ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಯುಗಾದಿ

ಚೈತ್ರ ॥ ಶುದ್ಧ ॥ ಪ್ರತಿಪತ್


ವಿದ್ವಾನ್ ॥ ಬೆಮ್ಮತ್ತಿ ವೇಂಕಟೇಶಾಚಾರ್ಯ,

ಬೆಂಗಳೂರು.



ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),

ಗಿರಿನಗರ, ಬೆಂಗಳೂರು-೮೫

'ಯುಗಾದಿ' ಶಾಲಿವಾಹನ ಶಕೆ ೧೯೪೩ ಶಾರ್ವರಿ॥ ಶ್ರಾವಣ॥ ಶುದ್ಧ॥ ಪೂರ್ಣಿಮೆ (ದಿನಾಂಕ:೩-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪರಮಪೂಜ್ಯ ಶ್ರೀ ವಿದ್ಯಾಧೀಶತೀರ್ಥ-ಶ್ರೀಪಾದಂಗಳವರ ಕರಕಮಲಗಳಿಂದ ಭಾರತೀರಮಣಹೃದಯ-ಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು : ೧೦೩



ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಶ್ರೀಮತಿ ನಾಗಲತಾ

ಮುದ್ರಣ : ಮುಕ್ತಿಪಥ ಮುದ್ರಣಾಲಯ,
ಬೆಂಗಳೂರು.



ಶ್ರೀಮದ್ಭಾಗವತ, ಹರಿಕಥಾಮೃತಸಾರ ಮತ್ತು ಇತರ ಮಧ್ವಶಾಸ್ತ್ರಗಳಲ್ಲೇ ತಮ್ಮ ಜೀವನವನ್ನು ಮುಡುಪಾಗಿಟ್ಟು, ಚಳ್ಳಕೆರೆ ನಿವಾಸಿಗಳಾಗಿದ್ದ ದಿವಂಗತರಾದ ಶ್ರೀಯುತರಾದ ಎನ್.ಎ. ವಿಜೇಂದ್ರರಾವ್ ಮತ್ತು ಎನ್.ವಿ. ಮಂದಾಕಿನಿ ಬಾಯಿ ಇವರುಗಳ ಸ್ಮರಣಾರ್ಥ ಬೆಂಗಳೂರು ಸಹಕಾರನಗರದಲ್ಲಿರುವ ಇವರ ಪುತ್ರ ಶ್ರೀ ಎನ್.ವಿ. ಅನಂತಮೂರ್ತಿ ಮತ್ತು ಅವರ ಧರ್ಮಪತ್ನಿ ಶ್ರೀಮತಿ ಬಿ.ಆರ್. ಪ್ರಿಯಂವದ, ಅವರು ಮಾಡಿದ ಸೇವೆ.

---

ಯುಗಾದಿಯ ಪರ್ವಕಾಲದಲ್ಲಿ ಅಷ್ಟದಳ ಕಮಲವನ್ನು ಬರೆದು, ಎಂಟು ದಳಗಳಲ್ಲಿ ಈ ಕೆಳಗಿನ ಶ್ಲೋಕದಂತೆ ವೇದಾದಿ ಶಾಸ್ತ್ರಗಳನ್ನು ಅವಶ್ಯ ಪೂಜಿಸಬೇಕು.

ಋಗ್ವೇದಂ ಪೂರ್ವಪತ್ರೇ ತು ಯಜುರ್ವೇದಂ ತು ದಕ್ಷಿಣೇ
ಪಶ್ಚಿಮೇ ಸಾಮವೇದಂ ತು ಉದಗಾಥರ್ವಣಂ ತಥಾ
ಆಗ್ನೇಯೇ ಚ ತಥಾಂಗಾನಿ ಧರ್ಮಶಾಸ್ತ್ರಾಣಿ ನೈರ್ಋತೇ
ಪುರಾಣಂ ಚೈವ ವಾಯುವ್ಯ ಈಶಾನ್ಯೇ ನ್ಯಾಯವಿಸ್ತರೌ ॥

# ವಿಷಯಾನುಕ್ರಮಣಿಕೆ

# ಮುನ್ನುಡಿ

ಪದ್ಮನಾಭರೂಪಿಯಾದ ಭಗವಂತನ ನಾಭಿಯಿಂದ ಒಂದು ಕಮಲ ಹುಟ್ಟಿತು. ಆ ಕಮಲದಲ್ಲಿ ಚತುರ್ಮುಖಬ್ರಹ್ಮದೇವರು ಹುಟ್ಟಿದರು. ೫೦ ವರ್ಷಗಳ ಕಾಲ ಅಖಂಡ ತಪಸ್ಸನ್ನು ಮಾಡಿದ ಚತುರ್ಮುಖಬ್ರಹ್ಮದೇವರು ಭಗವಂತನ ಆಜ್ಞೆಯಂತೆ ಸೃಷ್ಟಿಯನ್ನು ಪ್ರಾರಂಭ ಮಾಡಿದರು. ಆ ಸೃಷ್ಟಿಯನ್ನು ಪ್ರಾರಂಭ ಮಾಡಿದ ದಿನವೇ ಯುಗಾದಿ. 'ಚೈತ್ರೇಮಾಸಿ ಜಗದ್‌ಬ್ರಹ್ಮ ಸಸರ್ಜ ಪ್ರಥಮೇಽಹನಿ' ಚೈತ್ರಮಾಸದ ಶುಕ್ಲಪಕ್ಷದ ಪ್ರತಿಪತ್ ದಿನ ಚತುರ್ಮುಖಬ್ರಹ್ಮದೇವರು ಸೃಷ್ಟಿಯನ್ನು ಪ್ರಾರಂಭ ಮಾಡಿದರು. ಇದುವೇ ಸೃಷ್ಟಿಯ ಮೊದಲ ದಿನವಾಗಿದೆ.

ಹಬ್ಬಗಳ ಆಚರಣೆಯಿಂದ ಸನಾತನ ಸಂಸ್ಕೃತಿಯ ರಕ್ಷಣೆಯಾಗುತ್ತದೆ. ಮನೆಯಲ್ಲಿ ಸಡಗರದ ವಾತಾವರಣವು ಅಧಿಕವಾಗುತ್ತದೆ. ಬಂಧು-ಬಾಂಧವರಲ್ಲಿ ಸಂಬಂಧವು ದೃಢವಾಗುತ್ತದೆ. ದಾನ-ಧರ್ಮಗಳಿಂದ ಪುಣ್ಯವು ಅಧಿಕವಾಗುತ್ತದೆ. ಈ ದೃಷ್ಟಿಯಿಂದ ಎಲ್ಲ ಹಬ್ಬಗಳ ಮಹತ್ವವನ್ನು ಸಾರುವುದಕ್ಕಾಗಿ ೩೦ ಪುಸ್ತಕಗಳು ಹೊರಟಿವೆ. ಇವುಗಳಲ್ಲಿ ಎರಡನೆಯದ್ದೇ 'ಯುಗಾದಿ' ಎಂಬ ಈ ಪುಸ್ತಕ.

ಈ ಪುಸ್ತಕದಲ್ಲಿ ಯುಗಾದಿಯ ದಿವಸ ಆಚರಿಸಬೇಕಾದ ಕರ್ತವ್ಯಗಳನ್ನು ಪಂಚಾಂಗಪೂಜಾ ಕ್ರಮವನ್ನು, ಪಾರಾಯಣ ಮಾಡಬೇಕಾದ ಸ್ತೋತ್ರ ಮಂತ್ರಗಳನ್ನು ಹಾಗೂ ಅಡುಗೆಗಳನ್ನು, ಯುಗಾದಿ ಹಬ್ಬದ ವೈಶಿಷ್ಟ್ಯಗಳನ್ನು ನೀಡಲಾಗಿದೆ. ಸಾಧಕರು ಇದರ ಸದುಪಯೋಗವನ್ನು ಪಡೆದುಕೊಳ್ಳಬೇಕು. ಈ ೩೦ ಪುಸ್ತಕಗಳಲ್ಲಿ ಮೊಟ್ಟಮೊದಲು ನೀವು ವಿಷಯಾನುಕ್ರಮಣಿಕೆಯನ್ನು ಓದಬೇಕು. ನಿಮಗೆ ಕುತೂಹಲವಿರುವ ವಿಷಯವನ್ನು ಆದರಿಂದ ಮೊದಲು ತಿಳಿದುಕೊಳ್ಳಬೇಕು. ಹಾಗೂ ಹಬ್ಬದ ಹಿಂದಿನ ದಿವಸವೇ ಆಚಾರ-ವಿಚಾರ ಎಂಬ ವಿಭಾಗವನ್ನು

ಓದಿಟ್ಟುಕೊಂಡಿರಬೇಕು. ಮತ್ತು ಅಡುಗೆಯ ಕ್ರಮವನ್ನೂ ಕೂಡ ತಿಳಿದುಕೊಂಡಿರಬೇಕು. ಮರುದಿವಸ ಈ ಪುಸ್ತಕವನ್ನು ಉಪಯೋಗಿಸಿಕೊಂಡು ಹಬ್ಬವನ್ನು ಆಚರಣೆ ಮಾಡಬೇಕು. ಪೂಜಾಕಾಲದಲ್ಲಿ ಅವಶ್ಯವಾಗಿ ಪೂಜಾವಿಧಾನ ಎಂಬ ವಿಭಾಗವನ್ನು ತೆರೆದಿಟ್ಟುಕೊಂಡು ಪೂಜಿಸಬೇಕು. ಹಾಗೂ ಪೂಜೆಯ ನಂತರ ಮೂರನೆಯ ಭಾಗದಲ್ಲಿ ನೀಡಲ್ಪಟ್ಟ ಸ್ತೋತ್ರಮಂತ್ರಗಳನ್ನು ಪಾರಾಯಣ ಮಾಡಬೇಕು. ಸ್ತ್ರೀಯರಾದವರು ಹಾಡುಗಳನ್ನು ಹೇಳಿಕೊಳ್ಳಬೇಕು. ಇಷ್ಟು ವಿಷಯ ೩೦ ಪುಸ್ತಕಗಳಿಗೂ ಕೂಡ ಸಂಬಂಧಪಟ್ಟಿದೆ. ಎಲ್ಲ ಹಬ್ಬಗಳಿಗೂ ನೀವು ಇದೇ ಕ್ರಮವನ್ನು ಅನುಸರಿಸಬೇಕು.

ಅನೇಕ ಸಂಪ್ರದಾಯಜ್ಞರ ಬಳಿ ವಿಚಾರ ಮಾಡಿ, ಹಾಗೂ ಪ್ರಾಚೀನ ಧರ್ಮಗ್ರಂಥಗಳನ್ನು ಅರ್ವಾಚೀನ ಮುದ್ರಿತ ಪುಸ್ತಕಗಳನ್ನು ನೋಡಿ ಈ ೩೦ ಪುಸ್ತಕಗಳನ್ನು ಸಿದ್ಧಗೊಳಿಸಲಾಗಿದೆ. ಇಷ್ಟಾದರೂ ಕೆಲವೊಂದು ಸಂಪ್ರದಾಯಗಳು ಬಿಟ್ಟಿರುವ ಪ್ರಸಂಗವಿದೆ. ಅವುಗಳನ್ನು ನಿಮ್ಮ ಕ್ರಮದಂತೆ ಖಂಡಿತವಾಗಿಯೂ ಆಚರಣೆ ಮಾಡಬೇಕು. ಹಾಗೂ ಬಿಟ್ಟು ಹೋದ ಸಂಪ್ರದಾಯಗಳನ್ನು ನಮ್ಮ ಗಮನಕ್ಕೂ ತಂದುಕೊಡಬೇಕು. ಕೆಲವೊಂದು ಹಬ್ಬಗಳಿಗೆ ಇಂಥದ್ದೇ ರಂಗೋಲಿಗಳನ್ನು ಬರೆಯಬೇಕೆಂಬ ಸಂಪ್ರದಾಯಗಳೂ ಕೂಡ ಇದೆ. ಅದನ್ನು ಸಂಗ್ರಹ ಮಾಡಲು ಸಾಧ್ಯವಾಗಿರುವುದಿಲ್ಲ. ಅಡುಗೆಗಳ ವಿಧಾನದಲ್ಲಿಯೂ ಕೂಡ ಸಂಪ್ರದಾಯ ಭೇದವಿರುತ್ತದೆ. ಅವುಗಳನ್ನು ನಿಮ್ಮ ಸಂಪ್ರದಾಯದಂತೆ ನೀವು ಆಚರಿಸಬೇಕು.

ಹಬ್ಬ-ಹರಿದಿನಗಳಲ್ಲಿ ಸಂಪೂರ್ಣದಿನವನ್ನು ಭಗವಂತನ ಸೇವಾರೂಪವಾಗಿ ಆಚರಿಸಬೇಕೆಂಬುದಷ್ಟೇ ಈ ಎಲ್ಲ ಕೃತಿಗಳ ಮುಖ್ಯಉದ್ದೇಶ. ಭಗವಂತನ ಆರಾಧನೆಯನ್ನು ಬಿಟ್ಟು, ಕೇವಲ ಅಡುಗೆ ಮಾಡುವುದು, ಮನೆಯ ಕೆಲಸವನ್ನೇ ಅತ್ಯಧಿಕಗೊಳಿಸುವುದು ಹಬ್ಬವೆಂದು ಕರೆಸಿಕೊಳ್ಳುವುದಿಲ್ಲ. ಕೇವಲ ಇದರ ಆಚರಣೆಯಿಂದ ದುಃಖವೇ ಮತ್ತಷ್ಟು ಆಗುತ್ತದೆ. ಮನಸ್ಸಿಗೆ ಕಿರಿಕಿರಿಯಾಗುತ್ತದೆ. ಆದ್ದರಿಂದ ಸಾಧಕರಾದವರು ಹಬ್ಬದ ದಿವಸ ಹೆಚ್ಚು ಸಮಯವನ್ನು ಭಗವಂತನ ಆರಾಧನೆಗಾಗಿಯೇ ವಿನಿಯೋಗ ಮಾಡಬೇಕು. ಮನೆಯ ಕೆಲಸಗಳನ್ನು ಹಿಂದಿನ-ಮುಂದಿನ ದಿನಗಳಿಗೆ ಹಂಚಿಕೊಳ್ಳಬೇಕು.

ಪ್ರಕೃತ ಯುಗಾದಿ ಎಂಬ ಈ ಪುಸ್ತಕದಲ್ಲಿ ಅಪರೂಪದ ಯುಗಾದಿಯ ದಿವಸ ಮಾಡಲೇ ಬೇಕಾದ ಸ್ತೋತ್ರವನ್ನು ಮುದ್ರಿಸಲಾಗಿದೆ. ಹಾಗೂ ಪಂಚಾಂಗಪೂಜಾ ಕ್ರಮವನ್ನು ನೀಡಲಾಗಿದೆ. ಈ ರೀತಿಯ ಸ್ತೋತ್ರವನ್ನು ಹಾಗೂ ಪಂಚಾಂಗಪೂಜೆಯನ್ನು ಮಾಡುವ ಕ್ರಮವು ಹಾಗೂ ಸಂಪ್ರದಾಯವು ಇಂದು ಬಿಟ್ಟುಹೋಗುತ್ತಿದೆ. ಪ್ರತಿಯೊಬ್ಬ ಸಾಧಕರು ಅನುಷ್ಠಾನವನ್ನು ಈ ಕ್ರಮದಲ್ಲಿಯೇ ಮಾಡಿ ಧನ್ಯರಾಗಬೇಕು.

ಈ ಪುಸ್ತಕದಲ್ಲಿ ಅಡುಗೆ ವಿಭಾಗವನ್ನು ವಿಸ್ತಾರವಾಗಿ ನೀಡಲಾಗಿದೆ. ಹಾಗೂ ಪ್ರತಿಯೊಂದು ಪದಾರ್ಥಗಳಲ್ಲಿರುವ ಗುಣಧರ್ಮಗಳನ್ನು ಸಂಕ್ಷೇಪವಾಗಿ ಪರಿಚಯ ಮಾಡಲಾಗಿದೆ. ಆದ್ದರಿಂದ ಪ್ರತಿಯೊಂದು ಹಬ್ಬಗಳ ಅಡುಗೆಯ ಮೊದಲು ಈ ಪುಸ್ತಕದಲ್ಲಿರುವ ಅಡುಗೆ ವಿಭಾಗವನ್ನು ನೋಡಬೇಕು. ಇಲ್ಲಿ ಪದಾರ್ಥಗಳ ಬಗ್ಗೆ ನೀಡಿರುವ ವಿಚಾರಗಳು ಅತ್ಯಪೂರ್ವವಾಗಿವೆ. ಹಾಗೂ ಪ್ರತಿಯೊಂದು ಆಹಾರಪದಾರ್ಥಗಳಿಗೆ ಸಂಸ್ಕೃತದ ಶಬ್ದವನ್ನೂ ಕೂಡ ಬ್ರಾಕೆಟ್‌ನಲ್ಲಿ ನೀಡಲಾಗಿದೆ. ನೈವೇದ್ಯ ಮಾಡುವ ಸಂದರ್ಭದಲ್ಲಿ ಸಂಸ್ಕೃತದ ಪದಗಳನ್ನು ಉಪಯೋಗಿಸಿ ಭಗವಂತನಿಗೆ ನಿವೇದನೆ ಮಾಡಬೇಕೆಂಬ ದೃಷ್ಟಿಯಿಂದ ಇಲ್ಲಿ ಹೆಸರುಗಳನ್ನು ನೀಡಲಾಗಿದೆ. ೧೦೦ ವರ್ಷಗಳ ಹಿಂದೆ ಪ್ರಕಟಣೆಗೊಂಡ ಸೂಪಶಾಸ್ತ್ರ ಎಂಬ ಪುಸ್ತಕದ ಸಂಗ್ರಹವೇ ಇದಾಗಿದೆ. ಮತ್ತು ಮುಂದಿನ ಪುಸ್ತಕಗಳಲ್ಲಿಯೂ ಅಲ್ಲಲ್ಲಿ ಸೂಪಶಾಸ್ತ್ರದಿಂದ ಆಯ್ದ ಅಡುಗೆ ವಿಭಾಗಗಳನ್ನು ನೀಡಲಾಗಿದೆ. ಹಾಗಾಗಿ ಸೂಪಶಾಸ್ತ್ರ ಪುಸ್ತಕದ ಕರ್ತೃಗಳಿಗೆ ಅನಂತ ಧನ್ಯವಾದಗಳನ್ನು ಸಮರ್ಪಿಸುತ್ತೇನೆ. ಹಾಗೂ ಅವರ ಉಪಕಾರವನ್ನು ಸ್ಮರಿಸುತ್ತೇನೆ.

ಪ್ರತಿಯೊಂದು ಹಬ್ಬಗಳಲ್ಲಿಯೂ ಕೂಡ ಕೆಲವೊಂದು ಅಪೂರ್ವವಾದ ದಾಸರಾಯರ ಪದ್ಯಗಳನ್ನು ಹೇಳುವ ಸಂಪ್ರದಾಯವಿದೆ. ಅದನ್ನು ಅನೇಕ ಸಂಪ್ರದಾಯಜ್ಞರ ಕೇಳಿ ತಿಳಿದಿರುತ್ತೇನೆ. ಅವರಿಗೆಲ್ಲರಿಗೂ ಹೃದಯತುಂಬಿ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ.

ಪೂಜಾವಿಭಾಗದಲ್ಲಿ ಹತ್ತಾರು ಕೃತಿಗಳ ಉಪಯೋಗವನ್ನು ಪಡೆದುಕೊಂಡಿರುತ್ತೇನೆ. ಮುಖ್ಯವಾಗಿ ವ್ರತರಾಜ ಎಂಬ ಸಂಸ್ಕೃತ ಪುಸ್ತಕದ

ಉಪಯೋಗವನ್ನು ಬಹಳವಾಗಿ ಪಡೆದುಕೊಂಡಿರುವುದರಿಂದ ಆ ಪುಸ್ತಕಗಳ ಕರ್ತೃಗಳಿಗೆ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಅವರ ಉಪಕಾರವನ್ನು ಸ್ಮರಿಸುತ್ತೇನೆ. ಹಾಗೂ ಪ್ರಾಚೀನವಾದ ಅರ್ವಾಚೀನವಾದ ಅನೇಕ ಪೂಜಾಪುಸ್ತಕಗಳ ಋಣಭಾರ ನನಗಿದೆ. ಅನೇಕ ಪುರಾಣಗಳ ಆಗಮಗ್ರಂಥಗಳ ಉಪಯೋಗವನ್ನೂ ಕೂಡ ಬಹಳವಾಗಿ ಪಡೆದುಕೊಂಡಿರುತ್ತೇನೆ.

ಹಗಲಿರುಳು ಸಲಹುತ್ತಾ ಜ್ಞಾನಕಾರ್ಯದಲ್ಲಿ ನಿರಂತರ ಆಸಕ್ತನಾಗಿರುವಂತೆ ಮಾಡುತ್ತಿರುವ ಈ ಲಕ್ಷ್ಮೀಹಯಗ್ರೀವದೇವರ ಜಯಂತಿಯ ಶುಭಪರ್ವಕಾಲದಲ್ಲಿ ಈ ೩೦ ಕೃತಿಗಳು ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಸಮರ್ಪಣೆಯಾಗುತ್ತಿರುವುದು ನನ್ನ ಸೌಭಾಗ್ಯವಾಗಿದೆ. ಗುರುಗಳೇ ಆದ ಪಲಿಮಾರುಮಠಾಧೀಶರಾದ ಪರಮಪೂಜ್ಯ ಶ್ರೀವಿದ್ಯಾಧೀಶತೀರ್ಥಶ್ರೀಪಾದಂಗಳವರ ಕರಕಮಲಗಳಿಂದ ಭಗವಂತನಿಗೆ ಈ ಪುಸ್ತಕವು ಸಮರ್ಪಿತವಾಗುತ್ತಿರುವುದರಿಂದ ಭಗವಂತನು ನನ್ನ ವಿಷಯದಲ್ಲಿ ಸುಪ್ರೀತನಾಗುವುರಲ್ಲಿ ಸಂಶಯವಿಲ್ಲ. ಎಲ್ಲ ಸಾಧಕರಿಗೆ ಈ ಕೃತಿಯ ಲಾಭವು ದೊರಕಿ, ಎಲ್ಲರ ಸಾಧನೆ ಅಭಿವೃದ್ಧಿಯಾಗಲಿ ಎಂದು ಆ ಭಗವಂತನಲ್ಲಿ ಭಕ್ತಿಯಿಂದ ಪ್ರಾರ್ಥಿಸುತ್ತೇನೆ. ಹಾಗೂ ಗುರುಗಳಿಗೂ ಭಕ್ತಿಯಿಂದ ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಫಲಪ್ರತೀಕಗಳಲ್ಲಿರುವ ಭಗವಂತನು ಈ ಕೃತಿಗಳಿಂದ ಸಂಪ್ರೀತನಾಗಲಿ.

ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ಸಹಕಾರನಗರದಲ್ಲಿರುವ ಶ್ರೀ ಅನಂತಮೂರ್ತಿ ದಂಪತಿಗಳಿಗೆ ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ-ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಇವರ ಮಾತಾ-ಪಿತೃಗಳಿಗೆ ಈ ಜ್ಞಾನಯಜ್ಞದ ಪುಣ್ಯರಾಶಿಯು ತಲುಪಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ

# ಯುಗಾದಿ ಹಬ್ಬದ ಆಚರಣೆಗೆ ಬೇಕಾಗುವ ಸಾಮಗ್ರಿಗಳು

* ಹೊಸದಾದ ಅರಿಶಿನ-ಕುಂಕುಮ ಹಾಗೂ ರಂಗವಲ್ಲಿಗಳು.
* ನೈವೇದ್ಯಕ್ಕಾಗಿ ಬೇವಿನ ಚಿಗುರು, ಬೇವಿನ ಹೂವು ಹಾಗೂ ಬೆಲ್ಲ.
* ಅಲಂಕಾರಕ್ಕಾಗಿ ಮಾವಿನಸೊಪ್ಪು, ಬೇವಿನಸೊಪ್ಪು.
* ಭಗವಂತನಿಗೆ ಸಮರ್ಪಿಸಲು ರೇಷ್ಮೆ ವಸ್ತ್ರ.
* ಮನೆಯಲ್ಲಿರುವ ಪ್ರತಿಯೊಬ್ಬರಿಗೂ ಹೊಸ ವಸ್ತ್ರಗಳು.
* ಭಗವಂತನಿಗೆ ಅಭ್ಯಂಗಸ್ನಾನಕ್ಕಾಗಿ ಶುದ್ಧವಾದ ಹೊಸದಾದ ಎಳ್ಳೆಣ್ಣೆ, ಬ್ರಾಹ್ಮೀ ತೈಲ. ಹಾಗೂ ಸೀಗೆಕಾಯಿ ಪುಡಿ.
* ಪಂಚಾಮೃತಾಭಿಷೇಕಕ್ಕೆ ಬೇಕಾಗುವ ಎಲ್ಲ ಸಾಮಗ್ರಿಗಳು.
* ಹಬ್ಬದ ಅಡುಗೆಗೆ ಬೇಕಾಗುವ ಪದಾರ್ಥಗಳು.
* ಹೊಸದಾದ ಪಂಚಾಂಗ.
* ತಪ್ಪದೇ ಆಚರಿಸಿರಿ ಎಂಬ ಶೀರ್ಷಿಕೆಯಲ್ಲಿ ಮೊದಲು ಬರೆದ ಸಾಮಗ್ರಿಗಳು.
* ಪೂರ್ಣಫಲ, ಸೇರಿನಲ್ಲಿ ತುಂಬಿದ ಅಕ್ಕಿ, ತಾಂಬೂಲ, ಚಿನ್ನದ ಆಭರಣಗಳು, ನಾಣ್ಯಗಳು, ಲೇಖನೀ, ಪುಸ್ತಕ, ದವಸ-ಧಾನ್ಯ, ಅರಿಶಿನದ ಕೊಂಬು, ಕಾಯಿಪಲ್ಯಗಳು, ಹಣ್ಣುಗಳು. ಇವುಗಳ ನಡುವೆ ಒಂದು ಕನ್ನಡಿ.

ಈ ಪರಿಕರಗಳನ್ನು ಹಿಂದಿನ ದಿವಸವೇ ತಯಾರು ಮಾಡಿಟ್ಟುಕೊಳ್ಳಬೇಕು.

# ಸ್ತ್ರೀಯರು ಮಾಡಬೇಕಾದ ಕರ್ತವ್ಯಗಳು

* ಹಿಂದಿನ ದಿವಸಗಳಲ್ಲಿ ನಿಮ್ಮ ಮನೆಗೆ ಸುಣ್ಣ ಬಣ್ಣಗಳನ್ನು ಹಚ್ಚಿರಿ. ನಿಮ್ಮ ಮನೆ ಸಂಪೂರ್ಣವಾಗಿ ಸ್ವಚ್ಛವಾಗಿದ್ದು ಲಕ್ಷ್ಮೀದೇವಿಯು ನಿಮ್ಮ ಮನೆಗೆ ಭಗವಂತನ ಜೊತೆ ಆಗಮಿಸುತ್ತಾಳೆಂಬ ಅನುಸಂಧಾನವಿರಲಿ.

* ಬಾಗಿಲಿಗೆ ಮಾವಿನ ತೋರಣಗಳನ್ನು ಕಟ್ಟಿರಿ. ಮಾವಿನ ಚಿಗುರಿನ ಗೊಂಚಲನ್ನು ತೋರಣದ ಜೊತೆ ಸೇರಿಸಿ. ದೇವರ ಮಂಟಪಕ್ಕೂ ಕೂಡ ಇದೇ ಕ್ರಮದಲ್ಲೇ ಅಲಂಕಾರವನ್ನು ಮಾಡಿರಿ.

* ತುಳಸಿಯ ಮುಂದೆ ಹೊಸ್ತಿಲುಗಳಿಗೆ ದೇವರ ಮಂಟಪದ ಮುಂದೆ ಕೆಮ್ಮಣ್ಣಿನಿಂದ ಸಾರಿಸಿರಿ. ಕೆಮ್ಮಣ್ಣಿನಿಂದ ಸಾರಿಸದೆ ರಂಗೋಲಿಯನ್ನು ಸರ್ವಥಾ ಹಾಕಬೇಡಿರಿ.

* ಬಳಪದಿಂದ ಸೀಮೇಸುಣ್ಣದಿಂದ ರಂಗೋಲಿಯನ್ನು ಬರೆಯಬೇಡಿರಿ. ರಂಗೋಲಿ ಪುಡಿಯಿಂದಲೇ ಹಬ್ಬದ ವಾತಾವರಣ ಎದ್ದುಕಾಣುವಂತೆ ಕಲಾತ್ಮಕವಾದ ರಂಗೋಲಿಗಳನ್ನು ಬರೆಯಿರಿ.

* ಯುಗಾದಿ ದಿವಸ ಮೊದಲು ಮುತ್ತೈದೆಯು ಎದ್ದೇಳಬೇಕು. ಉಷಃಕಾಲದಲ್ಲೆದ್ದು ದೇವರಿಗೆ ನಮಿಸಿ, ಮಂಗಳದ್ರವ್ಯ ದರ್ಶನವನ್ನು ಮಾಡಬೇಕು. ಅನಂತರ ಗಂಡನನ್ನು, ಮಕ್ಕಳನ್ನು ಎಬ್ಬಿಸಬೇಕು.

* ಹೊಸ್ತಿಲ ಪೂಜೆಯನ್ನು ಶ್ರದ್ಧೆಯಿಂದ ಆಚರಿಸಬೇಕು. ಶಂಖ-ಚಕ್ರ-ಪದ್ಮ, ಸ್ವಸ್ತಿಕೆಗಳನ್ನು ಬರೆದು, ಅರಿಶಿನ-ಕುಂಕುಮ ಮಂತ್ರಾಕ್ಷತೆಗಳನ್ನು ಏರಿಸಿ, ತಂಬಿಗೆ ಅಥವಾ ಗಿಂಡಿಯಲ್ಲಿ ಪೂರ್ಣಜಲವನ್ನು ಹೊಸ್ತಿಲ ಮೇಲಿಟ್ಟು ದ್ವಾರಲಕ್ಷ್ಮಿಯನ್ನು, ಸರಸ್ವತಿಯನ್ನು, ಗೌರಿಯನ್ನು ಸ್ಮರಿಸುತ್ತಾ ಹೀಗೆ ಹೇಳಬೇಕು-

ಹ್ರೀಂಕಾರರೂಪಿಣೀ ದೇವೀ ವೀಣಾಪುಸ್ತಕಧಾರಿಣಿ ।
ವೇದಮಾತರ್ನಮಸ್ತುಭ್ಯಂ ಮಾಂಗಲ್ಯಂ ದೇಹಿ ಮೇ ಸದಾ ॥

* ಹೊಸ್ತಿಲ ನಡುವೆ ಗಿಂಡಿಯಲ್ಲಿ ಮಧ್ಯದಲ್ಲಿ ಲಕ್ಷ್ಮೀದೇವಿಯನ್ನು, ಬಲಭಾಗದಲ್ಲಿ ಸರಸ್ವತಿಯನ್ನು, ಎಡಭಾಗದಲ್ಲಿ ಗೌರಿಯನ್ನು ಸ್ಮರಿಸುತ್ತಾ ನಮಿಸಬೇಕು. ಹೊಸ್ತಿಲ ಪೂಜೆ ಮಾಡುವಾಗ ಯಾರು ಹೊಸ್ತಿಲನ್ನು ದಾಟಬಾರದು. ಎಳ್ಳೆಣ್ಣೆಯ ದೀಪವನ್ನು ಹಚ್ಚಿ, ಹೂವು ಏರಿಸಿ, ನಮಸ್ಕಾರ ಮಾಡಿ, ಗಿಂಡಿಯಲ್ಲಿರುವ ನೀರನ್ನು ತುಳಸಿಗೆ ಹಾಕಬೇಕು.
* ಮನೆಯಲ್ಲಿ ಅನೇಕ ಸ್ತ್ರೀಯರಿದ್ದಾಗ ಒಬ್ಬಳು ಮುಖ್ಯವಾಗಿ ಹೊಸ್ತಿಲ ಪೂಜೆ ಮಾಡಿದ ಅನಂತರ ಉಳಿದ ಹೆಣ್ಣುಮಕ್ಕಳು ಅರಿಶಿನ-ಕುಂಕುಮ ಏರಿಸಿ, ನಮಿಸಿ ಸಂಕ್ಷೇಪವಾಗಿ ಹೊಸ್ತಿಲ ಪೂಜೆಯನ್ನು ಮಾಡಲೇಬೇಕು.
* ಹೊಸ್ತಿಲ ಮೇಲಿಟ್ಟ ಗಿಂಡಿಯ ನೀರನ್ನು ತುಳಸಿಯ ವೃಂದಾವನಕ್ಕೆ ಹಾಕಿ, ತುಳಸಿಗೆ

  ಪ್ರಸೀದ ತುಳಸೀದೇವಿ ಪ್ರಸೀದ ಹರಿವಲ್ಲಭೇ ।
  ಕ್ಷೀರೋದಮಥನೋದ್ಭೂತೇ ತುಲಸೀ ತ್ವಾಂ ನಮಾಮ್ಯಹಂ ॥

  ಎಂಬ ಶ್ಲೋಕವನ್ನು ಹೇಳಿ, ಅರಿಶಿನ-ಕುಂಕುಮವನ್ನು ಏರಿಸಿ, ದೀಪಗಳನ್ನು ಹಚ್ಚಿ, ನಾಕು ಪ್ರದಕ್ಷಿಣೆಗಳನ್ನು ಹಾಕಿ, ನಮಸ್ಕಾರಗಳನ್ನು ಮಾಡಬೇಕು. ತುಳಸಿಯ ಮೇಲೆ ನೀರನ್ನು ಉದ್ಧರಣೆಯಿಂದ ಹಾಕಿ, ಆ ನೀರು ಕೈ ಮೇಲೆ ಬೀಳುವಂತೆ ಮಾಡಿಕೊಂಡು ಅದನ್ನು ಸ್ವೀಕರಿಸಬೇಕು. ಹಾಗೂ ಮನೆಯಲ್ಲಿರುವ ಪ್ರತಿಯೊಬ್ಬರನ್ನೂ ಕೂಡಿಸಿ, ಮುತ್ತೈದೆಯಾದವಳು ಆರತಿಯನ್ನು ಮಾಡಬೇಕು.
* ನಿಷಿದ್ಧ ದಿವಸವಾದರೂ ಕೂಡ ಯುಗಾದಿ ಹಾಗೂ ದೀಪಾವಳಿಗಳಲ್ಲಿ ಅಭ್ಯಂಗಸ್ನಾನವನ್ನು ವಿಧಾನ ಮಾಡಿರುವುದರಿಂದ ಸ್ತ್ರೀಯರೂ ಕೂಡ ಅಭ್ಯಂಗ ಸ್ನಾನವನ್ನು ಮಾಡಲೇ ಬೇಕು. ರಜಸ್ವಲೆಯಾದವರು ಅಭ್ಯಂಗಸ್ನಾನ ಮಾಡುವಂತಿಲ್ಲ.
* ಈ ಪುಸ್ತಕದಲ್ಲಿರುವ ಹಾಡುಗಳನ್ನು ಅವಶ್ಯವಾಗಿ ಹೇಳಿಕೊಳ್ಳಬೇಕು.
* ಮುತ್ತೈದೆಯರು ಹಬ್ಬದ ಅಡುಗೆಯನ್ನು ಮಾಡುವಾಗ ಕಡಲೆಬೇಳೆ ಹೋಳಿಗೆ ಮಾವಿನ ಕಾಯಿಯ ಚಿತ್ರಾನ್ನ, ಹೆಸರುಕಾಳು, ಸಿಹಿಗುಂಬಳ ಪಾಯಸ

ಇವುಗಳನ್ನು ಮಾಡಲೇಬೇಕು. ವಿವಿಧ ಪಲ್ಯಗಳು, ಭಕ್ಷ್ಯಗಳು ಕೊಸಂಬರಿಗಳನ್ನು ಯಥಾಶಕ್ತಿ ಮಾಡಿ ಭಗವಂತನಿಗೆ ಪತಿಯ ಮೂಲಕ ಸಮರ್ಪಿಸಬೇಕು.

* ನೈವೇದ್ಯಕಾಲದಲ್ಲಿ ಬೇವುಬೆಲ್ಲವನ್ನು ಸಮರ್ಪಣೆ ಮಾಡಬೇಕು. ಮತ್ತೊಂದು ತಟ್ಟೆಯಲ್ಲಿ ಶುಂಠಿಬೆಲ್ಲವನ್ನು ಸಮರ್ಪಣೆ ಮಾಡಬೇಕು. ಬೇವಿನ ಚಿಗುರು ಬೇವಿನ ಹೂ ಹಾಗೂ ಬೆಲ್ಲ ಎರಡನ್ನು ಮಿಶ್ರಣ ಮಾಡಿ ಅದಕ್ಕೆ ತುಪ್ಪದ ಅಭಿಘಾರವನ್ನು ಮಾಡಿ ನೈವೇದ್ಯವನ್ನು ಪತಿಯ ಮೂಲಕ ಮಾಡಿಸಬೇಕು.

* ದೇವರ ಮುಂದೆ ಬಾಗಿಲಮುಂದೆ ತುಳಸಿಯ ಮುಂದೆ ಶುದ್ಧ ಎಳ್ಳೆಣ್ಣೆಯ ದೀಪವನ್ನು ಬೆಳಗ್ಗೆ ಹಾಗೂ ಸಾಯಂಕಾಲ ಹಚ್ಚಬೇಕು.

* ಬೆಳಗ್ಗೆ ಹಾಗೂ ಸಾಯಂಕಾಲದಲ್ಲಿ ಅವಶ್ಯವಾಗಿ ಹರಿಭಜನೆಯನ್ನು ಮಾಡಿರಿ. ಹಬ್ಬದ ದಿವಸ ಮನೆಯಲ್ಲಿ ಹಬ್ಬವನ್ನು ಆಚರಿಸದೇ ಬೇರೆ ಕಡೆ ತೆರಳಿ ಭಜನೆಯನ್ನು ಮಾಡುವುದು ಉತ್ತಮ ಪಕ್ಷವಲ್ಲ. ಮನೆಯಲ್ಲಿ ಗಂಡ-ಮಕ್ಕಳು ಇವರುಗಳನ್ನು ಬಿಟ್ಟು ಮತ್ತೊಬ್ಬರ ಮನೆಯಲ್ಲಿ ಹಬ್ಬಗಳನ್ನು ಆಚರಿಸುವುದರಿಂದ ಮನೆಯಲ್ಲಿ ದೇವತಾ ಸಾನ್ನಿಧ್ಯವು ಕಡಿಮೆಯಾಗುತ್ತದೆ. ಹಾಗೂ ಅದು ಉತ್ತಮ ಸಾಧನೆ ಎಂದು ಕರೆಸಿಕೊಳ್ಳುವುದಿಲ್ಲ. ಆದ್ದರಿಂದ ಸ್ತ್ರೀಯರಾದವರು ಮತ್ತೊಂದು ಕಡೆ ಭಜನೆ ಮೊದಲಾದವುಗಳಲ್ಲಿ ತೊಡಗದೇ ತಮ್ಮ ತಮ್ಮ ಮನೆಯಲ್ಲೇ ಹಬ್ಬದ ಸಡಗರವನ್ನು ಆಚರಿಸಬೇಕು.

* * * *

# ಯುಗಾದಿ ಹಬ್ಬದಲ್ಲಿ ಮಾಡಲೇ ಬೇಕಾದ ಕರ್ತವ್ಯಗಳು

* ನೀವು ಅಂದುಕೊಂಡ ಕೆಲಸ ಪರಿಪೂರ್ಣವಾಗಲು ಭಗವಂತನ ಅನುಗ್ರಹವಾಗಲು ಕೆಳಗೆ ಹೇಳಿದಂತೆ ಪ್ರಾರ್ಥಿಸಿರಿ.

* ಬ್ರಾಹ್ಮೀಮುಹೂರ್ತದಲ್ಲಿ ಸೂರ್ಯೋದಯಕ್ಕಿಂತ ೯೬ ನಿಮಿಷ ಮೊದಲು ಬಲಮಗ್ಗಲಿನಲ್ಲಿ ಎದ್ದು ಕುಳಿತುಕೊಳ್ಳಬೇಕು. ಕಣ್ಣುಮುಚ್ಚಿ ಭಗವಂತನನ್ನು ಆಪಾದಮೌಳಿಪರ್ಯಂತವಾಗಿ ಒಮ್ಮೆ ಧ್ಯಾನ ಮಾಡಬೇಕು.

* ಅಖಿಲಾಂಡಕೋಟಿಬ್ರಹ್ಮಾಂಡನಾಯಕನೇ! ಜಗತ್ತಿನ ಸಾರ್ವಭೌಮನೇ! ಸಚ್ಚಿದಾನಂದಸ್ವರೂಪನೇ! ನನ್ನ ಹೃದಯಕಮಲದಲ್ಲಿದ್ದು ಅನಾದಿ-ಕಾಲದಿಂದಲೂ ನನ್ನ ಉದ್ಧಾರಮಾರ್ಗವನ್ನೇ ಬಯಸುವ ಸ್ವಾಮಿಯೇ! ಯುಗಾದಿಯ ಈ ಪರ್ವಕಾಲದಲ್ಲಿ ಅನಂತಾನಂತ ಸಾಷ್ಟಾಂಗ ನಮಸ್ಕಾರಗಳನ್ನು ಸಮರ್ಪಿಸುತ್ತಿರುವೆ. ನಿನ್ನ ಸೇವೆಗೋಸ್ಕರವೇ, ನನ್ನ ಈ ಜೀವನದ ಪ್ರತಿಯೊಂದು ಕ್ಷಣಗಳು ಸಾರ್ಥಕಗಳಾಗಲಿ, ಅದಕ್ಕಾಗಿ ನಾನು ಅಂದುಕೊಂಡಿರುವ ಈ ಸತ್ಕಾರ್ಯವು ಈ ವರ್ಷದಲ್ಲಿ ನಿರ್ವಿಘ್ನವಾಗಿ ನೆರವೇರಲಿ. ಈ ಸತ್ಕಾರ್ಯಕ್ಕೆ ಯಾವುದೇ ರೀತಿಯಲ್ಲಿ ಯಾರಿಂದಲೂ ವಿಘ್ನವು ಬಾರದಿರಲಿ.

* ಮೇಲೆ ಹೇಳಿದ ಕ್ರಮದಲ್ಲಿ ನಿಮ್ಮ ಅಪೇಕ್ಷೆಗಳು ಏನಿದ್ದರೂ ಕೂಡ ಹರಿಸೇವಾರೂಪವಾಗಿ ಪ್ರಾರ್ಥನೆ ಮಾಡಿರಿ. ರಾತ್ರಿಯ ಕಾಲ ಮಲಗುವ ಮೊದಲು ಹಾಸಿಗೆಯಲ್ಲಿ ಕುಳಿತು ಪುನಃ ಇದೇ ಕ್ರಮದಲ್ಲಿ ಪ್ರಾರ್ಥನೆ ಮಾಡಿ ಮಲಗಿರಿ. ನಿಮ್ಮ ಇಷ್ಟಾರ್ಥ ನೆರವೇರುವುದರಲ್ಲಿ ಕಿಂಚಿತ್ತು ಸಂಶಯವಿಲ್ಲ.

## ತಪ್ಪದೇ ಆಚರಿಸಿರಿ

* ಒಂದು ಹರಿವಾಣದಲ್ಲಿ ದೇವರ ಮನೆಯಲ್ಲಿ ಮಂಗಳ ವಸ್ತುಗಳನ್ನು ಹಿಂದಿನ ದಿವಸ ಇಟ್ಟಿರಬೇಕು. ಅಥವಾ ಪಡಸಾಲೆಯಲ್ಲಿಯೂ ಇಟ್ಟಿರಬಹುದು. ಆ

ಮಂಗಳದ್ರವ್ಯಗಳು ಹೀಗಿವೆ - ಪೂರ್ಣಫಲ, ಸೇರಿನಲ್ಲಿ ತುಂಬಿದ ಅಕ್ಕಿ, ತಾಂಬೂಲ, ಚಿನ್ನದ ಆಭರಣಗಳು, ನಾಣ್ಯಗಳು, ಲೇಖನೀ, ಪುಸ್ತಕ, ದವಸ-ಧಾನ್ಯ, ಅರಿಶಿನದ ಕೊಂಬು, ಕಾಯಿಪಲ್ಯಗಳು, ಹಣ್ಣುಗಳು. ಇವುಗಳ ನಡುವೆ ಒಂದು ಕನ್ನಡಿ.

ಯುಗಾದಿಯಂದು ಭಗವಂತನನ್ನು ಪ್ರಾರ್ಥಿಸಿ ಎದ್ದು ಬಂದು ಮೊದಲು ಈ ಮಂಗಳದ್ರವ್ಯಗಳನ್ನು ನೋಡಬೇಕು. ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡು ಭಗವಂತನ ಪ್ರತಿಬಿಂಬನಾಗಿದ್ದೇನೆಂದು ಅನುಸಂಧಾನ ಮಾಡಬೇಕು. ಇಂದು ಅನೇಕ ಮನೆಗಳಲ್ಲಿ ಈ ಸಂಪ್ರದಾಯವು ಬಿಟ್ಟುಹೋಗಿದೆ. ಇದನ್ನು ಅವಶ್ಯವಾಗಿ ಆಚರಿಸಿರಿ.

* ಬೇವಿನಕಡ್ಡಿ ಅಥವಾ ಮಾವಿನ ಎಲೆಯಿಂದ ದಂತಧಾವನ ಮಾಡಿ. ಶೌಚಾಚಾರಗಳನ್ನು ಮುಗಿಸಿ. ದೇವರ ಮುಂದೆ, ಹೊಸ್ತಿಲ ಮುಂದೆ ತುಳಸಿಯ ಮುಂದೆ ಎಳ್ಳೆಣ್ಣೆಯ ದೀಪಗಳನ್ನು ಹಚ್ಚಿರಿ.
* ಪ್ರಾತಃ ಸ್ತೋತ್ರಗಳನ್ನು ಮಂಗಳಾಷ್ಟಕಗಳನ್ನು ಪಠಿಸಿರಿ.
* ಎಳ್ಳೆಣ್ಣೆ, ಬ್ರಾಹ್ಮಿತೈಲ ಸೀಗೆಕಾಯಿಪುಡಿ ಇವುಗಳನ್ನು ಭಗವಂತನ ಮುಂದೆ ಇಟ್ಟು ಸಮರ್ಪಣೆ ಮಾಡಿರಿ. ಲಕ್ಷ್ಮೀದೇವಿಯು ಭಗವಂತನಿಗೆ ಬ್ರಾಹ್ಮಿ-ಮುಹೂರ್ತದಲ್ಲಿ, ಅಭ್ಯಂಗಸ್ನಾನವನ್ನು ಮಾಡಿಸುತ್ತಿದ್ದಾಳೆ. ಭಾರತಿದೇವಿಯು ಮುಖ್ಯಪ್ರಾಣದೇವರಿಗೆ ಅಭ್ಯಂಗಸ್ನಾನವನ್ನು ಮಾಡಿಸುತ್ತಾಳೆ ಎಂಬುದಾಗಿ ಅನುಸಂಧಾನ ಮಾಡಿರಿ, ಅನಂತರ ಮುತ್ತೈದೆಯರ ಮೂಲಕ ಮನೆಯಲ್ಲಿ ಇರುವ ಎಲ್ಲರೂ ಒಟ್ಟಿಗೆ ಕುಳಿತು ಆರತಿಯನ್ನು ಎಳ್ಳೆಣ್ಣೆಶಾಸ್ತ್ರವನ್ನು ಮಾಡಿಸಿಕೊಳ್ಳಿರಿ.
* ವ್ಯಾಸಃ ಪರಶುರಾಮಶ್ಚ ಹನೂಮಾನ್ ದ್ರೋಣಜಃ ಕೃಪಃ ।
  ಬಲಿರ್ವಿಭೀಷಣಶ್ಚೈವ ಸಪ್ತೈತೇ ಚಿರಜೀವಿನಃ ॥

  ಎಂಬ ಶ್ಲೋಕವನ್ನು ಪಠಿಸುವ ಮೂಲಕ ವೇದವ್ಯಾಸದೇವರು,

ಪರಶುರಾಮದೇವರು, ಹನುಮಂತದೇವರು, ಅಶ್ವತ್ಥಾಮಾಚಾರ್ಯರು, ಕೃಪಾಚಾರ್ಯರು, ಬಲಿ, ವಿಭೀಷಣ ಈ ಏಳು ಚಿರಂಜೀವಿಗಳನ್ನು ಸ್ಮರಣೆ ಮಾಡಿ ತಲೆಗೆ ಹಾಗೂ ಮೈಗೆ ಎಣ್ಣೆಯನ್ನು ಹಚ್ಚಿಕೊಳ್ಳಿರಿ. ಎಣ್ಣೆಯನ್ನು ಹಚ್ಚಿಕೊಂಡನಂತರ ಬಿಸಿನೀರಿನಲ್ಲಿಯೇ ಸ್ನಾನಮಾಡಿ ಅನಂತರ ಮಡಿಸ್ನಾನವನ್ನು ಆಚರಿಸಿರಿ.

* ವತ್ಸರಾದೌ ವಸಂತಾದೌ ಬಲಿರಾಜ್ಯೇ ತಥೈವಚ ।
  ತೈಲಾಭ್ಯಂಗಮಕುರ್ವಾಣೋ ನರಕಂ ಪ್ರತಿಪದ್ಯತೇ ॥

  ಎಂಬ ಪ್ರಮಾಣಶ್ಲೋಕದಂತೆ ಯುಗಾದಿ ಹಾಗೂ ಬಲಿಪಾಡ್ಯಗಳಲ್ಲಿ ಯಾರು ಅಭ್ಯಂಗಸ್ನಾನವನ್ನು ಮಾಡುವುದಿಲ್ಲವೋ ಅವರಿಗೆ ನರಕವಾಗುತ್ತದೆ ಎಂದು ಮಹಿಷ್ಠರು ಹೇಳಿರುತ್ತಾರೆ. ಆದ್ದರಿಂದ ಯುಗಾದಿಯಂದು ಅಭ್ಯಂಗಸ್ನಾನವನ್ನು ಮಾಡಲೇಬೇಕು.

* ಇಂದು ವರ್ಷದ ಪ್ರಾರಂಭದ ದಿವಸ. ವಿಶೇಷವಾಗಿ ಭಗವಂತನನ್ನು ಪ್ರಾರ್ಥಿಸಿ ಅನುಗ್ರಹ ಪಡೆದುಕೊಳ್ಳಬೇಕಾದ ಪರ್ವಕಾಲ. ಆದ್ದರಿಂದ, ಇಷ್ಟು ದಿವಸಗಳ ಕಾಲ ಎಷ್ಟು ಹೊತ್ತು ಸಂಧ್ಯಾವಂದನೆ ಜಪ ಪೂಜೆಗಳನ್ನು ಮಾಡುತ್ತಿದ್ದಿರೋ; ಅದಕ್ಕಿಂತ ಹೆಚ್ಚಿನ ಸಮಯವನ್ನು ವಿನಿಯೋಗಿಸಿ ಆಹ್ನಿಕ ದೇವರ ಪೂಜೆಗಳನ್ನು ಪೂರೈಸಿರಿ.

* ಪ್ರತಿನಿತ್ಯ ದೇವರ ಪೂಜೆ ಮಾಡುವವರು ಇಂದು ವಿಷ್ಣುಸಹಸ್ರನಾಮಾವಳಿಗಳಿಂದ ಭಗವಂತನಿಗೆ ಅರ್ಚನೆಯನ್ನು ಮಾಡಿದರೆ ವಿಶೇಷ ಫಲ ಉಂಟಾಗುವುದು. ಮತ್ತು ವಿಶೇಷವಾಗಿ ವಸಂತಕಾಲದ ಚಿಗುರುಗಳು, ಮೊಗ್ಗುಗಳು, ಹೂವುಗಳನ್ನು ಸಂಗ್ರಹಿಸಿ ಭಗವಂತನಿಗೆ ಅಲಂಕಾರ ಮಾಡಬೇಕು. ಪಂಚಾಮೃತಗಳಿಂದ ಅಭಿಷೇಕವನ್ನು ಮಾಡಲು ಮರೆಯಬಾರದು. ಯುಗಾದಿಯಂದು ಪಂಚಾಮೃತಾಭಿಷೇಕ ಮಾಡುವ ಕ್ರಮ ಶಿಷ್ಟಾಚಾರಸಂಪ್ರದಾಯದಲ್ಲಿ ಅನೂಚಾನವಾಗಿ ಬಂದಿದೆ.

* ಭಗವಂತನಿಗೆ ವಿವಿಧ ಬಗೆಯ ಆರತಿಗಳನ್ನು ಮಾಡಬೇಕು. ಮಂತ್ರಪುಷ್ಪಾರ್ಚನೆ ಮಾಡಿ ಈ ಕೆಳಗಿನ ಕ್ರಮದಲ್ಲಿ ಪ್ರಾರ್ಥನೆಯನ್ನು ಸಲ್ಲಿಸಿಬೇಕು.

* ''ಸರ್ವಾಂತರ್ಯಾಮಿಯಾದ ಮಮಸ್ವಾಮಿಯೇ! ನೀನೇ ನನ್ನಲ್ಲಿ ಕುಳಿತು ಪೂಜೆಯನ್ನು ಮಾಡಿ ಮಾಡಿಸಿ ಕೊಂಡಿರುವಿ. ನಮ್ಮೆಲ್ಲ ಇಂದ್ರಿಯಗಳಲ್ಲಿ ಇದ್ದು ನಿನ್ನ ಸೇವೆಯನ್ನು ಮಾಡಿಸಿಕೊಂಡ ನಿನಗೆ ಅನಂತಾನಂತ ನಮನಗಳು. ನಾನು ಕಳೆದ ವರ್ಷ ಪ್ರತಿಯೊಂದು ಋತುಗಳಲ್ಲಿ ಪ್ರತಿಯೊಂದು ಮಾಸಗಳಲ್ಲಿ ಪ್ರತಿಯೊಂದು ವಾರಗಳಲ್ಲಿ ಪ್ರತಿಯೊಂದು ತಿಥಿ, ನಕ್ಷತ್ರ, ಯೋಗ, ಕರಣ, ಮುಹೂರ್ತಗಳಲ್ಲಿ, ನಿಮಿಷಗಳಲ್ಲಿ, ಕ್ಷಣಗಳಲ್ಲಿ, ತ್ರುಟಿಗಳಲ್ಲಿ ಏನೇನು ಕರ್ಮಗಳನ್ನು ಮಾಡಿದ್ದೇನೋ ಕಾಯಕವಾಗಿ ಮಾನಸಿಕವಾಗಿ ವಾಚನಿಕವಾಗಿ ನಡೆದ ಆ ಎಲ್ಲ ಕರ್ಮಗಳನ್ನು ಯಜ್ಞರೂಪದಲ್ಲಿ ನಿನ್ನಲ್ಲಿ ಸಮರ್ಪಿಸುತ್ತಿದ್ದೇನೆ. ಅನೇಕ ಬಗೆಯ ಮಾಡಬಾರದ ಕೆಟ್ಟ ಕಾರ್ಯಗಳನ್ನು ಮಾಡಿರುವೆನು. ಅವೆಲ್ಲದರಿಂದ ಬರುವ ದುರಿತಗಳನ್ನು ಉಪಶಮನಗೊಳಿಸಿ ಮುಂದೆಂದೂ ತಪ್ಪುಗಳನ್ನು ಮಾಡದಂತೆ ಎನ್ನನ್ನು ರಕ್ಷಿಸು, ಕಳೆದ ವರ್ಷದಲ್ಲಿ ಮಾಡಿದ ಸತ್ಕರ್ಮಗಳನ್ನು ಕೇವಲ ಶ್ರೀಹರಿವಾಯುಗುರುಗಳ ಅನುಗ್ರಹದಿಂದಷ್ಟೇ ಮಾಡಿರುತ್ತೇನೆ. ಅದೆಲ್ಲವನ್ನು ಪುಷ್ಪರೂಪವಾಗಿ ನಿನ್ನ ಪಾದಕಮಲಗಳಲ್ಲಿ ಸಮರ್ಪಿಸುತ್ತೇನೆ''.

'ನಾನು ಅಸ್ವತಂತ್ರ ನೀನೊಬ್ಬನೇ ಸ್ವತಂತ್ರ ನಾನು ನಿನ್ನ ದಾಸ ನೀನು ಎನ್ನ ಈಶ' ಎಂಬುದಾಗಿ ಅತ್ಯಂತ ಭಾವುಕರಾಗಿ ಪ್ರತಿಯೊಂದು ಇಂದ್ರಿಯಗಳಿಂದ, ಪ್ರತಿಯೊಂದು ಉಸಿರಿನಿಂದ, ರೋಮಾಂಚಿತರಾಗಿ ಭಕ್ತಿಭರಾಭಿನುನ್ನರಾಗಿ ಭಗವಂತನಲ್ಲಿ ಕರ್ಮಗಳನ್ನು ಸಮರ್ಪಣೆ ಮಾಡಿರಿ.

* ಮುಂದೆ ಹೇಳುವ ಸಂಕಲ್ಪವನ್ನು ದೃಢವಾಗಿ ದೇವರ ಮುಂದೆ ಮಾಡಿರಿ.

* 'ಎನ್ನ ಉಪಾಸ್ಯಮೂರ್ತಿಯೇ! ಈ ಸಂವತ್ಸರದಲ್ಲಿ ನಾನು ಇಂಥ ಒಳ್ಳೆಯ ಕಾರ್ಯಗಳನ್ನು ಮಾಡಬೇಕೆಂದು ನಿನ್ನ ಇಚ್ಛಾಧೀನನಾಗಿ ಸಂಕಲ್ಪ

ಮಾಡುತ್ತಿದ್ದೇನೆ. ನಾನು ಮಾಡುತ್ತಿರುವ ಎಲ್ಲ ಸಂಕಲ್ಪಗಳು ನಿನ್ನ ಸಂಕಲ್ಪಕ್ಕೆ ಅನುಗುಣವಾಗಿರಲಿ. ನಾನು ಮಾಡಲು ಹೊರಟಿರುವ ಎಲ್ಲ ಕಾರ್ಯಗಳಲ್ಲಿ ನಿನ್ನ ಸಾನ್ನಿಧ್ಯವಿರಲಿ. ನಿನ್ನ ಸಂಕಲ್ಪಕ್ಕೆ ವಿರುದ್ಧವಾದ ಯಾವುದೇ ಕಾರ್ಯಗಳಾದರೂ ನನಗದು ಬೇಡ. ಈ ವರ್ಷದಲ್ಲಿ ಮುಂಬರುವ ಋತುಗಳಲ್ಲಿ, ಮಾಸಗಳಲ್ಲಿ, ವಾರಗಳಲ್ಲಿ, ತಿಥಿ, ನಕ್ಷತ್ರ, ಯೋಗ, ಕರಣಗಳಲ್ಲಿ, ಕೇವಲ ಸತ್ಕಾರ್ಯಗಳನ್ನೇ ನನ್ನಿಂದ ಮಾಡಿಸು'.

* ಮತ್ತು ನೀವಂದುಕೊಂಡ ಸತ್ಕಾರ್ಯಗಳ ಸಂಕಲ್ಪವನ್ನೂ ಮಾಡಿರಿ. ಹೀಗೆ ಸಂಕಲ್ಪ ಮಾಡಿದ ಕರ್ಮಗಳನ್ನೂ, ಸಮರ್ಪಣೆ ಮಾಡಿರಿ. ಮುಂದೆ ಮಾಡಬೇಕಾದ ಕಾರ್ಯಗಳೆಲ್ಲವೂ ಭಗವದಧೀನವೆಂದು ಮುನ್ನುಗ್ಗಿರಿ.

* ಪೂಜೆಯು ಮುಗಿದ ಬಳಿಕ ಈ ಪುಸ್ತಕದಲ್ಲಿ ಮುಂದೆ ನೀಡಿರುವ ಕ್ರಮದಲ್ಲಿ ಪಂಚಾಂಗ ಪೂಜೆಯನ್ನು ಮಾಡಿರಿ.

* ಮನೆಯವರೆಲ್ಲರೂ ದೇವರ ಮುಂದೆ ಕುಳಿತು ನೂತನಸಂವತ್ಸರಫಲವನ್ನು ಶ್ರವಣ ಮಾಡಿರಿ. ಆ ಸಂವತ್ಸರಕ್ಕೆ ಯಾವ ಯಾವ ಗ್ರಹಗಳು ಯಾವಯಾವ ಅಧಿಕಾರವನ್ನು ವಹಿಸಿದ್ದಾರೆ ಎಂಬುದನ್ನು ತಿಳಿದು ಅವರಿಗೆ ನಮಿಸಿರಿ.

* ಕೆಲವರು ಸಾಯಂಕಾಲ ಪಂಚಾಂಗ ಶ್ರವಣ ಮಾಡುತ್ತಾರೆ. ಆದರೆ ಭೋಜನದ ಮೊದಲು  ಉಪವಾಸದಲ್ಲಿ ಪಂಚಾಂಗ ಶ್ರವಣ ಮಾಡಿ. ಗ್ರಹ ನಕ್ಷತ್ರಗಳಿಗೆ ನಮಿಸಿ ಆಶೀರ್ವಾದ ಪಡೆದುಕೊಳ್ಳಬೇಕು.

* ತೀರ್ಥವನ್ನು ಸ್ವೀಕರಿಸಿದ ಅನಂತರ

ಶತಾಯುರ್ವಜ್ರದೇಹಾಯ ಸರ್ವಸಂಪತ್ಕರಾಯಚ ।
ಸರ್ವಾರಿಷ್ಟವಿನಾಶಾಯ ನಿಂಬಕಂ ದಲಭಕ್ಷಣಂ ॥

ಎಂಬ ಶ್ಲೋಕವನ್ನು ಪಠಿಸಿ ಬೇವು ಬೆಲ್ಲವನ್ನು ಸ್ವೀಕರಿಸಿರಿ.

* ಔಪಾಸನ, ವೈಶ್ವದೇವ, ಬಲಿಹರಣ, ಮೊದಲಾದವುಗಳನ್ನು ಪೂರೈಸಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ತೀರ್ಥ ಹಾಗೂ ಬೇವು ಬೆಲ್ಲಗಳನ್ನು ಸ್ವೀಕರಿಸಿ ಹರಿನೈವೇದ್ಯವನ್ನು ಸ್ವೀಕರಿಸಿರಿ.
* ಸಾಯಂಕಾಲದಲ್ಲಿ ಸಂಧ್ಯಾಕಾಲಕ್ಕೆ ಸರಿಯಾಗಿ ಸಂಧ್ಯಾವಂದನೆಯನ್ನು ಆಚರಿಸಿರಿ.
* ಭಗವಂತನಿಗೆ ಸಾಯಂಕಾಲದಲ್ಲಿ ವಿಶೇಷವಾಗಿ ಪೂಜೆಯನ್ನು ಮಾಡಿ ಪಾನಕ ಕೊಸಂಬರಿಗಳನ್ನು ಸಮರ್ಪಣೆ ಮಾಡಿರಿ.
* ಯುಗಾದಿಯ ದಿವಸ ಈ ಪುಸ್ತಕದಲ್ಲಿ ನೀಡಿದ ಪಂಚಾಂಗಪೂಜಾ ಕ್ರಮವನ್ನು ಅವಶ್ಯ ಆಚರಿಸಿರಿ. ಪಂಚಾಂಗ ಪೂಜೆಯನ್ನು ಮಾಡುವಾಗ ಸಂವತ್ಸರಾಭಿಮಾನಿಗಳನ್ನು, ಸಕಲ ಗ್ರಹದೇವತೆಗಳನ್ನು ಪ್ರತ್ಯೇಕವಾಗಿ ಪೂಜಿಸಿರಿ. ಇದರಿಂದ ನಿಮ್ಮ ಜಾತಕದಲ್ಲಿರುವ ಗ್ರಹದೋಷಗಳು ನಕ್ಷತ್ರದೋಷಗಳು ಯೋಗದೋಷಗಳು ಹಾಗೂ ಕರಣದೋಷಗಳು ಪರಿಹಾರವಾಗುತ್ತವೆ. ಅದೆಷ್ಟೋ ಆಪತ್ತುಗಳು ನಿಮಗೆ ತಿಳಿಯದಂತೆ ಪರಿಹಾರವಾಗುತ್ತವೆ. ಹಾಗೂ ಆ ಎಲ್ಲ ದೇವತೆಗಳ ಪೂರ್ಣಾನುಗ್ರಹವನ್ನು ನೀವು ಪಡೆದುಕೊಂಡಂತಾಗುತ್ತದೆ. ಅಷ್ಟೇ ಅಲ್ಲದೇ ನಿರಂತರ ನಮ್ಮ ರಕ್ಷಣೆಯಲ್ಲಿ ತೊಡಗಿದ ಎಲ್ಲ ಗ್ರಹಾಭಿಮಾನಿ-ದೇವತೆಗಳಿಗೆ ನಮಸ್ಕರಿಸುವುದು, ಕೃತಜ್ಞತೆಯನ್ನು ಸಲ್ಲಿಸುವುದು ನಮ್ಮ ಕರ್ತವ್ಯವೂ ಕೂಡ ಆಗಿರುತ್ತದೆ. ಈ ದೃಷ್ಟಿಯಿಂದ ಈ ಪೂಜಾಕ್ರಮದಲ್ಲಿ ನೀಡಿದ ಎಲ್ಲ ಮಂತ್ರಗಳನ್ನು ಪಠಿಸಿ ಉತ್ತಮ ಫಲವನ್ನು ಪಡೆದುಕೊಳ್ಳಿರಿ.

## ಸಾಯಂಕಾಲ ಹೀಗೆ ಮಾಡಿರಿ

* ಸಾಯಂಕಾಲದಲ್ಲಿ ತಮ್ಮ ಕುಲದೇವರ ಗುಡಿಗೆ ಹೋಗುವ ಸಂಪ್ರದಾಯವಿದೆ. ಅಥವಾ ಆ ಊರಿನಲ್ಲಿ ಯಾವುದು ಸನ್ನಿಹಿತವಾದ ದೇವಾಲಯವಿರುತ್ತದೋ, ಅಲ್ಲಿಗೆ ಹೋಗಿ ಊರದೇವರಿಗೆ, ಕುಲದೇವರಿಗೆ ನಮಸ್ಕಾರವನ್ನು ಮಾಡಿ, ಅಲ್ಲಿರುವ ಗುರುಹಿರಿಯರಿಗೂ ನಮಸ್ಕರಿಸಿ, ಫಲತಾಂಬೂಲ ದಕ್ಷಿಣೆಗಳನ್ನು ನೀಡಿ ಆಶೀರ್ವಾದ ಪಡೆದುಕೊಂಡು ಮನೆಗೆ ಬರಬೇಕು.

* ಲಾಲಿ ಪದ್ಯ ಜೋ ಜೋ ಪದ್ಯಗಳನ್ನು ಹಾಡಿ ಭಗವಂತನಿಗೆ ತೊಟ್ಟಿಲ ಸೇವೆಯನ್ನು ಮಾಡಿ ಅಂದಿನ ಹಬ್ಬದ ಆಚರಣೆಯನ್ನು ಭಗವಂತನಿಗೆ ಸಮರ್ಪಿಸಿರಿ.

## ಹೊಸ ಬೆಳೆ ಹಾಗೂ ಹೊಸ ವಸ್ತುಗಳ ಖರೀದಿ

ಚಾಂದ್ರಮಾನ ಯುಗಾದಿಯ ಈ ದಿವಸದಂದೇ ಹೊಸ ಬೆಳೆಯನ್ನು ಕೃಷಿಕರು ಪ್ರಾರಂಭ ಮಾಡುತ್ತಾರೆ. ಯುಗಾದಿಯಂದು ಹಳ್ಳಿಯ ಕಡೆ ಇಂದೂ ಸಹ ಮಳೆ ಬಂದೇ ಬರುತ್ತದೆ. ಅಥವಾ ಯುಗಾದಿಯ ಹಿಂದಿನ ದಿವಸವು ಮಳೆ ಬಂದಿರುತ್ತದೆ. ಆದ್ದರಿಂದ ಯುಗಾದಿಯಂದು ಪೂಜೆಯನ್ನು ಮಾಡಿ, ಸಸ್ಯಾಧಿಪನಿಗೆ ನಮಿಸಿ ಬೆಳೆಯನ್ನು ಪ್ರಾರಂಭ ಮಾಡುತ್ತಾರೆ.

ಗ್ರಾಮವಾಸಿಗಳು ಹೊಸವಸ್ತುಗಳನ್ನು ಖರೀದಿಸುತ್ತಾರೆ. ಚಿನ್ನಾಭರಣಗಳನ್ನು ಖರೀದಿಸಿ, ತನ್ಮೂಲಕ ಸಂಪತ್ತು ನಮಗೆ ಅಭಿವೃದ್ಧವಾಗುತ್ತದೆ ಎಂದು ಭಾವಿಸುತ್ತಾರೆ.

**ಇಲ್ಲಿಗೆ ಯುಗಾದಿ ದಿವಸ ಆಚರಿಸಬೇಕಾದ ಸಂಪ್ರದಾಯಗಳು ಹಾಗೂ ಆಚಾರವಿಚಾರಗಳು ಮುಗಿಯಿತು.**

**॥ಶ್ರೀಕೃಷ್ಣಾರ್ಪಣಮಸ್ತು ॥**

# ಯುಗಾದಿಯ ಧ್ವಜಪೂಜೆ

ಬೆಳ್ಳಿಯ ಅಥವಾ ಹಿತ್ತಾಳೆಯ ಕಲಶದಿಂದ ಆವೃತವಾದ ಒಂದು ರೇಷ್ಮೆವಸ್ತ್ರದ ಧ್ವಜದಂಡವನ್ನು ನಿಲ್ಲಿಸಿ, ಅದಕ್ಕೆ ಗಂಧಪುಷ್ಪಾದಿಗಳಿಂದ ಪೂಜಿಸುತ್ತಾರೆ. ಉತ್ತರದ ಕಡೆ ಈ ಧ್ವಜದಂಡದ ಪೂಜೆಯು ವ್ಯಾಪಕವಾಗಿ ಇದೆ. ದಕ್ಷಿಣದ ಕಡೆ ಸಂಪ್ರದಾಯದಲ್ಲಿರುವುದಿಲ್ಲ. ಧರ್ಮಶಾಸ್ತ್ರದಲ್ಲಿ ಆಶ್ವೀನ ಮಾಸದ ಶುಕ್ಲಪಕ್ಷದ ಪ್ರತಿಪತ್ ದಿವಸವೂ ಕೂಡ ಇಂದ್ರಧ್ವಜಪೂಜೆಯನ್ನು ವಿಧಾನ ಮಾಡಿದಂತೆ, ಯುಗಾದಿಯ ದಿವಸ ಅಂಥದ್ದೇ ವಿಧಾನಗಳು ಕಾಣಸುತ್ತವೆ. (ಧರ್ಮಸಿಂಧುವಿನಲ್ಲಿ 'ಪ್ರತಿಗೃಹಂ_ಧ್ವಜಾರೋಹಣಂ ನಿಂಬಪತ್ರಾಶನಂ ವತ್ಸರಾದಿಫಲಶ್ರವಣ-ನವರಾತ್ರಾರಂಭೋ ನವರಾತ್ರೋತ್ಸವಾದಿನಿಮಿತ್ತಾಭ್ಯಂಗಾದಿಭಿಶ್ಚಶುದ್ಧಮಾಸಪ್ರತಿಪದಿ ಕಾರ್ಯಃ' ಎಂಬ ವಾಕ್ಯದಿಂದ ಯುಗಾದಿಯ ದಿವಸವೂ ಧ್ವಜಾರೋಹಣೆಯನ್ನು ವಿಧಾನ ಮಾಡಿದ್ದಾರೆ.) ಆದ್ದರಿಂದ ಧ್ವಜದಂಡವನ್ನು ನಿಲ್ಲಿಸಿ ಗಂಧಪುಷ್ಪಾದಿಗಳಿಂದ ಪೂಜಿಸಿ ಮಂಗಳಾರತಿ ಮಾಡಿರಿ. ಧ್ವಜದಲ್ಲಿ ದೇವೇಂದ್ರನ ಅಂತರ್ಗತನಾದ ಉಪೇಂದ್ರನನ್ನು ಪೂಜಿಸಬೇಕು.

## ಪಂಚಾಂಗ ಪೂಜೆ

### ಗ್ರಹನಕ್ಷತ್ರಮಾಸಾದ್ಯಭಿಮಾನಿ ದೇವತೆಗಳ ಪೂಜೆ

ಶ್ರೀ ಗುರುಭ್ಯೋನಮಃ, ಶ್ರೀ ಪರಮಗುರುಭ್ಯೋ ನಮಃ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ । ಶ್ರೀ ಭಾರತ್ಯೈನಮಃ। ಶ್ರೀ ಸರಸ್ವತ್ಯೈನಮಃ। ಶ್ರೀ ವಾಯವೇ ನಮಃ। ಶ್ರೀ ಬ್ರಹ್ಮಣೇ ನಮಃ । ಶ್ರೀ ಮಹಾಲಕ್ಷ್ಮ್ಯೈ ನಮಃ । ಶ್ರೀ ಲಕ್ಷ್ಮೀನಾರಾಯಣಾಭ್ಯಾಂ ನಮಃ । ಶ್ರೀ ವಾಸುದೇವಾಯ ನಮಃ।

## ಆಚಮನಮ್

ಕೇಶವಾಯ ಸ್ವಾಹಾ । ನಾರಾಯಣಾಯ ಸ್ವಾಹಾ । ಮಾಧವಾಯ ಸ್ವಾಹಾ । ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ ।

ತ್ರಿವಿಕ್ರಮಾಯ ನಮಃ । ವಾಮನಾಯ ನಮಃ । ಶ್ರೀಧರಾಯ ನಮಃ । ಹೃಷೀಕೇಶಾಯ ನಮಃ । ಪದ್ಮನಾಭಾಯ ನಮಃ । ದಾಮೋದರಾಯ ನಮಃ । ಸಂಕರ್ಷಣಾಯ ನಮಃ । ವಾಸುದೇವಾಯ ನಮಃ । ಪ್ರದ್ಯುಮ್ನಾಯ ನಮಃ । ಅನಿರುದ್ಧಾಯ ನಮಃ । ಪುರುಷೋತ್ತಮಾಯ ನಮಃ । ಅಧೋಕ್ಷಜಾಯ ನಮಃ । ನಾರ- ಸಿಂಹಾಯ ನಮಃ । ಅಚ್ಯುತಾಯ ನಮಃ । ಜನಾರ್ದನಾಯ ನಮಃ । ಉಪೇಂ-ದ್ರಾಯ ನಮಃ । ಹರಯೇ ನಮಃ । ಶ್ರೀ ಕೃಷ್ಣಾಯ ನಮಃ ।

(ಆಚಮನವನ್ನು ಎರಡು ಬಾರಿ ಮಾಡಬೇಕು)

## ಪ್ರಾಣಾಯಾಮ

ಓಂ ಪ್ರಣವಸ್ಯ ಪರಬ್ರಹ್ಮಋಷಿಃ ಪರಮಾತ್ಮಾ ದೇವತಾ ದೈವೀ ಗಾಯತ್ರೀ ಛಂದಃ ಪ್ರಾಣಾಯಾಮೇ ವಿನಿಯೋಗಃ ।

ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಂ ಸತ್ಯಂ । ಓಂ ತತ್ಸವಿತುರ್ವರೇಣ್ಯಮ್ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಓಮಾಪೋಜ್ಯೋಽತಿ ರಸೋಽಮೃತಂ ಬ್ರಹ್ಮ ಭೂರ್ಭುವಸ್ಸ್ವರೋಮ್ ।

## ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ............ ಶಾಲೀವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಉತ್ತರಾಯನೇ ವಸಂತಋತೌ ಚೈತ್ರಮಾಸೇ ಶುಕ್ಲಪಕ್ಷೇ ಪ್ರತಿಪದಿ ಶುಭತಿಥೌ .... ವಾಸರಯುಕ್ತಾಯಾಂ ಶುಭನಕ್ಷತ್ರ ಶುಭಯೋಗ ಶುಭಕರಣ

ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಅಸ್ಮಾಕಂ ಸಹಕುಟುಂಬಾನಾ ಕ್ಷೇಮಸ್ಥೈರ್ಯವಿಜಯವೀರ್ಯಅಭಯ-ಆಯುರಾರೋಗ್ಯಐಶ್ವರ್ಯಾಭಿ-ವೃದ್ಧ್ಯರ್ಥಂ, ಸಮಸ್ತದುರಿತೋಪಶಾಂತ್ಯರ್ಥಂ, ಸಮಸ್ತಸನ್ಮಂಗಳಾರ್ಥಂ ಸಮಸ್ತ ಅಭ್ಯುದಯಾರ್ಥಂ ಚ, ಧರ್ಮಾರ್ಥಕಾಮಮೋಕ್ಷಾಖ್ಯಚತುರ್ವಿಧ-ಫಲಪುರುಷಾರ್ಥಸಿದ್ಧ್ಯರ್ಥಂ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ .......... ಪ್ರೇರಣಯಾ ............... ಪ್ರೀತ್ಯರ್ಥಂ ಯಥಾಯೋಗ್ಯಂ ಸಂಪಾದಿತೇನ ದ್ರವ್ಯೇಣ ಯುಗಾದಿಪರ್ವಕಾಲೇ ಸಂವತ್ಸರ-ಅಯನ-ಋತು-ಮಾಸ-ಗ್ರಹ-ನಕ್ಷತ್ರ-ಕರಣ-ಯೋಗಾದ್ಯಭಿಮಾನಿದೇವತಾ ಪೂಜಾಂ ಕರಿಷ್ಯೇ ।

## ಘಂಟಾನಾದ ಮಾಡಬೇಕು

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।
ಕುರ್ವೇ ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ॥

## ಭೂತೋಚ್ಚಾಟನೆ ಮಾಡಬೇಕು

ಅಪಸರ್ಪಂತು ಯೇ ಭೂತಾಃ ಯೇ ಭೂತಾಃ ಭುವಿ ಸಂಸ್ಥಿತಾಃ ।
ಯೇ ಭೂತಾಃ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ॥

ಅಪಕ್ರಾಮಂತು ಯೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ ।
ತೇಷಾಮಪ್ಯವಿರೋಧೇನ ಪೂಜಾಕರ್ಮ ಸಮಾರಭೇ ॥

## ಗುರುಗಣಪತಿ ಪೂಜೆ ಮಾಡಬೇಕು

ಪ್ರತಿಯೊಂದು ಪೂಜೆಯ ಪ್ರಾರಂಭದಲ್ಲಿ ಗುರುಗಳಿಗೆ ಹಾಗೂ ಗಣಪತಿಗೆ ಮೊಟ್ಟಮೊದಲು ಪೂಜೆ ಮಾಡಬೇಕು.

ಶ್ರೀಗುರುಭ್ಯೋ ನಮಃ । ಆದಿಗುರುಭ್ಯೋ ನಮಃ । ಮೂಲಗುರುಭ್ಯೋ ನಮಃ । ಪರಮಗುರುಭ್ಯೋ ನಮಃ । ಶ್ರೀವೇದವ್ಯಾಸಾಯ ನಮಃ । ಆಶ್ವಲಾಯನಾ-ಚಾರ್ಯೇಭ್ಯೋ ನಮಃ ।

ಬಲಭಾಗದಲ್ಲಿ ಬರೆದ ಶ್ರೀಕಾರದಲ್ಲಿ ಗಂಧಾಕ್ಷತೆ ಪುಷ್ಪಗಳಿಂದ ಗುರುಗಳನ್ನು ಪೂಜಿಸಬೇಕು.

ಅಸ್ಮದ್ ಗುರುಸಮಾರಂಭಾಂ ಟೀಕಾಕೃತ್ಪಾದಮಧ್ಯಗಾಮ್ ।
ಶ್ರೀಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಮ್ ॥

ಆಪಾದಮೌಳಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥

ಓಂ ಶ್ರೀಗುರುಭ್ಯೋ ನಮಃ ಅನುಜ್ಞಾಂ ದೇಹಿ ।

ಶ್ರೀಕಾರದ ಪಕ್ಕದಲ್ಲಿ ಬರೆದ ಷಟ್ಕೋಣಮಂಡಲದಲ್ಲಿ ಬೆಳ್ಳಿಯ ಗಣಪತಿಯನ್ನಿಟ್ಟು ಪೂಜಿಸಬೇಕು. ಬೆಳ್ಳಿಗಣಪತಿ ಇಲ್ಲದಿದ್ದಲ್ಲಿ ಅಡಿಕೆಬೆಟ್ಟು, ಅರಿಶಿನಕೊಂಬುಗಳಲ್ಲಿ ಗಣಪತಿ ಆವಾಹನೆ ಮಾಡಿ ಪೂಜಿಸಬೇಕು.

ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ ।
ಲಂಬೋದರಶ್ಚ ವಿಕಟೋ ವಿಘ್ನರಾಜೋ ಗಣಾಧಿಪಃ ॥೧॥

ಧೂಮಕೇತುರ್ಗಣಾಧ್ಯಕ್ಷೋ ಫಾಲಚಂದ್ರೋ ಗಜಾನನಃ ।
ದ್ವಾದಶೈತಾನಿ ನಾಮಾನಿ ಯಃ ಪಠೇಚ್ಛೃಣುಯಾದಪಿ ॥೨॥

ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ ।
ಸಂಗ್ರಾಮೇ ಸರ್ವಕಾರ್ಯೇಷು ವಿಘ್ನಸ್ತಸ್ಯ ನ ಜಾಯತೇ ॥೩॥

ಅಭೀಪ್ಸಿತಾರ್ಥಸಿದ್ಧ್ಯರ್ಥಂ ಪೂಜಿತೋ ಯಃ ಸುರೈರಪಿ ।
ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥೪॥

ಗಣಾನಾಂ ತ್ವಾ ಗೃತ್ಸಮದ ಋಷಿಃ । ಜಗತೀಛಂದಃ ಗಣಪತಿರ್ದೇವತಾ । ಗಣಪತ್ಯಾವಾಹನೇ ವಿನಿಯೋಗಃ ॥

ಓಂ ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪಮಶ್ರವ-ಸ್ತಮಮ್ । ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆ ನಃ ಶೃಣ್ವನ್ನೂತಿಭಿಃ ಸೀದ ಸಾದನಮ್ ॥

## ಗಣಪತಿಗೆ ಸಂಕ್ಷೇಪವಾಗಿ ಷೋಡಶೋಪಚಾರ ಪೂಜೆ ಮಾಡಬೇಕು.

ಶ್ರೀಮಹಾಗಣಪತಯೇ ನಮಃ ॥ ಓಂ ಭೂಃ ಗಣಪತಿಮ್ ಆವಾಹಯಾಮಿ। ಓಂ ಭುವಃ ಗಣಪತಿಮ್ ಆವಾಹಯಾಮಿ । ಓಂ ಸ್ವಃ ಗಣಪತಿಮ್ ಆವಾಹ-ಯಾಮಿ । ಓಂ ಭೂರ್ಭುವಃ ಸ್ವಃ ಗಣಪತಿಮ್ ಆವಾಹಯಾಮಿ । ಮಹಾಗಣ-ಪತಯೇ ನಮಃ । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ । ಆವಾಹಯಾಮಿ ಆವಾಹನಂ ಸಮರ್ಪಯಾಮಿ । ಸ್ವಾಗತಂ ಸಮರ್ಪಯಾಮಿ । ಆಸನಂ ಸಮರ್ಪ-ಯಾಮಿ । ಪಾದಯೋಃ ಪಾದ್ಯಂ ಸಮರ್ಪಯಾಮಿ । ಅರ್ಘ್ಯಂ ಸಮರ್ಪಯಾಮಿ। ಆಚಮನಂ ಸಮರ್ಪಯಾಮಿ । ಮಧುಪರ್ಕಂ ಸಮರ್ಪಯಾಮಿ । ಪುನರಾಚಮನಂ ಸಮರ್ಪಯಾಮಿ । ಸ್ನಾನಂ ಸಮರ್ಪಯಾಮಿ । ವಸ್ತ್ರಂ ಸಮರ್ಪಯಾಮಿ । ಉಪವೀತಂ ಸಮರ್ಪಯಾಮಿ । ಆಭರಣಂ ಸಮರ್ಪಯಾಮಿ । ಗಂಧಂ ಸಮರ್ಪಯಾಮಿ । ಪುಷ್ಪಾಣಿ ಸಮರ್ಪಯಾಮಿ । ಧೂಪಮಾಘ್ರಾಪಯಾಮಿ । ದೀಪಂ ದರ್ಶಯಾಮಿ ।

ಮಹಾಗಣಪತಯೇ ನಮಃ ॥ ನೈವೇದ್ಯಾರ್ಥೇ ಗುಡೋಪಹಾರಮಹಾ-ನೈವೇದ್ಯಂ ನಿವೇದಯಾಮಿ । ತಾಂಬೂಲಂ ಸಮರ್ಪಯಾಮಿ । ನೀರಾಜನಂ ಸಮರ್ಪಯಾಮಿ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ।

ನಿಷುಸೀದೇತಿ ವೈರೂಪೋ ನಭಃಪ್ರಭೇದನ ಋಷಿಃ । ತ್ರಿಷ್ಟುಪ್ ಛಂದಃ । ಗಣಪತಿರ್ದೇವತಾ ಮಂತ್ರಪುಷ್ಪಾರ್ಚನೇ ವಿನಿಯೋಗಃ ।

ಓಂ ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಮ್। ನ ಋತೇ ತ್ವತ್ ಕ್ರಿಯತೇ ಕಿಂ ಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ ॥

ಮಂತ್ರಪುಷ್ಪಂ ಸಮರ್ಪಯಾಮಿ । ಧ್ಯಾನಾವಾಹನಾದಿಸರ್ವೋಪಚಾರಪೂಜಾಃ ಸಮರ್ಪಯಾಮಿ ॥

ವಕ್ರತುಂಡ ಮಹಾಕಾಯ ಬಾಲಸೂರ್ಯಸಮಪ್ರಭ ।
ಅವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥

ರಕ್ತಾಂಬರೋ ರಕ್ತತನೂ ರಕ್ತಮಾಲ್ಯಾನುಲೇಪನಃ ।
ಮಹೋದರೋ ಗಜಮುಖಃ ಪಾಶದಂತಾಂಕುಶಾಭಯೀ ।

ಬಿಭ್ರದ್ ಧ್ಯೇಯೋ ವಿಘ್ನಹರಃ ಕಾಮದಸ್ತ್ವರಯಾ ಹ್ಯಯಮ್ ॥
ಶ್ರೀಮಹಾಗಣಪತಯೇ ನಮಃ । ಓಂ ಕ್ಷಿಪ್ರಪ್ರಸಾದಾಯ ನಮಃ ।

ಪ್ರಾರ್ಥನಾಂ ಸಮರ್ಪಯಾಮಿ ॥ ಹೇ ದೇವ! ನಿರ್ವಿಘ್ನಂ ಕುರು ॥

ವರ್ಷದಲ್ಲಿ ಮಾಡುವ ಸಕಲ ಕಾರ್ಯಗಳು ನಿರ್ವಿಘ್ನವಾಗಿ ನಡೆಯಲಿ ಎಂಬುದಾಗಿ ಪ್ರಾರ್ಥಿಸಿ ಕೈಮುಗಿದು ಸಕಲವೂ ಫಲಪ್ರದವಾಗಲಿಯೆಂದು ಪ್ರಾರ್ಥಿಸಬೇಕು.

## ಶಿಂಶುಮಾರ ದೇವರ ಪೂಜೆ

ನವಗ್ರಹಗಳಿಗೆ ಮುಖ್ಯನಿಯಾಮಕನಾದ ಶಿಂಶುಮಾರ ಭಗವಂತನ ರೂಪವನ್ನು ಪಂಚಾಂಗದಲ್ಲಿ ಆವಾಹನೆ ಮಾಡಬೇಕು. 'ಶಿಂಶುಮಾರಾಯ ನಮಃ' ಎಂದು ೧೨ ಬಾರಿ ಪಂಚಾಂಗ ಮುಟ್ಟಿ ಹೇಳಬೇಕು.

## ಆವಾಹನೆ

ಅನಂತರ 'ಶ್ರೀಮುಖ್ಯಪ್ರಾಣಾಯ ನಮಃ' ಎಂದು ೫ ಬಾರಿ ಹೇಳಬೇಕು. ಅನಂತರ ಕೆಳಗಿನ ಕ್ರಮದಲ್ಲಿ ನವಗ್ರಹದೇವತೆಗಳನ್ನು ತಾರತಮ್ಯಕ್ಕೆ ಅನುಗುಣವಾಗಿ ಆವಾಹನೆ ಮಾಡಬೇಕು.

ಬೃಹಸ್ಪತಯೇ ನಮಃ । ಸೂರ್ಯಾಯ ನಮಃ । ಚಂದ್ರಾಯ ನಮಃ । ಶುಕ್ರಾಯ ನಮಃ । ಬುಧಾಯ ನಮಃ । ಕುಜಾಯ ನಮಃ । ಶನೈಶ್ಚರಾಯ ನಮಃ । ರಾಹವೇ

ನಮಃ। ಕೇತವೇ ನಮಃ। ಅಶ್ವಿನ್ಯಾದಿ ನಕ್ಷತ್ರಾಣಿ ಆವಾಹಯಾಮಿ। ಬವಾದಿಕರಣಾನಿ ಆವಾಹಯಾಮಿ । ವಿಷ್ಕಂಬಾದಿಯೋಗಾನ್ ಆವಾಹಯಾಮಿ । ಪ್ರಭವಾದಿ ಸಂವತ್ಸರಾಣಿ ಆವಾಹಯಾಮಿ ।

ಹೀಗೆ ನವಗ್ರಹ ದೇವತೆಗಳನ್ನು ಅಶ್ವಿನ್ಯಾದಿ ಇಪ್ಪತ್ತೇಳು ನಕ್ಷತ್ರಗಳನ್ನು, ೧೧ ಕರಣಗಳನ್ನು, ೨೭ ಯೋಗಗಳನ್ನು, ಷಷ್ಠೀ ಸಂವತ್ಸರಗಳನ್ನು ತದಭಿಮಾನಿ ದೇವತೆಗಳನ್ನು ಮಾನಸಿಕವಾಗಿ ಆವಾಹನೆ ಮಾಡಿ ಈ ಕೆಳಗಿನ ಮಂತ್ರವನ್ನು ಹೇಳಿ ಮಂತ್ರಾಕ್ಷತೆಯಿಂದ ಅರ್ಚನೆ ಮಾಡಬೇಕು.

## ಸಂವತ್ಸರ ದೇವತಾ ಪೂಜೆ

ಪ್ರಭವೋ ವಿಭವಃ ಶುಕ್ಲಃ ಪ್ರಮೋದಶ್ಚ ಪ್ರಜಾಪತಿಃ ।
ಅಂಗಿರಾಃ ಶ್ರೀಮುಖೋ ಭಾವೋ ಯುವಾ ಧಾತಾ ತಥೈವ ಚ ॥
ಈಶ್ವರೋ ಬಹುಧಾನ್ಯಶ್ಚ ಪ್ರಮಾಥೀ ವಿಕ್ರಮೋ ವೃಷಃ ।
ಚಿತ್ರಭಾನುಃ ಸ್ವಭಾನುಶ್ಚ ತಾರಣಃ ಪಾರ್ಥಿವೋ ವ್ಯಯಃ ।
ಸರ್ವಜಿತ್ ಸರ್ವಧಾರೀ ಚ ವಿರೋಧೀ ವಿಕೃತಿಃ ಖರಃ ।
ನಂದನೋ ವಿಜಯಶ್ಚೈವ ಜಯೋ ಮನ್ಮಥದುರ್ಮುಖೌ ॥
ಹೇಮಲಂಬೀ ವಿಲಂಬೀ ಚ ವಿಕಾರೀ ಶಾರ್ವರೀ ಪ್ಲವಃ ।
ಶುಭಕೃತ್ ಶೋಭಕೃತ್ ಕ್ರೋಧೀ ವಿಶ್ವಾವಸುಪರಾಭವೌ ॥
ಪ್ಲವಂಗಃ ಕೀಲಕಃ ಸೌಮ್ಯಃ ಸಾಧಾರಣೋ ವಿರೋಧಿಕೃತ್ ।
ಪರಿಧಾವೀ ಪ್ರಮಾದೀ ಚ ಆನಂದೋ ರಾಕ್ಷಸೋ ನಲಃ ॥
ಪಿಂಗಲಃ ಕಾಲಯುಕ್ತಶ್ಚ ಸಿದ್ಧಾರ್ಥೀ ರೌದ್ರದುರ್ಮತೀ ।
ದುಂದುಭೀ ರುಧಿರೋದ್ಗಾರೀ ರಕ್ತಾಕ್ಷೀ ಕ್ರೋಧನಃ ಕ್ಷಯಃ ॥

ತತ್ತತ್ ಸಂವತ್ಸರಾಭಿಮಾನಿದೇವತಾಭ್ಯೋ ನಮಃ ತದಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ॥

## ಅಯನ ದೇವತಾ ಪೂಜೆ

ಭಾನೋರ್ಮಕರಸಂಕ್ರಾಂತೇಃ ಷಣ್ಮಸಾ ಉತ್ತರಾಯಣಮ್
ಕರ್ಕಾದೇಸ್ತು ತಥೈವ ಸ್ಯಾತ್ ಷಣ್ಮಸಾ ದಕ್ಷಿಣಾಯನಮ್ ॥

ಅಯನದೇವತಾಭ್ಯೋ ನಮಃ ತದಂತರ್ಗತ ಭಾರತೀರಮಣ-ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ॥

## ಋತು ದೇವತಾ ಪೂಜೆ

ವಸಂತಗ್ರೀಷ್ಮಕೌ ಚೈವ ವರ್ಷರ್ತುಃಶರದೌ ತಥಾ ।
ಹೇಮಂತಶಿಶಿರೌ ಚೈವ ಷಡೇತೇ ಋತವಃ ಸ್ಮೃತಾಃ ॥

ಋತ್ವಭಿಮಾನಿದೇವತಾಭ್ಯೋ ನಮಃ ತದಂತರ್ಗತ ಭಾರತೀರಮಣ-ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ॥

## ಮಾಸದೇವತಾ ಪೂಜೆ

ಚೈತ್ರಾಭಿಮಾನಿದೇವತಾಭ್ಯೋ ನಮಃ - ತನ್ನಿಯಾಮಕ ವಿಷ್ಣವೇ ನಮಃ
ವೈಶಾಖಾಭಿಮಾನಿದೇವತಾಭ್ಯೋ ನಮಃ - ತನ್ನಿಯಾಮಕ ಮಧುಸೂದನಾಯ ನಮಃ
ಜ್ಯೇಷ್ಠಾಭಿಮಾನಿದೇವತಾಭ್ಯೋ ನಿಯಾಮಕ ನಮಃ - ತನ್ನಿಯಾಮಕ ತ್ರಿವಿಕ್ರಮಾಯ ನಮಃ
ಆಷಾಢಾಭಿಮಾನಿದೇವತಾಭ್ಯೋ ನಮಃ - ತನ್ನಿಯಾಮಕ ವಾಮನಾಯ ನಮಃ
ಶ್ರಾವಣಾಭಿಮಾನಿದೇವತಾಭ್ಯೋ ನಮಃ - ತನ್ನಿಯಾಮಕ ಶ್ರೀಧರಾಯ ನಮಃ
ಭಾದ್ರಪದಾಭಿಮಾನಿದೇವತಾಭ್ಯೋ ನಮಃ - ತನ್ನಿಯಾಮಕ ಹೃಷೀಕೇಶಾಯಾ ನಮಃ
ಆಶ್ವಯುಜಾಭಿಮಾನಿದೇವತಾಭ್ಯೋ ನಮಃ - ತನ್ನಿಯಾಮಕ ಪದ್ಮನಾಭಾಯ ನಮಃ
ಕಾರ್ತಿಕಾಭಿಮಾನಿದೇವತಾಭ್ಯೋ ನಮಃ - ತನ್ನಿಯಾಮಕ ದಾಮೋದರಾಯ ನಮಃ
ಮಾರ್ಗಶೀರ್ಷಾಭಿಮಾನಿದೇವತಾಭ್ಯೋ ನಮಃ - ತನ್ನಿಯಾಮಕ ಕೇಶವಾಯ ನಮಃ
ಪೌಷಾಭಿಮಾನಿದೇವತಾಭ್ಯೋನಮಃ - ತನ್ನಿಯಾಮಕ ನಾರಾಯಣಾಯ ನಮಃ
ಮಾಘಾಭಿಮಾನಿದೇವತಾಭ್ಯೋ ನಮಃ - ತನ್ನಿಯಾಮಕ ಮಾಧವಾಯ ನಮಃ
ಫಾಲ್ಗುನಾಭಿಮಾನಿದೇವತಾಭ್ಯೋ ನಮಃ - ತನ್ನಿಯಾಮಕ ಗೋವಿಂದಾಯ ನಮಃ

## ನವಗ್ರಹದೇವತಾ ಪೂಜೆ

ಗುರವೇ ನಮಃ - ತನ್ನಿಯಾಮಕ ವೇದವ್ಯಾಸಾಯ ನಮಃ
ಸೂರ್ಯಾಯ ನಮಃ - ತನ್ನಿಯಾಮಕ ರುದ್ರಾಯ ನಮಃ
ಚಂದ್ರಾಯ ನಮಃ - ತನ್ನಿಯಾಮಕ ದುರ್ಗಾಯೈ ನಮಃ
ಶುಕ್ರಾಯ ನಮಃ - ತನ್ನಿಯಾಮಕ ಲಕ್ಷ್ಮ್ಯೈ ನಮಃ
ಬುಧಾಯ ನಮಃ - ತನ್ನಿಯಾಮಕ ವಿಷ್ಣವೇ ನಮಃ
ಕುಜಾಯ ನಮಃ - ತನ್ನಿಯಾಮಕ ಸುಬ್ರಹ್ಮಣ್ಯಾಯ ನಮಃ
ಶನಯೈ ನಮಃ - ತನ್ನಿಯಾಮಕ ವಿಷ್ಣವೇ ನಮಃ
ರಾಹವೇ ನಮಃ - ತನ್ನಿಯಾಮಕ ನಾಗಾಯ ನಮಃ
ಕೇತವೇ ನಮಃ - ತನ್ನಿಯಾಮಕ ಗಣಪತ್ಯೇ ನಮಃ

## ದ್ವಾದಶರಾಶಿದೇವತಾ ಪೂಜೆ

ಮೇಷಾಯ ನಮಃ - ತದಧಿಪತಿ ಕುಜಾಯ ನಮಃ
ವೃಷಭಾಯ ನಮಃ - ತದಧಿಪತಿ ಶುಕ್ರಾಯ ನಮಃ
ಮಿಥುನಾಯ ನಮಃ - ತದಧಿಪತಿ ಬುಧಾಯ ನಮಃ
ಕರ್ಕಾಟಕಾಯ ನಮಃ - ತದಧಿಪತಿ ಚಂದ್ರಾಯ ನಮಃ
ಸಿಂಹಾಯ ನಮಃ - ತದಧಿಪತಿ ಸೂರ್ಯಾಯ ನಮಃ
ಕನ್ಯಾಯ ನಮಃ - ತದಧಪತಿ ಬುಧಾಯ ನಮಃ
ತುಲಾಯ ನಮಃ - ತದಧಪತಿ ಶುಕ್ರಾಯ ನಮಃ
ವೃಶ್ಚಿಕಾಯ ನಮಃ - ತದಧಪತಿ ಕುಜಾಯ ನಮಃ
ಧನವೇ ನಮಃ - ತದಧಿಪತಿ ಗುರವೇ ನಮಃ
ಮಕರಾಯ ನಮಃ - ತದಧಿಪತಿ ಶನಯೇ ನಮಃ
ಕುಂಭಾಯ ನಮಃ - ತದಧಿಪತಿ ಶನಯೇ ನಮಃ
ಮೀನಾಯ ನಮಃ - ತದಧಿಪತಿ ಗುರವೇ ನಮಃ

# ನಕ್ಷತ್ರದೇವತಾ ಪೂಜೆ

| ನಕ್ಷತ್ರಗಳು | ನಿಯಾಮಕರು |
|---|---|
| ೧. ಅಶ್ವಿನ್ಯೈ ನಮಃ | - ತನ್ನಿಯಾಮಕ ಅಶ್ವಿನೀದೇವತಾಭ್ಯೋ ನಮಃ |
| ೨. ಭರಣ್ಯೈ ನಮಃ | - ತನ್ನಿಯಾಮಕ ಯಮಧರ್ಮಾಯ ನಮಃ |
| ೩. ಕೃತ್ತಿಕಾಯ್ಯೈ ನಮಃ | - ತನ್ನಿಯಾಮಕ ಅಗ್ನಿದೇವಾಯ ನಮಃ |
| ೪. ರೋಹಿಣ್ಯೈ ನಮಃ | - ತನ್ನಿಯಾಮಕ ಚತುರ್ಮುಖಬ್ರಹ್ಮಣೇ ನಮಃ |
| ೫. ಮೃಗಶಿರಾಯ್ಯೈನಮಃ | - ತನ್ನಿಯಾಮಕ ಚಂದ್ರಾಯ ನಮಃ |
| ೬. ಆರ್ದ್ರಾಯ್ಯೈ ನಮಃ | - ತನ್ನಿಯಾಮಕ ರುದ್ರಾಯ ನಮಃ |
| ೭. ಪುನರ್ವಸವೇ ನಮಃ | - ತನ್ನಿಯಾಮಕ ಅದಿತ್ಯೈ ನಮಃ |
| ೮. ಪುಷ್ಯಾಯ್ಯೈ ನಮಃ | - ತನ್ನಿಯಾಮಕ ಬೃಹಸ್ಪತ್ಯೇ ನಮಃ |
| ೯. ಆಶ್ಲೇಷಾಯ್ಯೈ ನಮಃ | - ತನ್ನಿಯಾಮಕ ನಾಗಾಯ ನಮಃ |
| ೧೦. ಮಘಾಯ್ಯೈ ನಮಃ | - ತನ್ನಿಯಾಮಕ ಪಿತೃಭ್ಯೋ ನಮಃ |
| ೧೧. ಪೂರ್ವಫಲ್ಗುನ್ಯೈ ನಮಃ | - ತನ್ನಿಯಾಮಕ ಭಗಾಯೇ ನಮಃ |
| ೧೨. ಉತ್ತರ ಫಲ್ಗುನ್ಯೈ ನಮಃ | - ತನ್ನಿಯಾಮಕ ಅರ್ಯಮಾಯೇ ನಮಃ |
| ೧೩. ಹಸ್ತಾಯ್ಯೈ ನಮಃ | - ತನ್ನಿಯಾಮಕ ಸೂರ್ಯಾಯ ನಮಃ |
| ೧೪. ಚಿತ್ರಾಯ್ಯೈ ನಮಃ | - ತನ್ನಿಯಾಮಕ ವಿಶ್ವಕರ್ಮಣೇ ನಮಃ |
| ೧೫. ಸ್ವಾತ್ಯೈ ನಮಃ | - ತನ್ನಿಯಾಮಕ ವಾಯವೇ ನಮಃ |
| ೧೬. ವಿಶಾಖಾಯ್ಯೈ ನಮಃ | - ತನ್ನಿಯಾಮಕ ಇಂದ್ರಾಯ್ಯೈ ನಮಃ |
| ೧೭. ಅನೂರಾಧಾಯ್ಯೈ ನಮಃ | - ತನ್ನಿಯಾಮಕ ಮಿತ್ರಾಯ ನಮಃ |
| ೧೮. ಜ್ಯೇಷ್ಠಾಯ್ಯೈ ನಮಃ | - ತನ್ನಿಯಾಮಕ ಇಂದ್ರಾಯ ನಮಃ |
| ೧೦. ಮೂಲಾಯ್ಯೈ ನಮಃ | - ತನ್ನಿಯಾಮಕ ನಿರ್ಋತ್ಯೈ ನಮಃ |
| ೨೦. ಪೂರ್ವಾಷಾಢಾಯ್ಯೈ ನಮಃ | - ತನ್ನಿಯಾಮಕ ಬುಧಾಯ ನಮಃ |
| ೨೧. ಉತ್ತರಾಷಾಢಾಯ್ಯೈ ನಮಃ | - ತನ್ನಿಯಾಮಕ ವಿಶ್ವೇಭ್ಯೋ ದೇವೇಭ್ಯೋ ನಮಃ |
| ೨೨. ಶ್ರವಣಾಯ್ಯೈ ನಮಃ | - ತನ್ನಿಯಾಮಕ ಮಹಾವಿಷ್ಣವೇ ನಮಃ |

೨೩. ಧನಿಷ್ಠಾಯೈ ನಮಃ - ತನ್ನಿಯಾಮಕ ವಸವೇ ನಮಃ
೨೪. ಶತಭಿಷಾಯೈ ನಮಃ - ತನ್ನಿಯಾಮಕ ವರುಣಾಯ ನಮಃ
೨೫. ಪೂರ್ವಾಭಾದ್ರಾಯೈ ನಮಃ - ತನ್ನಿಯಾಮಕ ಅಜೈಕಪಾದೇ ನಮಃ
೨೬. ಉತ್ತರಭಾದ್ರಾಯೈ ನಮಃ - ತನ್ನಿಯಾಮಕ ಅಹಿರ್ಬುಧ್ನ್ಯೇ ನಮಃ
೨೭. ರೇವತ್ಯೈ ನಮಃ - ತನ್ನಿಯಾಮಕ ಪೂಷಾಯೈ ನಮಃ

## ಕರಣ ದೇವತಾ ಪೂಜೆ

| ಚರ ಕರಣಗಳು ಅಧಿದೇವತೆಗಳು | | ಸ್ಥಿರ ಕರಣಗಳು ಅಧಿದೇವತೆಗಳು |
|---|---|---|
| ೧. ಬವಾಯ ನಮಃ (ಸಿಂಹ) | - | ತನ್ನಿಯಾಮಕ ಇಂದ್ರಾಯ ನಮಃ |
| ೨. ಬಾಲವಾಯ ನಮಃ (ಹುಲಿ) | - | ತನ್ನಿಯಾಮಕ ಬ್ರಹ್ಮಣೇ ನಮಃ |
| ೩. ಕೌಲವಾಯ ನಮಃ (ಹಂದಿ) | - | ತನ್ನಿಯಾಮಕ ಮಿತ್ರಾಯೈ ನಮಃ |
| ೪. ತೈತಿಲೆಕರಣಾಯ ನಮಃ (ಕಪ್ಪೆ) | - | ತನ್ನಿಯಾಮಕ ಅರ್ಯಮನೇ ನಮಃ |
| ೫. ಗರಿಜಾಯ ನಮಃ (ಆನೆ) | - | ತನ್ನಿಯಾಮಕ ಪೃಥ್ವ್ಯೈನಮಃ |
| ೬. ವಣಿಜೆ ನಮಃ (ಎಮ್ಮೆ) | - | ತನ್ನಿಯಾಮಕ ಶ್ರೀದೇವ್ಯೈ ನಮಃ |
| ೭. ಭದ್ರಾಯೈ ನಮಃ (ಕುದುರೆ) | - | ತನ್ನಿಯಾಮಕ ಯಮಾಯ ನಮಃ |
| ೮. ಶಕುನ್ಯೈ ನಮಃ (ನಾಯಿ) | - | ತನ್ನಿಯಾಮಕ ಕಲಯೇ ನಮಃ |
| ೯. ಚತುಷ್ಪಾದಾಯೈ ನಮಃ (ಎತ್ತು) | - | ತನ್ನಿಯಾಮಕ ವೃಕಾಯ ನಮಃ |
| ೧೦. ನಾಗಾಯ ನಮಃ (ಸರ್ಪ) | - | ತನ್ನಿಯಾಮಕ ಸರ್ಪಾಯ ನಮಃ |
| ೧೧. ಕಿಸ್ತುಂಘ್ನ್ಯೈ ನಮಃ (ಕೋಳಿ) | - | ತನ್ನಿಯಾಮಕ ವಾಯವೇ ನಮಃ |

## ಯೋಗ ದೇವತಾ ಪೂಜೆ

| ಹೆಸರು | | ದೇವತೆ |
|---|---|---|
| ೧. ವಿಷ್ಕಂಭಾಯೈ ನಮಃ | - | ತನ್ನಿಯಾಮಕ ಯಮಾಯ ನಮಃ |
| ೨. ಪ್ರೀತ್ಯೈ ನಮಃ | - | ತನ್ನಿಯಾಮಕ ವಿಷ್ಣವೇ ನಮಃ |
| ೩. ಆಯುಷ್ಮತೇ ನಮಃ | - | ತನ್ನಿಯಾಮಕ ಚಂದ್ರಾಯ ನಮಃ |
| ೪. ಸೌಭಾಗ್ಯಾಯ ನಮಃ | - | ತನ್ನಿಯಾಮಕ ಬ್ರಹ್ಮಣೇ ನಮಃ |
| ೫. ಶೋಭನಾಯೈ ನಮಃ | - | ತನ್ನಿಯಾಮಕ ಬೃಹಸ್ಪತ್ಯೇ ನಮಃ |

೬. ಅತಿಗಂಡಾಯ ನಮಃ - ತನ್ನಿಯಾಮಕ ಚಂದ್ರಾಯ ನಮಃ
೭. ಸುಕರ್ಮಣೇ ನಮಃ - ತನ್ನಿಯಾಮಕ ಇಂದ್ರಾಯ ನಮಃ
೮. ಧೃತ್ಯೈ ನಮಃ - ತನ್ನಿಯಾಮಕ ಆಪ್ತ್ರೇ ನಮಃ
೯. ಶೂಲಾಯ್ಯೈ ನಮಃ - ತನ್ನಿಯಾಮಕ ಸರ್ಪಾಯ ನಮಃ
೧೦. ಗಂಡಾಯ ನಮಃ - ತನ್ನಿಯಾಮಕ ಅಗ್ನಯೇ ನಮಃ
೧೧. ವೃದ್ಧ್ಯೈ ನಮಃ - ತನ್ನಿಯಾಮಕ ಸೂರ್ಯಾಯ ನಮಃ
೧೨. ಧ್ರುವಾಯ ನಮಃ - ತನ್ನಿಯಾಮಕ ಪೃಥ್ವೇ ನಮಃ
೧೩. ವ್ಯಾಘಾತಾಯ ನಮಃ - ತನ್ನಿಯಾಮಕ ಪವನಾಯ ನಮಃ
೧೪. ಹರ್ಷಣಾಯ ನಮಃ - ತನ್ನಿಯಾಮಕ ರುದ್ರಾಯ ನಮಃ
೧೫. ವಜ್ರಾಯ ನಮಃ - ತನ್ನಿಯಾಮಕ ವರುಣಾಯ ನಮಃ
೧೬. ಸಿದ್ಧ್ಯೈ ನಮಃ - ತನ್ನಿಯಾಮಕ ಗಣೇಶಾಯ ನಮಃ
೧೭. ವ್ಯತೀಪಾತಾಯ ನಮಃ - ತನ್ನಿಯಾಮಕ ಶಿವಾಯ ನಮಃ
೧೮. ವರೀಯತೇ ನಮಃ - ತನ್ನಿಯಾಮಕ ಕುಬೇರಾಯ ನಮಃ
೧೯. ಪರಿಘಾಯ ನಮಃ - ತನ್ನಿಯಾಮಕ ವಿಶ್ವಕರ್ಮಣೇ ನಮಃ
೨೦. ಶಿವಾಯ ನಮಃ - ತನ್ನಿಯಾಮಕ ಮಿತ್ರಾಯ ನಮಃ
೨೧. ಸಿದ್ಧಾಯೇ ನಮಃ - ತನ್ನಿಯಾಮಕ ಕಾರ್ತಿಕೇಯಾಯ ನಮಃ
೨೨. ಸಾಧ್ಯಾಯ ನಮಃ - ತನ್ನಿಯಾಮಕ ಸಾವಿತ್ರ್ಯೈ ನಮಃ
೨೩. ಶುಭಾಯ ನಮಃ - ತನ್ನಿಯಾಮಕ ಕಮಲಾಯೇ ನಮಃ
೨೪. ಶುಕ್ಲಾಯ ನಮಃ - ತನ್ನಿಯಾಮಕ ಗೌರೀಯೇ ನಮಃ
೨೫. ಬ್ರಹ್ಮಣೇ ನಮಃ - ತನ್ನಿಯಾಮಕ ಅಶ್ವಿನೀ ದೇವತಾಭ್ಯೋ ನಮಃ
೨೬. ಐಂದ್ರಾಯ ನಮಃ - ತನ್ನಿಯಾಮಕ ಪಿತೃಭ್ಯೋ ನಮಃ
೨೭. ವೈಧೃತ್ಯೈ ನಮಃ - ತನ್ನಿಯಾಮಕ ಅದಿತ್ಯೈ ನಮಃ

ಯಾವ ಸಂವತ್ಸರವು ನಡೆಯುತ್ತಿರುತ್ತದೋ, ಆ ಸಂವತ್ಸರದ ಹೆಸರನ್ನು ಮತ್ತೊಮ್ಮೆ ಉಚ್ಚರಿಸಿ ತದಂತರ್ಗತನಾದ ಭಗವಂತನಿಗೆ ವಿಶೇಷವಾಗಿ ಪೂಜಿಸಬೇಕು. ಹಾಗೂ ಆ ದಿನದ ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳನ್ನು ಆಯನ ದೇವತೆಗಳನ್ನು ಒಮ್ಮೆ ಸ್ಮರಿಸಿ, ಪುನಃ ಪೂಜಿಸಬೇಕು.

# ಷೋಡಶೋಪಚಾರ ಪೂಜೆ

ಸಂಕ್ಷೇಪವಾಗಿ ಷೋಡಶೋಪಚಾರ ಪೂಜೆಯನ್ನು ಸಮರ್ಪಿಸಬೇಕು.

ಅರ್ಘ್ಯಂ ಸಮರ್ಪಯಾಮಿ

ಪಾದ್ಯಂ ಸಮರ್ಪಯಾಮಿ,

ಆಚಮನಂ ಸಮರ್ಪಯಾಮಿ,

ಮಧುಪರ್ಕಂ ಸಮರ್ಪಯಾಮಿ,

ಪುನರಾಚಮನಮ್ ಸಮರ್ಪಯಾಮಿ

ಸ್ನಾನಮ್ ಸಮರ್ಪಯಾಮಿ

ವಸ್ತ್ರಂ ಸಮರ್ಪಯಾಮಿ

ಉಪವೀತಂ ಸಮರ್ಪಯಾಮಿ

ಆಸನಂ ಸಮರ್ಪಯಾಮಿ

ಗಂಧಮ್ ಸಮರ್ಪಯಾಮಿ

ಅಕ್ಷತಮ್ ಸಮರ್ಪಯಾಮಿ

ಪುಷ್ಪಂ ಸಮರ್ಪಯಾಮಿ

ಧೂಪಂ ಸಮರ್ಪಯಾಮಿ

ದೀಪಂ ಸಮರ್ಪಯಾಮಿ

ನೈವೇದ್ಯಂ ಸಮರ್ಪಯಾಮಿ

ಮಂಗಳಾರತಿಂ ಸಮರ್ಪಯಾಮಿ

ಮಂತ್ರಪುಷ್ಪಂ ಸಮರ್ಪಯಾಮಿ

ನಮಸ್ಕಾರಂ ಸಮರ್ಪಯಾಮಿ

ಈ ಶ್ಲೋಕವನ್ನು ಪಂಚಾಂಗಕ್ಕೆ ಹೇಳಿ ಮಂಗಳಾರತಿಯನ್ನು ಮಾಡಬೇಕು

ಆದಿತ್ಯಾದಿನವಗ್ರಹಾಃ ಶುಭಕರಾಃ ಮೇಷಾದಯೋ ರಾಶಯೋ

ನಕ್ಷತ್ರಾಣಿ ಸಯೋಗಕಾಶ್ಚ ತಿಥಯಃ ತದ್ದೇವತಾಸ್ತದ್ಗಣಾಃ ।

ಮಾಸಾಬ್ದಾಃ ಋತವಸ್ತಥೈವ ದಿವಸಾಃ ಸಂಧ್ಯಾಸ್ತಥಾ ರಾತ್ರಯಃ

ಸರ್ವೇ ಸ್ಥಾವರಜಂಗಮಾಃ ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥೮॥

## ಉದ್ವಾಸನೆ

ಪಂಚಾಂಗದ ಮೇಲೆ ಮಂತ್ರಾಕ್ಷತೆಯನ್ನು ಏರಿಸಿ, ದೇವತೆಗಳನ್ನು ಉದ್ವಾಸನೆ ಮಾಡಿರಿ.

**ಯಾಂತು ದೇವಗಣಾಃ ಸರ್ವೇ ಪೂಜಾಂ ಆದಾಯಮತ್ಕೃತಾಂ**

**ಇಷ್ಟಕಾಮ್ಯಾರ್ಥಸಿದ್ಧ್ಯರ್ಥಂ ಪುನರಾಗಮನಾಯಚ ||**

ಘಂಟಾನಾದ ಮಾಡಿರಿ.

ಅನೇನ ಪಂಚಾಂಗಪೂಜನೇನ ಅಸ್ಮದ್ಗುರ್ವಂತರ್ಗತಶ್ರೀಭಾರತೀರಮಣ-ಮುಖ್ಯಪ್ರಾಣಾಂತರ್ಗತ ಶ್ರೀಶಿಂಶುಮಾರರೂಪಿಪರಮಾತ್ಮಾ ಪ್ರೀಯತಾಂ ಶ್ರೀ ಕೃಷ್ಣಾರ್ಪಣಮಸ್ತು ||

## ಕೃಷ್ಣಾರ್ಪಣ

ಆಚಮನೆ ಮಾಡಿ ಕೃಷ್ಣಾರ್ಪಣ ಬಿಡಬೇಕು

ಪ್ರೀಯತಾಂ ಶ್ರೀ ಕೃಷ್ಣಾರ್ಪಣಮಸ್ತು ||

* * * * *

## ಪಂಚಾಂಗ ಪಠನ ಕ್ರಮ

'ಸಂಪೂಜ್ಯೋ ಗಣಕಃ ಫಲಂ ಚ ಶೃಣುಯಾತ್ ತಸ್ಮಾಚ್ಚ ಲಾಭಪ್ರದಮ್' ಎಂಬ ಶಾಸ್ತ್ರದ ಮಾತಿನಂತೆ ಜ್ಯೋತಿಷಿಯನ್ನು ಮನೆಗೆ ಕರೆಯಿಸಿ, ಅವನ ಮೂಲಕವೇ ಪಂಚಾಂಗವನ್ನು ಶ್ರವಣ ಮಾಡಬೇಕು. ಹಾಗೂ ಆ ಜ್ಯೋತಿಷಿಗೂ ಕೂಡ ಫಲತಾಂಬೂಲಾದಿಗಳನ್ನು ನೀಡಿ ಆರಾಧಿಸಬೇಕು. ಒಂದು ವೇಳೆ ಜ್ಯೋತಿಷಿಯು ದೊರಕದೇ ಇದ್ದಾಗ ಯಜಮಾನನೇ ಪಂಚಾಂಗದ ಪೂಜೆಯನ್ನು ಮಾಡಿ ಪಠನೆಯನ್ನು ಮಾಡಬೇಕು. ಜ್ಯೋತಿಷಿಗೆ ತಲುಪಿಸಬೇಕಾದ ದಕ್ಷಿಣೆಯನ್ನು ಅವರ ಮನೆಗೆ ತೆಗೆದುಕೊಂಡು ಹೋಗಿ ನೀಡಬೇಕು.

ಪ್ರಾಪ್ತೇ ನೂತನವತ್ಸರೇ ಪ್ರತಿಮುಖಂ ದೃಷ್ಟ್ವಾ ಶುಭಂ ತೋರಣಂ
ಸ್ನಾನಂ ಮಂಗಲಮಾಚರೇತ್ ದ್ವಿಜವರಾನ್ ಸಂಪೂಜ್ಯ ಭಕ್ತ್ಯಾ ಹರಿಮ್ ।
ವೃದ್ಧಾಂಶ್ಚೈವ ಗುರೂನ್ ಪ್ರಣಮ್ಯ ಮಹಿಲಾಬಾಲಾನ್ ಸ್ವಯಂ ಭೂಷಿತೋಽ-
ಲಂಕೃತ್ಯಾಂಬರಭೂಷಣೈಶ್ಚ ಶೃಣುಯಾತ್ ಪುಣ್ಯಂ ಫಲಂ ವಾರ್ಷಿಕಮ್ ॥

ಹೊಸವರ್ಷವು ಬಂದಾಗ ಮಂಗಳದ್ರವ್ಯಗಳ ನಡುವೆ ಇರುವ ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಳ್ಳಬೇಕು. ತಳಿರು-ತೋರಣಗಳಿಂದ ಮನೆಯನ್ನು ಅಲಂಕರಿಸಬೇಕು. ಮಂಗಲಸ್ನಾನವನ್ನು ಆಚರಿಸಬೇಕು. ಬ್ರಾಹ್ಮಣರನ್ನು ಮನೆಗೆ ಕರೆಸಿ, ಅನ್ನಾರಾಧನೆ ಮಾಡಬೇಕು. ಭಗವಂತನನ್ನು ಸಂತೋಷ ಪಡಿಸಬೇಕು. ಗುರುಗಳನ್ನು ವೃದ್ಧರನ್ನು ಅವಶ್ಯವಾಗಿ ನಮಸ್ಕಾರ ಮಾಡಬೇಕು. ಹೆಣ್ಣುಮಕ್ಕಳಿಗೆ ಬಾಲಕರಿಗೆ ನೂತನವಾದ ವಸ್ತ್ರಾಭರಣಗಳನ್ನು ನೀಡಬೇಕು. ತಾನೂ ಸಹ ಹೊಸ ವಸ್ತ್ರವನ್ನು ಧರಿಸಬೇಕು. ಪಂಚಾಂಗವನ್ನು ಶ್ರವಣ ಮಾಡಬೇಕು. ಆಗ ಆ ವರ್ಷವು ಸಂಪೂರ್ಣ ಪುಣ್ಯದಾಯಕವಾಗುತ್ತದೆ.

ಈ ಮಂಗಲಶ್ಲೋಕವನ್ನು ಅವಶ್ಯವಾಗಿ ಪಠನ ಮಾಡಬೇಕು.

ಇಲ್ಲಿಗೆ ಪಂಚಾಂಗಪಠನ ಕ್ರಮವು ಮುಗಿಯಿತು.

* * * *

## ಅಥ ಪಂಚಾಂಗ ಪಠನಂ

ನೂತನಸಂವತ್ಸರೇ ಶೋಭನಫಲಸಿದ್ಧ್ಯರ್ಥಂ ಕಾಲನಿಯಾಮಕ-ಶಿಂಶುಮಾರಾತ್ಮಕಲಕ್ಷ್ಮೀನಾರಾಯಣಪ್ರೀತ್ಯರ್ಥಂ ಸಂವತ್ಸರಫಲಪಠನಪೂರ್ವಕಂ ಪಂಚಾಂಗಪಠನಂ (ಶ್ರವಣಂ) ಅಹಂ ಕರಿಷ್ಯೇ । ಎಂದು ಸಂಕಲ್ಪವನ್ನು ಮಾಡಬೇಕು.

ಪ್ರತಿಯೊಂದು ಪಂಚಾಂಗಗಳಲ್ಲಿಯೂ ಕೂಡ ಸಂವತ್ಸರದ ಫಲಗಳನ್ನು ಬರೆದಿರುತ್ತಾರೆ. ಅದರ ಸಂಸ್ಕೃತ ಶ್ಲೋಕವನ್ನು ಪಾರಾಯಣ ಮಾಡುವುದೇ ಶ್ರೇಷ್ಠ. ಉಳಿದವರಿಗೆ ಅರ್ಥವಾಗುವುದಕ್ಕಾಗಿ ಕನ್ನಡದಲ್ಲಿ ಬರೆದ ಅನುವಾದವನ್ನು ಓದಬಹುದು.

ಪಂಚಾಂಗದ ಫಲವನ್ನು ಓದಿದ ಮೇಲೆ ಅಂದಿನ ತಿಥಿ, ವಾರ, ನಕ್ಷತ್ರ , ಯೋಗ, ಕರಣಗಳನ್ನು ಪಠನ ಮಾಡಬೇಕು. ಪಠನೆ ಮಾಡುವ ಮೊದಲು ಇದನ್ನು ಹೇಳಬೇಕು-

ಮಂಗಲಂ ನಿತ್ಯಕಲ್ಯಾಣಂ ಲಕ್ಷ್ಮೀಸೌಭಾಗ್ಯವರ್ಧನಮ್ ।
ಮನೋರಥಃ ಪ್ರಾಪ್ತಿಕರಂ ಪಂಚಾಂಗಮವಧಾರಯ ॥

ಅದ್ಯತಿಥಿಶ್ರವಣಂ ಅದ್ಯಮಾರ್ತಾಂಡಮಂಡಲಸ್ಯ ಅರ್ಕೋದಯಾದುಪರಿ .......... ಸಂವತ್ಸರಸ್ಯ ಉತ್ತರಾಯಣೇ ವಸಂತಋತೌ ಮೀನರ್ಕೇ......... ದಿವಸೇ ಚೈತ್ರಮಾಸೇ ಶುಕ್ಲಪಕ್ಷೇ ........... ವಾಸರೇ ಪ್ರತಿಪದಿ ದಿವಸೇ ................ ಘಟಿಕಾಃ ............. ಮಹಾನಕ್ಷತ್ರೇ : ........... ಘಟಿಕಾಃ .......... ಯೋಗೇ ........... ಘಟಿಕಾಃ .......... ಕರಣೇ .......... ಘಟಿಕಾಃ ಪುನಃ ಶುಭವಚನಂ ........... ಸಂವತ್ಸರಸ್ಯ ಉತ್ತರಾಯಣೇ ವಸಂತಋತೌ ಮೀನರ್ಕೇ .......... ದಿವಸೇ ಚೈತ್ರಮಾಸೇ ಶುಕ್ಲಪಕ್ಷೇ .......... ವಾಸರೇ ಪ್ರತಿಪದಿ ದಿವಸೇ ............. ಘಟಿಕಾಃ । ಶ್ವಃ ............. ಸಂವತ್ಸರಸ್ಯ ಉತ್ತರಾಯಣೇ ವಸಂತಋತೌಃ ಮೀನರ್ಕೇ ............ ದಿವಸೇ ಚೈತ್ರಮಾಸೇ ಶುಕ್ಲಪಕ್ಷೇ ............. ವಾಸರೇ ದ್ವಿತೀಯಾಯಾಂ ........... ಘಟಿಕಾಃ

ತಿಥೇಶ್ಚ ಶ್ರಿಯಾಮಾಪ್ನೋತಿ ವಾರಾದಾಯುಷ್ಯವರ್ಧನಮ್ ।
ನಕ್ಷತ್ರಾದ್ಧರತೇ ಪಾಪಂ ಯೋಗಾದ್ರೋಗನಿವಾರಣಮ್ ॥
ಕರಣಾತ್ಕಾರ್ಯಸಿದ್ಧಿಃ ಸ್ಯಾತ್ ಪಂಚಾಂಗಫಲಮುತ್ತಮಮ್ ।
ಪಂಚಾಂಗಂ ಪಠತೇ ನಿತ್ಯಂ ಶ್ರೋತುಮಿಚ್ಛಂತಿ ಯೇ ನರಾಃ ॥
ಅಗ್ನಿಷ್ಟೋಮಫಲಂ ತೇಷಾಂ ಗಂಗಾಸ್ನಾನಂ ದಿನೇ ದಿನೇ ।
ಸರ್ವೇ ಗ್ರಹಾಃ ಶುಭ ಏಕಾದಶಸ್ಥಾನಫಲದಾಃ ವರದಾಃ ಭವಂತು ॥
ಸ್ವಸ್ತಿಃ ಪ್ರಜಾಭ್ಯಃ ಪರಿಪಾಲಯಂತಾಮ್
ನ್ಯಾಯೇನ ಮಾರ್ಗೇಣ ಮಹೀಂ ಮಹೀಶಾಃ ।
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ

ಲೋಕಾಃ ಸಮಸ್ತಾಃ ಸುಖಿನೋ ಭವಂತು ॥

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।

ದೇಶೋऽಯಂ ಕ್ಷೋಭರಹಿತಃ ಸಜ್ಜನಾಃ ಸಂತು ನಿರ್ಭಯಾಃ ॥

ಅಪುತ್ರಾಃ ಪುತ್ರಿಣಃ ಸಂತು ಪುತ್ರಿಣಃ ಸಂತು ಪೌತ್ರಿಣಃ ।

ನಿರ್ಧನಾಃ ಸಧನಾ ಸಂತು ಜೀವಂತು ಶರದಾಂ ಶತಮ್ ॥

ಸರ್ವೇ ಭವಂತು ಸುಖಿನಃ ಸರ್ವೇ ಸಂತು ನಿರಾಮಯಾಃ ।

ಸರ್ವೇ ಭದ್ರಾಣಿ ಪಶ್ಯಂತು ಮಾ ಕಶ್ಚಿತ್‌ದುಃಖಭಾಗ್ ಭವೇತ್ ॥

ಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ ವಿದ್ಯಾಂ ಪುಷ್ಟಿಂ ಶ್ರಿಯಮ್ ಬಲಮ್ ।

ತೇಜ ಆಯುಷ್ಯಮಾರೋಗ್ಯಂ ದೇಹಿ ಮೇ ಹವ್ಯವಾಹನ ॥

ನಮೋಽಸ್ತ್ವನಂತಾಯ ಸಹಸ್ರಮೂರ್ತಯೇ ಸಹಸ್ರಪಾದಾಕ್ಷಿಶಿರೋರುಬಾಹವೇ ।

ಸಹಸ್ರನಾಮ್ನೇ ಪುರುಷಾಯ ಶಾಸತೇ ಸಹಸ್ರಕೋಟ್ಯಾಯುಧಧಾರಿಣೇ ನಮಃ ॥

ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।

ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ।

ವಸುದೇವಸುತಂ ದೇವಂ ಕಂಸಚಾಣೂರಮರ್ದನಮ್ ।

ದೇವಕೀಪರಮಾನಂದಂ ಕೃಷ್ಣಂ ವಂದೇ ಜಗದ್ಗುರುಮ್ ॥

ಪುನಃ ಪಂಚಾಂಗಪುಸ್ತಕದ ಮೇಲೆ ಮಂತ್ರಾಕ್ಷತೆಯನ್ನಿಟ್ಟು ಮಂಗಳಾರತಿಯನ್ನು ಮಾಡಬೇಕು. ಅನಂತರ ಮನೆಮಂದಿ ಎಲ್ಲರಿಗೂ ಮಂತ್ರಾಕ್ಷತೆಯನ್ನು ನೀಡಬೇಕು. ಶ್ರೀಕೃಷ್ಣಾರ್ಪಣಮಸ್ತು ಎಂಬುದಾಗಿ ಸಮರ್ಪಣೆ ಮಾಡಬೇಕು.

## ಪಂಚಾಂಗ ಶ್ರವಣಫಲ

ಯಃ ಶೃಣೋತಿ ಮಧುಶುಕ್ಲಪಕ್ಷಕೇ ವರ್ಷನಾಥ ಸಚಿವಾದಿಕಂ ಫಲಮ್ ।

ಪ್ರಾಪ್ನುಯಾದ್ದುರಿತಮುಕ್ತವಿಗ್ರಹಂ ಚಾಯುರರ್ಥಮತುಲಂ ಯಶಃ ಸುಖಮ್ ॥೧॥

ಯಾರು ವಸಂತಮಾಸದ ಶುಕ್ಲಪಕ್ಷದ ಯುಗಾದಿಯಂದು ಆ ವರ್ಷದ ರಾಜನ ಬಗ್ಗೆ, ಮಂತ್ರಿ ಮೊದಲಾದವರ ಬಗ್ಗೆ ಫಲವನ್ನು ಕೇಳುತ್ತಾನೋ, ಅಂಥವನು ಎಲ್ಲ

ದುರಿತಗಳಿಂದ ವಿಮುಕ್ತನಾಗುತ್ತಾನೆ. ಅತುಲವಾದ ಸಂಪತ್ತನ್ನು, ಆಯುಷ್ಯವನ್ನು, ಯಶಸ್ಸನ್ನು ಸುಖವನ್ನು ಪಡೆದುಕೊಳ್ಳುತ್ತಾನೆ.

ಶ್ರುತ್ವಾ ರಾಜಫಲಂ ಭವಂತಿ ಸುಖಿನೋ ಶ್ರುತ್ವಾ ಫಲಂ ಮಂತ್ರಿಣೋ
ಬುದ್ಧ್ಯುತ್ಸಾಹಸುಕೀರ್ತಯಃ ಭಟಪತೇಃ ಸಸ್ಯಾಧಿನಾಥಸ್ಯ ಚ ।
ಶ್ರುತ್ವಾರ್ಘೇಶಫಲಂ ರಸಾಧಿಪಫಲಂ ಧಾನ್ಯಾಧಿನಾಥಸ್ಯ ಚ
ಶ್ರುತ್ವಾ ನೀರಸನಾಯಕಸ್ಯ ಚ ಫಲಂ ಚೈಶ್ವರ್ಯವಂತಃ ಸದಾ ॥೨॥

ರಾಜನ ಫಲವನ್ನು ಕೇಳುವುದರಿಂದ ಸುಖಿಯಾಗುತ್ತಾನೆ. ಮಂತ್ರಿಯ ಫಲವನ್ನು ಕೇಳುವುದರಿಂದ ಬುದ್ಧಿ ಮತ್ತು ಉತ್ಸಾಹ ಸುಕೀರ್ತಿಗಳನ್ನು ಪಡೆದುಕೊಳ್ಳುತ್ತಾನೆ. ಸೇನಾಧಿಪತಿಯ, ಸಸ್ಯಾಧಿನಾಥನ, ಅರ್ಘೇಶನ, ರಸಾಧಿಪನ, ಧಾನ್ಯಾಧಿನಾಥನ ಫಲಗಳನ್ನು ಕೇಳುವುದರಿಂದ, ನೀರಸನಾಯಕನ ಫಲವನ್ನೂ ಸಹ ಕೇಳುವುದರಿಂದ ಐಶ್ವರ್ಯವಂತನಾಗುತ್ತಾನೆ.

ಆಯುರ್ವೃದ್ಧಿಂ ಪುತ್ರಪೌತ್ರಾಭಿವೃದ್ಧಿಂ ನಿತ್ಯಾರೋಗ್ಯಂ ಸಂಪದಂ ಚಾನಪಾಯಂ।
ಅಚ್ಛಿನ್ನಾನಾಮುತ್ಸವಾನಾಮವಾಪ್ತಿಂ ಯಚ್ಛತ್ಯೇಂತೇ ವತ್ಸರಾಧೀಶಮುಖ್ಯಾಃ ॥೩॥

ವರ್ಷದ ಅಧೀಶರೇ ಮೊದಲಾದವರ ಉತ್ಸವವನ್ನು ಮಾಡುವುದರಿಂದ ಆಯುಷ್ಯದ ಅಭಿವೃದ್ಧಿಯಾಗುತ್ತದೆ. ಪುತ್ರಪೌತ್ರಾದಿಗಳ ಅಭಿವೃದ್ಧಿಯಾಗುತ್ತದೆ. ನಿತ್ಯವಾಗಿಯೂ ಆರೋಗ್ಯವಿರುತ್ತದೆ. ನಿರಾತಂಕವಾಗಿ ಸಂಪತ್ತು ಬರುತ್ತದೆ.

ತಿಥೇಶ್ಚ ಶ್ರಿಯಮಾಪ್ನೋತಿ ವಾರಾದಾಯುಷ್ಯವರ್ಧನಮ್ ।
ನಕ್ಷತ್ರಾದ್ಧರತೇ ಪಾಪಂ ಯೋಗಾದ್ರೋಗನಿವಾರಣಮ್ ॥೪॥

ತಿಥಿಯ ಶ್ರವಣದಿಂದ ಸಂಪತ್ತು ದೊರಕುತ್ತದೆ. ವಾರದ ಶ್ರವಣದಿಂದ ಆಯುಷ್ಯವು ಅಭಿವೃದ್ಧವಾಗುತ್ತದೆ. ನಕ್ಷತ್ರದ ಶ್ರವಣದಿಂದ ಪಾಪವು ಪರಿಹಾರವಾಗುತ್ತದೆ. ಯೋಗದ ಶ್ರವಣದಿಂದ ರೋಗವು ಪರಿಹಾರವಾಗುತ್ತದೆ.

ಕರಣಾತ್ಕಾರ್ಯಸಿದ್ಧಿಃ ಸ್ಯಾತ್ಪಂಚಾಂಗಫಲಮುತ್ತಮಮ್ ।
ಇತೀದಂ ವತ್ಸರಫಲಂ ವತ್ಸರಾದಿತಿಥೌ ಶುಭಮ್ ॥೫॥

ಕರಣದ ಶ್ರವಣದಿಂದ ಕಾರ್ಯಸಿದ್ಧಿಯಾಗುತ್ತದೆ. ಹೀಗೆ ಪಂಚಾಂಗಶ್ರವಣದ ಫಲವು ಉತ್ತಮವಾಗಿದೆ. ವತ್ಸರದ ಶುಭಫಲವನ್ನು ವತ್ಸರದ ಮೊದಲ ತಿಥಿಯಂದು ಕೇಳಬೇಕು.

ಯಃ ಶೃಣೋತಿ ನರೋ ಭಕ್ತ್ಯಾ ವತ್ಸರಂ ಸ ಸುಖೀ ಭವೇತ್ ।
ತಸ್ಮಾದಾದೌ ಸಾಂಗೋಪಾಂಗಂ ವತ್ಸರಸ್ಯ ಬ್ರಹ್ಮಣಃ ಜನ್ಮಫಲಂ
ಯೇ ಶೃಣ್ವಂತಿ ತೇ ಕ್ರತುಫಲಂ ಭಜಂತೇ ನಾತ್ರ ಸಂಶಯಃ ॥॥೨॥

ಯಾವ ಮನುಷ್ಯನು ವತ್ಸರದ ಫಲವನ್ನು ಕೇಳುತ್ತಾನೋ, ಅವನು ಶುಚಿಯಾಗುತ್ತಾನೆ. ಚತುರ್ಮುಖಬ್ರಹ್ಮನ ಆಯುರ್ಮಾನದ ಬಗ್ಗೆ ಯಾರು ಕೇಳುತ್ತಾನೋ, ಅವನು ಯಜ್ಞವನ್ನು ಮಾಡಿದ ಫಲವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

* * * *

# ಪುರುಷರು ಪಠಿಸಬೇಕಾದ ಮಂತ್ರಗಳು
## ಪುರುಷಸೂಕ್ತ

ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸಭೂಮಿಂ ವಿಶ್ವತೋ ವೃತ್ವಾಽತ್ಯತಿಷ್ಠದ್ದಶಾಂಗುಲಮ್ ॥೧॥

ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್ ।
ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥

ಏತಾವಾನಸ್ಯ ಮಹಿಮಾಽತೋ ಜ್ಯಾಯಾಂಶ್ಚ ಪೂರುಷಃ ।
ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥

ತ್ರಿಪಾದೂರ್ಧ್ವ ಉದೈತ್ ಪುರುಷಃ ಪಾದೋಽಸ್ಯೇಹಾ ಭವತ್ ಪುನಃ ।
ತತೋ ವಿಷ್ವಙ್ ವ್ಯಕ್ರಾಮತ್ಸಾಶನಾನಶನೇ ಅಭಿ ॥

ತಸ್ಮಾದ್ ವಿರಾಳಜಾಯತ ವಿರಾಜೋ ಅಧಿ ಪೂರುಷಃ ।
ಸ ಜಾತೋ ಅತ್ಯರಿಚ್ಯತ ಪಶ್ಚಾದ್ ಭೂಮಿಮಥೋ ಪುರಃ ॥

ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ ।
ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ ॥

ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ ಪುರುಷಂ ಜಾತಮಗ್ರತಃ ।
ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ ॥

ತಸ್ಮಾದ್ ಯಜ್ಞಾತ್ ಸರ್ವಹುತಃ ಸಂಭೃತಂ ಪೃಷದಾಜ್ಯಮ್ ।
ಪಶೂನ್ ತಾಂಶ್ಚಕ್ರೇ ವಾಯವ್ಯಾನಾರಣ್ಯಾನ್ ಗ್ರಾಮ್ಯಾಶ್ಚ ಯೇ ॥

ತಸ್ಮಾದ್ಯಜ್ಞಾತ್ ಸರ್ವಹುತ ಋಚಃ ಸಾಮಾನಿ ಜಜ್ಞಿರೇ ।
ಛಂದಾಂಸಿ ಜಜ್ಞಿರೇ ತಸ್ಮಾದ್ ಯಜುಸ್ತಸ್ಮಾದಜಾಯತ ॥

ತಸ್ಮಾದಶ್ವಾ ಅಜಾಯಂತ ಯೇ ಕೇ ಚೋಭಯಾದತಃ ।
ಗಾವೋ ಹ ಜಜ್ಞಿರೇ ತಸ್ಮಾತ್ ತಸ್ಮಾಜ್ಜಾತಾ ಅಜಾವಯಃ ॥

ಯತ್ ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್ ।
ಮುಖಂ ಕಿಮಸ್ಯ ಕೌ ಬಾಹೂ ಕಾ ಊರೂ ಪಾದಾ ಉಚ್ಯೇತೇ ॥

ಬ್ರಾಹ್ಮಣೋಽಸ್ಯ ಮುಖಮಾಸೀದ್ ಬಾಹೂ ರಾಜನ್ಯಃ ಕೃತಃ ।
ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ॥

ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ।
ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ ವಾಯುರಜಾಯತ ॥

ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ ।
ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ ತಥಾ ಲೋಕಾಂ ಅಕಲ್ಪಯನ್ ॥

ಸಪ್ತಾಸ್ಯಾ ಸನ್ ಪರಿಧಯಸ್ತ್ರಿಃ ಸಪ್ತ ಸಮಿಧಃ ಕೃತಾಃ ।
ದೇವಾ ಯದ್ಯಜ್ಞಂ ತನ್ವಾನಾ ಅಬಧ್ನನ್ ಪುರುಷಂ ಪಶುಮ್ ॥

ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।
ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥

****

## ಯುಗಾದಿ ದಿವಸ ಪ್ರಾರ್ಥನಾರೂಪವಾಗಿ ಪಠಿಸಬೇಕಾದ ಮಂತ್ರಗಳು

ಓಂ ನಮೋ ಬ್ರಹ್ಮಣೇ ತುಭ್ಯಂ ಕಾಮಾಯಚ ಮಹಾತ್ಮನೇ ।
ನಮಸ್ತೇಽಸ್ತು ನಿಮೇಷಾಯ ತ್ರುಟಯೇ ಚ ನಮೋಸ್ತುತೇ॥

''ಕಾಮರೂಪಿಗಳಾದ ಮಹಾತ್ಮರಾದ ಬ್ರಹ್ಮದೇವರಿಗೆ ಭಕ್ತಿಪೂರ್ವಕವಾಗಿ ನಮಸ್ಕಾರಗಳು. ನಿಮಿಷಗಳಿಗೆ ತ್ರುಟಿಗಳಿಗೆ ನಮಸ್ಕಾರಗಳು.

**ಗಮನಿಸಿ** - ನಿಮಿಷ, ತ್ರುಟಿ ಲವ, ಕ್ಷಣ, ಕಾಷ್ಠ, ಕಲಾ, ಇತ್ಯಾದಿ ಶಬ್ದಗಳಿಂದ ತಿಳಿಯಲ್ಪಟ್ಟ ತ್ರುಟಿ ಮೊದಲಾದವುಗಳಿಗೆ ನಮಸ್ಕಾರಗಳೆಂದರೆ ದೇವತೆಗಳಿಗೆ ನಮಸ್ಕಾರ ಎಂದರ್ಥ. ಮತ್ತು ಆ ಅಭಿಮಾನಿ ದೇವತೆಗಳಲ್ಲಿ ಅಂತರ್ಯಾಮಿಯಾಗಿದ್ದು, ಸೃಷ್ಟಿಯನ್ನು ಮಾಡುತ್ತಿರುವ ಜೀವೋತ್ತಮರಾದ ಮುಖ್ಯಪ್ರಾಣದೇವರಿಗೆ ಹಾಗೂ ಚತುರ್ಮುಖಬ್ರಹ್ಮದೇವರಿಗೆ ನಮಸ್ಕಾರವನ್ನು ಮಾಡಬೇಕು, ಅದರಂತೆ ತ್ರುಟಿ ನಿಮಿಷ ದಿವಸ ಮೊದಲಾದ ನಾಮಗಳನ್ನು ಧರಿಸಿ ಆಯಾ ರೂಪಗಳಲ್ಲಿರುವ ಭಗವದ್ರೂಪಗಳಿಗೆ ನಮಸ್ಕಾರ ಮಾಡಬೇಕು.

ಲವಾಯ ಚ ನಮಸ್ತುಭ್ಯಂ ನಮಸ್ತೇಽಸ್ತು ಕ್ಷಣಾಯ ಚ ।
ನಮೋ ನಮಸ್ತೇ ಕಾಷ್ಠಾಯೈ ಕಾಲಾಯೈ ತೇ ನಮೋಽಸ್ತುತೇ ॥

ಲವಗಳಿಗೆ ನಮಸ್ಕಾರ. ಕ್ಷಣಗಳಿಗೆ, ಕಾಷ್ಠಗಳಿಗೆ, ಕಲಾಗಳಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಭಕ್ತಿಯ ನಮಸ್ಕಾರಗಳು.

ನಾಡಿಕಾಯೈ ಸುಸೂಕ್ಷ್ಮಾಯೈ ಮುಹೂರ್ತಾಯ ನಮೋ ನಮಃ ।
ನಮೋ ನಿಶಾಭ್ಯಃ ಪುಣ್ಯೇಭ್ಯೋ ದಿವಸೇಭ್ಯಶ್ಚ ನಿತ್ಯಶಃ ॥

ಸೂಕ್ಷ್ಮವಾದ ನಾಡಿಕಾಗಳಿಗೆ ಮುಹೂರ್ತಗಳಿಗೆ, ರಾತ್ರಿಗಳಿಗೆ, ಪುಣ್ಯದಿವಸಗಳಿಗೆ, ನಿತ್ಯವಾಗಿಯೂ, ಪ್ರತ್ಯೇಕ ನಮಸ್ಕಾರಗಳು.

ಪಕ್ಷಾಭ್ಯಾಂ ಚಾಥ ಮಾಸೇಭ್ಯ ಋತುಭ್ಯಃ ಷಡ್‌ಭ್ಯ ಏವ ಚ ।
ಅಯನಾಭ್ಯಾಂ ಚ ಪಂಚಭ್ಯೋ ವತ್ಸರೇಭ್ಯಶ್ಚ ಸರ್ವದಾ ॥

ಪಕ್ಷಗಳಿಗೆ, ಮಾಸಗಳಿಗೆ, ಆರು ಋತುಗಳಿಗೆ ಎರಡು ಅಯನಗಳಿಗೆ ಐದು ವರ್ಷಗಳಿಗೆ ನಿರಂತರ ನಮಸ್ಕಾರಗಳು.

ನಮಃ ಕೃತಯುಗಾದಿಭ್ಯೋ ಗ್ರಹೇಭ್ಯಶ್ಚ ನಮೋ ನಮಃ ।
ಅಷ್ಟಾವಿಂಶತಿಸಂಖ್ಯೇಭ್ಯೋ ನಕ್ಷತ್ರೇಭ್ಯೋ ನಮೋ ನಮಃ ॥

ಕೃತ ಮೊದಲಾದ ನಾಕು ಯುಗಗಳಿಗೆ, ಒಂಬತ್ತು ಗ್ರಹಗಳಿಗೆ, ಇಪ್ಪತ್ತೆಂಟು ನಕ್ಷತ್ರಗಳಿಗೆ ಮತ್ತೆ ಮತ್ತೆ ನಮಸ್ಕಾರಗಳು.

ರಾಶಿಭ್ಯಃ ಕರಣೇಭ್ಯಶ್ಚ ವ್ಯತೀಪಾತೇಭ್ಯ ಏವ ಚ ।
ಪ್ರತಿವರ್ಷಾಧಿಪೇಭ್ಯಶ್ಚ ವಿಜ್ಞಾತೇಭ್ಯೋ ನಮಃ ಸದಾ ॥

ಹನ್ನೆರಡು ರಾಶಿಗಳಿಗೆ ವ್ಯತಿಪಾತ ಮೊದಲಾದ ಕರಣಗಳಿಗೆ ಪ್ರತಿವರ್ಷದ ನಿಯಾಮಕರಿಗೆ ನಿರಂತರ ನಮಸ್ಕಾರಗಳು.

ನಮೋಽಸ್ತು ಕುಲನಾಗೇಭ್ಯಃ ಸಾನುಯಾತ್ರೇಭ್ಯ ಏವ ಚ ।
ನಮೋಽಸ್ತು ಸರ್ವ ದಿಗ್‌ಭ್ಯಶ್ಚ ದಿಕ್‌ಪಾಲೇಭ್ಯೋ ನಮೋ ನಮಃ ॥

ಅನುಚರರಿಂದ ಕೂಡಿರುವ ಕುಲನಾಗಗಳಿಗೆ ಎಲ್ಲ ದಿಕ್ಕುಗಳಿಗೆ ದಿಕ್‌ಪಾಲಕರಿಗೂ ಭಕ್ತಿಯ ನಮನಗಳು.

ನಮಶ್ಚತುರ್ದಶೇಭ್ಯಶ್ಚ ಮನುಭ್ಯಶ್ಚ ನಮೋ ನಮಃ ।
ನಮಃ ಪುರಂದರೇಭ್ಯಶ್ಚ ತತ್ಸಂಖ್ಯೇಭ್ಯೋ ನಮೋ ನಮಃ ॥

ಹದಿನಾಕು ಮನುಗಳಿಗೆ, ಅದೇ ಸಂಖ್ಯೆಯ ಇಂದ್ರಪದವಿಯನ್ನಾಳುವ ಪುರಂದರರಿಗೆ ಅನೇಕ ನಮಸ್ಕಾರಗಳು.

ಪಂಚಾಶತೇ ನಮೋ ನಿತ್ಯಂ ದಕ್ಷಕನ್ಯಾಯ ಏವ ಚ ।
ನಮೋಽದಿತ್ಯೈ ಸುಭದ್ರಾಯೈ ಜಯಾಯೈ ಚಾಥ ಸರ್ವದಾ ॥

ಐವತ್ತುಮಂದಿ ದಕ್ಷಕನ್ಯೆಯರಿಗೆ ಅದಿತಿಗೆ, ಸುಭದ್ರೆಗೆ, ಜಯಾದೇವಿಗೆ ನಿರಂತರ ನಮಸ್ಕಾರಗಳು.

ಸುಶಾಸ್ತ್ರಾಯ ನಮಸ್ತುಭ್ಯಂ ಸರ್ವಾಸ್ತ್ರಜನಕಾಯ ಚ ।
ನಮಸ್ತೇ ಬಹುಪುತ್ರಾಯ ಪತ್ನೀಭಿಃ ಸಹಿತಾಯ ಚ ॥

ಸಚ್ಛಾಸ್ತ್ರಗಳಿಗೆ, ಸಕಲ ಅಸ್ತ್ರಗಳಿಗೆ, ಸರ್ವಾಸ್ತ್ರಗಳ ಜನಕನಿಗೆ, ಪತ್ನಿಯರಿಂದ ಸಹಿತರಾದ ಬಹುಪುತ್ರರನ್ನು ಪಡೆದ ಸಾಧಕನಿಗೆ ನಮಸ್ಕಾರಗಳು.

ನಮೋ ಬುದ್ಧ್ಯೈ ತಥಾ ವೃದ್ಧ್ಯೈ ನಿದ್ರಾಯೈ ಧನದಾಯ ಚ ।
ನಮಃ ಕುಬೇರಪುತ್ರಾಯ ಗುಹ್ಯಕಸ್ವಾಮಿನೇ ನಮಃ ॥

ಬುದ್ಧಿಗೆ, ವೃದ್ಧಿಗೆ, ನಿದ್ರಾದೇವಿಗೆ, ಸಂಪತ್ತನ್ನು ನೀಡುವ ಕುಬೇರನಿಗೆ ಕುಬೇರಪುತ್ರನಿಗೆ ಗುಹ್ಯಕಸ್ವಾಮಿಗೆ ನಮಸ್ಕಾರಗಳು.

**ನಮೋಽಸ್ತು ಶಂಖಪದ್ಮಾಭ್ಯಾಂ ನಿಧಿಭ್ಯಾಮಥ ನಿತ್ಯಶಃ ।**
**ಭದ್ರಕಾಲ್ಯೈ ನಮಸ್ತುಭ್ಯಂ ಸುರಭ್ಯೈ ಚ ನಮೋನಮಃ ॥**

ಶಂಖ ಪದ್ಮಸಂಖ್ಯೆಯ ನಿಧಿಗೆ ನಿತ್ಯವಾಗಿಯೂ ನಮಸ್ಕಾರಗಳು, ಭದ್ರಕಾಳಿಗೆ, ಸುರಭಿಗೂ ಅನೇಕ ನಮಸ್ಕಾರಗಳು.

**ವೇದವೇದಾಂಗವೇದಾಂತವಿದ್ಯಾಸಂಸ್ಥೇಭ್ಯ ಏವ ಚ ।**
**ನಾಗಯಕ್ಷಸುಪರ್ಣೇಭ್ಯೋ ನಮೋಽಸ್ತು ಗರುಡಾಯ ಚ ॥**

ವೇದಗಳಿಗೆ ವೇದಾಂಗಗಳಿಗೆ ವೇದಾಂತಗಳಿಗೆ, ಸಕಲವಿದ್ಯೆಗಳಿಗೆ, ನಾಗಗಳಿಗೆ, ಯಕ್ಷರಿಗೆ, ಪಕ್ಷಿಗಳಿಗೆ, ಪಕ್ಷಿಯ ರಾಜನಾದ ಗರುಡನಿಗೂ ನಮಸ್ಕಾರಗಳು.

**ಸಪ್ತಭ್ಯಶ್ಚ ಸಮುದ್ರೇಭ್ಯಃ ಸಾಗರೇಭ್ಯಶ್ಚ ಸರ್ವದಾ ।**
**ಉತ್ತರೇಭ್ಯಃ ಕುರುಭ್ಯಶ್ಚ ನಮೋ ಮೇರುಗತಾಯ ಚ ॥**

ಸಪ್ತ ಸಮುದ್ರಗಳಿಗೆ, ಸಾಗರಗಳಿಗೆ, ಕುರುಗಳಿಗೆ, ಮೇರು ಪರ್ವತದಲ್ಲಿ ಇರುವವರಿಗೆ ಭಕ್ತಿಯ ನಮನಗಳು.

**ಭದ್ರಾಶ್ವಕೇತುಮಾಲಾಭ್ಯಾಂ ನಮಃ ಸರ್ವತ್ರ ಸರ್ವದಾ ।**
**ಇಲಾವೃತಾಯ ಚ ನಮೋ ಹರಿವರ್ಷಾಯ ಚೈವ ಹಿ ॥**

ಭದ್ರಾಮಾಲಾ, ಅಶ್ವಮಾಲಾ, ಕೇತುಮಾಲಾಗಳಿಗೆ, ಇಲಾವೃತಖಂಡಕ್ಕೆ, ಹರಿವರ್ಷಕ್ಕೆ ನಮಸ್ಕಾರಗಳು.

**ನಮಃ ಕಿಂಪುರುಷೇಭ್ಯಶ್ಚ ಭಾರತಾಯ ನಮೋ ನಮಃ ।**
**ನಮೋ ಭಾರತಭೇದೇಭ್ಯೋ ಮಹದ್ಭ್ಯಶ್ಚಾಥ ಸರ್ವದಾ ॥**

ಕಿಂಪುರುಷಕ್ಕೆ, ಭಾರತವರ್ಷಕ್ಕೆ, ಭಾರತದ ವಿವಿಧ ಪ್ರದೇಶಗಳಿಗೆ ಮಹಾತ್ಮರಿಗೆ ನಿರಂತರ ನಮನಗಳು.

ಪಾತಾಲೇಭ್ಯಶ್ಚ ಸಪ್ತಭ್ಯೋ ನರಕೇಭ್ಯೋಃ ನಮೋ ನಮಃ ।
ಕಾಲಾಗ್ನಿರುದ್ರಶ್ಚೈವಾಭ್ಯಾಂ ಹರಯೇ ಕ್ರೋಡರೂಪಿಣೇ ॥

ಏಳು ಪಾತಾಳಗಳಿಗೆ, ಎಲ್ಲಾ ನರಕಗಳಿಗೆ ನಮಸ್ಕಾರಗಳು. ಕಾಲಾಗ್ನಿರುದ್ರನಿಗೆ, ಶಿವಗಣಗಳಿಗೆ, ವರಾಹರೂಪಿಯಾದ ಶ್ರೀಹರಿಗೆ ನಮಸ್ಕಾರಗಳು.

ಸಪ್ತಭ್ಯಸ್ತ್ವಥ ಲೋಕೇಭ್ಯೋಃ ಮಹಾಭೂತೇಭ್ಯ ಏವ ಚ ।
ನಮಃ ಸಂಬುದ್ಧಯೇ ಚೈವ ನಮಃ ಪ್ರಕೃತಯೇ ತಥಾ ॥

ಏಳು ಲೋಕಗಳಿಗೆ, ಮಹಾಭೂತಗಳಿಗೆ, ಸಮೀಚೀನವಾದ ಬುದ್ಧಿಗೆ, ಪ್ರಕೃತಿಗೂ ನಮಸ್ಕಾರಗಳು.

ಪುರುಷಾಯಾಭಿಮಾನಾಯ ನಮಸ್ತ್ವವ್ಯಕ್ತಮೂರ್ತಯೇ ।
ಹಿಮವತ್ ಪ್ರಮುಖೇಭ್ಯಶ್ಚ ಪರ್ವತೇಭ್ಯೋ ನಮಸ್ತ್ವಥ ॥

ಪುರುಷಾಭಿಮಾನಿಗಳಿಗೆ, ಹಿಮವತ್ ಪರ್ವತವೇ ಮೊದಲಾದ ಎಲ್ಲ ಪರ್ವತಗಳಿಗೂ ನಮಸ್ಕಾರಗಳು.

ಪೌರಾಣೇಭ್ಯಶ್ಚ ಗಂಗಾಭ್ಯಃ ಸಪ್ತಭ್ಯಶ್ಚ ನಮೋ ನಮಃ ।
ನಮೋಽಸ್ತ್ವಾದಿ ಮುನಿಭ್ಯಶ್ಚ ಸಪ್ತಭ್ಯಶ್ಚಾಥ ಸರ್ವದಾ ॥

ಪ್ರಾಚೀನವಾದ ಗಂಗೆ ಮೊದಲಾದ ಏಳು ನದಿಗಳಿಗೆ, ಸಪ್ತಮುನಿಗಳಿಗೆ ಯಾವಾಗಲೂ ನಮಸ್ಕಾರಗಳು.

ನಮೋಽಸ್ತು ಪುಷ್ಕರಾದಿಭ್ಯಸ್ತೀರ್ಥೇಭ್ಯಶ್ಚ ಪುನಃ ಪುನಃ ।
ನಿಮ್ನಗಾಭ್ಯೋ ನಮೋ ನಿತ್ಯಂ ವಿತಸ್ತಾದಿಭ್ಯ ಏವ ಚ ॥

ಪುಷ್ಕರಾದಿತೀರ್ಥಗಳಿಗೆ ಪುನಃ ಪುನಃ ನಮಸ್ಕಾರಗಳು, ಅಧೋಮುಖ ಜಲಾಶಯಗಳಿಗೆ ವಿತಸ್ತಿ ಮೊದಲಾದ ನದಿಗಳಿಗೆ ನಮಸ್ಕಾರಗಳು.

ಚತುರ್ದಶಭ್ಯೋ ದೀರ್ಘಾಭ್ಯೋ ಧರಿಣೇಭ್ಯೋ ನಮೋ ನಮಃ ।
ಹದಿನಾಕು ಮಹಾಲೋಕಗಳಿಗೆ ನಮಸ್ಕಾರಗಳು.

ನಮೋ ಧಾತ್ರೇವಿಧಾತ್ರೇ ಚ್ಛಂದೋಭ್ಯಶ್ಚ ನಮೋ ನಮಃ ।
ಸುರಭ್ಯೈರಾವಣಾಭ್ಯಾಂ ಚ ನಮೋ ಭೂಯೋ ನಮೋ ನಮಃ ॥

ಧಾತೃವಿಗೆ, ವಿಧಾತೃವಿಗೆ, ಛಂದಸ್ಸುಗಳಿಗೆ ನಮಸ್ಕಾರಗಳು. ಸುರಭಿಗೆ ಮತ್ತು ಐರಾಣವರಿಗೆ ಪುನಃಪುನಃ ನಮಸ್ಕಾರಗಳು.

ನಮಸ್ತಥೋಚ್ಚೈಃ ಶ್ರವಸೇ ಧ್ರುವಾಯ ಚ ನಮೋನಮಃ ।
ನಮೋಽಸ್ತು ಧನ್ವಂತರಯೇ ಶಸ್ತ್ರಾಭ್ಯಾಂ ನಮೋನಮಃ ॥

ಉಚ್ಚೈಃಶ್ರವಸ್ಸಿಗೆ, ಧ್ರುವನಿಗೆ, ಭಗವಂತನಾದ ಧನ್ವಂತರಿಗೆ, ಶಸ್ತ್ರಗಳಿಗೆ, ಅಸ್ತ್ರಗಳಿಗೆ, ಪುನಃ ಪುನಃ ನಮಸ್ಕಾರಗಳು.

ವಿನಾಯಕಕುಮಾರಾಭ್ಯಾಂ ವಿಘ್ನೇಭ್ಯಶ್ಚ ನಮಃ ಸದಾ ।
ಶಾಖಾಯ ಚ ವಿಶಾಖಾಯ ನೈಗಮೇಯಾಯ ವೈ ನಮಃ ॥

ವಿನಾಯಕನಿಗೆ, ಸುಬ್ರಹ್ಮಣ್ಯನಿಗೆ,ಸಕಲವಿಘ್ನಗಳ ನಿಯಾಮಕರಿಗೆ ನಮಸ್ಕಾರಗಳು, ಶಾಖಾ ಮತ್ತು ವಿಶಾಖರಿಗೆ ನೈಗಮೇಯರಿಗೆ ನಮಸ್ಕಾರಗಳು.

ನಮಃ ಸ್ಕಂದಗ್ರಹೇಭ್ಯಶ್ಚ ಸ್ಕಂದಮಾತೃಭ್ಯ ಏವ ಚ ।
ಜ್ವರಾಯ ರೋಗಪತಯೇ ಭಸ್ಮಪ್ರಹರಣಾಯ ಚ ॥

ಸ್ಕಂದನಿಗೆ, ಗ್ರಹಗಳಿಗೆ, ಸ್ಕಂದನ ಮಾತೃಗಳಿಗೆ ನಮಸ್ಕಾರಗಳು. ರೋಗಪತಿಯಾದ ಜ್ವರನಿಗೆ ಭಸ್ಮನಾಶಕನಿಗೆ ನಮಸ್ಕಾರಗಳು.

ಋಷಿಭ್ಯೋ ವಾಲಖಿಲ್ಯೇಭ್ಯಃ ಕೇಶವಾಯ ನಮಃ ಸದಾ ।
ಅಗಸ್ತಯೇ ನಾರದಾಯ ವ್ಯಾಸಾದಿಭ್ಯೋ ನಮೋ ನಮಃ ॥

ವಾಲಖಿಲ್ಯಾದಿ ಋಷಿಗಳಿಗೆ, ಪರಮಾತ್ಮನಾದ ಕೇಶವನಿಗೆ, ನಿರಂತರ ನಮಸ್ಕಾರ, ಅಗಸ್ತ್ಯರಿಗೆ, (ಅಗಸ್ತಿಶಬ್ದ) ನಾರದರಿಗೆ ವ್ಯಾಸಾದಿ ಭಗವದ್‌ರೂಪಗಳಿಗೆ ನಮಸ್ಕಾರ.

ಅಪ್ಸರೇಭ್ಯಃ ಸೋಮಪೇಭ್ಯೋ ದೇವೇಭ್ಯಶ್ಚ ನಮೋ ನಮಃ ।
ಅಸೋಮಪೇಭ್ಯಶ್ಚ ನಮಸ್ತುಷಿತೇಭ್ಯೋ ನಮಃ ಸದಾ ।

ಅಪ್ಸರರಿಗೆ, ಸೋಮಪಾನಾರ್ಹರಿಗೆ, ಉಳಿದೆಲ್ಲ ದೇವತೆಗಳಿಗೆ ನಮಸ್ಕಾರಗಳು, ಸೋಮಪಾನ ಮಾಡದೆ ಇರುವ ದೇವತೆಗಳಿಗೂ ಕೂಡ ನಮಸ್ಕಾರಗಳು. ಮತ್ತು ತುಷಿತ ಎಂಬ ಗಣ ದೇವತೆಗಳಿಗೂ ನಮಸ್ಕಾರಗಳು.

**ಆದಿತ್ಯೇಭ್ಯೋ ನಮೋ ನಿತ್ಯಂ ದ್ವಾದಶೇಭ್ಯಶ್ಚ ಸರ್ವದಾ ।**
**ಏಕಾದಶೇಭ್ಯೋ ರುದ್ರೇಭ್ಯಸ್ತಪಸ್ವಿಭ್ಯೋ ನಮೋ ನಮಃ ॥**

ಹನ್ನೆರಡು ಮಂದಿ ಆದಿತ್ಯರಿಗೆ, ಹನ್ನೊಂದು ಮಂದಿ ರುದ್ರರಿಗೆ ಭಕ್ತಿಯ ನಮಸ್ಕಾರಗಳು.

**ನಮೋ ನಾಸತ್ಯದಸ್ರಾಭ್ಯಾಮಶ್ವಿಭ್ಯಾಂ ನಿತ್ಯಮೇವ ಹಿ ।**
**ಸಾಧ್ಯೇಭ್ಯೋ ದ್ವಾದಶೇಭ್ಯಶ್ಚ ಪೌರಾಣೇಭ್ಯೋ ನಮಃ ಸದಾ ॥**

ನಾಸತ್ಯದಸ್ರ ಎಂಬ ಅಶ್ವಿನೀದೇವತೆಗಳಿಗೆ ನಿತ್ಯವಾಗಿ ನಮಸ್ಕಾರಗಳು. ಪುರಾಣದಲ್ಲಿ ಹೇಳಲ್ಪಟ್ಟ ಹನ್ನೆರಡುಮಂದಿ ಸಾಧ್ಯರಿಗೆ ನಮಸ್ಕಾರಗಳು.

**ಏಕೋನಪಂಚಶತೇ ಚ ಮರುದ್ಭ್ಯಶ್ಚ ನಮೋ ನಮಃ ।**
**ಶಿಲ್ಪಾಚಾರ್ಯಾಯ ದೇವಾಯ ನಮಸ್ತೇ ವಿಶ್ವಕರ್ಮಣೇ ॥**

೪೯ ಮರುದ್ದೇವತೆಗಳಿಗೆ, ದೇವಶಿಲ್ಪಿ ಎನಿಸಿದ ವಿಶ್ವಕರ್ಮನಿಗೆ ನಮಸ್ಕಾರಗಳು.

**ಅಷ್ಟಭ್ಯೋ ಲೋಕಪಾಲೇಭ್ಯೋ ಸಾನುಗೇಭ್ಯಶ್ಚ ಸರ್ವದಾ ।**
**ಆಯುಧೇಭ್ಯೋ ವಾಹನೇಭ್ಯೋ ವರ್ಮಭ್ಯಶ್ಚ ನಮಃ ಸದಾ ॥**

ಎಂಟು ಲೋಕಪಾಲಕರಿಗೆ, ಆಯುಧಗಳಿಗೆ, ವಾಹನಗಳಿಗೆ, ಕವಚಗಳಿಗೆ ನಮಸ್ಕಾರಗಳು.

**ಆಸನೇಭ್ಯೋ ದುಂದುಭಿಭ್ಯೋ ದೇವೇಭ್ಯಶ್ಚ ನಮಃ ಸದಾ ।**
**ದೈತ್ಯರಾಕ್ಷಸಗಂಧರ್ವಪಿಶಾಚೇಭ್ಯಶ್ಚ ನಿತ್ಯಶಃ ॥**

ಆಸನಗಳಿಗೆ ದುಂದುಭಿಗಳಿಗೆ, ದೇವತೆಗಳಿಗೆ ನಿರಂತರ ನಮಸ್ಕಾರಗಳು. ದೈತ್ಯರಿಗೆ ರಾಕ್ಷಸರಿಗೆ ಗಂಧರ್ವರಿಗೆ ಪಿಶಾಚಿಗಳಿಗೆ ನಮಸ್ಕಾರಗಳು.

**ಪಿತೃಭ್ಯಃ ಸಪ್ತಭೇದೇಭ್ಯಃ ಪ್ರೇತೇಭ್ಯಶ್ಚ ನಮಃ ಸದಾ ।**
**ಸುಸೂಕ್ಷ್ಮೇಭ್ಯಶ್ಚ ದೇವೇಭ್ಯೋ ಭಾವಾಗಮ್ಯೇಭ್ಯ ಏವ ಚ ॥**

ಪಿತೃಗಳಿಗೆ, ಏಳು ಬಗೆಯ ಪ್ರೇತಗಳಿಗೆ ಅತ್ಯಂತ ಸೂಕ್ಷ್ಮವಾದ ಪ್ರಾಣವರ್ಗಗಳಿಗೆ ದೇವತೆಗಳಿಗೆ, ಭಕ್ತಿಯಿಂದ ಅಗಮ್ಯರಾದವರಿಗೆ ನಮಸ್ಕಾರಗಳು.

**ನಮಸ್ತೇ ಬಹುರೂಪಾಯ ವಿಷ್ಣವೇ ಪರಮಾತ್ಮನೇ ।**
**ಅಥ ಕಿಂ ಬಹುನೋಕ್ತೇನ ಮಂತ್ರೇಣಾನೇನ ವಾರ್ಚಯೇತ್ ॥**

ಅನಂತರೂಪಗಳನ್ನು ಧರಿಸಿದ ಪರಮಾತ್ಮನಾದ ಮಹಾವಿಷ್ಣುವಿಗೆ ಭಕ್ತಿಪೂರ್ವಕವಾಗಿ ನಮಸ್ಕಾರಗಳು. ಇದನ್ನು ಎಷ್ಟು ವಿಸ್ತಾರ ಮಾಡಿದರೇನು? ಈ ಮಂತ್ರದಿಂದ ಅರ್ಚನೆ ಮಾಡಿದರೆ ಎಲ್ಲಾ ಫಲಗಳು ದೊರೆಯುತ್ತವೆ.

**ಪ್ರಾಙ್ಮುಖೋಽದಙ್ಮುಖೋ ವಿಪ್ರಾನ್ ದೇವಾನುದ್ದಿಶ್ಯ ಪೂರ್ವವತ್ ।**

ಪೂರ್ವಕ್ಕೆ ಅಥವಾ ಉತ್ತರಕ್ಕೆ ಅಭಿಮುಖವಾಗಿ ಬ್ರಾಹ್ಮಣರಲ್ಲಿ ಅಥವಾ ದೇವತೆಗಳಲ್ಲಿ ಪೂಜೆಯನ್ನು ಮಾಡಬೇಕು.

**ವಿವರಣೆ** - ಯುಗಾದಿಯ ದಿವಸ ಬ್ರಾಹ್ಮಣನಿಗೆ ವಿಶೇಷ ಪೂಜೆಯನ್ನು ಮಾಡಬೇಕು. ಅವರಲ್ಲಿ ಮೇಲೆ ಹೇಳಿದ ಎಲ್ಲ ದೇವತೆಗಳು ಸನ್ನಿಹಿತರಾಗಿದ್ದಾರೆಂದು ಅನುಸಂಧಾನ ಮಾಡಿ ಪೂಜಿಸಬೇಕು. ಅಥವಾ ದೇವತಾ ಪ್ರತಿಮೆಯನ್ನು ಇಟ್ಟು ಪೂಜಿಸಬಹುದು.

**ಅರ್ಘ್ಯೈಃ ಪುಷ್ಪೈಶ್ಚ ಧೂಪೈಶ್ಚ ವಸ್ತ್ರಮಾಲ್ಯೈಃ ಸುಹೃಷ್ಟಕಮ್ ।**
**ಧನಧಾನ್ಯಾನುವಿಭವೈರ್ದಕ್ಷಿಣಾಭಿಶ್ಚ ಸರ್ವದಾ ॥**

ಕೈತೊಳೆಯಲು ನೀರನ್ನು ನೀಡಿ ಪುಷ್ಪಗಳಿಂದ ಧೂಪಗಳಿಂದ ಮಾಲೆಗಳಿಂದ ಅತ್ಯಂತ ರೋಮಾಂಚನ ಗೊಂಡು ಭಕ್ತಿಯಿಂದ ಪೂಜಿಸಬೇಕು. ಯಥೇಚ್ಛವಾದ ಧನಧಾನ್ಯಗಳ ಸಮೃದ್ಧಿಯಿಂದ ದಕ್ಷಿಣೆಗಳಿಂದ ಎಂದೂ ಬಿಡದೆ ಈ ಪೂಜೆಯನ್ನು ಆಚರಿಸಬೇಕು.

ಇತಿಹಾಸಪುರಾಣಾನಾಂ ಪ್ರವಕ್ತೄಶ್ಚ ದ್ವಿಜೋತ್ತಮಾನ್ ।
ಕಾಲಜ್ಞಾನ್ವೇದವೇದಜ್ಞಾನ್ ಭೃತ್ಯಾನ್ ಸಂಬಂಧಿಬಾಂಧವಾನ್ ॥

ಇತಿಹಾಸ ಪುರಾಣಗಳನ್ನು ಪ್ರವಚನ ಮಾಡುವ ಬ್ರಾಹ್ಮಣಶ್ರೇಷ್ಠನನ್ನು ಕಾಲದ ಬಗ್ಗೆ ಅರಿವಿರುವ ವೇದವೇದಾಂತಗಳನ್ನು ಅರಿತಿರುವ ಬಂಧುಬಾಂಧವರನ್ನು ಭೃತ್ಯರನ್ನು ಹೊಂದಿರುವ ಬ್ರಾಹ್ಮಣನನ್ನು ಪೂಜಿಸಬೇಕು.

ಅನೇನೈವತು ಮಂತ್ರೇಣ ಸ್ವಾಹಾಂತೇನ ಪೃಥಕ್ ಪೃಥಕ್ ।
ಯವಿಷ್ಠಾಯಾಗ್ನಯೇ ಹೋಮಃ ಕರ್ತವ್ಯಃ ಸರ್ವತೃಪ್ತಯೇ ॥

ಇದೇ ಮಂತ್ರದಿಂದ ಸ್ವಾಹಾಕಾರವನ್ನು ಹೇಳಿ ಯವಿಷ್ಠ ಎಂಬ ಅಗ್ನಿಯಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಹೋಮವನ್ನು ಆಚರಿಸಬೇಕು. ಆಗ ಇದರಿಂದ ಎಲ್ಲರೂ ಕೂಡ ತೃಪ್ತರಾಗುತ್ತಾರೆ.

ವೇದವಿಚ್ಚಕ್ಷುಷೀ ದತ್ವಾ ಸ್ಥಾನೇ ಪ್ರಾಧಾನಿಕೇ ಸದಾ ।

ವೇದವನ್ನು ತಿಳಿದವನು ಮೊದಲು ಚಕ್ಷುಃ ಸ್ಥಾನದಲ್ಲಿ ಆಹುತಿಯನ್ನು ನೀಡಬೇಕು.

ಭೋಜಯಿತ್ವಾ ದ್ವಿಜಾನ್ ಸರ್ವಾನ್ ಸುಹೃತ್ಸಂಬಂಧಿಬಾಂಧವಾನ್ ।
ವಿಶೇಷೇಣ ಚ ಭೋಕ್ತವ್ಯಂ ಕಾರ್ಯಶ್ಚಾಪಿ ಮಹೋತ್ಸವಃ ।
ವನಸಂವತ್ಸರಾರಂಭಃ ಸರ್ವಸಿದ್ಧಿ ಪ್ರವರ್ತಕಃ ॥

॥ ಇತಿ ಶ್ರೀ ಬ್ರಾಹ್ಮಪುರಾಣೇ ವತ್ಸರಾರಂಭನಿರೂಪಣಮ್
ಶ್ರೀಕೃಷ್ಣಾರ್ಪಣಮಸ್ತು ॥

ಎಲ್ಲ ಸ್ನೇಹಿತರನ್ನು ಬಂಧುಬಾಂಧವರನ್ನು ಮನೆಗೆ ಕರೆಯಿಸಿ ಯಥೇಚ್ಛವಾಗಿ ಭೋಜನವನ್ನು ಬಡಿಸಬೇಕು. ಮಹೋತ್ಸವನ್ನು ಆಚರಿಸಬೇಕು. ಹೀಗೆ ಸಂವತ್ಸರದ ಆರಂಭವನ್ನು ಆಚರಿಸಿದರೆ ಸರ್ವಸಿದ್ಧಿಯು ಪ್ರಾಪ್ತವಾಗುತ್ತದೆ.

* * * *

# ಯುಗಾದಿಯ ಆಚರಣೆಯ ಬಗ್ಗೆ ಪ್ರಮಾಣಶ್ಲೋಕಗಳು

## ಪಾರಾಯಣ ಶ್ಲೋಕಗಳು

ಚೈತ್ರಾದಾವುಷಸಿ ಸ್ಮರನ್ ರಘುಪತಿಂ ಚೋತ್ಥಾಯ ಚಂದ್ರಂ ಸ್ಮರೇತ್
ವೃದ್ಧಾಜ್ಞಾಮನುಗೃಹ್ಯ ನಿಂಬಕದಲಂ ಪ್ರಾಶ್ಯಾಜ್ಯಪಾತ್ರೇ ಸ್ವಕಂ।
ವಕ್ತ್ರಂ ವೀಕ್ಷ್ಯ ಚ ದರ್ಪಣೇ ಸುಮನಸೋ ದೈವಜ್ಞಮಿತ್ರಾನ್ವಿತಃ
ಪಂಚಾಂಗಂ ಶ್ರುಣುಯಾನ್ನೃಪಃ ಪ್ರಮುದಿತಃ ಸಂಭಾವ್ಯ ಮೌಹೂರ್ತಿಕಾನ್ ॥

ಶ್ರೀರಾಮಚಂದ್ರನನ್ನು ಸ್ಮರಣೆ ಮಾಡುತ್ತಲೇ ಎದ್ದೇಳಬೇಕು. ನಿತ್ಯಕರ್ಮವನ್ನು ಪೂರೈಸಿ, ಚಂದ್ರನನ್ನು ಸ್ಮರಣೆ ಮಾಡಬೇಕು. ಹಿರಿಯರ ಅಪ್ಪಣೆಯನ್ನು ಪಡೆದು, ಅವರ ಆಶೀರ್ವಾದವನ್ನು ಪಡೆದು, ಬೇವಿನ ಎಲೆಯನ್ನು ತಿನ್ನಬೇಕು. ತುಪ್ಪದ ಪಾತ್ರೆಯಲ್ಲಿ ತನ್ನ ಮುಖವನ್ನು ನೋಡಿಕೊಳ್ಳಬೇಕು. ಅನಂತರ ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳಬೇಕು. ಜೋಯಿಸರಿಂದ ಪಂಚಾಂಗವನ್ನು ಶ್ರವಣ ಮಾಡಬೇಕು. ಹೀಗೆ ಯುಗಾದಿಯನ್ನು ಆಚರಿಸಬೇಕು.

ಅಬ್ದಾದೌ ಮಿತ್ರಸಂಯುಕ್ತೋ ಮಂಗಲಸ್ನಾನಮಾಚರೇತ್
ವಸ್ತ್ರೈರಾಭರಣೈರ್ದೇಹಮಲಂಕೃತ್ಯ ತತಃ ಶುಚಿಃ ॥೧॥

ವರ್ಷದ ಮೊದಲ ದಿವಸ ಮಿತ್ರರಿಂದ ಕೂಡಿ ಮಂಗಲಸ್ನಾನವನ್ನು ಮಾಡಬೇಕು. ಹೊಸ ವಸ್ತ್ರವನ್ನು ಧರಿಸಬೇಕು. ಆಭರಣಗಳನ್ನು ಧಾರಣೆ ಮಾಡಬೇಕು. ದೇಹವನ್ನು ಅಲಂಕಾರ ಮಾಡಿಕೊಂಡು ಶುಚಿಯಾಗಬೇಕು.

ದೇವದ್ವಿಜಾನ್ ಸಮಭ್ಯರ್ಚ್ಯ ಪ್ರಗೃಹ್ಯ ಬ್ರಾಹ್ಮಣಾಶಿಷಃ।
ಭಕ್ಷಯಿತ್ವಾ ನಿಂಬಪತ್ರಂ ಶೃಣುಯಾದ್ವರ್ಷಜಂ ಫಲಮ್ ॥೨॥

ಭಗವಂತನನ್ನು, ದೇವತೆಗಳನ್ನು, ಬ್ರಾಹ್ಮಣರನ್ನು ಆರಾಧನೆ ಮಾಡಬೇಕು. ಬ್ರಾಹ್ಮಣರಿಗೆ ನಮಸ್ಕರಿಸಿ, ಆಶೀರ್ವಾದವನ್ನು ಪಡೆದುಕೊಳ್ಳಬೇಕು. ಬೇವಿನ ಪತ್ರವನ್ನು ತಿನ್ನಬೇಕು. ವರ್ಷದ ಫಲವನ್ನು ಜೋಯಿಸರಿಂದ ಕೇಳಬೇಕು.

ವತ್ಸರಾದೌ ವಸಂತಾದೌ ಬಲಿರಾಜ್ಯೇ ತಥೈವ ಚ ।
ತೈಲಸ್ನಾನಮಕುರ್ವಾಣೋ ನರಕಂ ಪ್ರತಿಪದ್ಯತೇ॥೩॥

ವಸಂತ ಋತುವಿನ ಮೊದಲ ದಿವಸ, ವರ್ಷದ ಮೊದಲ ದಿವಸ, ಬಲಿಪಾಡ್ಯದ ದಿವಸ ಯಾರು ಎಣ್ಣೆಸ್ನಾನವನ್ನು ಮಾಡುವುದಿಲ್ಲವೋ, ಅವನು ನರಕಕ್ಕೆ ಹೋಗುತ್ತಾನೆ.

ತೈಲೇ ಲಕ್ಷ್ಮೀರ್ಜಲೇ ಗಂಗಾ ವತ್ಸರಾದಿತಿಥೌ ಶುಭೇ ।
ಅಲಕ್ಷ್ಮೀಪರಿಹಾರಾರ್ಥಂ ಮಂಗಲಸ್ನಾನಮಾಚರೇತ್ ॥೪॥

ವರ್ಷದ ಮೊದಲ ದಿವಸ ಎಳ್ಳೆಣ್ಣೆಯಲ್ಲಿ ಲಕ್ಷ್ಮಿಯು ವಾಸವಾಗಿರುತ್ತಾಳೆ. ನೀರಿನಲ್ಲಿ ಗಂಗೆಯು ಸನ್ನಿಹಿತಳಾಗಿರುತ್ತಾಳೆ. ಅಲಕ್ಷ್ಮಿಯ ಪರಿಹಾರಕ್ಕಾಗಿ ಮಂಗಲಸ್ನಾನವನ್ನು ಅಂದು ಆಚರಿಸಬೇಕು.

ತೈಲಾಭ್ಯಂಗಸ್ನಾನಮಾದೌ ಚ ಕೃತ್ವಾ
ಪೀಯೋಷೋತ್ಥಂ ಪಾರಿಭದ್ರಸ್ಯ ಪತ್ರಮ್ ।
ಭಕ್ಷೇತ್ಸೌಖ್ಯಂ ಮಾನವಂ ವ್ಯಾಧಿನಾಶಂ
ದೀರ್ಘಾಯುಷ್ಯಂ ಲಭ್ಯತೇ ವರ್ಷಮೂಲೇ ॥೫॥

ಮೊದಲು ತೈಲಾಭ್ಯಂಗವನ್ನು ಮಾಡಬೇಕು. ಪೀಯೂಷದಿಂದ ಹುಟ್ಟಿದ ಬೇವಿನ ಪತ್ರವನ್ನು ತಿನ್ನಬೇಕು. ಅಂಥವನು ಸುಖವಾಗಿ ಜೀವನವನ್ನು ನಡೆಸುತ್ತಾನೆ. ಕೀರ್ತಿಶಾಲಿಯಾಗುತ್ತಾನೆ. ಮಾನಸಿಕರೋಗದಿಂದ ವಿಮುಕ್ತನಾಗುತ್ತಾನೆ. ದೀರ್ಘಾಯುಷ್ಯವನ್ನು ಹೊಂದುತ್ತಾನೆ.

ಶತಾಯುರ್ವಜ್ರದೇಹಾಯ ಸರ್ವಸಂಪತ್ಕರಾಯ ಚ ।
ಸರ್ವಾರಿಷ್ಟವಿನಾಶಾಯ ನಿಂಬಕಂ ದಲಭಕ್ಷಣಮ್ ॥೬॥

ನೂರುವರ್ಷಗಳ ಕಾಲ ಈ ದೇಹವು ವಜ್ರದಂತೆ ಇರುವುದಕ್ಕಾಗಿ ಜೀವನದಲ್ಲಿ ಎಲ್ಲ ಬಗೆಯ ಸಂಪತ್ತುಗಳ ಪ್ರಾಪ್ತಿಗಾಗಿ ಎಲ್ಲ ಅರಿಷ್ಟಗಳ ವಿನಾಶಕ್ಕಾಗಿ ಬೇವಿನ ಎಲೆಯನ್ನು ಭಕ್ಷಿಸಬೇಕು.

॥ ಶ್ರೀಕೃಷ್ಣಾರ್ಪಣಮಸ್ತು ॥

# ಮಂಗಳಾಷ್ಟಕಮ್

ಲಕ್ಷ್ಮೀರ್ಯಸ್ಯ ಪರಿಗ್ರಹಃ ಕಮಲಭೂಃ ಸೂನುರ್ಗರುತ್ಮಾನ್ ರಥಃ
ಪೌತ್ರಶ್ಚಂದ್ರವಿಭೂಷಣಃ ಸುರಗುರುಃ ಶೇಷಶ್ಚ ಶಯ್ಯಾ ಪುನಃ ।
ಬ್ರಹ್ಮಾಂಡಂ ವರಮಂದಿರಂ ಸುರಗಣಾ ಯಸ್ಯ ಪ್ರಭೋಃ ಸೇವಕಾಃ ।
ಸ ತ್ರೈಲೋಕ್ಯಕುಟುಂಬಪಾಲನಪರಃ ಕುರ್ಯಾದ್ಧರಿರ್ಮಂಗಲಮ್ ॥೧॥

ಬ್ರಹ್ಮ-ವಾಯು-ಗಿರೀಶ-ಶೇಷಗರುಡಾ ದೇವೇಂದ್ರ-ಕಾಮೌ ಗುರು-
ಶ್ಚಂದ್ರಾರ್ಕೌ ವರುಣಾನಲೌ ಮನು-ಯಮೌ ವಿತ್ತೇಶ-ವಿಘ್ನೇಶ್ವರೌ ।
ನಾಸತ್ಯೌ-ನಿರ್ಋತಿ-ರ್ಮರುದ್ಗಣ-ಯುತಾಃ ಪರ್ಜನ್ಯ-ಮಿತ್ರಾದಯಃ
ಸಸ್ತ್ರೀಕಾಃ ಸುರಪುಂಗವಾಃ ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥೨॥

ವಿಶ್ವಾಮಿತ್ರ-ಪರಾಶರೌರ್ವಭೃಗವೋಽಗಸ್ತ್ಯಃಪುಲಸ್ತ್ಯಃ ಕ್ರತುಃ
ಶ್ರೀಮಾನತ್ರಿಮರೀಚಿ-ಕೌತ್ಸ-ಪುಲಹಾಃ ಶಕ್ತಿರ್ವಸಿಷ್ಠೋಽಂಗಿರಾಃ ।
ಮಾಂಡವ್ಯೋ ಜಮದಗ್ನಿ-ಗೌತಮ-ಭರದ್ವಾಜಾದಯಸ್ತಾಪಸಾಃ
ಶ್ರೀವಿಷ್ಣುಪದಾಂಬುಜೈಕಶರಣಾಃ ಕುರ್ವಂತು ನೋ ಮಂಗಲಮ್ ॥೩॥

ಮಾಂಧಾತಾ ನಹುಷೋಽಂಬರೀಷ-ಸಗರೌ ರಾಜಾ ಪೃಥುರ್ಹೈಹಯಃ
ಶ್ರೀಮಾನ್ ಧರ್ಮಸುತೋ ನಲೋ ದಶರಥೋ ರಾಮೋ ಯಯಾತಿರ್ಯದುಃ ।
ಇಕ್ಷ್ವಾಕುಶ್ಚ ವಿಭೀಷಣಶ್ಚ ಭರತಶ್ಚೋತ್ತಾನಪಾದಧ್ರುವಾ-
ವಿತ್ಯಾದ್ಯಾ ಭುವಿ ಭೂಭುಜಶ್ಚ ಸತತಂ ಕುರ್ವಂತು ನೋ ಮಂಗಲಮ್ ॥೪॥

ಶ್ರೀಮೇರುರ್ಹಿಮವಾಂಶ್ಚ ಮಂದರಗಿರಿಃ ಕೈಲಾಸಶೈಲಸ್ತಥಾ
ಮಾಹೇಂದ್ರೋ ಮಲಯಶ್ಚ ವಿಂಧ್ಯನಿಷಧೌ ಸಿಂಹಸ್ತಥಾ ರೈವತಃ ।
ಸಹ್ಯಾದ್ರಿರ್ವರಗಂಧಮಾದನಗಿರಿರ್ಮೈನಾಕಗೋಮಂತಕಾ-
ವಿತ್ಯಾದ್ಯಾ ಭುವಿ ಭೂಧರಾಶ್ಚ ಸತತಂ ಕುರ್ವಂತು ನೋ ಮಂಗಲಮ್ ।೫॥

ಗಂಗಾ ಸಿಂಧು ಸರಸ್ವತೀ ಚ ಯಮುನಾ ಗೋದಾವರೀ ನರ್ಮದಾ
ಕೃಷ್ಣಾ ಭೀಮರಥೀ ಚ ಫಲ್ಗುಸರಯೂ ಶ್ರೀಗಂಡಕೀ ಗೋಮತೀ।
ಕಾವೇರಿ ಕಪಿಲಾ ಪ್ರಯಾಗವಿನತಾ ನೇತ್ರಾವತೀತ್ಯಾದಯೋ
ನದ್ಯಃ ಶ್ರೀಹರಿಪಾದಪಂಕಜಭವಾಃ ಕುರ್ವಂತು ನೋ ಮಂಗಲಮ್ ॥೬॥

ವೇದಾಶ್ಚೋಪನಿಷದ್ಗಣಾಶ್ಚ ವಿವಿಧಾಃ ಸಾಂಗಾಃ ಪುರಾಣಾನ್ವಿತಾ
ವೇದಾಂತಾ ಅಪಿ ಮಂತ್ರತಂತ್ರಸಹಿತಾಸ್ತರ್ಕಾಃ ಸ್ಮೃತೀನಾಂ ಗಣಾಃ।
ಕಾವ್ಯಾಲಂಕೃತಿನೀತಿನಾಟಕಯುತಾಃ ಶಬ್ದಾಶ್ಚ ನಾನಾವಿಧಾಃ
ಶ್ರೀವಿಷ್ಣೋರ್ಗುಣನಾಮಕೀರ್ತನಪರಾಃ ಕುರ್ವಂತು ನೋ ಮಂಗಲಮ್ ॥೭॥

ಆದಿತ್ಯಾದಿನವಗ್ರಹಾಃ ಶುಭಕರಾಃ ಮೇಷಾದಯೋ ರಾಶಯೋ
ನಕ್ಷತ್ರಾಣಿ ಸಯೋಗಕಾಶ್ಚ ತಿಥಯಃ ತದ್ದೇವತಾಸ್ತದ್ಗಣಾಃ।
ಮಾಸಾಬ್ದಾ ಋತವಸ್ತಥೈವ ದಿವಸಾಃ ಸಂಧ್ಯಾಸ್ತಥಾ ರಾತ್ರಯಃ
ಸರ್ವೇ ಸ್ಥಾವರಜಂಗಮಾಃ ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥೮॥

ಇತ್ಯೇತದ್ವರಮಂಗಲಾಷ್ಟಕಮಿದಂ ಶ್ರೀರಾಜರಾಜೇಶ್ವರೇ-
ಣಾಖ್ಯಾತಂ ಜಗತಾಮಭೀಷ್ಟಫಲದಂ ಸರ್ವಾಶುಭಧ್ವಂಸನಮ್।
ಮಾಂಗಲ್ಯಾದಿಶುಭಕ್ರಿಯಾಸು ಸತತಂ ಸಂಧ್ಯಾಸು ವಾ ಯಃ ಪಠೇತ್
ಧರ್ಮಾರ್ಥಾದಿಸಮಸ್ತವಾಂಛಿತಫಲಂ ಪ್ರಾಪ್ನೋತ್ಯಸೌ ಮಾನವಃ ॥೯॥

ತದೇವ ಲಗ್ನಂ ಸುದಿನಂ ತದೇವ
ತಾರಾಬಲಂ ಚಂದ್ರಬಲಂ ತದೇವ ॥
ವಿದ್ಯಾಬಲಂ ದೈವಬಲಂ ತದೇವ
ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ ॥೧೦॥

ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ।
ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ ॥೧೧॥

॥ ಇತಿ ಶ್ರೀರಾಜರಾಜೇಶ್ವರತೀರ್ಥಯತಿಕೃತಂ ಮಂಗಲಾಷ್ಟಕಂ ಸಂಪೂರ್ಣಂ ॥

* * * *

# ಶ್ರೀನವಗ್ರಹಸ್ತೋತ್ರಮ್

ಭಾಸ್ವಾನ್ ಮೇ ಭಾಸಯೇತ್ ತತ್ತ್ವಂ ಚಂದ್ರಶ್ಚಾಹ್ಲಾದಕೃದ್ಭವೇತ್ ।
ಮಂಗಲೋ ಮಂಗಲಂ ದದ್ಯಾದ್ ಬುಧಶ್ಚ ಬುಧತಾಂ ದಿಶೇತ್ ॥೧॥

ಗುರುರ್ಮೇ ಗುರುತಾಂ ದದ್ಯಾತ್ ಕವಿಶ್ಚ ಕವಿತಾಂ ದಿಶೇತ್ ।
ಶನಿಶ್ಚ ಶಂ ಪ್ರಾಪಯತು ಕೇತುಃ ಕೇತುಂ ಜಯೇಽರ್ಪಯೇತ್ ॥೨॥

ರಾಹುರ್ಮೇ ರಹಯೇದ್ ರೋಗಂ ಗ್ರಹಾಃ ಸಂತು ಕರಗ್ರಹಾಃ ।
ನವಂ ನವಂ ಮಮೈಶ್ವರ್ಯಂ ದಿಶಂತ್ವೇತೇ ನವಗ್ರಹಾಃ ॥೩॥

ಶನೇ ದಿನಮಣೇಸ್ಸೂನೋಹ್ಯನೇಕಗುಣಸನ್ಮಣೇ ।
ಅರಿಷ್ಟಂ ಹರ ಮೇಽಭೀಷ್ಟಂ ಕುರು ಮಾ ಕುರು ಸಂಕಟಮ್ ॥೪॥

ಹರೇರನುಗ್ರಹಾರ್ಥಾಯ ಶತ್ರೂಣಾಂ ನಿಗ್ರಹಾಯ ಚ ।
ವಾದಿರಾಜಯತಿಪ್ರೋಕ್ತಂ ಗ್ರಹಸ್ತೋತ್ರಂ ಸದಾ ಪಠೇತ್ ॥೫॥

॥ ಇತಿ ಶ್ರೀವಾದಿರಾಜಯತಿವಿರಚಿತಂ ನವಗ್ರಹಸ್ತೋತ್ರಂ ಸಂಪೂರ್ಣಮ್ ॥

* * * *

# ಸ್ತ್ರೀಯರು ಹೇಳಬೇಕಾದ ಹಾಡುಗಳು

## ಸೃಷ್ಟಿ ಸುಳಾದಿ

### ರಾಗ : ಸಾವೇರಲಿ, ಧೃವತಾಳ

ಚಿನುಮಯ ಮೂರುತಿ ಪ್ರಳಯ ಜಲಧಿಯೊಳು ।
ವನಿತೆ ಶ್ರೀ ಭೂಮಿ ದುರ್ಗೆಯರೊಡನೆ ।
ತನವುದರದಲ್ಲಿ ಲಿಂಗವಿಶಿಷ್ಟರಾದ ।
ಇನಿತು ಜೀವರ ಹಿಡಿ ತುಂಬಾಕೊಂಡು ।
ತನಯನ ನೂರುವರುಷ ಪರಿಯಂತದಿ ।
ವನಜಾಕ್ಷ ವಟಪತ್ರ ಶಯನನಾಗಿ
ಜನರೆಲ್ಲ ತಮ್ಮ ತಮ್ಮ ಗತಿಗೆ ತಕ್ಕ ಸಾ ।
ಧನವ ಸಾಧಿಸಿ ಕೊಳ್ಳಲೆಂದು ಕರುಣಿ ।
ಪುನರಪಿ ಸೃಷ್ಟಿಯ ಮಾಡುವೆನೆಂದು ಲಾ ।
ಲನಿಗೆ ಪ್ರಕೃತಿಯ ಮಮತೆ ಇತ್ತು ।
ಗುಣತ್ರಯಾತ್ಮಕ ಸೂಕ್ಷ್ಮ ತತ್ವರಾಶಿಯ ಜೀವ ।
ರನು ಸೃಜಿಸಿದ ಹಯವದನ ಪ್ರಭು ॥೧॥

### ಮಟ್ಟತಾಳ

ಮಹತತ್ವವ ಸೃಜಿಸಿ (ಸೃಷ್ಟಿಸಿ) ಮರುತ ಬ್ರಹ್ಮರಿಟ್ಟ ।
ಅಹಂಕಾರದಿ ಗರುಡ ಶೇಷರುದ್ರರಿಟ್ಟ ।
ಅಹಂಕೃತಿ ತೃತಿಯಭಾಗವನೆ ಮಾಡಿ ।
ಶ್ರೀಹಯವದನ ಭೂತೇಂದ್ರಿಯಗಳ ಮಾಡಿದ ॥೨॥

### ರೂಪಕತಾಳ

ತಾಮಸದಿಂದ ಪಂಚಭೂತಂಗಳ ಸೃಜಿಸಿ ।
* ಯೋಮಾಂತರದಿ ಪಂಚದೇವರ ಕೂಡಿಸಿ ।

ಯುಗಾದಿ

ಆ ಮುನ್ನ ತೈಜಸದಿ ಸಾಧಿಸಿದ ದಶೇಂದ್ರಿಯ ।
ಸೋಮಸೂರ್ಯಾದಿ ದೇವತೆಗಳನೇ ನೆಲಸಿ ।
ಶ್ರೀ ಮನೋಹರ ಹಯವದನ ವೈಕಾರಿಕದಿ ।
ಆಮನವ ದೇವತೆಗಳ ತನುವಮಾಡಿದ ॥೩॥
(* ಬಹಿಬ್ರಹ್ಮಾಂಡದಲ್ಲಿ ಆಕಾಶಾದಿ ಪಂಚಭೂತಾವರಣ)

**ತ್ರಿವಿಡಿತಾಳ**

ಇಂತೀ ತತ್ವವೇ ಸೃಷ್ಟಿಗೆ ಮೊದಲು ।
ಕಾಂತಿಯರಷ್ಟಕೊಂಡಿಪ್ಪ ಶ್ರೀ ಕೃಷ್ಣ ತಾನೆ ।
ಅಂತವಿಲ್ಲ ಸ್ವರೂಪಿಲ್ಲ ವಿರೂಪನಲ್ಲಾ ।
ನಂತಮೂರುತಿ ಸಿರಿ ಹಯವದನ ॥೪॥

## ಝಂಪಿತಾಳ (ಶ್ಲೋಕ)

ತಥಾಸುರಾಣಾಂ ವಿಶದಾಸುರಾಣಾಂ ।
ರೂಪೇಣ ತೇಷಾಂ ಬಲವೀರ್ಯಚೋದಿತಾಂ ।
ವಂದೇ ಪರಂದೇವ ಗುಣೈಕ ವಿಷ್ಣೋ ।
ದೇವೇನನಾಗೇಂದ್ರ ಮತಃಪರೇಣ ॥೧॥

**ಪದ**

ತಥ ಬ್ರಹ್ಮರುದ್ರಾದಿ ಜೀವರ ಸೃಜಿಸಿ ।
ತತ್ಸ್ವರೂಪವಪೊಕ್ಕು ನಡಿಸಿದನು ಹಯವತದ ॥೫॥

**ಅಟ್ಟತಾಳ**

ಆದರಿಂದ ತತ್ವದೇವತೆಗಳೆಲ್ಲರು ಕೂಡಿ ।
ಮುದದಿ ಬ್ರಹ್ಮಾಂಡ ಮಾಡಲರಿಯದೇ ಪೋಗಿ ।
ಪದುಮನಾಭನ ತುತಿಸಲು ಅವರೊಳು ಪೊಕ್ಕು ।
ಅದುಭೂತ ಬ್ರಹ್ಮಾಂಡವನು ರಚಿಸಿದನು ।
ಅದರೊಳು ಬಂದು ಬಹುಕಾಲ ಪರಿಯಂತರ ।
ಉದಕ ಶಾಯಿಯಾದ ಮುದದಿ ಹಯವದನ ॥೬॥

### ಆದಿತಾಳ

ಶಿಷ್ಟರನು ಶುಭ ಪಥಕೆ ನಡೆಸಿ ವು-।
ತ್ಕೃಷ್ಟ ಸುಗತಿಯನು ಕಡಿಯಲ್ಲೀವನು ।
ದುಷ್ಟರನ್ನು ದುರ್ಗತಿ ಯ್ಯೆದಿಸುವನು ।
(ದುಷ್ಟರನ್ನು ದುಷ್ಪಥಕೆ ನಡಿಸಿ ಕಷ್ಟಗತಿಯ ಕಡೆಯಲೀವನು)
ಹೃಷ್ಟಮೂರುತಿ ಶ್ರೀ ಹಯವದನ ಈ ।
ಸೃಷ್ಟಿಯೊಳು ಮಧ್ಯಮರನು ಮಾಡಿದ ಯೆ- ।
ಳಷ್ಟು ವೈಷಮ್ಯವಿಲ್ಲ ಕಾಣಿರೊ ॥೭॥

### ಜತೆ

ಇಂತೀ ತತ್ವಸೃಷ್ಟಿಯ ನೆನೆವ ಮಹತ್ಮರ ।
ಸಂತತ ಪೊರೆವ ಶ್ರೀಕಾಂತ ಹಯವದನ ॥೮॥

## ಕಾಲಾಖ್ಯ ಸುಳಾದಿ

### ರಾಗ ಭೈರವಿ, ಧೃವತಾಳ

ಅಣುದ್ವಯ ಪರಮಾಣು ಯಿಂಥಾದೆ ತ್ರಯವಾಗೆ ।
ತ್ರಣು ಯೆನಿಸಿ ಕೊಂಬೋದು ಯಿದೆ ತ್ರಸರೇಣು ।
ಮನುಜಾಗೋಚರವೆನ್ನು ಜಾಲಾರ್ಕಕಿರಣಾದಲ್ಲಿ ।
ಘನವಾಗಿ ಚರಿಸುವ ದೇಶಭೇದ ।
ಇನಿತು ತ್ರಸರೇಣು ತ್ರುಟಿ ತ್ರುಟಿಮೂರು ಯೆಂಬೋದು ।
ಅನಿಸಿಕೊಳುತಲಿದು ವಂದು ವೇಧ ।
ತ್ರಣವೇಧವಂದುಲವ ಯಿಂಥವುಮೂರಾಗೆ ।
ಎಣಿಸು ನಿಮಿಷಾವೆಂದು ನಿಮಿಷಮೂರು ।
ಕ್ಷಣವಾಗುವದು ಕೇಳಿ ಮರಳೆ ಚೆನ್ನಾಗಿ ಐದು ।
ಕ್ಷಣ ಕೂಡಿದರೆ ವೊಂದುಕಾಷ್ಟಯೆನ್ನಿ ।
ಅನುಮಾನ ಮಾಡಸಲ್ಲ ಹೈದಿನೈದು ಕಾಷ್ಟಾ ಲೋ ।
ಚನೆಮಾಡುವೊಂದು ಲಘುವು ಸಿದ್ಧವಕ್ಕು ।

ಯುಗಾದಿ

ಆ ಮುನ್ನ ತೈಜಸದಿ ಸಾಧಿಸಿದ ದಶೇಂದ್ರಿಯ ।
ಸೋಮಸೂರ್ಯಾದಿ ದೇವತೆಗಳನೇ ನೆಲಸಿ ।
ಶ್ರೀ ಮನೋಹರ ಹಯವದನ ವೈಕಾರಿಕದಿ ।
ಅಮನವ ದೇವತೆಗಳ ತನುವಮಾಡಿದ ॥೩॥
(* ಬಹಿಬ್ರಹ್ಮಾಂಡದಲ್ಲಿ ಆಕಾಶಾದಿ ಪಂಚಭೂತಾವರಣ)

### ತ್ರಿವಿಡಿತಾಳ

ಇಂತೀ ತತ್ವವೇ ಸೃಷ್ಟಿಗೆ ಮೊದಲು ।
ಕಾಂತಿಯರಪ್ಪಿಕೊಂಡಿಪ್ಪ ಶ್ರೀ ಕೃಷ್ಣ ತಾನೆ ।
ಅಂತವಿಲ್ಲ ಸ್ವರೂಪಿಲ್ಲ ವಿರೂಪನಲ್ಲಾ ।
ನಂತಮೂರುತಿ ಸಿರಿ ಹಯವದನ ॥೪॥

### ಝಂಪೆತಾಳ (ಶ್ಲೋಕ)

ತಥಾಸುರಾಣಾಂ ವಿಶದಾಸುರಾಣಾಂ ।
ರೂಪೇಣ ತೇಷಾಂ ಬಲವೀರ್ಯಚೋದಿತಾಂ ।
ವಂದೇ ಪರಂದೇವ ಗುಣೈಕ ವಿಷ್ಣೋ ।
ದೇವೇನನಾಗೇಂದ್ರ ಮತಃಪರೇಣ ॥೧॥

### ಪದ

ತಥ ಬ್ರಹ್ಮರುದ್ರಾದಿ ಜೀವರ ಸೃಜಿಸಿ ।
ತತ್ಸ್ವರೂಪವಪೊಕ್ಕು ನಡಿಸಿದನು ಹಯವತದ ॥೫॥

### ಅಟ್ಟತಾಳ

ಆದರಿಂದ ತತ್ವದೇವತೆಗಳೆಲ್ಲರು ಕೂಡಿ ।
ಮುದದಿ ಬ್ರಹ್ಮಾಂಡ ಮಾಡಲರಿಯದೇ ಪೋಗಿ ।
ಪದುಮನಾಭನ ತುತಿಸಲು ಅವರೊಳು ಪೊಕ್ಕು ।
ಅದುಭೂತ ಬ್ರಹ್ಮಾಂಡವನು ರಚಿಸಿದನು ।
ಅದರೊಳು ಬಂದು ಬಹುಕಾಲ ಪರಿಯಂತರ ।
ಉದಕ ಶಾಯಿಯಾದ ಮುದದಿ ಹಯವದನ ॥೬॥

### ಆದಿತಾಳ

ಶಿಷ್ಟರನು ಶುಭ ಪಥಕೆ ನಡೆಸಿ ವು-।
ತ್ಕೃಷ್ಟ ಸುಗತಿಯನು ಕಡಿಯಲ್ಲೀವನು ।
ದುಷ್ಟರನ್ನು ದುರ್ಗತಿ ಯೈದಿಸುವನು ।
(ದುಷ್ಟರನ್ನು ದುಷ್ಪಥಕೆ ನಡಿಸಿ ಕಷ್ಟಗತಿಯ ಕಡೆಯಲೀವನು)
ಹೃಷ್ಟಮೂರುತಿ ಶ್ರೀ ಹಯವದನ ಈ ।
ಸೃಷ್ಟಿಯೊಳು ಮಧ್ಯಮರನು ಮಾಡಿದ ಯ- ।
ಥಷ್ಟು ವೈಷಮ್ಯವಿಲ್ಲ ಕಾಣಿರೊ ॥೭॥

### ಜತೆ

ಇಂತೀ ತತ್ವಸೃಷ್ಟಿಯ ನೆನೆವ ಮಹತ್ಮರ ।
ಸಂತತ ಪೊರೆವ ಶ್ರೀಕಾಂತ ಹಯವದನ ॥೮॥

## ಕಾಲಾಖ್ಯ ಸುಳಾದಿ

### ರಾಗ ಭೈರವಿ, ಧೃವತಾಳ

ಅಣುದ್ವಯ ಪರಮಾಣು ಯಿಂಥಾದೆ ತ್ರಯವಾಗೆ ।
ತ್ರಣು ಯೆನಿಸಿ ಕೊಂಬೋದು ಯಿದೆ ತ್ರಸರೇಣು ।
ಮನುಜಾಗೋಚರವೆನ್ನು ಜಾಲಾರ್ಕಕಿರಣಾದಲ್ಲಿ ।
ಘನವಾಗಿ ಚರಿಸುವ ದೇಶಭೇದ ।
ಇನಿತು ತ್ರಸರೇಣು ತ್ರುಟಿ ತ್ರುಟಿಮೂರು ಯೆಂಬೋದು ।
ಅನಿಸಿಕೊಳುತಲಿದು ವಂದು ವೇಧ ।
ತ್ರಣಿವೇಧವಂದುಲವ ಯಿಂಥವುಮೂರಾಗೆ ।
ಎಣಿಸು ನಿಮಿಷಾವೆಂದು ನಿಮಿಷಮೂರು ।
ಕ್ಷಣವಾಗುವದು ಕೇಳಿ ಮರಳೆ ಚೆನ್ನಾಗಿ ಐದು ।
ಕ್ಷಣ ಕೂಡಿದರೆ ವೊಂದುಕಾಷ್ಟಯೆನ್ನಿ ।
ಅನುಮಾನ ಮಾಡಸಲ್ಲ ಹೈದಿನೈದು ಕಾಷ್ಟಾ ಲೋ ।
ಚನೆಮಾಡುವೊಂದು ಲಘುವು ಸಿದ್ಧವಕ್ಕು ।

ಯುಗಾದಿ

ಗುಣಿಸು ಹದಿನೈದು ಲಘುವು ವೊಂದು ನಾಡಿಯೆಂದು ।
ಇನಿತು ಆರೇಳುಯೆಂಟು ವೊಂದುಯಾಮಾ ।
ಎಣಿಕೆಗೈಯೊ ಇಂಥಯಾಮ ಚತುಷ್ಟವಾಗೆ ।
ದಿನಮಣಿ ಅಸ್ತಂಗತ ಹನ್ನೆರಡುತಾಸು ।
ಇನಿತು ಹನ್ನೆರಡಾಗೆರಳು ನಾಲ್ಕುಝಾಂ ವ ।
ಎನಿಸುವದು ವೊಂದುವಾಸರಕೆ ।
ಗಣಿತಜ್ಞರು ಪೇಳುವರು ತಿಥಿ ತಾರ ಯೋಗ ಕರಣ ।
ಮನುಜರಿಗೆ ವೊಂದು ದಿವಸಾಯಿತೋ ದೇವ ।
ಜನನಮಿಕ್ಕಾದ ಕರ್ಮಗಳಿಗೆ ಯಿದೆ ಆರಂಭ ।
ನೆನಿಸು ಹತ್ತೈದು ದಿವಸವೆಂಬೋದೆ ಪಕ್ಷ ।
ಇನಿತು ಈಪರಿಯಾಗೆ ಭಿನ್ನ ಪಕ್ಷ ವೆಂ ।
ದೆನಿಸುವು ಶುಕ್ಲ ಕೃಷ್ಣಯೆಂಬೊನಾಮ ।
ಅನುವಾಗಿ ಯೆರಡು ಪಕ್ಷ ಕೂಡಿಸಲು ಮಾ ।
ತನು ಕೇಳು ತಿಂಗಳೊಂದು ಇಂಥವೆರಡು ।
ಅನುಸಂಧಿ ನಾಲ್ಕು ವೊಂದು ಋತುವಾಹದು ಯಿವೆ ಆರು ।
ಗುಣಿಸಲು ವೊಂದುವರ್ಷ ವರ್ಷನೂರಾಗಲು ।
ಮನುಜರಿಗೆ ಪೂರ್ಣಾಯು ಯೆಂದೆನಿಸುವದು ಯೋ ।
ಚನೆ ಮಾಡು ಮಾನುಷ್ಯಮಾನದಲೆಕ್ಕ ।
ಅನಿಮಿಷತತಿಗಳಿಗೆ ಮತ್ತೆ ಬಗೆವೊಂದು ವತ್ಸರ ।
ದಿನವೊಂದು ಹಗಲಿರುಳು ಆಗೋವೆಂದು ।
ವನಜಗರ್ಭನ್ನ ತನಕ ಈಪರಿಯಿಂದಯೆಣಿಸಿ ।
ಗುಣಿಸಿ ತಿಳಿಯಬೇಕು ಕಾಲಪ್ರಭಾ ।
ಅಣುಮಹತ್ತುರೂಪ ವಿಜಯವಿಠ್ಠಲರೇಯ ।
ಗುಣನಿಧಿ ಸರ್ವಕಾಲದೊಡನೆ ತಿರುಗುತಿಪ್ಪ ॥೧॥

ಮಟ್ಟತಾಳ

ಮೂರೊಂದು ಯುಗವುಂಟು ಮನುಜ ಮಾನದಲ್ಲಿ
ಸಾರುವೆ ವರ್ಷಂಗಳು ವಿವರ ವಿವರವಾಗಿ ।

ಯುಗಾದಿ

ಆರಂಭಯುಗಕೆ ಹದಿನೇಳು ಲಕ್ಷ ।
ಈರೈದುಹತ್ತುಯೆಂಟುಸಾವಿರವೆನ್ನಿ (೧೭,೨೮,೦೦೦)
ಚಾರುದ್ವಿತಿಯ ಯುಗಕೆ ಲಕ್ಷದ್ವಾದಶ ತೊಂಬ ।
ತ್ತಾರುಸಾವಿರವ್ಯೆಯ್ಯಾ । (೧೨,೯೬,೦೦೦)
ಮೂರನೆಯುಗಕೆ ಯೆಂಟುಲಕ್ಷಮ್ಯಾಲೆ ।
ಈರೆರರವತ್ತು ಸಾವಿರವರುಷಗಳು ।(೮,೬೪,೦೦೦)
ಈ ರೀತಿ ಗ್ರಹಿಸು ನಾಲ್ಕನೆಯುಗಕೆ ವಿ ।
ಚಾರ ನಾಲ್ಕು ಲಕ್ಷತ್ರಿಂಶತಿ ದ್ವಯ ಸಹಸ್ರ । (೪,೩೨,೦೦೦)
ಹಾರೈಸುಯೆಲ್ಲ ಕೂಡಿಗುಣಿಸೆ ವಿ ।
ಸ್ತಾರವಾಗಿದೆ ನಾಲ್ಕು ಹತ್ತು ।
ಮೂರುಲಕ್ಷದಶದಶ ಸಾಸಿರವೊ । (೪೨,೨೦,೦೦೦)
ಬ್ಯಾರೆಬ್ಯಾರೆ ಯುಗದ ಪೆಸರಂಗಳು ಶ್ರಿಂ ।
ಗಾರದಿಂದಲಿಕೇಳಿ ಕೃತ ತ್ರೈತಾ ದ್ವಾಪರ ಕಲಿ ।
ಸಾರ ಹೃದಯರೊಲಿದು ಸಂತತಕರುಣದಲಿ ।
ಶ್ರೀರಮಣ ನಮ್ಮ ವಿಜಯವಿಠ್ಠಲರೇಯ ।
ಮೂರೊಂದು ವತ್ಸರನಾಮಕ ಕಾಣೊ ॥೨॥

**ರೂಪಕತಾಳ**

ಏಕತ್ರಯ (೧+೩=೪) ವೊಮ್ಮೆ ತಿರುಗಿದರು ಮಹಯುಗ ।
ನಾಕಮಾನದಲ್ಲಿ ದ್ವಾದಶಸಹಸ್ರವೊ । (೧೨,೦೦೦)
ಲೋಕದೊಳಗೆಸಿದ್ಧ ಯಿಂಥ ಮಹಯುಗ ಸಾವಿರ ।
ಶ್ರೀಕಾಂತನಿಂದಲಿ ತಿರುಗಿದರದು ಅಂದು ।
ಲೋಕೇಶಗಾಗುವದು ವೊಂದು ಹಗಲು ಶಬ್ದ ।
ವಾಕು ಲಾಲಿಸಿ ನಾನೂರು ಮೂವತ್ತೆರಡುಕೋಟಿ ।
(೪,೩೨೦೦೦೦೦೦೦)
ಈ ಕಾಲದಂತೆ ಸಾವಿರಾವರ್ತಿ ತಿರುಗಿದರು ।
ನೂಕಿಪೋಯಿತು ವೊಂದುಯಿರಳು ಕಮಲಾಸನಗೆ ।
ನಾಲ್ಕು ನೂರು ಮೂವತ್ತೆರಡುಕೋಟಿ ।

ಯುಗಾದಿ

ಶ್ಲೋಕಾರ್ಥದಿಂದಲಿ ಯಿತ್ತಂಡ ಕೂಡಿಸಿ ।
ನಾಲ್ಕೆರಡು ಅರವತ್ತು ನಾಲ್ಕು ಕೋಟಿಗುಣಿತ ।
(೮,೬೪,೦೦೦೦೦೦೦)
ವಾಕೇಶಚತುರ್ಮುಖನಿಗೆ ನಿಜವೊಂದುದಿವಸವೊ ।
ಸಾಕಾರಮೂರ್ತಿಸಿರಿ ವಿಜಯವಿಠ್ಠಲರೇಯ ।
ಲೌಕಿಕಮಾನದಲ್ಲಿ ಯಿಷ್ಟು ವರ್ಷಗೈದಾ ॥೩॥

ಝಂಪೆತಾಳ

ವನಸಂಭವನ ವೊಂದುದಿವರಾತ್ರಿಯೊಳು ।
ಮನುಗಳು ಚತುರ್ದಶರು ತಮ್ಮ ಪದವಿ ।
ಅನುಭವಿಸುವರು ಪ್ರತ್ಯೇಕ ಪ್ರತ್ಯೇಕವಾಗಿ ।
ಗಣಿಕೆಮಾಡಲಿಬೇಕು ಯಿವರಕಾಲ ।
ಮನುವೊಬ್ಬಗೆ ಎಪ್ಪತ್ತೊಂದು ಮಹಾಯುಗ ದಶ ।
ಪನಗರ್ಧಾಲಕ್ಷಮೇಲೆ ಭುಕ್ತಿಕಾಲ ।
ಎಣಿಕೆ ಮಾಡಲಿಬೇಕು ಯೆಪ್ಪತ್ತೊಂದುಮಹಾಯುಗ ।
ವಿನಯದಿಂದಲಿ ವೊಂದುಮಹಯುಗದಲೆಖ್ಖಿ
(೪೩,೨೦೦೦೦)
ಇನಿತು ಯೆಪ್ಪತ್ತೊಂದರಿಂದವೆಗ್ಗಳಿಸೆ ।
ಮನಕೆ ವೊಪ್ಪುವದು ತ್ರಿಂಶತಿಕೋಟಿ ಅರವತ್ತು ।
ಮುನಿಲಕ್ಷ ಯಿಪ್ಪತ್ತು ಸಾಸಿರವರುಷ । (೩೦,೬೭,೨೦೦೦೦)
ಮನು ವೊಬ್ಬಬ್ಬನಿಗೆ ಮಹಯುಗ ಎಪ್ಪತ್ತೊಂದು ।
ಉಣಿಸಿ ಪೋದವು ನೂಕೆ ಅದು ಸಂಖ್ಯ ಮಾಡೆ ।
ಕ್ಷಣಬಿಡದೆ ವೊಂಭೈನೂರುವೊಂಭತ್ತು ನಾಲ್ಕು ।
ಮಿನಗುವದು ಮಹಾಯುಗ ಉಳಿದವಾರು ಈ ।
ಜನಕೆ ಹಂಚಿಕೆಯಿಂದ ನೋಡಲಿಬೇಕು ।
ಎಣಿಸು ಹದಿನೆಂಟುಲಕ್ಷ ವಂದ್ಯೆವತ್ತು ಸಾವಿರ ।
ವನಧಿ ಶತಯಿಪ್ಪತ್ತೆಂಟು ವರುಷಾರು ತಿಂಗಳ ।
ದಿನ ಯಿಪ್ಪತ್ತೈದು ತಾಸು ಹದಿನೇಳು ಲಘು ಐದು ।

ಕೊನೆಮಾತ್ರವುಂಟು ಅದು ಅಲ್ಪ ವಿವಿಕ್ಷ ।
ಮನೋರ್ವನಿಗೆ ಕೇಳು ಕಾಲಕ್ಲಪ್ತಿ ಅಬ್ದ ।
ಮುನಿಗಳ ಸಮ್ಮತ್ರವೊ ಬಲ್ಲವರಿಗೆ .......
(೧೮,೫೧,೪೨೮) ವರುಷ, (೬) ತಿಂಗಳು, (೨೫) ದಿನ, (೧೭) ತಾಸು, (೫) ಲಘು, (೫) ಕಾಷ್ಟ, (೩) ಕ್ಷಣ ಈ ಪ್ರಕಾರದಲಿ

ಇನಿತು ಮಿಶ್ರಮಾಡೆ ವೊಬ್ಬ ನುವಿಗೆ ಧಾ ।
ರುಣಿ ವಶವಾಗಿಯಿದ್ದದು ಕೇಳಿರೊ ।
ಗುಣ ಹತ್ತು ಕೋಟಿ ಎಂಭತ್ತೈದು ಲಕ್ಷ, ಮಾ ।
ರ್ಗುಣ ಯೆರಡುಶತಿ ಮೇಲೆವೊಂದು ಸಹಸ್ರ ।
ವನಧಿ ವಿಂಶತಿ ಅಷ್ಟವರುಷ ತದುಪರಿಯಿಂದ ।
ಗುಣಿಸು ಯುತಾಮಹಾಯುಗ ವಿಭಾಗದಿ ।
ಜನನ ಮರಣ ಶೂನ್ಯ ವಿಜಯವಿಠ್ಠಲ ತಾನೆ ।
ಮನುವಿನೊಳಗಿದ್ದು ತ್ರಿಲೋಕವನು ಆಳ್ವಾ ॥೪॥

## ತ್ರಿವಿಡಿತಾಳ

ಹದಿನಾಲ್ಕು ಮನುಗಳು ಯಿಪ್ಪರು ಸ್ವಾಯಂಭುವ ।
ಇದರೊಳಗಾದಿ ಮನುವೆನಿಸಿಕೊಂಬ ।
ಮುದದಿಂದ ತಿಳಿವದು ತಾಪಸಾಖ್ಯಮನು ।
ಉದುಭವ ವಾಗಿಹ ನಾರೆಯೆಣ ।
ಬುಧರು ವಿವರಿಸಿ ಇವರ ಸಂಧಿಕಾಲದಕ್ಲಪ್ತಿ ।
ಒದಗಿ ಕೊಂಡಾಡುವದು ಪುಣ್ಯವಕ್ಕು ।
ಮೊದಲು ಮನುವಿಗೆ ಎರಡುಸಾವಿರ ಹಯನ - ೨೦೦೦
ಅದರ ತರುವಾಯದಲಿ ಐದು ಮನುಗಳಿಗೆ ।
ಹದಿನಾಲ್ಕುನೂರು ವತ್ಸರ ಪ್ರಕಾರ । ೧೪೦೦೦ x ೫
ಯಿದನೆ ಗುಣಿಸಲಾಗಿ ಏಳುಸಾವಿರ ವಾ । - ೭೦೦೦
ದದುಕಾಣೊ ಉಳಿದೆಂಟು ಮನುಗಳಸಂಧಿ ।
ಹದಿನೈದು ನೂರಬ್ದದಂತೆ ಉಗ್ಗಡಿಸೆ ಹನ್ನೆರಡು ।
ಸಾವಿರವಾದವೆನ್ನಿ ..... - ೧೨೦೦೦

ಇದರಂತೆ ಅವರವರ ಸಂಧಿಕಾಲಗಳಿಗೆ ।
ತ್ರಿದಶಗಣ ಬಲ್ಲರೆ ಕಾಲವಿವರ ।
ಮದನ ಜನಕ ನಮ್ಮ ವಿಜಯವಿಠ್ಠಲರೇಯ ।
ಹೃದಯದೊಳಗೆ ಪ್ರೇರಿಸಿದಂತೆ ವಿವರ ನಿಶ್ಚಯಮಾಡಿ ॥೫॥
೨೧,೦೦೦ ಇಪ್ಪತ್ತೊಂದು ಸಾವಿರ ವರುಷ ೧೪ ಮನುಗಳ ಸಂಧಿಕಾಲ

## ಅಟ್ಟತಾಳ

ಇಂತು ಸಾವಿರ ಪ್ಯಾಟಿ ತಿರುಗಿದರೆ ದೇವ ।
ಶಿಂಶಿಣ ಓರಿಯಂಗೆ ಹಗಲಿರುಳೊಂದೆ ಅಯ್ಯ ।
ಸಂಶಿತೊ ಕಾಣೊ ಮುಂದೆ ಗಣಿತಿ ಚನ್ನಾಗಿ ।
ಚಿಂತಿಸು ಬೊಮ್ಮನ್ನಾ ವಂದೆತಿಂಗಳಿಗೆ ಅ ।
ದ್ಯಂತಕಾಲ ನೋಡೆ ಎರಡುಅರ್ಬುದ ಐನೂರಾ ತೊಂ ।
ಭತ್ತೆರಡು ಕೋಟಿ ವತ್ಸರ ಸಿದ್ಧ । (೨,೫೯,೨೦೦೦೦೦೦೦)
ಇಂಥವೆ ಹನ್ನೆರಡಾಗೆ ವೊಂದುವರುಷ ।
ಮಂತ್ರೋಕ್ತದಿಂದಲಿ ಯಿವೆನೂರುಬೊಮ್ಮಗೆ ।
ಕಂತುಜನಕ ರಂಗ ವಟಪತ್ರಶಯನನೊ ।
ಎಂತು ಪೇಳಲಿ ಹರಿಯ ಶಕ್ತಿಗೆ ಸರ್ವ ಸ್ವಾ ।
ತಂತ್ರನೊ ಅಜನಬ್ಬ ನೂರುವರುಷ ಪರಿ ।
ಯಂತ್ರ ಮಲಗಿಪ್ಪ ಲಕುಮಿ ಸಹಿತವಾಗಿ ।
ಚಿಂತಿತಫಲದಾಯ ವಿಜಯವಿಠ್ಠಲರೇಯ ।
ಓಂತಿನ ಬೊಮ್ಮನಿಗೆ ಯಿದರಂತೆ ಫಲಿಸಿದ ॥೬॥

## ಆದಿತಾಳ

ಕಾಲಾತೀತ ವಿಷ್ಣು ಅಣುಮಹತ್ತುವಾದ ।
ಕಾಲಪ್ರೇರಕನಾಗಿ ಅನಾದಿಯಿಂದವಿಡಿದು ।
ಕಾಲನಾಮಕನೆನಿಸಿ ಸಮಸ್ತಜೀವಿಗಳ ।
ಕಾಲಪಾಶದಿ ಸಂಸಾರದೊಳಗಿಟ್ಟು ।
ಕಾಲಕಾಲಕೆ ಮಹಾಸುಳಿಯೊಳು ಸುತ್ತಿಸುವ ।

ಯುಗಾದಿ

ಕಾಲಮೂರುತಿ ಈತನ ಭಯದಿಂದ ಜಡ ಜೀವರು ।
ಕಾಲಮೀರದೆ ಸರ್ವ ತತ್ವಥಕೊಡುವರು ।
ಕಾಲದೊಡನೆಯಿಪ್ಪ ಕಾಲಕ್ಕೆ ಶಿಗದಿಪ್ಪ ।
ಕಾಲತ್ರಯದಲ್ಲಿ ಯೆನಿತೆನಿಸಿದಮಾನವ ।
ಕಾಲ ಜ್ಞಾನಿಯಾಗುವ ಆವಾವದೇಹದಲ್ಲಿ ।
ಕಾಲನ್ನ ಭೀತಿಯಿಲ್ಲದೆ ಸುಖಿಸುವ ಗೋತ್ರದೊಡನೆ
ಕಾಲಕ್ಕೆ ದೋಷವಿಲ್ಲ ಸಮ್ಮಂಧದಿಂದ ದು ।
ಷ್ಕಾಲ ಅಕಾಲವೆಂದು ।
ಕಾಲ ಕರೆಸಿಕೊಳುತಿಪ್ಪವು ನೋಡಿರೊ ।
ಕಾಲ(ಕಾಳ) ಕಂಧರವಿನುತ ವಿಜಯವಿಠ್ಠಲ ಸರ್ವ ।
ಕಾಲಕೆಗತಿಯೆನ್ನು ಕಡೆಮಾಡುಭವದಿಂದ ॥೭॥

ಜತೆ

ಕಾಲವಿವರ ತಿಳಿದು ವಿಜಯವಿಠ್ಠಲರೇಯನ ।
ಕಾಲಿಗೆರಗಿ ಬದುಕು ಜ್ಞಾನಭಕುತಿಯಿಂದ ॥೮॥

* * * * *

# ಯುಗಾದಿಯ ಬಗ್ಗೆ ಅಪೂರ್ವ ಮಾಹಿತಿ

ಯಾವ ಯುಗವು ಪ್ರಾರಂಭವಾದ ದಿವಸವಿದು ? ಎಂಬ ಪ್ರಶ್ನೆಗೆ ಬ್ರಹ್ಮಾಂಡಪುರಾಣವು ಉತ್ತರಿಸುತ್ತದೆ.

ಚೈತ್ರೇ ಮಾಸಿ ಜಗದ್-ಬ್ರಹ್ಮಾ ಸಸರ್ಜ ಪ್ರಥಮೇಽಹನಿ ।
ಶುಕ್ಲಪಕ್ಷೇ ಸಮಗ್ರಂತು ಸದಾ ಸೂರ್ಯೋದಯೇ ಸತಿ ।
ಪ್ರವರ್ತಯಾಮಾಸ ತಥಾ ಕಾಲಸ್ಯ ಗಣನಾಮಪಿ ।
ಸರ್ವೋತ್ಪಾತಪ್ರಶಮಿನೀ ಕಲಿದುಃಸ್ವಪ್ನನಾಶಿನೀ ॥

ಚೈತ್ರಮಾಸದ ಶುಕ್ಲಪಕ್ಷದ ಪ್ರತಿಪತ್ ದಿವಸದಂದು ಬ್ರಹ್ಮನು ಜಗತ್ತನ್ನು ಸೃಷ್ಟಿ ಮಾಡಿದನು. ಸೂರ್ಯೋದಯವಾದಾಗ ಅಂದು ಜಗತ್‌ಸೃಷ್ಟಿಯ ಮೊದಲ ದಿವಸವಾಯಿತು. ಕಾಲಗಣನೆಯು ಇಲ್ಲಿಂದಲೇ ಪ್ರಾರಂಭವಾಯಿತು.

ಕಲಿಯುಗವು ಪ್ರಾರಂಭವಾದದ್ದು, ಚೈತ್ರಮಾಸದ ಶುಕ್ಲಪಕ್ಷದ ಪ್ರತಿಪತ್ ದಿವಸವೆಂದು ಭಾವಿಸಬಾರದು. ಭಾದ್ರಪದಮಾಸದ ಕೃಷ್ಣಪಕ್ಷದ ತ್ರಯೋದಶಿಯಂದು ಕಲಿಯುಗವು ಪ್ರಾರಂಭವಾಗಿದೆ. ಮಾಘಮಾಸದ ಕೃಷ್ಣಪಕ್ಷದ ಅಮಾವ್ಯಾಸ್ಯಾ ತಿಥಿಯಂದು ದ್ವಾಪರಯುಗವು ಪ್ರಾರಂಭವಾಗಿದೆ. ವೈಶಾಖಮಾಸದ ಶುಕ್ಲಪಕ್ಷದ ಅಕ್ಷಯತೃತೀಯಾ ದಿವಸ ತ್ರೇತಾಯುಗವು ಪ್ರಾರಂಭವಾಗಿದೆ. ಕಾರ್ತೀಕಮಾಸದ ಶುಕ್ಲಪಕ್ಷದ ನವಮಿಯಂದು ಕೃತಯುಗವು ಪ್ರಾರಂಭವಾಗಿದೆ. ಈ ಯುಗಾದಿಯು ಸೃಷ್ಟಿಯ ಪ್ರಾರಂಭದ ದಿವಸವಾದ್ದರಿಂದ ಯುಗಾದಿ ಎನಿಸಿದೆ. ಇವತ್ತಿನಿಂದಲೇ ಚತುರ್ಮುಖಬ್ರಹ್ಮದೇವರು ಕಾಲಗಣನೆಯನ್ನು ಪ್ರಾರಂಭಿಸಿದ್ದಾರೆ.

ವರ್ಷವನ್ನು ಐದು ರೀತಿಯಲ್ಲಿ ಪರಿಗಣಿಸಬಹುದು. ಖಗೋಳದಲ್ಲಿ ಸೂರ್ಯನು ಒಮ್ಮೆ ಸಂಪೂರ್ಣ ಸಂಚರಿಸಿದರೆ ಅದನ್ನು ಸಂವತ್ಸರ ಎನ್ನುತ್ತಾರೆ. ಇದರಿಂದಲೇ ಹನ್ನೆರಡು ರಾಶಿಗಳಲ್ಲಿ ಸಂಕ್ರಮಣವನ್ನು ಗುರುತಿಸಲಾಗುತ್ತದೆ. ಚಂದ್ರನು

ಚೈತ್ರ, ವೈಶಾಖ ಮೊದಲಾದ ಮಾಸಗಳಲ್ಲಿ ೩೦ ತಿಥಿಗಳನ್ನು ಕಳೆದರೆ ಅದನ್ನು ವತ್ಸರ ಎಂದು ಕರೆಯುತ್ತಾರೆ. ಅಥವಾ ಇದನ್ನೇ ಉದ್ವತ್ಸರ ಎಂದೂ ಕೂಡ ಕರೆಯುತ್ತಾರೆ. ಗುರು ಹಾಗೂ ಬೃಹಸ್ಪತಿಯ ಸಂಕ್ರಮಣದ ಕಾಲವನ್ನೇ ಪರಿವತ್ಸರ ಎಂದು ಕರೆಯುತ್ತಾರೆ. ೩೬೦ ದಿನದ ಕಾಲಾವಧಿಯನ್ನು ಅನುವತ್ಸರ ಎಂದು ಕರೆಯುತ್ತಾರೆ. ಸಾವನ ಎಂಬುದೂ ಕೂಡ ಮತ್ತೊಂದು ಹೆಸರು. ೨೭ ನಕ್ಷತ್ರಗಳ ೧೨ ಬಾರಿಯ ಸಂಚಾರವನ್ನೇ ಇಡಾವತ್ಸರ ಎಂದು ಕರೆಯುತ್ತಾರೆ. ಈ ಐದು ಬಗೆಯ ಸಂವತ್ಸರಗಳಿಗೆ ಕ್ರಮವಾಗಿ ಅಗ್ನಿ, ಸೂರ್ಯ, ಚಂದ್ರ, ಬ್ರಹ್ಮ ಹಾಗೂ ರುದ್ರ ಇವರು ಅಧಿಪತಿಗಳಾಗಿದ್ದಾರೆ. ಭೂಮಧ್ಯರೇಖೆಯನ್ನು ಸೂರ್ಯನು ದಾಟುವ ಸಂಕ್ರಮಣ ವಿಶುಸಂಕ್ರಮಣ ಅಥವಾ ಯುಗಾದಿ ಎಂದು ಕರೆಯುತ್ತಾರೆ. ಸಂವತ್ಸರದ ಲೆಕ್ಕಾಚಾರದಿಂದ ವತ್ಸರವನ್ನು ಹಾಗೂ ಚಾಂದ್ರಮಾನವನ್ನು ಅಧಿಕಮಾಸದಿಂದ ಸರಿಗೊಳಿಸುತ್ತಾರೆ. ಯುಗಾದಿಯು ಸೂರ್ಯನಿಗೆ ಸಂಬಂಧಪಟ್ಟ ದಿನವಾಗಿದೆ. ತಿಥಿ, ಮಾಸ, ಋತು ಎಲ್ಲವೂ ಕೂಡ ಪ್ರಾರಂಭವಾದ ದಿವಸವಾದ್ದರಿಂದ ಇದನ್ನು ಯುಗಾದಿ ಎನ್ನುತ್ತಾರೆ. ಎಲ್ಲ ಕರ್ಮಗಳಲ್ಲಿ ಚಾಂದ್ರಮಾನ ತಿಥಿಯನ್ನು ಹೇಳಬೇಕೆಂದು 'ಸ್ಮರೇತ್ ಸರ್ವತ್ರ ಕರ್ಮಾದೌ ಚಾಂದ್ರಂ ಸಂವತ್ಸರಂ ತಥಾ' ಎಂಬ ವಚನವು ಹೇಳುತ್ತಿದೆ.

ಇದನ್ನು ಮತ್ತಷ್ಟು ಸ್ಪಷ್ಟವಾಗಿ ಹೀಗೆ ತಿಳಿದುಕೊಳ್ಳಬೇಕು - ಚಂದ್ರನು ೩೦ ದಿನಗಳಂತೆ ೧೨ ತಿಂಗಳುಗಳನ್ನು ಕಳೆದರೆ, ಅದನ್ನು ಚಾಂದ್ರಮಾನ ಎಂದು ಕರೆಯುತ್ತಾರೆ. ೧೨ ತಿಂಗಳು ಕಳೆದು ಹೊಸ ವರ್ಷವು ಪ್ರಾರಂಭವಾಗುವುದರಿಂದ ಇದನ್ನು ಚಾಂದ್ರಮಾನ ಯುಗಾದಿ ಎಂದೇ ಹೇಳುತ್ತಾರೆ. ಮತ್ತೊಂದು ಸೌರಮಾನ ಯುಗಾದಿಯು ಇದೆ. ಸೂರ್ಯನು ೩೦ ದಿನಗಳಂತೆ ೧೨ ರಾಶಿಗಳನ್ನು ಸುತ್ತಿ ಬಂದು ಕೊನೆಗೊಂಡರೆ ಆಗ ಸೌರಮಾನ ಯುಗಾದಿಯು ಬರುತ್ತದೆ. ಸಾಮಾನ್ಯವಾಗಿ ಏಪ್ರಿಲ್ ೧೪ನೇ ತಾರೀಕು ಸೌರಮಾನ ಯುಗಾದಿಯು ಇರುತ್ತದೆ. ಮತ್ತೊಂದು ಬೃಹಸ್ಪತಿಯ ಸಂಕ್ರಮಣದ ಕಾಲವನ್ನು ಪರಿವತ್ಸರ ಎಂದು ಕರೆಯುತ್ತಾರೆ. ೩೬೦ ದಿನಗಳು ಕಳೆದರೆ ಅದನ್ನು ಅನುವತ್ಸರ ಎಂದು ಕರೆಯುತ್ತಾರೆ. ೨೭ ನಕ್ಷತ್ರಗಳ ೧೨ ಬಾರಿಯ ಚಲನವನ್ನು ಇಡಾವತ್ಸರ ಎಂದು ಕರೆಯುತ್ತಾರೆ. ಹೀಗೆ ಐದು ಬಗೆಯಲ್ಲಿ

ವರ್ಷಗಳು ಪ್ರಾರಂಭವಾಗುತ್ತವೆ. ಚೈತ್ರಮಾಸದ ಶುಕ್ಲಪಕ್ಷದ ಪ್ರತಿಪತ್ ದಿವಸವು ಚಾಂದ್ರಮಾನಯುಗಾದಿಯಾಗಿದೆ. ಇದನ್ನೇ ಎಲ್ಲರೂ ವ್ಯಾಪಕವಾಗಿ ಅನುಸರಿಸುತ್ತಾರೆ.

ಚಾಂದ್ರಮಾನ ಯುಗಾದಿಯನ್ನು ಆಚರಿಸುವಂತೆ ತೌಳವರು ಸೌರಮಾನ ಯುಗಾದಿಯನ್ನು ಆಚರಿಸುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯವರು ಚಾಂದ್ರಮಾನ ಯುಗಾದಿಯನ್ನು ಆಚರಿಸುವುದಿಲ್ಲ. ಸೌರಮಾನ ಯುಗಾದಿಯನ್ನೇ ಆಚರಿಸುತ್ತಾರೆ.

ಮೇಷಸಂಕ್ರಾಂತಿಯ ಮರುದಿವಸ ಸೌರಯುಗಾದಿಯು ಇರುತ್ತದೆ. ಫಾಲ್ಗುಣ ಮಾಸದ ಕೃಷ್ಣಪಕ್ಷದ ಅಮಾವಾಸ್ಯೆಯ ದಿವಸ ಚಾಂದ್ರಯುಗಾದಿಯು ಇರುತ್ತದೆ. ಸೌರವರ್ಷವನ್ನು ಸೌರಮಾನವೆಂದು, ಚಾಂದ್ರವರ್ಷವನ್ನು ಚಾಂದ್ರಮಾನವೆಂದು ಕರೆಯುತ್ತಾರೆ. ಪ್ರಭವಾದಿ ಸಂವತ್ಸರಗಳು ಇಬ್ಬರ ಪಕ್ಷದಲ್ಲಿಯೂ ಕೂಡ ಸಮಾನ.

## ಯಾವ ಪ್ರತಿಪತ್ ತಿಥಿಯು ಯುಗಾದಿಗೆ ಯೋಗ್ಯ ?

ಸೂರ್ಯೋದಯಕಾಲದಲ್ಲಿ ವ್ಯಾಪ್ತಿಯನ್ನು ಹೊಂದಿರುವ ಪ್ರತಿಪತ್ ತಿಥಿಯೇ ಹಬ್ಬದ ಆಚರಣೆಗೆ ಯೋಗ್ಯವಾಗಿದೆ. ಒಂದು ವೇಳೆ ಎರಡು ದಿನ ಸೂರ್ಯೋದಯದಲ್ಲಿ ಪ್ರತಿಪತ್ ತಿಥಿಯು ಇದ್ದರೆ, 'ಪ್ರಥಮಾತಿಕ್ರಮಣೇ ಮಾನಾಭಾವಾತ್' ಮೊದಲನೆಯ ಪ್ರತಿಪತ್ ತಿಥಿಯಂದೇ ಹಬ್ಬವನ್ನಾಗಿ ಆಚರಿಸಬೇಕು. ಎರಡು ದಿನವು ಸೂರ್ಯೋದಯಕಾಲದಲ್ಲಿ ಪ್ರತಿಪತ್ ತಿಥಿಯು ಇಲ್ಲದೇ ಇದ್ದರೆ ಅಮಾವಾಸ್ಯೆಯ ತಿಥಿಯಿಂದ ವಿದ್ಧವಾದ ಪ್ರತಿಪತ್ ತಿಥಿಯಂದೇ ಯುಗಾದಿಯನ್ನು ಆಚರಿಸಬೇಕು. ಉದಾಹರಣೆ - ಸೂರ್ಯೋದಯದ ಅನಂತರ ನಾಕು ಗಳಿಗೆ ಇದ್ದರೆ ಮರುದಿವಸ ಪ್ರತಿಪತ್ ತಿಥಿಯ ವ್ಯಾಪ್ತಿಯು ಐವತ್ತಾರು ಮತ್ತು ಹೆಚ್ಚಿನ ಇನ್ನೊಂದು ಘಳಿಗೆಯ ವರೆಗೆ ಇರುತ್ತದೆ. ಆಗ ಅಮಾವಾಸ್ಯೆಯ ವೇದವಿದ್ದರೂ ಕೂಡ ಆ ಪ್ರತಿಪತ್ ತಿಥಿಯಂದೇ ಯುಗಾದಿಯನ್ನು ಆಚರಣೆ ಮಾಡಬೇಕು. ಯಾವುದೇ ಕಾರಣಕ್ಕೂ ದ್ವಿತೀಯಾ ತಿಥಿಯ ವೇದವಿರುವ ಪ್ರತಿಪತ್ ತಿಥಿಯಂದು ಯುಗಾದಿಯನ್ನು ಆಚರಿಸಬಾರದು.

ಚೈತ್ರ, ವೈಶಾಖ ಮೊದಲಾದ ಮಾಸಗಳಲ್ಲಿ ೩೦ ತಿಥಿಗಳನ್ನು ಕಳೆದರೆ ಅದನ್ನು ವತ್ಸರ ಎಂದು ಕರೆಯುತ್ತಾರೆ. ಅಥವಾ ಇದನ್ನೇ ಉದ್ವತ್ಸರ ಎಂದೂ ಕೂಡ ಕರೆಯುತ್ತಾರೆ. ಗುರು ಹಾಗೂ ಬೃಹಸ್ಪತಿಯ ಸಂಕ್ರಮಣದ ಕಾಲವನ್ನೇ ಪರಿವತ್ಸರ ಎಂದು ಕರೆಯುತ್ತಾರೆ. ೩೬೦ ದಿನದ ಕಾಲಾವಧಿಯನ್ನು ಅನುವತ್ಸರ ಎಂದು ಕರೆಯುತ್ತಾರೆ. ಸಾವನ ಎಂಬುದೂ ಕೂಡ ಮತ್ತೊಂದು ಹೆಸರು. ೨೭ ನಕ್ಷತ್ರಗಳ ೧೨ ಬಾರಿಯ ಸಂಚಾರವನ್ನೇ ಇಡಾವತ್ಸರ ಎಂದು ಕರೆಯುತ್ತಾರೆ. ಈ ಐದು ಬಗೆಯ ಸಂವತ್ಸರಗಳಿಗೆ ಕ್ರಮವಾಗಿ ಅಗ್ನಿ, ಸೂರ್ಯ, ಚಂದ್ರ, ಬ್ರಹ್ಮ ಹಾಗೂ ರುದ್ರ ಇವರು ಅಧಿಪತಿಗಳಾಗಿದ್ದಾರೆ. ಭೂಮಧ್ಯರೇಖೆಯನ್ನು ಸೂರ್ಯನು ದಾಟುವ ಸಂಕ್ರಮಣ ವಿಶುಸಂಕ್ರಮಣ ಅಥವಾ ಯುಗಾದಿ ಎಂದು ಕರೆಯುತ್ತಾರೆ. ಸಂವತ್ಸರದ ಲೆಕ್ಕಾಚಾರದಿಂದ ವತ್ಸರವನ್ನು ಹಾಗೂ ಚಾಂದ್ರಮಾನವನ್ನು ಅಧಿಕಮಾಸದಿಂದ ಸರಿಗೊಳಿಸುತ್ತಾರೆ. ಯುಗಾದಿಯು ಸೂರ್ಯನಿಗೆ ಸಂಬಂಧಪಟ್ಟ ದಿನವಾಗಿದೆ. ತಿಥಿ, ಮಾಸ, ಋತು ಎಲ್ಲವೂ ಕೂಡ ಪ್ರಾರಂಭವಾದ ದಿವಸವಾದ್ದರಿಂದ ಇದನ್ನು ಯುಗಾದಿ ಎನ್ನುತ್ತಾರೆ. ಎಲ್ಲ ಕರ್ಮಗಳಲ್ಲಿ ಚಾಂದ್ರಮಾನ ತಿಥಿಯನ್ನು ಹೇಳಬೇಕೆಂದು 'ಸ್ಮರೇತ್ ಸರ್ವತ್ರ ಕರ್ಮಾದೌ ಚಾಂದ್ರಂ ಸಂವತ್ಸರಂ ತಥಾ' ಎಂಬ ವಚನವು ಹೇಳುತ್ತಿದೆ.

ಇದನ್ನು ಮತ್ತಷ್ಟು ಸ್ಪಷ್ಟವಾಗಿ ಹೀಗೆ ತಿಳಿದುಕೊಳ್ಳಬೇಕು - ಚಂದ್ರನು ೩೦ ದಿನಗಳಂತೆ ೧೨ ತಿಂಗಳುಗಳನ್ನು ಕಳೆದರೆ, ಅದನ್ನು ಚಾಂದ್ರಮಾನ ಎಂದು ಕರೆಯುತ್ತಾರೆ. ೧೨ ತಿಂಗಳು ಕಳೆದು ಹೊಸ ವರ್ಷವು ಪ್ರಾರಂಭವಾಗುವುದರಿಂದ ಇದನ್ನು ಚಾಂದ್ರಮಾನ ಯುಗಾದಿ ಎಂದೇ ಹೇಳುತ್ತಾರೆ. ಮತ್ತೊಂದು ಸೌರಮಾನ ಯುಗಾದಿಯು ಇದೆ. ಸೂರ್ಯನು ೩೦ ದಿನಗಳಂತೆ ೧೨ ರಾಶಿಗಳನ್ನು ಸುತ್ತಿ ಬಂದು ಕೊನೆಗೊಂಡರೆ ಆಗ ಸೌರಮಾನ ಯುಗಾದಿಯು ಬರುತ್ತದೆ. ಸಾಮಾನ್ಯವಾಗಿ ಏಪ್ರಿಲ್ ೧೪ನೇ ತಾರೀಕು ಸೌರಮಾನ ಯುಗಾದಿಯು ಇರುತ್ತದೆ. ಮತ್ತೊಂದು ಬೃಹಸ್ಪತಿಯ ಸಂಕ್ರಮಣದ ಕಾಲವನ್ನು ಪರಿವತ್ಸರ ಎಂದು ಕರೆಯುತ್ತಾರೆ. ೩೬೦ ದಿನಗಳು ಕಳೆದರೆ ಅದನ್ನು ಅನುವತ್ಸರ ಎಂದು ಕರೆಯುತ್ತಾರೆ. ೨೭ ನಕ್ಷತ್ರಗಳ ೧೨ ಬಾರಿಯ ಚಲನವನ್ನು ಇಡಾವತ್ಸರ ಎಂದು ಕರೆಯುತ್ತಾರೆ. ಹೀಗೆ ಐದು ಬಗೆಯಲ್ಲಿ

ವರ್ಷಗಳು ಪ್ರಾರಂಭವಾಗುತ್ತವೆ. ಚೈತ್ರಮಾಸದ ಶುಕ್ಲಪಕ್ಷದ ಪ್ರತಿಪತ್ ದಿವಸವು ಚಾಂದ್ರಮಾನಯುಗಾದಿಯಾಗಿದೆ. ಇದನ್ನೇ ಎಲ್ಲರೂ ವ್ಯಾಪಕವಾಗಿ ಅನುಸರಿಸುತ್ತಾರೆ.

ಚಾಂದ್ರಮಾನ ಯುಗಾದಿಯನ್ನು ಆಚರಿಸುವಂತೆ ತೌಳವರು ಸೌರಮಾನ ಯುಗಾದಿಯನ್ನು ಆಚರಿಸುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯವರು ಚಾಂದ್ರಮಾನ ಯುಗಾದಿಯನ್ನು ಆಚರಿಸುವುದಿಲ್ಲ. ಸೌರಮಾನ ಯುಗಾದಿಯನ್ನೇ ಆಚರಿಸುತ್ತಾರೆ.

ಮೇಷಸಂಕ್ರಾಂತಿಯ ಮರುದಿವಸ ಸೌರಯುಗಾದಿಯು ಇರುತ್ತದೆ. ಫಾಲ್ಗುಣ ಮಾಸದ ಕೃಷ್ಣಪಕ್ಷದ ಅಮಾವಾಸ್ಯೆಯ ದಿವಸ ಚಾಂದ್ರಯುಗಾದಿಯು ಇರುತ್ತದೆ. ಸೌರವರ್ಷವನ್ನು ಸೌರಮಾನವೆಂದು, ಚಾಂದ್ರವರ್ಷವನ್ನು ಚಾಂದ್ರಮಾನವೆಂದು ಕರೆಯುತ್ತಾರೆ. ಪ್ರಭವಾದಿ ಸಂವತ್ಸರಗಳು ಇಬ್ಬರ ಪಕ್ಷದಲ್ಲಿಯೂ ಕೂಡ ಸಮಾನ.

## ಯಾವ ಪ್ರತಿಪತ್ ತಿಥಿಯು ಯುಗಾದಿಗೆ ಯೋಗ್ಯ ?

ಸೂರ್ಯೋದಯಕಾಲದಲ್ಲಿ ವ್ಯಾಪ್ತಿಯನ್ನು ಹೊಂದಿರುವ ಪ್ರತಿಪತ್ ತಿಥಿಯೇ ಹಬ್ಬದ ಆಚರಣೆಗೆ ಯೋಗ್ಯವಾಗಿದೆ. ಒಂದು ವೇಳೆ ಎರಡು ದಿನ ಸೂರ್ಯೋದಯದಲ್ಲಿ ಪ್ರತಿಪತ್ ತಿಥಿಯು ಇದ್ದರೆ, 'ಪ್ರಥಮಾತಿಕ್ರಮಣೇ ಮಾನಾಭಾವಾತ್' ಮೊದಲನೆಯ ಪ್ರತಿಪತ್ ತಿಥಿಯಂದೇ ಹಬ್ಬವನ್ನಾಗಿ ಆಚರಿಸಬೇಕು. ಎರಡು ದಿನವು ಸೂರ್ಯೋದಯಕಾಲದಲ್ಲಿ ಪ್ರತಿಪತ್ ತಿಥಿಯು ಇಲ್ಲದೇ ಇದ್ದರೆ ಅಮಾವಾಸ್ಯೆಯ ತಿಥಿಯಿಂದ ವಿದ್ಧವಾದ ಪ್ರತಿಪತ್ ತಿಥಿಯಂದೇ ಯುಗಾದಿಯನ್ನು ಆಚರಿಸಬೇಕು. ಉದಾಹರಣೆ - ಸೂರ್ಯೋದಯದ ಅನಂತರ ನಾಕು ಗಳಿಗೆ ಇದ್ದರೆ ಮರುದಿವಸ ಪ್ರತಿಪತ್ ತಿಥಿಯ ವ್ಯಾಪ್ತಿಯು ಐವತ್ತಾರು ಮತ್ತು ಹೆಚ್ಚಿನ ಇನ್ನೊಂದು ಘಳಿಗೆಯ ವರೆಗೆ ಇರುತ್ತದೆ. ಆಗ ಅಮಾವಾಸ್ಯೆಯ ವೇದವಿದ್ದರೂ ಕೂಡ ಆ ಪ್ರತಿಪತ್ ತಿಥಿಯಂದೇ ಯುಗಾದಿಯನ್ನು ಆಚರಣೆ ಮಾಡಬೇಕು. ಯಾವುದೇ ಕಾರಣಕ್ಕೂ ದ್ವಿತೀಯಾ ತಿಥಿಯ ವೇದವಿರುವ ಪ್ರತಿಪತ್ ತಿಥಿಯಂದು ಯುಗಾದಿಯನ್ನು ಆಚರಿಸಬಾರದು.

ಒಂದು ವೇಳೆ ಅಧಿಕ ಚೈತ್ರಮಾಸವು ಪ್ರಾಪ್ತವಾದರೆ ಅನೇಕ ಸ್ಮೃತಿಕಾರರ ಪ್ರಕಾರ ಅಧಿಕಮಾಸದ ಪ್ರತಿಪತ್ ತಿಥಿಯಂದು ಯುಗಾದಿಯನ್ನು ಆಚರಿಸಬೇಕು. 'ಸಮಯ ಮಯೂಖ' ಎಂಬ ಗ್ರಂಥವು ಹೇಳುವಂತೆ ಅಧಿಕಮಾಸವಾದರೂ ಸಂವತ್ಸರವು ಪ್ರಾರಂಭವಾಗಿರುತ್ತದೆ. ವಸಂತಋತುವೂ ಕೂಡ ಪ್ರಾರಂಭವಾಗಿರುತ್ತದೆ. ಆದ್ದರಿಂದ ಅಂದೇ ಯುಗಾದಿಯಂದು ಹೇಳಬೇಕು. ಆದರೆ ಅಭ್ಯಂಜನ ಸ್ನಾನವನ್ನು ಅಂದು ಮಾಡುವಂತಿಲ್ಲ. ನಿಜ ಚೈತ್ರಮಾಸದಲ್ಲಿಯೇ ಅಭ್ಯಂಜನ ಸ್ನಾನಾದಿಗಳನ್ನು ಹಾಗೂ ಮುತ್ತೈದೆಯರ ಆರತಿ ಮೊದಲಾದವುಗಳನ್ನು ಮಾಡಬೇಕು. ಫಲಶ್ರವಣವನ್ನು ಶುದ್ಧಚೈತ್ರದಲ್ಲಿಯೇ ಮಾಡಬೇಕು. ಆದರೆ ಧರ್ಮಸಿಂಧು ಗ್ರಂಥವು ಅಧಿಕಮಾಸದ ಪಾಡ್ಯದಂದೇ ಅಭ್ಯಂಜನಸ್ನಾನವನ್ನೂ ಕೂಡ ವಿಧಾನ ಮಾಡಿದೆ. ಧ್ವಜಾರೋಹಣ, ನಿಂಬಪತ್ರಾಶನ, ವತ್ಸರಾದಿಫಲಶ್ರವಣ ಇವುಗಳನ್ನು ಮಾತ್ರ ಶುದ್ಧಪಾಡ್ಯದಂದು ವಿಧಾನ ಮಾಡಿದೆ.

ತತ್ರ ಚೈತ್ರಶುಕ್ಲಪ್ರತಿಪದಿ ವತ್ಸರಾರಂಭಃ । ತತ್ರೌದಯಿಕೀ ಪ್ರತಿಪದ್ಗ್ರಾಹ್ಯಾ । ದಿನದ್ವಯೇ ಉದಯವ್ಯಾಪ್ತೌ ಅವ್ಯಾಪ್ತೌ ವಾ ಪೂರ್ವಾ । ಚೈತ್ರಸ್ಯ ಮಲಮಾಸತ್ವೇ ವತ್ಸರಾರಂಭನಿಮಿತ್ತಕಂ ತೈಲಾಭ್ಯಂಗಂ ಸಂಕಲ್ಪಾದೌ ನೂತನವತ್ಸರ-ನಾಮಕೀರ್ತನಾದ್ಯಾರಂಭಂ ಚ ಮಲಮಾಸಪ್ರತಿಪದ್ಯೇವ ಕುರ್ಯಾತ್ । ಪ್ರತಿಗೃಹಂ ಧ್ವಜಾರೋಪಣಂ ನಿಂಬಪತ್ರಾಶನಂ ವತ್ಸರಾದಿಫಲಶ್ರವಣಂ ನವರಾತ್ರಾರಂಭೋ ನವರಾತ್ರೋತ್ಸವಾದಿನಿಮಿತ್ತಾಭ್ಯಂಗಾದಿಶ್ಚ ಶುದ್ಧಮಾಸಪ್ರತಿಪದಿ ಕಾರ್ಯಃ ವತ್ಸರಾರಂಭನಿಮಿತ್ತಕೋಽಪಿ ತೈಲಾಭ್ಯಂಗಃ ಶುದ್ಧಪ್ರತಿಪದ್ಯೇವೇತಿ ಮಯೂಖೇ ಉಕ್ತಮ್ । ಅಸ್ಯಾಂ ತೈಲಾಭ್ಯಂಗೋ ನಿತ್ಯಃ । ಅಕರಣೇ ಪ್ರತ್ಯವಾಯೋಕ್ತೇಃ ।)

ಹೀಗೆ ಸ್ಮೃತಿಗಳಲ್ಲಿ ವಿರೋಧ ಬಂದಾಗ ತಿಳಿದವರ ಬಳಿ ಕೇಳಿ ಆಚರಣೆಯನ್ನು ಮಾಡಬೇಕು. ಒಟ್ಟು ಅಧಿಕಮಾಸದ ಪಾಡ್ಯದಂದು, ನಿಜಮಾಸದ ಪಾಡ್ಯದಂದು ಎರಡು ಬಾರಿಯೂ ಹಬ್ಬ ಮಾಡಬೇಕು. ಯಾವ ಅನುಷ್ಠಾನ ಎಂದು ಮಾಡಬೇಕೆಂದಷ್ಟೇ ತಿಳಿದವರ ಬಳಿ ಕೇಳಿ ಆಚರಿಸಬೇಕು.

ಬ್ರಹ್ಮನ ದಿನದ ಬಗ್ಗೆ ಮತ್ತು ಅವನ ಆಯುಃ ಪ್ರಮಾಣಾದಿಗಳನ್ನು ಅನಿಷ್ಟಫಲನಿವೃತ್ತಿ ಇಷ್ಟಫಲಪ್ರಾಪ್ತಿಗಾಗಿ ಹೀಗೆ ತಿಳಿಯಬೇಕು -

## ನಾವು ಯಾವ ಕಾಲದಲ್ಲಿದ್ದೇವೆ ?

ಜಗತ್ತಿನ ಉತ್ಪತ್ತಿಸ್ಥಿತಿಲಯಗಳಿಗೆ ಕಾರಣನಾದ ಶ್ರೀಮಹಾವಿಷ್ಣುವಿನ ನಾಭಿಕಮಲದಿಂದ ಉದಯಿಸಿದ ಚತುರ್ಮುಖಬ್ರಹ್ಮನ ದಿನವೆಂದರೆ **"ಚತುರ್ಯುಗಸಹಸ್ರಾಣಿ ಬ್ರಹ್ಮಣೋ ದಿನಮುಚ್ಯತೇ"** ಎಂದು ಪ್ರಸಿದ್ಧವಾಗಿದೆ. ಕೃತ, ತ್ರೇತಾ, ದ್ವಾಪರ, ಕಲಿಯುಗಗಳು ಒಂದು ಸಾವಿರವಾದರೆ ಒಂದು ಕಲ್ಪ. ಅದೇ ಬ್ರಹ್ಮನ ಒಂದು ಹಗಲು, ಅಂತಹುದೇ ಮತ್ತೊಂದು ಕಲ್ಪವಾದರೆ ಒಂದು ರಾತ್ರಿ. ಹೀಗೆ ಎರಡು ಕಲ್ಪಗಳ ಹಗಲು-ರಾತ್ರಿಗಳಿಂದ ಬ್ರಹ್ಮನ ಒಂದು ದಿನವಾಗುತ್ತಾದೆ. ಇಂಥ ೩೬೦ ದಿನಗಳಿಗೆ ೧ ಸಂವತ್ಸರ, ಇಂಥ ನೂರು ಸಂವತ್ಸರಗಳು ಶ್ರೀಬ್ರಹ್ಮದೇವರ ಆಯುಃ ಪ್ರಮಾಣವು. ಈ ೧೦೦ ವರ್ಷಗಳಲ್ಲಿ ಈಗ ೫೦ ವರ್ಷಗಳು ಗತಿಸಿವೆ. ೨ನೇ ಪರಾರ್ಧವಾದ ಈಗ ೫೧ನೇ ವರ್ಷದಲ್ಲಿ ಪ್ರಥಮ ಮಾಸ ಪ್ರಥಮ ಪಕ್ಷ ಪ್ರಥಮ ದಿನವಾದ ಶ್ರೀಶ್ವೇತವರಾಹಕಲ್ಪದಲ್ಲಿ ಹಗಲು ೧೩ ಘಳಿಗೆ ೪೨ ಪಳಗಳು ಗತಿಸಿವೆ.

ಇಷ್ಟರಲ್ಲಿ ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಪಸ, ರೈವತ, ಚಾಕ್ಷುಷವೆಂಬ ೬ ಮನ್ವಂತರಗಳು ಕಳೆದುಹೋಗಿ ೭ನೆಯದಾದ ವೈವಸ್ವತ ಮನ್ವಂತರದಲ್ಲಿ ೨೭ ಮಹಾಯುಗಗಳು ಮುಗಿದು, ೨೮ನೇ ಮಹಾಯುಗದಲ್ಲಿ ಮೂರು ಪಾದಗಳು ಗತಿಸಿಹೋಗಿವೆ. ಇನ್ನು ಮಹಾಯುಗವೆಂದರೆ ೪೩ ಲಕ್ಷ ೨೦ ಸಾವಿರ ವರ್ಷಗಳು. ಇದರಲ್ಲಿ ಕೃತಯುಗ ೧೭ ಲಕ್ಷ ೨೮ ಸಾವಿರ ವರ್ಷಗಳು, ತ್ರೇತಾಯುಗ ೧೨ ಲಕ್ಷ ೯೬ ಸಾವಿರ ವರ್ಷಗಳು, ದ್ವಾಪರಯುಗ ೮ ಲಕ್ಷ ೬೪ ಸಾವಿರ ವರ್ಷಗಳು. ೨೮ನೆಯ ಮಹಾಯುಗದ ಮೂರು ಯುಗಗಳು ಮುಗಿದು ನಾಲ್ಕನೆಯ ಕಲಿಯುಗದಲ್ಲಿ ೫೧೧೯ ವರ್ಷಗಳು ಕಳೆದಿವೆ. ಕಲಿಯುಗದಲ್ಲಿ ೪ ಲಕ್ಷದ ೨೬ ಸಾವಿರದ ೮೮೧ ವರ್ಷಗಳು ಉಳಿದಿವೆ.

ಈ ಕಲಿಯುಗದಲ್ಲಿ ೬ ಜನ ರಾಜರು ಶಕಕರ್ತರು. ಮೊದಲು ಹಸ್ತಿನಾವತಿಯಲ್ಲಿ ಧರ್ಮರಾಜನ ಶಕ ೩೦೪೪ ವರ್ಷಗಳು. ನಂತರ ಉಜ್ಜಯಿನಿಯಲ್ಲಿ ವಿಕ್ರಮರಾಜನ ಗತ ಶಕೆ ೧೩೫ ವರ್ಷಗಳು, ಪ್ರತಿಷ್ಠಾನ ನಗರದಲ್ಲಿ ಶಾಲಿವಾಹನ ಶಕ ೧೮೦೦೦ ವರ್ಷಗಳು. ನಂತರ ವೈತರಣಿಯ ವಿಜಯಾಭಿನಂದನ ಶಕೆ ೧೦,೦೦೦ ವರ್ಷಗಳು, ನಂತರ ಕಾವೇರಿ ತೀರದಲ್ಲಿ ನಾಗಾರ್ಜುನನ ಶಕೆ ೪ ಲಕ್ಷ ವರ್ಷಗಳು, ನಂತರ ಗೌಡದೇಶದಲ್ಲಿ ಕಲ್ಕಿಭೂಪತಿಯ ಶಕೆ ೯೨೧ ವರ್ಷಗಳು. ಕಾಲಮಾನದ ಬಗ್ಗೆ ಇಷ್ಟು ವಿಚಾರವನ್ನು ಅವಶ್ಯವಾಗಿ ತಿಳಿದುಕೊಳ್ಳಬೇಕು.

## ಶಾಲಿವಾಹನ ಶಕೆ ೧೯೪೩ ಇತ್ಯಾದಿ ವರ್ಷದ ಅನುಷ್ಠಾನ ಇಂದೇಕೆ ಕಾಣಿಸುತ್ತಿಲ್ಲ ?

ನಾವು ಈಗ ಶಾಲಿವಾಹನ ಶಕವರ್ಷದಲ್ಲಿದ್ದೇವೆ. ಆದರೆ ನಿತ್ಯ ನಾವು ಮಾಡುವ ಸಂಕಲ್ಪದಲ್ಲಿ ಇದನ್ನು ನಾವು ಹೇಳುತ್ತಿಲ್ಲ. ೧೯೪೩ ಎಂಬುದನ್ನು ಹೇಳದೇ ಇರುವುದರಿಂದಲೇ ಇಂದು ಕ್ರಿಸ್ತರ ತಾರೀಖು ಅನುಷ್ಠಾನದಲ್ಲಿ ಹೇರಳವಾಗಿ ಬರುತ್ತಿದೆ. ನಮ್ಮದನ್ನೇ ಸಂಪೂರ್ಣವಾಗಿ ಮರೆತುಹೋದ ಸ್ಥಿತಿಯಲ್ಲಿದ್ದೇವೆ. ಇನ್ನು ಮುಂದಾದರೂ ಎಚ್ಚೆತ್ತುಕೊಂಡು ಶಾಲಿವಾಹನಶಕೆಯನ್ನು ಉಲ್ಲೇಖಿಸೋಣ. ಆಗ ಕ್ರಿಸ್ತರ ಪ್ರಭಾವವು ನಮ್ಮಲ್ಲಿ ಕಡಿಮೆಯಾಗುತ್ತದೆ. ಸಂಕಲ್ಪದಲ್ಲಿ ಶಾಲಿವಾಹನಶಕೇ ಬೌದ್ಧಾವತಾರೇ ಎಂದಷ್ಟೇ ನಾವು ಹೇಳುತ್ತಿದ್ದೇವೆ. ವಾಸ್ತವಿಕವಾಗಿ ವಿಕಾರಿ ಸಂವತ್ಸರದಲ್ಲಿ ''ದ್ವಿಚತ್ವಾರಿಂಶದಧಿಕೇ ಏಕೋನವಿಶಂತಿತಮೇ ಶಾಲಿವಾಹನಶಕೇ ಬೌದ್ಧಾವತಾರೇ'' ಎಂದೇ ಹೇಳಬೇಕು. ಮುಂದಿನ 'ಶಾರ್ವರೀ ಸಂವತ್ಸರದಲ್ಲಿ ತ್ರಿಚತ್ವಾರಿವಿಂಶದಧಿಕೇ ಏಕೋನವಿಶಂತಿತಮೇ ಶಾಲಿವಾಹನಶಕೇ ಬೌದ್ಧಾವತಾರೇ' ಎಂದು ಹೇಳಬೇಕು. ಇದು ಹೇಳಲು ಸ್ವಲ್ಪ ಕಠಿಣವಾದ್ದರಿಂದ ಸಂಪ್ರದಾಯದಲ್ಲಿ ಬಿಟ್ಟಿದ್ದಾರೆ. ಇದು ಬಿಟ್ಟಿದ್ದರಿಂದಲೇ ಇಂದು ಯಾವ ವರ್ಷದಲ್ಲಿ ನಾವಿದ್ದೇವೆ ಎಂದೂ ಕೂಡ ಅರ್ಥವಾಗುತ್ತಿಲ್ಲ. ಕೇವಲ ಪಂಚಾಂಗದಲ್ಲಿ ಮಾತ್ರ ಮುದ್ರಿಸುತ್ತಾರೆ. ಅನುಷ್ಠಾನದಲ್ಲಿ ಅದು ಬರುತ್ತಿಲ್ಲ.

ಸರ್ಕಾರದ ಎಷ್ಟೋ ಒಪ್ಪಂದಗಳಲ್ಲಿ ಇಂದೂ ಸಹ ಶಾಲಿವಾಹನಶಕ ವರ್ಷವನ್ನೇ ಉಲ್ಲೇಖಿಸುವ ಸಂಪ್ರದಾಯವಿದೆ. ಮತ್ತು ತೆರಿಗೆ ಮೊದಲಾದವುಗಳ

ಪರಿಗಣನೆಯನ್ನೂ ಕೂಡ ಶಾಲಿವಾಹನ ಶಕ ವರ್ಷದ ಪ್ರಕಾರವೇ ಇಂದೂ ಕೂಡ ಸರ್ಕಾರವು ಮಾಡಿಕೊಂಡು ಬಂದಿದೆ. ಸಂಕಲ್ಪದಲ್ಲಿ ನಾವು ಇದನ್ನು ಅನುಷ್ಠಾನಕ್ಕೆ ತರುವ ಮೂಲಕ ಎಲ್ಲೆಡೆಯೂ ಹೀಗೆ ಬರೆಯುವ ಪದ್ಧತಿಯನ್ನು ರೂಢಿಸಬೇಕು - 'ಚೈತ್ರ ಶುದ್ಧ ಪ್ರತಿಪತ್ ೧೯೪೩' ಹೀಗೆ ಬರೆಯುವುದನ್ನು ರೂಢಿ ಮಾಡಿಕೊಳ್ಳುವುದರಿಂದ ನಮ್ಮ ಶಾಸ್ತ್ರದಲ್ಲಿ ಹೇಳಿದ ಸಂವತ್ಸರಗಳನ್ನು ಅನುಷ್ಠಾನ ಮಾಡಿ, ನಮ್ಮತನವನ್ನು ಉಳಿಸಿಕೊಂಡು, ಉಳಿದ ದೇಶಗಳಿಗೂ ಮಾದರಿಯಾಗಬಹುದು.

ಶಾಲಿವಾಹನನು ಬಂದು ೧೯೪೨ ವರ್ಷಗಳು ಕಳೆದಿವೆ. ಒಟ್ಟು ೧೮೦೦೦ ವರ್ಷಗಳ ಕಾಲ ಇವನ ಶಕವರ್ಷವು ಇರುತ್ತದೆ. ಮುಂದೆ ವೈತರಣಿಯ ತೀರದಲ್ಲಿ ವಿಜಯಾಭಿನಂದನ ಎಂಬುವನು ಬರುತ್ತಾನೆ. ಅವನದ್ದು ೧೦೦೦೦ ವರ್ಷಗಳು ಇರುತ್ತವೆ. ಅನಂತರ ಕಾವೇರಿ ನದಿಯತೀರದಲ್ಲಿ ನಾಗಾರ್ಜುನನು ಬರುತ್ತಾನೆ. ಕೊನೆಯಲ್ಲಿ ಭಗವಂತನು ಕಲ್ಕಿಯಾಗಿ ಅವತರಿಸುತ್ತಾನೆ. ಈ ಕ್ರಮದಲ್ಲಿಯೇ ಕಾಲದ ಪರಿಗಣನೆಯನ್ನು ಮಾಡಬೇಕು.

## ಕಾಲದ ಬಗ್ಗೆ ಮುಖ್ಯ ಮಾಹಿತಿ

ನಿಮೇಷ, ಕಲಾ, ಮುಹೂರ್ತ, ಕಾಷ್ಠಾ, ಅಹೋರಾತ್ರ, ಅರ್ಧಮಾಸಗಳು, ಮಾಸಗಳು, ಋತುಗಳು, ಸಂವತ್ಸರಗಳನ್ನು ಮಹಾನಾರಾಯಣ ಉಪನಿಷತ್ತು (೧.೮,೯) ಕಾಲದ ಪರಿಮಾಣಗಳೆಂದು ಹೇಳುತ್ತದೆ. ೧೮ ನಿಮೇಷಗಳಿಗೆ ಒಂದು ಕಾಷ್ಠಾ. ೩೦ ಕಾಷ್ಠಾಗಳಿಗೆ ೧ ಕಲೆ, ೩೦ ಕಲೆಗಳಿಗೆ ೧ ಮುಹೂರ್ತ, ೩೦ ಮುಹೂರ್ತಗಳಿಗೆ ಒಂದು ಅಹೋರಾತ್ರ.

ಈ ನಾನಾ ಕಾಲಪ್ರಮಾಣಗಳ ಬಗ್ಗೆ ಅತಿಸೂಕ್ಷ್ಮದಿಂದ ಹಿಡಿದು ಅತಿ ಮಹತ್ತಾದುದರವರೆಗೆ, ಸಂಪೂರ್ಣ ಹಾಗೂ ಪ್ರಾಚೀನವಾದ ವಿವರಣೆ ವರಾಹನ ಬೃಹತ್ಸಂಹಿತಾ, ವೈಶೇಷಿಕಸೂತ್ರದ ಮೇಲಿರುವ ಪ್ರಶಸ್ತಪಾದನ ಭಾಷ್ಯ ಈ ಗ್ರಂಥಗಳಲ್ಲಿ ಬರುತ್ತದೆ. (ಸ ಕಾಲಃ) ಕ್ಷಣಲವನಿಮೇಷ - ಕಾಷ್ಠಾ-ಕಲಾ-ಮುಹೂರ್ತಯಾಮಾಹೋ

ರಾತ್ರ್ಯರ್ಧಮಾಸ-ಮಾಸರ್ತ್ವಯನಸಂವತ್ಸರ-ಯುಗ-ಕಲ್ಪ-ಮನ್ವಂತರ-ಪ್ರಲಯ-ಮಹಾಪ್ರಲಯ-ವ್ಯವಹಾರಹೇತುಃ । ವೈಶೇಷಿಕಸೂತ್ರ ೨.೬ರ ಕೆಳಗಿನ ಪ್ರಶಸ್ತಪಾದಭಾಷ್ಯ. ಪ್ರ. ೨೭ (ಕಾಶೀ ಸಂಸ್ಕೃತ ಗ್ರಂಥಮಾಲೆ ; ೧೯೨೩); ತತ್ರ ಗ್ರಹಗಣಿತೇ ಪೌಲಿಶ ರೋಮಕವಾಸಿಷ್ಠ ಸೌರಪೈತಾಮಹೇಷ್ಯು ಪಂಚಸ್ವೇತೇಷು ಸಿದ್ಧಾಂತೇಷು ಯುಗವರ್ಷಾಯನರ್ತುಮಾಸ ಪಕ್ಷಾಹೋರಾತ್ರಯಾಮ-ಮುಹೂರ್ತ-ನಾಡೀಪ್ರಾಣತ್ರುಟಿ ತ್ರುಟ್ಯಾದ್ಯವಯ ವಾದಿಕಸ್ಯ ಕಾಲಸ್ಯ ಕ್ಷೇತ್ರಸ್ಯ ಚ ವೇತ್ತಾ ॥ ಬೃಸಂ. II, ನಿಮೇಷಕಾಲತುಲ್ಯಂ ಹಿ ವಿದ್ಯಾಲಘ್ವಕ್ಷರಂ ಚ ಯತ್ । ವಾಯು. ೫೭.೬ ಲಘ್ವಕ್ಷರಮಸಮಾ ಮಾತ್ರಾ ನಿಮೇಷಃ ಪರಿಕೀರ್ತಿತಃ । ಅತಃ ಸೂಕ್ಷತರಃ ಕಾಲೋ ನೋಪಲಭ್ಯೋ ಭೃಗೂತ್ತಮ ॥ ವಿಷ್ಣುಧರ್ಮೋತ್ತರ ೭೩.೧ ಉದಾಹೃತ ಹೇ. (ಕಾಲಖಂಡ) ಕ್ಷಣ, ಲವ, ನಿಮೇಷ, ಕಾಷ್ಠಾ, ಕಲಾ, ಮುಹೂರ್ತ, ಯಾಮ (ಪ್ರಹರ ಅಥವಾ ೧/೮ ದಿವಸ), ಅಹೋರಾತ್ರ, ಅರ್ಧಮಾಸ, ಮಾಸ, ಋತು, ಅಯನ, ಸಂವತ್ಸರ, ಯುಗ, ಮನ್ವಂತರ, ಕಲ್ಪ, ಪ್ರಲಯ, ಮತ್ತು ಮಹಾಪ್ರಲಯ - ಹೀಗೆ ಕಾಲಪ್ರಮಾಣಗಳ ವಿಷಯದಲ್ಲಿ ವ್ಯವಹಾರಕ್ಕೆ ಕಾರಣವಾವುದೋ ಅದೇ ಕಾಲ. ಪುರಾಣಗಳು ಕೂಡ ನಿಮೇಷದಿಂದ ಪ್ರಲಯದವರೆಗಿನ ಕಾಲಪ್ರಮಾಣಗಳನ್ನು ನಿರ್ದೇಶಿಸುತ್ತವೆ.

ಕಣ್ಣುಮುಚ್ಚಿ ತೆರೆಯುವುದು ಎಂಬುದನ್ನು ವಾಯುಪುರಾಣ ಮತ್ತು ವಿಷ್ಣುಧರ್ಮೋತ್ತರಗಳು ಒಂದು ಲಘ್ವಕ್ಷರವನ್ನು ಉಚ್ಚರಿಸಲು ಬೇಕಾಗುವ ಸಮಯವೆನ್ನುತ್ತವೆ; ಅದಕ್ಕಿಂತ ಸೂಕ್ಷ್ಮತರವಾದ ಕಾಲ ಪ್ರತ್ಯಕ್ಷಗೋಚರವಲ್ಲವೆಂದು ವಿಷ್ಣುಧರ್ಮೋತ್ತರ ಹೇಳುತ್ತದೆ. ಕಾಲದ ಸೂಕ್ಷ್ಮ ಅವಯವಗಳ ಸಂಖ್ಯೆ ಹಾಗೂ ಹೆಸರುಗಳ ಬಗೆಗೆ ಹಾಗೂ ಅವುಗಳ ಸಂಬಂಧದ ಬಗೆಗೆ ತುಂಬಾ ಮತಭೇದವಿದೆ. ಕೆಲವು ಉದಾಹರಣೆಗಳನ್ನು ಮಾತ್ರ ಇಲ್ಲಿ ಕೊಡಬಹುದು. ಮನುಸ್ಮೃತಿ (೧.೬೪) ಕೊಡುವ ಕೋಷ್ಟಕವಿದು : ೧೮ ನಿಮೇಷ = ೧ ಕಾಷ್ಠಾ, ೩೦ ಕಾಷ್ಠಾ = ೧ ಕಲಾ, ೩೦ ಕಲಾ = ೧ ಮುಹೂರ್ತ, ೩೦ ಮುಹೂರ್ತ = ೧ ಅಹೋರಾತ್ರ. ಕೌಟಿಲ್ಯದ ಅರ್ಥಶಾಸ್ತ್ರ

ಹೀಗೆನ್ನುತ್ತದೆ (ಕಾಲಮಾನಮತ ಊರ್ಧ್ವಮ್ । ತ್ರುಟೋ ಲವೋ ನಿಮೇಷಃ ಕಾಷ್ಠಾ-ಕಲಾ ನಾಡಿಕಾ ಮುಹೂರ್ತಾ : ಪೂರ್ವಾಪರಭಾಗೌ ದಿವಸೋ ರಾತ್ರಿಃ ಪಕ್ಷೋ ಮಾಸ ಋತುರಯನಂ ಸಂವತ್ಸರೋ ಯುಗಮಿತಿ ಕಾಲಾಃ । ದ್ವೌತ್ರುಟೌ ಲವಃ । ದ್ವೌವೌ ನಿಮೇಷಃ ಪಂಚ ನಿಮೇಷಾಃ ಕಾಷ್ಠಾ । ತ್ರಿಂಶತ್ ಕಾಷ್ಠಾಃ ಕಲಾ । ಚತ್ವಾರಿಂಶತ್ಕಲಾಃ ನಾಡಿಕಾ । ದ್ವಿನಾಡಿಕಾ ಮುಹೂರ್ತ : ೧ ಪಂಚ ದಶಮುಹೂರ್ತೋ ದಿವಸೋ ರಾತ್ರಿಶ್ಚ ಚೈತ್ರೇ ಮಾಸ್ಯಾಶ್ವಯುಜೇ ಮಾಸೇ ಚ ಭವತಃ। ೨ ತ್ರುಟಿ = ೧ ಲವ, ೨ ಲವ = ೧ ನಿಮೇಷ, ೫ ನಿಮೇಷ = ೧ ಕಾಷ್ಠಾ, ೩೦ ಕಾಷ್ಠಾ = ೧ ಕಲಾ, ೪೦ ಕಲಾ = ೧ ನಾಡಿಕಾ, ೨ ನಾಡಿಕಾ = ೧ ಮುಹೂರ್ತ, ೩೦ ಮುಹೂರ್ತ = ೧ ಅಹೋರಾತ್ರ. ಕೆಲವೊಂದು ಪುರಾಣಗಳು ಸೂಕ್ಷ್ಮ ಕಾಲಪ್ರಮಾಣಗಳು, ಅವುಗಳ ಹೆಸರು ಹಾಗೂ ಸಂಬಂಧಗಳ ಬಗೆಗೆ ಒಂದೇ ಶ್ಲೋಕವನ್ನು ಉದ್ಧರಿಸುತ್ತವೆ.

> ಕಾಷ್ಠಾ ನಿಮೇಷಾ ದಶ ಪಂಚ ಚೈವ ತ್ರಿಂಶಚ್ಚ ಕಾಷ್ಠಾ ಗಣಯೇತ್ಕಲಾಸ್ತಾಃ ।
> ತ್ರಿಶಂತ್ಕಲಾಶ್ಚೈವ ಭವೇನ್ಮುಹೂರ್ತಸ್ತ್ರಿಂಶತಾ ರಾತ್ರ್ಯಹನೀ ಸಮೇತೇ ॥

೧೫ ನಿಮೇಷ = ೧ ಕಾಷ್ಠಾ., ೩೦ ಕಾಷ್ಠಾ = ೧ ಕಲಾ, ೪೦ ಕಲಾ = ೧ ನಾಡಿಕಾ, ೨ ನಾಡಿಕಾ = ೧ ಮುಹೂರ್ತ, ೩೦ ಮುಹೂರ್ತ = ಒಂದು ಅಹೋರಾತ್ರ. ನಿಮೇಷಕ್ಕೂ ಕಾಷ್ಠಾಕ್ಕೂ ಇರುವ ಇಲ್ಲಿಯ ಪ್ರಮಾಣ ಮನು ಕೌಟಿಲ್ಯರು ಹೇಳಿರುವುದಕ್ಕಿಂತ ಬೇರೆಯಾಗಿರುವುದು ಉಲ್ಲೇಖನೀಯವಾಗಿದೆ.

ಅದರ ಕೋಷ್ಟಕ ಹೀಗಾಗುತ್ತದೆ : - ೧೮ ನಿಮೇಷ = ೧ ಕಾಷ್ಠಾ, ೩೦ ಕಾಷ್ಠಾ = ೧ ಕಲಾ, ೩೦ ಕಲಾ = ೧ ಕ್ಷಣ, ೧೨ ಕ್ಷಣ = ೧ ಮುಹೂರ್ತ, ೩೦ ಮುಹೂರ್ತ = ೧ ಅಹೋರಾತ್ರ. ಭಾಗವತಪುರಾಣ (III, 11 ೩-೧೦) ಇನ್ನೂ ಬಹುವಿಸ್ತಾರವಾದ ಪಟ್ಟಿಯನ್ನು ಹೇಳಿದೆ - ಎರಡು ಕಾಲ ಪರಮಾಣುಗಳು = ೧ ಅಣು, ೩ ಅಣುಗಳು = ೧ ತ್ರಸರೇಣು, ೩ ತ್ರಸರೇಣು = ೧ ತ್ರುಟಿ, ೧೦೦ ತ್ರುಟಿ = ೧ ವೇಧ, ೩ ವೇದಗಳು = ೧ ಲವ, ೩ ಲವಗಳು = ೧ ನಿಮೇಷ, ೩ ನಿಮೇಷಗಳು = ೧ ಕ್ಷಣ, ೫ ಕ್ಷಣಗಳು = ಕಾಷ್ಠಾ, ೧೫ ಕಾಷ್ಠಾಗಳು = ೧ ಲಘು, ೧೫ ಲಘುಗಳು =

೧ ನಾಡಿಕಾ, ೨ ನಾಡಿಕಾಗಳು = ೧ಮುಹೂರ್ತ, ೩೦ ಮುಹೂರ್ತಗಳು = ೧ ಅಹೋರಾತ್ರ.

## ವಿಷ್ಣುರಹಸ್ಯದಲ್ಲಿ ಕಾಲದ ಬಗ್ಗೆ

ಅತಿಸೂಕ್ಷ್ಮಸ್ತು ಯಃ ಕಾಲಃ ಸ ಕ್ಷಣಃ ಪರಿಕೀರ್ತಿತಃ ।
ಕ್ಷಣಾಃ ಪಂಚ ತ್ರುಟಿಪ್ರೋಕ್ತಾ ಪಂಚಾಶತ್ ಕ ಃ ಲವಃ ಸ್ಮೃತಃ ॥
ಲವದ್ವಯಂ ನಿಮೇಷಃ ಸ್ಯಾತ್ ಮಾತ್ರಾ ಸ್ಯಾತ್ ಅಷ್ಟಭಿಶ್ಚ ತೈಃ ।
ಯಥಾಯಂ ವದತೇ ಶಾಸ್ತ್ರೀ ಮಾತ್ರಯೋಃ ದ್ವಿತಯಂ ಗುರುಃ ।
ಗುರೂಣಾಂ ದಶಕಂ ಪ್ರಾಣಃ ಪ್ರಾಣಷಟ್ಕಂ ಪಳಂ ಭವೇತ್ ।
ಪಳಷಷ್ಟಿರ್ಘಟೀ ಪ್ರೋಕ್ತಾ ತಾಃ ಷಷ್ಟಿಃ ದಿನಮುಚ್ಯತೇ ॥

(ವಿಷ್ಣುರಹಸ್ಯ)

## ಅತ್ಯಂತ ಸ್ಪಷ್ಟವಾಗಿ ಕಾಲದ ಬಗ್ಗೆ ಹೀಗೆ ತಿಳಿದುಕೊಳ್ಳಿ

1 ಕ್ಷಣ = 0.00005 ಸೆಕೆಂಡ್

5 ಕ್ಷಣ = 1 ತ್ರುಟಿ = 0.00025 ಸೆಕೆಂಡ್

50 ತ್ರುಟಿ (250 ಕ್ಷಣ) = 1 ಲವ = 0.0125 ಸೆಕೆಂಡ್

2 ಲವ (500 ಕ್ಷಣ) = 1 ನಿಮಿಷ = 0.025 ಸೆಕೆಂಡ್

8 ನಿಮೇಷ (4000 ಕ್ಷಣ) 1 = ಮಾತ್ರ = 0.2 ಸೆಕೆಂಡ್

2 ಮಾತ್ರಾ (8000 ಕ್ಷಣ) = 1 ಗುರು = 0.4 ಸೆ.

10 ಗುರು (80,000 ಕ್ಷಣ) = 1 ಪ್ರಾಣ = 4 ಸೆಕೆಂಡ್

6 ಪ್ರಾಣ (4,80,000 ಕ್ಷಣ) = 1 ಪಳ = 24 ಸೆಕೆಂಡ್ = 0.4 ನಿಮಿಷ.

+ 60 ಪಳ (2, 88, 00000 ಕ್ಷಣ) 1 ಘಳಿಗೆ = 24 ನಿಮಿಷಗಳು

60 ಘಳಿಗೆ ÷ (1, 7 2, 8 0,00000 ಕ್ಷಣ) = 1 ದಿನ = 24 ಘಂಟೆ = 1440 ನಿಮಿಷ

## ಭಾಗತವದ ತೃತೀಯಸ್ಕಂದದಲ್ಲಿ ಕಾಲಗಣನೆ (3 -12 - 6)

2 ಪರಮಾಣು ಕಾಲ = 1 ದ್ವ್ಯಣುಕ ಕಾಲ

3 ದ್ವಣ್ಯುಕ (6 ಪರಮಾಣು) = 1 ತ್ರ್ಯಣುಕ

3 ತ್ರಣ್ಯುಕ (18 ಪರಮಾಣು) = 1 ತ್ರುಟಿ

3 ತ್ರುಟಿ = (54 ಪರಮಾಣು) = 1 ವೇಧ

3 ವೇಧ (162 ಪರಮಾಣು) = 1 ಲವ

3 ಲವ (486 ಪರಮಾಣು) = 1 ನಿಮೇಷ

3 ನಿಮೇಷ (1458 ಪರಮಾಣು) 1 ಕ್ಷಣ

5 ಕ್ಷಣ (7290 ಪರಮಾಣು) = 1 ಕಾಷ್ಠಾ

15 ಕಾಷ್ಠಾ (1,09350 ಪರಮಾಣು) 1 ಲಘು

+ 15 ಲಘು (16, 40,250 ಪರಮಾಣು) 1 ಘಳಿಗೆ = 24 ನಿಮಿಷಗಳು

2 ಘಳಿಗೆ (32,80,500 ಪರಮಾಣು) = 1 ಮುಹೂರ್ತ = 48 ನಿಮಿಷಗಳು

6 ಘಳಿಗೆ (1,9 6,8 3000 ಪರಮಾಣು) 1 ಪ್ರಹರ 144 ನಿಮಿಷಗಳು

1 ಪ್ರಹರ = ದಿನ = 1440 ನಿಮಿಷಗಳು (24 ಗಂಟೆಗಳು)

1 ಯಾಮ = ದಿನ = 1440 ನಿಮಿಷಗಳು (24 ಗಂಟೆಗಳು)

10 ಪ್ರಹರ ÷ (19,68,30,000 ಪರಮಾಣು) = 1 ದಿನ = 24 ಘಂಟೆ =

1440 ನಿಮಿಷ 86,400 ಸೆಕೆಂಡ್. = 2278.128 86,400 ಸೆಕೆಂಡ್

## ಗಡಿಯಾರವನ್ನು ಅನುಸರಿಸಿದರ ದುಷ್ಪರಿಣಾಮ

ಪ್ರಾಚೀನರು ಈಗಿನ ಟೈಂ ಎಂಬುದನ್ನು ಅಂಗೀಕರಿಸಿರಲಿಲ್ಲ. ೬ ಘಂಟೆ, ೧೨ ಘಂಟೆ, ೯ ಘಂಟೆ ಇತ್ಯಾದಿ ಪ್ರಯೋಗಗಳು ಗ್ರೀಸ್ ದೇಶದವರಿಂದ ಬಂದಿದೆ. ಇದು ನಮ್ಮ ಶಾಸ್ತ್ರೀಯ ಕ್ರಮವಲ್ಲ. ಕ್ರಿ.ಶ. ೧೬೫೬ ಇಸವಿಯಲ್ಲಿ ಗಡಿಯಾರವನ್ನು ಕ್ರಿಶ್ಚಿಯನ್ ಹೈಗೆನ್ಸ್ ಎಂಬ ಗ್ರೀಸ್‌ದೇಶದವನು ಕಂಡುಹಿಡಿದಿದ್ದಾನೆ. ಅನಂತರ ಈ ಗಡಿಯಾರವು ಜಗತ್ತಿನಾದ್ಯಂತ ವ್ಯಾಪಿಸುತ್ತದೆ. ಅಲ್ಲಿಯ ತನಕವೂ ನಮ್ಮ ದೇಶದಲ್ಲಿ

ಘಳಿಗೆ, ಮುಹೂರ್ತ, ಯಾಮ, ಪ್ರಹರಗಳ ಪ್ರಯೋಗವಿತ್ತು. ಗಡಿಯಾದ ಕಲ್ಪನೆ ಬಂದಮೇಲೆ ಪ್ರಾಚೀನ ಕಾಲಗಣನೆಗೆ ಎಲ್ಲರೂ ತಿಲಾಂಜಲಿ ಬಿಟ್ಟರು. ಈಗ ಹೇಳುವ ಸೆಕೆಂಡು, ನಿಮಿಷ, ಘಂಟೆಗಳಿಗೆ ಸಂಸ್ಕೃತದಲ್ಲಿ ಶಬ್ದವಿಲ್ಲ. ನಿಮಿಷ ಎಂದು ಕನ್ನಡದಲ್ಲಿ ಹೇಳುವುದು ಸಂಸ್ಕೃತದ ಶಬ್ದವೇ ಆಗಿದೆ. ಆದರೆ ಈ ನಿಮಿಷಕ್ಕೂ ಸಂಸ್ಕೃತದಲ್ಲಿ ಪರಿಗಣಿಸುವ ನಿಮಿಷಕ್ಕೂ ಸಂಬಂಧವೇ ಇಲ್ಲ. ಸಂಸ್ಕೃತದಲ್ಲಿರುವ ೪ ನಿಮೇಷ ಸೇರಿಸಿದರೆ ಈಗಿನ ಒಂದು ಸೆಕೆಂಡು ಆಗುತ್ತದೆ. ಹಾಗೆಯೇ ಘಳಿಗೆ ಶಬ್ದವನ್ನೇ ಘಂಟೆಯಾಗಿ ಪ್ರಯೋಗಿಸಲಾಗುತ್ತದೆ. ೨೪ ನಿಮಿಷಕ್ಕೆ ಸಂಸ್ಕೃತದಲ್ಲಿ ೧ ಘಳಿಗೆ ಎನ್ನುತ್ತಾರೆ. ಹಿಂದೆ ಘಳಿಗೆಯ ಪ್ರಯೋಗವೇ ಹೆಚ್ಚಾಗಿತ್ತು. ೨ ಘಳಿಗೆಗೆ ಮುಹೂರ್ತ ಎನ್ನುತ್ತಿದ್ದರು. ೧ ದಿನಕ್ಕೆ ೩೦ ಮುಹೂರ್ತ ಆಗುತ್ತದೆ. ಹಾಗೂ ಒಂದು ದಿವಸದಲ್ಲಿ ೮ ಯಾಮಗಳಿರುತ್ತವೆ. ಹಾಗೂ ೬೦ ಘಳಿಗೆಗಳಿರುತ್ತವೆ. ಹಗಲು ೩೦ ಘಳಿಗೆ, ರಾತ್ರಿ ಮೂವತ್ತು ಘಳಿಗೆ. ಈ ಹಿಂದೆ ಹೇಳಿದ ಕ್ರಮದಂತೆ ಅತ್ಯಂತ ಸೂಕ್ಷ್ಮವಾದ ಕಾಲ ಎಂದರೆ ಅದು ಕ್ಷಣ. ಇದಕ್ಕಿಂತಲೂ ಸೂಕ್ಷ್ಮವಾದ ಕಾಲವಾಚಕ ಶಬ್ದಗಳ ಪ್ರಯೋಗವನ್ನು ಶಾಸ್ತ್ರಕಾರರು ತಿಳಿಸಿದ್ದಾರೆ. ಆಧುನಿಕರು ಇತ್ತೀಚಿಗೆ ಸೆಕೆಂಡು ಸಾವಿರವಿಭಾಗವಾಗುತ್ತದೆಂದು ಹೇಳಿ ಸಂತೋಷ ಪಟ್ಟಿದ್ದಾರೆ. ಇದು ಹಿಂದಿನಿಂದಲೂ ಇದ್ದ ಸಂಗತಿಯೇ ಆಗಿದೆ. ಕ್ಷಣ, ಲವ, ಘಳಿಗೆ, ಮುಹೂರ್ತ ಈ ಕ್ರಮದಲ್ಲಿ ಅರ್ಥವಾಗುವಂತೆ ಒಂದು ಗಡಿಯಾರವನ್ನು ತಯಾರು ಮಾಡುವ ಅವಶ್ಯಕತೆಯಿದೆ. ಇದರಿಂದ ನಮ್ಮ ಪ್ರಾಚೀನ ಸಂಸ್ಕೃತಿಯನ್ನು ಪುನರುತ್ಥಾನ ಮಾಡಿದಂತೆ ಆಗುತ್ತದೆ.

ಈ ಘಳಿಗೆ ಮುಹೂರ್ತಗಳನ್ನೆಲ್ಲಾ ಹೇಳುವ ಕ್ರಮವು ನಮ್ಮಲ್ಲಿ ಬಿಟ್ಟಿದ್ದರಿಂದ ಸಂಕಲ್ಪವನ್ನೂ ಕೂಡ ನಾವಿಂದು ಸ್ಪಷ್ಟವಾಗಿ ಮಾಡುತ್ತಿಲ್ಲ. ಏಕೆಂದರೆ ದ್ವಿತೀಯಾ ತಿಥಿಯು ೪೫ ಘಳಿಗೆ ಇರುತ್ತದೆ ಎಂದು ಪಂಚಾಂಗದಲ್ಲಿ ಬರೆದಿರುತ್ತಾರೆ. ನಾವು ಸಂಕಲ್ಪ ಮಾಡುವಾಗ ಕೇವಲ ದ್ವಿತೀಯಾ ತಿಥಿಯನ್ನಷ್ಟೇ ಉಲ್ಲೇಖ ಮಾಡುತ್ತಿದ್ದೇವೆ. ಘಳಿಗೆಗಳ್ನು ಉಲ್ಲೇಖ ಮಾಡುವುದನ್ನು ಬಿಟ್ಟಿದ್ದೇವೆ. ೪೫ ಘಳಿಗೆಗಳಿದ್ದರೆ ದ್ವಿತೀಯಾಯಂ ಪಂಚಚತ್ವಾರಿಂಶತ್ ಘಟಿಕಾಃ ಎಂಬುದಾಗಿಯೇ ಸಂಕಲ್ಪವನ್ನು ಮಾಡಬೇಕು. ಗಡಿಯಾರದ ಆಕ್ರಮಣದಿಂದ ಇಂಥ ಪ್ರಾಚೀನ ಸಂಸ್ಕಾರವೇ ನಿಂತು ಹೋಗಿದೆ. ಸಾಧಕರು ಇದರ ಬಗ್ಗೆ ಗಮನ ಹರಿಸಬೇಕು.

## ಯುಗಾದಿಯ ದಿವಸ ಮಾಡಬಹುದಾದ ದಾನಗಳು

* ಯಥಾಶಕ್ತಿ ದಕ್ಷಿಣೆ
* ನೂತನ ವಸ್ತ್ರ
* ಪಾನಕ, ಮಜ್ಜಿಗೆ, ಕೋಸಂಬರಿಗಳ ದಾನ
* ಸತ್ಪಾತ್ರರಿಗೆ ಭೋಜನ
* ಬೇವು-ಬೆಲ್ಲ ದಾನ
* ವಟುಗಳಿಗೆ ಪುಸ್ತಕ ದಾನ
* ನೀರು
* ಛತ್ರಿ
* ಬೀಸಣಿಗೆ
* ನೀರು ತುಂಬಿದ ಪಾತ್ರೆ
* ಕನ್ನಡಿ
* ತಾಂಬೂಲ
* ಬೆಲ್ಲ
* ಹಿತವಾದ ಹಾಸಿಗೆ
* ತುಪ್ಪ ತುಂಬಿದ ಕಂಚಿನ ಪಾತ್ರೆ
* ಕಬ್ಬಿನರಸ
* ಗೋಧಿ
* ಮೊಸರನ್ನ
* ತೆಂಗಿನಕಾಯಿ
* ಮಾವಿನಹಣ್ಣು
* ವಸ್ತ್ರ
* ಪುಸ್ತಕ
* ಕಮಂಡಲ
* ಯತಿಗಳಿಗೆ ದಂಡದಾನ
* ಮಠಕ್ಕೆ ತೈಲದಾನ ಶ್ರೇಷ್ಠ.
* ಹಣ್ಣು
* ತರಕಾರಿ

ಯುಗಾದಿ

* ಗಡ್ಡೆ
* ಗೆಣಸು
* ಚಂದನ
* ತಂಪುನೀರು
* ತಂಪುದ್ರವ್ಯ
* ಕರ್ಪೂರ
* ಕಸ್ತೂರಿ
* ದೀಪದಾನ
* ಧೇನುದಾನ
* ಗೃಹದಾನ
* ಆಕಳಹಾಲು
* ಮೊಸರು
* ತುಪ್ಪ
* ಮಜ್ಜಿಗೆ
* ಬೆಣ್ಣೆ
* ಯತಿಗಳಿಗೆ ಬ್ರಾಹ್ಮಣರಿಗೆ ಭೋಜನ
* ಪುಸ್ತಕದಾನ
* ಕುಂಕುಮ
* ಕೇಸರಿ ದಾನ
* ಜಾತೀಫಲ
* ಲವಂಗ
* ಜಾಜಿಪತ್ರಿ
* ಕಗ್ಗಲೀ
* ದಾಳಿಂಬೆ
* ಸುಗಂಧದ್ರವ್ಯ
* ಮಾದಾಳ
* ಬೆಟ್ಟಮಲ್ಲಿಗೆ
* ನಿಂಬೆಹಣ್ಣು
* ಹಲಸು

ಯುಗಾದಿ

* ಬಳವಲ ಹಣ್ಣು
* ಕುಂಬಳಕಾಯಿ
* ದಾರಿಯಲ್ಲಿ ವಿಶ್ರಾಂತಿಧಾಮ ನಿರ್ಮಾಣ.
* ದಾರಿಯ ಕಲ್ಲು ಮುಳ್ಳು ತೆಗೆದು ಶೋಧನೆಗಳು ಶ್ರೇಷ್ಠ.
* ಚಪ್ಪಲಿದಾನ
* ಆನೆ, ಕುದುರೆ ಮುಂತಾದ ವಾಹನ ದಾನ ಉತ್ತಮ.

**ಚಪ್ಪಲಿದಾನ -**

ಉಪಾನಹೌ ಪ್ರದಾಸ್ಯಾಮಿ ಕಂಟಕಾದಿನಿವಾರಣೇ ।
ಸರ್ವಸ್ಥಾನೇಷು ಸುಖದೇ ಅತಃ ಶಾಂತಿಂ ಪ್ರಯಚ್ಛಮೇ ॥

**ಛತ್ರದಾನ -**

ಇಹಾಮುತ್ರಾತಪತ್ರಾಣಿ ಕುರು ಮೇ ಕೇಶವ ಪ್ರಭೋ ।
ಛತ್ರಂ ತ್ವತ್ಪ್ರೀತಯೇ ದತ್ತಂ ಬ್ರಾಹ್ಮಣಾಯ ಮಯಾ ತವ ॥

**ಉದಕುಂಭದಾನ -**

ಏಷ ಕುಂಭೋ ಮಯಾ ದತ್ತಃ ಶರ್ಕರಾಜಲಪೂರಿತಃ ।
ಪ್ರದಾನಾದಸ್ಯ ತೃಪ್ಯಂತು ತ್ರಯಸ್ತ್ರಿಂಶತ್ತು ದೇವತಾಃ ॥

**ಬೀಸಣಿಕೆ ದಾನ -**

ಘರ್ಮಶಾಂತಿಕರಂ ನಿತ್ಯಂ ವ್ಯಜನಂ ವಿಷ್ಣುವಲ್ಲಭಮ್ ।
ತ್ರಿವಿಕ್ರಮಸ್ಯ ಪ್ರೀತ್ಯರ್ಥಂ ಭೂಸುರಾಯ ದದಾಮಹ್ಯಮ್ ॥

**ಚಂದನದಾನ -**

ಚಂದನಂ ರುಚಿರಂ ಚಾರು ಕರ್ಪೂರೋಶೀರಸಂಯುತಮ್ ।
ಅಸ್ಯ ಪ್ರದಾನಾತ್ ತೃಪ್ಯಂತು ದೇವರ್ಷಿಪಿತೃಮಾನವಾಃ ॥

* * * *

॥ ಶ್ರೀ ಗುರುಭ್ಯೋ ನಮಃ ॥

## ಅಡುಗೆ ಮಾಡುವ ಮೊದಲು ತಿಳಿಯಿರಿ
## ಇದು ಎಲ್ಲ ಹಬ್ಬಗಳಿಗೂ ಸಂಬಂಧಪಟ್ಟ ಆಚಾರವಿಚಾರ

ದ್ರವ್ಯಸ್ವಭಾವ ಅದರ ಪ್ರಭಾವಜ್ಞಾನವು ದ್ರವ್ಯವನ್ನು ಉಪಯೋಗಿಸುವ ಜನರೆಲ್ಲರಿಗೂ ತಿಳಿದಿರಬೇಕು. ಯಥಾಶಾಸ್ತ್ರವಾಗಿ ತಿಳಿಸಲು ಅವಶ್ಯವಾದುದರಿಂದ ನಿತ್ಯವು ಉಪಯೋಗಿಸಿಕೊಳ್ಳುತ್ತಿರುವ ಮುಖ್ಯಮುಖ್ಯ ಪದಾರ್ಥಗಳ ಕೆಲವು ಹಿತಾಹಿತ ಗುಣಕರ್ಮಗಳ ಸ್ವಭಾವ ಪ್ರಭಾವಗಳು ಧಾನ್ಯ ಶಾಕ ಫಲ ಜಲ ಮೊದಲಾದ ಜಾತಿಗಳ ವರ್ಗಭೇದದಿಂದಲೂ, ಪ್ರಾಧಾನ್ಯ ಅಪ್ರಧಾನ್ಯ ಭೇದದಿಂದಲೂ, ಸಂಗ್ರಹವಾಗಿ ಇಲ್ಲಿ ಕೆಲವೇ ತೋರಿಸಲ್ಪಡುತ್ತವೆ. ದೇಹಪೋಷಣಕ್ಕೆ ಮುಖ್ಯಸಾಧಕವಾದ ಪದಾರ್ಥವೇ ಧಾನ್ಯ. ಇದು ಶೂಕಧಾನ್ಯ , ಶಮೀ (ಶಿಂಬಿ), ಧಾನ್ಯವೆಂದು ೨ ಬಗೆಯಿದೆ. ನೆಲ್ಲು ಗೋಧಿ ಮುಂತಾದ ಮುಳ್ಳುಳ್ಳ ತೆನೆಯಾಗುವ ಧಾನ್ಯವು ಶೂಕಧಾನ್ಯ ವರ್ಗಕ್ಕೆ ಸೇರಿದೆ. ತೊಗರಿ ಹೆಸರು ಮುಂತಾದ ಕಾಳು ಹೊಟ್ಟು ಉಳ್ಳ ಕಾಯಿಯಾಗುವ ಧಾನ್ಯವು ಶಮೀಧಾನ್ಯವರ್ಗಕ್ಕೆ ಸೇರಿದೆ. ಶೂಕಧಾನ್ಯದಲ್ಲಿ ೨-೩ ತಿಂಗಳೊಳಗೆ ಬೆಳೆಯಾಗುವುದೆಲ್ಲವೂ ಲಘುವು. ೬-೭ ತಿಂಗಳಿಗೆ ಬೆಳೆಯಾಗುವ ಬತ್ತವು ಗುರುವು. ಶಿಂಬೀಧಾನ್ಯದಲ್ಲಿ ಗುರುವು, ವಾತವೃದ್ಧಿಕರವು. ರಸರಕ್ತಾದಿ ಸ್ರೋತೋಮಾರ್ಗ ಬಂಧಕವು. ಅದರಲ್ಲಿಯೂ ಉದ್ದು ಅತಿಕಠಿಣವು. ಬೇಗನೆ ಜೀರ್ಣಿಸದೆ ಬಹಳ ಹೊತ್ತು ಆಮಾಶಯದಲ್ಲೇ ಇರುವುದು. ಹೀಗಿರುವುದರಿಂದ ನಮ್ಮ ಆಹಾರ ಪದಾರ್ಥಗಳಲ್ಲಿ ಶೂಕಧಾನ್ಯವೇ ಮುಖ್ಯವಾಗಿಯೂ ಶಮೀಧಾನ್ಯವು ಅದಕ್ಕೆ ವ್ಯಂಜನವಾಗಿಯೂ ಇರುವುದು.

## ಶೂಕಧಾನ್ಯಗಳು

ಅಥ ಶೂಕದಾನ್ಯ ವರ್ಗ: -

ರಕ್ತೋ ಮಹಾನ್ ಸಕಲಮಸ್ತೂರ್ಣಕಃ ಶಕುನಾಹತಃ ।

ಸಾರಾಮುಖೋ ದೀರ್ಘಶುಕೋ ರೋಧ್ರಶೂಕಃ ಸುಗಂಧಿಕಃ

ಪುಂಡ್ರಃ ಪಾಂಡುಃ ಪುಂಡರೀಕಃ ಪ್ರಮೋದೋ ಗೌರಸಾರಿವೌ ।
ಕಾಂಚನೋ ಮಹಿಷಃ ಶೂಕೋ ದೂಷಕಃ ಕುಸುಮಾಂಡಕಃ
ಲಾಂಗಲಾ ಲೋಹವಾಲಾಖ್ಯಾಃ ಕರ್ದಮಾಃ ಶೀತಿಭೀರುಕಾಃ
ಷತಂಗಸ್ತಪನೀಯಾಶ್ಚ ಯೇ ಚಾನ್ಯೇ ಶಾಲಯಃ ಶುಭಾಃ ॥ (ಅ.ಹ)

**ಒಂದು ವರ್ಗದ ಸಣ್ಣ ಅಕ್ಕಿ (ರಕ್ತಶಾಲಿ)** – ಮೃದು ಮಧುರ ಲಘು ಸ್ನಿಗ್ಧ ಶೀತ ಗುಣವುಳ್ಳದ್ದು. ಕಣ್ಣಿಗೆ ತಂಪು, ಬಲಕರವು, ಮೂತ್ರ ವೃದ್ಧಿ ಮಾಡುವುದು. ದಾಹತೃಷ್ಣಾದಿಶಾಮಕವು, ಶುಕ್ರಕ್ಕೆ ಹಿತವು, ತ್ರಿದೋಷ ಹರವು, ಸಾತ್ವಿಕವು, ಪಥ್ಯಕ್ಕೆ ಸೇರಿದುದು.

ಇದು ಹೊಸದಾದಷ್ಟು ಗುರುವು ಅತಿಸ್ನಿಗ್ಧವು ಆಗುವುದರಿಂದ ಮಲಮೂತ್ರಗಳನ್ನು ಹೆಚ್ಚಿಸುವುದು. ಅಪಥ್ಯವು ೨ ವರ್ಗಕ್ಕೆ ಮೇಲ್ಪಟ್ಟ ಅಕ್ಕಿಯು ನಿಸ್ಸಾರವು, ಲಘು ಅತಿರೂಕ್ಷವಾಗುವುದರಿಂದ ವಾತವೃದ್ಧಿ ಮಾಡಿ ಮಲವನ್ನು ಅತಿ ಸ್ವಲ್ಪವಾಗಿಸಿ ಗಂಟು ಕಟ್ಟಿಸುವುದು.

**ಬಾಲದಿ ಬಿಳಿಯ ಬತ್ತವು (ಯವ)** – ಮೇಲೆ ಹೇಳಿದ ಗುಣವುಳ್ಳುದ್ದಾದರೂ ವಾತ ಮೂತ್ರವೃದ್ಧಿಕಾರಿಯು. ಇದು ದಪ್ಪವಾದಷ್ಟು ನಿಕೃಷ್ಟವು.

**ಎರಡು ತಿಂಗಳ ಸಣ್ಣ ಅಕ್ಕಿ (ಷಷ್ಠಿಕ)** – ೨ ಸಲ ಕಿತ್ತು ನಟ್ಟು ಬೆಳೆದ ಬತ್ತವು ಸ್ನಿಗ್ಧವಾದರೂ ಅತಿಲಘು, ಬಲುಬೇಗನೆ ಜೀರ್ಣಿಸುವುದು, ಬಲಕರವು, ಪಥ್ಯವು, ರಾಜಯೋಗ್ಯವು, ಸಾತ್ವಿಕತರವು.

**ಚೀಣಾದೇಶ ಬ್ರಹ್ಮದೇಶದ ಸಣ್ಣಕ್ಕಿಗಳು (ಸೇಗೊ ಮುಂತಾದದ್ದು)** – ಷಷ್ಠಿಕರಂತೆಯೇ ಪಥ್ಯಕಾರಿಯು, ರುಚ್ಯ ಲಘು ಸ್ನಿಗ್ಧ ಶೀತಗುಣವುಳ್ಳವು.

**ಗೋಧಿ (ಗೋಧೂಮ)** – ಸ್ನಿಗ್ಧ ಶೀತ ಗುರು, ಮಧುರ, ಸ್ಥಿರಸರ ಗುಣವುಳ್ಳದ್ದು, ವಾತಪಿತ್ತಹರವು, ಶ್ಲೇಷ್ಮಕರವು, ಬಲವೀರ್ಯವರ್ಧಕವು, ಮುರಿದ ಅವಯವಗಳನ್ನು ಕೂಡಿಸಿ ಪುಷ್ಟಿಯನ್ನು ಕೊಡುವುದು, ಸಾತ್ವಿಕವು.

**ನವಣೆ (ನೀವಾರ-ಕಂಗು)** – ಇದು ಸ್ವಾದು. ಲಘು ರೂಕ್ಷ ಗುಣವುಳ್ಳದಾದರೂ ವಾತವಲ್ಲ, ತೀಕ್ಷ್ಣವಾದರೂ ಕಫಪಿತ್ತಹರವು. ಸಾತ್ವಿಕತರವು, ಮುನಿಗಳಿಗೆ ಯೋಗ್ಯವು.

**ಸಾಮೆ (ಶ್ಯಾಮಾಕ)** – ಸ್ವಾದು ಲಘುರೂಕ್ಷವು, ಶೋಷಕವೂ, ವಾತವು, ರುಚ್ಯವು. ಸಾತ್ವಿಕವು, ಶ್ಲೇಷ್ಮಪಿತ್ತಹರವು.

**ಹಾರಕ (ಕೋದ್ರವ)** – ಇದು ಸಾಮೆಯಂತಾದರೂ ಬಂಧಕವು. ೬, ೭, ೮ ಇವು ಮೂರು ಉಷ್ಣವೀರ್ಯವುಳ್ಳವು.

**ಜೋಳ (ಯುಗಂಧರ, ಯಾವನಾಳ)** – ಸ್ವಾದು ಗುರು ಉಷ್ಣ, ಕಫಹರ, ವಾತಕರ, ಮಲವರ್ಧಕವು.

ಮುಸುಕಿನಜೋಳವು ಜೋಳದಂತೆಯೇ ಆದರೂ ವಿದಾಹಿ, ಅತಿ ಗುರು, ತ್ರಿದೋಷಗಳನ್ನು ಉಂಟುಮಾಡುವುದು. ಅಪಥ್ಯವು.

**ಸಜ್ಜೆ (ಕುಲ್ಮಾಷ)** – ಸ್ವಾದು, ಗುರು ಸ್ನಿಗ್ಧ ಗುಣವುಳ್ಳದ್ದು.

**ರಾಗಿ (ಅಣುರಾಜಿ)** – ರೂಕ್ಷ ಗುರು ಉಷ್ಣ, ಕಫಹರವು ಬಲಕರವು.

## ಶಿಂಬೀಧಾನ್ಯಗಳು

ಅಥ ಶಿಂಬೀಧಾನ್ಯವರ್ಗಃ –

ಮುದ್ಗಾಢಕೀ ಮಸೂರಾದಿ ಶಿಂಬೀಧಾನ್ಯಂ ವಿಬಂಧಕೃತ್

ಕಷಾಯಂ ಸ್ವಾದು ಸಂಗ್ರಾಹೀ ಕಟುಪಾಕಂ ಹಿಮಂ ಲಘು

ಮೇದಃ ಶ್ಲೇಷ್ಮಾಸ್ರಪಿತ್ತೇಷು ಹಿತಂ ಲೇಪೋಪಸೇಕಯೋಃ ॥

**ಹೆಸರು (ಮುದ್ಗ)** – ಶೀತ ಲಘು, ಒಗರು ಸಿಹಿ, ರಕ್ತಪಿತ್ತ ಕಫಹರವು, ಹೊಟ್ಟಿನೊಡನೆ ತಿಂದರೆ ಪ್ರವೃತ್ತಿಕಾರಿ. ಹೊಟ್ಟಿಲ್ಲದುದು ಬಂಧಕವು. ಮಾಂಸ ವರ್ಧಕವು, ವಿಪಾಕದಲ್ಲಿ ಕಟುವಾದರೂ ನೇತ್ರಕ್ಕೆ ಹಿತವು, ಬೇಳೆಯ ಕಾಳುಗಳಲ್ಲಿ ಇದೇ ಉತ್ತಮವು. ಉಳಿದ ಬೇಳೆಗಳಷ್ಟು ವಾತವಲ್ಲ. ಸಾತ್ವಿಕವು.

**ತೊಗರಿ (ಆಢಕ)** – ಗುರು, ಉಷ್ಣ, ಒಗರು, ಸಿಹಿ, ಕಫಪಿತ್ತಹರ, ವಾತಕರ, ಸ್ರೋತ್ರೋಬಂಧಕಾರಿ, ರಾಜಸವು.

**ಅವರೆ (ನಿಷ್ಪಾವ)** – ಗುರುಶೀತತಮ, ಸಿಹಿ ಒಗರು, ವಿದಾಹಿ, ರೂಕ್ಷವು, ಅತಿವಾತ ಪಿತ್ತಮೂತ್ರಕರವು, ಆಮ್ಲವಿಪಾಕದಿಂದ ದೃಷ್ಟಿ-ಶುಕ್ರದೋಷಕಾರಿ, ಶ್ಲೇಷ್ಮ ಮಲವೃದ್ಧಿಕರವು, ಬಾವನ್ನುಂಟುಮಾಡುವುದು, ತಾಮಸತಮವು, ಅಪಥ್ಯವು.

**ಉದ್ದು (ಮಾಷ)** – ಉಷ್ಣ ಗುರು, ಸ್ನಿಗ್ಧವು, ಮಧುರವು, ವೀರ್ಯ, ಮಾಂಸ ಮೇದಃ ಶ್ಲೇಷ್ಮ ಮಲಗಳನ್ನು ಹೆಚ್ಚಿಸುವುದು, ವಾತಹರವು, ಮಿತವಾದರೆ ಬಲಪುಷ್ಟಿಪ್ರದವು. ಹೆಚ್ಚಿದರೆ ಅಜೀರ್ಣ ರೋಗವುಂಟಾಗುವುದು. ಇದು ಸಾತ್ವಿಕಕ್ಕೆ ಸೇರಿದ್ದರೂ ಗುರೂಷ್ಣ ವೀರ್ಯವಾದುದರಿಂದ ನಿತ್ಯಾಭ್ಯಾಸಕ್ಕೆ ಯೋಗ್ಯವಲ್ಲವು. ಅಪಥ್ಯವು.

**ಕಡಲೆ (ಚಣಕ)** – ಗುರು ಶೀತ ವೀರ್ಯವು, ಸಿಹಿ ಒಗರು, ವಾತವರ್ಧಕವು, ಶ್ಲೇಷ್ಮ ರಕ್ತಪಿತ್ತಹರವು. ಅಗ್ನಿಮಾಂದ್ಯಕಾರಿ, ಪುಂಸ್ತ್ವವನ್ನು ಕಳೆಯುವುದು, ರಾಜಸವು. ಅಪಥ್ಯವು.

**ಕಾಡುಕಡಲೆ- ನೆಲಗಡಲೆ (ಸತೀನಕ)** – ವಾತ ಪಿತ್ತ ವರ್ಧಕವು. ಬಂಧಕವು, ಗುರೂಷ್ಣ ಸ್ನಿಗ್ಧ ವೀರ್ಯವು, ಸ್ವಾದುಪಾಕವಾದರೂ ಸಾತ್ವಿಕವಲ್ಲವು.

**ಬಟಾಣಿ (ಮಸೂರ)** – ಗುರು ಶೀತ ವೀರ್ಯವು, ಸ್ವಾದು, ಕಫಪಿತ್ತಹರವು, ಅತಿವಾತಕರವು, ಅಪಥ್ಯವು.

**ಅಲಸಂದೆ (ರಾಜಮಾಷ)** – ರೂಕ್ಷ ಗುರು ಶೀತವೀರ್ಯವು. ಸಿಹಿ ಒಗರು, ವಾತವರ್ಧಕವು, ಬಂಧಕವು, ಮಧುರಪಾಕವಾದರೂ ಶುಕ್ರನಾಶಕವು.

**ಹುರುಳಿ (ಕುಲತ)** – ಉಷ್ಣರೂಕ್ಷಗುರು, ಸಿಹಿ ಒಗರು, ಆಮ್ಲ ಕಟುವಿಪಾಕವು, ಕಫವಾತಹರವು, ರಕ್ತಪಿತ್ತವರ್ಧಕವು, ದೃಷ್ಟಿ, ಶುಕ್ರನಾಶಕವು, ಕುಸಶ್ವಾಸ ಶೋಧ ಮೂತ್ರ ಪೀನಸ ಹಿಕ್ಕಾಶೋರ್ ರೋಗಿಗಳಿಗೆ ಹಿತವು. ಕಾಡುಹುರುಳಿಗೂ ಇದೇ ಗುಣವಿದ್ದರೂ ಅದು ಕಣ್ಣಿಗೆ ಬಾಧಕವಲ್ಲ.

**ಎಳ್ಳು (ತಿಲ)** – ಉಷ್ಣ ಸ್ನಿಗ್ಧ ಗುರು ತೀಕ್ಷ್ಣ ವೀರ್ಯವು, ಸಿಹಿ ಕಹಿ ಒಗರು, ಮಧುರಪಾಕವಾದರೂ ಪಿತ್ತಕರವು, ವಾತಹರವು, ಹಣ್ಣು ಕೂದಲು ಚರ್ಮ ಹಲ್ಲುಗಳಿಗೆ ಹಿತವು, ಮೂತ್ರವನ್ನು ತಗ್ಗಿಸುವುದು, ಪಿತ್ತಾಗ್ನಿ ಬುದ್ಧಿ ವರ್ಧಕವು. ಎಳ್ಳುಗಳಲ್ಲಿ ಕರಿ ಎಳ್ಳೇ ಉತ್ತಮವು. ಹುಚ್ಚೆಳ್ಳು ಅತ್ಯುಷ್ಣವು, ಕಣ್ಣಿಗೆ ಅಹಿತವು.

**ಕುಸುಮೆ (ಕುಸುಂಭ)** – ಉಷ್ಣ ತೀಕ್ಷ್ಣ ಸ್ನಿಗ್ಧ ಗುಣವುಳ್ಳದ್ದು, ಸಿಹಿ-ಕಾರ, ಕಫಹರವು, ಪಿತ್ತವರ್ಧಕವು.

**ಸಾಸುವೆ (ಸರ್ಷಪ)** – ಅತ್ಯುಷ್ಣ ತೀಕ್ಷ್ಣ ಸ್ನಿಗ್ಧವು. ಕಾರ, ಕಫವಾತ ಕೃಮಿಕುಷ್ಠ ಹರವು, ಅತಿಕಟುವಿಪಾಕದಿಂದ ವ್ರಣವನ್ನುಂಟು ಮಾಡುವುದು. ಇದರಿಂದ ರಕ್ತ ಪಿತ್ತರೋಗ ಹುಟ್ಟುವುದು, ತಾಮಸವು. ಬಿಳಿಯ ಸಾಸುವೆಯು ಇದೇ ಗುಣವುಳ್ಳದ್ದು.

**ಗಸಗಸೆ (ಖರ್ಸೆ)** – ಉಷ್ಣಸ್ನಿಗ್ಧ ಲಘು. ಸ್ಥಿರ, ಮಧುರ, ಅತಿಸಾರ ಹಿಕ್ಕಾಶ್ವಾಸಕಾಸ ರೋಗಿಗೆ ಹಿತವು. ಬಂಧಕವು, ನಿದ್ರಾಲಸ್ಯಾದಿ ತಾಮಸ ಗುಣವರ್ಧಕವು.

## ಶಾಕವರ್ಗವು

ಮೂಲಪತ್ರಕರೀರಾಗ್ರ ಫಲಕಾಂಡಾಧಿರೂಢಕಂ ।
ತ್ವಕ್ ಪುಷ್ಪಂ ಕವಕಂ ಚೇತಿ ಶಾಕಂ ದಶವಿಧಂ ಸ್ಮೃತಂ ॥

ಬೇರು, ಎಲೆ ಸೊಪ್ಪು, ಮೊಳಕೆ, ಚಿಗುರು, ಹಣ್ಣು, ದಂಟು, ದಿಂಡು, ಸಸಿಗಳು, ಬಟ್ಟಡೆ, ಹೂವು, ಗೆಡ್ಡೆಗಳು, ಇವು ಹತ್ತೂ ಶಾಕಗಳೆಂದು ರೂಢಿ.

ಈ ಶಾಕಗಳೆಲ್ಲವು ಗುರು ರೂಕ್ಷ ಮಂದಗುಣವುಳ್ಳವು. ಅಗ್ನಿಬಲವನ್ನು ಕೆಡಿಸಿ ಮಲವೃದ್ಧಿ ಮಾಡುವವು. ವಿಪಾಕಪ್ರಭಾವದಿಂದ ದೃಷ್ಟಿಶುಕ್ರಗಳಿಗೆ ಅಹಿತವು. ಸರ್ವವಿಧದಿಂದಲೂ ರೋಗಹೇತುವಾಗುವುದರಿಂದ ಅಪಥ್ಯಕ್ಕೇ ಸೇರಿದೆ. ಶಾಕವರ್ಧಕವೇ ಸುಖಕರವೆಂದು ಮುನಿಗಳ ಮತವು. ಆದರೆ ಅದರಲ್ಲಿ ಕಿರಿಹಾಲೆ ಚಕ್ರವರ್ತಿ ಹೊನಗೊನ್ನೆ ಚಿಲುಕೀರೆ ಕೊಮ್ಮೆ ಈ ೫ ಸೊಪ್ಪುಗಳು ಕಣ್ಣಿಗೆ ಬಾಧಕವಲ್ಲವೆಂದು ಕೆಲವರ ಮತವು.

**ಸಿಹಿಹಾಲೆಸೊಪ್ಪು (ಜೀವಂತೀ)** – ಶೀತಮಂದರೂಕ್ಷವು, ಸ್ವಾದು, ಸರ್ವದೋಷ ಹರವು. ನೇತ್ರಕ್ಕೆ ಹಿತವು, ಸಾಮಾನ್ಯವಾಗಿ ಸರ್ವರಿಗೂ ಪಥ್ಯವು. ಇದೇ ಪತ್ರಶಾಕದಲ್ಲಿ ಶ್ರೇಷ್ಠವೆನ್ನುವರು.

**ಚಿಕ್ಕವತ್ತ (ವಾಸ್ತುಕ)** – ಉಷ್ಣ ಲಘು ರೂಕ್ಷವು. ಸ್ವಾದು, ರುಚ್ಯವು, ಸರವು (ಬೇಗನೆ ವ್ಯಾಪಿಸುವುದು) ತ್ರಿದೋಷಹರವು, ಕ್ರಿಮಿನಾಶಕವು, ಅಗ್ನಿಬುದ್ಧಿ ವರ್ಧಕ, ವಿಪಾಕದಲ್ಲಿ ಕಟುವಾದರೂ ಕಣ್ಣಿಗೆ ಕೆಟ್ಟುದಲ್ಲ, ಬಂಧಕವಲ್ಲ.

**ಹೊನಗೊನ್ನೆ (ಮತ್ಸ್ಯಾಕ್ಷಿ)** – ಲಘು ಶೀತ ಮಂದ ರೂಕ್ಷವು, ಮಧುರವು, ಚಕ್ಷುಷ್ಯವು, ಪಥ್ಯವು, ಇದರಲ್ಲಿ ಕಹಿ ಒಗರೂ ಉಂಟು, ಆದರೂ ಬಂಧಕವಲ್ಲ.

**ಚಿಲುಕೀರೆ (ಹಿಲಮೋಚಿ-ಮೇಘನಾದ)** – ಉಷ್ಣ ಗುರು ರೂಕ್ಷ ಮಂದವು, ಸಿಹಿ-ಕಹಿ, ಕ್ರಿಮಿವಿಷಹರವು, ಕಫಪಿತ್ತನಾಶಕವು, ಭೇದಿಕಾರಿ, ಇದು ಪಥ್ಯಕ್ಕೆ ಸೇರಿದೆ.

**ಕೊಮ್ಮೆಸೊಪ್ಪು (ಪುನರ್ನವಾ)** – ಉಷ್ಣಲಘು ತೀಕ್ಷ್ಣವೀರ್ಯವುಳ್ಳದ್ದು. ಕಫವಾತಹರವು, ಮೂಲವ್ಯಾಧಿ ಶೋಫಾದಿರೋಗಿಗಳಿಗೆ ಹಿತವು.

**ಕೀರೆಯ ಸೊಪ್ಪು (ತಂಡುಲೀಯ)** – ಶೀತಲಘುರೂಕ್ಷವು, ರಸವಿಪಾಕಗಳೆರಡರಲ್ಲಿಯೂ ಸ್ವಾದುವಾದುದರಿಂದ ವಿಷ ರಕ್ತ ಪಿತ್ತ ಕಾಸಗಳನ್ನು ಕಳೆಯುವುದು. ವಾತವನ್ನು ವೃದ್ಧಿ ಮಾಡುವುದು.

**ಚಿಲಿಕೆಯ ಸೊಪ್ಪು (ಚಿಲ್ಲಿ-ಕ್ಷೇತ್ರವಾಸ್ತು)** – ಉಷ್ಣಲಘು (೨೭ ವಾಸ್ತುಕ ಗುಣವುಳ್ಳದ್ದು).

**ಗರಿಕೆ (ದೂರ್ವಾ)** – ಶೀತವೀರ್ಯವು, ಸ್ವಾದು, ತ್ರಿದೋಷಹರವು, ಭೇದಿಕಾರಿ, ರಸಾಯನವು, ಗ್ರಹಣೀ ಕುಷ್ಠ ಕಾಸ ದೋಷ ಪಾಂಡು ಮುಂತಾದ ರೋಗಹರವು.

**ಮೆಂತಿಯ ಸೊಪ್ಪು (ಮೇಥಿಕಾ)** – ಕಹಿ ಒಗರು, ಉಷ್ಣ ಲಘು ರೂಕ್ಷವು, ಕಫವಾತಹರವು, ಬಂಧಕವು, ಪಿತ್ತಕರ.

**ಪುಲ್ಲಂಪುರುಚಿ (ಚಾಂಗೇರಿ)** – ಲಘು ಉಷ್ಣವೀರ್ಯವು. ಅಗ್ನಿವರ್ಧಕವು, ಹುಳಿ ಒಗರು, ವಾತಕಫಗಳನ್ನು ರಕ್ತಾರ್ಶೋ ಗ್ರಹಣಿಗಳನ್ನು ಕಳೆಯುವುದು. ಅತಿಸಾರಿಗಳಿಗೂ ಹಿತವು. ಪಿತ್ತವನ್ನು ಕೆರಳಿಸುವುದಿಲ್ಲ.

**ಚುಕ್ಕೆಸೊಪ್ಪು (ಚುಕ್ರಿಕ)** – ಗುರು ಉಷ್ಣವು, ಹುಳಿ, ಪಿತ್ತವು, ಭೇದಿಕಾರಿ, ಬೇಗನೆ ಜೀರ್ಣಿಸದು. ಅಪಥ್ಯವು, ಅಗ್ರಾಹ್ಯ.

**ಅಗಸೆ (ಅತಸೀ)** – ಉಷ್ಣರೂಕ್ಷವು, ಒಗರು ಕಹಿ, ಪಿತ್ತಜ್ವರ ಶಾಮಕವು, ಮಲಬಂಧದವರಿಗೂ ರಾತ್ರಿಯಲ್ಲಿ ಕಣ್ಣು ಕಾಣದವರಿಗೂ ಹಿತವು, ಚಾತುರ್ಥಿಕ ಜ್ವರಹರವು. ಇದರ ಹೂವು ಕಾಯಿ ಪಿತ್ತವೃದ್ಧಿ ಮಾಡುವುದು.

**ಕುಂಬಳ (ಕೂಷ್ಮಾಂಡ)** – ಶೀತ ಗುರು, ಸ್ವಾದು, ಅಗ್ನಿನಾಶಕವು. ಕಫಕರ ಅಪಥ್ಯವು. ಮಂದಾಗ್ನಿಗಳಿಗೆ ಜ್ವರವನ್ನೇ ಉಂಟು ಮಾಡುವುದು.

**ಬೂದಿಗುಂಬಳ (ಶುಕ್ಲ ಕೂಷ್ಮಾಂಡ)** – ಉಷ್ಣ ಲಘು, ಮಧುರ ಕ್ಷಾರವು, ತ್ರಿದೋಷಹರವು, ಅಗ್ನಿದೀಪಕವು, ವಸ್ತಿಶುದ್ಧಿ ಮೂತ್ರವೃದ್ಧಿ ಕರವು, ಕ್ಷಯಾಪಸ್ಮಾರಾದಿ ರೋಗಗಳಿಗೆ ಹಿತವು. ಇದರ ರಸಾಯನದಿಂದ ಬಲಪುಷ್ಟಿಗಳುಂಟಾಗುವವು.

**ಸೌತೆ (ವಾಲುಕ-ಕರ್ಕಟ)** – ಉಷ್ಣ ಲಘುರೂಕ್ಷವು, ಸಿಹಿ ಸ್ವಲ್ಪ ಹುಳಿ ಕ್ಷಾರವುಳ್ಳದ್ದು, ಎಳೇದು ದೀಪನವು, ರಕ್ತಪಿತ್ತಹರವು. ಪಕ್ವವಾದರೆ ಸಿಹಿ, ಕಫವಾತವರ್ಧಕವು. ನೆಲಸೌತೆಯು ಶೀತವು, ಪಾಕದಲ್ಲಿ ಆಮ್ಲವಾಗಿ ಕಫವಾತಹರವಾಗುವುದು.

**ಪಡವಲ (ಪಟೋಲ)** – ಶೀತ ಲಘು, ಸ್ವಾದು, ಕ್ರಿಮಿನಾಶಕವು. ಇದರ ಹಣ್ಣು ತ್ರಿದೋಷಹರವು, ಪಥ್ಯವು.

**ಹೀರೆ (ಕೋಶಾತಕಿ)** – ಶೀತ ಮಂದ ರೂಕ್ಷ, ಲಘು, ಸಿಹಿ ಕಹಿ, ಕಫಪಿತ್ತಹರವು. ಮೇಹದಾಯಕ ಯದಾಂಡುಕುಷ್ಠಾದಿ ರೋಗಿಗೆ ಹಿತವು.

**ಗೋವರ್ಧನ-ಗೋರಿಕಾಯಿ (ಭಾರ್ಗಿ)** – ಗುರು ಉಷ್ಣ ರೂಕ್ಷ, ಸಿಹಿ ಒಗರು ಉಪ್ಪು, ವಾತಪಿತ್ತವರ್ಧಕವು, ಅಜೀರ್ಣ ಭೇದಿಕಾರಿ.

**ಹುರಳಿಕಾಯಿ (ಕುಲತ್ಥ ಶಲಾಟು)** – ಇದು, ಚಪ್ಪರದ ಅವರೆಕಾಯಿಯು, ಗೋವರ್ಧನದಂತೆಯೇ, ಆದರೆ ಬಂಧಕವು, ರಾಜಸವು.

**ಬೆಂಡೆ (ಶ್ಲೇಷ್ಮಾತಕಿ)** – ಉಷ್ಣ ಲಘು, ಸಿಹಿ, ಹುಳಿ, ಬಂಧಕವು, ಕಫಹರವು, ರುಚ್ಯವು.

**ಹಾಗಲ (ಕಾರವೇಲ್ಲ)** – ಉಷ್ಣ ಲಘುತೀಕ್ಷ್ಣವು, ಕಹಿ, ದೀಪನವು, ಕಫವಾತಹರವು. ಗೋಟುಹಾಗಲವು ವಿಷಹರವು, ಜ್ವರಶ್ವಾಸಕುಷ್ಠಾದಿ ರೋಗಿಗಳಿಗೆ ಹಿತವು. ಪಥ್ಯವು, ಸಾತ್ವಿಕವು.

**ಗುಳ್ಳ (ಬೃಹತೀ)** – ಹೆಗ್ಗುಳ್ಳ ನೆಲಗುಳ್ಳ ಇವೆರಡು ೪೯ ಬದನೆಯ ಗುಣವುಳ್ಳದ್ದಾದರೂ ದೀಪನವು, ಭೇದಿಕಾರಿ, ಅಗ್ನಿವೃದ್ಧಿಕರವು, ಕ್ರಿಮಿಕುಷ್ಠ ವಾತಘ್ನವು. ಶುಕ್ರವನ್ನು ಕರಗಿಸುವುದು.

**ಹಲಸಿನಕಾಯಿ (ಪನಸ)** – ಶೀತ ಗುರು ರೂಕ್ಷ ಮಂದ ವೀರ್ಯವುಳ್ಳದ್ದು. ಒಗರು ಸಿಹಿ, ಕಫವಾತವರ್ಧಕವು, ಬಂಧಕವು, ಅಗ್ನಿನಾಶಕವು, ಬೀಜವು ಇದೇ ಗುಣವುಳ್ಳದ್ದು. ಮಕ್ಕಳಿಗೆ ಇದು ಜೀರ್ಣಿಸುವುದೇ ಇಲ್ಲ.

**ಬಾಳೆಯ ಕಾಯಿ (ಕದಳೀ)** – ಶೀತ ಗುರು, ಒಗರು ಸಿಹಿ, ಕಫಪಿತ್ತರಕ್ತಹರವು, ಇದರ ದಿಂಡು ಗಡ್ಡೆಯು ಅತ್ಯುಷ್ಣ ರೂಕ್ಷವೀರ್ಯವು, ಅಜೀರ್ಣ ವಾತಹರವು, ರಕ್ತಪಿತ್ತ ರೋಗವನ್ನುಂಟು ಮಾಡುವುದು.

**ಆಲೂಗೆಡ್ಡೆ (ಕ್ಷೀರಕಂದ)** – ಗುರುರೂಕ್ಷ ಮಂದವು, ಸಿಹಿ, ಬಲಕರವು ರಾಜಸವು, ವಾತವರ್ಧಕವು.

**ಗೆಣಸು (ಕಂದಭೇದ)** – ಶಿಶಿನೆಯ ಗುಣವು, ಬಂಧಕವು, ರಕ್ತಪಿತ್ತಹರವು, ಹಸಿವನ್ನದಾಗಿಸುತ್ತದೆ.

**ಚೂರ್ಣಗಡ್ಡೆ (ಅರ್ಯೋಘ್ನ-ಸೂರಣ)** – ಉಷ್ಣರೂಕ್ಷ ಲಘು ತೀಕ್ಷ್ಣವೀರ್ಯವು, ಕಾರ ಒಗರು ಸಿಹಿ, ಕಫವಾತಹರವು, ರಕ್ತಪಿತ್ತಕರವು, ಮೂಲವ್ಯಾಧಿಗೆ ಹಿತವು. ಇದರಲ್ಲಿ ಸ್ಥಲಕಂದವು ವಾತವೃದ್ಧಿ ಮಾಡುವುದು.

**ಶ್ಯಾವೇಗಡ್ಡೆ (ಆಲುಕಕಂದ)** – ಉಷ್ಣಲಘುರೂಕ್ಷವು, ಸಿಹಿಕಾರ ಕಫವಾತಹರವು. ಸಾತ್ವಿಕವು. ಇದು ದೀರ್ಘಕಾಲ ಸೇವನದಿಂದ ಗುಲ್ಮಶೋಫಾದಿ ಜಾಡ್ಯವನ್ನು ಹರಿಸುತ್ತದೆ.

## ಫಲವರ್ಗವು (ಹಣ್ಣುಕಾಯಿಗಳು)

ಹಣ್ಣುಗಳಲ್ಲಿ ಚೆನ್ನಾಗಿ ಪಕ್ವವಾದುದೇ ಉತ್ತಮವು. ಕಾಲಪರಿಪಕ್ವವಲ್ಲದ ಅಕಾಲದ ಹಣ್ಣುಗಳು, ಅತಿಪಕ್ವವಾದುದು, ಹುಳಿತುದು, ಕೊಳೆತುದು, ಕ್ರಿಮಿವ್ಯಾಪ್ತವಾದುದು, ಒಣಗಿ ಬಹಳ ಹಳದಾದುದು, ಇಂತಹವೆಲ್ಲವು ವರ್ಜನೀಯವು.

**ದ್ರಾಕ್ಷಿ(ಮೃದ್ವೀಕಾ)** – ಶೀತಸ್ನಿಗ್ಧ ಗುರು, ಸಿಹಿ ಹುಳಿ, ರಕ್ತಪಿತ್ತ ಜ್ವರದಾಹಕಾಸಕ್ಷಯಾದಿಹರವು, ಬಲವೀರ್ಯವೃದ್ಧಿಕರವು, ಮಲಮೂತ್ರ ವಿಸರ್ಜನಿ, ಕಣ್ಣಿಗೆ ತಂಪು, ಮನಕ್ಕೆ ಇಂಪು, ಬಾಯಿ ಒಣಗಿದ್ದರೂ ಕಹಿಯಾಗಿದ್ದರೂ ಇದರ ಪಾನಕವು ಹರಿಸುತ್ತದೆ. ಇದು ಫಲಗಳಲ್ಲಿ ಶ್ರೇಷ್ಠವು.

**ದಾಳಿಂಬೆ (ದಾಡಿಮ)** – ಶೀತಲಘು ಸ್ನಿಗ್ಧವು. ಸಿಹಿ ಒಗರು ಹುಳಿ, ತ್ರಿದೋಷಹರವು, ಬಂಧನದೀಪನಗುಣವುಳ್ಳದ್ದು. ಆರೋಚಕ ವಾಂತಿ, ಭೇದಿ, ದಾಹಜ್ವರಾದಿಗಳನು ಹರಿಸುತ್ತದೆ. ಹುಳಿಯಾದರೂ ಪಿತ್ತವನು ಕೆರಳಿಸುವುದಿಲ್ಲ. ಅಪಕ್ವವಾಗಿದ್ದರೆ ಉಷ್ಣರೂಕ್ಷವಾಗುವುದರಿಂದ ಪಿತ್ತವಾಯು ಪ್ರಕೋಪ ಹೇತುವಾಗುವುದು. ಅಪಥ್ಯವು, ಗಂಟಲಿಗೆ ಹಿತವಲ್ಲ.

**ನೆಲ್ಲಿ (ಆಮಲಕ-ಧಾತ್ರೀ)** – ಶೀತಲಘುರೂಕ್ಷವು, ಹುಳಿ ಸಿಹಿ ಒಗರು ಕಾರ ಕಹಿ, ತ್ರಿದೋಷಹರವು, ಭೇದಿಕಾರಿ, ಕಣ್ಣಿಗೆ ಹಿತವು, ಹಳೆಯ ನೆಲ್ಲಿಯು ವಿಷಜ್ವರ ದಾಹ ಕ್ಷಯಾಪಸ್ಮಾರಾದಿ ರೋಗಹರವು. ಇವೆಲ್ಲವು ಬೆಟ್ಟನೆಲ್ಲಿಯ ಗುಣವು. ಕಿರುನೆಲ್ಲಿಯು ಗಂಟಲಿಗೆ ಕೆಟ್ಟದ್ದು, ಕಾಸಾದಿ ರೋಗಗಳುಂಟಾಗುವುದು.

**ಖರ್ಜೂರ (ಖರ್ಜೂರಿಕಾಫಲ)** – ಶೀತ ಗುರು ರೂಕ್ಷವು, ಸಿಹಿ ಒಗರು, ರಕ್ತಪಿತ್ತ ದಾಹಹರವು, ಬಲಕರವು, ಸಂತರ್ಪಣವು, ಪಿಂಡಖರ್ಜೂರವು ಉಷ್ಣವು ಸ್ನಿಗ್ಧವು, ವಾತಪಿತ್ತಮದ ಮೂರ್ಛಾದಿಹರವು.

**ಎಲಚಿ (ಬದರಿ)** – ಉಷ್ಣ ಲಘು ರೂಕ್ಷವು, ಹುಳಿ ಒಗರು ಸಿಹಿ, ಎಳೇದು ಗುರು, ಕಫಪಿತ್ತವರ್ಧಕವು, ರಾಯಬೋರೆ - ಸೌವೀರಬದರ ೨ ಸ್ನಿಗ್ಧ ಶೀತ ಗುರು, ವಾತಪಿತ್ತಹರವು, ವೀರ್ಯವರ್ಧಕವು. ಹಳೆಯ ಎಲಚಿ ಹಣ್ಣು ದೀಪನವು, ಶ್ರಮದಾಹ ಪಿತ್ತಶಾಮಕವು.

**ತೆಂಗು (ನಾರಿಕೇಲ)** – ಶೀತಸ್ನಿಗ್ಧಗುರು, ಸ್ವಾದು, ರಕ್ತ ಪಿತ್ತ ವಾತ ವ್ರಣಘ್ನವು, ದುರ್ಜರವು, ಬಲಪುಷ್ಟಿಕರವು, ವಸ್ತಿ ಶೋಧಕವು, ಇದರ ಹಾಲು ಚರ್ಮಕ್ಕೂ ಕೂದಲಿಗೂ ಕಾಂತಿಯನ್ನುಂಟು ಮಾಡುವುದು, ಇದರ ನೀರು ವಮನ ದಾಹಶ್ರಮಹರವು, ದೀಪನವು, ಮೂತ್ರವರ್ಧಕವು, ಎಳೆಕಾಯಿ ಲಘುವಾದರೂ ಸಾವಕಾಶವಾಗಿ ಜೀರ್ಣಿಸುವುದು. ಇದರ ಎಣ್ಣೆಯು ಪಿತ್ತ ವರ್ಧಕವಾದರೂ ಗಾಯಗಳನ್ನು ಗುಣಮಾಡುವುದು.

**ಹಲಸಿನ ಹಣ್ಣು (ಪಸಸಫಲಂ)** – ಶೀತ ಗುರುಸ್ನಿಗ್ಧವು, ಸ್ವಾದು, ಪಿತ್ತವಾಯುಹರವು, ಶುಕ್ರಬಲಪ್ರದವು, ದುರ್ಜರವು, ಅಪಕ್ವವು ಒಗರು ಸಿಹಿ, ಬಂಧಕವು, ವಾತವರ್ಧಕವು, ಇದರ ಬೀಜವು ಹಣ್ಣಿನ ದೋಷಹರವೆನ್ನುವರು. ಇದು ತೀಕ್ಷ್ಣಾಗ್ನಿಗೆ ಹಿತವು. ಮಂದಾಗ್ನಿಗಳು ಇದನ್ನು ಸೇವಿಸಲೇಕೂಡದು.

**ಮಾವಿನ ಹಣ್ಣು (ಚೂತಫಲಂ)** – ಉಷ್ಣ ಸ್ನಿಗ್ಧ ಗುರು, ಸಿಹಿ ಹುಳಿ, ಮಾಂಸಾಕ್ಕ್ ಬಲಪ್ರದವು, ಸರ್ವೇಂದ್ರಿಯತರ್ಪಕವು, ವಾತಹರವು, ಅಪಕ್ವವಾದರೆ ರೂಕ್ಷ ಶೀತವು. ಸರ್ವದೋಷಪ್ರಕೋಪವು, ವಿದಾಹಿ ಎಲೆಗು ಗಂಟಲಿಗು ಅಹಿತವು. ಜ್ವರಾತಿಸಾರಾದಿಗಳನ್ನುಂಟು ಮಾಡುವುದು.

**ಬಾಳೆಯ ಹಣ್ಣು (ಕದಲೀಫಲಂ)** – ಶೀತಗುರು ಸ್ನಿಗ್ಧವು. ಸಿಹಿ ಒಗರು, ಕಫವೃದ್ಧಿ ಮಲಬಂಧಕಾರಿ, ಪಿತ್ತವಾತಹರವು. ಸದ್ಯ ಸಂತರ್ಪಣವು. ವೀರ್ಯಬಲಪ್ರದವು, ಕುತ್ತೃಡಾಹಕ್ಷಯವ್ರಣಗಳನ್ನು ಮಾಣಿಸುವುದು. ಇದು ಉತ್ತಮವಾದ ರಸಬಾಳೆಯ ಲಕ್ಷಣವು. ಉಳಿದ ಬಾಳೆಗಳಲ್ಲಿ ಇಷ್ಟು ಗುಣವಿಲ್ಲ. ಅದೂ ಅಪಕ್ವವಾದರೆ ಸರ್ವರೋಗಗಳನ್ನು ಉಂಟು ಮಾಡುವುದು. ಮಕ್ಕಳಿಗೆ ಇದು ಜೀರ್ಣಿಸುವುದೇ ಅಲ್ಲವು. ವ್ಯಾಯಾಮಶರರಿಗೂ ದೀಪ್ತಾಗ್ನಿಗಳಿಗೂ ಬಾಧಕವಾದುದು. ಮಂದಾಗ್ನಿ ಗಳಿದನ್ನು ಮುಟ್ಟಬಾರದು.

**ನೇರಳೆ (ರಾಜಜಂಬೂ)** – ಶೀತರೂಕ್ಷ ಗುರು, ಒಗರು ಸಿಹಿ ಹುಳಿ, ರಕ್ತಾದಿ ಸ್ರೋತೋಮಾರ್ಗ ಬಂಧಕವು, ಕಫಪಿತ್ತ ವ್ರಣಹಾರಿ. ನಾಯಿ ನೇರಳೆಹಣ್ಣು (ಸಣ್ಣ) ಕಫಪಿತ್ತಕಾರಿ, ವಾತಹರವು, ಎರಡೂ ಅಪಥ್ಯವೇ.

**ಕರಿಬೂಜ (ಖರ್ಬೂಜ)** – ಶೀತ ಸ್ನಿಗ್ಧ ಗುರು, ಸಿಹಿ ಉಪ್ಪು, ವಾತ ಪಿತ್ತಹರ. ಮಲಮೂತ್ರ ವಿಸರ್ಜನಿ, ಕೋಷ್ಠ ಶುದ್ಧಿಕರ, ಬಲವೀರ್ಯಪ್ರದವು.

**ಸೇಬು (ಸೇವ್ಯಂ)** – ಶೀತ ಸ್ನಿಗ್ಧ ಗುರು, ಸ್ವಾದು, ರಸವಿಪಾಕಗಳೆರಡರಲ್ಲಿಯೂ ಮಧುರವಾದುದರಿಂದ ಕಫಕಾರಿ, ವಾತಪಿತ್ತಶಾಮಕವು, ಮಿತವಾದರೆ ಪುಷ್ಟಿ

ಬಲವೀರ್ಯಪ್ರದವು. ಇದರ ರಸಾಯನವು ಜ್ವರತೃಡಾಹತಾಪಹರವು ಪ್ರವೃತ್ತಿಕಾರಿಯು.

**ಅಂಜೂರ (ಅಂಜೀರ)** – ಗುರುಸ್ನಿಗ್ಧ ಶೀತವು. ಸಿಹಿ ಒಗರು, ಇದು ಕೂಡ ಸೇಬಿನಂತೆಯೇ ಆದರೂ ಕಫವಾತಗಳನ್ನು ಹೆಚ್ಚಿಸಿ ಅಗ್ನಿಯನ್ನು ಆರಿಸುವುದ. ಆದರೆ ಕ್ಷುನ್ನಿವಾರಕವು.

**ಅತ್ತಿಯ ಹಣ್ಣು (ಔದುಂಬರ)** – ಇದು ಅಂಜೂರದಂತೆಯಾದರೂ ಪಿತ್ತ ದಾಹಕಾಮಕವು, ಮೂತ್ರರೋಧಕವು ಆಗಿರುವುದು. ಮಂದವು, ಇದು ಕೃಮಿಮಯವಾದುದರಿಂದ ಅಪಥ್ಯವು.

**ಬೇಲ (ಕಪಿತ್ಥ)** – ಗುರುಶೀತರೂಕ್ಷವು, ಒಗರು ಹುಳಿ ಸಿಹಿ ಇದು ಕಾಲಶಕ್ವವಾದರೆ ವಾತಪಿತ್ತವನ್ನು ಪರಿಹರಿಸುತ್ತದೆ. ದಾಹ ತೃಷ್ಣಾಜ್ವರತಾ ಪಶ್ರಮಹರವು, ಕೃಮಿ ವಿಷಗಳನ್ನು ಕಳೆಯುವುದು. ವಾಂತಿ ಬಿಕ್ಕುಳಿಕೆಗಳನ್ನು ಮಣಿಸುವುದು, ಬಂಧಕವು, ಅಪಕ್ವವಾಗಿದ್ದರೆ ಕಂಠಕ್ಕೆ ಅಹಿತವು, ವಾತವೃದ್ಧಿಕರವು, ಅಪಥ್ಯವು.

**ಸೀತಾಫಲ** – ಶೀತಗುರು, ಸಿಹಿ, ಪಿತ್ತಹರ, ರುಚಿ ಬಲವಾತಕರವು.

**ಮಾದಲದ ಹಣ್ಣು (ಮಾತುಲುಂಗ)** – ಉಷ್ಣ ಲಘು ರೂಕ್ಷವು, ಹುಳಿ ಒಗರು ಕಹಿ ಸಿಹಿ, ಅಗ್ನಿದೀಪನವು, ಅರುಚಿ ತೃಡ್ದಾಹಜ್ವರ ಶ್ವಾಸಕಾಸಾದಿಗಳನ್ನು ಹರಿಸುವುದು, ಇದರ ಕುಸುಮೆಯು ಗುಲ್ಮಾರ್ಶೋರೋಗಿಗೆ ಹಿತವು, ವಾಕರಿಕೆ ವಾಂತಿಗಳನ್ನು ನಿಲ್ಲಿಸುವುದು, ಅತಿಸಾರಹರವು, ಬುದ್ಧಿವರ್ಧಕವು. ಇದು ಎಲ್ಲರಿಗೂ ಪಥ್ಯವು.

**ಹೇರೀಳೆ (ನಾರಂಗ)** – ಉಷ್ಣರೂಕ್ಷ ಗುರು, ಹುಳಿ ಕಹಿ ಒಗರು ಸಿಹಿ, ಮರ ರವು, ಕಫವಾತಹರವು, ಇರುಳನ್ನು ಕೂಡ ಕರಗಿಸಿ ಹುಣ್ಣು ಮಾಡುವಷ್ಟು ತೀಕ್ಷ್ಣವು. ಇದು ನಿತ್ಯೋಪಯೋಗಾರ್ಹವಲ್ಲವು.

**ನಿಂಬೆ (ಜಂಬೀರ)** – ಅಗ್ನಿಮಾಂದ್ಯ ಶ್ವಾಸಶೂಲಗುಲ್ಮಾದಿಗಳಿಗೆ ಹಿತವು. ಇದನ್ನು ನಿತ್ಯವು ಊಟಕ್ಕೆ ಉಪಯೋಗಿಸಬಹುದು.

ಗಜನಿಂಬೆ, ರಾಜನಿಂಬೆ, ಸಿಹಿನಿಂಬೆ ಇವೆಲ್ಲವೂ ಹುಳಿ ನಿಂಬೆಯಂತೆ ಶೀತವೀರ್ಯವುಳ್ಳವು, ರೋಚನ ಪಾಚನ ದೀಪನ ಗುಣದಿಂದ ವಾತಹರವಾಗಿವೆ. ರಾಜನಿಂಬೆಯು ತ್ರಿದೋಷಹರವೆನ್ನುವರು.

**ಕಮರಿಕೆ (ಕರಮರ)** – ಉಷ್ಣ ಗುರುರೂಕ್ಷವು, ಹುಳಿ, ರಕ್ತ ಪಿತ್ತ ಕಫಪ್ರದವು, ಸುಪಕ್ವವಾಗಿದ್ದರೆ ಲಘು-ವಾತಪಿತ್ತಹರವು.

**ಅಂಬಟೆ (ಆಮ್ರಾತಕ)** – ಉಷ್ಣ ಗುರು ಸರವು, ಹುಳಿ ಒಗರು, ವಾತಹರವು ಪಕ್ವವಾದರೆ ಸ್ವಾದು ಶೀತವು, ರಕ್ತ ಪಿತ್ತ ಹರವು.

**ಹುಣಸೆ (ಚಿಂಚಾ)** – ಉಷ್ಣ ಲಘು ರೂಕ್ಷ ಸರವು, ಹುಳಿ ಸಿಹಿ ದೀಪನವು, ರುಚ್ಯವು, ಕಫವಾತಹರವು, ಪಿತ್ತವರ್ಧಕವು.

**ಬಚ್ಚಲ ಹುಣಸೆ (ಆಮ್ಲವೇತಸ)** – ಅತ್ಯುಷ್ಣ ಲಘು. ಶೂಲಗುಲಹರ, ಭೇದಿಕಾರಿ, ಅಪಥ್ಯವು.

**ತಾಳೆ (ತಾಲಫಲಂ)** – ಶೀತಗುರು, ಸ್ವಾದು, ಪಿತ್ತಹರ, ಮೂತ್ರ ವೃದ್ಧಿಕಾರಿ, ರಾಜಸವು.

**ಚಳ್ಳೆ (ಶ್ಲೇಷ್ಮಾತಕ)** – ಶೀತಗುರು, ಸ್ನಿಗ್ಧ, ಸ್ವಾದು, ಅತಿಕಫಕಾರಿ. ತೊಂಡೆಹಣ್ಣು ಇದೇ ಗುಣವಾದರೂ ಅಷ್ಟು ಕಫಕರವಲ್ಲ. ಪಿತ್ತದ ಉರಿಯನ್ನು ಮಾಣಿಸುವುದು. ಹೊಟ್ಟೆಯುಬ್ಬರ ಮಲಬಂಧ ಮಾಡುವುದು.

**ಬಾದಾಮಿ (ವಾತಾಮ)** – ಉಷ್ಣಸ್ನಿಗ್ಧ ಗುರು, ಸ್ವಾದು, ಶುಕ್ರವೃದ್ಧಿ, ಬಲಪುಷ್ಟಿ ಕರವು, ವಾತ ಪಿತ್ತ ವ್ರಣ ಹರವು. ಕಣ್ಣಿಗೆ ಹಿತವು.

**ಅಕ್ರೋಟು (ಅಕ್ಷೋಟ)** – ಉಷ್ಣ ಸ್ನಿಗ್ಧ ಗುರು, ಮಧುರ, ವಾತಹರ, ಬಲಕರವು, ಬೇಗನೆ ವ್ಯಾಪಿಸುವುದು. ಹೆಚ್ಚಿದರೆ ಪಿತ್ತವೃದ್ಧಿಯಾಗುವುದು.

**ಅಡಕೆ (ಪೂಗ)** – ಶೀತರೂಕ್ಷಗುರು, ಒಗರು, ಕಫಪಿತ್ತಹರವು, ಅಪಕ್ವವಾದರೆ ಅಗ್ನಿ ದೃಷ್ಟಿಗಳನ್ನು ಕಳೆಯುವುದು, ಸೊಕ್ಕು ಮೂರ್ಛೆ ಹೃದ್ರೋಗಗಳನ್ನುಂಟು ಮಾಡುವುದು. ವೀಳ್ಯೇದೆಲೆವಿಲ್ಲದೆ ಇದೊಂದನ್ನೇ ತಿಂದರೆ ಕ್ಷಯ ಕಾಮಾಲಾದಿವ್ಯಾಧಿ ವೃದ್ಧಿಯಾಗುವುದು.

**ವೀಳ್ಯದೆಲೆ (ತಾಂಬೂಲ-ನಾಗವಲ್ಲೀದಳ)** – ಉಷ್ಣ ತೀಕ್ಷ್ಣ ಲಘು ರೂಕ್ಷವು, ಕಾರ ಕಹಿ ಒಗರು, ಕಫವಾತಹರ ಕ್ರಿಮಿವಿಷಹರವು, ಅನ್ನಜೀರ್ಣಕಾರಿ, ಮುಖ ಕಂಠ ಶುದ್ಧಿಕರವು, ಹೆಚ್ಚಿದರೆ ಪಿತ್ತವನ್ನು ಕೆರಳಿಸಿ ವಮನ ವಿರೇಚನಗಳನ್ನು ಮಾದಿಸಿ ಬೆವರುಬರಿಸಿ, ಶುಕ್ರವನ್ನು ಕರಗಿಸಿ ಹೊರಗೆ ಹೊರಡಿಸುವುದು. ಆದರಿಂದ ಆಹಾರವಿಲ್ಲದಾಗ ಇದನ್ನು ಸೇವಿಸಕೂಡದು. ಗುರುಭೋಜನ ಮಾಡಿ ವ್ಯಾಯಾಮವಿಲ್ಲದೆ ಇರತಕ್ಕವರಿಗೆ ಅನ್ನಪಚನಾರ್ಥವಾಗಿಯೇ ಆರ್ಯರಲ್ಲಿ ಈ ತಾಂಬೂಲಚರ್ವಣ ಅಭ್ಯಾಸವೇರ್ಪಟ್ಟಿದೆ. ಹೀಗೆಯೇ ಅನಾರ್ಯರಲ್ಲಿ ಧೂಮಪತ್ರಸೇವನೆ ಧೂಮಪಾನ ಮದ್ಯಪಾನಾದಿಗಳೂ ಅತ್ಯಶನ ಪರಿಣಾಮಕ್ಕಾಗಿಯೇ ಬಳಕೆಗೆ ಬಂದಿವೆಯೆನ್ನುವರು.

**ಉಪ್ಪು (ಲವಣ)** – ಇದರ ಗುಣದೋಷಗಳು ಹಿಂದೆ ಹೇಳಲ್ಪಟ್ಟಿವೆ. ಎಲ್ಲಾ ಲವಣಗಳು ಕಣ್ಣು ಕೂದಲು ಶುಕ್ರಗಳನ್ನು ಕಳೆಯುವವು. ಸೈಂಧವ ಲವಣವೊಂದು ಮಿತವಾಗಿದ್ದರೆ ಬಾಧಕವಾಗದು.

**ಕ್ಷಾರಗಳು** – ಹಪ್ಪಳಕಾರ (ಸೋಡ) ನವಾಸಾಗರ ಬೆಳಿಗಾರವು, ಯವಕ್ಷಾರ ಸ್ವರ್ಜಿಕಾಕ್ಷಾರಾದಿಗಳು, ಅತ್ಯುಷ್ಣ ತೀಕ್ಷ್ಣ ಲಘುಗಳು, ಓಜಶ್ಶುಕ್ರ ದೃಷ್ಟಿಕೇಶರಕ್ತಗಳನ್ನು ಕೆಡಿಸುವವು. ಅಗ್ನಿಸಮಾನಗಳು. ಕಠಿಣ ಪದಾರ್ಥಗಳನ್ನು ಕರಗಿಸಲು ಅತ್ಯಲ್ಪವಾಗಿ ಉಪಯೋಗಿಸಲ್ಪಡತಕ್ಕುವು.

**ಹಿಂಗು** – ಉಷ್ಣತೀಕ್ಷ್ಣಲಘು ರೂಕ್ಷವು, ಕಹಿ ಖಾರ, ಕಫವಾತ ಶೂಲಾಜೀರ್ಣ ಕ್ರಿಮಿ ಮಲಬಂದಗಳನ್ನು ಕಳೆಯುವುದು, ಅಗ್ನಿದೀಪಕವು, ಆಹಾರ ಪಾಚಕವು, ಹೆಚ್ಚಿದರೆ ಪಿತ್ತ ಪ್ರಕೋಪ ಮಾಡಿ ತಾಪ ಶಿರೋಭ್ರಮಣಾದಿ ರೋಗವನ್ನುಂಟು ಮಾದುವುದು.

**ಅರಿಶಿನ (ಹರಿದ್ರಾ)** – ಉಷ್ಣ ಲಘು, ಒಗರು ಕಹಿ ಖಾರ, ಕಫವಾತ ಕ್ರಿಮಿಕುಷ್ಠ ಪಾಂಡುಶೋಷಾದಿ ಚರ್ಮರೋಗಹರವು, ಕಂಠಕ್ಕೆ ಹಿತವು.

**ಜೀರಿಗೆ (ಜೀರಕ)** – ಉಷ್ಣರೂಕ್ಷ ತೀಕ್ಷ್ಣಲಘು, ಖಾರ ಕಹಿ, ವಿಪಾಕದಲ್ಲಿಯೂ ಖಾರವೇ, ಸುಗಂಧ, ರುಚಿಕರ, ಅಗ್ನಿವರ್ಧಕ, ಕಫವಾತಹರ, ಪ್ರವೃತ್ತಿಕಾರಿ.

**ಮೆಣಸು (ಮರೀಚ)** – ಉಷ್ಣ ತೀಕ್ಷ್ಣ ರೂಕ್ಷ ಲಘು, ರಸಪಾಕಗಳೆರಡರಲ್ಲಿಯೂ ಖಾರವ, ರೋಚನದೀಪನ ಪಿತ್ತ ಕೋಪನಗುಣವುಳ್ಳದ್ದು. ಕಫಹರವು, ಹಸಿಯ ಮೆಣಸು ಗುರು, ಕಫಹರವಲ್ಲ, ಬಿಳಿಯ ಮೆಣಸು ಉಷ್ಣವಲ್ಲ, ಹಸಿಯ ಮೆಣಸು ಗುರು, ಕಫಹರವಲ್ಲ, ಬಿಳಿಯ ಮೆಣಸು ಉಷ್ಣವಲ್ಲ, ದೃಷ್ಟಿಗೂ ಅಷ್ಟು ದೋಷಕಾರಿಯಲ್ಲ. ಸಾತ್ವಿಕವು. ಮೆಣಸಿನಕಾಯಿಯು ಅತ್ಯುಷ್ಣತೀಕ್ಷ್ಣರೂಕ್ಷವು, ಎಲ್ಲಾ ರಕ್ತಪಿತ್ತ ರೋಗವನ್ನುಂಟು ಮಾಡುವುದು. ದೃಷ್ಟಿ ಶುಕ್ರಗಳನ್ನು ನಾಶ ಮಾಡುತ್ತದೆ. ಅತಿವಿದಾಹಿ, ಇದಕ್ಕೆ ಸಂಸ್ಕೃತದಲ್ಲಿ ಹೆಸರೇ ಇಲ್ಲ.

**ಶುಂಠಿ (ನಾಗರ-ಶೃಂಗವೇರ)** – ಉಷ್ಣ ಸ್ನಿಗ್ಧ ಸರ ಲಘು, ಕಾರ, ವಿಪಾಕದಲ್ಲಿ ಸಿಹಿ, ಆದರಿಂದ ದೃಷ್ಟಿ ಶುಕ್ರಗಳಿಗೆ ಬಾಧಕವಲ್ಲವು. ಅಗ್ನಿದೀಪಕವು, ಕಫವಾತಹರವು, ಸ್ರೋತೋಬಂಧವನ್ನು ಹರಿಸುವುದು. ಹೃದ್ಯವು; ಹಸಿರು ಶುಂಠಿಯು ಇದೇ ಗುಣವಾದರೂ ರುಚ್ಯವು, ವೀರ್ಯಪ್ರದವು, ಕಂಠಸ್ವರಕ್ಕೆ ಹಿತವು, ಮಲಬಂಧಶೂಲಾಗ್ನಿಮಾಂದ್ಯಾದಿಗಳನ್ನು ಪರಿಹರಿಸುವುದು, ನೆಗಡಿ ಶ್ವಾಸಕಾಸಾದಿ ರೋಗಿಗೆ ಹಿತವು.

**ಹಿಪ್ಪಲಿ (ಪಿಪ್ಪಲಿ)** – ಉಷ್ಣ ಸ್ನಿಗ್ಧ ಲಘು, ಹಸಿಯ ಹಿಪ್ಪಲಿ ಗುರು, ಕಾರ, ವಿಪಾಕದಲ್ಲಿ ಸಿಹಿ, ಕಫವಾತಹರವು, ದೀಪನವು, ಒಣಗಿದುದು ಪಿತ್ತ ಕೋಪನವು, ಉಪ್ಪಿನಕಾಯಲ್ಲಿ ಸೇರಿಸುವುದುಂಟು. ಇದನ್ನು ನಿತ್ಯಾಭ್ಯಾಸಕ್ಕೆ ತರಕೂಡದು.

**ಕೊತ್ತುಂಬರಿ (ಕುಸ್ತುಂಬುರು)** – ಉಷ್ಣ ರೂಕ್ಷ ಲಘು, ಒಗರು ಕಹಿ, ರೋಚನದೀಪನವು, ಕಫಪಿತ್ತಶಮನವು, ವಿಪಾಕದಲ್ಲಿ ಮಧುರವು, ಕಣ್ಣಿಗೆ ಹಿತವು.

**ಓಮು (ಅಜಮೋದಾ)** – ಉಷ್ಣತೀಕ್ಷ್ಣ ರೂಕ್ಷ ಲಘು, ಕಾರ ಕಹಿ ಒಗರು, ಪಿತ್ತವರ್ಧಕ, ದೀಪನ ಪಾಚನವು, ಕಫವಾತಹರವು.

**ಮೆಂತಿಯ (ಮೇಥಿಕಾ)** – ಶೀತ ಲಘುವಮಂದ, ಕಹಿ ಒಲಗರು, ವಾತಪಿತ್ತಹರವು, ಬಂಧಕವು.

**ಲವಂಗ (ದೇವಕುಸುಮಂ)** – ಉಷ್ಣ ತೀಕ್ಷ್ಣ ರೂಕ್ಷ ಲಘು, ಕಾರ, ಕಫವಾತಹರ, ಪಾಚನವು. ಲವಂಗಚಕ್ಕೆಯು ಉಷ್ಣ ಲಘು, ಒಗರು ಕಾರ, ರೋಚನದೀಪನವು.

**ಏಲಕ್ಕಿ (ಎಲಾ)** – ಸ್ನಿಗ್ಧ ಶೀತ, ಕಾರ ಸಿಹಿ, ಜಾಕಾಯಿ ಜಾಪತ್ರೆ (ಜಾತಿ) ಉಷ್ಣಲಘು, ಕಹಿ ಕಾರ, ಇವೆಲ್ಲಾ ಸುಗಂಧದ್ರವ್ಯವು, ಮಿತವಾಗಿದ್ದರೆ ಮೇಲು. ಕಫಹರ, ಅಗ್ನಿದೀಪನವು, ಹೆಚ್ಚಿದರೆ ವಿದಾಹ ಮಲಬಂಧ ಶಿರೋರೋಗಗಳು ಉಂಟಾಗುವವು.

**ಕುಂಕುಮಕೇಸರ (ಕಾಶ್ಮೀರ)** – ಉಷ್ಣ ತೀಕ್ಷ್ಣ ಲಘು, ಕಹಿಕಾರ ಒಗರು, ಕಫವಾತಹರವು, ಪಿತ್ತವರ್ಧಕವು, ದೀಪನವು, ವಿಷಕ್ರಿಮಿಶೀತರೋಗ ನಾಶಕವು. ಹೆಚ್ಚಿದರೆ ರಕ್ತಾತಿಸಾರಾದಿ ತೀಕ್ಷ್ಣ ರೋಗಾಸ್ಪದವಾಗುವುದು.

**ಪಚ್ಚಕರ್ಪೂರ (ಘನಸಾರ)** – ಶೀತಲಘು, ಕಾರ, ಪಿತ್ತದಾಹ ನೇತ್ರ ರೋಗಹರ. ಸೌಮ್ಯವು. ಹೆಚ್ಚಿದರೆ ನೆಗಡಿ ಹಿಡಿಯುವುದು.

**ಕಲ್ಲುಸಕ್ಕರೆ (ಖಂಡಶರ್ಕರಾ)** – ಶೀತಸ್ನಿಗ್ಧ ಲಘು, ಸ್ವಾದು, ಕಫಪ್ರದ, ವಾತಪಿತ್ತಹರವು. ಮಿತವಾಗಿದ್ದರೆ ಸಾತ್ವಿಕವು.

ಬೂರಾಸಕ್ಕರೆಗಳಲ್ಲಿ ಎಷ್ಟೆಷ್ಟು ಶುಭ್ರವಾಗಿದ್ದರೆ ಅಷ್ಟು ಶೈತ್ಯವು, ಲಾಘವವು, ಎಷ್ಟೆಷ್ಟು ಕೆಂಪು ಕಪ್ಪು ಇದ್ದರೆ ಅಷ್ಟಷ್ಟು ಉಷ್ಣವು, ಗುರುವು ಆಗುವುದು.

**ಬೆಲ್ಲ (ಗುಡ)** – ಉಷ್ಣ ತೀಕ್ಷ್ಣ ಗುರು, ಸಿಹಿ ಹುಳಿ ಕಾರ, ಮೂತ್ರ ಮೇಹ ಕಫ ಪಿತ್ತ ರೋಗಿಗೆ ಅಹಿತವು, ವಿದಾಹಿ, ರಾಜಸವು.

**ಕಾಕಂಬಿ (ಘಾಣಿತಂ)** – ಗುರೂಷ್ಣವು, ಕಫವರ್ಧಕ, ಅಪಥ್ಯವು ತಾಮಸವು, ಅಭ್ಯಾಸಕ್ಕೆ ಯೋಗ್ಯವಲ್ಲವು.

**ಜೇನುತುಪ್ಪ (ಮಧು)** – ಶೀತರೂಕ್ಷ ಲಘು, ತ್ರಿದೋಷಹರವು, ಸ್ಥೂಲಾಂಗರಿಗೆ ಹಿತವು, ಕ್ರಿಮಿವ್ರಣಹರವು. ಬಿಕ್ಕಳಿಕೆ ಕೆಮ್ಮು ಉಬ್ಬಸಗಳನ್ನು ಮಾಣಿಸುವುದು. ಪ್ರವೃತ್ತಿಕಾರಿ.

**ತುಪ್ಪ (ಘೃತಂ)** – ಶೀತ ಸ್ನಿಗ್ಧ ಗುರು, ಸ್ವಾದು, ವಾತಪಿತ್ತ ವಿಷಶೋಷ ಉನ್ಮಾದಾದಿಗಳನ್ನು ಕಳೆಯುವುದು. ಕಫ ಶುಕ್ರ ಓಜಸ್ಸು ವರ್ಚಸ್ಸು ಮೇದಸ್ಸು ಆಯುಸ್ಸು ಸ್ಮೃತಿ ಬುದ್ಧಿ ಬಲ ಜೀರ್ಣಶಕ್ತಿ ಇವುಗಳನ್ನುಂಟು ಮಾಡುವುದು. ಹಸುವಿನ ತುಪ್ಪ ಆಡಿನತುಪ್ಪ ಇವೆರಡು ನೇತ್ರಕ್ಕೆ ಹಿತವು, ಲಘುವು. ಕುರಿಯತುಪ್ಪವು ನಿಕೃಷ್ಟವು. ಈ ತುಪ್ಪಗಳಿಂದಾಗುವ ಅಜೀರ್ಣಾದಿ ದೋಷವು ಮಜ್ಜಿಗೆಯಿಂದಲೂ ಬಿಸುನೀರಿನಿಂದಲೂ ಪರಿಹರವು.

**ಎಣ್ಣೆ (ತೈಲಂ)** – ಉಷ್ಣ ಸ್ನಿಗ್ಧ ಲಘು, ಸಿಹಿ ಕಹಿ ಒಗರು, ವಾತಹರವು, ಪಿತ್ತವರ್ಧಕವು, ಎಣ್ಣೆಗಳಲ್ಲಿ ಆಯಾಧಾನ್ಯ ಗುಣವೇ ಅಧಿಕವಾಗಿರುವುದು. ಎಲ್ಲಾ ಎಣ್ಣೆಗಳಲ್ಲಿಯೂ ಅಚ್ಚೆಳ್ಳೆಣ್ಣೆ ಶ್ರೇಷ್ಠವು, ಕುಸುಮೆ ಸಾಸುವೆ ಎಣ್ಣೆ ನಿಕೃಷ್ಟವು. ಹರಳೆಣ್ಣೆಯು ಉಷ್ಣ ಗುರು. ಒಗರು ಕಹಿ ಪಿಚ್ಛಿಲ (ಅಂಟು) ಆದರೂ ಶೂಲ ಗುಲ್ಮ ವಾತ ವಿಷಮಜ್ವರ ಕುಷ್ಠ ಶೋಥ ಉದರವ್ಯಾಧಿಗಳನ್ನು ಕಳೆಯುತ್ತದೆ. ವಿರೇಚಕವು, ಮಕ್ಕಳು ಮುದುಕರಿಗೆ ಅಹಿತವು. ಬೇಗನೆ ಬೇಯದ ಬೇಳೆಕಾಳು ಕಾಯಿ ಮುಂತಾದುವನ್ನು ಮೆತ್ತಗೆ ಮಾಡುವುದು, ಅಭ್ಯಂಗಾದಿ ಲೇಪಕ್ಕೆ ಪ್ರಶಸ್ತವು.

**ಬೆಣ್ಣೆ (ನವನೀತಂ)** – ಸ್ನಿಗ್ಧ ಶೀತ ಗುರು, ಸ್ವಾದು ಹುಳಿ ಒಗರು, ವಾತಪಿತ್ತ ರಕ್ತಕ್ಷಯ ಕಾಸ ಮೂಲರೋಗಹರವು. ಅಗ್ನಿ ಬಲ ವೀರ್ಯವರ್ಣ ವೃದ್ಧಿಕರವು, ಇದು ಹೊಸದೇ ಉತ್ತಮವು.

**ಮೊಸರು (ದಧಿ)** – ಉಷ್ಣ ಸ್ನಿಗ್ಧ ಮಂದಗುರು, ಸಿಹಿ ಹುಳಿ ಒಗರು, ಅರೋಚಕ ವಾತಹರವು, ಕಫ ಪಿತ್ತ ಮೇದಸ್ಸುಗಳನ್ನು, ಅಗ್ನಿ ಬಲ ವೀರ್ಯ ಶೋಫಾದಿಗಳನ್ನು ಉಂಟು ಮಾಡುವುದು. ಬಿಸಿಮಾಡಿದ ಮೊಸರು ಬಂಧಕವು. ರಾತ್ರಿಕಾಲದಲ್ಲಿ ಮೊಸರನ್ನ ಬೇಕಾದರೆ ಸಕ್ಕರೆ, ತುಪ್ಪ, ಹೆಸರುತೊವ್ವೆ, ನೆಲ್ಲಿ, ಜೇನುತುಪ್ಪ, ನೀರು ಇವುಗಳಲ್ಲಿ ಯಾವುದೊಂದನ್ನಾದರೂ ಬೆರೆಸಿಕೊಂಡೇ ಉಣ್ಣಬೇಕು. ಇಲ್ಲದಿದ್ದರೆ ಜ್ವರ ಪಾಂಡು ಶೋಫ ಕುಷ್ಠಾದಿರೋಗ ಉಂಟಾಗುವುದು. ಮೊಸರುಗಳಲ್ಲಿ ಹಸುವಿನದೇ ಶ್ರೇಷ್ಠವು. ಆಡಿನದು ಪಥ್ಯವೇ. ಎಮ್ಮೆಯದು ಅಪಥ್ಯವು, ವಸಂತ ಗ್ರೀಷ್ಮ ಶರದೃತುಗಳಲ್ಲಿ ಮೊಸರನ್ನು ಉಪಯೋಗಿಸದೆ ಇರುವುದುತ್ತಮವು.

**ಮಜ್ಜಿಗೆ (ತಕ್ರಂ, ಉದಶ್ವಿತ, ಮಥಿತಂ, ಘೋಲಂ)** – ಮೊಸರಿಗೆ ಪಾದಭಾಗದಷ್ಟೇ ನೀರುಬೆರೆಸಿ ಕಡೆದ ಮಜ್ಜಿಗೆ ತಕ್ರವು. ಲಘು, ಹುಳಿ ಸಿಹಿ ಒಗರು, ಇದು ತ್ರಿದೋಷಹರವು, ಅಜೀರ್ಣ ಮಂದಾಗ್ನಿ ಶೋಫ ಉದರ ಗ್ರಹಣಿ ಗುಲ್ಮ ಪಾಂಡು ಮೂಲರೋಗ ಮೊದಲಾದುವನ್ನು ಪರಿಹರಿಸುವುದು; ಮೊಸರಿಗೆ ಅರ್ಧಭಾಗ ನೀರು ಸೇರಿಸಿ ಕಡೆದುದು ಉದಶ್ವಿತ್ತೆಂಬ ಮಜ್ಜಿಗೆಯು. ಇದು ಕಫಕಾರಿ; ಕೆನೆಯನ್ನು ತೆಗೆಯದೆ ನೀರನ್ನು ಬೆರಸದೆ ಕಡೆದ ಮೊಸರೇ ಮಥಿತವೆಂಬಮಜ್ಜಿಗೆ- ಇದು ಕಫಪಿತ್ತಗಳನ್ನು ಹರಿಸುವುದು; ಕೆನೆಯನ್ನು ತೆಗೆಯದೆ ನೀರನ್ನು ಬೆರಸದೆ, ಕಡೆದ ಮೊಸರೇ ಘೋಲವೆಂಬ ಮಜ್ಜಿಗೆ. ಇದು ಸ್ನಿಗ್ಧ ಗುರು, ವಾತಪಿತ್ತಹರವು.

ಹೀಗೆ ನಾಲ್ಕು ಬಗೆಯಾಗಿರುವ ಮಜ್ಜಿಗೆಗಳಲ್ಲಿ ಬೆಣ್ಣೆ ತೆಗೆದುದು ರೂಕ್ಷವು, ಬೆಣ್ಣೆಯೊಡನೆ ಕೂಡಿರುವುದು ಸ್ನಿಗ್ಧವು, ರೂಕ್ಷವು ಕಫಹರವು, ಲಘು; ಸ್ನಿಗ್ಧವು ವಾತಪಿತ್ತಹರವು, ಗುರುವು. ಹಾಲನ್ನು ಚೆನ್ನಾಗಿ ಕಾಸಿ ಹೆಪ್ಪಿಟ್ಟ ಮೊಸರಿನ ಮೇಲಿನ ಕೆನೆಯ ಭಾಗವು ಸ್ವಾದು, ಆದರೂ ಇದು ಅಗ್ನಿಮಾದ್ಯಕಾರಿಯು, ವಾತಪಿತ್ತಶಮನವು, ಕಫವೃದ್ಧಿಕರವು. ಆ ಮೊಸರಿನ ಕೆಳಗದು ಹುಳಿ, ಲಘು ರೂಕ್ಷವಾಗುವುದರಿಂದ ಕಫಹರವು, ಪಿತ್ತಕರವು, ಸ್ರೋತಸ್ಸುಗಳನ್ನು ಶುದ್ಧಿ ಮಾಡುವುದು. ಆದುದರಿಂದ ಆ ಎರಡು ಭಾಗಗಳನ್ನು ಒಟ್ಟಿಗೆ ಪಾದಾಂಶ ಜಲದೊಡನೆ ಚೆನ್ನಾಗಿ ಕರೆದರೆ ಶಕ್ರವೆಂಬ ಮಜ್ಜಿಗೆಯಾಗುವುದಷ್ಟೆ. ಇದು ಸರ್ವದೋಷಗಳನ್ನೂ ಕಳೆದು ದೇಹಕ್ಕೆ ಧಾತುಬಲ ಪುಷ್ಟಿಗಳನ್ನುಂಟು ಮಾಡುವುದು. ಇಂತಹ ತಕ್ರವನ್ನು ಅತಿಯಾಗಿ ವಾತವಿಕಾರವುಳ್ಳವರು ಕೊಂಚ ಸೈಂಧವಲವಣ ಮಿಶ್ರವಾಗಿಯೂ, ಪಿತ್ತವಿಕಾರದವರು ಕಲ್ಲು ಸಕ್ಕರೆಯೊಡನೆಯು, ಶ್ಲೇಷ್ಮ ರೋಗದವರು ಶುಂಠಿ ಮೆಣಸು ಹಿಪ್ಪಲಿ ಯವಕ್ಷಾರ ಈ ಚೂರ್ಣದೊಡನೆಯು ಕುಡಿಯುತ್ತ ಬಂದರೆ ಆಯಾ ರೋಗವಿಕಾರಗಳೆಲ್ಲವು ಶಮನವಾಗುವವು. ಈ ಮಜ್ಜಿಗೆಯು ಶೀತಕಾಲದಲ್ಲಿ ಅಮೃತವು, ಉಷ್ಣಕಾಲದಲ್ಲಿ ವಿಷವು ಎಂದು ಸುಶ್ರುತಮತವು.

**ಹಾಲು (ಪಯಃ)** – ಸ್ನಿಗ್ಧ ಶೀತಗುರು, ಸ್ವಾದು, ವಾತಪಿತ್ತ ರಕ್ತ ಪಿತ್ತಹರವು, ಕಫಕಾರಿಯು, ಓಜಶ್ಶುಕ್ರಧಾತುವರ್ಧಕವು, ಉತ್ತಮ ರಸಾಯನವು. ಸಾತ್ವಿಕವು, ಇದು ಗವ್ಯವೇ ಶ್ರೇಷ್ಠವು, ಅದರಲ್ಲಿ ಧಾರೋಷ್ಣವು ಅಮೃತದಂತೆ ಸಂತರ್ಪಣವು. ಸರ್ವರಿಗೂ ಪ್ರಾಣಶಕ್ತಿಪ್ರದವು. ಈ ಹಾಲೊಂದರಿಂದಲೇ ಬಹುಕಾಲ ಬದುಕಿರಬಹುದು.

ಆದರಿಂದಲೇ ಆಯುರ್ವೃದ್ಧಿಕರವೆಂದು ಪ್ರಸಿದ್ಧಿಗೆ ಬಂದಿದೆ. ಎಲ್ಲಾ ಹುಳಿಗಳು, ಮದ್ಯವು, ಇದಕ್ಕೆ ವಿರೋಧಿಗಳು, ಎಮ್ಮೆಯ ಹಾಲು ಅತಿನಿದ್ರೆಯನ್ನು ಬುದ್ಧಿಮಾಂದ್ಯಾಜೀರ್ಣಾದಿಗಳನ್ನು ಉಂಟು ಮಾಡುವುದ, ಅತಿತೀಕ್ಷ್ಣಾಗ್ನಿಗೆ ಹಿತವು. ಆಡಿನಹಾಲು ಲಘು ಉಷ್ಣ, ಒಗರು, ತ್ರಿದೋಷಹರವು. ಚರಸೇವನದಿಂದ ವಿಷಕ್ಷಯಕಾಸಾದಿ ರೋಗಹರವು.

**ಕಬ್ಬಿನ ಹಾಲು (ಇಕ್ಷುರಸಃ)** – ಶೀತಸ್ನಿಗ್ಧ ತೀಕ್ಷ್ಣ ಗುರು, ಸ್ವಾದು, ಕಫವಿದಾಹಕರವು, ವಾತಹರವು. ಮೂತ್ರಕಾರಿ, ವಮನವನ್ನು ನಿಲ್ಲಿಸುವುದು, ಅಗಿದು ತಿಂದರೆ ಅಷ್ಟು ವಿದಾಹಿಯಲ್ಲ.

## ಪಾನೀಯ ವರ್ಗವು

**'ಪಾನೀಯಂ ಪ್ರಾಣಿನಾಂ ಪ್ರಾಣಾ ವಿಶ್ವಮೇವಚ ತನ್ಮಯಂ'**

ಸಮಸ್ತ ಪ್ರಪಂಚವು ನೀರಿನಿಂದಲೇ ಬದುಕಿರುವುದು, ನೀರೇ ಪ್ರಾಣಾಧಾರವು, ನೀರು ಗಾಳಿ ಇವೆರಡು ಎಷ್ಟೆಷ್ಟು ಪರಿಶುದ್ಧವು ನಿರ್ಜಲವು ಆಗಿರುವುದೋ ಅಷ್ಟಷ್ಟು ಪ್ರಾಣಿಗಳ ಆಯುರಾರೋಗ್ಯ ಸುಖವು ಬೆಳೆಯುವುದು. ಅವು ಎಷ್ಟೆಷ್ಟು ಕಶ್ಮಲದಿಂದ ಕೂಡಿ ದುಷ್ಟವಾಗುವುವೊ ಅಷ್ಟಷ್ಟು ಅಲ್ಪಾಯುರನಾರೋಗ್ಯ ದುಃಖಗಳು ಹೆಚ್ಚುವವು ಎಂಬುದನ್ನೂ ಯಾರೂ ಮರೆಯಬಾರದು-

'ನೀರನ್ನು ಚೆನ್ನಾಗಿ ಪರೀಕ್ಷಿಸಿ ಶೋಧಿಸಿಕೊಂಡೇ ಸ್ವಲ್ಪವಾಗಿ ಕುಡಿಯಬೇಕು; ಯಾರೂ ಸ್ವೇಚ್ಛೆಯಾಗೆ ನೀರು ಕುಡಿಯಕೂಡದು; ಮಂದಾಗ್ನಿಗಳು, ಗುಲ್ಮಾತಿಸಾರ ಪಾಂಡು ಗ್ರಹಣೀ ಶೋಫ ಮೂಲರೋಗವುಳ್ಳವರ, ಶರತ್ಕಾಲ ಬೇಸಗೆ ಹೊರತು ಉಳಿದ ಕಾಲಗಳಲ್ಲಿ ಸ್ವಸ್ಥನು ಕೂಡ ಕೊಂಚಕೊಂಚವೇ ನೀರು ಕುಡಿಯಬೇಕು'.

ಹೀಗೆ ಆಯುರ್ವೇದವು ಸಾರುತ್ತಿರುವುದರಿಂದ ಸ್ನಾನಪಾನಗಳಿಗೆ ಶುದ್ಧ ಜಲವನ್ನೇ ಪಡೆಯಬೇಕು. ನೀರುಗಳು ನಾನಾವಿಧಗಳಾಗಿ ಇವೆ. ಅದರಲ್ಲಿ ಸರ್ವಶ್ರೇಷ್ಠವು ಗಂಗೋದಕವು, ಮಳೆಯ ನೀರನ್ನು ಶುದ್ಧವಾದ ಪಾತ್ರದಲ್ಲಿ ಹಿಡಿದಿರಿಸಿದರೆ ಯಾವ ದೋಷವು ಇಲ್ಲದೆ ಅದೂ ಸರ್ವೋತ್ಕೃಷ್ಟವೇ. ಉಳಿದ ವಾಪೀ ಕೂಪ ಸಮಸ್ತ ಟಾಕ ನದೀ ಪ್ರಸ್ರವಣ ಪಲ್ವಲಾದಿ ಜಲಗಳು ದೇಶಕಾಲಾನುಗುಣವಾಗಿ ಗುಣದೋಷ

ಉಳ್ಳವಾಗಿದೆ. ಆದರಿಂದ ಮುಖ್ಯವಾಗಿ ಈ ಪಾನೀಯವರ್ಗವನ್ನು ಎಲ್ಲರೂ ಲಕ್ಷ್ಯದಲ್ಲಿ ಇಟ್ಟಿರಬೇಕು.

೧. ಸೋಪಾನಶಕ್ತಿಯಿಂದ ಇಳಿಯಲನುಕೂಲವಾದ ದೊಡ್ಡ ಬಾವಿಯೇ ವಾಪಿ, ಇದರ ನೀರು ಕೊಂಚ ಕಾರವು ತ್ರಿದೋಷಹರವು ಆಗಿರುವುದು.

೨. ಕೂಪವೆಂಬುದು ಭೂಮಿಯನ್ನು ಆಳವಾಗಿ ತೋಡುವುದರಿಂದ ಬಂದ ನಿರ್ಮಲ ಮಧುರೋದಕವುಳ್ಳದ್ದು. ಇದು ಲಘು, ಸದಾ ಪಥ್ಯವು. ಇದು ಚೌಳು ಕಾರವಾಗಿದ್ದರೆ ದೀವನವು, ಉಷ್ಣವು, ಕಫವಾತಹರವು, ಪಿತ್ತ ವೃದ್ಧಿಕಾರಿಯು ಆಗಿರುವುದು.

೩. ಸರಸ್ಸು (ಪುಷ್ಕರಿಣಿ) ಬೆಟ್ಟ ನದಿಗಳ ಪಕ್ಕದಲ್ಲಿ ತಾವರೆನೈದಿಲೆಗಳಿಂದ ಕೂಡಿದ ಕೊಳವು. ಇದು ಒಗರು ಸಿಹಿ ಆಗಿ ದಾಹತಾಮಕವು ಲಗುವು ತಂಪು ರುಚ್ಯವು ಆಗಿರುತ್ತದೆ.

೪. ಪ್ರಶಸ್ತಭೂಭಾಗದಲ್ಲಿ ಅನೇಕಮಾಸ ವರ್ಗಗಳವರೆಗೂ ನೀರು ನಿಲ್ಲುವ ಕೆರೆಯು ತಟಾಕವು. ಇದು ಮಧುರವು, ಶೀತವು, ಪಿತ್ತಹರವು, ಕಪಪ್ರದವು.

೫. ಬೆಟ್ಟದ ಬುಡದಲ್ಲಿ ಹುಟ್ಟಿಯೋ, ಜಟ್ಟಿದಿಂದ ಕೆಳಗೆ ಧುಮಿಕಿಯೋ ಮರಳಲ್ಲಿ ಹರಿದು ಸಮುದ್ರಕ್ಕೆ ಸೇರುವುದು ಮಹಾನದಿ. ಈ ನೀರು ಲಘು, ಅಲ್ಪ ದೋಷವುಳ್ಳದ್ದು, ಶುದ್ಧವು, ಪಥ್ಯವು. ಮಳೆಗಾಲದಲ್ಲಿ ಆ ನೀರೇ ಅಪಥ್ಯವು. ಇದು ಹರಿಯದಾಗ ಅಲ್ಲಿ ಮರಳನ್ನು ಬಗಿದು ತೆಗೆದ ಚಲುಮೆಯ ನೀರು ಉಷ್ಣವು, ಕಫಹರವು, ಅಗ್ನಿದೀಪನವು.

೬. ಬೆಟ್ಟದ ತಪ್ಪಲುಗಳಲ್ಲಿ ಜನಿಸಿ ಹರಿಯುವುದು ಪ್ರಸ್ರವಣವು. ಇದನ್ನು ತಲೆಪರಿಗೆಯೆನ್ನುವರು. ಶೀತ ಲಘು, ಸ್ವಾದು, ನಿರ್ಮಲವು, ಪಿತ್ತ ಹರವು, ಪಥ್ಯವು.

೭. ಪಲ್ವಲವು, ಸಣ್ಣ ಕುಂಟೆ. ಅಲ್ಪ ಜಲವು, ಬಹುಕಶ್ಮಲ, ಅಪಥ್ಯವು.

೮. ಗದ್ದೆ ತೋಟಗಳ ಮೇಲೆ ಹರಿದು ಬರುವ ಕಾಲುವೆಗಳ ನೀರು ಸರ್ವದೋಷಾಕರವು, ಅಪಥ್ಯತಮವು.

## ಕಡ್ಲೆ ಬೇಳೆ ಹೋಳಿಗೆ

**ಕಣಕ -** 1 ಕಪ್ ಮೈದಾ
1/4 ಚಮಚ ಅರಿಶಿನ
1/4 ಚಮಚ ಉಪ್ಪು
1/2 ಕಪ್ ನೀರು
1/4 ಕಪ್ ಎಣ್ಣೆ

**ಹೂರಣ -** 1 ಕಪ್ ಕಡ್ಲೆಬೇಳೆ
3 ಕಪ್ ನೀರು
1/4 ಚಮಚ ಅರಿಶಿನ
1 ಚಮಚ ಎಣ್ಣೆ
1 ಕಪ್ ಬೆಲ್ಲ
1/4 ಚಮಚ ಏಲಕ್ಕಿ ಪುಡಿ

ಕಣಕವನ್ನು ಕಲೆಸಿ ಎಣ್ಣೆಲ್ಲಿ 3 ಘಂಟೆಯ ಕಾಲ ನೆನೆಸಿಡಿ.
ನಂತರ ಸ್ವಲ್ಪ ನಾದಿ, ಪುಟ್ಟ ಉಂಡೆಯನ್ನು ಅಗಲಿಸಿರಿ.
ಹೂರಣವನ್ನು ಮಧ್ಯದಲ್ಲಿಟ್ಟು, ತುದಿಗಳನ್ನು ಒಟ್ಟಾಗಿಸಿ ಮಿಕ್ಕ ಕಣಕವನ್ನು ತೆಗೆದುಬಿಡಿ.
ಅಕ್ಕಿಹಿಟ್ಟನ್ನು ಉದುರಿಸಿ ನಿಧಾನವಾಗಿ ಲಟ್ಟಿಸಿರಿ.
ಒಂದೇ ದಿಕ್ಕಿನಲ್ಲಿ ತೆಳುವಾಗಿ ಲಟ್ಟಿಸಿರಿ.
ತವದ ಮೇಲೆ ಮಧ್ಯಮ ಉರಿಯಲ್ಲಿ ಉಬ್ಬುವ ತನಕ 1 ನಿಮಿಷ ಬೇಯಿಸಿರಿ.
ರುಚಿಶುಚಿಯಾದ ಕಡಲೆಬೇಳೆ ಹೋಳಿಗೆ ನೈವೇದ್ಯಕ್ಕೆ ಸಿದ್ಧ.

## ಹೆಸರುಬೇಳೆ ಕೋಸಂಬರಿ, ಕಡಲೆಬೇಳೆ ಕೋಸಂಬರಿ

ಈ ವಿಧಾನಗಳು ಎಲ್ಲರಿಗೂ ತಿಳಿದಿರುವುದರಿಂದ ಪ್ರತ್ಯೇಕವಾಗಿ ತಿಳಿಸಿರುವುದಿಲ್ಲ.

## ಆಂಬೋಡೆ

**ಸಾಮಗ್ರಿಗಳು** - 1 ಕಪ್ ಕಡಲೆಬೇಳೆ
1 ಇಂಚ್ ಶುಂಠಿ
2 ಹಸಿರು ಮೆಣಸಿನಕಾಯಿ
ಕೊತ್ತಂಬರಿ ಸೊಪ್ಪು
ಕರಿಬೇವು
1 ಚಿಟಕಿ ಹಿಂಗು
ರುಚಿಗೆ ತಕ್ಕಷ್ಟು ಉಪ್ಪು
ಕರಿಯಲು ಎಣ್ಣೆ
ಕಾಯಿತುರಿ

ನೆನೆಸಿದ ಕಡಲೆಬೇಳೆ, ಶುಂಠಿ, ಹಿಂಗು, ಮೆಣಸಿನಕಾಯಿಯನ್ನು ತರಿಯಾಗಿ ರುಬ್ಬಿಕೊಳ್ಳಿ.
ಕೊತ್ತಂಬರಿ ಸೊಪ್ಪು, ಕರಿಬೇವು, ಉಪ್ಪು, ಕಾಯಿತುರಿಯನ್ನು ಹಾಕಿ ಕಲೆಸಿರಿ. ನಂತರ ಮಿಶ್ರಣದ ಪುಟ್ಟ ಉಂಡೆಯನ್ನು ತಟ್ಟಿ-ತಟ್ಟಿ ಬಿಸಿ ಎಣ್ಣೆಯಲ್ಲಿ ಕಂದು ಬಣ್ಣ ಬರುವ ತನಕ ಕರೆಯಿರಿ.

* * * *

## ಹೆಸರು ಕಾಳು - ಸಿಹಿಗುಂಬಳದ ಪಾಯಸ

**ಸಾಮಗ್ರಿಗಳು** - ಹೆಸರುಕಾಳು
ಸಿಹಿಗುಂಬಳಕಾಯಿ
ಗೋಡಂಬಿ - 50 ಗ್ರಾಂ.
ಬಾದಾಮಿ - 50 ಗ್ರಾಂ
ಗಸಗಸೆ - 1 ಚಮಚ
ಲವಂಗ - 2 ದಳ
ಏಲಕ್ಕಿ ಪುಡಿ - 1/2 ಚಮಚ
ಬೆಲ್ಲ

ಹೆಸರುಕಾಳು, ಸಿಹಿಗುಂಬಳವನ್ನು ಚೆನ್ನಾಗಿ ಬೇಯಿಸಿಕೊಳ್ಳಿ.
ಹಾಲನ್ನು ಹಾಕಿ ಕುದಿಯಲು ಇಡಿ.
ಗೋಡಂಬಿ ಗಸಗಸೆ, ಲವಂಗ, ಬಾದಾಮಿಯ ಪುಡಿಯನ್ನು ಹಾಕಿರಿ.
ಬೆಲ್ಲವನ್ನು ಕೊನೆಯಲ್ಲಿ ಹಾಕಿರಿ.

4. ಹೆಸರುಬೇಳೆ ಕೋಸಂಬರಿ, ಕಡಲೇ ಬೇಳೆ ಕೋಸಂಬರಿ
5. ಪಾನಕ.
6. ನೀರು ಮಜ್ಜಿಗೆ
7. ಶುಂಠಿ-ಬೆಲ್ಲ (ಚೈತ್ರಮಾಸದಲ್ಲಿ ಕಡ್ಡಾಯವಾಗಿ ದೇವರ ನೈವೇದ್ಯಕ್ಕೆ ಇಡಬೇಕು) ತುಪ್ಪ ಹಾಗೂ ಬೆಲ್ಲದ ಜೊತೆ ಶುಂಠಿ ಪುಡಿಯನ್ನು ಮಿಶ್ರಣ ಮಾಡಿ ಶುಂಡಿ ಉಂಡೆ ಮಾಡಿ ಸಮರ್ಪಿಸಬೇಕು.

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ಯುಗಾದಿ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ
ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ
ಶ್ರೀಲಕ್ಷ್ಮೀಹಯಗ್ರೀವದೇವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ



ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ).

ಗಿರಿನಗರ, ಬೆಂಗಳೂರು - 560 085

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ದೇವರ ಪೂಜೆ

## ಆಗಮೋಕ್ತಶ್ರೌತಪೂಜಾವಿಧಾನ

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :

ಜಗದ್ಗುರುಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),
ಗಿರಿನಗರ, ಬೆಂಗಳೂರು-೮೫

"ದೇವರಪೂಜೆ" ಶಾರ್ವರಿ ॥ ಶ್ರಾವಣ ॥ ಶುದ್ಧ ಹುಣ್ಣಿಮೆ, (ದಿನಾಂಕ : 3-8-2020) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶ-ರಾದ ಶ್ರೀಶ್ರೀವಿದ್ಯಾಧೀಶತೀರ್ಥಶ್ರೀಪಾದರ ಕರಕಮಲಗಳ ಮೂಲಕ ಭಾರತೀರಮಣ-ಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮ-ರ್ಪಿಸಲಾಯಿತು.

ಪ್ರಥಮ ಮುದ್ರಣ : 2020



ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಪ್ರತಿಗಳು : 1000
ಪುಟಗಳು : viii +148 = 156

ಅಕ್ಷರಜೋಡಣೆ : ಸುಬ್ಬಣ್ಣ ಕೆಂಪದಾಳಿಹಳ್ಳಿ,
9141311280

ಮುದ್ರಣ : ಮುಕ್ತಿಪಥ ಮುದ್ರಣಾಲಯ,
ಬೆಂಗಳೂರು.

ದಿ|| ಎನ್.ಎ. ವಿಜೇಂದ್ರರಾವ್ ಮತ್ತು ದಿ|| ಎನ್.ವಿ. ಮಂದಾಕಿನಿ ಬಾಯಿ



ಶ್ರೀಮದ್ಭಾಗವತ, ಹರಿಕಥಾಮೃತಸಾರ ಮತ್ತು ಇತರ ಮಧ್ವಶಾಸ್ತ್ರಗಳಲ್ಲೇ ತಮ್ಮ ಜೀವನ-ವನ್ನು ಮುಡುಪಾಗಿಟ್ಟು, ಚಳ್ಳಕೆರೆ ನಿವಾಸಿಗಳಾಗಿದ್ದ ದಿವಂಗತರಾದ ಶ್ರೀಯುತರಾದ ಎನ್.ಎ. ವಿಜೇಂದ್ರರಾವ್ ಮತ್ತು ಎನ್.ವಿ. ಮಂದಾಕಿನಿ ಬಾಯಿ ಇವರುಗಳ ಸ್ಮರಣಾರ್ಥ ಬೆಂಗಳೂರು ಸಹಕಾರನಗರದಲ್ಲಿರುವ ಇವರ ಪುತ್ರ ಶ್ರೀ ಎನ್.ವಿ. ಅನಂತಮೂರ್ತಿ ಮತ್ತು ಅವರ ಧರ್ಮಪತ್ನಿ ಶ್ರೀಮತಿ ಬಿ.ಆರ್. ಪ್ರಿಯಂವದ, ಅವರು ಮಾಡಿದ ಸೇವೆ.

---

## ವಿಷಯಾನುಕ್ರಮಣಿಕೆ



* * * * * * *

# ಮುನ್ನುಡಿ

ಆಗಮಗಳು ಎರಡು ವಿಧ. ವೈಷ್ಣವಾಗಮ, ಶೈವಾಗಮ ಎಂದು. ವೈಷ್ಣವಾಗಮವು ಮುಖ್ಯವಾಗಿ ಎರಡು ವಿಧ. ಪಂಚರಾತ್ರಾಗಮ, ವೈಖಾನಸಾಗಮ. ವೈಖಾನಸಾಗಮದ ಆಚರಣೆ ಅತ್ಯಂತವಿಸ್ತಾರ ಹಾಗೂ ಕಠಿಣ. ಸುಬ್ರಹ್ಮಣ್ಯಕ್ಷೇತ್ರದಲ್ಲಿ ಇದರ ಆಚರಣೆ ಇಂದಿಗೂ ಕಾಣಿಸುತ್ತದೆ. ಪಂಚರಾತ್ರಾಗಮದ ಅನುಷ್ಠಾನ ನಮ್ಮಲ್ಲಿ ವ್ಯಾಪಕವಾಗಿ ನಡೆದುಬಂದಿದೆ.

ಪಂಚರಾತ್ರಾಗಮದಲ್ಲಿ ಇನ್ನೂರಕ್ಕೂ ಅಧಿಕ ಸಂಹಿತೆಗಳಿವೆ. ಅವುಗಳ ನಡುವೆ ೧೦೮ ಸಂಹಿತೆಗಳು ಪ್ರಧಾನವಾಗಿವೆ. ಅವುಗಳಲ್ಲಿಯೂ ನಾಲ್ಕೈದು ಮಾತ್ರ ಪ್ರಚಲಿತವಾಗಿವೆ. ಅವುಗಳ ನಡುವೆ ಪಾದ್ಮಸಂಹಿತೆಯು ಬಹಳ ಪ್ರಸಿದ್ಧವಾಗಿದೆ.

ಪ್ರತಿಯೊಂದು ಸಂಹಿತೆಗಳಲ್ಲಿಯೂ ನಾಲ್ಕು ಪಾದಗಳು ಇರುತ್ತವೆ. ಜ್ಞಾನಪಾದ, ಯೋಗಪಾದ, ಕ್ರಿಯಾಪಾದ ಮತ್ತು ಚರ್ಯಾಪಾದ ಎಂದು. ಅನುಷ್ಠಾನಗಳ ಬಗ್ಗೆ ಚರ್ಯಾಪಾದದಲ್ಲಿ ಎಲ್ಲ ಮಾಹಿತಿಗಳು ದೊರಕುತ್ತವೆ. ಪಾದ್ಮಸಂಹಿತೆಗೆ ಅನುಗುಣ-

ವಾದ ದೇವರಪೂಜಾಕ್ರಮವನ್ನು ಈ ಪುಸ್ತಕದಲ್ಲಿ ನೀಡಲಾಗಿದೆ. ಹಾಗೂ ಪಂಚ-ರಾತ್ರಾಗಮದಲ್ಲಿ ಹೇಳಿದ ಪೂಜಾವಿಧಾನವನ್ನೇ ಶ್ರೀಮದಾಚಾರ್ಯರು ತಂತ್ರಸಾರ-ಸಂಗ್ರಹದಲ್ಲಿ ತಿಳಿಸಿದ್ದಾರೆ. 'ತಂತ್ರಸಾರಸಂಗ್ರಹ' ಶ್ರೀನಾರಾಯಣಪಂಡಿತಾಚಾರ್ಯ-ರ 'ಯೋಗದೀಪಿಕಾ' ಹಾಗೂ ಶ್ರೀಟೀಕಾಕೃತ್ಪಾದರ 'ಪದ್ಯಮಾಲಾ' ಗ್ರಂಥಗಳಲ್ಲಿ ಹೇಳಿದಂತೆ ಈ ಪುಸ್ತಕದಲ್ಲಿ ಸಂಗ್ರಹಿಸಿ ನೀಡಲಾಗಿದೆ.

ಶ್ರೌತಪೂಜೆಯನ್ನು ಈ ಪುಸ್ತಕದಲ್ಲಿ ನೀವು ಕಾಣಬಹುದು. ಇದನ್ನೂ ಕೂಡ ಪಾದ್ಮಸಂಹಿತೆಯಲ್ಲಿಯೇ ಹೇಳಿದ್ದಾರೆ. ಪ್ರತಿಯೊಂದು ಉಪಚಾರಗಳಿಗೂ ಕೂಡ ಇಂಥದ್ದೇ ವೇದಮಂತ್ರಗಳನ್ನು ಪಠಿಸಬೇಕೆಂಬ ನಿಯಮವಿದೆ. ಅದಕ್ಕನುಗುಣವಾಗಿ ವೇದಮಂತ್ರಗಳಿಂದ ಕೂಡಿದ ಷೋಡಶೋಪಚಾರಗಳನ್ನು ಈ ಪುಸ್ತಕದಲ್ಲಿ ನೀಡಲಾಗಿದೆ. ಪ್ರತಿಯೊಂದು ಉಪಚಾರಗಳಿಗೂ ಕೂಡ ಆಯಾ ಪೂಜಾಮಂತ್ರ-ಗಳನ್ನು ಪಠಿಸುತ್ತಾ ಪೂಜಿಸಬೇಕು. ಇದನ್ನು ಬಿಟ್ಟು ಕೇವಲ ಒಂದೇ ಮಂತ್ರದಿಂದ ಷೋಡಶೋಪಚಾರಪೂಜೆಯನ್ನು ಮಾಡುವುದು ಉತ್ತಮಪಕ್ಷ ಎನಿಸುವುದಿಲ್ಲ. ಆದ್ದರಿಂದ ಸಾಧಕರು ಪ್ರಯತ್ನಪಟ್ಟು ಇಲ್ಲಿ ನೀಡಿದ ವೇದಮಂತ್ರಗಳ ಉಪದೇಶವನ್ನು ಪಡೆದುಕೊಂಡು ತನ್ಮೂಲಕವಾಗಿಯೇ ಭಗವಂತನ ಪೂಜೆಯನ್ನು ಆಚರಿಸಬೇಕು. ಶ್ರೌತಪೂಜೆಯು ಸಾಧ್ಯವಾಗದ್ದಿರೆ ಸ್ಮಾರ್ತಪೂಜೆಯನ್ನು ಅದೂ ಸಾಧ್ಯವಾಗದಿದ್ದರೆ ಅಷ್ಟಾಕ್ಷರಪೂಜೆಯನ್ನು ಆಗಮಶಾಸ್ತ್ರವು ವಿಧಾನಮಾಡುತ್ತದೆ.

ಕಪಿಂಜಲಸಂಹಿತೆಯೂ ಕೂಡ ಪೂಜೆಯ ಬಗ್ಗೆ ಅಪರೂಪದ ವಿಷಯಗಳನ್ನು ತಿಳಿಸುತ್ತದೆ. ಹದಿನಾರು ಉಪಚಾರಗಳಿಗೂ ಒಂದೊಂದು ಮುದ್ರೆಗಳನ್ನು ವಿಧಿಸು-ತ್ತದೆ. ಆ ಮುದ್ರೆಗಳನ್ನು ದೇವರಿಗೆ ತೋರಿಸಿದರೆ ಆಯಾ ಪರಿಕರಗಳು ಇಲ್ಲದೇ ಪೂಜಿಸಿದಾಗ ಪ್ರಾಪ್ತವಾಗುವ ದೋಷವು ಪರಿಹಾರವಾಗುತ್ತದೆ. ಮತ್ತು ಭಗವಂತನು ಸುಪ್ರಸನ್ನನಾಗುತ್ತಾನೆ.

ಮುದ್ರಯಾ ಪ್ರೀಯತೇ ದೇವಃ ತಥಾ ಸನ್ನಿಹಿತೋ ಭವೇತ್ ।
ಮುದ್ರಯಾ ಸಿದ್ಧ್ಯತೇ ಜ್ಞಾನಂ ತಥಾ ಕರ್ಮ ಪ್ರಶಸ್ಯತೇ ॥

ಕಪಿಂಜಲಸಂಹಿತೆಯ ಈ ಮಾತಿನ ಆಧಾರದಿಂದ ಈ ಪುಸ್ತಕದಲ್ಲಿ ಹದಿನಾರು ಮುದ್ರೆಗಳ ಸಹಿತವಾಗಿ ಷೋಡಶೋಪಚಾರಪೂಜೆಯನ್ನು ನೀಡಲಾಗಿದೆ. ಮುದ್ರೆಗಳ ಲಕ್ಷಣವನ್ನು ಪುಸ್ತಕದ ಕೊನೆಯಲ್ಲಿ ನೋಡಬಹುದು.

ಮತ್ತು ವರಾಹಪುರಾಣದ ಧರಣೀದೇವಿ ಹಾಗೂ ಯಜ್ಞವರಾಹರ ಸಂವಾದದಲ್ಲಿ ಭಗವಂತನಿಗೆ ಅಷ್ಟೋತ್ತರ ಶತೋಪಚಾರಪೂಜೆಯನ್ನು ಹೇಳಿದ್ದಾರೆ. ಇದು ಬಹಳ ಮನೋಹರವಾಗಿದೆ. ಅದರ ಕ್ರಮವನ್ನೂ ಕೂಡ ಈ ಪುಸ್ತಕದಲ್ಲಿ ನೋಡಬಹುದು.

ತಂತ್ರಸಾರಸಂಗ್ರಹದಲ್ಲಿ ಹೇಳಿದ ಪ್ರಕಾರವೇ ನ್ಯಾಸಾದಿಗಳ ಕ್ರಮವನ್ನು ಇಲ್ಲಿ ಉಲ್ಲೇಖ ಮಾಡಲಾಗಿದೆ. ಸಾಮಾನ್ಯವಾಗಿ 'ರಕ್ತಾಂಭೋಧಿಃ' ಎಂಬ ಶ್ಲೋಕವನ್ನು ಎಲ್ಲರೂ ಪಠಿಸುತ್ತಾರೆ. ಹಾಗೂ 'ಯರಲವ' ಬೀಜಾಕ್ಷರಗಳನ್ನು ಪಠಿಸಿ ನ್ಯಾಸವನ್ನು ಮಾಡುತ್ತಾರೆ. ಈ ಕ್ರಮವನ್ನು ಶ್ರೀಮದಾಚಾರ್ಯರು ಹೇಳಿರುವುದಿಲ್ಲ. ಮತ್ತು ಶ್ರೀಮದಾಚಾರ್ಯರು ಹೇಳಿದ ನ್ಯಾಸಕ್ರಮವನ್ನು ಅವಶ್ಯವಾಗಿ ಆಚರಿಸಲೇಬೇಕು ಎಂಬ ಉದ್ದೇಶದಿಂದ ಇಲ್ಲಿ ತಂತ್ರಸಾರಸಂಗ್ರಹದ ನ್ಯಾಸಕ್ರಮವನ್ನೇ ಅಳವಡಿಸಲಾಗಿದೆ. ಸಾಧಕರು ಈ ಕ್ರಮವನ್ನೇ ಅನುಸರಿಸಬೇಕು.

ಸುಲಭವಾಗಿ ಪೂಜೆಯನ್ನು ಆಚರಿಸಬೇಕೆಂಬ ಉದ್ದೇಶದಿಂದ ಆಯಾ ವಿಧಾನಗಳನ್ನು ಶೀರ್ಷಿಕೆ ರೂಪದಲ್ಲಿ ಅಲ್ಲಲ್ಲಿ ನೀಡಲಾಗಿದೆ. ಅದರ ಪ್ರಕಾರ ಪೂಜೆಯನ್ನು ಅನುಷ್ಠಾನ ಮಾಡಬೇಕು. ಈ ಪುಸ್ತಕದ ಬಗ್ಗೆ ಹಾಗೂ ಮಾಡಬೇಕಾದ ವಿಧಿವಿಧಾನಗಳ ಬಗ್ಗೆ ಪುಸ್ತಕವನ್ನು ಮುಂದೆ ಓದುತ್ತಾ ಅರ್ಥವಾಗುತ್ತದೆ. ಪ್ರಾರಂಭದಲ್ಲಿ ನೀಡಿದ ಸೂಚನೆಗಳನ್ನು ಓದಿಯೇ ದೇವರ ಪೂಜೆಯನ್ನು ಮಾಡಿದರೆ ವಿಷಯಗಳು ಮನದಟ್ಟಾಗುತ್ತವೆ.

ಮನುಸ್ಮೃತಿಯ ಮಾತಿನಂತೆ ನಿತ್ಯವೂ ಮನೆಗೆ ಅಭ್ಯುಕ್ಷಣವನ್ನು ಮಾಡಬೇಕು. 'ನ ವಿನಾ ಅಭ್ಯುಕ್ಷಣಂ ಜಾತು ವಿಧಿಜ್ಞಃ ಕಿಂಚಿದಾಚರೇತ್' ಎಂಬ ಸಂಗ್ರಹಗ್ರಂಥದ ಆಧಾರದಂತೆ ನಿತ್ಯವೂ ನಾವು ವಾಸಿಸುವ ಮನೆಗೆ ಅಭ್ಯುಕ್ಷಣವನ್ನು ಮಾಡಬೇಕು.

ಅಭ್ಯುಕ್ಷಣ ಎಂದರೆ ಸಿಂಪಡಿಸುವುದು ಎಂದರ್ಥ. ಜಲಾಭಿಮಾನಿ ದೇವತೆಗಳನ್ನು ಪ್ರಾರ್ಥನೆ ಮಾಡಿ ಬಲಗೈಯ್ಯಲ್ಲಿ ನೀರನ್ನು ಹಾಕಿಕೊಂಡು – 'ವೈಶ್ವಾನರಾಯ ವಿದ್ಮಹೇ ಲಾಲೀಲಾಯ ಧೀಮಹಿ ತನ್ನೋ ವಹ್ನಿ ಪ್ರಚೋದಯಾತ್' ಎಂಬ ಅಗ್ನಿಗಾಯತ್ರಿಯನ್ನು ಪಠಿಸಿ ಮನೆಗೆ ಪ್ರೋಕ್ಷಣೆಯನ್ನು ಮಾಡಬೇಕು. ಆಗ ಮನೆಯಲ್ಲಿದ್ದ ಎಲ್ಲ ದೋಷಗಳು ಪರಿಹಾರವಾಗುತ್ತವೆ. 'ಪ್ರೋಕ್ಷಣರಹಿತೇ ಗೃಹೇ ಕಿಂಚಿದಪಿ ನ ಕರ್ತವ್ಯಮ್' ಎಂಬುದಾಗಿ ಮನುಸ್ಮೃತಿಯಲ್ಲಿ ಹೇಳಿದ್ದಾರೆ. ಮತ್ತು ಕಾತ್ಯಾಯನರು 'ತತಃ ಸೂತ್ರಮುಪಸ್ಥಾಪ್ಯ ಸಮ್ಯಗಾಚಮ್ಯಚ ಸ್ವಯಂ । ಅಭ್ಯುಕ್ಷಣಂ ಸಮಾದಾಯ ಸಂಯತಾತ್ಮಾ ಗೃಹಂ ವ್ರಜೇತ್॥' ಎಂದು ಹೇಳಿದ್ದಾರೆ.

ಸಂಧ್ಯಾವಂದನೆ ಮಾಡಿದ ಮೇಲೆ ಆಚಮನ ಮಾಡಿ ಮನೆಯ ಹೊರಗೆ ನಿಂತು ಜಿತೇಂದ್ರಿಯನಾಗಿ ಅಭ್ಯುಕ್ಷಣವನ್ನು ಮಾಡಬೇಕು. ಅನಂತರ ಮನೆಯ ಒಳಗೆ ಪ್ರವೇಶಮಾಡಬೇಕು. ಈ ಕ್ರಮವನ್ನು ಸಾಧಕರು ಅಳವಡಿಸಿಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.

ಇಲ್ಲಿರುವ ದೇವಪೂಜಾಪದ್ಧತಿಯು ಅತ್ಯಂತವಿವರವಾಗಿದೆಯೆಂದು ಸರ್ವಥಾ ತಿಳಿಯಬಾರದು. ಇಷ್ಟನ್ನು ಆಚರಿಸಲು ಕೇವಲ ಅರ್ಧಗಂಟೆ ಸಾಕು. ನಾವು ಇಲ್ಲಿರುವ ಮಂತ್ರಗಳನ್ನು ಬಿಟ್ಟು ಉಳಿದ ಮಂತ್ರಗಳನ್ನು ಪೂಜೆಯಲ್ಲಿ ಹೇಳುವ ಅವಶ್ಯಕತೆ ಇರುವುದಿಲ್ಲ. ಈ ಪುಸ್ತಕದಲ್ಲಿ ವಿಷ್ಣುಸಹಸ್ರನಾಮವನ್ನು ಮಾತ್ರ ಮುದ್ರಿಸಿಲ್ಲ. ಅದೊಂದನ್ನು ಪೂಜಾಕಾಲದಲ್ಲಿ ಸ್ವತಃ ಉಚ್ಚರಿಸುವ ಕ್ರಮವನ್ನು ಅಳವಡಿಸಿ-ಕೊಳ್ಳಬೇಕು. ಪ್ರಾರಂಭದಲ್ಲಿ ಮಂತ್ರಗಳು ಕಂಠಪಾಠವಾಗುವ ತನಕ ಬಹಳ ಸಮಯ ತೆಗೆದುಕೊಳ್ಳುತ್ತದೆ. ಕಂಠಪಾಠವಾದ ಮೇಲೆ ಇಲ್ಲಿರುವ ಮಂತ್ರಗಳನ್ನು ಉಚ್ಚರಿಸಿ ಪೂಜಿಸಲು ಹೆಚ್ಚು ಸಮಯ ಬೇಕಾಗುವುದಿಲ್ಲ. ಆದ್ದರಿಂದ ಸಾಧಕರು ಭಗವಂತನ ಪೂಜೆಯನ್ನು ವೇದೋಕ್ತಮಂತ್ರಗಳಿಂದಲೇ ಈ ಕ್ರಮದಲ್ಲಿ ಆಚರಿಸಬೇಕೆಂದು ಕಳಕಳಿಯಿಂದ ಪ್ರಾರ್ಥಿಸುತ್ತೇನೆ.

ಈ ಪುಸ್ತಕದ ಕೊನೆಯಲ್ಲಿ ಶತಾಪರಾಧಸ್ತೋತ್ರವನ್ನು, ಪದ್ಯಮಾಲಾವನ್ನು, ಯೋಗದೀಪಿಕಾವನ್ನು ನೀಡಲಾಗಿದೆ. ಇದನ್ನು ಪಾರಾಯಣ ಮಾಡಿ ಮನೋಗತ

ಕಪಿಂಜಲಸಂಹಿತೆಯ ಈ ಮಾತಿನ ಆಧಾರದಿಂದ ಈ ಪುಸ್ತಕದಲ್ಲಿ ಹದಿನಾರು ಮುದ್ರೆಗಳ ಸಹಿತವಾಗಿ ಷೋಡಶೋಪಚಾರಪೂಜೆಯನ್ನು ನೀಡಲಾಗಿದೆ. ಮುದ್ರೆಗಳ ಲಕ್ಷಣವನ್ನು ಪುಸ್ತಕದ ಕೊನೆಯಲ್ಲಿ ನೋಡಬಹುದು.

ಮತ್ತು ವರಾಹಪುರಾಣದ ಧರಣೀದೇವಿ ಹಾಗೂ ಯಜ್ಞವರಾಹರ ಸಂವಾದದಲ್ಲಿ ಭಗವಂತನಿಗೆ ಅಷ್ಟೋತ್ತರ ಶತೋಪಚಾರಪೂಜೆಯನ್ನು ಹೇಳಿದ್ದಾರೆ. ಇದು ಬಹಳ ಮನೋಹರವಾಗಿದೆ. ಅದರ ಕ್ರಮವನ್ನೂ ಕೂಡ ಈ ಪುಸ್ತಕದಲ್ಲಿ ನೋಡಬಹುದು.

ತಂತ್ರಸಾರಸಂಗ್ರಹದಲ್ಲಿ ಹೇಳಿದ ಪ್ರಕಾರವೇ ನ್ಯಾಸಾದಿಗಳ ಕ್ರಮವನ್ನು ಇಲ್ಲಿ ಉಲ್ಲೇಖ ಮಾಡಲಾಗಿದೆ. ಸಾಮಾನ್ಯವಾಗಿ 'ರಕ್ತಾಂಬೋಧಿಃ' ಎಂಬ ಶ್ಲೋಕವನ್ನು ಎಲ್ಲರೂ ಪಠಿಸುತ್ತಾರೆ. ಹಾಗೂ 'ಯರಲವ' ಬೀಜಾಕ್ಷರಗಳನ್ನು ಪಠಿಸಿ ನ್ಯಾಸವನ್ನು ಮಾಡುತ್ತಾರೆ. ಈ ಕ್ರಮವನ್ನು ಶ್ರೀಮದಾಚಾರ್ಯರು ಹೇಳಿರುವುದಿಲ್ಲ. ಮತ್ತು ಶ್ರೀಮದಾಚಾರ್ಯರು ಹೇಳಿದ ನ್ಯಾಸಕ್ರಮವನ್ನು ಅವಶ್ಯವಾಗಿ ಆಚರಿಸಲೇಬೇಕು ಎಂಬ ಉದ್ದೇಶದಿಂದ ಇಲ್ಲಿ ತಂತ್ರಸಾರಸಂಗ್ರಹದ ನ್ಯಾಸಕ್ರಮವನ್ನೇ ಅಳವಡಿಸಲಾಗಿದೆ. ಸಾಧಕರು ಈ ಕ್ರಮವನ್ನೇ ಅನುಸರಿಸಬೇಕು.

ಸುಲಭವಾಗಿ ಪೂಜೆಯನ್ನು ಆಚರಿಸಬೇಕೆಂಬ ಉದ್ದೇಶದಿಂದ ಆಯಾ ವಿಧಾನಗಳನ್ನು ಶೀರ್ಷಿಕೆ ರೂಪದಲ್ಲಿ ಅಲ್ಲಲ್ಲಿ ನೀಡಲಾಗಿದೆ. ಅದರ ಪ್ರಕಾರ ಪೂಜೆಯನ್ನು ಅನುಷ್ಠಾನ ಮಾಡಬೇಕು. ಈ ಪುಸ್ತಕದ ಬಗ್ಗೆ ಹಾಗೂ ಮಾಡಬೇಕಾದ ವಿಧಿವಿಧಾನಗಳ ಬಗ್ಗೆ ಪುಸ್ತಕವನ್ನು ಮುಂದೆ ಓದುತ್ತಾ ಅರ್ಥವಾಗುತ್ತದೆ. ಪ್ರಾರಂಭದಲ್ಲಿ ನೀಡಿದ ಸೂಚನೆಗಳನ್ನು ಓದಿಯೇ ದೇವರ ಪೂಜೆಯನ್ನು ಮಾಡಿದರೆ ವಿಷಯಗಳು ಮನದಟ್ಟಾಗುತ್ತವೆ.

ಮನುಸ್ಮೃತಿಯ ಮಾತಿನಂತೆ ನಿತ್ಯವೂ ಮನೆಗೆ ಅಭ್ಯುಕ್ಷಣವನ್ನು ಮಾಡಬೇಕು. 'ನ ವಿನಾ ಅಭ್ಯುಕ್ಷಣಂ ಜಾತು ವಿಧಿಜ್ಞಃ ಕಿಂಚಿದಾಚರೇತ್' ಎಂಬ ಸಂಗ್ರಹಗ್ರಂಥದ ಆಧಾರದಂತೆ ನಿತ್ಯವೂ ನಾವು ವಾಸಿಸುವ ಮನೆಗೆ ಅಭ್ಯುಕ್ಷಣವನ್ನು ಮಾಡಬೇಕು.

ಅಭ್ಯುಕ್ಷಣ ಎಂದರೆ ಸಿಂಪಡಿಸುವುದು ಎಂದರ್ಥ. ಜಲಾಭಿಮಾನಿ ದೇವತೆಗಳನ್ನು ಪ್ರಾರ್ಥನೆ ಮಾಡಿ ಬಲಗೈಯ್ಯಲ್ಲಿ ನೀರನ್ನು ಹಾಕಿಕೊಂಡು – 'ವೈಶ್ವಾನರಾಯ ವಿದ್ಮಹೇ ಲಾಲೀಲಾಯ ಧೀಮಹಿ ತನ್ನೋ ವಹ್ನಿ ಪ್ರಚೋದಯಾತ್' ಎಂಬ ಅಗ್ನಿಗಾಯತ್ರಿಯನ್ನು ಪಠಿಸಿ ಮನೆಗೆ ಪ್ರೋಕ್ಷಣೆಯನ್ನು ಮಾಡಬೇಕು. ಆಗ ಮನೆಯಲ್ಲಿದ್ದ ಎಲ್ಲ ದೋಷಗಳು ಪರಿಹಾರವಾಗುತ್ತವೆ. 'ಪ್ರೋಕ್ಷಣರಹಿತೇ ಗೃಹೇ ಕಿಂಚಿದಪಿ ನ ಕರ್ತವ್ಯಮ್' ಎಂಬುದಾಗಿ ಮನುಸ್ಮೃತಿಯಲ್ಲಿ ಹೇಳಿದ್ದಾರೆ. ಮತ್ತು ಶಾಟ್ಯಾಯನರು 'ತತಃ ಸೂತ್ರಮುಪಸ್ಥಾಪ್ಯ ಸಮ್ಯಗಾಚಮ್ಯಚ ಸ್ವಯಂ । ಅಭ್ಯುಕ್ಷಣಂ ಸಮಾದಾಯ ಸಂಯತಾತ್ಮಾ ಗೃಹಂ ವ್ರಜೇತ್॥' ಎಂದು ಹೇಳಿದ್ದಾರೆ.

ಸಂಧ್ಯಾವಂದನೆ ಮಾಡಿದ ಮೇಲೆ ಆಚಮನ ಮಾಡಿ ಮನೆಯ ಹೊರಗೆ ನಿಂತು ಜಿತೇಂದ್ರಿಯನಾಗಿ ಅಭ್ಯುಕ್ಷಣವನ್ನು ಮಾಡಬೇಕು. ಅನಂತರ ಮನೆಯ ಒಳಗೆ ಪ್ರವೇಶಮಾಡಬೇಕು. ಈ ಕ್ರಮವನ್ನು ಸಾಧಕರು ಅಳವಡಿಸಿಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.

ಇಲ್ಲಿರುವ ದೇವಪೂಜಾಪದ್ಧತಿಯು ಅತ್ಯಂತವಿವರವಾಗಿದೆಯೆಂದು ಸರ್ವಥಾ ತಿಳಿಯಬಾರದು. ಇಷ್ಟನ್ನು ಆಚರಿಸಲು ಕೇವಲ ಅರ್ಧಗಂಟೆ ಸಾಕು. ನಾವು ಇಲ್ಲಿರುವ ಮಂತ್ರಗಳನ್ನು ಬಿಟ್ಟು ಉಳಿದ ಮಂತ್ರಗಳನ್ನು ಪೂಜೆಯಲ್ಲಿ ಹೇಳುವ ಅವಶ್ಯಕತೆ ಇರುವುದಿಲ್ಲ. ಈ ಪುಸ್ತಕದಲ್ಲಿ ವಿಷ್ಣುಸಹಸ್ರನಾಮವನ್ನು ಮಾತ್ರ ಮುದ್ರಿಸಿಲ್ಲ. ಅದೊಂದನ್ನು ಪೂಜಾಕಾಲದಲ್ಲಿ ಸ್ವತಃ ಉಚ್ಚರಿಸುವ ಕ್ರಮವನ್ನು ಅಳವಡಿಸಿ-ಕೊಳ್ಳಬೇಕು. ಪ್ರಾರಂಭದಲ್ಲಿ ಮಂತ್ರಗಳು ಕಂಠಪಾಠವಾಗುವ ತನಕ ಬಹಳ ಸಮಯ ತೆಗೆದುಕೊಳ್ಳುತ್ತದೆ. ಕಂಠಪಾಠವಾದ ಮೇಲೆ ಇಲ್ಲಿರುವ ಮಂತ್ರಗಳನ್ನು ಉಚ್ಚರಿಸಿ ಪೂಜಿಸಲು ಹೆಚ್ಚು ಸಮಯ ಬೇಕಾಗುವುದಿಲ್ಲ. ಆದ್ದರಿಂದ ಸಾಧಕರು ಭಗವಂತನ ಪೂಜೆಯನ್ನು ವೇದೋಕ್ತಮಂತ್ರಗಳಿಂದಲೇ ಈ ಕ್ರಮದಲ್ಲಿ ಆಚರಿಸಬೇಕೆಂದು ಕಳಕಳಿಯಿಂದ ಪ್ರಾರ್ಥಿಸುತ್ತೇನೆ.

ಈ ಪುಸ್ತಕದ ಕೊನೆಯಲ್ಲಿ ಶತಾಪರಾಧಸ್ತೋತ್ರವನ್ನು, ಪದ್ಯಮಾಲಾವನ್ನು, ಯೋಗದೀಪಿಕಾವನ್ನು ನೀಡಲಾಗಿದೆ. ಇದನ್ನು ಪಾರಾಯಣ ಮಾಡಿ ಮನೋಗತ

ಮಾಡಿಕೊಳ್ಳಬೇಕು. ಆದರೆ ಅನುಯಾಗ, ಔಪಾಸನೆ, ವೈಶ್ವದೇವ, ಬಲಿಹರಣ ಇವುಗಳ ವಿಧಿವಿಧಾನಗಳನ್ನು ನೀಡಲು ಇಲ್ಲಿ ಅವಕಾಶವಾಗಿಲ್ಲ. ಸ್ವತಃ ಸಾಧಕರು ಇದರ ಬಗ್ಗೆ ತಿಳಿದುಕೊಳ್ಳಬೇಕು.

ಈ ಪುಸ್ತಕವನ್ನು ಇಟ್ಟುಕೊಂಡು ಪೂಜೆಯನ್ನು ಮಾಡಬಹುದು. ಸುಲಭವಾಗಿ ಅರ್ಥವಾಗುವಂತೆ ವಿಧಿವಿಧಾನಗಳನ್ನು ಅಲ್ಲಲ್ಲಿ ತಿಳಿಸಲಾಗಿದೆ. ಎಲ್ಲ ಹರಿಭಕ್ತರು ಇದರ ಸದುಪಯೋಗವನ್ನು ಪಡೆದುಕೊಳ್ಳಬೇಕು.

ಈ ಸಂಪುಟವನ್ನು ಮುದ್ರಣ ಮಾಡಿಸುವಲ್ಲಿ ಆರ್ಥಿಕವಾಗಿ ಸಹಾಯ ನೀಡಿದ ಹರಿಭಕ್ತರಾದ ಶ್ರೀಯುತ ಅನಂತಮೂರ್ತಿದಂಪತಿಗಳಿಗೆ ಆಯುಷ್ಯಾರೋಗ್ಯಗಳ ಜೊತೆ ಜ್ಞಾನಭಕ್ತಿವೈರಾಗ್ಯಗಳು ಪ್ರಾಪ್ತವಾಗಿ ತನ್ಮೂಲಕ ಶ್ರೀಹರಿಯ ಅನುಗ್ರಹ ದೊರೆಯಲಿ; ಹಾಗೂ ಅವರ ಮಾತಾಪಿತೃಗಳಿಗೆ ಉತ್ತಮೋತ್ತಮ ಸದ್ಗತಿಯು ದೊರಕಲಿ ಎಂದು ಶ್ರೀಹರಿಯಲ್ಲಿ ಭಕ್ತಿಪೂರ್ವಕ ಪ್ರಾರ್ಥಿಸುತ್ತೇನೆ.

ಇತಿ ಸಜ್ಜನವಿಧೇಯ,<br>
ವಿದ್ವಾನ್ ಬೆಮ್ಮತ್ತಿವೇಂಕಟೇಶಾಚಾರ್ಯ,<br>
ಸಂಪಾದಕರು, ಬೆಂಗಳೂರು.

|| ಶ್ರೀಮದ್ಧನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ ||

# ಇದನ್ನು ಓದದೇ ಪೂಜಿಸಬೇಡಿ?

* ಗಂಧ, ಅಕ್ಷತೆ, ಹೂವು, ತುಳಸಿ, ಹಣ್ಣುಹಂಪಲು ಇವೆಲ್ಲವೂ ಜಡ ಪದಾರ್ಥಗಳು. ನಾವು ಪೂಜಿಸುವ ಮೂರ್ತಿಗಳು, ಶಾಲಗ್ರಾಮಗಳು ಕೂಡ ಜಡಪದಾರ್ಥಗಳು (ನ ಪ್ರತೀಕೇ ನ ಹಿ ಸಃ). ಭಕ್ತಿಯಿಲ್ಲದೇ, ಅನುಸಂಧಾನವಿಲ್ಲದೇ ಪೂಜೆ ಮಾಡಿದಲ್ಲಿ ಇದು ಕೇವಲ ಕಲ್ಲು ಮಣ್ಣುಗಳ ಜೊತೆ ಆಟವಾಡಿದಂತೆ.

* ನಮ್ಮ ಹೃದಯದ ಮಧ್ಯದಲ್ಲಿ ಅಷ್ಟದಳ ಕಮಲವಿದೆ. ಅಲ್ಲಿ ನಮ್ಮನ್ನು ಸಲಹುತ್ತಿರುವ ಬಿಂಬರೂಪಿಯಾದ ಭಗವಂತನಿದ್ದಾನೆ. ಇವನನ್ನು ಅಂತರಂಗದಲ್ಲಿ ಮಾನಸಿಕವಾಗಿ ಪೂಜಿಸಲು ನಮಗೆ ಸಾಧ್ಯವಾಗುತ್ತಿಲ್ಲ. ಅದಕ್ಕಾಗಿ ಹೃತ್ಕಮಲದಿಂದ ಸುಷುಮ್ನಾನಾಡಿಯ ಮೂಲಕ ಮೂಗಿನ ರಂಧ್ರದಿಂದ ತುಲಸೀದಳದಲ್ಲಿ ಆ ಬಿಂಬನನ್ನು ತಂದು ಮೂರ್ತಿಯಲ್ಲಿ ಇಟ್ಟು, ಬಾಹ್ಯವಾಗಿ ಪೂಜಿಸುವುದೇ ದೇವರಪೂಜೆ.

* ಗಂಧ, ಅಕ್ಷತೆ, ಪುಷ್ಪ ಈ ಎಲ್ಲಾ ಪೂಜಾಪರಿಕರಗಳಲ್ಲಿಯೂ ಭಗವಂತನು ನೆಲೆಸಿರುವನು. ಇಂಥ ಭಗವಂತನನ್ನು ಎಲ್ಲೆಡೆಯೂ ಅನುಸಂಧಾನ ಮಾಡುತ್ತಾ ಪೂಜಿಸುವುದೇ ನಿಜವಾದ ದೇವರ ಪೂಜೆ. ಇಲ್ಲದಿದ್ದರೆ ಅದು ಜಡಪೂಜೆ.

* ಪ್ರತಿಮೆಗಳಲ್ಲಿ ಮಾತ್ರ ಬಿಂಬರೂಪಿಯಾದ ಭಗವಂತನ ಪೂಜೆಯಲ್ಲ; ಶಾಲ-ಗ್ರಾಮಗಳಲ್ಲಿ ಸ್ವಯಂವ್ಯಕ್ತ ಮೂರ್ತಿಗಳಲ್ಲಿಯೂ ಬಿಂಬನದ್ದೇ ಪೂಜೆ ನಡೆಯಬೇಕು. ಆವಾಹನೆ ಮಾತ್ರ ಅಲ್ಲಿರುವುದಿಲ್ಲ.

* ತಾಯಿ ಮಗುವಿಗೆ ಅಕ್ಷರಾಭ್ಯಾಸ ಮಾಡಿಸುವಾಗ ಬರೆದ ಅಕಾರವನ್ನೇ ಪುನಃ ಪುನಃ ತಿದ್ದಿಸುತ್ತಾಳೆ. ಅಕಾರವನ್ನು ಕಲಿತ ಮೇಲೆ ಯಾರ ಸಹಾಯವೂ ಇಲ್ಲದೇ ಮೊದಲೇ

ಬರೆದ ಆಕಾರದ ಸಹಾಯವೂ ಇಲ್ಲದೇ ಸ್ವತಂತ್ರವಾಗಿ ಮಗುವು 'ಅ' ಎಂದು ಬರೆಯುತ್ತದೆ. ಇದರಂತೆ ಮೊದಮೊದಲು ಮಾನಸಿಕವಾಗಿ ಅಂತರಂಗದಲ್ಲಿ ಪೂಜಿಸಲು ಸಾಧ್ಯವಾಗದೇ ಜಡವಾದ ಮೂರ್ತಿಗಳಲ್ಲಿ ಶಾಲಗ್ರಾಮಾದಿಗಳಲ್ಲಿ ಪೂಜೆಯನ್ನು ಮಾಡಬೇಕು. ಆದರೆ ಇದರಲ್ಲೇ ಜೀವನವನ್ನು ಕಳೆಯಬಾರದು. ಏತನ್ಮೂಲಕ ಬಿಂಬರೂಪಿಯಾದ ಭಗವಂತನನ್ನು ನೇರವಾಗಿ ಸ್ವತಂತ್ರವಾಗಿ ಪೂಜಿಸುವ ಕೌಶಲವನ್ನು ಪಡೆದುಕೊಳ್ಳಬೇಕು. ಆಗಷ್ಟೇ ಬಾಹ್ಯ ಪೂಜೆಗೆ ಬೆಲೆ.

* ಈ ದೇಹವೇ ಒಂದು ರಥ, ಮಾಡುವ ಸ್ನಾನವೇ ಶ್ರೀಹರಿಗೆ ಅಭಿಷೇಕ, ಧರಿಸುವ ಉಡುಪುಗಳು ಆವನ ಅಲಂಕಾರ; ಭುಂಜಿಸುವುದೇ ಅವನ ನೈವೇದ್ಯ – ಈ ಅನುಸಂಧಾನ-ದಲ್ಲಿ 'ಸುಲಭಪೂಜೆ ಮಾಡಿ ಬಲವಿಲ್ಲದವರು' ಎಂದು ಪುರಂದರದಾಸರು ದಾರಿ ತೋರಿಸಿರುವರು.

* ಪ್ರತಿಮೆಯಲ್ಲಿ ಹೃತ್ಕಮಲದಿಂದ ಬಿಂಬರೂಪಿಯಾದ ಭಗವಂತನನ್ನು ಆವಾಹನೆ ಮಾಡುವಂತೆ, ಶಾಲಗ್ರಾಮಾದಿಗಳಲ್ಲಿ ಅನುಸಂಧಾನ ಮಾಡುವಂತೆ, ಮುಖ್ಯಪ್ರಾಣದೇವರ ಪ್ರತಿಮೆಯಲ್ಲಿಯೂ ಹೃತ್ಕಮಲದಲ್ಲಿ ಹಂಸಮಂತ್ರ ಜಪಿಸುತ್ತಿರುವ ಪ್ರಾಣದೇವರನ್ನೇ ತಂದು ಆವಾಹನೆ ಮಾಡಿ ಪೂಜಿಸಬೇಕು. ಗರುಡದೇವರು ಶೇಷದೇವರು ಸಹ ಹೃತ್ಕಮಲದ ಎದುರು ನಿಂತಿರುತ್ತಾರೆ. ಅವರನ್ನು ಆವಾಹನೆ ಮಾಡಬೇಕು.

* ದೇವರನ್ನು ಪೂಜಿಸುವ ಮಂಟಪದಲ್ಲಿ ಭಗವಂತನ ಪ್ರತೀಕಗಳಷ್ಟೇ ಇರಬೇಕು. ಪೀಠದ ಕೊನೆಯ ಬಲಭಾಗದಲ್ಲೊಂದು ಮುಖ್ಯಪ್ರಾಣದೇವರ ಪ್ರತಿಮೆ, ಎಡಭಾಗದಲ್ಲಿ ಗರುಡ ಶೇಷದೇವರ ಪ್ರತಿಮೆಗಳು ಇರಬೇಕು. ಉಳಿದ ಯಾರೇ ದೇವತೆಗಳ ಹಾಗೂ ಗುರುಗಳ ಪ್ರತೀಕಗಳನ್ನು ದೇವರ ಪೀಠದಲ್ಲಿ ಸರ್ವಥಾ ಇಡಬಾರದು. ದೇವರ ಪೂಜೆಯ ಜೊತೆ ಪೂಜಿಸಲೂ ಬಾರದು.

ವಿಷ್ಣೋಶ್ಚ ಪುರತೋ ನೈವ ಹ್ಯನ್ಯಸ್ಯ ಪ್ರತಿಮಾಂ ಯಜೇತ್।
ವರ್ಜಯಿತ್ವಾ ಹನೂಮಂತಂ ಶೇಷಂ ಗರುಡಮೇವ ಚ॥ (ಪದ್ಮಪುರಾಣ)

* ಭಗವಂತನ ಯಾವ ಮೂರ್ತಿಯನ್ನು ಪೂಜಿಸುತ್ತೇವೋ ಆ ರೂಪದ ಮಂತ್ರದ ಉಪದೇಶವಿರಬೇಕು. ನಿತ್ಯವೂ ಅದನ್ನು ಜಪಿಸಬೇಕು. ಪೂಜೆಯ ಆರಂಭದಲ್ಲಿ ಮೂರ್ತಿ-ಯನ್ನು ಸ್ಪರ್ಶಿಸಿ ಆ ಮಂತ್ರವನ್ನು ಅಕ್ಷರಾನುಸಾರಿಯಾಗಿ ಜಪಿಸಬೇಕು. ತಪ್ಪದೇ ಅದರ ನ್ಯಾಸವನ್ನು ಮಾಡಬೇಕು. ಜೊತೆಯಲ್ಲಿ ತತ್ವನ್ಯಾಸ, ಮಾತೃಕಾನ್ಯಾಸಗಳನ್ನು ಮಾಡದೇ ಪೂಜಿಸಬಾರದು. ಇದು ಕಡ್ಡಾಯ. ಇಲ್ಲದಿದ್ದರೆ ಜಡಪೂಜೆಯ ಫಲವಷ್ಟೇ ನಮ್ಮ ಪ್ರಾಪ್ತಿ.

* ಯಾರಿಗೆ ನ್ಯಾಸಗಳ ಆವಾಹನೆ, ಪ್ರತ್ಯಾವಾಹನೆಗಳ ಬಗ್ಗೆ ಕೌಶಲ್ಯವಿರುವುದಿಲ್ಲವೋ ಅವರು ಮೂರ್ತಿಗಳ ಪೂಜೆಯನ್ನು ಮಾಡುತ್ತೇನೆಂಬ ಸಾಹಸಕ್ಕೆ ಮುನ್ನುಗ್ಗಬಾರದು. ಇದುವೇ ದೇವರ ಪೂಜೆಯಲ್ಲಿ ಬಹುದೊಡ್ಡ ಪಾತ್ರ. ಪೂಜಿಸುವುದು ಬಿಂಬರೂಪಿಯಾದ ಭಗವಂತನ ಪ್ರೀತಿಗೋಸ್ಕರ ಮಾತ್ರ. ಉಳಿದ ಫಲ ಇದರಲ್ಲಿ ಇರುವುದಿಲ್ಲ. ಕೇವಲ ಶಾಲಗ್ರಾಮ ಹಾಗೂ ಸುದರ್ಶನಗಳ ಪೂಜೆಗೆ ನ್ಯಾಸಾದಿಗಳ ಅವಶ್ಯಕತೆ ಇರುವುದಿಲ್ಲ.

* ಷೋಡಶ ಉಪಚಾರಗಳನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು – (೧) ಅರ್ಘ್ಯ , (೨) ಪಾದ್ಯ , (೩) ಆಚಮನ, (೪) ಮಧುಪರ್ಕ, (೫) ಪುನರಾಚಮನ (೬) ಸ್ನಾನ, (೭) ವಸ್ತ್ರ, (೮) ಭೂಷಣ, (೯) ಯಜ್ಞೋಪವೀತ (೧೦) ಆಸನ, (೧೧) ಗಂಧ, (೧೨) ಪುಷ್ಪ, (೧೩) ಧೂಪ, (೧೪) ದೀಪ, (೧೫) ನೈವೇದ್ಯ, (೧೬) ನಮಸ್ಕಾರ. ಈ ಕ್ರಮದಲ್ಲಿಯೇ ಉಪಚಾರಗಳನ್ನು ನಿವೇದಿಸಬೇಕು. (ಆಸನವನ್ನು ಮೊದಲು ಹಾಗೂ ಸ್ನಾನದ ನಂತರ ಸಮರ್ಪಿಸುವ ಕ್ರಮವಿದೆ. ತಂತ್ರಸಾರಸಂಗ್ರಹದಲ್ಲಿ ಗಂಧ ಹಚ್ಚುವ ಮೊದಲು ಸಮರ್ಪಿಸಬೇಕೆಂದು ತಿಳಿಸಿದ್ದಾರೆ).

* ಇವು ಮುಖ್ಯವಾದ ಹದಿನಾರು ಉಪಚಾರಗಳು. ಇವುಗಳ ಜೊತೆ ಉಳಿದ ಕೆಲವು ಅನೂಪಚಾರಗಳನ್ನು ಸೇರಿಸಿ ಪೂಜಿಸಬೇಕು . ಹದಿನಾರನ್ನು ಬಿಡಬಾರದು ಎಂದಷ್ಟೇ ತಾತ್ಪರ್ಯ.

* ''ಸರ್ವೋತ್ಕರ್ಷಮವಿಜ್ಞಾಯ ವಿಷ್ಣೋರ್ಯಾತಿ ತಮೋ ಧ್ರುವಮ್'' - ಯಾರಿಗೆ ವಿಷ್ಣುವಿನ ಸರ್ವೋತ್ತಮತ್ವದ ಬಗ್ಗೆ ದಾರ್ಢ್ಯವಿರುವುದಿಲ್ಲವೋ ಅವನು ತಮಸ್ಸಿಗೆ ಹೋಗುವುದು ನಿಶ್ಚಯ ಎಂಬ ತಂತ್ರಸಾರದ ಮಾತಿನಂತೆ ದೇವರ ಪೂಜೆಯ ಮುಖ್ಯಸಿದ್ಧತೆ ಎಂದರೆ ವಿಷ್ಣುಸರ್ವೋತ್ತಮತ್ವದ ದೀಕ್ಷೆ.

* ಪೂಜ್ಯಶ್ಚ ಭಗವಾನ್ನಿತ್ಯಂ ಚಕ್ರಾಬ್ಜಾದಿಕಮಂಡಲೇ – ಎಂಬ ತಂತ್ರಸಾರದ ಮಾತಿನಂತೆ ಚಕ್ರಾಬ್ಜಮಂಡಲದಲ್ಲಿ ಭಗವಂತನನ್ನಿಟ್ಟು ಪೂಜಿಸಬೇಕು. ಆ ಚಕ್ರಾಬ್ಜಮಂಡಲವನ್ನು ರಂಗವಲ್ಲಿಯಲ್ಲಿ ಲೋಹದ ಫಲಕದಲ್ಲಿ ಮರದ ಹಲಗೆಯಲ್ಲಿ ಕಲ್ಲಿನಲ್ಲಿಯೂ ತಯಾರು ಮಾಡಿರಬಹುದು.

* ಕೆಲವರು ಒಂದೇ ಸ್ತೋತ್ರವನ್ನು ಹೇಳಿಕೊಂಡು ದೇವರ ಪೂಜೆಯನ್ನು ಮುಗಿಸುತ್ತಾರೆ. ಪದ್ಯಮಾಲೆಯನ್ನು ನೋಡಿದಾಗ ಪ್ರತಿಯೊಂದು ಪೂಜೆಗೂ ಬೇರೆ ಬೇರೆ ಮಂತ್ರಗಳಿವೆಯೆಂದು ಸ್ಪಷ್ಟವಾಗುತ್ತದೆ. ಪ್ರಯತ್ನಪೂರ್ವಕವಾಗಿ ಪದ್ಯಮಾಲೆಯಲ್ಲಿರುವ

ಸ್ತೋತ್ರಗಳನ್ನು ಕಲಿತು ಅಥವಾ ಪುಸ್ತಕವನ್ನು ನೋಡಿಕೊಂಡಾದರೂ ಆಯಾ ಉಪಚಾರ-ಗಳಿಗೆ ಆಯಾ ಮಂತ್ರಗಳನ್ನೇ ಹೇಳಬೇಕು. ರಾಗಬದ್ಧವಾಗಿ ಅಥವಾ ಉಚ್ಚ ಕಂಠದಿಂದ ಒಂದು ಸ್ತೋತ್ರ ಹೇಳುವುದು ಮುಖ್ಯವಲ್ಲ. ಯಾವ ಸಮಯಕ್ಕೆ ಯಾವ ಸ್ತೋತ್ರ ಹೇಳಬೇಕೋ ಆಗ ಅದನ್ನೇ ಹೇಳಬೇಕು.

* ಬ್ರಹ್ಮಪಾರಸ್ತೋತ್ರ, ಪುರುಷಸೂಕ್ತ, ವಿಷ್ಣುಸಹಸ್ರನಾಮ, ದ್ವಾದಶಸ್ತೋತ್ರ ಈ ನಾಕನ್ನೂ ಪೂಜೆಯಲ್ಲಿ ಹೇಳದೇ ಇರುವಂತಿಲ್ಲ. ಪೂರ್ಣವಾಗದಿದ್ದಲ್ಲಿ ಯಥಾಶಕ್ತಿ ಹೇಳಿದರೆ ಸಾಕು.

* ತುಂಬಾ ಅವಸರವಿದ್ದಾಗ ಪೂಜೆ ಬಿಡುವಂತಿಲ್ಲ. ಪೂಜೆಯ ಎಲ್ಲ ಮಂತ್ರಗಳನ್ನೂ ಪಠಿಸಲು ಸಾಧ್ಯವಾಗದಿದ್ದಲ್ಲಿ ಪುರುಷಸೂಕ್ತದಿಂದ ಹದಿನಾರು ಉಪಚಾರಗಳನ್ನು ಸಮ-ರ್ಪಿಸಲು ಋಗ್ವಿಧಾನವು ಸಮ್ಮತಿ ನೀಡಿದೆ. ಅದಕ್ಕೂ ಸಮಯವಿಲ್ಲದಾಗ ನಾರಾಯಣಾ-ಷ್ಟಾಕ್ಷರವನ್ನೊಮ್ಮೆ ಹೇಳಿ ಉದ್ಧರಣೆಯಿಂದ ನೀರು ಹಾಕಿ ತುಳಸಿದಳ ಇಟ್ಟು ನಮಿಸಲು ಹಿರಿಯರು ತಿಳಿಸಿದ್ದಾರೆ. –

ಯೋ ಮೋಹಾದಥವಾಽಲಸ್ಯಾತ್ ಅಕೃತ್ವಾ ದೇವತಾರ್ಚನಮ್ ।
ಭುಂಕ್ತೇ ಸ ಯಾತಿ ನಿರಯಂ ಸೂಕರತ್ವಂ ಚ ಗಚ್ಛತಿ ॥

ಯಾರು ಮೋಹದಿಂದ, ಸೋಮಾರಿತನದಿಂದ ದೇವರಪೂಜೆಯನ್ನು ಮಾಡದೇ ಭೋಜನ ಮಾಡುತ್ತಾನೋ ಅವನು ನಿಶ್ಚಯವಾಗಿ ನರಕಕ್ಕೆ ಹೋಗುತ್ತಾನೆ; ಮುಂದೆ ಹಂದಿಯಾಗುತ್ತಾನೆ.

* 'ಜಲಂ ದಲಂ ತುಲಸ್ಯಾ ವಾ ಅವಶ್ಯಂ ವಿಷ್ಣೋಃ ಸಮರ್ಪಯೇತ್ ।
ಪಶ್ಯೇದ್ ವಾಽನ್ಯಕೃತಾಂ ಪೂಜಾಂ ಸೋಽಪಿ ಸ್ಯಾತ್ ಕೃತಪೂಜನಃ ॥

ಯಾರಿಗೆ ವಿಸ್ತಾರಪೂಜೆ ಮಾಡಲು ಸಾಧ್ಯವಾಗುವುದಿಲ್ಲವೋ ಅವರು ಒಂದು ಉದ್ಧರಣೆ ನೀರು ಅಥವಾ ತುಳಸಿ ಸಮರ್ಪಿಸಿದರೆ ಸಾಕು. ಇದೂ ಆಗದಿದ್ದರೆ ಮತ್ತೊಬ್ಬರು ಪೂಜೆ ಮಾಡುವುದನ್ನು ನೋಡಿದರೆ ಸಾಕು. ಪೂಜೆ ಮಾಡದೇ ಇರುವುದಂತೂ ತಪ್ಪು.

* * * * * *

## ದೇವರ ಪೂಜೆ ಏಕೆ ಮಾಡಬೇಕು?

* ನಮ್ಮ ಜೀವನ ಪಶುಗಳ ಜೀವನವಾಗಬಾರದು. ಬದುಕಿಗೆ ಏನಾದರೂ ಒಂದು ಸಾರ್ಥಕ್ಯ ಬರಬೇಕು ಎಂದರೆ ದೇವರಪೂಜೆ ಮಾಡಬೇಕು –

"ತೇ ನರಾ ಪಶವೋ ಲೋಕೇ ಕಿಂ ತೇಷಾಂ ಜೀವನೇ ಫಲಮ್ ।
ಯೈರ್ನ ಲಬ್ಧಾ ಹರೇರ್ದೀಕ್ಷಾ ನಾರ್ಚಿತೋ ವಾ ಜನಾರ್ದನಃ ॥"

* ಯಾರ ಆಯುಷ್ಯವು ಪಾಪಮಯವಾಗಬಾರದೆಂಬ ಉದ್ದೇಶವಿರುತ್ತದೋ ಯಾರ ಆಯುಷ್ಯವು ವ್ಯರ್ಥವಾಗಬಾರದೋ ಅವರು ದೇವರ ಪೂಜೆಯನ್ನೇ ಮಾಡಬೇಕೆಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಹೇಳುತ್ತಾನೆ. –

ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೇ ಹಿ ಯಃ ।
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥

* ಎಲ್ಲ ದೇವತೆಗಳನ್ನು ಪೂಜಿಸಬೇಕೆಂಬ ಅಪೇಕ್ಷೆ ಇದ್ದರೆ ಪೂಜಿಸಲು ಸಾಧ್ಯವಾಗದಿದ್ದರೆ ಕೇವಲ ಭಗವಂತನನ್ನು ಪೂಜಿಸಿದರೆ ಸಾಕು. ಹೀಗೆ ಎಲ್ಲ ದೇವತೆಗಳ ಗುರುಗಳ ಅನುಗ್ರಹಕ್ಕಾಗಿ ದೇವರ ಪೂಜೆಯನ್ನು ಮಾಡಬೇಕು.

ಅರ್ಚಿತೇ ದೇವದೇವೇಶೇ ಶಂಖಚಕ್ರಗದಾಧರೇ ।
ಅರ್ಚಿತಾಃ ಸರ್ವದೇವಾ ಸ್ಯುಃ ಯತಃ ಸರ್ವಗತೋ ಹರಿಃ ॥

* ಭಗವಂತ ನಮಗೆ ಕೊಟ್ಟಿದ್ದನ್ನು ಅವನಿಗೇ ಸಮರ್ಪಿಸಬೇಕು. ಇಲ್ಲದಿದ್ದರೆ ನಾವು ಕಳ್ಳರಾಗುತ್ತೇವೆ. ನಮ್ಮನ್ನು ಶ್ರೀಕೃಷ್ಣನೇ ಕಳ್ಳ ಎಂದು ಹೇಳುತ್ತಾನೆ. ಕಳ್ಳತನದ ಅಪವಾದದಿಂದ ಮುಕ್ತರಾಗಬೇಕೆಂದರೆ ದೇವರ ಪೂಜೆಯನ್ನು ಮಾಡಬೇಕು. ದೇವರ ಪೂಜೆಯಲ್ಲಿ ದೇವರು ನಮಗೆ ನೀಡಿದ್ದೆಲ್ಲವನ್ನೂ ಸಮರ್ಪಣೆ ಮಾಡಬೇಕು – "ತೈರ್ದತ್ತಾ ನ ಪ್ರದಾಯೇಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ" ।

* ಜೀವನದಲ್ಲಿ ಸ್ಥಾನಮಾನವನ್ನು ಪಡೆದುಕೊಳ್ಳಲು ಅಪೇಕ್ಷಿತವಾದ ಫಲಗಳನ್ನು ಪಡೆದುಕೊಳ್ಳಲು ದೇವರ ಪೂಜೆಯನ್ನೇ ಮಾಡಬೇಕೆನ್ನುತ್ತದೆ ಕೃಷ್ಣಾಮೃತಮಹಾರ್ಣವ –

ಪ್ರಾಪ್ನೋತ್ಯಾರಾಧಿತೇ ವಿಷ್ಣೌ ಮನಸಾ ಯದ್ಯದಿಚ್ಛತಿ ।
ತ್ರೈಲೋಕ್ಯಾಂತರ್ಗತಂ ಸ್ಥಾನಂ ಕಿಮು ಲೋಕೋತ್ತರೋತ್ತರಮ್ ॥

* ಯಾರು ತಮಗಾಗಿ ಬೇಯಿಸಿ ತಿನ್ನುತ್ತಾರೋ ಅವರು ತಿನ್ನುವುದು ಅನ್ನವನ್ನಲ್ಲ. ಪಾಪವನ್ನು. ನಾವು ತಿನ್ನುವ ಪ್ರತಿಯೊಂದು ಪದಾರ್ಥವು ಶುದ್ಧವಾಗಿರಬೇಕೆಂದರೆ, ಪಾಪ ರಹಿತವಾಗಿರಬೇಕೆಂದರೆ ದೇವರ ಪೂಜೆಯನ್ನು ಮಾಡಿ ಎಲ್ಲವನ್ನೂ ಅಲ್ಲಿ ಸಮರ್ಪಿಸ-ಬೇಕು. – ''ಭುಂಜತೇ ತೇ ತ್ವಘಂ ಪಾಪಾಃ ಯೇ ಪಚಂತ್ಯಾತ್ಮಕಾರಣಾತ್ ॥''

* ನಾವು ಭೂಮಿಗೆ ಭಾರವಾಗಬಾರದು; ಅನ್ನಕ್ಕೆ ಶತ್ರುವಾಗಬಾರದು; ಹುಟ್ಟಿದ್ದು ವ್ಯರ್ಥವಾಗಬಾರದು. ಅದಕ್ಕಾಗಿ ದೇವರನ್ನು ಪೂಜಿಸಬೇಕು. ದೇವರನ್ನು ಸ್ಮರಿಸಬೇಕು; ಸ್ತುತಿಸಬೇಕು – ಕಿಂ ತೇನ ಜಾತಮಾತ್ರೇಣ ಭೂಭಾರೇಣಾನ್ನಶತ್ರುಣಾ । ಯೋ ಜಾತೋ ನಾರ್ಚಯೇತ್ ವಿಷ್ಣೋಃ ನ ಸ್ಮರೇತ್ ನಾಪಿ ಕೀರ್ತಯೇತ್ ॥

* ಧರ್ಮ, ಅರ್ಥ, ಕಾಮಗಳನ್ನು ಇಹಲೋಕದಲ್ಲಿ ಅನುಭವಿಸಿ, ಪರಲೋಕದಲ್ಲಿ ಮೋಕ್ಷವನ್ನು ಪಡೆಯಬೇಕೆಂದರೆ ಇರುವ ದಾರಿ ಒಂದೇ ಒಂದು. ಅದುವೇ ದೇವರ ಪೂಜೆ. –ಜಪಧ್ಯಾನಹುತಾರ್ಚಾದೀನ್ ಏವಂ ಯಃ ಕುರುತೇ ಸದಾ। ಧರ್ಮಾರ್ಥಕಾಮಮೋಕ್ಷಾಣಾಂ ಭಾಜನಂ ಸ್ಯಾತ್ ಸ ಏವ ಹಿ ॥ (ತಂತ್ರಸಾರ)

* ಹಾಗಿದ್ದರೆ ಇಂದೇ ಪ್ರತಿಜ್ಞೆ ಮಾಡೋಣ – ''ಇನ್ನೆಂದೂ ಎಲ್ಲಿಯೂ ದೇವರ ಪೂಜೆಯನ್ನು ನಾನು ಬಿಡುವುದಿಲ್ಲ. ನಿತ್ಯವೂ ದೇವರ ಕರ್ತವ್ಯಗಳಲ್ಲಿ ತೊಡಗುತ್ತೇನೆ. ತನ್ಮೂಲಕ ಭಗವಂತನ ಕೃಪೆಗೆ ಪಾತ್ರನಾಗುತ್ತೇನೆ'' ಎಂದು.

* * * * * *

# ದೇವರ ಪೂಜೆ ಮಾಡಲು ಇಷ್ಟು ಅಂಶಗಳು ತಿಳಿಯಲೇ ಬೇಕು?

* ತಂತ್ರಸಾರಸಂಗ್ರಹದ ಪ್ರಥಮಾಧ್ಯಾಯದಲ್ಲಿ ಇಪ್ಪತ್ತೊಂದು ಶ್ಲೋಕಗಳಿಂದ ದೇವರ ಪೂಜೆಯನ್ನು ಶ್ರೀಮಧ್ವಾಚಾರ್ಯರು ವಿಧಿಸಿದ್ದಾರೆ. ಅದನ್ನು ಶ್ರೀಮಟ್ಟೀಕಾಕೃತ್ಪಾ-ದರು ಪದ್ಯಮಾಲಾ ಎಂಬ ಗ್ರಂಥದಿಂದ ೧೨೩ ಶ್ಲೋಕಗಳಿಂದ ವ್ಯಾಖ್ಯಾನ ಮಾಡಿದ್ದಾರೆ.

* ತಂತ್ರಸಾರಸಂಗ್ರಹ ಹಾಗೂ ಪದ್ಯಮಾಲಾಗ್ರಂಥಕ್ಕೆ ಅನುಗುಣವಾಗಿ ಇಲ್ಲಿ ದೇವರ ಪೂಜೆಯನ್ನು ನೀಡಲಾಗಿದೆ. ಪ್ರಯತ್ನಪೂರ್ವಕವಾಗಿ ಪ್ರತಿಯೊಬ್ಬರೂ ಇದೇ ಕ್ರಮದಲ್ಲಿ ದೇವರಪೂಜೆಯನ್ನು ಮಾಡಬೇಕು.

* ಮುಖ್ಯಪ್ರಾಣದೇವರ ಪೂಜೆಯನ್ನು ಪದ್ಯಮಾಲಾದಲ್ಲಿ ಹೇಳಿರುವುದಕ್ಕಿಂತ ಸ್ವಲ್ಪ ವ್ಯತ್ಯಾಸಮಾಡಿ ನೀಡಲಾಗಿದೆ (ಕೇವಲ ಅನುಕೂಲಕ್ಕಾಗಿ). ಹಾಗೂ ಭಗವಂತನ ಅಷ್ಟೋತ್ತರಶತನಾಮಾವಳಿಯನ್ನು ಪದ್ಯಮಾಲಾದಲ್ಲಿ ಹೇಳದೇ ಇದ್ದರೂ ಕೂಡ ಸೇರಿ-ಸಲಾಗಿದೆ. ಹಾಗೂ ಪದ್ಯಮಾಲಾದಲ್ಲಿರುವ ಎಲ್ಲ ಮಂತ್ರಗಳನ್ನು ಇಲ್ಲಿ ನೀಡಿದೆ. ಉಪಯುಕ್ತವಾದ ಇನ್ನು ಕೆಲವು ಬೇರೆ ಮಂತ್ರಗಳನ್ನು ಕೂಡ ಅಲ್ಲಲ್ಲಿ ನೀಡಲಾಗಿದೆ.

* ಶ್ರೀಮಧ್ವಾಚಾರ್ಯರ ದಿನಚರಿಯನ್ನು ಗಮನಿಸಿದಾಗ ಹಾಗೂ ಸಂಪ್ರದಾಯವನ್ನು ನೋಡಿದಾಗ, ಶಾಸ್ತ್ರಗಳನ್ನು ಅವಲೋಕಿಸಿದಾಗ ಮಧ್ಯಾಹ್ನವೇ ದೇವರ ಪೂಜೆಯು ವಿಹಿತವಾಗುತ್ತದೆ.

* ಅರುಣೋದಯಕಾಲದಲ್ಲೆದ್ದು ಶೌಚಾಚಾರಗಳನ್ನು ಮುಗಿಸಿ, ಸ್ನಾನ ಸಂಧ್ಯಾ-ವಂದನೆಯನ್ನು ಮಾಡಲೇ ಬೇಕು. ಮತ್ತು ಸ್ನಾನವಾದ ಕೂಡಲೇ ನಿರ್ಮಾಲ್ಯಾಭಿಷೇಕವನ್ನು ಕೂಡ ಮಾಡಲೇ ಬೇಕು. ದೇವರ ಪೂಜೆಯನ್ನು ಮಾತ್ರ ಮಧ್ಯಾಹ್ನಕಾಲದಲ್ಲಿ ಮಾಡಬೇಕು.

* ಮಠಗಳಲ್ಲಿ ಹಾಗೂ ದೇವಸ್ಥಾನಗಳಲ್ಲಿ ಇದೇ ಕ್ರಮದಲ್ಲಿ ಇಂದೂ ಸಹ ಪೂಜೆಯು ನಡೆಯುತ್ತದೆ. ಆದರೆ ಕೆಲವು ಗೃಹಸ್ಥರಿಗೆ ಇದನ್ನು ಅನುಷ್ಠಾನ ಮಾಡಲು ಸಾಧ್ಯವಾಗುತ್ತಿಲ್ಲ.

* ಮಧ್ಯಾಹ್ನಕಾಲದಲ್ಲಿ ಪೂಜೆ ಮಾಡುವುದು ಶ್ರೇಷ್ಠವೆಂದು ಪ್ರಾತಃಕಾಲದಲ್ಲಿ ಮಾಡಲಾಗದೇ ಪೂಜೆಯನ್ನೇ ಬಿಡುವ ಪರಿಸ್ಥಿತಿ ಬರಬಾರದು. ಮಧ್ಯಾಹ್ನಕಾಲದಲ್ಲಿ ಪೂಜೆಯನ್ನು ಮಾಡಲು ಸಾಧ್ಯವಾಗದೇ ಇರುವವರು ಪ್ರಾತಃಕಾಲದಲ್ಲಿಯೇ ಪೂಜೆಯನ್ನು ಮಾಡಬಹುದು.

* ಆದಷ್ಟು ವಿಳಂಬವಾಗಿ ದೇವರ ಪೂಜೆಯು ವಿಹಿತವೆಂದು ಕೆಲವರು ಅರುಣೋ-ದಯಕಾಲದಲ್ಲಿ ಸ್ನಾನಾದಿಗಳನ್ನು ಮಾಡದೇ ಸೂರ್ಯೋದಯವಾದ ಮೇಲೆ ಸ್ನಾನಾದಿಗಳನ್ನು ಮಾಡುತ್ತಾರೆ. ಇದು ಸರ್ವಥಾ ತಪ್ಪು. ಯಾವುದೇ ಕಾರಣಕ್ಕೂ ಸೂರ್ಯೋದಯದ ಮೇಲೆ ಸ್ನಾನವನ್ನು ಮಾಡಬಾರದು. ಸೂರ್ಯೋದಯಕ್ಕಿಂತ ಮೊದಲೇ ಸ್ನಾನವನ್ನು ಮಾಡಿ ಸಂಧ್ಯಾವಂದನೆಯನ್ನು ಮಾಡಬೇಕು.

* ಗ್ರಹಣಕಾಲವು ಮುಗಿದ ಮೇಲೆ ಗ್ರಹಣವನ್ನು ಆಚರಣೆ ಮಾಡುವುದು ಹೇಗೆ ವ್ಯರ್ಥವೋ ಅದರಂತೆ ಸಂಧ್ಯಾಕಾಲದಲ್ಲಿ ಸಂಧ್ಯಾವಂದನೆಯನ್ನು ಮಾಡದೇ ಸಂಧ್ಯಾಕಾಲ ಮೀರಿದ ಮೇಲೆ ಮಾಡಿದ ಸಂಧ್ಯಾವಂದನೆಯೂ ಕೂಡ ವ್ಯರ್ಥವಾಗುತ್ತದೆ.

* ಸರಿಯಾದ ಸಮಯದಲ್ಲಿ ಸಂಧ್ಯಾವಂದನೆ ಮಾಡದೇ ಇರುವವನಿಗೆ ದೇವರ ಪೂಜೆಯ ಅನುಷ್ಠಾನವು ಪೂರ್ಣಫಲವನ್ನು ಕೊಡುವುದಿಲ್ಲ.

* ಮಧ್ಯಾಹ್ನಕಾಲದಲ್ಲಿ ಪೂಜೆ ಮಾಡದೇ ಇರುವುದು ತಪ್ಪಲ್ಲ. ಸೂರ್ಯೋದಯದ ಮೊದಲು ಸಂಧ್ಯಾವಂದನೆ ಮಾಡದಿರುವುದು ತಪ್ಪು. ಸೂರ್ಯೋದಯ ಕಾಲದಲ್ಲಿ ಪೂಜೆ ಮಾಡುವುದೂ ಸಹ ತಪ್ಪಲ್ಲ. ಸೂರ್ಯೋದಯದ ಮೊದಲು ಸಂಧ್ಯಾವಂದನೆ ಮಾಡ-ದಿರುವುದು ತಪ್ಪು.

* ಗೃಹಸ್ಥರು ದೇವರ ಪೂಜೆಯನ್ನು ಮಾಡದೇ ಇರಲು ಅವಕಾಶವಿಲ್ಲ. ಹಾಗೂ ಶಾಲಗ್ರಾಮವನ್ನು ಸ್ಪರ್ಶಮಾಡದೆಯೂ ಕೂಡ ಇರಲು ಅವಕಾಶವಿಲ್ಲ.

* ಬೆಳಗ್ಗೆ ಭಗವಂತನಿಗೆ ಪೂಜೆ ಮಾಡುವಂತೆ ಸಾಯಂಕಾಲವೂ ಕೂಡ ನಿತ್ಯ ಪಂಚೋಪಚಾರಪೂಜೆಯನ್ನು ಮಾಡಬೇಕು. ಅನಂತರ ತೊಟ್ಟಿಲು ಪೂಜೆಯನ್ನು ಮಾಡಿ ಶ್ರೀಕೃಷ್ಣನನ್ನು ಮಲಗಿಸಬೇಕು.

* ದೇವರ ಕೋಣೆಯಲ್ಲಿ ಜಿರಳೆ, ಜೇಡರಬಲೆ, ಜೇಡರ ಹುಳು, ಹಲ್ಲಿ, ಇಲಿ, ಕ್ರಿಮಿಕೀಟಗಳು, ಧೂಳು, ಹೊಗೆ ಹಾಗೂ ಮೊಬೈಲ್ ಇವುಗಳು ಇಲ್ಲದಂತೆ ಅತ್ಯಂತ ಎಚ್ಚರವಹಿಸಬೇಕು.

* ನೋಡಲು ರಮ್ಯವಾದ ಪರಿಶುದ್ಧವಾದ ಸ್ಥಳದಲ್ಲಿ ಭಗವಂತನ ಸಾನ್ನಿಧ್ಯವಿರುತ್ತದೆ. ದೇವರ ಮನೆಯು ಕೊಳಕಾಗಿದ್ದರೆ ದೇವರ ಸಾನ್ನಿಧ್ಯವು ಕೂಡ ಕಮ್ಮಿಯಾಗುತ್ತದೆ.

* ಪ್ರಯತ್ನಪೂರ್ವಕವಾಗಿ ದೇವರ ಪೀಠ ಹಾಗೂ ಉಪಕರಣಗಳನ್ನು ವೈಭವೋ-ಪೇತವಾಗಿ ಮಾಡಿಸಬೇಕು. ಸಂಪಾದನೆಯ ಒಂದು ಭಾಗವನ್ನು ದೇವರ ಪೂಜೆಗೋಸ್ಕರ ವಿನಿಯೋಗಿಸಿ ಯಥಾಶಕ್ತಿ ದೇವರ ಮನೆಯನ್ನು ಹಾಗೂ ದೇವರ ಪೀಠಗಳನ್ನು ವೈಭವೀ-ಕರಿಸಬೇಕು.

* ಶುದ್ಧವಾದ ಮಡಿಗೆ ಅನುಕೂಲವಾಗುವ ನೆಲವನ್ನು ರಚನೆ ಮಾಡಿರಬೇಕು. ಮಡಿಗೆ ಬಾರದ ಕೆಲವು ಟೈಲ್ಸ್‌ಗಳನ್ನು ಹಾಗೂ ಪ್ಲಾಸ್ಟಿಕ್ ಮೊದಲಾದ ಸ್ಟಿಕ್ಕರ್‌ಗಳನ್ನು ಪ್ಲಾಸ್ಟಿಕ್ ಫೋಟೋಗಳನ್ನು ಪ್ಲಾಸ್ಟಿಕ್ ರಂಗೋಲಿ ಇತ್ಯಾದಿಗಳನ್ನು ದೇವರ ಮನೆಯಲ್ಲಿ ಇಲ್ಲದಂತೆ ಎಚ್ಚರ ವಹಿಸಬೇಕು.

* ದೇವರ ಮನೆಯಲ್ಲಿ ಚಿತ್ರಗಳನ್ನು ಹಾಕುವುದಿದ್ದರೆ ಭಗವಂತನ ಚಿತ್ರವನ್ನೇ ಹಾಕಬೇಕು. ಉಳಿದ ದೇವತೆಗಳ ಅಥವಾ ಗುರುಗಳ ಚಿತ್ರಗಳನ್ನು ಹಾಕುವುದು ಪ್ರಶಸ್ತವಲ್ಲ.

* ದೇವರ ಮನೆಯಲ್ಲಿ ಗುರುಗಳ ಪಾದುಕೆಗಳನ್ನು ಕೂಡ ಇಡುವುದು ಪ್ರಶಸ್ತವಲ್ಲ. ಅದಕ್ಕಾಗಿ ಪ್ರತ್ಯೇಕ ವ್ಯವಸ್ಥೆಯನ್ನು ಮನೆಯಲ್ಲಿ ಮಾಡಬೇಕು.

* ದೇವರ ಪೀಠದಲ್ಲಿ ಪ್ರಾಣದೇವರು ಗರುಡದೇವರನ್ನು ಬಿಟ್ಟು ಉಳಿದ ಯಾವುದೇ ದೇವರ ವಿಗ್ರಹಗಳನ್ನು ಅಥವಾ ಪ್ರತೀಕಗಳನ್ನು ಇಡಬಾರದು. ಗುರುಗಳ ವೃಂದಾವನವನ್ನೂ ಕೂಡ ಮತ್ತೊಂದು ಕಡೆ ಇಡಲು ಅನುಕೂಲ ಮಾಡಿಕೊಳ್ಳಬೇಕು.

* ನಾವು ಮನೆಯಲ್ಲಿ ಕುಳಿತುಕೊಳ್ಳುವ ಕುರ್ಚಿ, ಮಂಚ, ಉಳಿದ ಆಸನಗಳು ಇವೆಲ್ಲದರಕ್ಕಿಂತ ದೇವರ ಕಟ್ಟೆ ಎತ್ತರದಲ್ಲಿರಬೇಕು. ಭಗವಂತನನ್ನು ಕೆಳಗೆ ಇಟ್ಟು ಅದೇ ಮನೆಯಲ್ಲಿ ಎತ್ತರಸ್ಥಾನದಲ್ಲಿ ನಾವು ಕುಳಿತುಕೊಳ್ಳುವುದು ಬಹಳ ತಪ್ಪಾಗುತ್ತದೆ.

* ನಿಂತು ಕೊಂಡು ಪೂಜಿಸುವುದು ಕೂಡ ಅತ್ಯಂತ ಅರ್ಥಪೂರ್ಣವಾಗಿದೆ. ಆದ್ದರಿಂದ ದೇವರ ಕಟ್ಟೆಯನ್ನು ಎತ್ತರ ಮಾಡಿಸಿ ನಿಂತು ಪೂಜಿಸಬಹುದು. ಪ್ರದಕ್ಷಿಣೆ ಮೊದಲಾದವುಗಳನ್ನು ಮಾಡಲು ಕೂಡ ಅನುಕೂಲ ಮಾಡಿಕೊಳ್ಳಬೇಕು.

* ದೇವರ ಮನೆಯಲ್ಲಿ ಚಕ್ರ , ಶಂಖ, ಜಯಶಬ್ದ, ಮಂಗಳ ಶಬ್ದಗಳನ್ನು ಬರೆದಿ-ರಬೇಕು. ದೇವರ ಕಟ್ಟೆಯ ಕೆಳಗೆ ನಿತ್ಯವೂ ರಂಗವಲ್ಲಿ ಹಾಕಲು ಅನುಕೂಲ ಮಾಡಿಕೊಳ್ಳ-ಬೇಕು. ಹಾಗೂ ನಿತ್ಯವೂ ರಂಗವಲ್ಲಿಯನ್ನು ಹಾಕಲೇ ಬೇಕು.

* ನಿತ್ಯವೂ ಶೆಗಣಿಯಿಂದ ದೇವರ ಮನೆಯನ್ನು ಶುದ್ಧಿಗೊಳಿಸಬೇಕು.

* ತುಳಸಿಯನ್ನು ಸ್ನಾನವಾದ ಮೇಲೆ ಬಿಡಿಸಬೇಕು. ನಿಷಿದ್ಧ ತಿಥಿವಾರಗಳಲ್ಲಿ ತೆಗೆಯ ಬಾರದು. ಮಂಜರಿಯಿರುವ ತುಳಸಿಯೇ ದೇವರಿಗೆ ಅತ್ಯಂತ ಇಷ್ಟವಾಗಿದೆ. ಈ ತುಳಸಿಯನ್ನು ತೊಳೆಯಬಾರದು. ವಸ್ತ್ರಾದಿಗಳಲ್ಲಿ ತರಬಾರದು. ದೇವರ ಸ್ಮರಣೆಯಿಲ್ಲದೇ ತೆಗೆಯ ಬಾರದು. ಹೆಚ್ಚಿನ ವಿಚಾರವನ್ನು ಉತ್ಥಾನದ್ವಾದಶೀ ಪುಸ್ತಕದಿಂದ ತಿಳಿದುಕೊಳ್ಳಬೇಕು.

* ದುಡ್ಡುಕೊಟ್ಟು ತೆಗೆದುಕೊಂಡ, ಕಳ್ಳತನ ಮಾಡಿದ, ಶೂದ್ರರಿಂದ ತರಸಲ್ಪಟ್ಟ, ಭೂಮಿಯಲ್ಲಿ ಬಿದ್ದ ಹೂವುಗಳನ್ನು ಪರಿತ್ಯಾಗ ಮಾಡಬೇಕು. ಇವುಗಳು ಪೂಜೆಗೆ ಅನರ್ಹ-ವಾಗಿವೆ ಎಂದು ಪದ್ಮಮಾಲಾದಲ್ಲಿ ಶ್ರೀಮಟ್ಟೀಕಾಕೃತ್ಪಾದರು ತಿಳಿಸಿದ್ದಾರೆ.

ಅಕ್ರೀತಾನ್ಯಪ್ರದತ್ತಾನಿ ಚೌರ್ಯಾಲ್ಲಬ್ಧಾನಿ ಯಾನಿ ಚ ।
ಶೂದ್ರಾಹೃತಾನಿ ವಾ ಭೂಮೌ ಪತಿತಾನಿ ತಥೈವ ಚ ॥

* ಕೆಲವರು ಕೊಂಡ ಹೂ ಮೊದಲಾದವುಗಳನ್ನು ಉಪಯೋಗಿಸಿಕೊಂಡೇ ಪೂಜಿಸುತ್ತಿರುತ್ತಾರೆ. ಅಂಥವರನ್ನು ಕಂಡು ಇವರು ಮಾಡುವ ಪೂಜೆ ವ್ಯರ್ಥ ಎಂದು ಅವರನ್ನು ತಿರಸ್ಕಾರ ಮಾಡಬಾರದು. ಅಥವಾ ನಿಂದಿಸಬಾರದು. ಅವರಿಗೆ ಅವಹೇಳನ ಮಾಡಬಾರದು. ಏಕೆಂದರೆ, ಮತ್ತೊಬ್ಬರ ಅಂತರಂಗದ ಸಾಧನೆ ಕೆಲವೊಮ್ಮೆ ಶಾಸ್ತ್ರ ಮೀರಿಯೂ ನಡೆದಿರುತ್ತದೆ.

* ನಾವು ಇರುವ ದೇಶಕಾಲಗಳಲ್ಲಿ ಯಾವುದು ಅತ್ಯಂತ ಪ್ರಶಸ್ತವಾಗಿದೆಯೋ ಅದನ್ನು ಉಪಯೋಗಿಸಿಕೊಂಡು ಆಯಾ ಧರ್ಮಕಾರ್ಯಗಳನ್ನು ನಾವು ಮಾಡಬೇಕು. ನಮ್ಮ ದೇಶಕಾಲಗಳನ್ನು ಮೀರಿದ ಸಾಧನೆಯನ್ನು ಮಾಡಲು ನಾವು ಅಪಾತ್ರರು ಮತ್ತು ಅಯೋಗ್ಯರು. ಇದನ್ನರಿತುಕೊಂಡು ಪೂಜಾಸಾಮಗ್ರಿಗಳನ್ನು ಫಲಪುಷ್ಪಾದಿಗಳನ್ನು, ಗಂಧ-ವನ್ನು ತೇಯಲು ಉಪಯೋಗಿಸುವ ಕೇಸರಿ ಮೊದಲಾದವುಗಳನ್ನು ಬಳಸಿಕೊಳ್ಳಬೇಕು.

* ಪರಿಶುದ್ಧವಾದ ರೀತಿಯಲ್ಲಿಯೇ ಪೂಜೆಯನ್ನು ಮಾಡಬೇಕು. ಅದು ಸಾಧ್ಯ-ವಾಗದೇ ಇದ್ದಾಗ ಆ ಕರ್ಮವನ್ನೇ ಲೋಪ ಮಾಡಬಾರದು. ದೋಷಪೂರಿತವಾಗಿದ್ದರೂ ಉಳಿದ ಧರ್ಮದ ಆದೇಶದಂತೆ ಅದನ್ನು ಆದಷ್ಟು ಪವಿತ್ರಗೊಳಿಸಿ ಭಗವಂತನಿಗೆ ಸಮರ್ಪಿಸಬೇಕು. 'ಸದೋಷಮಪಿ ನ ತ್ಯಜೇತ್'.

* ಈಗಿನ ಕಾಲದಲ್ಲಿ ಕೇಸರಿ, ಪಚ್ಚಕರ್ಪೂರ, ಏಲಕ್ಕಿ , ಗಂಧದ ಕೊರಡು (ಗಂಧದ ಕೊರಡಿನಲ್ಲಿಯೂ ಎಣ್ಣೆ ತೆಗೆದಿರುತ್ತಾರೆ), ಹಾಲು, ಬೆಣ್ಣೆ, ತುಪ್ಪ, ಹೂವು, ಹಣ್ಣು,

ನೈವೇದ್ಯಕ್ಕೆ ಉಪಯೋಗಿಸುವ ಎಲ್ಲ ಆಹಾರಪದಾರ್ಥಗಳು ಕಲುಷಿತವೇ ಆಗಿವೆ. ಪದ್ಯಮಾಲಾದಲ್ಲಿ ಹೇಳಿದಂತೆ ಅನುಷ್ಠಾನ ಮಾಡಲು ನಮ್ಮಿಂದ ಸಾಧ್ಯವೇ ಆಗುತ್ತಿಲ್ಲ. ಈ ದೋಷವನ್ನು ನಮ್ಮಲ್ಲಿ ತಿಳಿದು ಆ ಕ್ರಿಯೆಯನ್ನು ಪರಿತ್ಯಾಗ ಮಾಡುವುದಕ್ಕಿಂತ ದೋಷವಿದ್ದರೂ ಕೂಡ ಆದಷ್ಟು ಅದನ್ನು ಪವಿತ್ರಗೊಳಿಸಿ ಭಗವಂತನಿಗೆ ಸಮರ್ಪಣೆ ಮಾಡಿ ಆ ಕರ್ಮವನ್ನು ಆಚರಣೆ ಮಾಡಬೇಕು.

* ಕಂಠದಲ್ಲಿ ತುಳಸೀಮಾಲೆಯನ್ನು ಹಾಗೂ ಕಮಲಾಕ್ಷಮಾಲೆಯನ್ನು ಧಾರಣ ಮಾಡಿಯೇ ಪೂಜೆಯನ್ನು ಮಾಡಬೇಕು. ಇಲ್ಲದಿದ್ದರೆ ಭಗವಂತನು ನಾವು ಪೂಜಿಸುವುದನ್ನು ಸ್ವೀಕರಿಸುವುದಿಲ್ಲ. ಹಾಗೂ ಎರಡು ವಸ್ತ್ರಗಳನ್ನು ಧಾರಣೆ ಮಾಡಿರಲೇಬೇಕು. ಆದರೆ ಬ್ರಹ್ಮವಸ್ತ್ರವನ್ನು ಅಥವಾ ಶಾಲನ್ನು ಹೊದ್ದುಕೊಂಡಿರಬಾರದು.

ಪ್ರದಕ್ಷಿಣೇ ಪ್ರಣಾಮೇ ಚ ಪೂಜಾಯಾಂ ಭೋಜನೇ ಜಪೇ ।
ಆಶ್ವಲಾಯನಶಾಖೀಯಸ್ತಥಾ ಸ್ನಾನೇ ಚ ಸುವ್ರತ ।
ನ ಕಂಠಾವೃತವಸ್ತ್ರಸ್ಯಾದ್ದರ್ಶನೇ ಗುರುದೇವಯೋಃ ॥

ಉಕ್ತಂ ಚಾನ್ಯತ್ರ –
ಶ್ರಾದ್ಧೇ ಸ್ನಾನೇ ಸುರಾಣಾಂ ಚ ನಮಸ್ಕಾರೇ ತಥೈವ ಚ ।
ಬಧ್ನೀಯಾದಂಬರಂ ಕಟ್ಯಾಂ ದ್ವಿಜೋಽನ್ಯೋ ಬಹ್ವೃಚಂ ವಿನಾ ॥
(ಪದ್ಯಮಾಲಾವ್ಯಾಖ್ಯಾನೇ)

ಪ್ರದಕ್ಷಿಣೆ ಮಾಡುವಾಗ, ನಮಸ್ಕಾರ ಮಾಡುವಾಗ, ಪೂಜೆ ಮಾಡುವಾಗ, ಊಟ ಮಾಡುವಾಗ ಆಶ್ವಲಾಯನಶಾಖೆಯವರು ಕಂಠದ ಮೇಲೆ ಬಟ್ಟೆಯನ್ನು ಹಾಕಿಕೊಂಡಿರ-ಬಾರದು. (ಎರಡು ಭುಜಗಳಲ್ಲಿ ಬಟ್ಟೆಯನ್ನು ಹೊದ್ದುಕೊಂಡಿರಬಾರದು). ಅದರಂತೆ ಸ್ನಾನ ಮಾಡುವಾಗ, ಗುರುಗಳ ದರ್ಶನಕ್ಕೆ ತೆರಳಿದಾಗ, ದೇವತೆಗಳ ದರ್ಶನಕ್ಕೆ ತೆರಳಿದಾಗಲೂ ಕಂಠದ ಮೇಲೆ ಬಟ್ಟೆಯಿರಬಾರದು.

ಹಾಗೇ ಮತ್ತೊಂದು ಕಡೆ ಹೀಗಿದೆ – ಶ್ರಾದ್ಧದಲ್ಲಿ ಸ್ನಾನದಲ್ಲಿ ದೇವತೆಗಳನ್ನು ನಮಸ್ಕರಿಸುವ ಸಮಯದಲ್ಲಿ ಉತ್ತರೀಯವನ್ನು ಕಟಿಪ್ರದೇಶದಲ್ಲಿ ಕಟ್ಟಿಕೊಳ್ಳಬೇಕು. ಋಗ್ವೇದಿಗಳನ್ನು ಬಿಟ್ಟು. ಮೊದಲ ಶ್ಲೋಕದಲ್ಲಿ ಋಗ್ವೇದಿಗಳಿಗೆ ಈ ವಿಧಿಯನ್ನು ಹೇಳಿದ್ದಾರೆ. ಎರಡನೆಯ ಶ್ಲೋಕದಲ್ಲಿ ಉಳಿದವರಿಗೂ ಈ ವಿಧಿಯನ್ನು ತಿಳಿಸಿದ್ದಾರೆ.

ಕೆಲವರು ಮುಂಡಾಸು ಕಟ್ಟಿಕೊಂಡು ಪೂಜಿಸುತ್ತಾರೆ. ಕೆಲವರು ಮುಂಡಾಸಿನ

ಜೊತೆ ಶಿವಿ ಹಾಗೂ ಗದ್ದೆಗಳನ್ನು ಕೂಡ ವಸ್ತ್ರದಿಂದ ಸುತ್ತಿ ಪೂಜಿಸುತ್ತಾರೆ. ಕೂದಲು ಮೊದಲಾದವುಗಳ ಸಂಪರ್ಕ ಆಗಬಾರದೆಂದಷ್ಟೇ ಇದರ ಉದ್ದೇಶ. ಇದಕ್ಕೆ ಯಾವುದೇ ವಿರೋಧವಿರುವುದಿಲ್ಲ.

* ಸ್ನಾನವನ್ನು ಮಾಡಿ ಒಣಗಿದ ಮಡಿವಸ್ತ್ರವನ್ನೇ ಉಟ್ಟುಕೊಂಡು ಪೂಜೆಯನ್ನು ಮಾಡಬೇಕು. ಒದ್ದೆ ಬಟ್ಟೆಯನ್ನು ಉಟ್ಟು ಕೂಡ ಪೂಜಿಸಬಾರದು.

* ಕೆಲವರು ಉತ್ತರೀಯವನ್ನು ಹೊದ್ದುಕೊಳ್ಳಲು ಸಾಧ್ಯವಾಗುವುದಿಲ್ಲವೆಂಬ ದೃಷ್ಟಿಯಿಂದ ಮೂರನೆಯ ಯಜ್ಞೋಪವೀತವನ್ನು ಧಾರಣೆ ಮಾಡಿರುತ್ತಾರೆ. ಆದರೆ ಇದಕ್ಕೆ ಅಧಿಕಾರಿಗಳು ಮಾತ್ರ ಅರ್ಹರು ಅನಧಿಕಾರಿಗಳಲ್ಲ.

* ಏಕವಸ್ತ್ರಲಕ್ಷಣ –

ಸವ್ಯಾದಿಷಟ್ಪರಿಭ್ರಷ್ಟಃ ಕಟಿದೇಶಧೃತಾಂಬರಃ ।
ಏಕವಸ್ತ್ರಂ ತು ತಂ ವಿದ್ಯಾದ್ದೈವೇ ಪಿತ್ರ್ಯೇ ಚ ಕರ್ಮಣಿ ॥ (ಗೋಭಿಲರ ವಚನ)

'ಹೊದ್ದುಕೊಳ್ಳುವ ಉತ್ತರೀಯದಲ್ಲಿ ಆರು ಲಕ್ಷಣಗಳಿರಬೇಕು. (೧) ಎಡ ಹೆಗಲ ಮೇಲಿನ ಆ ವಸ್ತ್ರದ ಹಿಂದಿನ ಭಾಗವನ್ನು ತನ್ನ ಮುಂದೆ ಹಾಕಿಕೊಳ್ಳಬೇಕು. (೨) ಅದೇ ಹೆಗಲಿನ ಆ ವಸ್ತ್ರದ ಮೇಲೆ ಮುಂದಿನ ಭಾಗವನ್ನು ತನ್ನ ಹಿಂದೆ ಹಾಕಿಕೊಳ್ಳಬೇಕು. (೩) ಆ ವಸ್ತ್ರದ ಮಧ್ಯಭಾಗವು ಬಲಕಂಕುಳಿನ ಕೆಳಭಾಗದಲ್ಲಿ ಹೊಕ್ಕಳಿಗೆ ಸಮವಾಗಿರಬೇಕು. (೪) ಆ ವಸ್ತ್ರದ ಉಳಿದ ಭಾಗವು ತನ್ನ ಎದೆ ಮತ್ತು ಬೆನ್ನುಗಳಿಗೆ ತಗುಲಿದಂತಿರಬೇಕು. (೫) ಆ ವಸ್ತ್ರದಲ್ಲಿ ಕಪ್ಪುಬಣ್ಣದ ಅಂಚನ್ನು ಬಿಟ್ಟು ಇತರ ಬಣ್ಣದ ಅಂಚು ಇರಬೇಕು. (೬) ಆ ವಸ್ತ್ರವು ಶುಭ್ರವಾಗಿರಬೇಕು. ಈ ಆರು ಲಕ್ಷಣಗಳಲ್ಲಿ ಒಂದು ಲಕ್ಷಣವು ಕಡಿಮೆಯಾದರೂ ಆ ಉತ್ತರೀಯವನ್ನು ಅವನು ಧರಿಸಿದ್ದರೂ ಧರಿಸಿದಂತಾಗುವುದಿಲ್ಲ. ಆದ್ದರಿಂದ ಅವನು ಉಟ್ಟುಕೊಳ್ಳುವ ಮತ್ತು ಹೊದ್ದುಕೊಳ್ಳುವ ಎರಡು ವಸ್ತ್ರಗಳನ್ನು ಧರಿಸಿದ್ದರೂ ಏಕವಸ್ತ್ರನೆನಿಸುವನು.

* ಘಂಟಾವಾದನ ಕಾಲ –

ಸ್ನಾನೇ ಧೂಪೇ ತಥಾ ದೀಪೇ ನೈವೇದ್ಯೇ ಶಯನೇ ತಥಾ ।
ಬೋಧನೇ ಭೂಷಣೇ ಚೈವ ಕುರ್ಯಾದ್ ಘೋಷಂ ಸದಾ ನರಃ ॥

ಅಭಿಷೇಕ, ಧೂಪ-ದೀಪಗಳ ಸಮರ್ಪಣೆ, ನೈವೇದ್ಯ , ಶಯನೋತ್ಸವ, ಪ್ರವಚನ, ಅಲಂಕಾರಸಮಯಗಳಲ್ಲಿ ಸದಾ ಘಂಟಾವಾದನ ವಿಹಿತ.

* ಪೂಜಾಸಂದರ್ಭದಲ್ಲಿ ದರ್ಭೆಯ ಪವಿತ್ರ ಅಥವಾ ಚಿನ್ನದ ಪವಿತ್ರದುಂಗುರ, ಕಮಲಾಕ್ಷಮಣಿ, ತುಳಸೀಮಣಿ, ಉತ್ತರೀಯ ಇಷ್ಟನ್ನು ಅವಶ್ಯವಾಗಿ ಧರಿಸಿರಬೇಕು.

* ಭಗವಂತನ ಬಲಭಾಗದಲ್ಲಿ ಕುಳಿತು ಪೂಜೆಯನ್ನು ಮಾಡಬೇಕು. ನಮಸ್ಕಾರವನ್ನು ಕೂಡ ಬಲಭಾಗದಲ್ಲಿಯೇ ಮಾಡಬೇಕು. ದೇವರ ನಿರ್ಮಾಲ್ಯತೀರ್ಥವನ್ನು ಪ್ರಾಶನ ಮಾಡಿ ನಿರ್ಮಾಲ್ಯವನ್ನು ಧರಿಸಿಯೇ ಸತ್ಕರ್ಮಗಳನ್ನು ಮಾಡಬೇಕು. ಇಲ್ಲದಿದ್ದರೆ ಅದು ವ್ಯರ್ಥ-ವಾಗುತ್ತದೆ. ಆದ್ದರಿಂದ ಹಿಂದಿನ ದಿವಸವೇ ನಿರ್ಮಾಲ್ಯತೀರ್ಥವನ್ನು ಇಟ್ಟುಕೊಂಡಿರಬೇಕು. ಸ್ನಾನ ಮಾಡಿ ಬಂದ ಕೂಡಲೇ ಆಚಮನವನ್ನು ಮಾಡಿ ಮೊದಲು ನಿರ್ಮಾಲ್ಯತೀರ್ಥವನ್ನು ತೆಗೆದುಕೊಂಡು, ಎರಡು ಕಿವಿಗಳಲ್ಲಿ ನಾಭಿಯಲ್ಲಿ ತಲೆಯಲ್ಲಿ ನಿರ್ಮಾಲ್ಯತುಳಸಿಯನ್ನು ಧರಿಸಿ ಗೋಪೀಚಂದನ, ಪಂಚಮುದ್ರೆಗಳನ್ನು ಧರಿಸಬೇಕು.

* ಅನಂತರ ನಿರ್ಮಾಲ್ಯವಿಸರ್ಜನೆ ಹಾಗೂ ನಿರ್ಮಾಲ್ಯಾಭಿಷೇಕವನ್ನು ಮಾಡಿ, ಸಂಧ್ಯಾವಂದನಾದಿಗಳನ್ನು ಆಚರಿಸಬೇಕು. ನಿರ್ಮಾಲ್ಯವಿಸರ್ಜನೆ ಮಾಡುವ ಮೊದಲು ದ್ವಾರಪಾಲಕರಿಗೆ ನಮಸ್ಕಾರವನ್ನು ಮಾಡಿ, ದೇವರ ಮನೆಯ ಬಾಗಿಲನ್ನು ತೆಗೆದು ಪ್ರವೇಶ ಮಾಡಿ, ದೀಪವನ್ನು ಹಚ್ಚಿ, ಭೂತೋಚ್ಚಾಟನೆ ಆಚರಿಸಿ, ಮಾನುಷಗಂಧದ ನಿರಸನವನ್ನು ಮಾಡಿಕೊಳ್ಳಬೇಕು. ಬ್ರಹ್ಮಪಾರಸ್ತೋತ್ರವನ್ನು ಹೇಳಿ, ಘಂಟಾನಾದವನ್ನು ಮಾಡಿ ಅನಂತರ ನಿರ್ಮಾಲ್ಯವಿಸರ್ಜನೆಯನ್ನು ಮಾಡಬೇಕು.

* ಕೆಲವರು ಮೇಲಿನ ಅಂಶವನ್ನು ದೇವರ ಪೂಜೆಯ ಮೊದಲು ಮಾಡುತ್ತಾರೆ. ಆದರೆ ಪದ್ಯಮಾಲಾದ ಪ್ರಕಾರ ನಿರ್ಮಾಲ್ಯವಿಸರ್ಜನೆಯ ಮೊದಲೇ ಆಚರಿಸಬೇಕು.

* ನಿರ್ಮಾಲ್ಯವಿಸರ್ಜನೆ ಆದ ಬಳಿಕ ಮಂಟಪಧ್ಯಾನ, ಆಸನ, ದೇವತೆಗಳ ಚಿಂತನೆ, ದಿಗ್ಬಂಧನ ಇವುಗಳನ್ನು ಮಾಡಿ ಕರಶುದ್ಧಿ, ಗುರುವಂದನೆ, ಪಾಪಪುರುಷವಿಸರ್ಜನೆ, ಪ್ರಾಣಾಯಾಮ, ತತ್ವನ್ಯಾಸ, ಮಾತೃಕಾನ್ಯಾಸ, ಅಷ್ಟಾಕ್ಷರಮಂತ್ರಜಪ, ಪ್ರಾರ್ಥನಾ ಮಂತ್ರ ಇಷ್ಟನ್ನು ಆಚರಿಸಿ ಷೋಡಶೋಪಚಾರಪೂಜೆಯ ಸಂಕಲ್ಪವನ್ನು ಮಾಡಿ ಪೂಜೆಯನ್ನು ಆರಂಭ ಮಾಡಬೇಕು.

* ಅರುಣೋದಯಕಾಲದಲ್ಲಿ ನಿರ್ಮಾಲ್ಯವನ್ನು ತೆಗೆಯದೇ ಇದ್ದರೆ ಭಗವಂತನ ಹೃದಯಕ್ಕೆ ಶಲ್ಯ ಹಾಕಿದಂತಾಗುತ್ತದೆಂದು ಅರುಣೋದಯವೇಲಾಯಾಂ ನಿರ್ಮಾಲ್ಯಂ .. ವ್ರಜೇತ್' ಎಂಬ ಪ್ರಮಾಣವು ಹೇಳುತ್ತದೆ. ಆದ್ದರಿಂದ ಬ್ರಾಹ್ಮೀಮುಹೂರ್ತದಲ್ಲಿ ನಿರ್ಮಾಲ್ಯ -ವಿಸರ್ಜನೆ ಮಾಡಬೇಕು. ಅಸಾಧ್ಯವಾದ ಪಕ್ಷದಲ್ಲಿ ದೇವರ ಮೇಲೆ ನಿರ್ಮಾಲ್ಯವಿಲ್ಲದಂತೆ

ಹಿಂದಿನ ದಿನವೇ ವ್ಯವಸ್ಥೆ ಮಾಡಿರಬೇಕು. ನಿರ್ಮಾಲ್ಯವಿಸರ್ಜನೆ ಬಗ್ಗೆ ಪಂಚರಾತ್ರದಲ್ಲಿರುವ ಈ ಪ್ರಮಾಣಶ್ಲೋಕಗಳನ್ನು ಗಮನಿಸಿ.

* ರುದ್ರದೇವರು ದೇವರ ಬಲಬದಿಯಲ್ಲಿ ಬಂಗಾರದ ಹರಿವಾಣವನ್ನಿಟ್ಟುಕೊಂಡು ನಿಂತಿರುತ್ತಾರೆ. ಆ ಹರಿವಾಣದಲ್ಲಿ ನಿರ್ಮಾಲ್ಯವಿಸರ್ಜನೆಯನ್ನು ಮಾಡಬೇಕು.

* ಎರಡು ಕಲಶಕ್ಕೆ ನೀರನ್ನು ಹಾಕಿಕೊಂಡು ತುಳಸೀದಳವನ್ನು ಹಾಕಿ ಅಷ್ಟಾಕ್ಷರವನ್ನು ಎಂಟುಬಾರಿ ಜಪಿಸಿ, ಗಂಗೆಯ ಸಾನ್ನಿಧ್ಯವನ್ನು ಚಿಂತಿಸಿ, ಶಂಖವನ್ನು ತೊಳೆದು ಮೊದಲ ಕಲಶದಿಂದ ದೇವರ ಪ್ರತಿಮೆ ಶಾಲಿಗ್ರಾಮಗಳನ್ನು ತೊಳೆಯಬೇಕು. ಎರಡನೆಯ ಕಲಶದಿಂದ ನಿರ್ಮಾಲ್ಯಾಭಿಷೇಕವನ್ನು ಮಾಡಬೇಕು.

* ಶಾಲಿಗ್ರಾಮದಲ್ಲಿ ನಿತ್ಯದಲ್ಲಿ ಕಲಿಯಿರುತ್ತಾನೆಂದು ಒಂದು ಶ್ಲೋಕವಿದೆ. – 'ಶಾಲ-ಗ್ರಾಮಶಿಲಾಯಾಂ ತು ನಿತ್ಯಂ ಸನ್ನಿಹಿತಃ ಕಲಿಃ' ಎಂದು. ಈ ಶ್ಲೋಕಕ್ಕೆ ಸಂವಾದಿಪ್ರಮಾಣ ಇಲ್ಲದಿರುವುದರಿಂದ 'ನಿತ್ಯಂ ಸನ್ನಿಹಿತೋ ಹರಿಃ' ಎಂಬ ಪಾಠಾಂತರವೂ ಇರುವುದರಿಂದ ಅವಿಗೀತಶಿಷ್ಟಾಚಾರವು ಎಲ್ಲೆಡೆಯೂ ಇಲ್ಲದಿರುವುದರಿಂದ ಈ ಪುಸ್ತಕದಲ್ಲಿ ಇದರ ಅನುಷ್ಠಾನವನ್ನು ಕೈಬಿಡಲಾಗಿದೆ.

* ಕಲಿಚಿಂತನೆಯನ್ನು ಮಾಡುವುದಕ್ಕಿಂತ ನಿರ್ಮಾಲ್ಯವನ್ನು ಋಷಭಸೂಕ್ತವನ್ನು ಹೇಳುವ ಮೂಲಕ ತೊಳೆದು ವಿಷ್ಣುಸೂಕ್ತದಿಂದ ಅಭಿಷೇಕ ಮಾಡುವುದು ಶ್ರೇಷ್ಠವಾಗಿದೆ.

* ಕೆಲವರು ಶಂಖದಿಂದ ಅಭಿಷೇಕವನ್ನು ಮಾಡುವ ಸಂದರ್ಭದಲ್ಲಿ ಗಂಟೆಯನ್ನು ಬಾರಿಸುವುದಿಲ್ಲ. ಕಲಶದಿಂದ ಅಭಿಷೇಕವನ್ನು ಮಾಡುವ ಸಂದರ್ಭದಲ್ಲಿ ಮಾತ್ರ ಘಂಟಾ-ನಾದವನ್ನು ಮಾಡುತ್ತಾರೆ. ನಿರ್ಮಾಲ್ಯಾಭಿಷೇಕವನ್ನು ಶಂಖದಿಂದಲೇ ಮಾಡಬೇಕಾದ್ದರಿಂದ ಘಂಟಾನಾದ ಮಾಡಬೇಕಾಗಿಲ್ಲವೆಂಬುದು ಕೆಲವರ ಅಭಿಪ್ರಾಯ. ಸಂಪ್ರದಾಯವನ್ನು ಅನು-ಸರಿಸಬೇಕು.

* ಮೊದಲೊಮ್ಮೆ ಎಲ್ಲ ಪ್ರತಿಮೆಗಳನ್ನು ತೊಳೆದು, ನಿರ್ಮಾಲ್ಯಾಭಿಷೇಕವಾದ ಮೇಲೆ ಆ ನಿರ್ಮಾಲ್ಯತೀರ್ಥದಿಂದಲೇ ಶಂಖಕ್ಕೆ ಅಭಿಷೇಕ ಮಾಡಿ, ಮುಖ್ಯಪ್ರಾಣದೇವರ ಪ್ರತಿಮೆಗೆ ಅಭಿಷೇಕ ಮಾಡಿ, ಗರುಡಶೇಷರ ಪ್ರತಿಮೆಗೂ ಅಭಿಷೇಕ ಮಾಡಬೇಕು. ಮತ್ತೊಂದು ಪಾತ್ರೆಯಲ್ಲಿ ಆ ನಿರ್ಮಾಲ್ಯತೀರ್ಥ ತೆಗೆದುಕೊಂಡು ಮೂರು ಬಾರಿ ಆ ನಿರ್ಮಾಲ್ಯತೀರ್ಥವನ್ನು ಲಕ್ಷ್ಮೀದೇವಿಗೆ, ಪ್ರಾಣದೇವರಿಗೆ ಗರುಡಶೇಷರಿಗೆ ನೀಡಬೇಕು. ಅನಂತರ ಸಮಸ್ತಗುರು-ದೇವತಾದಿಗಳಿಗೂ ನಿರ್ಮಾಲ್ಯ ಪೂಜೆಯನ್ನು ಮಾಡಿ, ತಾನು ಆ ನಿರ್ಮಾಲ್ಯತೀರ್ಥವನ್ನು ಮರುದಿವಸಕ್ಕೆ ಇಟ್ಟುಕೊಳ್ಳಬೇಕು. ಅಥವಾ ತೆಗೆದುಕೊಳ್ಳಬೇಕು.

* ನಿರ್ಮಾಲ್ಯಾಭಿಷೇಕವು ಆದ ಮೇಲೆ ತುಳಸೀದಳವನ್ನು ಏರಿಸಿ ನಮಸ್ಕಾರವನ್ನು ಮಾಡಿ, ನಿರ್ಮಾಲ್ಯಪೂಜೆಯಿಂದ ಭಗವಂತನು ಸಂಪ್ರೀತನಾಗಲಿ ಎಂದು ಕೃಷ್ಣಾರ್ಪಣ ಬಿಟ್ಟು ಸಂಧ್ಯಾವಂದನೆಯನ್ನು ಪ್ರಾರಂಭ ಮಾಡಬೇಕು.

* ದೇವರ ಪೂಜೆಯನ್ನು ಮಾಡುವ ಮೊದಲು ಗಂಧಾಕ್ಷತೆಯನ್ನು ತೆಗೆದಿಟ್ಟುಕೊಳ್ಳ-ಬೇಕು. ತೀರ್ಥಕ್ಕೆ ಕೆಳಗೆ ಹೇಳಿದ ಹತ್ತು ಸುಗಂಧದ್ರವ್ಯಗಳನ್ನು ಹಾಕಬೇಕು. ಗಂಧಕ್ಕೂ ಹಾಕಬೇಕೆಂದು ಕೆಲವರು ಹೇಳುತ್ತಾರೆ. ಆದರೆ ಉಡುಪಿ ಶ್ರೀಕೃಷ್ಣಮಠದಲ್ಲಿ ತೀರ್ಥಕ್ಕೆ ಎಲ್ಲವನ್ನೂ ಹಾಕಿ ಗಂಧಕ್ಕೆ ಏನನ್ನೂ ಹಾಕುವುದಿಲ್ಲ. ಕೇವಲ ಚಂದನವನ್ನಷ್ಟೇ ತೇಯುತ್ತಾರೆ.

* ಉಷೀರಂ ಕುಂಕುಮಂ ಮಾಂಸೀ ಕುಷ್ಠಂ ಮಲಯಜೋಽಗುರುಃ ।
ಹ್ರೀರವೇರಂ ಮುರಂ ಚೇತಿ ಗಂಧಾಷ್ಟಕಮುದಾಹೃತಮ್ ॥

ಲಾವಂಚ, ಕೇಸರಿ, ಕಂಕುಷ್ಠದ ಬೇರು, ಜಟಾಮಾಂಸೀ, ಗಂಧ, ಅಗುರು, ಹ್ರೀರವೇರ, ಮುರ ಇವು ಅಷ್ಟಗಂಧಗಳೆಂದು ಕರೆಸಿಕೊಳ್ಳುತ್ತವೆ. ಅಷ್ಟಗಂಧವನ್ನು ತೇದು ತೀರ್ಥಕ್ಕೆ ಹಾಕಬೇಕು.

* ಅಷ್ಟಗಂಧದ ಜೊತೆ ಪಚ್ಚಕರ್ಪೂರ, ತುಲಸೀಕಾಷ್ಠ, ಏಲಕ್ಕಿಗಳನ್ನು ಸೇರಿಸುವ ಸಂಪ್ರದಾಯವಿದೆ.

ಏಲಕ್ಕಿಯನ್ನು ಬಿಟ್ಟರೆ ದಶಗಂಧಗಳಾಗುತ್ತವೆ. ದಶಗಂಧಗಳನ್ನು ತೀರ್ಥಕ್ಕೆ ಹಾಕಲೇ ಬೇಕು. ಗಂಧಕ್ಕೆ ಹಾಕಲೇ ಬೇಕೆಂಬ ವಿಧಿಯು ಇರುವುದಿಲ್ಲ.

* ಒಂದು ವೇಳೆ ಹತ್ತು ಗಂಧಗಳನ್ನು ತೇಯಲು ಸಾಧ್ಯವಾಗದಿದ್ದರೆ ಮೊದಲೇ ಈ ಹತ್ತರ ಪುಡಿಯನ್ನು ಮಾಡಿಕೊಂಡಿರಬೇಕು. ಗಂಧ ತೇಯುವ ಸಂದರ್ಭದಲ್ಲಿ ತೇಯ್ದು ತೀರ್ಥಕ್ಕೆ ಹಾಕಿ ಗಂಧವನ್ನು ತೇಯಬಹುದು. ಈ ದಶಗಂಧಗಳ ಜೊತೆಯಲ್ಲಿ ನವರತ್ನ-ಗಳನ್ನು ಕಲಶಕ್ಕೆ ಹಾಕಬೇಕು. ಒಂದು ನವರತ್ನದ ಸರ ಮಾಡಿಕೊಂಡು ಕಲಶದಲ್ಲಿ ಹಾಕಿ ಅಭಿಷೇಕವಾದ ಮೇಲೆ ದೇವರಿಗೆ ತೊಳೆದು ಸಮರ್ಪಿಸಬಹುದು.

* ಮೇಲೆ ಹೇಳಿದ ಹತ್ತು ಪರಿಮಳದ ದ್ರವ್ಯಗಳು ಪನ್ಸಾರಿ ಅಂಗಡಿಯಲ್ಲಿ ದೊರೆಯುತ್ತವೆ.

* ಗಂಧ ತೇಯುವ ಮೊದಲೇ ಕಲಶಪೂಜೆಗೆ ಸಿದ್ಧತೆ ಮಾಡಿಕೊಳ್ಳಬೇಕು. ೫ ಕಲಶ, ಅಥವಾ ೭ ಕಲಶಗಳನ್ನು ಜೋಡಿಸಿಟ್ಟುಕೊಂಡು ಪೂರ್ಣಕುಂಭಕ್ಕೆ ಹತ್ತು ಗಂಧಗಳನ್ನು

ಬೃಹತ್ಕಲಶಕ್ಕೆ ತುಲಸೀಕಾಷ್ಠವನ್ನು ತೇಯ್ದು ಹಾಕಬೇಕು. ನೈವೇದ್ಯದ ನೀರಿಗೆ ಏಲಕ್ಕಿ, ಪಚ್ಚಕರ್ಪೂರ, ಕೇಸರಿಗಳನ್ನು ಹಾಕಿದರೆ ಸಾಕು.

* ಕೆಲವರು ಶಂಖಪೂಜೆಯನ್ನು ಮೊದಲು ಮಾಡಿ, ಆ ಶಂಖತೀರ್ಥದಿಂದ ಕಲಶಗಳನ್ನು ಪ್ರೋಕ್ಷಣೆ ಮಾಡಿ ಶುದ್ಧ ಪಡಿಸಿಕೊಂಡು ಅನಂತರ ಕಲಶಪೂಜೆಯನ್ನು ಮಾಡುತ್ತಾರೆ. ಆದರೆ ಪದ್ಮಮಾಲಾದಲ್ಲಿ ಹೇಳಿರುವಂತೆ ಮೊದಲು ಕಲಶಪೂಜೆಯನ್ನೇ ಮಾಡಬೇಕು. ಅನಂತರ ಶಂಖಪೂಜೆಯನ್ನು ಮಾಡಿ ಪೀಠಪೂಜೆಯನ್ನು ಮಾಡಬೇಕು.

* ಶಂಖಪೂಜೆಯಲ್ಲಿ ಷೋಡಶೋಪಚಾರಗಳನ್ನು ಮಾಡುವ ಸಂಪ್ರದಾಯವಿಲ್ಲ. ಲಕ್ಷ್ಮಿಯ ಹಾಗೂ ಇತರ ದೇವತೆಗಳ ಸನ್ನಿಧಾನವು ಶಂಖದಲ್ಲಿರುವುದರಿಂದ ಪುಷ್ಪದ ತನಕ ಮಾತ್ರ ಎಂಟು ಉಪಚಾರಗಳನ್ನು ಸಮರ್ಪಿಸಬೇಕು.

* ಶಂಖದಲ್ಲಿ ಕೇವಲ ಲಕ್ಷ್ಮಿಯ ಸನ್ನಿಧಾನವೆಂದು ಕೆಲವರು ತಿಳಿದಿದ್ದಾರೆ. ಆದರೆ ಶಂಖಪೂಜೆಯ ಮಂತ್ರಗಳನ್ನು ಗಮನಿಸಿದಾಗ, ಚತುರ್ಮುಖಬ್ರಹ್ಮ, ಚಂದ್ರ, ವರುಣ, ವೇದಗಳು, ಗಂಗೆ ಮೊದಲಾದ ದೇವತೆಗಳು ಶಂಖದಲ್ಲಿರುತ್ತಾರೆ. ಲಕ್ಷ್ಮೀದೇವಿಯು ಮುಖ್ಯವಾಗಿರುತ್ತಾಳೆಂದಷ್ಟೇ ತಿಳಿಯಬೇಕು.

* ಕೆಲವರು ಶಂಖವನ್ನು ಲಕ್ಷ್ಮಿಯ ಪ್ರತೀಕವೆಂದು ಭಾವಿಸಿ ದೇವರ ಶಾಲಿಗ್ರಾಮಗಳ ಜೊತೆ ಇಟ್ಟು ಪೂಜಿಸುತ್ತಾರೆ, ಕೆಲವರು ದೇವರ ಪ್ರತಿಮೆಯ ಜೊತೆಯಿಟ್ಟು ಪೂಜಿಸುತ್ತಾರೆ. ಇದು ಸರ್ವಥಾ ತಪ್ಪು. ಶಂಖವು ಕೇವಲ ಲಕ್ಷ್ಮೀದೇವಿಯ ಪ್ರತೀಕವಲ್ಲ. ಆದ್ದರಿಂದ ದೇವರ ಪ್ರತೀಕಗಳ ಜೊತೆ ಶಂಖವನ್ನು ಇಡಬಾರದು.

* ಬಲಮುರಿಶಂಖದಲ್ಲಿ ಲಕ್ಷ್ಮೀನಾರಾಯಣರ ಸನ್ನಿಧಾನವಿರುವುದರಿಂದ ಅದನ್ನು ದೇವರ ಪ್ರತಿಮೆಯ ಜೊತೆಯಿಟ್ಟು ಪೂಜಿಸುವ ಸಂಪ್ರದಾಯವಿದೆ. ಆ ಬಲಮುರಿ ಶಂಖದಿಂದ ಅಭಿಷೇಕಾದಿಗಳನ್ನು ಮಾಡಬಾರದು. ಅದು ಕೇವಲ ಪೂಜೆಗೆ ಮಾತ್ರ ಯೋಗ್ಯವಾಗಿರುತ್ತದೆ. ಸುಮಾರು ೧೦೦ ಗ್ರಾಂ ಇರುವ ಬಲಮುರಿಶಂಖಕ್ಕೆ ಈಗಿನ ಕಾಲದಲ್ಲಿ ಸುಮಾರು ೫ ಲಕ್ಷ ರೂ ಬೆಲೆ ಇದೆ. ಬಹಳ ಪ್ರಯತ್ನಪಟ್ಟರೆ ದೊರೆಯುತ್ತದೆ. ಬೇರೆ ಬಲಮುರಿಶಂಖಗಳು ನಿಜವಾದದ್ದಲ್ಲ. ಅವುಗಳನ್ನು ಕೊಂಡುಕೊಳ್ಳಬೇಡಿರಿ.

* ಶಂಖದ ಕೆಳಭಾಗದಿಂದ ದೇವರ ಮೇಲೆ ನೀರು ಬೀಳಬಾರದು. ಶಂಖದ ತುದಿ-ಯಿಂದಲೂ ಕೂಡ ನೀರು ಬೀಳಬಾರದು. ಅದು ರಕ್ತಕ್ಕೆ ಸಮಾನವಾಗಿರುತ್ತದೆ. ಆದ್ದರಿಂದ ಬುಡ ಮತ್ತು ತುದಿಯನ್ನು ರಜತ ಅಥವಾ ಸುವರ್ಣದಿಂದ ಸಂಪೂರ್ಣವಾಗಿ ಮುಚ್ಚಿ ಮಧ್ಯದಿಂದಲೇ ನೀರು ಬೀಳುವಂತೆ ವ್ಯವಸ್ಥೆ ಮಾಡಿಕೊಳ್ಳಬೇಕು.

* ಶಂಖೇನೈವಾಭಿಷೇಕೇ ತು ತೀರ್ಥಂ ಸ್ಯಾನ್ನೈವ ಚಾನ್ಯಥಾ ।

ಶಂಖದಿಂದ ಬಿದ್ದದ್ದೇ ತೀರ್ಥವಾಗುತ್ತದೆ. ಶಂಖವಿಲ್ಲದೇ ಅಭಿಷೇಕ ಮಾಡಿದರೆ ಅದು ತೀರ್ಥವೆನಿಸುವುದಿಲ್ಲ.

* ಹಾಲು, ಮೊಸರು ಮೊದಲಾದ ಪಂಚಾಮೃತಗಳನ್ನು ಅಭಿಷೇಕ ಮಾಡುವಾಗಲೂ ಕೂಡ ಶಂಖದಿಂದಲೇ ಮಾಡಬೇಕು. ಮತ್ತು ಪೂಜೆಯಲ್ಲಿ ಪ್ರತಿಯೊಂದನ್ನೂ ಶಂಖಕ್ಕೆ ತಾಗಿಸಿ ಲಕ್ಷ್ಮೀದೇವಿಯು ಪೂಜೆಯನ್ನು ಮಾಡುತ್ತಿದ್ದಾಳೆಂದು ಭಾವಿಸಿ ಪೂಜೆಯನ್ನು ಮಾಡಬೇಕು.

* ಅರ್ಘ್ಯ, ಪಾದ್ಯ, ಆಚಮನ, ಮಧುಪರ್ಕ, ಪುನರಾಚಮನ ಈ ಐದು ಉಪಚಾರಗಳಿಗೂ ಪ್ರತ್ಯೇಕವಾಗಿ ಸಣ್ಣ ಬಟ್ಟಲುಗಳಲ್ಲಿ ನೀರನ್ನು ಇಟ್ಟು ಕಲಶಪೂಜೆಯನ್ನು ಮಾಡುವಾಗ ಪೂಜಿಸುವುದು ಉತ್ತಮವಾಗಿದೆ. ಸಾಧ್ಯವಾಗದಿದ್ದಲ್ಲಿ ಇಷ್ಟನ್ನು ಒಂದೇ ಕಲಶದಲ್ಲಿ ಪೂಜಿಸಬೇಕು.

* ಪೂರ್ಣಕುಂಭ ಹಾಗೂ ಬೃಹತ್ಕಲಶಗಳಲ್ಲಿ ಮಾತ್ರ ಭಗವಂತನ ನೂರೊಂದು ರೂಪಗಳ ಆವಾಹನೆ ಮಾಡಬೇಕು. ಉಳಿದ ಕಲಶಗಳಲ್ಲಿ ಅಷ್ಟಾಕ್ಷರದಿಂದ ಕಲಶಪೂಜೆ ಮಂತ್ರದಿಂದಷ್ಟೇ ಪೂಜಿಸಿದರೆ ಸಾಕು.

* ದೇವರ ಪ್ರತಿಮೆಯಲ್ಲಿ ಹಾಗೂ ನಮ್ಮಲ್ಲಿ ಮಾಡುವ ಎಲ್ಲ ನ್ಯಾಸಗಳನ್ನು ಕಲಶದಲ್ಲಿಯೂ ಕೂಡ ಮಾಡಬೇಕು. ಕಷ್ಟವಾಗುವುದಾದರೆ ಸಂಕ್ಷೇಪವಾಗಿ ಇಂಥ ನ್ಯಾಸವನ್ನು ಮಾಡುತ್ತೇನೆಂದು ಉಚ್ಚರಿಸಿದರೆ ಸಾಕು. ಆದರೆ ನಮ್ಮ ದೇಹದಲ್ಲಿ ಪ್ರತಿಮೆಯಲ್ಲಿ ಎಲ್ಲಾ ನ್ಯಾಸಗಳನ್ನು ಮಾಡಲೇ ಬೇಕು. ವಾಸ್ತವಿಕವಾಗಿ ಉಪಾಸ್ಯನಾದ ಭಗವಂತನಿಗೆ ಕಲಶ, ಪ್ರತಿಮೆ, ಅಗ್ನಿ ಎಂಬ ಮೂರು ಅಧಿಷ್ಠಾನದಲ್ಲಿ ಪೂಜೆ ಸಲ್ಲಿಸಬೇಕು.

* ಕಲಶಕ್ಕೆ ಷೋಡಶೋಪಚಾರಪೂಜೆಯನ್ನು ಮಾಡುವಾಗ ಯಾವ ಮೂರ್ತಿ ಇರುತ್ತದೋ ಅಂತರ್ಯಾಮಿಯಾದ ಆ ರೂಪಕ್ಕೆ ಪೂಜೆಯನ್ನು ಸಮರ್ಪಿಸಬೇಕು; ಉಳಿದ ದೇವತೆಗಳಿಗಲ್ಲ.

* ಪೀಠಪೂಜೆಯನ್ನು ಅತ್ಯಂತ ಶ್ರದ್ಧೆಯಿಂದ ಮಾಡಬೇಕು. ಪೀಠಪೂಜೆಗೆ ಶ್ರೀ-ಮಧ್ವಾಚಾರ್ಯರು ಬಹಳ ಮಹತ್ವವನ್ನು ಸಾರಿದ್ದಾರೆ.

* ಹೃತ್ಕಮಲದಲ್ಲಿರುವ ಬಿಂಬರೂಪಿಯಾದ ಭಗವಂತನನ್ನು ಮೂರ್ತಿಯಲ್ಲಿ

ಆವಾಹನೆ ಮಾಡಿ ಪೂಜೆಯನ್ನು ಮಾಡಬೇಕು. ಪೂಜೆ ಮುಗಿದ ಮೇಲೆ ಪುನಃ ಹೃದಯ-ದಲ್ಲಿ ಪ್ರತ್ಯಾವಾಹನೆ ಮಾಡಿಕೊಳ್ಳಬೇಕು.

* ಪ್ರತಿಮೆಗಳು ಮನೆಯಲ್ಲಿದ್ದಾಗ ಅವುಗಳಿಗೆ ಅಷ್ಟಾಕ್ಷರಮಂತ್ರದಿಂದ ಸೃಷ್ಟಿ, ಸ್ಥಿತಿ, ಲಯ ನ್ಯಾಸವನ್ನು ೧೪ ಬಾರಿಮಾಡಬೇಕು. ಮತ್ತು ತತ್ವನ್ಯಾಸ ಮಾತೃಕಾನ್ಯಾಸಗಳನ್ನು ಮಾಡಬೇಕು.

* ಯಾವ ಮೂರ್ತಿಯ ಪ್ರತಿಮೆಯು ಇರುತ್ತದೋ ಆ ಮಂತ್ರದ ಉಪದೇಶವು ಇರಬೇಕು. ನರಸಿಂಹಪ್ರತಿಮೆಯಿದ್ದರೆ ನರಸಿಂಹಮಂತ್ರದ ಉಪದೇಶವಿರಬೇಕು. ಮತ್ತು ಆಯಾ ಮಂತ್ರಗಳ ಸೃಷ್ಟಿ, ಸ್ಥಿತಿ, ಲಯನ್ಯಾಸಗಳನ್ನು ಪ್ರತಿಮೆಯಲ್ಲಿ ಮಾಡಬೇಕು. ಸೃಷ್ಟ್ಯಾದಿ ನ್ಯಾಸಗಳನ್ನು ಮಾಡಬೇಕಾದರೆ ಗುರೂಪದೇಶವಿಲ್ಲದೆ ಮಾಡಬಾರದು.

* ಈ ಪುಸ್ತಕದಲ್ಲಿ ಆವಾಹನೆ ಬಗ್ಗೆ ವಿವರವಾಗಿ ನೀಡಲಾಗಿದೆ. ಆದಷ್ಟು ಪ್ರಯತ್ನ-ಪೂರ್ವಕವಾಗಿ ಇದನ್ನು ಆಚರಿಸಿದರೆ ವಿಶೇಷಸಾನ್ನಿಧ್ಯವು ಹೆಚ್ಚುತ್ತದೆ.

* ಶಾಲಗ್ರಾಮದಲ್ಲಿ ಹೃತ್ಕಮಲದಿಂದ ಆವಾಹನೆ ಮಾಡುವ ಕ್ರಮವಿರುವುದಿಲ್ಲ. ಕೇವಲ ಅಲ್ಲಿರುವ ರೂಪದ ಚಿಂತನೆ ಮಾಡಿದರೆ ಸಾಕು. ಅಷ್ಟಾಕ್ಷರಮಂತ್ರವನ್ನು ಎಂಟು ಬಾರಿ ಶಾಲಿಗ್ರಾಮ ಮುಟ್ಟಿ ಹೇಳಬೇಕು.

* ಆವರಣಪೂಜೆಯಾದ ಮೇಲೆ ಮುಖ್ಯಪ್ರಾಣದೇವರಿಗೆ ಪೂಜೆಯನ್ನು ನೀಡಲಾಗಿದೆ. ಆದರೆ ದೇವರನ್ನು ಆವಾಹನೆ ಮಾಡುವ ಮೊದಲೇ ಮುಖ್ಯಪ್ರಾಣದೇವರನ್ನು ಹಾಗೂ ಗರುಡಶೇಷರನ್ನು ಆವಾಹನೆ ಮಾಡಿಕೊಳ್ಳಬೇಕು.

* ಪದ್ಯಮಾಲಾದ ಪ್ರಕಾರ ಕಲಶಪೂಜೆ ಮಾಡುವ ಮೊದಲು ಅಷ್ಟಾಕ್ಷರಮಂತ್ರ ತತ್ವನ್ಯಾಸ- ಮಾತೃಕಾನ್ಯಾಸಗಳನ್ನು ನಮ್ಮ ದೇಹದಲ್ಲಿ ಮಾಡಿಕೊಳ್ಳಬೇಕೆಂದು ತಿಳಿಸಲಾಗಿದೆ. ಸಂಧ್ಯಾವಂದನೆಯ ಅನಂತರ ದೇವರ ಪೂಜೆ ಮಾಡುವ ಸಂದರ್ಭವಿದ್ದಾಗ ಸಂಧ್ಯಾ-ವಂದನೆಯಲ್ಲಿಯೇ ನಾವು ಮಾಡಿರುತ್ತೇವಾದ್ದರಿಂದ ಪುನಃ ಇಲ್ಲಿ ಮಾಡಿಕೊಳ್ಳುವ ಅವಶ್ಯಕತೆ ಇಲ್ಲ.

* ನಾರಾಯಣಾಷ್ಟಾಕ್ಷರಮಂತ್ರವನ್ನು ಜಪಿಸುವಾಗಲೇ ನಮ್ಮ ದೇಹದಲ್ಲಿ ಸೃಷ್ಟ್ಯಾದಿ ನ್ಯಾಸಗಳನ್ನು ಮಾಡಿಕೊಂಡಿರುತ್ತೇವೆ.

* ಮತ್ತೊಬ್ಬರ ಉದ್ದೇಶದಿಂದ ಪೂಜೆಯನ್ನು ಮಾಡುವ ಸಂದರ್ಭದಲ್ಲಿ ಸೂರ್ಯ ಮಂಡಲದಲ್ಲಿರುವ ನಾರಾಯಣದೇವರನ್ನು ಆವಾಹನೆ ಮಾಡಿ ಪೂಜಿಸಬೇಕು.

* ನಮಗಾಗಿ ನಮ್ಮ ಮನೆಯಲ್ಲಿ ಪೂಜಿಸುವಾಗ ಮಾತ್ರ ಹೃತ್ಕಮಲದಿಂದ ಆವಾಹನೆ ಮಾಡಿ ಪೂಜಿಸಬೇಕು.

* ಬಿಂಬಮೂರ್ತಿಯನ್ನು ಆವಾಹನೆ ಮಾಡುವ ಮೊದಲು ಹೃತ್ಕಮಲದಲ್ಲಿ ಮಾನಸಿಕವಾಗಿ ಷೋಡಶೋಪಚಾರ ಪೂಜೆಯನ್ನು ಮಾಡಿ ಅನಂತರ ಆ ಬಿಂಬನನ್ನು ಕರೆತಂದು ಪ್ರತಿಮೆಯಲ್ಲಿ ಕೂಡಿಸಿ ಬಾಹ್ಯವಾದ ಉಪಚಾರವನ್ನು ಮಾಡಬೇಕು.

* ಅನೇಕ ಪುಸ್ತಕಗಳಲ್ಲಿ ಪ್ರಾಣಪ್ರತಿಷ್ಠಾಪನವಿಧಿ ಎಂಬುದಾಗಿ ಧ್ಯಾನಶ್ಲೋಕವನ್ನು, ಯ, ರ, ಲ, ವ ಇತ್ಯಾದಿಯಾದ ಬೀಜಾಕ್ಷರಗಳನ್ನು ನೀಡಿರುತ್ತಾರೆ. ಅದನ್ನು ನಮ್ಮ ಯಾವುದೇ ಪುಸ್ತಕಗಳಲ್ಲಿ ಮುದ್ರಣ ಮಾಡಿರುವುದಿಲ್ಲ. ಕಾರಣವೇನೆಂದರೆ ಯಾವುದೇ ವೈಷ್ಣವ ಶಾಸ್ತ್ರಗಳಲ್ಲಿ ಇದರ ಉಲ್ಲೇಖವು ಕಾಣಿಸುತ್ತಿಲ್ಲ. ಮತ್ತು ತಂತ್ರಸಾರಸಂಗ್ರಹ ಪದ್ಯಮಾಲಾಗಳಲ್ಲಿ ಹೇಳಿರುವ ಆಯಾ ಮಂತ್ರಗಳ ಸೃಷ್ಟ್ಯಾದಿ ನ್ಯಾಸಗಳು, ತತ್ವನ್ಯಾಸ ಮಾತೃಕಾನ್ಯಾಸ ಅಷ್ಟಾಕ್ಷರಮಂತ್ರದ ಜಪ ಇವುಗಳು ಅತ್ಯಂತ ಆವಶ್ಯಕ. ಪ್ರಾಣಶಕ್ತಿಯ ಆವಾಹನೆಯ ಅವಶ್ಯಕತೆ ಇರುವುದಿಲ್ಲ.

* ಮುಂದೆ ಷೋಡಶೋಪಚಾರಪೂಜೆಗಳನ್ನು ಮಹಾಲಕ್ಷ್ಮೀದೇವಿಯೇ ಮಾಡುತ್ತಾಳೆಂದು ಚಿಂತನೆ ಮಾಡಬೇಕು. ನಾವು ಮಾಡುತ್ತೇವೆಂದು ಸರ್ವಥಾ ಭಾವಿಸಬಾರದು. ಭಗವಂತನನ್ನು ಸ್ಪರ್ಶಮಾಡಿ ಪೂಜಿಸುವ ಸೌಭಾಗ್ಯ ಮಹಾಲಕ್ಷ್ಮೀದೇವಿಗಷ್ಟೇ ಇರುತ್ತದೆ.

* ಉಳಿದ ದೇವತೆಗಳು ಕೆಲವೊಂದು ಉಪಚಾರಗಳನ್ನು ಸಮರ್ಪಿಸುತ್ತಾರೆಂದು ಮಂತ್ರಗಳಿದ್ದರೂ ಕೂಡ ಅವರು ಮಹಾಲಕ್ಷ್ಮೀದೇವಿಯ ಮುಖಾಂತರವೇ ಆಯಾ ಉಪಚಾರಗಳನ್ನು ಸಲ್ಲಿಸುತ್ತಾರೆಂದು ಅನುಸಂಧಾನ ಮಾಡಬೇಕು.

* ಪೂಜೆಯನ್ನು ಮಾಡುವಾಗ ೧೬ ಉಪಚಾರಗಳನ್ನು ಸಮರ್ಪಿಸುವಾಗ ವೇದಮಂತ್ರಗಳನ್ನೇ ಪಠಿಸಬೇಕು.

* ಇಲ್ಲಿ ನೀಡಿರುವ ವೇದಮಂತ್ರಗಳ ಜೊತೆ ಮತ್ತಷ್ಟು ಉಪಯುಕ್ತವಾದ ವೇದಮಂತ್ರಗಳನ್ನು ಸೇರಿಸಿಕೊಂಡು ಪೂಜಿಸುವುದು ಸೂಕ್ತವಾಗಿದೆ.

* ಪೂಜಾಕಾಲದಲ್ಲಿ ಸರ್ವಥಾ ಮಾತನಾಡಬಾರದು. ಮತ್ತು ಕನ್ನಡಪದ್ಯಗಳನ್ನು ಹೇಳಿಕೊಂಡು ಪೂಜಿಸುವುದು ಉತ್ತಮಪಕ್ಷವಲ್ಲ. ಆದರೆ ಭಕ್ತಿಗೆ ಭಗವಂತನು ಒಲಿಯುವುದರಿಂದ ಭಕ್ತಿಯ ಬಗ್ಗೆ ಹೆಚ್ಚು ಏಕಾಗ್ರತೆ ಇದ್ದರೆ ಸಾಕು.

* ಭಕ್ತಿಯನ್ನು ಮಾಡದೇ ಎಷ್ಟೇ ಬಾಹ್ಯಸಾಮಗ್ರಿಗಳನ್ನು ಬಳಸಿಕೊಂಡು ವೇದ ಮಂತ್ರಗಳನ್ನು ಉಚ್ಚರಿಸುತ್ತಾ ಪೂಜಿಸುವುದರಿಂದ ಭಗವಂತನ ಪ್ರೀತಿಯನ್ನು ಸಂಪಾದಿಸಲು ಸಾಧ್ಯವಾಗುವುದಿಲ್ಲ.

* ವಿಷ್ಣುಸಹಸ್ರನಾಮವನ್ನು ಈ ಪುಸ್ತಕದಲ್ಲಿ ನೀಡಿರುವುದಿಲ್ಲ. ಆದರೆ ವಿಷ್ಣುಸಹಸ್ರ-ನಾಮವನ್ನು ಪಠಿಸುತ್ತಾ ಅರ್ಚನೆ ಮಾಡಬೇಕು. ಇದು ಅತ್ಯಂತ ಫಲದಾಯಕವಾಗಿದೆ.

* ವಾಯುಸ್ತುತಿಯನ್ನು ಹೇಳುತ್ತಾ ವಾಯುದೇವರಿಗೆ ಅಭಿಷೇಕವನ್ನು ಹಾಗೂ ಪೂಜೆಯನ್ನು ಆಚರಿಸಬೇಕು. ವಿಷ್ಣುಸಹಸ್ರನಾಮ ಹಾಗೂ ವಾಯುಸ್ತುತಿಗಳನ್ನು ನಿತ್ಯ-ಪಠಿಸುವ ರೂಢಿಯನ್ನು ಇಟ್ಟುಕೊಂಡರೆ ಯಾವ ಸಮಸ್ಯೆಯೂ ಕೂಡ ಬರುವುದಿಲ್ಲ. ಮೋಕ್ಷಮಾರ್ಗದಲ್ಲಿ ದಾರ್ಢ್ಯವು ಅಭಿವೃದ್ಧವಾಗುತ್ತದೆ.

* 'ಧೂಪಹೀನೇ ಶ್ರಿಯಂ ಹಂತಿ ದೀಪಹೀನೇ ಮತಿಭ್ರಮಃ' – ಧೂಪಾರತಿ ಮಾಡದಿದ್ದರೆ ಸಂಪತ್ತು ನಾಶವಾಗುತ್ತದೆ. ದೀಪಾರತಿ ಮಾಡದಿದ್ದರೆ ಬುದ್ಧಿಭ್ರಮಣೆ ಆಗುತ್ತದೆ. ಆದ್ದರಿಂದ ನೈವೇದ್ಯಕ್ಕಿಂತ ಮೊದಲು ಧೂಪಾರತಿ ದೀಪಾರತಿಯನ್ನು ಮಾಡಲೇ ಬೇಕು.

* ಧೂಪಕ್ಕೆ ಉಪಯೋಗಿಸಬೇಕಾದ ಪದಾರ್ಥಗಳು –

'ಚಂದನಾಗರು ಕರ್ಪೂರದೇವದಾರೂಣಿ ಗುಗ್ಗುಲಮ್ ।
ಜಾತೀಫಲಂ ಶ್ರೀಫಲಂ ಚ ಉಶೀರಂ ಕೋಷ್ಠಮೇವ ಚ ।
ತಥೈವ ಸಾಲನಿರ್ಯಾಸೋ ದಶಾಂಗೋ ಧೂಪ ಉಚ್ಯತೇ ।
ಗವಾಜ್ಯೇನ ಯುತಂ ದದ್ಯಾದ್ ಧೂಪಂ ವಿಷ್ಣೋರ್ಮನೋರಮಮ್ ॥

ಶ್ರೀಗಂಧ ದೇವದಾರು ಗುಗ್ಗುಲು ಸಾಂಬ್ರಾಣಿ ಜಾತಿಫಲ, ಶ್ರೀಫಲ, ಉಶೀರ, ಕಂಕುಷ್ಠ, ಸಾಲನಿರ್ಯಾಸ ಈ ಹತ್ತು ದ್ರವ್ಯಗಳನ್ನು ಕುಟ್ಟಿ ಪುಡಿಮಾಡಿ ದಶಾಂಗವನ್ನಾಗಿ ಮಾಡಿಕೊಳ್ಳಬೇಕು. ಇವುಗಳನ್ನು ಪನ್ಸಾರಿ ಅಂಗಡಿಯಲ್ಲಿ ಕೊಂಡುಕೊಳ್ಳಬೇಕು.

* 'ಕೇವಲೇನ ಘೃತೇನೈವ ಧೂಪಯೇನ್ಮಾಂ ವಿಮೂಢಧೀಃ' 'ಅಘೃತಂ ಗುಗ್ಗುಲಂ ಮರ್ತ್ಯೋ ಮತ್ಪುರೋ ವಿದಹೇಚ್ಚ ಯಃ' ಕೇವಲ ಘೃತದಿಂದಲೂ ಧೂಪಾರತಿ ಮಾಡಬಾರದು. ಕೇವಲ ದಶಾಂಗದಿಂದಲೂ ಧೂಪಾರತಿ ಮಾಡಬಾರದು. ಎರಡನ್ನೂ ಮಿಶ್ರಣ ಮಾಡಿ ಧೂಪಾರತಿ ಮಾಡಬೇಕು.

* ದ್ವಾದಶಸ್ತೋತ್ರವನ್ನು ನೈವೇದ್ಯಕಾಲದಲ್ಲಿ ಅವಶ್ಯವಾಗಿ ಪಠಿಸಬೇಕು. ಇದರಿಂದ

ನೈವೇದ್ಯಪದಾರ್ಥಗಳಲ್ಲಿರುವ ವಿಷವು ಪರಿಹಾರವಾಗುತ್ತದೆ. ಈಗಿನ ಕಾಲದಲ್ಲಿ ಪ್ರತಿಯೊಂದು ಆಹಾರಪದಾರ್ಥದಲ್ಲಿಯೂ ವಿಷಬಾಧೆಯು ಹೆಚ್ಚುತ್ತಿದೆ. ಆದ್ದರಿಂದ ದ್ವಾದಶಸ್ತೋತ್ರವನ್ನು ಅತ್ಯಂತ ಭಕ್ತಿಯಿಂದ ಪಠಿಸಬೇಕು.

* ನೈವೇದ್ಯವಾದ ಮೇಲೆ ಅನುಯಾಗವನ್ನು ಮಾಡಬೇಕೆಂದು ತಂತ್ರಸಾರದಲ್ಲಿ ಹೇಳಿದ್ದಾರೆ. ಸಾಧ್ಯವಾದವರು ಅದನ್ನು ಆಚರಿಸಿ ಮಹಾಮಂಗಳಾರತಿಯನ್ನು ಮಾಡಬಹುದು.

* ವಿಶ್ವಕ್ಸೇನನಿಗೆ ಅವಶ್ಯವಾಗಿ ನೈವೇದ್ಯವನ್ನು ಇಡಬೇಕು. ಭಗವಂತನಿಗೆ ನೈವೇದ್ಯ ಮಾಡಿದ ಮೇಲೆ ನಿರ್ಮಾಲ್ಯದೇವತೆಯೆನಿಸಿದ ವಿಷ್ವಕ್ಸೇನನಿಗೆ ನೈವೇದ್ಯ ಮಾಡುವ ಸಂಪ್ರದಾಯ ಅಷ್ಟಮಠಗಳಲ್ಲಿದೆ. ಆದರೆ ಪ್ರತ್ಯೇಕ ತಟ್ಟೆಯಲ್ಲಿ ನೈವೇದ್ಯಮಾಡಿ ಅದನ್ನು ವಿಸರ್ಜನೆಮಾಡಬೇಕು. ವಾಯುದೇವರಿಗಿಂತ ಮೊದಲು ವಿಶ್ವಕ್ಸೇನನಿಗೆ ನೈವೇದ್ಯವನ್ನು ಮಾಡಬಹುದು. ಗಣಪತಿಯ ಜೊತೆ ನೈವೇದ್ಯವನ್ನು ನೀಡಿ ಮುಂದೆ ಗೋಗ್ರಾಸಕ್ಕಾಗಿ ವಿನಿಯೋಗಿಸುವ ಸಂಪ್ರದಾಯವೂ ಇದೆ.

* ವೈಶ್ವದೇವಕ್ಕೋಸ್ಕರ ಒಂದು ತಟ್ಟೆಯಲ್ಲಿ ಅನ್ನವನ್ನು ಇಡಬೇಕು. ಮತ್ತೊಂದು ತಟ್ಟೆಯಲ್ಲಿ ಗರುಡಶೇಷಾದಿಗಳಿಗೆ ನೈವೇದ್ಯವನ್ನು ಮಾಡುವುದಕ್ಕಾಗಿ ಅನ್ನವನ್ನು ಇಟ್ಟಿರಬೇಕು.

* ವೈಶ್ವದೇವಕ್ಕೆ ಇಟ್ಟ ಅನ್ನವನ್ನು ಪರಶುರಾಮದೇವರಿಗೆ ಮಾತ್ರ ನಿವೇದನೆ ಮಾಡಿರಬೇಕು. ಮುಖ್ಯಪ್ರಾಣಾದಿಗಳಿಗೂ ಕೂಡ ನಿವೇದನೆ ಮಾಡಬಾರದು. ಆಹುತಿ ನೀಡುವ ಸಕಲಪದಾರ್ಥಗಳನ್ನು ಭಗವಂತನಿಗೆ ಸಮರ್ಪಿಸಬೇಕು. ಪ್ರತಿಮೆಯಲ್ಲಿರುವ ಭಗವಂತನಿಗೆ ಸಮರ್ಪಿಸಿದ್ದನ್ನು ಸಮರ್ಪಿಸುವುದು ತಪ್ಪಲ್ಲ ಎನ್ನಲು ಆಧಾರವಿದೆ.

* ಉಳಿದ ಪಾತ್ರೆಯಲ್ಲಿರುವ ಸಮಸ್ತ ನೈವೇದ್ಯಪದಾರ್ಥವನ್ನು ಭಗವಂತನಿಗೆ ಸಮರ್ಪಣೆ ಮಾಡಿದ ಮೇಲೆ ಲಕ್ಷ್ಮೀದೇವಿಗೆ ಸಮರ್ಪಣೆ ಮಾಡಬೇಕು. ಅನಂತರ ಮುಖ್ಯಪ್ರಾಣದೇವರಿಗೆ ಸಮರ್ಪಣೆ ಮಾಡಬೇಕು. ಅನಂತರ ಸರಸ್ವತೀಭಾರತಿಯರಿಗೆ ಸಮರ್ಪಣೆ ಮಾಡಬೇಕು.

* ಮುಖ್ಯಪ್ರಾಣದೇವರಿಗೆ ಸಮರ್ಪಣೆ ಮಾಡಿದ ಅನ್ನವನ್ನೇ ನಾವು ಭುಂಜಿಸಬೇಕು. ಮುಖ್ಯಪ್ರಾಣದೇವರಿಗೆ ಸಮರ್ಪಣೆ ಮಾಡದ ಅನ್ನವನ್ನಾಗಲೀ ಮತ್ತು ಮುಖ್ಯಪ್ರಾಣದೇವರ ತೀರ್ಥವನ್ನು ತೆಗೆದುಕೊಳ್ಳದೇ ಊಟವನ್ನಾಗಲೀ ಮಾಡಬಾರದು.

* ಭಗವಂತನಿಗೆ ನೈವೇದ್ಯ ಮಾಡುವಾಗ ಮೊದಲು ಕಲಶೋದಕದಿಂದಷ್ಟೇ

ಪ್ರೋಕ್ಷಣೆಯನ್ನು ಮಾಡಿ, ತುಪ್ಪ ತುಳಸಿಯನ್ನು ಹಾಕಿ ನಿವೇದನೆ ಮಾಡಬೇಕು. ಮುಖ್ಯ-ಪ್ರಾಣದೇವರಿಗೆ ನೈವೇದ್ಯ ಮಾಡುವಾಗ ಎಲ್ಲ ನೈವೇದ್ಯಪದಾರ್ಥಗಳಿಗೆ ತೀರ್ಥವನ್ನು ಹಾಕಿ, ಪುನಃ ಹರಿನಿರ್ಮಾಲ್ಯವನ್ನು ಹಾಕಿ ನೈವೇದ್ಯ ಮಾಡಬೇಕು.

* ಲಕ್ಷ್ಮೀದೇವಿಗೆ ಮೊದಲು ಮೂರು ಬಾರಿ ತೀರ್ಥವನ್ನು ನೀಡಿ, ನೈವೇದ್ಯಪದಾರ್ಥಕ್ಕೆ ತೀರ್ಥವನ್ನು ಹಾಕಿ ನೈವೇದ್ಯ ಮಾಡಬೇಕು. ಅನಂತರ ಮುಖ್ಯಪ್ರಾಣದೇವರಿಗೆ ಮೂರು ಬಾರಿ ದೇವರ ತೀರ್ಥವನ್ನು ನೀಡಿ ನೈವೇದ್ಯವನ್ನು ಮಾಡಬೇಕು. ಅನಂತರ ಭಾರತೀ ದೇವಿಯರಿಗೆ ಮೂರು ಬಾರಿ ದೇವರ ತೀರ್ಥವನ್ನು ಒಂದು ಬಾರಿ ಮುಖ್ಯಪ್ರಾಣದೇವರ ತೀರ್ಥವನ್ನು ನೀಡಿ, ನೈವೇದ್ಯಪದಾರ್ಥಗಳಿಗೆ ಮುಖ್ಯಪ್ರಾಣದೇವರ ತೀರ್ಥವನ್ನು ಹಾಕಿ ಮುಖ್ಯಪ್ರಾಣದೇವರ ಪ್ರಸಾದವನ್ನು ಭಾರತೀದೇವಿಗೆ ಸಮರ್ಪಣೆ ಮಾಡಬೇಕು. ಅನಂತರ ಭಾರತೀರಮಣಮುಖ್ಯಪ್ರಾಣರ ಪ್ರಸಾದವನ್ನು ನಾವು ಸ್ವೀಕರಿಸಬೇಕು.

* ಋಜುಗಣಸ್ಥರನ್ನು ಬಿಟ್ಟು ಉಳಿದ ದೇವತೆಗಳಿಗೆ ನಾವು ಸ್ವೀಕರಿಸಬಹುದಾದ ಪದಾರ್ಥಗಳನ್ನು ನೈವೇದ್ಯ ಮಾಡಬಾರದು. ಅವರ ನೈವೇದ್ಯಕ್ಕಾಗಿ ಪ್ರತ್ಯೇಕವಾಗಿ ಪದಾರ್ಥವನ್ನಿಟ್ಟು ನೈವೇದ್ಯ ಮಾಡಬೇಕು.

* ಒಂದು ತಟ್ಟೆಯಲ್ಲಿ ಪ್ರತ್ಯೇಕವಾಗಿ ಇಟ್ಟ ಒಂದೇ ಅನ್ನವನ್ನು ಎಲ್ಲ ದೇವತೆಗಳಿಗೆ ಔಪಚಾರಿಕವಾಗಿ ನೈವೇದ್ಯ ಮಾಡಬಹುದು. ಆಗ ಅವರವರ ಭಾಗವನ್ನು ಆಯಾ ದೇವತೆಗಳು ಸ್ವೀಕರಿಸಿ ನಮ್ಮನ್ನು ಅನುಗ್ರಹಿಸುತ್ತಾರೆಂದಷ್ಟೇ ಅನುಸಂಧಾನ ಮಾಡಬೇಕು.

* ಪೂಜೆಯಾದ ಮೇಲೆ ತುಳಸಿಗೆ ಹಾಗೂ ಗಂಗೆಗೆ ಅವಶ್ಯವಾಗಿ ನೈವೇದ್ಯವನ್ನು ಮಾಡಬೇಕು.

* ಯಾವುದೇ ಕಾರಣಕ್ಕೂ ನಿಷಿದ್ಧಪದಾರ್ಥಗಳನ್ನು ನೈವೇದ್ಯ ಮಾಡಬಾರದು.

* ನೈವೇದ್ಯಕಾಲದಲ್ಲಿ ತುಪ್ಪವನ್ನು , ನೀರನ್ನು ಇಟ್ಟಿರಲೇ ಬೇಕು.

* ನೈವೇದ್ಯವಾದ ಮೇಲೆ ದೇವರಿಗೆ ಹಸ್ತಪ್ರಕ್ಷಾಲನಾದಿಗಳನ್ನೆಲ್ಲ ಮಾಡಿಸಿ ಪೀಠದಲ್ಲಿ ಕುಳ್ಳಿರಿಸಿ ಅನಂತರ ತಾಂಬೂಲದ ನೈವೇದ್ಯವನ್ನು ಮಾಡಬೇಕು. ನೈವೇದ್ಯದ ಜೊತೆಗೆ ತಾಂಬೂಲವನ್ನು ನಿವೇದನೆ ಮಾಡಬಾರದು. ಪ್ರತ್ಯೇಕವಾಗಿ ಮಾಡಬೇಕು.

* ತಾಂಬೂಲಸಮರ್ಪಣೆಗೆ ವಿಶೇಷ ಮಹತ್ವವಿದೆ. ಅಧಿಕಪುಣ್ಯವಿದೆ. ದಕ್ಷಿಣಾಸಹಿತ-ವಾಗಿ ತಾಂಬೂಲವನ್ನು ಭಗವಂತನಿಗೆ ಪ್ರತಿನಿತ್ಯವೂ ನಿವೇದನೆ ಮಾಡಬೇಕು. ಊಟವಾದ ಮೇಲೆ ಅದನ್ನು ತಿನ್ನುವ ರೂಢಿ ಇಟ್ಟುಕೊಳ್ಳಬೇಕು.

* ನೈವೇದ್ಯದ ಅನಂತರ ಮಹಾಮಂಗಳಾರತಿಯನ್ನು ಆದಷ್ಟು ವೈಭವೋಪೇತವಾಗಿ ನಡೆಸಬೇಕು.

* ಆಪಾದಮೌಳಿಪರ್ಯಂತಂ ಪ್ರಾದಕ್ಷಿಣ್ಯಾತ್ ತ್ರಿರರ್ಧಕಮ್ ।
ಭ್ರಾಮ್ಯ ಪ್ರದರ್ಶ್ಯ ದೇವಾಯ ದೀಪಂ ನಿರ್ವಾಪಯೇತ್ ತತಃ ॥

ಸ್ವಯಮೇವ ವಿನಷ್ಟಂ ತು ದೀಪಂ ಗೃಹ್ಣಂತಿ ರಾಕ್ಷಸಾಃ ।
ತಸ್ಮಾನ್ನಿರ್ವಾಪಯೇದ್ದೀಪಂ ವೃತ್ತ್ಯೈ ರಕ್ಷಃ ಕ್ಷಯಾಯ ಚ ।
ಅನ್ಯಥಾ ನರಕಂ ಯಾತಿ ಯಾವದಾಭೂತಸಂಪ್ಲವಮ್ ॥

ಏಕಾರತಿದೀಪವನ್ನು ಭಗವಂತನ ಪಾದದಿಂದ ಮೂರು ಬಾರಿ ಮಾಡಬೇಕು. ನಾಕನೆಯ ಬಾರಿ ಅರ್ಧ ಮಾತ್ರ ಮಾಡಿ ನೀರಿನಲ್ಲಿ ಹಾಕಿ ಆರಿಸಬೇಕು. ತಾನೇ ಆರಿ ಹೋದರೆ ಅದನ್ನು ರಾಕ್ಷಸರು ಸ್ವೀಕರಿಸುತ್ತಾರೆ. ದೀಪದ ಫಲ ಉಳಿಯುವುದಕ್ಕಾಗಿಯೂ ರಾಕ್ಷಸರ ನಾಶಕ್ಕಾಗಿಯೂ ದೀಪವನ್ನು ತಾನೇ ಆರಿಸಿ ಬಿಡಬೇಕು. ಹಾಗೆ ಮಾಡದಿದ್ದರೆ ಪ್ರಲಯಕಾಲದ ಕಡೆಯವರೆಗೂ ನರಕದಲ್ಲಿ ಬೀಳುತ್ತಾರೆ.

* ಮಂಗಳಾರತಿ ಬತ್ತಿಗಳನ್ನು ತುಪ್ಪದಲ್ಲಿ ನೆನೆಸಬೇಕು – ಗೋಘೃತೇನ ಸುಸಂಯುಕ್ತಂ ದೀಪಂ ಚ ವಿನಿವೇದಯೇತ್ - ಗೋಘೃತದಿಂದ ಸಂಯುಕ್ತವಾದ ದೀಪವನ್ನು ಸಮರ್ಪಣೆ ಮಾಡಬೇಕು.

* ಧೂಪಕಾಲೇ ಹರೇರ್ವಕ್ತ್ರಂ ಧೂಪಧೂಮ್ರಂ ಮನೋಹರಮ್ ।
ಚಾರುಹಾಸಂ ಪ್ರಪಶ್ಯಂತಿ ತೇಷಾಂ ಪುಣ್ಯಮನಂತಕಮ್ ॥

ಧೂಪ ಹಾಕುವ ಸಮಯದಲ್ಲಿ ಭಗವಂತನ ಮನೋಹರವಾದ ಮಂದಹಾಸ-ಯುಕ್ತವಾದ ಮುಖವನ್ನು ಧೂಪದ ಮಬ್ಬಿನಲ್ಲೇ ಯಾರು ನೋಡುತ್ತಾರೋ ಅವರ ಪುಣ್ಯಕ್ಕೆ ಎಣೆಯೇ ಇಲ್ಲ.

* ಎರಡನೆಯ ಬಾರಿ ಧೂಪಾರತಿಯನ್ನು ಮಾಡಿದಾಗ ಆ ಕೆಂಡಕ್ಕೆ ತೀರ್ಥವನ್ನು ಹಾಕಿ ಅಂಗಾರವನ್ನಾಗಿ ಮಾಡಿಕೊಳ್ಳಬೇಕು. ಮತ್ತು ಎರಡನೆ ಬಾರಿಮಾಡುವ ಏಕಾರತಿ-ಯನ್ನಾಗಲೀ ಮಂಗಳಾರತಿಯನ್ನಾಗಲೀ ಆರಿಸಬಾರದು.

* ಭಗವಂತನ ಪಾದಕ್ಕೆ ಮೂರು ಬಾರಿ, ಹೃದಯಕ್ಕೆ ಮೂರು ಬಾರಿ, ಮುಖಕ್ಕೆ

ಮೂರು ಬಾರಿ ಆರತಿಯನ್ನು ಬೆಳಗಿ, ಸಮಸ್ತ ಭಗವಂತನ ಸ್ವರೂಪಕ್ಕೆ ಮೂರುಬಾರಿ ಬೆಳಗಬೇಕು. ಭಗವಂತನ ಪ್ರತಿಯೊಂದು ಪ್ರತೀಕಕ್ಕೂ ಹೀಗೆ ಮಾಡಲು ಸಾಧ್ಯವಾಗದಿದ್ದರೆ ಎಲ್ಲಪ್ರತೀಕಗಳನ್ನುಮಾನಸಿಕವಾಗಿ ಒಂದೇ ರೂಪವನ್ನಾಗಿ ಮಾಡಿಕೊಂಡು ಸಮಗ್ರಪೀಠದಲ್ಲಿ ಆ ಭಗವಂತನ ಒಂದು ರೂಪಕ್ಕೆ ಹೀಗೆ ಒಂಭತ್ತು ಬಾರಿ ಪ್ರದಕ್ಷಿಣಾಕಾರವಾಗಿ ಆರತಿಯನ್ನು ಮಾಡಬೇಕು.

* ಏಕಾರತಿ, ಪಂಚಾರತಿ, ಕೂರ್ಮಾರತಿ, ಚಕ್ರಶಂಖಗಳ ಆರತಿ, ಮಹಾನೀರಾಜನ ಇವುಗಳನ್ನು ಭಗವಂತನಿಗೆ ಬೆಳಗಿ ಸಂತೋಷವನ್ನು ಅನುಭವಿಸಬೇಕು. ಮಂಗಳಾರತಿಯ ಬೆಳಕಿನಿಂದ ಭಗವಂತನ ಮುಖಸೌಂದರ್ಯವನ್ನು ಅನುಭವಿಸುತ್ತಾ ಜಗತ್ತನ್ನು ಮರೆತು ಬಿಡಬೇಕು.

* ಮಹಾಮಂಗಳಾರತಿಯು ಆದ ಮೇಲೆ ಮಂತ್ರಪುಷ್ಪವನ್ನು ಸಮರ್ಪಿಸಿ, ಛತ್ರ ಚಾಮರಾದಿ ರಾಜೋಪಚಾರಗಳನ್ನು ಸಮರ್ಪಿಸಲೇಬೇಕು.

* ಅನಂತರ ೧೦೮ ಸುವರ್ಣನಾಣ್ಯಗಳಿಂದ ಅಥವಾ ೪೮ ಅಥವಾ ೨೪ ಸುವರ್ಣ-ನಾಣ್ಯಗಳಿಂದ ಶ್ರೀಸೂಕ್ತವನ್ನು ಪಠಿಸುತ್ತಾ ಕನಕಾಭಿಷೇಕವನ್ನು ಮಾಡಿ ಹಣ್ಣನ್ನು ನೈವೇದ್ಯ ಮಾಡಿ ಮಂಗಳಾರತಿಯನ್ನು ಮಾಡಿದರೆ ಮನೆಯಲ್ಲಿ ಸಂಪತ್ತು ಅಭಿವೃದ್ಧವಾಗುತ್ತದೆ.

* ಶಂಖಾಗ್ರದಲ್ಲಿ ಶಂಖಮುದ್ರೆಯನ್ನು, ಶಂಖಮಧ್ಯದಲ್ಲಿ ಧೇನು ಮುದ್ರೆಯನ್ನು, ಶಂಖದ ಹಿಂದೆ ಚಕ್ರಮುದ್ರೆಯನ್ನು ತೋರಿಸಿ ದೇವರ ಪಾದದಿಂದ ಮುಕುಟದ ತನಕ ಒಮ್ಮೆ, ನಾಭಿಯಿಂದ ಮುಕುಟದ ತನಕ ಒಮ್ಮೆ, ಹೃದಯದಿಂದ ಮುಕುಟದ ತನಕ ಮತ್ತೊಮ್ಮೆ ಹೀಗೆ ಮೂರು ಬಾರಿ ಪ್ರದಕ್ಷಿಣಾಕಾರವಾಗಿ ಶಂಖವನ್ನು ತಿರುಗಿಸಿ ಆ ಜಲವನ್ನು ಪ್ರತ್ಯೇಕ ಪಾತ್ರೆಯಲ್ಲಿ ಇಟ್ಟುಕೊಳ್ಳಬೇಕು. ಇದುವೇ ಶಂಖೋದಕ ಎಂದು ಕರೆಸಿಕೊಳ್ಳುತ್ತದೆ.

"ಬ್ರಹ್ಮಹತ್ಯಾದಿ ಕೋಟಿಂ ಚ ಗುರುತಲ್ಪಾಯುತಾನಿ ಚ । ನಾಶಯತ್ಯಾಶು ..."

ಎಂಬ ಪ್ರಮಾಣದಂತೆ ಈ ಶಂಖೋದಕದಿಂದ ಕೋಟಿ ಬ್ರಹ್ಮಹತ್ಯೆಗಳು ಪರಿಹಾರವಾಗುತ್ತವೆ. ಅಯುತವಾದ ಗುರುತಲ್ಪವು ಕೂಡ ಪರಿಹಾರವಾಗುತ್ತದೆ. ಉಪಪಾತಕಗಳು ಕೂಡ ಇದರಿಂದ ನಾಶ ಹೊಂದುತ್ತವೆ. ಆದ್ದರಿಂದ ಅವಶ್ಯವಾಗಿ ಈ ಶಂಖೋದಕವನ್ನು ನಿತ್ಯವೂ ಶಿರಸಾ ವಹಿಸಬೇಕು.

* ಶಂಖೋದಕವನ್ನು ಹಾಗೂ ತೀರ್ಥವನ್ನು ಪ್ರತ್ಯೇಕವಾಗಿ ಮನೆಯಲ್ಲಿ ಒಂದು ಕಡೆ ಇಟ್ಟುಕೊಂಡಿರಬೇಕು. ಹೊರಗಡೆ ಹೋಗಿ ಬಂದಾಗ ಅಥವಾ ಇತರಾದಿಗಳ ಸಂಪರ್ಕ-

ವಾದಾಗ ಸ್ನಾನಮಾಡಲು ಸಾಧ್ಯವಾಗದೇ ಇರುವಾಗ ಶಂಖೋದಕವನ್ನು ಹಾಗೂ ತೀರ್ಥ-ವನ್ನು ಪ್ರೋಕ್ಷಣೆ ಮಾಡಿಕೊಳ್ಳಬೇಕು. ಈ ರೂಢಿಯನ್ನು ಇಟ್ಟುಕೊಳ್ಳುವುದರಿಂದ ಧರ್ಮ-ವನ್ನು ಉಳಿಸಿದಂತಾಗುತ್ತದೆ. ಮತ್ತು ಹೊರಗಡೆ ಹೋಗುವಾಗ ತುಳಸೀಮಾಲೆಯನ್ನು ಧಾರಣ ಮಾಡಿರಬೇಕು. 'ಸ್ಪೃಷ್ಟ್ವಾ ವಪುಃ ಪಾವನೀ' ಎಂಬ ಪ್ರಮಾಣದಂತೆ ತುಳಸೀ-ಸರದ ಧಾರಣೆಯಿಂದ ದೇಹ ಅಪವಿತ್ರವಾಗುವುದಿಲ್ಲ.

* ಷೋಡಶೋಪಚಾರಪೂಜೆಗಳನ್ನು ಮುಗಿಸಿದ ಮೇಲೆ ದೇವರನ್ನು ಹೃದಯದಲ್ಲಿ ಪ್ರತ್ಯಾವಾಹನೆ ಮಾಡಿಕೊಳ್ಳಬೇಕು. ಆಗ ಮಾಡಿದ ನ್ಯಾಸಗಳನ್ನು ವ್ಯುತ್ಕ್ರಮದಿಂದ ಚಿಂತಿಸಿ ಹೃದಯದಲ್ಲಿ ಕರೆದು ಕೂಡಿಸಬೇಕು.

* ಮುಖ್ಯಪ್ರಾಣದೇವರ, ಗರುಡಶೇಷರ ಪ್ರತಿಮೆಗಳಿಂದಲೂ ಕೂಡ ಆಯಾ ದೇವತೆಗಳನ್ನು ಪ್ರತ್ಯಾವಾಹನೆ ಮಾಡಿಕೊಳ್ಳಬೇಕು. ಅನಂತರ ನಮ್ಮ ದೇಹದಲ್ಲಿ ಶ್ರೀಹರಿ ವಾಯುಗುರುಗಳ ಸಾನ್ನಿಧ್ಯವು ಸುಸ್ಥಿತವಾಗಿದೆಯೆಂದು ಭಾವಿಸಿ ಸತ್ಕರ್ಮಗಳಲ್ಲಿ ತೊಡಗ-ಬೇಕು.

* ನಾವು ನೋಡುವುದೆಲ್ಲವೂ ಭಗವದ್ವ್ಯಾಪಾರದರ್ಶನ, ನಾವು ತಿನ್ನುವುದೆಲ್ಲವೂ ಹರಿನೈವೇದ್ಯ , ನಮ್ಮ ಮಾತುಗಳೆಲ್ಲವೂ ಶ್ರೀಹರಿಸ್ತೋತ್ರ, ನಡೆದಾಡಿದ್ದೆಲ್ಲವೂ ಶ್ರೀಹರಿಗೆ ಪ್ರದಕ್ಷಿಣೆ, ನಮಸ್ಕಾರ, ಕೇಳಿದ್ದೆಲ್ಲವೂ ಶ್ರೀಹರಿಯ ಕಥಾ, ಉಸಿರಾಟವೇ ಹಂಸಮಂತ್ರ ಜಪ. ಈ ಬಗೆಯಲ್ಲಿ ೨೪ ಗಂಟೆಯೂ ದೇವರ ಪೂಜೆ ಮಾಡುತ್ತಾ ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕು.

* * * * * *

## ಯಾವ ಶಾಲಗ್ರಾಮವನ್ನು ಪೂಜಿಸಬೇಕು

ಅತಿರಿಕ್ತಾ ರೋಗದಾ ಸ್ಯಾತ್ ಕೃಷ್ಣಾ ಕೀರ್ತಿಪ್ರದಾಯಿಕಾ ।
ಕರಾಳಂ ವಿಕರಾಳಂ ಚ ಅಧ ಊರ್ಧ್ವಾಸ್ಯಮುಷ್ಣಕಮ್ ।
ದಳಿತಂ ಸ್ಫುಟಿತಲಗ್ನಂ ಚ ಭಗ್ನಚಕ್ರಂ ತಥೈವ ಚ ।
ಬಹುರೇಖಾಬಹುಚ್ಛಿದ್ರತಿರ್ಯಕ್ಚಕ್ರಂ ತಥಾ ತ್ಯಜೇತ್ ॥

ಕೆಂಪು ಇರುವ ಶಾಲಗ್ರಾಮವು ರೋಗವನ್ನುಂಟುಮಾಡುತ್ತದೆ. ಕೃಷ್ಣವರ್ಣದ ಶಾಲಗ್ರಾಮವು ಕೀರ್ತಿಯನ್ನು ನೀಡುತ್ತದೆ. ವಿಕಾರವಾಗಿರುವ, ಭಯಂಕರವಾಗಿರುವ ಕೆಳಗಡೆ ವದನವಿರುವ ಮೇಲೆ ವದನವಿರುವ ಉಷ್ಣವನ್ನುಂಟುಮಾಡುವ ಭಿನ್ನವಾದ ಸುಟ್ಟ ತ್ರಿಕೋಣದಲ್ಲಿರುವ ಶಾಲಗ್ರಾಮಗಳನ್ನು ಪೂಜಿಸಬಾರದು. ಹಾಗೂ ಒಳಗೆ ಎರಡು ಚಕ್ರಗಳು ಒಟ್ಟಿಗೆ ಸೇರಿಕೊಂಡಿದ್ದರೆ, ಒಳಗಿನ ಚಕ್ರವು ಭಂಗವಾಗಿದ್ದರೆ, ಬಹಳ ರೇಖೆಗಳು ಶಾಲಗ್ರಾಮದ ಮೇಲಿದ್ದರೆ, ಅಲ್ಲಲ್ಲಿ ತೂತುಗಳಿದ್ದರೆ, ವಿಪರೀತಕ್ರಮದಲ್ಲಿ ಚಕ್ರವಿದ್ದರೆ ಇಂತಹ ಶಾಲಗ್ರಾಮವನ್ನು ಕೂಡ ಪೂಜಿಸಬಾರದು.

ಸಮಸಂಖ್ಯೆಯಲ್ಲಿ ಶಾಲಗ್ರಾಮಗಳನ್ನು ಪೂಜಿಸಬೇಕು. ಆದರೆ ಎರಡು ಶಾಲ-ಗ್ರಾಮಗಳನ್ನು ಪೂಜಿಸಬಾರದು. ವಿಷಮ ಸಂಖ್ಯೆಯಲ್ಲಿ ಶಾಲಗ್ರಾಮಗಳನ್ನು ಪೂಜಿಸಬಾರದು. ಆದರೆ ಒಂದು ಶಾಲಗ್ರಾಮವನ್ನು ಪೂಜಿಸಬಹುದು. - ಹೀಗೆ ಪದ್ಮಪುರಾಣವು ಹೇಳುತ್ತದೆ.

ಪ್ರತಿಮಾಯಾ ಅಭಾವೇಽಪಿ ಪೂಜಾಂ ವಿಷ್ಣೋಃ ಪ್ರಕಲ್ಪಯೇತ್ ।
ಸಾಲಿಗ್ರಾಮಶಿಲಾಯಾಂ ತು ಧ್ಯಾತ್ವಾಪೂರ್ವೋಕ್ತವಿಗ್ರಹಮ್ ॥

ಪ್ರತಿಮೆಗಳಿಲ್ಲದಿದ್ದರೂ ಕೂಡ ಶಾಲಗ್ರಾಮಗಳನ್ನು ಪೂಜೆ ಮಾಡಬಹುದು. ಶಾಲಗ್ರಾಮಶಿಲೆಯಲ್ಲಿ ಭಗವಂತನ ಯಾವುದೇ ರೂಪವನ್ನು ಕೂಡ ಚಿಂತಿಸಿ ಪೂಜಿಸಬಹುದು.

* * * * * *

# ನಿರ್ಮಾಲ್ಯಪೂಜೆ

## ಉಷಃಕಾಲದ ಪೂಜೆ

## ನಿರ್ಮಾಲ್ಯಪೂಜೆ

### ಹರಿ-ಗುರುವಂದನೆ

ಶ್ರೀಗುರುಭ್ಯೋ ನಮಃ । ಶ್ರೀಪರಮಗುರುಭ್ಯೋ ನಮಃ । ಶ್ರೀಮದಾನಂದ-ತೀರ್ಥಭಗವತ್ಪಾದಾಚಾರ್ಯೇಭ್ಯೋ ನಮಃ । ಶ್ರೀವೇದವ್ಯಾಸಾಯ ನಮಃ । ಶ್ರೀಭಾರತ್ಯೈ ನಮಃ । ಶ್ರೀಸರಸ್ವತ್ಯೈ ನಮಃ । ಶ್ರೀವಾಯವೇ ನಮಃ । ಶ್ರೀಬ್ರಹ್ಮಣೇ ನಮಃ । ಶ್ರೀಮಹಾಲಕ್ಷ್ಮ್ಯೈ ನಮಃ । ಶ್ರೀಲಕ್ಷ್ಮೀನಾರಾಯಣಾಯ ನಮಃ । ಮಂತ್ರ-ದೇವತಾ ಇಷ್ಟದೇವತಾ ಕುಲದೇವತಾತ್ಮಕ ಶ್ರೀಸೀತಾರಾಮಚಂದ್ರಾಯ ನಮಃ । ಶ್ರೀಲಕ್ಷ್ಮೀಹಯಗ್ರೀವಾಯ ನಮಃ । ಮುಕ್ತಿಪ್ರದಾಯಕವಾಸುದೇವಾಯ ನಮಃ ॥

ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ-
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥

ಯೋ ವಿಪ್ರಲಂಭವಿಪರೀತಮತಿಪ್ರಭೂತಾನ್
ವಾದಾನ್ನಿರಸ್ಯ ಕೃತವಾನ್ ಭುವಿ ತತ್ತ್ವವಾದಮ್ ।
ಸರ್ವೇಶ್ವರೋ ಹರಿರಿತಿ ಪ್ರತಿಪಾದಯಂತಮ್
ಆನಂದತೀರ್ಥಮುನಿವರ್ಯಮಹಂ ನಮಾಮಿ ॥

## ಯಾವ ಶಾಲಗ್ರಾಮವನ್ನು ಪೂಜಿಸಬೇಕು

ಅತಿರಿಕ್ತಾ ರೋಗದಾ ಸ್ಯಾತ್ ಕೃಷ್ಣಾ ಕೀರ್ತಿಪ್ರದಾಯಿಕಾ ।
ಕರಾಳಂ ವಿಕರಾಳಂ ಚ ಅಥ ಊರ್ಧ್ವಾಸ್ಯಮುಷ್ಣಕಮ್ ।
ದಳಿತಂ ಸ್ಫುಟಿತಲಗ್ನಂ ಚ ಭಗ್ನಚಕ್ರಂ ತಥೈವ ಚ ।
ಬಹುರೇಖಾಬಹುಚ್ಛಿದ್ರತಿರ್ಯಕ್ಚಕ್ರಂ ತಥಾ ತ್ಯಜೇತ್ ॥

ಕೆಂಪು ಇರುವ ಶಾಲಗ್ರಾಮವು ರೋಗವನ್ನುಂಟುಮಾಡುತ್ತದೆ. ಕೃಷ್ಣವರ್ಣದ ಶಾಲಗ್ರಾಮವು ಕೀರ್ತಿಯನ್ನು ನೀಡುತ್ತದೆ. ವಿಕಾರವಾಗಿರುವ, ಭಯಂಕರವಾಗಿರುವ ಕೆಳಗಡೆ ವದನವಿರುವ ಮೇಲೆ ವದನವಿರುವ ಉಷ್ಣವನ್ನುಂಟುಮಾಡುವ ಭಿನ್ನವಾದ ಸುಟ್ಟ ತ್ರಿಕೋಣದಲ್ಲಿರುವ ಶಾಲಗ್ರಾಮಗಳನ್ನು ಪೂಜಿಸಬಾರದು. ಹಾಗೂ ಒಳಗೆ ಎರಡು ಚಕ್ರಗಳು ಒಟ್ಟಿಗೆ ಸೇರಿಕೊಂಡಿದ್ದರೆ, ಒಳಗಿನ ಚಕ್ರವು ಭಂಗವಾಗಿದ್ದರೆ, ಬಹಳ ರೇಖೆಗಳು ಶಾಲಗ್ರಾಮದ ಮೇಲಿದ್ದರೆ, ಅಲ್ಲಲ್ಲಿ ತೂತುಗಳಿದ್ದರೆ, ವಿಪರೀತಕ್ರಮದಲ್ಲಿ ಚಕ್ರವಿದ್ದರೆ ಇಂತಹ ಶಾಲಗ್ರಾಮವನ್ನು ಕೂಡ ಪೂಜಿಸಬಾರದು.

ಸಮಸಂಖ್ಯೆಯಲ್ಲಿ ಶಾಲಗ್ರಾಮಗಳನ್ನು ಪೂಜಿಸಬೇಕು. ಆದರೆ ಎರಡು ಶಾಲ-ಗ್ರಾಮಗಳನ್ನು ಪೂಜಿಸಬಾರದು. ವಿಷಮ ಸಂಖ್ಯೆಯಲ್ಲಿ ಶಾಲಗ್ರಾಮಗಳನ್ನು ಪೂಜಿಸಬಾರದು. ಆದರೆ ಒಂದು ಶಾಲಗ್ರಾಮವನ್ನು ಪೂಜಿಸಬಹುದು. - ಹೀಗೆ ಪದ್ಮಪುರಾಣವು ಹೇಳುತ್ತದೆ.

ಪ್ರತಿಮಾಯಾ ಅಭಾವೇಽಪಿ ಪೂಜಾಂ ವಿಷ್ಣೋಃ ಪ್ರಕಲ್ಪಯೇತ್ ।
ಸಾಲಿಗ್ರಾಮಶಿಲಾಯಾಂ ತು ಧ್ಯಾತ್ವಾ ಪೂರ್ವೋಕ್ತವಿಗ್ರಹಮ್ ॥

ಪ್ರತಿಮೆಗಳಿಲ್ಲದಿದ್ದರೂ ಕೂಡ ಶಾಲಗ್ರಾಮಗಳನ್ನು ಪೂಜೆ ಮಾಡಬಹುದು. ಶಾಲಗ್ರಾಮಶಿಲೆಯಲ್ಲಿ ಭಗವಂತನ ಯಾವುದೇ ರೂಪವನ್ನು ಕೂಡ ಚಿಂತಿಸಿ ಪೂಜಿಸಬಹುದು.

* * * * * *

# ನಿರ್ಮಾಲ್ಯಪೂಜೆ

## ಉಷಃಕಾಲದ ಪೂಜೆ

## ನಿರ್ಮಾಲ್ಯಪೂಜೆ

### ಹರಿ-ಗುರುವಂದನೆ

ಶ್ರೀಗುರುಭ್ಯೋ ನಮಃ । ಶ್ರೀಪರಮಗುರುಭ್ಯೋ ನಮಃ । ಶ್ರೀಮದಾನಂದ-ತೀರ್ಥಭಗವತ್ಪಾದಾಚಾರ್ಯೇಭ್ಯೋ ನಮಃ । ಶ್ರೀವೇದವ್ಯಾಸಾಯ ನಮಃ । ಶ್ರೀಭಾರತ್ಯೈ ನಮಃ । ಶ್ರೀಸರಸ್ವತ್ಯೈ ನಮಃ । ಶ್ರೀವಾಯವೇ ನಮಃ । ಶ್ರೀಬ್ರಹ್ಮಣೇ ನಮಃ । ಶ್ರೀಮಹಾಲಕ್ಷ್ಮ್ಯೈ ನಮಃ । ಶ್ರೀಲಕ್ಷ್ಮೀನಾರಾಯಣಾಯ ನಮಃ । ಮಂತ್ರ-ದೇವತಾ ಇಷ್ಟದೇವತಾ ಕುಲದೇವತಾತ್ಮಕ ಶ್ರೀಸೀತಾರಾಮಚಂದ್ರಾಯ ನಮಃ । ಶ್ರೀಲಕ್ಷ್ಮೀಹಯಗ್ರೀವಾಯ ನಮಃ । ಮುಕ್ತಿಪ್ರದಾಯಕವಾಸುದೇವಾಯ ನಮಃ ॥

ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ-
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥

ಯೋ ವಿಪ್ರಲಂಭವಿಪರೀತಮತಿಪ್ರಭೂತಾನ್
ವಾದಾನ್ನಿರಸ್ಯ ಕೃತವಾನ್ ಭುವಿ ತತ್ತ್ವವಾದಮ್ ।
ಸರ್ವೇಶ್ವರೋ ಹರಿರಿತಿ ಪ್ರತಿಪಾದಯಂತಮ್
ಆನಂದತೀರ್ಥಮುನಿವರ್ಯಮಹಂ ನಮಾಮಿ ॥

## ದ್ವಾರಪಾಲಕರನ್ನು ನಮಿಸಿರಿ

ದ್ವಾರಪಾಲೇಭ್ಯೋ ನಮಃ ॥ ಪೂರ್ವದ್ವಾರೇ - 'ಶ್ರಿಯೈ ನಮಃ, ಜಯಾಯ ನಮಃ । ವಿಜಯಾಯ ನಮಃ ।' ದಕ್ಷಿಣದ್ವಾರೇ - 'ಶ್ರಿಯೈ ನಮಃ, ಬಲಾಯ ನಮಃ । ಪ್ರಬಲಾಯ ನಮಃ ॥' ಪಶ್ಚಿಮದ್ವಾರೇ - 'ಶ್ರಿಯೈ ನಮಃ, ನಂದಾಯ ನಮಃ । ಸುನಂದಾಯ ನಮಃ ॥' ಉತ್ತರದ್ವಾರೇ - 'ಶ್ರಿಯೈ ನಮಃ, ಕುಮುದಾಯ ನಮಃ । ಕುಮುದಾಕ್ಷಾಯ ನಮಃ ॥'

## ಬಾಗಿಲು ತೆಗೆದು ದೇವಗೃಹ ಪ್ರವೇಶಿಸಿರಿ.

ವಾಯವಾ ಯಾಹಿ ಇತ್ಯಸ್ಯ ಮಂತ್ರಸ್ಯ ಮಧುಚ್ಛಂದಃ ವೈಶ್ವಾಮಿತ್ರ ಋಷಿಃ ವಾಯುರ್ದೇವತಾ । ಗಾಯತ್ರೀ ಛಂದಃ ।

ವಾಯವಾ ಯಾಹಿ ದರ್ಶತೇ ಮೇ ಸೋಮಾ ಅರಂಕೃತಾಃ ।
ತೇಷಾಂ ಪಾಹಿ ಶ್ರುಧೀ ಹವಮ್ ॥ (ಋ.೧.೨.೧)

* ಈ ಮಂತ್ರವನ್ನು ಹೇಳಿ, ದೇವರ ಮನೆಯ ಬಾಗಿಲು ತೆಗೆದು ಮೂರು ಚಪ್ಪಾಳೆ ಹೊಡೆದು ಬಲಗಾಲಿಟ್ಟು ಒಳಗೆ ಪ್ರವೇಶಿಸಿರಿ.

## ದೀಪ ಹಚ್ಚಿರಿ

ಅಗ್ನಿನಾಗ್ನಿರಿತ್ಯಸ್ಯ ಮಂತ್ರಸ್ಯ ಮೇಧಾತಿಥಿಃ ಕಾಣ್ವ ಋಷಿಃ । ಅಗ್ನಿರ್ದೇವತಾ । ಗಾಯತ್ರೀಛಂದಃ । ದೀಪಪ್ರಜ್ವಲನೇ ವಿನಿಯೋಗಃ ।

ಅಗ್ನಿನಾಽಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ ।
ಹವ್ಯವಾಡ್ ಜುಹ್ವಾಸ್ಯಃ ॥ (ಋ.೧-೧೨-೬)

ದೀಪಸ್ತಂಭೇ ಸಪ್ತವಿಂಶತಿನಕ್ಷತ್ರದೇವತಾಭ್ಯೋ ನಮಃ । ನಾಳೇ ವಾಸುಕಯೇ ನಮಃ । ಮೂಲೇ ಚಂದ್ರಾರ್ಕಾಭ್ಯಾಂ ನಮಃ ।

ಓಂ ನಮ ಇತಿ ॥ ಶ್ರೀಯಜ್ಞಪುರುಷಾಯ ನಮಃ ॥ (ಗೋತ್ರ ಪ್ರವರಾದೀನುಚ್ಚಾರ್ಯ ಅಭಿವಾದಯೇತ್)

## ಉತ್ತರಪರಿಷೇಕ

ಹಿಂದೆ ಮಾಡಿದ ಪರಿಷೇಕಕ್ಕೆ ವಿಪರೀತ ಕ್ರಮದಲ್ಲಿ ಪರಿಷೇಕ ಮಾಡಬೇಕು

**(ಉಪವಿಶ್ಯ) ಅದಿತೇಽನ್ವಮಂಸ್ಥಾಃ। ಅನುಮತೇಽನ್ವಮಂಸ್ಥಾಃ। ಸರಸ್ವತೇಽನ್ವಮಂಸ್ಥಾಃ। ದೇವಸವಿತಃ ಪ್ರಾಸಾವೀಃ ॥**

## ಹುತಭಸ್ಮಧಾರಣೆ

ಮಾನಸ್ತೋಕ್ತ ಇತ್ಯಸ್ಯ ಮಂತ್ರಸ್ಯ ಕುತ್ಸ ಋಷಿಃ । ಜಗತೀ ಛಂದಃ । ರುದ್ರೋ ದೇವತಾ। ವಿಭೂತಿಗ್ರಹಣೇ ವಿನಿಯೋಗಃ ॥

**ಓಂ ಮಾ ನಸ್ತೋಕೇ ತನಯೇ ಮಾ ನ ಆಯೌ ಮಾ ನೋ ಗೋಷು ಮಾ ನೋ ಅಶ್ವೇಷು ರೀರಿಷಃ । ವೀರಾನ್ಮಾನೋ ರುದ್ರ ಭಾಮಿತೋ ವಧೀರ್ಹವಿಷ್ಮಂತಃ ಸದಮಿತ್ತ್ವಾ ಹವಾಮಹೇ ॥ (ಇತಿ ಮಂತ್ರೇಣ ಭಸ್ಮ ಲಲಾಟೇ ಧಾರಯೇತ್)**

## ಸಮಿತ್ಸಮಾರೋಪಣೆ

ಒಂದು ಸಮಿಧೆಯನ್ನು ಸ್ವಲ್ಪ ಸುಟ್ಟು ಇಟ್ಟುಕೊಂಡು ಅದರಿಂದ ಸಾಯಂಕಾಲ ಅಥವಾ ಮರುದಿವಸ ಮಾಡುವ ಅಗ್ನಿಕಾರ್ಯದಲ್ಲಿ ಅಗ್ನಿಪ್ರತ್ಯವರೋಹಣ ಮಾಡಿಕೊಳ್ಳಬೇಕು.

ಅಯಂ ತೇ ಯೋನಿರಿತ್ಯಸ್ಯ ಮಂತ್ರಸ್ಯ ಗಾಧಿಪುತ್ರೋ ವಿಶ್ವಾಮಿತ್ರ ಋಷಿಃ । ತ್ರಿಷ್ಟುಪ್ ಛಂದಃ । ಅಗ್ನಿರ್ದೇವತಾ । ಅಗ್ನಿ ಸಮಿತ್ಸಮಾರೋಪಣೇ ವಿನಿಯೋಗಃ ॥

**ಓಂ ಅಯಂ ತೇ ಯೋನಿರ್ಋತ್ವಿಯೋ ಯತೋ ಜಾತೋ ಅರೋಚಥಾಃ। ತಂ ಜಾನನ್ನಗ್ನ ಆ ಸೀದಾಥಾ ನೋ ವರ್ಧಯಾ ಗಿರಃ ॥ ಓಂ ಭೂರ್ಭುವಃ ಸ್ವರೋಮಗ್ನಿಂ ಸಮಿಧಿ ಆರೋಪಯಾಮಿ ॥**

## ಸಮಾಪನೆ

ಯಸ್ಯಸ್ಮೃತ್ಯಾ ಚ ............ ಕಾಯೇನ ವಾಚಾ ............. ॥

ಅನೇನ ಪ್ರಾತರ (ಸಾಯಮ)ಗ್ನಿಕಾರ್ಯ ಕರಣೇನ ಭಗವಾನ್ ಅಗ್ನ್ಯಂತರ್ಗತ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಪರಶುರಾಮಃ ಪ್ರೀಯತಾಮ್ । ಶ್ರೀಕೃಷ್ಣಾರ್ಪಣಮಸ್ತು ॥ (೨ ಸಲ ಆಚಮನ, ನಾಮತ್ರಯಮಂತ್ರ ಜಪ ಮಾಡಬೇಕು).

॥ ಇತಿ ಋಗ್ವೇದೀಯ ಅಗ್ನಿಕಾರ್ಯಂ ಸಂಪೂರ್ಣಮ್ ॥

★ ★ ★ ★

# ಔಪಾಸನವಿಧಿ

## ಪ್ರತಿಯೊಬ್ಬರೂ ಔಪಾಸನೆ ಮಾಡಲೇಬೇಕು

★ ಗೃಹಸ್ಥನಾದವನು ಮಾಡಲೇಬೇಕಾದ ಕರ್ತವ್ಯವೆಂದರೆ ಔಪಾಸನ. ಔಪಾಸನೆ ಮಾಡದವನು ಗೃಹಸ್ಥಾಶ್ರಮ ಧರ್ಮವನ್ನು ಪರಿಪಾಲಿಸಲು ಸಾಧ್ಯವೇ ಇಲ್ಲ.

★ ಉಪನಯನವಾದಾಗ ಸಮುದ್ಭವ ಎಂಬ ಅಗ್ನಿಯನ್ನು ಸ್ವೀಕರಿಸಿ ಅದರ ಉಪಾಸನೆಯ ಮೂಲಕ ಬ್ರಹ್ಮಚರ್ಯಾಶ್ರಮವನ್ನು ಪರಿಪಾಲನೆ ಮಾಡಲಾಗುತ್ತದೆ. ಗೃಹಸ್ಥನಾದ ಮೇಲೆ ದ್ವಿಜ ಎಂಬ ಅಗ್ನಿಯನ್ನು ಸ್ವೀಕರಿಸಿ ಅದರ ಪರಿಪಾಲನೆಯಿಂದ ಗೃಹಸ್ಥಾಶ್ರಮವನ್ನು ಸಾರ್ಥಕ ಮಾಡಿಕೊಳ್ಳುವುದು ಪ್ರತಿಯೊಬ್ಬರ ಕರ್ತವ್ಯವಾಗಿದೆ.

★ ವಿವಾಹದ ಸಂದರ್ಭದಲ್ಲಿ ಪತ್ನಿಯ ತಾಯಿಯು ತಮ್ಮ ಮನೆಯ ಅಗ್ನಿಯನ್ನು ತಂದು ವಿವಾಹ ಹೋಮವನ್ನು ಮಾಡಿಸುತ್ತಾಳೆ. ಆ ಸಂದರ್ಭದಲ್ಲಿ ಅಗ್ನಿ ಸ್ವೀಕಾರವನ್ನು ಮಾಡಬೇಕು. ಈ ಅಗ್ನಿಯ ಪರಿಪಾಲನೆಯನ್ನು ಸಾಯುವ ತನಕವೂ ಮಾಡುತ್ತಲೇ ಇರಬೇಕು.

★ ಯಾವ ಈ ದೇಹವನ್ನು ಭಗವಂತನ ಸೇವೆ ಮಾಡುವ ಮೂಲಕ ಸಾರ್ಥಕ ಮಾಡಿಕೊಂಡಿದ್ದೇವೋ, ಈ ದೇಹವನ್ನು ಆಹುತಿ ರೂಪವಾಗಿ ಭಗವಂತನಿಗೆ ಸಮರ್ಪಣೆ ಮಾಡಬೇಕು. ದೇಹವನ್ನು ಉಸಿರುನಿಂತ ಮೇಲೆ ಬೆಂಕಿಯಲ್ಲಿ ಸುಡುತ್ತಾರೆ. ಆಗ ಯಾವುದೋ ಬೆಂಕಿಯಲ್ಲಿ ಸುಡುವುದು ತಪ್ಪು, ನಮ್ಮ ಔಪಾಸನ ಅಗ್ನಿಯಲ್ಲಿಯೇ ಇದನ್ನು ಸುಡಬೇಕು. ಆಗ ಈ ದೇಹವು ಹುತವಾಗಿ ಭಗವಂತನಿಗೆ ಸಮರ್ಪಿತವಾಗುತ್ತದೆ. ಜೀವನ ಪರಿಪೂರ್ಣವಾಗುತ್ತದೆ.

★ ವಿವಾಹದ ದಿವಸದಿಂದ ಕೊನೆಯ ತನಕವೂ ದ್ವಿಜ ಎಂಬ ಅಗ್ನಿಯು ನಮ್ಮನ್ನು ಕಾಪಾಡುತ್ತದೆ. ಕೊನೆಯಲ್ಲಿ ಈ ದೇಹವನ್ನು ಭಗವಂತನಿಗೆ ಸಮರ್ಪಿಸಿ ನಮ್ಮ ಜೀವನವನ್ನೇ ಸಾರ್ಥಕವಾಗಿ ಮಾಡುತ್ತದೆ. ಇಂತಹ ಅಗ್ನಿಯ ಉಪಾಸನೆಯನ್ನು ಖಂಡಿತವಾಗಿಯೂ ನಾವು ಮಾಡಲೇಬೇಕು. ಮಾಡದೇ ಇರಲು ಸಾಧ್ಯವೇ ಇಲ್ಲ.

★ ಇಂದು ಬಹಳಷ್ಟು ಮಂದಿ ಔಪಾಸನೆಯನ್ನು ಬಿಟ್ಟಿದ್ದಾರೆ, ಮರೆತಿದ್ದಾರೆ. ಕೇವಲ ವೈಶ್ವದೇವ ಹೋಮ ಮಾಡಿ ಮುಗಿಸುತ್ತಾರೆ. ಉಳಿದೆಲ್ಲ ಕರ್ತವ್ಯಗಳಲ್ಲಿ ತೊಡಗುತ್ತಾರೆ. ಆದರೆ ಕೇವಲ ಹತ್ತು ನಿಮಿಷದ ಔಪಾಸನೆಯನ್ನು ಆಚರಿಸಲು ಔದಾಸೀನ್ಯವನ್ನು ಹೊಂದುತ್ತಾರೆ.

★ ಪ್ರಯತ್ನಪಟ್ಟು ಔಪಾಸನಾಗ್ನಿಯ ಸಂರಕ್ಷಣೆ ಮಾಡಿಕೊಳ್ಳಲೇಬೇಕು. ಏತನ್ಮೂಲಕ

ಜೀವನವನ್ನು ಪರಿರಕ್ಷಣೆ ಮಾಡಿಕೊಳ್ಳಬೇಕು. ತಿಳಿದವರ ಬಳಿ ಇನ್ನೂ ಹೆಚ್ಚಿನ ಮಾಹಿತಿಯನ್ನು ಇದರ ಬಗ್ಗೆ ಪಡೆದುಕೊಳ್ಳಬೇಕು.

★ ಒಂದು ವೇಳೆ ತಿಳಿಯದೆ ವಿವಾಹದ ದಿನದಿಂದ ಔಪಾಸನೆಯನ್ನು ಮಾಡದೇ ಇದ್ದರೆ ಜ್ಞಾನಿಜನರ ಬಳಿ ತೆರಳಿ ಪ್ರಾಯಶ್ಚಿತ್ತ ಮಾಡಿಕೊಂಡು ಪುನಃ ಔಪಾಸನೆಯನ್ನು ಪ್ರಾರಂಭ ಮಾಡಬೇಕು.

★ ಔಪಾಸನೆಯನ್ನು ವೈಶ್ವದೇವ ಹೋಮದಲ್ಲಿ ಸೇರಿಸಿಕೊಂಡು ಸರ್ವಥಾ ಮಾಡಬಾರದು. ಏಕೆಂದರೆ ದ್ವಿಜ ಎಂಬುದು ಔಪಾಸನ ಅಗ್ನಿಯ ಹೆಸರು, ರುಗ್ಮ ಎಂಬುದು ವೈಶ್ವದೇವ ಹೋಮದ ಅಗ್ನಿಯ ಹೆಸರು. ಎರಡೂ ಅಗ್ನಿಗಳು ಬೇರೆ ಬೇರೆಯೇ ಆಗಿದ್ದಾರೆ. ಆದ್ದರಿಂದ ವೈಶ್ವದೇವಾಗ್ನಿಯಲ್ಲಿ ಔಪಾಸನೆಯನ್ನು ಮಾಡಲು ಸರ್ವಥಾ ಬರುವುದಿಲ್ಲ. ಅದರಂತೆ ಔಪಾಸನಾಗ್ನಿಯಲ್ಲಿಯೂ ಕೂಡ ವೈಶ್ವದೇವವನ್ನು ಸರ್ವಥಾ ಮಾಡಬಾರದು.

★ ಅಡುಗೆ ಮಾಡುವ ಮೊದಲು ಔಪಾಸನೆಯನ್ನು ಮಾಡಿ ಅದೇ ಔಪಾಸನಾಗ್ನಿಯಲ್ಲಿ ಅಡುಗೆಯನ್ನು ಮಾಡಬೇಕು. ಹೀಗೆ ಮಾಡುವುದರಿಂದ ಅಗ್ನಿಯಲ್ಲಿರುವ ಬ್ರಹ್ಮಹತ್ಯಾ ಪಾಪವು ಪರಿಹಾರವಾಗುತ್ತದೆ. ಸ್ವಯಂಪಾಕಿಗಳು ತಮ್ಮ ಔಪಾಸನೆಯಾಗ್ನಿಯಲ್ಲಿಯೇ ಅಡುಗೆ ಮಾಡಿ ಭುಂಜಿಸುತ್ತಾರೆ. ಹಾಗಾಗಿ ಅವರು ಬೇರೆ ಕಡೆ ಭೋಜನವನ್ನು ಮಾಡುವುದಿಲ್ಲ. ಅಸಂಸ್ಕೃತವಾದ ಅಗ್ನಿಯಲ್ಲಿ ಅಡುಗೆ ಮಾಡಿದ್ದನ್ನು ಸ್ವೀಕರಿಸುವುದಿಲ್ಲ ಎಂಬ ದೀಕ್ಷೆಯನ್ನು ಹೊಂದಿರುತ್ತಾರೆ. ಈ ನಿಯಮವನ್ನು ಅನುಸರಿಸಲು ಕಷ್ಟವಾದವರು ಹೀಗೆ ಮಾಡಬೇಕು– ಪೂಜೆ ಮುಗಿದ ಮೇಲೆ ವೈಶ್ವದೇವ ಮಾಡುವ ಮೊದಲು ಔಪಾಸನ ಹೋಮವನ್ನು ಮಾಡಬೇಕು. ಔಪಾಸನೆಯು ಮುಗಿದ ಮೇಲೆ ವೈಶ್ವದೇವ ಹೋಮವನ್ನು ಪ್ರಾರಂಭ ಮಾಡಬೇಕು, ಅನಂತರ ಬಲಿಹರಣವನ್ನು ಆಚರಿಸಬೇಕು.

★ ಋಗ್ವೇದಿಗಳು ಸಮಿತ್ತಿನಲ್ಲಿ ಔಪಾಸನಾಗ್ನಿಯನ್ನು ತೆಗೆದಿಟ್ಟುಕೊಳ್ಳುತ್ತಾರೆ. ಸುಟ್ಟ ಆ ಸಮಿತ್ತನ್ನು ಪುನಃ ಅಗ್ನಿಯಲ್ಲಿ ಹಾಕಿ ಔಪಾಸನೆಯನ್ನು ಮಾಡುತ್ತಾರೆ. ಇನ್ನು ಕೆಲವು ಋಗ್ವೇದಿಗಳು ಹೃದಯದಲ್ಲಿಯೇ ಅಗ್ನಿಯನ್ನು ಪ್ರತ್ಯಾವಾಹನೆ ಮಾಡಿಕೊಳ್ಳುತ್ತಾರೆ. ಹೃದಯದಿಂದಲೇ ಪುನಃ ಆವಾಹನೆ ಮಾಡಿ ಹೋಮಿಸುತ್ತಾರೆ. ಎರಡು ಪಕ್ಷಗಳೂ ಕೂಡ ಶಾಸ್ತ್ರೀಯವೇ ಆಗಿವೆ.

★ ಹಗಲಿಗೆ ಸೂರ್ಯನು ದೇವತೆಯಾದರೆ, ರಾತ್ರಿಗೆ ಅಗ್ನಿಯು ದೇವತೆಯಾಗಿದ್ದಾನೆ. ಆದ್ದರಿಂದ ರಾತ್ರಿ ಮಾಡಿದ ಪಾಪಕರ್ಮಗಳನ್ನು ನಾವು ಅಗ್ನಿಯಲ್ಲಿ ಹೋಮಿಸುತ್ತೇವೆ, ಹಗಲಿನಲ್ಲಿ ಮಾಡಿದ ಪಾಪಕರ್ಮಗಳನ್ನು ಸೂರ್ಯನಲ್ಲಿ

ಹೋಮಿಸುತ್ತೇವೆ. ಈ ಕಾರಣದಿಂದ ಸಾಯಂಕಾಲದ ಔಪಾಸನಕ್ಕೆ ಹೆಚ್ಚು ಮಹತ್ತ್ವವನ್ನು ನೀಡಲಾಗಿದೆ.

★ ಔಪಾಸನಾಗ್ನಿಯಲ್ಲಿ ಆಹುತಿಯನ್ನು ನೀಡುವ ಮೊದಲು ಅಗ್ನಿಗೆ ಷೋಡಶೋಪಚಾರ ಪೂಜೆಯನ್ನು ಸಮರ್ಪಿಸಬೇಕು. ಆಗ ನೈವೇದ್ಯದ ಸಂದರ್ಭದಲ್ಲಿ ಭಗವಂತನ ತೀರ್ಥವನ್ನು, ನಿರ್ಮಾಲ್ಯ ತುಳಸಿ ಪುಷ್ಪಗಳನ್ನು ಸಮರ್ಪಿಸಬೇಕು. ಅಗ್ನಿಯ ಒಳಗೆ ಸಮರ್ಪಿಸಬಾರದು. ಅಗ್ನಿಯ ಮುಂದೆ ಸಮರ್ಪಿಸಬೇಕು.

★ ಔಪಾಸನೆ ಮಾಡಲು ಪತ್ನಿ ಇರಲೇಬೇಕು ಎಂಬ ನಿಯಮವಿದೆ. ಆದ್ದರಿಂದ ಎಷ್ಟೇ ಕಷ್ಟವಾದರೂ ಪಕ್ಕದಲ್ಲಿ ಹೆಂಡತಿಯನ್ನು ಕುಳ್ಳಿರಿಸಿಕೊಂಡು ಔಪಾಸನೆಯನ್ನು ಮಾಡಬೇಕು.

★ ಔಪಾಸನೆಗೆ ನೀಡುವ ಆಹುತಿಯ ಸಿದ್ಧತೆಯನ್ನು ಪತ್ನಿಯಾದವಳೇ ಮಾಡಬೇಕು. ಅಕ್ಕಿಯನ್ನು ಸಂಗ್ರಹಿಸಿ ತುಪ್ಪದ ಕೈಯಿಂದ ಅಕ್ಕಿಯನ್ನು ಯಜಮಾನನಿಗೆ ನೀಡಬೇಕು. ಯಜಮಾನನು ಅಗ್ನಿಗೆ ಅದನ್ನು ಆಹುತಿಯನ್ನಾಗಿ ಸಮರ್ಪಿಸಬೇಕು.

★ ಪತ್ನಿಯು ತನ್ನ ಕೈಗೆ ತುಪ್ಪವನ್ನು ಹಾಕಿಕೊಂಡು ಅಕ್ಕಿಯನ್ನು ತೆಗೆದುಕೊಂಡು ಯಜಮಾನನ ಕೈಗೆ ಹಾಕಿ ಭಗವಂತನಲ್ಲಿ ಪ್ರಾರ್ಥಿಸಿ ಯಜಮಾನನು ಗೋತ್ರಾಭಿವಾದನ ಮಾಡಿ ನಮಿಸುವ ಪರ್ಯಂತ ಜೊತೆಯಲ್ಲಿದ್ದು, ಅನಂತರ ಇತರ ಕಾರ್ಯಗಳಿಗೆ ತೆರಳಬೇಕು.

★ ಸಾಯಂಕಾಲಕ್ಕೆ ಅಗ್ನಿಯು ದೇವತೆಯಾಗಿರುವುದರಿಂದ ಮೊದಲು ಸಾಯಂಕಾಲದ ಹೋಮವನ್ನು ಮಾಡಿ ಅನಂತರ ಬೆಳಿಗ್ಗೆಯ ಹೋಮವನ್ನು ಮಾಡಬೇಕು.

★ 'ಹ್ಯಃ ಸಾಯಂ ಅದ್ಯ ಪ್ರಾತಃ ಔಪಾಸನಾಖ್ಯಂ ಕರ್ಮ ಕರಿಷ್ಯೇ' ಎಂಬುದಾಗಿಯೇ ಸಂಕಲ್ಪವನ್ನು ಮಾಡಬೇಕು. ಅಂದರೆ ನೆನ್ನೆಯ ದಿವಸದ ಸಾಯಂಕಾಲದ ಔಪಾಸನೆಯನ್ನು ಹಾಗೂ ಇಂದಿನ ಬೆಳಿಗ್ಗಿನ ಔಪಾಸನೆಯನ್ನು ಆಚರಿಸುತ್ತೇನೆ ಎಂಬುದು ಇದರ ಅಭಿಪ್ರಾಯ.

★ ದ್ವಾದಶಿಯ ದಿವಸ ದಶಮ್ಯಾಃ ಸಾಯಂ ಅದ್ಯಪ್ರಾತಃ ಔಪಾಸನಾಖ್ಯಂ ಕರ್ಮಕರಿಷ್ಯೇ ಎಂದು ಸಂಕಲ್ಪವನ್ನು ಮಾಡಿ ಔಪಾಸನೆಯನ್ನು ಮಾಡಬೇಕು.

★ ಹೋಮದಲ್ಲಿ ಹಿಂದಿನ ಆಹುತಿಯನ್ನು ನೀಡಬಹುದು. ಮುಂದಿನದ್ದನ್ನು ನೀಡಲು ಅವಕಾಶವಿರುವುದಿಲ್ಲ. ಆದ್ದರಿಂದ ಹ್ಯಃ ಸಾಯಂ ಅದ್ಯಪ್ರಾತಃ ಎಂದೇ ಸಂಕಲ್ಪವನ್ನು ಮಾಡಬೇಕು.

★ ವಿವಾಹದ ದಿವಸ ಮಾತ್ರ ಬೆಳಿಗ್ಗೆ ಅಗ್ನಿಯನ್ನು ಸ್ವೀಕರಿಸಿ ಸಾಯಂಕಾಲ ಔಪಾಸನೆಯನ್ನು ಮಾಡಬೇಕು. ಮರುದಿವಸ ಕೇವಲ ಅದ್ಯಪ್ರಾತಃ ಎಂದು ಸಂಕಲ್ಪಿಸಿ ಪ್ರಾತಃಕಾಲದ ಔಪಾಸನೆಯನ್ನು ಮಾಡಬೇಕು. ಅದರ ಮರುದಿವಸದಿಂದ 'ಹ್ಯಃ ಸಾಯಂ ಅದ್ಯಪ್ರಾತಃ ಔಪಾಸನಾಖ್ಯಂ ಕರ್ಮ ಕರಿಷ್ಯೇ' ಎಂದೇ ಸಂಕಲ್ಪವನ್ನು ಮಾಡಿ ಔಪಾಸನೆಯನ್ನು ಮಾಡಬೇಕು.

★ ನಾರಾಯಣಾಷ್ಟಾಕ್ಷರ, ವಾಸುದೇವ ದ್ವಾದಶಾಷ್ಟಾಕ್ಷರ, ಕೃಷ್ಣಷಡಕ್ಷರ, ಪುರುಷಸೂಕ್ತ ಇವುಗಳಿಂದ ಆಹುತಿಯನ್ನು ನೀಡಿ ಅನಂತರ ಪತ್ನಿ ನೀಡಿದ ಅಕ್ಕಿಯಿಂದ ಆಹುತಿಯನ್ನು ನೀಡಬೇಕು. ಒಂದುವೇಳೆ ಔಪಾಸನ ಹಾಗೂ ವೈಶ್ವದೇವ ಹೋಮಗಳನ್ನು ಪರಿಪೂರ್ಣವಾಗಿ ಮಂತ್ರಗಳಿಂದ ಆಚರಿಸಲು ಸಾಧ್ಯವಾಗದಿದ್ದರೆ, ಔಪಾಸನೆಯನ್ನು ವಿಸ್ತಾರವಾಗಿ ಮಾಡಲೇಬೇಕು. ವೈಶ್ವದೇವ ಹೋಮವನ್ನು ಸಂಕ್ಷೇಪವಾಗಿ ಮಾಡಬಹುದು.

★ ಒಂದು ವೇಳೆ ಔಪಾಸನೆಯಲ್ಲಿ ಪತ್ನಿಯು ಭಾಗವಹಿಸಲು ಸಾಧ್ಯವಾಗದಿದ್ದರೆ ತನ್ನ ಎಡಗೈಯನ್ನೇ ಪತ್ನಿ ಎಂದು ಭಾವಿಸಿ ಎಡಗೈಯಲ್ಲಿ ಅಕ್ಕಿಯನ್ನು ಹಾಕಿಕೊಂಡು, ತುಪ್ಪ ಹಾಕಿ, ಅದನ್ನು ಬಲಗೈಗೆ ಹಾಕಿಕೊಂಡು ಆಹುತಿ ಪ್ರದಾನವನ್ನು ಮಾಡಬೇಕು. ಪತ್ನಿ ಇಲ್ಲವೆಂದು ಔಪಾಸನೆಯನ್ನು ಬಿಡಬಾರದು. ಔಪಾಸನೆಗೆ ಅನೇಕ ಅಂಗಗಳಂತೆ ಪತ್ನಿಯೂ ಕೂಡ ಒಂದು ಅಂಗ. ಒಂದು ಅಂಗದ ನ್ಯೂನತೆಯಿಂದ ಸಮಸ್ತ ಕರ್ಮವನ್ನೇ ಲೋಪ ಮಾಡುವುದು ಸೂಕ್ತವಲ್ಲ.

★ ★ ★ ★

# ಅಥ ಔಪಾಸನವಿಧಾನಮ್

## ಆಚಮನಮ್

ಆಚಮನವನ್ನು ಎರಡು ಬಾರಿ ಮಾಡಬೇಕು

ಕೇಶವಾಯ ಸ್ವಾಹಾ । ನಾರಾಯಣಾಯ ಸ್ವಾಹಾ । ಮಾಧವಾಯ ಸ್ವಾಹಾ । ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ । ತ್ರಿವಿಕ್ರಮಾಯ ನಮಃ । ವಾಮನಾಯ ನಮಃ । ಶ್ರೀಧರಾಯ ನಮಃ । ಹೃಷೀಕೇಶಾಯ ನಮಃ । ಪದ್ಮನಾಭಾಯ ನಮಃ । ದಾಮೋದರಾಯ ನಮಃ । ಸಂಕರ್ಷಣಾಯ ನಮಃ । ವಾಸುದೇವಾಯ ನಮಃ । ಪ್ರದ್ಯುಮ್ನಾಯ ನಮಃ । ಅನಿರುದ್ಧಾಯ ನಮಃ । ಪುರುಷೋತ್ತಮಾಯ ನಮಃ । ಅಧೋಕ್ಷಜಾಯ ನಮಃ । ನಾರಸಿಂಹಾಯ ನಮಃ । ಅಚ್ಯುತಾಯ ನಮಃ । ಜನಾರ್ದನಾಯ ನಮಃ । ಉಪೇಂದ್ರಾಯ ನಮಃ । ಹರಯೇ ನಮಃ । ಶ್ರೀ ಕೃಷ್ಣಾಯ ನಮಃ ।

## ಪ್ರಾಣಾಯಾಮ

ಓಂ ಪ್ರಣವಸ್ಯ ಪರಬ್ರಹ್ಮಋಷಿಃ ಪರಮಾತ್ಮಾ ದೇವತಾ ದೈವೀ ಗಾಯತ್ರೀ ಛಂದಃ ಪ್ರಾಣಾಯಾಮೇ ವಿನಿಯೋಗಃ ।

ಓಮ್ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಂ ಸತ್ಯಂ । ಓಮ್ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಓಮಾಪೋಜ್ಯೋತೀರಸೋಽಮೃತಂಬ್ರಹ್ಮ ಭೂರ್ಭುವಃ ಸುವರೋಮ್ ॥

## ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತ-ಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲೀವಾಹನ .......[1] ಶಕೇ ಶಾಲೀವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ ........ ಆಯನೇ ..... ಋತು ....... ಮಾಸೇ ......... ಪಕ್ಷೇ ..... ಶುಭತಿಥೌ ...... ವಾಸರಯುಕ್ತಾಯಾಂ .... ಶುಭನಕ್ಷತ್ರೇ ..... ಶುಭಯೋಗೇ ....... ಶುಭಕರಣೇ ಏವಂಗುಣವಿಶೇಷಣ ವಿಶಿಷ್ಟಾಯಾಂ ದ್ವಿಜನಾಮಕ ಅಗ್ನ್ಯಂತರ್ಗತ

ಭಾರತೀರಮಣ ಮುಖ್ಯಪ್ರಾಣಾಂತರ್ಗತ ಯಜ್ಞನಾಮಕ ಹರಿಣೇಪತಿ ಶ್ರೀ ಪರಶುರಾಮ ಪ್ರೇರಣಯಾ ಹರಿಣೇಪತಿ ಶ್ರೀ ಪರಶುರಾಮ ಪ್ರೀತ್ಯರ್ಥಂ ಹ್ಯಃ ಸಾಯಂ ಅದ್ಯಪ್ರಾತಃ ಔಪಾಸನಾಖ್ಯಂ ಕರ್ಮ ಕರಿಷ್ಯೇ ॥ (ಪತ್ನಿಸಹಿತನಾಗಿ ಹೀಗೆ ಸಂಕಲ್ಪವನ್ನು ಮಾಡಬೇಕು)

## ಅಗ್ನಿ ಪ್ರತಿಷ್ಠಾಪನೆ

ಹೃದಯದಲ್ಲಿ ಅಥವಾ ಸಮಿತ್ತಿನಲ್ಲಿ ಧರಿಸಿದ ದ್ವಿಜ ಎಂಬ ಅಗ್ನಿಯನ್ನು ಜ್ವಲಿಸುತ್ತಿರುವ ಅಗ್ನಿಯ ಜ್ವಾಲೆಯ ಮಧ್ಯದಲ್ಲಿ ಕೆಳಗಿನ ಮಂತ್ರವನ್ನು ಹೇಳುತ್ತಾ ಪ್ರತಿಷ್ಠಾಪನೆ ಮಾಡಬೇಕು

ಜುಷ್ಟೋದಮೂನಾ ಆತ್ರೇಯೋ ವಸುಶ್ರುತೋಽಗ್ನಿಸ್ತ್ರಿಷ್ಟುಪ್ । ಏಹ್ಯಗ್ನೇ ರಾಹುಗಣೋ ಗೌತಮೋಽಗ್ನಿಸ್ತ್ರಿಷ್ಟುಪ್ । ಅಗ್ನ್ಯಾವಾಹನೇ ವಿನಿಯೋಗಃ ॥

ಓಂ ಜುಷ್ಟೋದಮೂನಾ ಅತಿಥಿರ್ದುರೋಣ ಇಮಂ ನೋ ಯಜ್ಞಮುಪಯಾಹಿ ವಿದ್ವಾನ್ । ವಿಶ್ವಾ ಅಗ್ನೇ ಅಭಿಯುಜೋ ವಿಹತ್ಯಾ ಶತ್ರೂಯತಾಮಾಭರಾ ಭೋಜನಾನಿ॥ ಏಹ್ಯಗ್ನ ಇಹಹೋತಾ ನಿಷೀದಾದಬ್ಧಃ ಸುಪುರ ಏತಾ ಭವಾನಃ । ಅವತಾಂ ತ್ವಾ ರೋದಸೀ ವಿಶ್ವಮಿನ್ವೇ ಯಜಾಮಹೇ ಸೌಮನಸಾಯ ದೇವಾನ್॥

ಸಮಸ್ತವ್ಯಾಹೃತೀನಾಂ ಪರಮೇಷ್ಠೀ ಪ್ರಜಾಪತಿಃ ಪ್ರಜಾಪತಿರ್ಬೃಹತೀ ಅಗ್ನಿಪ್ರತಿಷ್ಠಾಪನೇ ವಿನಿಯೋಗಃ ॥

ಓಂ ಭೂರ್ಭುವಃ ಸ್ವರೋಮ್ । ವಿಷ್ಣುವೀರ್ಯಾತ್ಮಕಂ ದ್ವಿಜನಾಮಾನಂ ಅಗ್ನಿಂ ಪ್ರತಿಷ್ಠಾಪಯಾಮಿ ॥

## ಅಗ್ನಿಮೂರ್ತಿಧ್ಯಾನಮ್

ಚತ್ವಾರಿಶೃಂಗೇತಿ ಗೌತಮೋ ವಾಮದೇವೋಽಗ್ನಿಸ್ತ್ರಿಷ್ಟುಪ್ । ಅಗ್ನಿಮೂರ್ತಿಧ್ಯಾನೇ ವಿನಿಯೋಗಃ ॥

ಓಂ ಚತ್ವಾರಿಶೃಂಗಾ ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತ ಹಸ್ತಾಸೋ ಅಸ್ಯ। ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ ಮರ್ತ್ಯಾ ಆವಿವೇಶ॥

ಸಪ್ತಹಸ್ತಶ್ಚತುಃಶೃಂಗಃ ಸಪ್ತಜಿಹ್ವೋ ದ್ವಿಶೀರ್ಷಕಃ ।
ತ್ರಿಪಾತ್ ಪ್ರಸನ್ನವದನಃ ಸುಖಾಸೀನಃ ಶುಚಿಸ್ಮಿತಃ ॥
ಸ್ವಾಹಾಂ ತು ದಕ್ಷಿಣೇ ಪಾರ್ಶ್ವೇ ದೇವೀಂ ವಾಮೇ ಸ್ವಧಾಂ ತಥಾ ।
ಬಿಭ್ರದ್ದಕ್ಷಿಣಹಸ್ತೈಸ್ತು ಶಕ್ತಿಮನ್ನಂ ಸ್ರುಚಂ ಸ್ರುವಮ್ ॥
ತೋಮರಂ ವ್ಯಜನಂ ವಾಮೇ ಘೃತಪಾತ್ರಂ ಚ ಧಾರಯನ್ ।
ಮೇಷಾರೂಢೋ ಜಟಾಬದ್ಧೋ ಗೌರವರ್ಣೋ ಮಹೌಜಸಃ ॥

ಧೂಮ್ರಧ್ವಜೋ ಲೋಹಿತಾಕ್ಷಃ ಸಪ್ತಾರ್ಚಿಃ ಸರ್ವಕಾಮದಃ ।
ಆತ್ಮಾಭಿಮುಖಮಾಸೀನ ಏವಂ ರೂಪೋ ಹುತಾಶನಃ ॥

## ಅಗ್ನಿಸಮ್ಮುಖೀಕರಣಮ್

ಏಷ ಹಿ ದೇವ ಇತ್ಯಸ್ಯ ಹಿರಣ್ಯಗರ್ಭೋಽಗ್ನಿಸ್ತ್ರಿಷ್ಟುಪ್ । ಅಗ್ನಿಸಮ್ಮುಖೀಕರಣೇ ವಿನಿಯೋಗಃ ॥

ಓಂ ಏಷ ಹಿ ದೇವಃ ಪ್ರದಿಶೋ ನು ಸರ್ವಾಃ ಪೂರ್ವೋ ಹಿ ಜಾತಸ್ಸ ಉ ಗರ್ಭೇ ಅಂತಃ । ಸವಿಜಾಯಮಾನಃ ಸಜನಿಷ್ಯಮಾಣಃ ಪ್ರತ್ಯಙ್ಮುಖಾಸ್ತಿಷ್ಠತಿ ವಿಶ್ವತೋ ಮುಖಃ॥

ಅಗ್ನೇ ವೈಶ್ವಾನರ ಶಾಂಡಿಲ್ಯ ಗೋತ್ರ ಮೇಷಾರೂಢ ಮೇಷಧ್ವಜ ವರಪ್ರದ ಪ್ರಾಙ್ಮುಖೋ ದೇವ ಮಮ ಸಮ್ಮುಖೋ ವರದೋ ಭವ ॥

## ಪರಿಷೇಕಮ್

ಅದಿತೇಽನುಮನ್ಯಸ್ವ। ಅನುಮತೇಽನುಮನ್ಯಸ್ವ। ಸರಸ್ವತೇಽನುಮನ್ಯಸ್ವ। ದೇವ ಸವಿತಃ ಪ್ರಸುವ॥ (ಪರಿಷೇಕದ ಕ್ರಮವನ್ನು ಹಿಂದೆ ಅಗ್ನಿಕಾರ್ಯದ ಸಂದರ್ಭದಲ್ಲಿ ತಿಳಿಸಲಾಗಿದೆ).

## ಅಗ್ನಿ ಅಲಂಕರಣ

ಅಗ್ನಿಗೆ ಅಲಂಕಾರ ಮಾಡಿರಿ

ವಿಶ್ವಾನಿನ ಇತಿ ತಿಸೃಣಾಮಾತ್ರೇಯೋ ವಸುಸ್ರುತ್ರೋಽಗ್ನಿಸ್ತ್ರಿಷ್ಟುಪ್ । ದ್ವಯೋಃ ಅಲಂಕರಣೇ, ತೃತೀಯಸ್ಯ ಅಗ್ನ್ಯರ್ಚನೇ ವಿನಿಯೋಗಃ ॥

ಓಂ ವಿಶ್ವಾನಿನೋ ದುರ್ಗಹಾ ಜಾತವೇದಃ । ಸಿಂಧುಂ ನ ನಾವಾ ದುರಿತಾತಿಪರ್ಷಿ। ಅಗ್ನೇ ಅತ್ರಿವನ್ನಮಸಾ ಗೃಣಾನಃ । ಅಸ್ಮಾಕಂ ಬೋಧ್ಯವಿತಾ ತನೂನಾಮ್ । ಯಸ್ತ್ವಾ ಹೃದಾ ಕೀರಿಣಾ ಮನ್ಯಮಾನಃ। ಅಮರ್ತ್ಯಂ ಮರ್ತ್ಯೋ ಜೋಹವೀಮಿ। ಜಾತವೇದೋ ಯಶೋ ಅಸ್ಮಾಸು ಧೇಹಿ । ಪ್ರಜಾಭಿರಗ್ನೇ ಅಮೃತತ್ವಮಶ್ಯಾಮ್ ॥ ಯಸ್ಮೈ ತ್ವಂ ಸುಕೃತೇ ಜಾತವೇದ ಉ ಲೋಕಮಗ್ನೇ ಕೃಣವಃ ಸ್ಯೋನಂ । ಅಶ್ವಿನಂ ಸಪುತ್ರಿಣಂ ವೀರವಂತಂ ಗೋಮಂತಂ ರಯಿಂ ನಶತೇ ಸ್ವಸ್ತಿ ॥

## ಅಗ್ನಿಗೆ ಹದಿನಾರು ಪೂಜೆ

ರಾಂ ಸಹಸ್ರಾರ್ಚಿಷೇ ಹೃದಯಾಯ ನಮಃ । ರೀಂ ಸ್ವಸ್ತಿಪೂರ್ಣಾತ್ಮನೇ ಶಿರಸೇ

ಸ್ವಾಹಾ। ರೂಂ ಉತ್ತಿಷ್ಠಪುರುಷಾತ್ಮನೇ ಶಿಖಾಯೈ ವೌಷಟ್ । ರೈಂ ಧೂಮಾವ್ಯಾಪಿನೇ ಕವಚಾಯ ಹುವ್ । ರೌಂ ಸಪ್ತಜಿಹ್ವಾತ್ಮನೇ ನೇತ್ರತ್ರಯಾಯ ವೌಷಟ್ । ರಃ ಧನುರ್ಧರಾಯ ಅಸ್ತ್ರಾಯ ಫಟ್ ॥

ತ್ರಿನಯನಮರುಣಾಪ್ತಾಬದ್ಧ .................. ಕೃಶಾನುಮ್ ॥

## ಮುಖ್ಯಪ್ರಾಣಧ್ಯಾನ

ಉದ್ಯದ್ರವಿಪ್ರಕರ ಸನ್ನಿಭಮಚ್ಯುತಾಂಕೇ
ಸ್ವಾಸೀನಮಸ್ಯ ನುತಿನಿತ್ಯವಚಃಪ್ರವೃತ್ತಿಮ್ ।
ಧ್ಯಾಯೇದ್ಗದಾಭಯಕರಂ ಸುಕೃತಾಂಜಲಿಂ ತಂ
ಪ್ರಾಣಂ ಯಥೇಷ್ಟತನುಮುನ್ನತಕರ್ಮಶಕ್ತಿಮ್ ॥

## ಪರಶುರಾಮಧ್ಯಾನ

ಅಂಗಾರವರ್ಣಮಭಿತೋಂಡಬಹಿಃಪ್ರಭಾಭಿ
ರ್ವ್ಯಾಪ್ತಂ ಪರಶ್ವಧಧನುರ್ಧರಮೇಕವೀರಮ್ ।
ಧ್ಯಾಯೇದಜೇಶಪುರುಹೂತಮುಖೈಃ ಸ್ತುವದ್ಭಿ
ರಾವೀತಮಾತ್ಮ ಪದವೀಂ ಪ್ರತಿಪಾದಯಂತಮ್ ॥

ವೈಶ್ವಾನರಾಯ ವಿದ್ಮಹೇ ಜ್ವಾಲಾಲೀಲಾಯ ಧೀಮಹಿ ।
ತನ್ನೋ ವಹ್ನಿಃ ಪ್ರಚೋದಯಾತ್ ॥

ಅಗ್ನ್ಯಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಹರಿಣೀಪತಿ ಪರಶುರಾಮಂ ಆವಾಹಯಾಮಿ । 'ಓಂ ರವ್ ಅಗ್ನಯೇ ನಮಃ । ಓಂ ರಾಂ ರಾಮಾಯ ನಮಃ । ಓಂ ಭಾಂ ಭಾರ್ಗವಾಯ ನಮಃ ।

ಆಸನಂ ಸಮರ್ಪಯಾಮಿ । ಸ್ವಾಗತಂ । ಅರ್ಘ್ಯಂ । ಸ್ನಾನಂ । ಆಚಮನಂ । ಮಧುಪರ್ಕಂ । ಪುನರಾಚಮನಂ। ಪಾದ್ಯಂ । ವಸ್ತ್ರಂ । ವಿಭೂಷಣಂ । ಉಪವೀತಂ । ಗಂಧಂ । ಪುಷ್ಪಂ । ಧೂಪಂ। ದೀಪಂ । ನೈವೇದ್ಯ (ಆಜ್ಯಂ) ಸಮರ್ಪಯಾಮಿ । ಧ್ಯಾನಾವಾಹನಾದಿ ಷೋಡಶೋಪಚಾರಪೂಜಾಂ ಸಮರ್ಪಯಾಮಿ ॥

ಭಗವಂತನಿಗೆ ಸಮರ್ಪಿಸಿದ ತುಳಸೀದಳ, ಪುಷ್ಪ, ಗಂಧ, ಅಕ್ಷತೆ ಇವುಗಳನ್ನು ದ್ವಿಜನಾಮಕನಾದ ಅಗ್ನಿಗೆ ಸಮರ್ಪಿಸಬೇಕು ಹಾಗೂ ತೀರ್ಥವನ್ನು ನೀಡಬೇಕು.

## ಆಹುತಿ ಪ್ರದಾನ

ಓಂ ಭೂಃ ಸ್ವಾಹಾ ಅಗ್ನ್ಯಾತ್ಮನೇ ಅನಿರುದ್ಧಾಯ ಇದಂ ನ ಮಮ ।
ಓಂ ಭುವಃ ಸ್ವಾಹಾ ವಾಯ್ವಾತ್ಮನೇ ಪ್ರದ್ಯುಮ್ನಾಯ ಇದಂ ನ ಮಮ ।
ಓಂ ಸ್ವಃ ಸ್ವಾಹಾ ಸೂರ್ಯಾತ್ಮನೇ ಸಂಕರ್ಷಣಾತ್ಮನೇ ಇದಂ ನ ಮಮ ।
ಓಂ ಭೂರ್ಭುವ ಸ್ವಃ ಸ್ವಾಹಾ ಪ್ರಜಾಪತ್ಯಾತ್ಮನೇ ಇದಂ ನ ಮಮ ।

(ವ್ಯಾಹೃತಿಯ ಹೋಮದಿಂದ ಅಗ್ನಿಗೆ ಸಂಸ್ಕಾರವಾಯಿತೆಂದು ತಿಳಿಯಬೇಕು. ಮುಂದೆ ನಲವತ್ತೆಂಟು ಆಹುತಿಗಳನ್ನು ನೀಡಬೇಕು).

ಓಂ ಓಂ ನಮೋ ನಾರಾಯಣಾಯ ಸ್ವಾಹಾ । ನಾರಾಯಣಾಯ ಇದಂ ನ ಮಮ ॥ (ಎಂಟು ಆಹುತಿ)

ಓಂ ಕ್ಲೀಂ ಕೃಷ್ಣಾಯ ನಮಃ ಓಂ ಸ್ವಾಹಾ । ಕೃಷ್ಣಾಯ ಇದಂ ನ ಮಮ ॥ (ಆರು ಆಹುತಿ)

ಓಂ ಓಂ ನಮೋ ಭಗವತೇ ವಾಸುದೇವಾಯ ಓಂ ಸ್ವಾಹಾ । ವಾಸುದೇವಾಯ ಇದಂ ನ ಮಮ ॥ (ಹನ್ನೆರಡು ಆಹುತಿ)

ಸಹಸ್ರಶೀರ್ಷೇತಿ ಷೋಡಶರ್ಚಸ್ಯ ಸೂಕ್ತಸ್ಯ ನಾರಾಯಣೋ ಋಷಿಃ । ಅನುಷ್ಟುಪ್ ಛಂದಃ । ಅಂತ್ಯಾತ್ರಿಷ್ಟುಪ್ ಛಂದಃ । ಪರಮಪುರುಷೋ ದೇವತಾ । ಪುರುಷಸೂಕ್ತೇನ ಆಹುತಿ ಪ್ರದಾನೇ ವಿನಿಯೋಗಃ ॥

ಓಂ ॥ ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಸ್ಸಹಸ್ರಪಾತ್ । ಸ ಭೂಮಿಂ ವಿಶ್ವತೋ ವೃತ್ವಾಽತ್ಯತಿಷ್ಠದ್ದಶಾಂಗುಲಮ್ ॥ ಸ್ವಾಹಾ ॥ ಪುರುಷಾಯ ಇದಂ ನ ಮಮ ॥

ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್ । ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥ ಸ್ವಾಹಾ ॥ ಪುರುಷಾಯ ಇದಂ ನ ಮಮ ॥

ಏತಾವಾನಸ್ಯ ಮಹಿಮಾಽತೋ ಜ್ಯಾಯಾಂಶ್ಚ ಪೂರುಷಃ । ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥ ಸ್ವಾಹಾ ॥ ಪುರುಷಾಯ ಇದಂ ನ ಮಮ ॥

ತ್ರಿಪಾದೂರ್ಧ್ವ ಉದೈತ್ ಪುರುಷಃ ಪಾದೋಽಸ್ಯೇಹಾಭವತ್ ಪುನಃ । ತತೋ ವಿಷ್ವಙ್ ವ್ಯಕ್ರಾಮತ್ಸಾಶನಾನಶನೇ ಅಭಿ ॥ ಸ್ವಾಹಾ ॥ ಪುರುಷಾಯ ಇದಂ ನ ಮಮ॥

ತಸ್ಮಾದ್ವಿರಾಳಜಾಯತ ವಿರಾಜೋ ಅಧಿ ಪೂರುಷಃ । ಸ ಜಾತೋ ಅತ್ಯರಿಚ್ಯತ ಪಶ್ಚಾದ್ಭೂಮಿಮಥೋ ಪುರಃ ॥ ಸ್ವಾಹಾ ॥ ಪುರುಷಾಯ ಇದಂ ನ ಮಮ ॥

ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ । ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಶ್ಶರದ್ಧವಿಃ ॥ ಸ್ವಾಹಾ ॥ ಪುರುಷಾಯ ಇದಂ ನ ಮಮ ॥

ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ ಪುರುಷಂ ಜಾತಮಗ್ರತಃ । ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ ॥ ಸ್ವಾಹಾ ॥ ಪುರುಷಾಯ ಇದಂ ನ ಮಮ ॥

ತಸ್ಮಾದ್ ಯಜ್ಞಾತ್ ಸರ್ವಹುತಃ ಸಂಭೃತಂ ಪೃಷದಾಜ್ಯಮ್ । ಪಶೂನ್ ತಾಂಶ್ಚಕ್ರೇ ವಾಯವ್ಯಾನಾರಣ್ಯಾನ್ ಗ್ರಾಮ್ಯಾಶ್ಚ ಯೇ ॥ ಸ್ವಾಹಾ ॥ ಪುರುಷಾಯ ಇದಂ ನ ಮಮ॥

ತಸ್ಮಾದ್ ಯಜ್ಞಾತ್ ಸರ್ವಹುತ ಋಚಸ್ಸಾಮಾನಿ ಜಜ್ಞಿರೇ । ಛಂಧಾಂಸಿ ಜಜ್ಞಿರೇ ತಸ್ಮಾದ್ಯಜುಸ್ತಸ್ಮಾದಜಾಯತ ॥ ಸ್ವಾಹಾ ॥ ಪುರುಷಾಯ ಇದಂ ನ ಮಮ ॥

ತಸ್ಮಾದಶ್ವಾ ಅಜಾಯಂತ ಯೇ ಕೇ ಚೋಭಯಾದತಃ । ಗಾವೋ ಹ ಜಜ್ಞಿರೇ ತಸ್ಮಾತ್ತಸ್ಮಾಜ್ಜಾತಾ ಅಜಾವಯಃ ॥ ಸ್ವಾಹಾ ॥ ಪುರುಷಾಯ ಇದಂ ನ ಮಮ ॥

ಯತ್ ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್ । ಮುಖಂ ಕಿಮಸ್ಯ ಕೌ ಬಾಹೂ ಕಾ ಊರೂ ಪಾದಾ ಉಚ್ಯೇತೇ ॥ ಸ್ವಾಹಾ ॥ ಪುರುಷಾಯ ಇದಂ ನ ಮಮ ॥

ಬ್ರಾಹ್ಮಣೋಽಸ್ಯ ಮುಖಮಾಸೀತ್ ಬಾಹೂ ರಾಜನ್ಯಃ ಕೃತಃ । ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ॥ ಸ್ವಾಹಾ ॥ ಪುರುಷಾಯ ಇದಂ ನ ಮಮ॥

ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ । ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ ॥ ಸ್ವಾಹಾ ॥ ಪುರುಷಾಯ ಇದಂ ನ ಮಮ ॥

ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋದ್ಯೌಸ್ಸಮವರ್ತತ । ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ತಥಾ ಲೋಕಾ ಅಕಲ್ಪಯನ್ ॥ ಸ್ವಾಹಾ ॥ ಪುರುಷಾಯ ಇದಂ ನ ಮಮ॥

ಸಪ್ತಾಸ್ಯಾಽಸನ್ ಪರಿಧಯಃ ತ್ರಿಸ್ಸಪ್ತ ಸಮಿಧಃ ಕೃತಾಃ। ದೇವಾ ಯದ್ ಯಜ್ಞಂ ತನ್ವಾನಾ ಅಬಧ್ನನ್ ಪುರುಷಂ ಪಶುಮ್ ॥ ಸ್ವಾಹಾ ॥ ಪುರುಷಾಯ ಇದಂ ನ ಮಮ॥

ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಸ್ಸಚಂತ ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ ॥ ಸ್ವಾಹಾ ॥ ಪುರುಷಾಯ ಇದಂ ನ ಮಮ ॥

ಪತ್ನಿಯ ಕೈಯಿಂದ ಅಕ್ಕಿಯನ್ನು ಹಾಕಿಸಿಕೊಂಡು ಕೆಳಗಿನ ನಾಲ್ಕು ಆಹುತಿಗಳನ್ನು ನೀಡಬೇಕು. ಸಪ್ತಜಿಹ್ವೆಗಳಿಂದ ಜ್ವಲಿಸುವ ಅಗ್ನಿಯ ಮಧ್ಯದಲ್ಲಿ ಹಾಕಬೇಕು.

## ನಿನ್ನೆಯ ಸಾಯಂಕಾಲದ ಆಹುತಿ

ಓಂ ಭೂಃ ಸ್ವಾಹಾ ಅಗ್ನ್ಯಾತ್ಮನೇ ಅನಿರುದ್ಧಾಯ ಇದಂ ನ ಮಮ ।
ಓಂ ಭುವಃ ಸ್ವಾಹಾ ವಾಯ್ವಾತ್ಮನೇ ಪ್ರದ್ಯುಮ್ನಾಯ ಇದಂ ನ ಮಮ ।
ಓಂ ಸ್ವಃ ಸ್ವಾಹಾ ಸೂರ್ಯಾತ್ಮನೇ ಸಂಕರ್ಷಣಾತ್ಮನೇ ಇದಂ ನ ಮಮ ।
ಓಂ ಭೂರ್ಭುವ ಸ್ವಃ ಸ್ವಾಹಾ ಪ್ರಜಾಪತ್ಯಾತ್ಮನೇ ಇದಂ ನ ಮಮ ।

ಓಂ ಅಗ್ನಯೇ ಸ್ವಾಹಾ ಅಗ್ನ್ಯಾತ್ಮನೇ ಅನಿರುದ್ಧಾಯ ಇದಂ ನ ಮಮ ।
ಓಂ ಪ್ರಜಾಪತಯೇ ಸ್ವಾಹಾ । ಪ್ರಜಾಪತ್ಯಾತ್ಮನೇ ವಾಸುದೇವಾಯ ಇದಂ ನ ಮಮ॥

ಓಂ ಭೂಃ ಸ್ವಾಹಾ ಅಗ್ನ್ಯಾತ್ಮನೇ ಅನಿರುದ್ಧಾಯ ಇದಂ ನ ಮಮ ।
ಓಂ ಭುವಃ ಸ್ವಾಹಾ ವಾಯ್ವಾತ್ಮನೇ ಪ್ರದ್ಯುಮ್ನಾಯ ಇದಂ ನ ಮಮ ।
ಓಂ ಸ್ವಃ ಸ್ವಾಹಾ ಸೂರ್ಯಾತ್ಮನೇ ಸಂಕರ್ಷಣಾತ್ಮನೇ ಇದಂ ನ ಮಮ ।
ಓಂ ಭೂರ್ಭುವ ಸ್ವಃ ಸ್ವಾಹಾ ಪ್ರಜಾಪತ್ಯಾತ್ಮನೇ ಇದಂ ನ ಮಮ ।

## ಬೆಳಗಿನ ಆಹುತಿ

ಓಂ ಸೂರ್ಯಾಯ ಸ್ವಾಹಾ ಸೂರ್ಯಾತ್ಮನೇ ಸಂಕರ್ಷಣಾಯ ಇದಂ ನ ಮಮ ।
ಓಂ ಪ್ರಜಾಪತಯೇ ಸ್ವಾಹಾ । ಪ್ರಜಾಪತ್ಯಾತ್ಮನೇ ವಾಸುದೇವಾಯ ಇದಂ ನ ಮಮ॥

ಓಂ ಭೂಃ ಸ್ವಾಹಾ ಅಗ್ನ್ಯಾತ್ಮನೇ ಅನಿರುದ್ಧಾಯ ಇದಂ ನ ಮಮ ।
ಓಂ ಭುವಃ ಸ್ವಾಹಾ ವಾಯ್ವಾತ್ಮನೇ ಪ್ರದ್ಯುಮ್ನಾಯ ಇದಂ ನ ಮಮ ।
ಓಂ ಸ್ವಃ ಸ್ವಾಹಾ ಸೂರ್ಯಾತ್ಮನೇ ಸಂಕರ್ಷಣಾತ್ಮನೇ ಇದಂ ನ ಮಮ ।
ಓಂ ಭೂರ್ಭುವ ಸ್ವಃ ಸ್ವಾಹಾ ಪ್ರಜಾಪತ್ಯಾತ್ಮನೇ ಇದಂ ನ ಮಮ ।

## ಅಗ್ನಿ ಉಪಸ್ಥಾನಮ್

ಪತಿ-ಪತ್ನಿಯರು ಎದ್ದುನಿಂತು ಕೈಮುಗಿದು ಪ್ರಾರ್ಥಿಸಬೇಕು

ಓಂ ಚಮ ಇತ್ಯಸ್ಯ ಸಾರಸ್ವತೋಽಗ್ನಿಸ್ತ್ರಿಷ್ಟುಪ್ । ಅಗ್ನಿ ಪ್ರಾರ್ಥನೇ ವಿನಿಯೋಗಃ॥

ಓಂ ಚಮೇ ಸ್ವರಶ್ಚ ಮೇ ಯಜ್ಞೋಪಚತೇ ನಮಶ್ಚ । ಯತ್ತೇ ನ್ಯೂನಂ ತಸ್ಮೈ ತ ಉಪಯತ್ತೇಽತಿರಿಕ್ತಂ ತಸ್ಮೈ ತೇ ನಮಃ । ಅಗ್ನಯೇ ನಮಃ ॥ ಓಂ ಸ್ವಸ್ತಿ ॥

ಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ ವಿದ್ಯಾಂ ಬುದ್ಧಿಂ ಶ್ರಿಯಂ ಬಲಮ್ ।
ಆಯುಷ್ಯಂ ತೇಜ ಆರೋಗ್ಯಂ ದೇಹಿ ಮೇ ಹವ್ಯವಾಹನ ॥ ಶ್ರಿಯಂ ದೇಹಿ ಮೇ ಹವ್ಯವಾಹನ ಓಂ ನಮೋ ನಮಃ

......... ಗೋತ್ರೋದ್ಭವಃ .... ಪ್ರವರಾನ್ವಿತಃ ...... ಆಶ್ವಲಾಯನಸೂತ್ರಃ ಋಕ್‌ಶಾಖಾಧ್ಯಾಯೀ.... ಶರ್ಮಾ ಅಹಂ ಭೋ ಅಭಿವಾದಯೇ ॥

## ಉತ್ತರಪರಿಷೇಕ

ಕುಳಿತು ಪರಿಷೇಕ ಮಾಡಬೇಕು

ಅದಿತೇಽನ್ವಮಂಸ್ಥಾಃ । ಅನುಮತೇಽನ್ವಮಂಸ್ಥಾಃ । ಸರಸ್ವತೇಽನ್ವಮಂಸ್ಥಾಃ । ದೇವಸವಿತಃ ಪ್ರಾಸಾವೀಃ ॥ (ಹಿಂದೆ ತೋರಿಸಿದ ಚಿತ್ರದ ವಿಪರೀತ ಕ್ರಮದಲ್ಲಿ ಪರಿಷೇಕ ಮಾಡಬೇಕು).

## ಹುತಭಸ್ಮಧಾರಣೆ

ಮಾನಸ್ತೋಕ್ತ ಇತ್ಯಸ್ಯ ಮಂತ್ರಸ್ಯ ಕುತ್ಸ ಋಷಿಃ । ಜಗತೀ ಛಂದಃ । ರುದ್ರೋ ದೇವತಾ। ವಿಭೂತಿಗ್ರಹಣೇ ವಿನಿಯೋಗಃ ॥

ಓಂ ಮಾ ನಸ್ತೋಕೇ ತನಯೇ ಮಾ ನ ಆಯೌ ಮಾ ನೋ ಗೋಷು ಮಾ ನೋ ಅಶ್ವೇಷು ರೀರಿಷಃ । ವೀರಾನ್ಮಾನೋ ರುದ್ರ ಭಾಮಿತೋ ವಧೀರ್ಹವಿಷ್ಮಂತಃ ಸದಮಿತ್ತ್ವಾ ಹವಾಮಹೇ ॥ (ಇತಿ ಮಂತ್ರೇಣ ಭಸ್ಮ ಲಲಾಟೇ ಧಾರಯೇತ್)

## ಸಮಿತ್ಸಮಾರೋಪಣೆ

ಒಂದು ಸಮಿಧೆಯನ್ನು ಸ್ವಲ್ಪ ಸುಟ್ಟು ಇಟ್ಟುಕೊಂಡು ಅದರಿಂದ ಸಾಯಂಕಾಲ ಅಥವಾ ಮರುದಿವಸ ಮಾಡುವ ಔಪಾಸನದಲ್ಲಿ ಅಗ್ನಿಪ್ರತ್ಯವರೋಹಣ ಮಾಡಿಕೊಳ್ಳಬೇಕು ಅಥವಾ ಹೃದಯದಲ್ಲಿ ಸಮಾರೋಪಣ ಮಾಡಿಟ್ಟುಕೊಳ್ಳಿರಿ.

ಅಯಂ ತೇ ಯೋನಿರಿತ್ಯಸ್ಯ ಮಂತ್ರಸ್ಯ ಗಾಧಿಪುತ್ರೋ ವಿಶ್ವಾಮಿತ್ರ ಋಷಿಃ । ತ್ರಿಷ್ಟುಪ್ ಛಂದಃ । ಅಗ್ನಿರ್ದೇವತಾ । ಅಗ್ನಿ ಸಮಿತ್ಸಮಾರೋಪಣೇ ವಿನಿಯೋಗಃ ॥

ಓಂ ಅಯಂ ತೇ ಯೋನಿರ್ಋತ್ವಿಯೋ ಯತೋ ಜಾತೋ ಅರೋಚಥಾಃ। ತಂ ಜಾನನ್ನಗ್ನ ಆ ಸೀದಾಥಾ ನೋ ವರ್ಧಯಾ ಗಿರಃ ॥ ಓಂ ಭೂರ್ಭುವಃ ಸ್ವರೋಮಗ್ನಿಂ ಸಮಿಧಿ ಆರೋಪಯಾಮಿ ॥

## ಸಮಾಪನಮ್

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋಯಜ್ಞಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಹುತಾಶನ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

ಅನೇನ ಹ್ಯಃ ಸಾಯಂ ಅದ್ಯ ಪ್ರಾತಃ ಔಪಾಸನಕರಣೇನ ಅಸ್ಮದ್ಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಹರಿಣೀಪತಿಃ ಶ್ರೀಪರಶುರಾಮಃ ಪ್ರೀಯತಾಂ ಪ್ರೀತೋ ಭವತು ಶ್ರೀಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ॥

॥ ಇಲ್ಲಿಗೆ ಔಪಾಸನಾವಿಧಿಯು ಮುಗಿಯಿತು ॥

★ ★ ★ ★

# ವೈಶ್ವದೇವ ಪದ್ಧತಿ

**ಅಕೃತ್ವಾ ವೈಶ್ವದೇವಂ ತು ಯೋऽನ್ನಂ ಭುಂಕ್ತೇ ದ್ವಿಜಾಧಮಃ ।**
**ಸ ಭುಂಕ್ತೇ ಹಿ ಕ್ರಿಮೀನ್ ಸರ್ವಾನ್ ಕಾಕಯೋನಿಷು ಜಾಯತೇ ॥**

ವೈಶ್ವದೇವವನ್ನು ಮಾಡದೇ ಅನ್ನವನ್ನು ಭೋಜನ ಮಾಡುವ ಬ್ರಾಹ್ಮಣನು ಕ್ರಿಮಿಗಳನ್ನು ತಿಂದಂತೆ. ಅವನು ಕಾಗೆಯಾಗಿ ಹುಟ್ಟುತ್ತಾನೆ.

**'ಹುತಶೇಷಂ ಭುಂಜಾನೋ ಬ್ರಾಹ್ಮಣೋ ನಾವಸೀದತಿ ।'** (ಪರಾಶರಸ್ಮೃತಿ)

**ಯಜ್ಞಶಿಷ್ಟಾಶಿನಃ ಸಂತೋ ಮುಚ್ಯತೇ ಸರ್ವಕಿಲ್ಬಿಷೈಃ ।**
**ಭುಂಜತೇ ತೇ ತ್ವಘಂ ಪಾಪಾಃ ಯೇ ಪಚಂತ್ಯಾತ್ಮಕಾರಣಾತ್ ॥** (ಗೀತಾ)

ವೈಶ್ವದೇವದ ಹೋಮಶೇಷವನ್ನು ಭುಂಜಿಸುವ ಬ್ರಾಹ್ಮಣನು ಎಂದೂ ನಾಶ ಹೊಂದುವುದಿಲ್ಲ. ಆದ್ದರಿಂದ ಪ್ರತಿಯೊಬ್ಬ ಬ್ರಾಹ್ಮಣನೂ ವೈಶ್ವದೇವ ಮಾಡುವುದು ಅವಶ್ಯ ಕರ್ತವ್ಯವಾಗಿದೆ.

(ಪ್ರತಿಪಾಕಾನಂತರವೂ ವಿಷ್ಣ್ವರ್ಪಿತವಾದ ನೈವೇದ್ಯದಿಂದ ಪ್ರಾತಃಕಾಲ ಮತ್ತು ಸಾಯಂಕಾಲ ಎರಡು ವೇಳೆಯಲ್ಲಿಯೂ ಪ್ರತ್ಯೇಕ ಪ್ರತ್ಯೇಕ ವೈಶ್ವದೇವ ಹೋಮವನ್ನು ಮಾಡುವುದು ಉತ್ತಮಪಕ್ಷವು. ಅಥವಾ 'ಪ್ರಾತಃ' ಸಾಯಂ ವೈಶ್ವದೇವಹೋಮಾಖ್ಯಂ ಕರ್ಮ ಕರಿಷ್ಯೇ ॥' ಎಂದು ಸಂಕಲ್ಪಮಾಡಿ ಪ್ರಾತಃಕಾಲದಲ್ಲಿಯೇ ಎರಡು ಹೊತ್ತಿನ ಆಹುತಿಗಳನ್ನು ಕೊಡಬೇಕು. ದೇವಪೂಜಾನಂತರ ಜಲಪಾತ್ರ, ವಿಷ್ಣ್ವರ್ಪಿತವಾದ ನೈವೇದ್ಯದಿಂದ ಪೂರ್ವಾಭಿಮುಖವಾಗಿ ಕುಳಿತು ವೈಶ್ವದೇವವನ್ನು ಮಾಡಬೇಕು)*.

★ **ಆಚಮನ ಮಾಡಿರಿ**

★ **ಪ್ರಾಣಾಯಾಮ ಮಾಡಿರಿ**

★ **ಸಂಕಲ್ಪ ಮಾಡಿರಿ**

---

* ((೧) ಪಂಚಸೂನಾ-ಖಂಡನ (ತುಂಡುಮಾಡುವುದು) ಪೇಷಣ (ಅರೆಯು(ರುಬ್ಬು) ವುದು) ಚುಲ್ಲೀ (ಒಲೆಯಲ್ಲಿಸುಡುವುದು) ಭರ್ಜನ (ಹುರಿಯುವುದು) ಉದಕುಂಭ (ನೀರಿನಲ್ಲಿ ಇಲ್ಲವೆ ಆವಿಯಲ್ಲಿ ಬೇಯಿಸುವುದು) ಧಾನ್ಯ ಶಾಕಾದಿ ಆಹಾರ ಪದಾರ್ಥಗಳಿಗೆ ಉಪಯೋಗಿಸುವ ವಸ್ತುಗಳಿಗೆ ಮಾಡುವ ಈ ಐದು ಸಂಸ್ಕಾರಗಳು ಪಂಚಸೂನಾ. ಇದು ದೋಷವಾದ್ದರಿಂದ ಇದು ವೈಶ್ವದೇವದಿಂದ ಪರಿಹಾರವಾಗುತ್ತದೆ. ವೈಶ್ವದೇವವನ್ನು ಏಕಾದಶೀ, ಜನ್ಮಾಷ್ಟಮಿಯಂದು ಮಾಡಕೂಡದು).

ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಅಗ್ನ್ಯಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಪರಶುರಾಮಪ್ರೇರಣಯಾ ಶ್ರೀಪರಶುರಾಮಪ್ರೀತ್ಯರ್ಥಂ ಪಂಚಸೂನಾ ದೋಷ ಪರಿಹಾರಾರ್ಥಂ ಪ್ರಾತಃಸಾಯಂ ವೈಶ್ವದೇವ ಹೋಮಾಖ್ಯಂ ಕರ್ಮ ಕರಿಷ್ಯೇ॥

## ಅಗ್ನಿ-ಆವಾಹನೆ

ಜುಷ್ಟೋದಮೂನಾ ಆತ್ರೇಯೋ ವಸುಶ್ರುತೋಽಗ್ನಿಸ್ತ್ರಿಷ್ಟುಪ್ । ಏಹ್ಯಗ್ನೇ ರಾಹುಗಣೋ ಗೌತಮೋಽಗ್ನಿಸ್ತ್ರಿಷ್ಟುಪ್ । ಅಗ್ನ್ಯಾವಾಹನೇ ವಿನಿಯೋಗಃ ॥

ಓಂ ಜುಷ್ಟೋದಮೂನಾ ಅತಿಥಿರ್ದುರೋಣ ಇಮಂ ನೋ ಯಜ್ಞಮುಪಯಾಹಿ ವಿದ್ವಾನ್ । ವಿಶ್ವಾ ಅಗ್ನೇ ಅಭಿಯುಜೋ ವಿಹತ್ಯಾ ಶತ್ರೂಯತಾಮಾಭರಾ ಭೋಜನಾನಿ॥ ಏಹ್ಯಗ್ನ ಇಹಹೋತಾ ನಿಷೀದಾದಬ್ಧಃ ಸುಪುರ ಏತಾ ಭವಾನಃ । ಅವತಾಂ ತ್ವಾ ರೋದಸೀ ವಿಶ್ವಮಿನ್ವೇ ಯಜಾಮಹೇ ಸೌಮನಸಾಯ ದೇವಾನ್॥

## ಅಗ್ನಿಪ್ರತಿಷ್ಠಾಪನೆ

ಸಮಸ್ತವ್ಯಾಹೃತೀನಾಂ ಪರಮೇಷ್ಠೀ ಪ್ರಜಾಪತಿಃ ಪ್ರಜಾಪತಿರ್ಬೃಹತೀ ಅಗ್ನಿಪ್ರತಿಷ್ಠಾಪನೇ ವಿನಿಯೋಗಃ ॥

ಓಂ ಭೂರ್ಭುವಃ ಸ್ವರೋಮ್ । ವಿಷ್ಣುವೀರ್ಯಾತ್ಮಕಂ ರುಕ್ಮಕನಾಮಾನಂ ಅಗ್ನಿಂ ಪ್ರತಿಷ್ಠಾಪಯಾಮಿ ॥

## ಅಗ್ನಿಮೂರ್ತಿಧ್ಯಾನ

ಚತ್ವಾರಿಶೃಂಗೇತಿ ಗೌತಮೋ ವಾಮದೇವೋಽಗ್ನಿಸ್ತ್ರಿಷ್ಟುಪ್ । ಅಗ್ನಿಮೂರ್ತಿಧ್ಯಾನೇ ವಿನಿಯೋಗಃ ॥

ಓಂ ಚತ್ವಾರಿಶೃಂಗಾ ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತ ಹಸ್ತಾಸೋ ಅಸ್ಯ। ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ ಮರ್ತ್ಯಾँ ಆವಿವೇಶ॥

ಸಪ್ತಹಸ್ತಶ್ಚತುಃಶೃಂಗಃ ಸಪ್ತಜಿಹ್ವೋ ದ್ವಿಶೀರ್ಷಕಃ ।
ತ್ರಿಪಾತ್ ಪ್ರಸನ್ನವದನಃ ಸುಖಾಸೀನಃ ಶುಚಿಸ್ಮಿತಃ ॥
ಸ್ವಾಹಾಂ ತು ದಕ್ಷಿಣೇ ಪಾರ್ಶ್ವೇ ದೇವೀಂ ವಾಮೇ ಸ್ವಧಾಂ ತಥಾ ।
ಬಿಭ್ರದ್ದಕ್ಷಿಣಹಸ್ತೈಸ್ತು ಶಕ್ತಿಮನ್ನಂ ಸ್ರುಚಂ ಸ್ರುವಮ್ ॥
ತೋಮರಂ ವ್ಯಜನಂ ವಾಮೇ ಘೃತಪಾತ್ರಂ ಚ ಧಾರಯನ್ ।
ಮೇಷಾರೂಢೋ ಜಟಾಬದ್ಧೋ ಗೌರವರ್ಣೋ ಮಹೌಜಸಃ ॥
ಧೂಮ್ರಧ್ವಜೋ ಲೋಹಿತಾಕ್ಷಃ ಸಪ್ತಾರ್ಚಿಃ ಸರ್ವಕಾಮದಃ ।
ಆತ್ಮಾಭಿಮುಖಮಾಸೀನ ಏವಂ ರೂಪೋ ಹುತಾಶನಃ ॥

## ಮುಖ್ಯಪ್ರಾಣಧ್ಯಾನ

ಉದ್ಯದ್ರವಿಪ್ರಕರ ಸನ್ನಿಭಮಚ್ಯುತಾಂಕೇ
ಸ್ವಾಸೀನಮಸ್ಯ ನುತಿನಿತ್ಯವಚಃಪ್ರವೃತ್ತಿಮ್ ।
ಧ್ಯಾಯೇದ್ಗದಾಭಯಕರಂ ಸುಕೃತಾಂಜಲಿಂ ತಂ
ಪ್ರಾಣಂ ಯಥೇಷ್ಟತನುಮುನ್ನತಕರ್ಮಶಕ್ತಿಮ್ ॥

## ಪರಶುರಾಮಧ್ಯಾನ

ಅಂಗಾರವರ್ಣಮಭಿತೋಂಡಬಹಿಃಪ್ರಭಾಭಿ
ರ್ವ್ಯಾಪ್ತಂ ಪರಶ್ವಧಧನುರ್ಧರಮೇಕವೀರಮ್ ।
ಧ್ಯಾಯೇದಜೇಶಪುರುಹೂತಮುಖ್ಯೈಃ ಸ್ತುವದ್ಭಿ
ರಾವೀತಮಾತ್ಮ ಪದವೀಂ ಪ್ರತಿಪಾದಯಂತಮ್ ॥

## ಅಗ್ನಿಸಮ್ಮುಖೀಕರಣ

ಏಷ ಹಿ ದೇವ ಇತ್ಯಸ್ಯ ಹಿರಣ್ಯಗರ್ಭೋಽಗ್ನಿಸ್ತ್ರಿಷ್ಟುಪ್ । ಅಗ್ನಿಸಮ್ಮುಖೀಕರಣೇ ವಿನಿಯೋಗಃ ॥

ಓಂ ಏಷ ಹಿ ದೇವಃ ಪ್ರದಿಶೋ ನು ಸರ್ವಾಃ ಪೂರ್ವೋ ಹಿ ಜಾತಸ್ಸ ಉ ಗರ್ಭೇ ಅಂತಃ । ಸವಿಜಾಯಮಾನಃ ಸಜನಿಷ್ಯಮಾಣಃ ಪ್ರತ್ಯಙ್ಮುಖಾಸ್ತಿಷ್ಠತಿ ವಿಶ್ವತೋ ಮುಖಃ॥

ಅಗ್ನೇ ವೈಶ್ವಾನರ ಶಾಂಡಿಲ್ಯ ಗೋತ್ರ ಮೇಷಾರೂಢ ಮೇಷಧ್ವಜ ವರಪ್ರದ ಪ್ರಾಙ್ಮುಖೋ ದೇವ ಮಮ ಸಮ್ಮುಖೋ ವರದೋ ಭವ ॥

## ಪರಿಷೇಕ

ಅದಿತೇಽನುಮನ್ಯಸ್ವ। ಅನುಮತೇಽನುಮನ್ಯಸ್ವ। ಸರಸ್ವತೇಽನುಮನ್ಯಸ್ವ। ದೇವ ಸವಿತಃ ಪ್ರಸುವ ॥

## ಅಗ್ನಿ ಅಲಂಕರಣ

ವಿಶ್ವಾನಿನ ಇತಿ ತಿಸೃಣಾಮಾತ್ರೇಯೋ ವಸುಸ್ರುತ್ರೋಽಗ್ನಿಸ್ತ್ರಿಷ್ಟುಪ್ । ದ್ವಯೋಃ ಅಲಂಕರಣೇ, ತೃತೀಯಸ್ಯ ಅಗ್ನ್ಯರ್ಚನೇ ವಿನಿಯೋಗಃ ॥

ಓಂ ವಿಶ್ವಾನಿನೋ ದುರ್ಗಹಾ ಜಾತವೇದಃ । ಸಿಂಧುಂ ನ ನಾವಾ ದುರಿತಾತಿಪರ್ಷಿ। ಅಗ್ನೇ ಅತ್ರಿವನ್ನಮಸಾ ಗೃಣಾನಃ । ಅಸ್ಮಾಕಂ ಬೋಧ್ಯವಿತಾ ತನೂನಾಮ್ । ಯಸ್ತ್ವಾ

ಹೃದಾ ಕೀರಿಣಾ ಮನ್ಯಮಾನಃ । ಅಮರ್ತ್ಯಂ ಮರ್ತ್ಯೋ ಜೋಹವೀಮಿ । ಜಾತವೇದೋ ಯಶೋ ಅಸ್ಮಾಸು ಧೇಹಿ । ಪ್ರಜಾಭಿರಗ್ನೇ ಅಮೃತತ್ವಮಶ್ಯಾಮ್ ॥ ಯಸ್ಮೈ ತ್ವಂ ಸುಕೃತೇ ಜಾತವೇದ ಉ ಲೋಕಮಗ್ನೇ ಕೃಣವಃ ಸ್ಯೋನಂ । ಅಶ್ವಿನಂ ಸಪುತ್ರಿಣಂ ವೀರವಂತಂ ಗೋಮಂತಂ ರಯಿಂ ನಶತೇ ಸ್ವಸ್ತಿ ॥

## ಆಹುತಿಪ್ರದಾನ

ಅಗ್ನಿಗೆ ಸಂಸ್ಕಾರಾರ್ಥವಾಗಿ ವ್ಯಾಹೃತಿಹೋಮ, ಪುರುಷಸೂಕ್ತಹೋಮ ಮಾಡಬೇಕು. ನಂತರ ಆಹುತಿ. ಮನಸಾ ಪ್ರಜಾಪತಿಂ ಧ್ಯಾಯನ್ ''ಪ್ರಜಾಪತಯೇ ಸ್ವಾಹಾ'' ಪ್ರಜಾಪತಯ ಇದಂ ನ ಮಮ ॥ ಇತಿ ಜುಹುಯಾತ್ ॥

ಓಂ ಓಂ ನಮೋ ನಾರಾಯಣಾಯ ಸ್ವಾಹಾ । ನಾರಾಯಣಾಯ ಇದಂ ನ ಮಮ ॥ (ಎಂಟು ಆಹುತಿ)

ಓಂ ಕ್ಲೀಂ ಕೃಷ್ಣಾಯ ನಮಃ ಸ್ವಾಹಾ । ಕೃಷ್ಣಾಯ ಇದಂ ನ ಮಮ ॥ (ಆರು ಆಹುತಿ)

ಓಂ ನಮೋ ಭಗವತೇ ವಾಸುದೇವಾಯ ಸ್ವಾಹಾ । ವಾಸುದೇವಾಯ ಇದಂ ನ ಮಮ॥ (ಹನ್ನೆರಡು ಆಹುತಿ)

ಓಂ ಸೂರ್ಯಾಯ ಸ್ವಾಹಾ । ಸೂರ್ಯಾತ್ಮನೇ ಸಂಕರ್ಷಣಾಯ ಇದಂ ನ ಮಮ॥

ಓಂ ಪ್ರಜಾಪತಯೇ ಸ್ವಾಹಾ । ಪ್ರಜಾಪತ್ಯಾತ್ಮನೇ ವಾಸುದೇವಾಯ ಇದಂ ನ ಮಮ॥

ಓಂ ಅಗ್ನಯೇ ಸ್ವಾಹಾ । ಅಗ್ನ್ಯಾತ್ಮನೇ ಅನಿರುದ್ಧಾಯ ಇದಂ ನ ಮಮ ॥

ಓಂ ಪ್ರಜಾಪತಯೇ ಸ್ವಾಹಾ । ಪ್ರಜಾಪತಯ ಇದಂ ನ ಮಮ ॥

ಓಂ ಸೋಮಾಯ ವನಸ್ಪತಯೇ ಸ್ವಾಹಾ । ಸೋಮಾಯ ವನಸ್ಪತಯ ಇದಂ ನ ಮಮ॥

ಓಂ ಅಗ್ನೀಷೋಮಾಭ್ಯಾಂ ಸ್ವಾಹಾ । ಅಗ್ನೀಷೋಮಾಭ್ಯಾಮ್ ಇದಂ ನ ಮಮ ॥

ಓಂ ಇಂದ್ರಾಗ್ನಿಭ್ಯಾಂ ಸ್ವಾಹಾ । ಇಂದ್ರಾಗ್ನಿಭ್ಯಾಮ್ ಇದಂ ನ ಮಮ ॥

ಓಂ ದ್ಯಾವಾಪೃಥಿವೀಭ್ಯಾಂ ಸ್ವಾಹಾ । ದ್ಯಾವಾಪೃಥಿವೀಭ್ಯಾಮ್ ಇದಂ ನ ಮಮ ॥

ಓಂ ಧನ್ವಂತರಯೇ ಸ್ವಾಹಾ । ಧನ್ವಂತರಯ ಇದಂ ನ ಮಮ ॥

ಓಂ ಇಂದ್ರಾಯ ಸ್ವಾಹಾ । ಇಂದ್ರಾಯ ಇದಂ ನ ಮಮ ॥

ಓಂ ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ । ವಿಶ್ವೇಭ್ಯೋ ದೇವೇಭ್ಯಃ ಇದಂ ನ ಮಮ॥

ಓಂ ಬ್ರಹ್ಮಣೇ ಸ್ವಾಹಾ । ಬ್ರಹ್ಮಣ ಇದಂ ನ ಮಮ ॥

ವೈಶ್ವದೇವ ಸಾಂಗತಾಸಿದ್ಧ್ಯರ್ಥಂ (ಷಾಡ್ಗುಣ್ಯಾರ್ಥಂ) ವ್ಯಾಹೃತಿಹೋಮಂ ಕರಿಷ್ಯೇ॥

(ತುಪ್ಪದಿಂದ ನಾಲ್ಕು ಆಹುತಿ)

ಓಂ ಭೂಃ ಸ್ವಾಹಾ । ಅಗ್ನಯೇ ಶ್ರೀಅನಿರುದ್ಧಾಯ ಇದಂ ನ ಮಮ ॥

ಓಂ ಭುವಃ ಸ್ವಾಹಾ । ವಾಯವೇ ಶ್ರೀ ಪ್ರದ್ಯುಮ್ನಾಯ ಇದಂ ನ ಮಮ ॥

ಓಂ ಸ್ವಃ ಸ್ವಾಹಾ । ಸೂರ್ಯಾಯ ಶ್ರೀ ಸಂಕರ್ಷಣಾಯ ಇದಂ ನ ಮಮ ॥

ಓಂ ಭೂರ್ಭುವಃಸ್ವಃ ಸ್ವಾಹಾ । ಪ್ರಜಾಪತಯೇ ಶ್ರೀ ವಾಸುದೇವಾಯ ಇದಂ ನ ಮಮ।

ಈಗ ಪರಿಷೇಕವನ್ನು ಮಾಡಿ, ಭಸ್ಮಧಾರಣೆಯನ್ನು ಮಾಡಿ ಉಪಸ್ಥಾನ ಮಾಡಬೇಕು.

## ಅಗ್ನಿ ಉಪಸ್ಥಾನ

ಓಂ ಚಮ ಇತ್ಯಸ್ಯ ಸಾರಸ್ವತೋಽಗ್ನಿಸ್ತ್ರಿಷ್ಟುಪ್ । ಅಗ್ನಿ ಪ್ರಾರ್ಥನೇ ವಿನಿಯೋಗಃ॥

ಓಂ ಚಮೇ ಸ್ವರಶ್ಚ ಮೇ ಯಜ್ಞೋಪಚತೇ ನಮಶ್ಚ । ಯತ್ತೇ ನ್ಯೂನಂ ತಸ್ಮೈ ತ ಉಪಯತ್ತೇಽತಿರಿಕ್ತಂ ತಸ್ಮೈ ತೇ ನಮಃ । ಅಗ್ನಯೇ ನಮಃ ॥ ಓಂ ಸ್ವಸ್ತಿ ॥

ಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ ವಿದ್ಯಾಂ ಬುದ್ಧಿಂ ಶ್ರಿಯಂ ಬಲಮ್ ।
ಆಯುಷ್ಯಂ ತೇಜ ಆರೋಗ್ಯಂ ದೇಹಿ ಮೇ ಹವ್ಯವಾಹನ ॥

......... ಗೋತ್ರೋದ್ಭವಃ .... ಪ್ರವರಾನ್ವಿತಃ ...... ಆಶ್ವಲಾಯನಸೂತ್ರಃ ಋಕ್‌ಶಾಖಾಧ್ಯಾಯೀ.... ಶರ್ಮಾ ಅಹಂ ಭೋ ಅಭಿವಾದಯೇ ॥

## ಉತ್ತರಪರಿಷೇಕ

(ಉಪವಿಶ್ಯ) ಅದಿತೇಽನ್ವಮಂಸ್ಥಾಃ। ಅನುಮತೇಽನ್ವಮಂಸ್ಥಾಃ। ಸರಸ್ವತೇಽನ್ವಮಂಸ್ಥಾಃ। ದೇವಸವಿತಃ ಪ್ರಾಸಾವೀಃ ॥

ರುಗ್ಮನಾಮಕನಾದ ಅಗ್ನಿಯನ್ನು ಹೃದಯದಲ್ಲಿ ಪ್ರತ್ಯಾವಾಹನೆ ಮಾಡಿರಿ.

ಗಚ್ಛ ಗಚ್ಛ ಸುರಶ್ರೇಷ್ಠ ಸ್ವಸ್ಥಾನಂ ಯಜ್ಞಪೂರುಷ ।
ಯತ್ರ ಬ್ರಹ್ಮದಯೋ ದೇವಾಸ್ತತ್ರ ಗಚ್ಛ ಹುತಾಶನ ॥

## ಸಮಾಪನಮ್

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋಯಜ್ಞಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥
ಮನ್ತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಹುತಾಶನ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

ಅನೇನ ಪ್ರಾತಃಸಾಯಂ ವೈಶ್ವದೇವಹೋಮೇನ ಅಸ್ಮದ್ಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಹರಿಣೀಪತಿಃ ಶ್ರೀಪರಶುರಾಮಃ ಪ್ರೀಯತಾಂ ಪ್ರೀತೋ ಭವತು ಶ್ರೀಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ॥

॥ ಇತಿ ಋಗ್ವೇದೀಯ ವೈಶ್ವದೇವಃ ಸಂಪೂರ್ಣಮ್ ॥

★ ★ ★ ★ ★

# ಬಲಿಹರಣ

ಆಚಮ್ಯ , ಪ್ರಾಣಾನಾಯಾಮ್ಯ ... ಪೂರ್ವೋಕ್ತ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಬಲಿಹರಣಂ ಕರಿಷ್ಯೇ ॥

ಒಲೆಯ ದಕ್ಷಿಣಭಾಗದ ಭೂಮಿಯನ್ನು ತೊಳೆದು ವರ್ತುಲಾಕಾರದ ಮಂಡಲವನ್ನು ಮಾಡಿ ಪೂರ್ವದಿಂದ ಪ್ರಾರಂಭಿಸಿ ಚಕ್ರಾಕಾರವಾಗಿ ಬಲಿಹರಣವನ್ನು ಮಾಡಬೇಕು.

ಓಂ ಸೂರ್ಯಾಯ ಸ್ವಾಹಾ । ಪ್ರಜಾಪತಯೇ ಸ್ವಾಹಾ । ಅಗ್ನಯೇ ಸ್ವಾಹಾ । ಪ್ರಜಾಪತಯೇ ಸ್ವಾಹಾ । ಸೋಮಾಯ ವನಸ್ಪತಯೇ ಸ್ವಾಹಾ । ಅಗ್ನಿಷೋಮಾಭ್ಯಾಂ ಸ್ವಾಹಾ । ಇಂದ್ರಾಗ್ನಿಭ್ಯಾಂ ಸ್ವಾಹಾ । ದ್ಯಾವಾಪೃಥಿವೀಭ್ಯಾಂ ಸ್ವಾಹಾ । ಧನ್ವಂತರಯೇ ಸ್ವಾಹಾ । ಇಂದ್ರಾಯ ಸ್ವಾಹಾ । ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ । ಬ್ರಹ್ಮಣೇ ಸ್ವಾಹಾ । ಅದ್ಭ್ಯಃ ಸ್ವಾಹಾ । ಓಷಧಿವನಸ್ಪತಿಭ್ಯಃ ಸ್ವಾಹಾ । ಗೃಹಾಯ ಸ್ವಾಹಾ । ಗೃಹದೇವತಾಭ್ಯಃ ಸ್ವಾಹಾ । ವಾಸ್ತುದೇವತಾಭ್ಯಃ ಸ್ವಾಹಾ ॥

| | |
|---|---|
| ಇಂದ್ರಾಯ ಸ್ವಾಹಾ ॥ | ಚಕ್ರದ ಹೊರಗೆ ಪೂರ್ವಕ್ಕೆ |
| ಇಂದ್ರಪುರುಷೇಭ್ಯಃ ಸ್ವಾಹಾ ॥ | (ಅದರ ಮೇಲ್ಭಾಗ) |
| ಯಮಾಯ ಸ್ವಾಹಾ ॥ | ಚಕ್ರದ ಹೊರಗೆ ದಕ್ಷಿಣಕ್ಕೆ |
| ಯಮಪುರುಷೇಭ್ಯಃ ಸ್ವಾಹಾ ॥ | (ಅದರ ಮೇಲ್ಭಾಗ) |
| ವರುಣಾಯ ಸ್ವಾಹಾ ॥ | ಚಕ್ರದ ಹೊರಗೆ ಪಶ್ಚಿಮಕ್ಕೆ |
| ವರುಣಪುರುಷೇಭ್ಯಃ ಸ್ವಾಹಾ ॥ | (ಅದರ ಮೇಲ್ಭಾಗ) |
| ಸೋಮಾಯ ಸ್ವಾಹಾ ॥ | ಚಕ್ರದ ಹೊರಗೆ ಉತ್ತರಕ್ಕೆ |
| ಸೋಮಪುರುಷೇಭ್ಯಃ ಸ್ವಾಹಾ ॥ | (ಅದರ ಮೇಲ್ಭಾಗ) |
| ಬ್ರಹ್ಮಣೇ ಸ್ವಾಹಾ ॥ | ಚಕ್ರದ ಮಧ್ಯದಲ್ಲಿ |
| ಬ್ರಹ್ಮಪುರುಷೇಭ್ಯಃ ಸ್ವಾಹಾ ॥ | (ಅದರ ಮೇಲ್ಭಾಗ) |
| ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ ॥ | ಚಕ್ರಮಧ್ಯದ ಬಲಭಾಗ |
| ಸರ್ವೇಭ್ಯೋ ಭೂತೇಭ್ಯಃ ಸ್ವಾಹಾ ॥ | (ಅದರ ಮೇಲ್ಭಾಗ) |
| ದಿವಾಚಾರಿಭ್ಯಃ ಸ್ವಾಹಾ ॥ | ಚಕ್ರಮಧ್ಯದ ಎಡಭಾಗ |

| | |
|---|---|
| ನಕ್ತಂಚರೇಭ್ಯಃ ಸ್ವಾಹಾ ॥ | (ಅದರ ಮೇಲ್ಭಾಗ) |
| ರಕ್ಷೋಭ್ಯಃ ಸ್ವಾಹಾ ॥ | ಚಕ್ರದ ಹೊರಗೆ ಈಶಾನ್ಯ ಭಾಗ |
| (ಅಪಸವ್ಯದಿಂದ) ಸ್ವಧಾ ಪಿತೃಭ್ಯಃ ಸ್ವಾಹಾ ॥ | ಚಕ್ರದ ಹೊರಗೆ ಆಗ್ನೇಯ ಭಾಗ |
| | (ಕೈ ತೊಳೆದುಕೊಂಡು) ಸವ್ಯದಿಂದ |
| ಶ್ಯಾಮಾಯ ಸ್ವಾಹಾ ॥ | ಚಕ್ರದ ಹೊರಗೆ ನೈಋತ್ಯ ಭಾಗ |
| ಶಬಲಾಯ ಸ್ವಾಹಾ ॥ | ಚಕ್ರದ ಹೊರಗೆ ವಾಯವ್ಯ ಭಾಗ |
| ಸನಕಾದಿಮನುಷ್ಯೇಭ್ಯೋ ಹಂತ ॥ | (ಅದರ ಮೇಲ್ಭಾಗ) |

ಉಳಿದ ಸ್ವಲ್ಪ ಅನ್ನವನ್ನು ತೆಗೆದುಕೊಂಡು ಹೊರಗೆ ಹೋಗಿ–

ಓಂ ಯೇ ಭೂತಾಃ ಪ್ರಚರಂತಿ ದಿವಾನಕ್ತಂ ಬಲಿಮಿಚ್ಛಂತೋ ವಿತುದಸ್ಯಪ್ರೇಷ್ಯಾಃ। ತೇಭ್ಯೋ ಬಲಿಂ ಪುಷ್ಟಿಕಾಮೋ ಹರಾಮಿ ಮಯಿ ಪುಷ್ಟಿಂ ಪುಷ್ಟಿಪತಿರ್ದದಾತು ಸ್ವಾಹಾ॥

ಐಂದ್ರವಾರುಣವಾಯವ್ಯಾ ಯಾಮ್ಯಾ ವೈ ನೈಋತ್ಯಾಶ್ಚ ಯೇ ।
ತೇ ಕಾಕಾಃ ಪ್ರತಿಗೃಹ್ಣಂತು ಭೂಮ್ಯಾಂ ಪಿಂಡಂ ಮಯೋಜ್ಝಿತಮ್ ॥
ಶ್ವಚಾಂಡಾಲಭೂತಪತಿತವಾಯಸೇಭ್ಯಃ ಅನ್ನಂ ಭೂಮೌ ವಿಕಿರೇತ್ ॥

ಸ್ವಲ್ಪ ವೇಳೆ ಅತಿಥಿಗಳ ಸಲುವಾಗಿ ಪ್ರತೀಕ್ಷೆ ಮಾಡಿ (ಕಾಯ್ದು) ಕೈಕಾಲುಗಳನ್ನು ತೊಳೆದುಕೊಂಡು ಒಳಗೆ ಹೋಗಬೇಕು ಹಾಗೂ ಆಚಮನ ಮಾಡಬೇಕು.

ಓಂ ಶಾಂತಾ ಪೃಥಿವೀ ಶಿವಮಂತರಿಕ್ಷಂ ದ್ಯೌರ್ನೋ ದೇವೀ ಅಭಯಂ ನೋ ಅಸ್ತು । ಶಿವಾ ದಿಶಃ ಪ್ರದಿಶ ಉದ್ದಿಶೋ ನ ಆಪೋ ವಿಶ್ವತಃ ಪರಿಪಾಂತು ಸರ್ವತಃ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ ಎಂದು ಹೇಳಬೇಕು.

ಯಸ್ಯ ಸ್ಮೃತ್ಯಾ...... ಬಲಿಕ್ರಿಯಾದಿಷು ॥ ನ್ಯೂನಂ ಸಂಪೂರ್ಣತಾಂ ಯಾತು.... । ಮಂತ್ರಹೀನಂ .......... ರಮಾಪತೇ ॥ ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ।

ಅನೇನ ಬಲಿಹರಣಕರ್ಮಣಾ ಭಗವಾನ್ ಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಃ ಪ್ರೀಯತಾಂ ಪ್ರೀತೋ ಭವತು ಶ್ರೀಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ॥

★ ★ ★ ★ ★

# ಬಲಿಹರಣಚಕ್ರಮ್


ಪೂರ್ವ
ಇಂದ್ರಪುರುಷೇಭ್ಯಃ ಸ್ವಾಹಾ ೧೯
ಇಂದ್ರಾಯ ಸ್ವಾಹಾ
ಆಗ್ನೇಯ
(ಅಪಸವ್ಯದಿಂದ ಅಧಿಕಾರಿಗಳಿಗೆ ಮಾತ್ರ)
ಸ್ವಧಾ ಪಿತೃಭ್ಯೋ ಸ್ವಾಹಾ
ಈಶಾನ
ರಕ್ಷೋಭ್ಯಃ ಸ್ವಾಹಾ
ಉತ್ತರ
ಸೋಮಪುರುಷೇಭ್ಯಃ ಸ್ವಾಹಾ ೨೫
ಸೋಮಾಯ ಸ್ವಾಹಾ
ದಕ್ಷಿಣ
ಯಮಪುರುಷೇಭ್ಯಃ ಸ್ವಾಹಾ ೧೮
ಯಮಾಯ ಸ್ವಾಹಾ
ಸೂರ್ಯಾಯ
ಪ್ರಜಾಪತಯೇ
ಅಗ್ನಯೇ
ವಾಸ್ತುದೇವತಾಭ್ಯಃ
ಗೃಹದೇವತಾಭ್ಯಃ
ಗೃಹಾಯ
ಬ್ರಹ್ಮಪುರುಷೇಭ್ಯಃ ೨೭
ನಕ್ತಂಚಾರಿಭ್ಯಃ ೨೧
ಸರ್ವೇಭ್ಯೋ ಭೂತೇಭ್ಯಃ ೨೯
ದಿವಾಚಾರಿಭ್ಯಃ ೨೦
ವಿಶ್ವೇಭ್ಯೋ ದೇವೇಭ್ಯಃ ೨೮
ಬ್ರಹ್ಮಣೇ ೨೬

# ಬ್ರಹ್ಮಯಜ್ಞ

೧. ನಾಲ್ಕು ವೇದಗಳನ್ನು, ಆರು ವೇದಾಂಗಗಳನ್ನು, ಇತಿಹಾಸ ಪುರಾಣಗಳನ್ನು ಪಾರಾಯಣ ಮಾಡಿ ಜ್ಞಾನಪರಂಪರೆಯನ್ನು ನೀಡಿದ ಮಹನೀಯರನ್ನು ತೃಪ್ತಿಪಡಿಸುವ ಕಾರ್ಯವೇ ಬ್ರಹ್ಮಯಜ್ಞ. ಕೃತಜ್ಞತಾಪೂರ್ವಕವಾಗಿ ಆಹುತಿರೂಪದಲ್ಲಿ ನೀಡುವುದೆ ಬ್ರಹ್ಮಯಜ್ಞ ತರ್ಪಣ.

೨. 'ಯತ್ ಸ್ವಾಧ್ಯಾಯಮಧೀಯೀತ । ಏಕೈಕಾಮಪ್ಯೃಚಂ ಯಜುಸ್ಸಾಮ ಚ ತದ್ ಬ್ರಹ್ಮಯಜ್ಞಂ ಸಂತಿಷ್ಠತೇ ॥' ಎಂಬ ಮಾತಿನಂತೆ ನಿತ್ಯವೂ ಅಧ್ಯಯನ-ಶೀಲನಾಗಿರಬೇಕು. ಕನಿಷ್ಟಪಕ್ಷ ಒಂದೊಂದು ಋಕ್ಕುಗಳನ್ನಾದರೂ ಪಠಿಸಬೇಕು. ಇದನ್ನೇ ಬ್ರಹ್ಮಯಜ್ಞ ಎನ್ನುತ್ತಾರೆ.

೩. ಪ್ರಾತಃಕಾಲದಲ್ಲಿ ಸಂಧ್ಯಾವಂದನೆಯಾದ ಬಳಿಕ ಬ್ರಹ್ಮಯಜ್ಞವನ್ನು ಮಾಡಬೇಕು. ಮಧ್ಯಾಹ್ನಕಾಲದಲ್ಲಿ ದೇವರ ಪೂಜೆಯನ್ನು ಮಾಡುವುದಾದರೆ ಪ್ರಾತಃಕಾಲದಲ್ಲಿಯೇ ಬ್ರಹ್ಮಯಜ್ಞವನ್ನು ಮಾಡಬಹುದು. ಸಂಧ್ಯಾವಂದನೆಯಾದ ಬಳಿಕ ದೇವರಪೂಜೆಯನ್ನು ಮಾಡುವ ಕ್ರಮವಿದ್ದರೆ, ದೇವರಪೂಜೆಯನ್ನು ಮುಗಿಸಿ ವೈಶ್ವದೇವವಾದ ಮೇಲೆ ಬ್ರಹ್ಮಯಜ್ಞವನ್ನು ಮಾಡಬೇಕು.

೪. ತರ್ಪಣ ನೀಡುವ ನೀರು ಸುಗಂಧ ಭರಿತವಾಗಿರಬೇಕು. ಆದ್ದರಿಂದ ಹರಿನಿರ್ಮಾಲ್ಯದಲ್ಲಿ ಪುಷ್ಪ, ತುಳಸಿ, ದರ್ಭೆಗಳನ್ನು ಹಾಕಿಕೊಂಡು ತರ್ಪಣವನ್ನು ನೀಡಬೇಕು.

೫. ಭಗವಂತನಿಗೆ ಅಭಿಷೇಕ ಮಾಡಿದ ನಿರ್ಮಾಲ್ಯತೀರ್ಥದಿಂದಲೇ ಆಹಾರರೂಪವಾಗಿ ತರ್ಪಣವನ್ನು ನೀಡಬೇಕು.

೬. ಜನ್ಮಾಷ್ಟಮೀ ಹಾಗೂ ಏಕಾದಶೀ ಮತ್ತು ಶ್ರವಣ ದ್ವಾದಶಿಗಳಲ್ಲಿ ಬ್ರಹ್ಮಯಜ್ಞವನ್ನು ಮಾಡಬಾರದು. ಅಶೌಚವಿದ್ದಾಗ, ದೀಕ್ಷಿತನಾದಾಗ, ನಾಂದಿ ಇಟ್ಟಾಗ ಬ್ರಹ್ಮಯಜ್ಞವನ್ನು ಮಾಡಬಾರದು.

೭. ಬ್ರಹ್ಮಯಜ್ಞದಲ್ಲಿ ಪಠಿಸುವ ಮಂತ್ರಗಳನ್ನು ಗುರುಗಳಿಂದ ಉಪದೇಶ ಪಡೆದಿರಲೇಬೇಕು.

೮. ಒಂದು ವೇಳೆ ಬ್ರಹ್ಮಯಜ್ಞ ಮಾಡದಿದ್ದರೆ ವಿದ್ಯೆಯು ಯಾತಯಾಮವಾಗುತ್ತದೆ. ಬ್ರಾಹ್ಮಣ್ಯ-ಬ್ರಹ್ಮವರ್ಚಸ್ಸುಗಳು ನಷ್ಟವಾಗುತ್ತದೆ. ತಪಸ್ಸು ಹಾನಿಯಾಗುತ್ತದೆ. ದೇವಋಣ-ಋಷಿಋಣ-ಆಚಾರ್ಯಋಣವು ಪರಿಹಾರವಾಗದೆ ಪಾಪಭಾಜನನಾಗುತ್ತಾನೆ.

೯. ಋಷಿತರ್ಪಣದಲ್ಲಿ ಉಲ್ಲೇಖಗೊಂಡ ಪ್ರತಿಯೊಬ್ಬ ಋಷಿಗಳೂ ಋಗ್ವೇದ ಮಂಡಲದ ದೃಷ್ಟಾರರಾಗಿದ್ದಾರೆ ಹಾಗೂ ಎಲ್ಲ ಋಗ್ವೇದಿಗಳಿಗೆ ಗುರುಗಳಾಗಿದ್ದಾರೆ. ನಾವು ನಿತ್ಯವೂ ಉಪಕಾರ ಪಡೆದುಕೊಳ್ಳುವ ಎಲ್ಲ ದೇವತೆಗಳಿಗೂ ತರ್ಪಣವನ್ನು ನೀಡಬೇಕು. ಜ್ಞಾನಪರಂಪರೆಯನ್ನು ನೀಡಿದ ಎಲ್ಲಾ ಆಚಾರ್ಯ ಪುರುಷರಿಗೂ ತರ್ಪಣವನ್ನು ನೀಡಬೇಕು. ನಮ್ಮ ಪಾಪ-ಪುಣ್ಯಗಳಿಗೆ ಸಾಕ್ಷಿಯಾಗಿ ನಿಂತ ಯಮದೇವರಿಗೂ ಕೂಡ ತರ್ಪಣವನ್ನು ನೀಡಬೇಕು.

೧೦. ಏಕಾದಶಿಯ ದಿವಸ ತರ್ಪಣವನ್ನು ನೀಡದೆ ಕೇವಲ ಬ್ರಹ್ಮಯಜ್ಞದ ಮೊದಲ ಮಂತ್ರಗಳನ್ನು ಉಚ್ಚರಿಸಬಹುದಲ್ಲವೇ ಎಂದು ಪ್ರಶ್ನಿಸಬಾರದು. ಏಕೆಂದರೆ ಬ್ರಹ್ಮಯಜ್ಞದ ಸಂಕಲ್ಪವನ್ನು ಮಾಡಿ ಪಾರಾಯಣ ಮಾಡಲು ಪ್ರಾರಂಭಿಸಿದಾಗ ಆಯಾ ಶಾಸ್ತ್ರದ ಅಭಿಮಾನಿದೇವತೆಗಳಿಗೂ, ಆಹಾರ ನೀಡಿದಂತಾಗುತ್ತದೆ. ಆದ್ದರಿಂದ ಏಕಾದಶಿಯಂದು ಬ್ರಹ್ಮಯಜ್ಞದ ಕ್ರಮದಲ್ಲಿ ಮಂತ್ರವನ್ನು ಪಠಿಸಬಾರದೆಂದು ಜ್ಞಾನಿಗಳು ಹೇಳುತ್ತಾರೆ. ಬ್ರಹ್ಮಯಜ್ಞದ ಸಂಕಲ್ಪವನ್ನು ಮಾಡದೆ ಹಾಗೆಯೇ ಪಾರಾಯಣ ಮಾಡಲು ಆತಂಕವಿಲ್ಲ.

★ ★ ★ ★ ★

# ಬ್ರಹ್ಮಯಜ್ಞದ ಬಗ್ಗೆ ತಿಳಿಯಲೇಬೇಕಾದ ಅಪೂರ್ವ ವಿಚಾರ

ಸಂಪ್ರದಾಯದಲ್ಲಿ ಬ್ರಹ್ಮಯಜ್ಞದ ಮಂತ್ರಗಳು ಇವೆಯೋ, ಅವುಗಳಿಗಿಂತ ವಿಭಿನ್ನವಾದ ಮಂತ್ರಗಳ ಪದ್ಧತಿಗಳನ್ನು ನೀವು ಇಲ್ಲಿ ಕಾಣಬಹುದು. ಇಲ್ಲಿಯ ತನಕ ಸಂಪ್ರದಾಯವಿಲ್ಲವನ್ನು ಸೇರಿಸಿದ್ದು ತಪ್ಪಲ್ಲವೇ? ಇದರಿಂದ ಸಂಪ್ರದಾಯವನ್ನು ಬಿಟ್ಟಂತಾಗುತ್ತದಲ್ಲವೇ? ಹಿಂದಿನವರು ಮಾಡದಿದ್ದನ್ನು ಹೊಸದಾಗಿ ಏಕೆ ಪ್ರಾರಂಭಿಸಬೇಕು? ಇತ್ಯಾದಿಯಾಗಿ ಪ್ರಶ್ನೆಗಳು ಇಲ್ಲಿ ಉದ್ಭವವಾಗುತ್ತದೆ. ಇದಕ್ಕೆ ಕಾರಣ ಹೀಗಿದೆ–

ಬ್ರಹ್ಮಯಜ್ಞದಲ್ಲಿ ನಾವು ಎಲ್ಲವನ್ನೂ ಪಾರಾಯಣ ಮಾಡುವ ಕ್ರಮವನ್ನು ಇಟ್ಟುಕೊಳ್ಳಬೇಕು. ನಿತ್ಯವೂ ಋಗ್ವೇದದ ಒಂದೇ ಮಂತ್ರವನ್ನು ಪಠಿಸುವುದಕ್ಕಿಂತ, ಒಂದೊಂದು ಹೊಸ ಮಂತ್ರಗಳನ್ನು ಪಠನೆ ಮಾಡುವ ಕ್ರಮವನ್ನು ರೂಢಿಸಿಕೊಳ್ಳುವುದೇ ಶ್ರೇಷ್ಠ. ಹೀಗೆ ಮಾಡುವುದರಿಂದ ಚತುರ್ವೇದಗಳ, ಷಡಂಗಗಳ, ಇತಿಹಾಸ-ಪುರಾಣಗಳ ಸಂಪೂರ್ಣ ಪಾರಾಯಣವನ್ನು ಜೀವನದಲ್ಲಿ ನಡೆಸಿದಂತಾಗುತ್ತದೆ. ಹೀಗೆ ಮಾಡಲು ಯಾರಿಗೂ ಸಮಯವಿಲ್ಲವಾದ್ದರಿಂದ ನಿತ್ಯವೂ ಹೇಳಿದ್ದನ್ನೇ ಹೇಳುತ್ತಿದ್ದಾರೆ. ಅದುವೇ ಸಂಪ್ರದಾಯವಾಗಿದೆ ಮತ್ತು ಸಂಪ್ರದಾಯದಲ್ಲಿ ಬಂದಿರುವ ಷಡಂಗಗಳ ವಾಕ್ಯವು ಎಲ್ಲಿ ಇವೆ ಎಂದು ಯಾರಿಂದಲೂ ಗುರುತಿಸಲು ಸಾಧ್ಯವಾಗುತ್ತಿಲ್ಲ. ಶಿಕ್ಷಾ ಗ್ರಂಥವನ್ನು ಉವಟನು ಬರೆದಿದ್ದಾನೆ. ಉವಟನ ಶಿಕ್ಷಾವನ್ನೇ ಇಲ್ಲಿ ಹೇಳುತ್ತಿದ್ದೇವೋ ಅಥವಾ ಬೇರೆ ಶಿಕ್ಷಾವನ್ನು ಹೇಳಿತ್ತಿದ್ದೇವೋ ತಿಳಿದಿಲ್ಲ. ಇದರಂತೆ ಪಾಣಿನೀ ವ್ಯಾಕರಣವನ್ನು ಬ್ರಹ್ಮಯಜ್ಞದಲ್ಲಿ ಉಪಯೋಗಿಸುತ್ತಾರೆ. ಪಾಣಿನೀ ವ್ಯಾಕರಣವನ್ನು ಶ್ರೀಮದಾಚಾರ್ಯರು ಎಲ್ಲಿಯೂ ಉಲ್ಲೇಖ ಮಾಡುವುದಿಲ್ಲ. ಛಂದಸ್ಸು ಪಿಂಗಳನಾಗನಿಂದ ರಚಿತವಾಗಿದೆ. ನಿರುಕ್ತವು ಯಾಸ್ಕನಿಂದ ರಚಿಸಲ್ಪಟ್ಟಿದೆ. ವೇದಾಂಗವಾದ ಜ್ಯೋತಿಷ ಗ್ರಂಥವನ್ನು ಲಗದನು ಬರೆದಿದ್ದಾನೆ. ದಂಡನಾಥನಾರಾಯಣನು ನಿಘಂಟನ್ನು ಬರೆದಿದ್ದಾನೆ. ಈ ಯಾವ ವ್ಯಕ್ತಿಗಳನ್ನೂ ಕೂಡ ಶ್ರೀಮದಾಚಾರ್ಯರು ಉಲ್ಲೇಖ ಮಾಡುವುದಿಲ್ಲ. ಆದ್ದರಿಂದ ಇಲ್ಲಿ ಶ್ರೀಮದಾಚಾರ್ಯರು ಉಲ್ಲೇಖ ಮಾಡಿದ ಷಡಂಗ ವಾಕ್ಯಗಳನ್ನು ಸಂಗ್ರಹ ಮಾಡಿ ನೀಡಲಾಗಿದೆ ಮತ್ತು ಶ್ರೀಮದಾಚಾರ್ಯರಿಂದ ದೊರಕದ ಕೆಲವು ವಾಕ್ಯಗಳನ್ನೂ ಕೂಡ ನೀಡಲಾಗಿದೆ. ಶ್ರೀಮದಾಚಾರ್ಯರು ಎಲ್ಲಿ ಉಲ್ಲೇಖಿಸಿದ್ದಾರೆ ಎಂಬುದನ್ನೂ ಕೂಡ ನೀವು ಕಾಣಬಹುದು. ಶ್ರೀಮದಾಚಾರ್ಯರಿಂದ ಉಲ್ಲೇಖಿಸಲ್ಪಟ್ಟ ಯಾವುದೇ

ವಿವಾದವಿಲ್ಲದ ಷಡಂಗಗಳನ್ನೇ ಪಠಿಸಲು ನಮ್ಮಿಂದ ಸಾಧ್ಯವಾಗುತ್ತಿರುವಾಗ ಉಲ್ಲೇಖವೇ ಇಲ್ಲದ ಷಡಂಗಗಳನ್ನು ಪಠಿಸುವುದು ಹೆಚ್ಚು ಸೂಕ್ತವಲ್ಲ ಎಂದು ಅಭಿಪ್ರಾಯ. ಈ ನಿಟ್ಟಿನಲ್ಲಿ ಮಹಾಪ್ರಯತ್ನವನ್ನು ಪಟ್ಟು ಎಲ್ಲವನ್ನೂ ಸಂಗ್ರಹಿಸಿ ವಿದ್ವಾನ್ ಪೂಜ್ಯ ಬನ್ನಂಜೆ ಗೋವಿಂದಾಚಾರ್ಯರ ಬಳಿ ಅನುಮೋದನೆಯನ್ನು ಪಡೆದು ಉಪಕರಿಸಿದ ವಿದ್ವಾನ್ ಪಾಂಡುರಂಗ ಪಾಂಡುರಂಗಿ ಆಚಾರ್ಯರಿಗೆ ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಸಾಧಕರು ಇದರ ಸದುಪಯೋಗವನ್ನು ಪಡೆದುಕೊಳ್ಳಬೇಕು ಹಾಗೂ ಇಲ್ಲಿ ನೀಡಿದ ಶ್ರೀಮದಾಚಾರ್ಯರಿಂದ ಉಲ್ಲೇಖಗೊಂಡ ಹದಿನೆಂಟು ಪುರಾಣದ ಶ್ಲೋಕಗಳ ಪಾರಾಯಣವನ್ನೂ ಕೂಡ ಮಾಡಿ ಧನ್ಯರಾಗಬೇಕು.

★ ★ ★ ★ ★

# ಅಥ ಬ್ರಹ್ಮಯಜ್ಞ

ಆಚಮನ, ಪ್ರಾಣಾಯಾಮ, ದೇಶಕಾಲಾದಿಗಳನ್ನು ಉಚ್ಚರಿಸಿ

ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀವೇದವ್ಯಾಸಪ್ರೇರಣಯಾ ಶ್ರೀವೇದವ್ಯಾಸ ಪ್ರೀತ್ಯರ್ಥಂ ಬ್ರಹ್ಮಯಜ್ಞೇನ ಯಕ್ಷ್ಯೇ, ದೇವ-ಋಷಿ-ಆಚಾರ್ಯ ಪಿತೃತರ್ಪಣಾಖ್ಯಂ ಕರ್ಮ ಕರಿಷ್ಯೇ ॥

ಓಂ ವಿದ್ಯುದಸಿ ವಿದ್ಯಮೇ ಪಾಪ್ಮಾನಮಮೃತಾತ್ಸತ್ಯಮುಪೈಮಿ ॥

ಈ ಮಂತ್ರದಿಂದ ಜಲವನ್ನು ಸ್ಪರ್ಶಿಸಿ ಎಡಗಾಲಿನ ಮೇಲೆ ಬಲಗಾಲನ್ನು ಇರಿಸಿ ದರ್ಭೆಯನ್ನು ಅಂಜಲಿಯಲ್ಲಿ ಮುಚ್ಚಿ ಹಿಡಿದು ಪೂರ್ವಭಾವಿಯಾಗಿ ಓಂಕಾರವನ್ನು, ವ್ಯಾಹೃತಿಯನ್ನು, ಗಾಯತ್ರೀಮಂತ್ರವನ್ನುಪಾದವಾಗಿಯೂ, ಅರ್ಧವಾಗಿಯೂ, ಪೂರ್ಣ ಋಕ್ಕಾಗಿಯೂ ಪಠಿಸಬೇಕು.

ಓಂ ಭೂಃ । ತತ್ಸವಿತುರ್ವರೇಣ್ಯಮ್ । ಭುವಃ ಭರ್ಗೋ ದೇವಸ್ಯ ಧೀಮಹಿ । ಸ್ವಃ ಧಿಯೋ ಯೋ ನಃ ಪ್ರಚೋದಯಾತ್ ॥ (ಪಾದಃ)

ಓಂ ಭೂರ್ಭುವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಸ್ವಃ ಧಿಯೋ ಯೋ ನಃ ಪ್ರಚೋದಯಾತ್ ॥ (ಅರ್ಧಃ)

ಓಂ ಭೂರ್ಭುವಸ್ಸ್ವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ। ಧಿಯೋ ಯೋ ನಃ ಪ್ರಚೋದಯಾತ್ ॥ (ಋಕ್)

ಋಗ್ವೇದ– ಓಂ ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಮ್ । ಹೋತಾರಂ ರತ್ನಧಾತಮಮ್ ॥ ಅಗ್ನಿಃ ಪೂರ್ವೇಭಿರ್ಋಷಿಭಿರೀಡ್ಯೋ ನೂತನೈರುತ । ಸ ದೇವಾಂ ಏಹ ವಕ್ಷತಿ ॥ ಅಗ್ನಿನಾ ರಯಿಮಶ್ನವತ್ಪೋಷಮೇವ ದಿವೇದಿವೇ । ಯಶಸಂ ವೀರವತ್ತಮಮ್ ॥ ಅಗ್ನೇ ಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ। ಸ ಇದ್ದೇವೇಷು ಗಚ್ಛತಿ ॥ ಅಗ್ನಿರ್ಹೋತಾ ಕವಿಕ್ರತುಃ ಸತ್ಯಶ್ಚಿತ್ರಶ್ರವಸ್ತಮಃ । ದೇವೋ ದೇವೇಭಿರಾಗಮತ್ ॥ ಯದಂಗ ದಾಶುಷೇ ತ್ವಮಗ್ನೇ ಭದ್ರಂ ಕರಿಷ್ಯಸಿ । ತವೇತ್ತತ್ಸತ್ಯಮಂಗಿರಃ॥ ಉಪ ತ್ವಾಗ್ನೇ ದಿವೇದಿವೇ ದೋಷಾವಸ್ತರ್ಧಿ- ಯಾವಯಮ್ । ನಮೋ ಭರಂತ ಏಮಸಿ ॥

ರಾಜಂತಮಧ್ವರಾಣಾಂ ಗೋಪಾಮೃತಸ್ಯ ದೀದಿವಿಮ್ । ವರ್ಧಮಾನಂ ಸ್ವೇ ದಮೇ ॥
ಸ ನಃ ಪಿತೇವ ಸೂನವೇಽಗ್ನೇ ಸೂಪಾಯನೋ ಭವ । ಸಚಸ್ವಾನಃ ಸ್ವಸ್ತಯೇ ॥

ಐತರೇಯಬ್ರಾಹ್ಮಣ– ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ ಪರಮಃ ।

ಆರಣ್ಯಕ– ಅಥ ಮಹಾವ್ರತಮ್ । ಏಷ ಪಂಥಾ । ಏತತ್‌ಕರ್ಮ । ಅಥಾತಃ ಸಂಹಿತಾಯಾ ಉಪನಿಷತ್ । ವಿದಾ ಮಘವನ್ವಿದಾ । ಮಹಾವ್ರತಸ್ಯ ಪಂಚವಿಂಶತಿ ಸಾಮಧೇನ್ಯಃ ।

ಆಶ್ವಲಾಯನಸೂತ್ರಮ್– ಅಥೈತಸ್ಯ ಸಮಾಮ್ನಾಯಸ್ಯ ।

ಯಜುರ್ವೇದ– ಓಂ ಇಷೇ ತ್ವೋರ್ಜೇತ್ವಾ ವಾಯವಃ ಸ್ಥೋಪಾಯವಃ ಸ್ಥ ದೇವೋ ವಃ ಸವಿತಾ ಪ್ರಾರ್ಪಯತು ಶ್ರೇಷ್ಠತಮಾಯ ಕರ್ಮಣ ಆ ಪ್ಯಾಯಧ್ವಮಘ್ನಿಯಾ ದೇವಭಾಗಮೂರ್ಜಸ್ವತೀಃ ಪಯಸ್ವತೀಃ ಪ್ರಜಾವತೀರನಮೀವಾ ಅಯಕ್ಷ್ಮಾ ಮಾ ವಃ ಸ್ತೇನ ಈಶತ ಮಾಽಘಶꣳಸೋ ರುದ್ರಸ್ಯ ಹೇತಿಃ ಪರಿವೋ ವೃಣಕ್ತು ಧ್ರುವಾ ಅಸ್ಮಿನ್ ಗೋಪತೌ ಸ್ಯಾತ ಬಹ್ವೀರ್ಯಜಮಾನಸ್ಯ ಪಶೂನ್ ಪಾಹಿ ॥

ಸಾಮವೇದ– ಓಮ್ ಅಗ್ನ ಆ ಯಾಹಿ ವೀತಯೇ ಗೃಣಾನೋ ಹವ್ಯದಾತಯೇ। ನಿ ಹೋತಾ ಸತ್ಸಿ ಬರ್ಹಿಷಿ ॥

ಅಥರ್ವ ವೇದ– ಓಮ್ ಶಂ ನೋ ದೇವಿರಭಿಷ್ಟಯ ಆಪೋ ಭವಂತು ಪೀತಯೇ। ಶಂ ಯೋರಭಿ ಸ್ರವಂತು ನಃ ॥

| | |
|---|---|
| ಸಂಹಿತಾ ಪಾಠ | ವಿಷ್ಣವೇ ನಮಃ ॥ |
| ಪದಪಾಠ | ವಿಷ್ ಣವೇ ನಮಃ ॥ |
| ಕ್ರಮಪಾಠ | ವಿಷ್ಣವೇ ಣವೇ ನಮಃ ॥ |

ಶಿಕ್ಷಾ★– ಶೀಕ್ಷಾಂ ವ್ಯಾಖ್ಯಾಸ್ಯಾಮಃ । ವರ್ಣಸ್ವರಃ । ಮಾತ್ರಾ ಬಲಮ್ । ಸಾಮ ಸಂತಾನಃ। ಇತ್ಯುಕ್ತಶೀಕ್ಷಾಧ್ಯಾಯಃ (ತೈತ್ತಿರೀಯೋಪನಿಷತ್) (ಅಥ ಶಿಕ್ಷಾಂ ಪ್ರವಕ್ಷ್ಯಾಮಿ......)

---

★ ಇಲ್ಲಿಯ ತನಕ ಸಂಪ್ರದಾಯದಲ್ಲಿ ಬಂದಿರುವುದನ್ನು ಬೋಲ್ಡ್ ಅಕ್ಷರಗಳಲ್ಲಿ ನೀಡಲಾಗಿದೆ. ಶ್ರೀಮದಾಚಾರ್ಯರಿಂದ ಉಲ್ಲೇಖಿತವಾದ ಪ್ರಮಾಣ ಶ್ಲೋಕಗಳನ್ನು ಮೊದಲು ನೀಡಿ ಸಂಪ್ರದಾಯದಲ್ಲಿ ಬಂದಿರುವ ವಾಕ್ಯಗಳನ್ನು ಬೋಲ್ಡ್ ಮಾಡಿ ನೀಡಲಾಗಿದೆ.

| | |
|---|---|
| **ಮಹಾವ್ಯಾಕರಣ** | ದ್ವಿತೀಯಾರ್ಥೇ ತೃತೀಯಾರ್ಥೇ ಚತುರ್ಥ್ಯಾರ್ಥೇ ಚ ಸಪ್ತಮೀ ।<br>ಪಂಚಮ್ಯರ್ಥೇ ಚ ಸಂಪ್ರೋಕ್ತಾ ವಿಷಯೇತಿ ಚ ತಾಂ ವಿದುಃ ॥<br>**(ವೃದ್ಧಿರಾದೈಚ್ ........।)** |
| **ವ್ಯಾಸನಿರುಕ್ತ** | ಮಹಾನ್ಮಹೀಯಸಾಮಾದಿ ಬ್ರೂಯಾದತ್ಯುತ್ತಮೋತ್ತಮಂ ।<br>ಯತ್ರಾಧಿಕಂ ವದೇತ್ ಕಿಂಚಿಜ್ಜ್ಞೇಯೋಽರ್ಥಸ್ತತ್ರ ಚಾಧಿಕಃ ॥<br>**(ಸಮಾಮ್ನಾಯಃ ಸಮಾಮ್ನಾತಃ .........।)** |
| **ಛಂದಸ್ಸು** | ಛಂದಸ್ತು ನವಪಾದಂ ಯಜ್ಜಗದಿತ್ಯುಚ್ಯತೇ ಬುಧೈಃ ।<br>ಛಂದಸ್ತು ನವ ಪಾಠಂ ಭಾ.ತ. ೧೧-೨೧-೪೧<br>**(ಮಯರಸತಜಭನಲಗಸಮ್ಮಿತಂ........।)** |
| **ಜ್ಯೋತಿಷ** | ನಮೋ ನಮೋ ಜ್ಯೋತಿರ್ಲೋಕಾಯ ಕಾಲಾಯಾಸಾ-<br>ಯಾನಿಮಿಷಾಂ ಪತಯೇ ಮಹಾಪುರುಷಾಯ ಧೀಮಹಿ ॥<br>(ಭಾ.೫.೨೨.೩೧) **(ಪಂಚ ಸಂವತ್ಸರಮಯಂ .......।)** |
| **ನಿಘಂಟು** | ಮಾಲಿನೀ ಶಾಲಿನೀ ಕಾಲ್ಯಾ ಚಾರ್ಯಾ, ಭಾರ್ಯೇತಿ ಚೋಚ್ಯತೇ॥<br>(ಭಾ.ತಾ.ನಿ. ೩.೨೫.೧) **(ಗೌಃ ಗ್ಮಾ ಜ್ಮಾ ಕ್ಷ್ಮಾ...... ।)** |
| **ಬ್ರಹ್ಮಸೂತ್ರ** | **ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ** |
| **ಉತ್ತರಮೀಮಾಂಸಾ** | **ಓಂ ಅಥಾತೋ ದೈವೀಮೀಮಾಂಸಾ ಓಂ** |
| **ದೈವೀಮೀಮಾಂಸಾ** | **ಓಂ ಅಥಾತೋ ಧರ್ಮಜಿಜ್ಞಾಸಾ ಓಂ** |
| **ವ್ಯಾಸಸ್ಮೃತಿ** | ಪ್ರಾಜಾಪತ್ಯಬ್ರಹ್ಮಚರ್ಯಮೇಕಭಾರ್ಯಾರ್ತುಗಾಮಿತಾ ॥<br>(ಭಾ.ತಾ. ೩.೧೩.೪೨) **(ಯೋಗೀಶ್ವರಂ ಯಾಜ್ಞವಲ್ಕ್ಯಂ ..... ।)** |
| **ಮಹಾಭಾರತ** | **ನಾರಾಯಣಂ ಸುರಗುರುಂ ಜಗದೇಕನಾಥಂ<br>ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।<br>ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ<br>ವಂದೇ ಭವಘ್ನಮಮರಾಸುರಸಿದ್ಧವಂದ್ಯಮ್ ॥<br>ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।<br>ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥** |

ಭಾಗವತ

ಜನ್ಮಾದ್ಯಸ್ಯ ಯತೋಽನ್ವಯಾದಿತರತಶ್ಚಾರ್ಥೇಷ್ವಭಿಜ್ಞಃ ಸ್ವರಾಟ್
ತೇನೇ ಬ್ರಹ್ಮ ಹೃದಾ ಯ ಆದಿಕವಯೇ ಮುಹ್ಯಂತಿ ಯಂ ಸೂರಯಃ ।
ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋ ಮೃಷಾ
ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ ॥

ಅಣುಭಾಷ್ಯ

ನಾರಾಯಣಂ ಗುಣೈಸ್ಸರ್ವೈರುದೀರ್ಣಂ ದೋಷವರ್ಜಿತಮ್ ।
ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥
ನಮೋ ನಮೋಽಶೇಷದೋಷದೂರಪೂರ್ಣಗುಣಾತ್ಮನೇ ।
ವಿರಿಂಚಿಶರ್ವಪೂರ್ವೇಡ್ಯವಂದ್ಯಾಯ ಶ್ರೀವರಾಯ ತೇ ॥

ಓಂ ತಚ್ಛಂಯೋರಾವೃಣೀಮಹೇ । ಗಾತುಂ ಯಜ್ಞಾಯ । ಗಾತುಂ ಯಜ್ಞ ಪತಯೇ । ದೈವೀ ಸ್ವಸ್ತಿರಸ್ತು ನಃ । ಸ್ವಸ್ತಿರ್ಮಾನುಷೇಭ್ಯಃ । ಊರ್ಧ್ವಂ ಜಿಗಾತು ಭೇಷಜಮ್ । ಶಂ ನೋ ಅಸ್ತು ದ್ವಿಪದೇ ಶಂ ಚತುಷ್ಪದೇ ॥

ಓಂ ನಮೋ ಬ್ರಹ್ಮಣೇ ನಮೋ ಅಸ್ತ್ವಗ್ನಯೇ ನಮಃ ಪೃಥಿವ್ಯೈ ನಮ ಓಷಧೀಭ್ಯಃ । ನಮೋ ವಾಚೇ ನಮೋ ವಾಚಸ್ಪತಯೇ ನಮೋ ವಿಷ್ಣವೇ ಮಹತೇ ಕರೋಮಿ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

ಈ ಮಂತ್ರವನ್ನು ಮೂರಾವರ್ತಿ ಪಠಿಸಬೇಕು.

**ಸಮಯ ಮಾಡಿಕೊಂಡು ಕೆಳಗಿನ ಎಲ್ಲಾ ಸ್ತೋತ್ರಗಳನ್ನು ಪಠಿಸಬೇಕು**

ಮತ್ಸ್ಯಪುರಾಣ

ಹರಿಸ್ತಾಪಸನಾಮಾಸೌ ಜಾತಸ್ತಪಸಿ ಮೈ ಮನುಃ ಮನಃ ।
ಗಜೇಂದ್ರಂ ಮೋಚಯಾಮಾಸ ಸಸರ್ಜ ಚ ಜಗದ್ವಿಭುಃ ॥
(ಭಾ.ತಾ.ನಿ. ೨.೭.೧೬)

ಮಾರ್ಕಂಡೇಯ ಪುರಾಣ

ದೇವತಾನಾಂ ಯಥಾ ವ್ಯಾಸೋ ದ್ವಿಪದಾಂ ಬ್ರಾಹ್ಮಣೋ ವರಃ ।
ಆಯುಧಾನಾಂ ಯಥಾ ವಜ್ರಮೋಷಧೀನಾಂ ಯಥಾ ಯವಾಃ ।
ತಥೈವ ಸರ್ವಶಾಸ್ತ್ರಾಣಾಂ ಮಹಾಭಾರತಮುತ್ತಮಮ್ ॥
(ತಾ.ನಿ.೨.೫೨)

ಭವಿಷ್ಯತ್ ಪುರಾಣ

ಅಶರೀರಸ್ಯ ಜೀವಸ್ಯ ಶರೀರೋತ್ಪತ್ತಿಕಾರಣಮ್ ।
ಈಶ್ವರೇಚ್ಛಾ ಪ್ರಾಥಮಿಕಾ ತಾಂ ವಿನಾ ನಹಿ ಕಿಂಚನ ।

ದ್ವಿತೀಯಾ ಪ್ರಕೃತಿಃ ಪ್ರೋಕ್ತಾ ತದ್ರೂಪಾ ಹಿ ಗುಣಾಸ್ತ್ರಯಃ ॥

(ಭಾ.ತಾ.ನಿ.೨-೯-೩)

| | |
|---|---|
| ಬ್ರಾಹ್ಮ ಪುರಾಣ | ಕುಮಾರೋ ನಾಮ ಭಗವಾನ್ ಸ್ವಯಂ ಸ್ವಸ್ಮಾದಜಾಯತ ।<br>ದಿದೇಶ ಬ್ರಹ್ಮಣೇ ಬ್ರಹ್ಮ ಬ್ರಹ್ಮಚರ್ಯೇ ಸ್ಥಿತೋ ವಿಭುಃ ।<br>ಯಸ್ಮಾತ್ ಸನತ್ಕುಮಾರಶ್ಚ ಬ್ರಹ್ಮಚರ್ಯಮಪಾಲಯತ್ ।<br>ಯಃ ಸ್ಥಾಣೋಃ ಸ್ಥಾಣುತಾಂ ಪ್ರಾದಾತ್ ಭಗವಾನವ್ಯಯೋ ಹರಿಃ॥<br>(ಭಾ.ತಾ.ನಿ.೧.೩.೬) |
| ಬ್ರಹ್ಮಾಂಡ ಪುರಾಣ | ಮೋಹನಾರ್ಥಂ ದಾನವಾನಾಂ ಬಾಲರೂಪೀ ಪರಃಸ್ಥಿತಃ ।<br>ಪುತ್ರಂ ತಂ ಕಲ್ಪಯಾಮಾಸ ಮೂಢಬುದ್ಧಿರ್ಜಿನಃ ಸ್ವಯಮ್ ।<br>ತತಃ ಸಮ್ಮೋಹಯಾಮಾಸ ಜಿನಾದ್ಯಾನಸುರಾಂಶಕಾನ್ ।<br>ಭಗವಾನ್ ವಾಗ್ಭಿರುಗ್ರಾಭಿರಹಿಂಸಾ ವಾಚಿಭಿರ್ಹರಿಃ ॥<br>(ಭಾ.ತಾ.ನಿ.೧.೩.೨೪) |
| ಬ್ರಹ್ಮವೈವರ್ತ ಪುರಾಣ | ನಾಹಂ ನ ಚ ಶಿವೋಽನ್ಯೇ ಚ ತಚ್ಛಕ್ತ್ಯೇಕಾಂಶಭಾಗಿನಃ ।<br>ಬಾಲಃಕ್ರೀಡನಕೈರ್ಯದ್ವತ್ ಕ್ರೀಡತೇಽಸ್ಮಾಭಿರಚ್ಯುತಃ ॥ |
| ವಾರಾಹ ಪುರಾಣ | ವಿರುದ್ಧಶಾಕಯೋ ಯಸ್ಯ ನಿತ್ಯಾ ಯುಗಪದೇವ ಚ ।<br>ತಸ್ಮೈ ನಮೋ ಭಗವತೇ ವಿಷ್ಣವೇ ಸರ್ವಜಿಷ್ಣವೇ ॥<br>(ಭಾ.ತಾ.ನಿ.೪.೧೭.೩೪) |
| ವಾಮನ ಪುರಾಣ | ಯತ್ಸ್ಥಾನತ್ವಾದಿದಂ ಚಕ್ಷುರಸಂಗಂ ಸರ್ವವಸ್ತುಭಿಃ ।<br>ಸ ವಾಮನಃ ಪರೋಽಸ್ಮಾಕಂ ಗತಿರಿತ್ಯೇವ ಚಿಂತಯೇತ್ ॥<br>(ಬ್ರ.ಸೂ.ಭಾ.೧.೭.೧೪) |
| ವಿಷ್ಣುಪುರಾಣ | ಪ್ರಕೃತಿ ಪುರುಷಶ್ಚೈವ ನಿತ್ಯೌಕಾಲಶ್ಚ ಸತ್ತಮ ॥<br>(ಗೀ.ಭಾ.೨.೧೬) |
| ವಾಯು ಪುರಾಣ | ಜಯತಿ ಪರಾಶರಸೂನುಃ ಸತ್ಯವತೀ ಹೃದಯನಂದನೋ ವ್ಯಾಸಃ ।<br>ಯಸ್ಯ ಆಸ್ಯಕಮಲಗಲಿತಂ ವಾಙ್ಮಯಮಮೃತಂ ಜಗತ್ಪಿಬತಿ॥ |
| ಅಗ್ನಿ ಪುರಾಣ | ಶ್ರೀರೇವ ಲೋಕರೂಪೇಣ ವಿಷ್ಣೋಸ್ತಿಷ್ಠತಿ ಸರ್ವದಾ ।<br>ಅತೋ ಹಿ ವೈಷ್ಣವಾ ಲೋಕಾ ನಿತ್ಯಾಸ್ತೇ ಚೇತನಾ ಅಪಿ ॥<br>(ಗೀ.ತಾ.೧೮.೬೨) |

ನಾರದ ಪುರಾಣ ಸತ್ಯಂ ಸತ್ಯಂ ಪುನಃಸತ್ಯಂ ಶಪಥೈಶ್ಚಾಪಿ ಕೋಟಿಭಿಃ ।
ವಿಷ್ಣುಮಾಹಾತ್ಮ್ಯಲೋಕಸ್ಯ ವಿಭಕ್ತಸ್ಯ ಚ ಕೋಟಿಧಾ ।
ಪುನಶ್ಚಾನಂತಧಾ ತಸ್ಯ ಪುನಶ್ಚಾಪಿ ಹ್ಯನಂತಧಾ ।
ನೈಕಾಂಶಸಮಮಾಹಾತ್ಮ್ಯಾಃ ಶ್ರೀಶೇಷ ಬ್ರಹ್ಮಶಂಕರಾಃ ॥

ಪದ್ಮ ಪುರಾಣ ಕಪಿಲೋ ವಾಸುದೇವಾಖ್ಯಸ್ತಂತ್ರಂ ಸಾಂಖ್ಯಂ ಜಗಾದ ಹ ।
ಬ್ರಹ್ಮಾದಿಭ್ಯಶ್ಚ ದೇವೇಭ್ಯೋ ಭೃಗ್ವಾದಿಭ್ಯಸ್ತಥೈವ ಚ ।
ತಥೈವಾಸುರಯೇ ಸರ್ವಂ ವೇದಾರ್ಥೈರುಪಬೃಂಹಿತಮ್ ।
ಸರ್ವವೇದವಿರುದ್ಧಂ ಚ ಕಪಿಲೋಽನ್ಯೋ ಜಗಾದ ಹ ।
ಸಾಂಖ್ಯಮಾಸುರಯೇಽನ್ಯಸ್ಮೈ ಕುತರ್ಕಪರಿಬೃಂಹಿತಮ್ ॥

ಲಿಂಗ ಪುರಾಣ ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ವಿಶ್ವಪ್ರಜಾಂ
ಸೃಜಮಾನಾಂ ಸರೂಪಾಮ್ ।
ಅಜೋಹಂ ಮಾಂ ವಿದ್ಧಿ ತಂ ವಿಶ್ವರೂಪಂ ಗಾಯತ್ರೀಂ
ಗಾಂ ವಿಶ್ವರೂಪಾಂ ಹಿ ಬುಧ್ವಾ ॥

ಗರುಡ ಪುರಾಣ ಸ್ತ್ರೀರೂಪಶ್ಚೈವ ಪುಂರೂಪೋ ಯಸ್ಮಾನ್ನಾರಾಯಣಃ ಸ್ಥಿತಃ ।
ಪುಮಾನ್ ಸ್ತ್ರೀಚೇತಿ ವಾಚ್ಯೋಽತೋ ವೈಲಕ್ಷಣ್ಯಾನ್ನಚೋಽಚ್ಯತೇ ॥
ವಿಷ್ಣೋರ್ನಪುಂಸಕಾಕಾರೋ ನೈವಾಸ್ತಿ ಕ್ವಚನ ಪ್ರಭೋಃ ।
ತಥಾಽಪ್ಯರಾಗಾಕೃಷ್ಟತ್ವಾತ್ ತಚ್ಛಬ್ದೈರಪಿ ಕಥ್ಯತೇ ॥
(ಐತರೇಯ ಭಾಷ್ಯ)

ಕೂರ್ಮ ಪುರಾಣ ಅಧಿಕಸ್ಯ ಸಮಸ್ಯಾಪಿ ಸ್ವತಂತ್ರಸ್ಯ ಚ ವರ್ಜನಾತ್ ।
ಏಕ ಏವಾಽದ್ವಿತೀಯೋಽಸೌ ನ ಶಾಸ್ಯಜನವರ್ಜನಾತ್ ॥
(ಭಾ.ತಾ.ನಿ.೧೦.೧೬.೩೧)

ಸ್ಕಾಂದ ಪುರಾಣ ತೃತೀಯೇ ಸಪ್ತಮೇ ಚೈವ ಷೋಡಶೇ ಪಂಚವಿಂಶಕೇ ।
ಅಷ್ಟಾವಿಂಶೇ ಯುಗೇ ಕೃಷ್ಣಃ ಸತ್ಯವತ್ಯಾಮಜಾಯತ ।
ವ್ಯಾಸಾಚಾರ್ಯಸ್ತು ಪೂರ್ವೇಷು ಚರಮೇ ಸ್ವಯಮೇವ ತು ।
ವಿವ್ಯಾಸ ವೇದಾಂಶ್ಚಕ್ರೇ ಚ ಭಾರತಂ ವೇದಸಂಮಿತಮ್ ॥
(ಭಾ.ತಾ.ನಿ.೨.೭.೩೬)

| | |
|---|---|
| ಬ್ರಹ್ಮತರ್ಕ | ಸರ್ವತ್ರ ಸರ್ವಕೃಚ್ಚಾಪಿ ಹಯಗ್ರೀವಾದಿರೂಪಕಃ ।<br>ಜ್ಞಾನಾದಿರಕ್ಷಕೋ ವಿಷ್ಣುರ್ಜಾಮದಗ್ನ್ಯಾದಿರೂಪವಾನ್ ।<br>ಜ್ಞಾನಾದ್ಯುತ್ಪಾದಕೇ ನಿತ್ಯಂ ಕೃಷ್ಣಾದಿದೋಷನಾಶಕಃ ॥ |
| ದತ್ತಾತ್ರೇಯ ಯೋಗ | ತ್ಯಕ್ತ್ವಾ ದೇಹಾದ್ಯಾತ್ಮಭಾವಂ ಜೀವರೂಪೇ ಹೃದಿ ಸ್ಥಿತೇ ।<br>ದೃಷ್ಟ್ವಾತ್ಮಭಾವಂ ತಂ ಚಾಪಿ ಹರಿಪಾದಾಬ್ಜಸಂಸ್ಥಿತಮ್ ।<br>ಯದಾ ಪಶ್ಯತ್ಯಾಪರೋಕ್ಷ್ಯಾತ್ ತದಾ ಮುಕ್ತಿಂ ವ್ರಜತ್ಯಸೌ ॥<br>(ಭಾ.ತಾ.ನಿ.೩.೧೦.೩೩) |
| ಕಾಪಿಲೇಯ | ಸದಾ ಸರ್ವಗುಣಾಢ್ಯತ್ವಾತ್ ಸತ್ವೋ ವಿಷ್ಣುರುದೀರ್ಯತೇ ॥<br>(ಭಾ.ತಾ.ನಿ.೩.೨೬.೩೩) |
| ಹರಿವಂಶ | ಹರಿಸ್ತು ನಿರ್ಗುಣಂ ಬ್ರಹ್ಮ ಶ್ರೀಬ್ರಹ್ಮ ಸಗುಣಾ ಸ್ಮೃತಾಃ ॥<br>(ಭಾ.ತಾ.ನಿ.೩.೧೭.೧೬) |
| ಭಾಗವತತಂತ್ರ | ಸಾಕ್ಷಾತ್ ಶ್ರೀಸ್ತು ಹರೇರೂಪಮಿಂದಿರಾ ತು ತದಾಶ್ರಯಾತ್ ॥<br>(ಭಾ.ತಾ.ನಿ.೩.೩೯.೨೯) |
| ತಂತ್ರಭಾಗವತ | ಶ್ರೀದೇವೀ ವೇಣುಮಾವಿಶ್ಯ ರೇಮೇ ಕೃಷ್ಣಮುಖಾಂಬುಜೇ ।<br>ಪಪೌ ಚ ತದ್ಗತಂ ಗೀತಂ ಸುರಾ ಇತರಭಾಂಡಗಾಃ ॥<br>(ಭಾ.ತಾ.ನಿ.೧೦.೧೯.೭) |
| ಪಂಚರಾತ್ರ | ಸ್ಥಿತಪ್ರಜ್ಞಾಸ್ಯಾಪಿ ಕಾರ್ಯೋ ದೇಹಾದಿರ್ದೃಶ್ಯತೇ ಯದಾ ।<br>ಸ್ವಧರ್ಮೋ ಮಮ ತುಷ್ಟ್ಯರ್ಥಂ ಸಾಹಿ ಸರ್ವೈರಪೇಕ್ಷಿತಾ ॥<br>(ಗೀ.ಭಾ.೩.೧೭) |
| ನರಸಿಂಹಪುರಾಣ | ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ<br>ನಾರಾಯಣಃ ಸರಸಿಜಾಸನಸನ್ನಿವಿಷ್ಟಃ ।<br>ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ<br>ಹಾರೀ ಹಿರಣ್ಮಯವಪುಃ ಧೃತಶಂಖಚಕ್ರಃ ॥ |

ವೃಷ್ಟಿರಸಿ ವೃಶ್ಚಮೇ ಪಾಪ್ಮಾನಮೃತಾತ್ಸತ್ಯಮುಪಾಗಾಮ್ ॥

(ಎಂದು ನೀರನ್ನು ಪ್ರೋಕ್ಷಿಸಿಕೊಳ್ಳಬೇಕು)

## ದೇವತರ್ಪಣಮ್ (ಸವ್ಯದಿಂದ)

ಓಂ ಅಗ್ನಿಸ್ತೃಪ್ಯತು । ವಿಷ್ಣುಸ್ತೃಪ್ಯತು । ಪ್ರಜಾಪತಿಸ್ತೃಪ್ಯತು । ಬ್ರಹ್ಮಾ ತೃಪ್ಯತು । ವೇದಾಸ್ತೃಪ್ಯಂತು । ದೇವಾಸ್ತೃಪ್ಯಂತು । ಋಷಯಸ್ತೃಪ್ಯಂತು । ಸರ್ವಾಣಿ ಛಂದಾಂಸಿ ತೃಪ್ಯಂತು। ಓಂಕಾರಸ್ತೃಪ್ಯತು । ವಷಟ್ಕಾರಸ್ತೃಪ್ಯತು । ವ್ಯಾಹೃತಯಸ್ತೃಪ್ಯಂತು । ಸಾವಿತ್ರೀ ತೃಪ್ಯತು । ಯಜ್ಞಾಸ್ತೃಪ್ಯಂತು । ದ್ಯಾವಾಪೃಥಿವ್ಯೌ ತೃಪ್ಯೇತಾಮ್ । ಅಂತರಿಕ್ಷಾಣಿ ತೃಪ್ಯಂತು । ಅಹೋರಾತ್ರಾಣಿ ತೃಪ್ಯಂತು । ಸಾಂಖ್ಯಾಸ್ತೃಪ್ಯಂತು । ಸಿದ್ಧಾಸ್ತೃಪ್ಯಂತು । ಸಮುದ್ರಾಸ್ತೃಪ್ಯಂತು । ನದ್ಯಸ್ತೃಪ್ಯಂತು । ಗಿರಯಸ್ತೃಪ್ಯಂತು । ಕ್ಷೇತ್ರೌಷಧಿವನಸ್ಪತಿಗಂಧರ್ವಾಪ್ಸರಸ್ತೃಪ್ಯಂತು । ನಾಗಾಸ್ತೃಪ್ಯಂತು । ವಯಾಂಸಿ ತೃಪ್ಯಂತು । ಗಾವಸ್ತೃಪ್ಯಂತು । ಸಾಧ್ಯಾಸ್ತೃಪ್ಯಂತು । ವಿಪ್ರಾಸ್ತೃಪ್ಯಂತು। ಯಕ್ಷಾಸ್ತೃಪ್ಯಂತು । ರಕ್ಷಾಂಸಿ ತೃಪ್ಯಂತು । ಭೂತಾನಿ ತೃಪ್ಯಂತು । ಏವಮಂತಾನಿ ತೃಪ್ಯಂತು ।।

(ಹೀಗೆ ದೇವತರ್ಪಣವನ್ನು ಸವ್ಯದಿಂದ ಬಲಗೈಯ ಬೆರಳ ತುದಿಗಳಿಂದ ಒಂದುಬಾರಿ ಕೊಡಬೇಕು).

## ಋಷಿತರ್ಪಣಮ್

(ಮಾಲಾಕಾರದಿಂದ ತೃಪ್ಯಂತು ತೃಪ್ಯಂತು ಎಂದು ಎರಡು ಬಾರಿ ತರ್ಪಣ)

ಓಂ ಶತರ್ಚಿನಸ್ತೃಪ್ಯಂತು । ಮಾಧ್ಯಮಾಸ್ತೃಪ್ಯಂತು । ಗೃತ್ಸಮದಸ್ತೃಪ್ಯತು । ವಿಶ್ವಾಮಿತ್ರಸ್ತೃಪ್ಯತು । ವಾಮದೇವಸ್ತೃಪ್ಯತು । ಅತ್ರಿಸ್ತೃಪ್ಯತು । ಭರದ್ವಾಜಸ್ತೃಪ್ಯತು । ವಸಿಷ್ಠಸ್ತೃಪ್ಯತು । ಪ್ರಗಾಥಾಸ್ತೃಪ್ಯಂತು । ಪಾವಮಾನ್ಯಸ್ತೃಪ್ಯಂತು । ಕ್ಷುದ್ರಸೂಕ್ತಾಸ್ತೃಪ್ಯಂತು ।। ಮಹಾಸೂಕ್ತಾಸ್ತೃಪ್ಯಂತು । ಸನಕಸ್ತೃಪ್ಯತು । ಸನಂದನಸ್ತೃಪ್ಯತು । ಸನತ್ಸುಜಾತಸ್ತೃಪ್ಯತು । ಸನಾತನಸ್ತೃಪ್ಯತು । ಸನತ್ಕುಮಾರಸ್ತೃಪ್ಯತು । ಕಪಿಲಸ್ತೃಪ್ಯತು । ಓಳ್ಹರಿಸ್ತೃಪ್ಯತು । ಆಸುರೀ ತೃಪ್ಯತು। ಪಂಚಶಿಖಾಸ್ತೃಪ್ಯಂತು ।।

ಹೀಗೆ ಋಷಿತರ್ಪಣವನ್ನು, ಯಜ್ಞೋಪವೀತವನ್ನು ಮಾಲಾಕಾರವಾಗಿ ಹಾಕಿಕೊಂಡು ಬಲಗೈಯ ಕಿರುಬೆರಳ ತಳದಿಂದ ಎರಡುಬಾರಿ ತರ್ಪಣ ಕೊಡಬೇಕು.

## ಆಚಾರ್ಯ ತರ್ಪಣಮ್

(ತೃಪ್ಯಂತು, ತರ್ಪಯಾಮಿ ಎಂಬುದನ್ನು ಮೂರು ಬಾರಿ ಹೇಳಬೇಕು. ಅಧಿಕಾರಿಗಳು ಅಪಸವ್ಯದಿಂದ ಅನಧಿಕಾರಿಗಳು ಸವ್ಯದಿಂದ ತರ್ಪಣ ನೀಡಬೇಕು)

ಓಂ ಸುಮಂತು-ಜೈಮಿನಿ-ವೈಶಂಪಾಯನ-ಪೈಲ-ಸೂತ್ರ-ಭಾಷ್ಯ-ಭಾರತ-ಮಹಾಭಾರತ-ಧರ್ಮಾಚಾರ್ಯಾಸ್ತೃಪ್ಯಂತು । ಜಾನಂತಿ-ಬಾಹವಿ-ಗಾರ್ಗ್ಯ-ಗೌತಮ-ಶಾಕಲ್ಯ-ಬಾಭ್ರವ್ಯ-ಮಾಂಡವ್ಯ-ಮಾಂಡೂಕೇಯಾ ಸ್ತೃಪ್ಯಂತು । ಗಾರ್ಗೀವಾಚಕ್ನವೀ ತೃಪ್ಯತು । ವಡವಾ ಪ್ರಾತಿಥೇಯೀ ತೃಪ್ಯತು । ಸುಲಭಾ ಮೈತ್ರೇಯೀ ತೃಪ್ಯತು । ಕಹೋಳಂ ತರ್ಪಯಾಮಿ । ಕೌಷೀತಕಂ ತರ್ಪಯಾಮಿ । ಮಹಾಕೌಷೀತಕಂ ತರ್ಪಯಾಮಿ ।

ಭರದ್ವಾಜಂ ತರ್ಪಯಾಮಿ । ಪೈಂಗ್ಯಂ ತರ್ಪಯಾಮಿ । ಮಹಾಪೈಂಗ್ಯಂ ತರ್ಪಯಾಮಿ ।। ಸುಯಜ್ಞಂ ತರ್ಪಯಾಮಿ । ಸಾಂಖ್ಯಾಯನಂ ತರ್ಪಯಾಮಿ । ಐತರೇಯಂ ತರ್ಪಯಾಮಿ । ಮಹೈತರೇಯಂ ತರ್ಪಯಾಮಿ । ಶಾಕಲಂ ತರ್ಪಯಾಮಿ । ಬಾಷ್ಕಲಂ ತರ್ಪಯಾಮಿ । ಸುಜಾತವಕ್ತ್ರಂ ತರ್ಪಯಾಮಿ । ಔದವಾಹಿಂ ತರ್ಪಯಾಮಿ । ಮಹೌದವಾಹಿಂ ತರ್ಪಯಾಮಿ । ಸೌಜಾಮಿಂ ತರ್ಪಯಾಮಿ । ಶೌನಕಂ ತರ್ಪಯಾಮಿ। ಆಶ್ವಲಾಯನಂ ತರ್ಪಯಾಮಿ । ಯೇ ಚಾನ್ಯೇ ಆಚಾರ್ಯಾಃ ತೇ ಸರ್ವೇ ತೃಪ್ಯಂತು ತೃಪ್ಯಂತು ತೃಪ್ಯಂತು।।

## ಪಿತೃತರ್ಪಣಕ್ರಮಃ (ಅಪಸವ್ಯದಿಂದ)

(ಅಧಿಕಾರಿಗಳಿಗೆ ಮಾತ್ರವಿದು)

ಅಸ್ಮತ್ ಪಿತರಂ ......... ಶರ್ಮಾಣಂ ......... ಗೋತ್ರಂ ......... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ - ೩ ।।

ಅಸ್ಮತ್ ಪಿತಾಮಹಂ ......... ಶರ್ಮಾಣಂ ......... ಗೋತ್ರಂ ......... ರುದ್ರಾಂತರ್ಗತ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾ ನಮಸ್ತರ್ಪಯಾಮಿ - ೩।।

ಅಸ್ಮತ್ ಪ್ರಪಿತಾಮಹಂ .... ಶರ್ಮಾಣಂ ....... ಗೋತ್ರಂ ....... ಆದಿತ್ಯಾಂತರ್ಗತ ಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾ ನಮಸ್ತರ್ಪಯಾಮಿ -೩।।

ಅಸ್ಮತ್ ಮಾತರಂ ......... ದಾಂ ..... ಗೋತ್ರಂ ......... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ - ೩ ।।

ಅಸ್ಮತ್ ಪಿತಾಮಹೀಂ ......... ದಾಂ ......... ಗೋತ್ರಂ ......... ರುದ್ರಾಂತರ್ಗತ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾ ನಮಸ್ತರ್ಪಯಾಮಿ - ೩ ।।

ಅಸ್ಮತ್ ಪ್ರಪಿತಾಮಹೀಂ ....... ದಾಂ ....... ಗೋತ್ರಂ ......... ಆದಿತ್ಯಾಂತರ್ಗತ ಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾ ನಮಸ್ತರ್ಪಯಾಮಿ -೩।।

ಅಸ್ಮತ್ ಸಾಪತ್ನಜನನೀಂ ......... ದಾಂ ......... ಗೋತ್ರಂ ......... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ - ೩ ।।

ಅಸ್ಮತ್ ಮಾತಾಮಹಂ ......... ಶರ್ಮಾಣಂ ......... ಗೋತ್ರಂ ......... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ - ೩ ।।

ಅಸ್ಮತ್ ಮಾತುಃ ಪಿತಾಮಹಂ ..... ಶರ್ಮಾಣಂ.... ಗೋತ್ರಂ ..... ರುದ್ರಾಂತರ್ಗತ

ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾ ನಮಸ್ತರ್ಪಯಾಮಿ - ೩||

ಅಸ್ಮತ್ ಮಾತುಃ ಪ್ರಪಿತಾಮಹಂ ... ಶರ್ಮಾಣಂ... ಗೋತ್ರಂ .... ಆದಿತ್ಯಾಂತರ್ಗತ ಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾ ನಮಸ್ತರ್ಪಯಾಮಿ -೩||

ಅಸ್ಮತ್ ಮಾತಾಮಹೀಂ ......... ದಾಂ ......... ಗೋತ್ರಂ ......... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ - ೧ ||

ಅಸ್ಮತ್ ಮಾತುಃ ಪಿತಾಮಹೀಂ ....... ದಾಂ ....... ಗೋತ್ರಂ ..... ರುದ್ರಾಂತರ್ಗತ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾ ನಮಸ್ತರ್ಪಯಾಮಿ - ೧||

ಅಸ್ಮತ್ ಮಾತುಃ ಪ್ರಪಿತಾಮಹೀಂ..ದಾಂ........ಶರ್ಮಾಣಂ.. ಗೋತ್ರಂ ... ಆದಿತ್ಯಾಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ -೩||

ಅಸ್ಮತ್ ಪತ್ನೀಂ......... ದಾಂ ......... ಗೋತ್ರಂ ......... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ - ೨ ||

ಅಸ್ಮತ್ ಸುತಂ ......... (ಸಪತ್ನೀಕಂ) ಶರ್ಮಾಣಂ ......... ಗೋತ್ರಂ ......... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ - ೧ ||

ಅಸ್ಮತ್ ಭ್ರಾತರಂ ......... ಶರ್ಮಾಣಂ ......... ಗೋತ್ರಂ ......... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ - ೧ ||

ಅಸ್ಮತ್ ಪಿತೃವ್ಯಂ ......... ಶರ್ಮಾಣಂ ......... ಗೋತ್ರಂ ......... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ - ೧ ||

ಅಸ್ಮತ್ ಮಾತುಲಂ ......... ಶರ್ಮಾಣಂ ......... ಗೋತ್ರಂ ......... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ - ೧ ||

ಅಸ್ಮತ್ ದುಹಿತರಂ ...... (ಸಭರ್ತೃಕಾಂ ಸಸುತಾಂ) ಶರ್ಮಾಣಂ ..... ಗೋತ್ರಂ ... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ -೧||

ಅಸ್ಮತ್ ಭಗಿನೀಂ ......... ದಾಂ ......... ಗೋತ್ರಂ ......... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ - ೧ ||

ಅಸ್ಮತ್ ಪಿತೃಸ್ವಸಾರಂ ......... ದಾಂ ......... ಗೋತ್ರಂ ......... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ - ೧ ||

ಅಸ್ಮತ್ ಮಾತೃಸ್ವಸಾರಂ ......... ದಾಂ ......... ಗೋತ್ರಂ ......... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ - ೧ ||

ಅಸ್ಮತ್ ಶ್ವಶುರಂ (ಸಪತ್ನೀಕಂ) ......... ಶರ್ಮಾಣಂ ......... ಗೋತ್ರಾಂ ......... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ - ೧ ||

ಅಸ್ಮತ್ ಗುರುಂ ......... ಶರ್ಮಾಣಂ ......... ಗೋತ್ರಂ ......... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ - ೨ ||

ಅಸ್ಮತ್ ಆಚಾರ್ಯಂ ......... ಶರ್ಮಾಣಂ ......... ಗೋತ್ರಂ ......... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ - ೨ ||

**ಆಬ್ರಹ್ಮಸ್ತಂಭಪರ್ಯಂತಂ ದೇವರ್ಷಿಪಿತೃಮಾನವಾಃ ।**
**ತೃಪ್ಯಂತು ಪಿತರಃ ಸರ್ವೇ ಮಾತೃಮಾತಾಮಹಾದಯಃ ॥**
**ಅತೀತಕುಲಕೋಟೀನಾಂ ಸಪ್ತದ್ವೀಪನಿವಾಸಿನಾಮ್ ।**
**ಆಬ್ರಹ್ಮಭುವನಾಲ್ಲೋಕಾದಿದಮಸ್ತು (ತಿಲೋದಕಮ್) ಕುಶೋದಕಮ್ ॥**
**ಯೇ ಕೇ ಚಾಸ್ಮತ್ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ ।**
**ತೇ ಗೃಹ್ಣಂತು ಮಯಾ ದತ್ತಂ ಸೂತ್ರ ನಿಷ್ಪೀಡನೋದಕಮ್ ॥**

## ಯಮತರ್ಪಣಮ್

(ಪ್ರಾಚೀನಾವೀತಿ ದೇವತೀರ್ಥೇನ ಪೂರ್ವಾಭಿಮುಖಃ ಸನ್)

ಓಂ ಯಮಂ ತರ್ಪಯಾಮಿ । ಧರ್ಮರಾಜಂ ತರ್ಪಯಾಮಿ । ಮೃತ್ಯುಂ । ಅಂತಕಂ। ವೈವಸ್ವತಂ । ಕಾಲಂ । ಸರ್ವಭೂತಕ್ಷಯಂ । ಔದುಂಬರಂ । ದಧ್ನಂ । ನೀಲಂ । ಪರಮೇಷ್ಠಿನಂ। ವೃಕೋದರಂ । ಚಿತ್ರಂ । ಚಿತ್ರಗುಪ್ತಂ ತರ್ಪಯಾಮಿ ॥

**ಯಮೋ ನಿಹಂತಾ ಪಿತೃಧರ್ಮರಾಜೋ ವೈವಸ್ವತೋ ದಂಡಧರಶ್ಚ ಕಾಲಃ ।**
**ಪ್ರೇತಾಧಿಪೋ ದತ್ತಕೃತಾನುಸಾರೀ ಕೃತಾಂತ ಏತದ್ದಶಭಿರ್ಜಪಂತಿ ॥**

ಯಸ್ಯ ಸ್ಮೃತ್ಯಾ ಚ ......... ಪರಿಪೂರ್ಣಂ ತದಸ್ತು ಮೇ ॥

ಅನೇನ ಬ್ರಹ್ಮ ಯಜ್ಞೇನ ದೇವರ್ಷ್ಯಾಚಾರ್ಯಪಿತೃಯಮತರ್ಪಣೇನ ಭಗವಾನ್ ಶ್ರೀಮಜ್ಜನಾರ್ದನವಾಸುದೇವಃ ಪ್ರೀಯತಾಂ ಪ್ರೀತೋ ಭವತು ॥

॥ ಶ್ರೀಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ॥

★ ★ ★ ★

# ಯಜ್ಞೋಪವೀತ ಧಾರಣೆ

**ಕಾರ್ಪಾಸಮುಪವೀತಂ ಸ್ಯಾತ್ ವಿಪ್ರಸ್ಯೋರ್ಧ್ವ ವೃಕಂ ತ್ರಿವೃತ್ ।**
**ತ್ರಿರಾವೇಷ್ಟ್ಯ ದೃಢಂ ಬದ್ಧ್ವಾ ಹರಿಬ್ರಹ್ಮೇಶ್ವರಾನ್ನಮೇತ್ ॥**

ಪೂರ್ವಾಭಿಮುಖವಾಗಿ ದೇವರ ನಾಮಸಂಕೀರ್ತನೆ ಮಾಡುತ್ತಾ ದರ್ಭಾಸನದಲ್ಲಿ ಕುಳಿತುಕೊಂಡು ಶುದ್ಧವಾದ ಹತ್ತಿಯಿಂದ ನೂಲನ್ನು ಎಳೆದು, ಪ್ರಣವಸಹಿತವಾಗಿ ಪುರುಷಸೂಕ್ತವನ್ನು ಹೇಳುತ್ತ ತನ್ನ ನಾಲ್ಕು ಮುಂಬೆರಳುಗಳಿಗೆ ೯೬ ಸಲ ಸುತ್ತಿದಾಗ ಷಣ್ಣವತ್ಯಂಗುಲವಾಗುವುದು (೯೬ ಅಂಗುಲ). ಆ ನೂಲನ್ನು ಮೂರಾಗಿ ಜೋಡಿಸಿ ಆದನ್ನು ಮತ್ತೆ ಪುನಃ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವ ವೇದಗಳ ಸೂಕ್ತಗಳನ್ನುಜಪಿಸುತ್ತ ಮೂರಾಗಿ ಜೋಡಿಸಿ ರಾಟೆಯಿಂದ ಚೆನ್ನಾಗಿ ತಿರುಗಿಸಬೇಕು. ಆಗ ಆ ನೂಲಿನಲ್ಲಿ ಒಟ್ಟಿಗೆ ಒಂಬತ್ತು ನೂಲು ಸೇರುವುದು. ಈ ನೂಲನ್ನು ಮತ್ತೆ ಪುನಃ ವಿಷ್ಣು, ಬ್ರಹ್ಮ, ರುದ್ರ ಸೂಕ್ತಾದಿಗಳನ್ನು ಜಪಿಸುತ್ತಾ ಮೂರು ಎಳೆಗಳಾಗಿ ತಂದು ಎರಡು ಕುಚ್ಚಿಯನ್ನು ಜೋಡಿಸಿ ಪವಿತ್ರಗ್ರಂಥಿ (ಗಂಟು) ಹಾಕಿ ಅನಂತರ ಬ್ರಹ್ಮಗಂಟನ್ನು ಹಾಕಬೇಕು. ಯಜ್ಞೋಪವೀತಧಾರಣ ಮಾಡುವ ಮೊದಲು ಆಪೋಹಿಷ್ಠಾದಿ ಮಂತ್ರಗಳಿಂದ ಪ್ರೋಕ್ಷಿಸಿ, ಶುದ್ಧಗೊಳಿಸಿ, ದೇವರಿಗೆ ಸಮರ್ಪಿಸಿ, ಗಾಯತ್ರೀಮಂತ್ರವನ್ನು ಅಭಿಮಂತ್ರಿಸಿ ಸಂಸ್ಕಾರ (ಭಿನ್ನತಂತುವಾಗಿದ್ದಾಗಲೂ ಸೂತಕಾದಿಗಳಲ್ಲಿಯೂ ಅನ್ಯರಿಂದ ಮಾಡಿಸಿ) ಮಾಡಿಕೊಂಡು ಧಾರಣ ಮಾಡತಕ್ಕದ್ದು.

**ಓಂಕಾರೋಽಗ್ನಿಶ್ಚ ನಾಗಶ್ಚ ಸೋಮಃ ಪಿತೃಪ್ರಜಾಪತೀ ।**
**ವಾಯುಸೂರ್ಯೌ ವಿಶ್ವೇದೇವಾ ಇತ್ಯೇತಾಸ್ತಂತುದೇವತಾಃ ॥**

ಎಂಬ ಒಂಬತ್ತು ತಂತುದೇವತೆಗಳ ಅಧಿಷ್ಠಾನಕ್ಕಾಗಿ ಉಪವೀತದ ಒಂದೊಂದು ಎಳೆಯಲ್ಲಿ ಒಂಬತ್ತು ಒಂಬತ್ತು ತಂತುಗಳು; ನಮ್ಮ ದೇಹವು ಸದಾ ಪವಿತ್ರವಾಗಿ ಪರಮಾತ್ಮನ ಅಧಿಷ್ಠಾನವುಳ್ಳದ್ದಾಗಿರಬೇಕು.

ಹಾಗಾದರೆ ಈ ಉಪವೀತವು ಹೇಗಿರತಕ್ಕದ್ದು, ಎಷ್ಟೆಷ್ಟನ್ನು ಧರಿಸತಕ್ಕದ್ದು, ಅದನ್ನು ಸದಾ ಪವಿತ್ರವಾಗಿ ಹೇಗೆ ಇಟ್ಟುಕೊಳ್ಳತಕ್ಕದ್ದು ಎಂದರೆ–

**ತ್ರಿವೃತಂ ಚೋಪವೀತಂ ಚ ತತ್ರೈಕೋ ಗ್ರಂಥಿರಿಷ್ಯತೇ ।**
**ನಾಭೇರೂರ್ಧ್ವಮನಾಯುಷ್ಯಮಧೋ ನಾಭೇಸ್ತಪಃಕ್ಷಯಃ ॥**

ಉಪವೀತವು ಮೂರು ಎಳೆಗಳಿಂದಲೂ ಒಂದು ಗ್ರಂಥಿಯಿಂದಲೂ ಕೂಡಿದ್ದಾಗಿ ಕಾರಣ ಮಾಡಿದ ಕಾಲದಲ್ಲಿ ನಾಭಿಗೆ ಸರಿಯಾಗಿ ಇರಬೇಕು. ನಾಭಿಯ ಮೇಲಿದ್ದರೆ ಆಯುಸ್ಸು ಕ್ಷೀಣ; ನಾಭಿಯ ಕೆಳಗಿದ್ದರೆ ತಪಸ್ಸಿಗೆ ಹ್ರಾಸ.

**ಯಜ್ಞೋಪವೀತೇ ದ್ವೇ ಧಾರ್ಯೇ ಶ್ರೌತೇ ಸ್ಮಾರ್ತೇ ಚ ಕರ್ಮಣಿ ।**
**ವಸ್ತ್ರಾಭಾವೇ ತೃತೀಯಂ ತು ಗೃಹಸ್ಥೋ ಧಾರಯೇದ್ದ್ವಿಜಃ ॥**
**ಚತುರ್ಥಮುತ್ತರೀಯಾರ್ಥಮಾಯುಷ್ಕಾಮೋ ಬಹೂನ್ಯಪಿ ।**
**ಗೃಹಸ್ಥಸ್ಯ ತ್ವಿದಂ ಪ್ರೋಕ್ತಮೇಕಂ ವೈ ಬ್ರಹ್ಮಚಾರಿಣಃ ॥**

ಗೃಹಸ್ಥಾಶ್ರಮಿಯು ಶ್ರೌತಸ್ಮಾರ್ತಕರ್ಮದಲ್ಲಿ ಎರಡು ಉಪವೀತಗಳನ್ನು ಧರಿಸತಕ್ಕದ್ದು; ಉಡುವ ವಸ್ತ್ರವಿಲ್ಲದ ದೋಷಪರಿಹಾರಕ್ಕೆ ಮೂರನೆಯದು; ಉತ್ತರೀಯದ ಬದಲು ನಾಲ್ಕನೆಯದು. ಆಯುಸ್ಸನ್ನು ಬಯಸುವವರು ಇನ್ನೂ ಹೆಚ್ಚು ಉಪವೀತಗಳನ್ನು ಧರಿಸಬಹುದು. ಬ್ರಹ್ಮಚಾರಿಯು ಯಾವಾಗಲೂ ಒಂದನ್ನೇ ಧರಿಸಿಕೊಳ್ಳತಕ್ಕದ್ದು. ಅಧಿಕಾರಿಗಳು ಮಾತ್ರ ಮೂರು ಅಥವಾ ನಾಲ್ಕು ಯಜ್ಞೋಪವೀತವನ್ನು ಧರಿಸಿಕೊಳ್ಳಬೇಕು. ಅನಧಿಕಾರಿಗಳು ಎರಡು ಯಜ್ಞೋಪವೀತವನ್ನು ಮಾತ್ರ ಧರಿಸಬೇಕು.

**ಬ್ರಹ್ಮಸೂತ್ರಂ ವಿನಾ ಭುಂಕ್ತೇ ವಿಣ್ಮೂತ್ರೇ ಕುರುತೇಽಥ ವಾ ।**
**ಗಾಯತ್ರ್ಯಷ್ಟಸಹಸ್ರೇಣ ಪ್ರಾಣಾಯಾಮೇನ ಶುದ್ಧ್ಯತಿ ॥**

ಯಜ್ಞೋಪವೀತವಿಲ್ಲದೆ ಊಟ ಮಾಡಿದರೆ ಅಥವಾ ಮಲಮೂತ್ರ ವಿಸರ್ಜನೆ ಮಾಡಿದರೂ ಆ ದೋಷಪರಿಹಾರಕ್ಕಾಗಿ ಪ್ರಾಣಾಯಾಮ ಪೂರ್ವಕ ಎಂಟು ಸಹಸ್ರ ಗಾಯತ್ರೀಜಪ ಮಾಡಬೇಕು.

**ಸ್ವದಕ್ಷಿಣಶ್ರುತೌ ನ್ಯಸ್ಯ ಬ್ರಹ್ಮಸೂತ್ರಂ ಸಮಾಹಿತಃ ।**
**ಉದಙ್ಮುಖೋ ದಿವಾನಕ್ತಂ ದಕ್ಷಿಣಾಮುಖ ಸಂಸ್ಥಿತಃ ॥**

ಉಪವೀತವನ್ನು ತನ್ನ ಬಲಕಿವಿಗೆ ಸಿಕ್ಕಿಸಿ ಮೌನಿಯಾಗಿ ಹಗಲಲ್ಲಿ ಉತ್ತರಮುಖವಾಗಿಯೂ, ರಾತ್ರಿಯಲ್ಲಿ ದಕ್ಷಿಣಮುಖವಾಗಿಯೂ ಮಲಮೂತ್ರ ವಿಸರ್ಜನೆ ಮಾಡಬೇಕು.

**ಆದಿತ್ಯಾ ವಸವೋ ರುದ್ರಾ ವಾಯುರಗ್ನಿಶ್ಚ ಧರ್ಮರಾಟ್ ।**
**ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ।**

**ವಿಪ್ರಸ್ಯ ದಕ್ಷಿಣೇ ಕರ್ಣೇ ನಿವಸಂತಿ ಹಿ ಸರ್ವದಾ ॥**

'ಬ್ರಾಹ್ಮಣನ ಬಲಕಿವಿಯಲ್ಲಿ ನಿತ್ಯದಲ್ಲಿಯೂ ಆದಿತ್ಯರು, ವಸುಗಳು, ರುದ್ರರು, ವಾಯು, ಅಗ್ನಿ, ಧರ್ಮರಾಜ, ಪುಷ್ಕರಾದಿ ತೀರ್ಥಗಳೂ ಗಂಗೆ ಮೊದಲಾದ ನದಿಗಳೂ ವಾಸಮಾಡುತ್ತವೆ' ಎಂಬ ವಚನದಂತೆ ಬಲಕಿವಿಯು ಪವಿತ್ರವಾದುದರಿಂದ ಮೂತ್ರಪುರೀಷೋತ್ಸರ್ಜನಾದಿಕಾಲಗಳಲ್ಲಿ ದೇಹವು ಅಶುಚಿಯಾಗುವುದರಿಂದ ಅಂತಹ ಸಂದರ್ಭಗಳಲ್ಲಿ ಉಪವೀತವನ್ನು ಮಾಲಾಕಾರವಾಗಿ ಹಿಂದಿನಿಂದ ಬಲಕಿವಿಗೆ ಸಿಕ್ಕಿಸಿಕೊಂಡು ಪವಿತ್ರವಾಗಿ ಇರಿಸಿಕೊಳ್ಳತಕ್ಕದ್ದು.

ಈ ರೀತಿಯಾಗಿ ಅಭಿಮಂತ್ರಿಸಿದ ಯಜ್ಞೋಪವೀತವನ್ನು ಧರಿಸುವುದರಿಂದ ಆ ಯಜ್ಞೋಪವೀತದಲ್ಲಿ ಸನ್ನಿಹಿತರಾಗಿರುವ ದೇವತೆಗಳು ನಮ್ಮೊಡನೆ ಇದ್ದು ರಕ್ಷಿಸಲಿ ಎಂದು ಪ್ರಾರ್ಥಿಸಬೇಕು. ಅಷ್ಟೇ ಅಲ್ಲದೆ ಇದರ ಧಾರಣೆಯಿಂದ ನಮ್ಮಲ್ಲಿರುವ ಅಶುಚಿ ದೂರವಾಗಿ ಶ್ರೌತಸ್ಮಾರ್ತಕರ್ಮಾನುಷ್ಠಾನಗಳನ್ನು ಮಾಡಲು ಅರ್ಹತೆ ಹಾಗೂ ವೀರ್ಯವತ್ವವನ್ನು ತಂದುಕೊಡುವುದು. ತ್ರಿಕಾಲಸಂಧ್ಯಾವಂದನ, ಗಾಯತ್ರಿ ಅನುಷ್ಠಾನದಿಂದ ದೇವತಾ ಸಾನ್ನಿಧ್ಯ ತುಂಬುವುದು. ದರ್ಭೆ ಇಲ್ಲದ ಸಂದರ್ಭದಲ್ಲಿ ಯಜ್ಞೋಪವೀತದ ಪವಿತ್ರಗ್ರಂಥಿಯನ್ನು ಹಿಡಿದುಕೊಂಡು ಬ್ರಹ್ಮಯಜ್ಞ, ದೇವಋಷಿ, ಆಚಾರ್ಯ, ತರ್ಪಣಾದಿಗಳನ್ನು ಕೊಡುವುದರಿಂದ ದೇವತೆಗಳು ತೃಪ್ತರಾಗುತ್ತಾರೆ. ಶೂದ್ರಕೃತ ಯಜ್ಞೋಪವೀತ, ಅಂಗಡಿಯಿಂದ ತಂದ ಯಜ್ಞೋಪವೀತವು ಅಪವಿತ್ರ. ಅದರಲ್ಲಿ ದೇವತಾ ಸಾನ್ನಿಧ್ಯವಿರುವುದಿಲ್ಲ. ದೇವತಾಪ್ರತಿಷ್ಠೆ ಮಾಡಿದರೂ ಅಪ್ರಯೋಜಕವಾಗುವುದು. ಅಂತಹ ಯಜ್ಞೋಪವೀತಧಾರಣೆ ಅದು ಕೇವಲ ತಂತುಮಾತ್ರ ಧಾರಣೆಯಾಗುವುದು.ಆದುದರಿಂದ ಸರ್ವರೂ ಇದರ ಮಹತ್ತ್ವವನ್ನು ಜ್ಞಾಪಕದಲ್ಲಿಟ್ಟುಕೊಂಡು ಅದರ ಉದ್ದೇಶವನ್ನು ಸಂಪೂರ್ಣವಾಗಿ ನೆರವೇರಿಸತಕ್ಕದ್ದು.

ಯಜ್ಞೋಪವೀತವನ್ನು ಕುತ್ತಿಗೆಯಿಂದ ತೆಗೆದು ತೊಳೆಯಬಾರದು. ಅದರಲ್ಲಿ ಗುಗ್ಗಿ ಕಡ್ಡಿ, ಬೀಗದಕ್ಕೆ ಮುಂತಾದವುಗಳನ್ನು ಹಾಕಿಕೊಳ್ಳಬಾರದು. ಈಗಿನ ಕಾಲದಲ್ಲಿ ಸ್ಪರ್ಶಾಸ್ಪರ್ಶದೋಷ, ಭಕ್ಷ್ಯಾಭಕ್ಷಣದೋಷ, ರಜಸ್ವಲಾನಿಯಮೋಲ್ಲಂಘನ ಹಾಗೂ ಬೇಕರಿ-ಹೋಟೆಲು ಇತ್ಯಾದಿಗಳಲ್ಲಿ ಆಹಾರ ಸ್ವೀಕರಿಸುವುದರಿಂದ ಕರ್ಮಭ್ರಷ್ಟನಾಗುವನು. ಆದುದರಿಂದ ಯಾವುದೇ ದೇವತಾ ಸತ್ಕರ್ಮಾಚರಣೆಯ ಸಂದರ್ಭದಲ್ಲಿ ಮೊದಲು ಪಂಚಗವ್ಯಪ್ರಾಶನ, ಯಜ್ಞೋಪವೀತಧಾರಣ ಮಾಡಿಕೊಂಡು ಕರ್ಮಾರಂಭ ಮಾಡಬೇಕು.

**ಜಾತಾಶೌಚೇ ಮೃತಾಶೌಚೇ ಗತೇಮಾಸೇ ತೃತೀಯಕೇ ।**
**ಉಪಾಕರ್ಮಣಿ ಚೋತ್ಸರ್ಗೇ ಜೀರ್ಣತಂತುಂ ವಿಸರ್ಜಯೇತ್ ॥**

ಜಾತಾಶೌಚ-ಮೃತಾಶೌಚಶುದ್ಧಿಯ ದಿನಗಳಲ್ಲಿಯೂ, ಒಂದು ಸಲ ಹಾಕಿಕೊಂಡ ಯಜ್ಞೋಪವೀತಕ್ಕೆ ಮೂರು ಅಥವಾ ನಾಲ್ಕು ತಿಂಗಳನಂತರವೂ, ಉತ್ಸರ್ಜನ ಉಪಾಕರ್ಮದ ದಿವಸವೂ ಹೊಸ ಉಪವೀತಧಾರಣೆ ಮಾಡಬೇಕು. (ಈ ಎಲ್ಲ ವಿಷಯವನ್ನು ಯಜ್ಞಮಹೋದಧಿ ಪುಸ್ತಕದಿಂದ ಸಂಗ್ರಹಿಸಲಾಗಿದೆ).

★ ★ ★ ★

## ಯಜ್ಞೋಪವೀತ ಧಾರಣಾ ವಿಧಿ

(ದ್ವಿರಾಚಮ್ಯ, ಪ್ರಾಣಾನಾಯಮ್ಯ , ದೇಶಕಾಲಾದೀನುಚ್ಚಾರ್ಯ) ಶ್ರೌತಸ್ಮಾರ್ತ ಕರ್ಮಾನುಷ್ಠಾನಯೋಗ್ಯತಾ ಸಿದ್ಧ್ಯರ್ಥಂ (ಜಾತಾಶೌಚ-ಮೃತಾಶೌಚಾದಿ-ಶುದ್ಧ್ಯರ್ಥಂ) ಯಜ್ಞೋಪವೀತಧಾರಣಮಹಂ ಕರಿಷ್ಯೇ ॥ (ಇತಿ ಸಂಕಲ್ಪ್ಯ ದೇವಾರ್ಪಿತಮ್ ಉಪವೀತಂ ಗೃಹೀತ್ವಾ ದಶವಾರಂ ಗಾಯತ್ರೀಂ ಜಪೇತ್) ತದಂಗತಯಾ ಉಪವೀತಸಂಸ್ಕಾರಂ ಕರಿಷ್ಯೇ ॥ (ಸ್ವಪುರತಃ ಚತುರಸ್ರಮಂಡಲಂ ಕೃತ್ವಾ ।)

**ಓಂ ಸ್ಯೋನಾ ಪೃಥಿವೀ ಭವಾನೃಕ್ಷರಾ ನಿವೇಶನೀ । ಯಚ್ಛಾ ನಃ ಶರ್ಮ ಸಪ್ರಥಾಃ॥**

(ಇತಿ ಮಂತ್ರೇಣ ಧಾರಣೀಯಮ್ ಉಪವೀತಂ ಭೂಮೌ ಮಂಡಲೋಪರಿ ನಿಕ್ಷಿಪ್ಯ)

ಬ್ರಹ್ಮಜ್ಞಾನಂ ಗೌತಮೋ ವಾಸುದೇವಸ್ತ್ರಿಷ್ಟುಪ್ । ಸೂತ್ರಕರಣೇ ವಿನಿಯೋಗಃ ॥

**ಓಂ ಬ್ರಹ್ಮ ಜಜ್ಞಾನಂ ಪ್ರಥಮಂ ಪುರಸ್ತಾದ್ವಿ ಸೀಮತಃ ಸುರುಚೋ ವೇನ ಆವಃ। ಸಬುಧ್ನ್ಯಾ ಉಪಮಾ ಅಸ್ಯ ವಿಷ್ಠಾಃ ಸತಶ್ಚ ಯೋನಿಮಸತಶ್ಚ ವಿವಃ ॥**

ಇದಂ ವಿಷ್ಣುಃ ಕಾಣ್ವೋ ಮೇಧಾತಿಥಿಃ ವಿಷ್ಣುರ್ಗಾಯತ್ರೀ । ಸೂತ್ರಿತ್ರಿಗುಣೀಕರಣೇ ವಿನಿಯೋಗಃ ॥

**ಓಮ್ ಇದಂ ವಿಷ್ಣುರ್ವಿ ಚಕ್ರಮೇ ತ್ರೇಧಾ ನಿ ದಧೇ ಪದಮ್ । ಸಮೂಢಮಸ್ಯ ಪಾಂಸುರೇ ॥**

ತ್ರ್ಯಂಬಕಂ ಮೈತ್ರಾವರುಣಿರ್ವಸಿಷ್ಠೋ ರುದ್ರೋನುಷ್ಟುಪ್ । ಗ್ರಂಥಿಬಂಧನೇ ವಿನಿಯೋಗಃ ॥

**ಓಂ ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಮ್ । ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥**

## ಅಭಿಮಂತ್ರಣ

ಆಪೋಹಿಷ್ಠೇತಿ ತೃಚಸ್ಯಾಂಬರೀಷಃ ಸಿಂಧುದ್ವೀಪ ಆಪೋ ಗಾಯತ್ರೀ । ಅಭಿಮಂತ್ರಣೇ ವಿನಿಯೋಗಃ ॥

**ಓಮ್ ಆಪೋ ಹಿ ಷ್ಠಾ .................. ಜನಯಥಾ ಚ ನಃ ॥**

**ಓಂ ಹಿರಣ್ಯವರ್ಣಾಃ ಶುಚಯಃ ಪಾವಕಾ ಯಾಸು ಜಾತಃ ಕಶ್ಯಪೋ ಯಾಸ್ವಿಂದ್ರಃ। ಅಗ್ನಿಂ ಯಾ ಗರ್ಭಂ ದಧಿರೇ ವಿರೂಪಾಸ್ತಾ ನ ಆಪಃ ಶꣳಸ್ಯೋನಾ ಭವಂತು ॥ ಪವಮಾನಃ ಸುವರ್ಜನಃ । ಪವಿತ್ರೇಣ ವಿಚರ್ಷಣಿಃ । ಯಃ ಪೋತಾ ಸ ಪುನಾತು ಮಾ । ಪುನಂತು ಮಾ ದೇವಜನಾಃ । ಪುನಂತು ಮನವೋ ಧಿಯಾ । ಪುನಂತು ವಿಶ್ವ ಆಯವಃ । ಜಾತವೇದಃ ಪವಿತ್ರವತ್ ॥**

ಅಸುನೀತೇ ಇತಿ ಮಂತ್ರಸ್ಯ ಬಂಧಾದ್ವಯ ಋಷಯಃ । ತ್ರಿಷ್ಟುಪ್ ಛಂದಃ । ಅಸುನೀತಿರ್ದೇವತಾ । ಪ್ರಾಣಪ್ರತಿಷ್ಠಾಪನೇ ವಿನಿಯೋಗಃ ॥

**ಓಮ್ ಅಸುನೀತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣಮಿಹ ನೋ ಧೇಹಿ ಭೋಗಮ್॥ ಜ್ಯೋಕ್ ಪಶ್ಯೇಮ ಸೂರ್ಯಮುಚ್ಚರಂತಮನುಮತೇ ಮೃಳಯಾ ನಃ ಸ್ವಸ್ತಿಃ ॥ ಓಮ್॥ ಓಂ ಪುನರ್ನೋ ಅಸುಂ ಪೃಥಿವೀ ದದಾತು ಪುನರ್ದ್ಯೌರ್ದೇವೀ ಪುನರಂತರಿಕ್ಷಮ್। ಪುನರ್ನಃ ಸೋಮಸ್ತನ್ವಂ ದದಾತು ಪುನಃ ಪೂಷಾ ಪಥ್ಯಾꣳ ಯಾ ಸ್ವಸ್ತಿ ॥ ಓಮ್ ॥**

(ಉಪವೀತವನ್ನು ಮುಟ್ಟಿಕೊಂಡು 10 ಸಲ ಗಾಯತ್ರಿಯಿಂದ ಅಭಿಮಂತ್ರಿಸಿ)

## ಆವಾಹನ

ಬ್ರಹ್ಮಣೇ ನಮಃ - ಸೂತ್ರೋತ್ಪಾದಕಂ ಬ್ರಹ್ಮಾಣಮಾವಾಹಯಾಮಿ ।

ವಿಷ್ಣವೇ ನಮಃ - ತ್ರಿಗುಣೀಕರ್ತಾರಂ ವಿಷ್ಣುಮಾವಾಹಯಾಮಿ ।

ರುದ್ರಾಯ ನಮಃ-ತದ್ಗ್ರಂಥಿದಾತಾರಂ ರುದ್ರಮಾವಾಹಯಾಮಿ ।

ಓಂಕಾರಾಯ ನಮಃ-ಪ್ರಥಮತಂತೌ ಓಂಕಾರವಾಚ್ಯಮನಿರುದ್ಧಮಾವಾಹಯಾಮಿ ।
ಅಗ್ನಯೇ ನಮಃ - ದ್ವಿತೀಯತಂತೌ ಅಗ್ನಿಮಾವಾಹಯಾಮಿ ।
ನಾಗಾಯ ನಮಃ - ತೃತೀಯತಂತೌ ನಾಗಮಾವಾಹಯಾಮಿ ।
ಸೋಮಾಯ ನಮಃ - ಚತುರ್ಥತಂತೌ ಸೋಮಮಾವಾಹಯಾಮಿ ।
ಪಿತೃಭ್ಯೋ ನಮಃ - ಪಂಚಮತಂತೌ ಪಿತೄನ್ ಆವಾಹಯಾಮಿ ।
ಪ್ರಜಾಪತಯೇ ನಮಃ - ಷಷ್ಠತಂತೌ ಪ್ರಜಾಪತಿಮಾವಾಹಯಾಮಿ ।
ವಾಯವೇ ನಮಃ - ಸಪ್ತಮತಂತೌ ವಾಯುಮಾವಾಹಯಾಮಿ ।
ಸೂರ್ಯಾಯ ನಮಃ - ಅಷ್ಟಮತಂತೌ ಸೂರ್ಯಮಾವಾಹಯಾಮಿ ।
ವಿಶ್ವೇಭ್ಯೋ ದೇವೇಭ್ಯೋ ನಮಃ-ನವಮತಂತೌ ವಿಶ್ವಾನ್ ದೇವಾನ್ ಆವಾಹಯಾಮಿ।

(ಎಂದು ನವತಂತುದೇವತೆಗಳನ್ನು ಆವಾಹಿಸಿ, ಅರ್ಘ್ಯಾದಿಪುಷ್ಪಸಮರ್ಪಣಾಂತಪೂಜೆ ಮಾಡಿ 108 ಸಲ ಗಾಯತ್ರಿಯನ್ನು ಜಪಿಸಿ, ಧೂಪದೀಪನೈವೇದ್ಯಾದಿ ಸರ್ವೋಪಚಾರಗಳನ್ನು ಅರ್ಪಿಸಬೇಕು).

ಯಜ್ಞೋಪವೀತ ಸಹಜ ಬ್ರಹ್ಮಣೋ ವಿದುಷಾಂ ಪ್ರಿಯ ।
ಶ್ರೌತಸ್ಮಾರ್ತಾದಿಕಾನಾಂ ಚ ಕರ್ಮಣಾಮಧಿಕಾರದ ॥
ಮಮ ಬ್ರಾಹ್ಮಣ್ಯಸಿದ್ಧ್ಯರ್ಥಂ ವಹಾಮಿ ತ್ವಾಮತಂದ್ರಿತಃ ।
ಪಾವಿತ್ರ್ಯಂ ಬಲಮಾಯುಷ್ಯಂ ಶ್ರಿಯಾಂ ಕಾಂತಿಮರೋಗತಾಮ್ ।
ಹರಿತದ್ಭಕ್ತಸೇವಾಂ ಚ ಸದಾ ಕುರು ಜಗತ್ಪ್ರಿಯ ॥

ಓಂ ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮ್॥ ಓಮ್ ॥ (ಇತಿ ಮಂತ್ರೇಣ ಉದ್ಧೃತ್ಯ)

**ಸೂರ್ಯದರ್ಶನ**

ಯಜ್ಞೋಪವೀತವನ್ನು ಸೂರ್ಯನಿಗೆ ತೋರಿಸಬೇಕು

ಓಮ್ ಉದ್ಯನ್ನದ್ಯ ಮಿತ್ರಮಹ ಆರೋಹನ್ನುತ್ತರಾಂ ದಿವಮ್ ॥ ಹೃದ್ರೋಗಂ ಮಮ ಸೂರ್ಯ ಹರಿಮಾಣಂ ಚ ನಾಶಯ ॥

ಓಮ್ ಉದ್ವಯಂ ತಮಸಸ್ಪರಿ ಜ್ಯೋತಿಷ್ಪಶ್ಯಂತ ಉತ್ತರಮ್ । ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಮ್ ॥ ಓಂ ॥

## ಯಜ್ಞೋಪವೀತಧಾರಣೆ

ಮಮ ಶ್ರೌತಸ್ಮಾರ್ತನಿತ್ಯಕರ್ಮಾನುಷ್ಠಾನಯೋಗ್ಯತಾಸಿದ್ಧ್ಯರ್ಥಂ ಯಜ್ಞೋಪವೀತಧಾರಣಮಹಂ ಕರಿಷ್ಯೇ ॥

**ಯಜ್ಞೋಪವೀತಮಿತಿ ಮಂತ್ರಸ್ಯ ಪರಬ್ರಹ್ಮ ಋಷಿಃ । ತ್ರಿಷ್ಟುಪ್ ಛಂದಃ । ಪರಮಾತ್ಮಾ ದೇವತಾ । ಯಜ್ಞೋಪವೀತಧಾರಣೇ ವಿನಿಯೋಗಃ ॥**

**ಓಂ ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ ಸಹಜಂ ಪುರಸ್ತಾತ್। ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತು ತೇಜಃ ॥**

ವಾಮನಮೂರ್ತಿಯನ್ನು ಸ್ಮರಿಸುತ್ತಾ ಮೊದಲು ಬಲದ ಕೈ ಮೇಲೆತ್ತಿ ಅನಂತರ ಕಂಠದಲ್ಲಿ ಧರಿಸಬೇಕು. ಆಚಮನ ಮಾಡಿ ಗೃಹಸ್ಥರು ಎರಡನೆಯ ಉಪವೀತವನ್ನು ಮಂತ್ರಪೂರ್ವಕ ಧರಿಸಿ.

**ಗಾಯತ್ರೀ ವೇದಮಾತಾಽಸಿ ಸೂತ್ರರೂಪೇಣ ತಿಷ್ಠಸಿ ।**
**ಪೂರ್ವಸೂತ್ರಗತಂ ತೇಜೋ ನೂತನೇ ಸ್ಥಾಪಯಾಮ್ಯಹಮ್ ॥**

ಎಂದು ಪ್ರಾರ್ಥಿಸಿ, ಎರಡೂ ಉಪವೀತವನ್ನು ಹಿಡಿದುಕೊಂಡು, ಹತ್ತು ಗಾಯತ್ರಿಯನ್ನು ಜಪಿಸುವುದು.

**ಉಪವೀತಂ ಭಿನ್ನತಂತುಂ ಜೀರ್ಣಂ ಕಶ್ಮಲದೂಷಿತಮ್ ।**
**ವಿಸೃಜಾಮಿ ಜಲೇ ಬ್ರಹ್ಮವರ್ಚೋ ದೀರ್ಘಾಯುರಸ್ತು ಮೇ ॥**

ಎಂದು ಜೀರ್ಣಯಜ್ಞೋಪವೀತವನ್ನು ಜಲದಲ್ಲಿ ವಿಸರ್ಜಿಸಿ, ಆಚಮನ ಮಾಡಬೇಕು.

## ಸಮಾಪನಮ್

**ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋಪೂಜಾಕ್ರಿಯಾದಿಷು ।**
**ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥**
**ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।**
**ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥**

**ಅನೇನ ಯಜ್ಞೋಪವೀತಧಾರಣೇನ ಅಸ್ಮದ್ಗುರ್ವಂತರ್ಗತ ಭಾರತೀರಮಣಮುಖ್ಯ ಪ್ರಾಣಾಂತರ್ಗತಃ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಮ್ ॥ ಶ್ರೀಕೃಷ್ಣಾರ್ಪಣಮಸ್ತು ॥**

★ ★ ★ ★ ★

ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।

ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ

ಅಚ್ಯುತಾನಂತಗೋವಿಂದೇಭ್ಯೋ ನಮಃ ॥

ಅಸ್ಮದ್ಗುರ್ವಂತರ್ಗತ ಶ್ರೀಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕರಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಈ ಕೃತಿಕುಸುಮವು ಸಮರ್ಪಿತವಾಗಿದೆ.

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★ ★ ★

ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ



ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),

ಗಿರಿನಗರ, ಬೆಂಗಳೂರು - 560 085

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಜ್ಯೇಷ್ಠಮಾಸ
# ಆಷಾಢಮಾಸ

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯ ಸಿದ್ಧಾಂತ ಪ್ರತಿಷ್ಠಾನ (ರಿ),
ಬೆಂಗಳೂರು

''ಜ್ಯೇಷ್ಠಮಾಸ-ಆಷಾಢಮಾಸ'' ಶಾರ್ವರಿ ॥ ಶ್ರಾವಣ ॥ ಶುದ್ಧ ಹುಣ್ಣಿಮೆ, (ದಿನಾಂಕ : 3-8-2020) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಶ್ರೀಶ್ರೀವಿದ್ಯಾಧೀಶತೀರ್ಥಶ್ರೀಪಾದರ ಕರಕಮಲಗಳ ಮೂಲಕ ಭಾರತೀರಮಣಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : 2020



ಪ್ರಕಾಶಕರು : ಜಗದ್ಗುರು ಶ್ರೀಮಧ್ವಾಚಾರ್ಯ ಸಿದ್ಧಾಂತ ಪ್ರತಿಷ್ಠಾನ (ರಿ)
4171, 2ನೇ ಮೇನ್, ಗಿರಿನಗರ, ಸೀತಾಸರ್ಕಲ್ ಹತ್ತಿರ, ಬೆಂಗಳೂರು-85
ದೂರವಾಣಿ : 9141495120

ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಪ್ರತಿಗಳು : 1000
ಪುಟಗಳು : vi + 126

ಅಕ್ಷರಜೋಡಣೆ : ಸುಬ್ಬಣ್ಣ ಕೆಂಪದಾಳಿಹಳ್ಳಿ ,
9141311280

ಮುಖಪುಟ – ಶ್ರೀವಿಶ್ವಾತ್ಮಾ, ಕಾರ್ತಿಕಜೋಷಿ.

ಮುದ್ರಣ :
ಮುಕ್ತಿಪಥ ಮುದ್ರಣಾಲಯ,
(ಪಿ. ಮಂಜುನಾಥ)
ಬೆಂಗಳೂರು.



ನಮ್ಮ ತಾಯಿ ದಿ|| ಕೆ. ಉಷಾ ವೆಂಕೋಬರಾವ್ ಜನ್ಮ ನೀಡಿ ಸಾರ್ಥಕ ಜೀವನ ನಡೆಸಲು ಕಾರಣಕರ್ತರಾಗಿದ್ದಾರೆ. ಇವರ ಅನುಗ್ರಹಕ್ಕಾಗಿ ಈ ಜ್ಞಾನಸೇವೆಯನ್ನು ನಡೆಸಿರುತ್ತೇವೆ. ಇದರಿಂದ ಪ್ರಾಪ್ತವಾಗುವ ಅಪಾರ ಪುಣ್ಯರಾಶಿಯು ಅವರಿಗೆ ತಲುಪಿ, ಶ್ರೀಹರಿವಾಯುಗಳು ನಮ್ಮನ್ನು ಹರಸಲಿ ಎಂದು ಪ್ರಾರ್ಥಿಸುತ್ತೇವೆ.

ಕಲ್ಲಕುರ್ಚಿ ಫ್ಯಾಮಿಲಿ. ಬೋಸ್ಟನ್. ಯು.ಎಸ್.ಎ.

---

## ವಿಷಯಾನುಕ್ರಮಣಿಕೆ

ಜ್ಯೇಷ್ಠಮಾಸ ಶುಕ್ಲಪಕ್ಷ

# ಮುನ್ನುಡಿ

ಜ್ಯೇಷ್ಠಮಾಸ ಹಾಗೂ ಆಷಾಢಮಾಸಕ್ಕೆ ಸಂಬಂಧಪಟ್ಟ ಎಲ್ಲ ವ್ರತಗಳನ್ನು ಹರಿದಿನಗಳನ್ನು ಗುರುಗಳ ದಿನವನ್ನು ಈ ಪುಸ್ತಕದಲ್ಲಿ ಸಂಗ್ರಹಿಸಲಾಗಿದೆ. ಗಂಗಾ-ಪೂಜಾವಿಧಾನ, ವೃಷಭಪೂಜಾವಿಧಾನಗಳನ್ನು ಇಲ್ಲಿ ಕಾಣಬಹುದು. ಹಾಗೂ ಚಾತುರ್ಮಾಸ್ಯದ ಬಗ್ಗೆ ತಪ್ತಮುದ್ರಾಧಾರಣೆಯ ಬಗ್ಗೆ ವಿಶೇಷವಿಚಾರಗಳನ್ನು ಕೂಡ ಗಮನಿಸಬಹುದು. ಗುರುಚರಿತ್ರೆ ಎಂಬ ಪುಸ್ತಕದಿಂದ ಗುರುಗಳ ಆರಾಧನೆಗಳನ್ನು ಸಂಗ್ರಹಿಸಲಾಗಿದೆ. ಕೃಷ್ಣಾಚಾರ್ಯರ ಸ್ಮೃತಿಮುಕ್ತಾವಲೀ ಗ್ರಂಥದಿಂದ ಚಾತು-ರ್ಮಾಸ್ಯದ ವಿಧಾನವನ್ನು, ಏಕಾದಶೀಮಹಿಮೆಯನ್ನು ಮೈಸೂರು ರಾಜರಿಂದ ಪ್ರಕಟನೆಗೊಂಡ ಪದ್ಮಪುರಾಣದ ಪುಸ್ತಕದಿಂದ, ಉಳಿದ ವ್ರತಗಳ ಬಗ್ಗೆ ಅನೇಕ ಸಂಬಂಧಪಟ್ಟ ಪುಸ್ತಕಗಳಿಂದ ಹಾಗೂ ಪಂಚಾಂಗಗಳಿಂದ ವಿಷಯಗಳನ್ನು ಸಂಗ್ರಹಿಸಿ ಇಲ್ಲಿ ನೀಡಲಾಗಿದೆ. ಈ ವಿಷಯದಲ್ಲಿ ಬಹಳ ಪರಿಶ್ರಮವನ್ನು ಹೊಂದಿದ ವಿದ್ವಾನ್ ಸಿ.ಆರ್. ಪ್ರದೀಪಸಿಂಹಾಚಾರ್ಯರಿಗೆ ಅನಂತ ಕೃತಜ್ಞತೆಗಳು. ಈ ಪುಸ್ತಕದ ಡಿ.ಟಿ.ಪಿ. ಕಾರ್ಯದಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡು ಉತ್ತಮಸಲಹೆಗಳನ್ನು ನೀಡಿ ಅನೇಕ ವಿಷಯಗಳ ಯಥಾರ್ಥತೆಗೆ ಕಾರಣರಾದ ಸುಬ್ಬಣ್ಣ.ಕೆಂಪದಾಳಿಹಳ್ಳಿ ಇವರಿಗೂ ಅನಂತ ಅಭಿನಂದನೆಗಳು.

ಶ್ರೀ ಕಲ್ಲಕುರ್ಚಿ ಫ್ಯಾಮಿಲಿ, ಬೋಸ್ಟನ್‌ರವರು ಈ ಪುಸ್ತಕದ ಪ್ರಕಟನೆಯ ಸೇವೆ ಮಾಡಿರುತ್ತಾರೆ. ಅವರ ಅಪೇಕ್ಷೆಯಂತೆ ಶ್ರೀಹರಿವಾಯುಗುರುಗಳ ಅನುಗ್ರಹವು ಅವರ ದಿ || ಮಾತೃಶ್ರೀ ಉಷಾ ಕೆ. ವೆಂಕೋಬರಾವ್‌ರವರಿಗೆ ದೊರಕಲಿ ಹಾಗೂ ಕಲ್ಲಕುರ್ಚಿ ಫ್ಯಾಮಿಲಿಯವರಿಗೆ ಅವರ ಮಾತೃಶ್ರೀಯವರ ಹಾಗೂ ಶ್ರೀಹರಿಯ ಅನುಗ್ರಹವು ದೊರೆಯಲಿ ಎಂದು ಈ ಮೂಲಕ ಶ್ರೀಹರಿಯಲ್ಲಿ ಪ್ರಾರ್ಥಿಸುತ್ತೇನೆ. ಇದರ ಸದುಪಯೋಗವನ್ನು ಎಲ್ಲಾ ಹರಿಭಕ್ತರು ಪಡೆದುಕೊಳ್ಳಬೇಕೆಂದು ಕೇಳಿ-ಕೊಳ್ಳುತ್ತೇನೆ.

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ ॥

# ಜ್ಯೇಷ್ಠ ಮಾಸ

ಮಾಸನಿಯಾಮಕಶ್ರೀರಮಾತ್ರಿವಿಕ್ರಮಾಯ ನಮಃ

## ಜ್ಯೇಷ್ಠ॥ ಶುದ್ಧ॥ ಪ್ರತಿಪತ್

ಕರಿದಿನ – ಅಮಾವಾಸ್ಯೆಯ ಮರುದಿವಸವಾದ ಇಂದು ಯಾವುದೇ ಶುಭ-ಕಾರ್ಯಗಳನ್ನು ಮಾಡಬಾರದು. ಆದ್ದರಿಂದಲೇ ಕರಿದಿನ ಎಂದು ಇದನ್ನು ಕರೆಯುತ್ತಾರೆ.

ಕರವೀರವ್ರತ – ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ಪ್ರಥಮೇಽಹ್ನಿ ದಿನೋದಯೇ । ದೇವೋದ್ಯಾನಭವಂ ಹೃದ್ಯಂ ಕರವೀರಂ ಸಮುರ್ಚಯೇತ್ ॥ ಜ್ಯೇಷ್ಠಮಾಸದ ಶುಕ್ಲಪಕ್ಷದ ಪ್ರತಿಪತ್ ದಿವಸ ಸೂರ್ಯೋದಯವಾದಾಗ ಕಣಿಗಲೆ ಗಿಡವನ್ನು ಪೂಜಿಸಬೇಕು. ಈ ಗಿಡದಲ್ಲಿ ಸೂರ್ಯಾಂತರ್ಗತನಾದ ನಾರಾಯಣನನ್ನು ದುರ್ಗಾದೇವಿಯ ಅಂತರ್ಗತನಾದ ನರಸಿಂಹದೇವರನ್ನು ಆವಾಹನೆ ಮಾಡಿ ಪೂಜೆ ಮಾಡಬೇಕು. ಸ್ತ್ರೀಯರು ಕರವೀರವೃಕ್ಷಕ್ಕೆ ದಾರವನ್ನು ಸುತ್ತಿ, ಅರಿಶಿನ ಕುಂಕುಮ ಗೆಜ್ಜೆವಸ್ತ್ರಗಳಿಂದ ಪೂಜಿಸಿ, ಮೊಳಕೆ ಬಂದಿರುವ ಸಪ್ತಧಾನ್ಯಗಳನ್ನು ಕಿತ್ತಲೆ ಹಣ್ಣು, ಸೀಬೆಹಣ್ಣುಗಳಿಂದ ನೈವೇದ್ಯವನ್ನು ಮಾಡಿ, ನಾಲ್ಕು ಪ್ರದಕ್ಷಿಣೆ ನಮಸ್ಕಾರವನ್ನು ಹಾಕಿ ಪ್ರಾರ್ಥನೆ ಮಾಡಬೇಕು – ಕರವೀರ ರುಷಾವಾಸ ನಮಸ್ತೇ ಭಾನುವಲ್ಲಭ । ಮೌಲಿಮಂಡನದುರ್ಗಾದಿದೇವಾನಾಂ ಸತತಂ ಪ್ರಿಯ ॥ ಹೀಗೆ ಕಣಿಗಲೆ ಗಿಡವನ್ನು ಪೂಜಿಸುವುದರಿಂದ ಪತಿಗೆ ಆಯುಷ್ಯವು ಅಭಿವೃದ್ಧಿಯಾಗುತ್ತದೆ. ಪಾತಿವ್ರತ್ಯವು ಹೆಚ್ಚುತ್ತದೆ. ಎಲ್ಲಾ ಅಭೀಷ್ಟಗಳೂ ಈಡೇರುತ್ತವೆ. ದಿನನಿತ್ಯದ ತುಲಸೀ ಪೂಜೆ ಮಾಡಿದ ಮೇಲೆ ಇಂದು ಹೀಗೆ ಕರವೀರಗಿಡದ ಪೂಜೆಯನ್ನು ಮಾಡಬೇಕು.

ದಶಹರಾವ್ರತಪ್ರಾರಂಭ – ಇಂದಿನಿಂದ ಹತ್ತುದಿವಸಗಳ ತನಕ ದಶಹರಾ ವ್ರತವನ್ನು ಆಚರಣೆ ಮಾಡಬೇಕು. – ಪ್ರತಿಪದ್ದಿನಮಾರಭ್ಯ ಯಾ ಶುಕ್ಲದಶಮೀ ಭವೇತ್ । ತಾವದ್ವ್ರತಂ ಪ್ರಕರ್ತವ್ಯಂ ಪುಣ್ಯಂ ದಶಹರಾಭಿಧಮ್ ॥ ಜ್ಯೇಷ್ಠಮಾಸದ

ಶುಕ್ಲ ಪ್ರತಿಪತ್ ದಿವಸದಿಂದ ಪ್ರಾರಂಭಮಾಡಿ ದಶಮಿಯವರೆಗೆ ಯಾವ ವ್ರತ-ವನ್ನು ಮಾಡಲಾಗುತ್ತದೋ ಅದನ್ನೇ ದಶಹರಾವ್ರತ ಎಂಬುದಾಗಿ ಕರೆಯುತ್ತಾರೆ. ಗಂಗಾದೇವಿಯನ್ನು ಕುರಿತು ಮಾಡುವ ಈ ವ್ರತವು ಅತ್ಯಂತ ಶ್ರೇಷ್ಠವಾಗಿದೆ. ಜ್ಯೇಷ್ಠ ಶುಕ್ಲ ದಶಮಿ ಗಂಗಾವತಾರವಾದ ದಿನ. ಈ ದಿನ ಗಂಗೆಯ ಅವತಾರವಿದ್ದಾಗ ಹತ್ತು ಯೋಗಗಳಿದ್ದವು. (1) ಜ್ಯೇಷ್ಠಮಾಸ, (2) ಶುಕ್ಲಪಕ್ಷ, (3) ದಶಮೀ, (4) ಬುಧವಾರ, (5) ಹಸ್ತ ನಕ್ಷತ್ರ , (6) ವ್ಯತೀಪಾತಯೋಗ, (7) ಗರಿಜಾಕರಣ, (8) ಆನಂದ ಯೋಗ (ಬುಧವಾರ ಮತ್ತು ಹಸ್ತ ನಕ್ಷತ್ರ), (9) ಕನ್ಯಾರಾಶಿಯಲ್ಲಿ ಚಂದ್ರ , (10) ವೃಷಭ ರಾಶಿಯಲ್ಲಿ ಸೂರ್ಯ ಇಷ್ಟರ ಮಧ್ಯೆ ದಶಮೀ ಹಾಗೂ ವ್ಯತೀಪಾತಗಳು ಮುಖ್ಯ. ಪೂರ್ವಾಹ್ನದಲ್ಲಿ ಯಾವತ್ತು ಕೆಲವು ಯೋಗಗಳು ಇರುತ್ತವೆಯೋ ಅಂದು ದಶಹರಾ ವ್ರತವನ್ನು ಮಾಡಬೇಕು. ಎರಡು ದಿನ ಪೂರ್ವಾಹ್ನದಲ್ಲಿ ದಶಮೀ ಇದ್ದರೆ ಯಾವ ದಿನ ಹೆಚ್ಚು ಯೋಗಗಳಿವೆಯೋ ಅಂದು ಆಚರಿಸಬೇಕು. ಅಧಿಕ ಜ್ಯೇಷ್ಠ ಮಾಸಬಂದರೆ ಅಧಿಕಮಾಸದಲ್ಲಿಯೇ ಈ ವ್ರತವನ್ನು ಮಾಡಬೇಕು. ಇಂದು ಕಾಶೀನಿವಾಸಿಗಳು ದಶಾಶ್ವಮೇಧಘಾಟಿನಲ್ಲಿ ಸ್ನಾನ ಮಾಡಿ ಗಂಗಾಪೂಜೆಯನ್ನು ಮಾಡಬೇಕು. ಇತರರು ಬೇರೆ ನದಿಯಲ್ಲಿ ಸ್ನಾನ ಮಾಡಿ ಗಂಗಾಪೂಜೆಯನ್ನು ಮಾಡಬೇಕು.

ದರ್ಶೇಷ್ಟಿ– ಅಮಾವಾಸ್ಯೆಯ ಮರುದಿವಸವೆನಿಸಿದ ಇಂದು ದರ್ಶೇಷ್ಟಿಯನ್ನು ಆಚರಿಸಬೇಕು. ನಿತ್ಯವೂ ಔಪಾಸನೆ ಮಾಡುವ ಪ್ರತಿಯೊಬ್ಬ ಗೃಹಸ್ಥರೂ ತಪ್ಪದೇ ಇಂದು ಸ್ಥಾಲೀಪಾಕಹೋಮವನ್ನು ಮಾಡಬೇಕು.

## ಜ್ಯೇಷ್ಠ॥ ಶುದ್ಧ॥ ದ್ವಿತೀಯಾ

ಕಲ್ಪಾದಿ – ಸಮಾನ ಎಂಬ ಕಲ್ಪವು ಪ್ರಾರಂಭವಾದ ದಿವಸವಾಗಿದೆ. ತಥಾ ಶುಕ್ಲದ್ವಿತೀಯಾಯಾಂ ಅಪರಾಹ್ಣೇ ದ್ವಿಜೋತ್ತಮಾಃ । ಸಮಾನೋ ನಾಮ ವಿಖ್ಯಾತೋ ಕಲ್ಪಃ ಪ್ರಾದುರಭೂತ್ ಕಿಲ ॥ ಎಂಬ ಭವಿಷ್ಯಪುರಾಣದ ಮಾತಿನಂತೆ ಕಲ್ಪಾದಿಯಾದ ಕಾರಣ ಇಂದು ಸ್ನಾನದಾನ ತರ್ಪಣಾದಿಗಳನ್ನು ಆಚರಿಸುವುದರಿಂದ ಅಪಾರಪುಣ್ಯವು ಪ್ರಾಪ್ತವಾಗುತ್ತದೆ.

**ಭಾಸ್ಕರಪೂಜೆ** – ಜ್ಯೇಷ್ಠಶುಕ್ಲದ್ವಿತೀಯಾಯಾಂ ಭಾಸ್ಕರಂ ಭುವನಾಧಿಪಮ್ । ಭೋಜಯಿತ್ವಾ ಸಮಭ್ಯರ್ಚ್ಯ ಭಾಸ್ಕರಂ ಲೋಕಮಾಪ್ನುಯಾತ್ ॥ ಜ್ಯೇಷ್ಠಮಾಸದ ಶುಕ್ಲಪಕ್ಷದ ದ್ವಿತೀಯಾ ದಿವಸ ಭಾಸ್ಕರನನ್ನು ವಿಶೇಷವಾಗಿ ಪೂಜೆ ಮಾಡಬೇಕು. ಬ್ರಾಹ್ಮಣರನ್ನು ಕರೆದು ಭಾಸ್ಕರನ ಸಂಪ್ರೀತಿಗಾಗಿ ಊಟೋಪಚಾರಗಳನ್ನು ನಡೆಸಬೇಕು. ಇದರಿಂದ ಸೂರ್ಯಲೋಕವನ್ನು ಪಡೆಯುತ್ತಾನೆ. ಘೃಣಿಃ ಸೂರ್ಯ ಆದಿತ್ಯಃ ಎಂಬ ಮಂತ್ರವನ್ನು ಅರುಣಪ್ರಶ್ನೆಯನ್ನು ವಿಶೇಷವಾಗಿ ಪಾರಾಯಣ ಮಾಡಬೇಕು. 108 ಗಾಯತ್ರೀಜಪವನ್ನು ಅವಶ್ಯವಾಗಿ ಸೂರ್ಯೋದಯ ಕಾಲ-ದಲ್ಲಿ ನಿಂತು ಆಚರಿಸಬೇಕು.

**ಶ್ರೀಸೂರೀಂದ್ರತೀರ್ಥರ ಆರಾಧನೆ(ರಾಯರಮಠ)** – ರಾಘವೇಂದ್ರಾ-ರ್ಪಿತಧಿಯೇ ಯೋಗೀಂದ್ರಾರ್ಪಿತಸೂನವೇ । ಶ್ರೀಮತ್ಸೂರೀಂದ್ರಯತಯೇ ಸುತಪೋ ನಿಧಯೇ ನಮಃ॥ ಯೋಗೀಂದ್ರರ ತರುವಾಯ ಅವರ ಪೂರ್ವಾಶ್ರಮದ ಅಣ್ಣಂದಿರಾದ ವಾಸುದೇವಾಚಾರ್ಯರಿಗೆ ಆಶ್ರಮವಾಯಿತು. ಇವರೂ ಗುರು-ರಾಜರ ಸಾಕ್ಷಾತ್ ಶಿಷ್ಯರು ಮತ್ತು ಗುರುರಾಜರ ಏಕಾಂತ ಭಕ್ತರು. ಇವರು ಆಶ್ರಮ ಆದಮೇಲೆ ನಾಲ್ಕು ವರ್ಷ ಕಾಲ ಮಾತ್ರವಿದ್ದು ಮಧುರೈಯಲ್ಲಿ ಅಂಗಿರಸ ಸಂವತ್ಸರದ ಜ್ಯೇಷ್ಠ ಶುದ್ಧ ಬಿದಿಗೆ ಹರಿಪಾದ ಸೇರಿದರು.

**ಶ್ರೀಸತ್ಯಸಂಧತೀರ್ಥರ ಆರಾಧನೆ** – ಶ್ರೀಸತ್ಯಸಂಧತೀರ್ಥರು ಉತ್ತರಾದಿ ಮಠ. ಪೂರ್ವಾಶ್ರಮದಲ್ಲಿ ಇವರ ಹೆಸರು ಶ್ರೀರಾಘವೇಂದ್ರಾಚಾರ್ಯ ಎಂದು. ಶ್ರೀಸತ್ಯಬೋಧರು ಇವರ ಆಶ್ರಮಗುರುಗಳು. ಶ್ರೀಸತ್ಯವರತೀರ್ಥರು ಇವರ ಉತ್ತರಾಧಿಕಾರಿಗಳು. ಮಹಿಷಿಯಲ್ಲಿ ಇವರ ವೃಂದಾವನ ಇದೆ. ಕ್ರಿ .1984ರಿಂದ 1794ರ ತನಕ ಪೀಠಾಧಿಪತಿಗಳಾಗಿದ್ದರು. ಇವರಿಗೊಮ್ಮೆ ರಾಮದೇವರಿಗೆ ಏರಿಸಲು ಹೂವು ಇಲ್ಲದಿದ್ದಾಗ ಅಪರಿಚಿತರೊಬ್ಬರು ಬಂದು ಕಮಲಪುಷ್ಪಗಳನ್ನು ನೀಡಿ ಅದೃಶ್ಯರಾದರು.

## ಜ್ಯೇಷ್ಠ॥ ಶುದ್ಧ॥ ತೃತೀಯಾ॥

**ರಂಭಾವ್ರತ** – ಅಥ ಜ್ಯೇಷ್ಠತೃತೀಯಾ ತು ಶುಕ್ಲಾರಂಭೇಽತಿ ನಾಮತಃ। ತಸ್ಯಾಂ

ಸಭಾರ್ಯಂ ವಿಧಿವತ್ ಪೂಜಯೇತ್ ಬ್ರಾಹ್ಮಣೋತ್ತಮಮ್ ॥ ಜ್ಯೇಷ್ಠಮಾಸದ ಶುಕ್ಲಪಕ್ಷದ ತೃತೀಯಾ ದಿವಸ ರಂಭಾವ್ರತವನ್ನು ಸ್ತ್ರೀಯರು ಆಚರಿಸಬೇಕು. ಹಾಗೂ ದಂಪತಿಗಳಿಗೆ ವಿಧಿಪ್ರಕಾರವಾಗಿ ಪೂಜೆಯನ್ನು ಮಾಡಬೇಕು. ರಂಭಾ ಎಂದರೆ ಬಾಳೆಯ ಗಿಡ ಎಂದರ್ಥ. ಸಾವಿತ್ರೀದೇವಿಯನ್ನು ಬಾಳೆಯಗಿಡದಲ್ಲಿ ಇಂದು ಪೂಜಿಸಬೇಕು. ಆಗ ಸಂತಾನಸೌಭಾಗ್ಯಗಳನ್ನು ಸಾವಿತ್ರೀದೇವಿಯು ಅನು-ಗ್ರಹಿಸುತ್ತಾಳೆ. ರಂಭಾವ್ರತಮಿದಂ ದೇವಿ ಯೇಽರ್ಚಯಂತಿ ಶುಭಾನನೇ । ತಾಸಾಂ ಅಕ್ಷಯ್ಯತಾಮೇತಿ ಸೌಭಾಗ್ಯಸುಖಸಂಪದಾ ॥ ಯಾರು ರಂಭಾವ್ರತವನ್ನು ಮಾಡು-ತ್ತಾರೋ ಅವರು ಅಕ್ಷಯಫಲವನ್ನು ಹೊಂದುತ್ತಾರೆ. ಸೌಭಾಗ್ಯವನ್ನು ಸುಖವನ್ನು ಪಡೆದುಕೊಳ್ಳುತ್ತಾರೆ. ಬಾಳೆಯ ಗಿಡದ ಬಳಿ ತೆರಳಿ, ಸರಸ್ವತೀದೇವಿಯನ್ನು ಆವಾಹನೆ ಮಾಡಿ, ಅರಿಶಿನ ಕುಂಕುಮ ಗೆಜ್ಜೆವಸ್ತ್ರ ಮೊದಲಾದವುಗಳಿಂದ ಪೂಜಿಸಿ, ಪುಷ್ಪಗಳಿಂದ ಅರ್ಚಿಸಿ, ಸಕ್ಕರೆ ಬೆಲ್ಲ ಹುರಿದಿರುವ ಎಳ್ಳು ಇವುಗಳಿಂದ ನೈವೇದ್ಯ-ವನ್ನು ಮಾಡಿ ಆರತಿಯನ್ನು ಬೆಳಗಿ ಸುಖಸೌಭಾಗ್ಯ ಸಂಪತ್ತುಗಳನ್ನು ಪ್ರಾರ್ಥಿಸಿ ನಮಿಸಬೇಕು. ಇದುವೇ ರಂಭಾವ್ರತ. ಸ್ತ್ರೀಯರು ಇದನ್ನು ಆಚರಿಸಬೇಕು. ತುಳಸಿಪೂಜೆ ಆದ ಬಳಿಕ ಬಾಳೆಯ ಗಿಡದ ಬಳಿ ತೆರಳಿ ಕೇವಲ ಐದು ನಿಮಿಷದಲ್ಲಿ ಮಾಡುವ ಕರ್ತವ್ಯವಿದು.

ವಾಮನಕಲ್ಪಾದಿ – ದ್ವಿತೀಯಾ ದಿವಸ ಸಮಾನ ಎಂಬ ಕಲ್ಪವು ಪ್ರಾರಂಭ-ವಾದರೆ ತೃತೀಯಾದ ಈ ದಿವಸದಲ್ಲಿ ವಾಮನ ಎಂಬ ಕಲ್ಪವು ಪ್ರಾರಂಭವಾಗಿದೆ. ಅಸ್ಯಾಮೇವ ದ್ವಿಜಶ್ರೇಷ್ಠ ಕಲ್ಪೋಽಭೂತ್ ವಾಮನಸ್ಯ ಚ । ದಧ್ಯೋದನಪ್ರದಾನೇನ ತುಷ್ಟೋ ಭವತಿ ವಾಮನಃ ॥ ಎಂಬ ಶ್ಲೋಕದಂತೆ ವಾಮನದೇವರಿಗೆ ದಧ್ಯನ್ನವನ್ನು ಸಮರ್ಪಿಸಿ ತರ್ಪಣಾದಿಗಳನ್ನು ನೀಡಿ ಅನ್ನಸಂತರ್ಪಣೆಯನ್ನು ಮಾಡಬೇಕು.

## ಜ್ಯೇಷ್ಠ ॥ ಶುದ್ಧ ॥ ಚತುರ್ಥೀ

ಉಮಾಪೂಜನವ್ರತ – ಅಸ್ಯಾಂ ಶುಕ್ಲಚತುರ್ಥ್ಯಾಂ ತು ಜಾತಾ ಪೂರ್ವಂ ಉಮಾ ಸತೀ । ತಸ್ಮಾತ್ ಸಾ ತತ್ರ ಸಂಪೂಜ್ಯಾ ಸ್ತ್ರೀಭಿಃ ಸೌಭಾಗ್ಯವೃದ್ಧಯೇ ॥ ಎಂಬ ಭವಿಷ್ಯಪುರಾಣದ ಮಾತಿನಂತೆ ಇಂದು ಹಿಮಾಲಯದಲ್ಲಿ ಮೇನಕಾ ದೇವಿಯಿಂದ ಪಾರ್ವತೀದೇವಿಯು ಅವತಾರ ಮಾಡಿದಳು. ಸಕಲಸ್ತ್ರೀಯರು ಉತ್ಸಾಹ ಉಲ್ಲಾಸ

-ಗಳಿಂದ ಇಂದು ಉಮಾಪೂಜೆಯನ್ನು ಆಚರಿಸಲೇಬೇಕು. ಪ್ರತಿನಿತ್ಯ- ಮಾಡುವ ಗೌರೀಪೂಜೆಯನ್ನೇ ವಿಸ್ತಾರವಾಗಿ ಆಚರಿಸಿ ಅವಳ ಅನುಗ್ರಹವನ್ನು ಪಡೆದು-ಕೊಳ್ಳಬೇಕು. ಸಾಧ್ಯವಾದರೆ ಚೈತ್ರಮಾಸದ ತೃತೀಯಾ ದಿವಸ ಯಾವ ಗೌರೀ-ಪೂಜೆಯನ್ನು ಪುಸ್ತಕದಲ್ಲಿ ನೀಡಲಾಗಿದೆಯೋ ಅದೇ ಪೂಜಾವಿಧಾನದಿಂದ ಗೌರೀಪೂಜೆಯನ್ನು ಮಾಡಬೇಕು.

ವಿನಾಯಕಚತುರ್ಥೀ – ಕಪಿಲಾಶ್ರಮದಲ್ಲಿ ಚತುರ್ಬಾಹುಯುಕ್ತನಾದ ಗಣಪತಿಯು ಅಗ್ನಿಕುಂಡದಿಂದ ಪ್ರಾದುರ್ಭವಿಸಿದ ದಿವಸವಾಗಿದೆ. ಆದ್ದರಿಂದ ಇದನ್ನುವಿನಾಯಕಚತುರ್ಥೀ ಎಂದೇ ಕರೆಯುತ್ತಾರೆ. ಈ ದಿವಸದಲ್ಲಿ ಗಣಪತಿಗೆ ವಿಶೇಷಪೂಜೆಯನ್ನು ಆಚರಿಸಬೇಕು. ಗಣಪತಿಯ ಅಂತರ್ಯಾಮಿಯಾದ ವಿಶ್ವಂ-ಭರನನ್ನು ಪ್ರದ್ಯುಮ್ನನಾಮಕನನ್ನಾಗಿ ಚಿಂತಿಸಿ ಆರಾಧಿಸಬೇಕು.

## ಜ್ಯೇಷ್ಠ॥ ಶುದ್ಧ॥ ಪಂಚಮೀ

ತಥಾ ಜ್ಯೇಷ್ಠಸ್ಯ ಪಂಚಮ್ಯಾಂ ಪಿತೄನಭ್ಯರ್ಚಯೇತ್ ಸುಧೀಃ । ಸರ್ವಕಾಮ-ಫಲಾಪ್ರಾಪ್ತಿಃ ಭವೇದ್ ವೈ ವಿಪ್ರಭೋಜನೇ ॥ ಎಂಬ ನಾರದ ಪುರಾಣದ ಮಾತಿ-ನಂತೆ ಪಿತೃದೇವತೆಗಳನ್ನು ಇಂದು ವಿಶೇಷವಾಗಿ ಅರ್ಚನೆ ಮಾಡಬೇಕು. ಇದರಿಂದ ಎಲ್ಲಾ ಅಭೀಷ್ಟಗಳು ನೆರವೇರುತ್ತದೆ. ಸಂತಾನಭಾಗ್ಯವು ಪ್ರಾಪ್ತವಾಗುತ್ತದೆ.

## ಜ್ಯೇಷ್ಠ॥ ಶುದ್ಧ॥ ಷಷ್ಠೀ

ಮೋಹನದಾಸರ ಆರಾಧನೆ – ಬಡತನದ ಬೇಗೆಯಲ್ಲಿ ಬೆಂದ ಓರ್ವ ಅನಾಥತಾಯಿಯು ತನ್ನ ಮಗುವನ್ನು ಉಡಿಯಲ್ಲಿ ಕಟ್ಟಿಕೊಂಡು ತುಂಗೆಯ ಮಡುವಿಗೆ ಹಾರ ಹೊರಟಿದ್ದಳು. ಸುದೈವದಿಂದ ಅದು ವಿಜಯದಾಸರ ಕಣ್ಣಿಗೆ ಬಿದ್ದು ಅವರು ಧಾವಿಸಿ ಹೋಗಿ ಅದನ್ನು ತಡೆದರು. ತುಂಗೆಯಲ್ಲಿ ಎಸೆಯ ಹೊರಟ ಅವಳನ್ನೂ, ಅವಳ ಮಗುವನ್ನೂ ತಡೆದು ಅವಳಿಂದ ಆ ಮಗುವನ್ನು ಪಡೆದರು. ಆ ಅನಾಥಳಿಗೆ ಆಶ್ರಯವಿತ್ತು ಆ ಮಗುವನ್ನು ತೊಡೆಯ ಮೇಲೆ ಆಡಿಸಿ ಬೆಳೆಸಿ ದೊಡ್ಡವನನ್ನಾಗಿ ಮಾಡಿದರು. 'ಚಿರಂಜೀವಿಯಾಗೆಲವೋ ಚಿಣ್ಣ ನೀನು । ಪರಮಭಾಗವತರ ಪದಧೂಳಿ ಧರಿಸುತಲಿ' ಎಂದು ಹಾಡಿ ಹರಸಿದರು. ಆ

ಮಹಾರಾಯರ ಹರಕೆ ಆರೈಕೆಗಳಿಂದ ಬಡಕಲು ಮೈಯ್ಯ ಆ ರೋಗಿಷ್ಠ ಕೂಸು ಒಳ್ಳೆ ಸುಂದರವಾದ ಮೋಹನಾಂಗದ ಮಗುವಾಗಿ ಬೆಳೆಯಿತು. ಅವನನ್ನು ಬೆಳೆಸಿ ವಿದ್ಯಾದಾನ ಮಾಡಿ 'ಮೋಹನವಿಟ್ಠಲ' ಎಂಬ ಅಂಕಿತವನ್ನಿತ್ತರು. ಇದೇ ಅಂಕಿತ-ದಿಂದ ಮೋಹನದಾಸರು ಅನೇಕ ಹರಿಕೀರ್ತನೆಗಳನ್ನೂ, ಎರಡುನೂರಾ ಹದಿ-ನೇಳು ನುಡಿಯ ಒಂದು ಕೋಲ ಹಾಡನ್ನೂ ರಚಿಸಿದ್ದಾರೆ. ಈ ಕೋಲು ಹಾಡು ರುಗ್ಮಿಣಿ - ಸತ್ಯಭಾಮಾ - ಶ್ರೀಕೃಷ್ಣ - ಅರ್ಜುನರ ನಡುವಿನ ಸರಸಸಂಭಾಷಣಾ ರೂಪವಾಗಿದೆ. ಯುಕ್ತಿ ಯುಕ್ತವಾದ ಸಂವಾದ ಭಂಗಿಯ ಚಾತುರ್ಯಕ್ಕೂ ಇದು ಒಳ್ಳೆಯ ನಿದರ್ಶನವಾಗಿದೆ. ಇದರಿಂದಲೇ 'ಭಕ್ತಿಯಲಿ ಭಾಗಣ್ಣ, ಯುಕ್ತಿಯಲಿ ಮೋಹನ್ನ, ಶಕ್ತಿಯಲಿ ತಿಮ್ಮಣ್ಣ' ಎಂಬ ಯುಕ್ತಿಯು ರೂಢಿಯಲ್ಲಿ ಬಂದಂತೆ ತೋರುತ್ತದೆ. ಜಾನಪದದ ಗೀತೆಗಳ ಧಾಟಿ, ಥಾಟುಗಳನ್ನುಸಾಹಿತ್ಯದ ಶೈಲಿಗೆ ಅಳವಡಿಸಿ ಸಿದ್ಧಾಂತಕ್ಕೆ ಅವಿರುದ್ಧವಾಗಿ ವಿನೋದ, ವ್ಯಂಗ್ಯ, ವಕ್ರೋಕ್ತಿಗಳನ್ನು ಧಾರಾಳವಾಗಿ ಉಪಯೋಗಿಸಿ ರಚಿಸಿದ ಈ ಕೋಲುಹಾಡು ಒಳ್ಳೇ ರಂಜಕವೂ ರಸಭರಿತವೂ ಹಾಸ್ಯಪ್ರಚುರವೂ ಆಗಿದೆ.

## ಜ್ಯೇಷ್ಠ॥ ಶುದ್ಧ॥ ಸಪ್ತಮೀ

ಲಕ್ಷ್ಮೀಪೂಜೆ – ಸಪ್ತಮ್ಯಾಂ ಜ್ಯೇಷ್ಠಮಾಸಸ್ಯ ಜ್ಯೇಷ್ಠಾಂ ತೇನಾರ್ಚಯಂತಿ ಯೇ । ತತ್ರೈವ ವಾಸೋ ಜ್ಯೇಷ್ಠಾಯಾಃ ಭವಿಷ್ಯತಿ ನ ಸಂಶಯಃ ॥ ಜ್ಯೇಷ್ಠಾ ಎಂಬ ಹೆಸರಿನ ಲಕ್ಷ್ಮೀದೇವಿಯನ್ನು ಇಂದು ಪೂಜೆ ಮಾಡಬೇಕು. ಇದರಿಂದ ಆ ಲಕ್ಷ್ಮಿಯು ಪೂಜೆ ಮಾಡುವವರ ಮನೆಯಲ್ಲಿ ನಿರಂತರ ವಾಸಮಾಡುತ್ತಾಳೆ. ಜ್ಯೇಷ್ಠಾ ಎಂಬ ಪದಕ್ಕೆ ಸ್ತ್ರೀಯರಲ್ಲೇ ಸರ್ವೋತ್ತಮಳಾದ ಲಕ್ಷ್ಮೀದೇವಿ ಎಂದಷ್ಟೇ ಅರ್ಥ. ಅಲಕ್ಷ್ಮಿ ಎಂಬರ್ಥವನ್ನು ತಿಳಿಯಬಾರದು.

## ಜ್ಯೇಷ್ಠ॥ ಶುದ್ಧ॥ ಅಷ್ಟಮೀ

ಶ್ರೀರಘುಪುಂಗವತೀರ್ಥರು (ಮಾಧವತೀರ್ಥ ಮಠ) ಸಚ್ಛಾಸ್ತ್ರಾದ್ಯಮಲ ಸದ್ಬೋಧಂ ಶ್ರೀಮಧ್ವಮುನಿಸೇವಕಮ್ । ಸಚ್ಛಾಸ್ತ್ರಾಸಕ್ತಹೃದಯಂ ರಘುಪುಂಗವ ಗುರುಂ ಭಜೇ ॥

**ದುರ್ಗಾಷ್ಟಮೀ** – ಜ್ಯೇಷ್ಠಮಾಸದ ಶುಕ್ಲಪಕ್ಷದ ಈ ಅಷ್ಟಮಿಯ ದಿವಸದಲ್ಲಿ ದುರ್ಗೆಯನ್ನು ವಿಶೇಷವಾಗಿ ಅರ್ಚನೆ ಮಾಡಬೇಕು. ಸಾಯಂಕಾಲದ ಸಂದರ್ಭದಲ್ಲಿ ದುರ್ಗಾನಮಸ್ಕಾರವನ್ನು ಆಚರಿಸಬೇಕು. ಇದರಿಂದ ದುರ್ಗೆಯ ಪರಮಾನುಗ್ರಹವು ಉಂಟಾಗುತ್ತದೆ.

**ಶುಕ್ಲಾದೇವಿ ಪೂಜೆ** – ಶುಕ್ಲಾದೇವಿಯನ್ನು ಇಂದು ಪೂಜಿಸಬೇಕು.

## ಜ್ಯೇಷ್ಠ॥ ಶುದ್ಧ॥ ನವಮೀ

**ಶ್ರೀವಾದೀಂದ್ರತೀರ್ಥರು (ರಾಯರ ಮಠ)** - ವಂದಾರುಜನಸಂದೋಹ-ಮಂದಾರತರುಸನ್ನಿಭಮ್ । ವೃಂದಾರಕಗುರುಪ್ರಖ್ಯಂ ವಂದೇ ವಾದೀಂದ್ರದೇಶಿಕಂ ॥ ರಾಯರ ಪೂರ್ವಾಶ್ರಮದ ಪುತ್ರರಾದ ಲಕ್ಷ್ಮೀನಾರಾಯಣಾಚಾರ್ಯರ ಮಕ್ಕಳು ಪುರುಷೋತ್ತಮಾಚಾರ್ಯರು. ಅವರ ಮಕ್ಕಳ ಹೆಸರು ಶ್ರೀನಿವಾಸಾಚಾರ್ಯರು. ಇವರು ತಮ್ಮ ವಂಶದ ಗೌರವಕ್ಕನುಸರಿಸಿ ಉತ್ತಮ ಪಾಂಡಿತ್ಯ ಪಡೆದು ಸಂಸ್ಥಾನದಲ್ಲಿ ಪಾಠ ಪ್ರವಚನ ಮಾಡುತ್ತಿದ್ದರು. ಉಪೇಂದ್ರತೀರ್ಥರು ಶ್ರೀನಿವಾಸಾಚಾರ್ಯರ ಪಾಂಡಿತ್ಯ ಸಂಸ್ಥಾನ ದೀಕ್ಷೆಯನ್ನು ನೋಡಿ ಇವರೇ ಈ ಪರಂಪರೆಗೆ ತಕ್ಕವರೆಂದು ಇವರಿಗೆ ಆಶ್ರಮ ಕೊಟ್ಟು 'ವಾದೀಂದ್ರತೀರ್ಥ'ರೆಂದು ನಾಮಕರಣ ಮಾಡಿದರು. ಇಷ್ಟು ಹೊತ್ತಿಗೆ ದಕ್ಷಿಣ ಭಾರತದಲ್ಲಿ ರಾಜ್ಯವಿಪ್ಲವ ಆರಂಭವಾಗಿತ್ತು. ಇದೊಂದು ಪಾಳೆಯ ಪಟ್ಟು ತಲೆಯೆತ್ತಿದರೆ, ನಾಳೆ ಅದನ್ನು ಮೆಟ್ಟಿ ಇನ್ನೊಂದು ಹೊಸಪಾಳೆಯ ಪಟ್ಟು ಉದಯಿಸುತ್ತಿತ್ತು. ಇದರಿಂದ ಧರ್ಮಸಂಸ್ಥೆಗಳಿಗೆ ಹಿಂದಿನ ರಾಜರುಗಳು ಹಾಕಿಕೊಟ್ಟ ಗ್ರಾಮ ಜಹಗೀರುಗಳು ನಡೆದು ಬರುವುದೇ ಕಷ್ಟವಾಗುತ್ತಿತ್ತು. ಒಬ್ಬ ಪಾಳೆಯಗಾರ ಅದನ್ನು ನಡೆಸಿಕೊಂಡು ಬಂದರೆ ಇನ್ನೊಬ್ಬ ಅದನ್ನು ಜಪ್ತಿ ಮಾಡಿ ಬಿಡುತ್ತಿದ್ದ. ಹೀಗಾಗಿ ಅವುಗಳನ್ನೆಲ್ಲ ಉಳಿಸಿಕೊಂಡು ಬರಲು ಧರ್ಮ ಪೀಠಾಧ್ಯಕ್ಷರು ಅಲ್ಲಲ್ಲಿ ಸಂಚಾರ ಮಾಡಿ ತಮ್ಮ ವೈಯಕ್ತಿಕ ವರ್ಚಸ್ಸನ್ನು ಬೀರಿ ರಕ್ಷಿಸಿಕೊಳ್ಳಬೇಕಾಗಿತ್ತು. ರಾಜಾಶ್ರಮ ಸಿಕ್ಕುವುದರ ಬದಲು ಉಪಟಳವೇ ಹೆಚ್ಚಾಗುತ್ತಿತ್ತು. ಇದನ್ನೆಲ್ಲ ಎದುರಿಸಿ ಸಂಸ್ಥಾನದ ಮರ್ಯಾದೆಯನ್ನು ಉಳಿಸಿಕೊಂಡು, ಪೂಜಾ ಪಾಠ ಪ್ರವಚನಾದಿ ಕಾರ್ಯಗಳನ್ನು ಮಾಡಿಕೊಂಡು ಹೋಗುವುದು ಬಹಳ ಕಷ್ಟ ಸಾಧ್ಯವಾಗಿತ್ತು. ಇಂತಹ ಕಷ್ಟದೆಸೆಯಲ್ಲೂ ಪೀಠಾಧಿಪತಿಗಳು ತಮ್ಮ ಪರಂಪರೆಯನ್ನು ಯೋಗ್ಯ-

ರೀತಿಯಲ್ಲಿ ರಕ್ಷಿಸಿಕೊಂಡು ಬಂದರು. ಹಿಂದೆ ಗುರುರಾಜರಿಗಾಗಿ ವೆಂಕಣ್ಣಪಂತ ನಿರ್ಮಿಸಿದ್ದ ಬೃಂದಾವನ ಅವರ ಆಜ್ಞೆಯಂತೆ ಹಾಗೆಯೇ ಉಳಿದುಕೊಂಡಿತ್ತು. ಅದಕ್ಕೆ ತಕ್ಕ ಅಧಿಕಾರಿಗಳು ಯಾವಾಗ ಬರುವರೆಂಬುದು ಜ್ಞಾನಿಗಳಾದ ಗುರುರಾಜರೊಬ್ಬರ ಹೊರತು ಇನ್ನಾರಿಗೂ ಗೊತ್ತಿರಲಿಲ್ಲ. ಈಗ ಆಕಾಲ ಸನ್ನಿಹಿತವಾಯಿತೆಂದು ತೋರುತ್ತದೆ. ಶ್ರೀಗಳವರು ಮತ್ತೆ ದಕ್ಷಿಣ ದೇಶದ ಕಡೆ ಹೋಗುವ ಮನಸ್ಸು ಮಾಡದೆ ಮಂತ್ರಾಲಯದಲ್ಲೇ ನಿಂತು ಬಿಟ್ಟು 1750ನೆಯ ಪ್ರಮೋದಿನೀ ಸಂವತ್ಸರದ ಜ್ಯೇಷ್ಠ ಶುದ್ಧ ನವಮಿಯ ದಿನ ಶ್ರೀಗುರುರಾಜರ ಸನ್ನಿಧಾನದಲ್ಲಿ ಹರಿಧ್ಯಾನತತ್ಪರರಾದರು. ಇವರಿಗಾಗಿ ಗುರುರಾಜರಿಗಾಗಿ ಸಿದ್ಧಪಡಿಸಿದ ವೃಂದಾವನವನ್ನು ಉಪಯೋಗಿಸಲಾಯಿತು. ಗುರುರಾಜರ ಎಡಭಾಗದಲ್ಲಿ ಅವರಿಗೆ ಅತಿ ಸಮೀಪವಾಗಿಯೇ ಇವರ ವೃಂದಾವನ ಪ್ರತಿಷ್ಠೆಯಾಯಿತು. ಗುರುರಾಜರ ಸನ್ನಿಧಿಯಲ್ಲಿ ಸ್ಥಳ ಸಿಕ್ಕಿದ್ದೇ ಇವರ ಮಹಿಮಾತಿಶಯವನ್ನು ತೋರಿಸುತ್ತದೆ. ಇವರು ಗುರುಗುಣಸ್ತವ ರಚಿಸಿ ಗುರುರಾಜರಿಗರ್ಪಿಸಿದಾಗ ಬೃಂದಾವನ ತನ್ನ ಸಮ್ಮತಿ ಸೂಚಿಸಲು ಅಲ್ಲಾಡಿತೆಂಬುದು ಹಿಂದೆಯೇ ವರ್ಣಿತವಾಗಿದೆ. ಇದರಿಂದ ಇವರಲ್ಲಿ ಗುರುರಾಜರ ಪರಮಾನುಗ್ರಹವೆಷ್ಟರ ಮಟ್ಟದೆಂಬುದೂ ಗೊತ್ತಾಗುತ್ತದೆ. ಗುರುರಾಜರಿಗೆ ಗ್ರಂಥರಚನಾಭಾಗದಲ್ಲಿ ಸುಮತೀಂದ್ರ ಗುರುಗಳು ಮಂತ್ರಿಗಳಾದಂತೆ, ದಾಸಸಾಹಿತ್ಯ ಪ್ರಪಂಚದಲ್ಲಿ ಜಗನ್ನಾಥದಾಸಾರ್ಯರು ಮಂತ್ರಿಗಳಾದಂತೆ, ವೃಂದಾವನ ಮಹಿಮೆಯ ವಿಷಯದಲ್ಲಿ ವಾದೀಂದ್ರತೀರ್ಥರು ಮಂತ್ರಿಗಳಾದರು. ಇಂದಿಗೂ ಭಕ್ತಜನರ ಸ್ವಪ್ನದಲ್ಲಿ ಗುರುರಾಜರೊಂದಿಗೆ ವಾದೀಂದ್ರರೂ ಗೋಚರರಾಗಿ ಗುರು ಪ್ರಸಾದವನ್ನು ಭಕ್ತರಿಗೆ ಮಾಡಿಸುತ್ತಾ ಕಂಗೊಳಿಸುತ್ತಿದ್ದಾರೆ.

ಶ್ರೀಗಳವರಿಂದ ರಚಿತವಾದ ಗ್ರಂಥಗಳ ಪೈಕಿ ಇಷ್ಟು ಉಪಲಬ್ಧವಾಗಿದೆ :- 1. ತತ್ತ್ವಪ್ರಕಾ ಟಿಪ್ಪಣೀ (ಮೀಮಾಂಸಾ ನಯದರ್ಪಣ) 2. ತತ್ತ್ವೋದ್ಯೋತಟಿಪ್ಪಣೀ 3. ಭೂಗೋಳ ಖಗೋಳ ವಿಚಾರ 4. ರಾಘವೇಂದ್ರಮಠ ಗತಾರ್ಚಾಗತಿಕ್ರಮ 5. ಗುರುಗುಣಸ್ತವನ 6. ನವ್ಯದುರುಕ್ತಿಶಿಕ್ಷಾ (ಪೂರ್ವಾಶ್ರಮದಲ್ಲಿ ರಚಿಸಿದ್ದು)

**ಶ್ರೀ ವಿದ್ಯಾಕಾಂತತೀರ್ಥರು (ವ್ಯಾಸರಾಜ ಮಠ)** (ಕ್ರಿ.ಶ. 1812-1824)

**ಚತುಃಷಷ್ಟಿಕಲಾಯುಕ್ತಃ ಸರ್ವಶಾಸ್ತ್ರಾಬ್ಧಿಪಾರಗಃ । ವಿದ್ಯಾಕಾಂತಗುರುರ್ಭೂಯಾದ-**

ಸ್ಮದಿಷ್ಟಾರ್ಥಸಿದ್ಧಯೇ ॥ ಇವರ ಪೂರ್ವಾಶ್ರಮದ ಹೆಸರು ನಚ್ಚಪ್ಪಾಚಾರ್ಯರೆಂದು ತಿಳಿದುಬಂದಿದೆ. ಇವರು ವಿದ್ಯಾವಲ್ಲಭತೀರ್ಥರ ಪೂರ್ವಾಶ್ರಮದ ತಮ್ಮಂದಿರು. ಅಣ್ಣಂದಿರಲ್ಲಿಯೇ ಆಶ್ರಮ ಸ್ವೀಕಾರ ಮಾಡಿ ವಿದ್ಯಾಕಾಂತತೀರ್ಥರೆಂಬ ನಾಮಕರಣ-ದಿಂದ ಪೀಠವನ್ನಲಂಕರಿಸಿದರು. ಅತ್ಯಮೋಘವಾದ ಅನರ್ಘ್ಯವಾದ ವೈಜಯಂತೀ ಮಾಲೆಯನ್ನು ಶ್ರೀಗೋಪಾಲಕೃಷ್ಣದೇವರ ಪೂಜಾರ್ಥವಾಗಿ ಸಂಪಾದಿಸಿದ ಕೀರ್ತಿ ಇವರದ್ದಾಯಿತು. ಚತುಶ್ಶಾಸ್ತ್ರ ಪಂಡಿತರು ವಾದನಿಪುಣರು ಆದ ಇವರು ಮೈಸೂರು, ತಿರುವಾಂಕೂರು, ಕೊಚ್ಚಿ, ಪುದುಕೋಟೆ ಮುಂತಾದ ಅನೇಕ ಸಂಸ್ಥಾನದ ರಾಜರುಗಳಿಂದ ಮಾನಿತರಾಗಿದ್ದರು. ಇವರ ಕಾಲದಲ್ಲಿ ಮೈಸೂರು ಅರಸರಾದ ಮುಮ್ಮಡಿ ಕೃಷ್ಣರಾಜ ಒಡೆಯರಿಂದ ಹಾಲ್ಕುರಿಕೆ, ಸಾರ್ಥನ ಹಳ್ಳಿ ಎಂಬ ಗ್ರಾಮಗಳು ಶ್ರೀಮಠಕ್ಕೆ ಸೇರಿದವು. ಕನ್ನಡ ಭಾಷೆಯಲ್ಲಿ ಶಾಸ್ತ್ರಾರ್ಥಗಳನ್ನೊಳಗೊಂಡ ಅನೇಕ ಕೃತಿಗಳನ್ನಿವರು ರಚಿಸಿದ್ದಾರೆ. ಇವರು ಅರವತ್ನಾಲ್ಕು ವಿದ್ಯೆಗಳಲ್ಲಿ ನಿಪುಣರಾಗಿದ್ದರೆಂಬ ಪ್ರತೀತಿಯು ಇದೆ. ಕೊನೆಗೆ 1824ರ ಜ್ಯೇಷ್ಠ ಶುದ್ಧ ನವಮಿಯಂದು ಕಾವೇರಿ ತೀರದ ಸೋಸಲೆಯಲ್ಲಿ ವೃಂದಾವನಸ್ಥರಾದರು. ಶ್ರೀವಿದ್ಯಾಕಾಂತತೀರ್ಥರು ಆಚಾರ್ಯ-ಕರಾರ್ಚಿತ ಮೂಲಗೋಪಾಲಕೃಷ್ಣನಿಗೆ ಒಂದು ಅದ್ಭುತವಾದ ವೈಜಯಂತೀಮಾಲೆ-ಯನ್ನು ಮಾಡಿ ಸಮರ್ಪಿಸಿದ್ದಾರೆ.

## ಜ್ಯೇಷ್ಠ ॥ ಶುದ್ಧ ॥ ದಶಮೀ

ಭಾಗೀರಥೀ ಜಯಂತಿ – ಅದತ್ತಾನಾಮುಪಾದಾನಂ ಹಿಂಸಾ ಚೈವಾ-ವಿಧಾನತಃ । ಪರದಾರೋಪಸೇವಾ ಚ ಕಾಯಿಕಂ ತ್ರಿವಿಧಂ ಸ್ಮೃತಮ್ । ಪಾರುಷ್ಯ-ಮನೃತಂ ಚೈವ ಪೈಶುನ್ಯಂ ಚಾಪಿ ಸರ್ವಶಃ । ಅಸಂಬದ್ಧಪ್ರಲಾಪಶ್ಚ ವಾಙ್ಮಯಂ ಸ್ಯಾಚ್ಚತುರ್ವಿಧಮ್ । ಪರದ್ರವ್ಯೇಷ್ವಭಿಧ್ಯಾನಂ ಮನಸಾನಿಷ್ಟಚಿಂತನಮ್ । ವಿತಥಾ-ಭಿನಿವೇಶಶ್ಚ ಮಾನಸಂ ತ್ರಿವಿಧಂ ಸ್ಮೃತಮ್ । ಏತಾನಿ ದಶಪಾಪಾನಿ ಹರ ತ್ವಂ ಮಮ ಜಾಹ್ನವಿ । (ಇದನ್ನು ಸ್ನಾನ ಕಾಲದಲ್ಲಿ ಹತ್ತುಬಾರಿ ಪಠಿಸಬೇಕು)

ದಶಹರಾವ್ರತ ಎಂದೇ ಪ್ರಸಿದ್ಧವಾದ ಭಾಗೀರಥೀ ಜಯಂತಿಯು ಅತ್ಯಂತ ಶ್ರೇಷ್ಠವಾದ ದಿವಸವಾಗಿದೆ. ಜ್ಯೇಷ್ಠಮಾಸದ ಶುಕ್ಲಪಕ್ಷದ ದಶಮಿಯ ದಿವಸ ಪ್ರತಿಯೊಬ್ಬರೂ ಮನೆ ಮನೆಗಳಲ್ಲಿ ಗಂಗಾಪೂಜೆಯನ್ನು ಮಾಡಬೇಕು. ಮತ್ತು

ಶ್ಲೋಕವನ್ನು ಅವಶ್ಯವಾಗಿ ಪಠಿಸಿ ಹತ್ತು ಬಗೆಯ ಪಾಪಗಳಿಂದ ಮುಕ್ತರಾಗಬೇಕು. ಇಂದು ಯಾರು ಗಂಗೆಯಲ್ಲಿ ಸ್ನಾನ ಮಾಡುತ್ತಾರೋ, ಅವರು ಈ ಹತ್ತು ಪಾಪ-ಗಳಿಂದ ಮುಕ್ತರಾಗುವುದಷ್ಟೇ ಅಲ್ಲದೇ, ಭಗವಂತನ ಕೃಪೆಗೆ ಪಾತ್ರರಾಗುತ್ತಾರೆ.

## ದಶಹರಾ ವ್ರತದ ಬಗ್ಗೆ ತಿಳಿಯಬೇಕಾದ ಪ್ರಮೇಯಗಳು

* ಜ್ಯೇಷ್ಠಮಾಸದ ಶುಕ್ಲಪಕ್ಷದ ದಶಮಿಯು ದಶಹರ ದಿವಸ ಎಂದೇ ಪ್ರಸಿದ್ಧವಾಗಿದೆ. ಭಾಗೀರಥಿಯು ಪ್ರತಿಯೊಬ್ಬರ ಹತ್ತು ಬಗೆಯ ಪಾಪಗಳನ್ನು ಪರಿಹಾರ ಮಾಡುವವಳಾದ್ದರಿಂದ ಇದಕ್ಕೆ ದಶಹರ ಎಂಬ ಹೆಸರು ಅರ್ಥ-ಪೂರ್ಣವಾಗಿದೆ. * ಜ್ಯೇಷ್ಠಮಾಸದ ಪ್ರತಿಪತ್ ದಿವಸದಿಂದ ದಶಮಿಯ ತನಕ ಹತ್ತು ದಿನವೂ, ಹತ್ತು ಬಗೆಯ ದಾನಗಳನ್ನು ಮಾಡಬೇಕು. ಮತ್ತು ಹತ್ತು ದಿವಸವೂ ಗಂಗಾಸ್ನಾನವನ್ನು ಮಾಡಬೇಕು. * ಅನುಕೂಲವನ್ನು ಮಾಡಿಕೊಂಡು ಈ ಹತ್ತುದಿನಗಳಕಾಲ ಗಂಗಾಸ್ನಾನವನ್ನು ಮಾಡುವುದಾದಲ್ಲಿ ಅನಂತ ಪುಣ್ಯಭಾಜನ-ನಾಗುತ್ತಾನೆ. ಈ ಹತ್ತು ದಿವಸಗಳಲ್ಲಿ ಒಂದು ದಿವಸ ಗಂಗಾಸ್ನಾನವನ್ನು ಮಾಡುವು-ದರಿಂದ 38,48,000 ವರ್ಷಗಳ ಕಾಲ ಗಂಗಾಸ್ನಾನವು ಮಾಡಿದ ಪುಣ್ಯವು ಬರುತ್ತದೆ. ಭಾಗೀರಥಿಯ ಜಯಂತಿಯ ಗಂಗಾಸ್ನಾನ ಮಾಡಿದ್ದರ ಫಲವನ್ನು ಎಣಿಸಲು ಸಾಧ್ಯವೇ ಇಲ್ಲವೆಂದು ಶಾಸ್ತ್ರವು ತಿಳಿಸುತ್ತದೆ. * ಒಂದು ವೇಳೆ ಗಂಗೆಗೆ ತೆರಳಲು ಸಾಧ್ಯವಾಗದಿದ್ದರೆ, ನಮಗೆ ಹತ್ತಿರವಿರುವ ನದಿಗಳಲ್ಲಿಯೇ ಗಂಗೆಯ ಅನು-ಸಂಧಾನವನ್ನು ಮಾಡಿ, ಸ್ನಾನವನ್ನು ಮಾಡಬೇಕೆಂದು ಧರ್ಮಸಿಂಧು ಹೇಳುತ್ತದೆ - 'ಇತರದೇಶಸ್ಥೈಃ ಸ್ವಸನ್ನಿಹಿತನದ್ಯಾಂ ಸ್ನಾತ್ವಾ ಗಂಗಾಪೂಜನಾದಿಕಂ ಕಾರ್ಯಮ್ ।' * ಉಳಿದ ನದಿಗಳಿಗಿಂತ ಗಂಗಾಸ್ನಾನವೇ ಹೆಚ್ಚು ಫಲದಾಯಕವಾಗಿವೆ. ಅದರಲ್ಲಿಯೂ ದಶಾಶ್ವಮೇಧಘಾಟನಲ್ಲಿ ಮಾಡುವ ಗಂಗಾಸ್ನಾನಕ್ಕೆ ಮತ್ತಷ್ಟು ಹೆಚ್ಚಿನ ಫಲವಿದೆ. * ಗಂಗೆಗೆ ತೆರಳಲು ಸಾಧ್ಯವಾಗದಿದ್ದರೆ, ಇತರ ನದಿಗಳಿಗೂ ತೆರಳಲು ಸಾಧ್ಯವಾಗದಿದ್ದರೆ, ತಂದಿರುವ ಗಂಗೆಯ ನೀರನ್ನು ನಾವು ಸ್ನಾನ ಮಾಡುವ ನೀರಿಗೆ ಬೆರೆಸಿ ಸ್ನಾನ ಮಾಡಬೇಕು. * ಸ್ನಾನ ಮಾಡುವಾಗ ಹತ್ತುಬಾರಿ ದಶಹರಾ ಸ್ತೋತ್ರ-ವನ್ನು ಪಠಿಸಿ ಸ್ನಾನವನ್ನು ಮಾಡಬೇಕು. * ಪುರುಷರು ದಶಹರಾ ಸ್ತೋತ್ರವನ್ನು ಹೇಳುವುದರ ಜೊತೆಗೆ ಅಘಮರ್ಷಣ ಸೂಕ್ತವನ್ನೂ ಕೂಡ ಹತ್ತು ಬಾರಿ ಪಠಿಸಿ

ಮುಳುಗಬೇಕು. ಅಥವಾ ಸ್ನಾನವನ್ನು ಮಾಡಬೇಕು. * ದಶಯೋಗಗಳು ಇರುವ ಈ ದಿವಸದಲ್ಲಿ ಮಾಡುವ ಗಂಗಾಸ್ನಾನಕ್ಕೆ ಸಮಸ್ತ ವರ್ಷದಲ್ಲಿ ಮಾಡುವ ಗಂಗಾ-ಸ್ನಾನಕ್ಕಿಂತ ಮಹತ್ ಫಲವಿದೆ. * ದಶಯೋಗಗಳು ಹೀಗಿವೆ - ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ದಶಮ್ಯಾಂ ಬುಧಹಸ್ತಯೋಃ ॥ ಗರಾನಂದೇ ವ್ಯತೀಪಾತೇ ಕನ್ಯಾಚಂದ್ರೇ ವೃಷೇ ರವೌ । ದಶಯೋಗೇ ನರಃ ಸ್ನಾತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ (ಸ್ಕಾಂದಪುರಾಣ) – 1. ಜ್ಯೇಷ್ಠ ಮಾಸ, 2. ಶುಕ್ಲ ಪಕ್ಷ, 3. ದಶಮೀ ತಿಥಿ, 4. ಬುಧವಾರ, 5. ಹಸ್ತಾ ನಕ್ಷತ್ರ , 6. ಗರಕರಣ, 7. ಅಮೃತಗಳಿಗೆ, 8. ಕನ್ಯಾ ರಾಶಿಯಲ್ಲಿ ಚಂದ್ರ , 9.ವ್ಯತೀಪಾತ, 10. ವೃಷಭ ರಾಶಿಯಲ್ಲಿ ರವಿ. ಈ ಹತ್ತು ಯೋಗಗಳಿದ್ದಾಗ ಯಾರು ಸ್ನಾನವನ್ನು ಮಾಡುತ್ತಾನೋ, ಅವನು ಎಲ್ಲಾ ಪಾಪಗಳಿಂದ ವಿಮುಕ್ತ-ನಾಗುತ್ತಾನೆ.

* ಶುಕ್ಲಪಕ್ಷಸ್ಯ ದಶಮೀ ಜ್ಯೇಷ್ಠೇ ಮಾಸೇ ದ್ವಿಜೋತ್ತಮಾಃ । ಹರತೇ ದಶಪಾಪಾನಿ ತಸ್ಮಾದ್ದಶಹರಾಃ ಸ್ಮೃತಾಃ ॥ (ಬ್ರ.ಪು. 63-15)

ಜ್ಯೇಷ್ಠಮಾಸದ ಶುಕ್ಲ ಪಕ್ಷದ ದಶಮಿಯ ತಿಥಿಯಲ್ಲಿ ಬ್ರಾಹ್ಮಣ ಶ್ರೇಷ್ಠನು ಹತ್ತು ಬಗೆಯ ಪಾಪಗಳಿಂದ ವಿಮುಕ್ತನಾಗುತ್ತಾನೆ. ಆದ್ದರಿಂದ ಇದನ್ನು 'ದಶಹರಾ' ಎಂದು ಕರೆಯುತ್ತಾರೆ. * ಬುಧವಾರ ಹಸ್ತಾನಕ್ಷತ್ರವಿದ್ದಾಗ, ಗರಕರಣ, ಆನಂದಯೋಗ-ಗಳಿದ್ದಾಗ ಗಂಗೆಯು ಭೂಮಿಗೆ ಆಗಮಿಸಿದಳು ಎಂದು ಪುರಾಣವು ಹೇಳುತ್ತದೆ. * ದಶಮಿಯ ಯಾವ ಹೊತ್ತಿನಲ್ಲಿ ಇಷ್ಟು ಯೋಗಗಳು ಬರುತ್ತವೆಯೋ, ಆ ಹೊತ್ತಿನಲ್ಲಿಯೇ ಸ್ನಾನವನ್ನು ಮಾಡಬೇಕು. ಎರಡು ದಿವಸಗಳ ಪೂರ್ವಾಹ್ಣದಲ್ಲಿ ಈ ಯೋಗವಿದ್ದರೆ, ಅಂದೇ ಸ್ನಾನಾದಿಗಳನ್ನು ಮಾಡಬೇಕು. ಅಪರಾಹ್ಣದಲ್ಲಿದ್ದರೆ ಆಗಲೇ ಸ್ನಾನಾದಿಗಳನ್ನು ಆಚರಿಸಬೇಕು. ಅಧಿಕಜ್ಯೇಷ್ಠಮಾಸವಿದ್ದಾಗ ಈ ಹತ್ತು ಯೋಗಗಳು ಬಂದರೆ ಆಗಲೇ ದಶಹರಾ ವ್ರತವನ್ನು ಆಚರಿಸಬೇಕು.

ಜ್ಯೇಷ್ಠಸ್ಯ ಶುಕ್ಲದಶಮೀ ಸಂವತ್ಸರಮುಖೀ ಸ್ಮೃತಾ । ತಸ್ಯಾಂ ಸ್ನಾನಂ ಪ್ರಕುರ್ವೀತ ದಾನಂ ಚೈವ ವಿಶೇಷತಃ ॥ ( ಸ್ಕಾಂದಪುರಾಣ)

ಜ್ಯೇಷ್ಠಮಾಸದ ಶುಕ್ಲಪಕ್ಷದ ದಶಮೀ ತಿಥಿಯಲ್ಲಿ ಸ್ನಾನ-ದಾನಗಳನ್ನು ವಿಶೇಷವಾಗಿ ಆಚರಿಸಬೇಕು. ಯಾಂ ಕಾಂಚಿತ್ಸರಿತಂ ಪ್ರಾಪ್ಯ ದದ್ಯಾದರ್ಘ್ಯಂ

ತಿಲೋದಕಮ್ । ಮುಚ್ಯತೇ ದಶಭಿಃ ಪಾಪೈಃ ಸುಮಹಾಪಾತಕೋಪಮೈಃ ॥ ಗಂಗೆಯಲ್ಲಿ ಸ್ನಾನವನ್ನು ಮಾಡಲು ಸಾಧ್ಯವಾಗದಿದ್ದರೆ, ಹತ್ತಿರವಿರುವ ಯಾವು-ದಾದರೂ ನದಿಗೆ ತೆರಳಿ, ಸ್ನಾನವನ್ನು ಮಾಡಿ, ಅರ್ಘ್ಯಪ್ರದಾನ ಮಾಡಿ, ತಿಲೋದಕದಲ್ಲಿ ತರ್ಪಣವನ್ನು ನೀಡಿ, ಮಹಾಪಾತಕಗಳಾಗಿದ್ದರೂ ಹತ್ತು ಪಾಪಗಳಿಂದ ವಿಮುಕ್ತನಾಗುತ್ತಾನೆ. ಜ್ಯೇಷ್ಠಶುಕ್ಲದಶಮ್ಯಾಂ ತು ಭವೇದ್ಭೌಮದಿನಂ ಯದಿ । ಜ್ಞೇಯಾ ಹಸ್ತರ್ಕ್ಷಸಂಯುಕ್ತಾ ಸರ್ವಪಾಪಹರಾ ತಿಥಿಃ ॥ ಜ್ಯೇಷ್ಠಶುಕ್ಲ ದಶಮಿಯಲ್ಲಿ ಬುಧವಾರವು ಬಂದಾಗ, ಹಸ್ತಾ ನಕ್ಷತ್ರ ಸೇರಿದಾಗ, ಆ ತಿಥಿಯು ಸರ್ವಪಾಪವನ್ನು ಪರಿಹರಿಸಲು ಸಮರ್ಥವಾಗುತ್ತದೆ. ದಶಮೀ ಶುಕ್ಲಪಕ್ಷೇ ತು ಜ್ಯೇಷ್ಠಮಾಸೇ ಬುಧೇಽಹನಿ । ಅವತೀರ್ಣಾ ಯತಃ ಸ್ವರ್ಗಾದ್ಧಸ್ತರ್ಕ್ಷೇ ಚ ಸರಿದ್ವರಾ । ಹರತೇ ದಶಪಪಾಪಾನಿ ತಸ್ಮಾದ್ದಶಹರಾ ಸ್ಮೃತಾ ॥ ಜ್ಯೇಷ್ಠಮಾಸದ ಶುಕ್ಲಪಕ್ಷದ ದಶಮಿಯ ಬುಧವಾರದ ಹಗಲು, ಸ್ವರ್ಗದಿಂದ ಭೂಲೋಕಕ್ಕೆ ಗಂಗೆಯು ಆಗಮಿಸಿದಳು. ಆದ್ದರಿಂದ ಅಂದು ಪ್ರತಿಯೊಬ್ಬರೂ ಗಂಗೆಯಲ್ಲಿ ಸ್ನಾನ ಮಾಡಬೇಕು. ಅಂಥವರ ಹತ್ತುಬಗೆಯ ಪಾಪಗಳು ಪರಿಹಾರವಾಗುತ್ತವೆ. ತಸ್ಯಾಂ ದಶಮ್ಯಾಮೇತಚ್ಚ ಸ್ತೋತ್ರಂ ಗಂಗಾಜಲೇ ಸ್ಥಿತಃ । ಯಃ ಪಠೇದ್ದಶಕೃತ್ವಸ್ತು ದರಿದ್ರೋ ವಾಪಿ ಚಾಕ್ಷಮಃ । ಸೋಽಪಿ ತತ್ಫಲಮಾಪ್ನೋತಿ ಗಂಗಾಂ ಸಂಪೂಜ್ಯ ಯತ್ನತಃ ॥ (ಭವಿಷ್ಯಪುರಾಣ)

ದಶಮಿಯಂದು ಗಂಗಾಜಲದಲ್ಲಿ ನಿಂತು ಜ್ಯೇಷ್ಠೇ ಮಾಸೇ ಎಂಬ ಶ್ಲೋಕವನ್ನು ಹತ್ತುಬಾರಿ ಪಠಿಸಬೇಕು. ಸಾಧ್ಯವಾಗದಿದ್ದರೆ ಸ್ನಾನ ಮಾಡುವ ಸಂದರ್ಭದಲ್ಲಿ ಈ ಸ್ತೋತ್ರವನ್ನು ಪಠಿಸಿದರೂ ಅವನು ಗಂಗಾಸ್ನಾನದ ಪುಣ್ಯವನ್ನು ಪಡೆಯುತ್ತಾನೆ. ಮುಂದೆ ನೀಡಿದ ಗಂಗಾ ಸ್ತೋತ್ರವನ್ನು ಹತ್ತು ಬಾರಿ ಪಠಿಸಬೇಕು.

## ಗಂಗಾಸ್ತೋತ್ರ

ಬ್ರಹ್ಮೋವಾಚ – ನಮಃ ಶಿವಾಯೈ ಗಂಗಾಯೈ ಶಿವದಾಯೈ ನಮೋ ನಮಃ ।
ನಮಸ್ತೇ ರುದ್ರರೂಪಿಣ್ಯೈ ಶಾಂಕರ್ಯೈ ತೇ ನಮೋ ನಮಃ ।
ನಮಸ್ತೇ ವಿಶ್ವರೂಪಿಣ್ಯೈ ಬ್ರಹ್ಮಮೂರ್ತ್ಯೈ ನಮೋ ನಮಃ ।
ಸರ್ವದೇವಸ್ವರೂಪಿಣ್ಯೈ ನಮೋ ಭೇಷಜಮೂರ್ತಯೇ ।
ಸರ್ವಸ್ಯ ಸರ್ವವ್ಯಾಧೀನಾಂ ಭಿಷಕ್‌ಶ್ರೇಷ್ಠ್ಯೈ ನಮೋಸ್ತು ತೇ ।

ಸ್ಥಾಣುಜಂಗಮಸಂಭೂತವಿಷಹಂತ್ರ್ಯೈ ನಮೋನಮಃ ।
ಭೋಗೋಪಭೋಗದಾಯಿನ್ಯೈ ಭೋಗವತ್ಯೈ ನಮೋಽನಮಃ ।
ಮಂದಾಕಿನ್ಯೈ ನಮಸ್ತೇಽಸ್ತು ಸ್ವರ್ಗದಾಯ್ಯೈ ನಮಃ ಸದಾ ।
ನಮಸ್ತ್ರೈಲೋಕ್ಯಭೂಷಾಯ್ಯೈ ಜಗದ್ಧಾತ್ರ್ಯೈ ನಮೋನಮಃ ।
ನಮಃ ಸ್ತ್ರೀಶುಕ್ಲಸಂಸ್ಥಾಯ್ಯೈ ತೇಜೋವತ್ಯೈ ನಮೋನಮಃ ।
ನಂದಾಯ್ಯೈ ಲಿಂಗಧಾರಿಣ್ಯೈ ನಾರಾಯಣ್ಯೈ ನಮೋನಮಃ ।
ನಮಸ್ತೇ ವಿಶ್ವಮುಖ್ಯಾಯ್ಯೈ ರೇವತ್ಯೈ ತೇ ನಮೋನಮಃ ।
ಬೃಹತ್ಯೈ ತೇ ನಮಸ್ತೇಽಸ್ತು ಲೋಕಧಾತ್ರ್ಯೈ ನಮೋನಮಃ ।
ನಮಸ್ತೇ ವಿಶ್ವಮಿತ್ರಾಯ್ಯೈ ನಂದಿನ್ಯೈ ತೇ ನಮೋನಮಃ ।
ಪೃಥ್ವ್ಯೈ ಶಿವಾಮೃತಾಯ್ಯೈ ಚ ಸುವೃಷಾಯ್ಯೈ ನಮೋನಮಃ ।
ಶಾಂತಾಯ್ಯೈ ಚ ವರಿಷ್ಠಾಯ್ಯೈ ವರದಾಯ್ಯೈ ನಮೋನಮಃ ।
ಉಸ್ರಾಯ್ಯೈ ಸುಖದೋಗ್ಧ್ರ್ಯೈ ಚ ಸಂಜೀವಿನ್ಯೈ ನಮೋನಮಃ ।
ಬ್ರಹ್ಮಿಷ್ಠಾಯ್ಯೈ ಬ್ರಹ್ಮದಾಯ್ಯೈ ದುರಿತಘ್ನ್ಯೈ ನಮೋನಮಃ ।
ಪ್ರಣತಾರ್ತಿಪ್ರಭಂಜಿನ್ಯೈ ಜಗನ್ಮಾತ್ರೇ ನಮೋಽಸ್ತು ತೇ ।
ಸರ್ವಾಪತ್ಪ್ರತಿಪಕ್ಷಾಯ್ಯೈ ಮಂಗಲಾಯ್ಯೈ ನಮೋನಮಃ ।
ಶರಣಾಗತದೀನಾರ್ತಪರಿತ್ರಾಣಪರಾಯಣೇ ।
ಸರ್ವಸ್ಯಾರ್ತಿಹರೇ ದೇವಿ ನಾರಾಯಣಿ ನಮೋಽಸ್ತು ತೇ ।
ನಿರ್ಲೇಪಾಯ್ಯೈ ದುರ್ಗಹಂತ್ರ್ಯೈ ದಕ್ಷಾಯ್ಯೈ ತೇ ನಮೋನಮಃ ।
ಪರಾತ್ಪರತರೇ ತುಭ್ಯಂ ನಮಸ್ತೇ ಮೋಕ್ಷದೇ ಸದಾ ।
ಗಂಗೇ ಮಮಾಗ್ರತೋ ಭೂಯಾ ಗಂಗೇ ಮೇ ದೇವಿ ಪೃಷ್ಠತಃ ।
ಗಂಗೇ ಮೇ ಪಾರ್ಶ್ವಯೋರೇಹಿ ತ್ವಯಿ ಗಂಗೇಽಸ್ತು ಮೇ ಸ್ಥಿತಿಃ ।
ಆದೌ ತ್ವಮಂತೇ ಮಧ್ಯೇ ಚ ಸರ್ವಂ ತ್ವಂ ಗಾಂ ಗತೇ ಶುಭೇ ।
ತ್ವಮೇವ ಮೂಲಪ್ರಕೃತಿಸ್ತ್ವಂ ಹಿ ನಾರಾಯಣಃ ಪರಃ ।
ಗಂಗೇ ತ್ವಂ ಪರಮಾತ್ಮಾ ಚ ಶಿವಸ್ತುಭ್ಯಂ ನಮಃ ಶಿವೇ ।
ಯ ಇದಂ ಪಠತಿ ಸ್ತೋತ್ರಂ ಭಕ್ತ್ಯಾ ನಿತ್ಯಂ ನರೋಽಪಿ ಯಃ ।
ಶೃಣುಯಾಚ್ಛ್ರದ್ಧಯಾ ಯುಕ್ತಃ ಕಾಯವಾಕ್‌ಚಿತ್ತಸಂಭವೈಃ ।

ದಶಧಾ ಸಂಸ್ಥಿತೈರ್ದೋಷೈಃ ಸರ್ವೈರೇವ ಪ್ರಮುಚ್ಯತೇ ।
ಸರ್ವಾನ್‌ಕಾಮಾನವಾಪ್ನೋತಿ ಪ್ರೇತ್ಯ ಬ್ರಹ್ಮಣಿ ಲೀಯತೇ ।
ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ದಶಮೀ ಹಸ್ತಸಂಯುತಾ ।
ತಸ್ಯಾಂ ದಶಮ್ಯಾಮೇತಚ್ಚ ಸ್ತೋತ್ರಂ ಗಂಗಾಜಲೇ ಸ್ಥಿತಃ ।
ಯಃ ಪಠೇದ್ದಶಕೃತ್ವಸ್ತು ದರಿದ್ರೋ ವಾಪಿ ಚಾಕ್ಷಮಃ ।
ಸೋಽಪಿ ತತ್ಫಲಮಾಪ್ನೋತಿ ಗಂಗಾಂ ಸಂಪೂಜ್ಯ ಯತ್ನತಃ ।
ಅದತ್ತಾನಾಮುಪಾದಾನಂ ಹಿಂಸಾ ಚೈವಾವಿಧಾನತಃ ।
ಪರದಾರೋಪಸೇವಾ ಚ ಕಾಯಿಕಂ ತ್ರಿವಿಧಂ ಸ್ಮೃತಮ್ ।
ಪಾರುಷ್ಯಮನೃತಂ ಚೈವ ಪೈಶುನ್ಯಂ ಚಾಪಿ ಸರ್ವಶಃ ।
ಅಸಂಬದ್ಧಪ್ರಲಾಪಶ್ಚ ವಾಙ್ಮಯಂ ಸ್ಯಾಚ್ಚತುರ್ವಿಧಮ್ ।
ಪರದ್ರವ್ಯೇಷ್ವಭಿಧ್ಯಾನಂ ಮನಸಾಽನಿಷ್ಟಚಿಂತನಮ್ ।
ವಿತಥಾಭಿನಿವೇಶಶ್ಚ ಮಾನಸಂ ತ್ರಿವಿಧಂ ಸ್ಮೃತಮ್ ।
ಏತಾನಿ ದಶಪಾಪಾನಿ ಹರ ತ್ವಂ ಮಮ ಜಾಹ್ನವಿ ।
ದಶಪಾಪಹರಾ ಯಸ್ಮಾತ್ತಸ್ಮಾದ್ದಶಹರಾ ಸ್ಮೃತಾ ।
ತ್ರಯಸ್ತ್ರಿಂಶಚ್ಛತಂ ಪೂರ್ವಾನ್‌ಪಿತ್ೃನಥ ಪಿತಾಮಹಾನ್ ।
ಉದ್ಧರತ್ಯೇವ ಸಂಸಾರಾನ್ಮಂತ್ರೇಣಾನೇನ ಪೂಜಿತಾ ।
ನಮೋ ಭಗವತ್ಯೈ ದಶಪಾಪಹರಾಯೈ ಗಂಗಾಯೈ ನಾರಾಯಣ್ಯೈ ರೇವತ್ಯೈ
ಶಿವಾಯೈ ದಕ್ಷಾಯೈ ಅಮೃತಾಯೈ ವಿಶ್ವರೂಪಿಣ್ಯೈ ನಂದಿನ್ಯೈ ತೇ ನಮೋನಮಃ ।
ಸಿತಮಕರನಿಷಣ್ಣಾಂ ಶುಭವರ್ಣಾಂ ತ್ರಿನೇತ್ರಾಂ
ಕರಧೃತಕಲಶೋದ್ಯತ್ಸೋತ್ಪಲಾಮತ್ಯಭೀಷ್ಟಾಮ್ ।
ವಿಧಿಹರಿಹರರೂಪಾಂ ಸೇಂದುಕೋಟಿರಜುಷ್ಟಾಂ
ಕಲಿತಸಿತದುಕೂಲಾಂ ಜಾಹ್ನವೀಂ ತಾಂ ನಮಾಮಿ ।
ಆದಾವಾದಿಪಿತಾಮಹಸ್ಯ ನಿಗಮವ್ಯಾಪಾರಪಾತ್ರೇ ಜಲಂ
ಪಶ್ಚಾತ್ಪನ್ನಗಶಾಯಿನೋ ಭಗವತಃ ಪಾದೋದಕಂ ಪಾವನಮ್ ।
ಭೂಯಃ ಶಂಭುಜಟಾವಿಭೂಷಣಮಣಿರ್ಜಹ್ನೋರ್ಮಹರ್ಷೇ-
ರಿಯಂ ದೇವೀ ಕಲ್ಮಷನಾಶಿನೀ ಭಗವತೀ ಭಾಗೀರಥೀ ದೃಶ್ಯತೇ ।

ಗಂಗಾಗಂಗೇತಿ ಯೋ ಬ್ರೂಯಾದ್ಯೋಜನಾನಾಂ ಶತೈರಪಿ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥

**ಗಂಗಾಪೂಜೆ** – ಗಂಗೆ ಭಾಗೀರಥಿ ಮಂಗಳಾಂಗಿ ಅಳಕನಂದಳೇ ನೀ ಮಹಾ ಸುಂದರಾಂಗಿ । ಸಿಂಧುರಾಜನ ರಾಣಿ ಸರಿಯು ಸಂಪತ್ತು ಕೊಡು ಕಂಗಳಿಂದಲಿ ನೋಡಿ ಕರುಣಿಸೆನ್ನ ॥ಪ॥ ಕಾಶಿ ಪಟ್ಟಣದಲ್ಲಿ ವಾಸವಾಗಿ ಸರ । ಸ್ವತಿಯನು ಕೂಡಿ ನೀ ಸರಸವಾಗಿ । ಸೋಸಿಲಿಂದಲಿ ಸೂರ್ಯಪುತ್ರಿ ಯಮುನೆಯ ಕೂಡಿ । ಉಲ್ಲಾಸದಿಂದ್ಹರಿದು ವಾರ್ಣಾಸಿಗ್ಹೋಗಿ ॥1॥ ಹಾಲಿನಂತೆ ಹರಿವೊ ಗಂಗೆ ನೀನು । ನೀಲದಂತಿದ್ದ ಯುಮನೆಯನು ಕೂಡಿ ॥ ಲೀಲೆಯಿಂದಲಿ ಸರಸ್ವತಿಯನು ಕೂಡಿ । ಓಲ್ಯಾಡುತ ಬಂದೆ ಒಯ್ಯಾರದಿಂದ ॥2॥ ಭಗೀರಥನ ಹಿಂದೆ ನೀ ಬಂದೆ ಓಡಿ । ಸಗರನ ಸುತರ ಉದ್ಧಾರ ಮಾಡಿ ॥ ಜಗವ ಪಾವನ ಮಾಡೋ ಜಾಹ್ನವಿಯೇ ನೀ ಎನ್ನ । ಮಗುವೆಂದು ಮುಂದಕೆ ಕರೆಯೆ ತಾಯಿ ॥3॥ ಬಿಂದು ಮಾಧವ ವೇಣುಮಾಧವನ್ನ ಆ -। ನಂದ ಭೈರವ ಕಾಳ ಭೈರವನ್ನ ॥ ಚಂದದಿಂದ್ವಿಶ್ವನಾಥನ ಗುಡಿಮುಂದೆ । ಹೊಂದಿ ಹರಿದ್ಹನುಮಂತ ಘಾಟಿನ್ನಿಂದೆ ॥4॥ ಧಡಧಡನೆ ಬಂದು ದಡಗಳನು ಕೊರೆದು । ಪೊಡವಿ ಮ್ಯಾಲಿಂಥ ಸಡಗರದಿ ಹರಿಯ ॥ ಕಡಲಶಯನನ್ನ ಕಾಲುಂಗುಷ್ಠದ ಮಗಳು । ಕಡಲರಾಣಿಯೆ ಕಯ್ಯ ಪಿಡಿಯೆ ನೀನು ॥5॥ ಮರದ ಬಾಗಿಣ ಕುಂಕುಮರಿಷಿಣವು ಗಂಧ । ಪರಿಪರಿಯಿಂದ ಪೂಜೆಯಗೊಂಬುವಿ ॥ ಸ್ಥಿರವಾದ ಮುತ್ತೈದೆತನ ಜನಮ ಜನುಮಕ್ಕು । ವರವ ಕೊಟ್ಟು ವೈಕುಂಠವನು ತೋರಿಸೆ ॥6॥ ಮಧ್ಯಾಹ್ನದಲಿ ಮಲಕರ್ಣಿಕೆಯ ಸ್ನಾನ । ಶುದ್ಧವಾಗಿ ಪಂಚಗಂಗೆಯಲ್ಲಿ ॥ ಅದ್ದಿದ ದೇಹ ಪವಿತ್ರವನು ಮಾಡಿ ಭವಸ- । ಮುದ್ರವನು ದಾಟಿಸೆ ಭಾಗೀರಥಿ ॥7॥ ಎಷ್ಟು ಜನ್ಮ ಸುಕೃತ ಒದಗಿತೆಂದು ಗಂಗೆ । ಭೆಟ್ಟಿಯಾಗೊ ಪುಣ್ಯ ಬಂದಿತಿಂದು ॥ ಚಕ್ರತೀರ್ಥದ ಸ್ನಾನ ಸಂಕಲ್ಪದ ಫಲವ । ಕೊಟ್ಟು ರಕ್ಷಿಸು ತಾಯಿ ತರಂಗಿಣಿ ॥8॥ ಸಾಸಿರ ಮುಖದಿ ಶರಧಿಯನು ಕೂಡಿ ॥ ಹೋಗಿ ಬಾ ಊರಿಗೆ ಭಕ್ತಿ ನೀಡಿ ॥ ನೀನು ಭೀಮೇಶ ಕೃಷ್ಣನಲಿ ಹುಟ್ಟಿದ್ದ । ಪಾದವನು ತೋರೆನ್ನ ಪೊರೆಯಬೇಕೆ ॥9॥

**ಭಾಗೀರಥೀ ಹಾಡುಗಳು** – 1) ಭಾಗೀರಥೀದೇವಿ ಭಯನಿವಾರಣ ಗಂಗೆ । ಸಾಗರನ ನಿಜರಾಣಿ ಸಕಲ ಕಲ್ಯಾಣಿ॥ಪ॥ ಒಮ್ಮೆ ಶ್ರೀಹರಿ ಪಾದಕಮಲದಿಂದುದು-

ಭವಿಸಿ । ಬ್ರಹ್ಮ ಕರಪಾತ್ರಿಯಲಿ ನಿಂದು ಬಂದೆ । ಶ್ರೀಮನ್ನಾರಾಯಣನ ಪಾದ ತೀರ್ಥವಾಗಿ । ಬ್ರಹ್ಮಾಂಡವನು ಪಾವನ ಮಾಡಬಂದೆ ॥1॥ ದೇವಿ ನೀ ವಿಷ್ಣು ಪಾದೋಕದವೆಂದೆನಿಸಿ । ದೇವತೆಗಳಿಗೆಲ್ಲ ಅಧಿಕವಾದೆ ॥ ದೇವಲ್ಲರು ನೆರೆದು ತಲೆವಾಗಿದರು ಮಹ - । ದೇವನ ಶಿರದಿಂದ ಧರೆಗಿಳಿದು ಬಂದೆ ॥2॥ ಜಹ್ನುವಿಗೆ ಉದರದಲಿ ಪೊಕ್ಕ ಕಾರಣದಿಂದ । ಜಾನ್ಹವೀಯೆಂದು ನೀ ಎನಿಸಿಕೊಂಡು ॥ ಮುನ್ನೆ ನರಕಕ್ಕಿಳಿದ ಸಗರರಾಯನ ವಂಶ। ವನ್ನು ಪಾವನವಿನ್ನು ನೀ ಮಾಡಬಂದೆ ॥3॥ ದಿಟ್ಟಿಸಲು ಮುನ್ನೂರು ಜನ್ಮದ ಪಾತಕವು। ನೀಟಿಸಲು ಮೂರು ಜನ್ಮದ ಮುಕುತಿ-ಯು । ಮುಟ್ಟಿ ಮಾಡಿದರೊಂದು ಸ್ನಾನ ಮಾತ್ರದಲಿ । ಸುಟ್ಟು ಹೋಹುದು ಸಾಹಸ್ರ ಜನ್ಮದ ಪಾಪ ॥4॥ ಹಲವು ಪರಿಯಲ್ಲಿ ಹರಿಸ್ಮರಣೆ ಯಿಲ್ಲದೆ ಭವ - । ದೊಳಗೆ ಶಿಲ್ಕಿ ಕಡುನೊಂದೆ ನಾನು ॥ ಹಲವು ಮಾತ್ಯಾಕೆ ಶ್ರೀಪುರಂದರ ವಿಠಲನ । ಚಲುವ ಪದ ನಖದಿಳಿದೆ ವೊಲಿದು ದಯ ಮಾಡೆ ॥5॥

2) ಭಾಗೀರಥೀತಾಯಿ ಶೃಂಗಾರ ಶುಭಕಾಯೆ । ಶ್ರೀಭೂರಮಣ ತನಯೆ ॥ಪ॥ ನಿನ್ನ ಯಾತ್ರಿಗೋಸುಗ ಎನ್ನ। ಮನಸು ಪುಟ್ಟಿತು ಇನ್ನು ನೀ ಮರಿಸದೆ। ಪುಣ್ಯ ನರನ ಮಾಡೊ ಪೂತೋಭಾವವೆಂದು। ಧನ್ಯ ಜನಮಾನ್ಯೆ ಭಕ್ತಜನ ಪ್ರಸನ್ನೆ ॥1॥ ಶಿವ ನಿನ್ನ ಶಿರದಲ್ಲಿ ಧರಿಸಿದ ಕಾರಣ । ಪವಿತ್ರಗಂಗನಾನೆಂದು ॥ ಅವನಿಯೊಳಗೆ ಮಹಕವಿಜನ ಪೇಳಿದ । ಶ್ರವಣ ದಿಂದಲಿ ಭಕುತಿಯಿಂದಲಿ ನಿಂದೆ ॥2॥ ದೂರದಿಂದಲಿ ನಿನ್ನ ಸ್ಮರಿಸಿದವರ ಪಾಪ। ಹಾರಿಪೋಗುವದು ಸಿದ್ಧ॥ ಶ್ರೀರಮಣ ವಿಜಯವಿಠ್ಠಲರೇಯನ ಪಾದ। ವಾರಿಜ ಪೊಗಳುವಂತೆ ಬುದ್ಧಿ ಪಾಲಿಸುವುದು ॥3॥

**ಭಾಗೀರಥೀ ಸ್ತೋತ್ರ** – ಜೈ ಜೈ ಭಾಗೀರಥಿಗೆ ಜೈ ಜೈ ಭೋಗಾಪತಿಗೆ ಜೈ ಜೈ ಜಾನ್ಹವಿಗೆ ಕೂಡಿದ ತ್ರಿವೇಣಿ ತಾಯಿಗೆ ಕರ್ಕಾಟಕ ಮಾಸದಲ್ಲಿ । ಅರ್ಥಿಯಿಂದಲಿ ಭಾಗೀರಥಿ ವಸತಿ ಮಾಡಿದಳು ಗೋದಾವರೀ ಮಧ್ಯದಲ್ಲಿ । ಭೀಮರಥಿ ದಾಟಿ ಪ್ರೇಮದಿ ಕೃಷ್ಣೆಯ ದಾಟಿ ಹಂಪಿ ಕ್ಷೇತ್ರಕ್ಕೆ ಬಂದು ನಿಂತಳು. ತುಂಗಭದ್ರೆಯಲ್ಲಿ ನಿಂತ ಫಲ ಜನರಿಗೆಲ್ಲ ಪಾನಂಗಳನೆ ಮಾಡಿಸುವ ಅಜ ಬಂದಳು ಶ್ರೀ ಗಂಗೆ ನಿಜ ಬಂದಳು ಶ್ರೀಯಮುನೆ ಮದನ ಪಿತನ ಸುತೆ ಭಾಗೀರಥಿ ಬಂದಳೆಂದು ಭೂಸುರರೆಲ್ಲ ಗುಡಿ ತೋರಣ ಕಟ್ಟುವರು ಸಡಗರದಿಂದಲಿ । ಎದುರುಗೊಂಡರು ಗಂಗೆಯ, ಆಗರದ

ಅಡಿಕೆ ಹೋಳು, ನಾಗಬಳ್ಳಿಯ ಎಲಿಯು ನಾರೆರೆಲ್ಲ ಮರದ ಬಾಗಿಣ ಕೊಡು-ವೋರು । ಅಷ್ಟ ಭೋಗದಿ ಅಡಿಕೆಹೋಳು ಉತ್ತರಬಳ್ಳಿಯ ಬಿಳಿ ಎಲೆಯು ಮಿತ್ರರೆಲ್ಲ ಮರದ ಬಾಗಿಣ ಕೊಡುವೋರು । ಒಂದು ದಿನ ಮಘ ಮಾಡಿದರೆ ಹಿಂಗಿತು ಸರ್ವಪಾಪಗಳು । ದಾರು ಬಲ್ಲರು ಮೂರು ದಿನ ಮಾಘದ ಫಲದೆಡೆಗಳನು ॥ ಮೂರು ದಿನ ಮಘ ಮಾಡಿದರ ಸಾಯುಜ್ಯ ಪದವುಂಟು, ದಾರು ಬಲ್ಲರು ಹತ್ತು ದಿನ ಮಾಘದ ಫಲದೆಡೆಗಳನು ॥ ಹತು ದಿನ ಮಾಡಿದರ ಪುತ್ರೋತ್ಸವವಾಗುವದು । ದಾರು ಬಲ್ಲರು ತಿಂಗಳ ಮಾಘದ ಫಲದೆಡೆಗಳನು ॥ ತಿಂಗಳ ಮಾಘ ಮಾಡಿದರ ಗೋವಿಂದನ ದಯವಾಹೋದು ॥

ಶಾರಾ ದೊಡ್ಡದು ಪ್ರಯಾಗವೆಂಬೋದು ಕ್ಷೇತ್ರ ಸಾರಿ ಹೇಳುವೆ ಗಂಗೆ ಯಮುನೆ ಯರ ಚರಿತೆ ॥ ಸ್ನಾನ ಮಾತ್ರದಿ ಭಕ್ತರಿಗೆ ಆಭಯಗಳನು ತಾನೆ ಕೊಡುವಳು ವೇಣುಮಾಧವನ ದಯದಿ ॥1॥ ಹಸಿರರು ಪಚ್ಚದಂತೆ ಹೊಳೆವಳ ಮುದ್ದುಸುರಿವಳ ನಂಬಿದವರ ಮರೆಯಳ ಕುಂದುಕೊರತೆಗಳ ಎಣಿಸಳ ನಮ್ಮನ್ ದಣಿಸಳ ದೋಷಿಗರ ದಣಿಸುವಳ ಗಂಧ ಕುಂಕುಮ ಧ್ಯಾನ ಲೇಪಳ ಶುಭ್ರ ತಾಪಳ ಪಾವನ ಸರೂಪಳ ತುಳಸಿಯ ಸೇವಿಸೋಣ ಬಾರ ಬ್ಯಾಗನೆ ನೀರೆ ॥2॥ ದೂರ ದೇಶದಿ ಬಂದೆ ನಾನಿನ್ನ ಬಳಿಗೆ ಬಾಗಿ ನಮಿಸುವೆ ನಿನ್ನ ಪಾದಾಬ್ಜಗಳಿಗೆ ಘೋರ ಜನ್ಮದೊಳ್ ಪಾರುಗಾಣಿಸು ಎಂದು ಧರ್ಮನನುಜಕೇಳ್ ಬೇಡಿಕೊಂಬುವೆ ನಿನ್ನ ॥3॥ ಮಿಂದು ಮಡಿಯನುಟ್ಟು ಸಖಿಯರು ಸಂಭ್ರಮದಿಂದ ತಂದು ಪೂಜಿಸಿ ಅಲಂಕೃತರಾಗಿ ತೋಷಿತರಾಗಿ ತಮ್ಮ ಪತಿಸಹಿತರಾಗಿ ಬಂದು ನಿನಗೆ ವೇಣದಾನವ ಕೊಡುವೆನು ಪ್ರೇಮಮನದಣಿಯೆ ನೋಡಿದೆ ಹೋಗಿ ನೋಡೋಣು ಬಾರ ಜಾಣೆಯ ತ್ರಿವೇಣಿಯ ॥4॥ ಶ್ರೇಷ್ಠ ಜನ್ಮದೊಳ್ ಪುಟ್ಟಿದಕೆ ಫಲವು ಈಗ ಧಿಟ್ಟೆರಿಬ್ಬರ ನೋಡಿ ನಾ ಧನ್ಯನಾದೆ ಒಲಿದು ಬಾಗಿಲಿಗೆ ಗಂಗಾ ಭರದಿಂದ ಬಹುತ್ವರದಿಂದ ಹರಿ ನದಿಯೋಗದಿಂದ ಗುರುಕೃಷ್ಣ ವಿಠ್ಠಲನ ಚರಣದಿ ಉದ್‌ಭವಿಸಿದಿ ಮನದಣಿಯೆ ನೋಡಿದೆ ಹೋಗಿ ನೋಡೋಣು ಬಾರ ಜಾಣೆಯ ತ್ರಿವೇಣಿಯ ॥5॥

ನಡೆದು ಬಂದೆನು ಭಾಗೀರಥಿಗೆ ಎನ್ನ ಒಡಲೊಳಗಿದ್ದ ಪಾಪಗಳೆಲ್ಲ ಕಳೆಯೇ ಕಶ್ಮಲಗಳೆಲ್ಲ ತೊಳೆಯೆ ॥ಪ॥ ಸಿಂಹಕ್ಕೆ ಬೃಹಸ್ಪತಿ ಇರಲು ಅಲ್ಲೆ ಶ್ರೀಗೌತಮ ಭಾಗೀರಥಿ

ಬರಲು ಸೀಮೆಯ ಜನರೆಲ್ಲ ನೆರೆದು ಭೂಮಿಯ ಪಾವನ ಮಾಡಿದ ಶ್ರೀಗಂಗಾ ||1|| ಕಾಲ ಬಲವು ಎನಗಿಲ್ಲ ದ್ರವ್ಯ ಬಲವು ಅದಕ್ಕಿಂತಯಿಲ್ಲ ಎನ್ನೊಡೆಯ ಮಾಧವರಾಯಾ ಬಲ್ಲ ಹೀಂಗ ದೃಡಭಕ್ತಿಯನೋಡಿ ಹನುಮ ಭೀಮ ಮಧ್ವ ಕರೆತಂದೆರು ||2|| ಮಧ್ವರಾಯರ ನಂಬಿ ಬಂದೆ ಅಲ್ಲೆ ಮುದ್ಗಲ್ಲ ನರಸಿಂಹನ ಪಾದವ ಕಂಡೆ ಸಕಲತೀರ್ಥಗಳಲ್ಲಿ ಮಿಂದೆ ಕಾಶಿ ಬಿಂದುಮಾಧವನ ಪಾದವ ಕಂಡೆ ||3||

## ಜ್ಯೇಷ್ಠ|| ಶುದ್ಧ|| ಏಕಾದಶೀ

ಪಾದ್ಮಪುರಾಣೇ ಉತ್ತರಖಂಡೇ ತ್ರಿಪಂಚಾಶತ್ತಮೋಽಧ್ಯಾಯಃ – ಯುಧಿಷ್ಠಿರಃ – ಅಪರಾಯಾಶ್ಚ ಮಾಹಾತ್ಮ್ಯಂ ಶ್ರುತಂ ಸರ್ವಂ ಜನಾರ್ದನ | ಜ್ಯೇಷ್ಠಸ್ಯ ಶುಕ್ಲಪಕ್ಷೇ ತು ಸ್ಯಾದ್ಯಾ ತಾಂ ವದ ಮಾನದ ||1|| ಯುಧಿಷ್ಠಿರನು ಹೇಳಿದನು. ಎಲೈ ಜನಾರ್ದನನೇ! ಅಪರಏಕಾದಶಿಯ ಮಹಿಮೆಯನ್ನು ಕೇಳಿದೆನು. ಅದೇ ಜ್ಯೇಷ್ಠ-ಶುದ್ಧದಲ್ಲಿ ಬರುವ ಏಕಾದಶಿಯ ಹೆಸರೇನು ಅದನ್ನು ಹೇಳು. ಶ್ರೀಕೃಷ್ಣಃ – ಏತಾಂ ವಕ್ಷ್ಯತಿ ಧರ್ಮಾತ್ಮಾ ವ್ಯಾಸಃ ಸತ್ಯವತೀಸುತಃ | ಸರ್ವಶಾಸ್ತ್ರಾರ್ಥತತ್ವಜ್ಞೋ ವೇದ-ವೇದಾಂಗಪಾರಗಃ ||2|| ಶ್ರೀಕೃಷ್ಣನು ಹೇಳಿದನು – ಎಲೈ ಯುಧಿಷ್ಠಿರನೇ! ಸರ್ವಶಾಸ್ತ್ರಾರ್ಥವನ್ನೂ ಬಲ್ಲ ವೇದವೇದಾಂಗಗಳಲ್ಲಿ ಪಾರಗನಾದ ಸತ್ಯವತಿ ಸುತನಾದ ವ್ಯಾಸನು ಈ ಏಕಾದಶಿಯ ಬಗ್ಗೆ ಹೇಳಿದ್ದಾನೆ. ಅದನ್ನೇ ಹೇಳುತ್ತೇನೆ. ಯುಧಿಷ್ಠಿರಃ – ಶ್ರುತಾ ಮೇ ಮಾನವಾ ಧರ್ಮಾ ವಾಸಿಷ್ಠಾಶ್ಚ ಶ್ರುತಾ ಮಯಾ | ದ್ವೈಪಾಯನ ಯಥಾವತ್ತ್ವಂ ವೈಷ್ಣವಾನ್ ವಕ್ತುಮರ್ಹಸಿ || 3|| ಯುಧಿಷ್ಠಿರನು ಹೇಳಿದನು – ಎಲೈ ಕೃಷ್ಣನೇ! ಮನುವು ಹೇಳಿರುವ ಧರ್ಮಗಳನ್ನು ಕೇಳಿದೆನು. ವಸಿಷ್ಠನು ಹೇಳಿದ ಧರ್ಮಗಳನ್ನೂ ಕೇಳಿದೆನು. ವ್ಯಾಸನು ಹೇಳಿರುವ ವೈಷ್ಣವ ಧರ್ಮಗಳನ್ನು ತಿಳಿಸು. ಕೃಷ್ಣಃ – ಶ್ರುತಾ ಯೇ ಮಾನವಾ ಧರ್ಮಾ ವೈದಿಕಾಶ್ಚ ಶ್ರುತಾ- ಸ್ತ್ವಯಾ | ಕಲೌ ಯುಗೇ ನ ಶಕ್ಯಂತೇ ತೇ ವೈ ಕರ್ತುಂ ನರಾಧಿಪ ||4|| ಕೃಷ್ಣನು ಹೇಳಿದನು – ಮನುವಿನ ಧರ್ಮಗಳನ್ನೂ, ವೈದಿಕಧರ್ಮಗಳನ್ನೂ ಕಲಿಯುಗದಲ್ಲಿ ಮಾಡಲಾಗುವುದಿಲ್ಲ. ಸುಖೋಪಾಯಂ ಅಲ್ಪಧನಮಲ್ಪಕ್ಲೇಶಂ ಮಹಾಫಲಮ್ | ಪುರಾಣಾನಾಂ ಚ ಸರ್ವೇಷಾಂ ಸಾರಭೂತಂ ಮಹಾಮತೇ ||5|| ಎಲೈ ಕೃಷ್ಣನೇ ಪುರಾಣಗಳ ಸಾರವೇನೆಂದರೆ, ಸುಲಭವಾದ ಉಪಾಯವನ್ನು

ಬೋಧಿಸುತ್ತದೆ. ಸ್ವಲ್ಪವೇ ಹಣದಿಂದ ಸಾಧ್ಯವಾಗುತ್ತದೆ. ಫಲವು ಹೆಚ್ಚು ಬರುತ್ತದೆ. ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ । ದ್ವಾದಶ್ಯಾಂ ತು ಶುಚಿರ್ಭೂತ್ವಾ ಪುಷ್ಪೈಃ ಸಂಪೂಜ್ಯ ಕೇಶವಮ್ ॥6॥ ಭುಂಜೀತ ಕೃತ್ಯಕೃತ್ಯಸ್ತು ಪಶ್ಚಾದ್ ವಿಪ್ರಪುರಸ್ಸರಮ್ । ಸೂತಕೇಽಪಿ ನ ಭೋಕ್ತವ್ಯಂ ನಾಽಽಶೌಚೇ ಚ ಜನಾಧಿಪ ॥7॥ ಎರಡು ಪಕ್ಷಗಳ ಏಕಾದಶಿಯ ದಿನವೂ ಊಟ ಮಾಡಬಾರದು. ದ್ವಾದಶಿಯ ದಿವಸ ಸ್ನಾನಮಾಡಿ ಶುಚಿಯಾಗಿ ಕೇಶವನನ್ನು ಪೂಜಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಅನಂತರ ತಾನೂ ಊಟ ಮಾಡಬೇಕು. ಸೂತಕದಲ್ಲಾಗಲೀ ಅಶೌಚದಲ್ಲಾಗಲೀ ಏಕಾದಶಿಯ ದಿವಸ ಊಟಮಾಡಬಾರದು. ಯಾವಜ್ಜೀವಂ ವ್ರತಮಿದಂ ಕರ್ತವ್ಯಂ ಪುರುಷರ್ಷಭ । ಸ್ವರ್ಗತಿಂ ಪ್ರಾಪ್ತುಮಿಚ್ಛದ್ಭಿರತ್ರ ಮೇ ನಾಸ್ತಿ ಸಂಶಯಃ ॥8॥ ಎಲೈ ಧರ್ಮಜನೇ! ಈ ವ್ರತವನ್ನು ಪ್ರಾಣವಿರುವವರೆಗೂ ಮಾಡಬೇಕು. ಹಾಗಾದರೆ ಸ್ವರ್ಗವು ಸಿಗುತ್ತದೆ. ಇದರಲ್ಲಿ ಸಂಶಯವಿಲ್ಲ. ಅತಿಪಾಪದುರಾಚಾರಾಃ ಪಾಪಿಷ್ಠಾ ಧರ್ಮವರ್ಜಿತಾಃ । ಏಕಾದಶ್ಯಾಂ ನ ಭುಂಜಂತಿ ನ ತೇ ಯಾಂತಿ ಯಮಾಂತಿಕಮ್ ॥9॥ ಪಾಪಿಷ್ಠರೂ ಧರ್ಮ ಮಾಡದವರೂ ಕೂಡ ಏಕಾದಶಿಯ ದಿನ ಊಟ ಮಾಡದಿದ್ದರೆ ಅವರು ಯಮಲೋಕವನ್ನು ಹೊಂದುವುದಿಲ್ಲ. ಮಹಾದೇವಃ – ಇತಿ ತದ್ವಚನಂ ಶ್ರುತ್ವಾ ಕಂಪಿತೋಶ್ವತ್ಥಪತ್ರವತ್ । ಭೀಮಸೇನೋ ಮಹಾಬಾಹುಃ ತದೋವಾಚ ಗುರುಂ ಪ್ರತಿ ॥10॥ ಮಹಾದೇವನು ಹೇಳಿದನು – ಆಗ ಮಹಾಬಾಹುವಾದ ಭೀಮಸೇನನು ಇದನ್ನು ಕೇಳಿ ಅರಳಿಯ ಎಲೆಯಂತೆ ನಡುಗುತ್ತಾ ಇಂತೆಂದನು. ಭೀಮಸೇನಃ – ಪಿತಾಮಹ ಮಹಾಬುದ್ಧೇ ಶೃಣು ಮೇ ಪರಮಂ ವಚಃ । ಯುಧಿಷ್ಠಿರಶ್ಚ ಕುಂತೀ ಚ ತಥಾ ದ್ರುಪದನಂದಿನೀ ॥11॥ ಅರ್ಜುನೋ ನಕುಲಶ್ಚೈವ ಸಹದೇವಸ್ತಥೈವ ಚ । ಏಕಾದಶ್ಯಾಂ ನ ಭುಂಜಂತಿ ಕದಾಚಿದಪಿ ಸುವ್ರತ ॥12॥ ಎಲೈ ಪಿತಾಮಹನಾದ ವ್ಯಾಸನೇ! ಧರ್ಮಜ, ಕುಂತಿ, ದ್ರೌಪದಿ, ಅರ್ಜುನ, ನಕುಲ, ಸಹದೇವ ಇವರು ಏಕಾದಶಿಯ ದಿವಸ ಊಟಮಾಡುವುದಿಲ್ಲ. ತೇ ಮಾಂ ಬ್ರುವಂತಿ ವೈ ನಿತ್ಯಂ ಮಾ ಭುಂಕ್ಷ್ವ ತ್ವಂ ವೃಕೋದರ । ಅಹಂ ತಾನಬ್ರವಂ ತಾತ ಬುಭುಕ್ಷಾ ದುಃಸಹಾ ಮಮ । ದಾನಂ ದಾಸ್ಯಾಮಿ ವಿಧಿವತ್ ಪೂಜಯಿತ್ವಾ ಚ ಕೇಶವಮ್ ॥13॥ ಅವರೆಲ್ಲರೂ ನನ್ನನ್ನು ಕುರಿತು ಎಲೈ ವೃಕೋದರನೇ! ನೀನು ಏಕಾದಶಿಯ ದಿವಸ ಊಟಮಾಡ-

ಬೇಡವೆನ್ನುತ್ತಾರೆ. ನಾನು ಮಾತ್ರ, ನನಗೆ ಹಸಿವು ತಡೆಯಲಾಗುವುದಿಲ್ಲ. ಕೇಶವನ ಪೂಜೆಯನ್ನು ಮಾಡಿ ದಾನಗಳನ್ನು ಕೊಡುತ್ತೇನೆ ಎಂದೆನ್ನುತ್ತಿರುವೆನು. **ಮಹಾದೇವ – ಭೀಮಸೇನವಚಃ ಶ್ರುತ್ವಾ ವ್ಯಾಸೋ ವಚನಮಬ್ರವೀತ್ ॥14॥** ಮಹಾದೇವನು ಹೇಳಿದನು – ಭೀಮಸೇನನ ಈ ಮಾತನ್ನು ಕೇಳಿ ವ್ಯಾಸನು ಹೀಗೆಂದನು. **ವ್ಯಾಸಃ – ಯದಿ ಸ್ವರ್ಗೋ ಹ್ಯಭೀಷ್ಟಸ್ತೇ ನರಕೋ ದುಷ್ಟ ಏವ ಚ । ಏಕಾದಶ್ಯಾಂ ನ ಭೋಕ್ತವ್ಯಂ ಪಕ್ಷಯೋರುಭಯೋರಪಿ ॥15॥** ವ್ಯಾಸನು ಹೇಳಿದನು – ಎಲೈ ಭೀಮನೇ! ನಿನಗೆ ಸ್ವರ್ಗವು ಬೇಕಾಗಿ ನರಕವು ಬೇಡವಾದರೆ ಶುಕ್ಲ ಕೃಷ್ಣಪಕ್ಷಗಳೆರಡರ ಏಕಾದಶಿಗಳಲ್ಲಿಯೂ ಊಟ ಮಾಡಬೇಡ. **ಭೀಮಸೇನಃ – ಪಿತಾಮಹ ಮಹಾಬುದ್ಧೇ ಕಥಯಾಮಿ ತವಾಗ್ರತಃ । ಏಕಭುಕ್ತೇ ನ ಶಕ್ನೋಮಿ ಉಪವಾಸೇ ಕುತಃ ಪ್ರಭೋ ॥16॥** ಭೀಮಸೇನನು ಹೇಳಿದನು – ಎಲೈ ಪಿತಾಮಹನೇ! ನಿನ್ನೆದುರಿಗೆ ನಿಶ್ಚಯವಾಗಿಯೂ ಹೇಳುತ್ತೇನೆ. ನನಗೆ ಒಂದು ಹೊತ್ತು ಊಟಮಾಡಿಕೊಂಡಿರುವುದಕ್ಕೇ ಆಗುವುದಿಲ್ಲ. ಉಪವಾಸ ಮಾಡುವುದೆಲ್ಲಿ ಆದೀತು? **ವೃಕೋ ನಾಮ ಚ ಯೋ ವಹ್ನಿಃ ಸ ಸದಾ ಜಠರೇ ಮಮ । ಅತಿವೇಳಂ ಯದಾಶ್ನಾಮಿ ತದಾ ಸಮುಪಶಾಮ್ಯತಿ ॥17॥** ನನ್ನ ಹೊಟ್ಟೆಯಲ್ಲಿ ವೃಕ ಎಂಬ ಬೆಂಕಿಯು ಸದಾ ಉರಿಯುತ್ತಿರುವುದು. ನಾನು ಬಹುವಾಗಿ ತಿಂದರೆ ಅದು ಆಗ ಶಾಂತವಾಗುತ್ತದೆ. **ಏಕಂ ಶಕ್ನೋಮ್ಯಹಂ ಕರ್ತುಮುಪವಾಸಂ ಮಹಾಮುನೇ । ಯೇನೈವ ಪ್ರಾಪ್ಯತೇ ಸ್ವರ್ಗಃ ತತ್ಕರ್ತಾಸ್ಮಿ ಯಥಾತಥಮ್ । ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಹಮಾಪ್ನುಯಾಮ್ ॥18॥** ಸ್ವರ್ಗವು ಖಂಡಿತವಾಗಿ ಬರುವ ಯಾವುದಾದರೂ ಒಂದು ಏಕಾದಶಿಯನ್ನು ಹೇಳು. ಅದೊಂದರಲ್ಲಿ ಉಪವಾಸ ಮಾಡುತ್ತೇನೆ. ಅದನ್ನು ನಿಶ್ಚಯಿಸಿ ಹೇಳು. **ವ್ಯಾಸಃ – ವೃಷಸ್ಥೇ ಮಿಥುನಸ್ಥೇ ವಾ ಯದಾ ಚೈಕಾದಶೀ ಭವೇತ್ । ಜ್ಯೇಷ್ಠಮಾಸೇ ಪ್ರಯತ್ನೇನ ಸೋಪೋಷ್ಯೋ-ದಕವರ್ಜಿತಮ್ ॥19॥** ವೃಷಭಮಾಸವಾಗಲೀ ಮಿಥುನ ಮಾಸವಾಗಲೀ ಇದ್ದು ಜ್ಯೇಷ್ಠಮಾಸದಲ್ಲಿ ಏಕಾದಶಿ ಬಂದಲ್ಲಿ ಆ ಏಕಾದಶಿಯಲ್ಲಿ ನೀರನ್ನೂ ಸಹ ಕುಡಿ-ಯದಂತೆ ಉಪವಾಸ ಮಾಡು. **ಗಂಡೂಷಾಚಮನಂ ವಾರಿ ವರ್ಜಯಿತ್ವೋದಕಂ ಬುಧಃ । ಉಪಭುಂಜೀತ ನೈವೇಹ ವ್ರತಭಂಗೋಽನ್ಯಥಾ ಭವೇತ್ ॥20॥** ಬಾಯಿ ಮುಕ್ಕಳಿಸುವುದು, ಆಚಮನ ಮಾಡುವುದು ಇವನ್ನು ಬಿಟ್ಟು ನೀರನ್ನು ಸ್ವಲ್ಪವೂ

ಕುಡಿಯ ಕೂಡದು. ಹಾಗೆ ಮಾಡಿದರೆ ವ್ರತಭಂಗವಾಗುತ್ತದೆ. ಉದಯಾದುದಯಂ ಯಾವದ್ ವರ್ಜಯಿತ್ವೋದಕಂ ನರಃ । ಅಯತ್ನಾತ್ ಸಮವಾಪ್ನೋತಿ ದ್ವಾದಶ-ದ್ವಾದಶೀಫಲಮ್ ॥21॥ ಸೂರ್ಯೋದಯದಿಂದ ಮತ್ತೊಂದು ಸೂರ್ಯೋ-ದಯದವರೆಗೂ ನೀರನ್ನೂ ಕೂಡ ಕುಡಿಯದಿದ್ದರೆ ಇದರಿಂದ ಸುಲಭವಾಗಿಯೇ ಹನ್ನೆರಡು ದ್ವಾದಶಿಗಳ ಫಲವನ್ನು ಹೊಂದುತ್ತಾನೆ. ತತಃ ಪ್ರಭಾಗೇ ವಿಮಲೇ ದ್ವಾದಶ್ಯಾಂ ಸ್ನಾನಮಾಚರೇತ್ । ಜಲಂ ಸುವರ್ಣಂ ದತ್ವಾ ಚ ದ್ವಿಜಾತಿಭ್ಯೋ ಯಥಾವಿಧಿ ॥22॥ ಭುಂಜೀತ ಕೃತಕೃತ್ಯಸ್ತು ಬ್ರಾಹ್ಮಣೈಃ ಸಹಿತೋ ವಶೀ । ಏವಂ ಕೃತೇ ತು ಯತ್ಪುಣ್ಯಂ ಭೀಮಸೇನ ಶೃಣುಷ್ವ ತತ್ ॥23॥ ಸಂವತ್ಸರೇ ತು ಯಾಶ್ಚೈವ ಏಕಾದಶ್ಯೋ ಭವಂತಿ ಹಿ । ತಾಸಾಂ ಫಲಮವಾಪ್ನೋತಿ ಹ್ಯತ್ರ ಮೇ ನಾಸ್ತಿ ಸಂಶಯಃ ॥24॥ ಅನಂತರ ಮಾರನೆಯ ದಿವಸ ಬೆಳಗಾಗಲು ದ್ವಾದಶಿಯ ದಿನ ಸ್ನಾನ ಮಾಡಬೇಕು. ಆ ದಿನ ನೀರನ್ನೂ ದಕ್ಷಿಣೆಯನ್ನೂ ಬ್ರಾಹ್ಮಣರಿಗೆ ದಾನ ಮಾಡಿ ಭೋಜನ ಮಾಡಿಸಿ, ನಂತರ ತಾನೂ ಊಟ ಮಾಡಿ ಕೃತಕೃತ್ಯನಾಗಬೇಕು. ಹೀಗೆ ಮಾಡಿದರೆ ಬರುವ ಪುಣ್ಯವನ್ನು ಎಲೈ ಭೀಮಸೇನನೇ! ಕೇಳು. ಆ ವರ್ಷದಲ್ಲಿ ಎಷ್ಟು ಏಕಾದಶಿಗಳು ಬರುತ್ತವೆಯೋ ಅವುಗಳ ಫಲವನ್ನೆಲ್ಲಾ ಹೊಂದುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ. ಇತಿ ಮಾಂ ಕೇಶವಃ ಪ್ರಾಹ ಶಂಖಚಕ್ರಗದಾಧರಃ । ಪುಮಾನ್ ಸರ್ವಂ ಪರಿತ್ಯಜ್ಯಮ ಮಾಮೇಕಂ ಶರಣಂ ವ್ರಜೇತ್ ॥25॥ ಶಂಖಚಕ್ರಗದಾಧರನಾದ ಕೇಶವನು ಹೀಗೆಂದು ನನಗೆ ಹೇಳಿರುವನು. ಮನುಷ್ಯನು ಎಲ್ಲವನ್ನೂ ಬಿಟ್ಟು ನನ್ನನ್ನೇ ಶರಣು ಹೊಂದಬೇಕು. ಏಕಾದಶ್ಯಾಂ ನಿರಾಹಾರಸ್ತತಃ ಪಾಪಾತ್ ಪ್ರಮುಚ್ಯತೇ । ದ್ರವ್ಯಶುದ್ಧಿಃ ಕಲೌ ನಾಸ್ತಿ ಸಂಸ್ಕಾರಃ ಸ್ಮಾರ್ತ ಏವ ಚ ॥26॥ ವೈದಿಕಸ್ತು ಕುತಶ್ಚಾಪಿ ಪ್ರಾಪ್ತೇ ದುಷ್ಟೇ ಕಲೌ ಯುಗೇ । ಕಿಂತು ತೇ ಬಹುನೋಕ್ತೇನ ವಾಯುಪುತ್ರ ಪುನಃ ಪುನಃ ॥27॥ ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ । ಏಕಾದಶ್ಯಾಂ ಸಿತೇ ಪಕ್ಷೇ ಜ್ಯೇಷ್ಠೇಮಾಸ್ಯುದಕಂ ವಿನಾ ॥28॥ ಪುಣ್ಯಂ ಫಲಮಾಪ್ನೋತಿ ತಚ್ಛೃಣುಷ್ವ ವೃಕೋದರ । ಸಂವತ್ಸರೇ ತು ಯಃ ಪ್ರೋಕ್ತಾಃ ಶುಕ್ಲಾಃ ಕೃಷ್ಣಾ ವೃಕೋದರ ॥29॥ ಉಪೋಷಿತಾ ಹಿ ಸರ್ವಾ ಸ್ಯುಃ ಏಕಾದಶ್ಯೋ ನ ಸಂಶಯಃ । ಧನಧಾನ್ಯಪ್ರದಾ ಪುಣ್ಯಾ ಪುತ್ರಾರೋಗ್ಯಶುಭಪ್ರದಾ ॥30॥ ಉಪೋಷಿತಾ ನರವ್ಯಾಘ್ರ ಇತಿ ಸತ್ಯಂ ಬ್ರವೀಮಿ ತೇ । ಯಮದೂತಾ

ಮಹಾಕಾಯಾಃ ಕರಾಳಾಃ ಕೃಷ್ಣರೂಪಿಣಃ ||31|| ದಂಡಪಾಶಧರಾ ರೌದ್ರಾ ನೋಽಪಸರ್ಪಂತಿ ತಂ ನರಮ್ । ಪೀತಾಂಬರಧರಾಃ ಸೌಮ್ಯಾಶ್ಚಕ್ರಹಸ್ತಾ ಮನೋ-ಜವಾಃ ||32|| ಅಂತಕಾಲೇ ನಯಂತ್ಯೇತಂ ವೈಷ್ಣವಂ ವೈಷ್ಣವಂ ವೈಷ್ಣವೀ ಪುರೀಮ್ । ತಸ್ಮಾತ್ ಸರ್ವಪ್ರಯತ್ನೇನ ಉಪೋಷ್ಯೋದಕವರ್ಜಿತಾ ||33|| ಹೀಗೆ ಏಕಾದಶಿಯ ದಿವಸ ನಿರಾಹಾರನಾಗಿದ್ದರೆ ಪಾಪದಿಂದ ಪಾರಾಗುತ್ತಾನೆ. ಕಲಿಯುಗದಲ್ಲಿ ದ್ರವ್ಯ-ಗಳಲ್ಲಿ ಶುದ್ಧಿಯಿಲ್ಲವು. ಸಂಸ್ಕಾರಗಳು ಸ್ಮೃತಿಯಂತೆ ನಡೆಯುತ್ತವೆ. ಈ ದುಷ್ಟಕಲಿ-ಯುಗವು ಬಂದರೆ ವೈದಿಕಸಂಸ್ಕಾರಗಳು ಅಪರೂಪವಾಗಿ ಅಲ್ಲಲ್ಲಿ ನಡೆಯುತ್ತವೆ. ಎಲೈ ವಾಯುಪುತ್ರನೇ! ಬಹಳ ಮಾತಿನಿಂದೇನು? ಎರಡು ಪಕ್ಷಗಳಲ್ಲಿಯೂ ಬರುವ ಏಕಾದಶಿಯ ದಿವಸ ಊಟ ಮಾಡಬಾರದು. ಜ್ಯೇಷ್ಠಮಾಸದ ಶುಕ್ಲಪಕ್ಷ-ದಲ್ಲಿ ಬರುವ ಏಕಾದಶಿಯ ದಿನ ನೀರನ್ನು ಕುಡಿಯದೇ ಉಪವಾಸ ಮಾಡಿದರೆ ಬರುವ ಪುಣ್ಯಫಲವನ್ನು ಹೇಳುತ್ತೇನೆ. ಕೇಳು. ಹಾಗೆ ಮಾಡಿದರೆ ವರ್ಷದಲ್ಲಿ ಬರುವ ಶುಕ್ಲ, ಕೃಷ್ಣಪಕ್ಷಗಳ ಏಕಾದಶಿಗಳೆಲ್ಲದರಲ್ಲಿಯೂ ಉಪವಾಸ ಮಾಡಿ-ದಂತಾಗುತ್ತದೆ. ಇದರಲ್ಲಿ ಸಂಶಯವಿಲ್ಲ. ಹೀಗೆ ಉಪವಾಸ ಮಾಡಿದರೆ ಧನಧಾನ್ಯಗಳೆಲ್ಲವೂ ಬರುತ್ತವೆ. ಪುಣ್ಯವೂ ಬರುತ್ತದೆ. ಮಕ್ಕಳು, ಆರೋಗ್ಯ ಎಲ್ಲವೂ ಉಂಟಾಗುತ್ತವೆ. ಇದು ಸತ್ಯವು. ಭಯಂಕರವಾದ ದೇಹವೂ ಕೆಂಪು ಬಣ್ಣವೂ ಉಳ್ಳ ಯಮದೂತರು ದಂಡಪಾಶಗಳನ್ನು ಧರಿಸಿದವರಾಗಿ ಅವರ ಹತ್ತಿರ ಬರುವುದೇ ಇಲ್ಲ. ಪೀತಾಂಬರವನ್ನು ಧರಿಸಿದ ಸೌಮ್ಯವಾದ ಆಕಾರವುಳ್ಳ ಚಕ್ರವನ್ನು ಕೈಯ್ಯಲ್ಲಿ ಹಿಡಿದಿರುವ ವಿಷ್ಣುಭಕ್ತರಾದ ಭಟರು ಇವನನ್ನು ಕೊನೆಗಾಲದಲ್ಲಿ ಕರೆದುಕೊಂಡು ಹೋಗುವರು. ಆದುದರಿಂದ ಎಲ್ಲಾ ಪ್ರಯತ್ನವನ್ನೂ ಪಟ್ಟು ಈ ಏಕಾದಶಿಯಲ್ಲಿ ನೀರನ್ನು ಕುಡಿಯದೇ ಉಪವಾಸ ಮಾಡಬೇಕು. ಜಲಧೇನುಂ ತದಾ ದತ್ವಾ ಸರ್ವಪಾಪೈಃ ಪ್ರಮುಚ್ಯತೇ । ತತಸ್ತ್ವಮಪಿ ಭೂಪಾಲ ಸೋಽಪವಾಸೋಽರ್ಚನಂ ಹರೇಃ ||34|| ಕುರು ಸರ್ವಪ್ರಯತ್ನೇನ ಸರ್ವಪಾಪಪ್ರಶಾಂತಯೇ । ಸ್ವಪ್ನೇ ನ ಮೇऽಪರಾಧೋಽಸ್ತಿ ದಂತರಾಗತಯಾಪಿ ವಾ ||35|| ಭೋಕ್ಷ್ಯೇ ಪರೇಹ್ನಿ ದೇವೇಶ ಹ್ಯಶನಂ ವಾಸರಾದ್ ಹರೇಃ । ಇತ್ಯುಚ್ಚಾರ್ಯ ತತೋ ಮಂತ್ರಮುಪವಾಸಪರೋ ಭವೇತ್ ||36|| ಆಗ ಜಲಧೇನುವನ್ನು ಕೊಟ್ಟರೆ ಪಾಪವೆಲ್ಲವೂ ನಾಶವಾಗುತ್ತದೆ. ಆದುದರಿಂದ ಎಲೈ ಭೀಮಸೇನನೇ! ಆ ದಿನ

ನೀನು ಉಪವಾಸವಿದ್ದು ಹರಿಯ ಅರ್ಚನೆಯನ್ನು ಮಾಡಿದರೆ ಪಾಪವೆಲ್ಲವೂ ಹೋಗುತ್ತದೆ. ''ಅಕಸ್ಮಾತ್ತಾಗಿ ನಿದ್ದೆ ಬಂದರೆ ನನ್ನ ಅಪರಾಧವಿಲ್ಲ. ಹಲ್ಲು ಮುಂತಾದವುಗಳನ್ನು ಉಜ್ಜಿಕೊಳ್ಳುವುದರಿಂದಲೂ ನನ್ನ ಅಪರಾಧವಿಲ್ಲ. ಉಪವಾಸದ ಅನಂತರ ಮಾರನೆಯ ದಿವಸ ಊಟವನ್ನು ಮಾಡುತ್ತೇನೆ'' ಎಂದು ಹೇಳಿ ಉಪವಾಸ ಮಾಡಬೇಕು. ಸರ್ವಪಾಪವಿನಾಶಾಯ ಶ್ರದ್ಧಾದಮಸಮನ್ವಿತಃ । ಮೇರುಮಂದರಮಾತ್ರಾಘಂ ಸ್ತ್ರಿಯಾ ಪುಂಸಾ ಚ ಯತ್ಕೃತಮ್ ॥37॥ ಸರ್ವಂ ತದ್ಭಸ್ಮತಾಂ ಯಾತಿ ಏಕಾದಶ್ಯಾಃ ಪ್ರಭಾವತಃ । ನ ಶಕ್ನುವಂತಿ ಯೇ ದಾತುಂ ಜಲಧೇನುಂ ನರಾಧಿಪ ॥38॥ ಸಕಾಂಚನಃ ಪ್ರದಾತವ್ಯೋ ಘಟಕೋ ವಸ್ತ್ರಸಂಯುತಃ । ತೋಯಸ್ಯ ನಿಯಮಂ ಯೋಽಸ್ಯಾಂ ಕುರುತೇ ವೈ ಸ ಪುಣ್ಯಭಾಕ್ ॥39॥ ಶ್ರದ್ಧೆಯಿಂದಲೂ ಇಂದ್ರಿಯನಿಗ್ರಹದಿಂದಲೂ ಮಾಡಿದರೆ ಹೆಂಗಸಾಗಲೀ ಗಂಡಸಾಗಲೀ ಮಾಡಿದ ಮೇರುಮಂದರಗಳಷ್ಟು ದೊಡ್ಡದೂ ಆದ ಎಲ್ಲಾ ಪಾಪಗಳೂ ಈ ಏಕಾದಶಿಯ ಪ್ರಭಾವದಿಂದ ಬೂದಿಯಾಗುತ್ತವೆ. ಜಲಧೇನುವನ್ನು ಕೊಡಲು ಶಕ್ತಿಯಿಲ್ಲದವರು ನೀರನ್ನು ಬಿಂದಿಗೆಗಾಗಲೀ ಮಡಕೆಗಾಗಲೀ ತುಂಬಿ ಬಟ್ಟೆಯನ್ನೂ ದಕ್ಷಿಣೆಯನ್ನೂ ಇಟ್ಟು ದಾನ ಮಾಡಬೇಕು. ಈ ಏಕಾದಶಿಯಲ್ಲಿ ನೀರನ್ನು ಕುಡಿಯದೇ ನಿಯಮದಿಂದ ಇರುವವನೇ ಪುಣ್ಯಭಾಗಿಯು. ಫಲಂ ಕೋಟಿಸುವರ್ಣಸ್ಯ ಯಾಮೇ ಯಾಮೇ ಶ್ರುತಂ ನೃಪ । ಸ್ನಾನಂ ದಾನಂ ಜಪೋ ಹೋಮೋ ಯದಸ್ಯಾಂ ಕುರುತೇ ನರಃ ॥40॥ ತತ್ಸರ್ವಂ ಚಾಕ್ಷಯಂ ಪ್ರಾಪ್ತಮೇತತ್ ಕೃಷ್ಣಪ್ರಭಾಷಿತಮ್ । ಕಿಂ ಚಾಪರೇಣ ಧರ್ಮೇಣ ನಿರ್ಜಲೈಕಾದಶೀಂ ವಿನಾ ॥41॥ ಯಾಮ ಯಾಮದಲ್ಲಿಯೂ ಈ ರೀತಿಯಿದ್ದರೆ ಕೋಟಿಸುವರ್ಣಗಳ ದಾನವನ್ನು ಮಾಡಿದ ಫಲವುಂಟು. ಈ ಏಕಾದಶಿಯ ದಿವಸ ಸ್ನಾನ, ದಾನ, ಜಪ, ಹೋಮ ಮತ್ತೆ ಯಾವುದನ್ನು ಮಾಡುತ್ತಾನೆಯೋ ಅವೆಲ್ಲವೂ ಅಕ್ಷಯವಾಗುತ್ತದೆ ಎಂದು ಶ್ರೀಕೃಷ್ಣನೇ ಹೇಳಿರುವನು. ಈ ಏಕಾದಶಿಗೆ ''ನಿರ್ಜಲೈಕಾದಶೀ'' ಎಂದು ಹೆಸರು. ಇದನ್ನು ಬಿಟ್ಟರೆ ಮಿಕ್ಕ ಧರ್ಮಗಳಿಂದಾಗಲೀ ವ್ರತಗಳಿಂದಾಗಲೀ ಪ್ರಯೋಜನವೇ ಇಲ್ಲ. ಉಪೋಷ್ಯ ಸಮ್ಯಗ್ ವಿಧಿವತ್ ವೈಷ್ಣವಂ ಪದಮಾಪ್ನುಯಾತ್ । ಸುವರ್ಣ-ಮನ್ನಂ ವಾಸೋ ವಾ ಯದಸ್ಯಾಂ ಸಂಪ್ರದೀಯತೇ ॥42॥ ತಚ್ಚೈವ ಕುರುಶಾರ್ದೂಲ ಸರ್ವಂ ಚಾಪ್ಯಕ್ಷಯಂ ಭವೇತ್ । ಏಕಾದಶ್ಯಾಂ ದಿನೇ ಯೋಽನ್ನಂ ಭುಂಕ್ತೇ ಪಾಪಂ

ಭುನಕ್ತಿ ಸಃ ।।43।। ಇಹ ಲೋಕೇ ಚ ಚಾಂಡಾಲೋ ಮೃತಃ ಪ್ರಾಪ್ನೋತಿ ದುರ್ಗತಿಮ್ । ಯೇ ಚ ದಾಸ್ಯಂತಿ ದಾನಾನಿ ದ್ವಾದಶ್ಯಾಂ ಸಮುಪೋಷಿತಾಃ ।।44।। ಜ್ಯೇಷ್ಠಮಾಸೇ ಸಿತೇ ಪಕ್ಷೇ ಪ್ರಾಪ್ಸ್ಯಂತಿ ಪರಮಂ ಪದಮ್ । ಬ್ರಹ್ಮಹಾ ಮದ್ಯಪಃ ಸ್ತೇನೋ ಗುರುದ್ವೇಷೀ ಸದಾನೃತೀ ।।45।। ಮುಚ್ಯಂತೇ ಪಾತಕೈಃ ಸರ್ವೈರ್ದ್ವಾದಶೀ ಯೈರುಪೋಷಿತಾ । ವಿಶೇಷಂ ಶೃಣು ಕೌಂತೇಯ ನಿರ್ಜಲೈಕಾದಶೀದಿನೇ ।।46।। ಯತ್ಕರ್ತವ್ಯಂ ನರೈಸ್ತ್ರೀಭಿರ್ದಾನಂ ಶ್ರದ್ಧಾಸಮನ್ವಿತೈಃ । ಜಲಶಾಯೀ ಚ ಸಂಪೂಜ್ಯೋ ಧೇನುರ್ದೇಯಾ ತಥಾಮ್ಮಯೀ ।।47।। ಈ ರೀತಿ ಉಪವಾಸ ಮಾಡಿದರೆ ವಿಷ್ಣುವಿನ ಸ್ಥಾನವನ್ನು ಹೊಂದುತ್ತಾನೆ. ಚಿನ್ನ, ಅನ್ನ, ಬಟ್ಟೆ ಯಾವುದನ್ನು ಈ ಏಕಾದಶಿಯ ದಿವಸ ಕೊಡುತ್ತಾನೆಯೋ ಅವೆಲ್ಲವೂ ಅಕ್ಷಯವಾಗುತ್ತವೆ. ಏಕಾದಶಿಯ ದಿವಸ ಅನ್ನವನ್ನು ತಿನ್ನುವವನು ಪಾಪವನ್ನು ತಿನ್ನುತ್ತಾನೆ. ಅಲ್ಲದೇ ಈ ಲೋಕದಲ್ಲಿ ಚಂಡಾಲನಾಗಿ ಹುಟ್ಟಿ ಪರಲೋಕದಲ್ಲಿ ನರಕವನ್ನು ಹೊಂದುತ್ತಾನೆ. ಹೀಗೆ ಜ್ಯೇಷ್ಠ ಶುಕ್ಲ ಏಕಾದಶಿಯ ದಿನ ಉಪವಾಸವಿದ್ದು ದ್ವಾದಶಿಯ ದಿವಸ ದಾನಗಳನ್ನು ಮಾಡಿದರೆ ಸ್ವರ್ಗವನ್ನು ಹೊಂದುತ್ತಾರೆ. ಈ ರೀತಿಯಲ್ಲಿ ಆ ಏಕಾದಶಿಯ ದಿವಸ ಉಪವಾಸ ಮಾಡಿದರೆ ಬ್ರಹ್ಮಹತ್ಯೆ, ಮದ್ಯಪಾನ, ಕಳ್ಳತನ, ಗುರುದ್ವೇಷ, ಸುಳ್ಳು ಹೇಳುವುದು - ಈ ಎಲ್ಲಾ ಪಾಪಗಳೂ ಹೋಗುತ್ತವೆ. ಎಲೈ ಭೀಮನೇ! ಇದರಲ್ಲಿ ವಿಶೇಷವನ್ನು ಕೇಳು. ನಿರ್ಜಲೈಕಾದಶಿಯ ದಿವಸ, ಹೆಂಗಸರಾಗಲೀ, ಗಂಡಸ-ರಾಗಲೀ ಶ್ರದ್ಧೆಯಿಂದ ಉಪವಾಸವನ್ನು ಮಾಡಿ ವಿಷ್ಣುವನ್ನು ಪೂಜಿಸಿ ಜಲಧೇನುವನ್ನು ದಾನ ಮಾಡಬೇಕು. ಪ್ರತ್ಯಕ್ಷಾ ವಾ ನರಶ್ರೇಷ್ಠ ಘೃತಧೇನುಸ್ತಥಾಪಿ ವಾ । ದಕ್ಷಿಣಾಭಿಃ ಸುಪುಷ್ಟಾಭಿರ್ಮಿಷ್ಟಾನ್ನೈಶ್ಚ ಪೃಥಗ್ವಿಧೈಃ ।।48।। ತೋಷಣೀಯಾಃ ಪ್ರಯತ್ನೇನ ದ್ವಿಜಾ ಧರ್ಮಭೃತಾಂ ವರ । ತುಷ್ಟಾ ಭವಂತಿ ವೈ ವಿಪ್ರಾಃ ತೈಸ್ತುಷ್ಟೈರ್ಮೋಕ್ಷದೋ ಹರಿಃ ।।49।। ಪ್ರತ್ಯಕ್ಷವಾದ ಗೋವನ್ನೂ ದಾನ ಮಾಡಬಹುದು. ಘೃತಧೇನುವನ್ನು ಆದರೂ ಕೊಡಬಹುದು. ಒಳ್ಳೆಯ ರುಚಿ-ಕರವಾದ ಅನ್ನಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಿ ದಕ್ಷಿಣೆಯನ್ನು ಕೊಡಬಹುದು. ಆ ವಿಪ್ರರು ತುಷ್ಟರಾದರೆ ಹರಿಯು ಮೋಕ್ಷವನ್ನು ಕೊಡುತ್ತಾನೆ. ಆತ್ಮದ್ರೋಹಕೃತಸ್ತೇಹಿ ಯೈರೇಷಾ ನ ಹ್ಯುಪೋಷಿತಾ । ಪಾಪಾತ್ಮಾನೋ ದುರಾಚಾರಾ ಮುಷ್ಟಾಸ್ತೇ ನಾತ್ರ ಸಂಶಯಃ ।।50।। ಯಾರು ಈ ಏಕಾದಶಿಯ ದಿವಸ ಉಪವಾಸ

ಮಾಡುವುದಿಲ್ಲವೋ ಅವರು ಆತ್ಮದ್ರೋಹ ಮಾಡಿಕೊಂಡಂತಾಗುವುದು. ಅವರು ಪಾಪಿಗಳು. ದುರಾಚಾರಿಗಳು. ಅವರು ಪದಾರ್ಥಗಳನ್ನು ಕಳೆದುಕೊಂಡವರೂ ಮೋಸಹೋದವರೂ ಆಗುತ್ತಾರೆ. ಇದರಲ್ಲಿ ಸಂಶಯವಿಲ್ಲ. ಕುಲಾನಾಂ ಶತಮಾಗಾಮಿ ಹ್ಯತೀತಾನಾಂ ತಥಾ ಶತಮ್ । ಆತ್ಮನಾ ಸಹ ತೈರ್ನೀತಂ ವಾಸು-ದೇವಸ್ಯ ಮಂದಿರಮ್ ॥51॥ ಹೀಗೆ ಉಪವಾಸ ಮಾಡಿದವನು ತನ್ನ ಮುಂದಿನ ನೂರು ತಲೆಗಳನ್ನೂ ಹಿಂದಿನ ನೂರು ತಲೆಗಳನ್ನೂ ತನ್ನೊಡನೆಯ ವೈಕುಂಠಕ್ಕೆ ಒಯ್ಯುತ್ತಾನೆ. ಶಾಂತೈರ್ದಾಂತೈರ್ದಾನಪರ್ರೈರರ್ಚಯದ್ಭಿಸ್ತಥಾ ಹರಿಮ್ । ಕುರ್ವ-ದ್ಭಿರ್ಜಾಗರಂ ರಾತ್ರೌ ಯೈರೇಷಾ ಸಮುಪೋಷಿತಾ ॥52॥ ಶಾಂತರಾಗಿಯೂ ಇಂದ್ರಿಯನಿಗ್ರಹಿಗಳಾಗಿಯೂ ಇದ್ದು ಹರಿಯನ್ನು ಅರ್ಚಿಸಿ ರಾತ್ರಿಯಲ್ಲಿ ಜಾಗರ-ಣೆಮಾಡುತ್ತ, ಉಪವಾಸವಿದ್ದರೆ ಅವರು ಹಿಂದೆ ಹೇಳಿದವರನ್ನು ಕರೆದುಕೊಂಡು ವೈಕುಂಠಕ್ಕೆ ಹೋಗುತ್ತಾರೆ. ಅನ್ನಂ ವಸ್ತ್ರಂ ತಥಾ ಗಾವೋ ಜಲಂ ಶಯ್ಯಾಸನಂ ಶುಭಮ್ । ಕಮಂಡಲುಸ್ತಥಾ ಛತ್ರಂ ದಾತವ್ಯಂ ನಿರ್ಜಲಾದಿನೇ ॥53॥ ನಿರ್ಜಲೈಕಾದಶಿಯ ದಿನದಲ್ಲಿ ಉಪವಾಸವಿದ್ದು ಮರುದಿನ ದ್ವಾದಶಿಯಲ್ಲಿ ಅನ್ನ ವಸ್ತ್ರ ಗೋವು ನೀರು ಹಾಸಿಗೆ ಆಸನ ಕಮಂಡಲು ಛತ್ರಿ ಮುಂತಾದ ದಾನಗಳನ್ನು ಮಾಡಬೇಕು. ಉಪಾನಹೌ ಯೋ ದದಾತಿ ಪಾತ್ರಭೂತೇ ದ್ವಿಜೋತ್ತಮೇ । ಸ ಸೌವರ್ಣೇನ ಯಾನೇನ ಸ್ವರ್ಗಲೋಕೇ ಮಹೀಯತೇ ॥54॥ ಯಾವನು ಯೋಗ್ಯನಾದ ಬ್ರಾಹ್ಮಣನಿಗೆ ಕೆರೆಗಳನ್ನು ಕೊಡುತ್ತಾನೆಯೋ ಅವನು ಚಿನ್ನದ ಯಾನದಲ್ಲಿ ಸ್ವರ್ಗದಲ್ಲಿ ಸುಖಿಸುತ್ತಾನೆ. ಯಶ್ಚೇಮಂ ಶೃಣುಯಾದ್ಭಕ್ತ್ಯಾ ಯಶ್ಚಾಪಿ ಪರಿಕೀರ್ತಯೇತ್ । ಉಭೌ ತು ಸ್ವರ್ಗಮಾಪ್ನುತೌ ನಾತ್ರ ಕಾರ್ಯಾ ವಿಚಾರಣಾ ॥55॥ ಯಾವನು ಇದನ್ನು ಹೇಳುತ್ತಾನೆಯೋ ಅವನೂ ಯಾವನು ಕೇಳುತ್ತಾನೆಯೋ ಅವನೂ ಈ ಇಬ್ಬರೂ ಸ್ವರ್ಗವನ್ನು ಹೊಂದುತ್ತಾರೆ. ಇದರಲ್ಲಿ ಸಂಶಯವು ಬೇಡ. ಯತ್ಫಲಂ ಚ ಸಿನೀವಾಲ್ಯಾಂ ರಾಹುಗ್ರಸ್ತೇ ದಿವಾಕರೇ । ಕೃತ್ವಾ ಶ್ರಾದ್ಧಂ ಲಭೇನ್ಮರ್ತ್ಯಃ ತದಸ್ಯಾಃ ಶ್ರವಣಾದಪಿ ॥56॥ ಅಮಾವಾಸ್ಯೆಯಲ್ಲಿಯೂ ಸೂರ್ಯಗ್ರಹಣದಲ್ಲಿಯೂ ಮನುಷ್ಯನು ಶ್ರಾದ್ಧ ಮಾಡಿದರೆ ಯಾವ ಫಲವು ಬರುತ್ತದೆಯೋ ಆ ಫಲವು ನಿರ್ಜಲೈಕಾದಶಿಯ ವಿಷಯವನ್ನು ಕೇಳಿದರೆ ಬರುತ್ತದೆ. ನಿಯಮಶ್ಚ ಪ್ರಕರ್ತವ್ಯೋ ದಂತಧಾವನಪೂರ್ವಕಮ್ । ಏಕಾದಶ್ಯಾಂ ನಿರಾಹಾರೋ

ವರ್ಜಯಿಷ್ಯಾಮಿ ವೈ ಜಲಮ್ ॥57॥ ಕೇಶವಪ್ರೀಣನಾರ್ಥಾಯ ಅನ್ಯದಾ-ಚಮನಾದೃತೇ । ದ್ವಾದಶ್ಯಾಂ ದೇವದೇವೇಶಃ ಪೂಜನೀಯಸ್ತ್ರಿವಿಕ್ರಮಃ ॥58॥ ಗಂಧೈರ್ಧೂಪೈಸ್ತಥಾಪುಷ್ಪೈರ್ವಾಸೋಭಿಃ ಪ್ರಿಯದರ್ಶನೈಃ । ಪೂಜಯಿತ್ವಾ ವಿಧಾನೇನ ಮಂತ್ರಮೇತಮುದೀರಯೇತ್ ॥59॥ ಹಲ್ಲನ್ನುಜ್ಜಿಕೊಂಡು ಮುಖವನ್ನು ತೊಳೆದುಕೊಂಡು ನಿಯಮವನ್ನು ಮಾಡಬೇಕು. 'ಏಕಾದಶಿಯ ದಿನ ಆಚಮನದ ನೀರನ್ನು ಹೊರತಾಗಿ ಬೇರೆ ನೀರನ್ನು ಕುಡಿಯುವುದಿಲ್ಲ. ಇದರಿಂದ ಕೇಶವನು ಪ್ರೀತಿಯನ್ನು ಹೊಂದಲಿ' ಎಂದು ಹೇಳಬೇಕು. ದ್ವಾದಶಿಯ ದಿವಸ ದೇವ-ದೇವನಾದ ವಿಷ್ಣುವನ್ನು ನಿಯಮದಿಂದಲೂ ಗಂಧ, ಧೂಪ, ದೀಪ, ಹೂವು, ವಸ್ತ್ರ, ನೈವೇದ್ಯ ಮುಂತಾದವುಗಳಿಂದಲೂ ಕ್ರಮವಾಗಿ ಪೂಜಿಸಿ ಮುಂದಿನ ಮಂತ್ರವನ್ನು ಹೇಳಬೇಕು. ದೇವದೇವ ಹೃಷೀಕೇಶ ಸಂಸಾರಾರ್ಣವತಾರಕ । ಉದಕುಂಭಪ್ರದಾನೇನ ನಯ ಮಾಂ ಪರಮಾಂ ಗತಿಮ್ ॥60॥ ದೇವದೇವನೇ! ಹೃಷೀಕೇಶನೇ! ಸಂಸಾರವೆಂಬ ಸಮುದ್ರವನ್ನು ದಾಟಿಸುವವನೇ! ಈ ಉದಕುಂಭದಾನದ ಪ್ರಭಾವದಿಂದ ನನಗೆ ಸದ್ಗತಿಯನ್ನು ಕೊಡು. ಜ್ಯೇಷ್ಠೇ ಮಾಸಿ ತು ವೈ ಭೀಮ ಯಾ ಶುಕ್ಲೈಕಾದಶೀ ಶುಭಾ । ನಿರ್ಜಲಂ ಸಮುಪೋಷ್ಯಾತ್ರ ಜಲಕುಂಭಾನ್ ಸಶರ್ಕರಾನ್ ॥61॥ ಪ್ರದಾಯ ವಿಪ್ರಮುಖ್ಯೇಭ್ಯೋ ಮೋದತೇ ವಿಷ್ಣುಸನ್ನಿಧೌ । ತತಃ ಕುಂಭಾಃ ಪ್ರದಾತವ್ಯಾಂ ಬ್ರಾಹ್ಮಣಾನಾಂ ಚ ಭಕ್ತಿತಃ ॥62॥ ಭೋಜಯಿತ್ವಾತತೋ ವಿಪ್ರಾನ್ ಸ್ವಯಂ ಭುಂಜೀತ ತತ್ಪರಃ । ಏವಂ ಯಃ ಕುರುತೇ ಪೂರ್ಣಾಂ ದ್ವಾದಶೀಂ ಪಾಪನಾಶಿನೀಂ ॥63॥ ಎಲೈ ಭೀಮನೇ! ಜ್ಯೇಷ್ಠಶುಕ್ಲ ಏಕಾದಶಿಯ ದಿನ ನೀರನ್ನೂ ಸಹ ಕುಕಡಿಯದೇ ಉಪವಾಸವಿದ್ದು ನೀರುತುಂಬಿದ ಪಾತ್ರೆಯನ್ನೂ ಸಕ್ಕರೆಯನ್ನೂ (ಪಾನಕವನ್ನೂ) ಬ್ರಾಹ್ಮಣರಿಗೆ ಕೊಟ್ಟರೆ ವಿಷ್ಣುವಿನ ಬಳಿ ಸುಖಿಸುತ್ತಾನೆ. ಆದುದರಿಂದಲೇ ಬ್ರಾಹ್ಮಣರಿಗೆ ಉದಕುಂಭದಾನವನ್ನು ಮಾಡಬೇಕು. ಅನಂತರ ಅವರಿಗೆ ಊಟ ಮಾಡಿಸಿ ಆಮೇಲೆ ತಾನು ಊಟ-ಮಾಡಬೇಕು. ಈ ರೀತಿಯಾಗಿ ಯಾರು ಏಕಾದಶಿಯನ್ನು ಮಾಡಿ ದ್ವಾದಶಿಯ ದಿವಸ ಪಾರಣೆಯನ್ನು ಮಾಡುತ್ತಾರೋ ಅವರು ಪಾಪಗಳನ್ನು ಕಳೆದುಕೊಂಡು ಮುಕ್ತಿಯನ್ನು ಹೊಂದುತ್ತಾರೆ. ಸರ್ವಪಾಪವಿನಿರ್ಮುಕ್ತಃ ಪದಂ ಗಚ್ಛತ್ಯನಾ-ಮಯಮ್ । ತತಃ ಪ್ರಭೃತಿ ಭೀಮೇನ ಕೃತಾ ಹ್ಯೇಕಾದಶೀ ಶುಭಾ । ಪಾಂಡವದ್ವಾದಶೀ

ನಾಮ್ನಾ ಲೋಕೇ ಖ್ಯಾತಾ ಬಭೂವ ಹ ॥ ಅದು ಮೊದಲುಗೊಂಡು ಆ ಏಕಾದಶಿಯ ದಿವಸ ಭೀಮನು ಉಪವಾಸವಿದ್ದು ದ್ವಾದಶಿಯ ದಿನ ಪಾರಣೆ ಮಾಡುತ್ತಾ ಬಂದನು. ಆದುದರಿಂದ ಆ ದ್ವಾದಶಿಗೆ ಪಾಂಡವ ದ್ವಾದಶಿ ಎಂದು ಹೆಸರು ಬಂದಿತು. ಇತಿ ಶ್ರೀಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ-ನಾರದಸಂವಾದಾಂತರ್ಗತ ಕೃಷ್ಣಯುಧಿಷ್ಠಿರಸಂವಾದೇ ಜ್ಯೇಷ್ಠಶುಕ್ಲನಿರ್ಜಲೈಕಾದಶೀ-ಮಾಹಾತ್ಮ್ಯಂ ನಾಮ ತ್ರಿಪಂಚಾಶತ್ತಮೋऽಧ್ಯಾಯಃ ಸಮಾಪ್ತಃ ॥ ಇಂತು ಪದ್ಮಮಹಾ-ಪುರಾಣದ ಉತ್ತರಖಂಡದ ಉಮಾಪತಿನಾರದಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಜ್ಯೇಷ್ಠಶುದ್ಧ ನಿರ್ಜಲೈಕಾದಶಿಯ ಮಹಿಮೆ ಎಂಬ ಐವತ್ತಮೂರನೆಯ ಅಧ್ಯಾಯವು ಮುಗಿಯಿತು.

## ಜ್ಯೇಷ್ಠ॥ ಶುಕ್ಲ॥ ದ್ವಾದಶಿ

ತ್ರಿವಿಕ್ರಮಪೂಜಾ ಈ ದಿವಸ ತ್ರಿವಿಕ್ರಮದೇವರಿಗೆ ತುಪ್ಪ, ಪಾಯಸ ಹಾಗೂ ಭಕ್ಷ್ಯಗಳನ್ನು ನೈವೇದ್ಯ ಮಾಡಿ ಪೂಜೆ ಮಾಡಬೇಕು. ಇದರಿಂದ ಗವಾಮಯನ ಕ್ರತುಫಲ ದೊರೆಯುತ್ತದೆ. ಇಂದು ತ್ರಿವಿಕ್ರಮಸ್ತೋತ್ರಪಾರಾಯಣದಿಂದ ಸಂಪತ್ ಪ್ರಾಪ್ತಿಯಾಗುತ್ತದೆ.

ಶ್ರೀವಾದಿರಾಜತೀರ್ಥವಿರಚಿತಂ ತ್ರಿವಿಕ್ರಮಸ್ತೋತ್ರಮ್ ವಿದಾರಿತಾರಿ-ಸಂಘಾತಂ ಪಾದಾಕ್ರಾಂತಜಗತ್ತ್ರಯಮ್ । ಗದಾಚಕ್ರಧರಂ ಧೀರಂ ಸದಾ ವಂದೇ ತ್ರಿವಿಕ್ರಮಮ್ ॥1॥ ಶಂಖಾಂಭೋಜಕರದ್ವಂದ್ವ ಹುಂಕಾರಾರ್ದಿತದಾನವ । ಶಂಕಾತಂಕಹರಾಹಂ ತೇ ಕಿಂಕರೋऽಸ್ಮಿ ತ್ರಿವಿಕ್ರಮ ॥2॥ ಕ್ಷಪಾಕರೋಲ್ಲಸದ್ವಕ್ತ್ರಂ ಕೃಪಾವಿಪುಲಲೋಚನಮ್ । ಅಪಾರಸುಗುಣಸ್ತೋಮಮುಪಾಸೇ ತಂ ತ್ರಿವಿಕ್ರಮಮ್ ॥3॥ ರಮಾಧರಾಶ್ಲಿಷ್ಟಪಾರ್ಶ್ವಂ ಸಮಸ್ತಸುರಸೇವಿತಮ್ । ಭ್ರಮಾದಿದೋಷದೂರಂ ತಂ ನಮಾಮಿ ಶ್ರೀತ್ರಿವಿಕ್ರಮಮ್ ॥4॥ ಯೋऽಂಗಾದಂಗಜಮಸ್ರಾಕ್ಷೀದ್ಗಂಗಾ-ಮಂಗುಷ್ಠತೋऽಸೃಜತ್ । ತುಂಗಾಮರಚಯೋತ್ತುಂಗಂ ತಂ ಗಾಯಾಮಿ ತ್ರಿವಿಕ್ರಮಮ್ ॥5॥ ನಾನಾऽಲಂಕಾರಭರಿತಂ ಪೀನಾವಯವಮೋಹನಮ್। ಜ್ಞಾನಾನಂದಮಯಂ ವಂದೇ ಶ್ರೀನಾಥಂ ತಂ ತ್ರಿವಿಕ್ರಮಮ್ ॥6॥ ವೃಂದಾರ-

ಕೇಂದ್ರವಂದ್ಯಾಂಘ್ರಿಂ ನಂದಿತೀರ್ಥಮುನೇಃ ಪ್ರಿಯಮ್ । ಕಂದರ್ಪಕೋಟಿಲಾವಣ್ಯಂ ತಂ ಧ್ಯಾಯಾಮಿ ತ್ರಿವಿಕ್ರಮಮ್ ॥7॥ ಸುಧಾಕುಂದೇಂದುಧವಲಮಧಃಕೃತ-ಚರಾಚರಮ್ । ಉದಾರಮಾದರಾದ್ ವಂದೇ ತ್ರಿಧಾಮಾನಂ ತ್ರಿವಿಕ್ರಮ್ ॥8॥ ವೇದಾಂತವೇದಿತಗುಣಂ ಬೋಧಪ್ರದಮಹರ್ನಿಶಮ್ । ಆಧಾರಂ ನೌಮಿ ಜಗತಾಂ ಶ್ರೀಧಾಮಾನಂ ತ್ರಿವಿಕ್ರಮಮ್ ॥9॥ ಅನುಯಾಗೇನ ಬಲಿನಾ ಮನುನಾ ಮನನೇನ ಚ। ದಿನೇ ದಿನೇಽರ್ಚಿತಂ ವಂದೇ ಮನಸಾ ತಂ ತ್ರಿವಿಕ್ರಮಮ್ ॥10॥ ಸರ್ಪಿಃಪಾಯಸ-ನೈವೇದ್ಯೈರ್ಭಕ್ಷ್ಯೈಶ್ಚ ವಿವಿಧೈಃ ಸದಾ । ನೃತ್ಯವಾದಿತ್ರಗೀತೈಶ್ಚ ತರ್ಪಯಾಮಿ ತ್ರಿವಿಕ್ರಮಮ್ ॥11॥ ವಾದಿರಾಜೇಂದ್ರವರದಂ ಸೋದಾಪುರನಿವಾಸಿನಮ್। ಮೋದಪ್ರದಂ ಸದಾ ವಂದೇ ಮಾಧವಂ ತಂ ತ್ರಿವಿಕ್ರಮಮ್ ॥12॥ ಧೂಪೈರ್ಗಂಧಾ-ನುಲೇಪೈಶ್ಚ ದೀಪೈರಪಿ ಮನಃಪ್ರಿಯೈಃ । ತಾಪಸೈಃ ಪೂಜಿತಂ ವಂದೇ ಶ್ರೀಪತಿಂ ತಂ ತ್ರಿವಿಕ್ರಮಮ್ ॥13॥ ಯೋಽಸೌ ಧವಲಗಂಗಾಯಾಃ ಪಾರ್ಶ್ವೇ ತಿಷ್ಠತಿ ಸರ್ವದಾ । ದೇಶೇದೇಶೇ ಚ ವಿಖ್ಯಾತಮಾಸೇವೇ ತಂ ತ್ರಿವಿಕ್ರಮಮ್ ॥14॥ ಅಗ್ರೇ ನಿಧಾಯ ಶ್ರೀದೇವೀಂ ಪೃಷ್ಠೇ ಪಾರ್ಶ್ವೇ ಚ ಸಜ್ಜನಾನ್ । ಸ್ವರ್ಗಿಭಿಃ ಪರಿತಃ ಸೇವ್ಯೋ ಮಧ್ಯೇ ಭಾತಿ ತ್ರಿವಿಕ್ರಮಃ ॥15॥ ಶಿಲಾಮಯೈ ರಮ್ಯತಮಶಾಲಾವಲಭಿಮಂಡಪೈಃ। ಕಲಶೈಶ್ಚೋಲ್ಲಸದ್ದೇವಾಲಯೇ ಭಾತಿ ತ್ರಿವಿಕ್ರಮಃ ॥16॥ ಯಾವಚ್ಚಂದ್ರಶ್ಚ ಸೂರ್ಯಶ್ಚ ಯಾವತ್ ತಿಷ್ಠತಿ ಮೇದಿನೀ । ತಾವತ್ ತ್ರಿವಿಕ್ರಮಃ ಸೋಽಯಂ ಪೂಜ್ಯಸ್ತಿಷ್ಠತು ಸಜ್ಜನೈಃ ॥17॥ ಇದಂ ಸ್ತೋತ್ರಂ ವಾದಿರಾಜೋ ಮುದೇ ಸಜ್ಜನಸಂತತೇಃ । ವ್ಯಧತ್ತ ತೇನ ಪ್ರೀತೋಽಸ್ತು ಸದಾ ಶ್ರೀದಸ್ತ್ರಿವಿಕ್ರಮಃ ॥18॥ ತ್ರಿವಿಕ್ರಮಸ್ತೋತ್ರಮುಗಿಯಿತು.

ಜ್ಯೇಷ್ಠ ಶುಕ್ಲ ದ್ವಾದಶೀ - ರಾಮ ದ್ವಾದಶೀ, ದುರ್ವಾಸಮುನಿ – ವ್ರತ ಮಾಡುವವನು, ಜ್ಯೇಷ್ಠಮಾಸದಲ್ಲಿ ಹೀಗೆಯೇ ಸಂಕಲ್ಪ ಮಾಡಿ, ಪರಮದೇವ ಶ್ರೀರಾಮನನ್ನು ಬಗೆ ಬಗೆಯ ಶುಭಪುಷ್ಪಾದಿಗಳಿಂದ ವಿಧಿಯಂತೆ ಪೂಜಿಸಬೇಕು.

ರಾಮಾಭಿರಾಮಾಯ ನಮಃ ಎಂದು ದೇವನ ಪಾದಗಳನ್ನು ಪೂಜಿಸಬೇಕು. ತ್ರಿವಿಕ್ರಮಾಯ ನಮಃ ಎಂದು ನಡುವನ್ನೂ, ಧೃತವಿಶ್ವಾಯ ನಮಃ ಎಂದು ಉದರವನ್ನೂ, ಸಂವತ್ಸರಾಯ ನಮಃ ಎಂದು ಎದೆಯನ್ನೂ, ಸಂವರ್ತಕಾಯ ನಮಃ ಎಂದು ಕಂಠವನ್ನೂ, ಸರ್ವಾಸ್ತ್ರಧಾರಿಣೇ ನಮಃ ಎಂದು ತೋಳುಗಳನ್ನೂ,

ಶಂಖಾಯ ನಮಃ ಚಕ್ರಾಯ ನಮಃ ಎಂದು ಶಂಖಚಕ್ರಗಳನ್ನೂ, ಸಹಸ್ರಶಿರಸೇ ನಮಃ ಎಂದು ಆ ಮಹಾತ್ಮನ ಶಿರಸ್ಸನ್ನೂ ಅರ್ಚಿಸಿ, ವಿಧಿಪೂರ್ವಕವಾಗಿ ಹಿಂದಿನಂತೆ ವಸ್ತ್ರದಿಂದಲಂಕೃತವಾದ ಕುಂಭವನ್ನು ಸ್ಥಾಪಿಸಬೇಕು. ಚಿನ್ನದಿಂದ ಮಾಡಿಸಿದ ರಾಮಲಕ್ಷ್ಮಣರ ಮೂರ್ತಿಗಳನ್ನು ಹಿಂದಿನಂತೆ ಪೂಜಿಸಿ, ಇಷ್ಟಾರ್ಥ-ವನ್ನು ಬಯಸುವವನು, ದ್ವಾದಶಿಯ ದಿನ ಬೆಳಿಗ್ಗೆ ಆ ಮೂರ್ತಿಗಳನ್ನು ಬ್ರಾಹ್ಮಣನಿಗೆ ಅರ್ಪಿಸಬೇಕು. ಪೂರ್ವದಲ್ಲಿ ಗಂಡುಮಕ್ಕಳಿಲ್ಲದ ದಶರಥರಾಜನು ವಸಿಷ್ಠ ಋಷಿಯನ್ನು ಚೆನ್ನಾಗಿ ಪೂಜಿಸಿ, ಕೇಳಲು, ರಾಜನಿಗೆ ಮಕ್ಕಳಾಗಬೇಕೆಂಬುದರಲ್ಲಿ ಆಸಕ್ತಿಯುಳ್ಳ ಆ ಮುನಿಯು ಇದೇ ವಿಧಾನವನ್ನು ಹೇಳಿದನು. ರಹಸ್ಯವರಿತ ಆ ದಶರಥರಾಜನು ಮೊದಲು ಈ ವ್ರತವನ್ನು ಮಾಡಿದನು. ನಾಶರಹಿತನಾದ ಆ ವಿಷ್ಣುವು ಪರಿತುಷ್ಟನಾಗಿ, ತಾನೇ ನಾಲ್ಕು ಅಂಶಗಳಿಂದ ಆ ದಶರಥನಿಗೆ ಮಹಾ-ಬಲಶಾಲಿಯಾಗಿ ರಾಮನೆಂಬ ಹೆಸರಿನಿಂದ ಪುತ್ರನಾಗಿ ಜನಿಸಿದನು. ಮುನಿಯೇ ಇದು ಇಹಲೋಕದ ಕಥೆ. ಇನ್ನು ಪರಲೋಕದ್ದನ್ನು ಕೇಳು. ಈ ವ್ರತವನ್ನು ಮಾಡಿದವನು, ಇಂದ್ರನೂ ದೇವತೆಗಳ ಗುಂಪುಗಳೆಲ್ಲವನ್ನೂ ಇರುವವರೆಗೂ ಸ್ವರ್ಗಲೋಕದಲ್ಲಿ ಸುಖಗಳನ್ನು ಅನುಭವಿಸುತ್ತಾನೆ. ಅಲ್ಲಿಯ ಕಾಲವು ಕಳೆಯಲು ಮತ್ತೆ ಭೂಮಿಗೆ ಬಂದು ರಾಜನಾಗಿ ನೂರು ಯಜ್ಞಗಳನ್ನು ಮಾಡುವನು. ಯಾವ ಆಸೆಯೂ ಇಲ್ಲದೆ ಈ ವ್ರತವನ್ನು ಮಾಡುವವನ ಪಾಪವೆಲ್ಲವೂ ನಾಶವಾಗುವುದು. ಅವನು ಸಮರ್ಥನಾಗಿ ಶಾಶ್ವತವಾದ ಲೋಕವನ್ನು ಪಡೆಯುವನು.

## ಜ್ಯೇಷ್ಠ ॥ ಶುದ್ಧ ॥ ಚತುರ್ದಶೀ

**ಶ್ರೀಲಕ್ಷ್ಮೀಕಾಂತತೀರ್ಥರು (ಶ್ರೀಪಾದರಾಜ ಮಠ)** ನರಸಿಂಹಪದಾಸಕ್ತಂ ಭಕ್ತಾಭೀಷ್ಟ ಪ್ರದಾಯಕಮ್ । ವಿಜ್ಞಾನವಿಮಲಂ ಶಾಂತಂ ಲಕ್ಷ್ಮೀಕಾಂತಗುರುಂ ಭಜೇ ॥

**ಶ್ರೀ ಶ್ರೀಪಾದರಾಜರು (ಶ್ರೀಪಾದರಾಜ ಮಠ)** – ಮುಳಬಾಗಿಲು (ಕ್ರಿ.ಶ. 1430–1504) ಜ್ಞಾನವೈರಾಗ್ಯಭಕ್ತ್ಯಾದಿಕಲ್ಯಾಣಗುಣಶಾಲಿನಃ । ಲಕ್ಷ್ಮೀನಾರಾಯಣ-ಮುನೀನ್ ವಂದೇ ವಿದ್ಯಾಗುರೂನ್ಮಮ ॥

ಶಬ್ದಬ್ರಹ್ಮದಲ್ಲಿ ಪರಿನಿಷ್ಠಿತರಾಗಿ ನಾದಬ್ರಹ್ಮದಲ್ಲಿ ಲೀನರಾಗಿ ಅನ್ನಬ್ರಹ್ಮದ ಪೂರ್ಣಾನುಗ್ರಹಕ್ಕೆ ಪಾತ್ರರಾದ ಬ್ರಹ್ಮರ್ಷಿಗಳೆಂದರೆ ಶ್ರೀಪಾದರಾಜರು. ಶ್ರೀ-ಪಾದರಾಜರ ನಾಮ ಧಾಮಗಳ ನೆನೆಪಾದರೂ ಸಾಕು ಮೃಷ್ಟಾನ್ನ ಪ್ರಾಪ್ತಿ, ಇಷ್ಟಾರ್ಥ ಸಿದ್ಧಿ. ಎಂಥ ಕಾಡಿನಲ್ಲಿದ್ದರೂ ಪಕ್ವಾನ್ನ ಭೋಜನ ಶ್ರೀಪಾದರಾಜರ ಸ್ಮರಣೆ ಮಾತ್ರದಿಂದಲೇ ಲಭಿಸಿದ್ದು ಸಾವಿರಾರು ಜನರ ಅನುಭೂತ ವಿಷಯ. ಶೇಷಗಿರಿ, ಗಿರಿಯಮ್ಮ ದಂಪತಿಗಳ ನೆಚ್ಚಿನ ಮಗ ಲಕ್ಷ್ಮೀನಾರಾಯಣ. ಬಾಲ್ಯದಲ್ಲಿಯೇ ಭಗವಂತನತ್ತ ಎಳೆತ. ಕ್ರೀಡೆಗಳಲ್ಲಿಯೂ ಕೃಷ್ಣನ ಧ್ಯಾನ, ಬಿಡುವಿನಲ್ಲಿಯೂ ಭಗವಂತನದೇ ಧ್ಯಾನ. ಮಣ್ಣಿನ ಆಟಿಗೆ ಮಾಡಿದರೆ ಮುಕುಂದನ ಮೂರ್ತಿಯದೇ ನಿರ್ಮಾಣ. ಕಲ್ಲಿನ ಕೇಳೀ ಕಟ್ಟಡಕ್ಕೂ ಕೇಶವನ ಗುಡಿ ಎಂದೇ ಹೆಸರಿಟ್ಟು ಪೂಜಾ ಪಾರಾಯಣ ಪ್ರಾರಂಭ. ಧ್ರುವ ಪ್ರಹ್ಲಾದರಂತೆ ಬಾಲ್ಯದಲ್ಲಿಯೇ ವೈರಾಗ್ಯದತ್ತ ಒಲುಮೆ ತೋರಿದ ಲಕ್ಷ್ಮೀನಾರಾಯಣ ಗೆಳೆಯರ ಗುಂಪು ಕಟ್ಟಿಕೊಂಡು ಹಗಲಿರುಳು ಹರಿಯನ್ನೇ ಹಾಡಿ ಪಾಡಿ ಗಾನಗೈದು ಧ್ಯಾನಲೀನನಾಗುತ್ತಿದ್ದ. ಈ ಚಿಕ್ಕ ಬಾಲಕನ ಅಸಾಧಾರಣವಾದ ಧಾರಣಾಶಕ್ತಿ, ಪ್ರತಿಭಾವಿಶೇಷ, ಭಕ್ತಿಭಾವ, ಮುಂತಾದವುಗಳನ್ನು ಕಂಡು ಪ್ರೀತರಾದ ಪದ್ಮನಾಭತೀರ್ಥಪರಂಪರೆಯ ಶ್ರೀಸ್ವರ್ಣವರ್ಣತೀರ್ಥರು ಇವರಿಗೆ ಪಾಠ ಹೇಳಿ ಪಂಡಿತರನ್ನಾಗಿ ಮಾಡಿದರು. ಮತ್ತು ಶ್ರೀರಂಗಕ್ಷೇತ್ರದಲ್ಲಿ ಆಶ್ರಮವಿತ್ತು ಶ್ರೀಪಾದರಾಜರೆಂದು ನಾಮಕರಣಗೈದು ತಮ್ಮ ಉತ್ತರಾಧಿಕಾರಿ-ಗಳನ್ನಾಗಿ ಮಾಡಿದರು. ಶ್ರೀಪಾದರಾಜರು ದಾಸಕೂಟದ ಕುಲದೇವತೆಯೆನಿಸಿದ ಪಂಢರಪುರದ ವಿಠ್ಠಲನ ದರ್ಶನಕ್ಕೆ ಹೋದಾಗ ಸ್ವಪ್ನ ಸೂಚನೆಯಾಗಿ ರಂಗವಿಠ್ಠಲನ ಪ್ರತಿಮೆ ದೊರಕಿತು. ಅಂದಿನಿಂದ ಶ್ರೀರಂಗವಿಠ್ಠಲ ಮುದ್ರಿಕೆಯಿಂದಲೇ ಕನ್ನಡದಲ್ಲಿ ಅನೇಕ ದೇವರ ನಾಮಗಳನ್ನು ರಚಿಸಿ ಹಾಡತೊಡಗಿದರು. ಪಂಢರಪುರದ ವಿಠ್ಠಲನನ್ನು ಹಾಡಿ ಕೊನೆಯಲ್ಲಿ ಅಂಕಿತಘಟಿತನನ್ನಾಗಿ ಮಾಡಿ ದೇವರ ನಾಮಗಳನ್ನು ರಚಿಸುವ ಸಂಪ್ರದಾಯಕ್ಕೆ ಶ್ರೀಕಾರ ಹಾಕಿ ಶ್ರೀಪಾದರಾಜರು ದಾಸಕೂಟಕ್ಕೆ ದಾರಿದೀಪವಾಗಿ ನಿಂತುಕೊಂಡರು. ಮುಂದೆ ಇದೇ ಸಂಪ್ರದಾಯವನ್ನೇ ಪುರಂದರದಾಸರು ವಿಜಯದಾಸರು ಜಗನ್ನಾಥದಾಸರೇ ಮುಂತಾದ ದಾಸಕೂಟ ಧುರೀಣರು ಅನುಸರಿಸಿಗೊಂಡು ಬಂದು ವಿಠ್ಠಲ ಅಂಕಿತದಿಂದಲೇ ಪದಪದ್ಯ ಸುಳಾದಿ ಉಗಾಭೋಗಗಳನ್ನು ರಚಿಸಿ ದಾಸ ವಾಙ್ಮಯದ ವಿಕಾಸಕ್ಕೆ ಕಾರಣರಾದರು.

ನಾದಬ್ರಹ್ಮದ ಉಪಾಸನೆಗೈದು ದಾಸಕೂಟಕ್ಕೆ ಹೊಸ ಹೆದ್ದಾರಿ ತೋರಿದ ವಿದ್ವದ-ಧ್ವರ್ಯುಗಳೆಂದರೆ ಶ್ರೀಪಾದರಾಜರೇ. ಶ್ರೀಪಾದರಾಜರು ಸಂಸ್ಕೃತದಲ್ಲಿ ಬರೆದ 'ವಾಗ್ವಜ್ರಹಾರ' ಎಂಬ ಉದ್ಗ್ರಂಥವು ಅವರ ಶಬ್ದಬ್ರಹ್ಮದ ಸಾಕ್ಷಾತ್ಕಾರದ ಫಲ. ಶಾಸ್ತ್ರೀಯ ಪ್ರಪಂಚದಲ್ಲಿ ಅದೊಂದು ಸೀಮೆಗಲ್ಲು. ದ್ವೈತವೇದಾಂತದ ವೀಧಿಯಲ್ಲಿ ವ್ಯಾಖ್ಯಾನ ವೈಖರಿಯ ವಿಚಾರ ಸಾಹಿತ್ಯದ ಹೊಸಹೊಳವು ಹಾಕಿ ಮಧ್ವಸಿದ್ಧಾಂತದ ಸಾರ್ವತ್ರಿಕ ಪ್ರಸಾರಕ್ಕೂ ಶ್ರೀಪಾದರಾಜರೇ ಶ್ರೀಕಾರ ಹಾಕಿದರು. ಇವರು ತೋರಿದ ದಾರಿಯಲ್ಲಿಯೇ ಇವರ ಶಿಷ್ಯರಾದ ಶ್ರೀಚಂದ್ರಿಕಾಚಾರ್ಯರು ಮುಂದುವರೆದು ವೇದಾಂತವಾಙ್ಮಯದ ವಿಭೂತಿ ಪುರುಷರೆನಿಸಿದರು. ಹೀಗೆ ಶ್ರೀಪಾದರಾಜರು ಸಂಸ್ಕೃತ ಕನ್ನಡ ಉಭಯ ಭಾಷೆಗಳಲ್ಲಿಯೂ ಅಪೂರ್ವ ಕೃತಿರತ್ನಗಳನ್ನು ರಚಿಸಿ ವ್ಯಾಸದಾಸಕೂಟಗಳ ಉದ್ಧಾರಕರೆನಿಸಿದರು. ಕನ್ನಡದಲ್ಲಿ ಬರೀ ದೇವರನಾಮಗಳು ಮಾತ್ರವಲ್ಲದೆ ಭಾಗವತ ದಶಮಸ್ಕಂದದ ರಸೋತ್ಕಟ ಸನ್ನಿವೇಶಗಳೆನಿಸಿದ ಗೋಪೀಗೀತ ವೇಣುಗೀತ ಭ್ರಮರ ಗೀತಗಳನ್ನೂ ಕನ್ನಡದಲ್ಲಿ ಅಷ್ಟೇ ಸುಂದರವಾದ ಸರಳ ಶೈಲಿಯಲ್ಲಿ ಭಾಷಾಂತರಿಸಿ ಕನ್ನಡದಲ್ಲಿಯೂ ಮೂಲದ ಅರ್ಥಸೌಂದರ್ಯ ಭಾವಮಾಧುರ್ಯ ಭಾವಪೇಶಲತೆಗಳು ಇಳಿದು ಬರುವಂತೆ ಮಾಡಿದ್ದಾರೆ. ಹೀಗೆ ಕನ್ನಡ ಭಕ್ತಿಗೀತ ಭಕ್ತಿಕಾವ್ಯಗಳಿಗೂ ಸಂಸ್ಕೃತ ಮಾಧ್ವಸಿದ್ಧಾಂತದ ವೈಚಾರಿಕ ಗ್ರಂಥಗಳಿಗೂ ಅತ್ಯುತ್ಕೃಷ್ಟ ಲೇಖಕರಾಗಿ ವ್ಯಾಸಕೂಟದ ಉತ್ಕರ್ಷಕ್ಕೂ ದಾಸಪಂಥದ ಬೆಳವಣಿಗೆಗೂ ಭಕ್ತಿ ಮಾರ್ಗ ಪ್ರಸಾರಣೆಗೂ ಪ್ರೇರಣಾ ಪ್ರದಾತೃಗಳಾದ ಕಾರಣ ಪುರುಷರಾದರು. ಶ್ರೀಪಾದರಾಜರು ಮಾಧ್ವ ಸಮಾಜಕ್ಕಿತ್ತ ಇನ್ನೊಂದು ದೊಡ್ಡ ಕಾಣಿಕೆಯೆಂದರೆ ಶ್ರೀವ್ಯಾಸರಾಜರು. ಬ್ರಹ್ಮಣ್ಯತೀರ್ಥರ ಶಿಷ್ಯರಾದ ಶ್ರೀವ್ಯಾಸರಾಜರಿಗೆ ನ್ಯಾಯ ವೇದಾಂತಪಾಠ ಹೇಳಿ ಅವರನ್ನು ತ್ರಿಖಂಡ ಭೂಮಂಡದಲ್ಲಿಯೇ ಅಪ್ರತಿಮ ಪಂಡಿತರೆಂದು ಜಯ ಡಿಂಡಿಮ ಹೊಡಿಸಿದವರು ಶ್ರೀಪಾದರಾಜರೇ. ವ್ಯಾಸತ್ರಯ ಪ್ರಣೀತೃಗಳಾದ ಚಂದ್ರಿಕಾಚಾರ್ಯರು ಇವರ ವಿದ್ಯಾಶಿಷ್ಯರೆಂದ ಬಳಿಕ ಶ್ರೀಪಾದ-ರಾಜರ ಶಾಸ್ತ್ರಪಾಂಡಿತ್ಯ, ಯಾವ ಮಟ್ಟದ್ದಿದ್ದಿತೆಂಬುದನ್ನು ಹೇಳುವುದಕ್ಕಿಂತ ಊಹಿಸುವುದೇ ಲೇಸು. ಶ್ರೀ ವ್ಯಾಸರಾಜರು ಉತ್ತರದೇಶ ಸಂಚಾರ ಮಾಡಿ ಅಲ್ಲಿಯ ಕಾಶಿ, ಮಿಥಿಲಾ, ನವದ್ವೀಪ ಮುಂತಾದ ವಿದ್ವತ್ಕೇಂದ್ರಗಳಲ್ಲಿದ್ದ ನ್ಯಾಯವೇದಾಂತ ವ್ಯಾಕರಣಮೀಮಾಂಸಾದಿ ಶಾಸ್ತ್ರೀಯಪ್ರಪಂಚದ ಜಗಜಟ್ಟಿಗಳನ್ನೆಲ್ಲ ವಾದವೇದಿಕೆ

-ಯಲ್ಲಿ ಸೋಲಿಸಿ 'ನಿರ್ವೀರಮುರ್ವೀತಲಂ' ಎನಿಸಿದರು. ಎಲ್ಲರಿಂದಲೂ ಜಯಪತ್ರಗಳನ್ನು ದೊರಕಿಸಿದರು. ದ್ವೈತಧ್ವಜವನ್ನು ಭಾರತದ ತುಂಬ ಏರಿಸಿ ಹಾರಿಸಿದರು. ಉತ್ತರ ಖಂಡದಲ್ಲಿ ಗಂಗೇಶೋಪಾಧ್ಯಾಯನಿಂದ ಪ್ರವರ್ತಿತವಾದ ನವ್ಯನ್ಯಾಯ ಭವ್ಯ ಪರಿಷ್ಕಾರ ಪ್ರಣಾಲಿಕೆಯನ್ನು ಚೆನ್ನಾಗಿ ತಿಳಿದುಕೊಂಡು ಅವರ ಕೋಟಿಕ್ರಮ ವಿಕ್ರಮದಿಂದಲೇ ಅವರ ವಾದಚ್ಛೇದ ಮಾಡುವ ತರ್ಕತಾಂಡವ ಎಂಬ ಉದ್ಗ್ರಂಥವನ್ನು ರಚಿಸಿ ಪ್ರಚುರ ಪಡಿಸಿದರು. ಇವರ ಈ ಅಪ್ರತಿಮ ಪ್ರತಿಭೆ, ಪಾಂಡಿತ್ಯ, ಪ್ರೌಢಿಮೆ, ವಾದಕೌಶಲ, ಗ್ರಂಥ ಗಾಂಭೀರ್ಯ, ವಾಕ್ಯಾರ್ಥವೈದುಷ್ಯಾದಿ -ಗಳನ್ನು ಕಂಡು ಕೇಳಿ ಔತ್ತರೇಯ ನೈಯ್ಯಾಯಿಕರೆಲ್ಲರೂ ಬೆಕ್ಕಸಬೆರಗಾಗಿ ಬೆರಳು ಕಚ್ಚಿದರು. ಅದರಲ್ಲಿಯೂ ಪಕ್ಷಧರಮಿಶ್ರನೆಂಬ ಮಹಾಪಂಡಿತನ ತರ್ಕಶಿಷ್ಯರೆಲ್ಲರೂ 'ಇಂಥ ಉದ್ದಂಡ ಪಂಡಿತ ಪ್ರಕಾಂಡ ಶಿಷ್ಯನನ್ನು ತಯಾರು ಮಾಡಿದ ಗುರು ಹೇಗಿರಬಹುದು? ಒಮ್ಮೆ ಹೋಗಿ ಆ ಜ್ಞಾನಮೇರುವನ್ನು ಕಣ್ಣಿಂದ ನೋಡಿಯೇ ಬರುವ' ಎಂದು ಮುಳಬಾಗಿಲವರೆಗೆ ಬಂದು ಶ್ರೀಪಾದರಾಜರ ದರ್ಶನ ತೆಗೆದು-ಕೊಂಡರು. ಶ್ರೀಪಾದರಾಜ ವಿದ್ವತ್ತಾಪೂರ್ಣವಾದ ವಾಗ್ಧೋರಣೆಯನ್ನು ಕೇಳಿ 'ತಿಮಿಂಗಿಲಗಿಲೋಪ್ಯಸ್ತಿ' ಎಂಬುದರ ಅರಿವಾಯಿತು ಆ ಉತ್ತರದ ಪಂಡಿತರಿಗೆ. ಆಗ ಆ ಪಂಡಿತರು ಶ್ರೀಪಾದರಾಜರೆದುರು ಅವರ ಶಿಷ್ಯ ವ್ಯಾಸರಾಜರ ಪ್ರಖರ ಪಾಂಡಿತ್ಯದ ಬಣ್ಣನೆ ಮಾಡಿ, ಯದಧೀತಂ ತದಧೀತಂ ಯನ್ನಾಧೀತಂ ತದಪ್ಯಧೀತಂ ಪಕ್ಷಧರ ವಿಪಕ್ಷಃ ನಾವೇಕ್ಷಿ ವಿನಾ ನವೀನವ್ಯಾಸೇನ ॥ ನಾವು ಓದಿದ್ದನ್ನೂ ಬಲ್ಲರು. ನಾವೆಲ್ಲರೂ ಓದದೇ ಇದ್ದನ್ನೂ ಅವರು ಚೆನ್ನಾಗಿ ಬಲ್ಲರು. ಪಕ್ಷಧರ ಪಂಡಿತರನ್ನು ಎದುರಿಸುವ ಎದೆಗಾರಿಕೆ ಶ್ರೀ ವ್ಯಾಸರಾಜರ ಹೊರತು ಇನ್ನಾರಿಗಿದೆ! ಅವರೊಬ್ಬ 'ನವೀನ ವೇದವ್ಯಾಸ' ಎಂದು ಹೇಳಿದರಂತೆ. ಒಂದು ದೃಷ್ಟಿಯಿಂದ ವಿಚಾರಿಸಿದರೆ ಶ್ರೀಚಂದ್ರಿಕಾಚಾರ್ಯರ ವ್ಯಾಸತ್ರಯದ ಪ್ರತಿ ಪಂಕ್ತಿಯಲ್ಲಿಯೂ ಅವರ ವಿದ್ಯಾಗುರು ಶ್ರೀಪಾದರಾಜರ ಪಾಂಡಿತ್ಯದ ಪ್ರಭಾವ ಬಿದ್ದುದು ಕಂಡುಬಾರದೇ ಇರಲಾರದು. ಸೂಕ್ಷ್ಮ ಪ್ರಜ್ಞರಿಗೆ. ಅನೇಕ ಸಂದರ್ಭಗಳಲ್ಲಿ ವ್ಯಾಸರಾಜರು 'ಗುರುಪಾದ' ಶಬ್ದದಿಂದ ಶ್ರೀ ಶ್ರೀಪಾದರಾಜರನ್ನು ಉಲ್ಲೇಖ ಮಾಡಿದ್ದೂ ಉಂಟು. ನೆನೆದವರಿಗೆ ಕೂಡಲೇ ಭಕ್ತಿಯನ್ನೂ ಕೊಟ್ಟು ತಮ್ಮ ಕೃತಿಗಳಿಂದ ಮುಕ್ತಿ ಮಾರ್ಗವನ್ನೂ ತೋರಿ ವ್ಯಾಸಕೂಟ

ದಾಸಕೂಟಗಳೆರಡನ್ನೂ ಉದ್ಧರಿಸಿದ ಶ್ರೀ ಪಾದರಾಜರೂ ಪ್ರಾತಃಸ್ಮರಣೀಯರೂ, ನಿತ್ಯಸ್ಮರಣೀಯರೂ ಆದ ಪುಣ್ಯ ಪುರುಷರಾಗಿದ್ದಾರೆ.

**ಶ್ರೀ ಸತ್ಯಾಭಿನವತೀರ್ಥರು (ಉತ್ತರಾದಿ ಮಠ) ಜ್ಯೇಷ್ಠ ಶುಕ್ಲ ಚತುರ್ದಶೀ** ಸತ್ಯನಾಥಾಬ್ಧಿಸಂಭೂತಃ ಸದ್ಯೋಗಣವಿಜೃಂಭಿತಃ । ಸತ್ಯಾಭಿನವತೀರ್ಥೇಂದುಃ ಸಂತಾಪಾನ್ ಹಂತು ಸಂತತಮ್ ॥ ಉತ್ತರಾದಿಮಠದ ಪರಂಪರೆಯಲ್ಲಿ 21ನೇ ಯತಿಗಳಾಗಿ ಪೀಠವನ್ನು ಅಲಂಕರಿಸಿದವರೇ ಶ್ರೀಸತ್ಯಾಭಿನವತಿರ್ಥರು. ಗುರುಭಕ್ತಿಗೆ ಮತ್ತೊಂದು ಹೆಸರು ಎಂದರೆ ಶ್ರೀಸತ್ಯಾಭಿನವತೀರ್ಥರು ಎಂದು ಹೇಳಬಹುದು, ಶ್ರೀಸತ್ಯನಾಥತೀರ್ಥಗುರುಭ್ಯೋ ನಮಃ ಎಂಬ ಒಂದು ಮಂತ್ರದಿಂದ ತಮಗೆ ಬಂದಿದ್ದ ಎಷ್ಟೋ ಆಪತ್ತುಗಳನ್ನು ಪರಿಹರಿಸಿಕೊಂಡ ಮಹಾನುಭಾವರು ಶ್ರೀ ಸತ್ಯಾಭಿನವ ತೀರ್ಥರು. ಶ್ರೀಸತ್ಯಾಭಿನವತೀರ್ಥರು ಪಂಚಾಭಿನವಕಾರರು ಎಂದು ಹೆಸರು. ''ಗುರುಪ್ರಸಾದೋ ಬಲವಾನ್'' ಎಂಬಂತೆ ಗುರುಗಳ ಅನುಗ್ರಹ ಪಡೆಯದೇ ಹರಿಯ ಅನುಗ್ರಹವು ಆಗುವುದಿಲ್ಲ. ಉತ್ತರಾದಿಮಠದ ಯತಿ-ಪರಂಪರೆಯಲ್ಲಿ ಬರುವ ಮಹಾಯೋಗಿಗಳು ಶ್ರೀಸತ್ಯಾಭಿನವತೀರ್ಥರು. ಪೂರ್ವಾ-ಶ್ರಮ ನಾಮ : ಶ್ರೀ ನರಸಿಂಹಚಾರ್ಯ, ಕೇಶವಾಚಾರ್ಯರು ಎಂದು ಹೆಸರಿದೆ. ಆಶ್ರಮ ಗುರುಗಳು : ಶ್ರೀ ಸತ್ಯನಾಥತೀರ್ಥರು ಆಶ್ರಮ ಶಿಷ್ಯರು : ಶ್ರೀ ಸತ್ಯಪೂರ್ಣ ತೀರ್ಥರು ಇತರ ಸನ್ಯಾಸ ಶಿಷ್ಯರು: ಶ್ರೀ ಸತ್ಯಾಧೀಶ ತೀರ್ಥರು ಮತ್ತು ಶ್ರೀ ಸತ್ಯಾಧಿ ರಾಜ ತೀರ್ಥರು ವೇದಾಂತ ಸಾಮ್ರಾಜ್ಯ ಕಾಲ : 1673 ರಿಂದ 1706 32 ವರ್ಷ 6 ತಿಂಗಳು ಮತ್ತು 4 ದಿನಗಳು ವೃಂದಾವನ ಸ್ಥಳ : ನಾಚಾರ್‌ಕೋಯಿಲ್ ತಮಿಳುನಾಡು ಕುಂಭಕೋಣಂ ಹತ್ತಿರ ಆರಾಧನಾ ದಿನ: ಜೇಷ್ಠ ಶುದ್ಧ ಚತುರ್ದಶಿ

## ಜ್ಯೇಷ್ಠ॥ ಶುಕ್ಲ॥ ಪೂರ್ಣಿಮಾ

ಜ್ಯೇಷ್ಠಮಾಸದ ಹುಣ್ಣಿಮೆಯ ದಿವಸ ಎಲ್ಲ ಸುಮಂಗಲಿಯರು ಭಕ್ತಿ, ಶ್ರದ್ಧೆಗಳಿಂದ ವಟಸಾವಿತ್ರಿವ್ರತವನ್ನು ಆಚರಣೆ ಮಾಡಬೇಕು. ಮಹಾಭಾರತದ ವನಪರ್ವದಲ್ಲಿ 295, 296, 297ನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ಸಾವಿತ್ರಿಯ ಮಹಿಮೆಯು ವರ್ಣಿತವಾಗಿದೆ. ಸಾಕ್ಷಾತ್ ಭಗವಂತನಾದ ಶ್ರೀವೇದವ್ಯಾಸದೇವರು ಮುಕ್ತಕಂಠದಿಂದ ಸಾವಿತ್ರಿಯ ಪಾತಿವ್ರತ್ಯವನ್ನು ಪ್ರಶಂಸೆ ಮಾಡಿದ್ದಾರೆ. 'ಪತೀವ್ರತಾ

ಮಾಹಾತ್ಮ್ಯಪರ್ವ' ಎಂಬುದಾಗಿಯೇ ಈ ಭಾಗಕ್ಕೆ ಹೆಸರನ್ನಿಟ್ಟಿದ್ದಾರೆ. ಇಂದು ಪ್ರಯತ್ನಪಟ್ಟು ಮಹಾಭಾರತದ ಈ ಭಾಗದ ಕಥಾಭಾಗವನ್ನು ಶ್ರವಣ ಮಾಡಬೇಕು. ಅಥವಾ ಅದರ ಅನುವಾದವನ್ನಾದರೂ ಓದಬೇಕು. ಆಗ ಸುಮಂಗಲಿಯರಿಗೆ ಪಾತಿವ್ರತ್ಯವು ಅಭಿವೃದ್ಧವಾಗುತ್ತದೆ. ಪತಿಯ ಆಯುಷ್ಯವೂ ಕೂಡ ಹೆಚ್ಚುತ್ತದೆ.

ಸಾವಿತ್ರಿಯ ಸ್ಮರಣೆಯಷ್ಟೇ ಅಲ್ಲದೇ ಯಮದೇವರ ಚಿಂತನೆಯನ್ನು ಇಂದು ವಿಶೇಷವಾಗಿ ಆಚರಣೆ ಮಾಡಬೇಕು. ಆಲದಮರದಲ್ಲಿ ಯಮದೇವರನ್ನು ಮುತ್ತೈದೆ -ಯರು ಪೂಜೆ ಮಾಡಬೇಕು. ಆಗ ಹೇಳಬೇಕಾದ ಶ್ಲೋಕ ಹೀಗಿದೆ - 'ನಮೋ ವೃಕ್ಷಸ್ವರೂಪಾಯ ಮಹಾಪ್ರಣವರೂಪಿಣೇ । ಮಹದ್ರಸೋಪವಿಷ್ಟಾಯ ನ್ಯಗ್ರೋ-ಧಾಯ ನಮೋಽಸ್ತುತೇ' ಸ್ಕಂದಪುರಾಣದಲ್ಲಿ ಪ್ರತೀ ತಿಂಗಳು ಆಲದಮರದಲ್ಲಿ ಯಮದೇವರನ್ನು ಒಂದೊಂದು ಹೆಸರಿನಿಂದ ಪೂಜೆ ಮಾಡಬೇಕೆಂದು ಉಲ್ಲೇಖ ಮಾಡುತ್ತದೆ.

ಶ್ಲೋಕ ಹೀಗಿದೆ - 'ಧರ್ಮರಾಜೋ ಯಮೋ ಧಾತಾಃ ಮೃತ್ಯುಃ ಕಾಲಾಂ-ತಕೋರ್ಯಮಃ ವೈವಸ್ವತಃ ಚಿತ್ರಗುಪ್ತೌ ದಾಂತೋ ಮೃತ್ಯು ಕ್ಷಯೋ ವಟಃ' ಚೈತ್ರ - ಧರ್ಮರಾಜ, ವೈಶಾಖ - ಯಮ, ಜ್ಯೇಷ್ಠ - ಧಾತಾ, ಆಷಾಢ - ಮೃತ್ಯು , ಶ್ರಾವಣ - ಕಾಲ, ಭಾದ್ರಪದ - ಅಂತಕ, ಆಶ್ವೀನ - ಅರ್ಯಮ, ಕಾರ್ತೀಕ - ವೈವಸ್ವತ, ಮಾರ್ಗಶಿರಾ - ಚಿತ್ರಗುಪ್ತ , ಪೌಷ - ದಾಂತಾ, ಮಾಘ - ಮೃತ್ಯು , ಫಾಲ್ಗುಣ - ಕ್ಷಯ. ಈ ಕ್ರಮದಲ್ಲಿ ಆಲದಮರದಲ್ಲಿ ಯಮದೇವರನ್ನು ಪೂಜಿಸಿ, ನಮಿಸಬೇಕು. ಪ್ರಕೃತ ಜ್ಯೇಷ್ಠಮಾಸದಲ್ಲಿ ದಾತಾ ಎಂಬ ಯಮದೇವರ ರೂಪವನ್ನು ಸುಮಂಗಲಿ-ಯರು ವಿಶೇಷವಾಗಿ ಪೂಜಿಸಬೇಕು. ಆಲದಮರಕ್ಕೆ ಕನಿಷ್ಠಪಕ್ಷ ಹನ್ನೆರಡು ನಮಸ್ಕಾರಗಳನ್ನು ಮಾಡಿ, ಯಮದೇವರ ಅನುಗ್ರಹವನ್ನು ಪ್ರಾರ್ಥಿಸಬೇಕು.

ಹೀಗೆ ವಟಸಾವಿತ್ರಿ ವ್ರತದ ಉಪಯೋಗವನ್ನು ಪಡೆದುಕೊಂಡು, ಜ್ಯೇಷ್ಠ-ಮಾಸದ ಶುಕ್ಲಪಕ್ಷದ ಹುಣ್ಣಿಮೆಯನ್ನು ಸಾರ್ಥಕ ಮಾಡಿಕೊಳ್ಳಬೇಕು. ಮುತ್ತೈದೆ-ಯರಿಗೆ ಮೊರದಬಾಗಿಣ, ಯಥಾಶಕ್ತಿ ದಕ್ಷಿಣೆ ಮೊದಲಾದವುಗಳನ್ನು ಕೊಡಬೇಕು. ದಂಪತಿಗಳನ್ನು ಕರೆದು ಭೋಜನ ಮಾಡಿಸಬೇಕು. ಇದರಿಂದ ಯಮದೇವರ ವಿಶೇಷ ಅನುಗ್ರಹಕ್ಕೆ ಪಾತ್ರರಾಗುವುದರಲ್ಲಿ ಸಂಶಯವಿಲ್ಲ.

## ವಟಸಾವಿತ್ರಿಹುಣ್ಣಿಮೆಯ ಬಗ್ಗೆ ತಿಳಿಯಲೇಬೇಕು

ವಟಸಾವಿತ್ರಿ ಪೂಜೆಯನ್ನು ಜ್ಯೇಷ್ಠಮಾಸದ ಹುಣ್ಣಿಮೆಯಲ್ಲಿ ಅವಶ್ಯವಾಗಿ ಪ್ರತಿಯೊಬ್ಬ ಸುವಾಸಿನಿಯರು ಆಚರಿಸತಕ್ಕದ್ದು. ವಟಸಾವಿತ್ರಿಹುಣ್ಣಿಮೆಯನ್ನು ಆಚರಣೆ ಮಾಡುವುದರಿಂದ ದುರ್ಮರಣ, ಅಪಘಾತ, ಅನಾರೋಗ್ಯ ಮೊದಲಾದ ಮಹಾದೋಷವು ಪರಿಹಾರವಾಗುತ್ತದೆ. ಆದ್ದರಿಂದ ಎಷ್ಟೇ ಕಷ್ಟವಾದರೂ ಈ ವಟಸಾವಿತ್ರಿ ಪೂಜೆಯನ್ನು ಆಚರಿಸಲೇಬೇಕು. ಸಾವಿತ್ರಿಯು ತನ್ನ ತೊಡೆಯ ಮೇಲೆ ಪತಿಯನ್ನು ಮಲಗಿಸಿಕೊಂಡಿದ್ದಾಳೆ, ಯಮದೇವರು ಪ್ರತ್ಯಕ್ಷರಾಗಿದ್ದಾರೆ ಅವರಿಗೆ ಭಕ್ತಿಯಿಂದ ಕೈಮುಗಿಯುತ್ತಿದ್ದಾಳೆ. ಭಗವಂತನು ಹಿಂದೆ ವರನೀಡುತ್ತಿದ್ದಾನೆ. ಇಂಥಹ ಚಿತ್ರವನ್ನು ಇಟ್ಟುಕೊಂಡು ವಟಸಾವಿತ್ರಿಪೂಜೆಯನ್ನು ಮಾಡಬೇಕು. ವಟಸಾವಿತ್ರಿ ಹುಣ್ಣಿಮೆಯಂದು ಪ್ರತಿಯೊಬ್ಬರೂ ಈ ಚಿತ್ರಕ್ಕೆ ಪೂಜಿಸುತ್ತಾರೆ. ಕಲಶ ಪ್ರತಿಷ್ಠಾಪನಾದಿಗಳನ್ನು ಮಾಡುವ ಸಂಪ್ರದಾಯವು ಇರುವುದಿಲ್ಲ. ವಿಶೇಷವಾಗಿ ಯಮದೇವರನ್ನು ಕುರಿತು ಪ್ರಾರ್ಥನೆ ಮಾಡುವ ಪೂಜೆಯಾಗಿದೆ. ಆದ್ದರಿಂದ ಹೆಣ್ಣುಮಕ್ಕಳು ಇಲ್ಲಿ ನೀಡಿರುವ ಯಮದೇವರ ಹೆಸರುಗಳನ್ನು ಹೇಳಿಕೊಂಡು ಪುಷ್ಪದಿಂದ ಶ್ಯಾಮಲಾಸಹಿತಯಮದೇವರಿಗೆ ಅರ್ಚನೆಯನ್ನು ಮಾಡಬೇಕು. ಯಮದೇವರನ್ನು ಪೂಜಿಸಿ ಆಯುಷ್ಯವನ್ನು ಪ್ರಾರ್ಥಿಸಿ ಅನಂತರ ವಟಸಾವಿತ್ರಿ ಕುರಿತಾದ ಹಾಡುಗಳನ್ನು ಹೇಳಿಕೊಳ್ಳಬೇಕು. ಆರತಿಮಾಡುವಾಗ ವಟಸಾವಿತ್ರಿಯ ಹಾಡನ್ನು ಹೇಳಬೇಕು. ಮೊದಲು ಯಮದೇವರಿಗೆ ಸಂಕ್ಷೇಪವಾಗಿ ಅರ್ಚನೆ ಮಾಡಿ ಅನಂತರ ಸಾವಿತ್ರಿಗೆ ಕುಂಕುಮಾರ್ಚನೆಯನ್ನು ಮಾಡಿ ಯಮದೇವರಿಗೆ ನೈವೇದ್ಯವನ್ನು ಸಮರ್ಪಣೆ ಮಾಡಿ ಸತ್ಯವಾನ್‌ಸಾವಿತ್ರಿಗೂ ಕೂಡ ನೈವೇದ್ಯವನ್ನು ಸಮರ್ಪಣೆ ಮಾಡಬೇಕು. ಯಮದೇವರಿಗೆ ಆರತಿಯನ್ನು ಮಾಡಿದಮೇಲೆ ಅವರ ಅನುಗ್ರಹಕ್ಕೆ ಪಾತ್ರಳಾದ ಸತ್ಯವಾನ್‌ಸಾವಿತ್ರಿಗೂ ಕೂಡ ಆರತಿಯನ್ನು ಮಾಡಬೇಕು. ವಾಸ್ತವಿಕವಾಗಿ ಈ ವ್ರತವನ್ನು ಒಂದು ವರ್ಷಗಳ ಕಾಲ ಪೂರ್ಣವಾಗಿ ಆಚರಿಸಬೇಕು. ಹುಣ್ಣಿಮೆಯ ತನಕ ಮೂರು ದಿವಸಗಳ ಕಾಲ ಉಪವಾಸ ಇರಬೇಕು. ನಾಲ್ಕನೆಯ ದಿನ ಚಂದ್ರೋದಯವಾದ ಮೇಲೆ ಚಂದ್ರನಿಗೆ ಅರ್ಘ್ಯವನ್ನು ನೀಡಿ ಸುವಾಸಿನಿಯರಿಗೆ ಭೋಜನಮಾಡಿಸಿ ಅನಂತರ ಊಟಮಾಡಬೇಕೆಂದು ಪುರಾಣವು ಹೇಳುತ್ತದೆ.

ಮತ್ತು ನಿತ್ಯವೂ ವಟವೃಕ್ಷಕ್ಕೆ ನೀರು ಹಾಕಬೇಕು. ಬಿದಿರುಪಾತ್ರೆಯಲ್ಲಿ ಮರಳನ್ನು ತುಂಬಿ ಅದರಮೇಲೆ ಏಳು ಧಾನ್ಯಗಳನ್ನು ತುಂಬಿ ಎರಡು ವಸ್ತ್ರಗಳನ್ನು ಅದಕ್ಕೆ ಸುತ್ತಿ ಸತ್ಯವಾನ್ ಹಾಗೂ ಸಾವಿತ್ರಿಯರ ಚಿತ್ರಪಟಗಳನ್ನು ಅದರ ಮೇಲಿಟ್ಟು ಷೋಡಶೋಪಚಾರಪೂಜೆಯನ್ನು ಮಾಡಬೇಕು. ಹೀಗೆ ಸ್ಕಂದಪುರಾಣವು ಹೇಳು-ತ್ತದೆ. ಇಷ್ಟನ್ನು ಮಾಡಲು ಸಾಧ್ಯವಾಗದಿದ್ದರೆ ಸತ್ಯವಾನ್ ಸಾವಿತ್ರಿಯರ ಚಿತ್ರಪಟ-ವನ್ನಾದರೂ ಇಟ್ಟು ಪೂಜೆಯನ್ನು ಮಾಡಬೇಕು. ಹಾಗೂ ಅಂದು ಒಪ್ಪತ್ತು ಮಾತ್ರ ಊಟವನ್ನು ಮಾಡಬೇಕು. ಯಮದೇವರಿಗೆ ಅರ್ಘ್ಯವನ್ನು ನೀಡಿದಮೇಲೆ ಸಾವಿತ್ರಿಗೆ ಅರ್ಘ್ಯವನ್ನು ನೀಡಬೇಕು. ಮಹಾಭಾರತದ ವನಪರ್ವದಲ್ಲಿ ಬರುವ ಸಾವಿತ್ರಿಯ ಈ ಕಥೆಯನ್ನು ಪತಿಯಿಂದ ಅಥವಾ ಬ್ರಾಹ್ಮಣರ ಮುಖದಿಂದ ಶ್ರವಣಮಾಡಬೇಕು. ಪದ್ಯದ ರೂಪದಲ್ಲಿರುವ ವಟಸಾವಿತ್ರಿ ವ್ರತದ ಕಥೆಯನ್ನು ಪಾರಾಯಣ ಮಾಡ-ಬೇಕು. ಈ ಪುಸ್ತಕದಲ್ಲಿರುವ ಯಮಸೂಕ್ತವನ್ನು ಗಂಡನು ಪಠಿಸಿ ಇಬ್ಬರ ದಾಂಪತ್ಯವು ಅವಿಚ್ಛಿನ್ನವಾಗಿ ನಡೆಯುವಂತೆ ಇಬ್ಬರಿಗೂ ಆಯುಷ್ಯವು ಅಭಿವೃದ್ಧಿಯಾಗುವಂತೆ ಯಮದೇವರಲ್ಲಿ ಪ್ರಾರ್ಥಿಸಬೇಕು.

## ಯಮದೇವರ ಪೂಜೆ (ಪುಷ್ಪಗಳಿಂದ ಯಮದೇವರಿಗೆ ಅರ್ಚನೆಯನ್ನು ಮಾಡಿರಿ)

ಶ್ಯಾಮಲಾಸಹಿತ ಯಮಾಯ ನಮಃ । ಶ್ಯಾಮಲಾಸಹಿತ ಧರ್ಮರಾಜಾಯ ನಮಃ । ಶ್ಯಾಮಲಾಸಹಿತ ಮೃತ್ಯವೇ ನಮಃ । ಶ್ಯಾಮಲಾಸಹಿತ ಅಂತಕಾಯ ನಮಃ । ಶ್ಯಾಮಲಾಸಹಿತ ವೈವಸ್ವತಾಯ ನಮಃ । ಶ್ಯಾಮಲಾಸಹಿತ ಕಾಲಾಯ ನಮಃ । ಶ್ಯಾಮಲಾಸಹಿತ ಸರ್ವಭೂತಕ್ಷಯಾಯ ನಮಃ । ಶ್ಯಾಮಲಾಸಹಿತ ಔದುಂಬರಾಯ ನಮಃ । ಶ್ಯಾಮಲಾಸಹಿತ ದಗ್ಧಾಯ ನಮಃ । ಶ್ಯಾಮಾಲಸಹಿತ ನೀಲಾಯ ನಮಃ । ಶ್ಯಾಮಲಾಸಹಿತ ಪರಮೇಷ್ಠಿನೇ ನಮಃ । ಶ್ಯಾಮಲಾಸಹಿತ ವೃಕೋದರಾಯ ನಮಃ । ಶ್ಯಾಮಲಾಸಹಿತ ಚಿತ್ರಾಯ ನಮಃ । ಶ್ಯಾಮಲಾಸಹಿತ ಚಿತ್ರಗುಪ್ತಾಯ ನಮಃ ॥

## ಯಮದೇವರಿಗೆ ಅರ್ಘ್ಯ

ಯಮೋ ನಿಹಂತಾ ಪಿತೃಧರ್ಮರಾಜೋ ವೈವಸ್ವತೋ ದಂಡಧರಶ್ಚ ಕಾಲಃ ।
ಪ್ರೇತಾಧಿಪೋ ದತ್ತಕೃತಾನುಸಾರೀ ಕೃತಾಂತ ಏತದ್ದಶಕೃಜ್ಜಪಂತೀ ॥

'ಶ್ಯಾಮಲಾಸಹಿತ ಯಮಾಯ ನಮಃ ಇದಮರ್ಘ್ಯಂ' ಎಂದು ಯಮದೇವರಿಗೆ ಅರ್ಘ್ಯವನ್ನು ನೀಡಬೇಕು.

## ಸಾವಿತ್ರಿಗೆ ಅರ್ಘ್ಯ

ಅವೈಧವ್ಯಂ ಚ ಸೌಭಾಗ್ಯಂ ದೇಹಿ ತ್ವಂ ಮಮ ಸುವ್ರತೇ। ಪುತ್ರಾನ್ ಪೌತ್ರಾಂಶ್ಚ ಸೌಖ್ಯಂ ಚ ಗೃಹಾಣಾರ್ಘ್ಯಂ ನಮೋಸ್ತುತೇ ॥ ಸತ್ಯವಾನ್‌ಸಾವಿತ್ರ್ಯೈ ನಮಃ ಇದಮರ್ಘ್ಯಂ

ಪೂರ್ಣಿಮೆಗೆ ಎರಡು ದಿನಗಳ ವ್ಯಾಪ್ತಿಯಿದ್ದರೆ, ವ್ರತವನ್ನು ಪೂರ್ಣಿಮೆಯ ವೇಧಯಿರುವ ಚತುರ್ದಶಿಯಂದೇ ಮಾಡಬೇಕು. ಮೂರು ದಿನಗಳ ಅವಧಿಯಲ್ಲಿ ವ್ರತಾಚರಣೆ ನಡೆಯುವುದಾದರೆ ಆಗ ವ್ರತವನ್ನು ದ್ವಾದಶಿ ಅಥವಾ ತ್ರಯೋ-ದಶಿಯಿಂದಲೇ ಆರಂಭಿಸಬೇಕಾಗಬಹುದು. ಆದರೆ ಚತುರ್ದಶಿ 18 ಗಳಿಗೆಗಳು ಮಾತ್ರವೇ ಇದ್ದು ಮುಂದೆಲ್ಲ ಪೂರ್ಣಿಮೆಯ ವ್ಯಾಪ್ತಿಯೇ ಇರುವುದಾದರೆ ಆ ಚತುರ್ದಶಿ ತ್ಯಾಜ್ಯ (ಕಾ.ನಿ.ಪ್ರ 301) ಮರಣಕಾಲ ಸನ್ನಿಹಿತವಾದಾಗ ಸತ್ಯವಂತನು ವಟವೃಕ್ಷದ ನೆರಳಲ್ಲಿ ಆಶ್ರಯ ಪಡೆದನು. ಮತ್ತು ಅದರ ಒಂದು ಶಾಖೆಗೆ ಒರಗಿ-ಕೊಂಡು ಕ್ಷೀಣಸ್ವರದಿಂದ ತನ್ನ ತಲೆ ನೋಯುತ್ತಿದೆಯೆಂದು ಸಾವಿತ್ರಿಗೆ ಹೇಳಿದನು. ವಟಶಾಖಾಮವಷ್ಟಭ್ಯ ಸತ್ಯವಾನ್ಪ್ರಾಹ ಗದ್ಗದಮ್। ಸಾವಿತ್ರೀ ಪಶ್ಯ ಶಿರಸಿ ವೇದನಾ ಮಾಂ ಪ್ರಬಾಧ್ಯತೇ ॥ ಮತ್ತು ಕಡೆಯ ಮಧ್ಯಯುಗೀನ ನಿಬಂಧಗಳಲ್ಲಿ ಹೇಳಿರುವ ಈ ವ್ರತದ ವಿಧಾನ ಸಂಕ್ಷೇಪವಾಗಿ ಹೀಗಿದೆ:- ಸ್ತ್ರೀಯು ಮೊದಲು ಈ ರೀತಿ ಸಂಕಲ್ಪ ಮಾಡಬೇಕು- ನನ್ನ ಪತಿ ಮತ್ತು ಪುತ್ರರ ಆರೋಗ್ಯ ಮತ್ತು ಆಯುಷ್ಯಾಭಿವೃದ್ಧಿಗೋಸ್ಕರ ಮತ್ತು ಈ ಜನ್ಮದಲ್ಲಿ ಹಾಗೂ ಮುಂದಿನ ಜನ್ಮಗಳಲ್ಲಿ ನನ್ನ ವೈಧವ್ಯಪರಿಹಾರಕ್ಕೋಸ್ಕರ ನಾನು ಸಾವಿತ್ರೀವ್ರತವನ್ನು ಆಚರಿಸುತ್ತೇನೆ. ಅನಂತರ ಆಕೆಯು ವಟವೃಕ್ಷದ ಮೂಲದಲ್ಲಿ ನೀರನ್ನು ಚಿಮುಕಿಸಿ ಹಸಿಯ ಅರಳೆನೂಲಿನಿಂದ ಅದನ್ನು ಸುತ್ತುಗಟ್ಟಿ, ಉಪಚಾರಗಳಿಂದ ಅದರ ಪೂಜೆಯನ್ನು ಮಾಡಿಯಾದ ಮೇಲೆ ಸಾವಿತ್ರಿಗೆ (ಪ್ರತಿಮೆಗೆ ಅಥವಾ ಧ್ಯಾನಮೂರ್ತಿಗೆ) ಪಾದಾದಿ ಸರ್ವಾಂಗಪೂಜೆಯನ್ನು ಸಲ್ಲಿಸಿ ಸೌಭಾಗ್ಯ, ಯಶಸ್ಸು, ಸಂಪತ್ತು ಮತ್ತು ಅವೈಧವ್ಯಗಳನ್ನು ಕರುಣಿಸುವಂತೆ ಪ್ರಾರ್ಥನೆ ಮಾಡಬೇಕು. ಆಮೇಲೆ ಯಮ ಮತ್ತು ನಾರದರನ್ನು ಪೂಜೆಗೈದು ಪುರೋಹಿತರಿಗೆ

ಕಾಣಿಕೆ (ವಾಯನ) ಗಳನ್ನು ಕೊಟ್ಟು ಮಾರನೆಯ ದಿನ ಪಾರಣೆಯನ್ನು ಮಾಡಬೇಕು. ಬಂಗಾಳದಲ್ಲಿ ಸಾವಿತ್ರೀ ವ್ರತಾಚರಣೆಯ ವಿಧಾನವು ಇದಕ್ಕಿಂತ ಬೇರೆಯಾಗಿದೆ. ಬಂಗಾಳದಲ್ಲಿ ವಟಸಾವಿತ್ರೀವ್ರತವಿಲ್ಲ. ಆದರೆ ಕೃಷ್ಣ ಚತುರ್ದಶಿಯಂದು ಜನ್ಮ-ಜನ್ಮಾಂತರಗಳಲ್ಲಿಯೂ ಸೌಭಾಗ್ಯವುಳಿಯಬೇಕೆಂದು ಮಾಡಲಾಗುವ ಸಾವಿತ್ರೀ ಚತುರ್ದಶಿಯಿದೆ. ಅದನ್ನು ಹದಿನಾಲ್ಕು ವರ್ಷಗಳ ಕಾಲ ಆಚರಿಸಲಾಗುತ್ತದೆ. ಮೂರು ದಿನಗಳ ಕಾಲ ಉಪವಾಸ ಮಾಡಲು ಅಶಕ್ತಳಾದ ಸ್ತ್ರೀಯು ತ್ರಯೋ-ದಶಿಯಂದು ನಕ್ತವನ್ನು ಉಣ್ಣುವಂತೆಯೂ, ಚತುರ್ದಶಿಯಂದು ಆಯಾಚಿತವಾಗಿ ದೊರೆತುದನ್ನು ತಿನ್ನುವಂತೆಯೂ ಪೂರ್ಣಿಮೆಯ ದಿವಸ ಉಪವಾಸವನ್ನಾ-ಚರಿಸುವಂತೆಯೂ ಅವಕಾಶ ನೀಡಲಾಗಿದ್ದಿತು. ತ್ರಿರಾತ್ರಂ ನಿಯಮಂ ಕುರ್ಯಾ-ದುಪವಾಸಸ್ಯ ಭಕ್ತಿತಃ । ಅಶಕ್ತಾ ಚೇತ್ ತ್ರಯೋದಶ್ಯಾಂ ನಕ್ತಂ ಕುರ್ಯಾ-ಜ್ಜಿತೇಂದ್ರಿಯಾ ।ಅಯಾಚಿತಂ ಚತುರ್ದಶ್ಯಾಂ ಪೌರ್ಣಮಾಸ್ಯಾಮುಪೋಷಣಂ ॥ (ಭವಿಷ್ಯತ್‌ಪುರಾಣ)

## ವಟಸಾವಿತ್ರಿ ಹಾಡು

ವಿನಾಯಕಪೂಜಿತ । ಮನಕೆ ಚಿಂತಾಮಣಿ। ಮನದೊಳಿಷ್ಟಾರ್ಥ ಕೊಡುವೋಲು ಕಾಶಿಯ । ತನಯನ ಮುನ್ನ ಬಲಗೊಂಬೆ ॥1॥ ಸೊಂಡಿಲ ಗಣಪನ । ಸುತನ ಮಾರ್ತಂಡನ । ಉದ್ದಂಡನಾಯಕ ಒಡೆಯನಾ ಕೈಯಲ್ಲಿ । ಕೊಂಡೇವು ನಾವು ಮತಿಗಳ ॥2॥ ಅತ್ತಿಹಣ್ಣಿನಂತೆ । ಸುತ್ತ ಗೆಜ್ಜೆಯ ಕಟ್ಟಿ । ಚಿತ್ತಾರ ಧ್ವನಿಗೆ ನಲಿವೋನು ಕಾಶಿಯ । ವಿಶ್ವಮೂರ್ತಿಗೆ ನಮೋ ಎಂಬೆ ॥3॥ ಆಲದ ಹಣ್ಣಿನಂತೆ । ಸಾಲುಗೆಜ್ಜೆಯ ಕಟ್ಟಿ। ತಾಳದ ಧ್ವನಿಗೆ ನಲಿವೋನು ಕಾಶಿಯ । ಕಾಲಭೈರವಗೆ ನಮೋ ಎಂಬೆ ॥4॥ ನಿಂಬೆ ಹಣ್ಣಿನಂತೆ ತುಂಬ ಗೆಜ್ಜೆಯ ಕಟ್ಟಿ ತಂಬಟೆಯ ಧ್ವನಿಗೆ ನಲಿವೋನು ಕಾಶಿಯ । ಬಿಂದುಮಾಧವಗೆ ನಮೋ ಎಂಬೆ ॥5॥ ಇಂದು ನಾಳೆನ್ನದೆ । ಒಂದೋರ್ವರರುಹದೆ । ಅಂಗನೆವೊಮ್ಮೆ ಮನವಿಟ್ಟು ಕೇಳಿದರೆ । ಬಂದಿದ್ದ ಪಾಪಗಳು ಪರಿಹಾರ ॥6॥ ಹೇಳು ಹೇಳೆಂದಾರೆ । ಹೇಳದಿದ್ದರೆ ಪಾಪ । ಹೇಳಿಸಿ ಕೇಳಿದವರ ಮನಸು ಪರಿಶುದ್ಧವಾದರೆ । ಬಾಗಿಲೊಳಗಿದ್ದು ಯಮ ಕಾಯ್ವ ॥7॥ ನಿದ್ರೆಯ ಗೈಯದೆ । ಒಬ್ಬರ ಕೂಡೆ ಮಾತಾಡದೆ । ಬುದ್ಧಿಯಲಿ ಒಮ್ಮೆ ಮನವಿಟ್ಟು ಕೇಳಿದರೆ ಅ । ಲ್ಲಿದ್ದ ಪಾಪಗಳು

ಪರಿಹಾರ ॥8॥ ಶನಿವಾರದಮಾವಾಸ್ಯೆ । ಭರಣಿನಕ್ಷತ್ರವು । ಕರಿದನೇ ಉಟ್ಟು ಸಾವಿತ್ರೀ ದೇವಿ ತಾ । ಮಡದಿ ಮೈನೆರೆದಳುಪವಾಸ ॥9॥ ಆಗಲೇ ಸಾವಿತ್ರಿಯು । ಅಂಗಳದಲ್ಲಿ ನಿಂತಳು । ಅಂದು ಅತ್ತೆಯನ್ನು ಕರೆದು ಹೇಳಿದಳಾಗ । ಬಂದಿತು ಕಷ್ಟವೆನುತಲಿ ॥10॥ ಸಾವಿತ್ರಿಯೆಂಬಾಕೆ । ಸತ್ಯಕ್ಕೆ ಹಿರಿಯೊಳು । ಅತ್ಯಂತ ತಪವ ನಡೆಸಿದನು ಸತ್ಯನು । ತಾರಯ್ಯ ಕುಶಸಮಿತ್ತವನು ॥11॥ ಗಂಡಗೊಲಿದು ತಾನು । ನಿಂದದ್ದು ನೋಡ್ಡೋನ । ಕಂಜಾಮುಖದ ವನಿತೆಯ ಕಂಡ್ವಿಪ್ಪ । ರಂಭೆಯನು ಮನೆಗೆ ನಡೆಯೆಂದ ॥12॥ ನಾಡಗೊಲಿ ತಾನು । ನೋಡಿದರೆ ಮರುಗುವನು ಬಾಡಿದ ವನಿತೆಯನು ಕಂಡ್ವಿಪ್ಪ । ಭಾಮೆಯನು ಮನೆಗೆ ನಡೆಯೆಂದ ॥13॥ ಅತ್ತೆ ನನ್ನ ಕಳುಹೀರಿ । ಇತ್ತ ನೀವು ಹೋದೀರಿ । ಹಸ್ತಕನಾಣೆ ಉರಿಯಾಣೆ ನಿಮಗೆಂದ್ಯು । ಸ್ವಾಮಿಯ ಆಣೆ ನಿಮಗೆಂದ್ಯು ॥14॥ ಹಾಗೆ ನನ್ನ ಕಳುಹೀರಿ । ಹೀಗೆ ನೀವು ಹೋದೀರಿ । ಪಾವಕನಾಣೆ ಉರಿಯಾಣೆ ನಿಮಗೆಂದ್ಯು ॥15॥ ಅಂಜದೆ ಹೋಗೆಂದ । ನಿಂದೆರಗಿ ಬಾರೆಂದ । ರಂಭೆಯನು ಮನೆಗೆ ಬರಲಟ್ಟಿ ಋಷಿಪುತ್ರ । ನಿಂಬೆಯ ಅರಗಿಲೊರಗಿದ ॥16॥ ನಿಲ್ಲದೆ ಹೋಗೆಂದ । ಮೆಲ್ಲನೆ ಬಾರೆಂದ । ಭಾಮೆಯನು ಮನೆಗೆ ಬರಲಟ್ಟಿ ಋಷಿಪುತ್ರ । ಬಾಳೆಯ ಅರಗಿಲೊರಗಿದ ॥17॥ ಚಂದ್ರಮುಖ ಸಾವಿತ್ರಿ । ಬಂದೊಂದು ವರ್ಷ-ವಾಯಿತು । ಒಂದು ಬಾರಿಗೂ ನೀ ಹೋಗಲಿಲ್ಲ ಸಾವಿತ್ರಿ ಹಾ । ಗೆಂದಳ್ಹರಿಯೊಡನೆ ಸೊಸೆ ಕೂಡೆ ॥18॥ ಮೂರು ಉಪವಾಸದ । ಪಾರಣೆಯ ಮಾಡಿದೆ । ದೂರ ಹೋದಲ್ಲಿ ಬಳಲೀಯೆ ಸಾವಿತ್ರಿ । ಭಾನು ಉದಯಕ್ಕೆ ಉಣಬೇಕು ॥19॥ ಶಾಕವನು ಮೆದ್ದು । ಸಾವಿತ್ರಿ ಪಾಕಂಗಳು ಅತ್ತೆಗೂ ಮಾವಗೂ ನಿರ್ವಿಘ್ನಸತ್ಯೆಗು । ಕೋವಿದಾರತಿಯ ಬೆಳಗ್ಯಾಳು ॥20॥ ಅತ್ತೆ ಬಿನ್ನಪ ನಾನು । ಭರ್ತರೊಡನಾಡುವೆ । ಮತ್ತೀಗ ಹೋಗಿ ಉಲ್ಲಂಘಿಸದೆ ಬಹೆನೆಂದು । ಆರ್ತಿಯಿಂದ್ಹೊರಗೆ ಹೊರಟಳು ॥21॥ ಮಾವ ಬಿನ್ನಪ ನಾನು ದೇವರೊಡನಾಡುವೆ । ನಾನೀಗ ಹೋಗಿ ಉಲ್ಲಂಘಿ-ಸದೇ ಬಹೆನೆಂದು । ಬೇಗದಿಂದಾಗ ಹೊರಗ್ಹೊರಟಳು ॥22॥ ಅತ್ತೆ ಆಡಿದ ಮಾತು । ಭಕ್ತಿಬೀರುವುದಾಗಿ । ಮೇರುವೆಗಟ್ಟಿ ಗುಡಿಗಟ್ಟಿ ಸಾವಿತ್ರಿ । ಮಿತ್ರೆ ಮಾನವ ನಡಿ ಸಾಕೆ ॥23॥ ಮಾವನಾಡಿದ ಮಾತು । ಭಾಮೆ ಬೀರುವುದಾಗಿ । ಮೆರುವೆಗಟ್ಟಿ ಗುಡಿಗಟ್ಟಿ ಸಾವಿತ್ರಿ । ಸಾಗ ಮಾನವ ನಡಿಸಾಕೆ ॥24॥ ಮುತ್ತಿನ ತೊಡಿಗೆಯನ । ಮಿತ್ರೆ ತಾನು ಸಡಿಲಿಸಿ । ಮತಿನ್ನು ತೊಡಿಗೆಯ ತೊಡುವೆನೊ ತೊಡೆನೆಂದಳು ।

ಸಾವಿತ್ರಿ ಮನದಲ್ಲಿ ಮರುಗ್ಯಾಳು ||25|| ಹವಳ ತೊಡಿಗೆಯನು | ಹರದಿ ತಾನು ಸಡಿಲಿಸಿ | ತಿರುಗಿನ್ನು ತೊಡಿಗೆಯ ತೊಡುವೆನೋ ತೊಡೆನೆಂದಳು | ಹರದಿ ಮನದಲ್ಲಿ ಮರುಗ್ಯಾಳು ||26|| ಚಿನ್ನ ತೊಡಿಗೆಯನು | ಕನ್ಯೆ ತಾನು ಸಡಿಲಿಸಿ | ಇನ್ನು ತೊಡುಗೆಯ ತೊಡುವೆನೋ ತೊಡೆನೆಂದಳು | ಕನ್ಯೆ ಮನದಲ್ಲಿ ಮರುಗ್ಯಾಳು ||27|| ಭೂಮಿಯ ಚೇಷ್ಟೆಯು | ರಾಗವಿಂತೆಯರು | ಅಹಲ್ಯಾಮಗಳೆ ಅಳದಿರೆ ಸಾವಿತ್ರಿ | ನಾ ಬಂದು ತೊಡಿಗೆ ತೊಡಿಸುವೆ ||28|| ಕಿತ್ಲೆಯ ವನಗಳಿರ | ಕಸ್ತೂರಿಕೊಳಗಳಿರ | ಒಪ್ಪದಲಿ ಹರಿವೊ ನದಿಗಳೆ ಕಾಣೀರ | ಬಂದ ನಮ್ಮರಸು ವನಕಾಗಿ ||29|| ನಿಂಬೆಯ ವನಗಳಿರ | ತುಂಬಿದ್ದ ಕೊಳಗಳಿರ | ಚಂದದಲಿ ಹರಿವ ನದಿಗಳಿರ ಕಾಣೀರ | ಬಂದ ನಮ್ಮರಸು ವನಕಾಗಿ ||30|| ಅಡಿಕೆಯ ವನಗಳಿರ | ತುಂಬಿರುವ ಕೊಳಗಳಿರ | ಚಂದದಲಿ ಹರಿವ ನದಿಗಳಿರ ಕಾಣೀರ | ಬಂದ ನಮ್ಮರಸು ವನಕಾಗಿ ||31|| ಕಿತ್ಲೆ ಹಣ್ಣಿನಂತೆ | ಮಿತ್ರೆ ನಿನ್ಯೌವನ | ಮಿತ್ರೆಯೆನ್ನೊಡನುಡಿಯೆ ಸಾವಿತ್ರಿ ಕಿತ್ಲೇಯ ವನವು ಇದು ನೋಡು ||32|| ನಿಂಬೆಹಣ್ಣಿನಂತೆ | ರಂಭೆ ನಿನ್ಯೌವನ | ರಂಭೆಯೆನ್ನೊಡನುಡಿಯೆ ಸಾವಿತ್ರಿ| ನಿಂಬೆಯ ವನವು ಇದು ನೋಡು ||33|| ಅಡಿಕೆ ಹಣ್ಣಿನಂತೆ | ಅರಸಿ ನಿನ್ನಳಿತೋಳು | ಅರಸಿಯೆನ್ನೊಡನುಡಿಯೆ ಸಾವಿತ್ರಿ | ಅಡಿಕೆಯ ವನವು ಇದು ನೋಡು ||34|| ಏರಿ ಮೇಲೆ ಒಂದು | ಜಾಣ ಸಿರಿಯ ಬೆಳಕು | ನೇರಿಳೆಯು ಹುಣಸೆ ಅರಳಿ ಅತ್ತೀ ಮರ | ಆಲದ ಮರವು ಇದು ನೋಡು ||35|| ಕೋಡು ಕೋಡನೆ ಹತ್ತಿ | ಕಾಡು ಹಣ್ಣನೆ ಮೆದ್ದು | ಬ್ಯಾಡನ ಬ್ಯಾಡತಿ ನಲಿವಾಗ ಇಂದೆನ್ನ | ಬ್ಯಾಡನ ಬಾಳು ಕಡೆಸುಖ ||36|| ಬ್ಯಾಡನ ತೊಡೆಮೇಲೆ | ಬ್ಯಾಡತಿ ವರಗಿಹಳು | ಇದು ನೋಡೆ ಸಾವಿತ್ರಿ ಸುಖಂಗಣೆಂದರ | ನೋಡಲಾ ಕಾಂತ ಕಡೆಗಣ್ಣಿ ||37|| ಮುತ್ತುಗದ ಮರದಷ್ಟರ ಅತ್ಯಂತ ಭೂತಿದೆ | ಇತ್ತಿತ್ತ ಬಾರೆ ನೆರಳೀಗೆ ಸಾವಿತ್ರಿ | ಮತ್ತೇನು ನಿನ್ನ ಚರಣಾವ ||38|| ದೋಷಕ್ಕೇನು ನುಡಿಯುವುದು | ಏನು ಸುಖ ಅರಸರೆ | ಶಾಕವನು ಮೆದ್ದು ಅಡವಿಲಿ ಇರಲಾಗ | ಆಕಸ್ಮಿಕ ದತ್ತನೆ ಮರವೇರಿ ||39|| ಕಲ್ಲು ಕುಣಿದಾವು | ಕಳ್ಳರು ಬಂದು ಇಳಿದಾರು | ಒಳ್ಳೇಯ ಮನದಲ್ಲಿ ಮರುಗಿದನು ಸತ್ಯಾನು | ತಲ್ಲಣಿಸುತ್ತಿದ್ದಳು ಪತಿವ್ರತೆ ||40|| ಕಾಗೆ ಕೂಗುವುದು | ಬ್ಯಾನಿಮೇಲೊರಗೋದು | ಮೇಲಿನಿಂದ ಬಂದು ಸರಳು ಹೊರಡುವದು | ಕಾಲವೆಂದತ್ತಳು ಪತಿವ್ರತೆ ||41|| ಅತ್ತಿ ಆಲನಾಗಿ | ಮುತ್ತಕ್ಕೆ

ತೆರನಾಗಿ । ಅತ್ತಿ ಸಮಿತ್ತ ಕಡಿವ್ಹೋನು ನೆತ್ತೀಲಿ । ಹತ್ತಿತು ಬೇನೆ ಘನವಾಗಿ ॥42॥ ಆಲ ಆಲನಾಗಿ । ಆಲಕ್ಕೆ ಆಲನಾಗಿ । ಆಲಸಮಿತ್ತ ಕಡಿವ್ಹೋನ ನೆತ್ತೀಲಿ । ಏರಿತು ಬೇನೆ ಘನವಾಗಿ ॥43॥ ಹಸುಳೆ ಕೇಳೆ ನೆತ್ತಿ । ತ್ರಿಶೂಲಗೊಳುತಿದೆ । ವಶವಲ್ಲ ಕಾಣೆ ವರಗುವ ತಲೆ ಬೇನೆ । ಬಿಸಿಗೀತು ಕಾಣೆ ಕಮಲಾಕ್ಷಿ ॥44॥ ನಾರಿ ಕೇಳೆ ನೆತ್ತಿ । ತ್ರಿಶೂಲಗೊಳುತಿದೆ । ನಾಲಿಗೆ ಬಾಯಿ ಕಳವಳಗೊಂಡವು । ಕಾಲ ದಂದತ್ತಳು ಪತಿವ್ರತೆ ॥45॥ ಅಂತಕನ ಪುರದಲ್ಲಿ । ಚಿಂತೆ ಘನವಾಯಿತೆ । ಸದ್ಯದಲ್ಲಿ ಹೋಗಿ ತರಬೇಕು ಶೀಘ್ರದಿ । ಅತ್ಯಂತ ಯಮನು ನುಡಿದಾನು ॥46॥ ತುಟ್ಟತುದೀ ಕೊಂಬು । ಮತ್ತ್ಯಾಗೆ ಇಳಿದೀರಿ । ಉಟ್ಟ ಮುಂಜೆಂಗಗುಡಿ ಗಟ್ಟಿ ಸಾವಿತ್ರಿ । ಜಡೆಯನ್ನು ಕೊಟ್ಟಳರಸಾಗೆ ॥47॥ ಅತ್ತ ಹೋಗೋರಿಲ್ಲ। ಇತ್ತ ಬಾಹೋರಿಲ್ಲ। ಸೊಸ್ತಿಲ್ಲವೆಂದು ಗುರುಗಳಿಗೆ ಹೇಳೋರಿಲ್ಲ। ಎತ್ತಿಂದ ಎತ್ತ ವಿಧಿ ತಂತು ॥48॥ ಹಾಗೆ ಹೋಗೋರಿಲ್ಲ । ಹೀಗೆ ಬಾಹೋರಿಲ್ಲ। ಹೀಗಾಯಿತೆಂದು ಗುರುಗಳಿಗ್ಹೇಳೋರಿಲ್ಲ। ಹ್ಯಾಗೆಂದಿದ್ಹಾಗೆ ವಿಧಿ ತಂತು ॥49॥ ನೂರಿಬ್ರ ತಾಯರಿಗೆ । ಒಬ್ಬಳು ಮಗಳೇ ನಾನು । ಒಬ್ಬನು ಇಲ್ಲಿ ಸ್ಮೃತಿಯ ಕಾಣೆನೆಂದ್ಯು । ಪೊರ್ವಿಷ್ಟಿ ಶೋಕ ಪಡುತ್ತಿದ್ಯು ॥50॥ ಎಲ್ಲಿ ತಾಯಿ ತಂದೆ । ಎಲ್ಲಿಯ ಸೋದರ । ರೆಲ್ಲಿ ಬಂಧು ಬಳಗವು । ಶ್ರೀಪುಲ್ಲನಾಭನ ಮನದಿ ನೆನೆದಿರಿ ॥51॥ ಯಾವ ತಾಯಿ ತಂದೆ । ಯಾವ ಸಹೋದರ । ಯಾವ ಬಂಧು-ಬಳಗವು । ಶ್ರೀನಾರಾಯಣನ ನೆನೆದಿರಿ ॥52॥ ಕಾರಾವಳಿಯನುಟ್ಟು । ಕಗ್ಗಟ್ಟಿನ ಬೊಟ್ಟನಿಟ್ಟು । ಕಾಳ ನಾಯ್ಗಳ ನೊಳಗೊಂಡು ಚೋರರು । ಘೋರನೆ ಬಂದರಡವೀಗೆ ॥53॥ ತೆಂಕಣ ಬಾಗಿಲಲಿ । ಬಿಂಕದಲಿ ಬಂದರು । ಬಿಂಕದಲ್ಲಿರುವ ಪತಿವ್ರತೆಯನೆ ಕಂಡು । ಬಿಂಕದಿಂದ್ಹೋದರು ಯಮಚಾರರು ॥54॥ ಮೂಡಣ ಬಾಗಿಲಲಿ । ಗಾಢದಲಿ ಬಂದರು। ನೋಡುತ್ತಲಿರುವೋ ಪತಿವ್ರತೆಯನೆ ಕಂಡು । ನೋಡುತ್ತಲ್ಹೋದರು ಯಮಚಾರರು ॥55॥ ಯಮನ ಕಾಣುತಲಂಜಿ । ಗಡಗಡನೆ ನಡಗುತ್ತ । ಹಿರಿಯಣ್ಣನೀಗ ರಥವೆ ತರಲಾಗದು । ಪ್ರತಿಷ್ಠೆ ಗೈದಾಳು ಪತಿವ್ರತೆ ॥56॥ ತರಲಾರೆವೆಂದರೆ ಉರಿಯ ಬಿದ್ದ ಯಮರಾಯ । ಕರಿಯ ಬಣ್ಣಗಳ ತೆಗೆದುಟ್ಟು ವೇಷಾಂಗಿ । ಪರಮೇಷ್ಠಿ ತೊಟ್ಟು ಹೊರಗ್ಹೊರಟ ॥57॥ ಅಂಬರದ ಯಾನವನು । ಇಳಿದನೇ ಯಮರಾಯ । ನಿಂದಿದ್ದ ಸತಿಯು ನಿಂದಿರ್ಪುದ ಕಂಡು । ಬಂದೋ-ರ್ಯಾರೆಂದು ಬೆಸಗೊಂಡಳು ॥58॥ ಯಾಕತ್ತೆ ಎನ್ನ ತಂದೆ । ಮಾರ್ತಂಡಳೆನ್ನ

ಪ್ರಿಯಳೆ । ಲೋಕದ ಮೇಲುಳ್ಳ ಮನುಷ್ಯರಾಪ್ರಾಣವನು । ನೂಕಿ ಕೊಂಡೋಗ್ವ ಯಮ ನಾನು ॥59॥ ತೊಡೆಯ ಮೇಲುಳ್ಳರಸನ್ನ । ಪೊಡವಿಮೇಲಿಟ್ಟಳು । ಪೊಡವಿಮೇಲುಳ್ಳ ಪತಿವ್ರತೆ ಸಾವಿತ್ರಿ । ಪೊಡವೊಟ್ಟು ತನ್ನ ಪಿತನಿಗೆ ॥60॥ ಮುತ್ತೈದೆಯಾಗೆಂದು । ಅಂತಕಪ್ಪನ್ದರಸೀದ । ಇಂದಿನಾ ವಚನ ಖರೆಯಲ್ಲಿ ಎನುತಾಳೆ । ಸೆರಗು ಗಂಟಕ್ಕಿ ನಡೆದಾಳು ॥61॥ ತೂಗಿನೋಡಿದಾಳಾಗ । ಮೂಗಿನ ಸ್ವರ ಕಾಣದೆ । ಯಾವಾಗ ಹೋಯಿತೋ ಅರಿಯಳೋ ಸತ್ಯನ । ಆಯುಷ್ಯಾವ ತರುವೆ ಯಮನಲ್ಲಿ ॥62॥ ಖಂಡುಗ ರಾಜ್ಯವನು । ಉಂಡಲಿಗೆ ನೀಯುವೆ । ಪಾಂಡಿತ್ಯವುಳ್ಳ ಪುರುಷನ ಪ್ರಾಣವನು । ಕೊಂಡು ಬಂದಿಲ್ಲಿ ಪ್ರಿಯೆಮಾಳ್ಪೆ ॥63॥ ಹರಿಣ ಸಾರಂಗ । ಮೃಗ ಕೋಡಂಗ । ನೀವೆಲ್ಲ ಬಂದು ಅರಸನ್ನ ನೋಡಿದರೆ । ನಾನೀಗ ಶಾಪ ನಿಮಗೀವೆ ॥64॥ ದೂರ ಹುಲಿ ಮೃಗ । ಸಾರಂಗ ಕೋಡಂಗ । ನೀವೆಲ್ಲ ಬಂದು ಅರಸನ್ನ ನೋಡಿದರೆ । ನಾನೀಗ ಶಾಪವ ನಿಮಗೀವೆ ॥65॥ ಎಡದ ಕೈಯಲಿ ಹಣತೆ । ಬಲದ ಕೈಲಿ ರಂಗೋಲಿ । ಹಲವು ದೇವಾಲಯ ತಿರುಗಲಾರೆ ಸರ್ವೇಶ । ಬಂದೇನು ನಿನ್ನ ಬಳಿಗೆಂದಳು ॥66॥ ಒಪ್ಪೊತ್ತು ಉಣಲಾರೆ । ಇಪ್ಪೊತ್ತು ಮೀಲಾರೆ । ಸತ್ಯನಾ ಬಿಟ್ಟು ಇರಲಾರೆ ಸರ್ವೇಶ । ಬಂದೇನು ನಿನ್ನ ಬಳಿಗೆಂದಳು ॥67॥ ಒಂದೊತ್ತು ಉಣಲಾರೆ । ಒಂದೆಲೆಯನ್ನಾಕಲಾರೆ । ಗಂಡನಾ ಬಿಟ್ಟು ಇರಲಾರೆ ಸರ್ವೇಶ । ಬಂದೇನು ನಿನ್ನ ಬಳಿಗೆಂದಳು ॥68॥ ಹಾಲು ಕೋಯೆಂದರೆ । ಹಾಸಿದಳೆ ಮುಂಚೆರಗ । ಹಾಲಿಕ್ಕೆಂದಗಳ ಕೊಡಬೇಕು ನೀವು ಕೊಟ್ಟ । ಬಾಲನಾ ಯಾರಿಗೆ ಪಡೆಯಲಿ ॥69॥ ಮೊಸರು ಕೋಯೆಂದಾರೆ । ಹಾಸಿದಳೆ ಮುಂಚೆರಗ । ಮೊಸರಿಕ್ಕಂದಗಳ ಕೊಡಬೇಕು ನೀವು ಕೊಟ್ಟ । ಶಿಶುವ ನಾನ್ಯಾರಿಗೆ ಪಡೆಯಲಿ ॥70॥ ಏರೀರಾಜನ ನೀರಿಲ್ಲದೆ ಬೆಳೆವೋರು । ರಾಯ ನಿಮ್ಮೊಡನೆ ವನವಾಸವಿರುವಾಗ । ಬಾಲಾನ ನಾನಾರಿಗೆ ಪಡೆಯಲಿ ॥71॥ ಬೆಟ್ಟದ ರಾಜನ । ಬಿತ್ತೋರೆ ಬೆಳಗೋರೆ । ರಾಯ ನಿಮ್ಮೊಡನೆ ವನವಾಸವಿರುವಾಗ । ಶಿಶುವ ನಾನ್ಯಾರಿಗೆ ಪಡೆಯಲಿ ॥72॥ ಗಂಡನಿಲ್ಲದ ಬಾಲೆ । ಉಂಡುಟ್ಟು ಇದ್ದರೆ । ನಿಂದು ಕಂಕಣವು ನೆರೆದು ಇಟ್ಟಿದ್ದರೆ । ಕಂಡೋರೆಲ್ಲಾ ನಗುವೋರು ॥73॥ ಅರಸಿನುಳ್ಳೋಳ ಕಂಡಾರೆ । ಅರಶಿನ ಹಚ್ಚಿಂಬೋರು । ಅರಸನಿಲ್ಲಾದ ವಿಧವೆಯ ಕಂಡಾರೆ । ಚರಿತಳೆ ಬಾನು ಬಸಿ- ಯೆಂಬೋರು ॥74॥ ಅತ್ತೆಗು ನಾದ್ನಿಗು । ತೊತ್ತಾಗಿ ನುಡಿದರೆ । ತುತ್ತು ನುಂಗುವಾಗ

ಮಿಡುಕುವಳು ತಾ ತನ್ನ। ನೆತ್ತಿಲಿ ಹೊತ್ತು ಇಳಿಸೆಂಬೋಳು ||75|| ಅತ್ತೆಗು ನಾದ್ನಿಗೂ । ತೊತ್ತಾಗಿ ನುಡಿದರೆ । ಕೂಳ ನುಂಗುವಾಗ ಮಿಡುಕೋಳು ತಾ ತನ್ನ । ಬೀದೀಲಿ ಹೊತ್ತು ಇಳುವೆಂಬೋರು ||76|| ನೀನಾಡಿದ ಮಾತು । ತಪ್ಪೋದು ಹುಸಿಯಲ್ಲ। ಮೆಚ್ಚಿದೆನು ಕಾಣೆ ವರ ಬೇಡೆ ಸಾವಿತ್ರಿ । ಸತ್ಯನ ಪ್ರಾಣ ಹೊರತಾಗಿ ||77|| ಕಂಗಳಿಲ್ಲದ ಅಂದಕ । ಮಾವಂದಿರಿಗೆ । ಕಂಗಳು ನೀವು ಕೊಡಬೇಕು ಸರ್ವೇಶ । ರಂಭೆ ತಾ ಕರವ ಮುಗಿದಾಳು ||78|| ಪುತ್ರನಿಲ್ಲದ ಪುತ್ರೀಗೆ । ಎನ್ನಯ್ಯಾ । ಪುತ್ರನ್ನ ನೀವು ಕೊಡಬೇಕು ಸರ್ವೇಶ । ಮಿತ್ರೆ ತಾ ಕರವ ಮುದಿಗಾಳು ||79|| ಹೊನ್ನಡಳಿಗೆಯಲಿ । ಹೊಯಿದನೆ ಆಯುಷ್ಯಾವ । ಸಾವಿತ್ರಿ ದೇವಿ ಹಿಡಿಯೆಂದು ಯಮರಾಯ । ಹೊನ್ನೋಲೆ ಹರಿಸಿ ಕಿವಿಗಿಟ್ಟ ||80|| ಬಾಳು ಬಳ್ಳಾಳು । ಏರಿದನೆ ರಥಗಳ । ದಾರಿಯನು ತೋರಿದರೆ ಯಮಧರ್ಮ ಬಿಟ್ಟೇನು । ತೋರಿ ನೀ ರಥಕ್ಕೆ ಬಳಸೆಂದ್ನು ||81|| ಅಕ್ಕ ಕೇಳಿ ಸಾವಿತ್ರಿ । ನಾ ನಿನಗೆ ಪ್ರಿಯವೆ ಮಾಳ್ಪೆ। ಸೃಷ್ಟಿ ಮೇಲುಳ್ಳ ಮನುಷ್ಯರಿಗೆ ದಾರಿಯನು । ನಮ್ಮಕ್ಕ ನೀ ತೋರದಿರು ಕಂಡ್ಯ ||82|| ತಾಯಿ ಕೇಳೆ ಸಾವಿತ್ರಿ । ನಾನೀಗ ಪ್ರಿಯ ಮಾಳ್ಪೆ । ಭೂಮಿಯ ಮೇಲುಳ್ಳ ಮನುಷ್ಯರಿಗೆ ದಾರಿಯನು । ನಮ್ಮ ತಾಯೀ ನೀ ತೋರದಿರು ಕಂಡ್ಯ ||83|| ತಂಗಿ ಕೇಳೆ ಸಾವಿತ್ರಿ । ನಾ ನಿನಗೆ ಪ್ರಿಯವ ಮಾಳ್ಪೆ। ಸೃಷ್ಟಿ ಮೇಲುಳ್ಳ ಮನುಜರಿಗೆ ದಾರಿಯನು । ನಮ್ಮ ತಂಗಿ ನೀ ತೋರದಿರು ಕಂಡ್ಯ ||84|| ಎಡದ ಕೈಯಲಿ ಹಣತೆ । ಬಲದ ಕೈಲಿ ಆಯಷ್ಯಾವು । ಸಾವಿತ್ರಿ ದೇವಿ ತರಲಾಗ ಸತ್ಯನು । ತಾನಾಗ ಮೈಯ ಮುರಿದೆದ್ದ ||85|| ನಾರಿ ಕೇಳು ಸಾವಿತ್ರಿ । ನಾನಿರುಳು ಕನಸಿನಲಿ । ಯಮನವರು ಬಂದು ಕರವ ಪಿಡಿದೆಳೆವಾಗ। ನೀಯೆನ್ನ ಬಿಡಿಸಿಕೊಳುತಿರ್ದೆ ||86|| ನಿನ್ನಂತೆ ನಡಿವೋಳು । ನಿನ್ನಂತೆ ನುಡಿವೋಳು। ನಿನ್ನೋಲುವ ಮಿಡುಗೆಸೆದ ಬಾಲೆ। ಎನ್ನ ಕರ ಪಿಡಿದು ತರುವೋಳು ||87|| ಇಂದಿನ ಕನಸು ಮತ್ತೆಲ್ಲ ಒಳ್ಳೇದು । ಇನ್ನಿಲ್ಲೀಗ ಇರಲಾರದ ಋಷಿವಳ್ಳಿ । ಅಲ್ಲಗ್ಹೋಗೋಣ ನಡಿಯೆಂದಳು ||88|| ದೂರದ ಹುಲಿ ಮೃಗ । ಸಾರಂಗ ಕೋಡಂಗ । ತಾವೆಲ್ಲ ಬಂದು ಕಳುಹಿಸಿದವು ಸಾವಿತ್ರಿಯ । ಗ್ರಾಮದಾಹಳ್ಳಿವಳಗಾಗಿ ||89|| ಹಂದಿ ಸಾರಂಗ । ಮೃಗ ಕೋಡಂಗ । ತಾವೆಲ್ಲ ಬಂದು ಕಳುಹಿಸಿದವು ಸಾವಿತ್ರಿಯ । ಗ್ರಾಮದಾ ಹಳ್ಳಿವಳಗಾಗಿ ||90|| ಉತ್ತಮೋತ್ತಮ ತೀರ । ಉತ್ತಮಾ ಕುಲಕ್ಷೇತ್ರ । ಸತ್ಯಪ್ಪ ಬಂದು ಗುಡಿ ಕಟ್ಟಿ ಎನುತಾಲೆ । ಹಕ್ಕಿಗಳು ತಾವು ನುಡಿದವು.

॥91॥ ಅರಗಿಳಿ ನುಡಿದಂತೆ । ತಳಿರು ತೋರಣ ಕಟ್ಟಿ । ಬಾಸಿಂಗ ಕಟ್ಟಿ ಗುಡಿ ಕಟ್ಟಿ ಯೇನುತಾಲೆ । ಶೇಷಪತಿ ಬರುವೊಭರವೀಗ ॥92॥ ಮಾನಪ್ಪ ಕಂಗಳಿರ । ನೀವೇನೆನುತ್ತೀರಿ । ಮಾನಪ್ಪನೆಂಬ ಹಿರಿಯ ಮಗನ್ಹೊದ ಸೊಸೆ ಹೋದಳು । ನೀವೇನೆನುತ್ತೀರಿ ಬರಿಮಾತು ॥93॥ ದರ್ಭೆ ಸಮಿತ್ತವನು । ಧರೆಯ ಮೇಲಿರಿಸೀದ । ಹೆತ್ತೋರ ಚರಣಕ್ಕೆರಗಿದ ಹಸುಕೂಸನೆ ಕಂಡು । ಇಪ್ಪೋರೆ ಮಗನ ಅಡವೀಲಿ ॥94॥ ಅರಣ್ಯದಡವೀಲಿ । ನಾನೊಬ್ಬನೇ ಇದ್ದೆ । ನಾನೊಂದು ತೆರವ ಅರಿಯೇನು ನೀವು ನಿಮ್ಮ । ಭೂನಾಥ ಸೊಸೆಯ ಬೆಸಗೊಳ್ಳಿ ॥95॥ ಪಾಪ ಹರಿದವು ನಮಗೆ । ಯಮಧರ್ಮ ಕಣ್ಣು ತೆರೆದ । ನಿಮ್ಮ ಪಾಪವು ನೆನೆದ ಕಾರಣದಿಂದ । ನಮ್ಮ ಕಾರ್ಯಗಳು ಜಯವಾಯಿತು ॥96॥ ಸಾವಿತ್ರಿ ದೇವೀನ । ಸತ್ಯಪ್ಪ ಹರಸೀದ । ಹತ್ರದಲ್ಲೇ ಇದು ಹೇಳೋರಿಗೆ ಕೇಳೋರಿಗೆ । ವಿಷ್ಣು ಲೋಕದಲ್ಲಿ ಸುಖವಿತ್ತರು ॥97॥ ಶನಿವಾರದಮಾವಾಸ್ಯೆ । ಹೇಳೋರಿಗೆ ಕೇಳೋರಿಗೆ । ಮುತ್ತೈದೆತನ ಕೊಡವೋಳು ಸಾ । ವಿತ್ರಿ ದೇವಿ ಸ್ಥಿರವಾಗಿ ॥98॥

* * * *

ಪತಿಯು ಇಂದು ಯಮಸೂಕ್ತ ಪಠಿಸಬೇಕು –

ಪರೇಯಿವಾಂಸಮಿತಿ ಷೋಳಶರ್ಚಸ್ಯ ಸೂಕ್ತಸ್ಯ । ವೈವಸ್ವತೋ ಯಮಃ । ಯಮಃ, ಷಷ್ಠ್ಯಾಃ ಅಂಗಿರಃ ಪಿತ್ರಥರ್ವಭೃಗುಸೋಮಾಃ, ಸಪ್ತಮ್ಯಾದಿತಿಸೃಣಾಂ ಪಿತರಃ, ದಶಮ್ಯಾದಿತಿಸೃಣಾಂ ಶ್ವಾನೌ । ತ್ರಿಷ್ಟುಪ್, ತ್ರಯೋದಶ್ಯಾದಿದ್ವೇ ಅಂತ್ಯಾ ಚ ಅನುಷ್ಟುಭಃ, ಉಪಾಂತ್ಯಾ ಬೃಹತೀ ॥ ಪರೇಯಿವಾಂಸಂ ಪ್ರವತೋ ಮಹೀರನು ಬಹುಭ್ಯಃ ಪಂಥಾಮನುಪಸ್ಪಶಾನಮ್। ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಂ ಹವಿಷಾ ದುವಸ್ಯ ॥ ಯಮೋ ನೋ ಗಾತುಂ ಪ್ರಥಮೋ ವಿವೇದ ನೈಷಾ ಗವ್ಯೂತಿರಪಭರ್ತವಾ ಉ ಯತ್ರಾ ನಃ ಪೂರ್ವೇ ಪಿತರಃ ಪರೇಯು ರೇನಾ ಜಜ್ಞಾನಾಃ ಪಥ್ಯಾಕಿ(ಅ) ಅನು ಸ್ವಾಃ ॥ ಮಾತಲೀ

ಕವ್ಯೈರ್ಯಮೋ ಅಂಗಿರೋಭಿರ್ಬೃಹಸ್ಪತಿರೃಕ್ವಭಿರ್ವಾವೃಧಾನಃ। ಯಾಶ್ಚ ದೇವಾ ವಾವೃಧುರ್ಯೇ ಚ ದೇವಾನ್ ತ್ಸ್ವಾಹಾನ್ಯೇ ಸ್ವಧಯಾನ್ಯೇ ಮದಂತಿ॥ ಇಮಂ ಯಮ ಪ್ರಸ್ತರಮಾ ಹಿ ಸೀದಾಽಂಗಿರೋಭಿಃ ಪಿತೃಭಿಃ ಸಂವಿದಾನಃ। ಆ ತ್ವಾ ಮಂತ್ರಾಃ ಕವಿಶಸ್ತಾ ವಹಂತ್ವೇನಾ ರಾಜನ್ ಹವಿಷಾ ಮಾದಯಸ್ವ॥ ಅಂಗಿರೋ-ಭಿರಾ ಗಹಿ ಯಜ್ಞಿಯೇಭಿರ್ಯಮ ವೈರೂಪೈರಿಹ ಮಾದಯಸ್ವ। ವಿವಸ್ವಂತಂ ಹುವೇ ಯಃ ಪಿತಾ ತೇಽಸ್ಮಿನ್ ಯಜ್ಞೇ ಬರ್ಹಿಷ್ಯಾ ನಿಷದ್ಯ ॥ ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ ಸೋಮ್ಯಾಸಃ। ತೇಷಾಂ ವಯಂ ಸುಮತೌ ಯಜ್ಞಿಯಾನಾಮಪಿ ಭದ್ರೇ ಸೌಮನಸೇ ಸ್ಯಾಮ ॥ ಪ್ರೇಹಿ ಪ್ರೇಹಿ ಪಥಿಭಿಃ ಪೂರ್ವ್ಯೇಭಿರ್ಯತ್ರಾ ನಃ ಪೂರ್ವೇ ಪಿತರಃ ಪರೇಯುಃ। ಉಭಾ ರಾಜಾನಾ ಸ್ವಧಯಾ ಮದಂತಾ ಯಮಂ ಪಶ್ಯಾಸಿ ವರುಣಂ ಚ ದೇವಮ್ ॥ ಸಂ ಗಚ್ಛಸ್ವ ಪಿತೃಭಿಃ ಸಂ ಯಮೇನೇಷ್ಟಾಪೂರ್ತೇನ ಪರಮೇ ವ್ಯೋಮನ್। ಹಿತ್ವಾ ಯಾವದ್ಯಂ ಪುನರಸ್ತಮೇಹಿ ಸಂ ಗಚ್ಛಸ್ವ ತನ್ವಾ ಸುವರ್ಚಾಃ ॥ ಅಪೇತ ವೀತ ವಿ ಚ ಸರ್ಪತಾತೋಽಸ್ಮಾ ಏತಂ ಪಿತರೋ ಲೋಕಮಕ್ರನ್ । ಅಹೋಭಿರದ್ಭಿ-ರಕ್ತುಭಿರ್ವ್ಯಕ್ತಂ ಯಮೋ ದದಾತ್ಯವಸಾನಮಸ್ಮೈ ॥ ಅತಿದ್ರವ ಸಾರಮೇಯೌ ಶ್ವಾನೌ ಚತುರಕ್ಷೌ ಶಬಲೌ ಸಾಧುನಾ ಪಥಾ । ಅಥಾ ಪಿತೄನ್ ತ್ಸುವಿದತ್ರಾಂ ಉಪೇಹಿ ಯಮೇನ ಯೇ ಸಧಮಾದಂ ಮದಂತಿ ॥ ಯೌ ತೇ ಶ್ವಾನೌ ಯಮ ರಕ್ಷಿತಾರೌ ಚತುರಕ್ಷೌ ಪಥಿರಕ್ಷೀ ನೃಚಕ್ಷಸೌ । ತಾಭ್ಯಾಮೇನಂ ಪರಿ ದೇಹಿ ರಾಜನ್ ತ್ಸ್ವಸ್ತಿ ಚಾಸ್ಮಾ ಅನಮೀವಂ ಚ ಧೇಹಿ ॥ ಉರೂಣಸಾವಸುತೃಪಾ ಉದುಂಬಲೌ ಯಮಸ್ಯ ದೂತೌ ಚರತೋ ಜನಾಂ ಅನು। ತಾವಸ್ಮಭ್ಯಂ ದೃಶಯೇ ಸೂರ್ಯಾಯ ಪುನರ್ದಾತಾಮಸುಮದ್ಯೇಹ ಭದ್ರಮ್ ॥ ಯಮಾಯಯ ಸೋಮಂ ಸುನುತ

ಯಮಾಯ ಜುಹುತಾ ಹವಿಃ । ಯಮಂ ಹ ಯಜ್ಞೋಗಚ್ಛತ್ಯಗ್ನಿದೂತೋ ಅರಂಕೃತಃ ॥ ಯಮಾಯ ಘೃತವದ್ಧವಿರ್ಜುಹೋತ ಪ್ರ ಚ ತಿಷ್ಠತ । ಸ ನೋ ದೇವೇಷ್ವಾಯಮದ್ ದೀರ್ಘಮಾಯುಃ ಪ್ರ ಜೀವಸೇ ॥ ಯಮಾಯ ಮಧುಮತ್ತಮಂ ರಾಜ್ಞೇ ಹವ್ಯಂ ಜುಹೋತನ । ಇದಂ ನಮ ಋಷಿಭ್ಯಃ ಪೂರ್ವಜೇಭ್ಯಃ ಪೂರ್ವೇಭ್ಯಃ ಪಥಿಕೃದ್ಭ್ಯಃ ॥ ತ್ರಿಕದ್ರುಕೇಭಿಃ ಪತತಿ ಷಳುರ್ವೀರೇಕಮಿದ್ ಬೃಹತ್ । ತ್ರಿಷ್ಟುಬ್ ಗಾಯತ್ರೀ ಛಂದಾಂಸಿ ಸರ್ವಾ ತಾ ಯಮ ಆಹಿತಾ ॥

* * * * *

ಮಹಾಜ್ಯೇಷ್ಠಯೋಗ – ಪೂರ್ಣಿಮಾದಂದು ಜ್ಯೇಷ್ಠಾನಕ್ಷತ್ರದಲ್ಲಿ ಗುರು ಮತ್ತು ಚಂದ್ರರು ಇದ್ದು, ರೋಹಿಣೀ ನಕ್ಷತ್ರದಲ್ಲಿ ಸೂರ್ಯನು ಇದ್ದರೆ 'ಮಹಾಜ್ಯೇಷ್ಠೀ' ಎನ್ನುತ್ತಾರೆ. ಈ ಯೋಗವು 12 ವರುಷಕ್ಕೊಮ್ಮೆ ಬರಬಹುದಾದ ಅಪರೂಪದ ಯೋಗ. ಈ ದಿನವೇ ಮನ್ವಾದಿಯೂ ಆಗುವುದರಿಂದ ಮನ್ವಾದಿ ಶ್ರಾದ್ಧವನ್ನು ಮಾಡಬೇಕು.

## ಜ್ಯೇಷ್ಠ ॥ ಬಹುಳ ॥ ದ್ವಿತೀಯಾ

ಶ್ರೀ ರಘುಪತಿತೀರ್ಥರು (ಪಲಿಮಾರು ಮಠ) ಪರಂಪರೆಯಲ್ಲಿ ಹದಿನಾರನೆಯವರು. ಇವರು ಆರುಬಾರಿ ಸುಧಾಮಂಗಲ ಮಾಡಿದಂತೆ ಮಠದ ದಾಖಲೆ-ಗಳಲ್ಲಿ ಉಲ್ಲೇಖವಿದೆ. ಶ್ರೀವಾದಿರಾಜರ ಕಾಲದ ವಿದ್ವನ್ಮಣಿಯತಿಗಳಲ್ಲಿ ಇವರ ಹೆಸರಿಗೂ ಪ್ರಮುಖವಾದ ಸ್ಥಾನವಿದೆ. ಇವರು ಹದಿನೇಳು ವರ್ಷಗಳ ಕಾಲ ಪೀಠದಲ್ಲಿದ್ದು ಶಾ.ಶ 1511 (ಕ್ರಿ.ಶ. 1588) ಸರ್ವಧಾರಿ ಸಂವತ್ಸರದ ಜ್ಯೇಷ್ಠ ಬಹುಳ ದ್ವಿತೀಯಾ ತಿಥಿಯಂದು ಹರಿದ್ವಾರದಲ್ಲಿ ಹರಿಪದವೈದಿದರು.

ಶ್ರೀಯೋಗಿಮಾಧವತೀರ್ಥರು (ಮಾಧವತೀರ್ಥ ಮಠ) ಮುಳಬಾಗಿಲು

ಧೀರಮಾಧವಕರಾಬ್ಜೋತ್ಥಂ ಕೃಪಾಶೇಷಪೂರಿತಮ್ । ಯೋಗಿಮಾಧವಗುರುಂ ವಂದೇ ಸುತಪೋನಿಧಿಗುರುಂ ಸದಾ ॥

## ಜ್ಯೇಷ್ಠ || ಬಹುಳ || ಚತುರ್ಥಿ

**ಶ್ರೀ ಸ್ವರ್ಣವರ್ಣತೀರ್ಥರು (ಶ್ರೀಪಾದರಾಜ ಮಠ)** - ಶ್ರೀರಂಗ (ಕ್ರಿ.ಶ. 1400-1430) **ವಸುಧಾತಲವಿಖ್ಯಾತಂ ವೈರಾಗ್ಯಾದಿಗುಣಾರ್ಣವಂ । ವೇದ-ವೇದಾಂಗಚತುರಂ ಸ್ವರ್ಣವರ್ಣಗುರುಂ ಭಜೇ ॥**

## ಜ್ಯೇಷ್ಠ || ಬಹುಳ || ಪಂಚಮಿ

**ಶ್ರೀಸುರೇಶತೀರ್ಥರು (ಪಲಿಮಾರು ಮಠ)** ಇವರು ಪರಂಪರೆಯಲ್ಲಿ ಹನ್ನೆರಡನೆಯವರು. ಕಾಷ್ಠಮೌನದಂಥ ಕಠಿಣ ತಪಶ್ಚರ್ಯದಲ್ಲಿ ಇವರು ಜೀವನ-ವನ್ನು ಕಳೆದರು ಎಂದು ಮಠದ ದಾಖಲೆಯಲ್ಲಿ ಉಲ್ಲೇಖಿಸಲಾಗಿದೆ. ಎರಡು ತಿಂಗಳ ಕಾಲಾವಧಿಯ ಪರ್ಯಾಯವನ್ನು ಎರಡು ವರ್ಷ ಕಾಲಾವಧಿಯನ್ನಾಗಿ ಶ್ರೀವಾದಿ-ರಾಜರು ಪರಿವರ್ತಿಸಿದಾಗ ಪಲಿಮಾರು ಮಠದಿಂದ ಕ್ರಿ.ಶ. 1522ನೇ ವರ್ಷದಲ್ಲಿ ಪ್ರಾರಂಭಿಸಿದಾಗ ಇವರಿದ್ದ ಕಾರಣ ಇವರೇ ಎರಡು ವರ್ಷಗಳ ಪರ್ಯಾಯದ ಪ್ರಥಮ ಪೀಠಸ್ಥರಾಗಿದ್ದರು. ಎಂದು ಭಾವಿಸಬಹುದು. ಇವರು ಹೆಚ್ಚಿನ ಕಾಲವನ್ನು ತನ್ನ ಹಳ್ಳಿಯ ಮಠದಲ್ಲಿಯೇ ಕಳೆದರು. ಹೀಗೆ ಹದಿನಾರು ವರ್ಷಗಳ ಕಾಲ ಈ ಪೀಠವನ್ನಲಂಕರಿಸಿ ಶಾ.ಶ. 1452 (ಕ್ರಿ.ಶ. 1530) ವಿರೋಧಿ ಸಂವತ್ಸರದ ಜ್ಯೇಷ್ಠ ಬಹುಳ ಪಂಚಮಿಯಂದು ಪಲಿಮಾರಿನ ಮಠದಲ್ಲಿಯೇ ವೃಂದಾವನಸ್ಥರಾದರು.

## ಜ್ಯೇಷ್ಠ || ಬಹುಳ || ಏಕಾದಶೀ

**ಯುಧಿಷ್ಠಿರಃ - ಜ್ಯೇಷ್ಠಸ್ಯ ಕೃಷ್ಣಪಕ್ಷೇ ತು ಕಿನ್ನಾಮ್ನ್ಯೇಕಾದಶೀ ಭವೇತ್ । ಶ್ರೋತುಮಿಚ್ಛಾಮಿ ಮಾಹಾತ್ಮ್ಯಂ ತದ್ವದಸ್ವ ಜನಾರ್ದನ ॥1॥** ಯುಧಿಷ್ಠಿರನು ಹೇಳಿದನು - ಎಲೈ ಜನಾರ್ದನನೇ! ಜ್ಯೇಷ್ಠಕೃಷ್ಣಪಕ್ಷದ ಏಕಾದಶಿಗೆ ಹೆಸರೇನು? ಅದರ ಮಹಿಮೆಯನ್ನು ಕೇಳಲಿಚ್ಛಿಸುತ್ತೇನೆ. ಹೇಳು. **ಶ್ರೀಕೃಷ್ಣಃ - ಸಾಧು ಪೃಷ್ಟಂ ತ್ವಯಾ ರಾಜನ್ ಲೋಕಾನಾಂ ಹಿತಕಾಮ್ಯಯಾ । ಬಹುಪುಣ್ಯಪ್ರದಾ ಹ್ಯೇಷಾ ಮಹಾಪಾತಕಹಾನಿದಾ ॥2॥** ಶ್ರೀಕೃಷ್ಣನು ಹೇಳಿದನು - ಎಲೈ ದೊರೆಯೇ! ನೀನು ಕೇಳಿದುದು ಚೆನ್ನಾಗಿದೆ. ಇದು ಲೋಕಕ್ಕೆ ಬೇಕಾದುದು. ಇದು ಬಹುವಾದ ಪುಣ್ಯವನ್ನು ಕೊಡುತ್ತದಲ್ಲದೇ ಮಹಾಪಾಪಗಳನ್ನೂ ನಾಶಮಾಡುತ್ತದೆ. ಅಪರಾ

ನಾಮ ರಾಜೇಂದ್ರ ಅಪರಾ ಪುತ್ರದಾಯಿನೀ। ಲೋಕೇ ಪ್ರಸಿದ್ಧತಾಂ ಯಾತಿ ಅಪರಾಂ ಯಸ್ತು ಸೇವತೇ ॥3॥ ಆ ಜ್ಯೇಷ್ಠಕೃಷ್ಣ ಏಕಾದಶಿಗೆ ಅಪರಾ ಎಂದು ಹೆಸರು. ಈ ಅಪರೆಯು ಪುತ್ರರನ್ನು ಕೊಡುತ್ತದೆ. ಈ ಅಪರಾ ಏಕಾದಶೀವ್ರತವನ್ನು ಮಾಡಿದವನು ಲೋಕದಲ್ಲಿ ಪ್ರಸಿದ್ಧನಾಗುತ್ತಾನೆ. ಬ್ರಹ್ಮಹತ್ಯಾಭಿಭೂತೋಽಪಿ ಗೋತ್ರಹಾ ಭ್ರೂಣಹಾ ತಥಾ । ಪರಾಪವಾದವಾದೀ ಚ ಪರಸ್ತ್ರೀರತಿಕೋಽಪಿ ಚ ॥4॥ ಅಪರಾಸೇವನಾದ್ ರಾಜನ್ ವಿಪಾಪ್ಮಾ ಭವತಿ ಧ್ರುವಮ್ । ಕೂಟಸಾಕ್ಷ್ಯಂ ಕೂಲಮಾನಂ ಕೂಟಾತ್ ಕೂಟಂ ಕರೋತಿ ಯಃ ॥5॥ ಕೂಟವೇದಂ ಪಠೇದ್ಯಸ್ತು ಕೂಟಶಾಸ್ತ್ರಂ ತಥೈವ ಚ । ಜ್ಯೋತಿಷಾಂ ಗಣಕಃ ಕೂಟಃ ಕೂಟಾಯುರ್ವೇದಕೋ ಭಿಷಕ್ ॥6॥ ಕೂಟಸಾಕ್ಷಿಸಮಾಯುಕ್ತೋ ವಿಜ್ಞೇಯಾ ನರಕೌಕಸಃ । ಅಪರಾಸೇವನಾದ್ ರಾಜನ್ ಪಾಪೈರ್ಮುಕ್ತಾ ಭವಂತಿ ತೇ ॥7॥ ಬ್ರಹ್ಮಹತ್ಯೆ , ಗೋಹತ್ಯೆ , ಭ್ರೂಣಹತ್ಯೆ, ಪರಾಪವಾದದ ಪಾಪ, ಪರಸ್ತ್ರೀ ರತಿಯ ಪಾಪ ಇವೆಲ್ಲವೂ ಈ ಅಪರಾ ಏಕಾದಶಿಯ ಸೇವನೆಯಿಂದಾಗಿ ನಾಶವಾಗಿ ಪಾಪವನ್ನು ಕಳೆದುಕೊಳ್ಳುತ್ತಾನೆ. ನಿಶ್ಚಯವು. ಸುಳ್ಳು ಸಾಕ್ಷಿ, ಸುಳ್ಳು ಅಳತೆ, ಅನ್ಯಾಯದಿಂದ ಮತ್ತೊಂದು ಅನ್ಯಾಯ ಸೃಷ್ಟಿಸುವುದು ಇವೆಲ್ಲವೂ ಪಾಪಗಳು. ಕೂಟವೇದ (ಅಥರ್ವಣವೇದದಲ್ಲಿನ ಆಭಿಚಾರಿಕಭಾಗ)ವನ್ನು ಓದುವವನು, ಕೂಟಶಾಸ್ತ್ರ (ಚಾಣಕ್ಯನೀತಿಯಂತಹವು)ವನ್ನು ಓದುವವನು, ಜ್ಯೋತಿಷ್ಕನು, ರಸಮರ್ದನ-ಗಳನ್ನು ಓದುವ ವೈದ್ಯನು ಸುಳ್ಳುಸಾಕ್ಷಿ ಹೇಳುವವನು ಇವರೆಲ್ಲರೂ ನರಕಭಾಗಿ-ಗಳಾಗುತ್ತಾರೆ. ಈ ಮೇಲೆ ಹೇಳಿದ ಪಾಪಿಗಳೂ ಕೂಡ ಈ ಅಪರಾ ಏಕಾದಶೀ ವ್ರತದಿಂದ ಮುಕ್ತರಾಗುತ್ತಾರೆ. ಕ್ಷತ್ರಿಯಃ ಕ್ಷಾತ್ರಧರ್ಮಂ ಯಸ್ತ್ಯಕ್ತ್ವಾ ಯುದ್ಧಾತ್ ಪಲಾಯತೇ । ಸ ಯಾತಿ ನರಕಂ ಘೋರಂ ಸ್ವಾಮಿಧರ್ಮಬಹಿಷ್ಕೃತಃ ॥8॥ ಕ್ಷತ್ರಿಯನಾದವನು ಕ್ಷತ್ರಿಯಧರ್ಮವನ್ನು ಗಮನಿಸದೇ ಯುದ್ಧದಿಂದ ಓಡಿ-ಹೋದರೆ ಅವನು ಘೋರವಾದ ನರಕವನ್ನು ಹೊಂದುತ್ತಾನೆ. ಭಟನಾದವನು ಸ್ವಾಮಿಗೆ ಮಾಡಬೇಕಾದ ಕರ್ತವ್ಯವನ್ನು ಬಿಟ್ಟು ಹಿಂತಿರುಗಿದರೆ ಅವನೂ ನರಕಭಾಗಿಯಾಗುತ್ತಾನೆ. ಅಪರಾಸೇವನಾತ್ ಸೋಽಪಿ ಪಾಪಂ ತ್ಯಕ್ತ್ವಾ ದಿವಂ ವ್ರಜೇತ್ । ವಿದ್ಯಾವಾನ್ ಯಃ ಸ್ವಯಂ ಶಿಷ್ಯೋ ಗುರುನಿಂದಾಂ ಕರೋತಿ ಚ ॥9॥ ಸ ಮಹಾಪಾತಕೈರ್ಯುಕ್ತೋ ನಿರಯಂ ಯಾತಿ ದಾರುಣಮ್ । ಅಪರಾಸೇವನಾ-

ತೋಽಪಿ ಸದ್ಗತಿಂ ಪ್ರಾಪ್ನುಯಾನ್ನರಃ ॥10॥ ಅಂತಹ ಕ್ಷತ್ರಿಯನೂ ಭಟನೂ ಈ ಅಪರಾ ವ್ರತದ ಆಚರಣೆಯಿಂದ ಸ್ವರ್ಗವನ್ನು ಸೇರುತ್ತಾರೆ. ವಿದ್ಯಾವಂತನಾದವನು ತಾನು ಶಿಷ್ಯನಾಗಿದ್ದು ಗುರುವನ್ನು ನಿಂದಿಸಿದರೆ ಅವನು ಮಹಾಪಾಪಿಯಾಗಿ ನರಕಭಾಗಿಯಾಗುವನು. ಅವನೂ ಕೂಡ ಈ ಅಪರಾಸೇವನೆಯಿಂದ ಸದ್ಗತಿ-ಯನ್ನು ಹೊಂದುತ್ತಾನೆ. ಮಹಿಮಾನಮಪರಾಯಾಃ ಶೃಣು ರಾಜನ್ ವದಾ-ಮ್ಯಹಮ್ । ಮಕರಸ್ಥೇ ರವೌ ಮಾಘೇ ಪ್ರಯಾತೇ ಯತ್ಫಲಂ ನೃಣಾಮ್ ॥11॥ ಕಾಶ್ಯಾಂ ಯತ್ಪ್ರಾಪ್ಯತೇ ಪುಣ್ಯಂ ಶಿವರಾತ್ರೇರುಪೋಷಣಾತ್ । ಗಯಾಪಿಂಡ-ಪ್ರದಾನೇನ ಪಿತೃಣಾಂ ತೃಪ್ತಿದೋ ಯಥಾ ॥12॥ ಅಪರಾ ಏಕಾದಶಿಯ ಮಹಿಮೆ-ಯನ್ನು ಹೇಳುತ್ತೇನೆ ಕೇಳು - ಮಕರಮಾಸ ಮಾಘಮಾಸಗಳೆರಡೂ ಸೇರಿದಾಗ ಪ್ರಯಾಗದಲ್ಲಿ ಸ್ನಾನ ಮಾಡಿದರೆ ಯಾವ ಫಲವು ಬರುತ್ತದೆಯೋ ಆ ಫಲವು ಅಪರಾವ್ರತದಾಚರಣೆಯಿಂದ ಬರುತ್ತದೆ. ಕಾಶಿಯಲ್ಲಿ ಶಿವರಾತ್ರಿಯ ದಿವಸ ಉಪವಾಸ ಮಾಡಿದರೆ ಯಾವ ಪುಣ್ಯವು ಬರುತ್ತದೆಯೋ ಆ ಪುಣ್ಯವು ಅಪರಾಸೇವನೆಯಿಂದ ಬರುತ್ತದೆ. ಗಯೆಯಲ್ಲಿ ಪಿಂಡದಾನ ಮಾಡಿದರೆ ಪಿತೃಗಳಿಗೆ ತೃಪ್ತಿಯುಂಟಾಗಿ ಯಾವ ಪುಣ್ಯಬರುತ್ತದೆಯೋ ಆ ಪುಣ್ಯವು ಅಪರಾಸೇವನೆಯಿಂದ ಬರುತ್ತದೆ. ಸಿಂಹಸ್ಥಿತೇ ದೇವಗುರೌ ಗೌತಮ್ಯಾಂ ಸ್ನಾತಕೋ ನರಃ । ಯತ್ಫಲಂ ಸಮವಾಪ್ನೋತಿ ಕೇದಾರದರ್ಶನಾನ್ನರಃ ॥13॥ ಬದರ್ಯಾಶ್ರಮಯಾತ್ರಾಯಂ ತತ್ತೀರ್ಥಸೇವನಾದಪಿ । ಯತ್ಫಲಂ ಸಮವಾಪ್ನೋತಿ ಕುರುಕ್ಷೇತ್ರೇ ರವಿಗ್ರಹೇ ॥14॥ ಗಜಾಶ್ವ ಹೇಮದಾನೇನ ಯಜ್ಞಂ ಕೃತ್ವಾ ಸದಕ್ಷಿಣಮ್ । ತಾದೃಶಂ ಫಲಮಾಪ್ನೋತಿ ಅಪರಾವ್ರತಸೇವನಾತ್ ॥15॥ ಬೃಹಸ್ಪತಿಯು ಸಿಂಹರಾಶಿಯಲ್ಲಿರುವಾಗ ಗೌತಮೀ ನದಿಯಲ್ಲಿ ಸ್ನಾನ ಮಾಡಿದರೆ ಯಾವ ಫಲ ಬರುತ್ತದೆಯೋ ಅದೂ, ಕೇದಾರದಲ್ಲಿ ತೀರ್ಥಸ್ನಾನ ಮಾಡಿ ಸ್ವಾಮಿಯ ದರ್ಶನ ಮಾಡಿದರೆ ಯಾವ ಫಲ ಬರುವುದೋ ಅದೂ ಬದರ್ಯಾಶ್ರಮದ ಯಾತ್ರೆ ಮಾಡಿ ಅಲ್ಲಿನ ತೀರ್ಥವನ್ನು ಸೇವಿಸಿದರೆ ಯಾವ ಫಲವು ಬರುತ್ತದೆಯೋ ಅದೂ, ಸೂರ್ಯಗ್ರಹಣದಲ್ಲಿ ಕುರುಕ್ಷೇತ್ರದಲ್ಲಿ ಸ್ನಾನ ಮಾಡಿದರೆ ಯಾವ ಪುಣ್ಯವು ಬರುವುದೋ ಅದೂ, ಆನೆ ಕುದುರೆ ಸ್ವರ್ಣದಾನಗಳನ್ನು ಮಾಡಿ ಸಂಪೂರ್ಣವಾದ ದಕ್ಷಿಣೆಯನ್ನು ಕೊಟ್ಟು ಯಾಗ ಮಾಡಿದರೆ ಯಾವ ಪುಣ್ಯವು ಬರುತ್ತದೋ ಆ ಪುಣ್ಯವೂ ಈ ಅಪರಾ ಏಕಾದಶಿಯ

ವ್ರತಾಚರಣೆಯಿಂದ ಬರುತ್ತದೆ. ಪಾಪದ್ರುಮಕುಠಾರೀಯಂ ಪಾಪೇಂಧನದವಾ-ನಲಃ। ಪಾಪಾಂಧಕಾರತರಣಿಃ ಪಾಪಸಾರಂಗಕೇಸರೀ ॥16॥ ಈ ಅಪರಾ ಏಕಾದಶೀ ವ್ರತವು ಪಾಪವೆಂಬ ಮರಕ್ಕೆ ಕೊಡಲಿಯು; ಪಾಪವೆಂಬ ಸೌದೆಗೆ ಕಾಳ್ಗಿಚ್ಚು ಪಾಪವೆಂಬ ಕತ್ತಲಿಗೆ ಸೂರ್ಯನು. ಪಾಪವೆಂಬ ಜಿಂಕೆಗೆ ಸಿಂಹವು. ಬುದ್ಬುದಾ ಇವ ತೋಯೇಷು ಪೂತಿಕಾ ಇವ ಜಂತುಷು । ಜಾಯಂತೇ ಮರಣಾಯೈವ ಏಕಾದಶ್ಯಾ ವ್ರತಂ ವಿನಾ ॥17॥ ಏಕಾದಶಿಯ ವ್ರತವನ್ನು ಮಾಡದವರು ನೀರಿನ ಮೇಲಿನ ಗುಳ್ಳೆಯಂತೆಯೂ, ಪ್ರಾಣಿಗಳಲ್ಲಿ ಪೂತಿಕೆ (ಕೊಡತಿಯ ಹುಳು) ಗಳಂತೆಯೂ ಸಾಯುವುದಕ್ಕೆ ಹುಟ್ಟಿರುತ್ತಾರೆ. ಅಪರಾಂ ಸಮುಪೋಷ್ಯೈವ ಪೂಜಯಿತ್ವಾ ತ್ರಿವಿಕ್ರಮಂ । ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕೇ ಮಹೀ-ಯತೇ ॥18॥ ಪಠನಾದ್ ಶ್ರವಣಾದ್ ರಾಜನ್ ಗೋಸಹಸ್ರಫಲಂ ಲಭೇತ್ ॥19॥ ಅಪರಾ ಏಕಾದಶಿಯ ದಿನ ಉಪವಾಸ ಮಾಡಿ ತ್ರಿವಿಕ್ರಮನನ್ನು ಪೂಜಿಸಿದರೆ ಪಾಪಗಳೆಲ್ಲವನ್ನೂ ಕಳೆದುಕೊಂಡು ವೈಕುಂಠವನ್ನು ಹೊಂದುತ್ತಾನೆ. ಈ ವ್ರತವನ್ನು ಓದುವವನೂ ಕೇಳುವವನೂ ಸಾವಿರಗೋದಾನಗಳ ಫಲವನ್ನು ಹೊಂದುತ್ತಾರೆ. ಇತಿ ಶ್ರೀಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿನಾರದಸಂವಾದಾಂತರ್ಗತ ಶ್ರೀಕೃಷ್ಣಯುಧಿಷ್ಠಿರಸಂವಾದೇ ಜ್ಯೇಷ್ಠಕೃಷ್ಣ ಅಪರೈಕಾದಶೀವರ್ಣನಂ ನಾಮ ದ್ವಿಪಂಚಾ-ಶತ್ತಮೋಽಧ್ಯಾಯಃ ಸಮಾಪ್ತಃ ॥ ಇಂತು ಶ್ರೀಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿನಾರದರ ಸಂವಾದದೊಳಗಿನ ಕೃಷ್ಣಯುಧಿಷ್ಠಿರ ಸಂವಾದದಲ್ಲಿ ಜ್ಯೇಷ್ಠಕೃಷ್ಣ-ಅಪರೈಕಾದಶಿಯ ವರ್ಣನೆ ಎಂಬ ಐವತ್ತೆರಡನೆಯ ಅಧ್ಯಾಯವು ಮುಗಿದುದು.

## ಜ್ಯೇಷ್ಠ ॥ ಬಹುಳ ॥ ತ್ರಯೋದಶಿ

ಶ್ರೀವಿಜಯೀಂದ್ರತೀರ್ಥರು (ರಾಯರ ಮಠ) - ಕುಂಭಕೋಣ । ಭಕ್ತಾನಾಂ ಮಾನಸಾಂಭೋಜಭಾನವೇ ಕಾಮಧೇನವೇ । ನಮತಾಂ ಕಲ್ಪತರವೇ ಜಯೀಂದ್ರಗುರವೇ ನಮಃ ॥ ''ಚಾತುರ್ಯೈಕಾಕೃತಿರ್ಯಶ್ಚತುರಧಿಕಶತಗ್ರಂಥರತ್ನ-ಪ್ರಣೇತಾ ಧೂತಾರಾತಿಪ್ರಬಂಧಸ್ಫುಟವಿದಿತಚತುಃಷಷ್ಠಿವಿದ್ಯಾವಿಶೇಷಃ। ಸೋಽಯಂ ನಃ ಶ್ರೀಸುರೇಂದ್ರಯತಿವರತನಯೋಽದ್ವೈತಶೈವಾಸಹಿಷ್ಣುಃ ಪುಷ್ಣಾತು ಶ್ರೀಜಯೀಂ-ದ್ರ ಸ್ತ್ರಿಭುವನವಿದಿತಸರ್ವತಂತ್ರಸ್ವತಂತ್ರಃ ॥'' (ಶ್ರೀಗುರುಗುಣಸ್ತವನ) ಶ್ರೀವಿಜ-ಯೀಂದ್ರತೀರ್ಥರ ಮಹಾಮಹಿಮೆಯು ಎಂಥದೆಂಬುದು 'ವಿಜಯೀಂದ್ರ

-ಕರಾಬ್ಜೋತ್ಥಸುಧೀಂದ್ರವರಪುತ್ರಕಃ' ಎಂಬ ಶ್ರೀಗುರುಸಾರ್ವಭೌಮರ ವಿಶೇಷಣ -ದಿಂದಲೇ ತಿಳಿದು ಬರುತ್ತದೆ. ಶ್ರೀವಿಜಯೀಂದ್ರತೀರ್ಥರು ಶ್ರೀರಾಘವೇಂದ್ರ-ಸ್ವಾಮಿಗಳವರಿಗೆ ಆಶ್ರಮಕ್ರಮದಲ್ಲಿ ಮಾತ್ರ ಪರಮಗುರುಗಳಾಗಿರದೇ ವಿದ್ಯಾ-ವೈಭವ, ಗ್ರಂಥಕರ್ತೃತ್ವಾದಿಗಳಲ್ಲಿ ತಮ್ಮ ಗುರುಗಳಾದ ಶ್ರೀಸುಧೀಂದ್ರತೀರ್ಥರಿಗೆ ಗುರುಗಳಾದುದರಿಂದಲೂ ಪರಮಗುರುಗಳಾಗಿದ್ದಾರೆ. ಆದುದರಿಂದಲೇ ಶ್ರೀ-ಪರಿಮಳಾಚಾರ್ಯರು ತಮ್ಮ ಗ್ರಂಥಗಳಲ್ಲಿ ಶ್ರೀಸುಧೀಂದ್ರತೀರ್ಥರನ್ನೂ, ಶ್ರೀ-ವಿಜಯೀಂದ್ರತೀರ್ಥರನ್ನೂ ''ಗುರುಪಾದರು'' ಎಂದು ಬಹು ಭಕ್ತಿಯಿಂದ ಗೌರವಿಸುವುದಲ್ಲದೇ 'ಗುರುಪಾದಕೃತಾಪ್ಯಸ್ತಿ ಟೀಕಾ ತ್ವತ್ರ್ಯರ್ಥವಿಸ್ತರಾ' 'ವಿಸ್ತರಸ್ತು ಗುರುಪಾದಕೃತನ್ಯಾಯಮೌಕ್ತಿಕಮಾಲಾಯಾಂ ದ್ರಷ್ಟವ್ಯಃ' ಎಂದು ಮುಂತಾಗಿ ಗುರುಗಳನ್ನೂ ಪರಮಗುರುಗಳನ್ನೂ ಅತ್ಯಂತ ಆದರಾತಿಶಯ ಪೂರ್ವಕವಾಗಿ ಉಲ್ಲೇಖ ಮಾಡುತ್ತಾರೆ. ಶ್ರೀವಿಜಯೀಂದ್ರತೀರ್ಥರು ಶ್ರೀಚಂದ್ರಿಕಾಚಾರ್ಯರ ಶಿಷ್ಯಸಂಪುಟದಲ್ಲಿನ ಒಂದು ಅನರ್ಘ್ಯರತ್ನ. ಕರ್ಣಾಟಕಸಾಮ್ರಾಜ್ಯದ ರಾಜಧಾನಿ-ಯಾದ ವಿಜಯನಗರದಲ್ಲಿ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಶ್ರೀವ್ಯಾಸರಾಜರು ರಾಜಗುರುಗಳಾಗಿ ಅಲ್ಲಿ ಒಂದು ದರ್ಶನಶಾಸ್ತ್ರಗಳ ವಿಶ್ವವಿದ್ಯಾಲಯವನ್ನೇ ನಡೆಸುತ್ತಿದ್ದರು. ಸಾಕ್ಷಾತ್ ವೇದವ್ಯಾಸರೇ ಅವತಾರ ಮಾಡಿದಂತಿದ್ದ ಶ್ರೀವ್ಯಾಸ-ಯೋಗಿಗಳು ಭಾರತದ ಎಲ್ಲ ಕಡೆಗೂ ಅನೇಕ ವೇದಾಂತ ವಿದ್ಯಾಪೀಠಗಳನ್ನು ಸ್ಥಾಪಿಸಿ ವಿದ್ಯಾಕೇಂದ್ರವಾದ ವಿಜಯನಗರದ ವಿಶ್ವವಿದ್ಯಾನಿಲಯದಲ್ಲಿ ಹತ್ತುಸಾವಿರ ವಿದ್ಯಾರ್ಥಿಗಳಿಗೆ ಊಟ, ವಸತಿ, ಸೌಕರ್ಯ ಮಾಡಿಕೊಟ್ಟು ಶಾಸ್ತ್ರಪಾಠ ಹೇಳುತ್ತಲಿದ್ದರು. ತಮ್ಮಲ್ಲಿ ಓದುವ ಅತ್ಯಂತ ಮೇಧಾಶಾಲಿಗಳಾದ ಕೆಲವರು ವಿರಕ್ತ ವಿದ್ಯಾರ್ಥಿಗಳಿಗೆ ಅವರು ಪರಮಹಂಸಾಶ್ರಮ ಕೊಟ್ಟು ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು ಮುಂತಾಗಿ ಇಪ್ಪತ್ತುನಾಲ್ಕು ದೇವರ ಹೆಸರನ್ನಿಟ್ಟು ಸುಧಾನ್ಯಾಯಾಮೃತ, ಚಂದ್ರಿಕಾದಿ ಗ್ರಂಥಗಳನ್ನು ನಿತ್ಯನಿರಂತರವೂ ಪಾಠ ಹೇಳುತ್ತಿದ್ದರು. ಕೇಶವಾದಿ ಚತುರ್ವಿಂಶತಿ ಪರಮಹಂಸಶಿಷ್ಯರಲ್ಲಿ ಐದನೆಯ-ವರಾದ ಶ್ರೀವಿಷ್ಣುತೀರ್ಥರೇ ಶ್ರೀವಿಜಯೀಂದ್ರತೀರ್ಥರು. ಇದರಂತೆ ಪುರಂದರ-ದಾಸರೂ, ಕನಕದಾಸರೂ, ಕುಮಾರವ್ಯಾಸ, ವಲ್ಲಭಾಚಾರ್ಯರೂ, ನಾರಾ-ಯಣಯೋಗಿ ಮುಂತಾದ ಜ್ಞಾನಯೋಗಿ, ಭಕ್ತಿಯೋಗಿ ಮುಂತಾದ ರಸ-

ಯೋಗಿಗಳೂ ಆ ಸೌರವಲಯದ ಬೆಳಕಿನಲ್ಲಿ ಬೆಳಗುತ್ತಿದ್ದರು. ವಿಷ್ಣುತೀರ್ಥರ ಪೂರ್ವಾಶ್ರಮದ ಹೆಸರು ವಿಟ್ಠಲಾಚಾರ್ಯರು. ಇವರು ಶ್ರೀವ್ಯಾಸರಾಜರ ಅನುಗ್ರಹದಿಂದ ವೃದ್ಧ ತಂದೆ ತಾಯಿಗಳಿಗೆ ಪುತ್ರರಾಗಿ ಅವತರಿಸಿದ್ದು ಶ್ರೀವ್ಯಾಸ-ಯೋಗಿಗಳ ಅನುಗ್ರಹದಿಂದ ಚಂದ್ರಮನಂತೆ ದಿನೇ ದಿನೇ ವೃದ್ಧಿಗೊಳ್ಳಹತ್ತಿದರು. ಬಾಲ್ಯದಲ್ಲಿ ಚತುರಬಾಲಕ ವಿಟ್ಠಲನ ವಿಲಕ್ಷಣವಾದ ಬುದ್ಧಿ-ತೀಕ್ಷ್ಣತೆ, ವಾಕ್ಪಟುತ್ವ, ಸ್ಮರಣಶಕ್ತಿಗಳನ್ನು ಕಂಡು ಅವರ ತಂದೆ-ತಾಯಿಗಳು ಆ ಮಗುವಿಗೆ ಉಪ-ನಯನಮಾಡಿ ಮೊದಲೇ ಶ್ರೀವ್ಯಾಸರಾಜರಿಗೆ ವಚನವಿದ್ದಂತೆ ವಿಟ್ಠಲನನ್ನು ಅವರಿಗೆ ಒಪ್ಪಿಸಿಕೊಟ್ಟರು. ವಿಟ್ಠಲನು ವಿಜಯನಗರದ ಶ್ರೀವ್ಯಾಸರಾಜರ ವಿದ್ಯಾಪೀಠದಲ್ಲಿ ಅವರ ವಿಶೇಷತರಬೇತಿಯಲ್ಲಿ ವಿದ್ಯೆಯನ್ನು ಅಭ್ಯಸಿಸುತ್ತಿದ್ದನು. ಸರ್ವಂಕಷ-ಪ್ರತಿಭಾಶಾಲಿಯಾದ ವಿಟ್ಠಲನ ಇತರಾಸಾಧಾರಣಮೇಧಾವೈದುಷ್ಯಗಳನ್ನು ಕಂಡು ಚಕಿತರಾದ ಚಂದ್ರಿಕಾಚಾರ್ಯರು ಅವರನ್ನು ಮಹಾಸಂಸ್ಥಾನಾಧಿಪತಿಗಳನ್ನಾಗಿ ಮಾಡಲು ಬಯಸಿ ಅವರಿಗೆ ನ್ಯಾಯ, ವೇದಾಂತ, ವ್ಯಾಕರಣ, ಮೀಮಾಂಸ-ಶಾಸ್ತ್ರಗಳನ್ನು ಪಾಠಹೇಳಿ, ಚತುಃಷಷ್ಟಿಕಲೆಗಳನ್ನು ಉಪದೇಶಿಸಿ ವಿದ್ವತ್ತಲ್ಲಜರನ್ನಾಗಿ ಮಾಡಿದರು. ಇದೇ ವೇಳೆಗೆ ಶ್ರೀಮದಾಚಾರ್ಯ ಸಂಸ್ಥಾನದ ಶ್ರೀವಿಬುಧೇಂದ್ರ-ತೀರ್ಥಪರಂಪರೆಯ ಶ್ರೀಸುರೇಂದ್ರತೀರ್ಥ ಶ್ರೀಪಾದಂಗಳವರು ಸಾಮ್ರಾಟ್ ಕೃಷ್ಣದೇವರಾಯನ ಆಹ್ವಾನದ ಪ್ರಕಾರ ಅಲ್ಲಿಗೆ ಬಂದು ವಿದ್ಯಾಪೀಠದ ಕುಲ-ಪತಿಗಳೂ, ರಾಜಗುರುಗಳೂ ತಮ್ಮ ಪೂರ್ವಾಶ್ರಮಬಂಧುಗಳೂ ಆದ ಚಂದ್ರಿಕಾಚಾರ್ಯರ ಜೊತೆಗೆ ಕೆಲದಿನ ವಾಸವಾಗಿದ್ದರು. ಶ್ರೀಸುರೇಂದ್ರತೀರ್ಥರಿಗೆ ಶ್ರೀವ್ಯಾಸರಾಜರ ವಿಶ್ವವಿದ್ಯಾಲಯದ ಸಾವಿರಾರು ವಿದ್ಯಾರ್ಥಿಗಳಲ್ಲಿ ಅಸಾಧಾರಣ-ವಾದ ಕೌಶಲ್ಯ, ಅಪರೂಪವಾದ ನಿರೂಪಣಶಕ್ತಿ, ವಿಲಕ್ಷಣವರ್ಚಸ್ಸು ಮೊದ-ಲಾದ ಗುಣಗಳಿಂದ ವಿಷ್ಣುತೀರ್ಥರು ಒಳ್ಳೇ ಸ್ಪೃಹಣೀಯ ವ್ಯಕ್ತಿ ಎನಿಸಿತು. ಅವರು ತಮ್ಮ ಶಿಷ್ಯರಾಗಬೇಕೆಂಬ ಬಯಕೆ ಸುರೇಂದ್ರತೀರ್ಥರಲ್ಲಿ ಒಡಮೂಡಿತು. ತಮ್ಮ ಆಶಯವನ್ನು ವ್ಯಾಸರಾಜರಲ್ಲಿ ಬೇರೆ ಬೇರೆ ವಿಧಗಳಿಂದ ನಿರೂಪಿಸಿದಾಗ ಶ್ರೀವ್ಯಾಸರಾಜರು ಬಹಳ ಸಂತೋಷದಿಂದ ಅದಕ್ಕಾಗಿಯೇ ತಯಾರಾಗಿದ್ದ ವಿಷ್ಣುತೀರ್ಥರನ್ನು ಸುರೇಂದ್ರತೀರ್ಥರಿಗೆ ಅರ್ಪಿಸಿ ಮಹೋಪಕಾರ ಮಾಡಿದರು. ಶ್ರೀಸುರೇಂದ್ರತೀರ್ಥರು ವಿಷ್ಣುತೀರ್ಥರನ್ನು ಆನಂದದಿಂದ ಸ್ವೀಕರಿಸಿ, ದಂಡಪಲ್ಲಟ

ಮಾಡಿಸಿ, ಮಂತ್ರ - ಮುದ್ರಾಧಾರಣೆ ಗುರೂಪದೇಶಾದಿಗಳಿಂದ ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡು 'ಶ್ರೀವಿಜಯೀಂದ್ರತೀರ್ಥ'ರೆಂಬ ನಾಮಕರಣ-ಪೂರ್ವಕ ಶ್ರೀಸರ್ವಜ್ಞಪೀಠದಲ್ಲಿ ಮಂಡಿಸಿ ಸಾಮ್ರಾಜ್ಯಾಭಿಷೇಕ ಮಾಡಿದರು. ಶ್ರೀವಿಜಯೀಂದ್ರರು ತಮ್ಮ ಹೆಸರಿಗೆ ತಕ್ಕಂತೆ ದೇಶ-ವಿದೇಶಗಳಲ್ಲೆಲ್ಲ ಸಂಚಾರ ಮಾಡಿ ವಾದವಿಜಯ ಮಾಡಿ ತಮ್ಮ 'ವಿಜಯೀಂದ್ರ' ಎಂಬ ಹೆಸರನ್ನು ಸಾರ್ಥಕ-ಗೊಳಿಸಿದರು.

ಅವರು 104 ಶಾಸ್ತ್ರೀಯಉದ್‌ಗ್ರಂಥಗಳನ್ನು ಬರೆದಿದ್ದಾರೆ. ಆದರೆ ಈಗ ಸದ್ಯ 60-70 ಗ್ರಂಥಗಳು ಮಾತ್ರ ಉಪಲಬ್ಧವಿವೆ. ಅವುಗಳ ಮೇಲೆ ವಿಚಾರ ಮಾಡಿ-ದರೂ ಶ್ರೀವಿಜಯೀಂದ್ರತೀರ್ಥರ ವಾಕ್ಯಾರ್ಥಕ್ರಮ, ವಾದಿನಿಗ್ರಹಣವಿಕ್ರಮ, ಪ್ರತಿವಾದಿಗಳ ಗ್ರಂಥಗಳನ್ನು ಪ್ರತ್ಯಕ್ಷರ ಖಂಡಿಸುವ ಪಾಂಡಿತ್ಯಪ್ರಕಾರ ಪರಾ-ಕ್ರಮಗಳು ಹೇಗಿದ್ದವೆಂಬುದರ ಕಲ್ಪನೆ ವಿದ್ವಾಂಸರಿಗೆ ಮಾತ್ರ ಸಾಧ್ಯ.

## ಜ್ಯೇಷ್ಠ ॥ ಬಹುಳ ॥ ಅಮಾವಾಸ್ಯೆ

## ಮಣ್ಣೆತ್ತಿನ ಅಮಾವಾಸ್ಯೆ
## ಮೃಣ್ಮಯ ವೃಷಭಪೂಜಾವಿಧಾನ

ಚಾತುರ್ಮಾಸ್ಯವ್ರತವು ನಿರ್ವಿಘ್ನವಾಗಿ ನೆರವೇರುವುದಕ್ಕಾಗಿ ಜ್ಯೇಷ್ಠಮಾಸದ ಕೃಷ್ಣಪಕ್ಷದ ಅಮಾವಾಸ್ಯೆಯ ದಿವಸ ಮಣ್ಣಿನಲ್ಲಿ ಮಾಡಿದ ಎತ್ತಿನ ಪೂಜೆಯನ್ನು ಆಚರಿಸುತ್ತಾರೆ. ಎರಡು ವೃಷಭಗಳನ್ನು ಮಣ್ಣಿನಲ್ಲಿ ತಯಾರಿಸಬೇಕು. ಕ್ರಮ-ಪ್ರಕಾರವಾಗಿ ನಂದಿಯನ್ನು ಅಂತರ್ಯಾಮಿಯಾದ ವೃಷಭರೂಪಿಯಾದ ಪರಮಾತ್ಮನನ್ನು ಆವಾಹನೆ ಮಾಡಬೇಕು. ಚಾತುರ್ಮಾಸ್ಯ ಕಾಲದಲ್ಲಿ ಎತ್ತುಗಳಿಗೆ ವಿಶ್ರಾಂತಿಯನ್ನು ಕೊಡಬೇಕಾದ್ದರಿಂದ, ಇಷ್ಟು ದಿವಸ ಹೊಲವನ್ನು ಉತ್ತಿ ದುಡಿಸಿ-ಕೊಂಡಿದ್ದಕ್ಕೆ ಕೃತಜ್ಞತಾಪೂರ್ವಕವಾಗಿ ಈ ವೃಷಭಪೂಜಾ ವಿಧಾನವು ಪ್ರಾಪ್ತವಾಗಿದೆ. ಪ್ರತ್ಯಕ್ಷವಾಗಿ ಎತ್ತುಗಳನ್ನು ಪೂಜಿಸುವುದು ಅತ್ಯಂತ ಶ್ರೇಷ್ಠವಾಗಿದೆ. ಇಂದು ಅದು ಸಾಧ್ಯವಾಗುತ್ತಿಲ್ಲವಾದ್ದರಿಂದ ಮೃಣ್ಮಯವೃಷಭಪೂಜೆಯನ್ನು ಆಚರಿಸಬೇಕು. ಮನೆ-

ಯಲ್ಲಿ ದೇವರ ಪೂಜೆಯಾದ ಮೇಲೆ ಮೃಣ್ಮಯವಾದ ವೃಷಭವನ್ನು ಪೂಜೆಮಾಡಿ ಅನಂತರ ಎಲ್ಲಿ ಎತ್ತುಗಳಿರುತ್ತವೋ ಅಲ್ಲಿಗೆ ಹೋಗಿ ಅವುಗಳಿಗೆ ಹುಲ್ಲು, ನೀರು, ಹಣ್ಣುಗಳನ್ನು ಭಗವಂತನಿಗೆ ನಿವೇದಿಸಿ ಸಮರ್ಪಣೆ ಮಾಡಬೇಕು. ಅನಂತರವೇ ನಾವು ಊಟವನ್ನು ಮಾಡಬೇಕು. ವೃಷಭವು ಶಿವನ ವಾಹನವಾದ್ದರಿಂದ ನಂದಿ-ಯೆಂದೇ ಕರೆಯುತ್ತಾರೆ, ಆದ್ದರಿಂದ ಆ ಶಿವನ ವಾಹನವಾದ ನಂದಿಯನ್ನು ಅನು-ಸಂಧಾನ ಮಾಡಿ ಪೂಜಿಸುವುದು ಉತ್ತಮವಾಗಿದೆ. ಹಸುವು ನಮಗೆ ಹೇಗೆ ತಾಯಿ ಸ್ಥಾನದಲ್ಲಿದೆಯೋ ಹಾಗೆ ಎತ್ತು ನಮಗೆ ತಂದೆ ಸ್ಥಾನದಲ್ಲಿದೆ. ಹಸು ಮತ್ತು ಎತ್ತುಗಳನ್ನು ಗೌರವಭಾವದಿಂದಲೇ ಕಾಣಬೇಕು. ಗೋ ಪೂಜೆಯನ್ನು ನಿತ್ಯ ಮಾಡುತ್ತೇವೆ. ವೃಷಭಪೂಜೆಯನ್ನು ವರ್ಷದಲ್ಲಿ ಒಮ್ಮೆಯಾದರೂ ಕೂಡ ಭಕ್ತಿಯಿಂದ ಆಚರಿಸಬೇಕು. ಇದರಿಂದ ನಾವು ಸಸ್ಯಗಳನ್ನು ನೀಡಿದ ಎತ್ತುಗಳ ವಿಷಯದಲ್ಲಿ ಕೃತಜ್ಞತೆಯನ್ನು ಸಲ್ಲಿಸಿದಂತಾಗುತ್ತದೆ. ಕುಚ್ಚಿದ ಕಡುಬು, ಹುರುಳಿಯ ಉಸುಳಿ ಇಂದಿನ ನೈವೇದ್ಯದ ವಿಶೇಷ, ಇದನ್ನು ಮಾಡಿ ಭಗವಂತನಿಗೆ ಸಮರ್ಪಿಸಿ ನಂದಿಗೂ ಕೂಡ ಸಮರ್ಪಣೆ ಮಾಡಬೇಕು. ಅನಂತರ ಗೋಗ್ರಾಸವನ್ನು ನೀಡಿ ಎತ್ತುಗಳಿಗೂ ಕೂಡ ತಿನ್ನಿಸಬೇಕು. ಸಂಪ್ರದಾಯದ ಮನೆಗಳಲ್ಲಿ ಮಣ್ಣೆತ್ತಿನ ಅಮಾ-ವಾಸ್ಯೆಯನ್ನು ಬಿಡದೆ ಅನುಸರಿಸುತ್ತಿದ್ದಾರೆ. ನಾವೂ ಸಹ ಶ್ರದ್ಧಾಭಕ್ತಿಗಳಿಂದ ಮಣ್ಣೆತ್ತಿನ ಅಮಾವಾಸ್ಯೆಯನ್ನು ಮಾಡಿ ವೃಷಭಗಳಿಗೆ ಕೃತಜ್ಞತೆಯನ್ನು ಸಲ್ಲಿಸಿ ಧನ್ಯರಾಗೋಣ.

## ಮೃಣ್ಮಯ ವೃಷಭಪೂಜಾವಿಧಾನಃ

ಎರಡು ಬಾರಿ ಆಚಮನ ಮಾಡಿ ಪ್ರಾಣಾಯಾಮ ಮಾಡಿ ದೇಶಕಾಲಗಳನ್ನು ಹೇಳಿ ಹೀಗೆ ಸಂಕಲ್ಪ ಮಾಡಿರಿ. ಮಮ ಸಹಕುಟುಂಬಸ್ಯ ಕ್ಷೇಮ-ಸ್ಥೈರ್ಯ-ವೀರ್ಯ -ವಿಜಯ-ಅಭಯ -ಆಯುರಾರೋಗ್ಯ-ಐಶ್ವರ್ಯಾಧಭ್ಯುದಯಾರ್ಥಂ ಜ್ಯೇಷ್ಠಾ-ಮಾವಾಸ್ಯಾಂ ಪ್ರತಿವಾರ್ಷಿಕಂ ಕುಲಾಚಾರತ್ವೇನ ವಿಹಿತಂ ಸಸ್ಯಾಭಿವೃದ್ಧ್ಯರ್ಥಂ ಈತಿಬಾಧವಿನಾಶ-ಸುವೃಷ್ಟ್ಯಾದಿಪ್ರಾಪ್ತ್ಯಾ ಧನಧಾನ್ಯ ಸಮೃದ್ಧ್ಯರ್ಥಂ ವೃಷಭಾ-ನುಗ್ರಹಸಿದ್ಧ್ಯರ್ಥಂ ವೃಷಭಾಂತರ್ಗತ ಉಮಾಪತ್ಯಂತರ್ಗತ ಭಾರತೀರಮಣ-ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನರಸಿಂಹಪ್ರೇರಣಯಾ ಶ್ರೀಲಕ್ಷ್ಮೀನರಸಿಂಹ ಪ್ರೀತ್ಯರ್ಥಂ ಮೃಣ್ಮಯವೃಷಭಪೂಜಾಂ ಕರಿಷ್ಯೇ । ಹರಿನಿರ್ಮಾಲ್ಯಗಳನ್ನು

ತೀರ್ಥಾದಿಗಳನ್ನು ಸಂಗ್ರಹ ಮಾಡಿಕೊಂಡು ವೃಷಭಪೂಜೆಯನ್ನು ಮಾಡಬೇಕು. ಮಣ್ಣಿನ ಮೂರ್ತಿಯಲ್ಲಿ ತತ್ವನ್ಯಾಸ ಮಾತೃಕಾನ್ಯಾಸ ಅಷ್ಟಾಕ್ಷರ ಪಂಚಾಕ್ಷರ ಮಂತ್ರಗಳಿಂದ ಆವಾಹನೆ ಮಾಡಿ ಮುಂದಿನ ಮಂತ್ರದಿಂದ ಷೋಡಶೋಪಚಾರಪೂಜೆ ಮಾಡಬೇಕು.

## ಷೋಡಶೋಪಚಾರ ಪೂಜೆ

ಧರ್ಮಸ್ತ್ವಂ ವೃಷರೂಪೇಣ ಜಗದಾನಂದಕಾರಕ।
ಅಷ್ಟಮೂರ್ತೇರಧಿಷ್ಠಾನಂ ಅತಃ ಪಾಹಿ ಸನಾತನ ॥

ಋಷಭಂ ಮಾ ಸಮಾನಾನಾಂ ಸಪತ್ನಾನಾಂ ವಿಷಾಸಹಿಮ್ । ಹಂತಾರಂ ಶತ್ರೂಣಾಂ ಕೃಧಿ ವಿರಾಜಂ ಗೋಪತಿಂ ಗವಾಮ್ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ ॥

ಅಹಮಸ್ಮಿ ಸಪತ್ನಹೇಂದ್ರ ಇವಾರಿಷ್ಟೋ ಅಕ್ಷತಃ। ಅಧಃ ಸಪತ್ನಾ ಮೇ ಪದೋರಿಮೇ ಸರ್ವೇ ಅಭಿಷ್ಠಿತಾ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಆವಾಹಯಾಮಿ ಅವಾಹನಂ ಸಮರ್ಪಯಾಮಿ ॥

ಅತ್ರೈವ ವೋಽಪಿ ನಹ್ಯಾಮ್ಯುಭೇ ಆರ್ತ್ನೀ ಇವಜ್ಯಯಾ । ವಾಚಸ್ಪತೇ ನಿ ಷೇಧೇ-ಮಾನ್ ಯಥಾ ಮದಧರಂ ವದಾನ್ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಅರ್ಘ್ಯಂ ಸಮರ್ಪಯಾಮಿ ॥

ಅಭಿಭೂರಹಮಾಗಮಂ ವಿಶ್ವಕರ್ಮೇಣ ಧಾಮ್ನಾ। ಆ ವಶ್ಚಿತ್ತಮಾ ವೋವ್ರತಮಾ ವೋಽಹಂ ಸಮಿತಿಂ ದದೇ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಪಾದ್ಯಂ ಸಮರ್ಪಯಾಮಿ ॥

ಯೋಗಕ್ಷೇಮಂ ವ ಆದಾಯಾऽಹಂ ಭೂಯಾಸಮುತ್ತಮ ಆ ವೋ ಮೂರ್ಧಾನ ಮಕ್ರಮೀಮ್ । ಅಧಸ್ಪದಾನ್ಮ ಉದ್ವದತ ಮಂಡೂಕಾಇವೋದಕಾನ್ಮಂಡೂಕಾ ಉದಕಾದಿವ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಆಚಮನಂ ಸಮರ್ಪಯಾಮಿ ॥

ಮಯೋಭೂರ್ವಾತೋ ಅಭಿ ವಾತೂಸ್ರಾ ಊರ್ಜಸ್ವತೀರೋಷಧೀರಾ ರಿಶನ್ತಾಮ್ । ಪೀವಸ್ವತೀರ್ಜೀವಧನ್ಯಾಃ ಪಿಬಂತ್ವವಸಾಯ ಪದ್ವತೇ ರುದ್ರ ಮೃಳ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಮಧುಪರ್ಕಂ ಸಮರ್ಪಯಾಮಿ ॥

ಯಾಃ ಸರೂಪಾ ವಿರೂಪಾ ಏಕರೂಪಾ ಯಾಸಾಮಗ್ನಿರಿಷ್ಟ್ಯಾ ನಾಮಾನಿ ವೇದ । ಯಾ ಅಂಗಿರಸಸ್ತಪಸೇಹ ಚಕ್ರುಸ್ತಾಭ್ಯಃ ಪರ್ಜನ್ಯ ಮಹಿ ಶರ್ಮ ಯಚ್ಛ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಪುನರಾಚಮನಮ್ ಸಮರ್ಪಯಾಮಿ ॥

ಯಾ ದೇವೇಷು ತನ್ವ(ಅ) ೧ ಮೈರಯಂತ ಯಾಸಾಂ ಸೋಮಾ ವಿಶ್ವಾ ರೂಪಾಣಿ ವೇದ । ತಾ ಅಸ್ಮಭ್ಯಂ ಪಯಸಾ ಪಿನ್ವಮಾನಾಃ ಪ್ರಜಾವತೀರಿಂದ್ರ ಗೋಷ್ಠೇ ರಿರೀಹಿ

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಸ್ನಾನಂ ಸಮರ್ಪಯಾಮಿ ॥

ಪ್ರಜಾಪತಿರ್ಮಹ್ಯಮೇತಾ ರರಾಣೋ ವಿಶ್ವೈರ್ದೇವೈಃ ಪಿತೃಭಿಃ ಸಂವಿದಾನಃ ।
ಶಿವಾಃ ಸತೀರುಪ ನೋ ಗೋಷ್ಠಮಾಕಸ್ತಾಸಾಂ ವಯಂ ಪ್ರಜಯಾ ಸಂ ಸದೇಮ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ವಸ್ತ್ರಂ ಸಮರ್ಪಯಾಮಿ ॥

ಆ ಗಾವೋ ಅಗ್ಮನ್ನುತ ಭದ್ರಮಕ್ರನ್ ತ್ಸೀದಂತು ಗೋಷ್ಠೇಃ ರಣಯಂತ್ವಸ್ಮೇ ।
ಪ್ರಜಾವತೀಃ ಪುರುರೂಪಾ ಇಹ ಸ್ಯುರಿಂದ್ರಾಯ ಪೂರ್ವೀಃ ರುಷಸೋ ದುಹಾನಾಃ

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಉಪವೀತಂ ಸಮರ್ಪಯಾಮಿ ॥

ಇಂದ್ರೋ ಯಜ್ವನೇ ಪೃಣತೇ ಚ ಶಿಕ್ಷತ್ಯುಪೇದ್ ದದಾತಿ ನ ಸ್ವಂ ಮುಷಾಯತಿ ।
ಭೂಯೋಭೂಯೋ ರಯಿಮಿದಸ್ಯ ವರ್ಧಯನ್ನಭಿನ್ನೇ ಖಿಲ್ಯೇ ನಿ ದಧಾತಿ ದೇವಯುಮ್ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಗಂಧಾಂ ಸಮರ್ಪಯಾಮಿ ॥

ನ ತಾ ನಶಂತಿ ನ ದಭಾತಿ ತಸ್ಕರೋ ನಾಸಾಮಾಮಿತ್ರೋ ವ್ಯಥಿರಾ ದಧರ್ಷತಿ ।
ದೇವಾಶ್ಚ ಯಾಭಿರ್ಯಜತೇ ದದಾತಿ ಚ ಜ್ಯೋಗಿತ್ ತಾಭಿಃ ಸಚತೇ ಗೋಪತಿಃ ಸಹ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಅಕ್ಷತಾನ್ ಸಮರ್ಪಯಾಮಿ ॥

ನ ತ ಅರ್ವಾ ರೇಣುಕಕಾಟೋ ಅಶ್ನುತೇ ನ ಸಂಸ್ಕೃತತ್ರಮುಪಯಂತಿ ತಾ ಅಭಿ ।
ಉರುಗಾಯಮಭಯಂ ತಸ್ಯ ತಾ ಅನು ಗಾವೋ ಮರ್ತಸ್ಯ ವಿ ಚರಂತಿ ಯಜ್ವನಃ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಆಭರಣಾನಿ ಸಮರ್ಪಯಾಮಿ ॥

ಗಾವೋ ಭಗೋ ಗಾವ ಇಂದ್ರೋ ಮೇ ಅಚ್ಛಾನ್ ಗಾವಃ ಸೋಮಸ್ಯ ಪ್ರಥಮಸ್ಯ ಭಕ್ಷಃ। ಇಮಾ ಯಾ ಗಾವಃ ಸ ಜನಾಸ ಇಂದ್ರ ಇಚ್ಛಾಮೀದ್ಧೃದಾ ಮನಸಾ ಚಿದಿಂದ್ರಮ್ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ತುಳಸೀಪುಷ್ಪಾಣಿ ಸಮರ್ಪಯಾಮಿ ॥

ಯೂಯಂ ಗಾವೋ ಮೇದಯಥಾ ಕೃಶಂ ಚಿದಶ್ರೀರಂ ಚಿತ್ ಕೃಣುಥಾ ಸುಪ್ರತೀಕಮ್ । ಭದ್ರಂ ಗೃಹಂ ಕೃಣುಥ ಭದ್ರವಾಚೋ ಬೃಹದ್ ವೋ ವಯ ಉಚ್ಯತೇ ಸಭಾಸು ॥ ಪ್ರಜಾವತೀಃ ಸೂಯವಸಂ ರಿಶಂತೀಃ ಶುದ್ಧಾ ಅಪಃ ಸುಪ್ರಪಾಣೇ ಪಿಬಂತೀಃ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಧೂಪಮಾಘ್ರಾಪಯಾಮಿ ॥

ಮಾ ವಃ ಸ್ತೇನ ಈಶತ ಮಾಘಶಂಸಃ ಪರಿ ವೋ ಹೇತೀ ರುದ್ರಸ್ಯ ವೃಜ್ಯಾಃ। ಉಪೇದಮುಪಪರ್ಚನ ಮಾಸು ಗೋಷೂಪ ಪೃಚ್ಯತಾಮ್ । ಉಪ ಋಷಭಸ್ಯ ರೇತಸ್ಯುಪೇಂದ್ರ ತವ ವೀರ್ಯೇಃ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ದೀಪಂ ದರ್ಶಯಾಮಿ ॥

ಶುನಂ ವಾಹಾಃ ಶುನಂ ನರಃ ಶುನಂ ಕೃಷತು ಲಾಂಗಲಮ್ । ಶುನಂ ವರತ್ರಾ ಬಧ್ಯಂತಾಂ ಶುನಮಷ್ಟ್ರಾಮುದಿಂಗಯ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಮಹಾನೈವೇದ್ಯಂ ಸಮರ್ಪಯಾಮಿ ॥

ಶುನಾಸೀರಾವಿಮಾಂ ವಾಚಂ ಜುಷೇಥಾಂ ಯದ್ ದಿವಿ ಚಕ್ರಥುಃ ಪಯಃ ।

ತೇನಮಾಮುಪ ಸಿಂಚತಮ್ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ತಾಂಬೂಲಂ ಸಮರ್ಪಯಾಮಿ ॥

ಅರ್ವಾಚೀ ಸುಭಗೇ ಭವ ಸೀತೇ ವಂದಾಮಹೇ ತ್ವಾ । ಯಥಾ ನಃ ಸುಭಗಾಸಸಿ

ಯಥಾ ನಃ ಸುಫಲಾಸಸಿ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಮಂಗಳನೀರಾಜನಂ ಸಮರ್ಪಯಾಮಿ ॥

ಇಂದ್ರಃ ಸೀತಾಂ ನಿ ಗೃಹ್ಣಾತು ತಾಂ ಪೂಷಾನು ಯಚ್ಛತು । ಸಾ ನಃ ಪಯಸ್ವತೀ

ದುಹಾ ಮುತ್ತರಾಮುತ್ತರಾಂ ಸಮಾಮ್ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಮಂತ್ರಪುಷ್ಪಂ ಸಮರ್ಪಯಾಮಿ ॥

ಶುನಂ ನಃ ಫಾಲಾ ವಿ ಕೃಷಂತು ಭೂಮಿಂ ಶುನಂ ಕೀನಾಶಾ ಅಭಿ ಯಂತು ವಾಹೈಃ ।

ಶುನಂ ಪರ್ಜನ್ಯೋ ಮಧುನಾ ಪಯೋಭಿಃ ಶುನಾಸೀರಾ ಶುನಮಸ್ಮಾಸು ಧತ್ತಮ್

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮ: । ಪ್ರಾರ್ಥನಾಂ ಸಮರ್ಪಯಾಮಿ ॥

ಕ್ಷೇತ್ರಸ್ಯ ಪತಿನಾ ವಯಂ ಹಿತೇನೇವ ಜಯಾಮಸಿ । ಗಾಮಶ್ವಂ ಪೋಷಯಿತ್ನ್ವಾಸ

ನೋ ಮೃಳಾತೀದೃಶೇ । ಕ್ಷೇತ್ರಸ್ಯ ಪತೇ ಮಧುಮಂತ ಮೂರ್ಮಿಂ ಧೇನುರಿವ

ಪಯೋ ಅಸ್ಮಾಸು ಧುಕ್ಷ್ವ । ಮಧುಶ್ಚುತಂ ಘೃತಮಿವ ಸುಪೂತ ಮೃತಸ್ಯ ನಃ ।

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮಃ । ಆಭರಣಾನಿ ಸಮರ್ಪಯಾಮಿ ॥

ಗಾವೋ ಭಗೋ ಗಾವ ಇಂದ್ರೋ ಮೇ ಅಚ್ಛಾನ್ ಗಾವಃ ಸೋಮಸ್ಯ ಪ್ರಥಮಸ್ಯ ಭಕ್ಷಃ । ಇಮಾ ಯಾ ಗಾವಃ ಸ ಜನಾಸ ಇಂದ್ರ ಇಚ್ಛಾಮೀದ್ಧೃದಾ ಮನಸಾ ಚಿದಿಂದ್ರಮ್ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮಃ । ತುಳಸೀಪುಷ್ಪಾಣಿ ಸಮರ್ಪಯಾಮಿ ॥

ಯೂಯಂ ಗಾವೋ ಮೇದಯಥಾ ಕೃಶಂ ಚಿದಶ್ರೀರಂ ಚಿತ್ ಕೃಣುಥಾ ಸುಪ್ರತೀಕಮ್ । ಭದ್ರಂ ಗೃಹಂ ಕೃಣುಥ ಭದ್ರವಾಚೋ ಬೃಹದ್ ವೋ ವಯ ಉಚ್ಯತೇ ಸಭಾಸು ॥ ಪ್ರಜಾವತೀಃ ಸೂಯವಸಂ ರಿಶಂತೀಃ ಶುದ್ಧಾ ಅಪಃ ಸುಪ್ರಪಾಣೇ ಪಿಬಂತೀಃ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮಃ । ಧೂಪಮಾಘ್ರಾಪಯಾಮಿ ॥

ಮಾ ವಃ ಸ್ತೇನ ಈಶತ ಮಾಘಶಂಸಃ ಪರಿ ವೋ ಹೇತೀ ರುದ್ರಸ್ಯ ವೃಜ್ಯಾಃ । ಉಪೇದಮುಪಪರ್ಚನ ಮಾಸು ಗೋಷೂಪ ಪೃಚ್ಯತಾಮ್ । ಉಪ ಋಷಭಸ್ಯ ರೇತಸ್ಯುಪೇಂದ್ರ ತವ ವೀರ್ಯೇಃ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮಃ । ದೀಪಂ ದರ್ಶಯಾಮಿ ॥

ಶುನಂ ವಾಹಾಃ ಶುನಂ ನರಃ ಶುನಂ ಕೃಷತು ಲಾಂಗಲಮ್ । ಶುನಂ ವರತ್ರಾ ಬಧ್ಯಂತಾಂ ಶುನಮಷ್ಟ್ರಾಮುದಿಂಗಯ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮಃ । ಮಹಾನೈವೇದ್ಯಂ ಸಮರ್ಪಯಾಮಿ ॥

ಶುನಾಸೀರಾವಿಮಾಂ ವಾಚಂ ಜುಷೇಥಾಂ ಯದ್ ದಿವಿ ಚಕ್ರಥುಃ ಪಯಃ ।

ತೇನಮಾಮುಪ ಸಿಂಚತಮ್ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮಃ । ತಾಂಬೂಲಂ ಸಮರ್ಪಯಾಮಿ ॥

ಅರ್ವಾಚೀ ಸುಭಗೇ ಭವ ಸೀತೇ ವಂದಾಮಹೇ ತ್ವಾ । ಯಥಾ ನಃ ಸುಭಗಾಸಸಿ

ಯಥಾ ನಃ ಸುಫಲಾಸಸಿ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮಃ । ಮಂಗಳನೀರಾಜನಂ ಸಮರ್ಪಯಾಮಿ ॥

ಇಂದ್ರಃ ಸೀತಾಂ ನಿ ಗೃಹ್ಣಾತು ತಾಂ ಪೂಷಾನು ಯಚ್ಛತು । ಸಾ ನಃ ಪಯಸ್ವತೀ

ದುಹಾ ಮುತ್ತರಾಮುತ್ತರಾಂ ಸಮಾಮ್ ॥

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮಃ । ಮಂತ್ರಪುಷ್ಪಂ ಸಮರ್ಪಯಾಮಿ ॥

ಶುನಂ ನಃ ಫಾಲಾ ವಿ ಕೃಷಂತು ಭೂಮಿಂ ಶುನಂ ಕೀನಾಶಾ ಅಭಿ ಯಂತು ವಾಹೈಃ ।

ಶುನಂ ಪರ್ಜನ್ಯೋ ಮಧುನಾ ಪಯೋಭಿಃ ಶುನಾಸೀರಾ ಶುನಮಸ್ಮಾಸು ಧತ್ತಮ್

ವೃಷಭಾಂತರ್ಗತ ಉಮಾಪತ್ಯಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮಃ । ಪ್ರಾರ್ಥನಾಂ ಸಮರ್ಪಯಾಮಿ ॥

ಕ್ಷೇತ್ರಸ್ಯ ಪತಿನಾ ವಯಂ ಹಿತೇನೇವ ಜಯಾಮಸಿ । ಗಾಮಶ್ವಂ ಪೋಷಯಿತ್ನ್ವಾಸ

ನೋ ಮೃಳಾತೀದೃಶೇ । ಕ್ಷೇತ್ರಸ್ಯ ಪತೇ ಮಧುಮಂತ ಮೂರ್ಮಿಂ ಧೇನುರಿವ

ಪಯೋ ಅಸ್ಮಾಸು ಧುಕ್ಷ್ವ । ಮಧುಶ್ಚುತಂ ಘೃತಮಿವ ಸುಪೂತ ಮೃತಸ್ಯ ನಃ ।

ಪತಯೋ ಮೃಳಯಂತು ॥ ಮಧುಮತೀ ರೋಷಧೀರ್ದ್ಯಾವ ಆಪೋ ಮಧು-
ಮನ್ನೋ ಭವತ್ವಂತರಿಕ್ಷಮ್ । ಕ್ಷೇತ್ರಸ್ಯ ಪತಿರ್ಮಧುಮಾನ್ನೋ ಅಸ್ತ್ವರಿಷ್ಯಂತೋ
ಅನ್ವೇನಂ ಚರೇಮ ॥ ಚಿತ್ರ ಇದ್ ರಾಜಾ ರಾಜಕಾ ಇದನ್ಯಕ್ರೇ ಯಕೇ ಸರಸ್ವತೀ
ಮನು । ಪರ್ಜನ್ಯ ಇವ ತತನದ್ಧಿ ವೃಷ್ಟ್ಯಾ ಸಹಸ್ರಮಯುತಾ ದದತ್ ॥

ಅನೇನ ವೃಷಭಪೂಜಾಕರನೇನ ಅಸ್ಮದ್ಗುರ್ವಂತರ್ಗತ ವೃಷಭಾಂತರ್ಗತ ಉಮಾಪತ್ಯಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಪ್ರಾಣಸ್ಥ ಶ್ರೀ-ಲಕ್ಷ್ಮೀನರಸಿಂಹ ಪ್ರೀಯತಾಂ ಪ್ರೀತೋಭವತು ಶ್ರೀಕೃಷ್ಣಾರ್ಪಣಮಸ್ತು ॥

ಪಾಪೋಽಹಂ ಪಾಪಕರ್ಮಾಽಹಂ ಪಾಪಾತ್ಮಾ ಪಾಪಸಂಭವ । ತ್ರಾಹಿ ಮಾಂ ಕೃಪಯಾ ದೇವ ಶರಣಾಗತವತ್ಸಲ ॥ ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ । ತಸ್ಮಾತ್ ಕಾರುಣ್ಯಭಾವೇನ ರಕ್ಷ ರಕ್ಷ ರಮಾಪತೇ ॥ ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು । ನ್ಯೂನಂ ಸಂಪೂರ್ಣತಾಂ ಯಾಂತಿ ಸದ್ಯೋ ವಂದೇ ತಮಚ್ಯುತಮ್ ॥ ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ । ಯತ್ಕೃತಂ ತು ಮಯಾದೇವ ಪರಿಪೂರ್ಣಂ ತದಸ್ತು ಮೇ ॥ ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾ ಅನುಸೃತಃ ಸ್ವಭಾವಮ್ । ಕರೋಮಿ ಯದ್ಯತ್ ಸಕಲಂ ಪರಸ್ಮೈ ಶ್ರೀಮನ್ನಾರಾಯಣಾಯೇತಿ ಸಮರ್ಪಯಾಮಿ ॥

ಜ್ಯೇಷ್ಠ ಮಾಸ ಅಮಾಗೌರೀ ಹಾಡು – ದಯಮಾಡಿ ಬಾರಮ್ಮ ಶಿರಿಗೌರಿ । ಕರುಣವಾ ತೋರಿ ॥ಪ॥ ಜೇಷ್ಠಮಾಸದೊಳು ಹುಣ್ಣಿಮಿ ಗೌರಿ ಕಷ್ಟವ ಬಿಡಿಸಿ ಕಾಪಾಡುವಿ ಬ್ರಹ್ಮನ ರಾಣಿ । ಭಕ್ತಿಲಿ ನಿನ್ನನು ಪೂಜಿಪ ಜನರಿಗೆ ಇಷ್ಟಾರ್ಥ ಕೊಟ್ಟು ಸಲಹೆ ತಾಯಿ ॥1॥ ಅಮಹ ಪತಿವ್ರತೆ ಸಾವಿತ್ರಿ ನಿನ್ನನು ನಿಷ್ಠೆಲಿ ಪೂಜಿಸಿ ಅಮರತ್ವವನ್ನೂ । ಪತಿಯ ಪಡೆದಳು ಪೂಜಿಸಿ । ಆಯುಷ್ಯಾರೋಗ್ಯವ ಕೊಟ್ಟು ಸಲಹಿದೆ । ಬಿಟ್ಟಿಮಪಾಶನ ಅಟ್ಟಿ ಪೊರೆದೆಯೆ ॥2॥ ಕಪಿಲನಾಮಕನ ಪ್ರೀತಿಯ ಸೊಸೆಯೆ ಅಪಾರಮಹಿಮನ ಆಜ್ಞೆಯಂತೆ ನೀನು ಕೃಪೆಯ ತೋರಿ ರಕ್ಷಿಸುವೆ ಸ್ತ್ರೀಯರ ಸೌಭಾಗ್ಯವ ಕೊಟ್ಟು ಕಾಪಾಡಮ್ಮ ॥3॥

## ಜ್ಯೇಷ್ಠ ಮಾಸದ ದಾನಗಳು

ಈ ಮಾಸದ ಎಲ್ಲ ದಿನಗಳು ಪುಣ್ಯಪ್ರದಗಳಾದರೂ ದಶಮಿಗೆ ಬಹಳ ಮಹತ್ತ್ವ ಹೇಳಲಾಗಿದೆ. ದಶಮಿಯು ಅಧಿಕ ಪುಣ್ಯಪ್ರದವಲ್ಲದೆ ದಶವಿಧ ಪಾಪಗಳನ್ನು ಬಗೆಹರಿಸುವ ಪುಣ್ಯದಿವಸವಾಗಿದ್ದು ಅಂದು ಜಲಪೂರ್ಣಕುಂಭದಾನ, ಬೀಸಣಿಕೆಯ ದಾನ, ಚಂದನ, ಛತ್ರ , ಪಾದರಕ್ಷೆಗಳ ದಾನಗಳನ್ನು ತ್ರಿವಿಕ್ರಮನ ಪ್ರೀತ್ಯರ್ಥವೆಂದು ಸಂಕಲ್ಪಿಸಿ ದಾನ ನೀಡಬೇಕು.

ದಾನ ಮಂತ್ರಗಳು ಹೀಗಿವೆ– ಚಪ್ಪಲಿದಾನ– ಉಪಾನಹೌ ಪ್ರದಾಸ್ಯಾಮಿ ಕಂಟಕಾದಿನಿವಾರಣೇ । ಸರ್ವಸ್ಥಾನೇಷು ಸುಖದೇ ಅತಃ ಶಾಂತಿಂ ಪ್ರಯಚ್ಛಮೇ ॥ ಛತ್ರದಾನ– ಇಹಾಮುತ್ರಾತಪತ್ರಾಣಿ ಕುರು ಮೇ ಕೇಶವ ಪ್ರಭೋ । ಛತ್ರಂ ತ್ವತ್ಪ್ರೀತಯೇ ದತ್ತಂ ಬ್ರಾಹ್ಮಣಾಯ ಮಯಾ ತವ ॥ ಉದಕುಂಭದಾನ– ಏಷ ಕುಂಭೋ ಮಯಾ ದತ್ತಃ ಶರ್ಕರಾಜಲಪೂರಿತಃ । ಪ್ರದಾನಾದಸ್ಯ ತೃಪ್ಯಂತು ತ್ರಯಸ್ತ್ರಿಂಶತ್ತು ದೇವತಾಃ ॥ ಬೀಸಣಿಕೆ ದಾನ– ಘರ್ಮಶಾಂತಿಕರಂ ನಿತ್ಯಂ ವ್ಯಜನಂ ವಿಷ್ಣುವಲ್ಲಭಮ್ । ತ್ರಿವಿಕ್ರಮಸ್ಯ ಪ್ರೀತ್ಯರ್ಥಂ ಭೂಸುರಾಯ ದದಾಮ್ಯಹಮ್ ॥ ಚಂದನದಾನ– ಚಂದನಂ ರುಚಿರಂ ಚಾರು ಕರ್ಪೂರೋಶೀರಸಂಯುತಮ್ । ಅಸ್ಯ ಪ್ರದಾನಾತ್ ತೃಪ್ಯಂತು ದೇವರ್ಷಿ ಪಿತೃಮಾನವಾಃ ॥

ಜ್ಯೇಷ್ಠಮಾಸದ ವಿಧಿವಿಧಾನಗಳು ಮುಗಿಯಿತು.

* * * * * *

# ಆಷಾಢಮಾಸ

ಮಾಸನಿಯಾಮಕ ವೃಷಾಕಪೀವಾಮನಾಯ ನಮಃ

## ಆಷಾಢ ಮಾಸದ ದಾನಗಳು

ಸ್ಕಂದನಿಗೆ ಶಿವನು ಈ ಮಾಸದ ಮಹಿಮೆ, ದಾನಗಳ ಹಿರಿಮೆಗಳನ್ನು ತಿಳಿಸುವನು. ಪ್ರತಿದಿನ ವಿಪ್ರೋತ್ತಮನಿಗೆ ಹಾಲು ಕೊಡುವ ಒಂದು ಗೋದಾನವನ್ನು ಕೊಡುವುದರಿಂದ ಸೂರ್ಯಲೋಕವನ್ನು ಹೊಂದಿ ಸೂರ್ಯ ಪ್ರಕಾಶಿಸುವಷ್ಟು ಕಾಲವಿದ್ದು ಕ್ರಮವಾಗಿ ವಿಷ್ಣುಸಾಯುಜ್ಯವನ್ನು ಪಡೆಯುತ್ತಾನೆ. ಅಷ್ಟು ಶಕ್ತಿಯಿರದಿದ್ದರೆ ಹದಿನೈದು ದಿವಸ ಅಥವಾ ಒಂದು ವಾರವಾದರೂ ಗೋದಾನ ಮಾಡಿದರೂ ಮಹಾಪುಣ್ಯ . ಹಾಗೆಯೇ ಗಜದಾನ, ರಥದಾನ, ವೃಷಭದಾನಗಳನ್ನು ಮಾಡುವುದು ಪ್ರಶಸ್ತ. ಒಬ್ಬ ಬ್ರಾಹ್ಮಣನಿಗೆ ಅನ್ನದಾನ ಮಾಡುವುದು ಶ್ರೇಷ್ಠ.

ವಸ್ತ್ರದಾನದಿಂದ ಪ್ರಜಾಪತಿ ಲೋಕಪ್ರಾಪ್ತಿ, ತಾಂಬೂಲದಾನದಿಂದ ಭೋಗಗಳ ಕೊರತೆ ಉಂಟಾಗುವುದಿಲ್ಲ. ಫಲದಾನದಿಂದ ಇಷ್ಟಸಿದ್ಧಿಯ ಜೊತೆಗೆ ಸಂತಾನವೂ ಪ್ರಾಪ್ತವಾಗುತ್ತದೆ. ಪಾದರಕ್ಷೆಯ ದಾನದಿಂದ ಕಾಲ್ನಡಿಗೆಯ ಪ್ರಸಂಗ ತಪ್ಪುತ್ತದೆ. ನೀರು ತುಂಬಿದ ತಾಮ್ರ ಅಥವಾ ಕಂಚಿನ ಪಾತ್ರೆಯನ್ನು ಗೋದಿ ಪಾಯಸ ತುಂಬಿದ ಕಂಚಿನ ಪಾತ್ರೆಯನ್ನು ದಾನ ಕೊಡುವುದರಿಂದ ದೇವತೆಗಳ ಅನುಗ್ರಹದಿಂದ ಯಥಾಯೋಗ್ಯ ಅಮೃತ ಪಾನ ಭಾಗ್ಯ ಪಡೆವನು. ಬೆಳ್ಳಿಯ ದಾನದಿಂದ ಸುಂದರ ಹೆಂಡತಿಯರು ಲಭ್ಯರಾಗುವರು. ಗೋದಿ, ಭತ್ತ, ಹೆಸರು, ಜವೆಗೋದಿ, ಉದ್ದು, ಎಳ್ಳು ಇವುಗಳ ದಾನದಿಂದ ಆ ಕಾಳುಗಳ ಸಂಖ್ಯೆಯ ಎರಡು ಪಟ್ಟು ವರ್ಷಗಳಷ್ಟು ಕಾಲ ಸ್ವರ್ಗಸುಖವನ್ನು ಅನುಭವಿಸುವನು. ಇನ್ನಿತರ ಧಾನ್ಯಗಳನ್ನು ಕೊಡುವುದರಿಂದಲೂ ಇಂತಹ ಪುಣ್ಯವನ್ನು ಪಡೆವನು. ಗಟ್ಟಿಯಾಗಿ ತಳಪಾಯವಿರುವ, ಬೆಲೆಬಾಳುವ ಕಟ್ಟಿಗೆ ಕಲ್ಲುಗ್ಗಳಿಂದ ರಚನೆಯಾದ ಸುಂದರ ಬಣ್ಣಗಳಿಂದ ಕಂಗೊಳಿಸುವ ಎಲ್ಲ ಗೃಹೋಪಯೋಗಿ ವಸ್ತುಗಳಿಂದ ಸುಸಜ್ಜಿತವಾದ ಮನೆಯನ್ನು ವಿಪ್ರೋತ್ತಮನಿಗೆ ದಾನ ಕೊಟ್ಟವನು ಮರಣೋತ್ತರದಲ್ಲಿ ವಿಷ್ಣುಲೋಕವನ್ನು ಹೊಂದಿ ಅಲ್ಲಿ ಸುಂದರ ಅರಮನೆಯಲ್ಲಿ ವಾಸ ಮಾಡಿ ಸುಖದಿಂದಿರುತ್ತಾನೆ. ಬ್ರಾಹ್ಮಣರಿಗೆ ಅಕ್ಕಿಯನ್ನು ದಾನ

ಕೊಟ್ಟವನು ಸ್ವರ್ಗಲೋಕದಲ್ಲಿ ಸುಖಿಯಾಗಿರುತ್ತಾನೆ. ನಿತ್ಯ ಪ್ರಾತಃ ಸ್ನಾನ ಮುಗಿಸಿ ತುಪ್ಪವನ್ನು ದಾನ ನೀಡಿದವನು ಯಥಾಯೋಗ್ಯ ಅಮೃತಾಹಾರನಾಗಿ ದೇವಲೋಕ-ದಲ್ಲಿ ಆನಂದ ಪಡುವನು. ಬ್ರಾಹ್ಮಣರಿಗೆ ಹಾಲು ಮೊಸರುಗಳನ್ನು ಯಥಾಶಕ್ತಿದಾನ ಕೊಟ್ಟವನು ಸ್ವರ್ಗದ ಸುಧಾಹಾರವನ್ನು ಅನುಭವಿಸುವನು. ಅನ್ನದಾನಕ್ಕಿಂತ ಅಧಿಕದಾನವಿಲ್ಲ. ಆದ್ದರಿಂದ ಅಪೇಕ್ಷಿತವಾದುದೆಲ್ಲವನ್ನು ಪಡೆವನು. ಪುಸ್ತಕದಾನದಿಂದ ಜ್ಞಾನವನ್ನು, ವಿದ್ಯಾದಾನದಿಂದ ಮೋಕ್ಷವನ್ನು ಪಡೆವನು.

ಯಸ್ಮಿನ್ ಯಸ್ಮಿನ್ ಭವೇದಿಚ್ಛಾ ತತ್ತದ್ದದ್ಯಾತ್ ಪ್ರಯತ್ನತಃ । ಇಹ ಲೋಕೇ ಪರಸ್ಮಿನ್ವಾನಾನ್ಯಥಾ ಲಭತೇ ಕ್ವಚಿತ್ । ನಮಗೆ ಯಾವ ಯಾವ ಯೋಗ್ಯವಸ್ತುವಿನಲ್ಲಿ ಇಚ್ಛೆ ಇರುವುದೋ ಅದನ್ನು ಕೊಡುವುದರಿಂದ ಇಹಪರಗಳಲ್ಲಿ ಸುಖ ಸಮೃದ್ಧಿ-ಯಾಗುವುದು.

ಸ್ತ್ರೀಯರೂ ಹೀಗೆ ದಾನ ಕೊಡುವುದರಿಂದ ಪರಲೋಕದಲ್ಲಿ ತಮ್ಮ ತಮ್ಮ ಪತಿಯರೊಂದಿಗೆ ಮುದ ಪಡುವರು. ಯಾವ ವಯಸ್ಸಿನಲ್ಲಿ ಯಾವ ಕಾಲದಲ್ಲಿ ಹೀಗೆ ಏನು ದಾನ ಕೊಟ್ಟಿರುವೆಯೋ ಅದು ಆ ವಯಸ್ಸಿನಲ್ಲಿ ಆ ಕಾಲದಲ್ಲಿ ಹಾಗೆಯೇ ನಮಗೆ ತಲುಪುವುದು.

## ಆಷಾಢ ॥ ಶುದ್ಧ ॥ ದ್ವಿತೀಯಾ

ಆಷಾಢ ಶುದ್ಧದ್ವಿತೀಯಾದಂದು ಪುಷ್ಯಾನಕ್ಷತ್ರವಿದ್ದರೆ ಶ್ರೀಕೃಷ್ಣ, ಬಲರಾಮ, ಸುಭದ್ರಾ ಇವರನ್ನು ಪೂಜಿಸಬೇಕು. 'ಆಷಾಢಸ್ಯ ಸಿತೇ ಪಕ್ಷೇ ದ್ವಿತೀಯಾ ಪುಷ್ಯ-ಸಂಯುತಾ । ತಸ್ಯಾಂ ರಥೇ ಸಮಾರೋಪ್ಯ ರಾಮಂ ವೈ ಭದ್ರಯಾ ಸಹ ॥'

**ಅಶೂನ್ಯಶಯನವ್ರತ** – ಆಷಾಢಮಾಸದ ಕೃಷ್ಣಪಕ್ಷದ ದ್ವಿತೀಯಾದಂದು ಅಶೂನ್ಯಶಯನವ್ರತವನ್ನು ಆಚರಿಸಬೇಕು. ಈ ವ್ರತಾಚರಣೆಯಿಂದ ಪತಿಶಯನವು ಪತ್ನಿಶೂನ್ಯವಾಗದೇ ಇರುವುದು. ''ಶೇತೇ ಜಗತ್ಪತಿಃ ಕೃಷ್ಣಃ ಶ್ರಿಯಾ ಸಾರ್ಧಂ ಯದಾ ನೃಪ । ಅಶೂನ್ಯಶಯನಾ ನಾಮ ತದಾ ಗ್ರಾಹ್ಯಾ ತು ಸಾ ತಿಥಿಃ ॥ ಕೃಷ್ಣಪಕ್ಷೇ ದ್ವಿತೀಯಾಯಾಂ ಶ್ರಾವಣೇ ಮಾಸಿ ಭಾರತ ॥'' ಆಷಾಢಶುಕ್ಲಏಕಾದಶಿಯಂದು ಮಲಗಿದ ಭಗವಂತನು ನಿದ್ದೆ ಪ್ರಾರಂಭಿಸುವುದು ಈ ದ್ವಿತೀಯಾದಂದು. ಇಂದು

ಪ್ರಾರಂಭಿಸಿದ ವ್ರತವನ್ನು ಶ್ರಾವಣ ಭಾದ್ರಪದ ಆಶ್ವಯುಜ ಮಾಸಗಳ ಕೃಷ್ಣಪಕ್ಷದ ದ್ವಿತೀಯಾ ತಿಥಿಗಳಂದು ಆಚರಿಸಬೇಕು. 'ಲಕ್ಷ್ಮ್ಯಾ ವಿಯುಜ್ಯತೇ ದೇವ ನ ಕದಾಚಿದ್ ಯಥಾ ಭವಾನ್ । ತಥಾ ಕಲತ್ರಸಂಬಂಧೋ ದೇವ ಮಾ ಮೇ ವಿಯುಜ್ಯತಾಮ್ ॥ ಲಕ್ಷ್ಮ್ಯಾ ನ ಶೂನ್ಯಂ ವರದ ಯಥಾ ತೇ ಶಯನಂ ಸದಾ । ಶಯ್ಯಾ ಮಮಾಪ್ಯಶೂನ್ಯಾಸ್ತು ತಥಾಽತ್ರ ಮಧುಸೂದನ ॥ – ಭಗವಂತನೇ! ನೀನು ಯಾವ ಕಾಲದಲ್ಲಿಯೂ ನಿನ್ನ ಕಳತ್ರಳಾದ (ಪತ್ನಿಯಾದ) ಲಕ್ಷ್ಮೀದೇವಿಯಿಂದ ವಿಯೋಗವನ್ನು ಹೊಂದಲಾರೆ. ಹಾಗೆಯೇ ನನಗೂ ಪತ್ನಿಯ ಸಂಬಂಧ ಕಡಿದು ಹೋಗುವುದು ಬೇಡ. ನಿನ್ನ ಹಾಸಿಗೆಯು ಎಂದೂ ಲಕ್ಷ್ಮಿಯಿಂದ ಶೂನ್ಯವಾಗಿ-ರುವುದಿಲ್ಲವೋ ಹಾಗೆ ನನ್ನ ಹಾಸಿಗೆಯೂ ನನ್ನ ಧರ್ಮಪತ್ನಿಯಿಂದ ಶೂನ್ಯವಾಗು-ವುದು ಬೇಡ - ಎಂದು ಪ್ರಾರ್ಥಿಸಬೇಕು. ಪ್ರಾರ್ಥನೆಯ ನಂತರ ಚಂದ್ರದೇವನಿಗೆ ಅರ್ಘ್ಯವನ್ನು ಕೊಡಬೇಕು. ಮೊಸರು, ಅಕ್ಷತೆ, ಫಲ ಇವುಗಳನ್ನು ಕೈಯ್ಯಲ್ಲಿ ಹಿಡಿದುಕೊಂಡು ಈ ಮಂತ್ರದಿಂದ ಅರ್ಘ್ಯವನ್ನು ನೀಡಬೇಕು. 'ಗಗನಾಂಗಣ-ಸಂದೀಪ ಕ್ಷೀರಾಬ್ಧಿಮಥನೋದ್ಭವ । ಬಾಭಾಸಿತದಿಗಾಭೋಗ ರಮಾನುಜ ನಮೋ-ಽಸ್ತು ತೇ ॥' ಮಾರನೇ ದಿನ ಬ್ರಾಹ್ಮಣನಿಗೆ ವಸ್ತ್ರ, ಫಲ, ದಕ್ಷಿಣೆಗಳನ್ನು ಕೊಟ್ಟು ಆಶೀರ್ವಾದವನ್ನು ಪಡೆಯಬೇಕು. ಹೀಗೆ ನಾಲ್ಕು ತಿಂಗಳೂ ಅಶೂನ್ಯವ್ರತವನ್ನು ಆಚರಿಸಿದವನಿಗೆ 21 ಜನ್ಮ ತಾನು ಬದುಕಿರುವಾಗ ಹೆಂಡತಿಯ ವಿಯೋಗ-ವಾಗಲಾರದು. ಸ್ತ್ರೀಗೆ ಗಂಡನ ವಿಯೋಗ ಬರಲಾರದು. 'ಸಪ್ತಜನ್ಮ- ತ್ರಯಂ ವೀರ ಗೃಹಭಂಗೋ ನ ಜಾಯತೇ' ವ್ರತವನ್ನು ಮುಗಿಸಿದ ನಂತರ ಭಗವಂತನ ಪ್ರೀತಿಗಾಗಿ ಬ್ರಾಹ್ಮಣದಂಪತಿಗಳನ್ನು ಹೊಸ ಹಾಸಿಗೆಯ ಮೇಲೆ ಕೂಡಿಸಿ, ದಾನ ಕೊಟ್ಟು ಕೃಷ್ಣಾರ್ಪಣವನ್ನು ಬಿಡಬೇಕು. ಲಕ್ಷ್ಮೀನಾರಾಯಣರ ಪ್ರತಿಮೆ, ದೀಪಗಳು, ಪಾದುಕೆ, ಛತ್ರ, ಆಸನ (ಮಣೆ), ಹಣ್ಣುಗಳು, ಗೋವು (ಪ್ರತ್ಯಾಮ್ನಾಯವಾಗಿ ಧನ) ಉದಕಕುಂಭ ಇವುಗಳನ್ನು ದಂಪತಿಗೆ ದಾನವಾಗಿ ಕೊಡಬೇಕು.

## ಆಷಾಢ ॥ ಶುದ್ಧ ॥ ತದಿಗೆ

ಶ್ರೀ ಸುಶೀಲೇಂದ್ರತೀರ್ಥರು (ರಾಯರ ಮಠ) - ಹೊಸರಿತ್ತಿ-ಸುಧಾದ್ಯಮಲಸದ್ಬೋಧಂ ಸುಕೀರ್ತಿವಿಲಸದ್ದಿಶಂ । ಸುಧೀಸಂಸ್ತುತ್ಯಸುಗುಣಂ

ಸುಶೀಲೇಂದ್ರ ಗುರುಂ ಭಜೇ ॥ ಆಷಾಡ ಮಾಸದ ತೃತೀಯಾದಿವಸ ಗೌರಿ ಪೂಜೆ ಮಾಡಬೇಕು.

## ಆಷಾಢ ॥ ಶುದ್ಧ ॥ ಚತುರ್ಥೀ

ಶ್ರೀಶೇಷಚಂದ್ರಿಕಾಚಾರ್ಯರ ಆರಾಧನೆ (ವ್ಯಾಸರಾಜಮಠ)– ಶ್ರೀಲಕ್ಷ್ಮೀ-ನಾರಾಯಣತೀರ್ಥರ ಬಳಿ ಆಶ್ರಮಪಡೆದ ಶ್ರೀರಘುನಾಥತೀರ್ಥಶ್ರೀಪಾದಂಗಳವರು ಶೇಷಚಂದ್ರಿಕಾಚಾರ್ಯರೆಂದೇ ಪ್ರಸಿದ್ಧರಾಗಿದ್ದಾರೆ. ಐವತ್ತೈದುವರ್ಷಗಳ ಕಾಲ ವ್ಯಾಸರಾಜಮಠದ ಸಿಂಹಾಸನಾಧೀಶ್ವರರಾದ ಇವರು ಶ್ರೀವ್ಯಾಸರಾಜಗುರುಸಾರ್ವ-ಭೌಮರ ಪ್ರತಿಬಿಂಬದಂತೆ ಕಂಗೊಳಿಸಿದ್ದಾರೆ. ಶ್ರೀವ್ಯಾಸರಾಜಗುರುಸಾರ್ವಭೌಮರ ಅನಂತರ ಹತ್ತನೆಯ ಯತಿಗಳು ಇವರು. ಶೇಷತಾತ್ಪರ್ಯಚಂದ್ರಿಕಾಗ್ರಂಥವನ್ನು ಬರೆದು ಶೇಷಚಂದ್ರಿಕಾಚಾರ್ಯರೆಂದೇ ಬಿರುದು ಪಡೆದಿದ್ದಾರೆ. ತಂತ್ರಸಾರಸಂಗ್ರಹ ಗ್ರಂಥಕ್ಕೆ ತತ್ವಕಣಿಕಾ ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಬೃಹತೀಸಹಸ್ರಕ್ಕೂ ಕೂಡ ತತ್ವಸಾರ ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಅತ್ಯಂತಕಠಿಣವಾದ ವೇದಾರ್ಥವನ್ನು ತಿಳಿಸುವ ಕರ್ಮನಿರ್ಣಯ ಎಂಬ ಗ್ರಂಥಕ್ಕೂ ಇವರ ವ್ಯಾಖ್ಯಾನವಿದೆ. ಈಶಾವಾಸ್ಯೋಪನಿಷದ್ಭಾಷ್ಯದ ಟೀಕೆಗೂ ವ್ಯಾಖ್ಯಾನವನ್ನು ಬರೆದಿದ್ದಾರೆ. ಇವರ ಮತ್ತೊಂದು ಕೃತಿ ಪದಾರ್ಥವಿವೇಕ. ಇವರು ಮಾಡಿದ ಸ್ತೋತ್ರವೇ ಗಂಗಾಸ್ತೋತ್ರ. ಶ್ರೀವ್ಯಾಸರಾಜಗುರುಸಾರ್ವಭೌಮರು ತತ್ವಪ್ರಕಾಶಿಕಾ ಗ್ರಂಥಕ್ಕೆ ತಾತ್ಪರ್ಯಚಂದ್ರಿಕಾ ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಆದರೆ ಕೇವಲ ಎರಡುಅಧ್ಯಾಯಗಳಿಗೆ ಮಾತ್ರ ವ್ಯಾಖ್ಯಾನ ಬರೆದು, ಕೊನೆಯ ಎರಡು ಅಧ್ಯಾಯಗಳಿಗೆ ಬರೆಯುವುದಿಲ್ಲ. ಆಗ ಶಿಷ್ಯಂದಿರು ಶ್ರೀವ್ಯಾಸರಾಜಗುರುಸಾರ್ವ-ಭೌಮರ ಬಳಿ ಪ್ರಶ್ನಿಸುತ್ತಾರೆ. 'ಗುರುಗಳೇ! ಮುಂದಿನ ಎರಡು ಅಧ್ಯಾಯಗಳಿಗೆ ವ್ಯಾಖ್ಯಾನವನ್ನು ಏಕೆ ತಾವು ಬರೆಯಲಿಲ್ಲ. ಯಾರು ಬರೆಯುತ್ತಾರೆ?' ಎಂದು. ಆಗ ಶ್ರೀವ್ಯಾಸರಾಜಗುರುಸಾರ್ವಭೌಮರು 'ದಶಮೋ ಮತ್ಸಮೋ ಭವೇತ್' ನನ್ನಿಂದ ಹತ್ತನೆಯ ಪೀಠಾಧಿಪತಿಯಾಗಿ ಯಾರು ಬರುತ್ತಾರೋ ಅವರು ನನಗೆ ಸಮಾನರಾಗಿರುತ್ತಾರೆ. ಅವರೇ ಈ ಎರಡು ಅಧ್ಯಾಯಗಳಿಗೆ ಬರೆದು ಕೃಷ್ಣಾರ್ಪಣ ಎನ್ನುತ್ತಾರೆ ಎಂದು ಉತ್ತರಿಸಿದರು. ಅದೇ ಪ್ರಕಾರವಾಗಿ ಶ್ರೀವ್ಯಾಸರಾಜಗುರು-

ಸಾರ್ವಭೌಮರ ಮಾತಿನಂತೆ ಹತ್ತನೆಯ ಪೀಠಾಧಿಪತಿಗಳಾಗಿ ಶ್ರೀರಘುನಾಥ - ತೀರ್ಥಶ್ರೀಪಾದಂಗಳವರು ಆಗಮಿಸಿದರು. ಶ್ರೀವ್ಯಾಸರಾಜಗುರುಸಾರ್ವಭೌಮರ ಅಪೇಕ್ಷೆಯನ್ನು ಪೂರೈಸಿದರು. ಚಂದ್ರಿಕಾಗ್ರಂಥವು ಎಷ್ಟು ಪ್ರಬುದ್ಧವಾಗಿದೆಯೋ ಅದೇ ಶೈಲಿಯಲ್ಲಿ ಶೇಷತಾತ್ಪರ್ಯಚಂದ್ರಿಕಾಗ್ರಂಥವು ಕೂಡ ಪ್ರಬುದ್ಧವಾಗಿದೆ. ಶ್ರೀವ್ಯಾಸರಾಜರೇ ಬರೆದಿರುವಂತೆ ಭಾಸವಾಗುತ್ತದೆ. ಶ್ರೀವ್ಯಾಸರಾಜಗುರುಸಾರ್ವ-ಭೌಮರಿಗೆ ಸರಿಸಮಾನರೆಂಬ ಭಾವನೆ ಮೂಡುತ್ತದೆ. ಒಂದು ವೇಳೆ ಶ್ರೀರಘು-ನಾಥತೀರ್ಥಶ್ರೀಪಾದಂಗಳವರು ಉಳಿದೆರಡು ಅಧ್ಯಾಯಗಳಿಗೆ ಶೇಷಚಂದ್ರಿಕೆ-ಯನ್ನು ಬರೆಯದಿದ್ದರೆ ಚಂದ್ರಿಕಾಗ್ರಂಥವು ಅಪೂರ್ಣವಾಗುತ್ತದೆ. ಇದನ್ನು ಪರಿಪೂರ್ಣಮಾಡಿ ಪರಿಪೂರ್ಣಚಂದ್ರಿಕೆಯನ್ನಾಗಿ ಮಾಡಿದ್ದಾರೆ. ಇವರ ಶಿಷ್ಯರೇ ಶ್ರೀಜಗನ್ನಾಥಯತಿಗಳು. ಶ್ರೀಜಗನ್ನಾಥತೀರ್ಥರು ತುರುಷ್ಕರ ಹಾವಳಿಗಳಿಂದ ಶಸ್ತ್ರಾಘಾತಕ್ಕೆ ತುತ್ತಾದರು. ಗೋಪಾಲಕೃಷ್ಣನ ಪೂಜೆಯನ್ನು ಗುರುಗಳಿಗೆ ಒಪ್ಪಿಸಿ ಗ್ರಂಥರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯಕ್ಕೆ ಭಾಷ್ಯದೀಪಿಕಾ ಗ್ರಂಥವನ್ನು ಇವರು ಬರೆದಿದ್ದಾರೆ. ಬಹಳ ಅತ್ಯದ್ಭುತವಾಗಿದೆ. ಒಮ್ಮೆ ಹೀಗೆ ಬರೆಯುತ್ತಾ ನಿದ್ರೆಗೆ ಜಾರಿದ್ದರು. ಕೈಯ್ಯಲ್ಲಿರುವ ಲೇಖನಿ ಕೈಯ್ಯಲ್ಲೇ ಇತ್ತು. ದೀಪದ ಹಣತೆ ಉರಿಯುತ್ತಿತ್ತು. ಆಗ ಅವರನ್ನು ನೋಡಲು ಗುರುಗಳಾದ ಶ್ರೀರಘುನಾಥತೀರ್ಥಶ್ರೀಪಾದಂಗಳವರು ಆಗಮಿಸಿ-ದರು. ಅವರು ಬರೆದಿಟ್ಟ ತಾಳಪತ್ರೆಗಳನ್ನು ಜೋಡಿಸಿ ಓದಿದರು. ಅವರ ವಿಚಾರ-ವಿನ್ಯಾಸಗಳನ್ನು ಗ್ರಂಥಶೈಲಿಯನ್ನು ಕಂಡು ಹಿರಿಹಿಗ್ಗಿದರು. ಇಂಥ ಶ್ರೇಷ್ಠವಾದ ಜ್ಞಾನಿಗಳಿಗೆ ಶಸ್ತ್ರಾಘಾತದಿಂದ ಮೈಲಿಗೆ ಬರಲು ಸಾಧ್ಯವಿಲ್ಲ ಎಂದು ನಿರ್ಣಯಿಸಿ ಗೋಪಾಲಕೃಷ್ಣದೇವರ ಪೂಜೆಯ ಭಾಗ್ಯವನ್ನು ಪುನಃ ನೀಡಿದರು. ಆಗ ಭಾಷ್ಯದೀಪಿಕಾಚಾರ್ಯ ಎಂಬ ಬಿರುದನ್ನು ನೀಡಿದರು. ಇಂದಿಗೂ ಜಗನ್ನಾಥ ಯತಿಗಳನ್ನು ಎಲ್ಲರೂ ಭಾಷ್ಯದೀಪಿಕಾಚಾರ್ಯರೆಂದೇ ಕರೆಯುತ್ತಾರೆ. ಇವರ ಗುರುಗಳಾದ ಶ್ರೀರಘುನಾಥತೀರ್ಥಶ್ರೀಪಾದಂಗಳವರನ್ನು ಶೇಷಚಂದ್ರಿಕಾ-ಚಾರ್ಯರೆಂದೇ ಕರೆಯುತ್ತಾರೆ. ಮೈಸೂರಿನ ಬಳಿ ಕಾವೇರಿ ತೀರದಲ್ಲಿರುವ ತಿರುಮಕೂಡಲು ಎಂಬ ಕ್ಷೇತ್ರದಲ್ಲಿ ಆಷಾಢಮಾಸದ ಶುಕ್ಲಪಕ್ಷದ ಚತುರ್ಥೀ ದಿವಸ ಶ್ರೀರಘುನಾಥತೀರ್ಥರು ವೃಂದಾವನಸ್ಥರಾದರು. ಇಂದಿಗೂ ಎಲ್ಲ ಭಕ್ತ

ಜನರನ್ನು ಉದ್ಧರಿಸುತ್ತಾ ದಿವ್ಯಸಾನ್ನಿಧ್ಯವನ್ನು ಹೊಂದಿರುವವರು. ಇಂಥ ಶ್ರೀರಘುನಾಥತೀರ್ಥಶ್ರೀಪಾದಂಗಳವರ ಪರಮಾನುಗ್ರಹ ನಮ್ಮೆಲ್ಲರ ಮೇಲೆ ನಿರಂತರ ಇರಲೆಂದು ಭಕ್ತಿಯಿಂದ ಪ್ರಾರ್ಥಿಸೋಣ.

## ಆಷಾಢ ॥ ಶುದ್ಧ ॥ ಪಂಚಮೀ

ಶ್ರೀರಘುನಾಥತೀರ್ಥರು (ಶ್ರೀಪಾದರಾಜ ಮಠ) - ಎರಗಂಬಳ್ಳಿ (ಕ್ರಿ.ಶ. 1645-1670) ರಾಮಚಂದ್ರಪದಾಸಕ್ತಂ ಪ್ರಸನ್ನೀಕೃತಂ ರಾಮಕಂ । ಪದವ್ಯಾಖ್ಯಾನ-ಕುಶಲಂ ರಘುನಾಥಗುರುಂ ಭಜೇ ॥

## ಆಷಾಢ ॥ ಶುದ್ಧ ॥ ಷಷ್ಠೀ

ಆಷಾಢಶುಕ್ಲಷಷ್ಠಿಯಂದು ಸ್ಕಂದವ್ರತವನ್ನು ಮಾಡಬೇಕು. ಇದರಿಂದ ಪುತ್ರಾದಿ ಸಂಪತ್ತು ಲಾಭವಾಗುತ್ತದೆ. ವಟುವಿನ ಆರಾಧನೆ ಮಾಡಬೇಕು.

ಶ್ರೀ ಶ್ರೀನಿಧಿತೀರ್ಥರು (ಪಲಿಮಾರು ಮಠ) ಶ್ರೀ ರಾಜರಾಜೇಶ್ವರತೀರ್ಥರ ಅನಂತರ ಶ್ರೀ ವಿದ್ಯಾಮೂರ್ತಿತೀರ್ಥರಿಂದ ಆಶ್ರಮ ಪಡೆದು ಮಠದ ಪರಂಪರೆಯಲ್ಲಿ ಆರನೆಯ ಯತಿಗಳಾಗಿ ಪೀಠವನ್ನೇರಿದವರು ಶ್ರೀನಿಧಿತೀರ್ಥರು. ಇವರು ಶ್ರೀ ರಾಜರಾಜೇಶ್ವರರಂತೆ ಗ್ರಂಥ ರಚನೆ ಮಾಡದಿದ್ದರೂ ಆಶ್ರಮ ಗುರುಗಳ ಪರಿಣತಿಯನ್ನೆಲ್ಲಾ ತನ್ನಲ್ಲಿ ಅರಗಿಸಿಕೊಂಡು ನಿರಂತರ ವಿದ್ಯಾವ್ಯಾಸಂಗದಲ್ಲಿ ತನ್ನ ಕಾಲವನ್ನು ಕಳೆದರು. ಸಕಲತೀರ್ಥಕ್ಷೇತ್ರಗಳನ್ನು ಸಂದರ್ಶಿಸಿದರು. ತಮ್ಮ ಗುರುಗಳ ಅನಂತರ ಹದಿನೆಂಟು ವರ್ಷಗಳ ಕಾಲ ಪೀಠದಲ್ಲಿದ್ದು ಶಾ.ಶ. 1312 (ಕ್ರಿ.ಶ. 1389) ಶುಕ್ಲ ಸಂವತ್ಸರದ ಆಷಾಢ ಶುದ್ಧ ಷಷ್ಠಿಯಂದು ಜಗನ್ನಾಥ ಕ್ಷೇತ್ರದಲ್ಲಿ ಹರಿಪದವನ್ನು ಸೇರಿದರು.

ಶ್ರೀ ವರದೇಂದ್ರತೀರ್ಥರು (ರಾಯರ ಮಠ) ಆಷಾಢ ಶುದ್ಧ ಷಷ್ಠಿ - ಪೂನಾ – ವಾದೇ ವಿಜಯಶೀಲಾಯ ವರದಾಯ ವರಾರ್ಥಿನಾಂ । ವದಾನ್ಯಜನಸಿಂಹಾಯ ವರದೇಂದ್ರಾಯ ತೇ ನಮಃ ॥ ಮಠದ ಇತಿಹಾಸದಲ್ಲಿ ವರದೇಂದ್ರಸ್ವಾಮಿಗಳ ಹೆಸರು ಬಹಳ ಪ್ರಖ್ಯಾತವಾದದ್ದು. ಇವರು ದೊಡ್ಡ ಪಂಡಿತರು ಪ್ರಸಿದ್ಧವಾದಿ, ದಿಗ್ವಿಜಯಿಗಳು. ಇವರ ಕಾಲದಲ್ಲಿ ಸಂಸ್ಥಾನ ಸರ್ವ ವಿಧದಿಂದಲೂ

ಅತ್ಯುನ್ನತ ಸ್ಥಿತಿಗೆ ಬಂದಿತು. ಶ್ರೀಗಳವರ ವ್ಯಕ್ತಿತ್ವ ಬಹಳ ಪ್ರತಿಭಾ ಪೂರ್ಣವಾದದ್ದು. ಚತುಶ್ಶಾಸ್ತ್ರ ಪಂಡಿತರಾಗಿ ದಾಸಾಗ್ರಣಿಗಳೆಂದು ಪ್ರಖ್ಯಾತರಾದ ಜಗನ್ನಾಥ ದಾಸರು ಶ್ರೀಗಳವರಲ್ಲಿ ವ್ಯಾಸಂಗ ಮಾಡಿದವರು, ಮತ್ತು ಶ್ರೀಗಳವರು ಸ್ತೋತ್ರ ರೂಪವಾಗಿ ಅವರು 'ವರದೇಂದ್ರ ಪಂಚರತ್ನಮಾಲಿಕೆ' ಎಂಬ ಕವಿತೆಯನ್ನು ರಚಿಸಿದರು. ಶ್ರೀಗಳವರು ದಾಸಸಾಹಿತ್ಯಕ್ಕೆ ವಿಶೇಷ ಪ್ರೋತ್ಸಾಹವನ್ನು ಕೊಟ್ಟರು. ಹಿಂದೆ ಚಂದ್ರಿಕಾಚಾರ್ಯರ ಕಾಲದಲ್ಲಿ ಆ ಸಾಹಿತ್ಯ ಹೇಗೆ ಪೋಷಿತವಾಯಿತೋ ಹಾಗೆ ಈಗ ಇನ್ನೊಮ್ಮೆ ದಾಸಸಾಹಿತ್ಯ ಪುನರುಜ್ಜೀವಿತವಾಯಿತು. ವಿಜಯದಾಸರು, ಗೋಪಾಲ ದಾಸರು, ಜಗನ್ನಾಥದಾಸರುಗಳಂತಹ ಅಪರೋಕ್ಷಜ್ಞಾನಿಗಳು ಒಟ್ಟಾಗಿ ಸೇರಿದ್ದು ಶ್ರೀಗಳವರ ಕಾಲದಲ್ಲಿ. ಆ ದಾಸರಾಯರುಗಳು ಅನೇಕ ಸಲ ಸಂಸ್ಥಾನಕ್ಕೆ ಬಂದು ಗುರುಗಳ ಅನುಗ್ರಹ ಪಡೆದು ಹೋಗುತ್ತಿದ್ದರು. ಇಷ್ಟೇ ಅಲ್ಲದೆ ಶ್ರೀಗಳವರೇ 'ತಂತ್ರಸಾರ'ವನ್ನು ಕನ್ನಡದಲ್ಲಿ ಪದರೂಪವಾಗಿ ರಚಿಸಿದ್ದಾರೆ. ಇದಕ್ಕೆ ಜಗನ್ನಾಥ-ದಾಸರು ಫಲಸ್ತುತಿ ಬರೆದಿದ್ದಾರೆ. ಎಲ್ಲಕ್ಕಿಂತ ಹೆಚ್ಚಾಗಿ ಶ್ರೀಗಳವರು ಜಗನ್ನಾಥದಾಸರ ಶಿಷ್ಯರಾದ ಪ್ರಾಣೇಶ ದಾಸರಲ್ಲಿ ವಿಶೇಷಾನುಗ್ರಹ ಮಾಡಿದರು. ಸಂಚಾರತ್ವೇನ ಲಿಂಗಸೂಗೂರಿಗೆ ಹೋದ ಶ್ರೀಗಳವರ ಭಿಕ್ಷೆ ಅಲ್ಲಿ ಮೊದಲಿಗೆ ಮಠದ ಶಿಷ್ಯರಾದ ಕುಲಕರಣಿ ಯೋಗೀಂದ್ರರಾಯರ (ಪ್ರಾಣೇಶದಾಸರು) ಮನೆಯಲ್ಲಿ ಆಯಿತು. ಮಧ್ಯಾಹ್ನ ಶ್ರೀಗಳವರು ನಗುತ್ತಾ, 'ದಾಸರೇ, ಮೂಲರಾಮನಿಗೇನು ಕಾಣಿಕೆ ಕೊಡುವಿರಿ?' ಎಂದು ಕೇಳಿದರು. 'ಎಲ್ಲ ಸಂಸ್ಥಾನದ್ದೇ, ಬೇಕಾದ್ದನ್ನು ಶ್ರೀಗಳವರು ತೆಗೆದುಕೊಳ್ಳಬಹುದು'. 'ನಿಮ್ಮ ಮನೆಯ ಹಿತ್ತಿಲಿನಲ್ಲಿರುವ ಜೋಳದಬಣಿವೆ. ಆ ಸ್ಥಳ ನಮಗೆ ದಾನ ಕೊಡಿರಿ'. 'ಅದೇಕೆ ಮಹಾಸ್ವಾಮಿ? ಬೇರೆ ಯಾವುದಾದರೂ ಪ್ರಶಸ್ತವಾದ ಸ್ಥಳ ಕೊಡುತ್ತೇನೆ'. 'ಇಲ್ಲ, ನಮಗದೇ ಬೇಕು'. 'ಅಪ್ಪಣೆ' ಎಂದು ಪ್ರಾಣೇಶದಾಸರು ಅದನ್ನು ಕೃಷ್ಣಾರ್ಪಣಪೂರ್ವಕವಾಗಿ ಶ್ರೀಗಳವರಿಗೆ ದಾನ ಕೊಟ್ಟರು. ಶ್ರೀಗಳವರು 'ಇದು ನಿಮ್ಮ ಸ್ವಾಧೀನದಲ್ಲೇ ಇರಲಿ. ನಾವು ಅಪೇಕ್ಷಿಸಿದಾಗ ನಮ್ಮ ವಶಕ್ಕೆ ಕೊಡಿರೆಂದು ಹೇಳಿ ಮುಂದೆ ಸಂಚಾರಕ್ಕೆ ಹೊರಟರು. ಆಗ ಪುಣೆಯಲ್ಲಿ ಪೇಶ್ವೆಗಳ ಆಡಳಿತ ನಡೆಯುತ್ತಿತ್ತು. ಬಾಲಾಜಿ ಬಾಜೀರಾಯನ ಕಾಲ ರಾಮಾ-ಶಾಸ್ತ್ರಿಗಳೆಂಬ ಪ್ರಸಿದ್ಧ ಅದ್ವೈತ ಪಂಡಿತರು ತಮ್ಮ ಪ್ರತಿಭಾಶಕ್ತಿಯಿಂದ ಪೇಶ್ವೆಗಳ ನ್ಯಾಯಾಧೀಶರಾಗಿದ್ದರು. ಶ್ರೀಗಳವರ ಸವಾರಿ ಅಲ್ಲಿಗೆ ಚಿತ್ತೈಸಿತು. ಅಲ್ಲಿ ಬ್ರಾಹ್ಮಣ-

ರಾದ ಪೇಶ್ವೆಗಳು ಶ್ರೀಗಳವರನ್ನು ಆದರದಿಂದ ಬರ ಮಾಡಿಕೊಂಡು ಸತ್ಕರಿಸಿದರು. ರಾಮಶಾಸ್ತ್ರಿಗಳಿಗೂ ಶ್ರೀಗಳವರಿಗೂ ವಾಕ್ಯಾರ್ಥವಾಗಬೇಕೆಂದು ವ್ಯವಸ್ಥೆಯಾಯಿತು. ರಾಮಶಾಸ್ತ್ರಿಗಳ ಮನೆಯೇ ವಾಕ್ಯಾರ್ಥದ ಸ್ಥಳ. ರಾಮಶಾಸ್ತ್ರಿಗಳು ಸೋತರೆ ಆ ಮನೆಯನ್ನು ಶ್ರೀಗಳವರಿಗೆ ಬಿಟ್ಟುಬಿಡಬೇಕೆಂದೂ, ಶ್ರೀಗಳವರು ಸೋತರೆ ತಮ್ಮ ಬಿರುದು-ಮರ್ಯಾದೆಗಳನ್ನೆಲ್ಲಾ ಬಿಟ್ಟು ಬಿಡಬೇಕೆಂದೂ ನಿರ್ಣಯವಾಗಿ ವಾಕ್ಯಾರ್ಥ ಆರಂಭವಾಯಿತು. ಆ ಹೊತ್ತಿಗೆ ಸರಿಯಾಗಿ ವಾದೀಂದ್ರಸ್ವಾಮಿಗಳ ಪೂರ್ವಾಶ್ರಮ ಪುತ್ರರಾದ ಜಯರಾಮಾಚಾರ್ಯರು ಸಂಸ್ಥಾನಕ್ಕೆ ಬಂದರು. ಅಂತಹ ದಿಗ್ದಂತಿ-ಪಂಡಿತರು ಸಮಯಕ್ಕೆ ಸರಿಯಾಗಿ ಬಂದಿದ್ದರಿಂದ ಶ್ರೀಗಳವರಿಗೆ ಬಹಳ ಆನಂದ-ವಾಯಿತು. ಅವರು ಅವರನ್ನು ಆದರದಿಂದ ಬರಮಾಡಿಕೊಂಡರು. ಸ್ವಾಮಿಗಳು ಮತ್ತು ರಾಮಶಾಸ್ತ್ರಿಗಳ ವಾದದಲ್ಲಿ ಜಯರಾಮಾಚಾರ್ಯರು ಸ್ವಾಮಿಗಳಿಗೆ ಮುಖ್ಯ ಬೆಂಬಲಿಗರಾಗಿ ನಿಂತು ವಾಕ್ಯಾರ್ಥದಲ್ಲಿ ಭಾಗವಹಿಸಿದರು. ಶ್ರೀಗಳವರ ಪಕ್ಷಕ್ಕೆ ಜಯವಾಯಿತು. ಸಮಯಬಂಧದಂತೆ ರಾಮಾಶಾಸ್ತ್ರಿಗಳು ತಮ್ಮ ಮನೆಯನ್ನು ಬಿಟ್ಟು ಕಾಶಿಯ ಕಡೆಗೆ ಹೊರಟುಬಿಟ್ಟರು. ಅವರ ಮನೆಯು ಮೂಲರಾಮನ ಆವಾಸ-ವಾಯಿತು. ಪೂನಾ ಶ್ರೀಮಂತರು ಅದ್ವೈತಿಗಳು. ಆದರೂ ಅವರು ಶ್ರೀಗಳವರ ಪಾಂಡಿತ್ಯಕ್ಕೆ ತಲೆದೂಗಿ ಅವರನ್ನು ವಿಶೇಷವಾಗಿ ಸತ್ಕರಿಸಿದರು. ಶ್ರೀಗಳವರು ಅಲ್ಲೇ ತಮ್ಮ ಕೊನೆಗಾಲವನ್ನು ಕಳೆದು ವಿಶ್ವಾವಸು ಸಂವತ್ಸರದ ಆಷಾಢ ಶುದ್ಧ ಷಷ್ಠಿಯದಿನ ಅಲ್ಲೇ ಬೃಂದಾವನಸ್ಥರಾದರು. ಇವರ ಶಿಷ್ಯರಾದ ಭುವನೇಂದ್ರಸ್ವಾಮಿಗಳು ಆ ಸ್ಥಳದಲ್ಲಿ ಮಠವನ್ನು ಕಟ್ಟಿಸಿ ಅಲ್ಲಿ ಅತ್ಯಂತ ವೈಭವದಿಂದ ವೃಂದಾವನ ಪ್ರತಿಷ್ಠೆ ಮಾಡಿಸಿದರು. ಪೇಶ್ವೆಯರ ರಾಜ್ಯವಿರುವ ತನಕ ಅಲ್ಲಿ ಪೂಜಾದಿಗಳಿಗೆ ಧನಸಹಾಯ ಮಾಡುತ್ತಿದ್ದರು. ಅಲ್ಲಿ ಬೃಂದಾವನಸ್ಥರಾದ ಮೇಲೆ ಇತ್ತ ಪ್ರಾಣೇಶದಾಸರ ಸ್ವಪ್ನದಲ್ಲಿ ಅಂದು ರಾತ್ರಿ ಶ್ರೀಗಳವರು ಕಾಣಿಸಿಕೊಂಡು ತಾವು ಭಕ್ತರಾದ ಪ್ರಾಣೇಶದಾಸರ ಹಿತ್ತಲಲ್ಲಿರುವ ತಾವು ದಾನ ತೆಗೆದುಕೊಂಡ ಹುಲ್ಲಬಣಿವೆಯ ಕೆಳಗೆ ಬಂದು ಸನ್ನಿಹಿತರಾಗಿರುವರೆಂದೂ ಇದಕ್ಕೆ ಅದನ್ನು ತೆಗೆದರೆ ಅದರ ಕೆಳಗೆ ತುಳಸೀಗಿಡ-ವಿರುವುದೇ ಸಂಕೇತವೆಂದೂ, ಅಲ್ಲಿ ತಮ್ಮ ಪೂಜಾರಾಧನೆ ನಡೆಸಬೇಕೆಂದೂ ಅಪ್ಪಣೆ ಮಾಡಿದರು. ದಾಸರ ಆನಂದಕ್ಕೆ ಎಣೆಯಿರಲಿಲ್ಲ. ತಕ್ಷಣವೇ ಅವರು ಎದ್ದು ಸ್ನಾನಾದಿಗಳನ್ನು ತೀರಿಸಿಕೊಂಡು ಜನರ ಸಹಾಯದಿಂದ ಆ ಬಣಿವೆಯನ್ನು ತೆಗೆದರು.

ಆದರ ಕೆಳಗೆ ಒಂದು ಆಳಿನೆತ್ತರದ ತುಳಸಿಗಿಡವನ್ನು ನೋಡಿ ಎಲ್ಲರಿಗೂ ಅತ್ಯಾ-ಶ್ಚರ್ಯವಾಯಿತು. ಅಲ್ಲಿ ಸ್ಥಳವನ್ನೆಲ್ಲ ಶುದ್ಧಿಪಡಿಸಿ ಅಲ್ಲಿ ಅವತ್ತಿನಿಂದ ಪೂಜೆಗಾ-ರಂಭಿಸಿದರು. ಸ್ವಲ್ಪ ಕಾಲ ಆ ತುಳಸಿಯ ಗಿಡಕ್ಕೆ ಪೂಜೆ ನಡೆಯುತ್ತಿತ್ತು. ಆಮೇಲೆ ಶ್ರೀಗಳವರ ಆಜ್ಞೆಯಂತೆ ಗುಲಗಂಜಿಯ ಮೊರಡಿಯಿಂದ ಶಿಲೆಯನ್ನು ತಂದು ಅಲ್ಲಿ ಒಂದು ಬೃಂದಾವನ ನಿರ್ಮಿಸಿ ಪ್ರತಿಷ್ಠಿಸಿದರು. ಪುಣೆಯಿಂದ ಶ್ರೀಗಳವರ ಪಾದುಕೆ-ಯನ್ನು ತರಿಸಿಟ್ಟರು. ಅಲ್ಲಿ ವರದೇಂದ್ರತೀರ್ಥಸ್ವಾಮಿಗಳ ಮಠ ನಿರ್ಮಾಣವಾಯಿತು. ಅಂದಿನಿಂದ ಆರಾಧನೆಯೂ ಇಂದಿಗೂ ವಿಜೃಂಭಣೆಯಿಂದ ನಡೆಯುತ್ತಿದೆ. ಅರ್ಥಿಗಳು ಅಲ್ಲಿ ಸೇವೆ ಮಾಡಿ ತಮ್ಮ ಅಭೀಷ್ಟಗಳನ್ನು ಪಡೆಯುತ್ತಿದ್ದಾರೆ.

## ಆಷಾಢ ।। ಶುದ್ಧ ।। ಸಪ್ತಮೀ

ಆಷಾಢಶುಕ್ಲ ಸಪ್ತಮಿಯಂದು ವಿವಸ್ವಾನ್ ನಾಮಕ ಸೂರ್ಯನು ಪ್ರಕಟವಾದ ದಿವಸವಾದ್ದರಿಂದ ವೈವಸ್ವತಸೂರ್ಯಪೂಜೆ ಮಾಡಬೇಕು.

## ಆಷಾಢ ।। ಶುದ್ಧ ।। ನವಮಿ

**ಶ್ರೀ ವಿದ್ಯಾಸಿಂಧುತೀರ್ಥರು (ವ್ಯಾಸರಾಜ ಮಠ)** (ಕ್ರಿ.ಶ. 1872–1884)

ಸದ್ಯಾಚಿತಾಮರತರುಃ ಹೃದ್ಯಾಶ್ಚರ್ಯಪ್ರಭಾವವಾನ್ । ವಿದ್ಯಾಶ್ರೀಸಿಂಧು ಯತಿ-ರಾಟ್ ದದ್ಯಾದ್ವಿದ್ಯಾ ಮುರದ್ವಿಷಃ ।। ಇವರ ಪೂರ್ವಾಶ್ರಮದ ನಾಮ ಶ್ರೀ ಕೃಷ್ಣಾಚಾರ್ಯರೆಂದು. ಇವರು ಶ್ರೀ ವಿದ್ಯಾಪೂರ್ಣತೀರ್ಥರ ಪೂರ್ವಾಶ್ರಮದ ಮೊಮ್ಮಕ್ಕಳು. ಇವರು ಉದ್ದಾಮ ಪಂಡಿತರು. ಅತಿವಿರಕ್ತರೂ ಮತ್ತು ತುಂಬಾ ಉದಾರ ಸ್ವಭಾವದವರೂ ಆಗಿದ್ದರು. 1877-1878 (ಧಾತು ಹಾಗೂ ಈಶ್ವರ) ಸಂವತ್ಸರಗಳಲ್ಲಿ ಘೋರವಾದ ಕ್ಷಾಮ ತಲೆದೋರಿದಾಗ ಇಡೀ ಮಠದ ಆದಾಯ-ವನ್ನೆಲ್ಲಾ ಸಂಪನ್ಮೂಲಗಳನ್ನೆಲ್ಲಾ ಕ್ಷಾಮಪೀಡಿತ ಜನರ ಸಂರಕ್ಷಣೆಗಾಗಿ ವಿನಿಯೋಗಿಸಿದ ಅಪಾರಕೀರ್ತಿ ಇವರದ್ದಾಗಿದೆ. ಆ ಕಾಲದಲ್ಲಿ ಕ್ಷಾಮದಿಂದ ಸಾಯಬೇಕಾಗಿದ್ದ ಸಹಸ್ರಾರು ಜನರುಗಳಿಗೆ ಪ್ರಾಣದಾನ ಮಾಡಿದ ಮಹಾತ್ಮರು. ಮಠಗಳ ನಡುವೆ ಪರಸ್ಪರ ಸ್ನೇಹ ಸೌಹಾರ್ದತೆಗಳಿಗಾಗಿ ಬಹುವಾಗಿ ಪ್ರಯತ್ನ ಮಾಡಿದ ಕೀರ್ತಿವಂತರು. ಉಡುಪಿ ಅಷ್ಟಮಠದ ಯತಿಗಳಿಂದ ಸನ್ಮಾನಿತರಾಗಿ ಉಡುಪಿ ಕೃಷ್ಣನ ದರ್ಶನ ಮಾಡಿ 1884ರ ಆಷಾಢ ಶುದ್ಧ ನವಮಿಯಂದು ಸೋಸಲೆ ಕ್ಷೇತ್ರದಲ್ಲಿ ವೃಂದಾವನಸ್ಥರಾದರು.

## ಆಷಾಢ॥ ಶುದ್ಧ॥ ದಶಮೀ

**ಮಹಾಭಿಷೇಕ** – ಗೋಮಯಾದ್ಯುಪಲೇಪೇನ ಶುದ್ಧಿಂ ಕೃತ್ವಾ ವಿಚಕ್ಷಣಃ । ಅಭ್ಯಂತರಂ ಗೃಹಸ್ಯೈವ ವಾಸೋಭಿಃ ಕಂಬಲೈಸ್ತಥಾ ॥ ಎಂಬುದಾಗಿ ಸ್ಮೃತಿ ಮುಕ್ತಾವಳಿ ಗ್ರಂಥದಲ್ಲಿ ಹೇಳಿದಂತೆ ಚಾತುರ್ಮಾಸ್ಯದ ಮೊದಲು ಮನೆಯನ್ನು ಶುದ್ಧಿಗೊಳಿಸಬೇಕು. ಮನೆಯಲ್ಲಿರುವ ಬಟ್ಟೆಗಳನ್ನು ಕಂಬಳಿ ಮೊದಲಾದವುಗಳನ್ನು ನೀರಿನಿಂದ ಶುದ್ಧಿಗೊಳಿಸಿ ಸಮಸ್ತಮನೆಯನ್ನೇ ಪವಿತ್ರವನ್ನಾಗಿ ಮಾಡಬೇಕು. ವಿಶೇಷವಾಗಿ ದೇವರ ಮನೆಯನ್ನು ಸ್ವಚ್ಛಗೊಳಿಸಬೇಕು. ಜೇಡರಬಲೆ, ಜಿರಳೆ, ಹಲ್ಲಿ ಮೊದಲಾದವುಗಳು ಇಲ್ಲದಂತೆ ಸ್ವಚ್ಛಗೊಳಿಸಬೇಕು. ಮತ್ತು ಪ್ರತಿ ಹದಿನೈದು ದಿವಸಗಳಿಗೊಮ್ಮೆ ಹೀಗೆ ದೇವರ ಮನೆಯನ್ನು ಸ್ವಚ್ಛಗೊಳಿಸುತ್ತಿರಬೇಕು. ದೇವರ ಮಂಟಪದಲ್ಲಿ ಧೂಳು ಇಲ್ಲದಂತೆ ಕಾಪಾಡಿಕೊಳ್ಳಬೇಕು. ಚಾತು-ರ್ಮಾಸ್ಯದ ಎರಡು ದಿವಸಗಳ ಮೊದಲು ಹೀಗೆ ಮನೆಯೆಲ್ಲವನ್ನೂ ಶುದ್ಧಿಗೊಳಿಸಿ ಚಾತುರ್ಮಾಸ್ಯಕ್ಕೆ ಸಿದ್ಧತೆಯನ್ನು ಮಾಡಿಕೊಳ್ಳಬೇಕು. ಆಷಾಢಮಾಸದ ಶುಕ್ಲಪಕ್ಷದ ದಶಮಿಯ ದಿವಸ ಭಗವಂತನಿಗೆ ಹನ್ನೆರಡು ಎಳನೀರುಗಳಿಂದ ಅಭಿಷೇಕವನ್ನು ಮಾಡಬೇಕು. ಮಹಾಭಿಷೇಕಗಳನ್ನು ಮಾಡುವಾಗ ನಾಕು, ಎಂಟು, ಹನ್ನೆರಡು, ಹದಿನಾರು ಈ ಸಂಖ್ಯೆಯಲ್ಲಿ ಪೂರ್ಣಕುಂಭಗಳನ್ನಿಟ್ಟು ಅಭಿಷೇಕವನ್ನು ಮಾಡು-ತ್ತಾರೆ. ಅದಕ್ಕಾಗಿ ಕಲಶಪ್ರತಿಷ್ಠಾಪನಾದಿ ವಿಧಿವಿಧಾನಗಳಿವೆ. ಇದನ್ನು ಮಾಡಲು ಸಾಧ್ಯವಾಗದವರು ಎಳನೀರುಗಳನ್ನು ತಂದು ಅವುಗಳಲ್ಲಿಯೇ ಭಗವಂತನ ನೂರೆಂಟು ರೂಪಗಳನ್ನು ಆವಾಹನೆ ಮಾಡಿ ಅಭಿಷೇಕವನ್ನು ಪೂರೈಸಬೇಕು. ಸಾಧ್ಯವಾಗದಿದ್ದರೆ ನಾಕು ಎಳನೀರುಗಳಿಂದಾದರೂ ಭಗವಂತನಿಗೆ ಮಹಾಭಿಷೇಕ-ವನ್ನು ಮಾಡಬೇಕು. ಹೀಗೆ ಮಾಡುವುದರಿಂದ ಪರಮಾತ್ಮನು ಅತ್ಯಂತ ಪ್ರಸನ್ನನಾಗುತ್ತಾನೆ. ಉಡುಪಿ ಕೃಷ್ಣಮಠದಲ್ಲಿ ಪ್ರತಿವರ್ಷವೂ ಮೂರು ದಿವಸಗಳ ಮೊದಲೇ ಕೃಷ್ಣ ಮಠವನ್ನು ತೊಳೆದು ಶುಭ್ರಗೊಳಿಸಿರುತ್ತಾರೆ. ದಶಮಿಯ ದಿವಸ ಮಹಾಭಿಷೇಕವನ್ನು ಮಾಡುತ್ತಾರೆ. ಈ ಸಂಪ್ರದಾಯವನ್ನು ನಮ್ಮ ಮನೆಯಲ್ಲಿಯೂ ಅಳವಡಿಸಿಕೊಳ್ಳಬೇಕು. ಈ ಉದ್ವರ್ತನಾ ವಿಧಿಯನ್ನು ಸ್ಮೃತಿಮುಕ್ತಾವಳಿಕಾರರು ಅತ್ಯಂತ ಸ್ಪಷ್ಟವಾಗಿ ನಿರ್ಣಯ ಮಾಡಿರುತ್ತಾರೆ. (ಸ್ಪಷ್ಟ ಪ್ರಮಾಣವೂ ಇದೆ.

ಮುಂದೆ ಚಾತುರ್ಮಾಸ್ಯವ್ರತ ಎಂಬ ಪ್ರಕರಣದಲ್ಲಿ ಗಮನಿಸಿರಿ). ಸಕಲ ಹರಿ-ಭಕ್ತರೂ ಎಷ್ಟೇ ಕಷ್ಟವಾದರೂ ಈ ಕ್ರಮವನ್ನು ಬಿಡದೇ ಅಳವಡಿಸಿಕೊಂಡು ಭಗವಂತನ ಒಲುಮೆಗೆ ಪಾತ್ರರಾಗಬೇಕು.

ಶ್ರೀ ಪರಂಜ್ಯೋತಿತೀರ್ಥರು (ಮಾಧವತೀರ್ಥ ಮಠ) ಆಷಾಢ ಶುದ್ಧ ದಶಮೀ – ನಾರಾಯಣಕರಾಬ್ಜೋತ್ಥಂ ಸಾವಿದ್ವನ್ಮಣಿರಾಜಿತಮ್ । ಪರಂಜ್ಯೋತಿ -ಗುರುಂ ವಂದೇ ಸದ್ವಿದ್ಯಾಬುದ್ಧಿಸಿದ್ಧಯೇ ॥

## ಆಷಾಢ ॥ ಶುದ್ಧ ॥ ಏಕಾದಶೀ

ಯುಧಿಷ್ಠಿರಃ – ಆಷಾಢಸ್ಯ ಸಿತೇ ಪಕ್ಷೇ ಕಾ ಚ ಏಕಾದಶೀ ಭವೇತ್ । ಕಿನ್ನಾ-ಮಕೋ ವಿಧಿಸ್ತಸ್ಯಾ ಏತದ್ವಿಸ್ತರತೋ ವದ ॥ ಯುಧಿಷ್ಠಿರನು ಹೇಳಿದನು. ಆಷಾಢಮಾಸದ ಶುಕ್ಲಪಕ್ಷದಲ್ಲಿ ಯಾವ ಏಕಾದಶಿಯು ಬರುತ್ತದೆ. ಅದರ ಹೆಸರೇನು? ಅದಕ್ಕೆ ವಿಧಿಯೇನು? ವಿಸ್ತಾರವಾಗಿ ಹೇಳು. ಶ್ರೀಕೃಷ್ಣಃ – ಕಥಯಾಮಿ ಮಹಾಪುಣ್ಯಾಂ ಸ್ವರ್ಗಮೋಕ್ಷಪ್ರದಾಯಿನೀಮ್ । ಶಯನೀಂ ನಾಮ ನಾಮ್ನಾ ತು ಸರ್ವಪಾಪಹರಾಂ ಪರಾಮ್ ॥2॥ ಶ್ರೀಕೃಷ್ಣನು ಹೇಳಿದನು – ಅದು ಸ್ವರ್ಗಮೋಕ್ಷಗಳನ್ನು ಕೊಡುತ್ತದೆ. ಅದರ ಹೆಸರು ಶಯನ್ಯೈಕಾದಶೀ ಎಂದು. ಪಾಪಹಾರಕವಾದುದು. ಯಸ್ಯಾಃ ಶ್ರವಣಮಾತ್ರೇಣ ವಾಜಪೇಯಫಲಂ ಲಭೇತ್ । ಸತ್ಯಂ ಸತ್ಯಂ ಮಯಾ ಪ್ರೋಕ್ತಂ ನಾತಃ ಪರತರಂ ನೃಣಾಮ್ ॥3॥ ಈ ಏಕಾದಶಿಯ ವಿಷಯವನ್ನು ಕೇಳಿದರೇನೇ ವಾಜಪೇಯಯಾಗದ ಫಲವು ಬರುತ್ತದೆ. ನಾನು ಹೇಳಿದುದು ಸತ್ಯವು. ಇದಕ್ಕಿಂತಲೂ ಉತ್ತಮವಾದುದು ಮತ್ತೊಂದಿಲ್ಲ. ಪಾಪಿನಾಂ ಪಾಪನಾಶಾಯ ಸೃಷ್ಟಂ ಧಾತ್ರಾ ಮಹೋತ್ತಮಮ್ । ಅತಃ ಪರಾ ನ ರಾಜೇಂದ್ರ ವರ್ತತೇ ಮೋಕ್ಷದಾ ಪರಾ ॥4॥ ಪಾಪಿಗಳ ಪಾಪದ ನಾಶಕ್ಕೋಸ್ಕರವೇ ಬ್ರಹ್ಮನು ಸೃಷ್ಟಿಸಿದ್ದಾನೆ. ಆದುದರಿಂದ ಮೋಕ್ಷವನ್ನು ಕೊಡುವಂತಹದು ಇದಕ್ಕಿಂತಲೂ ಮತ್ತೊಂದಿಲ್ಲ. ಏತಸ್ಮಾತ್ ಕಾರಣಾತ್ ರಾಜನ್ ಶ್ರೂಯತಾಂ ಗತಿರುತ್ತಮಾ । ಭವೇನ್ನರಾಣಾಂ ಶ್ರೋತೃಣಾಂ ಕಥಾಯಾಃ ಶ್ರವಣಾದಪಿ ॥5॥ ಆ ಕಾರಣದಿಂದಲೇ ಇದನ್ನು ಕೇಳಿದವರಿಗೂ ಮಾಡಿದವರಿಗೂ ಉತ್ತಮವಾದ ಗತಿಯು ಬರುತ್ತದೆ. ತೇ ಸದಾ ವೈಷ್ಣವಾ ರಾಜನ್ ಮಮ ಭಕ್ತಿಪರಾಯಣಾಃ ।

ಆಷಾಢೇ ವಾಮನಶ್ಚೈವ ಪೂಜ್ಯತೇ ಪರಮೇಶ್ವರಃ ||6|| ಆ ಏಕಾದಶಿಯನ್ನು ಮಾಡುವವರು ವೈಷ್ಣವರು, ವಿಷ್ಣುಭಕ್ತಿಪರಾಯಣರು. ಆಷಾಢದಲ್ಲಿ ವಾಮನ-ನೆಂಬ ದೇವರನ್ನು ಪೂಜಿಸಬೇಕು. ವಾಮನಃ ಪೂಜಿತೋ ಯೇನ ಕಮಲೈಃ ಕಮಲೇಕ್ಷಣಃ। ಆಷಾಢಸ್ಯ ಸಿತೇ ಪಕ್ಷೇ ಶಯನ್ಯಾಶ್ಚ ದಿನೇ ತಥಾ ||7|| ತೇನಾರ್ಚಿತಂ ಜಗತ್ಸರ್ವಂ ತ್ರಯೋ ದೇವಾಃ ಸನಾತನಾಃ । ಕೃತಾ ಚೈಕಾದಶೀ ಯೇನ ಹರಿ-ವಾಸರಮುತ್ತಮಮ್ ||8|| ಆಷಾಢಮಾಸದ ಶುಕ್ಲಪಕ್ಷದ ಕಾಮಿಕಾ (ಶಯನೀ) ಏಕಾದಶಿಯ ದಿನ ವಾಮದೇವರನ್ನು ಯಾವನು ಪೂಜಿಸುವನೋ ಅವನು ಮೂರು ಲೋಕವನ್ನೂ ಬ್ರಹ್ಮ ವಿಷ್ಣು ಶಿವರನ್ನೂ ಪೂಜಿಸಿದಂತಾಗುತ್ತದೆ. ಆ ದಿನ ಏಕಾದಶಿಯ ಉಪವಾಸ ಮಾಡಿಕೊಂಡು ಜಾಗರಣೆಗಳನ್ನು ಮಾಡಿ ಪೂಜಿಸಬೇಕು. ಯುಧಿಷ್ಠಿರಃ – ಸಂಶಯೋಽಸ್ತಿ ಮಹಾನ್ಮೇಽತ್ರ ಶ್ರೂಯತಾಂ ಪುರುಷೋತ್ತಮ । ಕಥಂ ಸುಪ್ತೋಽಸಿ ದೇವೇಶ ಕಥಂ ಚ ಬಲಿಮಾಶ್ರಿತಃ ||9|| ಕಥಂ ಭೂಮೌ ಚ ಸರ್ವೇಶ ಕಿಂ ಕುರ್ವಂತಿ ಜನಾಃ ಪರೇ । ಏತದ್ ವದ ಮಹಾಪ್ರಾಜ್ಞ ಸಂಶಯೋಽಸ್ತಿ ಮಹಾನ್ಮಮ ||10|| ಯುಧಿಷ್ಠಿರನು ಹೇಳಿದನು – ಎಲೈ ಪುರುಷೋತ್ತಮನೇ! ನನಗೆ ಈ ವಿಷಯದಲ್ಲಿ ಬಹುವಾದ ಸಂಶಯವಿದೆ. ನೀನು ಮಲಗಿರುವುದು ಹೇಗೆ? ಬಲಿಯೆಂಬ ದಾನವನ ಬಳಿ ಇರುತ್ತೇನೆಂಬುದು ಹೇಗೆ? ಭೂಮಿಯಲ್ಲಿ ಹೇಗೆ ಮಲಗಿರುತ್ತೀಯೆ? ಆಗ ಜನಗಳೆಲ್ಲರೂ ಏನು ಮಾಡುತ್ತಾರೆ? ಇದೇ ನನ್ನ ಸಂಶಯವು. ಇದಕ್ಕೆ ಸಮಾಧಾನವನ್ನು ಹೇಳು. ಶ್ರೀಕೃಷ್ಣಃ – ಶ್ರೂಯತಾಂ ರಾಜಶಾರ್ದೂಲ ಕಥಾ ಪಾಪಪ್ರಣಾಶಿನೀ । ಯಸ್ಯಾಃ ಶ್ರವಣಮಾತ್ರೇಣ ಸರ್ವ-ಪಾಪಕ್ಷಯೋ ಭವೇತ್ ||11|| ಶ್ರೀಕೃಷ್ಣನು ಹೇಳಿದನು – ಎಲೈ ಯುಧಿಷ್ಠಿರನೇ! ಒಂದು ಕಥೆಯನ್ನು ಹೇಳುತ್ತೇನೆ ಕೇಳು. ಅದು ಪಾಪವನ್ನು ನಾಶ ಮಾಡುತ್ತದೆ. ಅದನ್ನು ಕೇಳಿದೊಡನೆಯೇ ಎಂತಹ ಪಾಪಗಳಿದ್ದರೂ ನಾಶವಾಗುತ್ತವೆ. ಬಲಿರ್ವೈ ದಾನವಃ ಪೂರ್ವಮಾಸೀತ್ ತ್ರೇತಾಯುಗೇ ನೃಪ । ಪೂಜಯಂಶ್ಚೈವ ಮಾಂ ನಿತ್ಯಂ ಮದ್ಭಕ್ತೋ ಮತ್ಪರಾಯಣಃ ||12|| ಪೂರ್ವದಲ್ಲಿ ತ್ರೇತಾಯುಗದಲ್ಲಿ ಬಲಿಯೆಂಬ ದಾನವನಿದ್ದನು. ಅವನು ದಿನವೂ ನನ್ನನ್ನು ಪೂಜಿಸುತ್ತ ನನ್ನಲ್ಲಿಯೇ ಭಕ್ತಿ-ಯುಳ್ಳವನಾಗಿದ್ದನು. ಯಜ್ಞೈಸ್ತು ವಿಧಿವದ್ ದೈತ್ಯೋ ಯಜತೇ ಮಾಂ ಸನಾತನಂ । ಭಕ್ತ್ಯಾ ಚ ಪರಯಾ ರಾಜನ್ ಯಜ್ಞಕೃದ್ ವ್ರತಕೃತ್ತಥಾ ||13|| ಅವನು ಅನೇಕವಾದ

ಯಜ್ಞಗಳಿಂದ ನನ್ನನ್ನು ಸಂತೋಷಪಡಿಸುತ್ತ ಇದ್ದನು. ಉತ್ತಮವಾದ ಭಕ್ತಿಯಿಂದ ಯಜ್ಞಗಳನ್ನು ಮಾಡುವುದಲ್ಲದೇ ವ್ರತಗಳನ್ನೂ ಮಾಡುತ್ತಿದ್ದನು. ಪರಂ ವಿಚಾರ್ಯ ಬಹುಧಾ ಮಘೋನಂ ಚೈವ ಸೂಕ್ತಿಭಿಃ । ಗುರುಣಾ ದೇವತೈಃ ಸಾರ್ಧಂ ಬಹುಧಾ ಪೂಜಿತೋಽಪ್ಯಹಮ್ ॥14॥ ಅನಂತರ ಇಂದ್ರನು ಬೃಹಸ್ಪತಿ-ಯೊಡನೆಯೂ ದೇವತೆಗಳೊಡನೆಯೂ ಯೋಚನೆಮಾಡಿ ಅನೇಕ ಒಳ್ಳೆಯ ರೀತಿಯಿಂದ ನನ್ನನ್ನು ಪೂಜಿಸಿದನು. ತತೋ ವಾಮನರೂಪೇಣ ಅವತಾರೇ ಚ ಪಂಚಮೇ । ಅತ್ಯುಗ್ರರೂಪೇಣ ತದಾ ಸರ್ವಬ್ರಹ್ಮಾಂಡರೂಪಿಣಾ ॥15॥ ವಾಕ್ ಛಲೇನ ಜಿತೋ ದಾತಾ ಸತ್ಯಮಾಶ್ರಿತ್ಯ ಸಂಸ್ಥಿತಃ । ಶುಕ್ರಸ್ತಂ ವಾರಯಾಮಾಸ ಯನ್ನಾರಾಯಣ ಇತ್ಯಹಮ್ ॥16॥ ಅನಂತರ ವಾಮನಾವತಾರವೆಂಬ ಐದನೆಯ ಅವತಾರವನ್ನು ಮಾಡಿದೆನು. ಅದು ಬ್ರಹ್ಮಾಂಡರೂಪವಾದ ಉಗ್ರಾವತಾರವು. ಆಗ ಮೋಸದ ಮಾತಿನಿಂದ ಸತ್ಯವಂತನಾದ ಬಲಿಯನ್ನು ಜಯಿಸಿದೆನು. ಆಗ ಶುಕ್ರಾಚಾರ್ಯನು ಇವನು ನಾರಾಯಣನು ಇವನ ಮಾತಿಗೆ ಮರುಳಾಗಬೇಡ-ವೆಂದು ಬಲಿಗೆ ಹೇಳಿದನು. ಯಾಚಿತಾ ವಸುಧಾ ರಾಜನ್ ಸಾರ್ಧತ್ರಯಪದಾ ಮಯಾ । ಸಂಕಲ್ಪೋದಕಮಾತ್ರೇ ತು ಕರೇ ತೇನೈವ ಚಾರ್ಪಿತೇ ॥17॥ ರೂಪಮೀದೃಗ್ವಿಧಂ ರಾಜನ್ ತದಾ ಶೃಣು ಮಯಾ ಕೃತಮ್ । ಭೂರ್ಲೋಕೇ ಚರಣೌ ನ್ಯಸ್ಯ ಭುವರ್ಲೋಕೇ ತು ಜಾನುನೀ ॥18॥ ಸ್ವರ್ಲೋಕೇ ತು ಕಟಿಂ ನ್ಯಸ್ಯ ಮಹರ್ಲೋಕೇ ತಥೋದರಮ್ । ಜನೋ ಲೋಕೇ ಚ ಹೃದಯಂ ತಪೋಲೋಕೇ ತು ಕಂಠಕಮ್ ॥19॥ ಸತ್ಯಲೋಕೇ ಮುಖಂ ಸ್ಥಾಪ್ಯ ಮಸ್ತಕಂ ಚ ತದೂರ್ಧ್ವಕಮ್ । ಚಂದ್ರಸೂರ್ಯಗ್ರಹಾಶ್ಚೈವ ನಕ್ಷತ್ರಾಣಿ ತಥೈವ ಚ ॥20॥ ದೇವಾಃ ಸೇಂದ್ರಾಶ್ಚ ನಾಗಾಶ್ಚ ಯಕ್ಷಗಂಧರ್ವಕಿನ್ನರಾಃ । ಸ್ತುವಂತೋ ವೇದಸಂಭೂತೈಃ ಸೂಕ್ತೈಶ್ಚ ವಿವಿಧೈಸ್ತಥಾ ॥21॥ ಆಗ ನಾನು ಮೂರುವರೆ ಹೆಜ್ಜೆ ಭೂಮಿಯನ್ನು ಕೇಳಿ ಕೊಂಡೆನು. ಆ ಬಲಿಯು ಸಂಕಲ್ಪಮಾಡಿ ನೀರಿನೊಡನೆ ದಾನ ಮಾಡಿ ನನ್ನ ಕೈಗೆ ಹಾಕಲು ನಾನು ಮಾಡಿದ ಅವತಾರವನ್ನು ಹೇಳುತ್ತೇನೆ ಕೇಳು. ಭೂಲೋಕದಲ್ಲಿ ಹೆಜ್ಜೆಗಳನ್ನೂ, ಭುವರ್ಲೋಕದಲ್ಲಿ ಮಂಡಿಗಳನ್ನೂ, ಸ್ವರ್ಲೋಕದಲ್ಲಿ ಸೊಂಟ-ವನ್ನೂ, ಮಹರ್ಲೋಕದಲ್ಲಿ ಹೊಟ್ಟೆಯನ್ನು, ಜನೋಲೋಕದಲ್ಲಿ ಎದೆಯನ್ನೂ, ತಪೋಲೋಕದಲ್ಲಿ ಕತ್ತನ್ನೂ, ಸತ್ಯಲೋಕದಲ್ಲಿ ಮುಖವನ್ನೂ, ಅದರ ಮೇಲಿನ

ಲೋಕದಲ್ಲಿ ತಲೆಯನ್ನೂ ಇಟ್ಟೆನು. ಚಂದ್ರ , ಸೂರ್ಯ, ನಕ್ಷತ್ರಗಳು, ದೇವತೆಗಳು, ಇಂದ್ರನು, ನಾಗರು, ಯಕ್ಷರು, ಗಂಧರ್ವರು, ಕಿನ್ನರರು ಇವರೆಲ್ಲರೂ ಆಗ ವೇದದ ಋಕ್ಕುಗಳಿಂದ ನನ್ನನ್ನು ಸ್ತೋತ್ರಮಾಡಿದರು. ಕರೇ ಗೃಹೀತ್ವಾ ಚ ಬಲಿಂ ತ್ರಿಪದೈಃ ಪೂರಿತಾ ಮಹೀ । ಅರ್ಧಂ ಚ ತಸ್ಯ ಪೃಷ್ಠೇ ಚ ಪದಂ ನ್ಯಸ್ತಂ ಮಯಾ ತದಾ ॥22॥ ಗತೋ ರಸಾತಲಂ ರಾಜನ್ ದಾನವೋ ಮಮ ಪೂಜಕಃ । ಕ್ಷಿಪ್ತೋಽಧೋ ದಾನವಶ್ಚೈಷ ಕಿಮಕುರ್ವನ್ ತತಃ ಪರಮ್ ॥23॥ ವಿನಯೇನಾನತೋಽಸೌ ವೈ ಪ್ರಸನ್ನೋ ಜನಾರ್ದನಃ । ಆಷಾಢಶುಕ್ಲಪಕ್ಷೇ ತು ಕಾಮಿಕಾ ಹರಿವಾಸರೇ ॥24॥ ತಸ್ಯಾಮೇಕಾ ಚ ಮೂರ್ತಿರ್ಮೇ ಬಲಿಮಾಶ್ರಿತ್ಯ ತಿಷ್ಠತಿ । ದ್ವಿತೀಯಾ ಶೇಷಪೃಷ್ಠೇ ವೈ ಕ್ಷೀರಸಾಗರಮಧ್ಯತಃ ॥25॥ ಸ್ವಪಿತ್ಯೇವ ಮಹಾರಾಜಾ ಯಾವದಾಗಾಮಿಕಾರ್ತಿಕೀ । ತಾವದ್ಭವೇತ್ಸುಧರ್ಮಾತ್ಮಾ ಸರ್ವಧರ್ಮೋತ್ತಮೋತ್ತಮಮ್ ॥26॥ ಆಗ ಬಲಿ-ಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಮೂರುಕಾಲಗಳಿಂದ ಭೂಮಿಯನ್ನು ಅಳೆದೆನು. ಆಗ ಅರ್ಧಕಾಲನ್ನು ಅವನ ಬೆನ್ನಿನ ಮೇಲಿಟ್ಟೆನು. ಆ ನನ್ನ ಭಕ್ತನಾದ ಬಲಿಯು ರಸಾತಳಕ್ಕೆ ಹೋದನು. ಆಗ ಆ ದಾನವನನ್ನು ಪಾತಾಳಕ್ಕೆ ತುಳಿದೆನು. ಅನಂತರ ಆ ಬಲಿಯು ವಿನಯದಿಂದ ತಲೆ ಬಾಗಲು ಅವನಿಗೆ ಪ್ರಸನ್ನನಾದೆನು. ಆಷಾಢ ಶುಕ್ಲಪಕ್ಷದಲ್ಲಿ ಕಾಮಿಕಾ ಅಥವಾ ಶಯನೈಕಾದಶಿಯು ಬರುವುದು. ಆ ದಿನ ನನ್ನ ಒಂದು ಮೂರ್ತಿಯು ಬಲಿಯ ಹತ್ತಿರವಿರುತ್ತದೆ. ಎರಡನೆಯ ಮೂರ್ತಿಯು ಕ್ಷೀರಸಾಗರ ಮಧ್ಯದಲ್ಲಿ ಶೇಷನ ಹಾಸಿಗೆಯ ಮೇಲೆ ಮಲಗಿರುತ್ತದೆ. ಈ ಎರಡು ಮೂರ್ತಿಗಳೂ ಕಾರ್ತಿಕ ಮಾಸದವರೆಗೆ ಮಲಗಿರುತ್ತವೆ. ಅದುವರೆಗೂ ಬೇಕಾದ ವ್ರತವನ್ನು ಆಚರಿಸಿ ಮನುಷ್ಯನು ಧರ್ಮಗಳನ್ನು ಸಂಪಾದಿಸಬಹುದು. ವ್ರತಂ ಚ ಕುರುತೇ ಮರ್ತ್ಯಃ ಸ ಯಾತಿ ಪರಮಾಂ ಗತಿಮ್ । ಏತಸ್ಮಾತ್ ಕಾರಣಾದ್ ರಾಜನ್ ಕರ್ತವ್ಯಾ ಚ ಪ್ರಯತ್ನತಃ ॥27॥ ಆಗ ವ್ರತಗಳನ್ನು ಮಾಡಿದ ಮನುಷ್ಯನು ಉತ್ತಮಗತಿಯನ್ನು ಹೊಂದುತ್ತಾನೆ. ಆದುದರಿಂದಲೇ ಈ ಕಾಲದಲ್ಲಿ ವ್ರತಗಳನ್ನು ಪ್ರಯತ್ನಪಟ್ಟು ಮಾಡಬೇಕು. ನಾತಃ ಪರತರಾ ಕಾಚಿತ್ ಪವಿತ್ರಾ ಪಾಪನಾಶಿನೀ । ಯಸ್ಯಾಂ ಸ್ವಪಿತಿ ದೇವೇಶಃ ಶಂಖಚಕ್ರಗದಾಧರಃ ॥28॥ ಶಂಖ, ಚಕ್ರ , ಗದಾಧರನಾದ ಸ್ವಾಮಿಯು ಮಲಗಿರುವ ಈ ದಿನಗಳಿಗಿಂತ ಪಾಪನಾಶಕವಾದ ಬೇರೆ ದಿನಗಳಿಲ್ಲವು. ಇದೇ ಪಾಪಹರವು. ತಸ್ಯಾಂ ಚ

ಯಜ್ಞಗಳಿಂದ ನನ್ನನ್ನು ಸಂತೋಷಪಡಿಸುತ್ತ ಇದ್ದನು. ಉತ್ತಮವಾದ ಭಕ್ತಿಯಿಂದ ಯಜ್ಞಗಳನ್ನು ಮಾಡುವುದಲ್ಲದೇ ವ್ರತಗಳನ್ನೂ ಮಾಡುತ್ತಿದ್ದನು. ಪರಂ ವಿಚಾರ್ಯ ಬಹುಧಾ ಮಘೋನಂ ಚೈವ ಸೂಕ್ತಿಭಿಃ । ಗುರುಣಾ ದೇವತೈಃ ಸಾರ್ಧಂ ಬಹುಧಾ ಪೂಜಿತೋಽಪ್ಯಹಮ್ ॥14॥ ಅನಂತರ ಇಂದ್ರನು ಬೃಹಸ್ಪತಿ-ಯೊಡನೆಯೂ ದೇವತೆಗಳೊಡನೆಯೂ ಯೋಚನೆಮಾಡಿ ಅನೇಕ ಒಳ್ಳೆಯ ರೀತಿಯಿಂದ ನನ್ನನ್ನು ಪೂಜಿಸಿದನು. ತತೋ ವಾಮನರೂಪೇಣ ಅವತಾರೇ ಚ ಪಂಚಮೇ । ಅತ್ಯುಗ್ರರೂಪೇಣ ತದಾ ಸರ್ವಬ್ರಹ್ಮಾಂಡರೂಪಿಣಾ ॥15॥ ವಾಕ್ ಛಲೇನ ಜಿತೋ ದಾತಾ ಸತ್ಯಮಾಶ್ರಿತ್ಯ ಸಂಸ್ಥಿತಃ । ಶುಕ್ರಸ್ತಂ ವಾರಯಾಮಾಸ ಯನ್ನಾರಾಯಣ ಇತ್ಯಹಮ್ ॥16॥ ಅನಂತರ ವಾಮನಾವತಾರವೆಂಬ ಐದನೆಯ ಅವತಾರವನ್ನು ಮಾಡಿದೆನು. ಅದು ಬ್ರಹ್ಮಾಂಡರೂಪವಾದ ಉಗ್ರಾವತಾರವು. ಆಗ ಮೋಸದ ಮಾತಿನಿಂದ ಸತ್ಯವಂತನಾದ ಬಲಿಯನ್ನು ಜಯಿಸಿದೆನು. ಆಗ ಶುಕ್ರಾಚಾರ್ಯನು ಇವನು ನಾರಾಯಣನು ಇವನ ಮಾತಿಗೆ ಮರುಳಾಗಬೇಡ-ವೆಂದು ಬಲಿಗೆ ಹೇಳಿದನು. ಯಾಚಿತಾ ವಸುಧಾ ರಾಜನ್ ಸಾರ್ಧತ್ರಯಪದಾ ಮಯಾ । ಸಂಕಲ್ಪೋದಕಮಾತ್ರೇ ತು ಕರೇ ತೇನೈವ ಚಾರ್ಪಿತೇ ॥17॥ ರೂಪಮೀದೃಗ್ವಿಧಂ ರಾಜನ್ ತದಾ ಶೃಣು ಮಯಾ ಕೃತಮ್ । ಭೂರ್ಲೋಕೇ ಚರಣೌ ನ್ಯಸ್ಯ ಭುವರ್ಲೋಕೇ ತು ಜಾನುನೀ ॥18॥ ಸ್ವರ್ಲೋಕೇ ತು ಕಟಿಂ ನ್ಯಸ್ಯ ಮಹರ್ಲೋಕೇ ತಥೋದರಮ್ । ಜನೋ ಲೋಕೇ ಚ ಹೃದಯಂ ತಪೋಲೋಕೇ ತು ಕಂಠಕಮ್ ॥19॥ ಸತ್ಯಲೋಕೇ ಮುಖಂ ಸ್ಥಾಪ್ಯ ಮಸ್ತಕಂ ಚ ತದೂರ್ಧ್ವಕಮ್ । ಚಂದ್ರಸೂರ್ಯಗ್ರಹಾಶ್ಚೈವ ನಕ್ಷತ್ರಾಣಿ ತಥೈವ ಚ ॥20॥ ದೇವಾಃ ಸೇಂದ್ರಾಶ್ಚ ನಾಗಾಶ್ಚ ಯಕ್ಷಗಂಧರ್ವಕಿನ್ನರಾಃ । ಸ್ತುವಂತೋ ವೇದಸಂಭೂತೈಃ ಸೂಕ್ತೈಶ್ಚ ವಿವಿಧೈಸ್ತಥಾ ॥21॥ ಆಗ ನಾನು ಮೂರುವರೆ ಹೆಜ್ಜೆ ಭೂಮಿಯನ್ನು ಕೇಳಿ ಕೊಂಡೆನು. ಆ ಬಲಿಯು ಸಂಕಲ್ಪಮಾಡಿ ನೀರಿನೊಡನೆ ದಾನ ಮಾಡಿ ನನ್ನ ಕೈಗೆ ಹಾಕಲು ನಾನು ಮಾಡಿದ ಅವತಾರವನ್ನು ಹೇಳುತ್ತೇನೆ ಕೇಳು. ಭೂಲೋಕದಲ್ಲಿ ಹೆಜ್ಜೆಗಳನ್ನೂ, ಭುವರ್ಲೋಕದಲ್ಲಿ ಮಂಡಿಗಳನ್ನೂ, ಸ್ವರ್ಲೋಕದಲ್ಲಿ ಸೊಂಟ-ವನ್ನೂ, ಮಹರ್ಲೋಕದಲ್ಲಿ ಹೊಟ್ಟೆಯನ್ನು, ಜನೋಲೋಕದಲ್ಲಿ ಎದೆಯನ್ನೂ, ತಪೋಲೋಕದಲ್ಲಿ ಕತ್ತನ್ನೂ, ಸತ್ಯಲೋಕದಲ್ಲಿ ಮುಖವನ್ನೂ, ಅದರ ಮೇಲಿನ

ಲೋಕದಲ್ಲಿ ತಲೆಯನ್ನೂ ಇಟ್ಟೆನು. ಚಂದ್ರ , ಸೂರ್ಯ, ನಕ್ಷತ್ರಗಳು, ದೇವತೆಗಳು, ಇಂದ್ರನು, ನಾಗರು, ಯಕ್ಷರು, ಗಂಧರ್ವರು, ಕಿನ್ನರರು ಇವರೆಲ್ಲರೂ ಆಗ ವೇದದ ಋಕ್ಕುಗಳಿಂದ ನನ್ನನ್ನು ಸ್ತೋತ್ರಮಾಡಿದರು. ಕರೇ ಗೃಹೀತ್ವಾ ಚ ಬಲಿಂ ತ್ರಿಪದೈಃ ಪೂರಿತಾ ಮಹೀ । ಅರ್ಧಂ ಚ ತಸ್ಯ ಪೃಷ್ಠೇ ಚ ಪದಂ ನ್ಯಸ್ತಂ ಮಯಾ ತದಾ ॥22॥ ಗತೋ ರಸಾತಲಂ ರಾಜನ್ ದಾನವೋ ಮಮ ಪೂಜಕಃ । ಕ್ಷಿಪ್ತೋಧೋ ದಾನವಶ್ಚೈಷ ಕಿಮಕುರ್ವನ್ ತತಃ ಪರಮ್ ॥23॥ ವಿನಯೇನಾನತೋಽಸೌ ವೈ ಪ್ರಸನ್ನೋ ಜನಾರ್ದನಃ । ಆಷಾಢಶುಕ್ಲಪಕ್ಷೇ ತು ಕಾಮಿಕಾ ಹರಿವಾಸರೇ ॥24॥ ತಸ್ಯಾಮೇಕಾ ಚ ಮೂರ್ತಿರ್ಮೇ ಬಲಿಮಾಶ್ರಿತ್ಯ ತಿಷ್ಠತಿ । ದ್ವಿತೀಯಾ ಶೇಷಪೃಷ್ಠೇ ವೈ ಕ್ಷೀರಸಾಗರಮಧ್ಯತಃ ॥25॥ ಸ್ವಪಿತ್ಯೇವ ಮಹಾರಾಜಾ ಯಾವದಾಗಾಮಿಕಾರ್ತಿಕೀ । ತಾವದ್ಭವೇತ್ಸುಧರ್ಮಾತ್ಮಾ ಸರ್ವಧರ್ಮೋತ್ತಮೋತ್ತಮಮ್ ॥26॥ ಆಗ ಬಲಿಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಮೂರುಕಾಲಗಳಿಂದ ಭೂಮಿಯನ್ನು ಅಳೆದೆನು. ಆಗ ಅರ್ಧಕಾಲನ್ನು ಅವನ ಬೆನ್ನಿನ ಮೇಲಿಟ್ಟೆನು. ಆ ನನ್ನ ಭಕ್ತನಾದ ಬಲಿಯು ರಸಾತಳಕ್ಕೆ ಹೋದನು. ಆಗ ಆ ದಾನವನನ್ನು ಪಾತಾಳಕ್ಕೆ ತುಳಿದೆನು. ಅನಂತರ ಆ ಬಲಿಯು ವಿನಯದಿಂದ ತಲೆ ಬಾಗಲು ಅವನಿಗೆ ಪ್ರಸನ್ನನಾದೆನು. ಆಷಾಢ ಶುಕ್ಲಪಕ್ಷದಲ್ಲಿ ಕಾಮಿಕಾ ಅಥವಾ ಶಯನ್ಯೆಕಾದಶಿಯು ಬರುವುದು. ಆ ದಿನ ನನ್ನ ಒಂದು ಮೂರ್ತಿಯು ಬಲಿಯ ಹತ್ತಿರವಿರುತ್ತದೆ. ಎರಡನೆಯ ಮೂರ್ತಿಯು ಕ್ಷೀರಸಾಗರ ಮಧ್ಯದಲ್ಲಿ ಶೇಷನ ಹಾಸಿಗೆಯ ಮೇಲೆ ಮಲಗಿರುತ್ತದೆ. ಈ ಎರಡು ಮೂರ್ತಿಗಳೂ ಕಾರ್ತಿಕ ಮಾಸದವರೆಗೆ ಮಲಗಿರುತ್ತವೆ. ಅದುವರೆಗೂ ಬೇಕಾದ ವ್ರತವನ್ನು ಆಚರಿಸಿ ಮನುಷ್ಯನು ಧರ್ಮಗಳನ್ನು ಸಂಪಾದಿಸಬಹುದು. ವ್ರತಂ ಚ ಕುರುತೇ ಮರ್ತ್ಯಃ ಸ ಯಾತಿ ಪರಮಾಂ ಗತಿಮ್ । ಏತಸ್ಮಾತ್ ಕಾರಣಾದ್ ರಾಜನ್ ಕರ್ತವ್ಯಾ ಚ ಪ್ರಯತ್ನತಃ ॥27॥ ಆಗ ವ್ರತಗಳನ್ನು ಮಾಡಿದ ಮನುಷ್ಯನು ಉತ್ತಮಗತಿಯನ್ನು ಹೊಂದುತ್ತಾನೆ. ಆದುದರಿಂದಲೇ ಈ ಕಾಲದಲ್ಲಿ ವ್ರತಗಳನ್ನು ಪ್ರಯತ್ನಪಟ್ಟು ಮಾಡಬೇಕು. ನಾತಃ ಪರತರಾ ಕಾಚಿತ್ ಪವಿತ್ರಾ ಪಾಪನಾಶಿನೀ । ಯಸ್ಯಾಂ ಸ್ವಪಿತಿ ದೇವೇಶಃ ಶಂಖಚಕ್ರಗದಾಧರಃ ॥28॥ ಶಂಖ, ಚಕ್ರ , ಗದಾಧರನಾದ ಸ್ವಾಮಿಯು ಮಲಗಿರುವ ಈ ದಿನಗಳಿಗಿಂತ ಪಾಪನಾಶಕವಾದ ಬೇರೆ ದಿನಗಳಿಲ್ಲವು. ಇದೇ ಪಾಪಹರವು. ತಸ್ಯಾಂ ಚ

ಪೂಜಯೇದ್ ದೇವಂ ಶಂಖಚಕ್ರಗದಾಧರಮ್ । ರಾತ್ರೌ ಜಾಗರಣಂ ಕೃತ್ವಾ ಭಕ್ತ್ಯಾ ಚೈವ ವಿಶೇಷತಃ ॥29॥ ಈ ಕಾಮಿಕೈಕಾದಶಿಯಲ್ಲಿ ಶಂಖ, ಚಕ್ರ , ಗದಾಧರನಾದ ಸ್ವಾಮಿಯನ್ನು ಪೂಜಿಸಿ ರಾತ್ರಿಯಲ್ಲಿ ಭಕ್ತಿಯಿಂದ ಜಾಗರಣೆ ಮಾಡಬೇಕು. ತಸ್ಯ ಪುಣ್ಯಸ್ಯ ಸಂಖ್ಯಾಂ ನ ಕರ್ತುಂ ಶಕ್ತಶ್ಚತುರ್ಮುಖಃ । ಏವಂ ಯಃ ಕುರುತೇ ರಾಜನ್ನೇಕಾದಶ್ಯಾ ವ್ರತೋತ್ತಮಮ್ ॥30॥ ಸರ್ವಪಾಪಹರಂ ಚೈವ ಭುಕ್ತಿ-ಮುಕ್ತಿಪ್ರದಾಯಕಮ್ । ಸ ಚ ಲೋಕೇ ಮಮ ಸದಾ ಶ್ವಪಚೋಽಪಿ ಪ್ರಿಯಂಕರಃ ॥31॥ ಆ ದಿನ ವ್ರತಮಾಡಿದ ಪುಣ್ಯವನ್ನು ಎಣಿಸಲು ಚತುರ್ಮುಖನಾದ ಬ್ರಹ್ಮನಿಂದಲೂ ಸಾಧ್ಯವಿಲ್ಲ. ಈ ರೀತಿಯಾಗಿ ಉತ್ತಮವಾದ ಏಕಾದಶಿವ್ರತವನ್ನು ಮಾಡುವವನು ಪಾಪಗಳನ್ನು ನಾಶಮಾಡಿಕೊಳ್ಳುತ್ತಾನೆ. ಅದಲ್ಲದೇ ಇಹದಲ್ಲಿ ಭುಕ್ತಿಯೂ ಪರದಲ್ಲಿ ಮುಕ್ತಿಯೂ ಸಿಗುತ್ತವೆ. ಲೋಕದಲ್ಲಿ ಅವನು ಚಂಡಾಲನಾದರೂ ನನಗೆ ಪ್ರಿಯನು. ದೀಪದಾನೇನ ಪಾಲಾಶಪತ್ರೇ ಭುಕ್ತ್ಯಾ ವ್ರತೇನ ಚ । ಚಾತುರ್ಮಾಸ್ಯಂ ನಯಂತೀಹ ತೇ ನರಾ ಮಮ ವಲ್ಲಭಾಃ ॥32॥ ದೀಪದಾನ ಮಾಡುತ್ತಾ ಮುತ್ತುಗದೆಲೆಯಲ್ಲಿ ಊಟ ಮಾಡುತ್ತಾ ಯಾವನು ಚಾತುರ್ಮಾಸ್ಯಗಳನ್ನು ಕಳೆಯುತ್ತಾನೆಯೋ ಅವನು ನನಗೆ ಪ್ರೀತಿಪಾತ್ರನು. ಚಾತುರ್ಮಾಸ್ಯೇ ಹರೌ ಸುಪ್ತೇ ಭೂಮಿಶಾಯೀ ಭವೇನ್ನರಃ । ಶ್ರಾವಣೇ ವರ್ಜಯೇಚ್ಛಾಕಂ ದಧಿ ಭಾದ್ರಪದೇ ತಥಾ ॥33॥ ದುಗ್ಧಮಾಶ್ವಯುಜೇ ತ್ಯಾಜ್ಯಂ ಕಾರ್ತಿಕೇ ದ್ವಿದಳಂ ತ್ಯಜೇತ್ । ಅಥವಾ ಬ್ರಹ್ಮಚರ್ಯಸ್ಥಃ ಸ ಯಾತಿ ಪರಮಾಂ ಗತಿಮ್ ॥34॥ ಹರಿಯು ಮಲಗಿದ ಚಾತುರ್ಮಾಸ್ಯದಲ್ಲಿ ಮನುಷ್ಯನು ನೆಲದ ಮೇಲೆ ಮಲಗಬೇಕು. ಶ್ರಾವಣದಲ್ಲಿ ಕಾಯಿಪಲ್ಲೆಯನ್ನೂ ಭಾದ್ರಪದದಲ್ಲಿ ಮೊಸರನ್ನೂ, ಆಶ್ವಯುಜದಲ್ಲಿ ಹಾಲನ್ನೂ, ಕಾರ್ತಿಕದಲ್ಲಿ ದ್ವಿದಳಧಾನ್ಯಗಳನ್ನೂ ಬಿಡಬೇಕು. ಅದಿಲ್ಲದಿದ್ದರೆ ನಾಲ್ಕು ತಿಂಗಳಲ್ಲಿಯೂ ಬ್ರಹ್ಮಚಾರಿಯಾಗಿರಬೇಕು. ಅಂಥವರು ಮುಕ್ತಿಯನ್ನು ಹೊಂದುತ್ತಾರೆ. ಏಕಾದಶ್ಯಾ ವ್ರತೇನೈವ ಪುಮಾನ್ ಪಾಪೈರ್ವಿಮುಚ್ಯತೇ । ಕರ್ತವ್ಯಾ ಸರ್ವದಾ ರಾಜನ್ ವಿಸ್ಮರ್ತವ್ಯಾ ನ ಕರ್ಹಿಚಿತ್ ॥35॥ ಏಕಾದಶಿಯ ವ್ರತದಿಂದ ಮನುಷ್ಯನ ಪಾಪಗಳೆಲ್ಲವೂ ಹೋಗುತ್ತವೆ. ಆ ಏಕಾದಶೀಯನ್ನು ಯಾವಾಗಲೂ ಮಾಡಬೇಕು. ಮರೆಯಬಾರದು. ಶಯನೀ-ಬೋಧಿನೀಮಧ್ಯೇ ಯಾ ಕೃಷ್ಣೈಕಾದಶೀ ಭವೇತ್ । ಸೈವೋಪೋಷ್ಯಾ ಗೃಹಸ್ಥಸ್ಯ

ನಾನ್ಯಾ ಕೃಷ್ಣಾ ಕದಾಚನ ॥36॥ ಗೃಹಸ್ಥನಾದವನು ಶಯನ್ಯೈಕಾದಶಿ ಬೋಧನ್ಯೈ-ಕಾದಶಿಗಳ ಮಧ್ಯದಲ್ಲಿ ಬರುವ ಕೃಷ್ಣೈಕಾದಶಿಗಳಲ್ಲಿಯೂ ಉಪವಾಸ ಮಾಡ-ಬೇಕು. ಇತರ ಕಾಲದ ಕೃಷ್ಣೈಕಾದಶಿಗಳಲ್ಲಿ ಉಪವಾಸ ಮಾಡಬಾರದು. ಶೃಣು-ಯಾಚ್ಚೈವ ಭೋ ರಾಜನ್ ಕಥಾಂ ಪಾಪಹರಾಂ ಪರಾಮ್ । ಅಶ್ವಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥37॥ ಪಾಪಹಾರಕವಾದ ಈ ಕಥೆಯನ್ನು ಕೇಳಿದವನು ಅಶ್ವಮೇಧಯಜ್ಞದ ಫಲವನ್ನು ಹೊಂದುತ್ತಾನೆ. ಇತಿ ಶ್ರೀಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿನಾರದಸಂವಾದಾಂತರ್ಗತ ಕೃಷ್ಣಯುಧಿಷ್ಠಿರಸಂವಾದೇ ಆಷಾಢಶುಕ್ಲಶಯನ್ಯೈಕಾದಶೀ ಮಾಹಾತ್ಮ್ಯಂ ನಾಮ ಪಂಚಪಂಚಾಶತ್ತಮೋಽಧ್ಯಾಯಃ ಸಮಾಪ್ತಃ ॥ – ಇಂತು ಶ್ರೀಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿನಾರದರ ಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರರ ಸಂವಾದದಲ್ಲಿ ಆಷಾಢಶುಕ್ಲಶಯನ್ಯೈಕಾದಶಿಯ ಮಹಿಮೆ ಎಂಬ ಐವತ್ತೈದನೆಯ ಅಧ್ಯಾಯವು ಮುಗಿದಿದು.

**ತಪ್ತಮುದ್ರಾಧಾರಣದ ಮಹತ್ವ** – ಸುದರ್ಶನಮುದ್ರೆಯನ್ನು ಉತ್ತಮ ಚಿನ್ನದಿಂದ ಶಾಸ್ತ್ರೋಕ್ತಕ್ರಮದಲ್ಲಿ ಮಾಡಿರಬೇಕು. ಶಂಖವು ರಜತದ್ದಾಗಿರಬೇಕು ಎಂಬ ಪ್ರಮಾಣ ಯುಕ್ತಿಮಲ್ಲಿಕೆಯಲ್ಲಿದೆ. ಆನಂತರ ಎರಡೂ ಬೆಳ್ಳಿಯದೇ ಆಗಿರುವ ಸಂಪ್ರದಾಯ ಬಂದಿದೆ. ಚಕ್ರಾದಿಗಳ ಅಭಿಮಾನಿದೇವತೆಗಳು ಚಕ್ರಕ್ಕೆ ದುರ್ಗಾ-ದೇವಿಯೂ, ಶಂಖಕ್ಕೆ ಶ್ರೀದೇವಿಯೂ, ಪದ್ಮಕ್ಕೆ ಭೂದೇವಿಯೂ, ಗದೆಗೆ ವಾಯುದೇವರೂ ಅಭಿಮಾನಿದೇವತೆಗಳಾಗಿರುವರು. (ಆದ್ದರಿಂದ ಚಕ್ರಾದಿಗಳ ಧಾರಣೆಯಿಂದ ಅಜ್ಞಾನ ಮಿಥ್ಯಾಜ್ಞಾನಗಳ ಪರಿಹಾರ, ತತ್ವಜ್ಞಾನವಾಪ್ತಿ ಮೊದಲಾದ ಫಲಗಳು ಅಭಿಸುವವು ಎಂದು ಭಾವ.) ಅಶಕ್ತರು ಚಕ್ರ ಒಂದನ್ನಾದರೂ ಧರಿಸ ಬೇಕು. ಶಕ್ತರು ಚಕ್ರ ಶಂಖ ಎರಡನ್ನೂ ಧರಿಸಬೇಕು. ಅತ್ಯಂತ ಶಕ್ತರು ಚಕ್ರಾದಿ ಪಂಚ ಮುದ್ರೆಗಳನ್ನೂ ಧರಿಸಬೇಕು. ಮಂತ್ರಪೂರ್ವಕವಾಗಿ ಆಯಾ ಅಭಿಮಾನಿ ದೇವತೆ-ಗಳನ್ನು ಆರ್ಘ್ಯಾದಿಗಳಿಂದ ಪೂಜಿಸಿ, ಚೆನ್ನಾಗಿ ಕಾಯಿಸಿದ ಚಕ್ರ ಶಂಖಾದಿಗಳನ್ನು ಗುರುಗಳ ಕೈಯಿಂದ ಧಾರಣ ಮಾಡಿಸಿಕೊಳ್ಳಬೇಕು.

ಮಂತ್ರಪೂರ್ವಕವಾಗಿ ಆಯಾ ಅಭಿಮಾನಿದೇವತೆಗಳನ್ನು ಪೂಜಿಸಿ, ಚೆನ್ನಾಗಿ ಕಾಯಿಸಿದ ಚಕ್ರಶಂಕಾದಿಗಳನ್ನು ಗುರುಗಳ ಕೈಯಿಂದ ಧಾರಣ ಮಾಡಿಸಿಕೊಳ್ಳಬೇಕು. ತಪ್ತಮುದ್ರೆಗಳನ್ನು ಪರಮಹಂಸಗುರುಗಳಿಂದಲೇ ಸ್ವೀಕರಿಸಬೇಕು. ಎರಡು ಭುಜ-

ಗಳಲ್ಲೂ ತೃಪ್ತ ವಾದ ಚಕ್ರ ಶಂಖಗಳನ್ನು ಕ್ರಮವಾಗಿ ಧರಿಸಬೇಕು. ಇದು ಸಕಲ ಶೃತಿ, ಸ್ಮೃತ್ಯುಕ್ತ ಕರ್ಮಗಳ ಅನುಷ್ಠಾನಕ್ಕೆ ಅರ್ಹತೆಯನ್ನು ತಂದು ಕೊಡುತ್ತದೆ. ಮಂತ್ರಗಳ ಸಿದ್ಧಿಗೂ ಸಾಧನವಾಗುತ್ತದೆ.ಭುಜಗಳಲ್ಲಿ ಚಕ್ರಶಂಖಗಳ ಲಾಂಛನದಿಂದ ಕೂಡಿದ ಜನರ ದರ್ಶನಮಾತ್ರದಿಂದಲೇ ಮಹಾಪಾತಕಗಳು ನಾಶವಾಗುತ್ತವೆ. ರಾಕ್ಷಸರು, ಪಿಶಾಚಗಳು, ದೈತ್ಯದಾನವರು ಮೊದಲಾದ ದುಷ್ಟ ಶಕ್ತಿಗಳೆಲ್ಲಾ ಅಂತಹವರನ್ನು ಕಾಣುತ್ತಲೇ ಭಯದಿಂದ ಬಹು ದೂರಕ್ಕೆ ಪಲಾಯನ ಮಾಡುತ್ತವೆ.

(ಪದ್ಮಪುರಾಣ ಉತ್ತರ ಖಂಡದಲ್ಲಿ ಉಮಾಮಹೇಶ್ವರ ಸಂವಾದದಲ್ಲಿ ನಿರ್ದಿಷ್ಟ -ವಾಗಿರುವ ಈ ಶ್ರುತಿವಾಕ್ಯಗಳನ್ನು ಶ್ರೀವಾದಿರಾಜಸ್ವಾಮಿಗಳು ಯುಕ್ತಿ ಮಲ್ಲಿಕಾ-ಗ್ರಂಥದಲ್ಲೂ (577) ಇಂತಹ ಇನ್ನೂ ಅನೇಕ ಶ್ರುತಿ ವಾಕ್ಯಗಳನ್ನು ಪುರಾಣ ವಾಕ್ಯಗಳನ್ನೂ ಯುಕ್ತಿಮಲ್ಲಿಕೆಯಲ್ಲೂ, ಶ್ರೀವಿಜಯೀಂದ್ರಸ್ವಾಮಿಗಳ ತಪ್ತಚಕ್ರ ಮೀಮಾಂಸಾಕೃತಿಯಲ್ಲೂ, ಕೃಷ್ಣಾಚಾರ್ಯರ ಸ್ಮೃತಿಮುಕ್ತಾವಲಿಯಲ್ಲೂ , ಶ್ರೀಸತ್ಯಾ-ಭಿನವತೀರ್ಥರ 'ರಾಮಾಮೃತ ಮಹಾರ್ಣವ' ಗ್ರಂಥದಲ್ಲೂ ಕಾಣಬಹುದು. ತಪ್ತಚಕ್ರಭೂಷಣವೆಂಬ ಪ್ರಾಚೀನ ಕೃತಿಯಲ್ಲಿ ಇವೆಲ್ಲವುಗಳ ಸಂಗ್ರಹವೂ ಬಂದಿದೆ.)

### ತಪ್ತಮುದ್ರಾಧಾರಣ ವಿಧಿ

ಸುದರ್ಶನಾದಿಗಳನ್ನು ಪೂಜಿಸಿ, ಅವನ್ನು ಅಗ್ನಿಯಲ್ಲಿರಿಸಿ, ಆಯಾ ಅಭಿಮಾನಿ ದೇವತೆಗಳನ್ನು ಧ್ಯಾನಿಸಬೇಕು. ಷಡಕ್ಷರ (ವಿಷ್ಣು, ಕೃಷ್ಣ) ಮಂತ್ರದಿಂದ ಇಪ್ಪತ್ತು ಸಲ ಆಜ್ಯವನ್ನು ಹೋಮಿಸಬೇಕು; ಇತರ ಆಯುಧ ಮಂತ್ರಗಳಿಂದ ಇಪ್ಪತ್ತು ಸಲ ಆಜ್ಯಾಹುತಿಯನ್ನು ಅರ್ಪಿಸಬೇಕು. ಅನಂತರ ಶಿಷ್ಯಸಮೇತನಾಗಿ (ವಿಷ್ಣು)ಮಂತ್ರ-ವನ್ನು ಜಪಿಸುತ್ತ ಪ್ರದಕ್ಷಿಣನಮಸ್ಕಾರಗಳನ್ನು ಸಮರ್ಪಿಸಬೇಕು: ಪೂರ್ವಾಭಿ-ಮುಖನಾಗಿ ಏಕಾಗ್ರಚಿತ್ತದಿಂದ ಕುಳಿತ ಶಿಷ್ಯನಿಗೆ ಚಕ್ರಶಂಖಾದಿಧಾರಣ ಮಾಡಿಸ-ಬೇಕು.

ಬಲಭುಜದಲ್ಲಿ ಚಕ್ರ, ಎಡಭುಜದಲ್ಲಿ ಶಂಖ, ಫಾಲಮಧ್ಯದಲ್ಲಿ ಗದಾ, ಹೃದಯದಲ್ಲಿ ನಂದಕ ಮತ್ತು ಮಸ್ತಕದ ಮೇಲೆ ಶಾರ್ಙ್ಗ - ಈ ರೀತಿಚಕ್ರಾದಿಗಳನ್ನು ಧರಿಸಬೇಕು. ವಿಷ್ಣುಭಕ್ತರಾದ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಸ್ತ್ರೀಯರು ಮೊದಲಾಗಿ ಸಕಲರೂ ತಪ್ತಮುದ್ರೆಗಳನ್ನು ತಪ್ಪದೆ ಧರಿಸಬೇಕು;

ಚಕ್ರಾದಿಲಾಂಛನಶೂನ್ಯರಾಗಿ ಎಂದೂ ಇರಕೂಡದು. ಯೋಗ್ಯರೀತಿಯಲ್ಲಿ ತಮ್ಮ ಶ್ರೀಮಠದ ಗುರುಗಳಿಂದ ತಪ್ತಮುದ್ರೆಗಳನ್ನು ಸ್ವೀಕರಿಸದ ವಿಪ್ರನು ಸ್ಮಶಾನದ ಕಾಷ್ಟ-ದಂತೆ ಸರ್ವಕರ್ಮಗಳಲ್ಲೂ ಅನರ್ಹವೆನ್ನಿಸುವನು.

ತಪ್ತಮುದ್ರಾಧಾರಣೆಯ ಹಿನ್ನೆಲೆ – ಹಿಂದೊಮ್ಮೆ ಇಂದ್ರಾದಿ ದೇವತೆಗಳೆಲ್ಲ ವೃತಾಸುರನಿಂದ ಪರಾಜಿತರಾದಾಗ ಅವರೆಲ್ಲರೂ ಮಹಾವಿಷ್ಣುವಿನ ಬಳಿ ಹೋಗಿ ತಮ್ಮನ್ನು ವೃತ್ರಾಸುರನ ಆಕ್ರಮಣದಿಂದ ಪಾರು ಮಾಡಲು ಪ್ರಾರ್ಥಿಸಿಕೊಂಡರು. ಆಗ ಶ್ರೀನಾರಾಯಣನು ಎಲೈ ದೇವತೆಗಳೇ! ನೀವೆಲ್ಲರೂ ಚಕ್ರಶಂಖಾದಿ ಲಾಂಛನಗಳನ್ನು ಧರಿಸಿಕೊಂಡವರಾಗಿ ಆ ವೃತ್ರಾಸುರಾದಿ ದೈತ್ಯರೊಂದಿಗೆ ಯುದ್ಧ ಮಾಡಿರಿ. ಆಗ ನನ್ನ ಆಯುಧಲಾಂಛನದ ಪ್ರಭಾವದಿಂದ ವೃತ್ರಾದಿದೈತ್ಯರೆಲ್ಲ ಹತರಾಗುವರು; ನಿಮಗೆ ವಿಜಯಶ್ರೀ ಲಭಿಸುವುದು' ಎಂದು ಉಪದೇಶಿಸಿದನು. ಅದರಂತೆಯೇ ಮಾಡಿದ ಇಂದ್ರಾದಿ ದೇವತೆಗಳು ವೃತ್ರಾದಿ ಶತ್ರುಗಳನ್ನು ಜಯಿಸಿ ಕೃತಾರ್ಥರಾದರು; ಆಂದಿನಿಂದ ಸಮಸ್ತವೈಷ್ಣವರೂ ಶತ್ರುಜಯಾದಿಗುರಿಯನ್ನು ಸಾಧಿಸಲು ಚಕ್ರಾದಿಗಳ ಧಾರಣೆಯು ಅತ್ಯವಶ್ಯ ಎಂಬುದನ್ನು ಅರಿತು, ಅವನ್ನು ಧರಿಸತೊಡಗಿದರು. ಚಕ್ರಾದಿಗಳ ಧಾರಣೆಯು ಶತ್ರುಜಯಕ್ಕೂ ಕಾಮಕ್ರೋಧಾದಿ ಅರಿಷಡ್ವರ್ಗದ ಜಯಕ್ಕೂ ಪರಮಸಾಧನಗಳಲ್ಲೊಂದು ಎಂಬುದು ಖಚಿತ ಎಂದು ಭಾವ

ತಪ್ತಮುದ್ರಾಧಾರಣ ಕ್ರಮ – ಸಕಲ ಸಂಸ್ಕಾರಗಳಲ್ಲೂ ತಪ್ತ ಮುದ್ರಾ-ಧಾರಣಕ್ಕೇ ಪ್ರಥಮ ಸ್ಥಾನ: ಸಕಲವರ್ಣದವರೂ, ಸಕಲ ಆಶ್ರಮದವರೂ, ತಪ್ಪದೆ ತಪ್ತಚಕ್ರಾಂಕನ ಮಾಡಿಸಿಕೊಳ್ಳಬೇಕು; ಬ್ರಾಹ್ಮಣನಿಗೆ ಯಜ್ಞೋಪವೀತಾದಿಗಳಷ್ಟೇ ಅವಶ್ಯವಾದುದು ತಪ್ತಮುದ್ರಾಧಾರಣ. ಬಾಹ್ಯ ಮತ್ತು ಅಂತರ ಎಂಬುದಾಗಿ ವೈಷ್ಣವರ ಲಕ್ಷಣ ಎರಡು ವಿಧವಾಗಿದೆ; ಆದರಲ್ಲಿ ಮುಖ್ಯಬಾಹ್ಯಲಕ್ಷಣ- ತಪ್ತಮುದ್ರಾ -ಧಾರಣೆ; ಮತ್ತು ಅಂತರ ಲಕ್ಷಣ, ಕಾಮಕ್ರೋಧಾದಿಗಳ ಪರಿತ್ಯಾಗ, ಬಳೆ ಮೊದಲಾದವುಗಳನ್ನು ಸ್ತ್ರೀಯರು ಧರಿಸುವುದು ಅವರ ಪಾತಿವ್ರತ್ಯಕ್ಕೆ ದ್ಯೋತಕ-ವಾಗಿರುವಂತೆ ತಪ್ತಮುದ್ರಾಧಾರಣೆಯು ವೈಷ್ಣವತ್ವಕ್ಕೆ ದ್ಯೋತಕವಾಗಿದೆ. ತಪ್ತ-ಮುದ್ರಾಧಾರಣೆಯಾಗದಿದ್ದಲ್ಲಿ ಮಹಾಪಾಪ ಬರುತ್ತದೆ. ಗುರುಗಳಿಂದ ಕಾಲಕಾಲಕ್ಕೆ

ವಿಧ್ಯುಕ್ತರೀತಿಯಲ್ಲಿ ತಪ್ತಮುದ್ರಧಾರಣೆಯನ್ನು ಹೊಂದದವರ ವೇದಾದಿ ಶಾಸ್ತ್ರಾಭ್ಯಾಸವೆಲ್ಲಾ ವ್ಯರ್ಥವೆನಿಸುತ್ತದೆ ವಿಧ್ಯುಕ್ತವಾಗಿ ತಪ್ತ ಮುದ್ರೆಗಳನ್ನು ಧರಿಸದವನ ಯಜ್ಞೋಪವೀತ, ಶಿಖಾಬಂಧನ, ಊರ್ಧ್ವಪುಂಡ್ರ ಮೊದಲಾದ ಎಲ್ಲ ಚಿಹ್ನೆಗಳೂ ವ್ಯರ್ಥವೆನಿಸುತ್ತವೆ. ತಪ್ತಚಕ್ರವನ್ನು ಧರಿಸದ ಜನರು ಮಾಡುವ ಸಕಲ ಸತ್ಕರ್ಮಗಳೂ ರಾಕ್ಷಸರ ಪಾಲಾಗುತ್ತವೆ

ಗುರುಗಳಿಂದ ವಿದ್ಯುಕ್ತವಾಗಿ ತಪ್ತ ಮುದ್ರೆಗಳನ್ನು ಸ್ವೀಕರಿಸದವನಿಗೆ ನಮಸ್ಕರಿಸುವ ಜನರು ಸಹ ಮುನ್ನೂರು ಕಲ್ಪಗಳ ಕಾಲ ನರಕವನ್ನು ಹೊಂದುವರು. ಸಕಲ ವರ್ಣದವರಿಗೂ, ಸಕಲ ಆಶ್ರಮದವರಿಗೂ, ಸ್ತ್ರೀಯರಿಗೂ ಸಹ ತಪ್ತಚಕ್ರಾಂಕನವು ವಿಹಿತವಾಗಿದೆ, ಯಜಮಾನನು ಪತ್ನಿ ಪುತ್ರಮೊದಲಾದ ತನ್ನ ಕುಟುಂಬದ ಸಕಲರಿಗೂ ಚಕ್ರಾಂಚನಮಾಡಿಸಲೇಬೇಕು. ಗೃಹೋಪಕರಣಗಳಿಗೂ ಚಕ್ರ ಶಂಖಗಳ ಲಾಂಛನವನ್ನು ಹಾಕಬೇಕು. ವಿಧ್ಯುಕ್ತವಾಗಿ ತಪ್ತ ಮುದ್ರಾಧಾರಣವನ್ನು ಹೊಂದುವ ಸಕಲರಿಗೂ ಹರಿಸಾಲೋಕ್ಯವು ಲಭಿಸುತ್ತದೆ. ತಪ್ತಮುದ್ರೆಯನ್ನು ಚೌಲ, ಉಪನಯನಾದಿ ಸಂಸ್ಕಾರಗಳ ಸಮಯದಲ್ಲೂ, ಮಂತ್ರಾಧ್ಯಯನ ಸಮಯದಲ್ಲೂ ಅವಶ್ಯಕರ್ತವ್ಯವಾಗಿದೆ;

ಸ್ತ್ರೀಯರಿಗೆ ವಿವಾಹಸಮಯವು ಅತ್ಯಂತ ಸೂಕ್ತಕಾಲ. ಪ್ರತಿವರ್ಷವೂ ಉಪಾಕರ್ಮದಂದು ತಪ್ತ ಮುದ್ರೆಗಳನ್ನು ವಿಧ್ಯುಕ್ತವಾಗಿ ತಪ್ಪದೇ ಧರಿಸಲೇಬೇಕು. (ಇದರಿಂದ ಜನ್ಮದಲ್ಲಿ ಎಂದಾದರೂ ಒಮ್ಮೆ ವಿಧ್ಯುಕ್ತವಾಗಿ ತಪ್ತ ಮುದ್ರೆ ಸ್ವೀಕರಿಸಿದ್ದರೆ ಸಾಕು ಎಂಬ ವಾದವೂ, ಒಮ್ಮೆ ಗುರುಗಳಿಂದ ಸ್ವೀಕರಿಸಿದ್ದರೆ, ಅನಂತರ ತಾವೇ ಸ್ವತಃ ತಪ್ತಮುದ್ರೆ ಹಾಕಿಕೊಳ್ಳಬಹುದು ಎಂದು ಹಲವರ ವಾದವೂ ಶಾಸ್ತ್ರವಿರುದ್ಧ ಎಂದು ಸಿದ್ಧವಾಗುತ್ತವೆ.) ಅಂತ್ಯಕಾಲದಲ್ಲೂ ಮುದ್ರಾಧಾರಣೆ ಹೊಂದಿದವರಿಗೆ ಯಮದೂತರ ಭಯವೇ ಇರುವುದಿಲ್ಲ.

ತಪ್ತಚಕ್ರಾಂಕನಕ್ಕೆ ಯೋಗ್ಯವಾದ ಶ್ರವಣದ್ವಾದಶೀ, ಪ್ರಥಮ ಏಕಾದಶೀದಿನಗಳಲ್ಲಿ ದೇವತೆಗಳು ಸಹ ತಪ್ಪದೆ ತಪ್ತಮುದ್ರೆಗಳನ್ನು ಧರಿಸುವರು. ಬ್ರಹ್ಮದೇವರು, ರುದ್ರದೇವರು, ಇಂದ್ರದೇವರು ಮೊದಲಾದ ಸಕಲ ದೇವತೆಗಳೂ ಪ್ರಹ್ಲಾದ ವಿಭೀಷಣ, ಮಾಂಧಾತಾ ಅಂಬರೀಷ, ಮಾರ್ಕಂಡೇಯ ಮೊದಲಾದ ಸಕಲ

ಭಾಗವತ ಶಿರೋಮಣಿಗಳೂ ಬಾಹು ಮೂಲಗಳಲ್ಲಿ ತಪ್ತಚಕ್ರಾದಿಲಾಂಛನಗಳನ್ನು ಸದಾ ಧರಿಸಿರುತ್ತಾರೆ.

## ಚಾತುರ್ಮಾಸ್ಯ ವ್ರತ

ಚಾತುರ್ಮಾಸ್ಯ ವ್ರತದ ಪ್ರಶಂಸೆಯು ವರಾಹಪುರಾಣದಲ್ಲಿ ಉಕ್ತವಾಗಿದೆ. ಚಾತುರ್ಮಾಸ್ಯ ಮಾಹಾತ್ಮ್ಯೆ ಎಂಬ ಪ್ರಕರಣದಲ್ಲಿ ಧರಣೀದೇವಿ ಮತ್ತು ವರಾಹ-ದೇವರ ಸಂವಾದದಲ್ಲಿ ವರಾಹದೇವರು ಈ ರೀತಿಯಾಗಿ ಚಾತುರ್ಮಾಸ್ಯದ ಪ್ರಶಂಸೆಯನ್ನು ಮಾಡಿದ್ದಾರೆ.

ಅಸ್ತಿ ಪ್ರಿಯತಮಃ ಕಾಲಃ ಚಾತುರ್ಮಾಸ್ಯಾಭಿಧೋ ಮಮ । ಸ್ನಾನಂ ವ್ರತಂ ಜಪೋ ಹೋಮಃ ತತ್ರಾನಂತಗುಣಂ ಸ್ಮೃತಮ್ ॥ ಮಾಸೇಷ್ವನ್ಯೇಷು ಯತ್ಕಿಂಚಿತ್ ಕ್ರಿಯತೇ ಮಮ ತೋಷಣಮ್ । ತಸ್ಮಾತ್ ಕೋಟಿಗುಣಂ ಪುಣ್ಯಂ ಮಾಘೇ ಮಕರಗೇ ರವೌ ॥ ತತೋಽಪಿ ಕೋಟಿಗುಣಿತಂ ವೈಶಾಖೇ ಮಾಸಿ ಲಭ್ಯತೇ । ತತೋಽಪ್ಯನಂತಗುಣಿತಂ ಚಾತುರ್ಮಾಸ್ಯೇ ನ ಸಂಶಯಃ । ಇತ್ಯಾದಿ ತತ್ಸ್ವರೂಪಂ ತತ್ರೈವೋಕ್ತಮ್ ॥ ನನಗೆ ಅತ್ಯಂತ ಪ್ರೀತಿಕರವಾದ ಕಾಲವು ಚಾತುರ್ಮಾಸ್ಯವೆಂಬ ಹೆಸರಿನದ್ದು ಇರುತ್ತದೆ. ಆ ಅತ್ಯಂತ ಪವಿತ್ರವಾದ, ನನಗೆ ಪ್ರೀತಿಕರವಾದ ಕಾಲದಲ್ಲಿ ಆಚರಿಸತಕ್ಕ ಸ್ನಾನವೂ, ವ್ರತವೂ, ಹೋಮವೂ, ಜಪವೂ ಅನಂತಗುಣವುಳ್ಳದ್ದೆಂದು ಸ್ಮೃತವಾಗಿದೆ. ಬೇರೆ ಮಾಸಗಳಲ್ಲಿ ನನ್ನ ಪ್ರೀತಿಗಾಗಿ ಯಾವ ಸ್ವಲ್ಪ ಸತ್ಕಾರ್ಯ-ವನ್ನು ಮಾನವನು ಮಾಡುತ್ತಾನೋ ಅದಕ್ಕಿಂತಲೂ ಮಾಘಮಾಸದಲ್ಲಿ ಸೂರ್ಯನು ಮಕರರಾಶಿಯಲ್ಲಿರುವಾಗ ಆಚರಿಸತಕ್ಕದ್ದು ಕೋಟಿಗುಣ ಪುಣ್ಯ-ದಾಯಕವು. ಅದಕ್ಕಿಂತಲೂ ವೈಶಾಖಮಾಸದಲ್ಲಿ ಆಚರಿಸತಕ್ಕ ಸ್ನಾನ, ವ್ರತ, ಜಪ ಹೋಮಾದಿಗಳಿಗೆ ಕೋಟಿಪುಣ್ಯವು ಲಭಿಸುತ್ತದೆ. ಅದಕ್ಕಿಂತಲೂ ಕೋಟಿ ಗುಣ ಪುಣ್ಯವು ಚಾತುರ್ಮಾಸ್ಯದಲ್ಲಿ ಲಭಿಸುತ್ತದೆ. ಇದರಲ್ಲಿ ಸಂದೇಹವು ಇಲ್ಲ. ಇತ್ಯಾದಿಯಾಗಿ ಅದರ ಸ್ವರೂಪವು ಅಲ್ಲಿಯೇ ಹೇಳಲ್ಪಟ್ಟಿದೆ.

ತತ್ ಸ್ವರೂಪಂ ತು ತತ್ರೈವೋಕ್ತಮ್ – ಆಷಾಢಾದ್ಯಸ್ತು ಷಣ್ಮಾಸಾ ದಕ್ಷಿಣಾಯನ -ಮೀರಿತಮ್ । ಪೌಷಾದ್ಯಾ ದೇವಿ ಷಣ್ಮಾಸಾ ಉತ್ತರಾಯಣಮೀರಿತಮ್ ॥

ಚಾಂದ್ರೋ ಮಾಸೋ ದ್ವಿಧಾ ಪ್ರೋಕ್ತೋ ದರ್ಶಾಂತಃ ಪೌರ್ಣಿಮಾಂತಕಃ । ವ್ರತಾದೌ ಗೃಹ್ಯತೇ ತತ್ರ ಪೌರ್ಣಿಮಾಂತೋ ಹಿ ಸೂರಿಭಿಃ ॥ ಚಾಂದ್ರೋ ಮಾಸೋ ದ್ವಿಧಾ ಪ್ರೋಕ್ತೋ ದರ್ಶಾಂತಃ ಪೌರ್ಣಿಮಾಂತಕಃ । ವ್ರತಾದೌ ಗೃಹ್ಯತೇ ತತ್ರ ಪೌರ್ಣಿಮಾಂತೋ ಹಿ ಸೂರಿಭಿಃ ॥ ಆಷಾಢೇ ದಶಮೀಂ ಶುಕ್ಲಾಂ ಆರಭ್ಯಂ ಸ್ಯಾತ್ತು ಕಾರ್ತಿಕೀ। ಪೌರ್ಣಮಾಸೀ ತಾವದಿದಂ ಚಾತುರ್ಮಾಸ್ಯವ್ರತಾದಿಕಮ್ ॥ ಇತ್ಯಾದಿ। ಚಾತುರ್ಮಾಸ್ಯ ಸ್ವರೂಪವೂ ಆದೇ ವರಾಹಪುರಾಣದಲ್ಲಿ ಹೇಳಲ್ಪಟ್ಟಿದೆ. ಧರಣೀ ದೇವಿಗೆ ವರಾಹದೇವರು ಹೇಳುತ್ತಾರೆ – ''ದೇವಿ! ಆಷಾಢದಿಂದ ಆರಂಭಿಸಿ ಆರು ತಿಂಗಳು ಕಾಲ ದಕ್ಷಿಣಾಯನ ಎಂಬುದಾಗಿ ಉಕ್ತವಾಗಿದೆ. ಪುಷ್ಯದಿಂದ ಆರಂಭಿಸಿ ಆರು ತಿಂಗಳು ಉತ್ತರಾಯಣವು. ಚಾಂದ್ರಮಾಸವು ಅಮಾವಾಸ್ಯಾಂತ ಮತ್ತು ಪೌರ್ಣಿಮಾಂತ ಎಂದು ಎರಡುವಿಧ. ಶುಕ್ಲಪಕ್ಷದ ಪಾಡ್ಯದಿಂದ ಆರಂಭಿಸಿ ಅಮಾವಾಸ್ಯೆಯವರೆಗೆ ಒಂದು ಚಾಂದ್ರಮಾಸವೆಂತಲೂ, ಕೃಷ್ಣಪಕ್ಷದ ಪಾಡ್ಯ-ದಿಂದಾರಂಭಿಸಿ ಹುಣ್ಣಿಮೆಯವರೆಗಿನ ದಿವಸಗಳು ಒಂದು ಚಾಂದ್ರಮಾನ ಮಾಸವೆಂತಲೂ ಎರಡು ವಿಧ. ಈ ಎರಡು ವಿಧ ಚಾಂದ್ರಮಾನ ಮಾಸಗಳಲ್ಲಿ ವ್ರತಾದಿಗಳಲ್ಲಿ ಪೌರ್ಣಿಮಾಂತಮಾಸವನ್ನು ಸ್ವೀಕರಿಸುತ್ತಾರೆ. ಆಷಾಢಶುಕ್ಲ ದಶಮಿಯನ್ನಾರಂಭಿಸಿ ಕಾರ್ತಿಕಶುಕ್ಲಪೂರ್ಣಿಮಾ ಪರ್ಯಂತವಾಗಿ ಚಾತು-ರ್ಮಾಸ್ಯ ವ್ರತಾದಿಗಳನ್ನು ಮಾಡಬೇಕು''.

ತಸ್ಯ ಸರ್ವಕಾಲೋತ್ತಮತ್ವಂ ಚ ತತ್ರೈವೋಕ್ತಂ ಆಖ್ಯಾಯಿಕಯಾ ವರಾಹಃ । – ''ಪುರಾ ಸರ್ವೈರ್ದೇವಗಣೈರ್ವೃತೋಽಹಂ ಮೇರುಮಸ್ತಕೇ । ತದಾ ಯಾಮ್ಯಾ-ಯನಂ ಪ್ರಾಪ್ಯ ದೇವಾಃ ಸರ್ವೇಽಪ್ಯಥೋಚಿರೇ ॥ ಭಗವನ್ ರಾತ್ರಿರಸ್ಮಾಕಂ ಪ್ರಾಪ್ತಾ ಹಿ ಭವದಾಜ್ಞಯಾ । ಸ್ವಸ್ವಸ್ಥಾನಂ ಪ್ರಯಾಸ್ಯಾಮ ಇತಿ ತಾವದುಪಸ್ಥಿತಾ ॥ ಶುಕ್ಲಾಂಬರ -ಧರಾ ನಾರೀ ಶ್ಯಾಮಾ ಪರಶುಧಾರಿಣೀ । ಸಾಷ್ಟಾಂಗಂ ಪ್ರಣಿಪತ್ಯಾಹ ರಾತ್ರಿಸ್ತ್ವಾಂ ಪ್ರಾರ್ಥಯಾಮ್ಯಹಮ್ ॥ ನ ಹಿ ಯಾಮ್ಯಾಯನೇ ಕಿಂಚಿದ್ವಿವಾಹೋಪನಯಾ-ದಿಕಮ್ । ಶುಭಂ ಕರ್ಮ ಪ್ರಕುರುತೇ ತತೋಽಹಂ ನಿಂದಿತಾ ಜನೈಃ ॥ ವೃಥಾ ಮೇ ಜೀವನಂ ಸ್ವಾಮಿನ್ ಯತ್ ಸರ್ವೈರ್ಗರ್ಹಿತಾಸ್ಮ್ಯಹಮ್ । ಯದಿ ತ್ವಮನುಗೃಹ್ಣಾಸಿ ತರ್ಹಿ ಜೀವಾಮಿ ನಾನ್ಯಥಾ ॥ ತಪ ಏವ ಕರಿಷ್ಯಾಮಿ ತ್ವತ್ಪ್ರಸಾದಾರ್ಥಮತ್ರ ವೈ ।

ಇತ್ಯುಕ್ತ್ವಾ ಪ್ರಣತಾ ಭೂಯಸ್ತತೋ ದೇವಾ ವಿಜಿಜ್ಞಪುಃ ॥ ನಾಥ! ನಾಥ! ಕೃಪಾ-ಸಿಂಧೋ ಶರಣಾಗತವತ್ಸಲ । ವಿಧತ್ಸ್ವ ಕರುಣಾಂ ರಾತ್ರೌ ವ್ರಜೇದ್ ಯೇನ ಕೃತಾರ್ಥತಾಮ್ ॥ ತತಃ ಪ್ರಸನ್ನಹೃದಯಸ್ತಸ್ಯೈ ಪ್ರಾದಾಂ ವರೋತ್ತಮಮ್ । ಪ್ರಿಯಾ ಮೇ ತೇ ತ್ರಯೋ ಯಾಮಾಸ್ತತ್ರಾದ್ಯೌ ದ್ವೌಮಹಾಪ್ರಿಯೌ ॥ ಸ್ಯಾತಾಂ ತತ್ರ ಕೃತಂ ಕರ್ಮ ಜಪದಾನಾದಿಕಮ್ । ಅನಂತಗುಣಮೇವ ಸ್ಯಾದಷ್ಟಮಾಸಕೃತಾದಪಿ ॥ ಆದ್ಯಃ ಸ್ಯಾಚ್ಛ್ರಾವಣೋ ಮಾಸೋ ನಭಸ್ಯೋಽಥ ದ್ವಿತೀಯಕಃ । ತೃತೀಯಶ್ಚಾಶ್ವಿನೋ ಮಾಸಶ್ಚತುರ್ಥಃ ಕಾರ್ತಿಕಃ ಸ್ಮೃತಃ ॥ ಚಾತುರ್ಮಾಸ್ಯೇಽಪಿ ಪುಣ್ಯಸ್ಯ ವೃದ್ಧಿಃ ಸ್ಯಾಚ್ಚ ದಿನೇ ದಿನೇ । ನ ಕಾರ್ತಿಕಸಮಾ ವೃದ್ಧಿಃ ಪುಣ್ಯಸ್ಯೋಕ್ತಾ ಮನೀಷಿಭಿಃ ॥ ಇತಿ ವಾಚಂ ಮಮ ಶ್ರುತ್ವಾ ತುಷ್ಟಾಸ್ಸರ್ವೇ ಮುಹುರ್ಮುಹುಃ । ತತಃ ಪ್ರಭೃತಿ ಲೋಕೇಽಸ್ಮಿನ್ ಚಾತುರ್ಮಾಸ್ಯಂ ಮಮ ಪ್ರಿಯಮ್ ॥ ಪ್ರಥಿತಂ ಯತ್ರ ಕುರ್ವಂತಿ ತಸ್ಮಿನ್ ದಾನ-ವ್ರತಾದಿಕಮ್ । ದಿನೇ ದಿನೇಽನಂತಗುಣಂ ತತ್ಫಲಂ ಪ್ರದದಾಮ್ಯಹಮ್ ॥ ಅತಸ್ತತ್ರ ಅತಸ್ತತ್ರ ವಿಶೇಷೇಣ ಸ್ನಾನದಾನಾದಿಕಂ ನರೈಃ । ಪ್ರಕರ್ತವ್ಯಂ ಮಮ ಪ್ರೀತ್ಯೈ ಭಕ್ತ್ಯಾ ಸಂಸಾರಭೀರುಭಿಃ ॥ ಇತ್ಯಾದಿ – ಚಾತುರ್ಮಾಸ್ಯಕಾಲಕ್ಕೆ ಸರ್ವಕಾಲಗಳಿಗಿಂತಲೂ ಉತ್ತಮತ್ವವನ್ನು ವರಾಹಪುರಾಣದಲ್ಲಿಯೇ ಕಥೆಯ ಮೂಲಕ ತಿಳಿಸಿದ್ದಾರೆ. ವರಾಹದೇವರು ಹೇಳುತ್ತಾರೆ – ಹಿಂದೆ ಎಲ್ಲಾ ದೇವಗಣಗಳಿಂದ ಕೂಡಿಕೊಂಡು ನಾನು ಮೇರುಪರ್ವತದ ಶಿಖರದಲ್ಲಿದ್ದೆನು. ಆಗ ದಕ್ಷಿಣಾಯನ ಕಾಲವು ಬಂದಿತ್ತು . ಆ ಸಂದರ್ಭದಲ್ಲಿ ದೇವತೆಗಳೆಲ್ಲರೂ ಹೀಗೆ ಹೇಳಿದರು. ಭಗವಂತನೇ ನಿನ್ನ ಆಜ್ಞೆಯಂತೆ ನಮಗೆ ರಾತ್ರಿಕಾಲವಾದ ದಕ್ಷಿಣಾಯನವು ಬಂದಿದೆ. ನಾವೆಲ್ಲರೂ ನಮ್ಮ ನಮ್ಮ ಸ್ಥಾನಕ್ಕೆ ಮರಳುವ ಸಮಯವು ಬಂದಿದೆ. ಬಿಳಿಯ ಬಟ್ಟೆಯನ್ನು ಉಟ್ಟಿರುವ, ಪರಶು(ಕೊಡಲಿ)ಧಾರಿಣಿಯಾದ ಹದಿನಾರುವರ್ಷವಯಸ್ಸಿನ ಸ್ತ್ರೀ-ರೂಪಳಾದ ದಕ್ಷಿಣಾಯನಾಭಿಮಾನಿಯಾದ ದೇವತೆಯು ಆಗ ನನಗೆ ಸಾಷ್ಟಾಂಗ ನಮಸ್ಕಾರ ಮಾಡಿ ಹೇಳಿದಳು – ''ಭಗವಂತ! ನಿನಗೆ ಸಾಷ್ಟಾಂಗ ನಮಸ್ಕಾರ ಮಾಡಿ ನಾನು ಪ್ರಾರ್ಥಿಸುತ್ತಿದ್ದೇನೆ. ಈ ದಕ್ಷಿಣಾಯನದಲ್ಲಿ ವಿವಾಹ, ಉಪನಯನ ಮುಂತಾದ ಯಾವ ಶುಭಕಾರ್ಯವನ್ನೂ ಯಾರೂ ಮಾಡುವುದಿಲ್ಲ. ಆದು-ದರಿಂದ ನಾನು ಎಲ್ಲರಿಂದಲೂ ನಿಂದಿತಳಾಗುತ್ತೇನೆ. ಸ್ವಾಮಿನ್! ಎಲ್ಲರಿಂದಲೂ ನಿಂದಿತಳಾದ ನನ್ನ ಜನ್ಮವು ವ್ಯರ್ಥವಾಗುತ್ತದೆ. ನೀನು ಅನುಗ್ರಹಿಸಿದರೆ ಮಾತ್ರವೇ

ನಾನು ಬದುಕಿರುತ್ತೇನೆ. ಇಲ್ಲವಾದರೆ ನನ್ನ ಜೀವನವನ್ನು ಕೊನೆಗೊಳಿಸುತ್ತೇನೆ. ನಿನ್ನ ಅನುಗ್ರಹಕ್ಕೋಸ್ಕರ ತಪಸ್ಸನ್ನಾದರೂ ಮಾಡುತ್ತಾ ಇರುತ್ತೇನೆ''. ರಾತ್ರಿ-ದೇವಿಯು (ದಕ್ಷಿಣಾಯನಾಭಿಮಾನಿದೇವತೆಯು) ಹೀಗೆ ಹೇಳಿ ಪುನಃ ನಮಸ್ಕಾರ ಮಾಡಿದಳು. ಅನಂತರ ದೇವತೆಗಳು ಪುನಃ ವಿಜ್ಞಾಪಿಸಿ- ದರು – ''ಸ್ವಾಮಿಯೇ! ಪ್ರಭುವೇ! ದಯಾಸಮುದ್ರನೇ! ಶರಣಾಗತವತ್ಸಲನೇ! ರಾತ್ರಿದೇವಿಯಲ್ಲಿ ಕೃಪೆ ತೋರುವವನಾಗು. ಅವಳು ಕೃತಕೃತ್ಯಳಾಗಲಿ''. ಅನಂತರ ನಾನು ಪ್ರಸನ್ನ-ಹೃದಯನಾಗಿ ದಕ್ಷಿಣಾಯನ(ದೇವತಾ ರಾತ್ರಿ) ಅಭಿಮಾನಿದೇವತೆಗೆ ಉತ್ತಮವಾದ ವರವನ್ನು ಕೊಟ್ಟೆನು. – ''ನನಗೆ ದಕ್ಷಿಣಾಯನ ರಾತ್ರಿಯ ಮೂರು ಯಾಮಗಳು ಅತ್ಯಂತ ಪ್ರಿಯವಾಗಿವೆ. ಅದರಲ್ಲಿಯೂ ಮೊದಲನೆಯ ಎರಡು ಯಾಮಗಳು ಅತ್ಯಂತ ಪ್ರಿಯವಾಗಿವೆ. ಆಗ ಮಾಡಿದ ಜಪ, ದಾನ, ವ್ರತಾದಿಗಳು ಅನಂತ-ಗುಣಿತವಾದ ಫಲವನ್ನು ಕೊಡುತ್ತವೆ. ಉಳಿದ ಎಂಟು ಮಾಸಗಳಿಗಿಂತ ಚಾತುರ್ಮಾಸ್ಯದ ನಾಲ್ಕು ತಿಂಗಳುಗಳಲ್ಲಿ ಮಾಡಿದ ವ್ರತಾದಿಗಳಿಗೆ ಬಹಳ ಹೆಚ್ಚು ಫಲವಿದೆ. ಚಾತುರ್ಮಾಸ್ಯದಲ್ಲಿ ಮೊದಲನೆಯ ತಿಂಗಳು ಶ್ರಾವಣಮಾಸ. ಎರಡನೆಯದು ಭಾದ್ರಪದ, ಮೂರನೆಯದು ಆಶ್ವಯುಜಮಾಸ, ನಾಲ್ಕನೆಯದು ಕಾರ್ತಿಕಮಾಸ. ಹೀಗೆ ನಾಲ್ಕು ತಿಂಗಳು ಚಾತುರ್ಮಾಸ್ಯವಾಗುತ್ತದೆ. ಚಾತು-ರ್ಮಾಸ್ಯದಲ್ಲಿಯೂ ಕೂಡ ಕೂಡ ಮುಂದು ಮುಂದಿನ ದಿನಗಳು ಹೆಚ್ಚು ಪುಣ್ಯಕರಗಳಾಗಿವೆ. ಕಾರ್ತಿಕಮಾಸಕ್ಕೆ ಸಮಾನವಾಗಿ ಪುಣ್ಯವೃದ್ಧಿಕರವಾದ ಮಾಸವು ಯಾವುದೂ ಇಲ್ಲ''. ನನ್ನ ಈ ಮಾತುಗಳನ್ನು ಕೇಳಿ ಎಲ್ಲಾ ದೇವತೆಗಳೂ ಸಂತೋಷಪಟ್ಟರು. ರಾತ್ರೀದೇವಿಯೂ ಸಂತುಷ್ಟಳಾಗಿ ಪುನಃ ಪುನಃ ನಮಸ್ಕರಿಸಿ-ದಳು. ಅದು ಮೊದಲ್ಗೊಂಡು ಚಾತುರ್ಮಾಸ್ಯವ್ರತವು ನನಗೆ ಅತ್ಯಂತ ಪ್ರಿಯವೆಂಬುದಾಗಿ ಲೋಕದಲ್ಲಿ ಪ್ರಸಿದ್ಧವಾಗಿದೆ. ಆ ಸಮಯದಲ್ಲಿ ದಾನ-ವ್ರತಾದಿಗಳನ್ನು ಮಾಡಿದರೆ ದಿನ ದಿನಕ್ಕೂ ಅನಂತಗುಣಿತವಾದ ಫಲವನ್ನು ನಾನು ಕೊಡುತ್ತೇನೆ. ಆದುದರಿಂದ ಸಂಸಾರಭೀರುಗಳಾದ ಮನುಷ್ಯರು ವಿಶೇಷವಾಗಿ ಚಾತುರ್ಮಾಸ್ಯ ಸಮಯದಲ್ಲಿ ಸ್ನಾನ, ದಾನ, ವ್ರತ, ಜಪ, ನಿಯಮಗಳನ್ನು ಅನುಷ್ಠಾನ ಮಾಡಿ ಭಕ್ತಿಯಿಂದ ನನ್ನಲ್ಲಿ ಅರ್ಪಿಸಿದರೆ ನಾನು ಸುಪ್ರೀತನಾಗು-ತ್ತೇನೆ''.

ಅಥ ತತ್ರ ಕರ್ತವ್ಯಾನಿ ಸ್ಕಾಂದೇ ವ್ರತಕಾಂಡೇ – ಆಷಾಢಸ್ಯ ಸಿತೇ ಪಕ್ಷೇ ಏಕಾದಶ್ಯಾಂ ಸಮಾರಭೇತ್ । ಕಾರ್ತಿಕಸ್ಯ ಸಿತೇ ಪಕ್ಷೇ ಪೌರ್ಣಮಾಸ್ಯಾಂ ಸಮಾಪಯೇತ್ ॥ ಉಪವಾಸಸ್ವರೂಪಾಣಿ ವ್ರತಾನ್ಯನ್ಯಾನಿ ಸಂತಿ ವೈ । ತಾನಿ ಸರ್ವಾಣಿ ವಿಪ್ರೇಂದ್ರ ಪ್ರಬೋಧಿನ್ಯಾಂ ಸಮಾಪಯೇತ್ ॥ ದ್ವಾದಶ್ಯಾಂ ಕಾರಯೇತ್ ತೇಷಾಂ ಹೋಮಂ ಬ್ರಾಹ್ಮಣಪೂಜನಮ್ । ಇತರಾಣಿ ಚ ಸರ್ವಾಣಿ ಪೌರ್ಣಮಾಸ್ಯಾಂ ಸಮಾಪಯೇತ್ ॥ - ಇತಿ ॥ ಸ್ಕಾಂದಪುರಾಣದ ವ್ರತಕಾಂಡದಲ್ಲಿ ಚಾತುರ್ಮಾಸ್ಯ ವ್ರತದಲ್ಲಿ ಕರ್ತವ್ಯವಾದ ಕರ್ಮಗಳನ್ನು ಹೇಳಿದ್ದಾರೆ. ಆಷಾಢಶುಕ್ಲಪಕ್ಷದ ಏಕಾದಶಿಯ ದಿನ ಚಾತುರ್ಮಾಸ್ಯವ್ರತವನ್ನು ಆರಂಭಿಸಬೇಕು. ಕಾರ್ತಿಕಮಾಸದ ಶುಕ್ಲಪಕ್ಷದ ಹುಣ್ಣಿಮೆಯ ದಿನ ಸಮಾಪ್ತಿಗೊಳಿಸಬೇಕು. ಈ ಚಾತುರ್ಮಾಸ್ಯದಲ್ಲಿ ಉಪವಾಸಸ್ವರೂಪವಾದ ಬೇರೆ ವ್ರತಗಳೂ ಇರುತ್ತವೆ. ಬ್ರಾಹ್ಮಣಶ್ರೇಷ್ಠನೇ! ಅವೆಲ್ಲ -ವನ್ನೂ ಪ್ರಬೋಧಿನೀ ಏಕಾದಶಿಯ ದಿವಸ (ಕಾರ್ತಿಕಶುಕ್ಲ ಏಕಾದಶಿಯ ದಿವಸ) ಸಮಾಪ್ತಿ ಮಾಡಬೇಕು. ದ್ವಾದಶೀಯ ದಿವಸ ಆ ವ್ರತ, ಉಪವಾಸಾದಿಗಳ ಸಮಾಪ್ತಿಪ್ರಯುಕ್ತವಾಗಿ ಹೋಮ, ಬ್ರಾಹ್ಮಣಭೋಜನ, ಪಾರಾಯಣಾದಿಗಳನ್ನು ಮಾಡಬೇಕು. ಇನ್ನಿತರ ಚಾತುರ್ಮಾಸ್ಯದ ನಿಯಮಗಳೆಲ್ಲವನ್ನೂ ಹುಣ್ಣಿಮೆಯ ದಿನ ಸಮಾಪ್ತಿ ಮಾಡಬೇಕು.

ಅಥ ಚಾತುರ್ಮಾಸ್ಯವ್ರತಂ ತತ್ರೈವೋಕ್ತಮ್ – ಅಚ್ಯುತಂ ಶಯನಂ ಯಾತೇ ದ್ವಿಜೇಂದ್ರೈರ್ಭಾವಿತಾತ್ಮಭಿಃ । ನಾರೀಭಿರ್ವಾ ಮಾಸಿ ಕಿಂ ಕರ್ತವ್ಯಂ ವ್ರತಂ ಚ ಕಿಮ್ । ಕೋಽಯಂ ವಿಧಿಃ ಕ ಆಚಾರೋ ವದ ಮೇ ವದತಾಂ ವರ ॥ ಬ್ರಹ್ಮೋವಾಚ – ಆಷಾಢಸ್ಯ ತು ಮಾಸಸ್ಯ ಸೂರ್ಯೇ ಕರ್ಕಟಕೇ ತಥಾ । ಏಕಾದಶ್ಯಾಂ ಸಿತೇ ಪಕ್ಷೇ ದೇವಾನಾಂ ರಾತ್ರಿರಿಷ್ಯತೇ ॥ ತನ್ಮಧ್ಯಗೋ ಮಹಾವಿಷ್ಣುರುಪೇಂದ್ರ ಇತಿ ಸಂಜ್ಞಕಃ । ಅವಸ್ಥಾತ್ರಯಮಾದಾಯ ನಾನಾಮೂರ್ತಿಭಿರವ್ಯಯಃ ॥ ಸಮಸ್ತೈರ್ವಿಬುಧೈಃ ಸ್ತುತ್ಯೋ ಯೋಗನಿದ್ರಾಮುಪೇಯಿವಾನ್ । ಸಮಸ್ತಮಂಗಲಾನಾಂ ಚ ದೇವತಾ ಚ ಜನಾರ್ದನಃ ॥ ತಸ್ಮಿಂಸ್ತು ಶಯನಂ ಯಾತೇ ನೋದ್ವಾಹಾದಿಕ್ರಿಯಾ ಭವೇತ್ । ಚೌಲೋಪನಯನೇ ಚೈವ ವಿವಾಹಾದ್ಯಂ ತ್ಯಜೇದ್ ಬುಧಃ ॥ ಅಜ್ಞಾನಾದ್ ಯದಿ ಕುರ್ವಂತಿ ಮೃತಿಸ್ತೇಷಾಂ ನ ಸಂಶಯಃ । ಕಲ್ಯಾಣದೇವತಾದೃಷ್ಟಿಹೀನಾನಾಂ ತು ಕುತಃ

ಸುಖಿಮ್ ॥ – ಅನಂತರ ಚಾತುರ್ಮಾಸ್ಯ ವ್ರತವನ್ನು ಅಲ್ಲಿಯೇ ಹೇಳಿದ್ದಾರೆ. – ಪ್ರಶ್ನೆ - ಅಚ್ಯುತನು ಶಯನ ಮಾಡಿದಾಗ ಸಂಸ್ಕಾರಸಂಪನ್ನರಾದ ದ್ವಿಜರೂ, ಸ್ತ್ರೀಯರೂ ಪ್ರತಿತಿಂಗಳು ಮಾಡಬೇಕಾದುದೇನು! ಯಾವ ವ್ರತವನ್ನು ಮಾಡ-ಬೇಕು? ಅದರ ವಿಧಾನವೇನು! ಆಚಾರವೇನು? ವಾಗ್ಮಿಶ್ರೇಷ್ಠನಾದ ಬ್ರಹ್ಮದೇವನೇ ಇವೆಲ್ಲವನ್ನೂ ಹೇಳುವವನಾಗು. ಬ್ರಹ್ಮದೇವರು ಹೇಳುತ್ತಾರೆ. – ಆಷಾಢಮಾಸ-ದಲ್ಲಿ ಸೂರ್ಯನು ಕರ್ಕಾಟಕರಾಶಿಯಲ್ಲಿ ಪ್ರವೇಶಮಾಡಿದಾಗ ಆಷಾಢಶುಕ್ಲ-ಏಕಾದಶಿಯಲ್ಲಿ ದೇವತೆಗಳಿಗೆ ರಾತ್ರಿಯಾಗುತ್ತದೆ. ಆ ಆಷಾಢಮಾಸದಲ್ಲಿ ಅಭಿಮಾನಿಯಾದ ವಾಮನನಾಮಕನಾದ ಮಹಾವಿಷ್ಣುವು ವಿಶ್ವ, ತೈಜಸ, ಪ್ರಾಜ್ಞ ಎಂಬ ರೂಪಗಳಲ್ಲಿ ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳನ್ನು ಜೀವರಿಗೆ ಉಂಟುಮಾಡಿ, ಇನ್ನೂ ಅನೇಕಾನೇಕರೂಪಗಳನ್ನು ಸ್ವೀಕಾರಮಾಡಿ, ಎಲ್ಲಾ ರೂಪಗಳಲ್ಲಿಯೂ ನಿರ್ವಿಕಾರ ನಿತ್ಯನಾಗಿದ್ದು ಸಮಸ್ತದೇವತೆಗಳಿಂದಲೂ ಸ್ತುತ್ಯನಾಗಿರುತ್ತಾನೆ. ಅಂತಹ ಸಮಸ್ತಮಂಗಳಗಳಿಗೂ ದೇವತೆಯಾದ ಜನಾರ್ದನ ನಾಮಕನಾದ ಶ್ರೀಲಕ್ಷ್ಮೀನಾರಾಯಣನು ಯೋಗನಿದ್ರೆಯನ್ನು ಸ್ವೀಕರಿಸಿ ಶಯನಾ-ವಸ್ಥೆಯನ್ನು ತೋರಿಸುತ್ತಾನೆ. ಆ ಪರಮಾತ್ಮನು ಮಲಗಿರುವಾಗ ವಿವಾಹಾದಿ ಕಾರ್ಯಗಳನ್ನು ಮಾಡಬಾರದು. ಚೌಲ, ಉಪನಯನ, ವಿವಾಹ ಮುಂತಾದ ಯಾವ ಕಾರ್ಯಗಳನ್ನೂ ಮಾಡಬಾರದು. ಅಜ್ಞಾನದಿಂದ ಮಂಗಳ ಕಾರ್ಯ-ಗಳನ್ನು ಮಾಡಿದರೆ ಅವರಿಗೆ ಮರಣಾದಿರೂಪವಾದ ಅನರ್ಥವು ಉಂಟಾಗುತ್ತದೆ. ಇದರಲ್ಲಿ ಸಂಶಯವಿಲ್ಲ. ಮಂಗಳಕರವಾದ ದೇವತಾದೃಷ್ಟಿ ಇಲ್ಲದಿರುವಾಗ ಮಾಡಿದ ಕಾರ್ಯಗಳಿಗೆ ಮಂಗಳಕರವಾದ ಫಲವು ಹೇಗೆ ಉಂಟಾದೀತು? ಸರ್ವಥಾ ಉಂಟಾಗುವುದಿಲ್ಲ.

ಚಾತುರ್ಮಾಸ್ಯವಿಧಿಂ ವಕ್ಷ್ಯೇ ಶ್ರುತಿಸ್ಮೃತ್ಯುದಿತಂ ಶುಭಮ್ । ಪೂರ್ವಭಾಂಡಾನಿ ಸರ್ವಾಣಿ ರಸಭಾಂಡವಿವರ್ಜಿತಮ್ । ವಿಸರ್ಜಯೇನ್ನವಮ್ಯಾಂ ಶೂರ್ಪಾದೀನ್ ಶೋಧಯೇತ್ ತಥಾ ॥ ಗೋಮಯಾದ್ಯುಪಲೇಪೇನ ಶುದ್ಧಿಂ ಕೃತ್ವಾ ವಿಚಕ್ಷಣಃ । ಅಭ್ಯಂತರಂ ಗೃಹಸ್ಯೈವ ವಾಸೋಭಿಃ ಕಂಬಲೈಸ್ತಥಾ । ಕಟೈಶ್ಚ ಕಶುಭಿಶ್ಚೈವ ಸಚೇಲಂ ಸ್ನಾನಮಾಚರೇತ್ ॥ ತತಃ ಪ್ರಾತಃ ಸಮುತ್ಥಾಯ ದಶಮ್ಯಾಂ ತು ಶುಭೇ ದಿನೇ ।

ಸ್ನಾತ್ವಾ ನಿರ್ವರ್ತ್ಯ ಕರ್ಮಾಣಿ ಗೃಹಂ ಗತ್ವಾ ಜಿತೇಂದ್ರಿಯಃ ॥ ದೇವಸ್ಯೋದ್ವರ್ತನಂ ಕುರ್ಯಾದಲಂಕುರ್ಯಾಚ್ಚ ಮಂಡಪಮ್ । ಪಂಚಗವ್ಯಂ ಪ್ರಾಶಯಿತ್ವಾ ಶುದ್ಧಿಂ ಕೃತ್ವಾ ತನೋರ್ದೃಢಮ್ ॥ ಪೂಜಯಿತ್ವಾ ಯಥಾನ್ಯಾಯಂ ದೇವದೇವಂ ಜನಾ-ರ್ದನಮ್ । ವ್ರತಾನಾಂ ವಕ್ಷ್ಯಮಾಣಾನಾಂ ಸಂಕಲ್ಪಂ ವಿಧಿವಚ್ಚರೇತ್ ॥ ನೈಮಿತ್ತಿಕಾನಾಂ ಕಾಮ್ಯಾನಾಂ ನಿತ್ಯಾನಾಂ ಚ ತಥೈವ ಚ । ವ್ರತಾನ್ಯೇತಾನಿ ಸರ್ವಾಣಿ ಚತುರಾಶ್ರಮವರ್ತಿನಾಮ್ ॥ – ಈಗ ಶ್ರುತಸ್ಮೃತಿಗಳಲ್ಲಿ ಹೇಳಿರುವ ಚಾತು-ರ್ಮಾಸ್ಯವಿಧಿಯನ್ನು ಹೇಳುವೆನು. ತುಪ್ಪ, ಎಣ್ಣೆ ಮುಂತಾದವುಗಳನ್ನು ಬಿಟ್ಟು ಹಿಂದಿನ ಪಾತ್ರೆಗಳನ್ನೆಲ್ಲಾ ವಿಸರ್ಜಿಸಬೇಕು. ಮೊರ, ಜರಡಿ ಮುಂತಾದ್ದವನ್ನು ಕೂಡ ನವಮೀ ದಿನ ಶುದ್ಧ ಮಾಡಬೇಕು. ಮನೆಯ ಒಳಭಾಗವನ್ನು ಕೂಡ ಗೋಮಯ ಮುಂತಾದವುಗಳಿಂದ ಶಾಸ್ತ್ರವನ್ನು ತಿಳಿದ ವಿದ್ವಾಂಸನು ಶುದ್ಧಿ-ಗೊಳಿಸಬೇಕು. ಬಟ್ಟೆಗಳು, ಕಂಬಳಿಗಳು, ಹಾಸಿಗೆ, ದಿಂಬುಗಳು ಸಹಿತವಾಗಿ ಸಚೇಲ ಸ್ನಾನ ಮಾಡಬೇಕು. ನವಮಿಯ ದಿನ ಈ ವಿಧಾನಗಳನ್ನೆಲ್ಲಾ ಪೂರೈಸಿ, ಮಂಗಳಕರವಾದ ದಶಮಿಯ ದಿನ ಬೆಳಿಗ್ಗೆ ಎದ್ದು, ಸ್ನಾನ ಮಾಡಿ ನಿತ್ಯಾಹ್ನಿಕಗಳನ್ನು ಮಾಡಬೇಕು. (ಉದ್ವರ್ತನವೆಂದರೆ ಸುವಾಸನೆಯಾದ ಹಿಟ್ಟು ಇತರ ಸುಗಂಧ-ದ್ರವ್ಯಗಳಿಂದ ತಿಕ್ಕುವುದು). ಪ್ರತಿಮಾದಿಗಳನ್ನು ಹೀಗೆ ತಿಕ್ಕಿ ತೊಳೆದು ಅಭಿಷೇಕ ಮಾಡಬೇಕು. ನಂತರ ದೇವರ ಮಂಟಪಗಳನ್ನು ಸುಂದರವಾಗಿ ಅಲಂಕರಿಸಬೇಕು. ಶಾಸ್ತ್ರೋಕ್ತವಾಗಿ ಪಂಚಗವ್ಯಮೇಲನವನ್ನು ಮಾಡಿ, ಅದನ್ನು ಪ್ರಾಶನ ಮಾಡಬೇಕು. ಹೀಗೆ ಸರಿಯಾಗಿ ಶರೀರಶುದ್ಧಿ ಮಾಡಿಕೊಳ್ಳಬೇಕು. ಅನಂತರ ಶಾಸ್ತ್ರೋಕ್ತವಾಗಿ ದೇವದೇವೋತ್ತಮನಾದ, ಸಂಸಾರನಾಶಕನಾದ ಕಂಸಾರಿಯನ್ನು ಪೂಜಿಸಿ ನೈವೇದ್ಯಾದಿಗಳನ್ನು ಅರ್ಪಿಸಬೇಕು. ಅನಂತರ ನೈಮಿತ್ತಿಕ, ಕಾಮ್ಯ , ನಿತ್ಯಗಳೆಂಬ ಮೂರುವಿಧವಾದ ಚಾತುರ್ಮಾಸ್ಯದಲ್ಲಿ ಮಾಡಬೇಕಾದ ವ್ರತಗಳ ಸಂಕಲ್ಪವನ್ನು ಮಾಡಬೇಕು. ಮುಂದೆ ಹೇಳುವ ವ್ರತಗಳೆಲ್ಲವೂ ನಾಲ್ಕು ಆಶ್ರಮದಲ್ಲಿರುವವ-ರಿಗೂ ಅನ್ವಯಿಸುತ್ತವೆ.

ಪ್ರಥಮೇ ಮಾಸಿ ಕರ್ತವ್ಯಂ ನಿತ್ಯಂ ಶಾಕವ್ರತಂ ಶುಭಮ್ । ದ್ವಿತೀಯೇ ಮಾಸಿ ಕರ್ತವ್ಯಂ ದಧಿವ್ರತಮನುತ್ತಮಮ್ ॥ ಪಯೋವ್ರತಂ ತೃತೀಯೇ ತು ಚತುರ್ಥೇ ತು

ನಿಶಾಮಯ । ದ್ವಿದಲಂ ಬಹುಬೀಜಂ ಚ ವರ್ಜಯೇಚ್ಛುದ್ಧಿಮಿಚ್ಛತಾ ॥ ನಿತ್ಯಾನ್ಯೇತಾನಿ ವಿಪ್ರೇಂದ್ರವ್ರತಾನ್ಯಾಹುರ್ಮನೀಷಿಣಃ । ಜಂಬೀರಂ ರಾಜಮಾಷಂ ಚ ತುವರಂ ರಾಜಮುದ್ಗಕಮ್ ॥ ಅಭಕ್ಷ್ಯಾಣಿ ಚ ಶಾಕಾನಿ ಚಾತುರ್ಮಾಸ್ಯೇ ತ್ಯಜೇದ್ ಬುಧಃ । ದ್ವಾದಶ್ಯಾಂ ತು ದಶಮ್ಯಾಂ ಚ ಶಾಕಂ ದಶವಿಧಂ ತ್ಯಜೇತ್ ॥ – ಮೊದಲನೆಯ ತಿಂಗಳಲ್ಲಿ ನಿತ್ಯವ್ರತವಾದ ಮಂಗಳಕರವಾದ, ಶಾಕವ್ರತವನ್ನು ಮಾಡಬೇಕು. ಎರಡನೆಯ ತಿಂಗಳಿನಲ್ಲಿ ಶ್ರೇಷ್ಠವಾದ ದಧಿವ್ರತವನ್ನು ಮಾಡಬೇಕು. ಮೂರನೆಯ ತಿಂಗಳಲ್ಲಿ ಕ್ಷೀರವ್ರತವನ್ನು ಮಾಡಬೇಕು. ನಾಲ್ಕನೆಯ ತಿಂಗಳಿನಲ್ಲಿ ದ್ವಿದಳಧಾನ್ಯಗಳನ್ನೂ ಬಹುಬೀಜವುಳ್ಳ ಫಲಾದಿಗಳನ್ನೂ ಬಿಡಬೇಕು. ಬ್ರಾಹ್ಮಣಶ್ರೇಷ್ಠನೇ! ಈ ವ್ರತಗಳೆಲ್ಲವೂ ನಿತ್ಯವೆಂಬುದಾಗಿ ಜ್ಞಾನಿಗಳು ಹೇಳುತ್ತಾರೆ. ನಿಂಬೆಹಣ್ಣು, ಅಲಸಂದೆ, ತೊಗರಿ, ದೊಡ್ಡ ಹೆಸರು. ಇನ್ನೂ ಅಭಕ್ಷ್ಯವಾದ ಶಾಕಗಳನ್ನು ಚಾತುರ್ಮಾಸ್ಯದಲ್ಲಿ ಜ್ಞಾನಿಯಾದವನು ಬಿಡಬೇಕು. ದ್ವಾದಶೀ ಮತ್ತು ದಶಮೀಗಳಲ್ಲಿ ಹತ್ತುವಿಧವಾದ ಶಾಕವನ್ನು ತ್ಯಜಿಸಬೇಕು.

ಶಾಕಂ ದಶವಿಧಂ ಪ್ರೋಕ್ತಂ ವರ್ಜ್ಯಂ ಶಾಕವ್ರತೇ ಶುಭೇ । ಪತ್ರಂ ಪುಷ್ಪಂ ಫಲಂ ನಾಲಂ ಮೂಲಂ ಕುಡ್ಮಲಮೇವ ಚ ॥ ತಿಲಪಿಷ್ಟಂ ಪಲ್ಲವಂ ಚ ಛತ್ರಾಕಂ ಚಾಮಿಷಂ ತಥಾ । ಶಾಕಂ ದಶವಿಧಂ ಪ್ರೋಕ್ತಂ ವ್ರತಕರ್ಮಸು ನಿಷ್ಠಿತೈಃ ॥ ಕಾರ್ತಿಕ್ಯಾಂ ವರ್ಜಯೇದ್ ವಿದ್ವಾನ್ ದ್ವಿದಲಂ ಬಹುಬೀಜಕಮ್ । ಬೀಜಮೇವ ಸಮುದ್ಭೂತಂ ದ್ವಿದಲಂ ಚಾಂಕುರಂ ವಿನಾ ॥ ದೃಶ್ಯತೇ ಯತ್ರ ಸಸ್ಯೇಷು ದ್ವಿದಲಂ ಸದ್ಭಿರುಚ್ಯತೇ । ಶಿಲಯಾ ಭಿದ್ಯಮಾನೇ ಚ ದ್ವಿದಲಂ ಯತ್ರ ದೃಶ್ಯತೇ ॥ ದ್ವಿದಲಂ ತದ್ಧಿ ವಿಜ್ಞೇಯಂ ತನ್ಮೇ ನಿಗದತಃ ಶೃಣು । ಮಾಷಂ ಚ ಮುದ್ಗಕಂ ಚೈವ ಚಣಕಂ ಚ ಮಸೂರಕಮ್ ॥ ಕುಲಿತ್ಥಂ ಚೈವ ನಿಷ್ಪಾವಂ ಆಢಕಂ ರಾಜಮಾಷಕಮ್ ॥ ರಾಜಮುದ್ಗಂ ತಿಂತ್ರಿಣೀಂ ಚ ತಥಾ ವೈ ನಖಪಂಚಕಮ್ ॥ ನೂತನಾನ್ಯಥ ಜೀರ್ಣಾನಿ ಸರ್ವಾಣ್ಯೇತಾನಿ ವರ್ಜಯೇತ್ । ನಾಲೇ ಫಲೇ ವೈ ದೃಶ್ಯಂತೇ ಬಹುಬೀಜಾನಿ ನಾರದ ॥ ಬಹುಬೀಜಂ ತದಿತ್ಯಾಹುಃ ಪತ್ರಕೀರಾದಿಕಂ ತಥಾ ॥ – ಮಂಗಳಕರವಾದ ಶಾಕವ್ರತದಲ್ಲಿ ಹತ್ತು ವಿಧವಾದ ಶಾಕವನ್ನು ವರ್ಜಿಸಬೇಕು. ಎಲೆ, ಹೂವು, ಹಣ್ಣು, ಕಾಂಡ, ಗಡ್ಡೆ, ಮೊಗ್ಗು, ಎಳ್ಳುಹಿಟ್ಟು, ಚಿಗುರು, ಅಳಿಬೆ, ಮಾಂಸ (ಪ್ರತಿನಿಧಿಯಾದ ಮಾಷ =

ಉದ್ದು) ಇವು ಹತ್ತನ್ನು ವ್ರತ ನಿಷ್ಣಾತರಾದವರು ಶಾಕವೆಂದು ಹೇಳುತ್ತಾರೆ. ಮೊದಲನೆಯ ಶಾಕವ್ರತದಲ್ಲಿ ಇವುಗಳನ್ನು ವರ್ಜಿಸಬೇಕು. ಕಾರ್ತಿಕಮಾಸದಲ್ಲಿ ವಿದ್ವಾಂಸನು ದ್ವಿದಲವನ್ನು (ಬೇಳೆಗಳನ್ನು) ದಲ(ಭಾಗ)ವುಳ್ಳ ಬೀಜವು ಉತ್ಪನ್ನ-ವಾಗಿರುವುದು ಕಾಣಿಸುತ್ತದೋ ಅದನ್ನು ದ್ವಿದಲವೆಂದು ಹೇಳುತ್ತಾರೆ. ಕಲ್ಲಿನಿಂದ ಬೀಜವನ್ನು ಒಡೆದಾಗ (ಬೀಸುವ ಕಲ್ಲಿನಿಂದ ಬೀಸಿದಾಗ) ಯಾವ ಧಾನ್ಯದಲ್ಲಿ ಎರಡು ಬೇಳೆಗಳು (ಭಾಗಗಳು ಕಾಣಿಸುತ್ತವೆಯೋ ಅದನ್ನು ದ್ವಿದಲವೆಂದು ಹೇಳುತ್ತಾರೆ). ಯಾವ ಯಾವ ಧಾನ್ಯಗಳು ದ್ವಿದಲವೆಂಬುದನ್ನು ಹೇಳುತ್ತೇನೆ ಕೇಳು. ಉದ್ದು, ಹೆಸರು, ಕಡಲೆ, ಮಸೂರಧಾನ್ಯ, ಹುರಳಿ, ಅವರೆ, ತೊಗರಿ, ಅಲಸಂದೆ, ದೊಡ್ಡ ಹೆಸರು, ಹುಣಿಸೆ ಹಣ್ಣು, ನಖಪಂಚಕ (ಪಂಚನಖವುಳ್ಳ ಪ್ರಾಣಿಗಳು ಮೊಲ, ಮುಳ್ಳುಹಂದಿ, ಉಡ, ಖಡ್ಗಮೃತ, ಆಮೆ ಇವುಗಳು ಪಂಚನಖಗಳು, ಇವುಗಳ ಸ್ವೀಕಾರವು ಇತರ ಯುಗಗಳ ವಿಷಯ. ಕಲಿಯುಗದಲ್ಲಿ ಇವು ನಿಷಿದ್ಧ. ಅವನ್ನು ಚಾತುರ್ಮಾಸದಲ್ಲಿ ವರ್ಜಿಸಬೇಕು). ಹಿಂದೆ ಹೇಳಿದ ಈ ವಸ್ತುಗಳು ಹೊಸದಾಗಿರಲಿ, ಹಳೆಯದಾಗಿರಲಿ, ಅವುಗಳನ್ನು ವರ್ಜಿಸಬೇಕು. ನಾರದನೇ! ನಾಲದಲ್ಲಿ (ಕಾಂಡದಲ್ಲಿ), ಫಲದಲ್ಲಿ ಎಲ್ಲಿ ಬಹಳ ಬೀಜಗಳು ಕಾಣಿಸುತ್ತವೆಯೋ, ಅವುಗಳನ್ನು ಸೊಪ್ಪು, ಕೀರೆಸೊಪ್ಪು ಮುಂತಾದ್ದವನ್ನೂ ಬಹು ಬೀಜವೆಂದು ಹೇಳುತ್ತಾರೆ.

ಪ್ರಾತಃಸ್ನಾನಂ ದೀಪದಾನಂ ಕಾರ್ತಿಕ್ಯಾಂ ತು ವಿಶೇಷತಃ । ಜಾಗರಂ ತು ಪ್ರಬೋಧಿನ್ಯಾಂ ಕುರ್ಯಾದ್ ವೈ ನಿಯತೇಂದ್ರಿಯಃ ॥ ಗುರುರ್ಗೋಮಿಥುನಂ ದತ್ವಾ ದ್ವಾದಶ್ಯಾಂ ಭೋಜಯೇದ್ ದ್ವಿಜಾನ್ । ಆಸಾಯಾಹ್ನಂ ಪುರಾಣಾದ್ಯೈ-ರಹಃಶೇಷಂ ನಯೇದ್ ಬುಧಃ ॥ ಅಸ್ತಂಗತೇ ದಿನಕರೇ ಪುನಃ ಸ್ನಾತ್ವಾ ಯಥಾವಿಧಿ । ವೃಂದಾವನೇ ತತಃ ಕುರ್ಯಾನ್ಮಂಡಪಂ ಚತುರಸ್ರಕಮ್ ॥ ಪುಷ್ಪಮಾಲ್ಯೈಃ ಫಲೈ-ರ್ದಿವ್ಯೈರ್ನಾಲಿಕೇರಾದಿಭಿಃ ಶುಭೈಃ । ಪೂಗೀಫಲೈರಿಕ್ಷುದಂಡೈರಂಭಾಸ್ತಂಭೈಶ್ಚ ಶೋಭಿತಮ್ ॥ – ಕಾರ್ತಿಕಮಾಸದಲ್ಲಿ ಪ್ರಾತಃಸ್ನಾನ ಮತ್ತು ದೀಪದಾನಗಳು ಇವನ್ನು ವಿಶೇಷವಾಗಿ (ಅವಶ್ಯವಾಗಿ) ಮಾಡಬೇಕು. ಪ್ರಬೋಧಿನಿ ಏಕಾದಶಿಯ ದಿನ (ಕಾರ್ತಿಕಶುಕ್ಲಏಕಾದಶೀ) ಜಿತೇಂದ್ರಿಯನಾಗಿ ಜಾಗರಣ ಮಾಡಬೇಕು. ಗುರುಗಳಿಗೆ ಗೋಮಿಥುನ (ಹಸು-ಎತ್ತುಗಳನ್ನು) ದಾನ ಮಾಡಿ ದ್ವಾದಶಿಯ

ದಿನ ಬ್ರಾಹ್ಮಣಭೋಜನ ಮಾಡಿಸಬೇಕು. ಸಾಯಂಕಾಲದವರೆಗೂ ಪುರಾಣಾದಿ ಸತ್ಕಥೆಯಿಂದ ಹಗಲಿನ ಉಳಿದ ಭಾಗವನ್ನು ಕಳೆಯಬೇಕು. ಸೂರ್ಯನು ಅಸ್ತಂಗತನಾಗುವ ಸಮಯದಲ್ಲಿ ಪುನಃ ಶಾಸ್ತ್ರೋಕ್ತವಾಗಿ ಸ್ನಾನ ಮಾಡಿ, ತುಲಸೀವೃಂದಾವನದಲ್ಲಿ ಚತುರಸ್ರವಾದ (ಚೌಕವಾದ) ಮಂಟಪವನ್ನು ಮಾಡಬೇಕು. ಆ ಮಂಟಪಕ್ಕೆ ಬಾಳೆಯ ಗಿಡಗಳನ್ನು ಕಟ್ಟಿ ಅಲಂಕಾರ ಮಾಡಬೇಕು. ಹೂವಿನ ಮಾಲೆಗಳು ದಿವ್ಯವಾದ ತೆಂಗಿನಕಾಯಿ, ಇತರ ಹಣ್ಣುಗಳು, ಅಡಿಕೆಯ ಗೊನೆ, ಕಬ್ಬು ಮುಂತಾದವುಗಳಿಂದಲೂ ಆ ಮಂಟಪವನ್ನು ಚೆನ್ನಾಗಿ ಅಲಂಕರಿಸಬೇಕು.

ಪೂಜಯೇತ್ ತತ್ರ ದೇವೇಶಂ ಕ್ಷೀರಾಂಬುಧಿನಿವಾಸಿನಮ್ । ನಾನಾವಿಧೈಶ್ಚೋಪಚಾರೈರ್ಗೀತವಾದಿತ್ರನರ್ತನೈಃ ॥ ಮಾರ್ಗತಾಲಾನಿ ಸರ್ವಾಣಿ ನೃತ್ತಂ ನಾಟ್ಯಂ ತದುದ್ಭವಮ್ । ವಸಂತಂ ಶ್ರಾವಯೇದ್ ಗೀತಂ ವಿಷ್ಣೋರ್ದೇವಸ್ಯ ಚಕ್ರಿಣಃ ॥ ಮಹಾರಾಜೋಪಚಾರೇಣ ತಂ ಭಜೇದ್ ಗರುಡಧ್ವಜಮ್ । ನಿವೇದಿತೈಶ್ಚೋಪಹಾರೈರ್ದಕ್ಷಿಣಾಭಿರ್ದ್ವಿಜೋತ್ತಮಾನ್ ॥ ಸಂತೋಷಯೇನ್ಮಹಾಭಕ್ತ್ಯಾ ವೈಷ್ಣವಾನ್ ಭಾವಿತವ್ರತಾನ್ । ಆಶಿಷಃ ಪ್ರತಿಗೃಹ್ಣೀಯಾತ್ ತತ್ ಸರ್ವಂ ವಿಷ್ಣವೇಽರ್ಪಯೇತ್ ॥ – ಅಲ್ಲಿ ಕ್ಷೀರಸಮುದ್ರಶಯನನಾದ ಸರ್ವದೇವೋತ್ತಮನಾದ ಶ್ರೀಮನ್ನಾರಾಯಣನನ್ನು ನಾನಾ ವಿಧವಾದ ಉಪಚಾರಗಳಿಂದಲೂ, ಸಂಗೀತ, ವಾದ್ಯ , ನರ್ತನಗಳಿಂದಲೂ ಪೂಜಿಸಬೇಕು. ತಾಳಗಳನ್ನು ಬಾರಿಸುತ್ತಾ ಮಾರ್ಗನೃತ್ಯವನ್ನೂ , ವೃತ್ತವನ್ನೂ , ವೃತ್ತನೃತ್ಯಗಳಿಂದ ಹುಟ್ಟಿರುವ ನಾಟ್ಯವನ್ನೂ , ವಸಂತಗೀತವನ್ನೂ ಚಕ್ರಧಾರಿಯಾದ ಶ್ರೀಹರಿಯ ಎದುರು ನಡೆಸಬೇಕು. ಮಹಾರಾಜೋಪಚಾರಗಳಿಂದ ಗರುಡಧ್ವಜನಾದ ಹರಿಯನ್ನು ಪೂಜಿಸಬೇಕು. ಪರಮಾತ್ಮನ ಪ್ರಸಾದರೂಪವಾದ ಉಪಹಾರಗಳಿಂದಲೂ ದಕ್ಷಿಣೆಗಳಿಂದಲೂ ವ್ರತನಿಷ್ಠರಾದ ಬ್ರಾಹ್ಮಣೋತ್ತಮರನ್ನು ಬಹಳ ಭಕ್ತಿಯಿಂದ ಸಂತೋಷಗೊಳಿಸಬೇಕು. ಅವರಿಂದ ಆಶೀರ್ವಚನವನ್ನು ಸ್ವೀಕರಿಸಬೇಕು. ಅದೆಲ್ಲವನ್ನೂ ಸರ್ವೋತ್ತಮನಾದ ಶ್ರೀಮನ್ಮಹಾವಿಷ್ಣುವಿಗೆ ಅರ್ಪಿಸಬೇಕು.

ತತಸ್ತು ಪೌರ್ಣಮಾಸ್ಯಂ ತು ಧಾತ್ರೀವೃಕ್ಷೋಪಶೋಭಿತೇ । ವನೇ ದಾಮೋದರಂ ವಿಷ್ಣುಂ ಚಿತ್ರಾನ್ನೈಸ್ತೋಷಯೇದ್ ವಿಭುಮ್ ॥ ಕಲ್ಪೋಕ್ತವಿಧಿನಾ ತತ್ರ

ಹೋಮಂ ಕುರ್ಯಾದ್ ವಿಚಕ್ಷಣಃ । ಬ್ರಾಹ್ಮಣಾನ್ ಭೋಜಯೇತ್ ಪಶ್ಚಾತ್ ಸ್ವಯಂ ಭುಂಜೀತ ಬಂಧುಭಿಃ ॥ ಇದಂ ವ್ರತಂ ಮಹಾಪುಣ್ಯಂ ಸರ್ವೋಪದ್ರವ-ನಾಶನಮ್ । ಇದಂ ನೈಮಿತ್ತಿಕಂ ಪ್ರಾಹುಶ್ಚತುರಾಶ್ರಮವರ್ತಿನಾಮ್ ॥ ಪರಾಕಂ ಷಷ್ಠಕಾಲಂ ಚ ತಥಾ ಧಾರಣಪಾರಣಮ್ । ಲಕ್ಷವರ್ತೀ ವ್ರತಂ ಚೈವ ಭೀಷ್ಮಪಂಚಕ-ಮೇವ ಚ ॥ ತಥಾ ಲಕ್ಷನಮಸ್ಕಾರವ್ರತಂ ಲಕ್ಷಪ್ರದಕ್ಷಿಣಮ್ । ಚಾತುರ್ಮಾಸ್ಯೇ ವ್ರತಾನ್ಯಾಹುರೇತತ್ಕಾಮ್ಯಮಿತೀರಿತಮ್ ॥ ರಂಗವಲ್ಯಾಶ್ಚ ನಿಕ್ಷೇಪಂ ಚಾತುರ್ಮಾ-ಸ್ಯೇ ನ ಕಾರಯೇತ್ । ತುಲಸ್ಯೋಪ್ತಂ ನೈವ ಕುರ್ಯಾತ್ ಸರ್ವಮೇತತ್ ನವೋ-ದಿತಮ್ ॥ ನಿತ್ಯಂ ಕಾರ್ಯಂ ಚ ಸರ್ವೇಷಾಮೇತದ್ ವ್ರತಚತುಷ್ಟಯಮ್ । ನಾರೀಭಿಶ್ಚ ನರೈರ್ವಾಪಿ ಚತುರಾಶ್ರಮವರ್ತಿಭಿಃ ॥ ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಸ್ತ್ರಿಯಃ ಶೂದ್ರೋ ವ್ರತೀ ತಥಾ । ಗೃಹೀ ವನಸ್ಥಃ ಕುಟೀಚೋ ಬಹೂದಃ ಪರಮ-ಹಂಸಕಃ । ನರಕಾನ್ನ ನಿವರ್ತಂತೇ ತ್ಯಕ್ತ್ವಾ ವ್ರತಚತುಷ್ಟಯಮ್ ॥ – ಅನಂತರ ಹುಣ್ಣಿಮೆಯ ದಿನ ನೆಲ್ಲೀಮರದಿಂದ ಅಲಂಕೃತವಾದ ವನಪ್ರದೇಶಕ್ಕೆ ಹೋಗ-ಬೇಕು. ಅಲ್ಲಿ ಕಾರ್ತಿಕದಾಮೋದರ ಎಂಬ ಹೆಸರುಳ್ಳ ಶ್ರೀಹರಿಯನ್ನು ಪೂಜಿಸಿ ಚಿತ್ರಾನ್ನಗಳ ನೈವೇದ್ಯದಿಂದ ಸಂತೋಷಪಡಿಸಬೇಕು. ಶಾಸ್ತ್ರವನ್ನು ಬಲ್ಲ ವಿದ್ವಾಂಸ-ನು ಅಲ್ಲಿ ಕಲ್ಪೋಕ್ತವಿಧಾನದಿಂದ ಧಾತ್ರೀ ಹೋಮವನ್ನು ಮಾಡಬೇಕು. ಹೋಮ, ದೇವಪೂಜಾನಂತರದಲ್ಲಿ ಬ್ರಾಹ್ಮಣಭೋಜನವನ್ನು ಮಾಡಿಸಬೇಕು. ಅನಂತರ ಬಂಧುಗಳ ಸಹಿತನಾಗಿ ತಾನೂ ಭೋಜನ ಮಾಡಬೇಕು. ಈ ವ್ರತವು ಬಹಳ ಪುಣ್ಯಕರವಾದುದು. ಪರಮ ಮಂಗಳಕರವಾದುದು. ಸರ್ವಪಾಪಗಳನ್ನು ನಾಶ ಮಾಡತಕ್ಕಂತಹವು. ಭಕ್ತರು ಮಾಡಿದ ಮಾಡಿರಬಹುದಾದ ಎಲ್ಲಾ ಉಪದ್ರವ-ಗಳನ್ನು ನಾಶ ಮಾಡುವಂತಹದು. ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಎಂಬ ನಾಲ್ಕು ಆಶ್ರಮದವರೂ ಅವಶ್ಯಕವಾಗಿ ಅನುಷ್ಠಾನ ಮಾಡಬೇಕಾದುದು. ಇಂತಹ ಚಾತುರ್ಮಾಸ್ಯವ್ರತವು ನಾಲ್ಕು ಆಶ್ರಮದವರಿಗೂ ನೈಮಿತ್ತಿಕ ವ್ರತವು (ನಿಮಿತ್ತ ಎಂದರೆ ನಾಲ್ಕು ತಿಂಗಳು ಎಂಬ ಕಾರಣವನ್ನು ಇಟ್ಟುಕೊಂಡು ಮಾಡುವ ವ್ರತವು). ಪರಾಕ, ಹನ್ನೆರಡು ದಿನಗಳು ಉಪವಾಸವಿದ್ದು ಮಾಡುವ ಸರ್ವಪಾಪ-ಗಳಿಗೂ ಪ್ರಾಯಶ್ಚಿತ್ತರೂಪವಾದ ವ್ರತ, ಷಷ್ಠಕಾಲ (ಆರು ದಿವಸಕ್ಕೊಂದು ಬಾರಿ ಭೋಜನ ಅಥವಾ ಆರುಹೊತ್ತಿಗೆ ಮೂರು ದಿನಕ್ಕೊಂದು ಬಾರಿ ಭೋಜನ),

ಹಾಗೆಯೇ ಧಾರಣ-ಪಾರಣ (ಒಂದು ದಿನ ಉಪವಾಸ ಮರುದಿನ ಭೋಜನ ಹೀಗೆ ಒಂದು ತಿಂಗಳು ಇತ್ಯಾದಿ ಕ್ರಮದಿಂದ ನಡೆಸುವ ವ್ರತ), ಲಕ್ಷವರ್ತೀ ವ್ರತ (ಒಂದು ಲಕ್ಷ ಬತ್ತಿಗಳನ್ನು ಮಾಡಿ ದೇವರಿಗೆ ದೀಪವನ್ನು ಹಚ್ಚಿಡುವುದು), ಭೀಷ್ಮ ಪಂಚಕ ಉಪವಾಸ (ಏಕಾದಶಿಯಿಂದಾರಂಭಿಸಿ ಐದು ದಿವಸ ಉಪವಾಸ), ಲಕ್ಷ ಪ್ರದಕ್ಷಿಣ ವ್ರತ (ಒಂದು ಲಕ್ಷ ನಮಸ್ಕಾರ ಮಾಡುವ ವ್ರತ) ಇತ್ಯಾದಿ ವ್ರತಗಳನ್ನು ಚಾತುರ್ಮಾಸ್ಯದಲ್ಲಿ ನಡೆಸುತ್ತಾರೆ. ಇವೆಲ್ಲಾ ಕಾಮ್ಯ ವ್ರತಗಳೂ (ಕಾಮ್ಯ ಆಯಾ ಫಲದ ಆಸೆಯಿಂದ ಮಾಡತಕ್ಕ ವ್ರತಗಳು. ಆದರೆ ಇವನ್ನು ವಿಷ್ಣುಪ್ರೀತ್ಯರ್ಥವಾಗಿ ಮಾಡಿದರೆ ಪರಮಾತ್ಮನ ಅನುಗ್ರಹವೂ ಆಗುತ್ತದೆ). ಚಾತುರ್ಮಾಸ್ಯವ್ರತ ಸಮಯದಲ್ಲಿ ರಂಗವಲ್ಲೀ ಪುಡಿಯನ್ನು ಮಾಡಬಾರದು (ಬೇಕಾಗುವಷ್ಟು ರಂಗ-ವಲ್ಲೀ ಚೂರ್ಣವನ್ನು ಮೊದಲೇ ಸಂಗ್ರಹಿಸಿಟ್ಟುಕೊಳ್ಳಬೇಕು). ತುಲಸೀ ಗಿಡವನ್ನು ಚಾತುರ್ಮಾಸ್ಯದಲ್ಲಿ ನೆಡಬಾರದು. (ಚಾತುರ್ಮಾಸ್ಯಕ್ಕಿಂತ ಹಿಂದೆಯೇ ತುಲಸೀ ಗಿಡದ ಆರೋಪಣವನ್ನು ಮಾಡಿಕೊಳ್ಳಬೇಕು). (ಬ್ರಹ್ಮದೇವರು ಹೇಳುತ್ತಾರೆ) – ಎಲೈ ವತ್ಸ ನಾರದ! ಎಲ್ಲವನ್ನೂ ನಿನಗೆ ಹೇಳಿದ್ದಾಗಿದೆ. ಈ ಚಾತುರ್ಮಾಸ್ಯದ ನಾಲ್ಕು ತಿಂಗಳ ವ್ರತವು ನಿತ್ಯವಾದುದು. ಅವಶ್ಯಕವಾಗಿ ಮಾಡಲೇ ಬೇಕಾದುದು. ಹೆಂಗಸರು, ಗಂಡಸರು, ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳಲ್ಲಿರತಕ್ಕವರು, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ , ಶೂದ್ರ , ಇತರ ವ್ರತನಿಷ್ಠರಾದವರು, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಕುಟೀಚಕಸನ್ಯಾಸಿ, ಬಹೂದಕಸನ್ಯಾಸಿ, ಪರಮಹಂಸ ಇವರಲ್ಲಿ ಯಾರೇ ಆದರೂ ಈ ವ್ರತವನ್ನು ಮಾಡದಿದ್ದರೆ ನರಕವನ್ನು ತಪ್ಪಿಸಿ-ಕೊಳ್ಳಲಾರರು. (ಇಲ್ಲಿಗೆ ಸ್ಕಾಂದಪುರಾಣದಲ್ಲಿ ಬ್ರಹ್ಮನಾರದ ಸಂವಾದದಲ್ಲಿ ಚಾತುರ್ಮಾಸ್ಯ ವ್ರತಕಥನವೆಂಬ ಎಂಟನೆಯ ಅಧ್ಯಾಯವು ಸಮಾಪ್ತವಾಯಿತು).

ತಥಾ ಆದಿತ್ಯಪುರಾಣೇ ಚಾತುರ್ಮಾಸ್ಯವ್ರತಂ ಉಕ್ತಮ್, ಅಕರಣೇ ಪ್ರತ್ಯ-ವಾಯಪೂರ್ವಕಂ ಬ್ರಹ್ಮನಾರದಸಂವಾದೇನ – ಬ್ರಹ್ಮಾ ಉವಾಚ – ಗೋವಿಂದೇ ಶಯನಂ ಪ್ರಾಪ್ತೇ ಗೃಹ್ಣನ್ ವ್ರತಚತುಷ್ಟಯಮ್ । ವಿಷ್ಣೋಃ ಪ್ರೀತಿಮವಾಪ್ನೋತಿ ವ್ರತೈರೇತೈಶ್ಚ ನಾರದ ॥ ಶ್ರಾವಣೇ ವರ್ಜಯೇಚ್ಛಾಕಂ ದಧಿ ಭಾದ್ರಪದೇ ತಥಾ । ಕ್ಷೀರಮಾಶ್ವಯುಜೇ ಮಾಸಿ ಕಾರ್ತಿಕ್ಯಾಂ ದ್ವಿದಲಂ ತ್ಯಜೇತ್ ॥ ಯೋ ಭುಂಕ್ತೇ ಪ್ರಥಮೇ ಮಾಸೇ ಶಾಕಂ ದಶವಿಧಂ ಮುನೇ । ಪುಂಸಾ ತೇನ ಮಹಾವಿಷ್ಣೋಃ ಹೃದಿ

ಶಲ್ಯಂ ಸಮರ್ಪಿತಮ್ ॥ – ಹಾಗೆಯೇ ಆದಿತ್ಯಪುರಾಣದಲ್ಲಿ ಬ್ರಹ್ಮನಾರದ ಸಂವಾದದಿಂದ ಚಾತುರ್ಮಾಸ್ಯವ್ರತವನ್ನು ಹೇಳಿದ್ದಾರೆ. ಆ ವ್ರತವನ್ನು ಮಾಡದಿದ್ದರೆ ಪ್ರತ್ಯವಾಯ (ಪಾಪವನ್ನೂ) ಹೇಳಿದ್ದಾರೆ. ಬ್ರಹ್ಮದೇವರು ಹೇಳಿದರು – ನಾರದನೇ! ಶ್ರೀಮನ್ನಾರಾಯಣನು ಶಯನ ಮಾಡುವ ಶ್ರಾವಣಾದಿ ನಾಲ್ಕು ಮಾಸಗಳಲ್ಲಿ (ಆಷಾಢಶುದ್ಧ ದ್ವಾದಶಿಯಿಂದ ಕಾರ್ತಿಕ ಶುದ್ಧದ್ವಾದಶಿಯವರೆಗೆ ನಾಲ್ಕು ಮಾಸಗಳಲ್ಲಿ) ಶಾಕವ್ರತ (ತರಕಾರಿ ಬಿಡತಕ್ಕ ವ್ರತ), ದಧಿವ್ರತ (ಮೊಸರು ವರ್ಜಿಸತಕ್ಕದ್ದು) ಕ್ಷೀರವ್ರತ (ಹಾಲು ಬಿಡುವುದು), ದ್ವಿದಲವ್ರತ (ಬೇಳೆಗಳನ್ನು ಬೇಳೆಯುಳ್ಳ ತರಕಾರಿಗಳನ್ನು ಬಿಡುವುದು) ಎಂಬ ನಾಲ್ಕುವ್ರತಗಳನ್ನು ಸಂಕಲ್ಪ ಪೂರ್ವಕವಾಗಿ ಸ್ವೀಕರಿಸದರೆ ವಿಶೇಷವಾದ ಹರಿಪ್ರೀತಿಯುಂಟಾಗುತ್ತದೆ. ಶ್ರಾವಣ ಮಾಸದಲ್ಲಿ (ಆಷಾಢಶುದ್ಧ ದ್ವಾದಶೀಯಿಂದ ಶ್ರಾವಣ ಶುದ್ಧ ದಶಮಿಯವರೆಗೆ; ಅರ್ಥಾತ್ ಏಕಾದಶೀ ಉಪವಾದ ದ್ವಾದಶೀಯಿಂದ ಶಾಕಗಳನ್ನು ಸ್ವೀಕರಿಸಬಹುದು) ಶಾಕವ್ರತವನ್ನು ಮಾಡಬೇಕು. ಅಂದರೆ ತರಕಾರಿಗಳನ್ನು ವರ್ಜಿಸಬೇಕು. ಭಾದ್ರಪದ ಮಾಸದಲ್ಲಿ (ಶ್ರಾವಣಶುದ್ಧದ್ವಾದಶೀಯಿಂದ ಭಾದ್ರಪದಶುದ್ಧದಶಮಿ -ಯವರೆಗೆ) ಮೊಸರನ್ನು ವರ್ಜಿಸಬೇಕು. ಇದನ್ನು ದಧಿವ್ರತವೆಂದು ಕರೆಯುತ್ತಾರೆ. ಆಶ್ವಯುಜಮಾಸದಲ್ಲಿ (ಭಾದ್ರಪದ ಶುದ್ಧ ದ್ವಾದಶೀಯಿಂದ ಆಶ್ವಯುಜ ಶುದ್ಧ ದಶಮೀವರೆಗೆ) ದ್ವಿದಲವ್ರತವನ್ನು ಮಾಡಬೇಕು. (ಬೇಳೆಗಳನ್ನು, ಎರಡು ಬೇಳೆಗಳುಳ್ಳ ಫಲ, ಶಾಕಗಳನ್ನು ಬಿಡುವುದು). ನಾರದಮುನಿಯೇ! ಮೊದಲನೆಯ ಶ್ರಾವಣಮಾಸದಲ್ಲಿ ಮುಂದೆ ಹೇಳುವ ಹತ್ತುವಿಧವಾದ ಶಾಕವನ್ನು (ತರಕಾರಿಯನ್ನು) ಯಾವನು ತಿನ್ನುತ್ತಾನೋ ಆ ಮಾನವನಿಂದ ಶ್ರೀಮನ್ನಾರಾಯಣನ ಹೃದಯದಲ್ಲಿ ಮುಳ್ಳನ್ನು (ಮೊಳೆ) ಚುಚ್ಚಿದಂತಾಗುತ್ತದೆ.

ಮೂಲಪತ್ರಕರೀರಾಗ್ರಫಲಕಾಂಡಾಧಿರೂಢಕಾಃ । ತ್ವಕ್ ಪುಷ್ಪಂ ಕವಚಂ ಚೇತಿ ಶಾಕಂ ದಶವಿಧಂ ಸ್ಮೃತಮ್ ॥ ಅತಸೀ ತುಲಸೀ ಚೈವ ಧಾತ್ರೀ ಚೂತಫಲಂ ತಥಾ । ಗ್ರಾಹ್ಯಾಣ್ಯೇತಾನಿ ಚತ್ವಾರಿ ವಿಷ್ಣುನಾತ್ತಂ ಯತಃ ಪುರಾ ॥ ನಾನ್ಯತ್ ಕಿಂಚಿತ್ ಸಮಶ್ನೀಯಾತ್ ಭುಕ್ತ್ವಾ ಚಾಂದ್ರಾಯಣಂ ಚರೇತ್ । ಸುಪ್ತೇ ದೇವೇ ದ್ವಿತೀಯೇ ತು ಮಾಸ್ಯೇನಾಂಸಿ ಸಮಸ್ತಶಃ ॥ ದಧ್ಯಾಶ್ರಿತಾನಿ ತಿಷ್ಠಂತಿ ತದ್ ಭುಕ್ತ್ವಾ ಪಾಪಭುಗ್ ಭವೇತ್ । ವ್ರತಸ್ಥಿತಶ್ಚ ಯೋ ಮರ್ತ್ಯಃ ತೃತೀಯೇ ಶಯನಾನ್ಮಮ ॥ ಗವ್ಯಾಜ್ಯ-

ಮಾಹಿಷಾದೀನಾಂ ಕ್ಷೀರಾಣಾಂ ಸೇವನಾತ್ ಪುಮಾನ್ । ಸುರಾಪಲೋಕಮಾಪ್ನೋತಿ ಯಾವದಾಭೂತಸಂಪ್ಲವಮ್ ॥ ಚತುರ್ಥೇ ಮಾಸಿ ಸಂಪ್ರಾಪ್ತೇ ವ್ರತಂ ಕುರ್ಯಾದ್ ದ್ವಿಜೋತ್ತಮಃ। ಬಹುಬೀಜದ್ವಿದಲಾನಾಂ ವ್ರತಸ್ಯಾನಂತ್ಯಮಿಚ್ಛತಾ ॥ – ಮೂಲ (ಗೆಡ್ಡೆ), ಎಲೆ, ಶರೀರ (ಮೊಳಕೆ), ಅಗ್ರ (ತುದಿ), ಫಲ (ಹಣ್ಣು), ಕಾಂಡ (ದಂಟು, ದೇಟು), ಅಧಿರೂಢಕ (ಬಂದಣಿಕೆ) ತೊಗಟೆ, ಹೂವು, ಕವರ (ಪದರವುಳ್ಳ ಶಾಕ) ಎಂಬುದಾಗಿ ಶಾಕವು ಹತ್ತುವಿಧವಾಗಿದೆ. ಸುವರ್ಣಗೆಡ್ಡೆ ಇತ್ಯಾದಿ ಗೆಡ್ಡೆಗಳು, ನಾನಾವಿಧವಾದ ಸೊಪ್ಪುಗಳು, ಮೊಳಕೆಗಳು, ಚಿಗುರುಗಳು, ಅಗ್ರಭಾಗದಂತಿರುವ ತರಕಾರಿ, ಬಾಳೆ ಕಾಯಿ ಮುಂತಾದ್ದು, ನಾನಾವಿಧವಾದ ಗಿಡಗಳ ಫಲರೂಪವಾದ ತರಕಾರಿ, ಸೊಪ್ಪಿನ ದಂಟು ಮುಂತಾದ್ದು ಅಧಿಕರೂಢಗಳು (ಒಂದರ ಮೇಲೆ ಮತ್ತೊಂದು ಬೆಳೆದಿರುವ ಬಂದಣಿಕೆ ಮುಂತಾದವು), ತೊಗಟೆ, ಹೂವು, ಕವಚ (ಬಾಳೆ ಹೂವಿನಂತಹ ಪದರಾದ) ತರಕಾರಿ ಹತ್ತುವಿಧ. ಅದನ್ನು ಮೊದಲನೆಯ ಶಾಕವ್ರತದಲ್ಲಿ ಬಿಡಬೇಕು. ಅಗಸೆ ಸೊಪ್ಪು, ತುಲಸೀ, ನೆಲ್ಲಿ, ಮಾವು ಈ ನಾಲ್ಕು ಶ್ರೀಮನ್ನಾರಾಯಣನೇ ಸ್ವೀಕರಿಸಿರುವುದರಿಂದ ಶಾಕರೂಪವಾಗಿದ್ದರೂ ಇವುಗಳನ್ನು ಶಾಕವ್ರತ ಮಾಡುವವರೂ ಸ್ವೀಕರಿಸಬಹುದು. ಇವನ್ನು ಬಿಟ್ಟು ಮೇಲೆ ಹೇಳಿದ ಯಾವ ತರಕಾರಿಯನ್ನೂ ಸ್ವೀಕರಿಸಬಾರದು. ಪ್ರಮಾದವಶಾತ್ ಸ್ವೀಕರಿಸಿದರೆ ಚಾಂದ್ರಾಯಣವನ್ನು ಮಾಡಬೇಕು. ಪರಮಾತ್ಮ ಮಲಗಿರುವಾಗ ಎರಡನೆಯ ಭಾದ್ರಪದ ಮಾಸದಲ್ಲಿ ಎಲ್ಲಾ ಪಾಪಗಳೂ ಮೊಸರನ್ನು ಆಶ್ರಯಿಸಿರುತ್ತವೆ. ಆದುದರಿಂದ ಚಾತುರ್ಮಾಸ್ಯದ ಎರಡನೆಯ ಭಾದ್ರಪದ ಮಾಸದಲ್ಲಿ 'ಮೊಸರು' ಸ್ವೀಕರಿಸಿದರೆ ಪಾಪವನ್ನು ಹೊಂದಬೇಕಾಗುತ್ತದೆ. ಪರಮಾತ್ಮನ ಶಯನಕಾಲದ ನಾಲ್ಕು ತಿಂಗಳುಗಳಲ್ಲಿ ಮೂರನೆಯದಾದ ಆಶ್ವಯುಜಮಾಸದಲ್ಲಿ ವ್ರತಾನುಷ್ಠಾನ ಮಾಡುವ ಮಾನವನು ಹಸು, ಆಡು, ಎಮ್ಮೆ, ಕುರಿ ಇತ್ಯಾದಿ ಎಲ್ಲಾ ಪ್ರಾಣಿಗಳ ಹಾಲನ್ನು ವರ್ಜಿಸಬೇಕು. ಆಗ ಪ್ರಮಾದವಶಾತ್ ಹಾಲನ್ನು ಸ್ವೀಕರಿಸಿದರೆ ಮದ್ಯಪಾನ ಮಾಡಿದವರು ಸೇರುವ ಪಾಪಲೋಕವನ್ನು (ಅಂತಹ ಮಾನವನು) ಪಡೆದು ಅಲ್ಲಿ ಪ್ರಳಯಪರ್ಯಂತವಾಗಿ ದುಃಖಿಸುತ್ತಾ ಇರುತ್ತಾನೆ. ನಾಲ್ಕನೆಯ ಮಾಸದಲ್ಲಿ ದ್ವಿದಳ ವ್ರತವನ್ನು ಮಾಡತಕ್ಕದ್ದು. ಅಗಸೆ ಸೊಪ್ಪು, ತುಳಸಿ, ನೆಲ್ಲಿ, ಹಾಗೂ ಮಾವಿನ ಹಣ್ಣು ಈ

ನಾಲ್ಕನ್ನು ಪರಮಾತ್ಮನೇ ಸ್ವೀಕರಿಸಿದ್ದರಿಂದ ವ್ರತದಲ್ಲಿಯೂ ಎಲ್ಲರೂ ಸ್ವೀಕರಿಸ-ಬಹುದು. ಬಹುಬೀಜವುಳ್ಳ ಫಲಶಾಕಗಳನ್ನು, ದ್ವಿದಲ (ಎರಡು ಬೇಳೆಯುಳ್ಳ) ತರಕಾರಿ, ಧಾನ್ಯ, ಫಲ ಮುಂತಾದವನ್ನು ಬಿಡಬೇಕು. ಹೀಗೆ ಮಾಡಿದರೆ ಆ ಮನುಷ್ಯನು ಮಾಡಿದ ವ್ರತವು ಅನಂತಫಲದಾಯಕವಾಗಿರುತ್ತದೆ. ಈ ನಾಲ್ಕರ ಹೊರತು (ನಿಷಿದ್ಧವಾದ) ಮತ್ತಾವುದನ್ನೂ ಸ್ವೀಕರಿಸಬಾರದು. ಸ್ವೀಕರಿಸದರೆ ಚಾಂದ್ರಾಯಣವ್ರತವನ್ನು ಮಾಡತಕ್ಕದ್ದು.

ಅಂಕುರಾದ್ ಭರ್ಜನಾದ್ವಾಪಿ ದ್ವಿದಲಂ ಯತ್ರ ದೃಶ್ಯತೇ । ದ್ವಿದಲಂ ತದಿತಿ ಪ್ರಾಹುರ್ವ್ರತಕರ್ಮಸು ಕರ್ಶಿತಾ ॥ ಬಹೂನ್ಯೇಕತುಷಾಮದ್ಧಾನ್ಯಪಿ ತಾನಿ ಫಲೇಽಪಿ ಚ । ಬಹುಬೀಜಾನಿ ತಾನ್ಯಾಹುಸ್ತುಪಾತ್ವಾಚ್ಛಾದನಾತ್ತ್ವಚಾ ॥ ದ್ವಿದಲ, ಬಹುಬೀಜ ಎಂದರೇನೆಂದು ಹೇಳುತ್ತಾರೆ. ಬೀಜವು ಮೊಳೆತಾಗ ಅಥವಾ ಬೀಜವನ್ನು ಹುರಿದಾಗ (ಒಡೆದಾಗ) ಎರಡು ದಳಗಳು (ಹೋಳುಗಳು) ಎಲ್ಲಿ ಕಾಣಿಸುತ್ತ-ವೆಯೋ, ಅದನ್ನು ದ್ವಿದಲವೆಂದು ವ್ರತನಿಯಮಗಳಲ್ಲಿ ಪಳಗಿ ಕಷ್ಟಪಟ್ಟವರು ಹೇಳುತ್ತಾರೆ. ಯಾವ ಕಾಯಿಯಲ್ಲಿ ಆಗಲಿ, ಹಣ್ಣಿಲ್ಲಿಯಾಗಲೀ, ತರಕಾರಿ-ಯಲ್ಲಾಗಲೀ ಅನೇಕ ಬೀಜಗಳು ಒಳಗೆ ಇದ್ದು ಹೊರಗೆ ಒಂದೇ ಸಿಪ್ಪೆ (ತೊಗಟೆ, ಒಳಗೆ ತೆಳುವಾದ ಸಿಪ್ಪೆ ಅಥವಾ ಕೇವಲ ಸಿಪ್ಪೆ ಇವುಗಳ ಆಚ್ಛಾದನವುಳ್ಳ ಕಾಯಿ, ಹಣ್ಣು, ತರಕಾರಿ ಇವುಗಳನ್ನು ಬಹುಬೀಜಗಳೆಂದು ಹೇಳುತ್ತಾರೆ.

ಅದ್ಯಮಾನಂ ತು ಯತ್ಸರ್ವಂ ತದನ್ನಮಭಿಧೀಯತೇ । ತದನ್ನಂ ದ್ವಿವಿಧಂ ಪ್ರೋಕ್ತಂ ಜನ್ಮಕಾಲನಿಮಿತ್ತತಃ ॥ ಉತ್ತರಾಯಣಜಂ ಚೈವ ದಕ್ಷಿಣಾಯನಜಂ ತಥಾ । ಉತ್ತರಾಯಣಜಂ ಚಾನ್ನಂ ಶುದ್ಧಮಾಗ್ರಯಣೇಪ್ಸಿತಃ ॥ ದಕ್ಷಿಣಾಯನಜಂ ಚಾನ್ನಂ ಕಾರ್ತಿಕೇ ವನಭೋಜನಾತ್ । ಉಪೇಂದ್ರೇ ಸರ್ವದೇವೇಜ್ಯೇ ಶಯನಾದುತ್ಥಿತೇ ಸತಿ ॥ ಕಾರ್ತಿಕ್ಯಾಂ ಚ ಚತುರ್ದಶ್ಯಾಂ ಪಂಚಮ್ಯಾಂ ವನಭೋಜನಮ್ । ಕೃತ್ವಾ ಸರ್ವಂ ಸಮಶ್ನೀಯಾದನ್ಯಥಾ ತ್ವಘಭುಗ್ ಭವೇತ್ ॥ ಶಯಿಷ್ಣುನಾ ಚ ವಿಭುನಾ ಯದತ್ರಾ-ಸ್ವೀಕೃತಂ ಚ ತತ್ । ಅಭಕ್ಷ್ಯಮಿತಿ ತತ್ ಪ್ರಾಹುರ್ಮಹಾಂತೋ ವ್ರತಕರ್ಶಿತಾಃ । ಅತ ಏವ ವದಂತ್ಯನ್ಯೇ ಪುರಾಣಂ ಗ್ರಾಹ್ಯಮಿತ್ಯಪಿ ॥ – ನಾವು ಯಾವ ಯಾವ ವಸ್ತುವನ್ನು (ಪದಾರ್ಥವನ್ನು) ತಿನ್ನುತ್ತೇವೆಯೋ ಅದೆಲ್ಲವನ್ನೂ ಅನ್ನವೆಂದೇ ಹೇಳುತ್ತಾರೆ. ಆ

ಪದಾರ್ಥಗಳ (ತರಕಾರಿ ಧಾನ್ಯ ಮುಂತಾದವುಗಳ)ಉತ್ಪತ್ತಿಕಾಲದಿಂದಾಗಿ ಅವುಗಳನ್ನು ಉತ್ತರಾಯಣಜ (ಉತ್ತರಾಯಣಕಾಲದಲ್ಲಿ ಹುಟ್ಟಿದವುಗಳು) ಮತ್ತು ದಕ್ಷಿಣಾಯನಜ (ದಕ್ಷಿಣಾಯನ ಕಾಲದಲ್ಲಿ ಹುಟ್ಟಿದವುಗಳು) ಎಂದು ಎರಡು ವಿಧ. ಉತ್ತರಾಯಣದ ಕಾಲದಲ್ಲಿ ಉತ್ಪನ್ನವಾದ ಅನ್ನವು ಆಗ್ರಯಣೇಷ್ಟಿಯಿಂದ ಶುದ್ಧವಾಗುತ್ತದೆ. ದಕ್ಷಿಣಾಯನದಲ್ಲಿ ಉತ್ಪನ್ನವಾದ ಅನ್ನವು ಕಾರ್ತಿಕದಲ್ಲಿ ವನಭೋಜನದಿಂದ ಶುದ್ಧವಾಗುತ್ತದೆ. ಸಮಸ್ತದೇವತೆಗಳಿಂದ ಪೂಜ್ಯನಾದ ಶ್ರೀಮನ್ನಾರಾಯಣನು ತನ್ನ ಚಾತುರ್ಮಾಸ್ಯದ ನಾಲ್ಕುತಿಂಗಳಿನ ಶಯನದಿಂದ ಎದ್ದ ಮೇಲೆ ಕಾರ್ತಿಕಮಾಸದ ಹುಣ್ಣಿಮೆ, ಚತುರ್ದಶಿ, ಪಂಚಮಿಗಳಲ್ಲಿ ವನ-ಭೋಜನವನ್ನು ಮಾಡಿ ಅನಂತರ ಹಿಂದೆ ಬಿಟ್ಟಿರುವ ಪದಾರ್ಥಗಳನ್ನು ಸ್ವೀಕರಿಸ-ಬೇಕು. ಹೀಗೆ ಮಾಡದೇ ಚಾತುರ್ಮಾಸ್ಯದಲ್ಲಿ ಬಿಟ್ಟಿರುವ ಪದಾರ್ಥಗಳನ್ನು ಸ್ವೇಚ್ಛೆಯಿಂದ ಪುನಃ ಸ್ವೀಕರಿಸಿದರೆ ಪಾಪವನ್ನು ತುಂಬಿಕೊಂಡಂತಾಗುತ್ತದೆ. ಶ್ರೀಹರಿಯು ಚಾತುರ್ಮಾಸ್ಯದಲ್ಲಿ ಯಾವ ಯಾವ ಪದಾರ್ಥಗಳನ್ನು ಸ್ವೀಕರಿಸಿ-ಲ್ಲವೋ ಅದೆಲ್ಲವೂ ಅಭಕ್ಷ್ಯವೆಂದು ವ್ರತನಿಷ್ಠರಾದವರು ಹೇಳುತ್ತಾರೆ. ಆದುದ-ರಿಂದಲೇ ಹಿಂದಿನ ವರ್ಷದ ಕೆಲವು ಪದಾರ್ಥಗಳು ಗ್ರಾಹ್ಯ(ಸ್ವೀಕರಿಸಲು ಯೋಗ್ಯ)ವೆಂದು ಹೇಳುತ್ತಾರೆ. (ಏಕೆಂದರೆ ಆ ಪದಾರ್ಥಗಳು ವನಭೋಜನ ಮತ್ತು ಆಗ್ರಯಣೇಷ್ಟಿಯಿಂದ ಶುದ್ಧವಾಗಿರುತ್ತವೆ).

ಅವ್ರತೇನ ನಯೇದ್ಯಸ್ತು ಚಾತುರ್ಮಾಸ್ಯಮನುತ್ತಮಮ್ । ಸ ಪಾಪೀ ನರಕಂ ಯಾತಿ ಯಾವದಾಭೂತಸಂಪ್ಲವಮ್ ॥ ತಸ್ಮಾದ್ ವ್ರತಮಿದಂ ಧಾರ್ಯಂ ಅನ್ಯಥಾ ನಾಸ್ಯ ನಿಷ್ಕೃತಿಃ ॥ – ಅತ್ಯಂತ ಶ್ರೇಷ್ಠವಾದ ಚಾತುರ್ಮಾಸ್ಯವನ್ನು ಯಾವನು ಯಾವ ವಿಧವಾದ ವ್ರತವು ಇಲ್ಲದೇ ಕಳೆಯುತ್ತಾನೋ, ಆ ಪಾಪಿಯು ಪ್ರಳಕಾಲದವರೆಗೂ ನರಕವನ್ನು ಹೊಂದುತ್ತಾನೆ. ಆದ್ದರಿಂದ ಈ ಚಾತುರ್ಮಾಸ್ಯವ್ರತವನ್ನು ಅವಶ್ಯವಾಗಿ ಅನುಷ್ಠಾನ ಮಾಡಬೇಕು. ಇಲ್ಲದೇ ಹೋದರೆ ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತವೇ ಇಲ್ಲ.

ಯತ್ ಕಿಂಚಿದ್ ಭಕ್ಷ್ಯತೇ ಶಾಕಂ ಪ್ರಥಮೇ ಮಾಸಿ ನಾರದ । ತೇನಾರ್ಪಿತಂ ಹರೇಃ ಶಲ್ಯಂ ಹೃದಿ ನಾತ್ರ ವಿಚಾರಣಾ ॥ ದ್ವಿತೀಯೇ ಭಕ್ಷಿತೇ ದಧ್ನಿ ಗೋಮಾಂಸಂ

ತೇನ ಭಕ್ಷಿತಮ್ । ಕ್ಷೀರೇ ಪೀತೇ ತೃತೀಯೇ ತು ಸುರಾ ಪೀತಾ ನ ಸಂಶಯಃ ॥ ಚತುರ್ಥೇ ಮಾಸಿ ವಿಪ್ರೇಂದ್ರ ದ್ವಿದಲೇಽಪಿ ಚ ಭಕ್ಷಿತೇ । ಕ್ರಿಮಯೋ ಭಕ್ಷಿತಾಸ್ತೇನ ಯಾವದುದ್ಬೋಧನಂ ಹರೇಃ ॥ – ನಾರದನೇ! ಚಾತುರ್ಮಾಸ್ಯದ ಮೊದಲನೆಯ ತಿಂಗಳಲ್ಲಿ, (ಶಾಕವ್ರತದಲ್ಲಿ) ಯಾವನು ತರಕಾರಿಯನ್ನು ತಿನ್ನುತ್ತಾನೋ, ಅವನಿಂದ ಶ್ರೀಹರಿಯ ಎದೆಯಲ್ಲಿ ಮುಳ್ಳನ್ನು ಚುಚ್ಚಿದಂತಾಗುತ್ತದೆ. ಎರಡನೆಯ ತಿಂಗಳಲ್ಲಿ ದಧಿವ್ರತದ ಸಮಯದಲ್ಲಿ ಮೊಸರನ್ನು ಭಕ್ಷಿಸಿದವನು ಗೋಮಾಂಸ-ವನ್ನು ತಿಂದವನಾಗುತ್ತಾನೆ. ಮೂರನೆಯ ಕ್ಷೀರವ್ರತಸಮಯದಲ್ಲಿ ಹಾಲನ್ನು ಕುಡಿದವನು ಹೆಂಡ ಕುಡಿದವನಾಗುತ್ತಾನೆ. ಬ್ರಾಹ್ಮಣಶ್ರೇಷ್ಠನಾದ ನಾರದನೇ! ನಾಲ್ಕನೆಯ ಮಾಸದಲ್ಲಿ ದ್ವಿದಳವ್ರತದಲ್ಲಿ ತೊಗರಿ, ಹೆಸರು ಇತ್ಯಾದಿ ದ್ವಿದಳ ಧಾನ್ಯಗಳನ್ನು ಸ್ವೀಕರಿಸಿದರೆ, ಅವನು ಕಾರ್ತಿಕಮಾಸದ ಶುದ್ಧ ದ್ವಾದಶಿ ಶ್ರೀಹರಿಯು ಏಳುವವರೆಗೆ ಕ್ರಿಮಿಗಳನ್ನು ತಿಂದವನಾಗುತ್ತಾನೆ.

ತತಃ ಪ್ರಭಾತೇ ದ್ವಾದಶ್ಯಾಂ ಕೃತ್ವಾ ಕಾಲೋಚಿತಕ್ರಿಯಾಃ । ಸಂಪೂಜ್ಯ ತುಲಸೀ-ಪತ್ರೈರ್ಲಕ್ಷ್ಮೀದಾಮೋದರಂ ಪ್ರಭುಮ್ ॥ ದದ್ಯಾತ್ ಸಂಪೂಜ್ಯ ವಿಪ್ರಂ ಚ ಪಶ್ಚಾತ್ ತಸ್ಮೈ ಕುಟುಂಬಿನೇ । ದೇವ ದೇವ ಜಗನ್ನಾಥ ಲಕ್ಷ್ಮೀದಾಮೋದರ ಪ್ರಭೋ । ಚಾತುರ್ಮಾಸ್ಯೇ ತ್ವಯಾಽಽಜ್ಞಪ್ತಃ ಕೃತ್ವಾ ವ್ರತಚತುಷ್ಟಯಮ್ । ಭವನ್ಮೂರ್ತಿಂ ಪ್ರದಾಸ್ಯಾಮಿ ತ್ವತ್ ಪ್ರಸಾದಾಭಿಕಾಂಕ್ಷಯಾ ॥ ಮಂತ್ರೇಣಾನೇನ ತಾಂ ದದ್ಯಾತ್ ಸ್ವರ್ಚಿತಾಂ ತುಲಸೀದಲೈಃ । ಬ್ರಾಹ್ಮಣಾನ್ ಭೋಜಯೇದ್ ಪಶ್ಚಾತ್ ಯಥಾ ವಿತ್ತಾನುಸಾರತಃ । ಇತ್ಯಾದಿ । – ಕಾರ್ತಿಕಶುದ್ಧ ಏಕಾದಶಿಯ ದಿವಸ ಉಪವಾಸ-ವಿದ್ದು ಮರುದಿನ ದ್ವಾದಶೀ ಪ್ರಾತಃಕಾಲ ಪ್ರಾತರಾಹ್ನಿಕ, ದೇವಪೂಜಾದಿಗಳನ್ನು ಮುಗಿಸಿ, ಲಕ್ಷ್ಮೀದಾಮೋದರನ ಪ್ರತಿಮೆಯನ್ನು ತುಳಸೀದಳಗಳಿಂದ ಪೂಜಿಸಿ ಅನಂತರ ಆ ಪ್ರತಿಮೆಯನ್ನು ಕುಟುಂಬಿಯಾದ ಶ್ರೋತ್ರಿಯ ಬ್ರಾಹ್ಮಣನಿಗೆ ದಾನ ಮಾಡಬೇಕು. ದಾನಮಂತ್ರವು ಹೀಗಿದೆ – ದೇವ ದೇವ ಜಗನ್ನಾಥ ಲಕ್ಷ್ಮೀದಾಮೋ-ದರ ಪ್ರಭೋ । ಚಾತುರ್ಮಾಸ್ಯೇ ತ್ವಯಾಽಽಜ್ಞಪ್ತಃ ಕೃತ್ವಾ ವ್ರತಚತುಷ್ಟಯಮ್ । ಭವನ್ಮೂರ್ತಿಂ ಪ್ರದಾಸ್ಯಾಮಿ ತ್ವತ್ ಪ್ರಸಾದಾಭಿಕಾಂಕ್ಷಯಾ ॥ – ದೇವತೆಗಳಿಗೂ ದೇವನಾದ, ಜಗತ್ಸ್ವಾಮಿಯಾದ, ಲಕ್ಷ್ಮೀದಾಮೋದರಸ್ವಾಮಿಯೇ! ಚಾತು-ರ್ಮಾಸ್ಯಸಮಯದಲ್ಲಿ ನಿನ್ನಿಂದ ಆಜ್ಞಾಪಿಸಲ್ಪಟ್ಟವನಾಗಿ, ಶಾಕ- ದಧಿ- ಕ್ಷೀರ -

ದ್ವಿದಗಳಗಳೆಂಬ ನಾಲ್ಕು ವ್ರತಗಳನ್ನು ಮಾಡಿ, ಈಗ ಆ ವ್ರತಸಮಾಪ್ತಿಯನ್ನು ಮಾಡಿ, ನಿನ್ನ ಅನುಗ್ರಹವನ್ನು ಬಯಸುವವನಾಗಿ ನಿನ್ನ ವಿಗ್ರಹವನ್ನು ದಾನವಾಗಿ ಕೊಡುತ್ತಿದ್ದೇನೆ - ಈ ಮಂತ್ರವನ್ನು ಹೇಳಿ ತುಳಸೀದಳಗಳಿಂದ ಚೆನ್ನಾಗಿ ಪೂಜಿಸಿದ ಆ ಮೂರ್ತಿಯನ್ನು ಬ್ರಾಹ್ಮಣನಿಗೆ ದಾನ ಕೊಡಬೇಕು. ಅನಂತರ ತನ್ನ ಸಂಪತ್ತಿಗೆ ಅನುಗುಣವಾಗಿ ಬ್ರಾಹ್ಮಣರಿಗೆ ಭೋಜನ ಮಾಡಿಸತಕ್ಕದ್ದು.

## ಚಾತುರ್ಮಾಸ್ಯದಲ್ಲಿ ಮಾಡಬಹುದಾದ ಇತರ ವ್ರತಗಳು

### ಪ್ರಜಾಪತಿ ವ್ರತ

ಪಿಪ್ಪಲಾದರು ಹೇಳುತ್ತಾರೆ: ಯಾರಾದರು ಶ್ರದ್ಧೆಯಿಂದ ಪ್ರಜಾಪತಿ ವ್ರತ'ವನ್ನು ಆಚರಿಸಿದರೆ ಒಳ್ಳೆಯ ಮಕ್ಕಳ ತಂದೆ-ತಾಯಿಯರಾಗುತ್ತಾರೆ ಎಂದು.ಇಲ್ಲಿ ಹೇಳಿರುವ ಪ್ರಜಾಪತಿ ವ್ರತ'ವನ್ನು ಋಗ್-ವಿಧಾನದಲ್ಲಿ ವಿವರಿಸಿದ್ದಾರೆ. ಇದು ಪುರುಷಸೂಕ್ತದಲ್ಲಿ ಮಾಡುವ ಭಗವಂತನ ಉಪಾಸನೆ. ಪ್ರತೀತಿಂಗಳು ಶುಕ್ಲಪಕ್ಷದಲ್ಲಿ ಪುರುಷಸೂಕ್ತ ಹೋಮ- ಒಂದು ವರ್ಷ ಮಾಡಿದರೆ ಅದು ಪ್ರಜಾಪತಿವ್ರತವೆನಿಸುತ್ತದೆ. ಏಕಾದಶಿ ದಿನದಂದು ಪುರುಷಸೂಕ್ತದ ಹದಿನಾರು ಮಂತ್ರಗಳಿಂದ ಷೋಡಶೋಪಚಾರ ಪೂಜೆ ಮಾಡಬೇಕು. ಆಸನ, ಸ್ವಾಗತ, ಪಾದ್ಯ(ಕಾಲು ತೊಳೆಯುವ ನೀರು), ಅರ್ಘ್ಯ (ಕೈ ತೊಳೆಯುವನೀರು), ಆಚಮನ, ಮಧುಪರ್ಕ, ಪುನರಾಚಮನ, ಸ್ನಾನ, ವಸ್ತ್ರ, ಆಭರಣ, ಗಂಧ, ಪುಷ್ಪ, ಧೂಪ, ನೈವೇದ್ಯ, ನೀರಾಜನ ಅಥವಾ ಪ್ರದಕ್ಷಿಣ ನಮಸ್ಕಾರ ಮಾಡಿ, ಪೂರ್ಣ ಉಪವಾಸವಿರಬೇಕು. ಮರುದಿನ(ದ್ವಾದಶಿ) ಆಹುತಿ ಕೊಡಲು ಅಕ್ಕಿಯನ್ನು ಹಾಲಿನಲ್ಲಿ ಬೇಯಿಸಬೇಕು(ಚರು). ಬೇಯಿಸುವಾಗ ಅದನ್ನು ಪುರುಷಸೂಕ್ತದಿಂದ ಅಭಿಮಂತ್ರಣೆ ಮಾಡಬೇಕು. ತದನಂತರ ಅಗ್ನಿಪ್ರತಿಷ್ಠೆ ಮಾಡಿ ಹೋಮ ಮಾಡಬೇಕು. ಇಲ್ಲಿ ಮೊದಲು ಹದಿನಾರು ಮಂತ್ರಗಳಿಂದ ಷೋಡಶ-ಸಂಸ್ಕಾರ ಮಾಡಬೇಕು. ಅನಂತರ ಪುರುಷ ಸೂಕ್ತವನ್ನು ಹೇಳಿಕೊಂಡು ಅಗ್ನಿದೇವತೆ-ಯಲ್ಲಿ ಸನ್ನಿಹಿತನಾದ ಭಗವಂತನನ್ನು ಸ್ತೋತ್ರ ಮಾಡಬೇಕು. ಹನ್ನೆರಡು ತಿಂಗಳಿಗೆ ಭಗವಂತನ ಹನ್ನೆರಡು ರೂಪಗಳು. ಮಾರ್ಗಶಿರ-ಕೇಶವ, ಪುಷ್ಯ-ನಾರಾಯಣ, ಮಾಘ-ಮಾಧವ, ಫಾಲ್ಗುಣ-ಗೋವಿಂದ, ಚೈತ್ರ-ವಿಷ್ಣು, ವೈಶಾಖ-ಮಧುಸೂದನ,

ಜ್ಯೇಷ್ಠ -ತ್ರಿವಿಕ್ರಮ, ಆಷಾಢ-ವಾಮನ, ಶ್ರಾವಣ -ಶ್ರೀಧರ, ಭಾದ್ರಪದ-ಹೃಷಿಕೇಶ, ಆಶ್ವೀಜ-ಪದ್ಮನಾಭ, ಕಾರ್ತಿಕ- ದಾಮೋದರ ಆಯಾ ತಿಂಗಳ ದ್ವಾದಶಿಯಲ್ಲಿ ಆಯಾ ತಿಂಗಳ ಭಗವಂತನ ವಿಶಿಷ್ಟರೂಪಕ್ಕೆ ಆಹುತಿ. ನಂತರ ಹದಿನಾರು ಬಾರಿ ತುಪ್ಪದ ಆಹುತಿ. ನಂತರ ಹಾಲಿನಲ್ಲಿ ಬೇಯಿಸಿದ ಅನ್ನದ ಹದಿನಾರು ಆಹುತಿ. ಕೊನೆಯಲ್ಲಿ ಪುನಃ ಪುರುಷಸೂಕ್ತದ ಹದಿನಾರು ಮಂತ್ರಗಳಿಂದ ಹದಿನಾರು ಬಾರಿ ತುಪ್ಪದ ಆಹುತಿ. ಹೀಗೆ ಪ್ರತೀ ಶುಕ್ಲಪಕ್ಷದ ಏಕಾದಶಿಯಂದು ಉಪವಾಸವಿದ್ದು ದ್ವಾದಶಿ ದಿನ ಭಗವಂತನ ಪೂಜೆ. ಇನ್ನು ಸಾಧ್ಯವಾದರೆ ದ್ವಾದಶಿಯಂದು ಹದಿನಾರು ಮಂದಿ ಯೋಗ್ಯ ಮಂದಿಗೆ ಭೋಜನ ಹಾಕುವುದು. ಕೊನೆಯಲ್ಲಿ ಆಹುತಿ ಕೊಟ್ಟ ಅನ್ನದ ಶೇಷ ಭಾಗವನ್ನು ಹೆಂಡತಿ ತನ್ನ ಗಂಡನಲ್ಲಿ ನಾರಾಯಣನಿದ್ದಾನೆ' ಎಂದು ತಿಳಿದು, ಆತನಿಗೆ ಭಕ್ತಿಪೂರ್ವಕ ನಮಸ್ಕಾರ ಮಾಡಿ ಸೇವಿಸಬೇಕು. ನಮ್ಮೊಳಗೆ ಲಕ್ಷ್ಮೀ ನಾರಾಯಣರಿದ್ದಾರೆ ಎನ್ನುವ ಅನುಸಂಧಾನದಿಂದ ಪುರುಷ ಸೂಕ್ತ ಹೇಳಿ ದಂಪತಿಗಳು ಊಟ ಮಾಡಬೇಕು. ಈ ವ್ರತವನ್ನು ಹನ್ನೆರಡು ತಿಂಗಳು ಪೂರ್ಣ ಭಕ್ತಿ ಮತ್ತು ನಂಬಿಕೆಯಿಂದ ಮಾಡಿದರೆ ಆಗ ದಂಪತಿಗಳಿಗೆ ಉತ್ತಮ ಸಂತಾನವಾಗುತ್ತದೆ. ಈ ವ್ರತ ಮಾಡುವುದರಿಂದ ಮಕ್ಕಳೇ ಇಲ್ಲದವರಿಗೆ ಮಕ್ಕಳಾಗುತ್ತಾರೆ, ಗಂಡು ಮಗು ಇಲ್ಲದವರಿಗೆ ಗಂಡು ಮಗುವಾಗುತ್ತದೆ, ಮಕ್ಕಳು ಹುಟ್ಟಿ ಸಾಯುವ ಪ್ರಸಂಗ ಇದ್ದರೆ ಅದು ನಿಲ್ಲುತ್ತದೆ. ಇದನ್ನು ಋಷ್ಯಶೃಂಗ ಮುನಿಗಳು ಹೇಳಿದರು ಎನ್ನುತ್ತಾರೆ.

ಆ ಕಾಲದಲ್ಲಿ ದೇವಸ್ಥಾನಗಳಲ್ಲಿ ಪ್ರತಿಷ್ಠೆಗಳನ್ನು, ಯಾಗಾದಿ ಕಾರ್ಯಗಳನ್ನು ಮತ್ತು ಮಂಗಳ ಕಾರ್ಯಗಳನ್ನು ಮಾಡಬಾರದು. ತಾಂಬೂಲವನ್ನು ಬಿಟ್ಟವನು ಭೋಗವುಳ್ಳವನು ಒಳ್ಳೆಯ ಧ್ವನಿ ಉಳ್ಳವನು ಆಗುತ್ತಾನೆ. ತುಪ್ಪವನ್ನು ಬಿಟ್ಟವನು ಸೌಂದರ್ಯವನ್ನು ಮೃದು ದೇಹವನ್ನು ಹೊಂದುತ್ತಾನೆ. ಹಣ್ಣುಗಳನ್ನು ಬಿಟ್ಟವನು ಬಹುವಾದ ಮಕ್ಕಳನ್ನು ಹೊಂದುತ್ತಾನೆ. ಮುತ್ತುಗದ ಎಲೆಯಲ್ಲಿ ಊಟಮಾಡುವವನು ರೂಪವಂತನೂ ಭೋಗಿಯಾಗುತ್ತಾನೆ. ಹಾಲು, ಮೊಸರು ಬಿಟ್ಟವನು ಗೋಲೋಕ-ವನ್ನು ಹೊಂದುತ್ತಾನೆ. ಕಾಲಿಗೆ ಮತ್ತು ತಲೆಗೆ ಎಣ್ಣೆ ಹಚ್ಚುವುದನ್ನು ಬಿಡುವವನು ಕಾಂತಿಮಂತನು ಇಂದ್ರಿಯಪಾಟವ ಉಳ್ಳವನು ಆಗುತ್ತಾನೆ ಮತ್ತು ಬಹುಧನವುಳ್ಳ-ವನು ಆಗುತ್ತಾನೆ. ಬೆಲ್ಲವನ್ನು ಬಿಟ್ಟುವನು ಮಧುರತನವನ್ನು ಹೊಂದುತ್ತಾನೆ.

ಎಣ್ಣೆಯನ್ನು ಬಿಟ್ಟವನು ಸಂತತಿಯನ್ನು ಹೊಂದುತ್ತಾನೆ. ಸಾಸುವೆ ಮುಂತಾದವುಗಳ ಎಣ್ಣೆಯನ್ನು ಬಿಟ್ಟರೆ ಶತ್ರುಗಳು ನಾಶವಾಗುತ್ತಾರೆ. ಒಳ್ಳೆಯ ವಾಸನೆಯ ಎಣ್ಣೆಯನ್ನು ಬಿಟ್ಟರೆ ಹೆಚ್ಚಾದ ಐಶ್ವರ್ಯ ಬರುತ್ತದೆ. ಹೂವನ್ನು ಬಿಟ್ಟರೆ ಸ್ವರ್ಗದಲ್ಲಿ ವಿಧ್ಯಾಧರನಾಗುತ್ತಾನೆ. ಯೋಗಾಭ್ಯಾಸ ಮಾಡುವವನು ಬ್ರಹ್ಮ- ಸಾಯುಜ್ಯವನ್ನು ಹೊಂದುತ್ತಾನೆ. ವಿಷ್ಣುವಿನ ಪಾದಗಳಿಗೆ ನಮಸ್ಕರಿಸಿದವನು ಗೋದಾನ ಫಲ ಪಡೆಯುತ್ತಾನೆ. ಸೂರ್ಯನು ಮಿಥುನರಾಶಿಗೆ ಬಂದಾಗ ವಿಷ್ಣುವನ್ನು ಮಲಗಿಸಬೇಕು ತುಲಾರಾಶಿಗೆ ಬಂದಾಗ ಎಬ್ಬಿಸಬೇಕು. ಚಾತುರ್ಮಾಸ್ಯ ವ್ರತ ಮಾಡಿದರೆ ಸಾವಿರ ಅಶ್ವಮೇಧಯಾಗ ಮಾಡಿದ ಫಲ ಬರುತ್ತದೆ. ಪುಷ್ಕರದಲ್ಲಿ ಸ್ನಾನ ಮಾಡಿದರೆ ಗಂಗಾ ಸ್ನಾನ ಮಾಡಿದ ಫಲ ದೊರೆಯುತ್ತದೆ. ಯಾವಾಗಲು ನೆಲದ ಮೇಲೆ ಊಟ ಮಾಡುವವನು ರಾಜನಾಗುತ್ತಾನೆ. ನಿತ್ಯವೂ ಒಪ್ಪತ್ತು ಊಟಮಾಡಿದವನು ಅಗ್ನಿಷ್ಟೋಮ ಯಾಗದ ಫಲವನ್ನು ಪಡೆಯುತ್ತಾನೆ. ಹರಿಗೆ ನೂರೆಂಟು ನಮಸ್ಕಾರಗಳನ್ನು ಮಾಡಿದವನು ಹಂಸದಿಂದ ಕೂಡಿರುವ ವಿಮಾನದಲ್ಲಿ ಕುಳಿತುಕೊಂಡು ಹೋಗುತ್ತಾನೆ. ವಿಷ್ಣುವಿನೆದುರಿಗೆ ಗೀತವನ್ನು ಹಾಡುವವನು ವಾದ್ಯವನ್ನು ಬಾರಿಸುವವನು ಗಂಧರ್ವಲೋಕವನ್ನು ಹೊಂದುತ್ತಾನೆ. ಪಂಚಗವ್ಯ-ವನ್ನು ಕುಡಿಯುವವನು ಚಾಂದ್ರಾಯಣ ಫಲವನ್ನು ಹೊಂದುತ್ತಾನೆ. ದೇವರ ಎದುರಿನಲ್ಲಿ ಜನರಿಗೆ ಶಾಸ್ತ್ರಗಳನ್ನು ಬೋಧಿಸುವವನು ವಿಷ್ಣು ಪದವನ್ನು ಹೊಂದು-ತ್ತಾನೆ. ತುಳಸೀ ದಳದಿಂದ ಪೂಜಿಸಿದವನು ವೈಕುಂಠವನ್ನು ಹೊಂದುತ್ತಾನೆ. ದೇವರನ್ನು ತುಳಸಿಯಿಂದ ಪ್ರೋಕ್ಷಿಸಿದರೆ ಉತ್ತಮ ಸ್ಥಾನವನ್ನು ಹೊಂದುತ್ತಾನೆ. ಮನೆಯಲ್ಲಿ ತಣ್ಣೀರಿನಲ್ಲಿ ಸ್ನಾನ ಮಾಡಿದವನು ನಿರ್ಮಲವಾದ ದೇಹವನ್ನು ಹೊಂದುತ್ತಾನೆ. ಎಲೆಗಳಲ್ಲಿ ಊಟಮಾಡಿದರೆ ಅವನಿಗೆ ಕುರುಕ್ಷೇತ್ರತೀರ್ಥದಲ್ಲಿ ಸ್ನಾನ ಮಾಡಿದ ಫಲ ಬರುತ್ತದೆ. ಕಲ್ಲಿನ ಮೇಲೆ ದಿನವೂ ಊಟ ಮಾಡಿದರೆ ಪ್ರಯಾಗದಲ್ಲಿ ಸ್ನಾನ ಮಾಡಿದ ಫಲವು ಬರುತ್ತದೆ. ಯಾರು ಸ್ತ್ರೀಸಂಗವನ್ನು ಬಿಡುವನೋ ಅವನು ಒಂದು ಮನುವಿನ ಕಾಲದವರೆಗೂ ವಿಷ್ಣು ಲೋಕದಲ್ಲಿ ಸುಖಿಸುತ್ತಾನೆ. ಹಾಲು, ಮೊಸರು, ಮಜ್ಜಿಗೆ, ಬೆಲ್ಲ, ಕಾಯಿ ಪಲ್ಯಗಳನ್ನು ಬಿಟ್ಟರೆ ಅವನು ಮುಕ್ತಿಯನ್ನು ಹೊಂದುವನು. ನೆಲ್ಲಿ ಕಾಯಿಯನ್ನು ಜಜ್ಜಿ ಹಾಕಿಕೊಂಡು ಸ್ನಾನ ಮಾಡಿದವರು ಪ್ರತಿ ದಿನವೂ ಬಹು ಪುಣ್ಯವನ್ನು ಹೊಂದುತ್ತಾರೆ. ನೆಲದಮೇಲೆ ಮಲಗತಕ್ಕವನು ಸತ್ತ ನಂತರ ಒಳ್ಳೆಯ

ವಿಮಾನವನ್ನು ಹೊಂದುತ್ತಾನೆ, ಹಾಗೆ ನೆಲದಮೇಲೆ ಮಲಗಿ ತೈಲಾಭ್ಯಂಜನ ಮಾಡದಿದ್ದರೆ ಹತ್ತು ಸಾವಿರ ವರ್ಷಗಳವರೆವಿಗೆ ರೋಗ ಬರುವುದಿಲ್ಲ. ಬಹಳ ಜನ ಮಕ್ಕಳನ್ನು ಹೊಂದುತ್ತಾನೆ. ಐಶ್ವರ್ಯವನ್ನು ಹೊಂದುತ್ತಾನೆ. ಕುಷ್ಟರೋಗವೂ ಬರುವುದಿಲ್ಲ. ನಕ್ತ ಭೋಜನ ಮಾಡುವವನು ತೀರ್ಥಯಾತ್ರೆಯ ಫಲವನ್ನು ಹೊಂದುತ್ತಾನೆ. ಮತ್ತೊಬ್ಬರನ್ನು ಯಾಚಿಸದಿದ್ದರೆ ಕೆರೆ ಕಟ್ಟೆಗಳನ್ನು ಕಟ್ಟಿಸಿದ ಪುಣ್ಯವು ಬರುತ್ತದೆ. ಚಾತುರ್ಮಾಸ್ಯದಲ್ಲಿ ಜೇನನ್ನು ಉಪಯೋಗಿಸಿದರೆ ಪಾಪವು ಬರುವುದು. ಅದನ್ನು ಬಿಟ್ಟರೆ ಬರುವ ಪುಣ್ಯವನ್ನು ಕೇಳಿ. ಎಲ್ಲಾ ಯಜ್ಞಗಳನ್ನು ಮಾಡಿದರೆ ಬರುವ ಫಲವನ್ನು ಅದರಿಂದ ಹೊಂದುತ್ತಾನೆ. ದಾಳಿಂಬೆ ಮಾದಳ ತೆಂಗಿನಕಾಯಿ ಇವನ್ನು ಚಾತುರ್ಮಾಸ್ಯದಲ್ಲಿ ಬಿಡಬೇಕು. ಹಾಗೆ ಬಿಟ್ಟರೆ ಧನಿಕನಾಗಿ ಸುಂದರನಾಗಿ ಉತ್ತಮ ಕುಲದಲ್ಲಿ ಹುಟ್ಟುತ್ತಾನೆ. ಯಾರು ಈ ಚಾತುರ್ಮಾಸ್ಯದಲ್ಲಿ ಒಂದೇ ಹೊತ್ತು ಊಟ ಮಾಡುತ್ತಾನೆಯೋ ಅವನು ಸೂರ್ಯನು ಹುಟ್ಟಿದಮೇಲೆ ಎಷ್ಟು ಮುಹೂರ್ತಗಳ ಅನಂತರ ಊಟಮಾಡುವನೋ ಅಷ್ಟು ಸಾವಿರ ವರ್ಷಗಳವರೆಗೆ ವೈಕುಂಠದಲ್ಲಿ ಸುಖಿಸುತ್ತಾನೆ. ಯಾರು ಈ ಚಾತುರ್ಮಾಸ್ಯದಲ್ಲಿ ಒಂದೇ ಹೊತ್ತು ಊಟ ಮಾಡು-ತ್ತಾನೆಯೋ ಅವನು ಸೂರ್ಯನು ಹುಟ್ಟಿದಮೇಲೆ ಎಷ್ಟು ಮುಹೂರ್ತಗಳ ಅನಂತರ ಊಟ ಮಾಡುವನೋ ಅಷ್ಟು ಸಾವಿರ ವರ್ಷಗಳವರೆಗೆ ವೈಕುಂಠದಲ್ಲಿ ಸುಖಿಸುತ್ತಾನೆ. ಅಕ್ಕಿ ಯವ ಗೋಧೂಮಗಳನ್ನು ಬಿಟ್ಟವನು ಶಾಸ್ತ್ರೋಕ್ತವಾಗಿ ಮಾಡಿ ಸರಿಯಾಗಿ ದಕ್ಷಿಣೆ ಕೊಟ್ಟರೆ ಅಶ್ವಮೇಧಕ್ಕೆ ಯಾವ ಪುಣ್ಯವು ಬರುವುದೋ ಆ ಪುಣ್ಯವನ್ನು ಹೊಂದುತ್ತಾನೆ. ಧನಧಾನ್ಯಗಳಿಂದ ಕೂಡಿದವನಾಗಿ ಬಹಳ ಮಕ್ಕಳನ್ನು ಹೊಂದು-ತ್ತಾನೆ . ತುಳಸೀದಳ ದರ್ಭೆಗಳನ್ನು ಇಟ್ಟುಕೊಂಡು ಈ ಚಾತುರ್ಮಾಸ್ಯದಲ್ಲಿ ತರ್ಪಣ ಮಾಡಿದರೆ ಅಧಿಕ ಫಲ ಬರುತ್ತದೆ. ಚಾತುರ್ಮಾಸ್ಯಗಳು ಪೂರ್ತಿಯಾಗಿ ದಿನವೂ ಸ್ನಾನಮಾಡುವವನು ನಾಲ್ಕು ಮನ್ವಂತರಗಳವರೆಗೆ ವೈಕುಂಠವನ್ನು ಹೊಂದುತ್ತಾನೆ. ಚಾತುರ್ಮಾಸ್ಯದ ನಾಲ್ಕು ತಿಂಗಳೂ ತಾನೇ ಅಡಿಗೆ ಮಾಡಿಕೊಂಡು ಊಟ ಮಾಡಿದರೆ ಹತ್ತು ಸಾವಿರ ವರ್ಷಗಳವರೆವಿಗೂ ಇಂದ್ರ ಲೋಕದಲ್ಲಿ ಸುಖಿಸುವನು. ನಾಲ್ಕು ಮಾಸಗಳಲ್ಲಿಯೂ ಯಾರು ಮೌನವಾಗಿರುವರೋ ಅವರು ವೈಕುಂಠವನ್ನು ಹೊಂದಿ ಅನಂತರ ಬ್ರಹ್ಮಲೋಕವನ್ನು ಹೊಂದುತ್ತಾರೆ. ಮೌನದಿಂದ ಊಟಮಾಡು-ವವನು ದುಃಖವನ್ನು ಹೊಂದುವುದೇ ಇಲ್ಲ. ಎರಡು ಹೊತ್ತು ಅಥವಾ ಒಂದು

ಹೊತ್ತು ಆದರೂ ಯಾರು ಪುರಾಣವನ್ನು ಕೇಳುತ್ತಾನೆಯೋ ಅವನು ತನ್ನ ಪಾಪಗ-ಳನ್ನೆಲ್ಲಾ ಕಳೆದುಕೊಂಡು ವೈಕುಂಠವನ್ನು ಹೊಂದುತ್ತಾನೆ.

## ಧಾರಣಪಾರಣವ್ರತ

ಈ ವ್ರತವನ್ನು ಆಷಾಢಮಾಸ ಅಥವಾ ಕಾರ್ತಿಕಮಾಸದ ಪಾಡ್ಯದಿಂದ ಅಮಾವಾಸ್ಯೆಯವರೆಗೆ ಒಟ್ಟು ಒಂದು ತಿಂಗಳು ಕಾಲ ಆಚರಿಸಬೇಕು. ಮೊದಲನೆಯ ದಿನ ಉಪವಾಸ ಮಾಡಿ, ಮಾರನೆಯ ದಿನ ಪಾರಣೆ ಮಾಡಬೇಕು. ಇದನ್ನೇ ಧಾರಣ- ಪಾರಣವ್ರತವೆನ್ನುವರು.

ಕ್ರಮ: ವ್ರತದ ಆರಂಭದಂದು(ಉಪವಾಸ ದಿನದಂದು) ಪುಣ್ಯಾಹವಾಚನೆ ಮಾಡಿಸಿಕೊಂಡು ವ್ರತವನ್ನಾರಂಭಿಸಬೇಕು. ಅಂದು ಕೇವಲ ತೀರ್ಥಪ್ರಾಶನ ಮಾಡಬೇಕು. ಪಾರಣೇ ದಿನ ನೂರೆಂಟು ಬಾರಿ ಮೂಲ ಮಂತ್ರದಿಂದ ನಾರಾಯಣನಿಗೆ ಅರ್ಘ್ಯವನ್ನು ಬಿಟ್ಟು ದಂಪತಿ ಭೋಜನ ಮಾಡಿಸಿ, ತಾನು ಪಾರಣೆ ಮಾಡಬೇಕು. ದಂಪತೀಭೋಜನವನ್ನು ಮಾಡಿಸುವುದು ಅಸಾಧ್ಯವಾದರೆ ಒಬ್ಬ ಬ್ರಾಹ್ಮಣನಿಗಾದರೂ ಭೋಜನವನ್ನು ಮಾಡಿಸಿ, ನಂತರ ತಾವು ಭೋಜನವನ್ನು ಮಾಡಬೇಕು. ಹೀಗೆ ವ್ರತವನ್ನು ತಿಂಗಳು ಪರ್ಯಂತ ಆಚರಿಸಿ ಈ ವ್ರತವನ್ನು ಮುಗಿಸಿದಮೇಲೆ ಉದ್ಯಾಪನ ಮಾಡಿ ಲಕ್ಷ್ಮೀನಾರಾಯಣನ ಪ್ರತಿಮೆಯನ್ನು ತಂದು ಪಂಚಾಮೃತದಿಂದ ಅರ್ಚಿಸಿ, ಪುರಾಣ ಶ್ರವಣ ಮಾಡಿ, ಜಾಗರಣ ಮಾಡಿ, ನಂತರ ಉದ್ಯಾಪನೆ ಮಾಡಿಕೊಳ್ಳಬೇಕು.

ಸುಗ್ರೀವನು ತನ್ನ ಅಣ್ಣನನ್ನು ಕೊಂದ ಪಾಪ ಪರಿಹಾರಕ್ಕಾಗಿ ಶ್ರೀರಾಮನ ಅನುಜ್ಞೆಯಂತೆ ಧಾರಣ-ಪಾರಣ ವ್ರತವನ್ನು ಮಾಡಿದನು. ಹಿಂದಿನ ಜನ್ಮದಲ್ಲಿ ನಾರದರು ಈ ವ್ರತವನ್ನು ಮಾಡಿದ್ದರಿಂದ ಜಿತೇಂದ್ರಿಯರಾಗಿರುವರು. ಬಂಧು-ಬಾಂಧವರ ವಧನಿಮಿತ್ತವಾಗಿ ದುಃಖಗೊಂಡಿದ್ದ ಧರ್ಮರಾಜನು ಈ ಧಾರಣ-ಪಾರಣವನ್ನು ಮಾಡಿ ಸರ್ವಪಾಪದಿಂದ ಮುಕ್ತನಾದನು.

## ಚಾಂದ್ರಾಯಣ ವ್ರತ

ಈ ವ್ರತವು ಎರಡು ವಿಧವಾಗಿದೆ. (ಈ ವ್ರತವನ್ನು ಆಷಾಢಮಾಸ ಶುಕ್ಲಪಕ್ಷದ

ಪಾಡ್ಯದಿಂದ ಅಮಾವಾಸ್ಯೆಯವರೆಗೆ ಅಥವಾ ಕಾರ್ತೀಕಮಾಸದ ಶುಕ್ಲಪಕ್ಷದ ಪಾಡ್ಯದಿಂದ ಅಮಾವಾಸ್ಯೆಯವರೆಗೆ ಆಚರಿಸಬೇಕು.)

1. ಆರಂಭದ ದಿವಸವಾದ ಪಾಡ್ಯದಂದು ಒಂದೇ ತುತ್ತು ಭೋಜನ ಮಾಡಿ ಒಂದೇ ಲೋಟ ನೀರು ಕುಡಿಯಬೇಕು. ನಂತರ ದಿನವಿಡೀ ಯಾವುದೇ ಆಹಾರ ಪಾನೀಯಗಳನ್ನು ಸೇವಿಸಬಾರದು. ದ್ವಿತೀಯಾದಂದು ಮಾಡಿದ ಅಡುಗೆ ಪದಾರ್ಥಗಳನ್ನೆಲ್ಲಾ ಸೇರಿಸಿ ಕೇವಲ ಎರಡು ತುತ್ತು ಮಾತ್ರ ಭೋಜನ ಮಾಡಬೇಕು. ಎರಡೇ ಲೋಟ ನೀರು ಕುಡಿಯಬೇಕು. ಮೂರನೆಯ ದಿನ ಮೂರು ತುತ್ತು ಅನ್ನ, ಮೂರು ಲೋಟ ನೀರು ಕುಡಿಯಬೇಕು. ಹೀಗೆ ಏಕಾದಶಿಯವರೆಗೆ ಮಾಡಿ ಏಕಾದಶಿಯಂದು ಶುದ್ಧೋಪವಾಸವನ್ನು ಮಾಡಿ, ದ್ವಾದಶಿಯ ದಿವಸ ಮಾಡಿದ ಅಡುಗೆ ಪದಾರ್ಥಗಳನ್ನೆಲ್ಲಾ ಸೇರಿಸಿ ಕೇವಲ ಹನ್ನೆರಡು ತುತ್ತು ಆಹಾರ ಮತ್ತು ಹನ್ನೆರಡು ಲೋಟದಷ್ಟು ನೀರನ್ನು ಮಾತ್ರ ಭೋಜನಸಮಯದಲ್ಲಿ ಸ್ವೀಕರಿಸಬೇಕು. ಬೇರೆ ಸಮಯದಲ್ಲಿ ಯಾವುದೇ ರೀತಿಯ ಆಹಾರ-ಪಾನೀಯಗಳನ್ನು ಸೇವಿಸಬಾರದು. ಕೊನೆಗೆ ಹುಣ್ಣಿಮೆಯಂದು ಮಾಡಿದ ಆಹಾರಪದಾರ್ಥಗಳನ್ನೆಲ್ಲಾ ಸೇರಿಸಿ ಕೇವಲ ಹದಿನೈದು ತುತ್ತು ಆಹಾರ ಮತ್ತು ಹದಿನೈದು ಲೋಟ ನೀರನ್ನು ಸ್ವೀಕರಿಸಬೇಕು. ಕೃಷ್ಣಪಕ್ಷದ ಪಾಡ್ಯದಿಂದ ಒಂದೊಂದು ತುತ್ತು ಆಹಾರ ಮತ್ತು ನೀರನ್ನು ಕಡಿಮೆ ಮಾಡುತ್ತಾ ವ್ರತವನ್ನು ಆಚರಿಸಬೇಕು. ಏಕಾದಶಿಯಂದು ಸಂಪೂರ್ಣ ಉಪವಾಸ ಮಾಡಿ, ದ್ವಾದಶಿ ಪಾರಣೆ ದಿನದಂದು ಪೂರ್ವಕ್ರಮದಂತೆ ಆಹಾರ ನೀರನ್ನು ಕಡಿಮೆ ಮಾಡುತ್ತಾ ಅಮಾವಾಸ್ಯೆ ದಿನ ಪೂರ್ಣ ಉಪವಾಸ ಮಾಡಬೇಕು. ಹೀಗೆ ಈ ವ್ರತವನ್ನು ಒಂದು ತಿಂಗಳು ಪೂರ್ತಿ ಆಚರಿಸಬೇಕು. ಮಾರನೆಯ ದಿನ ಪ್ರತಿಪತ್ತಿನಂದು ತನ್ನ ಯೋಗ್ಯತಾನುಸಾರ ಬ್ರಾಹ್ಮಣ - ಸುವಾಸಿನಿ -ಯರಿಗೆ ಮೃಷ್ಟಾನ್ನಭೋಜನ ಮಾಡಿಸಿ, ತಾನು ತೀರ್ಥದೊಂದಿಗೆ ಹರಿನೈವೇದ್ಯ-ವನ್ನು ಸ್ವೀಕರಿಸಬೇಕು. ಈ ವ್ರತಕ್ಕೆ ಉದ್ಯಾಪನೆ ಮಾಡುವ ಸಂಪ್ರದಾಯವಿಲ್ಲ.

2. ಎರಡನೆಯ ವಿಧಾನ ಹೀಗಿದೆ – ಪಾಡ್ಯದಿಂದ ಅಮಾವಾಸ್ಯೆವರೆಗಿನ 30 ದಿನಗಳು ಮಾಡಿದ ಅಡುಗೆ ಪದಾರ್ಥಗಳಲ್ಲಿ ಹರಿನಿವೇದನವಾದನಂತರ ಎಂಟು ತುತ್ತು ಆಹಾರ ಎಂಟು ಲೋಟದಷ್ಟು ನೀರನ್ನು ಮಾತ್ರ ಸ್ವೀಕರಿಸಬಹುದು. ಏಕಾದಶೀ

ಹಾಗೂ ಅಮಾವಾಸ್ಯೆ ದಿನದಂದು ಪೂರ್ಣ ಉಪವಾಸ ಮಾಡಿ ಮಾರನೆಯ ದಿನ ಅಂದರೆ ಪಾಡ್ಯದಂದು ಬ್ರಾಹ್ಮಣ-ಸುವಾಸಿನಿಯರಿಗೆ ಮೃಷ್ಟಾನ್ನಭೋಜನ ಮಾಡಿಸಿ ತಾನು ತೀರ್ಥಪ್ರಸಾದ ಸ್ವೀಕರಿಸಬೇಕು.

## ಏಕಭುಕ್ತ (ಏಕೋಡಿ) ವ್ರತ

ಈ ವ್ರತವನ್ನು ಆಷಾಢಶುದ್ಧದ್ವಾದಶಿಯಿಂದ ಕಾರ್ತೀಕಶುದ್ಧದ್ವಾದಶೀ ಅಂದರೆ ತುಳಸೀವಿವಾಹದ ದಿನದವರೆಗೂ ಆಚರಿಸುವುದು.

ವ್ರತವನ್ನು ಆಚರಿಸುವಾಗ ಪಾಲಿಸಬೇಕಾದ ನಿಯಮಗಳು – ಊಟಕ್ಕೆ ಕೂಡುವಾಗ ಮಾಡಿದ ಆಹಾರ ಪದಾರ್ಥಗಳೆಲ್ಲವನ್ನೂ ಭೋಜನ ಪಾತ್ರೆಯಲ್ಲಿ ಬಡಿಸಿಕೊಂಡು ಕೂಡಬೇಕು. ನಂತರ ಊಟ ಮುಗಿಯುವವರೆಗೂ ಯಾವುದೇ ರೀತಿಯ ಪದಾರ್ಥವನ್ನು ಹಾಕಿ/ಹಾಕಿಸಿಕೊಳ್ಳಬಾರದು. ರಾತ್ರಿ ಊಟ ಮಾಡು-ವಾಗಲೂ ಇದೇ ನಿಯಮವನ್ನು ಪಾಲಿಸಬೇಕು. ಆದರೆ ಜಲಪಾನಕ್ಕೆ ಈ ನಿಯಮ ಅನ್ವಯವಾಗುವುದಿಲ್ಲ.

## ಮೌನಭೋಜನ ವ್ರತ

ಸ್ನಾಸ್ಯತೋ ವರುಣಃ ಕಾಂತಿ ಜುಹ್ವತೋಽಗ್ನಿಃ ಶ್ರಿಯಂ ಹರೇತ್ ।
ಭುಂಜತೋ ಮೃತ್ಯುರಾಯುಷ್ಯಂ ತಸ್ಮಾನ್ಮೌನಂ ತ್ರಿಷು ಸ್ಮೃತಮ್ ॥

ಸ್ನಾನಮಾಡುವಾಗ ಮತ್ತು ಹೋಮ ಮಾಡುವಾಗ ಹಾಗೂ ಭೋಜನ ಮಾಡುವಾಗ ಮಾತನಾಡದೇ ಹರಿಸ್ಮರಣೆಯನ್ನು ಮಾಡುತ್ತ ಈ ಕೆಲಸಗಳನ್ನು ಪೂರೈಸಬೇಕು. ಸ್ನಾನ ಮಾಡುವಾಗ ಮಾತನಾಡಿದರೆ ಜಲಾಭಿಮಾನಿ ವರುಣನು ದೇಹದ ಕಾಂತಿಯನ್ನು ಕಳೆಯುವನು. ಹೋಮ- ಹವನ ಮಾಡುವಾಗ ಮಾತನಾಡಿದರೆ ಅಗ್ನಿದೇವನು ನಮ್ಮ ಎಲ್ಲತರಹದ ಸಂಪತ್ತನ್ನು ನಾಶಮಾಡುವನು. ಭೋಜನ ಮಾಡುವಾಗ ಮಾತನಾಡಿದರೆ, ಪರಮಾತ್ಮನು ಆಯುಷ್ಯವನ್ನು ಕಳೆಯುವನು. ವ್ರತವನ್ನು ಆಚರಿಸುವಾಗ ಪಾಲಿಸಬೇಕಾದ ನಿಯಮ – ಊಟಕ್ಕೆ ಕುಳಿತಾಗ ಯಾವುದೇ ಕಾರಣದಿಂದಲೂ ಲೌಕಿಕ ಹರಟೆಯನ್ನು ಮಾಡದೆ ಕೇವಲ ಶ್ರೀಹರಿಸ್ಮರಣೆಯನ್ನು ಗೋವಿಂದನಾಮವನ್ನು ಹೇಳುತ್ತಾ ಭೋಜನ ಮಾಡಬೇಕು.

## ದಿಕ್ಸಾಧನವ್ರತ (ದಿಕ್ಕನ್ನು ಸಾಧಿಸುವುದು)

ಚಾತುರ್ಮಾಸ್ಯ ಪ್ರಾರಂಭದಿಂದಲೇ ಈ ವ್ರತವನ್ನು ಆರಂಭಿಸುವುದು. ಆಷಾಢ ಶುದ್ಧದ್ವಾದಶಿಯಿಂದ ಶ್ರಾವಣಶುದ್ಧ ದಶಮೀವರೆಗೆ ಒಂದು ತಿಂಗಳು ಪೂರ್ತಿ ಪೂರ್ವದಿಕ್ಕಿಗೆ ಮುಖ ಮಾಡಿ ಭೋಜನ ಮಾಡಬೇಕು. ಶ್ರಾವಣಶುದ್ಧದ್ವಾದಶಿಯಿಂದ ಭಾದ್ರಪದ ಶುದ್ಧ ದಶಮೀವರೆಗೆ ದಕ್ಷಿಣದಿಕ್ಕಿಗೆ ಮುಖಮಾಡಿ ಊಟಮಾಡುವುದು. ಭಾದ್ರಪದಶುದ್ಧದ್ವಾದಶಿಯಿಂದ ಆಶ್ವಯುಜಶುದ್ಧದಶಮೀವರೆಗೆ ಪಶ್ಚಿಮದಿಕ್ಕಿಗೆ ಮುಖ ಮಾಡಿ ಊಟ ಮಾಡಬೇಕು. ಆಶ್ವಯುಜ ಶುದ್ಧದ್ವಾದಶಿಯಿಂದ ಕಾರ್ತೀಕ ಶುದ್ಧ ದಶಮೀವರೆಗೆ ಉತ್ತರದಿಕ್ಕಿಗೆ ಊಟ ಮಾಡಬೇಕು. ಕಾರ್ತೀಕ ಶುದ್ಧ ದ್ವಾದಶಿಯಂದು (ಉತ್ಥಾನ ದ್ವಾದಶೀ) ಬ್ರಾಹ್ಮಣ-ಸುವಾಸಿನೀ ಭೋಜನ ಮಾಡಿಸಿ ತೀರ್ಥಪ್ರಸಾದ ಸ್ವೀಕರಿಸಿ ಈ ವ್ರತವನ್ನು ಮುಗಿಸಬೇಕು.

## ದಕ್ಷಿಣಹಸ್ತಜಲಪಾನಮ್ (ಬಲಗೈಯಿಂದ ನೀರು ಕುಡಿಯುವುದು)

ಎಡಗೈಯಿಂದ ನೀರನ್ನು ಕುಡಿದರೆ ಸುರಾಪಾನಕ್ಕೆ ಸಮವೆಂದು ಶಾಸ್ತ್ರವಾಣಿ. ಎಲ್ಲಾ ಕಾಲದಲ್ಲೂ ಬಲಗೈಯಿಂದಲೇ ನೀರನ್ನು ಕುಡಿಯಬೇಕು. ಆದರೆ ಸರ್ವೇ ಸಾಮಾನ್ಯವಾಗಿ ಎಡಗೈಯಿಂದ ನೀರು ಕುಡಿಯುವುದು ಹೆಚ್ಚು ರೂಢಿಯಲ್ಲಿದೆ. ಕನಿಷ್ಠಪಕ್ಷ ಚಾತುರ್ಮಾಸ್ಯದ ನಾಲ್ಕು ತಿಂಗಳುಗಳಾದರೂ ಬಲಗೈಯಿಂದಲೇ ನೀರನ್ನು ಕುಡಿಯಬೇಕು. ಇದು ಒಂದು ವ್ರತ. ಈ ವ್ರತವನ್ನು ಮುಗಿಸಿ ವ್ರತದ ಸಂಪೂರ್ಣ ಫಲಪ್ರಾಪ್ತಿಗಾಗಿ ಯೋಗ್ಯ ಬ್ರಾಹ್ಮಣರಿಗೆ ರಜತಪಾತ್ರೆಯನ್ನು (ಲೋಟ) ದಾನ ಮಾಡಬೇಕು.

## ಅಖಂಡವ್ರತ

ಪ್ರತಿದಿನ ಮಧ್ಯಾಹ್ನಮಾತ್ರ ಭೋಜನ ಮಾಡಿ ಸಾಕಾಗುವಷ್ಟು ನೀರನ್ನು ಕುಡಿಯಬಹುದು. ನಂತರ ಮರುದಿನದ ಭೋಜನದವರೆಗೂ ಯಾವುದೇ ರೀತಿಯ ಆಹಾರ ಮತ್ತು ಪಾನೀಯಗಳನ್ನು ಸ್ವೀಕರಿಸಬಾರದು. ಈ ರೀತಿ ಚಾತುರ್ಮಾಸ್ಯದ ಆರಂಭದಿಂದ ಕೊನೆಯವರೆಗೂ ಆಚರಿಸಬೇಕು. ಹೀಗೆ ಆಚರಿಸಲು ಅಸಾಧ್ಯ-ವೆನಿಸಿದರೆ ಚಾತುರ್ಮಾಸ್ಯದ ನಾಲ್ಕು ತಿಂಗಳು ಬರುವ ದಿನತ್ರಯಗಳಲ್ಲಾದರೂ

(ದಶಮೀ - ದ್ವಾದಶೀಗಳಂದು) ಈ ವ್ರತವನ್ನು ಮಾಡಬೇಕು. ಈ ಸಮಯದಲ್ಲಿ ಯೋಗ್ಯ ಬ್ರಾಹ್ಮಣರನ್ನು ಕರೆದು ಉಪಹಾರವನ್ನು ಮಾಡಿಸಿ, ಅವರನ್ನು ತೃಪ್ತಿ-ಗೊಳಿಸಬೇಕು.

## ಲಕ್ಷಪ್ರದಕ್ಷಿಣೆ ವ್ರತ

ಚಾತುರ್ಮಾಸ್ಯ ಈ ಸಂದರ್ಭದಲ್ಲಿ ನಾವು ಹಮ್ಮಿಕ್ರೊಳ್ಳುವ ವ್ರತ.

ಚಾತುರ್ಮಾಸ್ಯೇ ತು ಸಂಪ್ರಾಪ್ತೇ ಕುರ್ಯಾಲ್ಲಕ್ಷಪ್ರದಕ್ಷಿಣಮ್ । ಸ್ವಕೃತಂ ಪಾಪಮು-ಚ್ಚಾರ್ಯ ಪಶ್ಚಾತ್ತಾಪಪುರಃಸರಃ ॥ ಆಷಾಢ್ಯಾಂ ಚ ಸಮಾರಭ್ಯ ಕಾರ್ತಿಕ್ಯಾಂ ತು ಜಿತೇಂದ್ರಿಯಃ । ಲಕ್ಷಂ ಸಮಾಪ್ಯ ಪಶ್ಚಾತ್ತು ಕುರ್ಯಾದುದ್ಯಾಪನಂ ವ್ರತೀ ॥

ಚಾತುರ್ಮಾಸ್ಯವು ಬಂದಾಗ ಲಕ್ಷಪ್ರದಕ್ಷಿಣವ್ರತವನ್ನು ಗ್ರಹಣ ಮಾಡಿ ಆಚರಿಸ-ಬೇಕು. ಆಷಾಢಮಾಸದಲ್ಲಿ ಹುಣ್ಣಿಮೆಯ ದಿನ ಈ ವ್ರತವನ್ನು ಪ್ರಾರಂಭಿಸಿ ಕಾರ್ತೀಕಮಾಸದ ಹುಣ್ಣಿಮೆಯ ವರೆಗೆ ದೇವರಿಗೆ ಒಂದು ಲಕ್ಷ ಪ್ರದಕ್ಷಿಣೆ ಹಾಕಬೇಕು. ಪ್ರತಿದಿನ ತಾನು ಮಾಡಿರುವ ಪಾಪಗಳನ್ನು ಪಶ್ಚಾತ್ತಾಪಪೂರ್ವಕ ಹೇಳಿಕೊಂಡು ಲಕ್ಷಪ್ರದಕ್ಷಿಣವನ್ನು ಹಾಕಿ ಮುಗಿಸಿ ಅನಂತರ ಉದ್ಯಾಪನೆ ಮಾಡಬೇಕು. ಪ್ರತಿದಿನ ಪ್ರದಕ್ಷಿಣ ಹಾಕುವಾಗ ಹೇಳಬೇಕಾದ ಮಂತ್ರ – ಅನಂತಮವ್ಯಯೇ ವಿಷ್ಣುಂ ಲಕ್ಷ್ಮೀ - ನಾರಾಯಣಂ ಹರಿಮ್ । ಜಗದೀಶ ನಮಸ್ತುಭ್ಯಂ ಪ್ರದಕ್ಷಿಣ ಪದೇ ಪದೇ ॥

## ಲಕ್ಷನಮಸ್ಕಾರವ್ರತಮ್

ಚಾತುರ್ಮಾಸ್ಯದಲ್ಲಿ ಮಾಡಬೇಕಾದ ವ್ರತಗಳಲ್ಲಿ ಲಕ್ಷನಮಸ್ಕಾರ ವ್ರತವೂ ಒಂದು. ಸುಮಂಗಲೆಯರು ಮತ್ತು ವಿಧವೆಯರು ಸಹ ಈ ವ್ರತಕ್ಕೆ ಅರ್ಹರೆನಿಸುತ್ತಾರೆ. ಚಾತುರ್ಮಾಸ್ಯೇ ತು ಸಂಪ್ರಾಪ್ತೇ ಕೇಶವಂ ಶಯನಂ ಗತೇ । ಆಷಾಢಸ್ಯ ಸಿತೇ ಪಕ್ಷೇ ಏಕಾದಶ್ಯಾಂ ಸಮಾಹಿತಃ ॥ ಚಾತುರ್ಮಾಸ್ಯ ಕಾಲವು ಪ್ರಾಪ್ತವಾದಾಗ ಶ್ರೀಹರಿಯು ನಾಲ್ಕುತಿಂಗಳು ಯೋಗನಿದ್ರಾಮುದ್ರೆಯಲ್ಲಿರುತ್ತಾನೆ. ಆಗ ಆಷಾಢಮಾಸದ ಶುಕ್ಲಪಕ್ಷದ ಏಕಾದಶಿಯ ದಿನ ಮನಸ್ಸನ್ನು ಏಕಾಗ್ರವಾಗಿಟ್ಟು ಈ ಲಕ್ಷ ನಮಸ್ಕಾರದ ವ್ರತವನ್ನು ಪ್ರಾರಂಭಿಸಬೇಕು.

ವ್ರತಸಂಕಲ್ಪ – ಮಮ ಲಕ್ಷನಮಸ್ಕಾರವ್ರತಸ್ಯ ಪುರುಷೋತ್ತಮ । ನಿರ್ವಿಘ್ನಂ ತದ್ವ್ರತಂ ಸಾಂಗಂ ಕುರು ತ್ವಂ ಕೃಪಯಾ ಹರೇ ॥ ಹೀಗೆ ಸಂಕಲ್ಪಮಾಡಿ ಕಾರ್ತೀಕಮಾಸದ ಹುಣ್ಣಿಮೆಯ ವರೆಗೆ ಈ ವ್ರತವನ್ನು ಮಾಡಿ ಹುಣ್ಣಿಮೆ ಉದ್ಯಾಪನೆ ಮಾಡಬೇಕು. ಅರ್ಘ್ಯಮಂತ್ರ – ದೇವ ದೇವ ಜಗನ್ನಾಥ ಸರ್ವವ್ರತಫಲಪ್ರದ । ವ್ರತೇನಾನೇನ ಸುಪ್ರೀತೋ ಗೃಹಾಣಾರ್ಘ್ಯಂ ಮಯಾರ್ಪಿತಮ್ ॥ ಈ ವ್ರತವು ಮಹಾಪುಣ್ಯ-ಪ್ರದವಾದುದಾಗಿದೆ. ಪಾಪಾರಣ್ಯಗಳನ್ನು ಸುಡಲು ಇದು ಕಾಡ್ಗಿಚ್ಚಿನಂತಿರುವ ವ್ರತ. ಪಾಪಗಳೆಂಬ ಪರ್ವತಕ್ಕೆ ವಜ್ರಾಯುಧದಂತಿರುವ ವ್ರತ. ಪಾಪಗಳೆಂಬ ಸಾಗರಕ್ಕೆ ನಾವೆಯಂತಿರುವ ವ್ರತ. ಎಲ್ಲ ಪಾಪಗಳನ್ನು ಕಳೆದು ಕೊನೆಗೆ ವಿಷ್ಣುಪ್ರಸಾದಕ್ಕೂ ಸಾಧನವಾಗಿರುವ ವ್ರತವಿದು.

## ಲಕ್ಷಬತ್ತಿವ್ರತ ಮತ್ತು ಲಕ್ಷದೀಪವ್ರತಮ್

ಲಕ್ಷವರ್ತಿವ್ರತ ಎಂದರೆ ಒಂದು ಲಕ್ಷಬತ್ತಿಗಳನ್ನು ದೇವರಿಗೆ ಸಮರ್ಪಿಸುವ ವ್ರತ. ವೈಶಾಖ, ಕಾರ್ತೀಕ ಮತ್ತು ಮಾಘಮಾಸಗಳು ಲಕ್ಷಬತ್ತಿವ್ರತಕ್ಕೆ ವಿಹಿತವಾದ ಕಾಲಗಳು. ಚಾತುರ್ಮಾಸ್ಯದಲ್ಲಿ ಶ್ರಾವಣಶುಕ್ಲಪ್ರತಿಪತ್ತಿನಿಂದ ಪ್ರಾರಂಭಿಸಿ ಕಾರ್ತೀಕ ಪೂರ್ಣಿಮಾದವರೆಗೆ ಪ್ರತಿದಿನ ಒಂದು ಸಹಸ್ರಬತ್ತಿಗಳನ್ನು ಆಕಳತುಪ್ಪದಲ್ಲಿ ಅಥವಾ ತಿಲತೈಲದಲ್ಲಿ ತೋಯಿಸಿ, ಮೇಲೆ ಕರ್ಪೂರವನ್ನು ಹಾಕಿ ದೇವರೆದುರಿನಲ್ಲಿ ಹಚ್ಚಿಡಬೇಕು. ಕೊನೆಗೆ ಉದ್ಯಾಪನೆಯನ್ನು ಮಾಡಬೇಕು.

ಪರಮಾತ್ಮನನ್ನು ಸ್ಮರಿಸುತ್ತ ಹತ್ತಿ ಹೊಸೆದು ಒಂದು ಲಕ್ಷ ಬತ್ತಿ ಮಾಡಬೇಕು. ವ್ರತಸಮರ್ಪಣೆಯ ಮಂತ್ರ – ಕ್ರಿಯಾಹೀನಂ ಭಕ್ತಿಹೀನಂ ದ್ರವ್ಯಹೀನಂ ತಥೈವ ಚ । ಮಂತ್ರಹೀನಂ ಕೃತಂ ಯಚ್ಚ ಪರಿಪೂರ್ಣಂ ತದಸ್ತು ಮೇ ॥ ಬಾಲ್ಯೇ ವಯಸಿ ಯತ್ಪಾಪಂ ಯೌವನೇ ವಾಪಿ ಯತ್ಕೃತಮ್ । ವಾರ್ಧಕೇಽಪಿ ಕೃತಂ ಪಾಪಂ ತತ್ಸರ್ವಂ ನಶ್ಯತಿ ಧ್ರುವಮ್ ॥

ಪರಾಕವ್ರತ: ಸರ್ವಪಾಪ ಪ್ರಾಯಶ್ಚಿತ್ತ ರೂಪವಾದ ಪರಾಕವ್ರತವನ್ನು 12 ದಿನಗಳ ಕಾಲ ಉಪವಾಸವಿದ್ದು ಮಾಡಬೇಕು. ಇದೇ ರೀತಿ ಮೂರು ವರ್ಷ ಆಚರಿಸಬೇಕು. ಒಟ್ಟು ಮೂರು ವರ್ಷಗಳಿಂದ 37 ದಿನ ಉಪವಾಸ ಮಾಡಿದಂತಾಗಿ ಬ್ರಹ್ಮಹತ್ಯಾದಿ ಸಮಸ್ತ ಪಾಪಗಳು ಪರಿಹಾರವಾಗುವುದು.

**ಲಕ್ಷ ತುಳಸೀ ಪ್ರದಕ್ಷಿಣೆ:** ಚಾತುರ್ಮಾಸದಲ್ಲಿ ತುಳಸಿ ದೇವಿಗೆ ಲಕ್ಷಪ್ರದಕ್ಷಿಣೆ ಹಾಕುವ ವ್ರತ. ವೈಶಾಖ, ಕಾರ್ತೀಕ ಮತ್ತು ಚಾತುರ್ಮಾಸಗಳಲ್ಲಿ ಈ ವ್ರತವನ್ನು ಆಚರಿಸಿದರೆ ಬೇಡಿದ ಇಷ್ಟಾರ್ಥಗಳು ಸಿದ್ಧಿಸುವವು. ತುಳಸಿಪ್ರದಕ್ಷಿಣೆಯನ್ನು ಪ್ರಾತಃ ಕಾಲ, ಮಧ್ಯಾಹ್ನ ಹಾಗೂ ಸಾಯಂಕಾಲಗಳಲ್ಲಿ ಮಾಡಬಹುದು.

**ಗೋಪದ್ಮ ವ್ರತ** – ತುಳಸೀ ವೃಂದಾವನ ಅಥವಾ ದೇವರ ಮನೆ ಇವುಗಳಲ್ಲಿ ಮೂವತ್ತಮೂರು ಪದ್ಮಗಳನ್ನು ರಂಗೋಲೆಯಿಂದ ಬರೆಯಬೇಕು. ಅಷ್ಟೇ ಸಂಖ್ಯೆಯಲ್ಲಿ ಪ್ರದಕ್ಷಿಣೆ ಹಾಗೂ ನಮಸ್ಕಾರಗಳನ್ನು ಹಾಕಬೇಕು. ಮೂವತ್ತಮೂರು ಅರ್ಘ್ಯವನ್ನು ಮಂತ್ರಾಕ್ಷತೆ ಸಹಿತವಾಗಿ ಕೊಡಬೇಕು. ಗೃಹೇ ವೃಂದಾವನೇ ವಾಽಪಿ ಲಿಖೇತ್ ಗೋಪದ್ಮಕಂ ಪದಮ್ । ತ್ರಯಸ್ತ್ರಿಂಶತ್ತು ಪದ್ಮಾನಿ ಕುರ್ಯಾದ್ ಭಕ್ತ್ಯಾ ದಿನೇ ದಿನೇ । ತತ್ಸಂಖ್ಯಯಾ ಪ್ರಕರ್ತವ್ಯಾ ಅರ್ಘ್ಯಪ್ರದಕ್ಷಿಣಾನತೀಃ ॥ ಗೋಪದ್ಮ ವ್ರತದಲ್ಲಿ ಲಕ್ಷ್ಮೀನಾರಾಯಣರನ್ನು ಭಕ್ತಿಯಿಂದ ಗಂಧಾದ್ಯುಪಚಾರಗಳಿಂದ ಪೂಜಿಸಬೇಕು. ಅಪೂಪಾದಿ ನೈವೇದ್ಯಗಳನ್ನು ಭಗವಂತನಿಗೆ ಅರ್ಪಿಸಿ ಬ್ರಾಹ್ಮಣನಿಗೆ ನೀಡಬೇಕು.

ಇದನ್ನು ಹೆಂಗಸರು ಐಶ್ವರ್ಯ, ಆರೋಗ್ಯ, ಸಂಪತ್ತು, ಮದುವೆ ಮಕ್ಕಳು ಮುಂತಾದ ಸೌಭಾಗ್ಯ ಪಡೆಯಲು ಮಾಡುತ್ತಾರೆ. ಮೊದಲನೆ ವರುಷದಲ್ಲಿ ತಾಂಬೂಲ ಮತ್ತು ಭೋಜನವನ್ನು, ಎರಡನೆ ವರ್ಷ ಬಳೆ ಮತ್ತು ಭೋಜನ , ಮೂರನೇ ವರ್ಷ ಬಾಳೆ ಹಣ್ಣು ಮತ್ತು ಭೋಜನ, ನಾಲ್ಕನೇ ವರ್ಷ ಕಬ್ಬು ಮತ್ತ ಬೋಜನ, ಐದನೇ ವರ್ಷ ಮದುವೆಯಾಗದ ಹುಡುಗಿಗೆ ವಸ್ತ್ರ ಮತ್ತು ಭೋಜನ-ವನ್ನು ದಾನ ಮಾಡಬೇಕೆಂದು ನಿಯಮವಿದೆ. ಈ ನಿಯಮದಲ್ಲಿ ಸ್ವಲ್ಪ ವ್ಯತ್ಯಾಸವು ಇದೆ.

**ಗೋಪದ್ಮವ್ರತಕಥಾ** ಒಮ್ಮೆ ಇಂದ್ರನ ಆಸ್ಥಾನದಲ್ಲಿ ರಂಭೆ ನೃತ್ಯ ಮಾಡುತ್ತಿದ್ದಳು. ಆಗ ಮೃದಂಗದ ಚರ್ಮ ಹರಿದು ಹೋಯಿತು. ಆಗ ಇಂದ್ರನು ಯಮನಿಗೆ ಯಾರು ಗೋಪದ್ಮವ್ರತವನ್ನು ಮಾಡುವುದಿಲ್ಲವೊ ಅವರನ್ನು ಕೊಂದು ಅವರ ಬೆನ್ನು ಚರ್ಮದಿಂದ ಮೃದಂಗವನ್ನು ಸರಿಮಾಡು ಎಂದು ಹೇಳಿದನು. ಯಮನು ತನ್ನ ಭಟರನ್ನು ಕರೆದು ಯಾರು ಯಾವ ವ್ರತವನ್ನು ಮಾಡುವುದಿಲ್ಲವೊ ಅವರನ್ನು

ಕೊಂದು ಅವರ ಬೆನ್ನು ಚರ್ಮವನ್ನು ತನ್ನಿ ಎಂದು ಆಜ್ಞೆ ಮಾಡಿದನು. ಸ್ವಲ್ಪ ಕಾಲನಂತರ ಯಮನ ಬಂಟರು ಹಿಂದಿರುಗಿ ಗಂಗಾ, ಗೌರಿ, ಸಾವಿತ್ರಿ ಮತ್ತು ಸರಸ್ವತಿ ರಂಗೋಲಿ ಹಾಕಿದ್ದಾರೆ. ಆದರೆ ಕೃಷ್ಣನ ತಂಗಿ ಸುಭದ್ರಾ ಮನೆಯ ಮುಂದೆ ರಂಗೋಲಿ ಇಲ್ಲ ಎಂದು ಹೇಳಿದರು. ಆಗ ಯಮನು ಭಟರಿಗೆ ಸುಭದ್ರೆಯ ಚರ್ಮತಂದು ಮೃದಂಗವನ್ನು ಸರಿಪಡಿಸಿ ಎಂದು ಆಜ್ಞೆ ಮಾಡಿದನು. ಕೃಷ್ಣನು ಬೆಳಿಗ್ಗೆ ಸುಭದ್ರೆಯ ಮನೆಗೆ ಬಂದು ಮನೆಯ ಮುಂದೆ ರಂಗೋಲಿಯನ್ನು ಯಾಕೆ ಹಾಕಿಲ್ಲವೆಂದು ಸುಭದ್ರೆಯನ್ನು ಕೇಳಿದನು. ಸುಭದ್ರೆಯು ನನಗೆ ಇಂದ್ರ, ಚಂದ್ರನಂತಹ ಅಣ್ಣಂದಿರು, ಅರ್ಜುನಂತಹ ಗಂಡ, ವಸುದೇವ ದೇವಕಿಯಂತಹ ತಾಯಿತಂದೆಯರು ಎಲ್ಲಕ್ಕಿಂತ ಹೆಚ್ಚಾಗಿ ನೀನು ಇರುವಾಗ ನನಗೆಂತಹ ಭಯವೆಂದು ಹೇಳಿದಳು. ಕೃಷ್ಣನು ಇದೆಲ್ಲವೂ ಇದ್ದರೂ ಸಹ ನೀನು ಮನೆಯ ಮುಂದೆ ತುಳಿಸೀ ಕಟ್ಟೆಯ ಮುಂದೆ ಮತ್ತು ಸರ್ವ ತೀರ್ಥಗಳು ಹರಿಯುವ ಹಸುವಿನ ಕೊಟ್ಟಿಗೆಯಲ್ಲಿ ಗರುಡ, ವಿಷ್ಣುಪಾದ, ಶಂಖ, ಚಕ್ರ, ಗದಾ, ಕಮಲದ ಹೂವು, ಸ್ವಸ್ತಿಕ, ಬೃಂದಾವನ, ಕೊಳಲು, ರಾಮನ ತೊಟ್ಟಿಲು, ಸೀತೆಯ ಸೀರೆ, ತುಳಸಿ ಎಲೆ, ಆನೆ ಹಸು ಕರು ಮತ್ತು ಮೂವತ್ತಮೂವತ್ತು ಮೂರು ಕೋಟಿ ದೇವತೆಗಳನ್ನು ಪ್ರತಿನಿಧಿಸುವ ಕಮಲಗಳನ್ನು, ಆನೆ ಮತ್ತು ಸೈನಿಕರು ಇವುಗಳ ರೂಪವನ್ನು ರಂಗೋಲಿಯಲ್ಲಿ ಹಾಕಬೇಕೆಂದು ಹೇಳಿದನು. ಸುಭದ್ರೆಯು ಗಟ್ಟಿಯಾದ ಕಲ್ಲು ತರಿಸಿ ಮುತ್ತು ಹವಳ ಮುಂತಾದವು ಹಾಕಿ ಚೆನ್ನಾಗಿ ಪುಡಿಮಾಡಿ ರಂಗೋಲಿ ಹಾಕಿದಳು. ಐದು ವರ್ಷ ಹಾಕಬೇಕಾಗಿದ್ದ ರಂಗೋಲಿಯನ್ನು ಒಂದೇ ವರುಷದಲ್ಲಿ ಹಾಕಿದಳು. ಅದಕ್ಕೆ ಅರಿಷಿನ ಮತ್ತು ಕುಂಕುಮ ಹಚ್ಚಿ ಪೂಜೆ ಮಾಡಿದಳು. ಈ ವ್ರತವನ್ನು ಮಾಡಿದ್ದರಿಂದ ಸುಭದ್ರೆಯು ಶಿಕ್ಷೆಯಿಂದ ತಪ್ಪಿಸಿಕೊಂಡಳು. ಯಮನ ಬಂಟರು ಉತ್ತರ ದಿಕ್ಕಿಗೆ ತಲೆಹಾಕಿ ಮಲಗಿರುವ ಆನೆಯನ್ನು ಹುಡಿಕಿ ಅದನ್ನು ಕೊಂದು ಅದರ ಬೆನ್ನು ಚರ್ಮದಿಂದ ಮೃದಂಗವನ್ನು ಸರಿ ಮಾಡಿದರು.

## ಆಷಾಢ ।। ಶುದ್ಧ ।। ದ್ವಾದಶೀ

ಶ್ರೀ ಶ್ರೀಪತಿತೀರ್ಥರು (ವ್ಯಾಸರಾಜ ಮಠ) ಆಷಾಢ ಶುದ್ಧ ದ್ವಾದಶಿ (ಕ್ರಿ .ಶ. 1594-1612) - ವೆಂಕಟೇಶಪದಾಸಕ್ತಂ ವಾದಿಭಂಗವಿಚಕ್ಷಣಂ । ಶ್ರೀಪತೀಂದ್ರ-

ಗುರುಂ ವಂದೇ ಸರ್ವತಂತ್ರೇಷು ಕೋವಿದಂ ॥ ಶ್ರೀವ್ಯಾಸರಾಜರ ಅಪಾರ ಕೀರ್ತಿ-ಯನ್ನು ಅಚ್ಚಳಿಯದೆ ಕಾಪಾಡಿಕೊಂಡು ಬಂದ ಮಹಾನುಭಾವರಲ್ಲಿ ಇವರು ಒಬ್ಬ ಪ್ರಸಿದ್ಧ ಪೀಠಾಧಿಪತಿಗಳು. ಇವರಿಗೆ ಅಸಾಧಾರಣ ಪಾಂಡಿತ್ಯವಿತ್ತೆಂದೂ, ದುರ್ವಾದಿ-ಗಳನ್ನು ಖಂಡಿಸುವುದರಲ್ಲಿ ಬಹು ಸಮರ್ಥರಾಗಿದ್ದರೆಂದೂ, ತಿರುಪತಿ ಶ್ರೀನಿವಾಸನ ಅನನ್ಯ ಭಕ್ತರಾಗಿದ್ದರೆಂದೂ ವರ್ಣಿಸಿದ್ದಾರೆ. ಇವರು ಈಗಿನ ತಮಿಳುನಾಡು ಪ್ರಾಂತ್ಯದಲ್ಲಿ ಹೆಚ್ಚಿಗೆ ಸಂಚಾರ ಮಾಡಿರುವಂತೆ ತೋರುತ್ತದೆ. ಕೊನೆಗೆ ರಾಯ-ವೆಲ್ಲೂರಿನಲ್ಲಿ 1612ರ ಆಷಾಢ ಶುದ್ಧ ದ್ವಾದಶಿಯಂದು ಧ್ಯಾನಾಸಕ್ತರಾಗಿ ಶ್ರೀಹರಿ-ಪಾದವನ್ನೈದಿದರು. ಇವರ ವೃಂದಾವನವು ರಾಯವೆಲ್ಲೂರಿನಲ್ಲಿಯೇ ಇದೆ.

ಶ್ರೀ ಲಕ್ಷ್ಮೀಪತಿತೀರ್ಥರು (ಶ್ರೀಪಾದರಾಜ ಮಠ) ಆಷಾಢ ಶುದ್ಧ ದ್ವಾದಶೀ-ಪುದುಪಾಳ್ಯಸುಖತೀರ್ಥಮತಾಬ್ಧೇಂದು ಜಾತಂ ಲಕ್ಷ್ಮೀಮನೋಹರಾತ್ । ಸರ್ವಾ-ಭೀಷ್ಟಪ್ರದಂ ನೃಣಾಂ ಲಕ್ಷ್ಮೀಪತಿ ಗುರುಂಭಜೇ ॥

ಕೃಷ್ಣದ್ವಾದಶೀವ್ರತ - ದುರ್ವಾಸಮುನಿ – ವ್ರತ ಮಾಡುವ ಬುದ್ಧಿವಂತನು, ಆಷಾಢಮಾಸದ ಶುಕ್ಲಪಕ್ಷದ ದಶಮಿಯಲ್ಲಿಯೂ ಹಿಂದೆ ಹೇಳಿರುವಂತೆಯೇ (ವಿಧ್ಯುಕ್ತವಾಗಿ) ಸಂಕಲ್ಪಮಾಡಿ, ಏಕಾದಶಿಯ ದಿನ, ಚಕ್ರಪಾಣಯೇ ನಮಃ ಎಂದು ಸ್ವಾಮಿಯ ತೋಳುಗಳನ್ನೂ, ಭೂಪತಯೇ ನಮಃ ಎಂದು ಕಂಠವನ್ನೂ, ಶಂಖಾಯ ನಮಃ ಎಂದು ಶಂಖವನ್ನೂ, ಚಕ್ರಾಯ ನಮಃ ಎಂದು ಚಕ್ರವನ್ನೂ, ಪುರುಷಾಯ ನಮಃ ಎಂದು ಶಿರಸ್ಸನ್ನೂ ಅರ್ಚಿಸಿ, ಹಿಂದಿನಂತೆ ದೇವನೆದುರು ವಸ್ತ್ರಯುತವಾದ ಪೂರ್ಣಕಲಶವನ್ನು ಸ್ಥಾಪಿಸಬೇಕು. ಸನಾತನನೂ, ಚತು-ರ್ವ್ಯೂಹನೂ ಆದ ಶ್ರೀಕೃಷ್ಣನ ಸುವರ್ಣಮಯವಾದ ಮೂರ್ತಿಯನ್ನು ಕಲಶದ ಮೇಲೆ ಇರಿಸಬೇಕು. ವಿಧ್ಯುಕ್ತವಾಗಿ ಆ ದೇವನನ್ನು ಗಂಧಪುಷ್ಪಾದಿಗಳಿಂದ ಕ್ರಮವಾಗಿ ಪೂಜಿಸಿ, ದ್ವಾದಶಿಯ ದಿನ ಹಿಂದಿನಂತೆ ವೇದಾಧ್ಯಯನಾಸಕ್ತನಾದ ಬ್ರಾಹ್ಮಣನಿಗೆ ಒಪ್ಪಿಸಬೇಕು. ಹೀಗೆ ಈ ವ್ರತವನ್ನು ಮಾಡುವವನಿಗೆ ಏನು ಪುಣ್ಯವೆಂಬುದನ್ನು ನಾನು ತಿಳಿಸುತ್ತೇನೆ. ಕೇಳು.

ಶ್ರೇಷ್ಠನೂ, ಯದುವಂಶವರ್ಧನನೂ ಆದ ವಸುದೇವನಿದ್ದನಷ್ಟೆ. ಅವನ ಪತ್ನಿಯಾದ ದೇವಕಿಯು ಪತಿಯಂತೆಯೇ ವ್ರತನಿಷ್ಠಳು. ಪತಿವ್ರತೆಯೂ ಧರ್ಮ-

ಪರಾಯಣೆಯೂ ಆದ ಅವಳು ಅಪುತ್ರವತಿಯಾಗಿದ್ದಳು. ಬಹುಕಾಲದ ಮೇಲೆ ನಾರದಮುನಿಯು ಆ ವಸುದೇವನ ಮನೆಗೆ ಬಂದನು. ವಸುದೇವನಿಂದ ಭಕ್ತಿ-ಪೂರ್ವಕವಾಗಿ ಪೂಜಿತನಾದ ಆತನು ಮುಂದಿನ ಮಾತನ್ನು ಹೇಳಿದನು. ''ಪಾಪರಹಿತನಾದ ವಸುದೇವನೇ! ನಾನು ಹೇಳುವ ದೇವತೆಗಳ ಕಾರ್ಯವನ್ನು ಕೇಳು. ಈ ಕಥೆಯನ್ನು ಕೇಳಿಯೇ ನಾನು ಬೇಗನೇ ನಿನ್ನ ಬಳಿಗೆ ಬಂದಿದ್ದೇನೆ. ಯದೂತ್ತಮನೇ! ಭೂದೇವಿಯು ದೇವತೆಗಳ ಸಭೆಗೆ ಹೋಗಿ ಮಾತನಾಡುತ್ತಿದ್ದುದನ್ನು ನಾನು ನೋಡಿದ್ದೇನೆ. ಅವಳು 'ದೇವತೆಗಳೇ ನಾನು ಭಾರವನ್ನು ಹೊರಲಾರೆನು. ದುಷ್ಟರಾಕ್ಷಸರು ಒಟ್ಟಿಗೆ ಸೇರಿಕೊಂಡು ನನ್ನನ್ನು ಪೀಡಿಸುತ್ತಿದ್ದಾರೆ. ಸುರೋತ್ತಮರೇ! ಅವರನ್ನು ಕೊಲ್ಲಿರಿ'' ಎಂದು ಹೇಳಲಾಗಿ ಆ ದೇವತೆಗಳು ನಾರಾಯಣನ ಹತ್ತಿರಕ್ಕೆ ಹೋದರು.

ಅಲ್ಲಿ ಅವರು ಮನಸ್ಸಿನಿಂದ ಧ್ಯಾನಿಸಿದ ಮಾತ್ರಕ್ಕೇ ಆ ನಾರಾಯಣನು ಅವರಿಗೆ ಕಾಣಿಸಿಕೊಂಡನು. ಸುರೋತ್ತಮನಾದ ಆತನು ''ದೇವತೆಗಳೇ! ಈ ಕಾರ್ಯವನ್ನು ನಾನೇ ಮನುಷ್ಯನಂತೆ ಭೂಲೋಕಕ್ಕೆ ಹೋಗಿ ಸಾಧಿಸುತ್ತೇನೆ. ಸಂಶಯವಿಲ್ಲ. ಆದರೆ ಆಷಾಢಮಾಸದ ಶುಕ್ಲಪಕ್ಷದ ಏಕಾದಶಿಯಲ್ಲಿ ಮನುಷ್ಯಸ್ತ್ರೀಯರಲ್ಲಿ ಯಾರು ಪತಿಯೊಡನೆ ಉಪವಾಸ ಮಾಡುವಳೋ ಅವಳ ಗರ್ಭದಲ್ಲಿ ನಾನು ಜನಿಸುವೆನು'' ಎಂದು ಹೇಳಿದನು.

ನಾರಾಯಣನಿಂದ ಹೀಗೆ ಹೇಳಿಸಿಕೊಂಡ ದೇವತೆಗಳು ಅವರೆಡೆಗೆ ಹೊರಟು ಹೋದರು. ನಾನಾದರೋ ಉದ್ದೇಶ್ಯಪೂರ್ವಕವಾಗಿ ಇಲ್ಲಿಗೆ ಬಂದೆನು. ಪುತ್ರರಿಲ್ಲದಿರುವ ನಿನಗೆ ಅತ್ಯವಶ್ಯಕವೆಂದು ಉಪದೇಶಿಸಿದ್ದೇನೆ.

ಮಹಾಕೀರ್ತಿವಂತನಾದ ವಸುದೇವನು ನಾರದನ ಉಪದೇಶದಿಂದ ಶ್ರೀಕೃಷ್ಣ-ದ್ವಾದಶೀವ್ರತವನ್ನು ಮಾಡಿ ಕೃಷ್ಣನೆಂದು ಹೆಸರುಳ್ಳ ಪುತ್ರನನ್ನೂ, ಹೆಚ್ಚಾದ ಐಶ್ವರ್ಯವನ್ನೂ ಪಡೆದನು. ವಸುದೇವನು ಬಹುವಾದ ಐಶ್ವರ್ಯವನ್ನು ಅನುಭವಿಸಿ ಬಳಿಕ ಪರಮಪದವಿಯನ್ನು ಪಡೆದನು. ಸತ್ಯತಪಮುನಿಯೇ! ಈ ವ್ರತವು ನೀನು ಆಷಾಢಮಾಸದಲ್ಲಿ ಮಾಡಬೇಕಾದುದು.

ಗುರುಂ ವಂದೇ ಸರ್ವತಂತ್ರೇಷು ಕೋವಿದಂ ॥ ಶ್ರೀವ್ಯಾಸರಾಜರ ಅಪಾರ ಕೀರ್ತಿ-ಯನ್ನು ಅಚ್ಚಳಿಯದೆ ಕಾಪಾಡಿಕೊಂಡು ಬಂದ ಮಹಾನುಭಾವರಲ್ಲಿ ಇವರು ಒಬ್ಬ ಪ್ರಸಿದ್ಧ ಪೀಠಾಧಿಪತಿಗಳು. ಇವರಿಗೆ ಅಸಾಧಾರಣ ಪಾಂಡಿತ್ಯವಿತ್ತೆಂದೂ, ದುರ್ವಾದಿ-ಗಳನ್ನು ಖಂಡಿಸುವುದರಲ್ಲಿ ಬಹು ಸಮರ್ಥರಾಗಿದ್ದರೆಂದೂ, ತಿರುಪತಿ ಶ್ರೀನಿವಾಸನ ಅನನ್ಯ ಭಕ್ತರಾಗಿದ್ದರೆಂದೂ ವರ್ಣಿಸಿದ್ದಾರೆ. ಇವರು ಈಗಿನ ತಮಿಳುನಾಡು ಪ್ರಾಂತ್ಯದಲ್ಲಿ ಹೆಚ್ಚಿಗೆ ಸಂಚಾರ ಮಾಡಿರುವಂತೆ ತೋರುತ್ತದೆ. ಕೊನೆಗೆ ರಾಯ-ವೆಲ್ಲೂರಿನಲ್ಲಿ 1612ರ ಆಷಾಢ ಶುದ್ಧ ದ್ವಾದಶಿಯಂದು ಧ್ಯಾನಾಸಕ್ತರಾಗಿ ಶ್ರೀಹರಿ-ಪಾದವನ್ನೈದಿದರು. ಇವರ ವೃಂದಾವನವು ರಾಯವೆಲ್ಲೂರಿನಲ್ಲಿಯೇ ಇದೆ.

ಶ್ರೀ ಲಕ್ಷ್ಮೀಪತಿತೀರ್ಥರು (ಶ್ರೀಪಾದರಾಜ ಮಠ) ಆಷಾಢ ಶುದ್ಧ ದ್ವಾದಶೀ-ಪುರುಪಾಳ್ಯಸುಖತೀರ್ಥಮತಾಬ್ಧೀಂದು ಜಾತಂ ಲಕ್ಷ್ಮೀಮನೋಹರಾತ್ । ಸರ್ವಾ -ಭೀಷ್ಟಪ್ರದಂ ನೃಣಾಂ ಲಕ್ಷ್ಮೀಪತಿ ಗುರುಂಭಜೇ ॥

ಕೃಷ್ಣದ್ವಾದಶೀವ್ರತ - ದುರ್ವಾಸಮುನಿ – ವ್ರತ ಮಾಡುವ ಬುದ್ಧಿವಂತನು, ಆಷಾಢಮಾಸದ ಶುಕ್ಲಪಕ್ಷದ ದಶಮಿಯಲ್ಲಿಯೂ ಹಿಂದೆ ಹೇಳಿರುವಂತೆಯೇ (ವಿಧ್ಯುಕ್ತವಾಗಿ) ಸಂಕಲ್ಪಮಾಡಿ, ಏಕಾದಶಿಯ ದಿನ, ಚಕ್ರಪಾಣಯೇ ನಮಃ ಎಂದು ಸ್ವಾಮಿಯ ತೋಳುಗಳನ್ನೂ, ಭೂಪತಯೇ ನಮಃ ಎಂದು ಕಂಠವನ್ನೂ, ಶಂಖಾಯ ನಮಃ ಎಂದು ಶಂಖವನ್ನೂ, ಚಕ್ರಾಯ ನಮಃ ಎಂದು ಚಕ್ರವನ್ನೂ, ಪುರುಷಾಯ ನಮಃ ಎಂದು ಶಿರಸ್ಸನ್ನೂ ಅರ್ಚಿಸಿ, ಹಿಂದಿನಂತೆ ದೇವನೆದುರು ವಸ್ತ್ರಯುತವಾದ ಪೂರ್ಣಕಲಶವನ್ನು ಸ್ಥಾಪಿಸಬೇಕು. ಸನಾತನನೂ, ಚತು-ರ್ವ್ಯೂಹನೂ ಆದ ಶ್ರೀಕೃಷ್ಣನ ಸುವರ್ಣಮಯವಾದ ಮೂರ್ತಿಯನ್ನು ಕಲಶದ ಮೇಲೆ ಇರಿಸಬೇಕು. ವಿಧ್ಯುಕ್ತವಾಗಿ ಆ ದೇವನನ್ನು ಗಂಧಪುಷ್ಪಾದಿಗಳಿಂದ ಕ್ರಮವಾಗಿ ಪೂಜಿಸಿ, ದ್ವಾದಶಿಯ ದಿನ ಹಿಂದಿನಂತೆ ವೇದಾಧ್ಯಯನಾಸಕ್ತನಾದ ಬ್ರಾಹ್ಮಣನಿಗೆ ಒಪ್ಪಿಸಬೇಕು. ಹೀಗೆ ಈ ವ್ರತವನ್ನು ಮಾಡುವವನಿಗೆ ಏನು ಪುಣ್ಯವೆಂಬುದನ್ನು ನಾನು ತಿಳಿಸುತ್ತೇನೆ. ಕೇಳು.

ಶ್ರೇಷ್ಠನೂ, ಯದುವಂಶವರ್ಧನನೂ ಆದ ವಸುದೇವನಿದ್ದನಷ್ಟೆ. ಅವನ ಪತ್ನಿಯಾದ ದೇವಕಿಯು ಪತಿಯಂತೆಯೇ ವ್ರತನಿಷ್ಠಳು. ಪತಿವ್ರತೆಯೂ ಧರ್ಮ-

ಪರಾಯಣೆಯೂ ಆದ ಅವಳು ಅಪುತ್ರವತಿಯಾಗಿದ್ದಳು. ಬಹುಕಾಲದ ಮೇಲೆ ನಾರದಮುನಿಯು ಆ ವಸುದೇವನ ಮನೆಗೆ ಬಂದನು. ವಸುದೇವನಿಂದ ಭಕ್ತಿ-ಪೂರ್ವಕವಾಗಿ ಪೂಜಿತನಾದ ಆತನು ಮುಂದಿನ ಮಾತನ್ನು ಹೇಳಿದನು. ''ಪಾಪರಹಿತನಾದ ವಸುದೇವನೇ! ನಾನು ಹೇಳುವ ದೇವತೆಗಳ ಕಾರ್ಯವನ್ನು ಕೇಳು. ಈ ಕಥೆಯನ್ನು ಕೇಳಿಯೇ ನಾನು ಬೇಗನೇ ನಿನ್ನ ಬಳಿಗೆ ಬಂದಿದ್ದೇನೆ. ಯದೂತ್ತಮನೇ! ಭೂದೇವಿಯು ದೇವತೆಗಳ ಸಭೆಗೆ ಹೋಗಿ ಮಾತನಾಡುತ್ತಿದ್ದುದನ್ನು ನಾನು ನೋಡಿದ್ದೇನೆ. ಅವಳು 'ದೇವತೆಗಳೇ ನಾನು ಭಾರವನ್ನು ಹೊರಲಾರೆನು. ದುಷ್ಟರಾಕ್ಷಸರು ಒಟ್ಟಿಗೆ ಸೇರಿಕೊಂಡು ನನ್ನನ್ನು ಪೀಡಿಸುತ್ತಿದ್ದಾರೆ. ಸುರೋತ್ತಮರೇ! ಅವರನ್ನು ಕೊಲ್ಲಿರಿ'' ಎಂದು ಹೇಳಲಾಗಿ ಆ ದೇವತೆಗಳು ನಾರಾಯಣನ ಹತ್ತಿರಕ್ಕೆ ಹೋದರು.

ಅಲ್ಲಿ ಅವರು ಮನಸ್ಸಿನಿಂದ ಧ್ಯಾನಿಸಿದ ಮಾತ್ರಕ್ಕೇ ಆ ನಾರಾಯಣನು ಅವರಿಗೆ ಕಾಣಿಸಿಕೊಂಡನು. ಸುರೋತ್ತಮನಾದ ಆತನು ''ದೇವತೆಗಳೇ! ಈ ಕಾರ್ಯವನ್ನು ನಾನೇ ಮನುಷ್ಯನಂತೆ ಭೂಲೋಕಕ್ಕೆ ಹೋಗಿ ಸಾಧಿಸುತ್ತೇನೆ. ಸಂಶಯವಿಲ್ಲ. ಆದರೆ ಆಷಾಢಮಾಸದ ಶುಕ್ಲಪಕ್ಷದ ಏಕಾದಶಿಯಲ್ಲಿ ಮನುಷ್ಯಸ್ತ್ರೀಯರಲ್ಲಿ ಯಾರು ಪತಿಯೊಡನೆ ಉಪವಾಸ ಮಾಡುವಳೋ ಅವಳ ಗರ್ಭದಲ್ಲಿ ನಾನು ಜನಿಸುವೆನು'' ಎಂದು ಹೇಳಿದನು.

ನಾರಾಯಣನಿಂದ ಹೀಗೆ ಹೇಳಿಸಿಕೊಂಡ ದೇವತೆಗಳು ಅವರೆಡೆಗೆ ಹೊರಟು ಹೋದರು. ನಾನಾದರೋ ಉದ್ದೇಶ್ಯಪೂರ್ವಕವಾಗಿ ಇಲ್ಲಿಗೆ ಬಂದೆನು. ಪುತ್ರರಿಲ್ಲದಿರುವ ನಿನಗೆ ಅತ್ಯವಶ್ಯಕವೆಂದು ಉಪದೇಶಿಸಿದ್ದೇನೆ.

ಮಹಾಕೀರ್ತಿವಂತನಾದ ವಸುದೇವನು ನಾರದನ ಉಪದೇಶದಿಂದ ಶ್ರೀಕೃಷ್ಣ-ದ್ವಾದಶೀವ್ರತವನ್ನು ಮಾಡಿ ಕೃಷ್ಣನೆಂದು ಹೆಸರುಳ್ಳ ಪುತ್ರನನ್ನೂ, ಹೆಚ್ಚಾದ ಐಶ್ವರ್ಯವನ್ನೂ ಪಡೆದನು. ವಸುದೇವನು ಬಹುವಾದ ಐಶ್ವರ್ಯವನ್ನು ಅನುಭವಿಸಿ ಬಳಿಕ ಪರಮಪದವಿಯನ್ನು ಪಡೆದನು. ಸತ್ಯತಪಮುನಿಯೇ! ಈ ವ್ರತವು ನೀನು ಆಷಾಢಮಾಸದಲ್ಲಿ ಮಾಡಬೇಕಾದುದು.

## ಆಷಾಢ ॥ ಶುಕ್ಲ ॥ ಹುಣ್ಣಿಮೆ

ಚಾತುರ್ಮಾಸ್ಯ ಸಂಕಲ್ಪ– ಚಾತುರ್ಮಾಸ್ಯದ ಕಾಲ ಮಳೆಗಾಲ. ಆಗ ಅನೇಕ ಜಂತುಗಳು ಹಾದಿಬೀದಿಗಳಲ್ಲಿ ಹೆಚ್ಚಾಗಿ ಸಂಚರಿಸುವುದರಿಂದ ಅವು ಕಾಲಿಗೆ ಸಿಕ್ಕಿ ಸಾಯಬಾರದೆಂಬ ಉದ್ದೇಶದಿಂದಲೂ ಮಳೆಗಾಲದಲ್ಲಿ ಸಂಚಾರ ಕಷ್ಟಕರವಾದ್ದ-ರಿಂದಲೂ ಸಂನ್ಯಾಸಿಗಳು ಈ ಕಾಲದಲ್ಲಿ ಸಂಚಾರವನ್ನು ನಿಲ್ಲಿಸಿ ಒಂದೆಡೆ ತಂಗುತ್ತಾರೆ. ಹುಣ್ಣಿಮೆಯಂದು ಯತಿಗಳಾದವರು ಕ್ಷೌರ ಮಾಡಿಸಿಕೊಂಡು ಈ ನಾಲ್ಕು ತಿಂಗಳು-ಗಳಲ್ಲಿ ಒಂದೆಡೆಯಲ್ಲೇ ವಾಸಿಸುತ್ತೇವೆ ಎಂದು ಸಂಕಲ್ಪಮಾಡಿ ಶ್ರೀವೇದವ್ಯಾಸ ದೇವರನ್ನು ಪರಿವಾರದೊಡನೆ ಪೂಜಿಸಿ ಶಾಸ್ತ್ರಪುರಾಣೇತಿಹಾಸಾದಿ ಪ್ರವಚನಗಳನ್ನು ನಡೆಸುತ್ತ ಕಾಲ ಕಳೆಯುತ್ತಾರೆ. ನಾಲ್ಕು ತಿಂಗಳೂ ಒಂದೆಡೆಯಲ್ಲೇ ಇರಲು ಸಾಧ್ಯವಾಗದವರು ಎರಡು ತಿಂಗಳ ಕಾಲವಾದರೂ ಇರುತ್ತಾರೆ. ಆಷಾಢಮಾಸದಲ್ಲಿ ಚಾತುರ್ಮಾಸ್ಯ ಸಂಕಲ್ಪ ಮಾಡದವರು, ಅಶಕ್ತರು, ಆಶ್ವಯುಜಮಾಸ ಶುಕ್ಲ ದ್ವಾದಶೀ ದಿವಸ ವ್ರತವನ್ನು ಪ್ರಾರಂಭಿಸಿ ಕಾರ್ತಿಕ ಶುಕ್ಲ ದ್ವಾದಶೀ ದಿವಸ ಮುಗಿಸುತ್ತಾರೆ. ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶೈವ, ಬೌದ್ಧ, ಜೈನ ಮೊದಲಾದ ಎಲ್ಲ ಸಂಪ್ರದಾಯದವರು ಚಾತುರ್ಮಾಸ್ಯವನ್ನು ಶ್ರದ್ಧೆ, ಭಕ್ತಿಗಳಿಂದ ಆಚರಿಸುತ್ತಾರೆ. ಈ ನಾಲ್ಕು ತಿಂಗಳು ಮಳೆಗಾಲವಾದ್ದರಿಂದ ನಿರಂತರ ಮಳೆಯಿಂದಾಗಿ ಭೂಮಿಯೂ ಮೆದುವಾಗಿರುತ್ತದೆ, ಅಲ್ಲದೆ ಕ್ರಿಮಿ ಕೀಟಗಳು ಹುಟ್ಟಿಕೊಂಡಿರುವುದರಿಂದ ಆಗ ಸಂಚರಿಸಿದರೆ ತಿಳಿದೋ ತಿಳಿಯದೋ ಹಿಂಸೆ ಮಾಡಿದಂತಾಗುತ್ತದೆ, ಅಹಿಂಸಾ ಪರಿಪಾಲನೆಗಾಗಿ ಸನ್ಯಾಸಾಶ್ರಮಿಯು ಒಂದೆಡೆ ನೆಲಸಿ ಧ್ಯಾನ ಪರಾಯಣರಾಗುವರು. ಚಾತುರ್ಮಾಸ್ಯ ನಿರತ ಯತಿಗಳ ಸೇವೆ ಸಲ್ಲಿಸುವ ಅವಕಾಶ ಸಿಗುವುದರಿಂದ ಭಕ್ತಜನರಿಗೂ ಇದು ಶ್ರವಣ, ಮನನದ ಕಾಲ. ಯತಿಗಳ ಸೇವೆಯಿಂದ ಗೃಹಸ್ಥರಿಗೆ ಸಕಲ ಶ್ರೇಯಸ್ಸು ಲಭಿಸುತ್ತದೆ ಎನ್ನುವುದು ಶಾಸ್ತ್ರವಾಕ್ಯ. ನಿಯಮನಿಷ್ಠೆಯಿಂದ, ಅಂತಃ ಕರಣ ಶುದ್ಧಿಗಾಗಿ ಸುಖ-ಭೋಗಗಳನ್ನು ತ್ಯಜಿಸಿ ವೈರಾಗ್ಯದ ಮೂಲಕ ಭಗವದ್ಭಕ್ತಿ ಹೊಂದಿ ಜ್ಞಾನಗಳಿಕೆ, ಸತ್ಕರ್ಮಗಳನ್ನು ಮಾಡುವುದೇ ಚಾತುರ್ಮಾಸ್ಯ ವ್ರತದ ಗುರಿ. ಒಂದೇ ಸ್ಥಳದಲ್ಲಿ ನಾಲ್ಕು ತಿಂಗಳು ನೆಲೆಸಲು ಕಷ್ಟವಾಗಿರುವುದರಿಂದ ಒಂದು ಪಕ್ಷವನ್ನೇ ಮಾಸವೆಂದು ಪರಿಗಣಿಸಿ ಪಕ್ಷಾ ವೈ ಮಾಸಾಃ ಎರಡು ತಿಂಗಳಿಗೆ ಚಾತುರ್ಮಾಸ್ಯವ್ರತ ಮುಗಿಸುವ ಪದ್ಧತಿಯೂ ಇದೆ.

ಶ್ರೀ ಸತ್ಯಸಂಕಲ್ಪತೀರ್ಥರು ಆಷಾಢ ಶುಕ್ಲ ಪೂರ್ಣಿಮಾ – ಸತ್ಯಧರ್ಮಾಬ್ಧಿ ಸಂಭೂತ: ಚಿಂತಾಮಣಿ ವಿಜೃಂಭಿತ: । ಸತ್ಯಸಂಕಲ್ಪಕಲ್ಪದ್ರುಮ: ಕಲ್ಪಯೇತ್ ಕಾಮ-ಧುಕ್ ಮಮ ॥ ಪೂರ್ವಾಶ್ರಮ ನಾಮ : ಶ್ರೀ ನವರತ್ನ ಶ್ರೀನಿವಾಸಾಚಾರ್ಯರು ಆಶ್ರಮ ಗುರುಗಳು : ಶ್ರೀ ಸತ್ಯಧರ್ಮ ತೀರ್ಥರು (ಹೊಳೆಹೊನ್ನೂರು) ಆಶ್ರಮ ಶಿಷ್ಯರು : ಶ್ರೀ ಸತ್ಯ ಸಂತುಷ್ಟ ತೀರ್ಥರು ವೇದಾಂತ ಸಾಮ್ರಾಜ್ಯ ಆಳ್ವಿಕೆ : 1830 ರಿಂದ 1842 ವೃಂದಾವನ ಸ್ಥಳ : ಪ್ಲವ ನಾಮ ಸಂವತ್ಸರ, ಆಷಾಢ ಶುದ್ಧ ಪೌರ್ಣಮಿ, ಮೈಸೂರು. ಪೂರ್ವಾಶ್ರಮದಲ್ಲಿ ನವರತ್ನ ಶ್ರೀನಿವಾಸಾಚಾರ್ಯರು ಶ್ರೀಮನ್ನ್ಯಾಯ -ಸುಧಾ ಪಂಡಿತರು, ಪೂರ್ವಾಶ್ರಮದಲ್ಲಿ ಶ್ರೀ ಸತ್ಯಧರ್ಮತೀರ್ಥರ ಖಾಸಾ ತಮ್ಮಂದಿರು, ಶ್ರೀ ಸತ್ಯಧರ್ಮತೀರ್ಥರಿಂದ ಆಶ್ರಮವನ್ನು ತೆಗೆದು ಕೊಂಡರು. ಆನಂತರ ಎರಡು ವರ್ಷಗಳ ನಂತರ ಶ್ರೀ ಸತ್ಯಧರ್ಮತೀರ್ಥರು ಹೊಳೆ ಹೊನ್ನೂರಿ-ನಲ್ಲಿ ಬೃಂದಾವನಸ್ಥರಾದರು. ಇವರ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದ ಮೈಸೂರಿನ ಮಹಾರಾಜ ಇವರಿಗೆ ನವರತ್ನಗಳಿಂದ ಅಭಿಷೇಕ ಮಾಡ ಬೇಕೆಂದು ತಟ್ಟೆಯಲ್ಲಿ ಮುತ್ತು, ನವರತ್ನಗಳನ್ನೂ ತಂದರು, ಆಗ ಶ್ರೀ ಸತ್ಯಸಂಕಲ್ಪ ತೀರ್ಥರು ಒಂದು ಕ್ಷಣ ನಿಲ್ಲಿ ಎಂದರು, ನಿನ್ನ ಕೈಯಲ್ಲಿ ವೀರಲಕ್ಷ್ಮಿ, ರಾಜ್ಯಲಕ್ಷ್ಮಿ, ಎಲ್ಲ ಇದ್ದಾರೆ ಆದರೆ ಬ್ರಾಹ್ಮಣರಲ್ಲಿ ಪಂಚ ತೀರ್ಥಗಳು ಇರುತ್ತವೆ ಅವರ ಜೊತೆಗೆ ಮಾಡಿ ಎಂದು ಹೇಳಿ ನವರತ್ನಾಭಿಷೇಕ ಮಾಡಿಸಿಕೊಂಡ ಮಹನೀಯರು.

ಹೆಸರಿಗೆ ತಕ್ಕಂತೆ ಅವರ ಮಹಿಮೆ, ಅವರು ಕೊಟ್ಟ ಮಂತ್ರಾಕ್ಷತೆ ಸಂಕಲ್ಪದಂತೆ ಕೆಲಸ ಆಗುತ್ತಲೇ ಇತ್ತು. ಒಮ್ಮೆ ಹುಲುಗಿ ಶ್ರೀಯಃಪತ್ಯಚಾರ್ಯರು ಬಂದರು, ಅವರು ತಮ್ಮ 48ನೇ ವಯಸ್ಸಿನ ವರೆಗೂ ಶ್ರೀಮನ್ನ್ಯಾಯಸುಧಾ ಗ್ರಂಥ ಅಧ್ಯಯನ ಮಾಡಿದವರು. ಒಟ್ಟು 12 ಬಾರಿ ಸುಧಾಮಂಗಲ ಮಾಡಿದವರು ಅವರ ಪ್ರಸಿದ್ಧ ಕೃತಿ ದ್ವೈತ ದ್ಯುಮಣಿ ಎಂಬ ಗ್ರಂಥ. ವೇದಾಂತಶಾಸ್ತ್ರ ತಿಳಿಯಲು ಬೇಕಾದ ಗ್ರಂಥ. ಅಂತಹ ಮಹಾ ವಿದ್ವಾಂಸರು ಬಂದು ಶ್ರೀ ಸತ್ಯಸಂಕಲ್ಪತೀರ್ಥರಲ್ಲಿ ಸಾಷ್ಟಾಂಗ ಪ್ರಣಾಮ ಮಾಡಿ ಕೇಳುತ್ತಾರೆ, ನಾನು ಒಂದು ವಿಶಿಷ್ಟವಾದ ಗ್ರಂಥವನ್ನು ಬರೆಯ ಬೇಕೆಂದು ಅಂದು ಕೊಂಡಿದ್ದೇನೆ ತಾವು ಸಂಕಲ್ಪ ಮಾಡಬೇಕು ನಿಮ್ಮ ಅನುಜ್ಞಾ ಮಂತ್ರಾಕ್ಷತೆ ಕೊಡಬೇಕು ಎಂದು ಕೇಳಲು ಶ್ರೀ ಸತ್ಯಸಂಕಲ್ಪತೀರ್ಥರು ಅನುಗ್ರಹಿಸಿ

ಮಂತ್ರಾಕ್ಷತೆ ಕೊಡುತ್ತಾರೆ, ಆಗ ಶ್ರೀ ಶ್ರೀಯಃಪತ್ಯಚಾರ್ಯರಿಂದ ಹೊರಬಂದ ವಿಶಿಷ್ಟಗ್ರಂಥವೇ ದ್ವೈತದ್ಯುಮಣಿ ಅದರ ಕಡೆಯಲ್ಲಿ ಶ್ರೀ ಸತ್ಯಸಂಕಲ್ಪತೀರ್ಥರ ಮಂತ್ರಾಕ್ಷತೆ ಮಹಿಮೆಯಿಂದಲೇ ಈ ಗ್ರಂಥ ಪೂರ್ಣವಾಗಿದೆ ಎಂದು ಹೇಳುತ್ತಾರೆ.

ಮಹಾನುಗ್ರಹ ಶಕ್ತಿಯನ್ನು ಪಡೆದವರು ಶ್ರೀಸತ್ಯಸಂಕಲ್ಪತೀರ್ಥರು, ಮುಂದೆ ತಮ್ಮ ಸಂಚಾರ ಕ್ರಮದಲ್ಲಿ ಪುನಃ ಮೈಸೂರಿಗೆ ಬಂದರು. ಕೃಷ್ಣರಾಜ ಒಡೆಯರ್ ಅವರ ಅಪೇಕ್ಷೆಯಂತೆ ಮತ್ತು ರಾಜರೇ ಸ್ವತಹ ನಿಂತು ಕಟ್ಟಿಸಿಕೊಟ್ಟಿದ್ದ , ಮೈಸೂರು ಅರಮನೆಗೆ ಬಹಳ ಹತ್ತಿರದಲ್ಲಿ ಇರುವ ಶ್ರೀ ಮಠದಲ್ಲಿ ಹರಿಇಚ್ಛೆಯಂತೆ ಪ್ಲವನಾಮ ಸಂವತ್ಸರ ಆಷಾಢ ಶುಕ್ಲ ಪೌರ್ಣಮಿಯಂದು ವೃಂದಾವನಸ್ಥರಾದರು.

**ಗುರುಪೂರ್ಣಿಮಾಮಹಿಮೆ** – ಆಷಾಢ ಮಾಸದ ಹುಣ್ಣಿಮೆಯ ದಿನ ನಾವು ಆಚರಿಸುವ, ಶ್ರೇಷ್ಠವಾದ ಹಬ್ಬವೆಂದರೆ ಗುರು ಪೂರ್ಣಿಮೆ. ಈ ದಿನ ನಾವು ನಮ್ಮ ಗುರುಗಳಿಗೆ ವಂದನೆ ಸಲ್ಲಿಸುವ ದಿನ. ಗುರುವಿನ ಮಹತ್ವವನ್ನು ಸಾರುವ ದಿನ. ಗುರು ನಮಗೆ ಜೀವನದಲ್ಲಿ ಸರಿಯಾದ ದಿಕ್ಕು ಸೂಚಿಸುವ, ನಮ್ಮ ಕೈ ಹಿಡಿದು ನಡೆಸುವ, ಪರಮಾತ್ಮನ ಅರಿವನ್ನು ತಿಳಿಯಲು ನಮ್ಮೊಳಗಿರುವ ನಮ್ಮ ಆತ್ಮವನ್ನು ಜಾಗೃತಿ-ಗೊಳಿಸುವ ಮಹತ್ವದ ವ್ಯಕ್ತಿ.ಆಧ್ಯಾತ್ಮದ ಹಾದಿಯಲ್ಲಿ ನಮ್ಮನ್ನು ನಡೆಸಿ, ನಮ್ಮ ಗುರಿ ಮುಟ್ಟಲು ಸಹಾಯ ಮಾಡುವವನೇ ಗುರು.ಹುಡುಕಿದರೆ ಸಿಗುವವನಲ್ಲ ಗುರು, ನಮ್ಮನ್ನು ಹುಡುಕಿ, ನಾವು ಗುರುವನ್ನು ಕಾಣುವ ಮಟ್ಟಿಗೆ ಸಾಧನೆ ಮಾಡಿದ್ದರೆ ತಾನಾಗೇ ನಮ್ಮ ಬಳಿಗೆ ಬರುವವನು. ನಾವು ಗುರುವಿನ ಮುಖಾಂತರವೇ ಪರಮಾತ್ಮನ ಅರಿವು ಅರಿಯಬೇಕಾಗಿರುವುದರಿಂದ, ನಾವು ಆಷಾಢ ಪೌರ್ಣಮಿ-ಯಂದು ಮಾತ್ರ ಗುರುವನ್ನು ಪೂಜಿಸದೆ.. ಅನು ದಿನ, ಅನು ಕ್ಷಣ, ಗುರುವನ್ನು ಅಂತರಂಗದಲ್ಲೇ ಪೂಜಿಸುತ್ತಾ ನಮ್ಮನ್ನು ನಾವು ಸಮರ್ಪಿಸಿಕೊಳ್ಳಬೇಕು. ಹೀಗೆ ನನ್ನದೇನೂ ಇಲ್ಲವೆಂಬ ಭಾವ ನಮ್ಮಲ್ಲಿ ಸದಾ ಜಾಗೃತವಾಗಿಟ್ಟುಕೊಂಡು, ಗುರುವಿನಲ್ಲಿ ಶರಣಾದರೆ ಮಾತ್ರ ನಮ್ಮ ಗುರಿ ಮುಟ್ಟುವ ಪ್ರಯತ್ನ ಸಫಲವಾಗುತ್ತದೆ.

ಉಪನಿಷತ್ತಿನ ಪ್ರಕಾರ ಗು ಎಂದರೆ ಅಂಧಕಾರವೆಂದೂ ರು ಎಂದರೆ ದೂರೀ-ಕರಿಸುವವ ಅಥವಾ ಅಜ್ಞಾನದ ಅಂಧಕಾರವನ್ನು ನಿವಾರಿಸಿ ಜ್ಞಾನದ ಹಾದಿಗೆ ನಡೆಸುವವ ಎಂಬ ಅರ್ಥವಾಗುತ್ತದೆ. ಸಂಸ್ಕೃತದಲ್ಲಿ ಗುರು ಪದಕ್ಕೆ ಭಾರವಾದ

ಎನ್ನುವ ಅರ್ಥವೂ ಇದೆಯೆನ್ನುತ್ತಾರೆ. ಯಾರು ಜ್ಞಾನದಿಂದ ಭಾರವಾಗಿರುವನೋ ಅವನೇ ಗುರು ಎಂದು ಅರ್ಥೈಸಬಹುದೇನೋ. ಸ್ಕಂದಪುರಾಣದ ಗುರುಗೀತೆಯಲ್ಲಿ ಗುರುವನ್ನು ನಂದಾದೀಪದಂತೆ ಬೆಳಗುವ ಜ್ಯೋತಿಯಂತೆ ಎಂದು ಗುರುವಿನ ಹಿರಿಮೆಯನ್ನು ವಿಸ್ತಾರವಾಗಿ ತಿಳಿಸಿಲಾಗಿದೆ : ಅಖಂಡಮಂಡಲಾಕಾರಂ ವ್ಯಾಪ್ತಂ ಯೇನಾ ಚರಾಚರಂ। ತತ್ಪದಂ ದರ್ಶಿತಂ ಯೇನಾ ತಸ್ಮೈ ಶ್ರೀಗುರವೇ ನಮಃ।

## ಆಷಾಢ ॥ ಬಹುಳ ॥ ತದಿಗೆ

ಶ್ರೀ ರಘುಭೂಷಣತೀರ್ಥರು (ಪಲಿಮಾರು ಮಠ) ಪರಂಪರೆಯಲ್ಲಿ ಇಪ್ಪತ್ತನಾಲ್ಕನೆಯವರು ಇವರು ಶಾಸ್ತ್ರಗಳಲ್ಲಿ ಅಸದೃಶ ಪಂಡಿತರಿದ್ದಂತೆ ಸ್ವಯಂ ಪ್ರತಿಭೆ ಮೆಚ್ಚಿ ಅನೇಕ ರಾಜರು ಇವರನ್ನು ಸನ್ಮಾನಿಸಿ ಗೌರವಿಸಿರುತ್ತಾರೆ. ಇವರು ಐದು ದಶಕಗಳ ಕಾಲ ಪೀಠದಲ್ಲಿದ್ದರು. ನಾಲ್ಕು ಪರ್ಯಾಯಗಳನ್ನು ಬಹುವೈಭವದಿಂದ ಆಚರಿಸಿದ್ದರೆಂದು ದಾಖಲೆಗಳಿಂದ ತಿಳಿದು ಬರುತ್ತದೆ. ಇವರು ಶಾ.ಶ. 1767 (ಕ್ರಿ. ಶ. 1844) ಕ್ರೋಧಿಸಂವತ್ಸರದ ಆಷಾಢ ಬಹುಳ ತದಿಗೆಯಂದು ಉಡುಪಿಯಲ್ಲಿ ವೃಂದಾವನಸ್ಥರಾದರು.

## ಆಷಾಢ ॥ ಬಹುಳ ॥ ಪಂಚಮೀ

ಶ್ರೀಜಯತೀರ್ಥರು (ಟೀಕಾಕೃತ್ಪಾದರ ಆರಾಧನೆ) - ಯಸ್ಯ ವಾಕ್ಕಾಮ-ಧೇನುರ್ನಃ ಕಾಮಿತಾರ್ಥಾನ್ ಪ್ರಯಚ್ಛತಿ । ಸೇವೇ ತಂ ಜಯ ಯೋಗೀಂದ್ರಂ ಕಾಮಬಾಣಚ್ಛಿದಂ ಸದಾ ॥ ಶ್ರೀ ಮಜ್ಜಯತೀರ್ಥರು ದ್ವೈತಸಾಮ್ರಾಜ್ಯಕ್ಕೆ ಭದ್ರ ಬುನಾದಿ ಹಾಕಿದ ಮಹಾನ್ ಗುರುಗಳು . ಇವರ ಪೂರ್ವಾಶ್ರಮದ ಹೆಸರು ದೋಂಡೋಪಂಥ ಇವರ ತಂದೆಯ ಹೆಸರು ದುಂಡಿರಾಜ. ರಾಜರಿಗೆ ದೋಂಢೋ -ಪಂತ ನಾಯಕ ಒಬ್ಬನೇ ಒಬ್ಬ ಮಗ. ತಂದೆಯ ನಂತರ ದೊಂಢೋಪಂತನಾಯಕ ತಮ್ಮ ಸ್ವಾಯತ್ತತೆಯಲ್ಲಿದ್ದ ಪ್ರಾಂತಗಳಿಗೆ ಒಡೆಯನಾದ. 1352 ರಲ್ಲಿ ಅಲ್ಲಾವು-ದ್ದೀನನು ಯಾದವರ ಮೇಲೆ ಧಾಳಿ ಮಾಡಿದ , ಯಾದವರ ಸೈನ್ಯವನ್ನು ಹಿಮ್ಮೆಟ್ಟಿಸಿದ. ಒಂದು ದಿನ ತನ್ನ ಬೇಟೆಗಾಗಿ ಹೊರಟಾಗ ನೀರು ಕುಡಿಯಲೆಂದು ಭೀಮಾನದಿಗೆ ನೀರು ಕುಡಿಯಲೆಂದು ಕುದುರೆ ಸಹಿತ ಇಳಿದರು. ಹಾಗೆಯೇ ಕುದುರೆ ಮೇಲೆ

ಕುಳಿತೇ ನೀರು ಕುಡಿಯಲು ಪ್ರಾರಂಭಿಸಿದರು. ದೂರದಲ್ಲಿ ಕುಳಿತ ಶ್ರೀಮಧ್ವಾ-ಚಾರ್ಯರ ಮೂಲ ಮಹಾ ಸಂಸ್ಥಾನಾಧೀಶ್ವರರಾದ ಶ್ರೀಮದಕ್ಷೋಭ್ಯತೀರ್ಥರು ಮಹಾರಾಜನನ್ನು ನೋಡಿ ಅವನ ಅಪಾರ ತೇಜಸ್ಸನ್ನು ನೋಡಿ, ಮುಂದಿನ ಘಟನಾವಳಿಗಳ ಅರಿವಾಗಿ, ಅವನ ಅವತಾರಕಾರ್ಯ ಸನ್ನಿಹಿತ ಎಂದು ತಿಳಿದು ರಾಜನನ್ನು ಕುರಿತು 'ಕಿಂ ಪಶುಃ ಪೂರ್ವದೇಹೇ?' ಎಂದು ಹೇಳಿದರು. ನಾಯಕನ ಮನಸ್ಸು ವೈರಾಗ್ಯದೆಡೆ ಮೊದಲೇ ಜಾರಿದ್ದರಿಂದ ಶ್ರೀ ಗಳವರ ಮಾತು ಬಹಳವಾಗಿ ಮನಸ್ಸಿಗೆ ನಾಟಿದವು . ತನ್ನ ಪರಿವಾರ, ರಾಜ್ಯ, ಸಂಪತ್ತು , ಅಧಿಕಾರ ಎಲ್ಲವನ್ನು ಬದಿಗೊತ್ತಿ ಶ್ರೀಗಳವರಲ್ಲಿಗೆ ಬಂದು ''ಸ್ವಾಮಿ ನೀವು ನನ್ನ ಕಣ್ಣು ತೆರೆಸಿದಿರಿ ಇಂದಿನಿಂದ ನೀವು ನನ್ನ ಗುರುಗಳು, ನಾನು ನಿಮ್ಮ ಶಿಷ್ಯ . ನನಗೆ ಸನ್ಯಾಸ ಕೊಟ್ಟುಬಿಡಿ ಸ್ವಾಮಿ, ಇದೆಲ್ಲ ಸಾವು-ನೋವು ಯಾತಕ್ಕಾಗಿ ? ಈ ಸಂಪತ್ತು ಮಡದಿ-ಮಕ್ಕಳು ಯಾರಿಗಾಗಿ? ಸನ್ಯಾಸ ಸ್ವೀಕಾರ ಮಾಡಿದರೆ ಸಾಧನೆಗೆ ನೆರವಾದೀತು ದಯಮಾಡಿ ಸನ್ಯಾಸಭಿಕ್ಷೆ ನೀಡಿ ಸ್ವಾಮೀ'' ಎಂದು ಮನವಿ ಮಾಡಿಕೊಂಡರು. ತ್ರಿಕಾಲಜ್ಞಾನಿ-ಗಳಾದ ಶ್ರೀಗಳಿಗೆ ಎಲ್ಲವು ಗೊತ್ತಿದ್ದರು ಏನು ಗೊತ್ತಿಲ್ಲವೇನೋ ಎಂಬಂತೆ ದೊಂಢೋಪಂತ ನಿನ್ನ ವೈರಾಗ್ಯಕ್ಕೆ ನಾನು ಮೆಚ್ಚಿದೆ. ಆದರೆ ನೀನು ವಿವಾಹಿತ ಯುವಕ. ನಿನ್ನ ಸಂಸಾರದ ಗತಿ? ನಿನ್ನ ಅಶ್ರಿತರ ಗತಿ ? ನೀನು ಮನೆಗೆ ತೆರಳು ನಾವು ನಿನಗೆ ಆಚಾರ್ಯರ ಗ್ರಂಥಗಳನ್ನು ಬೋಧಿಸುತ್ತೇವೆ. ಸನ್ಯಾಸದ ಬಗ್ಗೆ ಈಗ ವಿಚಾರ ಬೇಡ ಎಂದು ಹೇಳಿದರು. ಆಗ ನಾಯಕ ಇಲ್ಲ ಸ್ವಾಮಿ ಶಾಶ್ವತ ಸುಖದ ದಾರಿ ತೋರಿ ನೀವು ನನಗೆ ಅನುಗ್ರಹಿಸಬೇಕು . ಈ ಸಂಸಾರ ಅಸಾರ. ಇದು ಅಶಾಶ್ವತ . ಈ ಲೌಕಿಕ ಜೀವನಕ್ಕೆ ಕೊನೆಯೇ ಇಲ್ಲ, ದಯವಿಟ್ಟು ನನಗೆ ಸನ್ಯಾಸ ಕೊಡಿರಿ ಎಂದು ನಿಜವಾದ ವೈರಾಗ್ಯದಿಂದ ನುಡಿದ. ಆಗ ಶ್ರೀಗಳು ತಥಾಸ್ತು ಎಂದು ನಾಯಕನಿಗೆ ಸನ್ಯಾಸ ನೀಡಿ ಶ್ರೀಜಯತೀರ್ಥರು ಎಂದು ನಾಮಕರಣ ಮಾಡಿ ವೇದಾಂತ ಸಾಮ್ರಾಜ್ಯಕ್ಕೆ ಪಟ್ಟಾಭಿಷೇಕ ಮಾಡಿದರು. ನಾಯಕರು ಶ್ರೀಜಯತೀರ್ಥರಾದದ್ದನ್ನು ಕೇಳಿ ಅವರ ಪೂರ್ವಾಶ್ರಮದ ಮನೆಯವರು ಬಂದು ಶ್ರೀಅಕ್ಷೋಭ್ಯತೀರ್ಥರನ್ನು ನಿಂದಿಸಿ ಶ್ರೀಜಯತೀರ್ಥರನ್ನು ಮರಳಿ ಮನೆಗೆ ಕರೆದೊಯ್ದರು. ಅಲ್ಲಿ ಅವರ ಪೂರ್ವಾಶ್ರಮದ ಪತ್ನಿಯನ್ನು ಪತಿಸಂಗಮಕ್ಕಾಗಿ ಕಳುಹಿಸಿದಾಗ ಶ್ರೀ ಶೇಷನ ಆಕೃತಿ ಅಲ್ಲಿದ್ದ ಶ್ರೀ ಜಯತೀರ್ಥರ ದಿವ್ಯತೇಜಸ್ಸನ್ನು ಕಂಡು ಅವರನ್ನು ಕಣ್ಣಿನಿಂದ

ನೋಡಲಾಗದೆ ಹೊರಗೆ ಓಡಿಹೋದಳು. ಮನೆಯವರಿಗೆಲ್ಲ ಶ್ರೀ ಜಯತೀರ್ಥರ ಶಕ್ತಿ ಅರಿವಾಗಿ ಎಲ್ಲರೂ ಕ್ಷಮಾದಾನ ಬೇಡಿದರು. ಶ್ರೀ ಹರಿಯ ಇಚ್ಛೆಯನ್ನು ಬದಲಿಸಲಾಗದು ಎಂದು ತಮ್ಮ ಅವತಾರಕಾರ್ಯ ಅರಿತ ಶ್ರೀ ಜಯತೀರ್ಥರು ಅವರಿಗೆ ಬುದ್ಧಿ ಹೇಳಿ ಅಲ್ಲಿಂದ ಗುರುಗಳು ಇದ್ದಲ್ಲಿಗೆ ಬಂದರು. ಶ್ರೀ ಅಕ್ಷೋಭ್ಯ ತೀರ್ಥರಲ್ಲಿ ಸಮಗ್ರ ಆಚಾರ್ಯರ ಗ್ರಂಥಗಳ ಅಧ್ಯಯನವಾಯಿತು. ಶ್ರೀಜಯ-ತೀರ್ಥರು, ತಮ್ಮ ಗೀತಭಾಷ್ಯದ ಕೊನೆಯಲ್ಲಿ ಅಕ್ಷೋಭ್ಯತೀರ್ಥಗುರುಣಾ ಶುಕವತ್ ಶಿಕ್ಷಿತಸ್ಯ ಮೇ ( ಶ್ರೀಅಕ್ಷೋಭ್ಯತೀರ್ಥರು ನನಗೆ ಗಿಳಿಗೆ ಪಾಠ ಹೇಳಿದಂತೆ ಪಾಠ ಹೇಳಿದರು ) ಎಂದು ತಮ್ಮ ಅಧ್ಯಯನದ ರೀತಿಯನ್ನು ಮೆಲುಕು ಹಾಕಿದ್ದಾರೆ . ಗುರುಗಳ ಹತ್ತಿರ ಸಕಲ ಗ್ರಂಥಾಧ್ಯಯನವಾದ ನಂತರ ಶ್ರೀಜಯತೀರ್ಥರು ಆಚಾರ್ಯರ ಗ್ರಂಥಗಳಿಗೆ ಟಿಪ್ಪಣಿ ಬರೆಯಲು ಪ್ರಾರಂಭಿಸಿದರು. ಶ್ರೀ ಅಕ್ಷೋಭ್ಯ ತೀರ್ಥರವರೆಗೆ ಎಲ್ಲರೂ ಸಾಕ್ಷಾತ್ ಮಧ್ವರ ಕೈಯಲ್ಲಿ ಪಳಗಿದ್ದರಿಂದ ಮಧ್ವರ ಗ್ರಂಥಗಳಿಗೆ ಟಿಪ್ಪಣಿ ಅಷ್ಟೊಂದು ಅವಶ್ಯಕತೆ ಇರಲಿಲ್ಲ. ಆದರೆ ಆಚಾರ್ಯರನ್ನು ಬಿಟ್ಟು ಅವರ ಶಿಷ್ಯರ ಹತ್ತಿರ ಅಧ್ಯಯನ ಮಾಡಿದ ಶ್ರೀಜಯತೀರ್ಥರು ಮುಂದಿನ ದಿನಮಾನದಲ್ಲಿ ಮಾಧ್ವಗ್ರಂಥಗಳಿಗೆ ಟಿಪ್ಪಣಿಯ ಅವಶ್ಯಕತೆಗಳನ್ನು ಅರಿತು ಅದನ್ನು ರಚಿಸಲು ಮುಂದಾದರು. ಈ ಟಿಪ್ಪಣಿಗಳನ್ನು ರಚಿಸಲು ಜಯತೀರ್ಥರು ಒಂದು ಗುಹೆಗೆ ತೆರಳಿದರು. ಅಲ್ಲಿಯೇ ದೇವತಾರ್ಚನೆ ಮುಂತಾದ ಕಾರ್ಯಗಳನ್ನು ಯಾವುದೇ ಲೋಪವಿಲ್ಲದೆ ಮಾಡುತ್ತಿದ್ದರು. ಒಮ್ಮೆ ಆ ಗುಹೆಗೆ ಶೃಂಗೇರಿ ಶಾರದಾ ಪೀಠದ ಶ್ರೀವಿದ್ಯಾರಣ್ಯರು ಅಲ್ಲಿಗೆ ಬಂದರು (ವಿದ್ಯಾರಣ್ಯರು ಈಗಾಗಲೇ ಜಯತೀರ್ಥರ ಗುರುಗಳಾದ ಅಕ್ಷೋಭ್ಯತೀರ್ಥರ ಹತ್ತಿರ ತತ್ವಮಸಿ ಎಂಬ ಪದದ ವಾಕ್ಯಾರ್ಥದಲ್ಲಿ ಸೋತಿದ್ದರು). ವಿದ್ಯಾರಣ್ಯರಿಗೆ ಶ್ರೀಜಯತೀರ್ಥರು ತಾವು ವ್ಯಾಖ್ಯಾನ ಬರೆಯುತ್ತಿದ್ದ, ಮಧ್ವರ ಪ್ರಮಾಣಲಕ್ಷಣಂ ಎಂಬ ಗ್ರಂಥವನ್ನು ತೋರಿಸಿದರು. ಆಗ ವಿದ್ಯಾರಣ್ಯರಿಗೆ ಅದರ ತಲೆ ಬುಡ ಹತ್ತಲಿಲ್ಲ. ಅವರು 'ಬಾಲವಾಕ್ಯೇನ ಕಿಮ್ ?' ಬಾಲಕನ ವಾಕ್ಯಗಳಿಂದೇನು ? ಎಂದು ಹಾಸ್ಯ ಮಾಡಿದರು. ಆಗ ಶ್ರೀಜಯತೀರ್ಥರು ತಾವು ಆ ಗ್ರಂಥದ ಮೇಲೆ ರಚಿಸಿದ ಟಿಪ್ಪಣಿಯನ್ನು ತೋರಿಸಿದರು. ಅದನ್ನು ಓದಿದ ವಿದ್ಯಾರಣ್ಯರಿಗೆ ಶ್ರೀ ಜಯತೀರ್ಥರ ಸಾಮರ್ಥ್ಯ ತಿಳಿಯಿತು. ಆ ಗ್ರಂಥ ಅವರಿಗೆ ಈಗ ಅರ್ಥವಾಗಿತ್ತು. ಅವರು ಮಧ್ವರ ಗ್ರಂಥಗಳ

ಮೆರವಣಿಗೆ ಮಾಡಿಸಿದರು ಎಂಬ ಐತಿಹ್ಯವೂ ಉಂಟು. ಶ್ರೀಜಯತೀರ್ಥರ ವ್ಯಾಖ್ಯಾನಗಳು ಬಹಳ ಗಂಭೀರ, ಸುಂದರ, ಅತೀವಆನಂದವನ್ನು ಉಂಟು ಮಾಡುತ್ತವೆ. ಶ್ರೀ ಜಯತೀರ್ಥರು ಅನೇಕಗ್ರಂಥಗಳನ್ನು ರಚಿಸಿರುತ್ತಾರೆ. ಅವುಗಳಲ್ಲಿ ಅವರ ಶ್ರೀಮನ್ನ್ಯಾಯಸುಧಾ ಇವರ ಮೇರು ಕೃತಿ . ಇವರ ಶ್ರೀಮನ್ನ್ಯಾಯಸುಧಾ-ಗ್ರಂಥದ ಬಗ್ಗೆ ಒಂದು ಉಕ್ತಿ ಇದೆ – ಸುಧಾ ವಾ ಪಠನೀಯಾ ವಸುಧಾ ವಾ ಪಾಲನೀಯಾ ಎಂದು. ಇವರ ಗ್ರಂಥಗಳು ಇಲ್ಲದಿದ್ದರೆ ಇಂದಿನ ಸಮಾಜದಲ್ಲಿ ಮಾಧ್ವರು ಆಚಾರ್ಯರನ್ನು ಅರ್ಥೈಸಿಕೊಳ್ಳುವದೇ ಸಾಧ್ಯವಿರಲಿಲ್ಲ . ಇವರ ಗ್ರಂಥಗಳು ಅಷ್ಟೊಂದು ಮಹತ್ವವನ್ನು ಪಡೆದುಕೊಂಡಿವೆ. ಇವರ ನ್ಯಾಯಸುಧೆ ಇಂದು ಪಂಡಿತರಿಗೆ ನೀಡುವ ಡಿಗ್ರೀ ಸೇರ್ಟಿಫಿಕೆಟ್ ಆಗಿದೆ . ಅಂದರೆ ಅದನ್ನು ಓದಿದರೆ ಮಾತ್ರ ಆಚಾರ್ಯರ ಗ್ರಂಥಗಳು ಅರ್ಥವಾಗುವವು ಎಂದು.

ಶ್ರೀ ವ್ಯಾಸರಾಜತೀರ್ಥರು ಟೀಕಾಚಾರ್ಯರನ್ನು ಕುರಿತು ಹೀಗೆ ಹೇಳಿದ್ದಾರೆ , ಆನಂದತೀರ್ಥೋಪದಿಷ್ಟೋ ನಿಧಿರ್ನಾರಾಯಣಾಹ್ವಯಃ । ಪ್ರದರ್ಶಿತೋ ಯೇನ ಸಮ್ಯಕ್ ಜಯತೀರ್ಥಂ ತಮಾಶ್ರಯೇ ॥ ಶತಾಧಿಕಗ್ರಂಥರತ್ನಪ್ರಣೇತೃಗಳಾದ ಶ್ರೀವಿಜ -ಯೀಂದ್ರತೀರ್ಥರು ಟೀಕಾಚಾರ್ಯರನ್ನು ಕುರಿತು , ಮಧ್ವಶಾಸ್ತ್ರಮಹಾಚಾಪ-ಮಸುದ್ಧಾರ್ಯಮಪೀತರೈಃ । ಉದ್ಧೃತ್ಯ ಕೀರ್ತಿಂ ಯೋ ಲೇಭೇ ತಂ ಜಯಾರ್ಯಂ ಸದಾ ಭಜೇ ॥ - ಭೇದವಿದ್ಯಾವಿಲಾಸ ಎಂಬ ಗ್ರಂಥದಲ್ಲಿ ಹೇಳಿದ್ದಾರೆ. ಯಸ್ಯ ವಾಕ್ಕಾಮಧೇನುರ್ನಃ ಕಾಮಿತಾರ್ಥಾನ್ ಪ್ರಯಚ್ಛತಿ । ಸೇವೇ ತಂ ಜಯ ಯೋಗೀಂದ್ರಂ ಕಾಮಬಾಣಚ್ಛಿದಂ ಸದಾ ॥ ಮಧ್ವಾಧ್ವಕಂಟಕೋದ್ಧಾರದ ಮಂಗ-ಳಾಚರಣ ಶ್ಲೋಕವಿದು.

## ಆಷಾಢ ॥ ಬಹುಳ ॥ ಷಷ್ಠೀ

ಶ್ರೀ ಸತ್ಯನಿಧಿತೀರ್ಥರು (ಶ್ರೀಪಾದರಾಜ ಮಠ) ಆಷಾಢ ಬಹುಳ ಷಷ್ಠಿ - ಮುಳಬಾಗಿಲು ಗೋಪೀನಾಥ ಪದದ್ವಂದ್ವಂ ವಾರಿಜಾಸಕ್ತಮಾನಸಂ । ಶ್ರೀಮತ್ಸತ್ಯನಿಧಿಂ ವಂದೇ ದಯಾನಿಧಿ ಸುಪುತ್ರಕಮ್ ॥

## ಆಷಾಢ ॥ ಬಹುಳ ॥ ಏಕಾದಶೀ

ಯುಧಿಷ್ಠಿರಃ – ಆಷಾಢಕೃಷ್ಣಪಕ್ಷೇ ತು ಕಿನ್ನಾಮ್ನ್ಯೇಕಾದಶೀ ಭವೇತ್ । ಕಥಯಸ್ವ ಪ್ರಸಾದೇನ ವಾಸುದೇವ ಮಮಾಗ್ರತಃ ॥1॥ ಯುಧಿಷ್ಠಿರನು ಹೇಳಿದನು – ಎಲೈ ವಾಸುದೇವನೇ! ಆಷಾಢಕೃಷ್ಣಪಕ್ಷದಲ್ಲಿ ಬರುವ ಏಕಾದಶೀ ಹೆಸರೇನು? ದಯ-ವಿಟ್ಟು ತಿಳಿಸು. ಕೃಷ್ಣಃ – ವ್ರತಾನಾಮುತ್ತಮಂ ರಾಜನ್ ಕಥಯಾಮಿ ತವಾಗ್ರತಃ । ಸರ್ವಪಾಪಕ್ಷಯಕರಂ ಸರ್ವಮುಕ್ತಿಪ್ರದಾಯಕಮ್ ॥2॥ ಕೃಷ್ಣನು ಹೇಳಿದನು – ಎಲೈ ರಾಜನೇ! ವ್ರತಗಳಲ್ಲೆಲ್ಲಾ ಉತ್ತಮವಾದ ವ್ರತವನ್ನು ಹೇಳುತ್ತೇನೆ. ಅದು ಸರ್ವಪಾಪಗಳನ್ನೂ ನಾಶಮಾಡುತ್ತದೆ. ಮುಕ್ತಿಯನ್ನೂ ಕೊಡುತ್ತದೆ. ಆಷಾಢಸ್ಯಾಽಸಿತೇ ಪಕ್ಷೇ ಯೋಗಿನೀ ನಾಮ ನಾಮತಃ । ಏಕಾದಶೀ ನೃಪಶ್ರೇಷ್ಠ ಮಹಾಪಾತಕನಾಶಿನೀ ॥3॥ ಆಷಾಢಮಾಸದ ಕೃಷ್ಣಪಕ್ಷದಲ್ಲಿ ಬರುವ ಏಕಾದಶೀಗೆ ಯೋಗಿನೀ ಏಕಾದಶೀ ಎಂದು ಹೆಸರು. ಮಹಾಪಾಪಗಳನ್ನೂ ನಾಶ ಮಾಡುತ್ತದೆ. ಸಂಸಾರಾರ್ಣವಮಗ್ನಾನಾಂ ಪೋತಭೂತಾ ಸನಾತನೀ । ಜಗತ್ತ್ರಯೇ ಸಾರಭೂತಾ ಯೋಗಿನೀವ್ರತಕಾರಿಣಾಮ್ ॥4॥ ಈ ಯೋಗಿನೀ ಏಕಾದಶಿಯು ಸಂಸಾರ-ಸಾಗರದಲ್ಲಿ ಮುಳುಗಿದವರಿಗೆ ದೋಣಿಯ ರೂಪದಲ್ಲಿರುವುದು. ಪ್ರಪಂಚ-ದಲ್ಲೆಲ್ಲಾ ಸಾರವಾದುದು. ಕಥಯಾಮಿ ತವಾಗ್ರೇಹಂ ಕಥಾಂ ಪೌರಾಣಕೀಂ ಶುಭಾಮ್ । ಅಲಕಾಯಾಂ ರಾಜರಾಜಃ ಶಿವಭಕ್ತಿಪರಾಯಣಃ ॥5॥ ನಿನಗೊಂದು ಹಿಂದಿನ ಕಥೆಯನ್ನು ಹೇಳುತ್ತೇನೆ. ಅಲಕಾಪಟ್ಟಣದಲ್ಲಿ ಶಿವಭಕ್ತಿಯಿಂದ ಕೂಡಿದ ಕುಬೇರನಿರುವನು. ತಸ್ಯಾಸೀತ್ಪುಷ್ಪವಟುಕೋ ಹೇಮಮಾಲೀತಿ ನಾಮತಃ । ತಸ್ಯ ಪತ್ನೀ ಸುರೂಪಾ ಚ ವಿಶಾಲಾಕ್ಷೀತಿ ನಾಮತಃ ॥6॥ ಆ ಕುಬೇರನಿಗೆ ಹೇಮಮಾಲೀ ಎಂಬ ಹೂ ತರುವವನಿದ್ದನು. ಅವನಿಗೆ ವಿಶಾಲಾಕ್ಷಿ ಎಂಬ ಹೆಂಡತಿಯಿದ್ದಳು. ಅವಳು ಬಹುಸುಂದರಿಯು. ಸ ತಸ್ಯಾಂ ಚಾಽಽಸಕ್ತಮನಾಃ ಕಾಮಪಾಶವಶಂ ಗತಃ। ಮಾನಸಾತ್ಪುಷ್ಪನಿಚಯಮಾನೀಯ ಸ್ವಗೃಹೇ ಸ್ಥಿತಃ ॥7॥ ಆತನು ಹೆಂಡತಿಯಲ್ಲಿ ಮನಸ್ಸುಳ್ಳವನಾಗಿ ಕಾಮಬಾಧೆಗೊಳಗಾಗಿ ಮಾನಸಸರೋವರದಿಂದ ಹೂವನ್ನು ತಂದಿದ್ದರೂ ಹೆಂಡತಿಯೊಡನೆ ಮನೆಯಲ್ಲಿಯೇ ಇದ್ದು ಬಿಟ್ಟನು. ಪತ್ನೀಪ್ರೇಮ-ರಸಾಸಕ್ತೋ ನ ಕುಬೇರಾಲಯಂ ಗತಃ । ಕುಬೇರೋ ದೇವಸದನೇ ಕರೋತಿ

ಶಿವಪೂಜನಮ್ ॥8॥ ಮಧ್ಯಾಹ್ನಸಮಯೇ ರಾಜನ್ ಪುಷ್ಪಾಗಮಸಮೀಕ್ಷಕಃ । ಹೇಮಮಾಲೀ ಸ್ವಭವನೇ ರಮತೇ ಕಾಂತಯಾ ಸಹ ॥9॥ ಕಸ್ಮಾನ್ನಾಯಾತಿ ಭೋ ಯಕ್ಷಾ ಹೇಮಮಾಲೀ ದುರಾತ್ಮವಾನ್ । ನಿಶ್ಚಯಂ ಕ್ರಿಯತಾಮಸ್ಯ ಇತ್ಯುವಾಚ ಪುನಃ ಪುನಃ ॥10॥ ಹೆಂಡತಿಯಲ್ಲಿ ಆಸಕ್ತನಾದ ಆ ಹೇಮಮಾಲಿಯು ಕುಬೇರನ ಮನೆಗೆ ಹೋಗಲೇ ಇಲ್ಲ. ಕುಬೇರನು ದೇವರ ಮನೆಯಲ್ಲಿ ದೇವರ ಪೂಜೆಯನ್ನು ಮಾಡುತ್ತಾ ಮಧ್ಯಾಹ್ನಸಮಯದಲ್ಲಿ ಹೂವನ್ನು ತರುವನೆಂದು ಕಾದುಕೊಂಡು ಇದ್ದನು. ಇತ್ತ ಹೇಮಮಾಲಿಯು ತನ್ನ ಹೆಂಡತಿಯೊಡನೆ ರಮಿಸುತ್ತ ಮನೆಯಲ್ಲಿ-ಯೇ ಇದ್ದು ಬಿಟ್ಟನು. ಆಗ ಪೂಜೆಯ ಕಾಲವು ಮೀರುತ್ತ ಬರಲು ಯಕ್ಷರಾಜನಾದ ಕುಬೇರನಿಗೆ ಕೋಪ ಬಂದು ಇಂತೆಂದನು. ಎಲೈ ಯಕ್ಷರೇ! ಹೇಮಮಾಲಿಯು ಏಕೆ ಬರಲಿಲ್ಲ? ಅವನು ಬರುವನೇ ಇಲ್ಲವೇ? ಎಂದು ನಿಶ್ಚಯವನ್ನು ಮಾಡಿ-ರೆಂದು ಪದೇ ಪದೇ ಹೇಳುತ್ತಿದ್ದನು. ಯಕ್ಷಾಃ – ವನಿತಾಕಾಮುಕೋ ಗೇಹೇ ರಮತೇ ಸ್ವೇಚ್ಛಯಾ ನೃಪ ॥11॥ ಯಕ್ಷರು ಹೇಳಿದರು – ಎಲೈ ದೊರೆಯೇ! ಅವನು ಹೆಂಡತಿಯಲ್ಲಿ ಆಸೆಗೊಂಡವನಾಗಿ ಮನೆಯಲ್ಲಿ ಸಂತೋಷದಿಂದ ರಮಿಸುತ್ತಿದ್ದಾನೆ. ಶ್ರೀಕೃಷ್ಣಃ – ತೇಷಾಂ ವಾಕ್ಯಂ ಸಮಾಕರ್ಣ್ಯ ಕುಬೇರಃ ಕೋಪ-ಪೂರಿತಃ । ಆಹ್ವಯಾಮಾಸ ತಂ ತೂರ್ಣಂ ವಟುಕಂ ಹೇಮಮಾಲಿನಮ್ ॥12॥ ಶ್ರೀಕೃಷ್ಣನು ಹೇಳಿದನು – ಕುಬೇರನು ಆ ಯಕ್ಷರ ಮಾತನ್ನು ಕೇಳಿ ಕೋಪಗೊಂಡು ಆ ಹೇಮಮಾಲಿಯನ್ನು ಕರೆಸಿದನು. ಜ್ಞಾತ್ವಾ ಕಾಲಾತ್ಯಯಂ ಸೋಽಪಿ ಭಯವ್ಯಾಕುಲಲೋಚನಃ । ಅಸ್ನಾತ ಏವ ಆಗತ್ಯ ಕುಬೇರಸ್ಯಾಗ್ರತಃ ಸ್ಥಿತಃ ॥13॥ ಆ ಹೇಮಮಾಲಿಯೂ ಕೂಡ ಹೊತ್ತಾದುದನ್ನು ತಿಳಿದು ಭಯಗೊಂಡವನಾಗಿ ಸ್ನಾನಮಾಡಿ ಶುಚಿಯಾಗದೇನೇ ಹೋಗಿ ಕುಬೇರನ ಎದುರಿನಲ್ಲಿ ನಿಂತನು. ತಂ ದೃಷ್ಟ್ವಾ ಧನದಃ ಕ್ರುದ್ಧಃ ಕ್ರೋಧಸಂರಕ್ತಲೋಚನಃ । ಪ್ರತ್ಯುವಾಚ ರುಷಾವಿಷ್ಟಃ ಕೋಪಪ್ರಸ್ಫುರಿತಾಧರಃ ॥14॥ ಕುಬೇರನು ಅವನನ್ನು ನೋಡಿ ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ತುಟಿಗಳನ್ನು ನಡುಗಿಸುತ್ತಾ ಇಂತೆಂದನು. ಧನದಃ – ಆಃ ಪಾಪ ದುಷ್ಟದುರ್ವೃತ್ತ ಕೃತವಾನ್ ದೇವಹೇಳನಮ್ । ಅಷ್ಟಾದಶ-ಕುಷ್ಠಚಿತ್ರೋ ವಿಯುಕ್ತಃ ಕಾಂತಯಾ ತಯಾ । ಅಸ್ಮಾತ್ ಸ್ಥಾನಾದಪಧ್ವಸ್ತೋ ಗಚ್ಛಸ್ವ ಪ್ರಮಥಾಧಮ ॥15॥ ಕುಬೇರನು ಹೇಳಿದನು – ಎಲೆಲವೋ ಪಾಪಿಯೇ! ಕೆಟ್ಟ

ನಡತೆಯವನೇ! ದೇವರಿಗೆ ತಿರಸ್ಕಾರ ಮಾಡಿದೆ. ಆದುದರಿಂದ ಹದಿನೆಂಟು ಬಗೆಯ ಕುಷ್ಠರೋಗಗಳನ್ನು ಹೊಂದಿ ಹೆಂಡತಿಯಿಂದ ಈ ಅಲಕೆಯಲ್ಲಿ ಇರದೇ ನಾಶವಾಗಿ ಹೋಗು. ಕೃಷ್ಣಃ – ಇತ್ಯುಕ್ತೋ ವಚನೇ ತಸ್ಯ ತಸ್ಮಾತ್ ಸ್ಥಾನಾತ್ ಪಪಾತ ಸಃ । ಮಹಾದುಃಖಾಭಿಭೂತಶ್ಚ ಕುಷ್ಠೈಃ ಪೀಡಿತವಿಗ್ರಹಃ ||16|| ಕುಬೇರನು ಹೀಗೆನ್ನಲು ಕುಷ್ಠಗಳಿಂದ ಕೂಡಿ ಬಹು ದುಃಖಪಡುತ್ತಾ ಆ ಜಾಗದಿಂದ ಬಿಟ್ಟು ಹೋದನು. ನ ಸುಖಂ ದಿವಸೇ ತಸ್ಯ ನ ನಿದ್ರಾಂ ಲಭತೇ ನಿಶಿ । ಛಾಯಾಯಾಂ ಪೀಡಿತತನುರ್ನಿದಾಘೇತ್ಯಂತಪೀಡಿತಃ ||17|| ಹಗಲಿನಲ್ಲಿ ಅವನಿಗೆ ಸುಖವಿಲ್ಲ. ರಾತ್ರೆಯಲ್ಲಿ ನಿದ್ದೆಯಿಲ್ಲ. ನೆರಳಿನಲ್ಲಿದ್ದರೆ ಛಳಿ ಹೆಚ್ಚು. ಬಿಸಿಲಿನಲ್ಲಿದ್ದರೆ ಸೆಕೆ ಹೆಚ್ಚು. ಈ ರೀತಿಯಾಗಿ ತೊಂದರೆ ಪಡುತ್ತಿದ್ದನು. ಶಿವಪೂಜಾಪ್ರಭಾವೇಣ ಸ್ಮೃತಿಸ್ತಸ್ಯ ನ ಲುಪ್ಯತೇ । ಪಾತಕೇನಾಭಿಭೂತೋಽಪಿ ಪೂರ್ವಕರ್ಮ ಸ್ಮರತ್ಯಸೌ ||18|| ಶಿವಪೂಜೆಯ ಮಹಿಮೆಯಿಂದ ಹಿಂದಿನ ಜ್ಞಾನವು ಅವನಿಗೆ ನಾಶ-ವಾಗಿರಲಿಲ್ಲ. ಪಾಪಿಯಾದರೂ ಪೂರ್ವಕಥೆಯೆಲ್ಲವನ್ನೂ ಜ್ಞಾಪಿಸಿಕೊಳ್ಳುತ್ತಿದ್ದನು. ಭ್ರಮಮಾಣಸ್ತತೋ ಗಚ್ಛನ್ ಹೇಮಾದ್ರಿಂ ಪರ್ವತೋತ್ತಮಮ್ । ತತ್ರಾಪಶ್ಯನ್ ಮುನಿವರಂ ಮಾರ್ಕಂಡೇಯಂ ತಪೋನಿಧಿಮ್ ||19|| ಹೀಗೆಯೇ ತೊಂದರೆ ಪಡುತ್ತ ಸುತ್ತುತ್ತ ಸುತ್ತುತ್ತ ಹಿಮವತ್ಪರ್ವತಕ್ಕೆ ಹೋದನು. ಅಲ್ಲಿ ತಪೋನಿಧಿ ಯಾದ ಮಾರ್ಕಂಡೇಯನನ್ನು ನೋಡಿದನು. ಯಸ್ಯಾಯುರ್ವಿದ್ಯತೇ ರಾಜನ್ ಬ್ರಹ್ಮಣೋ ವಯಸಾ ಸಮಮ್ । ವವಂದೇ ಚರಣೌ ತಸ್ಯ ದೂರತಃ ಪಾಪಕರ್ಮಕೃತ್ ||20|| ಆ ಮಾರ್ಕಂಡೇಯನಿಗೆ ಬ್ರಹ್ಮನಿಗಿರುವಷ್ಟು ಆಯುಸ್ಸು ಇರುವುದು. ಅವನ ಬಳಿಗೆ ಹೋಗಿ ಈ ಪಾಪಿಯು ದೂರದಿಂದಲೇ ನಮಸ್ಕರಿಸಿದನು. ಮಾರ್ಕಂಡೇಯೋ ಮುನಿವರೋ ದೃಷ್ಟ್ವಾತಂ ಕಂಪಿತಂ ತಥಾ । ಪರೋಪಕರಣಾರ್ಥಾಯ ಸಮಾಹೂಯೇದಮಬ್ರವೀತ್ ||21|| ಮಾರ್ಕಂ-ಡೇಯನು ಅವನು ಆ ರೀತಿಯಾಗಿ ತೊಂದರೆ ಪಡುತ್ತಿರುವುದನ್ನು ನೋಡಿದನು. ಆಗ ಪರೋಪಕಾರಬುದ್ಧಿಯಿಂದ ಅವನನ್ನು ಕರೆದು ಇಂತೆಂದನು. ಮಾರ್ಕಂ-ಡೇಯಃ – ಕಸ್ಮಾತ್ ಕುಷ್ಠಾಭಿಭೂತಸ್ತ್ವಂ ಕುತೋ ನಿಂದ್ಯತರೋ ಹ್ಯಸಿ ||22|| ಮಾರ್ಕಂಡೇಯನು ಹೇಳಿದನು – ಅಯ್ಯಾ! ನಿನಗೇಕೆ ಈ ಕುಷ್ಠವು ಬಂದಿತು? ಈ ರೀತಿ ನಿಂದ್ಯನಾಗಲು ಕಾರಣವೇನು? ಕೃಷ್ಣಃ – ಇತ್ಯುಕ್ತಃ ಸ ಪ್ರತ್ಯುವಾಚ

ಮಾರ್ಕಂಡೇಯಂ ಮಹಾಮುನಿಮ್ ॥23॥ ಶ್ರೀಕೃಷ್ಣನು ಹೇಳಿದನು – ಮಾರ್ಕಂಡೇಯನು ಇಂತೆಂದು ಹೇಳಲು ಹೇಮಮಾಲಿಯು ಇಂತೆಂದನು. ಯಕ್ಷಃ – ರಾಜರಾಜಸ್ಯಾನುಚರೋ ಹೇಮಮಾಲೀತಿ ನಾಮತಃ । ಮಾನಸಾತ್ ಪದ್ಮ-ಸಿಚಯಮಾನೀಯ ಪ್ರತ್ಯಹಂ ಮುನೇ ॥24॥ ಶಿವಪೂಜನವೇಳಾಯಂ ಕುಬೇರಾಯ ಸಮರ್ಪಯೇ । ಏಕಸ್ಮಿನ್ ದಿವಸೇ ಚೈವ ಕಾಲಶ್ಚಾವಿದಿತೋ ಮಯಾ ॥25॥ ಪತ್ನೀಸೌಖ್ಯಪ್ರಸಕ್ತೇನ ಶೋಕವ್ಯಾಕುಲಚೇತಸಾ । ತತಃ ಕ್ರುದ್ಧೇನ ಶಪ್ತೋಽಸ್ಮಿ ರಾಜರಾಜೇನ ವೈ ಮುನೇ ॥26॥ ಕುಷ್ಠಾಭಿಭೂತಃ ಸಂಜಾತೋ ವಿಯುಕ್ತಃ ಕಾಂತಯಾ ತಯಾ । ಅಧುನಾ ತವ ಸಾನ್ನಿಧ್ಯೇ ಪ್ರಾಪ್ತೋಽಸ್ಮಿ ಶುಭಕರ್ಮಣಾ ॥27॥ ಎಲೈ ಋಷಿಯೇ! ನಾನು ಕುಬೇರನ ಆಳು. ನನ್ನ ಹೆಸರು ಹೇಮಮಾಲಿ. ನಾನು ದಿನವೂ ಮಾನಸಸರೋವರದಿಂದ ಕಮಲಗಳನ್ನು ತಂದು ಕುಬೇರನಿಗೆ ಪೂಜೆಯ ವೇಳೆಗೆ ಕೊಡುತ್ತಿದ್ದೆನು. ಒಂದು ದಿನ ಹೆಂಡತಿಯೊಡನೆ ರಮಿಸುತ್ತ ಅದರ ವಿಷಯದಲ್ಲಿಯೇ ಆಸಕ್ತನಾದುದರಿಂದ ಹೊತ್ತೇ ಗೊತ್ತಾಗಲಿಲ್ಲ. ಆಗ ಕುಬೇರನು ಕೋಪಗೊಂಡು ಶಪಿಸಿದನು. ಆ ಶಾಪದಿಂದ ಕುಷ್ಠರೋಗವುಂಟಾಗಿ ತೊಂದರೆ ಪಡುತ್ತ ಹೆಂಡತಿಯಿಂದಲೂ ಅಗಲಿರುವೆನು. ಯಾವುದೋ ಪುಣ್ಯವಶದಿಂದ ಈಗ ನಿನ್ನ ಬಳಿಗೆ ಬಂದಿದ್ದೇನೆ. ಸತಾಂ ಸ್ವಭಾವತಶ್ಚಿತ್ತಂ ಪರೋಪಕರಣೇ ಕ್ಷಮಮ್ । ಇತಿ ಜ್ಞಾತ್ವಾ ಮುನಿಶ್ರೇಷ್ಠ ಮಾಂ ಪ್ರಶಾಧಿ ಕೃತಾಗಸಮ್ ॥28॥ ಸತ್ಪುರುಷರ ಮನಸ್ಸು ಯಾವಾಗಲೂ ಪರೋಪಕಾರದಲ್ಲಿ ತೊಡಗಿರುವುದು. ಆದುದರಿಂದ ಸತ್ಪುರುಷರಾದ ತಾವು ಪಾಪಿಯಾದ ನಾನು ಏನು ಮಾಡಿದರೆ ಸೌಖ್ಯವಾಗುತ್ತದೆ ಎಂಬುದನ್ನು ಅಪ್ಪಣೆ ಮಾಡಬೇಕು. ಮಾರ್ಕಂಡೇಯಃ – ತ್ವಯಾ ಸತ್ಯಮಿಹಪ್ರೋಕ್ತಂ ನಾಸತ್ಯಂ ಭಾಷಿತಂ ಯಶಃ । ಅತೋ ವ್ರತೋಪದೇಶಂ ತೇ ಕಥಯಾಮಿ ಶುಭಪ್ರದಮ್ ॥29॥ ಮಾರ್ಕಂಡೇಯನು ಹೇಳಿದನು – ಎಲೈ ಹೇಮಮಾಲಿಯೇ! ನೀನು ಸತ್ಯವನ್ನೇ ನುಡಿದೆ. ಸುಳ್ಳನ್ನಾಡಲಿಲ್ಲ. ಆದುದರಿಂದ ನಿನಗೆ ಒಳ್ಳೆಯ ವ್ರತವನ್ನು ಉಪದೇಶಿಸುತ್ತೇನೆ. ಆಷಾಢೇ ಕೃಷ್ಣಪಕ್ಷೇ ತು ಯೋಗಿನೀವ್ರತಮಾಚರ । ಅಸ್ಯ ವ್ರತಸ್ಯ ಪುಣ್ಯೇನ ಕುಷ್ಠಂ ಯಾಸ್ಯತಿ ವೈ ಧ್ರುವಮ್ ॥30॥ ಆಷಾಢಕೃಷ್ಣ ಪಕ್ಷದಲ್ಲಿ ಯೋಗಿನೀ ವ್ರತವನ್ನು ಮಾಡು. ಈ ವ್ರತದ ಪುಣ್ಯದಿಂದ ನಿನ್ನ ಕುಷ್ಠ-ರೋಗವು ಹೋಗುತ್ತದೆ. ನಿಶ್ಚಯವು. ಶ್ರೀಕೃಷ್ಣಃ – ಇತಿ ವಾಕ್ಯಮೃಷೇಃ ಶ್ರುತ್ವಾ

ದಂಡವತ್ ಪತತೋ ಭುವಿ । ಉತ್ಥಾಪಿತಃ ಸ ಮುನಿನಾ ಬಭೂವಾತೀವ ಹರ್ಷಿತಃ ॥31॥ ಶ್ರೀಕೃಷ್ಣನು ಹೇಳಿದನು – ಋಷಿಯ ಈ ಮಾತನ್ನು ಕೇಳಿ ಆತನಿಗೆ ಉದ್ದಕ್ಕೆ ಮಲಗಿ ನಮಸ್ಕರಿಸಿದನು. ಆ ಋಷಿಯು ಏಳೆಂದು ಎಬ್ಬಿಸಿದನು. ಇದರಿಂದ ಹೇಮಮಾಲಿಗೆ ಬಹು ಸಂತೋಷವಾಯಿತು. ಮಾರ್ಕಂಡೇಯೋಪದೇಶೇನ ವ್ರತಂ ತೇನ ಕೃತಂ ಯಥಾ । ಅಷ್ಟಾದಶೈವ ಕುಷ್ಠಾನಿ ಗತಾನಿ ತಸ್ಯ ಸರ್ವಶಃ ॥32॥ ಮಾರ್ಕಂಡೇಯನ ಉಪದೇಶದಂತೆ ಅವನು ಆ ವ್ರತವನ್ನು ಮಾಡಿದನು. ಅದರಿಂದ ಹದಿನೆಂಟು ಬಗೆಯ ಕುಷ್ಠರೋಗಗಳೂ ನಾಶವಾದವು. ಮುನೇರ್ವಚನತಃ ಸಮ್ಯಗ್ ವ್ರತೇ ಚೀರ್ಣೇಽಭವತ್ ಸುಖೀ । ಈದೃಗ್ವಿಧಂ ನೃಪ ಶ್ರೇಷ್ಠಂ ಕಥಿತಂ ಯೋಗಿನೀ ವ್ರತಮ್ ॥33॥ ಮುನಿಯ ಮಾತಿನಂತೆ ಈ ಯೋಗಿನೀ ವ್ರತವನ್ನು ಮಾಡಲು ರೋಗವೆಲ್ಲವೂ ಹೋಗಿ ಸುಖಿಯಾದನು. ಎಲೈ ದೊರೆಯೇ! ಈ ಯೋಗಿನೀ ವ್ರತವು ಈ ರೀತಿಯಾದ ಮಹಿಮೆಯುಳ್ಳದ್ದು. ಅಷ್ಟಾಶೀತಿಸಹಸ್ರಾಣಿ ದ್ವಿಜಾನ್ ಭೋಜಯತೇ ತು ಯಃ । ತತ್ಸಮಂ ಫಲಮಾಪ್ನೋತಿ ಯೋಗಿನೀವ್ರತಕೃನ್ನರಃ ॥34॥ ಈ ಯೋಗಿನೀವ್ರತವನ್ನು ಮಾಡಿದವನು ಎಂಭತ್ತೆಂಟುಸಾವಿರ ಬ್ರಾಹ್ಮಣರನ್ನು ಭೋಜನ ಮಾಡಿಸಿದ ಫಲವನ್ನು ಹೊಂದುತ್ತಾನೆ. ಮಹಾಪಾಪಪ್ರಶಮನೀ ಮಹಾಪುಣ್ಯಫಲಪ್ರದಾ । ಪಠನಾಚ್ಛ್ರವಣಾನ್ಮರ್ತ್ಯಃ ಸರ್ವಪಾಪೈಃ ಪ್ರಮುಚ್ಯತೇ ॥35॥ ಈ ಯೋಗಿನೀ ವ್ರತವು ಮಹಾಪಾಪಗಳನ್ನು ನಾಶಮಾಡುತ್ತದೆ. ಪುಣ್ಯವನ್ನು ಕೊಡುತ್ತದೆ. ಇದನ್ನು ಕೇಳಿದವರೂ ಓದಿದವರೂ ಎಲ್ಲಾ ಪಾಪಗಳಿಂದಲೂ ಮುಕ್ತರಾಗುತ್ತಾರೆ. ಇತಿ ಶ್ರೀಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿನಾರದಸಂವಾದಾಂತರ್ಗತ ಕೃಷ್ಣಯುಧಿಷ್ಠಿರಸಂವಾದೇ ಆಷಾಢಕೃಷ್ಣಯೋಗಿನ್ಯೇಕಾದಶೀ ಮಾಹಾತ್ಮ್ಯಂ ನಾಮ ಚತುಃಪಂಚಾಶತ್ತಮೋಽಧ್ಯಾಯಃ ಸಮಾಪ್ತಃ ॥೫೪॥ (ಇಂತು ಶ್ರೀಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿನಾರದರ ಸಂವಾದಾಂತರ್ಗತವಾದ ಕೃಷ್ಣಯುಧಿಷ್ಠಿರಸಂವಾದದಲ್ಲಿ ಆಷಾಢಕೃಷ್ಣಯೋಗಿನ್ಯೇಕಾದಶೀ ಮಹಿಮೆ ಎಂಬ ಐವತ್ತನಾಲ್ಕನೆಯ ಅಧ್ಯಾಯವು ಮುಗಿಯಿತು.

ಶ್ರೀ ವಿದ್ಯಾನಿಧಿತೀರ್ಥರು (ವ್ಯಾಸರಾಜ ಮಠ) ಆಷಾಢ ಬಹುಳ ಏಕಾದಶಿ (ಕ್ರಿ.ಶ. 1824) – ವಿದ್ಯಾಗಭಸ್ತಿವಿಧ್ವಸ್ತಾಽವಿದ್ಯಾತಿಮಿರ ಸಂತತಿಃ । ವಿದ್ಯಾನಿಧಿ ಗುರುರ್ಭೂಯಾದಸ್ಮದಿಷ್ಟಾರ್ಥಸಿದ್ಧಯೇ ॥ ಇವರ ಪೂರ್ವಾಶ್ರಮದ ನಾಮ

ಶ್ರೀರಂಗಪ್ಪಾಚಾರ್ಯರೆಂದು. ಇವರು ನಪ್ಪಚಾರ್ಯರ ಅಣ್ಣಂದಿರು. ಅಂದರೆ ಶ್ರೀ ವಿದ್ಯಾಕಾಂತತೀರ್ಥರು ಪೂರ್ವಾಶ್ರಮದ ಅಣ್ಣಂದಿರು. ವೃದ್ಧಾಪ್ಯದಲ್ಲಿ ಕೇವಲ ಸಾಧನೆಯ ಉದ್ದೇಶದಿಂದ ಸನ್ಯಾಸಾಶ್ರಮ ಸ್ವೀಕರಿಸಿ ವಿದ್ಯಾನಿಧಿತೀರ್ಥರೆಂಬ ಅಭಿ-ಧಾನದಿಂದ ಪೀಠವನ್ನಲಂಕರಿಸಿ ಕೇವಲ 48 ದಿನಗಳು ಮಾತ್ರ ಜೀವಂತರಾಗಿದ್ದರು. ಆಶ್ರಮವಾದ ಕೂಡಲೇ ಚಾತುರ್ಮಾಸ್ಯ ಸಂಕಲ್ಪ ಕೈಗೊಂಡು ಚಾತುರ್ಮಾಸ್ಯದ ಅವಧಿಯಲ್ಲಿಯೇ 1824ರ ಆಷಾಢ ಬಹುಳ ಏಕಾದಶಿಯಂದು ಸೋಸಲೆಯಲ್ಲಿ ಬೃಂದಾವನಸ್ಥರಾದರು.

## ಆಷಾಢ ॥ ಬಹುಳ ॥ ಅಮಾವಾಸ್ಯೆ

ಶ್ರೀವಿಶ್ವಪ್ರಿಯತೀರ್ಥರು (ಸೋದೆ ಮಠ) ಇವರು ಸೋದೆ ಮಠದ ಪರಂ-ಪರೆಯಲ್ಲಿ 32ನೇ ಯತಿಗಳು. ತಪೋನಿಧಿಗಳು, ವೈರಾಗ್ಯನಿಧಿಗಳು, ಶಾಸ್ತ್ರ-ಕೋವಿದರು. ವರ ಸುಧಾನುವಾದವನ್ನು ಅನುಭವುಸುತ್ತಿದ್ದ ಆಗಿನ ವಿದ್ವಾಂಸರು ಮೂಗಿನ ಮೇಲೆ ಬೆರಳಿಡುತ್ತಿದ್ದರಂತೆ.ಯಾವ ಪುಸ್ತಕದ ಸಹಾಯವೂ ಇಲ್ಲದೆಯೇ ಸರ್ವಮೂಲ, ಸುಧಾದಿ ಅನುವಾದ ಮಾಡುತ್ತಿದ್ದ ಇವರ ಶಾಸ್ತ್ರ ಪ್ರೌಢಿಮೆ ಹೇಳ ತೀರದು.ಪರ್ಯಾಯ ಸಭೆಯೇ ಇರಲಿ, ಸುಧಾ ಮಂಗಳವಿರಲಿ, ರಾಜಮಹಾ-ರಾಜರುಗಳ ಸಮಾಗಮವಿರಲಿ, ಸಂಚಾರವಿರಲಿ, ಇವರು ಸದಾ ಕೌಪೀನಧಾರಿ ಗಳಾಗಿರುತ್ತಿದ್ದರು. ಇವರು ಎಷ್ಟೋ ವರ್ಷಗಳ ಕಾಲ ಗ್ರಾಸಮುಷ್ಟಿ ಭತ್ತದರಳನ್ನು ಮಾತ್ರ ಸೇವಿಸುತ್ತಿದ್ದರು. ವೈರಾಗ್ಯದಲ್ಲಿ ಇವರಿಗೆ ಇವರೇ ಸಾಟಿಯಷ್ಟೇ!

ಶ್ರೀವಾದಿರಾಜರ ಪ್ರಶಿಷ್ಯರ ಶಿಷ್ಯರಾದ ಶ್ರೀವೇದನಿಧಿಗಳ ಕಾಲದಲ್ಲಿ, ಏಡಮೂಕ ಬ್ರಾಹ್ಮಣ ನೊಬ್ಬನಿದ್ದನು. (ಹುಟ್ಟು ಕಿವುಡ, ಮೂಕ)ಶ್ರೀವಾದಿರಾಜರು ಸ್ವಪ್ನದಲ್ಲಿ ಆ ಬ್ರಾಹ್ಮಣನಿಗೆ ಉಪದೇಶಿಸುತ್ತಿದ್ದ ಆಖ್ಯಾನವನ್ನು,ಆತ ಮಾರನೆಯ ದಿನ ವೇದನಿಧಿ ಗಳಿಗೆ ಒಪ್ಪಿಸುತ್ತಿದ್ದನು.ಶ್ರೀವೇದನಿಧಿಗಳು ಅದನ್ನು ತಮ್ಮ ಶಿಷ್ಯರಿಂದ ಬರೆದಿಡಿ-ಸುತ್ತಿದ್ದರು. ಆ ಏಡಮೂಕಬ್ರಾಹ್ಮಣನೇ ಶ್ರೀವಿಶ್ವಪ್ರಿಯತೀರ್ಥರು. ಇವರು ಸ್ವಾಪ್ನ-ವೃಂದಾವನಾಖ್ಯಾನೋಕ್ತರು. ಇವರು ಶ್ರೀವಾದಿರಾಜರ ವೃಂದಾವನದ ಬಳಿಯಲ್ಲೇ ಕುಳಿತು ಶಾಸ್ತ್ರಾಧ್ಯಯನ ಮಾಡುವಾಗ, ಏನಾದರೂ ಸಂಶಯಗಳು ಬಂದರೆ, ರಾಜರು ವೃಂದಾವನದಿಂದಲೇ ಪರಿಹಾರ ಸೂಚಿಸುತ್ತಿದ್ದರು. ಸಂಚಾರಕ್ಕೆ ಹೊರಡುವ

ಮುನ್ನ ವೃಂದಾನಕ್ಕೆ ನಮಸ್ಕರಿಸಲು, ರಾಜರು ಇವರ ಶಿರದ ಮೇಲೆ ಮಂತ್ರಾಕ್ಷತೆಯನ್ನು ಅನುಗ್ರಹಿಸುತ್ತಿದ್ದರಂತೆ. ಸ್ವಾಪ್ನ ವೃಂದಾವನಾಖ್ಯಾನ ಉಪ- ದೇಶಿಸಲ್ಪಟ್ಟದ್ದೂ ಇವರಿಗೇ. ಇವರು ತಮ್ಮ ಶಿಷ್ಯರಿಂದ ಅದಕ್ಕೆ ಪ್ರಬೋಧಿನಿಯನ್ನೂ ಬರೆಯಿಸಿದ್ದಾರೆ. ಈ ಎಲ್ಲಾ ಕಾರಣಗಳಿಂದ ಇವರಿಗೆ ಶ್ರೀವೃಂದಾವನಾಚಾರ್ಯ ರೆಂದೇ ಹೆಸರು. ಕೇಷಾಂಚಿತ್ ಭಕ್ತಿರೀಶೇ ಪ್ರಭವತಿ ನಹಿ ತೇ ಶಾಸ್ತ್ರಜಜ್ಞಾನಪೂರ್ಣಾಃ ಕೇಪಿ ಸ್ಯು- ರ್ಮೂಲಟೀಕಾಪ್ರವಚನನಿಪುಣಾಸ್ತೇಪಿ ನಾಚಾರಶೀಲಾಃ । ಯದ್ಯೇವ ನೋಪ- ವಾಸಾದ್ಯತಿಶಯಿತ ಮಹಾಕ್ಲೇಶಭಾಜಃ ತಮೇತ್ಯೈಃ ಸರ್ವೈಃ ಪೂರ್ಣಂ ಗುಣೌಘೈ- ರ್ಗುರುವರಮಮಲಂ ನೌಮಿ ವಿಶ್ವಪ್ರಿಯಾರ್ಯಂ ॥

ವೃಂದಾವನಾಚಾರ್ಯರಿಗೆ ಅನೇಕ ಶಿಷ್ಯರಿದ್ದರು. ಸನ್ಯಾಸಿ ಶಿಷ್ಯರು. 1. ಭೀಮನ- ಕಟ್ಟೆ ಮಠದ ಶ್ರೀರಘುಪ್ರವೀರತೀರ್ಥರು. (ಇವರಿಂದಲೇ ಶ್ರೀವೃಂದಾವನಾ- ಖ್ಯಾನಪ್ರಾಮಾಣ್ಯಬೋಧಿನೀ ಬರೆಯಿಸಿದ್ದು.) 2. ಶ್ರೀವರಾಹತೀರ್ಥರು. (ಇವರ ವೃಂದಾವನ ಸೋದೆಯಲ್ಲಿದೆ.) 3. ಶ್ರೀವಿಶ್ವಾಧೀಶತೀರ್ಥರು. (ಉತ್ತರಾಧಿಕಾರಿ- ಗಳು.) 4. ಶ್ರೀಸಂಕರ್ಷಣಒಡೆಯರು ತಮ್ಮ ಪೂರ್ವಾಶ್ರಮದಲ್ಲಿ ಇವರಲ್ಲಿಯೇ ಸರ್ವಮೂಲ ಗ್ರಂಥಗಳ ಅಧ್ಯಯನ ನಡೆಸಿದ್ದು. 5. ಶ್ರೀಮಧ್ವನಾಥತೀರ್ಥರು. (ಬಿಡಿಯತಿಗಳು. ನ್ಯಾಯಾಮೃತಕಲಾಧರ ಮುಂತಾದ ಗ್ರಂಥಕರ್ತೃಗಳು.) ಇವರ ವೃಂದಾವನ ಶ್ರೀರಂಗಂನಲ್ಲಿ ಇದೆ.

ಆಗಿನ ಕೊಚ್ಚಿಯ ರಾಜ ವೃಂದಾವನಾಚಾರ್ಯರಲ್ಲಿ ಮಧ್ವಾಗಮವನ್ನು ಅಧ್ಯಯನ ಮಾಡಿ ಸದ್ಗತಿಯನ್ನು ಹೊಂದಿದ ಎಂಬುದು ಇವರ ಜೀವನ ಚರಿತ್ರೆ- ಯಿಂದ ತಿಳಿದು ಬರುತ್ತದೆ. ಸೇತುಮಾಧವಸೂರಿ, ಕೊಚ್ಚೀ ರಂಗಪ್ಪಾಚಾರ್ಯರು, ಜಂಬುಖಂಡೀ ವಾದಿರಾಜಾಚಾರ್ಯರು, ಆತ್ತೂರು ವೆಂಕಟರಮಣಾಚಾರ್ಯರು, ಮುಂತಾದವರು ಇವರ ಶಿಷ್ಯ ಪ್ರಮುಖರು. 62 ವರ್ಷಗಳ ದೀರ್ಘಕಾಲ ಪೀಠಾಧಿ ಪತಿಗಳಾಗಿದ್ದು, ನಾಲ್ಕು ಬಾರಿ ಪರ್ಯಾಯವನ್ನು ಪೂರೈಸಿ, 1865 ನೇ ಇಸವಿಯ ಆಷಾಢ ಅಮಾವಾಸ್ಯೆಯ ಪರ್ವದಿನದಂದು ಇವರು ಹರಿಪದವನ್ನೈದಿದರು. ಇವರ ವೃಂದಾವನ ಉಡುಪಿಯಲ್ಲಿ, ಶ್ರೀವಾದಿರಾಜರ ಗುರುಗಳಾದ ಶ್ರೀವಾಗೀಶತೀರ್ಥರ ವೃಂದಾವನದ ಪಕ್ಕದಲ್ಲಿದೆ. ॥ * * * ॥

ಇಲ್ಲಿಗೆ ಆಷಾಢಮಾಸದ ವಿಧಾನವು ಸಮಾಪ್ತವಾಯಿತು ॥ ಶ್ರೀಮಧ್ವೇಶಾರ್ಪಣಮಸ್ತು ॥

ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

ಅಸ್ಮದ್ಗುರ್ವಂತರ್ಗತಶ್ರೀಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕರಾದ-
ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಈ ಕೃತಿಕುಸುಮವು ಸಮರ್ಪಿತವಾಗಿದೆ.

ಶ್ರೀಕೃಷ್ಣಾರ್ಪಣಮಸ್ತು.

* * * * * * *

* * * * *

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶನೀ

# ಅಕ್ಷಯ ತೃತೀಯಾ

ವೈಶಾಖ || ಶುದ್ಧ || ತೃತೀಯಾ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಅಕ್ಷಯತೃತೀಯಾ

## ಪರಶುರಾಮಜಯಂತೀ

ವೈಶಾಖ ॥ ಶುದ್ಧ ॥ ತೃತೀಯಾ

ವಿದ್ವಾನ್ ॥ ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :
ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),
ಗಿರಿನಗರ, ಬೆಂಗಳೂರು-೮೫

'ಅಕ್ಷಯತೃತೀಯಾ' ಶಾಲಿವಾಹನಶಕೆ ೧೯೪೩ ಶಾರ್ವರಿ|| ಶ್ರಾವಣ|| ಶುದ್ಧ|| ಪೂರ್ಣಿಮೆ (ದಿನಾಂಕ:೩-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪರಮಪೂಜ್ಯ||ಶ್ರೀ ವಿದ್ಯಾಧೀಶತೀರ್ಥ-ಶ್ರೀಪಾದಂಗಳವರ ಕರಕಮಲಗಳಿಂದ ಭಾರತೀರಮಣಹೃದಯ-ಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು :



ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಸುಬ್ಬಣ್ಣ ಕೆಂಪದಾಳಿಹಳ್ಳಿ,
ದೂರವಾಣಿ : 9141311280

ಮುದ್ರಣ : ಮುಕ್ತಿಪಥ ಮುದ್ರಣಾಲಯ,
ಬೆಂಗಳೂರು.



ದಿ|| ಹೆಚ್.ಪಿ. ನಾರಾಯಣರಾವ್, ದಿ|| ಹೆಚ್.ಪಿ. ಪದ್ಮಾವತಮ್ಮ, ಹಿಂದೂಪುರ

ಸಾಧಕರಾದ ಶ್ರೀ ಹೆಚ್. ಎನ್. ಶ್ರೀನಿವಾಸಮೂರ್ತಿ, ಹಿಂದೂಪುರ ಇವರು ತಮ್ಮ ತಂದೆ-ತಾಯಿಯ ಸ್ಮರಣಾರ್ಥವಾಗಿ ಕೃತಿಯ ಸೇವೆಯನ್ನು ಸಲ್ಲಿಸಿರುತ್ತಾರೆ.

## ಅಕ್ಷಯತೃತೀಯಾ ಮಾಡಲೇಬೇಕಾದ ಕರ್ತವ್ಯಗಳು

ಅರುಣೋದಯಕಾಲದಲ್ಲಿ ತೀರ್ಥಸ್ನಾನ, ನೂರೆಂಟು ಗಾಯತ್ರೀ-ಮಂತ್ರಜಪ, ಸಾವಿರ ಶ್ರೀಕರಮಂತ್ರಜಪ, ಗಂಧಾಲಂಕಾರ, ಪೂರ್ಣೋದಕ-ಕುಂಭದಾನ, ಪಿತೃತರ್ಪಣ, ಈ ಕೃತಿಯಲ್ಲಿ ನೀಡಿದ ಇಂದ್ರದೇವರ ಚರಿತ್ರೆಯ ಪಾರಾಯಣ, ಸಾಯಂಕಾಲದಲ್ಲಿ ಪರಶುರಾಮದೇವರಿಗೆ ಅರ್ಘ್ಯಪ್ರದಾನ.

ಪ್ರದೋಷಕಾಲದಲ್ಲಿ ಪರಶುರಾಮದೇವರಿಗೆ ಈ ಮಂತ್ರದಿಂದ ಅರ್ಘ್ಯ ನೀಡಿರಿ.

ಜಮದಗ್ನಿಸುತೋ ವೀರಃ ಕ್ಷತ್ರಿಯಾಂತಕರಃ ಪ್ರಭೋ ।
ಗೃಹಾಣಾರ್ಘ್ಯಂ ಮಯಾ ದತ್ತಂ ಕೃಪಯಾ ಪರಮೇಶ್ವರ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಪರಶುರಾಮಾಯ ಇದಮರ್ಘ್ಯಂ
ಇದಮರ್ಘ್ಯಂ ಇದಮರ್ಘ್ಯಂ

# ವಿಷಯಾನುಕ್ರಮಣಿಕೆ

# ಮುನ್ನುಡಿ

ವೈಶಾಖಮಾಸದ ಮೂವತ್ತು ತಿಥಿಗಳಲ್ಲಿ ಅಕ್ಷಯತೃತೀಯಾ ತಿಥಿಯು ಪರಮ-ಶ್ರೇಷ್ಠವಾಗಿದೆ ಎಂದು ವಿಷ್ಣುಧರ್ಮೋತ್ತರವು ತಿಳಿಸಿದೆ. ಯಾರು ವಾಸುದೇವನಾಮಕ-ನಾದ ಪರಮಾತ್ಮನನ್ನು ಮಂತ್ರಾಕ್ಷತೆಯಿಂದ ಪೂಜಿಸಿ, ವಾಸುದೇವದ್ವಾದಶಾಕ್ಷರಮಂತ್ರ-ದಿಂದ ಹೋಮ ಮಾಡುತ್ತಾನೋ, ಅನಂತರ ದಾನ ಮಾಡುತ್ತಾನೋ ಅವನು ವರ್ಷ ಪೂರ್ತಿ ಮಾಡಿದ ಎಲ್ಲ ಪಾಪಗಳನ್ನು ಕಳೆದುಕೊಳ್ಳುತ್ತಾನೆ. ಪರಿಶುದ್ಧನಾಗಿ ಭಗವಂತನ ಒಲುಮೆಗೆ ಪಾತ್ರನಾಗುತ್ತಾನೆ.

ಅಕ್ಷಯತೃತೀಯಾ ದಿವಸ ಯಾವುದೇ ಪದಾರ್ಥವನ್ನು ದಾನ ಮಾಡಿದರೂ ಕೂಡ ಅದು ಅಕ್ಷಯಫಲವನ್ನು ನೀಡುತ್ತದೆಂದು ಮತ್ಸ್ಯಪುರಾಣದ ೬೫ನೆಯ ಅಧ್ಯಾಯದ ಪ್ರಾರಂಭದ ಏಳು ಶ್ಲೋಕಗಳು ಸ್ಪಷ್ಟಪಡಿಸುತ್ತವೆ. ನಾರದೀಯ-ಪುರಾಣವೂ ಕೂಡ ಇದನ್ನೇ ಹೇಳಿದೆ. ಜಪ, ದಾನ, ಹೋಮ, ಇತರ ಪುಣ್ಯಕರ್ಮಗಳು ಇಂದು ಅಕ್ಷಯಫಲವನ್ನು ನೀಡುವುದರಿಂದಲೇ ಇದಕ್ಕೆ ಅಕ್ಷಯ ತೃತೀಯಾ ಎಂಬ ಬಿರುದು ಬಂದಿದೆ - ಎನ್ನುತ್ತವೆ ಪುರಾಣಗಳು. ಪುರಾಣದಲ್ಲಿ ಉಪವಾಸವಿದ್ದು ವ್ರತಾಚರಣೆ ಮಾಡಿದರೆ ವಿಶೇಷಫಲವನ್ನು ಹೇಳಲಾಗಿದೆ. ಆದರೆ ಏಕಾದಶಿಯ ವ್ರತವೊಂದನ್ನು ಶ್ರದ್ಧೆಯಿಂದ ಆಚರಿಸಿದರೆ ಸಾಕು ಉಳಿದ ದಿನಗಳಲ್ಲಿ (ಕೃಷ್ಣಾಷ್ಟಮಿಯೊಂದನ್ನು ಹೊರತು ಪಡಿಸಿ) ಉಪವಾಸ ಮಾಡದೇ ಇರುವುದರಿಂದ ಯಾವುದೇ ಅನರ್ಥಗಳು ಉಂಟಾಗುವುದಿಲ್ಲ. ಅಕ್ಷಯ ತೃತೀಯಾ ದಿವಸ ಕೃತ್ತಿಕಾ ನಕ್ಷತ್ರವಿದ್ದರೆ ಮತ್ತಷ್ಟು ಶ್ರೇಷ್ಠವಾಗುತ್ತದೆಂದು ಭವಿಷ್ಯೋತ್ತರಪುರಾಣವು ಹೇಳುತ್ತದೆ. ಅಕ್ಷಯತೃತೀಯಾದ ಬಗ್ಗೆ ಭವಿಷ್ಯೋತ್ತರಪುರಾಣವು ಇನ್ನೂ ಅನೇಕವಿಷಯಗಳನ್ನು ಸ್ಪಷ್ಟವಾಗಿ ಹೀಗೆ ನಿರೂಪಣೆ ಮಾಡಿದೆ –

ಸ್ನಾನಂ ದಾನಂ ಜಪೋ ಹೋಮಃ

ಸ್ವಾಧ್ಯಾಯಃ ಪಿತೃತರ್ಪಣಮ್ ।

ಯದಸ್ಯಾಂ ಕ್ರಿಯತೇ ಕಿಂಚಿತ್

ಸರ್ವಂ ಸ್ಯಾತ್ ತದಿಹಾಕ್ಷಯಮ್ ॥

ಆದೌ ಕೃತಯುಗಸ್ಯೇಯಂ ಯುಗಾದಿಸ್ತೇನ ಕಥ್ಯತೇ ।

(ಭವಿಷ್ಯೋತ್ತರ ೩೦.೨,೩ ಮತ್ತು ೧೯)

ಕೃತಯುಗವು ಇಂದೇ ಪ್ರಾರಂಭವಾಯಿತು. ಯುಗಾದಿಗಳಲ್ಲಿ ಇದೂ ಸಹ ಒಂದಾಗಿದೆ. ಆದ್ದರಿಂದ ಇಂದು ಮಾಡುವ ಸ್ನಾನ, ದಾನ, ಪವಿತ್ರಮಂತ್ರಗಳ ಪಠನ, ಹೋಮ, ವೇದಾಧ್ಯಯನ, ಪಿತೃತರ್ಪಣ ಇವುಗಳಿಂದ ಅಕ್ಷಯಫಲವು ಉಂಟಾಗುತ್ತದೆ.

ಅಕ್ಷಯತೃತೀಯಾದಿವಸವೇ ಪರಶುರಾಮಜಯಂತಿಯನ್ನು ಆಚರಿಸಬೇಕು. ಸ್ಕಾಂದ ಪುರಾಣ ಹಾಗೂ ಭವಿಷ್ಯಪುರಾಣಗಳು ವೈಶಾಖಶುದ್ಧತೃತೀಯಾದಿವಸ ರೇಣುಕಾ ದೇವಿಯಲ್ಲಿ ಭಗವಂತನು ಪರಶುರಾಮರೂಪದಿಂದ ಅವತರಿಸಿದನೆಂದು ಹೇಳುತ್ತವೆ. –

ವೈಶಾಖಸ್ಯ ಸಿತೇಪಕ್ಷೇ ತೃತೀಯಾಯಾಂ ಪುನರ್ವಸೌ ।

ನಿಶಾಯಾಃ ಪ್ರಥಮೇ ಯಾಮೇ ರಾಮಾಖ್ಯಃ ಸಮಯೇ ಹರಿಃ ॥

ಸ್ವೋಚ್ಚಗೈಃ ಷಡ್ಗ್ರಹೈರ್ಯುಕ್ತೇ ಮಿಥುನೇ ರಾಹುಸಂಸ್ಥಿತೇ।

ರೇಣುಕಾಯಾಸ್ತು ಯೋ ಗರ್ಭಾತ್ ಅವತೀರ್ಣೋ ಹರಿಃ ಸ್ವಯಮ್ ॥

ರಾತ್ರಿ ಮೊದಲನೇ ಯಾಮದಲ್ಲಿ ಪುನರ್ವಸು ನಕ್ಷತ್ರವಿದ್ದು ಆರುಗ್ರಹಗಳು ಉಚ್ಚವಾಗಿದ್ದವು. ಮಿಥುನದಲ್ಲಿ ರಾಹು ಉಚ್ಚನಾಗಿದ್ದನು. ಇಂತಹ ಸುಮುಹೂರ್ತ-ದಲ್ಲಿ ರೇಣುಕೆಯಲ್ಲಿ ಪರಶುರಾಮದೇವರು ಅವತರಿಸಿದರು.

ಹೀಗೆ ಆಧಾರವಿರುವುದರಿಂದ ಸಾಯಂಕಾಲದಲ್ಲಿ ಪರಶುರಾಮದೇವರನ್ನು ಕುರಿತು ಅರ್ಘ್ಯವನ್ನು ನೀಡಬೇಕು.

ಶ್ರೀಪೇಜಾವರ ಅಧೋಕ್ಷಜಮಠದ ಸಂಪ್ರದಾಯದಲ್ಲಿ ವಿಭೂತಿಪುರುಷರಾಗಿ ಮೆರೆದ ಕಣ್ವತೀರ್ಥಕ್ಷೇತ್ರ ಪ್ರಭುಗಳಾದ ಶ್ರೀವಿಜಯಧ್ವಜತೀರ್ಥರ ಆರಾಧನೆಯೂ ಕೂಡ ಅಕ್ಷಯತೃತೀಯಾ ದಿವಸವೇ ಆಗಿದೆ.

ಅಂಜನಾಸೂನುಸಾನ್ನಿಧ್ಯಾತ್ ವಿಜಯೇನ ವಿರಾಜಿತಮ್ ।
ಅಜಿತಪ್ರೀತಿಜನಕಂ ಭಜೇಽಹಂ ವಿಜಯಧ್ವಜಮ್ ॥

ಈ ಸ್ತೋತ್ರವನ್ನು ಹೇಳಿ ಶ್ರೀವಿಜಯಧ್ವಜತೀರ್ಥರನ್ನು ಪ್ರಾರ್ಥಿಸಬೇಕು.

ಅಕ್ಷಯತೃತೀಯಾದಿವಸ ಯಾವುದೇ ಸತ್ಕರ್ಮ ಮಾಡಿದರೂ ಅನಂತ-ಫಲವಿರುವುದರಲ್ಲಿ ಸಂದೇಹವಿಲ್ಲ. ಎಲ್ಲ ಸತ್ಕರ್ಮಗಳನ್ನು ಮಾಡಿ ಪ್ರಾತಃಕಾಲದಲ್ಲಿ ಸೂರ್ಯೋದಯದ ಮೊದಲು ಸ್ನಾನವನ್ನು ಮಾಡದೇ ಎಷ್ಟೇ ಸತ್ಕರ್ಮಗಳನ್ನು ಆಚರಿಸಿದರೂ ಅವು ಪರಿಪೂರ್ಣಫಲವನ್ನು ನೀಡಲು ಸಾಧ್ಯವಾಗುವುದಿಲ್ಲ. ಪ್ರಯತ್ನಪಟ್ಟು ಸೂರ್ಯೋದಯಕ್ಕೂ ಒಂದು ಗಂಟೆ ಮೊದಲು ಸ್ನಾನವನ್ನು ಆಚರಿಸಿ ಸೂರ್ಯೋದಯದ ಸಂದರ್ಭದಲ್ಲಿ ಗಾಯತ್ರೀಮಂತ್ರಜಪವನ್ನು ಮಾಡುವುದ-ರಿಂದಲೇ ಅಕ್ಷಯತೃತೀಯಾದ ತೊಂಭತ್ತರಷ್ಟು ಫಲವನ್ನು ಸುಲಭವಾಗಿ ಪಡೆದು-ಕೊಳ್ಳಬಹುದು. ಸೂರ್ಯನಾರಾಯಣನ ಆರಾಧನೆಯೇ ಇಂದಿನ ವಿಶೇಷ. ಸಾಧಕರು ಸಾಧನೆಯ ಈ ಮರ್ಮವನ್ನು ಮೊಟ್ಟಮೊದಲು ಅರಿತುಕೊಂಡು ಉಳಿದ ಸಾಧನೆಗಳಲ್ಲಿ ಮುನ್ನುಗ್ಗಬೇಕೆಂದು ಕಳಕಳಿಯ ಮನವಿ.

ಈ ಕೃತಿಯಲ್ಲಿ ಅನೇಕ ಪುರಾಣಗಳ ಆಧಾರದಿಂದ ಅಕ್ಷಯತೃತೀಯಾ ಕುರಿತಾದ ಹಲವು ವಿಚಾರಗಳನ್ನು ಸಂಗ್ರಹ ಮಾಡಲಾಗಿದೆ. ಎಲ್ಲವನ್ನೂ ಓದಿ ಸಾಧಕರು ಇದರ ಸದುಪಯೋಗವನ್ನು ಪಡೆದುಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.

ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ಶ್ರೀ ಹೆಚ್.ಎನ್. ಶ್ರೀನಿವಾಸಮೂರ್ತಿ ಹಿಂದೂಪುರ, ಇವರಿಗೆ ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ-ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಇವರ ಮಾತಾ-ಪಿತೃಗಳಿಗೆ ಈ ಜ್ಞಾನಯಜ್ಞದ ಪುಣ್ಯರಾಶಿಯು ತಲುಪಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ

## ಅಕ್ಷಯತೃತೀಯಾ ಆಚರಣೆಗೆ ಬೇಕಾಗುವ ಸಾಮಗ್ರಿಗಳು

* ಅರಿಶಿನ-ಕುಂಕುಮ, ಮಂತ್ರಾಕ್ಷತೆ.
* ಮಾವಿನಸೊಪ್ಪು.
* ಪಂಚಾಮೃತ ಸಾಮಗ್ರಿಗಳು.
* ಪರಿಮಳಭರಿತವಾದ ಪುಷ್ಪಗಳು.
* ತುಳಸೀ, ಐದು ಬಗೆಯ ಹಣ್ಣುಗಳು.
* ತೆಂಗಿನಕಾಯಿ.
* ಎರಡು ಗೆಜ್ಜೆವಸ್ತ್ರ.
* ಕಬ್ಬಿನ ಹಾಲು.
* ದೀಪಸ್ತಂಭಗಳು.
* ಮಂಗಳಾರತಿ ಬತ್ತಿಗಳು.
* ಶುಭ್ರವಾಗಿ ತೊಳೆದ ಪೂಜಾ ಸಾಮಗ್ರಿಗಳು.
* ಈ ಪುಸ್ತಕದ ಕೊನೆಯಲ್ಲಿ ನೀಡಿದ ಅಡುಗೆಯ ಪದಾರ್ಥಗಳು. ಹಾಗೂ ಇದೇ ಪುಸ್ತಕದಲ್ಲಿ ನೀಡಿದ ದಾನಮಾಡಬೇಕಾದ ವಸ್ತುಗಳು.
* ಮುತ್ತೈದೆಯರಿಗೆ ಗೌರೀಬಾಗಿಣ.

* * * *

## ಸ್ತ್ರೀಯರು ಏನು ಮಾಡಬೇಕು?

* ಮನೆಯಲ್ಲಿ ಸ್ತ್ರೀಯರಿದ್ದರೆ ಹಬ್ಬದ ಸಡಗರ ಇರಲು ಸಾಧ್ಯ. ಪ್ರತಿಯೊಂದು ಕರ್ತವ್ಯಗಳೂ ಹೆಚ್ಚಾಗಿ ಸ್ತ್ರೀಯರದ್ದೇ ಆಗಿರುತ್ತವೆ. ಆದ್ದರಿಂದ ಪ್ರಯತ್ನಪಟ್ಟು ಮನೆಯಲ್ಲಿಯೇ ಇದ್ದು ಅಕ್ಷಯತೃತೀಯಾ ಹಬ್ಬವನ್ನು ಸ್ತ್ರೀಯರು ಆಚರಣೆ ಮಾಡಬೇಕು. ಮನೆಯಲ್ಲಿ ಹಬ್ಬವನ್ನು ಆಚರಿಸದೇ ಮತ್ತೊಂದು ಕಡೆ ತೆರಳಿ ಹಬ್ಬವನ್ನು ಆಚರಿಸುವುದು ಹೆಚ್ಚು ಸೂಕ್ತವಲ್ಲ. ಮತ್ತು ಪತಿಯ ಮನಸ್ಸಿಗೆ ವಿರುದ್ಧವಾಗಿ ಮನೆಯನ್ನು ಬಿಟ್ಟು ಮತ್ತೊಂದು ಕಡೆ ಭಜನೆ ಮೊದಲಾದವು-ಗಳಲ್ಲಿ ಪಾಲ್ಗೊಳ್ಳುವುದೂ ಕೂಡ ಧರ್ಮ ಎನಿಸುವುದಿಲ್ಲ. ಆದ್ದರಿಂದ ಈ ಕೆಳಗೆ ಹೇಳಿದ ಕ್ರಮದಲ್ಲಿ ಸ್ತ್ರೀಯರು ಅಕ್ಷಯತೃತೀಯಾ ಹಬ್ಬವನ್ನು ಆಚರಿಸಿ ಧನ್ಯರಾಗಬೇಕು.
* ಪ್ರಾತಃಕಾಲದಲ್ಲಿ ೪.೩೦ರಿಂದ ೫.೦೦ ಗಂಟೆಯ ಒಳಗೆ ಅವಶ್ಯವಾಗಿ ಎದ್ದೇಳಬೇಕು.
* ಹಾಸಿಗೆಯಿಂದ ಏಳುವ ಮೊದಲು ಲಕ್ಷ್ಮೀನಾರಾಯಣನನ್ನು ಸ್ಮರಿಸಿ, ಹೀಗೆ ಸ್ತುತಿಸಬೇಕು. ''ಮೂರು ಲೋಕಸ್ವಾಮಿ ಸರ್ವಜ್ಞ ಸುಖಪೂರ್ಣ ಪ್ರೇರಕ ಸಾಕ್ಷಿ ಕಾರಣ ಕಾರ್ಯ ದೋಷಾತಿದೂರ ಸದ್ಗುಣಸಾಂದ್ರ ಸಜ್ಜನಾಂಬುಧಿ ಚಂದ್ರ ಜಗದಿ ನೀನಿರೆ ಎಮ್ಮ ಮನೋರಥ ಸಲಿಸುವುದೇನಸಾಧ್ಯವೋ ನಿನಗೆ; ಕ್ರೂರ ಮಾನವರ ಸಂಹಾರಮಾಡಿದ ಗುರು ಮಾರುತನಿಂದ ಅತಿಶೀಘ್ರವಾಗಿ ನೀ ರಕ್ಷಿಸೆಂದು ಪ್ರಾರ್ಥಿಸುವೆ. ಭಕ್ತಗೆ ಭೂರಿಸಾರ ಭಾಗ್ಯವನಿತ್ತು ಕೃಪೆ ಮಾಡು ಅನುದಿನ. ಶೂರ ಜಗನ್ನಾಥವಿಟ್ಠಲ ನೀನಲ್ಲದೇ ಇನ್ನಾರು ಭಕ್ತರ ಕಾವ ಕರುಣಿಗಳು ಜಗದಿ''.
* ಲಕ್ಷ್ಮೀನಾರಾಯಣರ ಪಾದಕ್ಕೆ ನಮಿಸಿ ಭಾರತೀರಮಣಮುಖ್ಯಪ್ರಾಣದೇವರ ಪಾದವನ್ನು ನಮಿಸಿ, ಅಕ್ಷಯತೃತೀಯಾದಿವಸ ಹರಿಪ್ರೀತಿಕರವಾಗುವಂಥ

ಸಾಧನೆಯನ್ನು ಮಾಡಿಸೆಂದು ಪ್ರಾರ್ಥಿಸಬೇಕು. ಹಾಗೂ ಪರಶುರಾಮ-ದೇವರನ್ನು ಸ್ಮರಿಸಬೇಕು. ಸೂರ್ಯನಾರಾಯಣನನ್ನು ಸ್ಮರಿಸಬೇಕು. ಶ್ರೀವಿಜಯಧ್ವಜತೀರ್ಥರನ್ನು ಸ್ಮರಿಸಬೇಕು.

* ಶೌಚಾಚಾರಗಳನ್ನು ಮುಗಿಸಿ, ಭಗವಂತನಿಗೆ ದೀಪವನ್ನು ಹಚ್ಚಬೇಕು. 'ದೀಪದೇವಿ ನಮಸ್ತುಭ್ಯಂ ಮಂಗಲೇ ಪಾಪನಾಶಿನೀ । ಅಜ್ಞಾನಾಂಧಸ್ಯ ಮೇ ನಿತ್ಯಂ ಸುಜ್ಞಾನಂ ದೇಹಿ ಸುಪ್ರಭೇ ॥' ಈ ಮಂತ್ರದಿಂದ ದೀಪವನ್ನು ಬೆಳಗಬೇಕು. ದೇವರ ಮುಂದೆ, ತುಳಸಿಯ ಮುಂದೆ, ಮನೆಯ ಬಾಗಿಲಿನ ಮುಂದೆ, ಮಹಾದ್ವಾರದ ಮುಂದೆ ಪ್ರಣತಿಗಳನ್ನು ಅವಶ್ಯವಾಗಿ ಹಚ್ಚಿಡಬೇಕು.

* ಅನಂತರ ''ಹರೇರಾಮ ಹರೇ ರಾಮ ರಾಮರಾಮ ಹರೇ ಹರೇ । ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣಕೃಷ್ಣ ಹರೇ ಹರೇ ॥'' ಎಂಬ ಮಂತ್ರವನ್ನು ಹದಿನಾರು ಬಾರಿ ಜಪಿಸಿ ಭಗವಂತನನ್ನು ಎಬ್ಬಿಸುವ ಹಾಡುಗಳನ್ನು ಹೇಳಬೇಕು.

* ಪತಿಯು ಏಳುವ ಮೊದಲೇ ಎದ್ದು ಸುಪ್ರಭಾತದ ಮೂಲಕ ಪತಿಯನ್ನು ಎಬ್ಬಿಸಬೇಕು.

* ಪ್ರಾತಃಕಾಲದ ದೇವರ ನಾಮಗಳನ್ನು ಹೇಳುತ್ತ, ದೇವಮಂದಿರವನ್ನು ಗೋಮಯದಿಂದ ಶುದ್ಧಗೊಳಿಸಬೇಕು.

* ಮನೆಯ ಅಂಗಳವನ್ನು ಗುಡಿಸಬೇಕು. ನೀರು ಚಿಮುಕಿಸಿ ರಂಗವಲ್ಲಿ ಹಾಕಬೇಕು.

* ಮೊದಲು ಹೊಸ್ತಿಲನ್ನು ತೊಳೆದು ರಂಗವಲ್ಲಿಯನ್ನು ಹಾಕಬೇಕು. ಹೊಸ್ತಿಲಿಗೆ ರಂಗವಲ್ಲಿಯನ್ನು ಹಾಕುವಾಗ ೫ಗೀಟುಗಳನ್ನು ೪ಕಡೆ ಬರೆಯಬೇಕು. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನಾರಾಯಣರೂಪಗಳನ್ನು ನೆನೆಯುತ್ತ ೫ ಗೀಟುಗಳನ್ನು ಹಾಕಬೇಕು. ಎಡಬಲ ಭಾಗಗಳಲ್ಲಿ ಶಂಖಚಕ್ರ ಚಿಹ್ನೆಗಳನ್ನು ಸ್ವಸ್ತಿ ಚಿಹ್ನೆಗಳನ್ನು ಹಾಕಬೇಕು. ಮಧ್ಯದಲ್ಲಿ ಲಕ್ಷ್ಮೀನರಸಿಂಹನನ್ನು ಸ್ಮರಿಸುತ್ತ, ಅರಿಶಿನ ಕುಂಕುಮ ಮಂತ್ರಾಕ್ಷತೆಗಳನ್ನು ಹಾಕಿ ನಮಿಸಬೇಕು. ಹಾಗೂ ಹೊಸ್ತಿಲಿಗೂ ಕೂಡ ಕೆಳಭಾಗದಲ್ಲಿ ಅರಿಶಿನ ಕುಂಕುಮಗಳಿಂದ ಅಲಂಕರಿಸಬೇಕು. ಹೀಗೆ ಪ್ರಾರ್ಥಿಸಬೇಕು -

ಹ್ರೀಂಕಾರರೂಪಿಣೀ ದೇವಿ ವೀಣಾಪುಸ್ತಕಧಾರಿಣೀ ।
ವೇದಮಾತ ನಮಸ್ತುಭ್ಯಂ ಮಾಂಗಲ್ಯಂ ದೇಹಿ ಮೇ ಸದಾ ॥

* ಅನಂತರ ದೇವರ ಮನೆಯಲ್ಲಿ ರಂಗವಲ್ಲಿಯನ್ನು ಹಾಕಬೇಕು. ಅಕ್ಷಯ ಪಾತ್ರೆಯನ್ನು ಬರೆಯಬೇಕು. ಪರಶುರಾಮದೇವರ ಚಿತ್ರವನ್ನು ಬರೆಯಬೇಕು.

* ಅನಂತರ ತುಳಸಿ ವೃಂದಾವನದ ಮುಂದೆ ಅಕ್ಷಯಪಾತ್ರೆಯ ಚಿತ್ರವನ್ನು ಬಿಡಿಸಬೇಕು. ರಂಗವಲ್ಲಿಯನ್ನು ಯಾವುದೇ ಕಾರಣಕ್ಕೂ ಚಾಕ್-ಪೀಸ್ (ಬಳಪದಿಂದ) ಮೊದಲಾದವುಗಳಿಂದ ಹಾಕಬಾರದು.

* ಅಂಗಳದಲ್ಲಿ ರಂಗವಲ್ಲಿಯನ್ನು ಬಿಡಿಸಿದ ಮೇಲೆ ಅಡುಗೆ ಮಾಡುವ ಸ್ಥಳದಲ್ಲಿಯೂ ರಂಗವಲ್ಲಿ ಹಾಕಿ, ''ಹರಿಣೀಪತಿಶ್ರೀಪರಶುರಾಮಾಯ ನಮಃ'' ಎಂದು ಬರೆಯಬೇಕು.

* ಸೂರ್ಯೋದಯವಾಗುವ ಮೊದಲೇ ಸ್ನಾನ ಮಾಡಿರಬೇಕು. ಸ್ತ್ರೀಯರು ಕಂಠಸ್ನಾನ ಮಾಡಿದರೆ ಸಾಕು. ಆದರೆ ಹಬ್ಬವಾಗಿರುವುದರಿಂದ ಅಭ್ಯಂಗಸ್ನಾನದ ಎರೆದುಕೊಳ್ಳುವುದು ಉತ್ತಮಪಕ್ಷವಾಗಿದೆ.

* ಸ್ನಾನವಾದ ಮೇಲೆ ಶಾಸ್ತ್ರೋಕ್ತಪ್ರಕಾರವಾಗಿ ನಾಮಧಾರಣೆ, ಮಂಗಳ ದ್ರವ್ಯಗಳ ಧಾರಣೆಯನ್ನು ಮಾಡಬೇಕು. ಗುರುಮಂತ್ರವನ್ನು ಮಾಡಿಕೊಳ್ಳಬೇಕು. ಕೃಷ್ಣ ಷಡಕ್ಷರಮಂತ್ರವನ್ನು ಅನುಕೂಲಕ್ಕೆ ತಕ್ಕಂತೆ ಯಥಾಶಕ್ತಿ ಜಪಿಸಬೇಕು. ಅನಂತರ ಲಕ್ಷ್ಮೀದೇವಿಯನ್ನು ಪೂಜಿಸಿ, ಸರಸ್ವತೀದೇವಿಯನ್ನು ಪೂಜಿಸಬೇಕು. ತುಳಸಿಯನ್ನು ಪೂಜಿಸಿ ಅನಂತರ ಗೌರೀಪೂಜೆಯನ್ನು ಮಾಡಬೇಕು. ಅನಂತರ ಗಂಗೆಗೆ ಹಾಗೂ ಕಾಮಧೇನುವಿಗೆ ಪೂಜೆಯನ್ನು ಮಾಡಬೇಕು.

* ಹೀಗೆ ಜಪ ಹಾಗೂ ಪೂಜೆಗಳು ಮುಗಿದ ನಂತರ ಅವಶ್ಯವಾಗಿ ಸೂರ್ಯನಾರಾಯಣನನ್ನು ಸ್ಮರಿಸುತ್ತ, ಯಥಾಶಕ್ತಿ ನಮಸ್ಕಾರವನ್ನು ಮಾಡಬೇಕು. ಅಕ್ಷಯತೃತೀಯಾದಿವಸದ ಮೂಲಕ ಧರ್ಮಪರಂಪರೆಯನ್ನು ನಮಗೆ ನೀಡಿದ ಆ ಶ್ರೀಕೃಷ್ಣಪರಮಾತ್ಮನನ್ನು ವಿಶೇಷವಾಗಿ ನಮಿಸಬೇಕು. ಶ್ರೀಹರಣೀಪತಿ-

ಪರಶುರಾಮದೇವರನ್ನು ಯಥಾಶಕ್ತಿ ನಮಿಸಬೇಕು. ಹೀಗೆ ಎಲ್ಲ ಭಗವಂತನ ರೂಪಗಳನ್ನು ಸ್ಮರಿಸುತ್ತ ನಮಸ್ಕಾರ ಮಾಡಿ, ತಾರತಮ್ಯಕ್ರಮದಂತೆ ಸಕಲ ದೇವತೆಗಳಿಗೂ ಕೂಡ ನಮಸ್ಕಾರವನ್ನು ಮಾಡಿ, ಗುರುಗಳಿಗೂ ನಮಿಸಿ, ತನ್ನ ಯಜಮಾನನಿಗೂ ನಮಸ್ಕಾರವನ್ನು ಮಾಡಿ, ಮನೆಯಲ್ಲಿರುವ ಹಿರಿಯರಿಗೆ ನಮಸ್ಕಾರವನ್ನು ಮಾಡಿ, ಅಡುಗೆಯನ್ನು ಪ್ರಾರಂಭಮಾಡಬೇಕು.

* ಮಡಿಯಲ್ಲಿಯೇ ಸ್ನಾನ ಮಾಡಿ ಅಡುಗೆಯನ್ನು ಮಾಡಬೇಕು.

* ಅಕ್ಷಯತೃತೀಯಾದಿವಸ ಅತಿರಸ ಮಾಡುವ ಸಂಪ್ರದಾಯವಿದೆ. ಪಾನಕ, ಕೋಸಂಬರಿ, ಚಿತ್ರಾನ್ನ, ಪಾಯಸ ಇವುಗಳನ್ನು ಅವಶ್ಯವಾಗಿ ಮಾಡಲೇ ಬೇಕು.

* ಪೂಜೆಯ ಸಂದರ್ಭದಲ್ಲಿ ಎಡಬಲಭಾಗಗಳಲ್ಲಿ ಮಂಡಲವನ್ನು ಮಾಡಿ ರಂಗವಲ್ಲಿ ಹಾಕಿ, ಶಾಸ್ತ್ರೋಕ್ತಕ್ರಮದಂತೆ ನೈವೇದ್ಯಪದಾರ್ಥಗಳನ್ನು ತಂದು ದೇವರ ಮುಂದಿಡಬೇಕು.

* ನಿತ್ಯವೂ ಯಜಮಾನನ ಮೂಲಕ ಔಪಾಸನೆಮಾಡುವಾಗ ಪತಿಯ ಜೊತೆಯೇ ಕುಳಿತು ಹರಣೀಪತಿಪರಶುರಾಮದೇವರನ್ನು ನೆನೆಯುಬೇಕು. ಅಕ್ಷಯತೃತೀಯಾದಿವಸ ವಿಶೇಷವಾಗಿ ಅಗ್ನಿಯಲ್ಲಿ ಪರಶುರಾಮದೇವರ ಸನ್ನಿಧಾನವಿರುವುದರಿಂದ ಪತಿಯು ಮಾಡುವ ಔಪಾಸನೆಯಿಂದ ಭಗವಂತನು ಸುಪ್ರೀತನಾಗುತ್ತಾನೆ. ಇದರಲ್ಲಿ ಅವಶ್ಯವಾಗಿ ಪಾಲ್ಗೊಳ್ಳಬೇಕು. ಒಂದು ವೇಳೆ ಪತಿಯು ಔಪಾಸನೆ ಮಾಡದಿದ್ದಲ್ಲಿ ಔಪಾಸನಾ ಕ್ರಮವನ್ನು ಆಚರಿಸುವಂತೆ ಪ್ರೇರಣೆ ಮಾಡಬೇಕು.

* ಬ್ರಾಹ್ಮಣದಂಪತಿಗಳನ್ನು ಮೊದಲೇ ಊಟಕ್ಕೆ ಕರೆದಿರಬೇಕು. ಪತಿಯು ಮಾಡುವ ಆದರೋಪಚಾರಗಳ ಜೊತೆ ತಾನೂ ಸೇರಿಕೊಂಡು ದಂಪತಿಗಳನ್ನು ಸಂತೋಷಪಡಿಸಬೇಕು. ಸ್ವತಃ ತಾನೇ ಎಲ್ಲವನ್ನು ಬಡಿಸಿ, ಅವರನ್ನು ಸಂಪೂರ್ಣತೃಪ್ತಿಗೊಳಿಸಲು ಎಲ್ಲವಿಧದಲ್ಲಿಯೂ ಕೂಡ ಪ್ರಯತ್ನವನ್ನು ಪಡಬೇಕು.

ಅಕ್ಷಯತೃತೀಯಾ

* ದಂಪತಿಗಳಿಗೆ ಊಟ ಬಡಿಸಿದ ಮೇಲೆ ಪತಿಗೆ ಊಟ ಬಡಿಸಿ, ಮನೆಯಲ್ಲಿ ಉಳಿದವರೆಲ್ಲರಿಗೂ ಬಡಿಸಿ ಕೊನೆಯಲ್ಲಿ ತಾನು ಊಟ ಮಾಡಬೇಕು.

* ಮಧ್ಯಾಹ್ನದ ಕಾಲದಲ್ಲಿ ಯಾವುದೇ ಕಾರಣಕ್ಕೂ ನಿದ್ರೆಯನ್ನು ಮಾಡಬಾರದು.

* ಮನೆಯ ಕೆಲಸವನ್ನೇ ಭಗವಂತನ ಸೇವೆಯೆಂದು ಅರಿತು ಆಚರಿಸಬೇಕು.

* ಸಾಯಂಕಾಲದಲ್ಲಿ ಅಕ್ಷಯತೃತೀಯಾ ದಿವಸ ಮಾಡಬೇಕಾದ ಹೇಳಬೇಕಾದ ಭಜನೆಯ ಹಾಡುಗಳನ್ನು ಅವಶ್ಯವಾಗಿ ಹೇಳಬೇಕು.

* ಶ್ರೀಕರನಾರಾಯಣನಿಗೆ ಸಂಬಂಧಪಟ್ಟ ಲಕ್ಷ್ಮೀನಾರಾಯಣರ ದೃಷ್ಟಿಯನ್ನು ಅಪೇಕ್ಷಿಸುವಂಥ ಸೂರ್ಯನಾರಾಯಣನಿಗೆ ಸಂಬಂಧಪಟ್ಟ ಹರಣೀಪತಿ-ಪರಶುರಾಮದೇವರಿಗೆ ಸಂಬಂಧಪಟ್ಟಿರುವ ಹಾಡುಗಳನ್ನು ಹೇಳಬೇಕು. ಅನುಕೂಲವಿದ್ದಲ್ಲಿ ಮನೆ ಮಂದಿಯೆಲ್ಲ ಸೇರಿ ಭಜನೆ ನಡೆಸಬೇಕು.

* ಗೋಧೂಳಿ ಮುಹೂರ್ತದಲ್ಲಿ ಪತಿಯ ಜೊತೆಗೆ ಹರಣೀಪತಿ-ಶ್ರೀಪರಶುರಾಮದೇವರಿಗೆ ಅರ್ಘ್ಯವನ್ನು ನೀಡಬೇಕು. ಪರಶುರಾಮದೇವರು ಪ್ರದೋಷಕಾಲದಲ್ಲಿ ಅವತಾರವನ್ನು ಮಾಡಿದ್ದಾರೆ. ನಮ್ಮ ಮನೆಯಲ್ಲೂ ಕೂಡ ಪರಶುರಾಮದೇವರು ಅವತರಿಸಿದ್ದಾರೆಂದು ಅನುಸಂಧಾನ ಮಾಡಿಕೊಂಡು ಅವರ ಅನುಗ್ರಹಕ್ಕಾಗಿ ಶರಣಾಗತರಾಗಬೇಕು.

* ತನ್ನ ಪತಿಯು ಸಾಯಂಕಾಲದ ಪೂಜೆಯನ್ನು ಮಾಡಿದ ಮೇಲೆ ತೊಟ್ಟಿಲಲ್ಲಿ ಹರಣೀಪತಿಪರಶುರಾಮದೇವರನ್ನೇ ಚಿಂತಿಸುತ್ತ ಲಾಲಿಯ ಪದ್ಯವನ್ನು ಹೇಳಬೇಕು.

* ಅಕ್ಷಯತೃತೀಯಾದಿವಸ ಆಚರಿಸಿದ ಎಲ್ಲ ಸತ್ಕಾರ್ಯಗಳನ್ನು ಪತ್ಯಂತರ್ಗತನಾದ ಭಾರತೀರಮಣಮುಖ್ಯಪ್ರಾಣಾಂತರ್ಗತನಾದ ರುಕ್ಮಿಣೀ-ಸತ್ಯಭಾಮಾಸಹಿತನಾದ ಶ್ರೀಕೃಷ್ಣನ ಪಾದಕಮಲಗಳಲ್ಲಿ ಅರ್ಪಿಸಿ ಧನ್ಯ ಎನ್ನಬೇಕು.

* ''ಪತಿಶುಶ್ರೂಷಣಾನ್ನಾನ್ಯತ್ ಧರ್ಮೋ ಸ್ತ್ರೀಣಾಂ ವಿಧೀಯತೇ'' - ಪತಿಶುಶ್ರೂಷೆಗಿಂತ ಮತ್ತೊಂದು ಧರ್ಮ ಸ್ತ್ರೀಯರಿಗೆ ವಿಹಿತವಾಗಿರುವುದಿಲ್ಲ. ಈ ಶಾಸ್ತ್ರದ ಮರ್ಮವನ್ನು ಅರಿತುಕೊಂಡು ಪತಿಯ ಶುಶ್ರೂಷೆಯಲ್ಲಿಯೇ ಅವಿರತವಾಗಿ ತಲ್ಲೀನರಾಗಬೇಕು. ಪತಿಯ ಜೊತೆ ಯಾವಾಗಲೂ ಅನುರಾಗ-ದಿಂದಲೇ ಇರಬೇಕು. ಇಂಥ ಹಬ್ಬ ಹರಿದಿನಗಳಲ್ಲಿ ವಿಶೇಷವಾಗಿ ಆದರವನ್ನು ತೋರಿಸಬೇಕು.

* ಚೈತ್ರಮಾಸದ ತೃತೀಯಾ ದಿವಸ ಗೌರೀಪೂಜೆಯನ್ನು ಅನೇಕ ಮುತ್ತೈದೆಯರು ಆಚರಿಸುತ್ತಾರೆ. ಅವರೆಲ್ಲರೂ ಅಕ್ಷಯತೃತೀಯಾ ದಿವಸ ಗೌರಿಯನ್ನು ಪೂಜಿಸಿ, ಪೂಜೆಯನ್ನು ಸಮಾಪ್ತಿಗೊಳಿಸಬೇಕು. ಹಾಗೂ ಮುತ್ತೈದೆಯರನ್ನು ಮನೆಗೆ ಕರೆದು ಬಾಗಿಣವನ್ನು ದಾನ ಮಾಡಬೇಕು.

* ಒಂದು ವೇಳೆ ಚೈತ್ರಗೌರೀಪೂಜೆಯ ಕ್ರಮವನ್ನು ಆಚರಿಸದಿದ್ದರೆ ಅವಶ್ಯವಾಗಿ ಇದನ್ನು ಅಳವಡಿಸಿಕೊಳ್ಳಬೇಕು. ಚೈತ್ರಗೌರೀಪೂಜೆಯು ಶಾಸ್ತ್ರದಲ್ಲಿ ವಿಶೇಷವಾಗಿ ವಿಹಿತವಾಗಿದೆ. ಇದರಿಂದ ದಾಂಪತ್ಯಸುಖವು ಅಭಿವೃದ್ಧಿ-ಯಾಗುತ್ತದೆ.

* ಶ್ರೀಕರನಾರಾಯಣನನ್ನು ಹಾಗೂ ದುರ್ಗೆಯನ್ನು ವಿಶೇಷವಾಗಿ ಪೂಜಿಸಬೇಕು. ಆರಾಧನೆ ಮಾಡಬೇಕು. ಅಕ್ಷಯತೃತೀಯಾದಿವಸ ದುರ್ಗಾಪೂಜೆಯನ್ನು ಪುರಾಣಗಳಲ್ಲಿ ವಿಶೇಷವಾಗಿ ಉಲ್ಲೇಖ ಮಾಡಲಾಗಿದೆ. ಇದನ್ನು ವಿವರವಾದ ಲೇಖನದಲ್ಲಿ ನೀವು ಕಾಣಬಹುದು.

## ಅಕ್ಷಯತೃತೀಯಾದಿವಸ ಮಾಡಲೇಬೇಕಾದ ಕೆಲಸಗಳು

* ಪ್ರತಿಯೊಬ್ಬರೂ ೫ಗಂಟೆಯ ಒಳಗೆ ಎದ್ದು, ಸೂರ್ಯನಾರಾಯಣನನ್ನು ಧ್ಯಾನಮಾಡಿ ಅಕ್ಷಯತೃತೀಯಾದಿವಸ ಪುಣ್ಯಕಾರ್ಯಗಳನ್ನು ನೀನೇ ನನ್ನಲ್ಲಿ ನಿಂತು ಮಾಡಿಸಿಕೋ ಎಂದು ಪ್ರಾರ್ಥಿಸಿಕೊಳ್ಳಬೇಕು. ಮತ್ತು ಆ ವರ್ಷದಲ್ಲಿ ಯಾವ ಉನ್ನತ ಕಾರ್ಯಗಳನ್ನು ಮಾಡುವ ಬಯಕೆ ಇರುತ್ತದೋ ಅದು

ನಿರ್ವಿಘ್ನವಾಗಿ ಸಾಂಗೋಪಾಂಗವಾಗಿ ನಡೆಯುವಂತೆ ಸೂರ್ಯನಾರಾಯಣನಲ್ಲಿ ಪ್ರಾರ್ಥನೆ ಮಾಡಬೇಕು. ಹೀಗೆ ಮಾಡಿದಾಗ ಉದ್ದೇಶಿತ ಕಾರ್ಯಗಳು ನೆರವೇರುವುದರಲ್ಲಿ ಸಂಶಯವೇ ಇಲ್ಲ.

* ಗಂಗಾಸ್ನಾನಕ್ಕೆ ಬಹಳ ಮಹತ್ತ್ವವಿದೆ. ಸಾಧ್ಯವಾಗದಿದ್ದರೆ ಬೇರೆ ನದಿಗಳಲ್ಲಿ ಸ್ನಾನ, ಅದೂ ಸಾಧ್ಯವಾಗದಿದ್ದರೆ ಸರೋವರ ಸ್ನಾನ, ಅದೂ ಸಾಧ್ಯವಾಗದಿದ್ದರೆ ಬಾವಿಸ್ನಾನ, ಅದೂ ಸಾಧ್ಯವಾಗದಿದ್ದರೆ ಸ್ನಾನ ಮಾಡುವ ನೀರಿನಲ್ಲಿ ಗಂಗೆಯನ್ನು ಆವಾಹನೆ ಮಾಡಿ ಸೂರ್ಯೋದಯಕ್ಕೂ ಮುಕ್ಕಾಲು ಗಂಟೆ ಮೊದಲು ಸ್ನಾನ ಮಾಡಬೇಕು.

* ಅಕ್ಷಯತೃತೀಯಾದಿವಸ ಸೂರ್ಯೋದಯದ ಮೊದಲು ಸ್ನಾನ ಮಾಡದೇ ಎಷ್ಟೇ ದಾನ, ಧರ್ಮ, ಜಪ, ತಪಗಳನ್ನು ಮಾಡಿದರೂ ಪರಿಪೂರ್ಣಫಲವು ಬರಲು ಸಾಧ್ಯವಿಲ್ಲ. ಇದುವೇ ಮುಖ್ಯಧರ್ಮ.

* ಎಲ್ಲ ಹಬ್ಬಗಳಲ್ಲಿ ಅಭ್ಯಂಗಸ್ನಾನವು ವಿಹಿತವಾಗಿದೆ. ಅಕ್ಷಯತೃತೀಯಾ ದಿವಸವೂ ಕೂಡ ನೆತ್ತಿಗೆ ಬ್ರಾಹ್ಮೀತೈಲವನ್ನು ಹಚ್ಚಿಕೊಂಡು, ದೇಹಕ್ಕೆ ಮಹಾನಾರಾಯಣ-ತೈಲವನ್ನು ಅಥವಾ ಧನ್ವಂತರಿ ತೈಲವನ್ನು ಚೆನ್ನಾಗಿ ಹಚ್ಚಿಕೊಂಡು ಸ್ನಾನವನ್ನು ಮಾಡಬೇಕು. ಆದರೆ ಅಧಿಕಾರಿಗಳಿಗೆ ಇದು ವಿಹಿತವಲ್ಲ.

* ಸೂರ್ಯೋದಯದ ಸಂದರ್ಭದಲ್ಲಿ ಗಾಯತ್ರ್ಯಧಿಕಾರವುಳ್ಳವರು ಖಂಡಿತವಾಗಿಯೂ ೧೦೮ ಗಾಯತ್ರೀಮಂತ್ರವನ್ನು ಜಪಿಸಲೇಬೇಕು. ೩೦೦ಕ್ಕೂ ಅಧಿಕ ನಾರಾಯಣಾಷ್ಟಾಕ್ಷರಮಂತ್ರವನ್ನು ಜಪಿಸಬೇಕು. ಇದರಿಂದ ಸೂರ್ಯ-ನಾರಾಯಣನ ದಿವ್ಯ ಅನುಗ್ರಹವಾಗುತ್ತದೆ. ಇದಕ್ಕೆ ಕಾರಣವನ್ನು ಮತ್ತೊಂದು ಲೇಖನದಲ್ಲಿ ತಿಳಿದುಕೊಳ್ಳಬಹುದು.

* ಭಗವನ್ಮೂರ್ತಿಗಳಿಗೆ ಗಂಧಾಲಂಕಾರವನ್ನು ಮಾಡಬೇಕು.

* ಇದು ನಮ್ಮ ಸಂಸ್ಥೆಯಿಂದ ಪ್ರಕಾಶನಗೊಂಡ ನೀಡಿದ ತಂತ್ರಸಾರೋಕ್ತಕ್ರಮದ ವಿಸ್ತೃತ ದೇವರಪೂಜೆಯನ್ನು ಆಮೂಲಾಗ್ರವಾಗಿ ಮಾಡಬೇಕು. ಇದರಿಂದ

ಅಕ್ಷಯವಾದ ಫಲವು ಉಂಟಾಗಿ ಹೃತ್ಕಮಲದಲ್ಲಿ ಭಗವಂತನು ಪ್ರಸನ್ನನಾಗಿ ಶೀಘ್ರದಲ್ಲಿ ದರ್ಶನವನ್ನು ನೀಡುತ್ತಾನೆ.

* ಶ್ರೀಕರನಾರಾಯಣಮಂತ್ರದ ಉಪದೇಶವಿರುವವರು ಅಕ್ಷಯ-ತೃತೀಯಾದಂದು ೧೦೦೦ಕ್ಕೂ ಹೆಚ್ಚು ಮಂತ್ರವನ್ನು ಜಪಿಸಬೇಕು.

* ಪುರಾಣಗಳಲ್ಲಿ ದುರ್ಗಾಪೂಜೆಯುನ್ನು ವಿಶೇಷವಾಗಿ ನಿರೂಪಣೆ ಮಾಡಲಾಗಿದೆ. ಭಗವಂತನ ಪೂಜೆಯ ನಂತರ ಬ್ರಹ್ಮಚಾರಿಣೀ ಸ್ವರೂಪಳಾದ ದುರ್ಗೆಯನ್ನು ವಿಶೇಷವಾಗಿ ಪೂಜಿಸಿ, ಅವಳ ಅಂತರ್ಯಾಮಿಯಾದ ಲಕ್ಷ್ಮೀನರಸಿಂಹದೇವರ ಅನುಗ್ರಹವನ್ನು ಪಡೆದುಕೊಳ್ಳಬೇಕು.

* ನೈವೇದ್ಯದ ಸಂದರ್ಭದಲ್ಲಿ ಪಾನಕ, ಕೋಸಂಬರಿ, ಮಾವಿನಹಣ್ಣಿನ ರಸಾಯನ, ಕರಬೂಜ ಹಣ್ಣಿನ ರಸಾಯ, ಚಿತ್ರಾನ್ನ, ಅತಿರಸ, ಪಂಚಾನ್ನಗಳು ಇವುಗಳನ್ನು ನಿವೇದನೆ ಮಾಡಬೇಕು. ಪಂಚಾನ್ನಗಳ ನೈವೇದ್ಯಕ್ಕೆ ವಿಶೇಷ ಮಹತ್ವವಿದೆ.

* ದಧ್ಯನ್ನ, ಗುಡಾನ್ನ, ಪರಮಾನ್ನ, ಕ್ಷೀರಾನ್ನಗಳ ಜೊತೆ ಅನ್ನವನ್ನು ನಿವೇದನೆ ಮಾಡುವುದೇ ಇಂದಿನ ವಿಶೇಷ. ಈ ಪುಸ್ತಕದಲ್ಲಿ ನೀವು ಹನ್ನೆರಡು ಬಗೆಯ ಅನ್ನಗಳನ್ನು ಮಾಡುವ ಕ್ರಮವನ್ನು ತಿಳಿಯಬೇಕು. ಕನಿಷ್ಠ ಪಂಚಾನ್ನಗಳನ್ನು ನೈವೇದ್ಯ ಮಾಡಬೇಕು.

* ಪೂಜಾಸಂದರ್ಭದಲ್ಲಿ ಹರಣೀಪತಿಪರಶುರಾಮದೇವರನ್ನು ವಿಶೇಷವಾಗಿ ಸ್ಮರಿಸಿ ಅವರಿಗೆ ಷೋಡಶೋಪಚಾರಪೂಜೆಯುನ್ನು ಭಕ್ತಿಯಿಂದ ಸಮರ್ಪಿಸಬೇಕು.

* ಪೂಜೆಯ ಕೊನೆಯಲ್ಲಿ ಯಾವುದಾದರೂ ಹೊಸ ಸಾಧನೆಯ ಸಂಕಲ್ಪವನ್ನು ಮಾಡಬೇಕು. ಹಾಗೂ ತಮ್ಮಲ್ಲಿರುವ ಅನೇಕ ದುರ್ಗುಣಗಳಲ್ಲಿ ಕೆಲವನ್ನಾದರೂ ಬಿಡುತ್ತೇನೆಂದು ದೇವರ ಮುಂದೆ ಪ್ರತಿಜ್ಞೆ ಮಾಡಬೇಕು.

* ಏನಾದರೂ ಹೊಸ ಅಧ್ಯಯನವನ್ನು ಪ್ರಾರಂಭಮಾಡುವುದೇ ಅಕ್ಷಯ ತೃತೀಯಾದ ಮಹತ್ವಸಾಧನೆಗಳಲ್ಲಿ ಒಂದಾಗಿದೆ.

ಅಕ್ಷಯತೃತೀಯಾ

* ಉತ್ತಮಕಾರ್ಯಗಳ ಆರಂಭಕ್ಕೆ ಅಕ್ಷಯತೃತೀಯಾ ಪರಮೋತ್ಕೃಷ್ಟವಾದ ಮುಹೂರ್ತವೆಂದು ಪ್ರಸಿದ್ಧವಾಗಿದೆ. ಆದ್ದರಿಂದ ಆ ವರ್ಷದಲ್ಲಿ ಯಾವುದಾದರೂ ಮಾಡಬೇಕಾದ ಕಾರ್ಯಗಳಿದ್ದರೆ ಅಕ್ಷಯತೃತೀಯಾ ದಿವಸವೇ ಪ್ರಾರಂಭ ಮಾಡುವುದು ಉತ್ತಮಪಕ್ಷವಾಗಿದೆ.

* ತಾಂಬೂಲದಾನ, ವಸ್ತ್ರದಾನ, ಪಾದರಕ್ಷಾ ದಾನ, ಛತ್ರಿದಾನ, ಫಲದಾನ, ಪಾನಕದಾನ, ಗೋದಾನ, ಭೂದಾನ, ತಿಲದಾನವೇ ಮೊದಲಾದ ದಾನಗಳ ಜೊತೆ ಅನ್ನದಾನಕ್ಕೆ ಎಲ್ಲಿಲ್ಲದ ವೈಶಿಷ್ಟ್ಯವಿದೆ. ಇವುಗಳಲ್ಲಿ ತಮ್ಮ ಶಕ್ತಿಗೆ ಅನುಸಾರವಾಗಿ ಬ್ರಾಹ್ಮಣರಿಗೆ ದಾನ ಮಾಡಬೇಕು. ಈ ಕೃತಿಯಲ್ಲಿ ಅತಿಥಿಸತ್ಕಾರದ ಬಗ್ಗೆ ಹಾಗೂ ದಾನಗಳ ಬಗ್ಗೆ ಅತ್ಯಪೂರ್ವವಾದ ವಿಷಯಗಳಿವೆ. ಇದನ್ನು ನೀವು ಅಕ್ಷಯತೃತೀಯಾದ ದಿವಸ ಉಪಯೋಗಿಸಿಕೊಳ್ಳಬಹುದು. ಹಾಗೂ ಉಳಿದ ಯಾವುದೇ ದಿವಸಗಳಲ್ಲಿ ಮಾಡುವ ಅತಿಥಿಸತ್ಕಾರಕ್ಕೆ ಹಾಗೂ ದಾನಧರ್ಮಗಳಿಗೆ ಈ ಕೃತಿಯನ್ನು ಉಪಯೋಗಮಾಡಿಕೊಳ್ಳಬಹುದು.

* ಅಕ್ಷಯತೃತೀಯಾದಿವಸಕ್ಕೆ ದಾನಗಳ ಹಬ್ಬ ಎಂದು ಕರೆಯುವುದು ಬಹಳ ಅರ್ಥಪೂರ್ಣವಾಗಿದೆ. ಇಂದಿನ ದಿವಸ ದಾನ ಮಾಡಿದರೇನೇ ಅಕ್ಷಯ ತೃತೀಯಾ ಹಬ್ಬವನ್ನು ಆಚರಿಸಿದಂತಾಗುತ್ತದೆ. ದಾನ ಮಾಡದೇ ಇದ್ದರೆ ಅಕ್ಷಯ ತೃತೀಯಾ ಹಬ್ಬವನ್ನು ಆಚರಿಸಿದಂತೆ ಆಗುವುದಿಲ್ಲ.

* ಇಂದು ಅಕ್ಷಯತೃತೀಯಾ ದಿವಸ ಎಲ್ಲರೂ ಚಿನ್ನವನ್ನು ಶಾಸ್ತ್ರದ ವಿಧಾನವೆಂದು ಖರೀದಿಸುತ್ತಾರೆ. ಆದರೆ ಇದು ಯಾವುದೇ ಶಾಸ್ತ್ರಗಳಲ್ಲಿ ಹೇಳಿಲ್ಲ. ಜೈನಧರ್ಮದ ಪ್ರಭಾವದಿಂದಷ್ಟೇ ಇದು ಸಂಪ್ರದಾಯದಲ್ಲಿ ಬಂದು ಬಿಟ್ಟಿದೆ. ಚಿನ್ನವನ್ನು ತೆಗೆದುಕೊಳ್ಳುವುದಕ್ಕಿಂತ ದಾನ ಮಾಡುವುದೇ ಶ್ರೇಷ್ಠವಾಗಿದೆ.

* ಅನೇಕರು ಇಂದು ಕುಬೇರಪೂಜೆಯನ್ನು ಆಚರಿಸುತ್ತಾರೆ. ಅಕ್ಷಯ-ತೃತೀಯಾ ದಿವಸ ಏನುಮಾಡಿದರೂ ಸಂಪತ್ತು ಅಭಿವೃದ್ಧಿಯಾಗುತ್ತದೆಂಬ ದೃಷ್ಟಿಯಿಂದ ಕುಬೇರನನ್ನು ಪೂಜಿಸುವುದು ತಪ್ಪಲ್ಲ. ಕುಬೇರನನ್ನು ಪೂಜಿಸುವುದು ಶಾಸ್ತ್ರದಲ್ಲಿ

ಹೇಳದಿದ್ದರೂ ಸಂಪ್ರದಾಯಕ್ಕೆ ಅನುಸಾರಿಯಾಗಿ ಕುಬೇರನನ್ನು ಪೂಜಿಸಬಹುದು. ಆದರೆ ಕುಬೇರನ ಅಂತರ್ಯಾಮಿಯಾದ ಭಾರತೀರಮಣಪ್ರಾಣದೇವರಲ್ಲಿ ಕುಳಿತ ಲಕ್ಷ್ಮೀನಾರಾಯಣನಿಗೆ ಈ ಪೂಜೆಯು ಸಲ್ಲುತ್ತದೆಂದು ಅನುಸಂಧಾನ ಮಾಡಿಕೊಳ್ಳಬೇಕು.

* ಅಕ್ಷಯತೃತೀಯಾದಿವಸ ಮಧ್ಯಾಹ್ನಕಾಲದಲ್ಲಿ ಸರ್ವಥಾ ಮಲಗ- ಬಾರದು.
* ಅಕ್ಷಯತೃತೀಯಾ ಹಬ್ಬವನ್ನು ಮನೆಯಲ್ಲಿಯೇ ಆಚರಿಸಬೇಕು. ಬೇರೆ ಕಡೆ ಹೋಗಿ ಆಚರಿಸುವುದರಿಂದ ಆ ವಾತಾವರಣದಲ್ಲಿ ಸಂಪತ್ತು ಅಭಿವೃದ್ಧಿ-ಯಾಗುತ್ತದೆ. ಮನೆಯಲ್ಲಿ ಸಂಪತ್ತು ಅಭಿವೃದ್ಧಿಯಾಗುವುದಿಲ್ಲ.
* ಅಕ್ಷಯತೃತೀಯಾ ದಿವಸದ ಇನ್ನೂ ಹೆಚ್ಚಿನ ಕರ್ತವ್ಯಗಳನ್ನು ಸ್ಪಷ್ಟವಾಗಿ ತಿಳಿಯಲು ವಿವರವಾದ ಲೇಖನವನ್ನು ನೋಡಿರಿ.

## ಅಕ್ಷಯತೃತೀಯಾ ಹಬ್ಬದ ಮಹತ್ವ

* ಚತುರ್ಮುಖಬ್ರಹ್ಮದೇವರು ಸೃಷ್ಟಿಯ ಪ್ರಾರಂಭವನ್ನು ಯುಗಾದಿಯ ದಿವಸ ಮಾಡಿದರು. ಅಕ್ಷಯತೃತೀಯಾ ದಿವಸ ಧರ್ಮಸ್ಥಾಪನೆಯನ್ನು ಮಾಡಿದರು. ಸತ್ಯಯುಗ ಅಥವಾ ಧರ್ಮಯುಗವೆಂದೇ ಪ್ರಸಿದ್ಧವಾದ ಕೃತಯುಗವು ಪ್ರಾರಂಭವಾದ ದಿವಸವೂ ಕೂಡ ಅಕ್ಷಯತೃತೀಯಾ ದಿವಸವೇ ಆಗಿದೆ.
* ಜಪ, ತಪಸ್ಸು, ಸ್ವಾಧ್ಯಯನ, ಹೋಮ, ದಾನ, ಯಜನ ಮೊದಲಾದ ಧರ್ಮಗಳನ್ನು ಪಾಲಿಸುವ ಮೂಲಕ ಚತುರ್ಮುಖಬ್ರಹ್ಮದೇವರು ಮಾಡಿದ ಧರ್ಮಸ್ಥಾಪನೆಗೆ ಗೌರವವನ್ನು ಇಂದು ಸಲ್ಲಿಸಬೇಕು.
* ಅಕ್ಷಯತೃತೀಯಾ ದಿವಸ ಎಲ್ಲ ಶುಭಕಾರ್ಯಗಳನ್ನು ಆಚರಣೆ ಮಾಡಬಹುದು. ಇದರಿಂದ ಅಕ್ಷಯವಾದ ಫಲವು ದೊರಕುತ್ತದೆ. ಆದರೆ ಭರಣಿ, ಕೃತ್ತಿಕಾ ಮೊದಲಾದ ಕೆಲವು ನಕ್ಷತ್ರಗಳಿದ್ದರೆ ಕೆಲವು ಶುಭಕಾರ್ಯಗಳನ್ನು ಮಾಡಲು ಬರುವುದಿಲ್ಲ. ಇದನ್ನು ಪುರೋಹಿತರ ಮೂಲಕ ಅಥವಾ ಜ್ಯೋತಿಷಿಗಳ ಮೂಲಕ ಕೇಳಿ ತಿಳಿದುಕೊಳ್ಳಬೇಕು.

ಅಕ್ಷಯತೃತೀಯಾ

* ಮೇಷಮಾಸದಲ್ಲಿ ಅಕ್ಷಯತೃತೀಯಾ ತಿಥಿಯು ಬರುತ್ತದೆ. ಆದ್ದರಿಂದ ಸೂರ್ಯನು ಉಚ್ಚಸ್ಥಾನದಲ್ಲಿರುತ್ತಾನೆ. ಕೆಲವೊಮ್ಮೆ ಚಂದ್ರನೂ ಕೂಡ ವೃಷಭರಾಶಿಯಲ್ಲಿ ಉಚ್ಚಸ್ಥಾನದಲ್ಲಿರುತ್ತಾನೆ. ಮೇಷದಲ್ಲಿ ಸೂರ್ಯನೂ ವೃಷಭದಲ್ಲಿ ಚಂದ್ರನೂ ಉಚ್ಚದಲ್ಲಿದ್ದಾಗ ಉಳಿದೆಲ್ಲ ಗ್ರಹಗಳೂ ಉತ್ತಮವಾದ ಫಲವನ್ನೇ ನೀಡುತ್ತಾರೆ. ನವಗ್ರಹಗಳಲ್ಲಿ ತಂದೆತಾಯಿಯ ಸ್ಥಾನದ ಸೂರ್ಯಚಂದ್ರರಿಗೆ ಇದೆ. ಇವರಿಬ್ಬರೂ ಉಚ್ಚಸ್ಥಾನದಲ್ಲಿ ಇರುವ ಕಾರಣದಿಂದಲೇ ಅಕ್ಷಯತೃತೀಯಾದಂದು ಮಾಡುವ ಎಲ್ಲ ಕಾರ್ಯಗಳಿಗೆ ನವಗ್ರಹಗಳ ಸಂಪೂರ್ಣ ಅನುಗ್ರಹ ಇರುತ್ತದೆ. ಹಾಗೂ ಪ್ರತಿಯೊಬ್ಬರೂ ಪರಿಪೂರ್ಣವಾದ ಫಲವನ್ನು ಕೊಟ್ಟು ನಮ್ಮನ್ನು ರಕ್ಷಿಸುತ್ತಾರೆ.

* ದಾನಗಳ ಹಬ್ಬವೆಂದೇ ಪ್ರಸಿದ್ಧವಾದ ಅಕ್ಷಯತೃತೀಯಾ ದಿವಸ ಇದೇ ಪುಸ್ತಕದಲ್ಲಿ ನೀಡಿದ ಮಹಾಸಂಕಲ್ಪವನ್ನು ಮಾಡಿ ದಾನವನ್ನು ಆಚರಿಸಬೇಕು. ಅಷ್ಟವಿಧದಾನಗಳ, ದಶವಿಧದಾನಗಳ ಇನ್ನೂ ಅನೇಕ ಬಗೆಯ ದಾನಗಳ ಬಗ್ಗೆ ಈ ಪುಸ್ತಕದಲ್ಲಿ ನೀಡಲಾಗಿದೆ. ಇವುಗಳಲ್ಲಿ ಶಕ್ತ್ಯಾನುಸಾರವಾಗಿ ದಾನವನ್ನು ಮಾಡಬೇಕು.

* ಪರಶುರಾಮದೇವರು ಅಕ್ಷಯತೃತೀಯಾದಿವಸದ ಪ್ರದೋಷದ ಕಾಲದಲ್ಲಿ ಜಮದಗ್ನಿ ಋಷಿಗಳ ಮೂಲಕ ರೇಣುಕಾದೇವಿಯಲ್ಲಿ ಅವತಾರ ಮಾಡಿದ್ದಾರೆ. ಇವರ ಚರಿತ್ರೆಯನ್ನು ಆಮೂಲಾಗ್ರವಾಗಿ ಶ್ರವಣ ಮಾಡಬೇಕು.

* ಶ್ರೀವಿಜಯಧ್ವಜತೀರ್ಥರ ಆರಾಧನೆಯು ಕೂಡ ಇಂದೇ ಆಗಿದೆ. ಶ್ರೀಪೇಜಾವರ ಅಧೋಕ್ಷಜಮಠದ ಸಂಪ್ರದಾಯದಲ್ಲಿ ಬಂದ ಕಣ್ವತೀರ್ಥಪ್ರಭುಗಳಾದ ಶ್ರೀವಿಜಯಧ್ವಜತೀರ್ಥರು ಸಮಗ್ರ ಭಾಗವತಕ್ಕೆ ಟಿಪ್ಪಣಿಯನ್ನು ಬರೆದ ದಿವ್ಯಜ್ಞಾನಿಗಳು. ತಾವು ಟಿಪ್ಪಣಿಯನ್ನು ಬರೆಯುವಾಗ ಗಾಳಿಗೆ ಅರಳಿ ಮರದ ಎಲೆಗಳು ಶಬ್ದಮಾಡುತ್ತವೆಂದು ಆ ಎಲ್ಲ ಎಲೆಗಳನ್ನು ಸ್ತಬ್ಧಗೊಳಿಸಿದ ವಿಭೂತಿಪುರುಷರು. ಸಮಸ್ತ ಭಾಗವತದ ಟಿಪ್ಪಣಿಯನ್ನು ಬರೆದು ಭಗವಂತನ ಬಳಿ ಅವರು ಕೇಳಿದ ವರವೇನೆಂದರೆ - ''ಪ್ರಾಕ್ ನಿಷ್ಕಿಂಚನತಾಂ''

- ನನಗೆ ಮೊದಲು ಬಡತನವನ್ನು ಕೊಡು. ಇದುವೇ ನಾನು ನಿನ್ನ ಬಳಿ ಕೇಳುವ ವೈರಾಗ್ಯ. ಇಂತಹ ಪರಮಮಾನ್ಯರಾದ ಶ್ರೀವಿಜಯಧ್ವಜತೀರ್ಥರ ಆರಾಧನೆಯನ್ನು ಇಂದು ಆಚರಿಸಬೇಕು.

* ಒಮ್ಮೆ ಸಕಲ ದೇವತೆಗಳು ದೈತ್ಯರಿಂದ ಸೋತಾಗ ದೇವೇಂದ್ರನು ಕಮಲದಳದಲ್ಲಿ ಅಡಗಿಕುಳಿತುಕೊಳ್ಳುತ್ತಾನೆ. ಆಗ ಎಲ್ಲ ದೇವತೆಗಳು ಜಪವನ್ನು ಮಾಡಿ ಪುನಃ ದೇವೇಂದ್ರನಿಗೆ ಸ್ವರ್ಗದಲ್ಲಿ ಪದವಿಯು ದೊರಕುವಂತೆ ಮಾಡುತ್ತಾರೆ. ಇದು ಅಕ್ಷಯತೃತೀಯಾದಿವಸವೇ ನಡೆದಿದೆ. ಹೀಗೆ ಅಕ್ಷಯ-ತೃತೀಯಾದಿವಸವು ದೇವೇಂದ್ರನಿಗೆ ತನ್ನ ಪದವಿಯು ದೊರಕಿತು ಎಂಬ ಆಧಾರದಿಂದ ನಾವು ಮಾಡುವ ಎಲ್ಲ ಜಪ, ತಪಗಳಿಗೆ ಉತ್ತಮಫಲವು ದೊರಕುತ್ತದೆಂದು ಪುರಾಣಗಳು ತಿಳಿಸುತ್ತವೆ.

* ಚೈತ್ರಮಾಸದಲ್ಲಿ ಪ್ರಾರಂಭಿಸಿದ ಚೈತ್ರಗೌರಿಯ ವಿಸರ್ಜನೆಯನ್ನು ಇಂದು ಆಚರಿಸಿ ಸ್ತ್ರೀಯರು ಬಾಗಿಣದಾನವನ್ನು ನೀಡಬೇಕು.

* ಅಕ್ಷತೆಕಾಳುಗಳಿಂದ ಭಗವಂತನನ್ನು ಅರ್ಚಿಸಬೇಕು. ಆದ್ದರಿಂದಲೇ ಇದಕ್ಕೆ ಅಕ್ಷಯತೃತೀಯಾ ಎಂಬ ಹೆಸರು ಸಾರ್ಥಕವಾಗಿದೆಯೆಂದು ಪುರಾಣಗಳು ಸ್ಪಷ್ಟಪಡಿಸಿವೆ.

## ಈ ಕಲ್ಪನೆಗಳಿಗೆ ಆಧಾರವಿಲ್ಲ

* ಮಹಾಭಾರತವನ್ನು ವೇದವ್ಯಾಸದೇವರು ಅಕ್ಷಯತೃತೀಯಾದಿವಸ ಗಣಪತಿಯ ಮೂಲಕ ಬರೆಸಿದರು.

* ಸುಧಾಮನಿಗೆ ಶ್ರೀಕೃಷ್ಣನು ದಿವ್ಯ ಅರಮನೆಯನ್ನು ಅಕ್ಷಯತೃತೀಯಾ ದಿವಸ ನೀಡಿದನು.

* ಅಕ್ಷಯತೃತೀಯಾ ದಿವಸ ಚಿನ್ನವನ್ನು ಖರೀದಿಸಲೇಬೇಕು.

* ಕುಬೇರನಿಗೆ ಅಕ್ಷಯತೃತೀಯಾದಿವಸವೇ ಸ್ಥಾನವು ದೊರಕಿತು.

## ಇಷ್ಟು ಪೂಜಾವಿಧಾನಗಳನ್ನು ಅನುಸರಿಸಿರಿ

೧. ನಿತ್ಯವೂ ಮಾಡುವ ದೇವರ ಪೂಜೆಯನ್ನೇ ಇಂದು ವಿಸ್ತಾರವಾಗಿ ಆಚರಿಸಬೇಕು. ಅದಕ್ಕಾಗಿ ನಮ್ಮ ಸಂಸ್ಥೆಯಿಂದ ಮುದ್ರಣವಾದ ದೇವರಪೂಜೆ ಪುಸ್ತಕವನ್ನು ಇಂದು ಅವಶ್ಯವಾಗಿ ದೇವರ ಪೂಜೆಯಲ್ಲಿರುವ ಮಂತ್ರಗಳನ್ನು ಹೇಳುತ್ತಾ ಪೂಜೆಯನ್ನು ಮಾಡಬೇಕು.

೨. ಪಂಚಾಮೃತ ಅಭಿಷೇಕವನ್ನು ಆಚರಿಸಬೇಕು.

೩. ಗಂಧಾಲಂಕಾರವನ್ನು ಮಾಡಬೇಕು.

೪. ಮಂತ್ರಾಕ್ಷತೆಗಳಿಂದ ಕೃಷ್ಣಾಷ್ಟೋತ್ತರ ಶತನಾಮಾವಳಿ, ಅಥವಾ ವಿಷ್ಣುಸಹಸ್ರನಾಮಾವಳಿಯನ್ನು ಪಠಿಸುತ್ತಾ ಅರ್ಚಿಸಬೇಕು.

೫. ಶಾಲಗ್ರಾಮಗಳಿಗೆ ಮಂತ್ರಾಕ್ಷತೆಗಳಿಂದ ಅರ್ಚನೆ ಮಾಡಬಾರದು. ಪ್ರತಿಮೆಗಳಿಗೆ ಮಾತ್ರ ಮಂತ್ರಾಕ್ಷತೆಯಿಂದ ಅರ್ಚನೆ ಮಾಡುವ ಸಂಪ್ರದಾಯವಿದೆ.

೬. ಪ್ರತಿಯೊಂದು ಉಪಚಾರಗಳನ್ನು ಸಮರ್ಪಿಸುವಾಗ ಹರಿಣೀಪತಿಯಾದ ಪರಶುರಾಮದೇವರನ್ನು ಸ್ಮರಣೆ ಮಾಡಬೇಕು.

೭. ಪಂಚಭಕ್ಷ್ಯ ಪರಮಾನ್ನಗಳನ್ನು ಸಮರ್ಪಿಸಬೇಕು.

೮. ಕನಿಷ್ಠ ೧೦ ನಿಮಿಷ ಮಂಗಳಾರತಿ ಮಾಡಬೇಕು. ಹಾಗೂ ಅನೇಕ ಬಗೆಯ ಮಂಗಳಾರತಿಗಳನ್ನು ಆಚರಿಸಬೇಕು.

೯. ದುರ್ಗಾಪೂಜೆಗೆ ವಿಶೇಷವಾಗಿ ಪೂಜೆಯನ್ನು ಆಚರಿಸಬೇಕು.

೧೦. ಪೂಜೆ ಮುಗಿದ ಮೇಲೆ ಕುಬೇರ ಪೂಜೆ, ಗೋಪೂಜೆಗಳನ್ನು ಮಾಡಬೇಕು.

೧೧. ಅನಂತರ ದಂಪತಿಗಳಿಗೆ ಹಾಗೂ ವಟುಗಳಿಗೆ ಪೂಜೆಯನ್ನು ಮಾಡಬೇಕು.

* * * *

# ಸ್ಕಂದಪುರಾಣದಲ್ಲಿ
# ಅಕ್ಷಯತೃತೀಯೋತ್ಸವವರ್ಣನೆ
## ಗಂಧಾಲಂಕಾರದ ಬಗ್ಗೆ

ಜೈಮಿನಿಃ –

ಅತಃ ಪರಂ ಪ್ರವಕ್ಷ್ಯಾಮಿ ಯಾತ್ರಾಮಕ್ಷಯಮೋಕ್ಷದಾಮ್ ।
ಅನಾಯಾಸೇನ ಮೂಢಾನಾಂ ವಾಸನಾಬದ್ಧಚೇತಸಾಮ್ ॥೧॥

ಜೈಮಿನಿ ಋಷಿಗಳು ಹೇಳುತ್ತಾರೆ – ಇನ್ನು ಮೂಢರಾಗಿ ಪೂರ್ವಕರ್ಮವಾಸನೆಗಳಿಂದ ಕೂಡಿದವರಿಗೂ ಸಹ ಅನಾಯಾಸವಾಗಿಯೇ ಶಾಶ್ವತವಾದ ಮೋಕ್ಷವನ್ನು ದೊರಕಿಸುವಂತಹ ವ್ರತವೊಂದನ್ನು ವಿವರಿಸುವೆನು.

ವೈಶಾಖಸ್ಯಾಮಲೇ ಪಕ್ಷೇ ದ್ವಿತೀಯಾರಾತ್ರಿಮಧ್ಯತಃ ।
ಮಂಡಪಂ ಚ ಚತುಷ್ಕೋಣಂ ಸುಧಾಲಿಪ್ತಂ ಸವೇದಿಕಮ್ ॥೨॥

ವೈಶಾಖಮಾಸದ ಶುಕ್ಲಪಕ್ಷದ ದ್ವಿತೀಯಾದಿವಸ ಮಧ್ಯರಾತ್ರಿಯಲ್ಲಿ ಚತುಷ್ಕೋಣವೂ, ಸುಧಾಲೇಪಿತವೂ, ವೇದಿಕಾಸಹಿತವೂ ಆದ ಉತ್ತಮಮಂಟಪವೊಂದನ್ನು ರಚಿಸಬೇಕು.

ಸುಧೌತವಾಸಸಾ ಕುರ್ಯಾತ್ ಪ್ರತಿಸೀರಾಸಮಂ ತತಃ ।
ಸಾಧುಸೋಪಾನಸಂಯುಕ್ತಂ ಚಾರುಚಂದ್ರಾತಪಾನ್ವಿತಮ್ ॥೩॥

ಆ ಮಂಟಪವು ಚೆನ್ನಾಗಿ ಒಗೆದು ಶುಭ್ರವಾದ ವಸ್ತ್ರದಿಂದಲಂಕೃತವಾಗಿ ಸೂರ್ಯನಿಗೆ ಅಭಿಮುಖವಾಗಿರುವಂತೆ ಮಾಡಲ್ಪಟ್ಟಿರಬೇಕು. ಉತ್ತಮ ಮೆಟ್ಟಿಲುಗಳುಳ್ಳದ್ದಾಗಿ ಸುಂದರವಾದ ಚಂದ್ರಕಾಂತಶಿಲೆಯಿಂದ ನಿರ್ಮಿತವಾಗಿರಬೇಕು.

ತನ್ಮಧ್ಯೇ ವಿನ್ಯಸೇನ್ನೂನಂ ಸಾಧು ಭದ್ರಾಸನೋತ್ತಮಮ್ ।
ತಸ್ಮಿನ್ನಿಚೋಲಸಂಛನ್ನೇ ವಿನ್ಯಸೇತ್ ಸ್ವರ್ಣಭಾಜನಮ್ ॥೪॥

ಅದರ ಮಧ್ಯಭಾಗದಲ್ಲಿ ಸರ್ವಾಲಂಕಾರಸಹಿತವಾದ ಭದ್ರಾಸನವೊಂದನ್ನು ಪ್ರತಿಷ್ಠೆ ಮಾಡಿರಬೇಕು. ಆ ಆಸನವನ್ನು ಸುತ್ತಲೂ ಬಟ್ಟೆಯ ಪರದೆಗಳಿಂದ ಮುಚ್ಚಿ ಅದರಲ್ಲಿ ಚಿನ್ನದ ಕಲಶವೊಂದನ್ನು ಸ್ಥಾಪಿಬೇಕು.

ತಸ್ಯ ಪಶ್ಚಿಮಭಾಗೇ ವೈ ಸ್ವಾಸೀನೋ ಬ್ರಾಹ್ಮಣಃ ಶುಚಿಃ ।
ಪಾತ್ರಾಂತರೇ ತು ಗೃಹ್ಣೀಯಾಚ್ಚಂದನಂ ಪಂಚವಿಂಶತಿಮ್ ॥೫॥

ಆ ಮಂಟಪದ ಪಶ್ಚಿಮದಿಕ್ಕಿನಲ್ಲಿ ಬ್ರಾಹ್ಮಣನು ಶುಚಿಯಾಗಿ ಉಚಿತಾಸನದಲ್ಲಿ ಕುಳಿತು ಬೇರೊಂದು ಪಾತ್ರೆಯಲ್ಲಿ ಇಪ್ಪತ್ತೈದು ಪಲಪ್ರಮಾಣದ ಚಂದನವನ್ನು ತೆಗೆದುಕೊಳ್ಳಬೇಕು. (ಒಂದು ಪಲ ಎಂದರೆ ೪೮ ಗ್ರಾಮ್)

ಸುಪಿಷ್ಟಂ ಕೃಷ್ಣಸ್ನೇಹಸ್ಯ ಗೃಹ್ಣೀಯಾಚ್ಚ ಪಲಾಧಿಕಮ್ ।
ಅಗುರ್ವರ್ಧಂ ಕುಂಕುಮಂ ಚ ಕುಂಕುಮಾರ್ಧಂ ಚ ಸಿಲ್ಹಕಮ್ ॥೬॥

ಅದಕ್ಕೆ ಒಂದು ಪಲದ ಹೆಚ್ಚಿನ ಕೃಷ್ಣಾಗುರುವಿನ ಪಿಷ್ಟವನ್ನು ಸೇರಿಸಬೇಕು. ಅಗುರುವಿನ ಪ್ರಮಾಣದ ಅರ್ಧದಷ್ಟು ಕುಂಕುಮವನ್ನೂ, ಕುಂಕುಮದ ಅರ್ಧ-ಪ್ರಮಾಣದಷ್ಟು ಶಿಲಾರಸವನ್ನು ಧೂಪದ ಧೂಳಿಯನ್ನೂ ಬೆರೆಸಬೇಕು.

ಕಸ್ತೂರಿಕಾಕರ್ಪೂರಯೋಃ ಪ್ರಮಾಣಂ ಸಿಲ್ಹಸಮ್ಮಿತಮ್ ।
ಸರ್ವಮೇಕತ್ರ ಸಂಪಿಷ್ಯಾತ್ ಪಾಟಲೋದ್ಭವವಾರಿಣಾ ॥೭॥

ಕಸ್ತೂರಿ ಮತ್ತು ಪಚ್ಚಕರ್ಪೂರಗಳ ಪ್ರಮಾಣವು ಶಿಲಾರಸದಂತೆಯೇ ಇರಬೇಕು. ಈ ದ್ರವ್ಯಗಳೆಲ್ಲವನ್ನೂ ಪಾಟಲೋದಕದಿಂದ ಒಂದಾಗಿ ಅರೆದು ಲೇಪವನ್ನು ಮಾಡಬೇಕು.

ಪಲದ್ವಯಂ ತತೋ ದದ್ಯಾದಗುರುಸ್ನೇಹಮುತ್ತಮಮ್ ।
ಏಕತ್ರ ಲೋಡಿತಾಂ ಕೃತ್ವಾ ಪೂರ್ವಪಾತ್ರೇ ನಿಧಾಪಯೇತ್ ॥೮॥

ಆಚ್ಛಾದ್ಯ ಕೇತಕೀಪತ್ರೈರ್ವೇಷ್ಟಯೇಚ್ಚೀನವಾಸಸಾ ।
ಗಂಧಸ್ತೇ ಸೋಮಮಂತ್ರೇಣ ರಕ್ಷೇದ್ ಗರುಡಮುದ್ರಯಾ ॥೯॥

ಬಳಿಕ ಎರಡು ಪಲದಷ್ಟು ಅಗರುತೈಲವನ್ನು ಅದಕ್ಕೆ ಸೇರಿಸಿ ಚೆನ್ನಾಗಿ ಬೆರೆಯುವಂತೆ ಆಲೋಡನ ಮಾಡಿ ಮೇಲೆ ಹೇಳಿದ ಪಾತ್ರೆಯಲ್ಲಿ ಶೇಖರಿಸಿಡಬೇಕು. ಆ ಕಲಶವನ್ನು ಕೇದಿಗೆ ಗರಿಗಳಿಂದ ಆಚ್ಛಾದಿಸಿ ರೇಷ್ಮೆಯ ವಸ್ತ್ರವನ್ನು ಹೊದಿಸಬೇಕು. ಪರಮಾತ್ಮನಿಗೆ ಅರ್ಪಿಸಲ್ಪಡುವ ಈ ಗಂಧವನ್ನು ಸೋಮಮಂತ್ರದಿಂದಲೂ ಗರುಡಮುದ್ರೆಯಿಂದಲೂ ಅಭಿರಕ್ಷಿಸಬೇಕು.

ಏವಂ ತು ಮಂಡಪೇ ತಸ್ಮಿನ್ ಸಾಧಿವಾಸಂ ನಿಧಾಪಯೇತ್ ।
ಅರುಣೋದಯಕಾಲೇಽಥ ನಯೇತ್ ಕೃಷ್ಣಸ್ಯ ಸನ್ನಿಧಿಮ್ ॥೧೦॥

ಹೀಗೆ ಕಲಶವನ್ನು ವಸ್ತ್ರಾದಿಗಳೊಡನೆ ಮಂಟಪದಲ್ಲಿ ಸ್ಥಾಪಿಸಬೇಕು. ಅರುಣೋ-ದಯಕಾಲದಲ್ಲಿ ಅದನ್ನು ಜಗನ್ನಾಥನ ಸನ್ನಿಧಿಗೆ ತೆಗೆದುಕೊಂಡು ಹೋಗಬೇಕು.

ಶಂಖಚಾಮರಭದ್ರಾದ್ಯೈರ್ಭ್ರಾಮಯಿತ್ವಾ ಸುರಾಲಯಮ್ ।
ದೇವಾಗ್ರೇ ಸ್ಥಾಪಯಿತ್ವಾ ಚ ಪೂಜಯೇತ್ ಪುರುಷೋತ್ತಮಮ್ ॥೧೧॥

ಶಂಖ, ಚಾಮರ, ಛತ್ರ ಮುಂತಾದ ಮರ್ಯಾದೆಗಳಿಂದ ದೇವಾಲಯಕ್ಕೆ ಪ್ರದಕ್ಷಿಣೆ ಮಾಡಿಸಿ, ದೇವರ ಸಮ್ಮುಖದಲ್ಲಿ ಇರಿಸಿ, ಬಳಿಕ ಪುರುಷೋತ್ತಮನ ಪೂಜೆಯನ್ನು ಮಾಡಬೇಕು.

ಉದ್ಘಾಟಯೇತ್ ತತೋ ವಸ್ತ್ರಂ ದಿವ್ಯದೃಷ್ಟ್ಯಾವಲೋಕಯೇತ್ ।
ಪ್ರೋಕ್ಷಿತಂ ಮಂತ್ರರಾಜೇನ ಸಂಸ್ಕುರ್ಯಾತ್ ತಾಡನಾದಿಭಿಃ ॥೧೨॥

ಬಳಿಕ ದೇವರ ವಸ್ತ್ರವನ್ನು ತೆಗೆದು ಹಾಕಿ, ಆತನನ್ನು ದಿವ್ಯದೃಷ್ಟಿಯಿಂದ ನೋಡಬೇಕು. (ಆಯತಾಭ್ಯಾಂ ವಿಶಾಲಾಭ್ಯಾಂ ಶೀತಲಾಭ್ಯಾಂ ವಿಲೋಕಯ । ಕರುಣಾರಸಪೂರ್ಣಾಭ್ಯಾಂ ಲೋಚನಾಭ್ಯಾಂ ವಿಲೋಕಯ) ಮತ್ತು ಮಂತ್ರರಾಜ ಎನಿಸಿದ ನಾರಾಯಣಮಂತ್ರವನ್ನುಚ್ಚರಿಸುತ್ತ ಮೂರು ಬಾರಿ ಚಪ್ಪಾಳೆ ಹೊಡೆದು ಗಂಧೋದಕದ ಪ್ರೋಕ್ಷಣೆಯನ್ನು ಮಾಡಬೇಕು.

ಗಂಧಪುಷ್ಪಾಕ್ಷತೈಃ ಪೂಜ್ಯ ಶ್ರಿಯಃ ಸೂಕ್ತೇನ ಲೇಪಯೇತ್ ।
ಶ್ರೀಶಸ್ಯ ಸರ್ವಗಾತ್ರೇಷು ಮೃದುಸ್ಪರ್ಶಂ ಶನೈಃ ಶನೈಃ ॥೧೩॥

ಗಂಧ, ಪುಷ್ಪ, ಅಕ್ಷತೆಗಳಿಂದ ಜಗನ್ನಾಥನನ್ನು ಪೂಜಿಸಿ ಶ್ರೀಸೂಕ್ತದ ಮಂತ್ರಗಳನ್ನು ಪಠಿಸುತ್ತ, ಮೃದುಹಸ್ತದಿಂದ ಮೆಲ್ಲ ಮೆಲ್ಲನೆ ಶ್ರೀಪತಿಯ ಸರ್ವದೇಹದಲ್ಲಿಯೂ ಮೇಲೆ ಹೇಳಿದ ಕಳಶದ ಗಂಧವನ್ನು ಲೇಪಿಸಬೇಕು.

ವೈಷ್ಣವಾ ಜಯಶಬ್ದೈಸ್ತಂ ವರ್ಧಯಂತಿ ತದಾ ಹರಿಮ್ ।
ನಾನಾಸೂಕ್ತೋಪನಿಷದ್ಭೈರ್ವಿದ್ವಾಂಸಸ್ತಂ ಸ್ತುವಂತಿ ವೈ ॥೧೪॥

ಆಗ ವಿಷ್ಣುಭಕ್ತರು ಜಯಕಾರಗಳಿಂದ ಶ್ರೀಹರಿಗೆ ಅಭಿವೃದ್ಧಿಯನ್ನು ಕೋರಬೇಕು. ವಿದ್ವಾಂಸರುಗಳು ಅನೇಕ ಉಪನಿಷತ್ತುಗಳಿಂದ, ವೇದಮಂತ್ರಗಳಿಂದ, ಉತ್ತಮ ಕಾವ್ಯಪಾಠಗಳಿಂದ ಶ್ರೀಹರಿಯನ್ನು ಸ್ತೋತ್ರಮಾಡುತ್ತಿರಬೇಕು.

ವೇಣುವೀಣಾದಿಕೈರ್ನೃತ್ಯಗೀತವಾದ್ಯೈರನೇಕಶಃ।
ವ್ಯಜನೈಶ್ಚಾಮರೈಃ ಛತ್ರೈರನ್ಯೈರ್ನಾನೋಪಹಾರಕೈಃ ॥೧೫॥
ಸಂತೋಷಯನ್ ಜಗನ್ನಾಥಂ ತೃತೀಯಾದೌ ವಿಲೇಪಯೇತ್ ।
ಯಸ್ಯ ಚಿಂತನಮಾತ್ರೇಣ ತಾಪಾ ನಶ್ಯಂತಿ ದೇಹಿನಾಮ್ ॥೧೬॥

ವೇಣು, ವೀಣೆ ಮುಂತಾದ ವಾದ್ಯಗಳಿಂದಲೂ ನೃತ್ಯಗೀತೆಗಳಿಂದಲೂ ಬಹು-ವಿಧವಾದ ಬೀಸಣಿಗೆಗಳಿಂದಲೂ, ಚಾಮರಗಳಿಂದಲೂ ಛತ್ರಗಳೇ ಮೊದಲಾದ ಇತರ ಸೇವೆಗಳಿಂದಲೂ ಜಗನ್ನಾಥನಿಗೆ ಸಂತೋಷವನ್ನು ಉಂಟುಮಾಡಬೇಕು. ತೃತೀಯಾ- ತಿಥಿಯ ಪ್ರಾರಂಭದಲ್ಲಿ ಲೇಪವನ್ನು ಮಾಡಬೇಕು. ಈ ಉತ್ಸವವನ್ನು ಚಿಂತಿಸುವ ಮಾತ್ರದಿಂದಲೇ ಜೀವರ ಸಕಲ ತೊಂದರೆಗಳು ನಾಶವನ್ನು ಹೊಂದುವವು.

ಸೋಽಸೌ ಸಂದರ್ಶನಾತ್ ತಾಪಾನ್ ನೃಣಾಂ ಹಂತಿ ತದಾ ದ್ವಿಜಾಃ ।
ಅಚಿಂತ್ಯಾ ಮಹಿಮಾ ವಿಷ್ಣೋರೀದೃಕ್ತಾದೃಕ್ತಯಾ ಸದಾ ॥೧೭॥

ಬ್ರಾಹ್ಮಣರುಗಳೇ! ಆ ಪರಮಾತ್ಮನು ಗಂಧಲೇಪನಸಮಯದಲ್ಲಿ ಸಂದರ್ಶನ ಮಾತ್ರದಿಂದಲೇ ಮಾನವರ ತ್ರಿವಿಧತಾಪಗಳನ್ನೂ ನಿರ್ಮೂಲಗೊಳಿಸುವನು. ಮಹಾವಿಷ್ಣುವಿನ ಮಹಿಮೆಯು ಇಷ್ಟೆಂದು ಅಷ್ಟೆಂದು ಹೇಳಲಾಗದಷ್ಟು ಯಾವಾಗಲೂ ಅಚಿಂತ್ಯವಾಗಿರುವುದು.

ತತಃ ಸೂಕ್ಷ್ಮಾಂಬರೈರ್ಮಾಲ್ಯೈರ್ಭಕ್ಷ್ಯಭೋಜ್ಯಾದಿಪಾನಕೈಃ ।
ದ್ರವ್ಯೈರ್ನಾನಾವಿಧೈರ್ಹೃದ್ಯೈರ್ಗವ್ಯೈರಾವರ್ತಿತೈಃ ಶುಭೈಃ ॥೧೮॥

ಬಳಿಕ ನಯವಾದ ವಸ್ತ್ರಗಳಿಂದಲೂ, ಪುಷ್ಪಮಾಲೆಗಳಿಂದಲೂ, ಭಕ್ಷ್ಯಭೋಜ್ಯ- ಮೊದಲಾದವುಗಳಿಂದಲೂ, ಪಾನಕಾದಿ ಪಾನೀಯಗಳಿಂದಲೂ, ನಾನಾವಿಧವಾದ ಇತರ ಕಾಲೋಚಿತ ಪದಾರ್ಥಗಳಿಂದಲೂ, ಮಧುರವೂ ಪವಿತ್ರಗಳೂ ಆದ ಆಕಳಿನ ಹಾಲು, ಬೆಣ್ಣೆ, ಮೊಸರು, ತುಪ್ಪ ಮುಂತಾದವುಗಳಿಂದ ತಯಾರಿಸಲ್ಪಟ್ಟ ತಿನಿಸುಗಳಿಂದಲೂ ಭಗವಂತನನ್ನು ಪೂಜಿಸಬೇಕು.

ತತಃ ಸಂಪೂಜಯೇದ್ ದೇವಂ ತಾಂಬೂಲೈಶ್ಚ ಸುಸಂಸ್ಕೃತೈಃ ।
ತಸ್ಮಿನ್ ಕಾಲೇ ತು ಯೇ ಕೃಷ್ಣಂ ಭಕ್ತ್ಯಾ ಪಶ್ಯಂತಿ ಮಾನವಾಃ ॥೧೯॥

ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ।
ವಿಷ್ಣೋಃ ಸ್ವರೂಪಮಾಸಾದ್ಯ ವಿಷ್ಣುಲೋಕೇ ವಸಂತಿ ವೈ ॥೨೦॥

ಬಳಿಕ ಸರ್ವೋಪಸ್ಕರಗಳಿಂದ ಕೂಡಿದ ತಾಂಬೂಲವನ್ನು ದೇವದೇವನಿಗೆ ಅರ್ಪಿಸಬೇಕು. ಆ ಸಮಯದಲ್ಲಿ ಶ್ರೀಕೃಷ್ಣನನ್ನು ಯಾವ ಮಾನವರು ಭಕ್ತಿಯಿಂದ ನೋಡುವರೋ ಅವರು ನೂರುಕೋಟಿಕಲ್ಪಗಳಾದರೂ ಪುನಃ ಸಂಸಾರದಲ್ಲಿ ಹುಟ್ಟುವುದಿಲ್ಲ. ಅವರೆಲ್ಲರೂ ವಿಷ್ಣುವಿನ ಸಾರೂಪ್ಯಮೋಕ್ಷವನ್ನು ಪಡೆದು ವೈಕುಂಠಲೋಕದಲ್ಲಿಯೇ ವಾಸ ಮಾಡುವರು.

ಪುರಾ ಕಲಿಯುಗೇ ವಿಪ್ರಾ ದಕ್ಷೋ ನಾಮ ಪ್ರಜಾಪತಿಃ ।
ಆಧ್ಯಾತ್ಮಿಕಾದಿಸಂತಾಪೈಃ ಸುದೀನಾನ್ ವೀಕ್ಷ್ಯ ಮಾನವಾನ್ ॥೨೧॥

ಎಲೈ ಬ್ರಾಹ್ಮಣರುಗಳಿರಾ! ಪೂರ್ವದಲ್ಲಿ ದಕ್ಷನಾಮಕನಾದ ಪ್ರಜಾಪತಿಯು ಕಲಿಯುಗದಲ್ಲಿ ಹುಟ್ಟಿದ ಮನುಷ್ಯರು ಆಧ್ಯಾತ್ಮಿಕಾದಿ ತಾಪತ್ರಯಗಳಿಗೆ ಸಿಲುಕಿ ಅತ್ಯಂತ ದೀನರಾಗಿರುವುದನ್ನು ಕಂಡನು.

ತತ್ರ ಗತ್ವಾ ಕೃಪಾಯುಕ್ತೋ ಮಹಿಮಾನಂ ಚಕಾರ ವೈ ।
ಯಥಾವಿಧಿ ಮಯಾ ಪ್ರೋಕ್ತಂ ಸ ಏವ ಪ್ರಥಮಂ ದ್ವಿಜಾಃ ॥೨೨॥

ಅವರಲ್ಲಿ ಕೃಪೆಯುಳ್ಳವನಾಗಿ ಅವರ ಬಳಿ ಹೋಗಿ, ನಾನು ಹೇಳಿರುವಂತೆ ಯಥಾವಿಧಿಯಾದ ಉತ್ಸವವನ್ನು ಮಾಡಿದನು. ಆತನೇ ಈ ಉತ್ಸವವನ್ನು ಪ್ರಥಮದಲ್ಲಿ ನಡೆಸಿದವನು.

ಪ್ರಲಿಪ್ಯ ಚಂದನೇನಾಂಗೇ ಮಾಧವಾಮಲಪಕ್ಷಕೇ ।
ತೃತೀಯಾಯಾಂ ಜಗನ್ನಾಥಂ ಸ್ತುತಿಮೇತಾಂ ಮುದಾ ಜಗೌ ॥೨೩॥

ವೈಶಾಖಮಾಸದ ಶುಕ್ಲಪಕ್ಷದ ತೃತೀಯಾದಲ್ಲಿ ಸ್ವಾಮಿಯ ಅಂಗಗಳಿಗೆಲ್ಲ ಚಂದನ ಗಂಧವನ್ನು ಲೇಪನ ಮಾಡಿ ಸಂತೋಷದಿಂದ ಈ ರೀತಿಯಾಗಿ ಸ್ತೋತ್ರ ಮಾಡಿದನು.

ದಕ್ಷಃ –

ದೇವದೇವ ಜಗನ್ನಾಥ ಸಹಜಾನಂದ ನಿರ್ಮಲ ।
ಸಂಸಾರಾರ್ಣವಸಂಮಗ್ನಾನ್ ತ್ರಾಹಿ ನಃ ಪರಮೇಶ್ವರ ॥೨೪॥

ದಕ್ಷನು ಹೇಳುತ್ತಾನೆ – ದೇವದೇವನೇ! ಜಗನ್ನಾಥನೇ! ಆನಂದಸ್ವರೂಪನೇ! ನಿರ್ದುಷ್ಟನೇ! ಪರಮೇಶ್ವರನಾದ ನೀನು ಸಂಸಾರವೆಂಬ ಅಗಾಧವಾದ ಸಮುದ್ರದಲ್ಲಿ ಬಿದ್ದು ಮುಳುಗುತ್ತಿರುವ ನಮ್ಮನ್ನು ರಕ್ಷಿಸು.

ನಾನಾವಿಧೈಶ್ಚ ಸಂತಾಪೈಃ ಸಂತಪ್ತಾನ್ ಮಾನವಾನಿಮಾನ್ ।
ಮಮಾನುಕ್ರೋಶಬುದ್ಧ್ಯಾ ವೈ ಶುಭದೃಷ್ಟ್ಯಾಮೃತೇನ ಚ ॥೨೫॥

ಸಂತರ್ಪಯ ತೃಣಾನ್ ಶುಷ್ಕಾನ್ ಕೃಷ್ಣಮೇಘ ನಮೋಽಸ್ತು ತೇ ।
ಕಲಿಕಲ್ಮಷಸಮ್ಮೂಢಾನ್ ಉದ್ಧರ್ತುಂ ಜಗತಾಂ ಪತೇ ॥೨೬॥

ಅವತಾರೋಽಯಮೇತಸ್ಮಿನ್ ನೀಲಾಚಲಗುಹಾಂತರೇ ।
ಚಿರಕಾಲಪ್ರರೂಢಾನಾಂ ದುಸ್ತ್ಯಜಾನಾಂ ಮಹಾಂಹಸಾಮ್ ॥೨೭॥

ರಾಶಿಂ ದಗ್ಧುಂ ತ್ವಮೇವೇಶೋ ದೀನನಾಥಕೃಪಾಕರ ।
ತ್ವದ್ ದರ್ಶನಮಹಾಯೋಗೇ ಯಮಾದ್ಯಷ್ಟಾಂಗವರ್ಜಿತೇ ॥೨೮॥

ಯೇಷಾಂ ಮತಿಃ ಸಮುತ್ಪನ್ನಾ ಚತುರ್ವರ್ಗೈಕಸಾಧನೇ ।
ನ ತೇ ಶೋಚಂತಿ ದುಷ್ಪಾರೇ ಭವಾರಣ್ಯೇ ಮಹಾಭಯೇ ॥೨೯॥

ಅನೇಕ ವಿಧಗಳಾದ ಸಂತಾಪಗಳಿಂದ ಈ ಮಾನವರು ಪರಿತಪಿಸುತ್ತಿರುವರು. ನನ್ನಲ್ಲಿ ಅನುಕಂಪ ಬುದ್ಧಿಯುಳ್ಳವನಾಗಿ ಎಲೈ ಕಾಲಮೇಘನೇ! ಈ ಒಣಗುತ್ತಿರುವ ಹುಲ್ಲುಗಳನ್ನು (ಇವರನ್ನು) ಅಮೃತಮಯವಾದ ಮಂಗಳಮಯವಾದ ನೋಡುವಿಕೆಯಿಂದ ಸಂತೋಷಗೊಳಿಸು. ನಿನಗೆ ನಮಸ್ಕರಿಸುವೆನು.

ಹೇ ತ್ರಿಲೋಕೇಶ್ವರನೇ! ನೀಲಾಚಲದಲ್ಲಿರುವ ಈ ಗುಹೆಯಲ್ಲಿ ನಿನ್ನ ಅವತಾರವೇ ಕಲಿಕಲ್ಮಷಗಳ ಸಂಪರ್ಕದಿಂದ ದಿಕ್ಕು ಕಾಣದಿರುವ ಜನರನ್ನು ಉದ್ಧರಿಸುವುದಕ್ಕಾಗಿಯೇ ಆಗಿದೆ. ಅನಾದಿ ಕಾಲದಿಂದ ಆತ್ಮನಿಗೆ ಅಂಟಿಕೊಂಡು ಬಂದಿರುವ ತ್ಯಜಿಸಲು ಕಷ್ಟತರಗಳಾದ ಮಹಾಪಾತಕಗಳ ರಾಶಿಯನ್ನು ಸುಟ್ಟುಹಾಕಲು ನೀನೊಬ್ಬನೇ ಸಮರ್ಥನಾಗಿರುವೆ. ದೀನರಲ್ಲಿಯೂ ಅನಾಥರಲ್ಲಿಯೂ ಕೃಪಾನ್ವಿತನಾಗಿರುವ ಸ್ವಾಮಿಯೇ! ಯಮನಿಯಮಾದಿ ಅಷ್ಟಾಂಗರಹಿತವಾಗಿದ್ದರೂ ಚತುರ್ವಿಧಪುರುಷಾರ್ಥಗಳಿಗೆ ಏಕಾಂತಸಾಧನವಾದ ನಿನ್ನ ಮಹೋತ್ಸವದ ದರ್ಶನವನ್ನು ಮಾಡಬೇಕೆಂಬ ಬುದ್ಧಿ ಯಾರಿಗೆ ಉಂಟಾಗಿರುವುದೋ, ಅವರು ದಾಟಲು ಅಸಾಧ್ಯವೂ ಮಹಾಭಯಂಕರವೂ ಆದ ಸಂಸಾರವೆಂಬ ಅರಣ್ಯದಲ್ಲಿ ದುಃಖಿಗೊಳ್ಳುವುದಿಲ್ಲ.

ಕರ್ಮಾನಪೇಕ್ಷಂ ದೇವೇಶ ನಾತ್ಮಜ್ಞಾನಂ ವಿಮೋಚಕಮ್ ।
ಇದಂ ತೇ ದರ್ಶನಂ ನಾಥ ವಿನಾ ಕರ್ಮಾಪಿ ಮೋಚಯೇತ್ ॥೩೦॥

ದೇವದೇವನೇ! ಯಜ್ಞಯಾಗಾದಿ ಕರ್ಮಗಳ ನಿರಪೇಕ್ಷೆಯಿಂದ ಕೂಡಿದ ಆತ್ಮಜ್ಞಾನವು ಮನುಷ್ಯನಿಗೆ ಮೋಕ್ಷವನ್ನು ದೊರಕಿಸಲಾರದು. ಆದರೆ ಲೋಕೇಶ್ವರನಾದ ನಿನ್ನ ದರ್ಶನವಾದರೋ ಯಾವ ಸಾಧನವೂ ಇಲ್ಲದೆಯೇ ಮೋಕ್ಷವನ್ನು ಕೊಡುವುದು.

ಜಯ ಕೃಷ್ಣ ಜಯೇಶಾನ ಜಯಾಕ್ಷರ ಜಯಾವ್ಯಯ ।
ಪ್ರಸೀದಾನುಗ್ರಹಾಣೇಮಾನ್ ದೀನಾನ್ ಮೂಢಾನ್ ವಿಚೇತಸಃ ॥೩೧॥

ಶ್ರೀಕೃಷ್ಣನೇ! ಲೋಕೇಶ್ವರನೇ! ನಾಶರಹಿತನೇ! ಕ್ಷಯವರ್ಜಿತನೇ! ಸರ್ವೋತ್ತಮನೇ! ನಿನಗೆ ಜಯವಾಗಲಿ. ದೀನರೂ, ಬುದ್ಧಿಹೀನರೂ, ಗತಸತ್ತ್ವರೂ ಆಗಿರುವ ಈ ಮಾನವರಲ್ಲಿ ಪ್ರಸನ್ನನಾಗಿ ಅನುಗ್ರಹವನ್ನು ಮಾಡು.

ಇತಿ ಸ್ತುತ್ವಾ ದಂಡಪಾತಂ ಪಪಾತ ಚರಣಾಂಬುಜೇ ।
ಪ್ರಸೀದೇಶ ಪ್ರಸೀದೇಶ ಪ್ರಸೀದೇಶೇತಿ ಘೋಷಯನ್ ॥೩೨॥

ದಕ್ಷಪ್ರಜಾಪತಿಯು ಈ ರೀತಿಯಾಗಿ ಸ್ತೋತ್ರವನ್ನು ಮಾಡಿ, 'ಸ್ವಾಮಿಯೇ ನನಗೆ ಪ್ರಸನ್ನನಾಗು, ಸ್ವಾಮಿಯೇ ನನಗೆ ಪ್ರಸನ್ನನಾಗು, ಸ್ವಾಮಿಯೇ ನನಗೆ ಪ್ರಸನ್ನನಾಗು' ಎಂದು ಜೋರಾಗಿ ಉದ್ಗಾರವನ್ನು ತೆಗೆದು ಶ್ರೀಜಗನ್ನಾಥನ ಪಾದಕಮಲಗಳಲ್ಲಿ ಸಾಷ್ಟಾಂಗ ಬಿದ್ದು ಹೊರಳಾಡಿದನು.

ತತೋ ಜಗಾದ ಭಗವಾನ್ ಸುಸ್ವರೇಣ ಪ್ರಜಾಪತಿಮ್ ।
ಉತ್ತಿಷ್ಠ ವತ್ಸ ತೇ ದತ್ತಂ ದುರ್ಲಭಂ ಯದ್ವರಂ ತ್ವಯಾ ॥೩೩॥
ಕಾಂಕ್ಷಿತಂ ಮತ್ಪ್ರಸಾದೇನ ಭವಿಷ್ಯತಿ ನ ಸಂಶಯಃ ।
ಮದನುಗ್ರಹೋಽಲ್ಪಪುಣ್ಯಾನಾಂ ದುರ್ಲಭೋ ವಿದಿತಸ್ತವ ॥೩೪॥

ಆಗ ಭಗವಂತನು ಮಧುರವಾದ ವಾಣಿಯಿಂದ ಪ್ರಜೇಶ್ವರನನ್ನು ಕುರಿತು ಹೀಗೆ ಹೇಳಿದನು – ಎಲೈ ಕುಮಾರನೇ! ಏಳು, ನೀನು ಅಪೇಕ್ಷಿಸಿದ ವರವನ್ನು ನಿನಗೆ ಕೊಟ್ಟಿರುವೆನು. ನನ್ನ ಅನುಗ್ರಹದಿಂದ ನೀನು ಪ್ರಾರ್ಥಿಸಿದಂತೆ ನಡೆಯುವುದರಲ್ಲಿ ಸಂಶಯವಿಲ್ಲ. ನನ್ನ ಅನುಗ್ರಹವು ಕ್ಷೀಣಪುಣ್ಯರಾದವರಿಗೆ ದುರ್ಲಭವಾದುದೆಂಬ ವಿಷಯ ನಿನಗೆ ತಿಳಿದೇ ಇರುವುದು.

ಮದಂಗಜಾತೋಽಸಿ ಭವಾನ್ಮಾಂ ತ್ವಂ ಪ್ರಾರ್ಥಿತವಾನಸಿ ।
ಮಮೋತ್ಸವೇನ ಸಂತೋಷ್ಯಂ ತತಸ್ತೇ ಪ್ರದದಾಮ್ಯಹಮ್ ॥೩೫॥

ನೀನು ನನ್ನ ಶರೀರದಿಂದಲೇ ಉದ್ಭವಿಸಿರುವೆ (ಪಾಣ್ಯಾತ್ಮನೇ ದಕ್ಷಾಯ ನಮಃ - ಭಗವಂತನ ಕೈಗಳಿಂದ ದಕ್ಷನು ಹುಟ್ಟಿರುವನು); ನನ್ನನ್ನೇ ಪ್ರಾರ್ಥಿಸುತ್ತಿರುವೆ. ನನ್ನ ಮಹೋತ್ಸವವನ್ನು ನೆರವೇರಿಸಿರುವೆ. ನಿನಗೆ ಪಾರಿತೋಷಕವಾಗಿ ಒಂದು ವರವನ್ನು ಕೊಡುವೆನು.

ಇಮಾಮಕ್ಷಯಯಾತ್ರಾಂ ಯೇ ಭಕ್ತ್ಯಾ ಪಶ್ಯಂತಿ ಹರ್ಷಿತಾಃ ।
ತಸ್ಮಿನ್ ಕಾಲೇ ಯದಿಚ್ಛಂತಿ ಮನಸಾ ತದವಾಪ್ನುಯುಃ ॥೩೬॥

ಅಕ್ಷಯತೃತೀಯಾ

ಭಕ್ತಿಯಿಂದಲೂ, ಸಂತೋಷದಿಂದಲೂ ಕೂಡಿದವರಾಗಿ ಭಕ್ತರು ಅಕ್ಷಯ ತೃತೀಯಾದಂದು ಈ ಮಹೋತ್ಸವವನ್ನು ನೋಡುವರೋ, ದರ್ಶನಕಾಲದಲ್ಲಿ ಅಪೇಕ್ಷಿಸಿದ ಕಾಮನೆಗಳೆಲ್ಲವೂ ಅವರಿಗೆ ಕೈಗೂಡುವುವು.

ಯಥಾ ಸಂತಾಪಹರಣಂ ಚಂದನೇನಾನುಲೇಪನಮ್ ।
ತಥೋತ್ಸವೋऽಯಂ ಮೇ ದಕ್ಷ ಸಂತಾಪತ್ರಯನಾಶನಃ ॥೩೭॥

ಎಲೈ ದಕ್ಷಪ್ರಜಾಪತಿಯೇ! ಈ ಚಂದನದ ಅನುಲೇಪನವು ಹೇಗೆ ಸಂತಾಪವನ್ನು ನಾಶಗೊಳಿಸುವುದೋ, ಹಾಗೆಯೇ ನನಗೆ ಸಲ್ಲಿಸುವ ಈ ಉತ್ಸವವೂ ತ್ರಿವಿಧತಾಪಗಳನ್ನು ಭಕ್ತರಿಗೆ ನಾಶಗೊಳಿಸುವುದು.

ಮತ್ಪ್ರೇರಿತಮತಿಸ್ತ್ವಂ ಹಿ ಉತ್ಸವಂ ಕೃತವಾನಸಿ ।
ಸಂಕಲ್ಪಿತೋऽಯಂ ಮನಸಾ ದೀನೋದ್ಧೃತ್ಯೈ ಮಯಾ ಧ್ರುವಮ್ ॥೩೮

ನನ್ನ ಪ್ರೇರಣೆಯಿಂದ ಹುಟ್ಟಿದ ಬುದ್ಧಿಯಿಂದಲೇ ನೀನು ಈ ಮಹೋತ್ಸವವನ್ನು ಮಾಡಿರುವಿ. ಸಜ್ಜನರಾದ ದೀನರನ್ನು ಉದ್ಧರಿಸಬೇಕೆಂದೇ ನನ್ನ ಮನಸ್ಸಿನಲ್ಲಿ ಸಂಕಲ್ಪಿತವೆಂಬುದು ನಿಶ್ಚಯವು.

ತ್ವಯಾಭಿಕಾಂಕ್ಷಿತಂ ಸರ್ವಂ ದಾಸ್ಯಾಮ್ಯೇವ ಪ್ರಜಾಪತೇ ।
ದ್ವಾದಶೈತಾ ಮಹಾಯಾತ್ರಾ ಗಂಡಿಚಾದ್ಯಾಸ್ತು ಪಾವನಾಃ ॥೩೯॥

ಪ್ರಜೇಶ್ವರನೇ! ನೀನು ಅಪೇಕ್ಷಿಸಿದೆಲ್ಲವನ್ನೂ ನೀಡುವೆನು. ಗಂಡೀಚ ಯಾತ್ರೆಯೇ ಮೊದಲಾದ ನನ್ನ ಈ ಹನ್ನೆರಡು ಮಹಾಯಾತ್ರೆಗಳೂ ಪರಮಮಂಗಳಕರಗಳಾಗಿರುವವು.

ಏಕೈಕಾ ಮುಕ್ತಿದಾ ಸರ್ವಾ ಧರ್ಮಕಾಮಾರ್ಥವರ್ಧನಾಃ ॥೪೦॥

ಇವುಗಳಲ್ಲಿ ಒಂದನ್ನು ಮಾಡಿದರೂ ಮುಕ್ತಿಯು ದೊರಕುತ್ತದೆ. ಇನ್ನು ಎಲ್ಲವನ್ನೂ ಮಾಡಿದರೆ ದೊರಕುವುದಿಲ್ಲವೇನು? ಎಲ್ಲಾ ಪುರುಷಾರ್ಥಕಾಮನೆಗಳೂ ದೊರಕು- ತ್ತವೆ.

ತಾಸಾಮೇಕತಮಾಂ ವಾऽಪಿ ಯೋ ಭಕ್ತ್ಯಾ ಚಾವಲೋಕಯೇತ್ ।
ಏಕಯಾऽಪಿ ಭವಾಬ್ಧಿಂ ಸ ತೀರ್ತ್ವಾ ವಿಷ್ಣುಪದಂ ವ್ರಜೇತ್ ॥

ಈ ಯಾತ್ರೆಗಳಲ್ಲಿ ಒಂದನ್ನಾದರೂ ಭಕ್ತಿಯಿಂದ ನೋಡಿದ ಮನುಷ್ಯನು, ಆ ಒಂದರಿಂದಲೇ ಸಂಸಾರಸಾಗರವನ್ನು ದಾಟಿ ವೈಕುಂಠಲೋಕವನ್ನು ಸೇರುವನು.

ಜೈಮಿನಿಃ–

ಇತ್ಯುದೀರ್ಯ ಪ್ರಜಾನಾಥಂ ಭಗವಾನ್ ಸ ತಿರೋದಧೇ ॥೪೨॥

ಜೈಮಿನಿ ಋಷಿಗಳು ಹೇಳುತ್ತಾರೆ – ಈ ರೀತಿಯಾಗಿ ಭಗವಂತನು ಪ್ರಜಾಪತಿಯಾದ ದಕ್ಷನಿಗೆ ವರವನ್ನು ಕೊಟ್ಟು ಆತನು ನೋಡುತ್ತಿರುವಂತೆಯೇ ಅಂತರ್ಧಾನವನ್ನು ಹೊಂದಿದನು.

ದಕ್ಷಃ ಪ್ರಜಾಪತಿಃ ಸೋಽಪಿ ಶ್ರದ್ದಧಾನಸ್ತದಾಜ್ಞಯಾ ।
ಸಂವತ್ಸರಂ ಗಿರೌ ಸ್ಥಿತ್ವಾ ಸಂದದರ್ಶ ಮಹೋತ್ಸವಾನ್ ॥೪೩॥

ದಕ್ಷಪ್ರಜಾಪತಿಯೂ ಕೂಡ ಪರಮಾತ್ಮನ ಅಪ್ಪಣೆಯನ್ನು ಶಿರಸಾ ವಹಿಸಿ ಶ್ರದ್ಧಾನ್ವಿತನಾಗಿ ನೀಲಾಚಲದಲ್ಲಿ ಒಂದು ವರ್ಷದವರೆಗೂ ನೆಲೆಸಿದ್ದು ಪರಮಾತ್ಮನ ಎಲ್ಲಾ ಮಹೋತ್ಸವಗಳನ್ನೂ ನೋಡಿದನು.

ಸರ್ವಜ್ಞೋ ಬ್ರಾಹ್ಮಣೋ ಭೂತ್ವಾ ಕೌಶಿಕಸ್ಯ ಕುಲೋತ್ತಮೇ ।
ಲೋಕಾನ್ ಪ್ರವರ್ತಯಾಮಾಸ ಯಥಾವಿಧಿ ಮಹೇಷು ಸಃ ॥೪೪॥

ಆದರ ಫಲವಾಗಿ ಉತ್ತಮವಾದ ಕೌಶಿಕವಂಶದಲ್ಲಿ ಸರ್ವಜ್ಞನಾದ ಬ್ರಾಹ್ಮಣನಾಗಿ ಜನ್ಮವನ್ನು ತಳೆದು ಸಕಲ ಜನರನ್ನೂ ಯಥಾವಿಧಿಯಾದ ಮಹೋತ್ಸವಗಳನ್ನು ನಡೆಸುವುದರಲ್ಲಿ ಆಸಕ್ತರನ್ನಾಗಿ ಮಾಡಿದನು. ಲೋಕೋದ್ಧಾರಕ ಗುರುವಾದನು.

ವಿಶ್ವಾಸಾಯಾಲ್ಪಬುದ್ಧೀನಾಂ ಯಾತ್ರಾ ವೈ ಪರಿಕೀರ್ತಿತಾ ।
ಅಯಂ ಚ ಸಾಕ್ಷಾತ್ಪರಮಬ್ರಹ್ಮರೂಪೀ ಜಗದ್ಗುರುಃ ।
ಪ್ರಸಾದಿತಃ ಸುರೇಶೇನ ಲೋಕಾನುಗ್ರಹಣಾಯ ವೈ ॥೪೫॥

ಅಲ್ಪಜನರಿಗೆ ಭಗವಂತನಲ್ಲಿ ವಿಶ್ವಾಸ ಹುಟ್ಟಲೆಂದು ಈ ಯಾತ್ರೆಯ ವಿಧಿಯು ಫಲವೂ ಕೂಡ ಚೆನ್ನಾಗಿ ವರ್ಣನೆ ಮಾಡಲ್ಪಟ್ಟಿದೆ. ಈ ಜಗನ್ನಾಥನೇ ಸಾಕ್ಷಾತ್ತಾಗಿ

ಅಕ್ಷಯತೃತೀಯಾ

ಭಕ್ತಿಯಿಂದಲೂ, ಸಂತೋಷದಿಂದಲೂ ಕೂಡಿದವರಾಗಿ ಭಕ್ತರು ಅಕ್ಷಯ ತೃತೀಯಾದಂದು ಈ ಮಹೋತ್ಸವವನ್ನು ನೋಡುವರೋ, ದರ್ಶನಕಾಲದಲ್ಲಿ ಅಪೇಕ್ಷಿಸಿದ ಕಾಮನೆಗಳೆಲ್ಲವೂ ಅವರಿಗೆ ಕೈಗೂಡುವುವು.

ಯಥಾ ಸಂತಾಪಹರಣಂ ಚಂದನೇನಾನುಲೇಪನಮ್ ।
ತಥೋತ್ಸವೋऽಯಂ ಮೇ ದಕ್ಷ ಸಂತಾಪತ್ರಯನಾಶನಃ ॥೩೭॥

ಎಲೈ ದಕ್ಷಪ್ರಜಾಪತಿಯೇ! ಈ ಚಂದನದ ಅನುಲೇಪನವು ಹೇಗೆ ಸಂತಾಪವನ್ನು ನಾಶಗೊಳಿಸುವುದೋ, ಹಾಗೆಯೇ ನನಗೆ ಸಲ್ಲಿಸುವ ಈ ಉತ್ಸವವೂ ತ್ರಿವಿಧತಾಪಗಳನ್ನು ಭಕ್ತರಿಗೆ ನಾಶಗೊಳಿಸುವುದು.

ಮತ್ಪ್ರೇರಿತಮತಿಸ್ತ್ವಂ ಹಿ ಉತ್ಸವಂ ಕೃತವಾನಸಿ ।
ಸಂಕಲ್ಪಿತೋऽಯಂ ಮನಸಾ ದೀನೋದ್ಧೃತ್ಯೈ ಮಯಾ ಧ್ರುವಮ್ ॥೩೮

ನನ್ನ ಪ್ರೇರಣೆಯಿಂದ ಹುಟ್ಟಿದ ಬುದ್ಧಿಯಿಂದಲೇ ನೀನು ಈ ಮಹೋತ್ಸವವನ್ನು ಮಾಡಿರುವಿ. ಸಜ್ಜನರಾದ ದೀನರನ್ನು ಉದ್ಧರಿಸಬೇಕೆಂದೇ ನನ್ನ ಮನಸ್ಸಿನಲ್ಲಿ ಸಂಕಲ್ಪಿತವೆಂಬುದು ನಿಶ್ಚಯವು.

ತ್ವಯಾಭಿಕಾಂಕ್ಷಿತಂ ಸರ್ವಂ ದಾಸ್ಯಾಮ್ಯೇವ ಪ್ರಜಾಪತೇ ।
ದ್ವಾದಶೈತಾ ಮಹಾಯಾತ್ರಾ ಗಂಡಿಚಾದ್ಯಾಸ್ತು ಪಾವನಾಃ ॥೩೯॥

ಪ್ರಜೇಶ್ವರನೇ! ನೀನು ಅಪೇಕ್ಷಿಸಿದೆಲ್ಲವನ್ನೂ ನೀಡುವೆನು. ಗಂಡೀಚ ಯಾತ್ರೆಯೇ ಮೊದಲಾದ ನನ್ನ ಈ ಹನ್ನೆರಡು ಮಹಾಯಾತ್ರೆಗಳೂ ಪರಮಮಂಗಳಕರಗಳಾಗಿರುವವು.

ಏಕೈಕಾ ಮುಕ್ತಿದಾ ಸರ್ವಾ ಧರ್ಮಕಾಮಾರ್ಥವರ್ಧನಾಃ ॥೪೦॥

ಇವುಗಳಲ್ಲಿ ಒಂದನ್ನು ಮಾಡಿದರೂ ಮುಕ್ತಿಯು ದೊರಕುತ್ತದೆ. ಇನ್ನು ಎಲ್ಲವನ್ನೂ ಮಾಡಿದರೆ ದೊರಕುವುದಿಲ್ಲವೇನು? ಎಲ್ಲಾ ಪುರುಷಾರ್ಥಕಾಮನೆಗಳೂ ದೊರಕು- ತ್ತವೆ.

ತಾಸಾಮೇಕತಮಾಂ ವಾऽಪಿ ಯೋ ಭಕ್ತ್ಯಾ ಚಾವಲೋಕಯೇತ್ ।
ಏಕಯಾऽಪಿ ಭವಾಬ್ಧಿಂ ಸ ತೀರ್ತ್ವಾ ವಿಷ್ಣುಪದಂ ವ್ರಜೇತ್ ॥

ಈ ಯಾತ್ರೆಗಳಲ್ಲಿ ಒಂದನ್ನಾದರೂ ಭಕ್ತಿಯಿಂದ ನೋಡಿದ ಮನುಷ್ಯನು, ಆ ಒಂದರಿಂದಲೇ ಸಂಸಾರಸಾಗರವನ್ನು ದಾಟಿ ವೈಕುಂಠಲೋಕವನ್ನು ಸೇರುವನು.

ಜೈಮಿನಿಃ–

ಇತ್ಯುದೀರ್ಯ ಪ್ರಜಾನಾಥಂ ಭಗವಾನ್ ಸ ತಿರೋದಧೇ ॥೪೨॥

ಜೈಮಿನಿ ಋಷಿಗಳು ಹೇಳುತ್ತಾರೆ – ಈ ರೀತಿಯಾಗಿ ಭಗವಂತನು ಪ್ರಜಾಪತಿಯಾದ ದಕ್ಷನಿಗೆ ವರವನ್ನು ಕೊಟ್ಟು ಆತನು ನೋಡುತ್ತಿರುವಂತೆಯೇ ಅಂತರ್ಧಾನವನ್ನು ಹೊಂದಿದನು.

ದಕ್ಷಃ ಪ್ರಜಾಪತಿಃ ಸೋऽಪಿ ಶ್ರದ್ದಧಾನಸ್ತದಾಜ್ಞಯಾ ।
ಸಂವತ್ಸರಂ ಗಿರೌ ಸ್ಥಿತ್ವಾ ಸಂದದರ್ಶ ಮಹೋತ್ಸವಾನ್ ॥೪೩॥

ದಕ್ಷಪ್ರಜಾಪತಿಯೂ ಕೂಡ ಪರಮಾತ್ಮನ ಅಪ್ಪಣೆಯನ್ನು ಶಿರಸಾ ವಹಿಸಿ ಶ್ರದ್ಧಾನ್ವಿತನಾಗಿ ನೀಲಾಚಲದಲ್ಲಿ ಒಂದು ವರ್ಷದವರೆಗೂ ನೆಲೆಸಿದ್ದು ಪರಮಾತ್ಮನ ಎಲ್ಲಾ ಮಹೋತ್ಸವಗಳನ್ನೂ ನೋಡಿದನು.

ಸರ್ವಜ್ಞೋ ಬ್ರಾಹ್ಮಣೋ ಭೂತ್ವಾ ಕೌಶಿಕಸ್ಯ ಕುಲೋತ್ತಮೇ ।
ಲೋಕಾನ್ ಪ್ರವರ್ತಯಾಮಾಸ ಯಥಾವಿಧಿ ಮಹೇಷು ಸಃ ॥೪೪॥

ಆದರ ಫಲವಾಗಿ ಉತ್ತಮವಾದ ಕೌಶಿಕವಂಶದಲ್ಲಿ ಸರ್ವಜ್ಞನಾದ ಬ್ರಾಹ್ಮಣನಾಗಿ ಜನ್ಮವನ್ನು ತಳೆದು ಸಕಲ ಜನರನ್ನೂ ಯಥಾವಿಧಿಯಾದ ಮಹೋತ್ಸವಗಳನ್ನು ನಡೆಸುವುದರಲ್ಲಿ ಆಸಕ್ತರನ್ನಾಗಿ ಮಾಡಿದನು. ಲೋಕೋದ್ಧಾರಕ ಗುರುವಾದನು.

ವಿಶ್ವಾಸಾಯಾಲ್ಪಬುದ್ಧೀನಾಂ ಯಾತ್ರಾ ವೈ ಪರಿಕೀರ್ತಿತಾ ।
ಅಯಂ ಚ ಸಾಕ್ಷಾತ್ಪರಮಬ್ರಹ್ಮರೂಪೀ ಜಗದ್ಗುರುಃ ।
ಪ್ರಸಾದಿತಃ ಸುರೇಶೇನ ಲೋಕಾನುಗ್ರಹಣಾಯ ವೈ ॥೪೫॥

ಅಲ್ಪಜನರಿಗೆ ಭಗವಂತನಲ್ಲಿ ವಿಶ್ವಾಸ ಹುಟ್ಟಲೆಂದು ಈ ಯಾತ್ರೆಯ ವಿಧಿಯು ಫಲವೂ ಕೂಡ ಚೆನ್ನಾಗಿ ವರ್ಣನೆ ಮಾಡಲ್ಪಟ್ಟಿದೆ. ಈ ಜಗನ್ನಾಥನೇ ಸಾಕ್ಷಾತ್ತಾಗಿ

ಲೋಕಗುರುವಾದ ಪರಬ್ರಹ್ಮವಸ್ತುವಾಗಿರುವನು. ದೇವತೆಗಳಲ್ಲಿ ಶ್ರೇಷ್ಠನಾದ ದಕ್ಷಪ್ರಜಾಪತಿಯಿಂದ ಲೋಕಕ್ಕೆ ಅನುಗ್ರಹಮಾಡಲೋಸುಗ ಈ ಸ್ತೋತ್ರಾದಿ ಮಹೋತ್ಸವಗಳಿಂದ ಸಂತೋಷ ಪಡಿಸಲ್ಪಟ್ಟನು.

ಯಥಾ ತಥಾ ದೃಷ್ಟಿಪಥಂ ಯಾತೋ ಮುಕ್ತಿಪ್ರದೋ ಭವೇತ್ ।
ಸರ್ವಾನ್ ಕಾಮಾನ್ ದದಾತ್ಯೇವ ನಾರೀಣಾಂ ನಾತ್ರ ಸಂಶಯಃ ॥೪೬॥

ಪ್ರಯತ್ನಪೂರ್ವಕವಾಗಲೀ, ಅಥವಾ ಆಕಸ್ಮಿಕವಾಗಲೀ ಯಾವ ಮನುಷ್ಯನು ಶ್ರೀಜಗನ್ನಾಥನ ದೃಷ್ಟಿಪಥಕ್ಕೆ ಬಿದ್ದನೆಂದರೆ ಸಾಕು (ಅವನ ಭಕ್ತನಾದರೆ ಸಾಕು). ನಿಶ್ಚಯವಾಗಿಯೂ ಮೋಕ್ಷವನ್ನು ಪಡೆಯುವನು. ತನ್ನ ದರ್ಶನವನ್ನು ಮಾಡುವ ಸ್ತ್ರೀಯರಿಗೂ ಸಹ ಜಗನ್ನಾಥನು ಸಕಲಾಭೀಷ್ಟಗಳನ್ನೂ ಕೊಡುವುದರಲ್ಲಿ ಸಂದೇಹವಿಲ್ಲ.

ಸತ್ಯಪ್ರತಿಜ್ಞೋ ಭಗವಾನ್ ತತ್ರಾಸ್ತೇ ಮಧುಸೂದನಃ ।
ಶೋಕಂ ತರತಿ ಯಂ ದೃಷ್ಟ್ವಾ ಭವಪಾಥೋಧಿಸಂಭವಮ್ ॥೪೭॥

ಸತ್ಯಸಂಕಲ್ಪನಾದ ಭಗವಂತನಾದ ಮಧುಸೂದನನು ಇಲ್ಲಿ ನೆಲೆಸಿರುವನು. ಆತನನ್ನು ನೋಡಿದ ಮಾತ್ರದಿಂದಲೇ ಮಾನವನು ಸಂಸಾರಸಮುದ್ರದಿಂದುಂಟಾದ ದುಃಖವನ್ನು ದಾಟುವನು.

ಕಿಂ ವ್ರತೈಃ ಕಿಂ ತಪೋದಾನೈಃ ಕಿಂ ಕೃಚ್ಛ್ರೈಃ ಕ್ರತುಭಿಸ್ತಥಾ ।
ಕಿಮಷ್ಟಾಂಗೇನ ಯೋಗೇನ ಕಿಂ ಸಾಂಖ್ಯೇನ ಪರೇಣ ಚ ॥೪೮॥

ವ್ರತೋಪವಾಸಗಳಿಂದೇನು, ತಪಸ್ಸು ದಾನಗಳಿಂದೇನು, ಕೃಚ್ಛ್ರ-ಚಾಂದ್ರಾಯಣಾದಿ ಪ್ರಾಯಶ್ಚಿತ್ತಗಳಿಂದಲೂ, ಯಜ್ಞಯಾಗಾದಿಗಳಿಂದಲೂ ಏನು? ಅಷ್ಟಾಂಗಸಹಿತವಾದ ಯೋಗಧಾರಣೆಯಿಂದೇನು? ಸಾಂಖ್ಯಯೋಗದಿಂದೇನು ಮನುಷ್ಯನಿಗೆ ಆಗಬೇಕಾಗಿರುವುದು?

ತೀರ್ಥರಾಜಜಲೇ ಸ್ನಾತ್ವಾ ಕ್ಷೇತ್ರೇ ಶ್ರೀಪುರುಷೋತ್ತಮೇ ।
ನ್ಯಗ್ರೋಧಮೂಲವಸತೌ ವಸಂತಂ ಚರ್ಮಚಕ್ಷುಷಾ ।

ದೃಷ್ಟ್ವಾ ದಾರುಮಯಂ ಬ್ರಹ್ಮ ದೇಹಬಂಧಾತ್ ಪ್ರಮುಚ್ಯತೇ ॥೪೯॥

ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ಪುರುಷೋತ್ತಮಕ್ಷೇತ್ರಮಾಹಾತ್ಮ್ಯೇ ಜೈಮಿನಿಋಷಿಸಂವಾದೇ 'ಅಕ್ಷಯತೃತೀಯೋತ್ಸವವರ್ಣನಂ' ನಾಮ ಷಟ್ ಚತ್ವಾರಿಂಶೋಽಧ್ಯಾಯಃ ॥

ಶ್ರೀಪುರುಷೋತ್ತಮಕ್ಷೇತ್ರವನ್ನು ಸೇರಿ ತೀರ್ಥರಾಜವೆನಿಸಿದ ಸಮುದ್ರದಲ್ಲಿ ಸ್ನಾನವನ್ನು ಮಾಡಿ ಮಾನವರು ಆಲದ ಮರದ ಬುಡದಲ್ಲಿ ದಾರುಮಯಶರೀರನಾಗಿ ವಾಸಮಾಡುತ್ತಿರುವ ಪರಬ್ರಹ್ಮವಸ್ತುವನ್ನು (ಶ್ರೀಜಗನ್ನಾಥನನ್ನು) ಚರ್ಮದ ಕಣ್ಣಿನಿಂದ ನೋಡಲು ಸಾಂಸಾರಿಕ ದೇಹವೆಂಬ ಪಾಶದಿಂದ ಬಿಡುಗಡೆ ಹೊಂದಿ ಮೋಕ್ಷವನ್ನು ಅನುಭವಿಸುವರು.

॥ ಇಲ್ಲಿಗೆ ೭೧,೦೦೦ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ
ಪುರುಷೋತ್ತಮಕ್ಷೇತ್ರಮಾಹಾತ್ಮ್ಯದ ಜೈಮಿನಿ-ಋಷಿಸಂವಾದದಲ್ಲಿ
'ಅಕ್ಷಯತೃತೀಯೋತ್ಸವವರ್ಣನೆ' ಎಂಬ ನಲವತ್ತಾರನೆಯ ಅಧ್ಯಾಯವು ಮುಗಿಯಿತು ॥

* * * * *

# ಪರಶುರಾಮಜಯಂತೀ

ವೈಶಾಖಸ್ಯ ಸಿತೇ ಪಕ್ಷೇ ತೃತೀಯಾಯಾಂ ಪುನರ್ವಸೌ ।

ನಿಶಾಯಾಃ ಪ್ರಥಮೇ ಯಾಮೇ ರಾಮಾಖ್ಯಃ ಸಮಯೇ ಹರಿಃ ॥

ವೈಶಾಖಮಾಸದ ಶುಕ್ಲಪಕ್ಷದ ತೃತೀಯಾ ದಿವಸ ಪುನರ್ವಸು ನಕ್ಷತ್ರದಲ್ಲಿ ರಾತ್ರಿಯ ಮೊದಲನೆಯ ಯಾಮದಲ್ಲಿ ಪರಶುರಾಮದೇವರು ಅವತಾರವನ್ನು ಮಾಡಿದರು.

## ಮಹಾವಿಷ್ಣುವೇ ಪರಶುರಾಮನಾಗಿ ಅವತರಿಸಿದನು

ಸ್ವೋಚ್ಚಸ್ಥೈಃ ಷಡ್‌ಗ್ರಹೈರ್ಯುಕ್ತೇ ಮಿಥುನೇ ರಾಹುಸಂಸ್ಥಿತೇ ।

ರೇಣುಕಾಯಾಸ್ತು ಯೋ ಗರ್ಭಾದವತೀರ್ಣೋ ವಿಭುಃ ಸ್ವಯಮ್ ।

ಸಾಕ್ಷಾತ್ ಮಹಾವಿಷ್ಣುವೇ ಪರಶುರಾಮದೇವರಾಗಿ ರೇಣುಕಾದೇವಿಯ ಗರ್ಭ-ದಿಂದ ಅವತಾರವನ್ನು ಮಾಡಿದ್ದಾನೆ. ಆ ಸಂದರ್ಭದಲ್ಲಿ ಆರು ಗ್ರಹಗಳು ಉಚ್ಚಸ್ಥಾನದಲ್ಲಿದ್ದವು. ಮಿಥುನದಲ್ಲಿ ರಾಹು ನೆಲೆಸಿದ್ದನು. (ಮಿಥುನರಾಶಿಯು ರಾಹುವಿನ ಉಚ್ಚಸ್ಥಾನ).

## ಪರಶುರಾಮದೇವರಿಗೆ ಅರ್ಘ್ಯವನ್ನು ನೀಡಬೇಕು

ಜಮದಗ್ನೇಃ ಸುತೋ ವೀರಃ ಕ್ಷತ್ರಿಯಾಂತಕರಃ ಪ್ರಭೋ ।

ಗೃಹಾಣಾರ್ಘ್ಯಂ ಮಯಾ ದತ್ತಂ ಕೃಪಯಾ ಪರಮೇಶ್ವರ ॥

ದುಷ್ಟಕ್ಷತ್ರಿಯರನ್ನು ಸಂಹಾರ ಮಾಡಿದ ಜಮದಗ್ನಿಸುತನಾದ ಪರಾಕ್ರಮಿಯೇ! ಪರಮೇಶ್ವರನೇ! ನಾನು ನೀಡುವ ಅರ್ಘ್ಯವನ್ನು ಕೃಪೆಯಿಂದ ಸ್ವೀಕರಿಸು.

ಹೀಗೆ ಪ್ರಾರ್ಥನೆಯನ್ನು ಮಾಡಿ ಈ ಶ್ಲೋಕವನ್ನು ಹೇಳಿ ಅಂದು ಪರಶುರಾಮ-ದೇವರಿಗೆ ಅರ್ಘ್ಯವನ್ನು ನೀಡಬೇಕು.

ರಾತ್ರಿಯ ಮೊದಲನೆಯ ಜಾವದಲ್ಲಿಯೇ ಪರಶುರಾಮದೇವರಿಗೆ ಅರ್ಘ್ಯವನ್ನು ನೀಡಿ, ಆ ಪರಶುರಾಮದೇವರ ಪೂಜೆಯನ್ನು ಆಚರಿಸಬೇಕು.

## ಗೋಪೂಜೆ

* ಅಕ್ಷಯತೃತೀಯಾದಂದು ಲಕ್ಷ್ಮೀದೇವಿಯು ಗೋವುಗಳಲ್ಲಿ ಸನ್ನಿಹಿತ-ಳಾಗಿರುತ್ತಾಳೆ. ಆದ್ದರಿಂದ ಅಂದು ಗೋಪೂಜೆಯನ್ನು ಮಾಡಿ ಗೋವುಗಳಿಗೆ ಗೋಗ್ರಾಸವನ್ನು ನೀಡಬೇಕು. ಬಾಳೆಹಣ್ಣು, ಅಕ್ಕಿ, ಬೆಲ್ಲ ಮೊದಲಾದವುಗಳನ್ನು ಹಸುಗಳಿಗೆ ತಿನ್ನಿಸಬೇಕು. ಮತ್ತು ಕುಡಿಯಲು ನೀರನ್ನು ನೀಡಬೇಕು. ಹೀಗೆ ಮಾಡುವುದರಿಂದ ಲಕ್ಷ್ಮೀದೇವಿಯ ಅನುಗ್ರಹವಾಗುತ್ತದೆ.

## ಕುಬೇರನಪೂಜೆ

* ಅಕ್ಷಯತೃತೀಯಾದಿವಸ ನಾರಾಯಣನ ಜೊತೆ ಕುಳಿತಿರುವ ಲಕ್ಷ್ಮೀ-ದೇವಿಯನ್ನು ಪೂಜಿಸುವುದರಿಂದ ಸಂಪತ್ತು ಅಭಿವೃದ್ಧಿಯಾಗುತ್ತದೆ. ಕೆಲವರು ಕುಬೇರನನ್ನು ಇಂದು ವಿಶೇಷವಾಗಿ ಪೂಜಿಸುತ್ತಾರೆ. ಕುಬೇರನು ಅಪಾರವಾದ ಧನವನ್ನು ಹೊಂದಿದ ದಿವಸವು ಇಂದೇ ಆಗಿದೆಯೆಂದು ನಂಬುತ್ತಾರೆ. ಏನೇ ಆದರೂ ಅಕ್ಷಯತೃತೀಯಾದಿವಸವು ಸಂಪತ್ತನ್ನು ನೀಡುವ ದಿವಸವೆಂಬುದು ಪಂಡಿತಪಾಮರರಲ್ಲಿ ಸಾಧಾರಣವಾದ ವಿಷಯವಾಗಿದೆ. ಕುಬೇರ ಮಂತ್ರ ಮಂತ್ರವನ್ನು ೧೦೮ಬಾರಿ ಜಪಿಸುವುದರಿಂದ ಅಪಾರವಾದ ಧನಸಂಪತ್ತು ಪ್ರಾಪ್ತವಾಗುತ್ತದೆ.

|| ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ ||

# ಅಕ್ಷಯತೃತೀಯಾ ಮತ್ತು ಪರಶುರಾಮಜಯಂತಿ

## ಅಕ್ಷಯ ತೃತೀಯಾ ದಿವಸದಂದು ಆಚರಿಸಲೇ ಬೇಕಾದ ಧರ್ಮಗಳು

ಅಕ್ಷಯತೃತೀಯಾದ ಪರ್ವಕಾಲದಲ್ಲಿ ಬ್ರಾಹ್ಮೀಮುಹೂರ್ತದಲ್ಲಿ ಎದ್ದೇಳಬೇಕು. ಶ್ರೀಭೂಸಹಿತನಾದ ನಾರಾಯಣರೂಪಿಯಾದ ಭಗವಂತನನ್ನು ಆಪಾದಮೌಳಿ-ಪರ್ಯಂತವಾಗಿ ಸ್ಮರಣೆಮಾಡಿರಿ. ಅನಂತರ ಅಕ್ಷಯತೃತೀಯಾದ ಆಚರಣೆಯನ್ನು ಸಂಕಲ್ಪ ಮಾಡಿರಿ. ರಾತ್ರಿ ಮಲಗುವಾಗ ಸಮರ್ಪಣೆ ಮಾಡಿರಿ. ಇದು ತುಂಬ ಮುಖ್ಯವಾದ ವಿಚಾರ. ಯಾವುದೇ ಕಾರಣಕ್ಕೂ ಈ ಅನುಸಂಧಾನವನ್ನು ಮರೆಯದಿರಿ.

## ಗಂಧಾಲಂಕಾರ

* ಯಃ ಕರೋತಿ ತೃತೀಯಾಯಾಂ ಕೃಷ್ಣಂ ಚಂದನಲೇಪಿತಮ್ ।

  ವೈಶಾಖಸ್ಯ ಸಿತೇ ಪಕ್ಷೇ ಸ ಯಾತಿ ಅಚ್ಯುತಮಂದಿರಮ್ ॥ (ಧರ್ಮಸಿಂಧು)

  ಅಕ್ಷಯತೃತೀಯಾ ದಿವಸ ಶ್ರೀಕೃಷ್ಣನಿಗೆ ಗಂಧಾಲಂಕಾರವನ್ನು ಮಾಡಬೇಕು. ಅಂಥ- ವನು ಅಚ್ಯುತನ ಮಂದಿರವನ್ನೇ ಹೊಂದುತ್ತಾನೆ.

* ಅಕ್ಷಯತೃತೀಯಾದಂದು ಬಿಸಿಲಿನ ತಾಪ ಹೆಚ್ಚು ಇರುವುದರಿಂದ ಗಂಧಾಲಂಕಾರವು ಭಗವಂತನಿಗೆ ಅತ್ಯಂತ ಪ್ರಿಯಕರವಾಗಿರುತ್ತದೆ. ಗಂಧಾಲಂಕಾರವನ್ನು ಎಲ್ಲ ಶಿಷ್ಟರೂ ಕೂಡ ಅನೂಚಾನವಾಗಿ ಮಾಡಿಕೊಂಡು ಬಂದಿದ್ದಾರೆ. ಆದ್ದರಿಂದ ಪ್ರತಿಯೊಬ್ಬರೂ ತಪ್ಪದೇ ಅಕ್ಷಯತೃತೀಯಾದಂದು ಗಂಧಾಲಂಕಾರವನ್ನು ಮಾಡಲೇಬೇಕು.

* ನೂರು ಸಾವಿರ ಮೊದಲಾದ ಸಂಖ್ಯೆಗಳಿಂದ ಕೃಷ್ಣಮಂತ್ರವನ್ನು ಜಪಿಸುತ್ತಾ ಭಗವಂತನಿಗೆ ಗಂಧದಿಂದ ಅರ್ಚನೆಯನ್ನು ಕೂಡ ಮಾಡಬಹುದು.

* ಮನೆಯಲ್ಲಿ ಪೂಜೆ ಮಾಡುತ್ತಿರುವ ಯಾವ ಭಗವಂತನ ಪ್ರತಿಮೆ ಇದೆಯೋ ಅದಕ್ಕೆ ಪಂಚಾಮೃತಾಭಿಷೇಕ, ಶುದ್ಧೋದಕದ ಅಭಿಷೇಕ ಎಲ್ಲವೂ ಆದ ಮೇಲೆ ಶ್ರೀಗಂಧದಿಂದ ಸಂಪೂರ್ಣವಾಗಿ ಅಲಂಕಾರವನ್ನು ಮಾಡಬೇಕು.

* ಭಗವಂತನಿಗೆ ಗಂಧಾಲಂಕಾರವನ್ನು ಮಾಡಿದ ಮೇಲೆ ಸಾಧ್ಯವಾದರೆ ಮುಖ್ಯಪ್ರಾಣದೇವರಿಗೆ, ಗರುಡ ದೇವರಿಗೆ ಹಾಗೂ ವೃಂದಾವನಗಳಿಗೂ ಗಂಧದಿಂದ ಅಲಂಕಾರವನ್ನು ಮಾಡಬಹುದು.

* ಬ್ರಾಹ್ಮಣರಿಗೆ ಗಂಧವನ್ನು ಹಚ್ಚುವುದರಿಂದ ಚಲಪ್ರತೀಕದಲ್ಲಿ ಭಗವಂತನಿಗೆ ಗಂಧವನ್ನು ಸಮರ್ಪಿಸಿದ ಪುಣ್ಯವು ಬರುತ್ತದೆ.

* ಗಂಧಾಲಂಕಾರವು ಅಕ್ಷಯತೃತೀಯಾ ದಿವಸ ಆಚರಿಸಲೇ ಬೇಕಾದ ಮುಖ್ಯ-ಧರ್ಮವಾಗಿದೆ.

## ದಾನ

* 'ಯದ್ಯದ್ದತ್ತಂ ತ್ವಕ್ಷಯಂ ಸ್ಯಾತ್ ತೇನೇಯಮಕ್ಷಯಾ ಸ್ಮೃತಾ ।' – ಅಕ್ಷಯತೃತೀಯಾ ದಿವಸ ಏನೇ ದಾನವನ್ನು ನೀಡಿದರೂ ಅದು ಅಕ್ಷಯಫಲವನ್ನು ನೀಡುತ್ತದೆ.

* 'ಯತ್ಕಿಂಚಿದ್ದೀಯತೇ ದಾನಂ ಸ್ವಲ್ಪಂ ವಾ ಯದಿ ವಾ ಬಹು ।
  ತತ್ಸರ್ವಂ ಅಕ್ಷಯಂ ಸ್ಯಾದ್ವೈ ತೇನೇಯಮಕ್ಷಯಾ ಸ್ಮೃತಾ ॥
  ಅಕ್ಷಯತೃತೀಯಾ ದಿವಸ ಸ್ವಲ್ಪದಾನ ಮಾಡಿದರೂ ಸಾಕು ಅಕ್ಷಯಫಲವನ್ನೇ ನೀಡುತ್ತದೆ.

* ಭವಿಷ್ಯಪುರಾಣದಲ್ಲಿ ಭಗವಂತನು ಹೇಳಿದಂತೆ ಅಕ್ಷಯತೃತೀಯಾ ದಿವಸ ತನ್ನ ಕೈಲಾದ ಯಾವುದೇ ವಸ್ತುವನ್ನು ದಾನ ಮಾಡಲೇ ಬೇಕು. ಹಾಗೆ ದಾನ ಮಾಡು-ವುದರಿಂದ ಉಳಿದ ಸಂದರ್ಭಗಳಲ್ಲಿ ದಾನ ಮಾಡದೇ ಯಾವ ಫಲವನ್ನು ಕಳೆದುಕೊಂಡಿರುತ್ತಾನೋ ಅದನ್ನು ಪಡೆದುಕೊಳ್ಳುವ ಉತ್ತಮ ಅವಕಾಶವಿರುತ್ತದೆ.

* ಅಕ್ಷಯತೃತೀಯಾ ದಿವಸ ಉದಕಕುಂಭದಾನವನ್ನು ಪುರಾಣಗಳಲ್ಲಿ ಹೇಳುತ್ತಾರೆ. ಬೆಳ್ಳಿ ಅಥವಾ ತಾಮ್ರದ ಕಲಶದಲ್ಲಿ ಪಾನಕ ಅಥವಾ ನೀರನ್ನು ತುಂಬಿಸಿ ವಿಪ್ರೋತ್ತಮನಿಗೆ ದಾನ ಮಾಡಬೇಕು.
* ಚಿನ್ನ, ಅನ್ನ, ತುಪ್ಪ ಮೊದಲಾದ ದಾನಗಳೂ ಕೂಡ ವಿಹಿತವಾಗಿವೆ.
* ಅಕ್ಷಯತೃತೀಯಾ ದಿವಸ ಚಿನ್ನವನ್ನು ಖರೀದಿಸುವುದಕ್ಕಿಂತ ದಾನ ಮಾಡುವುದೇ ಮುಖ್ಯಧರ್ಮವಾಗಿದೆ.
* ದಾನದ ಸಂಕಲ್ಪವನ್ನು ಮುಂದೆ ನೀಡಲಾಗಿದೆ. ಮಹಾಸಂಕಲ್ಪವನ್ನು ಮಾಡಿ ದಾನ ಮಾಡಿದರೆ ಅನಂತಪುಣ್ಯವು ಪ್ರಾಪ್ತವಾಗುತ್ತದೆ.

## ಗಂಗಾಸ್ನಾನ

* ವೈಶಾಖಮಾಸದಲ್ಲಿ ಬ್ರಾಹ್ಮೀಮುಹೂರ್ತದಲ್ಲೇ ಸ್ನಾನವನ್ನು ಮಾಡಬೇಕು. ಅಕ್ಷಯತೃತೀಯಾದಿವಸ ಪರ್ವಕಾಲವಾದ್ದರಿಂದ ಅಂದು ತಪ್ಪದೇ ಬ್ರಾಹ್ಮೀ ಮುಹೂರ್ತದಲ್ಲಿ ಸ್ನಾನವನ್ನು ಮಾಡಲೇಬೇಕು. ಸಾಧ್ಯವಾದರೆ ಗಂಗೆಗೆ ತೆರಳಿ ಸ್ನಾನವನ್ನು ಮಾಡಬೇಕು. ಸಾಧ್ಯವಾದಲ್ಲಿ ಹತ್ತಿರದಲ್ಲಿರುವ ನದಿಗಳಲ್ಲಿ ಸ್ನಾನ ಮಾಡಬೇಕು.
* ಗಂಗೆಗೆ ತೆರಳಲು ಸಾಧ್ಯವಾಗದೇ ಇದ್ದರೆ ವಿಶೇಷವಾಗಿ ಗಂಗೆಯ ಸ್ಮರಣೆ ಮಾಡಿ, ಗಂಗೆಯ ಸ್ತೋತ್ರವನ್ನು ಪಠಿಸಿ ತಾವು ಸ್ನಾನಮಾಡುವ ನೀರಿನಲ್ಲಿ ಗಂಗೆಯನ್ನು ಆವಾಹನೆ ಮಾಡಿ ಸ್ನಾನವನ್ನು ಮಾಡಬೇಕು.
* ನೀರು, ಪಾನಕ, ಬೆಲ್ಲ, ಫಲ, ತಾಂಬೂಲ, ಪಾದುಕೆ, ಜಲಪಾತ್ರೆ, ಅನ್ನ, ಛತ್ರಿ, ದಕ್ಷಿಣೆ, ಸುವರ್ಣ ಈ ವಸ್ತುಗಳನ್ನು ಅಕ್ಷಯತೃತೀಯಾ ದಿವಸ ದಾನ ಮಾಡುವುದರಿಂದ ಅಶ್ವಮೇಧಯಾಗದ ಫಲವು ದೊರೆಯುತ್ತದೆಂದು ಪದ್ಮಪುರಾಣದ ಪಾತಾಳಖಂಡದ ೪೦ನೆಯ ಅಧ್ಯಾಯವು ಹೇಳುತ್ತದೆ.

* ಮನೆಯಲ್ಲಿ ಪೂಜೆ ಮಾಡುತ್ತಿರುವ ಯಾವ ಭಗವಂತನ ಪ್ರತಿಮೆ ಇದೆಯೋ ಅದಕ್ಕೆ ಪಂಚಾಮೃತಾಭಿಷೇಕ, ಶುದ್ಧೋದಕದ ಅಭಿಷೇಕ ಎಲ್ಲವೂ ಆದ ಮೇಲೆ ಶ್ರೀಗಂಧದಿಂದ ಸಂಪೂರ್ಣವಾಗಿ ಅಲಂಕಾರವನ್ನು ಮಾಡಬೇಕು.

* ಭಗವಂತನಿಗೆ ಗಂಧಾಲಂಕಾರವನ್ನು ಮಾಡಿದ ಮೇಲೆ ಸಾಧ್ಯವಾದರೆ ಮುಖ್ಯಪ್ರಾಣದೇವರಿಗೆ, ಗರುಡ ದೇವರಿಗೆ ಹಾಗೂ ವೃಂದಾವನಗಳಿಗೂ ಗಂಧದಿಂದ ಅಲಂಕಾರವನ್ನು ಮಾಡಬಹುದು.

* ಬ್ರಾಹ್ಮಣರಿಗೆ ಗಂಧವನ್ನು ಹಚ್ಚುವುದರಿಂದ ಚಲಪ್ರತೀಕದಲ್ಲಿ ಭಗವಂತನಿಗೆ ಗಂಧವನ್ನು ಸಮರ್ಪಿಸಿದ ಪುಣ್ಯವು ಬರುತ್ತದೆ.

* ಗಂಧಾಲಂಕಾರವು ಅಕ್ಷಯತೃತೀಯಾ ದಿವಸ ಆಚರಿಸಲೇ ಬೇಕಾದ ಮುಖ್ಯ-ಧರ್ಮವಾಗಿದೆ.

## ದಾನ

* 'ಯದ್ಯದ್ದತ್ತಂ ತ್ವಕ್ಷಯಂ ಸ್ಯಾತ್ ತೇನೇಯಮಕ್ಷಯಾ ಸ್ಮೃತಾ ।' – ಅಕ್ಷಯತೃತೀಯಾ ದಿವಸ ಏನೇ ದಾನವನ್ನು ನೀಡಿದರೂ ಅದು ಅಕ್ಷಯಫಲವನ್ನು ನೀಡುತ್ತದೆ.

* 'ಯತ್ಕಿಂಚಿದ್ದೀಯತೇ ದಾನಂ ಸ್ವಲ್ಪಂ ವಾ ಯದಿ ವಾ ಬಹು ।
ತತ್ಸರ್ವಂ ಅಕ್ಷಯಂ ಸ್ಯಾದ್ವೈ ತೇನೇಯಮಕ್ಷಯಾ ಸ್ಮೃತಾ ॥

ಅಕ್ಷಯತೃತೀಯಾ ದಿವಸ ಸ್ವಲ್ಪದಾನ ಮಾಡಿದರೂ ಸಾಕು ಅಕ್ಷಯಫಲವನ್ನೇ ನೀಡುತ್ತದೆ.

* ಭವಿಷ್ಯಪುರಾಣದಲ್ಲಿ ಭಗವಂತನು ಹೇಳಿದಂತೆ ಅಕ್ಷಯತೃತೀಯಾ ದಿವಸ ತನ್ನ ಕೈಲಾದ ಯಾವುದೇ ವಸ್ತುವನ್ನು ದಾನ ಮಾಡಲೇ ಬೇಕು. ಹಾಗೆ ದಾನ ಮಾಡು-ವುದರಿಂದ ಉಳಿದ ಸಂದರ್ಭಗಳಲ್ಲಿ ದಾನ ಮಾಡದೇ ಯಾವ ಫಲವನ್ನು ಕಳೆದುಕೊಂಡಿರುತ್ತಾನೋ ಅದನ್ನು ಪಡೆದುಕೊಳ್ಳುವ ಉತ್ತಮ ಅವಕಾಶವಿರುತ್ತದೆ.

* ಅಕ್ಷಯತೃತೀಯಾ ದಿವಸ ಉದಕಕುಂಭದಾನವನ್ನು ಪುರಾಣಗಳಲ್ಲಿ ಹೇಳುತ್ತಾರೆ. ಬೆಳ್ಳಿ ಅಥವಾ ತಾಮ್ರದ ಕಲಶದಲ್ಲಿ ಪಾನಕ ಅಥವಾ ನೀರನ್ನು ತುಂಬಿಸಿ ವಿಪ್ರೋತ್ತಮನಿಗೆ ದಾನ ಮಾಡಬೇಕು.
* ಚಿನ್ನ, ಅನ್ನ, ತುಪ್ಪ ಮೊದಲಾದ ದಾನಗಳೂ ಕೂಡ ವಿಹಿತವಾಗಿವೆ.
* ಅಕ್ಷಯತೃತೀಯಾ ದಿವಸ ಚಿನ್ನವನ್ನು ಖರೀದಿಸುವುದಕ್ಕಿಂತ ದಾನ ಮಾಡುವುದೇ ಮುಖ್ಯಧರ್ಮವಾಗಿದೆ.
* ದಾನದ ಸಂಕಲ್ಪವನ್ನು ಮುಂದೆ ನೀಡಲಾಗಿದೆ. ಮಹಾಸಂಕಲ್ಪವನ್ನು ಮಾಡಿ ದಾನ ಮಾಡಿದರೆ ಅನಂತಪುಣ್ಯವು ಪ್ರಾಪ್ತವಾಗುತ್ತದೆ.

## ಗಂಗಾಸ್ನಾನ

* ವೈಶಾಖಮಾಸದಲ್ಲಿ ಬ್ರಾಹ್ಮೀಮುಹೂರ್ತದಲ್ಲೇ ಸ್ನಾನವನ್ನು ಮಾಡಬೇಕು. ಅಕ್ಷಯತೃತೀಯಾದಿವಸ ಪರ್ವಕಾಲವಾದ್ದರಿಂದ ಅಂದು ತಪ್ಪದೇ ಬ್ರಾಹ್ಮೀ ಮುಹೂರ್ತದಲ್ಲಿ ಸ್ನಾನವನ್ನು ಮಾಡಲೇಬೇಕು. ಸಾಧ್ಯವಾದರೆ ಗಂಗೆಗೆ ತೆರಳಿ ಸ್ನಾನವನ್ನು ಮಾಡಬೇಕು. ಸಾಧ್ಯವಾದಲ್ಲಿ ಹತ್ತಿರದಲ್ಲಿರುವ ನದಿಗಳಲ್ಲಿ ಸ್ನಾನ ಮಾಡಬೇಕು.
* ಗಂಗೆಗೆ ತೆರಳಲು ಸಾಧ್ಯವಾಗದೇ ಇದ್ದರೆ ವಿಶೇಷವಾಗಿ ಗಂಗೆಯ ಸ್ಮರಣೆ ಮಾಡಿ, ಗಂಗೆಯ ಸ್ತೋತ್ರವನ್ನು ಪಠಿಸಿ ತಾವು ಸ್ನಾನಮಾಡುವ ನೀರಿನಲ್ಲಿ ಗಂಗೆಯನ್ನು ಆವಾಹನೆ ಮಾಡಿ ಸ್ನಾನವನ್ನು ಮಾಡಬೇಕು.
* ನೀರು, ಪಾನಕ, ಬೆಲ್ಲ, ಫಲ, ತಾಂಬೂಲ, ಪಾದುಕೆ, ಜಲಪಾತ್ರೆ, ಅನ್ನ, ಛತ್ರಿ, ದಕ್ಷಿಣೆ, ಸುವರ್ಣ ಈ ವಸ್ತುಗಳನ್ನು ಅಕ್ಷಯತೃತೀಯಾ ದಿವಸ ದಾನ ಮಾಡುವುದರಿಂದ ಅಶ್ವಮೇಧಯಾಗದ ಫಲವು ದೊರೆಯುತ್ತದೆಂದು ಪದ್ಮಪುರಾಣದ ಪಾತಾಳಖಂಡದ ೪೦ನೆಯ ಅಧ್ಯಾಯವು ಹೇಳುತ್ತದೆ.

# ಅಕ್ಷಯತೃತೀಯಾದ ಮಹತ್ವ

ವೈಶಾಖಾಂತಾನಿ ಪಾಪಾನಿ ಸೂರ್ಯಾಂತಾನಿ ತಮಾಂಸಿ ಚ ।
ಪರೋಪಕಾರಪೈಶುನ್ಯಪ್ರಾಂತಾನಿ ಸುಕೃತಾನಿ ಚ ॥

ಕತ್ತಲೆಯ ಕೊನೆಯೆಂದರೆ ಅದು ಸೂರ್ಯ; ಪುಣ್ಯಗಳ ಕೊನೆಯೆಂದರೆ ಚಾಡಿ ಹೇಳುವುದು. ಹಾಗೆ ಎಲ್ಲಾ ಪಾಪಗಳ ಕೊನೆಯೆಂದರೆ ಅದು ವೈಶಾಖಮಾಸ. ಹೀಗೆ ಪದ್ಮಪುರಾಣ ಪಾತಾಳಖಂಡದಲ್ಲಿರುವ ಒಂದು ಶ್ಲೋಕವು ವೈಶಾಖಮಾಸದ ಮಹತ್ವವನ್ನು ಸಾರಿ ಹೇಳಿದೆ. ಆ ಮಾಸದಲ್ಲೂ ಕೂಡ ಅಕ್ಷಯತೃತೀಯಾ ದಿವಸ ಸಾವಿರದಷ್ಟು ಅಧಿಕಪುಣ್ಯವನ್ನು ನೀಡುತ್ತದೆ.

* ವೈಶಾಖಮಾಸದ ಅಕ್ಷಯತೃತೀಯಾ ದಿವಸಕ್ಕೆ ಏಕಿಷ್ಟು ಮಹತ್ವ ? ಎಂಬ ಪ್ರಶ್ನೆಗೆ ಅದೇ ಪದ್ಮಪುರಾಣವು ಕಾರಣವನ್ನು ನಿರೂಪಣೆ ಮಾಡಿದೆ – ಸೂರ್ಯನು ಮೇಷರಾಶಿಯಲ್ಲಿ ಸಂಚಾರ ಮಾಡುತ್ತಿರುತ್ತಾನೆ. ಅದರಲ್ಲೂ ಅಕ್ಷಯತೃತೀಯಾದಿವಸ ಅತ್ಯಂತ ಗರಿಷ್ಠನಾಗಿರುತ್ತಾನೆ. ಮೇಷರಾಶಿಯು ಸೂರ್ಯನಿಗೆ ಉಚ್ಚ ಸ್ಥಾನವಾಗಿದೆ. ಅದರಲ್ಲೂ ಸಂಪೂರ್ಣ ಉಚ್ಚ್ರಾಯಸ್ಥಿತಿಯಲ್ಲಿ ಅಕ್ಷಯತೃತೀಯಾ ದಿವಸ ಇರುತ್ತಾನೆ. ಚಂದ್ರನು ವೃಷಭರಾಶಿಯಲ್ಲಿ ಇರುತ್ತಾನೆ. ವೃಷಭರಾಶಿಯು ಚಂದ್ರನಿಗೆ ಉಚ್ಚಸ್ಥಾನ-ವಾಗಿದೆ. ಎಲ್ಲಾ ಗ್ರಹಗಳಿಗೆ ತಂದೆತಾಯಿಯಂತಿರುವ ಸೂರ್ಯಚಂದ್ರರಿಬ್ಬರೂ ಉಚ್ಚಸ್ಥಾನದಲ್ಲಿದ್ದಾಗ ಉಳಿದೆಲ್ಲ ಗ್ರಹಗಳೂ ಕೂಡ ಸಂತೋಷದಲ್ಲಿಯೇ ಇರುತ್ತಾರೆ. ಯಾರೊಬ್ಬ ಗ್ರಹಾಧಿಪತಿಯೂ ಕೂಡ ಯಾರಿಗೂ ಕೆಡಕನ್ನು ಮಾಡುವುದಿಲ್ಲ. ಸ್ವಲ್ಪ ಪುಣ್ಯಕೆಲಸವನ್ನು ಮಾಡಿದರೂ ಸಂಪೂರ್ಣ ಫಲವನ್ನು ನೀಡುತ್ತಾರೆ. ಆದ್ದರಿಂದ ವೈಶಾಖಮಾಸದ ಅಕ್ಷಯತೃತೀಯಾ ದಿವಸ ಯಾವುದೇ ಪುಣ್ಯದ ಕೆಲಸವನ್ನು ಮಾಡಲು ಅನಂತಫಲವನ್ನು ಪುರಾಣವು ತಿಳಿಸುತ್ತದೆ. ಇದರಿಂದ ಯಾರೂ ವಂಚಿತರಾಗಬಾರದು.

* ಒಂದು ಸವಂತ್ಸರದಲ್ಲಿ ಮೂರುವರೆ ದಿವಸಗಳು ಪರ್ವಕಾಲವೆಂದು ಕರೆಯಲಾಗಿದೆ. ಆ ಮೂರುವರೆ ದಿವಸಗಳಲ್ಲಷ್ಟೇ ಸಂಪೂರ್ಣವಾಗಿ

ಅಮೃತಗಳಿಗೆಯು ಇರುತ್ತದೆ. (೧) ಯುಗಾದಿ (೨) ಅಕ್ಷಯತೃತೀಯಾ (೩) ವಿಜಯದಶಮಿ (೪) ಬಲಿಪಾಡ್ಯದ ಮೊದಲರ್ಧ ದಿವಸ. ಈ ಮೂರುವರೆ ದಿವಸಗಳಲ್ಲಿ ಯಾವುದೇ ಪುಣ್ಯಕೆಲಸವನ್ನು ಮಾಡಿದರೂ ಸಾವಿರಪಟ್ಟು ಹೆಚ್ಚು ಪುಣ್ಯವು ಬರುತ್ತದೆ.

* ವರ್ಷದ ಈ ನಾಕುದಿವಸಗಳಲ್ಲಿಯೂ ಅವಶ್ಯವಾಗಿ ಭಗವಂತನಿಗೆ ಪಂಚಾಮೃತಾಭಿಷೇಕವನ್ನು ಮಾಡಿ ವಿಜೃಂಭಣೆಯಿಂದ ದೇವರ ಪೂಜೆಯನ್ನು ಆಚರಿಸಬೇಕು.

* ದ್ರೌಪದೀ ದೇವಿಗೆ ಸೂರ್ಯದೇವನು ಅಕ್ಷಯಪಾತ್ರೆಯನ್ನು ನೀಡಿದ ದಿವಸವೂ ಕೂಡ ಇಂದೇ ಆಗಿದೆ ಎಂದು ಬಲ್ಲವರು ಹೇಳುತ್ತಾರೆ.

* ಭಗವಂತನ ಹತ್ತು ಅವತಾರಗಳಲ್ಲಿ ಪರಶುರಾಮ ಎಂಬ ಅವತಾರವಾದದ್ದು ಅಕ್ಷಯತೃತೀಯಾದಂದು. ಇಂದೇ ಪರಶುರಾಮಜಯಂತಿಯನ್ನು ಆಚರಣೆ ಮಾಡಬೇಕು. ಮುಂದೆ ಹೇಳುವ ಪ್ರಕಾರ ಪರಶುರಾಮದೇವರಿಗೆ ಅರ್ಘ್ಯಾದಿಗಳನ್ನು ನೀಡಬೇಕು.

* ಭಾಗವತಗ್ರಂಥಕ್ಕೆ ಆಮೂಲಾಗ್ರವಾಗಿ ಟಿಪ್ಪಣಿ ಬರೆದ ಕಣ್ವತೀರ್ಥಪ್ರಭು-ಗಳಾದ ಶ್ರೀವಿಜಯಧ್ವಜತೀರ್ಥರ ಆರಾಧನೆಯೂ ಕೂಡ ಇಂದೇ ಬರುತ್ತದೆ. ಮನಸ್ಸಿನಲ್ಲೊಮ್ಮೆ ಅವರನ್ನು ಸ್ಮರಿಸಿಕೊಂಡು ಭಾಗವತಗ್ರಂಥವನ್ನು ಓದಿ ಜೀವನ ಉದ್ಧಾರವಾಗುವಂತೆ ಪ್ರಾರ್ಥಿಸಬೇಕು.

* ಅಕ್ಷಯತೃತೀಯಾ ದಿವಸ ಉಪನಯನ ಮೊದಲಾದ ಷೋಡಶಸಂಸ್ಕಾರ-ಗಳನ್ನು ಆಚರಿಸುವ ಪದ್ಧತಿಯು ಇರುವುದಿಲ್ಲ. ಹಾಗೂ ಯಾವುದೇ ಕೆಲಸಗಳ ಸಮಾಪ್ತಿಯನ್ನೂ ಕೂಡ ಇಂದು ಮಾಡುವ ಪದ್ಧತಿಯು ಇರುವುದಿಲ್ಲ.

* ಅಕ್ಷಯತೃತೀಯಾದಂದು ಅವಶ್ಯವಾಗಿ ಮುಂದೆ ನೀಡಿದ್ದನ್ನು ಪಾರಾಯಣ ಮಾಡಿರಿ.

# ಮತ್ಸ್ಯಪುರಾಣದಲ್ಲಿ ಅಕ್ಷಯತೃತೀಯಾದ ವಿಧಿವಿಧಾನ

## ೬೫ನೆಯ ಅಧ್ಯಾಯ ಮತ್ಸ್ಯಪುರಾಣ

## ಅಕ್ಷಯಫಲನೀಡುವ ಅಕ್ಷಯತೃತೀಯಾ

ಈಶ್ವರ ಉವಾಚ –

ಅಥಾನ್ಯಾಮಪಿ ವಕ್ಷ್ಯಾಮಿ ತೃತೀಯಾಂ ಸರ್ವಕಾಮದಾಮ್ ।
ಯಸ್ಯಾಂ ದತ್ತಂ ಹುತಂ ಜಪ್ತಂ ಸರ್ವಂ ಭವತಿ ಚಾಕ್ಷಯಮ್ ॥೧॥

ಈಶ್ವರನು ಯುಧಿಷ್ಠಿರನನ್ನು ಕುರಿತು ಹೇಳುತ್ತಾನೆ. – "ಎಲ್ಲ ಇಷ್ಟಾರ್ಥಗಳನ್ನು ನೀಡುವ ವ್ರತವೆಂದರೆ ಅಕ್ಷಯತೃತೀಯಾ ವ್ರತ. ಅದರ ಬಗ್ಗೆ ನಿನಗೆ ತಿಳಿಸುತ್ತೇನೆ. ಕೇಳು. ಆ ದಿವಸದಲ್ಲಿ ದಾನ, ಹೋಮ, ಜಪ ಇವೆಲ್ಲದರ ಆಚರಣೆಗಳು ಅಕ್ಷಯ ಫಲವನ್ನು ನೀಡುತ್ತವೆ.

ಅಕ್ಷಯತೃತೀಯಾ ಉಪವಾಸ ಮಾಡಿದರೆ ಹೆಚ್ಚು ಫಲ

ವೈಶಾಖಶುಕ್ಲಪಕ್ಷೇ ತು ತೃತೀಯಾ ಯ್ಯೆರುಪೋಷಿತಾ ।
ಅಕ್ಷಯಂ ಫಲಮಾಪ್ನೋತಿ ಸರ್ವಸ್ಯ ಸುಕೃತಸ್ಯ ಚ ॥೨॥

ವೈಶಾಖಮಾಸದ ಶುಕ್ಲಪಕ್ಷದ ತೃತೀಯಾದಿವಸವೇ ಅಕ್ಷಯತೃತೀಯಾ ಎಂದು ಕರೆಸಿಕೊಳ್ಳುತ್ತದೆ. ಅಂದು ಯಾರು ಉಪವಾಸ ಮಾಡುವರೋ ಅವರು ಮಾಡುವ ಎಲ್ಲಾ ಸತ್ಕಾರ್ಯಗಳು ಅಕ್ಷಯಫಲವನ್ನು ನೀಡುತ್ತವೆ.

**ಟಿಪ್ಪಣಿ** – ಅಕ್ಷಯತೃತೀಯಾ ದಿವಸ ಉಪವಾಸವು ಕಡ್ಡಾಯವಲ್ಲ. ಮಾಡಿದಲ್ಲಿಮಾತ್ರ ಅಕ್ಷಯ ಫಲವು ಬರುತ್ತದೆ. ಆದರೆ ಉಪವಾಸ ಮಾಡಬೇಕಾದರೆ ದ್ವಿತೀಯಾದಿಂದ ಕೂಡಿರುವ ತೃತೀಯಾದಿವಸ ಉಪವಾಸ ಮಾಡಬಾರದು. ಚತುರ್ಥಿಯಿಂದ ಕೂಡಿರುವ ಅಥವಾ ಕೇವಲ ತೃತೀಯಾ ಇರುವ ದಿವಸದಂದೇ ಉಪವಾಸವನ್ನು ಮಾಡಬೇಕು.

ಅಕ್ಷಯತೃತೀಯಾ

ಕೃತ್ತಿಕಾನಕ್ಷತ್ರ ಸೇರಿದ ಅಕ್ಷಯತೃತೀಯಾ ಬಹಳಶ್ರೇಷ್ಠ

ಸಾ ತಥಾ ಕೃತ್ತಿಕೋಪೇತಾ ವಿಶೇಷೇಣ ಸುಪೂಜಿತಾ ।

ತತ್ರ ದತ್ತಂ ಹುತಂ ಜಪ್ತಂ ಸರ್ವಮಕ್ಷಯಮಶ್ನುತೇ ॥೩॥

ಕೃತ್ತಿಕಾನಕ್ಷತ್ರದ ಜೊತೆ ಅಕ್ಷಯತೃತೀಯಾ ತಿಥಿಯು ಬಂದರೆ ಮತ್ತಷ್ಟು ಹೆಚ್ಚಿನ ಫಲವನ್ನು ನೀಡಿ, ಮತ್ತಷ್ಟು ಹೆಚ್ಚು ಪವಿತ್ರ ಎನಿಸುತ್ತದೆ. ದಾನ, ಹೋಮ, ಜಪ ಇವೆಲ್ಲವೂ ಕೂಡ ಅಕ್ಷಯಫಲವನ್ನು ನೀಡುತ್ತವೆ.

**ಟಿಪ್ಪಣಿ** – ಕೃತ್ತಿಕಾರೋಹಿಣೀಯುತಾ ಎಂಬ ಮತ್ತೊಂದು ಕಡೆ ಇರುವ ಪ್ರಮಾಣ- ದಂತೆ ಕೃತ್ತಿಕಾನಕ್ಷತ್ರದೊಂದಿಗೆ ರೋಹಿಣೀ ನಕ್ಷತ್ರವಿದ್ದಾಗಲೂ ಕೂಡ ವಿಶೇಷಫಲವು ಬರುತ್ತದೆಂದು ತಿಳಿಯಬೇಕು.

ರೋಹಿಣೀ ನಕ್ಷತ್ರದ ಜೊತೆ ಬುಧವಾರ ಅಥವಾ ಸೋಮವಾರ ಸೇರಿದರೆ ಮತ್ತಷ್ಟು ಶ್ರೇಷ್ಠವೆಂದು ತಿಳಿಯಬೇಕು.

ಆದರೆ ಕೃತ್ತಿಕಾ ರೋಹಿಣೀ ಬುಧವಾರಗಳಿದ್ದರೂ ದ್ವಿತೀಯಾವಿದ್ಧವಾದ ತೃತೀಯಾ ಆಚರಣೆ ಮಾಡಬಾರದು. ಯಾವುದೇ ನಕ್ಷತ್ರಗಳ ವಾರಗಳ ಯೋಗವಿಲ್ಲದ ಚತುರ್ಥೀ ಸಹಿತವಾದ ಅಕ್ಷಯತೃತೀಯಾವನ್ನೇ ಆಚರಣೆ ಮಾಡಬೇಕು –

ವೈಶಾಖೇ ಶುಕ್ಲಪಕ್ಷೇ ತು ತೃತೀಯಾ ರೋಹಿಣೀಯುತಾ ।

ದುರ್ಲಭಾ ಬುಧವಾರೇಣ ಸೋಮೇನಾಽಪಿ ಯುತಾ ತಥಾ ॥

ರೋಹಿಣೀಬುಧಯುಕ್ತಾಪಿ ಪೂರ್ವವಿದ್ಧಾ ವಿವರ್ಜಿತಾ ।

ಭಕ್ತ್ಯಾ ಕೃತಾಪಿ ಮಾಂಧಾತ ಪುಣ್ಯಂ ಹಂತಿ ಪುರಾಕೃತಮ್ ॥

ಎಂದು ಪೂರ್ವಾಹ್ಣದಲ್ಲಿ ತೃತೀಯಾ ಇದ್ದರೆ ಅಂಥ ಅಕ್ಷಯತೃತೀಯಾವನ್ನೇ ಆಚರಿಸಬೇಕು. ಸೂರ್ಯೋದಯಕಾಲದಲ್ಲಿ ತೃತೀಯಾ ಇರುವ ದಿವಸವೇ ಅಕ್ಷಯತೃತೀಯಾ ಎಂದು ಕರೆಸಿಕೊಳ್ಳುತ್ತದೆ. ಸೂರ್ಯೋದಯಕಾಲದಲ್ಲಿ ಐದು

ನಿಮಿಷಗಳ ಕಾಲ ದ್ವಿತೀಯಾವಿದ್ದರೂ ಕೂಡ ದಿವಸಪೂರ್ತಿ ತೃತೀಯಾ ಇದ್ದರೂ ಅಂದು ಅಕ್ಷಯತೃತೀಯಾವನ್ನು ಮಾಡುವಂತಿಲ್ಲ. ಮರು ದಿವಸ ಚತುರ್ಥಿಯಿಂದ ಕೂಡಿರುವ ತೃತೀಯಾದಂದೇ ಅಕ್ಷಯತೃತೀಯಾ ಹಬ್ಬವನ್ನು ಆಚರಿಸಬೇಕು.

## ಅಕ್ಷಯಾ ಎಂದು ಹೆಸರು ಬರಲು ಕಾರಣ

ಅಕ್ಷಯಾ ಸಂತತಿಸ್ತಸ್ಯಾಸ್ತಸ್ಯಾಂ ಸುಕೃತಮಕ್ಷಯಮ್ ।
ಅಕ್ಷತ್ತೈಃ ಪೂಜ್ಯತೇ ವಿಷ್ಣುಸ್ತೇನ ಸಾಪ್ಯಕ್ಷಯಾ ಸ್ಮೃತಾ ।
ಅಕ್ಷತ್ತೈಸ್ತು ನರಾಃ ಸ್ನಾತಾ ವಿಷ್ಣೋರ್ದತ್ತ್ವಾ ತಥಾಕ್ಷತಾನ್ ॥೪॥

ಅಕ್ಷಯತೃತೀಯಾ ವ್ರತದ ಆಚರಣೆಯಿಂದ ಸಂತಾನೋತ್ಪತ್ತಿಯು ಅಕ್ಷಯವಾಗಿ ಬೆಳೆಯುತ್ತದೆ. ಸುಕೃತಗಳು ಅಪರಿಮಿತಫಲವನ್ನು ನೀಡುತ್ತವೆ. ಅಕ್ಷತೆಗಳಿಂದ ಪೂಜೆಗೊಳ್ಳುವ ವಿಷ್ಣು ಕಾರಣ ಆದಕ್ಕೆ ಅಕ್ಷಯಾ ಎಂಬ ಹೆಸರು ಬಂದಿದೆ. ಆದ್ದರಿಂದ ಸಾಧಕನಾದವನು ಅಕ್ಷತೆಗಳಿಂದ ವಿಷ್ಣುವನ್ನು ಪೂಜೆ ಮಾಡಿ, ಅನಂತರ ಸಮರ್ಪಿತವಾದ ಅಕ್ಷತೆಗಳಿಂದ ತಾನು ಸ್ನಾನವನ್ನು ಮಾಡಬೇಕು.

## ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು

ವಿಪ್ರೇಷು ದತ್ವಾ ತಾನೇವ ತಥಾ ಸಕ್ತೂನ್ ಸುಸಂಸ್ಕೃತಾನ್ ।
ಯಥಾನ್ನಭುಜ್ ಮಹಾಭಾಗಃ ಫಲಮಕ್ಷಯಮಶ್ನುತೇ ॥೫॥

ಬ್ರಾಹ್ಮಣರಿಗೂ ಕೂಡ ಅದೇ ಅಕ್ಷತೆಗಳನ್ನು ನೀಡಬೇಕು. ಚೆನ್ನಾಗಿ ಹುರಿದ ಹುರಿಹಿಟ್ಟನ್ನು ಬ್ರಾಹ್ಮಣರಿಗೆ ದಾನ ಮಾಡಬೇಕು. ವಿಧಿಪ್ರಕಾರವಾಗಿ ಭೋಜನ ಮಾಡಿಸಿ ತಾನೂ ಭೋಜನವನ್ನು ಮಾಡಬೇಕು. ಇದರಿಂದ ಅಕ್ಷಯ ಫಲವನ್ನು ಪಡೆಯುತ್ತಾನೆ.

## ಅಕ್ಷತೆ ಕಾಳುಗಳಿಂದ ಭಗವಂತನನ್ನು ಪೂಜಿಸಬಹುದೇ? ಒಂದು ವಿಮರ್ಶೆ

'ಅಕ್ಷತ್ತೈಃ ಪೂಜ್ಯತೇ ವಿಷ್ಣುಸ್ತೇನ ಸಾಪ್ಯಕ್ಷಯಾ ಸ್ಮೃತಾ' ಎಂಬ ಈ ಶ್ಲೋಕವು ಅಕ್ಷತೆ ಕಾಳುಗಳಿಂದ ವಿಷ್ಣುವು ಪೂಜೆಗೊಳ್ಳಲ್ಪಡುತ್ತಾನೆ. ಆದ್ದರಿಂದಲೇ ಇದಕ್ಕೆ ಅಕ್ಷಯ-

ತೃತೀಯಾ ಎಂಬ ಹೆಸರು ಪ್ರಾಪ್ತವಾಗಿದೆ ಎಂಬುದಾಗಿ ಈ ಶ್ಲೋಕವು ಹೇಳುತ್ತಿದೆ. ಆದರೆ ಸಂಪ್ರದಾಯದಲ್ಲಿ ಅನೇಕರು ಅಕ್ಷತೆಕಾಳುಗಳನ್ನು ಭಗವಂತನಿಗೆ ಏರಿಸಬಾರದು ಎಂದು ಹೇಳುತ್ತಾರೆ. ಗುರುಗಳಿಗೆ ಮಾತ್ರ ಅಥವಾ ಗುರುಗಳ ಪಾದಗಳಿಗೆ ಮಾತ್ರ ಅಕ್ಷತೆ ಕಾಳುಗಳನ್ನು ಸಮರ್ಪಿಸಬೇಕು ಎಂಬ ಸಂಪ್ರದಾಯವನ್ನು ಅನುಷ್ಠಾನ ಮಾಡುತ್ತಿದ್ದಾರೆ. ಇದು ಎಷ್ಟು ಸರಿ ಎಷ್ಟು ತಪ್ಪು ಎಂಬುದನ್ನು ಈಗ ವಿಮರ್ಶಿಸೋಣ.

''ನಾಕ್ಷತ್ಯೆರರ್ಚಯೇದ್ ವಿಷ್ಣುಂ ನ ತುಲಸ್ಯಾ ಗಣಾಧಿಪಮ್'' ಎಂಬ ಶ್ಲೋಕವೇ ಈ ಸಂಪ್ರದಾಯಕ್ಕೆ ಬೀಜಭೂತವಾಗಿದೆ. ಆದರೆ ಇಲ್ಲಿರುವ ಅಕ್ಷತೈಃ ಎಂಬ ಪದಕ್ಕೆ ಅಕ್ಷತೆ ಕಾಳುಗಳು ಎಂದರ್ಥವಲ್ಲ. ಏಕೆಂದರೆ, ರುಗ್ಮಿಣೀಶವಿಜಯದ ವ್ಯಾಖ್ಯಾನವನ್ನು ನೋಡಿದಾಗ ಇಲ್ಲಿರುವ ಅಕ್ಷತಾ ಎಂಬ ಪದವು ಅಕ್ಷತೆ ಕಾಳುಗಳನ್ನು ಹೇಳುತ್ತಿಲ್ಲ. ಅಕ್ಷತಾ ಎಂಬ ಹೂವನ್ನು ಹೇಳುತ್ತಿದೆ ಎಂದು ಸ್ಪಷ್ಟವಾಗುತ್ತದೆ. 'ಯಾ ವೈ ಚಂಪಕ' ಇತ್ಯಾದಿ ಶ್ಲೋಕದಲ್ಲಿ ಲಕ್ಷ್ಮೀದೇವಿಯು ನಾರಾಯಣನಿಗೆ ಸಮರ್ಪಿಸುವ ಮಾಲೆಯಲ್ಲಿ ಇತರ ದೇವತೆಗಳಿಗೆ ನಿಷಿದ್ಧವಾದ ಹೂವುಗಳಿದ್ದವು. ಆದರೆ ಶ್ರೀಹರಿಗೆ ನಿಷಿದ್ಧವಾದ ಯಾವುದೇ ಹೂವುಗಳು ಇರಲಿಲ್ಲ ಎಂಬುದಾಗಿ ವಾದಿರಾಜತೀರ್ಥ-ಶ್ರೀಪಾದರು ವರ್ಣಿಸಿದ್ದಾರೆ. ಈ ಸಂದರ್ಭದಲ್ಲಿ ವ್ಯಾಖ್ಯಾನ ಮಾಡುವಾಗ 'ನಾಕ್ಷತ್ಯೆರರ್ಚಯೇದ್ ವಿಷ್ಣುಂ ಇತ್ಯುಕ್ತಾಕ್ಷತಾಯಾಃ ಮಾಲಾಯಾಂ ಅಪ್ರವೇಶಾಚ್ಚ' ಎಂಬುದಾಗಿ ವ್ಯಾಖ್ಯಾನಕಾರರು ಬರೆಯುತ್ತಾರೆ. ಸ್ತ್ರೀಲಿಂಗದಲ್ಲಿರುವ ಅಕ್ಷತಾಶಬ್ದವು ಅಕ್ಷತಾ ಎಂಬ ಹೂವನ್ನೇ ಹೇಳುತ್ತದೆ ಹೊರತು ಅಕ್ಷತೆ ಕಾಳುಗಳನ್ನು ಹೇಳುತ್ತಿಲ್ಲ. ಅಕ್ಷತೆ ಕಾಳುಗಳು ಮಾಲೆಯಲ್ಲಿ ಸೇರಲು ಸಾಧ್ಯವೂ ಇಲ್ಲ. ಹಾಗೇನಾದರೂ ನಿಷೇಧ ಮಾಡಿದರೆ ಅಪ್ರಸಕ್ತ ನಿಷೇಧ ಮಾಡಿದಂತಾಗುತ್ತದೆ. 'ವಿಷ್ಣುರ್ನಾರ್ಚಸ್ತಥಾಕ್ಷತೈಃ' ಎಂಬ ಪ್ರಮಾಣಶ್ಲೋಕದಲ್ಲಿರುವ ಹಾಗೂ 'ನಾಕ್ಷತ್ಯೆರರ್ಚಯೇದ್ ವಿಷ್ಣುಂ' ಎಂಬ ಪ್ರಮಾಣಶ್ಲೋಕದಲ್ಲಿರುವ ಅಕ್ಷತಾ ಎಂಬ ಪದವೂ ಕೂಡ ಪುಷ್ಪವನ್ನೇ ನಿಷೇಧ ಮಾಡುತ್ತಿದೆ. ಏಕೆಂದರೆ ಅಕ್ಷತಾಯಾಂ ಭವಂ ಅಕ್ಷತಮ್ ಎಂಬ ವ್ಯುತ್ಪತ್ತಿಯಿಂದ ಅಕ್ಷತ ಎಂಬ ಗಿಡದಲ್ಲಿ ಹುಟ್ಟಿದ ಪುಷ್ಪವು ಅಕ್ಷತಾ ಎಂದು ಕರೆಸಿಕೊಳ್ಳುತ್ತದೆ. ಕರ್ಕಟಶೃಂಗಿ ಎಂಬ ಗಿಡವು ಹಾಗೂ ಅದರ ಪುಷ್ಪವು ನಿಷಿದ್ಧವಾಗಿದೆಯೆಂದು ಧರ್ಮಶಾಸ್ತ್ರದಿಂದ ತಿಳಿಯುತ್ತದೆ. ಆದ್ದರಿಂದ ಅನೇಕ ನಿಷಿದ್ಧಪುಷ್ಪಗಳಲ್ಲಿ ಅಕ್ಷತಾ ಎಂಬ

ಪುಷ್ಪವನ್ನೂ ಕೂಡ ಶಾಸ್ತ್ರವು ನಿಷೇಧ ಮಾಡಿದೆ. ಇಂಥ ಪುಷ್ಪವು ಲಕ್ಷ್ಮೀದೇವಿಯು ಸಮರ್ಪಿಸುವ ಮಾಲೆಯಲ್ಲಿ ಇರಲಿಲ್ಲ. ಉಳಿದ ದೇವತೆಗಳಿಗೆ ನಿಷಿದ್ಧವಾದ ಪರಮಾತ್ಮನಿಗೆ ಅನಿಷಿದ್ಧವಾದ ಹೂವುಗಳಷ್ಟೇ ಆ ಮಾಲೆಯಲ್ಲಿತ್ತು ಎಂಬುದಾಗಿ ರುಕ್ಮಿಣೀಶವಿಜಯದ ಶ್ಲೋಕಕ್ಕೆ ವ್ಯಾಖ್ಯಾನವನ್ನು ಮಾಡಿದ್ದಾರೆ. ಆದ್ದರಿಂದ 'ನಾಕ್ಷತ್ಯೈರರ್ಚಯೇದ್ ವಿಷ್ಣುಂ' ಎಂಬ ಶ್ಲೋಕಕ್ಕೆ ಅಕ್ಷತೆಕಾಳುಗಳಿಂದ ಭಗವಂತನನ್ನು ಪೂಜಿಸಬಾರದು ಎಂದರ್ಥವಲ್ಲ. ಅಕ್ಷತಾ ಎಂಬ ಹೂವಿನಿಂದ ಪೂಜಿಸಬಾರದು ಎಂದೇ ಅರ್ಥ.

ದೇವರ ಪೂಜೆಯಲ್ಲಿ 'ಅಕ್ಷತಾನ್ ಸಮರ್ಪಯಾಮಿ' ಎಂದು ನಿತ್ಯವೂ ನಾವು ಹೇಳುತ್ತೇವೆ. ಇಲ್ಲಿರುವ ಅಕ್ಷತಾ ಶಬ್ದಕ್ಕೂ ಅಕ್ಷತೆಕಾಳುಗಳು ಎಂದೇ ಅರ್ಥ. ನಿತ್ಯವೂ ಷೋಡಶೋಪಚಾರಪೂಜೆಯಲ್ಲಿ ಅಕ್ಷತೆಕಾಳುಗಳನ್ನು ಸಮರ್ಪಿಸಲೇಬೇಕು. ಇಲ್ಲದಿದ್ದರೆ ಹದಿನಾರು ಉಪಚಾರಗಳಲ್ಲಿ ಒಂದು ಪೂಜೆಯನ್ನು ಬಿಟ್ಟಂತಾಗುತ್ತದೆ. ಆದರೆ ಮೈಲಿಗೆಯಲ್ಲಿ ನೀರಿನಿಂದ ಅಕ್ಷತೆಕಾಳುಗಳನ್ನು ತಯಾರು ಮಾಡಿರಬಾರದು. ಪವಿತ್ರವಾದ ತುಪ್ಪ ಮೊದಲಾದವುಗಳನ್ನು ಉಪಯೋಗಿಸಿಯೇ ಅಕ್ಷತೆ ಕಾಳನ್ನು ತಯಾರು ಮಾಡಿಕೊಂಡಿರಬೇಕು. ಎಲ್ಲ ಧಾನ್ಯಗಳಲ್ಲಿ ಶ್ರೇಷ್ಠವಾದದ್ದೇ ಅಕ್ಕಿ. ಅದನ್ನು ತಿನ್ನುತ್ತಲೇ ನಾವು ಜೀವನವನ್ನು ನಡೆಸುತ್ತಿದ್ದೇವೆ. ಇದರಿಂದ ತಯಾರು ಮಾಡಿದ ಅಕ್ಷತೆಗಳನ್ನು ಭಗವಂತನಿಗೆ ಸಮರ್ಪಿಸಿದಾಗ ವಿಶೇಷಫಲವು ಪ್ರಾಪ್ತವಾಗುತ್ತದೆ. ಅಕ್ಷಯತೃತೀಯಾದಿವಸ ವಿಶೇಷವಾಗಿ ಈ ಅಕ್ಷತೆ ಕಾಳುಗಳಿಂದ ಅಷ್ಟೋತ್ತರಶತನಾಮಾವಳಿಯ ಮೂಲಕ ಅರ್ಚನೆಯನ್ನು ಮಾಡಬೇಕು. ಆಗಷ್ಟೇ ಅಕ್ಷಯತೃತೀಯಾ ಎಂಬ ಹೆಸರು ಸಾರ್ಥಕವಾಗುತ್ತದೆ. ಬ್ರಾಹ್ಮಣರಿಗೂ ಕೂಡ ಇದೇ ಅಕ್ಷತೆ ಕಾಳುಗಳನ್ನು ನೀಡಿ ಅವರ ಆಶೀರ್ವಾದವನ್ನು ಪಡೆದುಕೊಳ್ಳಬೇಕು. ಆದ್ದರಿಂದ ಅಕ್ಷತೆಕಾಳುಗಳನ್ನು ಸಮರ್ಪಿಸಬಾರದು ಎಂಬ ವಿಚಾರವನ್ನು ಬಿಟ್ಟು ಭಕ್ತಿಯಿಂದ ನಿತ್ಯವೂ ಅಕ್ಷತೆಕಾಳುಗಳನ್ನು ಭಗವಂತನಿಗೆ ಸಮರ್ಪಿಸಬೇಕು. ಭಗವಂತನಿಗೆ ಸಮರ್ಪಿತವಾದ ಅಕ್ಷತೆಕಾಳುಗಳನ್ನೇ ಗುರುಗಳಿಗೆ ಸಮರ್ಪಿಸಬೇಕು. ನೇರವಾಗಿ ಸಮರ್ಪಿಸಬಾರದು. ಇನ್ನು ಹೆಚ್ಚಿನ ವಿಚಾರದ ಬಗ್ಗೆ ವಿದ್ವಾನ್ ಹಯವದನ ಪುರಾಣಿಕರು ಬರೆದ ಲಕ್ಷ್ಮೀಶೋಭಾನ ಪದದ ವ್ಯಾಖ್ಯಾನವನ್ನು ಓದಬೇಕು.

## ಅಕ್ಷಯತೃತೀಯಾ ಒಂದೇ ಸಾಕು

ಏಕಾಮಪ್ಯಕ್ತವತ್ ಕೃತ್ವಾ ತೃತೀಯಾಂ ವಿಧಿವನ್ನರಃ ।
ಏತಾಸಾಂ ತು ತೃತೀಯಾನಾಂ ಸರ್ವಾಸಾಂ ಫಲಮಶ್ನುತೇ ॥೬॥

ಸಮಸ್ತ ಸಂವತ್ಸರದಲ್ಲಿ ಅಕ್ಷಯತೃತೀಯಾವನ್ನು ವಿಧಿಪ್ರಕಾರವಾಗಿ ಆಚರಣೆ ಮಾಡಿದರೆ ಸಾಕು. ಮನುಷ್ಯನು ಉಳಿದೆಲ್ಲ ತೃತೀಯಾ ವ್ರತಗಳ ಆಚರಣೆಯನ್ನು ಮಾಡಿದ ಫಲವನ್ನು ಪಡೆಯುತ್ತಾನೆ.

## ಅಕ್ಷಯತೃತೀಯಾದಿವಸ ರಾಜಸೂಯಯಾಗದ ಫಲವು ಬರುತ್ತದೆ

ತೃತೀಯಾಯಾಂ ಸಮಭ್ಯರ್ಚ್ಯ ಸೋಪವಾಸೋ ಜನಾರ್ದನಮ್ ।
ರಾಜಸೂಯಫಲಂ ಪ್ರಾಪ್ಯ ಗತಿಮಗ್ರ್ಯಾಂ ಚ ವಿಂದತಿ ॥೭॥

॥ ಇತಿ ಮಾತ್ಸ್ಯೇ ಮಹಾಪುರಾಣೇಽಕ್ಷಯ್ಯತೃತೀಯಾವ್ರತಂ ನಾಮ
ಪಂಚಷಷ್ಟಿತಮೋಽಧ್ಯಾಯಃ ॥

ಉಪವಾಸದಿಂದ ಅಕ್ಷಯತೃತೀಯಾ ದಿವಸ ಜನಾರ್ದನನನ್ನು ಪೂಜೆ ಮಾಡಬೇಕು. ಹಾಗೆ ಮಾಡುವುದರಿಂದ ರಾಜಸೂಯಯಾಗದ ಫಲವನ್ನು ಹೊಂದುತ್ತಾನೆ. ಅಂತಿಮವಾಗಿ ಉತ್ತಮಸ್ಥಾನವನ್ನೇ ಪಡೆಯುತ್ತಾನೆ.

# ಭವಿಷ್ಯಮಹಾಪುರಾಣ

## ಚಂಡಿಕಾದೇವಿಯನ್ನು ಅಕ್ಷಯತೃತೀಯಾದಿವಸ ಪೂಜಿಸಬೇಕು

ಏವಂ ವೈಶಾಖಮಾಸೇ ತು ಸೋಪವಾಸಾತ್ ಜಿತೇಂದ್ರಿಯಃ ।
ಪೂಜಯೇತ್ ಚಂಡಿಕಾದೇವೀಂ ಮಧುಕಾನಿ ನಿವೇದಯೇತ್ ॥

ವೈಶಾಖಮಾಸದ ಶುಕ್ಲಪಕ್ಷದ ತೃತೀಯಾ ದಿವಸ ಉಪವಾಸವಿದ್ದು, ಚಂಡಿಕಾದೇವಿಯನ್ನು ಪೂಜಿಸಬೇಕು. ಮತ್ತು ಅತ್ಯಂತ ಮಧುರವಾದ ಮಿಠಾಯಿ ಮೊದಲಾದ ಭಕ್ಷಗಳನ್ನು ಶ್ರೀದೇವಿಗೆ ನೈವೇದ್ಯ ಮಾಡಬೇಕು.

**ಟಿಪ್ಪಣಿ** – ದುರ್ಗೆಗೆ ಚಂಡಿಕಾ ಎಂಬ ಹೆಸರಿದೆ. ಅಕ್ಷಯತೃತೀಯಾ ದಿವಸ ದುರ್ಗೆಯ ಅಂತರ್ಯಾಮಿಯಾದ ಭಗವಂತನನ್ನು ಪೂಜೆ ಮಾಡುವುದರಿಂದ ಎಲ್ಲ ಅನಿಷ್ಟಗಳು ಪರಿಹಾರವಾಗುತ್ತವೆ. ಮತ್ತು ಸಂಪತ್ತು ಮೊದಲಾದವುಗಳು ದೊರೆಯುತ್ತವೆ. ಚಾಂದ್ರಾಯಣ ಮೊದಲಾದ ವ್ರತಗಳನ್ನು ಆಚರಿಸಿದ ಫಲವೂ ದೊರೆಯುತ್ತದೆ.

## ಉದಕಪೂರ್ಣಕುಂಭವನ್ನು ದಾನ ಮಾಡಬೇಕು

ಗೃಹಮಾಗತ್ಯ ಕರಕಾನ್ ಅನ್ನಾನ್ ಉದಕಸಂಯುತಾನ್ ।
ಅಂಬುಪೂರ್ಣಾನ್ ಗೃಹೇ ಕುಂಭಾನ್ ಕ್ರಮಾನ್ನಿಃಶೇಷತಸ್ತದಾ ॥೭॥

ಅನಂತರ ಅವನು ಮನೆಗೆ ಬಂದು ಉದಕಪೂರಿತವಾದ ಕಮಂಡಲುವನ್ನು ದಾನ ಮಾಡಿದನು. ಅನ್ನವನ್ನು, ಉದಕಪೂರ್ಣವಾದ ಕುಂಭವನ್ನು ಇನ್ನೂ ಅನೇಕ ಪದಾರ್ಥಗಳನ್ನು ಕ್ರಮವಾಗಿ ದಾನ ಮಾಡಿದನು.

ಒಬ್ಬ ವೈಶ್ಯನು ಅಕ್ಷಯತೃತೀಯಾದಂದು ಅನೇಕ ದಾನಗಳನ್ನು ಮಾಡಿದನು. ಇದರ ಫಲವಾಗಿ ಬಹು ದೊಡ್ಡ ರಾಜನಾಗಿ ಹುಟ್ಟಿದನೆಂಬ ಕಥೆಯನ್ನು ಈ ಶ್ಲೋಕದಿಂದ ತಿಳಿದುಕೊಳ್ಳಬೇಕು. ಈ ಕಥೆಯೇ ಮುಂದೊರೆಯುತ್ತದೆ.

## ಅಕ್ಷಯತೃತೀಯಾದಿವಸ ಮಾಡಬೇಕಾದ ದಾನಗಳು

ಯವಗೋಧೂಮಚಣಕಸಕ್ತುದಧ್ಯೋದನಂ ತಥಾ ।
ಇಕ್ಷುಕ್ಷೀರವಿಕಾರಾಂಶ್ಚ ಸಹಿರಣ್ಯಾಂಶ್ಚ ಶಕ್ತಿತಃ ॥೮॥

ಭತ್ತ, ಗೋಧಿ, ಕಡಲೆ, ಹಿಟ್ಟು, ಮೊಸರನ್ನ, ಕಬ್ಬು, ಬೆಲ್ಲ, ಸುವರ್ಣ, ಹಾಲಿನ ವಿಕಾರಗಳಾದ ತುಪ್ಪ ಮೊದಲಾದವುಗಳು ಇವುಗಳನ್ನು ತನ್ನ ಶಕ್ತಿಗೆ ಅನುಸಾರಿಯಾಗಿ ದಾನಮಾಡಿದನು.

## ಹೆಂಡತಿ ತಡೆದರೂ ದಾನ ಮಾಡಿದನು

ಶುಚಿಃ ಶುದ್ಧೇನ ಮನಸಾ ಬ್ರಾಹ್ಮಣೇಭ್ಯೋ ದದೌ ವಣಿಕ್ ।
ಭಾರ್ಯಯಾ ವಾರ್ಯಮಾಣೋऽಪಿ ಕುಟುಂಬಾಸಕ್ತಚಿಂತಯಾ ॥೯॥

ಶುಚಿರ್ಭೂತನಾಗಿ ಶುದ್ಧವಾದ ಮನಸ್ಸಿನಿಂದ ಆ ವೈಶ್ಯನು ಬ್ರಾಹ್ಮಣರಿಗೆ ಮೇಲೆ ಹೇಳಿದ್ದೆಲ್ಲವನ್ನೂ ದಾನ ಮಾಡಿದನು. ಅವನ ಹೆಂಡತಿಯು ತನ್ನ ಕುಟುಂಬದ ಪೋಷಣೆಗಾಗಿ ಈ ಪದಾರ್ಥಗಳು ಬೇಕು ಎಂದು ತಡೆಯಲ್ಪಡುತ್ತಿದ್ದರೂ ಆ ವ್ಯಾಪಾರಿಯು ಶುದ್ಧ ಮನಸ್ಸಿನಿಂದ ಬ್ರಾಹ್ಮಣರಿಗೆ ದಾನ ಮಾಡಿದನು.

## ವೈಶ್ಯನಿಗೆ ಧರ್ಮಾರ್ಥಕಾಮಗಳ ಸಿದ್ಧಿ

ತಾವತ್ಸ ಚ ಸ್ಥಿತಃ ಸತ್ವೇ ಮತ್ವಾ ಸರ್ವಂ ವಿನಶ್ವರಮ್ ।
ಧರ್ಮಾರ್ಥಕಾಮಸಕ್ತಸ್ತು ಕಾಲೇನ ಬಹುನಾ ತತಃ ॥೧೦॥

ಆ ವೈಶ್ಯನು ಹೆಚ್ಚು ಸಾಧಕನಾಗಿರಲಿಲ್ಲ. ಹೆಚ್ಚಿನ ಜ್ಞಾನವನ್ನೂ ಕೂಡ ಹೊಂದಿರ-ಲಿಲ್ಲ. ಆದರೆ ಎಲ್ಲ ಪದಾರ್ಥಗಳೂ ನಶ್ವರವಾಗಿವೆ. ಅಕ್ಷಯತೃತೀಯಾ ದಿವಸ ಇವುಗಳನ್ನು ದಾನಮಾಡಬೇಕೆಂದಷ್ಟೇ ತಿಳಿದುಕೊಂಡಿದ್ದನು. ಅನಂತರ ಧರ್ಮ ಅರ್ಥ ಕಾಮಗಳೆಂಬ ಪುರುಷಾರ್ಥಗಳನ್ನು ಮುಂದೆ ಸಾಧಿಸಿದನು.

## ಅಕ್ಷಯತೃತೀಯಾ ದಾನ ಮಾಡಿದ್ದರ ಫಲ

ಜಗಾಮ ಪಂಚತ್ವಮಸೌ ವಾಸುದೇವಂ ಸ್ಮರನ್ ಮುಹುಃ ।
ತತಃ ಸ ಕ್ಷತ್ರಿಯೋ ಜಾತಃ ಕುಶವತ್ಯಾಂ ನರೇಶ್ವರಃ ॥೧೧॥

ಕಾಲಾಂತರದಲ್ಲಿ ಆ ವೈಶ್ಯನು ಮರಣವನ್ನು ಹೊಂದಿದನು. ಮರಣ ಕಾಲದಲ್ಲಿ ಪುನಃ ಪುನಃ ವಾಸುದೇವನನ್ನು ಸ್ಮರಣೆ ಮಾಡಿದನು. ಇದರ ಫಲವಾಗಿ ಮುಂದಿನ ಜನ್ಮದಲ್ಲಿ ಶ್ರೇಷ್ಠಕ್ಷತ್ರಿಯನಾಗಿ ಹುಟ್ಟಿದನು. ಕುಶವತೀ ಎಂಬ ನಗರಕ್ಕೆ ಒಡೆಯನಾದನು.

## ಕ್ಷತ್ರಿಯಜನ್ಮದಲ್ಲಿಯೂ ಅಪಾರವಾಗಿ ದಾನ ಮಾಡಿದನು

ಬಭೂವ ಚಾಕ್ಷಯಾ ತಸ್ಯ ಸಮೃದ್ಧಿರ್ಧರ್ಮನಿರ್ಜಿತಾ ।
ಇಯಾಜ ಸ ಮಹಾಯಜ್ಞೈಃ ಸಮಾಪ್ತವರದಕ್ಷಿಣೈಃ ॥೧೨॥

ಹಿಂದಿನ ಜನ್ಮದಲ್ಲಿ ಅಕ್ಷಯತೃತೀಯಾದಿವಸ ದಾನ ಮಾಡಿದ್ದರ ಫಲವಾಗಿ ಮುಂದಿನ ಕ್ಷತ್ರಿಯ ಜನ್ಮದಲ್ಲಿಯೂ ಅವನಿಗೆ ಅಕ್ಷಯವಾದ ಸಂಪತ್ತು ಪ್ರಾಪ್ತವಾಯಿತು. ಆ ಸಂಪತ್ತಿನಿಂದ ಮಹಾಯಜ್ಞಗಳನ್ನು ಆಚರಿಸಿದನು. ಅದರಲ್ಲಿ ಬ್ರಾಹ್ಮಣರಿಗೆ ಯಥೇಚ್ಛವಾಗಿ ದಕ್ಷಿಣೆಯನ್ನು ದಾನ ಮಾಡಿದನು.

## ಕ್ಷತ್ರಿಯಜನ್ಮದಲ್ಲಿಯೂ ಅಕ್ಷಯತೃತೀಯಾದಂದು ದಾನ ಮಾಡಿದನು

ದದೌ ಗೋಭೂಹಿರಣ್ಯಾದಿದಾನಾನ್ ಅಸ್ಯಾವಪ್ ಅಹರ್ನಿಶವಪ್ ।
ಬುಭುಜೇ ಕಾಮತೋ ಭೋಗಾನ್ ದೀನಾರ್ತಾಂಸ್ತರ್ಪಯನ್ ಜನಾನ್ ॥೧೩॥

ಈ ಅಕ್ಷಯತೃತೀಯಾದಿವಸದಲ್ಲಿ ಆ ರಾಜನು ಹಗಲು ರಾತ್ರಿಯೆಂಬ ಭೇದವಿಲ್ಲದೇ ಗೋದಾನ ಮಾಡಿದನು. ಭೂದಾನ ಮಾಡಿದನು. ಹಿರಣ್ಯದಾನವನ್ನೂ ಮಾಡಿದನು. ಅಷ್ಟೇ ಅಲ್ಲದೇ ದರಿದ್ರರಿಗೆ ದುಃಖಿತರಿಗೆ ಅವರವರ ಪೂರೈಕೆಗೆ ಬೇಕಾಗುವ ಪದಾರ್ಥಗಳನ್ನು ನೀಡಿ ತೃಪ್ತಿಪಡಿಸಿದನು. ಇದರ ಫಲವಾಗಿ ತಾನು ಯಥೇಚ್ಛ ಭೋಗವನ್ನು ಅನುಭವಿಸುತ್ತಾ ಸಂತೋಷವನ್ನು ಹೊಂದಿದನು.

## ಅಕ್ಷಯವಾದ ಫಲದ ಅನುಭವ

ತಥಾಪ್ಯಕ್ಷಯಮೇವಾಸ್ಯ ಕ್ಷಯಂ ಯಾತಿ ನ ತದ್ಧನಮ್ ।
ಶ್ರದ್ಧಾಪೂರ್ವಂ ತೃತೀಯಾಯಾಂ ಯದ್ ದತ್ತಂ ವಿಭವಂ ವಿನಾ ॥೧೪॥

ಹಿಂದಿನ ಜನ್ಮದಲ್ಲಿ ತೃತೀಯಾದಿವಸ ಅತ್ಯಂತ ಶ್ರದ್ಧೆಯಿಂದ ಯಾವುದೇ ಅಪೇಕ್ಷೆಯಿಲ್ಲದೆ ದಾನಮಾಡಿದ್ದರ ಫಲವಾಗಿ ರಾಜನು ಇಷ್ಟು ದಾನ ಮಾಡಿದರೂ ಅವನ ಸಂಪತ್ತು ಅಕ್ಷಯವಾಗಿಯೇ ಬೆಳೆಯುತ್ತಿತ್ತು.

## ಅಕ್ಷಯತೃತೀಯಾವ್ರತ ಅನುಷ್ಠಾನ ಕ್ರಮ

ಏತದ್ವ್ರತಂ ಮಯಾಖ್ಯಾತಂ ಶ್ರೂಯತಾಮತ್ರ ಯೋ ವಿಧಿಃ ।
ಉದಕುಂಭಾನ್ ಸ ಕರಕಾನ್ ಸಾನ್ನಸರ್ವರಸೈರ್ಯುತಾನ್ ॥೧೫॥

ಯುಧಿಷ್ಠಿರನೇ! ಅಕ್ಷಯತೃತೀಯಾದಿವಸದ ಮಹಿಮೆಯನ್ನು ನಿನಗೆ ನಾನು ಹೇಳಿರುವೆನು. ಈಗ ಅಕ್ಷಯತೃತೀಯಾವ್ರತವನ್ನು ಹೇಗೆ ಮಾಡಬೇಕೆಂಬುದನ್ನು ಹೇಳುತ್ತೇನೆ. ಕೇಳು. ಈ ವ್ರತದ ಅಂಗವಾಗಿ ಉದಕಕುಂಭ, ಕಮಂಡಲು ಇತ್ಯಾದಿಗಳನ್ನು ದಾನ ಮಾಡಬೇಕು. ಅನ್ನದಾನವನ್ನು ಮಾಡಬೇಕು.

## ಚಿನ್ನವನ್ನು ದಾನ ಮಾಡಿರಿ

ಗ್ರೈಷ್ಮಿಕಂ ಸರ್ವಮೇವಾತ್ರ ಸಸ್ಯದಾನಂ ಪ್ರಶಸ್ಯತೇ ।
ಛತ್ರೋಪಾನತ್ಪ್ರದಾನಂ ಚ ಗೋಭೂಕಾಂಚನವಾಸಸಾಮ್ ॥೧೬॥

ಅಕ್ಷಯತೃತೀಯಾವ್ರತವು ಗ್ರೀಷ್ಮ ಋತುವಿನಲ್ಲಿ ಬರುತ್ತದೆ. ಆ ಋತುವಿನಲ್ಲಿ ಯಾವ ಫಲಗಳು ಸಸ್ಯಗಳು ದೊರಕುತ್ತವೋ ಅವೆಲ್ಲವನ್ನೂ ದಾನ ಮಾಡಬೇಕು. ಮತ್ತು ಛತ್ರಿ, ಪಾದುಕೆ, ಗೋವು, ಭೂಮಿ, ಸುವರ್ಣ, ಬಟ್ಟೆ ಇವುಗಳನ್ನು ದಾನ ಮಾಡಿದರೆ ಬಹಳ ಪುಣ್ಯವು ಬರುತ್ತದೆ.

## ಇಷ್ಟವಾದದ್ದನ್ನೆಲ್ಲ ದಾನ ಮಾಡಬೇಕು

ಯದ್ಯದಿಷ್ಟತಮಂ ಚಾನ್ಯತ್ ದೇಯಮವಿಶಂಕಯಾ ।
ಏತತ್ ತೇ ಸರ್ವಮಾಖ್ಯಾತಂ ಕಿಮನ್ಯತ್ ಶ್ರೋತುಮಿಚ್ಛಸಿ ॥೧೭॥

ಮತ್ತು ತಮಗೆ ಯಾವುದು ಅತ್ಯಂತ ಇಷ್ಟವೋ ಆ ವಸ್ತುವನ್ನು ಸಂಶಯಪಡದೇ ದಾನ ಮಾಡಬೇಕು. ಧರ್ಮರಾಜನೇ! ನಾನು ನಿನಗೆ ಅಂದು ಮಾಡಬೇಕಾದ ಅನುಷ್ಠಾನ ಕ್ರಮವನ್ನು ಸಂಪೂರ್ಣವಾಗಿ ಹೇಳಿರುತ್ತೇನೆ. ನೀನು ಇನ್ನೇನನ್ನು ಕೇಳಲು ಬಯಸುವಿ?

ಅನಾಖ್ಯೇಯಂ ನ ಮೇ ಕಿಂಚಿದಸ್ತಿ ಸ್ವಸ್ತ್ಯಸ್ತು ತೇಽನಘ ॥೧೮॥

ಪಾಪರಹಿತನೇ! ನಿನಗೆ ಹೇಳಬಾರದ್ದೆಂಬುದು ಯಾವುದೂ ನನ್ನಲ್ಲಿಲ್ಲ. ನಿನಗೆ ಮಂಗಳವಾಗಲಿ.

## ಪ್ರತಿಯೊಂದಕ್ಕೂ ಅಕ್ಷಯಫಲವಿದೆ

ಅಸ್ಯಾಂ ತಿಥೌ ಕ್ಷಯಮುಪೈತಿ ಹುತಂ ನ ದತ್ತಂ
ತೇನಾಕ್ಷಯಾ ಚ ಮುನಿಭಿಃ ಕಥಿತಾ ತೃತೀಯಾ ।
ಉದ್ದಿಶ್ಯ ಯತ್ ಸುರಪಿತೄನ್ ಕ್ರಿಯತೇ ಮನುಷ್ಯೈಃ
ತಚ್ಚಾಕ್ಷಯಂ ಭವತಿ ಭಾರತ ಸರ್ವಮೇವ ॥೧೯॥

ಇತಿ ಶ್ರೀಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀಕೃಷ್ಣಯುಧಿಷ್ಠಿರಸಂವಾದೇ
ಅಕ್ಷಯತೃತೀಯಾವ್ರತವರ್ಣನಂ ನಾಮ ತ್ರಿಂಶತ್ತಮೋಽಧ್ಯಾಯಃ ॥

ಈ ಅಕ್ಷಯತೃತೀಯಾದಿವಸ ಆಚರಿಸಲ್ಪಡುವ ಹೋಮ, ದಾನ ಎಲ್ಲವೂ ಕೂಡ ಅಕ್ಷಯಫಲವನ್ನು ನೀಡುತ್ತವೆ. ಆದ್ದರಿಂದ ಈ ತಿಥಿಗೆ ಮುನಿಗಳು ಅಕ್ಷಯತೃತೀಯಾ ಎಂದೇ ಕರೆಯುತ್ತಾರೆ. ಈ ದಿವಸದಲ್ಲಿ ದೇವತೆಗಳನ್ನು ಮತ್ತು ಪಿತೃಗಳನ್ನು ಉದ್ದೇಶಿಸಿ ಯಾವುದೇ ಕರ್ಮವನ್ನು ಆಚರಿಸಿದರೂ ಕೂಡ ಅವುಗಳಿಗೆ ಅಕ್ಷಯವಾದ ಫಲವು ದೊರಕುತ್ತದೆ.

ಇಲ್ಲಿಗೆ ಭವಿಷ್ಯಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಧರ್ಮರಾಜರ- ಸಂವಾದದಲ್ಲಿ ಅಕ್ಷಯತೃತೀಯಾವ್ರತದ ವರ್ಣನೆಯೆಂಬ ೩೦ನೆಯ ಅಧ್ಯಾಯವು ಮುಗಿಯಿತು ॥

* * * * *

## ಭವಿಷ್ಯೋತ್ತರಪುರಾಣದಲ್ಲಿ ಅಕ್ಷಯತೃತೀಯಾವ್ರತ

ತೀರ್ಥೇ ವೈತದ್ದಿನೇ ಸ್ನಾನಂ ತಿಲೈಶ್ಚ ಪಿತೃತರ್ಪಣಮ್ ।
ದಾನಂ ಧರ್ಮಘಟಾದೀನಾಂ ಮಧುಸೂದನಪೂಜನಮ್ ॥

ಅಕ್ಷಯತೃತೀಯಾದಿವಸ ಗಂಗಾದಿತೀರ್ಥಗಳಲ್ಲಿ ಸ್ನಾನ ಮಾಡಬೇಕು. ಎಳ್ಳಿನಿಂದ ಪಿತೃತರ್ಪಣವನ್ನು ನೀಡಬೇಕು. ಉದಕಕುಂಭ ಮೊದಲಾದವುಗಳನ್ನು ದಾನ ಮಾಡಬೇಕು. ಭಗವಂತನ ಪೂಜೆಯನ್ನು ಅತ್ಯಂತ ಭಕ್ತಿಯಿಂದ ಆಚರಿಸಬೇಕು.

## ತುಲಾಮಕರಮೇಷಮಾಸಗಳಲ್ಲಿ ಪ್ರಾತಃ ಸ್ನಾನ ತಪ್ಪಿಸಬಾರದು

ಮಾಧವೇ ಮಾಸಿ ಕುರ್ವೀತ ಮಧುಸೂದನತುಷ್ಟಿದಮ್ ।
ತುಲಾಮಕರಮೇಷೇಷು ಪ್ರಾತಃ ಸ್ನಾನಂ ವಿಧೀಯತೇ ॥

ಮಾಧವ ಮಾಸವೆನಿಸಿದ ಮಾಘಮಾಸದಲ್ಲಿ ತುಲಾಮಾಸ, ಮಕರಮಾಸ ಹಾಗೂ ವೈಶಾಖಮಾಸಗಳಲ್ಲಿ ಬೇಗ ಸ್ನಾನ ಮಾಡಬೇಕು. ಮಧುಸೂದನನ ಪ್ರೀತಿಗಾಗಿ ಅರುಣೋದಯಕಾಲದಲ್ಲಿಯೇ ಸ್ನಾನವನ್ನು ಮಾಡಬೇಕು.

## ವೈಶಾಖಸ್ನಾನದ ಕ್ರಮ

ಹವಿಷ್ಯಂ ಬ್ರಹ್ಮಚರ್ಯಂ ಚ ಮಹಾಪಾತಕನಾಶನಮ್ ।
ವೈಶಾಖಸ್ನಾನನಿಯಮಂ ಬ್ರಾಹ್ಮಣಾನಾಮನುಜ್ಞಯಾ ॥

ಬ್ರಾಹ್ಮಣರ ಅನುಜ್ಞೆಯನ್ನು ಪಡೆದುಕೊಂಡು, ಹವಿಷ್ಪ್ರದಾನ ಹಾಗೂ ಬ್ರಹ್ಮಚರ್ಯಗಳೊಂದಿಗೆ ನಿಯಮಪೂರ್ವಕವಾಗಿ ಮಾಡುವ ವೈಶಾಖಸ್ನಾನವು ಮಹಾಪಾತಕವನ್ನು ನಾಶ ಮಾಡುತ್ತದೆ.

## ಸ್ನಾನಸಂಕಲ್ಪ

ಮಧುಸೂದನಮಭ್ಯರ್ಚ್ಯ ಕುರ್ಯಾತ್ ಸಂಕಲ್ಪಪೂರ್ವಕಮ್ ।
ವೈಶಾಖಂ ಸಕಲಂ ಮಾಸಂ ಮೇಷಸಂಕ್ರಮಣಂ ರವೇಃ ॥
ಪ್ರಾತಃ ಸನಿಯಮಃ ಸ್ನಾಸ್ಯೇ ಪ್ರೀಯತಾಂ ಮಧುಸೂದನಃ ।

ಮಧುಸೂದನನನ್ನು ಮನಸ್ಸಿನಲ್ಲಿಯೇ ಪೂಜಿಸಿ ಸ್ನಾನಸಂಕಲ್ಪವನ್ನು ಮಾಡಬೇಕು. ಸಂಪೂರ್ಣ ವೈಶಾಖಮಾಸದಲ್ಲಿ ರವಿಯು ಮೇಷದಲ್ಲಿದ್ದಾಗ ನಿಯಮಬದ್ಧವಾಗಿ ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡುತ್ತೇನೆ. ಇದರಿಂದ ಮಧುಸೂದನನು ಪ್ರೀತನಾಗಲಿ.

## ಸ್ನಾನವು ನಿರ್ವಿಘ್ನವಾಗಲಿ

ಮಧುಸೂದನಸಂತೋಷಾದ್ ಬ್ರಾಹ್ಮಣಾನಾಮನುಗ್ರಹಾತ್ ।
ನಿರ್ವಿಘ್ನಮಸ್ತು ಮೇ ಪುಣ್ಯಂ ವೈಶಾಖಸ್ನಾನಮನ್ವಹಮ್ ॥

ಮಧುಸೂದನನ ಸಂತೋಷಕ್ಕಾಗಿ ಬ್ರಾಹ್ಮಣರ ಅನುಗ್ರಹದಿಂದ ನಾನು ಸಂಕಲ್ಪ ಮಾಡಿದ ಈ ವೈಶಾಖಸ್ನಾನವು ನಿರ್ವಿಘ್ನವಾಗಿ ಪ್ರತಿದಿನವೂ ಪುಣ್ಯಕರವಾಗಲಿ.

## ಮಾಧವನೇ ಎನ್ನ ಪಾಪಗಳು ಪರಿಹಾರವಾಗಲಿ

ಮಾಧವೇ ಮೇಷಗೇ ಭಾನೌ ಮುರಾರೇ ಮಧುಸೂದನ ।
ಪ್ರಾತಃ ಸ್ನಾನೇನ ಮೇ ನಾಥ ಫಲದಃ ಪಾಪಹಾ ಭವ ॥

ವೈಶಾಖಮಾಸದಲ್ಲಿ ಸೂರ್ಯನು ಮೇಷದಲ್ಲಿರುತ್ತಾನೆ. ಇಂಥ ಒಳ್ಳೆಯ ಪರ್ವಕಾಲದಲ್ಲಿ ಹೇ?ಮುರಾರಿಯೇ! ಮಧುಸೂದನನೇ! ನಾನು ಪ್ರಾತಃಸ್ನಾನವನ್ನು ಮಾಡುತ್ತೇನೆ. ಎಲೈ ಸ್ವಾಮಿಯೇ! ನೀನು ನನಗೆ ಫಲಪ್ರದನಾಗು. ಪಾಪಪರಿಹಾರಕ-ನಾಗು.

## ಯಾವ ತೀರ್ಥವೆಂದು ತಿಳಿಯದೇ ಇದ್ದಾಗ

ಯದಾ ನ ಜ್ಞಾಯತೇ ನಾಮ ತಸ್ಯ ತೀರ್ಥಸ್ಯ ಭೋ ದ್ವಿಜಾಃ ।
ತತ್ರ ಚೋಚ್ಚಾರಣಂ ಕಾರ್ಯಂ ವಿಷ್ಣುತೀರ್ಥಮಿದಂ ತ್ವಿತಿ ॥

ಬ್ರಾಹ್ಮಣರೇ! 'ಇದು ಯಾವ ತೀರ್ಥವೆಂದು ನನಗೆ ತಿಳಿಯದಿದ್ದ ಸಂದರ್ಭದಲ್ಲಿ ಇದನ್ನು ವಿಷ್ಣುತೀರ್ಥವೆಂದು ಉಚ್ಚರಿಸಿರಿ.

ಅಪಿ ಸಮ್ಯಗ್ ವಿಧಾನೇನ ನಾರೀ ವಾ ಪುರುಷೋಽಪಿ ವಾ ।
ಪ್ರಾತಃ ಸ್ನಾತಃ ಸನಿಯಮಃ ಸರ್ವಪಾಪೈಃ ಪ್ರಮುಚ್ಯತೇ ॥

ಪುರುಷನಾಗಲೀ ಸ್ತ್ರೀಯಾಗಲಿ ವಿಧಿಪ್ರಕಾರವಾಗಿ ಪ್ರಾತಃ ಸ್ನಾನವನ್ನು ಮಾಡಿದಾಗ ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ.

ವೈಶಾಖೇ ವಿಧಿವತ್ ಸ್ನಾತ್ವಾ ಭೋಜಯೇದ್ ಬ್ರಾಹ್ಮಣಾನ್ ದಶ ।
ಕೃತ್ಸ್ನಶಃ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥

– ಇತಿ ಭವಿಷ್ಯೇ ವೈಶಾಖಸ್ನಾನವಿಧಿಃ ।

ವೈಶಾಖಮಾಸದಲ್ಲಿ ವಿಧಿಪ್ರಕಾರವಾಗಿ ಸ್ನಾನವನ್ನು ಮಾಡಿ ಹತ್ತು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಆಗ ಎಲ್ಲ ಪಾಪಗಳೂ ಸಂಪೂರ್ಣವಾಗಿ ನಾಶವಾಗುತ್ತವೆ. ಈ ವಿಷಯದಲ್ಲಿ ಸಂಶಯವಿಲ್ಲ.

**ಟಿಪ್ಪಣಿ** – ವೈಶಾಖಸ್ನಾನವು ಅತ್ಯಂತ ವಿಹಿತವಾಗಿದೆ. ಅದರಲ್ಲೂ ಅಕ್ಷಯತೃತೀಯಾದಿವಸ ಸರ್ವಥಾ ವೈಶಾಖಸ್ನಾನವನ್ನು ತಪ್ಪಿಸಬಾರದು. ಅದಕ್ಕಾಗಿ ಈ ಪ್ರಕರಣವನ್ನು ಇಲ್ಲಿ ನೀಡಲಾಗಿದೆ.

## ಪರಶುರಾಮಜಯಂತಿಯನ್ನು ಯಾವತ್ತು ಮಾಡಬೇಕು?

ಯಾವುದೇ ತಿಥಿಯ ಸಂಪರ್ಕವಿಲ್ಲದೇ ಇದ್ದರೆ ಅಕ್ಷಯತೃತೀಯಾದಂದೇ ಪರಶುರಾಮಜಯಂತಿಯನ್ನು ಆಚರಿಸಬೇಕು. ರಾತ್ರಿಯ ವೇಳೆ ತದಿಗೆಯು ಇಲ್ಲದೇ ಇದ್ದರೆ ಹಿಂದಿನ ದಿವಸವೇ ಪರಶುರಾಮಜಯಂತಿಯನ್ನು ಆಚರಿಸಬೇಕು. ಪರಶು-ರಾಮದೇವರು ತೃತೀಯಾತಿಥಿಯಲ್ಲಿ ಅವತರಿಸಿದ್ದಾರೆ.

## ಅಕ್ಷಯತೃತೀಯಾದಿವಸ ಚಿನ್ನವನ್ನು ಕೊಂಡುಕೊಳ್ಳುವುದು ಎಷ್ಟು ಸರಿ?

ಅಕ್ಷಯತೃತೀಯಾ ದಿವಸ ಚಿನ್ನವನ್ನು ಕೊಂಡುಕೊಳ್ಳಲೇ ಬೇಕು ಎಂಬ ಹೊಸ ವಿಧಿಯೇ ಪ್ರಾರಂಭವಾಗಿದೆ. ಕೆಲವರು ಸಾಲಮಾಡಿಯಾದರೂ ಚಿನ್ನವನ್ನು ಕೊಂಡುಕೊಳ್ಳುತ್ತಾರೆ. ಇನ್ನು ಕೆಲವರು ಕೊಂಡುಕೊಳ್ಳದಿದ್ದರೆ ದಾರಿದ್ರ್ಯಬರುತ್ತದೆಂಬ ದೃಷ್ಟಿಯಿಂದ ಹೆದರಿ ಚಿನ್ನವನ್ನು ಖರೀದಿಸುತ್ತಾರೆ. ಇನ್ನು ಕೆಲವರು ಕೂಡಿಡುವುದಕ್ಕಾಗಿ ಖರೀದಿಸುತ್ತಾರೆ.

ಆದರೆ ಅಕ್ಷಯತೃತೀಯಾದಿವಸ ಚಿನ್ನವನ್ನು ಕೊಂಡುಕೊಳ್ಳಬೇಕೆಂದು ಎಲ್ಲಿಯೂ ಹೇಳಿಲ್ಲ. ಕೊಂಡುಕೊಳ್ಳುವ ಅವಶ್ಯಕತೆಯೂ ಇರುವುದಿಲ್ಲ. ಚಿನ್ನವನ್ನು ಖರೀದಿಸಿ ಬ್ರಾಹ್ಮಣರಿಗೆ ದಾನಮಾಡುವುದು ತಪ್ಪಲ್ಲ. ಖರೀದಿಸಿ ಸುಮ್ಮನೇ ಇಟ್ಟುಕೊಳ್ಳುವುದು ತಪ್ಪು. ಮನುಷ್ಯನು ಎಂದೂ ಅತಿಯಾಸೆಗೆ ಪಾತ್ರನಾಗಬಾರದು. ಹಾಗೆ ಅತಿ ಆಸೆಗೆ ಪಾತ್ರನಾದಾಗ ಕೂಡಿಡುವ ಆಸೆಯನ್ನು ಬೆಳೆಸಿಕೊಳ್ಳುತ್ತಾನೆ. ಕೂಡಿಡುವುದು ಧರ್ಮಶಾಸ್ತ್ರದ ಪ್ರಕಾರ ತಪ್ಪು. ಆದ್ದರಿಂದ ಚಿನ್ನವನ್ನೂ ಕೂಡ ಕೂಡಿಡುವುದಕ್ಕಾಗಿ ಕೊಂಡುಕೊಳ್ಳುವುದು ತಪ್ಪಾಗುತ್ತದೆ. ತನ್ನ ಮತ್ತು ತನ್ನವರ ವಿಹಿತ ಉಪಯೋಗಕ್ಕಾಗಿ, ಅಥವಾ ದಾನಮಾಡುವುದಕ್ಕಾಗಷ್ಟೇ ಅಂದು ಖರೀದಿಸಬಹುದು. ಅಕ್ಷಯತೃತೀಯಾದಿವಸ ಎಷ್ಟು ದಾನ ಮಾಡುತ್ತೇವೋ ಅಷ್ಟು ಅಭಿವೃದ್ಧಿಯಾಗುತ್ತದೆಂದು ಶಾಸ್ತ್ರಗಳು ತಿಳಿಸುತ್ತಿವೆ. ಆದ್ದರಿಂದ ಪ್ರತಿಯೊಬ್ಬರೂ ತಮಗೆ ಅಭಿರುಚಿಯಿರುವ ಪದಾರ್ಥಗಳನ್ನು ಯೋಗ್ಯರಿಗೆ ದಾನ ಮಾಡಬೇಕು. ಈ ಕ್ರಮದಲ್ಲಿ ಅಕ್ಷಯತೃತೀಯಾ ಪರ್ವಕಾಲವನ್ನು ಸಾರ್ಥಕ ಪಡಿಸಿಕೊಳ್ಳಬೇಕು.

## ಉದಕಕುಂಭದಾನ ಮಾಡುವಾಗ ಹೇಳಬೇಕಾದ ಮಂತ್ರ

ಏಷ ಧರ್ಮಘಟೋ ದತ್ತೋ ಬ್ರಹ್ಮವಿಷ್ಣುಶಿವಾತ್ಮಕಃ ।
ಅಸ್ಯ ಪ್ರದಾನಾತ್ ಸಕಲಾ ಮಮ ಸಂತು ಮನೋರಥಾಃ ॥

## ತಂದೆತಾಯಿಯರ ಸದ್ಗತಿಗಾಗಿ ಅಧಿಕಾರಿಗಳು ಮಾಡುವ ಉದಕಕುಂಭದಾನ

ಏಷ ಧರ್ಮಘಟೋ ದತ್ತೋ ಬ್ರಹ್ಮವಿಷ್ಣುಶಿವಾತ್ಮಕಃ ।

ಅಸ್ಯ ಪ್ರದಾನಾತ್ ತೃಪ್ಯಂತು ಪಿತರೋಽಪಿ ಪಿತಾಮಹಾಃ ॥

ಗಂಧೋದಕತಿಲೈರ್ಮಿಶ್ರಂ ಸಾನ್ನಂ ಕುಂಭಂ ಫಲಾನ್ವಿತಮ್ ।

ಪಿತೃಭ್ಯಃ ಸಂಪ್ರದಾಸ್ಯಾಮಿ ಅಕ್ಷಯ್ಯಮುಪತಿಷ್ಠತು ॥

## ಪರಶುರಾಮದೇವರಿಗೆ ಅರ್ಘ್ಯವನ್ನು ನೀಡಿರಿ

ಜಮದಗ್ನಿಸುತೋ ವೀರ ಕ್ಷತ್ರಿಯಾಂತಕರಪ್ರಭೋ ।

ಗೃಹಾಣಾರ್ಘ್ಯಂ ಮಯಾ ದತ್ತಂ ಕೃಪಯಾ ಪರಮೇಶ್ವರ ॥

* * * *

# ಸ್ಕಾಂದಪುರಾಣ ವೈಷ್ಣವಖಂಡದ ಪುರುಷೋತ್ತಮಕ್ಷೇತ್ರ - ಮಾಹಾತ್ಮ್ಯೆಯಲ್ಲಿ ಬರುವ ಅಕ್ಷಯತೃತೀಯಾ ಉತ್ಸವ

ಶ್ರುತದೇವಃ –

ಅಥಾತಃ ಸಂಪ್ರವಕ್ಷ್ಯಾಮಿ ಮಾಹಾತ್ಮ್ಯಂ ಪಾಪನಾಶನಮ್ ।
ಅಕ್ಷಯ್ಯಾಯಾಸ್ತೃತೀಯಾಯಾಃ ಸಿತೇ ಪಕ್ಷೇ ಚ ಮಾಧವೇ ॥೧॥

ಶ್ರುತದೇವನು ಹೇಳುತ್ತಾನೆ – ಇನ್ನು ವೈಶಾಖಮಾಸದ ಶುಕ್ಲಪಕ್ಷದಲ್ಲಿ ಬರುವ ಪಾಪನಾಶಕವಾದ ಅಕ್ಷಯತೃತೀಯಾ ಎಂಬ ತಿಥಿಯ ಮಹಾತ್ಮ್ಯೆಯನ್ನು ವಿಸ್ತಾರದಿಂದ ಹೇಳುವೆನು.

ಯೇ ಕುರ್ವಂತಿ ಚ ತಸ್ಯಾಂ ವೈ ಪ್ರಾತಃಸ್ನಾನಂ ಭಗೋದಯೇ ।
ತೇ ಸರ್ವೇ ಪಾಪನಿರ್ಮುಕ್ತಾ ಯಾಂತಿ ವಿಷ್ಣೋಃ ಪರಂ ಪದಮ್ ॥೨॥

ಯಾರು ಆ ದಿನದಲ್ಲಿ ಸೂರ್ಯೋದಯಕಾಲಕ್ಕೆ ಸರಿಯಾಗಿ ಪ್ರಾತಃಸ್ನಾನವನ್ನು ಮಾಡುವರೋ ಅವರೆಲ್ಲರೂ ಪಾಪಗಳನ್ನು ಕಳೆದುಕೊಂಡು ಮಹಾವಿಷ್ಣುವಿನ ಅತ್ಯಂತ ಶ್ರೇಷ್ಠವಾದ ಲೋಕವನ್ನು ಹೊಂದುವರು.

ದೇವಾನ್ ಪಿತೄನ್ ಮುನೀನ್ ಯಸ್ತು ಕುರ್ಯಾದುದ್ದಿಶ್ಯ ತರ್ಪಣಮ್ ।
ತೇನಾಧೀತಂ ಚ ತೇನೇಷ್ಟಂ ತೇನ ಶ್ರಾದ್ಧಶತಂ ಕೃತಮ್ ॥೩॥

ಯಾವನು ಅಂದು ದೇವತೆಗಳಿಗೂ ಪಿತೃಗಳಿಗೂ ಮಹರ್ಷಿಗಳಿಗೂ ಮನಃಪೂರ್ವಕವಾಗಿ ತರ್ಪಣಗಳನ್ನು ಕೊಡುವನೋ ಅವನ ಅಧ್ಯಯನವು ಮತ್ತು ಯಜ್ಞವು ಸಫಲವಾಗಿ ಒಂದು ನೂರು ಶ್ರಾದ್ಧಗಳನ್ನು ಮಾಡಿದ ಫಲವು ದೊರಕುವುದು.

ಮಧುಸೂದನಮಭ್ಯರ್ಚ್ಯ ಕಥಾಂ ಶೃಣ್ವಂತಿ ಯೇ ನರಾಃ ।
ಅಕ್ಷಯ್ಯಾಯಾಂ ತೃತೀಯಾಯಾಂ ತೇ ನರಾ ಮುಕ್ತಿಭಾಗಿನಃ ॥೪॥

ಅಕ್ಷಯತೃತೀಯಾ

ಅಕ್ಷಯತೃತೀಯಾ ದಿವಸದಲ್ಲಿ ಯಾವ ಮಾನವರು ಮಧುಸೂದನನ ಪೂಜೆ-ಯನ್ನು ಮಾಡಿ ಆತನ ಲೀಲೆಗಳ ಸತ್ಕಥೆಯನ್ನು ಕೇಳುವರೋ, ಅವರು ಮೋಕ್ಷಕ್ಕೆ ಭಾಗಿಗಳಾಗುವರು.

ಯೇ ದಾನಂ ತತ್ರ ಕುರ್ವಂತಿ ಮಧುದ್ವಿಟ್ ಪ್ರೀತಯೇ ಶುಭಮ್ ।
ತದಕ್ಷಯ್ಯಂ ಫಲತ್ಯೇವ ಮಧುಸೂದನಶಾಸನಾತ್ ॥೫॥

ಅಂದು ಯಾರು ಶ್ರೀಕೃಷ್ಣನ ಪ್ರೀತಿಗಾಗಿ ದಾನಗಳನ್ನು ಮಾಡುವರೋ, ಅವರ ದಾನಗಳೆಲ್ಲವೂ ಪರಮಾತ್ಮನ ಅಪ್ಪಣೆಯಂತೆ ಅಕ್ಷಯಫಲಗಳನ್ನು ಕೊಡುವವು.

ದೇವರ್ಷಿಪಿತೃದೈವತ್ಯಾ ತಿಥಿರೇಷಾ ಮಹಾಶುಭಾ ।
ತ್ರಯಾಣಾಂ ತೃಪ್ತಿದಾತ್ರೀ ಚ ಕೃತೇ ಧರ್ಮೇ ಸನಾತನೇ ॥೬॥

ಈ ತಿಥಿಯು ದೇವತೆಗಳಿಗೂ ಮಹರ್ಷಿಗಳಿಗೂ ಪಿತೃದೇವತೆಗಳಿಗೂ ಪ್ರಿಯವಾಗಿ ಅತ್ಯಂತ ಪವಿತ್ರವಾಗಿರುವುದು. ಅಂದು ಸನಾತನಧರ್ಮಗಳನ್ನು ಆಚರಿಸಿದರೆ ಆ ಮೂರುವರ್ಗದವರೂ ಸಂತೋಷವನ್ನು ಹೊಂದುವರು.

ಪ್ರಖ್ಯಾತಿಶ್ಚ ತಿಥೇರಸ್ಯಾಃ ಕೇನ ಚಾಸ್ತಿ ತದಪ್ಯಹಮ್ ।
ವಕ್ಷ್ಯಾಮಿ ನೃಪಶಾರ್ದೂಲ ಸಾವಧಾನಮನಾಃ ಶೃಣು ॥೭॥

ಎಲೈ ರಾಜಶ್ರೇಷ್ಠನೇ! ಈ ಅಕ್ಷಯತೃತೀಯಾ ಆಚರಣೆಯು ಯಾರಿಂದ ಪ್ರಖ್ಯಾತಿ ಹೊಂದಿತು ಎಂಬುದನ್ನು ನಾನು ಹೇಳುವೆನು. ಸಾವಧಾನಮನಸ್ಕನಾಗಿ ಕೇಳು.

ಪುರಾ ಪುರಂದರಸ್ಯಾಽಽಸೀದ್ ಯುದ್ಧಂ ಚ ಬಲಿನಾ ಸಹ ।
ದೇವಾನಾಂ ಚೈವ ದೈತ್ಯಾನಾಂ ದ್ವಂದ್ವಯುದ್ಧಮಭೂತ್ ತತಃ ॥೮॥

ಹಿಂದೆ ದೇವತೆಗಳ ರಾಜನಾದ ಇಂದ್ರನಿಗೆ ದೈತ್ಯರಾಜನಾದ ಬಲಿಯ ಜೊತೆ ಯುದ್ಧವು ಉಂಟಾಯಿತು. ಆಗ ದೇವತೆಗಳಿಗೂ ಹಾಗೂ ದೈತ್ಯರಿಗೂ ಪರಸ್ಪರ ದ್ವಂದ್ವಯುದ್ಧವು ಸಂಭವಿಸಿತು.

ಸ ನಿರ್ಜಿತ್ಯ ಬಲಿಂ ದೈತ್ಯಂ ಪಾತಾಲತಲವಾಸಿನಮ್ ।
ಪುನರ್ಭೂವಂ ಸಮಾಸಾದ್ಯ ಚೋಚಥ್ಯಸ್ಯಾಶ್ರಮಂ ಯಯೌ ॥೯॥

ಆ ದೇವೇಂದ್ರನು ಪಾತಾಳಲೋಕವಾಸಿಯಾದ ದೈತ್ಯರಾಜನಾದ ಬಲಿಯನ್ನು ಜಯಿಸಿದನು. ಪುನಃ ಭೂಲೋಕವನ್ನು ಸೇರಿ ಉಚಥ್ಯಮುನಿಯ ಆಶ್ರಮವನ್ನು ಕುರಿತು ಹೋದನು.

ತತ್ರಾಪಶ್ಯಚ್ಚ ತತ್ಪತ್ನೀಂ ಗುರ್ವಿಣೀಂ ಮಂದಗಾಮಿನೀಮ್ ।
ಚಲಚ್ಛ್ರೋಣಿತಟಾಬದ್ಧಕಾಂಚೀದಾಮ್ನಾ ಸುಮಂಡಿತಾಮ್ ॥೧೦॥

ಅಲ್ಲಿ ಮೆಲ್ಲ ಮೆಲ್ಲನೆ ಓಡಾಡುತ್ತಿರುವ, ಚಲಿಸುತ್ತಿರುವ ನಿತಂಬಗಳ ಮೇಲೆ ಕಟ್ಟಿರುವ ಕಾಂಚೀದಾಮದಿಂದ ಅಲಂಕೃತಳಾಗಿರುವ ಆತನ ಪತ್ನಿಯನ್ನು ಕಂಡನು.

ಕ್ವಣತ್ ಕಂಕಣನಿರ್ಘೋಷಜಿತಮತ್ತಾಲಿಕೋಕಿಲಾಮ್ ।
ವಲ್ಗುಚಿತ್ರಾಂಬರಾಂ ರಾಮಾಂ ಮಂಜುವಾಚಂ ಶುಚಿಸ್ಮಿತಾಮ್ ॥೧೧॥

ತನ್ನ ಕೈಬಳೆಗಳ ಮನೋಹರವಾದ ಧ್ವನಿಯಿಂದ ಆಕೆಯು ಮದಿಸಿದ ದುಂಬಿ-ಗಳನ್ನು ಕೋಗಿಲೆಗಳನ್ನೂ ತಿರಸ್ಕರಿಸುತ್ತಿದ್ದಳು. ಸೂಕ್ಷ್ಮವಾದ ವಿಚಿತ್ರವಸ್ತ್ರವನ್ನುಟ್ಟು ಮೃದುವಾದ ಮಾತುಗಳಿಂದಲೂ ಶುಚಿಯಾದ ಎಳೆನಗೆಯಿಂದಲೂ ಮನೋಹರ-ಳಾಗಿದ್ದಳು.

ಲಸತ್ ಕುಂಭಸ್ಥಲಾಭ್ಯಾಂ ಚ ಕುಚಾಭ್ಯಾಮುಪಶೋಭಿತಾಮ್ ।
ಲಸತ್ ಪದ್ಮಮುಖಾಂ ದಿವ್ಯಾಂ ನೀಲೋತ್ಪಲಸುಲೋಚನಾಮ್ ॥೧೨॥

ಆನೆಗಳ ಕುಂಭಸ್ಥಳಗಳಂತೆ ತೋರುತ್ತಿದ್ದ ಕುಚಗಳಿಂದ ಶೋಭಿಸುವವ-ಳಾಗಿದ್ದಳು. ತಾವರೆಯಂತೆ ಅರಳಿದ ಮುಖಕಮಲವುಳ್ಳವಳಾಗಿ ನೀಲೋತ್ಪಲಗಳನ್ನು ಹೋಲುವ ಕಣ್ಣುಗಳುಳ್ಳವಳಾಗಿ ದಿವ್ಯಸುಂದರಿಯಾಗಿದ್ದಳು.

ಕೇತಕ್ಯುದರಪಾಂಡುಭ್ಯಾಂ ಗಂಡಾಭ್ಯಾಂ ಚ ಮನೋರಮಾಮ್ ।
ಶ್ರಮೋಚ್ಛ್ವಸಂತೀಂ ದೀನಾಕ್ಷೀಂ ಪರ್ಣಶಾಲಾಮುಖೇ ಸ್ಥಿತಾಮ್ ॥೧೩॥

ಆಕೆಯು ಕೇತಕೀಪುಷ್ಪದ ಗರ್ಭದಂತೆ ಬೆಳ್ಳಗಿನ ಮನೋಹರವಾದ ಕೆನ್ನೆಯುಳ್ಳ-ವಳಾಗಿದ್ದಳು. ನೋಡುವವರ ಮನಸ್ಸನ್ನು ಆಕರ್ಷಿಸುತ್ತ, ಶ್ರಮದಿಂದ ನಿಟ್ಟುಸಿರು ಬಿಡುತ್ತಾ ಆ ಪರ್ಣಶಾಲೆಯ ದ್ವಾರದಲ್ಲಿ ಮಲಗಿದ್ದಳು.

## 4. ಗುಳ್ಳಗೊಜ್ಜಿನ ಅನ್ನ

1 ಸೇರು ಸಣ್ಣ ಅಕ್ಕಿ ತೊಳೆದು ಬಸಿಹಾಕಬೇಕು, ಆಮೇಲೆ ತುಪ್ಪ ಕೊತ್ತಂಬರಿ ಬೀಜ, ಒಣಕೊಬ್ಬರಿ, ಲವಂಗ, ಜೀರಿಗೆ, ಮೆಣಸು, ದಾಲಚಿನ್ನಿ, ನಾಗಕೇಸರಿ, ಯಾಲಕ್ಕಿ ಈ ದಿನಸುಗಳು ಇಂಗು, ಒಣಗಿದ ಮೆಣಸಿನಕಾಯಿ, ಅರಿಶಿನ ಕೊನೆ, ಈ ಪ್ರಕಾರ ಒಟ್ಟುಗೂಡಿಸಿ ಜೀರಿಗೆ ತುಪ್ಪದಲ್ಲಿ ಹುರಿದು ಲವಂಗವನ್ನು ಬೇರೆ ಇಟ್ಟುಕೊಂಡು ಪುಡಿ ಮಾಡಿ ನಂತರ ಸೇರು ಅಕ್ಕಿ ಅನ್ನಕ್ಕೆ ವಾದಿರಾಜ ಗುಳ್ಳವನ್ನು ತುಂಡು ಮಾಡಿ ಹಾಕಬೇಕು. ಮೇಲೆ ಹೇಳಿದ ವಸ್ತುಗಳೆಲ್ಲಾ ಪುಡಿ ಮಾಡಿ ಅದರಲ್ಲಿ ಉಪ್ಪು ಪುಡಿ ಮಾಡಿ ಬೆರಸಬೇಕು. ಅದರಲ್ಲಿ ಅರ್ಧ ಮಸಾಲೆಯನ್ನು ತೊಳೆದ ಅಕ್ಕಿಗೆ ಹಾಕಿ , ಬಾಕಿ ಅರ್ಧ ಮಸಾಲಾ ಹುಣಸೆ ಹಣ್ಣು ಗೊಜ್ಜು ಮಾಡಿ ಅದರಲ್ಲಿ ಕಲಸಿ ಅಕ್ಕಿ ಎರಡರಷ್ಟು ನೀರು ಹಾಕಬೇಕು, ಒಲೆಯ ಮೇಲೆ ಇಟ್ಟು ತುಪ್ಪ ಹಾಕಿ ಅದರಲ್ಲಿ ಸಾಸಿವೇ ಹಾಕಿ ಚಿಟಚಿಟ ಅಂದಮೇಲೆ ಅದರಲ್ಲಿ ವಾದಿರಾಜ ಗುಳ್ಳವನ್ನು ಹಾಕಬೇಕು, ಮೇಲೆ ನೀರಿನ ಪಾತ್ರೆ ಮುಚ್ಚಿಡಬೇಕು, ಸ್ವಲ್ಪ ಹೊತ್ತಾದನಂತರ ಹಬೆಬಂದ ಮೇಲೆ ಕದಲಿಸಿ ಸ್ವಲ್ಪ ಘಟ್ಟಿಯಾಗಿರುವಾಗಲೇ ಇಳಿಸಬೇಕು. ಅದೇ ತಪ್ಪಲೆಯಲ್ಲಿಯೇ ತುಪ್ಪ ಹಾಕಿ ಇರಿಸಿಕೊಂಡಿರುವ ಲವಂಗ ಅದರಲ್ಲಿ ಹಾಕಿ ಅಕ್ಕಿ , ಸುರಿದು ಚೆನ್ನಾಗಿ ಕುದಿಸಿ ಕಾಯಿಸಿರುವ ನೀರು ಅದಕ್ಕೆ ಸುರಿಯಬೇಕು. ಸುಮಾರು ಅನ್ನ ಬಿರುಸಾಗಿರುವಾಗ 4 ರಲ್ಲಿ ಒಂದು ಭಾಗ ಅನ್ನ ಬೇರೆ ತೆಗೆದು ಇಟ್ಟುಕೊಂಡು ನಿಂತ ಮೂರು ಭಾಗದಲ್ಲಿ ಈ ವಾದಿರಾಜ ಗುಳ್ಳ ಹಾಕಬೇಕು. ಅದರ ಮೇಲೆ ತೆಗೆದಿಟ್ಟಿದ್ದ ಅನ್ನ ಅದರ ಮೇಲೆ ಹಾಕಿ ಅದರಮೇಲೆ ತುಪ್ಪ ಸುರಿದು ಮುಚ್ಚಿ ಅದರ ಮೇಲೆ ಕೆಂಡ ಸುರಿದು ಕೆಳಗೆ ಬೆಂಕಿಯ ಮೇಲೆ ಇಡಬೇಕು. ಬಡಿಸುವ ಕಾಲದಲ್ಲಿ ಅರ್ಧ ತೆಂಗಿನಕಾಯಿ ತುರಿದು ಅದಕ್ಕೆ ಬೆರಸಬೇಕು.

## 5. ನಾರಿಕೇಳಾನ್ನ

ಮೇಲೆ ಹೇಳಿದ ಒಂದು ಸೇರು ಅಕ್ಕಿ ಅನ್ನ ಮಾಡಿ ಕಲಾಯಿ ಪರಾತದಲ್ಲಿ ಆರಿಸಬೇಕು. ಕೇಸರಿ ಅರದು ಅನ್ನದಲ್ಲಿ ಬೆರೆಸಿ ಕಲಸಬೇಕು. ತೆಂಗಿನಕಾಯಿ ತುರಿದು ಅನ್ನದ ಮೇಲೆ ಹಾಕಿ ಅದರ ಮೇಲೆ 2 ಸೇರು ಸಕ್ಕರೆ ಪಾಕವಾಗಲಿ ಅಥವಾ ಸಕ್ಕರೆಯಾಗಲಿ ಹಾಕಬೇಕು. ಬಾದಾಮಿ ಯಾಲಕ್ಕಿ ಪುಡಿಮಾಡಿ ಹಾಕಬೇಕು. ಕಲಾಯಿ ಪಾತ್ರೆಯಲ್ಲಿ ತುಪ್ಪ ಅದರಲ್ಲಿ ಹಾಕಿ ಒಗ್ಗರಣೆ ಮಾಡಬೇಕು. ಆದರೆ ಲವಂಗದ ಒಗ್ಗರಣೆ

ಅನಂತರ ಸಿದ್ಧವಾಗಿರುವ ಅನ್ನ ಅದರಲ್ಲಿ ಹಾಕಿ ಕುದಿಸಬೇಕು. 2-2 ಸಾರಿ ಕುದಿಬಂದ ಮೇಲೆ ಇಳಿಸಿ ಕೆಂಡದ ಮೇಲೆ ಇದ್ದು ಹೊಗೆ ಬಂದಮೇಲೆ ಇಳಿಸಿ ಕಲ್ಲು ಸಕ್ಕರೆ ತುಂಡುಗಳು ಹಾಕಿ ನೈವೇದ್ಯ ಮಾಡಬೇಕು.

## 6. ಮುದ್ಗಾನ್ನ

ಒಂದು ಸೇರು ಸಣ್ಣ ಅಕ್ಕಿ ಮುಕ್ಕಾಲು ಸೇರು ಬಿಳೀ ಹೆಸರುಬೇಳೆ ಎರಡೂ ಸೇರಿಸಿ ತೊಳೆದು ಇಟ್ಟು 1 ಸೇರು ಇದಕ್ಕೆ 3 ಸೇರು ನೀರು ಹಾಕಿ ಅದರಲ್ಲಿ ಕುದಿ ಬಂದಮೇಲೆ ಈ ಬೆರಸಿನ ಅಕ್ಕಿ, ಸುರಿಯಬೇಕು. ಕುದಿ ಬರುವ ಕಾಲದಲ್ಲಿ ವಾಂಗೀಭಾತಿನ ಮಸಾಲೆ ಅದರಲ್ಲಿ ಹಾಕಬೇಕು. 2ನೇ ಕುದಿ ಬರುವ ವೇಳೆಯಲ್ಲಿ ತುಪ್ಪ ಹಾಕಿ ಸ್ವಲ್ಪ ಮೃದುವಾದ ಕೂಡ್ಲೆ ಇಳಸಿ ಕೆಂಡದ ಮೇಲೆ ಇಟ್ಟು ಬೇರೆ ಪಾತ್ರೆಯಲ್ಲಿ ತುಪ್ಪ ಹಾಕಿ ಅದರಲ್ಲಿ ಹಿಂಗು, ಸಾಸಿವೆ ಚಿಟ ಚಿಟಾ ಅಂದಮೇಲೆ ಅದರಲ್ಲಿ ಈ ಒಗ್ಗರಣೆ ಹಾಕಿ ಮುಚ್ಚಿಡಬೇಕು. ತರುವಾಯ ತೆಂಗಿನಕಾಯಿ ತುರಿದು ಅದಕ್ಕೆ ಹಾಕಿ ಬೆರೆಸಬೇಕು.

## 7. ಚಿತ್ರಾನ್ನ

ಒಂದು ಸೇರು ಅಕ್ಕಿ ಚೆನ್ನಾಗಿ ತೊಳೆದು ಬಸಿ ಹಾಕಿ ಇಟ್ಟದ್ದು ನೀರು ಹಾಕಿ ಚೆನ್ನಾಗಿ ಮರಳಿದ ಮೇಲೆ ಈ ಅಕ್ಕಿ. ಅದರಲ್ಲಿ ಹಾಕಿ ಬಿರುಸಾಗಿರುವಾಗ ಗಂಜಿ ಬಗ್ಗಿಸಿ ಬಿಳೀ ಅಚ್ಚೆಳ್ಳು ಹುರಿದು ಪುಡಿ ಮಾಡಿ ಹುಣಸೇಹಣ್ಣು ಉಪ್ಪು ಒರಳಿನಲ್ಲಿ ಹಾಕಿ ಈ ಎಳ್ಳುಪುಡಿ ಅದರಲ್ಲಿ ಹಾಕಿ ಚೆನ್ನಾಗಿ ರುಬ್ಬಿ ಚಟ್ನಿಯ ಹಾಗೆ ಮಾಡಿ ಅನ್ನದ ಮೇಲೆ ಹಾಕಿ ಮೆಣಸಿನ ಪುಡಿ, ಮೆಂತ್ಯ ಜೀರಿಗೆ ಪುಡಿ ಅದರ ಮೇಲೆ ಹಾಕಿ ಮೆಲ್ಲಗೆ ಕಲಸಿ, ಇಂಗು ಹಾಲು ಹಾಕಿ ಇಡಬೇಕು. ತರುವಾಯ ಬಾಣಲಿಯಲ್ಲಿ ಎಣ್ಣೆ, ಉದ್ದಿನ ಬೇಳೆ, ಮೆಣಸಿನಕಾಯಿ, ಸಾಸಿವೇಕಾಳು ಇವುಗಳೆಲ್ಲವನ್ನೂ ಹಾಕಿ ಚಿಟಚಿಟಾ ಅಂದಮೇಲೆ ಕೆಳಕ್ಕೆ ಇಳಿಸಿ ಈ ಅನ್ನದ ಮೇಲೆ ಸುರಿದು ಎರಡೂ ಕಲೆಬೆರಸಿ ಅದೇ ಬಾಣಲಿಯಲ್ಲಿ ಅರಶಿನ ಪುಡಿ ಕರಿಜೀವಿನ ಸೊಪ್ಪು ಹಾಕಿ ಸ್ವಲ್ಪ ಹೊತ್ತಿನ ಮೇಲೆ ಈ ಅನ್ನಕ್ಕೆ ಹಾಕಿ ಬೆರಸಿ ಮುಚ್ಚಿಡಬೇಕು.

## 8. ನಿಂಬುಕಾನ್ನ

ಒಂದು ಸೇರು ಅಕ್ಕಿ ಚೆನ್ನಾಗಿ ತೊಳೆದು ಇಟ್ಟುಕೊಂಡು ನೀರು ಮರಳಿದ ಮೇಲೆ ಅಕ್ಕಿ ಹಾಕಿ ಸ್ವಲ್ಪ ಬಿರುಸಾಗಿರುವಾಗ ಗಂಜಿ ಬಗ್ಗಿಸಿ ಉದುರುರಾಗಿ ಅನ್ನ

ಇಳಿಸಿಕೊಂಡು ಅದರಮೇಲೆ ತುಪ್ಪ ಹಾಕಿ ಮುಚ್ಚಿಡಬೇಕು, ಕಲಾಯಿ ಪಾತ್ರೆಯಲ್ಲಿ ಅನ್ನ ತೋಡಿ, ಉಪ್ಪು ನಿಂಬೇಹಣ್ಣಿನ ರಸ ಹಸಿಮೆಣಸಿನಕಾಯಿ ಕೊತ್ತಂಬರಿ ಸಣ್ಣಗೆ ಹೆಚ್ಚಿ 2 ತೆಂಗಿನಕಾಯಿ ತುರಿದು ಇವು ಎಲ್ಲಾ ಅನ್ನಕ್ಕೆ ಹಾಕಿ ಕಲಸಿ ಉದ್ದಿನ ಬೇಳೆ ಕಡ್ಲೇಬೇಳೆ, ಒಣಮೆಣಸಿನಕಾಯಿ, ಸಾಸಿವೆ, ಅರಿಶಿನ ಪುಡಿ, ಇಂಗು ಕರಿಬೇವು ಇವುಗಳೆಲ್ಲಾ ಒಗ್ಗರಣೆ ಪಾತ್ರೆಯಲ್ಲಿ ಹಾಕಿ ರಸದಿಂದ ಕಲಸಿಟ್ಟುಕೊಂಡು ಇದ್ದ ಅನ್ನವನ್ನು ಈ ಒಗ್ಗರಣೆಯ ಪಾತ್ರೆಯಲ್ಲಿ ಹಾಕಿ ಚೆನ್ನಾಗಿ ತಿರುಗಿಸಿ ಕೆಳಕ್ಕೆ ಇಳಿಸಿ ಕೆಂಡದಮೇಲೆ ಇಟ್ಟು ಮುಚ್ಚಿಡಬೇಕು.

## 9. ಮಾಷಾನ್ನ

ಮೇಲೆ ಹೇಳಿದ ರೀತಿಯಲ್ಲಿ ಅನ್ನವನ್ನು ಇಳಿಸಿಕೊಂಡು ಕಲಾಯಿ ಪರಾತದಲ್ಲಿ ತೋಡಿ ಇಟ್ಟುಕೊಂಡು 1 ಪಾವು ಉದ್ದಿನ ಬೇಳೆ ತುಪ್ಪದಲ್ಲಿ ಹುರಿದು ಪುಡಿಮಾಡಿ ಅನ್ನದಲ್ಲಿ ಬೆರೆಸಿ ಉಪ್ಪು ಪುಡಿ ಅದರ ಮೇಲೆ ಹಾಕಿ ಹಸಿಮೆಣಸಿನಕಾಯಿ ಕೊತ್ತಂಬರಿ ಒಣಗಿದ ಕೊಬ್ಬರಿ ಕಡ್ಲೆಕಾಯಿ ಬೀಜ ಮೇಲೆ ಹೇಳಿದ ಪ್ರಕಾರ ಒಗ್ಗರಣೆ ಇಟ್ಟು ಅದರಲ್ಲಿ ಈ ಅನ್ನ ಹಾಕಿ ನಾಲ್ಕು ಕಡೆಯಲ್ಲೂ ತಿರಿವಿ ತುಪ್ಪ ಹಾಕಿ ಮುಚ್ಚಿಡಬೇಕು.

## 10. ಘೃತಾನ್ನ

ಮೇಲೆ ಹೇಳಿದ ಒಂದು ಸೇರು ಅಕ್ಕಿ ಅನ್ನಾ ಮಾಡಿ ಇಳಿಸಿಕೊಂಡು ತುಪ್ಪ ಹಾಕಿ ಮುಚ್ಚಿಟ್ಟು ಸ್ವಲ್ಪ ಹೊತ್ತಿನ ಮೇಲೆ ಪರಾತದಲ್ಲಿ ತೋಡಿದ ಮೇಲೆ ಉಪ್ಪು ಹಾಕಿ 10 ಹಪ್ಪಳವೂ ಕಾರೆ ಸಂಡಿಗೆ ಸಹಾ ಕರಿದು ಪುಡಿ ಮಾಡಿ ಅದರಲ್ಲಿ ಸ್ವಲ್ಪ ಎಳ್ಳಿನ ಪುಡಿ ಹಾಕಿ ಅನ್ನದ ಮೇಲೆ ಸುರಿದು ಕಲಕಿ ಮುಚ್ಚಿಡಬೇಕು.

## 11. ಪರಮಾನ್ನ

ಅರ್ಧಪಾವು ಅಕ್ಕಿಯನ್ನು ತುಪ್ಪದಲ್ಲಿ ಕೆಂಪಗೆ ಹುರಿದು ಅಥವಾ ಸ್ವಲ್ಪ ನೆನಸಿ ತುಪ್ಪದಲ್ಲಿ ಕರಿದು ಆ ಬಳಿಕ ಹಸನಾದ ಹಾಲವನ್ನು ತಂದು ಹಿತ್ತಾಳೆ ಪಾತ್ರೆಗೆ ಹಾಕಿ ಅದನ್ನು ಒಲೆಯ ಮೇಲಿಟ್ಟು ಚೆನ್ನಾಗಿ ಕಾಯಿಸಬೇಕು. ಹಾಲು ಅರ್ಧಾವಶೇಷ-ವಾಗುವಂತೆ ಕಾಯಿಸಿದನಂತರ ತುಪ್ಪದಲ್ಲಿ ಹುರಿದ ಅಕ್ಕಿಯನ್ನು ಹಾಕಿ ಚೆನ್ನಾಗಿ ಕಾಯಿಸಿ ಆ ಅಕ್ಕಿ ಹಾಲು ಸಮನಾಗಿ ಹೊಂದಿಕೊಳ್ಳುವಂತೆ ಮಾಡಬೇಕು. ಆ ಬಳಿಕ ಕಸವಿಲ್ಲದ ಹಸನಾದ ಪುಡಿಸಕ್ಕರೆಯನ್ನು ತಕ್ಕಷ್ಟು ಹಾಕಬೇಕು. ಆ ಬಳಿಕ ಹಿತ್ತಾಳೆ ಸೌಟಿನಿಂದ

ಚೆನ್ನಾಗಿ ಕೆದಕಬೇಕು. ಕೇಸರವನ್ನು ಹಾಲು ಹಾಕಿ ಅರೆದು ಅದನ್ನು ಇದಕ್ಕೆ ಹಾಕಬೇಕು. ಸ್ವಲ್ಪ ಪಚ್ಚಕರ್ಪೂರ ಕರಿದ ಲವಂಗ ದ್ರಾಕ್ಷಿ ಬಾದಾಮಿ ಚೂರು ಗೇರುಪೊಪ್ಪಿನ ಚೂರು ಏಲಕ್ಕಿ ಪುಡಿ ಇವನ್ನು ಹಾಕಿ ಹೊಂದಿಸಿ ಕೆಂಡದ ಮೇಲೆ ಮುಚ್ಚಿಡುವುದು.

ನವಣೆಯನ್ನು 3-4 ವೇಳೆ ಚೆನ್ನಾಗಿ ತೊಳೆದು ತುಪ್ಪದಲ್ಲಿ ಹುರಿದು ಅಥವಾ ಕರೆದು ಹಿಂದೆ ಹೇಳಿದಂತೆ ಪಾಯಸ ಮಾಡಬಹುದು. ಅದರಂತೆ ಸಾಮೇ ಅಕ್ಕಿಯಿಂದ ಪಾಯಸ ಮಾಡಬಹುದು.

## 12. ದಧ್ಯನ್ನ

ಒಂದು ಸೇರು ಅಕ್ಕಿ, ಅನ್ನ ಮಾಡಿ ಇಟ್ಟುಕೊಂಡು 1 ಸೇರು ಮೊಸರು ಬೆರೆಸಿ ಕಲಾಯಿ ಪಾತ್ರೆಯಲ್ಲಿ ಅನ್ನಾ ತೋಡಿ ಮೊಸರು ಅದರ ಮೇಲೆ ಸುರಿದು, ಉಪ್ಪು ಹಸೀ ಶುಂಠಿ ಸಣ್ಣಗೆ ಹೆಚ್ಚಿ ಒಗ್ಗರಣೆಯಲ್ಲಿ ಹಾಕಿ ಅನ್ನದಮೇಲೆ ಹಾಕಿ ಕರಿಬೇವು ಅದರಲ್ಲಿ ಹಾಕಿ ಉದ್ದಿನ ಬೇಳೆ ಸಾಸಿವೆ ಮೆಣಸಿನಕಾಯಿ ಒಗ್ಗರಣೆ ಹಾಕಬೇಕು.

## ಬಿಸಿಬೇಳೆಬಾತ್

**ಬೇಕಾಗುವ ಪದಾರ್ಥಗಳು :**

ತೊಗರಿಬೇಳೆ - 500 ಗ್ರಾಂ. ಕೊಬ್ಬರಿ - 1 ಗಿಟುಕು

ಅಕ್ಕಿ - 500 ಗ್ರಾಂ. ಸಾಸಿವೆ - 1 ಚಮಚ

ತುಪ್ಪ - 150 ಗ್ರಾಂ. ಮೆಂತ್ಯ - 1 ಚಮಚ

ಒಣಮೆಣಸಿನ ಕಾಯಿ - 15 ಇಂಗು - 1 ಚಿಟಿಕೆ

ಹುಣಿಸೆಹಣ್ಣು - 25 ಗ್ರಾಂ. ಕೊತ್ತಂಬರಿಸೊಪ್ಪು - ಸ್ವಲ್ಪ

ನಿಂಬೆಹಣ್ಣು - ಸಣ್ಣದು ರುಚಿಗೆ ತಕ್ಕಷ್ಟು ಉಪ್ಪು, ದಾಲ್ಚಿನ್ನಿ, ಚಕ್ಕೆ, ಜೀರಿಗೆ, ಮೆಣಸು ಎಲ್ಲಾ ಸೇರಿ 5 ಗ್ರಾಂ.

**ಮಾಡುವ ರೀತಿ :**

ಕಲಾಯಿ ಮಾಡಿದ ಒಂದು ಪಾತ್ರೆಗೆ ನೀರು ಹಾಕಿ ಒಲೆಯ ಮೇಲಿಡಿ. ನೀರು ಕುದಿದ ಬಳಿಕ ತೊಗರಿಬೇಳೆ ಹಾಕಿ ಬೇಯಿಸಿ. ಬೇಯುವಾಗ ಒಂದು ಚಿಟಿಕೆ ಅರಶಿನ ಹಾಕಿ. ಬೇಳೆ ಅರ್ಧಭಾಗ ಬೆಂದಾಗ ಅಕ್ಕಿ ತೊಳೆದು ಹಾಕಿರಿ. ಇವೆರಡೂ ಕೂಡಿ ಬೇಯುತ್ತಿರುವಾಗ ಹುಣಸೆಹಣ್ಣನ್ನು ಬಿಸಿ ನೀರಲ್ಲಿ ನೆನೆಹಾಕಿ ಅದರ ರಸ ತೆಗೆಯಿರಿ.

ಒಣಮೆಣಸಿನಕಾಯಿ ಜೊತೆ ಮಿಕ್ಕ ಸಾಂಬಾರ್ ಪದಾರ್ಥಗಳನ್ನು ಸೇರಿಸಿ ಬಾಣಲಿಗೆ ಹುರಿದುಕೊಂಡು ಪುಡಿ ಮಾಡಿಕೊಳ್ಳಿ. ಇದರ ಜೊತೆ ತುರಿದ ಕೊಬ್ಬರಿಯನ್ನು ಸೇರಿಸಿ ಮಿಶ್ರಣ ಮಾಡಿ. ಬೇಳೆಯ ಜೊತೆಗೆ ಅಕ್ಕಿ ಕೂಡಿ ಬೆಂದಾಗ ಹುಣಸೆಹಣ್ಣಿನ ರಸ ಸೇರಿಸಿ ಕುಟ್ಟಿ ಪುಡಿ ಹಾಕಿ. ಇದರ ಜೊತೆಗೆ ಉಪ್ಪು ಹಾಕಿ ಚೆನ್ನಾಗಿ ಕೂಡಿಸಿ. ಮಿಶ್ರಣ ಎಲ್ಲಾ ಸೇರಿ ಬೆಂದನಂತರ ಕೆಳಗಿಳಿಸಿಕೊಂಡು ಸಾಸಿವೆ ಒಗ್ಗರಣೆ ಕೊಟ್ಟು, ಕರಿಬೇವು-ಕೊತ್ತುಂಬರಿ, ಇಂಗು ಒಗ್ಗರಣೆ ಸೇರಿಸಿ ಬಿಸಿಬೇಳೆಬಾತ್‌ಗೆ ಮಿಶ್ರಣ ಮಾಡಿರಿ.

## ಭೋಜನದಲ್ಲಿ ಮುಖ್ಯ ಪದಾರ್ಥ ತೊವ್ವೆ

ಒಂದು ಪಾವು ಸೇರು ತೊಗರೀಬೇಳೆ ಚೆನ್ನಾಗಿ ತೊಳೆದು ಆರಹಾಕಬೇಕು. ತುಪ್ಪ ಬೆರೆಸಿ ಚೆನ್ನಾಗಿ ಉಜ್ಜಿ ಅದರಲ್ಲಿ ಹಾಕಬೇಕು, ಒಂದು ಸಾರಿ ವುಕ್ಕು ಬಂದಮೇಲೆ ಅರಿಶಿನ ಪುಡಿ ಹಾಕಬೇಕು, ತರುವಾಯ ಮುಚ್ಚಿಡಬೇಕು, ಆಗಾಗ್ಯೆ ತಿರುವಕೂಡದು. ಯಾಕೆಂದರೆ ತೊವ್ವೆ, ಕಪ್ಪಾಗುತ್ತೆ, ಬೆಂದಮೇಲೆ ಉಪ್ಪು, ತುಪ್ಪ, ಬೆಲ್ಲ, ಹಿಂಗು, ಹಾಕಬೇಕು. ಕಡೇಲಿ ಬೆಂದದ್ದು ನೋಡಿಕೊಂಡು ಹಿತ್ತಾಳೆ ಸೌಟನಿಂದ ಚೆನ್ನಾಗಿ ತಿರವಬೇಕು, ಘಟ್ಟಿಯಾಗಿದ್ದ ಪಕ್ಷದಲ್ಲಿ ಸ್ವಲ್ಪ ಬಿಸಿನೀರು ಹಾಕಬಹುದು. ಈ ಪ್ರಕಾರ ಎಷ್ಟು ತೊವ್ವೆ ಬೇಕೋ ಅಷ್ಟು ಬೇಳೆಹಾಕಿ ಮೇಲೆ ಹೇಳಿದ ಪ್ರಕಾರ ಹೆಚ್ಚಿಸಿಕೊಂಡು ಹಾಕಬೇಕು.

## ಅಪೂಪ

1 ಪಾವು ಗೋಧಿಯ ಹಿಟ್ಟನ್ನು ತುಪ್ಪ ಹಾಕಿ ಹುರಿಯಬೇಕು. ಇದಕ್ಕೆ 1 ಸೇರು ಬಿಳೀ ಸಕ್ಕರೆ ಏಲಕ್ಕಿ ಪುಡಿ, ಲವಂಗದ ಪುಡಿ, ಜಾಕಾಯಿ ಪತ್ರೆ ಪುಡಿ, ಸ್ವಲ್ಪವಾಗಿ, ಹಣ್ಣಿನ ರಸವನ್ನಾಗಲಿ, ಹಾಲನ್ನಾಗಲಿ ಹಾಕಿ ಸ್ವಲ್ಪ ತುಪ್ಪವನ್ನೂ ಸೇರಿಸಿ ಚೆನ್ನಾಗಿ ಕಲೆಸಿಡಬೇಕು. ಸ್ವಲ್ಪ ಕಸ್ತೂರಿ ಬೇಕಾದರೆ ಹಾಕಬಹುದು. ಈ ಹಿಟ್ಟನ್ನು 3-4 ಗಂಟೆಗೆ ಹೆಚ್ಚಾಗಿ ನೆನೆಸಿದರೂ ಸರಿ ಇಲ್ಲದಿದ್ದರೆ ಒಂದು ದಿವಸ ಬಾಳೆಲೆ ಸುತ್ತಿ ಇಟ್ಟಿದ್ದರೂ ಸರಿ, ಆ ಬಳಿಕ ಕೈಗೆ ತುಪ್ಪವನ್ನು ಹಚ್ಚಿಕೊಂಡು ಬಾಳೆಲೆಯ ಮೇಲೆ ಒಂದು ಸಣ್ಣ ನಿಂಬೆಹಣ್ಣಿನ ಗಾತ್ರಕ್ಕೆ ತೆಗೆದುಕೊಂಡು; ಸಣ್ಣನಾಗಿ ಗುಂಡಗೆ ತಟ್ಟಿ, ತುಪ್ಪದಲ್ಲಿ ಕರಿಯಬೇಕು. ಗಸಗಸೆಯಲ್ಲಿ ಈ ಹಿಟ್ಟನ್ನು ಅದ್ದಿ ಕರಿದರೂ, ಕರಿಯಬಹುದು. ವಿಧವಿಧವಾದ ಹಣ್ಣುಗಳ ರಸದಿಂದ ಕಲೆಸಿ ಮಾಡಬಹುದು.

## ಅನರಸ

ಅಕ್ಕಿಯನ್ನು ನೆನೆಸಿ ತೊಳೆದು ಅದನ್ನು ನೆರಳಲ್ಲಿ 1 ಬಟ್ಟೆಯ ಮೇಲೆ ಹರವಬೇಕು. ಆ ಬಳಿಕ ಆ ಅಕ್ಕಿಯನ್ನು ಒರಳಲ್ಲಿ ಹಾಕಿ ಚೆನ್ನಾಗಿ ಕುಟ್ಟಿ ತೆಳ್ಳಗೆ ಇರುವ ಬಟ್ಟೆಯಿಂದ ಶೋಧಿಸಿಕೊಳ್ಳಬೇಕು. ಈ ಹಿಟ್ಟಿನಲ್ಲಿ 1 ಪಾವನ್ನು ತೆಗೆದುಕೊಂಡು ತುಪ್ಪಹಾಕಿ ಹುರಿದು ಸಮ ಸಕ್ಕರೆ ಬೆರೆಸಿ ಹಾಲು ಹಾಕಿ 3-4 ಬಾಳೆ ಹಣ್ಣನ್ನು ಸಹ ಸೇರಿಸಿ ಏಲಕ್ಕಿ ಪುಡಿ ಮುಂತಾದ ಪರಿಮಳ ದ್ರವ್ಯವನ್ನು ಸೇರಿಸಿ ತುಪ್ಪ ಅಥವಾ ಬೆಣ್ಣೆ ಹಾಕಿ ಕಲಿಸಿ ಚೆನ್ನಾಗಿ ಮರ್ದಿಸಿ ಇಡಬೇಕು. ಒಂದು ದಿವಸದವರೆಗೂ ಬಾಳೆಲೆಯಲ್ಲಿ ಸುತ್ತಿಟ್ಟು ಮಾರನೆಯ ದಿವಸ ಸಣ್ಣ ಸಣ್ಣ ಉಂಡೆಗಳನ್ನು ಮಾಡಿ ಬಾಳಲೆಯ ಮೇಲೆ ಅಗಲವಾಗಿ ತಟ್ಟಿ ತುಪ್ಪದಲ್ಲಿ ಕರಿಯಬೇಕು. ಇದನ್ನು ಗಸಗಸೆಯಲ್ಲಿ ಅದ್ದಿ ಕರಿಯಬಹುದು. ಇದು 4-5 ದಿವಸಗಳವರೆಗೂ ಕೆಡದೆ ರುಚಿಯಾಗಿಯೂ ಲಘುವಾಗಿಯೂ ಚೆನ್ನಾಗಿರುವುದು. ಕೆಲವರು ತುಪ್ಪದಲ್ಲಿ ಹಿಟ್ಟನ್ನು ಹುರಿಯದೇ ಮಾಡುತ್ತಾರೆ. ಸಕ್ಕರೆಗೆ ಬದಲಾಗಿ ಬಿಳೀ ಬೆಲ್ಲವನ್ನು ಉಪಯೋಗಿಸಬಹುದು.

## ಮಾವಿನಕಾಯಿ ಚಿತ್ರಾನ್ನ

**ಬೇಕಾಗುವ ಪದಾರ್ಥಗಳು :**

ಅಕ್ಕಿ - 500 ಗ್ರಾಂ.
ತೆಂಗಿನಕಾಯಿ - $^1/_2$ ಭಾಗ
ಉಪ್ಪು - 25 ಗ್ರಾಂ.
ಮಾವಿನಕಾಯಿ - 1
ಇಂಗು - 1 ಚಿಟಿಕೆ
ಒಣಮೆಣಸಿನಕಾಯಿ - 6
ಕಡಲೆಕಾಯಿ, ಕಡಲೆಬೇಳೆ, ಉದ್ದಿನಬೇಳೆ - ಒಟ್ಟು 10 ಗ್ರಾಂ.

**ಮಾಡುವ ರೀತಿ :**

ಅನ್ನ ಉದುರು ಉದುರಾಗಿ ಮಾಡಿಕೊಂಡು ಆರಾಕಿ. ಬಾಣಲಿಗೆ ಎಣ್ಣೆ ಕಾದ ಬಳಿಕ ಒಂದು ಚಮಚ ಸಾಸಿವೆ ಹಾಕಿ ಸಿಡಿಸಿ. ನಂತರ ಕಡಲೆಬೇಳೆ, ಉದ್ದಿನಬೇಳೆ ಇಂಗು ಹಾಕಿ ಹುರಿಯಿರಿ. ಹುರಿದ ಮಿಶ್ರಣವನ್ನು ಪುಡಿ ಮಾಡಿ, ಉಪ್ಪು ಸೇರಿಸಿ ಅನ್ನಕ್ಕೆ ಮಿಶ್ರಣ ಮಾಡಿ. ಮಾವಿನಕಾಯನ್ನು ತುರಿದು, ತೆಂಗಿನಕಾಯನ್ನೂ ತುರಿದು ಅನ್ನಕ್ಕೆ ಬೆರೆಸಿ. ನಂತರ ಎಣ್ಣೆಯಲ್ಲಿ ಕಡಲೆಕಾಯನ್ನು ಹುರಿದು, ಅನ್ನಕ್ಕೆ ಮಿಶ್ರಣ ಮಾಡಿ (ಮಾವಿನಕಾಯಿ ಜಾಸ್ತಿ ಹುಳಿ ಇರಬಾರದು).

## ಖರ್ಜೂರ ಪಾಯಸ

**ಸಾಮಗ್ರಿಗಳು :**

1. ಖರ್ಜೂರ - 1 ಕಪ್
2. ಹಾಲು - 2 ಕಪ್
3. ಬೆಲ್ಲ - 1/4 ಕಪ್
4. ಏಲಕ್ಕಿ ಪುಡಿ - 1/2 ಚಮಚ
5. ಗೋಡಂಬಿ - 1 ಚಮಚ
6. ಬಾದಾಮಿ - 1/2 ಚಮಚ
7. ತುಪ್ಪ

**ಮಾಡುವ ವಿಧಾನ -** ಹೆಚ್ಚಿರುವ ಖರ್ಜೂರವನ್ನು ಹಾಗೂ ಹಾಲನ್ನು ರುಬ್ಬಿಕೊಳ್ಳಿ. ರುಬ್ಬಿದ ಮಿಶ್ರಣಕ್ಕೆ ಮಿಕ್ಕ ಹಾಲನ್ನು ಹಾಕಿ ಕುದಿಸಿರಿ. ನಂತರ ತುಪ್ಪದಲ್ಲಿ ಕರಿದ ಗೋಡಂಬಿ, ಬಾದಾಮಿ, ಏಲಕ್ಕಿ ಪುಡಿಯನ್ನು ಬೆರೆಸಿದರೆ ಖರ್ಜೂರದ ಪಾಯಸ ನೈವೇದ್ಯಕ್ಕೆ ಸಿದ್ಧ.

## ಖಾರಾ ಬೂಂದಿ

**ಬೇಕಾಗುವ ಪದಾರ್ಥಗಳು :**

- ಕಡಲೆಹಿಟ್ಟು - 250 ಗ್ರಾಂ.
- ಖಾರದಪುಡಿ - $^1/_2$ ಚಮಚ
- ಕೊಬ್ಬರಿ - 50 ಗ್ರಾಂ.
- ಉಪ್ಪು, ಕರಿಬೇವು, ಎಣ್ಣೆ
- ಕಡಲೆಕಾಯಿ, ಹುರಿಗಡಲೆ - 50 ಗ್ರಾಂ.

**ಮಾಡುವ ರೀತಿ :**

ಕಡಲೆಹಿಟ್ಟಿಗೆ ಉಪ್ಪು, ಖಾರದಪುಡಿ ಹಾಕಿಕೊಂಡು ನೀರುಹಾಕಿ, ದೋಸೆ ಹಿಟ್ಟಿನಂತೆ ಕಲಸಿಕೊಳ್ಳಿ. ನಂತರ ಒಲೆಯ ಮೇಲೆ ಬಾಣಲಿಯಲ್ಲಿ ಎಣ್ಣೆಹಾಕಿ. ಎಣ್ಣೆ ಕಾದ ಬಳಿಕ ಬೂಂದಿ ತಟ್ಟೆಯ ಸಹಾಯದಿಂದ ತಟ್ಟೆಯ ಮೇಲೆ ಹಿಟ್ಟನ್ನು ಉದುರಿಸುತ್ತಾ ಬಾಣಲಿಯಲ್ಲಿ ಬಿಟ್ಟು ಬೂಂದಿ ಕಾಳುಗಳನ್ನು ಕರಿಯಿರಿ. ಆಮೇಲೆ ಬಾಣಲಿಗೆ ಸ್ವಲ್ಪ ಎಣ್ಣೆ ಹಾಕಿಕೊಂಡು ಕಡಲೆಕಾಯಿ, ಹುರಿಗಡಲೆ, ಕರಿಬೇವು ಹುರಿದುಕೊಂಡು ಬೂಂದಿಗೆ ಸೇರಿಸಿ.

## ಚೌಚೌ

**ಬೇಕಾಗುವ ಪದಾರ್ಥಗಳು :**

- ಕಡಲೆಹಿಟ್ಟು - 750 ಗ್ರಾಂ.
- ಕಡಲೆಕಾಯಿ - 75 ಗ್ರಾಂ.
- ಅಕ್ಕಿಹಿಟ್ಟು - 100 ಗ್ರಾಂ.
- ಹುರಿಗಡಲೆ - 50 ಗ್ರಾಂ.
- ಕೊಬ್ಬರಿ - 1000 ಗ್ರಾಂ.
- ಕರಿಬೇವು - 4 ಗರಿ, ಉಪ್ಪು, ಎಣ್ಣೆ

**ಮಾಡುವ ರೀತಿ :**

ಕಡಲೆಹಿಟ್ಟು, ಅಕ್ಕಿಹಿಟ್ಟು, ಉಪ್ಪು ಮತ್ತು ಒಂದು ಚಿಟಿಕೆ ಖಾರದ ಪುಡಿ ಹಾಕಿ ನೀರು ಸೇರಿಸಿ ಕಲಸಿಕೊಳ್ಳಿ. ಈ ಹಿಟ್ಟಿನಲ್ಲಿ ಸ್ವಲ್ಪ ಚಕ್ಕುಲಿ, ಮಿಕ್ಕ ಹಿಟ್ಟಿಗೆ ಓಂಪುಡಿ ಮಾಡಿಕೊಳ್ಳಿ. ಬಾಣಲಿಗೆ ಸ್ವಲ್ಪ ಎಣ್ಣೆ ಹಾಕಿ ಕಡಲೆಕಾಯಿ ಬೀಜ, ಹುರಿಗಡಲೆ, ಕರಿಬೇವು ಹುರಿದುಕೊಂಡು ಚೌಚೌಗೆ ಸೇರಿಸಿ. ಕೊಬ್ಬರಿಯನ್ನೂ ಸಹ ಸಣ್ಣಗೆ ಹೆಚ್ಚಿ ಸೇರಿಸಿದ ಬಳಿಕ ಚೆನ್ನಾಗಿ ಮಿಶ್ರಣ ಮಾಡಿ.

* * * *

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ಅಕ್ಷಯತೃತೀಯಾ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ
ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ
ಶ್ರೀಲಕ್ಷ್ಮೀಹಯಗ್ರೀವದೇವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ



ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),

ಗಿರಿನಗರ, ಬೆಂಗಳೂರು – 560 085

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಶ್ರಾವಣಮಾಸ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಶ್ರಾವಣಮಾಸ

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯ ಸಿದ್ಧಾಂತ ಪ್ರತಿಷ್ಠಾನ (ರಿ),
ಬೆಂಗಳೂರು

"ಶ್ರಾವಣಮಾಸ" ಶಾರ್ವರಿ ॥ ಶ್ರಾವಣ ॥ ಶುದ್ಧ ಹುಣ್ಣಿಮೆ, (ದಿನಾಂಕ : 3-8- 2020) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಶ್ರೀಶ್ರೀವಿದ್ಯಾಧೀಶತೀರ್ಥಶ್ರೀಪಾದರ ಕರಕಮಲಗಳ ಮೂಲಕ ಭಾರತೀರಮಣಹೃದಯ-ಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : 2020



ಪ್ರಕಾಶಕರು : ಜಗದ್ಗುರು ಶ್ರೀಮಧ್ವಾಚಾರ್ಯ ಸಿದ್ಧಾಂತ ಪ್ರತಿಷ್ಠಾನ (ರಿ)
4171, 2ನೇ ಮೇನ್, ಗಿರಿನಗರ, ಸೀತಾಸರ್ಕಲ್ ಹತ್ತಿರ, ಬೆಂಗಳೂರು-85
ದೂರವಾಣಿ : 9141495120

ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಪ್ರತಿಗಳು : 1000
ಪುಟಗಳು : vi + 136

ಅಕ್ಷರಜೋಡಣೆ : ಸುಬ್ಬಣ್ಣ ಕೆಂಪದಾಳಿಹಳ್ಳಿ ,
9141311280

ಮುಖಪುಟ – ಶ್ರೀವಿಶ್ವಾತ್ಮಾ, ಕಾರ್ತಿಕಜೋಷಿ.

ಮುದ್ರಣ :
ಮುಕ್ತಿಪಥ ಮುದ್ರಣಾಲಯ,
(ಪಿ. ಮಂಜುನಾಥ)
ಬೆಂಗಳೂರು.



ಕಠಿಣ ಪರಿಶ್ರಮದಲ್ಲಿ ಜೀವನ ಸಾಗಿಸಿ ನಮ್ಮನ್ನೆಲ್ಲ ಸಂಸ್ಕಾರವಂತರನ್ನಾಗಿ ಮಾಡಿ ಉತ್ತಮ ವಿದ್ಯೆ ನೀಡಿ ಜೀವನದ ದಾರಿದೀಪರಾದ ದಿ|| ಜಿ. ರಾಮಚಂದ್ರರಾವ್ ಇವರ ಆಶೀರ್ವಾದ ನಮ್ಮ ಮೇಲೆ ನಿರಂತರ ಇರಬೇಕೆಂಬ ಉದ್ದೇಶದಿಂದ ಈ ಜ್ಞಾನಸೇವೆಯನ್ನು ಆಚರಿಸಲಾಗಿದೆ. ಇದರಿಂದ ಪ್ರಾಪ್ತವಾಗುವ ಪುಣ್ಯರಾಶಿಯು ಇವರಿಗೆ ತಲುಪಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀಮತಿ ಗೀತಾ ರಾಮಚಂದ್ರರಾವ್,
ಶ್ರೀ ಜಿ.ಆರ್. ಆನಂದ ಮತ್ತು ಕುಟುಂಬದವರು.

---

## ವಿಷಯಾನುಕ್ರಮಣಿಕೆ

ಶ್ರಾವಣಮಾಸ ಶುಕ್ಲಪಕ್ಷ

* * * *

# ಮುನ್ನುಡಿ

ಶ್ರಾವಣಮಾಸದಲ್ಲಿ ನಿತ್ಯವೂ ಹಬ್ಬಗಳು ಇರುತ್ತವೆ. ಈ ಕೃತಿಯಲ್ಲಿ ವಾರಕ್ಕೆ ಸಂಬಂಧಪಟ್ಟ ಎಲ್ಲ ಹಬ್ಬಗಳನ್ನು, ತಿಥಿಗಳಿಗೆ ಸಂಬಂಧಪಟ್ಟ ಎಲ್ಲ ಹಬ್ಬಗಳನ್ನು ಸಂಗ್ರಹಿಸಲಾಗಿದೆ. ಹೆಂಗಸರಿಗೂ ಗಂಡಸರಿಗೂ ಸಮಾನವಾಗಿ ಈ ಪುಸ್ತಕವು ಉಪಯುಕ್ತವಾಗುತ್ತದೆ. ಶ್ರಾವಣ -ಮಾಸದಲ್ಲಿ ಹೇಳಿಕೊಳ್ಳಬೇಕಾದ ಎಲ್ಲ ಹಾಡುಗಳನ್ನೂ ಇಲ್ಲಿ ನೀವು ಕಾಣಬಹುದು. ಅಷ್ಟೇ ಅಲ್ಲದೇ ಸಂಬಂಧಪಟ್ಟ ಸ್ತೋತ್ರಗಳನ್ನು ಕೂಡ ಇಲ್ಲಿ ಸುಲಭವಾಗಿ ಪಡೆದುಕೊಳ್ಳಬಹುದು. ಮೊದಲು ವಾರಗಳಿಗೆ ಸಂಬಂಧಪಟ್ಟ ಹಾಡುಗಳನ್ನು ಹಾಗೂ ಸ್ತೋತ್ರಗಳನ್ನು ಪೂಜಾ-ವಿಧಾನಗಳನ್ನು ನೀಡಲಾಗಿದೆ. ಆನಂತರ ತಿಥಿಗಳಿಗೆ ಸಂಬಂಧಪಟ್ಟಂತೆ ಹಬ್ಬ ಹರಿದಿನಗಳನ್ನು ಸಂಗ್ರಹಿಸಲಾಗಿದೆ. ಗುರುರಾಯರ ಚರಿತ್ರೆಯನ್ನು ವಿಸ್ತಾರವಾಗಿ ನಿರೂಪಣೆ ಮಾಡಲಾಗಿದೆ. ಸುಮಾರು 500 ಪುಟಗಳಲ್ಲಿ ಮುದ್ರಿಸಬೇಕಾದ ವಿಷಯವನ್ನು ಕೇವಲ 140 ಪುಟಗಳಲ್ಲಿ ಮುದ್ರಿಸುತ್ತಿರುವುದು ಈ ಕೃತಿಯ ವೈಶಿಷ್ಟ್ಯವಾಗಿದೆ. ವಿಷಯಗಳ ಸಂಗ್ರಹದಲ್ಲಿ ತಮ್ಮನ್ನು ತೊಡಗಿಸಿಕೊಂಡ ವಿದ್ವಾನ್ ಸಿ.ಆರ್. ಪ್ರದೀಪಸಿಂಹಾಚಾರ್ಯರಿಗೆ ಅನಂತ ಕೃತಜ್ಞತೆಗಳು. ಈ ಪುಸ್ತಕದ ಡಿ.ಟಿ.ಪಿ. ಕಾರ್ಯದಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡು ಉತ್ತಮಸಲಹೆಗಳನ್ನು ನೀಡಿ ಅನೇಕ ವಿಷಯಗಳ ಯಥಾರ್ಥತೆಗೆ ಕಾರಣರಾದ ಸುಬ್ಬಣ್ಣ. ಕೆಂಪದಾಳಿಹಳ್ಳಿ ಇವರಿಗೂ ಅನಂತ ಅಭಿನಂದನೆಗಳು.

ಶ್ರೀಮತಿ ಗೀತಾ ರಾಮಚಂದ್ರರಾವ್, ಶ್ರೀ ಜಿ.ಆರ್. ಆನಂದ ಮತ್ತು ಕುಟುಂಬದವರು. ಈ ಪುಸ್ತಕದ ಪ್ರಕಟನೆಯ ಸೇವೆಯನ್ನು ದಿ|| ರಾಮಚಂದ್ರ.ಜಿ. ಅವರ ಹೆಸರಿನಲ್ಲಿ ಮಾಡಿರುತ್ತಾರೆ. ಅವರ ಅಪೇಕ್ಷೆಯಂತೆ ಪ್ರಕಟನೆಯಿಂದಾದ ಶ್ರೀಹರಿಯ ಅನುಗ್ರಹವು ಶ್ರೀರಾಮಚಂದ್ರರವರಿಗೆ ದೊರೆಯಲಿ ಮತ್ತು ಇನ್ನೂ ಉತ್ತಮಸೇವೆಯನ್ನು ಶ್ರೀಮತಿ ಗೀತಾ ರಾಮಚಂದ್ರರಾವ್ ಹಾಗೂ ಶ್ರೀ ಜಿ.ಆರ್. ಆನಂದ ಮತ್ತು ಕುಟುಂಬದವರಿಂದ ಕೈಗೊಳ್ಳಲಿ ಅವರಿಗೆ ಅನುಗ್ರಹ ಮಾಡಲಿ ಎಂದು ಈ ಮೂಲಕ ಶ್ರೀಹರಿಯಲ್ಲಿ ಪ್ರಾರ್ಥಿಸುತ್ತೇನೆ. ಇದರ ಸದುಪಯೋಗವನ್ನು ಎಲ್ಲಾ ಹರಿಭಕ್ತರು ಪಡೆದುಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ.

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

|| ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ ||

# ಶ್ರಾವಣ ಮಾಸ

### ಮಾಸನಿಯಾಮಕ - ಧನ್ಯಾಪತಿಶ್ರೀಧರಾಯ ನಮಃ

## ಶ್ರಾವಣಮಾಸದಲ್ಲಿ ಮಾಡಬಹುದಾದ ವ್ರತಗಳು

ಶ್ರಾವಣಮಾಸಕ್ಕೆ ಶ್ರೀಧರರೂಪಿ ಪರಮಾತ್ಮನು ನಿಯಾಮಕನಾಗಿದ್ದಾನೆ. ಶ್ರಾವಣ-ಮಾಸದಲ್ಲಿ ಶ್ರೀಧರನ ಪ್ರೀತಿಗಾಗಿ ಈ ಕೆಳಕಂಡ ಧರ್ಮಗಳನ್ನು ಆಚಸರಿಸತಕ್ಕದ್ದು. 'ಶ್ರಾವಣೇ ವರ್ಜಯೇಚ್ಛಾಕಂ' ಎಂಬ ಪ್ರಮಾಣಾನುಸಾರ ಶ್ರಾವಣ ಮಾಸದಲ್ಲಿ ಶಾಕವ್ರತವನ್ನು ಮಾಡಬೇಕು. ಇದನ್ನು 'ಆಷಾಢ ಶುಕ್ಲ ದ್ವಾದಶಿಯಿಂದ ಶ್ರಾವಣ ಶುಕ್ಲ ದ್ವಾದಶಿಯವರೆಗೆ ಆಚರಿಸತಕ್ಕದ್ದು.

ಸೂರ್ಯನು ಕರ್ಕಾಟಕ ರಾಶಿಯಲ್ಲಿದ್ದಾಗ ಕೇಶಕರ್ತನ (ಕ್ಷೌರ)ವು ನಿಷಿದ್ಧ. ಗೃಹಸ್ಥರು ಸೂರ್ಯನು ಕುಂಭ, ಕರ್ಕಾಟಕ, ಧನೂ ರಾಶಿಗಳಲ್ಲಿದ್ದಾಗ ತಲೆಗೂದಲು ಅಥವಾ ಮೈಮೇಲಿನ ಕೂದಲನ್ನು ಕತ್ತರಿಸಿದರೆ ಯಮನು ಅದನ್ನು ಪಿತೃಗಳಿಗೆ ಉಣಿಸುತ್ತಾನೆ ಎಂದು ಸುಮಂತು ಋಷಿಗಳು ಹೇಳಿರುತ್ತಾರೆ.

ಕರ್ಕರಾಶಿಗೆ ಸೂರ್ಯನು ಪ್ರವೇಶಿಸಿದ ಮೇಲೆ ನದಿಗಳಿಗೆ ಮೂರುದಿನ ರಜೋ ದೋಷವು. ಆಗ ಗಂಗಾದಿ ಮಹಾನದಿಗಳನ್ನು ಬಿಟ್ಟು ಸಣ್ಣನದಿಗಳಲ್ಲಿ ಸ್ನಾನಾದಿಗಳನ್ನು ಮಾಡಬಾರದು. ಆದರೆ ಈ ರಜೋದೋಷವು ತೀರವಾಸಿಗಳಿಗೆ ಅನ್ವಯಿಸುವುದಿಲ್ಲ. ಹಾಗೂ, ಉಪಾಕರ್ಮ, ಸೂರ್ಯಚಂದ್ರಗ್ರಹಣ, ಪ್ರೇತಸ್ನಾನ ಇವುಗಳಿಗೆ ಅನ್ವಯಿಸುವುದಿಲ್ಲ.

ನಕ್ತವ್ರತ– ಶ್ರಾವಣ ಮಾಸದ ಶುಕ್ಲ ಪಕ್ಷ ಪಾಡ್ಯದಿಂದ ಆರಂಭಿಸಿ ಒಂದು ತಿಂಗಳು ಈ ವ್ರತವನ್ನು ಮಾಡಬೇಕು. ನಿತ್ಯವೂ ತ್ರಿಕಾಲಸ್ನಾನ, ಭೂಮಿಯಲ್ಲಿ ಮಲಗುವುದು, ಪಂಚಮ ಕಾಲದಲ್ಲಿ (ಎಂದರೆ ಮಧ್ಯಾಹ್ನ 4 ಗಂಟೆಯ ನಂತರ) ಒಂದೇ ಭೋಜನ. ಇದು ವ್ರತ ಮಾಡುವ ಕ್ರಮ. ಇದರಿಂದ ಭಗವಂತನು ಪ್ರೀತನಾಗುವನು.

ಲಕ್ಷಪೂಜಾವ್ರತ– ಪರಮಾತ್ಮನಿಗೆ ತುಲಸಿಯಿಂದಲೂ ಮಲ್ಲಿಗೆ, ಜಾಜಿ, ಸಂಪಿಗೆ, ದೂರ್ವಾ ಇವುಗಳಿಂದಲೂ ಲಕ್ಷ ಪೂಜೆಯನ್ನು ಮಾಡಿ ಉದ್ಯಾಪನೆಯನ್ನು ಮಾಡಬೇಕು.

ಮೌನವ್ರತ– ಮಾಸಪೂರ್ತಿ ಮೌನವ್ರತವನ್ನು ಮಾಡಿ ವ್ರತಸಂಪೂರ್ತಿಗಾಗಿ ಘಂಟಾ-ಪುಸ್ತಕಗಳನ್ನು ದಾನ ಮಾಡಬೇಕು.

ರೋಟಿಕ ವ್ರತ– ಶ್ರಾವಣಮಾಸದ ಪಾಡ್ಯವು ಸೋಮವಾರದಿಂದ ಕೂಡಿದ್ದರೆ ಆಗ ರೋಟಿಕವ್ರತವನ್ನು ಮಾಡಬೇಕು. ಬಿಲ್ವಪತ್ರಾದಿಗಳಿಂದ ಶಿವನನ್ನು ಪೂಜಿಸಿ, ಐದು ರೊಟ್ಟಿಗಳನ್ನು ಮಾಡಿ ಒಂದು ಶಿವನಿಗೂ, ಎರಡು ಬ್ರಾಹ್ಮಣರಿಗೂ ಸಮರ್ಪಿಸಿ, ಉಳಿದೆರಡನ್ನು ಯಜಮಾನನು ಸ್ವೀಕರಿಸಬೇಕು. ಐದು ವರ್ಷ ಈ ವ್ರತವನ್ನು ಮಾಡಿದರೆ ಧನಧಾನ್ಯ ಸಮೃದ್ಧಿಯಾಗುತ್ತದೆ.

ಧಾರಣಾಪಾರಣವ್ರತ– ಉಪವಾಸವನ್ನು ಧಾರಣೆಯಂದೂ, ಭೋಜನವನ್ನು ಪಾರಣೆ ಎಂದೂ ಹೇಳುತ್ತಾರೆ. ಈ ವ್ರತವನ್ನು ಶ್ರಾವಣ ಶುಕ್ಲ ಪಾಡ್ಯದಿಂದ, ಅಥವಾ ಆಷಾಢ ಶುಕ್ಲ ಏಕಾದಶಿಯಿಂದ ಆರಂಭಿಸಿ ಒಂದು ತಿಂಗಳು ಮಾಡಿ ಉದ್ಯಾಪನೆ ಮಾಡಬೇಕು. ದಶಮೀ ದಿನ ಧಾರಣೆಯಾದರೂ ಅವತ್ತು ಪಾರಣೆಯನ್ನೇ ಮಾಡಬೇಕು.

ಜಪ-ಪಾರಾಯಣ– ಶ್ರಾವಣಮಾಸದಲ್ಲಿ ವೇದ ಪಾರಾಯಣದಿಂದ ಮಂತ್ರ ಸಿದ್ಧಿಯು ಉಂಟಾಗುತ್ತದೆ. ಪುರುಷಸೂಕ್ತ ಪಾರಾಯಣವನ್ನು ಒಂದು ದಿನವೂ ಬಿಡಬಾರದು. ಪುರುಷಸೂಕ್ತದಲ್ಲಿ ಎಷ್ಟು ಅಕ್ಷರಗಳಿವೆಯೋ ಅದರ ಸಹಸ್ರ ಅಥವಾ ನೂರರಷ್ಟು ಜಪದಿಂದ ಬ್ರಹ್ಮಹತ್ಯಾದಿಪಾಪಗಳು ನಾಶವಾಗುತ್ತವೆ.

ಇತರ ಕಾಲದಲ್ಲಿ ಲಕ್ಷಜಪದಿಂದ ಬರುವ ಸಿದ್ಧಿಯ ಈ ಮಾಸದಲ್ಲಿ ಒಂದು ಜಪದಿಂದಲೂ, ಇತರ ಕಾಲದಲ್ಲಿ ಸಹಸ್ರ ಪ್ರದಕ್ಷಿಣೆ ನಮಸ್ಕಾರಗಳಿಂದ ಬರುವ ಫಲವೂ ಈ ಮಾಸದಲ್ಲಿ ಒಂದು ಪ್ರದಕ್ಷಿಣೆ ನಮಸ್ಕಾರದಿಂದಲೂ ಲಭಿಸುತ್ತದೆ.

ರವಿವಾರ ವ್ರತ– ಶ್ರಾವಣಮಾಸದ ಮೊದಲನೆಯ ಭಾನುವಾರ ರಕ್ತ-ಚಂದನದಿಂದ ವರ್ತುಲಾಕಾರ ಸೂರ್ಯಮಂಡಲವನ್ನು ಮಾಡಿ, ದ್ವಾದಶ ಅರ್ಘ್ಯ ,

ದ್ವಾದಶ ನಮಸ್ಕಾರಾದಿಗಳಿಂದ ಪೂಜಿಸಿ, ಆರು ಎಳೆಯ ದಾರವನ್ನು ಆರು ಗಂಟು ಹಾಕಿ ಕೈಗೆ ಕಟ್ಟಿಕೊಳ್ಳಬೇಕು. ಹನ್ನೆರಡು ಹಣತೆಗಳನ್ನು ಬ್ರಾಹ್ಮಣರಿಗೆ ವಾಯನದಾನ ಕೊಡಬೇಕು. ಇದರಿಂದ ದಾರಿದ್ರ್ಯ , ರೋಗ ಎಲ್ಲಾ ಪರಿಹಾರವಾಗುವುದು.

## ರವಿಪೂಜಾವಿಧಾನ

ಸಂಕಲ್ಪ – ಮಮ ಸಮಸ್ತರೋಗನಿರಸಾರ್ಥಮಾಯುಷ್ಯವೃದ್ಧ್ಯಾದಿಸಕಲ-ಕಾಮನಾಸಿದ್ಧ್ಯರ್ಥಂ ಶ್ರೀಸೂರ್ಯನಾರಾಯಣಪ್ರೀತ್ಯರ್ಥಂ ಸೂರ್ಯವ್ರತಾಂ-ಗತ್ವೇನ ವಿಹಿತಂ ಸೂರ್ಯಪೂಜನಮಹಂ ಕರಿಷ್ಯೇ । ಗಣಪತಿಸ್ಮರಣಪೂರ್ವಕಂ ಕಲಶಾದಿಪೂಜನಂ ಚ ಕರಿಷ್ಯೇ । ತಾಮ್ರಪಾತ್ರೇ ರಕ್ತಚಂದನೇನಾಷ್ಟದಲಂ ಕೃತ್ವಾ ತತ್ರ ದೇವಂ ಪೂಜಯೇತ್ ।

ತೇಜೋರೂಪಂ ಸಹಸ್ರಾಂಶುಂ ಸಪ್ತಾಶ್ವರಥಗಂ ವರಮ್ ।
ದ್ವಿಭುಜಂ ವರದಂ ಪದ್ಮಲಾಂಛನಂ ಸರ್ವಕಾಮದಮ್ ॥ ಧ್ಯಾನಮ್ ।

ಆಗಚ್ಛ ಭಗವನ್ ಸೂರ್ಯ ಮಂಡಲೇ ಚ ಸ್ಥಿರೋ ಭವ ।
ಯಾವತ್ ಪೂಜಾ ಸಮಾಪ್ಯೈತ ತಾವತ್ತ್ವಂ ಸನ್ನಿಧೋ ಭವ ॥ ಆವಾಹನಮ್ ।

ಹೇಮಾಸನಂ ಮಹಾದಿವ್ಯಂ ನಾನಾರತ್ನವಿಭೂಷಿತಮ್ ।
ದತ್ತಂ ಮೇ ಗೃಹ್ಯತಾಂ ದೇವ ದಿವಾಕರ ನಮೋಽಸ್ತು ತೇ ॥ ಆಸನಮ್ ।

ಗಂಗಾಜಲಂ ಸಮಾನೀತಂ ಪರಮಂ ಪಾವನಂ ಮಹತ್ ।
ಪಾದ್ಯಂ ಗೃಹಾಣ ದೇವೇಶ ಧಾಮರೂಪ ನಮೋಽಸ್ತು ತೇ ॥ ಪಾದ್ಯಮ್ ।

ಭೋ ಭೋಃ ಸೂರ್ಯ ಮಹಾಭೂತ ಬ್ರಹ್ಮವಿಷ್ಣುಸ್ವರೂಪಿಣೇ ।
ಅರ್ಘ್ಯಮಂಜಲಿನಾ ದತ್ತಂ ಗೃಹಾಣ ಪರಮೇಶ್ವರ ॥ ಅರ್ಘ್ಯಮ್ ।

ಗಂಗಾದಿತೀರ್ಥಜಂ ತೋಯಂ ಜಾತೀಪುಷ್ಪೈಶ್ಚ ವಾಸಿತಮ್ ।
ತಾಮ್ರಪಾತ್ರೇ ಸ್ಥಿತಂ ದಿವ್ಯಂ ಗೃಹಾಣಾಚಮನೀಯಕಮ್ ॥ ಆಚಮನೀಯಮ್ ।

ಜಾಹ್ನವೀಜಲಮತ್ಯಂತಂ ಪವಿತ್ರಕರಣಂ ಪರಮ್ ।
ಸ್ನಾನಾರ್ಥಂ ಚ ಮಯಾ ನೀತಂ ಸ್ನಾನಂ ಕುರು ಜಗತ್ಪತೇ ॥ ಮಲಾಪಕರ್ಷಣಸ್ನಾನಂ

ಪಯೋದಧಿಘೃತಶ್ಚೈವ ಶರ್ಕರಾಮಧುಸಂಯುತೈಃ ।
ಕೃತಂ ಮಯಾ ಚ ಸ್ನಪನಂ ಪ್ರೀಯತಾಂ ಪರಮೇಶ್ವರ ॥ ಪಂಚಾಮೃತ.. ।

ಗಂಗಾ ಗೋದಾವರೀ ಚೈವ ಯಮುನಾ ಚ ಸರಸ್ವತೀ ।
ನರ್ಮದಾ ಸಿಂಧುಕಾವೇರೀ ತಾಭ್ಯಃ ಸ್ನಾನಾರ್ಥಮಾಹೃತಮ್ ॥ ಸ್ನಾನಮ್ ।
ಪುನರಾಚಮನೀಯಮ್ ।

ರಕ್ತಪಟ್ಟಯುಗಂ ದೇವ ಸೂಕ್ಷ್ಮತ್ರಂತುವಿನಿರ್ಮಿತಮ್ ।
ಶುದ್ಧಂ ಚೈವ ಮಯಾ ದತ್ತಂ ಗೃಹಾಣ ಕಮಲಾಕರ ॥ ವಸ್ತ್ರಮ್ ।

ನಮಃ ಕಮಲಹಸ್ತಾಯ ವಿಶ್ವರೂಪಾಯ ತೇ ನಮಃ ।
ಉಪವೀತಂ ಮಯಾ ದತ್ತಂ ತದ್ಗೃಹಾಣ ದಿವಾಕರ ॥ ಉಪವೀತಮ್ ।

ಕುಂಕುಮಾಗರುಕಸ್ತೂರೀಸುಗಂಧೈಶ್ಚಂದನಾದಿಭಿಃ ।
ರಕ್ತಚಂದನಯುಕ್ತಂ ತು ಗಂಧಂ ಗೃಹಾಣ ಪ್ರಭಾಕರ ॥ ಗಂಧಮ್ ।

ಜಪಾಕದಂಬಕುಸುಮರಕ್ತೋತ್ಪಲಯುತಾನಿ ಚ ।
ಪುಷ್ಪಾಣಿ ಗೃಹ್ಯತಾಂ ದೇವ ಸರ್ವಕಾಮಪ್ರದೋ ಭವ ॥ ಪುಷ್ಪಾಣಿ ।

ರಕ್ತಚಂದನಸಮ್ಮಿಶ್ರಾ ಅಕ್ಷತಾಶ್ಚ ಸುಶೋಭನಾಃ ।
ಮಯಾ ದತ್ತಾ ಗೃಹಾಣ ತ್ವಂ ವರದೋ ಭವ ಭಾಸ್ಕರ ॥

ಆದ್ರಾಕ್ಷತಾನ್ ಪ್ರಗೃಹ್ಯ ಅಂಗಪೂಜಾಂ ಕುರ್ಯಾತ್ । ಓಂ ಮಿತ್ರಾಯ- ಪಾದೌ । ರವಯೇ - ಜಂಘೇ । ಸೂರ್ಯಾಯ - ಜಾನುನೀ । ಖಗಾಯ - ಊರೂ । ಪೂಷ್ಣೇ - ಗುಹ್ಯಂ । ಹಿರಣ್ಯಗರ್ಭಾಯ - ಕಟೀ । ಅರ್ಕಾಯ - ಸ್ತನೌ । ಭಾಸ್ಕರಾಯ - ಕಂಠಂ । ಅರ್ಯಮ್ಣೇ – ಸ್ಕಂಧೌ । ಪ್ರಭಾಕರಾಯ - ಹಸ್ತೌ । ಅಹಸ್ಕರಾಯ - ಮುಖಂ । ಪ್ರಜ್ಞಾಯ - ನಾಸಿಕಾಂ । ಜಗದೇಕಚಕ್ಷುಷೇ - ನೇತ್ರೇ । ಸವಿತ್ರೇ - ಕರ್ಣೌ । ತ್ರಿಗುಣಾತ್ಮಧಾರಿಣೇ - ಲಲಾಟಂ । ವಿರಿಂಚನಾರಾಯಣ-ಶಂಕರಾತ್ಮನೇ - ಶಿರಃ । ತಿಮಿರನಾಶಿನೇ - ಸರ್ವಾಂಗಂ ಪೂಜಯಾಮಿ ।

ದಶಾಂಗೋ ಗುಗ್ಗುಲೋದ್ಭೂತಃ ಕಾಲಾಗುರುಸಮನ್ವಿತಃ ।
ಆಘ್ರೇಯಃ ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಮ್ ॥ ಧೂಪಮ್ ।

ಕಾರ್ಪಾಸವರ್ತಿಕಾಯುಕ್ತಂ ಗೋಘೃತೇನ ಸಮನ್ವಿತಮ್ ।
ದೀಪಂ ಗೃಹಾಣ ದೇವೇಶ ತ್ರೈಲೋಕ್ಯತಿಮಿರಾಪಹ ॥ ದೀಪಮ್ ।

ಪಾಯಸಂ ಘೃತಸಂಯುಕ್ತಂ ನಾನಾಪಕ್ವಾನ್ನಸಂಯುತಮ್ ।
ನೈವೇದ್ಯಂ ಚ ಮಯಾ ದತ್ತಂ ಶಾಂತಿಂ ಕುರು ಜಗತ್ಪತೇ ॥ ನೈವೇದ್ಯಮ್ ।

ಕರ್ಪೂರವಾಸಿತಂ ತೋಯಂ ಮಂದಾಕಿನ್ಯಾಃ ಸಮಾಹೃತಮ್ ।
ಆಚಾಮ್ಯತಾಂ ಜಗನ್ನಾಥ ಮಯಾ ದತ್ತಂ ಹಿ ಭಕ್ತಿತಃ ॥ ಆಚಮನಮ್ ।

ಮಲಯಾಚಲಸಂಭೂತಂ ಕರ್ಪೂರೇಣ ಸಮನ್ವಿತಮ್ ।
ಕರೋದ್ವರ್ತನಕಂ ಚಾರು ಗೃಹ್ಯತಾಂ ಜಗತಃ ಪತೇ ॥ ಕರೋದ್ವರ್ತನಕಮ್ ।

ಇದಂ ಫಲಂ ಮಯಾ ದೇವ ಸ್ಥಾಪಿತಂ ಪುರತಸ್ತವ ।
ತೇನ ಮೇ ಸಫಲಾವಾಪ್ತಿರ್ಭವೇಜ್ಜನ್ಮನಿ ಜನ್ಮನಿ ॥ ಫಲಮ್ ।

ಏಲಾಲವಂಗಕರ್ಪೂರಖದಿರೈಶ್ಚ ಸಪೂಗಕೈಃ ।
ನಾಗವಲ್ಲೀದಲೈರ್ಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥

ದಕ್ಷಿಣಾಂ ಕಾಂಚನೀಂ ದೇವ ಸ್ಥಾಪಿತಾಂ ಚ ತವಾಗ್ರತಃ ।
ಗೃಹಾಣ ಸುಮುಖೋ ಭೂತ್ವಾ ಪ್ರಭಾಕರ ನಮೋಽಸ್ತು ತೇ ॥ ದಕ್ಷಿಣಾಮ್ ।

ಪಂಚವರ್ತಿಸಮಾಯುಕ್ತಂ ಸರ್ವಮಂಗಲದಾಯಕಮ್ ।
ನೀರಾಜನಂ ಗೃಹಾಣೇದಂ ಸರ್ವಸೌಖ್ಯಕರೋ ಭವ ॥ ನೀರಾಜನಮ್ ।

ಯಾನಿ ಕಾನಿ ಚ ಪಾಪಾನಿ ಜನ್ಮಾಂತರ ಕೃತಾನಿ ಚ ।
ವಿಲಯಂ ಯಾಂತಿ ತಾನೀಹ ಪ್ರದಕ್ಷಿಣ ಪದೇ ಪದೇ ॥ ಪ್ರದಕ್ಷಿಣಾಃ ।

ನಮಃ ಪಂಕಜಹಸ್ತಾಯ ನಮಃ ಪಂಕಜಮಾಲಿನೇ ।
ನಮಃ ಪಂಕಜನೇತ್ರಾಯ ಭಾಸ್ಕರಾಯ ನಮೋ ನಮಃ ॥ ನಮಸ್ಕಾರಾನ್ ।

ತಂಡುಲೈಃ ಪೂರಿತಂ ಪಾತ್ರಂ ಹಿರಣ್ಯೇನ ಸಮನ್ವಿತಮ್ ।
ರಕ್ತವಸ್ತ್ರಯುಗಂ ಚೈವ ಬ್ರಾಹ್ಮಣಾಯ ನಿವೇದಯೇತ್ ॥ ವಾಯನಮ್।

ಯಸ್ಯೋದಯೇ ಸ್ಯಾಜ್ಜಗತಃ ಪ್ರಬೋಧೋ ಯಃ ಕರ್ಮಸಾಕ್ಷೀ ಭುವನಸ್ಯ ಗೋಪ್ತಾ। ಕುಷ್ಠಾದಿವ್ಯಾಧಿವಿನಾಶಕೋ ಯಃ ಸ ಭಾಸ್ಕರೋ ಮೇ ದುರಿತಂ ನಿಹನ್ಯಾತ್ ॥ ಇತಿ ಪ್ರಾರ್ಥನಾ ॥

ಸೂರ್ಯಾಯ ನಮಃ ಪಾದೌ। ವಾರುಣಾಯ - ಜಂಘೇ। ಮಾಧವಾಯ - ಜಾನುನೀ। ಧಾತ್ರೇ - ಊರೂ। ಹರಯೇ - ಕಟೀ। ಭಗಾಯ - ಗುಹ್ಯಂ। ಸುವರ್ಣರೇತಸೇ - ನಾಭಿಂ। ಅರ್ಯಮ್ಣೇ - ಜಠರಂ। ದಿವಾಕರಾಯ - ಹೃದಯಂ। ತಪನಾಯ - ಕಂಠಂ। ಭಾನವೇ - ಸ್ಕಂಧೌ। ಹಂಸಾಯ - ಹಸ್ತೌ। ಮಿತ್ರಾಯ - ಮುಖಂ। ರವಯೇ - ನಾಸಿಕಾಂ। ಖಗಾಯ - ನೇತ್ರೇ। ಕೃಷ್ಣಾಯ - ಕರ್ಣೌ। ಹಿರಣ್ಯಗರ್ಭಾಯ - ಲಲಾಟಂ। ಆದಿತ್ಯಾಯ - ಶಿರಃ। ಭಾಸ್ಕರಾಯ - ಸರ್ವಾಂಗಂ ಪೂಜಯಾಮಿ।

ಶ್ರೀ ಸೂರ್ಯದೇವರ ಹಾಡು – ಆ ನಮಿಸುವೆ ಘೃಣಿ ಆದಿತ್ಯ ಸೂರ್ಯ ಘನ್ನ ದಯಾಳುವಾಗಿಹಿ ಸೂರಿ ಪ್ರಾಪ್ಯ ॥ಪ॥ ಅಮಿತ ಸ್ವತೇಜದಿ ಝಗಿ ಝಗಿಸುತಿ ಜಗತ್ ಜನ್ಮಾದಿಕರ್ತ ಚೇಷ್ಟಕ ಸ್ಫೂರ್ತಿದಾತ ಆಮಯ ದೂರ ಸುಗುಣ ಗಣಾರ್ಣವ ದೇವ ಶ್ರೀಮನ್ನಾರಾಯಣ ಧ್ಯೇಯ ಧ್ಯಾನಿಪೆ ನಿನ್ನ ॥1॥ ಕೇಯೂರ ಮಕರ ಕುಂಡಲವಾನ್ ಕಿರೀಟಿಯೆ ದಿವ್ಯಮಾಲಾಮಣಿ ಅರಿದರ ಧಾರಿ ಅವ್ಯಯಾನಂದ ಚಿತ್ ಚಾಮೀಕರ ವಪು ಶ್ರೀಯುಕ್ ಪದ್ಮದಿ ಇರುತಿಹಿಯೋ ಅರ್ಕಸ್ಥ ॥2॥ ಹಿಂಕಾರ ಪ್ರಸ್ತಾವ ಆದಿ ನಮೋ ನಮೋ ಉದ್ಗೀಥ ಪ್ರತಿಹಾರೋಪದ್ರವ ನಿಧನ ಉತ್ಕೃಷ್ಟ ಸಾಮ ಪ್ರತಿಪಾದ್ಯ ನಾರಾಯಣ ಋಕ್ ಸಾಮ ವೇದದಿಂ ಸ್ತುತ್ಯ ವಾಗ್ವಾಯ್ವಿಂದ ॥3॥ ಭೂತೇಂದ್ರಿಯ ಕರ್ಣಾದಿಗಳಿಗೆ ದೂರ ದ್ಯುಸ್ಥದಿವಃಪರ ತ್ರಿಪಾದ ಜ್ಯೋತಿರ್ಮಯನು ಹಿತಕರನಿವ ಅರ್ಕನೋಳ್ ಜ್ವಲಿಸಿ ಅರ್ಕಗೆ ಒದಗಿಸಿಹ ತನ್ನ ಸೂರ್ಯನೆಂಬೋ ನಾಮ ॥4॥ ಸೂರ್ಯದೇವನೆ ದಯಾವಂತನೆ ನಮೋ ನಮೋ ಕಶ್ಯಪಾತ್ಮಜ ನೀ ಎನ್ನ ಪಾಪ ಪರಿಹರಿಸೋ ಮಹಾದ್ಯುತಿ ತಮೋಘ್ನನೇ ಜ್ಞಾನಾಯುರ್ದಾತಾ ನೀ ಶ್ರೀಯಃಪತಿ ನಾರಾಯಣನ್ನೊಲಿಸೋ ಎನಗೆ ॥5॥ ಗ್ರಹಗಳಲಿ ಆದಿ ಮಾರ್ತಾಂಡ ಸೂರ್ಯ ನೀ ಅಹರಹ ಎನ್ನ ಸರ್ವಪೀಡೆಗಳ್ ಕಳೆದು ಬೃಹತಿಸಾಸಿರ ಸ್ವರ ವ್ಯಂಜನಾಕ್ಷರ ವಾಚ್ಯ ಶ್ರೀಹರಿಯ ಭಜಿಸಲು ಶತಾಯುಸ್

ಬಲವೀಯೋ ||6|| ಶರಣು ಪದ್ಮಜಪಿತ ಪ್ರಸನ್ನ ಶ್ರೀನಿವಾಸ ತ್ರಿವೃತ್ ಉರುಕ್ರಮ ಸೂರ್ಯ ನಿನ್ನ ಪ್ರೀತಿಪಾತ್ರ ಸೂರ್ಯನೊಳಿದ್ದು ನೀ ಜಗತ್ಸರ್ವ ಕಾಯುತ್ತಿ ಕರುಣದಿ ಎನ್ನನು ಎನ್ನವರನು ಕಾಯೋ ||7||

**ಆದಿತ್ಯ ಪ್ರೀತಯೇ ಗೋಧೂಮದಾನಮ್ (ಗೋಧಿ) – ಗೋಧೂಮಾಃ** ಸರ್ವಜಂತೂನಾಂ ಬಲಪುಷ್ಟಿವಿವರ್ಧನಾಃ। ಮುಖ್ಯಾಶ್ಚ ಹವ್ಯ- ಕವ್ಯೇಷು ತಸ್ಮಾಚ್ಛಾಂತಿಂ ಪ್ರಯಚ್ಛ ಮೇ ॥ ಗೋಧೂಮಾಃ ಸೂರ್ಯದೈವತ್ಯಾಃ ಸೂರ್ಯಪ್ರೀತಿಕರಾಃ ಸದಾ । ತಸ್ಮಾದೇಷಾಂ ಪ್ರದಾನೇನ ಸ ಮೇ ಸೂರ್ಯಃ ಪ್ರಸೀದತು ॥

ಇದಂ ಸಹಿರಣ್ಯದಕ್ಷಿಣಾಕಂ ಸತಾಂಬೂಲಂ ಗೋಧೂಮದಾನಂ ಆದಿತ್ಯಗ್ರಹ - ಪೀಡಾ ಪರಿಹಾರದ್ವಾರಾ ಆದಿತ್ಯಾಂತರ್ಗತ ಶ್ರೀಭಾರತೀರಮಣ ಮುಖ್ಯ-ಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಪ್ರೀತಿಂ ಕಾಮಯಾಮನಃ ತುಭ್ಯಮಹಂ ಸಂಪ್ರ-ದದೇ ದತ್ತಂ ನ ಮಮ ॥ ಎಂದು ಹೇಳಿ ದಾನ ಕೊಡಬೇಕು.

ಅನೇನ ಸದಕ್ಷಿಣಾಕ-ಸತಾಂಬೂಲ-ಗೋಧೂಮದಾನೇನ ಆದಿತ್ಯಗ್ರಹಪೀಡಾ -ಪರಿಹಾರದ್ವಾರಾ ಆದಿತ್ಯಾಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಃ ಸುಪ್ರೀತೋಽಸ್ತು ಇತಿ ಭವಂತೋ ಬ್ರುವಂತು ಎಂದು ಪ್ರಾರ್ಥನೆ ಮಾಡಬೇಕು.

ದಾನ ಪಡೆದವರು– ಆದಿತ್ಯಗ್ರಹಪೀಡಾಪರಿಹಾರದ್ವಾರಾ ಆದಿತ್ಯಾಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತಃ ಶ್ರೀಲಕ್ಷ್ಮೀನೃಸಿಂಹಃ ಸುಪ್ರೀತೋ ಅಸ್ತು ಎಂದು ಹೇಳಬೇಕು.

## ಸೋಮವಾರ ವ್ರತ

ಶ್ರಾವಣ ಮಾಸದ ಪ್ರಥಮ ಸೋಮವಾರ ಸಂಕಲ್ಪವನ್ನು ಮಾಡಿ ನಾಲ್ಕು ಅಥವಾ ಐದು ಸೋಮವಾರಗಳಲ್ಲಿ ಸಾಯಂಕಾಲ ಉಮಾಸಮೇತ ಮಹದೇವ-ನನ್ನೂ, ಚಂದ್ರನನ್ನೂ ಪೂಜಿಸಬೇಕು. ಇದರಿಂದ ಎಲ್ಲಾ ಕಾಮಗಳು ಸಿದ್ಧಿಸುವವು.

ಶ್ರೀ ಚಂದ್ರಸ್ತೋತ್ರ – ವಾಮನ ಹಯಾಸ್ಯ ಶ್ರೀಹಂಸ ಧನ್ವಂತರಿ ರಮಾಪತಿಗೆ ಪ್ರಿಯ ಸೋಮರಾಜನೇ ನಮಸ್ತೇ ||ಪ|| ಸಹಸ್ರಶೀರ್ಷ ಪುರುಷನ

ನಾಭಿ ವನರುಹಜಾತ ಬ್ರಹ್ಮದೇವನ ಸುತನು ಬಹುಗುಣಿ ಅತ್ರಿ ಬ್ರಹ್ಮಿಷ್ಠ ಈ ಋಷಿಯ ನೇತ್ರಜನು ಸೋಮ ನೀ ಬ್ರಹ್ಮಔಷಧಿ ಉಡುಗಣಕೆ ಪತಿಯಾದಿ ॥1॥ ಪದ್ಮಜನ ನಿಯಮನದಿ ಹೊಂದಿದಿ ಈ ಅಧಿಕಾರ ಸುಧಾಮೂರ್ತಿಯೇ ಸುಧಾಶನ ಸುಧಾ-ಗಾತ್ರ ದಧಿ ಶಂಖ ತುಷಾರಾಭ ಆಹ್ಲಾದ ಕೃಷ್ಣಮೋ ಚಂದ್ರದೇವನೇ ಕ್ಷೀರೋ-ದಾರ್ಣವ ಸನ್ನಿಭನೇ ॥2॥ ತ್ರಿಭುವನಗಳ ಜೈಸಿ ರಾಜಸೂಯ ಯಜ್ಞಗೈದಿ ತ್ರ್ಯಂಬಕನ ಮುಕುಟ ಭೂಷಣ ರೋಹಿಣೀಶ ಅಂಬುಜೋದ್ಭವಪಿತ ಪ್ರಸನ್ನ ಶ್ರೀನಿವಾಸ ಹೃತ್ ಅಂಬರದಿಪೊಳೆವ ಸುಜ್ಞಾನ ಭಕ್ತಿ ಎನಗೀಯೋ ॥3॥

ಚಂದ್ರಪ್ರೀತಯೇ ತಂಡುಲದಾನಮ್ (ಅಕ್ಕಿ) – ವ್ರೀಹಿಜಾಸ್ತಂಡುಲಾಃ ಶುದ್ಧಾಃ ಪಿತೃದೇವದ್ವಿಜಪ್ರಿಯಾಃ । ತಸ್ಮಾದೇಷಾಂ ಪ್ರದಾನೇನ ಸರ್ವಕಾಮಾಶ್ಚ ಮೇ ಸದಾ ॥ ತಂಡುಲಶ್ಚಂದ್ರದೈವತ್ಯಾಃ ಚಂದ್ರಪ್ರೀತಿಕರಾಃ ಶುಭಾಃ । ತಸ್ಮಾದೇಷಾಂ ಪ್ರದಾನೇನ ಸ ಮೇ ಚಂದ್ರಃ ಪ್ರಸೀದತು ॥

ಯವಾಃ ಸಮಸ್ತ ಧಾನ್ಯಾನಾಂ ರಾಜಾನಃ ಪರಿಕೀರ್ತಿತಾಃ । ತಸ್ಮಾದೇಷಾಂ ಪ್ರದಾನೇನ ಮಮಾಸ್ತ್ವಭಿಮತಂ ಫಲಮ್ ॥ ಇದಂ ಸಹಿರಣ್ಯದಕ್ಷಿಣಾಕಂ ಸತಾಂಬೂಲಂ ತಂಡುಲದಾನಂ । ಚಂದ್ರ ಗ್ರಹಪೀಡಾಪರಿಹಾರದ್ವಾರಾ ಚಂದ್ರಾಂ-ತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀನೃಸಿಂಹಪ್ರೀತಿಂ ಕಾಮಯ -ಮಾನಃ ತುಭ್ಯಮಹಂ ಸಂಪ್ರದದೇ ದತ್ತಂ ನಮಮ ನ ಮಮ ॥

ಅನೇನ ಸದಕ್ಷಿಣಾಕಸತಾಂಬೂಲತಂಡುಲದಾನೇನ ಚಂದ್ರಗ್ರಹಪೀಡಾ-ಪರಿಹಾರದ್ವಾರಾ ಚಂದ್ರಾಂತರ್ಗತಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತಶ್ರೀ-ಲಕ್ಷ್ಮೀನೃಸಿಂಹಃ ಸುಪ್ರೀತೋ ಅಸ್ತು ಇತಿ ಭವಂತೋ ಬ್ರುವಂತು॥

ಬ್ರಾಹ್ಮಣರು– ಚಂದ್ರಗ್ರಹಪೀಡಾಪರಿಹಾರದ್ವಾರಾ ಚಂದ್ರಾಂತರ್ಗತ ಶ್ರೀಭಾರತೀ-ರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಃ ಸುಪ್ರೀತೋ ಅಸ್ತು ॥

## ಮಂಗಳವಾರಪೂಜಾ

ಅಂಗನ್ಯಾಸ- ಹಾಗೂ ಪೂಜಾಕ್ರಮ – ಓಂ ಹ್ರಾಂ ಅಂಗುಷ್ಠಾಭ್ಯಾಂ ನಮಃ ಓಂ ಹ್ರೀಂ ತರ್ಜನೀಭ್ಯಾಂ ಓಂ ಹ್ರೂಂ ಮಧ್ಯಮಾಭ್ಯಾಂ ಓಂ ಹ್ರೈಂ ಅನಾಮಿಕಾಭ್ಯಾಂ

ಓಂ ಹ್ರೌಂ ಕನಿಷ್ಠಿಕಾಭ್ಯಾಂ ಓಂ ಹ್ರಃ ಕರತಲಕರಪೃಷ್ಠಾಭ್ಯಾಂ । ಓಂ ಹ್ರಾಂ ಹೃದಯಾಯ ಓಂ ಹ್ರೀಂ ಶಿರಸೇ ಓಂ ಹ್ರೂಂ ಶಿಖಾಯೈ ಓಂ ಹ್ರೈಂ ಕವಚಾಯ ಹುಂ ಓಂ ಹ್ರೌಂ ನೇತ್ರತ್ರಯಾಯ ವೌಷಟ್ ಓಂ ಹ್ರಃ ಅಸ್ತ್ರಾಯ ಫಟ್ । ಇತಿ ದಿಗ್ಬಂಧಃ ।

ರಕ್ತಮಾಲ್ಯಾಂಬರಧರಃ ಶಕ್ತಿಶೂಲಗದಾಧರಃ । ಚತುರ್ಭುಜೋ ಮೇಷ-ಗರ್ಭೋ ವರದಃ ಸ್ಯಾದ್ಧರಾಸುತಃ ॥ ಧ್ಯಾನಮ್ । ಏಹ್ಯೇಹಿ ಭಗವನ್ ಭೌಮ ಅಂಗಾರಕ ಮಹಾಪ್ರಭೋ । ತ್ವಯಿ ಸರ್ವಂ ಸಮಾಯಾತಂ ತ್ರೈಲೋಕ್ಯಂ ಸಚರಾ-ಚರಮ್ ॥ ಭೌಮಮಾವಾಹಯಿಷ್ಯಾಮಿ ತೇಜೋಮೂರ್ತಿಂ ದುರಾಸದಮ್ । ರುದ್ರರೂಪಮನಿರ್ದೇಶ್ಯವಕ್ತ್ರಂ ಚ ರುಧಿರಪ್ರಭಮ್ ॥

ಅಗ್ನಿರ್ಮೂರ್ಧಾಂಗಿರಸೋ ವಿರೂಪಾಂಗಾರಕೋ ಗಾಯತ್ರೀ । ಮಂಗಲಾ-ವಾಹನೇ ವಿನಿಯೋಗಃ ॥ ಓಂ ಅಗ್ನಿರ್ಮೂರ್ಧಾ ... । ಓಂ ನಮೋ ಭಗವತೇ ಧನಸಮೃದ್ಧಿದಾಯ ಮಂಗಲಾಯ ನಮಃ । ಮಂಗಲಮಾವಾಹಯಾಮಿ ಇತ್ಯಾ-ವಾಹ್ಯ, ಎಂದು ಆವಾಹನೆ ಮಾಡಿ ಮಂಗಲಾಯ ನಮಃ ಮುಂತಾದ ನಾಮ-ಮಂತ್ರಗಳಿಂದ ಷೋಡಶೋಪಚಾರಪೂಜೆ ಮಾಡಬೇಕು. ಅನಂತರ ಅಂಗಪೂಜೆ ಮಾಡಬೇಕು. ಅಂಗಪೂಜಾಮಂತ್ರಗಳಿಂದಲೇ ಅರ್ಘ್ಯವನ್ನೂ ಕೊಡಬೇಕು.

(ಅಗ್ನಿರ್ಮೂರ್ಧೇತಿ ಮಂತ್ರೇಣ ಮಂಗಲಗಾಯತ್ರ್ಯಾ ವಾ ಆಸನಾದಿ ಪುಷ್ಪಾಂತಂ ಪೂಜಯಿತ್ವಾ ಯಂತ್ರಸ್ಯೈಕವಿಂಶತಿಕೋಷ್ಠೇಷ್ವಂಗಾನ್ಯೇಕವಿಂಶತಿನಾಮ-ಭಿಃ ಪೂಜಯೇತ್ । ತದ್ಯಥಾ )–

ಮಂಗಲಾಯ ನಮಃ ಪಾದೌ ಪೂಜಯಾಮಿ । ಭೂಮಿಪುತ್ರಾಯ - ಗುಲ್ಫೌ । ಲೋಹಿತಾಯ - ಉದರಂ । ಲೋಹಿತಾಕ್ಷಾಯ - ಹೃದಯಂ । ಸಾಮಗಾನಾಂ ಕೃಪಾಕರಾಯ -ಕರೌ । ಧರಾತ್ಮಜಾಯ - ಬಾಹೂ । ಕುಜಾಯ - ಸ್ಕಂಧೌ । ಭೌಮಾಯ - ಕಂಠಂ । ಭೂತಿದಾಯ - ಹನುಂ । ಭೂಮಿನಂದನಾಯ - ಮುಖಂ ಅಂಗಾರಕಾಯ - ನಾಸಿಕೇ । ಸಮಾಯ - ಕರ್ಣೌ । ಸರ್ವರೋಗಾಪಹಾರಕಾಯ - ಚಕ್ಷುಷೀ । ವೃಷ್ಟಿಕರ್ತ್ರೇ - ಲಲಾಟಂ । ವೃಷ್ಟಿಹರ್ತ್ರೇ -ಮೂರ್ಧಾನಂ । ಸರ್ವಕಾಮಫಲಪ್ರದಾಯ - ಶಿಖಾಮ್ ।

ತತೋ ಧೂಪಾದಿ ಪುಷ್ಪಾಂಜಲ್ಯಂತಂ ಕೃತ್ವಾ ಏತ್ತೈರೇವ ನಾಮಭಿರೇಕವಿಂಶ-ತ್ಯರ್ಘ್ಯಾನ್ ದದ್ಯಾತ್ । ಅರ್ಘ್ಯವನ್ನು ಕೊಟ್ಟಮೇಲೆ ಅಂಗಾರಕಕವಚವನ್ನು ಪಠಿಸಬೇಕು.

ಅಂಗಾರಕಕವಚ – ಶಿಖಾಯಾಂ ಮಂಗಲಃ ಪಾತು ಭೂಮಿಪುತ್ರಶ್ಚ ಮೂರ್ಧನಿ । ದಂತೋಷ್ಠಜಿಹ್ವಾಸು ಸರ್ವಕರ್ಮಾವರೋಧಕಃ ॥ ಹನೌ ಮೇ ಲೋಹಿತಃ ಪಾತು ಲೋಹಿತಾಕ್ಷಶ್ಚ ಕಂಠಕೇ । ಸ್ಕಂಧಯೋರುಭಯೋ ರಕ್ಷೇತ್ ಸಾಮಗಾನಾಂ ಕೃಪಾಕರಃ ॥ ಧರಾತ್ಮಜೋ ಭುಜೌ ಪಾತು ಕುಕಜೋ ರಕ್ಷೇತ್ ಕರದ್ವಯಮ್ । ಭೌಮೋ ಮೇ ಹೃದಯಂ ಪಾತು ಭೂತಿದಸ್ತು ತಥೋದರೇ ॥ ಭೂಮಿನಂದನೋ ನಾಭೌ ತು ಗುಹ್ಯೇ ತ್ವಂಗಾರಕೋಽವತು । ಊರೂ ಮಮ ಯಮೋ ರಕ್ಷೇಜ್ಜಾನ್ವೋ ರೋಗಾಪಹಾರಕಃ ॥ ಜಂಘಯೋರ್ವೃಷ್ಟಿಕರ್ತಾ ಚ ಅಪಹರ್ತಾ ಚ ಗುಲ್ಫಯೋಃ । ಪಾದಾಂಗುಷ್ಠೌ ಚ ಗುಲ್ಫೌ ಚ ಸರ್ವಕಾಮಫಲಪ್ರದಃ ॥ ಶಕ್ತಿರ್ಮೇ ಪೂರ್ವತೋ ರಕ್ಷೇಚ್ಛೂಲಂ ರಕ್ಷೇಚ್ಚ ದಕ್ಷಿಣೇ । ಪಶ್ಚಿಮೇ ಚ ಧನುಃ ಪಾತು ಉತ್ತರೇ ಚ ಶರಸ್ತಥಾ ॥ ಊರ್ಧ್ವಂ ಪಿಂಡಾನನಃ ಪಾತು ಅಧಸ್ತಾತ್ ಪೃಥಿವೀ ಮಮ । ಏವಂ ನ್ಯಸ್ತಶರೀರೋಽಸೌ ಚಿಂತಯೇದ್ ಭೂಮಿನಂದನಮ್ ॥

ಇತಿ ಕವಚಂ ಜಪಿತ್ವಾ ಜಪಂ ಕುರ್ಯಾತ್ ॥ ತದಂಗತಯಾ – "ಅಸೃಜ-ಮರುಣವರ್ಣಂ ರಕ್ತಮಾಲ್ಯಾಂಗರಾಗಂ ಕನಕಕಮಲಮಾಲಾಮಾಲಿನಂ ವಿಶ್ವ-ವಂದ್ಯಮ್ । ಅತಿಲಲಿತಕರಾಭ್ಯಾಂ ಬಿಭ್ರತಂ ಶಕ್ತಿಶೂಲೇ । ಭಜತ ಧರಣಿಸೂನುಂ ಮಂಗಲಂ ಮಂಗಲಾನಾಮ್ ॥ ಇತಿ ಧ್ಯಾತ್ವಾ ಅಗ್ನಿರ್ಮೂರ್ಧಾ ಇತಿ ಮಂತ್ರ-ಮಷ್ಟೋತ್ತರಶತಂ ಜಪೇತ್ ।

"ಅಂಗಾರಕಾಯ ವಿದ್ಮಹೇ ಶಕ್ತಿಹಸ್ತಾಯ ಧೀಮಹಿ । ತನ್ನೋ ಭೌಮಃ ಪ್ರಚೋ-ದಯಾತ್ ॥" ಅಂಗಾರಕಗಾಯತ್ರಿಯನ್ನು 108 ಬಾರಿ ಪಠಿಸಬೇಕು . ಅನಂತರ ಅಂಗಾರಕಸ್ತೋತ್ರವನ್ನು ಪಠಿಸಬೇಕು. (ಗಾಯತ್ರೀಂ ಪಠಿತ್ವಾ ತತಃ ಸ್ತೋತ್ರಂ ಪಠೇತ್ ।)

ಅಂಗಾರಕಸ್ತೋತ್ರ – ಮಂಗಲೋ ಭೂಮಿಪುತ್ರಶ್ಚ ಋಣಹರ್ತಾ ಧನಪ್ರದಃ । ಸ್ಥಿರಾಸನೋ ಮಹಾಕಾಯಃ ಸರ್ವಕರ್ಮಾವರೋಧಕಃ ॥ ಲೋಹಿತೋ

ಲೋಹಿತಾಕ್ಷಶ್ಚ ಸಾಮಗಾನಾಂ ಕೃಪಾಕರಃ। ಧರಾತ್ಮಜಃ ಕುಜೋ ಭೌಮೋ ಭೂತಿ-ದೋ ಭೂಮಿನಂದನಃ ॥ ಅಂಗಾರಕೋ ಯಮಶ್ಚೈವ ಸರ್ವರೋಗಾಪಹಾರಕಃ। ವೃಷ್ಟಿಕರ್ತಾಽಪಹರ್ತಾ ಚ ಸರ್ವಕಾಮಫಲಪ್ರದಃ ॥ ಏತಾನಿ ಕುಜನಾಮಾನಿ ನಿತ್ಯಂ ಯಃ ಪ್ರಯತಃ ಪಠೇತ್ । ಋಣಂ ನ ಜಾಯತೇ ತಸ್ಯ ಸಂತಾನಂ ವರ್ಧತೇ ಸದಾ ॥ ಏಕವಿಂಶತಿನಾಮಾನಿ ಪಠಿತ್ವಾ ತು ದಿನಾಂತಕೇ । ರೂಪವಾನ್ ಧನವಾಂಶ್ಚೈವ ಜಾಯತೇ ನಾತ್ರಸಂಶಯಃ ॥ ಏಕಕಾಲಂ ದ್ವಿಕಾಲಂ ವಾ ಯಃ ಪಠೇತ್ಸುಸಮಾಹಿತಃ। ಏವಂ ಕೃತೇ ನ ಸಂದೇಹೋ ಋಣಂ ಹಿತ್ವಾ ಸುಖೀ ಭವೇತ್ ॥

ಧರಣೀಗರ್ಭಸಂಭೂತಂ ವಿದ್ಯುತ್ಕಾಂತಿಸಮಪ್ರಭಮ್ । ಕುಮಾರಂ ಶಕ್ತಿಹಸ್ತಂ ಚ ಮಂಗಲಂ ಪ್ರಣಮಾಮ್ಯಹಮ್ ॥ ಇತಿ ನಮಸ್ಕಾರಃ।

ಅನಂತರ ಖದಿರ(ಕಗ್ಗಲಿ) ಮರದ ಸಮಿತ್ತನ್ನು ಸುಟ್ಟು ಆದರ ಅಂಗಾರದಿಂದ ಭೂಮಿಯಮೇಲೆ ಗೆರೆ ಎಳೆದು ಈ ಮಂತ್ರಗಳನ್ನು ಪಠಿಸಿದರೆ ಎಲ್ಲ ಋಣಬಾಧೆಗಳು ಪರಿಹಾರವಾಗುತ್ತವೆ. (ಖದಿರಾಂಗಾರೇಣ ರೇಖಾತ್ರಯಂ ಕೃತ್ವಾ –)

ಅಂಗಾರಕ ಮಹೀಪುತ್ರ ಭಗವನ್ ಭಕ್ತವತ್ಸಲ। ತ್ವಾಂ ನಮಸ್ಯಾಮಿ ಮೇಽಶೇಷಂ ಋಣಮಾಶು ವಿನಾಶಯ ॥ ಋಣರೋಗಾದಿದಾರಿದ್ರ್ಯಪಾಪಕ್ಷುದ್ರಾಪಮೃತ್ಯವಃ । ಭವಕ್ಲೇಶಮನಸ್ತಾಪಾ ನಶ್ಯಂತು ಮಮ ಸರ್ವದಾ ॥ ಋಣದುಃಖವಿನಾಶಾಯ ಪುತ್ರಸಂತಾನಹೇತವೇ। ಮಾರ್ಜಯಾಮ್ಯಸಿತಾ ರೇಖಾಸ್ತಿಸ್ರೋ ಜನ್ಮಸಮುದ್ಭವಾಃ ॥

ತತಃ ಪ್ರಾರ್ಥನಾ –ಋಣಕರ್ತ್ರೇ ನಮಸ್ತೇಽಸ್ತು ದುಃಖದಾರಿದ್ರ್ಯನಾಶಕ । ಸುಖಸೌಭಾಗ್ಯಧನದೋ ಭವ ಮೇ ಧರಣೀಸುತ ॥ಗ್ರಹರಾಜ ನಮಸ್ತೇಽಸ್ತು ಸರ್ವಕಲ್ಯಾಣಕಾರಕ। ಪ್ರಸಾದಾತ್ ತವ ದೇವೇಶ ಸದಾ ಕಲ್ಯಾಣಭಾಜನ ॥ ದೇವ ದಾನವಗಂಧರ್ವಯಕ್ಷರಾಕ್ಷಸಪನ್ನಗಾಃ। ಪ್ರಾಪ್ನುವಂತಿ ಶಿವಂ ಸರ್ವೇ ಸದಾ ಪೂರ್ಣ -ಮನೋರಥಾಃ ॥ ಪ್ರಸಾದಂ ಕುರು ಮೇ ಭೌಮ ಸೌಭಾಗ್ಯಂ ಮಂಗಲಪ್ರದ । ಬಾಲಃ ಕುಮಾರಕೋ ಯಸ್ತು ಸ ಭೌಮಃ ಪ್ರಾರ್ಥಿತೋ ಮಯಾ ॥ ಉಜ್ಜಯಿನ್ಯಾಂ ಸಮುತ್ಪನ್ನ ನಮೋ ಭೌಮ ಚತುರ್ಭುಜ। ಭರದ್ವಾಜಕುಲೇ ಜಾತ ಶೂಲಶಕ್ತಿಗದಾಧರ

ಇತಿಪ್ರಾರ್ಥ್ಯ, ಪುನಃ ಸ್ತೋತ್ರಂ ಪಠೇತ್ । ತತೋ ವಾಯನದಾನಮ್ ।

ಎಳ್ಳುಮಿಶ್ರಿತವಾದ ಗೋಧಿಹಿಟ್ಟಿನಿಂದ ಮಾಡಿದ ಲಾಡುಗಳನ್ನು ವೇದ-ವಿದ್ವಾಂಸರಾದ ಬ್ರಾಹ್ಮಣರಿಗೆ ದಾನ ಮಾಡಬೇಕು. ತಿಲಗುಡಮಿಶ್ರೈರ್ನೈಕವಿಂಶತಿ-ಲಡ್ಡುಕಾನ್ ಗೋಧೂಮಭವಾನ್ ಫಲದಕ್ಷಿಣಾಸಹಿತಾನ್ ವೇದವಿದೇ ದದ್ಯಾತ್ । ದಾನಮಂತ್ರಃ – ಮಂಗಲಾಯ ನಮಸ್ತುಭ್ಯಂ ಸರ್ವಮಂಗಲದಾಯಕ । ವಾಯನೇನ ಚ ಸಂತುಷ್ಟಃ ಕುರು ಮೇ ತ್ವಂ ಮನೋರಥಾನ್ ॥

'ದೇವಸ್ಯ ತ್ವಾ' ಇತಿ ಮಂತ್ರೇಣ 'ಮಂಗಲಃ ಪ್ರೀಯತಾಮ್' ಇತಿ ದದ್ಯಾತ್ ।

ಅಂಗಾರಕಸ್ತೋತ್ರವನ್ನು ಪಠಿಸಿ ಅವರೆದಾನವನ್ನು ನೀಡಬೇಕು. ಅಂಗಾರಕ ಪ್ರೀತಯೇ ಸಗುಡಾಢಕ (ಬೆಲ್ಲ-ತೊಗರಿ) ದಾನಮ್ – ಅಗ್ನಿಗರ್ಭೋದ್ಭವಾಃ ಖ್ಯಾತಾಃ ಸರ್ವಮಂಗಲಕಾರಕಾಃ । ಆಢಕಾಃ ಸರ್ವಪಾಪಘ್ನಾಃ ತಸ್ಮಾಚ್ಛಾಂತಿಂ ಪ್ರಯಚ್ಛಮೇ ॥ ಆಢಕಾಃ ಭೌಮದೈವತ್ಯಾಃ ಭೌಮಪ್ರೀತಿಕರಾಃ ಶುಭಾಃ । ತಸ್ಮಾ-ದೇಷಾಂ ಪ್ರದಾನೇನ ಸ ಮೇ ಭೌಮಃ ಪ್ರಸೀದತು ॥

ಇದಂ ಸಹಿರಣ್ಯ ದಕ್ಷಿಣಾಕಂ ಸತಾಂಬೂಲಂ ಸಗುಡಾಢಕದಾನಂ ಅಂಗಾರಕ ಗ್ರಹಾಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹ ಪ್ರೀತಿಂ ಕಾಮಯಮಾನಃ ತುಭ್ಯಮಹಂ ಸಂಪ್ರದದೇ । ದತ್ತಂ ನ ಮಮ, ನ ಮಮ.

ಅನೇನ ಸದಕ್ಷಿಣಾಸತಾಂಬೂಲಸಗುಡಾಢಕದಾನೇನ ಅಂಗಾರಕಗ್ರಹಪೀಡಾ-ಪರಿಹಾರದ್ವಾರಾ ಅಂಗಾರಕಾಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಃ ಸುಪ್ರೀತೋ ಅಸ್ತು ಇತಿ ಭವಂತೋ ಬ್ರುವಂತು ।

ಬ್ರಾಹ್ಮಣ– ಅಂಗಾರಕಪೀಡಾಪರಿಹಾರದ್ವಾರಾ ಅಂಗಾರಕಾತರ್ಗತ ಶ್ರೀ ಭಾರತೀ ರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಃ ಸುಪ್ರೀತೋ ಅಸ್ತು ॥

ಶ್ರೀಅಂಗಾರಕಸ್ತೋತ್ರ – ಗಂಗಾಜನಕ ಜಯೇಶ ಪ್ರಿಯತರ ಮಂಗಳ ನಮೋ ನಮೋ ಪಾಲಯ ಮಾಂ ॥ಪ॥ ತುಂಗ ಮಹಿಮ ವರಾಹಧರಾಸುತ ಮಂಗಳಪ್ರದ ತೇ ನಮೋ ನಮೋ ॥ಅ.ಪ॥ ಸಾಧು ಜನಪ್ರಿಯ ವೃಷ್ಟಿಕೃದ್ ವೃಷ್ಟಿ ಹರ್ತಾದುರ್ಜನ ಭೀಕರ ಭೋ ವಿದ್ಯುತ್ತೇಜ ಕುಮಾರ ನಮೋ ನಮೋ ಶಕ್ತಿಪಾಣೇ ತ್ವಂ ಪಾಲಯ ಮಾಂ ॥1॥ ಸಾಮಗಾನಪ್ರಿಯ ದೇಹಿಮೇ ಸಪ್ತಸಾಮಭಕ್ತಿ ಪ್ರತಿಪಾದ್ಯ ಹರೌ

ನಿರ್ಮಲಭಕ್ತಿಂ ಸಜ್ಜನಸಂಗಂ ಜ್ಞಾನಾಯುರ್ಬಲೈಶ್ವರ್ಯಂ ॥2॥ ವಾಗೀಶಪಿತ ಶ್ರೀಪ್ರಸನ್ನಶ್ರೀನಿವಾಸ ವಿಶ್ವರೂಪನು ನಿನ್ನೊಳ್ ಜ್ವಲಿಸುತಿಹ ಅಂಗಾರಕ ನಮೋ ಭೂಮಿಜ ಕೇವಲ ಕೃಪಯಾ ಸಂತತ ಪಾಲಯ ಮಾಂ ॥3॥

## ಬುಧ-ಬೃಹಸ್ಪತಿ ವ್ರತ ವಿಧಾನ

ಬುಧವಾರ, ಗುರುವಾರಗಳಲ್ಲಿ ಬುಧ ಹಾಗೂ ಬೃಹಸ್ಪತಿಯನ್ನು ಪೂಜಿಸಬೇಕು. ಮೊಸರನ್ನವನ್ನು ನೈವೇದ್ಯ ಮಾಡಬೇಕು. ಸೋದರಳಿಯ, ಸೋದರಮಾವನಿಗೆ ಭೋಜನ ಮಾಡಿಸಬೇಕು. ಬುಧನು ಬುಧತ್ವವನ್ನೂ, ಗುರುವು ಗುರುತ್ವವನ್ನೂ ಕೊಡುತ್ತಾರೆ. ವಿಧಾನ ಹೀಗಿದೆ – ಬುಧವಾರಯುಕ್ತಾಯಾಂ ಶುಕ್ಲಾಷ್ಟಮ್ಯಾಂ ಬುಧಾ-ಷ್ಟಮೀವ್ರತಮ್ ॥

ಮಾಸಪಕ್ಷಾದ್ಯುಲ್ಲಿಖ್ಯ ಮಮ ಇಹ ಜನ್ಮನಿ ಜನ್ಮಾಂತರೇ ಚ ಬಾಲ್ಯಾದಾರಭ್ಯ ಕರ್ಮಣಾ ಮನಸಾ ವಾಚಾ ಜಾನತಾಜಾನತಾ ವಾ ಕೃತಾಪರಸ್ಯಾದ್ಯಪಹೃತಿ-ದೋಷಪರಿಹಾರಾರ್ಥಂ ಪುತ್ರಪೌತ್ರಾದಿಸಕಲಮನೋರಥಸಿದ್ಧಿಪ್ರಾಪ್ತ್ಯರ್ಥಂ ಶ್ರೀ-ಲಕ್ಷ್ಮೀನಾರಾಯಣಪ್ರೀತ್ಯರ್ಥಂ ಬುಧಾಷ್ಟಮೀವ್ರತಮಹಂ ಕರಿಷ್ಯೇ ॥ ಎಂದು ಸಂಕಲ್ಪ ಮಾಡಿ ಬುಧ ಹಾಗೂ ಬೃಹಸ್ಪತಿಗಳನ್ನು ಷೋಡಶೋಪಚಾರಗಳಿಂದ ಪೂಜೆ ಮಾಡಬೇಕು.

ಚತುರ್ಬಾಹುಂ ಗ್ರಹಪತಿಂ ಸುಪ್ರಸನ್ನಮುಖಂ ಬುಧಮ್ । ಧ್ಯಾಯೇಽಹಂ ಶಂಖಚಕ್ರಾಸಿಪಾಶಹಸ್ತಮಿಲಾಪ್ರಿಯಮ್ ॥ ಪೀತಮಾಲ್ಯಾಂಬರಧರಃ ಕರ್ಣಿಕಾರ-ಸಮದ್ಯುತಿಃ । ಖಡ್ಗಚರ್ಮಗದಾಪಾಣಿಃ ಸಿಂಹಸ್ಥೋ ವರದೋ ಬುಧಃ ॥ ಧ್ಯಾನಮ್

ತಾರಾಸುತ ನಮಸ್ತೇಽಸ್ತು ನಕ್ಷತ್ರಾಧೀಶ್ವರಪ್ರಿಯ । ಗೃಹಾಣ ಪೂಜಾಂ ಭಗವನ್ ಸಮಾಗತ್ಯ ಗ್ರಹೇಶ್ವರ ॥ ಆವಾಹನಮ್ । ಉದ್ಬುಧ್ಯಸ್ವ ಎಂಬ ಮಂತ್ರದಿಂದ ಬುಧನನ್ನು ಆವಾಹನೆ ಮಾಡಿ ಅಧಿದೇವತೆಯಾದ ವಿಷ್ಣುವನ್ನು ಇದಂ ವಿಷ್ಣುಃ ಎಂಬ ಮಂತ್ರದಿಂದ ಹಾಗೂ ಪ್ರತ್ಯಧಿದೇವತೆಯಾದ ನಾರಾಯಣನನ್ನು ಪುರುಷಸೂಕ್ತದಿಂದ ಆವಾಹನೆ ಮಾಡಬೇಕು.

ಅನಂತರ ಆಸನಾದಿಗಳನ್ನು ಕೊಟ್ಟು ಪೂಜೆ ಮಾಡಬೇಕು. ಇಲಾಪತೇ

ನಮಸ್ತೇಽಸ್ತು ನಿಶೇಶಪ್ರಿಯಸೂನವೇ । ಹೇಮಸಿಂಹಾಸನಂ ದೇವ ಗೃಹಾಣ ಪ್ರೀತ-ಯೇ ಮಮ ॥ ಆಸನಂ । ಶೀತಲೋದಕಸಮಾನೀತಂ ಸುಪುಣ್ಯಸರಿದುದ್ಭವಮ್ । ಪಾದ್ಯಂ ಗೃಹಾಣ ದೇವೇಶ ಮಮಾಘಪರಿಶುದ್ಧಯೇ ॥ ಪಾದ್ಯಂ । ತಾರಾಸುತ ನಮಸ್ತೇಽಸ್ತು ಸತತಂ ಭಗವತ್ಪ್ರಿಯ । ಗೃಹಾಣಾರ್ಘ್ಯಂ ಗ್ರಹಪತೇ ನಾನಾಫಲ-ಸಮನ್ವಿತಮ್ ॥ ಅರ್ಘ್ಯಂ । ಸುಗಂಧದ್ರವ್ಯಸಂಯುಕ್ತೈಃ ಶುದ್ಧೈಃ ಸ್ವಾದುಸರಿಜ್ಜಲೈಃ । ಆಚಮ್ಯತಾಂ ನಿಶಾನಾಥನಂದನ ಪ್ರೀತಯೇ ಮಮ ॥ ಆಚಮನಂ । ಪಯೋದಧಿ ಘೃತಮಧುಶರ್ಕರಾಸಂಯುತಂ ಮಯಾ । ಪಂಚಾಮೃತಂ ಸಮಾನೀತಂ ಸ್ನಾನಾರ್ಥಂ ಸ್ವೀಕುರು ಪ್ರಭೋ ॥ ಪಂಚಾಮೃತಮ್ । ವಾಸಿತಂ ಗಂಧಕರ್ಪೂರೈರ್ನಿರ್ಮಲಂ ಜಲಮುತ್ತಮಮ್ । ಸ್ನಾನಾಯ ತೇ ಮಯಾ ಭಕ್ತ್ಯಾ ದೀಯತೇ ವ್ರತಸಿದ್ಧಯೇ ॥ ಪುರುಷಸೂಕ್ತದಿಂದ ಸ್ನಾನಮಂತ್ರಗಳನ್ನು ಹೇಳಿ ಸ್ನಾನದ ಉಪಚಾರ ಸಮರ್ಪಣೆ ಮಾಡಬೇಕು. ಪೀತವಸ್ತ್ರದ್ವಯಂ ದೇವ ರಾಜವಂಶಕರ ಪ್ರಭೋ । ಉರ್ವಶೀನಾಥ ಜನಕ ಗೃಹಾಣ ಪ್ರೀತಯೇ ಸದಾ ॥ ವಸ್ತ್ರಮ್ । ಯಜ್ಞೋಪವೀತಕಂ ಸೂತ್ರಂ ತ್ರಿಗುಣಂ ತ್ರಿದಶಪ್ರಿಯ । ಮಮ ಪಾಶವಿನಾಶಾರ್ಥಂ ಗೃಹಾಣ ಪ್ರೀತಯೇ ಬುಧ ॥ ಉಪವೀತಮ್ । ಹರಿಚಂದನಕಸ್ತೂರಿಕರ್ಪೂರಾದಿಸಮನ್ವಿತಮ್ । ಗಂಧಂ ಸಮರ್ಪಯೇ ತುಭ್ಯಮಿಲಾನಾಥ ನಮೋಽಸ್ತು ತೇ ॥ ಗಂಧಂ । ಅಕ್ಷತಾಂಶ್ಚ... ಅಕ್ಷತಾನ್ । ಮಾಲ್ಯಾದೀ ... ಪುಷ್ಪಾಣಿ ।

**ಅಥಾಂಗಪೂಜಾ** – ಬುಧಾಯ - ಪಾದೌ । ಸೋಮಪುತ್ರಾಯ - ಜಾನುನೀ । ತಾರಕಾಯ - ಕಟಿಂ । ರಾಜಪುತ್ರಾಯ - ಉದರಂ । ಇಲಾಪ್ರಿಯಾಯ - ಹೃದಯಂ ಕುಮಾರಾಯ - ವಕ್ಷಃಸ್ಥಲಂ । ಪುರೂರವಃ ಪಿತ್ರೇ - ಬಾಹೂ । ಸೋಮಸುತಾಯ - ಸ್ಕಂಧೌ । ಪೀತವರ್ಣಾಯ - ಮುಖಂ । ಜ್ಞಾನಾಯ -ನೇತ್ರೇ । ಬುಧಾಯ - ಮೂರ್ಧಾನಂ । ಸೋಮಸೂನವೇ - ಸರ್ವಾಂಗಂ ।

ವನಸ್ಪತಿ - ಧೂಪಮ್ । ಸಾಜ್ಯಂ ಚೇತಿ ದೀಪಮ್ । ನೈವೇದ್ಯ ಗೃ ... ನೈವೇದ್ಯಂ । ಪೂಗೀಫಲಮಿತಿ ತಾಂಬೂಲಮ್ । ಇದಂ ಫಲಮಿತಿ ಫಲಮ್ । ಹಿರಣ್ಯಗರ್ಭೇತಿ ದಕ್ಷಿಣಾಮ್ । ಶ್ರಿಯೇ ಜಾತ ಇತಿ ನೀರಾಜನದೀಪಮ್ । ಉದ್ಬುಧ್ಯಸ್ವೇತಿ ಪುಷ್ಪಾಂಜಲಿಮ್ ।

ಉರ್ವಶ್ಯಾಶ್ಚ ಪತಿರ್ಯಸ್ತು ಯಃ ಪುರೂರವಸಃ ಪಿತಾ । ಗ್ರಹಮಧ್ಯೇ ಸುರೂಪೋ ಯೋ ಬುಧೋ ನಃ ಸಂಪ್ರಸೀದತು ॥ ವಿಶೇಷಾರ್ಘ್ಯಮ್ । ಯಾನಿ ಕಾನಿ ಚೇತಿ ಪ್ರದಕ್ಷಿಣಮ್ । ನಮಸ್ಕಾರಾನ್ । ಆವಾಹನಂ ನೇತಿ ಪ್ರಾರ್ಥನಾ । ಸಂತುಷ್ಟೋ ವಾಯನಾದಸ್ಮಾದಿಲಾನಾಥೋ ಗ್ರಹೇಶ್ವರಃ। ಸತಾಂಬೂಲಾಷ್ಟಲಡ್ಡೂಕಂ ಪ್ರತಿಗೃಹ್ಣಾತು ವಾಯನಮ್ ॥ ವಾಯನಮ್ ।

ಶ್ರೀಬುಧಸ್ತೋತ್ರ – ಸೂರಿ ಸಂಪ್ರಾಪ್ಯ ಶ್ರೀನಾರಾಯಣ ಪ್ರಿಯ ಬುಧನೇ ನಮೋ ನಮೋ ನಮೋ ನಿನಗೆ ॥ಪ॥ ಸೂರಿಪ್ರಿಯಕರ ವಿದ್ವಾನ್ ನಮೋ ಎನ್ನ ಕುಂದು ನೀಗಿಸಿ ಪೊರೆ ಮಹಾದ್ಯುತಿಯೇ ॥ಅ.ಪ॥ ಪ್ರಿಯಂಗುಕಲಿಕಾ ಶಾಮ-ರೂಪಿಯೆ ಚಾರ್ವಾಂಗ ಬುಧನೇ ನಿನಗೆಣೆಯುಂಟೇ ಸೌಮ್ಯನೆ ಸೌಮ್ಯಗುಣವಂತನೇ ನಮೋ ಶಶಿಸುತ ದಯದಿಂ ಪಾಲಯಮಾಂ ॥1॥ ಅಂಬುವು ಚೂರ್ಣಪಿಂಡೀ ಭಾವ ಹೇತುವಾಗಿಹುದು- -ನೀ ಅಂಬು ಅಭಿಮಾನಿ ಮಹ ಪಂಡಿತನಾದುದರಿಂದ ಬೇಡುವೆ- ನಿನ್ನ ವಿಷಯದಲಿ ॥2॥ ಅಂಬುವತ್ ಜ್ಞಾನಯುಕ್ ಸ್ನೇಹಾನುರಾಗ ಎಂಬ- ಭಕ್ತಿ ಅಂಬುಜನಾಭ ಬಿಂಬನಲಿ ಅನುಕಂಪಯಾ ನೀ ಒದಗಿಸೊ ಎನಗೆ ಅಂಭ್ರಣಿಪತಿ -ಶ್ರೀವ್ಯಾಸಗೆ ಪ್ರಿಯನೆ ॥3॥ ಮೂಲೋಕದಿ ಖ್ಯಾತ ವಿಧುಕುಲ ಪ್ರವರ ನೀ-ಬುದ್ಧಿ ಗಾಂಭೀರ್ಯದಿ ಶ್ರೇಷ್ಠನೆಂದು ಮಾಲೋಲ ಆತ್ಮಜ ನಿನ್ನನು ಬುಧನೆಂದು-ನಾಮಕರಣವ ಮಾಡಿದನು ॥4॥ ಹೇಮಗರ್ಭನಪಿತ ಪ್ರಸನ್ನ ಶ್ರೀನಿವಾಸ ಪೂರ್ಣ-ಹೊಳೆಯುತಿಹ ನಿನ್ನಲ್ಲಿ ನಾಮಾತ್ಮಿಕ ಉಷ ಶನಿ ಕರ್ಮಪ ಮೊದಲಾದವರಿಗೆ-ವರ ಬುಧನೇ ನಮೋ ನಮೋ ॥5॥

ಬುಧಪ್ರೀತಯೇ ಮುದ್ಗದಾನಮ್ (ಹೆಸರು) – ಮುದ್ಗಬೀಜಾನಿ ಶುದ್ಧಾನಿ ಪ್ರಿಯಾಣಿ ಪರಮೇಷ್ಠಿನಃ । ಯಸ್ಮಾದೇಷಾಂ ಪ್ರದಾನೇನ ಹ್ಯತಃ ಶಾಂತಿಂ ಪ್ರಯಚ್ಛ ಮೇ ॥ ಮುದ್ಗಾಶ್ಚ ಸೌಮ್ಯದೈವತ್ಯಾಃ ಸೌಮ್ಯಪ್ರೀತಿಕರಾಃ ಶುಭಾಃ । ತಸ್ಮಾದೇನಾಂ ಪ್ರದಾನೇನ ಸ ಮೇ ಸೌಮ್ಯಃ ಪ್ರಸೀದತು ॥ ಇದಂ ಸಹಿರಣ್ಯ ದಕ್ಷಿಣಾಕಂ ಸತಾಂಬೂಲಂ ಮುದ್ಗದಾನಂ ಬುಧಗ್ರಹ ಪೀಡಾ ಪರಿಹಾರದ್ವಾರಾ ಬುಧ-ಗ್ರಹಾಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಪ್ರೀತಿಂ ಕಾಮಯಮಾನಃ ತುಭ್ಯಮಹಂ ಸಂಪ್ರದದೇ । ದತ್ತಂ ನ ಮಮ, ನ ಮಮ ।

ಅನೇನ ಸದಕ್ಷಿಣಾಸತಾಂಬೂಲಮುದ್ಗದಾನೇನ ಬುಧಾಂತರ್ಗತ ಶ್ರೀಭಾರತೀ-ರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಃ ಸುಪ್ರೀತೋ ಅಸ್ತು ಇತಿ ಭವಂತೋ ಬ್ರುವಂತು ।

ಬ್ರಾಹ್ಮಣ– ಬುಧಗ್ರಹಪೀಡಾಪರಿಹಾರದ್ವಾರಾ ಬುಧಾಂತರ್ಗತ ಶ್ರೀ ಭಾರತೀ ರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಃ ಸುಪ್ರೀತೋ ಅಸ್ತು ॥

## ಬೃಹಸ್ಪತಿಪ್ರೀತಯೇ ಚಣಕದಾನಮ್ (ಕಡಲೆ)

ಗೋವರ್ಧನಾಚಲೋದ್ಧಾರ ಸಮಯೇ ಹರಿರಕ್ಷಿತಾಃ (ಭಕ್ಷಿತಾಃ) ಚಣಕಾಃ ಸರ್ವಪಾಪಘ್ನಾಃ ತಸ್ಮಾಚ್ಛಾಂತಿಂ ಪ್ರಯಚ್ಛಮೇ ॥ ಚಣಕಾಃ ಗುರುದೈವತ್ಯಾಃ ಗುರುಪ್ರಿಯಕರಾಃ ಶುಭಾಃ ।

ಇದಂ ಸಹಿರಣ್ಯ ದಕ್ಷಿಣಾಕಂ ಸತಾಂಬೂಲಂ ಚಣಕದಾನಂ ಬೃಹಸ್ಪತಿಗ್ರಹ ಪೀಡಾ ಪರಿಹಾರದ್ವಾರಾ ಬೃಹಸ್ಪತಿಗ್ರಹಾಂತರ್ಗತ ಶ್ರೀಭಾರತೀರಮಣಮುಖ್ಯ-ಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಪ್ರೀತಿಂ ಕಾಮಯಮಾನಃ ತುಭ್ಯಮಹಂ ಸಂಪ್ರದದೇ । ದತ್ತಂ ನ ಮಮ, ನ ಮಮ ।

ಅನೇನ ಸದಕ್ಷಿಣಾಸತಾಂಬೂಲಚಣಕದಾನೇನ ಬೃಹಸ್ಪತಿಗ್ರಹಾಂತರ್ಗತ ಶ್ರೀ-ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಃ ಸುಪ್ರೀತೋ ಅಸ್ತು ಇತಿ ಭವಂತೋ ಬ್ರುವಂತು ।

ಬ್ರಾಹ್ಮಣ– ಬೃಹಸ್ಪತಿಗ್ರಹಪೀಡಾಪರಿಹಾರದ್ವಾರಾ ಬೃಹಸ್ಪತಿ ಗ್ರಹಾಂತರ್ಗತ ಶ್ರೀ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಃ ಸುಪ್ರೀತೋ ಅಸ್ತು॥

## ಬುಧ ಬೃಹಸ್ಪತಿ ಹಾಡು –

ಕರಿಮುಖದ ಗಣಪತಿಯ ಚರಣಕ್ವಂದನೆ ಮಾಡಿ । ಶಾರದೆಗೆ ಶಿರಬಾಗಿ ಬೇಡಿಕೊಂಬುವೆ ನಾನು । ಒಲಿದೆನಗೆ ವರವ ಕೊಡುಯೆಂದು ॥1 ॥ ಭವ ನಾರದ ಸುಜನವಂದಿತ ವಾಯು । ಮುದದಿಂದ ಮುದ್ದು ಮಹಾಲಕ್ಷ್ಮೀನಾರಾಯಣರ । ಅಂಬುಜ ಪಾದಕ್ಕೆರಗಿ ನಮೋಯೆಂಬೆ ॥2॥ ಪದುಮನಾಭ ಹರಿಗೆ ನಿಜ ಭಕ್ತರಾದಂಥ

। ಬುಧ ಬೃಹಸ್ಪತಿಗಳ ಕಥೆಯ ಪೇಳುವೆ ನಾನು । ಮುದದಿಂದ ಕೇಳಿ ಜನರೆಲ್ಲ ॥3 ॥ ಇರುತಿದ್ದ ಬಡವ ಬ್ರಾಹ್ಮಣ ಒಂದು ಪಟ್ಟಣದಿ । ಮಡದಿ ಮಕ್ಕಳು ನಾಲ್ಕು ಮಂದಿ ಸುತರು । ಸೊಸೆಯರೊಡಗೂಡಿಕೊಂಡು ಸುಖದಿಂದ ॥4 ॥ ಒಬ್ಬೊಬ್ಬ ಸುತಗಿಬ್ಬಿಬ್ಬರು ಗಂಡಸು ಮಕ್ಕಳು ವಿಧ್ಯುಕ್ತದಿಂದ ಜಾವಳ ಜುಟ್ಟು ಉಪನಯನ ಶುದ್ಧಾತ್ಮರಾಗಿ ಇರುತಿಹರು ॥ 5 ॥ ಪ್ರಾತಃಕಾಲದೊಳೆದ್ದು ನಾಲ್ಕು ಮಂದಿ ಸುತರು । ಗೋಪಾಳ ಜೋಳ ನಾಲ್ಕು ಸೇರು ಕಾಳು । ತಂದ್ಹಾಕೋರು ಅರ್ಧಗ್ರಾಸವನು ॥6 ॥ ಮೂರು ಪಾವು ಹಿಟ್ಟು ಮುಂಜಾನೆಗೆ ಇಟ್ಟು । ಗ್ರಾಸ ಮುದ್ದೆ ಅಂಬಲಿ ಕಾಲ ಕಳೆವೋರು ॥7 ॥ ಒಂದಾನೊಂದಿನದಲ್ಲಿ ಬಂದರಿಬ್ಬರು ದ್ವಿಜರು । ಮಂದಿರದ ದ್ವಾರದಲಿ ನಿಂತು ಕೂಗುತಿರೆ । ಬಂದಳೊಬ್ಬಳು ಹಿರಿ ಸೊಸೆ ತಾನು ॥8 ॥ ದಾರು ಬಂದವರು ನಿಮ್ಮ ನಾಮವೇನೆಂದೆನುತ । ಬಾಗಿ ಶಿರಗಳನೆ ಚರಣಕ್ವಂದನೆ ಮಾಡಿ । ಭಾಳ ಭಕ್ತಿಂದ ಕರೆದಳು ॥9 ॥ ದಾರಾದರೇನಮ್ಮ ಬಾಯಾರಿ ಬಳಲುತಲಿ । ಮೂರು ನಿರಾಹಾರ ಮಾಡಿ ಬಂದೆವು ನಾವು । ಆಹಾರ ನೀಡಿ ಕಳಿಸೆಂದ್ರು ॥10 ॥ ಭಿಕ್ಷಕೆ ಹೋದವರು ಈ ಕ್ಷಣದಿ ಬರುವೋರು । ಅರೆಕ್ಷಣ ನೀವು ತಡೆದರೆ ಜೋಳದ । ಭಕ್ಷ್ಯವನೆ ಮಾಡಿ ಬಡಿಸುವೆನು ॥11 ॥ ಹೊತ್ತು ಭಾಳಾಯಿತು ಹಸ್ತವು ನಮ್ಮೊಟ್ಟೆ । ತುತ್ತನ್ನ ಹಾಕಿದರೆ ಈಗ ನಾವದನುಂಡು । ತೃಪ್ತರಾಗ್ಹರಸಿ ನಡೆದೇವು ॥12 ॥ ಮಡಿವುಟ್ಟು ಮಾಡಿದೆನು ಮುಂಜಿಮನೆಗಳಿಗಡಿಗೆ । ತಡೆಯದೆ ಸ್ನಾನಮಾಡಿ ಬನ್ನಿರೆಂದು । ನುಡಿದಳು ಬ್ಯಾಗ ಪತಿವ್ರತೆ ॥13 ॥ ನಾಲ್ಕು ಭಕ್ಕರಿಯೊಳಗೆ ಎಂಟರ್ಧವನು ಮಾಡಿ । ಎಂಟುಮಕ್ಕಳಿಗೆ ಬಡಿಸೋ ಗ್ರಾಸವನು ಸಂತೋಷದಿಂದ ಬಡಿಸುವೆನು ॥14 ॥ ಸ್ನಾನ ಸಂಧ್ಯಾನವ ಮಾಡಿ ಬಂದೇವೆನಲು । ತಾನು ಎಡೆಮಾಡಿ ಎರಡೆರಡು ಭಕ್ಕರಿಯ । ನೀಡಿದಳು ಭಾಳ ಭಕ್ತಿಂದೆ ॥15 ॥ ಬೆಣ್ಣೆ ಬೆಲ್ಲ ತುಪ್ಪ ಕರಣೆ ಕರಣೆ ಕೆನೆಮೊಸರು ನುಣ್ಣನೆ ತವ್ವೆ ಅರೆದಕೊಬ್ಬರಿ ಖಾರ ಉಣ್ಣಿರೆಂದ್ಹಾಕುತಿರಲಾಗ ॥16 ॥ ಸಡಗರದಲದನುಂಡು ಕುಡಿದು ಮ್ಯಾಲ್ ಮಜ್ಜಿಗೆಯ ಒಡೆದಡಿಕೆಯೆಲೆ ಕೊಟ್ಟು ಕೇಳುತ ನಿಮ್ಮ ನಡೆವೊ ನಾಮೇನು ಹೇಳೆಂದ್ಲು ॥17 ॥ ಇಂದುಸುತ ಸುರರ ಗುರುವೆಂದು ಪೇಳುರ್ವ ನಮಗೆ । ಬಂದೆವು ನಾವು ಬುಧ ಬೃಹಸ್ಪತಿಗಳು ಆ- । ನಂದವಾಯಿತು ನಮಗೆಂದ್ರು ॥18 ॥ ಅನ್ನ ಬೇಕಾದರೆ ಅಡಿಗೆ ಒಲೆಗೋಡೆಯಲಿ ನ- । ಮ್ಮನ್ನ ಬರೆದು ಪೂಜೆ ಮಾಡಿದರೀಗ । ಅನ್ನವನು ನಾವು ಕೊಡುವೆವು ॥19 ॥

ಭಾಗ್ಯ ಬೇಕಾದರೆ ಬರೆದು ಪೆಟ್ಟಿಗೆಮ್ಯಾಲೆ । ಭಾಳ ಭಕ್ತಿಂದ ಪೂಜೆ ಮಾಡಿದರೆ । ಭಾಗ್ಯ ಕೊಡುವೆವೆಂದ್ಹೇಳಿ ನಡೆದರು ॥20 ॥ ಸುಣ್ಣಸಾರಣೆಮಾಡಿ ಬಣ್ಣ ಚಿತ್ರವ ಬರೆದು । ಚೆನ್ನಾಗಿ ಬರೆದು ಬುಧ ಬೃಹಸ್ಪತಿಗಳನೆ । ಮನ್ನಿಸಿ ಪೂಜಿಸಿದಳಾಗ ॥21 ॥ ಹಚ್ಚಿಟ್ಟು ಗಂಧಾಕ್ಷತೆ ಪುಷ್ಪಗಳ । ಉತ್ರಾಣಿ ಅಕ್ಕಿ ಮಂತ್ರಾಕ್ಷತೆ ಮಾಡಿ । ಭಕ್ತಿಂದೆ ಪೂಜಿಸಿದಳಾಗ ॥22 ॥ ಗೋಪಾಳಕ್ಕ್ಹೋದಲ್ಲಿ ಗೋಧಿ ಅಕ್ಕಿ ಬ್ಯಾಳೆ । ಹಾಕುವರು ನಾಲ್ಕು ಬೀದಿಯಲಿ ಅದು ಗಂಟು । ತಾವ್ಕಟ್ಟಿ ಹೊತ್ತರ್ಹಗಲಲ್ಲಿ ॥23 ಹಿಡಿಜೋಳ ಬೇಡಿದರೆ ಪಡಿಜೋಳ ಹಾಕುವರು । ಬಡವರು ನೀವು ಬನ್ನಿರೆಂದು ಕರೆದು । ಹಿಡಿಹಿಡಿ ರೊಕ್ಕ ಕೊಡುವ್ರೋರು ॥24 ॥ ಭರದಿಂದ ಬಂದಾಗ ಸುರುವಿದರು ಧಾನ್ಯವನು । ಬರೆದಂಥ ಗೊಂಬೆ ನೋಡಿ ಕೇಳುತ ಆದರ । ವಿವರವನು ಹೇಳಬೇಕೆನುತ ॥25 ॥ ಇವರು ಬುಧ ಬೃಹಸ್ಪತಿಗಳೆಂಬೊ ದೇವತೆಗಳು । ಇವರು ಬಂದೆನ್ನ ಮನೆಯಲ್ಲೂಟವನುಂಡು । ಒಲಿದ್ವರವ ಕೊಟ್ಟು ನಡೆದರು ॥26 ॥ ಇಂಥವರ ಪುಣ್ಯದಿಂದೀ ಧಾನ್ಯ ದೊರಕಿದವು ನಿ । ರಂತರದಿ ನಮ್ಮ ಮನೆಯಲ್ಲಿಟ್ಟವರನು । ಸಂತೋಷದಲಿ ಪೂಜಿಸುವಣೆಂದ್ರು ॥27 ॥ ಭಾಳ ಅನ್ನವ ಮಾಡು ಜೋಳ ಭಕ್ಕರಿ ಮಾಡು । ಬ್ಯಾಳೆಯ ತವ್ವೆ ಬೆಲ್ಲ ಪಲ್ಯವು ಬೆಣ್ಣೆ। ಮಾಡಿ ನೈವೇದ್ಯಕ್ಕಿಡುಯೆಂದ್ರು ॥28॥

## ಶುಕ್ರವಾರವ್ರತ

ಶುಕ್ರವಾರದಂದು ಶುಕ್ರಾಚಾರ್ಯರು ಅವರ ಅಂತರ್ಯಾಮಿ ನೃಸಿಂಹ - ದೇವರನ್ನು ಪೂಜಿಸಬೇಕು. ಗಂಧ ಪುಷ್ಪಾದಿಗಳಿಂದ ಪೂಜಿಸಿ, ದೀಪವನ್ನು ಹಚ್ಚಬೇಕು. (ನಿಷ್ಪಾವ )ಅವರೆ ಪಲ್ಯವನ್ನು ನೈವೇದ್ಯಮಾಡಬೇಕು.

ಶ್ರೀಶುಕ್ರಾಚಾರ್ಯ ಸ್ತೋತ್ರ ಶ್ರೀಶಪ್ರಿಯ ಭೃಗುವಂಶಜಾತ ಶುಕ್ರಾಚಾರ್ಯ ನೀ ಸಲಹೋ ಎನ್ನನ್ನ ನಮೋ ನಮೋ ನಮಸ್ತೇ ॥ಪ॥ ಶ್ರೀ ಪದ್ಮನಾಭಜನು ಸುಪವಿತ್ರ ವಿಧಿಸುತ ಭೃಗು ಅಪತ್ಯನು ಕವಿ ತತ್ಪುತ್ರರತ್ನನು ಶುಕ್ರ ಈ ಪುಣ್ಯ ಶ್ಲೋಕ ಶುಕ್ರಾಚಾರ್ಯ ಉಷನ ಶ್ರೀಪ ಪ್ರಿಯನಿಗೆ ನಮೋ ಮಂತ್ರ ತಂತ್ರ ಮಹಾಕವಿಗೆ ॥1॥ ದೈತ್ಯಮಂತ್ರಿಯೇ ಸರ್ವಶಾಸ್ತ್ರ ಪ್ರವರ್ತಾರ ದೈತ್ಯಾನಂ ಪರಮಂ ಗುರುಂ ಪ್ರಭುಸ್ತಾರಾ ಗಣಾನಾಂ ಮಹಾದ್ಯುತಿಯೇ ನಮೋ ಎನ್ನ ಪೀಡೆಗಳ ಪರಿಹರಿಸಿ ದಯದಿಪಾಲಿಸೆನ್ನನ್ನು

ಹರಿಭಕ್ತ್ಯಾದಿಗಳಿತ್ತು ||2|| ಅಕಳಂಕ ಅಜಪಿತ ಪ್ರಸನ್ನ ಶ್ರೀನಿವಾಸನು ಶುಕ್ರನೆಂದೆಣಿಸುವನು ಶೋಕ ರಹಿತನಾದ್ದರಿಂದ ಶ್ರೀಕರಾರ್ಚಿತ ಈ ಶುಕ್ರ ನಿನ್ನೊಳ್ ಪ್ರಕಾಶಿಪನು ಶುಕ್ರನ್ನ ಒಲಿಸೆನಗೆ ಶುಕ್ರಾಭಿದ ಮಹಾಶಯನೇ ||3||

ಶುಕ್ರಪ್ರೀತಯೇ ನಿಷ್ಪಾವದಾನಮ್ (ಅವರೆ) ಜನ್ಮತ್ರಯಕೃತಂ ಪಾಪಂ ಅವಸ್ಥಾತ್ರಿತಯೇ ಕೃತಮ್ । ನಿಷ್ಪಾವಾಚ್ಚ ವಿನಾಶ್ಯಾಶು ಶಾಂತಿಂ ಯಚ್ಛಂತು ಮೇ ಸದಾ || ನಿಷ್ಪಾವಾಃ ಶುಕ್ರ ದೈವತ್ಯಾಃ ಶುಕ್ರ ಪ್ರೀತಿಕರಾಃ ಶುಭಾಃ । ತಸ್ಮಾದೇಷಾಂ ಪ್ರದಾನೇನ ಸ ಮೇ ಶುಕ್ರಃ ಪ್ರಸೀದತು ||

ಇದಂ ಸಹಿರಣ್ಯ ದಕ್ಷಿಣಾಕಂ ಸತಾಂಬೂಲಂ ನಿಷ್ಪಾವದಾನಂ ಶುಕ್ರಗ್ರಹ ಪೀಡಾ ಪರಿಹಾರದ್ವಾರಾ ಶುಕ್ರಗ್ರಹಾಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಪ್ರೀತಿಂ ಕಾಮಯಮಾನಃ ತುಭ್ಯಮಹಂ ಸಂಪ್ರದದೇ । ದತ್ತಂ ನ ಮಮ, ನ ಮಮ । ಅನೇನ ಸದಕ್ಷಿಣಾಸತಾಂಬೂಲನಿಷ್ಪಾವದಾನೇನ ಶುಕ್ರಾಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಃ ಸುಪ್ರೀತೋ ಅಸ್ತು ಇತಿ ಭವಂತೋ ಬ್ರುವಂತು । ಬ್ರಾಹ್ಮಣಃ – ಶುಕ್ರಗ್ರಹಪೀಡಾಪರಿಹಾರದ್ವಾರಾ ಶುಕ್ರಾಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಃ ಸುಪ್ರೀತೋ ಅಸ್ತು ||

## ಶನಿವಾರವ್ರತ

ಶನಿವಾರದಂದು ಶನೈಶ್ಚರನನ್ನು, ಹನುಮಂತದೇವರನ್ನು, ನೃಸಿಂಹದೇವರನ್ನು ಪೂಜಿಸಬೇಕು. ಗಂಧ ಪುಷ್ಪಾದಿಗಳಿಂದ ಪೂಜಿಸಿ, ಎಳ್ಳೆಣ್ಣೆಯ ದೀಪವನ್ನು ಹಚ್ಚಬೇಕು. ಕುಂಜರಶಾಕ(ಪಾದರೀ ಸೊಪ್ಪು)ದ ಪಲ್ಯವನ್ನು ನೈವೇದ್ಯಮಾಡಬೇಕು. ಇದರಿಂದ ಅನಿಷ್ಟನಿವೃತ್ತಿಯೂ, ಇಷ್ಟಪ್ರಾಪ್ತಿಯೂ ಆಗುವುದು. ಶ್ರಾವಣಶನಿವಾರದಂದು ಪಡಿ ಬೇಡುವುದೂ, ಎಳ್ಳುದೀಪವನ್ನೂ ಹಚ್ಚುವುದೂ ಪದ್ಧತಿಯಲ್ಲಿದೆ.

## ಮಂಗಳಗೌರೀವ್ರತ–

ಸ್ತ್ರೀಯರು ನಾಲ್ಕು ಅಥವಾ ಐದು ಮಂಗಳವಾರಗಳಲ್ಲಿ ಬಂಗಾರ, ಬೆಳ್ಳಿ ಮೊದಲಾದ ಧಾತುಗಳಿಂದ ಗೌರೀಪ್ರತಿಮೆಯನ್ನು ನಿರ್ಮಿಸಿ ಪೂಜಿಸಬೇಕು.

ಹದಿನಾರು ತೆಂಬಿಟ್ಟಿನ ದೀಪಗಳನ್ನು ಹಚ್ಚಬೇಕು. ತಾಯಿಗೆ ವಾಯನದಾನವನ್ನು ಕೊಡಬೇಕು. ವಿವಾಹವಾದ ಐದು ವರ್ಷಗಳಲ್ಲಿ ಈ ವ್ರತವನ್ನು ಕಡ್ಡಾಯವಾಗಿ ಮಾಡುವುದು ಕಂಡುಬಂದಿದೆ. ಕನ್ಯೆಯರೂ ಈ ವ್ರತವನ್ನು ಮಾಡಿ ಉತ್ತಮ ಪತಿಯನ್ನು ಪಡೆಯಬಹುದು. ಈ ವ್ರತದಿಂದ ದಾಂಪತ್ಯ ಸುಖವು ಲಭಿಸುವುದು.

### ಶ್ರಾವಣ ಮಾಸದ ಮೂರನೇ ಶುಕ್ರವಾರದ ಗೌರಿ ಹಾಡು

ದಯಮಾಡಿ ಬಾರಮ್ಮ ಶಿವನರ್ಧಾಂಗಿ ಮಂಗಳಗೌರಿ ॥ಪ॥ ಶ್ರಾವಣಮಾಸದಿ ಐದು ಮಂಗಳವಾರ ಶಿವನ ಪಟ್ಟದ ರಾಣಿ ಬಾರೆ ಮಂದಿರಕೆ । ಬಿಡಿಮಲ್ಲಿಗೆಯ ನಡೆಮುಡಿ ಹಾಸುವೆ ಕಡಿಯದೆ ಸೌಭಾಗ್ಯ ಕೊಟ್ಟು ಕಾಪಾಡೆ ॥1॥ ಗೌರೀದೇವಿ ನಿನ್ನನು ಪೂಜಿಸಿ ರಾಜನ ಕುವರಿ ಮರೆತಿಪ್ಪಾ ಪತಿಯ ಪಡೆದಳು । ಹದಿನಾರನೆ ವರ್ಷ ಗಂಡವ ಕಳೆದು ಸತಿಪತಿಯರನು ಸಂತೋಷ ಪಡಿಸಿದೆ ॥2॥ ಕಪಿಲನಾಮಕನ ಸಹೋದರಿಯೆ ವಿಪುಲವಾಗಿ ನಿನ್ನನು ಪೂಜಿಪ ಜನರ ರಕ್ಷಿಸುವಿ । ಲಕ್ಷ್ಮೀ-ನರಸಿಂಹನಾಶೀರ್ವಾದದಿ ಕನ್ನಿಕೆಯರಿಗೆ ಛಲೋ ಪತಿಯನು ಕೊಡುವಿ ॥3॥

## ಸಂಪತ್ತು ಶುಕ್ರವಾರದ ಪೂಜೆ

### ಶ್ರಾವಣ ಮಾಸದ ಶುಕ್ರವಾರ ಲಕ್ಷ್ಮೀಪೂಜೆ

1. ಚೈತ್ರಶುಕ್ಲ ತದಿಗೆಯಿಂದ ಮೂರು ತದಿಗೆಗಳು ವಸಂತ ಗೌರೀಪೂಜೆಗೆ ಹೇಗೆ ಪ್ರಶಸ್ತವೋ ಹಾಗೆಯೇ ಶ್ರಾವಣ ಮಾಸದ ಶುಕ್ರವಾರಗಳೆಲ್ಲವೂ ಲಕ್ಷ್ಮೀಪೂಜೆಗೆ ಪ್ರಶಸ್ತ. ವಿಶೇಷವಾಗಿ ಹುಣ್ಣಿಮೆಯ ಹಿಂದಿನ ಶುಕ್ರವಾರ ವರಮಹಾಲಕ್ಷ್ಮಿಯ ಪೂಜೆಗೆ ಮೀಸಲು. ಗೋಧೂಳಿಯ ಲಗ್ನದಲ್ಲಿ ಲಕ್ಷ್ಮೀಪೂಜೆ ಮಾಡಬೇಕೆಂದು ವಿಧಿ.

ಶ್ರಾವಣಮಾಸದಲ್ಲಿ ಅಪರೂಪಕ್ಕೆ ಐದು ಶುಕ್ರವಾರಗಳೂ ಬರುವುದಿದೆ. ಆಗ ಐದು ಶುಕ್ರವಾರವೂ ಪೂಜೆ ಮಾಡಬೇಕು. ಮಣ್ಣಿನ ತಂಬಿಗೆಯ ಹೊರಭಾಗದಲ್ಲಿ ಮುಂಭಾಗದಲ್ಲಿ ಬಿಳಿಯ ಸುಣ್ಣದಿಂದ ಗೌರಿಯ ಮುಖವನ್ನು ಬರೆಯಬೇಕು. ಉಳಿದ ನಾಲ್ಕುಭಾಗಗಳಲ್ಲಿ ಕ್ರಮವಾಗಿ ಆನೆ, ಆಕಳು, ಚಕ್ರ-ಶಂಖ, ಗದಾ-ಪದ್ಮ ಚಿತ್ರಗಳನ್ನು ಬರೆಯಬೇಕು. ಈ ತಂಬಿಗೆಯೊಳಗೆ ಅಕ್ಕಿಯನ್ನು ಐದು ಸಲ ಹಾಕಬೇಕು. ಅರಿಷಿನ - ಕುಂಕುಮ - ಕರಿಮಣಿ - ಅಡಿಕೆ ಅರಿಷಿಣಬೇರು - ಬೆಳ್ಳಿಯ ಕಾಲುಂಗುರ

- ಪಿಲ್ಲೆ ಮುಂತಾದವುಗಳನ್ನು ಹಾಕಿ ಮೇಲೆ ಮುಚ್ಚಳ ಮುಚ್ಚಬೇಕು. ತಾಮ್ರದ ಮುಚ್ಚಳವನ್ನು ಮುಚ್ಚಬೇಕು. ಈ ಮುಚ್ಚಳದ ಮೇಲೂ ಅಷ್ಟದಳಪದ್ಮ ಆಗಲೀ, ಅಥವಾ ಗೌರಿಯ ಮುಖವನ್ನಾಗಲೀ ಬರೆಯಬೇಕು. ಹೀಗೆ ಸಿದ್ಧಪಡಿಸಿದ ತಂಬಿಗೆಯು ಗೌರಿಯ ಪ್ರತಿಮೆಯೆಂದು ತಿಳಿದು, ಆ ತಂಬಿಗೆಗೆ ಮಂಗಳಸೂತ್ರ ಕಟ್ಟಿ ಶುಭ್ರವಾದ ಮಂಟಪದಲ್ಲಿ ಅಕ್ಕಿಯನ್ನು ಹರಡಿ ಅದರ ಮೇಲೆ ಕುಂಕುಮದಿಂದ ಪದ್ಮವನ್ನು ಬರೆದು, ವ್ರತದ ಸಂಕಲ್ಪಮಾಡಿ ತಂಬಿಗೆ/ಚಟಿಗೆಯನ್ನು ಆ ಮಂಟಪದಲ್ಲಿ ಸ್ಥಾಪಿಸಬೇಕು. ನಂತರ ನಿರ್ವಿಘ್ನವಾಗಿ ಒಂದು ತಿಂಗಳು ಪೂರ್ತಿ ಈ ಗೌರಿಯನ್ನು ಕೂಡಿಸಬೇಕಾಗಿರುವುದರಿಂದ ಗಣಪತಿ ಪೂಜೆಯನ್ನು ಮಾಡಿ, ಪೀಠಪೂಜೆ, ಪ್ರಾಣಪ್ರತಿಷ್ಠೆಗಳನ್ನು ಮಾಡಿ ಪುರುಷಸೂಕ್ತ - ಶ್ರೀಸೂಕ್ತಗಳಿಂದ ಶ್ರೀಲಕ್ಷ್ಮೀ-ನಾರಾಯಣರಿಗೆ ಷೋಡಶೋಪಚಾರಪೂಜೆಯನ್ನು ಮಾಡಬೇಕು. ಈ ಗೌರಿಯನ್ನು ಸಾಕ್ಷಾತ್ ಮಹಾಲಕ್ಷ್ಮೀ ಎಂದೇ ತಿಳಿದು ಪೂಜಿಸಬೇಕು. ಆ ದಿನ ಮಹಿಳೆಯರು ಸಂಪತ್ ಶುಕ್ರವಾರದ ಹಾಡು ಎಂಬ ವ್ರತಕಥೆಯನ್ನು ಹೇಳುವ ವಾಡಿಕೆಯೂ ಇದೆ. ಕಜ್ಜಲೀ-ತೃತೀಯ ಎಂಬ ವಿಷ್ಣುಪೂಜೆಯ ಹಬ್ಬವನ್ನು ಕೆಲವು ಪ್ರಾಂತಗಳಲ್ಲಿ ಆಚರಿಸುತ್ತಾರೆ.

### ಶ್ರಾವಣ ಶುಕ್ರವಾರ ಲಕ್ಷ್ಮೀಹಾಡು –

ಹರನ ಕುಮಾರನ ಚರಣಕಮಲಕ್ಕೆರಗಿ ಶಾರದೆಗೆ ವಂದಿಸುವೆ ॥ ಶರಧಿಶಯನಗೆ ಸೆರಗೊಡ್ಡಿ ಬೇಡುವೆ ಶರಧಿ ಸುತೆಯ ಕಥೆಯೊರೆಯುವೆ ॥ 1 ॥ ಸಾಕ್ಷಾತ್ ಶ್ರೀ ಹರಿವಕ್ಷಸ್ಥಳವಾಸಿಯೆ ಇಕ್ಷುಕ್ಷೇಪಣನನ್ನೆ ಪಡೆದ । ಮೋಕ್ಷದಾಯಕಳೆ ಶ್ರೀ ಲಕ್ಷ್ಮಿಯೆ ಕರುಣ ಕಟಾಕ್ಷದಿ ನೋಡಬೇಕೆನ್ನ ॥ 2 ॥ ಶ್ರಾವಣ ಮಾಸದ ಮೊದಲ ಶುಕ್ರವಾರ ಮಾಧವನರಸಿ ಮಹಾಲಕ್ಷ್ಮಿ । ದೇವಿಯ ಮಹಿಮೆ ಕೊಂಡಾಡುವದೀ ಕಥೆ ಕೇಳುವುದು ಕಿವಿಗೊಟ್ಟು ಜನರು ॥ 3 ॥ ಇರುತಿರಲೊಂದು ಪಟ್ಟಣದೊಳು ಬ್ರಾಹ್ಮಣ ಮಡದಿ ಮಕ್ಕಳು ಸಹಿತಾಗಿ । ಹಿಡಿದು ತಂಬೂರಿ ತಂಬಿಗೆಯ ಗೋಪಾಳಕ್ಕೆ ಬಿಡದೈದು ಮನೆ ತಿರುಗುತಲಿ ॥ 4 ॥ ಸೊಸೆಯರು ನಾಲ್ಕು ಮಂದಿಯು ಗಂಡು ಮಕ್ಕಳು ಹಸುಗೂಸುಗಳು ಮನೆತುಂಬ । ಅಶನವಸನಕ್ಕಿಲ್ಲ ಹಸಿದ ಮಕ್ಕಳಿಗ್ಹಾಲು ಮೊಸರು ಅನ್ನವು ಮೊದಲಿಲ್ಲ ॥ 5 ॥ ಅತಿ ಗುಣವಂತರು ಗತಿಯಿಲ್ಲ ಗ್ರಾಸಕ್ಕೆ

ಮಿತಭೋಜನವ ಮಾಡುವರು । ವ್ರತ ನೇಮ ನಿಷ್ಠೆ ನಿರತ ದರಿದ್ರರನ್ನು ಶ್ರೀಪತಿ ಸತಿ ದಯದಿ ನೋಡುವಳು ॥ 6 ॥ ಒಂದು ದಿನದ ಬಂದ ಮಂದಿ ಮಂದಿರದಲ್ಲಿ ಚಂದಾದ ಸುಣ್ಣ ಸಾರಣೆಯು । ರಂಗವಲ್ಲಿಯ ಚಿತ್ರ ಬಣ್ಣ ಕಾರಣೆ ಮಾಡಿ ಮುಂದೆ ತೋರಣ ಕಟ್ಟುತ್ತಿಹರು ॥ 7 ॥ ಮನೆ ಮನೆಯಲ್ಲಿ ಮಹಾಲಕ್ಷ್ಮಿದೇವಿಯರ ಚಟ್ಟಿಗೆ ಬರುವುದನೆ ತಾ ಕಂಡು । ಇದು ಏನು ನೋಂಪಿ ಎನಗೆ ಹೇಳ ಬೇಕೆಂದು ಘನಭಕ್ತಿಯಿಂದ ಕೇಳಿದನು ॥ 8 ॥ ಕ್ಷೀರಸಾಗರದಲ್ಲಿ ಹುಟ್ಟಿದ ಮಹಾಲಕ್ಷ್ಮಿ ದೇವಿ ದೇವರ ಪಟ್ಟದರಸಿ ॥ ಶ್ರಾವಣಮಾಸ ಸಂಪತ್ತು ಶುಕ್ರವಾರ ನಾವು ಪೂಜೆಯ ಮಾಡಬೇಕು ॥ 9 ॥ ಎನಗೊಂದು ಚಟ್ಟಿಗೆ ಬರೆದು ಕೊಟ್ಟರೆ ನಮ್ಮ ಮನೆಯೊಳಿಟ್ಟು ಪೂಜಿಪೆನು । ವಿನಯದಿಂದೇಳಿಕೊಂಡರೆ ಒಂದು ಚಟ್ಟಿಗೆ ಬರೆದುಕೊಟ್ಟರು ಬಲಗೈಲಿ । 10 ॥ ಸಿರಿದೇವಿ ಚಟ್ಟಿಗೆ ಹಿಡಿದು ಗೋಪಾಳಕ್ಕೆ ಹೋದನು ಮನೆ ಮನೆಯಲ್ಲಿ । ಗೋಧಿ ಅಕ್ಕಿ ಬೇಳೆ ತುಪ್ಪವ ತಂದು ಇತ್ತರು ಹಿಡಿ ಹಿಡಿರೆನುತ ॥ 11 ॥ ತಂದ ಪದಾರ್ಥವ ತನ್ನ ಹೆಂಡತಿ ಕರೆದು ಮುಂದಿಟ್ಟು ವಾರ್ತೆಯನ್ನು ಹೇಳಿದನು । ಇಂದಿರೆ ದೇವಿಯ ಹೀಗೆಂದು ಪೂಜೆಯ ಮಾಡಿ ಆನಂದವ ಕೊಡುವಳು ನಮಗೆ ॥ 12 ॥ ಕಬ್ಬು ಬಿಲ್ಲೊಡೆವ ಕಾಮನ ಮಾತೆ ಮಹಾಲಕ್ಷ್ಮಿ ಉರ್ವಿಯೊಳುತ್ತ ಮಳೀಕೆ । ಹಬ್ಬದೂಟಕೆ ಬಂದ ಬ್ರಾಹ್ಮಣರಿಗೆ ಮತ್ತೊಬ್ಬ ಮುತ್ತೈದೆಗೇಳೆಂದ ॥ 13 ॥ ಚಿಕ್ಕ ಸೊಸೆಯು ಎಣ್ಣೆ ಕುಂಕುಮ ಕೈಯಲ್ಲಿ ತಕ್ಕೊಂಡು ನಡೆದ್ಹಾದಿಯಲಿ । ಚೊಕ್ಕೆ ಚಿನ್ನದ ಗೊಂಬೆಯಂತಿದ್ದ ಮುತ್ತೈದೆ ಫಕ್ಕನೆ ಬಂದು ಕೇಳಿದಳು ॥ 14 ॥ ಹುಡುಗಿ ನೀನೆ ಪೋಗುವೆಯೆ ನಿಮ್ಮನೆಯಲ್ಲಿ ಅಡಿಗೆಯೇನೇನು ಮಾಡುವಿರಿ । ಹಿಡಿದೆಣ್ಣೆ ಕುಂಕುಮ ಕೊಡುವುದಿನ್ಯಾರಿಗೆ ಕೊಡಬಾರದೇನೆ ನೀನೆನಗೆ ॥ 15 ॥ ಯಾರಾದರೇನಮ್ಮ ದಾರಿ ನೋಡದ ಮುಂಚೆ ನೀನೆ ಬಾ ನಮ್ಮ ಮಂದಿರಕೆ । ಹೇಳಿ ಮುತ್ತೈದೆ ಹಿಗ್ಗಿದಳಂದತ್ತೆ ಮಾವನ ಮುಂದರುಹಿದಳು ॥ 16 ॥ ಮನೆಯ ಸಾರಿಸಿ ಸುಣ್ಣ ಸಾರಣೆ ರಂಗೋಲೆ ಬರೆದು ಬಾಗಿಲಿಗೆ ಬಣ್ಣವನು । ತಳಿರು ತೋರಣ ಕಟ್ಟಿ ಸರ್ವರು ಸಂಭ್ರಮದಿಂದ ಎರೆದುಕೊಂಡರೆಲ್ಲರು ಬೇಗ ॥ 17 ॥ ಕಮಲ ಕೇದಗೆ ಕಬ್ಬು ಕದಳಿಕಂಬ ಬಾಳಿ ಗೊನೆ ಕಟ್ಟಿ ಚಿತ್ರ ಮಂಟಪವು ॥ ಎಡಬಲದಲ್ಲಿ ನಾಲ್ಕು ನಂದಾದೀವಿಗೆ ಹಚ್ಚಿ ನಡುವೆ ಶ್ರೀ ಪದ್ಮ ಪೀಠಗಳು ॥ 18 ॥ ಚಟ್ಟಿಗೆ ಒಳಗ್ಹಾಕಿ ಐದು ಫಲವು ತುಂಬಿ ಮುತ್ತೈದೆರೆಲ್ಲರು ನೆರೆದರು । ಕಟ್ಟಿದರು ತೋರಣ ಮಾಂಗಲ್ಯ ಮಹಲಕ್ಷ್ಮಿಗೆ ಪ್ರತಿಷ್ಠೆ ಮಾಡಿದರು

ಸಂಭ್ರಮದಿ ॥ 19 ॥ ಅರಿಸಿನ ಕುಂಕುಮ ಗಂಧ ಬುಕ್ಕಿಟ್ಟು ಗೆಜ್ಜೆ ವಸ್ತ್ರ ಪಾರಿಜಾತ ಸಂಪಿಗೆಯ ॥ ಮುಡಿಸಿ ಮಲ್ಲಿಗೆ ದಂಡೆ ಒಡೆಸಿ ತೆಂಗಿನಕಾಯಿ ಉಡಿತುಂಬುತ್ತಿತ್ತಿ ಫಲಗಳು ॥ 20 ॥ ಭಕ್ಷ್ಯ ಶಾವಿಗೆ ಪರಮಾನ್ನ ಚಿತ್ರಾನ್ನ ಸಣ್ಣಕ್ಕಿ ಶಾಲ್ಯನ್ನ ಸೂಪಗಳು । ಚಕ್ಕುಲಿ ಗಿಲಗಂಚಿ ಚಂದುಬ್ಬೇರುವ ಹಪ್ಪಳ ಸಂಡಿಗೆ ಅಂಬೋಡೆಗಳು । 21 ॥ ಸಕ್ಕರೆ ಘೃತ ಕ್ಷೀರ ಸಕಲ ಪಕ್ವಾನ್ನ ಮಂಡಿಗೆ ಬೀಸೂರಿಗೆ ಗುಳ್ಳೋರಿಗೆಗಳು । ಚಂದ್ರನಂತ್ಹೊಳೆವ ಶಾವಿಗೆ ಘಣೆ ಆ ದಿವ್ಯ ಬುಂದ್ಯ ಬುರಿಬುರಿ ಅನ್ನ ರಸವು ॥ 22 ॥ ಬೇಕಾದ ಬೇಸನ್ನು ಬಿಳಿಯ ದಳೇದುಂಡಿ ಮೋತೀಚೂರು ಚೂರ್ಣಲಾಡು । ಸೇತು ಕಟಕದ ಬಿಳುಪಿನಂತೆ ಜಿಲೇಬಿ ಸಿಖೇದುಂಡಿ ಮುಖವಿಲಾಸಗಳು ॥ 23 ॥ ಹೋಳಿಗೆ ಎಣ್ಹೊರಿಗೆ ಹೊಯ್ ದೊಸೇ ಕಾಯ್ ಹಾಲು ಕರಿದ್ಹೂರಣ ಕಡಬು ॥ ಸುರಳಿಹೊಳಿಗೆ ಉದ್ದಿನಬೇಳೆ ಮೆಣಸಿನಕಾಯಿ ಇಂಗಿನಿಂದೊಪ್ಪುವ ಕಡುಬು ॥ 24 ॥ ಸಾರು ಸಂಬಾರ ಸಾಸಿವೆಕಾಯಿ ಪಲ್ಯದ ಉಪ್ಪೇರಿ ಉಪ್ಪಿನಕಾಯಿ ರಸವು । ಖೀರು ಮಾಲತಿ ಗವಲಿ ಪರಡಿ ಪರಮಾನ್ನ ಮುನ್ನಾರ ಚಟ್ಟಣಿ ಕೋಸಂಬರಿಗಳು ॥ 25 ॥ ಹಾಗಲಕಾಯಿ ಸೌತೆ ಹಂದರದವರೆ ಹೀರೆ ಬಾಳೆ ಬೆಂಡೆ ಕುಂಬಳವು । ಮಾಗಿದ್ಹಲಸಿನಕಾಯಿ ಕಲಸುಮೇಲೋಗರ ಗೆಣಸು ಗುಳ್ಳದಕಾಯಿ ಬಜ್ಜಿಗಳು ॥ 26 ॥ ನಿಂಬೆಭಾತು ಸೌತೆಭಾತು ಕೇಸರಿಭಾತು ಕೆನೆ ಕೆನೆ ಮೊಸರು ಒಗ್ಗರಣೆ । ಹಸಿ ಅಲ್ಲ ಬಿಸಿ ಹಾಲು ಹೊಸಬೆಣ್ಣೆಯಿಂದೊಪ್ಪುವ ಕಲಸ ಬಾಳ್ಕಾಭಾತುಗಳು ॥ 27 ॥ ಮುದ್ದು ಮಹಾಲಕ್ಷ್ಮಿಗೆ ನೈವೇದ್ಯ ಮಾಡಿದರು ಅನಿರುದ್ಧಮೂರುತಿ ಸಹಿತಾಗಿ । ಶುದ್ಧ ಸುಣ್ಣವು ಎಲೆಯಡಿಕೆ ಯಾಲಕ್ಕಿ ಪತ್ರೆಕಾಯಿ ಕಾಚು ಲವಂಗ ॥ 28 ॥ ಹಚ್ಚಿಕೊಂಡೆಲ್ಲರರಿಸಿನ ಗಂಧ ಕುಂಕುಮ ಎತ್ತಿ ಚಾಮರ ಬೀಸುತಲೆ । ಅಚ್ಯುತನರಸಿ ಅನುಗ್ರಹದಿ ನೋಡಿದಳ್ ಮೆಚ್ಚಿ ಮುಚ್ಚಿದ ಕಣ್ಣನ್ನು ತೆರೆದು ॥ 29 ॥ ಅಮರಾದಿ ಸುರರೊಡೆಯನು ರಾಜಲಕ್ಷ್ಮಿಗೆ ಸರುವ ಸಮರ್ಪಣೆ ಮಾಡಿ । ನಮೋ ನಮೋಯೆಂದು ಕೈ ಮುಗಿದು ಮಂತ್ರಾಕ್ಷತೆ ಶಿರದಲಿ ತೂರುತ ಬೇಡುವರು ॥ 30 ॥ ಹಾಡುತ್ತ ಪಾಡುತ್ತ ಮಾಡುತ್ತ ಲಾರತಿ ಬೇಡುತ್ತ ಮುಡಿದ ಮಲ್ಲಿಗೆಯ । ನೋಡುತ್ತ ನಲಿದಾಡುತ್ತ ತಾ ದಯ ಮಾಡುತ್ತ ಕೊಟ್ಟಳಾಗೊರವ ॥ 31 ॥ ಹೊತ್ತು ಬಹಳಾಯಿತು ಮುತ್ತೈದೆ ಬರಲಿಲ್ಲ ಮತ್ತೇನು ಇದಕೆ ಉಪಾಯ ॥ ಅಷ್ಟು ಅಡಿಗಿ ಎಲೆ ಬಡಿಸಿ ಕುಂಕುಮ ವೀಳ್ಯ ಇಟ್ಟು ಬುಟ್ಟಿಯನೆ ಮುಚ್ಚಿದರು ॥ 32 ॥ ಗಂಡ ಹೆಂಡಿರು ಕೂಡಿ ಬ್ರಾಹ್ಮಣರೊಡಗೂಡಿ

ಉಂಡು ವೀಳ್ಯವನೆ ತಕ್ಕೊಂಡು । ಇಂದು ನಮಗೆ ಜಯ ಶುಭ ಕಾಲ ಬಂದಿತು ಹೀಗೆಂದು ಸಂತೋಷ ಪಡುವರು ॥ 33 ॥ ಮರುದಿನ ಸಂಪತ್ತು ಶನಿವಾರ ಹಿಟ್ಟಿನ ಕಡಬು ಅಂಬಲಿ ಪರಮಾನ್ನ । ತಿಳಿ ಗಾಣದೆಳ್ಳೆಣ್ಣೆ ಹಿಂಡಿ ಪಲ್ಯನೆ ಮಾಡಿ ಗೌರಿ ಪೂಜೆಗಿಟ್ಟರು ನೈವೇದ್ಯವನು ॥ 34 ॥ ಎರಡನೆ ಶುಕ್ರವಾರ ದಿನ ಮುತ್ತೈದೆಗೆ ದೃಢವಾಗಿ ಹೇಳಿ ಬಾಯೆನುತ । ಎಣ್ಣೆಗ್ಯೆಯ ಮುಚ್ಚಿಕೊಂಡೆಣ್ಣೆ ಕುಂಕುಮವನು ಹಿಡಿದಳಿನ್ನೊಂದು ಪಥವನು ॥ 35 ॥ ಬಾಜಾರ ಬಿಟ್ಟು ಬದಲು ಮಾರ್ಗ ಹಿಡಿಯಲು ಹಾದಿಗೆ ಬಂದಡ್ಡ ಗಟ್ಟಿ । ಆದಿ ಶುಕ್ರವಾರ ಹೇಳಿ ಯನ್ನನೆ ಬಿಟ್ಟು ದಾರಿಗ್ಹೋಳುವಿಯೆ ಭೋಜನಕೆ । 36 ॥ ನಮ್ಮ ಗೊಡವೆ ಯಾತಕಮ್ಮ ನಿಮಗೆ ಸುಮ್ಮನೊಗು ಶುಕ್ರವಾರದಲ್ಲಿ । ನಿಮ್ಮ ಎಲೆಯ ಬಡಿಸಿ ಅಂದಿಗಿಂದಿಗೆ ಆದೆ ಉಣ್ಣ ಬೇಕದ-ಹೋರ್ಗಮ್ಮ ॥ 37 ॥ ತಂಗಳೂಟಗಳುಂಬೊ ಕಂಗಾಳಿ ನಾನಲ್ಲ ಬಂಗಾರದಂಥ ಮುತ್ತೈದೆ ॥ ತಿಂಗಳಾಗಲಿ ಹಂಗು ನೂಲುಕಟ್ಟಿನಲಿ ತಂಗಳ ನಿನಗುಣಿಸುವೆನು ॥ 38 ॥ ಬಡಿವಾರದ ಮಾತೇಕೆ ಬಡಿಸಿಟ್ಟೆಲೆಯನುಂಬೊ ಬಡವೆಯಲ್ಲ ನಾ ಭಾಗ್ಯವಂತೆ । ತಡೆಯದೆ ಬರುವೆನು ತಾ ಎಣ್ಣೆ ಕುಂಕುಮ ಹಿಡಿದೆಳಕೊಂಡು ನಡೆದಳು ॥ 39 ॥ ಕೊಟ್ಟೆಣ್ಣೆ ಕುಂಕುಮ ಥಟ್ಟನೆ ನಡೆದಳು ಅಷ್ಟು ವಾರ್ತೆಯನೆ ಹೇಳಿದಳು । ಇಂಥ ಧಿಟ್ಟ ಮುತ್ತೈದೆ ದೇಶದ ಮೇಲೆ ಕಾಣೆನು ಎಟ್ಟೆಳಲಾಕೆ ಚಲ್ವಿಕೆಯ ॥ 40 ॥ ಸಿರಿದೇವಿ ಪೂಜೆ ನೈವೇದ್ಯಗಳಾದವು ಬಡಿದವು ಮೂರು ಘಂಟೆಗಳು । ಬರಲಿಲ್ಲ ಮುತ್ತೈದೆಯೆಂದೆಲೆ ಬಡಿಸಿಟ್ಟು ಸರುವರೂಟವನೆ ಮಾಡುವರು ॥ 1 ॥ ಮೂರನೆ ವಾರ ಮುತ್ತೈದೇಗ್ಹೇಳುವರು ಮತ್ಯಾರೆಂದ್ವಿಚಾರ ಮಾಡುವರು ॥ ಮಾವನವರೆ ಮುದ್ದು ಮಾತ ನೋಡಿರಿಯೆಂದು ತಾನ್ಹೋದಳಿನ್ನೊಬ್ಬ ಸೊಸೆಯು ॥ 42 । ಮುಡಿಬಾಗಿ ಮುಚ್ಚಿಕೊಂಡೆಣ್ಣೆ ಕುಂಕುಮವನ್ನು ನಡೆದಳಿನ್ನೊಂದು ಓಣಿಯಲಿ । ಬಡಬಡ ಬಂದು ಕೈ ಹಿಡಿದೆಣ್ಣೆ ಕುಂಕುಮ ಕೊಡುವದಿನ್ಯಾರಿಗೌತಣವ ॥ 43 ॥ ಔತಣವಲ್ಲಮ್ಮ ಅತಿ ಬಡವರು ನಾವು ಗತಿಯಿಲ್ಲ ಗೌರಿ ಹಬ್ಬಕ್ಕೆ । ಸುತರಾಡಹೋಗ್ಯಾರೆ ಹುಡುಕುತ ಬಂದೆ ಬಿಡು ದಾರಿ ಪತಿ ಬೈವರೆನ್ನ ಮನೆಯಲ್ಲಿ ॥ 44 ॥ ಒಗೆತನದ ಮಾತಿನ ಬಗೆ ನಾನು ಬಲ್ಲೆನು ಹಗರಣಗಿತ್ತಿ ನೀನಹುದೇ ॥ ಮೊದಲಿನ ಶುಕ್ರವಾರ ಹೇಳಿ ಎನ್ನನೆ ಬಿಟ್ಟು ಬದಲು ಮತ್ತೆದೆನ್ನೇಳುವರೆ । 45 ॥ ಎರಡು ವಾರವು ಹಸಬೂದೂಟಾಯಿತು ಬರಡಾಕಳ ಹೈನ ಉಂಡಂತೆ ॥ ಕಡಲೆಹೂರಣ ಕರಿಗಡಬು

ಕಡೆದ ಬೆಣ್ಣೆ ಕಾಸಿದ ತುಪ್ಪ ಬಡಿಸೆನಗೆ ॥ 46 ॥ ಮೆಚ್ಚಿಕೊಂಡಳಾಕೆ ಮಾತಿಗೆ ಮರುಳಾದಳು ಹಚ್ಚಿ ಕುಂಕುಮ ಎಣ್ಣೆ ಕೊಟ್ಟು । ನಿಶ್ಚಯವೇನಮ್ಮ ನೀನೆ ಬರುವದೆಂದು ಈ ಕ್ಷಣ ಬರುವೇನ್ಹೋಗೆಂದಳು ॥ 47 ॥ ಕೊಟ್ಟೆಣ್ಣೆ ಕುಂಕುಮ ಥಟ್ಟನೆ ಬಂದಳು ಒಂದೊಂದನ್ನು ಮಾಡಿ ವರ್ಣಿಸುತ । ಇಂದಾಕೆ ಮನಕೆ ಬಂದಂತಡಿಗೆ ಮಾಡು ಹೀ ಗೆಂದು ಸಂತೋಷಪಡುವರು ॥ 48 ॥ ಕಡಲೆ ಹೂರಣ ಗಸಗಸಿ ಕೊಬ್ಬರಿ ಯಾಲಕ್ಕಿ ಪುಡಿದ್ರಾಕ್ಷೆ ಉತ್ತತ್ತಿ ಹಳಕು । ಕಲಿಸಿ ಕಲ್ಲು ಸಕ್ಕರೆ ಕರಿಗಡಬು ಬೆಣ್ಣೆ ಕಾಸಿದ ತುಪ್ಪವು ಸೋಸಿಲಿಂದ । 49 । ಸಿರಿದೇವಿ ಪೂಜೆ ನೈವೇದ್ಯಗಳಾದವು ಹೊರಗಾರು ಗಂಟೆ ಬಡಿದವು ! ಬರಿದೆ ಬಾರಿಸದೆ ಬರಿಯ ಮಾತಿನ ಜಾಣೆ ಬರಲಿಲ್ಲ ಹಾಗೆಂದು ನುಡಿದರು ॥ 50 ॥ ಹುಟ್ಟಿದ ಮೇಲಿಂಥ ಕಡಬು ಕಂಡಿದ್ದಿಲ್ಲನಮ್ ಹೊಟ್ಟೆಗುಂಡವರು ನಾವಲ್ಲ। ಮುತ್ತೈದೆ ಪುಣ್ಯದಿಂದೂಟ ದೊರಕಿತೆಂದವರು ನಗುತ ನುಡಿದರು ॥ 51 ನಾಲ್ಕನೇ ವಾರ ನಾನ್ಹೇಳಿ ಬರುವೆನೆಂದು ಆಕೆ ಹೋದಳು ಹಿರಿಯ ಮಗನರಸಿ । ಬೇಕಾದವರು ಬಂದು ಕಾಡಿದರೂ ಕೂಡ ಯಾಕೆ ನನಗೊಬ್ಬರ ಭಿಡೆಯು ॥ 52 ॥ ದೊಡ್ಡ ಬಾಗಿಲ ಬಿಟ್ಟು ದಿಡ್ಡಿ ಬಾಗಿಲ ಮುಂದೆ ಸದ್ದು ಮಾಡದೆ ಬರುತಿರಲು ॥ ವಜ್ರದ ಗೊಂಬೆಯಂತ್ಹೊಳೆವ ಮುತ್ತೈದೆ ನಿಂತಿದ್ದಾಳಾಗೆದುರಿಗೆ ಬಂದು । 53 ॥ ಸರ್ವರೊಳಗೆ ಹಿರಿಯ ಸೊಸೆಯು ನೀನೆಂಬಂಥ ಗರುವಾಹಂಕಾರದಿ ನೀನು । ಸರಿಯಾಗಿ ಮೂರು ವಾರ ಹೇಳಿ ಎನ್ನನು ಕರೆಯದುಂಬುವ ಕಾರಣವೇನು ॥ 54 ॥ ಕರಿಲಿಕ್ಕೆ ಬರಲಿಕ್ಕೆ ಕಾಣೆ ನಿಮ್ಮನು ನಾನು ತಿರುಗುವಿ ನಾರದರಂತೆ । ಇರುವ ಮಂದಿರವ ತೋರಿದರೀಗ ನಾ ನಿಮ್ಮ ಕರೆದುಣಿಸುವೆ ನಿಮಗೆಂದ್ಲು ॥ 55 ॥ ದೂರುಂಟು ನಮ್ಮನೆ ದಾರಿ ಅಸಾಧ್ಯವು ನೋಡಿ ಬಂದವರು ದಾರಿಲ್ಲ। ಆಹಾರ ನಿದ್ರೆ ಸಂಸಾರ ಸಮುದ್ರವು ಮೀರಿದವರಿಗೆ ಕಾಂಬುವದು ॥ 56 ॥ ಮಧ್ಯಾಹ್ನದ ಹೊತ್ತಿಗೆ ಸಿದ್ಧಾಗಿ ಬರುವೆನು ಭದ್ರವಾದ್ವಚನವ ಕೊಡುವೆನು। ಶುಭ್ರವಾದಂಥ ಕೊಬ್ಬರಿ ಭಾರಿಬಟ್ಟಲು ತರಿಸಿಟ್ಟು ಕಡಲಿ ತುಂಬುಡಿಯ ॥ 57॥ ಆಗಾರದೊಳಗಿನ ಅರಗಿಣಿ ಮರವೇರಿ ಮಾಗಿದ ಫಲವ ಮೆದ್ದಂತೆ । ಬೇಗ ಬಂದೀಗ ನಿಮ್ಮನೆಯಲ್ಲೂಟವ ಮಾಡಿ ತೇಗುತ್ತ ತೃಪ್ತಳಾಗುವೆನು ॥ 58 ॥ ಮಾಯಾ ದೇವಿಯ ಮಾಯಾಮಾತಿಗೆ ಮರುಳಾಗಿ ತಾ ಕೊಟ್ಟಳೆಣ್ಣೆ ಕುಂಕುಮವ ॥ ನಾ ಹೋದಕಾರ್ಯಕ್ಕೆ ಮಾಗೋದು ಹಣ್ಣೆಂದು ಹೇಳಿಕೊಂಡಳು ಶಿಫಾರಸ್ಸು ॥ 59 ॥

ವರಗೌರಿಪೂಜೆ ನೈವೇದ್ಯಗಳಾದವು ಹೊರಗ್ಗತ್ತು ತಾಸು ಮೀರಿದವು ! ಬರಲಿಲ್ಲ ಮುತ್ತೈದೆ ಎಂದೆಲೆ ಬಡಿಸಿಟ್ಟು ಸರ್ವರೂಟವನೆ ಮಾಡಿದರು ॥ 60 ॥ ಬಂದಿತಾಗ್ಯೆದನೆ ವಾರ ಮುತ್ತೈದೆಗೆ ಇಂದು ನೀ ಹೇಳಿ ಬಾಯೆನುತ ॥ ಹೆಂಡತಿ ಕರೆದು ಹೇಳಿ ಕುಂಕುಮ ಎಣ್ಣೆ ತಕ್ಕೊಂಡು ತಾ ನಡೆದಳು ಬೇಗ ॥ 61 ॥ ಬೀದಿಯ ಬಿಟ್ಟು ಬದಲ್ಮಾರ್ಗಕ್ಕೆ ಬಂದಳು ಹಾದಿಗೆ ಬಂದಡ್ಡ ಕಟ್ಟಿ । ನೀ ದಯಮಾಡಿ ಬಂದೆಯೆನ-ಗೌತಣ ಆದರಿಂದ್ಹೇಳುವದೇಕೆ ॥ 6.2 ॥ ಜಪ್ಪಿಸಿಬಂದು ಔತಣವ ತಕ್ಕೊಂಡು ನೀ ತಪ್ಪಿಸಿಕೊಂಡು ಹೋಗುವರೆ ॥ ಒಪ್ಪತ್ತಾದರೂ ಊಟ ಮಾಡದವರ ಮಾತು ಒಪ್ಪಿಕೊಂಬುವದ್ಹೇಗೆ ಹೇಳಮ್ಮ ॥ 63 ॥ ಬಂದ ಔತಣ ಗಂಡ ಮಕ್ಕಳ ಭಾಗ್ಯ ಒಲ್ಲೆಂಬುವರುಂಟೆ ಲೋಕದಿ । ಕಂಡಲ್ಲೌತಣ ಹೇಳಿ ಕರೆಯದಿರುವದೇನೆ ಚಂದವೆ ನಿಮ್ಮ ನಡತೆಯು ॥ 64 ॥ ಲಕ್ಷಣವಂತೆ ನಾನೆದುರಿಗೆ ಬಂದರೆ ಲಕ್ಷಣ ಶುಭಶಕುನಗಳು । ಇಕ್ಷು ಮೇಲೆ ಜೇನು ಇಟ್ಟಂತೆ ಬರುವೆನು ಲಕ್ಷಿಸರಿಗೆ ನಾ ಕೂಡುವೆನು । 65 ॥ ಅವಕಾಶ ಕೊಡುವೆನು ಸಾವಕಾಶ ಅಡಿಗೆ ಮಾಡು ದಿನಕರ ಮುಳುಗೋ ಕಾಲದಲಿ । ದನಕರು ಬರುವ ವೇಳೆಗೆ ನಾನು ಬರುವೆನು ಮನಕೆ ಸಂದೇಹ ಬೇಡೆನಿತು ॥ 66 ॥ ಅಂಗಳ ಸಾರಸು ರಂಗು ತೋರಣ ಕಟ್ಟು ರಂಗವಲ್ಲಿಯ ಚಿತ್ರ ಬರೆದು । ಅಂಬರೂದಿನಕಡ್ಡಿ ಅರಮಗೆ ಬಾಗಿಲ ಮುಂದೊಂದು ಹಿಡಿಸೆ ಹಿಲಾಲು । 67 ॥ ಮಡಿಸೀರೆಯನು ಬಿಟ್ಟು ಮಡಿ ಪೀತಾಂಬರವುಟ್ಟು ಕಡಗ ಕಂಕಣ ಕೈಯಲ್ಲಿಟ್ಟು । ದೃಢವಾದ ಮುತ್ತಿನ ಮುಖರೆವೊಂದಡ್ಡಿಕೆ ಬುಗುಡಿ ಬಾವುಲಿ ಹೊಳೆಯುತಲಿ ॥ 68 ॥ ಕಂಚುಕ ಕಲಶ ಕದಲಾರತಿ ತಕ್ಕೊಂಡು ಮುಂಚೆ ಬಂದಿದಿರುಗೊಂಡೆನ್ನ । ಮಿಂಚಿನಂತ್ಹೊಳೆವ ಚಿನ್ನದ ಹಲಿಗೆ ತೂಗೋ ಮಂಚದಿ ಬಂದು ಕೂಡುವೆನು ॥ 69 ॥ ಅರಮನೆಯಲ್ಲಿ ನಾವಿರುವ ಮೂರಂಕಣ ಮನೆಮುಂದೆ ಮುರುಕು ಚಪ್ಪರವು । ಮರದ ಮಣೆ ನಮ್ಮಲ್ಲಿರುವುದೆ ಹಲಿಗೆಯ ತೂಗುವ ಮಂಚವೆಲ್ಲಿ ತರುವೆನೆ ॥ 70 ॥ ಬಂಗಾರದ ಬಾಳೆ ಎಲೆ ಬೆಳ್ಳಿ ಬಟ್ಟಲು ಮಂಡಿಗೆ ತುಪ್ಪ ಸಕ್ಕರೆಯು । ಉಂಡು ಕೂಡುವೆನೆ ಕುಂದಣ ಕೆತ್ತಿದ ತಬಕದಲೆ ತಂದು ನೀಡೆನಗೆ ತಾಂಬೂಲ ।71 ॥ ಹುಟ್ಟಿದ ಮೇಲೆ ಈ ಬಟ್ಟಲೇಲಿ ಸುಣ್ಣ ಹಚ್ಚಿಕೊಂಡು ನಾನರಿಯೆ । ಕರ್ಪೂರದ ಅಡಿಕೆ ಮುತ್ತಿನ ಸುಣ್ಣ ಬಿಳಿಯಲೆ ಹಚ್ಚಿ ನೀ ಮಡಿಚಿ ಕೊಡು ಎನಗೆ ॥ 72 ॥ ಬಂಗಾರೆಂಬುದು ನಮ್ಮ ಕಂಗಳು ಕಂಡಿಲ್ಲ ಮಂಗಳಸೂತ್ರದೊಂದ್ಹೊರತು ।

ಕುಂದಣದ ತಬಕಿಲ್ಲ ಒಡಕೊಂದು ಹಿತ್ತಾಳೆ ತುಂಡಾದ ತಾಟೊಂದಿರುವುದು ॥ 73 ॥ ಮಡಿಸೀರೆ ಬಿಟ್ಟರಿನ್ನೊಂದು ಸೀರೆನಗಿಲ್ಲ ಮಡಿಪೀತಾಂಬರವ ಕಂಡಿಲ್ಲ । ಕಡಗಕಂಕಣವಿಲ್ಲ ಕರಿಯ ಕಾಚಿನ ಬಳೆ ಇರಲಮ್ಮ ನಿಮ್ಮ ದಯ ನಮಗೆ । 74 ॥ ಬುಟ್ಟಿದ ಬುಗುಡಿ ಅಂಚು ಜರತಾರಿ ಅಂಚು ಚಿನ್ನದಿ ಥಳಕಿಸುವ । ಕುಪ್ಪಸ ಹೊಲಸಿ ಕೊಟ್ಟರೆ ಒಂದರಕ್ಷಣ ತೊಟ್ಟು ನಿಮಗೆ ಕೊಟ್ಟು ಬಿಡುವೆ ॥ 75 ॥ ಹುಟ್ಟು ಬಡವರು ನಾವಷ್ಟು ದರಿದ್ರರು ನಿತ್ಯ ಯಾತ್ರೆಯಲ್ಲಿ ಬದುಕುವರು । ಚಿತ್ತಕೆ ತಂದು ನೀ ದಯಮಾಡಿ ಬರಬೇಕೆಂದ್ದಸ್ತವ ಮುಗಿದು ಹೇಳಿದಳು ॥ 76 ॥ ಕಡೆಯ ವಾರವು ಕಾಮಧೇನಂತೆ ಬರುವೆನು ಕರೆದುಕೊ ಮನದ ಇಷ್ಟಾರ್ಥ ॥ ನಡೆದು ಬರುವೆ ನಾಲ್ಕು ವಾರದ ದಕ್ಷಿಣೆ ಕೊಡು ನಾನು ಬಿಡುವವಳಲ್ಲ ।77 ॥ ಒಂದೊಂದು ಮಾತನಾಡುವಳು ಮುತ್ತೈದೆ ಬಾಯಿಂದ ಮುತ್ತದುರುವಂದದಲಿ । ಆನಂದದಿಂದ ಕುಂಕುಮ ಎಣ್ಣೆ ಕೊಟ್ಟು ಬಂದಳು ತನ್ನ ಮಂದಿರಕೆ ॥ 78 ॥ ಸಾಧ್ಯವಲ್ಲವು ಭಾಳಸಾಧ್ಯ ಮತ್ತೈದೆ ನಿಂತಿದ್ದಳಾಗೆದುರಿಗೆ ಬಂದು । ನಿದ್ರೆಯೊ ಕನಸೊ ಎಚ್ಚರಿದ್ದಿಲ್ಲ ಎನಗೊಂದು ನಿರ್ಧಾರವಾಗಿ ತಿಳಿಯದು ॥ 79 ॥ ಗತ್ತಿನ ಮಾತು ಸಮಸ್ತದ ಚಾತುರ್ಯ ಸಂಪತ್ತಿನ ಸೌಭಾಗ್ಯವಂತೆ । ಎಷ್ಟ್ಹೇಳಲಾಕೆ ಚಂದದ ಚೆಲ್ವಿಕೆಗೆ ಸಾಕ್ಷಾತ್ ವಿಷ್ಣುವಾದರೆ ಮೋಹಿಸುವನು ॥ 80 ॥ ನಮ್ಮ ಪುಣ್ಯದ ಫಲ ಒದಗಿ ಬಂದಿದ್ದರೆ ಮನ್ನಿಸಿ ಮನೆಗೆ ಬರುವಳು । ಇನ್ನೇನು ಮಾಡೋಣೆಂದಿದಕೆಂದಾಲೋಚಿಸಿ ಇನ್ನೊಬ್ಬ ಮುತ್ತೈದೆಗೇಳುವುದು । 81 ॥ ಪಾಲು ಸಕ್ಕರೆ ಪಂಚಭಕ್ಷ್ಯ ಪರಮಾನ್ನವು ಸಾರು ಶಾಕಗಳು ಶಾಲ್ಯನ್ನ । ಮಾಲಕ್ಷ್ಮಿ ಪೂಜೆ ನೈವೇದ್ಯ ಮಾಡಿ ಮಂಗಳಾರತಿಯನೆ ಬೆಳಗುವರು ॥ 82 ॥ ಪಕ್ಷಿವಾಹನ ಪುರುಷೋತ್ತಮನಾದ ಅಧೋಕ್ಷಜ ಆ ಪರಮಾತ್ಮ ॥ ಅಕ್ಷಯಸೂತ್ರ ಅಡಗುವ ಕಾಲವನ್ನು ನಿರೀಕ್ಷಿಸಿ ನೋಡುತಿಹರು ॥ 83 ॥ ಮತ್ತೆ ಮಾಲಕ್ಷುಮಿ ಪಚ್ಚಕರ್ಪೂರ ಪುನಗಿನ ಎಣ್ಣೆ ಸಂಪಿಗೆಯ ತೈಲ । ಕಸ್ತೂರಿ ಬೆರೆಸಿದ ಬಿಸಿನೀರು ಅರಿಸಿನ ಹಚ್ಚಿ ತಾನೆರಕೊಂಡಳಾಗ ।84 ॥ ಸುರಳಿ ಗುಂಗುರುಳಿಗೆ ಬೈತಲೆ ತಿದ್ದಿ ತಳುಪ್ಪಾಕಿ ಚೌರಿ ರಾಗುಟೆ ಚಂದ್ರಗೊಂಡೆ । ಗಿಳಿಗೆಜ್ಜೆ ಹೆರಳು ಬಂಗಾರ ಕೇದಿಗೆ ಮೇಲೆ ಅರಳು ಮಲ್ಲಿಗೆ ಮಾಲೆ ಮುಡಿದು ॥ 85 ॥ ಬಿಚ್ಚಿ ತಾನುಟ್ಟಳು ಬಿಳಿಯ ಪೀತಾಂಬರ ಅಚ್ಚ ಜರಿಯ ಸೆರಗೊದ್ದು। ಕುತ್ತಣಿ ಕುಪ್ಪಸ ಮುತ್ತಿನ ಗೊಂಡೆ ತೋಳಿಗೆ ಕಟ್ಟುತ್ತಿದ್ದಳು ಬಾಜು ಬಂದು ॥ 86 ॥ ವಜ್ರದ ವಂಕಿ ನಾಗಮುರಿಗಿಯಡ್ಡಿಕೆ ಗೆಜ್ಜೆಡ್ಡಿಗೆ

ಕೊರಳಲ್ಲಿ। ದೊಡ್ಡ ಸರಿಗೆ ಮೇಲಡ್ಡಿಕೆ ಮುತ್ತಿನ ಕೆಂಪು ಥಳಕು ಬಳಕು ಹೊಳೆಯುತಲಿ ॥ 87 ॥ ಪುತ್ಥಳಿಸರ ಚಂದ್ರಹಾರ ಮೋಹನಮಾಲೆ ಕಟ್ಟಿದಳಾಗ ಕಂಠಿ ಕಟ್ಟಾಣಿ । ಪಚ್ಚೆ ಮಾಣಿಕ್ಯ ರತ್ನ ಪದಕ ನೀರಿಗೆಗಳಲಿ ಜತ್ತಾಗಿ ನಡೆದಾಡುತಿರಲು ॥ 88 ॥ ಬೆರಳಿಗಳಿಗುಂಗುರ ಕಡಗಕಮಲದ್ವಾರ ನಡುವಿಗೆ ನವರತ್ನ ಪಚ್ಚೆ। ಬಿಡಿ ಮುತ್ತು ಮುತ್ತಿನ ಓಲೆ ಬುಗುಡಿ ಚಂದ್ರ ಮುರುವು ಮುತ್ತಿನ ಸರಪಣಿಯ ॥ 89 ॥ ಸಾಲು ಕುಂದಣಮುತ್ತಿನ ಮುಕುರ್ಯ ಬುಲಾಕು ಜಾಲಕದೊಳ್ ವಜ್ರದ ಹರಳು । ತೀಡಿ ಕಾಡಿಗೆ ಹಚ್ಚಿ ತಿದ್ದಿ ಕುಂಕುಮ ಹಚ್ಚಿ ಮೇಲೆ ಹವಳದ ಕುಡಿಯಂತೆ ।90 ॥ ಪಿಲ್ಲೆ ಕಾಲುಂಗುರ ಲುಲ್ಲುರುಳಿ ಪೈಜಣ ಘಲ್ಲು ಘಲ್ಲೆಂದ್ದೆಜ್ಜೆಯನಿಡುತ ॥ ತೆಳ್ಳನೆ ಪಾದ ಪುತ್ಥಳಿಯಂತೆ ಚಿನ್ನದ ಬಳ್ಳಿಯಂದದಲಿ ಬಳುಕುತಲಿ । 91 ॥ ಬೆಳ್ಳನೆ ಬೆಳ್ಳಿಯ ಮಿಳ್ಳಿ ತನ್ನುಂಗುರ ಬೆರಳಿನಿಂದ ಹಿಡಿದಲ್ಲಾಡಿಸುತಲಿ ॥ ಗಗನದ ಮಿಂಚುಗಳಂತೆ ಥಳಥಳಿಸುತ ಬೀದಿಯಲಿ ಬಂದಳು ಗಜಗಮನೆ ॥ 92 ॥ ದೇವಲೋಕದಿಂದ ಇಳಿದಿಲ್ಲಿ ಬಂದಳೋ ಹರಸತಿಯ ಹರಸುತಳೊ । ಮೋರೆ ನೋಡಲು ಮೂರ್ಛೆ ಬರುವುದು ವೈಯ್ಯಾರಿ ಮುಂಗಾರಿ ಮಿಂಚುಗಳಂತೆ ತೋರುವಳೊ ॥ 93 ॥ ಇಂದ್ರನರಸಿಯೋ ಚಂದ್ರಮನ ರೋಹಿಣಿಯೋ ಸುಂದರ ಸೂರ್ಯನರಸಿಯೊ ಸತಿಯೋ । ಗಂಧರ್ವನರಸಿಯೋ ಗಗನದಿಂದಿಳಿದಂತೆ । ಗಂಗಾ ಶ್ಯಾಮಲೆ ಸೀತಾಂಗನೆಯೋ ॥ 94 ॥ ರತಿಯೊ ರೇವತಿಯೊ ಅರುಂಧತಿ ಪಾರ್ವತಿಯೊ ಭಾರತಿ ಭಾಗ್ಯವಂತೆ ಸರಸ್ವತಿಯೊ । ಪತಿಗಳೈವರ ಸತ್ಯಪಾಂಡವರರಸಿಯೊ - ದ್ರೌಪದಿ ಬಂದಳಿಲ್ಲಿಗೆಂಬುವರು ॥ 95 ॥ ಸತ್ಯಭಾಮೆಯೋ ರುಕ್ಮಿಣಿ ಜಾಂಬು-ವಂತೆಯೊ ಅಷ್ಟಮ ಸ್ತ್ರೀಯರೊಳಗೆ ಈಕೆ ಯಾರೋ । ಶ್ರೇಷ್ಠ ವೈಕುಂಠ ಕೊಲ್ಹಾಪುರ ಮಹಲಕ್ಷ್ಮಿ ಬಿಟ್ಟಲ್ಲಿ ಬಂದಳೆಂಬುವರು ॥ 96 ॥ ಹಸ್ತವ ಮುಗಿವರು ಸಾಷ್ಟಾಂಗ-ವೆರಗುವರು ಇತ್ತ ಬಾ ಎನುತ ಕರೆಯುವರು । ಈಹೊತ್ತು ಸಂಪತ್ತು ಶುಕ್ರವಾರ ಸಾಕ್ಷಾತ್ತು ಲಕ್ಷ್ಮಿ ಬಂದಳಿಲ್ಲಿಗೆಂಬುವರು ॥ 97 ॥ ರಾಜಾಧಿರಾಜರೆಲ್ಲರು ನಿಂತು ನೋಡಲು ಲಾಜಾವರದ ಗೊಂಬೆಯಂತೆ । ಭೋಜನಕೆತ್ತ ಹೋಗುವಳು ನೋಡೋಣೆಂದು ಬಹು ಜನರು ನಿಂತು ನೋಡುವರು ॥ 98 ॥ ಮುಡಿಬಾಗಿ ನಡೆಯುತ ಮುಡಿದ್ದುವ್ವ ಉದುರಿಸುತ ಮುಗುಳ್ ನಗೆಯಿಂದ ನಗುತಲಿ ॥ ಎಡಬಲದ ವಾರೆನೋಟವ ನೋಡುತ ನಡೆದಳು ಬಡವರ ಮನೆಗೆ ॥ 99 ॥

ಸಿರಿದೇವಿ ತಾ ಕಣ್ಣು ತೆರೆದು ನೋಡುತಲಿರೆ ಅರಮನೆಯಾಯಿತಾಕ್ಷಣದಿ । ಸುರಗಿ ಮಲ್ಲಿಗೆ ಶಾವಂತಿಗೆ ನಾನಾ ಫಲಗಳ ವನವಾದವು ಮನೆಸುತ್ತ ॥ 100 ॥ ಗಚ್ಚಿನಂಗಳದಿ ವೃಂದಾವನ ಕಟ್ಟಿ ಕಾರಂಜಿ ಅಚ್ಚನೆ ಗಿಳಿ ಮೋಹ ತುರಂಗ । ಪಕ್ಷಿನವಿಲು ಪಾರಿವಾಳ ಪಾರಿಜಾತ ವೃಕ್ಷ ಅಶ್ವತ್ಥ ಗಿಡಗಳು ॥ 101 ॥ ಪಚ್ಚದಂತ್ಹೊಳೆವ ಶ್ರೀತುಲಸೀವನದಲ್ಲಿ ಅಚ್ಚ ವಜ್ರದ ಗೊಂಬೆಯಂತೆ । ಲಕ್ಷ್ಮಿ ತಾನಲಿಯುತ ಹಿತದಿ ಅರ್ಚಿತವಾದ ಕುರ್ಚಿಯಲಿ ಬಂದು ಕೂಡುವಳು ॥ 102 । ಬಡವನ ಮಡದಿಗೆ ವಡವೆ ವಸ್ತ್ರವಾಯಿತು ಕಡಗಕಂಕಣವು ಕೈಯಲ್ಲಿ । ಮಡಸೀರೆ ಉಟ್ಟಿದ್ಹೋಗಿ ಮಡಿ-ಪೀತಾಂಬರವಾಯಿತು ಸಡಗರದಿಂದೆದುರು ಗೊಂಬುವರು ॥ 103 ॥ ಗಂಧ ಕುಂಕುಮ ಅರಿಸಿನ ದಿವ್ಯ ಬುಕ್ಕಿಟ್ಟು ತಂದ್ಹಚ್ಚಿ ತಿಲಕ ಫಣೆಯಲ್ಲಿ ॥ ದುಂಡುಮಲ್ಲಿಗೆ ಪಾರಿಜಾತ ಸಂಪಿಗೆ ಮಾಲೆ ದಂಡೆ ಮುಡಿಸುವರು ಜಡೆ ಮುಡಿಗೆ ॥ 104 ॥ ಕಿತ್ತಳೆ ಫಲವು ಕೊಬ್ಬರಿಬಟ್ಟಲೊಳು ಹುರಿ ಕಡಲೆ ಹಾಕ್ಕುಡಿಯ ತುಂಬುವರು । ಹಿಡಿದು ಕುಂದಣಹರಿವಾಣದೊಳಾಡಿ ಪಾಡುತ ಮಾಡಿ ಮುತ್ತಿನಾರತಿಯ ॥ 105 ॥ ಇಂದಿರಾದೇವಿ ಆನಂದದಿ ಕುಳಿತಿರೆ ಇಂದ್ರಾದಿ ಸುರರು ನೋಡುತಲಿ । ಮಂದಾರಮಲ್ಲಿಗೆ ಮಳೆಯ ಕರೆದಾಗ ದುಂದುಭಿ ಭೇರಿಯ ಹೊಡೆದರು ॥ 106 ॥ ಎಡಬಲದಲ್ಲಿಟ್ಟ ಚಾಮರವನ್ನೆ ಬೀಸುವರು ಹಿಡಿದು ನೋಡುವರು ಹಿಲಾಲು । ಬಿಡಿಮಲ್ಲಿಗೆ ತಂದು ನಡೆಮುಡಿಗ್ಹಾಸೋರು ಸಡಗರದಿಂದೆದ್ದಳಾಗ ॥ 107 ॥ ಲಕ್ಕುಮಿದೇವಿ ತಾ ಫಕ್ಕನೆ ಬಂದಳು ಹೊಕ್ಕಳು ದೇವರ ಮನೆಯ । ಚೊಕ್ಕ ಚಿನ್ನದ ಕೊಡವಾಗಿ ತೂಗೋ ಮಾಣಿಕ್ಯ ಮಂಚದಲಿ ಕೂಡುವಳು ॥ 108 ॥ ರತ್ನ ಮಾಣಿಕ್ಯ ನವ ರತ್ನದ ಹೊನ್ನು ಚೊಕ್ಕ ಚಿನ್ನದ ಮೂರು ಹಾರಗಳು ಬಣ್ಣದ್ಹವಳ ಮುತ್ತು ಭಾರಿ ಬಂಗಾರ ಬಂದು ಮಂದಿ ನೋಡುತಿಹರು ॥ 109 ॥ ಶುಕ್ರವಾರವೆ ಶುಭಕಾಲ ಇವರಿಗೆ ಸಿಕ್ಕಳು ಸಿಂಧುನಂದನೆಯು । ಲೋಕದ ಭಾಗ್ಯ ಭಂಡಾರ ಜಯಲಕ್ಷ್ಮಿ ದಕ್ಕಿದಳವರಿಗೆಂಬುವರು ॥ 110 ॥ ನಾಲ್ಕು ವಾರದ ಎಲೆ ತೆಗೆದು ನೋಡುತಲಿರೆ ಹಾಕಿದನ್ನವು ಮಣಿಮುತ್ತು । ಪಾಕಪಲ್ಯವು ಪಚ್ಚೆ ಪರಮಾನ್ನ ಬಂಗಾರದರ್ಚಿತ ಬಾಳೆ ಎಲೆಯು ॥ 111 ॥ ಬಂದು ನೋಡಿದರು ನಾಲ್ಕು ಸೊಸೆಯರು ಹಂಚಿ ಕೊಂಡರಾಗೊಂದೊಂದೆಲೆಯ । ಹಿಂದೆ ಮಾಡಿದ ಪುಣ್ಯ ಬಂದೊದಗಿತು ನಮಗೆಂದು ಸಂತೋಷ ಪಡುವರು ॥ 112 ॥ ಕರ್ಪೂರದಾರತಿ ಮಾಡಿ ಕಾಯಿ

ಒಡೆದು ಬುಕ್ಕಿಟ್ಟು ಕುಂಕುಮ ಹಚ್ಚುವರು । ಪಟ್ಟಣದ ಜನರು ಪತ್ತಲ ಸೀರೆ ಕುಪ್ಪಸ ಲಕ್ಷ್ಮಿಗುಡುಗೊರೆ ಕೊಡುವರು ॥ 113 ॥ ಬಡವನ ಮನೆಗೆ ನಡೆದು ಬಂದು ಭಾಗ್ಯದ ಕೊಡವಾಗಿ ಕೂತಂಥ ಕಥೆಯ । ದೃಢಭಕ್ತಿಯಿಂದ್ಹೇಳಿ ಕೇಳಿದ ಜನರಿಗೆ ಸಾಯುಜ್ಯ ಪದವಿ ಕೊಡುವಳು ॥ 114 ॥ ಮುದದಿಂದ ಮೂರ್ಜಗದೊಡೆಯ ನಾರಾಯಣನ ಎದೆಯಲ್ಲಿರುವ ಲಕ್ಷ್ಮಿನಮ್ಮ॥ ಸದನಕ್ಕೆ ಬಂದು ಸಂಪತ್ತು ಶುಕ್ರವಾರ ಸಮದೃಷ್ಟಿಯಿಂದ ನೋಡುವಳು ॥ 115 ॥ ಗಂಡ ಹೆಂಡಿರು ಕೂಡಿ ಬ್ರಾಹ್ಮಣರೊಡ-ಗೂಡಿ ಉಂಡು ವೀಳ್ಯವನೆ ತಕ್ಕೊಂಡು ॥ ಮಂದಗಮನೆ ಮಹಲಕ್ಷ್ಮಿಮಹಿಮೆ ಕೊಂಡಾಡುತ ಆನಂದವಾಗಿರುತ್ತಿದ್ದರವರು ॥ 116 ॥ ಕಿವುಡರಿಗೆ ಕಿವಿ ಕುರುಡರಿಗೆ ಕಣ್ಣು ಬರುವುದು ಬರಡಾಕಳು ಹೈನವಾಗುವದು ॥ ಹಡೆಯದ ಬಂಜೆ ಹೊಟ್ಟೆಯಲ್ಲಿ ಮಕ್ಕಳಾಗುವರು ಪಡೆವರು ಇಷ್ಟ ಫಲ ಫಲಗಳ ॥ 117 ॥ ದನಕರು ತಳಿಯಾಗಿ ಧನಧಾನ್ಯ ಬೆಳೆಯಾಗಿ ಸದಾಕಾಲ ಶುಭಕಾರ್ಯವಾಗಿ । ಬರಿ ಕುಂಕುಮರಿಸಿನ ಮಾಂಗಲ್ಯ ಮುತ್ತೈದೆತನವನು ವರವಾಗಿ ಕೊಡುವಳು ॥ 118 ॥ ಸಾಮಜವರದ ಸುಧಾಮನ ಸಖನಾದ ಸ್ವಾಮಿ ಶ್ರೀಹರಿ ಮೋಹದರಸಿ ॥ ಶ್ರೀಮಹಾಲಕ್ಷ್ಮಿಪೂಜೆಯ ಮಾಡಿದವರಿಗೆ ಭೀಮೇಶಕೃಷ್ಣ ತಾನೊಲಿವ ॥ 119 ॥

## ಸಂಪತ್ ಶುಕ್ರವಾರದ ಹಾಡು

### (ಶ್ರಾವಣಮಾಸದ ಪ್ರತಿಶುಕ್ರವಾರ ಹೇಳಬೇಕು)

ರುದ್ರಕುಮಾರನ ಚರಣಕ್ವಂದನೆ ಮಾಡಿ ವಿದ್ಯಾಭಿಮಾನಿ ವಾಣಿಯ ಸುಪಾದ -ಪದ್ಮಗಳಿಗೆ ಎರಗಿ ನಾ ಪೇಳುವೆ ಶುದ್ಧವಾಗಿ ಕೊಡು ಮತಿಯ ॥1॥ ಶ್ರಾವಣಮಾಸ ಶುಕ್ರವಾರ ಶುಭದಿನ । ಕಾಲದಿ ಕಮಲಾಕ್ಷಿಯನು । ಆಲಯದೊಳ- ಗಿಟ್ಟಾದರದಿ ಪೂಜಿಸೆ । ಬೇಡಿದಿಷ್ಟಾರ್ಥ ನೀಡುವಳು ॥2॥ ಇರುತಿರಲೊಂದು ಪಟ್ಟಣದಲ್ಲಿ ರಾಜನು । ತನಯರಿಲ್ಲದ ಕಾರಣವು । ವಿವಾಹದುತ್ಸವಕೆಂದು ತೆರಳೋ ಪತಿಯ ಕಂಡು । ತೆಗೆದಿಟ್ಟಳಾತನಾಯುಧವ ॥3॥ ಪಟ್ಟದ ಕತ್ತಿಯ ಬಿಟ್ಟು ಬಂದೆನೆಂದು । ಅಟ್ಟಿದ ತನ್ನ ದೂತರನು । ನೆಟ್ಟನೆರಡು ಕಾಲು ಚಾಚಿ ಕುಳ್ಳಿರಲಾಗ । ತಟ್ಟನೆ ದಾಟಿ ನಡೆದನು ॥4॥ ಮೂರು ತಿಂಗಳ ಗರ್ಭ ಸಾಲಾಗಿ ಬಂದಿದೆ । ನೀನೀಗ ಕಾಲ ದಾಟುವರೆ । ಕೇಳಿ, ಸಂಭ್ರಮದಿಂದ ಹೇಳೆ ರಾಜಗೆ ಬಂದು । ತಾಳಿದ ಪರಮ

ಹರುಷವನು ॥5॥ ಅಂಗನೆಗೆ ಗರ್ಭ ಚಂದದಿಂದೊಗಿ । ದ್ಭಾಂಗೆಂಬೋ ವಾರ್ತೆಯನು ಕೇಳುತಲಿ । ಬಂದ ದಿಬ್ಬಣವನ್ನೆ ಹಿಂದಕ್ಕೆ ತಿರುಗಿಸಿ । ಬಂದಿಳಿದನೆ ಅರಸ ಮಂದಿರಕೆ ॥6॥ ಅರಸನ ಅರಸಿಗೆ ಬೆರಸಿತು ಚಿಂತೆಯು ಕರೆಸಿದಳ್ ತನ್ನ ದಾಸಿಯರ ॥ ಕರೆದು ತಾರೆ ಸೂಲಗಿತ್ತಿಯ ಎನುತಲಿ ತ್ವರಿತದಿಂದಲಿ ಹೇಳಿದಳು ॥7॥ ಸದ್ದು ಮಾಡದೆ ಸೂಲಗಿತ್ತಿಯ ಕರೆದು । ತಾನಿದ್ದ ವಾರ್ತೆಗಳು ಪೇಳಿದಳು । ಮುದ್ದು ಕೂಸಿನ ತಂದು ಕೊಟ್ಟರೆ ನಿನಗೀಗ । ಮುತ್ತಿಲು ತಂಬ್ಹೊನ್ನ ಕೊಡುವೆ ॥8॥ ಅಂದ ಮಾತಿಗೆ ಸಂದೇಹ ಬೇಡಿರಿ । ಕಂದನ ತಂದು ಕೊಡುವೆನು । ಹಾಗೆಂದು ಕೇರಿ ಕೇರಿ ಮಂದಿರವನೆ ಪೊಕ್ಕು । ಚೆಂದದಿ ಹುಡಿಕಿ ನೋಡಿದಳು ॥9॥ ಹುಡುಕುತ್ತ ಬಂದಳು ಕಡೆ ಬಜಾರಕ್ಕೆ । ಬಡವ ಬ್ರಾಹ್ಮಣನ ಮಂದಿರದಿ । ಮಡದಿಗೆ ಮೂರು ತಿಂಗಳು ಗರ್ಭವಾಗಿದೆ । ನುಡಿಸಿ ಮಾತನಾ- ಡಿಸಿದಳು ॥10॥ ಹಡೆದತ್ತೆ ಮಾವ ಭಾವ ಮೈದ್ನಂದರು । ಒಡನೆ ಸಂತೈಸುವರಿಲ್ಲೆ ಹಡೆದ ತಾಯ್ತುಂದೆಯರಿಲ್ಲನೆ । ಕಡೆ ಹಾಯ್ಸಲೆನ್ನ ಕರೆಸೆಂದಳು ॥11॥ ಅಲ್ಲಿಯ ಸುದ್ದಿ ಮೆಲ್ಲ ಮೆಲ್ಲನೆ ತಿಳಿದು । ರಾಜನೊಲ್ಲಭೆಗಾಗ ಅರುಹಿದಳು । ನಿಮ್ಮಲ್ಲಿ ಆಗುವ ಉತ್ಸವ ಕಾರ್ಯಗಳನು । ಉಲ್ಲಾಸದಿಂದ ನಡೆಸೆಂದಳು ॥12॥ ಮೂರು ತಿಂಗಳು ರಾಜನರಸಿಗೆ ಮೊಗ್ಗೆಯು । ಐದು ತಿಂಗಳಿಗೂವ ಮುಡಿಸಿ । ಆರೆರಡು ತಿಂಗಳಿಗೆ ಸೀಮಂತದುತ್ಸವ ಮಾಡಿ ಬಂತಾಗ ನವಮಾಸಗಳು ॥13॥ ವಿಪ್ರನ ಮಡದಿಗೆ ಒತ್ತಿ ಬಂದವು ಬೇನೆ । ವರ್ತಮಾನವನೆ ಕೇಳುತಲಿ । ನೃಪತಿಯ ಅರಸಿಗೆ ಮತ್ತಾಗಲೆ । ಹತ್ತಿತು ಬೇನೆಯೆಂಬುವರು ॥14॥ ಅರ್ತಿಯಿಂದಲಿ ಬರುವಾಕೆ ಸಂಗಡಲೊಂದು । ಪುತ್ರಿಯ ಕರೆದುಕೊಂಡಿಹಳು । ಮತ್ತೆ ವೀಳ್ಯವ ಕೈಯ್ಯೊಳಗೆ ಕೊಟ್ಟು । ಹೆಚ್ಚುಪಚಾರವ ಮಾಡುವಳು ॥15॥ ವಿಪ್ರನ ಮಡದಿಗೆ ಒತ್ತಿ ಬಂದವು ಬೇನೆ । ಕಟ್ಟಿ ಕಣ್ಣುಗಳ ನಿಚ್ಚಣಿಕೆ । ಹತ್ತಿ ಇಳಿಯುತ್ತ ಹಡೆದಳು ಗಂಡುಕುಮಾರನ । ಎತ್ತಿಕೊಂಡೊಯ್ದಳಾ ಕ್ಷಣದಿ ॥16॥ ಕಲ್ಲು ಗುಂಡನು ಹಡೆದೆ ನೀ ಎಂಬಂತೆ । ಸೊಲ್ಲ ಕೇಳುತಲೆ ತಲ್ಲಣಿಸಿ । ಎಲ್ಲಿದ್ದರೆನ್ನ ಕುಮಾರ ಸುಖಬಾಳಲಿ ಇಂಥೆಲ್ಲ ನೇಮವನೆ ನಡೆಸಿದಳು ॥17॥ ಗುಂಡುಕಲ್ಲನೆ ಹಾಕಿ ಮುಂಡೆಗಟ್ಟನೆ ಕಟ್ಟಿ ಚೆಂದದಿ ಕೋಗಿಲು ಪೂಜೆ । ಆನಂದದಿಂದಲಿ ಆರತಿ ಅಕ್ಷತೆ ಮಾಡಿಸಿ । ಅಂದು ಕಳೆದಳು ಶೋಕರಾತ್ರೆ ॥18॥ ಮೂರನೆಯ ದಿನದಲ್ಲಿ ಮೂಬಟ್ಟಲನೆ ಮಾಡಿ । ಐದನೆ ದಿನ

ಜೀವುತಿಯು । ಏಳನೆಯ ದಿನ ಗೆದ್ವಿಳ್ಳಗಳ ಬೀರಿ । ಒಂಭತ್ತನೆ ದಿನದಿ ಕಡಬುಗಳು ॥19॥ ಹತ್ತನೆ ದಿನದಲ್ಲಿ ಈರುಳುಗಳ ಮಾಡಿ । ಹನ್ನೊಂದನೆಯ ದಿನ ನೀರೆರೆದು । ಹನ್ನೆರಡನೆಯ ದಿನ ನಾಮ್ಕರಣದುತ್ಸವವ । ಚೆನ್ನಾಗಿ ನಗುತ ಮಾಡಿದರು ॥20॥ ಇತ್ತ ಕೂಸಿಗೆ ಮಧುವಿತ್ತು ಜಾತಕ ಬರೆಸಿ । ಸಕ್ಕರೆ ಭೋಜನವ ಮಾಡಿಸಿದ । ದಕ್ಷಿಣೆ ತಾಂಬೂಲಸಹಿತ ಬ್ರಾಂಬರಿಗೆಲ್ಲ ಇಟ್ಟು ಭೋಜನವ ಮಾಡಿಸಿದ ॥21॥ ಹಾಲು ಕಡಗ ಗುಂಡು ಬಿಂದುಲಿ । ಅಸಲಿ ಪೂ ಮೇಲೆಕೆತ್ತಿಸಿದ ಅರಳೋಲೆಯು । ನೀಲದ ಬಾವುಲಿ ಚೌಕುಳಿ ಚಳತೊಂಬು । ರಾಜನ ಸುತಗೆ ಒಪ್ಪಿದವು ॥22॥ ದಶರಾತ್ರಿಯಾಗಲು ಅರಸು ಕುಮಾರಗೆ । ಶಶಿಮುಖಿಯರೆಲ್ಲ ನೆರದು । ಹೊಸ ವಜ್ರದ ಹೊನ್ನ ತೊಟ್ಟಿಲೊಳಿಟ್ಟು ತೂಗಿದರು । ಹೆಸರಿಟ್ಟು ಪಾಡಿ ತೂಗಿದರು ॥23॥ ಚಿನ್ನದ ತೊಟ್ಲಿಗೆ ರನ್ನದ ಗೊಣಸು ಕನ್ನಡಿ । ಹೊಳವೊ ಮೇಲ್ಕಟ್ಟಿನ ಬೆಳಕು । ಇನ್ನಾದರು ಬಾರದೆ ನಿನ್ನ ಮನಸು । ಕನ್ಯೇರು ತೂಗ್ಯಾರು ಪವಡಿಸು ಜೋ ಜೋ ॥24॥ ಜೋಜೋ ಜೋಜೋ ಲಕ್ಷ್ಮಿಯ ಪುತ್ರ । ಜೋ ಜೋ ಜೋ ಜೋ ಪರಮ ಪವಿತ್ರ । ಜೋ ಜೋ ಜೋ ಜೋ ಸುಲಲಿತಗಾತ್ರ ಜೋಜೋಜೋಜೋ ಚಾರುಚರಿತ್ರ ಜೋ ಜೋ ॥25॥ ನಾಮಕರಣ ಜಾವಳ ಚಂಡಿಕುಪನಯನ । ಪ್ರೇಮದಿಂದ್ವಿದ್ಯವ ಕಲಿಸಿ । ಸೋಮನಂದದಿ ಹೊರ ಹೊರಟು । ತನ್ನಮ್ಮನ ನೋಡಿ ಮೋಹಿಸಿದನಾಕ್ಷಣದಿ ॥26॥ ಕತ್ತಲೆಯೊಳಗೆ ಬರುತಿರಲು ಬಾಗಿಲ ಮುಂದೆ । ಕಟ್ಟಿದ ಗೋವು ಕಾಣದಲೆ ॥ ವತ್ಸದ ಕಾಲು ತುಳಿಯಲಾಗ ಅದು ಬಾಯಿ ಬಿಟ್ಟೊದರಿತು ಭಯದಿಂದ ॥27॥ ಅಮ್ಮಾ ನೀ ಬಾರೆ ತಮ್ಮಮ್ಮನರಿಯದವ । ನಮ್ಮನ್ನು ಬಲ್ಲನೆ ಪಾಪಿ । ಒಮ್ಮೆಲ್ಲ ಎರಡು ಬಾರಿ ಲಾಲಿಸ್ಯದರ ಮಾತು । ತಮ್ಮಿರ್ಧಿಯರನೆ ಕೇಳಿದನು ॥28॥ ಮಂದಾಕಿನಿಯ ಸ್ನಾನವ ಮಾಡಿ ಬಂದರೆ । ಸಂದೇಹ ಪರಿಹಾರವಾಗುವುದು । ಹಾಗೆಂದು ಹೇಳಿದ ಹಿರಿಯರ ವಾಕ್ಯವ ಕೇಳಿ । ಗಂಗಾಯಾತ್ರೆಗೆ ತೆರಳಿದನು ॥29॥ ನಡೆದು ಬಂದನೆ ನಡುಮಾರ್ಗದಿ ಪಟ್ಟಣ । ಹಡೆದ ಮನೆ ಬಾಗಿಲ ಮುಂದೆ । ಕೊಡಬೇಕು ನಮಗಿಷ್ಟು ಸ್ಥಳಗಳೆಂದೆನುತಲಿ । ನುಡಿದು ಪವಡಿಸಿದನಾಕ್ಷಣದಿ ॥30॥ ಬಾಣಂತಿ ತಾಯಿ ನುಡಿದಳೆ ಒಂದು ಮಾತನು । ಆರನೇ ದಿನ ನಮ್ಮಲ್ಲಿ ॥ ಆದರೆ ನಮ್ಮಯ್ಯ ಯಾರ ಪುಣ್ಯದಲಿಂದ । ಈಗೆನ್ನ ಶಿಶುವು ಬದುಕಲಿ ॥31॥ ಹೊರಗಿಂದ ಶೆಟವಿ

ಬಂದಳು ಮಹಲಕ್ಷ್ಮಿ । ಒಳಗಿಂದ ನುಡಿದಳೆ ಎನ್ನ ॥ ವರಪುತ್ರ ಅವನ ದಾಟಲು ನಿನ್ನ ಶಿರವು । ಸಿಡಿದು ಸಹಸ್ರಾಗ್ವದೆನಲು ॥32॥ ಅದು ಕೇಳಿ ಶೆಟವಿ ತಾ ತಿರುಗಿ ಪೋಗುತಲಿರೆ । ಬದಿಯಲ್ಲಿ ಬದುಕಿದ್ದ ಶಿಶುವು ॥ ಇದು ನಿನ್ನ ಪುಣ್ಯದಿಂದುಳಿ-ಯಿತೆಂದೆನುತಿರೆ । ಅಧಿಕ ಸಂತೋಷದಿಂದ್ಹೊರಟು ॥33॥ ಭಾಗೀರಥಿಯ ಸ್ನಾನವ ಮಾಡಿಕೊಂಡು । ಪ್ರಯಾಗಗಯಕೆ ನಡೆದಿರಲು । ಆಗ ಮಾಡಿದ ದಾನ ಧರ್ಮ ಕಾರ್ಯಂಗಳು । ಮತ್ತಾಗ ಕಂಡನೆ ಚತುರ್ಹಸ್ತ ॥34॥ ನಾಲ್ಕು ಹಸ್ತಂಗಳ ಕಂಡ ಕಾರಣವೇನು । ವ್ಯಾಕುಲದಿಂದ ಕೇಳಿದನು । ಸಾಕಿದವರು ಹಡೆದವರುಂಟು ನಿಮಗೆಂದು । ವಿವೇಕ ಬುದ್ಧಿ ಅವರು ಪೇಳಿದರು ॥35॥ ಜನನಿ ಜನಕ ಪಾಲಕರಿವರೆಂಬಂಥ । ಕಾಂಬೋ ಕಾರಣ ಹೇಳಿರೆಂದ । ಪಟ್ಟಣಕೆ ಹೋಗಿ ಶ್ರಾವಣ ತಿಂಗಳು । ನೇಮ ಸಂತರ್ಪಣೆ ಮಾಡಿಸೆಂದ್ರು ॥36॥ ಹಡದ ತಾಯಿ ಹೇಗೆ ದೊರಕ್ಯಾಳೋ । ನಿನಗೀಗ ದೃಢವಾಗಿ ಹೇಳಬೇಕೆನುತ । ಸಡಗರದಿಂದಲಿ ಬ್ರಾಹ್ಮಣರ ಭೋಜನ । ಮಾಡಿಸಿ ಹಿಡಿದಿರು ವೀಳ್ಯವೆಂದೆನಲು ॥37॥ ಪಟ್ಟಣದೊಳು ಉಳ್ಳ ವಿಪ್ರ ಜನರು । ಮತ್ತೆ ಮಡದಿ ಪುತ್ರರು ಸಹಿತವಾಗಿ । ಅಷ್ಟೂರ್ರಿಗೌತಣ ಕೊಟ್ಟು ಉತ್ಸಹದಿಂದ । ಇಚ್ಛಾಭೋಜನ ಮಾಡಿಸೆಂದ್ರು ॥38॥ ಹಾಗಲ್ಹಂದರದೊಳು ಮೂರುಕಾಲಿನ ಮಣೆ ನಾರ್ಯಾರು ಕಾಲ ತೊಳೆಯುತಲಿ ॥ ಹಸರು ಬಳೆಯನ್ನಿಟ್ಟು ಪಚ್ಚೆ ಪೀತಾಂಬರವ । ಕುಪ್ಪಸ ಸಹಿತ ಕೊಡಿರೆಂದ್ರು ॥39॥ ಸಾಲುಪಂಕ್ತಿಯಲ್ಲಿ ಕುಳ್ಳಿರಿಸಿ ಕುಂಕುಮ ಕೊಟ್ಟು । ಕುಡಿಬಾಳೆಯೆಲೆಯ ಹಾಕುತಲಿ । ಶಾಕ ಪರಮಾನ್ನವು ಹೊಸ ಮೊರದಲಿ । ಅನ್ನ ಸಾರು ಮೊದಲೆ ಬಡಿಸೆಂದ್ರು ॥40॥ ಸಾಲು ಪಂಕ್ತಿಯಲ್ಲಿ ಕುಳ್ಳಿರಿಸಿ ಕುಂಕುಮ ಕೊಟ್ಟು । ಆದರದಿಂದ ನೋಡುತಲಿ । ವಿಶಿಷ್ಟಬ್ರಾಹ್ಮಣರಿಗೆ ಶ್ರೀಕೃಷ್ಣಾರ್ಪಿತವೆಂದು । ತುಪ್ಪ ನೀನೇ ಬಡಿಸೆಂದ್ರು ॥41॥ ಜ್ಞಾನಿಗಳಾಡಿದ ಪ್ರೇಮದ ನುಡಿಯನ್ನು ಆದರದಿಂದ ಕೇಳುತಲಿ । ಭಾಗೀರಥಿಯನೆ ತುಂಬಿ ಕಾವಡಿ । ಪೊತ್ತು ಬಂದಾಗ ತನ್ನ ಪಟ್ಟಣಕ್ಕಾಗಿ ॥42॥ ಗೊತ್ತಿಲ್ದೆ ಬಂದನು ಪಟ್ಟಣದೊಳಗೊಂದು । ಹೆತ್ತಾರು ದಿನದ ಮಂದಿರದಿ । ಹೊಸ್ತಿಲ್ಹೊರಗೆ ಅಡ್ಡ ಮಲಗಿದ್ದ ಕಾಲಕ್ಕೆ । ಮತ್ತಾಗ ಬಂದಳು ಶೆಟವಿ ॥43॥ ಚೊಚ್ಚಲು ಮಗನ ದಾಟಲು ನಿನ್ನ ಶಿರವು । ಬಿಚ್ಚಿ ಸಹಸ್ರ ಹೋಳಾಗುವುದು। ಲಕ್ಷ್ಮಿ ಮಾತಿಗೆ ಹಿಂದೆ ತೆರಳಿದೆನ್ನ ತುತ್ತಿಗೆ । ಮೃತ್ವ್ಯಾದ ಪಾಪಿಯೆಂದೆನುತ ॥44॥

ಸತ್ಯವಂತನೆ ನಿನ್ನ ಪುಣ್ಯದಿಂದಿಬ್ಬರು ಪುತ್ರರು ಉಳಿದರೆಂದೆನಲು । ಅರ್ಥಿ-ಯಿಂದವರ ವಾಕ್ಯವ ಕೇಳುತಲೆ । ತನ್ನ ಪಟ್ಟಣಕೆ ನಡೆತಂದ ।।45।। ಗಂಗಾಸ್ನಾನವ ಮಾಡಿಕೊಂಡು ಕಾವಡಿ ಹೊತ್ತು । ಬಂದ ಶ್ರಾವಣ ಮಾಸದಲಿ । ಅಂದಿನಾರಭ್ಯ ಬ್ರಾಹ್ಮಣರಿಗೆ ಮೃಷ್ಟಾನ್ನ । ಕುಟುಂಬ ಭೋಜನವ ಮಾಡಿಸಿದ ।।46।। ನಿತ್ಯ ನಿತ್ಯದಿ ಭಕ್ಷ್ಯ ತುಪ್ಪ ಮಂಡಿಗೆ ಕ್ಷೀರ । ಸಕ್ಕರೆ ಸೂರೆ ಮಾಡುತಲಿ ।। ಗೊತ್ತಾಗದೆನ್ನ ಕಾರ್ಯಗಳು ಪಟ್ಟಣದಲ್ಲಿ । ಮತ್ತ್ಯಾರುಳಿದವರೆಂದ ।।47।। ಪಟ್ಟಣದೊಳು ಬಡ ಬ್ರಾಹ್ಮಣನರಸಿಯು । ನಿಷ್ಠೆಲಿ ವ್ರತದಲ್ಲಿರುವಳು । ಎಷ್ಟು ಕರೆದರು ಬಾರಳಾಕೆ ಶ್ರೀಗೌರಿಯ । ಶುಕ್ರವಾರದ ವ್ರತವಂತೆ ।।48।। ನಾನೇ ಬರಲೋ ತನ್ನ ಮಂದಿರಕಾಗಲೆ ತಾನೆ ಬರುವಳೋ ನಮ್ಮ ಮನೆಗೆ । ಮಾಡಿದಪ್ಪಣೆ ಜುರುಮಾನೆಯ ಕೊಡುವಳೋ । ಕೇಳಿ ಬನ್ನಿ ಎಂದು ಕಳುಹಿಸಿದನು ।।49।। ಇಷ್ಟು ಛಲಗಳೇಕೆ ಈಗ ಬರುವನೆಂದು । ಲಕ್ಷ್ಮೀದೇವಿಯ ಪೂಜೆ ಮಾಡಿ ।। ಭಕ್ತಿಯಿಂದಾರತಿ ಮುಷ್ಟ್ಯಕ್ಕಿಯನೆ ಉಡಿ ಕಟ್ಟಿ ಬಂದಳು ಭಾಗ್ಯಶಾಲಿ ।।50।। ಬರುತಿರಲಾಗ ಅಂಗನೆ ಅರಮನೆ ಮುಂದೆ । ಹರದಕ್ಕಿ ಕಚ್ಚನೆ ಕಂಡು । ಸ್ಥಿರವಾಗಲೆನ್ನ ಕುಮಾರಗೆ ಆಯುಷ್ಯಗಳೆಂದು ಬದಲು ಮಾರ್ಗದಲಿ ನಡೆದಳು ।।51।। ಮೂರುಕಾಲಿನ ಮಣೆ ತಂದಿಡುವರು । ಆದರದಿ ಪಾದ ತೊಳೆಯುವರು ।। ಹಸರು ಬಳೆಯನಿಡಿಸಿ ಪಚ್ಚೆ ಪೀತಾಂಬರ ಕುಪ್ಪುಸ ಸಹಿತ ಕೊಡುವರು ।।52।। ಮೇಲ್ಪಂಕ್ತಿಯೊಳಗೆ ಕುಳ್ಳಿರಿಸಿ ಉಪಚರಿಸುತ । ಕುಡಿ ಬಾಳೆಯೆಲೆಯನ್ಹಾಕುವರು ।। ಶಾಕಪರಮಾನ್ನ ಹೊಸ ಮೊರದಿ । ಅನ್ನ ಸಾರು ಮೊಗಿಲೆ ಬಡಿಸುವರು ।।53।। ಮೂರು ಕಾಲಿನ ಮಣೆ ಮುಂದೆ ತಂದಿಟ್ಟರೆ । ಕೂಡಲಾಗದು ನಮ್ಮ ವ್ರತವು । ಹಗಲ್ಹಂದರ ಹೂಗಳು ಹಸರು ಬಳೆಯ ಬಿಟ್ಟು । ನೀಲನಿಟ್ಟಳು ಕರದಲ್ಲಿ ।।54।। ಹಸರು ಪೀತಾಂಬರ ಹಸನಾದ ಕುಡಿಯೆಲೆ । ಹೊಸ ಮೊರದೊಳಗೆ ಅನ್ನವನು ।। ಬಿಸಿ ಬಿಸಿ ಸಾರು ಮೊಗೆ ತುಂಬ ಬಡಿಸಲು । ಶಶಿಮುಖಿ ಅದು ಒಲ್ಲೆನೆನುತ ।।55।। ಕಂದು ಕೆಂಪಿನ ಪೀತಾಂಬರವನುಡಕೊಟ್ಟು । ಚೆಂದಾವದೆಲೆಯ ಹಾಕಿದರು । ಬಂಗಾರದಡ್ಡರಿವಾಣದೊಳಗೆ ಅನ್ನವು । ಬೆಳ್ಳಿ ತಂಬಿಗೆಯಲ್ಲಿ ಸಾರು ಬಡಿಸಿದರು ।।56।। ಬಡವನ ಮಡದಿಯ ಬಡಿವಾರ ನೋಡಿರೆ । ಸಡಗರ ಬಂತೇ ನೀವತ್ತು।। ಪಡೆದಳೆ ಅರಸಿನ ಐಶ್ವರ್ಯವೆನುತಲಿ । ನುಡಿದರು ಜನರು ಹಾಸ್ಯದಲಿ ।।57।।

ಉಟ್ಟ ಪೀತಾಂಬರ ಕಟ್ಟಿದ್ದ ಉಡುದಾರ । ರತ್ನದ ಕಡಗ ಕೈಯ್ಯಲ್ಲಿ ॥ ಪಚ್ಚೆಯ ಪದಕ ಮುತ್ತಿನ ಕಂಠಿ ಕೊರಳಲ್ಲಿ । ಪುತ್ಥಳಿ ಸರ ಹೊಳೆಯುತಲಿ ॥58॥ ನೀಲ ಮಾಣಿಕದ್ವಜ್ರ ಹರಳಿನುಂಗುರವಿಟ್ಟು । ಅಣಿ ಮುತ್ತಿಟ್ಟು ಕುಜಿಯಿಲಿ ॥ ಪಾಣಿಯ ಮುಗಿದು ಬ್ರಾಂಬರಿಗೆ । ಭೋಜನಕುಪಚಾರ ಮಾಡುತಲೆ ತಾ ಬಂದ ॥59॥ ದೊರೆಯು ತುಪ್ಪವ ಬಡಿಸುತ್ತಾ । ಸಾಲೆಡೆಯಲಿ ಬರುತಿರೆ ॥ ತಾಯಿ ಸ್ತನಗಳು ಭರದಿಂದುಕ್ಕೇರಿ ಬಂದವು । ಕ್ಷೀರ ಮುಖದಲ್ಲಿ ತೊರೆದು ಚಿಮ್ಮಿದವಾಕ್ಷಣದಿ ॥60॥ ಹಾಲು ಬಿದ್ದರೆ ತನ್ನ ಶಾಲಿನಿಂದೊರೆಸುತ್ತ । ಮಹಲಿನ ಮ್ಯಾಲೆ ನಡೆದನು ॥ ಆಲಯದವರನು ಬಿಡದಂತಪ್ಪಣೆ ಮಾಡಿ । ತಾ ಮಲಗಿದ್ದ ಮಂಚದಲ್ಲಿ ॥61॥ ಹುಟ್ಟು ಬಡವಿಯ ದೌಲತ್ತನೆ ನೋಡಿರೆ । ಉಟ್ಟಳು ಪೀತಾಂಬರವ ॥ ಘಟ್ಯಾಗಿ ಸೆರಕ್ಶೊದ್ದಿಯದೆ ತನ್ನ ಮಾನವ ಬಿಟ್ಟಾಳೆಂದಾಡಿಕೊಂಬುವರು ॥62॥ ಎತ್ತ ನೋಡಿದರಿಲ್ಲ ಚಿತ್ತ ಚಂಚಲವಾಗಿ । ಮತ್ತಲ್ಲಿ ಮಗನ ಕಾಣದಲೆ ॥ ಹತ್ತಿ ಬಂದಳು ಮಹಲಿನೊಳಗೆ ಮಂಚದಿ । ಮಲಗಿಪ್ಪೊ ಸುತನ ಕಂಡಳಾಕೆ ॥63॥ ಏನು ಕಾರಣ ಮಲಗಿದೆ ಮಾತನಾಡೆಂದು । ಲಾಲಿಸಿ ಮಗನ ಮುದ್ದಿಸುತ ॥ ಬಾಲಕ ನೀನಿಷ್ಟು ಬಳಲುವುದೇಕೆಂದು । ಕೇಳಿದಳತಿ ಮೋಹದಿಂದ ॥64॥ ಹಡೆದವರ್ಯಾರು ಎನ್ನೊಡನೆ ನೀ ಹೇಳೆಂದು । ಬಿಡು ಭಯ ಬೇಡವೆಂದೆನುತ ॥ ಪಡೆಯಲಿಲ್ಲ ಎನ್ನ ಮೇಲೆ ರಾಜನೊಬ್ಬ । ಮಡದಿ ತಾ ಹೋದೆಂದೆನುತ ॥65॥ ಹೊನ್ನ ಹಣವ ಕೊಟ್ಟು ನಿನ್ನನ್ನು ತರಿಸಿದೆ । ಎನ್ನ ಕೂಸೆಂದು ಸಾಕಿದೆನು ॥ ನೀನಾರ ಸುತನೋ ನಾನರಿಯೆನೆಂದೆನುತಲಿ । ಮನ್ನಿಸಿ ಮಾತನಾಡಿದಳು ॥66॥ ಆದರೆ ನಮ್ಮಯ ರಾಜಸಿಂಹಾಸನ । ಏರಿದೆ ನಿನ್ನ ಪುಣ್ಯದಲಿ ॥ ನೀ ಮಾಡಿದುಪಕಾರ ಮರೆಯಲಾರೆನೆಂದು । ಪಾದಕ್ಕೆ ಬಂದೆರಗಿದನು ॥67॥ ಬಣ್ಣದಂದಣ ಕಳುಹಿದ ಸೂಲಗಿತ್ತಿಗೆ । ಮನ್ನಿಸಿ ಮಣೆಯ ಹಾಕಿದರು ॥ ಅಣ್ಣಯ್ಯ ನೀ ಕರೆಸಿದ ಕಾರಣವೇನೆಂದು । ಬಣ್ಣಿಸಿ ಮಾತನಾಡಿದಳು ॥68॥ ಎತ್ತಲಿಂದಲಿ ಎನ್ನ ತಂದೆ ವಾರ್ತೆಗಳನು । ಸತ್ಯವ ಪೇಳಬೇಕೆನಲು ॥ ವಿಪ್ರನ ಸುತ ನಿನ್ನಿಲ್ಲಿಗೆ ತಂದು ಕೊಟ್ಟೆನು । ಮುತ್ತುಲ್ಹೊನ್ನಿಗೆ ಆಸೆ ಮಾಡಿ ॥69॥ ಹಾಕಿದೆ ಕಲ್ಲುಗುಂಡನೆ ನಿಮ್ಮಮ್ಮಗೆ । ಹೋಕದ ಮಾತುಗಳನಾಡಿದೆನು । ಗೋಕುಲದಲಿ ಕೃಷ್ಣ ಬಂದಂತೆ ನಿನ್ನ । ತಂದೆ ಸಾಕಿದಳೆಶೋದೆಯಂತೆ ॥70॥ ಮಕ್ಕಳನಗಲಿ ದೇವಕಿಯಂದದಿ

ನಿಮ್ಮಮ್ಮ । ಹೊಸ್ತಿಲ್ಹೊರಗೆ ಕುಳಿತಿಹಳು ॥ ಅಕ್ಕರದಿಂದವರನ್ನು ಒಡಗೂಡೆಂದು । ಹಸ್ತವ ಮುಗಿದು ಹೇಳಿದಳು ॥71॥ ಮುದುಕಿ ಮಾತನೆ ಕೇಳಿ ಪದಕ ಮುತ್ತಿನ ಕಂಠಿ । ನಗುತ ಹಾಕಿದ ಕೊರಳಲ್ಲಿ ॥ ಜರತಾರಿ ಸೀರೆ ಕುಪ್ಪುಸ ಉಡುಗೋರೆ ಕೊಟ್ಟು । ಕರೆಸಿದ ತಾಯಿ ತಂದೆಯರ ॥72॥ ಕರೆದರೆಂದರೆ ಕಂಪನ ಹುಟ್ಟಿತು ದೇಹಕ್ಕೆ ಸುರಿಸುತ್ತ ಕಣ್ಣ ಜಲಗಳ ॥ ದೊರೆತನಕ್ಕಿದಿರು ನಾವೇನೆಂದು ಮನದಲಿ । ಮರುಗುತ್ಯೋಚನೆ ಮಾಡಿದರು ॥73॥ ಹೊಡಿಸೋನೋ ಬಡಿಸೋನೋ ಬೈದು ಬಿಡುವ್ನೋನೋ । ಕೊಡಿಸೋನೋ ಜುರ್ಮಾನೆಗಳ । ಇಡಿಸೋನೋ ಸೆರೆಮನೆಯೊಳಗೆ ನಮ್ಮಿಬ್ಬರ । ನುಡಿಸಿ ಬಿಡುವನೋ ತಪ್ಪೆನುತ ॥74॥ ಏನು ಮಾಡುವನೋ ಬಂದ ಜನರೊಳು ನಮ್ಮ । ಮಾನವ ಕಳೆದು ಬಿಡುವನೋ । ಮಾನಾಭಿಮಾನ ನಿನ್ನದು ಮಹಾಲಕ್ಷ್ಮಿ । ಪಾದವೆ ಗತಿಯೆಂದಳಾಕೆ ॥75॥ ನಡುಗುತ್ತ ಬಂದರು ಮುಡಿಯ ಮುಂದಕೆ ಬಾಗಿ । ಕಡು ಭಯದಿಂದ ನಿಂತಿಹರು ॥ ಹಡೆದ ತಾಯ್ತಂದೆ ನೀವೇ ಎನುತ । ಬಂದು ನುಡಿದು ಚರಣಕ್ಕೆರಗಿದನು ॥76॥ ಕಂದ ನಾನೆಂದರೆ ಸಂಭ್ರಮವಾಯಿತು । ಆನಂದ ಬಾಷ್ಪಗಳುದುರಿದವು ॥ ತಂದೆ ತಾಯಿ ಮಕ್ಕಳೊಂದಾದರೆನುತಲಿ । ದುಂದುಭಿ ಭೇರಿ ಹೊಡೆದವರು ॥77॥ ಹರುಷದಿಂದಲಿ ಇಬ್ಬರೊಂದಾಗಿ ತಾಯಂದಿರು । ಬರೆಸಿದರಾಗ ಪತ್ರಿಕೆಗಳ ॥ ಕರೆಸಿದರಾಗೊಂದು ಬಳಗ ದಿಬ್ಬಣದವರ । ಅರಸಿನ ಮದುವೆ ಸಂಭ್ರಮದಿ ॥78॥ ಹಾದಿಗ್ಹಂದರ ಹಾಕಿ ಮೇಲೆ ತೋರಣ ಕಟ್ಟಿ । ಬೀದಿ ನೌಬತ್ತು ವಾಲಗವು ॥ ವೇದಜ್ಞ ಬ್ರಾಹ್ಮಣರೆಲ್ಲರು ನೆರೆದರು । ನಾಲ್ಕು ವೇದ ಹೇಳುತ್ತ ಮಂಗಳಾಷ್ಟಕವ ॥79॥ ವಲ್ಲಭನೆದುರಿಗೆ ಚೆಲ್ವ ಸತಿಯ ತಂದು । ಚೆಲ್ಲುತ್ತ ಮಂತ್ರಾಕ್ಷತೆಯ ॥ ಮಲ್ಲಿಗೆ ಬಾಸಿಂಗವನೆ ಕಟ್ಟಿ ಕೊರಳ ಮಾಂಗಲ್ಯ । ಬಂಧನವ ಮಾಡಿದರು ॥80॥ ಹಾಗಲ್ಹಂದರದೊಳು ಹಸುರು ಪತ್ತಲವ ಕೊಟ್ಟು । ಆಗ ನೇಮವ ಬಿಡಿಸಿದರು । ಡಾಗುಬಾಳೆ ಕುಡಿಯೆಲೆಯ ಭೂಮವನುಂಡು । ನಾಗೋಲೆಗಳ ಮಾಡಿದರು ॥81॥ ಮುತ್ತಿನ ಪಲ್ಲಕ್ಕಿಯೊಳಗೆ ಶ್ರೀಗೌರಿಯ । ಪಟ್ಟಣದೊಳು ಮೆರೆಸುತಲಿ ॥ ಅರ್ಥಿಯಿಂದಲೇ ಬಂದು ಅರಸು ಸಿಂಹಾಸನ । ಕೊಪ್ಪಿದಳಾಗ ಮಹಾಲಕ್ಷ್ಮಿ ॥82॥ ಅರಿಶಿನ ಕುಂಕುಮ ಅರಳು ಮಲ್ಲಿಗೆ ಗಂಧ ಪರಿಪರಿ ಭಕ್ಷ್ಯ ಪಾಯಸವು । ನರಸಿಂಹನರಸಿಗರ್ಪಿಸುತ ಆರತಿ ಮಾಡೆ । ಹರುಷದಿಂದ್ವರವ ನೀಡುವಳು ॥83॥

ವರಸಿಂಹಾಸನದಲ್ಲಿ ಒಪ್ಪಿರುವ ಮಾಲಕ್ಷ್ಮಿಗೆ । ಅರಳು ಗಂಧ ಕುಂಕುಮ ॥ ಪರಿಪರಿಯಲ್ಲಿ ದಿವ್ಯಾಂಗವನೆಲ್ಲ । ಫಲವರ್ಪಿಸಿ ಕೈಯ ಮುಗಿದು ॥84॥ ಕಡಲಾಬ್ಧಿವಾಸನ ಮಡದಿ ಮಹಾಲಕ್ಷ್ಮಿಗೆ ಒಡೆದು ತೆಂಗಿನ ಕಾಯಿ ಫಲವು ॥ ಮಡದಿಯರೆಲ್ಲರು ಅರಶಿನ ಗಂಧ ಕುಂಕುಮ । ಕೊಡುತ ಮುತ್ತುಗಳುಡಿ ತುಂಬಿದವರು ॥85॥ ಮಂಗಳಂ ಜಯವೆನ್ನಿ ಮಂಗಳಂ ಶುಭವೆನ್ನಿ। ಮಂಗಳಾಂಗನೆ ಮಹಲಕ್ಷ್ಮಿ ॥ ಕಂಗಳ ತೆರೆದು ಕಟಾಕ್ಷದಿ ನೋಡಲು । ಹಿಂಗೋದು ಸಕಲ ದಾರಿದ್ರ್ಯ ॥86॥ ಬಿತ್ತಿದ ಬೆಳೆರಾಶಿ ಒಕ್ಕುವ ಧಾನ್ಯವು । ಉಕ್ಕುವ ಕ್ಷೀರದಂದದಲಿ ಲೆಕ್ಕವಿಲ್ಲದೆ ಮಕ್ಕಳಾಗುವವು ಮನೆತುಂಬ । ಮುತ್ತೈದೆತನವ ಕೊಡುವಳು ॥87॥ ತಾ ಸುರ ಕಾಮಧೇನುವಿನಂತೆ ಬಂದ । ಭೀಮೇಶ ಕೃಷ್ಣನ ಸಹಿತಾಗಿ । ಲೇಸಾದ ಸಕಲ ಸಂಪತ್ತನೆ ಕೊಟ್ಟು । ತಾ ವಾಸವಾದಳು ಮನೆಯಲ್ಲಿ ॥88॥ ಸಂಪತ್ ಶುಕ್ರವಾರದ ಹಾಡು ಸಮಾಪ್ತವಾಯಿತು.

## ಲಕ್ಷ್ಮೀಲೀಲಾಮೃತ – ರಾಗ - ಖಮಾಚ, ಆದಿ ತಾಳ

ಶುಕ್ಕುರವಾರದಲಿ ಭಕ್ತಿಲಿ ಭಜಿಸುವೆ । ಲಕ್ಕುಮಿ ದೇವಿಯನು । ರುಕ್ಮಾಭರಣ ವಿ । ಲಕ್ಷಣ ಶೋಭಿಸು । ಲಕ್ಷಣಮೂರ್ತಿಯನು ॥ ರಕ್ಕಸ ರಿಪುಬಲ ಪಕ್ಕದ ಕೂತಿಹ ರುಕ್ಮಿಣಿ ದೇವಿಯನು ॥ಪ॥ ಸಂತತ ಭಜಿಸುವ ಸಂತರ ಹತ್ತಿರ । ನಿಂತು ರಕ್ಷಿಸುತಿಹಳು । ಶಾಂತಳು ಸದ್ಗುಣವಂತಳು ಕಮಲಾಕಾಂತನ ಸುಪ್ರಿಯಳೂ । ಕರವೀರ ಪ್ರಾಂತದೊಳಿರುತಿಹಳು ಹೃತ್ಕಮ । ಲಂತಳ ಸಂಸ್ಥಿತಳು ॥1॥ ಸೀತೆಯು ತ್ರಿಜಗನ್ಮಾತೆಯು ಕ್ಷೀರಧಿ । ಜಾತೆಯು ಪರಮಶ್ರೀ । ಧಾತೆಯ ಮಾಧವ ಭೂತಿಯು ಮಂಗಳ ಮೂರ್ತಿಯು ಸುಖರಾಶಿ ॥2॥ ಅಸ್ಯಾಂಬುಜತನು ಹಾಸ ಕುಂತಳ । ಭೂಷಿತ ಬಿಂಬೋಷ್ಠೀ । ಕೂಸಿಗೆ ಕೊಡು ಇಂದಿರೇಶನ ಸಹ ತವ ಭೆಟ್ಟಿ ॥3॥

ರೇಗುಪ್ತಿ ಛಾಪು ತಾಳ – ಭೃಗುವಾರ ಬರಲಿ ಬೇಕು ಭಾರ್ಗವಿದೇವಿ ॥ ಭೃಗುವಾರ ಬರಲಿ ಬೇಕು । ಭೃಗುವಾರ ಬರಲಿಬೇಕ್ಹಗಲು ಪಾಯಸವುಂಡು । ನಗುತ ರಾತ್ರಿಲಿ ತಾಂಬೂಲಗಳ ಮೆಲ್ಲುವುದಕ್ಕೆ ॥ಪಲ್ಲ॥ ನೂಪುರ ಮುಖಭೂಷ ನೀ ಪದ ಕುಣಿಸುತ್ತ । ಶ್ರೀಪತಿ ಸಹ ಸುಖಲಾಪಗಳಾಡುತ ॥1॥ ಕಂಕಣಮುಖ

ರತ್ನಾ । ಲಂಕಾರಗಳನ್ನಿಟ್ಟ ಕಿಂಕರರಿಗೆ ಮುಖಾಲಂಕಾರತೋರುತ ॥2॥ ಕಂಕಣರ ಮುಖ ಸುರಪುಂಖ ಮಧ್ಯದಿ ಶ್ರೀಮ। ದ್ವೇಂಕಟೇಶನ ದಿವ್ಯ ಟೊಂಕದೊಳಗೆ ಕೂತು ॥3॥ ಪಕ್ಷಿವಾಹನ ದಿವ್ಯ ವಕ್ಷಸ್ಥಳಾಶ್ರಿತೆ ಲಕ್ಷ್ಮೀಲೀಲಾಮೃತ । ಲಕ್ಷ್ಮೀ ಕೇಳುವುದಕ್ಕೆ ॥4॥ ಇಂದಿರೇಶನ ಮೃದು ಸುಂದರೋತ್ಸಂಗದಿ ಪೊಂದಿ ಭಕ್ತರ ಪೂಜಾನಂದ ಭುಂಜಿಪುದಕ್ಕೆ ॥5॥

ರಾಗ ಕಲ್ಯಾಣಿ - ಅಟತಾಳ – ಶರಣು ಶರಣಮ್ಮಾ । ಶರಣು ತವ ಜಾನಕಿಯೆ ಶರಣು ಸತ್ಯಾಭಾಮಿನಿ । ಶರಣು ಲಕ್ಷ್ಮ್ಯಂಭ್ರಣಿಯೆ ಪದ್ಮಿನಿ ಶರಣು ಶರಧಿ ಸುಖಾತ್ಮಜೆ ॥ಪಲ್ಲ॥ ಶರಣು ತವ ಚರಣಾರವಿಂದಕೆ । ಶರಣು ಸುರನುತ ಜಂಘಕೆ ಶರಣು ಕರಿಕರಭೋರು ಯುಗಳಕೆ । ಶರಣು ಸಣ್ಣ ಸುಟೊಂಕಕೆ ॥1॥ ಶರಣು ಬಹು ಗಂಭೀರ ನಾಭಿಗೆ । ಶರಣು ಸುಸ್ತನ ಕಂಠಕೇ । ಶರಣು ಕರ ಕಣ್ಣು ಮೂಗು ಭ್ರೂಲತ । ಶರಣು ಕರಣಾಭರಣಕೆ ॥2॥ ಶರಣು ಸಾಲಕ ಬಿಂಬಭಾ(ಫಾ)ಲಕೆ । ಶರಣು ಕುಸುಮಿತವೇಣಿಗೆ । ಶರಣು ಮಾಧವನಂಕ ಬಿಂಬದಿ । ಮರೆವ ಸುಖ ಮುತ್ತೈದಿಗೆ ॥3॥ ನಿತ್ಯಮುಕ್ತಳೆ ದೇಶಕಾಲ ಸ್ವಭರ್ತೃ ಸಮಜಿತೆ ಭಕ್ತಪೋಷಣೆ । ಕೃತ್ಯಕರಣಾ ಸಾರಸಾಂಡಸುಪಾಸ್ತ ಸಂಸ್ಥಿತಳೆ ನೀ ॥4॥ ಬಲ್ಲವಳು ಮೊದಲ್ಹಿಡಿದು ನೀನತಿ ಸೊಲ್ಲು ಪೇಳುವೆ ಸ್ನೇಹದಿಂದಲಿ ॥ ಫುಲ್ಲನಾಭನ ಪರಿಚೆ ಈಗವನಲ್ಲಿನೀ ಪೇಳೆ ॥5॥ ದೇವಶರ್ಮನು ನಿನ್ನ ಚರಮಾಧ್ಯಾಯದಲಿ ಸನ್ನುತಿಸಿ ಕರುಣಾ ತೋಯಜಾಕ್ಷನ ಕಂಡು ಸುಖಿಸಿ । ದುಪಾಯವ ಬಲ್ಲವನು ॥6॥ ಸುಂದರಾಂಗಿಯೇ ಸಾರಸಾಕ್ಷಿಯೇ । ಮಂದಹಾಸಿನಿ ಮಾರಮೋಹಿನೀ । ಇಂದಿರೇಶನ ಮಾನಿನಿಯೇ । ತವ ಮುಂದೆ ನಿಂತಿಹನು ॥7॥

ಲಕ್ಷ್ಮೀನೃಸಿಂಹಮಮಲಂ ನತ್ವಾ ಮಧ್ವಾದಿಸದ್ಗುರೂನ್ । ಲಕ್ಷ್ಮೀಲೀಲಾಮೃತ-ಸ್ತೋತ್ರಂ ಕರಿಷ್ಯಾಮಿ ಯಥಾಮತಿ ॥1॥

ಚತುಷ್ಪದಿ ಛಾಪುತಾಳ – ಪೇಳುವೆ ನಿನ್ನಯ ಭಾಳ ಮಹಿಮೆಗಳ । ಬಾಲ ಕೃಷ್ಣನ ಹೃದಯಾಲಯದೊಳಗಿಟ್ಟು। ಆಳುವೋ ಅಗಲಾದೆ ನೀಲ ಸಾರಸ ನೇತ್ರೆ । ಏಳು ಎರಡು ಜಗದಾಲಯದಿ ॥1॥ ನಾನು ನಿನ್ನಯ ತುತಿ ಏನು ಮಾಡಲಿ ತಾಯೆ । ಧೇನುಪಾಲನು ನಿನ್ನಾಧೀನನಾಗುತ ತನ್ನ । ಧ್ಯಾನದೊಳಗೆ ನಿನ್ನ ಧ್ಯಾನ

ನೀಡುತಲಿಹ । ತಾನು, ನಿನ್ನನು ಬಿಟ್ಟು ಏನು ಮಾಡಲಿ ॥2॥ ಬೇರೆ ನಿನ್ನಯ ತುತಿ ಬಾರದೋ ಮನಸಿಗೆ । ನೀರಜಾಕ್ಷನು ತನ್ನ ಸಾರ ತುತಿಗಳಲ್ಲೆ ॥ ಮಾರಜನನೆ ನಿನ್ನ ಸೇರಿಸಿ ನುಡಿಸುವ । ಸಾರುವ ಮನ್ಮನೋರಾಗದಲಿ ॥3॥ ಶ್ರೀಲಕ್ಷ್ಮೀಪತಿ ನೀನು ಆಲದೆಲಿಯ ಮ್ಯಾಲೆ । ಲೋಲನೇತ್ರೆಯ ಕೂಡಿ ಲೀಲೆಯ ಮಾಡುತ್ತ ॥ ಮೂಲ ಪ್ರಕೃತಿಯಿಂದ ಬಹಳ ಸೃಷ್ಟಿಸಿ ಜಗ । ಪಾಲಿಸಿ ಹರಿಸುವಿ ಕಾಲ ರೂಪ ॥4॥ ವರಲಕ್ಷ್ಮಿ ಹರಿಯನು ವರಣಿಸಿ ಈ ಪರಿ । ಮುರಹತ ತುವಯೊಳು ಇರುವುದು ತುತಿ ನಿನ್ನ । ಕರುಣನಿಧಿಯೆ ನಾನು ಮರೆಯನು ಎಂದಿಗೂ । ಹರಿಯ ಮುಂದೆನ್ನ ನೀನರುಹು ದೇವಿ ॥5॥ ಅರ್ಧನಾರಾಯಣ ಅರ್ಧ ಲಕುಮಿ ಹೀ । ಗಿದ್ದ ರೂಪವು ಪೂಜ್ಯ ಯಜ್ಞದೊಳಗೆ ನಿನ್ನ ॥ ಮುದ್ದು ದಕ್ಷಿಣೆಯೆಂದು ಶ್ರದ್ಧೆಯಲಿ ನಮ್ಮ । ವದ್ಧಾರು ಪೇಳ್ವರು ಶುದ್ಧಾಂತರಾಗಿ ॥6॥ ಹರಿಯ ಎಡಕೆ ಬಲನರುವಿ ನಿನ್ನೊಳು ಸ್ನೇಹ । ಬೆರೆಸುವನತಿಶಯ ಪರಮ ಪುರುಷ ಕೃಷ್ಣ । ವರುಣತನಯೆ ಹರಿ ಬರುವಂತೆ ಮಾಡೆನ್ನ । ಗುರುಗಳು ಮುಖೆ ಚಿತ್ತಸರಸಿಜದಿ ॥7॥ ದೇಶ ಕಾಲಗಳಿಂದ ನೀ ಸಮಳೀಶಗೆ । ವಾಸಮಾಡಿದಿ ವಕ್ಷದೇಶದೊಳಗೆ ಭವ । ಕ್ಲೇಶವೆಂದಿಗೂ ಇಲ್ಲ ವಾಸುದೇವನ ದಯ । ವೇಸು ಪೇಳಲಿ ನಿನ್ನೋಳೀಭೇಶ(ಚಂದ್ರ)ಮುಖಿ ॥8॥ ಇಂದಿರೆ ನಿನ್ನಯ ಮಂದಿರ ದ್ವಾರದಿ । ಮಂದಜಾಸನ ಮುಖ ವೃಂದಾರಕರು ಎಲ್ಲ ॥ ಸುಂದರಾಪಾಂಗದಿ ಬಂದೊಮ್ಮೆ। ನಿಂದು ಮುಗಿದು ಕರ ನಿಂದಿಹರು ॥9॥ ನಿನ್ನ ತುತಿಸೆ ಆತನನ್ನ ತುತಿಸಿದಂತೆ । ಧನ್ಯನ ತುತಿಸಲು ನಿನ್ನ ತುತಿಸಿದಂತೆ ॥ ಚಿನ್ನದೊಳಗೆ ರನ್ನವನ್ನು ಕೂಡಿಸೆ ಕುಂದಣೆನ್ನು ವರದರಂತೆ ಮನ್ನಿಪುದು ॥10॥ ಸುರಮುನಿ ನೀಡಿದ ವರಪಾರಿಜಾತವ । ಕರದು ತೊಡೆಯೊಳಿಟ್ಟು ಸರಸಿಜಾಕ್ಷಿಯೆ ನಿನ್ನ । ಹರುಷದಿಂದಲಿ ಕೃಷ್ಣ ಹೆರಳಿಗೆ ಮುಡಿಸಿ ತಾ । ಸರಿಯಾರು ನಿನಗಿನ್ನು ತರುಳೆಯರು ॥11॥ ಹರಿಯ ವಿಯೋಗವು ಸಿರಿಯೆ ನಿನ್ನೊಳಗಿಲ್ಲ ॥ ಹರಿಯು ತೋರುವ ಹೀಗೆ ದುರುಳ ಮಾನವರಿಗೆ । ಸರುವ ವ್ಯಾಪಿಗಳಿಗೆ ಬರುವೊಧ್ಯಾಂಗಿದು ದೇವಿ ಪರಮಾವಿಯೋಗಿನಿ ಹರಿಗೆ ನೀನು ॥12॥ ವಾರಿಜಾಸನದೊಳು ನಾರಾಯಣನುಸು ಕೇ । ಯೂರಕಂಕಣ ಸುಕಿರೀಟಕುಂಡಲ ॥ ಹಾರಿ ಸೂರ್ಯ ಮಂಡಲದೊಳು ಸೇರಿ ನಿನ್ನಯ ಕೂಡಿ । ಭೂರಿಪ್ರಕಾಶಿಪ ಮೂರು ಲೋಕ ॥13॥ ಸಿಂಧು ತೀರದಿ ಬಹು ಸೌಂದರ್ಯ ಸೌಭಾಗ್ಯ । ಮಂದ ಮಾದದಿ ನಿಂತ ಸುಂದರಿ ನಿನ ನೋಡೆ ।

ಕಂದರ್ಪ ಜನಕನು ಬಂದು ಪಾಣಿಯ ಪಿಡಿ । ದಂದು ಕೊಟ್ಟನೇ ವಕ್ಷೋ ಮಂದಿರವ ॥14॥ ಸರುವ ಜೀವರ ಹೃತ್ಸರಸಿಜದೊಳಿಹ । ಉರು ಸೂಕ್ಷ್ಮಾಕಾಶದಿ ಬೆರಸಿ ಕೃಷ್ಣನು ನಿನ್ನ । ಎರಡಾರು ಕರಣಗಳ್ ಪರಿಚೋದಿಪ ಇಂಥ । ಮರುಳುಗೊಂಡಿಹನಲ್ಲೆ ಪರುಷಮಣಿ ॥15॥ ಪತ್ರವ ಬರೆದಿಲ್ಲ ಮಿತ್ರತ್ವ ಮೊದಲಿಲ್ಲ । ಹತ್ತಿದಣ್ಣಗೆ ಎತ್ತೋವಾರ್ತೆಗಳಿಲ್ಲ ॥ ಹಸ್ತದಕ್ಷರ ನೋಡಿ ಚಿತ್ತ ಭ್ರಮಿಸಿ ಕರ । ವೆತ್ತಿ ರಥದಿ ನಿನ್ನ ಹತ್ತಿಸಿದ ॥16॥ ದುಷ್ಟರಾಜರು ಸೈನ್ಯ ಕಟ್ಟಿ ನಿನ್ನಯ ಬೆ । ನ್ನಟ್ಟಿ ಬರಲು ದೇವಿ ಭೆಟ್ಟಿ ಹೋಗುವಾಗೆ ॥ ಅಷ್ಟು ರಾಜರ ಲಕ್ಷಿಲಿಟ್ಟು ನೋಡದೆ ಕರ । ಮುಟ್ಟಿದ ಹರಿ ನಿನ್ನೊಳೆಷ್ಟು ಪ್ರೀತೆ ॥17॥ ಮಿಂದು ಹೇಮಾಂಬರ ಸುಂದರಾಭರಣಿಟ್ಟು । ಬಂದ ಹರಿಗೆ ತನ್ನ ಸೌಂದರ್ಯ ತೋರುತ್ತ । ನಂದ ನಂದನ ಮುಖವಿಂದು ನೋಡುವದೆಂದು । ಬಂದು ರುಗ್ಮಿಣಿ ಸಭೆ ಮುಂದೆ ನಿಂದು ॥18॥ ಇಂದು ವದನದೊಳು ಬಂದು ಗುರುಳು ನಖ । ದಿಂದ ಮೇಲಕ ತಿದ್ದಿ ಸುಂದರ ಹರಿ ನೋಡು ॥ ಬಂದ ರಾಜರು ಎಲ್ಲ ಕಂದರ್ಪ ವಶರಾಗಿ । ಮುಂದೆ ಬಿದ್ದರು ಮೂರ್ಛೆ ಪೊಂದುತಲೆ ॥19॥ ಶತ್ರುಗಣವು ಬೆನ್ಹತ್ತಿ ಬರಲು ಗೆದ್ದ । ಮಿತ್ರನಂದದಿ ರುಗ್ಮಿ ಮತ್ತು ಬರಲು ಕರ । ಕತ್ತಿಯಿಂದಲಿ ಕೇಶ ಕತ್ತರಿಸುತ ನಿಜ । ಪತ್ತಿನ ಪೊಕ್ಕನು ತ್ವತ್ಸಹಿತ ॥20॥ ದ್ವಾರಕಪುರದೊಳು ಮಾರಜನಕ ಪರಿ । ವಾರ ಸಹಿತ ನಿನ್ನ ಸೇರಿ ಉತ್ಸವಗಳು । ತೋರಿಸೆ ಅಂಬರವೇರಿದ ಸುರರೆಲ್ಲ । ನಾರೇರ ಸಹ ಪುಷ್ಪ ತೂರಿದರು ॥21॥ ತರುಳ ರಾಮನು ಮುನಿಬೆರಸಿ ಮಿಥಿಲ ನಾಮ । ಪುರದೊಳು ಬರುತಲೆ ಹರನ ಚಾಪವ ನೋಡಿ । ಗುರುಳು ಮೇಲಕೆ ಮಾಡಿ ಮುರಿದು ನಿನ್ನನು ಕೂಡಿ । ಸುರಿದ ಸುಖವ ದಿವ್ಯ ಸರೆಯುವಲ್ಲೇ ॥22॥ ಸತ್ರಾಜಿತನು ತನ್ನೊಳು ರತ್ನದ ಕಳವಿಡೆ । ಚಿತ್ತದೊಳು ತಾರದೆ ಮತ್ತೆ ದ್ವಾರಕಿಯಲ್ಲಿ । ಹಸ್ತವ ಪಿಡಿದನು ಮಿತ್ರತ್ವ ನಿನ್ನಲ್ಲೆ । ವಿಸ್ತರಿಸಲಿ ಎಷ್ಟು ಸತ್ಯಭಾಮೆ ॥23॥ ಅಂತರಂಗದ ಪ್ರಿಯ ಕಂತುಪಿತನು ಮಹಾ । ನಂತ ಕಾಲದಿ ನಿನ್ನೊಳೆಂಥೆವರಲ್ಲೆಲ್ಲ । ದಂತೆ ಸ್ನೇಹವ ಮಾಳ್ಪಚಿಂತ್ಯಮಹಿಮೆಗಳ । ಚಿಂತಿಸಿದರು ವಿಧಿ ಪ್ರಾಂತಗಾಣಾ ॥24॥ ಇಂದಿರಾದೇವಿಯು ನಂದನ ಸತಿಯೊಳು । ಬಂದು ಪುಟ್ಟಲು ನೀನು ಬಂದಾನು ವಸುದೇವ । ಕಂದನವನ ನೋಡಿ ಸುಂದರಾಂಗಿಯೆ ನಾಚಿ । ಥಂದವಲ್ಲವು ಇದು ನಮಗೊಂದೆ ಮನಿ ॥25॥ ಎಂದು ಸಾಧರ್ಮ್ಯದ ಚಂದ್ರ

ತೋರುವ ಫಲ । ದಿಂದ ಶೌರಿಯ ಕರ ಪೊಂದಿ ರಾತ್ರಿಲಿ ಮಹ । ನಂದದಿಂದಲಿ ರವಿನಂದನೆ ದಾಟುತ್ತ । ಬಂದಿಯೇ ದೇವಕಿ ಮಂದಿರದಿ ॥26॥ ಬಂಧಿಕೆ ಇವಳೆಂಬೊದಿಂದೆ ತಿಳಿದೆವವು । ಬಂದಾಕ್ಷಣವೆ ಕಾಲಲಿಂದ ಬಿಚ್ಚಿದ ಬೇಡಿ । ಬಂದಿತು ಪುನರಪಿ ನಿಂದೆ ದ್ವಾರಗಳೆಲ್ಲ । ಪೊಂದಿಕೊಂಡವು ಕೀಲಿ ಬಂದಿತಾಗೆ ॥27॥ ದೋಷವೆಲ್ಲಿವೆ? ನಿನಗೀಶಾನುಗ್ರಹದಿ ವೇದ । ರಾಶಿಯಿಂದಲಿ ತುತಿ ಪೋಷಿಸಿ ಸಂಸಾರ । ಪಾಶ ಬಿಡಿಸು ದೇವ ಜೀವರು ಯೆಂದು ಬಭಾಷಿ ಭಾಷಿಗೆ ಹರಿತೋಷಿಸುವಿ ॥28॥ ಅಂದಲ್ಲ್ಯಾಕಾಶದಿ ನಿಂದು ದೇವಿಯೆ ನೀನು । ಮಂದಾತ್ಮ ನಿನ್ನನು ಕೊಂದು ಹಾಕುವ ಕೂಸು । ಬಂದಿಲ್ಲ ಪುಟ್ಟಿಹನೆಂದು ವಾಕ್ಚಾತುರ್ಯ । ದಿಂದಲ್ಲಿ ಪೇಳ್ದಿ ಸುರವಂದಿತಳೆ ॥29॥ ಎರಡು ಹತ್ತು ವರುಷ ಚರಿಸುತ್ತ ವನದೊಳು । ವರ ಮತ್ಸ್ಯದೇಶಕ್ಕೆ ಬರುವಾಗ್ಗೆ ಮಾರ್ಗದಿ ॥ ಸಿರಿದೇವಿ ನಿನ್ನಯ ಚರಣಗಳಿಗೆ ನಮ । ಸ್ಮರಿಸುತ್ತ ತುತಿಗಳ ಸುರಸಿದರು ॥30॥ ಸರಸಿಜಾಕ್ಷಿಯೆ ನಾವು ವಿರುವೆ ವೀಪುರದಲ್ಲಿ। ಪರರು ತಿಳಿಯದಂತೆ ವರವು ಕೊಡೆನ್ನಲು ॥ ಕುರುಕುಲಾಧಿಪ ಪಂಚ ಧರ್ಮ ಭೀಮಾऽರ್ಜುನ । ಪರಮ ಸುಂದರ ಮಾದ್ರಿ ತರುಳರಾಗೆ ॥31॥ ಕರುಣಾನಿಧಿಯೆ ಕಣ್ಣು ತೆರದು ಅವರ ನೋಡಿ । ಪರಮಸ್ನೇಹದಿ ನೀವು ಇರುವುದೀ ಪುರದಲ್ಲಿ॥ ಪರರು ತಿಳಿಯರಾರು ವರವ ನೀಡುತ ಹೀಗೆ। ಎರಡ್ಹತ್ತು ಮಾಸದಿ ಪೊರದೆವರ ॥32॥ ಬಂದು ಮನದಿ ಹರಿ ಸುಂದರಾಮೃತ ಲೀಲಾ । ವೃಂದವ ಸ್ಮೃತಿಯೊಳು ತಂದು ನೀಡುತ ಭಕ್ತ । ಸಂದೋಹಕನುದಿನ ನಂದಬಾಷ್ಪವನಿತ್ತಾ ಮಂದ ಸುಖವ ನೀವೆ ಸುಂದರಾಂಗಿ ॥33॥ ಪ್ರಳಯಕಾಲದಿ ವಟದೆಲೆಯ ಮ್ಯಾಲ್ಪುರುಷದಿ । ನಳಿನನಯನ ತನ್ನಂಗುಲಿಯನು ಮುಖದಿಂದ ॥ ಬಲು ರುಚಿ ಚೀಪುತ್ತ ಚಲುವ ಬಾಲಕನಾಗಿ। ಲಲನೆ ನಿನ್ನನು ಕೂಡಿ ಮಲಗುವನು ॥34॥ ಸೃಷ್ಟಿಕಾಲವು ಬರೆ ವಿಷ್ಪರಶ್ರವನರ್ಧ । ವಿಷ್ಟಾರದಲಿ ನಿಂತು ಭೀಷ್ಟ ಶ್ರೀಭೂದುರ್ಗಾ ॥ ಶ್ರೇಷ್ಠರೂಪಗಳಿಂದ ಧಿಟ್ಟತನದಿ ವೇದ। ವೆಷ್ಟು ಪಠಿಸಿ ಹರಿಯ ತುಷ್ಟಿಸುವಿ ॥35॥ ಬಿಲ್ಲು ಪಿಡಿದು ರಥದಲ್ಲಿ ಕುಳಿತು ಪಾರ್ಥ । ಗಲ್ಲೆ ರಣದಿ ಸಿರಿ ವಲ್ಲಭ ಕೃಷ್ಣನು । ಇಳಿದು ಭೂಮಿಯೊಳು ವಲ್ಲಭಿ ದುರ್ಗಿಯ । ಒಳ್ಳೆ ತುತಿಸು ಯೆಂದು ಸಲ್ಲಾಡಿದ ॥36॥ ಹಾಗೆ ಆಗಲಿಯೆಂದು ಸಾಗುತ್ತ ರಥದಿಂದ ಪೋಗಿ ಭೂಮಿಲಿ ಶಿರಬಾಗಿ ನಮಿಸಿ ಪಾರ್ಥ । ಯೋಗನಿದ್ರೆಯು ಜಯಯೋಗ

ನೀಡೆಮಗೆಂದು । ನಾಗಶಯನ ತಂಗಿಗ್ಹಾಗಾಡಿದಾ (ಹಾಗೆ ಆಡಿದಾ) ॥37॥ ನಿಂದು ತುತಿಪ ಪಾರ್ಥನಂದು ನೋಡುತ ದೇವಿ । ಸುಂದರ ಕರವಿಟ್ಟು ಮುಂದಾಲಿಯೊಳು ಜಯ । ಏಂದು ಆಗಲಿ ರಾಜ್ಯ ಪೊಂದಿ ಸುಖಿಸು ಕುಂತಿ । ನಂದನಾ ನೀ ನಂದಿ ನಂದ ಸುತ ॥38॥ ಕರಡಿಯೊಳಗೆ ನೀನು ಇರುವಿ ಯಂದವಳಿಗೆ । ಹಿರಿಯನಂದದಿ ಕೃಷ್ಣ ಮರಿಯಾದಿ ಮಾಡುವ । ಸರಿಯಾಲು(ರಿ) ಪರ ಸಮಳಿರುವಳಾದೇವಿಯು । ಸಿರಿಯ ನಿನ್ನೊಳು ಹರಿಹರುಷಾವೆಷ್ಟು ॥39॥ ಮದುವಿ ಆಗಿರುವಂಥ ಹದಿನಾರು ಸಾವಿರ । ಸದಮಲ ನೂರಾರೂ ಸುದತಿಯರೊಳು ನೀನು । ಮದನನಯ್ಯನ ಕೂಡಿ ಮುದವನುಂಬುವಿ ಇನ್ನು । ಹೃದಯದೊಳಾಡ್ಹರಿ ಬದಿಗನಾಗೆ ॥40॥ ಫುಲ್ಲಲೋಚನೆ ನೀನು ಕಲ್ಲಿಲೆ ಒಗೆದಾರು । ಸಲ್ಲನಾಡದೆ ವಂದು ಚಲ್ವಿಕಿ ಮರುಳಾಗಿ । ಸುಲ್ಲಲಿತಾಂಗಿಯೇ ಎಲ್ಲದೊರೆದು ಚಿತ್ತ । ದಲ್ಲಿ ನಿನ್ನ ಸ್ಮರಿಸುತ್ತ ಮಲಗಿದಾ ॥41॥ ಕನ್ಯಾಮಣಿಯೇ ನಿಜ ಚಿನ್ಮಯ ರೂಪವಾ । ಚ್ಛನ್ನಿಸಿ ಕೊರವಂಜಿ ತನ್ನುತ ಧರಿಸುತ್ತ ॥ ವನ್ನಜ ಜಾಂಡೆಂಬ ಘನ್ನ ಬುಟ್ಟಿಯ ಪೊತ್ತ । ನಿನ್ನಲೋಸುಗ ಪುರವನ್ನೇ ಪೊಕ್ಕಾ ॥42॥ ಚಿನ್ನಗರ್ಭನ ಹರಿ ತನ್ನ ಕೂಸಿನ ಮಾಡಿ । ಸಣ್ಣ ಉಡಿಯೊಳಾ ತನ್ನ ತಾ ಕಟ್ಟುತಾ ॥ ಧನ್ಯ ಧರಣಿದೇವಿ ಮನ್ನಿಯೊಳಘೆ ಬಂದು । ನಿನ್ನ ಯಾಚಿಸಿದನು ವಹ್ನಿಯಂತೆ ॥43॥ ನಿನ್ನ ಮದುವೆಯಾಗಿ ಪನ್ನಗ ಶೈಲದೊ । ಳನ್ನು ವಾಸವ ಮಾಡಿ ತನ್ನ ಜನಗಳಿಗೆ ॥ ಘನ್ನ ದರ್ಶನದಿಂದ ಧನ್ಯರ ಮಾಡುವಾ । ಪನ್ನ ಪಾಲನ ತೋರೆ ಎನ್ನೊಳಗೆ ॥44॥ ಹರಿಯೊಳಗಿರುವಂಥ ಪರಿ ಪರಿ ಸುವಿಶೇಷ । ಬೆರಗಾಗಿ ನೋಡುತ್ತ ಹರುಷಸಾಗರದಲ್ಲೆ॥ ಪರತೀರ ಕಾಣದೆ ಮರುಳುಗೊಂಡಿಹ ದೇವಿ । ಪರ ಜನರಿಗೆ ಇಂಥ ಹರುಷವುಂಟೆ ॥45॥ ಮೂರು ರೂಪಗಳಿಂದ ಮೂರು ಗುಣಗಳಲ್ಲಿ । ಸೇರಿ ಸಂತಸ ಹರಿ ಕಾರ್ಯವ ಮಾಡುವಿ । ನಾರಿಮಣಿಯೆ ನಿನ್ನ ಮೀರಿ ಪೋಗುವರುಂಟೆ । ತಾರತಮ್ಯದಿ ದೇವಿ ಮೂರ್ಜಗದಿ ॥46॥ ಮೂರು ರೂಪಗಳಲ್ಲೆ ಆರು ನೇತ್ರಗಳಿಂದ । ಮಾರನಯ್ಯನ ರೂಪ ಸಾರುವ ನೋಡುತ್ತ । ಸೇರಿ ಸುಖಾಬ್ಧಿಯೋಳ್ ಪಾರುಗಾಣದೆ ನಿಂತಿ । ಆರಮ್ಮ ನಿನ್ನ ಸಮ ನಾರಿಯರು ॥47॥ ದೋಲಮಂಚದಿ ಮುಕ್ತಮಾಲ ಮಾಣಿಕ್ಯದ । ಜೋಲ್ಯಾಡೊ ಗೊಂಡ್ಯಾವು ಶಾಲು ಶೈಯಾಛತ್ರ ॥ ಭಾಳು ಭೋಗಿಪ ದ್ರವ್ವಳಾಗಿ ಪತಿಯ ಸೇವೆ । ಲಾಲಿಸುತಿಹ

ದಿವ್ಯ ನೀಲ ನೇತ್ರೆ ॥48॥ ಭಾನು ನಂದದೆ ದಿವ್ಯ ಕಾನನದೊಳು ನಿಂತು । ಗಾನ ಮಾಡುವ ರನ್ನೆ ಪೇಣು ನೀನಾಗುತ್ತ ॥ ಧೇನುಪಾಧರಸುಧೆ ಪಾನ ಮಾನ ಮಾಡುವಿ ಸುಖ । ವೇನು ಪೇಳಲಿ ಶೇಷ ತಾನು ಪೇಳಾ ॥49॥ ಹರಿಯ ನಂತರದಲ್ಲಿ ಸರಸ್ವತಿ ಮೊದಲಾದ । ಸರವ ಶಬ್ದಗಳಿಂದ ಪರಮ ವಾಚ್ಯಳು ವೇದ ಅರುಹುವದೀ ಪರಿ ಸರುವ ಶಕ್ತಳೆ ನಿನ್ನ । ಸರಿಯಾರೊ ಸಂಸಾರ ಪರಿಮುಕ್ತಳೇ ॥50॥ ಇಂದು ಮುಖದಿ ಮಾಳ್ಪ ಮಂದಹಾಸನ ಬೆಳ । ಕಿಂದತಿ ದೇಹದಿ ಪೊಂದಿದ ಮಣಿ ಭೂಷ । ವಂದಾಗಿ ಥಳ ಥಳವೆಂದು ಶೋಭಿಸುವವು । ಮಂದಗಮನೆ ಕೋಟಿ ಚಂದ್ರರಂತೆ ॥51॥ ಕಂದನಲ್ಲವೆ ಎನ್ನೊಳೊಂದು ಮಾತಾಡದ । ಬಂದಾ ಕೋಪದ ದಾವದೆಂದು ತಿಳಿಯೆ ನಾನು । ಇಂದಿರೆ ನಿರ್ದೋಷವೆಂದು ಪೇಳುವ ವೇದ । ವೃಂದಾವು ಸುಳ್ಳೆನೆ ಸುಂದರಾಂಗಿ ॥52॥ ಥಳಥಳಿಸುವಾಮೃತಜಲಶೋಭೆ ವಾಪಿಯು । ಚಲುವ ವಿದ್ರುಮ ತಟ ವಲಯಾತ್ಮವನದೊಳು । ಹಲವು ಸಖಿಯರಿಂದ ನಳಿನಾಕ್ಷಿ ಹರಿಯನು । ತುಳಸಿದಳದಿಂದ ಪೂಲಿಸುತಲೆ ॥53॥ ಸ್ವಲಕ ಮುನ್ನಸ ವಕ್ತ್ರವಲಯಾ ನೋಡುತ ತನ್ನ ಜಲಜನೇತ್ರನು ಚುಂಬಿಸಲಿಹ ಸುಖವನುಂಬ ॥ ನಿಳೆಯೊಳು ಎನ ಸಮ ಲಲನೆಯರ್ಯಾರಿಲ್ಲೆಂದು । ತಿಳಿದು ಸುಖಾಂಬುಧಿ ಮುಳುಗಿದೆಯೆ ॥54॥ ಏಕ ಪತ್ನಿಯ ಕೂಡಿ ಲೋಕನಾಯಕಾ ರಾಜಾ । ಪಾಕ ಜನ್ಮದಿ ನಿನ್ನ ತಾ ಕಳದ್ದುಡುಕುತ್ತ । ಸಾಕಿದುವ್ರತ ನಂದ ತೋಕ ಜನ್ಮದಿ ನಾನಾ । ನೇಕ ಪತ್ನಿಯರಾಳಬೇಕು ಯೆಂದಾ ॥ ನಾಥನಾಡಿದ ಮಾತು ಸೀತೆ ನೀ ಕೇಳುತ್ತ । ಭೀತಳಾದಿಯೆ ಜಾರ ನೀತನಾಗುವನೆಂದು । ಆತ ತಂದಿಹ ಸರ್ವಸ್ತ್ರೀತನುವಿಲಿ ರೂಪ । ಜಾತ ಪೊಂದುತ ಸಂಘ ಶಾತ ಉಂಡೆ ॥56॥ ತರುಣಿಯ ಮುಖದಿಂದ ಪುರುಷನುತ್ಸವ ಕೇಳಿ ಕರವೀರಪುರದಿಂದ ಹೊರಟು ರಥದಿ ಕೂತು । ಬರುವ ಸೌಂದರ್ಯವ ಗುರುಳು ಮುಖಿಯೆ ಎನ್ನ । ಎರಡು ಕಣ್ಣಿಗೆ ತೋರೆ ಸರಸಿಜಾಕ್ಷಿ ॥57॥ ಬಂದು ಶೇಷಾದ್ರಿಯ ಕಂದರದೊಳು ಮಹ । ನಂದದಿಂದಲಿ ಪತಿ ಪೊಂದಿ ಪಾದಗಳಲ್ಲೆ ॥ ಸುಂದರ ಚಂಪಕ ವೃಂದವ ಸುರಿಸಿದಂಥ । ದ್ವಂದ್ವ ಕರವ ತೋರೆ ಸಿಂಧು ಪೋತೆ ॥58॥ ಹರಿಯ ಎದುರಿ ನಿಂತು ಕರದಿ ತೈಲದ ಪಾತ್ರಿ । ಧರಸಿ ಶಿರದಿ ಎಣ್ಣೆ ಇರಸಿ ಆಶೀರ್ವಾದ ಹರಸಿದ ಸುಂದರಾಭರಣಿ ಭೂಷಿತ ವಪು । ಸಿರಿಯ ತೋರಿಸ ನಿನ್ನ ಕರುಣಾನಿಧೆ ॥59॥

ರಾಮನಂಸದಿ ದಿವ್ಯ ಹೇಮ ಕಮಲ ಮಾಲೆ। ಪ್ರೇಮದಿಂದಲಿ ಹಾಕಿ ವಾಮಭಾಗಡಿ ನಿಂತ ॥ ಶ್ರೀಮನೋಹರಿ ನಿನ್ನ ಕೌಮಾರ ಸೌಭಾಗ್ಯ । ಶಾಮಸುಂದರಿ ತೋರೆ ಸೋಮಮುಖಿ ॥60॥ ದ್ವಾರಕಾ ಪುರದಲ್ಲಿ ಪಾರಿಜಾತದ ತಳ । ಸೇರಿ ಶೋಭಿಪ ಕಾಂಚನೂರು ಪೀಠದಿ ಕೂತು । ಮಾರನಯ್ಯನ ಕೂಡಿ ತೂರಿ ಲೆತ್ತವ ನಾಡ । ಸಾರಸಕರ ತೋರೆ ಮಾರಮೋಹೆ ॥61॥ ತಾರಾ ರುಮಾದಿಕ ನಾರೇರ ಒಡಗೂಡಿ । ಸೇರಿ ಪುಷ್ಪಕದೊಳು ರಾಮನಂಕದಿ ಕೂತು । ಹೀರ ಮೌಕ್ತಿಕ ಹೇಮ ಭೂರಿ ಭೂಷಣ ಶೋಭಿ । ಚಾರು ಶುಭಗ ಮುದ ತೋರೆ ದೇವಿ ॥62॥ ಕುಂದ - ಮಲ್ಲಿಗೆ ಚಂಪಕದಿರವಾಶೋಕ । ಮಂದಾರ ಸುಮಮಾಲ ವೃಂದಾದಿಂದೊಪ್ಪುವ ಸುಂದರ ವೇಣಿಯೇ ಹಿಂದಾಲಿಸುತ ಬಾಹೋ । ಸೌಂದರ್ಯ ತೋರಿಸೆ ಚಂದ್ರಮುಖಿ ॥63॥ ಘಿಲ್ಲು ಘಿಲುಕುಯೆಂಬೋಲುಲ್ಲುಕಾಲುಂಗುರ । ಪಿಲ್ಯಾ ಪೈಜಣ ರುಳಿ ಸುಳ್ಳಿ ಪಾಡಗ ಮೀನ ॥ ನಲ್ಲಲ್ಲಿ ಕುಣಿಸುತ ನೆಲ್ಲಿ ಪೋಗುವ ಪಾದ । ಪಲ್ಲವ ತೋರಮ್ಮ ಫುಲ್ಲನೇತ್ರೆ ॥64॥ ಧರೆಯೊಳಗಲವೂವ ಜರದ ಪೀತಾಂಬರ ಕರದಿಂದ ಮೇಲಕ್ಕೆ ಧರಿಸುತ ಹರಿಯಂತ । ಸೂರಗಿದ ಕಟಿಯಲ್ಲಿ ಪರಿ ಶೋಭಿಸುವ ಕಾಂಚಿ । ಸಿರಿಯು ನೂರಪುರದಲ್ಲೆ ಬೆರಸಿಹದು ॥65॥ ಕೊರಳಲ್ಲಿ ಶೋಭಿಪ ಸರಗಿ ಪದಕ ಹಾರ । ತರಳ ಗೆಜ್ಜೆಯು ಟೀಕಿ ಹರಳು ಕೆಚ್ಚಿದ ದಿವ್ಯ ॥ ಪುರಟ ಪುತ್ಥಳಿ ಮಾಲೆ ಬೆರೆದು ಕಾಂಚಿಯ ಮೇಲೆ। ಹರುಷ ನೀಡುತಲಿದೆ ಹರಿಣ ನೇತ್ರೆ ॥66॥ ಎರಡೈದು ಬೆರಳಲ್ಲೆ ಥರಥರದುಂಗುರ । ಕರದಿ ಕಂಕಣ ದುಂಡು ಹರಡಿ ಪಾಟಲಿ ತೋಡೆ । ಜರದ ಕಂಚುಕ ಮೇಲೆ ಉರಗಭೂಷಣ ವಂಕಿ । ತರುಳ ತಾಯಿತ ಗೊಂಡೆ ಸಿರಿಯು ತೋರೆ ॥67॥ ಗುರುಳು ಕೇಶದ ಮಧ್ಯ ಮೆರವ ತಿಲಕ ಕಣ್ಣೋಳ್ । ಕರಿಯ ಕಾಡಿಗೆ ಕೆಂಪು ಹರಳು ಕೆತ್ತಿದ ವಾಲೆ । ಸರಸರದ್ರಾಕ್ಷದ ಲತಿ ಅರಿಷಿಣ ಗಲ್ಲದಿ । ಪರಮ ಮುಖದ ಕಾಂತಿ ಹರವಿಹದು ॥68॥ ಇಂದಿರೆ ನಿನ್ನ ವಪು ಸೌಂದರ್ಯ ಸೌಭಾಗ್ಯ । ವೆಂದಿಗಾದರು ಮುಖದಿಂದ ಪೇಳುವುದುಂಟೆ ॥ ಒಂದು ಸಾವಿರ ಮುಖದಿಂದ ಪೇಳಿದರಿದು । ಎಂದಿಗೂ ತೀರಹೀಂದ್ರನಲ್ಲೆ ॥69॥ ನಿನ್ನಂಥ ಪತಿವ್ರತೆಯನು ಕಾಣೆನೆ ಮೀನ । ಜನ್ಮದೊಳಿಹ ಪತಿಯನ್ನು ನೋಡಿದವಳಾಗಿ । ಧನ್ಯ ವೇದಾಖ್ಯದಿ ಜನ್ಮಳಾಗುತ ಹರಿ । ಯನ್ನ ಭಜಿಸಿ ಸುಖವನ್ನು ಉಂಡೆ ॥70॥ ಕರ್ಮಿ ಮಾನವನಂತೆ ಶರ್ಮಚಿದ್ರಾತ್ಕ। ಪರಮ

ಪುರುಷ ಕೂರ್ಮ ವರುಷದೊಳಿರುತಿರೆ । ಸಿರಿ ವೇದವತಿಯೆಂಬೊ ಪರಮನಾಮದ ಲವ । ತರಿಸಿ ಸುಖವನುಂಡೆ ಹರಿಯೊಡನೆ ॥71॥ ಕನಕನೇತ್ರನು ತನ್ನ ವನಿತೆಯ ಕದ್ದೊಯ್ದು । ವನಧಿಯೋಳ್ ಹಾಕಿರೆ ವನಜಜ ನುತಿಸಲು ॥ ದನುಜದಲ್ಲಣ ಕೋಲ ತನುವ ಧರಿಸೆ ಧಾತ್ರಿ । ಯೆನಿಸಿ ವರಾಹನ ವನಿತೆಯಾದೆ ॥72॥ ಸುರಮುನಿಯುಪದೇಶ ಧರಿಸಿ ಪ್ರಹ್ಲಾದನು । ಹರಿಯ ಚರಣಗಳ ಸ್ಮರಿಸೆ ಮಾಧವ ಕಂಬ ॥ ಬಿರಿದು ಬರಲು ನೀನು ವರಮಹಾಲಕ್ಷ್ಮಿಯೇ । ತರುಣಿಯಾದೆಯೆ ದೇವ ನರಸಿಂಹಗೆ ॥73॥ ಬಲಿಯು ದೇವತೆಗಳ ವಲಯ ಜಯಿಸಿ ಶಕ್ರ । ಹಲವು ವ್ಯಾಜವ ಕೊಂಡು ಬಲು ಮತ್ತನಾಗಲು ॥ ನವಳಿನ ನಯನ ಪುಟ್ಟೀ ಇಳೆಯೊಳು ಸುಖಿ ಯಂಬೋ । ಚಲುವ ನಾಮದಿ ವಟು ಲಲನೆಯಾದೆ ॥74॥ ಕೃತವೀರ್ಯಸುತ ಸಮೀಹಿತ ಧೇನು ವಯ್ಯಲು । ಹತನ ಮಾಡೆವನನ್ನ ಪಿತರನುದ್ಧರಿಸುವಿ ವಿಪ್ರ । ಸತಿಯಿಂದ ಮಾಧವ ಕ್ಷಿತಿಯೊಳು ಹುಟ್ಟಲು ಹರಿ । ಣಿತಿ ನಾಮದಲಿ ರಾಮ ಸತಿಯಾದಿಯ್ಯೆ ॥75॥ ಮುನಿಜನ-ರೆಲ್ಲರು ಮನದಿ ದುಃಖಿಸುತಿರೆ । ವನಜನಾದಿಗಳೆಲ್ಲ ವನಧಿಯೋಳ್ ಪ್ರಾರ್ಥಿಸೆ । ದನುಜದಮನ ರಾಜತನುಜನಾಗಲು ನೀನು । ವನಿತೆಯಾದಿಯೆ ಸೀತೆ ಎನಿಸಿ ದೇವಿ ॥76॥ ತಂದೆ ತಾಯಿಗಳನ್ನ ಬಂಧಿಯೋಳ್ ಹಾಕಿದ । ಮಂದಾತ್ಮ ಕಂಸನ್ನ ಕೊಂದು ಹಾಕುವೆನೆಂದು । ನಂದಬಾಲನು ಶೌರಿ ಮಂದಿರದೊಳು ಪುಟ್ಟೆ । ಪೊಂದಿದವನ ಭೈಷ್ಮಿ ಎಂದುದಿಸಿ ॥77॥ ದೇವರಿಪುಗಳೆಲ್ಲ ಭೂವಲಯದಿ ಕರ್ಮ ಭಾವಿಸೆ ಸಂತತ ಪಾವನಾತ್ಮರಾಗೆ । ಕಾವನಯ್ಯನು ಬುದ್ಧ ದೇವನಾಗಲು ನೀನು ರೇವತಿ ರಾಮದಿ ಸೇವಿಸಿದಿ ॥78॥ ತುರುಕರೆಲ್ಲರು ಪುಟ್ಟಿ ಧರೆಯೊಳು ವಿಪ್ರರ । ಪರಿಬಾಧಿಸಲು ತಾಮ್ರಪರಣಿ ತೀರದಿ ಭೂಮಿ । ಸುರರಲ್ಲೆ ಹರಿ ಪುಟ್ಟಿ ತರುಣಿಯಾದೆ ಕಲ್ಕಿ । ವರನಿಗೆ ಪ್ರಭೆಯೆಂದು ಪುರುಟಪ್ರಭೆ ॥79॥ ಕಲಿ ದಿತಿಜನು ಬಂದು ಹಲವು ಶಾಸ್ತ್ರಗಳಿಂದ । ಬಲರಿಪುಮುಖಸುರವಲಯದೊಳಗೆ ಪೊಕ್ಕು । ಬಲು ಬಾಧಿಸಲು ಹರಿ ಇಳೆಯೊಳ್ ಉದಿಸೆ ವ್ಯಾಸ । ನೊಲಿಸಿದಂಭ್ರಣಿಯಾಗಿ ಜಲಜನೇತ್ರೆ ॥80॥ ಸನಕಾದಿಗಳು ಎಲ್ಲ ವಜನಾವಿಷ್ಟರನಲ್ಲೆ । ಮನದಂತೆ ಪ್ರಶ್ನವ ಕ್ಷಣಶ ಮಾಡುತಲಿರೆ । ತನುಜನ ಸಭೆಯೊಳು ಜನಿಸೆ ಹರಿಯ ಹಂಸ । ವನಿತೆಯಾದಿಯೆ ವರಟಿಳೆನಿಸಿ ದೇವಿ ॥81॥ ತರುಣಿ ಕಲಹ ಮಾಡಿ

ಕರವೀರಕ್ಷೋಗಲು । ಪರಮಪುರುಷ ತನ್ನ ಇರುವ ಸ್ಥಳವ ಬಿಟ್ಟು । ಗಿರಿಯೊಳಗಿರುತಿರೆ ಸರಸಿಯೊಳಗೆ ಪುಟ್ಟಿ । ಸಿರಿ ವೇಂಕಟೇಶಗೆ ಅರಸಿಯಾದೆ ||82|| ಯಜ್ಞನಾಮಕ ಸರ್ವಜ್ಞಗೆ ದಕ್ಷಿಣ ದುರ್ಗಾ ನಾಮದಿ ಹರಿ ಭಾರ್ಗವನರಸಿ ಸ । ನ್ಮಾರ್ಗದೊಳಿರುತಿಹ ಸುಜ್ಞತ್ತವಕ ಜನ । ವರ್ಗಕ್ಕೆ ಸ್ವರ್ಗಾಪವರ್ಗದಾತ್ರಿ ||83|| ವಾಸುದೇವಗೆ ಮಾಯಾ ಶ್ರೀಸಂಕುರಷಣ । ಗಾ ಸಖಿ ಜಯಯೆಂಬಿರಾ ಶಾಂತಿಗನಿರುದ್ಧ । ಗೀಶ ಪ್ರದ್ಯುಮ್ನ ಸುವಾಸಿನಿ ಕೃತಿದೇವಿ । ಈಸು ರೂಪದಿ ಜಗ ಪೋಷಿಸುವಿ ||84|| ಸಿರಿಕೇಶವಾಂಗನ ಶರನಿಲಯಗ ಲಕ್ಷ್ಮಿ । ಸರಸಿಜೆ ಮಾಧವಗರಸಿ ಪದ್ಮಾದೇವಿ || ಪರಮ ಗೋವಿಂದಗೆ ಸರಸಿ ಕಾಮಿನಿ ವಿಷ್ಣು । ಹರುಷ ಮಧು ಹಾಗೆ ಸರಸಿಜಾಸ್ಯಾ ||85|| ರಮೆಯು ತ್ರಿವಿಕ್ರಮ ಪ್ರಮದ ವೃಷಾಕಪಿ । ಪ್ರಮದ ವಟುಗೆ ಧನ ಪ್ರಮದ ಶ್ರೀಧರನಿಗೆ । ಪ್ರಮದ ಹೃಷಿಕಪಗಮಲ ಮಂಗಳೆ ಬುದ್ಧಿ । ಪ್ರಮದೆಯು ಪದುಮನಾಭನಿಗೆ ದೇವಿ ||86|| ದಾಮೋದರಗೆ ಪ್ರಿಯೆ ಕಾಮಿನಿಂದಿರದೇವಿ । ಶ್ಯಾಮ ಹಿರಣ್ಯಯೆ ಕಾಮ ಸಂಕರುಷಣ । ಭಾಮಿನಿ ದಕ್ಷಿಣೆ ವಾಸುದೇವಗೆ ನಿತ್ಯ । ಆ ಮಹಾಪ್ರದ್ಯುಮ್ನ ಕಾಮಿನಿಯು ||87|| ನಿತ್ಯಾನಿರುದ್ಧನ ಪತ್ನಿಯಾನಂದೆ ಪುರು । ಷೋತ್ತಮಪ್ರಿಯೆ ಸದಾಶ್ರಯಾಧೋದಜ । ಗುತ್ತಮ ಶುಭದೇವಿ ಮತ್ತೆ ಯಜ್ಞೆಯು । ಮರ್ತ್ಯ ಮಗಗೆ ಸಖಿ ಅಚ್ಯುತನಿಗೆ ಸುಖಿಯು ||88|| ಮುದ್ದು ಸೌಗಂಧಿ ಜನಾರ್ದನೋಪೇಂದ್ರಗೆ । ಹೃದ್ಯ ಸುಂದರಿ ಹರಿಗೆ ವಿದ್ಯಾದೇವಿ ನಿಜ । ಹೃದ್ಯಳಾದಿಯೆ ಸುಶೀಲೆ ಕೃಷ್ಣಗೆ । ಭದ್ರ ಸಂಕಾಯಸೀ ಪದ್ಮ ಚರ್ಮಾತ್ರಿಕೆಯೆ ||89|| ಪ್ರಾರ್ಥನಾ – ನಿತ್ಯಮುಕ್ತಳೆ ಸರ್ವ ಚಿತ್ತನಿಯಾಮಕೆ । ಭಕ್ತವತ್ಸಲೆ ಭೈಷ್ಮಿ ಸತ್ಯ ಎನ್ನಯ ಮನೋ । ವೃತ್ತಿಯೊಳೆಶೋದೆ ಪುತ್ರನಾಗಿಹ ದಿವ್ಯ । ಮುತ್ತಿನಂಥಾ ಕೂಸು ಎತ್ತಿ ತೋರೆ ||90|| ಭಾನುಮಂಡಲ ಮುಖಿ ಧೇನುಪಾಲನ ರಾಣಿ । ಪಾಣಿ ಜೋಡಿಸಿ ನಿಂತು ಗಾನವ ಮಾಡುವೆ ನಿತ್ಯ । ವೇಣು ಬಾಲನ ಎನ್ನ ಮಾನಸದೊಳು ತಂದು । ನೀನು ತೋರಿಸಬೇಕು ವೇಣು ರೂಪೆ ||91|| ಭಾಳು ದಿವಸ ನಿನ್ನ ಆಲಯದೊಳು ನಿಂತು । ಆಳಿನಂದದಿ ತಪ ಲೋಲಾಕ್ಷಿ ಮಾಡಿದೆ । ನೀಲವೇಣಿಯೆ ಹೃದಯಾಲಯದೊಳು ಎನ್ನ । ಬಾಲ ಕೃಷ್ಣನ ತೋರೆ ಲೀಲಾರೂಪೆ ||92|| ತೊಟ್ಟಿಲಿಂದಲಿ ಎದ್ದು ಬಿಟ್ಟು ಕರವ ಭೂಮಿ । ಲಿಟ್ಟು ತಪ್ಪೆಜ್ಜೆಯ ಮುಟ್ಟಿ ಭಿತ್ತಿಲೆ ಬಂದು । ಬಟ್ಟಲೊಳಗೆ ಬೆಣ್ಣೆ ಇಟ್ಟುಕೊಡೆಂಬುವ ।

ಪುಟ್ಟ ಕೃಷ್ಣನ ಮುಖ ಭೆಟ್ಟಿ ನೀಡೆ ॥93॥ ಶಂಬವಾದಿ ದೈವ ಕದಂಬ ವಂದಿತೆ ನಿನ್ನೋಳ್ । ತುಂಬ ಸ್ನೇಹದಿ ಹೀಗೆ ಹಂಬಲಿಸುವೆ ನಿತ್ಯ । ಶಂಬರಾರಿಯ ಪಿತನಂಬುಜ ವದನ ಹೃ । ದಂಬರದೊಳು ತೋರೆ ಕಂಬು ಪಾಣಿ ॥94॥ ದುಷ್ಟದಮನೆ ಸರ್ವ ಶಿಷ್ಟಪಾಲನೆ ಭವ । ಕಷ್ಟಮುಕ್ತಳೆ ಭಕ್ತಭೀಷ್ಟದಾಯಕೆ ಎನ್ನೋಳ್ । ಸಿಟ್ಟು ಬಂದಿಹುದೇನೇ? ಎಷ್ಟು ಪೇಳಿದೊಂ । ದಿಷ್ಟು ಕೇಳಲಿವಲ್ಲೆ ಕೃಷ್ಣಸಖೀ ॥95॥ ಕರುಣಸಮುದ್ರಳೆ ಶರಧಿತನಯ ಕೃಷ್ಣ। ನರಸಿ ರುಗ್ಮಿಣಿ ಸತ್ಯ ತರಣಿ ಶತಪ್ರಭೆ। ಇರುವದೆ ಸಿಟ್ಟಿಂಥ ಪರಿಪೂರ್ಣ ಸಿರಿವಂತಿ। ಗುರುಹೂವನತಿ ಮೂರ್ಖನರನು ದೇವಿ ॥96॥ ಚಂದ್ರ ಸಹೋದರಿ ಗಂಧ ವಸನ ಮಾಲ । ಸುಂದರಾಭರಣಗಳ್ ಹೊಂದಿ ನಿನ್ನಂಗ ಸಂ। ಬಂಧದಿಂದಲೇ ಬಹು ಸೌಂದರ್ಯ ಗುಣವನ್ನು। ಪೊಂದಿಕೊಂಡಿ ಕ್ಷೀರಸಿಂಧು ಪುತ್ರೀ ॥97॥ ಸಿಂಧು ತೀರದಿ ನಿಂತು ಒಂದು ಕ್ಷಣವೆ ಕಣ್ಣಿ। ನಿಂದಾ ದೇವತಿಗಳಿಗಾವೃಂದವ ನೋಡಿದಿ । ಅಂದಲ್ಲೆ ಸ್ವರ್ಗ ಸುಂದರ ಪದದೊಳ್ । ಅ । ಮಂದ ಸುಖಾಬ್ದಿಯೊಳು ಮಿಂದಿಹರೂ ॥98॥ ಕರವೀರದೊಳು ದೇವ ತರುಣೆರೆಲ್ಲರು ನಿನ್ನ । ಪರಿಚರ್ಯ ಮಾಡುತ್ತ ಇರುವರದ್ಯಾಪಿ ಹಿ । ಶರಣು ಬಂದಿಹೆ ತಾಯಿ ಕರುಣದಿ ಚಿತ್ತದೋಳ್ । ಹರಿಯ ಮೂರುತಿ ತೋರೆ ತರುಣಿ ಮಣಿ ॥99॥ ನೀಲಕಮಲ ಕರದೊಳು ಪಿಡಿದು ನಿನ್ನ। ಯಾಲಯದೊಳು ಸುತ್ತ(ತ್ತಿ) ಲೀಲೆ ಮಾಡುತಲಿರೆ । ಬೀಳೆ ಛಾಯವು ಮಣಿಯಾಲಯದೊಳು । ಶ್ರೀಲಲನೆಯ(ಯು) ಉಡಗೋಳೆಂಬೋರು ॥100॥ ನಿನ್ನ ಮಹಿಮೆ ಸ್ತುತಿಯನ್ನೆ ಮಾಡುವುದಕ್ಕೆ । ಎನ್ನಗಳವೆ ತಾಯಿ ಸಣ್ಣ ಬಾಲಕದ ಬುದ್ಧಿ। ಲಿನ್ನಿಷ್ಟು ಮಾಡಿದೆ ನಿನ್ನ ಪ್ರೇರಣೆಯಿಂದೆ । ಮನ್ನಿಸಬೇಕೆಮ್ಮ ಎಮ್ಮ ತುತಿ ॥101॥ ಶಬರಂಜಾಸನ ಶಂಬ(ಭು) ವಾದಿಸುತರರೆಲ್ಲ ಹಂಬಲಿಸುತ ಪಾದ ವಂಬುಲೋಚನೆ । ಮುಂಬಾಗಿಲಲಿ ನಿಂತು ಕಂಬು ಕಂಧರೆ ಮುಖ ।ಬಿಂಬಾ ನಿರೀಕ್ಷಿಪರಂಬರಸ್ಥೆ ॥102॥ ನಿನ್ನ ಪ್ರೇರಣೆಯಿಂದ ಚನ್ನ ಬುದ್ಧಿಯ ಪೊಕ್ಕು । ಕನ್ಯಾಮಣಿಯ ತುತಿಯನ್ನು ಮಾಡಿಸಿದಂಥ । ಚಿನ್ನ ವಡಲ ಮುಖ ನಿನ್ನ ಮಕ್ಕಳ ಪಾದ । ವನ್ನ ನಮಿಪೆ ಅವರನ್ನು ಬಿಡೆ ॥103॥ ಮಂದ ಜನರು ಎನ್ನ ಮುಂದೆ ಬಂದತಿಶಯ । ನಿಂದು ಮಾಡುವ ಮಹಾ ನಿಂದಾ ತುತಿಗಳ । ಒಂದು ತಾರದೆ ಮನಮಂದಿರದೊಳು ಗೋಪಿ। ನಂದನ ಪಾಡುವಾನಂದ ನೀಡೆ ॥104॥ ನಗುವ

ಸನ್ಮುಖಿ ಹರಿ ಅಗಣಿತಗುಣಗಳ । ಪೊಗಳುತ್ತ ಹರುಷದಿ ಬಿಗಿದು ಕಂಠವ ಬಾಷ್ಪ॥ ಒಗಿದು ಕಣ್ಣಲಿ ಬಹು ನಗುತ ಅಳುತ ದೇವೀ । ಹಗಲಿರಳ್ ನೆಗದಾಡೋ ಸುಗುಣ ನೀಡೆ ॥105॥ ನಿನ್ನುಪಕಾರಗಳ್ ಇನ್ನೆಷ್ಟು ಸ್ಮರಿಸಾ ಸಾಲೆ । ಎನ್ನ ಮನದೊಳಿದ್ದು ನಿನ್ನ ಮಹಿಮೆ ತುತಿಯ । ಯನ್ನು ನುಡಿಸಿದಿದಕನ್ಯುಪಕಾರ ಇ । ದನ್ನೆ ಪಠಿಸುವುದೇ ಅನ್ಯವಿಲ್ಲ ॥106॥ ನಿನ್ನ ಬೇಡಿದೆ ಮತ್ತನ್ನ್ಯರಾ ಬೇಡಿದಿರಿ । ನ್ನಿಂಥ ಸೌಭಾಗ್ಯವನ್ನು ಕೊಡುವರುಂಟೆ । ನಿನ್ನನ್ನೇ ಸೇವಿಸಿ ಧನ್ಯರಾಗಿಹರೆಲ್ಲ । ನಿನ್ನಂಥ ಹರಿ ಪ್ರಿಯಳನ್ನು ಕಾಣೆ ॥107॥ ಭಕ್ತಿಯಿಂದಲಿ ದಾವ ಮತ್ತ್ಯಾರು ಪಠಿಸೋರು । ಲಕ್ಷ್ಮೀಲೀಲಾಮೃತ ಚಿತ್ತದೊಳವರಿಗೆ । ಸತ್ಯ ಭೈಷ್ಮೇರ ಕೂಡಿ ಮರ್ತ್ಯಮೃಗೇಂದ್ರ । ಯದೂತ್ತಮ ಪೊಳೆವಾನು ನಿತ್ಯದಲ್ಲಿ ॥108॥ ಸುಂದರ ಸೌಭಾಗ್ಯಮಂದಿರ ತಟತಂತಿ । ಗೊಂದೆ ಫಲವ ನೀಡೊ । ಬಂದಾರೆ ಮನಸಿಗೆ । ಇಂದಿರೇಶನ ಸಖಿ ನಂದಬಾಲನ ವದನಿಂದು । ಮಂಡಲ ತೋರೆ ಚಂದ್ರಮುಖಿ ॥109॥ ಶ್ರೀಲಕ್ಷ್ಮೀಲೀಲಾಮೃತಸಮಾಪ್ತ ॥

ಜೀವಂತಿಕಾ ವ್ರತ – ಶುಕ್ರವಾರದ ದಿನ ಜೀವಂತಿಕಾ ಪೂಜೆಯಿಂದ ಜೀವಂತರಾದ ಮಕ್ಕಳು ಜನಿಸುವರು.

ಶ್ರಾವಣದ ಶುಕ್ರವಾರಗಳಂದು ಜೀವಂತಿಕಾಪೂಜೆಯನ್ನು ಮಾಡುವ ಪದ್ಧತಿ ಇದೆ. ಗೋಡೆ ಅಥವಾ ಪಲಕದ ಮೇಲೆ ಜೀವಂತಿಕಾದೇವಿಯ ಚಿತ್ರವನ್ನು ಶ್ರೀಗಂಧದಿಂದ ರಚಿಸಿ, ಪೂಜಿಸಿ, ಐವರು ಸಂತಾನವತಿಯರಾದ ಸುಮಂಗಲಿಯರಿಗೆ ಊಟ ಹಾಕಿ, ಹಾಲು, ಸಕ್ಕರೆ ಮತ್ತು ಉರಿಗಡಲೆಗಳೊಡನೆ ತಾಂಬೂಲವನ್ನು ಕೊಡಲಾಗುತ್ತದೆ.

## ಗೌರೀ ಹಬ್ಬಗಳ ಬಗ್ಗೆ ಅಪೂರ್ವಮಾಹಿತಿ

ಭಾದ್ರಪದಮಾಸದಲ್ಲಿ ಶುಕ್ಲತೃತೀಯದ ಸ್ವರ್ಣಗೌರಿವ್ರತ ಗೌರೀಹಬ್ಬ' ಎಂದೇ ಪ್ರಸಿದ್ಧ. ಚಿನ್ನ, ಬೆಳ್ಳಿ ಅಥವಾ ಮಣ್ಣಿನ ಗೌರಿಯ ಮೂರ್ತಿಯನ್ನೋ ಕಲಶವನ್ನೋ ಪೂಜಿಸಲಾಗುತ್ತದೆ. ಪೂಜೆಯ ಬಳಿಕ ಹದಿನಾರು ಗ್ರಂಥಿಗಳ ಅರಸಿನ ದೋರ'ವನ್ನು ಕೈಗೆ ಕಟ್ಟಿಕೊಂಡು ಸುಮಂಗಲಿಯರಿಗೆ ಧನ-ಧಾನ್ಯ-ಫಲ-ಪುಷ್ಪ-ದಕ್ಷಿಣೆಗಳ ಮೊರದ

ಬಾಗಿನವನ್ನು ಕೊಡಲಾಗುತ್ತದೆ. ಗೌರಿಯನ್ನು 'ಮನೆಯ ಮಗಳಂತೆ' ವರ್ಷವರ್ಷವೂ ಬರಮಾಡಿಕೊಂಡು ಉಡಿತುಂಬಿಸಿ ಕಳಿಸುವ ಭಾವ ಇಲ್ಲಿದೆ. ಇದರ ಪ್ರತೀಕವಾಗಿ ಮನೆಯ ಹೆಣ್ಣುಮಕ್ಕಳಿಗೆ ಉಡಿತುಂಬಿ ಉಣಬಡಿಸಿ ಗೌರೀ-ದಕ್ಷಿಣೆ' ಸಲ್ಲಿಸಲಾ-ಗುತ್ತದೆ.

ಆಶ್ವೀನಮಾಸದ ನವರಾತ್ರಿಯ ತದಿಗೆಯಂದು ಬೃಹದ್ಗೌರಿವ್ರತವನ್ನಾಚರಿಸಲಾಗ ುತ್ತದೆ. 20 ಸಂಖ್ಯೆಯಲ್ಲಿ ಪತ್ರಪುಷ್ಪಗಳನ್ನೂ, ನೈವೇದ್ಯಪದಾರ್ಥಗಳನ್ನೂ, ದೀಪ-ಗಳನ್ನೂ ದೇವಿಗೆ ನಿವೇದಿಸಲಾಗುತ್ತದೆ. ಆಶ್ವೀನಮಾಸದ ಸೀಗೆಹುಣ್ಣಿಮೆ ಹಾಗೂ ಗುರುವಾರಗಳಂದು ಸೀಗೆಗೌರಿವ್ರತವನ್ನು ಮಾಡಲಾಗುತ್ತದೆ. ಇದೇ ಆಶ್ವೀನದಲ್ಲಿ ಎಂಟು ವರ್ಷದ ಬಾಲೆಯ ರೂಪದ ದೇವಿಗೆ ಮಹಾಗೌರಿಪೂಜೆಯನ್ನು ಮಾಡುವ ಪದ್ಧತಿಯೂ ಉಂಟು.

ಕಾರ್ತಿಕಮಾಸದಲ್ಲಿ ಫಣಿಗೌರೀ, ವಿಷ್ಣುಗೌರಿ ಹಾಗೂ ಕೇದಾರೇಶ್ವರಗೌರಿ ಎಂಬ ವ್ರತಗಳು ನಡೆಯುತ್ತವೆ. ರೈತಾಪಿ ಕುಟುಂಬಗಳ ಮಹಿಳೆಯರು ಈ ಕೇದಾರಗೌರಿ-ವ್ರತವನ್ನು ವಿಶೇಷವಾಗಿ ಆಚರಿಸುತ್ತಾರೆ.

ಮಾರ್ಗಶಿರಮಾಸದ ತದಿಗೆ ಹಾಗೂ ಧನುರ್ಮಾಸಾವಧಿಯು ಕಾತ್ಯಾಯನೀ ಗೌರೀವ್ರತಕ್ಕೆ ತುಂಬ ಪ್ರಶಸ್ತ. ಉತ್ತಮಪತ್ರಿಪ್ರಾಪ್ತಿಗಾಗಿ ಕನ್ಯೆಯರ ಕೈಯಲ್ಲಿ ಈ ವ್ರತವನ್ನು ಮಾಡಿಸುವುದುಂಟು. ಕೃಷ್ಣನನ್ನು ತಮ್ಮ ಆಧ್ಯಾತ್ಮಿಕ ಪತಿಯನ್ನಾಗಿ ಪಡೆ-ಯಲು ವ್ರಜಗೋಪಿಯರು ಈ ವ್ರತವನ್ನಾಚರಿಸಿದ ಪ್ರಸ್ತಾವ ಭಾಗವತಪುರಾಣ-ದಲ್ಲಿದೆ.

ಪುಷ್ಯಮಾಸದ ತದಿಗೆಯಂದು ನಿತ್ಯಗೌರೀವ್ರತವನ್ನಾಚರಿಸಲಾಗುತ್ತದೆ.

ಮಾಘಮಾಸದ ತದಿಗೆಯಂದು ಮೌನಗೌರಿವ್ರತವನ್ನು ಆಚರಿಸಲಾಗುತ್ತದೆ. ದಿನವಿಡೀ ಅಥವಾ ಪೂಜೆಯಾಗುವವರೆಗೂ ದೃಢಮೌನವ್ರತವನ್ನು ಪಾಲಿಸಬೇಕು.

ಫಾಲ್ಗುಣಮಾಸದ ತದಿಗೆಯಂದು ಸೌಭಾಗ್ಯಗೌರೀವ್ರತವನ್ನು ಆಚರಿಸಲಾಗು-ತ್ತದೆ. ಇದೇ ಫಾಲ್ಗುಣದ ಶ್ರೀಪಂಚಮಿಯಂದು ಉಯ್ಯಾಲೆಗೌರಿವ್ರತ ಆಚರಿಸಲ್ಪ-ಡುತ್ತದೆ. ಗೌರಿಯನ್ನು ಉಯ್ಯಾಲೆಯಲ್ಲಿಟ್ಟು ಪೂಜಿಸಿ ಆ ಬಳಿಕ ಹೆಂಗಳೆಯರೆಲ್ಲ

ಉಯ್ಯಾಲೆಯಾಟದಲ್ಲಿ ಸಂಭ್ರಮಿಸುತ್ತಾರೆ. ಉತ್ತರಭಾರತದಲ್ಲಂತೂ ಈ ಸಂದರ್ಭ ದ-ಲ್ಲಿ ಸ್ತ್ರೀಯರಿಗೆ ಉಯ್ಯಾಲೆಯಾಟದ ಸ್ಪರ್ಧೆಗಳೇ ನಡೆಯುತ್ತವೆ. ಚೈತ್ರತದಿಗೆಯ ಚೈತ್ರಗೌರೀವ್ರತದಲ್ಲೂ ಉಯ್ಯಾಲೆಯಾಟ ಮುಂದುವರೆಯುತ್ತದೆ. ಮಾವಿನ ನೈವೇದ್ಯ ಹಾಗೂ ಮಾವಿನ ಹಣ್ಣನ್ನೂ ಮಾವಿನ ತಿನಿಸುಗಳನ್ನು ವಿತರಿಸುವ ಪದ್ಧತಿಯಿದೆ.

ಕುಲದ ಉನ್ನತಿಗಾಗಿ ವೈಶಾಖಮಾಸದಲ್ಲಿ ಅಕ್ಷಯತದಿಗೆ-ಗೌರಿವ್ರತವನ್ನು ಮಾಡ -ಲಾಗುತ್ತದೆ.

ಜ್ಯೇಷ್ಠಮಾಸದಲ್ಲಿ ದಿವಸೀಗೌರಿವ್ರತದ ಆಚರಣೆಯುಂಟು.

ಆಷಾಢದಲ್ಲಿ ಆಷಾಢಗೌರೀವ್ರತದ ಆಚರಣೆ ಇದೆ. ಮೊಲಕಾವ್ರತ್ ಎಂಬ ಹೆಸರಿನಿಂದ ಇದು ಗುಜರಾತಿನಲ್ಲಿ ಪ್ರಸಿದ್ಧ. ಈ ವ್ರತಗಳಲ್ಲದೆ, ಸೌಂದರ್ಯ ಹಾಗೂ ಕೀರ್ತಿಗಾಗಿ ಲಾವಣ್ಯಗೌರಿವ್ರತವನ್ನೂ, ಐಶ್ವರ್ಯಕ್ಕಾಗಿ ಸಂಪದ್ಗೌರಿವ್ರತವನ್ನೂ, ಜ್ಞಾನಪ್ರಾಪ್ತಿಗಾಗಿ ತ್ರಿಲೋಚನಗೌರಿವ್ರತವನ್ನೂ ಆಚರಿಸಲಾಗುತ್ತದೆ.

## ಸಂಪತ್‌ಶನಿವಾರದ ಹಾಡು

ಗಜವದನನ ಪಾದಾಂಬುಜಗಳಿಗೆರಗುವೆ । ಅಜನರಸಿಗೆ ನಮಸ್ಕರಿಸಿ । ತ್ರಿಜಗ-ವಂದಿತ ಲಕ್ಷ್ಮೀನಾರಾಯಣಸ್ವಾಮಿ । ನಿಜಪತ್ನಿ ಕಥೆಯ ವರ್ಣಿಸುವೆ ॥1॥ ಅರಸನಾ-ಶ್ರಯದಲ್ಲಿ ಮಾಡೊಂದು ಪಟ್ಟಣದಲ್ಲಿ । ಇರುತಿದ್ದ ಸೋಮೇಶಭಟ್ಟ । ಹರುಷ-ದಿಂದಲಿ ಸೊಸೆಯರು ಗಂಡು ಮಕ್ಕಳು । ಭರಿತರಾದರು ಸುಖದಿಂದ ॥2॥ ಮಹಾಕ್ಷೀರಸಾಗರದಲ್ಲಿ ಜನಿಸಿದ । ಶ್ರೀಮಹಾಲಕ್ಷ್ಮೀದೇವಿಯರ । ನೇಮದಿಂದಿಟ್ಟು ನಿಷ್ಠೆಯಲಿ ಸೋಮೇಶನು । ತಾ ಮಹಾ ಸಂಭ್ರಮದಿಂದ ॥3॥ ಚಾರು ಪರಿಮಳ ಅರಿಷಿಣ ಗಂಧ ಕುಂಕುಮ । ಕ್ಯಾದಿಗೆ ಕುಸುಮ ಮಲ್ಲಿಗೆಯ ॥ ಮಾಧವನರಸಿ ಮಾಲಕ್ಷ್ಮಿಗರ್ಪಿಸಿ ಮಂಗಲಾರುತಿಯನು ಬೆಳಗುವ್ಹೋರು ॥4॥ ಎಣ್ಹೋರಿಗೆ ತುಪ್ಪ ಸಣ್ಣಶಾವಿಗೆ ಪರಮಾನ್ನ । ಶಾಲ್ಯಾನ್ನ ಸೂಪಗಳು ॥ ಚೆನ್ನವಾಗಿದ್ದ ತಾಂಬೂಲವನರ್ಪಿಸಿ । ಅದನ್ನುಂಡರತಿ ಹರುಷದಲಿ ॥5॥ ಸುಂದರ ಗೌರಿ ಶುಕ್ಕರವಾರಪೂಜೆ ಸಾ । ನಂದದಿ ಶನಿವಾರದಲ್ಲಿ ॥ ಕುಂದ ಮಂದಾರ ಮಲ್ಲಿಗೆ ಗಂಧ ಕುಂಕುಮ । ಚೆಂದುಳ್ಳಾರುತಿಯ

-ನೆತ್ತಿದರು ॥6॥ ಹಿಟ್ಟಿನ ಕಡುಬು ಹಿಂಡಿಯ ಪಲ್ಯವನು ಮಾಡಿ । ಅಚ್ಚೆಳ್ಳು ಗಾಣದೆಣ್ಣೆಯನು । ನುಚ್ಚು ಮಜ್ಜಿಗೆ ಹುಳಿ ತುಳಿಯ ಕಟ್ಟಂಬಲಿ । ಇಟ್ಟರು ನೈವೇದ್ಯಗಳನು ॥7॥ ಭೋಜನಕೆನುತ ಕುಳ್ಳಿರುವೊ ಕಾಲದಿ ಬಂದು । ರಾಜನ ಸತಿಯು ನೋಡುತಲಿ ॥ ಸೋಜಿಗವೆ ನಿಮ್ಮ ಗೌರಿಯ ಸಂಪತ್ತು । ಈ ಜಗದೊಳಗೆ ಕಾಣೆನೆನುತ ॥8॥ ಬೇಕಾದರೊಂದು ಬೇಡಲು ಅರಸನ ಸತಿ । ಸಾಕು ದರಿದ್ರ-ದಂಬಲಿಯ । ಹಾಕಿದರ್ಧರಡಿ ಕಂಕಣದೊಳು ಸಿಕ್ಕೀತು । ನಾ ಕೈಯ್ಯ ಇಡಲಾರೆನೆನಲು ॥9॥ ತಟ್ಟನೆದ್ದಾಕ್ಷಿ ಕೊಂಡಷ್ಟೂ ಪದಾರ್ಥವ । ತುಷ್ಟರಾಗುಂಡರಾಗವರು ॥ ಕಟ್ಟಿದ್ದ ತೂಗುಮಣೆಯಲಿ ಕಾಲುಗಳಿಳಿ । ಬಿಟ್ಟು ಕುಳಿತಳು ರಾಜನರಸಿ ॥10॥ ಒಂದೊಂದು ಅಡಿಗೆ ನಿಂದ್ಯವು ಮಾಡಿ ನಗುತಿರೆ । ಕುಂದಿತು ಸಕಲ ಸಂಪತ್ತು॥ ಬಂದಿತು ಪರರಾಜರಿಂದ ಮುತ್ತಿಗೆ ದೊರೆ । ಬಂಧನ ಮಾಡಬೇಕೆನುತ ॥11॥ ದೊರೆ ತಾ ನೋಡುತಲಿರೆ ತ್ವರಿತದಿಂದಾತನ ಅನು । ಸರಿಸಾಗ ನಡೆದರು ॥ ದಿನ ತುಂಬಿದಂತೆ ಗರ್ಭಿಣಿಯಾಗಬಂದವು । ಕ್ಷಣಕೊಮ್ಮೆ ಟೊಂಕ ಬ್ಯಾನೆಗಳು ॥12॥ ಪುತ್ಥಳಿಗೊಂಬೆಯಂದದಿ ಜೋಡು ಮಕ್ಕಳು । ಕಿತ್ತಳೆ ವನದೊಳು ಜನಿಸೆ । ಹೊಚ್ಚಿದಳಾ ಬಾಳೆದೆಲೆಯ ಹಾಸುತ ಹೊಳೆ । ತಟ್ಟನೆ ದಾಟಿ ನಡೆದರು ॥13॥ ಬೇಕಾದ ಫಲಗಳನೇಕ ಪುಷ್ಪಂಗಳು । ಜೋಕೆ ಮಾಡುತ ವನದಲ್ಲಿ ॥ ಕೋಕಿಲು ಗಿಳಿ ನವಿಲ್ಲಿಂಡು ನೋಡುತಲಿ ತಾವ್ । ಹಾಕುತಿದ್ದರು ಕಾಲವನು ॥14॥ ನಸುಕಿನೊಳಗೆ ಬಂದ ಸೋಮೇಶಭಟ್ಟನು । ಹಸುಮಕ್ಕಳನ್ನೇ ನೋಡಿದನು ॥ ಮುಸುಗ್ಹಾಕಿ ತಂದು ಮುದ್ದಿಸುವೋ ಮಕ್ಕಳ ಸತಿ । ವಶಮಾಡಿ ಕೊಟ್ಟ ಕೈ ಒಳಗೆ ॥15॥ ಹುಟ್ಟಲಿಲ್ಲವೆ ಹೆಣ್ಣು ಮಕ್ಕಳು ನಮಗೀಗ । ಕೊಟ್ಟನು ದೇವರೆಂದೆನುತ ॥ ಅರ್ತಿಯಿಂದಾಗ ಮೂಬಟ್ಟಲೀರಲು ಮಾಡಿ । ತೊಟ್ಟಿಲೊಳಿಟ್ಟು ತೂಗಿದರು ॥16॥ ನಾಮಕರಣ ಮಾಡುತ ಹೆಸರಿಟ್ಟರು । ಸಾಯಕ್ಕ ಧೇಯಕ್ಕೆಂದೆನುತ । ಪ್ರಾಯಕ್ಕೆ ಬಂದ ಮಕ್ಕಳ ನೋಡಿ ಹುಡುಕಿದ ॥ ಸೋಮಾರ್ಕರಂಥ ವರಗಳ ॥17॥ ಅರಸನ ಕರೆದು ಅಕ್ಕನ ಕೊಟ್ಟರಾಗಲೆ । ಕರೆಸಿ ಪ್ರಧಾನಿಯ ತಂಗಿಯನು ॥ ಹರುಷದಿಂದಲಿ ಧಾರೆ ಎರೆದು ಹೆಣ್ಣುಮಕ್ಕಳ । ಕಳಿಸಿಕೊಟ್ಟನು ಸೋಮೇಶಭಟ್ಟ ॥18॥ ಅಕ್ಕರದಿಂದ ಹೇಳಿದಳು ಸೋಮೇಶಮ್ಮ । ಮಕ್ಕಳ ಕರೆದು ಬುದ್ಧಿಯನು ॥ ಶುಕ್ರವಾರದ ಗೌರಿ ಮರೆಯದೆ ಮಾಡೆ ಶ್ರೀ । ಲಕ್ಕುಮಿ ಒಲಿವೋಳೆಂದನುತ ॥19॥ ಸಾಯಕ್ಕ ಮಾಡೋ ಸಂತಾನ

ಸಂಪತ್ತಿಗೆ ಸ । ಹಾಯವಾದಳು ಶ್ರೀಗೌರಿ ॥ ಧೇಯಕ್ಕ ಮರೆತು ದೇಹಕ್ಕೆ ಗ್ರಾಸವಿಲ್ಲದೆ । ರಾಯನ ಸೆರೆಯ ಹಾಕಿದರು ॥20॥ ಪೊಡವಿ ಪಾಲಕನ ಬಂದು ಹಿಡಿದುಕೊಂಡೊಯ್ಯಲು । ಉಡಿಗೆ ತೊಡಿಗೆ ವಸ್ತ್ರಾಭರಣ ॥ ಉಡುಗಿತು ಸಕಲ ಸಂಪತ್ತು ಧೇಯಕ್ಕಗೆ । ದೃಢವಾಯಿತಾಗ ದಾರಿದ್ರ್ಯ ॥21॥ ಮಾತನಾಡಿದರು ಮಕ್ಕಳು ತಾಯಿ ಒಡಗೂಡಿ । ಈ ತೆರನಾಯಿತೀ ಬದುಕು । ಮಾತಾಪಿತರು ಒಡಹುಟ್ಟಿದವರು ನಿನ್ನ । ಮಾತನಾಡಿಸೋರ್‍ಯಾರಿಲ್ಲೆ ॥22॥ ದೂರದಲ್ಲಿರೋರೆನ್ನ ತಾಯಿತಂದ್ಯೇರು । ಸಾರ್ಯದಲ್ಲಿರಲೊಬ್ಬ ತಂಗಿ ॥ ಸೂರೆ ಹೋಯಿತು ದೊರೆತನ ಭಾಗ್ಯ ಬಡವ ಪ್ರ । ಧಾನಿ ಹ್ಯಾಗಿರುವೋನೋ ನಾನರಿಯೆ ॥23॥ ಕಂಡು ಬರುವೆನೆಂದು ಚಿಂದಿ ಮೈಯಿಗೆ ಸುತ್ತಿ । ತುಂಡು ಕೋರಿಯನುಟ್ಟುಕೊಂಡು । ಮಂಡಿಗ್ಹಚ್ಚಿದ ತಳ ಪ್ರಣತಿಯೆಣ್ಣೆಯ ಹೊಳೆ । ದಂಡೆಗೆ ಬಂದು ತಾ ಕುಳಿತ ॥24॥ ಪೋರ ನೀನಾರೆಂದು ವಿಚಾರವ ಮಾಡಲು । ನೀರಿಗೆ ಬಂದ ನಾರಿಯರು ॥ ದೂರದಿ ಬಂದೆ ಧೇಯಕ್ಕನ ಹಿರಿಯ ಕು । ಮಾರನೆಂದ್ಹೇಳಿ ಕಳಿಸಿದನು ॥25॥ ಬಂದು ಹೇಳಿದರವನಂದ ಚೆಂದವ ಕರೆ । ತಂದರ್‍ಹಿತ್ತಿಲ ಬಾಗಿಲಿಂದ ॥ ಬಂದ್ಹೇಳಿಕೊಂಡ ದರಿದ್ರ ಕಷ್ಟವನೆಲ್ಲ । ಉಂಡುಟ್ಟು ಸುಖದಿ ತಾನಿದ್ದ ॥26॥ ಆಲಯಕ್ಹೋಗಿ ಬರುವೆನೆಂದಪ್ಪಣೆ ಕೇಳಿ । ಕಾಲಹರಣ ಮಾಡದಂತೆ ॥ ಕೋಲಿನೊಳಗೆ ಹಣ ತುಂಬಿ ಕೈಯಲಿ ಕೊಟ್ಟು ಆಲಸಿಲ್ಲದೆ ಕಳುಲಹಿದಳು ॥27॥ ಬಾಲಕ ನಿನಗಿಂಥ ಕೋಲ್ಯಾಕೆಂದೆನುತ ಗೋ । ಪಾಲಕ ಸೆಳೆದು ಕೊಂಡೊಯ್ದ ॥ ನೂಲದವರಿಗೆ ನೂತವರ್‍ವಸ್ತ್ರ್ಯಾಕೆನುತಲಿ । ಆಲೋಚಿಸುತ ತಾ ಬಂದ ॥28॥ ಮಿಡುಕುತ ಬಂದು ಮಾತೆಗೆ ಎರಗಿದರವ । ಪೊಡನುಡಿದ್ವಾರ್ತೆ ಹೇಳುತಲಿ ॥ ಕೊಡುವಷ್ಟು ಕೊಟ್ಟರೆನಗೆ ದಕ್ಕದೆನುತಲಿ । ನಡೆದ ಮತ್ತೊಬ್ಬ ತನಯನು ॥29॥ ತಳಪ್ರಣತಿ ಎಣ್ಣೆ ತಲೆಗೆ ಪೂಸಿಕೊಂಡು । ಮೊಳ ಕೋರಿಯನು ಉಟ್ಟುಕೊಂಡು । ಬಳುಕುತ ಬಂದು ಭಾವಿಯ ಮೇಲೆ ಕುಳಿತ್ಹೇಳಿ । ಕಳಿಸಿದ ಮಾತೆ ಮಂದಿರಕೆ ॥31॥ ಗೊತ್ತಿಲೆ ಕರೆತಂದರ್‍ಹಿತ್ತಿಲ ಬಾಗಿಲಿಂದಷ್ಟು । ವಾರ್ತೆಗಳ ಕೇಳುತಲಿ ॥ ಅತ್ಯಂತಃಕರಣದಿಂದಲಿ ಭಕ್ಷ್ಯಪಾಯಸ । ಮೃಷ್ಟಾನ್ನವ ಉಣಿಸಿದರು ॥31॥ ನಿತ್ಯುಪವಾಸ ಮಾಡುವುದೆನ್ನ ಮನೆಯಲ್ಲಿ । ಅಪ್ಪಣೆಯನು ನೀಡೆಂದೆನಲು ॥ ಬುತ್ತಿಯೊಳಗೆ ಹಣ ಕಟ್ಟಿ ಕಳುಹೆ ಕಾಗೆ । ಎತ್ತಿಕೊಂಡ್ಹೋಯಿತಾಕ್ಷಣದಿ ॥32॥ ಏನು ಹೇಳಲಿ ನಾನು ಹೋದ ಕಾರ್ಯಗಳಿಂಥ । ಹೀನವಾಯಿತು ಈಗೆಂದೆನುತ ॥

ನಾನೋಗ್ಬಿಬರುವೆನೆಂದೆನುತ । ಮತ್ತೊಬ್ಬ ಕುಮಾರನು ತೆರಳಿ ನಡೆದನು ॥33॥ ಹರಕು ಕೋರಿಯನುಟ್ಟು ಮುರುಕು ತಂಬಿಗೆ ಪಿಡಿದು । ಕೆರಕು ಬುತ್ತಿಯ ಕಟ್ಟಿಕೊಂಡು ॥ ಗುರುತ್ತೇಳಿ ಕಳುಹೆ ಹಿತ್ತಲ ಬಾಗಿಲಿನಿಂದಲಿ । ಕರೆತಂದರಾಗರಮನೆಗೆ ॥34॥ ಎರಡು ದಿನವಲ್ಲಿಟ್ಟುಕೊಂಡುಪಚರಿಸುತ । ಬುರುಡೆಯೊಳಗೆ ಹಣವನ್ನು ಕಡುಬ್ಯಾಗ ॥ ತುಂಬಿ ಕೈಯಲಿ ಕೊಟ್ಟು ಕಳು(ಹಿ)ಸಲು । ನಡೆದ ಆತನಡವಿ ಮಾರ್ಗದಲಿ ॥35॥ ಸೆಳೆದು ನಾಲಿಗೆ ಬಿಸಿಲೇರಿ ಭಾವಿಯ ಕಂಡು । ಇಳಿದು ಪಾವಟಿಗೆಯಲ್ಲಿಟ್ಟು ॥ ಉರುಳಿಕೊಂಡ್ಹೋಗಿ ಮಡುವ ಸೇರಲದ ಕಂಡು । ಬಳಲುತ ಬಂದ ಮಂದಿರಕೆ ॥36॥ ಗತಿಹೀನರೊಳಗೆ ನಮ್ಮಂಥ ನಿರ್ಭಾಗ್ಯರ । ಪೃಥಿವಿಯೊಳಗೆ ಕಾಣೆನೆನುತ ॥ ಅತಿಬಾಯ ಬಿಡುವೋ ಮಾತೆಯ ಕಂಡು । ಮತ್ತೊಬ್ಬ ಸುತನಾಗ ತೆರಳಿ ನಡೆದನು ॥37॥ ಸೊಕ್ಕಿದ್ದ ಮೈಗೆ ಛಿದ್ರಬಟ್ಟೆಯನು ಸುತ್ತಿ । ಕುಕ್ಕುತ ಹೇನು ಕೂರೆಗಳ ಚಿಕ್ಕಮ್ಮಗ್ಹೇಲಿ ಕಳುಹೆ ಕರೆತಂದರು । ಹಿತ್ತಲ ಬಾಗಿಲಿಂದ ॥38॥ ಏಳೆಂಟು ದಿನದಲ್ಲಿ ಭಾಳುಪಚರಿಸುತ । ಬಾಳುವ ಕ್ರಮವ ಕೇಳಿದಳು ॥ ಜಾಳಿಗೆ ಹೊನ್ನು ಚಮ್ಮಾಳಿಗೆಯಲಿ ತುಂಬಿ । ಕಾಲ ಮೆಟ್ಟಿಸಿ ಕಳುಹಿದಳು ॥39॥ ಅದು ಮೆಟ್ಟಿ ಬರುತಿರೆ ಒದಗಿ ಬಂದಾ ಶನಿ । ಹುದಲು ಕಾಣದೆ ಸಿಗಿಬಿದ್ದು ॥ ಎದೆ ಬಾಯಿ ಬಿಡುತ । ಎತ್ತ್ಹುಡುಕಿದರಿಲ್ಲವೆಂದೆದುರಿಗೆ ಬಂದು ತಾ ನಿಂತ ॥40॥ ನಾಲ್ಕು ಮಂದಿಯ ಸುದ್ದಿ ನಾನಾಪರಿಯ ಕೇಳಿ । ವ್ಯಾಕುಲವಾಯಿತೀ ಮನಕೆ ॥ ನಾ ಕಂಡು ಬರುವೆನೆಂದೆನುತ ಧೇಯಕ್ಕನು । ಆ ಕಾಲದಲಿ ತೆರಳಿದಳು ॥41॥ ಉಟ್ಟಳು ಮಾರು ಸೀರೆಯನು ತೋಳಿನಲಿ । ತೊಟ್ಟಳು ಚಿಂದಿ ಕುಪ್ಪಸವ ॥ ಕಟ್ಟಿದ ಜಡೆಗೆಣ್ಣೆ ಹಚ್ಚಿ ತಲುಪನ್ಹಾಕಿ । ಬಟ್ಟು ಕುಂಕುಮವ ತೀಡಿದಳು ॥42॥ ಒಂದೊಂದು ಕರೆಯ ಕಾಜಿನ ಬಳೆ ಕೈಯ್ಯಲ್ಲಿ । ಕಂದಿಕುಂದಿದ ಕೊಸನೆತ್ತಿ ॥ ಬಂದಳು ನಿಮ್ಮ ಧೇಯಕ್ಕನೆಂದೆನುತಲಿ । ತಂಗಿಗ್ವಾರ್ತೆಯ ತಿಳಿಸಿದಳು ॥43॥ ಅಕ್ಕನ ಕರೆತಂದರಾ ಹಿತ್ತಲಿಂದಲಿ । ಶುಕ್ಕರವಾರ ಶುಭದಿನದಿ ॥ ಮಕ್ಕಳು ಸೊಸೆಯರಿಂದೊಡಗೂಡಿ ಬಂದು । ಧೇಯಕ್ಕನ ಚರಣಕ್ಕೆರಗಿದರು ॥44॥ ಅಂದಗಲಿದ ಅಕ್ಕತಂಗಿಯರಿಬ್ಬರು । ಇಂದಿಗೆ ಕಲೆತ-ವೆಂದೆನುತ । ಮಿಂದು ಮಡಿಯನುಟ್ಟು ಬಂದೆಲ್ಲ ಪರಿವಾರ್ಹಾ । ಗೆಂದು ಭೋಜನಕೆ ಕುಳಿತರು ॥45॥ ಹೋಳಿಗೆ ಹೊಸ ಬೆಣ್ಣೆ ಕಾಸಿದ ತುಪ್ಪವು । ಕ್ಷೀರ ಶಾವಿಗೆಯು ಮೃಷ್ಟಾನ್ನ ॥ ಬ್ಯಾಗದಿಂದುಂಡು ಹಾಕುತಲೆ ತಾಂಬೂಲವ । ತೂಗು ಮಂಚದಿ

ಮಲಗಿದರು ॥46॥ ಬೆಳಗಾಗಲೆದ್ದು ಹೇಳಿದಳಾಗ ಸೊಸೆಯರ । ಕರೆದು ಸ್ವಾಯಕ್ಕ ಕೆಲಸವ ॥ ಬಿಳಿಜೋಳ ಕುಟ್ಟಿ ಬೀಸಿರೆ ನೀವು ಇಂದಿನ । ಅಡಿಗೆಯ ಕ್ರಮವ ಹೇಳಿದರು ॥47॥ ಹುಳಿನುಚ್ಚು ಮಾಡುವೆ ತಿಳಿಯಕಟ್ಟಂಬಲಿ । ಎಳೆಸೊಪ್ಪಿನ್ಹಿಂಡಿ ಪಲ್ಯವನು । ತಿಳಿಯಾದ ಒಳ್ಳೆಣ್ಣೆ ತರಿಸಬೇಕ್ಹಿಟ್ಟಿನ । ಕಡುಬನು ಮಾಡಬೇಕೆನುತ ॥48॥ ಅದು ಕೇಳಿ ಧೇಯಕ್ಕ ಹೃದಯ ತಲ್ಲಣಿಸುತ । ಎದೆ ಒಳಗಲಗು ನೆಟ್ಟಂತೆ ॥ ನದಿ ಒಳಗಲ್ಪ ಹಳ್ಳವು ಬಂದು ಸೇರಲು । ಅದು ಲಕ್ಷಿಯಾಗಿ ತೋರುವುದೆ ॥49॥ ಉರಿಯ ಒಳಗೆ ಎಣ್ಣೆ ಸುರುವಿದಂತಾಯಿತು । ಸಿರಿಯು ಸಂಪತಿಲಿಂದೀಕೆ (ಯ) ॥ ಕರಗಸದಿಂದಲಿ ಕೊರೆದುಪ್ಪು ಸಾಸಿವೆ । ಅರೆದ್ಹಚ್ಚಿದಂಥ ಮಾತುಗಳು ॥50॥ ಜನರ ಮನೆಯಲಪಹಾಸ್ಯವಾಗೋದಕಿಂತ । ವನವಾಸಗಳು ಲೇಸು ಎಂದೆನುತ ॥ ಮನದ ಸಂತಾಪ ಸೈರಿಸಲಾರದೆದ್ದಳು । ದನವನೆ ಕಟ್ಟೋ ಮಂದಿರಕೆ ॥51॥ ಎತ್ತಿನ ಗೋದಲಿ ಒಳಗೆ ಕಂದಲಿದಂಟು । ಸೊಪ್ಪುಗಳನು ಹೊದ್ದು ಕೊಂಡು ॥ ಕಚ್ಚುತ್ತಲಿರಲು ಚಿಕ್ಕಾಡು ಕ್ರಿಮಿಗಳೆಲ್ಲ । ಅತ್ತಿತ್ತಾಗದೆ ಮಲಗಿದಳು ॥52॥ ಮಧ್ಯಾಹ್ನವಾಯಿತಡಿಗೆಯು ಧೇಯಕ್ಕನ । ಸದ್ದು ಸುಳಿವು ಕಾಣೆನೆನುತ । ನಿದ್ರೆಯಿಂದೆಲ್ಲ ಮಲಗಿದಾಳೋ ಆಕೆಯು ಇನ್ನು । ಇದ್ದಲ್ಲಿಂದಲಿ ಕರೆತನ್ನಿ ॥53॥ ಬಲ್ಲಷ್ಟು ಮನೆ ಹುಡುಕಿದೆವು ಅತ್ತೆಬಾಯರ । ಸೊಲ್ಲನು ಕಾಣೆವೆಂದೆನುತ । ಎಲ್ಲ ಹುಡುಕಿದರಿಲ್ಲೆನುತ ಮತ್ತೀಗ । ಬಂದೆಲ್ಲ ಸೊಸೆಯರು ಹೇಳಿದರು ॥54॥ ಒಳಗೆಲ್ಲ ಹುಡುಕಿ ಬಂದರು ಸಂದುಗೊಂದು । ಆಕಳ ಕಟ್ಟುವಂಥ ಕೋಣೆಯಲಿ ॥ ಸೆಳೆದು ದಂಟುಗಳ್ಹಾರುತಿರಲು ಗ್ವಾದಲಿಯಲ್ಲಿ । ಸುಳಿವನೆ ಕಂಡು ನೋಡುವರು ॥55॥ ಸಿಕ್ಕರು ನಮ್ಮ ಅತ್ತೆಯರೆಂದೆಬ್ಬಿಸುತಲಿ । ಹಸ್ತವ್ಹಿಡಿದು ಕರೆತಂದ್ರು ॥ ಉಕ್ಕುವ ಉರಿ ಮೋರೆಯನು ನೋಡಿ ಮನದ । ಸಿಟ್ಟೇನ್ಹೇಳೆಂದು ಕೇಳಿದಳು ॥56॥ ಹೇಳುವುದೇನು ಕೇಳುವುದೇನು ನಿನಗಿಂತ । ವ್ಯಾಳ್ಯವಾದೆನು ನಾನೆಂದೆನುತ ॥ ಜೋಳದನ್ನವ ಕಾಣದಂತೆ ನಾ ಬಂದೆ (ನೇ)ನು । ನಾಳೆ ಪೋಗುವೆ ನನ್ನ ಮನೆಗೆ ॥57॥ ಕೆಟ್ಟ ಬಡವರು ಬರುವುದುಂಟೆ ಜಗದೊಳು । ಅಟ್ಟುಂಬ ಮನೆಯ ಬಾಗಿಲಿಗೆ ॥ ಕಷ್ಟದಿ ಕಾಲಕಳೆಯಲಾಗದಿದ್ದರೆ । ಅಟ್ಟಡವಿಯ ಸೇರಬಹುದು ॥58॥ ಬಗೆ ಬಗೆ ಅಡಿಗೆ ಹೇಳದೆ ಸೊಸೆಯರಿಗೆಲ್ಲ । ನಗೆ ಹಾಸ್ಯವಾಗಿ ತೋರುವುದೆ ॥ ಖಗರಾಜನಲಿ ನೊಣವು ಬಂದು ಸರಿ । ಬೀಗತನ ಮಾಡೆ-ನೆಂಬೋದುಚಿತವೆ ॥59॥ ಭಕ್ಷ್ಯ ಪಾಯಸ ಮಾಡಿ ನಿನ್ನಿನ ದಿನ । ದುರ್ಭಿಕ್ಷದಡಿಗೆ

ಇಂದಿನಲ್ಲಿ ॥ ಭಿಕ್ಷಕ್ಕೆ ಬಂದೆನೆ ನಿನ್ನ ಮನೆಗೆ ಎಂದು । ಅಕ್ಷದಿ ಜಲವ ತುಂಬಿದಳು ॥60॥ ಅಕ್ಕಸದ್ವಚನ ಕೇಳುತಲೆ ಆಲೋಚಿಸಿ । ನಕ್ಕಳು ತನ್ನ ಮನದಲ್ಲಿ ॥ ಶುಕ್ರವಾರದ ಗೌರಿ ಮಾಡದೆ ಈ ಕಷ್ಟ । ದುಃಖಕ್ಕೆ ಗುರಿಯಾದಿರೆನಲು ॥61॥ ಬರುವ ಕಾಲಗಳಲ್ಲಿ ಕರೆದು ನಮ್ಮಮ್ಮನು । ಅರುಹಲಿಲ್ಲವೆ ಗೌರಿಯನು ॥ ಸಿರಿಯು ಸಂಪತ್ತು ಕೊಡುವ ಶನಿವಾರವ । ಮರೆತು ಬಿಟ್ಟೇನೆ ಅಕ್ಕಯ್ಯ ॥62॥ ಲಕ್ಷುಮಿದೇವೇರಾಲಕ್ಷ್ಯ ಮಾಡಿದರಿಂಥ । ನಿಕ್ಷೇಪ ನಿಧಿ ತೊಲಗಿದಳು ॥ ಈ ಕ್ಷಣ ನಿನ್ನ ಮನೆಯಲಿ ಪೂಜಿಸುವೆನೆ । ಸಾಕ್ಷಾತ್ ಶ್ರೀಗೌರಿಯನು ॥63॥ ಎರೆದು ಪೀತಾಂಬರ ಉಡಿಸಿ ತಂದಿಟ್ಟರು । ಪರಿಪರಿ ವಸ್ತ್ರಾಭರಣ ॥ ವರ ಮಣಿಮಯದ ಮಂಟಪದಲಿ ಚಟ್ಟಿಗೆ । ಬರೆದಿಟ್ಟರಾಗ ಪೀಠದಲಿ ॥64॥ ಹಾಕಿದರೈದು ಫಲಗಳಕ್ಕಿ ಅದರೊಳು । ನಾಲ್ಕೆಂಟು ನಂದಾದೀವಿಗೆಯು ॥ ಶ್ರೀಕಮಲೆಯ ಮಧ್ಯದಲ್ಲಿ ಸ್ಥಾಪನೆ ಮಾಡಿ । ಅನೇಕ ಭಕ್ತಿಂದ ಕುಳಿತಳು ॥65॥ ಮುಂದೆ ಕಟ್ಟಿಸಿದರು ಮಕರ ತೋರಣಗಳ । ದುಂದುಭಿ ಭೇರಿ ಬಡಿದವು ॥ ಬಂದು ಮುತ್ತೈದೇರ ಸಹಿತ ಬ್ರಾಹ್ಮಣರೆಲ್ಲ । ಅಂದವರ್ವೇದೋಕ್ತಮಂತ್ರಗಳ ॥66॥ ಅರಿಷಿಣ ಪಿಡಿದು ಹಚ್ಚುತ್ತಲೆ ಹಿಂದಕೆ ॥ ಗೌರಿ ಸರಕಾನೆ ತಿರುಗೆ ॥ ಮೋರೆಯನು ಎಡಕ್ಕೊಗಿ ಎರಡು ಕೈ ಮುಗಿದ್ದೇಳಿಕೊಂಡರೆ । ಬಲಕೆ ಬಂದಳೆ ಭಾಗ್ಯಲಕ್ಷ್ಮಿ ॥67॥ ಮಕ್ಕಳು ಮಾಡೋ ಮಹಾ ತಪ್ಪು ಅಪರಾಧ । ಹೆತ್ತ ಮಾತೆಯರೆಣಿಸುವರೆ ॥ ಸತ್ಯವಂತಳು ಈಕೆ ಸಮರಿಲ್ಲವೆನುತಲಿ । ಭಕ್ತಿಂದ ಕರೆವ ಮುಗಿದಳು ॥68॥ ಸಾಯಕ್ಕನ್ನವಚನ ಕೇಳುತಲೆ ಶ್ರೀಗೌರಿಯ । ಧೇಯಕ್ಕಗೆದುರಾಗಿ ಕುಳಿತು ॥ ಕಾಯಾ ವಾಚಾ ಭಕ್ತಿಗೊಳಿದು ತಾ ಕಮಲದ । ಛಾಯತಾಕ್ಷದಲಿ ನೋಡಿದಳು ॥69॥ ಕುಂಕುಮಗಂಧ ಬುಕ್ಕಿಟ್ಟು ಮಲ್ಲಿಗೆ ದಂಡೆ । ಪಂಕಜ ಪಾರಿಜಾತಗಳು ॥ ಶಂಕರ ಸುರಬ್ರಹ್ಮರೊಡೆಯನ ಸತಿಗೆ । ಅಲಂಕಾರ ಪೂಜೆ ಮಾಡಿದರು ॥70॥ ಕಡಲಾಬ್ಜಶಯನನ ಮಡದಿ ಮಾಲಕ್ಷ್ಮಿಗೆ । ಒಡೆದು ತೆಂಗಿನಕಾಯಿ ಫಲವು ॥ಮಡದೀಯರೆಲ್ಲರು ಅರಿಷಿಣ ಗಂಧ ಕುಂಕುಮ । ಕೊಡುತ ಪುಷ್ಪಗಳುಡಿ ತುಂಬಿ ॥71॥ ಅಚ್ಚ ಮುತ್ತಿನ ಹರಿವಾಣದೊಳ್ ನೈವೇದ್ಯ । ಭಕ್ಷ್ಯ ಪಾಯಸ ಬಡಿಸಿರಲು । ತುಷ್ಟಳಾಗದನೆ ನೋಡುತಲಿ ಧೇಯಕ್ಕಗೆ । ಅಷ್ಟಸೌಭಾಗ್ಯ ನೀಡಿದಳು ॥72॥ ಬಟ್ಟು ಮುತ್ತಿನ ಹರಿವಾಣದೊಳ್ ನೈವೇದ್ಯ । ಮೃಷ್ಟಾನ್ನವ ಬಡಿಸಿರಲು ॥ ಅರ್ಥಿಯಿಂದದನೆ ನೋಡುತಲಿ ಧೇಯಕ್ಕಗೆ । ಮುತ್ತೈದತನವ

ನೀಡಿದಳು ||73|| ದುಂಡುಮುತ್ತಿನ ಹರಿವಾಣದೊಳ್ ನೈವೇದ್ಯ । ಮಂಡಿಗೆ ತುಪ್ಪ ಸಕ್ಕರೆಯ || ಕಂಡು ಸಂತೋಷದಿಂದಾಗ ಧೇಯಕ್ಕನ । ಗಂಡಗೆ ರಾಜ್ಯ ನೀಡಿದಳು ||74|| ಹೊಳೆವೊ ಚಿನ್ನದ ಹರಿವಾಣದೊಳ್ ಹಿಟ್ಟಿನ । ಕಡಬು ಕಟ್ಟಂಬಲಿ ಬಡಿಸಿ || ತಿಳಿಯಾದೆಳ್ಳೆಣ್ಣೆ ಹಿಂಡಿಯ ಪಲ್ಯ ತಾಂಬೂಲ । ನಲಿ ನಲಿದಾಡಿ ನೋಡುತಲಿ ||75|| ಶಿರವನಲ್ಲಾಡಿಸಿ ಸಿರಿಮುಡಿ ಮ್ಯಾಲಿನ । ಸರ ಪಾರಿಜಾತ ಪುಷ್ಪಗಳು || ಅರಳು ಮಲ್ಲಿಗೆಯು ಅನಂತಹಸ್ತಗಳಿಂದ । ವರವ ಕೊಟ್ಟಳು ವರಲಕ್ಷ್ಮಿ ||76|| ಅಕ್ಕತಂಗಿಯರಾಗ ಜತ್ತಿಲಾರತಿಮಾಡೆ। ಮುತ್ತೈದೇರು ಪಾಡುತಲಿ || ಉತ್ತಮಾಂಗನೆಗೆ ಮಂತ್ರಾಕ್ಷತೆಯನು ಹಾಕಿ । ಎತ್ತಿದಾರತಿ ಇಳಿಸಿದರು ||77|| ಉಂಡರು ಸಕಲ ಜನರು ಸಹಿತಾಗಿ । ತಕ್ಕೊಂಡು ಕರ್ಪೂರದ ವೀಳ್ಯವನು || ಸಂಭ್ರಮದಿಂದ ಕೂತಿರಲು ಧೇಯಕ್ಕಗೆ । ಬಂದೆರಗಿದರು ಬಾಲಕರು ||78|| ಅರಸು ತಾನಾಗಿ ಬಂದನು ನಮ್ಮಯ್ಯನು ಕರೆಸಿದ ನಿಮ್ಮನೆಂದೆನುತ || ಹರುಷದಿಂದವರ ಮಾತುಗಳ ಕೇಳ್ಯಾನಂದ । ಭರಿತರಾದರು ಸುಖದಿಂದ ||79|| ಘಡಘಡನಾಗ ಬಂದವು ತೇಜಿ ರಥಗಳು । ಬಡಿದವು ಭೇರಿ ನಾದಗಳು || ಸಡಗರದಿಂದುಡುಗೊರೆ ವೀಳ್ಯ ತಕ್ಕೊಂಡು । ನಡೆದರು ತಮ್ಮ ಪಟ್ಟಣಕೆ ||80|| ಅಕ್ಕ- ತಂಗಿಯರು ಅಂದಣವೇರಿ ಗೌರಿಯ । ಪಲ್ಲಕ್ಕಿ ಒಳಗೆ ಇಟ್ಟುಕೊಂಡು । ಭಕ್ತಿಯಿಂದಾಗ ಚಾಮರವ ಬೀಸುತಲಿ । ಸಮಸ್ತ ಜನರು ನಡೆತರಲು ||81|| ಆಕಳಪಾಲ ತಂದಾಗ ಕಯ್ಯಲಿ ಕೊಟ್ಟ। ಈ ಕೋಲು ನಿಮ್ಮದೆಂದೆನುತ || ಹಾಕಿತು ಕಾಗೆ ಹಣದ ಬುತ್ತಿಗಂಟನು । ಸ್ವೀಕರಿಸಿದನೊಬ್ಬ ಸುತನು ||82|| ಮಡುವಿನೊಳಗೆ ಮುಳುಗೇಳುತಿರಲು ಕಂಡು । ಬುರುಡೆ ಹಣವ ಕೈಕೊಂಡು || ನಡೆವೊ ಮಾರ್ಗದಿ ಹುದಲೊಳಗೆ ಕಂ(ಡ್ಹಾರಿ) । ಹಿಡಿದು ಕೊಂಡ್ಹಿಗ್ಗಿ ನಡೆದರು ||83|| ಭರದಿಂದ ಬಂದ ದೊಡ್ಡ ಮಳೆ ಸುರಿಯಲು । ಸಿರಿ ತೊಯ್ಯಲಾಗದೆಂದೆನುತ || ಹರದೇರಿಬ್ಬರು ಸೆರಗನೆ ಮರೆ ಮಾಚುತ । ಕರೆತಂದರಾ ತೋಟದಲಿ ||84|| ಒಂದು ಗಳಿಗೆ ಸ್ಥಳವನು ಮಾಡಿಕೊಟ್ಟರೆ । ಬಂದಿತು ಭಾಳ ಪುಣ್ಯಗಳು || ಅಂದಮಾತಿಗೆ ಕೋಪದಿಂದ ತಾ ನುಡಿದನು । ಇದೆಲ್ಲಿ ಸ್ಥಳವು ಹೋಗೆಂದು ||85|| ಮೋಹದಿ ಕರೆದು ಮನ್ನಿಸಿ ಮಹಲಕ್ಷ್ಮಿ । ದೇವಿಗೆ ಸ್ಥಳವನೆ ಕೊಟ್ಟು। ನೀವು ಮತ್ತೀಗ ಕೋಪಿಸಲಾಗದೀ ಗೌರಿ । ದ್ರೋಹಕ್ಕೆ ಒಳಗಾದೆ ನಾನು ||86|| ಎತ್ತಲ ಗೌರಿ ಎಲ್ಲಿಯ ದ್ರೋಹ ನಿನಗೆಂದು । ಪತ್ನಿಯ ಕರೆದು ಕೇಳಿದನು ||

ಸತ್ಯವಂತಳು ಈಕೆ ಸಮರಿಲ್ಲವೆನುತಲಿ । ಭಕ್ತಿಂದ ಕರವ ಮುಗಿದಳು ॥87॥ ಹಿಂದಕ್ಕೆ ನಾ ಸೋಮೇಶಮ್ಮನ ಮನೆಯಲಿ । ನಿಂದ್ಯ ಮಾಡಿದೆ ಗೌರಿಯನು ॥ ಬಂದಿತು ನಮಗೆ ವನವಾಸವೆಂದೆನುತಲಿ । ಗಂಡಗೆ ತಿಳಿಯ ಹೇಳಿದಳು ॥88॥ ಹೊಳೆವೊ ಪುತ್ತಳಿಗೊಂಬೆಯಂಥ ಮಕ್ಕಳ ನಾನು । ಎಳೆ ಎಲೆ ಹಸಿ ಹೊಚ್ಚಿಟ್ಟೆ ॥ ಹೊಳೆಯ ದಾಟಿದೆ ಅಳಿದರೋ ಉಳಿದಿದ್ದರೋ । ತಿಳಿಯಲಿಲ್ಲವೆಂದು ಹೇಳಿದಳು ॥89॥ ಅಂದ ಮಾತನು ಕೇಳೀ ಸಂಭ್ರಮದಿಂದಲಿ । ತಂದೆ ತಾಯಿಗಳು ನೀವೆಂದೆನುತ ॥ ಬಂದೆರಗಿದರು ಮಕ್ಕಳ ನೋಡಿ । ಪರಮಾನಂದ ಭರತಿತರಾದರವರು ॥90॥ ಜಾತವಾದಿರಿ ಪಾರಿಜಾತದ (ಕಿತ್ತಳೆ?) ವನದೊಳನಾಥರ ಮಾಡಿ ಬಂದೆ ॥ ಪ್ರೀತಿಲಿ ನಿಮ್ಮ ಸಲಹಿದವರಾರೆಂದು । ಆ ತಾಯಿ ಸುತರ ಕೇಳಿದಳು ॥91॥ ತುಳಸಿಗೆ ಬಂದನು ಸೋಮೇಶಭಟ್ಟನು ನೋಡಿ । ಗಳಿಸಿ ಕೊಂಡೊಯ್ದ ನಮ್ಮನು ॥ ಬೆಳೆಸಿ ಧಾರೆಯ ನೆರದರಸು ಪ್ರಧಾನಿಗೆ । ಕಳಿಸಿ ಕೊಟ್ಟಳು ಸೋಮೇಶಮ್ಮ ॥92॥ ಹೆಚ್ಚಿನ ತಾಯಿ ಸೋಮೇಶಮ್ಮ ಹೇಳಿದಳು । ಶುಕ್ಕರವಾರದ ಗೌರಿಯನು ॥ ಮಕ್ಕಳು ಮನೆಯ ಸಂಪತ್ತೆಲ್ಲ ಸೋಮೇಶ । ಭಟ್ಟನ ಪುಣ್ಯವೆಂದೆನುತ ॥93॥ ಹಿಂದಾಗಲ್ವನವಾಸ ಮುಂದ್ಯಾಕೆನುತಲಿ । ತಂದು ವಸ್ತ್ರಗಳುಡಕೊಟ್ಟು ॥ ಮುಂಗೈಯ ಹಿಡಿದು ಮುಪ್ಪಿನ ತಾಯಿ । ತಂದೇರ ಅಂದಣವನೆ ಏರಿಸಿದರು ॥94॥ ಭೋರೆಂಬೊ ನದಿಯ ದಾಟುತಲಿ ಕಟ್ಟಿಸಿದರು । ಊರ ಬಾಗಿಲಿಗೆ ತೋರಣವ ॥ ಭೇರಿ ತುತ್ತೂರಿ ಬಾಜಾರ ಶೃಂಗರಿಸಿ । ಸಾಲು ದೀವಟಿಗೆ ಸಂಭ್ರಮದಿ ॥95॥ ಹಾಸುತಿದ್ದರು ನಡೆಮುಡಿ ಕದಲಾರತಿ । ಬೀಸುತ ಬಿಳಿಯ ಚಾಮರವ ॥ ಸೋಸಿಲಿಂದಲಿ ಕರತಂದರರಮನೆಯ । ಸಿಂಹಾಸನದಲಿ ಕುಳ್ಳಿರಿಸಿ ॥96॥ ವರಸಿಂಹಾಸನದಲ್ಲಿ ಒಪ್ಪಿರುವೋ ಮಾಲಕ್ಷ್ಮೀಗೆ ಅರಳುಢ್ಹವ್ವ ಗಂಧ ಪುಷ್ಪಗಳು ॥ ಪರಿಪರಿಯಲಿ ಸರ್ವಾಂಗ ಪೂಜೆಯ ಮಾಡಿ ಫಲಗಳರ್ಪಿಸಿ ಕೈಯ್ಯ ಮುಗಿದು ॥97॥ ನಿಂತು ನೋಡ್ವರಸು ನಿಶ್ಚಿಂತರ ಮಾಡೆಂದು ಮಂತ್ರಾಕ್ಷತೆಯ ಹಾಕುತಲಿ ॥ ನಿರಂತರ ತಮ್ಮ ಮನೆಯಲಿಟ್ಟು ಪೂಜಿಸಿ । ಸಂತೋಷದಿಂದಿದ್ದವರವರು ॥98॥ ತಮ್ಮ ಸಾಕಿದ ತಾಯಿ ತಂದೇರ ಕರೆಸುತ । ನಿಮ್ಮದೀ ಸಕಲ ಸಂಪತ್ತು ॥ ನಮ್ಮ ರಾಜ್ಯವೇ ನಿಮ್ಮ ರಾಜ್ಯವೆಂದೆನುತಲಿ । ಮನ್ನಿಸಿದರು ಮಾತಾ - ಪಿತರ ॥99॥ ಶ್ರೀ ಮಾಯಾ ಜಯಾ ಕೃತಿ ಶಾಂತಿ ಮಾಲಕುಮಿ । ಆ ಮಹ ಅತಿ ಪುಣ್ಯಶಾಲಿ ॥ ಕೋಮಲೆ ತನ್ನ ಕೊಂಡಾಡುವೋ ಜನರನು ।

ನೇಮದಿ ನಿಂತು ಕಾಯುವಳು ॥100॥ ಭಕ್ತಿಯಿಂದಲಿ ಮಾಡೆ ಮುಕ್ತರಾಗುವರು । ಧರ್ಮಾರ್ಥಕಾಮ್ಯವು ಫಲಿಸುವುದು ॥ ಮುತ್ತೈದೆತನ ಧನಧಾನ್ಯ ಸಂತಾನ । ಸಮಸ್ತಕಾರ್ಯವು ಸಿದ್ಧಿ ಉಂಟು ॥101॥ ಕಂತುಪಿತನ ರಾಣಿ ಕಥೆಯನು ಪೇಳಲು । ಸಂಪತ್ತು ಶನಿವಾರದಲಿ ॥ ದಂಪತಿಗಳ ಸುಖದಿಂದಿಟ್ಟು ಅವರ । ನಭ್ಯಂತರಿಲ್ಲದೆ ಸಲಹುವಳು ॥102॥ ಅಚ್ಯುತನರಸಿ ಅನುಗ್ರ(ಹ)ವ ಪಡೆಯಲು । ಇಚ್ಛೆ ಸಂಪೂರ್ಣವಾಗುವುದು ॥ ಸಚ್ಚಿದಾನಂದ ಭೀಮೇಶಕೃಷ್ಣನು ನೋಡಿ । ಮೆಚ್ಚಿ ಸೂರ್ಯಾಡುವ ದಯವ ॥103॥ ಸಂಪತ್‌ಶನಿವಾರ ಗೌರಿ ಹಾಡು ಸಮಾಪ್ತ ॥

## ಭಿಕ್ಷೆ ಬೇಡುವ ಸಂಪ್ರದಾಯ

ತಿರುಪತಿ ಶ್ರೀನಿವಾಸನ ವಾರಗಳಿವು. ಆ ದೇವರಿಗೆ ನಡೆದು ಕೊಳ್ಳುವ ಒಕ್ಕಲುಗಳು ಆ ದಿನಗಳಲ್ಲಿ ವೆಂಕಟೇಶಾಯ ಮಂಗಳಂ ಎಂದು ಹೇಳುತ್ತ ಶ್ರೀಮನ್ನಾರಾಯಣ ಗೋವಿಂದ, ಗೋವಿಂದ ಎನ್ನುತ್ತಾ ಐದು ಮನೆಗಳಿಗಾದರೂ ಹೋಗಿ ಭಿಕ್ಷೆ ತರಬೇಕೆಂದೂ ಶ್ರೀನಿವಾಸನ ಪ್ರೀತ್ಯರ್ಥ ಯಥಾಶಕ್ತಿ ದಾನ, ಸಂತರ್ಪಣೆಗಳನ್ನು ಮಾಡಬೇಕೆಂಬ ಸಂಪ್ರದಾಯವಿದೆ. ಈ ಸಂಪ್ರದಾಯ ಬಿಟ್ಟು ಹೋಗುತ್ತಿದೆ. ಸಾಧಕರು 5 ಮನೆಗೆ ತೆರಳಿ ಭಿಕ್ಷೆ ಬೇಡುವ ಸಂಪ್ರದಾಯ ಬೆಳಸಬೇಕು. ಇದರಿಂದ ಶ್ರೀನಿವಾಸನ ಅನುಗ್ರಹವಾಗಿ ಸಂಪತ್ತು ಹೆಚ್ಚುತ್ತದೆ. ಈ ದಿನಗಳಲ್ಲಿ ಶ್ರೀನಿವಾಸನ ಭಕ್ತರು ಹೆಚ್ಚಿನ ಸಂಖ್ಯೆಯಲ್ಲಿ ತಿರುಪತಿ ಯಾತ್ರೆಗೆ ಹೋಗುತ್ತಾರೆ. ಇದನ್ನು ಸಿರಿಸಂಪತ್ಪ್ರದ ಶನಿವಾರವೆಂದು ತಿಳಿದು ತಂಬಿಟ್ಟಿನ ತುಪ್ಪದ ದೀಪವನ್ನು ಹಚ್ಚಿಡುತ್ತಾರೆ. ಅಂಬಲಿ ಊಟಕ್ಕೆ ಪ್ರಾಶಸ್ತ್ಯ. ಶ್ರಾವಣಶನಿವಾರಗಳಂದು ಶನೈಶ್ಚರನ ಆರಾಧನೆಯನ್ನು ಉಪವಾಸ, ಜಪ, ದಾನ ಹಾಗೂ ಶನಿಮಾಹಾತ್ಮ್ಯಗ್ರಂಥದ ಪುಣ್ಯಕಥಾಶ್ರವಣಗಳ ಮೂಲಕ ಆಚರಿಸಲಾಗುತ್ತದೆ.

## ಶ್ರಾವಣ ॥ ಶುಕ್ಲ ॥ ಬಿದಿಗೆ

ಉದುಂಬರ ವ್ರತ– ಶ್ರಾವಣ ಮಾಸದ ಶುಕ್ಲ ದ್ವಿತೀಯಾದಂದು ಸಾಕ್ಷಾತ್ತಾಗಿ ಉದುಂಬರ (ಅತ್ತಿಮರ)ವನ್ನಾಗಲೀ, ಉದುಂಬರದ ಚಿತ್ರವನ್ನಾಗಲೀ ಪೂಜಿಸಬೇಕು. ಇಲ್ಲಿ ಅಧಿದೇವತೆಗಳು ಶಿವ ಮತ್ತು ಶುಕ್ರ . ಮೂವತ್ತಮೂರು ಅತ್ತಿ ಹಣ್ಣುಗಳನ್ನು

ಸಂಗ್ರಹಿಸಿ, ಹನ್ನೊಂದನ್ನು ದೇವತೆಗಳಿಗೂ, ಹನ್ನೊಂದನ್ನು ಬ್ರಾಹ್ಮಣರಿಗೂ ಸಮರ್ಪಿಸಿ, ಉಳಿದ ಹನ್ನೊಂದನ್ನು ತಾನು ಭುಜಿಸಬೇಕು. ಬೇರೆ ಯಾವ ಆಹಾರವನ್ನೂ ಸ್ವೀಕರಿಸಬಾರದು. ಹೀಗೆ ಹನ್ನೊಂದು ವರ್ಷಗಳು ಮಾಡಿ ಉದ್ಯಾಪನೆಮಾಡಬೇಕು. ಇದರಿಂದ ವಂಶಾಭಿವೃದ್ಧಿ, ಧನವೃದ್ಧಿಯೂ ಆಗುವುದು.

**ಶ್ರೀಸಮಾತ್ಮೇಶತೀರ್ಥರು (ಪಲಿಮಾರು ಮಠ)** – ಶ್ರೀ ಹೃಷೀಕೇಶತೀರ್ಥ-ರಿಂದ ಆಶ್ರಮ ದೀಕ್ಷೆ ಪಡೆದು ಅವರಿರುವಾಗಲೇ ಪೀಠವನ್ನೇರಿದ ಭಾಗ್ಯ ಇವರದು. ಭಗವಂತನ ಸಾವಿರ ನಾಮಗಳಲ್ಲಿ 'ಸಮಾತ್ಮಾ' ಎನ್ನುವುದೂ ಒಂದು. ಇವರು 'ಪಂಡಿತಾಃ ಸಮದರ್ಶಿನಃ' ಎಂದು ಗೀತೆಯಲ್ಲಿ ಹೇಳಿದಂತೆ ಸಮಾತ್ಮರಿಗೆ ಈಶರೂ ಹೌದು. ಸಮಾತ್ಮನಾದ ಭಗವಂತ ಇವರ ಈಶನೂ ಹೌದು ಎರಡೂ ಅರ್ಥದಲ್ಲಿ ಈ ಹೆಸರು ಇವರಿಗೆ ಅನ್ವರ್ಥಕವಾಗಿತ್ತು. ಇವರೂ ಗುರುಗಳಂತೆಯೇ ಹೆಚ್ಚಿನ ಸಮಯ ಅಂತರ್ಮುಖಿಗಳಾಗಿಯೇ ಕಳೆದರು. ಆಚಾರ್ಯರ ಗ್ರಂಥಗಳ ಮನನದಲ್ಲಿ ನಿರತರಾಗಿರುತ್ತಿದ್ದರು. ಇವರು ಸ್ವತಃ ಗ್ರಂಥ ರಚನೆ ಮಾಡಲಿಲ್ಲ. ಶ್ರೀ ಹೃಷಿಕೇಶ ತೀರ್ಥರ ಅನಂತರ ಸುಮಾರು ಎರಡೂವರೆ ದಶಕಕಾಲ ಪೀಠಸ್ಥರಾಗಿದ್ದರು. ಇವರು ತೀರ್ಥಯಾತ್ರೆ ಮಾಡುತ್ತಾ ಕೃಷ್ಣಾ ನದಿ ತೀರದಲ್ಲಿ ಶಾಲಿವಾಹನ ಶಕ 1235 (ಕ್ರಿ .ಶ. 1312) ಪರಾಭವ ಸಂವತ್ಸರದ ಶ್ರಾವಣಶುಕ್ಲಬಿದಿಗೆಯಂದು ಕೃಷ್ಣನ ಪಾದ ಸೇರಿ-ದರು.

## ಶ್ರಾವಣ ॥ ಶುಕ್ಲ ॥ ತೃತೀಯಾ

**ಸ್ವರ್ಣಗೌರೀ ವ್ರತ–** ಶ್ರಾವಣ ಶುಕ್ಲ ತೃತೀಯಾದಂದು ಸ್ವರ್ಣಗೌರೀ ಪೂಜೆಯನ್ನು ಮಾಡಿ ಹದಿನಾರು ದಂಪತಿಗಳಿಗೆ ವಾಯನದಾನವನ್ನು ಕೊಡಬೇಕು. ಹೀಗೆ 16,8,4,2 ಅಥವಾ 1 ವರ್ಷವಾದರೂ ಪೂಜಿಸಿ ಉದ್ಯಾಪನೆ ಮಾಡಬೇಕು.

## ಅಪ್ಪಾವರ ಆರಾಧನೆ

ಇಭರಾಮಪುರದ ಅಪ್ಪಾವರು ಶ್ರೀರಾಯರ ಅಂತರಂಗ ಭಕ್ತರು. ಅಗಮ್ಯಮಹಿಮರೆಂದು ಜಗತ್ಪ್ರಸಿದ್ಧರಾದ ಶ್ರೀ ರಾಘವೇಂದ್ರತೀರ್ಥ ಗುರುಸಾರ್ವ-ಭೌಮರ ಮಹಿಮೆಗಳನ್ನು ಸಂಪೂರ್ಣವಾಗಿ ತಿಳಿದುಕೊಳ್ಳುವ ಸಾಮರ್ಥ್ಯ

ಉಳ್ಳವರಾದರಿಂದ ''ಶ್ರೀ ರಾಘವೇಂದ್ರಚಿತ್ತಜ್ಞ'' ಎಂದು ಹೆಸರು ಪಡೆದರು. ಯತ್ ಸ್ಪೃಷ್ಟಧೂಪಧೂಮಸ್ಯ ಸೇವನಾದ್ ರೋಗಜಾತಯಃ । ತತ್‌ಕ್ಷಣಾದೇವ ನಶ್ಯಂತಿ ಸ ಕೃಷ್ಣೋ ಮಾಂ ಸದಾऽವತು ॥ – ಎಂದು ಮಹಿಷಿ ಚಕ್ರಪಾಣಿ ಆಚಾರ್ಯರು ಅಪ್ಪಾವರ ರೋಗಪರಿಹಾರಕಶಕ್ತಿಯನ್ನು ಸ್ತುತಿಸಿದ್ದಾರೆ. ಅಪ್ಪಾವರು ಪರಿಮಳಾ-ಚಾರ್ಯರು ಎಂಬ ಹೆಸರನ್ನೂ ಪಡೆದಿದ್ದರು. ಅಪ್ಪಾವರು ಸ್ನಾನಮಾಡಿದರೆ ಸುತ್ತಮುತ್ತಲಿನ ಪ್ರದೇಶದಲ್ಲಿ ದಿವ್ಯವಾದ ಪರಿಮಳದ ವಾಸನೆಯು ಬರುತ್ತಿತ್ತು. ಒಂದು ಬಾರಿ ಶ್ರೀಅಪ್ಪಾವರು ದಕ್ಷಿಣ ಭಾರತದ ಯಾತ್ರೆಯ ಸಮಯದಲ್ಲಿ ಕಾವೇರಿ ಸ್ನಾನಕ್ಕೆಂದು ಶ್ರೀರಂಗಪಟ್ಟಣ ನಗರಕ್ಕೆ ಬಂದಾಗ ಅಲ್ಲಿ ಕೆಲವು ಕುಹಕಿಗಳು ಶ್ರೀ ಅಪ್ಪಾವರು ಯಾವುದೋ ದ್ರವ್ಯ ಧಾರಣೆ ಮಾಡಿಕೊಂಡು ಜನರಿಗೆ ತಪ್ಪು ಗ್ರಹಿಕೆ ಮಾಡುತ್ತಿದ್ದಾರೆಯೆಂದು ಅವರ ಪರೀಕ್ಷೆ ಮಾಡಲು ಮುಂದಾಗುತ್ತಾರೆ. 'ನೀವು ಸ್ನಾನ ಮಾಡಿದಾಗ ಪರಿಮಳದ ಸುವಾಸನೆ ಬರುವುದೆಂದು ಕೇಳಿದ್ದೇವೆ , ಅದನ್ನು ನೀವು ಈಗ ಕಾವೇರಿ ನದಿಯಲ್ಲಿ ಸ್ನಾನಮಾಡಿ ತೋರಿಸಿ'' ಎನ್ನುತ್ತಾರೆ. ಆಗ ಶ್ರೀ ಅಪ್ಪಾವರು ಸ್ನಾನ ಮಾಡಿದಾಗ ಕಾವೇರಿ ನದಿಯಲ್ಲಿ ಮತ್ತು ಸುತ್ತಮುತ್ತಲಿನ ಗ್ರಾಮದಲ್ಲಿ ಪರಿಮಳದ ಸುವಾಸನೆ ಹರಡಿತು. ಅಪ್ಪಾವರ ಪರೀಕ್ಷೆ ಮಾಡಲು ಬಂದ ಆ ಕುಹಕಿಗಳಿಗೆ ತಮ್ಮ ತಪ್ಪಿನ ಅರಿವಾಗಿ ಅಪ್ಪಾವರ ಬಳಿ ಶರಣಾಗುತ್ತಾರೆ. ಕರುಣಾ ಸಾಗರರಾದ ಅಪ್ಪಾವರು ಪರೀಕ್ಷೆ ಮಾಡಲು ಬಂದ ಆ ಜನರನ್ನು ಕ್ಷಮಿಸಿ ಅನು-ಗ್ರಹಿಸುತ್ತಾರೆ.

ಶ್ರೀಅಪ್ಪಾವರಿಂದ ಅನುಗ್ರಹೀತರಾದ ದಾಸರು ಮತ್ತು ಜ್ಞಾನಿಗಳು – 1. ಶ್ರೀ ಸುರಪುರದ ಆನಂದದಾಸರು 2. ಶ್ರೀ ಗುರುಜಗನ್ನಾಥದಾಸರು 3. ವಿದ್ವಾನ್ ಶ್ರೀ ಯಳಮೇಲಿ ಹಯಗ್ರೀವಾಚಾರ್ಯರು 4. ವಿದ್ವಾನ್ ಯಳಮೇಲಿ ವಿಠಲಾ-ಚಾರ್ಯರು 5. ಶ್ರೀ ವಿಜಯರಾಮಚಂದ್ರದಾಸರು 6. ಶ್ರೀ ಜಯೇಶವಿಠಲರು 7. ಶ್ರೀಕಾರ್ಪರನರಹರಿ ದಾಸರು 8. ಶ್ರೀ ಮುದ್ದುಭೀಮಾಚಾರ್ಯರು 9. ಬೇಲೂರು ಕೇಶವ ದಾಸರು 10. ಶ್ರೀ ಯೋಗಿ ನಾರಾಯಣಾಚಾರ್ಯರು 11. ಶ್ರೀ ಇಂದಿರೇಶ ದಾಸರು. ಶ್ರೀಕ್ಷೇತ್ರ ಅಪ್ಪಾವರ ಕಟ್ಟೆಯಲ್ಲಿ ಈಗ ಮಂಟಪವಿದೆ. ಶ್ರೀ ಯೋಗಿ-ನಾರಾಯಣಾಚಾರ್ಯರು ಮಂಟಪದ ಕಂಬದ ಮೇಲೆ ಗಣಪತಿ ಪ್ರಾಣದೇವರು

ರುದ್ರದೇವರು, ರಾಯರನ್ನು , ಅವತಾರತ್ರಯ ಪ್ರಾಣದೇವರ ಕೆತ್ತನೆ ಮಾಡಿದ್ದಾರೆ. ಶ್ರೀರಾಮಚರಣದ್ವಂದ್ವಾರ್ಘ್ಯಚಂದ್ರೋದಯೋಪಮಃ । ಶ್ರೀಕೃಷ್ಣಪೂಜಾನಿರತಃ ಕೃಷ್ಣೋ ಮಾಂ ಸರ್ವದಾಽವತು ॥

## ಕಪರ್ದಿವಿನಾಯಕವ್ರತಮ್

ಚತುರ್ಥಿ ದಿನದಂದು ತಾಮ್ರದ ಕಲಶದಲ್ಲಿ ದೂರ್ವಾವನ್ನು ಇಟ್ಟು, ಅದರಲ್ಲಿ ಬಂಗಾರದ ಗಣಪತಿಯನ್ನು ಇಟ್ಟು ಪೂಜಿಸಬೇಕು. ಹೀಗೆ ಐದು ವರ್ಷ ಮಾಡಿ ಉದ್ಯಾಪನೆಯನ್ನು ಮಾಡಿದರೆ ಸರ್ವಾಭೀಷ್ಟಸಿದ್ಧಿಯಾಗುವುದು. ಸ್ಕಂದಪುರಾಣದಲ್ಲಿ ದೂರ್ವಾ ಗಣಪತಿವ್ರತದ ಕಥೆಯು ಬರುತ್ತದೆ. ದೂರ್ವಾಗಳಿಂದ ಗಣಪತಿ ಪೂಜೆ ಮಾಡಿ ಗಣಪತಿ ಪ್ರತಿಮೆಯನ್ನು ದಾನ ಕೊಡಬೇಕು.

ಶ್ರಾವಣಸ್ಯ ಸಿತೇ ಪಕ್ಷೇ ಚತುರ್ಥ್ಯಾಂ ಏಕಭುಗ್ ವ್ರತೀ । ವ್ರತಂ ಕುರ್ಯಾದ್ ಗಣೇಶಸ್ಯ ಮಾಸಮೇಕಂ ವ್ರತಂ ಚರೇತ್ । ಸರ್ವಸಿದ್ಧಿಕರಂ ನೃಣಾಂ ಸುಖಂ ಚೈವ ಸುರೇಶ್ವರ ॥ – ತಿಥ್ಯಾದಿ ಸ್ಮೃತ್ವಾ ಮಮ ಚತುರ್ವಿಧಪುರುಷಾರ್ಥಸಿದ್ಧ್ಯರ್ಥಂ ಕಪರ್ದಿಗಣೇಶವ್ರತಮಹಂ ಕರಿಷ್ಯೇ ಇತಿ ಸಂಕಲ್ಪ್ಯ, ಮೂಲಮಂತ್ರೇಣ ಷಡಂಗನ್ಯಾಸಂ ಕೃತ್ವಾ ಪೂಜಾಂ ಸಮಾರಭೇತ್ ॥

ತತ್ರಾದೌ ಪೀಠಪೂಜಾ – ಓಂ ನಮೋ ಭಗವತೇ ಸಕಲಗುಣಾತ್ಮಶಕ್ತಿಯುತಾನಂ ತಯೋಗಪೀಠಾಯ ನಮಃ॥ ಅಷ್ಟದಲಕೇಸರೇ ಓಂ ತೀವ್ರಾಯೈ ನಮಃ । ಜ್ವಾಲಿನ್ಯೈ । ನಂದಾಯೈ । ಭೋಗದಾಯೈ ನಮಃ । ಕಾಮರೂಪಿಣ್ಯೈ । ಉಗ್ರಾಯೈಃ । ತೇಜೋವತ್ಯೈ । ಸತ್ಯಾಯೈ । ಮಧ್ಯೇ ವಿಘ್ನವಿನಾಶಿನ್ಯೈ ।

ಧ್ಯಾನಂ– ಏಕದಂತಂ ಮಹಾಕಾಯಂ ಲಂಬೋದರಗಜಾನನಮ್ । ವಿಘ್ನನಾಶ-ಕರಂ ದೇವಂ ಗಣೇಶಂ ಪ್ರಣಮಾಮ್ಯಹಮ್ ॥ ಇಮಾಂ ಪೂಜಾಂ ಗೃಹಾಣೇಶ ಕಪರ್ದಿಗಣನಾಯಕ ॥ -ಇತಿ ಧ್ಯಾತ್ವಾ ।

ಆಗಚ್ಛ ದೇವದೇವೇಶ ಸ್ಥಾನೇ ಚಾತ್ರ ಸ್ಥಿರೋ ಭವ । ಯಾವದ್ವ್ರತಂ ಸಮಾಪ್ಯೇತ ತಾವತ್ತ್ವಂ ಸನ್ನಿಧೋ ಭವ ॥ ಇತಿ ತ್ರಿವಾರಂ ಪಠೇತ್ ॥

ವಿನಾಯಕ ನಮಸ್ತುಭ್ಯಮುಮಾಮಲಸಮುದ್ಭವ । ಇಮಾಂ ಮಯಾ ಕೃತಾಂ ಪೂಜಾಂ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥

ಅಲಂಕಾರಸಮಾಯುಕ್ತಂ ಮುಕ್ತಾಮಣಿವಿಭೂಷಿತಮ್ । ಸ್ವರ್ಣಸಿಂಹಾಸನಂ ಚಾರು ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥ ಇತ್ಯಾಸನಮ್ ॥

ಗೌರೀಸುತ ನಮಸ್ತೇಽಸ್ತು ಶಂಕರಪ್ರಿಯಕಾರಕ । ಭಕ್ತ್ಯಾ ಪಾದ್ಯಂ ಮಯಾ ದತ್ತಂ ಗೃಹಾಣ ಗಣನಾಯಕ ॥ ಇತಿ ಪಾದ್ಯಮ್ ॥

ವ್ರತಮುದ್ದಿಶ್ಯ ವಿಘ್ನೇಶ ಗಂಧಪುಷ್ಪಾದಿಸಂಯುತಮ್ । ಗೃಹಾಣಾರ್ಘ್ಯಂ ಮಯಾ ದತ್ತಂ ಸರ್ವಸಿದ್ಧಿಪ್ರದಾಯಕ ॥ ಆಚಮನೀಯಮ್ ॥

ಅನಾಥನಾಥ ಸರ್ವಜ್ಞ ಗೀರ್ವಾಣಪರಿಪೂಜಿತ । ಸ್ನಾನಂ ಪಂಚಾಮೃತಂ ದೇವ ಗೃಹಾಣ ಗಣನಾಯಕ ॥ ಆಪ್ಯಾಯಸ್ವೇತಿ ದುಗ್ಧಮ್ । ದಧಿ ಕ್ರಾವ್ಣೋ ಇತಿ ದಧಿ । ಘೃತಂ ಮಿಮಿಕ್ಷೇ ಇತಿ ಘೃತಮ್ । ಮಧುವಾತೇತಿ ಮಧು । ಸ್ವಾದುಃ ಪವಸ್ವೇತಿ ಶರ್ಕರಾ । ಇತಿ ಪಂಚಾಮೃತಸ್ನಾನಮ್ ।

ಗಂಗಾಜಲಂ ಸಮಾನೀತಂ ಹೇಮಾಂಭೋರುಹವಾಸಿನಮ್ । ಸ್ನಾನೇ ಸ್ವೀಕುರು ವಿಘ್ನೇಶ ಕಪರ್ದಿಗಣನಾಯಕ ॥ ಇತಿ ಸ್ನಾನಮ್ ।

ಹರಿದ್ವಸ್ತ್ರದ್ವಯಂ ದೇವ ದೇವಾಂಗವಸನೋಪಮಮ್ । ಭಕ್ತ್ಯಾ ದತ್ತಂ ಗೃಹಾಣೇಶ ಲಂಬೋದರ ಹರಾತ್ಮಜ ॥ ಇತಿ ವಸ್ತ್ರಮ್ ।

ನಾನಾಲಂಕಾರಸಂಯುಕ್ತಂ ನಾನಾರತ್ನೇ ವಿಭೂಷಿತಮ್ । ಅನೇಕದಿವ್ಯಾಭರಣಂ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥ ಆಭರಣಾನಿ ।

ರಾಜತಂ ಬ್ರಹ್ಮಸೂತ್ರಂ ಚ ಕಾಂಚನಂ ಚೋತ್ತರೀಯಕಮ್ । ಫಾಲಚಂದ್ರ ನಮಸ್ತುಭ್ಯಂ ಗೃಹಾಣ ವರದೋ ಭವ ॥ ಯಜ್ಞೋಪವೀತಮ್ ।

ಕರ್ಪೂರಕುಂಕುಮೈರ್ಯುಕ್ತಂ ದಿವ್ಯಚಂದನಮುತ್ತಮಮ್ । ವಿಲೇಪನಂ ಸುರಶ್ರೇಷ್ಠ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥ ಇತಿ ಗಂಧಮ್ ।

ಅಕ್ಷತಾನ್ ಧವಲಾನ್ ದೇವ ಸಿದ್ಧಗಂಧರ್ವಪೂಜಿತ । ಭಕ್ತ್ಯಾ ದತ್ತಾನ್

ಗೃಹಾಣೇಮಾನ್ ಸರ್ವಸಿದ್ಧಿಪ್ರದಾಯಕ ॥ ಅಕ್ಷತಾನ್ । ಸುಗಂಧೀನಿ ಚ ಪುಷ್ಪಾಣಿ ಋದ್ಧಿಸಿದ್ಧಿಪ್ರದಾಯಕ । ಕಪರ್ದಿಗಣನಾಥೇಶ ಮಯಾ ದತ್ತಾನಿ ಗೃಹ್ಯತಾಮ್ ॥ ಇತಿ ಪುಷ್ಪಾಣಿ ।

ಅಥಾಂಗಪೂಜಾ – ಕಪರ್ದಿಗಣನಾಥಾಯ - ಪಾದೌ । ಗಣೇಶಾಯ - ಜಾನುನೀ । ಗಣನಾಥಾಯ - ಊರೂ ಪೂ.. । ಗಣಕ್ರೀಡಾಯ - ಕಟಿಂ । ವಕ್ರತುಂಡಾಯ - ಹೃದಯಂ । ಲಂಬೋದರಾಯ - ಕಂಠಂ । ಗಜಾನನಾಯ - ಸ್ಕಂಧೌ । ಹೇರಂಬಾಯ - ಹಸ್ತೌ । ವಿಕಟಾಯ - ಮುಖಂ । ವಿಘ್ನರಾಜಾಯ -ನೇತ್ರೇ । ಧೂಮ್ರವರ್ಣಾಯ - ಶಿರಃ । ಕಪರ್ದಿನೇ - ಸರ್ವಾಂಗಂ ।

ಅಥಾವರಣಪೂಜಾ – ಈಶಾನಾಯ । ಅಘೋರಾಯ । ತತ್ಪುರುಷಾಯ । ವಾಮದೇವಾಯ । ಸದ್ಯೋಜಾತಾಯ । ಇತಿ ಪ್ರಥಮಾವರಣಮ್ ॥1॥ ವಕ್ರ-ತುಂಡಾಯ । ಏಕದಂತಾಯ । ಮಹೋದರಾಯ । ಗಜಾನನಾಯ । ವಿಕಟಾಯ । ವಿಘ್ನರಾಜಾಯ । ಧೂಮ್ರವರ್ಣಾಯ । ವಿನಾಯಕಾಯ । ದ್ವಿತೀಯಾವರಣಮ್ ॥2॥ ಬ್ರಾಹ್ಮ್ಯೈ । ಮಾಹೇಶ್ವರ್ಯೈ । ಕೌಮಾರ್ಯೈ । ವೈಷ್ಣವ್ಯೈ । ವಾರಾಹ್ಯೈ । ಇಂದ್ರಾಣ್ಯೈ । ಚಾಮುಂಡಾಯ್ಯೆ । ಮಹಾಲಕ್ಷ್ಮ್ಯೈ । ತೃತೀಯಾವರಣಮ್ ॥3॥ ಇಂದ್ರಾಯ । ಅಗ್ನಯೇ । ಯಮಾಯ । ನಿರ್ಋತಯೇ । ವರುಣಾಯ । ವಾಯವೇ । ಸೋಮಾಯ । ಈಶಾನಾಯ । ವರುಣನಿರ್ಋತ್ಯೋರ್ಮಧ್ಯೇ ಅನಂತಾಯ । ಇಂದ್ರೇಶಾನಯೋರ್ಮಧ್ಯೇ ಬ್ರಹ್ಮಣೇ ॥ ಇತಿ ಚತುರ್ಥಾವರಣಮ್ ॥4॥ ವಜ್ರಾಯ । ಶಕ್ತಯೇ । ದಂಡಾಯ । ಖಡ್ಗಾಯ । ಪಾಶಾಯ । ಅಂಕುಶಾಯ । ಗದಾಯ್ಯೆ । ತ್ರಿಶೂಲಾಯ । ಚಕ್ರಾಯ । ಅಬ್ಜಾಯ – ಇತಿ ಪಂಚಮಾವರಣಮ್ ॥5॥

ದಶಾಂಗಂ ಗುಗ್ಗುಲುಂ ಧೂಪಂ ಚಂದನಾಗರುಸಂಯುತಮ್ । ಉಮಾಸುತ ನಮಸ್ತುಭ್ಯಂ ಗೃಹಾಣ ವರದೋ ಭವ ॥ ಇತಿ ಧೂಪಮ್ ।

ಗೃಹಾಣ ಮಂಗಲಂ ದೇವ ಘೃತವರ್ತಿಸಮನ್ವಿತಮ್ । ದೀಪಂ ಜ್ಞಾನಪ್ರದಂ ಚಾರು ರುದ್ರಪ್ರಿಯ ನಮೋಸ್ತು ತೇ ॥ ಇತಿ ದೀಪಮ್ ।

ನೈವೇದ್ಯಂ ಗೃಹ್ಯತಾಂ ದೇವ .... ಇತಿ ನೈವೇದ್ಯಮ್ । ಆಚಮನೀಯಮ್ । ಇದಂ ಫಲಮಿತಿ ಫಲಮ್ ॥ ಪೂಗೀಫಲಮಿತಿ ತಾಂಬೂಲಮ್ । ಹಿರಣ್ಯಗರ್ಭೇತಿ ದಕ್ಷಿಣಾಮ್ ।

ಅಗ್ನಿರ್ಜ್ಯೋತೀ ರವಿರ್ಜ್ಯೋತಿರ್ಜ್ಯೋತಿರಗ್ನಿರ್ವಿಭಾವಸುಃ । ಜ್ಯೋತಿಸ್ತ್ವಂ ಸರ್ವದೇವಾನಾಂ ಗಣಾಧಿಪ ನಮೋಽಸ್ತು ತೇ ॥ ನೀರಾಜನಮ್ ।

ಯಾನಿ ಕಾನಿ ಚ ... ಇತಿ ಪ್ರದಕ್ಷಿಣಾಃ ॥ ನಮೋಸ್ತ್ವನಂತಾಯ ... ಇತಿ ನಮಸ್ಕಾರಃ ।

ಗಣಾಧಿಪ ನಮಸ್ತೇಽಸ್ತು ನಮಸ್ತೇಽಸ್ತು ಗಜಾನನ । ಸ್ಕಂದಾಗ್ರಜ ನಮಸ್ತೇಽಸ್ತು ನಮಸ್ತೇಸ್ತ್ವೀಪ್ಸಿತಪ್ರದ ॥ ಕಪರ್ದಿಗಣನಾಥೇಶ ಸರ್ವಸಂಪತ್ಪ್ರದಾಯಕ ॥ ಮಂತ್ರ-ಪುಷ್ಪಾಂಜಲಿಮ್ ।

**ಅಥ ಬ್ರಹ್ಮಚಾರಿಪೂಜಾ** – ಅಕಣಾನ್ಮುಷ್ಟಿಗಣಿತಾಂಸ್ತಂಡುಲಾನ್ ಸವರಾಟಕಾನ್ । ವಿಪ್ರಾಯ ವಟವೇ ದದ್ಯಾದ್ಗಂಧಪುಷ್ಪಾರ್ಚಿತಾಯ ಚ । ತಂಡುಲಾನ್ ವೈ ತತೋ ದದ್ಯಾತ್ ಪಾಕೇ ಚಾನ್ನೇ ಚ ಶೋಭನಾನ್ । ಕಪರ್ದಿಗಣನಾಥೋಽಸೌ ಪ್ರೀಯತಾಂ ತಂಡುಲೈಃ ಸದಾ । ಕಥಾಂ ಶ್ರುತ್ವಾ ವಿಧಾನೇನ ದೇವಮುದ್ವಾಸಯೇತ್ ತತಃ ॥

ಕಪರ್ದಿವಿಗಣೇಶ ವಂದಿಸುವೆ ಕರದ್ವಂದ್ವ ಜೋಡಿಸಿ ॥ಪ॥ ವಂದಿಸುವೆ ಒಂದೆ ಮನದಲಿ ನಂದಿವಾಹನ ಕಂದ ಕಪರ್ದಿ ಗಣಪಗೆ ಬಂದ ಭಯಗಳ ಹಿಂದೆ ಮಾಡುತ ಸಿಂಧುಶಯನನ ತೋರಿಸೆಂದು ॥ಅ.ಪ॥ ಮೂಷಕವಾಹನನೆ ದೂಷಿತಮನವ ನಾಶಮಾಡೆಲೊ ಬೇಗ ಭಾಷ್ಯಕಾರನೆ ಭಾಷ್ಯಮಾಡಿಸು ತೋಷದಿಂದಲಿ ದಾಸನೆಂಬಭಿ ಲಾಷೆಗಳ ಪೂರೈಸು ಅನುದಿನ ಪಾಶ ಅಂಕುಶದಾರನೇ ॥1॥ ಆಕಾಶಕಭಿಮಾನಿಯೇ ಎನ್ನಯ ವಾಕು ಲಾಲಿಸಬೇಕೊ ಪ್ರಭುವೇ ಕಾಕುಜನ ಸಹವಾಸದಿಂದಲಿ ನೂಕಿಸೆನ್ನನು ಏಕದಂತನೆ ಏಕಭಾವದಿ ಭಜಿಪ ಭಕುತರೋಳ್ಹಾತನೆನ್ನ ಗಜವದನನೆ ಬಾ ತೈಜ ವಿಶ್ವಭಾಜಕನೆ ತೋರೋ ಪಾದ ಭುಜ ಚತುಷ್ಟನೆ ತ್ರಿಜಗವಂದ್ಯನೆ ಭಜಿಪ ಭಕುತರ ಅಘವ ಕಳೆವನೆ ನಿಜೆ ಸುಜನರ...... ಭುಜಗ ಭೂಷಣ ಕಾಮನನುಜನೆ ॥2॥ ವಾರಿಬಂಧನ ಪೂರ್ವದಿ ಶ್ರೀ ರಾಮಚಂದ್ರನು ಪ್ರೀತಿಲಿ ಪೂಜಿಸಿದ ದುರುಳ ರಾವಣ

ಮೆರೆದು ಕೆಟ್ಟನು ಧರೆಯಗೆದ್ದನು ಜರಿದು ಚಂದ್ರನು ವಿದ್ಯ ಪ್ರದಾಯಕನೆ ಮನ ತಿದ್ದು ಬೇಗನೆ ಬಿದ್ದು ಬೇಡುಗೆ ಸಾಧುವಂದ್ಯನೆ ಮಧ್ವ ಮತದೊಳು ಶ್ರದ್ಧೆ ಪುಟ್ಟಿಸೊ ಮಧ್ವವಲ್ಲಭ ತಂದೆ ವರದ ವಿಠಲ ಪ್ರಿಯ ಸಿದ್ಧಿದಾಯಕ ॥2॥ ಇತಿ ಕಪರ್ದಿಗಣ-ಪತಿ ಪೂಜಾ ॥

## ಶ್ರಾವಣ ॥ ಶುದ್ಧ ॥ ಪಂಚಮಿ

**ನಾಗಪಂಚಮೀ ವ್ರತ**– ಶುಕ್ಲ ಚತುರ್ಥಿ ದಿನ ಒಪ್ಪತ್ತು ಮಾಡಿ ಪಂಚಮಿ ದಿನ ಬಂಗಾರ ಅಥವಾ ಬೆಳ್ಳಿಯ ನಾಗನನ್ನು ಪೂಜಿಸಬೇಕು. ಬಾಗಿಲಿನ ಎರಡು ಕಡೆ ನಾಗನನ್ನು ಬರೆಯಬೇಕು. ಹುತ್ತಕ್ಕೂ ಹಾಲೆರೆಯಬೇಕು. ಗೋಧಿಯ ಪಾಯಸವನ್ನು ನೈವೇದ್ಯ ಮಾಡಬೇಕು. ಅನಂತರ, ವಾಸುಕಿ, ಶೇಷ, ಪದ್ಮನಾಭ, ಕರ್ಕೋಟಕ, ಅಶ್ವ ಧೃತರಾಷ್ಟ್ರ, ತಕ್ಷಕ ಮೊದಲಾದ ಎಂಟು ನಾಗಗಳನ್ನು ಪೂಜಿಸಬೇಕು. ಈ ವ್ರತದಿಂದ ಸರ್ಪದೋಷಗಳು ಪರಿಹಾರವಾಗುತ್ತದೆ. ಹೆಚ್ಚಿನ ವಿಚಾರಕ್ಕಾಗಿ ನಮ್ಮ ಸಂಸ್ಥೆಯಿಂದ ಪ್ರಕಾಶನಗೊಂಡಿರುವ 'ನಾಗಪಂಚಮೀ' ಪುಸ್ತಕ ನೋಡಿರಿ.

**ರಘುವರ್ಯತೀರ್ಥರು (ಪಲಿಮಾರು ಮಠ)** ಪರಂಪರೆಯಲ್ಲಿ ಇಪ್ಪತ್ತ-ನೆಯವರು. ಗುರು, ಪರಮಗುರುಗಳ ಸಹವಾಸದಿಂದ ಹದಿನಾರನೆಯ ವಯಸ್ಸಿನಲ್ಲೇ ಸಕಲ ಶಾಸ್ತ್ರಪಾಂಡಿತ್ಯ ಗಳಿಸಿದ್ದರು. 'ರಘುನಾಥವಿಜಯ' ಎಂಬ ಛಂದೋಗ್ರಂಥ. 'ರಘುಪರಿಭಾಷಾ' ಎಂಬ ತರ್ಕಪ್ರಕರಣ. ಪ್ರಮೇಯ ನವಮಾಲಿಕೆಗೆ 'ಸೌರಭ' ಎಂಬ ಟೀಕೆ. 'ಸುಭಾಷಿತಮಂಡಲ' ಎಂಬ ಸೂಕ್ತಿಗಳ ಸಂಕಲನ ಕೆಲವು ವೇದಾಂತ ಗ್ರಂಥಗಳಿಗೆ ಲಘುಟಿಪ್ಪಣಿಗಳು. ಇವು ಇವರ ಸಂಸ್ಕೃತಕೃತಿಗಳು. 'ರಘುತಿಲಕ' ಎಂಬ ಅಂಕಿತದಿಂದ ಕನ್ನಡದಲ್ಲಿ ಗದ್ಯ ಪದ್ಯ ಸುಳಾದಿಗಳನ್ನು ರಚಿಸಿರುವರು. ರಘುನಾಥ ವಿಜಯದಂತಹ ಪ್ರೌಢಕೃತಿಯನ್ನು ಬರೆದಾಗ ಅವರಿಗಿನ್ನೂ ಇಪ್ಪತ್ತರ ಹರೆಯ, ಕಾಶಿಯಲ್ಲಿ ವಾದಿಜಯ, ಅನೇಕ ಕಡೆ ದಿಗ್ವಿಜಯ ಮಾಡಿ, ಪರಾಭವಗೊಂಡ ವಾದಿ-ಗಳಿಂದ ಪಡೆದ ಜಯಪತ್ರಿಕೆಗಳನ್ನು ಶ್ರೀಕೃಷ್ಣಮಠದ ಮಹಾದ್ವಾರಕ್ಕೆ ತೋರಣದಂತೆ ಕಟ್ಟಿಸಿದರಂತೆ. ಶ್ರೀಹೃಷೀಕೇಶತೀರ್ಥರ ಪಾಠಕ್ಕೆ ಅನುಗುಣವಾಗಿ ಸರ್ವಮೂಲ-ಗಳನ್ನು ಪ್ರತಿಮಾಡಿ ಇರಿಸಿರುವುದು ಇವರ ಮತ್ತೊಂದು ಮಹತ್ಕಾರ್ಯ. ಐವತ್ತೇಳು ವರ್ಷಗಳಷ್ಟು ದೀರ್ಘಕಾಲ ಪೀಠವನ್ನಾಳಿ ಶಾ.ಶ. 1626 (ಕ್ರಿ.ಶ. 1714) ನಂದನ

ಸಂವತ್ಸರದ ಶ್ರಾವಣ ಶುದ್ಧ ಪಂಚಮಿ ದಿನ ಇವರು ಪಲಿಮಾರಿನಲ್ಲಿ ವೃಂದಾ-ವನಸ್ಥರಾದರು. ಇವರ ಗುರುಗಳ, ಪರಮ ಗುರುಗಳ ಸನ್ನಿಧಾನದಲ್ಲಿಯೇ ವೃಂದಾವನಸ್ಥರಾದದ್ದು ವಿಶೇಷತೆ.

## ಶ್ರಾವಣ ॥ ಶುಕ್ಲ ॥ ಷಷ್ಠಿ

ಸಿರಿಯಾಳಷಷ್ಠಿ ಎನ್ನುತ್ತಾರೆ. ಮೊಸರನ್ನವನ್ನು ನೈವೇದ್ಯಮಾಡಿ ದಂಪತಿಗಳಿಗೆ ಬಡಿಸಬೇಕು. ಕನ್ಯೆಯರ ಅಭಿವೃದ್ಧಿಗಾಗಿ ಈ ವ್ರತ ವಿಹಿತವಾಗಿದೆ.

**ಸೂಪೌದನವ್ರತ**– ಶ್ರಾವಣ ಶುಕ್ಲ ಷಷ್ಠಿಯಂದು ಶಿವನನ್ನು ಪೂಜಿಸಿ ಮಾವಿನ ಕಾಯಿಯ ಉಪ್ಪಿನಕಾಯನ್ನು ನಿವೇದಿಸಿ, ಬ್ರಾಹ್ಮಣರಿಗೂ ದಾನ ಮಾಡಬೇಕು. ಇದರಿಂದ ಅಪಮೃತ್ಯುಗಳು ಪರಿಹಾರವಾಗುವುದು. ಸೂಪೌದನಸ್ಯ ನೈವೇದ್ಯಮ-ರ್ಪಯೇದ್ ವಿಧಿಸಂಯುತಃ। ಆಮ್ರಸ್ಯ ಲವಣಂ ಶಾಕಂ ಸಾಧನೇ ಪರಿಕಲ್ಪಯೇತ್' ಇತ್ಯಾದಿ ಶ್ರಾವಣಮಾಸಮಾಹಾತ್ಮ್ಯೆಯಲ್ಲಿ ಹೇಳಲಾಗಿದೆ. ಇದರ ಬಗ್ಗೆ ದೀರ್ಘ-ವಾದ ವ್ರತಕಥೆಯೇ ಇರುತ್ತದೆ.

ಶ್ರೀ ವಿದ್ಯಾಪೂರ್ಣತೀರ್ಥರು (ವ್ಯಾಸರಾಜ ಮಠ) ಶ್ರಾವಣ ಶುದ್ಧ ಷಷ್ಠಿ (ಕ್ರಿ .ಶ.1824-1872) ವಿದ್ವತ್‌ಕುಮುದಚಂದ್ರಾಯ ಭಕ್ತಪಂಕಜಭಾನವೇ। ವಿದ್ಯಾ-ಪೂರ್ಣಾಯ ಗುರವೇ ನಮಸ್ಸರ್ವೇಷ್ಟ ಹೇತುವೇ ॥ ಇವರು ಶ್ರೀ ವಿದ್ಯಾ-ಕಾಂತತೀರ್ಥರ ಪೂರ್ವಾಶ್ರಮದ ಮಕ್ಕಳು. ಇವರ ಪೂರ್ವಾಶ್ರಮದ ನಾಮಕರಣ ವೆಂಕಟನರಸಿಂಹಾಚಾರ್ಯರೆಂದು. ವಿದ್ಯಾನಿಧಿತೀರ್ಥರ ಕರಕಮಲಸಂಜಾತರಾಗಿ ಬಂದು 48 ವರ್ಷಗಳ ಕಾಲ ವಿದ್ಯಾಪೂರ್ಣತೀರ್ಥರೆಂಬ ಅಭಿದಾನದಿಂದ ಪೀಠ-ವನ್ನಲಂಕರಿಸಿದ್ದರು. ಪಾಠ-ಪ್ರವಚನಾದಿಗಳಲ್ಲಿ ಇವರಿಗೆ ವಿಶೇಷಾಸಕ್ತಿ ಇತ್ತು. ಮೈಸೂರು ಸಂಸ್ಥಾನದ ಅರಸರಾದ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಅತ್ಯಂತ ಪ್ರೀತಿಯ ಗುರುಗಳಾಗಿದ್ದರು. ದೇವರೆಂದರೆ ತಿರುಪತಿ ತಿಮ್ಮಪ್ಪ, ಗುರುಗಳೆಂದರೆ ಮಂಚಾಲೆ ರಾಘಪ್ಪ ಎಂಬ ನಾಣ್ಣುಡಿ ಇರುವಂತೆ ಇವರ ಕಾಲದಲ್ಲಿ ಮಠವೆಂದರೆ ಶ್ರೀ ವ್ಯಾಸರಾಜಮಠ, ಸ್ವಾಮಿಗಳೆಂದರೆ ಶ್ರೀ ವಿದ್ಯಾಪೂರ್ಣತೀರ್ಥರು ಎಂದು ಮಹಾರಾಜರಿಂದ ತುಂಬಿದ ಸಭೆಗಳಲ್ಲಿ ಪ್ರಶಂಸನೀಯರಾಗಿದ್ದರು. ಇವರೂ ಸಹ

ಸೋಸಲೆ ಕ್ಷೇತ್ರದಲ್ಲಿಯೇ 1872ರ ಶ್ರಾವಣ ಶುದ್ಧ ಷಷ್ಠಿಯಂದು ವೃಂದಾವನಸ್ಥ-ರಾದರು.

## ಶ್ರಾವಣ ॥ ಶುಕ್ಲ ॥ ಸಪ್ತಮೀ

ಶೀತಲಾಸಪ್ತಮೀ ವ್ರತ – ಶ್ರಾವಣ ಶುಕ್ಲ ಸಪ್ತಮೀ ಸಾಯಂಕಾಲ ಗೋಡೆಯ ಮೇಲೆ ಕೊಳವನ್ನೂ, ಜಲದೇವತೆಗಳನ್ನೂ ಬರೆದು, ಮೊಸರನ್ನವನ್ನು ನಿವೇದಿಸಿ ಪೂಜಿಸಬೇಕು. ಹೀಗೆ ಏಳು ವರ್ಷ ಮಾಡಿ ಉದ್ಯಾಪನೆಯನ್ನು ಮಾಡಬೇಕು.

ಶ್ರೀಲಕ್ಷ್ಮೀಕಾಂತತೀರ್ಥರು (ವ್ಯಾಸರಾಜ ಮಠ) ಶ್ರಾವಣ ಶುದ್ಧ ಸಪ್ತಮೀ (ಕ್ರಿ.ಶ. 1584-1594) ಲಕ್ಷ್ಮೀಕಾಂತಗುರುಂ ವಂದೇ ಲಕ್ಷಣಾರ್ಯಮಹಂ ಸದಾ । ರಚಿತಾನ್ ಸ್ವೇನ ಕುರ್ವಾಣ ಲಕ್ಷೀಶಾನ್ ಭಿಕ್ಷುಕಾನ್ ಅಪಿ ॥ ಈ ಮಹಾನುಭಾವರು ಶ್ರೀರಾಮತೀರ್ಥರಿಂದ ಸನ್ಯಾಸದೀಕ್ಷೆಯನ್ನು ಪಡೆದು ಕೇವಲ 10 ವರ್ಷಗಳ ಕಾಲ ಮಹಾಸಂಸ್ಥಾನವನ್ನಾಳಿದರು. ಇವರು ಸನ್ಯಾಸಿಗಳಿಗೆ ಬೇಕಾದ ಸರ್ವ ಲಕ್ಷಣ ಸಂಪನ್ನ-ರಾಗಿದ್ದರೆಂದು ತಿಳಿದುಬರುತ್ತದೆ. ತಾವು ಅನೇಕರಿಗೆ ವೈರಾಗ್ಯ ದೀಕ್ಷೆಯನ್ನು ಕೊಟ್ಟು ತಮ್ಮಿಂದ ಸನ್ಯಾಸ ಪಡೆದ ಎಲ್ಲ ಭಿಕ್ಷುಗಳನ್ನೂ ತಾವೇ ಸ್ವಯಂ ರಕ್ಷಣೆಯನ್ನೂ ಮಾಡುತ್ತಿದ್ದರು ಎಂದು ಇವರ ಚರಮಶ್ಲೋಕವು ತಿಳಿಸುತ್ತದೆ. ಶ್ರೀ ವ್ಯಾಸರಾಜರಿಂದ ಪ್ರತಿಷ್ಠಿತವಾದ ಸುಮಾರು 300ಕ್ಕೂ ಹೆಚ್ಚು ಮುಖ್ಯಪ್ರಾಣದೇವರ ಸನ್ನಿಧಿಯುಳ್ಳ ಪೆನುಗೊಂಡೆಯಲ್ಲಿ ಬಹುಕಾಲ ವಾಸವಾಗಿದ್ದರೆಂದು ಹಾಗೂ ಆಗಿನ ಶ್ರೀಪಾದರಾಜ ಮಠದಲ್ಲಿ ಪೀಠಾಧಿಪತಿಗಳಾಗಿದ್ದ ಶ್ರೀಉದ್ದಂಡರಾಮಚಂದ್ರತೀರ್ಥರ ಆಪ್ತಮಿತ್ರರಾ-ಗಿದ್ದರೆಂದು ಬಲ್ಲ ಮೂಲಗಳು ವರ್ಣಿಸುತ್ತವೆ. ಇವರು ಪೆನುಗೊಂಡೆಯಲ್ಲಿಯೇ 1594ರ ಶ್ರಾವಣ ಶುದ್ಧ ಸಪ್ತಮಿಯಂದು ಶ್ರೀಹರಿಪಾದವನ್ನು ಸೇರಿದರು. ಇವರ ಬೃಂದಾವನ ಪೆನುಗೊಂಡೆಯಲ್ಲಿಯೇ ಇದೆ.

ಶ್ರೀವಿದ್ಯೇಶತೀರ್ಥರು (ಪಲಿಮಾರು ಮಠ) ಶ್ರಾವಣ ಶುಕ್ಲಪಕ್ಷ ಸಪ್ತಮಿ ಇವರು ಪರಂಪರೆಯಲ್ಲಿ ಏಳನೆಯವರು ಇವರು ಪರಂಪರೆಯಿಂದ ಬಂದ ಸಿದ್ಧಾಂತ -ದ ತತ್ವಗಳನ್ನು ಮುಂದಿನ ಪೀಳಿಗೆಗೆ ಮುಟ್ಟಿಸಿದರು. ಭಕ್ತಿಯಿಂದ ರಾಮನನ್ನು ಪೂಜಿಸುತ್ತಾ ಸುಮಾರು ನಾಲ್ಕೂವರೆ ದಶಕಗಳ ಕಾಲ ಪೀಠಾಧಿಪತಿಯಾಗಿದ್ದು,

ದೇಶದ ಎಲ್ಲಾ ಕ್ಷೇತ್ರಗಳನ್ನು ಸಂದರ್ಶಿಸಿದರು. ತಮ್ಮ ಕೊನೆಕಾಲದಲ್ಲಿ ರಾಮೇ-ಶ್ವರದಲ್ಲಿ ಹೋಗಿ ನೆಲೆಸಿದರು. ಅಲ್ಲಿ ಶಾ.ಶಕ 1356 (ಕ್ರಿ .ಶ. 1433) ಪ್ರಮಾಥಿ ಸಂವತ್ಸರದ ಶ್ರಾವಣ ಮಾಸದ ಶುಕ್ಲಪಕ್ಷ ಸಪ್ತಮಿಯಂದು ಹರಿಪದವನ್ನು ಸೇರಿದರು.

**ಶ್ರೀ ಸತ್ಯವರತೀರ್ಥರು** – ಶ್ರೀಸತ್ಯಸಂಧಸಿಂಧೂತ್ಥಃ ಶ್ರೀಸತ್ಯವರಚಂದ್ರಮಾಃ। ಪ್ರಾರ್ಥಿತಾರ್ಥಪ್ರದೋ ನಿತ್ಯಂ ಭೂಯಃ ಸ್ಯಾತ್ ಇಷ್ಟಸಿದ್ಧಯೇ ॥ ಮೊಹಮ್ಮದೀ-ಯರ ಹಾವಳಿಯ ಕಾಲದಲ್ಲಿ ಶ್ರೀಮಠದ ಸಂಪತ್ತನ್ನು ಸಂರಕ್ಷಿಸುವ ಕಾರ್ಯ ಬಹಳ ಅನಿವಾರ್ಯವಾಗಿತ್ತು. ಇಂತಹ ಕಾಲದಲ್ಲೂ ಪಟ್ಟದ ದೇವರಿಗೆ ಕೋಟಿ ಸಲ ಅರ್ಚನೆ, ಲಕ್ಷಾಂತರ ಬ್ರಾಹ್ಮಣರಿಗೆ ಭೋಜನ ಮಾಡಿಸಿದ ಕೀರ್ತಿ ಶ್ರೀ ಸತ್ಯವರತೀರ್ಥ-ರದ್ದು. ಶ್ರೀಮಠದ ಸಂಸ್ಥಾನ ಪ್ರತಿಮೆಗಳ ಪೆಟ್ಟಿಗೆಯು ಕಳ್ಳರಿಂದ ಅಪಹರಿಸಲ್ಪಟ್ಟಾಗ ಸತತ 21 ದಿನ ಉಪವಾಸ ಇದ್ದರು. 22ನೇ ದಿನದಂದು ನವರತ್ನ ಮನೆತನದ ಅಣ್ಣಯ್ಯಾಚಾರ್ಯರಿಗೆ ಸಂಸ್ಥಾನ ಪ್ರತಿಮೆಗಳ ಪೆಟ್ಟಿಗೆ ಸಿಗಲು ಶ್ರೀ ಸತ್ಯವರತೀರ್ಥರು ಅಣ್ಣಯ್ಯಾಚಾರ್ಯರಿಗೆ ಆಶ್ರಮವನ್ನು ಕೊಟ್ಟು ತಮ್ಮ ಉತ್ತರಾಧಿಕಾರಿಯಾಗಿ ಪಟ್ಟಕಟ್ಟಿದರು. ಸಂತೇಬಿದನೂರಿನಲ್ಲಿ ಶ್ರೀಹರಿಯ ಅಡಿದಾವರೆಗಳನ್ನು ಪಡೆದರು. ಇಂದು ತುಳಸೀದಾಸರ ಜಯಂತಿಯೂ ಹೌದು.

## ಶ್ರಾವಣ ॥ ಶುಕ್ಲ ॥ ಅಷ್ಟಮೀ

**ದುರ್ಗಾದೇವೀಪವಿತ್ರಾರೋಪಣೆ**– ಶ್ರಾವಣ ಶುಕ್ಲ ಅಷ್ಟಮೀ ದಿನ ಅಧಿವಾಸ ಮಾಡಿ ನವಮಿಯಂದು ದೇವಿಗೆ ಪವಿತ್ರಾರೋಪಣೆಯನ್ನು ಮಾಡಬೇಕು. ಆ ದಿನ ಆಗದಿದ್ದಲ್ಲಿ ದ್ವಾದಶಿಯಂದು ವಿಷ್ಣುಪವಿತ್ರಾರೋಪಣವನ್ನು ಮಾಡುವಾಗ ಜೊತೆಯಲ್ಲಿಯೇ ಮಾಡಬಹುದು.

## ಶ್ರಾವಣ ॥ ಶುಕ್ಲ ॥ ದಶಮೀ

ಆಶಾದಶಮೀವ್ರತ – ಶ್ರಾವಣ ಶುಕ್ಲ ದಶಮಿಯಂದು, ಅಂಗಳದಲ್ಲಿ ದಿಗ್ದೇವತೆಗಳ ಚಿತ್ರಗಳನ್ನು ಬರೆದು ಗಂಧ ಪುಷ್ಪಫಲಾದಿಗಳಿಂದ ಪೂಜಿಸಬೇಕು. ಹೀಗೆ ಹನ್ನೆರಡು ತಿಂಗಳು ಶುಕ್ಲ ದಶಮಿಯಲ್ಲಿ ಪೂಜಿಸಿ ವರ್ಷಾಂತ್ಯದಲ್ಲಿ ಉದ್ಯಾಪನೆ ಮಾಡಬೇಕು. ಇದರಿಂದ ಎಲ್ಲಾ ಆಶೆಗಳು ಪೂರ್ಣವಾಗುವುವು. ಶ್ರಾವಣಮಾಸ-ಮಾಹಾತ್ಮ್ಯೆಯಲ್ಲಿ 36 ಶ್ಲೋಕಗಳಿಂದ ಈ ವ್ರತದ ವಿಧಾನವನ್ನು ತಿಳಿಸಿದ್ದಾರೆ.

## ಶ್ರಾವಣ ॥ ಶುಕ್ಲ ॥ ಏಕಾದಶೀ ॥

ಯುಧಿಷ್ಠಿರಃ – ಶ್ರಾವಣಸ್ಯ ಸಿತೇ ಪಕ್ಷೇ ಕಿನ್ನಾಮ್ನ್ಯೇಕಾದಶೀ ಭವೇತ್ । ಕಥಯಸ್ವ ಪ್ರಸಾದೇನ ಮಮಾಗ್ರೇ ಮಧುಸೂದನ ॥1॥ ಯುಧಿಷ್ಠಿರನು ಹೇಳಿದನು – ಶ್ರಾವಣಮಾಸ ಶುದ್ಧದಲ್ಲಿ ಬರುವ ಏಕಾದಶಿಯ ಹೆಸರೇನು? ಅದನ್ನು ದಯವಿಟ್ಟು ನನ್ನೆದುರಿಗೆ ಹೇಳು. ಶ್ರೀಕೃಷ್ಣಃ – ಶೃಣುಷ್ವಾವಹಿತೋ ರಾಜನ್ ಕಥಾಂ ಪಾಪಹರಾಂ ಪರಾಮ್ । ಯಸ್ಯಾಃ ಶ್ರವಣಮಾತ್ರೇಣ ವಾಜಪೇಯಫಲಂ ಲಭೇತ್ ॥2॥ ಶ್ರೀಕೃಷ್ಣನು ಹೇಳಿದನು – ಅದನ್ನು ಹೇಳುತ್ತೇನೆ ಕೇಳು. ಅದು ಪಾಪಹಾರವಾದುದು. ಅದನ್ನು ಕೇಳುವುದರಿಂದ ವಾಜಪೇಯಫಲವು ಬರುತ್ತದೆ. ದ್ವಾಪರಸ್ಯ ಯುಗಸ್ಯಾದೌ ಪುರಾ ಮಾಹಿಷ್ಮತೀಪುರೇ । ರಾಜಾ ಮಹೀಜಿದಾಖ್ಯಾತೋ ರಾಜ್ಯಂ ಪಾಲಯತಿ ಸ್ವಕಮ್ ॥3॥ ದ್ವಾಪರಯುಗದ ಆದಿಯಲ್ಲಿ ಪೂರ್ವದಲ್ಲಿ ಮಾಹಿಷ್ಮತಿ ಎಂಬ ಊರಿದ್ದಿತು. ಅದರಲ್ಲಿ ಮಹೀಜಿತ್ತೆಂಬ ರಾಜನು ರಾಜ್ಯವಾಳುತ್ತಿದ್ದನು. ಪುತ್ರಹೀನಸ್ಯ ತಸ್ಯೈವ ನ ತದ್ರಾಜ್ಯಂ ಸುಖಪ್ರದಮ್ । ಅಪುತ್ರಸ್ಯ ಸುಖಂ ನಾಸ್ತಿ ಇಹಲೋಕೇ ಪರತ್ರ ಚ ॥4॥ ಚಿಂತಯಾನಸ್ಯ ತಸ್ಯೈವಂ ಕಾಲೋ ಬಹುತರೋ ಗತಃ ನ ಪ್ರಾಪ್ತಶ್ಚ ಸುತೋ ರಾಜ್ಞಾ ಸರ್ವಸೌಖ್ಯಪ್ರದೋ ನೃಣಾಮ್ ॥5॥ ಮಕ್ಕಳಿಲ್ಲದುದರಿಂದ ಅವನಿಗೆ ರಾಜ್ಯವು ಸುಖಿಸಲಿಲ್ಲ. ಮಕ್ಕಳು ಇಲ್ಲದವನಿಗೆ ಈ ಲೋಕ ಪರಲೋಕಗಳಲ್ಲಿ ಸುಖವಿಲ್ಲ. ಹೀಗೆಂದು ಯೋಚಿಸುತ್ತ ಇರುವಷ್ಟರಲ್ಲಿಯೇ ಅವನಿಗೆ ಕಾಲವು ಬಹುವಾಗಿ ಕಳೆದುಹೋಯಿತು. ಕೊನೆಗೂ ಸರ್ವಸೌಖ್ಯವನ್ನೂ ಕೊಡುವ ಮಗುವ ರಾಜನಿಗೆ ಉಂಟಾಗಲೇ ಇಲ್ಲ. ದೃಷ್ಟ್ವಾತ್ಮಾನಂ ಪ್ರವಯಸಂ ರಾಜಾ ಚಿಂತಾಪರೋಭವತ್ । ತದಾಗತಃ ಪ್ರಜಾಮಧ್ಯೇ ಚೇದಂ ವಚನಮಬ್ರವೀತ್ ॥6॥ ರಾಜನು ತನಗೆ ವಯಸ್ಸಾದುದನ್ನು ತಿಳಿದು ಬಹು ಚಿಂತೆಗೊಳಗಾಗಿ ಸಭೆಯನ್ನು ಸೇರಿಸಿ ಅಲ್ಲಿ ಇಂತೆಂದನು. ರಾಜಾ – ಇಹ ಜನ್ಮನಿ ಭೋ ಲೋಕಾ ನ ಮಯಾ ಪಾತಕಂ ಕೃತಮ್ । ಅನ್ಯಾಯೋಪಾರ್ಜಿತಂ ವಿತ್ತಂ ಕ್ಷಿಪ್ತಂ ಕೋಶೇ ಮಯಾ ನ ಹಿ ॥7॥ ಬ್ರಹ್ಮಸ್ವಂ ದೇವ ದ್ರವಿಣಂ ನ ಗೃಹೀತಂ ಮಯಾ ಕ್ವಚಿತ್ । ಪುತ್ರವತ್ ಪಾಲಿತೋ ಲೋಕೋ ಧರ್ಮೇಣ ವಿಜಿತಾ ಮಹೀ ॥8॥ ದುಷ್ಟೇಷು ಪತಿತೋ ದಂಡೋ ಬಂಧುಪುತ್ರೋಪಮೇಷ್ವತಿ । ಶಿಷ್ಟಾಸ್ತು ಪೂಜಿತಾ ನಿತ್ಯಂ ನ ದ್ವೇಷ್ಯಾಶ್ಚ

ಮಯಾ ಜನಾಃ ॥9॥ ರಾಜನು ಹೇಳಿದನು – ಎಲೈ ಜನರುಗಳಿರಾ! ಈ ಜನ್ಮದಲ್ಲಿ ನಾನು ಪಾಪವನ್ನು ಮಾಡಿಲ್ಲ. ಅನ್ಯಾಯದಿಂದ ಹಣ ಸಂಪಾದಿಸಿ ಕೋಶಕ್ಕೆ ಹಾಕಿಲ್ಲ. ಬ್ರಾಹ್ಮಣರ ಸ್ವತ್ತು, ದೇವರ ಸ್ವತ್ತುಗಳನ್ನು ಅಪಹರಿಸಿಲ್ಲ. ಪ್ರಜೆಗಳನ್ನು ಮಕ್ಕಳಂತೆ ಕಾಪಾಡಿದ್ದೇನೆ. ಧರ್ಮದಿಂದ ಭೂಮಿಯನ್ನು ಜಯಿಸಿದ್ದೇನೆ. ದುಷ್ಟರನ್ನು ಅವರು ಬಂಧುಗಳಾಗಲೀ ಮಕ್ಕಳಿಗೆ ಸಮಾನರಾದವರಾಗಲೀ ನೋಡದೇ ಶಿಕ್ಷಿಸಿದ್ದೇನೆ. ಯೋಗ್ಯರನ್ನು ಗೌರವಿಸುತ್ತಿದ್ದೇನೆ. ಯಾರನ್ನೂ ದ್ವೇಷಿಸುತ್ತಿಲ್ಲ. ಇತ್ಯೇವಂ ಬ್ರುವತೋ ಮಾರ್ಗಂ ಧರ್ಮಯುಕ್ತಂ ದ್ವಿಜೋತ್ತಮಾಃ । ಕಸ್ಮಾನ್ಮಮ ಗೃಹೇ ಪುತ್ರೋ ನ ಜಾತಸ್ತದ್ವಿಮೃಶ್ಯತಾಮ್ ॥10॥ ಈ ರೀತಿಯಲ್ಲಿದ್ದರೂ ನನಗೇಕೆ ಮಕ್ಕಳಾಗುತ್ತಿಲ್ಲ? ಎಲೈ ಬ್ರಾಹ್ಮಣರಿರಾ! ನನಗೆ ಅದಕ್ಕೆ ಒಂದು ಮಾರ್ಗವನ್ನು ವಿಮರ್ಶಿಸಿ ಹೇಳಿರಿ. ಶ್ರೀಕೃಷ್ಣಃ – ಇತಿ ವಾಕ್ಯಂ ದ್ವಿಜಾಃ ಶ್ರುತ್ವಾ ಸಪ್ರಜಾಃ ಸಪುರೋಹಿತಾಃ । ಮಂತ್ರಯಿತ್ವಾ ನೃಪಹಿತಂ ಜಗ್ಮುಸ್ತೇ ಗಹನಂ ವನಮ್ ॥11॥ ಶ್ರೀಕೃಷ್ಣನು ಹೇಳಿದನು – ಆಗ ಬ್ರಾಹ್ಮಣರು ಅವನು ಹೇಳಿದುದನ್ನು ಕೇಳಿ ಪ್ರಜೆಗಳೂ, ಪುರೋಹಿತರೂ ಸೇರಿ ರಾಜನಿಗೆ ಅನುಕೂಲವಾಗುವಿಕೆಯನ್ನು ಯೋಚಿಸಿ ಎಲ್ಲರೂ ಕಾಡಿಗೆ ಹೋದರು. ಇತಸ್ತತಶ್ಚ ಪಶ್ಯಂತಃ ಆಶ್ರಮಾನ್ ಋಷಿಸೇವಿತಾನ್ । ನೃಪತೇರ್ಹಿತಮಿಚ್ಛಂತೋ ದದೃಶುರ್ಮುನಿಸತ್ತಮಮ್ ॥12॥ ಇತ್ತಿತ್ತ ಹುಡುಕುತ್ತ ಋಷಿಗಳ ಆಶ್ರಮಗಳನ್ನು ಹುಡುಕಿ ಕೊನೆಗೆ ಒಂದು ಋಷಿಯ ಆಶ್ರಮವನ್ನು ನೋಡಿದರು. ತಪ್ಯಮಾನಂ ತಪೋ ಘೋರಂ ನಿರಾಲಂಬಂ ನಿರಾಮಯಮ್ । ನಿರಾಹಾರಂ ಜಿತಾತ್ಮಾನಂ ಜಿತಕ್ರೋಧಂ ಸನಾತನಮ್ ॥13॥ ಲೋಮಶಂ ಧರ್ಮತತ್ವಜ್ಞಂ ಸರ್ವಶಾಸ್ತ್ರವಿಶಾರದಮ್ । ದೀರ್ಘಾಯುಷಂ ಮಹಾತ್ಮಾನಂ ಸಕೇಶಂ ಬ್ರಹ್ಮಸಮ್ಮಿತಮ್ ॥14॥ ಅಲ್ಲಿ ಒಬ್ಬ ಋಷಿಯು ತಪಸ್ಸು ಮಾಡುತ್ತಿದ್ದುದನ್ನು ಕಂಡರು. ಅವನು ಘೋರವಾಗಿ ತಪಸ್ಸು ಮಾಡುತ್ತಿದ್ದನು. ಅವನ ದೇಹದಲ್ಲಿ ನಿಲ್ಲುವುದಕ್ಕೆ ಆಗಲಿ ಕೂರುವುದಕ್ಕೆ ಆಗಲಿ ಆಧಾರವನ್ನೇ ಹೊಂದಿರಲಿಲ್ಲ. ರೋಗವಿಲ್ಲದವನು. ಆಹಾರವನ್ನು ತೆಗೆದುಕೊಳ್ಳುತ್ತಿರಲಿಲ್ಲ. ಇಂದ್ರಿಯಗಳನ್ನು ಜಯಿಸಿದ್ದನು. ಕೋಪವನ್ನು ಬಿಟ್ಟಿದ್ದನು. ಬಹು ಹಳಬನು. ಧರ್ಮವನ್ನು ಬಲ್ಲವನು. ಶಾಸ್ತ್ರಗಳನ್ನೆಲ್ಲಾ ಬಲ್ಲವನು. ದೀರ್ಘಾಯುಸ್ಸುಳ್ಳವನು. ಮಹಾಮಹಿಮನು. ಕೇಶಗಳನ್ನು ಬಹುವಾಗಿ ಬೆಳೆಸಿದ್ದನು. ಬ್ರಹ್ಮನಂತಿದ್ದನು.

ದೇಹದಲ್ಲೆಲ್ಲಾ ಕೂದಲುಗಳೇ ಹೆಚ್ಚಾಗಿದ್ದವು. ಕಲ್ಪೇ ಕಲ್ಪೇ ಗತೇ ತಸ್ಯ ಏಕಂ ಲೋಮ ವಿಶೀರ್ಯತೇ । ಅತೋ ಲೋಮಶನಾಮಾನಂ ತ್ರಿಕಾಲಜ್ಞಂ ಮಹಾಮುನಿಮ್ । ತಂ ದೃಷ್ಟ್ವಾ ಹರ್ಷಿತಾಃ ಸರ್ವ ಊಚುಸ್ತೇ ಚ ಪರಸ್ಪರಮ್ ॥15॥ ಒಂದೊಂದು ಕಲ್ಪವು ಕಳೆದಾಗಲೂ ಅವನ ಒಂದೊಂದು ರೋಮವು ನಾಶವಾಗುತ್ತದೆ. ಆದುದರಿಂದಲೇ ಅವನಿಗೆ ಲೋಮಶನೆಂಬ ಹೆಸರು ಬಂದಿದ್ದಿತು. ಅವನು ತ್ರಿಕಾಲಜ್ಞಾನಿಯು. ಆ ಮಹಾಮುನಿಯನ್ನು ನೋಡಿ ಎಲ್ಲರೂ ಸಂತೋಷಗೊಂಡು ಒಬ್ಬರಿಗೊಬ್ಬರು ಹೀಗೆ ಮಾತನಾಡಿಕೊಂಡರು. ಜನಾಃ – ಅಸ್ಮದ್ಭಾಗ್ಯವಶಾದೇವ ಪ್ರಾಪ್ತೋಽಯಂ ಮುನಿಸತ್ತಮಃ ॥16॥ ಜನಗಳು ಹೇಳಿದರು – ನಮ್ಮ ಭಾಗ್ಯದ ವಶದಿಂದಲೇ ಈ ಋಷಿಯು ನಮಗೆ ಸಿಕ್ಕಿದ್ದಾನೆ. ಶ್ರೀಕೃಷ್ಣಃ – ತಾಂಸ್ತಥಾ ಸ ಪ್ರಜಾನ್ ವೀಕ್ಷ್ಯ ಉವಾಚ ಋಷಿಸತ್ತಮಃ ॥17॥ ಶ್ರೀಕೃಷ್ಣನು ಹೇಳಿದನು – ಆಗ ಋಷಿಯು ಆ ಪ್ರಜೆಗಳನ್ನು ನೋಡಿ ಇಂತೆಂದನು. ಲೋಮಶಃ – ಕಿಮರ್ಥಮಿಹ ಸಂಪ್ರಾಪ್ತಾಃ ಕಥಯಧ್ವಂ ಸ್ವಕಾರಣಮ್ । ದರ್ಶನಾದ್ಧೃಷ್ಟಮನಸಃ ಸ್ತುವಂತಶ್ಚೈವ ಮಾಂ ಕಿಮು ॥18॥ ಅಸಂಶಯಂ ಕರಿಷ್ಯಾಮಿ ಭವತಾಂ ಯದ್ಧಿತಂ ಭವೇತ್ । ಪರೋಪಕೃತಯೇ ಜನ್ಮ ಮಾದೃಶಾನಾಂ ನ ಸಂಶಯಃ ॥19॥ ಲೋಮಶನು ಹೇಳಿದನು – ಎಲೈ ಜನಗಳಿರಾ! ಇಲ್ಲಿಗೇಕೆ ಬಂದಿರಿ? ಕಾರಣವನ್ನು ಹೇಳಿರಿ. ನನ್ನನ್ನು ನೋಡಿದ ಕೂಡಲೇ ಸಂತೋಷಗೊಂಡಿರುವಿರಿ. ನಿಮಗೆ ಬೇಕಾದುದನ್ನು ಸಂಶಯವಿಲ್ಲದೇ ಮಾಡಿಕೊಡುತ್ತೇನೆ. ನಮ್ಮಂಥವರ ಜನ್ಮವು ಪರೋಪಕಾರ-ಕ್ಕಾಗಿಯೇ ಇರುವುದು. ಸಂಶಯವಿಲ್ಲ. ಜನಾಃ – ಶ್ರೂಯತಾಂ ಅಭಿದಾಸ್ಯಾಮೋ ವಯಮಾಗಮಕಾರಣಮ್ । ಸಂಶಯಚ್ಛೇದನಾರ್ಥಾಯ ತವ ಸಾನ್ನಿಧ್ಯಮಾಗತಾಃ ॥20॥ ಜನರು ಹೇಳಿದರು – ನಾವು ಬಂದಿರುವ ಕಾರಣವನ್ನು ಹೇಳುತ್ತೇವೆ. ನಮಗೆ ಒಂದು ಸಂಶಯವು ಬರಲು ತಮ್ಮ ಬಳಿಗೆ ಬಂದಿದ್ದೇವೆ. ಪದ್ಮಯೋನೇಃ ಪರತರಾತ್ತ್ವತ್ತಃ ಶ್ರೇಷ್ಠೋ ನ ವಿದ್ಯತೇ । ಅತಃ ಕಾರ್ಯವಶಾತ್ ಪ್ರಾಪ್ತಾಃ ಸಮೀಪಂ ಭವತೋ ವಯಮ್ ॥21॥ ಉತ್ತಮನಾದ ಬ್ರಹ್ಮನೊಬ್ಬನನ್ನು ಬಿಟ್ಟರೆ ನಿನಗಿಂತಲೂ ಶ್ರೇಷ್ಠರಾದವರು ಮತ್ತೊಬ್ಬರಿಲ್ಲವು. ಆದುದರಿಂದ ಒಂದು ಕೆಲಸಕ್ಕೋಸ್ಕರ ನಿನ್ನ ಸಮೀಪಕ್ಕೆ ಬಂದಿದ್ದೇವೆ. ಮಹೀಜಿನ್ನಾಮ ರಾಜಾಸೌ ಪುತ್ರಹೀನೋಽಸ್ತಿ ಸಾಂಪ್ರತಮ್ । ವಯಂ ತಸ್ಯ ಪ್ರಜಾ ಬ್ರಹ್ಮನ್ ಪುತ್ರವತ್ ಪಾಲಿತಾಸ್ತಥಾ ॥22॥ ಈಗ

ಮಹೀಜಿತ್ತೆಂಬ ಒಬ್ಬ ರಾಜನಿರುವನು. ಅವನಿಗೆ ಮಕ್ಕಳಿಲ್ಲವು. ನಾವು ಅವನ ಪ್ರಜೆಗಳು. ನಮ್ಮನ್ನು ಅವನು ಮಕ್ಕಳಂತೆ ಕಾಪಾಡುತ್ತಿದ್ದಾನೆ. ತಂ ಪುತ್ರರಹಿತಂ ದೃಷ್ಟ್ವಾ ತಸ್ಯ ದುಃಖೇನ ದುಃಖಿತಾಃ । ತಪಃ ಕರ್ತುಮಿಹಾಯಾತಾ ಮತಿಂ ಕೃತ್ವಾತು ನೈಷ್ಠಿಕೀಮ್ ॥23॥ ಅವನಿಗೆ ಮಕ್ಕಳಿಲ್ಲದಿರುವುದರಿಂದ ಬಹು ದುಃಖಗೊಂಡಿರುವನು. ಅವನ ದುಃಖದಿಂದ ನಮಗೂ ದುಃಖವುಂಟಾಗಿದೆ. ತಸ್ಯ ಭಾಗ್ಯೇನ ದೃಷ್ಟೋಽಸಿ ಹ್ಯಸ್ಮಾಭಿಸ್ತ್ವಂ ದ್ವಿಜೋತ್ತಮ । ಮಹತಾಂ ದರ್ಶನೇನೈವ ಕಾರ್ಯಸಿದ್ಧಿರ್ಭವೇನ್ನೃಣಾಮ್ । ಉಪದೇಶಂ ವದ ಮುನೇ ರಾಜ್ಞಃ ಪುತ್ರೋ ಯಥಾ ಭವೇತ್ ॥24॥ ಅವನ ಅದೃಷ್ಟವಿಶೇಷದಿಂದ ನಿನ್ನನ್ನು ನಾವು ನೋಡಿದೆವು. ಮಹಾತ್ಮರ ದರ್ಶನದಿಂದಲೇ ಕೆಲಸವು ಸಿದ್ಧಿಸುತ್ತದೆ. ಆದುದರಿಂದ ಆ ರಾಜನಿಗೆ ಮಕ್ಕಳಾಗುವಂತೆ ಯಾವುದಾದರೂ ಒಂದು ವಿಷಯವನ್ನು ಉಪದೇಶಿಸು. ಶ್ರೀಕೃಷ್ಣಃ– ಇತಿ ತೇಷಾಂ ವಚಃ ಶ್ರುತ್ವಾ ಮುಹೂರ್ತಂ ಧ್ಯಾನಮಾಸ್ಥಿತಃ । ಪ್ರತ್ಯುವಾಚ ಮುನಿರ್ಜ್ಞಾತ್ವಾ ತಸ್ಯ ಜನ್ಮ ಪುರಾತನಮ್ ॥25॥ ಶ್ರೀಕೃಷ್ಣನು ಹೇಳಿದನು – ಹೀಗೆ ಅವರು ಹೇಳಿದ ಮಾತನ್ನು ಕೇಳಿ ಮುನಿಯು ಒಂದು ಘಳಿಗೆಯ ಕಾಲ ಧ್ಯಾನಸ್ಥನಾದನು. ಆಮೇಲೆ ಆ ರಾಜನ ಹಿಂದಿನ ಜನ್ಮವನ್ನು ತಿಳಿದು ಅವರನ್ನು ಕುರಿತು ಇಂತೆಂದನು. ಲೋಮಶಃ – ಪುರಾ ಜನ್ಮನಿ ವೈಶ್ಯೋಽಯಂ ಧನಹೀನೋ ನೃಶೋಷಕೃತ್ । ವಾಣಿಜ್ಯಕರ್ಮನಿರತೋ ಗ್ರಾಮಾದ್ ಗ್ರಾಮಾಂತರಂ ಗತಃ ॥26॥ ಲೋಮಶನು ಹೇಳಿದನು – ಈ ರಾಜನು ಹಿಂದಿನ ಜನ್ಮದಲ್ಲಿ ವೈಶ್ಯನಾಗಿದ್ದನು. ಬಡವನಾದುದರಿಂದ ವ್ಯಾಪಾರಮಾಡುತ್ತಾ ಜನರಲ್ಲಿ ಹಣವನ್ನು ಎಳೆಯುತ್ತಿದ್ದನು. ಈ ರೀತಿಯಾಗಿ ವ್ಯಾಪಾರಮಾಡುತ್ತ ಊರಿಂದೂರಿಗೆ ಹೋಗುತ್ತಿದ್ದನು. ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ದಶಮೀದಿವಸೇ ತಥಾ । ಮಧ್ಯಗೇ ದ್ಯುಮಣೌ ಪ್ರಾಪ್ತೌ ಗ್ರಾಮಸೀಮ್ನಿ ಜಲಾಶಯಮ್ ॥27॥ ಹೀಗೆ ಸುತ್ತುತ್ತಿರುವವರಲ್ಲಿ ಜ್ಯೇಷ್ಠಮಾಸದ ಶುಕ್ಲಪಕ್ಷದ ದಶಮಿಯ ದಿವಸ ಮಧ್ಯಾಹ್ನದ ಸಮಯದಲ್ಲಿ ಒಂದೂರಿನ ಬಳಿಯಿರುವ ಒಂದು ನೀರಿರುವ ಬಾವಿಯ ಬಳಿಗೆ ಹೋದನು. ಕೂಪಿಕಾಂ ಸಜಲಾಂ ದೃಷ್ಟ್ವಾ ಜಲಪಾನೇ ಮನೋ ದಧೇ । ಸದ್ಯಸ್ತತಃ ಸವತ್ಸಾ ಧೇನುಸ್ತತ್ರ ಸಮಾಗತಾ ॥28॥ ಆ ಬಾವಿಯಲ್ಲಿ ನೀರಿದ್ದುದನ್ನು ನೋಡಿ ನೀರು ಕುಡಿಯ -ಬೇಕೆಂದು ಮನಸ್ಸು ಬಂದಿತು. ಆಗ ಅಲ್ಲಿಗೆ ಒಂದು ಹಸುವೂ ಕರುವೂ ಬಂದವು.

ತೃಷಾತುರಾ ನಿದಾಘಾರ್ತಾ ಸಾ ತು ತಸ್ಯಾಮಪಃ ಪಪೌ । ಪಿಬಂತೀಂ ವಾರಯಿತ್ವಾ ತಾಮಸೌ ತೋಯಂ ಪಪೌ ಸ್ವಯಮ್ ॥29॥ ಆ ಹಸುವು ಬಿಸಿಲಿನ ಬೇಗೆಯನ್ನು ತಡೆಯಲಾರದೆ ಬಾಯಾರಿಕೆಯಿಂದ ಆ ಕೊಳದಲ್ಲಿ ನೀರನ್ನು ಕುಡಿಯುತ್ತಿದ್ದಿತು. ನೀರು ಕುಡಿಯುತ್ತಿದ್ದ ಆ ಹಸುವನ್ನು ಓಡಿಸಿ ತಾನು ಅಲ್ಲಿ ನೀರನ್ನು ಕುಡಿದನು. ಕರ್ಮಣಾ ತೇನ ಪಾಪೇನ ಪುತ್ರಹೀನೋ ನೃಪೋಭವತ್ । ಕಸ್ಯಾಪಿ ಜನ್ಮನಃ ಪುಣ್ಯಾತ್ ಪ್ರಾಪ್ತಂ ರಾಜ್ಯಮಕಂಟಕಮ್ ॥30॥ ಆ ಕೆಲಸದ ಪಾಪದಿಂದಲೇ ಅವನು ಮಕ್ಕಳಿಲ್ಲದವನಾದನು. ಹಿಂದಿನ ಯಾವುದೋ ಒಂದು ಜನ್ಮದ ಪುಣ್ಯದ ವಶದಿಂದ ಶತ್ರುರಹಿತವಾದ ಈ ರಾಜ್ಯವನ್ನು ಹೊಂದಿರುವನು. ಲೋಕಾಃ – ಪುಣ್ಯಾತ್ ಪಾಪಂ ಕ್ಷಯಂ ಯಾತಿ ಪುರಾಣೇ ಶ್ರೂಯತೇ ಮುನೇ । ಪುಣ್ಯೋ-ಪದೇಶಂ ಕಥಯ ಯೇನ ಪಾಪಕ್ಷಯೋ ಭವೇತ್ । ತಥಾ ಭವತ್ಪ್ರಸಾದೇನ ಪುತ್ರೋ ಭವತಿ ಭೂಪತೇಃ ॥31॥ ಜನರು ಹೇಳಿದರು – ಪುಣ್ಯವನ್ನು ಮಾಡಿದರೆ ಆ ಪುಣ್ಯವು ಪಾಪವನ್ನು ನಾಶ ಮಾಡುತ್ತದೆ ಎಂದು ಪುರಾಣಗಳಲ್ಲಿ ಹೇಳಿದ್ದೇವೆ. ಆದುದರಿಂದ ಪಾಪಕ್ಷಯವಾಗತಕ್ಕ ಒಂದು ಪುಣ್ಯದ ಕೆಲಸವನ್ನು ಹೇಳು. ನಿನ್ನ ಅನುಗ್ರಹದಿಂದ ಅದನ್ನು ಮಾಡಿದರೆ ಆ ರಾಜನಿಗೆ ಮಕ್ಕಳಾಗಲಿ. ಲೋಮಶಃ – ಶ್ರಾವಣೇ ಶುಕ್ಲಪಕ್ಷೇ ತು ಪುತ್ರದಾ ನಾಮ ವಿಶ್ರುತಾಃ । ಏಕಾದಶೀ ವಾಂಛಿತದಾ ಕುರುಧ್ವಂ ತದ್ವ್ರತಂ ಜನಾಃ ॥32॥ ಲೋಮಶನು ಹೇಳಿದನು – ಎಲೈ ಜನಗಳಿರಾ! ಶ್ರಾವಣಶುಕ್ಲ ಏಕಾದಶಿಯು ಪುತ್ರದಾ ಎಂದು ಪ್ರಸಿದ್ಧವಾಗಿದೆ. ಆ ಏಕಾದಶೀ ವ್ರತವನ್ನು ಮಾಡಿ ಇಷ್ಟಾರ್ಥವನ್ನು ಪಡೆಯಿರಿ. ಶ್ರೀಕೃಷ್ಣಃ – ಇತಿ ಶ್ರುತ್ವಾ ನಮಸ್ಕೃತ್ಯ ಮುನಿಮೇತ್ಯ ಪುರಂ ವ್ರತಮ್ । ಯಥಾವಿಧಿ ಯಥಾನ್ಯಾಯ್ಯಂ ಕೃತಂ ತೈರ್ಜಾ-ಗರಾನ್ವಿತಮ್ ॥33॥ ಶ್ರೀಕೃಷ್ಣನು ಹೇಳಿದನು – ಇದನ್ನು ಕೇಳಿ ಆ ಋಷಿಗೆ ನಮಸ್ಕರಿಸಿ ಪಟ್ಟಣಕ್ಕೆ ಹೋಗಿ ಆ ವ್ರತವನ್ನು ವಿಧಿವತ್ತಾಗಿಯೂ ನ್ಯಾಯವಾಗಿಯೂ ಮಾಡಿ ಜಾಗರಣೆಯನ್ನು ಮಾಡಿದರು. ತಸ್ಯ ಪುಣ್ಯಂ ಸುವಿಮಲಂ ದತ್ತಂ ನೃಪತಯೇ ಜನೈಃ । ದತ್ತೇ ಪುಣ್ಯೇಽಥ ಸಾ ರಾಜ್ಞೀ ಗರ್ಭಮಾಧತ್ತ ಶೋಭನಮ್ ॥34॥ ಜನಗಳು ತಾವು ಆ ವ್ರತವನ್ನು ಮಾಡಿ ಆ ಪುಣ್ಯವನ್ನು ರಾಜನಿಗೆ ಕೊಟ್ಟರು. ಅವರು ಪುಣ್ಯವನ್ನು ಕೊಡುತ್ತಿರಲು ಆ ರಾಣಿಯು ಗರ್ಭವತಿಯಾದಳು. ಪ್ರಾಪ್ತೇ ಪ್ರಸವಕಾಲೇ ಸಾ ಸುಷುವೇ ಪುತ್ರಮೂರ್ಜಿತಮ್ । ಶ್ರಾವಣಸ್ಯ ಸಿತೇ ಪಕ್ಷೇ

ಕರ್ಕಟಸ್ಥೇ ದಿವಾಕರೇ ॥35॥ ದ್ವಾದಶ್ಯಾಂ ವಾಸುದೇವಾಯ ಪವಿತ್ರಾರೋಪಣಂ ಸ್ಮೃತಮ್ । ಹೇಮರೂಪ್ಯತಾಮ್ರಕ್ಷೌಮೈಃ ಸೂತ್ರೈಃ ಕೌಶೇಯಪದ್ಮಜೈಃ ॥36॥ ಕುಶೈಃ ಕಾಶೈಶ್ಚ ಕಾರ್ಪಾಸೈರ್ಬ್ರಹ್ಮಣಾ ಕೀರ್ತಿತೈಃ ಶುಭೈಃ । ಸ್ನಾತ್ವಾ ತ್ರಿಗುಣಿತಂ ಸೂತ್ರಂ ತ್ರಿಗುಣೀಕೃತ್ಯ ಶೋಧಯೇತ್ ॥37॥ ಆಕೆಯು ದಿವಸಗಳು ತುಂಬಿದ ನಂತರ ಉತ್ತಮನಾದ ಮಗನನ್ನು ಹೆತ್ತಳು. ಕರ್ಕಾಟಕದಲ್ಲಿ ಸೂರ್ಯನಿರುವಾಗ ಶ್ರಾವಣಮಾಸದ ಶುದ್ಧದ್ವಾದಶಿಯ ದಿನ ವಾಸುದೇವನಿಗೆ ಪವಿತ್ರಾರೋಪಣವೆಂಬ ಕರ್ಮವನ್ನು ಮಾಡಬೇಕು. ಚಿನ್ನ, ಬೆಳ್ಳಿ, ತಾಮ್ರ, ರೇಷ್ಮೆ, ಮರದ ತೊಗಟೆ, ಕಮಲದ ದಂಟು, ಕುಶವೆಂಬ ದರ್ಭೆ, ಕಾಶವೆಂಬ ನೀರು ಹುಲ್ಲು, ಹತ್ತಿ, ಬ್ರಹ್ಮನು ಹೇಳಿರುವ ಇನ್ನ್ಯಾವುದಾದರೂ ಇದ್ದರೆ ಅವುಗಳ ತಂತಿ ಅಥವಾ ನೂಲುಗಳನ್ನು ಮಾಡಿ ಸ್ನಾನ ಮಾಡಿಕೊಂಡು ಮೊದಲು ಮೂರಾಗಿ ಸೇರಿಸಿ, ಅನಂತರ ಆ ಮೂರನ್ನೂ ಸೇರಿಸಿರುವುದನ್ನು ಮತ್ತೆ ಮೂರಾಗಿ ಸೇರಿಸಬೇಕು. ಗೋದೋಹಾಂತರಿತೇ ಕಾಲೇ ಪೂರ್ವೇದ್ಯುರಧಿವಾಸನಮ್ । ಬ್ರಾಹ್ಮಣಾಂಶ್ಚ ನಮಸ್ಕೃತ್ಯ ಗುರುಪಾದೌ ಪ್ರಣಮ್ಯ ಚ ॥38॥ ಗೀತಮಂಗಳನಿರ್ಘೋಷೈಃ ಕುರ್ಯಾಜ್ಜಾಗರಣಂ ತತಃ । ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಭಕ್ತಾಃ ಶೂದ್ರಾಸ್ತಥೈವ ಚ ॥39॥ ಸ್ವಧರ್ಮಾವಸ್ಥಿತಾಃ ಸರ್ವೇ ಭಕ್ತ್ಯಾ ಕುರ್ಯುಃ ಪವಿತ್ರಕಮ್ । ತತಃ ಪವಿತ್ರಂ ಗುರವೇ ದದ್ಯಾದ್ವೈ ವಿಧಿಪೂರ್ವಕಮ್ ॥40॥ ಏಕಾದಶಿಯ ದಿವಸದಲ್ಲಿ ಹಸುವನ್ನು ಕರೆಯುವ ಹೊತ್ತಿನಲ್ಲಿ ಅಧಿವಾಸನವೆಂಬ ಕರ್ಮವನ್ನು ಮಾಡಿಸಬೇಕು. ಆಗ ಬ್ರಾಹ್ಮಣರನ್ನು ನಮಸ್ಕರಿಸಿ ಗುರುವಿಗೆ ಪೂಜೆ ಮಾಡಿ ಮಂಗಳವಾದ್ಯಗಳಿಂದಲೂ ಗಾನಗಳಿಂದಲೂ ಕೂಡಿಕೊಂಡು ಜಾಗರಣವನ್ನು ಮಾಡಬೇಕು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ಭಕ್ತಿಯಿಂದಲೂ ತಮ್ಮ ತಮ್ಮ ಧರ್ಮಗಳಿಂದಲೂ ಕೂಡಿದ್ದು ಭಕ್ತಿಯಿಂದ ಮೇಲೆ ಹೇಳಿದ ಪದಾರ್ಥ -ಗಳಿಂದ ಪವಿತ್ರವನ್ನು ಮಾಡಬೇಕು. ಆ ಪವಿತ್ರವನ್ನು ಶಾಸ್ತ್ರದ ರೀತಿಯಿಂದ ಗುರುವಿಗೆ ಕೊಡಬೇಕು. ಬ್ರಾಹ್ಮಣಾನ್ ವೈಷ್ಣವಾಂಶ್ಚೈವ ಗಂಧಪುಷ್ಪಾದಿನಾರ್ಚ-ಯೇತ್ । ಅತೋ ದೇವೇತಿ ಮಂತ್ರೇಣ ದ್ವಿಜೋ ವಿಷ್ಣುಂ ನಿವೇದಯೇತ್ ॥41॥ ಆಗ ವಿಷ್ಣುಭಕ್ತರಾದ ಬ್ರಾಹ್ಮಣರನ್ನು ಹೂವು, ಗಂಧಗಳಿಂದ ಪೂಜಿಸಬೇಕು. 'ಅತೋ ದೇವಾ' ಎಂಬ ಮಂತ್ರದಿಂದ ಬ್ರಾಹ್ಮಣನು ವಿಷ್ಣುವಿಗೆ ಪವಿತ್ರಾ-

ರೋಪಣವನ್ನು ಮಾಡಬೇಕು. ಶೂದ್ರಸ್ತು ಮೂಲಮಂತ್ರೇಣ ಯಥಾ ವಿಷ್ಣೋಸ್ತಥಾ ಶಿವೇ । ವರ್ಷೇ ವರ್ಷೇ ಪ್ರಕರ್ತವ್ಯಂ ಪವಿತ್ರಾರೋಪಣಂ ಹರೇಃ ॥42॥ ಶೂದ್ರನು ಮೂಲಮಂತ್ರದಿಂದ ಪವಿತ್ರಾರೋಪಣವನ್ನು ಮಾಡಬೇಕು. ವಿಷ್ಣುವಿಗೆ ಹೇಳಿದ ವಿಷಯವೇ ಶಿವನಿಗೂ ಅನ್ವಯಿಸುತ್ತದೆ. ಈ ಪವಿತ್ರಾರೋಪಣವನ್ನು ವರ್ಷ-ವರ್ಷವೂ ಮಾಡಬೇಕು. ಭುಕ್ತಿಂ ಮುಕ್ತಿಂ ಚ ಇಚ್ಛದ್ಭಿಃ ಸಂಸಾರೇ ಶೋಕಸಾಗರೇ । ನ ಕರೋತಿ ವಿಧಾನೇನ ಪವಿತ್ರಾರೋಪಣಂ ತು ಯಃ ॥43॥ ಹೀಗೆ ಪವಿತ್ರಾ-ರೋಪಣವನ್ನು ಮಾಡಿದರೆ ಈ ಸಂಸಾರದಲ್ಲಿ ಭುಕ್ತಿಯೂ ಮುಕ್ತಿಯೂ ಸಿಕ್ಕುತ್ತವೆ. ಯಾರು ವಿಧಿವತ್ತಾಗಿ ಈ ಪವಿತ್ರಾರೋಪಣವನ್ನು ಮಾಡುವುದಿಲ್ಲವೋ ಅವರು ವರ್ಷದವರೆಗೂ ಮಾಡಿದ ಪೂಜೆಯು ವ್ಯರ್ಥವಾಗುತ್ತದೆ. ತಸ್ಯ ಸಾಂವತ್ಸರೀ ಪೂಜಾ ನಿಷ್ಫಲಾ ವೈಷ್ಣವಸ್ಯ ತು । ಶ್ರುತ್ವಾ ಮಾಹಾತ್ಮ್ಯಮೇತಸ್ಯಾ ನರಃ ಪಾಪಾ-ತ್ಪ್ರಮುಚ್ಯತೇ ॥44॥ ಇಹ ಲೋಕೇ ಸುಖಂ ಪ್ರಾಪ್ಯ ಪರತ್ರ ಸ್ವರ್ಗತಿಂ ಲಭೇತ್ ॥45॥ ಈ ಏಕಾದಶಿಯ ಮಹಿಮೆಯನ್ನು ಕೇಳಿದವನು ಪಾಪದಿಂದ ಪಾರಾಗುತ್ತಾನೆ. ಮತ್ತು ಇಹಲೋಕದಲ್ಲಿ ಸುಖವನ್ನು ಹೊಂದಿ ಪರದಲ್ಲಿ ಸ್ವರ್ಗವನ್ನೂ ಹೊಂದು-ತ್ತಾನೆ. ಇತಿ ಶ್ರೀಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿನಾರದಸಂವಾ-ದಾಂತರ್ಗತ ಕೃಷ್ಣಯುಧಿಷ್ಠಿರಸಂವಾದೇ ಶ್ರಾವಣಶುಕ್ಲಪುತ್ರದೈಕಾದಶೀಮಾಹಾತ್ಮ್ಯಂ ನಾಮ ಸಪ್ತಪಂಚಾಶತ್ತಮೋಽಧ್ಯಾಯಃ ಸಮಾಪ್ತಃ ॥ ಇಂತು ಪದ್ಮಮಹಾಪುರಾಣದ ಉತ್ತರ-ಖಂಡದ ಉಮಾಪತಿನಾರದಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರ ಸಂವಾದ-ದಲ್ಲಿ ಶ್ರಾವಣಶುಕ್ಲಪುತ್ರದೈಕಾದಶಿಯ ಮಹಿಮೆ ಎಂಬ ಐವತ್ತೇಳನೆಯ ಅಧ್ಯಾಯವು ಮುಗಿಯಿತು.

ಹಿಂಡೋಲೋತ್ಸವ- ಶ್ರಾವಣದ ಶುಕ್ಲಪಕ್ಷದ ಏಕಾದಶಿಯಿಂದ ಪೂರ್ಣಿಮಿಯ ವರೆಗೂ ಉತ್ತರ-ಭಾರದಲ್ಲಿ ಈ ಹಬ್ಬವನ್ನು ಆಚರಿಸಲಾಗುತ್ತದೆ. ಬೆಳ್ಳಿಯ ಉಯ್ಯಾಲೆಗಳಲ್ಲಿ ರಾಧಾಕೃಷ್ಣರ ಪ್ರತಿಮೆಗಳನ್ನಿಟ್ಟು ಪೂಜಿಸಿ ಹಾಡಿ ತೂಗಲಾಗುತ್ತದೆ.

## ಶ್ರಾವಣ ॥ ಶುಕ್ಲ ॥ ದ್ವಾದಶೀ ಬುದ್ಧದ್ವಾದಶೀ

ದುರ್ವಾಸಮುನಿ – ಶ್ರಾವಣಮಾಸದಲ್ಲಿ ಶುಕ್ಲಪಕ್ಷದ ಏಕಾದಶಿಯಲ್ಲಿ ಈ ವ್ರತವನ್ನು ಮಾಡಬೇಕು. ಹಿಂದಿನ ನಿಯಮದಂತೆ ಜನಾರ್ದನನನ್ನು ಗಂಧಪುಷ್ಪಾದಿ-

ಗಳಿಂದ ಅರ್ಚಿಸಬೇಕು. ದಾಮೋದರಾಯ ನಮಃ ಎಂದು ದೇವನ ಪಾದಗಳನ್ನೂ, ಹೃಷೀಕೇಶಾಯ ನಮಃ ಎಂದು ನಡುವನ್ನೂ, ಸನಾತನಾಯ ನಮಃ ಎಂದು ಉದರವನ್ನೂ, ಶ್ರೀವತ್ಸಧಾರಿಣೇ ನಮಃ ಎಂದು ಹೃದಯವನ್ನೂ, ಚಕ್ರಪಾಣಯೇ ನಮಃ ಎಂದು ತೋಳುಗಳನ್ನೂ, ಹರಯೇ ನಮಃ ಎಂದು ಕೊರಳನ್ನೂ, ಮುಂಜಿಕೇಶಾಯ ನಮಃ ಎಂದು ಶಿರಸ್ಸನ್ನೂ, ಭದ್ರಾಯ ನಮಃ ಎಂದು ಜುಟ್ಟನ್ನೂ ಅರ್ಚಿಸಬೇಕು. ಹೀಗೆ ಪೂಜಿಸಿ ಸ್ವಾಮಿಯೆದುರಿಗೆ ಹಿಂದಿನಂತೆಯೇ ಒಂದು ಜತೆಯ ವಸ್ತ್ರದಿಂದ ಅಲಂಕೃತವಾದ ಕಲಶವನ್ನು ಸ್ಥಾಪಿಸಿ ಅದರ ಮೇಲೆ, ದಾಮೋದರನೆಂಬ ಹೆಸರಿನ ದೇವದೇವನ ಸುವರ್ಣಮೂರ್ತಿಯನ್ನು ಬಿಜ ಮಾಡಿಸಬೇಕು. ಬಳಿಕ ಆ ದೇವನನ್ನು ಶಾಸ್ತ್ರೋಕ್ತವಾಗಿ ಗಂಧಪುಷ್ಪಗಳಿಂದ ಕ್ರಮವಾಗಿ ಪೂಜಿಸಿ, ಮೊದಲಿನಂತೆಯೇ ವೇದವೇದಾಂಗಪಾರಂಗತನಾದ ಬ್ರಾಹ್ಮಣನಿಗೆ (ದ್ವಾದಶಿಯ ದಿನ) ಅರ್ಪಿಸಬೇಕು. ಹೀಗೆ ವ್ರತ ಮಾಡುವವನ ಮಹಿಮೆಯನ್ನು ನಾನು ಹೇಳುವೆನು ಕೇಳು. ಸತ್ಯತಪಮುನಿಯೇ! ಈ ವ್ರತವು ಶ್ರಾವಣಮಾಸದಲ್ಲಿ ಮಾಡತಕ್ಕದ್ದು. ಪಾಪವನ್ನು ನಿರ್ಮೂಲಮಾಡುವ ಇದರ ಪ್ರಭಾವವನ್ನು ಕೇಳು.

ಹಿಂದೆ ಕೃತಯುಗದಲ್ಲಿ ಮಹಾಬಲಶಾಲಿಯಾದ ನೃಗನೆಂಬ ದೊರೆಯಿದ್ದನು. ಒಂದು ಸಾರಿ, ಬೇಟೆಯಲ್ಲಿ ಆಸಕ್ತಿಯುಳ್ಳ ಅವನು ಘೋರವಾದ ಅಡವಿಯಲ್ಲಿ ತಿರುಗುತ್ತಿದ್ದನು. ಆಗ ಅಕಸ್ಮಾತ್ತಾಗಿ ಅವನು ಕುದುರೆಯ ಮೇಲೆ ಆನೆ ಹುಲಿ ಸಿಂಹ ಸರ್ಪಗಳಿಂದ ನಿಬಿಡವೂ, ಕಳ್ಳರ ನೆಲೆಯೂ ಆದ ದೂರದ ದೊಡ್ಡ ಕಾಡಿಗೆ ಹೋಗಿಬಿಟ್ಟನು. ಒಂಟಿಗನಾದ ಆ ದೊರೆಯು ಅತಿದುಃಖಿತನಾಗಿ ಕುದುರೆಯನ್ನು ಮರದ ಕೆಳಗೆ ಕಟ್ಟಿ, ತಾನೂ ದರ್ಭೆಯ ಹುಲ್ಲನ್ನು ಹಾಸಿಕೊಂಡು ಅಲ್ಲಿಯೇ ಮಲಗಿ ನಿದ್ದೆ ಹೋದನು. ಅಷ್ಟರಲ್ಲಿ ಹದಿನಾಲ್ಕುಸಾವಿರ ಮಂದಿ ಬೇಡರು ರಾತ್ರಿಯಲ್ಲಿ ಮೃಗಗಳನ್ನು ಕೊಲ್ಲುವುದಕ್ಕಾಗಿ ಅಲ್ಲಿಗೇ ರಾಜನ ಸುತ್ತಮುತ್ತಲೂ ಬಂದರು. ಸುವರ್ಣರತ್ನಾಲಂಕೃತನೂ, ಅತಿಕಾಂತವಂತನೂ, ಭಯಂಕರನೂ ಆಗಿ ನಿದ್ರಿಸುತ್ತಿರುವ ನೃಗರಾಜನನ್ನು ನೋಡಿದ ಆ ಬೇಡರು ಬೇಗನೆ ಹೋಗಿ ತಮ್ಮೊಡೆಯನಿಗೆ ತಿಳಿಸಿದರು. ಅವನು ಸ್ವರ್ಣರತ್ನಗಳಿಗಾಗಿಯೂ ಕುದುರೆಗಾಗಿಯೂ ದೊರೆಯನ್ನು ಕೊಲ್ಲಲು ಉದ್ಯುಕ್ತನಾದನು. ಬೇಡರು ನಿದ್ರಿಸುತ್ತಿರುವ ದೊರೆಯನ್ನು ಸಮೀಪಿಸಿ, ಕತ್ತಿಗಳನ್ನು ಕೈಗೆ ತೆಗೆದುಕೊಳ್ಳಲು ಆರಂಭಿಸಿದರು. ಅಷ್ಟರಲ್ಲಿ ರಾಜನ

ದೇಹದಿಂದ ಗಂಧಮಾಲ್ಯಾಭರಣಗಳಿಂದ ಅಲಂಕೃತಳಾದ ಬೆಳ್ಳಗಿರುವ ವನಿತೆಯೊಬ್ಬಳು ಎದ್ದು ನಿಂತಳು. ಎದ್ದು, ಚಕ್ರವನ್ನು ತೆಗೆದುಕೊಂಡು, ಆ ಬೇಡರನ್ನು ಉರುಳಿಸಿ ಬಿಟ್ಟಳು. ಆ ಕಳ್ಳರನ್ನು ಕೊಂದು, ಆ ದೇವಿಯು ಮತ್ತೆ ರಾಜನ ದೇಹವನ್ನೇ ಬೇಗನೆ ಪ್ರವೇಶಿಸುತ್ತಿರುವಾಗ ಆತನೂ ಎಚ್ಚರಗೊಂಡು ನೋಡಿಬಿಟ್ಟನು. ಅವಳು ತನ್ನ ದೇಹದಲ್ಲಿ ಐಕ್ಯವಾದುದನ್ನೂ ಕಳ್ಳಬೇಡರೆಲ್ಲರೂ ಕೊಲೆಯಾಗಿರುವುದನ್ನೂ ನೋಡಿ ಮತ್ತೆ ಕುದುರೆಯನ್ನೇರಿ ಆ ದೊರೆಯು ವಾಮದೇವಾಶ್ರಮಕ್ಕೆ ಹೋದನು. ಅಲ್ಲಿ ಆ ಋಷಿಯನ್ನು ಭಕ್ತಿಯಿಂದ ವಂದಿಸಿ, ''ಆ ಸ್ತ್ರೀಯು ಯಾರು? ಉರುಳಿ ಹೋದ ಅವರಾರು? ಋಷಿಯೇ, ಈ ಕಾರ್ಯವನ್ನು ದಯೆಯಿಂದ ನನಗೆ ಹೇಳು'' ಎಂದನು.

ವಾಮದೇವ – ದೊರೆಯೇ! ನೀನು ಬೇರೆಯ ಜನ್ಮದಲ್ಲಿ ಶೂದ್ರಜಾತಿಯವನಾಗಿದ್ದೆ. ಆಗ ನೀನು ಬ್ರಾಹ್ಮಣರಿಂದ ಶ್ರಾವಣಮಾಸದ ಶುಕ್ಲಪಕ್ಷದ ದ್ವಾದಶಿಯ ವ್ರತವನ್ನು ಕೇಳಿ ಮಾಡಿದ್ದೆ. ರಾಜನೇ! ವಿಧಿಪೂರ್ವಕವಾಗಿ ಭಕ್ತಿಯಿಂದ (ಏಕಾದಶಿಯಲ್ಲಿ) ಉಪವಾಸ ಮಾಡಿ ಈ ವ್ರತವನ್ನು ಆಗ ಮಾಡಿದುದರಿಂದಲೇ ನಿನಗೆ ರಾಜ್ಯವೂ ದೊರೆಯಿತು. ಪಾಪಿಗಳೂ ಕ್ರೂರಿಗಳೂ ಆದ ಆ ಬೇಡರನ್ನು ಕೊಂದ ಆ ದ್ವಾದಶೀ(ವ್ರತ)ದೇವಿಯು ಸರ್ವಾಪತ್ತುಗಳಲ್ಲಿಯೂ ನಿನ್ನನ್ನು ಕಾಪಾಡುವಳು. ಈಗಲೂ ಕಾಪಾಡಿದಳು. ಶ್ರಾವಣದ್ವಾದಶಿಯೆಂಬುವಳು ಒಬ್ಬಳೇ ಕೇಡುಗಳಲ್ಲಿ ರಕ್ಷಿಸುವಳು. ಒಬ್ಬಳೇ ರಾಜ್ಯವನ್ನು ಕೊಡುವಳು. ಹೀಗಿರುವಾಗ ಇಂದ್ರಪದವಿಯನ್ನು ದೊರೆಯುವಂತೆ ಮಾಡುವ ಆ ಹನ್ನೆರಡು ದ್ವಾದಶಿಗಳೂ ಅನುಕೂಲವಾದರೆ ಹೇಳುವುದೇನಿದೆ!!.

ಈ ದಿನ ದಧಿವ್ರತವನ್ನು ಆರಂಭಿಸಬೇಕು.

## ಪವಿತ್ರೋತ್ಸವ

ಪವಿತ್ರಾರೋಪಣ – ವಿಷ್ಣುವಿಗೆ ಪವಿತ್ರಾರೋಪಣೆಯನ್ನು ಮಾಡಬೇಕು. ಇದು ನಿತ್ಯವ್ರತ. 360, 108 ಅಥವಾ 27 ಎಳೆಗಳಿಂದ ಪವಿತ್ರಗಳನ್ನು ಮಾಡಿ, ಪಂಚಗವ್ಯದಿಂದ ಪ್ರೋಕ್ಷಿಸಿ, ಬಿದಿರು ತಟ್ಟೆಯಲ್ಲಿ ದೇವರ ಎದುರಿಗೆ ಸ್ಥಾಪಿಸಿ, ವಸ್ತ್ರದಿಂದ ಮುಚ್ಚಿ 'ಕ್ರಿಯಾಲೋಪವಿಧಾನಾರ್ಥಂ ಯತ್ತ್ವಯಾ ವಿಹಿತಂ ಪ್ರಭೋ ।

ಮಯ್ಯೈತತ್ ಕ್ರಿಯತೇ ದೇವ ತವ ತುಷ್ಟ್ಯೈ ಪವಿತ್ರಕಮ್ ॥ ನ ಮೇ ವಿಘ್ನೋ ಭವೇ-ದ್ದೇವ ಕುರ್ನಾಥ ದಯಾಂ ಮಯಿ । ಸರ್ವಥಾ ಸರ್ವದಾ ವಿಷ್ಣೋ ಮಮ ತ್ವಂ ಪರಮಾ ಗತಿಃ ॥' ಎಂಬ ಮಂತ್ರಗಳಿಂದ ಅಧಿವಾಸವನ್ನು ಮಾಡಬೇಕು. ಪಂಚೋ-ಪಚಾರಗಳಿಂದ ಪೂಜಿಸಬೇಕು. ನಂತರ 'ಸಂವತ್ಸರಸ್ಯ ಯಾಗಸ್ಯ ಪವಿತ್ರೀಕರಣಾಯ ಭೋಃ । ವಿಷ್ಣುಲೋಕಾತ್ ಪವಿತ್ರಾದ್ಯ ಆಗಚ್ಛೇಹ ನಮೋಽಸ್ತುತೇ ॥' ಎಂಬ ಮಂತ್ರದಿಂದ 'ಅತೋ ದೇವಾ' ಎಂಬ ವೇದಮಂತ್ರದಿಂದಲೂ ದೇವರಿಗೆ ಪವಿತ್ರವನ್ನು ಸಮರ್ಪಿಸಬೇಕು. ದೇವಪೂಜಾ ನಂತರ ಬ್ರಾಹ್ಮಣರಿಗೂ ಪವಿತ್ರಗಳನ್ನು ಸಮರ್ಪಿಸಿ, ತಾನು ಧರಿಸಬೇಕು. ಈ ಪವಿತ್ರವನ್ನು ವರ್ಷಪೂರ್ತಿ ಧರಿಸುವುದೂ ಉಂಟು; ಮರುದಿನ ನಂತರ ವಿಸರ್ಜಿಸುವುದೂ ಉಂಟು. ಇದರಿಂದ ವರ್ಷಕಾಲ ಭಗವತ್ಪೂಜೆಯು ಸಾರ್ಥಕವಾಗುವುದು. ದ್ವಾದಶಿಯಂದು ಆಗದಿದ್ದಲ್ಲಿ ಶ್ರವಣ ನಕ್ಷತ್ರದಲ್ಲಿಯಾಗಲೀ, ಪೂರ್ಣಿಮಾದಲ್ಲಿ ಯಾಗಲೀ ಮಾಡಬಹುದು. ಪ್ರಮಾದ-ವಶಾತ್ ಮಾಡದೇ ಹೋದರೆ ಹತ್ತು ಸಾವಿರ ಮೂಲಮಂತ್ರಜಪವನ್ನು ಮಾಡ-ಬೇಕು.

ಶ್ರಾವಣಶುಕ್ಲೈಕಾದಶಿಗೆ 'ಪವಿತ್ರಾರೋಪಣೀ' ಎಂದು ಹೆಸರು. ಇಂದು ಹತ್ತಿ ಅಥವಾ ರೇಶ್ಮೆಯ ದಾರದಿಂದ 108 ಎಳೆ 27 ಗ್ರಂಥಿಗಳುಳ್ಳ ಪವಿತ್ರವನ್ನು ರಚಿಸಿ ದ್ವಾದಶಿಯಂದು ದೇವರಿಗೆ ಧಾರಣ ಮಾಡಿ ತಾವೂ ಮಾಡಬೇಕು. ಪವಿತ್ರಾ-ರೋಪಣವನ್ನು ಮಾಡದಿದ್ದವನ ಸಾಂವತ್ಸರಪೂಜೆಯು ವ್ಯರ್ಥವಾಗುತ್ತದೆ. 'ತಸ್ಯ ಸಾಂವತ್ಸರೀ ಪೂಜಾ ನಿಷ್ಫಲಾ ಮುನಿಸತ್ತಮ' ಎಂಬ ಮಾತು ಪುರಾಣಗಳಲ್ಲಿದೆ. ಕ್ರಮ ಹೀಗೆ- * ದೇವರಿಗೆ ಹಾಕುವ ಪವಿತ್ರದಲ್ಲಿ 108 ಎಳೆ 27 ಗಂಟು. ತನಗೆ ಧರಿಸುವುದಕ್ಕಾಗಿ 27 ಎಳೆ 27 ಗಂಟು.

ಅಧಿವಾಸವಿಧಿಃ – ಆಚಮ್ಯ , ಪ್ರಾಣಾನಾಯಮ್ಯ , ದೇಶಕಾಲೌ ಸ್ಮೃತ್ವಾ , ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಮ್ ಅಧಿವಾಸನವಿಧಿಪೂರ್ವಕಂ ಪವಿತ್ರಾರೋಪಣಂ ಕರಿಷ್ಯೇ । ಸರ್ವಾಣಿ ಪವಿತ್ರಾಣಿ ಪಂಚಗವ್ಯೇನ ಪ್ರೋಕ್ಷ್ಯ , ಪ್ರಣವೇನ ಪ್ರಕ್ಷಾಲ್ಯ , ವಿಷ್ಣುಸೂಕ್ತೇನ ತಥಾ ಮೂಲಮಂತ್ರೇಣ ಅಷ್ಟೋತ್ತರ-ಶತವಾರಮ್ ಅಭಿಮಂತ್ರ್ಯ , ಕುಂಕುಮಾಗರುಚಂದನೈಃ ತದಲಾಭೇ ಹರಿದ್ರಯಾ ವಾ

ಗ್ರಂಥೀನ್ ರಂಜಯೇತ್ । ತತಃ ತಾನಿ ಪವಿತ್ರಾಣಿ ವಂಶಪಾತ್ರೇ ನಿಧಾಯ, ಶುದ್ಧೇನ ವಾಸಸಾ ಆಚ್ಛಾದ್ಯ , ದೇವದಕ್ಷಿಣಭಾಗೇ ತದ್ವಂಶಪಾತ್ರಂ ಸ್ಥಾಪಯಿತ್ವಾ – ಕ್ರಿಯಾ -ಲೋಪವಿಧಾನಾರ್ಥಂ ಯತ್ ತ್ವಯಾ ವಿಹಿತಂ ಪ್ರಭೋ । ಮಯ್ಯೈತತ್ ಕ್ರಿಯತೇ ದೇವ ತವ ತುಷ್ಟ್ಯೈ ಪವಿತ್ರಕಮ್ ॥ ನ ಮೇ ವಿಘ್ನೋ ಭವೇದ್ದೇವ ಕುರು ನಾಥ ದಯಾಂ ಮಯಿ । ಸರ್ವಥಾ ಸರ್ವದಾ ವಿಷ್ಣೋ ಮಮ ತ್ವಂ ಪರಮಾಗತಿಃ ॥ ಉಪವಾಸೇನ ದೇವ ತ್ವಾಂ ತೋಷಯಾಮಿ ಜಗತ್ಪತೇ । ಕಾಮಕ್ರೋಧಾ-ದಯೋಽಪ್ಯೇತೇ ನ ಮೇ ಸ್ಯುರ್ವ್ರತಘಾತಕಾಃ ॥ ಅದ್ಯಪ್ರಭೃತಿ ದೇವೇಶ ಯಾವದ್ವೈಶೇಷಿಕಂ ದಿನಮ್ । ತಾವದ್ರಕ್ಷಾ ತ್ವಯಾ ಕಾರ್ಯಾ ಸರ್ವಸ್ಯಾಸ್ಯ ನಮೋಽಸ್ತು ತೇ ॥ ಎಂದು ದೇವರನ್ನು ಪ್ರಾರ್ಥಿಸಿ ಅಧಿವಾಸನ ಮಾಡಬೇಕು. * ಈ ಪವಿತ್ರಗಳನ್ನು ಒಂದು ಬಿದಿರಿನ ತಟ್ಟೆಯಲ್ಲಿ ಸರ್ವತೋಭದ್ರ ಮಂಡಲ ಹಾಕಿ ದೇವರ ಬಳಿ ಇಟ್ಟು ಏಕಾದಶಿಯಂದು ಪ್ರಾರ್ಥಿಸಬೇಕು. ಸಂವತ್ಸರಸ್ಯ ಯಾಗಸ್ಯ ಪವಿತ್ರೀಕರಣಾಯ ಭೋ । ವಿಷ್ಣುಲೋಕಾತ್ ಪವಿತ್ರ ತ್ವಂ ಆಗತೋಽಸಿ ನಮೋ ನಮಃ ॥ ವಾಸುದೇವಾದಿ ಪಂಚ, ಕ್ರುದ್ಧೋಲ್ಕಾದಿಪಂಚ, ವಿಶ್ವಾದ್ಯಷ್ಟ, ಕೇಶವಾದಿಚತುರ್ವಿಂಶತಿ, ವೇದವ್ಯಾಸಾದ್ಯಷ್ಟಮೂರ್ತಿಗಳು ಹಾಗೂ ಕ್ರಿಯಾ, ಪೌರುಷೀ, ವೀರಾ, ವಿಜಯಾ, ಈಶಾ, ಅಪರಾಜಿತಾ, ಮನೋನ್ಮನೀ, ಜಯಾ, ಭದ್ರಾ , ಮುಕ್ತಿ ಎಂಬ ರಮಾರೂಪಗಳ್ನನೂ ಸಹ ದಾರ ಹಾಗೂ ಗಂಟುಗಳಲ್ಲಿ ಆವಾಹಿಸಿ ಪ್ರಾಣಪ್ರತಿಷ್ಠಾಪನೆ ಮಾಡಿ ದೇವರ ಪಾದಗಳಿಗೆ ಸಮರ್ಪಿಸಬೇಕು.

ಅಥ ಪ್ರಾಣಪ್ರತಿಷ್ಠಾಪನಮ್ – ಓಂ ಅಸುನೀತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣಮಿಹ ನೋ ಧೇಹಿ ಭೋಗಮ್ । ಜ್ಯೋಕ್ ಪಶ್ಯೇಮ ಸೂರ್ಯಮುಚ್ಚರಂ ತಮನುಮತೇ ಮೃಳಯಾ ನಃ ಸ್ವಸ್ತಿ ಓಂ ॥ ಓಂ ಪುನರ್ನೋ ಅಸುಂ ಪೃಥಿವೀ ದದಾತು ಪುನರ್ದ್ಯೌರ್ದೇವೀ ಪುನರಂತರಿಕ್ಷಮ್ ॥ ಪುನರ್ನಃ ಸೋಮಸ್ತನ್ವಂ ದದಾತು ಪುನಃ ಪೂಷಾ ಪಥ್ಯಾಂ- ೩ ಯಾ ಸ್ವಸ್ತಿ ॥ ಓಂ ॥

ಮೂಲಮಂತ್ರೇಣ 'ಶ್ರೀಪವಿತ್ರಾದ್ಯಾವಾಹಿತದೇವತಾಭ್ಯೋ ನಮಃ' ಇತಿ ಗಂಧಾದ್ಯುಪಚಾರೈಃ ಪೂಜಯೇತ್ ॥ ತತಃ ಪೂರ್ವಸಂಪಾದಿತಂ ವಿತಸ್ತಿಮಾತ್ರಂ

ದ್ವಾದಶಗ್ರಂಥಿಕಂ 'ಗಂಧಪವಿತ್ರ'ಮಾದಾಯ – ವಿಷ್ಣುತೇಜೋದ್ಭವಂ ರಮ್ಯಂ ಸರ್ವ -ಪಾತಕನಾಶನಮ್ । ಸರ್ವಕಾಮಪ್ರದಂ ದೇವ ತವಾಂಗೇ ಧಾರಯಾಮ್ಯಹಮ್ ॥ ಇತಿ ಮಂತ್ರೇಣ ಮೂಲಸಂಪುಟಿತೇನ ದೇವಪಾದಯೋಃ ಸಮರ್ಪಯೇತ್ ।

ತತಃ ದೇವಂ ಪಂಚೋಪಚಾರೈಃ ಸಂಪೂಜ್ಯ ಪ್ರಾರ್ಥಯೇತ್ – ಆಮಂತ್ರಿ-ತೋಽಸಿ ದೇವೇಶ ಪುರಾಣಪುರುಷೋತ್ತಮ । ಪ್ರಾತಸ್ತ್ವಾಂ ಪೂಜಯಿಷ್ಯಾಮಿ ಸಾನ್ನಿಧ್ಯಂ ಕುರು ಕೇಶವ ॥ ಕ್ಷೀರೋದಧಿಮಹಾನಾಗಶಯ್ಯಾವಸ್ಥಿತವಿಗ್ರಹ । ಪ್ರಾತಸ್ತ್ವಾಂ ಪೂಜಯಿಷ್ಯಾಮಿ ಸನ್ನಿಧೌ ಭವ ತೇ ನಮಃ ॥ ನಿವೇದಯಾಮ್ಯಹಂ ತುಭ್ಯಂ ಪ್ರಾತರೇತತ್ಪವಿತ್ರಕಮ್ । ಸರ್ವಥಾ ಸರ್ವದಾ ವಿಷ್ಣೋ ನಮಸ್ತೇಽಸ್ತು ಪ್ರಸೀದ ಮೇ ॥ ಎಂದು ಸಾಷ್ಟಾಂಗಪ್ರಣಾಮ ಮಾಡಿ ನಮಸ್ಕಾರ ಮಾಡಬೇಕು.

### ಅಥ ಪವಿತ್ರಾರೋಪಣವಿಧಿಃ –

ಶ್ರೀಗುರುಭ್ಯೋ ನಮಃ । ಆಚಮ್ಯ , ಪ್ರಾಣಾನಾಯಮ್ಯ , ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಸಂವತ್ಸರಪೂಜಾಸಾದ್ಗುಣ್ಯಸಿದ್ಧ್ಯರ್ಥಂ ಪೂರ್ವೋಕ್ತದೇವತಾ-ಸನ್ನಿಹಿತಪವಿತ್ರಸಮರ್ಪಣದ್ವಾರಾ ನಾರಾಯಣಪ್ರೀತ್ಯರ್ಥಂ ತಸ್ಮೈ ಪವಿತ್ರಾರೋ-ಪಣಂ ಕರಿಷ್ಯೇ ॥

ಶೋಷಿತಂ ಪವಿತ್ರಂ ಪಾತ್ರೇ ನಿಧಾಯ, 'ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿ-ನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮ್' - ಇತಿ ಹಸ್ತಾಭ್ಯಾಂ ಪ್ರೋಕ್ಷ್ಯಾಮೀತಿ ತ್ರಿವಾರಂ ಪ್ರೋಕ್ಷ್ಯ ।

ಯೇನ ದೇವಾ ಪವಿತ್ರೇಣ ಆತ್ಮಾನಂ ತನುತೇ ಸದಾ । ತೇನ ಸಹಸ್ರಧಾರೇಣ ಪಾವಮಾನ್ಯಃ ಪುನಂತು ಮಾಮ್ ॥ ಪ್ರಾಜಾಪತ್ಯಂ ಪವಿತ್ರಂ ಶತಧಾರಂ ಹಿರಣ್ಮಯಮ್ । ತೇನ ವ್ರತವಿದೋ ವಯಂ ಪೂತಂ ಬ್ರಹ್ಮ ಪುನೀಮಹೇ ॥ ಇತಿ ಮಂತ್ರೇಣ ಮೂಲಮಂತ್ರೇಣ ಚ (108) ಅಭಿಮಂತ್ರ್ಯ , ಪಾತ್ರೇ ನಿಧಾಯ ಸೂತ್ರೇಷು ನಾರಾಯಣಾದೀನ್ ಆವಾಹಯಾಮಿ ।

### ದೇವತಾ ಆವಾಹನಕ್ರಮ

1. ನಾರಾಯಣಂ ಪ್ರಥಮಸೂತ್ರೇ ಆವಾಹಯಾಮಿ ।

2. ವಾಸುದೇವಂ ದ್ವಿತೀಯಸೂತ್ರೇ ಆವಾಹಯಾಮಿ ।
3. ವಿಷ್ಣುಂ ತೃತೀಯಸೂತ್ರೇ ಆವಾಹಯಾಮಿ ।
4. ಕೇಶವಂ ಚತುರ್ಥಸೂತ್ರೇ ಆವಾಹಯಾಮಿ ।
5. ನಾರಾಯಣಂ ಪಂಚಮಸೂತ್ರೇ ಆವಾಹಯಾಮಿ ।
6 ಮಾಧವಂ ಷಷ್ಠಸೂತ್ರೇ ಆವಾಹಯಾಮಿ ।
7. ಗೋವಿಂದಂ ಸಪ್ತಮಸೂತ್ರೇ ಆವಾಹಯಾಮಿ ।
8. ವಿಷ್ಣುಮ್ ಅಷ್ಟಮಸೂತ್ರೇ ಆವಾಹಯಾಮಿ ।
9. ಮಧುಸೂದನಂ ನವಮಸೂತ್ರೇ ಆವಾಹಯಾಮಿ ।
10. ತ್ರಿವಿಕ್ರಮಂ ದಶಮಸೂತ್ರೇ ಆವಾಹಯಾಮಿ ।
11. ವಾಮನಂ ಏಕಾದಶಸೂತ್ರೇ ಆವಾಹಯಾಮಿ ।
12. ಶ್ರೀಧರಂ ದ್ವಾದಶಸೂತ್ರೇ ಆವಾಹಯಾಮಿ ।
13. ಹೃಷೀಕೇಶಂ ತ್ರಯೋದಶಸೂತ್ರೇ ಆವಾಹಯಾಮಿ ।
14. ಪದ್ಮನಾಭಂ ಚತುರ್ದಶಸೂತ್ರೇ ಆವಾಹಯಾಮಿ ।
15. ದಾಮೋದರಂ ಪಂಚದಶಸೂತ್ರೇ ಆವಾಹಯಾಮಿ ।
16. ಸಂಕರ್ಷಣಂ ಷೋಡಶಸೂತ್ರೇ ಆವಾಹಯಾಮಿ ।
17. ವಾಸುದೇವಂ ಸಪ್ತದಶಸೂತ್ರೇ ಆವಾಹಯಾಮಿ ।
18. ಪ್ರದ್ಯುಮ್ನಮ್ ಅಷ್ಟಾದಶಸೂತ್ರೇ ಆವಾಹಯಾಮಿ ।
19. ಅನಿರುದ್ಧಮ್ ಏಕೋನವಿಂಶಸೂತ್ರೇ ಆವಾಹಯಾಮಿ ।
20. ಪುರುಷೋತ್ತಮಂ ವಿಂಶಸೂತ್ರೇ ಆವಾಹಯಾಮಿ ।
21. ಅಧೋಕ್ಷಜಂ ಏಕವಿಂಶಸೂತ್ರೇ ಆವಾಹಯಾಮಿ ।
22. ನಾರಸಿಂಹಂ ದ್ವಾವಿಂಶಸೂತ್ರೇ ಆವಾಹಯಾಮಿ ।
23. ಅಚ್ಯುತಂ ತ್ರಯೋವಿಂಶಸೂತ್ರೇ ಆವಾಹಯಾಮಿ ।
24. ಜನಾರ್ದನಂ ಚತುರ್ವಿಂಶಸೂತ್ರೇ ಆವಾಹಯಾಮಿ ।
25. ಉಪೇಂದ್ರಂ ಪಂಚವಿಂಶಸೂತ್ರೇ ಆವಾಹಯಾಮಿ ।
26. ಹರಿಂ ಷಡ್ವಿಂಶಸೂತ್ರೇ ಆವಾಹಯಾಮಿ ।
27. ಕೃಷ್ಣಂ ಸಪ್ತವಿಂಶಸೂತ್ರೇ ಆವಾಹಯಾಮಿ ।

## ಗ್ರಂಥಿಷು ಆವಾಹನಮ್

1. ವಿಶ್ವಂ ಕ್ರಿಯಾಶಕ್ತಿಸಹಿತಂ(ರಮಾರೂಪಾದಿಸಹಿತಂ) ಪ್ರಥಮಗ್ರಂಥೌ ಆವಾಹಯಾಮಿ ।

2. ತೈಜಸಂ ಪೌರುಷಶಕ್ತಿಸಹಿತಂ (ರಮಾರೂಪಾದಿಸಹಿತಂ) ದ್ವಿತೀಯಗ್ರಂಥೌ ಆವಾಹಯಾಮಿ ।

3. ಪ್ರಾಜ್ಞಂ ವೀರಶಕ್ತಿಸಹಿತಂ (ರಮಾರೂಪಾದಿಸಹಿತಂ) ತೃತೀಯಗ್ರಂಥೌ ಆವಾಹಯಾಮಿ ।

4. ತುರ್ಯಂ ವಿಜಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ಚತುರ್ಥ-ಗ್ರಂಥೌ ಆವಾಹಯಾಮಿ ।

5. ಆತ್ಮಾನಮ್ ಈಶಶಕ್ತಿಸಹಿತಂ (ರಮಾರೂಪಾದಿಸಹಿತಂ) ಪಂಚಮಗ್ರಂಥೌ ಆವಾಹಯಾಮಿ ।

6. ಅಂತರಾತ್ಮಾನಮ್ ಅಪರಾಜಿತಾಶಕ್ತಿಸಹಿತಂ (ರಮಾರೂಪಾದಿಸಹಿತಂ) ಷಷ್ಠಗ್ರಂಥೌ ಆವಾಹಯಾಮಿ ।

7. ಪರಮಾತ್ಮಾನಂ ಮನೋನ್ಮನೀಶಕ್ತಿಸಹಿತಂ (ರಮಾರೂಪಾದಿಸಹಿತಂ) ಸಪ್ತಮಗ್ರಂಥೌ ಆವಾಹಯಾಮಿ ।

8. ಜ್ಞಾನಾತ್ಮಾನಂ ಜಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ಅಷ್ಟಮ-ಗ್ರಂಥೌ ಆವಾಹಯಾಮಿ ।

9. ವಾಸುದೇವಂ ಭದ್ರಾಶಕ್ತಿಸಹಿತಂ (ರಮಾರೂಪಾದಿಸಹಿತಂ) ನವಮಗ್ರಂಥೌ ಆವಾಹಯಾಮಿ ।

10. ಸಂಕರ್ಷಣಂ ಮುಕ್ತಿಶಕ್ತಿಸಹಿತಂ (ರಮಾರೂಪಾದಿಸಹಿತಂ) ದಶಮಗ್ರಂಥೌ ಆವಾಹಯಾಮಿ ।

11. ಪ್ರದ್ಯುಮ್ನಂ ವಿಮಲಾಶಕ್ತಿಸಹಿತಂ (ರಮಾರೂಪಾದಿಸಹಿತಂ) ಏಕಾದಶ-ಗ್ರಂಥೌ ಆವಾಹಯಾಮಿ ।

12. ಅನಿರುದ್ಧಂ ಸತ್ಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ದ್ವಾದಶಗ್ರಂಥೌ ಆವಾಹಯಾಮಿ ।

13. ಮತ್ಸ್ಯಂ ಸತ್ಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ತ್ರಯೋದಶಗ್ರಂಥೌ ಆವಾಹಯಾಮಿ ।

14. ಕೂರ್ಮಂ ಸತ್ಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ಚತುರ್ದಶ-ಗ್ರಂಥೌ ಆವಾಹಯಾಮಿ ।

15. ವರಾಹಂ ಸತ್ಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ಪಂಚದಶಗ್ರಂಥೌ ಆವಾಹಯಾಮಿ ।

16. ನರಸಿಂಹಂ ಸತ್ಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ಷೋಡಶಗ್ರಂಥೌ ಆವಾಹಯಾಮಿ ।

17. ವಾಮನಂ ಸತ್ಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ಸಪ್ತದಶಗ್ರಂಥೌ ಆವಾಹಯಾಮಿ ।

18. ಭಾರ್ಗವಂ ಸತ್ಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ಅಷ್ಟಾದಶಗ್ರಂಥೌ ಆವಾಹಯಾಮಿ ।

19. ರಾಮಂ ಸತ್ಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ಏಕೋನವಿಂಶ-ಗ್ರಂಥೌ ಆವಾಹಯಾಮಿ ।

20. ಕೃಷ್ಣಂ ಸತ್ಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ವಿಂಶಗ್ರಂಥೌ ಆವಾಹ-ಯಾಮಿ ।

21. ಬುದ್ಧಂ ಸತ್ಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ಏಕವಿಂಶಗ್ರಂಥೌ ಆವಾಹಯಾಮಿ ।

22. ಕಲ್ಕಿನಂ ಸತ್ಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ದ್ವಾವಿಂಶಗ್ರಂಥೌ ಆವಾಹಯಾಮಿ ।

23. ಅನಂತಂ ಸತ್ಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ತ್ರಯೋವಿಂಶ-ಗ್ರಂಥೌ ಆವಾಹಯಾಮಿ ।

24. ವಿಶ್ವರೂಪಂ ಸತ್ಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ಚತುರ್ವಿಂಶ-ಗ್ರಂಥೌ ಆವಾಹಯಾಮಿ ।

25. ಅಗ್ನಿಗಂ ಅನಿರುದ್ಧಂ ಸತ್ಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ಪಂಚ-ವಿಂಶಗ್ರಂಥೌ ಆವಾಹಯಾಮಿ ।

26. ವಾಯುಗಂ ಪ್ರದ್ಯುಮ್ನಂ ಸತ್ಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ಷಡ್ವಿಂಶಗ್ರಂಥೌ ಆವಾಹಯಾಮಿ ।

27. ಸೂರ್ಯಗಂ ಸಂಕರ್ಷಣಂ ಸತ್ಯಾಶಕ್ತಿಸಹಿತಂ (ರಮಾರೂಪಾದಿಸಹಿತಂ) ಸಪ್ತವಿಂಶಗ್ರಂಥೌ ಆವಾಹಯಾಮಿ ।

ಪ್ರಜಾಪತಿಗಂ ವಾಸುದೇವಂ ಸರ್ವಸೂತ್ರೇಷು ಆವಾಹಯಾಮಿ ॥

(ತದಯಮುಪರಿನಿರ್ದಿಷ್ಟಃ ದೇವತಾವಾಹನಕ್ರಮಃ ಪ್ರಾಚೀನಕೋಶೇಷು ವಿದ್ಯ -ಮಾನಃ ಯಥಾವನ್ಮುದ್ರಿತಃ)

ತತಃ (ಪ್ರಾಣಪ್ರತಿಷ್ಠಾಂ ಕೃತ್ವಾ) ಪ್ರಣವೇನ ಷೋಡಶೋಪಚಾರೈಃ ಸಂಪೂಜ್ಯ ಪವಿತ್ರಾರೋಪಣಾಂಗಭೂತಂ ದೇವಪೂಜಾಂ ಪವಿತ್ರಪೂಜಾಂ ಚ ಕರಿಷ್ಯೇ - ಇತಿ ಸಂಕಲ್ಪ್ಯ, ತತಃ ನಿತ್ಯಪೂಜಾಂ ಕೃತ್ವಾ ಗಂಧದೂರ್ವಾದ್ಯುಕ್ತಂ ಪವಿತ್ರಮಾದಾಯ, ತಾನಿ ಗಂಧಾದಿಫಲಾದ್ಯುಪಚಾರೈಃ ಸಂಪೂಜ್ಯ, ಗಂಧದೂರ್ವಾಕ್ಷತಾಯುಕ್ತಂ ಕನಿಷ್ಠಂ ಪವಿತ್ರಮಾದಾಯ – ದೇವ ದೇವ ನಮಸ್ತುಭ್ಯಂ ಗೃಹಾಣೇದಂ ಪವಿತ್ರಕಮ್ । ಪವಿತ್ರೀಕರಣಾರ್ಥಾಯ ವರ್ಷಪೂಜಾಫಲಪ್ರದಮ್ ॥ ಪವಿತ್ರಕಂ ಕುರುಷ್ವಾದ್ಯ ಯನ್ಮಯಾ ದುಷ್ಕೃತಂ ಕೃತಮ್ । ಶುದ್ಧೋ ಭವಾಮ್ಯಹಂ ದೇವ ತ್ವತ್ಪ್ರಸಾದಾನ್ಮಹೇಶ್ವರ ॥ ಅತೋ ದೇವಾ ಅವಂತು ನೋ ಯತೋ ವಿಷ್ಣುರ್ವಿಚಕ್ರಮೇ । ಪೃಥಿವ್ಯಾಃ ಸಪ್ತಧಾಮಭಿಃ ॥ ಇತಿಮಂತ್ರೇಣ ಮೂಲಸಂಪುಟಿತೇನ ದತ್ವಾ, ಮಧ್ಯಮೋ-ತ್ತಮಪವಿತ್ರೇ ವನಮಾಲಾಂ ಚೈವಮೇವ ತನ್ಮಂತ್ರಾವೃತ್ತ್ಯಾ ದದ್ಯಾತ್ । ತತಃ ಲಕ್ಷ್ಮ್ಯಾದಿದೇವತಾನಾಂ ಪೀಠಾದಿದೇವತಾನಾಂ ಚ ಸ್ವಸ್ವಮಂತ್ರೈಃ ಪೃಥಕ್ ಪೃಥಕ್ ಪವಿತ್ರಾಣಿ ದದ್ಯಾತ್ । ಅಲಾಭೇ ತು ಏಕಮೇವ ಅರ್ಪಯೇತ್ । ತತಃ ಧೂಪದೀಪೌ ದತ್ವಾ ಮಹಾನೈವೇದ್ಯಂ ಕುರ್ಯಾತ್ । ತತೋ ನೀರಾಜನಂ ಕೃತ್ವಾ ಪ್ರಾರ್ಥಯೇತ್ ॥ ಮಣಿವಿದ್ರುಮಮಾಲಾಭಿಃ ಮಂದಾರಕುಸುಮಾದಿಭಿಃ । ಇಯಂ ಸಾಂವತ್ಸರೀ ಪೂಜಾ ತವಾಸ್ತು ಗರುಡಧ್ವಜ ॥ ವನಮಾಲಾ ಯಥಾ ದೇವ ಕೌಸ್ತುಭಂ ಸತತಂ ಹೃದಿ । ತದ್ವತ್ ಪವಿತ್ರಂ ತಂತೂನಾಂ ಪೂಜಾಂ ಚ ಹೃದಯೇ ತವ ॥ ಕಾಮತೋ-ಽಕಾಮತೋ ವಾಪಿ ನ ಕೃತಂ ನಿಯಮಾರ್ಚನಮ್ । ಕೇನಚಿದ್ ವಿಘ್ನದೋಷೇಣ ಪರಿಪೂರ್ಣಂ ತದಸ್ತು ಮೇ ॥ ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾ-

ರ್ದನ । ಯತ್ಪೂಜಿತಂ ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥ ಅಪರಾಧಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ । ತಾನಿ ಸರ್ವಾಣಿ ಮೇ ದೇವ ಕ್ಷಮಸ್ವ ಪುರುಷೋತ್ತಮ ॥ ಇತಿ ।

* ಸೂತ್ರದಲ್ಲಿರುವ ಎಳೆಗಳ ಸಂಖ್ಯೆಗೆ ಅನುಗುಣವಾಗಿ ಪ್ರಣವಮಂತ್ರವನ್ನು ಜಪಿಸಿ ಮಾರನೆಯ ದಿನ ದ್ವಾದಶಿಯಂದು ಆ ಪವಿತ್ರವನ್ನು ದೇವರಿಗೆ ಹಾರದಂತೆ ಹಾಕುವಾಗ- ಕೃಷ್ಣಕೃಷ್ಣ ನಮಸ್ತುಭ್ಯಂ ಗೃಹಾಣೇದಂ ಪವಿತ್ರಕಮ್ । ಪವಿತ್ರೀ-ಕರಣಾರ್ಥಾಯ ವರ್ಷಪೂಜಾಫಲಪ್ರದಮ್ । ವನಮಾಲಾ ಯಥಾ ದೇವ ಕೌಸ್ತುಭಂ ಸತತಂ ಹೃದಿ । ತದ್ವತ್ ಪವಿತ್ರತಂತೂನಾಂ ಮಾಲಾಂ ಚ ಹೃದಯೇ ವಹ ॥ ಕಾಮತೋಽಕಾಮತೋ ವಾಪಿ ನ ಕೃತಂ ನಿಯಮಾರ್ಚನಮ್ । ಕೇನಚಿತ್ ವಿಘ್ನದೋಷೇಣ ಪರಿಪೂರ್ಣಂ ತದಸ್ತು ಮೇ ॥

ತತೋ ಗುರುಂ ಸಂಪೂಜ್ಯ ಪವಿತ್ರಂ ದತ್ವಾ, ಅನ್ಯಬ್ರಾಹ್ಮಣೇಭ್ಯಃ ಸುವಾ-ಸಿನೀಭ್ಯಶ್ಚ ಅನ್ಯಾನಿ ದತ್ವಾ ಸ್ವಯಮಪಿ ಸಕುಟುಂಬೋ ಧಾರಯೇತ್ । ತತೋ ಬ್ರಾಹ್ಮಣೈಃ ಸಹ ಭುಕ್ತ್ವಾ ತ್ರಿರಾತ್ರಂ ಬ್ರಹ್ಮಚರ್ಯಾದಿನಿಯಮವಾನ್ ದೇವೇ ಪವಿತ್ರಂ ಸದರ್ಭಂ ಸಂಸ್ಥಾಪಯೇತ್ । ದೇವಸ್ಯ ಸ್ನಾನಾದ್ಯುಪಚಾರಾನ್ ಪವಿತ್ರಾಣ್ಯುತ್ತಾರ್ಯ ಕಾರಯೇತ್ । ಯಸ್ಯಸ್ಮೃತ್ಯಾ .... ಇತ್ಯಾದಿಯಾಗಿ ಹೇಳಿ ಕೃಷ್ಣಾರ್ಪಣ ಎನ್ನಬೇಕು.

ನಮಗಾಗಿ ರಚಿಸಿದ ಪವಿತ್ರಹಾರವನ್ನು ಪೂಜಾನಂತರ ಧರಿಸಿಕೊಳ್ಳುವುದು. ಉಡುಪಿಶ್ರೀಕೃಷ್ಣಮಠದಲ್ಲಿ ಪೂರ್ಣಿಮಾದಂದು ಪವಿತ್ರಸರ (ಕಲ್ಕಿಸರ)ವನ್ನು ದೇವರಿಗೆ ಸಮರ್ಪಿಸಿ ಪ್ರಸಾದರೂಪವಾಗಿ ಸರವನ್ನು ಗಂಧನೈರ್ಮಲ್ಯಾದಿ-ಗಳೊಂದಿಗೆ ಉಳಿದ ಮಠಾಧೀಶರಿಗೆ ಕಳಿಸಿಕೊಡುವ ಪದ್ಧತಿಯಿದೆ.

## ಶ್ರಾವಣ ॥ ಶುದ್ಧ ॥ ತ್ರಯೋದಶೀ

ಶ್ರೀ ಲಕ್ಷ್ಮೀನಾಥತೀರ್ಥರು (ವ್ಯಾಸರಾಜ ಮಠ) (ಕ್ರಿ.ಶ. 1642-1660)
ನಾಥಮಾನೇಷ್ಟ ಮಂದಾರಃ ಶ್ರೀನಾಥ ಸ್ಮರಣಾದರಃ । ಲಕ್ಷ್ಮೀನಾಥಾಖ್ಯ ಗುರುರಾಟ್ ಈಪ್ಸಿತಾರ್ಥ ಪ್ರದೋಽಸ್ತು ನಃ ॥

ಇವರು ಮಧ್ವಶಾಸ್ತ್ರ ಪಾಠ-ಪ್ರವಚನಾದಿಗಳಲ್ಲಿ ವಿಶೇಷ ಆಸಕ್ತರಾಗಿ ವೇದಾಂತ

ಸಾಮ್ರಾಜ್ಯವನ್ನು ಪರಿಪಾಲಿಸಿದ ಧೀಮಂತರು. ದಕ್ಷಿಣಭಾರತದಲ್ಲಿ ಹೆಚ್ಚಾಗಿ ಪ್ರವಾಸ ಮಾಡಿ ಶ್ರೀರಂಗನಾಥನ ಕ್ಷೇತ್ರವಾದ ಶ್ರೀರಂಗದಲ್ಲಿ ಮನೆಮಾತಾಗಿದ್ದರು. ಇವರು ಶ್ರೀವ್ಯಾಸರಾಜಕೃತ ವ್ಯಾಸತ್ರಯಗಳಿಗೆ ವ್ಯಾಖ್ಯಾನವನ್ನು ರಚಿಸಿದ್ದಾರೆ. 1660ರಲ್ಲಿ ಶ್ರಾವಣ ಶುದ್ಧತ್ರಯೋದಶಿಯಂದು ಶ್ರೀರಂಗದಲ್ಲಿಯೇ ಭೂವೈಕುಂಠ ವಾಸುದೇವನ ಪಾದವನ್ನು ಸೇರಿದರು. ಇವರ ಭವ್ಯ ವೃಂದಾವನವು ಶ್ರೀರಂಗಕ್ಷೇತ್ರದಲ್ಲಿ ಇದೆ.

## ಶ್ರಾವಣೀ

**ಯಜ್ಞೋಪವೀತ ಮಾಡುವ ವಿಧಾನ** – ಕೃಷ್ಣಾಚಾರ್ಯಸ್ಮೃತಿಮುಕ್ತಾವಳಿಯಲ್ಲಿ ಯಜ್ಞೋಪವೀತ ಮಾಡುವ ವಿಧಾನವನ್ನು ತಿಳಿಸಿದ್ದಾರೆ. ಬೆಳ್ಳಿಯ ತಕಲಿ ಮಾಡಿಸಬೇಕು. ಹತ್ತಿ ಸ್ವತಃ ಬೆಳೆಯಬೇಕು. ತಕಲಿಯಿಂದ ಹತ್ತಿಯ ಮೂಲಕ ದಾರ ತೆಗೆಯಬೇಕು. (ಇದು ಸಾಧ್ಯವಾಗದಿದ್ದರೆ ಮಾತ್ರ ಅಂಗಡಿಯಿಂದ ಹಸಿದಾರ ತಂದು ಅದರ ಮೂಲಕ ಯಜ್ಞೋಪವೀತ ಮಾಡಬೇಕು). ಎಡಗೈ ನಾಕು ಬೆಟ್ಟುಗಳಿಗೆ 24 ಕೇಶವಾದಿ ನಾಮಗಳನ್ನು ಹೇಳುತ್ತಾ 3 ಬಾರಿ ಸುತ್ತಬೇಕು. ಪುನಃ ಬಲಗೈಗೆ ಹೊಸದಾರದ ಜೊತೆ ಎಡಗೈಗೆ ಸುತ್ತಿದ್ದನ್ನು ಜೋಡಿಸಿಕೊಳ್ಳಬೇಕು. ಮೂರನೆಯ ಬಾರಿ ಹೊಸ ದಾರದ ಜೊತೆ ಹಳೆಯ ಎರಡು ಎಳೆಗಳನ್ನು ಜೋಡಿಸಿ ಸುತ್ತ ಬೇಕು. ಅನಂತರ ಮೂರು ಎಳೆ ಸೇರಿಸಿ ತಕಲಿ ಹಾಕಿ ಒಂದು ಹುರಿ ಹಾಕಿಕೊಳ್ಳಬೇಕು. ಅನಂತರ ಎದುರಿನಲ್ಲಿ ಒಬ್ಬರನ್ನು ಕೂಡಿಸಿಕೊಂಡು ಮೂರು ಬಾರಿ ಸುತ್ತಬೇಕು. ಪುನಃ ತಕಲಿಯಿಂದ ಹುರಿ ಮಾಡಿಕೊಳ್ಳಬೇಕು. ಕೊನೆಯಲ್ಲಿ ಮೂರು ಬಾರಿ ಸುತ್ತಿ ಬ್ರಹ್ಮಗಂಟು ಹಾಕಬೇಕು. ಬ್ರಹ್ಮಗಂಟು ಹಾಕುವುದನ್ನು ಕೇಳಿ ಪ್ರತ್ಯಕ್ಷವಾಗಿ ತಿಳಿದುಕೊಳ್ಳಬೇಕು.

ಶ್ರಾವಣಮಾಸದಲ್ಲಿ ಹುಣ್ಣಿಮೆಯ ದಿನ ಉಪಾಕರ್ಮವನ್ನು ಆಚರಿಸಲಾಗುವುದು. ಯಜುರ್ವೇದಿಗಳಿಗೆ ಹುಣ್ಣಿಮೆ ತಿಥಿಯೂ ಋಗ್ವೇದಿಗಳಿಗೆ ಶ್ರವಣ ನಕ್ಷತ್ರವೂ ಮುಖ್ಯವಾಗಿರುವುದರಿಂದ ಒಮ್ಮೊಮ್ಮೆ ಈ ಉಪಾಕರ್ಮದ ಹಬ್ಬ ಹಿಂದೆ ಮುಂದೆ ಬರುತ್ತದೆ. ಸಾಮವೇದಿಗಳು ಇದನ್ನು ಭಾದ್ರಪದಮಾಸದಲ್ಲಿ ಹಸ್ತಾನಕ್ಷತ್ರವಿರುವ ದಿನ ಆಚರಿಸುತ್ತಾರೆ.

## ಉತ್ಸರ್ಜನ

ಅಧ್ಯಯನವನ್ನು ತಾತ್ಕಾಲಿಕವಾಗಿ ಬಿಡಲು ಮಾಡುವ ವಿಧಿ- ವತ್ತಾದ ಕ್ರಿಯೆ. ಉಪನಯನಾನಂತರದಲ್ಲಿ ಶ್ರಾವಣ ಅಥವಾ ಭಾದ್ರಪದ ಮಾಸದ ಪುರ್ಣಿಮಾತಿಥಿ, ಶ್ರವಣ, ಹಸ್ತನಕ್ಷತ್ರ- ಈ ಮೂರರೊಂದರಲ್ಲಿ ಮಾಡುವ ಉಪಾಕರ್ಮದಿಂದ ಅಧ್ಯಯನಕ್ಕೆ ಪ್ರಾರಂಭ. ಅಲ್ಲಿಂದ ಮುಂದೆ ನಾಲ್ಕೂವರೆ ತಿಂಗಳ ಕಾಲ ಅನಧ್ಯಾಯ -ದಿವಸಗಳನ್ನು ಬಿಟ್ಟು ಉಳಿದ ದಿವಸಗಳಲ್ಲಿ ವೇದವನ್ನು ಗುರುವಿನಿಂದ ಸ್ವೀಕರಿಸಿ ಅಭ್ಯಾಸ ಮಾಡಬೇಕು. ಈ ಕಾಲ ಶಾಖಾಭೇದದಿಂದ ಆರು ತಿಂಗಳುಗಳವರೆಗೂ ಮುಂದುವರಿಯುತ್ತದೆ. ಈ ಕಾಲಾನಂತರದಲ್ಲಿ ಅಧ್ಯಯನ ಮಾಡುವುದನ್ನು ವಿಧಿ- ಪೂರ್ವಕ ನಿಲ್ಲಿಸಬೇಕು. ಈ ವಿಧಿಯೇ ಉತ್ಸರ್ಜನ, ಋಷಿಪೂಜೆ, ಹೋಮ-ಇವು ಇದರಲ್ಲಿ ಮುಖ್ಯಕಾರ್ಯ. ಇದನ್ನು ನದೀ ತೀರದಲ್ಲಿ ಮಾಡಬೇಕೆಂದು ಶಾಸ್ತ್ರದಲ್ಲಿದೆ. ಉಪಾಕರ್ಮದ ದಿವಸವೇ ಮೊದಲು ಉತ್ಸರ್ಜನ ಮಾಡಿ ಬಳಿಕ ಉಪಾಕರ್ಮವನ್ನು ಮಾಡಿಕೊಳ್ಳುವುದು ಕೆಲವರಲ್ಲಿ ರೂಢಿಯಲ್ಲಿದೆ. ಉತ್ಸರ್ಜನವಿಲ್ಲದೆ ಮತ್ತೆ ವೇದಾಧ್ಯಯನಾರಂಭವಿಲ್ಲ. ಯಜುರ್ವೇದಿಗಳಲ್ಲಿ ಉತ್ಸರ್ಜನ ಮಾಡುವ ಪ್ರಯುಕ್ತ ಉಂಟಾದ ದೋಷನಿವಾರಣೆಗಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಾರೆ. ಉತ್ಸರ್ಜನ ಮಾಡಿದ ಬಳಿಕ ಉಪಾಕರ್ಮದವರೆಗೂ ಅಧ್ಯಯನ ಮಾಡಬಾರದು. ಶುಕ್ಲಪಕ್ಷದಲ್ಲಿ ಧಾರಣಾಧ್ಯಯನವನ್ನೂ ಕೃಷ್ಣಪಕ್ಷದಲ್ಲಿ ಅಂಗಾಧ್ಯಯನವನ್ನೂ ಮಾಡಬಹುದು.

## ಉಪಾಕರ್ಮ

ವಿಧಿವತ್ತಾಗಿ ವೇದವನ್ನು ಅಧ್ಯಯನ ಮಾಡಲು ಪ್ರಾರಂಭಿಸುವುದು. ವೇದಾಧಿ- ಕಾರಿಗಳಾದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಈ ಮೂರು ವರ್ಣದವರಿಗೂ ವಿಹಿತವಾಗಿದೆ. ಉಪನಯನಾನಂತರದಲ್ಲಿ ಮೊಟ್ಟ ಮೊದಲು ವೇದಾಧ್ಯಯನಕ್ಕೆ ಪ್ರಾರಂಭಿಸುವುದು ಪ್ರಥಮೋಪಾಕರ್ಮ. ಅಧ್ಯಯನ ಮಾಡಲು ಪ್ರಾರಂಭಿಸುವುದಕ್ಕೆ ಮೊದಲು ಹೋಮಮಾಡಿ ಆ ಅಗ್ನಿ ಸನ್ನಿಧಿಯಲ್ಲಿ ವೇದಾಧ್ಯಯನಕ್ಕೆ ಉಪಕ್ರಮಿಸಬೇಕು.

ಪ್ರತಿವರ್ಷದಲ್ಲೂ ಶ್ರಾವಣಮಾಸದ ಹುಣ್ಣಿಮೆಯಲ್ಲಿ ಯಜುರ್ವೇದಿಗಳೂ ಇದೇ ತಿಂಗಳಿನ ಶ್ರವಣನಕ್ಷತ್ರದಲ್ಲಿ ಋಗ್ವೇದಿಗಳೂ ಹುಣ್ಣಿಮೆಯಲ್ಲೇ ಅಥರ್ವಣ -

ವೇದಿಗಳೂ ಉಪಾಕರ್ಮ ಮಾಡಬೇಕೆಂದು ವಿಹಿತವಾಗಿದೆ. ಶ್ರಾವಣ ಹುಣ್ಣಿಮೆ ಅಥವಾ ಶ್ರವಣನಕ್ಷತ್ರದ ದಿವಸ ಚಂದ್ರಗ್ರಹಣ ಸಂಭವಿಸಿದರೆ ಅಥವಾ ಸಿಂಹ ಸಂಕ್ರಮಣವಾದರೆ ಆ ದಿವಸ ಗ್ರಹಣ ಅಥವಾ ಸಂಕ್ರಮಣ ದುಷ್ಟವಾಗುವುದರಿಂದ ಆ ಕಾಲವನ್ನು ಬಿಟ್ಟು ಆಷಾಢ ಶುಕ್ಲ ಪುರ್ಣಿಮಾ ಅಥವಾ ಭಾದ್ರಪದಶುಕ್ಲ ಪುರ್ಣಿಮಾ ದಿವಸ ಮಾಡಬೇಕು. ಯಜುರ್ವೇದಿಗಳೂ ಶುಕ್ಲಪಂಚಮಿ ಅಥವಾ ಹಸ್ತನಕ್ಷತ್ರದಲ್ಲಿ ಋಗ್ವೇದಿಗಳೂ ಶ್ರಾವಣಮಾಸ ಅಧಿಕ ಬಂದರೆ ನಿಜಶ್ರಾವಣಮಾಸ-ದಲ್ಲಿ ಮಾಡಬೇಕು. ಅಧಿಕಶ್ರಾವಣದಲ್ಲೇ ಮಾಡುವ ಪದ್ಧತಿ ಕೆಲವರಲ್ಲಿ ಮಾತ್ರ ಇದೆ. ಸೌರಮಾನದವರಿಗೆ ಅಧಿಕಮಾಸದಲ್ಲೂ ಸಿಂಹಮಾಸ ಶ್ರವಣನಕ್ಷತ್ರದಂದು ಉಪಾ-ಕರ್ಮ ಕರ್ತವ್ಯ. ನೂತನೋಪಾಕರ್ಮವು ನೈಮಿತ್ತಿಕವಾಗಿದ್ದು ಇದನ್ನು ಅಧಿಕಮಾಸ -ದಲ್ಲಿ ಮಾಡುವಂತಿಲ್ಲ. ಎಲ್ಲಾ ವೇದದವರಿಗೂ ಒಂದೇ ದಿನ ಉಪಾಕರ್ಮ ಬರುವುದಿಲ್ಲ. ಸೌರಮಾನಕ್ಕೂ ಚಾಂದ್ರಪಕ್ಷದವರಿಗೂ ದಿನಭೇದವಿದೆ.

ಸೌರಋಗ್ವೇದಿಗಳಿಗೆ ಸಿಂಹಮಾಸದ ಶ್ರವಣನಕ್ಷತ್ರ. ಚಾಂದ್ರಋಗ್ವೇದಿಗಳಿಗೆ ಶ್ರಾವಣಮಾಸದ ಶ್ರವಣನಕ್ಷತ್ರ. ಸೌರಯಜುರ್ವೇದಿಗಳಿಗೆ ಸಿಂಹಮಾಸದ ಹುಣ್ಣಿಮೆ. ಚಾಂದ್ರಯಜುರ್ವೇದಿಗಳಿಗೆ ಶ್ರಾವಣಮಾಸದ ಹುಣ್ಣಿಮೆ. ಸೌರ-ಚಾಂದ್ರ ಸಾಮ-ವೇದಿಗಳಿಗೆ ಭಾದ್ರಪದಮಾಸದ ಹಸ್ತನಕ್ಷತ್ರ.

ಗುರು, ಶುಕ್ರರು ಅಸ್ತರಾಗಿದ್ದಾಗ ಪ್ರಥಮೋಪಾಕರ್ಮ ಕೂಡದು. ಉಪಾ-ಕರ್ಮಾನಂತರ ಐದು ತಿಂಗಳಕಾಲ ಶುಕ್ಲಪಕ್ಷದ ದಿವಸಗಳಲ್ಲಿ ವೇದಾಧ್ಯಯನವನ್ನೂ ಕೃಷ್ಣಪಕ್ಷದ ದಿವಸಗಳಲ್ಲಿ ಶಾಸ್ತ್ರಾಧ್ಯಯನವನ್ನೂ ಮಾಡಬೇಕು. ಶ್ರಾವಣದಲ್ಲಿ ಪ್ರಾರಂಭಿಸುವ ವೇದಾಧ್ಯಯನವನ್ನು ಪುಷ್ಯಮಾಸ ಶುಕ್ಲಪಕ್ಷದಲ್ಲಿ ಮುಕ್ತಾಯ ಮಾಡಬೇಕು. ಈ ಮುಕ್ತಾಯಕ್ಕೆ ಉತ್ಸರ್ಜನ ಎಂದು ಹೆಸರು. ಉತ್ಸರ್ಜನಾನಂತರ ಮತ್ತೆ ಶ್ರಾವಣದಲ್ಲಿ ಅಧ್ಯಯನವನ್ನು ಪ್ರಾರಂಭಿಸುವುದು ನಿತ್ಯೋಪಾಕರ್ಮ. ಇದಕ್ಕೆ ಗುರು ಶುಕ್ರಾಸ್ತಾದಿದೋಷಗಳಿಲ್ಲ. ಈ ಸಮಾರಂಭವನ್ನು ಜನಿವಾರದ ಹಬ್ಬ ಎಂದು ಕರೆಯುವುದೂ ಕೆಲವರಲ್ಲಿ ರೂಢಿಯಲ್ಲಿದೆ

ಹಯಗ್ರೀವಜಯಂತೀ– ಶ್ರಾವಣಪೂರ್ಣಿಮಾ

ಶ್ರಾವಣಮಾಸದ ಶುಕ್ಲಪಕ್ಷದ ಹುಣ್ಣಿಮೆಯ ದಿವಸ ಹಯಗ್ರೀವಜಯಂತಿಯನ್ನು

ಪ್ರತಿಯೊಬ್ಬರೂ ಆಚರಿಸಲೇಬೇಕು. ಯಾರಿಗೆ ತತ್ವಜ್ಞಾನದ ಅಪೇಕ್ಷೆಯಿರುತ್ತದೋ, ಯಾರಿಗೆ ಸಕಲ ವೇದಾರ್ಥಗಳನ್ನು ತಿಳಿಯಬೇಕೆಂಬ ಹಂಬಲವಿರುತ್ತದೋ, ಯಾರಿಗೆ ಉಪನಿಷತ್ತುಗಳ ಮರ್ಮವನ್ನು ಅರಿತು ಅದನ್ನು ಜೀವನದಲ್ಲಿ ಅಳವಡಿಸಿಕೊಳ್ಳ-ಬೇಕೆಂಬ ಇಚ್ಛೆ ಇರುತ್ತದೋ, ಯಾರಿಗೆ ಭಾಗವತ ಮೊದಲಾದ ಪುರಾಣಗಳನ್ನು ಆಮೂಲಾಗ್ರವಾಗಿ ಓದಬೇಕೆಂಬ ಆಸೆಯಿರುತ್ತದೋ, ಅವರು ಬಿಡದೆ ಹಯಗ್ರೀವ-ದೇವರ ಜಯಂತಿಯನ್ನು ಆಚರಿಸಬೇಕು. ಮಾತನಾಡಿದ್ದೆಲ್ಲವೂ ಪರಮಾತ್ಮನಿಗೆ ಸಮರ್ಪಿತವಾಗಬೇಕು. ನಿರರ್ಗಳವಾಗಿ ಮಾತಿನ ಶಕ್ತಿ ಹೆಚ್ಚಬೇಕು. ಮಾತುಗಳು ಉತ್ತಮವಾಗಿರಬೇಕು. ಕಾವ್ಯಮಯವಾಗಿರಬೇಕು, ಹರಿ ಪ್ರೀತಿಕರವಾಗಿರಬೇಕು. ಮತ್ತೊಬ್ಬರಿಗೆ ಉಪದೇಶಿಸಿದ್ದು, ಅವರ ಮನಸ್ಸಿಗೆ ನಾಟಿ, ಅವರು ಅದನ್ನು ಅನುಷ್ಠಾನಗೊಳಿಸಬೇಕು. ಶಿಷ್ಯಸಂಪತ್ತು ಹೆಚ್ಚಬೇಕು. ತಮಗೆ ಬಂದ ಸಂಶಯಗಳನ್ನು ನಿವಾರಿಸುವ ಗುರುಗಳ ಒಡನಾಟ ನಿರಂತರವೂ ಇರಬೇಕು. ಇವೇ ಮೊದಲಾದ ಅಪೇಕ್ಷೆಗಳು ಯಾರಿಗೆ ಇರುತ್ತವೋ, ಅಂಥ ಸಾಧಕನು ಪ್ರತೀವರ್ಷವೂ ಹಯಗ್ರೀವ-ಜಯಂತಿಯನ್ನು ಆಚರಿಸಲೇಬೇಕು. ಮತ್ತು ನಿತ್ಯವೂ ತಂತ್ರಸಾರಸಂಗ್ರಹದಲ್ಲಿ ಆಚಾರ್ಯರು ತಿಳಿಸಿಕೊಟ್ಟ ಹಯಗ್ರೀವಮಂತ್ರವನ್ನು ಜಪಿಸಲೇಬೇಕು. ಯಾವ ವ್ಯಕ್ತಿಯು ಹಯಗ್ರೀವದೇವರ ಆರಾಧನೆಯನ್ನು ಮಾಡುವುದಿಲ್ಲವೋ, ಹಾಗೂ ಹಯಗ್ರೀವನ ದಾಸನಾಗುವುದಿಲ್ಲವೋ, ಅವನಿಗೆ ಮೇಲಿನ ಫಲಗಳು ದೊರಕು-ವುದಿಲ್ಲ. ಆದ್ದರಿಂದಲೇ ಸಮಸ್ತ ಋಜುದೇವತೆಗಳು ವಿಶೇಷವಾಗಿ ಹಯಗ್ರೀವದೇವರ ಉಪಾಸನೆಯನ್ನೇ ಮಾಡುತ್ತಾರೆ. ಚತುರ್ಮುಖಬ್ರಹ್ಮದೇವರೂ ಕೂಡ ಏಕಾಂತದಲ್ಲಿ ಹಯಗ್ರೀವದೇವರ ಕಾರುಣ್ಯವನ್ನೇ ಸ್ಮರಣೆ ಮಾಡಿಕೊಳ್ಳುತ್ತಾರೆ.

ಹಯಗ್ರೀವಜಯಂತಿಯ ದಿವಸ ಅರುಣೋದಯಕಾಲದಲ್ಲಿ ಎದ್ದು, ಹಯಗ್ರೀವದೇವರನ್ನು ಆಪಾದಮೌಳಿಪರ್ಯಂತವಾಗಿ ಧ್ಯಾನ ಮಾಡಬೇಕು. ಕೇವಲ ಶುಭ್ರವರ್ಣದ ಕುದುರೆಯನ್ನು ಸ್ಮರಿಸಬಹುದು. ಅಥವಾ ಕುದುರೆಯ ಮುಖ ಮಾತ್ರವಿರುವ ವಿಷ್ಣುವಿನ ದೇಹವನ್ನು ಹೊಂದಿರುವ ಹಯಗ್ರೀವರೂಪವನ್ನೂ ಕೂಡ ಧ್ಯಾನ ಮಾಡಬಹುದು. ಶ್ರೀವಾದಿರಾಜತೀರ್ಥಶ್ರೀಪಾದಂಗಳವರು ನಮಗೆ ಉಪಾಸನೆಯ ಮಾರ್ಗವನ್ನು ತಿಳಿಸಿಕೊಟ್ಟಂತೆ ವಿಷ್ಣುವಿನ ದೇಹದ ಹಯಮುಖದ

ದೇವನನ್ನು ಧ್ಯಾನ ಮಾಡುವುದು ಅತ್ಯಂತ ಶ್ರೇಷ್ಠವಾಗಿದೆ. ಸೂರ್ಯೋದಯಕ್ಕಿಂತ ಅರ್ಧಗಂಟೆ ಮೊದಲು ಸ್ನಾನಾದಿಗಳನ್ನು ಮಾಡಿ, ಸೂರ್ಯನಿಗೆ ಅರ್ಘ್ಯಪ್ರದಾನವನ್ನು ನೀಡಿ, 108 ಗಾಯತ್ರೀಮಂತ್ರವನ್ನು ಸೂರ್ಯಮಂಡಲದಲ್ಲಿರುವ ನಾರಾಯಣನ ಜೊತೆ ಹಯಗ್ರೀವನನ್ನು ಸ್ಮರಿಸುತ್ತಾ ಜಪಿಸಬೇಕು. ಚಂದ್ರಮಂಡಲದಲ್ಲಿ ಲಕ್ಷ್ಮಿಯಿಂದ ನಿರಂತರವಾಗಿ ಅಮೃತಸ್ನಾನವನ್ನು ಮಾಡಿಸಿಕೊಳ್ಳುತ್ತಿರುವ ರೂಪದಂತೆ ಸೂಯ-ಮಂಡಲದಲ್ಲಿ ಸ್ತ್ರೀರೂಪದ ಹಯಗ್ರೀವರೂಪದಿಂದ ಉಪನಿಷತ್ತು ಮೊದಲಾದವು-ಗಳನ್ನು , ವಾಯುಸೂರ್ಯ ಮೊದಲಾದವರಿಗೆ ಉಪದೇಶಿಸುತ್ತಿರುವ ರೂಪವನ್ನೂ ಕೂಡ ಧ್ಯಾನ ಮಾಡಬೇಕು. ಹೀಗೆ ಸೂರ್ಯೋದಯಕಾಲದಲ್ಲಿ ಹಯಗ್ರೀವ-ದೇವರನ್ನು ಅಖಂಡವಾಗಿ ಧ್ಯಾನ ಮಾಡುವುದರಿಂದಲೇ ಹಯಗ್ರೀವಜಯಂತಿಯು ಪರಿಪೂರ್ಣಫಲವನ್ನು ನೀಡುತ್ತದೆ.

ಹಯಗ್ರೀವದೇವರು ಸಂಧ್ಯಾಕಾಲದಲ್ಲಿ ವಿಶೇಷವಾಗಿ ಭಕ್ತರನ್ನು ಅನುಗ್ರಹಿಸು-ತ್ತಾರೆ. ಆದ್ದರಿಂದ ಆಪಾದಮೌಳಿಪರ್ಯಂತವಾಗಿ ಹಯಗ್ರೀವದೇವರ ಧ್ಯಾನವನ್ನು ಮಾಡಬೇಕು. ಹಯಗ್ರೀವದಂಡಕವನ್ನು ಪುನಃ ಪುನಃ ಓದಿ, ಅದರಲ್ಲಿ ಹೇಳಿದ ಪ್ರಕಾರವಾಗಿಯೇ ಧ್ಯಾನವನ್ನು ಆಚರಿಸಬೇಕು.

ಕನಿಷ್ಠಪಕ್ಷ 1000 ಬಾರಿ ಹಯಗ್ರೀವ ಮಂತ್ರವನ್ನು ಜಪಿಸಬೇಕು. ಆ ಸಂದರ್ಭ -ದಲ್ಲಿ ಭಗವಂತನ ದಶಾವತಾರಗಳನ್ನು , ಚತುರ್ವಿಂಶತಿ ಅವತಾರಗಳ ಲೀಲೆಗಳನ್ನು ಹಯಗ್ರೀವದೇವರಲ್ಲಿ ಅನುಸಂಧಾನ ಮಾಡಿ, ಸಮರ್ಪಿಸಬೇಕು. ಮತ್ತು ಹಯ-ಗ್ರೀವದೇವರನ್ನು ಆಪಾದಮೌಳಿಪರ್ಯಂತವಾಗಿ ಸ್ಮರಣೆ ಮಾಡುತ್ತಾ, ಹೃತ್ಕಮಲದಲ್ಲಿ ನೆಲೆಸಿರುವ ಹಯಗ್ರೀವದೇವರಿಗೆ ಷೋಡಶೋಪಚಾರಪೂಜೆಯನ್ನು ಮಾಡಬೇಕು. ಪದ್ಮಾಸನದಲ್ಲಿ ಕುಳಿತು, ಕಣ್ಮುಚ್ಚಿ ನೇರವಾಗಿ ಕುಳಿತು, ಹೃತ್ಕಮಲವನ್ನು ಪ್ರಣವದಿಂದ ಅರಳಿಸಿ, ಅಲ್ಲಿ ಚಂದ್ರಮಂಡಲದಲ್ಲಿ ಹಯಗ್ರೀವದೇವರನ್ನು ಸ್ಥಾಪನೆ ಮಾಡಿ, ಅವರ ಕರುಣಾಪೂರ್ಣವಾದ ದೃಷ್ಟಿಯ ಬೆಳಕನ್ನು ಚಿಂತಿಸುತ್ತಾ, ಧ್ಯಾನ ಮಾಡಬೇಕು. ಬಾಹ್ಯಪೂಜೆಗಿಂತಲೂ ಅಂತರಂಗದ ಈ ಷೋಡಶೋಪಚಾರಪೂಜೆಗೆ ಅನುಪಮವಾದ ಮಹತ್ವವಿದೆ. ಉಳಿದೆಲ್ಲಾ ಲೌಕಿಕಕಾರ್ಯಗಳನ್ನು ಬದಿಗೊತ್ತಿ, ಸಮಯವನ್ನು ಸಾಧಿಸಿಕೊಂಡು, ಸುಮಾರು ಹದಿನೈದು ನಿಮಿಷಗಳ ಕಾಲ ಧ್ಯಾನವನ್ನು

ಆಚರಿಸಬೇಕು. ಬಾಹ್ಯವಾಗಿ ದೇವರಿಗೆ ಷೋಡಶೋಪಚಾರ ಪೂಜೆಯನ್ನು ಶ್ರದ್ಧಾಭಕ್ತಿಗಳಿಂದ ವಿಸ್ತಾರವಾಗಿ ಆಚರಿಸಬೇಕು. ಭಗವಂತನಿಗೆ ಪಂಚಾಮೃತಾಭಿ-ಷೇಕವನ್ನು ಮಾಡಬೇಕು. ವಿಷ್ಣುಸಹಸ್ರನಾಮಾವಳಿಯನ್ನು ಪಠಿಸುತ್ತಾ, ತುಳಸಿಯ ಅರ್ಚನೆಯನ್ನು ಮಾಡಬೇಕು. ಸಾಧ್ಯವಾದರೆ ಬ್ರಹ್ಮಸೂತ್ರಗಳನ್ನೂ ಕೂಡ ಪಠಿಸುತ್ತಾ, ಅರ್ಚನೆ ಮಾಡಬೇಕು. ಭಗವಂತನಿಗೆ ವಿಶೇಷವಾದ ಅಲಂಕಾರವನ್ನು ಮಾಡಿ, ನೈವೇದ್ಯವನ್ನು ಮಾಡಬೇಕು, ಪಂಚಭಕ್ಷ್ಯಗಳನ್ನು ಮಾಡಲು ಸಾಧ್ಯವಾಗ-ದಿದ್ದರೆ, ಕಡ್ಲೆಬೇಳೆ ಕೋಸಂಬರಿ, ಹಯಗ್ರೀವ, ಲಡ್ಡು, ಪಾಯಸಗಳನ್ನು ಅವಶ್ಯಮಾಡಿ, ಸಮರ್ಪಣೆ ಮಾಡಬೇಕು. ಹತ್ತು ನಿಮಿಷಕ್ಕೂ ಕಡಿಮೆಯಿಲ್ಲದಂತೆ ವಿವಿಧ ಬಗೆಯ ಮಂಗಳಾರತಿಗಳನ್ನು ಮಾಡಿ, ಭಗವಂತನ ಗುಣೋತ್ಕರ್ಷ-ಚಿಂತನೆಯನ್ನು ನಿರ್ದುಷ್ಟತ್ವ ಚಿಂತನೆಯನ್ನು ಮಾಡಬೇಕು. ಪೂಜೆಯ ಕೊನೆಯಲ್ಲಿ ಹಯಗ್ರೀವದಂಡಕವನ್ನು ಪಠಿಸುತ್ತಾ, ಲಕ್ಷ್ಮೀಹಯಗ್ರೀವನಿಗೆ ಜಯಕಾರವನ್ನು ಹಾಕಿ, ಈ ಮುಂದೆ ನೀಡಿದ ಮಂತ್ರದಿಂದ ಅರ್ಘ್ಯವನ್ನು ನೀಡಬೇಕು. ಋಗ್ಯಜುಸ್ಸಾಮ-ರೂಪಾಯ ವೇದಾಹರಣಕರ್ಮಣೇ । ಪ್ರಣವೋದ್ಗೀಥವಪುಷೇ ಮಹಾಶ್ವಶಿರಸೇ ನಮಃ ॥

ಹಯಗ್ರೀವದಂಡಕದ ಜೊತೆ ಇತರ ಸ್ತೋತ್ರಮಂತ್ರಗಳನ್ನೂ ಕೂಡ ಪಠಿಸಿ, ಲಕ್ಷ್ಮೀಹಯಗ್ರೀವನ ಅನುಗ್ರಹವನ್ನು ಯಾಚಿಸಬೇಕು. ಮೋಕ್ಷಕ್ಕೆ ಉಪಯುಕ್ತವಾದ ತತ್ವಜ್ಞಾನವನ್ನು ಕರುಣಿಸು ಎಂದು ಪ್ರಾರ್ಥಿಸಿ, ಧನ್ಯ ಎನ್ನಬೇಕು.

ಹಯಗ್ರೀವಪಂಜರ ಸ್ತೋತ್ರವನ್ನು ಪಠಿಸಿದರೆ ವಿಶೇಷವಾಗಿ ಜ್ಞಾನಸಿದ್ಧಿ-ಯಾಗುತ್ತದೆ, ವಾಕ್‌ಸಿದ್ಧಿಯೂ ಆಗುತ್ತದೆ. ಹಯಗ್ರೀವದಂಡಕ ಹಾಗೂ ಹಯಗ್ರೀವಪಂಜರ ಸ್ತೋತ್ರವನ್ನು 48 ದಿವಸಗಳ ಕಾಲ ಪಠಣೆ ಮಾಡುವುದರಿಂದ ಮಾತು ಬಾರದವನಿಗೂ ಮಾತು ಬರುತ್ತದೆ. ವಾಕ್‌ಸಿದ್ಧಿಯಿಲ್ಲದವನಿಗೂ, ವಾಕ್ ಸಿದ್ಧಿಯಾಗುತ್ತದೆ. ತತ್ವಜ್ಞಾನದ ಸಂಪಾದನೆ ಪ್ರತೀಕ್ಷಣವೂ ಅಭಿವೃದ್ಧವಾಗುತ್ತದೆ. ಇದರಲ್ಲಿ ಎಳ್ಳಷ್ಟೂ ಕೂಡ ಸಂಶಯವಿಲ್ಲ.

ಹಯಗ್ರೀವಜಯಂತಿಯ ದಿವಸ ಬ್ರಾಹ್ಮಣ ದಂಪತಿಗಳನ್ನು ಕರೆದು, ಊಟೋಪಚಾರಗಳನ್ನು ಮಾಡಿಸಿ, ದಾನ-ದಕ್ಷಿಣೆಗಳನ್ನು ನೀಡಿ, ಅವರ

ಅನುಗ್ರಹವನ್ನು ಪಡೆದುಕೊಳ್ಳಬೇಕು. ವಿಶೇಷವಾಗಿ ಮನೆಯಲ್ಲಿ ಜ್ಞಾನಸತ್ರವನ್ನು ಏರ್ಪಾಡು ಮಾಡಬೇಕು. ಅಥವಾ ಹಯಗ್ರೀವದೇವರ ಮುಖದಿಂದ ಹೊರ-ಹೊಮ್ಮಿದ ಉಪನಿಷತ್ತುಗಳನ್ನು ವೇದಾದಿಶಾಸ್ತ್ರಗಳ ವಿಚಾರವನ್ನು ಮಾಡಬೇಕು. ಬ್ರಾಹ್ಮಣರಿಂದ ಕೇಳಿ ತಿಳಿದು ತತ್ವಜ್ಞಾನದ ಸಂಪಾದನೆಯನ್ನು ಅಭಿವೃದ್ಧಿಗೊಳಿಸಿ-ಕೊಳ್ಳಬೇಕು.

ಹೀಗೆ ಹಯಗ್ರೀವಜಯಂತಿಯ ಆಚರಣೆಯನ್ನು ಮಾಡುವುದಷ್ಟೇ ಅಲ್ಲದೇ, ನಿತ್ಯವೂ ಹಯಗ್ರೀವದೇವರ ಆರಾಧನೆಯನ್ನು ಮಾಡುತ್ತಾ, ಭಗವಂತನ ಬಗ್ಗೆ ಯಥಾರ್ಥ ಜ್ಞಾನವನ್ನು ಪಡೆದು, ಜೀವನದಲ್ಲಿ ಮುಖ್ಯವಾದ ವಿವೇಕವನ್ನು ಹೊಂದಿ, ಸರಿಯಾದ ಮಾರ್ಗದಲ್ಲಿ ಸಾಗಿ, ಭಗವಂತನ ಅಪರೋಕ್ಷವನ್ನು ಪಡೆದು, ಲಕ್ಷ್ಮೀಹಯಗ್ರೀವನ ಪಾದಕಮಗಳ ದರ್ಶನವು ಶೀಘ್ರವಾಗಿ ಆಗುವಂತೆ ಪ್ರಯತ್ನ ಪಾಡಬೇಕು.

**ಗರುಡಜಯಂತೀ** – ಕೃಷ್ಣನು ಭಗವದ್ಗೀತೆಯಲ್ಲಿ ವೈನತೇಯಶ್ಚ ಪಕ್ಷಿಣಾಮ್, ಪಕ್ಷಿಗಳಲ್ಲಿ ನಾನು ಗರುಡ. ಎಂದು ಗರುಡನಲ್ಲಿ ವಿಭೂತಿರೂಪವನ್ನು ಹೇಳಿದ್ದಾನೆ. ಇಂತಹ ಶ್ರೀ ವಿಷ್ಣುವಿನ ವಾಹಕನಾದ ಗರುಡನ ಜನ್ಮ ದಿನವನ್ನು ಕೊಂಡಾಡಲು ಗರುಡ ಪಂಚಮಿ ಉತ್ಸವವನ್ನು ಆಚರಿಸಲಾಗುತ್ತದೆ. ಶ್ರಾವಣ ಮಾಸದ ಕೃಷ್ಣ ಪಕ್ಷ ಪಂಚಮಿಯನ್ನು ಗರುಡ ಪಂಚಮಿ ಎಂದು ಆಚರಿಸಲಾಗುತ್ತದೆ. ವಿನುತಾ ಮತ್ತು ಕಶ್ಯಪ ಮುನಿ ದಂಪತಿಯ ಪುತ್ರನಾದ ಗರುಡನು ಶಾಲ್ಮಲೀ ದ್ವೀಪ ಎಂಬ ಗ್ರಹದಲ್ಲಿ ವಾಸಿಸುತ್ತಾನೆ. ಅಲ್ಲಿ ಅವನು ನಿರಂತರವಾಗಿ ಭಗವಾನ್ ವಿಷ್ಣುವಿಗೆ ಪ್ರಾರ್ಥನೆ ಸಲ್ಲಿಸುತ್ತಿದ್ದಾನೆ

ಅಲೌಕಿಕಪಕ್ಷಿ ಗರುಡನ ಎರಡು ರೆಕ್ಕೆಗಳನ್ನು ಸಾಮ ವೇದದ ಎರಡು ವಿಭಾಗ-ಗಳೆಂದು - ಬೃಹತ್ ಮತ್ತು ರಥಂತರ - ವೈದಿಕ ಸಾಹಿತ್ಯದಲ್ಲಿ ಹೇಳಲಾಗಿದೆ. ಗರುಡನು ತನ್ನ ರೆಕ್ಕೆಗಳನ್ನು ಬಡಿದಾಗ, ಸಾಮವೇದದ ಮಂತ್ರ ಪಠಣವನ್ನು ಕೇಳಬಹುದು. ಗರುಡನು ವೈಕುಂಠದಲ್ಲಿ ಶ್ರೀವಿಷ್ಣುವಿನ ಸೇವೆಯಲ್ಲಿ ಸದಾ ನಿರತನಾಗಿದ್ದಾನೆ. ವಿಷ್ಣುವಿನ ಮಂದಿರಗಳಲ್ಲಿ ಭಗವಂತನ ಮುಂದೆ ಕೈ ಜೋಡಿಸಿ ಕುಳಿತಿರುವ ಗರುಡನ ವಿಗ್ರಹವನ್ನು ಕಾಣಬಹುದು.

ಗರುಡಧ್ಯಾನಮಂತ್ರ – ಖಗೇಶ್ವರಂ ಶರಣಮುಪಾಗತೋಸ್ಮ್ಯಹಂ ಮಹೌಜಸಂ ವಿತಿಮಿರಮಭ್ರಗೋಚರಮ್ । ಮಹಾಚಲಂ ಗರುಡಮುಪೇತ್ಯ ಖೇಚರಂ ಮಹೌಜಸಂ ವರದಮಜೇಯಮಕ್ಲಮಮ್ ॥ - ವಿಷ್ಣುಪುರಾಣ

ಗರುಡಃ ಸರ್ವದಾ ಧ್ಯೇಯಃ ಸುಧಾಪೂರ್ಣಂ ಹಿರಣ್ಮಯಮ್ । ದಧಾನಃ ಕುಂಭಮಭಯಂ ಪೀತಶುಕ್ಲಾರುಣೋ ಹರಿತ್ ॥ – ತಂತ್ರಸಾರ

ಈ ಕೆಳಗಿನ ಸ್ತೋತ್ರದಲ್ಲಿ ಗರುಡನ ದ್ವಾದಶನಾಮಗಳನ್ನು ಉಲ್ಲೇಖಿಸಲಾಗಿದೆ. ಸುಪರ್ಣ, ವೈನತೇಯ, ನಾಗಾರಿ, ನಾಗಭೂಷಣ, ವಿಷಾಂತಕಜಿತಾಂ, ಅಜಿತ, ವಿಶ್ವತೋಮುಖ, ಗರುತ್ಮಾನ್, ಖಗಪತಿ, ತಾರ್ಕ್ಷ್ಯ, ಕಶ್ಯಪನಂದನ ಈ ಹನ್ನೆರಡು ನಾಮಗಳನ್ನು ಯಾವನು ಪ್ರಾತಃಕಾಲ ಎದ್ದು ಪಠಿಸಿಸುವನೋ ಅವನು ಎಲ್ಲೆಡೆಯ-ಲ್ಲಿಯೂ ವಿಜಯವನ್ನು ಹೊಂದುವನು. ಅವನಿಗೆ ಹಾವುಗಳು ಕಚ್ಚುವುದಿಲ್ಲ ಹಾಗೂ ವಿಷವು ಬಾಧಿಸುವುದಿಲ್ಲ. ಸಂಗ್ರಾಮ ಹಾಗೂ ವ್ಯವಹಾರ್ಗಳಲ್ಲಿ ಕಾರ್ಯಸಿದ್ಧಿಯು ಆಗುವುದು, ಬಂಧನ ಬಿಡುಗಡೆ, ಯಾತ್ರೆಯಲ್ಲಿ ಸಿದ್ಧಿ, ವಿಪತ್ತು ನಾಶ, ಆಯುಷ್ಯ ಮೊದಲಾದವು ಶೀಘ್ರ ದೊರಕುವುವು.

ಸುಪರ್ಣೋ ವೈನತೇಯಶ್ಚ ನಾಗಾರಿರ್ನಾಗಭೂಷಣಃ । ವಿಷಾಂತಕೋ ಜಿತಾರಿಶ್ಚ ಅಜಿತೋ ವಿಶ್ವತೋಮುಖಃ । ಗರುತ್ಮಾನ್ ವೈ ಖಗಪತಿಸ್ತಾರ್ಕ್ಷ್ಯಃ ಕಶ್ಯಪನಂದನಃ ॥ 1 ॥ ದ್ವಾದಶೈತಾನಿ ನಾಮಾನಿ ಗರುಡಸ್ಯ ಮಹಾತ್ಮನಃ ಯಃ ಪಠೇತ್ ಪ್ರಾತರುತ್ಥಾಯ ಸರ್ವತ್ರ ವಿಜಯೀ ಭವೇತ್ ॥ 2 ॥ ವಿಷಂ ನಾಕ್ರಮತೇ ತಸ್ಯ ನ ವಾ ದಸ್ಯಂತಿ ಪನ್ನಗಾಃ । ಸಂಗ್ರಾಮೇ ವ್ಯವಹಾರೇ ಚ ಕಾರ್ಯಸಿದ್ಧಿಂ ಚ ಮಾನವಃ ॥ 3 ॥ ಬಂಧನಾನ್ಮುಕ್ತಿಮಾಪ್ನೋತಿ ಯಾತ್ರಾಯಾಂ ಸಿದ್ಧಿಮಾಪ್ನುಯಾತ್ । ವಿಪನ್ನಾಶಯತೇ ಕ್ಷಿಪ್ರಮಾಯುಃ ಶೀಘ್ರಂ ಪ್ರವರ್ತತೇ ॥ 4 ॥ ॥ ಇತಿ ಶ್ರೀಗರುಡದ್ವಾದಶನಾಮ-ಸ್ತೋತ್ರಮ್ ॥

ಗರುಡಧ್ಯಾನ-ಸ್ತೋತ್ರಪಠಣದಿಂದಾಗುವ ಫಲಗಳು

1. ಕಣ್ಣಿಗೆ ಸಂಬಂಧಪಟ್ಟ ಸಮೀಪ ದೃಷ್ಟಿದೋಷ, ದೂರದೃಷ್ಟಿದೋಷ ನಿವಾ-ರಣೆಯಾಗುತ್ತದೆ. ಕಣ್ಣು ಕೆಂಪಾಗುವುದು, ನೋವು, ಉರಿ ನಿವಾರಣೆಯಾಗುತ್ತದೆ..

2. ದ್ವಿತೀಯ ರಾಹು, ಪಂಚಮ ರಾಹು, ಸಪ್ತಮ ರಾಹು, ದ್ವಾದಶ ರಾಹು ದೋಷಗಳು, ಸರ್ವರೀತಿಯ ಸರ್ಪದೋಷಗಳೂ ನಿವಾರಣೆಯಾಗುತ್ತದೆ..

3. ಮನಸ್ಸಿನಲ್ಲಿ ನೋವು, ಅಸಮಾಧಾನ , ಬೇಸರ ಇಟ್ಟುಕೊಂಡು ಮನದಲ್ಲೇ ಕೊರಗುವವರು ಓದಿದರೆ ಮನಸ್ಸು ನಿರ್ಮಲವಾಗುತ್ತದೆ. ಶಾಂತವಾಗಿರುತ್ತಾರೆ..

4. ಸರ್ಪದೋಷ, ಕಾಳಸರ್ಪದೋಷ, .. ಇತ್ಯಾದಿ ಸರ್ಪದೋಷಗಳ ಪೂರ್ಣ -ವಾಗಿ ನಿವಾರಣೆಯಾಗುತ್ತದೆ..

5. ಸಮಸ್ತ ಕುಜದೋಷಗಳು ನಿವಾರಣೆಯಾಗುತ್ತದೆ..

6. ಸರ್ಪಸುತ್ತು ವಾಸಿಯಾಗುತ್ತದೆ..

7. ರಾಹು ನಕ್ಷತ್ರಗಳಲ್ಲಿ ಜನಿಸಿದ್ದರೆ ಆರಿದ್ರಾ, ಸ್ವಾತಿ, ಶತಭಿಷ..!

ಕೇತು ನಕ್ಷತ್ರಗಳಲ್ಲಿ ಜನಿಸಿದ್ದರೆ ಅಶ್ವಿನಿ, ಮಖಾ, ಮೂಲಾ ..!

ಕುಜನ ನಕ್ಷತ್ರಗಳಲ್ಲಿ ಜನಿಸಿದ್ದರೆ ಮೃಗಶಿರ, ಚಿತ್ತ, ಧನಿಷ್ಟ..!

ಆದವರ ನಕ್ಷತ್ರಗಳ ದೋಷ ನಿವಾರಣೆಯಾಗುತ್ತದೆ..

8. ಮಿಥುನಲಗ್ನದಲ್ಲಿ ಜನಿಸಿದ ಎಲ್ಲರೂ, ವಿವಾಹದ ನಂತರ ಜೀವನದಲ್ಲಿ ನೆಮ್ಮದಿ ಇಲ್ಲದವರು ಓದಿದರೆ ನೆಮ್ಮದಿ ಹಾಗೂ ಶಾಂತಿಯಿಂದ ಜೀವನ ಮಾಡುತ್ತಾರೆ..

9. ದೈವದೋಷವಿರುವವರು, ದೈವಶಾಪವಿರುವವರು, ಆಶ್ಲೇಷ ಬಲಿ ಮಾಡಿಸಿ-ದ್ದರೂ ದೋಷ ಹೋಗದೇ ಕಷ್ಟ ಅನುಭವಿಸುತ್ತಿದ್ದರೆ ಅಂತವರು ಗರುಡ ಅಷ್ಟೋತ್ತರ ಓದಿದರೆ ಸರ್ವದೋಷಗಳು ನಿವಾರಣೆಯಾಗುತ್ತದೆ..

10. ಸರ್ಪಸಂಸ್ಕಾರ ಮಾಡಿಸಿಯೂ ದೋಷ ಹೋಗದಿದ್ದರೆ, ನೆನೆದ ಕಾರ್ಯ-ಗಳು ಆಗದೇ ಇದ್ದರೆ ಅಂತವರು ಓದಿದರೆ ಶುಭವಾಗುತ್ತದೆ..

11. ಸತಿಪತಿಗಳ ಜಗಳ ನಿವಾರಣೆಯಾಗುತ್ತದೆ..

ರಾಹು-ಕೇತು ದೋಷಗಳು ನಿವಾರಣೆಯಾಗುತ್ತದೆ..

12. ಅನುಮಾನ, ಒಳಜಗಳ, ಪರದಾಟಗಳು ನಿವಾರಣೆಯಾಗುತ್ತದೆ.

13. ಪ್ರಸವ ಕಾಲದಲ್ಲಿ ಶಿಶುವು ಮಾಲೆಯನ್ನು ಹಾಕಿಕೊಂಡು ಜನಿಸಿದ್ದರೆ, ಕರುಳಬಳ್ಳಿ ಸುತ್ತಿ ಹುಟ್ಟಿದೆ ಅನ್ನುವ ದೋಷಗಳೆಲ್ಲವೂ ನಿವಾರಣೆಯಾಗುತ್ತದೆ..

14. ಮಕ್ಕಳು ತುಬಾ ಅನಾರೋಗ್ಯದಿಂದ ಇದ್ದು, ಜ್ವರ ಬಂದು ವಾಸಿಯಾಗದೇ ಇದ್ದರೆ, ಮಗುವಿನ ಕತ್ತು ಮತ್ತು ಸೊಂಟ ಸರಿಯಾಗಿ ನಿಲ್ಲದಿದ್ದರೆ, ಆ ಮನೆಯವರು, ಶಾಸ್ತ್ರೋಕ್ತವಾಗಿ ಗರುಡದೇವರನ್ನು ಪೂಜಿಸಿ, ಯಾವುದಾದರೂ ಎಣ್ಣೆಯಲ್ಲಿ ಅಭಿಮಂತ್ರಿಸಿ ಹಚ್ಚಿದರೆ ಬಹಳ ಬೇಗ ಮಗು ಆರೋಗ್ಯವಂತರಾಗುತ್ತಾರೆ..

15. ಕಣ್ಣಿನಲ್ಲಿ ಪೊರೆ ಬರುತ್ತಿರುವವರು, ಕಣ್ಣು ಕೆಂಪಗೆ ಆಗುತ್ತಿದ್ದರೆ, ಉರಿ ಬರುತ್ತಿದ್ದರೆ,

ಗರುಡ ಮಂತ್ರವನ್ನು ನೀರಿನಲ್ಲಿ ಅಭಿಮಂತ್ರಿಸಿ, ಆ ನೀರನ್ನು ಉಗ್ಗಲು ಇಖಿಕ ಗೆ ಹಾಕಿ ನೀರಿನಿಂದ ಕಣ್ಣು ಶುದ್ಧ ಮಾಡಿಕೊಂಡರೆ, ಸಮಸ್ತ ನೇತ್ರದೋಷ ಪೂರ್ಣವಾಗಿ ನಿವಾರಣೆಯಾಗುತ್ತದೆ.

## ಶ್ರಾವಣ ಮಾಸದ ದಾನಗಳು

ಶ್ರಾವಣಮಾಸದಲ್ಲಿ ತಿಂಗಳಿಡೀ ಬೆಳ್ಳಿಯ ಹಣತೆಯಲ್ಲಿ ದೀಪವನ್ನು ಹಚ್ಚಿ ಅಥವಾ ಬಂಗಾರದ ಹಣತೆಯಲ್ಲಿ ಆಕಳಿನ ಶುದ್ಧ ತುಪ್ಪವನ್ನು ತುಂಬಿ ಸತ್ಪಾತ್ರರಲ್ಲಿ ದಾನ ಮಾಡಬೇಕು. ಶ್ರೀಹರಿಗೆ ಲಕ್ಷಪುಷ್ಪಾರ್ಚನೆಯನ್ನು ಮಾಡಿ ಯಾವ ಪದಾರ್ಥಗಳಿಂದ ಲಕ್ಷ ಪೂಜೆಯನ್ನು ಮಾಡಲಾಗಿದೆಯೋ ಅದನ್ನು ದಾನ ಕೊಡಬೇಕು. ಈ ಮಾಸದಲ್ಲಿ ಮಾಸಪೂರ್ತಿ ಅಥವಾ ಹಗಲು ಮಾತ್ರವಾಗಲಿ ರಾತ್ರಿ ಕಾಲದಲ್ಲಿ ಮಾತ್ರವಾಗಲಿ ಒಂದು ದಿನ ಪೂರ್ತಿಯಾಗಲಿ, ಭೋಜನ ಕಾಲದಲ್ಲಿ ಮಾತ್ರವಾಗಲಿ ಮೌನವ್ರತ ಮಾಡಬೇಕು. ಇದರಿಂದ ಶಾಸ್ತ್ರ ಪ್ರಾವಿಣ್ಯ, ಉತ್ತಮ ವಾಗ್ಮಿತೆಗಳು, ಬುದ್ಧಿವಂತಿಕೆಗಳು ಲಭ್ಯವಾಗುತ್ತವೆ. ಮೌನ ವ್ರತದ ಕೊನೆಯಲ್ಲಿ ಘಂಟೆಯನ್ನು ಗ್ರಂಥಗಳನ್ನು ದಾನ ಕೊಡಬೇಕು. ಶ್ರಾವಣ ಶನಿವಾರದಂದು ಶನಿ-ಪೂಜೆಯನ್ನು ಮಾಡಿ ಬ್ರಾಹ್ಮಣರಿಗೆ ಎಳ್ಳೆಣ್ಣೆ, ಎಳ್ಳು, ಪೂಜೆ ಮಾಡಿದ ಶನಿಪ್ರತಿಮೆ, ಇಂದ್ರನೀಲಮಣಿಯನ್ನು ದಾನ ಕೊಡಬೇಕು.

## ಶ್ರಾವಣ ॥ ಬಹುಳ ॥ ಪ್ರತಿಪತ್

ಗಾಯತ್ರೀಪ್ರತಿಪದಾ – ಉಪಾಕರ್ಮದ ಮರುದಿವಸ ಸಹಸ್ರ ಗಾಯತ್ರಿಯನ್ನು ಮಾಡಬೇಕೆಂಬ ವಿಧಿ ಇದೆ. ಶ್ರಾವಣಹುಣ್ಣಿಮೆಯ ಮತ್ತೊಂದು ಪ್ರಸಿದ್ಧ ಆಚರಣೆ ರಕ್ಷಾಬಂಧನ(ರಾಖೀಹಬ್ಬ). ಇದರ ಬಗ್ಗೆ ಧರ್ಮಸಿಂಧುವಿನಲ್ಲಿ ಹೀಗಿದೆ –

ಉತ್ತರಭಾರತದಲ್ಲಿ ಇದು ಅತೀವ ಸಂತಸ-ಸಂಭ್ರಮಗಳ ದಿನ. ಶ್ರಾವಣ-ಹುಣ್ಣಿಮೆಯ ದಿನ ಒಡಹುಟ್ಟಿದ ಸೋದರರಿಗೂ ಹಾಗೂ ಸೋದರಸಮಾನರಾದ ಬಂಧುಮಿತ್ರರಿಗೂ ಹೆಣ್ಣುಮಕ್ಕಳು ತಿಲಕ ಹಚ್ಚಿ, ರಕ್ಷಾಬಂಧನ (ಹಿಂದೂಸ್ಥಾನೀ ಭಾಷೆಯಲ್ಲಿ ರಾಖೀ')ವನ್ನು ಬಲಗೈಗೆ ಕಟ್ಟುತ್ತಾರೆ. ಸೋದರರು ಪ್ರತಿಯಾಗಿ ಹಣ-ಕಾಣಿಕೆಗಳನ್ನು ಇತ್ತು ಹಾರೈಸುತ್ತಾರೆ. ಆ ದಿನ ಸೋದರ-ಸೋದರಿಯರು ಸಿಹಿ ಹಂಚಿಕೊಳ್ಳುತ್ತ ಗೀತನೃತ್ಯ ವಿನೋದಗಳಲ್ಲಿ ತೊಡಗುತ್ತ ಸಹಭೋಜನ ಮಾಡುತ್ತಾರೆ.

ಇದಕ್ಕೊಂದು ಕಥೆ ಇದೆ- ಬಲಿಚಕ್ರವರ್ತಿಯ ಭಕ್ತಿಗೆ ಒಲಿದು ಆತನ ಮನೆಯ ಬಾಗಿಲನ್ನು ಕಾಯಲು ಒಪ್ಪಿ ವಿಷ್ಣುವು ಪಾತಾಳ ಸೇರಿದಾಗ ವೈಕುಂಠದಲ್ಲಿ ಲಕ್ಷ್ಮಿಯು ತಬ್ಬಿಬ್ಬಾದಳಂತೆ. ಧರ್ಮಾತ್ಮನಾದ ಬಲಿಚಕ್ರವರ್ತಿಯನ್ನು ಸಮೀಪಿಸಿ ಸೋದರೀ-ಸ್ನೇಹದಿಂದ ಆತನ ಕೈಗೆ ರಕ್ಷಾಬಂಧನವನ್ನು ಕಟ್ಟಿದಳಂತೆ. ಪ್ರತಿಯಾಗಿ ವರ ಕೋರು-ವಂತೆ ಬಲಿಯು ತನ್ನ ಸೋದರಿ ಲಕ್ಷ್ಮಿಯನ್ನು ಕೇಳಿದಾಗ, ಗಂಡನನ್ನು ಬಿಟ್ಟು-ಕೊಡುವಂತೆ ಕೋರಿದಳಂತೆ! ಆದ್ದರಿಂದ ರಾಖೀ ಕಟ್ಟುವಾಗ ಈ ಕೆಳಕಂಡ ಶ್ಲೋಕ-ವನ್ನು ಹೇಳುವ ಸಂಪ್ರದಾಯವಿದೆ- ಯೇನ ಬದ್ಧೋ ಬಲೀ ರಾಜಾ ದಾನವೇಂದ್ರೋ ಮಹಾಬಲಃ । ತೇನ ತ್ವಾಂ ಪ್ರತಿಬಧ್ನಾಮಿ ರಕ್ಷೇ ಮಾ ಚಲ ಮಾ ಚಲ ॥

ಹೀಗೆ ಸೋದರೀಸ್ನೇಹದಿಂದ ಲಕ್ಷ್ಮೀದೇವಿಯು ಸಾಧಿಸಿದ ಉಪಾಯವೇ ಲೋಕಗಳಿಗೆ ಸೋದರ-ಸೋದರೀ ಪ್ರೇಮದ ಆದರ್ಶವಾಗಿ, ರಾಖೀಹಬ್ಬದ ಹಿನ್ನಲೆಯಾಗಿದೆ. ಇನ್ನೊಂದು ಕಥೆ ಪ್ರಚಲಿತವಿದೆ- ಶಿಶುಪಾಲನನ್ನು ವಧಿಸುವಾಗ ಶ್ರೀಕೃಷ್ಣನಿಗೆ ಚಕ್ರದ ತುದಿ ತಾಕಿ ರಕ್ತಸ್ರಾವವಾಯಿತಂತೆ. ಅಲ್ಲೇ ಇದ್ದ ದ್ರೌಪದಿ ಧಾವಿಸಿ ತನ್ನ ಸೆರಗಿನ ಅಂಚನ್ನೇ ಹರಿದು ಗಾಯಕ್ಕೆ ಕಟ್ಟಿ ರಕ್ತಸ್ರಾವವನ್ನು ತಡೆದಳಂತೆ. ಸಂತೋಷಗೊಂಡ ಕೃಷ್ಣನು ಅವಳಿಗೆ ಆಜನ್ಮವೂ ರಕ್ಷಣೆ ನೀಡುವುದಾಗಿ ಭರವಸೆ ಇತ್ತ

-ನಂತೆ. ಮುಂದೆ ಕುರುಸಭೆಯಲ್ಲಿ ಅವಳಿಗೆ ಅಕ್ಷಯಾಂಬರವಿತ್ತು ಮಾನಸಂರಕ್ಷಣೆ ಮಾಡಿದ ಪ್ರಸಂಗ ನಮಗೆಲ್ಲ ಗೊತ್ತೇ ಇದೆ.

ಶ್ರಾವಣ ಹುಣ್ಣಿಮೆಯನ್ನು ಪಾಣಿನೀಮಹರ್ಷಿಗಳ ಪುಣ್ಯದಿನವೆಂದೂ ಆರಾಧಿಸುತ್ತಾರೆ

**ಶ್ರೀ ಗೋಪಾಲಸ್ವಾಮಿತೀರ್ಥರು (ಶ್ರೀಪಾದರಾಜ ಮಠ)** ಶ್ರಾವಣ ಪೂರ್ಣಿಮಾ - ಮುಳಬಾಗಿಲು (ಕ್ರಿ.ಶ. 1598-1620) ಸನ್ನ್ಯಾಯರತ್ನವಲ್ಯಾದಿ ವ್ಯಾಖ್ಯಯಾ ಮೋದದಾಯಕಂ । ಗೋಪೀನಾಥಪದಾಸಕ್ತಂ ಗೋಪಾಲಸ್ವಾಮಿನಂ ಭಜೇ ॥

## ಶ್ರಾವಣ ॥ ಬಹುಳ ॥ ದ್ವಿತೀಯಾ ॥

## ಶ್ರೀಮದ್ರಾಘವೇಂದ್ರತೀರ್ಥಗುರುಸಾರ್ವಭೌಮರ ಚರಿತ್ರೆ ಹಾಗೂ ಮಹಿಮೆ

ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯ ಚ। ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ॥ ದುರ್ವಾದಿಧ್ವಾಂತರವಯೇ ವೈಷ್ಣವೇಂದೀವರೇಂದವೇ। ಶ್ರೀರಾಘವೇಂದ್ರಗುರವೇ ನಮೋ ಅತ್ಯಂತದಯಾಲವೇ ॥

[1]ಶ್ರೀರಾಘವೇಂದ್ರರೆಂದರೆ ಗುರುಗಳು. ಗುರಿ ತೋರುವವವರು. ತಲುಪುವ-ವರೆಗೆ ಬೆಂಗಾವಲಾಗಿದ್ದು ರಕ್ಷಿಸುವ ದಯಾಳುಗಳು. ಪೂಜ್ಯರು. ಸತ್ಯರತರು. ಧರ್ಮರತರು. ಕೇಳಿದ್ದನ್ನು ನೀಡುವರು. ಬಯಸಿದ್ದನ್ನು ಸುರಿಸುವರು. ಆದ್ದರಿಂದಲೇ ಗುರುಸಾರ್ವಭೌಮರು.

ಎಲ್ಲರಿಗೂ ಜೀವನದುದ್ದಕ್ಕೂ ತಾಯಿ, ತಂದೆ, ಬಂಧುಗಳು, ಜೊತೆಗಾರರು . .

---

೧. ಕೋಡಿಹಳ್ಳಿ ಸತ್ಯನಾರಾಯಣಾಚಾರ್ಯ ಶ್ರೀಮತೀ ಸುಕನ್ಯಾ ದಂಪತಿಗಳಲ್ಲಿ ಜನಿಸಿದ ಶ್ರೀವಿದ್ಯಾಮಾನ್ಯತೀರ್ಥರ ಶಿಷ್ಯರಾದ ವೇಂಕಟೇಶಾಚಾರ್ಯ ಇವರು ಗುರುರಾಯರ ಚರಿತ್ರೆಯನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಸುಮಾರು ಆರು ತಿಂಗಳು ಸತತ ಪರಿಶ್ರಮದಿಂದ ಬರೆದು ನೀಡಿದ್ದಾರೆ. ಇವರಿಗೆ ಅನಂತಕೃತಜ್ಞತೆಗಳನ್ನಷ್ಟೇ ಅರ್ಪಿಸುತ್ತೇನೆ.

. . . ಎಲ್ಲರೂ ಬೇಕು. ಇವರೆಲ್ಲಾ ಇಲ್ಲದೆಯೇ ಬದುಕುವುದು ಬಹಳಕಷ್ಟ. ಹಠಕ್ಕೆ ಬಿದ್ದು, ಎಲ್ಲರಿಂದ ದೂರಾಗಿ ಸಾಹಸದಿಂದ ಬದುಕಲೂಬಹುದು. ಆದರೆ, ಗುರುಗಳಿಲ್ಲದಿದ್ದರೆ ಬದುಕುವುದು ಅಸಾಧ್ಯ. ಬದುಕಿದ್ದೇ ಆದರೆ, ಉಸಿರಾಟವೂ ಅರ್ಥಹೀನ. ಅನರ್ಥಕಾರಕ. ಕುರುಡ ಬಹು ಎತ್ತರದ ಬೆಟ್ಟದ ಶಿಖರದ ಮೇಲೆ ಒಂಟಿಯಾಗಿ ವಾಯುವಿಹಾರ ಹೊರಟಂತೆ.

ಭಗವಂತನೆಂದರೆ, ಪರಮಾತ್ಮನೆಂದರೆ ವಿಷ್ಣುವೇ; ಬೇರಾರೂ ಅಲ್ಲ. ವಿಷ್ಣುವಿನ ಅನುಗ್ರಹ ಪಡೆಯುವುದೇ ಬಹುಮುಖ್ಯವಾದುದು. ಹುಟ್ಟು-ಸಾವು-ಮುಪ್ಪು - ನೋವು-ತಾಪತ್ರಯಗಳ ಬಂಧನದಿಂದ ಪೂರ್ಣವಾಗಿ ಮುಕ್ತರಾಗಿ ನಾರಾಯಣನ ಮಂದಿರದಲ್ಲಿ, ಅವನ ಪ್ರೀತಿಯ ದಾಸರಾಗಿ ಎಂದೆಂದಿಗೂ ಕೊನೆಯಾಗದ ಭೋಗಗಳೊಂದಿಗೆ ಸುಖವಾಗಿರುವುದೇ ಇದರ ಫಲ. ಈ ಗುರಿ ತಲುಪಲು ಬೇಕಾದ ಇತರ ವಿಷಯಗಳೂ ಗುರಿಗಳೇ. ಉಪಗುರಿಗಳು. ಗುರಿ-ಉಪಗುರಿಗೆ ಬೇಕಾದ ಪರಮಾನುಗ್ರಹ ಮಾಡುತ್ತಿರುವವರನ್ನೇ ಶಿಷ್ಯರು ಭಕ್ತಿಯಿಂದ ಕರೆವರು ಶ್ರೀಗುರುರಾಯರು.

ಭಗವಂತ, ತನ್ನ ಭಕ್ತರನ್ನು ವಾತ್ಸಲ್ಯದಿಂದ ಪೋಷಿಸುವ ಗುಣವುಳ್ಳವನನ್ನು ಭೂಲೋಕಕ್ಕೆ ಕಳುಹಿಸಿರುವನು. ಮಗುವಿಗೆ ಸಿಹಿಯ ಆಸೆ ತೋರಿಸಿ ಮಗ್ಗಿ ಕಲಿಸಿದಂತೆ, ಬೇಡಿದಿಷ್ಟಾರ್ಥ ನೀಡುತ್ತಲೇ ವಿಷ್ಣು ಸರ್ವೋತ್ತಮತ್ವವನ್ನು ಕಲಿಸುವ ಯೋಗಿ. ದೈತ್ಯ ಬಾಲಕರಿಗೂ ಬೋಧಿಸುವ ಜಾಣ. ಶ್ರೀನರಹರಿಯ ಅವತಾರವನ್ನೇ ಸಾಧಿಸಿದ ಪ್ರಹ್ಲಾದನೆಂಬ ಪರಮಭಕ್ತ. ಬ್ರಹ್ಮದೇವರ ಪೂಜೆಗೆ ಪುಷ್ಪಾದಿಗಳ ತಂದೊಪ್ಪಿಸುವ ಕರ್ಮಜ ದೇವತೆ. ಶೇಷವಾಯುಗಳಿಂದ ಸಮಾವಿಷ್ಟ. ಭೀಮಭಕ್ತ ಬಾಹ್ಲೀಕ. ಮಹಾಮಹಿಮ ವ್ಯಾಸರಾಜ. ಇಗೋ ಗುರುರಾಯ. ಮೂಲರೂಪ-ದಿಂದಾರಂಭಿಸಿ, ಅವರ ಅವತಾರ ರೂಪಗಳ, ಚರಿತೆಗಳ, ಗ್ರಂಥರಚನೆ, ದುರ್ವಾದಿನಿಗ್ರಹ, ಆರ್ತಾನುಕಂಪ, ಫಲಪಡೆದ ಭಕ್ತರ ಹರ್ಷೋದ್ಗಾರ ಮೊದಲಾದ ಪ್ರತಿಯೊಂದೂ ಅವರ ಮಹಿಮೆಯೇ. ಪುಣ್ಯಸುರಿಸುವ ಮೇಘವೇ.

ಶ್ರೀಮಧ್ವಾಚಾರ್ಯರು, ಶ್ರೀಪದ್ಮನಾಭತೀರ್ಥರು. ಶ್ರೀನರಹರಿತೀರ್ಥರು, ಶ್ರೀಮಾಧವತೀರ್ಥರು. ಶ್ರೀಅಕ್ಷೋಭ್ಯತೀರ್ಥರು, ಶ್ರೀಜಯತೀರ್ಥರು. ಶ್ರೀವಿದ್ಯಾಧಿ

-ರಾಜತೀರ್ಥರು. ಶ್ರೀಕವೀಂದ್ರತೀರ್ಥರು, ಶ್ರೀವಾಗೀಶತೀರ್ಥರು ಶ್ರೀರಾಮಚಂದ್ರ-ತೀರ್ಥರು, ಶ್ರೀವಿಬುಧೇಂದ್ರ-ತೀರ್ಥರು, ಶ್ರೀಜಿತಾಮಿತ್ರತೀರ್ಥರು ಶ್ರೀರಘು-ನಂದನತೀರ್ಥರು, ಶ್ರೀಸುರೇಂದ್ರತೀರ್ಥರು, ಶ್ರೀವಿಜಯೀಂದ್ರತೀರ್ಥರು,

ಶ್ರೀಸುಧೀಂದ್ರತೀರ್ಥರು ಅರ್ಚಿಸಿದ ಬ್ರಹ್ಮಕರಾರ್ಚಿತ ಶ್ರೀಮೂಲರಾಮ-ಚಂದ್ರದೇವರ ಮೂರ್ತಿಯ ಅರ್ಚಕರಾದ ಗುರುರಾಯರು ಸಕಲಾಭೀಷ್ಟದಾಯಕರು.

ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು ಜ್ಞಾನ, ಭಕ್ತಿ, ವೈರಾಗ್ಯ, ತಪಸ್ಸು ಮುಂತಾದ ಯೋಗ್ಯವಾದ ಅಸಂಖ್ಯ ಕಲ್ಯಾಣ ಗುಣಗಳ ಗಣಿ. ಸಮುದ್ರದಂತೆ ಗಂಭೀರ. ಪ್ರಖರ ತೇಜಸ್ವಿಯಾದರೂ ಭಕ್ತರ ಕಣ್ಣಿಗೆ ಆಹ್ಲಾದದಾಯಕ ಚಂದ್ರ. ಪರ್ವತದಂತೆ ಅಚಲ ಶ್ರೀಹರಿವಾಯುಗಳಲ್ಲಿರುವ ನಿಷ್ಠೆ. ಉತ್ತಮೋತ್ತಮ ಯೋಗಿವರ್ಯ. ಕಾವ್ಯ, ಅಲಂಕಾರ, ನೀತಿ, ನಾಟಕ, ವೇದ, ಸ್ಮೃತಿ, ಪೂರ್ವೋತ್ತರ-ಮೀಮಾಂಸಾ, ಯೋಗ, ಧರ್ಮಶಾಸ್ತ್ರ, ಸಂಗೀತ, ತರ್ಕ, ವ್ಯಾಕರಣಾದಿ ಸಮಸ್ತ ಶಾಸ್ತ್ರಾಭಿಜ್ಞ, ಮಂತ್ರ ನಿಕೇತ ನಿಲಯ. ಪರಿಮಳಾದಿ 48 ಕೃತಿರತ್ನಗಳ ಕರ್ತಾ. ಕಲಿಬಾಧೆಯಿಂದ ನಶಿಸುತ್ತಿದ್ದ ವೇದವಿದ್ಯೆಯ ಪುನರುದ್ಧಾರಕ. ಗುರುರಾಯರ ಸಾಧನೆಯನ್ನು ಕಂಡ ಆದಿಗುರುಗಳಾದ ಶ್ರೀಮಧ್ವರು ಬದರಿಯಲ್ಲಿಂದಿಗೂ ಶ್ರೀವೇದವ್ಯಾಸರ ಬಳಿ ನಿಶ್ಚಿಂತರು. ತನ್ನ ಭಕ್ತರ ರಕ್ಷಣೆ ಮಾಡುತ್ತಿರುವುದನ್ನು ನೋಡಿ ಶ್ವೇತದೀಪದ ಶೇಷತಲ್ಪದಲ್ಲಿ ಶ್ರೀಹರಿಯೂ ನಿಶ್ಚಿಂತ. 50 ವರ್ಷಗಳ ಪೀಠಾಧಿಪತ್ಯ. 700 ವರ್ಷ ಬೃಂದಾವನದಲ್ಲಿದ್ದು ಭಕ್ತರ ರಕ್ಷಣೆ. ಅವರ ಮಹಿಮಾತಿಶಯಗಳನ್ನು ಸಂಪೂರ್ಣವಾಗಿ ವರ್ಣಿಸಲು ನಮ್ಮಿಂದ ಸಾಧ್ಯವಿಲ್ಲ. ಲಭ್ಯವಿರುವ ಪ್ರಮಾಣಬದ್ಧ ದಿಟವಾದ ವಿಷಯಗಳಲ್ಲಿ ಆಯ್ದ ಕೆಲವನ್ನು ಮಾತ್ರ ವಸ್ತುನಿಷ್ಠವಾಗಿ, ಅತ್ಯಂತ ಸಂಕ್ಷಿಪ್ತವಾಗಿ, ನಿರ್ದುಷ್ಟವಾಗಿ ದಾಖಲಿಸುವುದೇ ಈ ಕೃತಿಯ ವೈಶಿಷ್ಟ್ಯ.

ಶ್ರೀ ಮಧ್ವಾಚಾರ್ಯರೇ ಮೊದಲಾದ ಸಕಲ ಗುರುಗಳ ಅನುಗ್ರಹವನ್ನು ಪಡೆಯಬೇಕಾಗಿರುವುದರಿಂದ ಅವರೆಲ್ಲರ ಸನ್ನಿಧಾನಪಾತ್ರರೂ, ಕರುಣಾ-ಮೂರ್ತಿಗಳೂ, ಭಕ್ತಪರಾಧೀನರೂ, ಆಶ್ರಿತವತ್ಸಲರೂ, ವಿದ್ವತ್ ಪರಿಜ್ಞೇಯ ಮಹಾವಿಶೇಷರೂ, ಕಲ್ಪವೃಕ್ಷ ಕಾಮಧೇನು ಸದೃಶರಾದ ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರಗುರುಸಾರ್ವಭೌಮರನ್ನು ನಾವು ಆಶ್ರಯಿಸಿದರೆ ಉಳಿದೆಲ್ಲಾ

ಗುರುಗಳ ಅನುಗ್ರಹವಾಗುವುದರಲ್ಲಿ ಸಂದೇಹವಿಲ್ಲ. ಗುರುಗಳ ಅನುಗ್ರಹವೇ ಶ್ರೀಹರಿಯ ಅನುಗ್ರಹದ ಮೂಲ. ಅಂತಹ ಶ್ರೀ ರಾಘವೇಂದ್ರ ತೀರ್ಥಗುರು-ಸಾರ್ವಭೌಮರ ಅನುಗ್ರಹವನ್ನು ನಾವು ಸಂಪಾದಿಸಿಕೊಳ್ಳಬೇಕಾಗಿದ್ದಲ್ಲಿ ತಪ್ಪದಲೇ ಅವರ ಮಹಾತ್ಮ್ಯಜ್ಞಾನದ ಅರಿವು ಅತ್ಯಂತ ಅವಶ್ಯಕ.

ರಾಯರ ಪೂರ್ವಾಶ್ರಮದ ಸೋದರಳಿಯ ನಾರಾಯಣಾಚಾರ್ಯ ರಚಿಸಿರುವ ರಾಘವೇಂದ್ರವಿಜಯ; ವ್ಯಾಖ್ಯಾನರೂಪವಾದ ಅರ್ಚಕ ವೇದವ್ಯಾಸಾಚಾರ್ಯರ ಅಣುರಾಘವೇಂದ್ರವಿಜಯ; ಅಪ್ಪಣ್ಣಾಚಾರ್ಯ ರಚಿಸಿರುವ ರಾಘವೇಂದ್ರ ಸ್ತೋತ್ರ, ಕವಚ, ಮಂಗಳಾಷ್ಟಕ, ಗದ್ಯ, ದಂಡಕ; ರಾಯರ ಪೂರ್ವಾಶ್ರಮದ ಮರಿಮೊಮ್ಮಗ ಶ್ರೀ ವಾದೀಂದ್ರತೀರ್ಥರ ಗುರುಗುಣಸ್ತವನ, ಇವುಗಳಲ್ಲಿ ಕೆಲವಕ್ಕಿರುವ ವ್ಯಾಖ್ಯಾನ-ಗಳು, ದಾಸ ಸಾಹಿತ್ಯ, ಕೃಷ್ಣಾವಧೂತರ ರಾಘವೇಂದ್ರ ತಂತ್ರ, ವಿದ್ಯಾರತ್ನಂ ಪಂಚಮುಖಿ ಶ್ರೀ ರಾಘವೇಂದ್ರಾಚಾರ್ಯವಿರಚಿತ ಶ್ರೀರಾಘವೇಂದ್ರಗುರುಸಾರ್ವ-ಭೌಮ-ಸಪ್ತರಾತ್ರೋತ್ಸವ-ಚಂಪೂ, ಪಂಡಿತ ಹನುಮೇಶಾಚಾರ್ಯ ಚಾಲಿಹಾಳರ ಶ್ರೀಮದ್ರಾಘವೇಂದ್ರ ಗುರುವೈಭವಕಾವ್ಯಂ ಶ್ರೀ ಪಿ.ವಿ.ಹರಿನಾಥ್‌ರವರು ಬರೆದ ಶ್ರೀ ರಾಘವೇಂದ್ರಗ್ರಂಥಮುಕ್ತಾವಲೀ, ಇನ್ನೂ ಹಲವರ ಲೇಖನಗಳು, ಶ್ರೀಮಠದ ಐತಿಹಾಸಿಕ ದಾಖಲೆಗಳು ರಾಯರ ಮಹಿಮೆಗಳ ತಿಳುವಳಿಕೆಯ ಆಕರಗಳು.

ಗೌತಮರ ಶಾಪದಿಂದ ನಷ್ಟವಾದ ದಿವ್ಯಜ್ಞಾನದ ಪುನಃ ಪ್ರಕಾಶನ, ಬ್ರಹ್ಮಾದಿ ಸಮಸ್ತ ಸಜ್ಜನರಿಗೆ ಸಕಲಸಚ್ಛಾಸ್ತ್ರಗಳ ಉಪದೇಶ ಕರುಣಿಸಿದ ಶ್ರೀವೇದವ್ಯಾಸರು ಬೋಧಿಸಿದ ತತ್ವಗಳು ದುರ್ವಾದಿಗಳ ಅಪವ್ಯಾಖ್ಯಾನಾದಿಗಳಿಂದ ಮರೆಯಾದಾಗ, ಜೀವೋತ್ತಮರಾದ ಶ್ರೀವಾಯುದೇವರೇ ಶ್ರೀಮಧ್ವಾಚಾರ್ಯರಾಗಿ ಅವತರಿಸಿ, ದುರ್ಮತಗಳ ಖಂಡಿಸಿ, ಸನ್ಮತಸ್ಥಾಪನೆಯನ್ನು ಮಾಡಿದರು. ಹನುಮದವತಾರದಲ್ಲಿ ಶ್ರೀರಾಮನನ್ನು, ಭೀಮಾವತಾರದಲ್ಲಿ ಶ್ರೀಕೃಷ್ಣನನ್ನು ಸೇವಿಸಿದಂತೆ, ಶ್ರೀವೇದವ್ಯಾಸ-ದೇವರನ್ನು ಪರಮಭಕ್ತಿಯಿಂದ ಸೇವಿಸಿದರು. ಸರ್ವಮೂಲಗ್ರಂಥಗಳನ್ನು ಶಿಷ್ಯಕೋಟಿಗಾಗಿ ಅನುಗ್ರಹಿಸಿದರು. ಸುಜ್ಞಾನವನ್ನು ಸುಜನರಿಗೆ ದಯಪಾಲಿಸುವಂತೆ ಶಿಷ್ಯ-ಪ್ರಶಿಷ್ಯರಿಗೆ ಆದೇಶಿಸಿದರು.

ಭಾಗವತ ಧರ್ಮರತರಾದ ಗೌತಮ ಋಷಿಗಳು ಭಗವಂತನ ಆಜ್ಞೆಯಂತೆ ಅಸುರಮೋಹನಾರ್ಥವಾಗಿ ಐದು ಅಧ್ಯಾಯಗಳಿಂದ ಕೂಡಿದ ನ್ಯಾಯ ಸೂತ್ರಾತ್ಮಕ-

ವಾದ ಗ್ರಂಥವನ್ನು ರಚಿಸಿದರು. ತಮ್ಮ ವಿರುದ್ಧ ಕುತಂತ್ರ ನಡೆಸಿದ ಬ್ರಾಹ್ಮಣರಿಗೆ ಜ್ಞಾನನಾಶದ ಶಾಪವನ್ನಿತ್ತು, ಜ್ಞಾನೋಪದೇಶಕ್ಕಾಗಿ ವೇದವ್ಯಾಸರ ಅವತಾರವಾಗಲು ಪರಂಪರಯಾ ಕಾರಣೀಭೂತರಾದರು.

ಈ ಗೌತಮರ ವಂಶದಲ್ಲಿ ಉತ್ತಮರಾದ ಅನೇಕ ಮಂದಿ ಋಷಿಗಳು, ಸಾತ್ತ್ವಿಕ ಗುಣಶಾಲಿ ಪುರುಷರು, ಸ್ತ್ರೀಯರೂ ಹುಟ್ಟಿದರು. ಈ ವಂಶದಲ್ಲಿ ಕಾಲಾನುಕ್ರಮದಲ್ಲಿ ಕೃಷ್ಣಭಟ್ಟರೆಂಬ ಪಂಡಿತ ಶ್ರೇಷ್ಠರು ಹುಟ್ಟಿದರು. ಬಹುಮಾನಿತ ವಿಪ್ರರ ಷಾಷ್ಟಿಕವಂಶ ಅರವತ್ತೊಕ್ಕಲು ಬೀಗಮುದ್ರೆ ಮನೆತನ. ಸ್ಥಳ ಚೋಳಮಂಡಳ. ವರದರಾಜನ ಕಂಚಿಯ ಬಳಿಯ ಭುವನಗಿರಿ. ಸದಾಚಾರಸಂಪನ್ನರು. ಶ್ರೀಮಧ್ವಸಿದ್ಧಾಂತಕುಶಲರು. ಸಜ್ಜನರ ಪ್ರೀತಿಪಾತ್ರರು. ಹರಿಯೊಲುಮೆಯಲ್ಲಿಯೇ ನಿರತರು. ವೀಣಾವಾದನದಲ್ಲಿ ಅದ್ವಿತೀಯ ಪಂಡಿತರು. ಶ್ರೀವ್ಯಾಸರಾಜರ ಅನುಗ್ರಹ, ನಂತರ ರಾಜಾಶ್ರಯ. ವಿಜಯನಗರ ಸಾಮ್ರಾಜ್ಯಾಧಿಪತಿಯಾದ ಶ್ರೀ ಕೃಷ್ಣದೇವರಾಯನಿಗೆ ಉಪದೇಶ. ತಲೆಯ ಪೇಟಾದಲ್ಲಿ ಧರಿಸುವ ಮುತ್ತಿನ ತುರಾಯಿ, ರತ್ನಖಚಿತವಾದ ಕಡಗಗಳೇ ಮೊದಲಾದ ಉಡುಗೊರೆಗಳೇ ರಾಜನ ಗುರುದಕ್ಷಿಣೆ.

ಇವರ ಮಗ ಕನಕಾಚಲ ಭಟ್ಟ. ಇವರ ಮಗ ತಿಮ್ಮಣ್ಣ ಭಟ್ಟ. ವಿಜಯನಗರದ ಪತನದ ನಂತರ, ಸ್ವಗ್ರಾಮವಾದ ಭುವನಗಿರಿಯಲ್ಲಿ ವಾಸ. ವಂಶದ ಹಿರಿಯರ ಬಳುವಳಿಯೊಂದಿಗೆ ಧರ್ಮಾರ್ಜಿತವಿತ್ತ; ಪತಿವ್ರತೆಯಾದ ಪತ್ನಿ ಗೋಪಿಕಾಂಬೆ-ಯೊಂದಿಗೆ ಸಂತೃಪ್ತ ಜೀವನ. ವಾದವನ್ನು ಮಾಡಿ ಪ್ರತಿವಾದಿಗಳನ್ನು ಜಯಿಸಿ, ಹಗಲುದೀವಟಿಗೆ ಮುಂತಾದ ಬಿರುದುಗಳನ್ನು ಕೃಷ್ಣನೆಂಬ ಆ ನಗರದ ರಾಜನಿಂದ ಪಡೆದರು. ಸತ್ಸಂತಾನಲಾಭ ಗೃಹಸ್ಥಧರ್ಮದ ಕರ್ತವ್ಯ. ಭಕ್ತರಭೀಷ್ಟಪೂರೈಸಲೆಂದು ಭೂತಲದಲ್ಲಿ ನೆಲೆನಿಂದ ಕುಲದೈವ ಶ್ರೀನಿವಾಸನ ಸೇವೆ ದಂಪತಿಗಳಿಂದ. ಅವನ ಅನುಗ್ರಹವನ್ನು ಪಡೆದು, ಅವನ ಅಪ್ಪಣೆಯಿಂದಲೇ ಹಿಂದಿರುಗಿ, ದಕ್ಷಿಣ ದೇಶದ ತುಂಡಿರಮಂಡಲ ಎಂಬ ಹೆಸರುಳ್ಳ ಕಾಂಚೀ ನಗರದ ಹತ್ತಿರ ಕಾವೇರಿ ಪಟ್ಟಣವೆಂಬ ವಾಸಿಸಲು ಯೋಗ್ಯವಾದ ಶೋಭಾಯಮಾನವಾದ ಅಗ್ರಹಾರಕ್ಕೆ ಬಂದರು. ಅಲ್ಲಿರುವ ಲಕ್ಷ್ಮೀಪತಿಯಾದ ಶ್ರೀಹರಿಯನ್ನು ಸೇವಿಸುತ್ತಾ, ಅವನ ಅನುಗ್ರಹವನ್ನು ಪಡೆದು ಪತ್ನೀಸಮೇತರಾಗಿ ಕೆಲ ವರ್ಷಗಳವರೆಗೆ ಅಲ್ಲಿಯೇ ವಾಸಮಾಡಿದರು.

ತಿಮ್ಮಣ್ಣಭಟ್ಟರಿಗೆ ಸತ್ಸಂತಾನಪ್ರಾಪ್ತಿಯಾಯಿತು. ಮೊದಲು ಗುಣವಂತಳು ಸುಂದರಿಯೂ ಆದ ಮಗಳು "ವೆಂಕಟಾಂಬಾ", ಅನಂತರ ಸಕಲ ಗುಣರತ್ನಾಕರ-ನಾದ ಮಗ "ಗುರುರಾಜ". ಜೊತೆಗೇ ಅತುಲವಾದ ಧನಸಂಪತ್ತೂ, ಪ್ರಾಪ್ತವಾ-ಯಿತು. ತಿಮ್ಮಣ್ಣಭಟ್ಟರಿಗೆ ಮತ್ತೊಬ್ಬ ಸತ್ಪುತ್ರನಾಗಬೇಕೆಂಬ ಬಯಕೆ. ಸಮರ್ಥನಾದ ಮತ್ತೊಬ್ಬ ಮಗನಿಗಾಗಿ ವೇಂಕಟೇಶನಲ್ಲಿ ನಿರಂತರ ಪ್ರಾರ್ಥನೆ.

ಶ್ರೀನಿವಾಸನ ಅನುಗ್ರಹ. ಗೋಪಿಕಾಂಬೆ ಪುನಃ ಗರ್ಭಿಣಿ. ಭಕ್ತರ ಕಲ್ಪವೃಕ್ಷವನ್ನೇ ಉದರದಲ್ಲಿ ಧರಿಸಿದ ಗೋಪಿಕಾಂಬೆ ನಿಜಕ್ಕೂ ಕಲ್ಪವೃಕ್ಷದ ಮಾತೆಯೇ. ಎತ್ತಿಕಾಣುವ ಬಿಳಿಯ ವರ್ಣ. ಒಳಗೆ ಜಗದೋದ್ಧಾರಕ ಚೇತನ, ಹೊರಗೆ ಅಪಾರ ಶೋಭೆ. ರುಚಿಯಲ್ಲಿ ಅಭಿರುಚಿಯಿಲ್ಲ. ಭೋಗಗಳಲ್ಲಿ ಅನುರಾಗವಿಲ್ಲ. ವೈರಾಗ್ಯ ಭಾಗ್ಯವಂತೆ. ಪ್ರಸನ್ನ ವದನೆ. ಕೆಂಪಾದ ಸುವಾಸನೆಯ ಮಣ್ಣು ಸೇವನೆ. ಒಳಗಿರುವವ ಕಾವಿಧಾರಿ-ಯೆಂಬ ಸೂಚನೆ. ಬಿಸಿನೀರ ಬಯಕೆಯಿಲ್ಲ. ತೀರ್ಥಸ್ನಾನ ಆಪ್ಯಾಯಮಾನ. ರುಚಿಕರವಿದ್ದರೂ ಸ್ವಗೃಹ ಭೋಜನದಲ್ಲಿ ಅನಾದರ. ಹೇಗೇ ಇದ್ದರೂ ಪರಗೃಹ ಭೋಜನದಲ್ಲಿಯೇ ಪರಮಾದರ. ವಿದುಷಿಯ ಸ್ವಂತ ರಚನೆಗಳಿಗೆಲ್ಲಾ ಗರುಡ-ವಾಹನನೇ ಅಂಕಿತ. ಸ್ವತಃ ಪದ-ಪದ್ಯಗಳ ಸುಸ್ವರಗಾಯನ. ನಾರಾಯಣ ವಾಸುದೇವಾದಿ ಭಗವದ್ರೂಪಗಳಿಗೆ ಪರಮಪ್ರೀತಿಕರ. ಬಟ್ಟೆ ಚಾಪೆಗಳ ಆಸನ. ಸುತ್ತುವರೆದ ಸತ್‌ಸ್ತ್ರೀಯರಿಗೆ ಭಗವತ್ಕಥಾನಿರೂಪಣ. ಕಾಲಿಗೆ ಅರಗಿನ ಬಣ್ಣದಿಂದ ಅಲಂಕರಣ. ಬಹುಬಗೆಯ ಬಣ್ಣ ಬಣ್ಣದ ಸೀರೆಗಳು ಬೇಡ. ನಸುಗೆಂಪು, ಕೆಂಪೇ ಇಷ್ಟ. ಕಾಲಕಾಲಕ್ಕೆ ವಿಹಿತವಾದ ಸಂಸ್ಕಾರದಿಂದ ಗರ್ಭ ಪರಮಪಾವನ. ಶುಭ-ವೃಷಭಲಗ್ನ, ಶುಭಗ್ರಹಗಳ ದೃಷ್ಟಿ, ಸುಮುಹೂರ್ತ, ಶ್ರೀ ಮನ್ಮಥನಾಮ ಸಂವತ್ಸರ ಫಾಲ್ಗುಣ ಶುಕ್ಲ ಸಪ್ತಮಿ ಗುರುವಾರ ಮೃಗಶಿರ ನಕ್ಷತ್ರ ವೃಷಭ ರಾಶಿ ಕ್ರಿ.ಶ. 1595. ಭುವನಗಿರಿಯಲ್ಲಿ ಭೂಸುರ, ಭೂಮಿಪಾಲವಂದ್ಯ ತೇಜಸ್ವಿಯಾದ ಶಿಶುವಿನ ಅವತಾರ.

ತಿಮ್ಮಣ್ಣಭಟ್ಟರು ಆನಂದಸಾಗರದಲ್ಲಿ ಮುಳುಗಿರುವವರಾಗಿಯೇ ಪುಣ್ಯನದಿ-ಯಲ್ಲಿ ಮಿಂದು ಪಿತೃಗಳ ಋಣವೆಂಬ ಸಮುದ್ರದಿಂದ ಮೇಲಕ್ಕೆದ್ದರು. ಮಗುವಿಗೆ ಸುಮಂಗಲಿಯರಿಂದ ಮಂಗಳ ಸ್ನಾನ. ತೀರ್ಥರೂಪರಿಂದ ಸಹೋಮ ಜಾತಕರ್ಮ.

ಸರ್ವವಂದ್ಯ ವೇಂಕಟನಾಥನ ಅನುಗ್ರಹದ ಕೂಸಿಗೆ ಬಹುಜನವಂದ್ಯ ''ವೇಂಕಟ-ನಾಥ'' ಎಂಬ ಅನ್ವರ್ಥನಾಮಕರಣ. ಪಾಪಗಳ ಪರಿಹರಿಸುವರಲ್ಲಿ ಅಗ್ರಗಣ್ಯನಾದ ಶ್ರೀನಿವಾಸನ ಗುಣಗಳು, ಅವನ ಭಕ್ತನಾದ ಶಿಶುವಿಗೆ ಈ ನಾಮಕರಣದಿಂದ ಕೂಡಿಕೊಂಡಿತು. ಬ್ರಾಹ್ಮಣರಿಗೆ ಧಾರಾಳವಾದ ದಾನ ದಕ್ಷಿಣೆ. ಮಹೀಸುರರಿಂದ ಆಶೀರ್ವಾದಗಳ ವೃಷ್ಟಿ.

ಕಾಲಕ್ರಮವಾಗಿ ಅಂಬೆಗಾಲಿಟ್ಟ ಶಿಶುವು ಏಕಕಾಲಕ್ಕೆ ವೃಷಭರೂಪದ ಧರ್ಮ-ದೇವತೆ ಕಾಮಧೇನುವೂ ಆಗಿದ್ದುದು ವಿಸ್ಮಯಕರ. ಹಸ್ತಕಮಲದಿಂದ ಪಾದ-ಕಮಲವನ್ನು ಮುಖಕಮಲದಲ್ಲಿ ಇಟ್ಟುಕೊಂಡು ಚೀಪುತ್ತಿರುವ ಆಲದ ಎಲೆಯ ಮೇಲೆ ಮಲಗಿರುವ ಬಾಲಮುಕುಂದನ ಭಕ್ತ ಕಾಲಿನ ಹೆಬ್ಬಟ್ಟನ್ನು ಚೀಪುವುದು ಸಹಜ. ಏಳುವುದು, ಬೀಳುವುದು ಹರಿಗೆ ನಿರಂತರ ನಮನವಲ್ಲವೇ? ಶಿಶುವಿಗೆ ಆರನೆಯ ತಿಂಗಳಲ್ಲಿ ಅನ್ನಪ್ರಾಶನ; ಮೂರನೇ ವರ್ಷದಲ್ಲಿ ಚೌಲ. ಪ್ರಣವವ ಬರೆದು ಓದಲು ಹೇಳಿದರೆ, ಈ ಚಿಕ್ಕ ಗೆರೆಯ ಅಕ್ಷರದಲ್ಲಿ ದೇವರ ಗುಣಪೂರ್ಣತ್ವ ಹೇಗೆ ಪೂರ್ಣವಾದೀತೆಂದು ಕೇಳಿದ ಬಾಲಕನಿಗೆ ವೇದಾರ್ಥದ ಅರಿವು ಈಗಾಗಲೇ ಇದೆಯೆಂದಾಯಿತಲ್ಲವೇ? ಇದ ನೋಡಿದವರು ಬೆರಗಾದರು. ಭಾಗ್ಯಶಾಲಿ ಎಂದು ಕಂದನ ತಂದೆಯ ಕರೆದರು.

ವಾಮನನ ಅನುಗ್ರಹಕ್ಕೆ ಪಾತ್ರರಾದ ಕಶ್ಯಪರ ವಂಶದ ಫಣಿಶಾಯಿಯ ಮಗನಾದ ಅಸಾಧಾರಣ ಬುದ್ಧಿಸಮುದ್ರರಾದ ಲಕ್ಷ್ಮೀನರಸಿಂಹಾರ್ಯರಿಗೆ ಪುತ್ರಿ ವೇಂಕಟಾಂಬಳನ್ನು ಕೊಟ್ಟು ತಿಮ್ಮಣ್ಣಭಟ್ಟರು ಮದುವೆಯನ್ನು ವಿಜೃಂಭಣೆಯಿಂದ ನೆರವೇರಿಸಿದರು. ಸ್ವಲ್ಪ ಸಮಯದಲ್ಲಿಯೇ ತನ್ನಂತೆಯೇ ಗುಣಶಾಲಿಯಾದ ತನ್ನ ಹಿರಿಯ ಮಗನಾದ ಗುರುರಾಜನಿಗೆ ಉಪನಯನ ಮಾಡಿದರು. ಹರಿಪದವನ್ನೈದಿದರು.

ಪ್ರೀತಿಯ ಅಣ್ಣ ಗುರುರಾಜನಿಂದ ವೇಂಕಟನಾಥನಿಗೆ ರತ್ನಮಾಲಾದಿ ನಿಘಂಟು-ಗಳ, ವಿಧ ವಿಧವಾದ ಲಿಪಿಗಳ ಉಪದೇಶ. ಆರಂಭದ ಪ್ರಕರಣ, ತರ್ಕ, ವ್ಯಾಕ-ರಣಗಳ ಪಾಠ. ಕ್ರಿ.ಶ. 1603 ಶುಭಕೃತ್ ಸಂವತ್ಸರ. ಎಂಟನೆಯ ವಯಸ್ಸಿನಲ್ಲಿ ಉಪನಯನ. ಮಧುರೈಗೆ ಪಯಣ. ಭಾವ ಲಕ್ಷ್ಮೀನರಸಿಂಹಾಚಾರ್ಯರಲ್ಲಿ ಗುರು-ಕುಲವಾಸ; ಆಶ್ರಮೋಚಿತ ಧರ್ಮಾನುಷ್ಠಾನ. ನಿರಾಯಾಸವಾಗಿ ಸ್ವಶಾಖೆಯಾದ

ಯಜುರ್ವೇದದ ಅಧ್ಯಯನ. ದೃಢವಾದ ಧಾರಣ. ತರ್ಕ, ವ್ಯಾಕರಣ, ಮಣಿ-ಮಂಜರಿ, ಅಣುಮಧ್ವವಿಜಯ, ಸಮುಚಿತವಾಗಿ ಇತರ ಶಾಸ್ತ್ರಾಧ್ಯಯನ. ವೇದಾ-ನಧ್ಯಯನಗಳಂದು ಕಾವ್ಯಗಳ ಅಧ್ಯಯನ. ಪುನರಾವರ್ತನೆ ಅವಶ್ಯಕತೆಗೆ ತಕ್ಕಷ್ಟು. ಅಸಾಧಾರಣ ನೆನಪಿನ ಶಕ್ತಿ. ಪ್ರಶ್ನೆಗಳಿಗೆ ನಿರಾಯಾಸದ ತಕ್ಷಣದ ಉತ್ತರಗಳಿಂದ ಗುರುಗಳಿಗೆ ಮಹದಾನಂದ. ಈಗ ವಿದ್ವಾನ್ ವೇಂಕಟನಾಥ. ಕುಲಾಗತ ವೀಣಾವಿದ್ಯೆ ಕರಗತವಾದ್ದರಿಂದ ವೀಣಾ ವೇಂಕಟನಾಥ. ಪಾಂಡಿತ್ಯದ ದ್ಯೋತಕವಾದ ವಂಶಾಗತ ಭಟ್ಟನೆಂಬ ಉಪನಾಮದಿಂದ ವೇಂಕಟಭಟ್ಟ.

ಗೆಳೆಯರೊಂದಿಗೆ ಆಟವಾಡಿದರೂ ಒಳಗೊಳಗೇ ವ್ರತಾನುಷ್ಠಾನದ ಧ್ಯಾನ! ಪರಬ್ರಹ್ಮನ ಮಾರ್ಗದೆಡೆಗೆ ಸದಾ ಹರಿಯುವ ಹೃದಯವಂತನಿಗೆ ಓಘದ ನದಿಯಲ್ಲಿ ವೇಗವಾಗಿ ಈಜುವುದೂ ತ್ರಾಸವಿಲ್ಲದೇ ಉಲ್ಲಾಸದಾಯಕ. ಉಸಿರುಕಟ್ಟಿ ಆಡುವ ಕಬ್ಬಡ್ಡಿ ಆಟ ಭಾವೀ ಯೋಗಿಗೆ ಪ್ರಾಣಾಯಾಮದ ಪೂರ್ವಾಭ್ಯಾಸ.

ನವತರುಣ ವೇಂಕಟನಾಥ ಅಪ್ರತಿಮ ಸುಂದರ, ದೃಢಕಾಯ. ಚಂದ್ರನ ತುಣುಕಿನಿಂದ ಮಾಡಿದ ಹಣೆ. ಮಾಧವನ ಎರಡು ಮತ್ಸ್ಯಾವತಾರವನ್ನು ಹೋಲುವ ದೀರ್ಘವಾದ ಕಣ್ಣುಗಳು. ನಯನಾಂತದಲ್ಲಿ ರಜೋಗುಣ. ಕೋಮಲ ಕಪೋಲ. ಎಳೆಯ ರೋಮಗಳು ಶರತ್ಕಾಲದ ತಾವರೆಯ ಮುತ್ತಿದ ದುಂಬಿಗಳ ಸಾಲುಗಳು. ಮುಖಸುವರ್ಣಪಾತ್ರೆಯಲ್ಲಿರುವ ಶಾಸ್ತ್ರನಿಧಿಯ ರಕ್ಷಣೆಗೆ ಕಬ್ಬಿಣದ ಸರಪಳಿ ಮೀಸೆ. ಸಹಜ ಕೆಂದುಟಿ ಸುಧೆಯ ನೆಲೆ. ನಾಲಿಗೆಯ ಮೇಲೆ ವಿದ್ಯೆಯ ನರ್ತನ. ಮುಖಕಮಲದ ನಾಳ ಶಂಖದಂತಹ ಕಂಠ. ಸತ್ತ್ವಗುಣದ ಮನಸ್ಸು. ಗುಣಪೂರ್ಣನ ಭಕ್ತನಿಗೆ ತಕ್ಕುದಾದ ವಿಸ್ತಾರವಾದ ವಕ್ಷಸ್ಥಳ. ಹೃದಯವೇ ಕ್ಷೀರಸಾಗರಕನ್ಯೆಯಾದ ಮಹಾಲಕ್ಷ್ಮಿಯ ರಮಣನಾದ ಶ್ರೀಹರಿಯ ಅಂತಃಪುರ. ಮೂರು ಲೋಕದ ಸಜ್ಜನರ ರಕ್ಷಕನೆಂಬುದಕ್ಕೆ ಕುರುಹು ಉದರದ ಮೇಲಿನ ಮೂರು ಗೆರೆಗಳು. ಮೃದುವಾದ ಪಾದತಲಗಳು. ವೇಂಕಟನಾಥನ ದೇಹ ವಿದ್ಯಾಧಿದೇವತೆಯ ತವರು. ವಿದ್ಯಾಪತಿಯ ಭವನ. ಅಂತೆಯೇ, ಬ್ರಹ್ಮವರ್ಚಸ್ಸು. ಎದ್ದುಕಾಣುವ ಚಾತುರ್ಯ. ರತಿಯೊಂದಿಗೆ ಬಂದು ಮನ್ಮಥನೂ ನೆಲೆನಿಂತ. ಕಲಶವಿಟ್ಟಂತೆ ನಾರಾಯಣನ ದಿವ್ಯ ಸನ್ನಿಧಾನ.

ವ್ರತಚತುಷ್ಟಯ ಪೂರ್ಣಗೊಳಿಸಿದ್ದ ವೇಂಕಟನಾಥ ಗೃಹಸ್ಥಾಶ್ರಮಕ್ಕೆ ಯೋಗ್ಯ. ತಮ್ಮನ ಮದುವೆಗೆ ಅಣ್ಣನ ಸಂಕಲ್ಪ . ಶುಭಸ್ಯ ಶೀಘ್ರಮ್. ಸಮೀಪದ ಅಗ್ರಹಾರ-

ದಲ್ಲಿಯೇ ಯೋಗ್ಯಕನ್ಯೆ. ಸುಂದರ ಕೋಮಲ ವ್ಯಕ್ತಿತ್ವ. ಅಸಾಧಾರಣ ವಿದ್ಯೆ, ವಿವೇಕ, ವಿನಯ, ದಾಕ್ಷಿಣ್ಯ . . . ಗುಣವಂತೆ ಸರಸ್ವತಿ. ಕ್ರಿ.ಶ. 1614 ಆನಂದ ನಾಮ ಸಂವತ್ಸರ. ಸಫಲವಾಯಿತು ಗುರುರಾಜರ ಯತ್ನ. ಸಾಂಗವಾಯಿತು ವೇಂಕಟನಾಥ-ಸರಸ್ವತಿಗಳ ಲಗ್ನ. ಪ್ರತಿದಿನವೂ ಬ್ರಾಹ್ಮಣ ಭೋಜನ. ವಸ್ತ್ರ-ತಾಂಬೂಲ- ದಕ್ಷಿಣೆಗಳ ಮಹಾಪೂರ. ಸಂತೃಪ್ತರ ಹೃದಯತುಂಬಿದ ಹಾರೈಕೆ-ಆಶೀರ್ವಾದಗಳು. ಕಾಂಚಿಯ ಕಾವೇರಿ ಪಟ್ಟಣ ಅಗ್ರಹಾರದಲ್ಲಿ ಪತಿವ್ರತೆಯೊಂದಿಗೆ ವೇಂಕಟನಾಥರ ದೀರ್ಘ ಸುಖಮಯ ದಾಂಪತ್ಯ.

ಕಾವೇರಿಯ ಸುಪುಣ್ಯ ತೀರದ ಕುಂಭಘೋಣ. ತುಂಬಿ ತುಳುಕುವ ಫಲಭರಿತ ಸಸ್ಯಸಂಪತ್ತು. ಸಾವಿರಾರು ವಿದ್ವಾಂಸರಿಂದ ಕೂಡಿದ ಬ್ರಾಹ್ಮಣ ಅಗ್ರಹಾರಗಳು. ಸತ್ಕರ್ಮಾನುಷ್ಠಾನದಿಂದ ತುಂಬಿರುವ ಪವಿತ್ರಗೃಹಗಳು ಸಕಲಶಾಸ್ತ್ರಗಳ ಅಧ್ಯಯನದ ವಿಶ್ವವಿದ್ಯಾಲಯಗಳು. ವೇದಘೋಷ ಮಾರ್ದನಿಸುವ ದಿಕ್ಕುಗಳು. ನಿರಂತರ ಪಾಠ-ಪ್ರವಚನಗಳ ನೆಲೆವೀಡು. ಕುಲಗುರುಗಳಾದ ಶ್ರೀಸುಧೀಂದ್ರತೀರ್ಥರ ಕಾರ್ಯಕ್ಷೇತ್ರ. ಪತ್ನಿಯೊಡನೆ ಪಯಣ. ಕೆಲವರ್ಷ ಅಲ್ಲಿಯೇ ವಾಸ.

ಗುರುಗಳಿಂದ ವಿಶೇಷ ಅಧ್ಯಯನ. ಪತಂಜಲಿಯ ವ್ಯಾಕರಣ ಮಹಾಭಾಷ್ಯ, ಜಯದೇವಕೃತ ಟೀಕೆ, ಕುಮಾರಿಲಭಟ್ಟ ರಚಿತ, ಪ್ರಭಾಕರಕೃತ ಪೂರ್ವಮೀಮಾಂಸಾ ವ್ಯಾಖ್ಯಾನಗಳು, ವಾಚಸ್ಪತಿಮಿಶ್ರಕೃತಭಾಮತೀ, ಶ್ರೀಮದ್‌ವ್ಯಾಸತೀರ್ಥರು ರಚಿಸಿ-ರುವ ಬ್ರಹ್ಮಸೂತ್ರಭಾಷ್ಯ ತತ್ತ್ವಪ್ರಕಾಶಿಕಾ - ತಾತ್ಪರ್ಯಚಂದ್ರಿಕಾ ತಿಳಿಯಬೇಕಾ-ದ್ದೆಲ್ಲದ್ದರ ಸರಿಯಾದ ತಿಳುವಳಿಕೆ.

ಅಧ್ಯಯನದಲ್ಲಿದ್ದ ನಿಷ್ಠೆಯೇ ಅಧ್ಯಾಪನದಲ್ಲಿಯೂ. ಅದೂ ಸಮಯಬದ್ಧ. ಪ್ರಾತಃಕಾಲದ ಸ್ನಾನಾಹ್ನಿಕವಾದೊಡನೆಯೇ ಮೊದಲನೆಯ ಯಾಮದಲ್ಲಿ ಶ್ರೀಮದಾ -ಚಾರ್ಯಕೃತವಾದ ಉಪನಿಷದ್ಭಾಷ್ಯಗಳ, ಬ್ರಹ್ಮಸೂತ್ರಭಾಷ್ಯಾದಿಗಳ ಪ್ರವಚನ. ಎರಡನೆಯ ಯಾಮದಲ್ಲಿ ವ್ಯಾಕರಣ ಮಹಾಭಾಷ್ಯ. ಮೂರನೆಯ ಯಾಮದಲ್ಲಿ ತರ್ಕಶಾಸ್ತ್ರ. ನಾಲ್ಕನೆಯ ಯಾಮದಲ್ಲಿ ಪೂರ್ವಮೀಮಾಂಸಾ ಪ್ರವಚನ.

ಗುರುಗಳ ಜೊತೆ ಪುಣ್ಯಕ್ಷೇತ್ರಗಳ ಯಾತ್ರೆ ದಿಗ್ವಿಜಯಯಾತ್ರೆ. ಚಂಪ-ಕಾರಣ್ಯವೆಂದರೆ ದಕ್ಷಿಣ ದ್ವಾರಕೆಯೇ. ಮನ್ನಾರಗುಡಿ ಮಾಧವನ ಗುಣಗಾನ

ಮಾಡಬೇಕಾದ ದಿವ್ಯಮಂದಿರ. ಮಾಯಾವಾದವೆಂದರೆ ಭಗವಂತನ ಅನಂತಗುಣ-ಗಳನ್ನು ಮರೆಮಾಚಿ ನಿರ್ಗುಣನೆಂದು ದುರಾಗ್ರಹದಿಂದ ವಾದಿಸುವ ಅತ್ಯಂತ ಹೇಯಮತವೇ. ಮಂದಿರದಲ್ಲಿ ಜೀವಬ್ರಹ್ಮರಿಗೆ ಐಕ್ಯ ಬೋಧಿಸುತ್ತಿದ್ದ ಸಂನ್ಯಾಸಿ. ಸುತ್ತುವರೆದಿದ್ದರು ಆತನ ಮೂರ್ಖಶಿಷ್ಯರು. ವೇಂಕಟನಾಥರಿಗೂ ಅಲ್ಲಿದ್ದವರಿಗೂ ವಿತಂಡ. ಐಕ್ಯಕ್ಕೆ ಪ್ರಮಾಣಕೊಡೆಂದರು ನಾಥರು. ''ಜಗತ್ತು ಸುಳ್ಳು, ಆದ್ದರಿಂದ ಐಕ್ಯ ಸತ್ಯ'' ಎಂದರು ಆಕಡೆಯವರು. ಇದು ಅಸಂಬದ್ಧವೆಂದು ತಿಳಿಸಲು ''ಕಿಂ-ಚಾತಃ'' ಎಂದರು ನಾಥರು. ಐಕ್ಯ ಬಿಟ್ಟು ವ್ಯಾಕರಣದೆಡೆಗೆ ಹೊರಳಿ ''ಕಿಂಚಾತಃ'' ಪ್ರಯೋಗವೇ ಅಸಾಧುವೆಂದರು ಆಕಡೆಯವರು. ಮಹಾಭಾಷ್ಯದಲ್ಲಿಯೇ ಪ್ರಯೋಗವಿದೆಯೆಂದು ತೋರಿಸಿದರು ನಾಥರು. ಅಷ್ಟಕ್ಕೇ ಚರ್ಚೆ ಮುಗಿಯಲಿಲ್ಲ. ವ್ಯಾಕರಣದ ಅನೇಕಾನೇಕ ವಿಷಯಗಳ ಬಗ್ಗೆ ಆಕಡೆಯವರ ಎಲ್ಲ ಪ್ರಶ್ನೆಗಳಿಗೂ ಉತ್ತರಿಸಿದರು ನಾಥರು. ಆದರೆ ನಾಥರ ಪ್ರಶ್ನೆಗೆ ಉತ್ತರಿಸುವಲ್ಲಿ ವಿಫಲರಾದರು ಆಕಡೆಯವರು. ವ್ಯಾಕರಣ ಮಹಾಭಾಷ್ಯದ ಅಪ್ರತಿಮ ಪಾಂಡಿತ್ಯದ ಅನಾವರಣ. ಸೋಲುಂಡವರ ಅನಿವಾರ್ಯ ಮೌನ. ವಿದ್ವನ್ಮಣಿಗಳ ಹರ್ಷೋದ್ಗಾರ. ಶ್ರೀ-ಸುಧೀಂದ್ರತೀರ್ಥರ ಆನಂದಬಾಷ್ಪ, ''ಮಹಾಭಾಷ್ಯ ವೆಂಕಟನಾಥ''ರೆಂಬ ಸಾರ್ಥಕ ಬಿರುದು.

ಯಾಗಶಾಲೆ ಯಜ್ಞಕುಂಡ ಮುಂತಾದ್ದನ್ನು ನಿರ್ಮಿಸುವ ವಿಧಾನವನರಿಯಲಿರುವ ಕೈಪಿಡಿ ಆಪಸ್ತಂಬರು ರಚಿಸಿದ ಶುಲ್ಬಸೂತ್ರ ಗ್ರಂಥ. ಅರೆಬರೆ ಪಂಡಿತನೊಬ್ಬ ಮಾಡುತ್ತಿದ್ದ ಅಪವ್ಯಾಖ್ಯಾನವನ್ನು ಖಂಡಿಸಿ, ಇದರಲ್ಲಿಯೂ ಅಪ್ರತಿಮ ಪಾಂಡಿತ್ಯದ ಅನಾವರಣ ವೇಂಕಟನಾಥರಿಂದ ತಂಜಾವೂರಿನ ರಾಜಸಭೆಯಲ್ಲಿ. ಅಲ್ಲಿಯ ಮತ್ತೊಬ್ಬ ಪಂಡಿತರು ಶ್ರೀಯಜ್ಞನಾರಾಯಣದೀಕ್ಷಿತರು. ವಿಧಿಪೂರ್ವಕವಾಗಿ ಬಹು ಯಾಗಗಳ ಮಾಡಿದ ಕೀರ್ತಿ ಅವರದ್ದು. ಅವರಿಂದ ವೇಂಕಟನಾಥರ ಮುಕ್ತಪ್ರಶಂಸೆ. ಕಾಕತಾಲೀಯ ಶಬ್ದದ ಅರ್ಥ ಕಾಗೆ ಕೂಡುವುದಕ್ಕೂ ಕೊಂಬೆಯಿಂದ ಫಲ ಉದುರುವುದಕ್ಕೂ ಸರೀ ಹೋಯಿತೆಂದು. ಇದನ್ನು ವ್ಯಾಕರಣ ಪ್ರಕ್ರಿಯೆಯನ್ವಯ ಸಮರ್ಥಿಸಿ ಪಂಡಿತರ ಮನ್ನಣೆಗೆ ಪಾತ್ರರಾದರು ನಾಥರು. ವೈಷ್ಣವರು ಬಹು ಭಕ್ತಿಯಿಂದ ಧರಿಸುವ ತಪ್ತಮುದ್ರಾಧಾರಣೆ ಶಾಸ್ತ್ರಸಮ್ಮತ ಸಂಸ್ಕಾರವೆಂದು

ಸಮರ್ಥಿಸಿ, ವಿಷ್ಣುಭಕ್ತರ ಹೆಮ್ಮೆಯನ್ನು ಎತ್ತಿಹಿಡಿದರು ನಾಥರು. ದೀಕ್ಷಿತರಿಂದ ಮತ್ತೆ ಪ್ರಶಂಸೆ.

ವಿದ್ಯಾಲಕ್ಷ್ಮಿಯ ಅನುಗ್ರಹದ ತುತ್ತತುದಿ. ಜ್ಞಾನಸಾಗರ ವ್ಯಕ್ತಿತ್ವ. ನಿರಂತರ ಪಾಠ-ಪ್ರವಚನ. ಆದರೂ, ವೇಂಕಟನಾಥರ ಜೀವನದ ಅತ್ಯಂತ ಕಠಿಣ ಘಟ್ಟ. ಧನಲಕ್ಷ್ಮಿಯ ಪರೀಕ್ಷೆಯ ತುತ್ತತುದಿ. ''ಯಸ್ಯಾನುಗ್ರಹಮಿಚ್ಛಾಮಿ ವಿತ್ತಂ ತಸ್ಯ ಹರಾಮ್ಯಹಮ್''- ಇದು ಭಗವಂತನ ನಿಯಮ. ಅಪರೋಕ್ಷ ಜ್ಞಾನ ನೀಡುವ ಸನಿಹದಲ್ಲಿ, ಅತ್ಯುತ್ತಮ ಸಾಧನೆ ಮಾಡಿಸುವ ಸನಿಹದಲ್ಲಿ, ಸಂಸಾರ ಬಂಧನದಿಂದ ಮುಕ್ತಿ ನೀಡುವ ಮುನ್ನ ಕೊನೆಯ ಜನ್ಮದಲ್ಲಿ ಭಕ್ತನನ್ನು ನಿರ್ಧನನನ್ನಾಗಿ ಮಾಡಿ, ತನ್ನನ್ನೇ ಸರ್ವಧನನೆಂದು ಉಪಾಸಿಸುವಂತೆ ಮಾಡುವುದು ಭಗವಂತನಿಗೆ ಸಾಮಾನ್ಯ ಸಂಗತಿ. ಎದುರಿಸಬೇಕಾದ್ದು ಪ್ರತಿಯೊಬ್ಬ ಭಕ್ತನಿಗಿರುವ ಅನಿವಾರ್ಯ ಸಂಗತಿ.

ವರ್ಷವಿಡೀ ಒಂದೇ ಬಟ್ಟೆ. ಬದಲಿಸಲಿನ್ನೊಂದಿಲ್ಲ. ಯುಗಾದಿ ದೀವಳಿಗೆಗೆ ಸಾಮಾನ್ಯ ಗುಣಮಟ್ಟದ ಹೊಸ ಬಟ್ಟೆಯ ಧಾರಣೆಯೂ ಮಾನಸಿಕವಾಗಿಯಷ್ಟೇ. ಜರತಾರಿ ಬಟ್ಟೆ . . ಊಂ ಹೂಂ . . ಕನಸಿನಲ್ಲಿಯೂ ಇಲ್ಲ. ಅಭ್ಯಂಜನಕ್ಕೆ ತೈಲವಿಲ್ಲದವನ ತಟ್ಟೆಯಲ್ಲಿ ತಿನ್ನಲು ತುಪ್ಪವೆಲ್ಲಿಂದ ಬರಬೇಕು? ಅಗ್ನಿಷ್ಟೋಮ ಮಾಡಲಾಗದವನು ಜ್ಯೋತಿಷ್ಟೋಮ ಮಾಡಿಯಾನೇ? ಹೊತ್ತು ಹೊತ್ತಿನ ಊಟವೇ ಇಲ್ಲ. ಅಲ್ಪ ಸ್ವಲ್ಪ ಅನ್ನವಿದ್ದಾಗಲೂ ಎಲೆ, ತಟ್ಟೆ ಇಲ್ಲ. ನೆಲದ ಮೇಲೆ ಭೋಜನ. ಬೇರೆಯವರನ್ನು ಬೇಡಬಾರದು; ಬೇಡಿದರೂ ಸಾಕಾಗುವಷ್ಟು ಸಿಗಬಾರದು- ಇದು ದೇವರು ಮಾಡಿದ್ದ ವ್ಯವಸ್ಥೆ. ಹೆಸರಿಗೆ ಮಾತ್ರ ಮನೆ. ಛಾವಣಿ, ಗೋಡೆ, ಕಂಭ ಎಲ್ಲವೂ ಶಿಥಿಲ. ಇದ್ದೊಂದೆರಡು ಒಡೆದ ಪಾತ್ರೆ, ತೂತು ಪಾತ್ರೆಗಳೂ ಕಳ್ಳರ ಪಾಲು. ಸಂನ್ಯಾಸಕ್ಕೂ ಮುನ್ನವೇ ಕೇವಲ ಕೌಪೀನ ಧಾರಣೆಯ ಸಂದರ್ಭ. ತಿಂಗಳಿಗೆ ಎರಡರ ಬದಲಾಗಿ ನಾಲ್ಕೈದು ಏಕಾದಶಿಗಳು. ಇವರ ವಂಶದ ಹಿಂದಿನವರ ಸಂಪತ್ತಿಗೆ ಹೋಲಿಕೆ ಕೊಡಬಹುದು; ಇವರ ಬಡತನಕ್ಕೆ ಹೋಲಿಕೆ ಕೊಡಲು ಸಾಧ್ಯವಿಲ್ಲ. ಸರಸ್ವತಿ ಮಹಾಪತಿವ್ರತೆ. ಪತಿಯ ಸಾಂಗತ್ಯವೇ ಸರ್ವ-ಸಂಪತ್ತು. ಬಡತನವನ್ನು ಯಾರೊಬ್ಬರೂ ಹೊರಗೆ ಬಿಟ್ಟುಕೊಡುತ್ತಿರಲಿಲ್ಲ. ಅಂಗಾರ, ಅಕ್ಷತೆ ಧರಿಸಿದ ನಾಥರ ಹಸನ್ಮುಖದಲ್ಲಿ ಯಾವ ಗುರುತೂ ಇರುತ್ತಿರಲಿಲ್ಲ.

ವೇಂಕಟನಾಥರಿಗೆ ಘೋರದಾರಿದ್ರ್ಯ ಹೆಚ್ಚು ಹೆಚ್ಚು ಭಗವಂತನ ಧ್ಯಾನಕ್ಕೆ ಸೋಪಾನ-ವಾಯಿತು.

ಸಂನ್ಯಾಸಕ್ಕೆ ಅರ್ಹತೆ, ವೇದಾಂತ ಸಾಮ್ರಾಜ್ಯಾಧಿಪತ್ಯಕ್ಕೆ ಯೋಗ್ಯತೆ ವೇಂಕಟ-ನಾಥರಿಗಿದ್ದುದು ಸ್ವಪ್ನಸೂಚನೆಯಿಂದ ಶ್ರೀಸುಧೀಂದ್ರತೀರ್ಥರಿಗೆ ದೃಢವಾಯಿತು. ಸೂಚಿಸಿದರು; ಮನವೊಲಿಕೆಗೆ ಯತ್ನಿಸಿದರು. ನಾಥರು ಅರ್ಹತೆಯಿಲ್ಲವೆಂದು ನಯವಾಗಿ ನಿರಾಕರಿಸಿದರು. ತಲೆ ಮೇಲೆ ಭಾರ ಹೊತ್ತು ಸಮುದ್ರತರಣ ತರವೇ? ಎಂದರು. ಪರಮಾತ್ಮನಲ್ಲಿ ಸ್ಥಿರವಾದ ಮನೋನಿಷ್ಠೆ, ಇಂದ್ರಿಯನಿಗ್ರಹ, ನಿರ್ವಿಕಾರ ಮನಸ್ಸು, ದಾನಶೀಲತೆ, ಗುರ್ವನುಗ್ರಹವೆಂಬ ನೌಕೆಗಳಿವೆ, ಸುಲಭವಾಗಿ ದಾಟಬಹುದೆಂದಾಗ, ಪತ್ನಿಯ ಚಿಕ್ಕವಯಸ್ಸು, ಪುತ್ರ ಲಕ್ಷ್ಮೀನಾರಾಯಣನ ಉಪನಯನ ಇನ್ನೂ ಆಗದಿರುವುದನ್ನು ಮುಂದು ಮಾಡಿದರು. ಇನ್ನೂ ತರುಣನಾದ ನನಗೆ ಸಂನ್ಯಾಸದಲ್ಲಿ ಇಚ್ಛೆಯೇ ಇಲ್ಲವೆಂದು ಗಂಭೀರವಾದರು. ಗುರುಗಳು ಒತ್ತಾಯಿಸಿದಾಗ ದೇಶಾಂತರ ಹೋಗುವೆನೆಂದರು. ಗೃಹಸ್ಥಾಶ್ರಮಕ್ಕಿಂತ ಸಂನ್ಯಾಸವೇ ಮುಕ್ತಿಗೆ ಸುಲಭೋಪಾಯವೆಂದಾಗ ಅತಿವಾದ ತರವಲ್ಲವೆಂದು ಸುಮ್ಮನಾದರು. ಶಿಷ್ಯ ದೂರಾಗದಿರಲೆಂದು ಗುರುಗಳ ಪಡೆಯಿಂದ ಎಚ್ಚರಿಕೆಯ ಕಣ್ಣು.

ಸರಸ್ವತಿಯ ಕಿವಿ ತಲುಪಿತು ವಾರ್ತೆ. ಕಣ್ಣೀರ ಧಾರೆ. ಇತ್ತ ನಾಥರ ತಳಮಳ. ಇಷ್ಟವಿಲ್ಲದ ಸಂನ್ಯಾಸ, ಇಲ್ಲವೇ ಗುರುಗಳ ಶಾಪ. ರಾತ್ರಿಯೆಲ್ಲಾ ಚಿಂತಾಕ್ರಾಂತ. ಬೆಳ-ಬೆಳಗಿನ ಝಾವದಲ್ಲಿ ಕಂಡ ದಿವ್ಯಸ್ತ್ರೀ. ಬಹುವಿಧಸುವರ್ಣಾಭರಣಭೂಷಿತೆ. ಆಹ್ಲಾದದಾಯಕ ಮುಖ. ಶರತ್ಕಾಲದ ಅರಳಿದ ತಾವರೆಯ ನಯನ. ಒತ್ತೊತ್ತಾದ ಕಪ್ಪು ಕೂದಲು. ಮನೋಹರ ರೂಪ. ಕುಂದಿಲ್ಲದ ಲಾವಣ್ಯ. ಹೇಮ ಒಡ್ಯಾಣದಿಂದ ಪ್ರತಿಫಲಿತವಾದ ಸೀರೆಯ ನೆರಿಗೆ, ಗಂಟುಗಳು. ನಾಥರ ಮನದಲ್ಲಿ ಯಾರಿರ-ಬಹುದೆಂಬ ವಿಕಲ್ಪ ತರಂಗಗಳು.

ಸ್ವತಃ ನುಡಿದಳಾಕೆ ತಾನು ವಿದ್ಯಾಲಕ್ಷ್ಮಿ. ಬ್ರಹ್ಮಸೂತ್ರಗಳೆಂಬ ಕಾನುಧೇನುವಿನಿಂದ ಪ್ರತಿಪಾದ್ಯವಾದ ವಿದ್ಯೆಯ ಸಾಕಾರ ರೂಪ. ವೇದವ್ಯಾಸರ ಪುತ್ರಿ. ವಿಚಾರ-ಮಥನವೆಂಬ ದಿವ್ಯಾನಂದವನ್ನು ಪಂಡಿತರಿಗೆ ಸುರಿಸುವ ಅಧಿದೇವತೆ. ಪಿತನ ಆರೈಕೆಯಲ್ಲಿ ಬಾಲ್ಯ. ಕನ್ಯೆಯಾದಾಗ ಶ್ರೀಮಧ್ವಾಚಾರ್ಯರ ಭಾಷ್ಯವೆಂಬ ಕ್ಷೀರದ

ಪ್ರೀತಿಯ ಪೋಷಣೆ. ಶ್ರೀಜಯತೀರ್ಥರ ತತ್ವಪ್ರಕಾಶಿಕಾ, ಸುಧಾದಿ ರಸಾಯನದಿಂದ ತಾರುಣ್ಯ.

ಪ್ರಳಯದವರೆಗೆ ಪ್ರಸಿದ್ಧಿ ಹಾಗೂ ಗೌರವಗಳಿಂದ ನಾನು ರಾರಾಜಿಸಬೇಕೆಂಬುದು ನನ್ನ ಬಯಕೆ. ಸೊಗಸಾದ ಬಳ್ಳಿಯಂತಿರುವ ನನಗೆ ತರ್ಕನರ್ತನ ಅಚ್ಚುಮೆಚ್ಚು. ಪೀಯೂಷಪಾನಲಾಲಸೆ. ಬೆಳದಿಂಗಳಲ್ಲಿ ವಿಹರಿಸುವ ಬಯಕೆ. ಶ್ರೀಕೃಷ್ಣದೇವ-ರಾಯಭೂಪಾಲನ ಗುರು ಶ್ರೀವ್ಯಾಸತೀರ್ಥರು ತರ್ಕತಾಂಡವ ರಚಿಸಿದರು. ನ್ಯಾಯಾಮೃತ ಕುಡಿಸಿದರು. ಚಂದ್ರಿಕಾ ನಿರ್ಮಿಸಿದರು. ನನ್ನನ್ನು ಕೈಹಿಡಿದು ಬೆಳೆಸಿ-ದರು. ಅಂತೆಯೇ ನಾನು ಪ್ರಗಲ್ಭೆಯಾದೆ.

ಶ್ರೀವಿಜಯೀಂದ್ರತೀರ್ಥರು ಆಮೋದವನ್ನು ಕಟ್ಟಿದರು. ನನ್ನ ಸಹಾಯದಿಂದ ಲೋಕಪ್ರಸಿದ್ಧರಾದರು. ಒತ್ತಾದ ನೇಯ್ಗೆ, ಬಣ್ಣಬಣ್ಣದ ಝರಿ, ಚಿರಕಾಲ ಬೆಳಗುವ ಬಿಳಿಯ ರೇಷ್ಮೆ ಸೀರೆಯ ಮೇಲೆ ಆಸೆಯಾಯಿತು. ಶ್ರೀವಿಜಯೀಂದ್ರ ತೀರ್ಥರು ನನ್ನಾಸೆ ಪೂರೈಸಿದರು. ಶ್ರೀಮಧ್ವಾಧ್ವಕಂಟಕೋದ್ಧಾರವೆಂಬ ಸೀರೆಯನ್ನು ಉಡು-ಗೊರೆಯಾಗಿ ಕೊಟ್ಟರು. ನ್ಯಾಯಮೌಕ್ತಿಕಮಾಲಾ ಎಂಬ ಮುತ್ತಿನ ಸರ ಮೊದಲಾದ ಆಭರಣಗಳನ್ನು, ಅವುಗಳನ್ನಿಡಲು ತತ್ವಮಾಣಿಕ್ಯಪೇಟಿಕಾ ಎಂಬ ಪೆಟ್ಟಿಗೆಯನ್ನೂ ಬಳುವಳಿಯಾಗಿ ನೀಡಿದರು.

ಶ್ರೀಸುಧೀಂದ್ರತೀರ್ಥರು ರಾಜಸಭೆಗಳಲ್ಲಿನ ತಮ್ಮ ವಿಜಯಗಳಿಗೆ ನಾನೇ ಕಾರಣವೆಂದರಿತು ನನಗೊಂದು ತರ್ಕತಾಂಡವವ್ಯಾಖ್ಯಾನವೆಂಬ ನರ್ತನರಂಗವನ್ನು ನಿರ್ಮಿಸಿದರು. ಭಾಗವತ ದ್ವಿತೀಯ ಸ್ಕಂಧವನ್ನು ವ್ಯಾಖ್ಯಾನಿಸಿದರು. ಏಕಾದಶ ಸ್ಕಂಧ ವ್ಯಾಖ್ಯಾನವೆಂಬ ಮುತ್ತು ನನ್ನ ಕಿರೀಟವನ್ನೇರಿತು. ಅವರು ನಿರ್ಮಿಸಿದ ಚೂರ್ಣಿಕಾ ಗದ್ಯ ಭೂಯಿಷ್ಠ ಸುಭದ್ರಾಪರಿಣಯ ನಾಟಕ ನನಗೆ ಉದ್ಯಾನವನ; ನನ್ನ ವಿಹಾರ ಭೂಮಿ.

ಸುಧಾ, ಚಂದ್ರಿಕಾ ನನ್ನ ಪ್ರಾಣನಾಡಿ. ಇವೆರಡಕ್ಕೆ ಸರಿಯಾದ ವ್ಯಾಖ್ಯಾನವಿಲ್ಲದೇ ಹೋದರೆ ನನ್ನ ಮೂಲವೇ ಕತ್ತರಿಸಿಹೋದಂತೆ. ನನ್ನ ಅಂತ್ಯ. ಹಾಗಾಗಿಹೋದಲ್ಲಿ, ಈವರೆಗಿನೆಲ್ಲರೂ ನೀಡಿದ ಬಳುವಳಿಗಳೆಲ್ಲವೂ ವ್ಯರ್ಥ. ಹಾಗಾಗಬಾರದು.

ನೀನಲ್ಲದೇ ಇನ್ಯಾರೂ ವ್ಯಾಖ್ಯಾನಶಕ್ತರಲ್ಲ. ಸಂನ್ಯಾಸವನ್ನು ಸ್ವೀಕರಿಸು. ವೇದಾಂತ ಸಾಮ್ರಾಜ್ಯಾಧಿಪತಿಯಾಗು. ವ್ಯಾಖ್ಯಾನ ಮಾಡು. ನನ್ನನ್ನುಳಿಸು.

ಶ್ರೀರಾಮ ಪ್ರತಿಮೆಯ ಪೂಜಿಸುವ ಸಂನ್ಯಾಸಿಗಳಲ್ಲಿಯೇ ನನ್ನ ವಾಸ. ಇದು ವ್ಯಾಸರ ಆದೇಶ. ನಿನ್ನ ಗುರುಗಳಿರುವುದಿನ್ನೆರಡೇ ವರ್ಷ. ನಾ ಹೇಳಿದಂತೆ ನೀ ನಡೆಯದಿದ್ದರೆ, ಅನಾದಿ ನಿತ್ಯವಾದ ವೇದರಾಶಿ, ಅರ್ಥಮಥನ, ವೈಷ್ಣವ ಸಂಪ್ರದಾ-ಯವೆಲ್ಲವೂ ನಾಶವಾಗುವುದು. ಮಠ-ಮಂದಿರಗಳು ಅಮಂಗಳಗಳ ನೆಲೆವೀಡಾ-ಗುವುವು. ನಿನಗೆ ಗೃಹಸ್ಥಾಶ್ರಮವಲ್ಲ, ಸಂನ್ಯಾಸವೇ ಚೆಂದ. ಇದು ಬ್ರಹ್ಮಲಿಖಿತ. ನಿನ್ನಧೀನಳಾಗಿರುವುದು ದೈವಸಂಕಲ್ಪ. ಇದುವೇ ನನಗೆ ಪರಮಾನಂದ. ಇಷ್ಟು ಹೇಳಿದ ವಿದ್ಯಾಲಕ್ಷ್ಮಿ ಮಂತ್ರೋಪದೇಶ ಮಾಡಿ, ಅಂತರ್ಧಾನರಾದರು.

ಗುರುಗಳ, ದೇವಿಯ ಮಾತುಗಳು ಪುನಃ ಪುನಃ ಕಾಡಿತು. ಗುರಿ ಸ್ಪಷ್ಟವಾಯಿತು. ಮಾರ್ಗ ಅನಿವಾರ್ಯವಾಯಿತು. ಮಗನ ಉಪನಯನ ಗುರುಗಳ ಸನ್ನಿಧಿ-ಯಲ್ಲಿಯೇ ಸಾಂಗವಾಯಿತು.

ಪತಿವ್ರತೆ ಸರಸ್ವತಿ ಪತಿವಿರಹ ತಾಳಲಾರಳು. ದೇಹತ್ಯಾಗಕ್ಕೆ ಮುಂದಾದಾಳೆಂಬ ಮುಂದಾಲೋಚನೆ ಗುರುಗಳದ್ದು. ಕುಂಭಘೋಣದಿಂದ ತಂಜಾವೂರಿಗೆ ಸಂಸ್ಥಾನದ ಪಯಣ.

ಕ್ರಿ.ಶ. 1621. ಫಾಲ್ಗುಣ ಶುದ್ಧ ದ್ವಿತೀಯಾ. ಸಂನ್ಯಾಸ ದೀಕ್ಷೆ. ವೇಂಕಟನಾಥರ ವಿರಜಾ ಹೋಮ. ಸರ್ವಸಂಗಗಳ ಕರ್ತನ. ಪವಿತ್ರಸ್ನಾನ. ಕಾವಿಯುಟ್ಟ ಕಾಂತಿವರ. ಪ್ರಣವೋಪದೇಶಪಡೆದ ಶಿಷ್ಯವರ. ಶ್ರೀಸುಧೀಂದ್ರತೀರ್ಥರ ವರಕುಮಾರ ಶ್ರೀರಾಘ-ವೇಂದ್ರತೀರ್ಥ. ಆಶ್ರಮನಾಮನಿರ್ಣಯ ಗುರುಗಳದ್ದಲ್ಲ. ಸ್ವಪ್ನದಲ್ಲಿಯೇ ಸೂಚಿಸಿ-ದ್ದ ದೇವರದ್ದು.

ಗುರುಗಳು ಮನತುಂಬಿ ಹರಸಿದರು: ಯತಿ ಚಕ್ರವರ್ತಿಯಾಗು; ತಪಸ್ಸಿನಲ್ಲಿ ಶ್ರೀಸುರೇಂದ್ರತೀರ್ಥರಂತಾಗು; ಕೀರ್ತಿಸಮೃದ್ಧಿಯಲ್ಲಿ ಶ್ರೀವಿಜಯೀಂದ್ರರಂತಾಗು. ವಾಗ್ಯುದ್ಧದಲ್ಲಿ ನನ್ನಂತಾಗು. ವೇದಾಂತಸಾಮ್ರಾಜ್ಯದ ಅಧಿಪತಿಯನ್ನಾಗಿ ಅಭಿಷೇ-ಚಿಸಿದರು. ವೇದಘೋಷಗಳು. ಜಯಘೋಷಗಳು ತುಂಬಿ ತುಳುಕಿದವು.

ಶ್ರೀಮೂಲರಾಮದೇವರ ಪ್ರತಿಮಾ, ಶ್ರೀವೇದವ್ಯಾಸದೇವರ ಶಿಲಾತ್ಮಕವಾದ ಎರಡು ಪ್ರತಿಮೆಗಳು, ಬೇರೆ ಬೇರೆ ಶಾಸ್ತ್ರಗ್ರಂಥಗಳ ಪರ್ವತಗಳು, ಚಾಮರದ್ವಯ, ಶ್ವೇತಚ್ಛತ್ರ, ಚಿನ್ನದ ಪಲ್ಲಕ್ಕಿ, ಆನೆಯ ಅಂಬಾರಿಯ ಮೇಲೆ ಅಲಂಕರಿಸಿದ ಸುವರ್ಣ ಮಂಟಪ, ವೀಣಾ, ಮೃದಂಗ, ಕೊಳಲು, ತಾಳ ಎಂಬ ಚತುರ್ವಿಧ ವಾದ್ಯಗಳು, ಶಂಖ, ಧವಳ, ಮದ್ದಳೆ, ಕಹಳೆ, ನಗಾರಿ ಮುಂತಾದ ಇನ್ನೂ ಅನೇಕ ವಾದ್ಯಗಳು, ಚಿನ್ನ ಬೆಳ್ಳಿಯ ರಾಜಮರ್ಯಾದೆಯ ಬೆತ್ತಗಳು, ತಾಳ ಹಾಕುವವರು, ಸ್ತುತಿ ಪಾಠಕರು, ಹಗಲು ದೀವಟಿಗೆ ಇತ್ಯಾದಿಯಾದ ಯಾವ ಯಾವ ವೇದಾಂತ ವಿದ್ಯಾ-ಸಿಂಹಾಸನದ ರಾಜಚಿಹ್ನೆಗಳಿವೆಯೋ ಅವೆಲ್ಲವನ್ನೂ ಶ್ರೀ ಸುಧೀಂದ್ರತೀರ್ಥರು, ಶ್ರೀ ರಾಘವೇಂದ್ರತೀರ್ಥರಿಗೆ ದಯಪಾಲಿಸಿದರು.

ನಿಶ್ಚಿಂತರಾದ ಶ್ರೀಸುಧೀಂದ್ರರು ತುಂಗಭದ್ರಾ ತೀರದ ಸನಿಹ ಕಾಲಾದ್ರಿಯಲ್ಲಿ ತಪಸ್ಸು ಮಾಡುತ್ತಾ ಕಾಲಕ್ರಮದಲ್ಲಿ ವೃಂದಾವನಾಂತರ್ಗತರಾದರು. ನವವೃಂದಾವನ ಖ್ಯಾತವಾಯಿತು.

ಸತತ ಸಂಚಾರ, ತೀರ್ಥಕ್ಷೇತ್ರಗಳ ಸಂದರ್ಶನ, ವ್ರತನಿಯಮಗಳ ಪಾಲನಾ, ಭಗವದುಪಾಸನಾ, ಆರ್ತಜನರಕ್ಷಣ, ದುರ್ವಾದನಿರಾಕರಣ, ಸಿದ್ಧಾಂತ-ಸ್ಥಾಪನಾದಿಗಳೇ ಸಂನ್ಯಾಸಿಗಳ ಪರಮಮುಖ್ಯಸಾಧನ. ಅಂತೆಯೇ, ಪೂರ್ವದಿಕ್ಕಿನಲ್ಲಿ ಕಾವೇರಿ-ಸಮುದ್ರಸಂಗಮವನ್ನು ಆರಂಭಿಸಿ ಪ್ರದಕ್ಷಿಣಾಕಾರವಾಗಿ ದ್ಯುಪುರಿ, ಪರಿಪೂರ್ಣ- ದೇವನಗರಿ, ಮಣಿಶೃಂಗ, ಕಮಲಾಲಯಪುಷ್ಕರಿಣೀ, ಮಹೇಶ್ವರಕ್ಷೇತ್ರ, ಚಂಪಕಾರಣ್ಯಾಧಿಪತಿಯಾದ ಶ್ರೀರಾಜಗೋಪಾಲಸ್ವಾಮಿಯ ಮನ್ನಾರಗುಡಿ, ಶ್ರೀರಾಮನಿರ್ಮಿತಸೇತು, ಸಮುದ್ರ, ಕನ್ಯಾಕುಮಾರಿ, ತೋತಾದ್ರಿ, ರಮ್ಯಪರ್ವತ, ಶ್ರೀಮದನಂತಪುರ, ಜನಾರ್ದನಕ್ಷೇತ್ರ, ತಾಮ್ರಪರ್ಣೀತಟ, ನವದೇವತಾಸನ್ನಿಧಿ, ದಕ್ಷಿಣಮಧುರೈ, ವೃಷಭಾಚಲ, ಶ್ರೀರಂಗ. ನಾಮಗಿರಿ, ಬಾಣಪುರ, ವಿಷ್ಣುಮಂಗಲ, ಕಣ್ವತೀರ್ಥ, ಸುಬ್ರಹ್ಮಣ್ಯ, ಉಡುಪಿ, ಪಂಡರಾಪುರ, ಕೊಲ್ಹಾಪುರ, ರಾಮನಾಥಪುರ, ಗೋದಾವರಿ, ವಿಜಯನಗರ, ಕೃಷ್ಣವೇಣಿ, ಶ್ರೀಶೈಲ, ತಿರುಪತಿ, ಕಾಂಚಿ, ಅರುಣಾಚಲ ವೃದ್ಧಾಚಲ, ಶ್ರೀಮುಷ್ಣ ಮೊದಲಾದ ಪುಣ್ಯಕ್ಷೇತ್ರತೀರ್ಥಯಾತ್ರೆಯನ್ನು ನಡೆಸಿ, ಶ್ರೀ ರಾಘವೇಂದ್ರತೀರ್ಥರು ಕುಂಭಘೋಣಕ್ಕೆ ಹಿಂದಿರುಗಿದರು.

ಬ್ರಾಹ್ಮಣರ ಭವ್ಯ ಸ್ವಾಗತ. ವಿವಿಧ ವಾದ್ಯಗಳ ಮಂಗಳ ಘೋಷ. ವಿವಿಧ ವರ್ಣದವರಿಂದ ಭಕ್ತಿಯ ಪುಷ್ಪವೃಷ್ಟಿ. ಸುಮಂಗಲಿಯರ ಶ್ರದ್ಧೆಯ ಆರತಿಗಳು. ಇಷ್ಟದೇವರಾದ ಹನುಮಂತದೇವರ ಸ್ತೋತ್ರ ಮಾಡಿದರು ಸ್ವರಚಿತ ಭುಜಂಗ-ಪ್ರಯಾತ ವೃತ್ತದ ಪದ್ಯಗಳಿಂದ. ಎಷ್ಟಾದರೂ, ಶ್ರೀವ್ಯಾಸರಾಜರಾಗಿದ್ದಾಗ ಹೇಮ-ಪುಷ್ಕರಿಣಿಯ ದಡದಲ್ಲಿ ತಾವೇ ಪ್ರತಿಷ್ಠಾಪಿಸಿದ ಮಾರುತಿಯಲ್ಲವೇ. ಶ್ರೀಮೂಲ-ರಾಮದೇವರೊಂದಿಗೆ ಮಠದ ಪ್ರವೇಶ. ಅಯೋಧ್ಯೆಯಾಯಿತು ಕುಂಭಘೋಣ. ಇಂತಹ ತೀರ್ಥಯಾತ್ರೆಗಳ ಪುನರಾವರ್ತನ ಕಾಲಕಾಲಕ್ಕೆ.

ಸಂಚಾರದಲ್ಲಿರಲೀ ಅಥವಾ ಚಾತುರ್ಮಾಸ್ಯದ ದೀಕ್ಷೆಯವಾಸವಿರಲಿ, ದುರ್ವಾ-ದಗಳ ಖಂಡನೆ, ಶ್ರೀಮಧ್ವಸಿದ್ಧಾಂತದ ಮಂಡನೆ ಅವರ ಉಸಿರು. ದುರ್ವಾದಿಗಳ ನಿಗ್ರಹ, ಸದ್ವಾದಿಗಳಿಗೆ ಅನುಗ್ರಹ ನಿತ್ಯವ್ರತ. ಋತುವಿಗೆ ತಕ್ಕಂತೆ ಭಗವದುಪಾಸನೆ ಮತ್ತೊಂದು ವೈಶಿಷ್ಟ್ಯ. ವಿಶೇಷ ದಿನಗಳಲ್ಲಿ ಶ್ರೀಮೂಲರಾಮಚಂದ್ರದೇವರಿಗೆ ಪಂಚಾಮೃತಾದಿ ಮಹಾಭಿಷೇಕ. ಇಂದಿಗೂ ತಮ್ಮ ಪೀಠದಲ್ಲಿ ವಿರಾಜಿಸುವ ಯತಿಗಳಲ್ಲಿದ್ದು ಶ್ರೀರಾಮನ ಕೈಂಕರ್ಯ ಪರಮಭಕ್ತಿಯಿಂದ.

ರಾಯರ ಶಿಷ್ಯರೋ ಪ್ರಜ್ಞಾಶಕ್ತಿ, ಧಾರಣಶಕ್ತಿಯಲ್ಲಿ ಪಟುಗಳು. ಗುರುರಾಯರ ಪಾಠ-ಪ್ರವಚನಗಳು ಯಾವಾಗಲೂ ಕ್ರಮಬದ್ಧ. ಶ್ರೀಜಯತೀರ್ಥರ ಪ್ರಮಾಣ-ಪದ್ಧತಿಯೇ ಆದ್ಯಗ್ರಂಥ. ಶ್ರೀಮಧ್ವಸಿದ್ಧಾಂತದ ಎಲ್ಲಾ ಪ್ರಮುಖ ಗ್ರಂಥಗಳೂ ಒಂದಾದ ಮೇಲೊಂದರಂತೆ. ಶ್ರೀವ್ಯಾಸರಾಜರ ಚಂದ್ರಿಕಾದೊಂದಿಗೆ ಉಪಸಂಹಾರ. ಶ್ರೀರಂಗದಲ್ಲಿ ಈ ತರಹದ ಪಾಠಗಳು ಹಲವು ಬಾರಿ.

ಬಾಣಪುರದಲ್ಲಿ ವೀರಭದ್ರ ಮತ್ತು ಭೈರವಭಟ್ಟ ಎಂಬ ವಾದಿಗಳ ಮೇಲೆ ವಿಜಯ. ಉಂಬಳಿಯಾಗಿ ಬಂತು ಗ್ರಾಮ. ಉಡುಪಿಯಲ್ಲಿ ಮಧ್ವಸರೋವರಸ್ನಾನ, ಶ್ರೀಕೃಷ್ಣದರ್ಶನ, ಅಷ್ಟಯತಿಗಳಿಂದ ಸನ್ಮಾನ, ವ್ಯವಧಾನರಹಿತವಾಗಿ ಹತ್ತು ಬಾರಿ ಚಂದ್ರಿಕಾ ಪಾಠ. ಚಂದ್ರಿಕಾಪ್ರಕಾಶ, ಗೀತಾವಿವೃತಿ, ತಂತ್ರದೀಪಿಕಾ, ನ್ಯಾಯಮುಕ್ತಾ-ವಲಿಗಳ ರಚನೆ. ವಿಜಯನಗರದಲ್ಲಿ ಶಿಷ್ಯರಿಗೆ ತಪ್ತಮುದ್ರಾಧಾರಣ, ವಾದಿಜಯ, ರಾಜನಿಂದ ಶ್ವೇತಚ್ಛತ್ರ-ಬಿರುದುಗಳ ಸ್ವೀಕಾರ. ಕೃಷ್ಣವೇಣಿ ನದೀತೀರದಲ್ಲಿ ತತ್ತ್ವಪ್ರಕಾಶಿಕಾ ಪ್ರವಚನ. ಕೃಷ್ಣಾನದೀ ತೀರದಲ್ಲಿ ಭಾವದೀಪ ಗ್ರಂಥರಚನೆ. ಅಣು-

ಭಾಷ್ಯಕ್ಕೆ ತತ್ವಮಂಜರೀ ವ್ಯಾಖ್ಯಾನ ರಚನೆ. ಮಳಖೇಡದಲ್ಲಿ ಸುಧಾಮಂಗಳ, ರಚಿಸಿದ್ದ ಪರಿಮಳ ಭಾವದೀಪಗಳ ಸಮರ್ಪಣೆ.

ಗುರುರಾಯರ ದಿನಚರಿ ಸುಸ್ವಚ್ಛ ದಿನಮಣಿ. ವಂದಿಮಾಗಧರ ಸ್ತುತಿ. ಎದ್ದ ಗುರುರಾಯರ ತುಲಸೀವಂದನೆ. ಆಂಜನೇಯ ನಮನ. ವಂದಿಸಿ ಹಿರಿಯರಿಗೆ ಆಶೀರ್ವಾದಸಂಪಾದನೆ. ವಂದಿಸಿದ ಬ್ರಾಹ್ಮಣರಿಗೆ ಶುಭಾಶಂಸನೆ. ಗಜೇಂದ್ರಮೋಕ್ಷ ಪಾರಾಯಣಪೂರ್ವಕ ತೀರಗಮನ. ಕಾವೇರಿಯಲ್ಲಿ ವಿಧಿಪುರಸ್ಸರವಾಗಿ ಪ್ರಾತಃಸ್ನಾನ, ಗೋಪೀಚಂದನ ಮುದ್ರಾಧಾರಣ, ಜಪ, ಭಾಗವತಾದಿ ಶ್ರವಣಪೂರ್ವಕ ವ್ಯಾಸ-ಪೂಜಾ, ಶ್ರೀವಿಜಯೀಂದ್ರಸೇವೆ, ವೈಭವೋಪೇತವಾಗಿ ಮಠಗಮನ, ಮಠದಲ್ಲಿ ಶಾಂತಿಪಾಠಪೂರ್ವಕ ಬ್ರಹ್ಮಸೂತ್ರಭಾಷ್ಯ ಪಾಠ, ಪರಬ್ರಹ್ಮನಾದ ಶ್ರೀಮನ್ನಾರಾಯಣನ ಅನಂತಗುಣಪೂರ್ಣತ್ವ, ದೋಷದೂರತ್ವಾದಿ ಪ್ರಮೇಯಗಳ ಸಮರ್ಥನೆ-ಯೊಂದಿಗೆ, ಜಿಜ್ಞಾಸುಗಳ ಪ್ರಶ್ನೆಗಳಿಗೆ ಉತ್ತರಗಳೊಂದಿಗೆ, ವಿರುದ್ಧಮತಗಳ ಖಂಡನೆ, ಮಧ್ಯಾಹ್ನ ಸ್ನಾನ, ಷೋಡಶೋಪಚಾರಪೂರ್ವಕ ರಾಮದೇವರ ಮಹಾಪೂಜೆ, ತೀರ್ಥಪ್ರಾಶನ, ಬ್ರಾಹ್ಮಣಭೋಜನ, ಭಿಕ್ಷಾಸ್ವೀಕಾರ, ಸಂಜೆಯವರೆಗೂ ವಿವಿಧ-ದೇಶಾದಾಗತ ಪಂಡಿತರೊಂದಿಗೆ ಶಾಸ್ತ್ರವಿಚಾರ, ಸಾಯಂ ಸ್ನಾನಾಹ್ನಿಕ, ಪೂಜಾ, ಭಗವಂತನದ ದಶಾವತಾರಾದ್ಯನಂತಾವತಾರಗಳ ಸ್ತುತಿ, ಉದ್ಧರಿಸೆಂದು ಪ್ರಾರ್ಥನೆ, ಭಕ್ತರರ್ಪಿಸಿದ ಸೇವಾಗ್ರಹಣ, ಸರ್ವಸಮರ್ಪಣ.

ಸರ್ವಾವಸ್ಥೆಗಳಲ್ಲಿಯೂ ಸದಾ ಸಂದರ್ಭೋಚಿತವಾಗಿ ಅಂತರ್ಮನದಿಂದ, ಬಹಿರ್ಮನದಿಂದ, ವ್ಯಕ್ತವಾಗಿ, ಅವ್ಯಕ್ತವಾಗಿ ಶ್ರೀಹರಿಯ ಸಂಸ್ಮರಣ.

ಚಾತುರ್ಮಾಸ್ಯ ಸಂಕಲ್ಪ ಮಾಡಿ, ನಿಯಮಗಳನ್ನು ಸ್ವೀಕರಿಸಿ, ಗುರುರಾಯರು ಪ್ರತಿನಿತ್ಯ ನೇರವೇರಿಸುವ ವಿಶೇಷವಾದ ಪೂಜೆ, ಉತ್ಸವ, ಪಾಠ-ಪ್ರವಚನಾದಿಗಳ ವೈಭವದಲ್ಲಿ ಒಂದು ದಿನದ ವೈಭವವನ್ನು ವರ್ಣಿಸುವ ಬ್ರಾಹ್ಮಣನೂ ವೇದವಿದ್ಯಾ ಪಾರಂಗತನಾಗುವನು.

ಭಗವಂತನ ಅನುಗ್ರಹದಿಂದ ಜಾಡ್ಯವನ್ನು ನಿಗ್ರಹಿಸುವ ಶಕ್ತಿ. ಆದ್ದರಿಂದಲೇ ಆಶ್ರಯಿಸಿದವರ ಸಾಧನೆಯ ಎಲ್ಲಾ ಪ್ರತಿಬಂಧಕಗಳನ್ನೂ ಪರಿಹರಿಸುವರು. ದೇವರ ಪ್ರತಿಮಾ. ಸಭೆಯಲ್ಲಿ ಆಸೀನರಾಗುರುವಾಗ ವಿದ್ವಾಂಸರು, ಕವಿಗಳು ಅವರನ್ನು

ವಿವಿಧ ಪ್ರಕಾರಗಳಿಂದ ಸೇವಿಸುವರು. ಅವರು ಶ್ರೀಹರಿಯ ಪ್ರೀತಿಪಾತ್ರರು. ಸದಾ ಶ್ರೀವೇದವ್ಯಾಸರ ಧ್ಯಾನನಿರತರು. ಗೀತಾ, ಉಪನಿಷತ್ತು ಮತ್ತು ಬ್ರಹ್ಮಸೂತ್ರಗಳ ಅರ್ಥ ಉಪದೇಶಕರು. ಗ್ರಂಥಕಾರರು. ಯತಿಶ್ರೇಷ್ಠರು. ಯೋಗಿಗಳು. ಮಾಯಿಸಂನ್ಯಾಸಿಗಳೆಂಬ ಕತ್ತಲೆಯ ನಿವಾರಕರು. ಭಜಿಸುವವರಿಗೆ ಕಲ್ಪವೃಕ್ಷ. ಶರಣಾದವರಿಗೆ ಐಶ್ವರ್ಯಪ್ರದರು. ಯೋಗ್ಯ ಚೇತನರಿಗೆ ಊಹಾತೀತ ಉದ್ಧಾರಕ ಜ್ಞಾನಪ್ರದರು. ಶ್ರೇಷ್ಠವಾದ ವಿದ್ಯೆ, ಸಂಪತ್ತು, ಸಂಗೀತ, ಶಿಲ್ಪಾದಿಜ್ಞಾನ, ಸಂತಾನ ಮುಂತಾದ ಸಕಲೇಷ್ಟಾರ್ಥಗಳೂ ಸಿದ್ಧಿಸುತ್ತವೆ.

ಭಗವಂತನ ನಾಲ್ಕು ರೂಪಗಳ ನಿತ್ಯಸನ್ನಿಧಾನ. ಆದರದಿ ಸಲ್ಲಿಸಿದ ಹಸ್ತೋದಕವ ಬೇಡವೆನ್ನದೆಯೇ ಹರಿಸಮರ್ಪಣೆ. ಪಾದೋದಕವ ಪ್ರತಿದಿನ ಸೇವಿಪ ಸಾಧುಜನರ ಆಧಿವ್ಯಾಧಿ ಪರಿಹಾರ. ಕುಹಕಿಗಳ ಕುತಂತ್ರದ ಅರಿವಿಲ್ಲದೇ ಸತ್ತವನಂತೆ ನಟಿಸಿ ನಿಜವಾಗಿ ಸತ್ತ ಬಾಲಕನ ತಾಯಿಯ ಮೊರೆಯ ಕೇಳಿ, ಬದುಕಿಸಿ, ಗುರುಪಾದನೆಂಬ ಪೆಸರಿನಿಂದ ಬಾಳುವಂತೆ ಮಾಡಿದ ಕರುಣಾಮಯಿ.

ಗುರುರಾಯರು ವ್ಯಾಸರಾಜರಾಗಿದ್ದಾಗ ಭೇಟಿಯಾಗಿದ್ದ ಕನಕ ಈ ಜನ್ಮದಿ ಅಂತ್ಯಜ ಬೆನಕನಾಗಿ ತಂದೊಪ್ಪಿಸಿದ ಸಾಸಿವೆಯ ಚಾತುರ್ಮಾಸ್ಯದ ನಿಯಮವ ಸಡಿಲಿಸಿ ಹರಿಗರ್ಪಿಸಿದ ಕರುಣೆ. ಸಂಪ್ರದಾಯವಾಗಿಸಿ, ಬಿದರಹಳ್ಳಿ ಶ್ರೀನಿವಾಸ-ತೀರ್ಥರ ಪ್ರಸಂಗದಿಂದ ಸಾಬೀತುಗೊಳಿಸಿದ ಜಾಣ್ಮೆ. ವಾಗ್ವೈಖರೀ ಗ್ರಂಥಪಾಂಡಿತ್ಯ-ವನ್ನವಲಂಬಿಸಿ, ಶೇಷನೆಂಬ ಪಂಡಿತನ ಪರಾಜಯ. ಬಿಜಾಪುರದಲ್ಲಿ ಸೋತ ಮಾಯಾವಾದ ಪಂಡಿತರಿಂದ ಜಯಪತ್ರ ಕೊಡಿಸಿದ ಬಾದ್‌ಶಾ. ಸೋತ ಕೆಲವರು ರಾಯರಿಂದ ಪಡೆದರು ವೈಷ್ಣವ ದೀಕ್ಷೆ,

ರಾಯರು ಬರುತ್ತಿರುವ ವಿಷಯ ತಿಳಿದು ಕಾಂಚಿ ತೊರೆದಿದ್ದ ವಿದ್ವಾಂಸರು, ರಾಯರು ಕಾಂಚಿಯಿಂದ ಹೊರಡುವವರೆಗೆ ಕಾಂಚಿಗೆ ಬರಲೇ ಇಲ್ಲ. ಬಿದರಹಳ್ಳಿ. ಶ್ರೀನಿವಾಸಾಚಾರ್ಯರು ರಚಿಸಿದ್ದ ಗ್ರಂಥಗಳನ್ನು ನೋಡಿ, ಶ್ರೀನಿವಾಸತೀರ್ಥ ಎಂದು ಶ್ಲಾಘನೆ. ಮುಕುತಿಪುರದೆಡೆಗೆ ಆಗಸಮಾರ್ಗದಿ ಹೊರಟ ಶ್ರೀಕೃಷ್ಣದ್ವೈಪಾಯನ-ಯತಿವರರಿಗೆ ನಮಿಸಿ, ಸಂಭಾಷಣೆ. ಇವೆಲ್ಲಾ ಗುರುರಾಯರ ಭವ್ಯವ್ಯಕ್ತಿತ್ವದ ಸಣ್ಣ ಸಣ್ಣ ಉದಾಹರಣೆ.

ಪೂರ್ವಾಶ್ರಮದ ಪತ್ನಿಯ ಪ್ರೇತತ್ವನಿವಾರಣೆ. ವಂಶಜರು ಶುಭಕಾರ್ಯಗಳ ಸಂದರ್ಭದಲ್ಲಿ ಈಕೆಯ ಪ್ರೀತ್ಯರ್ಥವಾಗಿ ಮುತ್ತೈದೆ ಪೂಜೆ ಸಲ್ಲಿಸುವಂತೆ ನಿಯಮ. ಅಗ್ನಿಸೂಕ್ತಪಾರಾಯಣಪೂರ್ವಕ ತೇಯ್ದ ಗಂಧ ಹಚ್ಚಿಕೊಂಡವರಿಗೆ ಉರಿ; ವರುಣಸೂಕ್ತಪಠಣದಿಂದ ಸಾಂತ್ವನ. ಬಿಸಿಲ ಬೇಗೆಗೆ ತತ್ತರಿಸಿ ಬಿಸಿಯ ಮರಳ ಮೇಲೆ ಬಿದ್ದು ನರಳುತ್ತಿದ್ದ ವಿಪ್ರನ ರಕ್ಷಣೆಗಾಗಿ ಮಂತ್ರಿಸಿದ ಜಲ ಸೇಚನ. ಮರಳಿನಿಂದ ಹೊಮ್ಮಿದ ಝರಿ.

ಅಜ್ಞಾನ, ವಿಸ್ಮರಣೆ, ತಪ್ಪು ತಿಳುವಳಿಕೆ, ಸಂಶಯ, ಅಪಸ್ಮರಣೆಗಳನ್ನು ಪರಿಹರಿಸುವರೆಂದು ಅಪ್ಪಣ್ಣಾಚಾರ್ಯರು ತಿಳಿಸಿರುವರು. ಜ್ಞಾನ, ಭಕ್ತಿ, ಸುಪುತ್ರ, ಆಯು, ಕೀರ್ತಿ, ಪುಣ್ಯಗಳನ್ನು ಬೆಳೆಸುವರು. ಪರಿಚಾರಕನಿಗೆ ನೀಡಿದ ಮೃತ್ತಿಕೆಯ ಶಕ್ತಿಯಿಂದ ದುಷ್ಟಗ್ರಹವಾಗಿದ್ದವನ ಶಾಪವಿಮೋಚನೆ, ಸದ್ಗತಿಪ್ರಾಪ್ತಿ. ಗೃಹಸ್ಥನ ಮನೆಯಲ್ಲಿ ಸುಖಪ್ರಸವ, ಪರಿಚಾರಕನಿಗೆ ಧನ-ಲಗ್ನ ಯೋಗ. ಮೂವರು ಬ್ರಾಹ್ಮಣರಿಗೆ ಗುರುರಾಯರ ಕಾವಿಪಿಡಿದ ಪರಿಚಾರಕನಿಂದ ಆಹ್ವಾನ, ಇಚ್ಛಾ-ಭೋಜನ, ಶಾಟಿಯ ಮಹಿಮೆಯ ಅನಾವರಣ.

ಹಾವಿನ ಕಡಿತದಿಂದ ಮೃತನಾದನೆಂದು ಗೋರಿ ಮಾಡಲ್ಪಟ್ಟಿದ್ದ ನವಾಬನೊಬ್ಬನ ಮಗನ ರಕ್ಷಣೆ. ನವಾಬನಿಂದ ಗ್ರಾಮದ ಕೊಡುಗೆ. ಬಹಿಷ್ಕಾರಕ್ಕೊಳಗಾಗಿದ್ದ ಬ್ರಾಹ್ಮಣನನ್ನು ಮಂತ್ರಪೂತ ಶಂಖೋದಕದಿಂದ ಪವಿತ್ರನನ್ನಾಗಿಸಿ, ಆಕ್ಷೇಪಿಸಿದ-ವರೆದುರೇ ಕೇರೆಣ್ಣೆಯಲ್ಲಿ ಅದ್ದಿದ್ದ ವಸ್ತ್ರವನ್ನೂ ಶಂಖೋದಕದಿಂದಲೇ ಶುದ್ಧಗೊಳಿಸಿದ ಮಂತ್ರಸಿದ್ಧಿ.

ಉತ್ತರ ಕರ್ನಾಟಕದ ನವಲ್ಗುಂದದ ಶಿರಸಂಗಿ ಗ್ರಾಮದಲ್ಲಿ ವೇದನಿಂದಕ ವೀರ-ಶೈವದೇಸಾಯಿಯೆದುರು ಒಣಗಿದ ಒನಕೆಯನ್ನು ಮಂತ್ರಪೂತ ಜಲದ ಪ್ರೋಕ್ಷಣೆ-ಯಿಂದ ಚಿಗುರಿಸಿ, ವೇದಪ್ರಾಮಾಣ್ಯಸ್ಥಾಪನೆ. ಶ್ರೀರಾಘವೇಂದ್ರ ಗುರುರಾಜರ ಅನುಗ್ರಹವಾದರೆ ಹುಟ್ಟು ಮೂಕ ಹುಟ್ಟು ಕಿವುಡನಾದವನೂ ಕೂಡ ಒಳ್ಳೆಯ ಮಾತುಗಾರನಾಗುತ್ತಾನೆ. ಹುಟ್ಟುದರಿದ್ರನೂ ಕೂಡ ನವನಿಧಿಸಂಪನ್ನನಾದ ಕುಬೇರ-ನಂತೆ ಐಶ್ವರ್ಯಸಂಪನ್ನನಾಗುತ್ತಾನೆ.

ಭೃತ್ಯನ ಅಪಮೃತ್ಯುಕಳೆದು ಸುಖವಿತ್ತು ರಕ್ಷಿಸಿದ್ದು, ಮಾವಿನ ಸೀಕರಣೆಯಲ್ಲಿ

ಮುಳುಗಿದ್ದ ಮಗುವನ್ನು ಮರಣದಿಂದ ರಕ್ಷಿಸಿದ್ದು, ಕ್ಷತ್ರಿಯನಲ್ಲದ ರಾಜನಿಗೆ ಬ್ರಾಹ್ಮಣರ ಮಹಿಮೆಯನ್ನು ಕ್ಷಿಪ್ರವಾಗಿ ತೋರಿದ ಪ್ರಸಂಗ, ಧರ್ಮಭ್ರಷ್ಟನಾದವನ ಸ್ವರೂಪಯೋಗ್ಯತೆಯನುಸಾರ ಸದ್ಗತಿ ನೀಡಿದ ಪ್ರಸಂಗ, ಪ್ರಸವಿಸಿದ ಲಲನೆಗಾಗಿ ಮರಳು ತುಂಬಿದ ಮಾರ್ಗದಲ್ಲಿ ಚಿಲುಮೆ ಸೃಷ್ಟಿಸಿದ ಪ್ರಸಂಗ, ಬಿಸಿಲಬೇಗೆಯ ತಾಳಲಾರದ ಶಿಶುವಿಗೆ ನೆರಳಾಗಿ ಆಗಸದಲ್ಲಿ ಶಾಟಿ ನಿಲ್ಲಿಸಿದ ಪ್ರಸಂಗ, ಬರಗಾಲದ ಹನ್ನೆರಡು ವರ್ಷ ಸಮಸ್ತಪ್ರಜೆಗಳ ಸಹಿತನಾದ ತಂಜಾವೂರು ರಾಜನಿಗೆ ಅನ್ನೋದಕ-ವನ್ನು ದಯಪಾಲಿಸಿ, ನಂತರ ಸುವೃಷ್ಟಿಯನ್ನೂ ಕರುಣಿಸಿದ ನಂತರ ಅಗ್ನಿಯಲ್ಲಿ ಪರಮಪುರುಷನಿಗೆ ಅರ್ಪಿಸಿದ್ದ ರತುನಮಾಲಿಕೆಯ ಕ್ಷಿತಿಪಗೆ ಮರಳಿಸಿದ ಮಹಿಮೆ, ಬೆಂಗಾಡಿನಲ್ಲಿ ಬೆಂದ ಕಾಶ್ಯಪವಿಪ್ರನ ಪೊರೆದ ಪ್ರಸಂಗ, ನಿಷಿದ್ಧ ವಸ್ತುಗಳನ್ನೂ ಶುದ್ಧ ವಸ್ತುಗಳನ್ನಾಗಿಸಿ, ಮ್ಲೇಂಛ ರಾಜನಿಗೆ ಮಹಿಮೆಯ ಅನುಭವ ನೀಡಿದ ಪ್ರಸಂಗ, ಚಿತ್ರದುರ್ಗದ ಭಕ್ತನ ಯೋಗ್ಯತೆ ಎಲ್ಲರೆದುರು ಸ್ಪಷ್ಟವಾಗುವಂತೆ ಅಗ್ನಿಪ್ರವೇಶ ಮಾಡಿಸಿ, ಮೋಕ್ಷಕೊಡಿಸಿ, ದಿವ್ಯವಿಮಾನದಲ್ಲಿ ಹರಿಲೋಕಕೇ ಕಳುಹಿದರೆಂದು ದಾಖಲಿಸಿರುವವರು ಶ್ರೀಜಗನ್ನಾಥದಾಸರು. ಕುರುಡ, ಹೆಳವ, ಮೂಕ, ಕಿವುಡರಿಗೂ ಅಭೀಷ್ಟಪೂರೈಸುವ, ಭೂತ-ಪ್ರೇತ-ವೇತಾಳಾದಿ ಭಯನಿವಾರಣೆ ಮಾಡುವರೆಂದೂ ಶ್ರೀಜಗನ್ನಾಥದಾಸರು ಹೇಳಿರುವರು. ಗುರುರಾಯರ ಅತಿಶಯವಾಗಿ ಕೊಂಡಾಡಿದ ಹರಿದಾಸರಿವರು.

ಸರ್ಪಕಡಿತದಿಂದ ಮೃತನೆಂದು ಗೋರಿ ಸೇರಿದ್ದ ಮಗನನ್ನು ರಕ್ಷಿಸಿ ದಯ-ಪಾಲಿಸಿದ ಗುರುರಾಯರಿಗೆ ನವಾಬನಿಂದ ಅನೇಕ ಖಿಲ್ಲತ್ತುಗಳ ಮತ್ತು ಕೃಷ್ಣಾಪುರ ಮುಂತಾದ ಹಳ್ಳಿಗಳ ಸಮರ್ಪಣೆ. ಶ್ರೀರಂಗಪಟ್ಟಣದ ಚಾತುರ್ಮಾಸ್ಯ, ಶ್ರೀರಂಗ-ನಾಥನ ಉಪಾಸನೆ, ತುಲಾ ಕಾವೇರಿ ಸ್ನಾನ. ಮೈಸೂರಿನ ಮಹಾರಾಜ ದೊಡ್ಡದೇವ -ರಾಜಒಡೆಯರ್‌ರವರಿಂದ ವಲ್ಲೂರು, ದೇವರಾಜಪುರವೆಂಬ ಊರುಗಳ ದಾನ.

ಸುಮಧ್ವವಿಜಯದ 16 ಸರ್ಗಗಳ ಕಥೆಯನ್ನು ಸಂಕ್ಷಿಪ್ತವಾಗಿ ತಿಳಿಸುವ ಸ್ವತಃ ನಾರಾಯಣ ಪಂಡಿತಾಚಾರ್ಯರು ರಚಿಸಿರುವ ಪ್ರಮೇಯನವಮಾಲಿಕಾಗೆ ವ್ಯಾಖ್ಯಾನ ಕೆಲವೇ ದಿವಸಗಳಲ್ಲಿ ವಿದ್ಯಾರ್ಥಿಜೀವನದಲ್ಲಿ. ಇದುವೇ ಗುರುರಾಯರ ಮೊದಲ ಕೃತಿ. ಇದ ನೋಡಿ ನಿರ್ಧರಿಸಿದರು ಪೀಠದಲ್ಲಿ ಸ್ಥಾಪಿಸಲು ವಾಣಿ-ವಾಯುಗಳು.

ಶ್ರೀರಂಗದಲ್ಲಿ ಈಶಾವಾಸ್ಯ ಮಂತ್ರದ ಅರ್ಥ ಪಾಠ ಹೇಳಿದಾಗ, ಶಿಷ್ಯರ ಪ್ರಾರ್ಥನೆಯಂತೆ, ಈಶಾವಾಸ್ಯಮಂತ್ರಾರ್ಥಸಂಗ್ರಹ ಗ್ರಂಥರಚನೆ. ಹತ್ತು ಉಪನಿಷತ್ತುಗಳಲ್ಲಿ 9ಕ್ಕೆ ವ್ಯಾಖ್ಯಾನ.

ಶಿಷ್ಯ ಸ್ಮೃತಿಮುಕ್ತಾವಲೀ ಕೃಷ್ಣಾಚಾರ್ಯರು ಐತರೇಯ ಉಪನಿಷತ್ತಿಗೆ ಬರೆದ ವ್ಯಾಖ್ಯಾನ ಪ್ರಸಿದ್ಧವಾಗಲೆಂದು ತಾವು ವ್ಯಾಖ್ಯಾನ ಮಾಡದೇ ಪ್ರೋತ್ಸಾಹಿಸಿದ ಕರುಣಾಮಯಿ.

ಶ್ರೀ ಜಯತೀರ್ಥರ 18 ಟೀಕಾ ಗ್ರಂಥಗಳಿಗೂ ಟಿಪ್ಪಣಿ ಬರೆಯುವುದಾಗಿ ಸಂಕಲ್ಪಿಸಿದ್ದರೂ, 17ಕ್ಕೆ ಮುಗಿಸಿದ್ದರೂ, ಋಕ್‌ಭಾಷ್ಯ ಟೀಕೆಗೆ ಟಿಪ್ಪಣಿ ಬರೆಯ-ಬೇಕಿಂದಿರುವಾಗ, ಅವರ ಪೂರ್ವಾಶ್ರಮದ ಮಗ ಲಕ್ಷ್ಮೀನಾರಾಯಣಾಚಾರ್ಯ ಬರೆದಿರುವುದಕ್ಕೇ ಅನುಮೋದನೆ. ಶ್ಲಾಘನೆ. ಟಿಪ್ಪಣಿಯನ್ನು ಬರೆಯದೆಯೇ ಋಗರ್ಥಮಂಜರಿಯನ್ನು ಮಾತ್ರ ಬರೆದ ಔದಾರ್ಯ.

ಶ್ರೀಭಾರತೀರಮಣ ಮುಖ್ಯ ಪ್ರಾಣಾಂತರ್ಗತ ವಿಷ್ಣು ಪ್ರೇರಣಯಾ ವಿಷ್ಣು ಪ್ರೀತ್ಯರ್ಥಮ್ ಎಂಬುದೇ ಮಾಧ್ವರ ಉಸಿರು. ಇದರ ವಿಸ್ತೃತವ್ಯಾಖ್ಯಾನವೇ ಪ್ರಾತಃ ಸಂಕಲ್ಪ ಗದ್ಯ. ಅವಭೃತಸ್ನಾನವೇ ಸರ್ವಸಮರ್ಪಣಗದ್ಯ. ರಾಮಾಯಣದ ಸಂಕ್ಷೇಪ ಶ್ರೀರಾಮಚಾರಿತ್ರ್ಯ ಮಂಜರಿ, ದಶಮ ಸ್ಕಂಧದ ಸಂಕ್ಷೇಪ ಶ್ರೀಕೃಷ್ಣಚಾರಿತ್ರ್ಯ ಮಂಜರಿ, ಮಹಾಭಾರತ ತಾತ್ಪರ್ಯ ನಿರ್ಣಯ ಭಾವಸಂಗ್ರಹ. ಉಪನಿಷದರ್ಥ ಸಂಗ್ರಹಗಳು, ಪುರುಷ-ಅಂಭೃಣಿ-ಹಿರಣ್ಯಗರ್ಭಸೂಕ್ತ ವ್ಯಾಖ್ಯಾನಗಳೇ ಅವರ ವೇದಾರ್ಥ ಪಾಂಡಿತ್ಯಕ್ಕೆ ಕನ್ನಡಿ. ವೇದ, ಉಪನಿಷತ್, ಗೀತಾ, ಬ್ರಹ್ಮಸೂತ್ರಗಳ ಅರ್ಥ ಶ್ರೀಮಧ್ವಾಚಾರ್ಯರಿಗೆ ಸಮ್ಮತವಾದ ರೀತಿಯಲ್ಲಿ ತಿಳಿಸುವ ಭಾವದೀಪಗಳು. ಬ್ರಹ್ಮಸೂತ್ರಗಳ ಮೇಲೆ 7. ಭಗವದ್ಗೀತೆಯ ಮೇಲೆ 3. ಮಂತ್ರೋದ್ಧಾರ ಗ್ರಂಥ ರಚನೆ. ತಮ್ಮ ಕೃತಿಗಳ ಲಂಪಟನಾಗಲಿರುವ ಶ್ರೀಸುಮತೀಂದ್ರತೀರ್ಥರ ಮೇಲಿನ ಪ್ರೀತಿಯ ಅನಾವರಣ.

ಗುಹ್ಯ, ಸಮಾಧಿ, ದರ್ಶನವೆಂಬ ತ್ರಿಭಾಷಾವಿಶಿಷ್ಟ ವೇದವ್ಯಾಸರ ಮಾತುಗಳ ಆಂತರ್ಯವನ್ನು ಪ್ರಕಾಶಗೊಳಿಸುವುದು. ಕಠಿಣವಾದ ವೇದಾಂತತತ್ವಗಳನ್ನು ಜಿಜ್ಞಾಸುಗಳು ಸುಲಭವಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗುವಂತಹ ಕೃತಿಗಳು.

ಗುರುರಾಯರ ನಾಲಿಗೆಯೆಂಬ ನಾಟ್ಯರಂಗದಲ್ಲಿ ನರ್ತಿಸಿದ ವಿದ್ಯಾಧಿಲಕ್ಷ್ಮಿಯ ಮುಡಿಯಿಂದ ಉದುರಿದ ಹೂಗಳ ಪರಿಮಳವೇ ಪರಿಮಳವೆಂಬ ಗ್ರಂಥವೆಂದು ವಾದೀಂದ್ರರು ಗುರುಗುಣಸ್ತವನದಲ್ಲಿ ವರ್ಣಿಸಿರುವರು. ಕನ್ನಡದಲ್ಲಿ ರಚಿಸಿರುವ ''ಇಂದು ಎನಗೆ ಗೋವಿಂದ ನಿನ್ನಯ ಪಾದಾರವಿಂದವ ತೋರೋ ಮುಕುಂದನೇ'' ಮಾತ್ರವೇ ಇಂದು ಲಭ್ಯ. ತಿರುಮಲ ನಾಯಕನ ಮಂತ್ರಿಯಾದ ಮೀಮಾಂಸಾಶಾಸ್ತ್ರ-ಪಂಡಿತರಾದ ನೀಲಕಂಠ ದೀಕ್ಷಿತರು ಗುರುರಾಯರ ರಚನೆಯ ಭಾಟ್ಟಸಂಗ್ರಹದಿಂದ ಪುಳಕಿತರಾಗಿ ಆನೆಯ ಮೇಲೆ ಮೆರವಣಿಗೆ ಮಾಡಿಸಿ ಧನ್ಯರಾದರು. ಕೃಷ್ಣಾತೀರದ ಅಲ್ಲೂರಿನಲ್ಲಿ ತತ್ವಪ್ರಕಾಶಿಕಾಕ್ಕೆ ಭಾವದೀಪವೆಂಬ ಅಮೂಲ್ಯ ಟಿಪ್ಪಣಿಯ ರಚನೆ, ಅಣುಭಾಷ್ಯಕ್ಕೆ ತತ್ವಮಂಜರೀ. ಪರಿಮಳವೇ ಮೊದಲಾದ 48 ಗ್ರಂಥರತ್ನಗಳು. ಪರಿಮಳಾಚಾರ್ಯರೆಂದು ಖ್ಯಾತರಾಗಿ ಅವರು ನೀಡುವ ಪ್ರಸಾದ ಪರಿಮಳ ಪ್ರಸಾದವೆಂದಾಗಿ ಬೆಳಗಿದವರು.

ಯಾದವಗಿರಿಯೆಂದರೆ ಆದವಾನಿ. ಅದರ ಬಳಿಯ ಕಂದನಾತಿ ಗ್ರಾಮವೇ ವಿಪ್ರನಾಗಿದ್ದರೂ ವಿದ್ಯಾಬುದ್ಧಿಗಳಿಲ್ಲದ ವೆಂಕಣ್ಣನ ಹುಟ್ಟೂರು. ಗುರುರಾಯರ ಕೃಪಾದೃಷ್ಟಿಗೆ ಪಾತ್ರನಾದ. ಗುರುರಾಯರ ಸ್ಮರಣೆ ಮಾತ್ರದಿಂದ, ಬಿಜಾಪುರ ಸುಲ್ತಾನನ ಸಾಮಂತನಾದ ಆದವಾನಿ / ರಾಯಚೂರಿನ ನವಾಬ ಸಿದ್ದಿಕ್ ಮಸೂದ್ ಖಾನನ ಪತ್ರ ಓದಿ, ಆತನ ಆದರಕ್ಕೆ ಪಾತ್ರನಾಗಿ ಬಾಳು ಹಸನಾಗಿಸಿಕೊಂಡ. ಕ್ರಮವಾಗಿ ಉನ್ನತಸ್ಥಾನಗಳಿಗೇರುತ್ತಾ ನವಾಬನ ದಿವಾನನಾದ.

ಆದೋನಿ ಮಂಡಲದ ತುಂಗಭದ್ರಾ ತೀರದ ಮಂಚಾಲಿಗ್ರಾಮವೆಂಬ ಮಂತ್ರ-ಸಿದ್ಧಿಯ ಕ್ಷೇತ್ರ ಮಂತ್ರಾಲಯದಲ್ಲಿ ವೃಂದಾವನದಲ್ಲಿ ನೆಲೆಸಬೇಕೆಂದು ಹರಿವಾಯುಗಳ ಅಣತಿಯಂತೆ ಗುರುರಾಯರ ನಿರ್ಧಾರ. ಮಾಂಸಾದಿ ನಿಷಿದ್ಧ ಪದಾರ್ಥಗಳ ಸಮರ್ಪಿಸಿದ ನವಾಬನೆದುರೇ ತೀರ್ಥಪ್ರೋಕ್ಷಣೆಯಿಂದ ವಿಹಿತಪದಾರ್ಥಗಳನ್ನಾಗಿ ಮಾಡಿದ ಗುರುರಾಯರಿಗೆ ಶರಣಾದ ನವಾಬ. ಗುರುರಾಯರಿಂದ ಆದೇಶಪಡೆದ ವೆಂಕಣ್ಣನ ಆಶಯದಂತೆ, ನವಾಬನಿಂದ ಬರಡಾಗಿ ಕಾಣುವ ಮಂಚಾಲೆ ಗ್ರಾಮದಾನ.

ಎಲ್ಲೆಲ್ಲಿ ಅಗೆದರೂ ವಿಭೂತಿ ಗಡ್ಡೆಗಳು, ಅಂಗಾರ ಚೂರುಗಳು ಪ್ರಹ್ಲಾದ-

ರಾಜರಾಗಿದ್ದಾಗ ಕೈಗೊಂಡಿದ್ದ ಯಜ್ಞದ ಕುರುಹುಗಳು. ಆಗಿನ ಯಜ್ಞಕುಂಡದ ಸ್ಥಳವೇ ಈಗ ಬೃಂದಾವನದ ಸ್ಥಳವಾಗಿ ಆದೇಶ. ತಾವೇ ಅರ್ಚಿಸಿದ್ದ ದುರ್ಗಾದೇವಿಯ ದರ್ಶನ, ಅನುಗ್ರಹಸಂಪಾದನೆ, ಭಕ್ತವರ್ಗದಿಂದ ಪೂಜೆಗೈಸುವ ಸಂಕಲ್ಪ. ಅರವತ್ತು ಜನ ಶ್ರೋತ್ರಿಯರಿಗೆ ಗೃಹ, ವೃತ್ತಿಗಳ ವ್ಯವಸ್ಥೆ. ಶ್ರೀವೇಂಕಟೇಶ ದೇವರ ಪ್ರತಿಷ್ಠಾಪನೆ. ವೆಂಕಣ್ಣ ಸಮರ್ಪಿಸಿದ ವೃಂದಾವನ ಪೀಠದ ಮುಂದಿನ ಐದನೆಯವರಾದ ಶ್ರೀವಾದೀಂದ್ರತೀರ್ಥರಿಗೆ ಮೀಸಲು. ತ್ರೇತಾಯುಗದಲ್ಲಿ ಶ್ರೀರಾಮಚಂದ್ರ ದೇವರು ಏಳು ಘಳಿಗೆ ಕುಳಿತಿದ್ದ ದಿವ್ಯ ಬಂಡೆಯಿಂದಲೇ ಪ್ರಾಣದೇವರ, ರುದ್ರದೇವರ ಪ್ರತಿಮೆಗಳ, ಮತ್ತು ವೃಂದಾವನದ ನಿರ್ಮಾಣ.

ಗುರುರಾಯರ ಆದೇಶದಂತೆ ವೆಂಕಣ್ಣ ಪ್ರಚುರಪಡಿಸಿದ ಸಜೀವ ವೃಂದಾವನ ಪ್ರವೇಶಿಸಲಿರುವ ವಿಷಯ. ಹರಿದುಬಂದ ಭಕ್ತಸಾಗರಕ್ಕೆ ಅಭೀಷ್ಟಗಳ ಸುರಿಮಳೆ, ಉಪದೇಶಾಮೃತ, ಏಳುನೂರು ವರ್ಷಗಳ ಕಾಲ ವೃಂದಾವನದಲ್ಲಿ ತೇಜೋರೂಪ-ದಿಂದಿದ್ದು ಭಕ್ತರ ಪರಿಪಾಲಿಸುವುದಾಗಿ ಅಭಯ. ಪೂರ್ವಾಶ್ರಮದ ಅಣ್ಣ ಗುರು-ರಾಜಾಚಾರ್ಯರ ಮಗ ವೆಂಕಣ್ಣಾಚಾರ್ಯರಿಗೆ ಸಂನ್ಯಾಸ ನೀಡಿ ಶ್ರೀಯೋಗೀಂದ್ರ-ತೀರ್ಥರೆಂದು ನಾಮಕರಣ ಮಾಡಿ ಉತ್ತರಾಧಿಕಾರಿಯಾಗಿ ಸ್ಥಾಪನೆ.

ವಿರೋಧಿಕೃತ್ ಸಂವತ್ಸರದ ಶ್ರಾವಣ ಬಹುಳ ದ್ವಿತೀಯಾ, ಶುಕ್ರವಾರ, ಕ್ರಿ. ಶ.1671, ಬೃಂದಾವನದ ಒಳಗೆ ಪದ್ಮಾಸನ. ದ್ವಾದಶ ನಾಮಗಳಿಂದ ಕಂಗೊಳಿಸು-ತ್ತಿರುವ ದೇಹ. ಶ್ರೀಮೂಲರಾಮದೇವರ ನಿರ್ಮಾಲ್ಯ ತುಳಸಿಯ ಹಾರ, ಬಲಗೈಲಿ ಅಕ್ಷಮಾಲಾ. ಇನ್ನೊಂದರಲ್ಲಿ ಕಮಂಡಲು. ಇತ್ತಿದ್ದ ಸೂಚನೆಗನುಸಾರವಾಗಿ 1200 ಲಕ್ಷ್ಮೀನಾರಾಯಣ ಸಾಲಿಗ್ರಾಮಗಳ ಸ್ಥಾಪನೆ, 12000 ವರಾಹಗಳ ಅಭಿಷೇಕ. ಬೃಂದಾವನ ನಿರ್ಮಾಣ.

ರಾಘವೇಂದ್ರಸ್ತೋತ್ರ ಕಟ್ಟುತ್ತ, ಉಕ್ಕಿ ಹರಿಯುವ ತುಂಗಭದ್ರೆಯ ಅನುಗ್ರಹ-ಬಲದಿಂ ದಾಟಿ, ಮಹಾಭಕ್ತ ಬಿಚ್ಚಾಲೆಯ ಅಪ್ಪಣ್ಣಾಚಾರ್ಯರ ತಡವಾದ ಆಗಮನ. ''ಸಾಕ್ಷೀ ಹಯಾಸ್ಯೋತ್ರ ಹಿ'' ಬೃಂದಾವನದಿಂದ ಹೊಮ್ಮಿಬಂತು ಅನುಮೋದನೆಯ ಮಹಾವಚನ. ಅಂತೆಯೇ ಆಚಾರ್ಯರ ರಚನೆಯ ರಾಯರ ಕವಚ, ಗದ್ಯ, ಮಂಗಳಾಷ್ಟಕ ಒಂದೊಂದೂ ಅಮೂಲ್ಯರತ್ನ. ಶ್ರೀರಾಘವೇಂದ್ರ ಸ್ತೋತ್ರದ ಅಷ್ಟೋತ್ತರಶತ ಪಾರಾಯಣ ಸಕಲಾಭೀಷ್ಟಸಿದ್ಧಿದಾಯಕ.

ಹರಿದಾಸರಿಗೆ ಮಂತ್ರಾಲಯ ಪರಮಾಪ್ತ. ಗುರುವಿದ್ದಲ್ಲಿಯೇ ಹರಿ. ದಾಸವರೇಣ್ಯರಾದ ಶ್ರೀವಿಜಯದಾಸರು, ಶ್ರೀಗೋಪಾಲದಾಸರು, ಶ್ರೀಜಗನ್ನಾಥದಾಸರು ಮೊದಲಾದವರೆಲ್ಲಾ ಗುರುರಾಯರಿಂದ ಪ್ರಭಾವಿತರು; ರಚಿಸಿ ಹಾಡಿದರು ಗುರುರಾಯರ ಮಹಿಮೆಗಳನ್ನು. ಅನುಗ್ರಹಕ್ಕೆ ಇವು ರಾಜಮಾರ್ಗಗಳು. ಶ್ರೀವಿಜಯದಾಸರಿಗೆ ತೇಜೋಮಯಶರೀರದಿಂದ ದರ್ಶನವಿತ್ತರು. ವೃಂದಾವನದಿಂದಲೇ ಶ್ರೀಜಗನ್ನಾಥದಾಸರೊಂದಿಗೆ ಸಂಭಾಷಿಸಿದರು.

ರಾಮ, ಕೃಷ್ಣ, ವ್ಯಾಸ, ನೃಹರಿ ಮೂರ್ತಿಗಳ ಉಪಾಸಕರು, ಕೋಮಲಾಂಗರು, ಕಠಿಣ ದುರ್ವಾದಿಸಮೂಹಗಳ ಗೆಲಿಪರು, ಯಾಮ ಯಾಮಕೆ ಭಕ್ತರಭೀಷ್ಟ ಪೂರೈಪರು, ಲಕ್ಷ್ಮೀನಾರಾಯಣನು ಚಕ್ರರೂಪದಿಂದು ಭಕ್ತರಘ ಕಳೆದಿವರಿಗೆ ಕೀರ್ತಿಯನೀವನನುದಿನ, ದಿನದಿನಕೂ ವೃದ್ಧಿ, ಸಚ್ಛಾಸ್ತ್ರಪ್ರಸಾರ, ಸಮವಿಲ್ಲದ ಕ್ಷೇತ್ರವೆಂದೆನಿಪುದು ಮಂತ್ರಾಲಯವೆಂದು ಶ್ರೀವಿಜಯದಾಸರು ಕೊಂಡಾಡಿರುವರು.

ಗುರುರಾಯರ ಚರಣಕಮಲವ ಸ್ಮರಿಸುವ ಸುಜನರ ಪಾಪಗಳು ನಾಶವಾಗುವವು; 'ರಾ' ಎಂದರೆ ದೋಷಗಳ ದಹಿಸುವರು; 'ಘ' ಎಂದರೆ ಘನಜ್ಞಾನ ಭಕುತಿಯ ನೀವರು; 'ವೇಂ' ಎಂದರೆ ಜನನ ಮರಣಗಳು ದೂರಾಗುವುದು; 'ದ್ರ' ಎಂದರೆ ಸಂಪತ್ತು, ವೇದವೇದ್ಯನ ದರುಶನವಾಗುವುದೆಂದು ಶ್ರೀಗೋಪಾಲದಾಸರು ಕೊಂಡಾಡಿರುವರು.

ರಥಾರೂಢ ರಾಯರು ಮನೋರಥವ ಕೊಡುವರು. ಪ್ರಹ್ಲಾದ, ವ್ಯಾಸಮುನಿ, ರಾಯರು ಪತಿತರುದ್ಧಾರಕರು. ಹರಿ ನೋಡಿದನಿವರ ಪರಮದಯಾಳುತನವ, ಗುರ್ವಂತರ್ಯಾಮಿಯಾಗಿ ವರನೀಡಲು ಜಗಕೆ ನರಹರಿ ತಾನೆ ನಿಂದು ನಿರುತ ಪೂಜೆಯಗೊಂಡು ಭಕ್ತರಭೀಷ್ಟ ಪೂರೈಪನು ಎಂದಿರುವರು ಶ್ರೀಗೋಪಾಲದಾಸರು.

ಕುರುಡರಿಗೆ ದೃಷ್ಟಿ, ಬಂಜೆಯರಿಗೆ ಸಂತಾನ, ಬಳಿಸಾರದವರೆಲ್ಲರಭೀಷ್ಟಪೂರಣ ಮಾಡುತ ವೃಂದಾವನದಲ್ಲಿ 700 ವರ್ಷ ಇದ್ದು ಮೆರವ ಕೃಪಾಸಿಂಧು ಎಂದೂ ಶ್ರೀಗೋಪಾಲದಾಸರು ಘೋಷಿಸಿರುವರು.

ಶ್ರೀಶ ವಿಠ್ಠಲಾಂಕಿತ ಕಂಪಲಿದಾಸರು ಬಂದು ಭಕುತರ ಪೊರೆಯೆಂದು, ನರಹರಿಪ್ರಿಯರೆಂದು ಸ್ತುತಿಸಿರುವರು. ಗುರುರಾಯರ ಬಿಟ್ಟರೆ ಕರುಣಿಸಿ ಪೊರೆವ ದೊರೆಗಳಿ-

ನ್ಯಾರಿಹರೆಂದು ಅಭಿನವ ಜನಾರ್ದನ ವಿಠ್ಠಲ ದಾಸರು ಮೊರೆಯಿಟ್ಟಿರುವರು. ಗುರುರಾಯರ ಪದಕಮಲವ ವಿಮಲ ಮನದಿ ಭಜಿಪರ ಕಾಯುವರೆಂದರು ಶ್ರೀರಘುನಾಥ ವಿಠ್ಠಲದಾಸರು.

ಬೃಂದಾವನದಲ್ಲಿ ಗುರುರಾಯರ ಹರಸುತ, ಅಚಿಂತ್ಯ ಯೋಗದಿಂದ ಕೀರ್ತಿ-ಪತಾಕೆಯ ಬೆಳೆಸುತ, ನರಹರಿ, ಕೃಷ್ಣ, ರಾಮ, ವೇದವ್ಯಾಸರು ಸಿರಿಸಹಿತ ಪರಿವಾರದಿಂದಿರುವರು. ಶ್ರೀಮಧ್ವಾಚಾರ್ಯರೇ ಮೊದಲಾದ ಯತಿಗಳು ತಾರ-ತಮ್ಯಕ್ಕನುಗುಣವಾಗಿ ಇರುವರೆಂದು, ನಿತ್ಯವಿಲ್ಲಿ ವೈಷ್ಣವ ಸಂಭ್ರಮ ಮನೆಮಾಡಿ-ರುವುದೆಂದು ಶ್ರೀಗೋಪಾಲದಾಸರು ತಿಳಿಸಿರುವರು.

ಶ್ರೀನರಹರಿ ರೂಪದಿಂದ ಬ್ರಹ್ಮಹತ್ಯಾದಿ ಪಾಪಗಳ ಪರಿಹಾರ, ಶ್ರೀರಾಮ-ರೂಪದಿಂದ ಬಾಳುವೆಯ ಕೊಡುಗೆ, ಶ್ರೀಕೃಷ್ಣರೂಪದಿಂದ ಮುಂಜಿ, ಮದುವೆ, ಪುತ್ರೋತ್ಸವ ಹರುಷ, ಶ್ರೀವ್ಯಾಸರೂಪದಿಂದ ದುರ್ವಾದಿಗಳ ಪಲಾಯನಗೈಸಿ ಹರಿಸರ್ವೋತ್ತಮ ಜ್ಞಾನದಾನ.

ದಿನ ದಿನಕಿಲ್ಲಿ ನೂತನ ಪೂಜೆಗಳಾಗುವುವು । ದಿನದಿನಕಿಲ್ಲಿ ನೂತನ ವಾರ್ತೆ-ಗಳಾಗುವುವು । ಜನರ ಸಂದಣಿಸಿ ಪ್ರತಿದಿನ ವಿಪ್ರ ಭೋಜನ । ಜನರ ಕೈಯ್ಯಿಂದ ಪ್ರತಿ ಜನರೀಪ್ಸಿತ ತುಂಬವರು । ಜನುಮಸಫಲ ತಮ್ಮ ಜನನವ ನೀಗುವರು । ದಿನ ಸಪ್ತಶತವರುಷಗಳ ಪರಿಯಂತರ । ದಿನಕರ ಶತತೇಜ ಜನನಾಥ ತಾನಿಲ್ಲಿ । ಅನುವಾಗಿ ತಾನಿಂದು ಘನಮಹಿಮೆಯಿಂದ ಜನರ ಪಾಲಿಪುದ। ಕ್ಕನುಮಾನಸಲ್ಲದು ಗುಣಗಣ ಪರಿಪೂರ್ಣ । ಗೋಪಾಲವಿಠ್ಠಲ ಅಣೋರಣೀಯ ಎಂಬುವಗೆ ಎಣೆಯಾರೋ ಜಗದೊಳಗೇ ಎಂದು ಶ್ರೀಗೋಪಾಲದಾಸರು ಘೋಷಿಸಿರುವುದು ಪ್ರತ್ಯಕ್ಷ ಸಿದ್ಧವಾಗಿರುವುದು.

ಇಂದ್ರಲೋಕದಂತಾಗುವುದು ಮಂತ್ರಾಲಯ, ಕರೆಸುವುದು ಕಂಗೊಳಿಸುವುದು ನೋಳ್ಪ ಜನಕೆ, ಕಾಮಧೇನುವಿನಂತೆ ಇಪ್ಪ ಗುರುಸಾರ್ವಭೌಮರೆಂದು ಸಾರಿರು-ವರು ಶ್ರೀಜಗನ್ನಾಥದಾಸರು.

ಶ್ರೀವಾದೀಂದ್ರರು ತಾವು ರಚಿಸಿದ ಗುರುಗುಣಸ್ತವನವನ್ನು ವೃಂದಾವನದ ಮುಂದೆ ಪಠಿಸಿದಾಗ ವೃಂದಾವನದ ಕಂಪನದಿಂದ ಅನುಮೋದನೆ. ಕ್ರಿ.ಶ. 1801.

ಬ್ರಿಟಿಷ್ ಅಧಿಕಾರಿ, ಕಲೆಕ್ಟರ್ ಆಫ್ ಬಳ್ಳಾರಿ, ಸರ್ ಥಾಮಸ್ ಮುನ್ರೋನೊಂದಿಗೆ ಗುರುರಾಯರು ಇಂಗ್ಲೀಷ್‌ನಲ್ಲಿ ಮಾತನಾಡಿದ್ದು, ಆತ ಉದ್ದೇಶಿತ ಎಂಡೋಮೆಂಟ್ ರದ್ದು ಮಾಡಿದ್ದು ಮದ್ರಾಸ್ ಡಿಸ್ಟ್ರಿಕ್ಟ್ ಗೆಜೆಟಿಯರ್‌ನಲ್ಲಿ ಶಾಶ್ವತವಾಗಿ ದಾಖಲು. ಮೂಲ ಬೃಂದಾವನವಷ್ಟೇ ಅಲ್ಲದೇ ಮೃತ್ತಿಕಾ ಬೃಂದಾವನದ ಸನ್ನಿಧಾನದಲ್ಲಿ ಸೇವೆ ಸಲ್ಲಿಸುವ ಭಕ್ತರಿಗೂ ಅನುಗ್ರಹಿಸುತ್ತಿರುವ ಅಚಿಂತ್ಯ ಮಹಿಮೆ.

ಗುರುರಾಯರ ಅಲ್ಪಾನುಗ್ರಹಕ್ಕೆ ಪಾತ್ರರಾದರೆ ಸಾಲದು. ಅದು ಬಳಿ ಸಾರಿದವರಿಗೆಲ್ಲಾ ದೊರಕಬಹುದು. ಬೀದಿಯ ಭಿಕ್ಷುಕನಿಗೆ ಸಿರಿವಂತನಿತ್ತ ಬಿಡಿಗಾಸಿ-ನಂತೆ. ಗುರುರಾಯರ ನಿಜವಾದ ಭಕ್ತರು ಹೆಚ್ಚು ಹೆಚ್ಚು ಸ್ವವರ್ಣಾಶ್ರಮೋಚಿತ-ಕರ್ಮಾಸಕ್ತರಾಗಬೇಕು. ತಮ್ಮ ಭಕ್ತರು ಭಗವಂತನಾದ ಮಹಾವಿಷ್ಣುವಿನಲ್ಲಿ ಯಥಾರ್ಥಜ್ಞಾನ, ದೃಢವಾದ ಭಕ್ತಿ, ಇತರವಿಷಯಗಳೆಡೆ ವಿರಕ್ತಿ, ಸಂಸಾರಬಂಧನ-ದಿಂದ ಮುಕ್ತಿ ಬೇಡುವುದೇ, ಇದಕ್ಕೆ ಪೂರಕವಾದ ಐಹಿಕ ವಸ್ತುಗಳ ಬೇಡುವುದೇ ಗುರುರಾಯರಿಗೆ ಬಲು ಇಷ್ಟ. ಕೊಡುವುದು ಕಷ್ಟ. ಅವಿರತ ಸೇವಿಸಬೇಕು ಬಹುವರ್ಷ. ಅನುಗ್ರಹವಾದ ಮೇಲೆ ಮುಕುತಿಯ ಸುಖ ಶಾಶ್ವತ. ಕೇವಲ ಐಹಿಕ ವಿಷಯ ಬೇಡಿದವರಿಗೆ ಅನುಗ್ರಹ ಸುಲಭ. ಸೇವಾವಧಿ ಅತ್ಯಲ್ಪ. ಫಲ ಅಶಾಶ್ವತ.

ಶ್ರೀಗುರುರಾಯರ ಆರಾಧಿಸುವ ಭಕ್ತರಿಗೆ ಅನುಗ್ರಹ ಖಚಿತ. ಅಂತೆಯೇ, ದಿನದಿನಕ್ಕೂ ಅವರ ಉಪಾಸಕರ ಸಂಖ್ಯೆ ಬೆಳೆಯುತ್ತಲೇ ಇದೆ. ಪ್ರೇರಣೆ, ಸೂಚನೆ, ರಕ್ಷಣೆ, ಮಾರ್ಗದರ್ಶನ ಹಲವುವಿಧ. ಫಲಪ್ರಾಪ್ತಿ ಒಬ್ಬೊಬ್ಬರದೂ ಸ್ವಂತ ಅನುಭವ. ಆ ಒಂದೊಂದು ಅನುಭವವನ್ನೂ ದಾಖಲಿಸಹೊರಟರೆ ಸಾವಿರಾರು ಪುಟಗಳೂ ಸಾಲದಾದಾವು. ಭಕ್ತರಿಗೆ ತೋರಿಸುವ ಕನಸಿನ ಮುಖಾಂತರ ತಮ್ಮ ಅನುಗ್ರಹವನ್ನು ಸೂಚಿಸುವ ಯೋಗಿಗಳ ಮಹಿಮೆಯನ್ನು ಯಾರು ಬೇಕಾದರೂ ಪರೀಕ್ಷಿಸಿ ಖಾತರಿ -ಪಡಿಸಿಕೊಳ್ಳಬಹುದು. ಶ್ರೀಗುರುರಾಯರ ಮಹಿಮೆಗೆ ಇದಕ್ಕಿಂತಲೂ ಪ್ರಮಾಣ ಬೇಕಿಲ್ಲ. ॥ ಶ್ರೀರಾಘವೇಂದ್ರಗುರವೇ ನಮೋ ಅತ್ಯಂತದಯಾಲವೇ ॥

ಇಲ್ಲಿಗೆ ಶ್ರೀಗುರುರಾಯರ ಚರಿತ್ರೆ ಹಾಗೂ ಮಹಿಮೆಗಳು ಸಮಾಪ್ತವಾಯಿತು.

ಶ್ರೀರಘುಪ್ರವೀರತೀರ್ಥರು (ಹುಲಿಕೊಂದ ಸ್ವಾಮಿಗಳು) ಪಲಿಮಾರು ಮಠ ಶ್ರಾವಣ ಬಹುಳ ಬಿದಿಗೆ. ಪರಂಪರೆಯಲ್ಲಿ ಇಪ್ಪತ್ತಮೂರನೆಯವರು. ಇವರು

ಮೊದಲು ತಿರುಪತಿ ಯಾತ್ರೆಯನ್ನು ಮಾಡಿ ಮುಂದೆ ಶಾಸ್ತ್ರಾಭ್ಯಾಸ ಮಾಡಿದರು. ನಾಲ್ಕು ವರ್ಷಗಳಲ್ಲಿ ಚತುಃಶಾಸ್ತ್ರಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿದರು. ಪುನಃ ತಿರುಪತಿಗೆ ಹೋಗಿ, ಧನ್ವಂತರಿರಾಮಾಚಾರ್ಯ ಮೊದಲದ ಖ್ಯಾತ ವಿದ್ವಾಂಸ-ರೊಂದಿಗೆ ವ್ಯಾಖ್ಯಾರ್ಥ ಮಾಡಿ ಜಯಗಳಿಸಿದರು. ಅನಂತರ ಆರಣಿ ಸಂಸ್ಥಾನದಲ್ಲಿ ವಿಶೇಷ ಸನ್ಮಾನಿತರಾದರು. ಮಹಮದ್‌ರಜಾ ಎಂಬ ನವಾನೊಬ್ಬನು ಇವರಿಂದ ಪ್ರಭಾವಿತನಾಗಿ ರೌಪ್ಯಶ್ವೇತಛತ್ರ ಸಮರ್ಪಣೆ ಮಾಡಿ ಕೃತಕೃತ್ಯನಾದನು. ಹನ್ನೆರಡು ಬಾರಿ ಸುಧಾಪಾಠ ಹಾಗೂ ಚಂದ್ರಿಕಾಪಾಠ, ಗೀತಾಭಾಷ್ಯ, ತಂತ್ರಸಾರ, ತರ್ಕ ಮೀಮಾಂಸಾದಿಗಳ ಪಾಠ ಇವರ ಮತ್ತೊಂದು ಸಾಧನೆ. ತಪಶ್ಚರ್ಯ ಮಂತ್ರಶಕ್ತಿ, ಯೋಗಸಿದ್ಧಿ ಇವರ ವೈಶಿಷ್ಟ್ಯ. ಪಲಿಮಾರಿನಲ್ಲಿ ಆಂಜನೇಯನ ಪ್ರತಿಷ್ಠಾಪನೆ ಮಾಡಿದವರು ಇವರೇ. ಇವರ ಮಂತ್ರಸಿದ್ಧಿಯ ಫಲವಾಗಿ ಇವರ ಬಾಯಿಯಿಂದ ಹೊರಹೊಮ್ಮಿದ 'ಹನುಮದ್‌ಭೀಮ-ಮಧ್ವಾಷ್ಟೋತ್ತರ ಶತನಾಮ ಸ್ತೋತ್ರ' ಇವತ್ತಿಗೂ ಮಂತ್ರತುಲ್ಯವಾದ ಪಾರಾಯಣ ಗ್ರಂಥವಾಗಿದೆ.

ಇವರು ತೋರಿದ ಪವಾಡಗಳು (1) : ಶ್ರೀ ರಘುಪ್ರವೀರರು ಆಶ್ರಮ ಸ್ವೀಕರಿ-ಸಿದ ಪ್ರಾರಂಭದಲ್ಲಿ ಬಹಳ ದಡ್ಡರಂತೆ. ಮಾತೂ ಉಗ್ಗುತ್ತಿತ್ತಂತೆ. ಆಗ ಜನರು ಇವರನ್ನು ಕಂಡು ಲಘುವಾಗಿ ಮಾತನಾಡುತ್ತಿದ್ದು ಇವರ ಮನಸ್ಸಿಗೆ ನೋವು ಉಂಟುಮಾಡಿತು. ಆಗ ಸ್ವಾಮಿಗಳು ಘಟಿಕಾಚಲಕ್ಕೆ ಹೋಗಿ 48 ದಿನಗಳ ಕಾಲ 'ಸುಂದರಕಾಂಡ' ಪಾರಾಯಣ ಮಾಡುತ್ತಾ ತಪಶ್ಚರ್ಯ ಆಚರಿಸಿದರು. 48ನೇ ದಿನ ರಾತ್ರಿ ಸ್ವಪ್ನದಲ್ಲಿ ಶ್ರೀ ಮುಖ್ಯಪ್ರಾಣದೇವರು ಒಂದು ಮಂಗನರೂಪದಲ್ಲಿ ಬಂದು ಇವರ ಬಾಯಿಯಲ್ಲಿ ಉಗುಳಿದ ಹಾಗೆ ಭಾಸವಾಯಿತು ಹಾಗೂ 'ನನ್ನದೊಂದು ಪ್ರತೀಕ ಸರೋವರದಲ್ಲಿದೆ. ಅದನ್ನು ತೆಗೆದುಕೊಂಡು ಹೋಗಿ ಮಠದಲ್ಲಿ ಸ್ಥಾಪಿಸು' ಎಂದು ಆಜ್ಞಾಪಿಸಿದರು. ಮರುದಿನ ಸರೋವರದಲ್ಲಿ ಮುಳುಗಿ ತೆಗೆಯಲು ಸುಂದರ ಪ್ರಾಣದೇವರಮೂರ್ತಿ ದೊರೆಯಿತು. ಆದಿನದಿಂದಲೇ ಶ್ರೀರಘುಪ್ರವೀರರು ಸಿದ್ಧ-ಪುರುಷರಾದರು. ಪಲಿಮಾರಿನ ಮಠದಲ್ಲಿ ಒಂದು ದೊಡ್ಡ ಪ್ರಾಣದೇವರ ಮೂರ್ತಿ ಸ್ಥಾಪಿಸಿದರು. ಕೆಳಗೆ ಈ ಪುಟ್ಟ ಚತುರ್ಭುಜ ಪದ್ಮಾಸನ ಹಾಕಿ ಕುಳಿತ ವಿಶಿಷ್ಟ ಭಂಗಿಯ ಮೂರ್ತಿಯನ್ನಿರಿಸಿದರು. ಮುಖ್ಯಪ್ರಾಣದೇವರು ಊರಿನ ಆರಾಧ್ಯದೇವರಾದರು.

ಏನೇ ಕಷ್ಟಬಂದರೂ ಓಡಿಬರುವ ಭಕ್ತರು. ಹೆಚ್ಚಾಗಿ ರಂಗಪೂಜೆ ಸೇವೆ ಮಾಡಿಸಿ ಇಷ್ಟಾರ್ಥ ಹೊಂದುತ್ತಿದ್ದಾರೆ. ರಥಬೀದಿಯಲ್ಲಿ ಡೊಂಬರನೊಬ್ಬನು ನಾನಾ ಆಟಗಳನ್ನು ತೋರಿಸಿ ಕೊನೆಗೆ ಒಂದು ಸವಾಲು ಹಾಕಿದನು. 'ಈ ಆಟ ಮುಗಿದ ಮೇಲೆ ನಾನು ನಿಮ್ಮ ಅನಂತೇಶ್ವರ ದೇವಾಲಯ ನುಂಗುತ್ತೇನೆ'. ಈ ವಿಷಯವನ್ನು ಕೇಳಿದ ಕೆಲವರು ಮಠದ ಜಗಲಿಯಲ್ಲಿ ಕುಳಿತಿದ್ದ ಶ್ರೀ ರಘುಪ್ರವೀರರಿಗೆ ಹೇಳಿದರು. ಆಗ ಸ್ವಾಮಿಗಳು ಲಘುವಾಗಿ ನಗುತ್ತಾ 'ಅನಂತೇಶ್ವರನನ್ನು ನುಂಗುತ್ತಾನೋ, ಮುಕುಳಿ ನುಂಗುತ್ತಾನೋ?' ಎಂದು ತುಳುವಿನಲ್ಲಿ ತಮಾಷೆ ಮಾಡಿದರು. ಸ್ವಲ್ಪ ಸಮಯದ ನಂತರ, ಸವಾಲನ್ನು ಕೃತಿಗಿಳಿಸಲು ಆಡೊಂಬರನು 'ಆ' ಎಂದು ದೊಡ್ಡದಾಗಿ ಬಾಯಿ ತೆಗೆದು ನುಂಗುವವನಂತೆ ನಟನೆ ಮಾಡಲು ಪ್ರಾರಂಭಿಸಲು, ಅಲ್ಲಿ ನೆರೆದಿದ್ದ ಜನರು ಹೋ! ಎಂದು ನಗುತ್ತಾ ಭರ್ತ್ಸನೆ ಮಾಡತೊಡಗಿದರು. ಆಗ ಅವನಿಗೆ ಗೊತ್ತಾಯಿತು; ತಾನು ಮಾಡುತ್ತಿದ್ದ ಸಂಮೋಹಿನಿ ಆಟ ತಿರುಗುಬಾಣವಾಗಿ ದೇವಾಲಯದ ಬದಲು ಕುಂಡೆಯನ್ನು ನುಂಗುತ್ತಿರುವಂತೆ ಪ್ರೇಕ್ಷಕರಿಗೆ ಕಾಣುತ್ತಿದೆ ಎಂಬುದಾಗಿ ಅಪಮಾನದಿಂದ ಸಿಟ್ಟಾದ ಆತ ಸ್ವಾಮಿಗಳಿಗೆ ಬುದ್ಧಿಕಲಿಸಬೇಕೆಂದು ಸಂಕಲ್ಪಿಸಿದನು.

ಮರುದಿನ ಬೆಳಿಗ್ಗೆ ಪರ್ಯಾಯ ಪೀಠಸ್ಥರಾದ ಶ್ರೀ ರಘುಪ್ರವೀರ ಸ್ವಾಮಿಗಳು ಸ್ನಾನ ಮಾಡಿ ತರ್ಪಣಕ್ಕೆ ಕುಳಿತರು. ಕೆಲವು ನಿಮಿಷಗಳಲ್ಲೇ ಅವರಿಗೆ ಮೂತ್ರದ ಶಂಕೆಯಾಯಿತು. ಆಗ ಅವರು ಎದ್ದು ವಿಸರ್ಜನೆ ಮಾಡಿ ಪುನಃ ಸ್ನಾತರಾಗಿ ಬಂದು ತರ್ಪಣಾರಂಭ ಮಾಡಲು ಪುನಃ ಶಂಕೆಯಾಯಿತು. ಹೀಗೆ ಸುಮಾರು ಹತ್ತಾರು ಸಲ ತರ್ಪಣಕ್ಕೆ ಮೂತ್ರಶಂಕೆಯು ಅಡ್ಡಿಯಾಯಿತು. ಈ ವಿಚಿತ್ರ ತೊಂದರೆಯಿಂದ ಶ್ರೀಗಳವರು ತುಂಬಾ ಚಿಂತೆಗೊಳಗಾದರು. ಆಗ ಯಾರೋ ಸ್ವಾಮಿಗಳಿಗೆ ಹಿಂದಿನ ದಿನದ ಡೊಂಬರನು ಒಂದು ಹಳ್ಳದ ನೀರಿನಲ್ಲಿ ಮುಳುಗುತ್ತಾ ಬೊಗಸೆಯಲ್ಲಿ ನೀರೆತ್ತಿ ಅರ್ಘ್ಯ ಕೊಡುತ್ತಿದ್ದಾನೆ ಎಂದು ಶ್ರೀಗಳವರಿಗೆ ಹೇಳಿದರು. ಆ ಶ್ರೀಗಳವರು ಕ್ಷಣಕಾಲ ಕಣ್ಮುಚ್ಚಿ ಏನೋ ಮಂತ್ರ ಪಠಿಸುತ್ತಾ ಒಬ್ಬ ಸೇವಕನನ್ನು ಕರೆದು 'ತೋಟಕ್ಕೆ ಹೋಗಿ ಕತ್ತಿಯಿಂದ ಒಂದು ಬಾಳೆಗಿಡದ ತಲೆ ಕಡಿದು ಬಾ' ಎಂದರು. ಆಮೇಲೆ ಶ್ರೀಗಳವರು ಮೂತ್ರಶಂಕೆ ನಿಂತು ಹೋಯಿತು. ಕಡಿದ ಬಾಳೆ ದಿಂಡಿನಲ್ಲಿ ನೀರು ಉಕ್ಕಿ ಹರಿಯ ತೊಡಗಿತು. ಮುಂದೆ ಶ್ರೀಗಳವರಿಂದ ನಿರ್ವಿಘ್ನವಾಗಿ ಸ್ನಾನ, ಪೂಜೆ,

ಭಿಕ್ಷೆಗಳೆಲ್ಲಾ ಸಾಂಗವಾಗಿ ನೆರವೇರಿದವು. ಊಟ ಮಾಡಿದ ಬ್ರಾಹ್ಮಣರು ಮನೆಗೆ ಹೋಗುತ್ತಿರುವಾಗಲೂ, ಡೊಂಬರನು ಹೊಳೆಯ ನೀರಿನಲ್ಲಿ ಮುಳುಗುವುದು, ನೀರಿನಲ್ಲಿ ಅರ್ಘ್ಯ ನೀಡುವುದು ನಡದೇ ಇತ್ತು. ಆಗ ಬ್ರಾಹ್ಮಣರಿಂದ ಸ್ವಾಮಿಗಳು ನಿರ್ವಿಘ್ನವಾಗಿ ಪೂಜೆ ಮಾಡಿ ಭಿಕ್ಷೆ ಸ್ವೀಕರಿಸಿದ ವಿಷಯ ತಿಳಿದನು. ತನ್ನ ಮಾಟ ಶ್ರೀಗಳ ಎದುರಿಸಿದ ರೀತಿ ತಿಳಿದು ಪೆಚ್ಚಾಗಿ ಪಶ್ಚಾತ್ತಾಪ ಪಟ್ಟು ಶ್ರೀಗಳವರಿಗೆ ಶರಣಾಗತನಾಗಿ ಕ್ಷಮೆಯಾಚಿಸಿದನು.

ಇವರ ಪರ್ಯಾಯ ಕಾಲದಲ್ಲಿ ಶ್ರೀಕೃಷ್ಣಮಠದ 'ನರ್ಮದೆ' ಎಂಬ ಇವರಿಗೆ ಅತ್ಯಂತ ಪ್ರಿಯವಾದ ಹಸುವನ್ನು ಹುಲಿಯೊಂದು ಕೊಂದು ತಿಂದಿತು. ಶ್ರೀಕೃಷ್ಣನಿಗೆ ಪಂಚಾಮೃತಾಭಿಷೇಕಕ್ಕೆ ಪ್ರತಿದಿನ ಆದರ ಹಾಲನ್ನೆ ಉಪಯೋಗಿಸುತ್ತಿದ್ದರು. ಹಸುವಿನ ಸಾವು ಶ್ರೀಗಳವರಿಗೆ ತುಂಬಾ ವ್ಯಥೆಯನ್ನುಂಟು ಮಾಡಿತು. ಅಂದು ಪದ್ಮಾಸನದಲ್ಲಿ ಕುಳಿತ ಸ್ವಾಮಿಗಳು ಪೂಜೆಗೂ ಏಳದೇ ಧ್ಯಾನಸ್ಥರಾಗಿ ಬಿಟ್ಟರು. ಕೊನೆಗೆ ಹಸುಕೊಂದ ಹುಲಿ ಶ್ರೀಕೃಷ್ಣ ಮಠದ ಮಹಾದ್ವಾರ ಬಳಿ ಬಂದು ವಿಲವಿಲನೆ ಒದ್ದಾಡಿ ಪ್ರಾಣ ಬಿಟ್ಟಿತು. ಅನಂತರವೇ ಶ್ರೀಗಳವರು ಸ್ನಾನಕ್ಕೆದ್ದು ಪೂಜಾದಿಗಳನ್ನು ನೆರವೇರಿಸಿ ಭಿಕ್ಷೆ ಸ್ವೀಕರಿಸಿದರು. ಈ ಮಹಿಮೆಯ ಸ್ಮಾರಕವಾಗಿ ಇವರ ವೃಂದಾವನದ ಮುಂದೆ ಹುಲಿಯ ಪ್ರತೀಕ ಸ್ಥಾಪಿಸಲಾಗಿದೆ. ಈ ಘಟನೆಯ ನಂತರ ಶ್ರೀ ರಘುಪ್ರವೀರ-ತೀರ್ಥರನ್ನು ಜನರು 'ಹುಲಿಕೊಂದ ಸ್ವಾಮಿ'ಗಳು ಎಂದು ಕರೆಯ ತೊಡಗಿದರು. ಇವರು ಮೂರೂವರೆ ನಾಲ್ಕು ದಶಕಗಳ ಕಾಲ ಪೀಠವನ್ನಾಳಿದರು. ಇವರ ಅವಸಾನವೂ ಉಡುಪಿಯಲ್ಲಿಯೇ ಶ್ರೀಕೃಷ್ಣನ ಸನ್ನಿಧಿಯಲ್ಲಿಯೇ ಆಯಿತು. ಶಾ.ಕ. 1718 (ಕ್ರಿ .ಶ. 1795) ರಾಕ್ಷಸ ಸಂವತ್ಸರದ ಶ್ರಾವಣ ಬಹುಳ ಬಿದಿಗೆ ಇವರ ಪುಣ್ಯ-ತಿಥಿಯು.

## ಶ್ರಾವಣ ॥ ಬಹುಳ ॥ ಚತುರ್ಥೀ

ಶ್ರೀ ಸುಜ್ಞಾನೇಂದ್ರತೀರ್ಥರು (ರಾಯರ ಮಠ) ಶ್ರಾವಣ ಬಹುಳ ಚತುರ್ಥೀ - ಸುಧಾಸಾರಾರ್ಥತತ್ವಜ್ಞಂ ಸುರದ್ರುಮಸಮಂ ಸತಾಂ । ಸುರಾ-ಧಿಪಗುರುಪ್ರಖ್ಯಂ ಸುಜ್ಞಾನೇಂದ್ರಗುರುಂ ಭಜೇ ॥ ಧೀರೇಂದ್ರಸ್ವಾಮಿಗಳವರ ಪೂರ್ವಾಶ್ರಮ ಪ್ರಪೌತ್ರರೂ, ಸುಜನೇಂದ್ರಸ್ವಾಮಿಗಳ ಪೂರ್ವಾಶ್ರಮದ ಭಾವ-

ಮೈದುನಂದಿರೂ ಆದ ರಾಘವೇಂದ್ರಾಚಾರ್ಯರೆಂಬುವರು ದೊಡ್ಡಪಂಡಿತರು. ಅತ್ಯಂತ ಆಚಾರಶೀಲರು ಸುಜನೇಂದ್ರಸ್ವಾಮಿಗಳವರಿಂದ ಅವರ ಮಾತೃಶ್ರೀಯವರ ಅಪ್ಪಣೆಯಂತೆ ರಾಘವೇಂದ್ರಾಚಾರ್ಯರು ಆಶ್ರಮಪಡೆದು 'ಸುಜ್ಞಾನೇಂದ್ರ-ತೀರ್ಥ'ರೆಂಬ ಹೆಸರನ್ನು ಪಡೆದರು ಇವರ ಇಪ್ಪತ್ತೈದು ವರ್ಷಗಳ ಆಳ್ವಿಕೆಯಲ್ಲಿ ಸ್ವಲ್ಪ ಕಾಲ ಮಾತ್ರ ಸಂಚಾರಕಾಲದಲ್ಲಿ ಮತ್ತೊಮ್ಮೆ ಕೈತಪ್ಪಿ ಹೋಗಿದ್ದ ಕಿರೀಟಗಿರಿ, ಮೊರಬ, ಸೋಮನಹಳ್ಳಿ ಮುಂತಾದ ಗ್ರಾಮಗಳನ್ನೂ ಅಮರಾಪುರ, ಶೆಟ್ಟಿಹಳ್ಳಿ ಮುಂತಾದ ಕಡೆಗಿದ್ದ ಜಮೀನುಗಳನ್ನೂ ಸಂಪಾದಿಸಿದರು. ಇಂಗ್ಲೀಷರ ಆಡಳಿತ ಆಗಲೇ ಸ್ಥಿರಪಟ್ಟಿದ್ದರಿಂದ ಮಠದ ಎಲ್ಲ ಆಸ್ತಿಗಳ ಬಗ್ಗೆ ಸರಿಯಾದ ಕಾಗದಪತ್ರಗಳು ಆದದ್ದು ಇವರ ಕಾಲದಲ್ಲೇ ಶ್ರೀಗಳವರು ಮಹಾತಪಸ್ವಿಗಳು. ಪ್ರಣವ ಜಪ-ಮಾಡಿಕೊಂಡು ಆಹ್ನೀಕವನ್ನು ಮುಗಿಸಿಕೊಂಡು ಶ್ರೀಗಳವರನ್ನು ನೋಡಿದರೆ ಅವರಲ್ಲಿ ವಿಲಕ್ಷಣ ತೇಜಸ್ಸು ಹೊರಸೂಸುತ್ತಿತ್ತು . ಯಾವುದೋ ಗ್ರಾಮದ ಸಂಬಂಧ -ದಲ್ಲಿ ಮೈಸೂರಿನ ಡೆಪ್ಯೂಟಿ ಕಮೀಶನರವರಿಂದ ಮಠಕ್ಕೆ ಒಂದು ಕೆಲಸವಾಗ-ಬೇಕಾಗಿತ್ತು. ಅವನು ಇಂಗ್ಲೀಷಿನವನು, ಶ್ರೀಪಾದಪುತ್ರರಾದ ರಾಜಗೋಪಾಲಾ-ಚಾರ್ಯರು ಆ ಅಧಿಕಾರಿಯನ್ನು ಲೌಕಿಕ್ಕನುಸರಿಸಿ ಶ್ರೀಗಳವರ ಭೇಟಿ ಮಾಡಿಸಿದರೆ ಈ ಕೆಲಸಕ್ಕೆ ಅನುಕೂಲವೆಂದುಕೊಂಡು ಶ್ರೀಗಳವರ ಮುಂದೆ ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಮ್ಲೇಚ್ಛನದರ್ಶನ ಶಾಸ್ತ್ರನಿಷಿದ್ಧವೆಂದೂ, ತಮಗೆ ಅವನಿಗೆ ದರ್ಶನ ಕೊಡಲು ಇಷ್ಟವಿಲ್ಲವೆಂದೂ ಶ್ರೀಗಳವರು ನುಡಿದರು. ಲೌಕಿಕವನ್ನು ದೃಷ್ಟಿಯನ್ನಿಟ್ಟು ಇದಕ್ಕೆ ಅವಕಾಶಕೊಡಬೇಕೆಂದು ರಾಜಗೋಪಾಲಾಚಾರ್ಯರು ಒತ್ತಾಯ ಪಡಿಸಿ ಆ ಅಧಿಕಾರಿಯನ್ನು ಶ್ರೀಗಳವರ ದರ್ಶನಕ್ಕೆ ಕರೆದುಕೊಂಡು ಬಂದರು. ಆದರೆ ಅಧಿಕಾರಿಗೆ ಬರಿಯ ಮಣೆ ಕಂಡಿತೇ ಹೊರತು ಶ್ರೀಗಳವರು ಕಾಣಲಿಲ್ಲ. ಶ್ರೀಪಾದ-ಪುತ್ರರು ಹೇಳಿದ್ದೆಲ್ಲ ವ್ಯರ್ಥವಾಯಿತು. ಇದರಿಂದ ಅಧಿಕಾರಿಗೆ ಶ್ರೀಗಳವರಲ್ಲಿ ಭಕ್ತಿಯುಂಟಾದ್ದಲ್ಲದೆ ಶ್ರೀಪಾದಪುತ್ರರೂ ಕೂಡ ಶ್ರೀಗಳವರ ತಪಶ್ಶಕ್ತಿಯನ್ನು ನೋಡಿ ಆಶ್ಚರ್ಯ ಮತ್ತು ಭಯದಿಂದ ಚಕಿತರಾದರು. ಶ್ರೀಗಳವರ ತೇಜಸ್ಸು ಉಜ್ವಲವಾದ-ದ್ದೆಂದು ಇದರಿಂದ ವ್ಯಕ್ತಪಟ್ಟಿತು.

ಶ್ರೀಗಳವರು ಇಪ್ಪತ್ತೈದು ವರ್ಷಗಳು ವೇದಾಂತಸಾಮ್ರಾಜ್ಯಾಧಿಪತಿಗಳಾಗಿದ್ದು ತಮ್ಮ ಕೊನೆಯ ಜೀವನವನ್ನು ಮಂತ್ರಾಲಯದಲ್ಲಿ ಕಳೆಯಬೇಕೆಂದು ಶ್ರೀಗಳವರು

ಅಪೇಕ್ಷಿಸಿ ಮಂತ್ರಾಲಯಕ್ಕೆ ಹೋದರು. ಅಲ್ಲಿ ಕೆಲಕಾಲ ಶ್ರೀಗಳವರು ಗುರುರಾಜರ ಸೇವೆ ಮಾಡಿಕೊಂಡಿದ್ದ ಮೇಲೆ ನಂಜನಗೂಡಿಗೇ ಹೋಗಬೇಕೆಂದೂ ತಮ್ಮ ಸನ್ನಿಧಾನದ ಬದಲು ತಮ್ಮ ದಿನ ಒಂದನ್ನು ಅವರಿಗೆ ಕೊಟ್ಟಿರುದವೆಂದೂ ಮುಂದೆ ಅವರಿಗೆ ತಮ್ಮ ಸನ್ನಿಧಾನದ ಲಾಭವಾಗುವುದೆಂದೂ ಗುರುರಾಜರು ಶ್ರೀಗಳವರಿಗೆ ಸ್ವಪ್ನದ್ವಾರಾ ಸೂಚನೆ ಇತ್ತರು. ಶ್ರೀಗಳವರು ಗುರುರಾಜರ ಅಪ್ಪಣೆಯಂತೆ ನಂಜನಗೂಡಿಗೆ ಬಂದರು. ಅಲ್ಲಿಗೆ ಬಂದ ಕೆಲವು ದಿನಗಳಾದ ಮೇಲೆ ದುರ್ಮತಿ ಸಂವತ್ಸರದ ಶ್ರಾವಣ ಬಹುಳ ಚತುರ್ಥಿಯ ದಿನ ಕೃಷ್ಣಪಾದಾರವಿಂದವನ್ನು ಸೇರಿದರು. ಗುರುರಾಜರ ಉತ್ತರಾರಾಧನೆಯ ದಿನ ಸ್ವಾಮಿಗಳ ಪೂರ್ವಾರಾಧನೆ-ಯಾದದ್ದರಿಂದ ಗುರುರಾಜರ ಅಪ್ಪಣೆಯ ಸಾರಾಂಶ ಭಕ್ತರಿಗೆ ಅರ್ಥವಾಯಿತು. ಶ್ರೀಗಳವರ ಪಾಂಡಿತ್ಯ ಅದ್ಭುತವಾದದ್ದು ಇವರು ಒಂಭತ್ತು ಸುಧಾಪ್ರವಚನ ಮಾಡಿ ಮಂಗಳ ಮಾಡಿದ್ದಲ್ಲದೆ, ಚಂದ್ರಿಕಾಮಂಡನವೆಂಬ ಗ್ರಂಥ ರಚಿಸಿ ಪ್ರಸಿದ್ಧರಾಗಿದ್ದಾರೆ.

## ಶ್ರಾವಣ ॥ ಬಹುಳ ॥ ಷಷ್ಠೀ

ಸಿರಿಯಾಳ ಷಷ್ಠೀ ಮಣ್ಣಿನಲ್ಲಿ ಸಿರಿಯಾಳನನ್ನು (ವಿರುದ್ಧ ದಿಕ್ಕಿನಲ್ಲಿ ತಲೆಮಾಡಿ ಮಲಗಿರುವ ಎರಡು ಹಸುಳೆಗಳ ಪ್ರತಿಕೃತಿ) ಮಾಡಿ ಷೋಡಶೋಪಚಾರಗಳಿಂದ ಪೂಜಿಸಿ ಮೊಸರನ್ನವನ್ನೂ ಕಡುಬನ್ನೂ ನೈವೇದ್ಯ ಮಾಡುತ್ತಾರೆ. ಅನಂತರ ಚಿಕ್ಕ ಮಕ್ಕಳಿರುವ ಮನೆಗೆ ಬುತ್ತಿ ಮತ್ತು ಕಡುಬು ಬೀರಿ ಬರುವುದು ವಾಡಿಕೆ.

## ಶ್ರಾವಣ ॥ ಬಹುಳ ॥ ಸಪ್ತಮೀ

ಶ್ರೀ ನಾರಾಯಣತೀರ್ಥರು (ಮಾಧವತೀರ್ಥ ಮಠ) ಸಿಂಹಾಚಲ ಶ್ರೀಮನ್ಮಧುಹರ್ಯಾಖ್ಯಸಂಜಾತಾನ್ ವೀರರಾಮ ಪದಪ್ರಿಯಾನ್ । ಶ್ರೀನಾರಾ-ಯಣಗುರೂನ್ ವಂದೇ ಸದ್ವಿದ್ಯಾಬುದ್ಧಿಸಿದ್ಧಯೇ ॥

## ಶ್ರಾವಣ ॥ ಬಹುಳ ॥ ಅಷ್ಟಮೀ

ಕೃಷ್ಣಜನ್ಮಾಷ್ಟಮೀ ದುಷ್ಟಶಕ್ತಿಗಳ ದಮನ ಮತ್ತು ಶಿಷ್ಟರ ಪೋಷಣಾ ಕಾರ್ಯದಲ್ಲಿ ನಿರತನಾದ ಅರ್ಜುನನಿಗೆ ಗೀತೆಯನ್ನು ಉಪದೇಶಿಸಿದ ಮಹಾನುಭಾವ

ಶ್ರೀಕೃಷ್ಣನ ಜನ್ಮದಿನ. ಚಾಂದ್ರ, ಸೌರಮಾನಗಳ ರೀತ್ಯಾ ಈ ಹಬ್ಬವನ್ನು ಬೇರೆ ಬೇರೆ ದಿನಗಳಲ್ಲಿ ಆಚರಿಸುತ್ತಾರೆ. ಶ್ರಾವಣ ಬಹುಳ ಅಷ್ಟಮೀ ಮಧ್ಯ ರಾತ್ರಿ ಚಂದ್ರೋದಯ ಕಾಲದಲ್ಲಿ ಅರ್ಘ್ಯವನ್ನು ಬಿಡಬೇಕೆಂಬ ವಿಧಿ. ಅದಕ್ಕೆ ಮುಂಚೆ ಶ್ರೀಕೃಷ್ಣ ಮತ್ತು ಗೋಕುಲದ ಪ್ರತಿಮೆಗಳನ್ನು ಮಣ್ಣಿನಲ್ಲಿ ಮಾಡಿಟ್ಟು ಷೋಡಶೋಪಚಾರ ಪೂಜೆಯನ್ನು ಮಾಡುತ್ತಾರೆ.

ಆ ದಿನ ಬಗೆಬಗೆಯ ತಿಂಡಿ ತಿನುಸುಗಳನ್ನು ಮಾಡಿ ಕೃಷ್ಣನಿಗೆ ನಿವೇದಿಸುತ್ತಾರೆ. ರೋಹಿಣಿ ನಕ್ಷತ್ರ ಇರುವ ದಿನ ಈ ಹಬ್ಬವನ್ನು ಆಚರಿಸಿದರೆ, ಅದಕ್ಕೆ ಕೃಷ್ಣ ಜಯಂತೀ ಎಂದು ಹೆಸರಾಗುತ್ತದೆ. ಪೂಜೆ ರಾತ್ರಿ ವೇಳೆ ನಡೆಯುವುದರಿಂದ ಆ ದಿನ ಉಪವಾಸವಿರಬೇಕು. ಹೆಚ್ಚಿನ ವಿಚಾರಕ್ಕಾಗಿ ಕೃಷ್ಣಾಷ್ಟಮೀ ಎಂಬ ಪುಸ್ತಕ ನೋಡಿರಿ.

ಶ್ರೀವ್ಯಾಸತತ್ವಜ್ಞರ ಆರಾಧನೆ – ಪ್ರಕಟೀಕೃತಟೀಕೋಕ್ತಿಃ ಮರ್ಕಟೀಕೃತ-ಮಾಯಿರಾಟ್ । ಚಕ್ರ್ಯತಾತ್ ವ್ಯಾಸತತ್ವಜ್ಞಮಸ್ಕರೀಂದ್ರಃ ಕೃಪಾಂ ಮಯಿ ॥ ಪೂರ್ವಾಶ್ರಮದಲ್ಲಿ ವೇಂಕಟರಾಮಾರ್ಯರೆಂದು ಹೆಸರು. ಗದ್ವಾಲಸಂಸ್ಥಾನಕ್ಕೆ ಸೇರಿದ ಐಜೀ ಗ್ರಾಮದವರು. ಪಾಠಪ್ರವಚನ ಮಾಡಲು ಅನುಕೂಲ-ವಾಗುತ್ತದೆಂದು ಬೀಚಪಲ್ಲಿ ಎಂಬ ಗ್ರಾಮಕ್ಕೆ ಬಂದು ನೆಲೆಸಿದರು. ಐಜೀ ಗ್ರಾಮ-ದಿಂದ ಬಂದವರಾದ್ದರಿಂದ ಐಜೀ ರಾಮಾಚಾರ್ಯರು ಎಂದೇ ಹೆಸರಾಯಿತು. ಇವರು ಶ್ರೀಟೀಕಾರಾಯರ ನ್ಯಾಯಸುಧೆಗೆ 'ವ್ಯಜನ' ಎಂಬ ವ್ಯಾಖ್ಯಾನವನ್ನೂ, ಇತರ ಗ್ರಂಥಗಳಿಗೆ 'ಗುರುಪ್ರಭಾ ಮತ್ತು ಲಘುಪ್ರಭಾ, ಕುಲಿಶ' ಎಂಬ ಪ್ರೌಢ ಟಿಪ್ಪಣಿಗಳನ್ನು ರಚಿಸಿ ಪ್ರಖ್ಯಾತರಾಗಿದ್ದವರು. 'ವಾಸುದೇವವಿಟ್ಠಲ' ಎಂಬ ಅಂಕಿತದಿಂದ ಕನ್ನಡದಲ್ಲಿ ದೇವರನಾಮಗಳನ್ನು ರಚಿಸಿದವರು. ಆರಣ್ಯಕಾ-ಚಾರ್ಯರೆಂದೇ ಪ್ರಸಿದ್ಧರಾದ ಮಾದನೂರು ವಿಷ್ಣುತೀರ್ಥರು ಶ್ರೀವ್ಯಾಸತತ್ತ್ವಜ್ಞರ ಶಿಷ್ಯರು. ಐಜೀ ಆಚಾರ್ಯರು ತಮ್ಮ 76ನೆಯ ವಯಸ್ಸಿನಲ್ಲಿ ರಾಘವೇಂದ್ರಮಠದ ಪೀಠಾಧಿಪತಿಗಳಾಗಿದ್ದ ಭುವನೇಂದ್ರತೀರ್ಥರು ವೇಣಿಸೋಮಪುರಕ್ಕೆ ಬಂದಾಗ, ಯತ್ಯಾಶ್ರಮವನ್ನು ನೀಡಲು ಅವರನ್ನು ಕೇಳಿಕೊಂಡರು. ಶ್ರೀಪಾದಂಗಳವರ ಸೂಚನೆಯಂತೆ ಭಾಗವತಸಪ್ತಮಸ್ಕಂಧಕ್ಕೆ 'ಮಂದನಂದಿನೀ' ಎಂಬ ಟೀಕೆಯನ್ನು ರಚಿಸಿ ಗುರುಗಳಿಗೆ ಸಮರ್ಪಿಸಿದರು. ಶ್ರೀಭುವನೇಂದ್ರತೀರ್ಥರು ಆಚಾರ್ಯರಿಗೆ

ಯತ್ಯಾಶ್ರಮ ನೀಡಿ 'ವ್ಯಾಸತತ್ತ್ವಜ್ಞ'ರೆಂಬ ಅನ್ವರ್ಥಕ ನಾಮಕರಣ ಮಾಡಿದರು. ಶ್ರೀಜಗನ್ನಾಥದಾಸರು – ಕವಿಭಿರೀಡಿತಮಹಾಮುನಿ ವ್ಯಾಸಕೃತ ಸುಭಾಗವತಾದಿ ಗ್ರಂಥ ವ್ಯಾಖ್ಯಾನ ನೋಡಿ । ಭುವನೇಂದ್ರರಾಯ ತಾ ಕರುಣದಲಿ ತುರಿಯಾ-ಶ್ರಮವನಿತ್ತು ವ್ಯಾಸತತ್ತ್ವಜ್ಞರಹುದೆಂದ ॥' ಎಂಬುದಾಗಿ ಈ ಘಟನೆಯನ್ನು ವಿವರಿಸಿದ್ದಾರೆ. ಶ್ರೀವ್ಯಾಸತತ್ತ್ವಜ್ಞರ ವೃಂದಾವನವು ವೇಣಿಸೋಮಪುರದಲ್ಲಿದೆ.

## ಶ್ರಾವಣ ॥ ಬಹುಳ ॥ ಏಕಾದಶೀ

ಯುಧಿಷ್ಠಿರಃ – ಶ್ರಾವಣಸ್ಯಾಸಿತೇ ಪಕ್ಷೇ ಕಿನ್ನಾಮ್ನ್ಯೇಕಾದಶೀ ಭವೇತ್ । ತನ್ಮೇ ಕಥಯ ಗೋವಿಂದ ವಾಸುದೇವ ನಮೋಸ್ತು ತೇ ॥1॥ ಯುಧಿಷ್ಠಿರನು ಹೇಳಿದನು – ಎಲೈ ಗೋವಿಂದನೇ! ಶ್ರಾವಣಮಾಸದ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಗೆ ಏನೆಂದು ಹೆಸರು? ಅದನ್ನು ನನಗೆ ಹೇಳು. ಎಲೈ ವಾಸುದೇವನೇ! ನಿನಗೆ ನಮಸ್ಕಾರವು. ಶ್ರೀಕೃಷ್ಣ – ಶೃಣು ರಾಜನ್ ಪ್ರವಕ್ಷ್ಯಾಮಿ ಆಖ್ಯಾನಂ ಪಾಪನಾಶನಮ್ ಯತ್ಪ್ರೋಕ್ತಂ ಬ್ರಹ್ಮಣಾ ಪೂರ್ವಂ ಪೃಚ್ಛತೇ ನಾರದಾಯ ವೈ ॥2॥ ಕೃಷ್ಣನು ಹೇಳಿದನು – ಎಲೈ ರಾಜನೇ! ಬ್ರಹ್ಮನು ಪೂರ್ವದಲ್ಲಿ ನಾರದನಿಗೆ ಹೇಳಿದ ಒಂದು ಪಾಪನಾಶಕವಾದ ಕಥೆಯನ್ನು ಹೇಳುತ್ತೇನೆ. ಕೇಳು. ನಾರದಃ – ಭಗವನ್ ಶ್ರೋತುಮಿಚ್ಛಾಮಿ ತ್ವತ್ತೋಽಹಂ ಕಮಲಾಸನ । ಶ್ರಾವಣಸ್ಯಾಸಿತೇ ಪಕ್ಷೇ ಕಿನ್ನಾಮ್ನ್ಯೇಕಾದಶೀ ಭವೇತ್ । ಕೋ ದೇವಃ ಕೋ ವಿಧಿಃ ತಸ್ಯಾಃ ಕಿಂ ಪುಣ್ಯಂ ಕಥಯ ಪ್ರಭೋ ॥3॥ ನಾರದನು ಹೇಳಿದನು – ಎಲೈ ಬ್ರಹ್ಮನೇ! ನಿನ್ನಿಂದ ಒಂದು ವಿಷಯವನ್ನು ಕೇಳಬೇಕೆಂದಿರುವೆನು. ಶ್ರಾವಣದ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ಅದರಲ್ಲಿ ದೇವರಾವುದು? ವಿಧಿಯೇನು? ಅದರಿಂದ ಬರುವ ಪುಣ್ಯವೇನು? ಹೇಳು. ಬ್ರಹ್ಮಾ – ಶೃಣು ನಾರದ ತೇ ವಕ್ಷ್ಯೇ ಲೋಕಾನಾಂ ಹಿತಕಾಮ್ಯಯಾ । ಶ್ರಾವಣ್ಯೈಕಾದಶೀ ಕೃಷ್ಣಾ ಕಾಮಿಕಾ ನಾಮ ನಾಮತಃ ॥4॥ ಬ್ರಹ್ಮನು ಹೇಳಿದನು – ಎಲೈ ನಾರದನೇ! ಲೋಕದ ಹಿತದ ರೀತಿಯಿಂದ ನಿನಗೆ ಹೇಳುತ್ತೇನೆ. ಕೇಳು. ಶ್ರಾವಣಕೃಷ್ಣ ಏಕಾದಶಿಗೆ ಕಾಮಿಕಾ ಏಕಾದಶೀ ಎಂದು ಹೆಸರು. ಯಸ್ಯಾಃ ಸ್ಮರಣಮಾತ್ರೇಣ ವಾಜಪೇಯಫಲಂ ಲಭೇತ್ । ಯಸ್ಯಾಂ ಜಾಗರ್ತಿ ದೇವೇಶಃ ಶಂಖಚಕ್ರಗದಾಧರಃ ॥5॥ ಶ್ರೀಧರಾಖ್ಯಂ ಹರಿಂ ವಿಷ್ಣುಂ

ಮಾಧವಂ ಮಧುಸೂದನಮ್ । ಪೂಜಯೇದ್ಧ್ಯಾಯತೇ ಯೋ ವೈ ತಸ್ಯ ಪುಣ್ಯಫಲಂ ಶೃಣು ॥6॥ ಆ ಏಕಾದಶಿಯ ಸ್ಮರಣೆಯಿಂದಲೇ ವಾಜಪೇಯಯಾಗದ ಫಲವು ಬರುತ್ತದೆ. ಆ ಏಕಾದಶಿಯಲ್ಲಿ ಶಂಖ, ಚಕ್ರ, ಗದಾಧರನಾದ ವಿಷ್ಣುವು ಎಚ್ಚರದಿಂದಿರುವನು. ಶ್ರೀಧರನೂ ವಿಷ್ಣುವೂ ಮಾಧವನೂ ಮಧುಸೂದನನೂ ಆದ ಸ್ವಾಮಿಯನ್ನು ಆ ದಿನ ಪೂಜೆ ಮಾಡಿ ಧ್ಯಾನಿಸಿದರೆ ಅವನ ಪುಣ್ಯಫಲವನ್ನು ಹೇಳುತ್ತೇನೆ. ಕೇಳು. ನ ಗಂಗಾಯಾಂ ನ ಕಾಶ್ಯಾಂ ಚ ನೈಮಿಷೇ ನ ಚ ಪುಷ್ಕರೇ । ಯತ್ಫಲಂ ಸಮವಾಪ್ನೋತಿ ತತ್ಫಲಂ ಕೃಷ್ಣಪೂಜನಾತ್ ॥7॥ ಗಂಗೆಯಲ್ಲಾಗಲೀ ಕಾಶಿಯಲ್ಲಾಗಲೀ ನೈಮಿಷದಲ್ಲಾಗಲೀ ಪುಷ್ಕರದಲ್ಲಾಗಲೀ ಆ ಫಲವು ಬರುವುದಿಲ್ಲ. ಅಂತಹ ಪುಣ್ಯವನ್ನು ಆ ಏಕಾದಶಿಯ ದಿವಸ ಕೃಷ್ಣ ಪೂಜೆಯನ್ನು ಮಾಡಿದರೆ ಬರುತ್ತದೆ. ಗೋದಾವರ್ಯಾಂ ಗುರೌ ಸಿಂಹೇ ವ್ಯತೀಪಾತೇ ಚ ದಂಡಕೇ । ಯತ್ಫಲಂ ಸಮವಾಪ್ನೋತಿ ತತ್ಫಲಂ ಕೃಷ್ಣಪೂಜನಾತ್ ॥8॥ ಗುರುವು ಸಿಂಹರಾಶಿಯನ್ನು ಹೊಂದಿರುವಾಗ ಗೋದಾವರಿಯಲ್ಲಿಯೂ, ವ್ಯತೀಪಾತದಲ್ಲಿ ದಂಡಕವನದಲ್ಲಿಯೂ ಸ್ನಾನ ಮಾಡಿದರೆ ಬರುವ ಪುಣ್ಯವನ್ನು ಈ ಶ್ರಾವಣ ಕೃಷ್ಣ ಏಕಾದಶಿಯನ್ನು ಆಚರಿಸುವುದರಿಂದ ಬರುತ್ತದೆ. ಸಸಾಗರವನೋಪೇತಾಂ ಯೋ ದದಾತಿ ವಸುಂಧರಾಮ್ । ಕಾಮಿಕಾವ್ರತಕಾರೀ ಚ ಉಭೌ ಸಮಫಲೌ ಸ್ಮೃತೌ ॥9॥ ಸಮುದ್ರದೊಡನೆ ಕೂಡಿದ ಭೂಮಿಯನ್ನು ದಾನ ಮಾಡಿದರೆ ಯಾವ ಪುಣ್ಯವು ಬರುತ್ತದೆಯೋ ಆ ಪುಣ್ಯವೂ ಕಾಮಿಕಾವ್ರತವನ್ನು ಮಾಡಿದವನ ಪುಣ್ಯವೂ ಸಮವೆಂದು ಹೇಳಿದೆ. ಪ್ರಸೂಯಮಾನಾಂ ಯೋ ಧೇನುಂ ದದ್ಯಾತ್ಸೋಪಸ್ಕರಾಂ ನರಃ । ತತ್ಫಲಂ ಸಮವಾಪ್ನೋತಿ ಕಾಮಿಕಾವ್ರತಕಾರಕಃ ॥10॥ ಯಾವನು ಕರುಹಾಕುತ್ತಿರುವ ಹಸುವನ್ನು ಅದಕ್ಕೆ ಬೇಕಾದ ಸಾಮಗ್ರಿಗಳೊಡನೆ ದಾನಕೊಡುತ್ತಾನೆಯೋ ಆ ಫಲವನ್ನು ಈ ಕಾಮಿಕೈಕಾದಶೀ ವ್ರತವನ್ನು ಮಾಡಿದವನು ಹೊಂದುತ್ತಾನೆ. ಶ್ರಾವಣೇ ಶ್ರೀಧರಂ ದೇವಂ ಪೂಜಯೇದ್ ಯೋ ನರೋತ್ತಮ । ತೇನೈವ ಪೂಜಿತಾ ದೇವಾ ಗಂಧರ್ವೋರಗಪನ್ನಗಾಃ ॥11॥ ಶ್ರಾವಣದಲ್ಲಿ ಶ್ರೀಧರನನ್ನು ಪೂಜಿಸಿದವನು ದೇವತೆಗಳನ್ನೂ ಗಂಧರ್ವರನ್ನೂ ಉರಗರನ್ನೂ ಪನ್ನಗರನ್ನೂ ಪೂಜಿಸಿದಂತಾಗುತ್ತಾನೆ. ತಸ್ಮಾತ್ ಸರ್ವಪ್ರಯತ್ನೇನ ಕಾಮಿಕಾದಿವಸೇ ಹರಿಃ । ಪೂಜನೀಯೋ ಯಥಾಶಕ್ತಿ ಮಾನುಷ್ಯೈಃ ಪಾಪಭೀರುಭಿಃ

॥12॥ ಆದುದರಿಂದ ಪಾಪಕ್ಕೆ ಹೆದರಿರುವವರು ಕಾಮಿಕೈಕಾದಶೀಯ ದಿವಸ ಸರ್ವಪ್ರಯತ್ನದಿಂದಲೂ ಶ್ರೀವಿಷ್ಣುವನ್ನು ಪೂಜಿಸಬೇಕು. ಯೇ ಸಂಸಾರಾರ್ಣವೇ ಮಗ್ನಾಃ ಪಾಪಪಂಕಸಮಾಕುಲೇ । ತೇಷಾಮುದ್ಧಾರಣಾರ್ಥಾಯ ಕಾಮಿಕಾವ್ರತ-ಮುತ್ತಮಮ್ ॥13॥ ಪಾಪಕರ್ಮಗಳಿಂದಲೇ ಕೂಡಿರುವ ಈ ಸಂಸಾರವೆಂಬ ಸಮುದ್ರದಲ್ಲಿ ಮುಳುಗಿರುವವರನ್ನು ಉದ್ಧಾರಮಾಡುವುದಕ್ಕೋಸ್ಕರವೇ ಈ ಕಾಮಿಕೈಕಾದಶಿಯ ವ್ರತವು ಹುಟ್ಟಿರುವುದು. ನಾತಃ ಪರತರಾ ಕಾಚಿತ್ ಪವಿತ್ರಾ ಪಾಪಹಾರಿಣೀ । ಏವಂ ನಾರದ ಜಾನೀಹಿ ಸ್ವಯಮಾಹ ಪರೋ ಹರಿಃ ॥14॥ ಈ ಕಾಮಿಕಾ ಏಕಾದಶಿಯ ವ್ರತಕ್ಕಿಂತಲೂ ಪವಿತ್ರವೂ ಪಾಪಹಾರಕವಾದುದು ಮತ್ತೊಂದಿಲ್ಲ ಎಂಬುದಾಗಿ ಎಲೈ ನಾರದನೇ! ತಿಳಿದುಕೋ. ಹೀಗೆಂದು ಹರಿಯೇ ಹೇಳಿದ್ದಾನೆ. ಅಧ್ಯಾತ್ಮವಿದ್ಯಾನಿರತೈರ್ಯತ್ಫಲಂ ಪ್ರಾಪ್ಯತೇ ನರೈಃ । ತತೋ ಬಹುತರಂ ವಿದ್ಧಿ ಕಾಮಿಕಾವ್ರತಸೇವಿನಾಮ್ ॥15॥ ವೇದಾಂತವಿದ್ಯೆಯನ್ನು ಓದಿ ಅದರಲ್ಲಿ ಅನುಷ್ಠಾನ ಮಾಡುವವರಿಗೆ ಯಾವ ಫಲವು ಬರುತ್ತದೆಯೋ ಅದಕ್ಕಿಂತ ಹೆಚ್ಚಾದ ಫಲವು ಈ ಕಾಮಿಕೈಕಾದಶಿಯ ವ್ರತಿಗಳಿಗೆ ಬರುತ್ತದೆ. ರಾತ್ರೌ ಜಾಗರಣಂ ಕೃತ್ವಾ ಕಾಮಿಕಾವ್ರತಕೃನ್ನರಃ । ನ ಪಶ್ಯತಿ ಯಮಂ ರೌದ್ರಂ ನೈವ ಗಚ್ಛತಿ ದುರ್ಗತಿಮ್ ॥16॥ ಈ ಕಾಮಿಕೈಕಾದಶಿಯ ವ್ರತವನ್ನು ಮಾಡುವವನು ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿದರೆ ಅವನು ಯಮನನ್ನು ನೋಡುವುದೇ ಇಲ್ಲ. ನರಕವನ್ನು ಹೊಂದುವುದೂ ಇಲ್ಲ. ನ ಪಶ್ಯತಿ ಕುಯೋನಿಂ ಚ ಕಾಮಿಕಾವ್ರತಸೇವನಾತ್ । ಕಾಮಿಕಾಯಾ ವ್ರತೇ ಚೀರ್ಣೇ ಕೈವಲ್ಯಂ ಯೋಗಿನೋ ಗತಾಃ ॥17॥ ಅಂತಹವನು ಕೆಟ್ಟ ಜನ್ಮದಲ್ಲಿಯೂ ಹುಟ್ಟುವುದಿಲ್ಲ. ಈ ಕಾಮಿಕಾ ವ್ರತವನ್ನು ಆಚರಿಸಿಯೇ ಯೋಗಿಗಳು ಕೈವಲ್ಯವನ್ನು ಹೊಂದಿರುವುದು. ತಸ್ಮಾತ್ ಸರ್ವಪ್ರಯತ್ನೇನ ಕರ್ತವ್ಯಾ ನಿಯತಾತ್ಮಭಿಃ । ತುಳಸೀಪ್ರಭವೈಃ ಪುತ್ರೈಃ ಯೋ ನರಃ ಪೂಜಯೇದ್ಧರಿಮ್ ॥18॥ ಆದುದರಿಂದ ಇಂದ್ರಿಯ ನಿಗ್ರಹ ಮಾಡಿಕೊಂಡು ಆ ಏಕಾದಶಿಯ ದಿವಸ ತುಳಸಿಯ ದಳಗಳಿಂದ ಶ್ರೀಹರಿಯನ್ನು ಪೂಜಿಸಬೇಕು. ನ ಸ ಲಿಪ್ಯತಿ ಪಾಪೇನ ಪದ್ಮಪತ್ರಮಿವಾಂಭಸಾ । ಸುವರ್ಣಭಾರಮೇಕಂ ತು ರಜತಂ ಚ ಚತುರ್ಗುಣಮ್ ॥19॥ ತತ್ಫಲಂ ಸಮವಾಪ್ನೋತಿ ತುಳಸೀದಳಪೂಜನಾತ್ । ಅಂತಹವನು ಪದ್ಮದ ಎಲೆಯು ನೀರಿನಿಂದ ಅಂಟಿಕೊಳ್ಳದಿರುವಂತೆ ಪಾಪಗಳಿಂದ ಪೀಡಿತನಾಗುವುದಿಲ್ಲ.

ಒಂದು ಮಣ ಚಿನ್ನವನ್ನು ದಾನಮಾಡಿದರಾಗಲೀ ನಾಲ್ಕು ಮಣ ಬೆಳ್ಳಿಯನ್ನು ದಾನ ಮಾಡಿದರಾಗಲೀ ವಿಷ್ಣುವಿಗೆ ತುಳಸಿಯ ಪೂಜೆಯನ್ನು ಮಾಡಿದಷ್ಟು ಪುಣ್ಯವನ್ನು ಮನುಜನು ಹೊಂದುವುದಿಲ್ಲ. ರಕ್ತಮೌಕ್ತಿಕವೈಡೂರ್ಯಪ್ರವಾಳಾದಿಭಿರರ್ಚಿತಃ ||20|| ನ ತುಷ್ಯತಿ ತಥಾ ವಿಷ್ಣುಸ್ತುಲಸೀದಳತೋ ಯಥಾ | ತುಳಸಿಯ ದಳದಿಂದ ವಿಷ್ಣುವು ಸಂತೋಷ ಪಡುವಂತೆ ಹವಳ, ಮುತ್ತು, ವೈಡೂರ್ಯ, ವಜ್ರ, ಕೆಂಪುಗಳಾವುದರಿಂದ ಪೂಜೆ ಮಾಡಿದರೂ ಸಂತೋಷಪಡುವುದಿಲ್ಲ. ತುಲಸೀಮಂಜರೀಭಿರ್ಯಃ ಪೂಜಿತೋ ಯೇನ ಕೇಶವಃ | ಆಜನ್ಮಪಾತಕಂ ತಸ್ಯ ನಿಶ್ಚಯಾದ್ಯಾತಿ ಸಂಕ್ಷಯಮ್ ||21|| ಯಾವನು ತುಳಸಿಯ ಮಂಜರಿಗಳಿಂದ ಕೇಶವನನ್ನು ಪೂಜಿಸುವನೋ ಅವನು ಜನ್ಮ ಜನ್ಮಾಂತರಗಳಿಂದ ಮಾಡಿದ ಪಾಪವನ್ನು ಕಳೆದುಕೊಳ್ಳುತ್ತಾನೆ. ಇದು ನಿಶ್ಚಿತವು. ಯಾ ದೃಷ್ಟಾ ನಿಖಿಲಾಘ-ಸಂಘಶಮನೀ ಸ್ಪೃಷ್ಟಾ ವಪುಃ ಪಾವನೀ | ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಂತಕತ್ರಾಸಿನೀ | ಪ್ರತ್ಯಾಸಕ್ತಿ ವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ | ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ||22|| ಈ ತುಳಸಿಯನ್ನು ನೋಡಿದರೇನೇ ಎಲ್ಲಾ ಪಾಪಗಳೂ ಹೋಗುತ್ತವೆ. ಮುಟ್ಟಿದರೆ ದೇಹವನ್ನು ಪಾವನ ಮಾಡುತ್ತದೆ. ನಮಸ್ಕರಿಸಿದರೆ ರೋಗಗಳು ಹೋಗುತ್ತವೆ. ಅದಕ್ಕೆ ನೀರು ಹಾಕಿದರೆ ಯಮನು ಹೆದರಿಕೊಳ್ಳುತ್ತಾನೆ. ಬೆಳೆಸಿದರೆ ಭಗವಂತನ ಸಮೀಪವನ್ನು ಹೊಂದಿಸುತ್ತದೆ. ಆ ವಿಷ್ಣುವಿನ ಪಾದಗಳಲ್ಲಿಟ್ಟರೆ ಮನುಷ್ಯನಿಗೆ ಮುಕ್ತಿಯನ್ನು ಕೊಡುತ್ತದೆ. ಅಂತಹ ತುಳಸಿಗೆ ನಮಸ್ಕಾರವು. ದೀಪಂ ದದಾತಿ ಯೋ ಮರ್ತ್ಯೋ ದಿವಾ ರಾತ್ರೌ ಹರೇರ್ದಿನೇ | ತಸ್ಯ ಪುಣ್ಯಸ್ಯ ಸಂಖ್ಯಾಂ ತು ಚಿತ್ರಗುಪ್ತೋ ನ ವೇತ್ತ್ಯಲಮ್ ||23|| ಹರಿವಾಸರದ ದಿನದಲ್ಲಿ ಕೃಷ್ಣನ ಎದುರಿನಲ್ಲಿ ಹಗಲೂ ರಾತ್ರಿಯೂ ದೀಪವನ್ನು ಹಚ್ಚಿದರೆ ಬರುವ ಪುಣ್ಯವನ್ನು ಚಿತ್ರಗುಪ್ತನೂ ಲೆಕ್ಕ ಮಾಡಲಾರ. ಕೃಷ್ಣಾಗ್ರೇ ದೀಪಕೋ ಯಸ್ಯ ಜ್ವಲತ್ಯೇಕಾದಶೀದಿನೇ | ಪಿತರಸ್ತಸ್ಯ ತೃಪ್ಯಂತಿ ಹ್ಯಮೃತೇನ ದಿವಿ ಸ್ಥಿತಾಃ ||24|| ಏಕಾದಶಿಯ ದಿವಸದಲ್ಲಿ ಕೃಷ್ಣನ ಎದುರಿಗೆ ದೀಪವಿದ್ದರೆ ಹಚ್ಚಿದವನ ಪಿತೃಗಳು ತೃಪ್ತರಾಗಿ ಸ್ವರ್ಗವನ್ನು ಹೊಂದುತ್ತಾರೆ. ಘೃತೇನ ದೀಪಂ ಪ್ರಜ್ವಾಲ್ಯ ತಿಲತೈಲೇನ ವಾ ಪುನಃ | ಪ್ರಯಾತಿ ಸೂರ್ಯಲೋಕಂ ಚ ದೀಪಕೋಟಿಶತಾರ್ಚಿತಃ ||25|| ತುಪ್ಪದಿಂದಾಗಲೀ, ಎಣ್ಣೆಯಿಂದಲಾಗಲೀ

ವಿಷ್ಣುವಿನ ಎದುರಿಗೆ ದೀಪವನ್ನು ಹಚ್ಚಿದರೆ ಅವನು ಅನೇಕ ದೀಪಗಳಿಂದ ಗೌರವಿಸಲ್ಪಟ್ಟು ಸೂರ್ಯಲೋಕಕ್ಕೆ ಹೋಗುತ್ತಾನೆ. ಶ್ರೀಕೃಷ್ಣಃ – ಅಯಂ ತವಾಗ್ರೇ ಕಥಿತಃ ಕಾಮಿಕಾಮಹಿಮಾ ಮಯಾ । ಅತೋ ನರೈಃ ಪ್ರಕರ್ತವ್ಯಾ ಸರ್ವ-ಪಾತಕಹಾರಿಣೀ ॥26॥ ಕೃಷ್ಣನು ಹೇಳಿದನು – ಈ ಕಾಮಿಕೈಕಾದಶಿಯ ಮಹಿಮೆಯನ್ನು ನಿನ್ನೆದುರಿಗೆ ಹೇಳಿದ್ದೇನೆ. ಆದುದರಿಂದ ಈ ವ್ರತವನ್ನು ಮಾಡ-ಬೇಕು. ಪಾಪಗಳೆಲ್ಲವೂ ಹೋಗುತ್ತವೆ. ಬ್ರಹ್ಮಹತ್ಯಾಪಹರಣೀ ಭ್ರೂಣಹತ್ಯಾ-ವಿನಾಶಿನೀ । ತ್ರಿದಿವಸ್ಥಾನದಾತ್ರೀ ಚ ಮಹಾಪುಣ್ಯಫಲಪ್ರದಾ ॥27॥ ಈ ಏಕಾದಶಿ-ಯು ಬ್ರಹ್ಮಹತ್ಯೆಯನ್ನೂ ಭ್ರೂಣಹತ್ಯೆಯನ್ನೂ ನಾಶ ಮಾಡುತ್ತದೆ. ಮತ್ತು ಮಹಾಪುಣ್ಯವನ್ನು ಕೊಟ್ಟು ಸ್ವರ್ಗವನ್ನು ಸೇರಿಸುತ್ತದೆ. ಶ್ರುತ್ವಾಮಾಹಾತ್ಮ್ಯಮೇತಸ್ಯಾ ನರಃ ಶ್ರದ್ಧಾಸಮನ್ವಿತಃ । ವಿಷ್ಣುಲೋಕಮವಾಪ್ನೋತಿ ಸರ್ವಪಾಪೈಃ ಪ್ರಮುಚ್ಯತೇ ॥28॥ ಯಾವನು ಶ್ರದ್ಧೆಯಿಂದ ಈ ಏಕಾದಶಿಯ ಮಹಿಮೆಯನ್ನು ತಿಳಿಯು-ತ್ತಾನೆಯೋ ಅವನು ಸರ್ವಪಾಪಗಳನ್ನೂ ಕಳೆದುಕೊಂಡು ವಿಷ್ಣುಲೋಕದಲ್ಲಿ ಸುಖಿಸುತ್ತಾನೆ. ಇತಿ ಶ್ರೀಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿನಾರದ-ಸಂವಾದಾಂತರ್ಗತ ಕೃಷ್ಣಯುಧಿಷ್ಠಿರಸಂವಾದೇ ಶ್ರಾವಣ-ಕೃಷ್ಣ ಕಾಮಿಕೈಕಾದಶೀಮಾಹಾತ್ಮ್ಯಂ ನಾಮ ಷಟ್‌ಪಂಚಾಶತ್ತಮೋಽಧ್ಯಾಯಃ ಸಮಾಪ್ತಃ ॥ ಇಂತು ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿನಾರದಸಂವಾದಾಂತರ್ಗತವಾದ ಕೃಷ್ಣಯುಧಿಷ್ಠಿರ-ಸಂವಾದದಲ್ಲಿ ಶ್ರಾವಣಕೃಷ್ಣ ಕಾಮಿಕೈಕಾದಶಿಯ ಮಹಿಮೆ ಎಂಬ ಐವತ್ತಾರನೆಯ ಅಧ್ಯಾಯವು ಮುಗಿಯಿತು. ॥

## ಶ್ರಾವಣ ॥ ಬಹುಳ ॥ ತ್ರಯೋದಶಿ

ಶ್ರೀ ಸತ್ಯಧರ್ಮತೀರ್ಥರು – ಶ್ರೀಸತ್ಯವರದುಗ್ಧಾಬ್ಧೇಃ ಉತ್ಥಿತಾ ಜಗತೀತಲೇ । ಸುಧಾ ಶ್ರೀಸತ್ಯಧರ್ಮಾಖ್ಯಾ ಪಾವಯೇತ್ ಸ್ಮರತಸ್ಸತಃ ॥ ಶ್ರೀ ಸತ್ಯವರತೀರ್ಥರ ಉತ್ತರಾಧಿಕಾರಿಯಾಗಿ ಶ್ರೀಮದುತ್ತರಾದಿಮಠದ ಪೀಠಾಧಿಪರಾಗಿ ಅನೇಕ ಗ್ರಂಥ-ಗಳನ್ನು, ಟೀಕಾಗ್ರಂಥಗಳನ್ನು ರಚಿಸಿ ಅತ್ಯಂತ ವಿಶಿಷ್ಟ ಖ್ಯಾತಿ, ಕೀರ್ತಿಯನ್ನು ಹೊಂದಿದ ಮಹಾತ್ಮರು ಶ್ರೀ ಸತ್ಯಧರ್ಮತೀರ್ಥರು.

ಬಡ ಕುಟುಂಬದಲ್ಲಿ ಜನಿಸಿದ ಅಣ್ಣಯ್ಯಾಚಾರ್ಯರು ಪೂರ್ವಾಶ್ರಮವನ್ನು

ಕಳೆದು, ಶ್ರೀ ಮಂತ್ರಾಲಯ ಪ್ರಭುಗಳನ್ನು ಉಪಾಸಿಸಿದರು. ಶ್ರೀರಾಘವೇಂದ್ರತೀರ್ಥ-ರಿಂದಲೇ ತಾವು (ಅಣ್ಣಯ್ಯಾಚಾರ್ಯರು) ಶ್ರೀಮದುತ್ತರಾದಿಮಠದ ಪೀಠಾಧಿಪ-ತಿಗಳಾಗುವರು ಎಂದು ಸೂಚನೆ ಪಡೆದರು. ಅದೇ ಸಮಯಕ್ಕೆ ಶ್ರೀಮದುತ್ತರಾದಿ-ಮಠದ ಸಂಸ್ಥಾನ ಪ್ರತಿಮೆಗಳ ಪೆಟ್ಟಿಗೆ ಕಳ್ಳರಿಂದ ಅಪಹರಿಸಲ್ಪಟ್ಟಿತ್ತು. ಅಣ್ಣಯ್ಯಾ-ಚಾರ್ಯರು ಸಂಸ್ಥಾನ ಪ್ರತಿಮೆಗಳ ಪೆಟ್ಟಿಗೆಯನ್ನು ಹುಡುಕಿ ಕೊಟ್ಟರು. ಅದರಿಂದ ಪ್ರಸನ್ನರಾಗಿ ಶ್ರೀ ಸತ್ಯವರತೀರ್ಥರು ಅಣ್ಣಯ್ಯಾಚಾರ್ಯರಿಗೆ ಪಟ್ಟಾಭಿಷೇಕವನ್ನು ಮಾಡಿ ಶ್ರೀ ಸತ್ಯಧರ್ಮತೀರ್ಥ ಎಂದು ಯತಿನಾಮವನ್ನು ಪ್ರದಾನ ಮಾಡಿದರು.

ಸುಮಾರು 33 ವರ್ಷಗಳ ಪೀಠಾಧಿಪತ್ಯವನ್ನು ಹೊಂದಿ ಶ್ರೀಮಠದ ಕೀರ್ತಿ-ಯನ್ನು ಇನ್ನಷ್ಟು ಮತ್ತಷ್ಟು ಹೆಚ್ಚಿಸಿದರು. ಇವರ ಸಮಕಾಲೀನ ರಾಜರು, ಸಾಮಂತರು, ನವಾಬರಿಂದ, ಪೇಶ್ವೆಗಳಿಂದ ಶ್ರೀಮಠವು ಗೌರವಿಸಲ್ಪಟ್ಟಿತು. ಇವರುಗಳಲ್ಲಿ ಮೈಸೂರು ಸಾಮ್ರಾಜ್ಯದ ದಿವಾನ್ ಪೂರ್ಣಯ್ಯನವರು ಒಬ್ಬರು. ಶ್ರೀಗಳು ಉತ್ತರ-ಯಾತ್ರೆಯನ್ನು ಮಾಡಲು ಇಚ್ಛಿಸಲು ಪಂಚವಟಿಯ ಶ್ರೀರಾಮದೇವರ ಗುಡಿಯ ಸನ್ನಿಧಾನದ ಶ್ರೀರಾಮದೇವರಿಂದ ಸ್ವಪ್ನದಲ್ಲಿ ಸೂಚಿತರಾಗಿ ದಕ್ಷಿಣದಲ್ಲಿಯೇ ಉಳಿದು ಕೊಂಡರು. ತಮ್ಮ ಅವಧಿಯಲ್ಲಿ ಹದಿನಾರು ಬಾರಿ ಸುಧಾಮಂಗಲವನ್ನು ಮಾಡಿದರು. ಮೈಸೂರಿನ ಅರಮನೆಯ ಬಳಿ ಶ್ರೀಶ್ವೇತವರಾಹದೇವರ ವಿಗ್ರಹವನ್ನು ಪ್ರತಿಷ್ಠಾಪಿಸಿದರು. ಹಿಂದೆ ಶ್ರೀವೇದವ್ಯಾಸತೀರ್ಥರ ಕಾಲದಲ್ಲಿ ಶ್ರೀಮಠಕ್ಕೆ ದೊರೆತ ಮಠವನ್ನು ದಿವಾನ್ ಪೂರ್ಣಯ್ಯನವರಿಂದ ನವೀಕರಿಸಿದರು. ಅಲ್ಲಿ ಪ್ರಾಣದೇವರನ್ನು ಪ್ರತಿಷ್ಠಾಪಿಸಿದರು. ಬೆಂಗಳೂರಿನ ಚಿಕ್ಕಪೇಟೆಯಲ್ಲೂ ಪ್ರಾಣದೇವರನ್ನು ಪ್ರತಿಷ್ಠಾಪಿಸಿ-ದರು. ಗಂಗಾಲಹರಿ, ಶ್ರೀಮದ್ಭಾಗವತ ಟಿಪ್ಪಣಿ, ರಾಮಾಯಣ ಟಿಪ್ಪಣಿ, ವಿಷ್ಣುತತ್ತ್ವ-ವಿನಿರ್ಣಯ ಟಿಪ್ಪಣಿ, ತತ್ತ್ವಸಂಖ್ಯಾನ ಟಿಪ್ಪಣಿ ಮುಂತಾದ ವಿದ್ವಜ್ಜನಪ್ರೀತಿದಾಯಕ ಗ್ರಂಥಗಳನ್ನು ರಚಿಸಿದರು. ಶ್ರೀ ಸತ್ಯಸಂಕಲ್ಪತೀರ್ಥರಿಗೆ ಶ್ರೀಮಠದ ಪೀಠವನ್ನು ಪ್ರದಾನ ಮಾಡಿ ಹೊಳೆಹೊನ್ನೂರಿನಲ್ಲಿ ವೃಂದಾವನಸ್ಥರಾದರು.

## ಶ್ರಾವಣ ॥ ಬಹುಳ ॥ ಅಮಾವಾಸ್ಯೆ

ಶ್ರಾವಣದ ಅಮಾವಾಸ್ಯೆಯನ್ನು ಸೋಮವತೀ ಅಮಾವಾಸ್ಯೆ ಎಂದೂ ಆಚರಿಸ-ಲಾಗುತ್ತದೆ.

ದರ್ಭಾಹರಣ – ಶ್ರಾವಣಅಮಾವಾಸ್ಯೆಯಂದು ದರ್ಭೆಯನ್ನು ಬಿಡಿಸಿ ತಂದಿಟ್ಟು, ಅದನ್ನೇ ವರ್ಷಪೂರ್ತಿ ಉಪಯೋಗಿಸಬೇಕು. ದರ್ಭೆಗಳು ದಶವಿಧ-ವಾಗಿವೆ. ದರ್ಭೆ ಹುಲ್ಲು, ಕಾಶ (ಜೊಂಡು ಹುಲ್ಲು), ಜವೆ ಹುಲ್ಲು, ದೂರ್ವಾ, ವಾಳದ ಬೇರು, ಕೋಲುಮಲ್ಲಿಗೆ, (ಕುಂದುಕ) ಗೋಧಿಯ ಹುಲ್ಲು, ಭತ್ತದ ಹುಲ್ಲು, ಮುಂಜಿಯ ಹುಲ್ಲು, ಬಿಲ್ವ ಇವೇ ಹತ್ತು ವಿಧಗಳು. ಶ್ರಾವಣ ಅಮಾ-ವಾಸ್ಯೆಯಲ್ಲಿ ಶುಚಿರ್ಭೂತನಾಗಿ ದರ್ಭೆಗಳನ್ನು ತರಬೇಕು. ಆ ದರ್ಭೆಗಳು 'ಆಯಾತಯಾಮ' ಅಂದರೆ ಇವು ಕೆಡುವುದಿಲ್ಲ. ಕೆಲವರು ಭಾದ್ರಪದ ಅಮಾ-ವಾಸ್ಯೆಯಲ್ಲಿ ದರ್ಭಗ್ರಹಣವನ್ನು ಹೇಳಿರುವರು. ''ವಿರಿಂಚಿನಾ ಸಹೋತ್ಪನ್ನ-ಪರಮೇಷ್ಠಿ ನಿಸರ್ಗಜ । ನುದ ಸರ್ವಾಣಿ ಪಾಪಾನಿ ದರ್ಭ ಸ್ವಸ್ತಿಕರೋ ಭವ'' ಈ ಮಂತ್ರವನ್ನುಚ್ಚರಿಸಿ ಪೂರ್ವ ಅಥವಾ ಉತ್ತರಾಭಿಮುಖನಾಗಿ 'ಹುಂಫಟ್' ಎಂದು ಒಂದೇ ಆವರ್ತಿ ಕತ್ತರಿಸಿ ಸಂಗ್ರಹಿಸತಕ್ಕದ್ದು. ಬ್ರಾಹ್ಮಣನಿಗೆ ನಾಲ್ಕು ದರ್ಭೆಗಳಿಂದ, ಕ್ಷತ್ರಿಯನಿಗೆ ಮೂರುದರ್ಭೆಗಳಿಂದ, ವೈಶ್ಯನಿಗೆ ಎರಡು ದರ್ಭೆಗಳಿಂದ, ಶೂದ್ರನಿಗೆ ಒಂದು ದರ್ಭೆಯಿಂದ ಮಾಡಿದ ಪವಿತ್ರ, ಹೀಗೆ ಹೇಳಿದೆ. ಇನ್ನು ಸಾಮಾನ್ಯವಾಗಿ ಎಲ್ಲರಿಗೂ ಎರಡು ದರ್ಭೆಗಳ ಪವಿತ್ರವನ್ನು ಹೇಳಿದೆ.

ಇಲ್ಲಿಗೆ ಶ್ರಾವಣಮಾಸದ ವಿಧಾನವು ಸಮಾಪ್ತವಾಯಿತು ॥ ಶ್ರೀಮಧ್ವೇಶಾರ್ಪಣಮಸ್ತು ॥

ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

ಅಸ್ಮದ್ಗುರ್ವಂತರ್ಗತಶ್ರೀಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕರಾದ-
ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಈ ಕೃತಿಕುಸುಮವು ಸಮರ್ಪಿತವಾಗಿದೆ.

ಶ್ರೀಕೃಷ್ಣಾರ್ಪಣಮಸ್ತು.

* * * * * * *

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಚೈತ್ರಮಾಸ - ವೈಶಾಖಮಾಸ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಚೈತ್ರಮಾಸ
# ವೈಶಾಖಮಾಸ

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯ ಸಿದ್ಧಾಂತ ಪ್ರತಿಷ್ಠಾನ (ರಿ),
ಬೆಂಗಳೂರು

''ಚೈತ್ರಮಾಸ-ವೈಶಾಖಮಾಸ'' ಶಾರ್ವರಿ ॥ ಶ್ರಾವಣ ॥ ಶುದ್ಧ ಹುಣ್ಣಿಮೆ, (ದಿನಾಂಕ : 3-8-2020) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಶ್ರೀಶ್ರೀವಿದ್ಯಾಧೀಶತೀರ್ಥಶ್ರೀಪಾದರ ಕರಕಮಲಗಳ ಮೂಲಕ ಭಾರತೀರಮಣ-ಹೃದಯಗುಹಾ-ನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : 2020


4171, 2ನೇ ಮೇನ್, ಗಿರಿನಗರ, ಸೀತಾಸರ್ಕಲ್ ಹತ್ತಿರ, ಬೆಂಗಳೂರು-85
ದೂರವಾಣಿ : 9141495120

ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಪ್ರತಿಗಳು : 1000
ಪುಟಗಳು : vi + 120

ಅಕ್ಷರಜೋಡಣೆ : ಸುಬ್ಬಣ್ಣ ಕೆಂಪದಾಳಿಹಳ್ಳಿ,
9141311280

ಮುಖಪುಟ – ಶ್ರೀವಿಶ್ವಾತ್ಮಾ, ಕಾರ್ತಿಕಜೋಷಿ.

ಮುದ್ರಣ :
ಮುಕ್ತಿಪಥ ಮುದ್ರಣಾಲಯ,
(ಪಿ. ಮಂಜುನಾಥ)
ಬೆಂಗಳೂರು.

ದಿ|| ಕೆ.ಎನ್. ಗುರುರಾಜಾಚಾರ್ಯ ಮತ್ತು ದಿ|| ಕಾವೇರಮ್ಮ







ಶಾಸ್ತ್ರಗ್ರಂಥಗಳ ಅಧ್ಯಯನದಲ್ಲಿ ಹಾಗೂ ವಿಶೇಷವಾಗಿ ವೇದಪಠನ, ಪಾಠನದಲ್ಲಿ ಆಸಕ್ತರಾಗಿದ್ದ ದಿ|| ಶ್ರೀ ಕೆ.ಎನ್. ಗುರುರಾಜಾಚಾರ್ಯ ಮತ್ತು ದಿ|| ಶ್ರೀಮತಿ ಕಾವೇರಮ್ಮ ಇವರುಗಳ ಸ್ಮರಣಾರ್ಥ ಬೆಂಗಳೂರು ರಾಜಾಜಿನಗರದಲ್ಲಿರುವ ಇವರ ಪುತ್ರ ಶ್ರೀ ಕೆ.ಜಿ. ಪ್ರಹ್ಲಾದರಾವ್ ಮತ್ತು ಅವರ ಧರ್ಮಪತ್ನಿ ಶ್ರೀಮತಿ ವಿದ್ಯಾ ಪ್ರಹ್ಲಾದರಾವ್, ಅವರು ಮಾಡಿದ ಸೇವೆ.

---

## ವಿಷಯಾನುಕ್ರಮಣಿಕೆ

* * * *

# ಮುನ್ನುಡಿ

ವರ್ಷದಲ್ಲಿ ಬರುವ ಪ್ರತಿಯೊಂದು ದಿವಸಗಳೂ ಕೂಡ ಪರ್ವಕಾಲಗಳೇ ಆಗಿವೆ. ನಿತ್ಯವೂ ಒಂದಲ್ಲ ಒಂದು ಹಬ್ಬಗಳು ಆರಾಧನೆಗಳು ಉತ್ಸವಗಳು ಇರುತ್ತವೆ. ಇವೆಲ್ಲವನ್ನೂ ಸಂಗ್ರಹಿಸುವುದಕ್ಕಾಗಿ ಇದೊಂದು ಯಾನ. ಈ ಯಾನದಲ್ಲಿ ಎಲ್ಲವನ್ನೂ ನೋಡುವ ಪ್ರಯತ್ನವಷ್ಟೇ ನಡೆದಿದೆ.

ಸಾಧಕರು ನಿತ್ಯವೂ ಆಯಾ ದಿವಸದ ವಿಶೇಷತೆಯನ್ನು ಅರಿತು ಅದರಂತೆ ಅನುಷ್ಠಾನ ಮಾಡಲು ಈ ಪುಸ್ತಕಗಳು ಅತ್ಯುಪಯುಕ್ತವಾಗಿವೆ. ಹಬ್ಬ, ಹರಿದಿನಗಳ ಬಗ್ಗೆ ಪ್ರತ್ಯೇಕ ಪುಸ್ತಕಗಳು ಹೊರಟಿವೆ. ಚೈತ್ರಮಾಸ ಮೊದಲಾದ ಪುಸ್ತಕಗಳಲ್ಲಿ ಪ್ರತಿಯೊಂದು ದಿವಸಗಳ ಮಾಹಿತಿಯನ್ನು ಸಂಕ್ಷೇಪವಾಗಿ ನೀಡಲಾಗಿರುತ್ತದೆ. ಎಲ್ಲಾ ಮಠದ ಪಂಚಾಂಗಗಳು ಹಾಗೂ ಧರ್ಮಶಾಸ್ತ್ರಗಳು ಪುರಾಣಾದಿಗಳು ಆಗಮಶಾಸ್ತ್ರಗಳ ಅಡಿಯಲ್ಲಿ ಈ ಪುಸ್ತಕವನ್ನು ಸಂಗ್ರಹ-ಮಾಡಲಾಗಿದೆ. ವಿದ್ವಾನ್ ॥ ಸಿ.ಆರ್. ಪ್ರದೀಪಸಿಂಹಾಚಾರ್ಯರು ಮಾಸಕ್ಕೆ ಸಂಬಂಧಪಟ್ಟ ಎಲ್ಲ ವಿಚಾರಗಳನ್ನು ಸಂಪೂರ್ಣವಾಗಿ ಸಂಗ್ರಹಿಸಿ ನನಗೆ ನೀಡಿ ಉಪಕರಿಸಿದ್ದಾರೆ. ಇವರ ಉಪಕಾರವನ್ನು ನಿರಂತರ ಸ್ಮರಿಸುತ್ತೇನೆ. ಈ ಪುಸ್ತಕದ ಡಿ.ಟಿ.ಪಿ. ಕಾರ್ಯದಲ್ಲಿ ಸಂಪೂರ್ಣ-ವಾಗಿ ತಮ್ಮನ್ನು ತೊಡಗಿಸಿಕೊಂಡು ಉತ್ತಮಸಲಹೆಗಳನ್ನು ನೀಡಿ ಅನೇಕ ವಿಷಯಗಳ ಯಥಾರ್ಥತೆಗೆ ಕಾರಣರಾದ ಸುಬ್ಬಣ್ಣ.ಕೆಂಪದಾಳಿಹಳ್ಳಿ ಇವರಿಗೂ ಅನಂತ ಅಭಿನಂದನೆಗಳು.

ನಿಷ್ಕಾಮಕರ್ಮದಿಂದ ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ರಾಜಾಜಿ-ನಗರದಲ್ಲಿರುವ ಪ್ರಹ್ಲಾದರಾವ್. ಕೆ.ಜೆ. ದಂಪತಿಗಳಿಗೆ ಆಯುಷ್ಯಾರೋಗ್ಯಗಳ ಜೊತೆ ಜ್ಞಾನಭಕ್ತಿವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಇವರ ಮಾತಾ-ಪಿತೃಗಳಿಗೆ ಈ ಜ್ಞಾನಯಜ್ಞದ ಪುಣ್ಯಸಂಪತ್ತು ಪ್ರಾಪ್ತವಾಗಲಿ ಎಂಬುದಾಗಿ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

## ಗ್ರಂಥ ಋಣ

ಇಲ್ಲಿ ಉಪಯೋಗಿಸಿಕೊಂಡ ಪುಸ್ತಕಗಳ ಸಂಪಾದಕರಿಗೆ ಅನಂತ ಕೃತಜ್ಞತೆಗಳು.

1. ಎಲ್ಲ ಮಠದ ಪಂಚಾಂಗಗಳು
2. ಕಪಿಲಕೀರ್ತನಮಂಜರೀ
3. ಗುರುಚರಿತ್ರೆ
4. ಅಷ್ಟಮಠದ ಯತಿವರರು
5. ಸದಾಚಾರಮುಕ್ತಾವಳಿ
6. ಪವಮಾನ, ಶ್ರೀಸುಧಾ, ತತ್ವವಾದ ಮೊದಲಾದ ಮಾಸಪತ್ರಿಕೆಗಳು.
7. ಚೈತ್ರಾದಿಮಾಸಕರ್ತವ್ಯಗಳು
8. ಸದಾಚಾರದರ್ಪಣ
9. ಗೃಹಸಮೀಕ್ಷೆ
10. ಧರ್ಮಸಿಂಧು
11. ವ್ರತರಾಜ

* * * * *

॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ ॥

# ಚೈತ್ರ ॥ ಶುದ್ಧ ॥ ಪ್ರತಿಪತ್

ಮಾಸನಿಯಾಮಕ ಶ್ರೀಪದ್ಮಿನೀಸಮೇತ ಶ್ರೀವಿಷ್ಣವೇ ನಮಃ

ಚೈತ್ರಮಾಸನಿಯಾಮಕನಾದ ಪದ್ಮಿನೀಸಮೇತ ಶ್ರೀ ವಿಷ್ಣುವಿನ ಪ್ರೀತಿಗೋಸ್ಕರ ಈ ಕೆಳಕಂಡ ಧರ್ಮಗಳನ್ನು ನಡೆಸಬೇಕು. ಇಂದು ವರ್ಷದ ಆರಂಭ. ತೈಲಾಭ್ಯಂಜನವನ್ನು ಮಾಡಿಕೊಳ್ಳಬೇಕು. ಇಲ್ಲದಿದ್ದರೆ ನರಕವಾಗುತ್ತದೆ. ಈ ದಿನವೇ ವಸಂತ ನವರಾತ್ರೋತ್ಸವದ ಆರಂಭವೂ ಆಗುತ್ತದೆ. ಈ ದಿನ 'ಪ್ರಪಾದಾನ'ವನ್ನು ಮಾಡಬೇಕು; ಎಂದರೆ ಅರವಟಿಗೆ ನಡೆಸಬೇಕು. ಬಾಯಾರಿದವರಿಗೆ ನೀರು ದಾನ ಮಾಡುವುದೇ ಪ್ರಪಾದಾನ ಎನ್ನುತ್ತಾರೆ. ಇದಕ್ಕೆ ಮಂತ್ರ – 'ಪ್ರಪೇಯಂ ಸರ್ವ ಸಾಮಾನ್ಯಾಃ ಭೂತೇಭ್ಯಃ ಪ್ರತಿಪಾದಿತಾ । ಅಸ್ಯಾಃ ಪ್ರದಾನಾತ್ ಪಿತರಃ ತೃಪ್ಯಂತು ಹಿ ಪಿತಾಮಹಾಃ ॥' ಪ್ರಪಾದಾನ ಮಾಡಲು ಅಸಕ್ತರಾದವರು ಬ್ರಾಹ್ಮಣರಿಗೆ ಉದಕುಂಭದಾನವನ್ನು ಮಾಡಬೇಕು. ಅದಕ್ಕೆ ಮಂತ್ರ- 'ಏಷ ಧರ್ಮಘಟೋ ದತ್ತೋ ಬ್ರಹ್ಮವಿಷ್ಣುಶಿವಾತ್ಮಕಃ । ಅಸ್ಯ ಪ್ರದಾನಾತ್ ಸಕಲಾಃ ಮಮ ಸಂತು ಮನೋರಥಾಃ ॥' ಈ ದಿನ ಬೆಳಿಗ್ಗೆ ತೈಲಾಭ್ಯಂಜನಾನಂತರ ಪಂಚಾಂಗ ಶ್ರವಣ ಹಾಗೂ ನಿಂಬಕದಲಭಕ್ಷಣವನ್ನು (ಬೇವು-ಬೆಲ್ಲ ತಿನ್ನುವುದನ್ನು) ಮಾಡಬೇಕು. ಅದಕ್ಕೆ 'ಶತಾಯುರ್ವಜ್ರದೇಹಾಯ ಸರ್ವಸಂಪತ್ಕರಾಯ ಚ । ಸರ್ವಾರಿಷ್ಟ ವಿನಾಶಾಯ ನಿಂಬಕಂ ದಲಭಕ್ಷಣಮ್ ।' ಎಂಬ ಮಂತ್ರವನ್ನು ಹೇಳಬೇಕು. ಹೆಚ್ಚಿನ ವಿಚಾರಕ್ಕಾಗಿ ನಮ್ಮ ಸಂಸ್ಥೆಯ ಯುಗಾದಿಪುಸ್ತಕವನ್ನು ನೋಡಿರಿ.

ಶ್ರೀ ಪುರುಷೋತ್ತಮತೀರ್ಥರ ಆರಾಧನೆ (ವ್ಯಾಸರಾಜ ಮಠ) – ಚೈತ್ರ ಶುದ್ಧ ಪ್ರತಿಪತ್ (ಕ್ರಿ .ಶ. 1400-1416) ಪುರುಷೋತ್ತಮಪಾದಾಬ್ಜಹೃದಯಶಾಸ್ತ್ರ-ಕೋವಿದಃ । ಪುರುಷೋತ್ತಮತೀರ್ಥಾಖ್ಯೋ ಗುರುರ್ಭೂಯಾದಭೀಷ್ಟದಃ ॥ ಇವರು ಶ್ರೀ ಜಯಧ್ವಜತೀರ್ಥರಿಂದ ಆಶ್ರಮವನ್ನು ಪಡೆದ ಮಹಾತೇಜಸ್ವಿ ಹಾಗೂ ತಪಸ್ವಿಗಳಾದ ಜ್ಞಾನಿಗಳು. ಪರಮ ವಿರಕ್ತರಾಗಿ ಚನ್ನಪಟ್ಟಣ ತಾಲ್ಲೂಕಿನ ಅಬ್ಬೂರಿನ ಸಮೀಪದಲ್ಲಿರುವ ಗುಹೆಯೊಂದರಲ್ಲಿ ಹೆಚ್ಚಿಗೆ ಕಾಲ ಕಳೆಯುತ್ತಾ ಅಲ್ಲಿ ಅತ್ಯಂತ ಕಠಿಣವಾದ ವ್ರತಗಳನ್ನು ಆಚರಿಸುತ್ತಾ ಕಾಲ ಕಳೆದ ಮಹಾಮಹಿಮರು. ಮುಂದೆ ಜಗತ್ತಿಗೆ ಬ್ರಹ್ಮಣ್ಯತೀರ್ಥರನ್ನು ದಯಪಾಲಿಸಿದ ತಪಸ್ವಿಗಳು. ಇವರು ದೇಹತ್ಯಾಗ

ಮಾಡಿ ವೃಂದಾವನಸ್ಥರಾಗಲಿಲ್ಲವೆಂದೂ ಅದ್ಯಾಪಿ ಅಬ್ಬೂರಿನ ಗುಹೆಯಲ್ಲಿಯೇ ವಾಸವಾಗಿದ್ದರೆಂದು ಪ್ರತೀತಿ. ಇವರು ಕಣ್ಮರೆಯಾದ ದಿನ 1416ನೇ ಇಸವಿ ಚೈತ್ರ ಶುದ್ಧ ಪ್ರತಿಪತ್ (ಯುಗಾದಿ ಹಬ್ಬ) ದಿನವನ್ನೇ ಇವರ ಆರಾಧನಾ ದಿನವೆಂದು ಆಚರಿಸಲಾಗುತ್ತಿದೆ.

## ಚೈತ್ರ ॥ ಶುದ್ಧ॥ ದ್ವಿತೀಯಾ

ಈ ದಿನ ಪ್ರದೋಷ ಕಾಲದಲ್ಲಿ 'ಬಾಲೇಂದುಪೂಜಾ' ಎಂಬ ಚಂದ್ರವ್ರತವನ್ನು ಮಾಡಬೇಕು. ಈ ದಿನವೇ ದವನದಿಂದ ಗೌರಿ - ಈಶ್ವರರನ್ನು ಪೂಜಿಸಬೇಕು.

ಶ್ರೀ ಸತ್ಯಪ್ರಜ್ಞತೀರ್ಥರು ಚೈತ್ರ ಶುಕ್ಲ ದ್ವಿತೀಯಾ (ಉತ್ತರಾದಿ ಮಠ) ಪ್ರಾವೋಚದ್ಯೋಽಧಿಕಂ ನ್ಯಾಯಸುಧಾವಾಕ್ಯಾರ್ಥಚಂದ್ರಿಕಾಮ್ । ಸತ್ಯಪ್ರಜ್ಞಗುರು-ರ್ದದ್ಯಾತ್ ಪ್ರಜ್ಞಾಂ ವೈದಾಂತಿಕೀಮ್ ಸದಾ ॥ ಪೂರ್ವಾಶ್ರಮದಲ್ಲಿ ಪಾಂಡುರಂಗೀ ಜಯಾಚಾರ್ಯರಾಗಿದ್ದ ಇವರು ಶ್ರೀ ಸತ್ಯಧ್ಯಾನತೀರ್ಥರ ಅನುಗ್ರಹದಿಂದ ಆಶ್ರಮ ಪಡೆದು ಶ್ರೀಉತ್ತರಾದಿಮಠದ ಪೀಠಾಧೀಶರಾದರು. ಇವರ ಆಳ್ವಿಕೆಯ ಅವಧಿ ಅಂದಾಜು ಮೂರು ವರ್ಷಗಳು. ನಿರಂತರವಾಗಿ ಸಂಸ್ಥಾನಪೂಜೆ, ಪಾಠ, ಪ್ರವಚನಗಳಲ್ಲೇ ಕಾಲವನ್ನು ವ್ಯಯಮಾಡಿ ಸತ್ಯಪ್ರಜ್ಞನಾದ ಶ್ರೀಹರಿಯನ್ನು ಪ್ರೀತಿಪಡಿಸಿದರು. ಶಿಷ್ಯಕೋಟಿಗೆ ಶ್ರೀಸತ್ಯಾಭಿಜ್ಞತೀರ್ಥರನ್ನು ಕೊಟ್ಟು ಪಾರ್ಥಿವ ಸಂವತ್ಸರದ ಚೈತ್ರ ಶುದ್ಧ ದ್ವಿತೀಯಾದಂದು ಆತಕೂರಿನಲ್ಲಿ ವೃಂದಾವನಸ್ಥರಾದರು.

## ಚೈತ್ರ ॥ ಶುದ್ಧ॥ ತೃತೀಯಾ

ಮತ್ಸ್ಯಜಯಂತೀ – ಚೈತ್ರಮಾಸದ ಶುಕ್ಲಪಕ್ಷದ ತೃತೀಯಾದಿವಸ ಮತ್ಸ್ಯಜಯಂತಿಯಂದು ಆಚರಣೆ ಮಾಡಬೇಕು. ಭಗವಂತನು ಅನೇಕ ಅವತಾರಗಳನ್ನು ಮಾಡಿದ್ದಾನೆ. ಅವುಗಳಲ್ಲಿ ದಶಾವತಾರಗಳು ನಮ್ಮ ಉದ್ಧಾರಕ್ಕಾಗಿ ಬಹಳ ಪ್ರಮುಖವಾಗಿವೆ. ಹತ್ತು ಅವತಾರಗಳ ಆರಾಧನೆಯನ್ನು ಜೀವನದಲ್ಲಿ ನಾವು ವಿಶೇಷವಾಗಿ ಅಳವಡಿಸಿಕೊಳ್ಳಬೇಕು. ಪ್ರಯತ್ನಪಟ್ಟು ಆ ಭಗವಂತನ ಹತ್ತು ಅವತಾರಗಳ ಲೀಲೆಗಳನ್ನು ಪುನಃ ಪುನಃ ಮನನ ಮಾಡಬೇಕು, ಚಿಂತನೆ ಮಾಡಬೇಕು, ಅನುಗ್ರಹವನ್ನು ಬೇಡಬೇಕು. ಆಗಷ್ಟೇ ಪರಮಾತ್ಮನ ಬಳಿ ತೆರಳಲು

ಸಾಧ್ಯವಾಗುತ್ತದೆ. ಭಗವಂತನ ಈ ಹತ್ತು ಅವತಾರಗಳಲ್ಲಿ ಮತ್ಸ್ಯಾವತಾರವು ಮೊದಲನೆಯ ಅವತಾರವಾಗಿದೆ. ಇದೇ ವೈವಸ್ವತಮನ್ವಂತರವನ್ನು ಪ್ರಾರಂಭ ಮಾಡಿದ ರೂಪವಿದು. ವೈವಸ್ವತಮನ್ವಂತರದ ಪ್ರಾರಂಭದಲ್ಲಿ ತನ್ನ ಹೊಟ್ಟೆಯಲ್ಲಿದ್ದ ಸಮಸ್ತ ವೇದವಾಙ್ಮಯವನ್ನು ಉಪದೇಶ ಮಾಡಿ, ನಮಗೆ ಜ್ಞಾನವನ್ನು ನೀಡಿದ ರೂಪವೂ ಕೂಡ ಇದೇ ಆಗಿದೆ. ಸತ್ಯವ್ರತರಾಜನಿಗೆ ಪರಮಾನುಗ್ರಹವನ್ನು ಮಾಡಿ, ಹಿಂದಿನ ಮನ್ವಂತರದ ಕೊನೆಯಲ್ಲಿ ರಾಜ್ಯಭಾರವನ್ನು ಮಾಡುತ್ತಿದ್ದ, ಸತ್ಯ-ವ್ರತರಾಜನಿಗೆ ಭಗವಂತನು ಮತ್ಸ್ಯರೂಪದಿಂದ ಅವತರಿಸಿ ಅನುಗ್ರಹವನ್ನು ಮಾಡಿದನು. ಸೃಷ್ಟಿಕಾರ್ಯವನ್ನು ಅದೇ ಸತ್ಯವ್ರತರಾಜನಿಂದ ಪ್ರಾರಂಭ ಮಾಡಿಸಿದನು. ಆ ಸಂದರ್ಭದಲ್ಲಿ ಹಯಗ್ರೀವಾಸುರನನ್ನು ಕೊಂದು, ವೇದಗಳನ್ನು ಚತುರ್ಮುಖಬ್ರಹ್ಮದೇವರಿಗೆ ಉಪದೇಶ ಮಾಡಿದನು. ಪ್ರಳಯಕಾಲದಲ್ಲಿ ಒಂದುವರೆ ಸಾವಿರ ವರ್ಷಗಳ ಕಾಲ ಆ ಸತ್ಯವ್ರತರಾಜನಿಗೆ ಮತ್ಸ್ಯಪುರಾಣವೇ ಮೊದಲಾದ ಸಮಸ್ತ ವಾಙ್ಮಯಪ್ರಪಂಚವನ್ನೇ ಉಪದೇಶ ಮಾಡಿದನು. ಮುಂದೆ ಸೃಷ್ಟಿಗೆ ಬೇಕಾದ ಸಕಲ ಸಂಪತ್ತುಗಳನ್ನೂ ಕೂಡ ನೀಡಿದನು. ಇದರಿಂದ ನಾವು ತಿಳಿಯಬೇಕಾದದ್ದು ಇಷ್ಟು - ಮತ್ಸ್ಯರೂಪಿಯಾದ ಭಗವಂತನನ್ನು ನಾವು ಮನಃಪೂರ್ವಕವಾಗಿ ಆರಾಧನೆ ಮಾಡಿದರೆ ಎಲ್ಲ ಫಲಗಳು ಲಭಿಸುತ್ತವೆ. 1) ಜೀವನವೇ ಮುಳುಗಿ ಹೋಗುವಂಥ ಸಂದರ್ಭದಲ್ಲಿ ಭಗವಂತನು ಮತ್ಸ್ಯನಾಗಿ ಬಂದು, ನಾವೆಯಲ್ಲಿ ನಮ್ಮನ್ನು ಕುಳ್ಳಿರಿಸಿಕೊಂಡು ಕಷ್ಟಸಮುದ್ರದಿಂದ ಪಾರುಮಾಡುತ್ತಾನೆ. ಎಲ್ಲ ದುಃಖವನ್ನು ಪರಿಹರಿಸಿ, ಧೈರ್ಯವನ್ನು ತುಂಬಿ, ಸಾಂತ್ವನಗೊಳಿಸುತ್ತಾನೆ. ಆದ್ದರಿಂದ ಕಷ್ಟಕಾಲದಲ್ಲಿ ನಮಗೆ ಯಾರು ರಕ್ಷಕರೇ ಇಲ್ಲ ಎಂಬ ಪರಿಸ್ಥಿತಿಯಲ್ಲಿ ಮತ್ಸ್ಯನನ್ನೇ ನಾವು ಮೊರೆಹೊಂದಬೇಕು. 2) ಯಾವುದೇ ಹೊಸಕಾರ್ಯವನ್ನು ಕೈಗೊಂಡಾಗ, ಮತ್ಸ್ಯರೂಪಿಯಾದ ಭಗವಂತನನ್ನು ಸ್ಮರಣೆ ಮಾಡಿದರೆ, ಎದುರಾಗುವ ಅನೇಕ ಆತಂಕಗಳು, ವಿಘ್ನಗಳು ಪರಿಹಾರವಾಗುತ್ತವೆ. ಸೃಷ್ಟಿಕಾಲದಲ್ಲಿ ತೊಡಗಿದ ಮನುವಿಗೆ ಹಯಗ್ರೀವಾಸುರನು ನೀಡಿದ ಉಪದ್ರವವನ್ನು ಹೇಗೆ ಮತ್ಸ್ಯರೂಪಿಯಾದ ಭಗವಂತನು ಪರಿಹರಿಸಿದನೋ, ಆದರಂತೆ ನಮಗೂ ಎದುರಾಗುವ ಶತ್ರುಗಳನ್ನು ಹಾಗೂ ವಿಘ್ನಗಳನ್ನು ಮತ್ಸ್ಯರೂಪಿಯಾದ ಭಗವಂತನೇ ಬಂದು ಅವಶ್ಯವಾಗಿ ಪರಿಹಾರ ಮಾಡುತ್ತಾನೆ. 3) ವೇದಗಳನ್ನು ಅಧ್ಯಯನ

ಮಾಡಬೇಕು, ವೇದಾರ್ಥಗಳನ್ನು ತಿಳಿದುಕೊಳ್ಳಬೇಕು, ಸಮಸ್ತ ತತ್ವವನ್ನು ಪುರಾಣಾದಿಗಳಿಂದ ತಿಳಿದುಕೊಳ್ಳಬೇಕು ಎಂದರೆ ಮತ್ಸ್ಯರೂಪಿಯಾದ ಭಗವಂತನ ಆರಾಧನೆಯನ್ನೇ ಮಾಡಬೇಕು. ಈ ಮತ್ಸ್ಯರೂಪಿಯಾದ ಭಗವಂತನು ಸಮಸ್ತ ವೇದಗಳಿಗೂ ನಿಯಾಮಕನಾಗಿದ್ದಾನೆ. ಕೇವಲ ನಮ್ಮ ಆಪತ್ತುಗಳನ್ನು ಪರಿಹಾರ ಮಾಡುವುದಲ್ಲದೇ ತತ್ವಜ್ಞಾನವನ್ನು ನೀಡಿ ನಮ್ಮನ್ನು ಉದ್ಧರಿಸುತ್ತಾನೆ. ಮತ್ಸ್ಯರೂಪವು ಸತ್ಯವ್ರತರಾಜನಿಗೆ ವೇದಾದಿಗಳನ್ನು ಉಪದೇಶ ಮಾಡುವ ಮೂಲಕ, ಜ್ಞಾನಕಾರ್ಯವನ್ನು ಪ್ರಕಟಣೆ ಮಾಡಿದೆ, ಹಯಗ್ರೀವಾಸುರನ ಸಂಹಾರ ಮೊದ-ಲಾದವುಗಳನ್ನು ಮಾಡುವುದರಿಂದ, ಬಲಕಾರ್ಯವನ್ನೂ ಕೂಡ ತೋರಿಸಿದೆ, ಜ್ಞಾನ ಮತ್ತು ಬಲ ಇವೆರಡರ ಲಾಭಕ್ಕಾಗಿ ನಾವು ಮತ್ಸ್ಯನನ್ನೇ ಮೊರೆಹೊಕ್ಕಬೇಕು. 4) ಹಣ, ಮನೆ ಮೊದಲಾದ ಸಂಪತ್ತುಗಳನ್ನೂ ಕೂಡ ಮತ್ಸ್ಯರೂಪಿಯಾದ ಭಗವಂತನು ನೀಡುತ್ತಾನೆ. ಮತ್ಸ್ಯಶಾಲಗ್ರಾಮದ ಪೂಜೆಯಿಂದ ಸಂಪತ್ತು ದೊರಕುತ್ತದೆಂದು ಪುರಾಣವು ಹೇಳುತ್ತದೆ. ಅನೇಕರ ಅನುಭವವೂ ಕೂಡ ಇದೇ ಆಗಿದೆ. ಆದ್ದರಿಂದ ಹಣದ ಅಪೇಕ್ಷೆ ಇದ್ದರೆ, ಮತ್ಸ್ಯರೂಪಿಯಾದ ಭಗವಂತನನ್ನೇ ಮೊರೆ ಹೊಂದಬೇಕು. 'ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ । ತೇನ ತ್ಯಕ್ತೇನ ಭುಂಜೀಥಾಃ ಮಾ ಗೃಧಃ ಕಸ್ಯಸ್ವಿದ್ ಧನಮ್ ॥ ಈ ಸಮಸ್ತ ಜಗತ್ತು ಮತ್ಸ್ಯರೂಪಿಯಾದ ಭಗವಂತನ ವಶದಲ್ಲಿದೆ. ಇದರಲ್ಲಿರುವ ಪ್ರತಿಯೊಂದು ಪದಾರ್ಥಗಳು ಅವನಿಗೆ ಸಂಬಂಧಪಟ್ಟಿವೆ. ಆದ್ದರಿಂದ ಅವನು ಕೊಟ್ಟಿದ್ದನ್ನೇ ನಾವು ತಿನ್ನಬೇಕು. ಏನಾದರೂ ಯಾಚನೆ ಮಾಡುವುದಾದರೆ, ಅವನಲ್ಲಿಯೇ ಯಾಚನೆ ಮಾಡಬೇಕು. ಅವನನ್ನು ಬಿಟ್ಟು, ಕಂಡಕಂಡವರ ಮನೆಗೆ ಹೋಗಿ, ಯಾರೊಬ್ಬರ ಸಂಪತ್ತನ್ನೂ ಯಾಚನೆ ಮಾಡಬಾರದು.

**ಮತ್ಸ್ಯಜಯಂತಿಯ ಆಚರಣೆ –** ಮೇಲೆ ಹೇಳಿದ ಎಲ್ಲ ಫಲಗಳ ಉದ್ದೇಶದಿಂದ ಮತ್ಸ್ಯರೂಪಿಯಾದ ಭಗವಂತನ ಆರಾಧನೆಯನ್ನು ಜೀವನದಲ್ಲಿ ನಾವು ಅವಶ್ಯವಾಗಿ ಮಾಡಬೇಕು. ಅಥವಾ ಯಾವುದೇ ಫಲಕಾಮನೆಗಳು ಇಲ್ಲದಿದ್ದರೂ ಮತ್ಸ್ಯನ ಆರಾಧನೆಯನ್ನು ಕರ್ತವ್ಯದೃಷ್ಟಿಯಿಂದ ಮಾಡಬೇಕು. ಇಲ್ಲದಿದ್ದರೆ, ಜೀವನವು ಪರಿಪೂರ್ಣವಾಗುವುದಿಲ್ಲ. ನಿತ್ಯವೂ ದೇವರ ಪೂಜೆಯಲ್ಲಿ

ಪಂಚಮಾವರಣದ ಪೂಜೆಯ ಸಂದರ್ಭದಲ್ಲಿ ಮತ್ಸ್ಯರೂಪಿಯಾದ ಭಗವಂತನನ್ನು ಸ್ಮರಿಸಿ, ಹಿಂದೆ ತಿಳಿಸಿದಂತೆ ಮಂತ್ರವನ್ನು ಹೇಳಿ ಪೂಜಿಸಿ, ಹೂವು ತುಳಸಿಗಳನ್ನು ಸಮರ್ಪಿಸಿ, ಪರಮಾನುಗ್ರಹವನ್ನು ಪಡೆದುಕೊಳ್ಳಬೇಕು. ಮತ್ತು ಭಗವಂತನ ಚಿಂತನೆಯ ಯಾವುದೇ ಸಂದರ್ಭದಲ್ಲಿ ಮೊಟ್ಟಮೊದಲು ಮತ್ಸ್ಯನನ್ನೇ ಆರಾಧನೆ ಮಾಡಬೇಕು. ಮತ್ಸ್ಯರೂಪಿಯಾದ ಭಗವಂತನ ಆರಾಧನೆಯನ್ನು ವರ್ಷಕ್ಕೆ ಒಮ್ಮೆ ಬರುವ ಮತ್ಸ್ಯಜಯಂತಿಯಂದು ವಿಶೇಷವಾಗಿ ಆಚರಿಸಬೇಕು. ಯಾವ ಮಹಾರುದ್ರದೇವರು ಪರ್ವತರಾಜನ ಮಗಳಾದ ಪಾರ್ವತಿಯನ್ನು ವಿವಾಹ-ವಾದರೋ, ಅಂದು ಚೈತ್ರಮಾಸದ ಶುಕ್ಲಪಕ್ಷದ ತೃತೀಯಾದಿವಸವೇ ಆಗಿತ್ತು. ಅದೇ ದಿವಸದಲ್ಲಿ ಮತ್ಸ್ಯಜಯಂತಿಯು ಬರುತ್ತದೆ. ಮತ್ಸ್ಯಜಯಂತಿಯ ಈ ಪರ್ವ-ಕಾಲವನ್ನು ಕಂಡು ರುದ್ರದೇವರು ಪಾರ್ವತಿಯನ್ನು ವಿವಾಹವಾಗಿ, ಸ್ಕಂದ, ಗಣಪತಿ ಮೊದಲಾದವರ ಜನ್ಮಕ್ಕೆ ಕಾರಣೀಭೂತರಾದರು. ಇಂಥ ಶ್ರೇಷ್ಠವಾದ ದಿವಸದಲ್ಲಿ ನಾವು ಮತ್ಸ್ಯಜಯಂತಿಯನ್ನು ಆಚರಣೆ ಮಾಡಬೇಕು. ಪುರಾಣಗಳಲ್ಲಿ ಹೇಳಿದ ಅನೇಕ ವ್ರತಾನುಷ್ಠಾನಗಳನ್ನು ಕಾಮ್ಯಫಲದ ಉದ್ದೇಶದಿಂದ ಅನೇಕರು ಆಚರಿ-ಸುತ್ತಾರೆ. ಆದರೆ ಪುರಾಣಗಳಲ್ಲಿ ತಿಳಿಸಿದ ಬೇರೆ ಹಬ್ಬಗಳಿಗಿಂತ ಶ್ರೇಷ್ಠವಾದ ಭಗವಂತನ ದಶಾವತಾರದ ಎಲ್ಲಾ ಜಯಂತಿಗಳನ್ನು ಅವಶ್ಯವಾಗಿ ನಾವು ಆಚರಿಸಬೇಕು. ಮತ್ಸ್ಯಾವತಾರವು ದಶಾವತಾರಗಳಲ್ಲಿ ಮೊದಲನೆಯದ್ದು. ಮತ್ತು ವರ್ಷದ ಹಬ್ಬಗಳಲ್ಲಿಯೇ ಶ್ರೇಷ್ಠ ಹಬ್ಬವೂ ಕೂಡ ಇದಾಗಿದೆ. ಮತ್ಸ್ಯಜಯಂತಿಯನ್ನು ಶ್ರದ್ಧಾಭಕ್ತಿಗಳಿಂದ ಆಚರಿಸಬೇಕು. ದೇವರ ಮುಂದೆ ಹಾಗೂ ಮನೆಯ ಮುಂದೆ ಹೊಸ್ತಿಲಲ್ಲಿ, ಮತ್ಸ್ಯಜಯಂತಿಯಂದು ಮತ್ಸ್ಯನ ಚಿತ್ರವನ್ನು ಬಿಡಿಸಬೇಕು. ಪರಮಾತ್ಮನು ಎರಡು ರೂಪದಿಂದ ಮತ್ಸ್ಯನಾಗಿ ನಮಗೆ ಕಾಣಿಸುತ್ತಾನೆ. ಮೀನಿನ ಸಂಪೂರ್ಣ ದೇಹವೇ ಮತ್ಸ್ಯನಾಗಿದ್ದಾನೆ, ಅಥವಾ ಕಟಿಭಾಗದಿಂದ ಕೆಳಭಾಗದಲ್ಲಿ ಮತ್ಸ್ಯರೂಪವನ್ನು ತಾಳಿ, ಮೇಲ್ಭಾಗದಲ್ಲಿ ಮಹಾವಿಷ್ಣುವಿನ ದೇಹವನ್ನು ಪ್ರಕಟಣೆ ಮಾಡುತ್ತಾ, ಭಕ್ತರ ಮೇಲೆ ಅನುಗ್ರಹದೃಷ್ಟಿಯನ್ನು ಬೀರುತ್ತಾ, ಇರುವುದು ಮತ್ತೊಂದು ರೂಪ. ಈ ಎರಡೂ ರೂಪಗಳ ಚಿತ್ರವನ್ನು ಬಿಡಿಸಬೇಕು. ಮತ್ತು ಆರಾಧನೆ ಮಾಡಬೇಕು. ಚಕ್ರಾಬ್ಜಮಂಡಲ ಬರೆದು ಮಧ್ಯದಲ್ಲಿ ಮತ್ಸ್ಯರೂಪಿಯಾದ ಭಗವಂತನ ಚಿತ್ರವನ್ನು ಬರೆದು, ಋಗ್ವೇದ, ಯಜುರ್ವೇದ, ಅಥರ್ವವೇದಗಳ

ಪ್ರತೀಕವಾಗಿ ನಾಕು ಕಲಶಗಳನ್ನಿಟ್ಟು ಪೂಜಿಸಬೇಕು. ನ್ಯಾಸಗಳ ಜೊತೆ ಆವಾಹನೆಯನ್ನು ಮಾಡಿ, ಷೋಡಶೋಪಚಾರಪೂಜೆಯನ್ನು ಮತ್ಸ್ಯನಿಗೆ ಸಮರ್ಪಿಸಬೇಕು. ವಿಷ್ಣುಸಹಸ್ರನಾಮ ಮೊದಲಾದವುಗಳಿಂದ ಮತ್ಸ್ಯನನ್ನು ಅರ್ಚಿಸಬೇಕು. ಭಕ್ಷ್ಯಭೋಜ್ಯಗಳನ್ನು ಮಾಡಿ, ಸಮರ್ಪಿಸಬೇಕು. ಬಗೆಬಗೆಯ ಮಂಗಳಾರತಿಗಳನ್ನು ಮಾಡಿ, ಮತ್ಸ್ಯನ ಕಣ್ಣುಗಳಿಂದ ಹೊರಹೊಮ್ಮುವ ಕಾಂತಿಯ ಸೊಬಗನ್ನು ಮಂದಹಾಸದ ಕಾಂತಿಯನ್ನು ಅನುಭವಿಸಬೇಕು. ಅಂತಿಮವಾಗಿ ಸಾಷ್ಟಾಂಗ ನಮಸ್ಕಾರ ಮಾಡಿ, ಮಾಡಿದ ಪಾಪಗಳ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತಾ, ಕ್ಷಮಾಪಣೆ ಕೇಳಿ, ಅನುಗ್ರಹವನ್ನು ಬೇಡಬೇಕು. ಇದೇ ಪುಸ್ತಕದಲ್ಲಿ ನೀಡಿದ ಮತ್ಸ್ಯನಿಗೆ ಸಂಬಂಧಪಟ್ಟ ಎಲ್ಲ ಸ್ತೋತ್ರಗಳನ್ನು ಅವಶ್ಯವಾಗಿ ಪಾರಾಯಣ ಮಾಡಬೇಕು. ಹಾಗೂ ಪ್ರಾರಂಭದ ಭಾಗದಲ್ಲಿ ನೀಡಿದ ಮತ್ಸ್ಯಾವತಾರದ ಸಮಗ್ರ ಚರಿತ್ರೆಯನ್ನು ಓದಿ ಭಕ್ತಿಪರವಶನಾಗಬೇಕು. ಪ್ರಯತ್ನಪೂರ್ವಕವಾಗಿ ಪ್ರವಚನ ಮಾಡಬೇಕು, ಅಥವಾ ಕೇಳಬೇಕು. ಸಂಪೂರ್ಣದಿನ 'ಶ್ರೀಮತ್ಸ್ಯಾಯ ನಮಃ ಶ್ರೀ' ಎಂಬ ನಾಮಮಂತ್ರವನ್ನು ಮನಸ್ಸಿನಲ್ಲಿ ಜಪಿಸಬೇಕು. ಮತ್ಸ್ಯಜಯಂತಿಯಂದು ಉಪವಾಸ ಮಾಡುವ ಅವಶ್ಯಕತೆಯಿರುವುದಿಲ್ಲ. ಭಗವಂತನ ದಶಾವತಾರಗಳಲ್ಲಿ ಕೃಷ್ಣಾವತಾರದ ದಿವಸ ಮಾತ್ರ ಉಪವಾಸ ಮಾಡಿದರೆ ಸಾಕು. ಉಳಿದ ಅವತಾರಗಳ ದಿವಸದಂದು ವೈಭವೋಪೇತವಾಗಿ ಪೂಜೆಯನ್ನು ಹಾಗೂ ಆಯಾ ಅವತಾರಗಳಿಂದ ತಿಳಿಯಲ್ಪಟ್ಟ ತತ್ವಜ್ಞಾನವನ್ನು ಪಡೆದುಕೊಳ್ಳಬೇಕು. ಅರ್ಚನೆಯನ್ನು ಮಾಡುವಾಗ ಮತ್ಸ್ಯರೂಪಿಯಾದ ಭಗವಂತನ ಎಲ್ಲ ಅಂಗಗಳಿಗೆ ಪ್ರತ್ಯೇಕವಾಗಿ ಪೂಜೆ ಮಾಡಬೇಕು. ಅವನ ಆಯುಧಗಳಿಗೂ ಕೂಡ ಪೂಜೆ ಮಾಡಬೇಕು - 'ಕೇಶವಾಯ ನಮಃ ಪಾದೌ ಪೂಜಯಾಮಿ, ದಾಮೋದರಾಯ ನಮಃ ಕಟಿಂ ಪೂಜಯಾಮಿ, ನರಸಿಂಹಾಯ ನಮಃ ಊರೂ ಪೂಜಯಾಮಿ, ಶ್ರೀವತ್ಸಧಾರಣೇ ನಮಃ ಉರಃ ಪೂಜಯಾಮಿ, ಕೌಸ್ತುಭವಾಸಾಯ ನಮಃ ಕೋಷ್ಠಂ ಪೂಜಯಾಮಿ, ಶ್ರೀಪತಯೇ ನಮಃ ವಕ್ಷಸ್ಥಳಂ ಪೂಜಯಾಮಿ, ತ್ರೈಲೋಕ್ಯವಿಜಯಾಯ ನಮಃ ಬಾಹೂನ್ ಪೂಜಯಾಮಿ, ಸರ್ವಾತ್ಮನೇ ನಮಃ ಶಿರಃ ಪೂಜಯಾಮಿ, ರಥಾಂಗಪಾಣಿನೇ ನಮಃ ಚಕ್ರಂ ಪೂಜಯಾಮಿ, ಶಂಖಧರಾಯನಮಃ ಶಂಖಂ ಪೂಜಯಾಮಿ, ಗಂಭಿರಾಯ ನಮಃ ಗದಾಂ ಪೂಜಯಾಮಿ, ಶಾಂತಮೂರ್ತಯೇ ನಮಃ ಪದ್ಮಂ ಪೂಜಯಾಮಿ,

ಪೂಜೆಯ ಕೊನೆಯಲ್ಲಿ ಮತ್ಸ್ಯರೂಪಿಯಾದ ಭಗವಂತನ ಎದುರು ಮಂಡಿಯೂರಿ ಕುಳಿತು ಪತಿ-ಪತ್ನಿಯರು ಒಟ್ಟಿಗೆ ಈ ಕೆಳಗಿನ ಮಂತ್ರದಿಂದ ಅರ್ಘ್ಯವನ್ನು ನೀಡಬೇಕು - ಕೆಳಗಿನ ಶ್ಲೋಕವನ್ನು ಹೇಳಿ ಹೂವು, ತುಳಸಿಗಳನ್ನು ಏರಿಸಬೇಕು. ಮೀನಾತ್ಮನೇ ನಮಸ್ತುಭ್ಯಂ ದೇವರಕ್ಷವಿಧಾಯಿನೇ ಪ್ರಳಯಾರ್ಣವ-ದುರ್ವಾರ-ವಾರಿಪೂರ-ವಿಹಾರಿಣೇ ॥ ಮೀನರೂಪವನ್ನು ಧರಿಸಿದ, ವೇದರಕ್ಷಕನಾದ, ಪ್ರಳಯಾರ್ಣವದಲ್ಲಿ ವಿಹಾರ ಮಾಡುವ ನಿನ್ನನ್ನು ಭಕ್ತಿಯಿಂದ ನಮಿಸುತ್ತೇನೆ ಎಂಬುದಾಗಿ ಪ್ರಾರ್ಥನೆಯನ್ನು ಆಚರಿಸಬೇಕು. ಸತ್ಯವ್ರತೋಪದೇಶಾಯ ವಿದ್ಯಾಮೀನಸ್ವರೂಪಿಣೇ। ಪ್ರಲಯಾಂಬುಧಿಸಂಚಾರಿಮತ್ಸ್ಯದೇವಾಯ ತೇ ನಮಃ ॥ ಮತ್ಸ್ಯದೇವ ಜಗನ್ನಾಥ ಹಯಗ್ರೀವಾ-ಸುರಾಂತಕ। ಪ್ರಳಯಾಬ್ಧಿಕೃತಾವಾಸ ಗೃಹಾಣಾರ್ಘ್ಯಂ ನಮೋಽಸ್ತು ತೇ। ಹೀಗೆನ್ನುತ್ತಾ ಅರ್ಘ್ಯವನ್ನು ಕೊಡಬೇಕು. ಪ್ರಾರ್ಥನೆ – ನಾಲ್ಕು ವೇದಗಳಿಗೆ ನಿಯಾಮಕ-ನಾಗಿರುವುದರಿಂದ ಮತ್ಸ್ಯಜಯಂತಿಯಂದು ನಾಲ್ಕು ಕಲಶಗಳಲ್ಲಿ ನಾಲ್ಕು ವೇದಗಳನ್ನು ಆವಾಹನೆ ಮಾಡಿ, ಋಗ್ವೇದಃ ಪ್ರೀಯತಾಂ ಪೂರ್ವೇ ಸಾಮವೇದಸ್ತು ದಕ್ಷಿಣೇ ಯಜುರ್ವೇದಃ ಪಶ್ಚಿಮತೋ ಅಥರ್ವಶ್ಚೋತ್ತರೇಣ ತು ॥ ಎಂಬ ಪ್ರಮಾಣದಂತೆ ಪೂಜೆಯನ್ನು ಮಾಡಬೇಕು. ಅಂತಿಮವಾಗಿ ರಸಾತಲಗತಾ ವೇದಾಃ ಯಥಾ ದೇವ ತ್ವಯಾ ಹೃತಾಃ। ಮತ್ಸ್ಯರೂಪೇಣ ತದ್ವನ್ಮಾಂ ಭವಾನುದ್ಧರ ಕೇಶವ ॥ ಹಯಗ್ರೀವಾಸುರನಿಂದ ಅಪಹರಿಸಲ್ಪಟ್ಟ ರಸಾತಳದಲ್ಲಿರುವ ವೇದಗಳನ್ನು ನೀನು ಉದ್ಧಾರ ಮಾಡಿರುವಿ. ಅದೇ ಕ್ರಮದಲ್ಲಿ ನನ್ನನ್ನೂ ಕೂಡ ಉದ್ಧರಿಸು ಎಂಬುದಾಗಿ ಪ್ರಾರ್ಥನೆಯನ್ನು ಮಾಡಬೇಕು. ಮತ್ಸ್ಯೋ ಭೂತ್ವಾ ವಿರಿಂಚಾಯ ಯೇನ ವೇದಾಃ ಸಮಾಹೃತಾಃ । ರಸಾತಳಗತಃ ಶೀಘ್ರಂ ತಸ್ಮೈ ಮತ್ಸ್ಯಾತ್ಮನೇ ನಮಃ ॥ ಎಂಬ ಮಹಾಭಾರತದ ಪ್ರಾರ್ಥನಾ ಶ್ಲೋಕವನ್ನು ನಿತ್ಯವೂ ಪಠಿಸಬೇಕು. ಇಲ್ಲಿಗೆ ಮತ್ಸ್ಯ-ಜಯಂತಿಯ ಆಚರಣೆಯ ವಿಚಾರವು ಮುಗಿಯಿತು.

ಮತ್ಸ್ಯವ್ರತ – ಮಾರ್ಗಶಿರ ಮಾಸದ ಶುಕ್ಲಪಕ್ಷದ ದ್ವಾದಶಿಯಂದು ಮತ್ಸ್ಯದ್ವಾದಶಿವ್ರತವನ್ನು ಆಚರಣೆ ಮಾಡಬೇಕೆಂಬುದಾಗಿ ಶಾಸ್ತ್ರವು ವಿಧಿಸಿದೆ. ವಿಶೇಷವಾಗಿ ರಾಜ್ಯಪ್ರಾಪ್ತಿಯು ಅಧಿಕವಾದ ವಿದ್ಯೆಯ ಲಾಭವು ಬೇರೆ ಯಾವುದ-ರಿಂದಲೂ ಪರಿಹಾರವಾಗದ ಪಾಪದ ನಿವೃತ್ತಿಯು ಮತ್ಸ್ಯವ್ರತದ ಆಚರಣೆಯಿಂದ ಪ್ರಾಪ್ತವಾಗುತ್ತದೆ. ಇಲ್ಲಿಗೆ ಮತ್ಸ್ಯಜಯಂತಿಯ ವಿಚಾರವು ಸಮಾಪ್ತವಾಯಿತು.

ಶ್ರೀವೇದವ್ಯಾಸತೀರ್ಥರು– (ಕ್ರಿ.ಶ. 1569-1620) ಶ್ರೀವೇದವ್ಯಾಸತೀರ್ಥರು ಶ್ರೀರಘೂತ್ತಮತೀರ್ಥರು ವೃಂದಾವನಸ್ಥರಾಗುವ ಸುಮಾರು ಒಂದು ವರ್ಷ ಮೊದಲೇ ಆಶ್ರಮ ಪಡೆದಿದ್ದರೆಂದು ಹೇಳಲಾಗುತ್ತದೆ. ಅಲ್ಲದೇ ಶ್ರೀವೇದೇಶ-ತೀರ್ಥರಿಗೆ, ವಿದ್ಯಾಪತಿತೀರ್ಥರಿಗೆ ಹಾಗೂ ಚಿಂಚೋಳಿ ಕೃಷ್ಣದ್ವೈಪಾಯನಾ-ಚಾರ್ಯರಿಗೂ ಆಶ್ರಮ ಕೊಟ್ಟು ಚಿಕ್ಕಸಂಸ್ಥಾನಗಳನ್ನು ನಿರ್ಮಿಸಿದರು. ಅವರಿಂದ ಪಾಠಪ್ರವಚನ, ಸಿದ್ಧಾಂತಪ್ರಚಾರಗಳು ದೇಶದಾದ್ಯಂತ ನಡೆಯುವಂತೆ ವ್ಯವಸ್ಥೆ ಮಾಡಿದರು. ಶ್ರೀವೇದವ್ಯಾಸತೀರ್ಥರು ಪೂರ್ವಾಶ್ರಮದಲ್ಲಿ ಪಿಲ್ಲೂರವಂಶದ ಕೋನೇರಭಟ್ಟರ ಮಕ್ಕಳು. ವ್ಯಾಸಾಚಾರ್ಯ ಎಂದು ಅವರ ಹೆಸರಾಗಿತ್ತು. ವೇದವ್ಯಾಸಮಂತ್ರದ ಪುನಶ್ಚರಣದ ತಪಸ್ಸಿನ ಪ್ರಭಾವ, ವೇದವ್ಯಾಸರ ಅನುಗ್ರಹ-ದಿಂದಲೇ ಹುಟ್ಟಿದವರು ಎಂಬ ಐತಿಹ್ಯವಿದೆ. ಅವರು ಪಾಠಪ್ರವಚನ, ಸಿದ್ಧಾಂತ-ಪ್ರಚಾರ ಹಾಗೂ ಶಿಷ್ಯಸಂಗ್ರಹಣೆಗೆ ಇನ್ನಷ್ಟು ಒತ್ತು ಕೊಡಬೇಕಾಯಿತು. ಬಹುಶಃ ಆದಕ್ಕಾಗಿಯೇ ಮೂರು - ಮೂರು ಯತಿಗಳಿಗೆ ಆಶ್ರಮ ಅಲ್ಲದೇ ಅಲ್ಲಲ್ಲಿ ಪಾಠಶಾಲೆಗಳನ್ನು ತೆರೆದರು. ಪರಂಪರೆಯ ಪುನರ್ ನಿರ್ಮಾಣ ಪುನರ್‌ವ್ಯವಸ್ಥೆಗೆ ಅಧಿಕ ಗಮನ ನೀಡಿದರು. ತಮ್ಮ ಗುರುಗಳಾದ ಶ್ರೀರಘೂತ್ತಮತೀರ್ಥರು ಪ್ರಾರಂಭಿಸಿದ ಪೀಠದ ವೈಭವದ ವ್ಯವಸ್ಥೆಯನ್ನು ಮುಂದುವರೆಸಿದರು. ಶ್ರೀವೇದ-ವ್ಯಾಸತೀರ್ಥರು ಸರ್ವಜ್ಞಪೀಠವನ್ನು ಸುಮಾರು 24 ವರ್ಷಗಳ ಕಾಲ ಆಳಿದರು. ಕ್ರಿ.ಶ. 1619ಕ್ಕೆ ಸಲ್ಲುವ ಸಿದ್ಧಾರ್ಥಿಸಂವತ್ಸರದ ಚೈತ್ರಶುದ್ಧ ತೃತೀಯಾದಂದು ಹರಿಧ್ಯಾನಪರರಾದರು. ಅವರ ವೃಂದಾವನವು ಆಂಧ್ರಪ್ರದೇಶದ ಪೆನು-ಗೊಂಡೆಯಲ್ಲಿದೆ.

## ಗೌರೀ ತದಿಗೆ

### ಚೈತ್ರಗೌರಿ ಪೂಜೆಗೆ ಬೇಕಾದ ಸಾಮಗ್ರಿಗಳು

* ಕಳಶ ಪ್ರತಿಷ್ಠಾಪನೆಗೆ ಬೇಕಾದ ಸಕಲ ಪದಾರ್ಥಗಳು. * ತೊಟ್ಟಿಲು. * ಮಣ್ಣು ತುಂಬಿದ ಗಡಿಗೆ. * ಪೈರು ಬೆಳೆಯಲು ಬೇಕಾದ ಧಾನ್ಯಗಳು. * ಕದಲಾರತಿಯ ಸಿದ್ಧತೆ. * ಪನ್ನೀರು. * ತೈಲ. * ಪಂಚಾಮೃತ ಸಾಮಗ್ರಿಗಳು. * ಗಂಧ. * ಅರಿಶಿನ, ಕುಂಕುಮ. * ಗೌರಿಯ ಎಲ್ಲ ಅಲಂಕಾರ ಸಾಮಗ್ರಿಗಳು.

* ಇದೇ ಪುಸ್ತಕದಲ್ಲಿ ಪೂಜಾಭಾಗದ ಅನಂತರ ನೀಡಿದ ನೈವೇದ್ಯ ಪದಾರ್ಥಗಳ ಸಿದ್ಧತೆ. * ಎರಡು ದೀಪದ ಕಂಬಗಳು. * ಸಕಲ ಧಾನ್ಯಗಳು, ಸೀರೆ, ಕರಿಮಣಿ, ಬಿಚ್ಚೋಲೆಗಳಿಂದ ತುಂಬಿದ ಮೊರದ ಬಾಗಿಣ. * ಹಣ್ಣುಗಳು. * ಹೂವುಗಳು, ಪತ್ರೆಗಳು.

## ಚೈತ್ರಗೌರಿ ಪೂಜೆಯ ಬಗ್ಗೆ ಮುಖ್ಯ ಮಾಹಿತಿಗಳು

* ಚೈತ್ರಮಾಸದ ಶುಕ್ಲಪಕ್ಷದ ತೃತೀಯಾದಿವಸವೇ ಶಿವಪಾರ್ವತಿಯರ ವಿವಾಹವಾಗಿದೆ. ಹೀಗೆ ಸ್ಕಂದಪುರಾಣ ಹೇಳಿದೆ. * ಗೌರೀಪೂಜೆಯನ್ನು ಎಲ್ಲಾ ಸುವಾಸಿನಿಯರು ಅವಶ್ಯವಾಗಿ ಆಚರಣೆ ಮಾಡಬೇಕು. ದಕ್ಷಿಣಭಾರತದಲ್ಲಿ ಅನೇಕ ಸಂಪ್ರದಾಯದ ಮನೆಗಳಲ್ಲಿ ಇದರ ಆಚರಣೆ ಇದ್ದರೂ ಕೂಡ ಎಷ್ಟೋ ಮಂದಿ ಬಿಟ್ಟಿದ್ದಾರೆ. ಆದರೆ ಪ್ರಯತ್ನಪಟ್ಟು ಈ ಚೈತ್ರಗೌರಿಯ ಪೂಜೆಯನ್ನು ಮಾಡುವುದರಿಂದ ಎಲ್ಲ ಮನೋರಥಗಳು ಈಡೇರುತ್ತವೆ. * ಗೌರೀತದಿಗೆ, ಚೈತ್ರಗೌರಿ, ಉಯ್ಯಾಲೆ ಗೌರಿ, ಮನೋರಥತೃತೀಯಾ ಇವೇ ಮೊದಲಾದ ಹೆಸರುಗಳಿಂದ ಇದು ಪ್ರಸಿದ್ಧ-ವಾಗಿದೆ. * ಈ ಪೂಜೆಯಲ್ಲಿ ಕೇವಲ ಗೌರಿಯನ್ನಷ್ಟೇ ಪೂಜಿಸದೇ ಈಶ್ವರನಿಂದ ಸಹಿತಳಾದ ಗೌರಿಯನ್ನೇ ಪೂಜಿಸಬೇಕು. ಇದನ್ನು ಸ್ವತಃ ಈಶ್ವರನೇ ಸ್ಕಂದಪುರಾಣದಲ್ಲಿ ತಿಳಿಸಿರುತ್ತಾನೆ. * ಕಟ್ಟಿಗೆಯ ತೊಟ್ಟಿಲಲ್ಲಿ ಅಥವಾ ಲೋಹದ ತೊಟ್ಟಿಲಲ್ಲಿ ಈಶ್ವರನ ಜೊತೆ ಗೌರಿಯ ಮೂರ್ತಿಯನ್ನಿಟ್ಟು ಅಲಂಕಾರವನ್ನು ಮಾಡಿ, ಪೂಜಿಸಬೇಕು. ಮತ್ತು ಡೋಲೋತ್ಸವವನ್ನು ನಿತ್ಯ ಆಚರಿಸಬೇಕು. * ಗೌರಿಯ ಜೊತೆ ಭಾಗೀರಥಿ ಕಲಶವನ್ನು ಇಡುವ ಸಂಪ್ರದಾಯವಿದೆ. * ಚೈತ್ರಮಾಸದ ಶುಕ್ಲಪಕ್ಷದ ತೃತೀಯಾ ದಿವಸ ತೊಟ್ಟಿಲಲ್ಲಿ ಗೌರಿಯನ್ನಿಟ್ಟು ಅಕ್ಷಯಾತೃತೀಯಾ ದಿವಸದ ತನಕ ಒಂದು ತಿಂಗಳ ಕಾಲ ನಿತ್ಯವೂ ಗೌರಿಗೆ ಆರತಿಯನ್ನು ಮಾಡಬೇಕು. * ಚೈತ್ರಮಾಸದ ಶುಕ್ಲದ ತೃತೀಯಾ ದಿವಸ ಹಾಗೂ ಕೃಷ್ಣಪಕ್ಷದ ತೃತೀಯಾ ಹಾಗೂ ಅಕ್ಷಯತೃತೀಯಾ ದಿವಸಗಳಲ್ಲಿ ವಿಶೇಷವಾಗಿ ಪೂಜೆಯನ್ನು ಮಾಡಿ, ಸುವಾಸಿನಿಯರಿಗೆ ಅರಿಶಿನ, ಕುಂಕುಮ, ಬಾಗಿಣ ಮೊದಲಾದವುಗಳನ್ನು ಶಕ್ತ್ಯನುಸಾರವಾಗಿ ನೀಡಬೇಕು. ಉಳಿದ ದಿನಗಳಲ್ಲಿ ಆರತಿಯನ್ನು ಉಯ್ಯಾಲೆ ಸೇವೆಯನ್ನು ಮಾಡಬೇಕು. * ಗೌರಿಯ ಪ್ರತಿಮೆಯಿದ್ದರೆ ಅದನ್ನು ತೊಟ್ಟಿಲಿನಲ್ಲಿ ಇಟ್ಟು ಪೂಜಿಸಬೇಕು. ಅಥವಾ ಗೌರಿ-

ಮುಖವನ್ನು ಪೂಜಿಸಬೇಕು. ತೊಟ್ಟಿಲಿನ ಮುಂದೆ ಒಂದು ಕಲಶವನ್ನಿಟ್ಟು ಆ ಕಲಶಕ್ಕೆ ಷೋಡಶೋಪಚಾರ ಪೂಜೆಯನ್ನು ತೃತೀಯಾ ದಿವಸ ಆಚರಿಸಬೇಕು. ಚತುರ್ಥಿಯ ದಿವಸ ಬೆಳಗ್ಗೆ ಆ ಕಲಶವನ್ನು ವಿಸರ್ಜನೆ ಮಾಡಬೇಕು. ಹೀಗೆ ಮೂರು ತೃತೀಯಾಗಳಲ್ಲೂ ಪೂಜೆಯನ್ನು ಮಾಡಬೇಕು. ಉಳಿದ ದಿವಸಗಳಲ್ಲಿ ತೊಟ್ಟಿಲಿನಲ್ಲಿದ್ದ ಗೌರಿಗೆ ಅರಿಶಿನ-ಕುಂಕುಮ, ನೈವೇದ್ಯ , ಕದರಾರತಿಗಳನ್ನು ಮಾಡಿ, ತೊಟ್ಟಿಲನ್ನು ತೂಗಬೇಕು. * ಯಾವುದೇ ವ್ರತಗಳಲ್ಲಿ ಅಥವಾ ಪೂಜೆಗಳಲ್ಲಿ ಕಲಶದಲ್ಲಿಯೇ ದೇವತೆಯನ್ನು ಆವಾಹನೆ ಮಾಡಿ, ಪೂಜಿಸುವುದೇ ಶಾಸ್ತ್ರೋಕ್ತ ವಿಧಾನವಾಗಿದೆ. ಆಗಷ್ಟೇ ನಮಗೆ ಪರಿಪೂರ್ಣಫಲವು ದೊರಕುತ್ತದೆ. * ಅವಶ್ಯವಾಗಿ ಮೊರದಬಾಗಿಣವನ್ನು ಗೌರಿಗೆ ನೀಡಬೇಕು. ಅನಂತರಿಗೆ ಮುತ್ತೈದೆಯರಿಗೆ ದಾನ ಮಾಡಬೇಕು. * ಒಂದು ಸಣ್ಣ ಮಣ್ಣಿನ ಅಥವಾ ಹಿತ್ತಾಳೆಯ ಪಾತ್ರೆಯಲ್ಲಿ ಮಣ್ಣನ್ನು ಹಾಕಿ, ಭತ್ತವನ್ನು ಹಾಕಿ, ಪೈರನ್ನು ಬೆಳೆಸುತ್ತಾರೆ. ಕೆಲವರು ಗೋಧಿಯನ್ನು ಬೆಳೆಸುತ್ತಾರೆ. ಎರಡು ವಾರಗಳಲ್ಲಿ ಚೆನ್ನಾಗಿ ಬೆಳೆದ ಮೇಲೆ ಪೈರು ಪೂಜೆಯನ್ನು ಮಾಡಿ, ಆರತಿ ಮಾಡುತ್ತಾರೆ. * ಚೈತ್ರಗೌರಿಯ ದಿವಸ ಮಾವಿನಕಾಯಿ ಹಾಗೂ ಹಸಿಕೊಬ್ಬರಿ ಹಾಕಿ, ಹೆಸರುಬೇಳೆಯ ಕೋಸಂಬರಿ, ಕಡ್ಲೆಬೇಳೆ ಕೋಸಂಬರಿ ಪಾನಕ ಇವುಗಳನ್ನು ನೈವೇದ್ಯ ಮಾಡಿ ಸುವಾಸಿನಿಯರಿಗೆ ನೀಡಬೇಕು. * ಹೊಸದಾಗಿ ವಿವಾಹಿತರಾದ ಹೆಣ್ಣುಮಕ್ಕಳು ಐದುವರ್ಷಗಳ ತನಕ ತಪ್ಪದೇ ಚೈತ್ರಗೌರೀ ಪೂಜೆಯನ್ನು ಆಚರಿಸಬೇಕು. ಮುತ್ತೈದೆಯರ ಕಾಲುಗಳನ್ನು ತೊಳೆದು, ಅರಿಶಿನ, ಕುಂಕುಮ, ಹೂವು, ಬಳೆ, ದಕ್ಷಿಣೆ ಮೊದಲಾದವುಗಳನ್ನು ಕೊಟ್ಟು, ಪಾನಕ ಕೋಸಂಬರಿಗಳನ್ನು ನೀಡಿ, ನಮಸ್ಕರಿಸಿ ಅವರಿಂದ ಆಶೀರ್ವಾದವನ್ನು ಪಡೆಯಬೇಕು. ಐದುಮಂದಿ ಸುವಾಸಿನಿಯರಿಗೆ ಐದುವರ್ಷಗಳ ತನಕ ಕಾಲು ತೊಳೆಯಬೇಕು. * ಶಿವ-ಪಾರ್ವತಿಯರ ಅಂತರ್ಗತರಾದ ಭಾರತೀದೇವಿ-ಮುಖ್ಯಪ್ರಾಣದೇವರ ಅಂತರ್ಗತರಾದ-ಜಯಾಪತಿಸಂಕರ್ಷಣದೇವರು ಸಂಪ್ರೀತರಾಗಲಿ ಎಂದು ಭಾವಿಸಿ ಈ ಪೂಜೆಯನ್ನು ಅನುಷ್ಠಾನ ಮಾಡಬೇಕು. * ಈ ಪುಸ್ತಕದಲ್ಲಿ ನೀಡಿದ ಗೌರೀತದಿಗೆಯ ಹಾಡನ್ನು ಚೈತ್ರಮಾಸದಲ್ಲಿ ನಿತ್ಯವೂ ಹೇಳುತ್ತಾ ಆರತಿ ಮಾಡಬೇಕು. * ಮತ್ತು ಇಲ್ಲಿ ನೀಡಿದ ಸ್ಕಂದಪುರಾಣದಲ್ಲಿ ಬಂದಿರುವ ಈ ವ್ರತದ ಬಗ್ಗೆ ಪತಿಯಿಂದ ಅಥವಾ ಬ್ರಾಹ್ಮಣರಿಂದ ಕೇಳಿ ತಿಳಿದುಕೊಳ್ಳಬೇಕು. ಅಥವಾ ಇದರ ಅನುವಾದವನ್ನು

ಪಾರಾಯಣ ಮಾಡಬೇಕು. * ಚೈತ್ರಮಾಸದ ತದಿಗೆಯಂದು ಅದರ ಅನು-ವಾದವನ್ನು ಪಾರಾಯಣ ಮಾಡಬೇಕು. * ಚೈತ್ರಮಾಸದ ತದಿಗೆಯಂದು ಉಯ್ಯಾಲೆಯಲ್ಲಿ ಗೌರಿಯನ್ನಿಟ್ಟು ತೂಗಿ ಆರತಿ ಮಾಡುವ ಒಂದು ಚೇತೋಹಾರಿ-ಯಾದ ಅದ್ಭುತ ಅವಕಾಶವನ್ನು ಯಾರೂ ತಪ್ಪಿಸಿಕೊಳ್ಳದೇ ಆ ಜೀವನ ಆಚರಿಸಿ ಧನ್ಯರಾಗಬೇಕು.

## ಪೂಜಾವಿಧಾನ

## ಚೈತ್ರಗೌರಿ ಷೋಡಶೋಪಚಾರ ಪೂಜೆ

**ಆವಾಹನ - ಹೂ ಏರಿಸಬೇಕು – ಸುಮಧ್ಯಮಾಂ ಸುವಸನಾಂ ಚಂದ್ರಬಿಂಬಾಧರಾನ್ವಿತಾಂ । ಆವಾಹಯಾಮಿ ದೇವೀಂ ತ್ವಾಂ ಸರ್ವದಾ ಶುಭ-ಕಾರಿಣೀಂ ॥** ಮಹಾರುದ್ರದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಆವಾಹಯಾಮಿ ಆವಾಹನಂ ಸಮರ್ಪಯಾಮಿ ॥

**ಆಸನ ಹೂ ಅಕ್ಷತೆಗಳನ್ನು ಪೀಠದಲ್ಲಿ ಹಾಕಬೇಕು – ರೌಪ್ಯೇಣ ಚಾಸನಂ ರತ್ನಮಾಣಿಕ್ಯಶೋಭಿತಂ । ಮಯಾನೀತಂ ಗೃಹಾಣ ತ್ವಂ ಗೌರೀ ಕಾಮಾರಿವಲ್ಲಭೇ ॥** ಮಹಾರುದ್ರದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಆಸನಂ ಸಮರ್ಪಯಾಮಿ॥

**ಪಾದ್ಯ – ಒಂದು ಉದ್ಧರಣೆ ನೀರನ್ನು ದೇವಿಯ ಪಾದಗಳಿಗೆ ತೋರಿಸಿ ಅರ್ಘ್ಯಪಾತ್ರೆಗೆ ಹಾಕಬೇಕು. ಮಹಾದೇವಿ ಜಗನ್ನಾಥೇ ಶ್ವೇತಾಂಬರವಿಭೂಷಿತೇ । ಪಾದ್ಯಂ ಗೃಹಾಣ ದೇವಿ ತ್ವಂ ಗಂಧಪುಷ್ಪಾಕ್ಷತೈರ್ಯುತಂ ॥** ಮಹಾರುದ್ರದೇವ-ವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ

**ಅರ್ಘ್ಯ – ಒಂದು ಉದ್ಧರಣೆ ನೀರನ್ನು ದೇವಿಯ ಕೈಗಳಿಗೆ ತೋರಿಸಿ ಅರ್ಘ್ಯಪಾತ್ರೆಗೆ ಹಾಕಬೇಕು. ಗಂಧಪುಷ್ಪಾಕ್ಷತೈರ್ಯುಕ್ತಂ ದಿವ್ಯಂ ಸಂಪಾದಿತಂ ಮಯಾ । ಅರ್ಘ್ಯಂ ಗೃಹಾಣ ದೇವಿ ತ್ವಂ ಮಯಾ ದತ್ತಂ ಸುರೇಶ್ವರಿ ॥** ಮಹಾರುದ್ರ-ದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪ-ಯಾಮಿ ॥

**ಆಚಮನ – ಒಂದು ಉದ್ಧರಣೆ ನೀರನ್ನು ದೇವಿಗೆ ತೋರಿಸಿ ಅರ್ಘ್ಯಪಾತ್ರೆಗೆ ಹಾಕಬೇಕು. ಕಾಮಾರಿವಲ್ಲಭೇ ದೇವಿ ಕುರ್ವಾಚಮನಮಂಬಿಕೇ । ನಿರಂತರಮಹಂ**

ವಂದೇ ಚರಣೌ ತವ ಪಾರ್ವತೀ ॥ ಮಹಾರುದ್ರದೇವವಾಮಾಂಕಸ್ಥಿತಚೈತ್ರ-ಗೌರ್ಯೈ ನಮಃ । ಆಚಮನೀಯಂ ಸಮರ್ಪಯಾಮಿ ॥

ಮಧುಪರ್ಕ – ಒಂದು ಬಾಳೆಹಣ್ಣು ಸುಲಿದು ಪಂಚಾಮೃತದಲ್ಲಿ ಅದ್ದಿ ತಾಂಬೂಲದಲ್ಲಿಟ್ಟು ಗಾಯತ್ರೀ ಮಂತ್ರದಿಂದ ಪ್ರೋಕ್ಷಿಸಬೇಕು. ದಧಿ ಮಧ್ವಾಜ್ಯ-ಸಂಯುಕ್ತಂ ಶರ್ಕರಾಕ್ಷೀರಸಂಯುತಂ । ಮಧುಪರ್ಕಂ ಗೃಹಾಣೇದಂ ಸರ್ವಾ-ಭೀಷ್ಟಪ್ರದಾಯಿನಿ ॥ ಮಹಾರುದ್ರದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಮಧುಪರ್ಕಂ ಸಮರ್ಪಯಾಮಿ ॥

ಪಂಚಾಮೃತಸ್ನಾನ ಹೂ ಅನ್ನು ಹಾಲಿನಲ್ಲಿ ಅದ್ದಿ ದೇವಿಗೆ ಪ್ರೋಕ್ಷಿಸಬೇಕು ಸುರಭೇಸ್ತು ಸಮುದ್ಭೂತಂ ದೇವಾನಾಮಪಿ ದುರ್ಲಭಮ್ । ಪಯೋ ದದಾಮಿ ದೇವೇಶಿ ಸ್ನಾನಾರ್ಥಂ ಪ್ರತಿಗೃಹ್ಯತಾಮ್ ॥ ಹಾಲಿನಲ್ಲಿ ಹೂ ಅದ್ದಿ ಪ್ರೋಕ್ಷಿಸಬೇಕು ಮಹಾರುದ್ರದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಕ್ಷೀರೇಣ ಸ್ನಪಯಾಮಿ॥

ಮೊಸರು ಮೊಸರಿನಿಂದ ಪ್ರೋಕ್ಷಿಸಬೇಕು. ಚಂದ್ರಮಂಡಲಸಂಕಾಶಂ ಸರ್ವದೇವಪ್ರಿಯಂ ಹಿ ತತ್ । ದದಾಮಿ ದಧಿ ದೇವೇಶಿ ಸ್ನಾನಾರ್ಥಂ ಪ್ರತಿ-ಗೃಹ್ಯತಾಮ್ ॥ ಮಹಾರುದ್ರದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ದಧಿ ಸ್ನಾನಂ ಸಮರ್ಪಯಾಮಿ ॥

ತುಪ್ಪ ತುಪ್ಪದಿಂದ ಪ್ರೋಕ್ಷಿಸಬೇಕು. ಸುರಾಣಾಮಾಜ್ಯಮಾಹಾರಂ ಆಜ್ಯಂ ಯಜ್ಞೇ ಪ್ರತಿಷ್ಠಿತಮ್ । ತೇಜಃ ಪವಿತ್ರಂ ಪರಮಂ ಸ್ನಾನಾರ್ಥಂ ಪ್ರತಿಗೃಹ್ಯತಾಮ್ ॥ ಮಹಾರುದ್ರದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಘೃತಸ್ನಾನಂ ಸಮರ್ಪ-ಯಾಮಿ ॥

ಜೇನುತುಪ್ಪ ಜೇನುತುಪ್ಪದಿಂದ ಪ್ರೋಕ್ಷಿಸಬೇಕು ಇದಂ ಮಧು ಮಯಾ ದೇವಿ ದತ್ತಂ ತುಷ್ಟ್ಯರ್ಥಮೇವ ಚ । ಗೃಹಾಣ ದೇವ ದೇವೇಶಿ ಮಮ ಶಾಂತಿಪ್ರದೋ ಭವ ॥ ಮಹಾರುದ್ರದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಮಧುಸ್ನಾನಂ ಸಮರ್ಪಯಾಮಿ ॥

ಸಕ್ಕರೆ ಸಕ್ಕರೆಯಿಂದ ಪ್ರೋಕ್ಷಣೆ ಮಾಡಬೇಕು ಇಕ್ಷುದಂಡಾತ್ ಸಮುದ್ಭೂತಂ ಶರ್ಕರಾಂ ಮಧುರಾಂ ಶುಭಾಮ್ । ಸ್ನಾನಾಯತೇ ಮಯಾ ದತ್ತಾಂ ಗೃಹಾಣ

ಪರಮೇಶ್ವರಿ ॥ ಮಹಾರುದ್ರದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಶರ್ಕರಾ-ಸ್ನಾನಂ ಸಮರ್ಪಯಾಮಿ ॥

ಎಳನೀರು – ಎಳನೀರಿನಿಂದ ಪ್ರೋಕ್ಷಣೆ ಮಾಡಬೇಕು ಮಹಾರುದ್ರದೇವ-ವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಫಲೋದಕೇನ ಸ್ನಪಯಾಮಿ॥ ಫಲತೋಯೈಃ ಗಂಧತೋಯೈಃ ನಾರಿಕೇಲಕುಶೋದಕೈಃ । ಸ್ನಾನಂ ಪುಣ್ಯಜಲೈರ್ಯುಕ್ತಂ ಗೃಹಾಣ ಸುರನಾಯಕಿ ॥ ಹೂವಿನಿಂದ, ನೀರು, ಗಂಧದ ನೀರು, ಎಳನೀರು, ದರ್ಭೆಯ ನೀರು ಇವುಗಳನ್ನು ಪ್ರೋಕ್ಷಿಸಬೇಕು.

ಶುದ್ಧೋದಕಸ್ನಾನ – ತೀರ್ಥದಿಂದ ಪ್ರೋಕ್ಷಣೆ ಮಾಡಬೇಕು ಗಂಗಾ ಗೋದಾವರೀ ಕೃಷ್ಣಾ ಗೌತಮೀ ನರ್ಮದಾ ಜಲೈಃ । ಸ್ನಾನಾರ್ಥಂ ಆಹೃತಂ ಮಾತಃ ಸ್ವೀಕುರುಷ್ವ ಹರಿಪ್ರಿಯೇ ॥ ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಶುದ್ಧೋದಕಸ್ನಾನಂ ಸಮರ್ಪಯಾಮಿ ॥ ಸ್ನಾನಾಂಗಮಾಚಮನಂ ಸಮರ್ಪಯಾಮಿ ॥ (ಒಂದು ಉದ್ಧರಣೆ ನೀರು ಬಿಡಬೇಕು)

ವಸ್ತ್ರ ಗೆಜ್ಜೆ ವಸ್ತ್ರವನ್ನು ದೇವಿಗೆ ಸಮರ್ಪಿಸಬೇಕು ವಸ್ತ್ರಂ ಚ ಸೋಮದೈವತ್ಯಂ ಲಜ್ಜಾಯಾಸ್ತು ನಿವಾರಣಮ್ । ಪ್ರಯಚ್ಛಾಮಿ ತವ ಪ್ರೀತ್ಯೈ ಮಮೇಷ್ಟಾರ್ಥಪ್ರದಾ ಭವ ॥ ಪೀತವಸ್ತ್ರದ್ವಯಂ ದೇವಿ ತುಭ್ಯಂ ದಾಸ್ಯಾಮಿ ಪಾರ್ವತಿ । ಚಂದ್ರ-ಮೌಳಿಪ್ರಿಯೇ ದೇವಿ ಸದಾ ಮೇ ವರದಾ ಭವ ॥ ಮಹಾರುದ್ರದೇವವಾಮಾಂಕ-ಸ್ಥಿತಚೈತ್ರಗೌರ್ಯೈ ನಮಃ । ವಸ್ತ್ರಯುಗ್ಮಂ ಸಮರ್ಪಯಾಮಿ ॥

ಮಾಂಗಲ್ಯಸಮರ್ಪಣೆ – ಮಾಂಗಲ್ಯಂ ಮಣಿಸಂಯುಕ್ತಮುಕ್ತಾಫಲಸಮ-ನ್ವಿತಮ್ । ಉತ್ತಮಂ ಗುಣಸೂತ್ರಂ ಗೃಹಾಣ ಶುಭಲಕ್ಷದೇ ॥

ಆಭರಣ – ವಿವಿಧ ಆಭರಣ ಸಮರ್ಪಿಸಬೇಕು ವಜ್ರಮಾಣಿಕ್ಯವೈಢೂರ್ಯ ಮುಕ್ತಾವಿದ್ರುಮಮಂಡಿತಮ್ । ಪುಷ್ಪರಾಗಸಮಾಯುಕ್ತಂ ಭೂಷಣಂ ಪ್ರತಿ-ಗೃಹ್ಯತಾಮ್ । ಕಿರೀಟಹಾರಕೇಯೂರ ಕಂಕಣಾದಿ ವಿಭೂಷಣೈಃ । ಅಲಂಕರೋಮಿ ತ್ವಾಂ ಭಕ್ತ್ಯಾ ಸರ್ವಾಲಂಕಾರಕಾರಿಣೀ ॥ ಮಹಾರುದ್ರದೇವವಾಮಾಂಕಸ್ಥಿತಮಂಗಳ-ಗೌರ್ಯೈ ನಮಃ । ಆಭರಣಾನಿ ಸಮರ್ಪಯಾಮಿ ॥

**ಗಂಧಃ** – ಹೂ ಅನ್ನು ಗಂಧದಲ್ಲಿ ಅದ್ದಿ ದೇವಿಗೆ ಹಚ್ಚಬೇಕು ಕುಂಕುಮಾಗರು ಕರ್ಪೂರಕಸ್ತೂರೀ ಚಂದನಾದಿಕಂ । ವಿಲೇಪನಂ ಮಹಾದೇವಿ ಗಂಧಂ ಸ್ವೀಕುರು ಶಾಂಕರಿ ॥ ಗಂಧಂ ಗೃಹಾಣ ದೇವೇಶಿ ಉತ್ತಮಂ ದಿವ್ಯಚಂದನಂ । ವಿಲೇಪನಂ ಸುರಾಧೀಶೇ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ ॥ ಮಹಾರುದ್ರದೇವವಾಮಾಂಕಸ್ಥಿತಚೈತ್ರ-ಗೌರ್ಯೈ ನಮಃ । ದಿವ್ಯಪರಿಮಳಗಂಧಾನ್ ಸಮರ್ಪಯಾಮಿ ॥

**ಅಕ್ಷತಾಃ** – ಮಂತ್ರಾಕ್ಷತೆಯನ್ನು ದೇವಿಗೆ ಸಮರ್ಪಿಸಬೇಕು ರಂಜಿತಾಃ ಕುಂಕುಮೌಘೇನ ಹರಿದ್ರಾಕ್ತಾಸ್ತಥಾಕ್ಷತಾಃ । ತವಾಲಂಕರಣಾರ್ಥಾಯ ಪ್ರದತ್ತಾಃ ಸರ್ವಮಂಗಳೇ ॥ ಶಾಲೀಯಾನ್ ಚಂದ್ರಸಂಕಾಶಾನ್ ಹರಿದ್ರಾಮಿಶ್ರಿತಾನ್ ಶುಭಾನ್ । ಅಕ್ಷತಾಂಶ್ಚಾರ್ಪಯೇ ತುಭ್ಯಂ ಗೃಹಾಣ ಪರಮೇಶ್ವರಿ ॥ ಮಹಾರುದ್ರ-ದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಅಕ್ಷತಾನ್ ಸಮರ್ಪಯಾಮಿ ॥

**ಹರಿದ್ರಾಚೂರ್ಣಂ** – ಅರಿಶಿನ ಏರಿಸಬೇಕು ಸೌಭಾಗ್ಯಶುಭದೇ ದೇವಿ ಸರ್ವಮಂಗಲದಾಯಿನೀ । ಹರಿದ್ರಾಂ ತೇ ಪ್ರದಾಸ್ಯಾಮಿ ಗೃಹಾಣ ಪರಮೇಶ್ವರಿ ॥ ಶಾಲೀಯಾನ್ ಚಂದ್ರಸಂಕಾಶಾನ್ ಹರಿದ್ರಾಮಿಶ್ರಿತಾನ್ ಶುಭಾನ್ । ಅಕ್ಷತಾಂ-ಶ್ಚಾರ್ಪಯೇ ತುಭ್ಯಂ ಗೃಹಾಣ ಪರಮೇಶ್ವರಿ ॥ ಮಹಾರುದ್ರದೇವವಾಮಾಂಕಸ್ಥಿತ-ಚೈತ್ರಗೌರ್ಯೈ ನಮಃ । ಹರಿದ್ರಾಚೂರ್ಣಂ ಸಮರ್ಪಯಾಮಿ ॥

**ಕುಂಕುಮಚೂರ್ಣಂ** – ಕುಂಕುಮ ಏರಿಸಬೇಕು ಕುಂಕುಮಂ ಕಾಂತಿದಂ ದಿವ್ಯಂ ಸರ್ವಕಾರ್ಯಫಲಪ್ರದಂ । ಕುಂಕುಮೇನಾರ್ಚಿತೇ ದೇವಿ ಗೃಹಾಣ ವರದಾ ಭವ ॥ ಮಹಾರುದ್ರದೇವವಾಮಾಂಕಸ್ಥಿತಚೈತ್ರಗೌರ್ಯೈನಮಃ । ಕುಂಕುಮಚೂರ್ಣಂ ಸಮರ್ಪಯಾಮಿ ॥

ಸಿಂಧೂರಚೂರ್ಣಂ - ಮಂಗಳದ್ರವ್ಯ, ಸಿಂಧೂರ, ಕಾಡಿಗೆ, ಗಂಧೂಡಿ ಇತ್ಯಾದಿಗಳನ್ನು ಅರ್ಪಿಸುವುದು ಹರಿದ್ರಾಕುಂಕುಮಂ ಚೈವ ಸಿಂಧೂರಂ ಕಜ್ಜಲಾ-ಧಿಕಂ । ನೀಲಲೋಹಿತತಾಟಂಕೇ ಮಂಗಲದ್ರವ್ಯಮೀಶ್ವರಿ ॥ ಮಹಾರುದ್ರದೇವ-ವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಸಿಂಧೂರಚೂರ್ಣಂ, ಮಂಗಳದ್ರವ್ಯಾಣಿ ಚ ಸಮರ್ಪಯಾಮಿ ॥

**ಪುಷ್ಪಮಾಲಿಕಾ –** (ಪುಷ್ಪಮಾಲೆ ಅರ್ಪಿಸಬೇಕು) ಚಂಪಕಾ ಕುಂದಮಂದಾರ ಮಾಲತೀ ಬೃಹತೀ ಸುಮೈಃ । ಪುಷ್ಪೈರ್ಬಿಲ್ವದಳೋಪೇತೈಃ ಪೂಜಯಾಮಿ ಶಿವ-ಪ್ರಿಯಾಂ ॥ ಜಾಜೀ ಪುನ್ನಾಗ ಮಂದಾರ ಕೇತಕೀ ಚಂಪಕಾನಿ ಚ । ಪುಷ್ಪಾಣಿ ತವ ಪೂಜಾರ್ಥಮರ್ಪಯಾಮಿ ಸದಾಶಿವೇ ॥ ಮಹಾರುದ್ರದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಪುಷ್ಪಮಾಲಿಕಾಂ ಸಮರ್ಪಯಾಮಿ ॥

**ಅಥ ಅಂಗಪೂಜಾ –** ಶ್ರೀ ಉಮಾಯೈ ನಮಃ - ಪಾದೌ ಪೂಜಯಾಮಿ ॥ ಗೌರ್ಯೈ ನಮಃ - ಗುಲ್ಫೌ ಪೂಜಯಾಮಿ ॥ ಶ್ವೇತವಸನಾಯೈ ನಮಃ - ಜಂಘೇ ಪೂಜಯಾಮಿ ॥ ಪಾರ್ವತ್ಯೈ ನಮಃ - ಜಾನುನೀ ಪೂಜಯಾಮಿ ॥ ಜಗನ್ಮಾತ್ರೇ ನಮಃ- ಕಟಿಂ ಪೂಜಯಾಮಿ ॥ ಮೂಲಪ್ರಕೃತ್ಯೈ ನಮಃ - ನಾಭಿಂ ಪೂಜಯಾಮಿ ॥ ಅಂಬಿಕಾಯೈ ನಮಃ - ಉದರಂ ಪೂಜಯಾಮಿ ॥ ಅನ್ನಪೂರ್ಣಾಯೈ ನಮಃ - ಸ್ತನೌ ಪೂಜಯಾಮಿ ॥ ಶಿವಸುಂದರ್ಯೈ ನಮಃ - ವಕ್ಷಸ್ಥಲಂ ಪೂಜಯಾಮಿ ॥ ಮಹಾಬಲಾಯೈ ನಮಃ - ಬಾಹೂ ಪೂಜಯಾಮಿ ॥ ವರಪ್ರದಾಯೈ ನಮಃ - ಹಸ್ತಾನ್ ಪೂಜಯಾಮಿ ॥ ಕಂಬುಕಂಠ್ಯೈ ನಮಃ - ಕಂಠಂ ಪೂಜಯಾಮಿ ॥ ಬ್ರಹ್ಮವಿದ್ಯಾಯೈ ನಮಃ - ಜಿಹ್ವಾಂ ಪೂಜಯಾಮಿ ॥ ಶಾಂಕರ್ಯೈ ನಮಃ - ಮುಖಂ ಪೂಜಯಾಮಿ ॥ ಶ್ರಿಯೈ ನಮಃ - ನೇತ್ರೇ ಪೂಜಯಾಮಿ ॥ ರುದ್ರಾಣ್ಯೈ ನಮಃ - ಕರ್ಣೌ ಪೂಜಯಾಮಿ ॥ ಸರ್ವಮಂಗಳಾಯೈ ನಮಃ -ಲಲಾಟಂ ಪೂಜಯಾಮಿ ॥ ಸರ್ವೇಶ್ವರ್ಯೈ ನಮಃ - ಶಿರಃ ಪೂಜಯಾಮಿ ॥ ಚೈತ್ರಗೌರ್ಯೈ ನಮಃ ಸರ್ವಾ-ಣ್ಯಂಗಾನಿ ಪೂಜಯಾಮಿ ॥

**ಪತ್ರ ಪೂಜಾ** (ಪತ್ರಗಳಿಂದ ಪೂಜಿಸಬೇಕು) ಶ್ರೀ ಉಮಾಯೈ ನಮಃ । ಬಿಲ್ವ-ಪತ್ರಂ ಸಮರ್ಪಯಾಮಿ ॥ ಗೌರ್ಯೈ ನಮಃ । ಚಂಪಕಪತ್ರಂ ಸಮರ್ಪಯಾಮಿ ॥ ಪಾರ್ವತ್ಯೈ ನಮಃ । ದೂರ್ವಾಪತ್ರಂ ಸಮರ್ಪಯಾಮಿ ॥ ಜಗನ್ಮಾತ್ರೇ ನಮಃ । ಅರ್ಕಪತ್ರಂ ಸಮರ್ಪಯಾಮಿ ॥ ಜಗತ್ಪ್ರತಿಷ್ಠಾಯೈ ನಮಃ । ಕರವೀರಪತ್ರಂ ಸಮರ್ಪಯಾಮಿ ॥ ಅನ್ನಪೂರ್ಣಾಯೈ ನಮಃ । ತುಳಸೀಪತ್ರಂ ಸಮರ್ಪಯಾಮಿ ॥ ಶಿವಸುಂದರ್ಯೈ ನಮಃ । ದಾಡಿಮಪತ್ರಂ ಸಮರ್ಪಯಾಮಿ ॥ ಅಂಬಿಕಾಯೈ ನಮಃ । ದತ್ತೂರಪತ್ರಂ ಸಮರ್ಪಯಾಮಿ ॥ ವರಪ್ರದಾಯೈ ನಮಃ । ಮಲ್ಲಿಕಾಪತ್ರಂ

ಸಮರ್ಪಯಾಮಿ ॥ ಕಂಬುಕಂಠ್ಯೈ ನಮಃ । ಯೂಥಿಕಾಪತ್ರಂ ಸಮರ್ಪಯಾಮಿ ॥ ಬ್ರಹ್ಮವಿದ್ಯಾಯೈ ನಮಃ । ಜಾಜೀಪತ್ರಂ ಸಮರ್ಪಯಾಮಿ ॥ ಶಿವಾಯೈ ನಮಃ । ಮರುವಕಪತ್ರಂ ಸಮರ್ಪಯಾಮಿ ॥ ತ್ರಿಪುರಸುಂದರ್ಯೈ ನಮಃ । ದವನಪತ್ರಂ ಸಮರ್ಪಯಾಮಿ ॥ ತ್ರಿಪುರೈಶ್ವರ್ಯೈ ನಮಃ ನಿಂಬಪತ್ರಂ ಸಮರ್ಪಯಾಮಿ ॥ ರುದ್ರಾಣ್ಯೈ ನಮಃ । ಕಾಮಸಂಜೀವಿನೀಪತ್ರಂ ಸಮರ್ಪಯಾಮಿ॥ ಹರಪ್ರಿಯಾಯೈ ನಮಃ । ವಿಷ್ಣುಕ್ರಾಂತಿಪತ್ರಂ ಸಮರ್ಪಯಾಮಿ ॥ ಚೈತ್ರಗೌರ್ಯೈ ನಮಃ ॥ ಪತ್ರಪೂಜಾಂ ಸಮರ್ಪಯಾಮಿ ॥

**ಅಥ ಪುಷ್ಪ ಪೂಜಾ** (ಪುಷ್ಪಗಳಿಂದ ಅರ್ಚಿಸಬೇಕು) ಶ್ರೀ ಗಿರಿಜಾಯೈ ನಮಃ । ಮಲ್ಲಿಕಾಪುಷ್ಪಂ ಸಮರ್ಪಯಾಮಿ (ಮಲ್ಲಿಗೆ) ದಾಕ್ಷಾಯಿಣ್ಯೈ ನಮಃ । ಜಾಜೀಪುಷ್ಪಂ ಸಮರ್ಪಯಾಮಿ (ಜಾಜೀ) ಉಮಾಯೈ ನಮಃ । ಕರವೀರಪುಷ್ಪಂ ಸಮರ್ಪಯಾಮಿ (ಕಣಗಲೆ) ದುರ್ಗಾಯೈ ನಮಃ । ಕಮಲಪುಷ್ಪಂ ಸಮರ್ಪಯಾಮಿ (ತಾವರೆ) ಗೌರ್ಯೈ ನಮಃ । ಪುನ್ನಾಗಪುಷ್ಪಂ ಸಮರ್ಪಯಾಮಿ (ಸುರಹೊನ್ನೆ) ಕಾಳ್ಯೈ ನಮಃ । ಸೇವಂತಿಕಾಪುಷ್ಪಂ ಸಮರ್ಪಯಾಮಿ (ಸೇವಂತಿಗೆ) ಹೈಮವತ್ಯೈ ನಮಃ । ಕುಂದಕಪುಷ್ಪಂ ಸಮರ್ಪಯಾಮಿ (ದುಂಡುಮಲ್ಲಿಗೆ) ಈಶ್ವರವಲ್ಲಭಾಯೈ ನಮಃ । ಚಂಪಕಪುಷ್ಪಂ ಸಮರ್ಪಯಾಮಿ (ಸಂಪಿಗೆ) ಶಿವಾಯೈ ನಮಃ । ಕೇತಕೀಪುಷ್ಪಂ ಸಮರ್ಪಯಾಮಿ (ತಾಳೆಹೂ) ಭವಾನ್ಯೈ ನಮಃ । ಉತ್ಪಲಪುಷ್ಪಂ ಸಮರ್ಪಯಾಮಿ (ನೈದಿಲೆ) ರುದ್ರಾಣ್ಯೈ ನಮಃ । ಪಾರಿಜಾತಪುಷ್ಪಂ ಸಮರ್ಪಯಾಮಿ (ಪಾರಿಜಾತ) ಶರ್ವಾಣ್ಯೈ ನಮಃ । ಜಪಾಪುಷ್ಪಂ ಸಮರ್ಪಯಾಮಿ (ದಾಸವಾಳ) ಸರ್ವ-ಮಂಗಳಾಯ ನಮಃ । ಸ್ಥಲಪದ್ಮಪುಷ್ಪಂ ಸಮರ್ಪಯಾಮಿ (ಗುಲಾಬಿ ಡೇರಾ) ಅಪರ್ಣಾಯೈ ನಮಃ । ನಂದ್ಯಾವರ್ತಪುಷ್ಪಂ ಸಮರ್ಪಯಾಮಿ(ನಂಜಬಟ್ಲು) ಜಗನ್ಮಂಗಳಾಯೈ ನಮಃ । ದಾಡಿಮಪುಷ್ಪಂ ಸಮರ್ಪಯಾಮಿ (ದಾಳಿಂಬೆ ಹೂ) ಜಗಜ್ಜನನ್ಯೈ ನಮಃ । ಪಾಟಲಿಪುಷ್ಪಂ ಸಮರ್ಪಯಾಮಿ (ಪಾದರಿ) ಶಿವವಲ್ಲಭಾಯೈ ನಮಃ । ಕಲ್ಹಾರಪುಷ್ಪಂ ಸಮರ್ಪಯಾಮಿ (ಬೆಟ್ಟ ದಾವರಿ) ॥ ಶ್ರೀ ಚೈತ್ರಗೌರ್ಯೈ ನಮಃ ನಾನಾವಿಧ ನಾನಾವರ್ಣ ಪರಿಮಳಪುಷ್ಪಾಣಿ ಸಮರ್ಪಯಾಮಿ ॥

## ಅಷ್ಟೋತ್ತರ ಶತನಾಮಪೂಜಾ

ಶ್ರೀರಜತಾಚಲಶೃಂಗಾಗ್ರಮಧ್ಯಸ್ಥಾಯೈ ನಮಃ । ಹಿಮಾಚಲ ಮಹಾ-ವಂಶಪಾವನಾಯೈ ನಮಃ । ಶಂಕರಾರ್ಧಾಂಗಸೌಂದರ್ಯಶರೀರಾಯೈ ನಮಃ । ಲಸನ್ಮರಕತಸ್ವಚ್ಛವಿಗ್ರಹಾಯೈ ನಮಃ । ಮಹಾತಿಶಯಸೌಂದರ್ಯಲಾವಣ್ಯಾಯೈ ನಮಃ । ಶಶಾಂಕಶೇಖರಪ್ರಾಣವಲ್ಲಭಾಯೈ ನಮಃ । ಸದಾಪಂಚದಶಾತ್ಮೈಕ್ಯಸ್ವರೂಪಾಯೈ ನಮಃ। ವಜ್ರಮಾಣಿಕ್ಯ ಕಿರೀಟಾಯೈ ನಮಃ। ಕಸ್ತೂರಿತಿಲಕೀಭೂತನಿಟಿಲಾಯೈ ನಮಃ ॥10॥ ವಿಕಚಾಂಭೋರುಹದಲಲೋಚನಾಯೈ ನಮಃ । ಶರಚ್ಚಾಂಪೇ-ಯಪುಷ್ಪಾಭನಾಸಿಕಾಯೈ ನಮಃ । ಲಸತ್ಕಾಂಚನತಾಟಂಕಯುಗಲಾಯೈ ನಮಃ । ಮಣಿದರ್ಪಣಸಂಕಾಶಕಪೋಲಾಯೈ ನಮಃ । ತಾಂಬೂಲಪೂರಿತ ಸ್ಮೇರವದನಾಯೈ ನಮಃ । ಸುಪಕ್ವದಾಡಿಮೀಬೀಜರದಾಯೈ ನಮಃ । ತ್ರಿವಲೀಯುಕ್ತಕಂಬುಕಂಧರಾಯೈ ನಮಃ । ಗಿರೀಶಬದ್ಧಮಾಂಗಲ್ಯ ಮಂಗಲಾಯೈ ನಮಃ । ಪದ್ಮಪಾಶಾಂಕುಶ-ಸತ್ಕರಾಬ್ಜಾಯೈ ನಮಃ ॥20॥ ಪದ್ಮಕೈರವಮಂದಾರ ಸುಮಾಲಿನ್ಯೈ ನಮಃ । ಸುವರ್ಣ-ಕುಂಭಯುಗ್ಮಾಭಸಂಕುಚಾಯೈ ನಮಃ। ರಮಣೀಯ ಚತುರ್ಬಾಹುಸಂಯುಕ್ತಾಯೈ ನಮಃ । ಕನಕಾಂಗದಕೇಯೂರಭೂಷಿತಾಯೈ ನಮಃ । ಬೃಹತ್ ಸೌವರ್ಣ-ಸೌಂದರ್ಯವಸನಾಯೈ ನಮಃ । ಬೃಹನ್ನಿತಂಬವಿಲಸಜ್ಜಘನಾಯೈ ನಮಃ । ಸೌಭಾಗ್ಯ ಜಾತಕಶೃಂಗಾರಮಧ್ಯಮಾಯೈ ನಮಃ । ದಿವ್ಯಭೂಷಣಸಂದೋಹ ರಂಜಿತಾಯೈ ನಮಃ । ಪಾರಿಜಾತಗುಣಾಧಿಕ್ಯಪದಾಬ್ಜಾಯೈ ನಮಃ । ಸಂಪದ್ಮರಾಗಸಂಕಾಶ ಚರಣಾಯೈ ನಮಃ ॥30॥ ಶ್ರೀಕಂಠನೇತ್ರಕುಮುದಚಂದ್ರಿಕಾಯೈ ನಮಃ । ಸ-ಚಾಮರಶಚ್ಯಾದಿದೇವತಾ ವೀಜಿತಾಯೈ ನಮಃ । ಭಕ್ತರಕ್ಷಣದಾಕ್ಷಿಣ್ಯ ಕಟಾಕ್ಷಾಯೈ ನಮಃ । ಭೂತೇಶಾಲಿಂಗನೋದ್ಭೂತಪುಲಕಾಂಗ್ಯೈ ನಮಃ । ಅನಂಗಜನಕಾ-ಪಾಂಗವೀಕ್ಷಣಾಯೈ ನಮಃ । ಶಚೀಮುಖಾಮರವಧೂಸೇವಿತಾಯೈ ನಮಃ । ಲೀಲಾಕಲ್ಪಿತಬ್ರಹ್ಮಾಂಡ ಮಂಡಿತಾಯೈ ನಮಃ । ಅಣಿಮಾದಿಮಹಾಶಕ್ತಿಸಂವೃತಾಯೈ ನಮಃ । ಏಕತಪತ್ರಸಾಮ್ರಾಜ್ಯದಾಯಕಾಯೈ ನಮಃ । ಸನಕಾದಿಸಮಾರಾಧ್ಯ-ಪಾದುಕಾಯೈ ನಮಃ ॥40॥ ದೇವರ್ಷಿಭಿಸ್ತೂಯಮಾನಾಽತ್ಮವೈಭವಾಯೈ ನಮಃ । ಮತ್ತೇಭವಕ್ತ್ರಷಡ್ವಕ್ತ್ರವತ್ಸಲಾಯೈ ನಮಃ । ಚಕ್ರರಾಜಮಧ್ಯವರ್ತ್ಯೈ ನಮಃ । ಚಿದಗ್ನಿ-ಕುಂಡಸಂಭೂತಸುದೇಹಾಯೈ ನಮಃ । ಶಶಾಂಕಖಂಡಸಂಯುಕ್ತಮಕುಟಾಯೈ

ನಮಃ । ಮತ್ತಹಂಸವಧೂಮಂದಗಮನಾಯ್ಯೈ ನಮಃ । ವಂದಾರುಜನಸಂದೋಹ-ವಂದಿತಾಯ್ಯೈ ನಮಃ । ಅಂತರ್ಮುಖಜನಾನಂದ ಫಲದಾಯ್ಯೈ ನಮಃ । ಪತಿ-ವ್ರತಾಂಗನಾಭೀಷ್ಟಫಲದಾಯ್ಯೈ ನಮಃ । ಅವ್ಯಾಜಕುರಣಾಪೂರಪೂರಿತಾಯ್ಯೈ ನಮಃ । ನಿರಂಜನಚಿದಾನಂದ ಸಂಯುಕ್ತಾಯ್ಯೈ ನಮಃ ॥50॥ ಸಹಸ್ರಸೂರ್ಯ ಸಂಯುಕ್ತ-ಪ್ರಕಾಶಾಯ್ಯೈ ನಮಃ । ರತ್ನ ಚಿಂತಾಮಣಿಗೃಹಮಧ್ಯಸ್ಥಾಯ್ಯೈ ನಮಃ । ಹಾನಿವೃದ್ಧಿ-ಗುಣಾಧಿಕ್ಯರಹಿತಾಯ್ಯೈ ನಮಃ । ಮಹಾಪದ್ಮಾಟವೀಟಮಧ್ಯನಿವಾಸಾಯ್ಯೈ ನಮಃ । ಜಾಗ್ರತ್ ಸ್ವಪ್ನಸುಷುಪ್ತೀನಾಂ ಸಾಕ್ಷೀ ಭೂತ್ಯೈ ನಮಃ । ಮಹಾಪಾಪೌಘಪಾಪಾನಾಂ ವಿನಾಶಿನ್ಯೈ ನಮಃ । ದುಷ್ಟಭೀತಿ ಮಹಾಭೀತಿ ಭಂಜನಾಯ್ಯೈ ನಮಃ । ಸಮಸ್ತದೇವಜನ ಪ್ರೇರಕಾಯ್ಯೈ ನಮಃ । ಸಮಸ್ತಹೃದಯಾಂಭೋಜನಿಲಯಾಯ್ಯೈ ನಮಃ । ಅನಾಹತ ಮಹಾಪದ್ಮ ಮಂದಿರಾಯ್ಯೈ ನಮಃ ॥60॥ ಸಹಸ್ರಾರಸರೋಜಾತವಾಸಿತಾಯ್ಯೈ ನಮಃ । ಪುನರಾವೃತ್ತಿರಹಿತ ಪುರಸ್ಥಾಯ್ಯೈ ನಮಃ । ಲೋಪಾಮುದ್ರಾರ್ಚಿತಶ್ರೀಮಚ್ಚ ರಣಾಯ್ಯೈ ನಮಃ । ಸಹಸ್ರರತಿ ಸೌಂದರ್ಯ ಶರೀರಾಯ್ಯೈ ನಮಃ । ಭಾವನಾಮಾತ್ರಸಂತುಷ್ಟಹೃದಯಾಯ್ಯೈ ನಮಃ । ಸತ್ಯಸಂಪೂರ್ಣ ವಿಜ್ಞಾನಸಿದ್ಧಿದಾಯ್ಯೈ ನಮಃ । ದಕ್ಷಾಧ್ವರಭೇದಸಾಧನಾಯ್ಯೈ ನಮಃ । ಶ್ರೀನಾಥಸೋದರೀಭೂತ್ವಾ ಶೋಭಿ-ತಾಯ್ಯೈ ನಮಃ । ಚಂದಶೇಖರಭಕ್ತಾರ್ತಿಭಂಜನಾಯ್ಯೈ ನಮಃ । ಸರ್ವೋಪಾಧಿ ವಿನಿರ್ಮುಕ್ತಚೈತನ್ಯಾಯ್ಯೈ ನಮಃ ॥70॥ ನಾಮಪಾರಾಯಣಾಭೀಷ್ಟಫಲದಾಯ್ಯೈ ನಮಃ । ಸೃಷ್ಟಿಸ್ಥಿತಿತಿರೋಧಾನಸಂಕಲ್ಪಾಯ್ಯೈ ನಮಃ । ಶ್ರೀ ಷೋಡಶಾಕ್ಷರೀಮಂತ್ರ-ಮಧ್ಯಗಾಯ್ಯೈ ನಮಃ । ಅನಾದ್ಯಂತಸ್ವಯಂಭೂತದಿವ್ಯಮೂರ್ತ್ಯೈ ನಮಃ । ಭಕ್ತಹಂಸಪರೀಮುಖ್ಯನಿಯೋಗಾಯ್ಯೈ ನಮಃ । ಮಾತೃಮಂಡಲಸಂಯುಕ್ತಲಲಿತಾಯ್ಯೈ ನಮಃ । ಭಂಡದೈತ್ಯಮಹಾಸ್ತ್ರನಾಶನಾಯ್ಯೈ ನಮಃ । ಕ್ರೂರಭಂಡಶಿರಚ್ಛೇದ-ನಿಪುಣಾಯ್ಯೈ ನಮಃ । ಚಂಡಮುಂಡನಿಶುಂಭಾದಿಖಂಡನಾಯ್ಯೈ ನಮಃ । ರಕ್ತಾಕ್ಷರಕ್ತಜಿಹ್ವಾದಿಶಿಕ್ಷಕಾಯ್ಯೈ ನಮಃ ॥80॥ ಮಹಿಷಾಸುರದೋರ್ವೀರ್ಯ-ನಿಗ್ರಹಾಯ್ಯೈ ನಮಃ । ಅಭ್ರಕೇಶಮಹೋತ್ಸಾಹಕರಣಾಯ್ಯೈ ನಮಃ । ಮಹೇಶ-ಯುಕ್ತನಟನತತ್ಪರಾಯ್ಯೈ ನಮಃ । ನಿಜಭರ್ತೃಮುಖಾಂಭೋಜಚಿಂತನಾಯ್ಯೈ ನಮಃ । ವೃಷಭಧ್ವಜವಿಜ್ಞಾನಭಾವನಾಯ್ಯೈ ನಮಃ । ಜನ್ಮಮೃತ್ಯುಜರಾರೋಗಭಂಜನಾಯ್ಯೈ ನಮಃ । ವಿಧೇಯಮುಕ್ತವಿಜ್ಞಾನಸಿದ್ಧಿದಾಯ್ಯೈ ನಮಃ । ಕಾಮಕ್ರೋಧಾದಿ

ಷಡ್ವರ್ಗನಾಶನಾಯ್ಯೆ ನಮಃ । ರಾಜರಾಜಾರ್ಚಿತಪದಸರೋಜಾಯ್ಯೆ ನಮಃ । ಸರ್ವವೇದಾಂತ ಸಂಸಿದ್ಧತತ್ತ್ವಾಯ್ಯೆ ನಮಃ ॥90॥ ಶ್ರೀವೀರಭಕ್ತವಿಜ್ಞಾನನಿಧಾನಾಯ್ಯೆ ನಮಃ । ಅಶೇಷದುಷ್ಟದನುಜಸೂದನಾಯ್ಯೆ ನಮಃ । ಸಾಕ್ಷಾಚ್ಛ್ರೀದಕ್ಷಿಣಾಮೂರ್ತಿಮನೋಜ್ಞಾಯ್ಯೆ ನಮಃ । ಹಯಮೇಧಾಗ್ರಸಂಪೂಜ್ಯಮಹಿಮಾಯ್ಯೆ ನಮಃ । ದಕ್ಷ-ಪ್ರಜಾಪತಿ ಸುತಾವೇಷಾಢ್ಯಾಯ್ಯೆ ನಮಃ । ಸಮಬಾಣೇಕ್ಷುಕೋದಂಡಮಂಡಿತಾಯ್ಯೆ ನಮಃ । ನಿತ್ಯಯೌವನಮಂಗಲಾಯ್ಯೆ ನಮಃ । ಮಹಾದೇವಸಮಾಯುಕ್ತ ಶರೀರಾಯ್ಯೆ ನಮಃ । ಮಹಾದೇವರತೌತ್ಸುಕಮಹಾದೇವ್ಯೈ ನಮಃ । ಶ್ರೀಚೈತ್ರಗೌರ್ಯ್ಯೈ ನಮಃ ॥100॥

॥ಅಷ್ಟೋತ್ತರಶತನಾಮಪೂಜಾಂ ಸಮರ್ಪಯಾಮಿ ॥

ಧೂಪ ದೇವದ್ರುಮರಸೋದ್ಭುತಃ ಕಾಲಾಗರುಸಮನ್ವಿತಃ । ಆಘ್ರೇಯತಾಂ ಅಯಂ ಧೂಪಃ ಭವಾನಿ ಘ್ರಾಣತರ್ಪಣಾ ॥ ಮಹಾರುದ್ರದೇವವಾಮಾಂಕಸ್ಥಿತಚೈತ್ರ ಗೌರ್ಯೈ ನಮಃ । ಧೂಪಮಾಘ್ರಾಪಯಾಮಿ॥

ಏಕಾರ್ತಿ ದೀಪ ಸಾಜ್ಯಂ ತ್ರಿವರ್ತಿ ಸಂಯುಕ್ತಂ ವಹ್ನಿನಾ ಯೋಜಿತಂ ಮಯಾ । ಗೃಹಾಣ ಮಂಗಳಂ ದೀಪಂ ತ್ರೈಲೋಕ್ಯತಿಮಿರಾಪಹಾ ॥ ಭಕ್ತ್ಯಾ ದೀಪಂ ಪ್ರಯಚ್ಛಾಮಿ ದೇವ್ಯೈ ತೇ ಭಕ್ತಿಪೂರ್ವಕಮ್ । ತ್ರಾಹಿ ಮಾಂ ನರಕಾತ್ ಘೋರಾತ್ ದಿವ್ಯಜ್ಯೋತಿರ್ನಮೋಽಸ್ತು ತೇ ॥ ಶ್ರೀ ಚೈತ್ರಗೌರ್ಯ್ಯೈನಮಃ ಏಕಾರ್ತಿದೀಪಂ ದರ್ಶಯಾಮಿ ॥ ಧೂಪ ದೀಪಾನಂತರಂ ಆಚಮನೀಯಂ ಸಮರ್ಪಯಾಮಿ ॥ ಆಚಮನೀಯಾನಂತರಂ ಪರಿಮಳಪತ್ರಪುಷ್ಪಾಣಿ ಸಮರ್ಪಯಾಮಿ ॥

ನೈವೇದ್ಯ- ಅನ್ನಂ ಚತುರ್ವಿಧಂ ಸ್ವಾದುರಸೈಃ ಷಡ್ಭಿಃ ಸಮನ್ವಿತಂ । ಭಕ್ಷ್ಯ-ಭೋಜ್ಯಸಮಾಯುಕ್ತಂ ನೈವೇದ್ಯಂ ಪ್ರತಿಗೃಹ್ಯತಾಂ ॥ ಖರ್ಜೂರ ನಾರಿಕೇಳಾಢ್ಯಂ ನಾನಾ ಭಕ್ಷ್ಯಸಮನ್ವಿತಂ । ಶಾಲ್ಯನ್ನಂ ಷಡ್ರಸೋಪೇತಂ ನೈವೇದ್ಯಂ ಸ್ವೀಕುರುಷ್ವ ಮೇ ॥ ಭಗವಂತನಿಗೆ ಹಾಗೂ ಮುಖ್ಯಪ್ರಾಣದೇವರಿಗೆ ಸಮರ್ಪಿಸಿದ ನೈವೇದ್ಯವನ್ನೇ ಚೈತ್ರಗೌರಿಗೆ ನಿವೇದನೆ ಮಾಡಬೇಕು. ಶ್ರೀ ಚೈತ್ರಗೌರ್ಯ್ಯೈ ನಮಃ ನಾರಿಕೇಳಫಲ-ನೈವೇದ್ಯಂ ಸಮರ್ಪಯಾಮಿ, ಕದಳೀಫಲನೈವೇದ್ಯಂ ಸಮರ್ಪಯಾಮಿ, ಗೋ-ಧೂಮಪಿಷ್ಟ ನೈವೇದ್ಯಂ ಸಮರ್ಪಯಾಮಿ, ಮುದ್ಗದಳ, ಚಣಕದಳ ನೈವೇದ್ಯಂ

ಸಮರ್ಪಯಾಮಿ, ಸಮಸ್ತವಿಧ-ಫಲಭಕ್ಷ್ಯಭೋಜ್ಯಮಹಾನ್ನೈವೇದ್ಯಂ ಸಮರ್ಪಯಾಮಿ । ಮಧ್ಯೇಮಧ್ಯೇ ಪಾನೀಯಂ ಸಮರ್ಪಯಾಮಿ । ಉತ್ತರಾಪೋಶನಂ ಸಮರ್ಪಯಾಮಿ । ಹಸ್ತಪ್ರಕ್ಷಾಳನಂ ಸಮರ್ಪಯಾಮಿ । ಮುಖಪ್ರಕ್ಷಾಳನಂ ಸಮರ್ಪಯಾಮಿ । ಪಾದಪ್ರಕ್ಷಾಳನಂ ಸಮರ್ಪಯಾಮಿ । ಕರೋದ್ವರ್ತನಂ ಸಮರ್ಪಯಾಮಿ । ಪುನರಾಚಮನೀಯಂ ಸಮರ್ಪಯಾಮಿ ।

ತಾಂಬೂಲ – ಪೂಗೀಫಲಸಮಾಯುಕ್ತಂ ನಾಗವಲ್ಲೀದಲೈರ್ಯುತಂ । ಕರ್ಪೂರಚೂರ್ಣಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥ ಮಹಾರುದ್ರದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ತಾಂಬೂಲಂ ಸಮರ್ಪಯಾಮಿ ॥

ಸುವರ್ಣಪುಷ್ಪದಕ್ಷಿಣೆ – ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ । ಅನಂತಪುಣ್ಯಫಲದಂ ಅತಃ ಶಾಂತಿಂ ಪ್ರಯಚ್ಛ ಮೇ ॥ ಮಹಾರುದ್ರದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ॥

ಉತ್ತರನೀರಾಜನ – ವರ್ತಿತ್ರಯಸಮಾಯುಕ್ತಂ ಕರ್ಪೂರೇಣ ಸಮನ್ವಿತಂ । ನೀರಾಜನಂ ಗೃಹಾಣೇದಂ ಮಯಾ ದತ್ತಂ ಮಹೇಶ್ವರಿ ॥ ಶ್ರೀಚೈತ್ರಗೌರ್ಯಂತರ್ಗತಪ್ರಾಣಸ್ಥಜಯಾಪತಿ-ಸಂಕರ್ಷಣಾಯ ನಮಃ ಮಹಾಮಂಗಳಾರತಿ ನೀರಾಜನಂ ಸಮರ್ಪಯಾಮಿ ॥ ಶ್ರೀಚೈತ್ರಗೌರ್ಯೈ ನಮಃ ಉತ್ತರನೀರಾಜನಂ ದರ್ಶಯಾಮಿ ॥ ಉತ್ತರ ನೀರಾಜನಾನಂತರಂ ಆಚಮನೀಯಂ ಸಮರ್ಪಯಾಮಿ ॥ ಆಚಮನೀಯಾನಂತರಂ ಪರಿಮಳಪತ್ರಪುಷ್ಪಾಣಿ ಸಮರ್ಪಯಾಮಿ ॥

ಮಂತ್ರಪುಷ್ಪ – ಕೈಯಲ್ಲಿ ಹೂ ಅಕ್ಷತೆ ಹಿಡಿಯುವುದು. ಚಂಪಕೈಃ ಶತಪತ್ರೈಶ್ಚ ಕಲ್ಹಾರೈಃ ಕರವೀರಕೈಃ । ಪಾಟಲೈರ್ಬಕುಳೈರ್ಯುಕ್ತಂ ಗೃಹಾಣ ಕುಸುಮಾಂಜಲಿಮ್ ॥ ಮಹಾರುದ್ರದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಮಂತ್ರಪುಷ್ಪಂ ಸಮರ್ಪಯಾಮಿ ॥ ಕೈಯಲ್ಲಿರುವ ಹೂ ಅಕ್ಷತೆಯನ್ನು ಗೌರಿಗೆ ಅರ್ಪಿಸುವುದು.

ಪ್ರದಕ್ಷಿಣ ನಮಸ್ಕಾರ ಪತಿ-ಪತ್ನಿಯರು ಒಟ್ಟಿಗೆ ನಾಕು ಪ್ರದಕ್ಷಿಣೆ ನಮಸ್ಕಾರ ಮಾಡಬೇಕು. ನಮಸ್ತೇ ದೇವಿ ಕಲ್ಯಾಣಿ ನಮಸ್ತೇ ವಿಶ್ವವಂದಿತೇ । ನಮೋ

ಭಕ್ತಾರ್ತಿನಾಶಿನ್ಯೈ ಭವಾನ್ಯೈ ತೇ ನಮೋ ನಮಃ ॥ ಪ್ರದಕ್ಷಿಣತ್ರಯಂ ದೇವಿ ಪ್ರಯತ್ನೇನ ಮಯಾ ಕೃತಂ । ತೇನ ಪಾಪಾನಿ ಸರ್ವಾಣಿ ವ್ಯಪೋಹತು ಸದಾ ಮಮ ॥ ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ । ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ । ಪಾಪಾಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪಸಂಭವಃ ॥ ತ್ರಾಹಿ ಮಾಂ ಕೃಪಯಾ ದೇವಿ ಶರಣಾಗತವತ್ಸಲೇ । ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ । ತಸ್ಮಾತ್ಕಾರುಣ್ಯಭಾವೇನ ರಕ್ಷ ರಕ್ಷ ಮಹೇಶ್ವರಿ ॥ ಮಹಾರುದ್ರ-ದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಪ್ರದಕ್ಷಿಣನಮಸ್ಕಾರಾನ್ ಸಮರ್ಪ-ಯಾಮಿ ॥

ಪ್ರಸನ್ನಾರ್ಘ್ಯಮ್ – ಹೂ ಮಂತ್ರಾಕ್ಷತೆ ತೆಗೆದುಕೊಂಡು ಒಂದು ಉದ್ಧರಣೆ ನೀರನ್ನು ಕೈಯಲ್ಲಿ ಹಾಕಿಕೊಂಡು ಅರ್ಘ್ಯಪಾತ್ರೆಯಲ್ಲಿ ಬಿಡುವುದು. ಗಂಗಾದಿಪುಣ್ಯಸಲಿಲೈಃ ಗಂಧಮಾಲ್ಯಾದಿವಾಸಿತೈಃ । ಅರ್ಘ್ಯಂ ದಾಸ್ಯಾಮಿ ವರದೇ ಗೃಹಾಣ ಹರವಲ್ಲಭೇ ॥ ಪುನರರ್ಘ್ಯಂ ಪ್ರದಾಸ್ಯಾಮಿ ಮಂಗಳೇ ಶಿವಸುಂದರಿ । ಸರ್ವಪಾಪಕ್ಷಯಂ ಕೃತ್ವಾ ರಕ್ಷ ಮಾಂ ಶರಣಾಗತಾಮ್ ॥ ಮಹಾರುದ್ರದೇವ-ವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಇದಮರ್ಘ್ಯಂ ಇದಮರ್ಘ್ಯಂ ಇದಮರ್ಘ್ಯಂ

ಪೂರ್ಣಫಲಸಮರ್ಪಣ – ಒಂದು ತೆಂಗಿನ ಕಾಯಿಯನ್ನು ತಾಂಬೂಲ-ದಲ್ಲಿಟ್ಟು ದೇವಿಯ ಬಲಭಾಗದಲ್ಲಿ ಇಡಬೇಕು. ಇದಂ ಫಲಂ ಮಯಾ ದೇವಿ ಸ್ಥಾಪಿತಂ ಪುರತಸ್ತವ । ತೇನ ಮೇ ಸುಫಲಾವಾಪ್ತಿರ್ಭವೇಜ್ಜನ್ಮನಿ ಜನ್ಮನಿ ॥ ಮಹಾ-ರುದ್ರದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಪೂರ್ಣಫಲಂ ಸಮರ್ಪಯಾಮಿ

ದೋರಗ್ರಹಣ ದೇವಿಯ ಹತ್ತಿರ ಇಟ್ಟಿರುವ ದೋರವನ್ನು ಕೆಳಗಿನ ಶ್ಲೋಕ ಹೇಳಿ ತೆಗೆದುಕೊಂಡು ಕಟ್ಟಿಕೊಳ್ಳಬೇಕು. ಭಕ್ತಪ್ರಿಯೇ ಮಹಾದೇವಿ ಸರ್ವೈಶ್ವರ್ಯ-ಪ್ರದಾಯಿನೀ । ಸೂತ್ರಂ ತೇ ಧಾರಯಿಷ್ಯಾಮಿ ಮಮಾಭೀಷ್ಟಂ ಚ ತ್ವಂ ಕುರು ॥

ಪ್ರಾರ್ಥನಾ – ದೇವಿಯನ್ನು ದೀರ್ಘಾಯುಷ್ಯ ಸೌಮಾಂಗಲ್ಯಗಳ ಜೊತೆ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಪ್ರಾರ್ಥಿಸುವುದು. ನಮಃ ಶಿವಕಾಂತಾಯೈ ಹ್ರೀಂ ನಮಶ್ಶಿವಶಕ್ತಯೇ । ಶ್ರೀಂ ನಮೋ ಜಗತಾಂ ಮಾತ್ರೇ ಮಮ ಭೂಯಾನ್ಮನೋ-ರಥಃ ॥ ಪುತ್ರಾನ್ ದೇಹಿ ಧನಂ ದೇಹಿ ಸೌಭಾಗ್ಯಂ ದೇಹಿ ಸುವ್ರತೇ । ಅನ್ಯಾಂಶ್ಚ

ಸರ್ವಕಾಮಾಂಶ್ಚ ದೇಹಿ ದೇವಿ ನಮೋಸ್ತು ತೇ ॥ ಇತಿ ದೋರಬಂಧನಮ್ । ಮಹಾ ರುದ್ರದೇವವಾಮಾಂಕಸ್ಥಿತಚೈತ್ರಗೌರ್ಯೈ ನಮಃ । ಮನೋಽಭೀಷ್ಟಪ್ರಾರ್ಥನಾಂ ಸಮರ್ಪಯಾಮಿ ॥

## ಚೈತ್ರಗೌರಿ ಪೂಜೆ –

ಚೈತ್ರಶುಕ್ಲತೃತೀಯಾಯಾಂ ಗೌರೀಮೀಶ್ವರಸಂಯುತಾಮ್ ।
ಸಂಪೂಜ್ಯ ದೋಲೋತ್ಸವಕಂ ಕುರ್ಯಾನ್ನಾರೀ ಶುಭೇಪ್ಸುಕಾ ॥

(ದೇವಿಪುರಾಣ, ಉಲ್ಲೇಖ ಹೇಮಾದ್ರಿ)

ಚೈತ್ರಮಾಸದ ಶುಕ್ಲಪಕ್ಷದ ತೃತೀಯಾ ದಿವಸ ಪರಮೇಶ್ವರನ ಜೊತೆ ಕುಳಿತಿರುವ ಗೌರಿಯನ್ನು ಭಕ್ತಿಯಿಂದ ಪೂಜಿಸಬೇಕು. ಡೋಲೋತ್ಸವ ಮಾಡಬೇಕು. (ತೊಟ್ಟಿಲಲ್ಲಿ ಕೂಡಿಸಿ ಉತ್ಸವ ಮಾಡಬೇಕು).

ತೃತೀಯಾಯಾಂ ಯಜೇದ್ದೇವೀಂ ಶಂಕರೇಣ ಸಮನ್ವಿತಾಮ್ । ಕುಂಕುಮಾಗರುಕರ್ಪೂರಮಣಿವಸ್ತ್ರಸ್ರಗರ್ಚಿತಾಮ್ ॥ ಸುಗಂಧಿಪುಷ್ಪಧೂಪೈಶ್ಚ ದಮನೇನ ವಿಶೇಷತಃ । ತತ ಆಂದೋಲಯೇದ್ವತ್ಸ ಶಿವೋಮಾತುಷ್ಟಯೇ ಸದಾ ॥ ರಾತ್ರೌ ಜಾಗರಣಂ ಕುರ್ಯಾ-ತ್ಪ್ರಾತರ್ದೇಯಾ ತು ದಕ್ಷಿಣಾ । ಸೌಭಾಗ್ಯಾಯ ಸದಾ ಸ್ತ್ರೀಭಿಃ ಕಾರ್ಯಾ ಪುತ್ರಸುಖೇ-ಪ್ಸುಭಿಃ ॥

ಶಂಕರನಿಂದ ಸಹಿತಳಾದ ಗೌರಿಯನ್ನು ತೃತೀಯಾದಿವಸ ಪೂಜಿಸಬೇಕು. ಕುಂಕುಮ, ಅಗರು, ಕರ್ಪೂರ, ಮಣಿ, ವಸ್ತ್ರ, ಮಾಲೆ ಇವುಗಳಿಂದ ಅರ್ಚಿಸಬೇಕು. ಸುಗಂಧಭರಿತವಾದ ಪುಷ್ಪಗಳಿಂದ ಪೂಜಿಸಿ, ಧೂಪಾರತಿ ಮಾಡಿ ವಿಶೇಷವಾಗಿ ದಮನದಿಂದ ಪೂಜಿಸಬೇಕು. ಅನಂತರ ತೊಟ್ಟಿಲನ್ನು ತೂಗಬೇಕು. ಶಿವ ಮತ್ತು ಪಾರ್ವತಿಯ ತುಷ್ಟಿಗಾಗಿ ಹೀಗೆ ಪ್ರತೀವರ್ಷವು ಆಚರಿಸಬೇಕು. ರಾತ್ರಿಕಾಲ ಜಾಗರಣೆ ಮಾಡಿ, ಪ್ರಾತಃಕಾಲದಲ್ಲಿ ದಕ್ಷಿಣೆಯನ್ನು ನೀಡಿ, ಸೌಭಾಗ್ಯವನ್ನು ಯಾಚಿಸಬೇಕು. ಸ್ತ್ರೀಯರು ಹೀಗೆ ಆಚರಿಸುವುದರಿಂದ ಪುತ್ರರನ್ನು ಹೊಂದಿ, ಅವರಿಂದ ಸುಖಪಡುತ್ತಾರೆ.

ಸಾಧು ಕೃತಂ ತ್ವಯಾ ದೇವಿ ಕೃತವತ್ಯಾ ಪರಿಗ್ರಹಮ್ ।
ಅಸ್ಯೇಹ ಧರ್ಮಪೀಠಸ್ಯ ಮನೋರಥಕೃತಃ ಸತಾಮ್ ॥1॥

ಪ್ರಿಯಳಾದ ಉಮೆಯೇ ! ಕಾಶಿಯಲ್ಲಿ ಧರ್ಮಪೀಠವನ್ನು ಸ್ಥಾಪನೆ ಮಾಡಿ, ಅಲ್ಲಿ ನೆಲೆಸಿ ಸಜ್ಜನರಿಗೆ ಅನುಗ್ರಹ ಮಾಡುವ ದೀಕ್ಷೆಯನ್ನು ನೀನು ಹೊಂದಿರುವುದು ಬಹಳ ಪ್ರಶಂಸಾರ್ಹವಾಗಿದೆ. ಸಜ್ಜನರ ಮನೋರಥಗಳು ಈಡೇರಲು ನಿನ್ನ ಈ ಕಾರ್ಯವು ಸ್ತುತ್ಯವಾಗಿದೆ.

ತ ಏವ ವಿಶ್ವಭೋಕ್ತಾರೋ ವಿಶ್ವಮಾನ್ಯಾಸ್ತ ಏವ ಹಿ ।
ಯೇ ತ್ವಾಂ ವಿಶ್ವಭುಜಾಮತ್ರ ಪೂಜಯಿಷ್ಯಂತಿ ಮಾನವಾಃ ॥2॥

ಯಾವ ಮನುಷ್ಯನು ಕಾಶಿಯಲ್ಲಿ ನೆಲೆಸಿದ ನಿನ್ನನ್ನು ನನ್ನ ಜೊತೆಗೆ ಪೂಜಿಸುತ್ತಾನೋ, ಅವನೇ ಸಮಸ್ತವಿಶ್ವದಲ್ಲಿ ಭೋಗವುಳ್ಳವನಾಗುತ್ತಾನೆ. ವಿಶ್ವಮಾನ್ಯ -ನಾಗುತ್ತಾನೆ. ಎಲ್ಲರೂ ಅವನನ್ನು ಗೌರವಿಸುತ್ತಾರೆ.

ವಿಶ್ವೇ ವಿಶ್ವಭುಜೇ ವಿಶ್ವಸ್ಥಿತ್ಯುತ್ಪತ್ತಿಲಯಪ್ರದೇ ।
ನರಾಸ್ತ್ವದರ್ಚಕಾಶ್ಚಾತ್ರ ಭವಿಷ್ಯಂತ್ಯಮಲಾತ್ಮಕಾಃ ॥3॥

ವಿಶ್ವದ ಸ್ಥಿತಿ ಉತ್ಪತ್ತಿ ಲಯಗಳನ್ನು ಮಾಡುವ ವಿಶ್ವವನ್ನು ಧರಿಸಿದ ನಿನ್ನನ್ನು ಯಾರು ಪೂಜಿಸುತ್ತಾರೋ, ಅವರು ದೋಷಮುಕ್ತರಾಗುತ್ತಾರೆ.

ಮನೋರಥತೃತೀಯಾಯಾಂ ಯಸ್ತೇ ಭಕ್ತಿಂ ವಿಧಾಸ್ಯತಿ ।
ತನ್ಮನೋರಥಸಂಸಿದ್ಧಿರ್ಭವಿತ್ರೀ ಮದನುಗ್ರಹಾತ್ ॥4॥

ಅಥವಾ ಮನೋರಥತೃತೀಯಾದಲ್ಲಿ ಯಾರು ಭಕ್ತಿಯಿಂದ ನಿನ್ನನ್ನು ಪೂಜಿಸು-ತ್ತಾರೋ, ಅವರೂ ಸಹ ತಮ್ಮ ಅಭಿಲಾಷೆಗಳನ್ನು ಪಡೆದುಕೊಳ್ಳುತ್ತಾರೆ. ಅವರಿಗೆ ನನ್ನ ಅನುಗ್ರಹವು ಪೂರ್ಣವಾಗಿರುತ್ತದೆ.

ನಾರೀ ವಾ ಪುರುಷೋ ವಾಪಿ ತ್ವದ್‌ವ್ರತಾಚರಣಾತ್ ಪ್ರಿಯೇ ।
ಮನೋರಥಾನಿಹ ಪ್ರಾಪ್ಯ ಜ್ಞಾನಮಂತೇ ಚ ಲಪ್ಸ್ಯತೇ ॥5॥

ಸ್ತ್ರೀಯಾಗಲೀ, ಪುರುಷರಾಗಲೀ ಈ ವ್ರತವನ್ನು ಕೈಗೊಂಡು ಭಕ್ತಿಯಿಂದ ಪೂಜಿಸುತ್ತಾರೋ, ಅವರ ಎಲ್ಲಾ ಮನೋರಥಗಳು ಈಡೇರುತ್ತವೆ. ಅಂತಿಮವಾಗಿ ಜ್ಞಾನವನ್ನು ಹೊಂದುತ್ತಾರೆ.

ದೇವೀ – ಮನೋರಥತೃತೀಯಾಯಾ ವ್ರತಂ ಕೀದೃಕ್ಕಥಾನಕಮ್ ।
ಕಿಂಫಲಂ ಕೈಃ ಕೃತಂ ನಾಥ ಕಥಯೈತತ್ಕೃಪಾಂ ಕುರು ॥6॥

ಪಾರ್ವತಿಯು ಮಹಾದೇವರನ್ನು ಪ್ರಶ್ನಿಸುತ್ತಾಳೆ - ಮನೋರಥತೃತೀಯಾದ

ವ್ರತದ ಕಥೆಯು ಏನೆಂಬುದನ್ನು ನನಗೆ ತಿಳಿಸಿರಿ. ಮನೋರಥತೃತೀಯಾವನ್ನು ಆಚರಣೆ ಮಾಡುವುದರಿಂದ ಯಾವ ಫಲವನ್ನು ಮನುಷ್ಯನು ಹೊಂದುತ್ತಾನೆ ? ಕೃಪೆಯಿಂದ ನನಗೆ ಅದೆಲ್ಲವನ್ನು ತಿಳಿಸಿರಿ.

**ಈಶ್ವರ – ಶ್ರುಣು ದೇವಿ ಯಥಾ ಪೃಷ್ಟಂ ಭವತ್ಯಾ ಭವತಾರಿಣಿ ।**
**ಮನೋರಥವ್ರತಂ ಚೈತದ್‌ಗುಹ್ಯಾದ್‌ಗುಹ್ಯತರಂ ಪರಮ್ ॥7॥**

ದೇವಿಯೇ! ನಿನ್ನ ಪ್ರಶ್ನೆಗೆ ಉತ್ತರಿಸುತ್ತೇನೆ. ಸಂಸಾರವನ್ನು ಪರಿಹರಿಸುವ ನೀನು ಯಾವ ಪ್ರಶ್ನೆಯನ್ನು ಮಾಡಿರುವೆಯೋ, ಅದು ಅತ್ಯಂತ ಶ್ರೇಷ್ಠವಾಗಿದೆ. ಮನೋರಥ ವ್ರತವು ಅತ್ಯಂತ ಗುಹ್ಯವಾದ ವ್ರತಗಳಲ್ಲಿ ಗುಹ್ಯತರವಾದ ವ್ರತವಾಗಿದೆ.

**ಪುಲೋಮತನಯಾ ಪೂರ್ವಂ ತತಾಪ ಪರಮಂ ತಪಃ ।**
**ಕಂಚಿನ್ಮನೋರಥಂ ತಪ್ತಂ ನ ಚಾಪ ತಪಸಃ ಫಲಮ್॥8॥**

ಪುಲೋಮನ ಮಗಳು ಹಿಂದೆ ಕಠಿಣವಾದ ತಪಸ್ಸನ್ನು ಆಚರಣೆ ಮಾಡಿದಳು. ಆದರೆ ಅವಳ ಮನೋರಥವು ಈಡೇರಲಿಲ್ಲ. ತಪಸ್ಸಿನ ಫಲವನ್ನು ಹೊಂದಲಿಲ್ಲ.

**ಅಪೂಜಯತ್ತತೋ ಮಾಂ ಸಾ ಭಕ್ತ್ಯಾ ಪರಮಯಾ ಮುದಾ ।**
**ಗೀತೇನ ಸರಹಸ್ಯೇನ ಕಲಕಂಠೀ ಕಲೇನ ಹಿ ॥9॥**

ಅನಂತರ ಆ ಪುಲೋಮನ ಮಗಳು ನನ್ನನ್ನು ಭಕ್ತಿಯಿಂದ, ಸಂತೋಷದಿಂದ ಪೂಜಿಸಿದಳು. ಕಲಕಂಠದಿಂದ ಉತ್ತಮವಾದ ಕಲೆಯಿಂದ ಹಾಡಿದಳು.

**ತದ್‌ಗಾನೇನಾತಿಸಂತುಷ್ಟೋ ಮೃದುನಾ ಮಧುರೇಣ ಚ ।**
**ಸುತಾಲೇನ ಸುರಂಗೇಣ ಧಾತುಮಾತ್ರಾಕಲಾವತಾ ॥10॥**

ಅವಳ ಗಾನದಿಂದ ನನಗೆ ಬಹಳ ಸಂತೋಷವಾಯಿತು. ಮೃದುವಾದ ಕಂಠ-ದಿಂದ ಕೂಡಿದ ಹಾಡು ತಾಳಮೇಳಗಳಿಂದ ಆಕರ್ಷಣೀಯವಾಗಿತ್ತು. ಇದರಿಂದ ನಾನು ಅವಳೆದುರು ಪ್ರಕಟನಾದೆನು.

**ಪ್ರೋವಾಚ ತ್ವಂ ವರಂ ಬ್ರೂಹಿ ಪ್ರಸನ್ನೋಽಸ್ಮಿ ಪುಲೋಮಜೇ ।**
**ಅನೇನ ಚ ಸುಗೀತೇನ ತ್ವನಯಾ ಲಿಂಗಪೂಜಯಾ ॥11॥**

ಪುಲೋಮನ ಮಗಳೇ ! ನಿನ್ನ ಸುಶ್ರಾವ್ಯವಾದ ಗೀತದಿಂದ, ನೀನು ಮಾಡಿದ ಲಿಂಗಪೂಜೆಯಿಂದ ನಾನು ಪ್ರಸನ್ನನಾಗಿರುವೆನು. ಏನು ವರಬೇಕೆಂದು ಕೇಳು, ಕೊಡುತ್ತೇನೆಂದು ಹೇಳಿದೆನು.

ಪುಲೋಮಾ– ಯದಿ ಪ್ರಸನ್ನೋ ದೇವೇಶ ತದಾ ಯೋ ಮೇ ಮನೋರಥಃ।
ತಂ ಪೂರಯ ಮಹಾದೇವ ಮಹಾದೇವೀಮಹಾಪ್ರಿಯ ॥12॥

ಪುಲೋಮಜಳು ಪ್ರಾರ್ಥಿಸಿದಳು. ದೇವೇಶನೇ ! ನನ್ನ ವಿಷಯದಲ್ಲಿ ನೀನು ಪ್ರಸನ್ನನಾಗಿದ್ದಲ್ಲಿ ನನ್ನ ಮನೋರಥವನ್ನು ಪೂರಣೆ ಮಾಡು. ಮಹಾದೇವಿಗೆ ಅತ್ಯಂತ ಪ್ರಿಯನಾದ ಮಹಾದೇವನೇ ! ನನ್ನ ಮನೋರಥವನ್ನು ಹೇಳುತ್ತೇನೆ.

ಸರ್ವದೇವೇಷು ಯೋ ಮಾನ್ಯಃ ಸರ್ವದೇವೇಷು ಸುಂದರಃ।
ಯಾಯಜೂಕೇಷು ಸರ್ವೇಷು ಯಃ ಶ್ರೇಷ್ಠಃ ಸೋಽಸ್ತು ಮೇ ಪತಿಃ ॥13॥

ಎಲ್ಲಾ ದೇವತೆಗಳಿಂದ ಮಾನ್ಯನಾಗಿರಬೇಕು. ಎಲ್ಲ ದೇವತೆಗಳಲ್ಲಿ ಅತಿ ಸುಂದರನಾಗಿರಬೇಕು. ಯಾಗ ಮಾಡುವವರಲ್ಲಿಯೂ ಅವನೇ ಶ್ರೇಷ್ಠನಾಗಿರಬೇಕು. ಅಂಥವನು ನನಗೆ ಪತಿಯಾಗಿ ದೊರಕಬೇಕು.

ಯಥಾಭಿಲಷಿತಂ ರೂಪಂ ಯಥಾಭಿಲಷಿತಂ ಸುಖಮ್।
ಯಥಾಭಿಲಷಿತಂ ಚಾಯುಃ ಪ್ರಸನ್ನೋ ದೇಹಿ ಮೇ ಭವ ॥14॥

ಅಭಿಲಾಷೆಗೆ ತಕ್ಕಂತೆ ರೂಪವಿರಬೇಕು. ಅಭಿಲಾಷೆಗೆ ತಕ್ಕಂತೆ ಅವನಿಂದ ಸುಖ ಹೊಂದಬೇಕು. ಅಭಿಲಾಷೆಯು ಪೂರ್ಣ ಹೊಂದುವಂತೆ ಅವನ ಆಯುಷ್ಯವಿರಬೇಕು. ಈ ವಿಷಯದಲ್ಲಿ ನನಗೆ ಪ್ರಸನ್ನನಾಗು.

ಯದಾ ಯದಾ ಚ ಪತ್ಯಾ ಮೇ ಸಂಗಃಸ್ಯಾದ್ಧೃತ್ಸುಖೇಚ್ಛಯಾ।
ತದಾ ತದಾ ಚ ತಂ ದೇಹಂ ತ್ಯಕ್ತ್ವಾಽನ್ಯಂ ದೇಹಮಾಪ್ನುಯಾಮ್ ॥15॥

ಯಾವಾಗ ನನಗೆ ಪತಿಯ ಜೊತೆ ಸಂಗ ಮಾಡಬೇಕೆಂಬ ಆಸೆಯು ಹೃದಯದಲ್ಲಿ ಹುಟ್ಟುತ್ತದೋ, ಆಗೆಲ್ಲಾ ಆ ದೇಹವನ್ನು ಬಿಟ್ಟು ಮತ್ತೊಂದು ಹೆಚ್ಚಿನ ಸುಖ ದೊರಕುವ ದೇಹವನ್ನು ನಾನು ಪಡೆಯಬೇಕು.

ಸದಾ ಚ ಲಿಂಗಪೂಜಾಯಾಂ ಮಮ ಭಕ್ತಿರನುತ್ತಮಾ।
ಭವ ಭೂಯಾದ್ಭವಹರ ಜರಾಮರಣಹಾರಿಣೀ ॥16॥

ಮತ್ತು ನಿನ್ನ ಲಿಂಗಪೂಜೆಯಲ್ಲಿ ನನಗೆ ಅನುತ್ತಮವಾದ ಭಕ್ತಿ ಯಾವಾಗಲೂ ಇರಬೇಕು. ಯಾವ ಲಿಂಗಪೂಜೆಯನ್ನು ಮಾಡುವುದರಿಂದ ಮುಪ್ಪು, ಮರಣ, ಸಂಸಾರಗಳೇ ಪರಿಹಾರವಾಗುತ್ತವೋ, ಅಂಥ ಲಿಂಗಪೂಜೆಯ ಭಾಗ್ಯ ನನಗೆ ಎಂದೂ ಕೂಡ ತಪ್ಪಬಾರದು.

ಭರ್ತುರ್ವ್ಯರ್ಯಯೇಽಪಿ ವೈಧವ್ಯಂ ಕ್ಷಣಮಾತ್ರಮಪೀಹ ನ ।
ಮಮ ಭಾವಿ ಮಹಾದೇವ ಪಾತಿವ್ರತ್ಯಂ ಚ ಯಾತು ಮಾ ॥17॥

ಗಂಡನು ನಷ್ಟನಾದರೂ ಕೂಡ ನಾನು ಅವನ ಜೊತೆಯೇ ಇರಬೇಕು. ಒಂದು ಕ್ಷಣವೂ ಕೂಡ ನನಗೆ ವೈಧವ್ಯ ಬರಬಾರದು. ಮಹಾದೇವನೇ ! ಪಾತಿವ್ರತ್ಯವು ನನ್ನನ್ನು ಎಂದೆಂದೂ ಬಿಟ್ಟಿರಬಾರದು.

ಸ್ಕಂದ – ಇಮಂ ಮನೋರಥಂ ತಸ್ಯಾಃ ಪೌಲೋಮ್ಯಾಃ ಪುರಸೂದನ ।
ಸಮಾಕರ್ಣ್ಯ ಕ್ಷಣಂ ಸ್ಥಿತ್ವಾ ಪ್ರಾಹೇಶೋ ವಿಸ್ಮಯಾನ್ವಿತಃ ॥18॥

ಪುಲೋಮನ ಮಗಳ ಈ ಮನೋರಥವನ್ನು ಕೇಳಿ ಅತ್ಯಂತ ಆಶ್ಚರ್ಯದಿಂದ ಒಂದು ಕ್ಷಣ ಮಹಾದೇವರು ಹಾಗೆಯೇ ನಿಂತುಬಿಟ್ಟರು. ನಂತರ ಹೀಗೆ ಹೇಳುತ್ತಾರೆ-

ಈಶ್ವರ – ಪುಲೋಮಕನ್ಯೇ ಯಶ್ಚೈಷ ತ್ವಯಾಽಕಾರಿ ಮನೋರಥಃ ।
ಲಪ್ಸ್ಯಸೇ ವ್ರತಚರ್ಯಾತಸ್ತತ್ಕುರುಷ್ವ ಜಿತೇಂದ್ರಿಯಾ ॥19॥

ಈಶ್ವರನು ಹೇಳಿದನು - ಪುಲೋಮನ ಕನ್ಯೆಯೇ ! ನಿನ್ನ ಮನಸ್ಸಿನಲ್ಲಿ ಈ ಯಾವ ಮನೋರಥ ಇದೆಯೋ, ಅದನ್ನು ಪಡೆಯಬೇಕೆಂದರೆ ನಾನು ಹೇಳುವ ಈ ಉತ್ತಮವಾದ ವ್ರತವನ್ನು ನೀನು ಆಚರಣೆ ಮಾಡಬೇಕು. ಜಿತೇಂದ್ರಿಯಳಾಗಿದ್ದು, ಬ್ರಹ್ಮಚರ್ಯದಲ್ಲಿದ್ದು ಈ ವ್ರತವನ್ನು ಆಚರಿಸು.

ಮನೋರಥತೃತೀಯಾಯಾಶ್ಚರಣೇನ ಭವಿಷ್ಯತಿ ।
ತತ್ಪ್ರಾಪ್ತಯೇ ವ್ರತಂ ವಕ್ಷ್ಯೇ ತದ್ವಿಧೇಹಿ ಯಥೋದಿತಮ್ ॥20॥

ಮನೋರಥ ತೃತೀಯಾವನ್ನು ಆಚರಣೆ ಮಾಡುವುದರಿಂದ ನಿನ್ನ ಅಪೇಕ್ಷೆಯು ಈಡೇರುತ್ತದೆ. ನಿನ್ನ ಮನೋರಥದ ಪ್ರಾಪ್ತಿಗಾಗಿ ಆ ವ್ರತವನ್ನು ಪುರಾಣದಲ್ಲಿ ಹೇಳಿದಂತೆ ನಿನಗೆ ತಿಳಿಸುತ್ತೇನೆ.

ತೇನ ವ್ರತೇನ ಚೀರ್ಣೇನ ಮಹಾಸೌಭಾಗ್ಯದೇನ ತು ।
ಅವಶ್ಯಂ ಭವಿತಾ ಬಾಲೇ ತವ ಚೈವಂ ಮನೋರಥಃ॥21॥

ಆ ವ್ರತವನ್ನು ಆಚರಣೆ ಮಾಡುವುದರಿಂದ ಮಹಾಸೌಭಾಗ್ಯವು ಪ್ರಾಪ್ತವಾಗುತ್ತದೆ. ಬಾಲೇ ! ಅವಶ್ಯವಾಗಿ ನಿನ್ನ ಮನೋರಥವು ಈಡೇರುತ್ತದೆ.

ಪುಲೋಮಕನ್ಯಾ – ಕಾರುಣ್ಯವಾರಿಧೇ ಶಂಭೋ ಪ್ರಣತಪ್ರಾಣಿಸರ್ವದ ।
ಕಿಂನಾಮಾ ಚಾಥ ಕಾ ಶಕ್ತಿಃ ಕಾ ಪೂಜ್ಯಾ ತತ್ರ ದೇವತಾ ॥22॥

ಪುಲೋಮಕನ್ಯೆಯು ಪುನಃ ಪ್ರಶ್ನಿಸುತ್ತಾಳೆ - ಕರುಣಾಸಮುದ್ರನೇ ! ಶಂಭುವೇ ! ಪ್ರಣತಪ್ರಾಣಿಗಳ ಸರ್ವವರಪ್ರದನೇ ! ಆ ವ್ರತದ ಹೆಸರೇನು? ಅದರ ಶಕ್ತಿಯೇನು? ಯಾರನ್ನು ಆ ವ್ರತದಲ್ಲಿ ಪೂಜಿಸಬೇಕು? ಯಾವ ದೇವತೆ ಆರಾಧ್ಯಳಾಗಿದ್ದಾಳೆ?

ಕದಾ ಚ ತದ್ವಿಧಾತವ್ಯಮಿತಿಕರ್ತವ್ಯತಾ ಚ ಕಾ ।
ಇತ್ಯಾಹಕರ್ಣ್ಯ ಶಿವೋ ವಾಕ್ಯಂ ತಾಂ ತು ಪ್ರಣಿಜಗಾದ ಹ ॥23॥

ಯಾವ ಕಾಲದಲ್ಲಿ ಆ ವ್ರತವನ್ನು ಆಚರಿಸಬೇಕು? ಯಾರು ಆಚರಿಸಬೇಕು? ಇವೇ ಮೊದಲಾದ ಪ್ರಶ್ನೆಗಳನ್ನು ಮಾಡಿದಳು, ಶಿವನು ಅವಳ ವಾಕ್ಯವನ್ನು ಕೇಳಿ ಉತ್ತರವನ್ನು ನೀಡಿದನು.

ಈಶ್ವರಃ – ಮನೋರಥತೃತೀಯಾಯಾ ವ್ರತಂ ಪೌಲೋಮಿ ತಚ್ಛುಭಮ್ ।
ಪೂಜ್ಯಾ ವಿಶ್ವಭುಜಾ ಗೌರೀ ಭುಜವಿಂಶತಿಶಾಲಿನೀ ॥24॥

ಪೌಲೋಮಿಯೇ ! ಮನೋರಥತೃತೀಯಾ ವ್ರತವು ಅತ್ಯಂತ ಶುಭಪ್ರದವಾಗಿದೆ. ವಿಶ್ವವನ್ನೇ ಧರಿಸಿದ ಇಪ್ಪತ್ತು ಭುಜಗಳನ್ನು ಹೊಂದಿದ, ಪೂಜ್ಯಳಾದ ಗೌರೀಯು ಇದರ ಆರಾಧ್ಯದೇವತೆಯಾಗಿದ್ದಾಳೆ.

ವರದಾಭಯಹಸ್ತಶ್ಚ ಸಾಕ್ಷಸೂತ್ರಃ ಸಮೋದಕಃ ।
ದೇವ್ಯಾಃ ಪುರಸ್ತಾದ್-ವ್ರತಿನಾ ಪೂಜ್ಯ ಆಶಾವಿನಾಯಕಃ ॥25॥

ವರದ, ಅಭಯ, ಹಸ್ತಗಳುಳ್ಳ ಅಕ್ಷಸೂತ್ರ ಮೋದಕಗಳನ್ನು ಧರಿಸಿದ ದೇವಿಯ ಮುಂದೆ ವ್ರತಿಯಾದವನು ಮೊದಲು ವಿನಾಯಕನನ್ನು ಪೂಜೆ ಮಾಡಬೇಕು.

ಚತುರ್ಭುಜಶ್ಚಾರುನೇತ್ರಃ ಸರ್ವಸಿದ್ಧಿಕರಃ ಪ್ರಭುಃ ।

ಚತುರ್ಭುಜನಾದ ಸುಂದರವಾದ ಕಣ್ಣುಗಳುಳ್ಳ ಸರ್ವಸಿದ್ಧಿಯನ್ನು ಉಂಟು-ಮಾಡುವ ವಿನಾಯಕನು ಸಂಪೂರ್ಣವಾಗಿ ಅನುಗ್ರಹ ಮಾಡುವನು.

ಚೈತ್ರಶುಕ್ಲದ್ವಿತೀಯಾಯಾಂ ಕೃತ್ವಾ ವೈ ದಂತಧಾವನಮ್ ॥26॥
ಸಾಯಂತನೀಂ ಚ ನಿರ್ವರ್ತ್ಯ ನಾತಿತೃಪ್ತ್ಯಾ ಭುಜಿಕ್ರಿಯಾಮ್ ।
ನಿಯಮಂ ಚೇತಿ ಗೃಹ್ಣೀಯಾಜ್ಜಿತಕ್ರೋಧೋ ಜಿತೇಂದ್ರಿಯಃ ॥27॥

ಚೈತ್ರಮಾಸದ ಶುಕ್ಲಪಕ್ಷದ ದ್ವಿತೀಯಾ ದಿವಸ ದಂತಧಾವನವನ್ನು ಮಾಡಿ, ಶುದ್ಧರಾಗಬೇಕು. ರಾತ್ರಿಯಲ್ಲಿ ಬಹಳ ತೃಪ್ತಿಯಾಗುವಷ್ಟು ಊಟವನ್ನು ಮಾಡ-

ಬಾರದು. ನಿಯಮದಲ್ಲಿರಬೇಕು. ಇಂದ್ರಿಯನಿಗ್ರಹವನ್ನು ಹೊಂದಿರಬೇಕು. ಯಾರ-ಲ್ಲಿಯೂ ಸಿಟ್ಟು ಮಾಡಬಾರದು.

ಸಂತ್ಯಕ್ತಾಸ್ಪೃಶ್ಯಸಂಸ್ಪರ್ಶಃ ಶುಚಿಸ್ತದ್‌ಗತಮಾನಸಃ ।
ಪ್ರಾತರ್ವ್ರತಂ ಚರಿಷ್ಯಾಮಿ ಮಾತರ್ವಿಶ್ವಭುಜೇಽನಘೇ ॥28॥
ವಿಧೇಹಿ ತತ್ರ ಸಾನ್ನಿಧ್ಯಂ ಮನ್ಮನೋರಥಸಿದ್ಧಯೇ ।
ನಿಯಮಂ ಚೇತಿ ಸಂಗೃಹ್ಯ ಸ್ವಪೇದ್ರಾತ್ರೌ ಶುಭಂ ಸ್ಮರನ್ ॥29॥

ಅಸ್ಪೃಶ್ಯವಾದದ್ದನ್ನು ಸರ್ವಥಾ ಮುಟ್ಟಬಾರದು. ಶುಚಿಯಾಗಿರಬೇಕು. ದೇವಿ-ಯಲ್ಲಿಯೇ ಮನಸ್ಸಿಟ್ಟಿರಬೇಕು. ಪ್ರಾತಃಕಾಲದಲ್ಲಿ ಬೇಗ ಎದ್ದು, ಜಗತ್ತಿನ ತಾಯಿ-ಯನ್ನು ಪೂಜಿಸುತ್ತೇನೆ. ಆದರಿಂದ ನನ್ನ ಮನೋರಥವನ್ನು ಈಡೇರಿಸಿಕೊಳ್ಳುತ್ತೇನೆ. ಹೀಗೆ ನಿಯಮಪೂರ್ವಕವಾಗಿ ಸಂಕಲ್ಪವನ್ನು ಮಾಡಿ, ರಾತ್ರಿಯ ಕಾಲ ಶುಭವನ್ನು ಚಿಂತಿಸುತ್ತಾ ಮಲಗಬೇಕು.

ಪ್ರಾತರುತ್ಥಾಯ ಮೇಧಾವೀ ವಿಧಾಯಾವಶ್ಯಕಂ ವಿಧಿಮ್ ।
ಶೌಚಮಾಚಮನಂ ಕೃತ್ವಾ ದಂತಕಾಷ್ಠಂ ಸಮಾದದೇತ್ ॥30॥
ಅಶೋಕವೃಕ್ಷಸ್ಯ ಶುಭಂ ಸರ್ವಶೋಕನಿಶಾತನಮ್ ।
ನಿತ್ಯಂತನಂ ಚ ನಿಷ್ಪಾದ್ಯ ವಿಧಿಂ ವಿಧಿವಿದಾಂ ವರ ॥31॥
ಸ್ನಾತ್ವಾ ಶುದ್ಧಾಂಬರಃ ಸಾಯಂ ಗೌರೀಪೂಜಾಂ ಸಮಾಚರೇತ್॥32॥

ಮರುದಿವಸ ಬ್ರಾಹ್ಮೀಮುಹೂರ್ತದಲ್ಲಿ ಎದ್ದೇಳಬೇಕು. ಶೌಚಾಚಾರವನ್ನು ಮುಗಿಸಿ, ಶೌಚಾಚಮನವನ್ನು ಮಾಡಿ, ದಂತಕಾಷ್ಠದಿಂದ ಹಲ್ಲುಗಳನ್ನು ಸ್ವಚ್ಛ-ಗೊಳಿಸಬೇಕು. ಅಶೋಕವೃಕ್ಷದ ಬಳಿ ತೆರಳಿ ನಮಿಸಿ, ಹೂವುಗಳನ್ನು ಸಂಗ್ರಹಿಸಬೇಕು. ವಿಧಿಪ್ರಕಾರವಾಗಿ ಸ್ನಾನವನ್ನು ಮಾಡಿ, ಶುದ್ಧವಾದ ಬಟ್ಟೆಯನ್ನುಟ್ಟು ಗೌರೀಪೂಜೆಯನ್ನು ಪ್ರಾರಂಭ ಮಾಡಬೇಕು.

ಅತ್ಯಂತ ಭಕ್ತಿ, ಶ್ರದ್ಧೆಗಳಿಂದ ವಿಧಿಪ್ರಕಾರವಾಗಿ ಗೌರೀಪೂಜೆಯನ್ನು ಪುರೋ-ಹಿತರನ್ನು ಕರೆಸಿ ಆಚರಿಸಬೇಕು.

ಪತ್ನೀಂ ಮನೋರಮಾಂ ಕುಲ್ಯಾಂ ಮನೋವೃತ್ತ್ಯನುಸಾರಿಣೀಮ್ ।
ತಾರಿಣೀಂ ದುಃಖಸಂಸಾರಸಾಗರಸ್ಯ ಪತಿವ್ರತಾಮ್ ॥63॥
ಕುರ್ವನ್ನೇತದ್‌ವ್ರತಂ ವರ್ಷಂ ಕುಮಾರಃ ಪ್ರಾಪ್ನುಯಾತ್ ಸ್ಫುಟಮ್ ।

ಪುರುಷನಾದವನು ಈ ವ್ರತವನ್ನು ಆಚರಣೆ ಮಾಡುವುದರಿಂದ ಮನೋ-ರಮೆಯಾದ ತನ್ನ ಮನೋವೃತ್ತಿಗೆ ಅನುಸಾರಿಯಾದ ಸತ್ಕುಲ ಪ್ರಸೂನಳಾದ, ದುಃಖಸಂಸಾರದ ಸಾಗರದಿಂದ ದಾಟಿರುವ ಪತಿವ್ರತೆಯಾದ ಉತ್ತಮ ಸ್ತ್ರೀಯನ್ನು ಪಡೆಯುತ್ತಾನೆ.

ಕುಮಾರೀ ಪತಿಮಾಪ್ನೋತಿ ಸ್ವಾಢ್ಯಂ ಸರ್ವಗುಣಾಧಿಕಮ್ ॥64॥
ಸುವಾಸಿನೀ ಲಭೇತ್‌ಪುತ್ರಾನ್ ಪತ್ಯುಃ ಸೌಖ್ಯಮಖಂಡಿತಮ್ ।
ದುರ್ಭಾಗಾ ಸುಭಗಾ ಸ್ಯಾಚ್ಚ ಧನಾಢ್ಯಾ ಸ್ಯಾದ್ದರಿದ್ರಿಣೀ ॥65॥

ಒಂದು ವರ್ಷಗಳ ಕಾಲ ಈ ವ್ರತವನ್ನು ಆಚರಿಸಿದರೆ ಸುಪುತ್ರನ ಜನನವಾಗುತ್ತದೆ. ಕುಮಾರಿಯಾದವಳು ಈ ವ್ರತವನ್ನು ಆಚರಣೆ ಮಾಡುವುದರಿಂದ, ಸರ್ವಗುಣಾಧಿಕನಾದ ಎಲ್ಲಾ ರೀತಿಯಿಂದಲೂ ಶ್ರೀಮಂತನಾದ ಪತಿಯನ್ನು ಪಡೆಯುತ್ತಾಳೆ. ಸುವಾಸಿನಿಯು ಈ ವ್ರತವನ್ನು ಆಚರಣೆ ಮಾಡುವುದರಿಂದ ಸುಪುತ್ರರನ್ನು ಪಡೆ-ಯುತ್ತಾಳೆ. ಮತ್ತು ಪತಿಗೆ ಉತ್ತಮ ಆರೋಗ್ಯಭಾಗ್ಯವು ಪ್ರಾಪ್ತವಾಗುತ್ತದೆ. ದೌರ್ಭಾ-ಗ್ಯವಂತಳು, ಸೌಭಾಗ್ಯಶಾಲಿಯಾಗುತ್ತಾಳೆ. ದರಿದ್ರಳಾದವಳು ಧನವುಳ್ಳವಳಾಗುತ್ತಾಳೆ.

ವಿಧವಾಪಿ ನ ವೈಧವ್ಯಂ ಪುನರಾಪ್ನೋತಿ ಕುತ್ರಚಿತ್ ।
ಗುರ್ವಿಣೀ ಚ ಶುಭಂ ಪುತ್ರಂ ಲಭತೇ ಸುಚಿರಾಯುಷಮ್ ॥66॥
ಬ್ರಾಹ್ಮಣೋ ಲಭತೇ ವಿದ್ಯಾಂ ಸರ್ವಸೌಭಾಗ್ಯದಾಯಿನೀ ।
ರಾಜ್ಯಭ್ರಷ್ಟೋ ಲಭೇದ್ರಾಜ್ಯಂ ವೈಶ್ಯೋ ಲಾಭಂ ಚ ವಿಂದತಿ ॥67॥

ವಿಧವಾ ಸ್ತ್ರೀ ಇನ್ನೆಂದೂ ವೈಧವ್ಯವನ್ನು ಹೊಂದುವುದಿಲ್ಲ. ಗರ್ಭಿಣಿಯಾದವಳು ಆಯುಷ್ಯವಂತನಾದ ಒಳ್ಳೆಯ ಮಗುವನ್ನು ಪ್ರಸವಿಸುತ್ತಾಳೆ. ಬ್ರಾಹ್ಮಣನು ಎಲ್ಲಾ ವಿದ್ಯೆಯನ್ನು ಪಡೆದುಕೊಳ್ಳುತ್ತಾನೆ. ಆದರಿಂದ ಎಲ್ಲ ಸೌಭಾಗ್ಯಗಳನ್ನು ತನ್ನ ವಶವನ್ನಾಗಿ ಮಾಡಿಕೊಳ್ಳುತ್ತಾನೆ. ರಾಜ್ಯಭ್ರಷ್ಟನಾದ ರಾಜನು ಪುನಃ ರಾಜ್ಯವನ್ನು ಹೊಂದುತ್ತಾನೆ. ವೈಶ್ಯನು ವ್ಯಾಪಾರದಲ್ಲಿ ಔನ್ನತ್ಯವನ್ನು ಹೊಂದುತ್ತಾನೆ.

ಚಿಂತಿತಂ ಲಭತೇ ಶೂದ್ರೋ ವ್ರತಸ್ಯಾಸ್ಯ ನಿಷೇವಣಾತ್ ।
ಧರ್ಮಾರ್ಥೀ ಧರ್ಮಮಾಪ್ನೋತಿ ಧನಾರ್ಥೀ ಧನಮಾಪ್ನುಯಾತ್ ॥68॥

ಕಾಮೀ ಕಾಮಾನವಾಪ್ನೋತಿ ಮೋಕ್ಷಾರ್ಥೀ ಮೋಕ್ಷಮಾಪ್ನುಯಾತ್ ।
ಯೋ ಯೋ ಮನೋರಥೋ ಯಸ್ಯ ಸ ತಂ ತಂ ವಿಂದತೇ ಧ್ರುವಮ್ ॥69॥
ಮನೋರಥತೃತೀಯಾಯಾ ವ್ರತಸ್ಯ ಚರಣಾದ್ವ್ರತೀ ॥70॥

॥ ಇತಿ ಸ್ಕಾಂದಪುರಾಣೇ ಕಾಶೀಖಂಡೇ ಉತ್ತರಾರ್ಧೇ ಅಶೀತಿತಮೋऽಧ್ಯಾಯೇ ಚೈತ್ರಶುಕ್ಲತೀಯಾಯಾಂ ಮನೋರಥತೃತೀಯಾವ್ರತಾಖ್ಯಾನಂ ಸಂಪೂರ್ಣಮ್ ॥

ಶೂದ್ರನು ತನ್ನ ಮನೋಭೀಷ್ಟಗಳನ್ನು ಪೂರೈಸಿಕೊಳ್ಳುತ್ತಾನೆ. ಧರ್ಮದ ಆಚರಣ ಶೀಲನು ಧರ್ಮವನ್ನು ಪಡೆಯುತ್ತಾನೆ. ಧನಾರ್ಥಿಯು ಧನವನ್ನು ಹೊಂದುತ್ತಾನೆ, ಕಾಮಿಯು ಕಾಮನೆಗಳನ್ನು ಪೂರೈಸಿಕೊಳ್ಳುತ್ತಾನೆ. ಮೋಕ್ಷಾರ್ಥಿಯು ಮೋಕ್ಷವನ್ನು ಹೊಂದುತ್ತಾನೆ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಯಾವ ವ್ಯಕ್ತಿಗೆ ಏನು ಮನೋ-ರಥಗಳಿರುತ್ತವೋ, ಅದೆಲ್ಲವೂ ಈ ವ್ರತದ ಆಚರಣೆಯಿಂದ ಪ್ರಾಪ್ತವಾಗುತ್ತವೆ. ಆದ್ದರಿಂದಲೇ ಇದಕ್ಕೆ ಮನೋರಥತೃತೀಯಾ ಎಂಬ ಹೆಸರು ಸಾರ್ಥಕವಾಗುತ್ತದೆ. ಇಲ್ಲಿಗೆ ಸ್ಕಾಂದಪುರಾಣದ ಕಾಶೀಖಂಡದ ಉತ್ತರಾರ್ಧದಲ್ಲಿ ಎಂಬತ್ತನೆಯ ಅಧ್ಯಾಯದಲ್ಲಿ ಚೈತ್ರಶುಕ್ಲತೃತೀಯಾದಲ್ಲಿ ಮಾಡಬೇಕಾದ ಮನೋರಥತೃತೀಯಾದ ಆಖ್ಯಾನವು ಸಂಪೂರ್ಣವಾಯಿತು.

## ಚೈತ್ರಗೌರಿಯ ಹಾಡು

ಕೋಲು ಕೋಲೆನ್ನ ಕೋಲೆ, ಕೋಲು ಕೋಲೆನ್ನ ಕೋಲೆ । ಕೋಲು ಶ್ರೀಲಕ್ಷ್ಮೀವೇಂಕಟನ್ನ ಬಲಗೊಂಬೆ ಕೋಲೆ ॥ಪ॥ ಚೈತ್ರ ಶುದ್ಧ ತ್ರಿತೀಯಾದಿ ಮಿತ್ರೆ ಗೌರಿಯು ತನ್ನ । ಅರ್ಥಿಯ ತೌರೂರಿಗೆಂದು ಬರುತಾಳೆ ಕೋಲೆ । ಅರ್ಥಿಯ ತೌರೂರಿಗೆಂದು ಮುತ್ತಿನ ಅಂದಣವನೇರಿ । ಪುತ್ರ ಗಣಪ ಸ್ಕಂದರನ್ನು ಎತ್ತಿಕೊಂಡು ಕೋಲೆ ॥1॥ ಪುತ್ರ ಗಣಪ ಸ್ಕಂದರನ್ನು ಎತ್ತಿಕೊಂಡು ಬರುವಾಗ । ಛತ್ರ ಚಾಮರವ ಪಿಡಿದು ಸೇವಕರು ಕೋಲೆ । ಛತ್ರ ಚಾಮರವ ಪಿಡಿದು ಭಕ್ತಿಯಿಂದ ಸೇವಕರು । ಮತ್ತೆ ಬಹುಪರಾಕವನು ಹೇಳುವರು ಕೋಲೆ ॥2॥ ವರುಷ ಪ್ರಾರಂಭದಲ್ಲಿ ಗಿರಿಜೆಯನು ಪೂಜಿಸಲು । ಸರಸದ ಉಯ್ಯಾಲೆಯಲಿ । ಗೌರಿಯನಿಟ್ಟು ಕೋಲೆ । ಗಿರಿಯ ಮೇಲೆ ಗೌರಿಯನಿಟ್ಟು । ವರಧಾನ್ಯಪೈರು ಬೆಳಸಿ । ಅರಿಶಿನದೋಕುಳಿ ತುಂಬಿ ಕಳಶವಿಡು ಕೋಲೆ ॥3॥ ಮುದದಿ ಕಳಶ ಕನ್ನಡಿಯ ಪದುಮ ನಯನೆಯರೆಲ್ಲ ಪಿಡಿದು ಎದುರುಗೊಂಡು ಗೌರಮ್ಮಗೆ ಕದಲಾರುತಿಯ ಕೋಲೆ । ಎದುರುಗೊಂಡು

ಗೌರಮ್ಮಗೆ ಕದಲಾರುತಿ ಎತ್ತುವಾಗ । ಸುದತಿ ಗೌರಮ್ಮ ನಗುತಾಳೆ ಕೋಲೆ ॥4॥ ಸಿರಿ ವಸಂತ ಕಾಲವಿದು । ಅರಳು ಮಲ್ಲಿಗೆ ವನದಿ । ಹರದಿ ಗೌರಮ್ಮಗೆ ಅರಮನೆಯು ಕೋಲೆ । ಅರಮನೆಯ ಸುತ್ತುಮುತ್ತು । ಹರಿವ ತಿಳಿ ನೀರ ಝರಿ । ಮರಿ ಪಕ್ಷಿ ಸ್ವರವ ಕೇಳು ಕೋಲೆ ॥5॥ ಮಲ್ಲಿಗೆ ತೈಲವ ತಂದು । ನಲ್ಲೆ ಗೌರಿಗೆ ಹಚ್ಚಿ । ಸಲ್ಲಲಿತ ಪನ್ನೀರು ಎರೆಯುವೆನು ಕೋಲೆ । ಸಲ್ಲಲಿತ ಪನ್ನೀರು ಚೆಲ್ವೆ ಶಂಕರಿಗೆರೆದು । ಪಾಲ್ಮಡ್ಡಿ ಸುವಾಸಿತ ಧೂಪ ಹಾಕಿ ಕೋಲೆ ॥6॥ ಪೀತಾಂಬರ ನೆರಿಗೆ ಕಟ್ಟಿ । ಮುತ್ತಿನ ಕಂಚುಕ ತೊಡಿಸಿ । ರತ್ನ ಕೆತ್ತಿದೆ ಸವಾ । ಭರಣವಿಟ್ಟು ಕೋಲೆ । ಹತ್ತು ಬೆರಳಿಗೆ ದಿವ್ಯ ಚಿತ್ರದುಂಗುರವಿಟ್ಟು । ಮತ್ತೆ ಸರಪಳಿ ಕಟ್ಟಿ ಅಲಂಕಾರ ಕೋಲೆ ॥7॥ ಚಂದ್ರ ಮುರುವು ಚಳ ತುಂಬು । ಛಂದದ ಮುತ್ತಿನ ಓಲೆ । ಕುಂದಣ ಕೆತ್ತಿದ ಬುಗುಡಿ ಬಾವಲಿಯು ಕೋಲೆ । ಸುಂದರಿ ಗೌರಮ್ಮಗೆ ಅಂದದ ಬುಲಾಕು ಮುಖಿರೆ । ಇಂದುವ ಪೋಲುವ ಮುಖಕೆ ಕುಂಕುಮವು ಕೋಲೆ ॥8॥ ಚಂದ್ರನ್ನ ಪೋಲುವ ಮುಖಕೆ । ಗಂಧ ಕಸ್ತೂರಿ ತಿಲಕ । ನಂದಿವಾಹನನ ಸತಿಗೆ । ಅಡ್ಡಿಕೆಯು ಕೋಲೆ । ನಂದಿವಾಹನನ ಸತಿಗೆ । ಚಂದ್ರಹಾರ ಕಾಸಿನ ಸರ । ಸಿಂಧೂರ ಗಮನೆ ಸತಿಗೆ ಸಾಲು ಮುತ್ತಿನಹಾರ ಕೋಲೆ ॥9॥ ಹರಳಿನಡ್ಡಿಕೆ ಕಂಠಿ । ಸರಿಗೆ, ಸಮಜೋಡು ತಾಯ್ತ । ಸರವು ನವರತ್ನಪಟ್ಟಿ । ಒಡ್ಯಾಣವು ಕೋಲೆ । ಹರಡಿ ಹಸ್ತ ಕಡಗ ನಾಗಮುರುಗಿ ವೆಂಕಿ । ಪೌಂಛಕಡಗ, ದ್ವಾರ ಕಡಗ ಗೀರುಬಳೆ । ತೋಡ್ಯವಿಟ್ಟು ಕೋಲೆ ॥10॥ ಘಿಲ್ಲು ಘಿಲ್ಲ ಗೆಜ್ಜೆ ಪೆಂಡೆ । ಉಲ್ಲರುಳಿ ಪೈಝಣಿ । ಪಿಲ್ಲೆ ಕಾಲುಂಗುರವು ಮೆಂಟಕಿಯ ಕೋಲೆ । ಪಿಲ್ಲೆ ಕಾಲುಂಗುರದ ಚೆಲ್ವ ಪಾದಗಳಿಗೆ ನಾನು । ಉಲ್ಲಾಸದಿ ಚಾವಡಿಯ ಬರೆಯುವೆನು ಕೋಲೆ ॥11॥ ಅರಿಶಿನ ಚಾವಡಿಯಲ್ಲಿ ಹರುಷದಿ ರೇಖೆಯ ತಿದ್ದಿ । ಅರಸಿ ಶಂಕರಿಗೀಗ ಎರಗುವೆನು ಕೋಲೆ । ಹೆರಳು ಬಂಗಾರ ಕಟ್ಟಿ । ಹರಳಿನ ರಾಗಟೆ ಹಾಕಿ । ತಿರಗಣೆಯ ಹರಳು ಹೂವು ಅರಳೆಲೆಯು ಕೋಲೆ ॥12॥ ತಿರಗಣೆಯ ಹರಳು ಹೂವು ಅರಳು ಮಲ್ಲಿಗೆ ಜಾಜಿ । ಸುರಗಿ ಸೇವಂತಿಗೆಯ ದಂಡೆ ಮುಡಿಸಿ ಕೋಲೆ । ಸುರಗಿ ಸೇವಂತಿಗೆಯು । ಸುರ ಪಾರಿಜಾತದ ಪುಷ್ಪ । ಅರಳಿದ ಚಂಪಕದ ಮಾಲೆ ಸೂಸುವವು ಕೋಲೆ ॥13॥ ಹೆಸರು ಕಡಲೆಬೇಳೆಯ ಹಸಿಯ ಕೋಸಂಬರಿಯು । ಹಸನಾದ ಮಜ್ಜಿಗೆ ಪಾನಕವು ಕೋಲೆ । ಹಸನಾದ ಮಜ್ಜಿಗೆಯ ಪಾನಕವು ಮಾವಿನಣ್ಣು ವೀಳ್ಯ । ಕುಸುಮಗಂಧಿ ಗೌರಮ್ಮಗೆ ನೈವೇದ್ಯವು ಕೋಲೆ

॥14॥ ಪಾನಕ ಕೋಸಂಬರಿಯು ಮಜ್ಜಿಗೆ । ಜಾಣೆ ತ್ರಿಪುರ ಸುಂದರಿಗೆ । ಎಲೆ ಅಡಿಕೆಯ ತಾಂಬೂಲ । ಫಲವಿಡುವೆ ಕೋಲೆ । ಜೇನುತುಪ್ಪ ಮಾವಿನ ಫಲವಿಟ್ಟು ಜಾನಕಿಕಾಂತನ । ಮನದಲ್ಲಿ ನೆನೆಯುವೆನು ಕೋಲೆ ॥15॥ ಸ್ವಚ್ಛವಾದ ಧಾನ್ಯಗಳ ತುಂಬಿ । ಬಿಚ್ಚೋಲೆ ಕರಿಮಣಿಗಳ ಹಾಕಿ । ಹಚ್ಚ ಹಸುರಿನ ವಸ್ತ್ರಗಳಿರಿಸಿ ಕೋಲೆ । ಹಚ್ಚ ಹಸುರಿನ ವಸ್ತ್ರಗಳ ಇರಿಸಿ । ಮುಚ್ಚು ಮರದ ಬಾಗಿಣಗಳ ಕೊಡುವೆನು ಕೋಲೆ ॥16॥ ಕರಿಮಣಿ ಬಿಚ್ಚೋಲೆ ಕನ್ನಡಿ । ಸರ್ವಧಾನ್ಯಗಳ ತುಂಬಿ । ಮರದ ಬಾಗಿಣ ವಸ್ತ್ರ ದಕ್ಷಿಣೆಯು ಕೋಲೆ । ಕರವ ಪಿಡಿಯೆ ತಾಯಿ ಗೌರಿ । ಹರುಷದಿ ಬಾಗಿಣ ಕೊಡುವೆ । ಸ್ಥಿರವಾಗಿ ಮುತ್ತೈದೆ ತನವ । ಎನಗೆ ನೀಡು ಕೋಲೆ ॥17॥ ಶುಕ್ರಮಂಗಳವಾರಗಳಲ್ಲಿ । ಸುವಾಸಿನಿಯರ ಕರೆದು । ಅಕ್ಕರೆಯಿಂದ ಸುವಾಸಿನಿಯರಿಗೆ । ಸಕ್ಕರೆಕ್ಷೀರ ಕೋಲೆ । ಸಕ್ಕರೆ ಕ್ಷೀರ ಪಕ್ವಾನ್ನವನುಣಿಸಿ । ಅಕ್ಕ ಪಾರ್ವತಿ ನಿನಗೆ ಅರ್ಪಿಸುವೆನು ಕೋಲೆ ॥18॥ ತೂಗುಮಣೆ ಮಂಚದಲ್ಲಿ ಭೋಗದ ಹಾಸಿಗೆ ಹಾಸಿ । ನಾಗಸಂಪಿಗೆ ಹೂವು ವರಗನಿಟ್ಟು ಕೋಲೆ । ನಾಗಸಂಪಿಗೆ ಒರಗು ಭೋಗಿ ಭೂಷಣನ ಕೂಡಿ । ಭೋಗಿಭೂಷಣ ಗೌರಿಯ ತೂಗುವೆನು ಕೋಲೆ ॥19॥ ತಿಂಗಳು ಮೀರಲು ಅಂಗನೆ ನಿನ್ನಯ । ಹೊಂಗಳಶವ ಕೊಂತಿಗಳ ಸಮೇತ । ಮಂಗಳ ಜಲದಿ ವಿಸರ್ಜಿಸಿ ಕೋಲೆ । ಮಂಗಳ ಜಲದಿ ವಿಸರ್ಜಿಸಿ । ಶ್ರೀಹರಿ ರಂಗ ನಾಗಶಯನ ನಿನಗರ್ಪಿಸುವೆನು ಕೋಲೆ ॥20॥ ಮೂರು ತದಿಗೆಯ ಈ ವ್ರತ । ಭಾರಿ ಭಕ್ತಿಯಿಂದ ಗೈಯೆ । ಮಾರ ಹರನಾರ್ಧಾಂಗಿ ಒಲಿಯುವಳು ಕೋಲೆ । ಮೂರನೆಯ ಅಕ್ಷಯತದಿಗೆ । ಭಾರಿ ಔತಣದೂಟ । ಗೌರಿ ಹೆಸರಿನಲ್ಲ ಮುತ್ತೈದೆಗಿಡು ಕೋಲೆ ॥21॥ ಹರಿಯೇ ಸರ್ವೋತ್ತಮನು । ಸಿರಿಯೇ ಆತನ ಸತಿ । ಭಾರತೀರಮಣ ಮುಖ್ಯಪ್ರಾಣ ಗುರುವು ಕೋಲೆ । ತಾರತಮ್ಯ ಪಂಚಭೇದ । ಮಾರುತನ ಮತದ ಜ್ಞಾನ । ಸೂರಿ ಜನ ಸಂಗವಿತ್ತು ಸಲಹೆನ್ನ ಕೋಲೆ ॥22॥ ಪತಿ, ಪುತ್ರ , ಬಂಧು, ಬಳಗ । ಹಿತವಾಗಿಹ ಭೋಗ ಭಾಗ್ಯ । ರತಿಪತಿ ಪಿತನ ಭಕ್ತಿ । ಮತಿಯ ಕೇಳು ಕೋಲೆ । ಹಿತದಿ ಹರನ ಅಂಕದಲ್ಲಿ ಸ್ಥಿತಳಾಗಿಹ ಗೌರಿ ಕಳಶ । ಸತಿಯರಿಂದೊಡಗೂಡಿ ವನದಿ ಇಹಳು ಕೋಲೆ ॥23॥ ವರುಷಕೊಮ್ಮೆ ಕರೆದು ಬಲು । ಹರುಷದಿ ಪೂಜಿಸುತಲಿ । ಹರನ ರಾಣಿಯಲ್ಲಿರುವ ಹರಿಗರ್ಪಿಸು ಕೋಲೆ । ಧರಣಿ ಜಾನಕಿ ಪತಿ । ಮಾರುತಿ ವಲ್ಲಭ ರಾಮ । ಕರುಣಿಸಿ ನಾಗೇಶ ಶಯನ ಪೊರೆಯುವನು

ಕೋಲೆ ||24|| **ಚೈತ್ರ ಗೌರಿ ಹಾಡು** – ದಯಮಾಡಿ ಬಾರಮ್ಮ ಶಿರಿಗೌರಿ ಕರುಣವಾ ತೋರಿ। ತ್ರಿಶೂಲಧಾರಿ ತ್ರಿನೇತ್ರನ ರಾಣಿ ಪರಮಕಲ್ಯಾಣಿ ಶಿವನರ್ಧಾಂಗಿ। ಪಶುಪತೇಶನ ಪ್ರಾಣದೊಲ್ಲಭೆ ಪೂಜಿಪೆ ನಿನ್ನನು ಅತಿಶಯದಿಂದಲಿ ||1|| ಚೈತ್ರಾದಲಿ ಮೂರು ತದಿಗಿಯಲಿ। ಮುತ್ತಿನ ಸರುಪಳಿ ಉಯ್ಯಾಲಿ ಚಿತ್ರಾದಿ ಅಲಂಕರಿಸಿ ಅತಿ ಶೋಭಿಸುತಲಿ। ಭಕ್ಷ ಭೋಜ್ಯ ನೈವೇದ್ಯವ ಮಾಡಿ। ನಿತ್ಯಪೂಜೆಯನು ಶುಭದಿ ಸ್ವೀಕರಿಸಮ್ಮ ||2|| ಕಪಿಲನಾಮಕನ ಸಹೋದರಿಯೆ ನೀ ಅಪಾರ ಮಹಿಮನ ಅನುಗ್ರಹದಿಂದೆ। ಕೃಪೆಯ ತೋರಿ ಯನ್ನ ಪೂಜೆ ಸ್ವೀಕರಿಸಿ ಸೌಭಾಗ್ಯವ ಕೊಟ್ಟು ಕಾಪಾಡಮ್ಮ ||

ಚೈತ್ರಗೌರಿ ಪೂಜಾವಿಧಾನವು ಹಾಗೂ ಅನುಷ್ಠಾನಪದ್ಧತಿಯು ಸಮಾಪ್ತವಾಯಿತು.

* * * *

## ಚೈತ್ರ || ಶುದ್ಧ || ಚತುರ್ಥೀ

# ಲಕ್ಷ್ಮೀಗಣಪತಿವ್ರತ

ಈ ದಿನ ಲಡ್ಡುಗೆ ಮೊದಲಾದ್ದರಿಂದ ಗಣಪತಿಯನ್ನು ಪೂಜಿಸಿ ದಮನವನ್ನು ಸಮರ್ಪಿಸಿದರೆ ವಿಘ್ನನಾಶವೂ ಸರ್ವಕಾಮಪ್ರಾಪ್ತಿಯೂ ಆಗುವುದು.

ಚೈತ್ರಶುಕ್ಲಚತುರ್ಥಿಯಂದು ಲಕ್ಷ್ಮಿಯನ್ನೂ ಗಣಪತಿಯನ್ನೂ ಆರಾಧಿಸಬೇಕು. ಪಂಚಾಂಗದಲ್ಲಿ ವಿನಾಯಕವ್ರತ ಲಕ್ಷ್ಮೀವ್ರತವೆಂದೂ ಬರೆದಿರುತ್ತಾರೆ. ದಮನದಿಂದ ಪೂಜೆ ಮಾಡುವುದೇ ಈ ವ್ರತದ ವೈಶಿಷ್ಟ್ಯ.

## ಚೈತ್ರ || ಶುಕ್ಲ || ಪಂಚಮೀ

ಈ ದಿನ ಅನಂತಾದಿ ನಾಗರನ್ನು ಪೂಜಿಸಿ ಹಾಲು ತುಪ್ಪ ನೈವೇದ್ಯವನ್ನು ಕೊಡಬೇಕು. ಈ ದಿನವೇ ಬ್ರಹ್ಮದೇವರ ದಿನಕಲ್ಪದ ಆದಿಯಾದ್ದರಿಂದ ಕಲ್ಪಾದಿ ಎನ್ನುವರು. ಆದ್ದರಿಂದಲೇ ಮಹಾಪರ್ವಕಾಲವಾಗಿರುತ್ತದೆ. ಹೇಮಾದ್ರಿ ವಚನಾನುಸಾರ ಈ ದಿನ ಲಕ್ಷ್ಮೀದೇವಿಯು ದೇವರಾಜ್ಞೆಯಂತೆ ಬ್ರಹ್ಮಲೋಕದಿಂದ ಮನುಷ್ಯ -ಲೋಕಕ್ಕೆ ಬಂದಿರುತ್ತಾರೆ. ಆದ್ದರಿಂದ, ಇಂದು ಲಕ್ಷ್ಮೀದೇವಿಯನ್ನು ಪೂಜಿಸಿದರೆ

ಎಂದೂ ದಾರಿದ್ರ್ಯ ಬರುವುದಿಲ್ಲ. ಉಚ್ಚೈಶ್ರವಸ್ಸು ಮೊದಲಾದವುಗಳ ಪೂಜಾ-ರೂಪವಾದ ಹಯವ್ರತವೂ ಕೂಡ ಇಂದು ವಿಧಿಸಲ್ಪಟ್ಟಿದೆ. ಕುದುರೆಗಳ ಪೂಜೆಯನ್ನು ಕೂಡ ಇಂದು ನಡೆಸಬೇಕು.

**ಶ್ರೀ ರಘುಪ್ರಿಯತೀರ್ಥರು (ಪಲಿಮಾರು ಮಠ)** ಆದಮಾರು ಮಠದ ಇತ್ತೀಚಿನ ಇತಿಹಾಸದಲ್ಲಿ ಧ್ರುವನಕ್ಷತ್ರದಂತೆ ಮಿನುಗಿದ, ದಿಗ್ದಂತ ಪಂಡಿತರಾದ ಶ್ರೀ ವಿಬುಧಪ್ರಿಯ ತೀರ್ಥರಿಂದ ಆಶ್ರಮ ಪಡೆದ ಪಲಿಮಾರು ಮಠದ ಪೀಠವನ್ನೇರಿದ ಇಪ್ಪತ್ತಾರನೆಯ ಯತಿಗಳು. ಉಡುಪಿಯ ಶ್ರೀಕೃಷ್ಣಮಠವನ್ನು ಇವರು ತಮ್ಮ ಪರ್ಯಾಯ ಕಾಲದಲ್ಲಿ ಜೀರ್ಣೋದ್ಧಾರ ಮಾಡಿದರು. ಶ್ರೀಪಾದರ ವ್ಯಕ್ತಿತ್ವದ ಪ್ರಭಾವ ಕರ್ನಾಟಕದಲ್ಲಿ ಮಾತ್ರವಲ್ಲದೆ ಕೇರಳದ ನಾಡಿನಲ್ಲೂ ಹರಡಿತ್ತು. ತಿರುವಾಂಕೂರಿನ ಮಹಾರಾಜರು ಇವರಿಗೆ ಮಾಡಿದ ಗೌರವ ಸನ್ಮಾನಗಳು ಇದಕ್ಕೆ ಸಾಕ್ಷಿ. ಇವರು ಮೂವತ್ತೆರಡು ವರ್ಷಗಳ ಕಾಲ ಪೀಠವನ್ನಾಳಿ ಶಾ.ಶ. 1838 (ಕ್ರಿ. ಶ. 1915) ರಾಕ್ಷಸನಾಮಸಂವತ್ಸರದ ಚೈತ್ರಶುದ್ಧ ಪಂಚಮಿಯಂದು ಪಲಿಮಾರಿನಲ್ಲಿ ವೃಂದಾವನಸ್ಥರಾದರು.

## ಚೈತ್ರ ॥ ಶುದ್ಧ ॥ ಷಷ್ಠೀ

ಈ ದಿನ ಷಣ್ಮುಖನಿಗೂ, ಸಪ್ತಮಿಯಂದು ಸೂರ್ಯನಿಗೂ ಪೂಜೆ ಮಾಡಬೇಕು. ಸುಬ್ರಹ್ಮಣ್ಯನಿಗೆ ದಮನವನ್ನು ಸಮರ್ಪಣೆ ಮಾಡಬೇಕು. ಸುಬ್ರಹ್ಮಣ್ಯ ವ್ರತವನ್ನು ಆಚರಿಸಬೇಕು. ಷಷ್ಠ್ಯಾಂ ಸ್ಕಂದಸ್ಯ ಕರ್ತವ್ಯಾ ಪೂಜಾ ಸರ್ವೋಪಕಾರಿಕೀ । ದಮನೇನ ವಿಶೇಷೇಣ ಸುಖಸೌಭಾಗ್ಯಮಾಪ್ನುಯಾತ್ ॥ ಎಂಬ ಶ್ಲೋಕದಿಂದ ದಮನವನ್ನು ಸುಬ್ರಹ್ಮಣ್ಯನಿಗೆ ಸಮರ್ಪಣೆ ಮಾಡಿ ಆಶೀರ್ವಾದವನ್ನು ಪಡೆದುಕೊಳ್ಳಬೇಕು. ಇದರಿಂದ ಪುತ್ರೋತ್ಸವವಾಗುತ್ತದೆ. ಮಕ್ಕಳಿಗೆ ಅಭಿವೃದ್ಧಿ-ಯಾಗುತ್ತದೆ.

**ಶ್ರೀ ಮಧುಹರಿತೀರ್ಥರು (ಮಾಧವತೀರ್ಥ ಮಠ)** – ಶ್ರೀಮಧ್ವರಾಮ ಪದದ್ವಂದ್ವ ವೇದವ್ಯಾಸಸಮರ್ಚಕಃ । ಶ್ರೀಮನ್ಮಧುಹರ್ಯಾಖ್ಯಂ ಗುರುಂ ವಂದೇ ಭಕ್ತಾಭೀಷ್ಟಪ್ರದಾಯಕಃ ॥

## ಚೈತ್ರ ॥ ಶುಕ್ಲ॥ ಸಪ್ತಮೀ

ಸಂತಾನಸಪ್ತಮೀ ಎಂದು ಕೂಡ ಕರೆಯುತ್ತಾರೆ. ಸಂತಾನಗೋಪಾಲಕೃಷ್ಣಮಂತ್ರ -ವನ್ನು ಜಪಿಸುವುದರಿಂದ ಪುತ್ರೋತ್ಸವವಾಗುತ್ತದೆ. ಇಂದು ಸೂರ್ಯನಿಗೆ ದಮನವನ್ನು ಸಮರ್ಪಣೆ ಮಾಡಬೇಕು. ಇದನ್ನು ಭಾಸ್ಕರಸಪ್ತಮೀ ಎಂದೇ ಕರೆಯುತ್ತಾರೆ. ಸೂರ್ಯನ ಪೂಜೆಗೆ ಎಲ್ಲಿಲ್ಲದ ಮಹತ್ವವಿದೆ. ಸೂರ್ಯನನ್ನು ಅವನ ಅಂತರ್ಯಾಮಿಯಾದ ನಾರಾಯಣನನ್ನು ಇವತ್ತು ವಿಶೇಷವಾಗಿ ಆರಾಧನೆ ಮಾಡಬೇಕು. ಭಾಸ್ಕರಸ್ಯ ತು ಸಪ್ತಮ್ಯಾಂ ಪೂಜಾಂ ದಮನಕಾದಿಭಿಃ। ಕೃತ್ವಾ ಪ್ರಾಪ್ನೋತಿ ಭೋಗಾದೀನ್ ವಿಗತಾರಿರ್ಮಹಾತಪಾಃ ॥ ಎಂಬ ಶ್ಲೋಕದಿಂದ ಸೂರ್ಯನನ್ನು ಅರ್ಚಿಸಬೇಕು. ಜ್ಯೌತಿಷಶಾಸ್ತ್ರವನ್ನು ಅಭ್ಯಾಸ ಮಾಡುವವರು ಇಂದು ವಿಶೇಷವಾಗಿ ಗಾಯತ್ರೀಮಂತ್ರವನ್ನು ಜಪಿಸಬೇಕು.

ಶ್ರೀ ವಿದ್ಯಾಪತಿತೀರ್ಥರು (ಪಲಿಮಾರು ಮಠ) ಶ್ರೀ ವಾದಿರಾಜರ ಸಮ-ಕಾಲೀನರಾದ ಇವರು ಪರಂಪರೆಯಲ್ಲಿ ಹದಿನೈದನೆಯವರು. ಇವರು ಪೀಠಾಧಿ-ಪತಿಯಾಗಿದ್ದು ಇಪ್ಪತ್ತೇಳು ವರ್ಷಗಳ ಅವಧಿಯಲ್ಲಿ ಹೆಚ್ಚಿನ ಸಮಯವನ್ನು ತೀರ್ಥ-ಯಾತ್ರೆಯಲ್ಲೇ ಕಳೆದವರು. ಶಾ.ಶಕ 1494 (ಕ್ರಿ.ಶ. 1571) ಪ್ರಜೋತ್ಪತ್ತಿ ಸಂವತ್ಸರದ ಶುಕ್ಲ ಸಪ್ತಮಿಯಂದು ಇವರು ಕಾಶಿಯಲ್ಲಿ ವೃಂದಾವನಸ್ಥರಾದರು.

## ಚೈತ್ರ ॥ ಶುಕ್ಲ ॥ ಅಷ್ಟಮೀ

ಭವಾನ್ಯುತ್ಪತ್ತಿ – ಭವಾನಿದೇವಿಯು ಜನಿಸಿದ ಮಹಾಪರ್ವಕಾಲವಿದೆ. ವಿಶೇಷವಾಗಿ ಗೌರಿಯನ್ನು ಪೂಜಿಸಲೇ ಬೇಕು. ಎಲ್ಲಾ ಪಂಚಾಂಗಗಳಲ್ಲಿ ಭವಾ-ನ್ಯುತ್ಪತ್ತಿಃ ಎಂದು ಬರೆದಿರುತ್ತಾರೆ. ಈ ದಿನ ಭವಾನಿಯ ಉತ್ಪತ್ತಿಯಾಗಿದೆ. ಶಿವಪತ್ನಿ ಪಾರ್ವತಿಯ ಅವತಾರದ ಶುಭದಿನ. ಭವಾನೀದರ್ಶನದಿಂದ ಎಲ್ಲಾ ದುಃಖದ ಪರಿಹಾರ ಹಾಗೂ ಆನಂದ ಪ್ರಾಪ್ತಿಯಾಗುವುದು. ಈ ದಿನ ಬುಧವಾರ ಹಾಗೂ ಪುನರ್ವಸು ನಕ್ಷತ್ರವಿದ್ದಲ್ಲಿ ಪ್ರಾತಃಸ್ನಾನದಿಂದ ವಾಜಪೇಯಯಾಗದ ಫಲವು ಬರುತ್ತದೆ. ಗೌರೀಯಾತ್ರೆ ಹಾಗೂ ಅಶೋಕಮುಕುಲಭಕ್ಷಣ ಎಂಬ ವಿಧಿ ಪುರಾಣ-ಗಳಲ್ಲಿ ಕಂಡು ಬರುತ್ತದೆ.

ಶ್ರೀ ಸತ್ಯಧ್ಯಾನತೀರ್ಥರ ಆರಾಧನೆ, (ಉತ್ತರಾದಿಮಠ) ಫಲಿಮಾರು ಮಠದ ವಿದ್ಯಾಮಾನ್ಯರಿಗೂ ಪಾಠ ಹೇಳಿದ ವಿಭೂತಿಪುರುಷರು ಸತ್ಯಧ್ಯಾನರು. ಇವರ ವೃಂದಾವನ ಪಂಡರಾಪುರದಲ್ಲಿದೆ. ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಅನೇಕ ಜನರು ಆಂಗ್ಲರ ಪ್ರಭಾವದಿಂದ ಆಂಗ್ಲಭಾಷಾ ಶಿಕ್ಷಣಕೆ ಮನಸ್ಸು ಮಾಡಿದ್ದರು. ವೈದಿಕ ಶಿಕ್ಷಣದಿಂದ ದೂರವಾಗತೊಡಗಿದ್ದರು. ಈ ಸಂದರ್ಭದಲ್ಲಿ ವೈದಿಕಮತವನ್ನು ಸುಭದ್ರಗೊಳಿಸಿ ದಿಗಂತಖ್ಯಾತವಿಕ್ರಮರಾಗಿ ಮೆರೆದವರು ಶ್ರೀ ಸತ್ಯಧ್ಯಾನತೀರ್ಥರು. ಇವರು ಪೂರ್ವಾಶ್ರಮದಲ್ಲಿ ಶ್ರೀ ಸತ್ಯವೀರತೀರ್ಥ ಸ್ವಾಮಿಗಳು, ಶ್ರೀ ಸತ್ಯಧೀರ-ತೀರ್ಥ ಸ್ವಾಮಿಗಳು ಅವತರಿಸಿದ ಮನೆತನವಾದ ಕೊರ್ಲಹಳ್ಳಿ ಎಂಬ ಮನೆತನಕ್ಕೆ ಸೇರಿದವರು. ಪೂರ್ವಾಶ್ರಮದಲ್ಲಿ ಇವರ ಹೆಸರು ಕೊರ್ಲಹಳ್ಳಿ ಸೇತುರಾಮಾ-ಚಾರ್ಯರು ಎಂದು. ಸನಾತನಧರ್ಮವು ಪತನವಾಗಬಾರದೆಂದು ಅದರ ಉಳಿವಿಗಾಗಿ, ಪುನರುಜ್ಜೀವನಕ್ಕಾಗಿ ಶ್ರಮಿಸಿದ ಶ್ರೀ ಉತ್ತರಾದಿಮಠದ ಸಂಸ್ಥಾನಕ್ಕೆ ಪೀಠಾಧೀಶರಾದರು. ತಮ್ಮ ಗುರುಗಳು ಪ್ರಾರಂಭಿಸಿದ ಶ್ರೀಮನ್ಮಧ್ವಸಿದ್ಧಾಂತ ಅಭಿವೃದ್ಧಿಕಾರಿಣೀ ಎಂಬ ಸಭೆಯನ್ನು ಮುಂದುವರೆಸುತ್ತಾ ದೇಶದ ಅನೇಕ ಪಂಡಿತರನ್ನು ಅದರಲ್ಲಿ ಭಾಗವಹಿಸುವಂತೆ ಮಾಡಿ ದ್ವೈತಮತದ ವಿಜಯ-ಪತಾಕೆಯನ್ನು ಪರಂಪರೆಗೆ ತಕ್ಕ ಹಾಗೆ ವಿಜೃಂಭಣೆಯಿಂದ ಹಾರಿಸಿದರು. ಪರಮತ ನಿರಾಕರಣೆಯ ಜೊತೆಗೆ ಸ್ವಮತಸ್ಥಾಪನೆಯನ್ನು ನಿರಂತರವಾಗಿ ಮಾಡುತ್ತಾ ದೇಶವಿಡಿ ಸಂಚರಿಸಿದರು. ಇವರು ದಿನನಿತ್ಯದ ಸಂಸ್ಥಾನ ಪೂಜೆ, ಮುದ್ರಾಧಾರಣೆ, ಶಾಸ್ತ್ರಪಾಠ, ಗ್ರಂಥ ರಚನೆಗಳ ಜೊತೆಗೆ ಪಂಡಿತರಿಗೆಲ್ಲ ವಿಶೇಷವಾದ ಗೌರವ ಕೊಟ್ಟು ಪಂಡಿತರಲ್ಲಿ ಭಗವಂತನ ಪೂಜೆಯನ್ನು ಮಾಡಿದರು. ತಮ್ಮ ಪೀಠಾಧಿಪತ್ಯದ 30 ವರ್ಷದ ಅವಧಿ ಯಲ್ಲಿ ಅನೇಕ ಘಟಾನುಘಟಿಗಳಾದ ಪಂಡಿತರನ್ನಷ್ಟೇ ಅಲ್ಲದೆ, ತಮ್ಮ ಕಾಲದ ವಿವಿಧ ಮಾಧ್ವಪೀಠಗಳ ಪೀಠಾಧೀಶರಿಗೆ ಮತ್ತು ಬಿಡಿ ಸಂನ್ಯಾಸಿಗಳಿಗೆ ಪಾಠವನ್ನು ಮಾಡಿದ ಮಹಾಮಹಿಮರು. ಇವರ ಈ ಸೊಬಗು ಶ್ರೀ ಚಂದ್ರಿಕಾಚಾರ್ಯರನ್ನು ನೆನಪು ಮಾಡಿಸುವಂಥದ್ದು. ಇನ್ನೊಂದು ಸ್ವಾರಸ್ಯವೆಂದರೆ ಇವರಿಗೆ ಆಶ್ರಮವನ್ನು ದಯ-ಪಾಲಿಸಿದ ಶ್ರೀಸತ್ಯಜ್ಞಾನತೀರ್ಥರಿಗೆ ಅವರ ಪೂರ್ವಾಶ್ರಮದಲ್ಲಿ ಸೇತುರಾಮಾ-ಚಾರ್ಯರಾಗಿ ಪಾಠ ಹೇಳಿದ್ದರು. ಆದರೂ ಸಂನ್ಯಾಸಾಶ್ರಮದ ನಂತರ ಶ್ರೀ ಸತ್ಯಜ್ಞಾನತೀರ್ಥರಿಗೆ ಮನಃಪೂರ್ವಕ ಸಾಷ್ಟಾಂಗ ನಮಸ್ಕಾರ ಮಾಡುತ್ತಿದ್ದರು.

ಇದಲ್ಲವೇ ವಿನಯ! ಸ್ವಲ್ಪವೇ ಓದಿ ಬೀಗುವ ಸಾಮಾನ್ಯ ಜನರಿಗೆ ಇವರ ಆದರ್ಶ ಮೇರುಪರ್ವತವೇ ಸರಿ. ಇವರ ಅನುಗ್ರಹದಿಂದಲೇ ಪ್ರಾರಂಭವಾದದ್ದು ಶ್ರೀ ಸತ್ಯಧ್ಯಾನ ವಿದ್ಯಾಪೀಠ. ಇವರ ಈ ವೈಭವ, ದ್ವೈತಮತದ ಅಗಾಧ ಪಾಂಡಿತ್ಯವನ್ನು ನೋಡಿ ಅದ್ವೈತಿಗಳಾದ ಅನಂತಕೃಷ್ಣಶಾಸ್ತ್ರಿಗಳು ಇವರನ್ನು ಅಭಿನವ ಆನಂದತೀರ್ಥರು ಎಂದು ತುಂಬು ಹೃದಯದಿಂದ ಕೊಂಡಾಡಿದ್ದರು. ಸಭಾಸಾರಸಂಗ್ರಹ (ದ್ವೈತ-ಸಿದ್ಧಾಂತವೈಜಯಂತೀ), Civil Suit - ಎಂಬ ಕನ್ನಡ ಕೃತಿ, ಚಂದ್ರಿಕಾಮಂಡನ, ಗೀತಾಪ್ರತಿಪದಾರ್ಥಚಂದ್ರಿಕಾ ಎಂಬಿತ್ಯಾದಿ ಕೃತಿಗಳನ್ನು ರಚಿಸಿದರು. ಮುಂದೆ ಶ್ರೀ ಸತ್ಯಪ್ರಜ್ಞತೀರ್ಥರನ್ನು ಮಾಧ್ವಸಮಾಜಕೆ ಕೊಟ್ಟು ಪಂಢರಪುರದಲ್ಲಿ ಚಿತ್ರಭಾನು ಸಂವತ್ಸರದ ಚೈತ್ರ ಶುದ್ಧ ಅಷ್ಟಮಿಯಂದು ವಿಠ್ಠಲನ ಸನ್ನಿಧಾನದಲ್ಲಿ, ಚಂದ್ರಭಾಗಾ-ನದಿಯ ತೀರದಲ್ಲಿ ವೃಂದಾವನಸ್ಥರಾದರು. ಆಸೇತೋರಾತುಷಾರಾದ್ರೇಃ ಯೋ ದಿಶೋ ಜಿತವಾನ್ ಮುಹುಃ। ಸತ್ಯಧ್ಯಾನಗುರುಃ ಪಾತು ಯತೀಂದ್ರೈರಪ್ಯುಪಾಸಿತಃ ॥

## ಚೈತ್ರ ॥ ಶುದ್ಧ॥ ನವಮೀ

ಶ್ರೀರಾಮನವಮೀ ಚೈತ್ರ ಶುಕ್ಲ ನವಮಿಯಂದು 'ಶ್ರೀರಾಮಜಯಂತೀ'. ಶ್ರೀರಾಮದೇವರು ಚೈತ್ರ ಶುಕ್ಲ ನವಮೀ, ಪುನರ್ವಸು ನಕ್ಷತ್ರದಲ್ಲಿ ಸೂರ್ಯನು ಮೇಷರಾಶಿಯಲ್ಲಿದ್ದಾಗ, ಕಟಕ ಲಗ್ನದಲ್ಲಿ ಐದು ಶುಭಗ್ರಹಗಳೂ ಉಚ್ಚದಲ್ಲಿದಾಗ ಅವತರಿಸಿದರು. ಪುನರ್ವಸು ನಕ್ಷತ್ರ ಯುಕ್ತವಾದ ನವಮಿಯು ಕೋಟಿ ಸೂರ್ಯಗ್ರಹಣಕ್ಕಿಂತಲೂ ಮಿಗಿಲಾದದ್ದು. ಈ ದಿನ ಶಕ್ತ್ಯಾನುಸಾರ ಬಂಗಾರದ ರಾಮದೇವರ ಪ್ರತಿಮೆಯನ್ನು ಪೂಜಿಸಿ ಅರ್ಘ್ಯವನ್ನು ಕೊಡಬೇಕು. ಅರ್ಘ್ಯಮಂತ್ರ–

'ದಶಾನನವಧಾರ್ಥಾಯ ಧರ್ಮಸಂಸ್ಥಾಪನಾಯ ಚ।
ರಾಕ್ಷಸಾನಾಂ ವಿನಾಶಾಯ ದೈತ್ಯಾನಾಂ ನಿಧನಾಯ ಚ।

ಪರಿತ್ರಾಣಾಯ ಸಾಧೂನಾಂ ಜಾತೋ ರಾಮಃ ಸ್ವಯಂ ಹರಿಃ।
ಗೃಹಾಣಾರ್ಘ್ಯಂ ಮಯಾ ದತ್ತಂ ಭ್ರಾತೃಭಿಃ ಸಹಿತೇಽನಘ ॥'

(ಹೆಚ್ಚಿನ ವಿಚಾರಕ್ಕಾಗಿ ನಮ್ಮ ಸಂಸ್ಥೆಯಿಂದ ಪ್ರಕಟನೆಗೊಂಡ ರಾಮನವಮೀ ಪುಸ್ತಕ ನೋಡಿರಿ).

ಶ್ರೀ ಕವೀಂದ್ರತೀರ್ಥಶ್ರೀಪಾದಂಗಳವರು ನವಬೃಂದಾವನ – ವೀಂದ್ರಾರೂಢಪದಾಸಕ್ತಂ ರಾಜೇಂದ್ರಮುನಿಸೇವಿತಮ್ । ಶ್ರೀಕವೀಂದ್ರಮುನಿಂ ವಂದೇ ಭಜತಾಂ ಚಂದ್ರಸನ್ನಿಭಂ ॥ ಕವೀಂದ್ರತೀರ್ಥರ ಪೂರ್ವಾಶ್ರಮದ ಹೆಸರು ವಾಸುದೇವಶಾಸ್ತ್ರಿ. ಶಾಸ್ತ್ರಿಗಳು ನ್ಯಾಯ, ವೇದಾಂತ, ವ್ಯಾಕರಣ, ಮೀಮಾಂಸಾದಿ ಚತುಃಶಾಸ್ತ್ರಗಳಲ್ಲಿಯೂ ಪಾರಂಗತರು. ಮೇಲೆ ಹುಟ್ಟು ತಪಸ್ವಿಗಳು. ಜಾತ್ಯಾ ವಿರಕ್ತರು. ಮತ್ತು ಭಗವದ್ಭಕ್ತರು. ಇವರ ಜ್ಞಾನ, ಭಕ್ತಿ, ವೈರಾಗ್ಯಭಾಗ್ಯಗಳನ್ನು ಕಂಡು ಸುಪ್ರೀತರಾದ ಸರ್ವಜ್ಞಸಂಸ್ಥಾನದ ಶ್ರೀವಿದ್ಯಾಧಿರಾಜತೀರ್ಥರು ಈ ವಾಸುದೇವಶಾಸ್ತ್ರಿಗಳನ್ನು ಕರೆದು ಸನ್ಯಾಸಾಶ್ರಮವಿತ್ತರು. ಕವೀಂದ್ರತೀರ್ಥ ಎಂದು ನಾಮಕರಣ ಮಾಡಿ ಮಂತ್ರೋಪದೇಶಗೈದರು. ಪ್ರಮಾಥಿಸಂವತ್ಸರ ಚೈತ್ರಶುದ್ಧನವಮಿ ನವವೃಂದಾವನದಲ್ಲಿ ಶ್ರೀಪದ್ಮನಾಭತೀರ್ಥರ ಪಕ್ಕದಲ್ಲಿಯೇ ಇವರೂ ವೃಂದಾವನಸ್ಥರಾಗಿದ್ದಾರೆ.

ಶ್ರೀ ರಘುನಾಥತೀರ್ಥರು (ಪಲಿಮಾರು ಮಠ) – ಪರಂಪರೆಯಲ್ಲಿ ಹದಿನೇಳನೆಯವರಾದ ಇವರು ತುಂಬ ಕಠಿಣವಾದ ತಪಸ್ವೀ ಜೀವನ ನಡೆಸಿದವರು. ಇವರು ನಡೆಸಿದ ಪರ್ಯಾಯ ತುಂಬಾ ಸಂಭ್ರಮದ ಪರ್ಯಾಯ ಎಂದು ಆ ಕಾಲದಲ್ಲಿ ಹೆಸರಾಗಿತ್ತು. ಸುಮಾರು ಮೂರೂವರೆ ದಶಕಗಳ ಕಾಲ ಈ ಪೀಠದಲ್ಲಿದ್ದರು. ಭಾವೀಸಮೀರರೆಂದು ಪ್ರಸಿದ್ಧರಾದ ಶ್ರೀವಾದಿರಾಜರ ಕೊನೆಯ ದಿನಗಳನ್ನು ಕಂಡವರು ಇವರು. ಹೀಗೆ ಶ್ರೀವಾದಿರಾಜರ ಕಾಲದಲ್ಲಿ ಈ ಮಠದಲ್ಲಿ ಒಟ್ಟು ಎಂಟು ಜನ ಯತಿಗಳಾಗಿ ಹೋದರು. ತನ್ನ ಕೊನೆಯ ದಿನಗಳಲ್ಲಿ ದೇಶ ಸಂಚಾರದಲ್ಲಿದ್ದ ರಘುನಾಥತೀರ್ಥರು ಶಾ.ಶ. 1547 (ಕ್ರಿ.ಶ. 1624) ರಕ್ತಾಕ್ಷಿ ಸಂವತ್ಸರದ ಚೈತ್ರ ಶುದ್ಧ ನವಮಿಯಂದು ತನ್ನ ಆರಾಧ್ಯ ದೇವತೆಯಾದ ಶ್ರೀರಾಮಚಂದ್ರನ ಅವತಾರ ದಿನವಾದ ಶ್ರೀರಾಮ ನವಮಿಯಂದು ದ್ವಾರಕೆಯಲ್ಲಿ ಹರಿಪದವನ್ನು ಸೇರಿದರು.

ಶ್ರೀ ಪ್ರಾಜ್ಞನಿಧಿತೀರ್ಥರು (ಶ್ರೀಪಾದರಾಜ ಮಠ)ಮುಳಬಾಗಿಲು ವೇದಶಾಸ್ತ್ರಾದಿ ಮಥನಾತ್ ಜ್ಞಾನಂ ಯಸ್ಯ ಪ್ರಕಾಶತೇ । ಪ್ರಾಜ್ಞನಿಧಿತೀರ್ಥಾಖ್ಯಃ ದದ್ಯಾನ್ಮೇ ಜ್ಞಾನಸಂಪದಾ ॥

## ಚೈತ್ರ ॥ ಶುದ್ಧ ॥ ದಶಮೀ

ಧರ್ಮರಾಜನಿಗೆ ದಮನವನ್ನು ಸಮರ್ಪಣೆ ಮಾಡಬೇಕು. ಹಿಂದಿನ ದಿವಸ ಆಚರಿಸಿದ ರಾಮನವಮಿಯ ವ್ರತವನ್ನು ಸಮಾಪ್ತಿಗೊಳಿಸಿ ಬ್ರಾಹ್ಮಣರಿಗೆ ಅನ್ನ-ಸಂತರ್ಪಣೆಯನ್ನು ಮಾಡಬೇಕು.

## ಚೈತ್ರ ॥ ಶುಕ್ಲ ॥ ಏಕಾದಶೀ

**ಶುಕ್ರಜಯಂತೀ** – ಶುಕ್ರಾಚಾರ್ಯರು ಪರಶುರಾಮರೂಪವನ್ನು ಆರಾಧನೆ ಮಾಡುತ್ತಾರೆ. ಇಂದು ಅವರ ಪ್ರೀತಿಗಾಗಿ ಕೆಳಗಿನಮಂತ್ರಗಳನ್ನು ಪಠಿಸಬೇಕು.

ಶುಕ್ರಾಯ ನಮಃ, ಸಿತಾಯ ನಮಃ, ಶುದ್ಧಾಯ ನಮಃ, ವೇದಮೂರ್ತಯೇ ನಮಃ, ಭೃಗೂದ್ವಹಾಯ ನಮಃ, ಕವಯೇ ನಮಃ, ಶಾಂತಾಯ ನಮಃ, ಅತಿ-ತೇಜಸ್ವಿನೇ ನಮಃ, ಸರ್ವಶಾಸ್ತ್ರವಿಶಾರದಾಯ ನಮಃ, ಶ್ವೇತವಸ್ತ್ರಧರಾಯ ನಮಃ, ದೈತ್ಯಮಂತ್ರಿಣೇ ನಮಃ, ವಿನಯಕೋವಿದಾಯ ನಮಃ. ''ಪ್ರಾಚ್ಯಾಂ ಭೃಗೋ-ರ್ಭೋರ್ ಜಗತಃ ಪ್ರಶಾಂತಃ ಸ ಭಾರ್ಗವಃ ಪೂರ್ವಮುಖೋ ಸಿತಾಭಃ । ಸಪಂಚ-ಕೋಣೋ ಸುರಥಾಧಿರೂಢೋ ದಂಡಾಕ್ಷಮಾಲಾವರದೋಽಂಬುಪಾತ್ರಃ ॥ ಶ್ವೇತಾಂಬರಃ ಶ್ವೇತವಪುಃ ಕಿರೀಟೀ ಚತುರ್ಭುಜೋ ದೈತ್ಯಗುರುಃ ಪ್ರಶಾಂತಃ । ಧತ್ತೇ -ಽಸಿದಂಡಂ ಚ ಕಮಂಡಲುಂ ಚ ತಥಾಕ್ಷಸೂತ್ರಂ ವರದೋಽಸ್ತು ಮಹ್ಯಮ್ ॥'' ಸರ್ವತೋಮುಖತಾ ಯೇನ ಲೀಲಯಾ ದರ್ಶಿತಾ ರಣೇ । ರಾಕ್ಷಸೇಶ್ವರ-ಯೋಧಾನಾಂ ತಂ ವಂದೇ ಸರ್ವತೋಮುಖಮ್ ॥

ಉಪಾಸ್ಯ - ಶ್ರೀಪರಶುರಾಮ, ರತ್ನ - ವಜ್ರ , ಕಕ್ಷ್ಯೆ - ಹತ್ತೊಂಭತ್ತು , ಅಗ್ನಿ - ಹಾಟಕ, ಸ್ಥಾನ - ಪೂರ್ವ, ಸಮಿತ್ - ಅತ್ತಿ , ಅಧಿದೇವತೆ - ಇಂದ್ರಾಣೀ, ದಾನ - ಬಿಳಿಕುದುರೆ, ಪ್ರತ್ಯಧಿದೇವತೆ - ಇಂದ್ರ , ರಸ - ಹುಳಿ, ಬಣ್ಣ - ಬಿಳಿ, ರೋಗ - ಮೂತ್ರ , ಭೂತ - ಜಲ, ಅಂಗ - ಅಂಡಾಶಯ, ಗೋತ್ರ - ಭಾರ್ಗವ, ದಶಾವರ್ಷ - ಇಪ್ಪತ್ತು , ದೇಶ - ಭೋಜಕಟ, ಅಧಿಕಾರ - ಮಂತ್ರಿ , ಜಾತಿ - ಬ್ರಾಹ್ಮಣ, ರಾಶಿಸಂಚಾರ - 28 ದಿನ, ಲಿಂಗ - ಸ್ತ್ರೀ , ಒಡೆತನ - ವೃಷಭ, ತುಲಾ, ಪ್ರತಿಮೆ - ಬೆಳ್ಳಿ , ತಂದೆ - ಭೃಗು, ಜಪ - 16,000, ತಾಯಿ - ಖ್ಯಾತಿ, ಧಾನ್ಯ - ಅವರೆ, ಹೆಂಡತಿ - ಊರ್ಜಸ್ವತೀ.

ಚೈತ್ರ ಶುಕ್ಲ ಏಕಾದಶೀ- ದ್ವಾದಶೀ ಇಂದು ವಿಷ್ಣುವಿಗೆ ಸಮರ್ಪಿಸುವ ದಮನವನ್ನು ಇಂದು ಸರ್ವತೋಭದ್ರಮಂಡಲದಲ್ಲಿಟ್ಟು ಅಧಿವಾಸ ಮಾಡಬೇಕು. ಈ ದಿನವೇ ಲಕ್ಷ್ಮೀನಾರಾಯಣನಿಗೆ ಡೋಲೋತ್ಸವವನ್ನು ಮಾಡಬೇಕು. ದಮನಾರೋಪಣೆಯ ವಿಧಿಯನ್ನು ಮುಂದೆ ನೋಡಿ ತಿಳಿಯಬೇಕು.

ಕಾಮದಾ ಏಕಾದಶಿ ಮಹಿಮೆ – ಸಂವತ್ಸರದ ಮೊಟ್ಟ ಮೊದಲ ಏಕಾದಶಿ 'ಕಾಮದಾ' ಏಕಾದಶಿ. ಚೈತ್ರಮಾಸ ಶುಕ್ಲಪಕ್ಷದಲ್ಲಿ ಆಚರಿಸುವ ಈ ವ್ರತದಿಂದ ವರ್ಷಪೂರ್ತಿ ಇಷ್ಟ ಕಾಮ್ಯ ಈಡೇರುವುದು. ಈ ವ್ರತದ ಮಹತ್ವ ಕುರಿತು 'ವರಾಹ' ಪುರಾಣದಲ್ಲಿ ಉಲ್ಲೇಖವಿದೆ. ಏಕಾದಶಿ ವ್ರತವೆಂದರೆ ಶ್ರೀವಿಷ್ಣುವಿನ ಪೂಜೆಯೇ ಆಗಿದೆ. ಒಂದೊಂದು ಏಕಾದಶಿಗೂ ಭಗವಂತನ ಒಂದೊಂದು ರೂಪವನ್ನು ಪೂಜೆ ಸಲ್ಲಿಸಿ ಭಗವಂತನನ್ನು ಒಲಿಸಿಕೊಳ್ಳುವ ಕ್ರಮವಾಗಿದೆ. ಕಾಮದಾ ಏಕಾದಶಿಯಂದು ದೇವರ ವಾಸುದೇವ ರೂಪವನ್ನು ಪೂಜೆ ಸಲ್ಲಿಸಬೇಕು. ವಾಸುದೇವನ ನಾಮವನ್ನು ಬಾಯ್ತುಂಬ ನೆನೆಯಬೇಕು.

ಧರ್ಮರಾಜನು ಒಮ್ಮೆ ಆಪದ್ಬಾಂಧವ ಶ್ರೀಕೃಷ್ಣನನ್ನು ಕೇಳುತ್ತಾನೆ ಯಾವ ವ್ರತ ಮಾಡಿದರೆ ಎಲ್ಲ ಅಭೀಷ್ಟೆ ಪೂರೈಸುವುದೋ ಅಂಥದ್ದನ್ನು ತಿಳಿಸು ಎಂದು. ಆಗ ಶ್ರೀಕೃಷ್ಣ ಪರಮಾತ್ಮನೇ ಪಾಂಡವರಿಗೆ ಈ ವ್ರತಾಚರಣೆ ಬಗ್ಗೆ ಹೇಳಿದನು. ಅದಕ್ಕೂ ಮೊದಲು ವಸಿಷ್ಠಋಷಿಗಳು ದಿಲೀಪರಾಜನಿಗೆ ದೃಷ್ಟಾಂತಸಹಿತವಾಗಿ 'ಕಾಮದಾ' ಏಕಾದಶಿ ವ್ರತದ ಮಹತ್ವ ತಿಳಿಸಿದ್ದಾರೆ. ರತ್ನಪುರವೆಂಬ ಪಟ್ಟಣವನ್ನು ಪುಂಡರೀಕನೆಂಬ ರಾಜ ಆಳುತ್ತಿದ್ದ. ಬಂಗಾರ,ಬೆಳ್ಳಿ, ರತ್ನಗಳಿಂದ ಸಿಂಗರಿಸಲಾದ ಆತನ ಆಸ್ಥಾನದಲ್ಲಿ ಲಲಿತ-ಲಲಿತಾ ಎಂಬ ಗಂಧರ್ವ ದಂಪತಿ ಗಾನ-ನೃತ್ಯಪಟುಗಳಾಗಿದ್ದರು. ಲಲಿತ ಸುಶ್ರಾವ್ಯವಾಗಿ ಹಾಡು ಹೇಳಿದರೆ ಲಲಿತಾ ಅದಕ್ಕೆ ತಕ್ಕಂತೆ ಮೋಹಕ ನೃತ್ಯಮಾಡಿ ರಾಜನನ್ನು ತೃಪ್ತಿಪಡಿಸುತ್ತಿದ್ದಳು. ಒಮ್ಮೆ ಲಲಿತ ಮಾತ್ರ ಆಸ್ಥಾನಕೆ ಬಂದು ಗಾಯನ ಆರಂಭಿಸುತ್ತಾನಂತೆ ಆಗ ಆತನ ಮನಸ್ಸು ಮನೆಯಲ್ಲಿ ಒಬ್ಬಳೇ ಇದ್ದ ಲಲಿತಾಳತ್ತ ತಿರುಗಿ ಅವಳ ಬಗ್ಗೆ ಚಿಂತಿಸುತ್ತಾನೆ. ಇದರಿಂದ ರಾಗ-ತಾಳ ತಪ್ಪಿ ಹೋಗುತ್ತದೆ. ಇದನ್ನು ಅರಿತ ಆಸ್ಥಾನದಲ್ಲಿದ್ದ ಕ್ರೂರ ಹಾವೊಂದು ಈ ವಿಷಯವನ್ನು ರಾಜನಿಗೆ ತಿಳಿಸುತ್ತದೆ. ಲಲಿತನಿಗೆ ಅನ್ನಹಾಕುವ ಯಜಮಾನನಿಗಿಂತ ಹೆಂಡತಿಯೇ ಹೆಚ್ಚು

ಎಂದು ಚಾಡಿ ಹೇಳುತ್ತದೆ. ಇದರಿಂದ ರಾಜ ಪುಂಡರೀಕನಿಗೆ ತುಂಬಾ ಕೋಪಬಂದು ಲಲಿತನಿಗೆ ರಾಕ್ಷಸನಾಗು ಎಂದು ಶಾಪ ಕೊಡುತ್ತಾನೆ. ತಕ್ಷಣ ಲಲಿತ ಸುಮಾರು 64 ಮೈಲಿ ಎತ್ತರದ ರಾಕ್ಷಸನ ರೂಪ ತಾಳುತ್ತಾನೆ. ಬೆಟ್ಟದಂತಹ ಕುತ್ತಿಗೆ, ಗುಹೆಯಂತಹ ಬಾಯಿ, ಕಂಬಗಳಂತೆ ಕೈಕಾಲು ಹೊಂದಿದ ರಾಕ್ಷಸನಾಗುತ್ತಾನೆ. ಇಂಥ ವಿಕಾರ ರೂಪದ ಗಂಡನೊಂದಿಗೆ ಲಲಿತಾ ಆತನ ಕೆಟ್ಟ ಕಾರ್ಯಗಳನ್ನು ಸಹಿಸುತ್ತಾ ಅಡವಿಯಲ್ಲಿ ಸಂಚರಿಸುತ್ತಾಳೆ. ಹಾಗೆ ಸಂಚರಿಸುತ್ತ ವಿಂಧ್ಯಾಚಲಕ್ಕೆ ಬರುತ್ತಾರೆ. ಅಲ್ಲಿ ಲಲಿತಾ 'ಶೃಂಗಿ' ಎಂಬ ಮುನಿಯನ್ನು ಭೇಟಿಯಾಗಿ ನಮಸ್ಕರಿಸುತ್ತಾಳೆ. ತಪಸ್ಸಿಗೆ ಕುಳಿತ ಶೃಂಗಿ ಮುನಿ ಲಲಿತಾಳ ವಿನಯತೆ ಕಂಡು ಬೆರಗಾಗಿ ಕಣ್ತೆರೆಯುತ್ತಾನೆ. ಆಗ ಲಲಿತಾ ತನಗೆ ಬಂದ ಕಷ್ಟವನ್ನು ತಿಳಿಸಿ ಪರಿಹಾರ ಸೂಚಿಸುವಂತೆ ಕೇಳಿಕೊಳ್ಳುತ್ತಾಳೆ. ಆಗ ಶೃಂಗಿ ಮುನಿಯು 'ಕಾಮದಾ' ಏಕಾದಶಿ ವ್ರತ ಆಚರಿಸುವಂತೆ ಹೇಳುತ್ತಾರೆ. ಅವರು ಹೇಳಿದ ಕ್ರಮದಲ್ಲಿ ಏಕಾದಶಿ ವ್ರತಾಚರಣೆ ಮಾಡಿ ದ್ವಾದಶಿಯಂದು ಋಷಿಯನ್ನು ಭೇಟಿಯಾದ ಲಲಿತಾ ಶ್ರೀಕೃಷ್ಣ ಪರಮಾತ್ಮನಲ್ಲಿ ಗಂಡನ ಶಾಪ ವಿಮೋಚನೆಗಾಗಿ ಪ್ರಾರ್ಥನೆ ಮಾಡಿಕೊಳ್ಳುತ್ತಾಳೆ. ಕೃಷ್ಣನ ಒಲುಮೆಯಿಂದ ಲಲಿತ ಮತ್ತೆ ಮೊದಲಿನಂತೆ ಸುಂದರ ಗಂಧರ್ವನಾಗುತ್ತಾನೆ. ಗಂಧರ್ವ ದಂಪತಿ ಪುಷ್ಪಕ ವಿಮಾನದಲ್ಲಿ ಸ್ವರ್ಗಲೋಕಕ್ಕೆ ತೆರಳುತ್ತಾರೆ.

ಆದ್ದರಿಂದ ಹೇ ಧರ್ಮರಾಜನೇ, ನೀನೂ ಕೂಡ ಇದೇ ಏಕಾದಶಿ ಆಚರಿಸಿ ನಿನ್ನ ಅಭೀಷ್ಟವನ್ನು ಪೂರೈಸಿಕೊ ಎಂದು ಶ್ರೀಕೃಷ್ಣ ಹೇಳುತ್ತಾನೆ. ಅದರಂತೆ ಪಾಂಡವರು ಈ ಏಕಾದಶಿ ವ್ರತ ಮಾಡಿ ಅಭೀಷ್ಟೆಯನ್ನು ಹೊಂದುತ್ತಾರೆ.

## ಚೈತ್ರ ॥ ಶುಕ್ಲ ॥ ದ್ವಾದಶೀ

**ದಮನಿಕಾ ಸಮರ್ಪಣ –**

'ಶ್ವೇತದ್ವೀಪೇ ಸಮಾಸೀನಂ ಪ್ರಣಿಪತ್ಯ ಜನಾರ್ದನಮ್ । ಪಪ್ರಚ್ಛ ಸುಮಹಾ -ಪುಣ್ಯಂ ನಾರದೋ ಭಗವತ್ಪ್ರಿಯಃ ॥ (ಪಂಚರಾತ್ರವಾಕ್ಯ) – ಶ್ವೇತದ್ವೀಪದಲ್ಲಿ ಸುಖವಾಗಿ ಕುಳಿತಿರುವ ಜನಾರ್ದನನನ್ನು ಶ್ರೀಹರಿಯ ಪ್ರೀತಿಗೆ ಪಾತ್ರರಾದ ನಾರದರು ನಮಸ್ಕರಿಸಿದರು. ಮಹಾಪುಣ್ಯಕರವಾದ ಪ್ರಶ್ನೆಯನ್ನು ಕೇಳಿದರು. ನಾರದರು ಹೇಳುತ್ತಾರೆ- 'ಉತ್ಸವೇಷು ಚ ಸರ್ವೇಷು ಪ್ರಾಯಶಃ ಪ್ರೀತಿಕೃದ್ಭವೇತ್ ।

ಕೋಽಯಮುತ್ಸವಸಂಜ್ಞೋಽತ್ರ ವಕ್ತುಮರ್ಹಸಿ ಕೇಶವ ॥' ಎಲ್ಲಾ ಉತ್ಸವಗಳೂ ಪ್ರಾಯಶಃ ನಿನಗೆ ಪ್ರೀತಿಕರವಾಗಿವೆ. ಎಲ್ಲಾ ಉತ್ಸವಗಳ ಮಧ್ಯದಲ್ಲಿಯೂ ನಿನಗೆ ಅತಿಪ್ರಿಯವಾದ ಉತ್ಸವವು ಯಾವುದು? ಭಗವಂತನು ಹೇಳುತ್ತಾನೆ – "ತಾತ ನಾರದ ಕಲ್ಯಾಣ, ಸಾಧು ಪೃಷ್ಟಂ ಮಹಾಮುನೇ! ಉತ್ಸವಾಃ ಬಹವಃ ಸಂತಿ ಪುರಾ ಪೃಷ್ಟಾ ಮಹರ್ಷಿಭಿಃ । ವ್ರತೇಷು ಮನ್ಮನೋ ಲಗ್ನಂ ರಹಸ್ಯಂ ಪ್ರವದಾಮಿ ತೇ ". ಕಲ್ಯಾಣ ಸ್ವಭಾವವುಳ್ಳ ಮಹಾಮುನಿಯಾದ ನಾರದನೇ! ಒಳ್ಳೆಯ ಪ್ರಶ್ನೆಯನ್ನು ಮಾಡಿರುವಿ. ಹಿಂದೆ ಮಹರ್ಷಿಗಳಿಂದ ಪ್ರಶ್ನಿಸಲ್ಪಟ್ಟು ತಿಳಿದಿರುವ ಉತ್ಸವಗಳು ಅಸಂಖ್ಯವಾಗಿವೆ. ವ್ರತಗಳೂ ಅಸಂಖ್ಯವಾಗಿವೆ. ನನ್ನ ಮನಸ್ಸು ಯಾವ ಉತ್ಸವದಲ್ಲಿ ಆಸಕ್ತವಾಗಿದೆಯೋ ರಹಸ್ಯವಾದ ಆ ಉತ್ಸವವನ್ನು ನಿನಗಾಗಿ ಹೇಳುವೆನು. 'ಪಂಚೋತ್ಸವಾ ಹಿ ಗೃಹ್ಯಂತೇ ಕಾರ್ತಿಕಃ ಪ್ರಥಮೋತ್ಸವಃ । ವಸಂತೋಽಪಿ ದ್ವಿತೀಯಸ್ತು ದಮನಾಖ್ಯಸ್ತೃತೀಯಕಃ ॥ ಚತುರ್ಥಃ ಫಲಪೂಜಾಖ್ಯಃ ಪವಿತ್ರಾ-ಖ್ಯಸ್ತಥಾಽಪರಃ । ಏತೇ ಮಹೋತ್ಸವಾ ಬ್ರಹ್ಮನ್ ನಿತ್ಯಂ ಪ್ರೀತಿಕರಾ ಮಮ' ಪ್ರತಿವರ್ಷದಲ್ಲಿಯೂ ಮಾಡುವ ಉತ್ಸವಗಳ ಮಧ್ಯದಲ್ಲಿ ಐದು ಉತ್ಸವಗಳು ನನಗೆ ಯಾವಾಗಲೂ ಪ್ರಿಯವಾದವುಗಳು. ಅವುಗಳಲ್ಲಿ ಕಾರ್ತಿಕೋತ್ಸವವು ಮೊದಲನೆಯದು. ವಸಂತೋತ್ಸವವು ಮೂರನೆಯದು. ಫಲಪೂಜೋತ್ಸವವು ನಾಲ್ಕನೆಯದು. ಪವಿತ್ರೋತ್ಸವವು ಐದನೆಯದು.

ದಮನೋತ್ಸವ – 'ಅಥೇದಾನೀಂ ಪ್ರವಕ್ಷ್ಯಾಮಿ ದಮನಾರೋಪಣಕ್ರಿಯಾಂ। ಪವಿತ್ರಪೂರ್ವಿಕಾ ಸಾಽರ್ಚಾ ಕರ್ತವ್ಯಾ ವಿಷ್ಣುಪೂಜಕೈಃ ॥ ಚೈತ್ರೇ ಸಿತೇ ಹರಿದಿನೇ ಪೌರ್ಣಮ್ಯಾಮಥ ವಾಪಿ ವಾ । ವಿಷ್ಣವೇ ದಮನಂ ದದ್ಯಾತ್ ಕೃತ್ವಾತದಧಿವಾಸನಂ॥ ಕರ್ತವ್ಯಂ ತತ್ತು ಪೂರ್ವೇದ್ಯುಃ ಸದ್ಯೋ ವಾಪಿ ವಿಜಾನತಾ । ನಿರ್ವರ್ತ್ಯ ನಿಜಕರ್ಮಾಣಿ ನಿತ್ಯಪೂಜಾಂ ಚ ಚಕ್ರಿಣಃ ॥ ಆಚಾರ್ಯೇಣಾಭ್ಯನುಜ್ಞಾತೋ ಗತ್ವಾ ದಮನವಾಟಿಕಾಮ್ । ಆನೀಯ ದಮನಂ ತತ್ರ ಮಂತ್ರೇಣಾನೇನ ಮಂತ್ರವಿತ್ ॥ ವಿಷ್ಣುಪ್ರಸಾದಸಂಭೂತಾ ಅತ್ರ ಸನ್ನಿಹಿತೋ ಭವ । ವಿಷ್ಣುಕಾರ್ಯಂ ಸಮುದ್ದಿಶ್ಯ ನೇತವ್ಯೋಽಸ್ಯಾಜ್ಞಯಾ ಹರೇಃ ॥ ತತ್ರಾವಾಹ್ಯ ಹರಿಂ ನಿತ್ಯಂ ತಸ್ಮೈ ಕಾಮಾತ್ಮನೇ ನಮಃ । ವಸಂತಾಯ ನಮಸ್ತುಭ್ಯಂ ವೃಕ್ಷಗುಲ್ಮಲತಾಪ್ರಿಯ ॥ ಕಾಮಭಸ್ಮಸಮುದ್ಭೂತ ರತಿಬಾಷ್ಪಪರಿಪ್ಲುತ । ಋಷಿಗಂಧರ್ವದೇವಾದಿವಿಮೋಹನ ನಮೋಽಸ್ತು ತೇ ॥

ಅನೇನ ದಮನಂ ಸ್ಪೃಷ್ಟ್ವಾ ಕಾಮಮನ್ವರ್ಚಯೇತ್ತತಃ । ದೇವಸ್ಯೋತ್ತರಭಾಗೇ ತು ಗೋಮಯೇನೋಪಲಿಪ್ಯ ಚ ॥ ಲಿಖಿತ್ವಾ ಸರ್ವತೋಭದ್ರಂ ತನ್ಮಧ್ಯೇ ಚ ಸಿತಾಂಬುಜಮ್ । ಲಿಖಿತ್ವಾಽಷ್ಟದಲಂ ಪದ್ಮಂ ಕರ್ಣಿಕಾಕೇಸರಾನ್ವಿತಮ್ ॥ ತತ್ರ ಸಂಸ್ಥಾಪ್ಯ ತತ್ಪಾತ್ರಂ ರತಿಂ ಕಾಮಂ ತತೋಽರ್ಚಯೇತ್ । ಸ್ವಗುರೂಕ್ತೇನ ಮನುನಾಽವಾಹಯೇದ್ಗುರ್ವನುಜ್ಞಯಾ ॥ ತತ್ರ ಪೂರ್ವಾದಿಪಾತ್ರೇಷು ರತಿಂ ಕಾಮಂ ಸಮರ್ಚಯೇತ್ ॥

ಓಂ ಹ್ರೀಂ ರತ್ಯೈ ನಮಃ, ಓಂ ಕ್ಲೀಂ ಕಾಮಾಯ ನಮಃ, ಓಂ ಹ್ರೀಂ ಸುಭಗಾಯ್ಯೈ ನಮಃ, ಓಂ ಕ್ಲೀಂ ಭಸ್ಮಶರೀರಾಯ ನಮಃ, ಓಂ ಹ್ರೀಂ ಆಹ್ಲಾದಿನ್ಯೈ ನಮಃ, ಓಂ ಕ್ಲೀಂ ಅನಂಗಾಯ ನಮಃ, ಓಂ ಹ್ರೀಂ ಹರ್ಷಾಯ್ಯೈ ನಮಃ, ಓಂ ಕ್ಲೀಂ ಮನ್ಮಥಾಯ ನಮಃ, ಓಂ ಹ್ರೀಂ ಧೃತ್ಯೈ ನಮಃ, ಓಂ ಕ್ಲೀಂ ವಸಂತಸಖಾಯ ನಮಃ, ಓಂ ಹ್ರೀಂ ರತ್ಯೈ ನಮಃ, ಓಂ ಕ್ಲೀಂ ಇಕ್ಷುಚಾಪಾಯ ನಮಃ, ಓಂ ಹ್ರೀಂ ಪ್ರೀತ್ಯೈ ನಮಃ, ಓಂ ಕ್ಲೀಂ ಪುಷ್ಪಬಾಣಾಯ ನಮಃ, ಓಂ ಹ್ರೀಂ ಸಂಗಮಾಯ್ಯೈ ನಮಃ, ಓಂ ಕ್ಲೀಂ ರತಿಪ್ರಿಯಾಯ ನಮಃ ॥

ಅಷ್ಟಗಂಧಾನಿ ಸಂಭೂಯ ದಮನಂ ಭಾವಯೇತ್ತತಃ । ರತಿಂ ಚ ಕಾಮದೇವಂ ಚ ಉಪಚಾರ್ಯ್ಯೈರ್ಯಥೋಚಿತೈಃ ॥ ಯಜೇದನಲಗಾಯತ್ರೀಂ ಜಪೇದಷ್ಟೋತ್ತರಂ ಶತಮ್ ॥ ಕಾಮದೇವಾಯ ವಿದ್ಮಹೇ । ಪಂಚಬಾಣಾಯ ಧೀಮಹಿ । ತನ್ನೋಽನಂಗಃ ಪ್ರಚೋದಯಾತ್ । ''ನಮಸ್ಕುರ್ಯಾತ್ ತಥಾ ಕಾಮಂ ಮಮ ಮಂತ್ರಮುದೀರಯನ್ । ನಮೋಽಸ್ತು ಪುಷ್ಪಬಾಣಾಯ ಜಗದಾಹ್ವಾನಕಾರಿಣೇ ॥ ಮನ್ಮಥಾಯ ಜಗನ್ಮೈತ್ರರತಿಪ್ರೀತಿಪ್ರದಾಯಿನೇ । ತತಸ್ತು ದಮನಂ ಕಿಂಚಿದ್ ಗೃಹೀತ್ವಾ ಧೂಪವಾಸಿತಮ್ ॥ ವಿಜ್ಞಾಪಯೇತ್ ತತಃ ಕಾಂತಂ ಮಂತ್ರೇಣಾನೇನ ಕಾಮದಮ್ । ಆಮಂತ್ರಿತಾನಿ ದೇವೇಶ ಪ್ರಾತಃಕಾಲೇ ಮಯಾ ಪ್ರಭೋ । ಕರ್ತವ್ಯಂ ಚ ಯಥಾಲಾಭಂ ಪೂಜಾಂ ಕುರ್ವೇ ತವಾಜ್ಞಯಾ । ದಮನಂ ಮೂಲಮಂತ್ರೇಣ ಹ್ಯರ್ಪಯೇದ್ ವಿಷ್ಣುಮೂರ್ಧನಿ ॥ ಧೂಪದೀಪಾದಿಕಂ ದತ್ವಾ ಮಂತ್ರೇಣ ಪ್ರಾರ್ಥಯೇತ್ ತತಃ । ದೇವದೇವ ಜಗನ್ನಾಥ ವಾಂಛಿತಾರ್ಥಫಲಪ್ರದ । ಹೃದಿಸ್ಥಾನ್ ಪೂರಯ ಸ್ವೇಷ್ಟಾನ್ ಶ್ರೀನಿವಾಸ ಸದಾ ಪ್ರಭೋ । ತತಸ್ತತ್ರೈವ ದಮನಂ

ಕೋಽಯಮುತ್ಸವಸಂಜ್ಞೋಽತ್ರ ವಕ್ತುಮರ್ಹಸಿ ಕೇಶವ ॥' ಎಲ್ಲಾ ಉತ್ಸವಗಳೂ ಪ್ರಾಯಶಃ ನಿನಗೆ ಪ್ರೀತಿಕರವಾಗಿವೆ. ಎಲ್ಲಾ ಉತ್ಸವಗಳ ಮಧ್ಯದಲ್ಲಿಯೂ ನಿನಗೆ ಅತಿಪ್ರಿಯವಾದ ಉತ್ಸವವು ಯಾವುದು? ಭಗವಂತನು ಹೇಳುತ್ತಾನೆ – ''ತಾತ ನಾರದ ಕಲ್ಯಾಣ, ಸಾಧು ಪೃಷ್ಟಂ ಮಹಾಮುನೇ! ಉತ್ಸವಾಃ ಬಹವಃ ಸಂತಿ ಪುರಾ ಪೃಷ್ಟಾ ಮಹರ್ಷಿಭಿಃ । ವ್ರತೇಷು ಮನ್ಮನೋ ಲಗ್ನಂ ರಹಸ್ಯಂ ಪ್ರವದಾಮಿ ತೇ ''. ಕಲ್ಯಾಣ ಸ್ವಭಾವವುಳ್ಳ ಮಹಾಮುನಿಯಾದ ನಾರದನೇ! ಒಳ್ಳೆಯ ಪ್ರಶ್ನೆಯನ್ನು ಮಾಡಿರುವಿ. ಹಿಂದೆ ಮಹರ್ಷಿಗಳಿಂದ ಪ್ರಶ್ನಿಸಲ್ಪಟ್ಟು ತಿಳಿದಿರುವ ಉತ್ಸವಗಳು ಅಸಂಖ್ಯವಾಗಿವೆ. ವ್ರತಗಳೂ ಅಸಂಖ್ಯವಾಗಿವೆ. ನನ್ನ ಮನಸ್ಸು ಯಾವ ಉತ್ಸವದಲ್ಲಿ ಆಸಕ್ತವಾಗಿದೆಯೋ ರಹಸ್ಯವಾದ ಆ ಉತ್ಸವವನ್ನು ನಿನಗಾಗಿ ಹೇಳುವೆನು. 'ಪಂಚೋತ್ಸವಾ ಹಿ ಗೃಹ್ಯಂತೇ ಕಾರ್ತಿಕಃ ಪ್ರಥಮೋತ್ಸವಃ । ವಸಂತೋಽಪಿ ದ್ವಿತೀಯಸ್ತು ದಮನಾಖ್ಯಸ್ತೃತೀಯಕಃ ॥ ಚತುರ್ಥಃ ಫಲಪೂಜಾಖ್ಯಃ ಪವಿತ್ರಾ-ಖ್ಯಸ್ತಥಾಽಪರಃ । ಏತೇ ಮಹೋತ್ಸವಾ ಬ್ರಹ್ಮನ್ ನಿತ್ಯಂ ಪ್ರೀತಿಕರಾ ಮಮ' ಪ್ರತಿವರ್ಷದಲ್ಲಿಯೂ ಮಾಡುವ ಉತ್ಸವಗಳ ಮಧ್ಯದಲ್ಲಿ ಐದು ಉತ್ಸವಗಳು ನನಗೆ ಯಾವಾಗಲೂ ಪ್ರಿಯವಾದವುಗಳು. ಅವುಗಳಲ್ಲಿ ಕಾರ್ತಿಕೋತ್ಸವವು ಮೊದಲನೆಯದು. ವಸಂತೋತ್ಸವವು ಮೂರನೆಯದು. ಫಲಪೂಜೋತ್ಸವವು ನಾಲ್ಕನೆಯದು. ಪವಿತ್ರೋತ್ಸವವು ಐದನೆಯದು.

ದಮನೋತ್ಸವ – 'ಅಥೇದಾನೀಂ ಪ್ರವಕ್ಷ್ಯಾಮಿ ದಮನಾರೋಪಣಕ್ರಿಯಾಂ। ಪವಿತ್ರಪೂರ್ವಿಕಾ ಸಾಽರ್ಚಾ ಕರ್ತವ್ಯಾ ವಿಷ್ಣುಪೂಜಕೈಃ ॥ ಚೈತ್ರೇ ಸಿತೇ ಹರಿದಿನೇ ಪೌರ್ಣಮ್ಯಾಮಥ ವಾಪಿ ವಾ । ವಿಷ್ಣವೇ ದಮನಂ ದದ್ಯಾತ್ ಕೃತ್ವಾತದಧಿವಾಸನಂ॥ ಕರ್ತವ್ಯಂ ತತ್ತು ಪೂರ್ವೇದ್ಯುಃ ಸದ್ಯೋ ವಾಪಿ ವಿಜಾನತಾ । ನಿರ್ವರ್ತ್ಯ ನಿಜಕರ್ಮಾಣಿ ನಿತ್ಯಪೂಜಾಂ ಚ ಚಕ್ರಿಣಃ ॥ ಆಚಾರ್ಯೇಣಾಭ್ಯನುಜ್ಞಾತೋ ಗತ್ವಾ ದಮನವಾಟಿಕಾಮ್ । ಆನೀಯ ದಮನಂ ತತ್ರ ಮಂತ್ರೇಣಾನೇನ ಮಂತ್ರವಿತ್ ॥ ವಿಷ್ಣುಪ್ರಸಾದಸಂಭೂತಾ ಅತ್ರ ಸನ್ನಿಹಿತೋ ಭವ । ವಿಷ್ಣುಕಾರ್ಯಂ ಸಮುದ್ದಿಶ್ಯ ನೇತವ್ಯೋಽಸ್ಯಾಜ್ಞಯಾ ಹರೇಃ ॥ ತತ್ರಾವಾಹ್ಯ ಹರಿಂ ನಿತ್ಯಂ ತಸ್ಮೈ ಕಾಮಾತ್ಮನೇ ನಮಃ । ವಸಂತಾಯ ನಮಸ್ತುಭ್ಯಂ ವೃಕ್ಷಗುಲ್ಮಲತಾಪ್ರಿಯ ॥ ಕಾಮಭಸ್ಮಸಮುದ್ಭೂತ ರತಿಬಾಷ್ಪಪರಿಪ್ಲುತ । ಋಷಿಗಂಧರ್ವದೇವಾದಿವಿಮೋಹನ ನಮೋಽಸ್ತು ತೇ ॥

ಅನೇನ ದಮನಂ ಸ್ಪೃಷ್ಟ್ವಾ ಕಾಮಮನ್ವರ್ಚಯೇತ್ತತಃ । ದೇವಸ್ಯೋತ್ತರಭಾಗೇ ತು ಗೋಮಯೇನೋಪಲಿಪ್ಯ ಚ ॥ ಲಿಖಿತ್ವಾ ಸರ್ವತೋಭದ್ರಂ ತನ್ಮಧ್ಯೇ ಚ ಸಿತಾಂಬುಜಮ್ । ಲಿಖಿತ್ವಾಽಷ್ಟದಲಂ ಪದ್ಮಂ ಕರ್ಣಿಕಾಕೇಸರಾನ್ವಿತಮ್ ॥ ತತ್ರ ಸಂಸ್ಥಾಪ್ಯ ತತ್ಪಾತ್ರಂ ರತಿಂ ಕಾಮಂ ತತೋಽರ್ಚಯೇತ್ । ಸ್ವಗುರೂಕ್ತೇನ ಮನುನಾಽವಾಹಯೇದ್ಗುರ್ವನುಜ್ಞಯಾ ॥ ತತ್ರ ಪೂರ್ವಾದಿಪಾತ್ರೇಷು ರತಿಂ ಕಾಮಂ ಸಮರ್ಚಯೇತ್ ॥

ಓಂ ಹ್ರೀಂ ರತ್ಯೈ ನಮಃ, ಓಂ ಕ್ಲೀಂ ಕಾಮಾಯ ನಮಃ, ಓಂ ಹ್ರೀಂ ಸುಭಗಾಯೈ ನಮಃ, ಓಂ ಕ್ಲೀಂ ಭಸ್ಮಶರೀರಾಯ ನಮಃ, ಓಂ ಹ್ರೀಂ ಆಹ್ಲಾದಿನ್ಯೈ ನಮಃ, ಓಂ ಕ್ಲೀಂ ಅನಂಗಾಯ ನಮಃ, ಓಂ ಹ್ರೀಂ ಹರ್ಷಾಯೈ ನಮಃ, ಓಂ ಕ್ಲೀಂ ಮನ್ಮಥಾಯ ನಮಃ, ಓಂ ಹ್ರೀಂ ಧೃತ್ಯೈ ನಮಃ, ಓಂ ಕ್ಲೀಂ ವಸಂತಸಖಾಯ ನಮಃ, ಓಂ ಹ್ರೀಂ ರತ್ಯೈ ನಮಃ, ಓಂ ಕ್ಲೀಂ ಇಕ್ಷುಚಾಪಾಯ ನಮಃ, ಓಂ ಹ್ರೀಂ ಪ್ರೀತ್ಯೈ ನಮಃ, ಓಂ ಕ್ಲೀಂ ಪುಷ್ಪಬಾಣಾಯ ನಮಃ, ಓಂ ಹ್ರೀಂ ಸಂಗಮಾಯೈ ನಮಃ, ಓಂ ಕ್ಲೀಂ ರತಿಪ್ರಿಯಾಯ ನಮಃ ॥

ಅಷ್ಟಗಂಧಾನಿ ಸಂಭೂಯ ದಮನಂ ಭಾವಯೇತ್ತತಃ । ರತಿಂ ಚ ಕಾಮದೇವಂ ಚ ಉಪಚಾರ್ಯೈರ್ಯಥೋಚಿತೈಃ ॥ ಯಜೇದನಲಗಾಯತ್ರೀಂ ಜಪೇದಷ್ಟೋತ್ತರಂ ಶತಮ್ ॥ ಕಾಮದೇವಾಯ ವಿದ್ಮಹೇ । ಪಂಚಬಾಣಾಯ ಧೀಮಹಿ । ತನ್ನೋಽನಂಗಃ ಪ್ರಚೋದಯಾತ್ । ''ನಮಸ್ಕುರ್ಯಾತ್ ತಥಾ ಕಾಮಂ ಮಮ ಮಂತ್ರಮುದೀರಯನ್ । ನಮೋಽಸ್ತು ಪುಷ್ಪಬಾಣಾಯ ಜಗದಾಹ್ಲಾನಕಾರಿಣೇ ॥ ಮನ್ಮಥಾಯ ಜಗನ್ನೈತ್ರರತಿಪ್ರೀತಿಪ್ರದಾಯಿನೇ । ತತಸ್ತು ದಮನಂ ಕಿಂಚಿದ್ ಗೃಹೀತ್ವಾ ಧೂಪವಾಸಿತಮ್ ॥ ವಿಜ್ಞಾಪಯೇತ್ ತತಃ ಕಾಂತಂ ಮಂತ್ರೇಣಾನೇನ ಕಾಮದಮ್ । ಆಮಂತ್ರಿತಾನಿ ದೇವೇಶ ಪ್ರಾತಃಕಾಲೇ ಮಯಾ ಪ್ರಭೋ । ಕರ್ತವ್ಯಂ ಚ ಯಥಾಲಾಭಂ ಪೂಜಾಂ ಕುರ್ವೇ ತವಾಜ್ಞಯಾ । ದಮನಂ ಮೂಲಮಂತ್ರೇಣ ಹ್ಯರ್ಪಯೇದ್ ವಿಷ್ಣುಮೂರ್ಧನಿ ॥ ಧೂಪದೀಪಾದಿಕಂ ದತ್ವಾ ಮಂತ್ರೇಣ ಪ್ರಾರ್ಥಯೇತ್ ತತಃ । ದೇವದೇವ ಜಗನ್ನಾಥ ವಾಂಛಿತಾರ್ಥಫಲಪ್ರದ । ಹೃದಿಸ್ಥಾನ್ ಪೂರಯ ಸ್ವೇಷ್ಟಾನ್ ಶ್ರೀನಿವಾಸ ಸದಾ ಪ್ರಭೋ । ತತಸ್ತತ್ರೈವ ದಮನಂ

ನಾಮಮಂತ್ರಾವಗೂಹಿತಮ್ । ರಕ್ಷಿತಂ ಚಾಸ್ತ್ರಮಂತ್ರೇಣ ಸ್ವಯುಕ್ತಮಧಿವಾಸ-ಯೇತ್ ॥ ತತೋ ಜಾಗರಣಂ ಕುರ್ಯಾದ್ ರಾತ್ರೌ ಹರಿಪರಾಯಣಃ । ಪ್ರಭಾತೇ ನಿತ್ಯಕರ್ಮಾಣಿ ನಿರ್ವರ್ತ್ಯ ಹರಿಮರ್ಚಯೇತ್ । ಆವಾಹನಾದಿ ಪುಷ್ಪಾಂತಂ ಸ್ವಾಗಮೋಕ್ತವಿಧಾನತಃ ॥ ಧ್ಯಾಯಂಸ್ತನ್ಮೂಲಮಂತ್ರೇಣ ಹಸ್ತಾಭ್ಯಾಂ ವಿಷ್ಣು-ಮೂರ್ಧನಿ । ಸಮಾರೋಪ್ಯಾಽಥ ಧೂಪಾದ್ಯೈರರ್ಚಯೇದ್ ವಿಷ್ಣುಮವ್ಯಯಮ್ ॥ ತತೋ ವಿಜ್ಞಾಪಯೇದ್ದೇವಂ ಕಿಂಚಿದಾದಾಯ ಮಂತ್ರತಃ । ಭಗವನ್ನತಿರಿಕ್ತಂ ವಾ ನ್ಯೂನಂ ವಾ ಯನ್ಮಯಾ ಕೃತಮ್ ॥ ಸರ್ವಂ ತದಸ್ತು ಸಂಪೂರ್ಣಂ ಪೂರ್ವ-ದಾಮನಕಂ ಮಮ । ಇತಿ ಸಂಪ್ರಾರ್ಥ್ಯ ಲಕ್ಷ್ಮ್ಯಾದಿ ದೇವಾನ್ ತತ್ಕ್ರಮತೋ ಯಜೇತ್ ॥ ತತಃ ಸ್ವಗುರುಮಭ್ಯರ್ಚ್ಯ ಗಂಧಪುಷ್ಪಾಂಬರಾದಿಭಿಃ । ದತ್ವಾ ದಮನಕಂ ತಸ್ಮೈ ನಮಸ್ಕೃತ್ಯ ಪ್ರಸಾದ್ಯ ಚ ॥ ಪೂಜಯೇದ್ ವೈಷ್ಣವಾನ್ ವಿಪ್ರಾನ್ ಗಂಧ-ಪುಷ್ಪಾಕ್ಷತಾದಿಭಿಃ । ಜಲಕ್ರೀಡಂ ತತಃ ಕುರ್ಯಾತ್ ಪ್ರಯತಃ ಸಖಿಭಿಃ ಸ್ವಕೈಃ । ಅಥವಾ ಕೃಷ್ಣಪಾದಾಬ್ಜಸ್ಪೃಷ್ಟಚಂದನವಾರಿಣಾ । ಕುರ್ವೀತ ಮಾರ್ಜನಂ ಸಾರ್ಧಂ ಬಂಧುಭಿ -ರ್ಭಕ್ತಿನಮ್ರಧೀಃ ॥ ತತಸ್ತು ವೈಷ್ಣವಾನ್ ಸರ್ವಾನಾಚಾರ್ಯಪ್ರಮುಖಾನ್ ದ್ವಿಜಾನ್ । ಭೋಜಯಿತ್ವಾ ತತಃ ಸಮ್ಯಕ್ ಮೃಷ್ಟಮನ್ನಂ ಸ್ವಶಕ್ತಿತಃ ॥ ಭುಂಜೀತ ಸ್ವಜನೋಪೇತಃ ಸ್ವಯಂ ಸಂತುಷ್ಟಮಾನಸಃ । ಏವಂ ಯಃ ಕುರುತೇ ವಿದ್ವಾನ್ ದಮನಾರೋಪಣಕ್ರಿಯಾಮ್ ॥ ತಸ್ಯ ಸಾಂವತ್ಸರೀ ಪೂಜಾ ವೈಷ್ಣವೀ ಸಫಲಾ ಭವೇತ್ । ಯೋ ನ ಕುರ್ಯಾದಿದಂ ಸರ್ವಂ ಶೋಭನಂ ಶ್ರೀಪತಿಪ್ರಿಯಂ ॥ ಪೂಜಾ ನಿಷ್ಫಲತಾಂ ಯಾತಿ ವಾರ್ಷಿಕೀ ನಾತ್ರ ಸಂಶಯಃ । ತಸ್ಮಾದ್ ವಿಷ್ಣ್ವರ್ಚನಂ ಕಾರ್ಯಂ ಭಕ್ತಿದಂ ಪ್ರತಿವಾರ್ಷಿಕಮ್ । ತತ್ಪೂಜಾಫಲಸಿದ್ಧ್ಯರ್ಥಂ ಪ್ರೀತಯೇ ಚಕ್ರಪಾಣಿನಃ ॥ (ಪಂಚರಾತ್ರವಚನಮ್)

ಇನ್ನು ಮುಂದೆ ದಮನವನ್ನು ಶ್ರೀಹರಿಗೆ ಸಮರ್ಪಿಸುವ ರೀತಿಯನ್ನು ಹೇಳುವೆನು ಕೇಳು. ದಮನದಿಂದ ವಿಷ್ಣುಪೂಜೆಯನ್ನು ಮಾಡುವವರು ಮೊದಲು ಪವಿತ್ರವನ್ನು ಧರಿಸಿಯೇ ಮಾಡಬೇಕು. ಚೈತ್ರಮಾಸ ಶುಕ್ಲಪಕ್ಷ ದ್ವಾದಶೀ ಅಥವಾ ಹುಣ್ಣಿಮೆ ದಿನದಲ್ಲಿ ವಿಷ್ಣುವಿಗೆ ದಮನವನ್ನು ಸಮರ್ಪಿಸಬೇಕು. ಮೊದಲನೇ ದಿನದಲ್ಲಿ ಅಥವಾ ಅಂದೇ ಅಧಿವಾಸನವನ್ನು ಮಾಡಿ, ಸಮರ್ಪಿಸಬೇಕು. ನಿತ್ಯ-ಕರ್ಮಗಳನ್ನು ಮುಗಿಸಬೇಕು. ಶ್ರೀಹರಿಯ ನಿತ್ಯಪೂಜೆಯನ್ನೂ ಮುಗಿಸಬೇಕು.

ಗುರುಗಳನ್ನು ನಮಸ್ಕರಿಸಿ ಅವರಿಂದ ಅನುಮತಿಯನ್ನು ಪಡೆಯಬೇಕು. ಅನಂತರದಲ್ಲಿ ದಮನದ ವನಕ್ಕೆ ಹೋಗಬೇಕು.

**ಅಧಿವಾಸನಕ್ರಮ** – ಮುಂದೆ ಹೇಳುವ ಮಂತ್ರದಿಂದ ''ವಿಷ್ಣುಪ್ರಸಾದ-ಸಂಭೂತ ಅತ್ರ ಸನ್ನಿಹಿತೋ ಭವ । ವಿಷ್ಣುಕಾರ್ಯಂ ಸಮುದ್ದಿಶ್ಯ ನೇತವ್ಯೋಽಸ್ಯಾಜ್ಞಯಾ ಹರೇಃ'' ವಿಷ್ಣುವಿನ ಅನುಗ್ರಹದಿಂದ ಹುಟ್ಟಿರುವ ಓ ದಮನವೇ! ಇಲ್ಲಿ ನೀನು ಸನ್ನಿಹಿತನಾಗು. ಶ್ರೀಹರಿಯ ಆಜ್ಞೆಯಿಂದ ಶ್ರೀವಿಷ್ಣುಕಾರ್ಯಕ್ಕಾಗಿ ನಿನ್ನನ್ನು ಕರೆದುಕೊಂಡು ಹೋಗುವೆನು - ಎಂದು ದಮನವನ್ನು ಪ್ರಾರ್ಥಿಸಬೇಕು.

ತತ್ರಾವಾಹ್ಯ ಹರಿಂ ನಿತ್ಯಂ ತಸ್ಮೈ ಕಾಮಾತ್ಮನೇ ನಮಃ । ದಮನಾಯ ಕಾಮಾತ್ಮನೇ ನಮಃ ಎಂಬ ಮಂತ್ರದಿಂದ ಶ್ರೀಹರಿಯನ್ನು ಆವಾಹಿಸಿ ಶ್ರೀಹರಿಯನ್ನೂ ದಮನವನ್ನೂ ಪೂಜಿಸಬೇಕು. ವಸಂತಾಯ ನಮಸ್ತುಭ್ಯಂ ವೃಕ್ಷಗುಲ್ಮಲತಾಪ್ರಿಯ । ಕಾಮಾಭಸ್ಮಸಮುದ್ಭೂತ ರತಿಬಾಷ್ಪಪರಿಪ್ಲುತ ॥ ಋಷಿಗಂಧರ್ವದೇವಾದಿವಿಮೋಹನ ನಮೋಽಸ್ತು ತೇ । ಅನೇನ ದಮನಂ ಸ್ಪೃಷ್ಟ್ವಾ ಕಾಮಮಭ್ಯರ್ಚಯೇತ್ ತತಃ ॥ – ಮರಗಳು, ಪೊದರುಗಳು ಮತ್ತು ಲತೆಗಳಲ್ಲಿ ತುಂಬಾ ಪ್ರೀತಿಯಿಂದ ಯುಕ್ತನಾಗಿರುವವನೂ, ಕಾಮನ ಬೂದಿಯಿಂಧ ಹುಟ್ಟಿದವನೂ, ರತಿದೇವಿಯ ಕಣ್ಣೀರುಗಳಿಂದ ಒದ್ದೆಯಾದವನೂ, ಋಷಿಗಂಧರ್ವದೇವಾದಿಗಳನ್ನು ಮೋಹಿತ-ರನ್ನಾಗಿ ಮಾಡುತ್ತಿರುವವನೂ ಆಗಿರುವ ಸಂತನೇ! ನಿನ್ನನ್ನು ನಮಸ್ಕರಿಸುವೆನು - ಎಂಬ ಮಂತ್ರದಿಂದ ದಮನವನ್ನು ಮುಟ್ಟಬೇಕು. ಆಮೇಲೆ ಮನ್ಮಥನನ್ನು ಪೂಜಿಸಬೇಕು. ಅನಂತರದಲ್ಲಿ ದೇವರನ್ನು ಮೆಲ್ಲಗೆ ಎತ್ತಬೇಕು. ಎಂಟು ಬಿದಿರಿನ ಪಾತ್ರೆಗಳನ್ನು ತೆಗೆದುಕೊಳ್ಳಬೇಕು. ಅವುಗಳಲ್ಲಿ ಮಧ್ಯದಲ್ಲಿ ಒಂದರಲ್ಲಿ ದೇವರನ್ನು ಇಡಬೇಕು. ಬಿಳಿ ಬಟ್ಟೆಯನ್ನು ಹೊದ್ದಿಸಬೇಕು. ಅಲ್ಲಿಂದ ಹೊರಟು ದೇವರಮನೆಗೆ ಹೋಗಬೇಕು. ದೇವರ ಮನೆಯಲ್ಲಿ ದೇವರು ಇರುವ ಸ್ಥಳಕ್ಕಿಂತ ಉತ್ತರದಿಕ್ಕಿನಲ್ಲಿ ಗೋಮಯದಿಂದ ಮಂಡಲವನ್ನು ಮಾಡಬೇಕು. ಆ ಮಂಡಲದ ಮೇಲೆ ತಂತ್ರಸಾರದಲ್ಲಿ ಹೇಳಿದಂತೆ ಸರ್ವತೋಭದ್ರಮಂಡಲವನ್ನು ಬರೆಯಬೇಕು. ಆ ಸರ್ವತೋಭದ್ರಮಂಡಲದ ಮಧ್ಯದಲ್ಲಿ ಬಿಳಿಯ ಎಂಟು ದಳವುಳ್ಳ ಕಮಲವನ್ನು ಬರೆಯಬೇಕು. ಆ ಕಮಲದಲ್ಲಿ ಕರ್ಣಿಕೆಯನ್ನೂ, ಕೇಸರಗಳನ್ನೂ ಬರೆಯಬೇಕು.

ಕಮಲದ ಎಂಟು ದಳಗಳಲ್ಲಿ ಹಿಂದೆ ಹೇಳಿದ ಬಿದಿರಿನ ಪಾತ್ರೆಗಳನ್ನು ಇಡಬೇಕು. ಆ ಪಾತ್ರೆಗಳಲ್ಲಿ ರತಿಯನ್ನೂ ಮನ್ಮಥನನ್ನೂ ಪೂಜಿಸಬೇಕು. ಗುರುಗಳ ಅನುಜ್ಞೆಯನ್ನು ಪಡೆದು ಗುರುಗಳಿಂದ ಹೇಳಲ್ಪಟ್ಟ ಮಂತ್ರಗಳಿಂದ ರತಿಯನ್ನೂ, ಮನ್ಮಥನನ್ನೂ ಆವಾಹನೆ ಮಾಡಬೇಕು. ಎಂಟು ದಿಕ್ಕುಗಳಲ್ಲಿ ಎಂಟು ಪಾತ್ರೆಗಳಲ್ಲಿ ಕ್ರಮವಾಗಿ ಎಂಟು ಮಂತ್ರಗಳಿಂದ ರತಿಯನ್ನೂ ಮನ್ಮಥನನ್ನೂ ಪೂಜಿಸಬೇಕು. ಕ್ರಮವಾಗಿ ಎಂಟು ರತಿಮಂತ್ರಗಳನ್ನೂ, ಎಂಟು ಮನ್ಮಥಮಂತ್ರಗಳನ್ನೂ ಹೇಳುವೆವು. ಪೂರ್ವದಿಕ್ಕಿನಲ್ಲಿರುವ ಪಾತ್ರೆಯಿಂದಾರಂಭಿಸಿ ಎಂಟು ದಿಕ್ಕುಗಳಲ್ಲಿ-ರುವ ಎಂಟು ಪಾತ್ರೆಗಳಲ್ಲಿ ರತಿಯನ್ನೂ, ಮನ್ಮಥನನ್ನೂ ಪೂಜಿಸಬೇಕು.

(1) ಓಂ ಹ್ರೀಂ ರತ್ಯೈ ನಮಃ, ಓಂ ಕ್ಲೀಂ ಕಾಮಾಯ ನಮಃ, (2) ಓಂ ಹ್ರೀಂ ಸುಭಗಾಯೈ ನಮಃ, ಓಂ ಕ್ಲೀಂ ಭಸ್ಮಶರೀರಾಯ ನಮಃ, (3) ಓಂ ಹ್ರೀಂ ಆಹ್ಲಾದಿನ್ಯೈ ನಮಃ, ಓಂ ಕ್ಲೀಂ ಅನಂಗಾಯ ನಮಃ, (4) ಓಂ ಹ್ರೀಂ ಹರ್ಷಾಯೈ ನಮಃ, ಓಂ ಕ್ಲೀಂ ಮನ್ಮಥಾಯ ನಮಃ, (5) ಓಂ ಹ್ರೀಂ ಧೃತ್ಯೈ ನಮಃ, ಓಂ ಕ್ಲೀಂ ವಸಂತಸಖಾಯ ನಮಃ, (6) ಓಂ ಹ್ರೀಂ ರತ್ಯೈ ನಮಃ, ಓಂ ಕ್ಲೀಂ ಇಕ್ಷುಚಾಪಾಯ ನಮಃ, (7) ಓಂ ಹ್ರೀಂ ಪ್ರೀತ್ಯೈ ನಮಃ, ಓಂ ಕ್ಲೀಂ ಪುಷ್ಪಬಾಣಾಯ ನಮಃ, (8) ಓಂ ಹ್ರೀಂ ಸಂಗಮಾಯೈ ನಮಃ, ಓಂ ಕ್ಲೀಂ ರತಿಪ್ರಿಯಾಯ ನಮಃ ॥

ಹೀಗೆ ಎಂಟು ರತಿಮಂತ್ರಗಳಿಂದ ರತಿಯನ್ನೂ, ಮನ್ಮಥಮಂತ್ರಗಳಿಂದ ಮನ್ಮಥನನ್ನೂ ಪೂಜಿಸಬೇಕು. ನೂರೆಂಟುಸಲ ಅನಂಗಗಾಯತ್ರೀಯನ್ನು ಜಪಿಸ-ಬೇಕು. 'ಕಾಮದೇವಾಯ ವಿದ್ಮಹೇ ಪಂಚಬಾಣಾಯ ಧೀಮಹಿ । ತನ್ನೋಽನಂಗಃ ಪ್ರಚೋದಯಾತ್' - (ಅನಂಗಗಾಯತ್ರೀಮಂತ್ರ).

''ನಮೋಽಸ್ತು ಪುಷ್ಪಬಾಣಾಯ ಜಗದಾಹ್ವಾನಕಾರಿಣೇ । ಮನ್ಮಥಾಯ ಜಗ-ನ್ಮೈತ್ರ ರತಿಪ್ರೀತಿಪ್ರದಾಯಿನೇ ॥ ಅಂದರೆ 'ಪುಷ್ಪಬಾಣನಾಗಿಯೂ ಜಗತ್ತಿನಲ್ಲಿರುವ ಸರ್ವರನ್ನೂ ಆಹ್ವಾನ ಮಾಡುವವನಾಗಿಯೂ, ಸಕಲಪ್ರಪಂಚಕ್ಕೂ ಮಿತ್ರತ್ವವನ್ನೂ ಪ್ರೀತಿಗಳನ್ನೂ ಕೊಡುವವನಾಗಿಯೂ ಇರುವ ಓ ಮನ್ಮಥ! ನಿನಗೆ ನಮಸ್ಕಾರ'' ಎಂದು ನನ್ನ ಮಂತ್ರದಿಂದ ಸ್ತುತಿಸಬೇಕು.

ಅನಂತರದಲ್ಲಿ ಸ್ವಲ್ಪ ದಮನವನ್ನು ತೆಗೆಯಬೇಕು. ಧೂಪವನ್ನು ತೋರಿಸ-

ಬೇಕು. ಆಮಂತ್ರಿತಾನಿ ದೇವೇಶ ಪ್ರಾತಃಕಾಲೇ ಮಯಾ ಪ್ರಭೋ । ಕರ್ತವ್ಯಂ ಚ ಯಥಾಲಾಭಂ ಪೂಜಾಂ ಕುರ್ವೇ ತವಾಜ್ಞಯಾ ॥ ಅಂದರೆ ''ಓ ಪ್ರಭೋ! ಇಂದು ಬೆಳಿಗ್ಗೆ ಎಲ್ಲಾ ದೇವತೆಗಳನ್ನೂ ಕರೆದಿರುವೆನು. ನನ್ನ ಶಕ್ತಿಯನ್ನು ಅನುಸರಿಸಿ ಅವರೆಲ್ಲರ ಪೂಜೆಯನ್ನು ಮಾಡಬೇಕು. ನಿನ್ನ ಆಜ್ಞೆಯಿಂದ ಮಾಡುವೆನು. ಸರ್ವರನ್ನೂ ತೃಪ್ತಿಪಡಿಸು'' ಎಂದು ಪ್ರಾರ್ಥಿಸಬೇಕು. ಅನಂತರದಲ್ಲಿ ಸ್ವಲ್ಪ ದಮನ ತೆಗೆದು ಕಾಮನ ಮೂಲಮಂತ್ರದಿಂದ ವಿಷ್ಣುವಿನ ತಲೆಯಲ್ಲಿ ಇಡಬೇಕು. ಪುನಃ ಧೂಪ, ಆರತಿ ಮುಂತಾದವುಗಳನ್ನು ಮಾಡಬೇಕು. ''ದೇವದೇವ ಜಗನ್ನಾಥ, ವಾಂಛಿತಾರ್ಥಫಲಪ್ರದ । ಹೃದಿಸ್ಥಾನ್ ಪೂರಯ ಸ್ವೇಷ್ಟಾನ್ ಶ್ರೀನಿವಾಸ ಸದಾ ಪ್ರಭೋ'' ಅಂದರೆ ಪ್ರಭೋ! ದೇವದೇವ, ಜಗನ್ನಾಥ, ವಾಂಛಿತಾರ್ಥ-ಫಲಪ್ರದ, ಶ್ರೀನಿವಾಸ ನನ್ನ ಮನಸ್ಸಿನಲ್ಲಿರುವ ನನ್ನ ಇಷ್ಟಾರ್ಥಗಳನ್ನು ಪೂರೈಸು'' ಎಂದು ಪ್ರಾರ್ಥಿಸಬೇಕು. ಅಲ್ಲಿಯೇ ದಮನಕ್ಕೆ ಅಧಿವಾಸವನ್ನು ಮಾಡಬೇಕು. ರತಿಮಂತ್ರಗಳಿಂದಲೂ, ಮನ್ಮಥಮಂತ್ರಗಳಿಂದಲೂ ದಮನವನ್ನು ಎಲ್ಲಾ ಕಡೆಯಿಂದಲೂ ಆಚ್ಛಾದನೆ ಮಾಡಬೇಕು. ಅಸ್ತ್ರಮಂತ್ರದಿಂದ ರಕ್ಷಿಸಬೇಕು. ಅಂದು ರಾತ್ರಿ ಜಾಗರಣವನ್ನು ಮಾಡಬೇಕು. ಇದು ಮೊದಲನೆಯ ದಿನದಲ್ಲಿ ಮಾಡುವ ಅಧಿವಾಸನವಿಧಿ.

**ದಮನಧಾರಣವಿಧಿ**– ಮರುದಿನದಲ್ಲಿ ಬೆಳಿಗ್ಗೆ ಎದ್ದು ತನ್ನ ನಿತ್ಯಕರ್ಮಗಳನ್ನು ಮುಗಿಸಬೇಕು. ಶ್ರೀಹರಿಯನ್ನು ಪ್ರತಿದಿವಸದಂತೆ ಪೂಜಿಸಬೇಕು. ತನ್ನ ಆಗಮದಲ್ಲಿ ಹೇಳಿದ ವಿಧಿಯಿಂದ ಆವಾಹನೆಯಿಂದ ಆರಂಭಿಸಿ ಪುಷ್ಪಸಮರ್ಪಣೆಯವರೆಗೆ ಪೂಜೆಯನ್ನು ಮಾಡಬೇಕು. ತನ್ನ ಎರಡು ಕೈಗಳಿಂದ ಶ್ರೀಹರಿಯ ತಲೆಯಲ್ಲಿ ದಮನವನ್ನು ಇಡಬೇಕು. ಅನಂತರದಲ್ಲಿ ಧೂಪ, ನೀರಾಜನ ಮುಂತಾದವು-ಗಳಿಂದ ಪೂಜಿಸಬೇಕು. ತಲೆಯನ್ನು ಬಗ್ಗಿಸಿ ''ಭಗವನ್ನತಿರಿಕ್ತಂ ವಾ ನ್ಯೂನಂ ವಾ ಯನ್ಮಯಾ ಕೃತಮ್ । ಸರ್ವಂ ತದಸ್ತು ಸಂಪೂರ್ಣಂ ಪೂರ್ವದಾಮನಕಂ ಮಮ'' – ಓ ಭಗವನ್! ದಮನವನ್ನು ಸಮರ್ಪಿಸುವುದಕ್ಕಿಂತ ಪೂರ್ವದಲ್ಲಿ ನಾನು ಮಾಡಿರುವ ಪೂಜೆಗಳಲ್ಲಿ ನ್ಯೂನವಾಗಿರಬಹುದು. ಅಥವಾ ಅಧಿಕವಾಗಿರ-ಬಹುದು. ಅದೆಲ್ಲವೂ ಸಂಪೂರ್ಣಫಲವನ್ನು ಕೊಡಲಿ ಎಂದು ಪ್ರಾರ್ಥಿಸಬೇಕು.

ಅನಂತರದಲ್ಲಿ ಲಕ್ಷ್ಮೀ, ಬ್ರಹ್ಮಮುಂತಾದ ಸಕಲದೇವತೆಗಳನ್ನೂ ತಾರತಮ್ಯ-ಕ್ರಮದಿಂದ ಪೂಜಿಸಬೇಕು. ತನ್ನ ಗುರುಗಳನ್ನು ಗಂಧ, ಪುಷ್ಪ, ವಸ್ತ್ರ ಮುಂತಾದವುಗಳಿಂದ ಪೂಜಿಸಬೇಕು. ನಮಸ್ಕರಿಸಬೇಕು. ಸಂತೋಷಪಡಿಸಬೇಕು. ದಮನವನ್ನು ಅವರಿಗೆ ಕೊಡಬೇಕು. ವಿಷ್ಣುಭಕ್ತರಾದ ಬ್ರಾಹ್ಮಣರನ್ನು ಗಂಧ, ಪುಷ್ಪ, ಮಂತ್ರಾಕ್ಷತೆಗಳಿಂದ ಪೂಜಿಸಬೇಕು. ಅನಂತರದಲ್ಲಿ ಜಲಕ್ರೀಡೆಯನ್ನು ಮಾಡಬೇಕು. ಅಥವಾ ಶ್ರೀಕೃಷ್ಣದೇವನ ಪಾದಕಮಲಗಳ ಸ್ಪರ್ಶವಾಗಿರುವ ಚಂದನದಿಂದ ಯುಕ್ತವಾಗಿರುವ ತೀರ್ಥದಿಂದ ಭಕ್ತಿನಮ್ರಬುದ್ಧಿಯುಳ್ಳವನಾಗಿ ಬಂಧುಗಳೊಡನೆ ಪ್ರೋಕ್ಷಣವನ್ನು ಮಾಡಿಸಿಕೊಳ್ಳಬೇಕು. ತನ್ನ ಶಕ್ತ್ಯನುಸಾರವಾಗಿ ಮೃಷ್ಟಾನ್ನಭೋಜನವನ್ನು ಸರ್ವವೈಷ್ಣವರಿಗೂ ಮಾಡಿಸಬೇಕು. ಸಂತುಷ್ಟನಾಗಿ ತಾನೂ ಬಂಧುಸಹಿತನಾಗಿ ಭೋಜನವನ್ನು ಮಾಡಬೇಕು.

ಈ ಶುಭಕಾರ್ಯವು ಶ್ರೀಪತಿಯಾದ ಪರಮಾತ್ಮನಿಗೆ ಪ್ರಿಯವಾದುದು. ಈ ಶುಭಕಾರ್ಯವನ್ನು ಮಾಡುವವನ ಒಂದು ವರ್ಷದಲ್ಲಿ ಮಾಡಿದ ಶ್ರೀಹರಿ-ಪೂಜೆಯು ಸಫಲವಾಗುತ್ತದೆ. ಮಾಡದವನು ಮಾಡಿದ ಒಂದು ವರ್ಷದ ವರೆಗಿನ ಶ್ರೀಹರಿಯ ಪೂಜೆಯು ನಿಷ್ಫಲವಾಗುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ. ಆದ್ದರಿಂದ ಒಂದೊಂದು ವರ್ಷದಲ್ಲೂ ಆಯಾ ವರ್ಷಗಳ ಪೂಜಾಫಲವು ಸಿಗುವುದಕ್ಕಾಗಿ ಶ್ರೀಹರಿಯ ಪ್ರೀತಿಗಾಗಿ ದಮನವನ್ನು ಸಮರ್ಪಿಸಬೇಕು.

ಪ್ರಾರ್ಥನಾ ಮಂತ್ರ –

ಮಣಿವಿದ್ರುಮಮಾಲಾಭಿಃ ಮಂದಾರಕುಸುಮಾದಿಭಿಃ । ಇಯಂ ಸಾಂವತ್ಸರೀಂ ಪೂಜಾ ತವಾಸ್ತು ಗರುಡಧ್ವಜ ॥ ವನಮಾಲಾಂ ಯಥಾ ದೇವ ಕೌಸ್ತುಭಂ ಸತತಂ ಹೃದಿ । ತದ್ವದ್ದಾಮನಕೀಂ ಮಾಲಾಂ ಪೂಜಾಂ ಚ ಹೃದಯೇ ವಹ ॥ ಜ್ಞಾನತಾಽಜ್ಞಾನತಾ ವಾಽಪಿ ನಕೃತಂ ಯತ್ತವಾರ್ಚನಮ್ । ತತ್ಸರ್ವಂ ಪೂರ್ಣತಾಂ ಯಾತು ತ್ವತ್ಪ್ರಸಾದಾದ್ ರಮಾಪತೇ ॥ ಜಿತಂ ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ । ಹೃಷಿಕೇಶ ನಮಸ್ತೇಽಸ್ತು ಮಹಾಪುರುಷಪೂರ್ವಜ ॥

ಮಂತ್ರದೀಕ್ಷೆಯನ್ನು ಹೊಂದದಿದ್ದವರು ನಾಮಮಂತ್ರದಿಂದ ಅರ್ಪಿಸತಕ್ಕದ್ದು. ಈ ದಮನಕೋತ್ಸವಕ್ಕೆ ಶ್ರಾವಣಮಾಸಪರ್ಯಂತ ಗೌಣಕಾಲವಿದೆ. ಇದನ್ನು

ಮಲಮಾಸದಲ್ಲಿ (ಅಧಿಕಮಾಸದಲ್ಲಿ) ಮಾಡತಕ್ಕದ್ದಲ್ಲ. ಶುಕ್ರಾಸ್ತಾದಿಗಳಲ್ಲಿ ಮಾಡಬಹುದು.

ವಾಮನದ್ವಾದಶೀವ್ರತವು ದುರ್ವಾಸಮುನಿ – ಮುನಿಯೇ! ಹೀಗೆಯೇ ಚೈತ್ರಮಾಸದ ದ್ವಾದಶಿವ್ರತವನ್ನು ಮಾಡುವೆನೆಂದು ಸಂಕಲ್ಪಮಾಡಿ, ಏಕಾದಶಿಯ ದಿನ ಉಪವಾಸ ಮಾಡಿ, ಭಕ್ತಿಯಿಂದ ದೇವದೇವನಾದ ನಾರಾಯಣನನ್ನು ಆರಾಧಿಸಬೇಕು. ವಾಮನಾಯ ನಮಃ ಎಂದು ಅವನ ಪಾದಗಳನ್ನೂ, ವಿಷ್ಣವೇ ನಮಃ ಎಂದು ಉದರವನ್ನೂ, ಸಂಕರ್ಷಣಾಯ ನಮಃ ಎಂದು ಹೃದಯವನ್ನೂ, ವಿಶ್ವಭೃತೇ ನಮಃ ಎಂದು ಕಂಠವನ್ನೂ, ವ್ಯೋಮರೂಪಿಣೇ ನಮಃ ಎಂದು ಶಿರಸ್ಸನ್ನೂ ವಿಶ್ವಜಿತೇ ನಮಃ ಎಂದು ತೋಳುಗಳನ್ನೂ ಅವುಗಳ ಹೆಸರಿನಿಂದಲೇ ಶಂಖಚಕ್ರಗಳನ್ನೂ ಕ್ರಮವಾಗಿ ಪೂಜಿಸಬೇಕು. ಹೀಗೆ ಸನಾತನನಾದ ದೇವದೇವನನ್ನು ಆರಾಧಿಸಿ, ಹಿಂದಿನಂತೆ ರತ್ನಸಹಿತವೂ, ಪವಿತ್ರವೂ ಆದ ಪೂರ್ಣಕುಂಭವನ್ನು ಅವನ ಮುಂದೆ ಇಡಬೇಕು. ವಿದ್ವಾಂಸನಾದವನು ತನ್ನ ಶಕ್ತಿಗನುಸಾರವಾಗಿ ಮಾಡಿಸಿದ ಸುವರ್ಣದ ವಾಮನ ಮೂರ್ತಿಯನ್ನು ಬೆಳ್ಳಗಿರುವ ಯಜ್ಞೋಪವೀತವುಳ್ಳವನನ್ನಾಗಿ ಹಿಂದೆ ಹೇಳಿರುವ ಪಾತ್ರದಲ್ಲಿ ಇಟ್ಟು, ಆ ಪಾತ್ರೆಯನ್ನು ಕಲಶದ ಮೇಲಿಡಬೇಕು. ವಾಮನಮೂರ್ತಿಯ ಪಕ್ಕದಲ್ಲಿ ಕಮಂಡಲುವನ್ನೂ, ಛತ್ರಿಯನ್ನೂ, ಪಾದುಕೆ-ಗಳನ್ನೂ ಇಡಬೇಕು. ಜಪಮಾಲೆಯನ್ನು ದೇವನಿಗೆ ಧರಿಸಬೇಕು. ಮುಖ್ಯವಾಗಿ ಕೃಷ್ಣಾಜಿನದ ಆಸನವನ್ನು ಇಡಬೇಕು. ಬೆಳಗಾಗುತ್ತಲೇ (ದ್ವಾದಶಿಯಲ್ಲಿ) ಈ ಸಾಮಗ್ರಿಗಳೆಲ್ಲವುಗಳೊಡನೆ ವಾಮನ ಮೂರ್ತಿಯನ್ನು ಬ್ರಾಹ್ಮಣನಿಗೆ ಅರ್ಪಿಸಬೇಕು. ಅರ್ಪಿಸಿ 'ವಾಮನರೂಪಿಯಾದ ವಿಷ್ಣುವು ತೃಪ್ತನಾಗಲಿ' ಎಂದು ಹೇಳಬೇಕು. ಮಾಸದ ಹೆಸರಿನಿಂದ ಕೂಡಿದವನೂ, (ಜನ್ಮ) ಹುಟ್ಟು ಹೆಸರಿನಿಂದ ಕೂಡಿದವನೂ ಎಂದರೆ ಚೈತ್ರಿಕವಾಮನನು ಪ್ರೀತನಾಗಲಿ ಎಂದು ಹೇಳಬೇಕು. ಈ ನಿಯಮವನ್ನು ಎಲ್ಲೆಲ್ಲಿಯೂ ಹೇಳಿದೆ. ಹಿಂದೆ ಹರ್ಯಶ್ವನೆಂಬ ದೊರೆಯು ಇದ್ದನೆಂದು ಕೇಳಿದ್ದೇವೆ. ಮಕ್ಕಳಿಲ್ಲದ ಅವನು ಪುತ್ರನನ್ನು ಬಯಸಿ, ತಪಸ್ಸನ್ನು ಮಾಡಿದನು. ಮುನಿಶ್ರೇಷ್ಠನೇ! ಪುತ್ರನನ್ನು ಬಯಸಿ ಹಾಗೆ ಇಷ್ಟಿಯನ್ನು ಮಾಡುತ್ತಿದ್ದ ಅವನ ಬಳಿಗೆ ದೇವನಾದ ಹರಿಯು ಬ್ರಾಹ್ಮಣರೂಪವನ್ನು ಧರಿಸಿ ಬಂದನು. ಅವನು ದೊರೆಯನ್ನು ''ರಾಜನೇ! ನಿನ್ನ ಪ್ರಯತ್ನವೇಕೆ?'' ಎಂದು ಕೇಳಿದನು. ''ಮಗನನ್ನು ಪಡೆಯುವುದಕ್ಕೆ'' ಎಂದು

ಅವನು ಹೇಳಿದನು. ಬ್ರಾಹ್ಮಣನು ರಾಜನಿಗೆ ''ದೊರೆಯೇ! ಪ್ರಯತ್ನಪೂರ್ವಕವಾಗಿ ಈ(ವಾಮನ) ವ್ರತವನ್ನು ಮಾಡು'' ಎಂದುಹೇಳಿ, ಕ್ಷಣದೊಳಗೆ ಕಣ್ಮರೆಯಾದನು. ರಾಜನು ಮಂತ್ರೋಕ್ತವಾಗಿ ಆ ವ್ರತವನ್ನು ಕೂಡಲೇ ಮಾಡಿ, ಜ್ಯೋತಿಗರ್ಭನೂ ವಿದ್ವಾಂಸನೂ ದರಿದ್ರನೂ ಆದ ಬ್ರಾಹ್ಮಣನಿಗೆ ವಾಮನಮೂರ್ತಿಯೇ ಮೊದಲಾದವನ್ನು ಒಪ್ಪಿಸಿದನು. ''ಭಗವಂತನೇ! ಅಪುತ್ರವತಿಯಾದ ಅದಿತಿಗೆ ನೀನೇ ಪುತ್ರ(ವಾಮನ)ನಾಗಿ ಉದಿಸಿದೆ. ಸತ್ಯದಿಂದ ನನಗೂ ಉತ್ತಮನಾದ ಪುತ್ರನಾಗಲಿ'' ಎಂದು ಪ್ರಾರ್ಥಿಸಿದನು. ಹೀಗೆ ಈ ನಿಯಮದಿಂದ ಆ ರಾಜನಿಗೆ ಉಗ್ರಾಶ್ವನೆಂಬ ಪ್ರಸಿದ್ಧನೂ, ಮಹಾಬಲನೂ, ಚಕ್ರವರ್ತಿಯೂ ಆದ ಪುತ್ರನುದಿಸಿದನು. ಈ ವಾಮನದ್ವಾದಶಿಯ ವ್ರತದಿಂದ ಮಗನಿಲ್ಲದವನು ಮಗನನ್ನೂ, ಹಣವಿಲ್ಲದವನು ಹಣವನ್ನೂ, ರಾಜ್ಯವನ್ನು ಕಳೆದುಕೊಂಡ ದೊರೆಯು ರಾಜ್ಯವನ್ನೂ ಪಡೆಯುವನು. ಮೃತನಾದ ಬಳಿಕ ವಿಷ್ಣುಲೋಕವನ್ನೈದುವನು. ಅಲ್ಲಿ ಬಹುಕಾಲ ವಿಹರಿಸಿ, ಮತ್ತೆ ಇಹಲೋಕಕ್ಕೆ ಬಂದು ನಹುಷಪುತ್ರನಾದ ಯಯಾತಿಯಂತೆ ಬುದ್ಧಿವಂತನೂ ಚಕ್ರವರ್ತಿಯೂ ಆಗುವನು. ವಾಮನ ದ್ವಾದಶೀ ಚೈತ್ರ ಶುಕ್ಲ ದ್ವಾದಶಿಯಂದು ವಿಷ್ಣುವಿಗೆ ದಮನಿಕಾ ಸಮರ್ಪಣೆ ವಿಶೇಷ ಫಲಪ್ರದ. ಮಾರ್ಕಂಡೇಯರು ಸ್ತುತಿಸಿದ ವಾಮನಸ್ತೋತ್ರಪಾರಾಯಣದಿಂದ ಆರೋಗ್ಯ, ಸಂತಾನ, ಸುಖಸಮೃದ್ಧಿಗಳು ಪ್ರಾಪ್ತವಾಗುತ್ತವೆ.

ಇಲ್ಲಿಗೆ ದಮನೋತ್ಸವಪ್ರಕರಣವು ಸಮಾಪ್ತವಾಯಿತು

ಕಶ್ಯಪ ಉವಾಚ –

ನಮೋ ನಮಸ್ತೇಖಿಲಕಾರಣಾಯ ನಮೋ ನಮಸ್ತೇಖಿಲಪಾಲಕಾಯ ।
ನಮೋ ನಮಸ್ತೇ ಪರನಾಯಕಾಯ ನಮೋ ನಮೋ ದೈತ್ಯವಿನಾಶನಾಯ ॥ ೧ ॥
ನಮೋ ನಮೋ ಭಕ್ತಜನಪ್ರಿಯಾಯ ನಮೋ ನಮೋ ಸಜ್ಜನರಂಜಿತಾಯ ।
ನಮೋ ನಮೋ ದುರ್ಜನನಾಶಕಾಯ ನಮೋಸ್ತು ತಸ್ಮೈ ಜಗದೀಶ್ವರಾಯ ॥೨॥
ನಮೋ ನಮಃ ಕಾರಣವಾಮನಾಯ ನಾರಾಯಣಾಯಾಮಿತವಿಕ್ರಮಾಯ ।
ಶ್ರೀಶಾರ್ಙ್ಗಚಕ್ರಾಸಿಗದಾಧರಾಯ ನಮೋಸ್ತು ತಸ್ಮೈಪುರುಷೋತ್ತಮಾಯ ॥ ೩ ॥
ನಮಃ ಪಯೋರಾಶಿನಿವಾಸಿತಾಯ ನಮೋಸ್ತು ಸದ್ಭಕ್ತಮನಃಸ್ಥಿತಾಯ ।
ನಮೋಸ್ತು ಸೂರ್ಯಾದ್ಯಮಿತಪ್ರಭಾಯ ನಮೋ ನಮಃ ಪುಣ್ಯಕಥಾಗತಾಯ॥ ೪ ॥

ನಮೋ ನಮೋರ್ಕೇಂದುವಿಲೋಚನಾಯ ನಮೋಸ್ತು ತೇ ಯಜ್ಞಫಲಪ್ರದಾಯ ।
ನಮೋಸ್ತು ತೇ ಯಜ್ಞವಿರಾಜಿತಾಯ ನಮೋಸ್ತು ತೇ ಸಜ್ಜನವಲ್ಲಭಾಯ ॥ ೫ ॥
ನಮೋ ನಮಃ ಕಾರಣಕಾರಣಾಯ ನಮೋಸ್ತು ಶಬ್ದಾದಿವಿವರ್ಜಿತಾಯ ।
ನಮೋಸ್ತು ತೇ ಪ್ರಸುಖಪ್ರದಾಯ ನಮೋ ನಮೋ ಭಕ್ತಜನಪ್ರಿಯಾಯ ॥ ೬ ॥
ನಮೋ ನಮಸ್ತೇ ಮಖನಾಶನಾಯ ನಮೋಸ್ತು ತೇ ಕ್ಷತ್ರಕುಲಾಂತಕಾಯ ।
ನಮೋಸ್ತು ತೇ ರಾವಣಮರ್ದನಾಯ ನಮೋಸ್ತು ತೇ ನಂದಸುತಾಗ್ರಜಾಯ॥ ೭ ॥
ನಮಸ್ತೇ ಕಮಲಾಕಾಂತ ನಮಸ್ತೇ ಸುಖದಕ್ಷಿಣೇ ।
ಸ್ಮೃತಾರ್ತಿನಾಶಿನೇ ತುಭ್ಯಂ ಭೂಯೋ ಭೂಯೋ ನಮೋ ನಮಃ ॥ ೮ ॥
ಯ ಇದಂ ವಾಮನಸ್ತೋತ್ರಂ ತ್ರಿಸಂಧ್ಯಾಸು ಪಠೇನ್ನರಃ ।
ಧನಾರೋಗ್ಯಾನ್ನಸಂತಾನಸುಖನಿತ್ಯೋತ್ಸವೀ ಭವೇತ್ ॥ ೯ ॥

ಇತಿ ಶ್ರೀಬೃಹನ್ನಾರದೀಯಪುರಾಣೇ ಮಾರ್ಕಂಡೇಯಪ್ರೋಕ್ತಂ ಶ್ರೀವಾಮನಸ್ತೋತ್ರಂ ಸಂಪೂರ್ಣಮ್

ಶ್ರೀ ಜಗದ್ಭೂಷಣತೀರ್ಥರು (ಪಲಿಮಾರು ಮಠ) - ಇವರು ಪರಂಪರೆಯಲ್ಲಿ ಒಂಭತ್ತನೆಯವರು. ಪೀಠದಲ್ಲಿದ್ದು ಒಂದು ದಶಕಕಾಲ ಮಾತ್ರ. ತನ್ನ ಕೊನೆಕಾಲವನ್ನು ಯಾತ್ರೆಯಲ್ಲೇ ಕಳೆದರು. ಶಾ.ಶ. 1406 (ಕ್ರಿ .ಶ. 1484) ಶೋಭನ ಸಂವತ್ಸರದ ಚೈತ್ರ ಶುದ್ಧ ದ್ವಾದಶಿಯಂದು ತಿರುಪತಿಯ ಶ್ರೀನಿವಾಸಸನ್ನಿಧಿಯಲ್ಲಿ ದೇಹತ್ಯಾಗ ಮಾಡಿ ಹರಿಪದ ಹೊಂದಿದರು.

## ಚೈತ್ರ ॥ ಶುಕ್ಲ॥ ತ್ರಯೋದಶೀ

ಈ ದಿನ ಅನಂಗವ್ರತವೆನ್ನುವರು. ರತಿಸಮೇತ ಮನ್ಮಥನ ಪೂಜೆಯನ್ನು ಮಾಡಬೇಕು.

ಶ್ರೀ ಸತ್ಯಪ್ರಿಯತೀರ್ಥರ ಆರಾಧನೆ (ಉತ್ತರಾದಿಮಠ) - ಶ್ರೀಸತ್ಯವಿಜಯಾಂಬೋಧೇಃ ಜಾತಂ ಸತ್ಯಪ್ರಿಯಾಮೃತಮ್ । ಜರಾಮೃತೀ ಜಂಘನೀತು ವಿಬುಧಾನಾಂ ಮುದೇ ಸದಾ ॥ ಶ್ರೀ ಸತ್ಯಪೂರ್ಣತೀರ್ಥರಿಗೂ ಮೊದಲೇ ಆಶ್ರಮ ಪಡೆದಿದ್ದರೂ ಪೀಠವನ್ನು ಅವರ ನಂತರ ಅಲಂಕರಿಸಿದವರು ಶ್ರೀ ಸತ್ಯಪ್ರಿಯತೀರ್ಥರು. ಇವರ ಕಾಲದಲ್ಲಿ ಶ್ರೀಮಠಕ್ಕೆ ಅನೇಕ ಜಹಗೀರುಗಳು ಬಂದವು.

ಶ್ರೀರಂಗದ ಅರಸನು ಶ್ರೀಮಠಕ್ಕೆ ಶ್ವೇತಚ್ಛತ್ರ, ರತ್ನ ಸಂಪುಟ ಇತ್ಯಾದಿಗಳನ್ನು ಸಮರ್ಪಿಸಿದನು. ಅದ್ವೈತಸಿದ್ಧಾಂತಿಯಾದ ಘನಶ್ಯಾಮಕವಿಯು ಇವರ ಜ್ಞಾನಕ್ಕೆ ಸೋತು ಇವರಿಗೆ ಶಿಷ್ಯರಾದರು. ಇವರು ಮಾಡಿದ ಎಲ್ಲ ಕೊಡುಗೆಗಳಿಗಿಂತ ಅತ್ಯಂತ ಹಿರಿದಾದ ಕೊಡುಗೆ - ಶ್ರೀ ಸತ್ಯಬೋಧತೀರ್ಥರು. ತಮ್ಮ ನಂತರ ಶ್ರೀ ಸತ್ಯಬೋಧತೀರ್ಥರನ್ನು ಶಿಷ್ಯರನ್ನಾಗಿಸಿ, ಅವರಿಗೆ ಪಟ್ಟಾಭಿಷೇಕ ಮಾಡಿದರು. ಚೈತ್ರ ಶುದ್ಧ ತ್ರಯೋದಶಿಯಂದು ತಮಿಳುನಾಡಿನ ಮಾನಾಮಧುರೈ ಎಂಬಲ್ಲಿ ವೃಂದಾ-ವನಸ್ಥರಾದರು.

## ಚೈತ್ರ ॥ ಶುಕ್ಲ ॥ ಚತುರ್ದಶೀ

ಇಂದು ನರಸಿಂಹದೇವರಿಗೆ ಡೋಲೋತ್ಸವವನ್ನು ಮಾಡಬೇಕು. ದಮನಕ ಚತುರ್ದಶೀ ಎಂದು ಕರೆಯುತ್ತಾರೆ.

## ಚೈತ್ರ ॥ ಪೂರ್ಣಿಮಾ

ಈ ದಿನ ಚಿತ್ರಾಪೂರ್ಣಿಮಾ ಎನ್ನುವರು. ಹಿಂದೆ ಹೇಳಿದಂತೆ ಆಯಾಯಾ ದಿನಗಳಲ್ಲಿ ಆಯಾಯಾ ದೇವತೆಗಳಿಗೆ ದಮನ ಸಮರ್ಪಣೆ ಮಾಡಿರದಿದ್ದರೆ, ಈ ದಿನ ಎಲ್ಲರಿಗೂ ಸಮರ್ಪಿಸಬಹುದು. ಈ ದಿನವೇ ಮಂಗಳ, ಭಾನು, ಗುರು-ವಾರಗಳ ಸಂಬಂಧವಿದ್ದರೆ ಸ್ನಾನಶ್ರಾದ್ಧಾದಿಗಳಿಂದ ಅಶ್ವಮೇಧ ಯಜ್ಞದ ಫಲವು ಬರುತ್ತದೆ. ಭಗವಂತನಿಗೆ ಚಿತ್ರಾನ್ನದ ನೈವೇದ್ಯ ಇಂದಿನ ವಿಶೇಷ. ಈ ದಿನ ಕರಕಗಳಲ್ಲಿ (ಗಡಿಗೆಗಳಲ್ಲಿ) ಪಾನಕ, ನೀರು ಮಜ್ಜಿಗೆ ದಾನ ಮಾಡಬೇಕು. ಹನುಮ-ಜ್ಜಯಂತಿಯೂ ಸಹ ಇಂದೇ. (ಹನುಮಜ್ಜಯಂತೀ ಎಂಬ ನಮ್ಮ ಪ್ರಕಟಣೆಯನ್ನು ನೋಡಿರಿ)

ಈ ದಿನ ಸ್ತ್ರೀಯರಿಗೆ ಸಂಭ್ರಮದ ಕಾಲ. ಇಂದು ಸ್ತ್ರೀಯರು ತಾವೂ ಬಣ್ಣಬಣ್ಣದ ಬಟ್ಟೆಗಳನ್ನುಟ್ಟು ಕೊಂಡು ಚಿತ್ರವರ್ಣದ (ಬಣ್ಣಬಣ್ಣದ) ಬಟ್ಟೆ-ಗಳೊಂದಿಗೆ ಬಾಗಿನವನ್ನು ಸ್ತ್ರೀಯರಿಗೆ ಅರ್ಪಿಸುವರು. ಇದು ಸೌಭಾಗ್ಯವೃದ್ಧಿಗೆ ಕಾರಣ. ಬಾಗಿನದಲ್ಲಿ ಇವುಗಳನ್ನು ಅನುಸಂಧಾನ ಮಾಡಬೇಕು.

ಯವಾಗ್ರಯಣವೂ ಇಂದೇ. ಸಾವರ್ಣಿಮನ್ವಾದಿ.

ವೈಶಾಖಸ್ನಾನವನ್ನು ಇಂದಿನಿಂದ ಆರಂಭ ಮಾಡಬೇಕು.

ಚೈತ್ರ ಕೃಷ್ಣ ಪಾಡ್ಯವನ್ನಾರಂಭಿಸಿ ತಿಂಗಳ ಪರ್ಯಂತ ವೈಶಾಖ ಮಧುಸೂದನನ ಪ್ರೀತಿಗಾಗಿ ಸ್ನಾನವನ್ನು ಮಾಡಬೇಕು. ಮಂತ್ರ– 'ವೈಶಾಖಂ ಸಕಲಂ ಮಾಸಂ ಮೇಷಸಂಕ್ರಮಣೇ ರವೇಃ । ಪ್ರಾತಃ ಸನಿಯಮಃ ಸ್ನಾಸ್ಯೇ ಪ್ರೀಯತಾಂ ಮಧುಸೂದನಃ । ಮಧುಹಂತುಃ ಪ್ರಸಾದೇನ ಬ್ರಾಹ್ಮಣಾನಾಮನುಗ್ರಹಾತ್ । ನಿರ್ವಿಘ್ನಮಸ್ತು ಮೇ ಪುಣ್ಯಂ ವೈಶಾಖಸ್ನಾನಮನ್ವಹಮ್ ॥ ಮಾಧವೇ ಮೇಷಗೇ ಭಾನೌ ಮುರಾರೇ ಮಧುಸೂದನ । ಪ್ರಾತಃಸ್ನಾನೇನ ಮೇ ನಾಥ ಫಲದೋ ಭವ ಪಾಪಹನ್ ॥'

ವೈಶಾಖಸ್ನಾನವನ್ನು ಮಹಾನದಿಯಲ್ಲಾಗಲೀ, ಇಲ್ಲದಿದ್ದರೆ ನದೀ, ತೀರ್ಥ, ಸರೋವರ, ಝರಿ, ಕೊಳಗಳಲ್ಲಿ ಮಾಡಬಹುದು. ಯಾವುದಾದರೂ ತೀರ್ಥದ ಹೆಸರು ಗೊತ್ತಿಲ್ಲದಿದ್ದರೆ 'ವಿಷ್ಣುತೀರ್ಥಸ್ನಾನಂ ಕರಿಷ್ಯಾಮಿ' ಎಂದು ಸಂಕಲ್ಪಿಸುವುದು. ಈ ವೈಶಾಖಸ್ನಾನವು ನಿತ್ಯವ್ರತವಾದ್ದರಿಂದ ಮಲಮಾಸವು (ಅಧಿಕಮಾಸವು) ಇದ್ದರೂ ಮಾಡಬೇಕು.

ಅರ್ಘ್ಯಮಂತ್ರಗಳು– ವೈಶಾಖೇ ಮೇಷಗೇ ಭಾನೌ ಪ್ರಾತಃಸ್ನಾನಂ ಕರೋಮ್ಯಹಮ್ । ಅರ್ಘ್ಯಂ ತೇಽಹಂ ಪ್ರದಾಸ್ಯಾಮಿ ಗೃಹಾಣ ಮಧುಸೂದನ ॥೧॥ ಗಂಗಾದ್ಯಾಃ ಸರಿತಃ ಸರ್ವಾಸ್ತೀರ್ಥಾನಿ ಜಲದಾ ನದಾಃ । ಪ್ರಗೃಹ್ಣಂತು ಮಯಾ ದತ್ತಂ ಅರ್ಘ್ಯಂ ಸಮ್ಯಕ್ ಪ್ರಸೀದಥ ॥೨॥ ಋಷಭಃ ಪಾಪಿನಾಂ ಶಾಸ್ತಾ ತ್ವಂ ಯಮಃ ಸಮದರ್ಶನಃ । ಗೃಹಣಾರ್ಘ್ಯಂ ಮಯಾ ದತ್ತಂ ಯಥೋಕ್ತಫಲದೋ ಭವ ॥೩॥

ವೈಶಾಖಸ್ನಾನವನ್ನು ಮಾಡದಿದ್ದವರು ಕತ್ತೆಯಾಗಿ ಹುಟ್ಟುತ್ತಾರೆ. ಒಂದು ದಿನವೂ ನದ್ಯಾದಿಗಳಲ್ಲಿ ಸ್ನಾನ ಮಾಡದೆ ಮನೆಯಲ್ಲೇ ಸ್ನಾನ ಮಾಡಿದರೆ ಚಂಡಾಲಯೋನಿಯಲ್ಲಿ ಹುಟ್ಟುತ್ತಾರೆ. ವೈಶಾಖಸ್ನಾನದಲ್ಲಷ್ಟೇ ಅಲ್ಲದೆ ಯಾವುದೇ ಸ್ನಾನವನ್ನು ನೀವು ಮಾಡುವಾಗ ಮುಂದೆ ನೀಡಿದ ಕ್ರಮವನ್ನು ಅನುಸರಿಸಬೇಕು –

ಸ್ನಾನದ ವಿಧಿವಿಧಾನ – 1. ಮಲಸ್ನಾನ 2. ಮಂತ್ರಸ್ನಾನ 3. ಧ್ಯಾನಸ್ನಾನ 4. ವಾರುಣಸ್ನಾನ 5. ಜಲಸ್ನಾನ ಎಂಬುದಾಗಿ ಸ್ನಾನವು ಐದು ತೆರನಾಗಿದೆ.

1. ಮಲಸ್ನಾನ – ನೀರಿನಲ್ಲಿ ಮೂರು ಬಾರಿ ಮುಳುಗಿ, ಶೀಗೆಪುಡಿ ಗೋಮಯಾದಿಗಳಿಂದ ಎಲ್ಲಾ ಅಂಗಾಗಗಳನ್ನು ತೊಳೆದುಕೊಂಡು ಮತ್ತೆ ಮೂರು ಬಾರಿ ಮುಳುಗಿ ಪರಮಾತ್ಮನನ್ನು ಧ್ಯಾನಿಸಬೇಕು. ಇದು ಮಲನಿವಾರಕವಾದ ಮಲಸ್ನಾನವೆನಿಸಿದೆ. ತಣ್ಣೀರಲ್ಲಿ ಸ್ನಾನ ಮಾಡಲು ಸಾಧ್ಯವಿಲ್ಲದಲ್ಲಿ ಬಿಸಿನೀರಿನಲ್ಲಿ ತಣ್ಣೀರು ಸೇರಿಸಿ ತುಲಸೀಮೃತ್ತಿಕೆಯನ್ನು ಅದರಲ್ಲಿ ಹಾಕಿ ಗಾಯತ್ರೀ ಮಂತ್ರದಿಂದ ಅಭಿಮಂತ್ರಿಸಿ ಆ ನೀರಿನಿಂದ ಸ್ನಾನ ಮಾಡಬೇಕು. 2. ಮಂತ್ರಸ್ನಾನ – ಅಶಕ್ತನಾದಲ್ಲಿ ಮಂತ್ರ ಸ್ನಾನವನ್ನು ಮಾಡಬೇಕು. ಒದ್ದೆ ಬಟ್ಟೆಯಿಂದ ಶರೀರದ ಕೊಳೆಯನ್ನು ಒರೆಸಿಕೊಂಡು, ಹಿಂದಿನ ವಸ್ತ್ರ ತೊರೆದು ಸ್ವಚ್ಛವಾದ ವಸ್ತ್ರವನ್ನು ಧರಿಸಿ, ಆಚಮನ ಮಾಡಿ ಗಾಯತ್ರೀ ಅಥವಾ ಮೂಲಮಂತ್ರದಿಂದ ಮೂರುಬಾರಿ ಅಭಿಮಂತ್ರಿಸಿ ದರ್ಭೆ ಅಥವಾ ತುಲಸಿಯಿಂದ ಪ್ರೋಕ್ಷಣೆ ಮಾಡಿಕೊಳ್ಳಬೇಕು. ಜಲಾಭಿಮಾನಿ ದೇವತೆಗಳನ್ನು ಸ್ಮರಿಸಿ 'ಆಪೋ ಹಿ ಷ್ಠಾ' ಇತ್ಯಾದಿ ಮಂತ್ರಗಳಿಂದ ಪ್ರೋಕ್ಷಣವನ್ನು ಮಾಡಿಕೊಂಡು ಸಂಧ್ಯಾದಿಕರ್ಮವನ್ನು ಮಾಡಬೇಕು. 3. ಧ್ಯಾನಸ್ನಾನ – ಅನಾರೋಗ್ಯದಿಂದ ಯಾವುದೇ ರೀತಿಯ ಸ್ನಾನ ಮಾಡಲು ಸಾಧ್ಯವಾಗದಿದ್ದಲ್ಲಿ, ತನ್ನ ತಲೆಯ ಮೇಲೆ ಸರ್ವಾಲಂಕಾರ ಭೂಷಿತನಾದ ಶ್ರೀಹರಿಯ ಸನ್ನಿಧಾನವನ್ನು ಚಿಂತಿಸಬೇಕು. ಅವನ ಪಾದಕಮಲಗಳಿಂದ ಹೊಮ್ಮಿದ ನೀರನ್ನು ಬ್ರಹ್ಮದೇವರು ಶ್ರೀಹರಿಯ ಪಾದ ಪ್ರಕ್ಷಾಲನೆಗೆ ತೆಗೆದುಕೊಂಡದ್ದನ್ನು ಚಿಂತಿಸಬೇಕು. ರುದ್ರದೇವರು ಮುಡಿಯಲ್ಲಿ ಹೊತ್ತ ಗಂಗೆಯು, ನನ್ನ ಶಿರಸ್ಸಿನ ಮೇಲೆ ಹರಿದು ಸರ್ವಾಂಗಗಳನ್ನೂ ಪವಿತ್ರಗೊಳಿಸುತ್ತಿರುವಳೆಂದು ಧ್ಯಾನಿಸಬೇಕು. ಅನಂತರ ಆಚಮನ ಮಾಡಬೇಕು. 4. ವಾರುಣಸ್ನಾನ – ಬಾವಿ-ಸರೋವರ ಮುಂತಾದವುಗಳಲ್ಲಿ ಶಾಸ್ತ್ರೋಕ್ತ ರೀತಿಯಿಂದ ಮುಳುಗು ಹಾಕಿ ಸ್ನಾನ ಮಾಡುವುದು 'ವಾರುಣಸ್ನಾನ'ವೆನ್ನಿಸಿದೆ. 'ಅವಗಾಹಂ ತು ವಾರುಣಮ್'. ವಿಹಿತ ಕ್ರಮದಿಂದ ಜಲಸ್ನಾನ-ವಾರುಣಸ್ನಾನ-ಮಲಸ್ನಾನ ಮಾಡುವವರು ಮಂತ್ರಸ್ನಾನ ಧ್ಯಾನಸ್ನಾನಗಳನ್ನು ಮಾಡಲೇಬೇಕು. 5. ಜಲಸ್ನಾನ – ಗಂಗಾದಿತೀರ್ಥಗಳಲ್ಲಿ ಅಥವಾ ಸರೋವರ ಬಾವಿ ಮುಂತಾದೆಡೆ ಅವಗಾಹನ ಸ್ನಾನ ಮಾಡುವಾಗ ಸಂಕಲ್ಪ ಮಾಡಿ ನದ್ಯಭಿಮಾನಿ ದೇವತೆಗಳನ್ನು ಪ್ರಾರ್ಥಿಸಿ ಭಗವನ್ಮೂರ್ತಿಯನ್ನು ಧ್ಯಾನಿಸಿ ಸ್ನಾನ ಮಾಡಬೇಕು. ಅನಂತರ ನೀರಲ್ಲಿರುವಾಗಲೇ ದೇವ-ಋಷಿ-ಪಿತೃತರ್ಪಣ (ಸ್ನಾನಾಂಗ) ನೀಡಬೇಕು. ಇದು

ಜಲಸ್ನಾನವೆನ್ನಿಸಿದೆ. ಇಲ್ಲಿ ಆಚರಿಸಬೇಕಾದ ವಿಶೇಷ ನಿಯಮಗಳನ್ನು ಶ್ರೀಮದಾಚಾರ್ಯರು ಹಾಗೂ ಸ್ಮೃತಿಕಾರರು ವಿಸ್ತಾರವಾಗಿ ನಿರೂಪಿಸಿದ್ದಾರೆ.

ಓಂ ತೀರ್ಥರಾಜಾಯ ನಮಃ ॥ 'ತ್ವಂ ರಾಜಾ ಸರ್ವತೀರ್ಥಾನಾಂ ತ್ವಮೇವ ಜಗತಃ ಪಿತಾ । ಯಾಚಿತಂ ದೇಹಿ ಮೇ ತೀರ್ಥ ಸರ್ವಪಾಪಾಪನುತ್ತಯೇ' ॥ (ಎಂದು ಪ್ರಾರ್ಥಿಸಿ ಮೂರು ಸಲ ಮುಳುಗಬೇಕು. ಮುಳುಗುವಾಗ ನೀರಿನಲ್ಲಿ ನಿಂತು ಮೊದಲು ತಲೆಯನ್ನೂ ಆಮೇಲೆ ಬೆನ್ನನ್ನೂ ಮುಳುಗಿಸಬೇಕು. ಎದ್ದು ಮೈಯನ್ನು ಚೆನ್ನಾಗಿ ತೊಳೆದು ಆಚಮನ ಮಾಡಿ ಸಂಕಲ್ಪಿಸಬೇಕು.)

ಸ್ನಾನಸಂಕಲ್ಪಃ : (ಆಚಮನ ಮಾಡಿ- ಪ್ರಾಣಾಯಾಮ ಮಾಡಿ. ಪುಣ್ಯತಿಥೌ .........ವಾಸರಯುಕ್ತಾಯಾಂ ಭಾಗೀರಥ್ಯಾದಿಸಾರ್ಧತ್ರಿಕೋಟಿತೀರ್ಥಾಭಿಮಾನಿದೇವತಾಸನ್ನಿಹಿತೇಽಸ್ಮಿನ್ ಜಲಾಶಯೇ ಪ್ರಾತಃಸ್ನಾನಮಹಂ ಕರಿಷ್ಯೇ ॥

ಸ್ನಾನಾಂಗಪ್ರಾರ್ಥನಾ: ಸಮಸ್ತಜಗದಾಧಾರ ಶಂಖಚಕ್ರಗದಾಧರ । ದೇವ ದೇಹಿ ಮಮಾನುಜ್ಞಾಂ ಯುಷ್ಮತ್ತೀರ್ಥನಿಷೇವಣೇ ॥ ಯಸ್ಯ ಪಾದೋದ್ಭವಾಂ ಗಂಗಾಂ ತ್ರೈಲೋಕ್ಯೇಶೋ ಮಹೇಶ್ವರಃ । ದಧಾರ ಶಿರಸಾ ಭಕ್ತ್ಯಾ ತಂ ನಮಾಮಿ ಹರಿಂ ಪರಮ್ ॥ ಯೋಽಸೌ ಸರ್ವಗತೋ ವಿಷ್ಣುಶ್ಚಿತ್ಸ್ವರೂಪೋ ನಿರಂಜನಃ । ಸ ಏವ ದ್ರವರೂಪೇಣ ಗಂಗಾಂಭೋ ನಾತ್ರ ಸಂಶಯಃ ॥ ನಂದಿನೀ ನಲಿನೀ ಸೀತಾ ಮಾಲತೀ ಚ ಮಲಾಪಹಾ । ವಿಷ್ಣುಪಾದಾಬ್ಜಸಂಭೂತಾ ಗಂಗಾ ತ್ರಿಪಥಗಾಮಿನೀ ॥ ಭಾಗೀರಥೀ ಭೋಗವತೀ ಜಾಹ್ನವೀ ತ್ರಿದಶೇಶ್ವರೀ । ದ್ವಾದಶೈತಾನಿ ನಾಮಾನಿ ಯತ್ರಯತ್ರ ಜಲಾಶಯೇ । ಸ್ನಾನಕಾಲೇ ಪಠೇನ್ನಿತ್ಯಂ ತತ್ರತತ್ರ ವಸಾಮ್ಯಹಮ್ ॥ ಗಂಗಾ ಗಂಗೇತಿ ಯೋ ಬ್ರೂಯಾತ್ ಯೋಜನಾನಾಂ ಶತೈರಪಿ । ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥ ಸಕೃನ್ನಾರಯಣೇತ್ಯುಕ್ತ್ವಾ ಪುಮಾನ್ ಕಲ್ಪಶತತ್ರಯಮ್ । ಗಂಗಾದಿಸರ್ವತೀರ್ಥೇಷು ಸ್ನಾತೋ ಭವತಿ ಪುತ್ರಕ ॥ ತೀರ್ಥಕೋಟಿಸಹಸ್ರಾಣಿ ವ್ರತಕೋಟಿಶತಾನಿ ಚ । ನಾರಾಯಣಪ್ರಣಾಮಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥ ಗಂಗಾಂ ಗಯಾಂ ಕುರುಕ್ಷೇತ್ರಂ ಪ್ರಯಾಗಂ ನೈಮಿಷಂ ತಥಾ । ಪುಷ್ಕರಂ ಚ ಮಹಾಬಾಹೋ ಸ್ನಾನಕಾಲೇ ಸದಾ ಸ್ಮರೇತ್ ॥ ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ । ಪುಷ್ಕರಂ ಚ

ಮಹಾಬಾಹೋ ಸ್ನಾನಕಾಲೇ ಸದಾ ಸ್ಮರೇತ್ ॥ ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ । ಆಗಚ್ಛಂತು ಪವಿತ್ರಾಣಿ ಸ್ನಾನಕಾಲೇ ಸದಾ ಮಮ ॥

**ಗಂಗಾಪ್ರಾರ್ಥನೆ.** – ತ್ವಂ ದೀನೇಷು ದಯಾವತೀತಿ ವಿದಿತಂ ಯದ್ಬ್ರಹ್ಮ-ಹಸ್ತಾಶ್ರಯಂ । ಪ್ರಾಪ್ತಾಽಥಾಚ್ಯುತಪಾದಸಂಗಮಹಿತಾ ಪಶ್ಚಾಚ್ಚ ನಾಕಂ ಗತಾ । ಸೌವರ್ಣಾಚಲಶೃಂಗಮೇತ್ಯ ಮುದಿತಾ ಶಂಭೋಃ ಶಿರಃಸಂಗತಾಽಪ್ಯಾಸ್ಮಾಕ್ಷಿತಿಮಂಡಲೇ ತ್ರಿಪಥಗೇ ತುಷ್ಟಾಽಸ್ಯಭೀಷ್ಟಪ್ರದಾ ॥ ಹೇ ಗಂಗೇ ತವ ಕೋಮಲಾಂ-ಘ್ರಿನಲಿನಂ ರಂಭೋರುನೀವೀಲಸತ್ - ಕಾಂಚೀದಾಮ ತನೂದರಂ ಘನಕುಚ-ವ್ಯಾಕೀರ್ಣಹಾರಂ ವಪುಃ । ಸನ್ಮುದ್ರಾಂಗದಕಂಕಣಾವೃತಕರಂ ಸ್ಮೇರಂ ಸ್ಫುರತ್ಕುಂಡಲಂ ಸಾರಂಗಾಕ್ಷಿ ಜಲಾನ್ಯದಿಂದುರುಚಿ ಯೇ ಜಾನಂತಿ ತೇಽನ್ಯೇ ಜಲಾತ್ । ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ । ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥ ಗಂಡೂಷಂ ಪಾದವಿಕ್ಷೇಪಂ ಕ್ಷಾಲನಂ ಮಲಿನಸ್ಯ ಚ । ಉತ್ ಕ್ಷೇಪಕ್ಷೇಪಣೇ ದೇವಿ ಮತ್ಕೃತಂ ಕ್ಷಮ ಪಾಹಿ ಮಾಮ್ ॥

ಇತ್ಯಾದಿ ಪಠಿಸಿ ನೀರಿನಲ್ಲಿ ಮುಳುಗಿ ಹಿಂದೆ ಹೇಳಿದಂತೆ ಮಣ್ಣು ಹಚ್ಚಿ ಜಲಸ್ನಾನವನ್ನು ಮಾಡುವುದು.

ಅನಂತರ ತುಳಸೀಮೃತ್ತಿಕೆಯನ್ನು ತೆಗೆದುಕೊಂಡು, ಮೂರು ಭಾಗ ಮಾಡಿ, 'ಗಂಧದ್ವಾರಾಂ' ಎಂಬ ಮಂತ್ರ ಪಠನದೊಂದಿಗೆ ಮತ್ತು 'ಉದ್ಧೃತಾಽಸಿ' ಎಂಬ ಮಂತ್ರದಿಂದ ಹಣೆ-ಕೈಗಳು-ಬಾಹು-ಕಂಕುಳು ಮೊದಲಾದ ಅಂಗಗಳಿಗೆ ಮೃತ್ತಿಕೆಯನ್ನು ಲೇಪಿಸಬೇಕು. 'ಉದ್ಧೃತಾಽಸಿ' ಎಂಬ ಮಂತ್ರ ಪಾಠ ಹೀಗಿದೆ-

'ಉದ್ಧೃತಾಽಸಿ ವರಾಹೇಣ ಕೃಷ್ಣೇನ ಶತಬಾಹುನಾ । ಮೃತ್ತಿಕೇ ಹರ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಮ್ ॥ ಮೃತ್ತಿಕೇ ಬ್ರಹ್ಮದತ್ತಾಽಸಿ ಕಾಶ್ಯಪೇನಾಭಿಮಂ-ತ್ರಿತಾ । ಮೃತ್ತಿಕೇ ದೇಹಿ ಮೇ ಪುಷ್ಟಿಂ ತ್ವಯಿ ಸರ್ವಂ ಪ್ರತಿಷ್ಠಿತಮ್ । ತಯಾ ಹತೇನ ಪಾಪೇನ ಗಚ್ಛಾಮಿ ಪರಮಾಂ ಗತಿಮ್ ॥ ಮೃತ್ತಿಕೇ ಪ್ರತಿಷ್ಠಿತೇ ಸರ್ವಂ ತನ್ಮೇ ನಿರ್ಣುದ ಮೃತ್ತಿಕೇ ॥'

ಅನಂತರ ಅರ್ಘ್ಯ ಕೊಡಬೇಕು ವಿಷ್ಣ್ವರ್ಘ್ಯಮಂತ್ರಃ : 'ನಮಃ ಕಮಲನಾಭಾಯ ನಮಸ್ತೇ ಜಲಶಾಯಿನೇ । ನಮಸ್ತೇಽಸ್ತು ಹೃಷೀಕೇಶ ಗೃಹಾಣಾರ್ಘ್ಯಂ ನಮೋಽಸ್ತು ತೇ' ॥

ಸೂರ್ಯಾರ್ಘ್ಯಮಂತ್ರಃ : 'ಏಹಿ ಸೂರ್ಯ ಸಹಸ್ರಾಂಶೋ ತೇಜೋರಾಶೇ ಜಗತ್ಪತೇ । ಅನುಕಂಪಯ ಮಾಂ ಭಕ್ತ್ಯಾ ಗೃಹಾಣಾರ್ಘ್ಯಂ ನಮೋಽಸ್ತು ತೇ' ॥ (ಏಕಾದಶೀದಿನದಲ್ಲಿ ವಿಷ್ಣುಸೂರ್ಯ ಇವರಿಬ್ಬರಿಗೆ ಮಾತ್ರ ಅರ್ಘ್ಯ ಕೊಡಬೇಕಲ್ಲದೆ ಗಂಗಾದಿಗಳಿಗೆ ಕೊಡಕೂಡದು. ಸೂರ್ಯನು ಕರ್ಮಸಾಕ್ಷಿಯಾಗಿರುವ ಕಾರಣ ಆತನ ಪ್ರೀತ್ಯರ್ಥವಾಗಿ ಮಾತ್ರವೇ ಆ ದಿನ ಅರ್ಘ್ಯಕೊಡಬೇಕೆಂದು ಸದಾಚಾರಸ್ಮೃತಿವ್ಯಾಖ್ಯಾನದಲ್ಲಿ ಪ್ರಮಾಣವಿದೆ.)

ಗಂಗಾರ್ಘ್ಯಮಂತ್ರಃ : 'ಬ್ರಹ್ಮಕಮಂಡಲುಸಂಭೂತೇ ಪೂರ್ಣಚಂದ್ರನಿಭಾನನೇ ತ್ರೈಲೋಕ್ಯವಂದಿತೇ ಗಂಗೇ ಗೃಹಾಣಾರ್ಘ್ಯಂ ನಮೋಽಸ್ತು ತೇ' ॥ (ಹೀಗೆ ಆಯಾ ನದೀತೀರ್ಥವಿಶೇಷಗಳಲ್ಲಿ ಸ್ನಾನಮಾಡುವಾಗ ಆಯಾ ನದೀತೀರ್ಥಾರ್ಘ್ಯ-ಮಂತ್ರಗಳಿಂದ ಅರ್ಘ್ಯ ಕೊಡಬೇಕು. ಆ ನದೀತೀರ್ಥಮಂತ್ರ ತಿಳಿಯದಿದ್ದರೆ '..... .ನದ್ಯಂತರ್ಗತತತ್ತದ್ರೂಪಿಶ್ರೀನಾರಾಯಣಾಯ ನಮಃ' ॥ ಎಂದು ಅರ್ಘ್ಯ ಕೊಡ-ಬೇಕು.)ನಂತರ ಮೈ ಒರೆಸುವುದು.

ಕೃಷ್ಣವೇಣೀ ನದಿ : ನಮಾಮಿ ಸುಕೃತ ಶ್ರೇಣೀಂ ಕೃಷ್ಣವೇಣೀಂ ತರಂಗಿಣೀಮ್ । ಯದ್ವೀಕ್ಷಣಂ ಕೋಟಿಜನ್ಮಕೃತದುಷ್ಕರ್ಮಶಿಕ್ಷಣಮ್ ॥ ಕೃಷ್ಣೇ ಕೃಷ್ಣಾಂಗಸಂಭೂತೇ ಜಂತೂನಾಂ ಪಾಪಹಾರಿಣಿ । ನಮಸ್ತೇ ಸಲಿಲಶ್ರೇಷ್ಠೇ ಗೃಹಣಾರ್ಘ್ಯಂ ನಮೋಽಸ್ತು ತೇ ॥

ಗೋದಾವರಿ ನದಿ – ವಿಪ್ರರ್ಷಿದೇವಕುಲ ಸಂಕುಲ ತೀರಯುಗ್ಮಾ ವಿದ್ರಾವಿತಾಘತೃಣರೇಣುಕಣಾ ಸ್ವವಾತೈಃ । ಸ್ವಾದೂದಕಪ್ರಶವಿತಾಖಿಲಲೋಕ ಶೋಕಾ ಗೋದಾವರೀ ಶುಭಕರೀ ಸರಿದುದ್ಧರೇನ್ನಃ ॥ ವೃದ್ಧಗಂಗೇ ಮಹಾಪುಣ್ಯೇ ಗೌತಮಸ್ಯಾಘನಾಶಿನಿ । ಗೃಹಾಣಾರ್ಘ್ಯಂ ಮಯಾ ದತ್ತಂ ಗೋದಾವರಿ ನಮೋಽ -ಸ್ತು ತೇ ॥

ಕಾವೇರೀ ನದಿ: ಕಾವೇರಿ ಕಮನೀಯಾಂಗಂ ರಂಗನಾಥಂ ಸದಾ ಹೃದಿ । ಧತ್ಸೇ ತ್ವತ್ಸೇವಯಾ ದೇವಿ ಕೋಽನು ಕುರ್ಯಾನ್ನ ತಂ ಹೃದಿ ॥ ಮೋಕ್ಷದಾನಕ್ಷಮಾಃ ಸಂತಿ ಸರಿತಸ್ತತ್ರ ತತ್ರ ಹಿ । ಕಾವೇರೀ ಚೋಲಭೂಮಾತಾ ಭುಕ್ತಿಮುಕ್ತಿಕರೀ ಸರಿತ್ ॥ ನಮಃ ಕರಾಲವದನೇ ನಮಸ್ತೇ ಕಲಿನಾಶಿನಿ । ನಮಸ್ತೇ ದೇವಿ ಕಾವೇರಿ ಗೃಹಾಣಾರ್ಘ್ಯಂ ನಮೋಸ್ತು ತೇ ॥ ಸಹ್ಯಾಚಲಸಮುದ್ಭೂತೇ ಶ್ರೀರಂಗೋತ್ಸಂಗಗಾಮಿನಿ । ಕಾವೇರೀತಿ ಚ ವಿಖ್ಯಾತೇ ಗೃಹಾಣಾರ್ಘ್ಯಂ ನಮೋಽಸ್ತು ತೇ ॥

ಚಂದ್ರಪುಷ್ಕರಿಣಿ : ಹಿತ್ವಾ ಹರಜಟಾಗಂಗಾಂ ಯತ್ರೇಂದುರತಪತ್ ತಪಃ । ಚಂದ್ರಪುಷ್ಕರಣೀ ಸೇಯಂ ಮಂದಭಾಗ್ಯೈರ್ನ ಸೇವ್ಯತೇ ॥ ರಂಗಪದೋದ್ಭವೇ ದೇವಿ ಪುಣ್ಯಾ ಗೋತ್ಸಂಗಗಾಮಿನಿ । ಚಂದ್ರಪುಷ್ಕರಣಿ ಖ್ಯಾತೇ ಗೃಹಾಣಾರ್ಘ್ಯಂ ನಮೋಽಸ್ತು ತೇ ॥

ಸ್ವಾಮಿಪುಷ್ಕರಣಿ: ಅರ್ಘ್ಯಮಂತ್ರ ವೆಂಕಟಾಚಾಲಸಂಭೂತೇ ಸರ್ವತೀರ್ಥ -ಸಮನ್ವಿತೇ । ಸ್ವಾಮಿ ಪುರಷ್ಕರಣಿ ಖ್ಯಾತೇ ಗೃಹಾಣಾರ್ಘ್ಯಂ ನಮೋಽಸ್ತು ತೇ ॥ ವೇಣೀ ಮಾಧವ ಸರ್ವಜ್ಞ ಭಕ್ತೇಪ್ಸಿತಫಲಪ್ರದ । ಸಫಲಾಂ ಕುರು ಮೇ ಯಾತ್ರಾಂ ವೇಣೀಮಾಧವ ತೇ ನಮಃ ॥ 4 ॥ ನಮಾಮಿ ತ್ರ್ಯಂಬಕೇ ದೇವಿ ತ್ರಿವಿಧಾಘ-ವಿನಾಶಿನಿ । ತ್ರಿಮಾರ್ಗಗುಣತೋ ತ್ರಾಹಿ ತ್ರಿವೇಣಿ ಶರಣಾಗತಮ್ ॥

ಪ್ರಯಾಗಕ್ಷೇತ್ರಕ್ಕೆ ಹೋದಾಗ ಈ ಕೆಳಗಿನಂತೆ ಸಂಕಲ್ಪ ಮಾಡಬೇಕು.

ಭಾರತ ಖಂಡೇ ಜಂಬೂದ್ವೀಪೇ ಮೇರೋರ್ದಕ್ಷಿಣದಿಗ್ಭಾಗೇ ವಿಂಧ್ಯಸ್ಯೋತ್ತರೇ ಆರ್ಯಾವರ್ತಾಂತರ್ಗತ ಬ್ರಹ್ಮಾವರ್ತೈಕದೇಶೇ, ವಿಷ್ಣು ಪ್ರಜಾಪತಿ ಕ್ಷೇತ್ರೇ ಷಟ್ಕೂಲಮಧ್ಯೇ ಅಂತರ್ವೇದ್ಯಾಂ ಭಾಗೀರಥ್ಯಾಃ ಪಶ್ಚಿಮತೀರೇ ಕಾಳಿಂದ್ಯಾಃ ಉತ್ತರೇ ತೀರೇ ವಟಸ್ಯ ಪೂರ್ವದಿಗ್ಭಾಗೇ ಪ್ರಯಾಗಸ್ನಾನಮಹಂ ಕರಿಷ್ಯೇ ।

ಪ್ರಾರ್ಥನೆ- ಸುರಮುನಿದಿತಿಜೇಂದ್ರೈಃ ಸೇವ್ಯತೇ ಯೋಽಸ್ತತಂದ್ರೈಃ ಗುರುತರ ದುರಿತಾನಾಂ ಕಾ ಕಥಾ ಮಾನವಾನಾಮ್ । ಸ ಭುವಿ ಸುಕೃತಕರ್ತುರ್ವಾಂಛಿತಾ-ವಾಪ್ತಿಹೇತುಃ ಜಯತಿ ವಿಜಿತಯಾಶಸ್ತೀರ್ಥರಾಜಃ ಪ್ರಯಾಗಃ ॥ ಪ್ರಯಾಗ-ಮಾಧವೋ ಭೂಯಾದ್ದಯಾವಾರಿನಿಧಿರ್ಹೃದಿ । ಪ್ರಕೃಷ್ಟಯಾಗಸದೃಶೀ ಸಕೃದ್ಯಸ್ಯ ಹಿ

ಸಂಸ್ಕೃತಿಃ ॥ ತ್ರಿವೇಣೀಯಮಘಶ್ರೇಣೀಕೃಪಾಣೀ ಮುಕ್ತಿಕಾರಿಣೀ । ಮಮಾನೀಹಿತ-ಮಾದಧ್ಯಾದ್ಧಿ ಮಾನೀಮಂಶುಮಾನಿವ ॥ ಲೋಕತ್ರಯೈಶ್ವರ್ಯನಿದಾನವೇಣೀ ತಾಪತ್ರಯೋಚ್ಚಾಟನಬದ್ಧವೇಣೀ । ಧರ್ಮಾರ್ಥಕಾಮಾ ಕಲನೈಕವೇಣೀ ಶ್ರೀಮ-ತ್ರ್ಪಯಾಗೇ ಜಯತಿ ತ್ರಿವೇಣೀ ॥

(ಈ ಕ್ಷೇತ್ರದಲ್ಲಿ ಮಾಧವನಿಗೆ, ತ್ರಿವೇಣಿಗೆ, ವಟವೃಕ್ಷಕ್ಕೆ ಅರ್ಘ್ಯಾದಿಗಳನ್ನು ಕೊಡಬೇಕು) ತ್ರಿವೇಣೀಂ ಮಾಧವಂ ಸೋಮಂ ಭಾರದ್ವಾಜಂ ಚ ವಾಸುಕಿಮ್ । ವಂದೇ ಅಕ್ಷಯವಟಂ ಶೇಷಂ ಪ್ರಯಾಗಂ ತೀರ್ಥನಾಯಕಮ್ । ಗಂಗಾ-ಯಮುನಯೋರ್ಮಧ್ಯೇ ಯತ್ರ ಗುಪ್ತಾ ಸರಸ್ವತೀ । ತ್ರೈಲೋಕ್ಯವಂದಿತೇ ದೇವಿ-ತ್ರಿವೇಣ್ಯರ್ಘ್ಯಂ ನಮೋಽಸ್ತುತೇ ॥ ತ್ರಿವೇಣ್ಯೈ ನಮಃ ಇದಮರ್ಘ್ಯಂ ಸಮರ್ಪ-ಯಾಮಿ ॥ ಏಕಾರ್ಣವೇ ಮಹಾಲ್ಪೇ ಸುಷುಪ್ತೇ ಮಾಧವ ಪ್ರಭೋ । ಪರ್ಯಂಕ-ವಟರಾಜ ತ್ವಂ ಗೃಹಾಣಾರ್ಘ್ಯಂ ನಮೋಽಸ್ತುತೇ ॥ 3 ॥ ವಟರಾಜಾಯ ನಮಃ ಇದಂ ಅರ್ಘ್ಯಂ ಸಮರ್ಪಯಾಮಿ ॥

ಹೀಗೆ ಆಯಾ ನದಿಗಳಲ್ಲಿ ವಿಶೇಷಾರ್ಘ್ಯಗಳನ್ನು ಕೊಟ್ಟು ಅವಗಾಹನಸ್ನಾನ ಮಾಡಬೇಕು.

ಅನಂತರ ಕ್ಷೇತ್ರಪಾಲನ ಅನುಜ್ಞೆಯನ್ನು- 'ಅತಿತೀಕ್ಷ್ಣಮಹಾಕಾಯ ಕಲ್ಪಾಂತ-ದಹನೋಪಮ । ಭೈರವಾಯ ನಮಸ್ತುಭ್ಯಂ ಅನುಜ್ಞಾಂ ದಾತುಮರ್ಹಸಿ ॥' ಎಂಬ ಮಂತ್ರ ಪಠನದೊಂದಿಗೆ ಸ್ನಾನಕ್ಕಾಗಿ ಪ್ರಾರ್ಥಿಸಬೇಕು.

ಅನಂತರ- 'ಸಮಸ್ತ ಜಗದಾಧಾರ ಶಂಖಚಕ್ರಗದಾಧರ । ದೇವ ದೇಹಿ ಮಮಾ-ನುಜ್ಞಾಂ ಯುಷ್ಮತ್ತೀರ್ಥನಿಷೇವಣೇ ॥' ಎಂಬುದಾಗಿ ತೀರ್ಥಾಂತರ್ಯಾಮಿಯಾದ ಶ್ರೀಹರಿಯನ್ನು ಸ್ನಾನಕ್ಕಾಗಿ ಅನುಜ್ಞೆ ನೀಡಲು ಪ್ರಾರ್ಥಿಸಿ, ನದಿಯಲ್ಲಿ ಪ್ರವಾಹಾ-ಭಿಮುಖವಾಗಿ, ಸರೋವರದಲ್ಲಿ ಸೂರ್ಯಾಭಿಮುಖವಾಗಿ ಮೂರು ಮುಳುಗು ಹಾಕಬೇಕು. ಅನಂತರ, ಆಚಮನ-ಪ್ರಾಣಯಾಮ-ಹರಿಸ್ಮರಣೆ ಮಾಡಿ ಪುನಃ ಮೃತ್ತಿಕೆ ಲೇಪಿಸಿಕೊಂಡು 'ಓಂ ನಮೋ ಭಗವತೇ ವಾಸುದೇವಾಯ ಓಂ' ಎಂಬ ವಾಸುದೇವ ದ್ವಾದಶಾಕ್ಷರ ಮಂತ್ರದಿಂದ ಮೂರು ಬಾರಿ ಮತ್ತು 'ಓಂ ನಮೋ ನಾರಾಯಣಾಯ ಓಂ' ಎಂಬ ನಾರಾಯಣಾಷ್ಟಾಕ್ಷರ ಮಂತ್ರದಿಂದ ಮೂರು ಬಾರಿ

'ಓಂ ವಿಷ್ಣವೇ ನಮಃ ಓಂ' ಎಂಬ ವಿಷ್ಣು ಷಡಕ್ಷರ ಮಂತ್ರದಿಂದ ಮೂರು ಬಾರಿ ಮುಳುಗು ಹಾಕಬೇಕು. ಅಥವಾ, ಈ ಮೂರೂ ಮಂತ್ರಗಳನ್ನೂ ಪಠಿಸುತ್ತ ಮೂರು ಬಾರಿ ಮುಳುಗು ಹಾಕಬೇಕು. ಅಪ್‌ದೇವತಾಕವಾದ ಸೂಕ್ತಗಳಿಂದ ಶಂಖಮುದ್ರೆ-ಯಿಂದ ಯುಕ್ತವಾದ ಕೈಗಳನ್ನು ನೀರಲ್ಲಿ ಮುಳುಗಿಸುತ್ತಾ ಕ್ರಮವಾಗಿ ತಲೆ-ಎದೆ ಮತ್ತು ಸರ್ವಾಂಗಗಳಿಗೆ ಪ್ರೋಕ್ಷಣೆ ಮಾಡಿಕೊಳ್ಳಬೇಕು. ನೀರಿಗೆ ಅಭಿಮಾನಿಯಾದ ಶ್ರೀಹರಿ ಮತ್ತು ಇತರ ದೇವತೆಗಳನ್ನು ವರ್ಣಿಸುವ ಮಂತ್ರಗಳು ಹೀಗಿವೆ-

ಆಪೋ ವಾ ಇದಗ್ಂ ಸರ್ವಮ್। ವಿಶ್ವಾ ಭೂತಾನ್ಯಾಪಃ। ಪ್ರಾಣಾ ವಾ ಆಪಃ।
ಪಶವ ಆಪೋಽನ್ನಮಾಪೋಽಮೃತಮಾಪಃ। ಸಮ್ರಾಡಾಪೋ ವಿರಾಡಾಪಃ।
ಸ್ವರಾಡಾಪಃ। ಛಂದಾಗ್ಂಸ್ಯಾಪಃ। ಜ್ಯೋತೀಗ್‌ಷ್ಯಾಪಃ। ಯಜೂಗ್‌ಷ್ಯಾಪಃ।
ಸತ್ಯಮಾಪಃ। ಸರ್ವಾದೇವತಾ ಆಪಃ। ಭೂರ್ಭುವಸ್ಸುವರಾಪಃ॥ ಓಮ್॥

ಆಪೋ ಹಿ ಷ್ಠಾ ಮಯೋ ಭುವಃ - ತಾನ ಊರ್ಜೇ ದಧಾತನ ಮಹೇ ರಣಾಯ ಚಕ್ಷಸೇ॥೧॥ ಯೋ ವಃ ಶಿವತಮೋ ರಸಃ ತಸ್ಯ ಭಾಜಯ ತೇಹ ನಃ ಉಶತೀರಿವ ಮಾತರಃ ॥೨॥ ತಸ್ಮಾ ಅರಂ ಗಮಾಮ ವಃ ಯಸ್ಯ ಕ್ಷಯಾಯ ಜಿನ್ವಥ ಆಪೋ ಜನಯಥಾ ಚ ನಃ ॥೩॥

ಶ್ರೀಹರಿಯು ಎಲ್ಲಾ ಕಾಲದಲ್ಲೂ ಜೀವರನ್ನು ಚೆನ್ನಾಗಿ ಪರಿಪಾಲಿಸುತ್ತಾನೆ. 'ಆ' ಎಂದರೆ ಚೆನ್ನಾಗಿ 'ಪ' ಎಂದರೆ ಪಾಲಿಸುವವನು, ಎಂಬ ಹಿನ್ನೆಲೆಯಲ್ಲಿ ಪಾಪನಿವಾರಕನಾದ ಶ್ರೀಹರಿಯ ಹಿರಿಮೆಯನ್ನು ಬಣ್ಣಿಸುವ ಈ ಸೂಕ್ತಗಳು 'ಆಪ್ಯ' ಸೂಕ್ತಗಳೆನಿಸಿವೆ. ಮೇಲೆ ತಿಳಿಸಿದ ಸೂಕ್ತಗಳಿಂದ ಪ್ರೋಕ್ಷಣೆ ಮಾಡಿಕೊಂಡು ಪಿತೃತರ್ಪಣಾಧಿಕಾರಿಗಳು ಪಿತೃಗಳನ್ನು ಗುರುಗಳನ್ನೂ ನೆನೆದು ತದಂತರ್ಗತ ಹರಿಪ್ರೀತಿಗಾಗಿ ಸ್ನಾನ ಮಾಡಬೇಕು. ಪುನಃ ಉಳಿದ ಮೃತ್ತಿಕೆಯನ್ನು ಮೂರು ಭಾಗ ಮಾಡಿ ಒಂದು ಭಾಗದಿಂದ ದ್ವಾದಶಪುಂಡ್ರ ಧರಿಸಬೇಕು. ಎರಡನೇ ಭಾಗವನ್ನು ಕಂಕುಳಿಗೂ ಮೂರನೆಯ ಭಾಗವನ್ನು ಸರ್ವಾಂಗಕ್ಕೂ ಲೇಪಿಸಿ ಹಿಂದಿನಂತೆಯೇ

ವಾಸುದೇವದ್ವಾದಶಾಕ್ಷರಮಂತ್ರ ನಾರಾಯಣಾಷ್ಟಾಕ್ಷರ ವಿಷ್ಣುಷಡಕ್ಷರ ಮಂತ್ರಗಳಿಂದ ಮೂರು ಮುಳುಗು ಹಾಕಬೇಕು. ಅನಂತರ ನೀರಲ್ಲಿ ನಿಂತು- 'ತನ್ನ ಸಂಕಲ್ಪ ಮಾತ್ರದಿಂದಲೇ ಮತ್ಸ್ಯಾದಿರೂಪಗಳನ್ನು ವ್ಯಕ್ತಗೊಳಿಸಿದ, ಬ್ರಹ್ಮಾದಿ ದೇವತೆಗಳನ್ನು ಹಾಗೂ ಸಕಲ ಲೋಕಗಳನ್ನೂ ಹಿಂದಿನ ಕಲ್ಪದಂತೆಯೇ ಸೃಷ್ಟಿಸಿದ ಅಪಾರಮಹಿಮನಾದ ಶ್ರೀಹರಿಯನ್ನು' ಬಣ್ಣಿಸುವ ಅಘಮರ್ಷಣ ಸೂಕ್ತವನ್ನು ಪಠಿಸಬೇಕು.

**ಅಘಮರ್ಷಣಸೂಕ್ತಮ್** – ಹಿರಣ್ಯಶೃಂಗಂ ವರುಣಂ ಪ್ರಪದ್ಯೇ ತೀರ್ಥಂ ಮೇ ದೇಹಿ ಯಾಚಿತಃ। ಯನ್ಮಯಾ ಭುಕ್ತಮಸಾಧೂನಾಂ ಪಾಪೇಭ್ಯಶ್ಚ ಪ್ರತಿಗ್ರಹಃ। ಯನ್ಮೇ ಮನಸಾ ವಾಚಾ ಕರ್ಮಣಾ ವಾ ದುಷ್ಕೃತಂ ಕೃತಮ್। ತನ್ನ ಇಂದ್ರೋ ವರುಣೋ ಬೃಹಸ್ಪತಿಸ್ಸವಿತಾ ಚ ಪುನಂತು ಪುನಃ ಪುನಃ। ನಮೋಽಗ್ನಯೇಽ-ಪ್ಸುಮತೇ ನಮ ಇಂದ್ರಾಯ ನಮೋ ವರುಣಾಯ ನಮೋ ವಾರುಣ್ಯೈ ನಮೋಽದ್ಭ್ಯಃ॥ ಯದಪಾಂ ಕ್ರೂರಂ ಯದಮೇಧ್ಯಂ ಯದಶಾಂತಂ ತದಪಗಚ್ಛತಾತ್। ಅತ್ಯಾಶನಾದತೀಪಾನಾದ್ಯಚ್ಚ ಉಗ್ರಾತ್ ಪ್ರತಿಗ್ರಹಾತ್। ತನ್ನೋ ವರುಣೋ ರಾಜಾ ಪಾಣಿನಾಹ್ಯವಮರ್ಶತು। ಸೋಽಹಮಪಾಪೋ ವಿರಜೋ ನಿರ್ಮುಕ್ತೋ ಮುಕ್ತಕಿಲ್ಬಿಷಃ। ನಾಕಸ್ಯ ಪೃಷ್ಠಮಾರುಹ್ಯ ಗಚ್ಛೇದ್ಬ್ರಹ್ಮಸಲೋಕತಾಮ್। ಯಶ್ಚಾಪ್ಸು ವರುಣಸ್ಸ ಪುನಾತ್ವಘಮರ್ಷಣಃ। ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಗ್ಂ ಸಚತಾ ಪರುಷ್ಣಿಯಾ। ಅಸಿಕ್ನಿಯಾ ಮರುದ್ವೃಧೇ ವಿತಸ್ತಯಾಽಽರ್ಜೀಕೀಯೇ ಶೃಣುಹ್ಯಾ ಸುಷೋಮಯಾ। ಋತಂ ಚ ಸತ್ಯಂ ಚಾಭೀದ್ಧಾತ್ತಪಸೋಽಧ್ಯಜಾಯತ। ತತೋ ರಾತ್ರಿರಜಾಯತ ತತಸ್ಸಮುದ್ರೋ ಅರ್ಣವಃ॥ ಸಮುದ್ರಾದರ್ಣವಾ ದಧಿ ಸಂವತ್ಸರೋ ಅಜಾಯತ। ಅಹೋರಾತ್ರಾಣಿ ವಿದಧದ್ವಿಶ್ವಸ್ಯ ಮಿಷತೋ ವಶೀ॥

ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್। ದಿವಂ ಚ ಪೃಥಿವೀಂ ಚಾಂತರಿಕ್ಷಮಥೋ ಸುವಃ॥ ಯತ್ಪೃಥಿವ್ಯಾಗ್ಂ ರಜಸ್ಸ್ವಮಾಂತರಿಕ್ಷೇ ವಿರೋದಸೀ। ಇಮಾಗ್‌ಸ್ತದಾಪೋ ವರುಣಃ ಪುನಾತ್ವಘಮರ್‌ಷಣಃ॥ ಪುನಂತು ವಸವಃ ಪುನಾತು ವರುಣಃ ಪುನಾತ್ವಘಮರ್‌ಷಣಃ। ಏಷ ಭೂತಸ್ಯ ಮಧ್ಯೇ ಭುವನಸ್ಯ ಗೋಪ್ತಾ। ಏಷ ಪುಣ್ಯಕೃತಾಂ ಲೋಕಾನೇಷ ಮೃತ್ಯೋರ್ ಹಿರಣ್ಮಯಮ್॥ ದ್ಯಾವಾಪೃಥಿವ್ಯೋರ್ ಹಿರಣ್ಮಯಗ್ಂ ಸಗ್ಂಶ್ರಿತಗ್ಂ ಸುವಃ। ಸನಸ್ಸುವಸ್ಸಗ್ಂ ಶಿಶಾಧಿ। ಆರ್ದ್ರಂ ಜ್ವಲತಿ ಜ್ಯೋತಿರಹಮಸ್ಮಿ। ಜ್ಯೋತಿರ್ಜ್ವಲತಿ ಬ್ರಹ್ಮಾಹಮಸ್ಮಿ। ಯೋಽಹಮಸ್ಮಿ ಬ್ರಹ್ಮಾಹಮಸಿ। ಅಹಮಸ್ಮಿ ಬ್ರಹ್ಮಾಹಮಸ್ಮಿ। ಅಹಮೇವಾಹಂ ಮಾಂ ಜುಹೋಮಿ ಸ್ವಾಹಾ॥ ಅಕಾರ್ಯಕಾರ್ಯವಕೀರ್ಣೀ ಸ್ತೇನೋ ಭ್ರೂಣಹಾ ಗುರುತಲ್ಪಗಃ। ವರುಣೋಽಪಾಮಘಮರ್‌ಷಣಸ್ತಸ್ಮಾತ್ ಪಾಪಾತ್ ಪ್ರಮುಚ್ಯತೇ। ರಜೋ ಭೂಮಿಸ್ತ್ವಮಾಗ್ಂ ರೋದಯಸ್ವಪ್ರವದಂತಿ ಧೀರಾಃ। ಆಕ್ರಾನ್‌ಥ್ಸಮುದ್ರಃ ಪ್ರಥಮೇ ವಿಧರ್ಮನ್ ಜನಯನ್ ಪ್ರಜಾಭುವನಸ್ಯ ರಾಜಾ। ವೃಷಾ ಪವಿತ್ರೇ ಅಧಿಸಾನೋ ಅವ್ಯೇ ಬೃಹತ್ಸೋಮೋ ವಾವೃಧೇ ಸುವಾನ ಇಂದುಃ॥

ಅಘಮರ್ಷಣಸೂಕ್ತಪಠನಾನಂತರ ತೀರ್ಥವನ್ನು ಮೂರು ಬಾರಿ ಸ್ವೀಕರಿಸಿ ನದಿಯ ನೀರಲ್ಲಿ ನಿಂತು ಸ್ನಾನಾಂಗ ದೇವ-ಋಷಿ ಪಿತೃ ತರ್ಪಣ ನೀಡಬೇಕು- ಸ್ನಾನಾನಂತರದಲ್ಲಿ 'ಭೂಃ ದೇವಾನ್ ತರ್ಪಯಾಮಿ, ಭುವಃ ಸ್ವಃ ಭೂರ್ಭುವಸ್ವಃ ದೇವಾನ್ ತರ್ಪಯಾಮಿ' ಎಂದು ನಾಲ್ಕು ಬಾರಿ ಬ್ರಹ್ಮಾದಿ ದೇವತೆಗಳಿಗೆ ಅದರಂತೆ ದ್ವೈಪಾಯನಾದಿ ಋಷಿಗಳಿಗೆ ಮತ್ತು ಪಿತೃಗಳಿಗೆ ತರ್ಪಣವನ್ನು ನೀಡಬೇಕು.

ತರ್ಪಣಕ್ರಮ – ಅಥ ದೇವತರ್ಪಣಂ ಬ್ರಹ್ಮಾದಯೋ ಯೇ ದೇವಾಃ॥ ತಾನ್ ದೇವಾನ್ ತರ್ಪಯಾಮಿ. ಭೂಃ ದೇವಾನ್ ತರ್ಪಯಾಮಿ ಭುವಃ

ದೇವಾನ್ ತರ್ಪಯಾಮಿ ಸ್ವಃ ದೇವಾನ್ ತರ್ಪಯಾಮಿ. ಭೂರ್ಭುವಸ್ವಃ ದೇವಾನ್ ತರ್ಪಯಾಮಿ' **ಅಥ ಋಷಿತರ್ಪಣಂ** — ಜನಿವಾರವನ್ನು ಮಾಲಾಕಾರ ಮಾಡಿಕೊಂಡು ಕೃಷ್ಣದ್ವೈಪಾಯನಾದಯೋ ಯೇ ಋಷಯಃ ತಾನ್ ಋಷೀನ್ ತರ್ಪಯಾಮಿ. ಭೂಃ ಋಷೀನ್ ತರ್ಪಯಾಮಿ ಭುವಃ ಋಷೀನ್ ತರ್ಪಯಾಮಿ ಸ್ವಃ ಋಷೀನ್ ತರ್ಪಯಾಮಿ. ಭೂರ್ಭುವಸ್ವಃ ಋಷೀನ್ ತರ್ಪಯಾಮಿ' **ಅಥ ಪಿತೃತರ್ಪಣಂ** — ಅಗ್ನಿಕವ್ಯವಾಹನಾದಯೋ ಯೇ ಪಿತರಃ ತಾನ್ ಭೂಃ ಪಿತ್ರೂನ್ ತರ್ಪಯಾಮಿ , ಭುವಃ ಪಿತ್ರೂನ್ ತರ್ಪಯಾಮಿ ಸ್ವಃ ಪಿತ್ರೂನ್ ತರ್ಪ-ಯಾಮಿ ಭೂರ್ಭುವಸ್ವಃ ಪಿತ್ರೂನ್ ತರ್ಪಯಾಮಿ'.

**ಅಗ್ನಿದಗ್ಧರಿಗೆ ತರ್ಪಣ** – 'ಅಗ್ನಿದಗ್ಧಾಶ್ಚ ಯೇ ಜೀವಾಃ ಯೇಽಪಿ ಜಾತಾಃ ಕುಲೇ ಮಮ । ಭೂಮೌ ದತ್ತೇನ ತೋಯೇನ ತೃಪ್ತಾ ಯಾಂತು ಪರಾಂ ಗತಿಮ್ ॥' ಎಂಬ ಮಂತ್ರದಿಂದ ಬೆಂಕಿಯ ಅಪಘಾತ ಮುಂತಾದವುಗಳಿಂದ ದುರ್ಮರಣ ಪಡೆದ ಹಿಂದಿನ ತಲೆಮಾರಿನವರಿಗೆ ಸದ್ಗತಿಯನ್ನು ಪ್ರಾರ್ಥಿಸಿ ತರ್ಪಣ ನೀಡಬೇಕು.

**ಶಿಖೋದಕ ತರ್ಪಣ** – 'ಶಿಖೋದಕಂ ಭೂಪತಿತಂ ಪಿಬಂತಿ ಪಿತರೋಽ-ಖಿಲಾಃ । ತಸ್ಮಾತ್ ಶಿಖೋದಕಂ ದದ್ಯಾದ್ ಪಿತೃಣಾಂ ತೃಪ್ತಿಹೇತವೇ ॥' ಎಂಬ ಮಂತ್ರ ಪಠಿಸಿ ಬಲಹೆಗಲ ಮೇಲೆ ಹಾಕಿಕೊಂಡಿರುವ ಜುಟ್ಟಿನ ಕೂದಲನ್ನು ಹಿಂಡಿ ತರ್ಪಣವನ್ನು ಕೊಡಬೇಕು.

**ವಸ್ತ್ರ ನಿಷ್ಪೀಡನೋದಕ ತರ್ಪಣ** – ಮೈ ಒರೆಸಿಕೊಳ್ಳಲು ಯಜುಃಶಾಖಿಗಳು ಸ್ನಾನಕಾಲಕ್ಕೆ ಸೊಂಟಕ್ಕೆ ಸುತ್ತಿದ, ಇತರ ಶಾಖೆಯವರು (ಅಧಿಕಾರಿಗಳು ಮಾತ್ರ) ಕೆಳಗಿರಿಸಿದ ವಸ್ತ್ರವನ್ನು ನಾಲ್ಕು ಭಾಗವಾಗಿ ಮಡಿಸಿ- 'ಯೇ ಕೇ ಚಾಸ್ಮತ್ಕುಲೇ ಜಾತಾಃ ಅಪುತ್ರಾ ಗೋತ್ರಿಣೋ ಮೃತಾಃ । ತೇ ಗೃಹ್ಣಂತು ಮಯಾ ದತ್ತಂ ವಸ್ತ್ರನಿಷ್ಪೀಡ-ನೋದಕಮ್ ॥' ಎಂಬ ಮಂತ್ರ ಪಠಿಸುತ್ತಾ ವಸ್ತ್ರವನ್ನು ಹಿಂಡಿ ತರ್ಪಣ ನೀಡಬೇಕು. ಈ ತರ್ಪಣಕಾಲದಲ್ಲಿ ಯಜ್ಞೋಪವೀತವನ್ನು ಎಡಗಡೆ ಹಾಕಿಕೊಂಡಿರಬೇಕು.

**ಯಕ್ಷ್ಮ ತರ್ಪಣ** – ನಾವು ಸ್ನಾನ ಮಾಡುವಾಗ ನಮ್ಮ ದೇಹದ ಕೊಳೆಯನ್ನೆಲ್ಲ ನೀರಲ್ಲಿ ಬಿಟ್ಟಿರುತ್ತೇವೆ. ಈ ಹಿನ್ನೆಲೆಯಲ್ಲಿ ತೀರ್ಥವನ್ನು ನಾವು ಕಶ್ಮಲಗೊಳಿಸಿದ್ದೇವೆ.

ಈ ಪಾಪ ಪರಿಹಾರಕ್ಕಾಗಿ ಯಕ್ಷ್ಮ ಎಂಬ ಜಲಾಭಿಮಾನಿ ದೇವತೆಯನ್ನು ತರ್ಪಣದ ಮೂಲಕ ಸಂತೋಷಪಡಿಸಬೇಕು. ಆ ಮಂತ್ರವು ಹೀಗಿದೆ: 'ಯನ್ಮಯಾ ದೂಷಿತಂ ತೋಯಂ ಶಾರೀರಮಲಸಂಭವಮ್ । ತತ್ಪಾಪಶೋಧನಾರ್ಥಾಯ ಯಕ್ಷ್ಮಾಣಂ ತರ್ಪಯಾಮ್ಯಹಮ್ ॥' ಸ್ನಾನಾಂಗತರ್ಪಣವನ್ನು ನೀರಲ್ಲೇ ನಿಂತು ಕೊಡುವುದು ಪ್ರಶಸ್ತ. ಅಶಕ್ತರು ಒಣಗಿದ ವಸ್ತ್ರವನ್ನು ಧರಿಸಿಯೂ ಮಾಡಬಹುದು. ಪ್ರಾತಃ ಸ್ನಾನಾನಂತರ ತರ್ಪಣ ಕೊಡುವುದಕ್ಕಿಂತ ಪೂರ್ವದಲ್ಲಿ ಒರೆಸಿಕೊಳ್ಳಲು ಉಪ-ಯೋಗಿಸುವ ವಸ್ತ್ರವನ್ನು ಹಿಂಡಬಾರದು. ಮಧ್ಯಾಹ್ನಸ್ನಾನದಲ್ಲಿ ಬ್ರಹ್ಮಯಜ್ಞಾಂಗ ತರ್ಪಣದ ನಂತರದಲ್ಲಿ ವಸ್ತ್ರವನ್ನು ಹಿಂಡಬೇಕು. ಒರೆಸಿಕೊಳ್ಳಲು ಬಳಸುವ ಸ್ನಾನವಸ್ತ್ರವನ್ನು ಅಪಸವ್ಯವಾಗಿ ನೆಲದ ಮೇಲೆಯೇ ಹಿಂಡಬೇಕು. ಇಲ್ಲಿಗೆ ಸ್ನಾನವಿಧಿ-ಯು ಸಮಾಪ್ತವಾಯಿತು.

**ಶ್ರೀಸತ್ಯವ್ರತತೀರ್ಥರು (ಶ್ರೀಪಾದರಾಜಮಠ)** ಚೈತ್ರಪೂರ್ಣಿಮಾ - ಶ್ರೀರಂಗ (ಕ್ರಿ.ಶ. 1384-1400) ಲೋಕೇಷು ವಿಖ್ಯಾತಸುಕೀರ್ತಿಮಂತಂ ಧೀಮಂತಮಾದ್ಯಂ ಕ್ಷಿತಿಪಾಲಜಾತಮ್ । ಸತ್ಯವ್ರತಂ ಜ್ಞಾನವಿರಾಗಯುಕ್ತಂ ಭಕ್ತಂ ಹರೇ ಸತ್ಯರತಂ ಭಜೇಹಂ ॥

**ಶ್ರೀ ರಾಜರಾಜೇಶ್ವರತೀರ್ಥರು (ಪಲಿಮಾರು ಮಠ)** ಚೈತ್ರಶುದ್ಧ ಹುಣ್ಣಿಮೆ ಶ್ರೀ ವಿದ್ಯಾಮೂರ್ತಿತೀರ್ಥರು ತಮ್ಮ ಗುರುಗಳಾದ ಅಪರಾಜಿತತೀರ್ಥರು ಪೀಠದಲ್ಲಿರುವಾಗಲೇ, ಗುರುಗಳು, ಪರಮಗುರುಗಳ ಪಾಂಡಿತ್ಯಕ್ಕೆ ಒಪ್ಪಕೊಡು-ವಂತಹ ಪಾಂಡಿತ್ಯವನ್ನೂ, ಕವಿಪ್ರತಿಭೆಯನ್ನೂ ಪಡೆದು ಬಂದ ಒಬ್ಬ ವಟುವಿಗೆ ಆಶ್ರಮ ಕೊಟ್ಟಿದ್ದರು. ಅವರೇ ಶ್ರೀ ರಾಜರಾಜೇಶ್ವರತೀರ್ಥರು. ಇಂದೂ ಕೂಡ ಪ್ರತಿಯೊಬ್ಬ ಮಾಧ್ವನ ಮನೆಯಲ್ಲಿ ಪ್ರಾತಃಕಾಲದಲ್ಲಿ ಕೇಳಿ ಬರುವ 'ಲಕ್ಷ್ಮೀರ್ಯಸ್ಯ ಪರಿಗ್ರಹಃ ಕಮಲಭೂಃ...' ಎಂಬ 'ಮಂಗಲಾಷ್ಟಕ'ವನ್ನು ಬರೆದವರು ಶ್ರೀ ರಾಜರಾಜೇಶ್ವರ ತೀರ್ಥರು. ಕಾಳಿದಾಸನ ಮೇಘ ಸಂದೇಶ, ವೇದಾಂತ ದೇಶಿಕರ ಹಂಸ ಸಂದೇಶಗಳ ಸಾಲಿನಲ್ಲಿ ನಿಲ್ಲಬಲ್ಲ ರಾಮ ಸಂದೇಶ ಇನ್ನೊಂದು ಕಾವ್ಯಶಿಲ್ಪ, ಕಾವ್ಯ ಹಾಗೂ ಶಾಸ್ತ್ರದಲ್ಲಿ ಸಿದ್ಧಹಸ್ತರಾಗಿದ್ದ ಇವರು ತನ್ನ ಪೂರ್ವ ವಯಸ್ಸಿನಲ್ಲೇ, ತಾರುಣ್ಯದಲ್ಲಿ ಸಮಗ್ರ ಭಾರತವನ್ನು, ಸಂಚರಿಸಿ, ತಾನು ಪಡೆದ ಅನುಭವವನ್ನೆಲ್ಲ

ಈ ರಾಮಸಂದೇಶದಲ್ಲಿ ತುಂಬಿದ್ದಾರೆ. ಶಾಸ್ತ್ರಗಳಲ್ಲಿ ಕೂಡ ಎದುರಿಲ್ಲದ ಮಲ್ಲರಾಗಿದ್ದ ಇವರು ಆ ಕಾಲದ ಪಾಂಡಿತ್ಯದ ಒರೆಗಲ್ಲಿನಂತಿದ್ದ ನ್ಯಾಯಶಾಸ್ತ್ರ ಇವರಿಗೆ ಅಂಗೈಯ ನೆಲ್ಲಿ. ಇವರ ಪ್ರವಚನ ಕೇಳುವವರಿಗೆ ಅಮೃತದ ರಸಧಾರೆ. ಈ ಮಾತಿನಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ. ತನ್ನ ಒಂದು ಕೃತಿಯಲ್ಲಿ ತನ್ನ ಬಗ್ಗೆ ಹೀಗೆ ಬರೆದಿದ್ದಾರೆ.

**ಸಮಧಿಗತಸಮಸ್ತನ್ಯಾಯಶಾಸ್ತ್ರಃ ಸುವಾಗ್ಮೀ ಕ್ಷಿತಿಸುರಗುರುವಿದ್ಯಾಮೂರ್ತಿ-**
**ತೀರ್ಥಾರ್ಯ ಶಿಷ್ಯಃ। ರಘುಪತಿಪದಭಕ್ತೋ ರಾಜರಾಜೇಶ್ವರಾಖ್ಯಃ ಸುಲಲಿತ**
**ಪದಬಂಧಂ ಕಾವ್ಯವೇತತ್ ಚಕಾರ॥**

ಇವರ ಪಾಂಡಿತ್ಯಕ್ಕೆ ತಪಸ್ಸಿಗೆ ಮೆಚ್ಚಿ ಅನೇಕ ಕಡೆಗಳಲ್ಲಿ ರಾಜರು ಇವರಿಗೆ ಸತ್ಕರಿಸಿದ ಉಲ್ಲೇಖಗಳಿವೆ. ಪಲಿಮಾರು ಮಠದ ಈಗಿರುವ ಸಂಪತ್ತಿನ ಅರ್ಧಾಂಶವೆಲ್ಲ ಶ್ರೀ ರಾಜರಾಜೇಶ್ವರತೀರ್ಥರೊಬ್ಬರಿಂದ ಬಂದದ್ದು. ಇಡಿಯ ಕಾಂತಾವರ ಗ್ರಾಮವನ್ನು ಮಾಂಡಲಿಕ ರಾಜನೊಬ್ಬನು ಇವರಿಗೆ ಧಾರೆಯೆರೆದು ಕೊಟ್ಟಿರುವ ಶಿಲಾಶಾಸನ ಇವತ್ತಿಗೂ ಕಾಂತಾವರದ ಮಠದಲ್ಲಿ ಅವರ ಕೀರ್ತಿ-ಶಾಸನವಾಗಿ ಕಂಗೊಳಿಸುತ್ತಿದೆ. 'ಈ ಗ್ರಾಮದ ಎಲ್ಲ ಆಸ್ತಿ-ಆಸ್ತಿಯೂ ಶ್ರೀ ರಾಜರಾಜೇಶ್ವರ ಮಠದ ಧರ್ಮ ಕಾರ್ಯಗಳಿಗೆ ವಿನಿಯೋಗವಾಗತಕದ್ದು. ಇದನ್ನು ಅಡ್ಡಿಪಡಿಸಿದವರಿಗೆ, ಕಸಿದುಕೊಂಡವರಿಗೆ ಕಾಶಿಯಲ್ಲಿ ಸಾವಿರ ಕಪಿಲೆಗೋವುಗಳನ್ನು ಕೊಂದ ಪಾಪವುಂಟು' ಎಂದು ಆ ರಾಜ ಶಿಲಾಶಾಸನದಲ್ಲಿ ಬರೆಯಿಸಿದ್ದಾನೆ. ಹಳ್ಳಿಯ ಮಠಗಳೆಲ್ಲ ಸುಂದರವಾದ ತಪೋವನದಂತಿರುವ ಈ ಕಾಂತಾವರ ಇವತ್ತಿಗೂ ಮಠದ ಸ್ವಾಧೀನದಲ್ಲಿದೆ. ಶ್ರೀಮಠದ ಪ್ರಮುಖ ಆದಾಯ ಕೇಂದ್ರವೂ ಆಗಿತ್ತು. ದೇಶದ ಎಲ್ಲೆಡೆಯೂ ಮಿಂಚಿನಂತೆ ಸಂಚರಿಸಿ, ತನ್ನ ಅದ್ಭುತ ಪ್ರವಚನ -ದಿಂದ ಆಚಾರ್ಯರ ತತ್ವಗಳ ಗರಿಮೆಯನ್ನು ಜನಮನದಲ್ಲಿ ನೆಲಗೊಳಿಸಿ, ಕಾವ್ಯಕೃತಿಗಳನ್ನು ಭವಿಷ್ಯದ ಜನಾಂಗಕೆ ಕೊಟ್ಟು ಪಾಠದ ಧರ್ಮಕಾರ್ಯಕೆ ಅನುಕೂಲವಾಗುವಂತೆ ಸಸ್ಯ ಸಮೃದ್ಧವಾದ ಗ್ರಾಮದ ಸಂಪತ್ತಿನ ಸೆಲೆಯನ್ನು ಶ್ರೀ ರಾಮನಿಗೆ ಕೊಟ್ಟು ತಾನು ಮಾತ್ರ ಎಲ್ಲವನ್ನೂ ಬಿಟ್ಟು ತನ್ನ ಗುರುಗಳ ಕಣ್ಣ ಮುಂದೆಯೇ ಚಿಕ್ಕ ವಯಸ್ಸಿನಲ್ಲೇ, ಚಿಕ್ಕಪಟ್ಟದಲ್ಲಿ, ಇರುವಾಗಲೇ ಶ್ರೀರಾಮ-ಪಾದವನ್ನು ಸೇರಿಕೊಂಡರು. ಪಲಿಮಾರುಮಠವನ್ನು ಸಾಕಷ್ಟು ಸಂಪತ್ತಿನಿಂದ

ಈ ಪಾಪ ಪರಿಹಾರಕ್ಕಾಗಿ ಯಕ್ಷ್ಮ ಎಂಬ ಜಲಾಭಿಮಾನಿ ದೇವತೆಯನ್ನು ತರ್ಪಣದ ಮೂಲಕ ಸಂತೋಷಪಡಿಸಬೇಕು. ಆ ಮಂತ್ರವು ಹೀಗಿದೆ: 'ಯನ್ಮಯಾ ದೂಷಿತಂ ತೋಯಂ ಶಾರೀರಮಲಸಂಭವಮ್ । ತತ್ಪಾಪಶೋಧನಾರ್ಥಾಯ ಯಕ್ಷ್ಮಾಣಂ ತರ್ಪಯಾಮ್ಯಹಮ್ ॥' ಸ್ನಾನಾಂಗತರ್ಪಣವನ್ನು ನೀರಲ್ಲೇ ನಿಂತು ಕೊಡುವುದು ಪ್ರಶಸ್ತ. ಅಶಕ್ತರು ಒಣಗಿದ ವಸ್ತ್ರವನ್ನು ಧರಿಸಿಯೂ ಮಾಡಬಹುದು. ಪ್ರಾತಃ ಸ್ನಾನಾನಂತರ ತರ್ಪಣ ಕೊಡುವುದಕ್ಕಿಂತ ಪೂರ್ವದಲ್ಲಿ ಒರೆಸಿಕೊಳ್ಳಲು ಉಪ-ಯೋಗಿಸುವ ವಸ್ತ್ರವನ್ನು ಹಿಂಡಬಾರದು. ಮಧ್ಯಾಹ್ನಸ್ನಾನದಲ್ಲಿ ಬ್ರಹ್ಮಯಜ್ಞಾಂಗ ತರ್ಪಣದ ನಂತರದಲ್ಲಿ ವಸ್ತ್ರವನ್ನು ಹಿಂಡಬೇಕು. ಒರೆಸಿಕೊಳ್ಳಲು ಬಳಸುವ ಸ್ನಾನವಸ್ತ್ರವನ್ನು ಅಪಸವ್ಯವಾಗಿ ನೆಲದ ಮೇಲೆಯೇ ಹಿಂಡಬೇಕು. ಇಲ್ಲಿಗೆ ಸ್ನಾನವಿಧಿ-ಯು ಸಮಾಪ್ತವಾಯಿತು.

ಶ್ರೀಸತ್ಯವ್ರತತೀರ್ಥರು (ಶ್ರೀಪಾದರಾಜಮಠ) ಚೈತ್ರಪೂರ್ಣಿಮಾ - ಶ್ರೀರಂಗ (ಕ್ರಿ.ಶ. 1384-1400) ಲೋಕೇಷು ವಿಖ್ಯಾತಸುಕೀರ್ತಿಮಂತಂ ಧೀಮಂತಮಾದ್ಯಂ ಕ್ಷಿತಿಪಾಲಜಾತಮ್ । ಸತ್ಯವ್ರತಂ ಜ್ಞಾನವಿರಾಗಯುಕ್ತಂ ಭಕ್ತಂ ಹರೇ ಸತ್ಯರತಂ ಭಜೇಹಂ ॥

ಶ್ರೀ ರಾಜರಾಜೇಶ್ವರತೀರ್ಥರು (ಪಲಿಮಾರು ಮಠ) ಚೈತ್ರಶುದ್ಧ ಹುಣ್ಣಿಮೆ ಶ್ರೀ ವಿದ್ಯಾಮೂರ್ತಿತೀರ್ಥರು ತಮ್ಮ ಗುರುಗಳಾದ ಅಪರಾಜಿತತೀರ್ಥರು ಪೀಠದಲ್ಲಿರುವಾಗಲೇ, ಗುರುಗಳು, ಪರಮಗುರುಗಳ ಪಾಂಡಿತ್ಯಕ್ಕೆ ಒಪ್ಪಕೊಡು-ವಂತಹ ಪಾಂಡಿತ್ಯವನ್ನೂ, ಕವಿಪ್ರತಿಭೆಯನ್ನೂ ಪಡೆದು ಬಂದ ಒಬ್ಬ ವಟುವಿಗೆ ಆಶ್ರಮ ಕೊಟ್ಟಿದ್ದರು. ಅವರೇ ಶ್ರೀ ರಾಜರಾಜೇಶ್ವರತೀರ್ಥರು. ಇಂದೂ ಕೂಡ ಪ್ರತಿಯೊಬ್ಬ ಮಾಧ್ವನ ಮನೆಯಲ್ಲಿ ಪ್ರಾತಃಕಾಲದಲ್ಲಿ ಕೇಳಿ ಬರುವ 'ಲಕ್ಷ್ಮೀರ್ಯಸ್ಯ ಪರಿಗ್ರಹಃ ಕಮಲಭೂಃ...' ಎಂಬ 'ಮಂಗಲಾಷ್ಟಕ'ವನ್ನು ಬರೆದವರು ಶ್ರೀ ರಾಜರಾಜೇಶ್ವರ ತೀರ್ಥರು. ಕಾಳಿದಾಸನ ಮೇಘ ಸಂದೇಶ, ವೇದಾಂತ ದೇಶಿಕರ ಹಂಸ ಸಂದೇಶಗಳ ಸಾಲಿನಲ್ಲಿ ನಿಲ್ಲಬಲ್ಲ ರಾಮ ಸಂದೇಶ ಇನ್ನೊಂದು ಕಾವ್ಯಶಿಲ್ಪ, ಕಾವ್ಯ ಹಾಗೂ ಶಾಸ್ತ್ರದಲ್ಲಿ ಸಿದ್ಧಹಸ್ತರಾಗಿದ್ದ ಇವರು ತನ್ನ ಪೂರ್ವ ವಯಸ್ಸಿನಲ್ಲೇ, ತಾರುಣ್ಯದಲ್ಲಿ ಸಮಗ್ರ ಭಾರತವನ್ನು, ಸಂಚರಿಸಿ, ತಾನು ಪಡೆದ ಅನುಭವವನ್ನೆಲ್ಲ

ಈ ರಾಮಸಂದೇಶದಲ್ಲಿ ತುಂಬಿದ್ದಾರೆ. ಶಾಸ್ತ್ರಗಳಲ್ಲಿ ಕೂಡ ಎದುರಿಲ್ಲದ ಮಲ್ಲರಾಗಿದ್ದ ಇವರು ಆ ಕಾಲದ ಪಾಂಡಿತ್ಯದ ಒರೆಗಲ್ಲಿನಂತಿದ್ದ ನ್ಯಾಯಶಾಸ್ತ್ರ ಇವರಿಗೆ ಅಂಗೈಯ ನೆಲ್ಲಿ. ಇವರ ಪ್ರವಚನ ಕೇಳುವವರಿಗೆ ಅಮೃತದ ರಸಧಾರೆ. ಈ ಮಾತಿನಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ. ತನ್ನ ಒಂದು ಕೃತಿಯಲ್ಲಿ ತನ್ನ ಬಗ್ಗೆ ಹೀಗೆ ಬರೆದಿದ್ದಾರೆ.

**ಸಮಧಿಗತಸಮಸ್ತನ್ಯಾಯಶಾಸ್ತ್ರಃ ಸುವಾಗ್ಮೀ ಕ್ಷಿತಿಸುರಗುರುವಿದ್ಯಾಮೂರ್ತಿ-ತೀರ್ಥಾರ್ಯ ಶಿಷ್ಯಃ। ರಘುಪತಿಪದಭಕ್ತೋ ರಾಜರಾಜೇಶ್ವರಾಖ್ಯಃ ಸುಲಲಿತ ಪದಬಂಧಂ ಕಾವ್ಯಮೇತತ್ ಚಕಾರ॥**

ಇವರ ಪಾಂಡಿತ್ಯಕ್ಕೆ ತಪಸ್ಸಿಗೆ ಮೆಚ್ಚಿ ಅನೇಕ ಕಡೆಗಳಲ್ಲಿ ರಾಜರು ಇವರಿಗೆ ಸತ್ಕರಿಸಿದ ಉಲ್ಲೇಖಗಳಿವೆ. ಪಲಿಮಾರು ಮಠದ ಈಗಿರುವ ಸಂಪತ್ತಿನ ಅರ್ಧಾಂಶವೆಲ್ಲ ಶ್ರೀ ರಾಜರಾಜೇಶ್ವರತೀರ್ಥರೊಬ್ಬರಿಂದ ಬಂದದ್ದು. ಇಡಿಯ ಕಾಂತಾವರ ಗ್ರಾಮವನ್ನು ಮಾಂಡಲಿಕ ರಾಜನೊಬ್ಬನು ಇವರಿಗೆ ಧಾರೆಯೆರೆದು ಕೊಟ್ಟಿರುವ ಶಿಲಾಶಾಸನ ಇವತ್ತಿಗೂ ಕಾಂತಾವರದ ಮಠದಲ್ಲಿ ಅವರ ಕೀರ್ತಿ-ಶಾಸನವಾಗಿ ಕಂಗೊಳಿಸುತ್ತಿದೆ. 'ಈ ಗ್ರಾಮದ ಎಲ್ಲ ಆಸ್ತಿ-ಆಸ್ತಿಯೂ ಶ್ರೀ ರಾಜರಾಜೇಶ್ವರ ಮಠದ ಧರ್ಮ ಕಾರ್ಯಗಳಿಗೆ ವಿನಿಯೋಗವಾಗತಕದ್ದು. ಇದನ್ನು ಅಡ್ಡಿಪಡಿಸಿದವರಿಗೆ, ಕಸಿದುಕೊಂಡವರಿಗೆ ಕಾಶಿಯಲ್ಲಿ ಸಾವಿರ ಕಪಿಲೆಗೋವುಗಳನ್ನು ಕೊಂದ ಪಾಪವುಂಟು' ಎಂದು ಆ ರಾಜ ಶಿಲಾಶಾಸನದಲ್ಲಿ ಬರೆಯಿಸಿದ್ದಾನೆ. ಹಳ್ಳಿಯ ಮಠಗಳೆಲ್ಲ ಸುಂದರವಾದ ತಪೋವನದಂತಿರುವ ಈ ಕಾಂತಾವರ ಇವತ್ತಿಗೂ ಮಠದ ಸ್ವಾಧೀನದಲ್ಲಿದೆ. ಶ್ರೀಮಠದ ಪ್ರಮುಖ ಆದಾಯ ಕೇಂದ್ರವೂ ಆಗಿತ್ತು. ದೇಶದ ಎಲ್ಲೆಡೆಯೂ ಮಿಂಚಿನಂತೆ ಸಂಚರಿಸಿ, ತನ್ನ ಅದ್ಭುತ ಪ್ರವಚನ -ದಿಂದ ಆಚಾರ್ಯರ ತತ್ವಗಳ ಗರಿಮೆಯನ್ನು ಜನಮನದಲ್ಲಿ ನೆಲಗೊಳಿಸಿ, ಕಾವ್ಯಕೃತಿಗಳನ್ನು ಭವಿಷ್ಯದ ಜನಾಂಗಕೆ ಕೊಟ್ಟು ಪಾಠದ ಧರ್ಮಕಾರ್ಯಕೆ ಅನುಕೂಲವಾಗುವಂತೆ ಸಸ್ಯ ಸಮೃದ್ಧವಾದ ಗ್ರಾಮದ ಸಂಪತ್ತಿನ ಸೆಲೆಯನ್ನು ಶ್ರೀ ರಾಮನಿಗೆ ಕೊಟ್ಟು ತಾನು ಮಾತ್ರ ಎಲ್ಲವನ್ನೂ ಬಿಟ್ಟು ತನ್ನ ಗುರುಗಳ ಕಣ್ಣ ಮುಂದೆಯೇ ಚಿಕ್ಕ ವಯಸ್ಸಿನಲ್ಲೇ, ಚಿಕ್ಕಪಟ್ಟದಲ್ಲಿ, ಇರುವಾಗಲೇ ಶ್ರೀರಾಮ-ಪಾದವನ್ನು ಸೇರಿಕೊಂಡರು. ಪಲಿಮಾರುಮಠವನ್ನು ಸಾಕಷ್ಟು ಸಂಪತ್ತಿನಿಂದ

ಊರ್ಜಿತಗೊಳಿಸಿದ ಈ ಯತಿ ತಾನು ಉತ್ತರಾಧಿಕಾರಿಯಾಗಿ ಪೀಠವನ್ನೇರುವಷ್ಟು ಕಾಲ ಬದುಕಲಿಲ್ಲ. ಪಲಿಮಾರು ಮಠದ ಗುರುಪರಂಪರೆಯಲ್ಲಿ ಅವರ ಹೆಸರು ಇರಲಿ, ಇಲ್ಲದಿರಲಿ; ಮಾಧ್ವಯತಿಗಳ ಪರಂಪರೆಯಲ್ಲಿ ಅವರ ಹೆಸರು ಅಜರಾಮರವಾಗಿದೆ. ಚೈತ್ರಶುದ್ಧಹುಣ್ಣಿಮೆಯಂದು ಅವರ ಪುಣ್ಯದಿನವನ್ನು ಆಚರಿಸಲಾಗುತ್ತದೆ. ಪಲಿಮಾರಿನಲ್ಲಿರುವ ಇವರ ವೃಂದಾವನ ಒಂದು ಪುಣ್ಯಕ್ಷೇತ್ರವೇ ಆಗಿದೆ.

## ಚೈತ್ರ ॥ ಕೃಷ್ಣ॥ ದ್ವಿತೀಯಾ

ಶ್ರೀಸುಶಮೀಂದ್ರತೀರ್ಥರ ಆರಾಧನೆ (ಮಂತ್ರಾಲಯ) ಸುಧೀಜನಸು-ಮಂದಾರಂ ಸುಧೀಂದ್ರಸುತಸುಪ್ರಿಯಮ್ । ಸುಶಮೀಂದ್ರಗುರುಂ ವಂದೇ ಸುಜ-ಯೀಂದ್ರಕರೋದ್ಭವಮ್ ॥

## ಚೈತ್ರ ॥ ಕೃಷ್ಣ ॥ ತೃತೀಯಾ

ಶ್ರೀ ವಾಗೀಶ ತೀರ್ಥರು ನವವೃಂದಾವನ – ವಾಸುದೇವಪದದ್ವಂದ್ವವಾರಿಜಾ ಸಕ್ತಮಾನಸಮ್ । ಪದವ್ಯಾಖ್ಯಾನಕುಶಲಂ ವಾಗೀಶಯತಿಮಾಶ್ರಯೇ ॥ ಇವರ ಪೂರ್ವಾಶ್ರಮದ ಹೆಸರು ರಘುನಾಥಾಚಾರ್ಯರು. ವೇದಶಾಸ್ತ್ರಗಳಲ್ಲಿ ಇವರಿಗೆ ಅಪ್ರತಿಮಪಾಂಡಿತ್ಯ. ವಾದವೇದಿಕೆಯಲ್ಲಂತೂ ಇವರದು ಯಾವಾಗಲೂ ಶಾರ್ದೂಲವಿಕ್ರೀಡಿತ. ಸಿಂಹವಿಕ್ರಮ. ತಪೋಭಕ್ತಿವಿರಕ್ತಿಗಳು ಇವರಲ್ಲಿ ಮುಪ್ಪುರಿ-ಗೊಂಡು ಶ್ರೀಶ್ರೀಗಳವರು ತೇಜೋಮೂರ್ತಿಗಳಾದ ಶಿಷ್ಯರನ್ನು ಉದ್ಧರಿಸಿದರು. ಪ್ರತಿವಾದಿಗಳನ್ನು ನಿಗ್ರಹಿಸಿ ಮಧ್ವಮತವನ್ನು ವಿಸ್ತರಿಸಿದರು. ಇವರು ಸಂಸ್ಥಾನ ಆಳಿದ್ದು ಕೇವಲ ಎಂಟುವರ್ಷ. ಅವರು ಮಾಡಿದ ಕೆಲಸ ನೂರೆಂಟು ವರ್ಷದ್ದು. ಅಸಂಖ್ಯ-ಶಿಷ್ಯರನ್ನು ವೈಷ್ಣವರನ್ನಾಗಿ ಮಾರ್ಪಡಿಸಿ ದ್ವೈತದುಂದುಭಿಯನ್ನು ಎಲ್ಲೆಡೆಯಲ್ಲಿಯೂ ಬಾರಿಸಿ ಸರ್ವಜಿತ್‌ಸಂವತ್ಸರದ ಚೈತ್ರಬಹುಳ ತೃತೀಯಾ ದಿನ ಇವರೂ ನವವೃಂದಾವನದ ತಮ್ಮ ಗುರುಗಳ ಪಕ್ಕದಲ್ಲಿಯೇ ವೃಂದಾವನಪ್ರವೇಶಗೈದರು.

ಶ್ರೀ ಸುಬೋಧೇಂದ್ರತೀರ್ಥರು (ರಾಯರ ಮಠ) ಚೈತ್ರ ಬಹುಳ ತದಿಗೆ - ನಂಜನಗೂಡು. ಸುಧಾಸೇವಾಸಮುದ್ಭೂತ ಸುಖಸಂವಿತ್ಸಮಾಶ್ರಯಂ । ಸುಜನಾ-

ಭೀಷ್ಟದಾತಾರಂ ಸುಬೋಧೇಂದ್ರಗುರುಂ ಭಜೇ ॥ ಕ್ರಿ.ಶ. 1799 ರಿಂದ 1835ರ ವರೆಗೆ ದ್ವೈತವೇದಾಂತಸಾಮ್ರಾಜ್ಯವನ್ನಾಳಿದವರು, ಶ್ರೀಭುವನೇಂದ್ರತೀರ್ಥರಿಂದ ಆಶ್ರಮ ಸ್ವೀಕರಿಸಿದವರು. ಇವರ ತಪಶ್ಶಕ್ತಿ ಅದ್ಭುತವಾದದ್ದು. ಮೈಸೂರಿನ ಮಹಾರಾಜರಿಂದ ದಾನವಾಗಿ ಪಡೆದ ಸ್ಥಳವೇ ಇಂದಿನ ನಂಜನಗೂಡು ಮಠವಾಗಿದೆ. ಶ್ರೀಸುಬೋಧೇಂದ್ರತೀರ್ಥಸ್ವಾಮಿಗಳ ಪೂರ್ವಾಶ್ರಮದ ಹೆಸರು ಮುದ್ದುಕೃಷ್ಣಾ-ಚಾರ್ಯ. ರಾಯರ ಮಠದ ಶ್ರೀಭುವನೇಂದ್ರತೀರ್ಥ ಶ್ರೀಗಳವರ ಕಾಲದಲ್ಲಿ ಶ್ರೀಮುದ್ದುಕೃಷ್ಣಾಚಾರ್ಯರೇ ಆಸ್ಥಾನ ಪಂಡಿತರು. ಪೂರ್ವಾಶ್ರಮದಲ್ಲಿಯೇ ಇವರು ಪದವಾಕ್ಯಪ್ರಮಾಣಪಾರಾವಾರಪಾರೀಣರು. ವಾದದಲ್ಲಿ ಕುಶಲರು. ಪಾಠದಲ್ಲಿ ಪಟುತರರು. ಭಕ್ತಿಯಲ್ಲಿ ಪ್ರಹ್ಲಾದ. ವಿರಕ್ತಿಯಲ್ಲಿ ಶುಕ. ವಶಿತ್ವದಲ್ಲಿ ವಶಿಷ್ಠ. ವೈರಾಗ್ಯದಲ್ಲಿ ವಾಮದೇವ. ಇವರಲ್ಲಿ ಈ ಎಲ್ಲ ಅಪೂರ್ವಗುಣಗಳ ಹೃದಯಂ-ಗಮಸಂಗಮವನ್ನು ಕಂಡೇ ಶ್ರೀಭುವನೇಂದ್ರ ತೀರ್ಥರು ಇವರನ್ನು ತಮ್ಮ ಉತ್ತರಾ-ಧಿಕಾರಿಗಳನ್ನಾಗಿ ಸರ್ವಜ್ಞಪೀಠದಲ್ಲಿ ಪಟ್ಟಾಭಿಷೇಕಗೈದರು. ಸುಬೋಧೇಂದ್ರ ಎಂದು ನಾಮಕರಣವಾಯಿತು. ಇವರು ಎಲ್ಲೆಡೆಗೆ ಸಂಚಾರಗೈದು ಮಧ್ವಸಿದ್ಧಾಂತದ ವಿಜಯಧ್ವಜವನ್ನು ಎತ್ತಿ ಹಿಡಿದರು. ೧೮೦೦ನೇ ಇಸ್ವಿಯಲ್ಲಿ ಕನಕಗಿರಿ ಎಂಬ ಜಹಗೀರಿಯನ್ನು ಸಂಪಾದಿಸಿದರು. ೧೮೦೨ನೆಯ ಇಸ್ವಿಯಲ್ಲಿ ಪ್ರಾಣದೇವರ ಕ್ಷೇತ್ರವಾದ ಬೊಮ್ಮಗಟ್ಟಿಗೆ ದಯಮಾಡಿಸಿದರು. ಅಲ್ಲಿದ್ದಾಗ ದೇಹಾಲಸ್ಯವಾದದ್ದರಿಂದ ಧೀರೇಂದ್ರಸ್ವಾಮಿಗಳ ಪೂರ್ವಾಶ್ರಮದ ದೌಹಿತ್ರರಾದ ಶ್ರೀಜಯರಾಮಾಚಾರ್ಯರಿಗೆ ಆಶ್ರಮವಿತ್ತು ಸುಜನೇಂದ್ರತೀರ್ಥರೆಂದು ಹೆಸರಿಟ್ಟರು. ಮುಂದೆ ಶ್ರೀಗಳವರಿಗೆ ಆರೋಗ್ಯವಾಯಿತು. ಇಬ್ಬರೂ ಬೇರೆ ಬೇರೆ ಕಡೆ ದಿಗ್ವಿಜಯ ಹೊರಟರು. ಹೈದರಾಬಾದ ಪ್ರಾಂತದಲ್ಲಿ ಚಂದೂಲಾಲ ಎಂಬ ಅಧಿಕಾರಿಯಿಂದ ಶ್ರೀಮಠಕ್ಕೆ ಆನೆಯ ಮೇಲೆ ನಗಾರಿ ಬಾರಿಸುವ ವಿಶೇಷಗೌರವ ಪ್ರಾಪ್ತವಾಯಿತು. ಮುಂದೆ ಶ್ರೀಗಳವರು ಸಂಚಾರಕ್ರಮದಿಂದ ಪಂಢರಾಪುರಕ್ಕೆ ಬಂದಾಗ ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು ರಾಜದೂತನನ್ನು ಕೊಟ್ಟು ಕಳಿಸಿ ಶ್ರೀಶ್ರೀಗಳವರನ್ನು ತಮ್ಮ ಆಸ್ಥಾನಕ್ಕೆ ಬರಮಾಡಿಕೊಂಡು ನಂಜನಗೂಡಿನಲ್ಲಿಯ ಛತ್ರವನ್ನೂ, ಅಂಗಳೆ, ಕಗ್ಗಲೂರು, ಕೊಂಗಳ್ಳಿ ಮುಂತಾದ ಗ್ರಾಮಗಳನ್ನೂ ಪ್ರತಿತಿಂಗಳು ಮುನ್ನೂರ ಅರವತ್ತು ಕಂಠೀವರಹಗಳನ್ನೂ ಕೊಟ್ಟು ಇಲ್ಲಿಯೇ ಇರಬೇಕೆಂದು ಹೇಳಿ

ಸತ್ಕರಿಸಿದರು. ಶ್ರೀಶ್ರೀಗಳವರು ತಮ್ಮ ಶಿಷ್ಯ ಸುಜನೇಂದ್ರರೊಂದಿಗೆ ನಂಜನ-ಗೂಡಿನಲ್ಲಿಯೇ ಇದ್ದು ಮನ್ಮಥಸಂವತ್ಸರ ಚೈತ್ರಬಹುಳತೃತೀಯಾ ಹರಿಪದ-ವನ್ನೈದಿದರು.

ಶ್ರೀ ವಿದ್ಯಾಶ್ರೀಧರತೀರ್ಥರು (ವ್ಯಾಸರಾಜ ಮಠ) ಚೈತ್ರ ಬಹುಳ ಚತುರ್ಥಿ (ಕ್ರಿ .ಶ. 1884-1887) ದುರ್ವಾದಿಮತ್ತಮಾತಂಗಕಂಠೀರವಉದಾರಧೀಃ । ವಿದ್ಯಾ -ಶ್ರೀಧರಯೋಗೀಶಃ ಶ್ರೇಯಸೇ ಭೂಯಸೇಽಸ್ತು ಮೇ ॥ ಇವರು ಸಹ ಕೇವಲ ಮೂರು ವರ್ಷಗಳ ಕಾಲ ಮಾತ್ರ ಪೀಠವನ್ನಲಂಕರಿಸಿದ್ದರು. ಆ ಅಲ್ಪ ಕಾಲದಲ್ಲಿಯೇ ಪರಮ ನಿಪುಣರು ಅತ್ಯಂತ ಉದಾರಿಗಳು, ಉತ್ತಮ ನಿರ್ವಾಹಕರು ಎಂಬ ಕೀರ್ತಿಯನ್ನು ಗಳಿಸಿದರು. ಸಂಚಾರ ಮಾಡುತ್ತಾ ಶ್ರೀರಂಗಕ್ಷೇತ್ರಕ್ಕೆ ಬಂದು ಅಲ್ಲಿಯೇ 1887ನೇ ಚೈತ್ರ ಬಹುಳ ಚತುರ್ಥಿಯಂದು ಬೃಂದಾವನಸ್ಥರಾದರು.

## ಚೈತ್ರ ॥ ಬಹುಳ ॥ ದಶಮೀ

ಶ್ರೀಪ್ರಾಜ್ಞಮಾಧವತೀರ್ಥರು (ಮಾಧವತೀರ್ಥ ಮಠ) ಕೇಶವಮಾಧವ ಪದಾಸಕ್ತಂ ಪೂರ್ಣವೈರಾಗ್ಯಶೇಖರಮ್ । ಪ್ರಾಜ್ಞಮಾಧವಗುರುಂ ವಂದೇ ಜ್ಞಾನ ವೈರಾಗ್ಯಸಿದ್ಧಯೇ ॥

## ಚೈತ್ರ ॥ ಬಹುಳ ॥ ಏಕಾದಶೀ

ಶ್ರೀಸತ್ಯವಿಜಯತೀರ್ಥರು – ಸತ್ಯಪೂರ್ಣಾಂಬುಧೇರ್ಜಾತೋ ವಿದ್ವಜ್ಜನವಿಜೃಂಭಿತಃ । ದನೀಧ್ವಂಸೀ ತು ನಸ್ತಾಪಂ ಶ್ರೀಸತ್ಯವಿಜಯೋಡುಪಃ ॥ ಶ್ರೀ ಸತ್ಯಪೂರ್ಣತೀರ್ಥರು ಮೊದಲಿಗೆ ಶ್ರೀ ಸತ್ಯಪ್ರಿಯತೀರ್ಥರಿಗೆ ಆಶ್ರಮವನ್ನು ಕೊಡಲಾಗಿ, ಶ್ರೀಸತ್ಯಪ್ರಿಯತೀರ್ಥರು ಯಾತ್ರಾರ್ಥಿಗಳಾಗಿ ಸಂಚಾರದಲ್ಲಿದ್ದರು. ತಮ್ಮ ನಿರ್ಯಾಣ ಸನಿಹದಲ್ಲಿರಲು ಶ್ರೀ ಸತ್ಯಪೂರ್ಣತೀರ್ಥರು ಶ್ರೀ ಸತ್ಯ-ವಿಜಯತೀರ್ಥರಿಗೆ ಆಶ್ರಮವನ್ನು ಕೊಟ್ಟು ಉತ್ತರಾಧಿಕಾರಿಯನ್ನಾಗಿಸಿದರು. ತಮ್ಮ ಗುರುಗಳ ಆಶೀರ್ವಾದ ಪಡೆದಿದ್ದ ಅರ್ಕಾಟದ ನವಾಬನ ಮಂತ್ರಿಯಾಗಿದ್ದ ಕೃಷ್ಣಾಜಿಪಂಡಿತರಿಂದ ಶ್ರೀಮಠಕ್ಕೆ ವಿಶೇಷ ಸೇವೆ ಸಲ್ಲಿಸಲ್ಪಟ್ಟಿತು. ಶ್ರೀಮಠದ ಸಂಪತ್ತು ಮತ್ತಷ್ಟು ವೃದ್ಧಿಸಿತು. ಆರಣಿಯ ವೇಂಕಾಜಿಪಂತರಿಂದಲೂ ಸಂಪತ್ತು

ಶ್ರೀಮಠಕ್ಕೆ ಸಲ್ಲಿಸಲ್ಪಟ್ಟಿತು. ಬಂಗಾರ, ಬೆಳ್ಳಿಯ ಸಾಮಗ್ರಿಗಳು, ಪಟ್ಟದ ದೇವರಿಗೆ ಆಭರಣಗಳು ಸೇರಿದಂತೆ ಜಾಹಗೀರು ಮೊದಲಾದವುಗಳು ಶ್ರೀಮಠಕ್ಕೆ ಸೇರಿದವು. ಆರಣಿಯ ಜಾಹಗೀರುದಾರರು ಶ್ರೀಮಠಕ್ಕೆ ಸಮರ್ಪಿಸಿದ ಚಿನ್ನದ ಗಂಗಾಳವು ಇಂದಿಗೂ ಶ್ರೀಮಠದಲ್ಲಿದೆ. ಇದರ ಸ್ಮರಣಾರ್ಥವಾಗಿ ಪ್ರತೀ ವರ್ಷ ವರಮಹಾಲಕ್ಷ್ಮೀ ವ್ರತದ ದಿನ ದೇವರಿಗೆ ನೈವೇದ್ಯ ಸಮರ್ಪಿಸಲು ಉಪಗೋಗಿಸುತ್ತಾರೆ. ಆರಣಿಯ ಪಂತರ ಬೇಡಿಕೆಯಂತೆ ಆರಣಿಯಲ್ಲೇ ಬಹುಕಾಲ ಇದ್ದು ಕೊನೆಗೆ ಸಿದ್ಧಾರ್ಥಿ ಸಂವತ್ಸರದ ಚೈತ್ರ ಬಹುಳ ಏಕಾದಶೀಯಂದು ಅಲ್ಲೇ ಕೌಂಡಿನ್ಯ ನದೀಯ ತೀರದಲ್ಲಿ ವೃಂದಾವನಸ್ಥರಾದರು. ಇಂದಿಗೂ ಈ ಸ್ಥಳಕ್ಕೆ ಸತ್ಯವಿಜಯನಗರ ಎಂದೇ ಹೆಸರಿ-ರುವುದು ಸ್ಪಷ್ಟ ಸಾಕ್ಷಿಯಾಗಿದೆ.

ಚೈತ್ರ ಮಾಸ ಕೃಷ್ಣಪಕ್ಷ ಏಕಾದಶಿ - ವರೂಥಿನೀ ಏಕಾದಶಿ ಮಹಾತ್ಮೆ – ಚೈತ್ರ ಮಾಸ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಗೆ 'ವರೂಥಿನೀ' ಏಕಾದಶಿ ಎನ್ನುವರು. ಈ ಏಕಾದಶಿಯು ಸೌಭಾಗ್ಯದಾಯಕವಾಗಿದೆ. ಇಂದು ದಶಾವತಾರದ ಐದನೇ ಅವತಾರವಾದ ವಾಮನರೂಪಿ ಭಗವಂತನ ಧ್ಯಾನಾದಿ ಪೂಜೆ ಮಾಡಬೇಕು.. ಈ ಕುರಿತು ಭವಿಷ್ಯ ಪುರಾಣದಲ್ಲಿ ಶ್ರೀಕೃಷ್ಣ-ಜ್ಯೇಷ್ಠಪಾಂಡವ ಸಂವಾದದಲ್ಲಿ ಉಲ್ಲೇಖವಿದೆ. ಪುಣ್ಯದಾಯಿನಿ, ಸೌಭಾಗ್ಯದಾಯಿನಿ, ಮೋಕ್ಷಪ್ರದಾಯಿನಿ ಏಕಾದಶಿ ಎಂದೂ ಇದನ್ನು ಕರೆಯುತ್ತಾರೆ. ನರ್ಮದಾ ನದಿ ತಟದಲ್ಲಿನ ಒಂದು ಪಟ್ಟಣವನ್ನು ಮಾಂಧಾತನೆಂಬ ರಾಜ ಆಳುತ್ತಿದ್ದ. ಆತ ಶೂರನೂ, ಮಹಾದಾನಿಯೂ, ತಪಸ್ವಿಯೂ ಆಗಿದ್ದ. ಒಮ್ಮೆ ಮಾಂಧಾತ ತಪಸ್ಸಿಗೆ ಕುಳಿತಾಗ ಕಾಡಿನಿಂದ ತಪ್ಪಿಸಿಕೊಂಡು ಬಂದ ಕರಡಿಯೊಂದು ಬಂದು ಆತನ ಕಾಲು ನೆಕ್ಕಲು ಶುರುಮಾಡಿತು. ಆತ ವಿಚಲಿತನಾಗಲಿಲ್ಲ. ಆದರೆ ಕರಡಿ ಅವನನ್ನು ಎಳೆದುಕೊಂಡು ಅಡವಿಗೆ ಹೋದಾಗ ಕೋಪಬಂದರೂ ಅದರ ಮೇಲೆ ಖಡ್ಗ ಬೀಸಲಿಲ್ಲ ಬದಲಾಗಿ ಶ್ರೀವಿಷ್ಣುವನ್ನು ಪ್ರಾರ್ಥಿಸಿದ. ಭಕ್ತನ ಕರೆಗೆ ಓಗೊಟ್ಟ ಶ್ರೀವಿಷ್ಣು ಪ್ರತ್ಯಕ್ಷನಾಗಿ ಸುದರ್ಶನ ಚಕ್ರದಿಂದ ಕರಡಿಯನ್ನು ಸಂಹರಿಸಿ ಮಾಂಧಾತನನ್ನು ರಕ್ಷಿಸಿದ. ಆದರೆ ಅದಾಗಲೇ ಕರಡಿ ಮಾಂಧಾತನ ಒಂದು ಕಾಲನ್ನು ತಿಂದುಬಿಟ್ಟಿತ್ತು. ಸುಂದರಾಂ-ಗನಾಗಿದ್ದ ಮಾಂಧಾತ ಕರಡಿ ದಾಳಿಯಿಂದ ಅಂಗಹೀನನೂ, ಕುರೂಪಿಯೂ ಆಗಿದ್ದ. ಆತನ ಮನದಿಂಗಿತ ಅರಿತ ಶ್ರೀವಿಷ್ಣುವು ಆತನಿಗೆ ತಿಳಿಸಿದ. ರಾಜಾ

ಮಾಂಧಾತನೇ! ನಿನಗೀಗ ಬಂದ ಆಪತ್ತು ನೀನು ಪೂರ್ವ ಜನ್ಮದಲ್ಲಿ ಮಾಡಿದ ಅಪರಾಧದ ಫಲ. ಚಿಂತಿಸಬೇಡ, ವರೂಥಿನೀ ಏಕಾದಶಿ ವ್ರತ ಆಚರಿಸಿ ಪಾಪವಿಮುಕ್ತನಾಗಲು ಹೇಳಿದ. ಅದರಂತೆ ಮಾಂಧಾತ ಶ್ರೀವಿಷ್ಣುವಿನ ಆಜ್ಞೆಯಂತೆ ವ್ರತ ಆಚರಿಸಿ, ದೇವರ ಪೂಜೆ ಸಲ್ಲಿಸಿ ಮತ್ತೆ ಮೊದಲಿನಂತಾಗಿ ರಾಜ್ಯವಾಳಿ ಸ್ವರ್ಗಲೋಕಕ್ಕೆ ತೆರಳಿದ. ಶಿವನಿಂದ ಶಾಪಗ್ರಸ್ತನಾಗಿ ಕುಷ್ಠರೋಗದಿಂದ ಬಳಲುತ್ತಿದ್ದ ಇಕ್ಷ್ವಾಕು ವಂಶದ ಧುಂಧುಮಾರ ಎಂಬ ಮಹಾರಾಜ ಕೂಡ ಇದೇ ವರೂಥಿನಿ ಏಕಾದಶಿ ವ್ರತ ಆಚರಿಸಿ ಶಾಪ ವಿಮೋಚನೆ ಪಡೆದ. ಈ ಏಕಾದಶಿ ವ್ರತ ಆಚರಿಸಿ ಶ್ರೀಹರಿ ಕೃಪೆಗೆ ಪಾತ್ರರಾಗುವಂತೆ ಶ್ರೀಕೃಷ್ಣ ಪಾಂಡವರಿಗೆ ಹೇಳುತ್ತಾನೆ. ಈ ವ್ರತವು ಹತ್ತು ಸಾವಿರ ವರ್ಷ ತಪಸ್ಸಿಗೆ ಸಮವಾಗಿದೆ. ಈ ವ್ರತದಿಂದ ಸ್ತ್ರೀಯರಿಗೆ ಸೌಭಾಗ್ಯ ಪ್ರಾಪ್ತಿಯಾಗುತ್ತದೆ. ಕುರುಕ್ಷೇತ್ರದಲ್ಲಿ ಸೂರ್ಯಗ್ರಹಣ ಸಮಯಕೆ ಅಪಾರ ಸುವರ್ಣ ದಾನ ಮಾಡಿದ ಫಲ, ಜೀವನದಲ್ಲಿ ಆಯುಷ್ಯ, ಆರೋಗ್ಯ ನಂತರ ಸ್ವರ್ಗಾದಿ ಫಲವಿದೆ. ಅನ್ನದಾನಮಾಡಿದ ಫಲ ದೊರೆಯುತ್ತದೆ. ಗಂಗಾಸ್ನಾನಕಿಂತ ಅಧಿಕ ಫಲ ಪ್ರಾಪ್ತಿ. ಕನ್ಯಾದಾನ, ಗಂಗಾಸ್ನಾನದ ಫಲ ದೊರೆಯುತ್ತದೆ. ಸ್ತ್ರೀಹತ್ಯಾದಿ ದೋಷಗಳು ಪರಿಹಾರವಾಗುತ್ತವೆ.

## ಚೈತ್ರ ॥ ಕೃಷ್ಣ॥ ತ್ರಯೋದಶೀ

ಈ ದಿನ ಶನಿವಾರ ಹಾಗೂ ಶತಭಿಷಾ ನಕ್ಷತ್ರಗಳ ಸಂಯೋಗವಿದ್ದರೆ 'ಮಹಾವಾರುಣೀ' ಎನ್ನುವರು. ಗಂಗೆಯಲ್ಲಿ ಇದು ಕೋಟಿ ಸೂರ್ಯಗ್ರಹಣಕ್ಕೆ ಸಮಾನ.

## ಚೈತ್ರ ॥ ಕೃಷ್ಣ॥ ಚತುರ್ದಶೀ

ಇಂದು ಶಿವಸನ್ನಿಧಾನದಲ್ಲಿ ಗಂಗಾಸ್ನಾನದಿಂದ ಪಿಶಾಚತ್ವವು ಬರುವುದಿಲ್ಲ. ಈ ದಿನದಲ್ಲಿ ಮಂಗಳವಾರ ಸೇರಿದರೆ ಕೃಷ್ಣಾಂಗಾರಕಚತುರ್ದಶೀ ಎಂದು ಕರೆಯುತ್ತಾರೆ. ಯಾವುದೇ ಕೃಷ್ಣಪಕ್ಷದ ಚತುರ್ದಶಿ ದಿವಸ ಮಂಗಳವಾರ ಸೇರಿದರೆ ಈ ಪರ್ವಕಾಲ ಇರುತ್ತದೆ. ಸುವರ್ಣಾನದಿಯಲ್ಲಿ ಇಂದು ಸ್ನಾನ ಮಾಡಬೇಕು. ಸ್ನಾನಮಾಡುವಾಗ ದೇಹದಲ್ಲಿರುವ ಪಾಪಗಳು ಚಟಚಟ ಎಂದು ಸಿಡಿದು ಹೋಗುವ ಶಬ್ದ ಕೇಳಿಸುತ್ತದೆ.

ತೀರ್ಥಪ್ರಬಂಧದಲ್ಲಿ ಇದರ ವರ್ಣನೆ ಹೀಗಿದೆ – ವೇದಾಚಲಹೃದುದ್ಭೂತಾಂ ಸುವರ್ಣಾಂ ಕೋಽನುವರ್ಣಯೇತ್ । ಅಂಹಸೋ ದಹ್ಯಮಾನಸ್ಯ ಶ್ರಾವಯಂತೀಂ ಸ್ವನಂ ಜನಾನ್ ॥

## ಚೈತ್ರಮಾಸದ ದಾನಗಳು

ಚೈತ್ರ ಮಾಸದಲ್ಲಿ ಬಿಸಿಲ ಬೇಗೆಯಲ್ಲಿ ಪಯಣಿಸುವ ದಾರಿಹೋಕರಿಗಾಗಿ ದಾರಿಯಲ್ಲಿ ಅರವಟ್ಟಿಗೆಗಳನ್ನು ಏರ್ಪಡಿಸುವುದು. ನೆರಳನ್ನು ವ್ಯವಸ್ಥೆಗೊಳಿಸುವುದು ಶ್ರೇಷ್ಠ. ನೀರನ್ನು ಬಯಸುವವನು ನೀರನ್ನು ತಂಪುನೆರಳನ್ನು ಬಯಸುವವನು ತಂಪು ನೆರಳನ್ನು ಬೀಸಣಿಗೆಯನ್ನು ಬಯಸುವವನು ಬೀಸಣಿಗೆಯನ್ನು ಕೊಡಬೇಕು. ನೀರು, ಛತ್ರಿ , ಬೀಸಣಿಗೆ, ನೀರು ತುಂಬಿದ ತಾಮ್ರದ ಪಾತ್ರೆ , ಕನ್ನಡಿ, ತಾಂಬೂಲ, ಬೆಲ್ಲ, ಹಿತವಾದ ಹಾಸಿಗೆ, ತುಪ್ಪ ತುಂಬಿದ ಕಂಚಿನ ಪಾತ್ರೆ , ಕಬ್ಬಿನರಸ, ಗೋಧಿ, ಮೊಸರನ್ನು ತೆಂಗಿನಕಾಯಿ, ಮಾವಿನಹಣ್ಣುಗಳನ್ನು ದಾನ ಕೊಡಬೇಕು. ತೆಳುವಾದ ವಸ್ತ್ರ , ಪುಸ್ತಕ, ಕಮಂಡಲಗಳನ್ನು ದಾನ ಕೊಡಬೇಕು. ಯತಿಗಳಿಗೆ ದಂಡದಾನ, ಮಠಕೆ ತೈಲದಾನಗಳು ಶ್ರೇಷ್ಠ. ಹಣ್ಣು, ತರಕಾರಿ, ಗಡ್ಡೆ, ಗೆಣಸು, ಚಂದನ, ತಂಪುನೀರು, ತಂಪುದ್ರವ್ಯ , ಕರ್ಪೂರ, ಕಸ್ತೂರಿ ಮುಂತಾದವುಗಳನ್ನು ದಾನ ಮಾಡಬೇಕು. ದೀಪದಾನ, ಧೇನುದಾನ, ಗೃಹದಾನ, ಆಕಳಹಾಲು, ಮೊಸರು, ತುಪ್ಪ, ಮಜ್ಜಿಗೆ, ಬೆಣ್ಣೆಗಳ ದಾನ, ಯತಿಗಳಿಗೆ ಬ್ರಾಹ್ಮಣರಿಗೆ ಭೋಜನ, ಪುಸ್ತಕದಾನ, ಕುಂಕುಮ ಕೇಸರಿದಾನ, ಜಾತೀಫಲ, ಲವಂಗ, ಜಾಜಿಪತ್ರಿ , ಕಗ್ಗಲೀ, ದಾಳಿಂಬೆ, ಸುಗಂಧದ್ರವ್ಯ , ಮಾದಾಳ, ಬೆಟ್ಟಮಲ್ಲಿಗೆ, ನಿಂಬೆಹಣ್ಣು, ಹಲಸು, ಬಳವಲ ಹಣ್ಣು, ಕುಂಬಳಕಾಯಿ ಮುಂತಾದವುಗಳನ್ನು ನೀಡಬೇಕು. ದಾರಿಯಲ್ಲಿ ವಿಶ್ರಾಂತಿಧಾಮದ ನಿರ್ಮಾಣ. ದಾರಿಯ ಕಲ್ಲು ಮುಳ್ಳು ತೆಗೆವ ಶೋಧನೆಗಳು ಶ್ರೇಷ್ಠ. ಚಪ್ಪಲಿದಾನ, ಆನೆ ಕುದುರೆ ಮುಂತಾದ ವಾಹನದಾನವೂ ಉತ್ತಮ.

* * * * * * *

# ವೈಶಾಖ ಮಾಸ

ಮಾಸನಿಯಾಮಕ ಶ್ರೀಕಮಲಾಲಯಮಧುಸೂದನಾಯ ನಮಃ

ವೈಶಾಖಮಾಸದ ಧರ್ಮಗಳನ್ನು ಚೈತ್ರ ಶುಕ್ಲ ಪೂರ್ಣಿಮಾ ಆರಂಭಿಸಿ ವೈಶಾಖ ಶುಕ್ಲ ಪೂರ್ಣಿಮಾಸಪರ್ಯಂತ ವೈಶಾಖಮಧುಸೂದನ ದೇವರ ಪ್ರೀತಿಗಾಗಿ ಮಾಡಬೇಕು. ಮೊದಲಿಗೆ ಸಾಮಾನ್ಯವಾದ ಈ ಮಾಸಧರ್ಮಗಳನ್ನು ತಿಳಿಸಿ ನಂತರ ಈ ಮಾಸದ ವಿಶೇಷತಿಥಿಗಳ ಬಗ್ಗೆ ಮಾಹಿತಿಯನ್ನು ಕೊಡಲಾಗುವುದು.

## ವೈಶಾಖ ಮಾಸದ ದಾನಗಳು

ಈ ಮಾಸದಲ್ಲಿ ಜಲದಾನ ಹಾಗು ಪ್ರಪಾದಾನಗಳು ಬಹಳ ಮುಖ್ಯ. ನೀರು, ನೆರಳು, ಬೀಸಣಿಗೆ, ಛತ್ರಿ , ಪಾದರಕ್ಷೆ, ತೆಳುವಾದ ಹಿತವಾದ ವಸ್ತ್ರ ಈ ದಾನಗಳು ಮುಖ್ಯ . ಈ ಮಾಸದಲ್ಲಿ ಉದಕುಂಭ (ನೀರು ತುಂಬಿದ ತಾಮ್ರದ ಅಥವಾ ಮಣ್ಣಿನ ಗಡಿಗೆ) ದಾನ ಕೊಡದಿದ್ದರೆ ಜಾತಕಪಕ್ಷಿಯ ಜನ್ಮ ಬರುತ್ತದೆ. ಬಿಸಿಲಿನಲ್ಲಿ ಬಳಲಿದ ವಿಪ್ರೋತ್ತಮನಿಗೆ ಬಟ್ಟೆಯಿಂದ ಗಾಳಿ ಹಾಕಿದರೂ ಮಹಾಪುಣ್ಯ . ತಾಡಪತ್ರಿಯ ಬೀಸಣಿಕೆಯನ್ನು ಕೊಡುವುದರಿಂದಲೂ ಪಾಪಪರಿಹಾರವಾಗುವುದು. ಛತ್ರಿಯನ್ನು ದಾನ ನೀಡುವುದರಿಂದ ಆಧ್ಯಾತ್ಮಿಕಾದಿ ತಾಪ ಪರಿಹಾರವಾಗುವುದು. ಪಾದರಕ್ಷೆ-ಗಳನ್ನು ದಾನ ಕೊಡುವುದರಿಂದ ನರಕದ ಕ್ಲೇಶ ತಪ್ಪುವುದು. ದಣಿದು ಬಂದ ಅತಿಥಿಗೆ ಆದರಲ್ಲೂ ವಿಪ್ರರಿಗೆ ಅನ್ನದಾನದಿಂದ ತೃಪ್ತಿಪಡಿಸುವುದರಿಂದ ಬಹುಪುಣ್ಯ ಪ್ರಾಪ್ತಿ. ಬಿಸಿಲಬೇಗೆಯಲ್ಲಿ ಬಳಲಿದ ವಿಪ್ರನಿಗೆ ವಿಶ್ರಾಂತಿ ಪಡೆಯಲು ಹಿತವಾದ ಮಂಚ ಹಾಸಿಗೆಗಳನ್ನು ದಾನ ನೀಡುವುದರಿಂದ ಜ್ಞಾತ ಅಜ್ಞಾತ ಪಾಪಗಳು ಪರಿಹಾರವಾಗುವುದು. ತಲೆಗೆ ಹಿತವಾದ ದಿಂಬುಗಳನ್ನು ದಾನ ಮಾಡಬಹುದು. ಅದರಿಂದ ಆಯುಷ್ಯ ಆರೋಗ್ಯ ಯಶಸ್ಸುಗಳು ಲಭಿಸುತ್ತವೆ. ಚಾಪೆ ಮುಂತಾದ ಆಸನದಾನವೂ ವಿಹಿತವಾಗಿದೆ. ಹಿತವಾದ ಕಂಬಳಿಯನ್ನು ಮಲಗಲು ಕೊಡ-ಬಹುದು. ತುಂಬ ತೆಳುವಾದ ಮೃದುವಾದ ವಸ್ತ್ರವನ್ನು ವಿಪ್ರನಿಗೆ ಕೊಡುವುದರಿಂದ ಪೂರ್ಣಾಯುಷ್ಯ ಪ್ರಾಪ್ತಿ . ಒಳಗಿನ ತಾಪವನ್ನು ಪರಿಹರಿಸುವ ಪಚ್ಚಕರ್ಪೂರದಾನ, ಪುಷ್ಪದಾನ, ಚಂದನದಾನ, ಲಾವಂಚದಿಂದ ಸುವಾಸಿತ ಜಲದಾನ, ಗೋರೋಚನ, ಕಸ್ತೂರಿ, ತಾಂಬೂಲದಾನ, ತೆಂಗಿನಕಾಯಿ ದಾನಗಳೂ ವಿಹಿತವಾಗಿವೆ. ನಿಂಬೆರಸ,

ಉಪ್ಪು, ಮೊದಲಾದವುಗಳಿಂದ ರುಚಿಯಾದ ತಂಪಾದ ಮಜ್ಜಿಗೆಯನ್ನು ದಾನ ಕೊಡುವುದು ತುಂಬ ವಿಶೇಷವಾಗಿದೆ.

ತುಲಸೀಪೂಜಾ– ವೈಶಾಖ ಮಾಸದಲ್ಲಿ ಕೃಷ್ಣತುಲಸಿಯಿಂದ ವಿಷ್ಣುವನ್ನು ಪೂಜಿಸಿದರೆ ವಿಷ್ಣುಲೋಕ ಪ್ರಾಪ್ತಿಯಾಗುವುದು.

ಅಶ್ವತ್ಥಪ್ರದಕ್ಷಿಣೆ– ಪ್ರಾತಃ ಸ್ನಾನಾನಂತರ ಅಶ್ವತ್ಥ ವೃಕ್ಷದ ಮೂಲಕ್ಕೆ ಬಹಳ ನೀರನ್ನು ಎರೆದು ಪ್ರದಕ್ಷಿಣೆ ಮಾಡಿದರೆ ಅನೇಕ ಕಾಲಗಳು ಉದ್ಧಾರವಾಗುತ್ತವೆ.

ಶ್ರೀವಿದ್ಯಾನಿಧಿತೀರ್ಥರು (ಶ್ರೀಪಾದರಾಜ ಮಠ) ವೈಶಾಖ ಶುದ್ಧ ಪಾಡ್ಯ - ಪುರುಪಾಳ್ಯಂ – ಶ್ರೀನಿಧ್ಯಂಭೋಧಿಸಂಭೂತಂ ವಿದುಷಾಂ ಚ ಸದಾಪ್ರಿಯಂ । ಪೂಜಯಂತಂ ವಿಠ್ಠಲಾದೀನ್ ವಂದೇ ವಿದ್ಯಾನಿಧಿಂ ಮುದಾ ॥

## ವೈಶಾಖ ॥ ಶುಕ್ಲ ॥ ತೃತೀಯಾ

ಶ್ರೀ ವಿದ್ಯಾಧಿರಾಜರು (ರಾಯರ ಮಠ) ವೈಶಾಖ ಶುದ್ಧ ತೃತೀಯಾ (ಕ್ರಿ .ಶ. 1342-1360) – ವಿದ್ಯಾಧೀಶಪದಾಸಕ್ತೋ ವಿದ್ಯಾಕೌಶಲ್ಯಸಂಯುತಃ । ವಿದ್ಯಾಧಿ-ರಾಜತೀರ್ಥಾಖ್ಯೋ ಗುರುರ್ಭೂಯಾದಭೀಷ್ಟದಃ ॥ ಇವರ ಪೂರ್ವಾಶ್ರಮದ ಹೆಸರು ಶ್ರೀ ಭೀಮಾಚಾರ್ಯರೆಂದು. ಇವರು ದೊಂಡೊ ರಘುನಾಥ ಪಂಥರಿಗೆ ಅತ್ಯಂತ ಹತ್ತಿರದ ಸಂಬಂಧಿಗಳಾಗಿದ್ದರೆಂದು ಹೇಳಲ್ಪಟ್ಟಿದೆ. ಬಾಲ್ಯದಿಂದಲೂ ಒಳ್ಳೆಯ ಪ್ರತಿಭಾವಂತರಾಗಿ ವಿದ್ವನ್ಮಣಿಗಳಾಗಿದ್ದರು. ಶ್ರೀಜಯತೀರ್ಥರಲ್ಲಿ ಸನ್ಯಾಸ ದೀಕ್ಷೆಯನ್ನು ಪಡೆದು ಶ್ರೀ ವಿದ್ಯಾಧಿರಾಜತೀರ್ಥರೆಂದು ಪ್ರಸಿದ್ಧರಾದರು. ಇವರು ಶ್ರೀವಿಷ್ಣು ಸಹಸ್ರನಾಮಕ್ಕೆ ಶ್ರುತಿ-ಸ್ಮೃತಿ ಸಮ್ಮತವಾದ ವ್ಯಾಖ್ಯಾನವನ್ನು ರಚಿಸಿದ್ದಾರೆ. ಪಾಠ-ಪ್ರವಚನ ಪರವಾದಿನಿಗ್ರಹದಲ್ಲೇ ಆಸಕ್ತರಾಗಿದ್ದರು. ವಿರಕ್ತ ಜೀವನವನ್ನು ನಡೆಸಿ ಯರಗೊಳದಲ್ಲಿಯೇ 1360ನೇ ಇಸವಿ ವೈಶಾಖ ಶುದ್ಧ ತೃತೀಯಾದಂದು ವೃಂದಾವನಸ್ಥರಾದರು. ಮಾಧ್ವದ್ ಅದ್ವೈತ್ಯಂ-ಧಕಾರ ಪ್ರತ್ಯೋತನಮಹರ್ನಿಶಂ । ವಿದ್ಯಾಧಿರಾಜಂ ಸುಗುರುಂ ಹೃದ್ಯಾಮಿತ ಗುರುಂ ಭಜೇ ॥

ವೈಶಾಖ ಶುಕ್ಲ ತೃತೀಯಾ– ಅಕ್ಷಯ ತೃತೀಯಾ, ಇಂದು ಗಂಗಾಸ್ನಾನ, ಯವ ಹೋಮ, ಯವದಾನಗಳಿಂದ ಎಲ್ಲಾ ಪಾಪವೂ ಪರಿಹಾರವಾಗುತ್ತವೆ.

ಭಗವಂತನಿಗೆ ಶ್ರೀಗಂಧಲೇಪನದಿಂದ ಭಗವಲ್ಲೋಕ ಪ್ರಾಪ್ತಿಯು ಆಗುತ್ತದೆ. ಜಪ, ಹೋಮ, ಪಿತೃತರ್ಪಣ, ದಾನಾದಿಗಳನ್ನು ಏನನ್ನು ಮಾಡಿದರೂ ಅಕ್ಷಯ ಫಲವು ಬರುತ್ತದೆ.

ಈ ದಿನ ರೋಹಿಣೀ ನಕ್ಷತ್ರ , ಬುಧವಾರಗಳ ಯೋಗವಿದ್ದರೆ ಮಹಾಪುಣ್ಯ . ಇವತ್ತೇ ಕೃತಯುಗಾದಿಯೂ ಆಗುತ್ತದೆ. ಆದ್ದರಿಂದ ಸಪಿಂಡ ಶ್ರಾದ್ಧ ಮಾಡಬೇಕು. ಇಲ್ಲದಿದ್ದರೆ ಹಿರಣ್ಯಶ್ರಾದ್ಧವನ್ನು ಮಾಡಿ ತಿಲತರ್ಪಣವನ್ನು ಕೊಡಬೇಕು. ಮೇಲೆ ಹೇಳಿದ ಉದಕುಂಭದಾನಗಳು ಈ ದಿನ ಪ್ರಶಸ್ತ. ಸಮುದ್ರ ಸ್ನಾನದಿಂದ ಮಹಾಫಲ. ಅಧಿಕಮಾಸವು ಬಂದರೆ ಎರಡೂ ಮಾಸದಲ್ಲಿಯೂ ಅನುಷ್ಠಾನ ಮಾಡಬೇಕು. ಯುಗಾದಿ ಶ್ರಾದ್ಧಲೋಪವು. ಆದರೆ 'ಸಯಸ್ಯದ್ಯಾವಾ' ಎಂಬ ಋಕ್ಕನ್ನು ನೂರು ಸಲ ಪಠಿಸಬೇಕು. ಯುಗಾದಿಯಲ್ಲಿ ಉಪವಾಸವೂ ಮಹಾಫಲ.

**ಪರಶುರಾಮಜಯಂತೀ.** ವೈಶಾಖಶುಕ್ಲತೃತೀಯಾದಂದು ಸಂಜೆಯ ಹೊತ್ತು ಪರಶುರಾಮದೇವರು ಜಮದಗ್ನಿಪತ್ನಿ ರೇಣುಕೆಯಲ್ಲಿ ಆವಿರ್ಭವಿಸಿದರು. ಸಾಯಂ ಸೂರ್ಯಾಸ್ತಕಾಲಕ್ಕೆ ತೃತೀಯಾ ಇದ್ದಾಗ ಮಾತ್ರ ಅಕ್ಷಯತೃತೀಯಾದಂದು ಪರಶು-ರಾಮಜಯಂತಿ ಬರುತ್ತದೆ. ಸಾಯಂವ್ಯಾಪಿನಿಯಾಗಿ ತೃತೀಯಾ ಇಲ್ಲದಿದ್ದಾಗ ಮುಂಚಿನ ವೈಶಾಖದ್ವಿತೀಯಾದಂದು ಇದರ ಆಚರಣೆ. ಪ್ರದೋಷ ಕಾಲದಲ್ಲಿ ಪರಶುರಾಮ ದೇವರನ್ನು ಪೂಜಿಸಿ ಈ ಮಂತ್ರದಿಂದ ಅರ್ಘ್ಯವನ್ನು ಕೊಡಬೇಕು. 'ಜಮದಗ್ನಿಸುತೋ ವೀರಕ್ಷತ್ರಿಯಾಂತಕರಪ್ರಭೋ । ಗೃಹಾಣಾರ್ಘ್ಯಂ ಮಯಾ ದತ್ತಂ ಕೃಪಯಾ ಪರಮೇಶ್ವರ ॥' ಇಂದು ಯುಗಾದಿಯ ಪ್ರಯುಕ್ತ ಪಿತೃತರ್ಪಣವನ್ನೂ ನೀಡಬೇಕು

**ವೈಶಾಖಮಾಸದ ಗೌರಿ** – ವೈಶಾಖ ಮಾಸ ಪ್ರತಿ ಶುಭದಿನಗಳಲಿ ಶಿರಿಗೌರಿ ಕರುಣವಾ ತೋರಿ॥ ಸುಖಪೂರ್ಣೇ ನೀನು ಚಂದ್ರಾಶೇಖರನ ರಾಣಿಯೆ ನಿತ್ಯಗೌರಿಯೆ ನೀಲವೇಣಿಯೆ । ಅತ್ಯಂತ ಹರುಷದಿ ಪೂಜಿಪೆ ನಿನ್ನೆ ಪ್ರತ್ಯಕ್ಷಳಾಗಿ ನೀ ಕಾಯಬೇಕಮ್ಮ ॥1॥ ದೇವಾಗೃಹದಲ್ಲೆ ನೀನು ಅಲಂಕಾರಳಾಗಿ ಕ್ಷಣ ಬಿಡದೆ ಕೂತಿರುವೆ ಪತಿಯ ಸಹಿತ । ನಿನ್ನನು ಸೇವಿಪ ಸ್ತ್ರೀಯರಿಗೆಲ್ಲ ಸೌಭಾಗ್ಯವ ಕೊಡುವಿ । ಅನೇಕ ವಿಧದಿ ಪೂಜಿಸಿ ನಿನಗೆ ಮುತ್ತಿನಾರುತಿ ಎತ್ತಿ ಬೆಳಗುವೆನಮ್ಮ ।

ದಯಮಾಡಿ ಬಾರಮ್ಮ ಮನೆಗೆ ಶಿರಿಗೌರಿ ಕರುಣವಾ ತೋರಿ ॥2॥ ಕಪಿಲನಾಮಕ ಪರಮಾತ್ಮನ ಪ್ರೀತಿಯ ಅಪಾರ ಮಹಿಮನ ಮೊಮ್ಮಗಳೇ । ಶ್ರದ್ಧೆ ಭಕ್ತಿಯಿಂ ಪೂಜಿಪೆ ನಿನ್ನನು । ಕಾಕುಮತಿಗೆ ಎನ್ನ ನೂಕದೆ ಸಲಹೇ ॥3॥

**ಶ್ರೀವಿಜಯಧ್ವಜರ ಆರಾಧನೆ (ಪೇಜಾವರಮಠ)** – ಶ್ರೀವಿಜಯಧ್ವಜ-ತೀರ್ಥರ ಪುಣ್ಯದಿನವಾಗಿದೆ. ವಿಜಯಧ್ವಜರು ಪೇಜಾವರಮಠದ ಪರಂಪರೆಯಲ್ಲಿ ಬಂದ ಯತಿ ವರೇಣ್ಯರು. ಭಾಗವತದ ಹನ್ನೆರಡು ಸ್ಕಂಧಗಳಿಗೂ ವ್ಯಾಖ್ಯಾನವನ್ನು ಬರೆದು ಉಪಕರಿಸಿದ ಮಹನೀಯರು. ಇವರ ವೃಂದಾವನ ತಲಪಾಡಿಸಮೀಪದ ಕಣ್ವತೀರ್ಥದಲ್ಲಿದೆ. ಪೇಜಾವರಶ್ರೀಪಾದರು ಈ ದಿನ ಕಣ್ವತೀರ್ಥದಲ್ಲಿದ್ದು ವಿಜಯ ಧ್ವಜತೀರ್ಥರ ಆರಾಧನೆಯನ್ನು ನಡೆಸುತ್ತಾರೆ. ಊರ ಪರವೂರ ಭಕ್ತರು ಈ ಸಂದ ರ್ಭದಲ್ಲಿ ಇಲ್ಲಿ ಸೇರುತ್ತಾರೆ. ಶ್ರೀವಿಜಯಧ್ವಜತೀರ್ಥರ ಚರಮಶ್ಲೋಕ- ಅಂಜನಾ -ಸೂನುಸಾನ್ನಿಧ್ಯಾದ್ವಿಜಯೇನ ವಿರಾಜಿತಮ್ । ಅಜಿತಪ್ರೀತಿಜನಕಂ ಭಜೇऽಹಂ ವಿಜಯಧ್ವಜಮ್ ॥ 1 ॥

**ಶ್ರೀವಿಜಯಧ್ವಜಾಷ್ಟಕಮ್** – ಅಂಜನಾಸೂನುಸಾನ್ನಿಧ್ಯಾದ್ವಿಜಯೇನ ವಿರಾಜಿತಮ್ । ಅಜಿತಪ್ರೀತಿಜನಕಂ ಭಜೇऽಹಂ ವಿಜಯಧ್ವಜಮ್ ॥ 1 ಶ್ರೀವಿಜಯಧ್ವಜಯೋಗಿಯತೀಶಂ ನೌಮಿ ನಿರಂತರಮಾನಮಿತಾಂಗಃ । ವಾದಿ-ಮದೇಭವಿದಾರಣದಕ್ಷಂ ವ್ಯಾಕೃತಭಾಗವತಂ ಪರಮಾಪ್ತಮ್ ॥ 2 ॥ ಜಯವಿಜಯೌ ದಂಡಧರೌ ಭೂಯೋ ಭೂಯೋऽಭಿವಾದಯೇ ಮೂರ್ಧ್ನಾ । ಭಾಗವತೀ ಟೀಕಾ ಯಾऽಸೌ ವರ್ಣ್ಯಂತಃ ಪ್ರವೇಷ್ಟುಮೇತಸ್ಯಾಃ ॥ 3 ॥ ಮಧ್ವಾಧೋಕ್ಷಜಸಂಪ್ರದಾಯ ಕಮಹಾಶಾಸ್ತ್ರಾರ್ಥಸಂವ್ಯಂಜಕಃ ಶ್ರೀಮದ್ಭಾಗವತಾಂಬುಧೌ ವ್ಯವಹರನ್ ತಾತ್ಪರ್ಯ-ರತ್ನಾವಲೀಮ್ । ದೃಷ್ಟ್ವಾ ಭಾಗವತಾರ್ಥದೀಪ್ತಪದಕೃೆಹ ಶ್ರೀಕೃಷ್ಣಪಾದಾರ್ಚನಂ ಮಾ ತ್ಯಾಕ್ಷೀದ್ವಿಜಯಧ್ವಜೋ ಭಜ ಮನಸ್ತಂ ಕಣ್ವತೀರ್ಥಸ್ಥಿತಮ್ ॥ 4 ॥ ಯಸ್ಯ ವಾಕ್ಕಾಮಧೇನುರ್ನಃ ಕಾಮಿತಾರ್ಥಾನ್ ಪ್ರಯಚ್ಛತಿ । ಭಜೇ ಮಹೇಂದ್ರಸಚ್ಛಿಷ್ಯಂ ಯೋಗೀಂದ್ರಂ ವಿಜಯಧ್ವಜಮ್ ॥ 5 ॥ ಸರ್ವದುರ್ವಾದಿಮಾತಂಗದಲನೇ ಸಿಂಹವಿಕ್ರಮಮ್ । ವಂದೇ ಯತಿಕುಲಾಗ್ರಣ್ಯಂ ಯೋಗೀಂದ್ರಂ ವಿಜಯಧ್ವಜಮ್ ॥ 6 ॥ ಮಧ್ವಾರಾಧಿತಸೀತೇಶರಾಮಚಂದ್ರಪದಾಂಬುಜೇ । ಚಂಚರೀಕಾಯಿತಂ

ವಂದೇ ಯೋಗೀಂದ್ರಂ ವಿಜಯಧ್ವಜಮ್ ॥ 7 ॥ ಶ್ರೀಮದ್ಭಾಗವತಾಭಿಧಾನಸುರಭಿರ್ಯಟ್ಟೀಕಯಾ ವತ್ಸಯಾ ಸ್ವಸ್ಪಷ್ಟಾ ಶ್ಲೋಕಪಯೋಧರೈರ್ನಿಜಮಹಾಭಾವಂ ಪಯಃ ಪ್ರಸ್ನುತೇ । ಲೋಕೇ ಸಜ್ಜನತಾಪಸಂಪ್ರಶಮನಾಯೋದೀರಿತಂ ಸೂರಿಭಿಃ ಶ್ರೀಮಂತಂ ವಿಜಯಧ್ವಜಂ ಮುನಿವರಂ ತಂ ಸನ್ನಮಾಮ್ಯನ್ವಯಮ್ ॥ 8 ॥ ॥ ಇತಿ ಶ್ರೀವಿಶ್ವಪತಿತೀರ್ಥವಿರಚಿತಂ ಶ್ರೀವಿಜಯಧ್ವಜಾಷ್ಟಕಮ್ ॥

**ಶ್ರೀ ಸುರೋತ್ತಮತೀರ್ಥರು** – ಶ್ರೀಸುರೋತ್ತಮತೀರ್ಥರು ಭಾವಿಸಮೀರರೆಂದೇ ಪ್ರಖ್ಯಾತರಾದ ಶ್ರೀವಾದಿರಾಜತೀರ್ಥಶ್ರೀಪಾದಂಗಳವರ ಪೂರ್ವಾಶ್ರಮದ ತಮ್ಮಂದಿರು. ಶ್ರೀಸುರೋತ್ತಮತೀರ್ಥರು ಶ್ರೀಮನ್ಮಧ್ವಾಚಾರ್ಯರನ್ನು ಶ್ರೀವಿಷ್ಣುತೀರ್ಥರು ಭಕ್ತಿಯಿಂದ ಸೇವಿಸಿ ಕೃತಾರ್ಥರಾದಂತೆ ಶ್ರೀಗುರುಸಾರ್ವಭೌಮರನ್ನು ಸೇವಿಸುತ್ತಾ ಪವಿತ್ರವ್ರತಗಳಿಂದ ಪೂತಾತ್ಮರಾಗಿ ಉತ್ತಮರೆನಿಸಿಕೊಂಡು, ತಮ್ಮ ವಿದ್ಯಾಗುರುಗಳಾದ ಅಗ್ರಜರಾದ ಶ್ರೀಗುರುರಾಜರ ಆಜ್ಞೆಯಂತೆ 'ಯುಕ್ತಿಮಲ್ಲಿಕಾ' ಗ್ರಂಥಕ್ಕೆ ಸರಿಯಾದ ವ್ಯಾಖ್ಯಾನವನ್ನು ಮಾಡಿ ಪಾಷಂಡಮತಖಂಡನಕ್ಕೆ ಹಾಗೂ ಸನ್ಯಾಸಪದ್ಧತಿಗೆ ಸಹ ವ್ಯಾಖ್ಯಾನವನ್ನು ಬರೆದಿರುವರು. ಭಂಡಾರಕೇರಿಯಲ್ಲಿ ಇವರ ಮೂಲವೃಂದಾವನವಿದ್ದು ಅಕ್ಷಯತೃತೀಯಾದಂದು ಬಾರ್ಕೂರಿನ ಬಳಿ ಇವರ ಆರಾಧನೆಯು ವೈಭವದಿಂದ ನಡೆಯುತ್ತದೆ. ಯುಕ್ತಿಮಲ್ಲಿಕಾ ಗ್ರಂಥಕ್ಕೆ ಸುರೋತ್ತಮತೀರ್ಥರು ಪೂರ್ವಾಶ್ರಮದಲ್ಲಿಯೇ ನಾರಾಯಣಾಚಾರ್ಯರಾಗಿದ್ದಾಗಲೇ ವ್ಯಾಖ್ಯಾನವನ್ನು ಬರೆಯಲಾರಂಭಿಸಿದ್ದಾರೆ. ವೇದಾಪೌರುಷೇಯತ್ವದ ತನಕ ಬರೆದ ಬಳಿಕ ಆಶ್ರಮಸ್ವೀಕರಿಸಿದ್ದಾರೆ. ಈ ಗ್ರಂಥವ್ಯಾಖ್ಯಾನಕ್ಕೆ ದೇವತೆಗಳು ದಕ್ಷರು. 'ಸುರೋತ್ತಮಯೋಗಿವರ್ಯಾಃ ದಕ್ಷಾಃ' ಎಂದು ಹೇಳಿದ್ದಾರೆ. ಇದಕ್ಕೆ ಪ್ರತಿಯಾಗಿ ಇವರಿಗೆ ಸುರೋತ್ತಮತೀರ್ಥರೆಂದು ದೊರೆತು ಇವರು ದೇವತೆಗಳೇ ಎಂದು ಖ್ಯಾತರಾಗಿದ್ದಾರೆ. 'ಸಂಶ್ರಿತ್ಯ ವಿಷ್ಣೋಃ ಪದಮತ್ರಸಾಧುಸಸ್ಯಾಸಿ ವಿಜ್ಞಾನಜಲೇನ ಹರ್ಷಮ್ । ನಯಂತಮುಚ್ಚೈಃ ಪ್ರವಚೋ ನಿನಾದಂ ಸುರೋತ್ತಮಾರ್ಯಾಂಬುಧರಂ ನತೋಽಸ್ಮಿ ॥ ಸುರೋತ್ತಮಾರ್ಯಸ್ತ- ಸ್ಯಾಸೀತ್ ಸೋದರ್ಯೋ ವಿದ್ವದಗ್ರಣೀಃ । ಯತೀಂದ್ರೋ ವಿಷ್ಣುತೀರ್ಥಾರ್ಯೋ ಯಥಾ ಮಧ್ವಸ್ಯ ವೈ ಪುರಾ ॥

## ವೈಶಾಖ ॥ ಶುದ್ಧ ॥ ಚತುರ್ಥೀ

ಶ್ರೀ ವಿದ್ಯಾಪತಿತೀರ್ಥರು (ವ್ಯಾಸರಾಜ ಮಠ) ವೈಶಾಖ ಶುದ್ಧ ಚತುರ್ಥಿ (ಕ್ರಿ.ಶ. 1788-1798) ವಾದಿವಾರಣಗರ್ವಾಣಾಂ ಛೇದೇ ಕಂಠೀರವಸ್ಸದಾ । ವಿದ್ಯಾಪತಿ ಗುರುರ್ಭೂಯಾನ್ಮನ್ಮನೋಭೀಷ್ಟಸಿದ್ಧಯೇ ॥ ವಿದ್ಯಾನಾಥತೀರ್ಥರ ಕರಕಮಲಸಂಜಾತರಾದ ಇವರು ವಾಕ್ಯಾರ್ಥದಲ್ಲಿ ನಿಪುಣರಾಗಿ ಪ್ರತಿವಾದಿಗಳ ಗರ್ವವನ್ನು ಭಂಗ ಮಾಡುವುದರಲ್ಲಿ ನಿಸ್ಸೀಮರಾಗಿದ್ದರು. ಇವರು ಸಹ ತಮಿಳುನಾಡಿ-ನಲ್ಲಿಯೇ ಹೆಚ್ಚಿಗೆ ವಾಸಿಸುತ್ತಾ ಸೇಲಂ, ತಿರುಚಿ, ಕುಂಭಕೋಣಂ, ಈರೋಡ್ ಮುಂತಾದ ಊರುಗಳಲ್ಲಿ ಶಿಷ್ಯ ಸಂಪತ್ತನ್ನು ವೃದ್ಧಿ ಮಾಡಿದರು. ಕೊನೆಗೆ ಕುಂಭ-ಕೋಣದಲ್ಲಿ ತಮ್ಮ ಗುರುಗಳ ಬೃಂದಾವನ ಸಮೀಪದಲ್ಲಿಯೇ 1798ನೇ ವೈಶಾಖ ಶುದ್ಧ ಚತುರ್ಥಿಯಂದು ಶ್ರೀಹರಿಪಾದವನ್ನು ಸೇರಿದರು. ಅವರ ವೃಂದಾವನವು ಕುಂಭಕೋಣದಲ್ಲಿದೆ.

ಶ್ರೀ ವಿದ್ಯಾಶ್ರೀನಿವಾಸತೀರ್ಥರು (ವ್ಯಾಸರಾಜ ಮಠ) ವೈಶಾಖ ಶುದ್ಧ ಚತುರ್ಥಿ (ಕ್ರಿ.ಶ. 1887-1890) ಭೈಷ್ಮೀ ಜಾನಿ ಪದಾಂಭೋಜ ಮಾನಸಾಸಕ್ತ ಮಾನಸಂ । ಮುನಿವರ್ಯಂ ಸದಾ ವಿದ್ಯಾಶ್ರೀನಿವಾಸಮಹಂ ಭಜೇ ॥ ಇವರ ಪೂರ್ವಾಶ್ರಮದ ಹೆಸರು ವ್ಯಾಸರಾಮಾಚಾರ್ಯರೆಂದು. ಇವರು ಶ್ರೀ ವಿದ್ಯಾ-ಶ್ರೀಧರತೀರ್ಥರ ಪೂರ್ವಾಶ್ರಮದ ತಮ್ಮಂದಿರು. ಅಣ್ಣಂದಿರಲ್ಲಿಯೇ ಆಶ್ರಮ ಸ್ವೀಕಾರ ಮಾಡಿ ಶ್ರೀ ವಿದ್ಯಾಶ್ರೀನಿವಾಸತೀರ್ಥರೆಂಬ ನಾಮಕರಣದಿಂದ ಪೀಠವನ್ನು ಅಲಂಕರಿಸಿದರು. ಇವರು ಸಹ ತಮ್ಮ ಗುರುಗಳಂತೆಯೇ ಕೇವಲ ಮೂರು ವರ್ಷಗಳ ಕಾಲ ಮಾತ್ರ ಅಧಿಪತ್ಯದಲ್ಲಿದ್ದರು. ಅಲ್ಪಾವಧಿಯಲ್ಲಿಯೇ ಜನಸ್ತೋಮದ ವಿಶೇಷ ಗೌರವಕ್ಕೆ ಪಾತ್ರರಾಗಿದ್ದರು. ಆಗಿನ ಮೈಸೂರು ಮಹಾರಾಜರಾದ ಶ್ರೀಚಾಮ-ರಾಜೇಂದ್ರ ಒಡೆಯರ್‌ರವರಿಂದ ಪೂಜಿತರಾಗಿದ್ದರು. ಇವರು 1890ರ ವೈಶಾಖ ಶುದ್ಧ ಚತುರ್ಥಿಯಂದು ಶ್ರೀ ಗೋಪಾಲಕೃಷ್ಣನ ಪಾದವನ್ನು ಸೇರಿ ಸೋಸಲೆಯಲ್ಲಿ ಬೃಂದಾವನಸ್ಥರಾದರು.

## ವೈಶಾಖ ॥ ಶುದ್ಧ ॥ ಪಂಚಮೀ

ಶ್ರೀ ಸಂಭವತೀರ್ಥರು (ಪಲಿಮಾರು ಮಠ) ವೈಶಾಖ ಶುಕ್ಲ ಪಂಚಮಿ ಪರಂಪರೆಯಲ್ಲಿ ಮೂರನೆಯವರು 'ಸಂಭವ' ಎನ್ನುವುದೂ ಪರಮಾತ್ಮನ ಸಾವಿರ ರೂಪಗಳಲ್ಲಿ ಒಂದು. ಇವರು ತಮ್ಮ ಗುರುಗಳಾದ ಸಮಾತ್ಮೇಶ ತೀರ್ಥರ ಅನಂತರ ಸುಮಾರು ಹದಿನೇಳು ವರ್ಷಗಳ ಕಾಲ ಈ ಪೀಠವನ್ನು ಅಲಂಕರಿಸಿದ್ದರು. ಸಚ್ಛಾಸ್ತ್ರದ ಪ್ರವಚನ ಮತ್ತು ಭಗವಂತನ ಅರ್ಚನೆ ಧ್ಯಾನಗಳಲ್ಲಿಯೇ ತನ್ನ ಜೀವಿತವನ್ನು ಸವೆಸಿದವರು. ವಾರ್ಧಕ್ಯದಲ್ಲಿ ಪೀಠವನ್ನು ಶಿಷ್ಯನಿಗೊಪ್ಪಿಸಿ ತೀರ್ಥಪರ್ಯಟನೆ ಮಾಡಿದರು. ರಾಮಾರ್ಚಕರಾದ ಇವರು ತನ್ನ ಯಾತ್ರೆಯ ತಾಣವಾಗಿ ಅಯೋಧ್ಯೆಯನ್ನು ಆರಿಸಿಕೊಂಡರು. ಶಾ.ಶಕೆ. 1252 (ಕ್ರಿ.ಶ. 1330) ಶುಕ್ಲ ಸಂವತ್ಸರದ ವೈಶಾಖ ಶುಕ್ಲಪಕ್ಷದ ಪಂಚಮಿಯಂದು ಅಯೋಧ್ಯೆಯಲ್ಲಿ ಹರಿಪದವನ್ನು ಸೇರಿದರು.

## ವೈಶಾಖ ॥ ಶುದ್ಧ ॥ ಷಷ್ಠೀ

ಶ್ರೀ ರಾಮಚಂದ್ರತೀರ್ಥರು - ಯರಗೋಳ ದ್ಯುಮಣ್ಯಭಿಜನಾಬ್ಧಿಂದು ರಾಮವ್ಯಾಸಪದಾರ್ಚಕಃ । ರಾಮಚಂದ್ರಗುರುರ್ಭೂಯಾತ್ ಕಾಮಿತಾರ್ಥ - ಪ್ರದಾಯಕಃ ॥ ಶ್ರೀರಾಮಚಂದ್ರತೀರ್ಥರು ಮಹಾ ಮೇಧಾವಿಗಳು. ಶ್ರೀಮ-ಟ್ಟೀಕಾಕೃತ್ಪಾದರ ಪ್ರಶಿಷ್ಯರಾದ ಶ್ರೀ ಕವೀಂದ್ರತೀರ್ಥರ ಪ್ರಶಿಷ್ಯರು. ಇವರ ಸ್ಥಾನ ದ್ವೈತ ಸಾಮ್ರಾಜ್ಯ ಇತಿಹಾಸದಲ್ಲಿ ಮಹತ್ವ ಪೂರ್ಣವಾದುದು. ಇವರ ಪೂರ್ವಾ-ಶ್ರಮದ ಹೆಸರು ಶ್ರೀಮಾಧವಶಾಸ್ತ್ರಿಗಳು. ಸರ್ವಜ್ಞ ಸಂಸ್ಥಾನದ ಶ್ರೀ ವಾಗೀಶ-ತೀರ್ಥರ ವಾಗ್ವೈಭವಕ್ಕೆ ಮನಸೋತು ಅವರ ಶಿಷ್ಯರಾದರು. ನ್ಯಾಯ - ವೇದಾಂತ - ವ್ಯಾಕರಣಾದಿ ಶಾಸ್ತ್ರಗಳಲ್ಲಿ ಶ್ರೀಮಾಧವ ಶಾಸ್ತ್ರಿಗಳಿಗೆ ಮೊದಲಿನಿಂದಲೂ ಮಹಾ ಪಾಂಡಿತ್ಯವಿದ್ದಿತು. ಶ್ರೀವಾಗೀಶತೀರ್ಥರ ಶಿಷ್ಯರಾದ ಬಳಿಕ ಅವರಲ್ಲಿ ಮಧ್ವ ಶಾಸ್ತ್ರವನ್ನೆಲ್ಲ ಅಧ್ಯಯನ ಮಾಡಿ ಮಹಾ ಪಂಡಿತರಾದರು. ಶ್ರೀ ಮಾಧವ ಶಾಸ್ತ್ರಿಗಳ ವಿದ್ವತ್, ವೈರಾಗ್ಯ, ಸಾತ್ವಿಕ ತೇಜಸ್ಸುಗಳನ್ನು ಕಂಡು ಗುರುಗಳು ಸುಪ್ರೀತರಾದರು. ಶ್ರೀವಾಗೀಶತೀರ್ಥರು ಶ್ರೀಮಾಧವಶಾಸ್ತ್ರಿಗಳಿಗೆ ಆಶ್ರಮವಿತ್ತು ರಾಮಚಂದ್ರ-ತೀರ್ಥರೆಂದು ನಾಮಕರಣ ಮಾಡಿ ದ್ವೈತ ವೇದಾಂತ ದಿಗ್ವಿಜಯ ವಿದ್ಯಾ

ಸಾಮ್ರಾಜ್ಯದಲ್ಲಿ ಕುಳ್ಳಿರಿಸಿ, ತಮ್ಮ ಸ್ವಹಸ್ತಗಳಿಂದ ಪಟ್ಟಾಭಿಷೇಕ ಮಾಡಿದರು. ಶ್ರೀ ರಾಮಚಂದ್ರತೀರ್ಥರು ಮಹಾ ಸಂಸ್ಥಾನದೊಂದಿಗೆ ಶ್ರೀರಂಗಪಟ್ಟಣಕ್ಕೆ ದಿಗ್ವಿಜಯ ಮಾಡಿಸಿದಾಗ ಶ್ರೀ ಕಾಶೀನಾಥ ಎಂಬ ಅದ್ವೈತ ಪಂಡಿತರೊಡನೆ ವಾಕ್ಯಾರ್ಥ ನಡೆಸಿದರು.ಆ ವಾಕ್ಯಾರ್ಥದಲ್ಲಿ ಶ್ರೀ ರಾಮಚಂದ್ರತೀರ್ಥರು ತಮ್ಮ ಅದ್ಭುತವಾದ ಪಾಂಡಿತ್ಯದಿಂದ ಕಾಶೀನಾಥ ಪಂಡಿತರನ್ನು ನಿರುತ್ತರರನ್ನಾಗಿ ಮಾಡಿದರು. ಅದ್ವೈತ ಮತವು ವೇದ ಶಾಸ್ತ್ರ ವಿರುದ್ಧವೆಂದು ಸಿದ್ಧ ಮಾಡಿ ತೋರಿಸಿದರು. ಕಾಶೀನಾಥ ಪಂಡಿತರು ಬಹಳ ಗಟ್ಟಿಗರು. ಅನೇಕ ಶಾಸ್ತ್ರಗಳಲ್ಲಿ ಅವರಿಗೆ ತಲಸ್ಪರ್ಶಿಯಾದ ಪಾಂಡಿತ್ಯವಿದ್ದಿತು. ಅವರ ಜೊತೆ ಅನೇಕ ನೈಯಾಯಿಕ, ವೈಯಾಕರಣ ಪಂಡಿತರಿದ್ದರು. ಶ್ರೀ ರಾಮಚಂದ್ರತೀರ್ಥರಿಗೆ ತರ್ಕ ಶಾಸ್ತ್ರದಲ್ಲಿ ಮಾತ್ರ ಗತಿ ಮತಿ ಇರಬಹುದೆಂದು ಎಣಿಸಿ ಆ ಕಾಶೀನಾಥರು ತರ್ಕ ಶಾಸ್ತ್ರದಲ್ಲಿ ಪೂರ್ವ ಪಕ್ಷ ತೆಗೆದರು. ನ್ಯಾಯನಯನಿಪುಣವಾದ ತಮ್ಮ ವಾಗ್ಧೋರಣೆಯಿಂದ ಶ್ರೀ ರಾಮಚಂದ್ರತೀರ್ಥರು ಆ ಪ್ರತಿವಾದಿ ಪಂಡಿತರ ಕೋಟಿಕ್ರಮದ ಶಾಬ್ದಿಕಗೋಪುರಗಳನ್ನೆಲ್ಲ ಪುಡಿಗೈದರು. ಅನಂತರ ವೈಯಾಕರಣ ದಿಗ್ದಂತಿಗಳು ಕಣಕ್ಕೆ ಇಳಿದರು. ಶ್ರೀ ರಾಮಚಂದ್ರತೀರ್ಥರು ಅಪ್ರತಿಮವಾದ ವ್ಯಾಕರಣವಿದ್ವತ್ತಿನಿಂದ, ನ್ಯಾಯಘಟಿತವಾದ ಪರಿಷ್ಕಾರ ಪದ್ಧತಿಯಿಂದ ಆ ಶುದ್ಧ ವಿಧ್ವಂಸರನ್ನೆಲ್ಲ ಮೂಕ ಮುಗ್ಧರನ್ನಾಗಿ ಮಾಡಿದರು. ಆನಂತರ ಆ ಪ್ರತಿವಾದಿ ಪಂಡಿತರೆಲ್ಲ ವಾದದಲ್ಲಿ ಖಂಡಿತರಾಗಿ ಜಯಪತ್ರಗಳನ್ನು ಬರೆದುಕೊಟ್ಟರು.ಆ ಕಾಲದಲ್ಲಿ ಶ್ರೀರಂಗಪಟ್ಟಣವನ್ನು ಆಳುತ್ತಿದ್ದ ಮಹಾರಾಜರು ಶ್ರೀರಾಮಚಂದ್ರತೀರ್ಥರು ಮತ್ತು ಶ್ರೀಕಾಶೀನಾಥ ಪಂಡಿತರಳ್ಳಿ ನಡೆದ ವಾಕ್ಯಾರ್ಥ -ವನ್ನು ಶಿಲಾಶಾಸನವನ್ನಾಗಿ ಮಾಡಿ ಬರೆಸಿ ಇಡಿಸಿದ್ದಾರೆ. ಆ ಮಹಾರಾಜನು ಶ್ರೀರಾಮಚಂದ್ರತೀರ್ಥರಿಗೆ ವಿಶೇಷವಾಗಿ ಮಾನ ಮರ್ಯಾದೆ ಮಾಡಿ ತನ್ನ ರಾಜ-ಧಾನಿಯಲ್ಲಿಯೇ ಬಹು ಕಾಲ ಇರಿಸಿ ಕೊಂಡಿದ್ದನು. ಶ್ರೀ ರಾಮಚಂದ್ರತೀರ್ಥರಿಗೆ ಶ್ರೀವಿಬುಧೇಂದ್ರತೀರ್ಥರು ಆಶ್ರಮ ಶಿಷ್ಯರೂ ಮತ್ತು ಉತ್ತರಾಧಿಕಾರಿಗಳು. ಮುಂದೆ ಶ್ರೀರಾಮಚಂದ್ರತೀರ್ಥರು ಸಂಚಾರ ಕ್ರಮದಲ್ಲಿ ರಾಜಮಹೇಂದ್ರಿ ಮುಂತಾದ ಆಂಧ್ರರಾಜ್ಯದಲ್ಲಿ ಸಂಚಾರ ಮಾಡಿ ಯರಗೋಳಕ್ಕೆ ಬಂದರು. ಅಲ್ಲಿಯೇ ಅವರು ವೃಂದಾವನಪ್ರವೇಶ ಮಾಡಿದರು.

ರಾಮಚಂದ್ರ ಗುರುವೇ । ಮೂಲ । ರಾಮಚಂದ್ರನ ಪೂಜಿಪ ಧೀರಾ ॥ಪ.॥ವಿಬುಧೇಂದ್ರರ್ಗೆ ಪಿತನೆಂದು ಇಳೆಯೊಳು ಮೆರೆದ । ಸುಬುಧರ ಸಮ್ಮುಖದಲಿ ಪಟ್ಟಾಭಿಷೇಕವನೆ ಗೈದ ॥ಚರಣ ॥ಗುರು ವಾಗೀಶರಲಿ ದ್ವೈತವನು ತಾ ಓದಿ । ಗುರು ಜಿತಾಮಿತ್ರರನ್ನೇ ಪೌತ್ರನನ್ನಾಗಿ ಪಡೆದ ॥ಚರಣ ॥ದೇಶ ದೇಶದಿ ಸಂಚರಿಸಿ ದ್ವೈತ ಸಿದ್ಧಾಂತವನು ಸ್ಥಾಪಿಸಿ । ಶ್ರೀಶ ಶ್ರೀವೆಂಕಟನಾಥ ವಿಬುಧೇಂದ್ರ ಪ್ರಿಯಾ ॥

## ವೈಶಾಖ ॥ ಶುಕ್ಲ ॥ ಸಪ್ತಮೀ

ಇಂದು ಜಹ್ನು ಋಷಿಗಳ ಬಲಗಿವಿಯಿಂದ ಗಂಗೋತ್ಪತ್ತಿ ಆಗಿದೆ. ಮಧ್ಯಾಹ್ನ ಕಾಲದಲ್ಲಿ ಗಂಗಾ ಪೂಜೆಯನ್ನು ಮಾಡಬೇಕು.

**ಗಂಗೋತ್ಪತ್ತಿಃ** – ತತ್ರ ವೈಶಾಖಶುಕ್ಲಸಪ್ತಮ್ಯಾಂ ಗಂಗೋತ್ಪತ್ತಿಃ, ತತ್ಪೂಜಾ ಚೋಕ್ತಾ ಪೃಥ್ವೀಚಂದ್ರೋದಯೇ ಬ್ರಾಹ್ಮೇ – ವೈಶಾಖಶುಕ್ಲಸಪ್ತಮ್ಯಾಂ ಜಹ್ನುನಾ ಜಾಹ್ನವೀ ಪುರಾ । ಕ್ರೋಧಾತ್ ಪೀತಾ ಪುನಃ ತ್ಯಕ್ತಾ ಕರ್ಣರಂಧ್ರಾತ್ತು ದಕ್ಷಿಣಾತ್ ॥ ತಾಂ ತತ್ರ ಪೂಜಯೇದ್ದೇವೀಂ ಗಂಗಾಂ ಗಗನಮೇಖಲಾಮ್ ॥ ಇತಿ ॥ ಹರಿವಂಶೇ ಪುಣ್ಯಕವ್ರತಾಂತೇ ಅಬ್ದಂ ಪ್ರಾತಃ ಸ್ನಾನಮಭಿಧಾಯ – ಗಂಗಯಾ ವ್ರತಕಂ ದತ್ತಂ ತದೈವೌಮಂ ಯಶಸ್ಕರಿ । ಸ್ನಾನಮಭ್ಯಧಿಕಂ ತ್ವತ್ರ ಪ್ರತ್ಯೂಷಸ್ಯಾತ್ಮನೋ ಜಲೇ ॥ ಅನ್ಯತ್ರ ವಾ ಜಲೇ ಮಾಘಶುಕ್ಲಪಕ್ಷೇ ಹರಿಪ್ರಿಯೇ । ಏತದ್ಗಂಗಾವ್ರತಂ ನಾಮ ಸರ್ವಕಾಮಪ್ರದಂ ಸ್ಮೃತಮ್ । ಸಪ್ತ ಸಪ್ತ ಚ ಸಪ್ತಾಥ ಕುಲಾನಿ ಹರಿವಲ್ಲಭೇ । ಸ್ತ್ರೀ ತಾರಯತಿ ಧರ್ಮಜ್ಞಾ ಗಂಗಾವ್ರತಕಚಾರಿಣೀ ॥ ದೇಯಂ ಕುಂಭಸಹಸ್ರಂ ತು ಗಂಗಾಯಾ ವ್ರತಕೇ ಶುಭೇ । ತಾರಣಂ ಪಾರಣಂ ಚೈವ ತದ್ವ್ರತಂ ಸಾರ್ವಕಾಮಿಕಮ್ ॥ ಇತಿ ॥

ಅನ್ಯತ್ರೋಕ್ತಂ – ವೈಶಾಖಶುಕ್ಲಪಕ್ಷೇ ತು ಸಪ್ತಮ್ಯಾಂ ಪೂಜಯೇದ್ಧರಿಮ್ । ಗಂಗಾಯಾಂ ವಿಧಿವತ್ ಸ್ನಾತ್ವಾ ಭೋಜಯೇದ್ ಬ್ರಾಹ್ಮಣಾನ ದಶ । ಪೂಜಯೇತ್ ಸೂಕ್ಷ್ಮವಸ್ತ್ರೈಶ್ಚ ಪುಷ್ಪಸ್ರಕ್‌ಚಂದನೈಃ ಶುಭೈಃ ॥ ಪೂಜಕಃ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ । ಇಯಂ ಚ ಶಿಷ್ಟಾಚಾರಾನ್ಮಧ್ಯಾಹ್ನವ್ಯಾಪಿನೀ ಗ್ರಾಹ್ಯಾ। ದಿನತ್ರಯೇ ತದ್ವ್ಯಾಪ್ತಾವಪ್ಯಾಪ್ತಾವೇಕಾದಶವ್ಯಾಪ್ತೌ ವಾ ಪೂರ್ವಾಯುಗ್ಮ-ವಾಕ್ಯಾತ್ । ಇತಿ ಗಂಗಾಸಪ್ತಮೀವ್ರತಮ್ ॥

**ಶರ್ಕರಾಸಪ್ತಮೀ** – ಶರ್ಕರಾಸಪ್ತಮೀ ಚೈವ ವಾಜಿಮೇಧಫಲಪ್ರದಾ ।

ಅಮೃತಂ ಪಿಬತೋ ಹಸ್ತಾತ್ ಸೂರ್ಯಸ್ಯಾಮೃತಬಿಂದವಃ । ನಿಷ್ಪೇತುರ್ಭುವಿ ಚೋತ್ಪನ್ನಾ ಶಾಲಿಮುದ್ಗಯವೇಕ್ಷವಃ ॥ – ರವಿಯಿಂದ ಹುಟ್ಟಿದ ಶರ್ಕರಾವು ರವಿಗೆ ಅತಿಪ್ರಿಯವಾಗಿದೆ. ಆದ್ದರಿಂದ ಹವ್ಯ-ಕವ್ಯಗಳಲ್ಲಿ ಸಕ್ಕರೆಯ ಬಳಕೆಯು ಹೆಚ್ಚಾಗಿದೆ. ''ಇಷ್ಟಾ ರವೇಃ ಅತಃ ಪುಣ್ಯಾ ಶರ್ಕರಾ ಹವ್ಯಕವ್ಯಯೋಃ'' ಈ ಸಪ್ತಮಿಯಂದು ಸಕ್ಕರೆಯ ದಾನ, ಸಕ್ಕರೆಯಿಂದ ಮಾಡಿದ ಭಕ್ಷ್ಯಗಳನ್ನು ಬ್ರಾಹ್ಮಣನಿಗೆ ಬಡಿಸುವುದು ಇವುಗಳು ರವಿಗೆ ಪ್ರಿಯವಾಗಿವೆ. ''ಅಸ್ಯಾಂ ತು ಶರ್ಕರಾದಾನಂ ಶರ್ಕರಾ-ಭೋಜನಂ ತಥಾ । ಕರ್ತವ್ಯಂ ಹಿ ಪ್ರಯತ್ನೇನ ರವೇಃ ಪ್ರೀತಿಕರಃ ಶುಭಮ್ ॥''.

## ವೈಶಾಖ ॥ ಶುದ್ಧ ॥ ಅಷ್ಟಮೀ

ಶ್ರೀ ವಿದ್ಯಾಮೂರ್ತಿತೀರ್ಥರು (ಪಲಿಮಾರು ಮಠ) ಪರಂಪರೆಯಲ್ಲಿ ಐದನೆಯವರಾದ ಇವರು ಗುರುಗಳು ತನಗಿಟ್ಟ ಹೆಸರನ್ನು ತನ್ನ ಪಾಂಡಿತ್ಯದ ಗರಿಮೆಯಿಂದ ಸಾರ್ಥಕಪಡಿಸಿಕೊಂಡ ಘನವಿದ್ವಾಂಸರು. ಸ್ವಯಂ ಎಲ್ಲ ವಿದ್ಯೆಗಳ ಮೂರ್ತಿಯೆ ಆಗಿದ್ದರು. ಇವರ ಅಸಾಧಾರಣ ಪಾಂಡಿತ್ಯದ ಬಗ್ಗೆ ಮಠದ ದಾಖಲೆಗಳಲ್ಲಿ ಬಹಳವಾದ ಉಲ್ಲೇಖವಿದೆ. ದುರ್ವಾದಿಗಳನ್ನು ವಾದದಲ್ಲಿ ಸೋಲಿಸಿ ಜಯಶೀಲರಾದ ಬಗ್ಗೆ ಉಲ್ಲೇಖ ಉಂಟು. ಇವರು ಶ್ರೀಜಯತೀರ್ಥರ ಸಮಕಾಲೀನರು. ಇವರು ತಮ್ಮ ಜೀವಿತಕಾಲದಲ್ಲಿ ಶ್ರೀಜಯತೀರ್ಥರನ್ನು ಭೇಟಿ-ಯಾಗಿರಬಹುದು. ಮತ್ತು ಮತಪ್ರಸಾರಕಾರ್ಯದಲ್ಲಿ ಇಬ್ಬರೂ ಜೊತೆಗೂಡಿ-ರಬಹುದು. ಇವರು ತನ್ನ ಗುರುಗಳ ಅನಂತರ ಹನ್ನೊಂದು ವರ್ಷಗಳ ಕಾಲ ಪೀಠವನ್ನಾಳಿದರು. ಶಾ.ಶಕ 1284 (ಕ್ರಿ .ಶ. 1361) ಪ್ಲವ ಸಂವತ್ಸರದ ವೈಶಾಖ ಶುದ್ಧ ಅಷ್ಟಮಿಯಂದು ಹರಿಪದವನ್ನು ಸೇರಿದರು.

**ಶೇಷದಾಸರ ಆರಾಧನೆ** – ಗದ್ವಾಲದಿಂದ 5 ಮೈಲು ದೂರದಲ್ಲಿರುವ ದರೂರ ಗ್ರಾಮದಲ್ಲಿ ಜನಿಸಿದ ಶ್ರೀಶೇಷದಾಸರು ಮೊದಲು ಕುಲಕರಣಿಕೆಯನ್ನು ಮಾಡುತ್ತಿದ್ದರು. ಗದ್ವಾಲದ ಸೋಮಭೂಪಾಲ ಎಂಬ ಸಂಸ್ಥಾನಿಕನು ಇವರಿಗೆ ತಾಡನ ಪೀಡನಾದಿಗಳಿಂದ ವಿಚಿತ್ರಹಿಂಸೆಗೆ ಈಡುಮಾಡಿದ್ದರಿಂದ ಇವರಿಗೆ ಒಮ್ಮೆ

ವಿಷಯದಲ್ಲಿ ವಿರಕ್ತಿ ಮೂಡಿತು. ಲೌಕಿಕಜೀವನದಲ್ಲಿ ಜಿಗುಪ್ಸೆ ಹುಟ್ಟಿತು. ತತ್ಕ್ಷಣವೇ ತಮ್ಮ ಉದ್ಯೋಗಕ್ಕೆ ರಾಜೀನಾಮೆ ಕೊಟ್ಟು, ಚಿಂತರವೇಲಿ ಎಂಬ ಗ್ರಾಮದಲ್ಲಿ ನಿಂತು ಪ್ರಾಣದೇವರನ್ನು ಕುರಿತು ತಪಸ್ಸು ಮಾಡಿದರು. ಹರಿವಾಯು-ಗಳ ಅನುಗ್ರಹವಾಯಿತು. ಶ್ರೀವಿಜಯದಾಸರು ಸ್ವಪ್ನದಲ್ಲಿ ಕಾಣಿಸಿಕೊಂಡು ದಾಸ ದೀಕ್ಷೆಯನ್ನು ತೊಡಲು ಉಪದೇಶ ಮಾಡಿದರು. ಯಳಮೇಲಿ ಹಯಗ್ರೀವಾ-ಚಾರ್ಯರು ಇವರು ಇದ್ದಲ್ಲಿಗೆ ಬಂದು ವಿಶೇಷವಾಗಿ ಹರಿಗುರುಗಳ ಆರಾಧನೆ ಮಾಡಬೇಕೆಂದು ಅಪ್ಪಣೆ ಮಾಡಿದರು. ಅದರಂತೆ ಶೇಷಪ್ಪನವರು ಚೀಕಲಪರವಿ, ಚಿಪ್ಪಿಗಿರಿ, ಚಕ್ರತೀರ್ಥ ಮುಂತಾದ ಸ್ಥಳಗಳಲ್ಲಿ ನಿಂತು ತಪಸ್ಸು ಮಾಡಿ ದಾಸರ ಅನುಗ್ರಹವನ್ನೂ ಈಶನ ಪ್ರಸಾದವನ್ನೂ ಹೊಂದಿದರು. ವಿಜಯದಾಸರು ಶೇಷಪ್ಪನ ಉಗ್ರಧ್ಯಾನೋಪಾಸನೆಗಳಿಂದ ಪ್ರಸನ್ನರಾಗಿ ಸ್ವಪ್ನದಲ್ಲಿ ಬಂದು ''ಶ್ರೀ ಗುರುವಿಜಯವಿಟ್ಠಲ'' ಎಂದು ಅಂಕಿತವನ್ನು ಕರುಣಿಸಿದರು. ಅವರ ಅಪ್ಪಣೆಯ ಮೇರೆಗೆ ಶೇಷಣ್ಣನವರು ಮೊದಲುಕಲ್ಲಿಗೆ ಬಂದು ಶಿವಪಂಚಾಕ್ಷರಿಮಂತ್ರವನ್ನು ಒಂದು ವರ್ಷ ಪಯೋವ್ರತದಿಂದ ಇದ್ದು ಮಾಡಿದರು. ಅದರಿಂದ ಮನೋ-ನಿಯಾಮಕರಾದ ಮಹಾರುದ್ರದೇವರ ಅನುಗ್ರಹವನ್ನು ಅನಂತರ ಹರಿವಾಯುಗಳ ನಿರಂತರದ ಧ್ಯಾನದಿಂದ ಹರಿ-ಗುರುಗಳ ಪ್ರಸಾದವನ್ನು ಪಡೆದರು. ಮುಂದೆ ದಾಸರ ಕೀರ್ತಿಯು ದೇಶದೇಶದಲ್ಲಿ ಬೆಳೆಯತೊಡಗಿತು. ಅವರ ಆಶೀರ್ವಾದ-ದಿಂದ ಜನರ ದುಃಖಚಿಂತೆಗಳು ಪರಿಹಾರವಾಗತೊಡಗಿದವು. ಇವರು ಅನೇಕ ಪದ-ಪದ್ಯ , ಸುಳಾದಿ, ಕೀರ್ತನೆಗಳನ್ನು ರಚಿಸಿದ್ದಾರೆ. ಅದರ ಪೈಕಿ 17 ತಾಳಗಳುಳ್ಳ ಅತಿಮಹತ್ವದ ಸುಳಾದಿ ಇರುವದು. ಇವರು ಶಾ.ಶಕೆ 1807ರಲ್ಲಿ ವೈಕುಂಠವಾಸಿ-ಗಳಾದರು. ದಾಸರ ದೇಹಸಂಸ್ಕಾರವಾದ ಸ್ಥಳದಲ್ಲಿ ಕಟ್ಟೆಯೊಂದನ್ನು ಕಟ್ಟಿಸಿದ್ದಾರೆ. ಭಕ್ತರು ದಾಸರ ಈ ಕಟ್ಟೆಯ ಸೇವೆಯನ್ನು ಮಾಡಿ ತಮ್ಮ ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳುತ್ತಲಿರುವರು. ವೈಶಾಖಶುದ್ಧ ಅಷ್ಟಮಿ ದಾಸರ ಪುಣ್ಯದಿನವಿರುತ್ತದೆ. ಮೊದಲಕಲ್ಲಿನಲ್ಲಿ ಪ್ರತಿವರ್ಷ ಇವರ ಆರಾಧನೆಯು ಬಹುವಿಜೃಂಭಣೆಯಿಂದ ನೆರವೇರುತ್ತದೆ. ಇವರ ಕೀರ್ತನೆಗಳೆಲ್ಲ ಪ್ರಮೇಯಪೂರಿತವಾಗಿದ್ದು ವೇದಾಂತದ ಒಗಟುಗಳನ್ನೆಲ್ಲ ತಿಳಿಗನ್ನಡದ ಸರಳ ಶೈಲಿಯಲ್ಲಿ ಬಿಡಿಸಿಡುತ್ತವೆ. ಛಾಂದೋಗ್ಯ , ಬೃಹದಾರಣ್ಯ , ಐತರೇಯ ಮುಂತಾದ ಉಪನಿಷತ್ತುಗಳಲ್ಲಿಯೂ ಹಾಗೂ

ಆಚಾರ್ಯರ ಬೇರೆ ಪ್ರಮೇಯ ಗ್ರಂಥಗಳಲ್ಲಿಯೂ ಹೇಳಿದ ಸೂಕ್ಷ್ಮವಾದ ತಾತ್ವಿಕವಿಷಯಗಳನ್ನೆಲ್ಲ ಶ್ರೀವಿಜಯದಾಸ, ಶ್ರೀಗೋಪಾಲದಾಸರ ನಂತರ ಸ್ವಚ್ಛ ಕನ್ನಡದಲ್ಲಿ ಬಿಚ್ಚಿ ಹೇಳಿದ ಶ್ರೇಯಸ್ಸು ಶ್ರೀಶೇಷದಾಸರದಾಗಿದೆ. ಆದುದರಿಂದಲೇ ಶೇಷದಾಸರ ಕೃತಿಗಳಲ್ಲಿ ಸಾಹಿತ್ಯದ ಸೊಬಗಿಗಿಂತ ವೇದಾಂತದ ಮೆರಗು, ತಾತ್ವಿಕತೆಯ ಬಿಗುವು ಹೆಚ್ಚಾಗಿ ಕಂಡು ಬರುತ್ತದೆ.

## ವೈಶಾಖ ॥ ಶುದ್ಧ ॥ ದಶಮೀ

ಶ್ರೀವೇಂಕಟೇಶಮಹಾತ್ಮೆ ಪುರಾಣ ಮಂಗಳ - ಪಾಡ್ಯದಿಂದ ದಶಮೀ ಪರ್ಯಂತರ ನಡೆಸಿದ ಶ್ರೀವೇಂಕಟೇಶಮಹಾತ್ಮೆಯ ಪುರಾಣದ ಮಂಗಳವನ್ನು ಈ ದಿನ ಮಾಡತಕ್ಕದ್ದು. ಮಂಗಳಮಹೋತ್ಸವದ ಪ್ರಾತಃ ವೇದವ್ಯಾಸಪೂಜಾ ಅಂಗವಾಗಿ ಪುರಾಣ ಹೇಳಿದ ಗ್ರಂಥಕ್ಕೆ ಪುಷ್ಪಾರ್ಚನೆ ಮಾಡಿ, ಮಂಗಳಾರತಿಯನ್ನು ನೆರವೇರಿಸಿ, ಪುರಾಣ ಹೇಳಿದವರಿಗೆ ಮೈ-ಕೈಗಳಿಗೆ ಗಂಧವನ್ನು ಲೇಪಿಸಿ, ಹಣೆಗೆ ಅಕ್ಷತೆಯನ್ನು ಹಚ್ಚಿ, ಹೂವಿನ ಹಾರವನ್ನು ಹಾಕಿ, ಪುರಾಣಿಕರಿಗೆ ಒಂದು ಜೊತೆ ಧೋತ್ರ, ಒಂದು ಸೀರೆಯೊಂಗೆ ಫಲತಾಂಬೂಲ, ಸಂಭಾವನೆಗಳನ್ನು ನೀಡುವುದು. ವೈಶಾಖಶುಕ್ಲದಶಮಿಯಂದು ಭಗವಂತ ಶ್ರೀನಿವಾಸನಿಗೆ ಪದ್ಮಾವತಿಯೊಂದಿಗೆ ಕಲ್ಯಾಣವು ನಡೆಯಿತು ಎಂದು ಪುರಾಣಗಳು ವರ್ಣಿಸಿವೆ. ತಿರುಮಲದಲ್ಲಿ ಕಲ್ಯಾಣೋತ್ಸವವು ಇಂದು ವಿಶಾಲ ಉದ್ಯಾನದಲ್ಲಿ ನಡೆಯುತ್ತದೆ. ಶ್ರೀನಿವಾಸಕಲ್ಯಾಣದ ಕಥೆಯ ಪಠಣ-ಶ್ರವಣಗಳು ಹೆಚ್ಚು ಶ್ರೇಯಸ್ಕರ. ನಿತ್ಯಪೂಜೆಯಲ್ಲಿ ಇಂದು ವೆಂಕಟೇಶಸ್ತೋತ್ರವನ್ನು ಪಠಿಸಿ ಅರ್ಚಿಸುವ ಪದ್ಧತಿಯಿದೆ.

ಶ್ರೀ ವಾದಿರಾಜ ಸ್ವಾಮಿಗಳಿಂದ ವಿರಚಿತವಾದ ಪದ್ಯರೂಪದ ಶ್ರೀ-ನಿವಾಸ ಕಲ್ಯಾಣ – ಸ್ತ್ರೀಯರೆಲ್ಲರು ಬನ್ನಿರೆ ಶ್ರೀನಿವಾಸನ ಪಾಡಿರೇ । ಜ್ಞಾನಗುರು-ಗಳಿಗೊಂದಿಸಿ ಮುಂದೆ ಕಥೆಯ ಪೇಳುವೆ ॥ಪ॥ ಗಂಗಾತೀರದಿ ಋಷಿಗಳು ।ಅಂದು ಯಾಗವ ಮಾಡ್ದರು । ಬಂದು ನಾರದ ನಿಂತುಕೊಂಡು । ಯಾರಿಗೆಂದು ಕೇಳಲು ॥ ಅರಿತು ಬರಬೇಕು ಎಂದು। ಆ ಮುನಿಯು ತೆರಳಿದ..ಭೃಗುಮುನಿಯು ತೆರಳಿದ ॥ ನಂದಗೋಪನ ಮಗನ ಕಂದನ। ಮಂದಿರಕಾಗೆ ಬಂದನು ॥ ವೇದಗಳನೆ ಓದುತಾ। ಶ್ರೀ ಹರಿಯನೂ ಕೊಂಡಾಡುತಾ । ಇರುವ ಬೊಮ್ಮನ ನೋಡಿದ । ಕೈಲಾಸಕ್ಕೆ

ಬಂದನು ॥ ಶಂಭುಕಂಠನು ಪಾರ್ವತೀಯೂ। ಕಲಿತಿರುವುದ ಕಂಡನು । ಸೃಷ್ಟಿಯೊಳಗೆ ನಿನ್ನ ಲಿಂಗ। ಶ್ರೇಷ್ಟವಾಗಲೆಂದನು ॥ ವೈಕುಂಠಕ್ಕೆ ಬಂದನು। ವಾರಿಜಾಕ್ಷನ ಕಂಡನು। ಕೆಟ್ಟ ಕೋಪದಿಂದ ಒದ್ದರೆ। ಎಷ್ಟು ನೊಂದಿತೆನ್ನದನು ॥ ತಟ್ಟನೆ ಬಿಸಿನೀರಿನಿಂದ। ನೆಟ್ಟಗೆ ಪಾದ ತೊಳೆದನು। ಬಂದ ಕಾರ್ಯ ಆಯಿತೆಂದು।ಅಂದು ಮುನಿಯು ತೆರಳಿದ ಬಂದು ನಿಂದು ಸಭೆಯೊಳಗೆ।ಇಂದಿರೇಶನ ಹೊಗಳಿದ । ಪತಿಯ ಕೂಡೆ ಕಲಹ ಮಾಡಿ।ಕೊಲ್ಹಾಪುರಕ್ಕೆ ಹೋದಳು ॥ ಸತಿಯು ಪೋಗೆ ಪತಿಯು ಹೊರಟು। ಗಿರಿಗೆ ಬಂದು ಸೇರಿದ । ಹುತ್ತದಲ್ಲೇ ಹತ್ತು ಸಾವಿರ ವರುಷ। ಗುಪ್ತವಾಗೆ ಇದ್ದನು ॥ ಬ್ರಹ್ಮ ಧೇನುವಾದನು। ರುದ್ರ ವತ್ಸನಾದನು । ಧೇನು ಮುಂದೆ ಮಾಡಿಕೊಂಡು। ಗೋಪಿ ಹಿಂದೆ ಬಂದಳು ॥ ಕೋಟಿ ಹೊನ್ನು ಬಾಳುವೋದು । ಕೊಡದ ಹಾಲು ಕರೆವುದು । ಪ್ರೀತಿಯಿಂದಲೇ ತನ್ನ ಮನೆಗೆ। ತಂದುಕೊಂಡನು ಚೋಳನು ॥ ಒಂದು ದಿವಸ ಕಂದಗ್ಹಾಲು। ಚೆಂದದಿಂದಲಿ ಕೊಡಲಿಲ್ಲ । ಅಂದು ರಾಯನ ಮಡದಿ ಕೋಪಿಸಿ। ಬಂದು ಗೋಪನ ಹೊಡೆದಳು ॥ ಧೇನು ಮುಂದೆ ಮಾಡಿಕೊಂಡು। ಗೋಪ ಹಿಂದೆ ನಡೆದನು । ಕಾಮಧೇನು ಕರೆದ ಹಾಲು। ಹರಿಯ ಶಿರ್ಕೆ ಬಿದ್ದಿತು ॥ ಇಷ್ಟು ಕಷ್ಟ ಬಂದಿತೆಂದು। ಪೆಟ್ಟು ಬಡಿಯೆ ಹೋದನು । ಕೃಷ್ಣ ತನ್ನ ಮನದಲ್ಯೋಚಿಸಿ। ಕೊಟ್ಟ ತನ್ನ ಶಿರವನ್ನು ॥ ಏಳು ತಾಳೆಮರದ ಉದ್ದ। ಏಕವಾಗಿ ಹರಿಯಿತು । ರಕ್ತವನ್ನು ನೋಡಿ ಗೋಪ। ಮತ್ತೆ ಸ್ವರ್ಗಕ್ಕೇರಿದ ॥ ಕಷ್ಟವನ್ನು ನೋಡಿ ಗೋವು ಅಷ್ಟು ಬಂದು ಹೇಳಿತು ತಟ್ಟನೆ ರಾಯ ಎದ್ದು ಗಿರಿಗೆ। ಬಂದು ಬೇಗ ಸೇರಿದ ॥ ಏನು ಕಷ್ಟ ಇಲ್ಲಿ ಹೀಗೆ। ಯಾವ ಪಾಪಿ ಮಾಡಿದ ಇಷ್ಟು ಕಷ್ಟ ಕೊಟ್ಟವಾಗೆ। ಭ್ರಷ್ಟಪಿಶಾಚಿಯಾಗೆಂದ ॥ ಪೆಟ್ಟು ವೇದನೆ ತಾಳಲಾರದೆ। ಬ್ರಹಸ್ಪತೀಯ ಕರೆಸಿದ । ಅರುಣ ಉದಯದಲ್ಲೆದ್ದು। ಔಷಧಕ್ಕೆ ಪೋದನು ॥ ಕ್ರೋಢರೂಪಿಯ ಕಂಡನು। ಕೂಡಿ ಮಾತನಾಡಿದನು । ಇರುವುದಕ್ಕೆ ಸ್ಥಳವು ಎನಗೆ। ಏರ್ಪಾಡಾಗಬೇಕೆಂದ ॥ ನೂರು ಪಾದ ಭೂಮಿ ಕೊಟ್ಟರೆ। ಮೊದಲು ಪೂಜೆ ನಿಮಗೆಂದ । ಪಾಕ ಪಕ್ವ ಮಾಡುವುದಕ್ಕೆ। ಆಕೆ ಬಕುಳೆ ಬಂದಳು ॥ ಭಾನುಕೋಟಿತೇಜನೀಗ। ಬೇಟೆಯಾಡ ಹೊರಟನು । ಮಂಡೆ ಬಾಚಿ ದೊಂಡೆ ಹಾಕಿ। ದುಂಡುಮಲ್ಲಿಗೆ ಮುಡಿದನು ॥ ಹಾರ ಪದಕ ಕೊರಳಲ್ಹಾಕಿ। ಫಣೆಗೆ ತಿಲಕವಿಟ್ಟನು । ಅಂಗುಲಿಗೆ ಉಂಗುರ। ರಂಗಶೃಂಗಾರವಾದವು ॥ ಪಟ್ಟೆನುಟ್ಟು ಕಚ್ಚೆ ಕಟ್ಟಿ। ಪೀತಾಂಬರವ ಹೊದ್ದನು । ಡಾಳು ಕತ್ತಿ ಉಡಿಯಲ್ ಸಿಕ್ಕಿ। ಜೋಡು ಕಾಲಲ್ಲಿ

ಮೆಟ್ಟಿದ ।। ಕರದಿ ವೀಳ್ಯವನ್ನೇ ಪಿಡಿದು। ಕನ್ನಡೀಯ ನೋಡಿದ । ಕನಕಭೂಷಣವಾದ ತೊಡಿಗೆ। ಕಮಲನಾಭ ತೊಟ್ಟನು ।। ಕನಕಭೂಷಣವಾದ ಕುದುರೆ । ಕಮಲನಾಭ ಏರಿದ । ಕರಿಯ ಹಿಂದೆ ಹರಿಯು ಬರಲು। ಕಾಂತೆರೆಲ್ಲ ಕಂಡರು ।। ಯಾರು ಇಲ್ಲಿ ಬರುವರೆಂದು। ದೂರ ಪೋಗಿರೆಂದರು ನಾರಿಯರಿರುವ ಸ್ಥಳಕ್ಕೆ। ಯಾವ ಪುರುಷ ಬರುವನು ।। ಎಷ್ಟು ಹೇಳೇ ಕೇಳ ಕೃಷ್ಣ। ಕುದುರೆ ಮುಂದೆ ಬಿಟ್ಟನು । ಕೇಶ ಬಿಚ್ಚಿ ವಾಸುದೇವ। ಶೇಷಗಿರಿಗೆ ಬಂದನು ।। ಪರಮಾನ್ನ ಮಾಡಿದ್ದೇನೆ। ಉಣ್ಣು ಬೇಗ ಎಂದಳು ಅಮ್ಮ ಎನಗೆ ಅನ್ನ ಬೇಡ। ಎನ್ನ ಮಗನೆ ವೈರಿಯೇ ।। ಕಣ್ಣಿಲ್ಲಾದ ದೈವ ಅವಳ। ನಿರ್ಮಾಣವ ಮಾಡಿದ । ಯಾವದೇಶ ಯಾವೋಳಾಕೆ। ಎನಗೆ ಪೇಳು ಎಂದಳು ।। ನಾರಾಯಣನ ಪುರಕೆ ಹೋಗಿ । ರಾಮಕೃಷ್ಣರ ಪೂಜಿಸಿ ಕುಂಜಮಣಿಯ ಕೊರಳಲ್ಹಾಕಿ। ಕೂಸಿನ್ ಕೊಂಕಳಲೆತ್ತಿದಾ ।। ಧರಣಿ ದೇವಿಗೆ ಕಣಿಯ ಹೇಳಿ। ಗಿರಿಗೆ ಬಂದು ಸೇರಿದ । ಕಾಂತೆರೆಲ್ಲ ಕೂಡಿಕೊಂಡು। ಆಗ ಬಕುಳೆ ಬಂದಳು ।। ಬನ್ನಿರಮ್ಮ ಸದನಕೆನುತ। ಬಹಳ ಮಾತನಾಡಿದರು ತಂದೆತಾಯಿ ಬಂಧುಬಳಗ।ಹೊನ್ನು ಹಣ ಉಂಟೆಂದರು ।। ಇಷ್ಟು ಪರಿಯಲ್ಲಿದ್ದವಗೆ। ಕನ್ನೆ ಯಾಕೆ ದೊರಕಲಿಲ್ಲ ದೊಡ್ಡವಳಿಗೆ ಮಕ್ಕಳಿಲ್ಲ। ಮತ್ತೆ ಮಾಡುವೆ ಮಾಡ್ವೆವು।। ಬೃಹಸ್ಪತೀಯ ಕರೆಸಿದ। ಲಗ್ನಪತ್ರಿಕೆ ಬರೆಸಿದ ಶುಕಾಚಾರ್ಯರ ಕರೆಸಿದ। ಮದುವೆ ಓಲೆ ಬರೆಸಿದ ।। ವಲ್ಲಭೇನ ಕರೆವುದಕ್ಕೆ। ಕೊಲ್ಹಾಪುರಕ್ಕೆ ಹೋದರು ಗರುಡನ್ ಹೆಗಲನೇರಿಕೊಂಡು। ಬೇಗ ಹೊರಟುಬಂದರು ।। ಅಷ್ಟವರ್ಗವನ್ನು ಮಾಡಿ। ಇಷ್ಟದೇವರ ಪೂಜಿಸಿ ಲಕ್ಷ್ಮೀಸಹಿತ ಆಕಾಶರಾಜನ। ಪಟ್ಟಣಕ್ಕೆ ಬಂದರು ।। ಕನಕಭೂಷಣವಾದ ತೊಡಿಗೆ। ಕಮಲನಾಭ ತೊಟ್ಟನು ಕಮಲನಾಭಾಗೆ ಕಾಂತಿಮಣಿಯ। ಕನ್ಯಾದಾನವ ಮಾಡಿದ ।। ಕಮಲನಾಭ ಕಾಂತೆ ಕೈಗೆ। ಕಂಕಣವನ್ನೇ ಕಟ್ಟಿದ ಶ್ರೀನಿವಾಸ ಪದ್ಮಾವತಿಗೆ। ಮಾಂಗಲ್ಯವನ್ನೇ ಕಟ್ಟಿದ ।। ಶ್ರೀನಿವಾಸನ ಮದುವೆ ನೋಡೇ। ಸ್ತ್ರೀಯರೆಲ್ಲರೂ ಬನ್ನಿರೆ ಪದ್ಮಾವತಿಯ ಮದುವೆ ನೋಡೇ। ಪದ್ಮಿನಿಯರು ಬನ್ನಿರೆ ।। ಶಂಕೆಯಿಲ್ಲದೆ ಹಣವ ಸುರಿದು। ವೆಂಕಟೇಶ ಸಲಹೆನ್ನ ಕೋಟಿ ತಪ್ಪು ಎನ್ನಲ್ಲುಂಟು। ಕುಸುಮನಾಭ ಸಲಹೆನ್ನ ।। ಶಂಕೆ ಇಲ್ಲದೆ ವರವ ಕೊಡುವ। ವೆಂಕಟೇಶ ಸಲಹೆನ್ನ ಭಕ್ತಿಯಿಂದಲಿ ಹೇಳ್ ಕೇಳ್ದವರಿಗೆ। ಮುಕ್ತಿ ಕೊಡುವ ಹಯವದನ ।। ಜಯ ಜಯ ಶ್ರೀನಿವಾಸನಿಗೆ । ಜಯ ಜಯ ಪದ್ಮಾವತಿಗೆ

ಒಲಿದಂತಹ ಶ್ರೀಹರಿಗೆ ನಿತ್ಯ ಶುಭಮಂಗಳ ॥ ಶೇಷಾದ್ರಿಗಿರಿವಾಸ ಶ್ರೀದೇವಿ ಅರಸಗೆ ಕಲ್ಯಾಣಮೂರುತಿಗೆ ನಿತ್ಯ ಜಯಮಂಗಳ ॥

**ಶ್ಯಾಮಸುಂದರದಾಸರ ಆರಾಧನೆ** – (ಮಾನವಿ ಗುಂಡಾಚಾರ್ಯರು) ಇವರು ವರಕವಿಗಳು. ಇವರ ಆಶುಕವಿತ್ವಪ್ರತಿಭೆ ಅಸಾಮಾನ್ಯವಾಗಿತ್ತು. 'ಹಲಗೆ ಬಳಪ ಹಿಡಿಯದೊಂದಗ್ಗಳಿಕೆ' ಇವರದಾಗಿತ್ತು. ಪ್ರಾಥಮಿಕ ಅಭ್ಯಾಸ ಮುಗಿಸಿ ಕೆಲದಿನ ಅಧ್ಯಾಪಕರಾಗಿದ್ದರು. ಅವರ ಮನಸ್ಸಿಗೆ ಏನು ಹೊಳೆಯಿತೋ ಅಧ್ಯಾಪಕ ವೃತ್ತಿಗೆ ರಾಜೀನಾಮೆ ಇತ್ತರು. ಪದಗಳನ್ನು ರಚಿಸಲು ಪ್ರಾರಂಭಿಸಿದರು. ಇವರಿಗೆ ಅನುಭವವೇ ಒಂದು ದೊಡ್ಡ ಶಾಲೆಯಾಗಿತ್ತು. ದಾಸಸಾಹಿತ್ಯದ ಮೇಲೆ, ಪ್ರಮೇಯ ಭಾಗಗಳ ಬಗ್ಗೆ ಅಗಾಧಪಾಂಡಿತ್ಯವಿತ್ತು. ಜನರು ಇವರಿಗೆ ಜೀವಂತ ಅರ್ಥಕೋಶ ಎನ್ನುತ್ತಿದ್ದರು. ಯಾರು ಏನೇ, ಎಷ್ಟೇ ಕಠಿಣವಾದ ಶಬ್ದಗಳನ್ನಾಗಲೀ ಪ್ರಮೇಯಭಾಗ-ವನ್ನಾಗಲೀ ಕೇಳಿದರೆ ತತ್ಕ್ಷಣ ಉತ್ತರಿಸುತ್ತಿದ್ದರು. ಮಾನ್ವಿಗೆ ಬಿ.ಎಂ.ಶ್ರೀಯವರು ಬಂದಾಗ ಶ್ರೀಗುಂಡಾಚಾರ್ಯರ ಕಾವ್ಯಪ್ರತಿಭೆಯನ್ನು ಕೊಂಡಾಡಿದರು. ಇವರು ''ಶ್ಯಾಮಸುಂದರ'' ಎಂಬ ಅಂಕಿತದಿಂದ ನೂರಾರು ಪದಪದ್ಯಗಳನ್ನು ರಚಿಸಿದ್ದಾರೆ. ಅವು ಇನ್ನೂ ಅಚ್ಚಾಗದೇ ಹಾಗೆಯೇ ಜನರ ಬಾಯಲ್ಲಿ ಉಳಿದಿವೆ. ಇವರು ಸತ್ಯ-ನಾರಾಯಣಕಥೆಯನ್ನು ಕನ್ನಡದಲ್ಲಿ ಸರಳವಾಗಿ ಬರೆದಿದ್ದಾರೆ. ಹುಟ್ಟಿದ ಊರು ಬಲ್ಲಟಗಿ. ಹೆಚ್ಚುಕಾಲ ಮಾನ್ವಿಯಲ್ಲಿಯೇ ಇದ್ದರು.

**ಶ್ರೀ ಹಯಗ್ರೀವತೀರ್ಥರು** (ಮಾಧವತೀರ್ಥ ಮಠ) ವೈಶಾಖ ಶುದ್ಧ ದಶಮೀ ಪೂರ್ಣಪ್ರಜ್ಞಪದದ್ವಂದ್ವಂ ಪೂರ್ಣೇಂದುಮಕಳಂಕಿವಮ್ । ವಂಶರಾಮ ಪದಾಸಕ್ತಂ ಹಯಗ್ರೀವ ಗುರುಂ ಭಜೇ ॥

## ವೈಶಾಖ ॥ ಶುದ್ಧ ॥ ಏಕಾದಶೀ

**ಮೋಹಿನಿ ಏಕಾದಶಿ ಮಹಾತ್ಮೆ..** ವೈಶಾಖ ಮಾಸ ಶುಕ್ಲ ಪಕ್ಷ ಏಕಾದಶಿ, ಅದನ್ನು ಮೋಹಿನಿ ಏಕಾದಶಿ ಎಂದು ಕರೆಯಲಾಗಿದೆ. ಈ ದಿನವು ಮಹಾವಿಷ್ಣುವಿನ ಆರಾಧನೆಗೆ ಅತ್ಯಂತ ಪವಿತ್ರ ದಿನವಾಗಿದೆ. ಮೋಹಿನಿ ಏಕಾದಶಿ ವ್ರತಾಚರಣೆಯು ಶುಭತರುವುದು.

ವೈದೇಹಿಸಹಿತಂ ಸುರದ್ರುಮತಲೇ ಹೈಮೇ ಮಹಾಮಂಡಲೇ ಮಧ್ಯೇ ಪುಷ್ಪಕಮಾಸನೇ ಮಣಿಮಯೇ ವೀರಾಸನೇ ಸುಸ್ಥಿತಮ್ । ಅಗ್ರೇ ವಾಚಯತಿ ಪ್ರಭಂಜನಸುತೇ ತತ್ವಂ ಮುನಿಭ್ಯಃ ಪರಮ್ ವ್ಯಾಖ್ಯಾತಂ ಭರತಾದಿಭಿಃ ಪರಿವೃತಂ ರಾಮಂ ಭಜೇ ಶ್ಯಾಮಲಮ್ ॥ ವೈಶಾಖ ಶುಕ್ಲ ಏಕಾದಶಿಗೆ ಮೋಹಿನಿ ಏಕಾದಶಿ ಎಂಬ ಹೆಸರಿದೆ. ಇಂದು ಶ್ರೀರಾಮನಿಗೆ ಪೂಜೆ ಸಲ್ಲಿಸಿ ಏಕಾದಶಿ ವ್ರತ ಆಚರಿಸಬೇಕು. ಈ ವ್ರತ ಕುರಿತು ಕೂರ್ಮ ಪುರಾಣ ಮತ್ತು ಸೂರ್ಯ ಪುರಾಣದಲ್ಲಿ ಉಲ್ಲೇಖವಿದೆ. ಮೋಹಿನಿ ಏಕಾದಶಿಯ ಮಹಾತ್ಮೆಯನ್ನು ವಶಿಷ್ಠ ಋಷಿಗಳು ಶ್ರೀರಾಮಚಂದ್ರನಿಗೆ ದೃಷ್ಟಾಂತ ಸಹಿತ ಹೇಳಿದ್ದಾರೆ. ಸರಸ್ವತಿ ನದಿ ದಂಡೆಯ ಮೇಲಿರುವ ಸುಂದರ ನಗರ ಭದ್ರಾವತಿ. ಅದನ್ನು ಚಂದ್ರವಂಶದ ದ್ಯುತಿಮಾನ್ ಎಂಬ ರಾಜ ಆಳುತ್ತಿದ್ದ. ಆತ ಧರ್ಮಾತ್ಮನಾಗಿದ್ದ. ಆತನ ಆಳ್ವಿಕೆಯಲ್ಲಿ ಪ್ರಜೆಗಳೆಲ್ಲರೂ ಸುಖದಿಂದಿದ್ದರು. ಅದೇ ನಗರದಲ್ಲಿ ಧನಪಾಲನೆಂಬ ವ್ಯಾಪಾರಿಯೂ ಇದ್ದ. ಅವನೂ ಕೂಡ ಧರ್ಮಿಷ್ಠನೆನಿಸಿದ್ದ. ನಗರದಲ್ಲಿ ಜನರ ಅನುಕೂಲಕ್ಕಾಗಿ ಸುಂದರವಾದ ಕೊಳಗಳನ್ನು ನಿರ್ಮಿಸಿದ್ದ. ಧಾರ್ಮಿಕ ಕಾರ್ಯಕ್ಕಾಗಿ ಅನೇಕ ಧಾಮಗಳನ್ನೂ, ಉದ್ಯಾನವನಗಳನ್ನು ನಿರ್ಮಾಣ ಮಾಡಿದ್ದ. ಆತ ವಿಷ್ಣುವಿನ ಭಕ್ತನಾಗಿದ್ದ. ಅವನಿಗೆ ಸುಮನಾ, ಸದ್ಬುದ್ಧಿ, ಮೇಧಾವಿ, ಸುಕೃತಿ, ದುಷ್ಟಬುದ್ಧಿ ಎಂಬ ಐವರು ಪುತ್ರರಿದ್ದರು. ಹೆಸರೇ ಹೇಳುವಂತೆ ಅವರಲ್ಲಿ ನಾಲ್ವರು ತಂದೆಯಂತೆ ಸದ್ಗುಣಿಗಳಾಗಿದ್ದರು. ಆದರೆ ದುಷ್ಟಬುದ್ಧಿ ಮಾತ್ರ ಸದಾಕಾಲ ಪಾಪಕಾರ್ಯದಲ್ಲಿ ತೊಡಗಿರುತ್ತಿದ್ದ. ಜೂಜಾಡುವುದು, ದೇವ-ಬ್ರಾಹ್ಮಣ, ಗುರು-ಹಿರಿಯರಿಗೆ ಗೌರವ ಕೊಡದಿರುವುದು, ತಂದೆ ಗಳಿಸಿದ ಹಣವನ್ನು ದುರಾಚಾರಕ್ಕೆ ಬಳಸುವುದು, ತಿನ್ನಬಾರದ್ದನ್ನು ತಿನ್ನುತ್ತಾ, ಮಾಡಬಾರದ್ದನ್ನು ಮಾಡುತ್ತಾ ಇದ್ದ. ಒಂದು ದಿನ ಧನಪಾಲನು ತನ್ನ ಮಗ ದುಷ್ಟಬುದ್ಧಿಯು ಓರ್ವ ವೇಶ್ಯೆಯೊಂದಿಗೆ ಹೋಗುವುದನ್ನು ನೋಡಿದ. ಆತ ಮಗನಿಗೆ ಏನನ್ನೂ ಹೇಳಲಿಲ್ಲ. ಬಂಧುಗಳೆಲ್ಲ ದೂರ ಸರಿದರು. ದುಷ್ಟಬುದ್ಧಿಗೆ ಬುದ್ಧಿ ಬರಲಿಲ್ಲ. ತಂದೆಯಿಂದ ಬಂದ ಆಭರಣಗಳು, ಆಸ್ತಿಯನ್ನೆಲ್ಲ ಕಳೆದುಕೊಂಡ. ಬಡತನಕ್ಕೆ ಗುರಿಯಾದ. ಆತನೊಂದಿಗೆ ಇದ್ದ ವೇಶ್ಯೆ ಕೂಡ ಆತನ ಬಡತನ ನೋಡಿ ಅವಮಾನಿಸಿದಳು. ಆಗ ದುಷ್ಟಬುದ್ಧಿಗೆ ಸಿಟ್ಟು ಬಂತು. ಬಡತನ ನೀಗಿಸಲು ಕಳ್ಳತನಕ್ಕಿಳಿದ, ರಾಜಭಟರು ಇವನನ್ನು ಹಿಡಿದು ಥಳಿಸುತ್ತಿದ್ದರು. ನಂತರ ವರ್ತಕ ಧನಪಾಲನ ಮಗನೆಂದು

ಬಿಟ್ಟುಬಿಡುತ್ತಿದ್ದರು. ಹೀಗೇ ಹಲವಾರು ಬಾರಿ ನಡೆಯಿತು. ಇವನ ಉಪಟಳ ಅತಿಯಾಯಿತು. ಆಗ ರಾಜಭಟರು ಅವನಿಗೆ ನಗರದಲ್ಲಿ ಸ್ಥಾನವಿಲ್ಲ ಎಂದು ಹೊರಹಾಕಿದರು. ಅಡವಿಗೆ ತೆರಳಿದ. ಹಸಿವು ನೀರಡಿಕೆಯಿಂದ ಬಳಲಿ ಬೆಂಡಾದಾಗ ಕಾಡುಪ್ರಾಣಿ, ಪಕ್ಷಿಗಳನ್ನು ಕೊಂದು ತಿಂದ. ಸಾಕಷ್ಟು ಪಾಪಕಾರ್ಯ ಮಾಡಿದ. ಯಾವಾಗಲೂ ದು:ಖಿತನಾಗಿ ಜೀವಿಸುತ್ತಿದ್ದ. ಹಿಂದಿನ ಜನ್ಮದ ಪುಣ್ಯದ ಫಲವೇನೋ ಅಲೆದಾಡುತ್ತಾ ಕೌಂಡಿನ್ಯ ಋಷಿಯ ಆಶ್ರಮಕ್ಕೆ ಬಂದ. ಋಷಿಗಳು ಆಗತಾನೆ ಗಂಗೆಯಲ್ಲಿ ಮಿಂದು ಬಂದಿದ್ದರು. ಅವರ ಬಟ್ಟೆಯಲ್ಲಿನ ಒಂದೆರಡು ಹನಿ ಗಂಗೆಯ ನೀರು ಇವನ ಮೇಲೆ ಬಿತ್ತು. ಆಗಲೇ ಅವನ ಅರ್ಧ ಪಾಪ ನಾಶವಾಯಿತು. ಕೆಟ್ಟಬುದ್ಧಿ ಮಾಯವಾಯಿತು. ಋಷಿಗಳಿಗೆ ಕೈಮುಗಿದು ನಾನು ಜೀವನದಲ್ಲಿ ಸಾಕಷ್ಟು ಪಾಪ ಮಾಡಿದ್ದೇನೆ. ಇದರಿಂದ ಮುಕ್ತಿ ಹೇಗೆ ತಿಳಿಸಿ ಎಂದು ಬೇಡಿಕೊಂಡ. ಅದಕ್ಕೆ ಕೌಂಡಿನ್ಯರು ಮೋಹಿನಿ ಏಕಾದಶಿ ಆಚರಿಸು ಬೆಟ್ಟದಂತಹ ಪಾಪ ನಾಶವಾಗಿ ಶ್ರೀಹರಿಯ ಪ್ರೀತಿಗೆ ಪಾತ್ರನಾಗುವಿ ಎಂದರು. ಅದರಂತೆ ದುಷ್ಟಬುದ್ಧಿ ವ್ರತಾಚರಣೆ ಮಾಡಿ ದೇವರ ಕೃಪೆಗೆ ಪಾತ್ರನಾಗಿ ಸುಂದರ ರೂಪ ತಾಳಿ ದೇವಲೋಕಕ್ಕೆ ತೆರಳಿದ. ತ್ರೇತಾಯುಗದಲ್ಲಿ ಶ್ರೀರಾಮ ಸೀತೆಯ ಹುಡುಕಾಟ-ದಲ್ಲಿದ್ದಾಗ ವಶಿಷ್ಠ ಮುನಿಗಳು ಹೇಳಿದಂತೆ ಲೋಕಕಲ್ಯಾಣಕ್ಕಾಗಿ ಹಾಗೂ ಲೋಕಶಿಕ್ಷಣಕ್ಕಾಗಿ ಸ್ವತಃ ಆಚರಿಸಿದ. ದ್ವಾಪರಯುಗದಲ್ಲಿ ಶ್ರೀಕೃಷ್ಣ ಹೇಳಿದ್ದಕ್ಕೆ ಜೇಷ್ಠ ಪಾಂಡವ ಯುಧಿಷ್ಠಿರನೂ ಸಹ ಆಚರಿಸಿರುವನು. ಎಲ್ಲ ಏಕಾದಶಿಯಂತೆಯೇ ವ್ರತ ಆಚರಣೆ ಕ್ರಮವಿದೆ. ಶ್ರೀರಾಮದೇವರ ಪ್ರತಿಮಾ ಪೂಜೆಯನ್ನು ಅತ್ಯಂತ ಭಕ್ತಿ-ಶ್ರದ್ಧೆಯಿಂದ ಮಾಡಬೇಕು. ವಿಷ್ಣು ಸಹಸ್ರನಾಮ, ಶ್ರೀರಾಮರಕ್ಷಾ ಸ್ತೋತ್ರ ಮುಂತಾದ ಸ್ತೋತ್ರ-ಮಂತ್ರಗಳ ಪಾರಾಯಣ ಮಾಡಬೇಕು. ದೇವರಿಗೆ ಹಣ್ಣುಗಳನ್ನು ಸಮರ್ಪಿಸಬೇಕು. ದೇವರ ಧ್ಯಾನ, ಭಜನೆ, ಗೀತ-ನೃತ್ಯಗಳಿಂದ ಅರ್ಚಿಸಬೇಕು.. ಈ ವ್ರತ ಆಚರಣೆಯಿಂದ ಜನ್ಮಾಂತರದ ಪಾಪನಾಶವಾಗುತ್ತದೆ. ಅನೇಕ ಸಂಕಷ್ಟಕ್ಕೆ ಪರಿಹಾರ ದೊರೆಯುತ್ತದೆ. ಶ್ರೀಹರಿಯ ಕೃಪೆಯಿಂದ ಎಲ್ಲ ತಾಪತ್ರಯಗಳಿಂದ ಮುಕ್ತಿ ದೊರೆಯುತ್ತದೆ. ಕೇವಲ ಕಥೆ ಕೇಳಿದರೂ, ಓದಿದರೂ ಸಹ ಒಂದು ಸಾವಿರ ಗೋದಾನ ಮಾಡಿದ ಫಲ ಪ್ರಾಪ್ತಿಯಾಗುತ್ತದೆ. ವಿಷ್ಣು ದೇವರ ಆಶೀರ್ವಾದವನ್ನು ಪಡೆಯಲು, ಮೋಹಿನಿ ಏಕಾದಶಿಯನ್ನು ಆಚರಿಸಲಾಗುತ್ತದೆ. ಈ

ದಿನ ವಿಷ್ಣು ದೇವರು ಮೋಹಿನಿಯ ಅವತಾರ ತಾಳಿದರೆಂಬ ಪ್ರತೀತಿಯಿದೆ. ರಾಮ ದೇವರಿಗೂ ಈ ಹಬ್ಬಕ್ಕೂ ಇರುವ ಕಥೆ ಇಂತಿದೆ. ರಾವಣ ಸೀತೆಯನ್ನು ಅಪಹರಿಸಿದ ನಂತರ ರಾಮನು ಪರಿತ್ಯಕ್ತ ಭಾವದಲ್ಲಿದ್ದನು. ಇದನ್ನು ಗಮನಿಸಿದ ವಶಿಷ್ಟ ಮುನಿಗಳು ಮೋಹಿನಿ ಏಕಾದಶಿಯನ್ನು ಆಚರಿಸುವ ಮೂಲಕ ಜೀವನದಲ್ಲಿನ ಎಲ್ಲ ದುಃಖಗಳಿಗೂ ಕೊನೆ ಹಾಡಬಹುದು ಎಂದು ತಿಳಿಹೇಳಿ ಈ ಹಬ್ಬದ ದಂತಕಥೆಯನ್ನು ವಿವರಿಸಿದರು.

**ದೇವಗುರುಬೃಹಸ್ಪತ್ಯಾಚಾರ್ಯರ ಜಯಂತಿ –** ಬೃಹಸ್ಪತ್ಯಾಚಾರ್ಯರು ಹತ್ತನೆಯ ಕಕ್ಷೆಯಲ್ಲಿ ಇರುತ್ತಾರೆ. ಅಹಂಕಾರಿಕ ಪ್ರಾಣದೇವರಿಗಿಂತ ಕಡಿಮೆ. ಪ್ರವಹವಾಯುವಿಗಿಂತ ಮೇಲಿನ ಕಕ್ಷ್ಯೆಯಲ್ಲಿ ಇದ್ದಾರೆ. ಇಂದ್ರಪತ್ನಿ ಶಚಿ, ಕಾಮ ಪತ್ನಿ ರತಿ, ಕಾಮ ಪುತ್ರ ಅನಿರುದ್ಧ, ದೇವಗುರು ಬೃಹಸ್ಪತಿ, ಸ್ವಾಯಂಭುವಮನು ಮತ್ತು ದಕ್ಷಪ್ರಜಾಪತಿ. 16 ಕಲ್ಪಗಳು ಬೃಹಸ್ಪತ್ಯಾಚಾರ್ಯರ ಸಾಧನೆ. ಇಂದ್ರದೇವರಿಗಿಂತಲೂ ಕಡಿಮೆ. ಆದರೂ 23 ದೇಹಲಕ್ಷಣಗಳಿವೆ. ರಾಮಾವತಾರದಲ್ಲಿ ತಾರಾ ಎಂಬ ಕಪಿ. ಕೃಷ್ಣಾವತಾರದಲ್ಲಿ ವಾಯುದೇವರ ಆವೇಶವನ್ನು ಹೊತ್ತ ಉದ್ಧವ, ಹಾಗು ಚತುರ್ಮುಖಬ್ರಹ್ಮನ ಆವೇಶವುಳ್ಳ ದ್ರೋಣಾಚಾರ್ಯ. ಉಪಗಮನ ಎಂಬ ಯಾದವನ ಮಗನೇ ಉದ್ಧವ. ಭರದ್ವಾಜನಿಂದ ಘೃತಾಚಿಯಲ್ಲಿ ಹುಟ್ಟಿದವರೇ ದ್ರೋಣಾಚಾರ್ಯರು. ಕೃಷ್ಣಾವತಾರದಲ್ಲಿ ಒಟ್ಟಿಗೆ 2 ಅವತಾರಗಳನ್ನು ಮಾಡಿದ ಮಹಾನ್ ವ್ಯಕ್ತಿಗಳು. ನವಗ್ರಹದೇವತೆಗಳಲ್ಲಿ ಬೃಹಸ್ಪತ್ಯಾಚಾರ್ಯರೇ ಶ್ರೇಷ್ಠರಾಗಿದ್ದಾರೆ. ಉಳಿದ ಎಲ್ಲ ಗ್ರಹದೇವತೆಗಳಿಗೂ ನಿಯಾಮಕರಾಗಿದ್ದಾರೆ, ಹಾಗು ಗುರುಗಳಾಗಿದ್ದಾರೆ. ಅಷ್ಟೇ ಅಲ್ಲದೇ ಸಮಸ್ತ ದೇವತೆಗಳಿಗೂ ಗುರುಸ್ಥಾನದಲ್ಲಿದ್ದಾರೆ. ಎಲ್ಲ ದೇವತೆಗಳಿಗೂ ಉತ್ತಮ ಮಾರ್ಗದರ್ಶನವನ್ನು ನೀಡಿ ಭವಿಷ್ಯವನ್ನು ಸರಿಯಾಗಿ ತಿಳಿದು ಜ್ಯೋತಿಷಶಾಸ್ತ್ರದ ಮೂಲಕ ತಮ್ಮ ಗುರುಪದವಿಯ ಮಹತ್ವವನ್ನು ಸಾರಿದ್ದಾರೆ. ಚತುರ್ಮುಖಬ್ರಹ್ಮದೇವರ ಮಗ ಆಂಗೀರಸರು. ಆಂಗೀರಸರ ಮಗ ಬೃಹಸ್ಪತ್ಯಾಚಾರ್ಯರು. ಬೃಹಸ್ಪತ್ಯಾಚಾರ್ಯರು ದೇವತೆಗಳ ರಕ್ಷಣೆಗೋಸ್ಕರ ಮಂತ್ರಸಿದ್ಧಿ, ಜ್ಞಾನಸಿದ್ಧಿಗಳನ್ನು ಪಡೆದುಕೊಂಡರು. ಇದರಿಂದ ಸುಪ್ರೀತರಾದ ರುದ್ರದೇವರು ಬೃಹಸ್ಪತ್ಯಾಚಾರ್ಯರನ್ನು ದೇವಗುರುಪದವಿಯನ್ನು ನೀಡಿದರು.

ಇವರ ಮಾರ್ಗದರ್ಶನದಿಂದಲೇ ದೇವಾಸುರರ ಯುದ್ಧದಲ್ಲಿ ದೇವೇಂದ್ರನಿಗೆ ಜಯವು ಉಂಟಾಗುತ್ತದೆ. ಬೃಹಸ್ಪತ್ಯಾಚಾರ್ಯರು ತಮಗಿಂತ ಅಧಮರಾದ ದೇವತೆಗಳಿಗಷ್ಟೇ ಗುರುಗಳಾಗಿದ್ದಾರೆ. ಇಂದ್ರದೇವರಿಗೆ ಗುರುಗಳಾಗಿರುವುದಿಲ್ಲ. ಇಂದ್ರದೇವರೇ ಬೃಹಸ್ಪತ್ಯಾಚಾರ್ಯರಿಗೆ ಗುರುಗಳಾಗಿರುತ್ತಾರೆ. ಆದರೆ ಸುರಗುರು ಎಂಬ ಪದವಿ ಇರುವುದರಿಂದ ಬೃಹಸ್ಪತ್ಯಾಚಾರ್ಯರ ಸ್ಥಾನಮಾನಕ್ಕೆ ಅನುಗುಣವಾಗಿ ಇಂದ್ರದೇವರು ನಡೆದುಕೊಳ್ಳುತ್ತಾರೆ. ಆದರೂ ಕೂಡ ಸುರಗುರುಗಳಾದ ಬೃಹಸ್ಪತ್ಯಾಚಾರ್ಯರನ್ನು ಅವಮಾನ ಮಾಡಲು ಇಂದ್ರದೇವರಿಗೆ ಸಾಧ್ಯವಿಲ್ಲ. ಒಮ್ಮೆ ಹಾಗೇ ಅವಮಾನ ಪಡಿಸಿ, ಅವರ ಕೋಪಕ್ಕೆ ಪಾತ್ರರಾಗಿ ಸರ್ವನಾಶವನ್ನೂ ಕೂಡ ಹೊಂದಿ, ಪುನಃ ಬೃಹಸ್ಪತ್ಯಾಚಾರ್ಯರನ್ನು ಸುಪ್ರೀತನನ್ನಾಗಿಸಿ, ತನ್ನೆಲ್ಲ ಸಂಪತ್ತುಗಳನ್ನು ಪಡೆದುಕೊಂಡರು ಎಂಬ ಕಥೆಯನ್ನು ಪುರಾಣವು ಹೇಳುತ್ತದೆ. ಸಕಲ ದೇವತೆಗಳು ಅನುಷ್ಠಾನ ಮಾಡುವ ಸದಾಚಾರ ಸದ್ಭಕ್ತಿ ಮೊದಲಾದವುಗಳಿಗೆ ಮಾರ್ಗದರ್ಶಕರಾಗಿದ್ದಾರೆ. ಹಾಗು ತತ್ತ್ವಜ್ಞಾನವನ್ನು ಉಪದೇಶಿಸುತ್ತಾರೆ. ಪ್ರತಿಯೊಂದು ಆಪತ್ತುಗಳಲ್ಲಿಯೂ ಕೂಡ ಉತ್ತಮ ಮಾರ್ಗದರ್ಶನವನ್ನು ನೀಡಿ ಆಪತ್ತುಗಳನ್ನು ಪರಿಹಾರ ಮಾಡುತ್ತಾರೆ. 'ತಾರೆ' ಇವರ ಪತ್ನಿ. ಇವಳಿಗೆ 'ಸುಧೆ' ಮತ್ತು 'ಚಾಂದ್ರಮಸಿ' ಎಂಬ ಹೆಸರುಗಳೂ ಕೂಡ ಇವೆ. ತಾರೆಯಲ್ಲಿ ಬೃಹಸ್ಪತ್ಯಾಚಾರ್ಯರಿಂದ 6 ಮಂದಿ ಪುತ್ರರು ಹುಟ್ಟುತ್ತಾರೆ - ಶಂಯ್ಯು , ನಿಶ್ಚ್ಯವನ, ವಿಶ್ವಜಿತ್, ವಿಶ್ವಭುಕ್, ವಡವಾಗ್ನಿ, ಸ್ವಿಷ್ಟಕೃತ್ ಎಂದು. ಸ್ವಾಹಾ ಎಂಬುವಳು ಏಳನೆಯ ಮಗಳು. ಕಚ ಎಂಟನೆಯ ಮಗ. ಆರುಮಂದಿ ಪುತ್ರರೇ ಅಗ್ನಿಗಳು. ಜೀವನದಲ್ಲಿ ಔನ್ನತ್ಯವನ್ನು ಸಾಧಿಸಲು ಪ್ರತಿಯೊಬ್ಬರೂ ಕೂಡ ಗುರುಗ್ರಹವನ್ನು ಉಪಾಸನೆ ಮಾಡಲೇ ಬೇಕು. ಆಗ ಆರಾಧನೆ ಮಾಡಬೇಕು. ಆಗಷ್ಟೇ ಅವನು ವಿದ್ಯಾವಂತನೂ, ನ್ಯಾಯವಂತನೂ, ಪುತ್ರವಂತನೂ, ಸಿದ್ಧಿವಂತನೂ ಆಗುತ್ತಾನೆ. ಯಾರು ಗುರುವಿನ ಅನುಗ್ರಹವನ್ನು ಪಡೆದಿರುತ್ತಾನೋ, ಅವನು ವೇದವಿದ್ಯಾವಂತನಾಗುತ್ತಾನೆ. ಅನೇಕ ಮಂತ್ರಗಳ ಸಿದ್ಧಿಯನ್ನು ಪಡೆದುಕೊಳ್ಳುತ್ತಾನೆ. ಮಾನವೀಯ ಮೌಲ್ಯವನ್ನು ಅಳವಡಿಸಿಕೊಳ್ಳುತ್ತಾನೆ. ವೇದಾಂತವಿದ್ಯೆಯನ್ನು ಹೊಂದುತ್ತಾನೆ. ಮಾಂಗಲ್ಯವಂತನಾಗುತ್ತಾನೆ. ಆನೆ, ಕುದುರೆ, ಹಸು ಮೊದಲಾದ ಪಶುಸಂಪತ್ತನ್ನು ಪಡೆದುಕೊಳ್ಳುತ್ತಾನೆ. ಪೌರೋಹಿತ್ಯ, ಪಾಠಪ್ರವಚನ, ಉಪದೇಶ

ಇವುಗಳಲ್ಲಿ ಆಸಕ್ತಿಯಿರುತ್ತದೆ. ಕಾರುಣ್ಯ, ಸತ್ಯ, ಶುಚಿತ್ವ, ವ್ರತನಿಯಮ, ದಾನ-ಧಮಗಳು, ವಿದ್ಯಾದಾನಗಳು ಔದಾರ್ಯ, ಉತ್ತಮವಿದ್ಯೆ ಇವುಗಳನ್ನು ಪಾಲಿಸುತ್ತಾನೆ. ಜ್ಞಾನ-ಭಕ್ತಿ, ವಾಕ್‌ಶಕ್ತಿ, ವೈರಾಗ್ಯ ಇವುಗಳಲ್ಲಿ ಅತ್ಯಾಸಕ್ತನಾಗಿರುತ್ತಾನೆ. ಹಾಗು ತೀರ್ಥಯಾತ್ರೆ- ಯಲ್ಲಿಯೂ ಕೂಡ ಇವನಿಗೆ ಆಸಕ್ತಿಯಿರುತ್ತದೆ. 19000 ಗುರುಮಂತ್ರವನ್ನು ಜಪಿಸಬೇಕು. ಗುರುಪೂಜೆಯನ್ನು ಮಾಡಬೇಕು. ಗುರುಶಾಂತಿ ಮಾಡಬೇಕು. ಕಡಲೆಯನ್ನು ದಾನ ಮಾಡಬೇಕು. ಅಥವಾ ಕಡಲೆ ಬೇಳೆ ದಾನ ಮಾಡಬೇಕು. ಕಡಲೆಯನ್ನು ನೆನೆಸಿ ಹಸುಗಳಿಗೆ ತಿನಿಸಬೇಕು. ಪುಷ್ಯರಾಗ ಧಾರಣೆ ಮಾಡಬೇಕು. ಶ್ರೀಸೂಕ್ತ, ಪುರುಷಸೂಕ್ತಗಳ ಪಾರಾಯಣ ಮಾಡಬೇಕು. ಭಾಗವತ ಪಾರಾಯಣ, ಸರ್ವಮೂಲ ಪಾರಾಯಣ ಇವುಗಳನ್ನು ಮಾಡಿದಾಗ ಗುರುವಿನ ಪೂರ್ಣಾನುಗ್ರಹವಾಗುತ್ತದೆ. ಹಾಗು 9 ಗುರುವಾರಗಳಲ್ಲಿ ಗುರುಮಂತ್ರವನ್ನು ಜಪಿಸುತ್ತಾ ಕಲಶದಲ್ಲಿ ಗುರುವನ್ನು ಅಭಿಮಂತ್ರಣೆ ಮಾಡಿ, ಕಡಲೆ ಬೇಳೆ ಮೊದಲಾದವುಗಳನ್ನು ದಾನ ಮಾಡಬೇಕು. ಕರ್ಣರೋಗ, ಸಂತಾನಹಾನಿ, ಮಧುಮೇಹ, ಗುಲ್ಮರೋಗ, ಕಫರೋಗ, ಮೇಹರೋಗ, ದೇಹಸ್ವಪಾಹಾರ, ಬ್ರಹ್ಮಶಾಪ, ಗುರುಶಾಪ ಬಗೆಬಗೆಯ ಅನಿಷ್ಟಗಳು ಸಂತಾನ ಇಲ್ಲದಿರುವಿಕೆ. ಪತ್ನಿಯಿಂದ ವಿಯೋಗ. ಮನೆಯಲ್ಲಿ ಜಗಳ ಇವೆಲ್ಲವೂ ಕೂಡ ಉಂಟಾಗುತ್ತವೆ.

ಪೂಜೆಯನ್ನು ಈ ಮಂತ್ರಗಳಿಂದ ಮಾಡಬೇಕು. ''ಬೃಹಸ್ಪತಯೇ ನಮಃ, ಸುರಾಚಾರ್ಯಾಯ ನಮಃ, ಜೀವಾಯ ನಮಃ, ಆಂಗೀರಸಾಯ ನಮಃ, ಗುರವೇ ನಮಃ, ಗೀಷ್ಪತಯೇ ನಮಃ, ಧಿಷಣಾಯ ನಮಃ, ಚಿತ್ರ-ಶಿಖಂಡಿನೇ ನಮಃ, ಪೀತವಸ್ತ್ರಧೃತೇ ನಮಃ, ತೇಜೋಮೂರ್ತಯೇ ನಮಃ, ಮಹಾಮೂರ್ತಯೇ ನಮಃ, ಕಮಲಾಸನಸಂಸ್ತುತಾಯ ನಮಃ,

''ಸೌಮ್ಯೇ ಸುದೀರ್ಘೇ ಚತುರಸ್ರಪೀಠೇ ರಥೇಽಂಗಿರಾಃ ಪೂರ್ವಮುಖ-ಸ್ವಭಾವಃ । ದಂಡಾಕ್ಷಮಾಲಾಜಲಪಾತ್ರಧಾರೀ ಸಿಂಧ್ವಾಖ್ಯದೇಶೇ ವರದಃ ಸ ಜೀವಃ ॥ ಸ್ವರ್ಣಾಂಬರಃ ಸ್ವರ್ಣವಪುಃ ಕಿರೀಟೀ ಚತುರ್ಭುಜೋ ದೇವಗುರುಃ ಪ್ರಶಾಂತಃ । ಧತ್ತೇಽಸಿದಂಡಂ ಚ ಕಮಂಡಲುಂ ಚ ತಥಾಕ್ಷಸೂತ್ರೋ ವರದೋಽಸ್ತು

ಮಹ್ಯಮ್ ॥ ಯೋ ಮೃತ್ಯುಂ ನಿಜದಾಸಾನಾಂ ಮಾರಯತ್ಯಖಿಲೇಷ್ಟದಃ । ತತ್ರೋದಾಹೃತಯೋ ಬಹ್ವ್ಯಃ ಮೃತ್ಯುಮೃತ್ಯುಂ ನಮಾಮ್ಯಹಮ್ ॥

ಉಪಾಸ್ಯ - ಶ್ರೀವಾಮನ, ರತ್ನ - ಪುಷ್ಯರಾಗ, ಕಕ್ಷ್ಯೆ - ಹತ್ತು, ಅಗ್ನಿ - ಶಿಖೀ, ಸ್ಥಾನ - ಉತ್ತರ, ಸಮಿತ್ - ಅಶ್ವತ್ಥ, ಅಧಿದೇವತೆ - ಇಂದ್ರ, ದಾನ - ಹಳದಿ ವಸ್ತ್ರ, ಪ್ರತ್ಯಧಿದೇವತೆ - ಬ್ರಹ್ಮಾ, ರಸ - ಸಿಹಿ, ಬಣ್ಣ - ಹಳದಿ, ರೋಗ - ಕಫ, ಭೂತ - ಆಕಾಶ, ಅಂಗ - ಮೇದಸ್ಸು, ಗೋತ್ರ - ಆಂಗೀರಸ, ದಶಾವರ್ಷ - ಹದಿನಾರು, ದೇಶ - ಸಿಂಧು, ಅಧಿಕಾರ - ಮಂತ್ರಿ, ಜಾತಿ - ಬ್ರಾಹ್ಮಣ, ರಾಶಿ-ಸಂಚಾರ - 1 ವರ್ಷ, ಲಿಂಗ - ಪುರುಷ, ಒಡೆತನ - ಧನು, ಮೀನ, ಪ್ರತಿಮೆ - ಚಿನ್ನ, ತಂದೆ - ಅಂಗೀರಸ, ಜಪ - 19,000, ತಾಯಿ - ಶ್ರದ್ಧಾ, ಧಾನ್ಯ - ಕಡಲೆ, ಹೆಂಡತಿ - ತಾರಾ.

ಶ್ರೀ ವಿದ್ಯಾನಾಥತೀರ್ಥರು (ವ್ಯಾಸರಾಜ ಮಠ) (ಕ್ರಿ.ಶ. 1780-1788) ವಾದಿಯೂಥಪಸಂದೋಹಗರ್ವಪಾತನಕೇಸರಿ । ನೈಜನಾರ್ಥಿತಯೋ ಭೂಯಾ ವಿದ್ಯಾನಾಥ ಗುರುಶ್ರಿಯೈ ॥ ಇವರು ಕೇವಲ 8 ವರ್ಷಗಳ ಕಾಲ ಪೀಠವನ್ನಲಂಕರಿಸಿದ್ದರು. ಹೆಚ್ಚು ಕಾಲ ಕಾವೇರಿ ತೀರದ ಕುಂಭಕೋಣ ಕ್ಷೇತ್ರದಲ್ಲಿ ವಾಸ ಮಾಡುವವರಾಗಿ ಪಾಠ-ಪ್ರವಚನಗಳಿಂದ ಅನೇಕ ಶಿಷ್ಯರನ್ನು ಉದ್ಧಾರ ಮಾಡಿದ್ದಾರೆ. ವಾದಿಗಳೆಂಬ ಮದಿಸಿದ ಆನೆಗಳ ಸಮೂಹಕ್ಕೆ ಇವರು ಸಿಂಹಪ್ರಾಯರಾಗಿದ್ದರಂತೆ. ತಮ್ಮ ಪರಮಗುರುಗಳಾದ ಭಾಷ್ಯದೀಪಿಕಾಚಾರ್ಯರ ಸನ್ನಿಧಾನದಲ್ಲಿ ಕುಂಭಕೋಣದಲ್ಲಿ 1788ರ ವೈಶಾಖ ಶುದ್ಧ ಏಕಾದಶಿಯಂದು ವೃಂದಾವನಸ್ಥರಾದರು.

## ವೈಶಾಖ ॥ ಶುದ್ಧ ॥ ದ್ವಾದಶೀ

ಫಲೋತ್ಸವ – ವಸಂತದ್ವಾದಶೀ ಎಂದೇ ಕರೆಯುತ್ತಾರೆ. ಇಂದು ಫಲೋತ್ಸವವನ್ನು ಮಾಡಬೇಕು. ವರ್ಷದಲ್ಲಿ ಮಾಡಬೇಕಾದ ಐದು ಉತ್ಸವಗಳಲ್ಲಿ ಇದೂ ಕೂಡ ಒಂದಾಗಿದೆ. ಅನಿರುದ್ಧಸಂಹಿತೆಯಲ್ಲಿ ಜ್ಯೇಷ್ಠಮಾಸದ ದ್ವಾದಶಿ-ಯಂದು ಫಲೋತ್ಸವವನ್ನು ಮಾಡಬೇಕೆಂದು ಹೇಳಲಾಗಿದೆ. ಆದರೆ ವಸಂತ-

ಋತುವಿನಲ್ಲಿ ಮಾಡುವ ಸಂಪ್ರದಾಯ ಬಂದಿದೆ. ದಮನೋತ್ಸವ, ಪವಿತ್ರೋತ್ಸವಗಳ ಕ್ರಮದಲ್ಲಿಯೇ ಫಲೋತ್ಸವವನ್ನು ಮಾಡಬೇಕು. ಏಕಾದಶಿಯ ದಿವಸ ಅಧಿವಾಸ ಮಾಡಬೇಕು. ದ್ವಾದಶಿಯ ದಿವಸ ಫಲೋತ್ಸವ ಮಾಡಬೇಕು. ಬಾಳೆಹಣ್ಣು, ಹಲಸಿನ ಹಣ್ಣು, ಮಾವಿನ ಹಣ್ಣುಗಳು ಈ ಉತ್ಸವಕ್ಕೆ ಬೇಕಾಗುತ್ತವೆ. ಇವುಗಳನ್ನು ಭಗವಂತನ ಮೂರ್ತಿಯ ಪಾದಪರ್ಯಂತ, ನಾಭಿಪರ್ಯಂತ, ಹೃದಯಪರ್ಯಂತ ಅಥವಾ ಕಂಠಪರ್ಯಂತ ಅಲಂಕರಿಸಬೇಕು. ಫಲೋತ್ಸವವನ್ನು ನಿರೂಪಣೆ ಮಾಡುವ ಅನಿರುದ್ಧ ಸಂಹಿತೆಯ 23ನೆಯ ಅಧ್ಯಾಯವನ್ನು ಇಲ್ಲಿ ಯಥಾವತ್ತಾಗಿ ನೀಡಲಾಗಿದೆ.

ಭಗವಾನ್ – ತುಲಸ್ಯಾರೋಪಣೇ ಚೈವ ದಮನಾರೋಪಣಂ ಭವೇತ್ । ಚಂಪಕಾರಾಧನೇ ವಿಪ್ರ ತಥಾ ಕರ್ಮ ಸಮಾಚರೇತ್ ॥1॥ ಅಂಕುರಾರೋಪಣಂ ತತಃ ಕುರ್ಯಾತ್ ತಥಾ ವೈ ಕೌತುಕತ್ರಯಮ್ । ನಿಶಿ ಪೂಜಾವಿಧಾನಂ ಚ ಅಧಿವಾಸಂ ಚ ಭೂಷಣಮ್ ॥2॥ ತ್ರಿಸ್ಥಾನಯಜನಂ ಚೈವ ಹೋಮಕರ್ಮವಿಧಿಸ್ತಥಾ । ಸ್ನಪನಂ ತು ವಿಶೇಷೇಣ ನಾರಿಕೇರಜಲೈರ್ಭವೇತ್ ॥3॥ ಕೇವಲಂ ಗಂಧತೋಯೇ ವಾ ತದಭಾವೇ ವಿಶೇಷತಃ । ಅಧಿವಾಸವಿಧೌ ಬ್ರಹ್ಮನ್ ಸದ್ಯೋ ದ್ರವ್ಯಾಧಿವಾಸನಮ್ ॥4॥ ಯಾತ್ರಾಕಾಲೇ ತು ವಿಪ್ರೇಂದ್ರ ಪುಷ್ಪದಾಮ ಪ್ರಶಸ್ಯತೇ । ವಿಕಿರೇತ್ ಸರ್ವತೋ ವಿಪ್ರ ಪುಷ್ಪೈರ್ಗ... ನೈರ್ಯಥಾ ॥5॥ ಅನ್ಯಾನಿ ಸರ್ವಕಾರ್ಯಾಣಿ ಪೂರ್ವವತ್ ಕಾರಯೇದ್ದ್ವಿಜ । ಚಂಪಕಾನಾಮಭಾವೇ ತು ಪಾಟಲಂ ಪರಿಕೀರ್ತಿತಮ್ ॥6॥ ವೈಶಾಖಂ ತು ವಿಶೇಷೇಣ ಸನ್ನ್ಯಾಸಂ ಸಮ್ಯಗಾಚರೇತ್ । ಬ್ರಾಹ್ಮಣಾದೀನಾಂ ವರ್ಣಾನಾಂ ತತ್ಪ್ರಸಾದಂ ಪ್ರದಾಪಯೇತ್ ॥7॥ ಸ್ನಪನೇ ತು ವಿಶೇಷೇಣ ಕೇವಲಂ ಪುಷ್ಪತೋಯಕಮ್ । ಗಂಧೋದಕಮಥೋ ವಾಪಿ ನಾಲಿಕೇರರಸಂ ತು ವಾ ॥8॥ ಪತ್ರಪುಷ್ಪೋತ್ಸವೇ ವಿಪ್ರ ಭೂಷಣೈಃ ಪರಿಭೂಷಯೇತ್ । ಫಲೋತ್ಸವೇಷು ಸರ್ವೇಷು ಪೂರಣಂ ಸಂಪ್ರಕೀರ್ತಿತಮ್ ॥9॥ ಗಂಧೋತ್ಸವೇಷು ಸರ್ವೇಷು ಲೇಪನಂ ಸಮ್ಯಗಾಚರೇತ್ । ಅನೂರಾಧೇ ವಿಶೇಷೇಣ ಫಲೋತ್ಸವಮಥಾಚರೇತ್ ॥10॥ ಫಲೋತ್ಸವವಿಧಿಂ ವಕ್ಷ್ಯೇ ಸಮಾಸಾದವಧಾರಯ । ಕದಲೀಪನಸಂ ಚಾಮ್ರಂ ಫಲಾನಾಂ ಸಂಪ್ರಕೀರ್ತಿತಮ್ ॥11॥ ತ್ವಜ್ರಾರ್ಕ್ಷ-

ಮಹ್ಯಮ್ ॥ ಯೋ ಮೃತ್ಯುಂ ನಿಜದಾಸಾನಾಂ ಮಾರಯತ್ಯಖಿಲೇಷ್ಟದಃ । ತತ್ರೋದಾಹೃತಯೋ ಬಹ್ವ್ಯಃ ಮೃತ್ಯುಮೃತ್ಯುಂ ನಮಾಮ್ಯಹಮ್ ॥

ಉಪಾಸ್ಯ - ಶ್ರೀವಾಮನ, ರತ್ನ - ಪುಷ್ಯರಾಗ, ಕಕ್ಷ್ಯೆ - ಹತ್ತು, ಅಗ್ನಿ - ಶಿಖೀ, ಸ್ಥಾನ - ಉತ್ತರ, ಸಮಿತ್ - ಅಶ್ವತ್ಥ, ಅಧಿದೇವತೆ - ಇಂದ್ರ, ದಾನ - ಹಳದಿ ವಸ್ತ್ರ, ಪ್ರತ್ಯಧಿದೇವತೆ - ಬ್ರಹ್ಮಾ, ರಸ - ಸಿಹಿ, ಬಣ್ಣ - ಹಳದಿ, ರೋಗ - ಕಫ, ಭೂತ - ಆಕಾಶ, ಅಂಗ - ಮೇದಸ್ಸು, ಗೋತ್ರ - ಆಂಗೀರಸ, ದಶಾವರ್ಷ - ಹದಿನಾರು, ದೇಶ - ಸಿಂಧು, ಅಧಿಕಾರ - ಮಂತ್ರಿ, ಜಾತಿ - ಬ್ರಾಹ್ಮಣ, ರಾಶಿ-ಸಂಚಾರ - 1 ವರ್ಷ, ಲಿಂಗ - ಪುರುಷ, ಒಡೆತನ - ಧನು, ಮೀನ, ಪ್ರತಿಮೆ - ಚಿನ್ನ, ತಂದೆ - ಅಂಗೀರಸ, ಜಪ - 19,000, ತಾಯಿ - ಶ್ರದ್ಧಾ, ಧಾನ್ಯ - ಕಡಲೆ, ಹೆಂಡತಿ - ತಾರಾ.

ಶ್ರೀ ವಿದ್ಯಾನಾಥತೀರ್ಥರು (ವ್ಯಾಸರಾಜ ಮಠ) (ಕ್ರಿ.ಶ. 1780-1788) ವಾದಿಯೂಥಪಸಂದೋಹಗರ್ವಪಾತನಕೇಸರಿ । ನೈಜನಾರ್ಥಿತಯೋ ಭೂಯಾ ವಿದ್ಯಾನಾಥ ಗುರುಶ್ರಿಯೈ ॥ ಇವರು ಕೇವಲ 8 ವರ್ಷಗಳ ಕಾಲ ಪೀಠವನ್ನಲಂಕರಿಸಿದ್ದರು. ಹೆಚ್ಚು ಕಾಲ ಕಾವೇರಿ ತೀರದ ಕುಂಭಕೋಣ ಕ್ಷೇತ್ರದಲ್ಲಿ ವಾಸ ಮಾಡುವವರಾಗಿ ಪಾಠ-ಪ್ರವಚನಗಳಿಂದ ಅನೇಕ ಶಿಷ್ಯರನ್ನು ಉದ್ಧಾರ ಮಾಡಿದ್ದಾರೆ. ವಾದಿಗಳೆಂಬ ಮದಿಸಿದ ಆನೆಗಳ ಸಮೂಹಕ್ಕೆ ಇವರು ಸಿಂಹಪ್ರಾಯರಾಗಿದ್ದರಂತೆ. ತಮ್ಮ ಪರಮಗುರುಗಳಾದ ಭಾಷ್ಯದೀಪಿಕಾಚಾರ್ಯರ ಸನ್ನಿಧಾನದಲ್ಲಿ ಕುಂಭಕೋಣದಲ್ಲಿ 1788ರ ವೈಶಾಖ ಶುದ್ಧ ಏಕಾದಶಿಯಂದು ವೃಂದಾವನಸ್ಥರಾದರು.

## ವೈಶಾಖ ॥ ಶುದ್ಧ ॥ ದ್ವಾದಶೀ

ಫಲೋತ್ಸವ – ವಸಂತದ್ವಾದಶೀ ಎಂದೇ ಕರೆಯುತ್ತಾರೆ. ಇಂದು ಫಲೋತ್ಸವವನ್ನು ಮಾಡಬೇಕು. ವರ್ಷದಲ್ಲಿ ಮಾಡಬೇಕಾದ ಐದು ಉತ್ಸವಗಳಲ್ಲಿ ಇದೂ ಕೂಡ ಒಂದಾಗಿದೆ. ಅನಿರುದ್ಧಸಂಹಿತೆಯಲ್ಲಿ ಜ್ಯೇಷ್ಠಮಾಸದ ದ್ವಾದಶಿ-ಯಂದು ಫಲೋತ್ಸವವನ್ನು ಮಾಡಬೇಕೆಂದು ಹೇಳಲಾಗಿದೆ. ಆದರೆ ವಸಂತ-

ಋತುವಿನಲ್ಲಿ ಮಾಡುವ ಸಂಪ್ರದಾಯ ಬಂದಿದೆ. ದಮನೋತ್ಸವ, ಪವಿತ್ರೋತ್ಸವ-ಗಳ ಕ್ರಮದಲ್ಲಿಯೇ ಫಲೋತ್ಸವವನ್ನು ಮಾಡಬೇಕು. ಏಕಾದಶಿಯ ದಿವಸ ಅಧಿ-ವಾಸ ಮಾಡಬೇಕು. ದ್ವಾದಶಿಯ ದಿವಸ ಫಲೋತ್ಸವ ಮಾಡಬೇಕು. ಬಾಳೆಹಣ್ಣು, ಹಲಸಿನ ಹಣ್ಣು, ಮಾವಿನ ಹಣ್ಣುಗಳು ಈ ಉತ್ಸವಕ್ಕೆ ಬೇಕಾಗುತ್ತವೆ. ಇವುಗಳನ್ನು ಭಗವಂತನ ಮೂರ್ತಿಯ ಪಾದಪರ್ಯಂತ, ನಾಭಿಪರ್ಯಂತ, ಹೃದಯ-ಪರ್ಯಂತ ಅಥವಾ ಕಂಠಪರ್ಯಂತ ಅಲಂಕರಿಸಬೇಕು. ಫಲೋತ್ಸವವನ್ನು ನಿರೂಪಣೆ ಮಾಡುವ ಅನಿರುದ್ಧ ಸಂಹಿತೆಯ 23ನೆಯ ಅಧ್ಯಾಯವನ್ನು ಇಲ್ಲಿ ಯಥಾವತ್ತಾಗಿ ನೀಡಲಾಗಿದೆ.

ಭಗವಾನ್ – ತುಲಸ್ಯಾರೋಪಣೇ ಚೈವ ದಮನಾರೋಪಣಂ ಭವೇತ್ । ಚಂಪಕಾರಾಧನೇ ವಿಪ್ರ ತಥಾ ಕರ್ಮ ಸಮಾಚರೇತ್ ॥1॥ ಅಂಕುರಾರೋಪಣಂ ತತಃ ಕುರ್ಯಾತ್ ತಥಾ ವೈ ಕೌತುಕತ್ರಯಮ್ । ನಿಶಿ ಪೂಜಾವಿಧಾನಂ ಚ ಅಧಿ-ವಾಸಂ ಚ ಭೂಷಣಮ್ ॥2॥ ತ್ರಿಸ್ಥಾನಯಜನಂ ಚೈವ ಹೋಮಕರ್ಮವಿಧಿಸ್ತಥಾ । ಸ್ನಪನಂ ತು ವಿಶೇಷೇಣ ನಾರಿಕೇರಜಲೈರ್ಭವೇತ್ ॥3॥ ಕೇವಲಂ ಗಂಧತೋಯೇ ವಾ ತದಭಾವೇ ವಿಶೇಷತಃ । ಅಧಿವಾಸವಿಧೌ ಬ್ರಹ್ಮನ್ ಸದ್ಯೋ ದ್ರವ್ಯಾಧಿ-ವಾಸನಮ್ ॥4॥ ಯಾತ್ರಾಕಾಲೇ ತು ವಿಪ್ರೇಂದ್ರ ಪುಷ್ಪದಾಮ ಪ್ರಶಸ್ಯತೇ । ವಿಕಿರೇತ್ ಸರ್ವತೋ ವಿಪ್ರ ಪುಷ್ಪೈರ್ಗ... ನೈರ್ಯಥಾ ॥5॥ ಅನ್ಯಾನಿ ಸರ್ವಕಾರ್ಯಾಣಿ ಪೂರ್ವವತ್ ಕಾರಯೇದ್ದ್ವಿಜ । ಚಂಪಕಾನಾಮಭಾವೇ ತು ಪಾಟಲಂ ಪರಿ-ಕೀರ್ತಿತಮ್ ॥6॥ ವೈಶಾಖಂ ತು ವಿಶೇಷೇಣ ಸನ್ನ್ಯಾಸಂ ಸಮ್ಯಗಾಚರೇತ್ । ಬ್ರಾಹ್ಮಣಾದೀನಾಂ ವರ್ಣಾನಾಂ ತತ್ಪ್ರಸಾದಂ ಪ್ರದಾಪಯೇತ್ ॥7॥ ಸ್ನಪನೇ ತು ವಿಶೇಷೇಣ ಕೇವಲಂ ಪುಷ್ಪತೋಯಕಮ್ । ಗಂಧೋದಕಮಥೋ ವಾಪಿ ನಾಲಿ-ಕೇರರಸಂ ತು ವಾ ॥8॥ ಪತ್ರಪುಷ್ಪೋತ್ಸವೇ ವಿಪ್ರ ಭೂಷಣೈಃ ಪರಿಭೂಷಯೇತ್ । ಫಲೋತ್ಸವೇಷು ಸರ್ವೇಷು ಪೂರಣಂ ಸಂಪ್ರಕೀರ್ತಿತಮ್ ॥9॥ ಗಂಧೋತ್ಸವೇಷು ಸರ್ವೇಷು ಲೇಪನಂ ಸಮ್ಯಗಾಚರೇತ್ । ಅನೂರಾಧೇ ವಿಶೇಷೇಣ ಫಲೋತ್ಸವ-ಮಥಾಚರೇತ್ ॥10॥ ಫಲೋತ್ಸವವಿಧಿಂ ವಕ್ಷ್ಯೇ ಸಮಾಸಾದವಧಾರಯ । ಕದಲೀಪನಸಂ ಚಾಮ್ರಂ ಫಲಾನಾಂ ಸಂಪ್ರಕೀರ್ತಿತಮ್ ॥11॥ ತ್ವರ್ಜಾರ್ಕ್ಷ-

ಸಂಯುತಂ ನ್ಯೂನಂ ಬೀಜಪೂರಂ ತು ಚಾಕ್ಷತಮ್ । ಪನಸಂ ವಿವಿಧಂ ಪ್ರೋಕ್ತಂ ಪನಸಂ ಕ್ಷುದ್ರಸಂಜ್ಞಕಮ್ ॥12॥ ಕ್ಷುದ್ರಂ ತು ವರ್ಜಯೇದ್ ವಿಪ್ರ ಸರ್ವದಾ ಪೂರಕರ್ಮಣಿ । ಕದಲೀ ತ್ರಿವಿಧಂ ಪ್ರೋಕ್ತಂ ತ್ರಿವಿಧಂ ಯೋಗ್ಯಮೇವ ಚ ॥13॥ ಸಹಕಾರೇ ತಥಾ ಪ್ರೋಕ್ತಂ ಹಾರೀತಂ ರಕ್ತಪೀತಕಮ್ । ತ್ರಿವಿಧಂ ಪೂರಣೇ ಯೋಗ್ಯಂ ಕ್ರಮುಕೇ ಚಂದ್ರಪೂರಕಮ್ ॥14॥ ಹಾರೀತಂ ಪೀತಕಂ ರಕ್ತಂ ಪೂರಣೇ ಸರ್ವಕಂ ಭವೇತ್ । ಅಂಕುರಾವಾಹನಂ ಚೈವ ಚತುಃಸ್ಥಾನಾರ್ಚನಂ ತಥಾ ॥15॥ ಕೌತುಕಂ ತು ಯಥಾ ಚೈವ ಪ್ರಾತಃಸ್ನಪನಮೇವ ಚ । ದ್ವಾರಪೂಜಾವಿಧಿಶ್ಚೈವ ಚತುಃಸ್ಥಾನಾರ್ಚನಕ್ರಿಯಾ ॥16॥ ಮೂಲಬಿಂಬಾರ್ಚನಂ ಚೈವ ನೈವೇದ್ಯಂ ಬಲಿರೇವ ಚ । ಅಧಿವಾಸದಿನೇ ವಿಪ್ರ ಶಿವಮಾನೇನ ಪೂರಯೇತ್ ॥17॥ ತದ್-ದ್ರವ್ಯೇಣ ಬಲಿಂ ಕುರ್ಯಾದ್ಧೋಮಕರ್ಮ ತಥಾ ಭವೇತ್ । ದ್ವಿಗುಣಂ ತ್ರಿಗುಣಂ ಚೈವ ಚಾತುರ್ಗುಣ್ಯಂ ತದಂತಿಕೇ ॥18॥ ವಾಸುದೇವಾದಿಭಿರ್ಮಂತ್ರೈಶ್ಚತು-ರ್ವೇದಾದ್ಯಕೈಸ್ತು ವಾ । ಶಾಖಾದ್ಯತ್ರಿತಯಂ ವಾಪಿ ವಿಷ್ಣುಸೂಕ್ತತೃತೀಯಕಮ್ ॥19॥ ಅಂಗಾದೀನಾಂ ವಿಶೇಷೇಣ ಮುಷ್ಟಿಮಾನೇನ ಪೂರಯೇತ್ । ಶ್ರಿಯಾದೀನಾಂ ವಿಶೇಷೇಣ ಜಾನುಮಾನೇನ ಪೂರಯೇತ್ ॥20॥ ಕರ್ಮಾರ್ಚಾದಿಬಿಂಬಾನಾಂ ಪಾದಮಾನೇನ ಪೂರಯೇತ್ । ಏಕೈಕಂ ಹೋಮಕಾರ್ಯೇ ತು ಬಲಿಕರ್ಮಣಿ ಮುಷ್ಟಿಕಮ್ ॥21॥ ಉತ್ಸವಂ ಕಾರಯೇದಂತೇ ವಿಕಿರೇತ್ ಫಲಪೂರಕೈಃ। ಮಂಡಪೇ ಸನ್ನಿವೇಶ್ಯಾಥ ತತಃ ಸನ್ನ್ಯಾಸಮಾಚರೇತ್ ॥22॥ ಪೂಜಾಪೂರ್ವಂ ತತಃ ಕುರ್ಯಾತ್ ಪೂರ್ವವತ್ ಪರಿವಾಪಯೇತ್ । ಶುದ್ಧಸ್ನಾನಂ ತತಃ ಕೃತ್ವಾಗರ್ಭಗೇಹೇ ನಿವೇಶಯೇತ್ ॥23॥ ಪನಸಾನಾಮಭಾವೇ ತು ಸಹಕಾರ್ಯೈಃ ಪ್ರಪೂರಯೇತ್ । ಸಹಕಾರಫಲಾಭಾವೇ ಮೋಚಕೈಃ ಪರಿಪೂರಯೇತ್ ॥24॥ ತ್ರಯಂ ತ್ರಿಮಾನೇ ವಾ ವಿಪ್ರ ಮಾಸಮ್ಯಕ್ಷೇ ಸಮರ್ಚಯೇತ್ । ಶ್ರಾವಣೇ ಮಾಸಿ ವಿಪ್ರೇಂದ್ರ ಬೀಜಪೂರಾ-ಷ್ಟಕೈರ್ಯಜೇತ್ ॥25॥ ತದಭಾವೇ ತು ವಿಪ್ರೇಂದ್ರ ಆರ್ದ್ರಪೂಗೀಫಲೈರ್ಯ-ಜೇತ್ । ಮಾಸೇ ಚಾಶ್ವಯುಜೇ ವಿಪ್ರ ಜಲಜೈಃ ಪರಿತೋ ಯಜೇತ್ ॥26॥ ಸ್ನಪನೇ ತು ವಿಶೇಷೇಣ ರಜನೀನೀರಮುತ್ತಮಮ್ । ಚೂರ್ಣಸ್ನಾನಯುತಂ ವಾಪಿ ಉಕ್ತ-

ದ್ರವ್ಯಘಟೈಸ್ತು ವಾ ||45|| ಲೇಪನಂ ಪೂರ್ವವತ್ ಕುರ್ಯಾತ್ ಅಂಕುರಾದಿಕ್ರಿಯಾಂ ತಥಾ | ಇತಿ ಸಂಕ್ಷೇಪತಃ ಪ್ರೋಕ್ತೋ ಮಾಸೋತ್ಸವವಿಶೇಷಕಃ ||46||

ಇತಿ ಶ್ರೀಪಾಂಚರಾತ್ರೇ ಮಹೋಪನಿಷದಿ ಅನಿರುದ್ಧಸಂಹಿತಾಯಾಂ ಮಾಸೋತ್ಸವ-ವಿಧಿರ್ನಾಮ ತ್ರಯೋವಿಂಶೋಽಧ್ಯಾಯಃ ||

ಶ್ರೀಸುವ್ರತೀಂದ್ರತೀರ್ಥರು (ರಾಯರ ಮಠ) - ಮಂತ್ರಾಲಯ – ಸುಶೀ-ಲೇಂದ್ರಕರಾಬ್ಜೋತ್ಥಂ ಸುಶಾಂತ್ಯಾದಿಗುಣಾರ್ಣವಂ | ಸುಧಾಪ್ರವಚನಾಸಕ್ತಂ ಸುವ್ರತೀಂದ್ರಗುರುಂ ಭಜೇ || ಇವರು 50ನೆಯ ಪೀಠಾಧಿಪತಿಗಳು. ಶ್ರೀಸುಶೀ-ಲೇಂದ್ರತೀರ್ಥರ ಶಿಷ್ಯರು. ಇವರ ವೃಂದಾವನ ಮಂತ್ರಾಲಯದಲ್ಲಿದೆ.

ಶ್ರೀ ವಿದ್ಯಾಮಾನ್ಯತೀರ್ಥರು (ಭಂಡಾರಕೇರಿ, ಪಲಿಮಾರು ಉಭಯ-ಮಠಾಧೀಶರು) –

ಎರ್ಮಾಳು ಗ್ರಾಮದಲ್ಲಿ ಶ್ರೀಕುಪ್ಪಣ್ಣ(ರಾಮಕೃಷ್ಣ) ತಂತ್ರಿ ರಾಧಮ್ಮ ದಂಪತಿಗಳ ಪುತ್ರರಾಗಿ ದಿನಾಂಕ 27.07.1913 ಪ್ರಮಾದಿ ಸಂವತ್ಸರ ಆಷಾಢನವಮಿ, ಭಾನುವಾರ ಜನನ. ಪೂರ್ವಾಶ್ರಮದ ಹೆಸರು ಶ್ರೀ ನಾರಾಯಣತಂತ್ರಿ , ಎಂಟನೆಯ ವಯಸ್ಸಿನಲ್ಲಿ ಆಗಿನ ಪುತ್ತಿಗೆ ಮಠಾಧೀಶರಾದ, ಮಹಾತಪಸ್ವಿಗಳಾದ ಶ್ರೀ ಸುಧೀಂದ್ರ ತೀರ್ಥರ ಸನ್ನಿಧಾನದಲ್ಲಿ ಉಪನಯನ, ಸನ್ಯಾಸದೀಕ್ಷೆ ಹಾಗೂ ಭಂಡಾರಕೇರೆ ಪೀಠಾಧಿಪತ್ಯವನ್ನು ಅದಮಾರು ಮಠಾಧೀಶರಾಗಿದ್ದ ಶ್ರೀ ವಿಬುಧಪ್ರಿಯತೀರ್ಥರಿಂದ 5.10.1925ನೇ ದಿನಾಂಕ ಕ್ರೋಧನ, ಕಾರ್ತಿಕ ಕೃಷ್ಣಪಂಚಮೀ ದಿನದಂದು ಸ್ವೀಕಾರ. ಶ್ರೀ ಸತ್ಯಧ್ಯಾನರಲ್ಲಿ ಸಮಗ್ರ ಶಾಸ್ತ್ರಾಧ್ಯಯನ. ಶ್ರೀ ಮಧ್ವಸಿದ್ಧಾಂತ ಸಂವರ್ಧಕ ಸಭಾ ಸ್ಥಾಪನೆ, 1969ರಲ್ಲಿ ಆಗಿನ ಪಲಿಮಾರು ಮಠದ ಶ್ರೀ ರಘುವಲ್ಲಭರಿಂದ ಪಲಿಮಾರು ಮಠಾಧಿಪತ್ಯ ಪ್ರಾಪ್ತಿ. ಆದುದರಿಂದ ಭಂಡಾರಕೇರಿ ಹಾಗೂ ಪಲಿಮಾರು ಮಠದ ಉಭಯ ಪೀಠಗಳಿಗೆ ಅಧಿಪತಿಗಳೆನ್ನಿಸಿದ ವಿಶಿಷ್ಟ ಹಿರಿಮೆ ಇವರದು.

ಶ್ರೀ ವಿಶ್ವೇಶತೀರ್ಥರು (ಪೇಜಾವರ ಮಠ), ಶ್ರೀ ವಿಶ್ವಪ್ರಿಯತೀರ್ಥರು (ಅದ-ಮಾರು ಮಠ) ಶ್ರೀ ಸುಗುಣೇಂದ್ರತೀರ್ಥರು (ಪುತ್ತಿಗೆ ಮಠ) ಶ್ರೀ ವಿದ್ಯಾಧೀಶತೀರ್ಥರು (ಪಲಿಮಾರು ಮಠ), ಶ್ರೀ ವಿದ್ಯೇಶತೀರ್ಥರು (ಭಂಡಾರಕೇರಿ ಮಠ), ಶ್ರೀ ವಿದ್ಯಾವಲ್ಲಭತೀರ್ಥರು (ಪ್ರಯಾಗಮಾಧ್ವಪೀಠ) ಮೊದಲಾದ ಸನ್ಯಾಸಿ ಶಿಷ್ಯರಿಗೆ ಪಾಠ

ಸಂಯುತಂ ನ್ಯೂನಂ ಬೀಜಪೂರಂ ತು ಚಾಕ್ಷತಮ್ । ಪನಸಂ ವಿವಿಧಂ ಪ್ರೋಕ್ತಂ ಪನಸಂ ಕ್ಷುದ್ರಸಂಜ್ಞಕಮ್ ॥12॥ ಕ್ಷುದ್ರಂ ತು ವರ್ಜಯೇದ್ ವಿಪ್ರ ಸರ್ವದಾ ಪೂರಕರ್ಮಣಿ । ಕದಲೀ ತ್ರಿವಿಧಂ ಪ್ರೋಕ್ತಂ ತ್ರಿವಿಧಂ ಯೋಗ್ಯಮೇವ ಚ ॥13॥ ಸಹಕಾರೇ ತಥಾ ಪ್ರೋಕ್ತಂ ಹಾರೀತಂ ರಕ್ತಪೀತಕಮ್ । ತ್ರಿವಿಧಂ ಪೂರಣೇ ಯೋಗ್ಯಂ ಕ್ರಮುಕೇ ಚಂದ್ರಪೂರಕಮ್ ॥14॥ ಹಾರೀತಂ ಪೀತಕಂ ರಕ್ತಂ ಪೂರಣೇ ಸರ್ವಕಂ ಭವೇತ್ । ಅಂಕುರಾವಾಹನಂ ಚೈವ ಚತುಃಸ್ಥಾನಾರ್ಚನಂ ತಥಾ ॥15॥ ಕೌತುಕಂ ತು ಯಥಾ ಚೈವ ಪ್ರಾತಃಸ್ನಪನಮೇವ ಚ । ದ್ವಾರಪೂಜಾವಿಧಿಶ್ಚೈವ ಚತುಃಸ್ಥಾನಾರ್ಚನಕ್ರಿಯಾ ॥16॥ ಮೂಲಬಿಂಬಾರ್ಚನಂ ಚೈವ ನೈವೇದ್ಯಂ ಬಲಿರೇವ ಚ । ಅಧಿವಾಸದಿನೇ ವಿಪ್ರ ಶಿವಮಾನೇನ ಪೂರಯೇತ್ ॥17॥ ತದ್-ದ್ರವ್ಯೇಣ ಬಲಿಂ ಕುರ್ಯಾದ್ಧೋಮಕರ್ಮ ತಥಾ ಭವೇತ್ । ದ್ವಿಗುಣಂ ತ್ರಿಗುಣಂ ಚೈವ ಚಾತುರ್ಗುಣ್ಯಂ ತದಂತಿಕೇ ॥18॥ ವಾಸುದೇವಾದಿಭಿರ್ಮಂತ್ರೈಶ್ಚತು-ರ್ವೇದಾದ್ಯಕೈಸ್ತು ವಾ । ಶಾಖಾದ್ಯತ್ರಿತಯಂ ವಾಪಿ ವಿಷ್ಣುಸೂಕ್ತತೃತೀಯಕಮ್ ॥19॥ ಅಂಗಾದೀನಾಂ ವಿಶೇಷೇಣ ಮುಷ್ಟಿಮಾನೇನ ಪೂರಯೇತ್ । ಶ್ರಿಯಾದೀನಾಂ ವಿಶೇಷೇಣ ಜಾನುಮಾನೇನ ಪೂರಯೇತ್ ॥20॥ ಕರ್ಮಾರ್ಚಾದಿಬಿಂಬಾನಾಂ ಪಾದಮಾನೇನ ಪೂರಯೇತ್ । ಏಕೈಕಂ ಹೋಮಕಾರ್ಯೇ ತು ಬಲಿಕರ್ಮಣಿ ಮುಷ್ಟಿಕಮ್ ॥21॥ ಉತ್ಸವಂ ಕಾರಯೇದಂತೇ ವಿಕಿರೇತ್ ಫಲಪೂರಕೈಃ। ಮಂಡಪೇ ಸನ್ನಿವೇಶ್ಯಾಥ ತತಃ ಸನ್ನ್ಯಾಸಮಾಚರೇತ್ ॥22॥ ಪೂಜಾಪೂರ್ವಂ ತತಃ ಕುರ್ಯಾತ್ ಪೂರ್ವವತ್ ಪರಿವಾಪಯೇತ್ । ಶುದ್ಧಸ್ನಾನಂ ತತಃ ಕೃತ್ವಾಗರ್ಭಗೇಹೇ ನಿವೇಶಯೇತ್ ॥23॥ ಪನಸಾನಾಮಭಾವೇ ತು ಸಹಕಾರ್ಯೈಃ ಪ್ರಪೂರಯೇತ್ । ಸಹಕಾರಫಲಾಭಾವೇ ಮೋಚಕೈಃ ಪರಿಪೂರಯೇತ್ ॥24॥ ತ್ರಯಂ ತ್ರಿಮಾನೇ ವಾ ವಿಪ್ರ ಮಾಸಮೃಕ್ಷೇ ಸಮರ್ಚಯೇತ್ । ಶ್ರಾವಣೇ ಮಾಸಿ ವಿಪ್ರೇಂದ್ರ ಬೀಜಪೂರಾ-ಕ್ಷಕೈರ್ಯಜೇತ್ ॥25॥ ತದಭಾವೇ ತು ವಿಪ್ರೇಂದ್ರ ಆರ್ದ್ರಪೂಗೀಫಲೈರ್ಯ-ಜೇತ್ । ಮಾಸೇ ಚಾಶ್ವಯುಜೇ ವಿಪ್ರ ಜಲಜೈಃ ಪರಿತೋ ಯಜೇತ್ ॥26॥ ಸ್ನಪನೇ ತು ವಿಶೇಷೇಣ ರಜನೀನೀರಮುತ್ತಮಮ್ । ಚೂರ್ಣಸ್ನಾನಯುತಂ ವಾಪಿ ಉಕ್ತ-

ದ್ರವ್ಯಘಟೈಸ್ತು ವಾ ॥45॥ ಲೇಪನಂ ಪೂರ್ವವತ್ ಕುರ್ಯಾತ್ ಅಂಕುರಾದಿಕ್ರಿಯಾಂ ತಥಾ । ಇತಿ ಸಂಕ್ಷೇಪತಃ ಪ್ರೋಕ್ತೋ ಮಾಸೋತ್ಸವವಿಶೇಷಕಃ ॥46॥

ಇತಿ ಶ್ರೀಪಾಂಚರಾತ್ರೇ ಮಹೋಪನಿಷದಿ ಅನಿರುದ್ಧಸಂಹಿತಾಯಾಂ ಮಾಸೋತ್ಸವ-ವಿಧಿರ್ನಾಮ ತ್ರಯೋವಿಂಶೋಽಧ್ಯಾಯಃ ॥

**ಶ್ರೀಸುವ್ರತೀಂದ್ರತೀರ್ಥರು (ರಾಯರ ಮಠ) - ಮಂತ್ರಾಲಯ** – ಸುಶೀ-ಲೇಂದ್ರಕರಾಬ್ಜೋತ್ಥಂ ಸುಶಾಂತ್ಯಾದಿಗುಣಾರ್ಣವಂ । ಸುಧಾಪ್ರವಚನಾಸಕ್ತಂ ಸುವ್ರತೀಂದ್ರಗುರುಂ ಭಜೇ ॥ ಇವರು 50ನೆಯ ಪೀಠಾಧಿಪತಿಗಳು. ಶ್ರೀಸುಶೀ-ಲೇಂದ್ರತೀರ್ಥರ ಶಿಷ್ಯರು. ಇವರ ವೃಂದಾವನ ಮಂತ್ರಾಲಯದಲ್ಲಿದೆ.

**ಶ್ರೀ ವಿದ್ಯಾಮಾನ್ಯತೀರ್ಥರು (ಭಂಡಾರಕೇರಿ, ಪಲಿಮಾರು ಉಭಯ-ಮಠಾಧೀಶರು)** –

ಎರ್ಮಾಳು ಗ್ರಾಮದಲ್ಲಿ ಶ್ರೀಕುಪ್ಪಣ್ಣ (ರಾಮಕೃಷ್ಣ) ತಂತ್ರಿ ರಾಧಮ್ಮ ದಂಪತಿಗಳ ಪುತ್ರರಾಗಿ ದಿನಾಂಕ 27.07.1913 ಪ್ರಮಾದಿ ಸಂವತ್ಸರ ಆಷಾಢನವಮಿ, ಭಾನುವಾರ ಜನನ. ಪೂರ್ವಾಶ್ರಮದ ಹೆಸರು ಶ್ರೀ ನಾರಾಯಣತಂತ್ರಿ , ಎಂಟನೆಯ ವಯಸ್ಸಿನಲ್ಲಿ ಆಗಿನ ಪುತ್ತಿಗೆ ಮಠಾಧೀಶರಾದ, ಮಹಾತಪಸ್ವಿಗಳಾದ ಶ್ರೀ ಸುಧೀಂದ್ರ ತೀರ್ಥರ ಸನ್ನಿಧಾನದಲ್ಲಿ ಉಪನಯನ, ಸನ್ಯಾಸದೀಕ್ಷೆ ಹಾಗೂ ಭಂಡಾರಕೇರೆ ಪೀಠಾಧಿಪತ್ಯವನ್ನು ಅದಮಾರು ಮಠಾಧೀಶರಾಗಿದ್ದ ಶ್ರೀ ವಿಬುಧಪ್ರಿಯತೀರ್ಥರಿಂದ 5.10.1925ನೇ ದಿನಾಂಕ ಕ್ರೋಧನ, ಕಾರ್ತಿಕ ಕೃಷ್ಣಪಂಚಮೀ ದಿನದಂದು ಸ್ವೀಕಾರ. ಶ್ರೀ ಸತ್ಯಧ್ಯಾನರಲ್ಲಿ ಸಮಗ್ರ ಶಾಸ್ತ್ರಾಧ್ಯಯನ. ಶ್ರೀ ಮಧ್ವರಾದ್ಧಾಂತ ಸಂವರ್ಧಕ ಸಭಾ ಸ್ಥಾಪನೆ, 1969ರಲ್ಲಿ ಆಗಿನ ಪಲಿಮಾರು ಮಠದ ಶ್ರೀ ರಘುವಲ್ಲಭರಿಂದ ಪಲಿಮಾರು ಮಠಾಧಿಪತ್ಯ ಪ್ರಾಪ್ತಿ. ಆದುದರಿಂದ ಭಂಡಾರಕೇರಿ ಹಾಗೂ ಪಲಿಮಾರು ಮಠದ ಉಭಯ ಪೀಠಗಳಿಗೆ ಅಧಿಪತಿಗಳೆನ್ನಿಸಿದ ವಿಶಿಷ್ಟ ಹಿರಿಮೆ ಇವರದು.

ಶ್ರೀ ವಿಶ್ವೇಶತೀರ್ಥರು (ಪೇಜಾವರ ಮಠ), ಶ್ರೀ ವಿಶ್ವಪ್ರಿಯತೀರ್ಥರು (ಅದ-ಮಾರು ಮಠ) ಶ್ರೀ ಸುಗುಣೇಂದ್ರತೀರ್ಥರು (ಪುತ್ತಿಗೆ ಮಠ) ಶ್ರೀ ವಿದ್ಯಾಧೀಶತೀರ್ಥರು (ಪಲಿಮಾರು ಮಠ), ಶ್ರೀ ವಿದ್ಯೇಶತೀರ್ಥರು (ಭಂಡಾರಕೇರಿ ಮಠ), ಶ್ರೀ ವಿದ್ಯಾವಲ್ಲಭತೀರ್ಥರು (ಪ್ರಯಾಗಮಾಧ್ವಪೀಠ) ಮೊದಲಾದ ಸನ್ಯಾಸಿ ಶಿಷ್ಯರಿಗೆ ಪಾಠ

ಹೇಳಿದ ಮಹಾವಿದ್ವಾಂಸರು. ಕುಂದಾಪುರದ ವ್ಯಾಸರಾಜ ಮಠದ ಶ್ರೀ ಲಕ್ಷ್ಮೀಂದ್ರ-ತೀರ್ಥರು ಇವರಲ್ಲಿ ಅಧ್ಯಯನ ಮಾಡಿರುವರು.

ಕ್ರಿ.ಶ. 1952ರಲ್ಲಿ ಬದರಿಕ್ಷೇತ್ರದಲ್ಲಿ 48 ದಿನಗಳ ಕಾಲ ಕಾಷ್ಠಮೌನವ್ರತವನ್ನು ಆಚರಿಸಿರುವರು. 1961ರಲ್ಲಿ ದಿಲ್ಲಿಯಲ್ಲಿ ಚಾತುರ್ಮಾಸ್ಯವ್ರತಗೊಂಡ ಸಂದರ್ಭದಲ್ಲಿ ಶ್ರೀಗಳ ಉಪನ್ಯಾಸದಿಂದ ಆಗಿನ ರಾಷ್ಟ್ರಪತಿ ಬಾಬುರಾಜೇಂದ್ರಪ್ರಸಾದ, ಉಪರಾಷ್ಟ್ರಪತಿ ಎಸ್. ರಾಧಾಕೃಷ್ಣನ್, ಗೃಹಮಂತ್ರಿ ಶ್ರೀನಂದಾ, ಲೋಕಸಭಾಧ್ಯಕ್ಷರಾದ ಅನಂತಶಯನ ಅಯ್ಯಂಗಾರ ಮುಂತಾದವರು ಪ್ರಭಾವಿತರಾಗಿದ್ದರು.

ವಾಕ್ಯಾರ್ಥಪ್ರಿಯರು, ವಾಕ್ಯಾರ್ಥಕೋವಿದರು. ಕರಪಾತ್ರಿ ಸ್ವಾಮಿಗಳೇ ಮೊದ-ಲಾದ ಅನೇಕ ಪರವಾದಿ ಪ್ರಖ್ಯಾತರನ್ನು ವಾದದಲ್ಲಿ ಪರಾಭವಗೊಳಿಸಿದವರು. ಅಪೂರ್ವ ಪ್ರವಚನ ಪಟುಗಳು, ಜೀವನದುದ್ದಕ್ಕೂ ಸದಾಚಾರಪಾವಿತ್ರ್ಯಗಳಿಗೆ ಹೆಸರು ಮಾಡಿದ್ದರು. 'ಅದ್ವೈತತತ್ತ್ವಸುಧಾಸಮೀಕ್ಷಾ' 'ತತ್ವಮಾರ್ತಾಂಡವಿಮರ್ಶಃ' 'ಮಾಯಾ ವಾದನಿರಸಾಖ್ಯಗ್ರಂಥಾನೇಕಾರ್ಥಮಾಲಿಕಾ' ಎಂಬ ಅಪೂರ್ವ ಶ್ಲೋಕರೂಪ ಸಂಸ್ಕೃತ ವ್ಯಾಖ್ಯಾನವನ್ನೂ ರಚಿಸಿರುವರು. ಹಾಗೂ ಕನ್ನಡದಲ್ಲಿ 'ನಾಸ್ತಿಕ್ಯನಿರಾಸ' 'ಗಾಯಿತ್ರೀ-ಗಾಂಭೀರ್ಯ' ಮೊದಲಾದ ಅನೇಕ ಕೃತಿಗಳನ್ನು ರಚಿಸಿರುವರು. 'ತತ್ತ್ವಸಂಖ್ಯಾನ' 'ತತ್ತ್ವವಿವೇಕ' ಹಾಗೂ ಖಂಡನತ್ರಯಗಳನ್ನು ಟೀಕಾ ಸಮೇತ ಕನ್ನಡಕ್ಕೆ ಅನುವಾದಿಸಿರುವರು. 'ದಶಪ್ರಕರಣ'ವನ್ನು ಟೀಕೆಯೊಂದಿಗೆ ಪ್ರಕಾಶನಪಡಿಸಿದ್ದು, ವಿಷ್ಣುಸಹಸ್ರನಾಮ ವ್ಯಾಖ್ಯಾನ, ತಂತ್ರಸಾರಸಂಗ್ರಹ ಟೀಕಾ, ಪ್ರಮೇಯ ಮಾಲಿಕಾ ತಂತ್ರಸಾರಮಂತ್ರೋದ್ಧಾರ. ತೀರ್ಥಪ್ರಬಂಧ ಮೊದಲಾದ ಅನೇಕ ಕೃತಿಗಳನ್ನು ಸಂಪಾದನೆ ಪಡಿಸಿ, ಪ್ರಕಾಶನ ಪಡಿಸಿರುವರು. ಶ್ರೀವಿಷ್ಣುಸಹಸ್ರನಾಮಕ್ಕೆ ಅತ್ಯಂತ ವಿಸ್ತಾರವಾದ ಅರ್ಥವನ್ನು ಕನ್ನಡದಲ್ಲಿ ಬರೆಯಿಸಿ 'ಜಿಜ್ಞಾಸೆ' ಎಂಬ ತುಂಬಾ ಉದ್ಬೋಧಕವಾದ ಟಿಪ್ಪಣಿಯನ್ನು ತಾವೇ ಸ್ವತಃ ಬರೆದು ನಾಲ್ಕು ಸಂಪುಟಗಳಲ್ಲಿ ಪ್ರಕಾಶನ ಪಡಿಸಿರುವರು.

1970-71ರಲ್ಲಿ ಪ್ರಥಮ ಪರ್ಯಾಯದಲ್ಲಿ ಶ್ರೀಕೃಷ್ಣದೇವರಿಗೆ ಚಿನ್ನದ ತೊಟ್ಟಿಲನ್ನೂ, 1986-67ರ ದ್ವಿತೀಯ ಪರ್ಯಾಯದಲ್ಲಿ ಚಿನ್ನದ ರಥ, ವಜ್ರದ ಕಿರೀಟವನ್ನು ಅಪಾರ ಆರ್ಥಿಕ ವೆಚ್ಚದಿಂದ ಮಾಡಿಸಿ ಸಮರ್ಪಿಸಿರುವರು. ತಾವು ಸ್ವತಃ

ಪ್ರವಚನ ಮಾಡುವುದರೊಂದಿಗೆ, ಬೇರೆ ಬೇರೆ ವಿದ್ವಾಂಸರಿಂದ ಅಪಾರ ಸಂಖ್ಯೆಯ ಪ್ರವಚನಗಳನ್ನು ಸ್ವತಃ ತಾವೇ ಉಪಸ್ಥಿತರಿದ್ದು ಮಾಡಿಸಿದ್ದು ವಿಶೇಷತೆ. ಶ್ರೀ ಸತ್ಯಧ್ಯಾನರ ಅನಂತರ ವಿದ್ವಾಂಸರಿಗೆ ಹಾಗೂ ವಿದ್ಯಾರ್ಥಿಗಳಿಗೆ ದೊಡ್ಡ ಪ್ರಮಾಣದಲ್ಲಿ ಸಂಭಾವನೆ, ಸನ್ಮಾನ, ಗೌರವಗಳನ್ನು ನೀಡಿದ ಖ್ಯಾತಿಯೂ ಇವರದೇ. ಪ್ರಶಾಂತ ಮುಖಮುದ್ರೆ, ಸದಾ ಹಸನ್ಮುಖ, ವಿಶೇಷ ಶಿಷ್ಯ ವಾತ್ಸಲ್ಯ ಇವರ ವಿಶಿಷ್ಟ ಗುಣಗಳು. ಸಾವಿರಾರು ಜನರಿಗೆ ಮಂತ್ರೋಪದೇಶ ನೀಡಿ, ಸನ್ಮಾರ್ಗ ಪರಾಯಣರನ್ನಾಗಿ ಮಾಡಿರುವರು. ಘಟಿಕಾಚಲ ಮೊದಲಾದ ಅನೇಕ ಸ್ಥಳಗಳಲ್ಲಿನ ಮಠಗಳನ್ನು ಜೀರ್ಣೋದ್ಧಾರಗೊಳಿಸಿರುವರು. ಶಾ. ಶ. 1922 (ಕ್ರಿ .ಶ. 2000) ವಿಕ್ರಮನಾಮ ಸಂವತ್ಸರ ವೈಶಾಖ ಶು. ಏಕಾದಶಿ ದಿನದಂದು ಉಡುಪಿಯಲ್ಲಿ ಶ್ರೀಕೃಷ್ಣ ಪಾದಾರವಿಂದವನ್ನು ಸೇರಿದರು. ಅಂದು ರಾತ್ರಿಯೇ ಪಲಿಮಾರಿನಲ್ಲಿರುವ ಮಠದಲ್ಲಿ ವೃಂದಾವನ ಮಾಡಲಾಯಿತು. ಅದ್ವೈತಮತಖಂಡನೆ ಇವರ ಜೀವನತಪಸ್ಸು. ಮತ್ತೊಂದು ಯಥಾರ್ಥವಾದ ಏಕಾದಶೀ ಆಚರಣೆಯ ಸಂಸ್ಥಾಪನೆ. ಅನವದ್ಯಾತ್ಮಚಾರಿತ್ರ್ಯಂ ವಾದಿಖದ್ಯೋತಭಾಸ್ಕರಮ್ । ವಿದ್ಯಾಮಾನ್ಯ-ಗುರುಂ ವಂದೇ ವಿದ್ಯಾವಿದ್ಯೋತಭಾಸ್ವರಮ್ ॥ ಬ್ರಹ್ಮಚರ್ಯಹರಿಪ್ರೀತಿಸುವಿದ್ಯಾ-ವಾದಶಾಲಿನಃ । ಇಷ್ಟದಾನ್ ಕಷ್ಟಹರ್ತ್ರ್ಯನ್ ನಃ ವಿದ್ಯಾಮಾನ್ಯಾನ್ ಮುನೀನ್ನುಮಃ ॥

## ವೈಶಾಖ ॥ ಶುಕ್ಲ ॥ ದ್ವಾದಶೀ

**ವೇದವ್ಯಾಸಜಯಂತೀ– ವೈಶಾಖಶುಕ್ಲದ್ವಾದಶೀ** – ವೈಶಾಖಮಾಸದ ಶುಕ್ಲಪಕ್ಷದ ದ್ವಾದಶಿಯಂದು ಶ್ರದ್ಧಾಭಕ್ತಿಗಳಿಂದ ಪ್ರತಿಯೊಬ್ಬರೂ ವೇದವ್ಯಾಸ-ಜಯಂತಿಯನ್ನು ಆಚರಣೆ ಮಾಡಬೇಕು. ಸತ್ಯವತೀ-ಪರಾಶರರಲ್ಲಿ ಹಿಮಾ-ಚ್ಛಾದಿತವಾದ ದ್ವೀಪದ ಮಧ್ಯ ಶ್ರೀವೇದವ್ಯಾಸದೇವರು ವೈಶಾಖಮಾಸದ ಶುಕ್ಲಪಕ್ಷದ ದ್ವಾದಶಿಯ ದಿವಸ ಅವತಾರ ಮಾಡಿರುವರು. ಅವತರಿಸಿದ ಕೂಡಲೇ ಉಪ-ನಯನವನ್ನು ಮಾಡಿಸಿಕೊಂಡು, ಬದರೀಕ್ಷೇತ್ರಕ್ಕೆ ತೆರಳಿ, ವೇದಗಳನ್ನು ಉದ್ಧಾರ ಮಾಡಿ, ಇತಿಹಾಸ-ಪುರಾಣಾದಿಗಳನ್ನು ರಚನೆ ಮಾಡಿದರು. 'ವ್ಯಾಸೋಚ್ಛಿಷ್ಟಂ ಜಗತ್ ಸರ್ವಂ' ಎಂಬ ನಾಣ್ನುಡಿಯಂತೆ ಪ್ರತಿಯೊಂದು ತತ್ವಜ್ಞಾನವನ್ನೂ ಕೂಡ ಇಂಥ ಶ್ರೀವೇದವ್ಯಾಸದೇವರಿಂದಷ್ಟೇ ನಾವು ಪಡೆದುಕೊಳ್ಳಲು ಸಾಧ್ಯ. ಇಂಥ ಶ್ರೀವೇದವ್ಯಾಸದೇವರು ಹೇಳಿದ್ದನ್ನೇ ಉಳಿದವರು ಪ್ರಚುರ ಪಡಿಸಿದ್ದಾರೆ. ಅವರು

ಹೇಳದ ವಿಷಯ ಯಾವುದೂ ಉಳಿದಿಲ್ಲ. ಆದ್ದರಿಂದ ಇಂಥ ಶ್ರೀವೇದವ್ಯಾಸದೇವರ ಮೂಲಕವೇ ನಾವು ತತ್ವಜ್ಞಾನವನ್ನು ಪಡೆದುಕೊಳ್ಳಲು ಸಾಧ್ಯ. ನಿಜವಾದ ಗುರುಗಳೆಂದರೆ ಇಂಥ ಶ್ರೀವೇದವ್ಯಾಸದೇವರೇ ಆಗಿದ್ದಾರೆ. ಇವರ ಅನುಗ್ರಹದಿಂದಷ್ಟೇ ನಾವು ಪರಮಾತ್ಮನ ಸಾಕ್ಷಾತ್ಕಾರವನ್ನು ಮೋಕ್ಷಾದಿ ಪುರುಷಾರ್ಥಗಳನ್ನು ಪಡೆದು-ಕೊಳ್ಳಲು ಸಾಧ್ಯ. ಹಾಗೂ ತಂತ್ರಸಾರಸಂಗ್ರಹದಲ್ಲಿ ಕಲಿಯುಗದಲ್ಲಿ ವಿಶೇಷ-ಫಲದಾಯಕವೆಂದು ಘೋಷಣೆಮಾಡಿದ, ಶ್ರೀವೇದವ್ಯಾಸಮಂತ್ರವನ್ನು ಖಂಡಿತ-ವಾಗಿಯೂ ಯಥಾಶಕ್ತಿ ಜಪ ಮಾಡಬೇಕು. ಅಕ್ಷರ ಲಕ್ಷಸಂಖ್ಯೆಯಲ್ಲಿ ಶ್ರೀವೇದವ್ಯಾಸ ಮಂತ್ರವನ್ನು ಜಪಿಸುವುದರಿಂದ ವಾಕ್‌ಸಿದ್ಧಿ ಹಾಗೂ ಜ್ಞಾನಸಿದ್ಧಿಗಳು ಶೀಘ್ರವಾಗಿ ದೊರೆಯುವುದರಲ್ಲಿ ಸಂಶಯವೇ ಇರುವುದಿಲ್ಲ. ನಿತ್ಯವೂ ಶ್ರೀವೇದವ್ಯಾಸದೇವರ ಆರಾಧನೆಯನ್ನು ಮಾಡಲೇಬೇಕು. ವೇದವ್ಯಾಸಜಯಂತಿಯ ದಿವಸ ಮತ್ತಷ್ಟು ಶ್ರದ್ಧಾಭಕ್ತಿಗಳನ್ನು ಹೊಂದಿ ಶ್ರೀವೇದವ್ಯಾಸದೇವರ ಆರಾಧನೆಯನ್ನು ಆಚರಿಸಬೇಕು.

ಪೂಜೆಯಲ್ಲಿ ಶ್ರೀವೇದವ್ಯಾಸದೇವರ ಪ್ರತಿಮೆಯನ್ನು ಇಟ್ಟುಕೊಳ್ಳಬೇಕು. ಇದು ಉತ್ತಮಪಕ್ಷ. ಇಲ್ಲದಿದ್ದರೆ ಭಗವಂತನ ಯಾವುದೇ ಪ್ರತಿಮೆಯಲ್ಲಿ ಶ್ರೀವೇದ-ವ್ಯಾಸದೇವರನ್ನು ಇಂದು ಆವಾಹನೆ ಮಾಡಿ, ಷೋಡಶೋಪಚಾರ ಪೂಜೆಗಳಿಂದ ಸಂತೃಪ್ತಿಪಡಿಸಿ ಧನ್ಯರಾಗಬೇಕು. ಹಾಗೂ ಕೆಳಗಿನ ಮಂತ್ರಗಳನ್ನು ಹೇಳಿ, ಅರ್ಘ್ಯವನ್ನು ನೀಡಬೇಕು.

ದ್ವೀಪೇ ಭಗಿನ್ಯಾಃ ಸ ಯಮಸ್ಯ ವಿಶ್ವಕೃತ್‌ಪ್ರಕಾಶತೇ ಜ್ಞಾನ-ಮರೀಚಿ-ಮಂಡಲಃ ಪ್ರಭಾಸಯನ್ ಅಂಡಬಹಿಸ್ತಥಾಂತಃಸಹಸ್ರಲಕ್ಷಾಮಿತ-ಭಾನು-ದೀಧಿತಿಃ ಶ್ರೀವೇದ-ವ್ಯಾಸಾಯ ನಮಃ ಇದಮರ್ಘ್ಯಂ ಇದಮರ್ಘ್ಯಂ ಇದಮರ್ಘ್ಯಂ

ಇಲ್ಲಿಗೆ ಶ್ರೀವೇದವ್ಯಾಸಜಯಂತಿಯ ಆಚರಣೆಯ ಕ್ರಮವು ಸಮಾಪ್ತವಾಯಿತು.

ಶ್ರೀಮಧ್ವಾಚಾರ್ಯರಿಂದ ಶ್ರೀವೇದವ್ಯಾಸದೇವಸ್ತುತಿ – ಜಯತ್ಯಜೋಽಖಂಡ-ಗುಣೋರು-ಮಂಡಲಃಸದೋದಿತೋ ಜ್ಞಾನ-ಮರೀಚಿ-ಮಾಲೀಸ್ವಭಕ್ತ-ಹಾರ್ದೋಚ್ಚ-ತಮೋ-ನಿಹಂತಾವ್ಯಾಸಾವತಾರೋ ಹರಿರಾತ್ಮ-ಭಾಸ್ಕರಃ ॥ ಅಗಣ್ಯದಿವ್ಯೋರುಗುಣಾರ್ಣವಃ ಪ್ರಭುಃ ಸಮಸ್ತ-ವಿದ್ಯಾಧಿಪತಿಃ ಜಗದ್ಗುರುಃ । ಅನಂತಶಕ್ತಿಃ ಜಗದೀಶ್ವರೇಶ್ವರಃ ಸಮಸ್ತದೋಷಾತಿ-ವಿದೂರವಿಗ್ರಹಃ ।

ಶುಭ-ಮರಕತವರ್ಣೋ ರಕ್ತಪಾದಾಬ್ಜ-ನೇತ್ರಾ- ಧರ-ಕರ-ನಖ-ರಸನಾಗ್ರಃ ಚಕ್ರಶಂಖಾಬ್ಜರೇಖಃ । ರವಿಕರವರಗೌರಂ ಚರ್ಮಚೈಣಂ ವಸಾನಃ ತಟಿದ-ಮಲ-ಜಟಾ-ಸಂದೀಪ್ತಚೂಡಂ ದಧಾನಃ। ವಿಸ್ತೀರ್ಣ-ವಕ್ಷಾಃ ಕಮಳಾಯತಾಕ್ಷೋ ಬೃಹದ್‌ಭುಜಃ ಕಂಬು-ಸಮಾನ-ಕಂಠಃ । ಸಮಸ್ತ-ವೇದಾನ್ ಮುಖತಃ ಸಮು-ದ್ಗಿರನ್ ಅನಂತಚಂದ್ರಾಧಿಕ-ಕಾಂತಸಮ್ಮುಖಃ । ಪ್ರಬೋಧ-ಮುದ್ರಾಭಯ-ದೋರ್ದ್ವಯಾನ್ವಿತೋ ಯಜ್ಞೋಪವೀತಾಜಿನ-ಮೇಖಲೋಲ್ಲಸನ್ । ದೃಶಾ ಮಹಾ-ಜ್ಞಾನ-ಭುಜಗಂ-ದಷ್ಟಂ ಉಜ್ಜೀವಯಾನೋ ಜಗದತ್ಯರೋಚತ ॥

ವಿಜ್ಞಾನರೋಚಿಃ ಪರಿಪೂರಿತಾಂತಃ ಬಾಹ್ಯಾಂಡಕೋಶಂ ಹರಿತೋಪ-ಲಾಭಮ್ । ತರ್ಕಾಭಯೇತಂ ವಿಧಿಶರ್ವಪೂರ್ವಗೀರ್ವಾಣವಿಜ್ಞಾನದಮಾನತೋಽಸ್ಮಿ॥

ಕಾಲೇನ ಮೀಲಿತದೃಶಾಂ ಅವಮೃಶ್ಯ ನೃಣಾಂ ಸ್ತೋಕಾಯುಷಾಂ ಸ್ವನಿಗಮೋ ಬತ ದೂರಪಾರಃ ಆವಿರ್ಹಿತಸ್ತ್ವನುಯುಗಂ ಸ ಹಿ ಸತ್ಯವತ್ಯಾಂ ವೇದದ್ರುಮಂ ವಿಟಪಶಃ ವಿಭಜಿಷ್ಯತಿ ಸ್ಮ॥

**ಜಾಮದಗ್ನ್ಯದ್ವಾದಶೀವ್ರತ (ಪರಶುರಾಮದ್ವಾದಶೀ) – ದುರ್ವಾಸಮುನಿ** – ವೈಶಾಖಮಾಸದ ಶುಕ್ಲಪಕ್ಷದ ದಶಮಿಯಲ್ಲಿಯೂ ವ್ರತ ಮಾಡುವವನು ವಿಧಿಯಂತೆ ಸಂಕಲ್ಪವನ್ನು ಮಾಡಿ, ಮತ್ಸ್ಯದ್ವಾದಶಿವ್ರತದಲ್ಲಿ ಹೇಳಿರುವಂತೆ ಏಕಾದಶಿಯ ದಿನ ಮೃತ್ತಿಕೆಯನ್ನು ಹಚ್ಚಿಕೊಂಡು ಸ್ನಾನ ಮಾಡಿ, ಬಳಿಕ ದೇವಗೃಹಕ್ಕೆ ಹೋಗಬೇಕು.

ಅಲ್ಲಿ ವಿದ್ವಾಂಸನಾದ ವ್ರತಿಯು ಭಕ್ತಿಯಿಂದ ಹರಿಯನ್ನು ಆರಾಧಿಸಿ ಈ ಮಂತ್ರಗಳಿಂದ ಎಂದರೆ, ಜಾಮದಗ್ನ್ಯಾಯ ನಮಃ ಎಂದು ಸ್ವಾಮಿಯ ಪಾದ-ಗಳನ್ನೂ, ಸರ್ವಧಾರಿಣೇ ನಮಃ ಎಂದು ಉದರವನ್ನೂ, ಮಧುಸೂದನಾಯ ನಮಃ ಎಂದು ನಡುವನ್ನೂ, ಶ್ರೀವತ್ಸಧಾರಿಣೇ ನಮಃ ಎಂದು ತೊಡೆಗಳನ್ನೂ, ಕ್ಷರಾಂತಕಾಯ ನಮಃ ಎಂದು ತೋಳುಗಳನ್ನೂ, ಶಿತಿಕಂಠಾಯ ನಮಃ ಎಂದು ಹುಬ್ಬುಗಳ ಮಧ್ಯವನ್ನೂ, ಅವುಗಳ ಹೆಸರಿನಿಂದಲೇ ಶಂಖಚಕ್ರಗಳನ್ನೂ, ಬ್ರಹ್ಮಾಂಡಧಾರಿಣೇ ನಮಃ ಎಂದು ತಲೆಯನ್ನೂ ಅರ್ಚಿಸಿ, ಹಿಂದಿನಂತೆ ದೇವ-

ನೆದುರಿಗೆ ಪೂರ್ಣಕಲಶವನ್ನು ಸ್ಥಾಪಿಸಬೇಕು. ಆ ಕಲಶದ ಮೇಲೆ ಬಿದಿರಿನ ಪಾತ್ರೆಯಲ್ಲಿ ಸುವರ್ಣದಿಂದ ಪರಶುರಾಮಮೂರ್ತಿಯನ್ನು ಮಾಡಿಸಿ, ಸ್ಥಾಪಿಸಿ ಶುದ್ಧವಸ್ತ್ರಗಳೆರಡನ್ನು ಧರಿಸಬೇಕು. ಆ ದೇವನ ಬಲಗೈಯಲ್ಲಿ ಪರಶು (ಗಂಡು-ಗೊಡಲಿ) ಇರುವಂತೆ ಮಾಡಿಸಿರಬೇಕು.

ಅರ್ಘ್ಯಪಾದ್ಯಾದಿಗಳಿಂದಲೂ, ಬಗೆ ಬಗೆಯ ಹೂವುಗಳಿಂದಲೂ, ಗಂಧಾದಿ-ಗಳಿಂದಲೂ ಚೆನ್ನಾಗಿ ಪೂಜಿಸಿ, ಅವನೆದುರುಗಡೆಯಲ್ಲಿ ಭಕ್ತಿಯಿಂದ ಧ್ಯಾನಿಸುತ್ತಾ ಜಾಗರಣೆಯನ್ನು ಮಾಡಬೇಕು. ಆ ರಾತ್ರಿಕಳೆದು ಸೂರ್ಯೋದಯವಾಗಲು ಹಿಂದಿನಂತೆ ಬ್ರಾಹ್ಮಣನಿಗೆ ಎಲ್ಲವನ್ನೂ ಅರ್ಪಿಸಬೇಕು. ಹೀಗೆ ವ್ರತವನ್ನು ಮಾಡಿದ-ವನಿಗೆ ಆಗುವ ಫಲವನ್ನು ಹೇಳುವೆನು. ಕೇಳು.

ಹಿಂದೆ ಅತಿಬಲಶಾಲಿಯೂ, ಭಾಗ್ಯವಂತನೂ ಆದ ವೀರಸೇನನೆಂಬ ದೊರೆಯಿದ್ದನು. ಬಲು ಒಳ್ಳೆಯ ಮನಸ್ಸುಳ್ಳ ಅವನು ಮಕ್ಕಳಿಲ್ಲದುದರಿಂದ ಕಠಿಣವಾದ ತಪಸ್ಸನ್ನು ಮಾಡುತ್ತಿದ್ದನು. ಆಗ ಅವನನ್ನು ನೋಡಲು ಯಾಜ್ಞವಲ್ಕ್ಯ ಮಹಾಮುನಿಯು ಅಲ್ಲಿಗೆ ಬಂದನು. ಸ್ವಲ್ಪದೂರದಲ್ಲಿ ಬರುತ್ತಿದ್ದ ಪರಮ-ತೇಜಸ್ವಿಯಾದ ಅವನನ್ನು ಕಂಡು ವೀರಸೇನನು ಕೈಮುಗಿದುಕೊಂಡು, ಎದುರು-ಗೊಂಡನು.

ಪೂಜಿತನಾದ ಆ ಮುನಿಯು ''ಧರ್ಮಜ್ಞನಾದ ರಾಜನೇ! ಏಕೆ ತಪಸ್ಸನ್ನು ಮಾಡುತ್ತಿರುವಿ? ನಿನಗಿಷ್ಟವಾದ ಕಾರ್ಯವೇನು?'' ಎಂದು ಕೇಳಿದನು.

ದೊರೆಯು ''ಮಹಾಭಾಗನೇ! ನನಗೆ ಪುತ್ರಸಂತಾನವಿಲ್ಲ. ಆದುದರಿಂದ ತಪಸ್ಸನ್ನು ಮಾಡಿ ದೇಹವನ್ನು ಕ್ಷಯಿಸುವೆನು'' ಎಂದು ಹೇಳಿದನು. ಯಾಜ್ಞವಲ್ಕ್ಯನು – ''ದೊರೆಯೇ! ಬಹುಕ್ಲೇಶದ ಈ ತಪವು ಸಾಕು. ಅಲ್ಪಾಯಾಸದಿಂದಲೇ ನಿನಗೆ ಮಗನು ಜನಿಸುವನು. ಸಂಶಯವಿಲ್ಲ'' ಎಂದನು.

ರಾಜನು – ''ಪೂಜ್ಯನಾದ ಬ್ರಾಹ್ಮಣನೇ! ಸ್ವಲ್ಪಶ್ರಮದಿಂದಲೇ ಹೇಗೆ ನನಗೆ ಪುತ್ರನುದಿಸುವನು? ನಮಸ್ಕರಿಸುವ ನನಗೆ ಪ್ರೀತಿಯಿಂದ ಇದನ್ನು ಹೇಳು'' ಎಂದನು.

ದುರ್ವಾಸಮುನಿ – ಕೀರ್ತಿವಂತನಾದ ವೀರಸೇನರಾಜನು ಹೀಗೆ ಕೇಳಲು ಯಾಜ್ಞವಲ್ಕ್ಯಮುನಿಯು ವೈಶಾಖಶುಕ್ಲಪಕ್ಷದ ಈ ದ್ವಾದಶಿಯ ವ್ರತವನ್ನು ಉಪದೇಶಿಸಿದನು. ಪುತ್ರನನ್ನು ಪಡೆಯಬೇಕೆಂಬ ಹೆಚ್ಚಾದ ಆಸೆಯುಳ್ಳ ಆ ರಾಜನು ಉಪವಾಸವ್ರತವನ್ನು ಮಾಡಿ, ಪರಮಧಾರ್ಮಿಕನೆಂದೂ ಪುಣ್ಯಶ್ಲೋಕನೆಂದೂ ಈಗಲೂ ಹೊಗಳಿಸಿಕೊಳ್ಳುವವನೂ ಆದ ನಳನೆಂಬ ಪುತ್ರನನ್ನು ಪಡೆದನು. ಮಹಾಮುನಿಯೇ! ಈ ವ್ರತಕ್ಕೆ ಇದು ಅಮುಖ್ಯವಾದ ಫಲ (ಇದೇ ಮುಖ್ಯಫಲವಲ್ಲ). ವ್ರತಿಗೆ ಈ ಜನ್ಮದಲ್ಲಿ ಸುಪುತ್ರನುದಿಸುವನು. ಅವನು ಕೀರ್ತಿ-ವಂತನೂ, ಶ್ರೀಮಂತನೂ, ವಿದ್ಯಾವಂತನೂ ಆಗುವನೆಂಬುದರಲ್ಲಿ ಆಶ್ಚರ್ಯವೇ? ಪರಲೋಕದಲ್ಲಾಗುವುದನ್ನು ಕೇಳು.

ಈ ವ್ರತವನ್ನು ಮಾಡುವವರು ಒಂದು ಕಲ್ಪಕಾಲ ಬ್ರಹ್ಮಲೋಕದಲ್ಲಿದ್ದು ಅಪ್ಸರಸ್ತ್ರೀಯರ ಸಮೂಹಗಳೊಡನೆ ವಿಹರಿಸುವರು. ತಿರುಗಿ ಸೃಷ್ಟಿಯಲ್ಲಿ ಚಕ್ರವರ್ತಿಗಳಾಗಿ ಹುಟ್ಟಿ, ಮೂವತ್ತುಸಾವಿರಕಲ್ಪಕಾಲ ಜೀವಿಸುವರು. ಇದರಲ್ಲಿ ಸಂದೇಹವಿಲ್ಲ.

ಮಧುಸೂದನ ಪೂಜಾ – ಈ ದಿನ ವೈಶಾಖ ಮಧುಸೂದನನ ಪೂಜೆಯಿಂದ ಅಗ್ನಿಷ್ಟೋಮ ಯಾಗದ ಫಲವು ಬರುತ್ತದೆ; ಸೋಮಲೋಕ ಪ್ರಾಪ್ತಿಯಾಗುತ್ತದೆ. ಈ ದಿನ ಗುರು, ಮಂಗಳರು ಸಿಂಹರಾಶಿಯಲ್ಲೂ, ಸೂರ್ಯನು ಮೇಷರಾಶಿಯಲ್ಲೂ ಇದ್ದು, ಹಸ್ತ ನಕ್ಷತ್ರ, ವ್ಯತೀಪಾತ ಯೋಗಗಳು ಇದ್ದರೆ ಯೋಗವಿಶೇಷವು. ಗೋ, ಭೂ, ಹಿರಣ್ಯ, ವಸ್ತ್ರದಾನಗಳಿಂದ ಸರ್ವ ಪಾಪವು ಪರಿಹಾರವಾಗುತ್ತದೆ. ಶ್ರೀಮಧ್ವಾಚಾರ್ಯರು ಮಧುಸೂದನ ದಾನವ ಸೂದನ ವಂದೇ ದೈವತಮೋದಿತ ವೇದಿತ ಪಾದ ಎಂದು ದ್ವಾದಶಸ್ತೋತ್ರದಲ್ಲಿ ಮಧುಸೂದನನ್ನು ಸ್ತುತಿಸಿರುವರು.

ಜಾಮದಗ್ನಿ ದ್ವಾದಶೀ/ಪೀತಕ ದ್ವಾದಶೀ ಇಂದು ಪರಶುರಾಮದೇವರ ಪೂಜೆಯನ್ನು ಮಾಡತಕ್ಕದ್ದು. ಶ್ರೀಮದಾಚಾರ್ಯರ ತಂತ್ರಸಾರ ಸಂಗ್ರಹದಲ್ಲಿ ಭಗವಂತನ ಪರಶುರಾಮಾವತಾರವನ್ನು ಉಲ್ಲೇಖಿಸುವ ಈ ಸ್ತೋತ್ರದಲ್ಲಿ ಪರಶುರಾಮನನ್ನು ಯಾವ ರೀತಿ ಧ್ಯಾನಿಸಬೇಕೆಂದು ನಿರೂಪಿಸಲಾಗಿದೆ. ಅಂಗಾರವರ್ಣಮಭಿತೋಂಡಬಹಿಃ ಪ್ರಭಾಭಿರ್ವ್ಯಾಪ್ತಂ ಪರಶ್ವಧಧನುರ್ಧರಮೇಕ

ವೀರಮ್ । ಧ್ಯಾಯೇದಜೇಶಪುರುಹೂತಮುಖೈಸ್ತುವದ್ಭಿರಾವೀತಮಾತ್ಮಪದವೀಂ ಪ್ರತಿಪಾದಯಂತಮ್ ॥ 1 ॥

## ವೈಶಾಖ ॥ ಶುಕ್ಲ ॥ ಚತುರ್ದಶೀ

ನೃಸಿಂಹಜಯಂತೀ – ವೈಶಾಖ ಶುಕ್ಲ ಚತುರ್ದಶಿಯದು ಸಾಯಂಕಾಲ ನರಸಿಂಹದೇವರ ಪೂಜೆ. ಈ ದಿನ ಸ್ವಾತಿ ನಕ್ಷತ್ರ , ಶನಿವಾರ, ಸಿದ್ಧಯೋಗ, ವಣಿಕ ಕರಣಗಳು ಇದ್ದರೆ ಪ್ರಶಸ್ತ. ಧಾನ್ಯದ ಮೇಲೆ ಉದಕುಂಭದಲ್ಲಿ ಯಥಾಶಕ್ತಿ ಸುವರ್ಣದಿಂದ ನಿರ್ಮಿತವಾದ ಲಕ್ಷ್ಮೀನೃಸಿಂಹದೇವರ ಪ್ರತಿಮೆಯನ್ನು ಸ್ಥಾಪಿಸಿ ಸಾಯಂಕಾಲದಲ್ಲಿ ಪೂಜಿಸುವ ಕ್ರಮವಿದೆ. ಹೊಸ್ತಿಲಿನಲ್ಲಿ ಪೂಜಿಸುವ ಕ್ರಮವೂ ಇದೆ. ಶ್ರೀನರಸಿಂಹದೇವರಿಗೆ ವಿಶೇಷ ಪಂಚಾಮೃತಗಳನ್ನು ನೆರವೇರಿಸಿ, ಶ್ರೀನೃಸಿಂಹ-ದೇವರ ಪ್ರತಿಮೆಗೆ ಗಂಧಲೇಪನವನ್ನು ಮಾಡಿ ಪೂಜಿಸಬೇಕು.

ಅರ್ಘ್ಯಮಂತ್ರ– ಪರಿತ್ರಾಣಾಯ ಸಾಧೂನಾಂ ಜಾತೋ ವಿಷ್ಣುರ್ನೃಕೇಸರೀ । ಅನೇನಾರ್ಘ್ಯಪ್ರದಾನೇನ ಸಫಲಾಃ ಸ್ಯುರ್ಮನೋರಥಾಃ ॥ ಪ್ರಾರ್ಥನಾ ಮಂತ್ರ– ಮದ್ವಂಶೇ ಯೇ ನರಾ ಜಾತಾ ಯೇ ಜನಿಷ್ಯಂತಿ ಚಾಪರೇ । ತಾನ್ ಸಮುದ್ಧರ ದೇವೇಶ ದುಸ್ತರಾದ್ ಭವಸಾಗರಾತ್ ॥1॥ ಪಾತಕಾರ್ಣವಮಗ್ನಸ್ಯ ವ್ಯಾಧಿದುಃಖಾಂಬುವಾರಿಭಿಃ । ತೀವ್ರೈಶ್ಚ ಪರಿಭೂತಃ ಸ ಮಹಾದುಃಖಗತಸ್ಯತೀ ॥2॥ ಕರಾವಲಂಬನಂ ದೇಹಿ ಶೇಷಶಾಯಿನ್ ಜಗತ್ಪತೇ । ಶ್ರೀನೃಸಿಂಹ ರಮಾಕಾಂತ ಭಕ್ತಾನಾಂ ಭಯನಾಶನ ॥3॥ ಕ್ಷೀರಾಂಬುನಿಧಿವಾಸಿರಿಸ್ತ್ವಂ ಚಕ್ರಪಾಣೇ ಜನಾರ್ದನ । ವ್ರತೇನಾನೇನ ದೇವೇಶ ಭುಕ್ತಿಮುಕ್ತಿ ಪ್ರದೋ ಭವ ॥4॥

ಈ ದಿವಸ ಕೋಸಂಬರಿ, ಬೆಲ್ಲದ ಪಾನಕ, ನೀರುಮಜ್ಜಿಗೆಯನ್ನು ದೇವರಿಗೆ ಮತ್ತು ರಾಯರಿಗೆ ಸಮರ್ಪಿಸಿ, ಬ್ರಾಹ್ಮಣ- ಸುವಾಸಿನಿಯರಿಗೆ ವಿತರಿಸುವುದು. (ಹೆಚ್ಚಿನ ವಿವರಣೆಗಾಗಿ ನಮ್ಮ ಸಂಸ್ಥೆಯ 'ನರಸಿಂಹಜಯಂತೀ' ಪುಸ್ತಕವನ್ನು ನೋಡಿರಿ.

ತ್ರಯೋದಶೀ ಚತುರ್ದಶೀ ಹುಣ್ಣಿಮೆಗಳೆಂಬ ಅಂತ್ಯಪುಷ್ಕರಿಣೀ – ವೈಶಾಖಶುಕ್ಲಪಕ್ಷದ ತ್ರಯೋದಶೀ ಚತುರ್ದಶೀ ಹುಣ್ಣಿಮೆಗಳೆಂಬ ಮೂರು ತಿಥಿಗಳನ್ನು

ಒಟ್ಟಾಗಿ 'ಅಂತ್ಯಪುಷ್ಕರಿಣೀ' ಎನ್ನಲಾಗಿದೆ. ವೈಶಾಖಸ್ನಾನದ ಕೊನೆಯ ಮೂರು ದಿನಗಳು ಇವು. ಪೂರ್ಣವೈಶಾಖಸ್ನಾನವನ್ನು ವಿಧಿಬದ್ಧವಾಗಿ ಆಚರಿಸಲಾಗದಿದ್ದರೂ ಈ ಮೂರು ದಿನಗಳಲ್ಲಾದರೂ ಅರುಣೋದಯಕಾಲದೊಳೆದ್ದು ನದೀ, ಸಮುದ್ರಾಗಳಲ್ಲಿ ಸ್ನಾನ ಮಾಡುವುದು ಪರಮಫಲದಾಯಕ.

ಶ್ರೀ ರಘುರತ್ನತೀರ್ಥರು (ಪಲಿಮಾರು ಮಠ) ವೈಶಾಖ ಶುದ್ಧ ಚತುರ್ದಶಿ ಇವರು ಪರಂಪರೆಯಲ್ಲಿ ಇಪ್ಪತ್ತೈದನೆಯವರು ಇವರು ಸರ್ವಮೂಲ ಗ್ರಂಥ ಇತರ ಅನೇಕ ಅಪೂರ್ವ ಗ್ರಂಥಗಳನ್ನು ಸ್ತೋತ್ರಗಳನ್ನು ಎಲ್ಲವನ್ನೂ ಕ್ರೋಢೀಕರಿಸಿ ಸ್ವಹಸ್ತದಲ್ಲಿ ಪ್ರತಿ ತೆಗೆದಿಟ್ಟಿರುವವರು. ಮಠದ ಪೀಳಿಗೆಯನ್ನು ಸಂಗ್ರಹಿಸಿ ಕ್ರಮಬದ್ಧವಾಗಿ ಬರೆದಿಟ್ಟಿರುವವರು. ಇವತ್ತು ನಾವು ಈ ಮಠದ ಗುರುಪರಂಪರೆಯ ಬಗೆಗೆ ಏನಾದರೂ ಮಾಹಿತಿಯನ್ನು ಪಡೆಯಬೇಕಾದರೆ ಇವರು ಬರೆದಿಟ್ಟಿರುವ ಈ ಸಂಗ್ರಹವೇ ಮೂಲಾಧಾರ. ಇವರು ನಾಲ್ಕು ದಶಕಗಳ ಕಾಲ ಪೀಠದಲ್ಲಿದ್ದು ಶಾ.ಶ. 1806 (ಕ್ರಿ .ಶ. 1883) ಸ್ವಭಾನು ಸಂವತ್ಸರದ ವೈಶಾಖ ಶುದ್ಧ ಚತುರ್ದಶಿಯಂದು ಕಾಂತಾವರ ಮಠದಲ್ಲಿ ವೃಂದಾವನಸ್ಥರಾದರು.

## ವೈಶಾಖ || ಶುದ್ಧ || ಪೂರ್ಣಿಮೆ

ವ್ಯಾಸಪೂರ್ಣಿಮಾ – ವರ್ಷದಲ್ಲಿ ಬರುವ ಮೂರು ವ್ಯಾಸಪೂರ್ಣಿಮೆ-ಗಳಲ್ಲಿ ಇದು ಮೊದಲನೆಯದ್ದು. ಇಂದು ಭಕ್ತಿಯಿಂದ ವೇದವ್ಯಾಸದೇವರನ್ನು ಆರಾಧನೆ ಮಾಡಬೇಕು. ಪ್ರತ್ಯಕ್ಷಗುರುಗಳಲ್ಲಿ ವ್ಯಾಸಪೂಜೆ ಮಾಡಬೇಕು.

ಈ ದಿನ ಪ್ರಾತಃಕಾಲದಲ್ಲಿಯೇ ನಿತ್ಯನೈಮಿತ್ತಿಕ ಕರ್ಮಗಳನ್ನು ಪೂರೈಸಿ, ಅಂದರೆ ಪಂಚಾಮೃತ, ತುಳಸೀ ಅರ್ಚನೆಗಳನ್ನು ಮುಗಿಸಿದ ನಂತರ ಬ್ರಾಹ್ಮಣರ ಮುಖಾಂತರ ಮಾಸಮಹಿಮೆಯನ್ನು ಹೇಳಿಸಿ, ವೇದವ್ಯಾಸದೇವರಿಗೆ ಮತ್ತು ರಾಯರಿಗೆ ನೆನಸಿದ ಹೆಸರುಬೇಳೆಯನ್ನು ಸಮರ್ಪಣಮಾಡಿ ವೇದವ್ಯಾಸದೇವರಿಗೆ ಮತ್ತು ರಾಯರಿಗೆ ಎರಡೆರಡು ಮಂಗಳಾರತಿಗಳನ್ನು ಮಾಡಬೇಕು. ಆನಂತರ ಪುರಾಣ ಹೇಳಿದ ಬ್ರಾಹ್ಮಣರಿಗೆ ಗಂಧ-ಅಕ್ಷತೆ-ನೂತನ ವಸ್ತ್ರ-ತಾಂಬೂಲಾಗಳನ್ನು ನೀಡಿ ಹಾರವನ್ನು ಹಾಕಿ, ದೇವರಿಗೆ ಅಭಿಷೇಕ ಮಾಡಿದ ತೀರ್ಥವನ್ನು ಬೇರೆಯಾಗಿ ತೆಗೆಟ್ಟುಕೊಂಡು ಆ

ತೀರ್ಥವನ್ನು ಪುರಾಣ ಹೇಳಿದವರಿಗೆ ಕೊಟ್ಟು ಮಂಗಳಾರತಿಯನ್ನು ಮಾಡಿ, ನಿವೇದನ ಮಾಡಿದ ಹೆಸರುಬೇಳೆಯನ್ನು ಅವರಿಗೆ ಸಮರ್ಪಿಸಬೇಕು.

**ಕೂರ್ಮಜಯಂತೀ – ಕೂರ್ಮ ಜಯಂತಿಯ ಆಚರಣೆ** * ದಶಾವತಾರಗಳ ಜಯಂತಿಯನ್ನು ಅವಶ್ಯವಾಗಿ ಆಚರಣೆ ಮಾಡಬೇಕು. ಎರಡನೆಯ ಕೂರ್ಮಾವತಾರದ ಜಯಂತಿಯನ್ನು ವೈಶಾಖಮಾಸದ ಶುಕ್ಲಪಕ್ಷದ ಪೂರ್ಣಿಮೆ-ಯ ದಿವಸ ಆಚರಣೆ ಮಾಡಬೇಕು. * ಬೆಳಿಗ್ಗೆ ಎದ್ದ ಕೂಡಲೇ ಬಂಗಾರದ ಮಂದರ ಪರ್ವತವನ್ನು ಬೆನ್ನಿನಲ್ಲಿ ಧರಿಸಿದ ಹಸನ್ಮುಖಿಯಾದ ಕೂರ್ಮ-ರೂಪಿಯಾದ ಭಗವಂತನ ಧ್ಯಾನವನ್ನು ಹೃದಯದಲ್ಲಿ ಮಾಡಬೇಕು. * ಪೂಜಾ ಸಂದರ್ಭದಲ್ಲಿ ಷೋಡಶೋಪಚಾರಪೂಜೆಯನ್ನು ಕೂರ್ಮರೂಪಿಯಾದ ಭಗವಂತನಿಗೆ ಅವಶ್ಯವಾಗಿ ಮಾಡಲೇಬೇಕು. * ಕೂರ್ಮರೂಪಿಯಾದ ಭಗವಂತನಿಗೆ ಕ್ಷೀರಾಭಿಷೇಕವು ಬಹಳ ಇಷ್ಟವಂತೆ. ಯಾರು ಕ್ಷೀರಾಭಿಷೇಕವನ್ನು ಮಾಡುತ್ತಾರೋ, ಅವರಿಗೆ ವಿಶೇಷ ಸಂಪತ್ತು ದೊರಕುತ್ತದೆಂದು ಪ್ರತೀತಿಯು ಇರುತ್ತದೆ. ಆದ್ದರಿಂದ ಕೂರ್ಮರೂಪಿಯಾದ ಭಗವಂತನಿಗೆ ಅವಶ್ಯವಾಗಿ ಕ್ಷೀರಾಭಿಷೇಕವನ್ನು ಮಾಡಬೇಕು. ಮತ್ತು ಆ ಸಂದರ್ಭದಲ್ಲಿ ಕ್ಷೀರಸಮುದ್ರದ ಕ್ಷೀರವನ್ನು ಸ್ಮರಿಸುತ್ತಾ, ಆ ಸಂಪೂರ್ಣ ಕ್ಷೀರವನ್ನು ಲಕ್ಷ್ಮೀದೇವಿಯು ಅಭಿಷೇಕ-ಗೈಯ್ಯುತ್ತಾಳೆಂದು ಚಿಂತಿಸಬೇಕು. * ಕನಿಷ್ಠಪಕ್ಷ ಪಾಯಸ, ಚಿತ್ರಾನ್ನಗಳ ನೈವೇದ್ಯ ಸಮರ್ಪಣೆಯನ್ನು, ಸಾಧ್ಯವಾದಲ್ಲಿ ಭಕ್ಷ್ಯಭೋಜ್ಯಗಳ ಸಮರ್ಪಣೆಯನ್ನು ಮಾಡಿ, ಕೂರ್ಮರೂಪಿಯಾದ ಭಗವಂತನ ಅನುಗ್ರಹವನ್ನು ಪ್ರಾರ್ಥಿಸಬೇಕು. * 'ಕೂರ್ಮೋ ಹರಿರ್ಮಾಂ ನಿರಯಾದ ಶೇಷಾತ್' ಇಹಲೋಕದಲ್ಲಿ ಪರ-ಲೋಕದಲ್ಲಿ ಅನುಭವಿಸಬೇಕಾದ ಎಲ್ಲ ಬಗೆಯ ನರಕಗಳಿಂದ ಎನ್ನನ್ನು ಪಾರು ಮಾಡು. ನಿರಂತರ ವೇದಾಂತದ ಅಧ್ಯಯನವು ನಡೆಯುವಂತೆ ಅನುಗ್ರಹಿಸು. ಮೋಕ್ಷಮಾರ್ಗವನ್ನು ಕರುಣಿಸು ಎಂದು ಪ್ರಾರ್ಥಿಸಬೇಕು. * ಯಾರಿಗೆ ಸಂಪತ್ತಿನ ಅಪೇಕ್ಷೆಯು ಇರುತ್ತದೋ, ಅವರು ಸಂಕಲ್ಪವನ್ನು ಮಾಡಿ, ಕ್ಷೀರಾಭಿ-ಷೇಕವನ್ನು ಮಾಡಿ, ನೈವೇದ್ಯ ಸಂದರ್ಭದಲ್ಲಿ ಸುವರ್ಣವನ್ನು ಸಮರ್ಪಣೆ ಮಾಡಿ, ಬ್ರಾಹ್ಮಣರಿಗೆ ಸುವರ್ಣದಾನವನ್ನು ಮಾಡಿ, ಕೃಷ್ಣಾರ್ಪಣವನ್ನು ಹೇಳುವ

ಸಂದರ್ಭದಲ್ಲಿ ಕೂರ್ಮರೂಪಿಯಾದ ಭಗವಂತನು ಸಂಪ್ರೀತನಾಗಿ ನನಗೆ ಇಂಥ ಸಂಪತ್ತನ್ನು ಕರುಣಿಸಲಿ ಎಂದು ಪ್ರಾರ್ಥಿಸಬೇಕು. * ಕೂರ್ಮರೂಪಿಯಾದ ಭಗವಂತನಿಗೆ ಕ್ಷೀರಾಭಿಷೇಕವು ಹೇಗೆ ಬಹಳ ಇಷ್ಟವೋ, ಅದರಂತೆ ಸುವರ್ಣ ದಾನವೂ ಕೂಡ ಇಷ್ಟವಾಗಿದೆ. * ಕೂರ್ಮರೂಪಿಯಾದ ಭಗವಂತನನ್ನು ಉಪಾಸನೆ ಮಾಡುವಾಗ ಮಂದರಗಿರಿಯನ್ನು ಹೊತ್ತುಕೊಂಡು ಅದನ್ನು ದೇವತೆಗಳು ಕ್ಷೀರಸಾಗರದಲ್ಲಿ ಮಥನ ಮಾಡುವ ರೂಪವನ್ನು ಚಿಂತಿಸುವುದು ವಿಶೇಷಫಲದಾಯಕವಾಗಿದೆ. * 'ಕಟ್ಯಾದೌ ಕೂರ್ಮರೂಪಾಯ ತಪನೀಯ-ವರ್ಣಾಯ ಕಿರೀಟಾದಿವಿಭೂಷಿತಾಯ ಚಕ್ರಶಂಖಗದಾಪದ್ಮಧರಾಯ ವೇದವತೀ-ಸಹಿತಾಯ ಕೂರ್ಮಾಯ ನಮಃ' ಎಂಬುದಾಗಿ ಹೇಳುತ್ತಾ ಕಟಿಭಾಗದ ಕೆಳಭಾಗದಲ್ಲಿ ಕೂರ್ಮರೂಪವನ್ನು ಧಾರಣೆ ಮಾಡಿ, ಭಕ್ತರ ಉದ್ಧಾರಕ್ಕಾಗಿ ಕಟಿಭಾಗದ ಮೇಲ್ಭಾಗದಲ್ಲಿ ಚತುರ್ಭುಜನಾದ ವಿಷ್ಣುವಿನ ರೂಪವನ್ನು ತಾಳಿ, ಚಕ್ರಶಂಖವರ-ಅಭಯಮುದ್ರೆಗಳನ್ನು ಧರಿಸಿ, ವೇದವತೀ ಎಂಬ ಲಕ್ಷ್ಮೀಸಹಿತನಾಗಿ ನನ್ನ ಮೇಲೆ ಕರುಣಾಪೂರ್ಣವಾದ ಮಂದಹಾಸ ಪೂರಿತವಾದ ದೃಷ್ಟಿಯನ್ನು ಬೀರುತ್ತಾ ಅನುಗ್ರಹಿಸುತ್ತಿರುವ, ಕೂರ್ಮರೂಪಿಯಾದ ಭಗವಂತನಿಗೆ ನಿರಂತರ ನನ್ನ ನಮನಗಳು ಎಂದು ಚಿಂತನೆ ಮಾಡಬೇಕು. * ಹಾಗೂ ಪೂಜಾ-ಸಂದರ್ಭದಲ್ಲಿ ಈ ಮಂತ್ರಗಳನ್ನು ಹೇಳಬೇಕು - ಕೂರ್ಮಾಯ ನಮಃ ಪಾದೌ ಪೂಜಯಾಮಿ, ನಾರಾಯಣಾಯ ನಮಃ ಕಟಿಂ ಪೂಜಯಾಮಿ, ಸಂಕರ್ಷಣಾಯ ನಮಃ ಉದರಂ ಪೂಜಯಾಮಿ, ವಿಶೋಕಾಯ ನಮಃ ಉರಃ ಪೂಜಯಾಮಿ, ಭವಾಯ ನಮಃ ಕಂಠಂ ಪೂಜಯಾಮಿ, ಸುಬಾಹುವೇ ನಮಃ ಭುಜೌ ಪೂಜ-ಯಾಮಿ, ವಿಶಾಲಾಯ ನಮಃ ಶಿರಃ ಪೂಜಯಾಮಿ. * ಕೂರ್ಮಜಯಂತಿಯಂದು ಮನೆಮಂದಿಯವರೆಲ್ಲರೂ ಅವಶ್ಯವಾಗಿ ಈ ಮಂತ್ರವನ್ನು ಹೇಳಿ, ಅರ್ಘ್ಯವನ್ನು ನೀಡಲೇ ಬೇಕು - ತುಭ್ಯಂ ನಮಸ್ಕ್ರಿಯಾಂ ಕುರ್ಮಃ ಕೂರ್ಮರೂಪಾಯ ವೇಧಸೇ । ಧಾರಿಣೇ ಮಂದರಸ್ಯಾದ್ರೇಃ ವಿಪ್ನಡಾನಂದಾದಾಯಿನೇ ॥ ಭಾರತೀ-ರಮಣಮುಖ್ಯಪ್ರಾಣಾಂತರ್ಗತ ವೇದವತೀಸಹಿತಕೂರ್ಮಾಯ ಇದಮರ್ಘ್ಯ-ಮಿದರ್ಘ್ಯಮಿದಮರ್ಘ್ಯಂ * ಪೂಜೆಯ ಕೊನೆಯಲ್ಲಿ ಈ ಮಂತ್ರಗಳನ್ನು ಹೇಳಿ ಪ್ರಾರ್ಥನೆಯನ್ನು ಮಾಡಬೇಕು. ಕೂರ್ಮಸ್ವರೂಪಕಮಂದರಧಾರಿನ್ ಲೋಕ-

ವಿಧಾರಕ ದೇವ-ವರೇಣ್ಯ ಸುರ-ದಿತಿಜ-ಸುಬಲ-ವಿಲುಳಿತ-ಮಂದರ- ಧರ ಪರ ಕೂರ್ಮ ಹೇ ಭವ ಮಮ ಶರಣಮ್ ।। ಕ್ಷೀರೋದಧಾವಮರ-ದಾನವ-ಯೂಥಪಾನಾಂ ಉನ್ಮಥ್ನತಾಮಮೃತಲಬ್ಧಯ ಆದಿದೇವಃ ಪೃಷ್ಠೇನ ಕಚ್ಛಪವಪುರ್ವಿದ-ಧಾರ ಗೋತ್ರಂ ನಿದ್ರೇಕ್ಷಣೋಽದ್ರಿಪರಿವರ್ತಕಷಾಣಕಂಡೂಃ ।। ಮಂದರಾದ್ರಿ-ರ್ಧೃತೋ ಯೇನ ಪ್ರಾಪ್ತೇ ಹ್ಯಮೃತಮಂಥನೇ ಅತಿಕರ್ಕಶದೇಹಾಯ ತಸ್ಮೈ ಕೂರ್ಮಾತ್ಮನೇ ನಮಃ ।। * ಮಧ್ಯಾಹ್ನ ಹಾಗೂ ಸಾಯಂಕಾಲಗಳಲ್ಲಿಯೂ ಕೂರ್ಮರೂಪಿಯಾದ ಭಗವಂತನ ಧ್ಯಾನ, ಉಪಾಸನೆಗಳನ್ನು ಆಚರಿಸಬೇಕು. * ಕೂರ್ಮದ್ವಾದಶೀವ್ರತವನ್ನು ಪುಷ್ಯಮಾಸದಲ್ಲಿ ಮಾಡಬೇಕೆಂದು ವರಾಹ-ಪುರಾಣವು ಹೇಳುತ್ತದೆ. * ಕೂರ್ಮಜಯಂತಿಯನ್ನು ಆಚರಣೆ ಮಾಡಿ, ಕೂರ್ಮರೂಪಿಯಾದ ಭಗವಂತನ ಅನುಗ್ರಹಕ್ಕೆ ಪಾತ್ರನಾದರೆ ಸುಲಭವಾಗಿ ಮೋಕ್ಷವು ದೊರಕುತ್ತದೆ. * ಈ ಕೃತಿಯಲ್ಲಿ ನೀಡಿದ ಕೂರ್ಮಸ್ತೋತ್ರಗಳನ್ನು ಕೂರ್ಮಜಯಂತಿಯಂದು ಸಮಯ ಮಾಡಿಕೊಂಡು ಅವಶ್ಯವಾಗಿ ಪಾರಾಯಣ ಮಾಡಬೇಕು. ಹಾಗೂ ಕೂರ್ಮರೂಪಿಯಾದ ಭಗವಂತನ ಬಗ್ಗೆ ಪ್ರವಚನ ಕೇಳಬೇಕು. ಗೊತ್ತಿರುವ ವಿಷಯವನ್ನು ಮತ್ತೊಬ್ಬರಿಗೆ ತಿಳಿಸುವ ಮೂಲಕ ಪ್ರವಚನ ಮಾಡಬೇಕು. * ಕೂರ್ಮರೂಪಿಯಾದ ಭಗವಂತನಿಗೆ ಸಂಬಂಧ-ಪಟ್ಟ ದಾಸರ ಪದ್ಯಗಳನ್ನು ಸ್ತ್ರೀಯರು ಹೇಳಿಕೊಳ್ಳಬೇಕು. ಭಗವಂತನ ಲೀಲೆಗಳನ್ನು ಪುನಃ ಪುನಃ ಮನನ ಮಾಡುತ್ತಾ, ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕು.

ಶ್ರೀಲಕ್ಷ್ಮೀನಾಥತೀರ್ಥರು (ಶ್ರೀಪಾದರಾಜ ಮಠ) ಅಬ್ಬೂರು ಶ್ರೀಶ್ರೀ-ಪಾದರಾಜಪಾದಕಮಲೇ ಭ್ರಮರಾಯಿತಂ । ಬ್ರಹ್ಮಣ್ಯಪುರವಾಸಂ ತಂ ಲಕ್ಷ್ಮೀನಾಥ ಗುರುಂ ಭಜೇ ।।

ಶ್ರೀವಿದ್ಯಾನಿಧಿತೀರ್ಥರು (ಪಲಿಮಾರು ಮಠ) ಪರಂಪರೆಯಲ್ಲಿ ಹನ್ನೊಂ-ದನೆಯವರು. ಗುರುವಿಗೆ ತಕ್ಕ ಶಿಷ್ಯ. ಇವರು ಹೆಚ್ಚಿನ ಸಮಯ ಶಾಸ್ತ್ರಪ್ರವ-ಚನದಲ್ಲೇ ಕಳೆದರು. ಇವರು ಶ್ರೀವಾದಿರಾಜರ ಸಮಕಾಲೀನರು. ಹನ್ನೆರಡು ವರ್ಷಗಳ ಕಾಲ ಪೀಠಸ್ಥರಾಗಿದ್ದರು. ಶಾ.ಶ. 1429 (ಕ್ರಿ.ಶ. 1514) ಶ್ರೀ ಮುಖ-ಸಂವತ್ಸರದ ವೈಶಾಖಪೂರ್ಣಿಮೆಯಂದು ಪಲಿಮಾರಿನ ಮಠದಲ್ಲೇ ವೃಂದಾ-ವನಸ್ಥರಾದರು.

ಶ್ರೀ ರಾಜೇಂದ್ರತೀರ್ಥರು (ವ್ಯಾಸರಾಜ ಮಠ) (ಕ್ರಿ.ಶ. 1360-1380) ವಿಬುಧೇಂದ್ರಮುಖಾನ್ ಶಿಷ್ಯಾನ್ ನವಕೃತ್ವಾ ಸುಧಾಂಸುಧೀಃ। ಯೋऽಪಾಠಯತ್ ಸ ರಾಜೇಂದ್ರತೀರ್ಥೋರ್ ಭೂಯಾದಭೀಷ್ಟದಃ ॥ ಇವರು ಶ್ರೀ ವಿದ್ಯಾಧಿರಾಜರಲ್ಲಿ ವ್ಯಾಸಂಗ ಮಾಡುತ್ತಿದ್ದ ಪ್ರಮುಖ ಶಿಷ್ಯರಲ್ಲಿ ಒಬ್ಬರು. ಶ್ರೀ ವಿದ್ಯಾಧಿರಾಜರು ಇಬ್ಬರು ಶಿಷ್ಯರಿಗೆ ಸನ್ಯಾಸದೀಕ್ಷೆಯನ್ನು ಕೊಟ್ಟು ಅವರಿಗೆ ಕ್ರಮವಾಗಿ ಶ್ರೀ ರಾಜೇಂದ್ರತೀರ್ಥರು ಮತ್ತು ಶ್ರೀ ಕವೀಂದ್ರತೀರ್ಥರು ಎಂದು ನಾಮಕರಣ ಮಾಡಿದರು. ಜ್ಯೇಷ್ಠರಾದ ಶ್ರೀ ರಾಜೇಂದ್ರತೀರ್ಥರ ಪೀಳಿಗೆಯೇ ಪೂರ್ವಾದಿಮಠವೆಂದು ಪ್ರಸಿದ್ಧವಾಯಿತು. ಶ್ರೀ ರಾಜೇಂದ್ರತೀರ್ಥರು ಅತ್ಯಂತ ಪ್ರತಿಭಾವಂತ ವಾದಿಭಯಂಕರರಾಗಿದ್ದರು. ದಕ್ಷಿಣ ಭಾರತದಲ್ಲಿಯೇ ಹೆಚ್ಚಾಗಿ ಪ್ರಚಾರದಲ್ಲಿದ್ದ ದ್ವೈತಸಿದ್ಧಾಂತವನ್ನು ಉತ್ತರ ಭಾರತ ಮತ್ತು ಬಂಗಾಳ ದೇಶಗಳೆಡೆಗೆ ಒಯ್ದು ದ್ವೈತ ಸಿದ್ಧಾಂತ ಪ್ರಚಾರ ಮಾಡಿದ ಕೀರ್ತಿ ಶ್ರೀ ರಾಜೇಂದ್ರತೀರ್ಥರಿಗೆ ಸೇರಿದ್ದು, ಇವರು ಶ್ರೀ ಭಗವದ್ಗೀತೆಗೆ ವಿವೃತಿಯನ್ನು ವಿಷ್ಣುಸಹಸ್ರನಾಮಕ್ಕೆ ಟೀಕೆಯನ್ನು ರಚಿಸಿದ್ದಾರೆ. 1380ರಲ್ಲಿ ತಮ್ಮ ಶಿಷ್ಯರೊಬ್ಬರಿಗೆ ಜಯಧ್ವಜತೀರ್ಥರೆಂದು ನಾಮಕರಣ ಮಾಡಿ ವೈಶಾಖಪೂರ್ಣಿಮಾದಂದು ಯರಗೋಳದಲ್ಲಿಯೇ ಬೃಂದಾವನಸ್ಥರಾದರು.

* * * *

ಈ ದಿನ ಉದಕುಂಭದಾನ ಮಾಡಿದರೆ ಗೋದಾನಫಲವು ಬರುತ್ತದೆ. ಬಂಗಾರ, ಎಳ್ಳು ಇವುಗಳ ಸಮೇತ ಹನ್ನೆರಡು ಉದಕುಂಭಗಳ ದಾನವನ್ನು ಮಾಡಿದರೆ ಬ್ರಹ್ಮಹತ್ಯಾ ಪರಿಹಾರ, ಕೃಷ್ಣಾಜಿನ ದಾನ ಮಾಡಿದರೆ ಭೂದಾನ ಫಲ, ಸುವರ್ಣ, ಮಧು, ತಿಲ, ತುಪ್ಪಗಳ ಸಮೇತ ಕೃಷ್ಣಾಜಿನ ದಾನದಿಂದ ಎಲ್ಲಾ ಪಾಪಗಳ ನಾಶವಾಗುತ್ತದೆ. ಈ ದಿನ ತಿಲಸ್ನಾನ, ತಿಲಹೋಮ, ತಿಲಪಾತ್ರದಾನ, ತಿಲದೀಪ, ತಿಲತರ್ಪಣ ಇವುಗಳಿಂದ ಮಹಾಫಲ. 'ಸ್ವರ್ಗಪ್ರದಾಃ ಸ್ವತಂತ್ರಾಶ್ಚ ತೇ ಮಾ ರಕ್ಷಂತು ನಿತ್ಯಶಃ ॥'

## ವೈಶಾಖ ॥ ಬಹುಳ ॥ ದ್ವಿತೀಯಾ

ಶ್ರೀ ಧೀರಮಾಧವತೀರ್ಥರು (ಮಾಧವತೀರ್ಥ ಮಠ) ಬಾಗೇಪಲ್ಲಿ

ರಾಮವ್ಯಾಸಪದಾಸಕ್ತಂ ಧೈರ್ಯಾದಿಗುಣಶಾಲಿನಮ್ । ಧೀರಮಾಧವಗುರುಂ ವಂದೇ ಪ್ರಾಜ್ಞಮಾಧವಕರೋದ್ಭವಮ್ ॥

## ವೈಶಾಖ ॥ ಬಹುಳ ॥ ಪಂಚಮೀ

ಶ್ರೀ ಶ್ರೀನಿವಾಸತೀರ್ಥರು (ವ್ಯಾಸರಾಜ ಮಠ) (ಕ್ರಿ.ಶ. 1539-1564) ಯದುನಾಥಪದಾಂಭೋಜಸಂಸಕ್ತೋ ಹಂಸರಾಣ್ಮುದೇ । ಶ್ರೀನಿವಾಸಗುರು-ರ್ಭೂಯಾತ್ ವಾಸವೀಸೂನುಪೂಜಕಃ ॥

ಇವರು ಶ್ರೀ ವ್ಯಾಸರಾಯರಿಗೆ ಪೂರ್ವಾಶ್ರಮದ ಸೋದರಳಿಯಂದಿರು ಹಾಗೂ ಅವರಲ್ಲಿ ವ್ಯಾಸಂಗ ಮಾಡಿದ ಶಿಷ್ಯರು. ವ್ಯಾಸರಾಜರು ಇವರಿಗೆ ಸನ್ಯಾಸಾಶ್ರಮವನ್ನು ಕೊಟ್ಟು ಸಂಸ್ಥಾನಾಧಿಪತ್ಯವನ್ನು ವಹಿಸಿಕೊಟ್ಟರು. ಗುರುಗಳ ಆಜ್ಞೆಯನ್ನು ಚೆನ್ನಾಗಿ ಪರಿಪಾಲಿಸುತ್ತಾ ತತ್ವಜ್ಞಾನ ಪ್ರಚಾರವನ್ನು, ವಾದಿವಿಗ್ರಹವನ್ನು ಅತ್ಯಂತ ಜವಾಬ್ದಾರಿಯಿಂದ ಯಶಸ್ವಿಯಾಗಿ ನೆರವೇರಿಸಿದರು. ಬಾರಕೂರು ಸಂಸ್ಥಾನದಿಂದ ಅನೇಕ ದತ್ತಿ ಜಹಗೀರುಗಳನ್ನು ಸಂಪಾದಿಸಿದರು. ಇವರು ಶ್ರೀ ವ್ಯಾಸರಾಜರ ಚರಿತ್ರೆ-ಯನ್ನು ವರ್ಣಿಸುವ 'ಶ್ರೀವ್ಯಾಸವಿಜಯ' ಎಂಬ ಗ್ರಂಥವನ್ನು ರಚಿಸಿದ್ದಾರೆ. ತಮ್ಮ ಗುರುಗಳನ್ನು ಬಿಟ್ಟಿರಲಾರರು ಎಂಬಂತೆ ನವವೃಂದಾವನ ಗೆಡ್ಡೆಯಲ್ಲಿಯೇ 1564ನೇ ಇಸವಿಯಲ್ಲಿ ವೈಶಾಖ ಬಹುಳ ಪಂಚಮಿಯಂದು ವೃಂದಾವನಸ್ಥರಾದರು.

## ವೈಶಾಖ ॥ ಬಹುಳ ॥ ಸಪ್ತಮೀ

ಶ್ರೀ ಭುವನೇಂದ್ರತೀರ್ಥರು (ರಾಯರ ಮಠ) ರಾಜವಳ್ಳಿ ಭೂದೇವ-ವೃಂದಪಾದಾಬ್ಜಂ ಭೂತಿಮಂತಮಭೀಷ್ಟದಂ । ಭೂತಲೇ ಸಾಧು ವ್ಯಾಖ್ಯಾತಂ ಭುವನೇಂದ್ರಗುರುಂ ಭಜೇ ॥ ಭುವನೇಂದ್ರ ಸ್ವಾಮಿಗಳವರು ಅತ್ಯಂತ ಪ್ರತಿಭಾ ಸಂಪನ್ನರು. ಧೀರೇಂದ್ರಸ್ವಾಮಿಗಳಿಂದ ಪಾಂಡಿತ್ಯವನ್ನು ಹೇಗೆ ಸಂಪಾದಿಸಿದರೋ, ತಮ್ಮ ಗುರುಗಳಾದ ವರದೇಂದ್ರಸ್ವಾಮಿಗಳಿಂದ ಹಾಗೆಯೇ ಲೌಕಿಕ ಕಾರ್ಯ-ದಕ್ಷತೆಯನ್ನು ಪಡೆದರು. ಅಲ್ಲದೆ ದಾಸಸಾಹಿತ್ಯಕ್ಕೂ ಪೋಷಕರಾಗಿದ್ದರು. ಶ್ರೀಗಳವರು ಮೂಲರಾಮನ ಆರಾಧನೆಯಲ್ಲಿ ಅತ್ಯಂತ ಆಸಕ್ತರು. ಪುಣೆಯ ಪೇಶ್ವೆಗಳಿಂದ ಗೌರವಿಸಲ್ಪಟ್ಟವರು. ಆದರೂ ಇವರು ಸಂಚಾರ ಮಾಡಿ ಶಿಷ್ಯರು ಕೊಟ್ಟ

ಕಾಣಿಕೆಯಿಂದಲೇ ಒಂದು ದೊಡ್ಡ ಬಂಗಾರದ ಮಂಟಪವನ್ನು ಮಾಡಿಸಿ ಅದರಲ್ಲಿ ಮೂಲರಾಮನನ್ನು ಇಟ್ಟು ಪೂಜಿಸಿದರು. ರಾಜರುಗಳು, ದೇಶಾಯರು ಇದನ್ನು ನೋಡಿ ಶ್ರೀಗಳವರ ಲೌಕಿಕ ದಕ್ಷತೆಗೆ ತಲೆ ತೂಗಿದರು.

ಶ್ರೀಗಳವರಲ್ಲಿ ಆಶ್ರಮ ಪಡೆದ ವ್ಯಾಸತತ್ತ್ವಜ್ಞರೆಂಬ ಮಹಾಜ್ಞಾನಿಗಳು ಗದ್ವಾಲಿಯ ಅರಸನಾದ ಸೀತಾರಾಮಭೂಪಾಲನ ರಾಜ ಗುರುಗಳಾದರು. ಅವರು ತಮ್ಮ ಗುರುಗಳ ಮಹಿಮೆಯನ್ನು ರಾಜನಿಗೆ ತಿಳಿಸಿದರು. ಇದನ್ನು ಕೇಳಿ ರಾಜ ಬಹಳ ಭಕ್ತಿ ಶ್ರದ್ಧೆಯಿಂದ ಶ್ರೀಗಳವರಿದ್ದಲ್ಲಿಗೆ ಬಂದು ತನ್ನ ರಾಜ್ಯಕ್ಕೆ ಕರೆದು ತನ್ನನ್ನು ಕೃತಾರ್ಥನನ್ನಾಗಿ ಮಾಡಬೇಕೆಂದು ಪ್ರಾರ್ಥಿಸಿದರು. ಶ್ರೀಗಳವರು ಆಹ್ವಾನವನ್ನು ಸ್ವೀಕರಿಸಿ ಅಲ್ಲಿಗೆ ಹೋದರು. ಅರಮನೆಯಲ್ಲಿ ಪೂಜೆ ನಡೆಯಿತು. ಅಲ್ಲಿ ಅವನು ತನ್ನ ರಾಜ್ಯದಲ್ಲಿ ಗ್ರಾಮ ಭೂಮಿಗಳನ್ನು ಶ್ರೀಗಳವರಿಗೆ ದಾನ ಕೊಟ್ಟನು.

ಶ್ರೀಗಳವರು ಪರವಾದಿಗಳಿಗಾಗಿ ಆಚಾರ್ಯರ ಋಗ್ಭಾಷ್ಯವನ್ನು ಮುಂದುವರಿಸಿ ಸಂಪೂರ್ಣ ಮಾಡಿದರೆಂದೂ, ವಾದಿದಿಗ್ವಿಜಯವಾದ ಮೇಲೆ ಆ ಗ್ರಂಥವನ್ನು ಪ್ರಕಟಪಡಿಸಲಿಲ್ಲವೆಂದೂ ಐತಿಹ್ಯವಿದೆ. ಶ್ರೀಗಳವರಿಗೆ ಗದ್ವಾಲರಾಜಾಶ್ರಯ-ವಿದ್ದದ್ದರಿಂದ ಅವರು ತಮ್ಮ ಕೊನೆಗಾಲವನ್ನು ಗದ್ವಾಲಸಂಸ್ಥಾನದ ತುಂಗಭದ್ರಾ ದೇಶದಲ್ಲಿನ ರಾಜವಳ್ಳಿ ಎಂಬ ಗ್ರಾಮದಲ್ಲಿ ಕಳೆದು ವೈಶಾಖ ಬಹುಳ ಸಪ್ತಮಿಯ ದಿನ ವೃಂದಾವನಸ್ಥರಾದರು.

## ವೈಶಾಖ ॥ ಬಹುಳ ॥ ನವಮೀ

ಶ್ರೀ ವಿದ್ಯಾರತ್ನಾಕರತೀರ್ಥರು (ವ್ಯಾಸರಾಜ ಮಠ) – (ಕ್ರಿ.ಶ. 1903-1915) ದುರ್ವಾದಿಮತ್ತನಾಗೇಂದ್ರವಿದಾರಣಮೃಗಾಧಿಪಃ । ವಿದ್ಯಾರತ್ನಾಕರಗುರು-ಸ್ಸನ್ನಿಧತ್ತಾಂ ಸದಾ ಹೃದಿ ॥ ಇವರ ಪೂರ್ವಾಶ್ರಮ ನಾಮ ಅಹೋಬಲಾ-ಚಾರ್ಯರೆಂದು. ಇವರು ಪೂರ್ವಾಶ್ರಮದಲ್ಲಿಯೇ ಚತುಶ್ಶಾಸ್ತ್ರಪಂಡಿತರು. ಪ್ರಾಚೀನಸಂಪ್ರದಾಯಪೋಷಕರು ಶಾಸ್ತ್ರಪ್ರವಚನಚತುರರು ಸಕಲಕಲಾವಿದರು ಎಂದು ಪ್ರಖ್ಯಾತರಾಗಿದ್ದರು. ಶ್ರೀ ವಿದ್ಯಾಸಮುದ್ರತೀರ್ಥರ ನಿರ್ಬಂಧಕ್ಕೆ ಒಳಗಾಗಿ ಸ್ವಪ್ನದಲ್ಲಿ ಭಗವದಾಜ್ಞೆಯನ್ನು ಸ್ವೀಕರಿಸಿ ತಮ್ಮ ವೃದ್ಧಾಪ್ಯದಲ್ಲಿ ಆಶ್ರಮ ಸ್ವೀಕಾರ

ಮಾಡಿ ಶ್ರೀ ವಿದ್ಯಾರತ್ನಾಕರತೀರ್ಥರೆಂಬ ನಾಮಕರಣದಿಂದ ಭವ್ಯ ಪೀಠವನ್ನ-ಲಂಕರಿಸಿದರು. ವಯೋವೃದ್ಧರಾದ್ದರಿಂದ ಹೆಚ್ಚಿಗೆ ಸಂಚಾರ ಮಾಡಲಾಗದೆ ಇದ್ದಲ್ಲಿಯೇ ವಿದ್ವತ್ಸಭಾಗಳನ್ನು ನಡೆಸಲು ಪ್ರಾರಂಭಿಸಲು ಶ್ರೀಮಠದಲ್ಲಿ ಈಗ ಪ್ರಚಲಿತವಾಗಿರುವ 'ಶ್ರೀಮದ್ದಶಪ್ರಮತಿದರ್ಶನಪ್ರಕಾಶೀ' ಎಂಬ ವಿದ್ವತ್ಸಭೆಯನ್ನು ರಾಜ್ಯದ ರಾಜಧಾನಿಯಾದ ಬೆಂಗಳೂರು ನಗರದಲ್ಲಿ ಪ್ರಾರಂಭಿಸಿ ಸಹಸ್ರಾರು ವಿದ್ಯಾರ್ಥಿಗಳ ಮತ್ತು ನೂರಾರು ವಿದ್ವಾಂಸರುಗಳ ಪರೀಕ್ಷಾದಿಗಳನ್ನು ಮಾಡಿ ಎಲ್ಲರಿಗೂ ಯೋಗ್ಯ ಸನ್ಮಾನವನ್ನೂ ಮಾಡಿದ ಅಪಾರಕೀರ್ತಿ ಇವರದ್ದಾಗಿದೆ. ಇವರು ಬಾಹ್ಯ ಪ್ರಶಂಸೆಗೆ ಇಷ್ಟಪಡದೆ ನಿಗರ್ವವಾದ ಸರಳ ಸ್ವಭಾವವುಳ್ಳವರಾಗಿ ಅನೇಕ ವಿದ್ವತ್ಸಭಾಗಳಿಂದಲೂ ರಾಜ್ಯಾಂಗಗಳಿಂದಲೂ ಬರಬೇಕಾಗಿದ್ದ ಪ್ರಶಸ್ತಿಗಳನ್ನು ಸವಿನಯವಾಗಿ ನಿರಾಕರಿಸಿದವರು. ಹತ್ತಾರು ಸಹಸ್ರ ಮಂದಿಯಿಂದ ತುಂಬಿದ ಸಭೆಗಳಲ್ಲಿ ವಿದ್ವತ್ಪೂರ್ಣವಾದ ಉಪನ್ಯಾಸಗಳನ್ನು ಕೊಟ್ಟು ಸಕಲರ ಮೆಚ್ಚುಗೆಯನ್ನು ಪಡೆದಿದ್ದರು. ಶ್ರೀ ರತ್ನಾಕರತೀರ್ಥರು ಸಾಹಿತ್ಯ , ಸಂಗೀತ ಮತ್ತು ಮಧ್ವಸಿದ್ಧಾಂತಗಳಲ್ಲಿ ಬಹಳ ಪ್ರತಿಭಾವಂತರಾದ ವಿದ್ವಾಂಸರಾಗಿದ್ದರು. ಕೃತಿಗಳನ್ನು ಆಶುಕವಿತೆಯಿಂದ ರಚಿಸಿ ರಾಗಸಂಯೋಜನೆ ಮಾಡಿ ಉತ್ತಮವಾದ ಕರ್ನಾಟಕ ಸಂಗೀತ ಶೈಲಿಯಲ್ಲಿ ರಾಗಾಲಾಪಗಳಿಂದ ಗಾನ ಮಾಡಿ ಪ್ರಖ್ಯಾತ ಸಂಗೀತ ವಿದ್ವಾಂಸರು ತಲೆದೂಗುವಂತೆ ಮಾಡುತ್ತಿದ್ದರೆಂದು ಪ್ರಸಿದ್ಧವಾಗಿದೆ. ಹರಿದಾಸ ಸಾಹಿತ್ಯ ಪೋಷಕರಾಗಿ ಕನ್ನಡದಲ್ಲಿ ದೇವರನಾಮಗಳನ್ನು ರಚಿಸಿ ಸಂಸ್ಕೃತದಲ್ಲಿಯೂ ಹರಿಗುರು ಮಂಗಳಾಷ್ಟಕ, ಶ್ರೀ ವ್ಯಾಸರಾಜ ಸ್ತೋತ್ರ , ಶ್ರೀ ಶೇಷಚಂದ್ರಿಕಾಚಾರ್ಯ ಸ್ತೋತ್ರ, ನರಸಿಂಹದೇವರ ಸುಪ್ರಭಾತ, ಸುಮಧ್ವವಿಜಯ ಸಾರಸಂಗ್ರಹ ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಇತ್ತೀಚಿನ ದಿನಗಳಲ್ಲಿ ಭಕ್ತಕೋಟಿಯು ಕಂಡ ಸಂನ್ಯಾಸ ರತ್ನವೆಂಬ ಹೊಗಳಿಕೆಗೆ ಪಾತರಾಗಿದ್ದಾರೆ. ಶ್ರೀ ರತ್ನಾಕರತೀರ್ಥರು 1915ನೇ ಇಸವಿ ರಾಕ್ಷಸನಾಮ ಸಂವತ್ಸರದ ವೈಶಾಖ ಬಹುಳ ನವಮಿಯಂದು ವಿದ್ವಾಂಸರಾದ ಶ್ರೀಲಕ್ಷ್ಮೀನರಸಿಂಹಾಚಾರ್ಯರಿಗೆ ಭಾಷ್ಯ ಪಾರಾಯಣ ಮಾಡುವಂತೆ ಹೇಳಿದರು. ಆ ಭಾಷ್ಯವನ್ನು ಶ್ರವಣ ಮಾಡುತ್ತಾ ಧ್ಯಾನಾಸಕ್ತರಾಗಿ ಬ್ರಹ್ಮರಂಧ್ರದ ಮೂಲಕ ಪ್ರಾಣತ್ಯಾಗ ಮಾಡಿ ಭೌತಿಕಶರೀರವನ್ನು ತ್ಯಜಿಸಿದರು. ಇವರ ವೃಂದಾವನವು ಕಾವೇರಿತೀರದ ಸೋಸಲೆಯಲ್ಲಿದೆ.

## ವೈಶಾಖ || ಬಹುಳ || ದಶಮೀ

ಶ್ರೀಶ್ರೀಪತಿತೀರ್ಥರು (ಶ್ರೀಪಾದರಾಜ ಮಠ) ಮಾರಂಡಹಳ್ಳಿ (ಕ್ರಿ.ಶ. 1536-1571) ಶ್ರೀಹಯಗ್ರೀವಸಂಜಾತಂ ಸಂಪ್ರದಾಯಾರ್ಥಕೋವಿದಂ । ಸಚ್ಛಾಸ್ತ್ರಾಮೃತಪಾತಾರಂ ಭಜೇ ಶ್ರೀಪತಿತೀರ್ಥಕಮ್ ॥

## ವೈಶಾಖ || ಬಹುಳ || ಏಕಾದಶೀ

ವೈಶಾಖ ಮಾಸದ ಕೃಷ್ಣಪಕ್ಷದ ಏಕಾದಶಿಯನ್ನು ಅಪರಾ ಅಥವಾ ಅಚಲಾ ಏಕಾದಶಿ ಎನ್ನುವರು. ಈ ಕುರಿತು ಬ್ರಹ್ಮಾಂಡ ಪುರಾಣದಲ್ಲಿ ಉಲ್ಲೇಖವಾಗಿದೆ. ಅಂದು ಭಗವಂತನ ತ್ರಿವಿಕ್ರಮ ರೂಪವನ್ನು ಪೂಜೆ ಮಾಡಬೇಕು. ಶ್ರೀವಿಷ್ಣು-ಸಹಸ್ರನಾಮ ಮೊದಲಾದ ಸ್ತೋತ್ರ ಮಂತ್ರಗಳಿಂದ ಅರ್ಚಿಸಬೇಕು.ಅಪಾರ ಧನಸಂಪತ್ತು, ಆಯುಷ್ಯ, ಕೀರ್ತಿ ಹಾಗೂ ಸಂತೋಷವನ್ನು ಕೊಡುವಂಥ ಈ ವ್ರತ ಅತ್ಯಂತ ಶ್ರೇಷ್ಠವಾಗಿದೆ.ಮಹಾರಾಷ್ಟ್ರದಲ್ಲಿ ಇದಕ್ಕೆ ವೈಶಾಖವಾಡಿ ಏಕಾದಶಿ ಎಂದು ಕರೆಯುತ್ತಾರೆ. ಅಲ್ಲಿ ಶ್ರೀವಿಷ್ಣುವಿನ ವಾಮನಾವತಾರಕ್ಕೆ ಪೂಜೆ ಮಾಡುವರು. ಪಂಜಾಬ, ಹರ್ಯಾಣ ಮತ್ತು ಕಾಶ್ಮೀರದಲ್ಲಿ ಇದಕ್ಕೆ ಭದ್ರಕಾಳಿ ಏಕಾದಶಿ ಎನ್ನುವರು. ಭದ್ರಕಾಳಿ ಜಯಂತಿಯನ್ನು ಆಚರಿಸಿ ದೇವಿಗೆ ಪೂಜೆ ಸಲ್ಲಿಸಿ ಉಪವಾಸ ಆಚರಿಸುತ್ತಾರೆ. ಓರಿಸ್ಸಾದಲ್ಲಿ ಜಲಕ್ರೀಡಾ ಏಕಾದಶಿ ಎನ್ನುವರು. ಅಂದು ಪುರಿ ಜಗನ್ನಾಥನಿಗೆ ಅರ್ಚನೆ ಮಾಡಿ ಇಷ್ಟಾರ್ಥ ಪೂರೈಸುವಂತೆ ಪ್ರಾರ್ಥಿಸುವರು. ಹಿಂದೆ ಧರ್ಮನಿಷ್ಠನಾದ ಮಹಿಧ್ವಜನೆಂಬ ರಾಜನಿದ್ದ. ಆತನಿಗೆ ವಜ್ರಧ್ವಜನೆಂಬ ದುಷ್ಟ, ವಂಚಕನೆನಿಸಿದ ತಮ್ಮನಿದ್ದ. ವಜ್ರಧ್ವಜನಿಗೆ ಅಣ್ಣ ಮಹಿಧ್ವಜನನ್ನು ಕಂಡರೆ ಆಗುತ್ತಿರಲಿಲ್ಲ. ಹೀಗಾಗಿ ಆತ ಅಣ್ಣನನ್ನು ಕೊಂದು ಒಂದು ಅಶ್ವತ್ಥ ಮರದ ಕೆಳಗೆ ಸುಟ್ಟುಹಾಕಿದ. ಈ ರೀತಿಯ ಕೆಟ್ಟಸಾವು ಪಡೆದ ಮಹಿಧ್ವಜ ಪಶಾಚಿಯಾದ. ಅದೇ ಗಿಡದ ಮೇಲೆ ಕುಳಿತು ಜನರಿಗೆ ತೊಂದರೆ ಕೊಡುಲು ಆರಂಭಿಸಿದ. ಒಮ್ಮೆ ಆ ಮಾರ್ಗವಾಗಿ ಧೂಮ್ರ ಎಂಬ ಋಷಿಗಳು ಹೋಗುತ್ತಿದ್ದರು. ಅವರಿಗೆ ಆ ಪಿಶಾಚಿ ಯಾರೆಂದು, ಅದಕ್ಕೆ ಈ ಗತಿ ಯಾಕೆ ಬಂದಿದೆ ಎಂಬುದು ತಮ್ಮ ತಪಃಶಕ್ತಿಯಿಂದ ತಿಳಿಯಿತು. ಅವರು ತಾವೇ ಅಪರಾಏಕಾದಶಿವ್ರತ ಆಚರಿಸಿ ದ್ವಾದಶಿಯಂದು ಆ ವ್ರತದ ಪುಣ್ಯವನ್ನು ಪಿಶಾಚಿಯಾಗಿದ್ದ ಮಹಿಧ್ವಜನಿಗೆ ಧಾರೆ ಎರೆದರು. ಮಹಿಧ್ವಜ

ಪಿಶಾಚ ರೂಪದಿಂದ ಮುಕ್ತಿಹೊಂದಿದ. ಈ ವ್ರತದ ಆಚರಣೆಯಿಂದ ಬ್ರಹ್ಮಹತ್ಯಾ-ದೋಷ, ಭೂತಬಾಧೆ, ದುಷ್ಟಯೋನಿಯಲ್ಲಿ ಜನನ, ಪರನಿಂದೆ ಇತ್ಯಾದಿ ಪಾಪ-ಗಳಿಂದ ಮುಕ್ತಿ ದೊರೆಯುತ್ತದೆ.

ಪರಸ್ತ್ರೀ ಮೋಹದಿಂದ, ಸುಳ್ಳುಸಾಕ್ಷಿಯಿಂದ, ಮೋಸಮಾಡಿದ್ದರಿಂದ, ಸುಳ್ಳು ಹೇಳಿದ್ದರಿಂದ, ಅನ್ಯಥಾವಾದದಿಂದ, ಅಭಕ್ಷಭಕ್ಷಣದಿಂದ ಅಲ್ಲದೇ ಅನೇಕ ಪಾಪ-ಕರ್ಮಗಳವಶಾತ್ ಪರಿತಪಿಸುತ್ತಿರುವವರು ಈ ವ್ರತಾಚರಣೆಯಿಂದ ಪಾಪಮುಕ್ತಿ ಪಡೆಯುತ್ತಾರೆ. ಯುದ್ಧದಿಂದ ಓಡಿಹೋದ ಕ್ಷತ್ರಿಯ, ಗುರುವಿಗೆ ದ್ರೋಹಬಗೆದ ಶಿಷ್ಯನಿಗೆ ನರಕವೇ ಗತಿ . ಆದರೆ ಅಪರಾ ಏಕಾದಶಿ ವ್ರತ ಆಚರಿಸಿದರೆ ಪ್ರಾಯಶ್ಚಿತ್ತ-ವಾಗುತ್ತದೆ.

ಈ ವ್ರತಾಚರಣೆಯಿಂದ ಪುಷ್ಕರ ಕ್ಷೇತ್ರದಲ್ಲಿ ಮೂರುಬಾರಿ ಸ್ನಾನದ ಫಲ, ಗಂಗೆಯಲ್ಲಿ ಮಿಂದು ಪಿಂಡಪ್ರದಾನ ಮಾಡಿದ ಪುಣ್ಯ ಲಭಿಸುತ್ತದೆ. ಸೂರ್ಯ ಮಕರದಲ್ಲಿದ್ದಾಗ ಪ್ರಯಾಗದಲ್ಲಿ ಮಾಘಸ್ನಾನ ಮಾಡಿದ ಫಲ, ಶಿವರಾತ್ರಿ ವ್ರತಾ-ಚರಣೆ ಫಲ, ಗುರು ಸಿಂಹದಲ್ಲಿದ್ದಾಗ ಗೋದಾವರಿ ನದಿ ಸ್ನಾನದ ಫಲ, ಕುಂಭದಲ್ಲಿದ್ದಾಗ ಬದರಿ-ಕೇದಾರ ಯಾತ್ರೆಯ ಫಲ, ಸೂರ್ಯಗ್ರಹಣ ಕಾಲದಲ್ಲಿ ಕುರುಕ್ಷೇತ್ರದಲ್ಲಿ ಸ್ನಾನ ಮಾಡಿದ ಫಲ ದೊರೆಯುತ್ತದೆ, ಸ್ವರ್ಣ, ಆನೆ, ಕುದುರೆ, ಇಲ್ಲವೆ ಕರುವಿನೊಂದಿಗೆ ಹಸುವನ್ನು ಭೂಮಿ, ಬಂಗಾರ ಸಹಿತ ದಾನ ಮಾಡಿದ ಫಲ ಈ ವ್ರತದಿಂದ ದೊರೆಯುತ್ತದೆ.

ಇದು ಪಾಪವೆಂಬ ವೃಕ್ಷವನ್ನು ಕಡಿಯುವಂಥ ಕೊಡಲಿಯಾಗಿದೆ. ಪಾಪವೆಂಬ ದಟ್ಟಡವಿಯನ್ನು ಸುಡುವ ಅಗ್ನಿ ಎನಿಸಿದೆ. ಮನುಷ್ಯನ ಪಾಪವೆಂಬ ಅಂಧಕಾರವನ್ನು ಅಳಿಸುವ ಸೂರ್ಯನ ಬೆಳಕಾಗಿದೆ. ಇದನ್ನು ಆಚರಿಸಿದವರು ಎಲ್ಲ ಪಾಪಗಳಿಂದ ಮುಕ್ತಿಪಡೆದು ವಿಷ್ಣುಲೋಕ ಪಡೆಯುತ್ತಾರೆ.

ಅಪರಾ ಏಕಾದಶಿಯಂದು ಬೆಳಗ್ಗೆ ಸ್ನಾನ ಮಾಡಿ ಶುಚಿಯಾಗಿ ವಿಷ್ಣು ದೇವರನ್ನು ಪ್ರಾರ್ಥಿಸಿ, ವ್ರತವು ನಿರ್ವಿಘ್ನವಾಗಿ ಮುಕ್ತಾಯಗೊಳ್ಳಲಿ ಎಂದು ಮನಪೂರ್ವಕವಾಗಿ ಬೇಡಿಕೊಂಡು ಉಪವಾಸ ವ್ರತವನ್ನು ಆರಂಭಿಸಿ. ಪೂಜೆ ಪ್ರಾರಂಭಿಸುವ ಮೊದಲು ಅಕ್ಷತೆ, ತಿಲಕ, ಬಿಳಿಬಣ್ಣದ ಹೂವು ಎತ್ತಿಟ್ಟುಕೊಳ್ಳಿ. ಈ ಎಲ್ಲಾ ವಸ್ತುವನ್ನು ದೇವರಿಗೆ

ಅರ್ಪಿಸಿ, ಈ ದಿನ ಬೆಳಗ್ಗೆ ಮತ್ತು ಸಂಜೆ ದೇವಸ್ಥಾನಕ್ಕೆ ಹೋಗಿ ದೇವರ ಪೂಜೆಯನ್ನು ಮಾಡಬೇಕು.

ಅಪರಾ ಏಕಾದಶಿಯಂದು ರಾತ್ರಿಯಿಡಿ ಎಚ್ಚರವಿದ್ದು, ವಿಷ್ಣುವಿನ ಸ್ತೋತ್ರಗಳನ್ನು ಪಠಿಸಬೇಕು. ಒಂದು ವೇಳೆ ಜಾಗರಣೆ ಮಾಡಲು ಸಾಧ್ಯವಾಗದಿದ್ದರೆ ಹಾಸಿಗೆಯ ಮೇಲೆ ಮಲಗುವ ಬದಲು ನೆಲದ ಮೇಲೆ ಮಲಗಿಕೊಳ್ಳಬಹುದು. ಮರುದಿನ ಬೆಳಗ್ಗೆ ಸೂರ್ಯೋದಯದ ಮುನ್ನ ಎದ್ದು, ಸ್ನಾನ ಮಾಡಿ ನಂತರ ವಿಷ್ಣುವಿಗೆ ಧೂಪ, ದೀಪವನ್ನು ಬೆಳಗಿ ನಿನ್ನೆಯ ಉಪವಾಸ ವ್ರತಕ್ಕೆ ಧನ್ಯವಾದವನ್ನು ಸಲ್ಲಿಸಿ. ನಂತರ ಸೂರ್ಯದೇವನಿಗೂ ಕೂಡ ತುಳಸಿ ಹಾಕಿದ ನೀರನ್ನು ಅರ್ಪಿಸಿ, ತುಳಸಿಯನ್ನು ಪೂಜಿಸಬೇಕು.

ಶ್ರೀ ಬ್ರಹ್ಮಣ್ಯತೀರ್ಥರು (ವ್ಯಾಸರಾಜ ಮಠ) ವೈಶಾಖ ಬಹುಳ ಏಕಾದಶಿ (ಕ್ರಿ .ಶ. 1416-1446) ಕಂಸಧ್ವಂಸಿಪದಾಂಭೋಜ ಸಂಸಕ್ತೋ ಹಂಸಪುಂಗವಃ। ಬ್ರಹ್ಮಣ್ಯ ಯತಿರಾಜಾಖ್ಯೋ ವರ್ತತಾಂ ಮಮ ಮಾನಸೇ॥ ಕಣ್ವಾನದಿತೀರದಲ್ಲಿ ಶ್ರೀ ಪುರುಷೋತ್ತಮತೀರ್ಥರಿಗೆ ದತ್ತವಾದ ರಾಮಗಿರಿ ಎಂಬ ಅಗ್ರಹಾರದಲ್ಲಿ ಅಡಕೆ ತೋಟದ ಮಾಲೀಕರಾದ ಶ್ರೀ ರಾಮಾಚಾರ್ಯ ಎಂಬುವವರೊಬ್ಬರು ಸದ್ಗೃಹಸ್ಥ-ರಾಗಿ ಸ್ವಧರ್ಮ ನಿರತರಾಗಿದ್ದರು. ಬಹುಕಾಲ ಸಂತಾನವಿಲ್ಲದೆ ಕೊನೆಗೆ ಶ್ರೀ ಪುರುಷೋತ್ತಮತೀರ್ಥರ ಸೇವಾ ಮಾಡಿ, ಶ್ರೀ ಲಕ್ಷ್ಮೀ ನರಸಿಂಹನ ಪ್ರಸಾದದಿಂದ ಒಂದು ಗಂಡು ಮಗುವನ್ನು ಪಡೆದು ಅದಕ್ಕೆ ಲಕ್ಷ್ಮೀ ನರಸಿಂಹನೆಂದೇ ನಾಮಕರಣ ಮಾಡಿದರು. ಶ್ರೀನರಸಿಂಹಾಚಾರ್ಯರಿಗೆ ಗರ್ಭಾಷ್ಟಮದಲ್ಲಿ ಉಪನಯನ ಸಂಸ್ಕಾರ ಮಾಡಿ ಶ್ರೀಪುರುಷೋತ್ತಮತೀರ್ಥರಿಂದ ಮಂತ್ರೋಪದೇಶ ಮಾಡಿಸಿ ಅವರಲ್ಲಿಯೇ ಶಾಸ್ತ್ರಾಭ್ಯಾಸವನ್ನು ಮಾಡಿಸಿದರು. ಇವರ 12ನೇ ವಯಸ್ಸಿನಲ್ಲಿ ಬಾಲ ಬ್ರಹ್ಮಚಾರಿ-ಗಳಾದ ನರಸಿಂಹಾಚಾರ್ಯರಿಗೆ ಶ್ರೀ ಪುರುಷೋತ್ತಮ ತೀರ್ಥರು ಸನ್ಯಾಸಾಶ್ರಮವನ್ನು ಕೊಟ್ಟು ಶ್ರೀ ಬ್ರಹ್ಮಣ್ಯತೀರ್ಥರೆಂದು ನಾಮಕರಣ ಮಾಡಿದರು. ಶ್ರೀ ಬ್ರಹ್ಮಣ್ಯ-ತೀರ್ಥರು ತಮ್ಮ ಗುರುಗಳಿಂದ ದತ್ತವಾದ ಸಂಸ್ಥಾನವನ್ನು ಪರಿಪಾಲಿಸುತ್ತಾ ಯೋಗ-ಪಟ್ಟಿಕಾನರಸಿಂಹದೇವರನ್ನು ಅರ್ಚಿಸುತ್ತಾ ಸಚ್ಛಾಸ್ತ್ರಪಾಠ-ಪ್ರವಚನ ದುರ್ವಾದಿ-ಖಂಡನ, ಅತ್ಯಂತ ಕಠಿಣವ್ರತಾಚರಣ ಮೊದಲಾದವುಗಳಿಂದ ಕಾಲಕಳೆದು

ಬ್ರಹ್ಮಣ್ಯತೀರ್ಥರೆಂಬ ಅನ್ವರ್ಥನಾಮಕರಾದರು. ಅತ್ಯಂತ ಕಠಿಣವಾದ ರೀತಿಯಲ್ಲಿ ಸನ್ಯಾಸದೀಕ್ಷೆಯನ್ನು ಪಾಲಿಸುತ್ತಾ ಶಿಷ್ಯರಿಂದ ತರಲ್ಪಟ್ಟ ಭಿಕ್ಷಾನ್ನವನ್ನು ಪ್ರೋಕ್ಷಣೆ ಮಾತ್ರದಿಂದ ವಿಂಗಡಿಸಿ ಬಿಸಿ ಹೊಗೆಯಾಡುವಂತೆ ಮಾಡಿ ನೈವೇದ್ಯ ಸಮರ್ಪಣೆ ಮಾಡಿ ಭಿಕ್ಷಾ ಸ್ವೀಕಾರ ಮಾಡುತ್ತಿದ್ದ ಅಪೂರ್ವಕೀರ್ತಿ ಇವರದಾಗಿತ್ತು. ಮುಂದೆ ರಾಮಾಚಾರ್ಯ ದಂಪತಿಗಳಿಗೆ ಸಂತಾನವನ್ನು ಅನುಗ್ರಹಿಸಿ ಶ್ರೀ ವ್ಯಾಸರಾಜ ಗುರು ಸಾರ್ವಭೌಮರಂತಹ ಸನ್ಯಾಸರತ್ನವನ್ನು ಜಗತ್ತಿಗೆ ಕೊಟ್ಟ ಕೀರ್ತಿ ಇವರಿಗೆ ಸಲ್ಲುತ್ತದೆ.

ಶ್ರೀಬ್ರಹ್ಮಣ್ಯತೀರ್ಥಸ್ತುತಿಃ –

ಶ್ರೀಪೂರ್ಣಬೋಧಸುಮತಾಬ್ಧಿಸುಧಾಕರಾಯ ಶ್ರೀವ್ಯಾಸರಾಜಗುರವೇ ಯತಿಪುಂಗವಾಯ । ಶ್ರೀವಿಠ್ಠಲಾಂಘ್ರಿಸರಸೀರುಹಮಂಭರಾಯ ಬ್ರಹ್ಮಣ್ಯತೀರ್ಥಗುರವೇಽಸ್ತು ನಮಃ ಶುಭಾಯ ॥ 1 ॥ ಶ್ರೀಮನ್ನೃಸಿಂಹಪದಪದ್ಮಗುಹಾಶ್ರಯಾಯ ವ್ಯಾಖ್ಯಾಘನಸ್ವನವಿದಾರಿತದುರ್ಮದಾಯ । ದುರ್ಮಾಯಿದಂತಿದಲನೈಕಮೃಗಾಧಿಪಾಯ ಬ್ರಹ್ಮಣ್ಯತೀರ್ಥಗುರವೇಽಸ್ತು ನಮೋಽಮಲಾಯ ॥ 2 ॥ ಬ್ರಹ್ಮಣ್ಯತೀರ್ಥಃ ಕಮನೀಯಗಾತ್ರಃ ಶರತ್ಸುಧಾಂಶೂಪಮಚಾರುವಕ್ತ್ರಃ । ಜಗದ್ವಿಚಿತ್ರಾಮಲಸಚ್ಚರಿತ್ರೋ ಗುರುಃ ಸ ಮಾಂ ಪಾತು ರಮೇಶಭಕ್ತಃ ॥ 3 ॥ ಬ್ರಹ್ಮಣ್ಯತೀರ್ಥೋ ಭಗವತ್ಪ್ರಸಾದಾ-ದವಾಪಸಂಪತ್ಕರಃ ಸುಧೀಂದ್ರಃ । ವಿಧೂತಪಾಪೋ ವಿಜಿತಾರಿವರ್ಗಃ ಸಂಸೇವಮಾನಾಖಿಲಕಾಮದಶ್ಚ ॥4॥ ಸಜ್ಞಾನಸದ್ಭಕ್ತಿವಿರಕ್ತಿಸಂಪತ್ಪುಧ್ಯಾಯುರಾರೋಗ್ಯಬಲಾನಿ ದತ್ವಾ । ಅಜ್ಞಾನರೋಗಾದ್ಯಖಿಲಾಶುಭಾನಿ ಹತ್ವಾವತಾನ್ನೋ ಭವತು ಪ್ರಸನ್ನಃ ॥5॥ ಕಣ್ವಾಪಗಾತೀರವರಾಧಿವಾಸಃ ಸಂಸೇವಿತಾಘೋರಗಪಕ್ಷ್ಯಧೀಶಃ । ಸ ಲ್ಲೋಕಚಿತ್ರಾಕ್ಷಿಮಹೋತ್ಸವೋಽಯಂ ವಾಕ್ಪಾಟವಂ ಸಂದಿಶತಾದ್ಗುರುರ್ಮೇ ॥ 6 ॥ ಯದ್ವೃಂದಾವನಸೇವಯಾ ಭುವಿ ಜನಃ ಪ್ರಾಪ್ನೋತಿ ಸೌಖ್ಯಂ ಮಹದ್ಯತ್ಪಾದಾಂಬುನಿಷೇವಣಂ ಸಕಲಸತ್ತೀರ್ಥಾಲಿಪುಣ್ಯಾವಹಮ್ । ಯತ್ಸಂದರ್ಶನಮಾತ್ರತೋ ನಿಜಮಹಾಪಾಪಾಲಿನಾಶೋ ಭವೇತ್ತಂ ವಂದೇ ತಪನೀಯವರ್ಣವಪುಷಂ ಬ್ರಹ್ಮಣ್ಯತೀರ್ಥಂ ಗುರುಮ್ ॥ 7 ॥ ಯತ್ಪುಣ್ಯಕೀರ್ತನಸುಧಾರಸತೃಪ್ತಚಿತ್ತಾ ಯತ್ಪಾದಪಂಕಜನಿಷೇವಣಲಬ್ಧಪುಣ್ಯಾಃ । ಯತ್ಪ್ರೇಮಪೂರ್ಣವಿಲಸತ್ಸುಕಟಾಕ್ಷಪಾತ್ರಾ

-ಸ್ತದ್ದರ್ಶನಂ ಕಲಿಮಲಾಚಲವಜ್ರಭೂತಮ್ ॥ 8 ॥ ಆಸೇತುಹಿಮಶೈಲಾಂತಂ ತೀರ್ಥಕ್ಷೇತ್ರಾಣಿ ಯೇನ ವೈ । ಚರಿತಾನಿ ಮನಶ್ಶುದ್ಧಿಂ ಸ ಮೇ ಯಚ್ಛತು ಸೂರಿರಾಟ್ ॥ 9 ॥ ಶ್ರೀಪಾದರಾಜೋ ಜನನೀಸ್ವಸ್ರೀಯೋ ಯಸ್ಯ ಯೋಗಿರಾಟ್ । ವಿದ್ಯಾ-ಗುರುರ್ವ್ಯಾಸಮುನೇಸ್ತಂ ವಂದೇಽಹಮಹರ್ನಿಶಮ್ ॥ 10 ॥ ಬ್ರಹ್ಮಣ್ಯಾರ್ಯಸ್ಯ ಶಿಷ್ಯೋಽನ್ಯೋ ನೈವಾತೋ ವ್ಯಾಸಯೋಗಿನೇ । ವಿಠ್ಠಲಾಚಾರ್ಯಂ ನೃಸಿಂಹಾಚಾರ್ಯಂ ಪ್ರಸನ್ನಃ ಪ್ರದದೌ ಗುರುಃ ॥ 11 ॥ ಮಾಧವಸ್ಯಾಸಿತೇ ಪಕ್ಷೇ ಸಹಸ್ರಾಂಶುತಿಥೌ ಗುರುಃ । ಬ್ರಹ್ಮಣ್ಯತೀರ್ಥಃ ಸ್ವರ್ಲೋಕಂ ಗತ್ವಾ ಸಪ್ತಾಶ್ವಮಾವಿಶತ್ ॥ 12 ॥ ಸೂರ್ಯಾಂಶತ್ವಾದಯಂ ಸಾಕ್ಷಾದ್ ಗ್ರಾಮೇಽಬ್ಬೂರುವರಾಭಿಧೇ । ವೃಂದಾವನಂ ಪ್ರವಿಶ್ಯೈವ ಸ್ಥಿತೋಽದ್ಯಾಪಿ ವಿರಾಜತೇ ॥ 13 ॥ ಶ್ರೀವಿಠ್ಠಲದಯಾಪಾತ್ರಂ ಜ್ಞಾನವಿಜ್ಞಾನಶಾಲಿನಮ್ । ಶ್ರೀಮದ್ಬ್ರಹ್ಮಣ್ಯತೀರ್ಥಾರ್ಯಂ ವಂದೇ ವಾಂಛಿತ-ದಾಯಕಮ್ ॥ 14 ॥ ಶ್ರೀಮತೇ ಯೋಗಿವರ್ಯಾಯ ಸಜ್ಜನಾಂಭೋ-ನಿಧೀಂದವೇ । ಬ್ರಹ್ಮಣ್ಯತೀರ್ಥಗುರವೇ ಕರುಣಾಸಿಂಧವೇ ನಮಃ ॥ 15 ॥ ಬ್ರಹ್ಮಣ್ಯಾರ್ಯಪದಾಂಭೋಜಪಾಂಸವಃಪಾವಯಂತು ನಃ । ಕಾಮಿತಾಶೇಷ-ಕಲ್ಯಾಣಕಲನೇ ಕಾಮಧೇನವಃ ॥ 16 ॥ ಧೃತಕಾಷಾಯದಂಡೋಽಯಂ ಪ್ರತಿವಾದಿಗಜಾಂಕುಶಃ । ಯತಿರಾಜಾಗ್ರಣೀಃ ಶ್ರೀಮಾನ್ ವಿತನೋತು ಮಮ ಶ್ರಿಯಮ್ ॥ 17 ॥ ಬ್ರಹ್ಮಣ್ಯತೀರ್ಥಗುರುವರ್ಯದಯಾಪಯೋಧೇ ಭಕ್ತಿಂ ಪ್ರದೇಹಿ ಸುದೃಢಾಂ ಹರಿಪಾದಪದ್ಮೇ । ಜ್ಞಾನಂ ಶುಭಂ ಚ ವಿಷಯೇಷು ವಿರಕ್ತಿ-ಮಗ್ರ್ಯಾಂ ಸ್ವಾಮಿನ್ ದಯಾಂ ಕುರು ದಯಾಂ ಕುರು ಮಯ್ಯನಾಥೇ ॥ 18 ॥ ಇತಿ ಬ್ರಹ್ಮಣ್ಯತೀರ್ಥಾರ್ಯಗುರುಸ್ತೋತ್ರಂ ಸುಭಕ್ತಿತಃ । ನರಸಿಂಹಾಭಿಧಾನೇನ ಕೃತಂ ವಿಠ್ಠಲತುಷ್ಟಯೇ ॥ 19 ॥ ಇತಿ ಬ್ರಹ್ಮಣ್ಯತೀರ್ಥಾರ್ಯಗುರುಸ್ತೋತ್ರಂ ॥

## ವೈಶಾಖ ॥ ಬಹುಳ ॥ ಚತುರ್ದಶೀ

ಶ್ರೀ ಸುಗುಣನಿಧಿತೀರ್ಥರು (ಶ್ರೀಪಾದರಾಜ ಮಠ) - ಭವಾನಿ – ಸುಜ್ಞಾನನಿಧಿತೀರ್ಥಾರ್ಯೋರ್ ಹ್ಯಂತಃ ಸಂತಾಪಶಾಂತಯೇ । ಪಾಯಾತ್ಸುಗುಣ-ನಿಧ್ಯಾಖ್ಯೋಗುರುರಸ್ಮಾದ್ ವಿಪದ್ಗಣಾತ್ ॥

## ವೈಶಾಖ ॥ ಬಹುಳ ॥ ಅಮಾವಾಸ್ಯಾ

ವೈಶಾಖ ಅಮಾವಾಸ್ಯೆಗೆ ಭಾವುಕಾ ಅಮಾವಾಸ್ಯೆ ಎನ್ನುತ್ತಾರೆ. ಅದರ ಮಾರನೆಯ ದಿನ ಕರಿದಿನ ಎನ್ನುವರು. ಈ ಎರಡು ದಿನ ಶುಭಕಾರ್ಯಗಳಿಗೆ ವರ್ಜ್ಯವಾಗಿರುತ್ತವೆ. ತುಪ್ಪದಾನ, ಸೌತೆಕಾಯಿ ಬೆರೆಸಿದ ಕೋಸಂಬರಿ ದಾನ, ಕಬ್ಬಿನ ದಾನ, ಹಣ್ಣಿನಿಂದ ಮಾಡಿದ ಪಾನಕದಾನ ಪಿತೃಗಳ ಪ್ರೀತಿಗಾಗಿ ಚೈತ್ರ ಅಮಾವಾಸ್ಯೆಯಂದು ಪಾನಕತುಂಬಿದ ಕುಂಭದಾನಗಳು ನೂರಾರು ಗಯಾಶ್ರಾದ್ಧ ಮಾಡಿದ ಪುಣ್ಯವನ್ನು ತಂದು ಕೊಡುತ್ತದೆ.

## ಶನೈಶ್ಚರ ಜಯಂತಿ

ವೈಶಾಖಅಮಾವಾಸ್ಯೆ ಶನೈಶ್ಚರ(ಶನಿ) ಹುಟ್ಟಿದ ದಿನ. ಸೂರ್ಯನ ಪುತ್ರನಾಗಿ ಛಾಯಾದೇವಿಯಲ್ಲಿ ಜನಿಸಿದ ಶನಿಗೆ ಯಮಧರ್ಮ ಹಿರಿಯ ಸಹೋದರ. ಶನಿಯ ಸಹೋದರಿ ತಪತಿ. ಸೂರ್ಯನ ಮಕ್ಕಳು ಶನಿ ಮತ್ತು ಯಮ ಇಬ್ಬರೂ ನ್ಯಾಯ ದೇವತೆಗಳೇ! ಜೀವನದ ಆಗು ಹೋಗುಗಳನ್ನು ಗಮನಿಸಿ, ಶನಿಯು ಸೂಕ್ತ ರೀತಿಯ ಶಿಕ್ಷೆ ಅಥವಾ ವರವನ್ನು ಬದುಕಿರುವಾಗ ನೀಡುತ್ತಾನೆ, ಆದರೆ ಯಮನು ಒಬ್ಬ ವ್ಯಕ್ತಿಯು ಸತ್ತ ನಂತರ ಅವರ ಪುಣ್ಯ ಪಾಪಗಳ ಫಲಿತಾಂಶವನ್ನೂ ಶಿಕ್ಷೆಯನ್ನೂ ನೀಡುತ್ತಾನೆ.

ದಶರಥನು ಶನೈಶ್ಚರನ ತೃಪ್ತಿಗಾಗಿ ಸ್ತೋತ್ರ ಮಾಡಿ ಪ್ರಾರ್ಥಿಸಿದ್ದಾನೆ.

# ಶನೈಶ್ಚರಾಷ್ಟಕಮ್

ಅಸ್ಯ ಶ್ರೀಶನೈಶ್ಚರಸ್ತೋತ್ರಮಂತ್ರಸ್ಯ ದಶರಥ ಋಷಿಃ ।ತ್ರಿಷ್ಟುಪ್ ಛಂದಃ । ಶನೈಶ್ಚರೋ ದೇವತಾ ।ಶನೈಶ್ಚರಪ್ರೀತ್ಯರ್ಥೇ ಜಪೇ ವಿನಿಯೋಗಃ ॥

ದಶರಥ ಉವಾಚ ಕೋಣಾಂತಕೋ ರೌದ್ರ ಯಮೋಽಥ ಬಭ್ರುಃ ಕೃಷ್ಣಃ ಶನಿಃ ಪಿಂಗಲ ಮಂದ ಸೌರಿಃ । ನಿತ್ಯಂ ಸ್ಮೃತೋ ಯೋ ಹರತೇ ಚ ಪೀಡಾಂ ತಸ್ಮೈ ನಮಃ ಶ್ರೀರವಿನಂದನಾಯ ॥ 1 ॥ ಸುರಾಸುರಾಃ ಕಿಂಪುರುಷೋರಗೇಂದ್ರಾ ಗಂಧರ್ವ-ವಿದ್ಯಾಧರಪನ್ನಗಾಶ್ಚ । ಪೀಡ್ಯಂತಿ ಸರ್ವೇ ವಿಷಮಸ್ಥಿತೇನ ತಸ್ಮೈ ನಮಃ

ಶ್ರೀರವಿನಂದನಾಯ ॥ 2 ॥ ನರಾ ನರೇಂದ್ರಾಃ ಪಶವೋ ಮೃಗೇಂದ್ರಾ ವನ್ಯಾಶ್ಚ ಯೇ ಕೀಟಪತಂಗಭೃಂಗಾಃ । ಪೀಡ್ಯಂತಿ ಸರ್ವೇ ವಿಷಮಸ್ಥಿತೇನ ತಸ್ಮೈ ನಮಃ ಶ್ರೀರವಿ-ನಂದನಾಯ ॥3॥ ದೇಶಾಶ್ಚ ದುರ್ಗಾಣಿ ವನಾನಿ ಯತ್ರ ಸೇನಾನಿವೇಶಾಃ ಪುರಪತ್ತನಾನಿ । ಪೀಡ್ಯಂತಿ ಸರ್ವೇ ವಿಷಮಸ್ಥಿತೇನ ತಸ್ಮೈ ನಮಃ ಶ್ರೀರವಿನಂದನಾಯ ॥ 4 ॥ ತಿಲೈ-ರ್ಯವೈರ್ಮಾಷಗುಡಾನ್ನದಾನೈರ್ಲೋಹೇನ ನೀಲಾಂಬರದಾನತೋ ವಾ । ಪ್ರೀಣಾತಿ ಮಂತ್ರೈರ್ನಿಜವಾಸರೇ ಚ ತಸ್ಮೈ ನಮಃ ಶ್ರೀರವಿನಂದನಾಯ ॥ 5 ॥ ಪ್ರಯಾಗಕೂಲೇ ಯಮುನಾತಟೇ ಚ ಸರಸ್ವತೀಪುಣ್ಯಜಲೇ ಗುಹಾಯಾಮ್ । ಯೋ ಯೋಗಿನಾಂ ಧ್ಯಾನಗತೋಽಪಿ ಸೂಕ್ಷ್ಮಃ ತಸ್ಮೈ ನಮಃ ಶ್ರೀರವಿನಂದನಾಯ ॥ 6 ॥ ಅನ್ಯ-ಪ್ರದೇಶಾತ್ ಸ್ವಗೃಹಂ ಪ್ರವಿಷ್ಟಸ್ತದೀಯವಾರೇ ಸ ನರಃ ಸುಖೀ ಸ್ಯಾತ್ । ಗೃಹಾದ್ಗತೋ ಯೋ ನ ಪುನಃ ಪ್ರಯಾತಿ ತಸ್ಮೈ ನಮಃ ಶ್ರೀರವಿನಂದನಾಯ ॥ 7 ॥ ಸ್ರಷ್ಟಾ ಸ್ವಯಂಭೂರ್ಭುವನತ್ರಯಸ್ಯ ತ್ರಾತಾ ಹರಿಃ ಸಂಹರತೇ ಪಿನಾಕೀ । ಏಕಸ್ತ್ರಿಧಾ ಋಗ್ಯಜುಃ ಸಾಮಮೂರ್ತಿ- ಸ್ತಸ್ಮೈನಮಃ ಶ್ರೀರವಿನಂದನಾಯ ॥ 8 ॥ ಶನ್ಯಷ್ಟಕಂ ಯಃ ಪ್ರಯತಃ ಪ್ರಭಾತೇ ನಿತ್ಯಂ ಸುಪುತ್ರೈಃ ಪಶುಬಾಂಧವೈಶ್ಚ। ಪಠೇಚ್ಚ ಸೌಖ್ಯಂ ಭುವಿ ಭೋಗಯುಕ್ತಃ ಪ್ರಾಪ್ನೋತಿ ನಿರ್ವಾಣಪದಂ ತದಂತೇ ॥ 9 ॥ ಕೋಣಸ್ಥಃ ಪಿಂಗಲೋ ಬಭ್ರುಃಕೃಷ್ಣೋ ರೌದ್ರೋಽಂತಕೋ ಯಮಃ । ಸೌರಿಃ ಶನೈಶ್ಚರೋ ಮಂದಃ ಪಿಪ್ಪಲಾದೇನ ಸಂಸ್ತುತಃ ॥ 10 ॥ ಏತಾನಿ ದಶ ನಾಮಾನಿ ಪ್ರಾತರುತ್ಥಾಯ ಯಃ ಪಠೇತ್(ಜಪೇದಶ್ವತ್ಥಸನ್ನಿಧೌ) । ಶನೈಶ್ಚರಕೃತಾ ಪೀಡಾ ನ ಕದಾಚಿದ್ಭವಿಷ್ಯತಿ ॥ 11 ॥ ಕಾಲನೀಲಾಂಗಸಪ್ರಖ್ಯಂನೀಲ-ಜೀಮೂತಸನ್ನಿಭಮ್ । ಛಾಯಾಮಾರ್ತಾಂಡಸೂನುಂ ಚ ಪ್ರಣಮಾಮಿ ಶನೈಶ್ಚರಮ್ ॥12॥ ನಮೋಽರ್ಕಪುತ್ರಾಯ ಶನೈಶ್ಚರಾಯ ನೀಲಾಭ್ರವರ್ಣಾಜಿನಮೇಖಲಾಯ । ಶ್ರುತ್ವಾ ರಹಸ್ಯಂ ಪ್ರಣತೋಽಸ್ಮಿ ನಿತ್ಯಂ ಫಲಪ್ರದೋ ಮೇ ಭವ ಸೂರ್ಯಪುತ್ರ ॥13॥ ಇತಿ ದಶರಥಪ್ರೋಕ್ತಂ ಶನೈಶ್ಚರಸ್ತೋತ್ರಮ್ ಸಂಪೂರ್ಣಮ್

## ಶ್ರೀ ಶನೈಶ್ಚರ ಸ್ತೋತ್ರ

ಪಾಹಿ ಶ್ರೀನರಸಿಂಹಪ್ರಿಯ ಶನೈಶ್ಚರನೆ ನಮೋ ಸಂತತ । ಪಾಹಿ ನಮೋ ಗ್ರಹರಾಜಶೌರಿ ಮಹೇಶ್ವರನೇ ಕೃಪಾಕರ ॥ಪ॥ ಪೃಥ್ವಿ ತತ್ವಾಭಿಮಾನಿಯೇ ನಮೋ ಕರ್ಮಪನು ಎಂಬ ಪುಷ್ಕರ ಮತ್ತು ಆಜಾನಜರು ಋಷಿಗಂಧರ್ವ ಮಹಾ-

ಸಮುದಾಯಕೆ ಮೇದಿನೀ ರಾಜರು ಮನುಷ್ಯರು ಸರ್ವರಿಗೂ ಗುರು ಈಶ್ವರ ನೀ ಯದಿ ಹರಿದಾಸರನ್ನ ಸಲಹುತಿಯೋ ಶರಣೆಂಬೆನೋ ॥1॥ ಸೂರ್ಯಛಾಯಸೂನು ಕಾಲರೂಪಿ ಮಹಾಗ್ರಹ ನಮೋ ಕಾಯೊ ಜಟಿಲನೇ ವಜ್ರ ರೋಮನೇ ದಾನವರಿಗೆ ಭಯಂಕರ ತ್ರ್ಯಂಬಕ ನಾರದರಿಗುಪದೇಶಿಸಿ ಕೊಂಡಾಡಿದ ನಿನ್ನನ್ನು ಖ್ಯಾತ ರಘುವಂಶೋತ್ಥ ಅತಿ ವಿಖ್ಯಾತ ದಶರಥ ಕೀರ್ತಿತ ॥2॥ ಜ್ಞಾನ ಚಕ್ಷುರ್ನಮಸ್ತೇಸ್ತು ಕಶ್ಯಪಾತ್ಮಜಸೂನವೇ ತುಷ್ಟೋದದಾಸಿ ವೈರಾಜ್ಯಂ ರುಷ್ಟೋ ಹರಸಿ ತಕ್ಷಣಾತ್ ನಿನ್ನನ್ನು ದಶರಥನು ಸ್ತುತಿಸಿ ನಮಿಸೆ ವರಗಳನ್ನಿತ್ತು ನೀ ಕ್ಷೋಣಿಜನ ಸಂರಕ್ಷಣೆಗೆ ಬಗೆ ಪಾದ್ಮ ಉಕ್ತದಿ ಅರುಹಿದಿ ॥3॥ ಗಂಗಾ ಮಹಿಮಾ ರಕ್ಷೋ ಭುವನ ಪ್ರಸ್ಥಾನೋಕ್ತವು ತ್ವತ್‌ಕೃತ ತುಂಗ ಮಹಿಮ ಶ್ರೀಲಕ್ಷ್ಮೀ ಭೂಮಾನಾರಸಿಂಹನ ಸ್ತೋತ್ರವು ರಾಘವಕೃತ ತ್ವತ್‌ಕೃತ ಈ ನುಡಿಗಳ್ ಪಠಿಸಿ ಕೇಳ್ವರ್ಗೆ ಶೋಕನೀಗಿ ಇಷ್ಟ ಲಭಿಸುವುದು ನೃಹರಿಪ್ರಿಯ ನೀ ಒದುಗುವಿ ॥4॥ ವನರುಹಾಸನನ ತಾತ ಪ್ರಸನ್ನ ಶ್ರೀನಿವಾಸ ನೃಕೇಸರಿ ಘನ್ನದಯದಿ ಪ್ರಸನ್ನನಾಗಿ ಒಲಿಯೆ ಸಾಧನವಾಗುವ ಜ್ಞಾನಭಕ್ತಿ ವೈರಾಗ್ಯ ಸಂಪತ್ ಆಯುರಾರೋಗ್ಯ ಇತ್ತು ನೀ ಎನ್ನ ತಪ್ಪುಗಳ ಮನ್ನಿಸಿ ಎನ್ನ ಪಾಹಿ ಸತತ ಶನೈಶ್ಚರ ॥5॥

**ಶನೈಶ್ಚರ ಪ್ರೀತಯೇ ತಿಲದಾನಮ್ (ಎಳ್ಳು)** – ತಿಲಾಃ ಕಾಶ್ಯಪಸಂಭೂತಾಃ ತಿಲಾಃ ಪಾಪಹರಾಃ ಶುಭಾಃ । ತಿಲದಾನಪ್ರದಾನೇನ ಸ ಮೇ ಮಂದಃ ಪ್ರಸೀದತು ॥

ಇದಂ ಸಹಿರಣ್ಯ ದಕ್ಷಿಣಾಕಂ ಸತಾಂಬೂಲಂ ತಿಲದಾನಂ ಶನೈಶ್ಚರಗ್ರಹ ಪೀಡಾ ಪರಿಹಾರದ್ವಾರಾ ಶನೈಶ್ಚರಾಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹ ಪ್ರೀತಿಂ ಕಾಮಯಮಾನಃ ತುಭ್ಯಮಹಂ ಸಂಪ್ರದದೇ । ದತ್ತಂ ನ ಮಮ, ನ ಮಮ । ಅನೇನ ಸದಕ್ಷಿಣಾಸತಾಂಬೂಲತಿಲದಾನೇನ ಶನೈಶ್ಚರಾಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಃ ಸುಪ್ರೀತೋ ಅಸ್ತು ಇತಿ ಭವಂತೋ ಬ್ರುವಂತು । ಬ್ರಾಹ್ಮಣ – ಶನೈಶ್ಚರಗ್ರಹಪೀಡಾಪರಿಹಾರದ್ವಾರಾ ಶನೈಶ್ಚರಾಂತರ್ಗತ ಶ್ರೀ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನೃಸಿಂಹಃ ಸುಪ್ರೀತೋ ಅಸ್ತು ॥

ಶನಿವಜ್ರಪಂಜರ ಕವಚಂ – ಓಂ ಶ್ರೀ ಶನ್ಯೈಶ್ಚರಃ ಪಾತು ಫಾಲಂ ಮೇ ಸೂರ್ಯನಂದನಃ । ನೇತ್ರೇ ಛಾಯಾತ್ಮಜಃ ಪಾತು ಪಾತು ಕರ್ಣೌ ಯಮಾನುಜಃ ॥ 1 ॥ ನಾಸಾಂ ವೈವಸ್ವತಃ ಪಾತು ಮುಖಂ ಮೇ ಭಾಸ್ಕರಃ ಸದಾ । ಸ್ನಿಗ್ಧಕಂಠಶ್ಚ ಮೇ ಕಂಠಂ ಭುಜೌ ಪಾತು ಮಹಾಭುಜಃ ॥ 2 ॥ ಸ್ಕಂಧೌ ಪಾತು ಶನಿಶ್ಚೈವ ಕರೌ ಪಾತು ಶುಭಪ್ರದಃ । ವಕ್ಷಃ ಪಾತು ಯಮಭ್ರಾತಾ ಕುಕ್ಷಿಂ ಪಾತ್ವಸಿತಸ್ತಥಾ ॥ 3 ॥ ನಾಭಿಂ ಗ್ರಹಪತಿಃ ಪಾತು ಮಂದಃ ಪಾತು ಕಟಿಂ ತಥಾ । ಊರೂ ಮಮಾಂತಕಃ ಪಾತು ಯಮೋ ಜಾನುಯುಗಂ ತಥಾ ॥ 4 ॥ ಪಾದೌ ಮಂದಗತಿಃ ಪಾತು ಸರ್ವಾಂಗಂ ಪಾತು ಪಿಪ್ಪಲಃ । ಅಂಗೋಪಾಂಗಾನಿ ಸರ್ವಾಣಿ ರಕ್ಷೇನ್ ಮೇ ಸೂರ್ಯನಂದನಃ ॥ 5 ॥ ಫಲಶ್ರುತಿಃ ಇತ್ಯೇತತ್ಕವಚಮ್ ದಿವ್ಯಂ ಪಠೇತ್ಸೂರ್ಯಸುತಸ್ಯ ಯಃ । ನ ತಸ್ಯ ಜಾಯತೇ ಪೀಡಾ ಪ್ರೀತೋ ಭವತಿ ಸೂರ್ಯಜಃ ॥ ವ್ಯಯಜನ್ಮದ್ವಿತೀಯಸ್ಥೋ ಮೃತ್ಯುಸ್ಥಾನಗತೋಽಪಿವಾ । ಕಲತ್ರಸ್ಥೋ ಗತೋ ವಾಪಿ ಸುಪ್ರೀತಸ್ತು ಸದಾ ಶನಿಃ ॥ ಅಷ್ಟಮಸ್ಥೋ ಸೂರ್ಯಸುತೇ ವ್ಯಯೇ ಜನ್ಮದ್ವಿತೀಯಗೇ । ಕವಚಂ ಪಠತೇ ನಿತ್ಯಂ ನ ಪೀಡಾ ಜಾಯತೇ ಕ್ವಚಿತ್ ॥ ಇತ್ಯೇತತ್ಕವಚಂ ದಿವ್ಯಂ ಸೌರೇರ್ಯನ್ನಿರ್ಮಿತಂ ಪುರಾ । ದ್ವಾದಶಾಷ್ಟಮಜನ್ಮಸ್ಥದೋಷಾನ್ನಾಶಯತೇ ಸದಾ । ಜನ್ಮಲಗ್ನಸ್ಥಿತಾನ್ ದೋಷಾನ್ ಸರ್ವಾನ್ನಾಶಯತೇ ಪ್ರಭುಃ ॥ ಇತಿ ಶ್ರೀ ಬ್ರಹ್ಮಾಂಡಪುರಾಣೇ ಬ್ರಹ್ಮ-ನಾರದಸಂವಾದೇ ಶನಿವಜ್ರಪಂಜರಕವಚಂ ಸಂಪೂರ್ಣಮ್ ॥

ವೈಶಾಖಮಾಸ ಒಂದು ತಿಂಗಳೂ ಒಪ್ಪತ್ತು ಭೋಜನ, ನಕ್ತಭೋಜನ, ಅಯಾಚಿತ ಭೋಜನ ಈ ಯಾವುದೊಂದು ವ್ರತವನ್ನು ಮಾಡಿದರೂ ಸರ್ವಾ-ಭೀಷ್ಟವು ಸಿದ್ಧಿಸುವುದು.

ಇಲ್ಲಿಗೆ ವೈಶಾಖಮಾಸದ ವಿಧಾನವು ಸಮಾಪ್ತವಾಯಿತು ॥ ಶ್ರೀಮಧ್ವೇಶಾರ್ಪಣಮಸ್ತು ॥

ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ||

ಅಸ್ಮದ್ಗುರ್ವಂತರ್ಗತ ಶ್ರೀಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಶ್ರೀಲಕ್ಷ್ಮೀಹಯಗ್ರೀವನಿಗೆ ಈ ಕೃತಿಕುಸುಮವು ಸಮರ್ಪಿತವಾಗಲಿ.

ಶ್ರೀಕೃಷ್ಣಾರ್ಪಣಮಸ್ತು.

* * * * * * *

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶನೀ

# ನಾಗಪಂಚಮೀ

ಶ್ರಾವಣ || ಶುದ್ಧ || ಪಂಚಮೀ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ನಾಗಪಂಚಮೀ

## ನಾಗಚತುರ್ಥೀ

ಶ್ರಾವಣ ॥ ಬಹುಳ ಚತುರ್ಥಿ ಹಾಗೂ ಪಂಚಮಿ

ವಿದ್ವಾನ್॥ ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :
ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),
ಗಿರಿನಗರ, ಬೆಂಗಳೂರು-೮೫

**'ನಾಗಪಂಚಮೀ'** ಶಾಲಿವಾಹನ ಶಕೆ ೧೯೪೩ ಶಾರ್ವರಿ ॥ ಶ್ರಾವಣ ॥ ಶುದ್ಧ ॥ ಪೂರ್ಣಿಮೆ (ದಿನಾಂಕ:೩-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥಶ್ರೀಪಾದಂಗಳವರ ಕರಕಮಲಗಳಿಂದ ಭಾರತೀರಮಣಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವ-ದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು : ೧೨೦



ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಸುಬ್ಬಣ್ಣ ಕೆಂಪದಾಳಿಹಳ್ಳಿ,
ದೂರವಾಣಿ : 9141311280

ಮುದ್ರಣ : ಮುಕ್ತಿಪಥ ಮುದ್ರಣಾಲಯ,
ಬೆಂಗಳೂರು.



ದಿ|| ಶ್ರೀ ತೂಮಕುಂಟ ಭೀಮಸೇನರಾವ್ ಮತ್ತು ದಿ|| ಶ್ರೀಮತಿ ಕಮಲಮ್ಮ

(೧೯೧೧-೧೯೮೪) (೧೯೧೬-೧೯೯೨)

ತೂಮಕುಂಟ, ಕಲ್ಯಾಣದುರ್ಗ ತಾ|| ಅನಂತಪುರ ಜಿಲ್ಲೆ, ಆಂಧ್ರಪ್ರದೇಶ

ಜಮದಗ್ನಿಗೋತ್ರದಲ್ಲಿ ಹುಟ್ಟಿದ ದಿ||ಶ್ರೀಯುತರಾದ ತೂಮಕುಂಟ ಭೀಮಸೇನರಾವ್ ಹಾಗೂ ದಿ|| ಶ್ರೀಮತಿ ಕಮಲಮ್ಮ, ಇವರುಗಳ ಸ್ಮರಣಾರ್ಥ ಶ್ರೀ ಟಿ. ಕೃಷ್ಣಮೂರ್ತಿ ಮತ್ತು ಶ್ರೀಮತಿ ಟಿ. ನಾಗವೇಣಿ ಕೃಷ್ಣಮೂರ್ತಿ ಹಾಗೂ ಕುಟುಂಬವರ್ಗದವರೆಲ್ಲರೂ ಈ ಕೃತಿಯ ಸೇವೆಯನ್ನು ಸಲ್ಲಿಸಿರುತ್ತಾರೆ.

**ನಾಗಚತುರ್ಥೀದಿವಸ ಹುತ್ತಕ್ಕೆ ಹಾಲು ಎರೆಯುವಾಗ ಹಾಗೂ ದಿನಪೂರ್ತಿ ಹೇಳಿಕೊಳ್ಳಬೇಕಾದ ಹರಿಕಥಾಮೃತಸಾರದ ಪದ್ಯ**

ಯೋಗಿಗಳ ಹೃದಯಕೆ ನಿಲುಕದ ನಿಗ-
ಮಾಗಮೈಕವಿನುತನ ಪರಮನು-
ರಾಗದಲಿ ದ್ವಿಸಹಸ್ರಜಿಹ್ವೆಗಳಿಂದ ವರ್ಣಿಸುವ ।
ಭೂಗಗನ ಪಾತಾಳವ್ಯಾಪ್ತನ
ಯೋಗನಿದ್ರಾಸ್ಪದನೆನಿಪ ಗುರು
ನಾಗರಾಜನ ಪದಕೆ ನಮಿಸುವೆ ಮನದೊಳನವರತ ॥

# ವಿಷಯಾನುಕ್ರಮಣಿಕೆ

# ಮುನ್ನುಡಿ

ಸಂತಾನವಾಗದಿದ್ದರೆ, ಎಷ್ಟೇ ದುಡಿದರೂ ಹಣ ಬಾರದಿದ್ದರೆ, ಚರ್ಮರೋಗಾದಿಗಳಿದ್ದರೆ, ಖಂಡಿತವಾಗಿಯೂ ಅಂತಹವನ ಮನೆಯಲ್ಲಿ ನಾಗದೋಷವು ಇರುತ್ತದೆ. ಅವನಿಗಿರುವ ದಾರಿ – ನಾಗಾರಾಧನೆ. ವರ್ಷಕ್ಕೊಮ್ಮೆ ಬರುವ ನಾಗಪಂಚಮಿಯನ್ನು ಶ್ರದ್ಧೆಯಿಂದ ಆಚರಿಸಬೇಕು. ಭಗವಂತನು ನಾಗಗಳಿಗೋಸ್ಕರ ಈ ದಿನವನ್ನು ನೀಡಿದ್ದಾನೆ. ಆದ್ದರಿಂದ ನಾಗಪಂಚಮಿಯಂದು ಅತ್ಯಂತ ಶ್ರದ್ಧಾಭಕ್ತಿಗಳಿಂದ ನಾಗಾರಾಧನೆಯನ್ನು ಮಾಡಬೇಕು. ಯಾರಿಗೆ ನಾಗದೋಷವು ಇರುತ್ತದೋ ಅಂಥವರು ಬಂಗಾರದ ನಾಗರತಾಳಿಯನ್ನು ತೆಗೆದುಕೊಂಡು ಬಂದು, ವಿಶೇಷವಾಗಿ ಆವಾಹನೆ ಮಾಡಿ, ಪೂಜಿಸಿ, ಕಂಠದಲ್ಲಿ ನಿತ್ಯವಾಗಿಯೂ ಧಾರಣೆ ಮಾಡಬೇಕು. ಅಂಥವನಿಗೆ ನಾಗದೋಷವು ತಪ್ಪುತ್ತದೆ. ಅಥವಾ ನಾಗರ ಉಂಗುರವನ್ನು ಅನಾಮಿಕ ಬೆರಳಿನಲ್ಲಿ ಧರಿಸಬಹುದು.

ಸರ್ಪವನ್ನು ಕೊಂದರೆ ಮಾತ್ರ ನಾಗದೋಷವು ಬರುವುದಲ್ಲ; ಸರ್ಪಗಳ ಮನೆಯನ್ನು ನಾಶಮಾಡಿದರೂ ಸರ್ಪಹತ್ಯಾ ದೋಷವೇ ಬರುತ್ತದೆ. ಸರ್ಪಗಳ ಮನೆಯೆಂದರೆ ಕಾಡು ಹಾಗೂ ಗಿಡಮರಗಳು, ಹುತ್ತ, ಕೆಲವೊಮ್ಮೆ ಸರ್ಪಗಳು ಸಂಚರಿಸುವ ದಾರಿಯನ್ನು ನಾಶಗೊಳಿಸಿದರೂ ಸರ್ಪದೋಷ ಬರುತ್ತದೆ. ಇವುಗಳನ್ನು ಜನ್ಮಾಂತರದಲ್ಲಿ ನಾಶ ಮಾಡಿದ್ದರೂ ಕೂಡ ಸರ್ಪದೋಷವು ಬರುತ್ತದೆ.

ಭಗವಂತನು ಪ್ರಕೃತಿಪ್ರಿಯನಾಗಿದ್ದಾನೆ. ಮನುಷ್ಯರಿಗೆ ಬದುಕಲು ಹೇಗೆ ಅನುಕೂಲ ಮಾಡಿಕೊಡುತ್ತಾನೋ ಅದರಂತೆ ಪ್ರಾಣಿಗಳಿಗೂ ಕೂಡ ಬದುಕಲು ಕಾಡು ಮೊದಲಾದವನ್ನು ಸೃಷ್ಟಿಸಿದ್ದಾನೆ. ಕಾಡಿನ ರಕ್ಷಣೆಗಾಗಿ ಹಾವು ಮೊದಲಾದ ಪ್ರಾಣಿಗಳನ್ನು ಸೃಷ್ಟಿಸಿದ್ದಾನೆ. ನಾವು ನೇರವಾಗಿ ಹಾವನ್ನು ಕೊಲ್ಲದಿದ್ದರೂ ಗಿಡಮರಗಳನ್ನು ಕಾಡುಗಳನ್ನು ನಾಶಮಾಡುವುದರಿಂದ ಸರ್ಪಗಳ ಸಿಟ್ಟಿಗೆ ಪಾತ್ರರಾಗುತ್ತೇವೆ. ಆದ್ದರಿಂದ ವರ್ಷದಲ್ಲಿ ಅನೇಕ ಹಬ್ಬಗಳ ಆಚರಣೆಯ ಮೂಲಕ ಈ ದೋಷಗಳನ್ನು ಪರಿಹಾರ

ಮಾಡಿಕೊಳ್ಳಬೇಕು. ಧಾತ್ರಿಹವನದಂದು ಧಾತ್ರಿಪೂಜೆ ಮಾಡಬೇಕು; ನವರಾತ್ರಿಯ ಪಾಡ್ಯದಂದು ಅಶೋಕವೃಕ್ಷದ ಪೂಜೆ ಮಾಡಬೇಕು. ಶನಿವಾರದಂದು ಅಶ್ವತ್ಥವೃಕ್ಷವನ್ನು ಪೂಜಿಸಬೇಕು. ಇಷ್ಟೇ ಅಲ್ಲದೆ ಗಿಡಮರಗಳಿಗೆ ಕಾಡುಗಳಿಗೆ ರಕ್ಷಕರಾದ ನಾಗಗಳನ್ನು ನಾಗಪಂಚಮಿಯಂದು ಪೂಜಿಸಬೇಕು.

ಎಲ್ಲ ನಾಗಗಳಿಗೆ ಶೇಷದೇವರೇ ಮುಖ್ಯನಿಯಾಮಕರಾಗಿದ್ದಾರೆ. ನಾಗಪಂಚಮಿಯಂದು ವಿಶೇಷವಾಗಿ ಶೇಷದೇವರ ಪೂಜೆಯನ್ನೇ ಮಾಡಬೇಕು.

ಶೇಷದೇವರ ಪೂಜೆಯನ್ನು ಮಾಡಿದರೆ ಸಾಕು, ಉಳಿದೆಲ್ಲ ನಾಗಗಳು ಪ್ರಸನ್ನರಾಗುತ್ತಾರೆ. ನಮ್ಮಲ್ಲಿ ಶೇಷದೇವರ ಪೂಜೆಯೇ ಸಂಪ್ರದಾಯಾಗತವಾಗಿದೆ. ಆದರೂ ಈ ಪುಸ್ತಕದಲ್ಲಿ ಅಷ್ಟಕುಲನಾಗಗಳ ಪೂಜಾಕ್ರಮವನ್ನೂ ಕೂಡ ಸೇರಿಸಲಾಗಿದೆ. ಉಡುಪಿ ರಾಮನಾಥಾಚಾರ್ಯರು ಬರೆದ ನಾಗಸಮೀಕ್ಷೆ ಪುಸ್ತಕದ ಸೊಬಗನ್ನು ಕಂಡು ಅದರಲ್ಲಿರುವ ಕೆಲವು ಮಂತ್ರವಿಶೇಷಗಳನ್ನು ಇಲ್ಲಿ ಸೇರಿಸುವುದು ಅತ್ಯಂತ ಸೂಕ್ತವೆಂದು ಅನಿಸಿತು. ಅದಕ್ಕಾಗಿ ನಾಗಸಮೀಕ್ಷೆ ಪುಸ್ತಕಕ್ಕೆ ಚಿರಋಣಿಯಾಗಿದ್ದೇನೆ. ಈ ದೃಷ್ಟಿಯಿಂದ ಅಷ್ಟಕುಲನಾಗಗಳ ಪೂಜೆಯನ್ನು ಸೇರಿಸಲಾಗಿದೆ. ಮತ್ತು ರುದ್ರದೇವರು ಪಾರ್ವತಿಯನ್ನು ಕುರಿತು ಅಷ್ಟಕುಲನಾಗಗಳ ಪೂಜೆಯನ್ನು ಮಾಡಬೇಕೆಂದು ಸ್ಕಾಂದಪುರಾಣದಲ್ಲಿ ಹೀಗೆ ಹೇಳಿದ್ದಾರೆ –

**ಅನಂತಂ ವಾಸುಕಿಂ ಶೇಷಂ ಪಂಚಕಂಬಲಕೋ ತಥಾ ।**

**ತಥಾ ಕಾರ್ಕೋಟಕಂ ನಾಗಂ ಭುಜಂಗಾಶ್ವತರೋ ಯಥಾ ।**

ಎಂದು.

ಮುಖ್ಯವಾಗಿ ಮಣ್ಣಿನ ಪ್ರತಿಮೆಯಲ್ಲಿ ಕಲಶದಲ್ಲಿ ಶೇಷದೇವರನ್ನು ಆವಾಹನೆ ಮಾಡಿ, ಅದೇ ಮಣ್ಣಿನ ಪ್ರತಿಮೆಯಲ್ಲಿ ಹಾಗೂ ಕಲಶದಲ್ಲಿ ಅವರ ಸೇವಕರಾದ ಉಳಿದ ನಾಗಗಳನ್ನು ಆವಾಹನೆ ಮಾಡಿ ಪೂಜಿಸಬೇಕು. ಅಥವಾ ಕಲಶ, ಪ್ರತಿಮೆಗಳಲ್ಲಿ ಶೇಷದೇವರನ್ನು ಮಾತ್ರ ಆವಾಹನೆ ಮಾಡಿ ಅಷ್ಟಕಮಲದಳ ಮುಖ್ಯದಳದಲ್ಲಿ ಶೇಷನನ್ನು ಆವಾಹನೆ ಮಾಡುವುದರ ಜೊತೆ ಉಳಿದ ಏಳು ದಳಗಳಲ್ಲಿ ಉಳಿದ ಏಳು ನಾಗಗಳನ್ನು ಆವಾಹನೆ ಮಾಡುವುದು ಸೂಕ್ತವಾಗುತ್ತದೆ.

ಶೇಷನನ್ನು ಪೂಜಿಸಿದ ಮೇಲೆ ಉಳಿದ ನಾಗಗಳನ್ನು ಕೂಡ ಪೂಜಿಸಬೇಕು. ಹೀಗೆ ನಾಗರಪಂಚಮಿಯನ್ನು ಅತ್ಯಂತ ಶ್ರದ್ಧಾಭಕ್ತಿಗಳಿಂದ ಆಚರಿಸಿದಾಗ ನಮ್ಮೆಲ್ಲ ಕಷ್ಟಗಳು ಪರಿಹಾರವಾಗುವುದಷ್ಟೇ ಅಲ್ಲದೆ ಕರ್ತವ್ಯಗಳನ್ನು ನಿರ್ವಹಿಸಿದ ಸಂತೃಪ್ತಿಯು ಕೂಡ ಇರುತ್ತದೆ. ಆದಕ್ಕಾಗಿ ಮಧ್ಯದಲ್ಲಿ ಮುಖಪುಟದಲ್ಲಿ ನೀಡಿದಂತೆ ಶೇಷದೇವರನ್ನು ಬರೆಯಬೇಕು. ಎಂಟು ದಿಕ್ಕುಗಳಲ್ಲಿ ಅಷ್ಟಕುಲನಾಗಗಳನ್ನು ಬರೆಯಬೇಕು. ಕಲಶ ಹಾಗೂ ಮಣ್ಣಿನ ಪ್ರತಿಮೆಯನ್ನೂ ಕೂಡ ಈ ನಾಗಮಂಡಲದ ಮೇಲ್ಭಾಗದಲ್ಲಿಟ್ಟು ಒಟ್ಟಿಗೆ ಕಲಶದಲ್ಲಿ, ಮಣ್ಣಿನ ಪ್ರತಿಮೆಯಲ್ಲಿ ಹಾಗೂ ನಾಗಮಂಡಲದಲ್ಲಿ ಪೂಜಿಸಬೇಕು. ಈ ಕ್ರಮವು ಪೂಜಿಸಲು ಬಹಳ ಅನುಕೂಲವಾಗುತ್ತದೆ. ಶ್ರದ್ಧಾಭಕ್ತಿಗಳಿಗೂ ಕೂಡ ಪೂರಕವಾಗುತ್ತದೆ.

ಈ ಪುಸ್ತಕದಲ್ಲಿ ನೀಡಿದ ಪ್ರಾರ್ಥನಾಮಂತ್ರಗಳನ್ನು ಹಾಗೂ ಸರ್ಪಸೂಕ್ತಗಳನ್ನು ಅವಶ್ಯವಾಗಿ ಪಠಿಸಬೇಕು. ಸ್ತ್ರೀಯರು ಇಲ್ಲಿ ನೀಡಿದ ಪದ್ಯಗಳನ್ನು ಪಠಿಸಿ, ನಾಗಾರಾಧನೆಯನ್ನು ಮಾಡಬೇಕು. ಹಾಗೂ ನಾಗಗಳಿಗೆ ಸಂತೋಷವಾಗುವ ನೈವೇದ್ಯಪದಾರ್ಥಗಳನ್ನು ಸಿದ್ಧಿಪಡಿಸಿ ಧನ್ಯರಾಗಬೇಕು. ಇಲ್ಲಿ ನೀಡಿದ ಪೂಜೆಯನ್ನು ಪಠಿಸಿ ಸ್ತ್ರೀಯರು ಪೂಜಿಸಬಾರದು. ಪುರುಷರೂ ಸಹ ಭಗವಂತನನ್ನು ಪೂಜಿಸಿ ಶುಚಿರ್ಭೂತರಾಗಿ ಪತ್ನಿಯಿಂದ ಕೂಡಿಕೊಂಡು ನಾಗಾರಾಧನೆಯನ್ನು ಮಾಡಬೇಕು. ತನ್ಮೂಲಕ ನಾಗಗಳ ಅನುಗ್ರಹಕ್ಕೆ ಪಾತ್ರರಾಗಿ ಮೋಕ್ಷಸಾಧನೆಯಲ್ಲಿ ಮುನ್ನಡೆಯೋಣ.

ಈ ಪುಸ್ತಕದ ಸೇವೆಯನ್ನು ಮಾಡಿದ ಜಮದಗ್ನಿಗೋತ್ರದಲ್ಲಿ ಹುಟ್ಟಿದ ಹರಿಭಕ್ತರಾದ ಶ್ರೀ ಟಿ. ಕೃಷ್ಣಮೂರ್ತಿ ಮತು ಶ್ರೀಮತಿ ಟಿ. ನಾಗವೇಣಿ ಕೃಷ್ಣಮೂರ್ತಿ ಹಾಗೂ ಕುಟುಂಬದವರಿಗೆಲ್ಲರಿಗೂ ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ-ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಇವರ ಮಾತಾ-ಪಿತೃಗಳಿಗೆ ಈ ಜ್ಞಾನಯಜ್ಞದ ಪುಣ್ಯರಾಶಿಯು ತಲುಪಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ.

## ನಾಗರಪಂಚಮಿಗೆ ಸಾಮಗ್ರಿಗಳು ಹಾಗೂ ಸಿದ್ಧತೆಗಳು

* ಐದು ಹೆಡೆಯ ಮಣ್ಣಿನ ಪ್ರತಿಮೆ.
* ಅಷ್ಟದಳ ಪದ್ಮ ಗರಿಕೆ.
* ಅರಳು.
* ಹಾಲು.
* ನೆನೆಸಿದ ಕಡಲೆಕಾಳು.
* ಆರತಿ.
* ಪಂಚಪಲ್ಲವ.
* ಕರ್ಪೂರ.
* ಮಾವಿನ ಚಿಗುರು.
* ತಂಬಿಟ್ಟು.
* ಸಹೋದರ.
* ಗರಿಕೆ.
* ದರ್ಭೆ.
* ಗೆಜ್ಜೆವಸ್ತ್ರ.
* ಅರಿಶಿನ-ಕುಂಕುಮ,
* ಹಸಿ ಸೆಗಣಿ.

* * * * *

## ನಾಗರಪಂಚಮಿಯ ಕರ್ತವ್ಯಗಳು

* ಬೆಳಿಗ್ಗೆ ಎದ್ದ ಕೂಡಲೇ ಶೇಷಶಾಯಿಯಾದ ನಾರಾಯಣನನ್ನು ಸ್ಮರಿಸಬೇಕು. ಭಗವಂತನ ಗುಣಗಾನ ಮಾಡುತ್ತಿರುವ ಶೇಷದೇವರನ್ನು ಸ್ಮರಿಸಬೇಕು. ಅಷ್ಟಕುಲನಾಗಗಳನ್ನು ನಮಿಸಿ ಎದ್ದೇಳಬೇಕು.
* ನಾಗಪಂಚಮಿಯ ಆಚರಣೆಯನ್ನು ಶ್ರದ್ಧೆಯಿಂದ ಮಾಡುತ್ತೇನೆಂದು ಸಂಕಲ್ಪ ಮಾಡಬೇಕು. ರಾತ್ರಿಮಲಗುವಾಗ ನಾಗಾರಾಧನೆಯನ್ನು ಶೇಷಶಾಯಿಗೆ ಸಮರ್ಪಿಸಿ ಕೃಷ್ಣಾರ್ಪಣ ಎನ್ನಬೇಕು.
* ನಾಗರಪಂಚಮಿಯಂದು ಮನೆಯ ಹೆಣ್ಮಕ್ಕಳು ಮುತ್ತೈದೆಯರು ಎರೆದು-ಕೊಳ್ಳಬೇಕು.
* ಮನೆಮಂದಿಯೆಲ್ಲರೂ ತನಿ ಎರೆಯಬೇಕು.
* ಬಣ್ಣದ ರಂಗೋಲಿಯಿಂದ ನಾಗಮಂಡಲ ಬರೆಯಬೇಕು. ಸುತ್ತಲೂ ಅಷ್ಟಕುಲನಾಗಗಳನ್ನು ಬರೆಯಬೇಕು.
* ಎಲ್ಲ ನಾಗಗಳ ಮುಂದೆ ದೀಪಗಳನ್ನು ಇಡಬೇಕು.
* ಅರಳನ್ನು ಎಲ್ಲರಿಗೂ ಪ್ರತ್ಯೇಕ ನೈವೇದ್ಯ ಮಾಡಬೇಕು.
* ಮಧ್ಯದಲ್ಲಿ ಶೇಷಾಸನನಾದ ಭಗವಂತನನ್ನು ಪೂಜಿಸಬೇಕು.
* ಮಣ್ಣಿನ ಪ್ರತಿಮೆಯಲ್ಲಿ ಪೂಜಿಸಬೇಕೆನ್ನುವವರು ಕೆಳಗಿನಂತೆ ಅನುಷ್ಠಾನ ಮಾಡಬೇಕು.
* ಶುದ್ಧವಾದ ಮಣ್ಣಿನಿಂದ ಏಳು ಹೆಡೆಯುಳ್ಳ ಶೇಷದೇವರ ಪ್ರತಿಮೆಯನ್ನು ನಿರ್ಮಾಣ ಮಾಡಬೇಕು. ಜೇಡಿಮಣ್ಣಿನಿಂದ ಮಾಡುವುದು ಅತ್ಯಂತ ಸುಲಭ.
* ಕೆಲವರು ಬರೀ ಹೆಡೆಯನ್ನು ಮಣ್ಣಿನಿಂದ ಮಾಡುತ್ತಾರೆ. ಇದು ತಪ್ಪು. ಸಂಪೂರ್ಣ ಹಾವಿನ ಶರೀರವನ್ನೇ ನಿರ್ಮಾಣ ಮಾಡಿ ಏಳು ಹೆಡೆಗಳನ್ನು ನಿರ್ಮಿಸಬೇಕು.

* ಒಂದು ಮಂಟಪವನ್ನು ಸಿದ್ಧ ಮಾಡಬೇಕು; ಆ ಮಂಟಪದ ನಾಕೂ ಕಡೆ ಬಾಳೆಕಂಬವನ್ನು ಕಟ್ಟಿರಬೇಕು.

* ಮಂಟಪದ ಮಧ್ಯದಲ್ಲಿ ರಂಗೋಲಿಯನ್ನು ಬರೆದು, ಬೆಳ್ಳಿ ಅಥವಾ ತಾಮ್ರದ ತಟ್ಟೆಯಲ್ಲಿ ಅಕ್ಕಿಯನ್ನಿಡಬೇಕು. ಅದರ ಮಧ್ಯದಲ್ಲಿ ತಾವು ಮಣ್ಣಿನಿಂದ ನಿರ್ಮಿಸಿದ ಶೇಷನ ಆಕೃತಿಯನ್ನು ಇಡಬೇಕು.

* ಮಂಟಪವನ್ನು ಹೂವು, ಹಣ್ಣುಗಳಿಂದ ಸುಂದರವಾಗಿ ಅಲಂಕರಿಸಿರಬೇಕು. ವಿದ್ಯುದ್ದೀಪ ಹಾಗೂ ಪ್ಲಾಸ್ಟಿಕ್ ಅಲಂಕಾರಸಾಮಗ್ರಿಗಳನ್ನು ಮಂಟಪದಲ್ಲಿ ಜೋಡಿಸು- ವುದು ಉತ್ತಮಪಕ್ಷವಲ್ಲ.

* ಮನೆಯಲ್ಲಿ ಚಿನ್ನ, ಬೆಳ್ಳಿ, ಪಂಚಲೋಹದ ನಾಗಪ್ರತಿಮೆಗಳು ಸಾನ್ನಿಧ್ಯವನ್ನು ಹೊಂದಿದ್ದರೆ ಅವುಗಳನ್ನಿಟ್ಟು ಪೂಜಿಸಬಹುದು. ಸಾಮಾನ್ಯವಾಗಿ ಇಂಥ ಪ್ರತಿಮೆಗಳನ್ನು ಯಾರೂ ಇಟ್ಟುಕೊಂಡಿರುವುದಿಲ್ಲವಾದ್ದರಿಂದ ಮಣ್ಣಿನ ಪ್ರತಿಮೆಯನ್ನು ಮಾಡಿ ಪೂಜಿಸುವ ಸಂಪ್ರದಾಯವು ಬಂದಿದೆ.

* ಶೇಷದೇವರ ಆಕೃತಿಯನ್ನು ಇಡುವ ಆ ತಟ್ಟೆಯಲ್ಲಿ ಅಡಿಕೆಬೆಟ್ಟ, ಅರಿಶಿನದ ಕೊಂಬು, ಬೆಳ್ಳಿಯ ನಾಣ್ಯ ಮೊದಲಾದ ಮಂಗಳದ್ರವ್ಯಗಳನ್ನು ಇಟ್ಟಿರಬೇಕು.

* ಒಂದು ಕಲಶದಲ್ಲಿ ನೀರನ್ನು ತುಂಬಿ, ಅದರಲ್ಲಿ ಪಂಚಪಲ್ಲವಗಳನ್ನು ಹಾಕಿ, ಅದರ ಮೇಲೆ ತೆಂಗಿನ ಕಾಯಿ ಇಟ್ಟು, ಅದನ್ನು ಮಾವಿನ ಚಿಗುರುಗಳಿಂದ ಅಲಂಕರಿಸಬೇಕು. ಮತ್ತು ಶೇಷದೇವರನ್ನು ಪೂಜಿಸುವ ಮೊದಲು ಆ ಕಲಶಕ್ಕೆ ಪೂಜೆಯನ್ನು ಮಾಡಿ ಅದರಲ್ಲಿ ಶೇಷನನ್ನು ಆವಾಹನೆ ಮಾಡಬೇಕು.

* ಕಲಶದ ಮುಂದೆ ಶೇಷದೇವರ ಪ್ರತೀಕವನ್ನಿಟ್ಟು ಪೂಜಿಸಬೇಕು. ಏಕೆಂದರೆ ಯಾವುದೇ ವ್ರತಗಳಲ್ಲಿ ಕಲಶದಲ್ಲಿ ಆವಾಹನೆ ಮಾಡಿ ಪೂಜಿಸಬೇಕೆಂದು ಶಾಸ್ತ್ರ ಹೇಳುತ್ತದೆ. ಸ್ಪಷ್ಟವಾಗಿ ಹೀಗೆ ತಿಳಿದುಕೊಳ್ಳಿ - ಬಣ್ಣದ ನಾಗಮಂಡಲವನ್ನು ಬರೆಯಿರಿ. ಸುತ್ತಲೂ ಅಷ್ಟಕುಲನಾಗಗಳನ್ನು ಬರೆಯಿರಿ. ಅದರ ಮುಂದೆ ಒಂದು

ಮಂಟಪವನ್ನು ಇಟ್ಟು ಅದರಲ್ಲಿ ಅಷ್ಟದಳಕಮಲವನ್ನು ಬರೆದು, ಅಕ್ಕಿಯ ತಟ್ಟೆಯಮೇಲೆ ಕಲಶವನ್ನು ಸ್ಥಾಪನೆ ಮಾಡಿರಿ. ಕಲಶದ ಮುಂದೆ ಮಣ್ಣಿನ ಪ್ರತಿಮೆಯನ್ನಿಟ್ಟು ಅಲಂಕರಿಸಿರಿ. ಇಷ್ಟನ್ನು ಮಾಡಲು ಸಾಧ್ಯವಾಗದಿದ್ದರೆ ಇವುಗಳಲ್ಲಿ ಒಂದನ್ನಾದರೂ ಆಚರಿಸಿರಿ.

* ತಂಬಿಟ್ಟನ್ನು ನೈವೇದ್ಯಕ್ಕಾಗಿ ತಯಾರು ಮಾಡಿಕೊಳ್ಳಬೇಕು. ಅಕ್ಕಿಯನ್ನು ತೊಳೆದು, ನೆರಳಿನಲ್ಲಿ ಒಣಗಿಸಿ, ಕುಟ್ಟಿ ಪುಡಿ ಮಾಡಿ, ಅದರ ಜೊತೆ ಬೆಲ್ಲವನ್ನು ಸೇರಿಸಿ, ತುಪ್ಪವನ್ನು ಮಿಶ್ರಣ ಮಾಡಿ ತಂಬಿಟ್ಟನ್ನು ತಯಾರು ಮಾಡಬೇಕು.

* ಸಣ್ಣ ತೊಟ್ಟಿಲಿನ ಆಕಾರದಲ್ಲಿ ಹಾಗೂ ಅಂಡಾಕಾರದಲ್ಲಿ ತಂಬಿಟ್ಟನ್ನು ಮಾಡಿಕೊಳ್ಳಬೇಕು. ವಿಳ್ಳೆದೆಲೆಯ ಮೇಲೆ ಅವುಗಳನ್ನು ಇಟ್ಟು ತಾಮ್ರದ ಅಥವಾ ಬೆಳ್ಳಿಯ ತಟ್ಟೆಯಲ್ಲಿ ಈ ತಂಬಿಟ್ಟನ್ನು ಇಡಬೇಕು.

* ಕೆಲವರು ಈ ತಂಬಿಟ್ಟಿನಲ್ಲಿಯೇ ಶೇಷದೇವರನ್ನು ಆವಾಹಿಸಿ ಪೂಜಿಸುತ್ತಾರೆ. ಆದರೆ ಶೇಷದೇವರಿಗೆ ಇದು ಅತ್ಯಂತ ಇಷ್ಟವಾದ್ದರಿಂದ ಶೇಷದೇವರ ಪ್ರತಿಮೆಯ ಮುಂದಿಟ್ಟು ನೈವೇದ್ಯ ಮಾಡುವುದೇ ಹೆಚ್ಚು ಸೂಕ್ತವಾಗಿದೆ.

* ನಾಗರಪಂಚಮಿಯಂದು ಕರಿದ ಪದಾರ್ಥಗಳನ್ನು ಮಾಡುವ ಕ್ರಮವಿಲ್ಲ. ಕಡುಬುಗಳನ್ನೂ ಕೂಡ ನೀರಿನಲ್ಲಿಯೇ ಬೇಯಿಸಿ ನೈವೇದ್ಯಕ್ಕೆ ಇಡುತ್ತಾರೆ. ಎಣ್ಣೆ ಅಥವಾ ತುಪ್ಪದಲ್ಲಿ ಯಾವುದನ್ನೂ ಕೂಡ ಕರಿಯಬಾರದು. ಕರಿದ ಪದಾರ್ಥಗಳು ನಾಗಗಳಿಗೆ ಇಷ್ಟವಾಗುವುದಿಲ್ಲ. ಕೆಲವರು ಒಗ್ಗರಣೆಯನ್ನು ಮಾಡುವುದಿಲ್ಲ.

* ಹಸಿಹಾಲು, ಅಕ್ಕಿಹಿಟ್ಟು, ತೋಯಿಸಿದ ಕಡಲೆ ಕಾಳುಗಳು, ಭತ್ತದ ಅರಳುಗಳು ಇವುಗಳನ್ನು ಪೂಜೆಗಾಗಿ ಇಟ್ಟುಕೊಳ್ಳಬೇಕು.

* ಪೂಜಿಸಿ ಉಳಿದ ಮೇಲಿನ ಪದಾರ್ಥಗಳನ್ನು ಸಹೋದರರಿಗೆ ಅಕ್ಕತಂಗಿ- ಯರು ನೀಡಬೇಕು. ಮತ್ತು ಅತಿಥಿಬ್ರಾಹ್ಮಣರಿಗೂ ದಾನ ಮಾಡಬೇಕು.

* ನಾಗರಪಂಚಮಿಯಂದು ಪೂಜೆಯ ಅನಂತರ ಸಹೋದರನ ಬೆನ್ನಿಗೆ ಹಸಿ ಹಾಲನ್ನು ಪ್ರೋಕ್ಷಿಸಿ, ತಂಬಿಟ್ಟು ಮೊದಲಾದವುಗಳನ್ನು ಉಡುಗೊರೆಯ ರೂಪದಲ್ಲಿ ನೀಡುವುದರಿಂದ ಸಹೋದರರಿಗೆ ಆಯುಷ್ಯವು ಅಭಿವೃದ್ಧವಾಗುತ್ತದೆ. ಹಾಗೂ ಸ್ತ್ರೀಯರಿಗೆ ದ್ವಿಕುಲೋದ್ಧಾರಿಣೀ ಎಂಬ ಕೀರ್ತಿಯು ಹೆಚ್ಚುತ್ತದೆ.
* ನಾಗಗಳಿಗೆ ಎಳೆನೀರು ತುಂಬಾ ಇಷ್ಟವಾದ್ದರಿಂದ ಶಕ್ತ್ಯನುಸಾರವಾಗಿ ಎಳೆ-ನೀರುಗಳನ್ನು ತಂದಿಟ್ಟುಕೊಳ್ಳಬೇಕು. ಬೆಳ್ಳಿಯ ಪ್ರತಿಮೆಯಾಗಿದ್ದರೆ ಎಳೆನೀರಿನಿಂದ ಅಭಿಷೇಕ ಮಾಡಬೇಕು. ಮತ್ತು ನೈವೇದ್ಯಕ್ಕೆ ದಾನಕ್ಕೂ ಕೂಡ ಎಳೆನೀರನ್ನು ಉಪಯೋಗಿಸಬೇಕು.
* ಒಂಭತ್ತು ಎಳೆಯ ಒಂಭತ್ತು ಗಂಟಿನ ದಾರವನ್ನು ನಾಗಪ್ಪನಿಗೆ ಏರಿಸಿ ಧರಿಸುವ ಸಂಪ್ರದಾಯವೂ ಇದೆ.
* ಗರಿಕೆ, ದರ್ಭೆ, ಗೆಜ್ಜೆವಸ್ತ್ರ, ಅರಿಶಿನ, ಕುಂಕುಮ, ಹಸಿಶೆಗಣಿ ಇವುಗಳನ್ನು ಇಟ್ಟುಕೊಂಡಿರಬೇಕು.
* ಅಂದು ಬೆಳಿಗ್ಗೆ ಮನೆಯ ಮುಂದೆ ಬಾಗಿಲುಗಳ ಎಡ ಮತ್ತು ಬಲ ಭಾಗಗಳಲ್ಲಿ ಹಸಿಶೆಗಣಿಯಿಂದ ಸರ್ಪದ ಚಿತ್ರವನ್ನು ಬರೆಯ ಬೇಕು. ಮತ್ತು ಅರಿಶಿನ ಕುಂಕುಮ ಗೆಜ್ಜೆ ವಸ್ತ್ರಗಳಿಂದ ಆ ಚಿತ್ರವನ್ನು ಅಲಂಕರಿಸಬೇಕು.

## ನಾಗರಚೌತಿ ಮತ್ತು ನಾಗರಪಂಚಮಿ ಆಚರಣೆಯ ಬಗ್ಗೆ ಪ್ರಮಾಣಗಳು

ಶ್ರಾವಣಶುಕ್ಲಪಂಚಮಿಯ ದಿವಸ ನಾಗರಪಂಚಮಿಯನ್ನು ಆಚರಿಸಬೇಕು. ಅದರ ಹಿಂದಿನ ದಿವಸ ನಾಗರಚೌತಿಯನ್ನು ಆಚರಿಸಬೇಕು. ನಾಗರಪಂಚಮಿಯು ಷಷ್ಠೀ ತಿಥಿಯಿಂದ ಕೂಡಿರಬೇಕು. ಚತುರ್ಥೀ ತಿಥಿಯಿಂದ ಕೂಡಿರಬಾರದು.

ನಾಗರಚೌತಿ ದಿವಸ ಹೆಣ್ಣುಮಕ್ಕಳು ಎರೆದುಕೊಂಡು ಹೊಸವಸ್ತ್ರ ಉಟ್ಟುಕೊಂಡು ಚಿನ್ನದ ಸರಗಳನ್ನು ಹಾಕಿಕೊಳ್ಳಬೇಕು. ಕಲ್ಲಿನ ನಾಗನಿಗೆ ಅಥವಾ

ಹುತ್ತಕ್ಕೆ ತನಿ ಎರೆಯ ಬೇಕು. ಗೆಜ್ಜೆವಸ್ತ್ರ, ಅರಿಷಿಣ, ಕುಂಕುಮ, ಜೋಳದ ಅರಳು, ಹುಣಿಸೇ ಕಾಯಿ, ನೆನೆಸಿದ ಕಡಲೆಕಾಳು, ಒಣಕೊಬ್ರಿ, ಕೇದಿಗೆ, ಗರಿಕೆ, ಮರುಗಗಳನ್ನು ನಾಗನಿಗೆ ಸಮರ್ಪಿಸಬೇಕು.

ಪಂಚಮೀ ನಾಗಪೂಜಾಯಾಂ ಕಾರ್ಯಾ ಷಷ್ಟೀ ಸಮನ್ವಿತಾ ।
ತಸ್ಯಾಂ ತು ತುಷಿತಾ ನಾಗಾ ಇತರಾ ಸಚತುರ್ಥಿಕಾ ॥

ಶ್ರಾವಣಪಕ್ಷ ಪಂಚಮೀದಿವಸದಲ್ಲಿ ಬರುವ ನಾಗಪಂಚಮಿಯು ಷಷ್ಠೀತಿಥಿಯಿಂದ ಕೂಡಿರಬೇಕು. ಚತುರ್ಥೀತಿಥಿಯಿಂದ ಕೂಡಿರಬಾರದು. ಅದರಂತೆ ನಾಗರಚೌತಿಯು ಪಂಚಮೀ ತಿಥಿಯಿಂದ ಕೂಡಿರಬೇಕು. ಅಂದಷ್ಟೇ ನಾಗರಚೌತಿಯನ್ನು ಆಚರಿಸಬೇಕು.

ಈಶ್ವರ ಉವಾಚ –

ಶ್ರಾವಣೇ ಮಾಸಿ ಪಂಚಮ್ಯಾಂ ಶುಕ್ಲಪಕ್ಷೇ ವರಾನನೇ ।
ದ್ವಾರಸ್ಯೋಭಯತೋ ಲೇಖ್ಯಾ ಗೋಮಯೇನ ವಿಷೋಲ್ಬಣಾಃ ॥

ಶ್ರಾವಣಮಾಸದ ಶುಕ್ಲಪಕ್ಷದಲ್ಲಿ ಬರುವ ಪಂಚಮೀಯಂದು ನಾಗಪೂಜೆಯನ್ನು ಮಾಡಬೇಕು. ಬಾಗಿಲಿನ ಎರಡೂ ಕಡೆ ಗೋಮಯದಿಂದ ವಿಷಪೂರಿತವಾದ ನಾಗಗಳ ಚಿತ್ರವನ್ನು ಬರೆಯಬೇಕು.

ಘೃತೋದಕಾಭ್ಯಾಂ ಪಯಸಾ ಸ್ನಾಪಯಿತ್ವಾ ವರಾನನೇ ।
ಗೋಧೂಮ್ಯೈಃ ಪಯಸಾ ಚೈವ ಲಾಜೈಶ್ಚ ವಿವಿಧೈಸ್ತಥಾ ॥

ತುಪ್ಪ, ನೀರು, ಹಾಲು ಇವುಗಳಿಂದ ತನಿಯೆರೆಯಬೇಕು. ಗೋಧಿ, ಹಾಲು, ಅರಳು ಇವುಗಳನ್ನು ನೈವೇದ್ಯ ಮಾಡಬೇಕು.

ಪೂಜಯೇದ್ ವಿಧಿವದ್ ದೇವಿ ದಧಿದೂರ್ವಾಂಕುರೈಃ ಕ್ರಮಾತ್ ।
ಗಂಧಪುಷ್ಪೋಪಹಾರೈಶ್ಚ ಬ್ರಾಹ್ಮಣಾನಾಂ ಚ ತರ್ಪಣಮ್ ॥

ಪಾರ್ವತಿದೇವಿಯೇ ಹೀಗೆ ವಿಧಿಪ್ರಕಾರವಾಗಿ ಮೊಸರು, ಗರಿಕೆ ಮೊದಲಾದವುಗಳಿಂದಲೂ ಪೂಜಿಸಬೇಕು. ಗಂಧ, ಪುಷ್ಪ, ನೈವೇದ್ಯಗಳಿಂದ

ಷೋಡಶೋಪಚಾರಪೂಜೆಯನ್ನು ಮಾಡಬೇಕು. ಪೂಜೆಯ ಅನಂತರ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ತೃಪ್ತಿಪಡಿಸಬೇಕು.

ಅಥವಾ ಶ್ರಾವಣೇ ಮಾಸಿ ಪಂಚಮ್ಯಾಂ ಶ್ರದ್ಧಯಾನ್ವಿತಃ ।
ಯಶ್ಚಾಲೇಖ್ಯ ನರೋ ನಾಗಾನ್ ಕೃಷ್ಣವರ್ಣಾದಿವರ್ಣಕೈಃ ॥

ಶ್ರಾವಣಮಾಸದ ಪಂಚಮೀಯಂದು ಶ್ರದ್ಧೆಯಿಂದ ಕೂಡಿ ಕಪ್ಪು ಮೊದಲಾದ ವರ್ಣಗಳಿಂದ ಕೂಡಿರುವ ನಾಗಗಳ ಪೂಜೆಯನ್ನು ಮಾಡಬೇಕು.

ಗುರುಕಲ್ಪಾಂಸ್ತಥಾ ವೀಥ್ಯಾಂ ಸ್ವಗೃಹೇ ವಾ ಪಟೇ ಬುಧಃ ।
ಪೂಜಯೇದ್ ಗಂಧಧೂಪೈಶ್ಚ ಪಯಸಾ ಪಾಯಸೇನ ಚ ॥

ತಸ್ಯ ತುಷ್ಟಿಂ ಸಮಾಯಾಂತಿ ಪದ್ಮಕಾಸ್ತಕ್ಷಕಾದಯಃ ।
ಆಸಪ್ತಮಾತ್ ಕುಲೇ ತಸ್ಯ ನ ಭಯಂ ನಾಗತೋ ಭವೇತ್ ॥

ಮನೆಯಿಂದ ಹೊರಗೆ ಇರುವ ಹುತ್ತದಲ್ಲಿ, ಮನೆಯಲ್ಲಿ ಅಥವಾ ಬಟ್ಟೆಯಲ್ಲಿ ಬಿಡಿಸಿದ ಚಿತ್ರದಲ್ಲಿ ನಾಗನನ್ನು ಪೂಜಿಸಬೇಕು. ಪದ್ಮಕ, ತಕ್ಷಕ, ಮೊದಲಾದ ನಾಗಗಳು ಹೀಗೆ ಪೂಜಿಸುವುದರಿಂದ ತುಷ್ಟರಾಗುತ್ತಾರೆ. ಏಳು ಕುಲದ ತನಕ ನಾಗಪೂಜೆಯನ್ನು ಮಾಡಿದವರಿಗೆ ಭಯವಿರುವುದಿಲ್ಲ.

ದಿವಾರಾತ್ರೌ ನರೈಃ ಕಾರ್ಯಂ ಮೇದಿನೀಖನನಂ ನ ಹಿ ।
ಮಂತ್ರೋಽಯಮುಚ್ಯತೇ ಸರ್ಪವಿಷಸ್ಯ ಪ್ರತಿಷೇಧಕಃ ॥

ಮತ್ತು ನಾಗರ ಚೌತಿ ಹಾಗೂ ನಾಗರ ಪಂಚಮೀಯಂದು ಯಾರೊಬ್ಬನೂ ಹಗಲು ರಾತ್ರಿಗಳಲ್ಲಿ ಭೂಮಿಯನ್ನು ಅಗೆಯಬಾರದು. ಈ ಮುಂದೆ ಹೇಳುವ ಮಂತ್ರವನ್ನು ಜಪಿಸುವುದರಿಂದ ಸರ್ಪದ ವಿಷವು ಪರಿಹಾರವಾಗುತ್ತದೆ.

ತಸ್ಯ ಪ್ರಜಪಮಾತ್ರೇಣ ನ ವಿಷಂ ಕ್ರಮತೇ ಸದಾ ॥
'ಓಂ ಕುಕುಲಂ ಹುಂ ಫಟ್ ಸ್ವಾಹಾ'

ದೇಹಕ್ಕೆ ಅಂಟಿದ ವಿಷವು ಈ ಮಂತ್ರಬಲದಿಂದ ಬಾಧಿಸುವುದಿಲ್ಲ. ಆ ಮಂತ್ರ ಹೀಗಿದೆ – ಓಂ ಕುಕುಲಂ ಹುಂ ಫಟ್ ಸ್ವಾಹಾ'.

ಇತ್ಯೇವಂ ಕಥಿತಂ ದೇವಿ ನಾಗವ್ರತಮನುತ್ತಮಮ್ ।

ಯಚ್ಛ್ರುತ್ವಾ ಚ ಪಠಿತ್ವಾ ಚ ಮುಚ್ಯತೇ ಸರ್ವಪಾತಕೈಃ ॥

ಹೀಗೆ ದೇವಿಯೇ ನಾಗವ್ರತವು ಅತ್ಯಂತ ಶ್ರೇಷ್ಠವಾಗಿದೆ. ಇದರ ಬಗ್ಗೆ ಕೇಳಿದವರು ಹೇಳಿದವರು ಎಲ್ಲಾ ಪಾತಕಗಳಿಂದ ಮುಕ್ತರಾಗುತ್ತಾರೆ.

## ಪಂಚಮಿಯಂದು ನಾಗನನ್ನು ಪೂಜಿಸಲು ಕಾರಣ?

ಪ್ರಾದಾತ್ ತೃತೀಯಾಂ ಪಾರ್ವತ್ಯೈ ಗಣೇಶಾಯ ಚತುರ್ಥಿಕಾಮ್।

ಪಂಚಮೀಂ ಸರ್ವನಾಗಾನಾಂ ಶೇಷಾಣಾಂಪತಯೇ ತತಃ ॥

ಭಗವಂತನು ಲೋಕದಲ್ಲಿ ಪೂಜೆಗೊಳ್ಳಲು ದೇವತೆಗಳಿಗೆ ಒಂದೊಂದು ದಿವಸಗಳನ್ನು ನೀಡಿದ್ದಾನೆ. ಗೌರಿಗೆ ತೃತೀಯಾವನ್ನು, ಗಣೇಶನಿಗೆ ಚತುರ್ಥೀಯನ್ನು, ಶೇಷದೇವರಿಗೆ ಹಾಗೂ ನಾಗಗಳಿಗೆ ಪಂಚಮೀ ತಿಥಿಯನ್ನು ನೀಡಿರುತ್ತಾನೆ. ಅದರಲ್ಲೂ ಶ್ರಾವಣಶುಕ್ಲಪಂಚಮೀಯಂದು ವಿಶೇಷವಾಗಿ ನಾಗಗಳಿಗೆ ಪೂಜೆಗೊಳ್ಳಲು ಅವಕಾಶವನ್ನು ನೀಡಿರುತ್ತಾನೆ.

## ನಾಗರಚೌತಿಯಂದು ಉಪವಾಸವಿದ್ದು ಹಬ್ಬ ಮಾಡಬೇಕು?

ಯುಗಂ ಮಧ್ಯಂದಿನೇ ಯತ್ರ ತತ್ರೋಪೋಷ್ಯ ಫಣೇಶ್ವರಾನ್ ।

ಕ್ಷೀರೇಣ ಆಪ್ಯಾಯ ಪಂಚಮ್ಯಾಂ ಪಾರಣೇತ್ ಪ್ರಯತೋ ನರಃ ॥

ವಿಷಾಣಿ ತಸ್ಯ ನಶ್ಯಂತಿ ನ ತಂ ಹಿಂಸಂತಿ ಪನ್ನಗಾಃ ॥

ನಾಗರಚೌತಿಯಂದು ಭಗವಂತನನ್ನು ಪೂಜೆ ಮಾಡಿದ ಮೇಲೆ ನಾಗಪ್ರತಿಮೆಗೆ ತನಿಯೆರೆಯಬೇಕು. ಅಂದು ನಾಗಗಳ ಪ್ರೀತಿಗೋಸ್ಕರ ಉಪವಾಸವನ್ನು ಮಾಡಬೇಕು. ಮರುದಿವಸ ಪ್ರಾತಃಕಾಲದಲ್ಲಿ ವಿಶೇಷವಾಗಿ ಹಾಲಿನ ಅಭಿಷೇಕವನ್ನು ಹಾಗೂ ಎಳೆನೀರಿನ ಅಭಿಷೇಕವನ್ನು ನಾಗಗಳಿಗೆ ಮಾಡಬೇಕು. ವೈಭವೋಪೇತವಾಗಿ ಷೋಡಶೋಪಚಾರಪೂಜೆಯನ್ನು ಮಾಡಬೇಕು. ಷೋಡಶೋಪಚಾರಪೂಜೆಯಲ್ಲಿ ನಾಗಗಳಿಗೆ ಎಳೆನೀರು, ಹಾಲು ಹಾಗೂ ನೀರುಗಳಿಂದ ಮಾಡುವ ಅಭಿಷೇಕವೇ

ಹೆಚ್ಚು ಪ್ರಿಯವಾಗಿರುತ್ತದೆ. ಆದ್ದರಿಂದ ಯಥಾಶಕ್ತಿ ಅಭಿಷೇಕವನ್ನು ಮಾಡಬೇಕು. ಇದನ್ನೇ ತನಿ ಎರೆಯುವುದು ಎಂದು ಕರೆಯುತ್ತಾರೆ. ಹೀಗೆ ತನಿ ಎರೆದರೆ ಅವನಿಗೆ ವಿಷಬಾಧೆ ತಟ್ಟುವುದಿಲ್ಲ. ಅವನನ್ನು ಸರ್ಪಗಳು ಹಿಂಸಿಸುವುದಿಲ್ಲ.

## ನಾಗದೇವನ ಮುಂದೆ ಪ್ರಾರ್ಥನೆ ಮಾಡಿಕೊಳ್ಳಬೇಕಾದ ಶ್ಲೋಕ

ಅನಂತಶಯನಂ ದೇವಂ ಸರ್ವಶೋಕವಿನಾಶನಮ್ ।
ಲೋಕಾಧಾರಂ ವಾರುಣೇಶಂ ನಾಗೇಂದ್ರಂ ಸನ್ನಮಾಮ್ಯಹಮ್ ॥

ನಾಗರಾಜನೇ! ನೀನು ಅನಂತನಾಮಕಭಗವಂತನ ಹಾಸಿಗೆಯಾಗಿರುವಿ. ದೇವಶ್ರೇಷ್ಠನಾಗಿರುವಿ. ಎಲ್ಲರ ದುಃಖ ಪರಿಹಾರ ಮಾಡುವಿ. ಬ್ರಹ್ಮಾಂಡವನ್ನು ಧಾರಣೆ ಮಾಡಿರುವಿ. ವಾರುಣೀಪತಿಯಾಗಿರುವಿ. ಎಲ್ಲ ನಾಗಗಳಿಗೆ ಒಡೆಯನಾಗಿರುವಿ. ನಿನಗೆ ಭಕ್ತಿಯಿಂದ ನಮಸ್ಕಾರ ಮಾಡುತ್ತೇನೆ.

## ಹೆಂಗಸರು ಹಾಗೂ ಗಂಡಸರು ಕೂಡಿ ಮಾಡಬೇಕಾದ ಹಬ್ಬವಿದು

ನಾಗರಚೌತಿಯಂದು ಸ್ತ್ರೀಯರು ಹುತ್ತಕ್ಕೆ ಹಾಲೆರೆದು ಪೂಜೆಯನ್ನು ಮಾಡಿ, ಮನೆಗೆ ಬರುತ್ತಾರೆ. ಅಥವಾ ಅಶ್ವತ್ಥದ ಕೆಳಗಿರುವ ನಾಗಪ್ರತಿಮೆಗಳಿಗೆ ತನಿಯೆರೆದು ಆರತಿ ಮಾಡಿ ಬರುವ ಸಂಪ್ರದಾಯವಿದೆ. ಇದು ಅರ್ಥಪೂರ್ಣವಾದ ಆಚರಣೆ. ನಾಗರಪಂಚಮಿಯಂದು ಪುರುಷರು ಮನೆಯಲ್ಲಿ ಮಣ್ಣಿನ ನಾಗಪ್ರತಿಮೆಯನ್ನು ಮಾಡಿ ತಂಬಿಟ್ಟಿನ ನೈವೇದ್ಯವನ್ನು ಮಾಡಿ ನಾಗನನ್ನು ಪೂಜಿಸುತ್ತಾರೆ.

ಇನ್ನು ಕೆಲವರು ನಾಗರ ಚೌತಿಯಂದು ಏನನ್ನೂ ಮಾಡುವುದಿಲ್ಲ. ನಾಗರ ಪಂಚಮಿಯಂದೇ ಹೆಂಗಸರು ಹಾಗೂ ಗಂಡಸರು ತನಿ ಎರೆದು ಪೂಜಿಸುತ್ತಾರೆ. ಈ ವಿಷಯದಲ್ಲಿ ಅವರವರ ಸಂಪ್ರದಾಯವನ್ನೇ ಅನುಸರಿಸಬೇಕು.

* ಆದರೆ ಯಾರು ವ್ರತವನ್ನಾಗಿ ಆಚರಿಸಲು ಇಚ್ಛಿಸುತ್ತಾರೋ ಅಂಥವರು ನಾಗರ ಚೌತಿ ಹಾಗೂ ನಾಗರಪಂಚಮೀ ಎರಡನ್ನೂ ಕೂಡ ಆಚರಿಸಲೇಬೇಕು. ನಾಗರ ಚೌತಿಯಂದು ಪೂರ್ಣ ಉಪವಾಸವನ್ನು ಮಾಡಿ, ಪಂಚಮೀಯ ದಿವಸ ಶೇಷದೇವರಿಗೆ ವಿಶೇಷವಾಗಿ ಅಭಿಷೇಕ ಹಾಗೂ ಪೂಜೆಗಳನ್ನು ಮಾಡಿ

ಬ್ರಾಹ್ಮಣರಿಗೆ ಅನ್ನಸಂತರ್ಪಣೆ ಮೊದಲಾದವುಗಳನ್ನು ನೀಡಿ, ವ್ರತವನ್ನು ಸಮರ್ಪಣೆ ಮಾಡಬೇಕು.

* ಉಪವಾಸ ಮಾಡಲಾಗದವರು ಉಪಹಾರವನ್ನಾದರೂ ಮಾಡಿ, ತಮ್ಮ ಭಕ್ತಿಗೆ ಅನುಗುಣವಾಗಿ ವ್ರತವನ್ನು ಆಚರಿಸಬಹುದು.

* ಉಪವಾಸ ಅಥವಾ ಉಪಹಾರಗಳು ನಿತ್ಯವಲ್ಲ. ಮಾಡಲೇಬೇಕು ಇಲ್ಲದಿದ್ದರೆ ಪಾಪಬರುತ್ತದೆಂಬ ವಿಧಿಯೂ ಇರುವುದಿಲ್ಲ. ಯಾರಿಗೆ ವಿಶೇಷವಾಗಿ ನಾಗದೇವರ ಅನುಗ್ರಹ ಬೇಕೆಂಬ ಅಪೇಕ್ಷೆ ಇರುತ್ತದೋ ಅವರಷ್ಟೇ ಆಚರಿಸಿದರೆ ಸಾಕು. ಏಕಾದಶಿ, ಕೃಷ್ಣಾಷ್ಟಮಿಗಳ ಉಪವಾಸ ಮಾತ್ರ ಕಡ್ಡಾಯ.

* ಊಟ ಮಾಡುವವರೂ ಕೂಡ ಕರಿದ ಪದಾರ್ಥಗಳನ್ನು ತಿನ್ನಬಾರದು. ಉಪ್ಪು ಹಾಕಿದ ಪದಾರ್ಥಗಳನ್ನು ತಿನ್ನಬಾರದು. ನಾಗಗಳಿಗೆ ಕರಿದಪದಾರ್ಥ ಹಾಗೂ ಉಪ್ಪು ಇಷ್ಟವಾಗುವುದಿಲ್ಲ.

* ನಾಗರಪಂಚಮಿಯಂದು ನಾಗಗಳನ್ನು ಪೂಜಿಸುವುದು ಪ್ರತಿಯೊಬ್ಬರಿಗೂ ಕಡ್ಡಾಯವಾಗಿದೆ.

* ನಾಗಪಂಚಮಿಯ ವ್ರತದ ಕಥೆಯಲ್ಲಿ ಸಹೋದರರರನ್ನು ಕನ್ಯೆಯು ಬದುಕಿಸಿದಳೆಂದೂ ಆದ್ದರಿಂದಲೇ ಅಂದು ನಾಗಪಂಚಮಿಯ ವ್ರತವನ್ನು ಆಚರಿಸಬೇಕೆಂದು ಬರುತ್ತದೆ. ಈ ಕಥೆಗೆ ಅನುಗುಣವಾಗಿ ಇಂದೂ ಕೂಡ ಸ್ತ್ರೀಯರು ಸಹೋದರರರನ್ನು ಕರೆದು ಉಪಚರಿಸುವ ವಾಡಿಕೆಯು ಬಂದಿದೆ.

* ದಂಪತಿಗಳಿಗೆ ಭೋಜನ ಮಾಡಿಸುವಂತೆ ಬ್ರಹ್ಮಚಾರಿಗಳಿಗೆ ಭೋಜನ ಮಾಡಿಸುವುದರಿಂದ ನಾಗಗಳಿಗೆ ಹೆಚ್ಚು ಸಂತೋಷವಾಗುತ್ತದೆ.

## ನಾಗರಪಂಚಮಿಯನ್ನು ಆಚರಿಸುವುದರಿಂದ ಬರುವ ಫಲಗಳು

೧. ಮಕ್ಕಳಾಗದ ದಂಪತಿಗಳಿಗೆ ಮಕ್ಕಳಾಗುತ್ತವೆ.

೨. ಕೇವಲ ಹೆಣ್ಣುಸಂತಾನವಿರುವವರಿಗೆ ಸತ್ಪುತ್ರನು ಹುಟ್ಟುತ್ತಾನೆ.

೩. ಆಶ್ಲೇಷಾಬಲಿಯನ್ನು ನಾಗರಪಂಚಮಿಯಂದು ಮಾಡಿದರೆ ಯಥೇಚ್ಛ ಹಣ ಸಿಗುತ್ತದೆ.

೪. ಗಂಡ ಹೆಂಡತಿಯರಲ್ಲಿ ಒಡಕಿದ್ದರೆ ಪರಿಹಾರವಾಗಿ, ಅನುಬಂಧ ಅಭಿವೃದ್ಧವಾಗುತ್ತದೆ.
೫. ಯಾರಿಗೆ ಚರ್ಮರೋಗವಿರುತ್ತದೋ ಅವರಿಗೆ ಸರ್ಪದೋಷವು ಇದ್ದೇ ಇರುತ್ತದೆ. ಹಾಗಾಗಿ ಯಾವುದೇ ಚರ್ಮರೋಗವಿರುವವರೂ ಅತ್ಯಂತ ಭಕ್ತಿ ಆದರಗಳಿಂದ ಯಥಾಶಕ್ತಿ ನಾಗರಪಂಚಮಿಯ ಆಚರಣೆಯನ್ನು ಮಾಡಬೇಕು.
೬. ಉದ್ಯೋಗವಿಲ್ಲದವರಿಗೆ ಉದ್ಯೋಗವು ದೊರಕುತ್ತದೆ.
೭. ವಿವಾಹವಾಗದ ಹೆಣ್ಣುಮಕ್ಕಳಿಗೆ ಮತ್ತು ಗಂಡಸರಿಗೆ ಮನೋಭೀಷ್ಟೆಯಂತೆ ವಿವಾಹವಾಗುತ್ತದೆ.
೮. ಅಧ್ಯಯನವನ್ನು ಮಾಡಲು ಏನು ಪ್ರತಿಬಂಧಕಗಳಿರುತ್ತವೋ ಅವು ಪರಿಹಾರವಾಗುತ್ತವೆ. ಮತ್ತು ಏಕಾಗ್ರತೆಯು ಹೆಚ್ಚುತ್ತದೆ.
೯. ಜಾತಕದಲ್ಲಿ ಕುಜದೋಷ, ಸರ್ಪದೋಷ, ಅಪೂರ್ಣಕಾಳಸರ್ಪದೋಷ, ಪೂರ್ಣಕಾಳಸರ್ಪದೋಷ ಇದ್ದರೆ ಇವೆಲ್ಲವೂ ಪರಿಹಾರವಾಗುತ್ತವೆ.
೧೦. ಅಕಾಲಮರಣವು ಪರಿಹಾರವಾಗುತ್ತದೆ ಮತ್ತು ಆಯುಷ್ಯವು ಹೆಚ್ಚುತ್ತದೆ.
೧೧. ಮಗು ಹುಟ್ಟುವಾಗ ಕರಳನ್ನು ಸುತ್ತಿಕೊಂಡು ಹುಟ್ಟಿದ್ದರೆ ಅದರಿಂದ ತಿಳಿಯುವ ಸರ್ಪದೋಷವು ನಾಳವೇಷ್ಟನಶಾಂತಿಯನ್ನು ಮಾಡಿ ನಾಗಾರಾಧನೆಯನ್ನು ಮಾಡುವುದರಿಂದ ಪರಿಹಾರವಾಗುತ್ತದೆ.
೧೨. ಆಶ್ಲೇಷಾನಕ್ಷತ್ರದ ದೋಷವು ಆಶ್ಲೇಷಾಬಲಿಯನ್ನು ಆಚರಿಸುವುದರಿಂದ ಪರಿಹಾರವಾಗುತ್ತದೆ.
೧೩. ಸಂತಾನಪ್ರತಿಬಂಧಕವಾದ ಸರ್ಪಹತ್ಯಾ ದೋಷವಿದ್ದರೆ ಸರ್ಪಸಂಸ್ಕಾರವನ್ನು ಮಾಡುವುದರಿಂದ ಪರಿಹಾರವಾಗುತ್ತದೆ.
೧೪. ಈ ಜನ್ಮದಲ್ಲಿ ಅಥವಾ ಜನ್ಮಾಂತರದಲ್ಲಿ ಸರ್ಪಹತ್ಯೆಯನ್ನು ಮಾಡಿದ್ದರೆ ನಾಗಬಿಂಬಪ್ರತಿಷ್ಠೆಯಿಂದ ಆ ದೋಷವು ಪರಿಹಾರವಾಗುತ್ತದೆ.
೧೫. ಗಂಡಸರ ಜಾತಕದಲ್ಲಿ ಲಗ್ನದಿಂದ ೨, ೭, ೮ರಲ್ಲಿ ಕುಜ ಇದ್ದರೆ ಹೆಂಗಸರ ಜಾತಕದಲ್ಲಿ ೪, ೮, ೧೨ ರಲ್ಲಿ ಕುಜ ಇದ್ದರೆ ಪ್ರಾಪ್ತವಾಗುವ ಕುಜದೋಷಕ್ಕೂ ನಾಗಾರಾಧನೆಯೇ ಪರಿಹಾರ.

* * * * *

॥ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ॥

# ಶ್ರೀನಾಗಪಂಚಮೀ ಪೂಜಾಪದ್ಧತಿ

ಶ್ರೀಗುರುಭ್ಯೋ ನಮಃ । ಶ್ರೀಪರಮಗುರುಭ್ಯೋ ನಮಃ । ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯೇಭ್ಯೋ ನಮಃ । ಶ್ರೀವೇದವ್ಯಾಸಾಯ ನಮಃ । ಶ್ರೀಭಾರತ್ಯೈ ನಮಃ । ಶ್ರೀಸರಸ್ವತ್ಯೈ ನಮಃ । ಶ್ರೀ ವಾಯವೇ ನಮಃ । ಶ್ರೀ ಬ್ರಹ್ಮಣೇ ನಮಃ । ಶ್ರೀಮಹಾಲಕ್ಷ್ಮ್ಯೈ ನಮಃ ।

ನಮೋಽಸ್ತ್ವನಂತಾಯ ಸಹಸ್ರಮೂರ್ತಯೇ
ಸಹಸ್ರಪಾದಾಕ್ಷಿ ಶಿರೋರುಬಾಹವೇ ।
ಸಹಸ್ರನಾಮ್ನೇ ಪುರುಷಾಯ ಶಾಶ್ವತೇ
ಸಹಸ್ರಕೋಟಿ ಯುಗಧಾರಿಣೇ ನಮಃ ॥

ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋನಮಃ ॥

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

ಸರ್ವವಿಘ್ನಪ್ರಶಮನಂ ಸರ್ವಸಿದ್ಧಿಕರಂ ಪರಮ್ ।
ಸರ್ವಜೀವಪ್ರಣೇತಾರಂ ವಂದೇ ವಿಜಯದಂ ಹರಿಮ್ ॥

ಲಕ್ಷ್ಮೀನಾರಾಯಣಂ ವಂದೇ ತದ್ಭಕ್ತಪ್ರವರೋ ಹಿ ಯಃ ।
ಶ್ರೀಮದಾನಂದತೀರ್ಥಾಖ್ಯೋ ಗುರುಸ್ತಂ ಚ ನಮಾಮ್ಯಹಮ್ ॥

ರಮಾಪತಿಂ ಪೂರ್ಣಗುಣಂ ಮುಕುಂದಂ
ವ್ಯಾಸಂ ಚ ವಿಜ್ಞಾನಸಹಸ್ರಭಾನುಮ್ ।

ಪೂರ್ಣಪ್ರಬೋಧಂ ಚ ಸುತತ್ತ್ವದೀಪಂ
ಕ್ರಮಾದ್ಗುರೂಂಶ್ಚ ಪ್ರಣಮಾಮಿ ಮೂರ್ಧ್ನಾ ॥

ಇತಿ ಪ್ರಾರ್ಥ್ಯ, ದರ್ಭೇಷು ಆಸೀನಃ ಆಸನಂ ಸ್ಪೃಷ್ಟ್ವಾ ಜಪೇತ್ ।

ಓಂ ಮಂ ಮಂಡೂಕಾಯ ನಮಃ ಓಂ

ಓಂ ಕೂಂ ಕೂರ್ಮಾಯ ನಮಃ ಓಂ

ಓಂ ವಂ ವರಾಹಾಯ ನಮಃ ಓಂ

ಓಂ ಶೇಂ ಶೇಷಾಯ ನಮಃ ಓಂ

ಓಂ ಕಾಂ ಕಾಲಾಗ್ನಿರುದ್ರಾಯ ನಮಃ ಓಂ

ಓಂ ವಂ ವಜ್ರಾಯ ನಮಃ ಓಂ ॥

ಓಂ ಪೃಥ್ವೀ ತ್ವಯಾ ಧೃತಾ ಲೋಕಾ ದೇವಿ ತ್ವಂ ವಿಷ್ಣುನಾ ಧೃತಾ ।
ತ್ವಂಚ ಧಾರಯ ಮಾಂ ದೇವಿ ಪವಿತ್ರಂ ಕುರುಚಾಸನಮ್ ॥

ಮಾಂ ಚ ಪೂತಂ ಕುರುಧರೇ ನತೋಽಸ್ಮಿ ತ್ವಾಂ ಸುರೇಶ್ವರೀ ।
ಆಸನೇ ಸೋಮಮಂಡಲೇ ಕೂರ್ಮಸ್ಕಂಧೇ ಉಪವಿಷ್ಟೋಽಸ್ಮಿ ॥

ಅಪಸರ್ಪಂತು ತೇ ಭೂತಾ ಯೇ ಭೂತಾ ಭುವಿ ಸಂಸ್ಥಿತಾಃ ।
ಯೇ ಭೂತಾ ಅಂತರಿಕ್ಷಸ್ಥಾ ಯೇ ಭೂತಾ ದಿವಿ ಸಂಸ್ಥಿತಾಃ ॥

ಯೇ ಭೂತಾ ವಿಘ್ನಕರ್ತಾರಃ ತೇ ನಶ್ಯಂತ್ವಾಜ್ಞಯಾ ಹರೇಃ ।
ಭೂತಪ್ರೇತಪಿಶಾಚಾ ಯೇ ಯೇ ಚಾನ್ಯೇ ಭುವಿ ಭಾರಕಾಃ ।
ತೇಷಾಮಪ್ಯವಿರೋಧೇನ ಬ್ರಹ್ಮಕರ್ಮ ಸಮಾರಭೇ ॥

ಓಂ ಅಸ್ತ್ರಾಯ ಫಟ್

ನಿರಸ್ತಃ ಪರಾವಸುಃ । ಇದಮಹಮರ್ವಾವಸೋಃ ಸದನೇ ಸೀದಾಮಿ ।

ಓಂ ಯಂ ಓಂ । ಓಂ ರಂ ಓಂ । ಓಂ ವಂ ಓಂ ।

(ಎರಡು ಬಾರಿ ಆಚಮನಮಾಡಿ ಪ್ರಾಣಾಯಾಮ ಮಾಡಬೇಕು.)

## ಜಲಶುದ್ಧಿ ಮಾಡಿರಿ

ಗಂಗೇ ಚ ಯಮುನೇ ಚೈವ ಗೋದಾವರೀ ಸರಸ್ವತೀ ।
ನರ್ಮದೇ ಸಿಂಧುಕಾವೇರಿ ಜಲೇऽಸ್ಮಿನ್ ಸನ್ನಿಧಿಂ ಕುರು ॥

## ಸಂಕಲ್ಪ ಮಾಡಿರಿ

....... ಸಂವತ್ಸರೇ ದಕ್ಷಿಣಾಯನೇ ವರ್ಷರ್ತೌ ಶ್ರಾವಣಮಾಸೇ ಶುಕ್ಲಪಕ್ಷೇ ನಾಗಪಂಚಮ್ಯಾಂ .......... ವಾಸರೇ ಶುಭಯೋಗಶುಭಕರಣ ಏವಂಗುಣವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಅಸ್ಮದಾದಿಗುರೂಣಾಂ ಶ್ರೀಮನ್ಮಧ್ವಾಚಾರ್ಯಾಣಾಂ ಹೃತ್ಕ- ಮಲಮಧ್ಯನಿವಾಸಿ - ವಾಸುದೇವಸಂಕರ್ಷಣ- ಪ್ರದ್ಯುಮ್ನಾನಿರುದ್ಧ - ಚತುರ್ಮೂರ್ತ್- ತ್ಯಾದ್ಯನಂತಾವತಾರಾತ್ಮಕ ನಾಗರಾಜಶೇಷಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಸಂಕರ್ಷಣರೂಪಿಪರಮಾತ್ಮ- ಪ್ರೇರಣಯಾ ಶ್ರೀಸಂಕರ್ಷಣರೂಪಿಪರ-ಮಾತ್ಮಪ್ರೀತ್ಯರ್ಥಂ

ಮಮ ...... ನಕ್ಷತ್ರೇ ........ ರಾಶೌ ಜಾತಸ್ಯ ........ ಶರ್ಮಣಃ ಕಾಂತಾಯಾಃ .........ನಕ್ಷತ್ರೇ ....... ರಾಶೌ ....... ಜಾತಾಯಾಃ ..... ನಾಮ್ನ್ಯಾಃ ಅಸ್ಮಾಕಂ ಸಹ ಕುಟುಂಬಾನಾಂ ಹರಿವಾಯುಪ್ರಸಾದೇನ ಆಯುರಾರೋಗ್ಯಾಭಿವೃದ್ಧ್ಯರ್ಥಂ ಮಮ ಇಹ ಜನ್ಮನಿ ಜನ್ಮಾಂತರೇಷು ಕೃತನಾಗಬಂಧನಲಂಘನಹಿಂಸನಾದಿದೋಷಪರಿ- ಹಾರಾರ್ಥಂ ಸರ್ಪಶಾಪಾದಿದೋಷನಿವೃತ್ತ್ಯರ್ಥಂ ಸ್ಥಿರಲಕ್ಷ್ಮೀಕೀರ್ತಿಪುತ್ರಪೌತ್ರಾದಿ- ದೀರ್ಘಾಯುರ್ವಿಪುಲಧನಧಾನ್ಯಾದಿಸಂಪದಭಿವೃದ್ಧ್ಯರ್ಥಂ

ನಿಷ್ಠುರಭಾಷಣ - ದೇವತಾಪ್ರಕೋಪ - ಗುರುದ್ರೋಹ - ಬಂಧುಜನದ್ರೋಹ - ಸ್ವರ್ಣಾಪಹರಣ - ಅಶ್ವತ್ಥದ್ರುಮಭೇದನ - ಅಶ್ವಗೋಮೇಷಕಪಿಮಾರ್ಜಾಲಾದಿ ಪ್ರಾಣಿಹಿಂಸಾಚರಣದೋಷಶಾಂತ್ಯರ್ಥಂ,

ಭ್ರೂಣಹತ್ಯಾ- ಗರ್ಭಿಣೀಗರಪ್ರದಾನ-ಗರ್ಭಾಂತರಾಯ-ಕೃತ್ರಿಮ- ವಿವಿಧೌಷಧ-ಕ್ರಿಯಾಸಂಜಾತ-ಜನ್ಮಾಂತರಪ್ರತಿಬಂಧಕ-ರಕ್ಷೋಭೂತ- ಪಿಶಾಚಾದಿಪೀಡಾ-ಪರಿಹಾರಾರ್ಥಂ,

ನಿಕ್ಷೇಪದ್ರವ್ಯಹರಣ-ವಿಶ್ವಾಸಾರ್ಥಾಪಹರಣ-ಲಬ್ಧನಿಷಿದ್ಧಶಾಕಾದಿ-ಭಕ್ಷಣಪಂಕ್ತಿ- ಭೇದಕರಣ- ದುಷ್ಟಾನ್ನದಾನಾಜ್ಜನಿತ- ಕ್ಷಯಾಪಸ್ಮಾರ-ಕುಷ್ಠವ್ಯಾಧಿ-ಅಂಧತ್ವ-ಮೂಕತ್ವ-ಬಧಿರತ್ವಾದಿ ಅಂಗಹೀನತ್ವ- ಅಜ್ಞಾನ-ವಿಸ್ಮೃತಿ- ಭ್ರಾಂತಿ-ಸಂಶಯಾಪಸ್ಮೃತ್ಯಾದಿ-ಮಹಾರೋಗಪರಿಹಾರಾರ್ಥಂ,

ಜನ್ಮಲಗ್ನರಾಶಿವಶಾತ್ ಪಂಚಮಸ್ಥಾನೇ ಸ್ಥಿತಾನಾಂ ಸಂತತಿಪ್ರತಿಬಂಧಕ-ಗ್ರಹಾಣಾಂ ಕುಜರಾಹುಕೇತ್ವಾದೀನಾಂ ಕ್ರೂರದೃಷ್ಟಿದೋಷೋಪಶಾಂತ್ಯರ್ಥಂ,

ಸರ್ಪಶಾಪ- ಸರ್ಪರೋಗ- ಪಿತೃಶಾಪ- ಮಾತೃಶಾಪ- ಮಾತುಲಶಾಪ-ಗುರು-ಬ್ರಾಹ್ಮಣಶಾಪಾಜ್ಜನಿತಬಂಧುತ್ಯಾಗ- ದೇಶತ್ಯಾಗ- ದಾರಾಪುತ್ರವಿಯೋಗ-ಕಳತ್ರಪುತ್ರ- ಮಿತ್ರನಿಷ್ಠುರಾದಿ ದೋಷಶಾಂತ್ಯರ್ಥಂ,

ಪರಿವಾರಸಹಿತ ಅಷ್ಟಕುಲನಾಗಾಧಿಪ ಶೇಷಾಂತರ್ಗತಶ್ರೀಭಾರತೀರಮಣ-ಮುಖ್ಯಪ್ರಾಣಾಂತರ್ಗತ ಸಂಕರ್ಷಣರೂಪೀಪರಮಾತ್ಮನಃ ಪರಮಾನುಗ್ರಹೇಣ ಸರ್ಪಾದ್ಯಷ್ಟಕುಲನಾಗಾಂತರ್ಯಾಮಿ ಶ್ರೀಸಂಕರ್ಷಣದೇವತಾಪ್ರೀತ್ಯರ್ಥಂ ಸರ್ಪಾದ್ಯ- ಷ್ಟಕುಲನಾಗಾನುಗ್ರಹಸಿದ್ಧ್ಯರ್ಥಂ ನಾಗಪಂಚಮೀ ವ್ರತಕಲ್ಪೋಕ್ತವಿಧಿನಾ ಯಥಾಶಕ್ತಿ ಧ್ಯಾನಾಽವಾಹನಾದಿ ಷೋಡಶೋಪಚಾರ- ಪೂಜಾಂ ಕರಿಷ್ಯೇ ॥
(ಪತ್ನೀಸಹಿತನಾಗಿ ಹೀಗೆ ಸಂಕಲ್ಪ ಮಾಡಬೇಕು.)

## ಘಂಟಾನಾದ ಮಾಡಿರಿ

ಓಂ ದೇವೀಂ ವಾಚಮಜನಯಂತ ದೇವಾಸ್ತಾಂ ವಿಶ್ವರೂಪಾಃ ಪಶವೋ ವದಂತಿ । ಸಾ ನೋ ಮಂದ್ರೇಷಮೂರ್ಜಂ ದುಹಾನಾ ಧೇನುರ್ವಾಗಸ್ಮಾನುಪ ಸುಷ್ಟುತೈತು ॥ ಓಂ

(ಹೀಗೆ ಪ್ರಾರ್ಥಿಸಿ, ಮುಂದಿನ ಮಂತ್ರ ಹೇಳಿಕೊಂಡು ಘಂಟಾನಾದ ಮಾಡ-ಬೇಕು.)

ಓಂ ಆ ಕ್ರಂದಯ ಬಲಮೋಜೋ ನ ಆ ಧಾ ನಿಃ ಷ್ಟನಿಹಿ ದುರಿತಾ ಬಾಧಮಾನಃ । ಅಪ ಪ್ರೋಥ ದುಂದುಭೇ ದುಚ್ಛುನಾ ಇತ ಇಂದ್ರಸ್ಯ ಮುಷ್ಟಿರಸಿ ವೀಳಯಸ್ವ ॥ ಓಂ

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।
ಕುರ್ವೇ ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ॥

## ಶಂಖಪೂಜೆ ಮಾಡಿರಿ

ತ್ವಂ ಪುರಾ ಸಾಗರೋತ್ಪನ್ನೋ ವಿಷ್ಣುನಾ ವಿಧೃತಃ ಕರೇ ।
ನಮಿತಃ ಸರ್ವದೇವೈಶ್ಚ ಪಾಂಚಜನ್ಯ ನಮೋಽಸ್ತುತೇ ॥
ಓಂ ರಂ ಸಹಸ್ರಾರ ಹುಂ ಫಟ್ ಓಂ

ಶಂಖದ ನೀರಿನಿಂದ ಪೂಜಾಸಾಮಗ್ರಿಗಳನ್ನೂ, ತನ್ನನ್ನೂ ಪ್ರೋಕ್ಷಿಸಬೇಕು. ಅನಂತರ ಗುರುಗಳ ಪೂಜೆ ಗಣೇಶನ ಪೂಜೆ ಮಾಡಬೇಕು.

ಅಷ್ಟಕಮಲದ ಮಧ್ಯದಲ್ಲಿ ಒಂದು ಕಲಶದಲ್ಲಿ ನೀರನ್ನು ತುಂಬಿ ಮಾವಿನಸೊಪ್ಪು ಹಾಕಿ, ತೆಂಗಿನ ಕಾಯಿಯನ್ನಿಟ್ಟು, ಅದರ ಮುಂದೆ ಮಣ್ಣಿನಲ್ಲಿ ನಿರ್ಮಿಸಿದ ಐದು ಹೆಡೆಯ ನಾಗಪ್ರತಿಮೆಯನ್ನಿಟ್ಟು ಪೂಜಿಸಬೇಕು. ಅಥವಾ ಅಷ್ಟದಳಕಮಲದ ಮಧ್ಯದಲ್ಲಿ ಕೇವಲ ಮಣ್ಣಿನ ಪ್ರತಿಮೆಯನ್ನು ಅಥವಾ ಕೇವಲ ಕಲಶವನ್ನಿಟ್ಟು ಪೂಜಿಸಬಹುದು. ಕೇವಲ ಸ್ಥಂಡಿಲದಲ್ಲಿಯೂ ಪೂಜಿಸಬಹುದು.

## ಮಂಟಪಧ್ಯಾನ ಮಾಡಿರಿ

ಉತ್ತಪ್ತೋಜ್ಜ್ವಲಕಾಂಚನೇನ ರಚಿತಂ ತುಂಗಾಂಗರಂಗಸ್ಥಲಂ
ಶುದ್ಧಸ್ಫಾಟಿಕಭಿತ್ತಿಕಾವಿಲಸಿತೈಃ ಸ್ತಂಭೈಶ್ಚ ಹೈಮೈಃ ಶುಭೈಃ ।
ದ್ವಾರೈಶ್ಚಾಮರರತ್ನರಾಜಖಚಿತೈಃ ಶೋಭಾವಹೈರ್ಮಂಟಪೈಃ
ರತ್ನಾಢ್ಯೈರಪಿ ಚಿತ್ರಪದ್ಮಧವಲೈಃ ಪ್ರಭ್ರಾಜಿತೈಃ ಸ್ವಸ್ತಿಕೈಃ ॥

ಮಾಣಿಕ್ಯೋಜ್ಜ್ವಲದೀಪದೀಪ್ತಿವಿಲಸಲ್ಲಕ್ಷ್ಮ್ಯಾ ವಿಲಾಸಾಸ್ಪದಂ
ಧ್ಯಾಯೇನ್ಮಂಟಪಮರ್ಚನೇಷು ಸತತಮೇವಂ ವಿಧೈಃ ಸಾಧಕಃ ॥

## ಪೀಠಪೂಜೆ

### ಪೀಠಕ್ಕೆ ಮಂತ್ರಾಕ್ಷತೆ ಹಾಕಿರಿ

ಸರ್ಪಾದ್ಯಷ್ಟಕುಲನಾಗೇಭ್ಯೋ ನಮಃ । ಪೀಠಪೂಜಾಂ ಸಮರ್ಪಯಾಮಿ ॥

## ಆವಾಹನೆ

ಹೃತ್ಕಮಲದಲ್ಲಿರುವ ಸಂಕರ್ಷಣರೂಪಿಯಾದ ಪರಮಾತ್ಮನನ್ನು ಹಾಗೂ ಮುಖ್ಯಪ್ರಾಣದೇವರನ್ನು ಸ್ಥಂಡಿಲದಲ್ಲಿ, ಕಲಶದಲ್ಲಿ, ಮಣ್ಣಿನ ಬಿಂಬದಲ್ಲಿ ಆವಾಹನೆ ಮಾಡಿ ಅನಂತರ ಶೇಷದೇವರನ್ನು ಆವಾಹನೆ ಮಾಡಬೇಕು. ಶೇಷದೇವರ ಸೇವಕರಾಗಿ ಉಳಿದ ಏಳು ಕುಲನಾಗಗಳನ್ನು ಆವಾಹನೆ ಮಾಡಬೇಕು.

ಆತ್ಮಾ ದೇವಾನಾಂ ಭುವನಸ್ಯ ಗರ್ಭೋ ಯಥಾವಶಂ ಚರತಿ ದೇವ ಏಷಃ ।

ಘೋಷಾ ಇದಸ್ಯ ಶೃಣ್ವಿರೇ ನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ ॥ಓಂ

ಪ್ರಸೀದ ಭಗವನ್ ಆಗಚ್ಛಾಗಚ್ಛ ಏಹಿ ಏಹಿ ಪರಿವಾರಸಹಿತ ಅಷ್ಟಕುಲನಾಗಾಧಿಪಶೇಷಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತಂ ಭಗವಂತಂ ಚಕ್ರಶಂಖ-ಹಲಮುಸಲಾಯುಧಧರಂ ರಕ್ತವರ್ಣಂ ಶ್ರೀಜಯಾದೇವೀ ಸಹಿತಂ ಸಂಕರ್ಷಣ-ರೂಪಿಪರಮಾತ್ಮಾನಂ ಕಲಶಮಧ್ಯೇ ಪ್ರತಿಮಾಮಧ್ಯೇ ಚ ಆವಾಹಯಾಮಿ ।

ಓಂ ಭೂಃ ಶ್ರೀಸಂಕರ್ಷಣಂ ಆವಾಹಯಾಮಿ ।
ಓಂ ಭುವಃ ಶ್ರೀಸಂಕರ್ಷಣಂ ಆವಾಹಯಾಮಿ ।
ಓಂ ಸ್ವಃ ಶ್ರೀಸಂಕರ್ಷಣಂ ಆವಾಹಯಾಮಿ ।
ಓಂ ಭೂರ್ಭುವಃಸ್ವಃ ಶ್ರೀಸಂಕರ್ಷಣಂ ಆವಾಹಯಾಮಿ ।

(ಆವಾಹನಾದಿದಶಮುದ್ರಾಃ ಪ್ರದರ್ಶಯೇತ್ । ಅಷ್ಟಾಕ್ಷರಂ ಅಷ್ಟವಾರಂ ಜಪ್ತ್ವಾ ಮಾತೃಕಾನ್ಯಾಸತತ್ವನ್ಯಾಸೌ ಕುರ್ಯಾತ್)

ಓಂ ಅಸುನೀ ತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣಮಿಹ ನೋ ಧೇಹಿ ಭೋಗಮ್ । ಜ್ಯೋಕ್ ಪಶ್ಯೇಮ ಸೂರ್ಯಮುಚ್ಚರಂತಮನುಮತೇ ಮೃಳಯಾ ನಃ ಸ್ವಸ್ತಿ ॥ ಓಂ ॥

ಭೋ ಸ್ವಾಮಿನ್ ಜಗತಾಂ ನಾಥ ಯಾವತ್ಪೂಜಾವಸಾನಕಮ್ ।
ತಾವತ್ತ್ವಂ ಪ್ರೀತಿಭಾವೇನ ಬಿಂಬೇಽಸ್ಮಿನ್ ಸ್ಥಿರೋ ಭವ ॥

(ಅಷ್ಟದಳಕಮಲದಲ್ಲಿ ಒಂದೊಂದು ದಳದಲ್ಲಿ ಒಬ್ಬೊಬ್ಬ ನಾಗನನ್ನು ಆವಾಹನೆ ಮಾಡಬೇಕು. ಕಲಶದಲ್ಲಿ ಮಣ್ಣಿನ ಪ್ರತಿಮೆಯಲ್ಲಿ ಶೇಷದೇವರನ್ನು ಆವಾಹನೆ ಮಾಡಬೇಕು. ಅಷ್ಟದಳಗಳಲ್ಲಿ ಉಳಿದ ಅಷ್ಟಕುಲನಾಗಗಳನ್ನು ಆವಾಹನೆ ಮಾಡಬೇಕು.)

ಓಂ ಶೇಷಾಯ ನಮಃ ಓಂ । ಓಂ ಅನಂತಾಯ ನಮಃ ಓಂ ।
ಓಂ ನರಾಯ ನಮಃ ಓಂ । ಓಂ ಲಕ್ಷ್ಮಣಾಯ ನಮಃ ಓಂ ।
ಓಂ ಬಲಾಯ ನಮಃ ಓಂ । ಓಂ ಸಂಕರ್ಷಣಾಯ ನಮಃ ಓಂ ।
ಓಂ ನೀಲವಾಸಸೇ ನಮಃ ಓಂ । ಓಂ ಜಗದ್ರಕ್ಷಾಯ ನಮಃ ಓಂ ।
ಓಂ ಜಲೇಶಯಾಯ ನಮಃ ಓಂ ।

(ಪೂರ್ವೇ) ಓಂ ಶೇಂ ಶೇಷಾಯ ನಮಃ ಓಂ । ಶೇಷ ಸ್ವಾಗತಮ್ । ಶೇಷಸ್ಯ ಇದಮಾಸನಮ್ । ಸಶಕ್ತಿಂ ಸಾಂಗಂ ಸಾಯುಧಂ ಸವಾಹನಂ ಸಪರಿವಾರಂ ಬ್ರಹ್ಮ-ಸಂಭವಂ ಶುಕ್ಲವರ್ಣಂ ಶೇಷಂ ಪೂರ್ವಭಾಗೇ ಆವಾಹಯಾಮಿ । ಓಂ ಭೂಃ ಶೇಷಂ ಆವಾಹಯಾಮಿ । ಓಂ ಭುವಃ ಶೇಷಂ ಆವಾಹಯಾಮಿ । ಓಂ ಸ್ವಃ ಶೇಷಂ ಆವಾಹಯಾಮಿ । ಓಂ ಭೂರ್ಭುವಃಸ್ವಃ ಶೇಷಂ ಆವಾಹಯಾಮಿ ಸ್ಥಾಪಯಾಮಿ । ಪೂಜಯಾಮಿ ।

(ಆಗ್ನೇಯ್ಯಾಂ) ಓಂ ವಾಂ ವಾಸುಕಯೇ ನಮಃ । ವಾಸುಕೇ ಸ್ವಾಗತಮ್ । ವಾಸುಕೇಃ ಇದಮಾಸನಮ್ । ಸಶಕ್ತಿಂ ಸಾಂಗಂ ಸಾಯುಧಂ ಸವಾಹನಂ ಸಪರಿವಾರಂ ಅಗ್ನಿಸಂಭವಂ ರಕ್ತವರ್ಣಂ ವಾಸುಕಿಂ ಆಗ್ನೇಯಭಾಗೇ ಆವಾಹಯಾಮಿ । ಓಂ ಭೂಃ ವಾಸುಕಿಂ ಆವಾಹಯಾಮಿ । ಓಂ ಭುವಃ ವಾಸುಕಿಂ ಆವಾಹಯಾಮಿ । ಓಂ ಸ್ವಃ ವಾಸುಕಿಂ ಆವಾಹಯಾಮಿ । ಓಂ ಭೂರ್ಭುವಃಸ್ವಃ ವಾಸುಕಿಂ ಆವಾಹಯಾಮಿ । ಸ್ಥಾಪಯಾಮಿ । ಪೂಜಯಾಮಿ ।

(ದಕ್ಷಿಣೇ) ಓಂ ತಂ ತಕ್ಷಕಾಯ ನಮಃ । ತಕ್ಷಕ ಸ್ವಾಗತಮ್ । ತಕ್ಷಕಸ್ಯ ಇದಮ್ ಆಸನಮ್ । ಸಶಕ್ತಿಂ ಸಾಂಗಂ ಸಾಯುಧಂ ಸವಾಹನಂ ಸಪರಿವಾರಂ ಇಂದ್ರ-ಸಂಭವಂ ಪೀತವರ್ಣಂ ತಕ್ಷಕಂ ದಕ್ಷಿಣಭಾಗೇ ಆವಾಹಯಾಮಿ । ಓಂ ಭೂಃ ತಕ್ಷಕಂ ಆವಾಹಯಾಮಿ । ಓಂ ಭುವಃ ತಕ್ಷಕಂ ಆವಾಹಯಾಮಿ । ಓಂ ಸ್ವಃ ತಕ್ಷಕಂ ಆವಾಹಯಾಮಿ । ಓಂ ಭೂರ್ಭುವಃ ಸ್ವಃ ತಕ್ಷಕಂ ಆವಾಹಯಾಮಿ । ಸ್ಥಾಪಯಾಮಿ । ಪೂಜಯಾಮಿ ।

(ನೈರ್ಋತ್ಯೇ) ಓಂ ಕಂ ಕರ್ಕೋಟಕಾಯ ನಮಃ । ಕರ್ಕೋಟಕ ಸ್ವಾಗತಮ್। ಕರ್ಕೋಟಕಸ್ಯ ಇದಮ್ ಆಸನಮ್ । ಸಶಕ್ತಿಂ ಸಾಂಗಂ ಸಾಯುಧಂ ಸವಾಹನಂ ಸಪರಿವಾರಂ ವಿಪ್ರಸಂಭವಂ ಕೃಷ್ಣವರ್ಣಂ ಕರ್ಕೋಟಕಂ ನೈರ್ಋತ್ಯಭಾಗೇ ಆವಾಹಯಾಮಿ । ಓಂ ಭೂಃ ಕರ್ಕೋಟಕಂ ಆವಾಹಯಾಮಿ । ಓಂ ಭುವಃ ಕರ್ಕೋಟಕಂ ಆವಾಹಯಾಮಿ । ಓಂ ಸ್ವಃ ಕರ್ಕೋಟಕಂ ಆವಾಹಯಾಮಿ । ಓಂ ಭೂರ್ಭುವಃಸ್ವಃ ಕರ್ಕೋಟಕಂ ಆವಾಹಯಾಮಿ । ಸ್ಥಾಪಯಾಮಿ । ಪೂಜಯಾಮಿ।

(ಪಶ್ಚಿಮೇ) ಓಂ ಪಂ ಪದ್ಮಾಯ ನಮಃ । ಪದ್ಮ ಸ್ವಾಗತಮ್ । ಪದ್ಮಸ್ಯ ಇದಮ್ ಆಸನಮ್ । ಸಶಕ್ತಿಂ ಸಾಂಗಂ ಸಾಯುಧಂ ಸವಾಹನಂ ಸಪರಿವಾರಂ ವಿಪ್ರಸಂಭವಂ ಕೃಷ್ಣವರ್ಣಂ ಪದ್ಮಂ ಪಶ್ಚಿಮಭಾಗೇ ಆವಾಹಯಾಮಿ । ಓಂ ಭೂಃ ಪದ್ಮಂ ಆವಾಹಯಾಮಿ । ಓಂ ಭುವಃ ಪದ್ಮಂ ಆವಾಹಯಾಮಿ । ಓಂ ಸ್ವಃ ಪದ್ಮಂ ಆವಾಹಯಾಮಿ । ಓಂ ಭೂರ್ಭುವಃಸ್ವಃ ಪದ್ಮಂ ಆವಾಹಯಾಮಿ । ಸ್ಥಾಪಯಾಮಿ । ಪೂಜಯಾಮಿ ।

(ವಾಯವ್ಯೇ) – ಓಂ ಮಂ ಮಹಾಪದ್ಮಾಯ ನಮಃ । ಮಹಾಪದ್ಮ ಸ್ವಾಗತಮ್ । ಮಹಾಪದ್ಮಸ್ಯ ಇದಮ್ ಆಸನಮ್ । ಸಶಕ್ತಿಂ ಸಾಂಗಂ ಸಾಯುಧಂ ಸವಾಹನಂ ಸಪರಿವಾರಂ ಇಂದ್ರಸಂಭವಂ ಪೀತವರ್ಣಂ ಮಹಾಪದ್ಮಂ ವಾಯವ್ಯಭಾಗೇ ಆವಾಹಯಾಮಿ । ಓಂ ಭೂಃ ಮಹಾಪದ್ಮಂ ಆವಾಹಯಾಮಿ । ಓಂ ಭುವಃ ಮಹಾಪದ್ಮಂ ಆವಾಹಯಾಮಿ । ಓಂ ಸ್ವಃ ಮಹಾಪದ್ಮಂ ಆವಾಹಯಾಮಿ । ಓಂ ಭೂರ್ಭುವಃಸ್ವಃ ಮಹಾಪದ್ಮಂ ಆವಾಹಯಾಮಿ । ಸ್ಥಾಪಯಾಮಿ । ಪೂಜಯಾಮಿ ।

(ಉತ್ತರೇ) ಓಂ ಶಂ ಶಂಖಪಾಲಾಯ ನಮಃ । ಶಂಖಪಾಲ ಸ್ವಾಗತಮ್ । ಶಂಖ-ಪಾಲಸ್ಯ ಇದಮ್ ಆಸನಮ್ । ಸಶಕ್ತಿಂ ಸಾಂಗಂ ಸಾಯುಧಂ ಸವಾಹನಂ ಸಪರಿವಾರಂ ಅಗ್ನಿಸಂಭವಂ ರಕ್ತವರ್ಣಂ ಶಂಖಪಾಲಂ ಉತ್ತರಭಾಗೇ ಆವಾಹಯಾಮಿ । ಓಂ ಭೂಃ ಶಂಖಪಾಲಂ ಆವಾಹಯಾಮಿ । ಓಂ ಭುವಃ ಶಂಖಪಾಲಂ ಆವಾಹಯಾಮಿ । ಓಂ ಸ್ವಃ ಶಂಖಪಾಲಂ ಆವಾಹಯಾಮಿ । ಓಂ ಭೂರ್ಭುವಃಸ್ವಃ ಶಂಖಪಾಲಂ ಆವಾಹಯಾಮಿ । ಸ್ಥಾಪಯಾಮಿ । ಪೂಜಯಾಮಿ।

(ಈಶಾನ್ಯೇ) ಓಂ ಕುಂ ಕುಲಿಕಾಯ ನಮಃ । ಕುಲಿಕ ಸ್ವಾಗತಮ್ । ಕುಲಿಕಸ್ಯ ಇದಮ್ ಆಸನಮ್ । ಸಶಕ್ತಿಂ ಸಾಂಗಂ ಸಾಯುಧಂ ಸವಾಹನಂ ಸಪರಿವಾರಂ ಬ್ರಹ್ಮಸಂಭವಂ ಶುಕ್ಲವರ್ಣಂ ಕುಲಿಕಂ ಈಶಾನ್ಯಭಾಗೇ ಆವಾಹಯಾಮಿ । ಓಂ ಭೂಃ ಕುಲಿಕಂ ಆವಾಹಯಾಮಿ । ಓಂ ಭುವಃ ಕುಲಿಕಂ ಆವಾಹಯಾಮಿ । ಓಂ ಸ್ವಃ ಕುಲಿಕಂ ಆವಾಹಯಾಮಿ । ಓಂ ಭೂರ್ಭುವಃಸ್ವಃ ಕುಲಿಕಂ ಆವಾಹಯಾಮಿ । ಸ್ಥಾಪಯಾಮಿ । ಪೂಜಯಾಮಿ ।

## ನಾಗಮಂತ್ರ

ಅಸ್ಯ ಶ್ರೀನಾಗಮಂತ್ರಸ್ಯ ಕಾಶ್ಯಪ ಋಷಿಃ । ಬೃಹತೀ ಛಂದಃ । ನಾಗರಾಜೋ ದೇವತಾ ।

ಓಂ ನಮೋ ಹೃದಯಾಯ ನಮಃ । ಭಗವತೇ ಶಿರಸೇ ಸ್ವಾಹಾ । ರಾಮರೂಪಿಣೇ ಶಿಖಾಯೈ ವಷಟ್ । ಮಹಾಬಲಾಯ ಕವಚಾಯ ಹುಮ್ । ನಾಗಾಧಿಪತಯೇ ನೇತ್ರಾಭ್ಯಾಂ ವೌಷಟ್ । ಅನಂತಾಯ ಸ್ವಾಹಾ ಅಸ್ತ್ರಾಯ ಫಟ್। ಓಂ ಭೂರ್ಭುವ- ಸ್ವರೋಮ್ । ಇತಿ ದಿಗ್ಬಂಧಃ ।

ಸಹಸ್ರಶೀರ್ಷಂ ಜಗದೇಕಕುಂಡಲಂ
ಪೀತಾಂಬರಂ ಧೂಮ್ರಸಹಸ್ರಲೋಚನಮ್ ।
ಉದಾರವೀರ್ಯಂ ವಿಷದಂಷ್ಟ್ರಕಾನನಂ
ನಮ್ಯಾಮ್ಯನಂತಂ ಭುವನೈಕನಾಥಮ್ ॥

ಓಂ ನಮೋ ಭಗವತೇ ಕಾಮರೂಪಿಣೇ ಮಹಾಬಲಾಯ ನಾಗಾಧಿಪತಯೇ ಅನಂತಾಯ ಸ್ವಾಹಾ ॥ ಓಂ (ಇತಿ ಮೂಲಮಂತ್ರಮಷ್ಟವಾರಂ ಜಪೇತ್)

ಓಂ ದಂಷ್ಟ್ರಾಫಣಾಯ ವಿದ್ಮಹೇ ಸುವರ್ಣಭೋಗಾಯ ಧೀಮಹಿ ತನ್ನಃ ಸರ್ಪಃ ಪ್ರಚೋದಯಾತ್ ॥ (ಇತಿ ಸರ್ಪಗಾಯತ್ರ್ಯಾ ತ್ರಿವಾರಮರ್ಘ್ಯಂ ದತ್ವಾ ಸಂಕ್ಷೇಪೇಣ ಧನಪುಷ್ಪನೈವೇದ್ಯಾದೀನಿ ಸಮರ್ಪಯೇತ್)

ಓಂ ಲಂ ಪೃಥಿವ್ಯಾತ್ಮನೇ ನಮಃ। ಗಂಧಂ ಸಮರ್ಪಯಾಮಿ। ಅಂ ಆಕಾಶಾತ್ಮನೇ ನಮಃ । ಪುಷ್ಪಂ ಸಮರ್ಪಯಾಮಿ । ಯಂ ವಾಯ್ವಾತ್ಮನೇ ನಮಃ । ಧೂಪಂ ಸಮರ್ಪಯಾಮಿ । ರಂ ಅಗ್ನ್ಯಾತ್ಮನೇ ನಮಃ । ದೀಪಂ ಸಮರ್ಪಯಾಮಿ । ವಂ ಅಮೃತಾತ್ಮನೇ ನಮಃ। ನೈವೇದ್ಯಂ ಸಮರ್ಪಯಾಮಿ। (ಇತಿ ಪಂಚೋಪಚಾರಾನ್ ಸಮರ್ಪಯಾಮಿ)

## ಧ್ಯಾನಮ್

ದಧಾನೌ ಹಲಸೌನಂದೌ ಶ್ವೇತವರ್ಣಃ ಕೃತಾಂಜಲಿಃ ।
ಸಹಸ್ರಮೂರ್ಧಾಽದ್ವಿತೀಯಕರ್ಣಭೂಷಃ ಪ್ರಿಯಾಯುತಃ ।
ವನಮಾಲೀ ನೀಲವಾಸಾ ಧ್ಯೇಯೋ ವಿಷ್ಣೋಸ್ತು ಪೃಷ್ಠತಃ ॥

ಬ್ರಹ್ಮಾಂಡಾಧಾರಭೂತಂ ಚ ಭುವನಾಂತರವಾಸಿನಮ್ ।
ಫಣಾಯುಕ್ತಮಹಂ ಧ್ಯಾಯೇ ನಾಗರಾಜಂ ಹರಿಪ್ರಿಯಮ್ ॥
ಫಣಾಮಣಿಗುಣೋಪೇತಂ ತಪ್ತಕಾಂಚನಸನ್ನಿಭಮ್ ।
ಧ್ಯಾಯಾಮಿ ಪನ್ನಗಾಧೀಶಂ ಪಾತಾಲತಲಸುಸ್ಥಿತಮ್ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಧ್ಯಾಯಾಮಿ। ಧ್ಯಾನಂ ಸಮರ್ಪಯಾಮಿ ।

## ಆವಾಹನಮ್

### ಮಂತ್ರಾಕ್ಷತೆ ಹಾಕಿ; ಸ್ವಾಗತ ಎನ್ನಿರಿ

ಆಗಚ್ಛ ಸರ್ವನಾಗೇಂದ್ರ ಜಗದಾನಂದಕಾರಕ ।
ಆವಾಹನಂ ಸುರಶ್ರೇಷ್ಠ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತಸಂಕರ್ಷಣಾಯ ನಮಃ । ಆವಾಹಯಾಮಿ । ಆವಾಹನಂ ಸಮರ್ಪಯಾಮಿ ।

## ಆಸನ

### ಆಸನಕ್ಕೆ ಮಂತ್ರಾಕ್ಷತೆ ಹಾಕಿರಿ

ಸರ್ವರತ್ನಸಮಾಯುಕ್ತಂ ಸುವರ್ಣಪರಿಭೂಷಿತಮ್ ।
ನಮಸ್ತೇ ಸರ್ಪರಾಜಾಯ ಅರ್ಪಯಾಮಿ ಮಹಾತ್ಮನೇ ॥

ಶ್ರೀನಾಗರಾಜಾಂತರ್ಗತ-ಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಆಸನಂ ಸಮರ್ಪಯಾಮಿ ।

## ಪಾದ್ಯ

### ಉದ್ಧರಣೆಯಿಂದ ನೀರು ಹಾಕಿರಿ

ಮೌಕ್ತಿಕೈಸ್ತಂಡುಲೈಶ್ಚೈವ ಫಲೋದಕಸಮನ್ವಿತಮ್ ।
ಪಾದ್ಯಂ ಗೃಹಾಣ ಸರ್ಪೇಶ ಭಕ್ತಾಭೀಷ್ಟಸಂಪದೇ ॥

ಓಂ ಯೇऽದೋ ರೋಚನೇ ದಿವೋ ಯೇ ವಾ ಸೂರ್ಯಸ್ಯ ರಶ್ಮಿಷು । ಯೇಷಾಮಪ್ಸು ಸದಸ್ಕೃತಂ ತೇಭ್ಯಃ ಸರ್ಪೇಭ್ಯೋ ನಮಃ ॥ ಓಂ

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತಸಂಕರ್ಷಣಾಯ ನಮಃ । ಪಾದ್ಯಂ ಸಮರ್ಪಯಾಮಿ ।

## ಅರ್ಘ್ಯ

### ಉದ್ಧರಣೆಯಿಂದ ನೀರು ಹಾಕಿರಿ

ಕೇತಕೀಗಂಧಸಂಯುಕ್ತೈರಕ್ಷತೈಃ ಪ್ರತಿಗೃಹ್ಯತಾಮ್ ।
ಅರ್ಘ್ಯಂ ದತ್ತಂ ಮಹಾನಾಗ ಪ್ರಸನ್ನವರದೋ ಭವ ॥

ಓಂ ಶೇಂ ಶೇಷಾಯ ನಮಃ ।

ಓಂ ನಮೋ ಅಸ್ತು ಸರ್ಪೇಭ್ಯೋ ಯೇ ಕೇ ಚ ಪೃಥಿವೀಮನು । ಯೇ ಅಂತರಿಕ್ಷೇ ಯೇ ದಿವಿ ತೇಭ್ಯಃ ಸರ್ಪೇಭ್ಯೋ ನಮಃ ॥ ಓಂ ॥

ಶ್ರೀನಾಗರಾಜಾಂತರ್ಗತ-ಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಅರ್ಘ್ಯಂ ಸಮರ್ಪಯಾಮಿ ।

## ಆಚಮನ

### ಉದ್ಧರಣೆಯಿಂದ ೩ ಬಾರಿ ನೀರು ಬಿಡಿ

ಓಂ ಯಾ ಇಷವೋ ಯಾತುಧಾನಾನಾಂ ಯೇ ವಾ ವನಸ್ಪತೀಂರನು ।
ಯೇ ವಾ ವಟೇಷು ಶೇರತೇ ತೇಭ್ಯಃ ಸರ್ಪೇಭ್ಯೋ ನಮಃ ॥ ಓಂ

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಆಚಮನಂ ಸಮರ್ಪಯಾಮಿ ।

## ಪಂಚಾಮೃತಸ್ನಾನಂ

(ಭಗವಂತನಿಗೆ ಮತ್ತು ಪ್ರಾಣದೇವರಿಗೆ ಅಭಿಷೇಕಮಾಡಿದ ಪಂಚಾಮೃತ ಹಾಗೂ ಶುದ್ಧೋದಕಗಳನ್ನು ಶೇಷದೇವರಿಗೆ ಅಭಿಷೇಕ ಮಾಡಿರಿ ಅಥವಾ ಪ್ರೋಕ್ಷಣೆ ಮಾಡಿರಿ)

ಓಂ ಆಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಮ್ ।

ಭವಾ ವಾಜಸ್ಯ ಸಂಗಥೇ ॥ ಓಂ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತಸಂಕರ್ಷಣಾಯ ನಮಃ । ಪಯಃ ಸ್ನಾನಂ ಸಮರ್ಪಯಾಮಿ ।

ಓಂ ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ ।

ಸುರಭಿನೋ ಮುಖಾ ಕರತ್ ಪ್ರ ಣ ಆಯೂಂಷಿ ತಾರಿಷತ್ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ದಧಿಸ್ನಾನಂ ಸಮರ್ಪಯಾಮಿ ।

ಓಂ ಘೃತಂ ಮಿಮಿಕ್ಷೇ ಘೃತಮಸ್ಯ ಯೋನಿರ್ಘೃತೇ ಶ್ರಿತೋ ಘೃತಮ್ವಸ್ಯ ಧಾಮ । ಅನುಷ್ವಧಮಾ ವಹ ಮಾದಯಸ್ವ ಸ್ವಾಹಾಕೃತಂ ವೃಷಭ ವಕ್ಷಿ ಹವ್ಯಮ್ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಘೃತಸ್ನಾನಂ ಸಮರ್ಪಯಾಮಿ ।

ಓಂ ಮಧು ವಾತಾ ಋತಾಯತೇ ಮಧು ಕ್ಷರಂತಿ ಸಿಂಧವಃ ।

ಮಾಧ್ವೀರ್ನಃ ಸಂತ್ವೋಷಧೀಃ ॥

ಮಧು ನಕ್ತಮುತೋಷಸೋ ಮಧುಮತ್ಪಾರ್ಥಿವಂ ರಜಃ ।

ಮಧು ದ್ಯೌರಸ್ತು ನಃ ಪಿತಾ ॥

ಮಧುಮಾನ್ನೋ ವನಸ್ಪತಿರ್ಮಧುಮಾಂ ಅಸ್ತು ಸೂರ್ಯಃ ।

ಮಾಧ್ವೀರ್ಗಾವೋ ಭವಂತು ನಃ ॥ಓಂ

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತಸಂಕರ್ಷಣಾಯ ನಮಃ । ಮಧುಸ್ನಾನಂ ಸಮರ್ಪಯಾಮಿ ।

ಓಂ ಸ್ವಾದುಃ ಪವಸ್ವ ದಿವ್ಯಾಯ ಜನ್ಮನೇ ಸ್ವಾದುರಿಂದ್ರಾಯ ಸುಹವೀತು ನಾಮ್ನೇ । ಸ್ವಾದುರ್ಮಿತ್ರಾಯ ವರುಣಾಯ ವಾಯವೇ ಬೃಹಸ್ಪತಯೇ ಮಧುಮಾಂ ಅದಾಭ್ಯಃ ॥ಓಂ

ಶ್ರೀನಾಗರಾಜಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಸಂಕರ್ಷಣಾಯ ನಮಃ । ಶರ್ಕರಾಸ್ನಾನಂ ಸಮರ್ಪಯಾಮಿ ।

ಓಂ ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾ ಯಾಶ್ಚ ಪುಷ್ಪಿಣೀಃ ।

ಬೃಹಸ್ಪತಿಪ್ರಸೂತಾಸ್ತಾ ನೋ ಮುಂಚಂತ್ವಂಹಸಃ ॥ ಓಂ

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತಸಂಕರ್ಷಣಾಯ ನಮಃ । ಕದಲೀಫಲಸ್ನಾನಂ ಸಮರ್ಪಯಾಮಿ । (ಪವಮಾನಾದಿಸೂಕ್ತ ಹೇಳಿಕೊಂಡು ಅಷ್ಟನಾಗಗಳಿಗೆ ಕನಿಷ್ಟ ಎಂಟು ಎಳನೀರು ಅಭಿಷೇಕ ಮಾಡಬೇಕು).

## ಶುದ್ಧೋದಕಸ್ನಾನ

### ವಿಭಾಗಿಸಿದ ದೇವರ ತೀರ್ಥದಿಂದ ಪ್ರೋಕ್ಷಿಸಿರಿ

ಓಂ ಸ್ವಪ್ನ ಸ್ವಪ್ನಾಧಿಕರಣೇ ಸರ್ವಂ ನಿಷ್ವಾಪಯಾ ಜನಮ್ ।

ಆಸೂರ್ಯಮನ್ಯಾನ್ ಸ್ವಾಪಯಾವ್ಯುಂ ಷಂ ಜಾಗ್ರಿಯಾಮಹಮ್ ॥

ಗಂಗಾಗೋದಾದಿತೋಯೇನ ಪವಿತ್ರಂ ಕುಂಕುಮಾನ್ವಿತಮ್ ।

ಗಂಧತೋಯಂ ಮಹಾನಾಗ ಸ್ನಾನಾರ್ಥಂ ಪ್ರತಿಗೃಹ್ಯತಾಮ್ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಸ್ನಾನಂ ಸಮರ್ಪಯಾಮಿ ।

## ವಸ್ತ್ರ

### ಗೆಜ್ಜೆ ವಸ್ತ್ರ ಸಮರ್ಪಿಸಿರಿ

ಅಜಗರೋ ನಾಮ ಸರ್ಪಃ ಸರ್ಪಿರವಿಷೋ ಮಹಾನ್ ।

ತಸ್ಮಿನ್ ಹಿ ಸರ್ಪಃ ಸುಧಿತಸ್ತೇನ ತ್ವಾ ಸ್ವಾಪಯಾಮಸಿ ॥

ದಿವ್ಯವಸ್ತ್ರದ್ವಯಂ ನಾನಾವರ್ಣಚಿತ್ರಮನೋಹರಮ್ ।

ಸಮರ್ಪಯಾಮಿ ನಾಗೇಂದ್ರ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ವಸ್ತ್ರಯುಗ್ಮಂ ಸಮರ್ಪಯಾಮಿ ।

## ಉಪವೀತ

### ಯಜ್ಞೋಪವೀತವನ್ನು ಸಮರ್ಪಿಸಿರಿ

ಸರ್ಪಃ ಸರ್ಪೋ ಅಜಗರಃ ಸರ್ಪಿರವಿಷೋ ಮಹಾನ್ ।

ತಸ್ಯ ಸರ್ಪಾತ್ಸಿಂಧವಸ್ತಸ್ಯ ಗಾಧಮಶೀಮಹಿ ॥೩॥

ಸುವರ್ಣಕಲಿತಂ ಚೈತದುಪವೀತಂ ತ್ರಿವೃಚ್ಛುಭಮ್ ।

ಅರ್ಪಯಾಮ್ಯದ್ಯ ಭಕ್ತ್ಯಾಽಹಂ ಧಾರಯಾಶ್ವಹಿಸತ್ತಮ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಉಪವೀತಂ ಸಮರ್ಪಯಾಮಿ ॥

# ಗಂಧ

## ಗಂಧವನ್ನು ಸಮರ್ಪಿಸಿರಿ

ಕಾಳಿಕೋ ನಾಮ ಸರ್ಪೋ ನವನಾಗಸಹಸ್ರಫಣಃ ।

ಯಮುನಹ್ರದೇ ಹ ಸೋ ಜಾತೋ 3 ಯೋ ನಾರಾಯಣವಾಹನಃ॥

ಚಂದನಾಗರು-ಕಸ್ತೂರಿ-ಘನಸಾರ-ಸಮನ್ವಿತಮ್ ।

ಗಂಧಂ ಗೃಹಾಣ ದೇವೇಶ ಸರ್ವಗಂಧಮನೋಹರ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಗಂಧಂ ಸಮರ್ಪಯಾಮಿ ।

# ಅಕ್ಷತೆ

## ಮಂತ್ರಾಕ್ಷತೆ ಏರಿಸಿರಿ

ಯದಿ ಕಾಳಿಕದೂತಸ್ಯ ಯದಿ ಕಾಃ ಕಾಳಿಕಾತ್ ಭಯಾತ್ ।

ಜನ್ಮಭೂಮಿಮತಿಕ್ರಾಂತೋ ನಿರ್ವಿಷೋ ಯಾತಿ ಕಾಳಿಕಃ ॥೫॥

ಅಕ್ಷತಾಂಶ್ಚ ಸುರಶ್ರೇಷ್ಠ ಕುಂಕುಮಾಕ್ತಾನ್ ಸುಶೋಭಿತಾನ್ ।

ಮಯಾ ನಿವೇದಿತಾನ್ ಭಕ್ತ್ಯಾ ಗೃಹಾಣ ಪವನಾಶನ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಅಕ್ಷತಾನ್ ಸಮರ್ಪಯಾಮಿ ।

(ನಾಗಪತ್ನೀಭ್ಯಃ ಹರಿದ್ರಾಕುಂಕುಮಾದಿದ್ರವ್ಯಂ ಸಮರ್ಪಣಂ ಕಾರ್ಯಮ್; ನಾಗಪತ್ನಿಯರಿಗೂ ಹರಿದ್ರಾಕುಂಕುಮಗಳಿಂದ ಪೂಜಿಸಬೇಕು).

## ಪುಷ್ಪ

### ಹೂವು ಏರಿಸಿರಿ

ಆ ಯಾಹೀಂದ್ರಪಥಿಭಿರೀಳಿತೇಭಿರ್ಯಜ್ಞಮಿಮಂ ನೋ ಭಾಗಧೇಯಂ ಜುಷಸ್ವ । ತೃಪ್ತಾಂ ಜಹುರ್ಮಾತುಳಸ್ಯೇವ ಯೋಷಾ ಭಾಗಸ್ತೇ ಪೈತೃಷ್ವಸೇಯೀ ವಪಾಮಿವ ॥

ಮಾಲ್ಯಾದೀನಿ ಸುಗಂಧೀನಿ ಮಾಲತ್ಯಾದೀನಿ ವೈ ಪ್ರಭೋ ।
ಮಯಾ ಹೃತಾನಿ ಪೂಜಾರ್ಥಂ ಪುಷ್ಪಾಣಿ ಸ್ವೀಕುರುಷ್ವ ಭೋ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಪುಷ್ಪಾಣಿ ಸಮರ್ಪಯಾಮಿ ।

## ದ್ವಾದಶನಾಮಪೂಜೆ

### ಮಂತ್ರಾಕ್ಷತೆ ಏರಿಸಿರಿ

ಓಂ ಸರ್ಪಾಯ ನಮಃ । ಓಂ ಅನಂತಾಯ ನಮಃ । ಓಂ ಶೇಷಾಯ ನಮಃ । ಓಂ ಕಪಿಲಾಯ ನಮಃ । ಓಂ ನಾಗಾಯ ನಮಃ । ಓಂ ಕುಲಿಕಾಯ ನಮಃ । ಓಂ ಶಂಖಪಾಲಾಯ ನಮಃ । ಓಂ ಭೂಧರಾಯ ನಮಃ । ಓಂ ಕಾಲಿಯಾಯ ನಮಃ । ಓಂ ವಿಷಾಯುಧಾಯ ನಮಃ । ಓಂ ಸಹಸ್ರಶೀರ್ಷಾಯ ನಮಃ । ಓಂ ವಾಸುಕಯೇ ನಮಃ

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । (ದ್ವಾದಶನಾಮಪೂಜಾಂ ಸಮರ್ಪಯಾಮಿ) ।

# ಪತ್ರಪೂಜೆ

## ಪತ್ರಗಳನ್ನು ಸಮರ್ಪಿಸಿರಿ

ಓಂ ಸರ್ಪಾಯ ನಮಃ ಜಾತೀಪತ್ರಂ ಸಮರ್ಪಯಾಮಿ ।
ಓಂ ಅನಂತಾಯ ನಮಃ ಸೇವಂತಿಕಾಪತ್ರಮ್ ಸಮರ್ಪಯಾಮಿ।
ಓಂ ಶೇಷಾಯ ನಮಃ ಮಲ್ಲಿಕಾಪತ್ರಂ ಸಮರ್ಪಯಾಮಿ ।
ಓಂ ಕಪಿಲಾಯ ನಮಃ ತುಲಸೀಪತ್ರಂ ಸಮರ್ಪಯಾಮಿ ।
ಓಂ ನಾಗಾಯ ನಮಃ ಬಿಲ್ವಪತ್ರಂ ಸಮರ್ಪಯಾಮಿ ।
ಓಂ ಕುಲಿಕಾಯ ನಮಃ ದೂರ್ವಾಪತ್ರಂ ಸಮರ್ಪಯಾಮಿ ।
ಓಂ ಶಂಖಪಾಲಾಯ ನಮಃ ವಿಷ್ಣುಕ್ರಾಂತಿಪತ್ರಂ ಸಮರ್ಪಯಾಮಿ ।
ಓಂ ಭೂಧರಾಯ ನಮಃ ಕೇತಕೀಪತ್ರಂ ಸಮರ್ಪಯಾಮಿ ।
ಓಂ ಶ್ರೀನಾಗರಾಜಾಯ ನಮಃ ಸಮಸ್ತಪತ್ರಾಣಿ ಸಮರ್ಪಯಾಮಿ ।

# ಪುಷ್ಪಪೂಜೆ

## ಹೂವುಗಳನ್ನು ಸಮರ್ಪಿಸಿರಿ

ಓಂ ಸರ್ಪಾಯ ನಮಃ ಜಾತೀಪುಷ್ಪಂ ಸಮರ್ಪಯಾಮಿ ।
ಓಂ ಅನಂತಾಯ ನಮಃ ಸೇವಂತಿಕಾಪುಷ್ಪಂ ಸಮರ್ಪಯಾಮಿ।
ಓಂ ಕಪಿಲಾಯ ನಮಃ ಚಂಪಕಪುಷ್ಪಂ ಸಮರ್ಪಯಾಮಿ ।
ಓಂ ನಾಗಾಯ ನಮಃ ನಂದ್ಯಾವರ್ತಪುಷ್ಪಂ ಸಮರ್ಪಯಾಮಿ ।
ಓಂ ಕುಲಿಕಾಯ ನಮಃ ಪೂಗಪುಷ್ಪಂ ಸಮರ್ಪಯಾಮಿ ।
ಓಂ ಶಂಖಪಾಲಾಯ ನಮಃ ಪುನ್ನಾಗಪುಷ್ಪಂ ಸಮರ್ಪಯಾಮಿ ।
ಓಂ ಭೂಧರಾಯ ನಮಃ ಕೇತಕೀಪುಷ್ಪಂ ಸಮರ್ಪಯಾಮಿ ।

ಕೇತಕೀ ಮಲ್ಲಿಕಾ ಜಾತೀ ಯೂಥಿಕಾ ಮಲ್ಲಿಕಾ ತಥಾ ।
ನಂದ್ಯಾವರ್ತಂ ಚ ಧತ್ತೂರಂ ಪದ್ಮಪುಷ್ಪಾಣಿ ಚಾರ್ಪಯೇ ॥

ಮಾಲ್ಯಾದೀನಿ ಸುಗಂಧೀನಿ ಮಾಲಿತ್ಯಾದೀನಿ ವೈ ಪ್ರಭೋ ।
ಮಯಾ ಹೃತಾನಿ ಪೂಜಾರ್ಥಂ ಪುಷ್ಪಾಣಿ ಸ್ವೀಕುರುಷ್ವ ಭೋ ॥
ಶ್ರೀನಾಗರಾಜಾಯ ನಮಃ । ಸರ್ವಪುಷ್ಪಾಣಿ ಸಮರ್ಪಯಾಮಿ ।

## ಅಥ ನಾಗಾಂಗಪೂಜಾ

### ಮಂತ್ರಾಕ್ಷತೆ, ಅರಿಶಿನ, ಕುಂಕುಮ ಏರಿಸಿರಿ

| | |
|---|---|
| ಓಂ ಸರ್ಪಾಯ ನಮಃ | ಪಾದೌ ಪೂಜಯಾಮಿ । |
| ಅನಂತಾಯ ನಮಃ | ಗುಲ್ಫೌ ಪೂಜಯಾಮಿ । |
| ಶೇಷಾಯ ನಮಃ | ಜಂಘೇ ಪೂಜಯಾಮಿ । |
| ಕಪಿಲಾಯ ನಮಃ | ಊರೂ ಪೂಜಯಾಮಿ । |
| ನಾಗಾಯ ನಮಃ | ಕಟಿಂ ಪೂಜಯಾಮಿ । |
| ಗುಲಿಕಾಯ ನಮಃ | ನಾಭಿಂ ಪೂಜಯಾಮಿ । |
| ಶಂಖಪಾಲಾಯ ನಮಃ | ಉದರಂ ಪೂಜಯಾಮಿ । |
| ಭೂಧರಾಯ ನಮಃ | ಹೃದಯಂ ಪೂಜಯಾಮಿ । |
| ಕರ್ಕೋಟಕಾಯ ನಮಃ | ಬಾಹೂನ್ ಪೂಜಯಾಮಿ । |
| ಕಾಲಿಕಾಯ ನಮಃ | ಕಂಠಂ ಪೂಜಯಾಮಿ । |
| ವಿಷಾಯುಧಾಯ ನಮಃ | ಮುಖಂ ಪೂಜಯಾಮಿ । |
| ಸಹಸ್ರಶೀರ್ಷಾಯ ನಮಃ | ನೇತ್ರೇ ಪೂಜಯಾಮಿ । |
| ವಾಸುಕಯೇ ನಮಃ | ಶಿರಃ ಪೂಜಯಾಮಿ । |
| ಶ್ರೀನಾಗರಾಜಾಯ ನಮಃ | ಸರ್ವಾಣ್ಯಂಗಾನಿ ಪೂಜಯಾಮಿ । |

## ಆವರಣಪೂಜಾ

### ಹೂ ಅಥವಾ ಗರಿಕೆಯಿಂದ ಪೂಜಿಸಿರಿ.

ಓಂ ನಮಃ ಕಾಮರೂಪಿಣೇ ಅನಂತಾಯ ನಾಗಾಧಿಪತಯೇ ಮಹಾಬಲಾಯ ಸ್ವಾಹಾ ಓಂ ॥ ಓಂ ಶೇಂ ಶೇಷಾಯ ನಮಃ । (ಪ್ರಥಮಾವರಣಪೂಜಾಂ ಸಮರ್ಪಯಾಮಿ)

ಓಂ ವಾರುಣ್ಯೈ ನಮಃ ಓಂ । ಓಂ ಮುಸಲಾಯುಧಧರಾಯ ನಮಃ ಓಂ । ಓಂ ಹಲಾಯುಧಧರಾಯ ಓಂ। ಓಂ ಶ್ವೇತವರ್ಣಾಯ ನಮಃ ಓಂ । ಓಂ ಕೃತಾಂಜಲಯೇ ನಮಃ ಓಂ । ಓಂ ಸಹಸ್ರಮೂರ್ಧ್ನೇ ನಮಃ ಓಂ । ಓಂ ಅದ್ವಿತೀಯಕರ್ಣಭೂಷಾಯ ನಮಃ ಓಂ ಓಂ ಪ್ರಿಯಾಯುತಾಯ ನಮಃ ಓಂ । ಓಂ ವನಮಾಲಿನೇ ನಮಃ ಓಂ

ಓಂ ನೀಲವಾಸಸೇ ನಮಃ ಓಂ ।

(ದ್ವಿತೀಯಾವರಣಪೂಜಾಂ ಸಮರ್ಪಯಾಮಿ)

ಓಂ ಮೃತ್ಯವೇ ನಮಃ ಓಂ । ಓಂ ಸಂಕರ್ಷಣಾಯ ನಮಃ ಓಂ ।

ಓಂ ಶೇಷಾಯ ನಮಃ ಓಂ । ಓಂ ಶೇತ್ರೇ ನಮಃ ಓಂ ।

ಓಂ ಅನಂತಾಯ ನಮಃ ಓಂ । ಓಂ ಬಲಯೇ ನಮಃ ಓಂ ।

ಓಂ ಮಹಾವಿಷಾಯ ನಮಃ ಓಂ । ಓಂ ಭೂಧರಾಯ ನಮಃ ಓಂ।

(ತೃತೀಯಾವರಣಪೂಜಾಂ ಸಮರ್ಪಯಾಮಿ)

ಓಂ ವಾಸುಕಯೇ ನಮಃ ಓಂ । ಓಂ ತಕ್ಷಕಾಯ ನಮಃ ಓಂ ।

ಓಂ ಕರ್ಕೋಟಕಾಯ ನಮಃ ಓಂ । ಓಂ ಪದ್ಮಾಯ ನಮಃ ಓಂ ।

ಓಂ ಮಹಾಪದ್ಮಾಯ ನಮಃ ಓಂ । ಓಂ ಶಂಖಪಾಲಾಯ ನಮಃ ಓಂ

ಓಂ ಕುಲಿಕಾಯ ನಮಃ ಓಂ । (ಚತುರ್ಥಾವರಣಪೂಜಾಂ ಸಮರ್ಪಯಾಮಿ)

ಓಂ ಐರಾವತಾಯ ನಮಃ ಓಂ । ಓಂ ಐರಾವತಾದಿ ಮಹೋದರಾಂತ - ದ್ವಾಸಪ್ತತಿಪರಿವಾರನಾಗೇಭ್ಯೋ ನಮಃ –

(ಪಂಚಮಾವರಣಪೂಜಾಂ ಸಮರ್ಪಯಾಮಿ)

ಓಂ ವಾಸುಕಿ ಕುಲನಾಗೇಭ್ಯೋ ನಮಃ ಓಂ ।

ಓಂ ತಕ್ಷಕಕುಲನಾಗೇಭ್ಯೋ ನಮಃ ಓಂ ।

ಓಂ ಕರ್ಕೋಟಕಕುಲನಾಗೇಭ್ಯೋ ನಮಃ ಓಂ ।

ಓಂ ಪದ್ಮಕುಲನಾಗೇಭ್ಯೋ ನಮಃ ಓಂ ।

ಓಂ ಮಹಾಪದ್ಮಕುಲನಾಗೇಭ್ಯೋ ನಮಃ ಓಂ ।
ಓಂ ಶಂಖಪಾಲಕುಲನಾಗೇಭ್ಯೋ ನಮಃ ಓಂ ।
ಓಂ ಕುಲಿಕಕುಲನಾಗೇಭ್ಯೋ ನಮಃ ಓಂ ।
(ಷಷ್ಠಾವರಣಪೂಜಾಂ ಸಮರ್ಪಯಾಮಿ)
ಓಂ ನಾಗೇಭ್ಯೋ ನಮಃ ಓಂ । ಓಂ ನಾಗಪತ್ನೀಭ್ಯೋ ನಮಃ ಓಂ ।
ಓಂ ನಾಗಪುತ್ರೇಭ್ಯೋ ನಮಃ ಓಂ । ಓಂ ನಾಗಕನ್ಯಾಭ್ಯೋ ನಮಃ ಓಂ।
ಓಂ ನಾಗಪೌತ್ರೇಭ್ಯೋ ನಮಃ ಓಂ । ಓಂ ನಾಗಪ್ರಪೌತ್ರೇಭ್ಯೋ
ನಮಃ ಓಂ ।
ಓಂ ನಾಗಪಾರ್ಷದೇಭ್ಯೋ ನಮಃ ಓಂ ।
ಓಂ ನಾಗಾನುಪಾರ್ಷದೇಭ್ಯೋ ನಮಃ ಓಂ ॥
(ಸಪ್ತಮಾವರಣಪೂಜಾಂ ಸಮರ್ಪಯಾಮಿ)
ಓಂ ವಜ್ರಾಯ ನಮಃ ಓಂ । ಓಂ ಶಕ್ತ್ಯೈ ನಮಃ ಓಂ ।
ಓಂ ದಂಡಾಯ ನಮಃ ಓಂ । ಓಂ ಖಡ್ಗಾಯ ನಮಃ ಓಂ ।
ಓಂ ಪಾಶಾಯ ನಮಃ ಓಂ । ಓಂ ಗದಾಯೈ ನಮಃ ಓಂ ।
ಓಂ ಕುಮುದಾಯ ನಮಃ ಓಂ । ಓಂ ಶೂಲಾಯ ನಮಃ ಓಂ ।

(ಅಷ್ಟಮಾವರಣಪೂಜಾಂ ಸಮರ್ಪಯಾಮಿ. ಇಲ್ಲಿಗೆ ಆವರಣಪೂಜೆ ಮುಗಿಯಿತು)

## ನಾಮಪೂಜೆ

### ಮಂತ್ರಾಕ್ಷತೆಯಿಂದ ಅರ್ಚಿಸಿರಿ

ಓಂ ಶೇಷಾಯ ನಮಃ ಓಂ । ಓಂ ಸ್ವಸ್ತಿಕಮೂರ್ಧ್ನೇ ನಮಃ ಓಂ ।
ಓಂ ಭೋಗಿನೇ ನಮಃ ಓಂ । ಓಂ ಸಹಸ್ರಶಿರಸೇ ನಮಃ ಓಂ ।
ಓಂ ನೀಲವಾಸಸೇ ನಮಃ ಓಂ । ಓಂ ಚತುರ್ಬಾಹವೇ ನಮಃ ಓಂ ।
ಓಂ ಕಿರೀಟಿನೇ ನಮಃ ಓಂ । ಓಂ ಪಿಂಗಳಶ್ಮಶ್ರುಲೋಚನಾಯ ನಮಃ

ಓಂ ಸರ್ವಾಭರಣಭೂಷಿತಾಯ ನಮಃ ಓಂ ।
ಓಂ ನಮ್ರಾಮ್ರಪಲ್ಲವಾಕಾರಾಯ ನಮಃ ಓಂ ।
ಓಂ ಬಲರಾಮಾಯ ನಮಃ ಓಂ । ಓಂ ಮಹಾಬಲಾಯ ನಮಃ ಓಂ ।
ಓಂ ವಾರುಣೀಪ್ರಿಯಾಯ ನಮಃ ಓಂ । ಓಂ ಅನಂತಾಯ ನಮಃ ಓಂ।
ಓಂ ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣ-ರೂಪಿಲಕ್ಷ್ಮೀನಾರಾಯಣಾಯ ನಮಃ ನಾಮಪೂಜಾಂ ಸಮರ್ಪಯಾಮಿ ।

## ಅಷ್ಟೋತ್ತರಶತನಾಮಪೂಜೆ

### ತುಳಸೀದಳಗಳಿಂದ ಅರ್ಚಿಸಿರಿ

ಓಂ ಶೇಷಾಯ ನಮಃ ಓಂ
ಓಂ ಅನಂತಾಯ ನಮಃ
ಓಂ ವಾಸುಕಯೇ ನಮಃ
ಓಂ ಸಹಸ್ರಫಣಮಂಡಿತಾಯ ನಮಃ
ಓಂ ಭೂಧರಾಯ ನಮಃ
ಓಂ ಸರ್ವಕಾಮಾಯ ನಮಃ
ಓಂ ವಿಷ್ಣುತಲ್ಪಾಯ ನಮಃ
ಓಂ ಹರಿಪ್ರಿಯಾಯ ನಮಃ
ಓಂ ವಿಷಜ್ವಾಲಾಕುಲಾಯ ನಮಃ
ಓಂ ಅಹೀಶಾಯ ನಮಃ (10)
ಓಂ ಶುಭ್ರವರ್ಣಸುಕಾಯವತೇ ನಮಃ
ಓಂ ಕ್ಷಮಾಸಮುದ್ರಾಯ ನಮಃ
ಓಂ ಪಾತಾಲವಾಸಿನೇ ನಮಃ
ಓಂ ಕೂರ್ಮಸಮಾಶ್ರಯಾಯ ನಮಃ
ಓಂ ಮಹಾಭೋಗಿನೇ ನಮಃ
ಓಂ ಸುಭೋಗಾಯ ನಮಃ
ಓಂ ಹಲಿನೇ ನಮಃ
ಓಂ ಮುಸಲಶಸ್ತ್ರಕಾಯ ನಮಃ
ಓಂ ಫಣಾಮಣಿಸುಶೋಭಾಢ್ಯಾಯ
ಓಂ ಫಣಾಸಪ್ತಕಮಂಡಿತಾಯ ನಮಃ
ಓಂ ಭಕ್ತಾಭೀಷ್ಟಪ್ರದಾಯ ನಮಃ
ಓಂ ಶಿಖಿವಾಹಪ್ರಿಯಾಯ ನಮಃ
ಓಂ ಶಂಕರಾಭರಣಾಯ ನಮಃ
ಓಂ ಅಹೀಂದ್ರಾಯ ನಮಃ
ಓಂ ಕುಂಡಲಿನೇ ನಮಃ
ಓಂ ಗೂಢಪಾದಕಾಯ ನಮಃ
ಓಂ ಚಕ್ಷುಃಶ್ರವಸೇ ನಮಃ
ಓಂ ನಾಗೇಂದ್ರಾಯ ನಮಃ
ಓಂ ಕದ್ರೂಜಾತಾಯ ನಮಃ
ಓಂ ಅಭಯಂಕರಾಯ ನಮಃ (30)

ಓಂ ಕಾಶ್ಯಪೇಯಾಯ ನಮಃ
ಓಂ ಬಲಾತ್ಮನೇ ನಮಃ
ಓಂ ಜ್ಞಾನಾತ್ಮನೇ ನಮಃ
ಓಂ ಚಿನ್ಮಯಾಕೃತಯೇ ನಮಃ
ಓಂ ಕಾಕೋದರಾಯ ನಮಃ
ಓಂ ಗುಹಾವಾಸಾಯ ನಮಃ
ಓಂ ಗುಹಪ್ರೀತಿಸುವರ್ಧನಾಯ ನಮಃ
ಓಂ ರಸಾತಲಾಲಂಕೃತಯೇ ನಮಃ
ಓಂ ಸರ್ವೈಶ್ವರ್ಯಸಮನ್ವಿತಾಯ ನಮಃ
ಓಂ ವಾರುಣೀದಯಿತಾಯ ನಮಃ
ಓಂ ದೇವವಂದಿತಾಯ ನಮಃ
ಓಂ ಪ್ರಿಯದರ್ಶನಾಯ ನಮಃ
ಓಂ ಗಾನಪ್ರಿಯಾಯ ನಮಃ
ಓಂ ಗೇಯಕೀರ್ತಯೇ ನಮಃ
ಓಂ ಗುಣಪೂರ್ತಯೇ ನಮಃ
ಓಂ ತ್ರಯೀತನವೇ ನಮಃ
ಓಂ ತ್ರಯೀಗಮ್ಯಾಯ ನಮಃ
ಓಂ ಅಷ್ಟವಂಶೇಶಾಯ ನಮಃ
ಓಂ ಸನಕಾದಿಸುವಂದಿತಾಯ ನಮಃ
ಓಂ ನಾರದಸ್ತುತಿಸಂಪ್ರೀತಾಯ ನಮಃ
ಓಂ ಜರಾಮರಣವರ್ಜಿತಾಯ ನಮಃ
ಓಂ ಅಮರಾಯ ನಮಃ
ಓಂ ತ್ರಿದಶಾರಾಧ್ಯಾಯ ನಮಃ
ಓಂ ಅಚಲಾಯ ನಮಃ
ಓಂ ಶಾಶ್ವತಾಯ ನಮಃ
ಓಂ ಶುಭಾಯ ನಮಃ
ಓಂ ಸರ್ಪೇಶ್ವರಾಯ ನಮಃ
ಓಂ ಶರ್ವಸಖಾಯ ನಮಃ
ಓಂ ಪರ್ವಪೂಜ್ಯಶುಭಾಕೃತಯೇ ನಮಃ
ಓಂ ಸತ್ಯಾತ್ಮನೇ ನಮಃ(60)
ಓಂ ಸತ್ಯಸಂಕಲ್ಪಾಯ ನಮಃ
ಓಂ ಸತ್ಯಧ್ಯೇಯಾಯ ನಮಃ
ಓಂ ಸುಸತ್ಯಧಿಯೇ ನಮಃ
ಓಂ ಬ್ರಹ್ಮಣ್ಯಾಯ ನಮಃ
ಓಂ ಬ್ರಾಹ್ಮಣಾರ್ಚ್ಯಾಯ ನಮಃ
ಓಂ ಅರ್ಚ್ಯಾಯ ನಮಃ
ಓಂ ಬ್ರಹ್ಮಧ್ಯೇಯಾಯ ನಮಃ
ಓಂ ಅರಿಮರ್ದನಾಯ ನಮಃ
ಓಂ ಮುಸಲಿನೇ ನಮಃ
ಓಂ ನಾಗಕನ್ಯಾಭಿರ್ವಂದಿತಾಯ ನಮಃ(70)
ಓಂ ಅಮಂದವಿಕ್ರಮಾಯ ನಮಃ
ಓಂ ಭುಜಂಗಮಾಯ ನಮಃ
ಓಂ ಕಲಾಪೂರ್ಣಾಯ ನಮಃ
ಓಂ ಪೂರ್ಣಸದ್ಗುಣಭೂಷಣಾಯ ನಮಃ
ಓಂ ಭೂಮಂಡಲಸುಖೋದ್ಧರ್ತ್ರೇ ನಮಃ
ಓಂ ಸುಖದಾಯ ನಮಃ
ಓಂ ಸುಖರೂಪವತೇ ನಮಃ
ಓಂ ಅರ್ಚಕಾಭೀಷ್ಟದಾಯಿನೇ ನಮಃ

ಓಂ ಸ್ವರ್ಚನೀಯಾಯ ನಮಃ
ಓಂ ಕ್ಷೀರಾಬ್ಧಿವಾಸಾಯ ನಮಃ
ಓಂ ನೀಲವಾಸಸೇ ನಮಃ
ಓಂ ಕಿರೀಟಿನೇ ನಮಃ
ಓಂ ವ್ರಣಹಾರಿಣೇ ನಮಃ
ಓಂ ಸರ್ವದೋಷಹರಾಯ ನಮಃ
ಓಂ ಧನಪ್ರದಾಯ ನಮಃ
ಓಂ ನಿಧಿಸ್ವಾಧೀನಹಾರಕಾಯ ನಮಃ
ಓಂ ರತ್ನಾಕರ ಸಮಾಶ್ರಯಾಯ ನಮಃ
ಓಂ ಭೂಖಂಡಧರಣೋತ್ಸುಕಾಯ ನಮಃ
ಓಂ ಭಕ್ತಿಪಾಶವಶ್ಯಾಯ ನಮಃ
ಓಂ ಕರ್ಕೋಟಕಾಯ ನಮಃ
ಓಂ ಕಾಲಿಯಾಯ ನಮಃ
ಓಂ ಕಪಿಲಾಯ ನಮಃ
ಓಂ ಸರ್ಪಾಯ ನಮಃ

ಓಂ ಶುಭಾರ್ಚನಾಯ ನಮಃ(80)
ಓಂ ಶ್ರೀವಾಸಾಯ ನಮಃ
ಓಂ ಸದರ್ಚಿತಾಯ ನಮಃ
ಓಂ ಕುಷ್ಠಹಾರಿಣೇ ನಮಃ
ಓಂ ಕೃಪಾಕರಾಯ ನಮಃ
ಓಂ ಸರ್ವರೋಗಹಾರಿಣೇ ನಮಃ
ಓಂ ನಿಧಿರಕ್ಷಣಸಂಸ್ಥಾಯ ನಮಃ
ಓಂ ರತ್ನಭೂಷಣಶೋಭಾಢ್ಯಾಯ ನಮಃ
ಓಂಭೂಮಂಡಲವಾಸಿನೇ ನಮಃ
ಓಂ ಭಕ್ತಕಲ್ಪದ್ರುಮಾಯ ನಮಃ
ಓಂ ಮಹಾಹಿಪಾಯ ನಮಃ (100)
ಓಂ ಶಂಖಪಾಲಾಯ ನಮಃ
ಓಂ ಧೃತರಾಷ್ಟ್ರಕಾಯ ನಮಃ
ಓಂ ಕುಲಿಕಾಯ ನಮಃ
ಓಂ ನಾಗರಾಜಾಧಿರಾಜಾಯ ನಮಃ (108)

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಅಷ್ಟೋತ್ತರಶತನಾಮಾವಲಿಪೂಜಾಂ ಸಮರ್ಪಯಾಮಿ ।

## ಧೂಪ

### ಧೂಪಾರತಿ ಮಾಡಿರಿ

ಯಶಸ್ಕರಂ ಬಲವಂತಂ ಪ್ರಭುತ್ವಂ ತಮೇವ ರಾಜಾಧಿಪತಿರ್ಬಭೂವ ।

ಸಂಕೀರ್ಣನಾಗಾಶ್ವಪತಿರ್ನರಾಣಾಂ ಸುಮಂಗಲ್ಯಂ ಸತತಂ ದೀರ್ಘಮಾಯುಃ ॥

ದಶಾಂಗಂ ಗುಗ್ಗುಲೋಪೇತಂ ಸುಗಂಧಂ ಚ ಮನೋಹರಮ್ ।
ಧೂಪಮಾಜಿಘ್ರ ಸರ್ಪೇಶ ಘೃತಯುಕ್ತಂ ಸುಮಿಶ್ರಿತಮ್ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಧೂಪಮಾಘ್ರಾಪಯಾಮಿ ।

## ದೀಪ

### ಮೂರುಬತ್ತಿಯಿಂದ ಆರತಿ ಮಾಡಿರಿ

ಕರ್ಕೋಟಕೋ ನಾಮ ಸರ್ಪೋ ಯೋ ದೃಷ್ಟೀವಿಷ ಉಚ್ಯತೇ ।
ತಸ್ಯ ಸರ್ಪಸ್ಯ ಸರ್ಪತ್ವಂ ತಸ್ಮೈ ಸರ್ಪ ನಮೋಽಸ್ತು ತೇ ॥8॥

ಘೃತವರ್ತಿತ್ರಯೋಪೇತಂ ಅಂಧಕಾರವಿನಾಶನಮ್ ।
ದೀಪಂ ಗೃಹಾಣ ದೇವೇಶ ಜ್ಞಾನದೀಪಂ ಕುರುಷ್ವ ಮೇ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ದೀಪಂ ದರ್ಶಯಾಮಿ ।

## ನೈವೇದ್ಯ

### ನೈವೇದ್ಯ ಸಮರ್ಪಿಸಿರಿ

ಉಗ್ರಾಯುಧಾಃ ಪ್ರಮತಿನಃ ಪ್ರವೀರಾ ಮಾಯಾವಿನೋ ಬಲಿನೋ ಮಿಚ್ಛ- ಮಾನಾಃ । ಯೇ ದೇವಾನಸುರಾಃ ಪರಾಭವನ್ ತಾಂಸ್ತ್ವಂ ವಜ್ರೇಣ ಮಘವನ್ ನಿವಾರಯ ॥9॥ ಓಂ

ಸುಗಂಧಶುಭತೋಯೇನ ನೈವೇದ್ಯಾರ್ಥಂ ಕೃಪಾನಿಧೇ ।
ಆಪೋಶನಂ ದದಾಮ್ಯದ್ಯ ನಾಗರಾಜ ಗೃಹಾಣ ಭೋಃ ॥

ಅಮೃತೋಪಸ್ತರಣಮಸಿ ಸ್ವಾಹಾ । ಶ್ರೀನಾಗರಾಜಾಂತರ್ಗತಭಾರತೀ-ರಮಣಮುಖ್ಯ-ಪ್ರಾಣಾಂತರ್ಗತಸಂಕರ್ಷಣಾಯ ನಮಃ । ಆಪೋಶನಂ ಸಮರ್ಪಯಾಮಿ ।

ಚಣಕಂ ನಾರಿಕೇಲಾದಿಗೋಧೂಮಂ ಗುಡಮಿಶ್ರಿತಮ್ ।
ಸಘೃತಂ ದಧಿ ಕ್ಷೀರಂ ಚ ನೈವೇದ್ಯಂ ಪ್ರತಿಗೃಹ್ಯತಾಮ್ ॥
ಸಘೃತಾನ್ ಗುಡಮಿಶ್ರಾಂಶ್ಚ ಲಡ್ಡುಕಾನ್ ಪಿಷ್ಟತಂಡುಲೈಃ ।
ಅಷ್ಟೌ ಸ್ವಾದುಕರಾನ್ ನಾಗ ಗೃಹ್ಯತಾಮರ್ಪಯಾಮಿ ತೇ ॥

ಸಶ್ರೀಕಾಯ ಸಪರಿವಾರಾಯ ಶ್ರೀನಾಗರಾಜಾಂತರ್ಗತ ಭಾರತೀರಮಣ-ಮುಖ್ಯಪ್ರಾಣಾಂತರ್ಗತ ಸಂಕರ್ಷಣಾಯ ನಮಃ । ಲಡ್ಡುಕಶರ್ಕರಾ-ಗುಡಲಾಜಕದಲೀ - ನಾರಿಕೇಲಖಂಡಾದಿ ಮಹಾನ್ನೈವೇದ್ಯಂ ಸಮರ್ಪಯಾಮಿ।

ಸರ್ಪಾದ್ಯಷ್ಟಕುಲಾಂತರ್ಯಾಮಿ ಶ್ರೀಸಂಕರ್ಷಣಾಯ ನಮಃ । ನಾರಿಕೇಲ-ಖಂಡಾದಿಮಹಾನ್ನೈವೇದ್ಯಂ ಸಮರ್ಪಯಾಮಿ

ಉತ್ತರಾಪೋಶನಮ್ –

ಆಪೋಶನಂ ಗೃಹಾಣ ತ್ವಂ ಭಕ್ತಾನಾಂ ಭದ್ರದಾಯಕ ।
ನಮಸ್ತೇ ಸರ್ವನಾಗೇಂದ್ರ ಭಕ್ತಿಂ ಮೇ ಹ್ಯಚಲಾಂ ಕುರು ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಉತ್ತರಾಪೋಶನಂ ಸಮರ್ಪಯಾಮಿ । ಹಸ್ತಪ್ರಕ್ಷಾಲನಂ ಸಮರ್ಪಯಾಮಿ । ಗಂಡೂಷಂ ಸಮರ್ಪಯಾಮಿ । ಮುಖಪ್ರಕ್ಷಾಲನಂ ಸಮರ್ಪಯಾಮಿ । ಆಚಮನಂ ಸಮರ್ಪಯಾಮಿ ।

## ತಾಂಬೂಲ ಸಮರ್ಪಿಸಿರಿ

ಪೂಗೀಫಲಸಮಾಯುಕ್ತಂ ನಾಗವಲ್ಲೀದಲೈರ್ಯುತಮ್ ।
ಕರ್ಪೂರೈಲಾಸಮಾಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಕ್ರಮುಕತಾಂಬೂಲಂ ಸಮರ್ಪಯಾಮಿ ।

# ನೀರಾಜನ

## ಮಹಾಮಂಗಳಾರತಿ ಮಾಡಿರಿ

ಶ್ರೀಮತ್ ಸ್ವಸ್ತಿಕಮೂರ್ಧಾನಂ ಪ್ರಣಮಾಮಿ ಚ ಭೋಗಿನಮ್ ।
ಸಹಸ್ರಶಿರಸಂ ದೇವಂ ಅನಂತಂ ನೀಲವಾಸಸಮ್ ॥

ಫಣಾಸಹಸ್ರಸಂಯುಕ್ತಂ ಚತುರ್ಬಾಹುಂ ಕಿರೀಟಿನಮ್ ।
ನವಾಮ್ರಪಲ್ಲವಾಕಾರಂ ಪಿಂಗಳಶ್ಮಶ್ರುಲೋಚನಮ್ ॥

ನೀಲಾಂಬರಧರಂ ದೇವಂ ಸರ್ವಾಭರಣಭೂಷಿತಮ್ ।
ಕ್ಷೀರಾಬ್ಧಿಮಧ್ಯೇ ಶ್ರೀಮಂತಮನಂತಂ ಪೂಜಯೇತ್ ಸದಾ ॥

ದಧಾನೌ ಹಲಸೌನಂದೌ ಶ್ವೇತವರ್ಣಃ ಕೃತಾಂಜಲಿಃ ।
ಸಹಸ್ರಮೂರ್ಧಾಽದ್ವಿತೀಯಕರ್ಣಭೂಷಃ ಪ್ರಿಯಾಯುತಃ ।
ವನಮಾಲೀ ನೀಲವಾಸಾ ಧ್ಯೇಯೋ ವಿಷ್ಣೋಸ್ತು ಪೃಷ್ಠತಃ ॥
ಓಂ ಶೇಂ ಶೇಷಾಯ ನಮಃ ।

ನೀರಾಜನಂ ಸುಮಾಂಗಲ್ಯಂ ಕರ್ಪೂರೇಣ ಸಮನ್ವಿತಮ್ ।
ವಹ್ನಿಚಂದ್ರಾರ್ಕಸದೃಶಂ ಗೃಹಾಣ ದುರಿತಾಪಹ ॥

ಭಕ್ತ್ಯಾ ನೀರಾಜಯೇ ದೇವ ಮಹಾಶೇಷ ನಮೋ ನಮಃ ।
ಮನಸೋಽಭೀಷ್ಟಸಿದ್ಧ್ಯರ್ಥಮಾರ್ತಿಕ್ಯಂ ಪ್ರತಿಗೃಹ್ಯತಾಮ್ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಮಂಗಲನೀರಾಜನಂ ಸಮರ್ಪಯಾಮಿ ।

# ಮಂತ್ರಪುಷ್ಪ

## ಬೊಗಸೆಯಿಂದ ಹೂವು ಹಾಕಿರಿ

ನಾನಾಕುಸುಮಸಂಯುಕ್ತಂ ಪುಷ್ಪಾಂಜಲಿಮಿಮಂ ಪ್ರಭೋ ।
ಕಶ್ಯಪಾನಂದಜನಕ ಸರ್ಪರಾಜ ಗೃಹಾಣ ಮೇ ॥

ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್। ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥

ಪರಿವಾರಸಹಿತಅಷ್ಟಕುಲನಾಗಾಧಿಪಶೇಷಾಂತರ್ಗತ-ಶ್ರೀಭಾರತೀ-ರಮಣಮುಖ್ಯಪ್ರಾಣಾಂತರ್ಗತಶ್ರೀಸಂಕರ್ಷಣಾಯ ನಮಃ ಪುಷ್ಪಾಂಜಲಿಂ ಸಮರ್ಪಯಾಮಿ

## ಅಷ್ಟಕುಲನಾಗಗಳಿಗೆ ಅರ್ಘ್ಯ ನೀಡಿರಿ

(ಬೊಗಸೆಯಲ್ಲಿ ಹರಿದ್ರಾಚೂರ್ಣಮಿಶ್ರಿತವಾದ ಕ್ಷೀರದಿಂದ ಅರ್ಘ್ಯ ನೀಡಬೇಕು.)

ಓಂ ತತ್ಪುರುಷಾಯ ವಿದ್ಮಹೇ ವಿಷ್ಣುತಲ್ಪಾಯ ಧೀಮಹಿ । ತನ್ನಃ ಶೇಷಃ ಪ್ರಚೋದಯಾತ್ ।

ಪ್ರಸನ್ನಾರ್ಘ್ಯಂ ಮಯಾ ದತ್ತಂ ಅನಂತಃ ಸುಪ್ರಸೀದತು ।
ಪ್ರಸನ್ನಾರ್ಘ್ಯಂ ಮಯಾ ದತ್ತಂ ವಾಸುಕಿಃ ಸುಪ್ರಸೀದತು ।
ಪ್ರಸನ್ನಾರ್ಘ್ಯಂ ಮಯಾ ದತ್ತಂ ತಕ್ಷಕಃ ಸುಪ್ರಸೀದತು ।
ಪ್ರಸನ್ನಾರ್ಘ್ಯಂ ಮಯಾ ದತ್ತಂ ಕರ್ಕೋಟಕಃ ಸುಪ್ರಸೀದತು ।
ಪ್ರಸನ್ನಾರ್ಘ್ಯಂ ಮಯಾ ದತ್ತಂ ಪದ್ಮಾಕ್ಷಿಃ ಸುಪ್ರಸೀದತು ।
ಪ್ರಸನ್ನಾರ್ಘ್ಯಂ ಮಯಾ ದತ್ತಂ ಮಹಾಪದ್ಮಃ ಸುಪ್ರಸೀದತು ।
ಪ್ರಸನ್ನಾರ್ಘ್ಯಂ ಮಯಾ ದತ್ತಂ ಶಂಖಪಾಲಃ ಸುಪ್ರಸೀದತು ।
ಪ್ರಸನ್ನಾರ್ಘ್ಯಂ ಮಯಾ ದತ್ತಂ ಕುಲಿಕಃ ಸುಪ್ರಸೀದತು ।

## ಪ್ರದಕ್ಷಿಣನಮಸ್ಕಾರ ಮಾಡಿರಿ

ನಮಸ್ತೇ ದೇವದೇವೇಶ ನಮಸ್ತೇ ಧರಣೀಧರ ।
ನಮಸ್ತೇ ಸರ್ವನಾಗೇಂದ್ರ ನಮಸ್ತೇ ಕರುಣಾಕರ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಪ್ರದಕ್ಷಿಣಂ ಸಮರ್ಪಯಾಮಿ ।

ಅಗ್ನಿಃ ಋಷಿಃ । ಅನುಷ್ಟುಪ್ ಛಂದಃ । ಸರ್ಪಾಃ ದೇವತಾಃ

ಓಂ ನಮೋ ಅಸ್ತು ಸರ್ಪೇಭ್ಯೋ ಯೇ ಕೇ ಚ ಪೃಥಿವೀಮನು ।

ಯೇ ಅಂತರಿಕ್ಷೇ ಯೇ ದಿವಿ ತೇಭ್ಯಃ ಸರ್ಪೇಭ್ಯೋ ನಮಃ ॥ ಓಂ॥

ಓಂ ಯೇಽದೋ ರೋಚನೇ ದಿವೋ ಯೇ ವಾ ಸೂರ್ಯಸ್ಯ ರಶ್ಮಿಷು । ಯೇಷಾಮಪ್ಸು ಸದಸ್ಕೃತಂ ತೇಭ್ಯಃ ಸರ್ಪೇಭ್ಯೋ ನಮಃ ॥ ಓಂ

ಓಂ ಯಾ ಇಷವೋ ಯಾತುಧಾನಾನಾಂ ಯೇ ವಾ ವನಸ್ಪತೀಂರನು।

ಯೇ ವಾ ವಟೇಷು ಶೇರತೇ ತೇಭ್ಯಃ ಸರ್ಪೇಭ್ಯೋ ನಮಃ ॥ ಓಂ

ಯೇ ಚ ಹೇಲಿಮರೀಚಿಸ್ಥಾ ಯೇಽಂತರೇ ದಿವಿ ಸಂಸ್ಥಿತಾಃ ।
ಯೇ ನದೀಷು ಮಹಾನಾಗಾ ಯೇ ಸರಸ್ವತಿಗಾಮಿನಃ ।
ಯೇ ಚ ವಾಪೀತಡಾಗೇಷು ತೇಷು ಸರ್ವೇಷು ವೈ ನಮಃ ॥

## ಪ್ರಾರ್ಥನೆ

ಸಹಸ್ರವಕ್ತ್ರಂ ದ್ವಿಸಹಸ್ರಜಿಹ್ವಂ ಪಿಶಂಗನೇತ್ರಂ ಕಪಿಲಾಂಶುಕಾಢ್ಯಮ್ ।

ವಿಷಾಯುಧಂ ಪ್ರಜ್ವಲದಂಷ್ಟ್ರಬಾಹುಂ ತಂ ನಾಗರಾಜಂ ಪ್ರಣತೋಽಸ್ಮಿ ನಿತ್ಯಮ್ ॥

ವಂದೇಽಹಂ ಶೇಷರೂಪಂ ತಂ ವಂದೇಽಹಂ ಚಿನ್ಮಯಾಕೃತಿಮ್ ।
ವಂದೇಹಂ ದೇವದೇವೇಶಂ ವಂದೇಽಹಂ ಸದ್ಗುಣಾಕರಮ್ ॥

ಬ್ರಹ್ಮಲೋಕೇ ಚ ಯೇ ಸರ್ಪಾಃ ಶೇಷನಾಗಪುರೋಗಮಾಃ ।
ನಮೋಽಸ್ತು ತೇಭ್ಯಃ ಸುಪ್ರೀತಾಃ ಪ್ರಸನ್ನಾಃ ಸಂತು ಸರ್ವದಾ ॥

ವಿಷ್ಣುಲೋಕೇ ಚ ಯೇ ಸರ್ಪಾಃ ವಾಸುಕಿಪ್ರಮುಖಾಶ್ಚ ಯೇ ।
ನಮೋಽಸ್ತು ತೇಭ್ಯಃ ಸುಪ್ರೀತಾಃ ಪ್ರಸನ್ನಾಃ ಸಂತು ಸರ್ವದಾ ॥

ರುದ್ರಲೋಕೇ ಚ ಯೇ ಸರ್ಪಾಃ ತಕ್ಷಕಪ್ರಮುಖಾಶ್ಚ ಯೇ ।
ನಮೋಽಸ್ತು ತೇಭ್ಯಃ ಸುಪ್ರೀತಾಃ ಪ್ರಸನ್ನಾಃ ಸಂತು ಸರ್ವದಾ ॥

ಖಾಂಡವಸ್ಯ ತಥಾ ದಾಹೇ ಸ್ವರ್ಗಂ ಯೇ ಚ ಸಮಾಶ್ರಿತಾಃ ।
ನಮೋಽಸ್ತು ತೇಭ್ಯಃ ಸುಪ್ರೀತಾಃ ಪ್ರಸನ್ನಾಃ ಸಂತು ಸರ್ವದಾ ॥

ಸರ್ಪಸತ್ರೇ ಚ ಯೇ ಸರ್ಪಾಃ ಆಸ್ತೀಕೇನಾಭಿರಕ್ಷಿತಾಃ ।
ನಮೋಽಸ್ತು ತೇಭ್ಯಃ ಸುಪ್ರೀತಾಃ ಪ್ರಸನ್ನಾಃ ಸಂತು ಸರ್ವದಾ ॥

ಮಲಯೇ ಚೈವ ಯೇ ಸರ್ಪಾಃ ಕರ್ಕೋಟಕಮುಖಾಶ್ಚ ಯೇ ।
ನಮೋಽಸ್ತು ತೇಭ್ಯಃ ಸುಪ್ರೀತಾಃ ಪ್ರಸನ್ನಾಃ ಸಂತು ಸರ್ವದಾ ॥

ಧರ್ಮಲೋಕೇ ಚ ಯೇ ಸರ್ಪಾಃ ವೈತರಣ್ಯಾಂ ಸಮಾಶ್ರಿತಾಃ ।
ನಮೋಽಸ್ತು ತೇಭ್ಯಃ ಸುಪ್ರೀತಾಃ ಪ್ರಸನ್ನಾಃ ಸಂತು ಸರ್ವದಾ ॥

ಯೇ ಸರ್ಪಾಃ ಪರ್ವತೀಯೇಷು ದರೀಸಂಧಿಷು ಸಂಸ್ಥಿತಾಃ ।
ನಮೋಽಸ್ತು ತೇಭ್ಯಃ ಸುಪ್ರೀತಾಃ ಪ್ರಸನ್ನಾಃ ಸಂತು ಸರ್ವದಾ ॥

ಗ್ರಾಮೇ ವಾ ಯದಿವಾಽರಣ್ಯೇ ಯೇ ಸರ್ಪಾಃ ಪ್ರಚರಂತಿ ಹಿ ।
ನಮೋಽಸ್ತು ತೇಭ್ಯಃ ಸುಪ್ರೀತಾಃ ಪ್ರಸನ್ನಾಃ ಸಂತು ಸರ್ವದಾ ॥

ಪೃಥಿವ್ಯಾಂ ಚೈವ ಯೇ ಸರ್ಪಾಃ ಯೇ ಸರ್ಪಾಃ ಬಿಲಸಂಸ್ಥಿತಾಃ ।
ನಮೋಽಸ್ತು ತೇಭ್ಯಃ ಸುಪ್ರೀತಾಃ ಪ್ರಸನ್ನಾಃ ಸಂತು ಸರ್ವದಾ ॥

ರಸಾತಳೇ ಚ ಯೇ ಸರ್ಪಾಃ ಅನಂತಾದ್ಯಾ ಮಹಾಬಲಾಃ ।
ನಮೋಽಸ್ತು ತೇಭ್ಯಃ ಸುಪ್ರೀತಾಃ ಪ್ರಸನ್ನಾಃ ಸಂತು ಸರ್ವದಾ ॥

ಶ್ರೀನಾಗರಾಜಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಸಂಕರ್ಷಣಾಯ ನಮಃ । ಪ್ರಾರ್ಥಯಾಮಿ । ಪ್ರಾರ್ಥನಾಂ ಸಮರ್ಪಯಾಮಿ।

ಮಂಡಲದಲ್ಲಿ, ಬಿಂಬದಲ್ಲಿ, ಕಲಶದಲ್ಲಿ ಉತ್ತರಪೂಜೆ ಮಾಡಿರಿ

ಚಾಮರಂ ದರ್ಪಣಂ ಛತ್ರಂ ವ್ಯಜನಂ ಪಕ್ಷಿವಾಹನಮ್ ।
ಶಿಬಿಕಾಂ ಪಾದುಕೇ ನೃತ್ಯಂ ಗೀತಂ ಪಂಚಸುವಾದನಮ್ ॥

ರಥಮಶ್ವಂ ಗಜಂ ಸ್ತೋತ್ರಂ ಪ್ರದಕ್ಷಿಣನಮಸ್ಕೃತೀಃ ।
ಸಮರ್ಪಯಾಮಿ ಸರ್ವಾಣೀ ಜಯಾಪಃ ಪ್ರೀಯತಾಂ ಮಮ ॥

(ತತ್ತ್ವನ್ಯಾಸಮಾತೃಕಾನ್ಯಾಸಪೂರ್ವಕವಾಗಿ ಸಂಕರ್ಷಣದೇವನನ್ನು ಉದ್ವಾಸನೆ ಮಾಡಿ, ಶೇಷಾದಿನಾಗಗಳನ್ನು ಪ್ರಾರ್ಥಿಸಿ ಉದ್ವಾಸನೆ ಮಾಡಬೇಕು.)

ಪನ್ನಗೇಂದ್ರ ನಮಸ್ತೇಽಸ್ತು ವಲ್ಮೀಕಾಂತರ್ನಿವಾಸಕ ।
ಇಮಾಂ ಮಯಾ ಕೃತಾಂ ಪೂಜಾಂ ಗೃಹಾಣ ವರದೋ ಭವ ॥

ಸಮರ್ಪಣೆ ಮಾಡಿರಿ

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾಽನುಸೃತಸ್ವಭಾವಃ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

ಅಜ್ಞಾನಾತ್ ಜ್ಞಾನತೋ ವಾಪಿ ಯನ್ಮಯಾ ಪೂಜನಂ ಕೃತಮ್ ।
ನ್ಯೂನಾತಿರಿಕ್ತಂ ತತ್ಸರ್ವಂ ಭೋ ನಾಗಾಃ ಕ್ಷಂತುಮರ್ಹಥ ।
ಸರ್ವದಾ ಮತ್ಕುಲೇ ಮಾಽಸ್ತು ಭಯಂ ಸರ್ಪವಿಷೋದ್ಭವಮ್ ॥

ಅನೇನ ಶ್ರೀನಾಗರಾಜಾಂತರ್ಯಾಮಿಶ್ರೀಭಾರತೀರಮಣಮುಖ್ಯ-ಪ್ರಾಣಾಂತರ್ಗತ -ಶ್ರೀಜಯಾಪತಿಸಂಕರ್ಷಣಪೂಜನೇನ ನಾಗರಾಜಾಂತರ್ಯಾಮಿ ಶ್ರೀಜಯಾಪತಿ-ಸಂಕರ್ಷಣಃ ಪ್ರೀಯತಾಮ್ । ಪ್ರೀತೋ ವರದೋ ಭವತು । ಶ್ರೀಮಧ್ವಾಂತರ್ಗತ- ಕೃಷ್ಣಾರ್ಪಣಮಸ್ತು ॥

## ವಾಯನದಾನ

ಶೇಷೇಶಃ ಪ್ರತಿಗೃಹ್ಣಾತಿ ಶೇಷೇಶೋ ವೈ ದದಾತಿ ಚ ।
ಶೇಷೇಶಸ್ತಾರಕೋಽಭಾಭ್ಯಾಂ ಶೇಷೇಶಾಯ ನಮೋ ನಮಃ ॥

ಇದಂ ನಾಗಪ್ರತಿಮಾಸಹಿತಂ ಸದಕ್ಷಿಣಾಕಂ, ಸತಾಂಬೂಲಂ, ವಾಯನದಾನಂ ಶ್ರೀಶೇಷಾಂತರ್ಯಾಮಿ ಶ್ರೀಭಾರತೀರಮಣಮುಖ್ಯ-ಪ್ರಾಣಾಂತರ್ಗತ ಶ್ರೀಜಯಾಪತಿ-ಸಂಕರ್ಷಣಸ್ಯ ಪ್ರೀತಿಂ ಕಾಮಯಮಾನಃ ತುಭ್ಯಂ ಸಂಪ್ರದದೇ । ನ ಮಮ ನ ಮಮ । ಪ್ರತಿಗೃಹ್ಣಾತು ಭವಾನ್ ।

ಆಚಾರ್ಯಃ ಪ್ರತಿಗೃಹ್ಣಾತಿ – ಸಂಕರ್ಷಣಾನುಗ್ರಹಸಿದ್ಧಿರಸ್ತು ॥

॥ ಸಂಪೂರ್ಣಾ ॥ ॥ ಶ್ರೀಮಧ್ವೇಶಾರ್ಪಣಮಸ್ತು ॥

## ಸರ್ಪರಾಜಸ್ತುತಿಃ

ಫಣಾಷ್ಟದಲಶೇಖರಂ ಧೃತಸುವರ್ಣಪುಂಜಪ್ರಭಂ
ಸುವಜ್ರವರಭೂಷಣಂ ನವಸರೋಜರಕ್ತೇಕ್ಷಣಮ್ ।
ಸುವರ್ಣಮುಕುಟೋಜ್ಜ್ವಲಂ ಸಕಲವಾಂಛಿತಾರ್ಥಪ್ರದಂ
ನಮಾಮಿ ಶಿರಸಾಸುರಾಸುರನಮಸ್ಕೃತಂ ವಾಸಿನಮ್ ॥1॥

ಸಹಸ್ರವಕ್ತ್ರಂ ದ್ವಿಸಹಸ್ರಜಿಹ್ವಂ
ಪಿಶಂಗನೇತ್ರಂ ಕಪಿಲಾಂಶುಕಾಢ್ಯಮ್ ।
ವಿಷಾಯುಧಂ ಪ್ರೋಜ್ಜ್ವಲದಂಷ್ಟ್ರಬಾಹುಂ
ತಂ ನಾಗರಾಜಂ ಪ್ರಣತೋಽಸ್ಮಿ ನಿತ್ಯಮ್ ॥2॥

ಸಹಸ್ರಶೀರ್ಷಂ ಜಗದೇಕಕುಂಡಲಂ
ಪೀತಾಂಬರಂ ಧೂಮ್ರಸಹಸ್ರಲೋಚನಮ್ ।
ಉದಾರವೀರ್ಯಂ ವಿಷದಂಷ್ಟ್ರಕಾನನಂ
ನಮಾಮ್ಯನಂತಂ ಭುವನೈಕನಾಥಮ್ ॥3॥

* * * *

## ವಾಯನದಾನ

ಶೇಷೇಶಃ ಪ್ರತಿಗೃಹ್ಣಾತಿ ಶೇಷೇಶೋ ವೈ ದದಾತಿ ಚ ।
ಶೇಷೇಶಸ್ತಾರಕೋಭಾಭ್ಯಾಂ ಶೇಷೇಶಾಯ ನಮೋ ನಮಃ ॥

ಇದಂ ನಾಗಪ್ರತಿಮಾಸಹಿತಂ ಸದಕ್ಷಿಣಾಕಂ, ಸತಾಂಬೂಲಂ, ವಾಯನದಾನಂ ಶ್ರೀಶೇಷಾಂತರ್ಯಾಮಿ ಶ್ರೀಭಾರತೀರಮಣಮುಖ್ಯ-ಪ್ರಾಣಾಂತರ್ಗತ ಶ್ರೀಜಯಾಪತಿ-ಸಂಕರ್ಷಣಸ್ಯ ಪ್ರೀತಿಂ ಕಾಮಯಮಾನಃ ತುಭ್ಯಂ ಸಂಪ್ರದದೇ । ನ ಮಮ ನ ಮಮ । ಪ್ರತಿಗೃಹ್ಣಾತು ಭವಾನ್ ।

ಆಚಾರ್ಯಃ ಪ್ರತಿಗೃಹ್ಣಾತಿ – ಸಂಕರ್ಷಣಾನುಗ್ರಹಸಿದ್ಧಿರಸ್ತು ॥
॥ ಸಂಪೂರ್ಣಾ ॥ ॥ ಶ್ರೀಮಧ್ವೇಶಾರ್ಪಣಮಸ್ತು ॥

## ಸರ್ಪರಾಜಸ್ತುತಿಃ

ಫಣಾಷ್ಟದಲಶೇಖರಂ ಧೃತಸುವರ್ಣಪುಂಜಪ್ರಭಂ
ಸವಜ್ರವರಭೂಷಣಂ ನವಸರೋಜರಕ್ತೇಕ್ಷಣಮ್ ।
ಸುವರ್ಣಮುಕುಟೋಜ್ಜ್ವಲಂ ಸಕಲವಾಂಛಿತಾರ್ಥಪ್ರದಂ
ನಮಾಮಿ ಶಿರಸಾಸುರಾಸುರನಮಸ್ಕೃತಂ ವಾಸಿನಮ್ ॥1॥
ಸಹಸ್ರವಕ್ತ್ರಂ ದ್ವಿಸಹಸ್ರಜಿಹ್ವಂ
ಪಿಶಂಗನೇತ್ರಂ ಕಪಿಲಾಂಶುಕಾಢ್ಯಮ್ ।
ವಿಷಾಯುಧಂ ಪ್ರೋಜ್ಜ್ವಲದಂಷ್ಟ್ರಬಾಹುಂ
ತಂ ನಾಗರಾಜಂ ಪ್ರಣತೋಽಸ್ಮಿ ನಿತ್ಯಮ್ ॥2॥
ಸಹಸ್ರಶೀರ್ಷಂ ಜಗದೇಕಕುಂಡಲಂ
ಪೀತಾಂಬರಂ ಧೂಮ್ರಸಹಸ್ರಲೋಚನಮ್ ।
ಉದಾರವೀರ್ಯಂ ವಿಷದಂಷ್ಟ್ರಕಾನನಂ
ನಮಾಮ್ಯನಂತಂ ಭುವನೈಕನಾಥಮ್ ॥3॥

* * * *

॥ ಶ್ರೀಃ ॥

# ನಾಗರಪಂಚಮೀ ವ್ರತ

ಈಶ್ವರ ಉವಾಚ

ಅತಃ ಪರಂ ಪ್ರವಕ್ಷ್ಯಾಮಿ ಶ್ರಾವಣೇ ಶುಕ್ಲಪಕ್ಷಕೇ ।
ಪಂಚಮ್ಯಾಂ ಯಚ್ಚ ಕರ್ತವ್ಯಂ ತತ್ ಶೃಣುಷ್ವ ಮಹಾಮುನೇ ॥೧॥

**ಈಶ್ವರನು ಹೇಳುತ್ತಾನೆ–** ಹೇ ಕುಮಾರ, ಇನ್ನು ಮುಂದೆ ಶ್ರಾವಣ ಶುದ್ಧ ಪಂಚಮಿಯ ದಿನ ಏನು ಮಾಡಬೇಕೆಂಬುದನ್ನು ಹೇಳುವೆನು, ಕೇಳು.

ಚತುರ್ಥ್ಯಾಮೇಕಭುಕ್ತಂ ತು ನಕ್ತಂ ಸ್ಯಾತ್ಪಂಚಮೀದಿನೇ ।
ಕೃತ್ವಾ ಸ್ವರ್ಣಮಯಂ ನಾಗಮಥವಾ ರೌಪ್ಯಸಂಭವಂ ॥೨॥

ಈ ದಿನ ವ್ರತವನ್ನು ಮಾಡಲು ಇಚ್ಛಿಸುವವನು ಚತುರ್ಥಿಯ ದಿನ ಒಪ್ಪತ್ತು ಊಟ ಮಾಡಿ ಪಂಚಮಿಯ ದಿನ ನಕ್ತವ್ರತವನ್ನು ಮಾಡಬೇಕು (ರಾತ್ರಿ ಭೋಜನ).

ಕೃತ್ವಾ ದಾರುಮಯಂ ವಾಪಿ ಅಥವಾ ಮೃನ್ಮಯಂ ಶುಭಂ ।
ಪಂಚಮ್ಯಾಮರ್ಚಯೇದ್ಭಕ್ತ್ಯಾ ನಾಗಂ ಪಂಚಫಣಾನ್ವಿತಂ ॥೩॥
ದ್ವಾರಸ್ಯೋಭಯತೋ ಲೇಖ್ಯಾಗೋಮಯೇನ ವಿಷೋಲ್ಬಣಾ ।
ಪೂಜಯೇದ್ವಿಧಿವಚ್ಚೈವ ದಧಿ ದೂರ್ವಾಂಕುರೈ ಶುಭೈಃ ॥೪॥

ಅಂದು ಸುವರ್ಣ ಅಥವಾ ಬೆಳ್ಳಿಯಲ್ಲಿ ನಾಗಪ್ರತಿಮೆಯನ್ನು ತಯಾರಿಸಬೇಕು. ಎರಡು ಬಾಗಿಲುಗಳ ಪಕ್ಕದಲ್ಲಿ ನಾಗವನ್ನು ಗೋಮಯದಲ್ಲಿ ಬರೆಯಬೇಕು. ಅವುಗಳು ವಿಷವನ್ನು ಪೂತ್ಕರಿಸುತ್ತಿರಬೇಕು. ಗರಿಕೆ ಹಾಗೂ ಚಿಗುರೆಲೆಗಳಿಂದ ಪೂಜಿಸಬೇಕು. ಇದು ಸಾಧ್ಯವಾಗದಿದ್ದರೆ ಕಟ್ಟಿಗೆಯಲ್ಲಿ ಅಥವಾ ಶುದ್ಧ ಮಣ್ಣಿನಿಂದ ೫ ಹೆಡೆಗಳುಳ್ಳ ನಾಗಪ್ರತಿಮೆಯನ್ನು ತಯಾರಿಸಬೇಕು. ಹಾಗೂ ನಾಗಪ್ರತಿಮೆಯನ್ನು ಪಂಚಮಿಯ ದಿನ ಬೆಳಿಗ್ಗೆ ವಿಧಿಪೂರ್ವಕವಾಗಿ ಆಚರಿಸಬೇಕು.

ಕರವೀರೈರ್ಮಾಲತೀಭಿರ್ಜಾತಿಪುಷ್ಪೈಶ್ಚ ಚಂಪಕೈಃ ।
ತಥಾ ಗಂಧೈರಕ್ಷತೈಶ್ಚ ಧೂಪೈರ್ದೀಪೈರ್ಮನೋಹರೈಃ ॥೫॥

ಕರವೀರ, ಮಾಲತೀ, ಜಾತಿಪುಷ್ಪ, ಚಂಪಕ ಮೊದಲಾದ ಪುಷ್ಪಗಳನ್ನು ಏರಿಸಬೇಕು. ಗಂಧಾಕ್ಷತೆಗಳನ್ನು ಏರಿಸಿ ಮನೋಹರವಾದ ಧೂಪಾರತಿ, ದೀಪಾರತಿಗಳನ್ನು ಮಾಡಬೇಕು.

ಬ್ರಾಹ್ಮಣಾನ್-ಪೂಜಯೇತ್-ಪಶ್ಚಾತ್ ಘೃತಮೋದಕಪಾಯಸೈಃ ।
ಅನಂತಂ ವಾಸುಕಿಂ ಶೇಷಂ ಪದ್ಮನಾಭಂ ಚ ಕಂಬಲಂ ॥೬॥

ನಂತರ ಮೋದಕ, ಪಾಯಸ, ತುಪ್ಪಗಳನ್ನು ಹಾಕಿ ಬ್ರಾಹ್ಮಣ ಭೋಜನ ಮಾಡಿಸಬೇಕು. ಅನಂತ, ವಾಸುಕಿ, ಶೇಷ, ಪದ್ಮನಾಭ, ಕಂಬಲ ಇವರನ್ನು ಪೂಜಿಸಬೇಕು.

ತಥಾ ಕರ್ಕೋಟಕಂ ನಾಮ ನಾಗಮಶ್ವಂ ತಥಾಷ್ಟಮಂ ।
ಧೃತರಾಷ್ಟ್ರಂ ಶಂಖಪಾಲಂ ಕಾಲೀಯಂ ತಕ್ಷಕಂ ತಥಾ ॥೭॥

ಕರ್ಕೋಟಕ, ಅಶ್ವ, ಧೃತರಾಷ್ಟ್ರ, ಶಂಖಪಾಲ, ಕಾಲೀಯ ಮತ್ತು ತಕ್ಷಕರನ್ನು ಪೂಜಿಸಬೇಕು.

ಹರಿದ್ರಯಾ ಚಂದನೇನ ಕುಡ್ಯೇ ನಾಗ ಕುಲಾಧಿಪಾನ್ ।
ನವಕದ್ರೂಂಶ್ಚ ಸಂಲಿಖ್ಯ ಪೂಜಯೇತ್ಕುಸುಮಾದಿಭಿಃ ॥೮॥

ನಾಗಕುಲದ ಅಧಿಪರನ್ನು ಗೋಡೆಯ ಮೇಲೆ ಅರಿಷಿಣ ಕುಂಕುಮಗಳಿಂದ ಚಿತ್ರಿಸಬೇಕು. ನಾಗಮಾತೆಯಾದ ಕದ್ರುವನ್ನು ಚಿತ್ರಿಸಿ ಕುಸುಮಾದಿಗಳಿಂದ ಪೂಜಿಸಬೇಕು.

ವಲ್ಮೀಕಂ ಪೂಜಯೇನ್ನಾಗಾನ್ ದುಗ್ಧಂ ಚೈವ ತು ಪಾಯಯೇತ್ ।
ಘೃತಯುಕ್ತಂ ಶರ್ಕರಾಢ್ಯಂ ಯಥೇಷ್ಟಂ ಚಾರ್ಪಯೇದ್ಬುಧಃ ॥೯॥

ಹಾವಿನ ಹುತ್ತು ಇರುವಲ್ಲಿ ಹೋಗಿ ಅಲ್ಲಿರುವ ನಾಗಗಳನ್ನು ಪೂಜಿಸಬೇಕು ಮತ್ತು ಸಕ್ಕರೆ, ತುಪ್ಪ ಬೆರೆಸಿದ ಹಾಲನ್ನು ಅವುಗಳಿಗೆ ಯಥೇಷ್ಟ ಕುಡಿಸಬೇಕು.

ಲೋಹಪಾತ್ರೆ ಪೋಲಿಕಾದಿ ನ ಕುರ್ಯಾತ್ತದ್ದಿನೆ ನರಃ ।
ಗೋಧೂಮ ಪಾಯಸಂ ಕುರ್ಯಾನ್ನೈವೇದ್ಯಾರ್ಥಂ ತು ಭಕ್ತಿತಃ ॥೧೦॥

ಅಂದಿನ ದಿನ ಕಬ್ಬಿಣದ ಹಂಚಿನ ಮೇಲೆ ಹೋಳಿಗೆ ಮೊದಲಾದವುಗಳನ್ನು ಮಾಡಬಾರದು. ನಾಗ ನೈವೇದ್ಯಕ್ಕೆ ಗೋದೀಕುಟ್ಟಿದ ಪಾಯಸವನ್ನು ಹಾಲಿನಲ್ಲಿ ಮಾಡಿ ಭಕ್ತಿಯಿಂದ ನಿವೇದಿಸಬೇಕು.

ಭರ್ಜಿತಾಶ್ಚಣಕಾಶ್ಚೈವ ವ್ರೀಹಯೋ ಯಾವನಾಲಿಕಾಃ ।
ಅರ್ಪಣೀಯಾಶ್ಚ ಸರ್ಪೇಭ್ಯಃ ಸ್ವಯಂ ಚೈವ ತು ಭಕ್ಷಯೇತ್ ॥೧೧॥

ಹುರಿದ ಕಡಲೆ, ಗೋದಿ, ಅರಳು, ಇವುಗಳನ್ನು ಸರ್ಪಗಳಿಗೆ ನಿವೇದಿಸಿ ತಾನೂ ಅವುಗಳನ್ನು ಸೇವಿಸಬೇಕು.

ಬಾಲಕೇಭ್ಯೋ ಅರ್ಪಣೀಯಾಶ್ಚ ದೃಢಾ ದಂತಾ ಭವಂತಿ ಹಿ ।
ವಲ್ಮೀಕಸ್ಯ ಸಮೀಪೇ ತು ಗಾಯನಂ ವಾದ್ಯಮೇವ ಚ ॥೧೨॥

ಇವುಗಳನ್ನು ಬಾಲಕರಿಗೆ ತಿನ್ನಲು ಕೊಡುವುದರಿಂದ ಅವರ ಹಲ್ಲುಗಳು ಗಟ್ಟಿಯಾಗುವವು. ಹುತ್ತದ ಸಮೀಪದಲ್ಲಿ ಅಲಂಕೃತರಾದ ಸ್ತ್ರೀಯರು ಗಾಯನವನ್ನು ಮಾಡಬೇಕು.

ಸ್ತ್ರೀಭಿಃ ಕಾರ್ಯಂ ಭೂಷಿತಾಭಿಃ ಕಾರ್ಯಶ್ಚೈವೋತ್ಸವೋ ಮಹಾನ್ ।
ಏವಂ ಕೃತೇ ಕದಾಚಿಚ್ಚ ಸರ್ಪತೋ ನ ಭಯಂ ಭವೇತ್ ॥೧೩॥

ವಾದ್ಯಗಳನ್ನು ಬಾರಿಸಬೇಕು. ಈ ಪ್ರಕಾರ ಅಂದು ಮಹೋತ್ಸವವನ್ನು ಆಚರಿಸಬೇಕು. ಈ ರೀತಿ ಮಾಡಿದರೆ ಸರ್ಪದ ಭಯವೆಂದಿಗೂ ಆಗಲಾರದು.

ಅನ್ಯಚ್ಚ ಶೃಣುಯಾದ್ವಿಪ್ರ ಲೋಕಾನಾಂ ಹಿತಕಾಮ್ಯಯಾ ।
ಕಥಯಿಷ್ಯಾಮಿ ಕಿಂಚತ್ತೇ ತತ್ ಶೃಣುಷ್ವ ಮಹಾಮುನೇ ॥೧೪॥

ಹೇ ಸನತ್ಕುಮಾರಾ, ಇನ್ನೊಂದು ವಿಷಯವನ್ನು ನಿನಗೆ ತಿಳಿಸುವೆನು ಕೇಳು. ಲೋಕಕ್ಕೆ ಹಿತವಾಗಲೆಂದು ಬಯಸಿ ನಿನಗೆ ಇದನ್ನು ಸ್ವಲ್ಪ ಹೇಳುತ್ತಿದ್ದೇನೆ, ಏನೆಂದರೆ-

ನಾಗದಷ್ಟೋ ನರೋ ವತ್ಸ ಪ್ರಾಪ್ಯ ಮೃತ್ಯುಂ ವ್ರಜತ್ಯಧಃ ।
ಅಧೋ ಗತ್ವಾ ಭವೇತ್ಸರ್ಪಸ್ತಾಮಸೋ ನಾತ್ರ ಸಂಶಯಃ ॥೧೫॥

ಹೇ ವತ್ಸಾ, ಹಾವು ಕಡಿದು ಮೃತನಾದವನು ಅಧೋಲೋಕಕ್ಕೆ ಹೋಗುತ್ತಾನೆ. ಅಲ್ಲಿ ತಾಮಸಿ ಸರ್ಪನಾಗುವನು.

ಪೂರ್ವೋಕ್ತವಿಧಿನಾ ಸರ್ವಮೇಕಭುಕ್ತಾದಿ ಕಾರಯೇತ್ ।
ನಾಗನಿರ್ಮಾಣಪೂಜಾದಿ ವಿಪ್ರೈಃ ಸಹ ತಥಾದರಾತ್ ॥೧೬॥

ಈ ಮೊದಲು ನಿನಗೆ ತಿಳಿಸಿದಂತೆ ಏಕಭುಕ್ತಾದಿಗಳನ್ನು ಮಾಡಿ ವಿಪ್ರರಿಂದ ಕೂಡಿಕೊಂಡು ನಾಗ ನಿರ್ಮಾಣ ಪೂಜಾದಿಗಳನ್ನು ಭಕ್ತಿಯಿಂದ ಮಾಡಬೇಕು.

ಏವಂ ದ್ವಾದಶಮಾಸೇಷು ಮಾಸಿ ಮಾಸಿ ವ್ರತಂ ಚರೇತ್ ।
ಪಂಚಮ್ಯಾಂ ಶುಕ್ಲಪಕ್ಷಸ್ಯ ಪೂರ್ಣೇ ಸಂವತ್ಸರೇ ಪುನಃ ॥೧೭॥

ಈ ಪ್ರಕಾರ ವರ್ಷದ ಹನ್ನೆರಡು ತಿಂಗಳುಗಳಲ್ಲಿ ಪ್ರತಿ ತಿಂಗಳೂ ಶುಕ್ಲಪಕ್ಷದ ಪಂಚಮಿಯಂದು ಪೂಜಾದಿಗಳನ್ನು ಮಾಡಬೇಕು. ಒಂದು ವರ್ಷ ಪೂರ್ಣವಾದ ನಂತರ,

ಬ್ರಾಹ್ಮಣಾಂಶ್ಚ ಯತೀಂಶ್ಚೈವ ನಾಗಾನುದ್ದಿಶ್ಯ ಭೋಜಯೇತ್ ।
ಇತಿಹಾಸವಿದೇ ನಾಗಂ ಕಾಂಚನಂ ರಕ್ತಚಿತ್ರಿತಂ ॥೧೮॥

ಬ್ರಾಹ್ಮಣರನ್ನು ಮತ್ತು ಯತಿಗಳನ್ನು ಆಮಂತ್ರಿಸಿ ಸರ್ಪಗಳ ಪ್ರೀತ್ಯರ್ಥವಾಗಿ ಅವರಿಗೆ ಭೋಜನ ಮಾಡಿಸಬೇಕು. ಪಂಚಮೀ ವ್ರತವನ್ನು ಮಾಡಿಸಿ ಕಥೆ ಹೇಳುವ ಆಚಾರ್ಯನಿಗೆ ರತ್ನಖಚಿತವಾದ ಸುವರ್ಣದ ನಾಗಪ್ರತಿಮೆಯನ್ನು,

ಗಾಂ ಚ ದದ್ಯಾತ್ಸವತ್ಸಾಂ ವೈ ಸರ್ವೋಪಸ್ಕರಸಂಯುತಾಂ ।
ದಾನಕಾಲೇ ಪಠೇದ್ಯೋ ಹಿ ಸ್ಮರನ್ನಾರಾಯಣಂ ವಿಭುಂ ॥೧೯॥
ಸರ್ವಗಂ ಸರ್ವದಾ ತಾರಮನಂತಮಪರಾಜಿತಂ ।
ಯೇ ಕೇಚಿನ್ಮೇ ಕುಲೇ ಸರ್ಪದಷ್ಟಾಃ ಪ್ರಾಪ್ತ ಹ್ಯಧೋಗತಿಂ ॥೨೦॥

ಸರ್ವಾಲಂಕಾರಭೂಷಿತವಾದ ಸವತ್ಸ ಗೋವನ್ನು ಆಹಾರ, ಪಾತ್ರೆ ಮೊದಲಾದ ಸಾಮಗ್ರಿಗಳೊಂದಿಗೆ ಕೊಡಬೇಕು. ದಾನಕಾಲದಲ್ಲಿ ಸರ್ವತ್ರ ವ್ಯಾಪ್ತನಾದ, ಅನಂತನಾದ ಅಪರಾಜಿತನಾದ ವಿಭುನಾರಾಯಣನನ್ನು ಸ್ಮರಿಸುತ್ತಾ 'ಯಾರಾದರೂ ನನ್ನ ಕುಲದಲ್ಲಿ ಸರ್ಪದಿಂದ ಕಚ್ಚಲ್ಪಟ್ಟು ಅಧೋಗತಿಯನ್ನು ಹೊಂದಿದ್ದರೆ'.

ವ್ರತದಾನೇನ ಗೋವಿಂದ ಮುಕ್ತಿಭಾಜೋ ಭವಂತು ತೇ ।
ಇತ್ಯುಚ್ಚಾರ್ಯಾಕ್ಷತೈರ್ಯುಕ್ತಂ ಸಿತಚಂದೇನ ಮಿಶ್ರಿತಂ ॥೨೧॥

ಅಂದಿನ ದಿನ ಕಬ್ಬಿಣದ ಹಂಚಿನ ಮೇಲೆ ಹೋಳಿಗೆ ಮೊದಲಾದವುಗಳನ್ನು ಮಾಡಬಾರದು. ನಾಗ ನೈವೇದ್ಯಕ್ಕೆ ಗೋದೀಕುಟ್ಟಿದ ಪಾಯಸವನ್ನು ಹಾಲಿನಲ್ಲಿ ಮಾಡಿ ಭಕ್ತಿಯಿಂದ ನಿವೇದಿಸಬೇಕು.

ಭರ್ಜಿತಾಶ್ಚಣಕಾಶ್ಚೈವ ವ್ರೀಹಯೋ ಯಾವನಾಲಿಕಾಃ ।
ಅರ್ಪಣೀಯಾಶ್ಚ ಸರ್ಪೇಭ್ಯಃ ಸ್ವಯಂ ಚೈವ ತು ಭಕ್ಷಯೇತ್ ॥೧೧॥

ಹುರಿದ ಕಡಲೆ, ಗೋದಿ, ಅರಳು, ಇವುಗಳನ್ನು ಸರ್ಪಗಳಿಗೆ ನಿವೇದಿಸಿ ತಾನೂ ಅವುಗಳನ್ನು ಸೇವಿಸಬೇಕು.

ಬಾಲಕೇಭ್ಯೋ ಅರ್ಪಣೀಯಾಶ್ಚ ದೃಢಾ ದಂತಾ ಭವಂತಿ ಹಿ ।
ವಲ್ಮೀಕಸ್ಯ ಸಮೀಪೇ ತು ಗಾಯನಂ ವಾದ್ಯಮೇವ ಚ ॥೧೨॥

ಇವುಗಳನ್ನು ಬಾಲಕರಿಗೆ ತಿನ್ನಲು ಕೊಡುವುದರಿಂದ ಅವರ ಹಲ್ಲುಗಳು ಗಟ್ಟಿಯಾಗುವವು. ಹುತ್ತದ ಸಮೀಪದಲ್ಲಿ ಅಲಂಕೃತರಾದ ಸ್ತ್ರೀಯರು ಗಾಯನವನ್ನು ಮಾಡಬೇಕು.

ಸ್ತ್ರೀಭಿಃ ಕಾರ್ಯಂ ಭೂಷಿತಾಭಿಃ ಕಾರ್ಯಶ್ಚೈವೋತ್ಸವೋ ಮಹಾನ್ ।
ಏವಂ ಕೃತೇ ಕದಾಚಿಚ್ಚ ಸರ್ಪತೋ ನ ಭಯಂ ಭವೇತ್ ॥೧೩॥

ವಾದ್ಯಗಳನ್ನು ಬಾರಿಸಬೇಕು. ಈ ಪ್ರಕಾರ ಅಂದು ಮಹೋತ್ಸವವನ್ನು ಆಚರಿಸಬೇಕು. ಈ ರೀತಿ ಮಾಡಿದರೆ ಸರ್ಪದ ಭಯವೆಂದಿಗೂ ಆಗಲಾರದು.

ಅನ್ಯಚ್ಚ ಶೃಣುಯಾದ್ವಿಪ್ರ ಲೋಕಾನಾಂ ಹಿತಕಾಮ್ಯಯಾ ।
ಕಥಯಿಷ್ಯಾಮಿ ಕಿಂಚಿತ್ತೇ ತತ್ ಶೃಣುಷ್ವ ಮಹಾಮುನೇ ॥೧೪॥

ಹೇ ಸನತ್ಕುಮಾರಾ, ಇನ್ನೊಂದು ವಿಷಯವನ್ನು ನಿನಗೆ ತಿಳಿಸುವೆನು ಕೇಳು. ಲೋಕಕ್ಕೆ ಹಿತವಾಗಲೆಂದು ಬಯಸಿ ನಿನಗೆ ಇದನ್ನು ಸ್ವಲ್ಪ ಹೇಳುತ್ತಿದ್ದೇನೆ, ಏನೆಂದರೆ-

ನಾಗದಷ್ಟೋ ನರೋ ವತ್ಸ ಪ್ರಾಪ್ಯ ಮೃತ್ಯುಂ ವ್ರಜತ್ಯಧಃ ।
ಅಧೋ ಗತ್ವಾ ಭವೇತ್ಸರ್ಪಸ್ತಾಮಸೋ ನಾತ್ರ ಸಂಶಯಃ ॥೧೫॥

ಹೇ ವತ್ಸಾ, ಹಾವು ಕಡಿದು ಮೃತನಾದವನು ಅಧೋಲೋಕಕ್ಕೆ ಹೋಗುತ್ತಾನೆ. ಅಲ್ಲಿ ತಾಮಸಿ ಸರ್ಪನಾಗುವನು.

ಪೂರ್ವೋಕ್ತವಿಧಿನಾ ಸರ್ವಮೇಕಭುಕ್ತಾದಿ ಕಾರಯೇತ್ ।
ನಾಗನಿರ್ಮಾಣಪೂಜಾದಿ ವಿಪ್ರೈಃ ಸಹ ತಥಾದರಾತ್ ॥೧೬॥

ಈ ಮೊದಲು ನಿನಗೆ ತಿಳಿಸಿದಂತೆ ಏಕಭುಕ್ತಾದಿಗಳನ್ನು ಮಾಡಿ ವಿಪ್ರರಿಂದ ಕೂಡಿಕೊಂಡು ನಾಗ ನಿರ್ಮಾಣ ಪೂಜಾದಿಗಳನ್ನು ಭಕ್ತಿಯಿಂದ ಮಾಡಬೇಕು.

ಏವಂ ದ್ವಾದಶಮಾಸೇಷು ಮಾಸಿ ಮಾಸಿ ವ್ರತಂ ಚರೇತ್ ।
ಪಂಚಮ್ಯಾಂ ಶುಕ್ಲಪಕ್ಷಸ್ಯ ಪೂರ್ಣೇ ಸಂವತ್ಸರೇ ಪುನಃ ॥೧೭॥

ಈ ಪ್ರಕಾರ ವರ್ಷದ ಹನ್ನೆರಡು ತಿಂಗಳುಗಳಲ್ಲಿ ಪ್ರತಿ ತಿಂಗಳೂ ಶುಕ್ಲಪಕ್ಷದ ಪಂಚಮಿಯಂದು ಪೂಜಾದಿಗಳನ್ನು ಮಾಡಬೇಕು. ಒಂದು ವರ್ಷ ಪೂರ್ಣವಾದ ನಂತರ,

ಬ್ರಾಹ್ಮಣಾಂಶ್ಚ ಯತೀಂಶ್ಚೈವ ನಾಗಾನುದ್ದಿಶ್ಯ ಭೋಜಯೇತ್ ।
ಇತಿಹಾಸವಿದೇ ನಾಗಂ ಕಾಂಚನಂ ರತ್ನಚಿತ್ರಿತಂ ॥೧೮॥

ಬ್ರಾಹ್ಮಣರನ್ನು ಮತ್ತು ಯತಿಗಳನ್ನು ಆಮಂತ್ರಿಸಿ ಸರ್ಪಗಳ ಪ್ರೀತ್ಯರ್ಥವಾಗಿ ಅವರಿಗೆ ಭೋಜನ ಮಾಡಿಸಬೇಕು. ಪಂಚಮೀ ವ್ರತವನ್ನು ಮಾಡಿಸಿ ಕಥೆ ಹೇಳುವ ಆಚಾರ್ಯನಿಗೆ ರತ್ನಖಚಿತವಾದ ಸುವರ್ಣದ ನಾಗಪ್ರತಿಮೆಯನ್ನು,

ಗಾಂ ಚ ದದ್ಯಾತ್ಸವತ್ಸಾಂ ವೈ ಸರ್ವೋಪಸ್ಕರಸಂಯುತಾಂ ।
ದಾನಕಾಲೇ ಪಠೇದ್ಭ್ಯೋ ಹಿ ಸ್ಮರನ್ನಾರಾಯಣಂ ವಿಭುಂ ॥೧೯॥
ಸರ್ವಗಂ ಸರ್ವದಾ ತಾರಮನಂತಮಪರಾಜಿತಂ ।
ಯೇ ಕೇಚಿನ್ಮೇ ಕುಲೇ ಸರ್ಪದಷ್ಟಾಃ ಪ್ರಾಪ್ತ ಹ್ಯಧೋಗತಿಂ ॥೨೦॥

ಸರ್ವಾಲಂಕಾರಭೂಷಿತವಾದ ಸವತ್ಸ ಗೋವನ್ನು ಆಹಾರ, ಪಾತ್ರೆ ಮೊದಲಾದ ಸಾಮಗ್ರಿಗಳೊಂದಿಗೆ ಕೊಡಬೇಕು. ದಾನಕಾಲದಲ್ಲಿ ಸರ್ವತ್ರ ವ್ಯಾಪ್ತನಾದ, ಅನಂತನಾದ ಅಪರಾಜಿತನಾದ ವಿಭುನಾರಾಯಣನನ್ನು ಸ್ಮರಿಸುತ್ತಾ 'ಯಾರಾದರೂ ನನ್ನ ಕುಲದಲ್ಲಿ ಸರ್ಪದಿಂದ ಕಚ್ಚಲ್ಪಟ್ಟು ಅಧೋಗತಿಯನ್ನು ಹೊಂದಿದ್ದರೆ'.

ವ್ರತದಾನೇನ ಗೋವಿಂದ ಮುಕ್ತಿಭಾಜೋ ಭವಂತು ತೇ ।
ಇತ್ಯುಚ್ಚಾರ್ಯಾಕ್ಷತೈರ್ಯುಕ್ತಂ ಸಿತಚಂದೇನ ಮಿಶ್ರಿತಂ ॥೨೧॥

ಹೇ ಗೋವಿಂದಾ, ನಾನು ಕೊಡುತ್ತಿರುವ ಈ ದಾನದಿಂದ ಅವರೆಲ್ಲರೂ ಮುಕ್ತರಾಗಲಿ, ಎಂದು ಪ್ರಾರ್ಥಿಸಿ ಬೆಳ್ಳಿ ಚಂದನಯುಕ್ತ ಅಕ್ಷತ ಜಲವನ್ನು ವಾಸುದೇವನ ಅಗ್ರಭಾಗದಲ್ಲಿ ಅರ್ಘ್ಯಪಾತ್ರೆಯಲ್ಲಿ ಬಿಡಬೇಕು.

ವಾಸುದೇವಾಗ್ರತೋ ಭಕ್ತ್ಯಾ ತೋಯೇ ತೋಯಂ ವಿನಿಕ್ಷಿಪೇತ್ ।
ಅನೇನ ವಿಧಿನಾ ಸರ್ಪೇ ಯೇ ಮರಿಷ್ಯತಿ ವಾ ಮೃತಾಃ ॥೨೨॥

ಭವಿಷ್ಯದಲ್ಲಿ ಸರ್ಪಕಚ್ಚಿ ಯಾರಾದರೂ ಸಾಯುವವರಿದ್ದರೆ, ಈ ಮೊದಲೇ ಯಾರಾದರೂ ಮೃತರಾಗಿದ್ದರೆ ಅವರೆಲ್ಲರೂ ಈ ವ್ರತದ ಪ್ರಭಾವದಿಂದ,

ಸರ್ಪಾತ್ತೇಽಭಯಾಸ್ಯಂತಿ ಸ್ವರ್ಗತಿಂ ಮುನಿಸತ್ತಮ ।
ಏವಂ ಸರ್ಪಾನ್ಸಮುದ್ಧೃತ್ಯ ಕುಲಜಾನ್ಕುಲನಂದನ ॥೨೩॥

ಸರ್ಪಯೋನಿಯಿಂದ ಮುಕ್ತರಾಗಿ ಸ್ವರ್ಗಲೋಕಕ್ಕೆ ಹೋಗುವರು. ಹೇ ಕುಲನಂದನ ಕುಮಾರಾ, ಈ ಪ್ರಕಾರ ವ್ರತವನ್ನು ಆಚರಿಸುವವನು ತನ್ನ ಕುಲದವರನ್ನೆಲ್ಲ ಉದ್ಧರಿಸಿ,

ಪ್ರಯಾತಿ ಶಿವ ಸಾನ್ನಿಧ್ಯಂ ಸೇವ್ಯಮಾನೋಪ್ಸರೋಗಣೈಃ ।
ವಿತ್ತಶಾಠ್ಯವಿಹೀನೋ ಯಃ ಸರ್ವಮೇತತ್ಫಲಂ ಲಭೇತ್ ॥೨೪॥

ಅಪ್ಸರೆಗಣಗಳಿಂದ ಸೇವಿತನಾಗಿ ಶಿವಸಾನ್ನಿಧ್ಯಕ್ಕೆ ಹೋಗುತ್ತಾನೆ. ವಿತ್ತಶಾಠ್ಯ ರಹಿತನಾಗಿ ವ್ರತವನ್ನು ಆಚರಿಸಿದರೆ ವ್ರತದ ಪೂರ್ಣಫಲವನ್ನು ಹೊಂದುವನು.

ನಕ್ತೇನ ಭಕ್ತಿಸಹಿತಾಃ ಸಿತಪಂಚಮೀಷು ಯೇ
ಪೂಜಯಂತಿ ಸುಭಗಾನ್ಕುಸುಮೋಪಹಾರೈಃ ।
ತೇಷಾಂ ಗೃಹೇಷ್ವ ಭಯದಾ ಹಿ ಭವಂತಿ ಸರ್ಪಾ
ಹರ್ಷಾನ್ವಿತಾ ಮಣಿಮಯೂಖವಿಭಾಸಿತಾಂಗಾಃ ॥೨೫॥

ಯಾವ ಮನುಷ್ಯರು ಪ್ರತಿ ಮಾಸದ ಶುದ್ಧ ಪಂಚಮಿಯ ದಿನಗಳಂದು ಪ್ರಾತಃಕಾಲ ನಕ್ತವ್ರತವನ್ನು ಮಾಡುತ್ತ ಭಕ್ತಿಯುತರಾಗಿ ಪುಷ್ಪೋಪಹಾರಗಳಿಂದ ನಾಗದೇವನ ಪೂಜೆ ಮಾಡುವರೋ ಅಂಥವರ ಮನೆಗಳಲ್ಲಿ ಸರ್ಪಗಳು ಯಾವ ತರಹದ ಭಯವನ್ನೂ

ಉಂಟುಮಾಡಲಾರವು. ಅವು ಮಣಿಮಯೂಖಗಳಿಂದ ಅಲಂಕೃತವಾಗಿ ಸಂತೋಷದಿಂದ ಯಾರನ್ನೂ ಬಾಧಿಸದೇ ಮನೆಯಲ್ಲಿ ಅಡ್ಡಾಡುತ್ತವೆ.

ಪ್ರತಿಗೃಹಂ ಯೇ ಚ ಕುರ್ಯುರ್ಗೃಹದಾನಸ್ಯ ವಾಡವಾಃ।
ಪ್ರಯಾಂತಿ ಸರ್ಪತಾಂ ತೇಽಪಿ ಘೋರಾಂ ಭುಕ್ತ್ವಾತು ಯಾತನಾಂ॥

ಮನೆಯನ್ನು ದಾನವಾಗಿ ತೆಗೆದುಕೊಳ್ಳುವ ಜನರು ಘೋರಯಮ ಯಾತನೆಯನ್ನು ಅನುಭೋಗಿಸಿ ಸರ್ಪಯೋನಿಯಲ್ಲಿ ಜನ್ಮತಾಳುವರು.

ಅಂತಕಾಲೇ ಚ ಯೇ ಕೇಚಿನ್ನಾಗಹತ್ಯಾವಶಾದಿಹ।
ಮೃತಾಪತ್ಯಾ ಅಪುತ್ರಾವಾ ಭವಂತಿ ಮುನಿಸತ್ತಮ ॥೨೭॥

ಹೇ ಮುನಿಸತ್ತಮಾ! ಯಾರಾದರೂ ನಾಗಹತ್ಯೆಯನ್ನು ಮಾಡಿದ್ದರೆ ಅವರು ವೃದ್ಧಾಪ್ಯದಲ್ಲಿ ತಮ್ಮ ಮಕ್ಕಳನ್ನು ಕಳೆದುಕೊಳ್ಳುವರು ಅಥವಾ ಆ ಜನ್ಮದಲ್ಲಿ ಮಕ್ಕಳಾಗದೇ ದುಃಖಪಡುವರು.

ಕಾರ್ಪಣ್ಯವಶತಃ ಸ್ತ್ರೀಣಾಂ ಸರ್ಪತಾಂ ಯಾಂತಿ ಕೇಚನ।
ನಿಕ್ಷೇಪಾನೃತವಾದಾಚ್ಚ ಕೇಚಿತ್ಸರ್ಪಾ ಭವಂತಿ ಹಿ ॥೨೮॥

ಸ್ತ್ರೀಯರ ಕಾರ್ಪಣ್ಯಕ್ಕೆ ವಶವಾಗುವುದರಿಂದ, ಕೆಲವರು ಸರ್ಪಯೋನಿಯನ್ನು ಹೊಂದುವರು. ಇನ್ನು ಕೆಲವರು ದ್ರವ್ಯ ನಿಕ್ಷೇಪದ ಬಗ್ಗೆ ಸುಳ್ಳು ಹೇಳುವುದರಿಂದ ಸರ್ಪಯೋನಿಯನ್ನು ಹೊಂದುವರು.

ಅನ್ಯೈಶ್ಚಾಪಿ ನಿಮಿತ್ತೈರ್ಯೇ ಸರ್ಪತಾಂ ಯಾಂತಿ ಮಾನವಾಃ।
ಉಪಾಯೋಽಯಂ ವಿನಿರ್ದಿಷ್ಟಃ ಸರ್ವೇಷಾಂ ನಿಷ್ಕೃತೌ ಪರಃ॥೨೯॥

ಇನ್ನಾವುದಾದರೂ ನಿಮಿತ್ತದಿಂದ ಯಾರಿಗಾದರೂ ಸರ್ಪಜನ್ಮ ಬರುವದಿದ್ದರೆ ಅವರೆಲ್ಲರಿಗೂ ಆ ಜನ್ಮಬಾರದಂತೆ ಈ ಪಂಚಮೀ ವ್ರತವು ಒಂದು ಶ್ರೇಷ್ಠವಾದ ಉಪಾಯವಾಗಿದೆ.

ವಿತ್ತಶಾಠ್ಯರಹೀನೇನ ಕೃತಾ ಚೇನ್ನಾಗಪಂಚಮೀ।
ತದ್ಧಿತಾರ್ಥಂ ಹರಿಂ ಶೇಷಃ ಸರ್ವನಾಗಾಧಿಪೋ ವಿಭುಂ ॥೩೦॥

ವಿತ್ತಶಾಠ್ಯರಹಿತನಾಗಿ ನಾಗಪಂಚಮಿ ವ್ರತವನ್ನು ಆಚರಿಸಿದರೆ, ಆ ವ್ರತಿಯ ಹಿತಾರ್ಥವಾಗಿ ಸರ್ಪನಾಗಗಳ ಅಧಿಪನಾದ ಶೇಷನು ಶ್ರೀಹರಿಯನ್ನೂ,

ಬದ್ಧಾಂಜಲಿಃ ಪ್ರಾರ್ಥಯತೇ ವಾಸುಕಿಶ್ಚ ಸದಾಶಿವಂ ।
ಶೇಷವಾಸುಕಿವಿಜ್ಞಪ್ತೌ ಶಿವವಿಷ್ಣೂ ಪ್ರಸಾದಿತೌ ॥೩೦॥

ಮತ್ತು ವಾಸುಕಿಯು ಸದಾಶಿವನನ್ನೂ ಕೈಜೋಡಿಸಿ ಪ್ರಾರ್ಥಿಸುತ್ತವೆ. ಶೇಷ ವಾಸುಕಿಯರ ಪ್ರಾರ್ಥನೆಯಿಂದ ವಿಷ್ಣು ಮತ್ತು ಶಿವರು ಪ್ರಸನ್ನರಾಗಿ,

ಮನೋರಥಾಂಸ್ತಸ್ಯ ಸರ್ವಾನ್ಪೂರಯತಃ ಪರಮೇಶ್ವರೌ ।
ನಾಗಲೋಕೇ ತು ತಾನ್ಭೋಗಾನ್ಭುಕ್ತ್ವಾ ತು ವಿವಿಧಾನ್ಬಹೂನ್॥೩೨॥

ವ್ರತಿಯ ಸರ್ವಮನೋರಥಗಳನ್ನು ಪೂರ್ಣಗೊಳಿಸುತ್ತಾರೆ. ಹರಿಹರರ ಪ್ರಸಾದದಿಂದ ಆ ವ್ರತಿಯು ನಾಗಲೋಕದಲ್ಲಿ ವಿವಿಧ ಭೋಗಗಳನ್ನುಂಡು,

ತತೋ ವೈಕುಂಠಮಾಸಾದ್ಯ ಕೈಲಾಸಂ ವಾಪಿ ಶೋಭನಂ ।
ಶಿವವಿಷ್ಣುಗಣೋ ಭೂತ್ವಾ ಲಭತೇ ಪರಮಂ ಸುಖಂ ॥೩೩॥

ನಂತರ ವೈಕುಂಠವನ್ನಾಗಲೀ, ಕೈಲಾಸವನ್ನಾಗಲೀ ಹೊಂದುವನು. ಅಲ್ಲಿ ವಿಷ್ಣುವಿನ ಗಣವನ್ನು ಅಥವಾ ಶಿವ ಗಣವನ್ನು ಸೇರಿ 'ಪರಮ ಸುಖವನ್ನು ಹೊಂದುವರು'.

ಏತತ್ತೇ ಕಥಿತಂ ವತ್ಸ ನಾಗಾನಾಂ ಪಂಚಮೀವ್ರತಂ ।
ಅತಃಪರಂ ಕಿಮನ್ಯತ್ತ್ವಂ ಶ್ರೋತುಮಿಚ್ಛಸಿ ತದ್ವದ ॥೩೪॥

ಹೇ ವತ್ಸಾ! ನಾಗಗಳಿಗೆ ಸಂಬಂಧಿಸಿದ 'ನಾಗಪಂಚಮೀ ವ್ರತವನ್ನು ನಿನಗೆ ತಿಳಿಸಿದೆನು' ಇನ್ನೇನು ಕೇಳಬೇಕೆಂದಿರುವಿಯೋ ಅದನ್ನು ಹೇಳು.

॥ ಇತಿ ಶ್ರೀಸ್ಕಂದಪುರಾಣೇ ಈಶ್ವರ-ಸನತ್ಕುಮಾರ ಸಂವಾದೇ
ಶ್ರಾವಣಮಾಸ ಮಹಾತ್ಮ್ಯೇ 'ನಾಗಪಂಚಮೀ ವ್ರತ ಕಥನಮ್' ॥

* * * *

# ನಾಗಪಂಚಮೀ ವ್ರತದ ಕಥೆ

ನೈಮಿಷೇಽನಿಮಿಷಾರಣ್ಯೇ ಸೂತಂ ಪಪ್ರಚ್ಛ ಶೌನಕಃ।
ಶ್ರಾವಣೇ ಶುಕ್ಲಪಂಚಮ್ಯಾಂ ನಾಗಾನರ್ಚಂತಿ ವೈ ಕುತಃ ॥೧॥

ಸೂತಪುರಾಣಿಕರನ್ನು ಕುರಿತು ಶೌನಕರು ಪ್ರಶ್ನಿಸುತ್ತಾರೆ – ಸೂತ ಪುರಾಣಿಕರೇ! ಶ್ರಾವಣಮಾಸದ ಶುಕ್ಲಪಕ್ಷದಲ್ಲಿ ಬರುವ ಪಂಚಮೀಯಂದು ನಾಗಗಳ ಪೂಜೆಯನ್ನು ಯಾವ ಕಾರಣಕ್ಕಾಗಿ ಆಚರಿಸಬೇಕು.

ಇತಿ ಪೃಷ್ಟೋ ಜಗಾದಾಽಶು ರೋಮಹರ್ಷಣಸಂಭವಃ।
ಇದಮೇವ ಪುರಾ ಪೃಷ್ಟಃ ಸಾಂಬೇನ ಶಿಖಿವಾಹನಃ ॥೨॥

ಹೀಗೆ ಶೌನಕರು ಪ್ರಶ್ನಿಸಿದರು. ರೋಮಹರ್ಷಣರ ಪುತ್ರರಾದ ಸೂತಪುರಾಣಿಕರು ಕೂಡಲೇ ಉತ್ತರಿಸಲು ಪ್ರಾರಂಭಿಸಿದರು – ಹಿಂದೆ ಇದೇ ಪ್ರಶ್ನೆಯನ್ನು ಸಾಂಬನೂ ಕೂಡ ಸ್ಕಂದನ ಬಳಿ ಮಾಡಿದ್ದನು.

ಪ್ರತ್ಯಕ್ಷಸ್ತಪಸಾ ದೇವೋ ಮೂರ್ತ್ಯಂತರಮುಪಾಗತಮ್ ।
ಯದುವೀರಂ ಜಗಾದಾಽಶು ಲೋಕಾನುಗ್ರಹಕಾಮ್ಯಯಾ ॥೩॥

ಯದುಕುಲದಲ್ಲಿ ಹುಟ್ಟಿದ ಸಾಂಬನು ತಪಸ್ಸನ್ನು ಮಾಡಿ ಸ್ಕಂದನನ್ನು ಒಲಿಸಿ-ಕೊಂಡನು. ಲೋಕಕ್ಕೆ ಅನುಗ್ರಹ ಮಾಡುವ ಅಪೇಕ್ಷೆಯಿಂದ ಸ್ಕಂದನು ಆ ಸಾಂಬನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾದನು.

ಪಾಂಡ್ಯೇ ಜನಪದೇ ವತ್ಸ ಪುರಾ ದಾರಿದ್ರ್ಯಪೀಡಿತಃ।
ವೇದಶರ್ಮಾ ದ್ವಿಜಃ ಕಶ್ಚಿದಷ್ಟಪುತ್ರಃ ಶುಚಿವ್ರತಃ ॥೪॥

ಹಿಂದೆ ಪೂರ್ವದಿಕ್ಕಿನಲ್ಲಿರುವ ಪಾಂಡ್ಯ ಎಂಬ ದೇಶದಲ್ಲಿ ಕಡುಬಡವನಾದ ವೇದಶರ್ಮ ಎಂಬ ಬ್ರಾಹ್ಮಣನಿದ್ದನು. ಸದಾಚಾರ ಸಂಪನ್ನನಾದ ಅವನಿಗೆ ಎಂಟು ಮಂದಿ ಗಂಡುಮಕ್ಕಳಿದ್ದರು.

ತಸ್ಯ ಕನ್ಯಾ ಸುಶೀಲಾಖ್ಯಾ ಬಭೂವಾತೀವ ಸದ್ಗುಣಾ ।
ಕಶ್ಚಿನ್ನಾಗವರಃ ತಾರ್ಕ್ಷ್ಯಾದ್ ಭೀತಸ್ತಾಂ ಶರಣಂ ಗತಃ ॥೫॥

ಸದ್ಗುಣಭರಿತಳಾದ ಸುಶೀಲಾ ಎಂಬ ಒಬ್ಬ ಕನ್ಯೆಯು ಇದ್ದಳು. ಒಂದು ನಾಗರಹಾವನ್ನು ಗರುಡನು ಅಟ್ಟಿಸಿಕೊಂಡು ಬರುತ್ತಿದ್ದನು. ಹೆದರಿದ ಆ ಹಾವು ಸುಶೀಲಯನ್ನೇ ಮೊರೆ ಹೊಕ್ಕಿತು.

ಕೃಪಾಲುಸ್ತಂ ಪುಪೋಷಾಸೌ ಪಯಸಾ ಗೃಹಕೋಣಕೇ ।
ಕನ್ಯಾಯಾಃ ಪೋಷಣಾತ್ತೃಪ್ತಃ ಸರ್ಪೇಂದ್ರಃ ಸ್ವರ್ಣಮಾಹರತ್ ॥೬॥

ಅತ್ಯಂತ ಕಾರುಣ್ಯದಿಂದ ಆ ಹಾವಿಗೆ ರಕ್ಷಣೆಯನ್ನು ನೀಡಿದಳು. ತನ್ನ ಮನೆಯಲ್ಲಿಯೇ ಇಟ್ಟುಕೊಂಡಳು. ನಿತ್ಯವೂ ಹಾಲು ಕುಡಿಸಿ ಪೋಷಣೆ ಮಾಡುತ್ತಿದ್ದಳು. ಇದರಿಂದ ಆ ಹಾವಿಗೆ ಬಹಳಸಂತೋಷವಾಯಿತು. ಆ ಸರ್ಪೇಂದ್ರನು ನಿತ್ಯವೂ ಸ್ವರ್ಣವನ್ನು ಆವಳಿಗೆ ತಂದು ಕೊಡುತ್ತಿದ್ದನು.

ದಿನೇ ದಿನೇ ಕರ್ಷಮಾತ್ರಂ ತೇನ ನಷ್ಟಾ ದರಿದ್ರತಾ ।
ತದಾ ದುರ್ವೃತ್ತನಿರತಃ ಕನ್ಯಾಭ್ರಾತಾ ಕದಾಚನ ॥೭॥

ಇದರಿಂದ ವೇದಶರ್ಮನ ಬಡತನವು ದಿನೇ ದಿನೇ ಪರಿಹಾರವಾಗುತ್ತಾ ಬಂದಿತು. ಆದರೆ ಆ ಸುಶೀಲೆಯ ಒಬ್ಬ ಅಣ್ಣ ದುಷ್ಟನಾಗಿದ್ದನು. ಅವನೊಮ್ಮೆ ಹೀಗೆ ಕೆಟ್ಟ ಕೆಲಸವನ್ನು ಮಾಡಿದನು.

ಬಹುಸ್ವರ್ಣಾನ್ಯಾಹರೇತಿ ನಾಗೇಂದ್ರಂ ತಾಡಯತ್ ಪದಾ ।
ತೇನ ರುಷ್ಟೋ ದಂದಶೂಕೋ ವಿಷದಂಷ್ಟ್ರಾಕರಾಲಕಃ ॥೮॥
ರುಷಾ ದದಂಶ ತಂ ದುಷ್ಟಂ ಸೋದರಾಂಶ್ಚಾನ್ಯ ದುರ್ಭಗಾನ್ ।

'ಎಲೈ ಸರ್ಪವೇ! ನೀನು ತಂದುಕೊಡುತ್ತಿರುವ ಚಿನ್ನವು ಸಾಲುತ್ತಿಲ್ಲ; ಇನ್ನು ಹೆಚ್ಚಿನ ಚಿನ್ನವನ್ನು ತೆಗೆದುಕೊಂಡು ಬಾ' ಎಂದು ಹೇಳುತ್ತಾ ದರ್ಪದಿಂದ ಆ ಹಾವನ್ನು ಕಾಲಿನಿಂದ ಒದ್ದನು. ಸಿಟ್ಟುಕೊಂಡ ಸರ್ಪವು ತನ್ನ ವಿಷದ ಹಲ್ಲುಗಳಿಂದ ಆ ಬ್ರಾಹ್ಮಣ ಕುಮಾರನನ್ನು ಕಚ್ಚಿತು. ಅವನನ್ನಷ್ಟೇ ಅಲ್ಲದೇ ಅವನ ಸಹೋದರರನ್ನೂ ಕೂಡ ಕಚ್ಚಿತು.

ಕನ್ಯಾ ಪ್ರಾತರ್ವಿಲೋಕ್ಯೇದಂ ಪೂರ್ವಜಾನಾಂ ವಿಘಾತನಮ್ ॥೯॥

ಸರ್ಪಂ ಪಪ್ರಚ್ಛ ಕೇನೇಮೇ ಮಾರಿತಾ ಮಮ ಪೂರ್ವಜಾಃ ।

ಇತಿ ಪೃಷ್ಟಸ್ತು ನಾಗೇಶಸ್ತತ್ಸರ್ವಂ ಸ್ವಕೃತಂ ವದನ್ ॥೧೦॥

ಮರುದಿವಸ ಬೆಳಿಗ್ಗೆಯ ಕಾಲದಲ್ಲಿ ತನ್ನ ಅಣ್ಣಂದಿರು ಮೃತರಾದ್ದನ್ನು ಆ ಕನ್ಯೆಯು ಕಂಡಳು. ಸರ್ಪದ ಬಳಿ ನನ್ನ ಸಹೋದರರನ್ನು ಯಾರು ಕೊಂದರು? ಎಂಬುದಾಗಿ ಕೇಳಿದಳು. ಆಗ ನಾಗೇಶನು ತನ್ನಿಂದ ನಡೆದ ಎಲ್ಲ ವೃತ್ತಾಂತವನ್ನು ತಿಳಿಸಿದನು.

ಇತಃ ಪರಂ ನ ವತ್ಸ್ಯೇಽಹಮಿತಿ ಕ್ರುದ್ಧೋ ಜಗಾಮ ಹ ।

ಸಾ ಕನ್ಯಾ ಸ್ವಕೃತಾದ್ ದೋಷಾತ್ ಪಿತೃವಂಶೋ ವಿಘಾತಿತಃ ॥೧೧॥

ಮತ್ತು ಆ ನಾಗೇಶನು ಅತ್ಯಂತ ಕ್ರುದ್ಧನಾಗಿ ನನಗೆ ಅವಮಾನವಾಗಿದೆ. ಇನ್ನು ಮುಂದೆ ನಾನು ಇಲ್ಲಿ ಇರಲು ಸಾಧ್ಯವಿಲ್ಲವೆಂದು ಹೇಳಿದನು. ಕೂಡಲೇ ಅಲ್ಲಿಂದ ಹೊರಟು ಬಿಟ್ಟನು. ಆಗ ಆ ಕನ್ಯೆಯು ತನ್ನ ದೋಷದಿಂದ ತಂದೆಯ ವಂಶವನ್ನೇ ಕೊಂದಂತಾಯಿತೆಂದು ಮರುಗಿದಳು.

ಕಿಂ ಕರೋಮಿ ಕ್ವ ಗಚ್ಛಾಮಿ ಕಂ ವಾ ಶರಣಮೇಮ್ಯಹಮ್ ।

ಪೃಚ್ಛತೇ ಮಮ ಪಿತ್ರೇ ತು ಕಿಂ ವಾ ವಕ್ಷ್ಯಾಮಿ ದುಃಖಿತಾ ॥೧೨॥

ಈಗ ಏನು ಮಾಡಲಿ? ಎಲ್ಲಿಗೆ ಹೋಗಲಿ? ನಾನು ಯಾರಿಗೆ ಶರಣಾಗತಳಾಗಲಿ? ಎಂಬ ಗೊಂದಲದಲ್ಲಿ ಮುಳುಗಿದಳು. ನನ್ನ ತಂದೆಯು ಏಕೆ ಹೀಗಾಯಿತೆಂದು ಕೇಳಿದರೆ ಅವರಿಗೆ ನಾನು ಏನೆಂದು ಉತ್ತರಿಸಲಿ ಎಂಬ ದುಃಖದಲ್ಲಿ ಮುಳುಗಿದಳು.

ಇತಿ ಖಿನ್ನಾ ಕುಲಾರಾಧ್ಯಂ ನಾರಾಯಣಮನಾಮಯಮ್ ।
ಶರಣ್ಯಂ ಶರಣಂ ಗತ್ವಾ ಯಯಾಚೇ ಕರುಣಾಕರಮ್ ॥೧೩॥

ಹೀಗೆ ಅತ್ಯಂತ ದುಃಖವನ್ನು ಅನುಭವಿಸುತ್ತಾ ತನ್ನ ಕುಲದೇವತೆಯಾದ ನಿರ್ದುಷ್ಟನಾದ ನಾರಾಯಣನನ್ನೇ ಮೊರೆ ಹೊಂದಿದಳು. ಶರಣಾಗತವತ್ಸಲನಾದ ಕರುಣಾಶಾಲಿಯಾದ ಆ ಭಗವಂತನನ್ನು ಭಕ್ತಿಯಿಂದ ಬೇಡಿದಳು.

ನ ಪ್ರಸೀದಸಿ ಚೇದ್ ದೇವ ತ್ವದಂಘ್ರಾವರ್ಪಯೇ ತನುಮ್ ।
ಇತಿ ನಿಶ್ಚಿತಸಂಕಲ್ಪಾ ಖಡ್ಗಂ ಕಂಠೇ ನ್ಯಧಾತ್ ಶುಭಾ ॥೧೪॥

ದೇವೋತ್ತಮನೇ! ನನ್ನ ವಿಷಯದಲ್ಲಿ ಪ್ರಸನ್ನನಾಗು. ನನಗೇನಾದರೂ ನೀನು ಪ್ರಸನ್ನನಾಗದಿದ್ದರೆ ಈ ದೇಹವನ್ನು ನಿನ್ನ ಪಾದದಲ್ಲಿ ಸಮರ್ಪಿಸುತ್ತೇನೆ. ಹೀಗೆ ದೃಢಸಂಕಲ್ಪವನ್ನು ಮಾಡಿ ತನ್ನ ಕುತ್ತಿಗೆಗೆ ಖಡ್ಗವನ್ನು ಇಟ್ಟಳು.

ತದಾ ಕೃಪಾಲುಃ ಸಹಸಾ ಗರುಡೋಪರಿಸಂಸ್ಥಿತಃ ।
ತದಂತಿಕಮುಪೇತ್ಯಾಽಽಶು ತತ್ ಖಡ್ಗಂ ಕೃಪಯಾಽಗೃಹೀತ್ ॥೧೫॥

ಆಗ ದಯಾಸಾಗರನಾದ ನಾರಾಯಣನು ಗರುಡನ ಮೇಲೆ ಕುಳಿತು ಆಕೆಯ ಬಳಿ ಆಗಮಿಸಿದನು. ಅತ್ಯಂತ ಕಾರುಣ್ಯದಿಂದ ಅವಳ ಆ ಖಡ್ಗವನ್ನು ಕೈಯ್ಯಲ್ಲಿ ಹಿಡಿದು ಕೊಂಡನು.

ಕನ್ಯಾಽಪಿ ತಂ ವಿಲೋಕ್ಯಾಸೌ ಪ್ರಹೃಷ್ಟಾ ಪಾದಯೋಃ ಪತತ್ ।
ತಾಮುತ್ಥಾಪ್ಯ ಜಗನ್ನಾಥೋ ವತ್ಸೇ ಕಿಂ ಖಿದ್ಯಸೇ ವದ ॥೧೬॥

ಈ ಕನ್ಯೆಯು ಭಗವಂತನನ್ನು ಕಂಡು ಎಲ್ಲಿಲ್ಲದ ಸಂತೋಷವನ್ನು ಅನುಭವಿಸಿದಳು. ಭಗವಂತನ ಪಾದಗಳಲ್ಲಿ ಬಿದ್ದಳು. ಆಗ ಜಗನ್ನಾಥನು ಆ ಕನ್ಯೆಯನ್ನು ಮೇಲೆಬ್ಬಿಸಿದನು. ಮಗಳೇ! ಯಾವ ಕಾರಣಕ್ಕಾಗಿ ದುಃಖಿಸುತ್ತಿರುವಿ ಹೇಳು? ಎಂದು ಪ್ರಶ್ನಿಸಿದನು.

ತ್ವದ್ಭಕ್ತ್ಯಾ ತೋಷಿತೋಽಸ್ಮ್ಯದ್ಧಾ ಪ್ರಸನ್ನೋ ವರದೋಽಸ್ಮಿ ತೇ ।
ಇತಿ ದೇವೋತ್ತಮೇನಾಸೌ ಸಾಂತ್ವಿತಾ ಪ್ರಾರ್ಥಯದ್ಧರಿಮ್ ॥೧೭॥

ನಿನ್ನ ಭಕ್ತಿಗೆ ನಾನು ಮೆಚ್ಚಿಕೊಂಡಿರುವೆನು. ನಿನಗೆ ವರವನ್ನು ಕೊಡುವುದಕ್ಕಾಗಿ ಪ್ರಸನ್ನನಾಗಿ ಆಗಮಿಸಿರುವೆನು. ಹೀಗೆ ದೇವೋತ್ತಮನಾದ ಮಹಾವಿಷ್ಣುವು ಆಕೆಯನ್ನು ಸಮಾಧಾನ ಮಾಡಿದನು. ಆ ಕನ್ಯೆಯು ಭಗವಂತನ ಬಳಿ ಹೀಗೆ ಪ್ರಾರ್ಥಿಸಿದಳು.

ಮತ್ಪೋಷಿತೋ ದಂದಶೂಕೋ ರೋಷಿತಃ ಪೂರ್ವಜೇನ ಮೇ ।
ಸೋದರಾನಷ್ಟ ಮೇ ನಾಥ ಜಘಾನ ವಿಷದಂಷ್ಟ್ರಯಾ ॥೧೮॥

ನಾನು ಒಂದು ಸರ್ಪವನ್ನು ಸಾಕಿದ್ದೆನು. ನನ್ನ ಅಣ್ಣನು ಅದನ್ನು ತುಳಿದು ಕೋಪಗೊಳಿಸಿದನು. ನಾಥ! ಆಗ ಸರ್ಪವು ತನ್ನ ವಿಷದ ಹಲ್ಲುಗಳಿಂದ ಕಚ್ಚಿ ನನ್ನ ಎಲ್ಲಾ ಎಂಟು ಅಣ್ಣಂದಿರನ್ನು ಕೊಂದುಬಿಟ್ಟಿತು.

ಗತೋಽನ್ಯತ್ರ ಪಿತಾಽಽಗತ್ಯ ಪೃಚ್ಛೇನ್ಮಾಂ ಚೇತ್ ಕಥಂ ಬ್ರುವೇ ।
ಮನ್ನಿಮಿತ್ತಾತ್ ಕುಲಂ ನಷ್ಟಂ ಪಿತುರ್ದೇವ ತತಃ ಶುಚಾ ॥೧೯॥

ಬೇರೆಯ ಕಡೆ ಹೋಗಿರುವ ತಂದೆಯು ಬಂದು ನನ್ನ ಬಳಿ ಕೇಳಿದರೆ ನಾನು ಏನೆಂದು ಉತ್ತರಿಸಬೇಕು? ನನ್ನ ನಿಮಿತ್ತದಿಂದ ತಂದೆಯ ಕುಲವನ್ನೇ ನಾನು ನಾಶ-ಮಾಡಿದಂತಾಯಿತಲ್ಲವೇ? ಈ ದುಃಖವು ನನ್ನನ್ನು ಕಾಡುತ್ತಿದೆ.

ಭವಂತಂ ಶರಣಂ ಯಾತಾ ತ್ರಾಹಿ ಮಾಂ ಕುಲಘಾತಿನೀಮ್ ।
ಮದಗ್ರಜಾ ಯಥಾ ಪ್ರಾಣಾನ್ ಪ್ರಪದ್ಯೇರನ್ ಪುನರ್ಭುವಿ ॥೨೦॥

ಈ ಕಾರಣದಿಂದ ದುಃಖದಿಂದ ಕೂಡಿದವಳಾಗಿ ನಿನ್ನನ್ನು ಶರಣಾಗತಳಾಗಿದ್ದೇನೆ. ಕುಲಘಾತಕಿಯಾದ ನನ್ನನ್ನು ರಕ್ಷಣೆ ಮಾಡು. ಆ ನನ್ನ ಅಣ್ಣಂದಿರು ಪುನಃ ಭೂಮಿಯಲ್ಲಿ ಹೇಗೆ ಬದುಕಿ ಬರುತ್ತಾರೆಂಬುದನ್ನು ತಿಳಿಸು.

ಯಥಾ ಸರ್ಪಭಯಂ ನ ಸ್ಯಾನ್ನಶ್ಯೇದ್ ದಾರಿದ್ರ್ಯಪೀಡನಮ್ ।
ಯಥಾ ತ್ವದಂಘ್ರೌ ಭಕ್ತಿಶ್ಚ ನಿಶ್ಚಲಾ ಮಮ ಸರ್ವದಾ ॥೨೧॥

ನನಗೆ ಸರ್ಪದ ಭಯವು ಎಂದೂ ಬರಬಾರದು ಮತ್ತೊಂದು ಕಡೆ ಈ ದಟ್ಟ ದಾರಿದ್ರ್ಯದ ತೊಂದರೆಯೂ ಇರಬಾರದು. ಮತ್ತು ನಿಶ್ಚಲವಾದ ಭಕ್ತಿಯು ನಿನ್ನ ಪಾದಕಮಲಗಳಲ್ಲಿ ನನಗೆ ಸರ್ವದಾ ಇರಬೇಕು.

ತಥಾ ದೇಹಿ ವರಾನ್ ಮಹ್ಯಂ ಪಾಹಿ ಮಾಂ ಶರಣಾಗತಮ್ ।
ಇತ್ಯರ್ಥಿತಃ ಸರ್ಪರಾಜಂ ತಮಾಹೂಯಾಬ್ರವೀನ್ಮುದಾ ॥೨೨॥

ಈ ಪ್ರಕಾರದ ವರಗಳನ್ನು ನನಗೆ ಕರುಣಿಸು; ಶರಣಾಗತಳಾದ ನನ್ನನ್ನು ಉದ್ಧರಿಸು. ಹೀಗೆ ಭಕ್ತಿಯಿಂದ ಪ್ರಾರ್ಥಿಸಿದಳು. ಆಗ ಭಗವಂತನು ಸರ್ಪರಾಜನಾದ ವಾಸುಕಿ- ಯನ್ನು ಕರೆದು ಹೀಗೆ ಸಂತೋಷದಿಂದ ಹೇಳಿದನು.

ಸಂಜೀವನರಸೇನೇಮಾನ್ ಜೀವಯಾಽಶು ದ್ವಿಜಾತ್ಮಜಾನ್ ।
ಧನಂ ಚಾಕ್ಷಯ್ಯಮಸ್ಮೈ ತು ಕನ್ಯಾಯೈ ದಿಶ ಮೋದವಾನ್ ॥೨೩॥

ಸರ್ಪರಾಜನೇ! ಸಂಜೀವನರಸವನ್ನು ತಂದು ಈ ಬ್ರಾಹ್ಮಣನ ಎಂಟು ಮಂದಿ ಗಂಡುಮಕ್ಕಳನ್ನು ಬದುಕಿಸು. ಮತ್ತು ಈ ಕನ್ಯೆಗೆ ಅಕ್ಷಯವಾದ ಸಂಪತ್ತನ್ನು ನೀಡು.

ಇತ್ಯಾಜ್ಞಪ್ತೋ ನಾಗನಾಥಸ್ತಥಾಽಜೀವಯದಗ್ರಜಾನ್ ।
ಧನಂ ಚಾಕ್ಷಯ್ಯಮದಿಶತ್ ಕನ್ಯಾಯೈ ಶುಭಕೀರ್ತಯೇ ॥೨೪॥

ಭಗವಂತನು ಹೀಗೆ ಆಜ್ಞೆ ಮಾಡಿದನು. ಆಗ ಸರ್ಪರಾಜನು ಭಗವಂತನ ಅಪ್ಪಣೆಯ ಪ್ರಕಾರ ಆ ಕನ್ಯೆಯ ಸಹೋದರರನ್ನು ಸಂಜೀವನರಸದಿಂದ ಬದುಕಿಸಿದನು. ಶುಭಕೀರ್ತಿಯನ್ನು ಹೊಂದಿದ ಆ ಕನ್ಯೆಗೆ ಅಕ್ಷಯವಾದ ಸಂಪತ್ತನ್ನು ಕೂಡ ಕೊಟ್ಟನು.

ದೇವೋಽಪಿ ನಾಗರಾಜಾಯ ವರಮೇನಮದಾತ್ ಕಿಲ ।
ಇತಃ ಪ್ರಭೃತಿ ಲೋಕೇಽಸ್ಮಿನ್ ದಿನೇ ನಾಗಪ್ರಪೂಜನಮ್ ॥೨೫॥

ಆಗ ಭಗವಂತನು ಆ ನಾಗರಾಜನಿಗೂ ಕೂಡ ವರವನ್ನು ನೀಡಿದನು. ನಾಗ- ರಾಜನೇ! ಇಂದಿನಿಂದ ಈ ದಿವಸದಲ್ಲಿ ನಾಗಗಳ ಪೂಜೆಯನ್ನು ಎಲ್ಲರೂ ಮಾಡಬೇಕು.

ಯೇ ಕುರ್ವಂತಿ ಸದಾ ತೇಷಾಂ ಧನಧಾನ್ಯಾದಿಸಂಪದಃ ।
ಪುತ್ರಪೌತ್ರಾದಿವೃದ್ಧಿಶ್ಚ ಸರ್ಪಾದ್ ಭಯನಿವಾರಣಮ್ ॥೨೬॥

ಯಾರು ನಾಗಪೂಜೆಯನ್ನು ಮಾಡುತ್ತಾರೋ ಅವರಿಗೆ ನಿತ್ಯದಲ್ಲಿಯೂ ಧನ-ಧಾನ್ಯಾದಿ ಸಂಪತ್ತುಗಳು, ಮಕ್ಕಳು ಮೊಮ್ಮಕ್ಕಳು ಮೊದಲಾದ ಸಂತಾನಾಭಿವೃದ್ಧಿಯು, ಸರ್ಪಭಯದ ಪರಿಹಾರವು ಆಗುತ್ತದೆ.

ಸರ್ವಶಾಪನಿವೃತ್ತಿಶ್ಚ ಸರ್ವಸಿದ್ಧಿಶ್ಚ ಜಾಯತಾಮ್ ।
ಸಂಕರ್ಷಣಾತ್ಮಾ ನಾಗೇಷು ಸ್ಥಿತ್ವಾ ಗೃಹ್ಣಾಮ್ಯಹಂ ಸ್ವಯಮ್ ॥೨೭॥

ಸರ್ಪಗಳಿಂದ ಬಂದ ಶಾಪವು ಪರಿಹಾರವಾಗುತ್ತದೆ. ಅಷ್ಟೇ ಅಲ್ಲದೇ ಎಲ್ಲಾ ಕಾರ್ಯಗಳ ಸಿದ್ಧಿಯೂ ಕೂಡ ಆಗುತ್ತದೆ. ಎಲ್ಲ ನಾಗಗಳಲ್ಲಿ ನಾನೇ ಸಂಕರ್ಷಣ-ರೂಪದಿಂದ ನೆಲೆಸಿ, ಪೂಜೆಯನ್ನು ಸ್ವೀಕರಿಸಿ, ಅನುಗ್ರಹವನ್ನು ಮಾಡುತ್ತೇನೆ.

ನಾಗಪೂಜಾಂ ತು ನಾಗಾಶ್ಚ ಸರ್ವೇ ತುಷ್ಯಂತ್ಯಸಂಶಯಮ್ ।
ಇತಿ ದತ್ತ್ವಾ ವರಂ ದೇವಃ ಕನ್ಯಯಾಽಕಾರಯದ್ ಹರಿಃ ॥೨೮॥

ಪ್ರತ್ಯಕ್ಷನಾಗಪೂಜಾಂ ಚ ಭಕ್ತಿಂ ತಸ್ಮೈ ಪ್ರದತ್ತವಾನ್ ।
ಆಜ್ಞಯಾ ವಾಸುದೇವಸ್ಯ ಪ್ರಸನ್ನೋ ನಾಗರಾಟ್ ಸ್ವಯಮ್ ॥೨೯॥

ಈ ದಿನದಲ್ಲಿ ಮಾಡುವ ನಾಗಪೂಜೆಯಿಂದ ಎಲ್ಲ ನಾಗಗಳಿಗೆ ಸಂತೋಷ-ವಾಗುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ. ಹೀಗೆ ಭಗವಂತನು ಸರ್ಪರಾಜನಿಗೆ ವರವನ್ನು ನೀಡಿದನು. ಆ ಕನ್ಯೆಯ ಮೂಲಕ ಪ್ರತ್ಯಕ್ಷವಾಗಿ ನಾಗಪೂಜೆಯನ್ನು ಕೂಡ ಮಾಡಿಸಿದನು. ತನ್ನಲ್ಲಿ ಭಕ್ತಿಯು ಅಭಿವೃದ್ಧವಾಗುವಂತೆ ವರವನ್ನು ದಯಪಾಲಿಸಿದನು. ಭಗವಂತನ ಆಜ್ಞೆಯಂತೆ ಆ ನಾಗರಾಜನು ಆ ಕನ್ಯೆಯ ವಿಷಯದಲ್ಲಿ ಪ್ರಸನ್ನನಾದನು.

ತಸ್ಯಾಃ ಕುಲಪ್ರಸೂತಾನಾಂ ವಿಷಬಾಧನಿವಾರಣಮ್ ।
ಅಭಯಂ ಸರ್ಪಕುಲತೋ ದತ್ತ್ವಾ ವಿಷ್ಣೋರನುಜ್ಞಯಾ ॥೩೦॥

ಆ ಕನ್ಯೆಯ ವಂಶದಲ್ಲಿ ಹುಟ್ಟಿದವರಿಗೆ ವಿಷಬಾಧೆಯು ತಟ್ಟುವುದಿಲ್ಲವೆಂಬ ವರವನ್ನು, ಸರ್ಪ ಕುಲಗಳಿಂದ ಭಯವಿಲ್ಲದಿರುವಿಕೆಯನ್ನು ಭಗವಂತನ ಆಜ್ಞೆಯ ಪ್ರಕಾರ ನೀಡಿದನು.

ಸ್ವಲೋಕಂ ಸರ್ಪರಾಜೋऽಥ ಜಗಾಮ ಗರುಡಧ್ವಜಃ ।
ಗರುಡಸ್ಕಂಧಮಾರುಹ್ಯ ನಿಜಲೋಕಂ ಜಗಾಮ ಹ ॥೩೧॥

ಸರ್ಪರಾಜನು ಬಂದ ಮಾರ್ಗದಲ್ಲಿ ತನ್ನ ಪಟ್ಟಣಕ್ಕೆ ತೆರಳಿದನು. ಅನಂತರ ಗರುಡಧ್ವಜನಾದ ಶ್ರೀಹರಿಯು ಗರುಡನ ಹೆಗಲೇರಿ ತನ್ನ ಲೋಕಕ್ಕೆ ಹೊರಟನು.

ಮೃತೋತ್ಥಿತಾಃ ಸ್ವಸುರ್ಯತ್ನಾದಾಶ್ಚರ್ಯಾನ್ವಿತಚೇತಸಃ ।
ತ್ವತ್ಪ್ರಯತ್ನಾದ್ ವಯಂ ಭದ್ರೇ ಜೀವಿತಾ ಜೀವದಾಯಿನೀ ॥೩೨॥

ತಂಗಿಯ ಪ್ರಯತ್ನದಿಂದ ಮರಣದಿಂದ ಬದುಕಿಬಂದ ಆ ಅಣ್ಣಂದಿರು ಬಹಳ ಆಶ್ಚರ್ಯದ ಮನದಿಂದ ತನ್ನ ತಂಗಿಗೆ ಹೀಗೆ ಹೇಳಿದರು. ಓ ಜೀವದಾಯಿನಿ! ಭದ್ರೇ ! ನಿನ್ನ ಪ್ರಯತ್ನದಿಂದ ಹಾಗೂ ಶಕ್ತಿಯಿಂದ ನಾವು ಪುನಃ ಬದುಕಿಬಂದೆವು.

ಈದೃಶೀ ತ್ವಂ ಚಿರಂ ಜೀವ ಪುತ್ರಪೌತ್ರಪ್ರವರ್ಧಿನೀ ।
ಇತ್ಯಾಶಿಷಾ ಯೋಜಯಂತೋ ಲಾಲಯಾಮಾಸುರಂಜಸಾ ॥೩೩॥

ಇಂತಹ ಪರಮ ಉಪಕಾರಶಾಲಿನಿಯಾದ ನೀನು ಮಕ್ಕಳು ಮೊಮ್ಮಕ್ಕಳುಗಳಿಂದ ಕೂಡಿ ಬಹುಕಾಲ ಸುಖವಾಗಿ ಬದುಕು. ಹೀಗೆ ಆಶೀರ್ವಾದವನ್ನು ಮಾಡಿ ತಂಗಿಯನ್ನು ಎಲ್ಲ ಅಣ್ಣಂದಿರೂ ಹೃದಯದಿಂದ ಪ್ರಶಂಸೆ ಮಾಡಿದರು.

ತತಸ್ತೇಷಾಂ ಪಿತಾऽऽಗತ್ಯ ಶ್ರುತ್ವಾ ಕನ್ಯಕಯಾ ಕೃತಮ್ ।
ಸ್ವಕುಲೋದ್ಧರಣಂ ವೃದ್ಧಸ್ತುತೋಷಾऽಲಿಂಗ್ಯ ಚಾऽತ್ಮಜಾಮ್ ॥೩೪॥

ಅನಂತರ ಅವಳ ತಂದೆಯು ಮನೆಗೆ ಬಂದನು. ತನ್ನ ಮಗಳಿಂದ ನಡೆದ ಘಟನೆ ಎಲ್ಲವನ್ನೂ ಕೂಡ ಕೇಳಿ ತಿಳಿದುಕೊಂಡನು. ತನ್ನ ವಂಶವನ್ನು ಉದ್ಧಾರ ಮಾಡಿದ ವೃತ್ತಾಂತವನ್ನು ಕೇಳಿ ಬಹಳ ಸಂತೋಷಪಟ್ಟು ಅವಳನ್ನು ಆಲಿಂಗಿಸಿ ತೃಪ್ತಿಹೊಂದಿದನು.

ತತಃ ಪ್ರಭೃತಿ ಲೋಕೇऽಸ್ಮಿನ್ ಶ್ರಾವಣೇ ನಾಗಪಂಚಮೀ ।
ಪೂಜಯಾ ನಾಗರಾಜಸ್ಯ ಭಕ್ತಾಭೀಷ್ಟಪ್ರದಾಯಿನೀ ॥೩೫॥

ಅಂದಿನಿಂದ ಶ್ರಾವಣಮಾಸದ ಶುಕ್ಲಪಕ್ಷದ ಪಂಚಮಿಯ ದಿವಸ ನಾಗರಾಜನ ಪೂಜೆಯ ಸಂಪ್ರದಾಯವು ಬೆಳೆದು ಬಂದಿತು. ಅಂದು ಪೂಜೆ ಮಾಡುವುದರಿಂದ ಭಕ್ತರ ಎಲ್ಲ ಅಭೀಷ್ಟಗಳು ನೆರವೇರುತ್ತವೆ.

ಇತಿ ಸ್ಕಂದೋಕ್ತಮಾಕರ್ಣ್ಯ ಸಾಂಬಃ ಪಪ್ರಚ್ಛ ಸಾದರಮ್ ।
ಶಿಖಿವಾಹ ನಮಸ್ತೇಽಸ್ತು ಛಿಂಧಿ ಮೇ ಸಂಶಯಂ ಪರಮ್ ॥೩೬॥

ಹೀಗೆ ಸ್ಕಂದನು ಹೇಳಿದ್ದನ್ನು ಕೇಳಿ, ಸಾಂಬನು ಆದರದಿಂದ ಪ್ರಶ್ನಿಸಿದನು. ಶಿಖಿವಾಹನನಾದ ಸ್ಕಂದನೇ! ಭಕ್ತಿಯಿಂದ ನಿನಗೆ ನಮಿಸುತ್ತೇನೆ. ನನಗೆ ಬಂದ ದೊಡ್ಡ ಸಂಶಯವನ್ನು ಪರಿಹಾರಮಾಡು.

ಹರಿಃ ಪ್ರಸನ್ನಃ ಕನ್ಯಾಯೈ ಸ್ವರ್ಗಸ್ಥಿತ್ಯಂತಕಾರಕಃ ।
ಸರ್ವಶಕ್ತಶ್ಚ ಸರ್ವಜ್ಞಃ ಸ್ವಯಂ ನಾಜೀವಯತ್ ಕುತಃ ॥೩೭॥

ಶ್ರೀಹರಿಯು ಕನ್ಯೆಯ ವಿಷಯದಲ್ಲಿ ಪ್ರಸನ್ನನಾದನು. ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುವ ಸಂಪೂರ್ಣಸಾಮರ್ಥ್ಯವನ್ನು ಹೊಂದಿದ ಸರ್ವಶಕ್ತನಾದ ಸರ್ವಜ್ಞನಾದ ಶ್ರೀಹರಿಯು ಸ್ವತಃ ತಾನೇ ಸತ್ತವರನ್ನು ಬದುಕಿಸಬಹುದಿತ್ತು. ಹಾಗೇಕೆ ಮಾಡಲಿಲ್ಲ?

ನಾಗರಾಜಮುಖೇನೈವ ಕಸ್ಮಾಚ್ಚಕ್ರೇ ಸುಜೀವಿತಾನ್ ।
ಇತಿ ಪೃಷ್ಟಃ ಕೃಪಾಸಾಂದ್ರಃ ಕುಮಾರೋ ನಿಜಗಾದ ಹ ॥೨೮॥

'ನಾಗರಾಜನ ಮೂಲಕವಾಗಿಯೇ ಏಕೆ ಬದುಕಿಸಿದನು?' ಹೀಗೆ ಸಾಂಬನು ಸ್ಕಂದನ ಬಳಿ ಪ್ರಶ್ನಿಸಿದನು. ಆಗ ಕೃಪಾಪೂರ್ಣನಾದ ಸ್ಕಂದನು ಸಾಂಬನಿಗೆ ಉತ್ತರಿಸಿದನು.

ಸಾಧು ವತ್ಸ ಶೃಣುಷ್ವೇದಂ ಹರಿಃ ಶಕ್ತೋಽಪಿ ಜೀವನೇ ।

ಕುಮಾರನೇ! ಸಮಂಜಸವಾದ ಪ್ರಶ್ನೆಯನ್ನು ಮಾಡಿರುವಿ. ಹೇಳುತ್ತೇನೆ ಕೇಳು. ಶ್ರೀಹರಿಯು ಸ್ವತಃ ತಾನೇ ಬದುಕಿಸಲು ಸಮರ್ಥನಾಗಿದ್ದಾನೆ.

ನಾಗಾಪರಾಧತಃ ಪ್ರಾಪ್ತಮರಣಾನ್ನಾಗಹಸ್ತತಃ ॥೩೯॥

ಪ್ರಾಪ್ತಾಸೂನ್ ಕಾರಯಾಮಾಸ ಲೋಕನ್ಯಾಯವ್ಯಪೇಕ್ಷಯಾ ।

ಕನ್ಯಾಯಾ ನಾಗಭಕ್ತತ್ವಾನ್ನಾಗಾನುಗ್ರಹಸಿದ್ಧಯೇ ॥೪೦॥

ಆದರೆ ಸರ್ಪದ ವಿಷಯದಲ್ಲಿ ಅಪರಾಧವನ್ನು ಮಾಡಿ, ಮರಣವನ್ನು ಹೊಂದಿದ್ದಾರೆ. ಅವರಿಗೆ ಸರ್ಪದ ಅನುಗ್ರಹವೇ ಆಗಬೇಕು. ಆದಕ್ಕಾಗಿ ಸರ್ಪಗಳಿಗೆ ರಾಜನಾದ ನಾಗರಾಜನ ಮೂಲಕ ಶ್ರೀಹರಿಯು ಸತ್ತವರನ್ನು ಬದುಕಿಸಿದನು. ಇದು ಲೋಕನ್ಯಾಯ. ಲೋಕನ್ಯಾಯಕ್ಕೆ ಸಮ್ಮತವಾಗಿದೆ. ಮತ್ತು ಆ ಕನ್ಯೆಯು ನಾಗಭಕ್ತಳಾಗಿ-ದ್ದಾಳೆ. ಅವಳಿಗೂ ನಾಗರಾಜನ ಅನುಗ್ರಹವಾಗಬೇಕು.

ಪೂಜಾಲಾಭಾಯ ನಾಗಾನಾಂ ಲೋಕೇಽಸ್ಮಿನ್ ಕೃತವಾಂಸ್ತಥಾ ।

ಏವಮೇವ ಸುರೌಘಾಣಾಂ ದತ್ತವಾನ್ ದಿನಮರ್ಚನೇ ॥೪೧॥

ಲೋಕದಲ್ಲಿ ನಾಗಗಳಿಗೆ ಪೂಜೆಯೂ ಕೂಡ ನಡೆಯಬೇಕು. ಈ ಎಲ್ಲ ದೃಷ್ಟಿಯಿಂದ ಭಗವಂತನು ಆ ನಾಗನ ಮೂಲಕವೇ ಬದುಕಿಸಿದನು. ಇದರಂತೆ ಭಗವಂತನು ಬೇರೆ ಬೇರೆ ಸುರಶ್ರೇಷ್ಠರಿಗೆ ಒಂದೊಂದು ದಿನಗಳಲ್ಲಿ ವಿಶೇಷಪೂಜೆಯು ಸಲ್ಲುವಂತೆ ಅನುಗ್ರಹಿಸಿರುವನು.

ಅತಶ್ಚ ಶ್ರಾವಣೇ ಶುಕ್ಲಪಂಚಮ್ಯಾಂ ದ್ವಾರಪಾರ್ಶ್ವಯೋಃ ।

ವಿಲಿಖ್ಯ ನಾಗರಾಜಾನಂ ಕೇಚಿದರ್ಚಂತಿ ಮಾನವಾಃ ॥೪೨॥

ಆದ್ದರಿಂದ ಶ್ರಾವಣಮಾಸದ ಶುಕ್ಲಪಕ್ಷದಲ್ಲಿ ಬರುವ ಪಂಚಮೀ ದಿವಸದಂದು ನಾಗಪೂಜೆಯನ್ನು ಮಾಡಬೇಕು. ಬಾಗಿಲಿನ ಎರಡು ಬದಿಗಳಲ್ಲಿ ನಾಗರಾಜನ ಚಿತ್ರವನ್ನು ಬರೆದು ಕೆಲವರು ಪೂಜೆ ಮಾಡುತ್ತಾರೆ.

ಅಪರೇ ಪ್ರತಿಮಾಸ್ವರ್ಚಾಂ ಕುರ್ವಂತಿ ನಿಯತವ್ರತಾಃ ।

ಪಂಚಾಮೃತಾಭಿಷೇಕೈಶ್ಚ ಶುದ್ಧೋದಕಸಮನ್ವಿತೈಃ ॥೪೩॥

ಇನ್ನು ಕೆಲವರು ವ್ರತದೀಕ್ಷೆಯನ್ನು ಹೊಂದಿ ನಾಗರಾಜನ ಪ್ರತಿಮೆಯನ್ನು ಮಾಡಿ, ಅಲ್ಲಿ ಪೂಜಿಸುತ್ತಾರೆ. ಪಂಚಾಮೃತ, ಶುದ್ಧೋದಕಗಳಿಂದ ಕೂಡಿದ ಅಭಿಷೇಕವನ್ನು ಮಾಡುತ್ತಾರೆ.

ಗಂಧೈಶ್ಚ ಕೇತಕಾಶೋಕಚಂಪಕಾದಿಸುಮೈಃ ಶುಭೈಃ ।
ಕದಲೀನಾಲಿಕೇರಾದಿಫಲೈರ್ಲಾಜೈಶ್ಚ ಲಡ್ಡುಕೈಃ ॥೪೪॥

ಮಂಗಳಕರವಾದ ಗಂಧ, ಕೇತಕೀಪುಷ್ಪ, ಅಶೋಕಪುಷ್ಪ, ಸಂಪಿಗೆ ಮೊದಲಾದ ಹೂವುಗಳಿಂದ ನಾಗರಾಜನನ್ನು ಅರ್ಚಿಸುತ್ತಾರೆ. ಬಾಳೆಹಣ್ಣು ತೆಂಗಿನಕಾಯಿ, ಅರಳು-ಗಳ ಲಡ್ಡುಗೆಗಳಿಂದ ನೈವೇದ್ಯವನ್ನು ಮಾಡುತ್ತಾರೆ.

ನೀರಾಜನೈರ್ಮಂತ್ರಪುಷ್ಪೈರ್ವಟುವಿಪ್ರಾನ್ನದಾನತಃ ।
ಪ್ರೀಣಯಂತೋಽಷ್ಟನಾಗೇಂದ್ರಾನ್ ಪ್ರಸಾದಂ ಪ್ರಾಪ್ನುವಂತಿ ಹಿ ॥೪೫॥

ಮಂಗಳಾರತಿ ಮಂತ್ರಪುಷ್ಪ ಮೊದಲಾದ ರೀತಿಯಲ್ಲಿ ಷೋಡಶೋಪಚಾರ ಪೂಜೆಯನ್ನು ಮಾಡುತ್ತಾರೆ. ಅನಂತರ ಬ್ರಹ್ಮಚಾರಿಗಳಿಗೆ ಬ್ರಾಹ್ಮಣರಿಗೆ ಅನ್ನದಾನವನ್ನು ಮಾಡಿ ಸಂತೋಷಪಡಿಸುತ್ತಾರೆ. ಅಷ್ಟಕುಲನಾಗೇಂದ್ರರನ್ನು ಸಂತೋಷಪಡಿಸಿ ಪ್ರಸಾದವನ್ನು ಸ್ವೀಕರಿಸುತ್ತಾರೆ.

ಇತೀದಂ ನಾಗಪಂಚಮ್ಯಾಶ್ಚರಿತಂ ಶೃಣ್ವತಾಂ ನೃಣಾಮ್ ।
ವದತಾಂ ನಾಗರಾಟ್ ಪ್ರೀತೋ ದದಾತ್ಯಖಿಲಕಾಮಿತಮ್ ॥೪೬॥

॥ಇತಿ ಸ್ಕಾಂದಪುರಾಣೇ ನಾಗರಪಂಚಮೀವ್ರತಕಥಾ ಸಮಾಪ್ತಾ ॥

ಇದು ನಾಗಪಂಚಮಿಯ ಕಥೆ. ಯಾರು ಇದನ್ನು ಕೇಳುತ್ತಾರೋ ಅವರಿಗೆ ನಾಗರಾಜನು ಸಂತುಷ್ಟನಾಗಿ ಅನುಗ್ರಹಿಸುತ್ತಾನೆ. ಎಲ್ಲ ಇಷ್ಟಾರ್ಥಗಳನ್ನೂ ಈಡೇರಿಸುತ್ತಾನೆ.

॥ಇಲ್ಲಿಗೆ ಸ್ಕಾಂದಪುರಾಣದಲ್ಲಿ ನಾಗಪಂಚಮೀವ್ರತದ ಕಥೆಯು ಮುಗಿಯಿತು॥

॥ ಶ್ರೀಮದ್ವೇಶಾರ್ಪಣಮಸ್ತು ॥

## ಸರ್ಪದೋಷವಿರುವವರು ಈ ಶ್ಲೋಕಗಳನ್ನು ಹೇಳಿಕೊಂಡರೆ ಎಲ್ಲಾ ದೋಷಗಳು ನಿವಾರಣೆಯಾಗುತ್ತವೆ ಎನ್ನುತ್ತದೆ ಮಹಾಭಾರತ.

ಜರತ್ಕಾರೋರ್ಜರತ್ಕಾರ್ವಾಂ ಸಮುತ್ಪನ್ನೋ ಮಹಾಯಶಾಃ ।
ಆಸ್ತೀಕಃ ಸತ್ಯಸಂಧೋ ಮಾಂ ಪನ್ನಗೇಭ್ಯೋಽಭಿರಕ್ಷತು ॥

ಜರತ್ಕಾರುವಿನಿಂದ ಜರತ್ಕಾರುವಿನಲ್ಲಿ ಜನಿಸಿದ ಮಹಾಕೀರ್ತಿಶಾಲಿಯಾದ, ಸತ್ಯಸಂಧನಾದ ಆಸ್ತೀಕನು ನನ್ನನ್ನು ಸರ್ಪಗಳಿಂದ ರಕ್ಷಿಸಲಿ.

ಆಸ್ತೀಕಂ ಚಾರ್ತಿಮಂತಂ ಚ ಸುನೀಥಂ ಚಾಪಿ ಯಃ ಸ್ಮರೇತ್ ।
ದಿವಾ ವಾ ಯದಿ ವಾ ರಾತ್ರೌ ನಾಸ್ತಿ ಸರ್ಪಭಯಂ ಕ್ವಚಿತ್ ॥

ಆಸ್ತೀಕನನ್ನೂ, ದುಃಖದಲ್ಲಿದ್ದ ತಕ್ಷಕನನ್ನೂ ಮತ್ತು ಸುನೀಥನನ್ನೂ ಯಾರು ಹಗಲಿನಲ್ಲಾಗಲೀ, ಅಥವಾ ರಾತ್ರಿಯಲ್ಲಾಗಲೀ ಸ್ಮರಿಸುವರೋ ಅವರಿಗೆ ಸರ್ಪ-ಭಯವಿಲ್ಲ.

ಅಪಸರ್ಪಸ್ವ ಭದ್ರಂ ತೇ ದೂರಂ ಗಚ್ಛ ಮಹಾಯಶಾಃ ।
ಆಸ್ತೀಕಃ ಸರ್ಪಸತ್ರೇ ವಃ ಪನ್ನಗಾನ್ ಯೋಽಭ್ಯರಕ್ಷತ ॥

ಎಲೈ ಸರ್ಪವೇ! ನೀನು ದೂರಸರಿದು ಹೋಗು. ನಿನಗೆ ಮಂಗಳವಾಗಲಿ. ಮಹಾಕೀರ್ತಿಶಾಲಿಯಾದ ಆಸ್ತೀಕನು ಸರ್ಪಸತ್ರದಲ್ಲಿ ನಿಮ್ಮನ್ನು ರಕ್ಷಿಸಿದ್ದಾನೆ.

## ಶ್ರೀಶೇಷದೇವರು

### -೧-

ಯೋಗಿಗಳ ಹೃದಯಕೆ ನಿಲುಕದ ನಿಗ-
ಮಾಗಮೈಕವಿನುತನ ಪರಮನು-
ರಾಗದಲಿ ದ್ವಿಸಹಸ್ರಜಿಹ್ವೆಗಳಿಂದ ವರ್ಣಿಸುವ ।
ಭೋಗಗನ ಪಾತಾಳವ್ಯಾಪ್ತನ
ಯೋಗನಿದ್ರಾಸ್ಪದನೆನಿಪ ಗುರು
ನಾಗರಾಜನ ಪದಕೆ ನಮಿಸುವೆ ಮನದೊಳನವರತ ॥

ಪೋಷಿಸೆನ್ನನು ನಿರುತ ಶೇಷದೇವ
ದೋಷನಾಶನಗೊಳಿಸಿ ಲೇಸಾಗಿ ಪಿಡಿ ಕರವ ॥ಪ॥

ವನಧಿಶಯನಗೆ ತಲ್ಪ ಅನುಜಪೂರ್ವಜನಾಗಿ ।
ಘನಸೇವೆಯನುಗೈದ ಫಣಿರಾಜನೆ ।
ವಿನಯದಲಿ ಬಿನ್ನೈಪೆ ನಿನಗಶನವಾದಾತ ।
ಎನಗೊಲಿದು ಪೊರೆವಂತೆ ಅನುಗ್ರಹಿಸಿ ದಿನದಿನದಿ ॥1॥

ಭೋಗಗನ ಪಾತಾಳಸಾಗರವ ವ್ಯಾಪಿಸಿದ ।
ಯೋಗಸಾಧನಶೂರ ನಾಗನಾಥ ।
ಬಾಗಿ ಬೇಡುವೆ ಭಗದ ರೋಗಕೌಷಧವಾದ ।
ಭಾಗವತಶ್ರವಣಸುಖರಾಗದಲಿ ನೀ ಕೊಟ್ಟು ॥2॥

ಸಾಸಿರಾಂಬಕನಮಿತ ಸಾಸಿರಾನನವಾದ
ವಾಸುಕೀವರ ವಾರುಣೀಶ ನಿನ್ನ ।
ಹಾಸಿಗೆಯ್ಯೆದಂಥ ಶ್ರೀಶ್ಯಾಮಸುಂದರನ
ದಾಸರಾದವರ ಸಹವಾಸ ಪಾಲಿಸಿ ನಿತ್ಯ ॥3॥

-೨-

ರಾಗ : ಶಂಕರಾಭರಣ ತಾಳ : ತ್ರಿವಿಡಿ

ಬಲು ರಮ್ಯವಾಗಿದೆ ಹರಿಯ ಮಂಚ ||ಪ||

ಎಲರುಣಿಕುಲ ರಾಜ ರಾಜೇಶ್ವರನ ಮಂಚ ||ಅ.ಪ||

ಪವನತನಯನ ಮಂಚ ಪಾವನತರ ಮಂಚ
ಭುವನತ್ರಯನ ಪೊತ್ತ ಭಾರಿಮಂಚ
ಕಿವಿಗಳಿಲ್ಲದ ಮಂಚ ಶ್ರೀನಿಕೇತನ ಮಂಚ
ಶಿವರೂಪದಲಿ ಹಿಂದೆ ಹರಿಯನೊಲಿಸಿದ ಮಂಚ ||1||

ನೀಲಾಂಬರವನುಟ್ಟು ನಳನಳಿಸುವ ಮಂಚ
ನಾಲಗೆ ಎರಡುಳ್ಳ ನೈಜಮಂಚ
ನಾಲ್ವತ್ತು ಕಲ್ಪದಿ ತಪವ ಮಾಡಿದ ಮಂಚ
ತಾಲ ಮುಸಲ ಹಲವ ಪಿಡಿದಿರುವ ಮಂಚ ||2||

ರಾಮನನುಜನಾಗಿ ರಣವ ಜಯಿಸಿದ ಮಂಚ
ತಾಮಸ ರುದ್ರನನು ಪಡೆದ ಮಂಚ
ಭಿಮಾವರಜನೊಳು ಆವೇಶಿಸಿದ ಮಂಚ
ಜೀಮೂತ ಮಂಡಲವ ತಡೆಗಟ್ಟಿದ ಮಂಚ ||3||

ಜೀವನಾಮಕನೆನಿಸಿ ವ್ಯಾಪ್ತನಾದ ಹರಿಯ
ಸೇವಿಸಿ ಸುಖಿಸುವ ದಿವ್ಯ ಮಂಚ
ಸಾವಿರ ಮುಖದಿಂದ ತುತ್ತಿಸಿ ಹಿಗ್ಗುವ ಮಂಚ
ದೇವಕೀಜಠರದಿ ಜನಿಸಿದ ಮಂಚ ||4||

ವಾರುಣೀ ದೇವಿ ವರನೆನಿಸಿದ ಮಂಚ
ಸಾರುವ ಭಕುತರ ಸಲಹೊ ಮಂಚ
ಕಾರುಣ್ಯನಿಧಿ ಜಗನ್ನಾಥ ವಿಠಲನ ವಿ-
ಹಾರಕ್ಕೆ ಯೋಗ್ಯವಾದ ವಿಮಲ ಶೇಷ ಮಂಚ ||5||

# ನಾಗರಪಂಚಮಿಯ ಹಾಡು

ಬಡಬ್ರಾಹ್ಮಣನ ಮಗಳು ಅಕಮಂಜಿ ಎಂಬಾಕೆ । ಗರುಡಪಂಚಮಿ ವ್ರತವು ತನಗೆನುತಲಿ ॥ ತರಿಸಿ ಕೊಡಬೇಕಾದ ಫಲಪುಷ್ಪಗಳೆನುತ । ತನ್ನೊಡಹುಟ್ಟಿದ ಅಣ್ಣಗೆ ಒಡನುಡಿಗಳು ॥೧॥ ಅಂದ ಮಾತನು ಕೇಳಿ ಬಂದು ಸಂತೋಷದಲಿ ಚೆಂದದಾ ಕುಸುಮವನೆ ಕೊಂಡು ತರಲು । ಒಂದು ಕೇದಿಗೆ ಒಳಗೆ ಹೊಂದಿಕೊಂಡನೆ ಶೇಷ ಬಂದು ನೋಡಿದವರ ಊರು ಸ್ಥಳಗಳ ॥೨॥ ವಿಷವು ತಲೆಗೇರಿ ಪರವಶನಾಗಿ ಬಿದ್ದಿರಲು ಕುಸುಮಗಂಧಿಣಿಯರು ಅವನರಿಯದಂತೇ । ಶಶಿಕಾಂತೆ ನೀ ಕೇಳೆ ವ್ಯಸನ-ವೇತಕೆ ನಾಗರ ಪೂಜಿಸಿಂಬೋ ಹರುಷದಲಿ ತೆರಳಿದಾರು ॥೩॥ ನೆನೆ ಅಕ್ಕಿ , ನೆನೆಕಡಲೆ, ಗೊನೆಯ ಬಾಳೆಯ ಹಣ್ಣು, ಚಿಗುಳಿ, ತಂಬಿಟ್ಟು, ತೆಂಗಿನಕಾಯಿ, ಅರಳು, ಹುರಿ-ಕಡಲೆ, ಹುಣಸೇಕಾಯಿ ಮುಂತಾಗಿಗಳಿರರಿಸಿ ತೆಕ್ಕೊಂಡು ತೆರಳಿದಾರು ॥೪॥ ರಂಭೆ-ಯರೊಡಗೊಂಡು ಬಂದು ನಿಂದಳೆ ಅನುಜೆ ಚೆಂದದಿ ಅರ್ಘ್ಯಪಾದ್ಯವನೆ ಮಾಡಿ । ಆನಂದದಿಂದ ಛತ್ರಿ ಚಾಮರವೆತ್ತಿ ಫಲದಿಂದ ನಿಂದು ಪೂಜಿಸಿದಳು ಕಾಳಿಂಗನ ॥೫॥ ಹಳದಿಯಾ ವಸ್ತ್ರಗಳು ಬಿಳಿಯ ಜನಿವಾರವು । ಹೊಳೆವ ಮುತ್ತಿನ ತೊಡಿಗೆ ಗಂಧಾಕ್ಷತೆ । ನಳಿನಳಿವ ಕುಸುಮಗಳು ಹಲವು ಸಮರ್ಪಿಸಿ । ಬೆಳಗಿದಳೆ ದೀಪಧೂಪಾರತಿಯನು ॥೬॥ ಪಡವಂ ಮುತ್ಯೆಯನೆ ಮುಗಿದು ಪಡೆದು ಮನದಭೀಷ್ಟವನು ಮಡದೇರು ಗಡಣದಲೆ । ಒಡನೆ ಬಂದು ಕಡುಹರುಷದಿಂದ ಗಂಧಾಕ್ಷತೆ ತೆಕ್ಕೊಂಡು ಮಡದಿ ಅಣ್ಣನಿದ್ದೆಡೆಗೆ ಬಂದಳು ॥೭॥ ಹುತ್ತದಾಮಿರ್ತಿಕನೆ ಕೈಗೆ ತೆಕ್ಕೊಂಡು ಅಕ್ಷತೆಯನೆ ಕೊಂಡು । ಬೆನ್ನು ತೊಳೆಯಲು ಎಷ್ಟು ಹೊತ್ತು ಮೈಮರೆತು ಮಲಗಿದೆ ಎನುತಲಿ ಎಚ್ಚರದಿ ಕಣ್ ತೆರೆದು ನೋಡಿದಾರು ॥೮॥ ಈ ಸಂತೋಷದಲಿ ಉಳ್ಳ ನಾರಿಯರೆಲ್ಲ ಈ ವ್ರತದ ನೇಮದಿ ಮಾಡೆ ಚೆಂದದವಾಲೆ ಸೌಭಾಗ್ಯವೂ ವಡಹುಟ್ಟಿದವರನು ಕಾಳಿಂಗನಾಭನು ಕರುಣಿಸುವನು ॥೯॥

* * * *

ಪ್ರಶ್ನೆ - ಶೇಷದೇವರು ಯಾರಿಂದ ಜನಿಸಿದರು ?

ಉತ್ತರ - ಶ್ರದ್ಧಾ ದ್ವಿತೀಯಾऽಥ ತಯೋಶ್ಚ ಯೋಗೋ
ಬಭೂವ ಪುಂಸ್ಯೆವ ಚ ಸೂತ್ರನಾಮ್ನಾ ।
ಹರೇರ್ನಿಯೋಗಾದಥ ಸಂಪ್ರಸೂತೌ
ಶೇಷಃ ಸುಪರ್ಣಶ್ಚ ತಯೋಃ ಸಹೈವ ॥

ಕೃತಿ ಹಾಗೂ ಪ್ರದ್ಯುಮ್ನರಿಂದ ಶ್ರದ್ಧೆ ಎಂಬ ಭಾರತಿಯು ಜನಿಸಿದಳು. ಈ ಭಾರತಿಯು ಸೂತ್ರನಾಮಕನಾದ ವಾಯುವನ್ನು ವಿವಾಹವಾದಳು. ಇವರಿಬ್ಬರಿಂದ ಶೇಷದೇವರು ಹಾಗೂ ಗರುಡದೇವರು ಜನಿಸಿದರು.

ಪ್ರಶ್ನೆ - ಬ್ರಹ್ಮಾಂಡದ ಹೊರಗೆ ದೇವತೆಗಳಿಗೆ ಎರಡು ಬಾರಿ ಉತ್ಪತ್ತಿ ಇದೆ ಎಂದು ಹೇಳುತ್ತಾರೆ. ಎರಡನೆ ಬಾರಿ ಶೇಷದೇವರು ಯಾರಿಂದ ಹುಟ್ಟಿದರು ?

ಉತ್ತರ - 'ಶೇಷಂ ಶಿವಂ ಶ್ಚೇಂದ್ರಮಥೇಂದ್ರತಶ್ಚ' ಎಂಬ ಮಾತಿನಂತೆ ಪುನಃ ಅದೇ ಸೂತ್ರನಾಮಕರಾದ ವಾಯುದೇವರಿಂದ ಶ್ರದ್ಧೆಯಲ್ಲಿ ಶೇಷದೇವರು ಹುಟ್ಟಿದರು. ಜೊತೆಯಲ್ಲಿ ಶಿವ, ಇಂದ್ರ ಮೊದಲಾದವರೂ ಕೂಡ ಜನಿಸಿದರು. ಈ ಹುಟ್ಟಿನಿಂದ ಶೇಷದೇವರಿಗೆ ಬ್ರಹ್ಮಾಂಡದ ಒಳಗಡೆ ಪ್ರವೇಶ ಮಾಡುವ ಸಾಮರ್ಥ್ಯ ಪ್ರಾಪ್ತವಾಯಿತು.

ಪ್ರಶ್ನೆ - ಎರಡನೇ ಹುಟ್ಟು ಬ್ರಹ್ಮಾಂಡದ ಒಳಗಡೆ ಪ್ರವೇಶ ಮಾಡುವುದಕ್ಕಾಗಿ ಎಂದು ಹೇಳಿದಿರಿ. ಹಾಗಿದ್ದರೆ ಮೊದಲನೇ ಹುಟ್ಟು ಯಾವ ಕಾರಣಕ್ಕಾಗಿ?

ಉತ್ತರ - 'ದೇವಾನಾಮ್ ದ್ವಿವಾರಂ ಸೃಷ್ಟಿಶ್ಚ ಸ್ವಸ್ವತತ್ವಾಭಿಮಾನಾರ್ಥಂ ಬ್ರಹ್ಮಾಂಡಾಂತಃ ಪ್ರವೇಷ್ಟುಂ ಚ' ಎಂಬ ಮಾತಿನಂತೆ ಮೊದಲನೆಯ ಸೃಷ್ಟಿಯು ತತ್ವಾಭಿಮಾನಿತ್ವದ ಸಿದ್ಧಿಗಾಗಿ ಎಂದು ತಿಳಿಯಬೇಕು.

ಪ್ರಶ್ನೆ - ಬ್ರಹ್ಮಾಂಡದ ಒಳಗೆ ಶೇಷದೇವರು ಯಾರಿಂದ ಯಾವಾಗ ಹುಟ್ಟಿದರು?

ಉತ್ತರ - ಚತುರ್ಮುಖಬ್ರಹ್ಮದೇವರ 51ನೇ ವರ್ಷದ ಮೊದಲ ಹಗಲಿನಲ್ಲಿ ಸೃಷ್ಟಿಯು ಪ್ರಾರಂಭವಾಯಿತು. ಆಗ 14 ಲೋಕಗಳನ್ನು ಬ್ರಹ್ಮದೇವರು

ಸೃಷ್ಟಿ ಮಾಡಿದರು. ಮೊಟ್ಟಮೊದಲು ಅಹಂಕಾರತತ್ವದಿಂದ ಗರುಡ, ಶೇಷ, ರುದ್ರರು ಜನಿಸಿದರು.

ಪ್ರಶ್ನೆ - ಚತುರ್ಮುಖಬ್ರಹ್ಮದೇವರಿಂದ ಆದ ಈ ಸೃಷ್ಟಿಗೆ ಏನೆಂದು ಹೆಸರು? ಇದರ ವರ್ಣನೆ ಎಲ್ಲಿದೆ?

ಉತ್ತರ - ಪದ್ಮದಿಂದ ಹುಟ್ಟಿದ ಚತುರ್ಮುಖಬ್ರಹ್ಮದೇವರಿಗೆ 'ಪಾದ್ಮ' ಎಂದು ಹೆಸರು. ಅವರಿಂದ ಮಾಡಿದ ಸೃಷ್ಟಿಯಾದ್ದರಿಂದ ಇದಕ್ಕೆ ಪಾದ್ಮಸೃಷ್ಟಿ ಎಂದು ಹೆಸರು. ಬ್ರಹ್ಮಾಂಡದ ಹೊರಗಿನ ಸೃಷ್ಟಿಯನ್ನು ಸೂಕ್ಷ್ಮಸೃಷ್ಟಿ ಎಂದು, ಬ್ರಹ್ಮಾಂಡದ ಒಳಗಿನ ಸೃಷ್ಟಿಯನ್ನು ಸ್ಥೂಲಸೃಷ್ಟಿ ಎಂದು ಕೂಡ ಕರೆಯುತ್ತಾರೆ. ಈ ಎರಡೂ ಬಗೆಯ ಸೃಷ್ಟಿಗಳನ್ನು ತಾತ್ಪರ್ಯನಿರ್ಣಯದ ಮೂರನೇ ಅಧ್ಯಾಯದಲ್ಲಿ ತಿಳಿಸಿದ್ದಾರೆ.

ಪ್ರಶ್ನೆ - ಭಗವಂತನಿಂದ ಶೇಷದೇವರು ನೇರವಾಗಿ ಹುಟ್ಟಲಿಲ್ಲವೆ?

ಉತ್ತರ - ವಿರಾಡ್‌ರೂಪಿಯಾದ ಪುರುಷನಾಮಕನಾದ ಭಗವಂತನ ಎಡನಾಡಿಯಿಂದ ಶೇಷದೇವರು ಜನಿಸಿರುವರು. ಇದು ಬ್ರಹ್ಮದೇವರ 50 ವರ್ಷಗಳ ಮೊದಲೇ ಆದ ಸೃಷ್ಟಿಯಾಗಿದೆ.

ಪ್ರಶ್ನೆ - 'ತೌ ವಾಹನಂ ಶಯನಂ ಚೈವ ವಿಷ್ಣೋಃ' ಎಂಬಂತೆ ಭಗವಂತನ ಶಯನಕ್ಕೋಸ್ಕರ ಮತ್ತೊಮ್ಮೆ ಶೇಷದೇವರು ಹುಟ್ಟಿರುವರೆ ?

ಉತ್ತರ - ಪ್ರದ್ಯುಮ್ನಕುಮಾರಿಯಿಂದ ಮೊದಲು ಹುಟ್ಟಿದ ಶೇಷನೇ ವಿಷ್ಣುವಿಗೆ ಶಯನರೂಪನಾದನು. ಇದಕ್ಕಾಗಿ ಪುನಃ ಮತ್ತೊಂದು ಸೃಷ್ಟಿಯನ್ನು ಒಪ್ಪಬೇಕಾಗಿಲ್ಲ.

ಪ್ರಶ್ನೆ - ಶಯನರೂಪವಾದ ಶೇಷದೇವರು ಯಾವುದಕ್ಕೆ ಮುಖ್ಯಾಭಿಮಾನಿ-ಗಳಾದರು ?

ಉತ್ತರ - 'ಶೇಷಸ್ತಯೋರೇವ ಜೀವನಾಮಾ' ಎಂಬಂತೆ ಜೀವಾಭಿಮಾನಿ-ಗಳಾಗಿರುವರು.

ಪ್ರಶ್ನೆ - ಈ ಶೇಷದೇವರಿಂದ ಯಾರು ಹುಟ್ಟಿದರು ?

ಉತ್ತರ - 'ಕಾಲನಾಮಕ ಹರಿಪಾರ್ಷದಾಃ ತತಃ ಶೇಷಾತ್ ಜಯವಿಜಯಾದ್ಯಾಃ ತತಃ ಸುಪರ್ಣಾತ್' ಎಂಬ ಮಾತಿನಂತೆ ಕಾಲನಾಮಕರಾದ

ಹರಿಪಾರ್ಷದರು ಶೇಷದೇವರಿಂದ ಹುಟ್ಟಿದರು. ಜಯ ವಿಜಯಾದಿಗಳು ಗರುಡನಿಂದ ಹುಟ್ಟಿದರು ಎಂದು ವರದರಾಜೀಯ ವ್ಯಾಖ್ಯಾನದಲ್ಲಿದೆ. ಆದರೆ ಜನಾರ್ದನೀಯ- ವ್ಯಾಖ್ಯಾನದಲ್ಲಿ ಶೇಷದೇವರಿಂದ ಜಯ ವಿಜಯರು ಗರುಡನಿಂದ ಕಾಲನಾಕನಾದ ಹರಿಪಾರ್ಷದರು ಹುಟ್ಟಿದರು ಎಂದಿದೆ.

ಪ್ರಶ್ನೆ - ಬಾಹ್ಯಸೃಷ್ಟಿಯಲ್ಲಿ ಕಶ್ಯಪ ವಿನತೆಯರಿಂದ ಗರುಡದೇವರು ಹುಟ್ಟಿದರೆಂದು ತಿಳಿದೆವು. ಶೇಷದೇವರು ಯಾರಿಂದ ಹುಟ್ಟಿದರು?

ಉತ್ತರ - ಕಶ್ಯಪರಿಂದ ಕದ್ರುವಿನಲ್ಲಿ ಶೇಷದೇವರು ಹುಟ್ಟಿದರು.

ಪ್ರಶ್ನೆ - ಹುಟ್ಟಿದರು ಎಂದರೆ ಅವತಾರ ರೂಪದಲ್ಲೋ ಅಥವಾ ಮೂಲರೂಪದಲ್ಲೋ ?

ಉತ್ತರ - ಇದು ಭೂಲೋಕದ ಅವತಾರವಲ್ಲ. ಮೂಲರೂಪದ ಜನನ.

ಪ್ರಶ್ನೆ - ಭಗವಂತನಿಂದ ಅಥವಾ ವಾಯುದೇವರಿಂದ ಮೂಲರೂಪದಲ್ಲಿ ಹುಟ್ಟಿದ್ದಾಗಿತ್ತಲ್ಲವೆ ?

ಉತ್ತರ - ಭಗವಂತನಿಂದ ಹಾಗೂ ಚತುರ್ಮುಖಬ್ರಹ್ಮದೇವರಿಂದ ಹಿಂದೆ ಹುಟ್ಟನ್ನು ಹೊಂದಿದ್ದರೂ ಕೂಡ ಪುನಃ ಕದ್ರು ಕಶ್ಯಪರಲ್ಲಿ ಹುಟ್ಟಿರುವುದು ತಪ್ಪಾಗುವುದಿಲ್ಲ. ಏಕೆಂದರೆ ದೇವತೆಗಳಿಗೆ 14 ಬಾರಿ ಉತ್ಪತ್ತಿಯಿದೆ ಅವುಗಳ ನಡುವೆ ಅವರಿಗೆ ಇದೊಂದು ಬಗೆಯ ಮೋಕ್ಷಸಾಧನೆ .

ಪ್ರಶ್ನೆ - ಕಶ್ಯಪರಿಂದ ಕದ್ರುದೇವಿಯಲ್ಲಿ ಶೇಷದೇವರ ಜನನ ಹೇಗಾಯಿತು?

ಉತ್ತರ - ಕಶ್ಯಪರ ವರಬಲದಿಂದ ಕದ್ರುದೇವಿಯು ಅನತಿಕಾಲದಲ್ಲಿ ಸಾವಿರ ಮೊಟ್ಟೆಗಳನ್ನು ಪ್ರಸವಿಸಿದಳು. 500 ವರ್ಷಗಳ ತನಕ ಅದನ್ನು ಕಾದಿರಿಸಲಾಯಿತು. ಅನಂತರ ಮೊಟ್ಟಮೊದಲು ಮೊಟ್ಟೆ ಒಡೆದುಕೊಂಡು ಹೊರಬಂದವರೇ ಶೇಷದೇವರು. ಸಾವಿರ ಸರ್ಪಗಳಿಗೆ ಇವರೇ ಹಿರಿಯಣ್ಣ.

ಪ್ರಶ್ನೆ - ಶೇಷದೇವರ ಅನಂತರ ಜನಿಸಿದವರು ಯಾರು ?

ಉತ್ತರ - ಶೇಷಃ ಪ್ರಥಮತೋ ಜಾತೋ ವಾಸುಕಿಸ್ತದನಂತರಮ್ ।
ಐರಾವತಸ್ತಕ್ಷಕಶ್ಚ ಕಾರ್ಕೋಟಕಧನಂಜಯೌ ॥

ಶೇಷದೇವರು ಮೊದಲು ಜನಿಸಿದರು. ಅನಂತರ ವಾಸುಕಿ, ಐರಾವತ, ತಕ್ಷಕ, ಕಾರ್ಕೋಟಕ, ಧನಂಜಯ ಇತ್ಯಾದಿಯಾಗಿ ಸಾವಿರ ಸರ್ಪಗಳ ಜನನವಾಯಿತು.

ಪ್ರಶ್ನೆ - ಸರ್ಪಗಳು ಅತ್ಯಂತ ಕ್ರೂರಿಗಳು ಭಯಂಕರವೂ ಆಗಿದ್ದವು, ಅವುಗಳ ನಡುವೆ ಶೇಷದೇವರು ಹೇಗೆ ವಾಸ ಮಾಡಿದರು ?

ಉತ್ತರ - ಎಲ್ಲ ಸರ್ಪಗಳು ಸರ್ವಥಾ ದುಷ್ಟವಲ್ಲ. ಆದರೂ ಕೂಡ ಮಂದಬುದ್ಧಿಗಳಾಗಿವೆ ಎಂಬ ದೃಷ್ಟಿಯಿಂದ ಶೇಷದೇವರು ಎಲ್ಲ ಸರ್ಪಗಳ ಸಹವಾಸವನ್ನು ಪರಿತ್ಯಾಗ ಮಾಡಿದರು. ಜಿತೇಂದ್ರಿಯರಾಗಿ ಕೇವಲ ವಾಯುಭಕ್ಷಕರಾಗಿ ಗಂಧಮಾದನ ಪರ್ವತಕ್ಕೆ ತೆರಳಿದರು. ಅಲ್ಲಿ ಬದರೀಕ್ಷೇತ್ರವನ್ನು ತಲುಪಿ ತಪೋನಿರತರಾದರು.

ಪ್ರಶ್ನೆ - ಶೇಷದೇವರ ತಪಸ್ಸು ಹೇಗಿತ್ತು ?

ಉತ್ತರ - ಬಹಳ ಕಠಿಣವಾದ ತಪಸ್ಸನ್ನು ಆಚರಿಸಿದರು. ದೇಹದ ಮಾಂಸ, ಸ್ನಾಯು, ರಕ್ತಗಳೆಲ್ಲವೂ, ಒಣಗಿ ಹೋದವು. ಜಟಾಚೀರ- ಧಾರಿಯಾಗಿ ಬ್ರಹ್ಮದೇವರನ್ನು ಕುರಿತು ಅಖಂಡವಾದ ತಪಸ್ಸನ್ನು ಆಚರಿಸಿದರು.

ಪ್ರಶ್ನೆ - ಶೇಷದೇವರ ತಪಸ್ಸಿಗೆ ಮೆಚ್ಚಿ ಬ್ರಹ್ಮದೇವರು ಏನು ಹೇಳಿದರು?

ಉತ್ತರ - ಪ್ರತ್ಯಕ್ಷರಾದ ಬ್ರಹ್ಮದೇವರು, ಮಗು ಏಕಿಷ್ಟು ಕಠಿಣವಾದ ತಪಸ್ಸನ್ನು ಆಚರಿಸುತ್ತಿರುವಿ? ನಿನ್ನ ತೀವ್ರತಪಸ್ಸಿನಿಂದ ಪ್ರಜೆಗಳು ಬೆಂದು ಹೋಗುತ್ತಿದ್ದಾರೆ. ನಿನ್ನ ಅಪೇಕ್ಷೆ ಏನು ಹೇಳು. ಈಡೇರಿಸುವೆ ಎಂದರು.

ಪ್ರಶ್ನೆ - ಶೇಷದೇವರ ಅಪೇಕ್ಷೆ ಏನಾಗಿತ್ತು ?

ಉತ್ತರ - ನನ್ನ ಸಹೋದರರು ಮಂದಬುದ್ಧಿಯವರು. ಅವರ ಜೊತೆ ವಾಸಿಸಲು ನನಗೆ ಇಷ್ಟವಿಲ್ಲ. ಪ್ರತಿಯೊಬ್ಬ ತಮ್ಮಂದಿರು ಪರಸ್ಪರ ಶತ್ರುಗಳಂತೆ ಅಸೂಯೆ ಪಡುತ್ತಾರೆ. ವಿನತೆಯ ಮಗನಾದ ಗರುಡನನ್ನು ನಿರಂತರ

ದ್ವೇಷ ಮಾಡುತ್ತಾರೆ. ಆ ಗರುಡನು ಸಹೋದರನಷ್ಟೇ ಅಲ್ಲದೆ ಮಹಾತಪಸ್ವಿಯೂ ಆಗಿದ್ದಾನೆ. ಇದರಿಂದ ಪರಿತಪ್ತನಾದ ನಾನು ಈ ದೇಹವನ್ನು ಬಿಡಲು ಸಂಕಲ್ಪಿಸಿದ್ದೇನೆ. ಜನ್ಮಾಂತರದಲ್ಲಿಯೂ ನನಗೆ ಅವರ ಸಂಬಂಧ ಆಗದಂತೆ ಅನುಗ್ರಹಿಸಿರಿ ಎಂದು ಪ್ರಾರ್ಥಿಸಿದರು.

ಪ್ರಶ್ನೆ - ಬ್ರಹ್ಮದೇವರು ಏನೆಂದು ಉತ್ತರಿಸಿದರು ?

ಉತ್ತರ - ಭುಜಗಶ್ರೇಷ್ಠನೇ ! ಈಗಾಗಲೇ ನಾನು ಈ ನಿನ್ನ ಸಮಸ್ಯೆಯನ್ನು ಪರಿಹಾರ ಮಾಡಿದ್ದೇನೆ. ಸನ್ನಡತೆಯುಳ್ಳ ನಿನ್ನ ಸಹೋದರರಿಗೆ ಯಾವುದೇ ಭಯವಿಲ್ಲ. ನೀನೂ ಕೂಡ ಘೋರವಾದ ಶಾಪದಿಂದ ಮುಕ್ತನಾಗಿರುವಿ. ಆದರೆ ದುರ್ನಡತೆಯುಳ್ಳವರಿಗೆ ಆಪತ್ತು ಖಚಿತ. ಬೇಕಾದ ವರವನ್ನು ಕೇಳಿಕೋ ನೀಡುವೆನು.

ಪ್ರಶ್ನೆ - ಶೇಷದೇವರು ಭಗವನ್ನಿಷ್ಠೆಯನ್ನು ವರವನ್ನಾಗಿ ಕೇಳಲಿಲ್ಲವೆ ?

ಉತ್ತರ - 'ಧರ್ಮೇ ಮೇರಮಾಂ ಬುದ್ಧಿಃ ಕ್ಷಮೇ ತಪಸಿ ಚೇಶ್ವರ' 'ಧರ್ಮದಲ್ಲಿ ನಿರಂತರ ಆಸಕ್ತಿಯಿರಲಿ ಭಗವನ್ನಿಷ್ಠೆ ಇರಲಿ' ಎಂಬ ವರವನ್ನು ಕೇಳಿದರು. ಇದರಿಂದ ಸಂತುಷ್ಟರಾದ ಬ್ರಹ್ಮದೇವರು 'ತಥಾಸ್ತು' ಎಂಬ ವರವನ್ನು ಕೊಟ್ಟರು.

ಪ್ರಶ್ನೆ - ಶೇಷದೇವರು ಭೂಮಿಯನ್ನು ಧಾರಣೆ ಮಾಡಿದ್ದಾರೆ ಎನ್ನುತ್ತಾರೆ. ಇದಕ್ಕೇನು ಸಂದರ್ಭ?

ಉತ್ತರ - ಶೇಷದೇವರ ಸಾಮರ್ಥ್ಯ ಹಾಗೂ ಭಗವನ್ನಿಷ್ಠೆಗಳನ್ನು ಕಂಡು ಸ್ವತಃ ಬ್ರಹ್ಮದೇವರೇ ಆಜ್ಞೆ ಮಾಡುತ್ತಾರೆ. ಸಾಗರ, ನಗರ, ಪಟ್ಟಣಗಳಿಂದ ಕೂಡಿದ ಭೂಮಿಯು ಅಲುಗಾಡುತ್ತಿದೆ. ಇದನ್ನು ಸ್ಥಿರವಾಗುವಂತೆ ನೀನು ಧಾರಣೆ ಮಾಡಬೇಕು ಎಂದು.

ಪ್ರಶ್ನೆ - ಬ್ರಹ್ಮದೇವರ ಈ ಅಪ್ಪಣೆಯನ್ನು ಅಂಗೀಕರಿಸಲು ಶೇಷದೇವರಿಗೆ ಭಯವಾಗಲಿಲ್ಲವೆ ?

ಉತ್ತರ - ತಮ್ಮ ಸಾಮರ್ಥ್ಯದ ಬಗ್ಗೆ ಪೂರ್ಣವಾದ ಅರಿವಿದೆ. ಆದ್ದರಿಂದ ಸಂತೋಷದಿಂದ ಒಪ್ಪಿದರು. ತನ್ಮೂಲಕ ಬ್ರಹ್ಮದೇವರಿಗೆ ಪರಮಪ್ರಿಯವಾದ ಕಾರ್ಯವನ್ನು ಮಾಡಿದರು.

'ಅಧೋಭೂರ್ಮೇವಸತ್ಯೇವ ನಾಗೋಽನಂತ ಪ್ರತಾಪವಾನ್ ।
ಧಾರಯನ್ ವಸುಧಾಮೇಕಃ ಶಾಸನಾತ್ ಬ್ರಹ್ಮಣೋ ವಿಭುಃ' ಅತ್ಯಂತ ಸಾಮರ್ಥ್ಯದಿಂದ ಕೂಡಿರುವ ಶೇಷದೇವರು ಚತುರ್ಮುಖ-ಬ್ರಹ್ಮದೇವರ ಅಪ್ಪಣೆಯಂತೆ ಭೂಮಿಯ ಕೆಳಗಿದ್ದು ಈ ಭೂಮಿಯನ್ನು ಧಾರಣೆ ಮಾಡಿದ್ದಾರೆ.

ಪ್ರಶ್ನೆ - ಶೇಷದೇವರು ಭಗವಂತನ ಹಾಸಿಗೆಯಾಗಿ ಸದಾ ಭಗವಂತನ ಜೊತೆ ಇರಲು ಕಾರಣವೇನು ?

ಉತ್ತರ - ಭಗವಂತನ ವಿಷಯದಲ್ಲಿ ಶೇಷದೇವರಿಗೆ ಇರುವ ಭಕ್ತಿ ಅಪಾರವಾದದ್ದು. ಅದನ್ನು ವರ್ಣಿಸಲು ಸಾಧ್ಯವೇ ಇಲ್ಲ. ವಿಷ್ಣುಪಾದಕಮಲವನ್ನು ಬಿಟ್ಟು ಕ್ಷಣಮಾತ್ರವು ಬೇರೆಡೆ ಆಸಕ್ತರಾಗಿರುವುದೇ ಇಲ್ಲ. ಸ್ವತಃ ಶೇಷದೇವರೇ ಹೇಳುವ ಮಾತಿದು - 'ವಸಾಮ್ಯಹಂ ಸದೈವಾತ್ರ । ಪಾದಮೂಲೇಚ ಮತ್ಪತೇಃ ವೈಕುಂಠಂ ವಾ ನ ಗಚ್ಛಾಮಿ ತ್ಯಕ್ತ್ವಾ ವಿಷ್ಣುಪದಾಂಬುಜಮ್' (ಆದಿತ್ಯಪುರಾಣ) ವಿಷ್ಣುಪಾದಕಮಲವನ್ನು ಬಿಟ್ಟು ವೈಕುಂಠಕ್ಕೂ ಕೂಡ ನಾನು ತೆರಳಲಾರೆ.

ಪ್ರಶ್ನೆ - ಹಾಗಾದರೆ ಪಾತಾಳಲೋಕಕ್ಕೆ ಏಕೆ ಹೋದರು ?

ಉತ್ತರ - ಇದಕ್ಕೂ ಕೂಡ ಶೇಷದೇವರೇ ಉತ್ತರಿಸಿದ್ದಾರೆ. 'ಪಾತಾಳಮಾತ್ರಂ ಗಂತವ್ಯಮ್ ಪಾದಮೂಲಂ ಯತೋ ಹರೇಃ ನ ಸ್ಥಾಸ್ಯಾಮಿ ಕ್ಷಣಮಪಿ ಯತ್ ಸೌಂದರ್ಯಾಮೃತಂ ವಿನಾ' 'ಪಾತಾಳಮೇತಸ್ಯ ಹಿ ಪಾದಮೂಲಂ' ಎಂಬ ಭಾಗವತದ ಮಾತಿನಂತೆ ಪಾತಾಳಲೋಕವು ಭಗವಂತನ ಪಾದಮೂಲ ಎನಿಸುತ್ತದೆ. ಭಗವಂತನ ಪಾದಸೌಂದರ್ಯದ ಅಮೃತರಸವನ್ನು ಪಾನ ಮಾಡುವುದಕ್ಕಾಗಿ ಪಾತಾಳಲೋಕಕ್ಕೆ ಮಾತ್ರ ತೆರಳುತ್ತೇನೆ. ಪಾದಸೌಂದರ್ಯಾಮೃತದ ಪಾನವಿಲ್ಲದೆ ನಾನು ಒಂದು ಕ್ಷಣವೂ ಇರಲಾರೆ ಹೀಗೆ ನಿಶ್ಚಯಮಾಡಿ; ಭಗವಂತನ ಪಾದವು ಎಲ್ಲೆಲ್ಲಿ ತೆರಳುತ್ತಾರೋ ಅಲ್ಲಿ ಶೇಷದೇವರೂ

ಕೂಡ ಧಾವಿಸುವರು. ಶೇಷದೇವರ ಇಂಥ ಭಕ್ತಿಯನ್ನು ಕಂಡು ಭಗವಂತನು ತನ್ನ ಹಾಸಿಗೆಯನ್ನಾಗಿ ಮಾಡಿಕೊಂಡರು.

ಪ್ರಶ್ನೆ - ಕೆಲವರು ಶೇಷದೇವರು ಭಗವಂತನ ಆಸನವೆನ್ನುತ್ತಾರೆ. ಕೆಲವರು ಹಾಸಿಗೆ ಎನ್ನುತ್ತಾರೆ ಯಾವುದು ಸರಿ?

ಉತ್ತರ - 'ಶಯ್ಯಾऽऽಸನಾತಪತ್ರಾದಿರೂಪೀತ್ವಾತ್ಪಾದಸೇವಕಃ' ಎಂಬಂತೆ ಹಾಸಿಗೆ, ಆಸನ, ಛತ್ರ ಪಾದುಕೆ ಎಂಬ ನಾಕು ರೂಪಗಳಿಂದ ಭಗವಂತನ ಪಾದಸೇವೆಗಳಲ್ಲಿ ನಿರತರಾಗಿದ್ದಾರೆ. ಆದ್ದರಿಂದ ಒಮ್ಮೆ ಹಾಸಿಗೆಯಾಗಿ ಸೇವೆಗೈಯುತ್ತಾರೆ. ಮತ್ತೊಮ್ಮೆ ಆಸನವಾಗುತ್ತಾರೆ. ಇನ್ನೊಮ್ಮೆ ಛತ್ರವಾಗುತ್ತಾರೆ. ಮತ್ತೊಮ್ಮೆ ಪಾದುಕೆಯಾಗುತ್ತಾರೆ. ಹೀಗೆ ಅದ್ಭುತವಾಗಿ ನಿರಂತರ ಭಗವಂತನ ಸೇವೆಯಲ್ಲಿ ಆಸಕ್ತರಾಗಿ ಹರಿಸೇವಕರಾಗಿದ್ದಾರೆ.

ಪ್ರಶ್ನೆ - ಶೇಷದೇವರಿಗೆ ಸಾವಿರ ಕಣ್ಣುಗಳೇಕೆ ಇವೆ? ಹಾಗೂ ಈ ಕಣ್ಣುಗಳಿಂದ ಯಾವ ಕಾರ್ಯಗಳನ್ನು ಸಾಧಿಸುತ್ತಾರೆ?

ಉತ್ತರ - ಒಮ್ಮೆ ರುದ್ರದೇವರು ಹೀಗೆ ಆಲೋಚನೆ ಮಾಡಿದರಂತೆ; ಆ ಶೇಷನ ಭಾಗ್ಯ ಎಷ್ಟು ಅದ್ಭುತ! ಭಗವಂತನ ಸೌಂದರ್ಯವನ್ನು ಅನುಭವಿಸಲು ಸಾವಿರ ಕಣ್ಣುಗಳನ್ನು ಪಡೆದಿದ್ದಾನೆ. ಇಂಥ ಶೇಷನೇ ಮಹಾಸೌಭಾಗ್ಯವಂತ.

ಏತದ್ದ್ವಯಂ ದುರ್ಲಭಂ ಮೇ ತ್ರಿನೇತ್ರತ್ವಾದಹೋ ಬತ ।
ಭಾವಿ-ಜನ್ಮನಿ ಶೇಷತ್ವ-ಪ್ರಾಪ್ತ್ಯರ್ಥಂ ವಾ ಮಹತ್ತಪಃ ॥
ಕರೋಮೀತ್ಯತಿ-ವೈರಾಗ್ಯಾತ್ ಶಂಭುಃ ಕೈಲಾಸ-ಗೋऽಭವತ್ ।

ನನಗೆ ಕೇವಲ ಮೂರೇ ಕಣ್ಣುಗಳಿವೆ ಶೇಷದೇವರಂತೆ ಸಾವಿರಕಣ್ಣುಗಳಿಲ್ಲ. ನಿರಂತರ ಭಗವಂತನ ಪಾದಸಾಮಿಪ್ಯದಲ್ಲಿದ್ದು ಸೇವೆಗೈಯುವ ಭಾಗ್ಯವೂ ಇಲ್ಲ. ಜನ್ಮಾಂತರದಲ್ಲಿಯಾದರೂ ಆ ಶೇಷನು ಮಾಡುತ್ತಿರುವ ಸೇವೆಯ ಸೌಭಾಗ್ಯ ನನಗೆ ಒದಗಲಿ' ಎಂದು ವಿರಕ್ತನಾಗಿ ಕೈಲಾಸದಲ್ಲಿ ತಪಸ್ಸನ್ನು ಮಾಡುತ್ತಿದ್ದಾರಂತೆ.

ಪ್ರಶ್ನೆ - ಶೇಷದೇವರು ಯಾವಾಗಲೂ ಭಗವಂತನ ಪಾದಸೇವೆಯಲ್ಲಿ ನಿರತರಾಗಿರುತ್ತಾರೆ ಎಂದು ಹೇಳಿದಿರಿ, ಹಾಗಾದರೆ ಇವರಿಗೆ ಪ್ರತ್ಯೇಕ

ಲೋಕವಿಲ್ಲವೆ? ಅಥವಾ ಹೆಂಡತಿ ಮಕ್ಕಳ ಜೊತೆ ಸಾಧನೆಗೈದು ಹರಿಸೇವೆಯಲ್ಲಿ ತತ್ಪರರಾಗಿರುವುದಿಲ್ಲವೆ?

ಉತ್ತರ - ಒಂದು ರೂಪದಿಂದ ಭಗವಂತನ ಹಾಸಿಗೆಯಾಗಿದ್ದಾರೆ. ಮತ್ತೊಂದು ರೂಪದಿಂದ ಭೂಮಿಯನ್ನು ಧಾರಣೆ ಮಾಡಿದ್ದಾರೆ. ಇನ್ನೊಂದು ರೂಪದಿಂದ ಇವರದ್ದೇ ಆದ ಪಾತಾಳಲೋಕದಲ್ಲಿ 'ಭೋಗವತೀ ಎಂಬ ಅರಮನೆ ಇದೆ. ಇವರ ಲೋಕ ಪಾತಾಳಲೋಕ. ಇವರ ಅರಮನೆಯ ಹೆಸರು 'ಭೋಗವತೀ' ಅಲ್ಲಿ ಮಣಿಮಯಮಂಟಪದಲ್ಲಿ ಸಂಕರ್ಷಣರೂಪಿಯಾದ ಭಗವಂತನನ್ನು ಕುಳ್ಳಿರಿಸಿ ತನ್ನ ಮಡದಿಯಾದ ವಾರುಣಿಯ ಜೊತೆ ನಿರಂತರ ಅವನ ಆರಾಧನೆಯನ್ನು ಮಾಡುತ್ತಾರೆ. ಅಮೃತಾನ್ನ ಊಟವನ್ನು ಉಣಿಸುತ್ತಾರೆ.

ಪ್ರಶ್ನೆ - ಶೇಷದೇವರು ಭೂಮಿಯನ್ನು ಧಾರಣೆ ಮಾಡಿದ್ದಾರೆ. ಇವರನ್ನು ಯಾರು ಧಾರಣೆ ಮಾಡಿದ್ದಾರೆ?

ಉತ್ತರ - ಬ್ರಹ್ಮಾಂಡಧಾರಿಯಾದ ಶೇಷದೇವರನ್ನು ಕೂರ್ಮರೂಪದಿಂದ ವಾಯುದೇವರು ಧಾರಣೆ ಮಾಡಿದ್ದಾರೆ. ಆ ವಾಯುದೇವರನ್ನು ಭಗವಂತನು ಕೂರ್ಮರೂಪದಿಂದ ಧಾರಣೆ ಮಾಡಿದ್ದಾನೆ.

ಪ್ರಶ್ನೆ - ದಿಗ್ಗಜಗಳು ಭೂಮಿಯನ್ನು ಧಾರಣೆ ಮಾಡಿವೆ ಎನ್ನುತ್ತಾರೆ. ನೀವು ಶೇಷದೇವರು ಭೂಮಿಯನ್ನು ಧಾರಣೆ ಮಾಡಿದ್ದಾರೆ ಎನ್ನುತ್ತಿದ್ದೀರಿ ಯಾವುದು ಸರಿ?

ಉತ್ತರ - ದಿಗ್ಗಜಗಳನ್ನು ಶೇಷದೇವರೇ ಧಾರಣೆ ಮಾಡಿದ್ದಾರೆ. ರಸಾತಳದಲ್ಲಿ ದಿಗ್ಗಜಗಳಿವೆ. ಅದಕ್ಕಿಂತಲೂ ಕೆಳಗಿನ ಪಾತಾಳದಲ್ಲಿ ಶೇಷದೇವರಿದ್ದಾರೆ. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ.

ಪ್ರಶ್ನೆ - ಭಗವಂತನು ಎಲ್ಲಿ ಶೇಷಶಾಯಿಯಾಗಿದ್ದಾನೆ ?

ಉತ್ತರ - ಸಪ್ತದ್ವೀಪಗಳಲ್ಲಿ ಶಾಖಾ ಎಂಬ ದ್ವೀಪದ ಅನಂತರ ಕ್ಷೀರಸಮುದ್ರವಿದೆ. ಅದರ ಆಚೆ ಪುಷ್ಕರದ್ವೀಪವಿದೆ. ಈ ಕ್ಷೀರಸಮುದ್ರವು 32

ಲಕ್ಷಯೋಜನ ವಿಸ್ತಾರ ಹೊಂದಿದೆ. ಇಲ್ಲಿ ಭಗವಂತನು ಶೇಷಶಾಯಿಯಾಗಿ ಪವಡಿಸಿದ್ದಾನೆ. ಎಲ್ಲ ದೇವತೆಗಳು ಇಲ್ಲಿರುವ ಭಗವಂತನನ್ನೇ ಪ್ರಾರ್ಥಿಸಲು ಆಗಾಗ ಬರುತ್ತಾರೆಂದು ಪುರಾಣಗಳಲ್ಲಿ ಉಲ್ಲೇಖವಿದೆ.

ಮೇಲಿನ ಸರಸಭಾರತಿವಿಲಾಸದ ವಾಕ್ಯವನ್ನು ಗಮನಿಸಿದಾಗ ನಾಗಲೋಕದಲ್ಲಿ ಭಗವಂತನು ಶೇಷಶಾಯಿ ಆಗಿದ್ದಾನೆ ಎಂದೂ ಕೂಡ ತಿಳಿಯುತ್ತದೆ. ಅಥವಾ 14 ಲೋಕಗಳಲ್ಲಿಯೂ ಕೂಡ ಭಗವಂತನ ಮಂದಿರ ಇದ್ದೇ ಇರುತ್ತದೆ. ಅಲ್ಲಿ ಶೇಷಶಯನನಾಗಿ ಅಥವಾ ಅನಂತಾಸನನಾಗಿ ಇರುತ್ತಾನೆಂದು ಅನುಸಂಧಾನ ಮಾಡಬಹುದು.

ಪ್ರಶ್ನೆ - ಕೆಲವೆಡೆ ವಾಸುಕಿಶಯನ ಎಂದಿದೆ. ಇನ್ನು ಕೆಲವೆಡೆ ಅನಂತಶಯನ ಎಂದಿದೆ. ಆದರೆ ನೀವು ಶೇಷಶಯನ ಎನ್ನುತ್ತಿರುವಿರಿ; ವಾಸುಕಿಯು ಶೇಷದೇವರ ತಮ್ಮನಾಗಿದ್ದಾನೆ. ಈ ವಿರೋಧವನ್ನು ಹೇಗೆ ಪರಿಹರಿಸುವುದು ?

ಉತ್ತರ - ಅನಂತ, ವಾಸುಕಿ, ನಾಗರಾಜ, ಇವೆಲ್ಲವೂ ಕೂಡ ಶೇಷದೇವರದ್ದೇ ಹೆಸರುಗಳಾಗಿವೆ. ತನ್ನ ಹೆಸರುಗಳನ್ನೇ ತನ್ನ ತಮ್ಮಂದಿರಿಗೆ ಶೇಷದೇವರು ನೀಡಿದ್ದಾರೆಂದು ತಿಳಿಯಬೇಕು.

ಪ್ರಶ್ನೆ - ಲಕ್ಷ್ಮಿಯ ಜೊತೆ ಮದುವೆಯಾದಾಗ ನೂತನ ದಂಪತಿಗಳು ಶೇಷನ ಮೇಲೆ ಮಲಗಿ ಸುಖಾಧಿಕ್ಯ ಹೊಂದುತ್ತಾರೆ. ಅಂಥ ನವದಂಪತಿಗಳು ಶೇಷನ ಮೇಲೆ ರತಿಕ್ರೀಡೆಯಾಡುತ್ತಾರೆ. ಹಾಗಾದರೆ ಲಕ್ಷ್ಮೀದೇವಿಯ ಜೊತೆ ರತಿಕ್ರೀಡೆಗೆ ಏಕಾಂತತೆ ಹಾಳಾಯಿತಲ್ಲವೆ?

ಉತ್ತರ - ನಮ್ಮಂತೆ ಭಗವಂತ ರತಿಕ್ರೀಡೆ ಮಾಡುವುದಿಲ್ಲ. ಹೀಗೆ ಭಾವಿಸುವುದೇ ತಪ್ಪು. ಆ ನವದಂಪತಿಗಳನ್ನು ಮಲಗಿಸಿಕೊಳ್ಳುವ ಸೌಭಾಗ್ಯವನ್ನು ಶೇಷದೇವರಿಗೆ ನೀಡುವುದೇ ಭಗವಂತನ ಮುಖ್ಯ ಉದ್ದೇಶ. ಆ ಶೇಷದೇವರು ಹಾಸಿಗೆಯಾಗುವುದರಿಂದ ಲಕ್ಷ್ಮೀನಾರಾಯಣರಲ್ಲಿ ಸುಖಾಧಿಕ್ಯಾದಿಗಳು ಸರ್ವಥಾ ಉಂಟಾಗುವುದಿಲ್ಲ. ಮತ್ತು

ಶೇಷದೇವರು ಮಾತ್ರವಲ್ಲದೆ ಉಳಿದ ತತ್ತ್ವಾಭಿಮಾನಿದೇವತೆಗಳೂ ಕೂಡ ಭಗವಂತನ ಜೊತೆ ಸದಾ ಇರುತ್ತಾರೆ. 'ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ' ಇತ್ಯಾದಿ ವೇದಮಂತ್ರವು ಹೇಳುವಂತೆ ಅಗ್ನಿ, ಇಂದ್ರ, ಬೃಹಸ್ಪತಿ, ಮೊದಲಾದವರು ಭಗವಂತನ ಅವಯವಗಳಿಂದ ಹುಟ್ಟಿ ಅಲ್ಲೇ ಆಶ್ರಯ ಹೊಂದಿರುತ್ತಾರೆ. ಈ ಎಲ್ಲ ದೇವತೆಗಳನ್ನು ಬಿಟ್ಟು ಭಗವಂತನು ಇರಲಾರ. ಅಥವಾ ರತಿಕ್ರೀಡೆಯ ವಿಷಯದಲ್ಲಿ ಶೇಷದೇವರಿಗೆ ಅಜ್ಞಾನ ನೀಡುತ್ತಾನೆಂದೂ ತಿಳಿಯಬಹುದು.

ಪ್ರಶ್ನೆ - ಹಾಗಾದರೆ ಭಗವಂತನು ಇರುವಲ್ಲೆಲ್ಲಾ ಈ ಎಲ್ಲ ದೇವತೆಗಳು ಇದ್ದೇ ಇರುತ್ತಾರೆಯೇ ?

ಉತ್ತರ - ಸೃಷ್ಟಿಯ ಪೂರ್ವದಲ್ಲಿ ಭಗವಂತನ ಜೊತೆ ಈ ದೇವತೆಗಳು ಇರುವುದಿಲ್ಲ. ಬ್ರಹ್ಮಾಂಡದ ಹೊರಗೂ ಕೂಡ ಇರುವುದಿಲ್ಲ. ಮೋಕ್ಷದಲ್ಲಿ ಅಮುಕ್ತದೇವತೆಗಳು ಇರುವುದಿಲ್ಲ ಉಳಿದೆಡೆ ಇರುತ್ತಾರೆ.

ಪ್ರಶ್ನೆ - ಶೇಷದೇವರು ಪಾತಾಳಲೋಕದಲ್ಲಿ ಇದ್ದಾರೆಂದು ಕೆಲವೆಡೆ ಹೇಳಿದ್ದಾರೆ. ಅದಕ್ಕಿಂತಲೂ ಕೆಳಗೆ ಶೇಷದೇವರು 14 ಲೋಕಗಳನ್ನು ನಿಂತು ಧಾರಣೆ ಮಾಡಿದ್ದಾರೆಂದು ಕೆಲವೆಡೆ ಇದೆ. ಯಾವುದು ಸರಿ ?

ಉತ್ತರ - ಪಾತಾಳಲೋಕವೆಂದರೆ ಅದಕ್ಕಿಂತಲೂ ಕೆಳಗೆಂದೇ ತಿಳಿಯಬೇಕು. ಪಂಚರಾತ್ರಾಗಮದಲ್ಲಿರುವ ಪ್ರಕಾಶಸಂಹಿತೆ ಇದನ್ನು ಹೀಗೆ ಸ್ಪಷ್ಟವಾಗಿ ಹೇಳಿದೆ-

ಪಾತಾಳೇ ನರಕಾಶ್ಚಾಷ್ಟವಿಂಶತ್‌ಸಂಖ್ಯಾ ಹರೇಃ ಕೃತಾಃ ।
ತದಧಸ್ತಾತ್ ಪಂಚವಿಂಶತ್ಕೋಟಿಗರ್ಭಾಂಬುನಿರ್ಮಲಮ್ ॥
ಲಕ್ಷೋನಂ ಯತ್ರ ಲಕ್ಷ್ಮೀಶೋ ಯಾದೋರೂಪೀ ವಿರಾಜತೇ ।
ಸಹಸ್ರಮೂರ್ಧ್ನಃ ಫಣಿನಸ್ತ್ವೇಕಸ್ಮಿನ್ ಮಸ್ತಕೇ ತದಾ ॥
ಸರ್ಷಪಾಯತಿ ವೈ ವಿಶ್ವಂ ನಿಖಿಲಂ ವಾರುಣೀಪತೇಃ ।
ಧರಾಖಿಲೇಯಂ ಸದ್ವೀಪಾ ಸಸಾಗರಕುಲಾಚಲಾ ॥

ಪಾತಾಳದಲ್ಲಿ 28 ನರಕಗಳನ್ನು ಶ್ರೀಹರಿಯು ನಿರ್ಮಿಸಿದ್ದಾನೆ. ಅದರ ಕೆಳಗೆ 25 ಕೋಟಿ ಆಳತೆಯ ಘನೋದಕವಿದೆ. ಅದರ ಕೊನೆಯ ಒಂದು ಲಕ್ಷಭಾಗದಲ್ಲಿ ಸಂಕರ್ಷಣರೂಪಿಯಾದ ಭಗವಂತನಿದ್ದಾನೆ. ಅಲ್ಲೇ ಸಾವಿರ ಹೆಡಗಳುಳ್ಳ ಶೇಷದೇವರು ನೆಲೆಸಿದ್ದಾರೆ. ಆ ಸಾವಿರ ಹೆಡೆಗಳಲ್ಲಿ ಒಂದು ಹೆಡೆಯಲ್ಲಿ ಸಾಗರ ಪರ್ವತಗಳಿಂದ ಕೂಡಿದ ಸಮಸ್ತ ಭೂಮಿಯನ್ನು ಸಾಸಿವೆ ಕಾಳಿನಂತೆ ಧಾರಣೆ ಮಾಡಿದ್ದಾನೆ.

ಪ್ರಶ್ನೆ - ಸಂಕರ್ಷಣರೂಪಿಯಾದ ಭಗವಂತನು ಇದ್ದಾನೆಂದು ಇದರಿಂದ ತಿಳಿಯುತ್ತದೆ. ಆದರೆ ಶೇಷದೇವರೆಂದು ನೀವು ಹೇಳುತ್ತಿದ್ದೀರಿ ಇದು ಹೇಗೆ ?

ಉತ್ತರ - ಸಂಕರ್ಷಣರೂಪಿಯಾದ ಭಗವಂತನ ವಿಶೇಷ ಆವೇಶ ಈ ಶೇಷದೇವರಲ್ಲಿದೆ. ಅಥವಾ ಮುಖ್ಯವಾಗಿ ಸಂಕರ್ಷಣರೂಪಿಯಾದ ಭಗವಂತನೇ ಭೂಧಾರಣೆ ಮಾಡಿದ್ದಾನೆ. ಅವನ ಅಧೀನವಾಗಿ ಶೇಷದೇವರು ಭೂಧಾರಣೆಯನ್ನು ಮಾಡಿದ್ದಾರೆಂದು ತಿಳಿಯಬೇಕು.

ಪ್ರಶ್ನೆ - ಸಂಕರ್ಷಣ ಎಂದರೇನು?

ಉತ್ತರ - ದ್ರಷ್ಟೃವನ್ನು ದೃಶ್ಯದೆಡೆಗೆ ಸೆಳೆದು 'ನಾನು ಕರ್ತಾ' ಎಂಬ ಅಭಿಮಾನರೂಪವಾದ ಸಂಪರ್ಕವನ್ನು ತಂದುಕೊಡುವವನು ಎಂದರ್ಥ. ಹೀಗೆ ಪ್ರತಿಯೊಬ್ಬರಿಗೂ ಜ್ಞಾನವನ್ನು ಹಾಗೂ 'ಅಹಂ' ಎಂಬ ಅಭಿಮಾನವನ್ನು ನೀಡುವವನೇ ಸಂಕರ್ಷಣ.

ಪ್ರಶ್ನೆ - ಸಂಕರ್ಷಣರೂಪಿಯಾದ ಭಗವಂತನೇ ಪ್ರಳಯುವನ್ನು ಮಾಡುತ್ತಾನೆಂದು ಹೇಳುತ್ತಾರೆ. ಇದು ಹೇಗೆ ?

ಉತ್ತರ - ಪ್ರಳಯಕಾಲದಲ್ಲಿ ಸಂಕರ್ಷಣರೂಪಿಯಾದ ಈ ಭಗವಂತನು ಹುಬ್ಬುಗಳನ್ನೊಮ್ಮೆ ಕೋಪದಿಂದ ಚಲಿಸುತ್ತಾನೆ. ಆಗ ತ್ರಿನೇತ್ರರಾದ ಮಹಾರುದ್ರದೇವರು ತ್ರಿಶೂಲವನ್ನು ಹಿಡಿದು ಹನ್ನೊಂದು ರೂಪಗಳಿಂದ ಹುಟ್ಟುತ್ತಾರೆ. ಅವರ ಮೂಲಕ ಪ್ರಳಯಕಾರ್ಯವು ನಡೆಯುತ್ತದೆ.

ಪ್ರಶ್ನೆ - ಹಾಗಾದರೆ ರುದ್ರದೇವರು ಸಂಕರ್ಷಣನಿಂದ ಹುಟ್ಟುತ್ತಾರೆಂದು ಹೇಳಿದ್ದಾಯಿತು. ಜೊತೆಯಲ್ಲಿ ಶೇಷದೇವರೂ ಕೂಡ ಹುಟ್ಟಬೇಕಲ್ಲವೆ?

ಉತ್ತರ - ಈ ಸಂಕರ್ಷಣರೂಪಿಯಾದ ಭಗವಂತ ಅಧೀನವಾಗಿಯೇ ಅಹಂಕಾರತತ್ವಕ್ಕೆ ಅಭಿಮಾನಿಯಾದ ಗರುಡ,ಶೇಷ,ರುದ್ರರು ಸಕಲ ಕಾರ್ಯಗಳನ್ನು ನೆರವೇರಿಸುತ್ತಾರೆಂದು ಸ್ವತಃ ರುದ್ರದೇವರೆ ಇಳಾವೃತಖಂಡದಲ್ಲಿ ಪ್ರಶಂಸೆ ಮಾಡುತ್ತಾರೆ. ರುದ್ರದೇವರು ಸಂಕರ್ಷಣನಿಂದ ಹುಟ್ಟಿದಂತೆ ಗರುಡದೇವರು ಹಾಗೂ ಶೇಷದೇವರೂ ಕೂಡ ಹುಟ್ಟುತ್ತಾರೆಂದು ಉಪಲಕ್ಷಣಯಾ ವಿವಕ್ಷಿಸಬೇಕು. ಇಳಾವೃತಖಂಡದಲ್ಲಿರುವ ರುದ್ರದೇವರು ಸಂಕರ್ಷಣರೂಪಿಯಾದ ಭಗವಂತನನ್ನು ನೀನೇ ನನ್ನ ಜನಕನೆಂದು ಹೀಗೆ ಸ್ತೋತ್ರಮಾಡುತ್ತಾರೆ-

ಯಸ್ಯಾದ್ಯ ಆಸೀದ್ ಗುಣವಿಗ್ರಹೋ ಮಹಾನ್
ವಿಜ್ಞಾನಧಿಷ್ಣೋ ಭಗವಾನಜಃ ಕಿಲ ।
ಯತ್-ಸಂಭವೋಽಹಂ ತ್ರಿವೃತಾ ಸ್ವತೇಜಸಾ
ವೈಕಾರಿಕಂ ತಾಮಸಮೈಂದ್ರಿಯಂ ಸೃಜೇ ॥

ಹೇ ಸಂಕರ್ಷಣನೇ! ತ್ರಿಗುಣಾತ್ಮಕಶರೀರಿಯೂ ಮಹತ್ತತ್ವಾ-ಭಿಮಾನಿಯೂ ಬುದ್ಧಿತತ್ವಾಭಿಮಾನಿಯಾದ ಸರಸ್ವತಿಗೆ ಆಶ್ರಯನೂ ಆದ ಭಗವಾನ್ ಚತುರ್ಮುಖನು ನಿನ್ನಿಂದ ಹುಟ್ಟಿದ್ದಾನೆ. ನಿನ್ನಿಂದ ಹುಟ್ಟಿರುವ ನಾನು ತ್ರಿವಿಧಾಹಂಕಾರ ಪ್ರೇರಕವಾಗಿ ಮೂರು ಬಗೆಯಾಗಿರುವ ನನ್ನ ಸಾಮರ್ಥ್ಯದಿಂದ ವೈಕಾರಿಕ ದೇವತೆಗಳನ್ನು ತೈಜಸ ಇಂದ್ರಿಯಗಳನ್ನು ತಾಮಸಪಂಚಭೂತಗಳನ್ನು ಸೃಜಿಸುತ್ತಿದ್ದೇನೆ. ಹೇ ಶೇಷದೇವನೇ! ಭಗವಾನ್ ಚತುರ್ಮುಖನಿಂದ ನೀನು ಜನಿಸಿರುವೆ ನಿನ್ನಿಂದ ನಾನು.

ಪ್ರಶ್ನೆ - ಇಳಾವೃತಖಂಡದಲ್ಲಿ ರುದ್ರದೇವರು ಶೇಷನನ್ನೇ ಸಂಬೋಧನೆ ಮಾಡಿ ಸ್ತುತಿಸುತ್ತಾರೆಂದು ಪಂಚಮಸ್ಕಂಧದ 17ನೇ ಅಧ್ಯಾಯದಲ್ಲಿ

ಕಾಣಿಸುತ್ತದೆ. ಹಾಗಿದ್ದರೆ ಇಳಾವೃತಖಂಡದಲ್ಲೂ ಕೂಡ ಸಂಕರ್ಷಣನ ಜೊತೆ ಶೇಷದೇವರಿದ್ದಾರೆಯೇ ?

ಉತ್ತರ - ಇಳಾವೃತಖಂಡದಲ್ಲಿ ಶಿವನೊಬ್ಬನೇ ಪುರುಷನು. ಉಳಿದವರಿಗೆ ಅವಕಾಶವಿಲ್ಲ. ಆದರೆ ಸಾಧನೆಯ ದೃಷ್ಟಿಯಲ್ಲಿ ಶಿವನಿಗಿಂತಲೂ ಶೇಷದೇವರು ಅಧಿಕವಾಗಿರುವುದರಿಂದ ಇಲ್ಲವೆನ್ನಲು ಆಧಾರವಿಲ್ಲ. ಮತ್ತು ಸಂಕರ್ಷರೂಪಿಯಾದ ಭಗವಂತನನ್ನು ಸ್ತೋತ್ರ ಮಾಡುವ ಜೊತೆ ಶೇಷನನ್ನು ಕೂಡ ರುದ್ರದೇವರು ಸ್ತೋತ್ರಮಾಡುತ್ತಾರೆ. ಇದು ಮಿಶ್ರಸ್ತುತಿಯಾಗಿದೆ. ಸಂಕರ್ಷಣನನ್ನು ಹೇಳುವ ಶಬ್ದಗಳು ಅಮುಖ್ಯವೃತ್ತಿಯಿಂದ ಶೇಷನನ್ನು ಪ್ರತಿಪಾದನೆ ಮಾಡುತ್ತವೆ. ಹೀಗೆ ರುದ್ರದೇವರಿಂದಲೂ ಕೂಡ ಶೇಷದೇವರು ಸ್ತುತ್ಯರಾಗಿದ್ದಾರೆಂದು ತಿಳಿಯಬೇಕು.

ಪ್ರಶ್ನೆ - ಇಳಾವೃತಖಂಡದಲ್ಲಿ ಹಾಗೂ ಪಾತಾಳಲೋಕದ ಕೆಳಭಾಗದಲ್ಲಿ ಸಂಕರ್ಷಣರೂಪಿಯಾದ ಭಗವಂತ ಹಾಗೂ ಶೇಷದೇವರು ಹೇಗಿದ್ದಾರೆ ?

ಉತ್ತರ - ಸುರರು, ಅಸುರರು, ಉರಗರು, ಸಿದ್ಧರು, ಗಂಧರ್ವರು, ವಿಧ್ಯಾಧರರು, ಅಖಂಡವಾಗಿ ಸಂಕರ್ಷಣನನ್ನೇ ಧ್ಯಾನ ಮಾಡುತ್ತಿದ್ದಾರೆ. ಇವನ ಕಣ್ಣುಗಳು ಮತ್ತೇರಿ ಆನಂದದಿಂದ ವಿಕಾರಗೊಂಡಂತಿವೆ. ಸುಂದರವಾದ ವಚನಾಮೃತದಿಂದ ತನ್ನ ಪಾರ್ಷದರಾದ ದೇವತೆಗಳಿಗೆ ಸಂತೋಷಪಡಿಸುತ್ತಾನೆ. ನೀಲವಸ್ತ್ರವನ್ನು ಉಟ್ಟಿದ್ದಾನೆ. ಏಕಕುಂಡಲವನ್ನು ಧಾರಣೆ ಮಾಡಿದ್ದಾನೆ. ಹಲಾಯುಧವನ್ನು ಹಿಡಿದಿದ್ದಾನೆ. ಅದರ ತುದಿಯಲ್ಲಿ ತೋಳನ್ನು ಇಟ್ಟಿದ್ದಾನೆ. ವೈಜಯಂತೀಮಾಲೆಯನ್ನು ಧರಿಸಿದ್ದಾನೆ. ಆ ವೈಜಯಂತೀಮಾಲೆಯು ದುಂಬಿಗಳ ಹಿಂಡು ಬಾಡದ ಕಾಂತಿಯುಳ್ಳ ಎಳೆ ತುಳಸಿಯ ಸುಗಂಧಭರಿತ ಮಧುರರಸವೊಂದು ಮತ್ತೇರಿ ಮಧುರವಾಗಿ ಮಾತಾಡುತ್ತವೆ. ಇದರಿಂದ ಆ ಮಾಲೆಯ ಸೊಬಗು ಮತ್ತಷ್ಟು ಹೆಚ್ಚಿದೆ. ಇಂತಹ ಸಂಕರ್ಷರೂಪಿಯಾದ

ಭಗವಂತನನ್ನು ಹಾಗೂ ಅದರ ಪ್ರತಿಬಿಂಬದಂತಿರುವ ಶೇಷದೇವರನ್ನು ಅಲ್ಲಿರುವ ನಾಗಕನ್ನಿಕೆಯರು ಧ್ಯಾನ ಮಾಡುತ್ತಾರೆ.

ಪ್ರಶ್ನೆ - ನಾವು ಹೇಳಲಾಗದಷ್ಟು ಪಾಪವನ್ನು ಆಚರಿಸಿದ್ದೇವೆ. ಹೀಗಿರುವಾಗ ಮೋಕ್ಷ ಪಡೆಯುವುದು ಹೇಗೆ ?

ಉತ್ತರ - ಶೇಷದೇವರನ್ನು ಆಶ್ರಯಿಸುವುದರಿಂದ ಎಲ್ಲ ಪಾಪಗಳು ನಾಶವಾಗಿ ಮೋಕ್ಷ ದೊರಕುತ್ತದೆಂದು ಭಾಗವತದ ಪಂಚಮಸ್ಕಂಧವು ಧೈರ್ಯ ತುಂಬುತ್ತದೆ.

ಯನ್ನಾಮ ಶ್ರುತಮನುಕೀರ್ತಯೇದಕಸ್ಮಾ-<br>
ದಾರ್ತೋ ವಾ ಯದಿ ಪತಿತಃ ಪ್ರಲೋಭನಾದ್ವಾ ।<br>
ಹಂತ್ಯಂಹಃ ಸಪದಿ ನೃಣಾಮಶೇಷಮನ್ಯಂ<br>
ಕಂ ಶೇಷಾದ್ ಭಗವತ ಆಶ್ರಯೇನ್ಮುಮುಕ್ಷುಃ ॥

ಆಕಸ್ಮಿಕವಾಗಿ ದುಃಖಿತರಾಗಿ ಬಿದ್ದು, ಅಥವಾ ಯಾವುದೋ ಪ್ರಲೋಭನೆಗೊಳಗಾಗಿಯಾದರೂ ತಾವು ಹಿಂದೆ ಕೇಳಿದ ಯಾರ ನಾಮವನ್ನು ಒಮ್ಮೆ ಉಚ್ಚರಿಸಿದರೆ ಒಡನೆ ಅವರ ಸಮಸ್ತಪಾಪವನ್ನು ಯಾವ ನಾಮ ನಾಶಪಡಿಸುವುದೋ ಅಂಥ ಶೇಷನಿಗಿಂತ ಬೇರೆ ಯಾರನ್ನು ಮುಮುಕ್ಷು ಆಶ್ರಯಿಸುತ್ತಾನೆ ?

ಶೇಷದೇವರ ಮಹಿಮೆಯನ್ನು ಮತ್ತಷ್ಟು ಕೇಳುತ್ತಲೇ ಇರಬೇಕು ಅನ್ನಿಸುತ್ತದೆ. ಸಮಸ್ತ ಭೂಮಂಡಲವು ಈ ಶೇಷದೇವರು ಒಂದು ಕ್ಷಣದಲ್ಲಿ ಪರಮಾಣುವಿನಂತಿದೆ ಎಂದು ಹೇಳಿದ ಮೇಲೆ ಅವರ ಶಕ್ತಿ ಅನಂತವಾಗಿದೆ ಎಂದರ್ಥ. ಯಾರಿಂದಲೂ ಕೂಡ ಪೂರ್ಣವಾಗಿ ವರ್ಣಿಸಲು ಸಾಧ್ಯವಿಲ್ಲ. ಮಹಾಮೇಧಾವಿಗೂ ಕೂಡ ಇವರ ಮಹಿಮೆಯನ್ನು ಎಣಿಸಿ ಮುಗಿಸಲು ಸಾಧ್ಯವಿಲ್ಲ. ಇವರ ವೀರ್ಯ ಪರಾಕ್ರಮಗಳಿಗೆ ಕೊನೆಯೇ ಇಲ್ಲ.

ಪ್ರಶ್ನೆ - ಈ ಶೇಷದೇವರನ್ನು ಕಾಣಬೇಕೆಂದರೆ ಹೇಗೆ ಸಾಧನೆಗೈಯಬೇಕು?

ಉತ್ತರ - ಶೇಷದೇವರ ಆರಾಧನೆಯನ್ನು ತನ್ಮೂಲಕ ಸಂಕರ್ಷಣ-ರೂಪಿಯಾದ ಭಗವಂತನ ಆರಾಧನೆಯನ್ನು ವಿಶೇಷವಾಗಿ ಆಚರಣೆ ಮಾಡುವುದರಿಂದ ಶೇಷದೇವರ ಲೋಕಕ್ಕೆ ಮನುಷ್ಯನು ತೆರಳಬಹುದು. ಅಲ್ಲಿ ಅವರಿಂದ ಶಾಸ್ತ್ರೋಪದೇಶವನ್ನು ಪಡೆದು ಸುಲಭವಾಗಿ ಮೋಕ್ಷವನ್ನು ಪಡೆಯಬಹುದು.

ಪ್ರಶ್ನೆ - ಪೌರುಷೇಯ ಗ್ರಂಥಗಳ ಅಧ್ಯಯನಕ್ಕಾಗಿ ಶೇಷದೇವರ ಅನುಗ್ರಹ ಏಕೆ?

ಉತ್ತರ - ಸ್ವತಃ ವೇದವ್ಯಾಸದೇವರೆ ಮಹಾಭಾರತದ ಪ್ರಾರಂಭದಲ್ಲಿ ಶೇಷದೇವರನ್ನು ನಮಸ್ಕಾರ ಮಾಡಬೇಕೆಂದು ತಿಳಿಸಿದ್ದಾರೆ. 'ನಾರಾಯಣಂ ಸಮಸ್ಕೃತ್ಯ ನರಂ ಚೈವ ನರೋತ್ತಮಮ್' ಎಂಬುದಾಗಿ ನರ ಶಬ್ದದಿಂದ ಶೇಷದೇವರಿಗೆ ನಮಸ್ಕಾರ ತಿಳಿಸಿದ್ದಾರೆ. ಏಕೆಂದರೆ ಶಾಸ್ತ್ರಜ್ಞಾನ ಬರಬೇಕೆಂದರೆ ಶೇಷದೇವರ ಅನುಗ್ರಹವೇ ಬೇಕು. ಅವರ ಅನುಗ್ರಹವಾದರೆ ಮಾತ್ರ ನಿಜವಾದ ತತ್ವಜ್ಞಾನ ಪಡೆಯಲು ಸಾಧ್ಯ. ವಾಯುದೇವರು ಸಾಧಕರೆಂದು ಕರೆಸಿಕೊಂಡರೆ ಶೇಷದೇವರು ಉಪಸಾಧಕರು ಎಂದು ಕರೆಸಿಕೊಳ್ಳುತ್ತಾರೆ.

ಪ್ರಶ್ನೆ - ನರಶಬ್ದದಿಂದ ಶೇಷದೇವರನ್ನೇ ವಿವಕ್ಷಿಸಬೇಕು ಎನ್ನಲು ಏನು ಆಧಾರ?

ಉತ್ತರ - ಉಪಸಾಧಕೋ ನರಶ್ಶೋಕ್ತೋ ದೇವೀ ಭಾಗ್ಯಾತ್ಮಿಕಾ ನೃಣಾಮ್ ।
ಸರಸ್ವತೀ ವಾಕ್ಯರೂಪಾ ತಸ್ಮಾನ್ನಮ್ಯಾ ಹಿ ತೇಽಖಿಲಾಃ ।

ಉಪಸಾಧಕನಾದ ಶೇಷನೇ 'ನರ'. ಗ್ರಂಥಾಧ್ಯೇತೃಗಳಾದ ಜನರಿಗೆ ಭಾಗ್ಯ ನೀಡುವವಳು ಮಹಾಲಕ್ಷ್ಮೀ. ಗ್ರಂಥಾಭಿಮಾನಿನೀ ಸರಸ್ವತಿ. ಆದ್ದರಿಂದ ಇವರು ಗ್ರಂಥಾರಂಭದಲ್ಲಿ ನಮನಕ್ಕೆ ಅರ್ಹರಾಗಿದ್ದಾರೆ.

ಪ್ರಶ್ನೆ - ಶೇಷದೇವರ ಸ್ತೋತ್ರ ಯಾವುದು ?

ಉತ್ತರ - ಫಣಾಷ್ಟದಲಶೇಖರಂ ಧೃತಸುವರ್ಣಪುಂಜಪ್ರಭಂ ।
ಸವಜ್ರವರಭೂಷಣಂ ನವಸರೋಜರಕ್ತೇಕ್ಷಣಮ್ ।
ಸುವರ್ಣಮುಕುಟೋಜ್ಜ್ವಲಂ ಸಕಲವಾಂಛಿತಾರ್ಥಪ್ರದಂ ।
ನಮಾಮಿ ಶಿರಸಾ ಸುರಾಸುರನಮಸ್ಕೃತಂ ವಾಸುಕಿಮ್ ॥

ಓ ಶೇಷದೇವರೇ! ತಾವು ಶ್ರೇಷ್ಠವಾದ ಎಂಟು ಫಣಗಳುಳ್ಳವ-ರಾಗಿರುವಿರಿ. ತೇಜಃಪುಂಜವಾದ ಸುವರ್ಣದ ಕಾಂತಿ ತಮ್ಮದು. ವಜ್ರಾಭರಣಭೂಷಿತರು. ಆಗ ತಾನೆ ಹುಟ್ಟಿದ ಕಮಲದಂತೆ ಕಣ್ಣುಗಳುಳ್ಳವರು ಸುವರ್ಣಮುಕುಟಧಾರಿಗಳು. ಭಕ್ತರ ಅಭೀಷ್ಟಗಳನ್ನು ನೆರವೇರಿಸುವವರು. ಸುರರು ಹಾಗೂ ಅಸುರರಿಂದ ವಂದಿತರು. ಇಂತಹ 'ವಾಸುಕೀ' ಎಂಬ ಹೆಸರು ಧರಿಸಿದ ತಮಗೆ ಭಕ್ತಿಯಿಂದ ನನ್ನ ನಮನ.

ಸಹಸ್ರವಕ್ತ್ರಂ ದ್ವಿಸಹಸ್ರಜಿಹ್ವಂ ಪಿಶಂಗನೇತ್ರಂ ಕಪಿಲಾಂಶುಕಾಢ್ಯಮ್ ।
ವಿಷಾಯುಧಂ ಪ್ರೋಜ್ಜ್ವಲದಂಷ್ಟ್ರಬಾಹುಂ ತಂ ನಾಗರಾಜಂ ಪ್ರಣತೋಽಸ್ಮಿ ನಿತ್ಯಮ್ ॥

ಎಲ್ಲ ನಾಗಗಳಿಗೆ ರಾಜರಾದ ವಿಷಪೂರಿತವಾದ ಆಯುಧಧಾರಿಗಳಾದ ಶೇಷದೇವರೇ! ಸಾವಿರ ವದನಗಳು, ಎರಡು ಸಾವಿರ ನಾಲಿಗೆಗಳು ಕೆಂಪಾದ ಕಣ್ಣುಗಳಿಂದ ಉಜ್ಜ್ವಲಿಸುವ ತಮ್ಮ ಮುಖ ಉಜ್ಜ್ವಲಿಸುತ್ತಿದೆ. ಇಂಥ ತಮಗೆ ನಿತ್ಯದಲ್ಲೂ ನನ್ನ ನಮನ.

ಸಹಸ್ರಶೀರ್ಷಂ ಜಗದೇಕಕುಂಡಲಂ
ಪೀತಾಂಬರಂ ಧೂಮ್ರಸಹಸ್ರಲೋಚನಮ್ ।
ಉದಾರವೀರ್ಯಂ ವಿಷದಂಷ್ಟ್ರಕಾನನಂ
ನಮಾಮ್ಯನಂತಂ ಭುವನೈಕನಾಥಮ್ ॥

ಸಾವಿರ ಹೆಡೆಗಳುಳ್ಳ ಒಂದೇ ಕುಂಡಲವನ್ನು ಧರಿಸಿದ ಪೀತಾಂಬರಧಾರಿಗಳಾದ ಕೆಂಪಾದ ಸಾವಿರ ಕಣ್ಣುಗಳುಳ್ಳ ಅಪಾರ ಪರಾಕ್ರಮಶಾಲಿಯಾದ ವಿಷಪೂರಿತಹಲ್ಲುಗಳಿಂದ ಕೂಡಿದ ಮುಖವುಳ್ಳ ಸಮಸ್ತ ಜಗತ್ತಿಗೆ ಒಡಯರಾದ ಅನಂತನಾಮಕರಾದ ಓ ಶೇಷದೇವರೇ! ತಮಗೆ ಭಕ್ತಿಯಿಂದ ನಮಿಸುವೆ.

ಪ್ರಶ್ನೆ - ಹೆಂಗಸರು ಹೇಳಬಹುದಾದ ಶೇಷದೇವರ ಬಗ್ಗೆ ದಾಸರಾಯರ ಹಾಡುಗಳು ಇವೆಯೇ ?

ಉತ್ತರ - ಶೇಷದೇವರ ಆರಾಧನೆಯನ್ನು ತನ್‌ಮೂಲಕ ಸಂಕರ್ಷಣ-ರೂಪಿಯಾದ ಭಗವಂತನ ಆರಾಧನೆಯನ್ನು ವಿಶೇಷವಾಗಿ ಆಚರಣೆ ಮಾಡುವುದರಿಂದ ಶೇಷದೇವರ ಲೋಕಕ್ಕೆ ಮನುಷ್ಯನು ತೆರಳಬಹುದು. ಅಲ್ಲಿ ಅವರಿಂದ ಶಾಸ್ತ್ರೋಪದೇಶವನ್ನು ಪಡೆದು ಸುಲಭವಾಗಿ ಮೋಕ್ಷವನ್ನು ಪಡೆಯಬಹುದು.

ಪ್ರಶ್ನೆ - ಪೌರುಷೇಯ ಗ್ರಂಥಗಳ ಅಧ್ಯಯನಕ್ಕಾಗಿ ಶೇಷದೇವರ ಅನುಗ್ರಹ ಏಕೆ?

ಉತ್ತರ - ಸ್ವತಃ ವೇದವ್ಯಾಸದೇವರೆ ಮಹಾಭಾರತದ ಪ್ರಾರಂಭದಲ್ಲಿ ಶೇಷದೇವರನ್ನು ನಮಸ್ಕಾರ ಮಾಡಬೇಕೆಂದು ತಿಳಿಸಿದ್ದಾರೆ. 'ನಾರಾಯಣಂ ಸಮಸ್ಕೃತ್ಯ ನರಂ ಚೈವ ನರೋತ್ತಮಮ್' ಎಂಬುದಾಗಿ ನರ ಶಬ್ದದಿಂದ ಶೇಷದೇವರಿಗೆ ನಮಸ್ಕಾರ ತಿಳಿಸಿದ್ದಾರೆ. ಏಕೆಂದರೆ ಶಾಸ್ತ್ರಜ್ಞಾನ ಬರಬೇಕೆಂದರೆ ಶೇಷದೇವರ ಅನುಗ್ರಹವೇ ಬೇಕು. ಅವರ ಅನುಗ್ರಹವಾದರೆ ಮಾತ್ರ ನಿಜವಾದ ತತ್ವಜ್ಞಾನ ಪಡೆಯಲು ಸಾಧ್ಯ. ವಾಯುದೇವರು ಸಾಧಕರೆಂದು ಕರೆಸಿಕೊಂಡರೆ ಶೇಷದೇವರು ಉಪಸಾಧಕರು ಎಂದು ಕರೆಸಿಕೊಳ್ಳುತ್ತಾರೆ.

ಪ್ರಶ್ನೆ - ನರಶಬ್ದದಿಂದ ಶೇಷದೇವರನ್ನೇ ವಿವಕ್ಷಿಸಬೇಕು ಎನ್ನಲು ಏನು ಆಧಾರ?

ಉತ್ತರ - ಉಪಸಾಧಕೋ ನರಶ್ಶೇಷೋ ದೇವೀ ಭಾಗ್ಯಾತ್ಮಿಕಾ ನೃಣಾಮ್ ।
ಸರಸ್ವತೀ ವಾಕ್ಯರೂಪಾ ತಸ್ಮಾನ್ನಮ್ಯಾ ಹಿ ತೇಽಖಿಲಾಃ ।

ಉಪಸಾಧಕನಾದ ಶೇಷನೇ 'ನರ'. ಗ್ರಂಥಾಧ್ಯೇತೃಗಳಾದ ಜನರಿಗೆ ಭಾಗ್ಯ ನೀಡುವವಳು ಮಹಾಲಕ್ಷ್ಮೀ. ಗ್ರಂಥಾಭಿಮಾನಿನೀ ಸರಸ್ವತಿ. ಆದ್ದರಿಂದ ಇವರು ಗ್ರಂಥಾರಂಭದಲ್ಲಿ ನಮನಕ್ಕೆ ಅರ್ಹರಾಗಿದ್ದಾರೆ.

ಪ್ರಶ್ನೆ - ಶೇಷದೇವರ ಸ್ತೋತ್ರ ಯಾವುದು ?

ಉತ್ತರ - ಫಣಾಷ್ಟದಲಶೇಖರಂ ಧೃತಸುವರ್ಣಪುಂಜಪ್ರಭಂ ।
ಸವಜ್ರವರಭೂಷಣಂ ನವಸರೋಜರಕ್ತೇಕ್ಷಣಮ್ ।
ಸುವರ್ಣಮುಕುಟೋಜ್ಜ್ವಲಂ ಸಕಲವಾಂಛಿತಾರ್ಥಪ್ರದಂ ।
ನಮಾಮಿ ಶಿರಸಾ ಸುರಾಸುರನಮಸ್ಕೃತಂ ವಾಸುಕಿಮ್ ॥

ಓ ಶೇಷದೇವರೇ! ತಾವು ಶ್ರೇಷ್ಠವಾದ ಎಂಟು ಫಣಗಳುಳ್ಳವ-ರಾಗಿರುವಿರಿ. ತೇಜಃಪುಂಜವಾದ ಸುವರ್ಣದ ಕಾಂತಿ ತಮ್ಮದು. ವಜ್ರಾಭರಣಭೂಷಿತರು. ಆಗ ತಾನೆ ಹುಟ್ಟಿದ ಕಮಲದಂತೆ ಕಣ್ಣುಗಳುಳ್ಳವರು ಸುವರ್ಣಮುಕುಟಧಾರಿಗಳು. ಭಕ್ತರ ಅಭೀಷ್ಟಗಳನ್ನು ನೆರವೇರಿಸುವವರು. ಸುರರು ಹಾಗೂ ಅಸುರರಿಂದ ವಂದಿತರು. ಇಂತಹ 'ವಾಸುಕೀ' ಎಂಬ ಹೆಸರು ಧರಿಸಿದ ತಮಗೆ ಭಕ್ತಿಯಿಂದ ನನ್ನ ನಮನ.

ಸಹಸ್ರವಕ್ತ್ರಂ ದ್ವಿಸಹಸ್ರಜಿಹ್ವಂ ಪಿಶಂಗನೇತ್ರಂ ಕಪಿಲಾಂಶುಕಾಢ್ಯಮ್ ।
ವಿಷಾಯುಧಂ ಪ್ರೋಜ್ಜ್ವಲದಂಷ್ಟ್ರಬಾಹುಂ ತಂ ನಾಗರಾಜಂ ಪ್ರಣತೋಽಸ್ಮಿ ನಿತ್ಯಮ್ ॥

ಎಲ್ಲ ನಾಗಗಳಿಗೆ ರಾಜರಾದ ವಿಷಪೂರಿತವಾದ ಆಯುಧಧಾರಿಗಳಾದ ಶೇಷದೇವರೇ! ಸಾವಿರ ವದನಗಳು, ಎರಡು ಸಾವಿರ ನಾಲಿಗೆಗಳು ಕೆಂಪಾದ ಕಣ್ಣುಗಳಿಂದ ಉಜ್ಜ್ವಲಿಸುವ ತಮ್ಮ ಮುಖ ಉಜ್ಜ್ವಲಿಸುತ್ತಿದೆ. ಇಂಥ ತಮಗೆ ನಿತ್ಯದಲ್ಲೂ ನನ್ನ ನಮನ.

ಸಹಸ್ರಶೀರ್ಷಂ ಜಗದೇಕಕುಂಡಲಂ
ಪೀತಾಂಬರಂ ಧೂಮ್ರಸಹಸ್ರಲೋಚನಮ್ ।
ಉದಾರವೀರ್ಯಂ ವಿಷದಂಷ್ಟ್ರಕಾನನಂ
ನಮಾಮ್ಯನಂತಂ ಭುವನೈಕನಾಥಮ್ ॥

ಸಾವಿರ ಹೆಡೆಗಳುಳ್ಳ ಒಂದೇ ಕುಂಡಲವನ್ನು ಧರಿಸಿದ ಪೀತಾಂಬರಧಾರಿಗಳಾದ ಕೆಂಪಾದ ಸಾವಿರ ಕಣ್ಣುಗಳುಳ್ಳ ಅಪಾರ ಪರಾಕ್ರಮಶಾಲಿಯಾದ ವಿಷಪೂರಿತಹಲ್ಲುಗಳಿಂದ ಕೂಡಿದ ಮುಖವುಳ್ಳ ಸಮಸ್ತ ಜಗತ್ತಿಗೆ ಒಡಯರಾದ ಅನಂತನಾಮಕರಾದ ಓ ಶೇಷದೇವರೇ! ತಮಗೆ ಭಕ್ತಿಯಿಂದ ನಮಿಸುವೆ.

ಪ್ರಶ್ನೆ - ಹೆಂಗಸರು ಹೇಳಬಹುದಾದ ಶೇಷದೇವರ ಬಗ್ಗೆ ದಾಸರಾಯರ ಹಾಡುಗಳು ಇವೆಯೇ ?

ಉತ್ತರ - ಶ್ಯಾಮಸುಂದರದಾಸರು ರಚಿಸಿದ ಹಾಡು ಬಹಳ ಸೊಗಸಾಗಿದೆ.

ಪೋಷಿಸೆನ್ನನು ನಿರುತ ಶೇಷದೇವಾ ।
ದೋಷ ನಾಶಗೊಳಿಸಿ ಲೇಸಾಗಿ ಪಿಡಿ ಕರವಾ ॥ ಪ ॥

ವನಧಿಶಯನಗೆ ತಲ್ಪ ಅನುಜ ಪೂರ್ವಜನಾಗಿ
ಘನ ಸೇವೆಯನು ಗೈದ ಫಣಿರಾಜನೇ ॥
ವಿನಯದಲಿ ಭಿನ್ನೈಪೆ ನಿನಗಶನವಾದಾತ ।
ಎನಗೊಲಿದು ಪೊರೆವಂತೆ ಅನುಗ್ರಹಿಸಿ ಅನುದಿನದಿ ॥1॥

ಭೂ ಗಗನ ಪಾತಾಳ ಸಾಗರವ ವ್ಯಾಪಿಸಿದ ।
ಯೋಗಸಾಧನ ಶೂರ ನಾಗನಾಥಾ ॥
ಬಾಗಿ ಬೇಡುವೆ ಭವದ ರೋಗಕೌಷಧವಾದ
ಭಾಗವತ ಶ್ರವಣ ಸುಖಾರಾಗದಲಿ ಕೊಟ್ಟು ॥2॥

ಸಾಸಿರಾಂಬಕ ನಮಿತ ಸಾಸಿರಾನನನಾದ
ವಾಸುಕಿವರ ವಾರುಣೀಶ ನಿನ್ನ ॥
ಹಾಸಿಗೆಯ ಗೈದಂಥ ಶ್ರೀಶ್ಯಾಮಸುಂದರನ
ದಾಸರಾದವರ ಸಹವಾಸ ಪಾಲಿಸಿ ನಿತ್ಯ ॥3॥

ಪ್ರಶ್ನೆ - ಸರಸಭಾರತಿವಿಲಾಸದಲ್ಲಿ ಶೇಷದೇವರನ್ನು ವಾದಿರಾಜರು ಹೇಗೆ ವರ್ಣಿಸಿದ್ದಾರೆ ?

ಉತ್ತರ - ಧೃತಲೋಕ ಧ್ವಸ್ತಶೋಕ ಫಣಾಜಾಲಪ್ರಭೋಜ್ಜ್ವಲ
ವಿಶಂಕ ಹರಿಪರ್ಯಂಕ ಸುಶಾಂತಾನಂತ ತೇ ನಮಃ ॥
ನಾಗ ನಾಗೇಂದ್ರಶಯನಂ ನಾಗಾನಾಮಧಿಪ ಪ್ರಭೋ ।
ಆಗಮಸ್ತುತಚಾರಿತ್ರಂ ಯೋಗೀಂದ್ರಪ್ರಿಯ ದರ್ಶಯ ॥

ಲೋಕಗಳನ್ನು ಧರಿಸಿದ ದುಃಖರಹಿತನಾದ ಹೆಡೆಗಳ ಸಮೂಹದ ಕಾಂತಿಯಿಂದ ಪ್ರಕಾಶಿಸುವ ಸಂಶಯ ರಹಿತನಾದ ಹರಿಯ ಮಂಚನಾದ ಪರಮಶಾಂತನಾದ ಅನಂತನೇ! ಶೇಷನೇ! ನಿನಗೆ ನಮಸ್ಕಾರ.

ಸರ್ಪರಾಜನೂ ಯೋಗಿಶ್ರೇಷ್ಠರಿಗೆ ಪ್ರಿಯನೂ ಆದ ಪ್ರಭುವಾದ ನಾಗರಾಜನೇ! ವೇದಗಳಿಂದ ಹೊಗಳಲ್ಪಟ್ಟ ಚರಿತ್ರೆಯುಳ್ಳ ನಾಗೇಂದ್ರನಾದ ನಿನ್ನಲ್ಲಿ ಮಲಗಿರುವ ಹರಿಯನ್ನು ತೋರಿಸು.

ಪ್ರಶ್ನೆ - ನಾಗಪಂಚಮಿಯೆಂದು ಶೇಷದೇವರನ್ನು ಮಾತ್ರ ಪೂಜಿಸಬೇಕೋ ? ಅಥವಾ ಉಳಿದ ನಾಗಗಳನ್ನೂ ಪೂಜಿಸಬೇಕೋ ?

ಉತ್ತರ - ಅಂದು ಮುಖ್ಯವಾಗಿ ಶೇಷದೇವರನ್ನೇ ಪೂಜಿಸಬೇಕು. ಜೊತೆಯಲ್ಲಿ ಶೇಷದೇವರ ಅನುಚರರಾದ ಸಾತ್ವಿಕ ನಾಗಗಳನ್ನು ಕೂಡ ಪೂಜಿಸಬೇಕು.

ಪ್ರಶ್ನೆ - ಹಾಗಾದರೆ ಅನಂತ, ವಾಸುಕೀ, ಪದ್ಮ, ಕಂಬಲ, ಕರ್ಕೋಟಕ, ಭುಜಂಗ, ಧೃತರಾಷ್ಟ್ರ, ಶಂಖಪಾಲ, ತಕ್ಷಕ, ಪಿಂಗಲ, ಅನಂತ ಇತ್ಯಾದಿ ಅನೇಕ ಹೆಸರುಗಳಿಂದ ಅಂದು ಪೂಜಿಸುತ್ತೇವೆ. ಇವೆಲ್ಲವೂ ಬೇರೆ ಬೇರೆ ನಾಗಗಳ ಹೆಸರಲ್ಲವೆ ?

ಉತ್ತರ - ಇವೆಲ್ಲವೂ ಮುಖ್ಯವಾಗಿ ಶೇಷದೇವರ ಹೆಸರುಗಳೇ ಆಗಿವೆ. ಅವರು ತಮ್ಮ ಹೆಸರನ್ನು ಬೇರೆ ನಾಗಗಳಿಗೂ ಕೂಡ ನೀಡಿದ್ದಾರೆ. ಈ ಅನುಸಂಧಾನದಲ್ಲಿ ಪೂಜೆ ಮಾಡಬೇಕು.

ಪ್ರಶ್ನೆ - ಶೇಷದೇವರಿಗೆ ಯಾವುದು ಇಷ್ಟ ? ಶೇಷದೇವರಿಗೆ ಯಾವುದರಿಂದ ಪೂಜೆ ಮಾಡಿದರೆ ಅವರ ಅನುಗ್ರಹ ಶೀಘ್ರವಾಗಿ ದೊರಕುತ್ತದೆ ? ಶೇಷದೇವರನ್ನು ಯಾವ ಅಧಿಷ್ಠಾನದಲ್ಲಿ ಪೂಜಿಸಬೇಕು ?

ಉತ್ತರ - ಹುತ್ತದ ಮಣ್ಣಿನಿಂದ ಶೇಷದೇವರ ಮೂರ್ತಿಯನ್ನು ನಿರ್ಮಾಣ ಮಾಡಿ ಅದರಲ್ಲಿ ಪ್ರಾಣಪ್ರತಿಷ್ಠೆಯನ್ನು ಮಾಡಿ ಪೂಜಿಸಬೇಕು. ಜೊತೆಯಲ್ಲಿ ಬೆಳ್ಳಿಯ ಮೂರ್ತಿಯನ್ನು ಇಟ್ಟು ಅದಕ್ಕೆ ಹಾಲಿನ ಅಭಿಷೇಕ ತಪ್ಪದೆ ಮಾಡಬೇಕು. ಗರಿಕೆ ಕೇತಕೀಪುಷ್ಪ ಇವುಗಳು ಅವರಿಗೆ ಇಷ್ಟವಾದವು. ಹಾಗೂ ಕಡಲೇಬೇಳೆಯ ಕೋಸಂಬರಿ, ತಂಬಿಟ್ಟು, ಕಡುಬು ಮೊದಲಾವುಗಳ ನೈವೇದ್ಯಮಾಡುವ ಸಂಪ್ರದಾಯವಿದೆ.

ಪ್ರಶ್ನೆ - ಪೂಜೆಯ ಕೊನೆಯಲ್ಲಿ ಏನೆಂದು ಪ್ರಾರ್ಥಿಸಬೇಕು ? ಹಾಗೂ ಏನು ಮಾಡಬೇಕು ?

ಉತ್ತರ - ಶೇಷೇಶಃ ಪ್ರತಿಗೃಹ್ಣಾತಿ ಶೇಷೇಶೋ. ವೈ ದದಾತಿ ಚ ।
ಶೇಷೇಶಸ್ತಾರಕೋಭಾಭ್ಯಾಂ ಶೇಷೇಶಾಯ ನಮೋ ನಮಃ ॥

ಎಂದು ಪ್ರಾರ್ಥನೆ ಮಾಡಿ ನಾಗಪ್ರತಿಮೆಯನ್ನು ದಕ್ಷಿಣೆಸಹಿತವಾಗಿ ಉತ್ತಮರಿಗೆ ದಾನ ಮಾಡಬೇಕು.

ಪ್ರಶ್ನೆ - ಗರುಡದೇವರ ಪೂಜೆಯಂತೆ ಶೇಷದೇವರ ಪೂಜೆಯೂ ಕೂಡ ಆವಶ್ಯಕವೇ ?

ಉತ್ತರ - ಪ್ರತಿನಿತ್ಯ ಶೇಷದೇವರ ಪೂಜೆಯನ್ನು ಮಾಡುವುದರಿಂದ ಶಾಸ್ತ್ರಜ್ಞಾನವು ಅಭಿವೃದ್ಧಿಯಾಗುತ್ತದೆ. ಹಾಗೂ ಸರ್ಪದೋಷಾದಿಗಳು ಪರಿಹಾರ-ವಾಗುತ್ತವೆ. ಶೇಷಶಾಯಿಯಾದ ಭಗವಂತನ ದರ್ಶನ ಶೀಘ್ರವಾಗಿ ಆಗುತ್ತದೆ. ಈ ಕಾಮನೆಯಿಂದ ಗರುಡದೇವರ ಜೊತೆ ಶೇಷದೇವರ ಪ್ರತಿಮೆಯನ್ನು ಇಟ್ಟು ಪೂಜೆ ಮಾಡುವ ಸಂಪ್ರದಾಯ ನಮ್ಮಲ್ಲಿ ಅನೂಚಾನವಾಗಿ ನಡೆದು ಬಂದಿದೆ. ಆದರ ಪ್ರಕಾರ ಪ್ರತಿಯೊಬ್ಬ ಸಾಧಕರು ಶೇಷದೇವರ ಪೂಜೆಯನ್ನು ಮಾಡಬೇಕು.

ಪ್ರಶ್ನೆ - ತಂತ್ರಸಾರಸಂಗ್ರಹದಲ್ಲಿ ಶೇಷದೇವರನ್ನು ಹೇಗೆ ಧ್ಯಾನ ಮಾಡಬೇಕೆಂದು ಹೇಳಿದ್ದಾರೆ?

ಉತ್ತರ - ದಧಾನೌ ಹಲಸೌನಂದೌ ಶ್ವೇತವರ್ಣಃ ಕೃತಾಂಜಲಿಃ ।
ಸಹಸ್ರಮೂರ್ಧಾಽದ್ವಿತೀಯ ಕರ್ಣಭೂಷಃ ಪ್ರಿಯಾಯುತಃ ।
ವನಮಾಲೀ ನೀಲವಾಸಾ ಧ್ಯೇಯೋ ವಿಷ್ಣೋಽಸ್ತು ಪೃಷ್ಠತಃ॥

ಎಡ-ಬಲಕೈಗಳಲ್ಲಿ ನೇಗಿಲು ಹಾಗೂ ಸೌನಂದವೆಂಬ ಒನಕೆಯನ್ನೂ ಹೊತ್ತು ನಿಂತ ಭಂಗಿ. ಸಾವಿರ ಹೆಡೆಗಳು, ಒಂಟಿಕಿವಿಯಲ್ಲಿ ಉಂಗುರ, ಬೆಳ್ಳನೆಯ ಮೈಬಣ್ಣ, ಕೊರಳಲ್ಲಿ ವನಮಾಲೆ, ನೀಲಿ ಬಣ್ಣದ ಪಟ್ಟೆಯುಡುಗೆ, ಇಂಥ ಶೇಷನನ್ನು, ಮಡದಿ ವಾರುಣಿಯೊಡನೆ ಶ್ರೀಹರಿಯ ಹಿಂದೆ ಕೈಮುಗಿದು ನಿಂತಿರುವ ಭಂಗಿಯಲ್ಲಿ ನೆನೆಯಬೇಕು.

ಪ್ರಶ್ನೆ - ಶೇಷದೇವರ ಮಂತ್ರವನ್ನು ಜಪಿಸಬೇಕೆಂದು ಆಚಾರ್ಯರು ಹೇಳಿದ್ದಾರೆಯೇ ?

ಉತ್ತರ - 72 ಮಂತ್ರಗಳ ನಡುವೆ ಶೇಷಮಂತ್ರವನ್ನು ಜಪಿಸಬೇಕು ಎಂದು ಆಚಾರ್ಯರು ಹೇಳಿದ್ದಾರೆ.

ಪ್ರಶ್ನೆ - ಶೇಷದೇವರನ್ನು ಮೂರ್ತಿಯಲ್ಲಿ ಹೇಗೆ ಆವಾಹನೆ ಮಾಡಬೇಕು?

ಉತ್ತರ - ಈಗಾಗಲೇ ಮೇಲೆ ತಿಳಿಸಿದಂತೆ ತಂತ್ರಸಾರಸಂಗ್ರಹಮಂತ್ರವನ್ನು ಪಠನೆ ಮಾಡಿ ಶೇಷಮಂತ್ರವನ್ನು ಪಠಿಸಿ ಅನಂತರ ಹೀಗೆ ಉಚ್ಚರಿಸಬೇಕು-

ಏಹ್ಯೇಹಿ ಮಮ ಹೃತ್ಪದ್ಮಸ್ಥಿತ ಬಿಂಬರೂಪಿಣಂ ಶೇಷಾಂತರ್ಗತ-ಶ್ರೀಲಕ್ಷ್ಮೀನಾರಾಯಣಂ ಪೀಠಸ್ಥಿತೈತದ್ಧಾತು ಮಯಪ್ರತಿಮಾಂತಃಸ್ಥಿತ-ತೇಜಸ್ಸಾರಮಯಪ್ರತಿಮಾಂತಸ್ಥಿತಃ ಶ್ರೀಮುಖ್ಯಪ್ರಾಣಪ್ರತಿಮಾಮಧ್ಯೇ ರಮಯಾ ಸಹ ಕ್ಷೀರನೀರವದಾಸೀನನಂ ಸಂಕರ್ಷಣಂ ಪ್ರತಿಮಾಯಾಮಾವಾಹಯಾಮಿ ಓಂ ಶೇಂ ಶೇಷಾಯ ನಮಃ ಓಂ

ಪ್ರಶ್ನೆ - ಭಗವಂತನಿಗೆ ಒಬ್ಬೊಬ್ಬ ದೇವತೆಗಳು ಒಂದೊಂದು ಆಭರಣಗಳನ್ನು ಸಮರ್ಪಣೆ ಮಾಡುತ್ತಾರೆ. ಶೇಷದೇವರು ಯಾವ ಉಪಚಾರವನ್ನು ಸಮರ್ಪಣೆ ಮಾಡುತ್ತಾರೆ ?

ಉತ್ತರ - ಭಗವಂತನಿಗೆ ಶೇಷದೇವರು ಆಸನ ಹಾಗೂ ಕುಂಡಲಗಳನ್ನು ಸಮರ್ಪಣೆ ಮಾಡುತ್ತಾರೆ. ಆದ್ದರಿಂದ ಶೇಷಹಸ್ತೇನ ಆಸನಂ ಸಮರ್ಪಯಾಮಿ, ಶೇಷಹಸ್ತೇನ ಕುಂಡಲಂ ಸಮರ್ಪಯಾಮಿ ಎಂದು ದೇವರ ಪೂಜೆಯಲ್ಲಿ ಹೇಳಬೇಕು.

ಪ್ರಶ್ನೆ - ಭಗವಂತನ ಪೂಜೆಯನ್ನು ಮಾಡುವಾಗ ಆವರಣ ಪೂಜೆಯಲ್ಲಿ ಶೇಷದೇವರನ್ನು ಹೇಗೆ ಚಿಂತನೆ ಮಾಡಬೇಕು ?

ಉತ್ತರ - ಆರನೆಯ ಆವರಣ ಪೂಜೆಯನ್ನು ಮಾಡುವಾಗ ಪೂರ್ವದಿಕ್ಕಿನಲ್ಲಿ ಶೇಷದೇವರನ್ನು ಹೀಗೆ ಚಿಂತನೆ ಮಾಡಬೇಕು.

ಓಂ ಕಿರೀಟಾದಿವಿಭೂಷಿತಸೌಮ್ಯವಕ್ತ್ರಾಯ ಸಹಸ್ರಫಣಯುಕ್ತಾಯ ಶುಭ್ರವರ್ಣಾಯ ಮುಸಲಾಭಯಹಸ್ತಸ್ಥಿತಾಯ ಶ್ರೀಮದನಂತಾಯ ನಮಃ

ಹಾಗೂ ಏಳನೆಯ ಆವರಣ ಪೂಜೆಯಲ್ಲಿ ನಿಋತಿ ಹಾಗೂ ವರುಣರ ಮಧ್ಯದಲ್ಲಿ ಅಧೋಲೋಕದಲ್ಲಿ ಶೇಷದೇವರನ್ನು ಹೀಗೆ ಚಿಂತನೆ ಮಾಡಬೇಕು.

ಓಂ ಅಂ ಅನಂತಾಯ ಅನಂತಾಖ್ಯಶೇಷಾಯ ನಾಗಾಧಿಪತಯೇ ಕ್ಷೀರಸಾಗರನಿಭಾಯ ಶುಭ್ರವರ್ಣಾಯ ಫಣಾಮಣಿ-ಜ್ಯೋತಿರ್ವಿಭೂಷಿತಾಯ ನಾಗವಾಹನಾಯ ರಥಾಂಗಾಯುಧಾಯ ವಾರುಣೀಸಹಿತಾಯ ಸಹಸ್ರಫಣಾಯ ಸಪುತ್ರಾಯ ಸಪರಿವಾರಾಯ ಶ್ರೀವಿಷ್ಣುಪಾರ್ಷದಾಯ ನಮಃ

ಪ್ರಶ್ನೆ - ನೈವೇದ್ಯ ಕಾಲದಲ್ಲಿ ಶೇಷದೇವರು ಯಾವುದರಲ್ಲಿ ನೆಲೆಸಿರುತ್ತಾರೆ.

ಉತ್ತರ - 'ಶೇಷಸ್ತು ಫಲಶಾಕೇಷು ಪದ್ಮನಾಭಸ್ತು ದೇವತಾ' ಎಂಬಂತೆ ಹಣ್ಣು ಮತ್ತು ಕಾಯಿಪಲ್ಯಗಳಲ್ಲಿ ಶೇಷದೇವರು ಇರುತ್ತಾರೆ. ಪದ್ಮನಾಭನು ಅಲ್ಲಿ ದೇವತೆಯಾಗಿ ನೆಲೆಸಿರುತ್ತಾನೆ.

ಪ್ರಶ್ನೆ - ಭಗವದ್ಗೀತೆಯ ಹತ್ತನೆಯ ಅಧ್ಯಾಯದಲ್ಲಿ 'ಸರ್ಪಾಣಂ ಅಸ್ಮಿ ವಾಸುಕಿಃ' ಎಂದು ಕೃಷ್ಣಪರಮಾತ್ಮನು ಸರ್ಪಗಳಲ್ಲಿ ವಾಸುಕಿಯು ಶ್ರೇಷ್ಠ. ಅವನಲ್ಲಿ ನಾನು ವಿಭೂತಿರೂಪದಿಂದ ನೆಲೆಸಿದ್ದೇನೆಂದು ಹೇಳಿದ್ದಾನೆ. ಶೇಷದೇವರ ಬಗ್ಗೆ ಏಕೆ ಹೇಳಲಿಲ್ಲ ?

ಉತ್ತರ - ಒಂದು ಹೆಡೆ ಹಾವುಗಳನ್ನು ಸರ್ಪವೆನ್ನುತ್ತಾರೆ. ಅವುಗಳಲ್ಲಿ ವಾಸಕಿಯೇ ಶ್ರೇಷ್ಠನಾಗಿದ್ದಾನೆ. ಅಂಥ ವಾಸುಕಿಯಲ್ಲಿ ಕೃಷ್ಣನ ವಿಭೂತಿರೂಪವಿದೆ. ಅನೇಕ ಹೆಡೆಗಳಿದ್ದರೆ ನಾಗ ಎಂದು ಕರೆಯುತ್ತಾರೆ. ಅವುಗಳಲ್ಲಿ ಕೃಷ್ಣಪರಮಾತ್ಮನು ಶೇಷದೇವರಲ್ಲಿ ನೆಲೆಸಿದ್ದಾನೆ. ಆದ್ದರಿಂದ ಅಲ್ಲೇ ಮುಂದೆ 'ಅನಂತಶ್ಚಾಸ್ಮಿ ನಾಗಾನಾಂ' ಎಂಬುದಾಗಿ ಶೇಷದೇವರಲ್ಲಿ ತಾನು ಅನಂತನಾಮಕನಾಗಿ ನೆಲೆಸಿದ್ದೇನೆಂದು ಹೇಳಿರುತ್ತಾನೆ. ಹೀಗೆ ಭಗವಂತನ ವಿಭೂತಿರೂಪವಿರುವ ಶೇಷದೇವರ ಮಹಿಮೆ ಕಲ್ಪನಾತೀತ.

ಪ್ರಶ್ನೆ - ಸ್ವೋತ್ತಮರಾದ ಚತುರ್ಮುಖಬ್ರಹ್ಮ ವಾಯುದೇವರಲ್ಲಿ ಈ ಶೇಷಶಾಯಿತ್ವ, ಗರುಡಾರೂಢತ್ವ ಎಂಬ ಧರ್ಮ ಏಕೆ ಬರುವುದಿಲ್ಲ?

ಉತ್ತರ - ಇದಕ್ಕೆ ಯುಕ್ತಿಮಲ್ಲಿಕೆಯಲ್ಲಿ ರಾಜರು ಸುಂದರವಾಗಿ ಉತ್ತರಿಸಿದ್ದಾರೆ-
'ನ ರಾಜವಾಹನಂ ಕಾಂಕ್ಷೇತ್ ನ ತತ್ಸಿಂಹಾಸನಂ ಭಟಃ ।
ಗರುಡಾರೂಢತಾ ಶೇಷಶಾಯಿತಾ ತತ್ ಕದಾಪಿ ನ ॥'

ರಾಜನಿಗೆ ಸೇವಕನ ಬಗ್ಗೆ ಎಷ್ಟೆ ಅಭಿಮಾನವಿದ್ದರೂ ಸೇವಕನು ರಾಜನ ಆಸನವನ್ನು ಅಥವಾ ವಾಹನವನ್ನು ಅಪೇಕ್ಷೆ ಪಡುವುದಿಲ್ಲ. ದೊರಕುವುದೂ ಇಲ್ಲ. ಆದರಂತೆ ಶ್ರೀಹರಿಯಲ್ಲಿರುವ ಗರುಡವಾಹನತ್ವ ಶೇಷಶಾಯಿತ್ವಗಳು ಇತರರಿಗೆ ಎಂದೂ ಲಭ್ಯವಾಗುವುದಿಲ್ಲ.

ಪ್ರಶ್ನೆ - ಶೇಷದೇವರ ಅದ್ಭುತ ಮಹಿಮೆ ಯಾವುದು ?

ಉತ್ತರ - ಚತುರ್ಭುಜತ್ವ, ಶಂಖಚಕ್ರಾದಿಧರತ್ವ, ಪಿತಾಂಬರಧಾರಿತ್ವ, ಇವೆಲ್ಲವೂ ಅಸಾಧಾರಣಲಕ್ಷಣವಲ್ಲ. ಮುಕ್ತರಾದವರೆಲ್ಲರಲ್ಲೂ ಈ ಲಕ್ಷಣಗಳಿವೆ. ಆದರೆ ಶೇಷಶಾಯಿತ್ವ, ಗರುಡವಾಹನತ್ವ, ಶ್ರೀವತ್ಸಾಂಕಿತತ್ವ ಮೊದಲಾದವುಗಳು ಭಗವಂತನ ಅಸಾಧಾರಣಲಕ್ಷಣಗಳಾಗಿವೆ, ಗರುಡದೇವರ, ಶೇಷದೇವರ ಮಹಿಮೆ ಅದ್ಭುತ.

ಪ್ರಶ್ನೆ - ಶೇಷದೇವರು ಹಾಸಿಗೆ ಆಗಿರುತ್ತಾರೆ. ಆಸನವಾಗಿರುತ್ತಾರೆ. ಪಾದುಕೆಗಳಾಗಿರುತ್ತಾರೆ ಎಂದೆಲ್ಲಾ ತಿಳಿದಿದ್ದಾಯಿತು. ಇನ್ನೂ ಯಾವ ರೀತಿಯಲ್ಲಿ ಭಗವಂತನನ್ನು ಧಾರಣೆ ಮಾಡುತ್ತಾರೆ ?

ಉತ್ತರ - ಲಕ್ಷ್ಮೀನಾರಾಯಣರ ವಿವಾಹಕಾಲದಲ್ಲಿ ಶೇಷದೇವರೇ ಹಸೆಮಣೆ-ಯಾಗಿರುತ್ತಾರೆ. ಅಷ್ಟೇ ಅಲ್ಲದೆ ಲಕ್ಷ್ಮೀನಾರಾಯಣರು ಕುಳಿತಿರುವ ಯೋಗಪೀಠಸ್ವರೂಪರೂ ಆಗಿದ್ದಾರೆ. ಆದ್ದರಿಂದಲೇ ಪೀಠಪೂಜೆಯಲ್ಲಿ 'ಶ್ರೀಲಕ್ಷ್ಮೀನಾರಾಯಣಸ್ಯ ಯೋಗಪೀಠಾತ್ಮನೇ ಶ್ರೀಮದನಂತಾಯ ನಮಃ' ಎಂದು ಹೇಳುತ್ತೇವೆ.

ಪ್ರಶ್ನೆ - ಶೇಷದೇವರು ಭಗವಂತನಿಗೆ ಹಾಸಿಗೆಯಾದಾಗ ಅವರ ಹೆಡೆಗಳು ಹೇಗೆ ಇರುತ್ತವೆ?

ಉತ್ತರ - ಇದೊಂದು ಅದ್ಭುತ ದೃಶ್ಯ. ದಕ್ಷಿಣದಿಕ್ಕಿನ ಹೆಡೆ ಶ್ರೀಹರಿಗೆ ತಲೆದಿಂಬಾಗಿರುತ್ತದೆ. ಉತ್ತರ ದಿಕ್ಕಿನ ಹೆಡೆ ಕಾಲುಗಳಿಗೆ ದಿಂಬಾಗಿರುತ್ತದೆ.

ಪಶ್ಚಿಮದಿಕ್ಕಿನ ಹೆಡೆ ಬೀಸಣಿಗೆಯಾಗಿರುತ್ತದೆ. ಈಶಾನ್ಯದ ಹೆಡೆ ಭಗವಂತನ ಶಂಖ, ಚಕ್ರ, ಗದಾ, ಖಡ್ಗ, ಎರಡು ಬತ್ತಳಿಕೆಗಳನ್ನು ಧರಿಸಿದೆ. ಆಗ್ನೇಯದ ಹೆಡೆ ಗದಾ, ಪದ್ಮ, ಶಾಂರ್ಜ್ಗಧನುಸ್ಸು ಮೊದಲಾದ ಆಯುಧಗಳನ್ನು ಧರಿಸಿದೆ. ಹೀಗೆ ಭಗವಂತನನ್ನು ಮಲಗಿಸಿಕೊಂಡಿರುವ ಶೇಷದೇವರ ಚಿತ್ರವನ್ನು ಮನಸ್ಸಿಗೆ ತಂದುಕೊಳ್ಳಬೇಕು.

ಪ್ರಶ್ನೆ - ಶೇಷದೇವರು ಕಕ್ಷ್ಯಾತಾರತಮ್ಯ ಎಲ್ಲಿದ್ದಾರೆ ?

ಉತ್ತರ - ಹರಿಕಥಾಮೃತಸಾರದ 21 ಸಂಧಿಯಲ್ಲಿ ಶೇಷದೇವರ ತಾರತಮ್ಯವನ್ನು ಹೀಗೆ ಹೇಳಿದ್ದಾರೆ - 'ಗರುಡಶೇಷ ಶಶಾಂಕದಳ ಶೇಖರರು ತಮ್ಮೊಳು ಸಮರು ಭಾರತಿ ಸರಸಿಜಾಸನಪತ್ನಿಗಧಮರು ನೂರು ಗುಣದಿಂದ' ಗರುಡ ಶೇಷ ರುದ್ರರು ಸಮಾನಕಕ್ಷ್ಯೆಯಲ್ಲಿದ್ದಾರೆ. ಸಾಧನೆಯಲ್ಲಿ ಶೇಷದೇವರು ರುದ್ರದೇವರಿಗಿಂತ ಕಿಂಚಿತ್ ಉತ್ತಮರಾಗಿದ್ದಾರೆ. ಈ ಗರುಡ ಶೇಷ ರುದ್ರರು ಸರಸ್ವತೀ ಭಾರತಿಯರಿಗಿಂತ ನೂರು ಗುಣದಿಂದ ಹೀನರಾಗಿದ್ದಾರೆ. 5 ನೇ ಕಕ್ಷ್ಯೆಯಲ್ಲಿ ನಿಂತಿದ್ದಾರೆ.

ಪ್ರಶ್ನೆ - ಶೇಷದೇವರ ಅವತಾರಗಳೆಷ್ಟು ?

ಉತ್ತರ - ಭಗವಂತನು ನಾರಾಯಣನಾಗಿ ಅವತರಿಸಿದಾಗ ಶೇಷದೇವರು ನರರೂಪದಿಂದ ಅವತರಿಸಿದರು. ರಾಮಾವಾತಾರ ಮಾಡಿದಾಗ ಲಕ್ಷ್ಮಣನಾಗಿ ಅವತರಿಸಿದರು. ಕೃಷ್ಣಾವತಾರ ಮಾಡಿದಾಗ ಬಲದೇವನಾಗಿ ಅವತರಿಸಿದರು.

ಪ್ರಶ್ನೆ - ಶೇಷದೇವರ ಸಾಧನೆ ಎಷ್ಟು ಕಲ್ಪ ?

ಉತ್ತರ - 50 ಮಹಾಕಲ್ಪ. ಪದವಿಯ ಪೂರ್ವದಲ್ಲೂ 50 ಕಲ್ಪ.

ಪ್ರಶ್ನೆ - ನಮ್ಮ ಶರೀರದಲ್ಲಿ ಶೇಷದೇವರು ಯಾವುದಕ್ಕೆ ಅಭಿಮಾನಿಗಳು?

ಉತ್ತರ - ಮುಖ್ಯವಾಗಿ ಜೀವಸ್ವರೂಪಕ್ಕೆ ಅಭಿಮಾನಿಗಳು. ಮತ್ತು ಪ್ರಾಣಮಯಕೋಶಕ್ಕೆ ಅಭಿಮಾನಿಗಳು, ಹಾಗೂ ಶರೀರದಲ್ಲಿರುವ ಅಹಂಕಾರತತ್ವಕ್ಕೆ ಅಭಿಮಾನಿಗಳು.

ಪ್ರಶ್ನೆ - ಶರೀರದಲ್ಲಷ್ಟೆ ಅಲ್ಲದೆ ಇನ್ನೆಲ್ಲಿ ಶೇಷದೇವರನ್ನು ಅಭಿಮಾನಿಗಳಾಗಿ ಚಿಂತಿಸಬೇಕು ?

ಉತ್ತರ - ಛಂದಸ್ಸುಗಳಿಗೆ ಶೇಷದೇವರು ಅಭಿಮಾನಿಗಳು. ಹಾಗೂ ಪೌರುಷೇಯಗ್ರಂಥಗಳಿಗೆ ಅಭಿಮಾನಿಗಳು. ಆದ್ದರಿಂದ ಛಂದಃಶಾಸ್ತ್ರದ ಅಧ್ಯಯನ ಸಂದರ್ಭದಲ್ಲಿ ಮಹಾಭಾರತವೇ ಮೊದಲಾದ ಯಾವುದೇ ಪೌರುಷೇಯಗ್ರಂಥಗಳ ಅಧ್ಯಯನಸಂದರ್ಭದಲ್ಲಿ ಶೇಷದೇವರನ್ನು ಅವಶ್ಯವಾಗಿ ನಮಸ್ಕಾರ ಮಾಡಬೇಕು. ಆದ್ದರಿಂದಲೇ ಮಹಾಭಾರತದ ಪ್ರಾರಂಭದಲ್ಲಿ 'ನರಂ ಚೈವ ನರೋತ್ತಮಮ್' ಎಂದು ಶೇಷದೇವರನ್ನು ವೇದವ್ಯಾಸದೇವರು ನಮಸ್ಕರಿಸಿದ್ದಾರೆ.

ಪ್ರಶ್ನೆ - ಈ ವಿಷಯವನ್ನು ಮತ್ತಷ್ಟು ಸ್ಪಷ್ಟಪಡಿಸಬಹುದೇ ?

ಉತ್ತರ - ಒಟ್ಟು ನಾಕು ಪುರುಷರು. ಶರೀರಪುರುಷ, ಛಂದಃಪುರುಷ, ವೇದಪುರುಷ, ಸಂವತ್ಸರಪುರುಷ. ಈ ನಾಕು ಪುರುಷರನ್ನು ಉಪನಿಷತ್ತು 'ಚತ್ವಾರಃ ಪುರುಷಃ ಇತಿ ಬಾಧ್ವಃ' ಎನ್ನುತ್ತದೆ. ಅನ್ನಮಯಕೋಶಕ್ಕೆ ಆಧಾರನಾದ ವಾಗಭಿಮಾನಿಯಾದ ರುದ್ರನು ಶರೀರಪುರುಷ ಎನಿಸುತ್ತಾನೆ. ಪ್ರಾಣಮಯಕೋಶಕ್ಕೆ ಆಧಾರನಾದ ಮನೋಭಿಮಾನಿಯಾದ ಶೇಷನು ಛಂದಃಪುರುಷ ಎಂದು ಕರೆಸಿಕೊಳ್ಳುತ್ತಾನೆ. ಮನೋಮಯಕೋಶಕ್ಕೆ ಆಧಾರನಾದ ಬುದ್ಧ್ಯಭಿಮಾನಿಯಾದ ಗರುಡನು ವೇದಪುರುಷ ಎಂದು ಕರೆಸಿಕೊಳ್ಳುತ್ತಾನೆ. ವಿಜ್ಞಾನಮಯಕೋಶಕ್ಕೆ ಆಧಾರರಾದ ಚೇತನಾಭಿಮಾನಿಗಳಾದ ಬ್ರಹ್ಮವಾಯುಗಳು ಸಂವತ್ಸರಪುರುಷರೆಂದು ಕರೆಸಿಕೊಳ್ಳುತ್ತಾರೆ. ಗರುಡ, ಶೇಷ, ರುದ್ರರು ನರ ಎಂಬ ಶಬ್ದದಿಂದ ಪ್ರತಿಪಾದ್ಯರಾಗಿದ್ದಾರೆ. ಬ್ರಹ್ಮವಾಯುಗಳು ನರೋತ್ತಮ ಎಂಬ ಶಬ್ದದಿಂದ ಪ್ರತಿಪಾದ್ಯರಾಗಿದ್ದಾರೆ. ಇಷ್ಟನ್ನು 'ನರಂ ಚೈವ ನರೋತ್ತಮಂ' ಎಂದು ಪಠಿಸುವಾಗ ಅನುಸಂಧಾನ ಮಾಡಬೇಕು.

ಪ್ರಶ್ನೆ - ಸ್ವತಃ ಶೇಷದೇವರೇ ಉಪದೇಶ ಮಾಡಿದ ಶಾಸ್ತ್ರ ಯಾವುದು?

ಉತ್ತರ - ಪಂಚರಾತ್ರದಲ್ಲಿ ಶೇಷಸಂಹಿತೆಯು ಪ್ರಸಿದ್ಧವಾಗಿದೆ. ನಾರದರಿಗೆ ಸ್ವತಃ ಶೇಷದೇವರೇ ಇದನ್ನು ಉಪದೇಶ ಮಾಡಿದ್ದಾರೆ.

ಪ್ರಶ್ನೆ - ಶೇಷಸಂಹಿತೆಯಲ್ಲಿ ಏನು ಹೇಳಿದ್ದಾರೆ ?

ಉತ್ತರ - ಎಲ್ಲಾ ಮಂತ್ರಗಳು, ತಂತ್ರಗಳು, ಹಾಗೂ ಪೂಜಾಕ್ರಮಗಳು ಆಯಾ ವರ್ಣಾಶ್ರಮಗಳಿಗೆ ಉಚಿತವಾದ ಸಂಪ್ರದಾಯಪದ್ಧತಿ ಇವುಗಳನ್ನು ಶೇಷದೇವರು ತಿಳಿಸಿಕೊಟ್ಟಿದ್ದಾರೆ.

ಪ್ರಶ್ನೆ - ಶೇಷದೇವರಿಗೆ ಅತ್ಯಂತ ಇಷ್ಟವಾದ ಗ್ರಂಥ ಯಾವುದು?

ಉತ್ತರ - ಮಧ್ವವಿಜಯದ 11ನೇ ಸರ್ಗವನ್ನು ಗಮನಿಸಿದಾಗ ಶ್ರೀಮಧ್ವಾಚಾರ್ಯರು ರಚನೆ ಮಾಡಿದ ಬ್ರಹ್ಮಸೂತ್ರಭಾಷ್ಯವು ಶೇಷದೇವರಿಗೆ ಅತ್ಯಂತ ಇಷ್ಟವೆಂದು ತಿಳಿಯುತ್ತದೆ. ಎಲ್ಲ ಶಿಷ್ಯಂದಿರಿಗೆ ಶ್ರೀಮಧ್ವಾಚಾರ್ಯರು ಬ್ರಹ್ಮಸೂತ್ರ ಭಾಷ್ಯವನ್ನು ಪಾಠ ಮಾಡುತ್ತಿರುವಾಗ ಸನಕಾದಿಮುನಿಗಳನ್ನು ಕರೆದುಕೊಂಡು ಗಗನಮಾರ್ಗದಲ್ಲಿ ನಿಂತು ಆಚಾರ್ಯರ ಬ್ರಹ್ಮಸೂತ್ರಭಾಷ್ಯದ ಪಾಠವನ್ನು ಶೇಷದೇವರು ಕೇಳುತ್ತಿದ್ದರೆಂದು ಹೇಳುತ್ತಾರೆ - 'ಪ್ರಚುರಾಂತರಪ್ರವಚನಂ ಫಣಿರಾಟ್ ಉಪಶುಶ್ರುವಾನ್ ಸಸನಕಾದಿಮುನಿಃ' (ಮಧ್ವವಿ-11)

ಪ್ರಶ್ನೆ - ಗರುಡಮಾರ್ಗ ಶೇಷಮಾರ್ಗದ ಬಗ್ಗೆ ತಿಳಿಯಬೇಕೆಂದು ತುಂಬಾ ಕುತೂಹಲವಿದೆ. ಇದರ ಬಗ್ಗೆ ನಿಖರವಾಗಿ ತಿಳಿಸುವಿರಾ?

ಉತ್ತರ - ಬ್ರಹ್ಮಸೂತ್ರದ ನಾಕನೇ ಅಧ್ಯಾಯದ ಎರಡನೇ ಪಾದದ ಏಳನೇ ಅಧಿಕರಣಕ್ಕೆ ಪರಾಧಿಕರಣ ಎಂದು ಹೆಸರು. ಅಲ್ಲಿ ಈ ವಿಷಯವು ಸ್ಪಷ್ಟವಾಗಿ ನಿರೂಪಿತವಾಗಿದೆ. ಸಕಲ ದೇವತೆಗಳು ಮುಕ್ತಿಕಾಲದಲ್ಲಿ ಬ್ರಹ್ಮದೇವರ ಮೂಲಕ ಪರಮಾತ್ಮನ ಮೂಲಕ ಲಯ ಹೊಂದುತ್ತಾರೆ. ಈ ಬ್ರಹ್ಮದೇವರಲ್ಲಿ ಲಯ ಹೊಂದಲು ಎರಡು ಮಾರ್ಗಗಳಿವೆ. 1. ಶೇಷಮಾರ್ಗ, 2. ಗರುಡಮಾರ್ಗ ಎಂದು. ಗಂಧರ್ವರು ಶೇಷಮಾರ್ಗದ ಮೂಲಕ ಬ್ರಹ್ಮದೇವರಲ್ಲಿ ಲಯ ಹೊಂದುತ್ತಾರೆ. ಪಿತೃದೇವತೆಗಳು ಗರುಡಮಾರ್ಗದ ಮೂಲಕ ಬ್ರಹ್ಮದೇವರಲ್ಲಿ ಲಯ ಹೊಂದುತ್ತಾರೆ.

ವಿವರವನ್ನು ಹೀಗೆ ತಿಳಿಯಬೇಕು - ಗಂಧರ್ವರು ಕುಬೇರನಲ್ಲಿ, ಕುಬೇರ ಮತ್ತು ವರುಣರು ಚಂದ್ರನಲ್ಲಿ, ಚಂದ್ರ ಮತ್ತು ವಿಶ್ವಕ್ಸೇನರು ಅನಿರುದ್ಧನಲ್ಲಿ, ಅನಿರುದ್ಧ ಸನಕಾದಿಗಳು ಪ್ರದ್ಯುಮ್ನನಲ್ಲಿ, ಪ್ರದ್ಯುಮ್ನನು ವಾರುಣಿಯಲ್ಲಿ, ವಾರುಣಿಯು ಶೇಷನಲ್ಲಿ ಲಯವನ್ನು ಹೊಂದುವಳು. ಶೇಷದೇವರು ಬ್ರಹ್ಮದೇವರಲ್ಲಿ ಲಯವನ್ನು ಹೊಂದುತ್ತಾರೆ. ಇದುವೇ ಶೇಷಮಾರ್ಗ.

ಪ್ರಶ್ನೆ - ಗರುಡಮಾರ್ಗದಲ್ಲಿ ಪಿತೃದೇವತೆಗಳೇ ಮೊದಲಾದವರು ಯಾವ ಕ್ರಮದಲ್ಲಿ ಲಯವನ್ನು ಹೊಂದುತ್ತಾರೆ?

ಉತ್ತರ - ಅಗ್ನಿದೇವತೆಯು ಸೂರ್ಯನಲ್ಲಿ, ಸೂರ್ಯ ಮೊದಲಾದ ದೇವತೆಗಳು ಬೃಹಸ್ಪತಿಯಲ್ಲಿ, ಭೃಗು ಮೊದಲಾದ ಮುನಿಗಳು ದಕ್ಷನಲ್ಲಿ ಲಯವನ್ನು ಹೊಂದುತ್ತಾರೆ. ಪಿತೃದೇವತೆಗಳು ಹಾಗೂ ನಿರ್ಋತಿಗಳು ಯಮದೇವರಲ್ಲಿ, ಯಮದೇವರು ವೈವಸ್ವತಮನುವಿನಲ್ಲಿ ಪ್ರಿಯವ್ರತ ಮೊದಲಾದ ಚಕ್ರವರ್ತಿಗಳು ಸ್ವಾಯಂಭುವಮನುವಿನಲ್ಲಿ ಪ್ರವೇಶವನ್ನು ಹೊಂದುತ್ತಾರೆ. ಸ್ವಾಯಂಭುವಮನು, ಬೃಹಸ್ಪತಿ, ದಕ್ಷ ಇವರೇ ಮೊದಲಾದವರು ಹಾಗೂ ಮರುದ್ಗಣಗಳು ಇಂದ್ರದೇವರಲ್ಲಿ, ಇಂದ್ರದೇವರು ಸೌಪರ್ಣಿಯಲ್ಲಿ ಸೌಪರ್ಣಿಯು ಗರುಡನಲ್ಲಿ ಲಯವನ್ನು ಹೊಂದುತ್ತಾರೆ. ಆ ಗರುಡದೇವರು ಬ್ರಹ್ಮದೇವರಲ್ಲಿ ಲೀನರಾಗುತ್ತಾರೆ. ಹೀಗೆ ಶೇಷಮಾರ್ಗದಿಂದ ಹಾಗೂ ಗರುಡಮಾರ್ಗದಿಂದ ಬಂದ ಎಲ್ಲ ದೇವತೆಗಳ ಜೊತೆ ಬ್ರಹ್ಮದೇವರು ಪರಮಾತ್ಮರನ್ನು ಹೊಂದುತ್ತಾರೆ. ಈ ಲಯ ಹೊಂದುವ ಸಂದರ್ಭದಲ್ಲಿ ಎಲ್ಲ ದೇವತೆಗಳು ಸಂಪೂರ್ಣವಾದ ಸ್ವರೂಪಾನಂದದ ಅನುಭವವನ್ನು ಪಡೆಯುತ್ತಾರೆ. ಇದನ್ನೇ ಸಾಯುಜ್ಯಮೋಕ್ಷವೆಂದು ಶಾಸ್ತ್ರದಲ್ಲಿ ಕರೆಯಲಾಗಿದೆ.

ಪ್ರಶ್ನೆ - ಜೀವರಿಗೆ ಶೇಷಮಾರ್ಗದಲ್ಲಿ ಮೋಕ್ಷವೋ? ಗರುಡಮಾರ್ಗದಲ್ಲಿ ಮೋಕ್ಷವೋ ?

ಉತ್ತರ - ಸಮಸ್ತ ದೇವತೆಗಳಿಗೆ ಮಾತ್ರ ಗರುಡಮಾರ್ಗದಲ್ಲಿ ಪ್ರವೇಶ.

ಜೀವರುಗಳಿಗೆ ಶೇಷಮಾರ್ಗದಲ್ಲಿ ಪ್ರವೇಶ. ಆದ್ದರಿಂದ ಶೇಷದೇವರನ್ನೇ ವಿಶೇಷವಾಗಿ ಆರಾಧನೆ ಮಾಡಬೇಕು.

ಪ್ರಶ್ನೆ - ಇಂಥ ಶೇಷಮಾರ್ಗದಲ್ಲಿ ತೆರಳಲು ಹೇಗೆ ಸಾಧನೆ ಮಾಡಬೇಕು?

ಉತ್ತರ - ಬ್ರಹ್ಮಸೂತ್ರಭಾಷ್ಯವೇ ಮೊದಲಾದ ಶ್ರೀಮಧ್ವಾಚಾರ್ಯರ ಗ್ರಂಥಗಳನ್ನು ಚೆನ್ನಾಗಿ ಅಧ್ಯಯನ ಮಾಡಬೇಕು. ಅನಂತರ ಜ್ಞಾನಿಯಾಗಿ ಭಗವಂತನನ್ನು ನಿರಂತರವಾಗಿ ಧ್ಯಾನಗೈಯುತ್ತಿರಬೇಕು. ಧ್ಯಾನ ಮಾಡುತ್ತಿರುವಾಗ ಹೃದಯದಲ್ಲಿ ಅಷ್ಟದಳ ಕಮಲದಲ್ಲಿರುವ ಶೇಷದೇವರನ್ನೇ ಆಸನವನ್ನಾಗಿಸಿಕೊಂಡು ಕುಳಿತಿರುವ ಲಕ್ಷ್ಮೀನಾರಾಯಣರ ಚಿಂತನೆಯನ್ನು ಮಾಡಬೇಕು.

ಪ್ರಶ್ನೆ - ಮೂಲಾಧಾರದ ಸಿದ್ಧಿಗಾಗಿ ಶೇಷದೇವರ ಅನುಗ್ರಹ ಪಡೆಯಬೇಕೆನ್ನುತ್ತಾರೆ. ಹೌದಲ್ಲವೆ ?

ಉತ್ತರ - ಮೂಲಾಧಾರದಲ್ಲಿ ನಾಕುದಳ ಕಮಲದಲ್ಲಿ ಭಗವಂತನು ನೆಲೆಸಿದ್ದಾನೆ. ಮೂಲಾಧಾರದಲ್ಲಿ ಕುಂಡಲಿನೀಶಕ್ತಿ ಇದೆ. ಇದನ್ನು ಜಾಗೃತಿಗೊಳಿಸಿದರೆ ಮಾತ್ರ ಮುಂದಿನ ಧ್ಯಾನ ಮಾರ್ಗವು ಸುಲಭವಾಗುತ್ತದೆ. ಕುಂಡಲಿನೀ ಶಕ್ತಿಯು ಜಾಗೃತವಾಗಬೇಕೆಂದರೆ ತದಭಿಮಾನಿಯಾದ ಶೇಷದೇವರ ಅನುಗ್ರಹವೇ ಬೇಕು. ಇದರ ಸಿದ್ಧಿಗಾಗಿ ಶೇಷದೇವರನ್ನು ಮೊರೆ ಹೊಂದಬೇಕು.

ಪ್ರಶ್ನೆ - ಯಾವ ಚಕ್ರದಲ್ಲಿ ಶೇಷದೇವರು ವಿಶೇಷವಾಗಿ ಅಭಿಮಾನಿಗಳಾಗಿದ್ದಾರೆ?

ಉತ್ತರ - ವಿಜಯದಾಸರ ಸುಳಾದಿಯ ಪ್ರಕಾರ ನಾಭಿಯ ಕೆಳಗೆ ಸ್ವಾಯಂಭುವಮನು ಇದ್ದಾನೆ. ನಾಭಿಯಲ್ಲಿ ಗಣಪತಿಯು, ಹೃದಯದಲ್ಲಿ ಇಂದ್ರ , ಹೃದಯದ ಮೇಲ್‌ಭಾಗದಲ್ಲಿ ರುದ್ರ, ಕಂಠಪ್ರದೇಶದಲ್ಲಿ ಶೇಷದೇವರು, ಭ್ರೂಮಧ್ಯದಲ್ಲಿ ಗರುಡದೇವರು, ಶಿರಸ್ಸಿನಲ್ಲಿ ಬ್ರಹ್ಮದೇವರು ಅಭಿಮಾನಿಗಳಾಗಿ ನೆಲೆಸಿದ್ದಾರೆ. ಕಂಠಪ್ರದೇಶದಲ್ಲಿ ಷೋಡಷದಳ ಕಮಲದಲ್ಲಿ ಹದಿನಾರು ಚಂದ್ರನ ಕಲಾಭಿಮಾನಿಗಳು ಇದ್ದಾರೆ. ಮಧ್ಯದಲ್ಲಿ ಶೇಷದೇವರು ಅಭಿಮಾನಿಗಳಾಗಿದ್ದು ಭಗವಂತನನ್ನು ಧಾರಣೆ ಮಾಡಿದ್ದಾರೆ ಎಂದು

ಹೇಳುತ್ತಾರೆ. ಆದರೆ ಇಂದ್ರಯೋನಿಯಲ್ಲಿ ದ್ವಿದಳ ಕಮಲವಿದೆ ಎಂಬುದಾಗಿ ತಂತ್ರಸಾರ ಸಂಗ್ರಹದಲ್ಲಿ ಆಚಾರ್ಯರು ಹೇಳಿದ್ದಾರೆ. ಬಹುಶಃ ಕಂಠದಲ್ಲೇ ಎರಡು ಸ್ಥಳಗಳಿದ್ದು ಒಂದನ್ನು ಆಚಾರ್ಯರು ಹೇಳಿರುತ್ತಾರೆ. ಮತ್ತೊಂದನ್ನು ಶ್ರೀವಿಜಯದಾಸರು ಹೇಳಿರುತ್ತಾರೆಂದು ತಿಳಿಯಬಹುದು. ಅಷ್ಟೇ ಅಲ್ಲದೆ ಕೆಲವು ನಾಡಿಗಳಿಗೆ ಶೇಷದೇವರು ಕೂಡ ಅಭಿಮಾನಿಯಾಗಿದ್ದಾರೆ. ಇಂಥ ಶೇಷದೇವರ ಅನುಗ್ರಹವನ್ನು ಪಡೆದು ಕೊಂಡು ಧನ್ಯರಾಗೋಣ.

ಪ್ರಶ್ನೆ - ಕ್ಷೀರಸಾಗರಮಥನಕಾಲದಲ್ಲಿ ಶೇಷದೇವರೇ ಮೇರು ಪರ್ವತವನ್ನು ಕಿತ್ತು ತೆಗೆದರು ಎನ್ನುತ್ತಾರೆ ಇದು ಸರಿಯೆ?

ಉತ್ತರ - ಬಂಗಾರದ ಪರ್ವತವನ್ನು ಗರುಡದೇವರು ಕಿತ್ತರು ಎಂದು ಕೆಲವು ವ್ಯಾಖ್ಯಾನಕಾರರು ಹೇಳುತ್ತಾರೆ. ಇನ್ನು ಕೆಲವು ವ್ಯಾಖ್ಯಾನಕಾರರು ಶೇಷದೇವರು ಕಿತ್ತು ತೆಗೆದರು ಎಂದು ಹೇಳುತ್ತಾರೆ. ಮೇರುಪರ್ವತವನ್ನು ತೆಗೆದುಕೊಂಡು ಹೋಗಿದ್ದು ಗರುಡದೇವರೇ ಆಗಿದ್ದಾರೆ. ಈ ವಿಷಯದಲ್ಲಿ ಮಾತ್ರ ವಿಪ್ರತಿಪತ್ತಿ ಇಲ್ಲ.

ಪ್ರಶ್ನೆ - ಹಿಂದೆ ಶೇಷದೇವರಿಗೆ ವಾಸುಕಿ ಎಂಬ ಹೆಸರಿದೆ ಎಂದು ಹೇಳಿದಿರಿ. ಹಾಗಾದರೆ ಮಂದರಪರ್ವತಕ್ಕೆ ಹಗ್ಗವಾಗಿದ್ದ ವಾಸುಕಿ ಎಂದರೆ ಶೇಷದೇವರೇ ಏಕಾಗಿರಬಾರದು?

ಉತ್ತರ - ಹಾಗೆ ಎಲ್ಲೂ ಆಧಾರವಿಲ್ಲ ಶೇಷದೇವರ ತಮ್ಮನಾದ ವಾಸುಕಿಯೇ ಹಗ್ಗವಾಗಿದ್ದನೆಂದು ಹೇಳಬೇಕು.

ಪ್ರಶ್ನೆ - ಭಗವಂತನ ಸೇವೆಯಲ್ಲಿ ಶೇಷದೇವರ ಸ್ಥಾನ ಎಷ್ಟನೆಯದ್ದು ?

ಉತ್ತರ - ತಾತ್ಪರ್ಯನಿರ್ಣಯದ ಎರಡನೇ ಅಧ್ಯಾಯದಲ್ಲಿ ಇದಕ್ಕೆ ಉತ್ತರಿಸಿದ್ದಾರೆ. 'ತಸ್ಯಾಂಗಂ ಪ್ರಥಮಂ ವಾಯುಃ' ಎಂಬುದಾಗಿ ವಾಯುದೇವರು ಪ್ರಧಾನಸೇವಕರಾಗಿದ್ದಾರೆ. 'ದ್ವಿತೀಯಾಂಗಂ ಸರಸ್ವತೀ' ಎಂಬಂತೆ ಭಾರತಿಯು ಎರಡನೆಯ ಸೇವಕಳಾಗಿದ್ದಾಳೆ. 'ತೃತೀಯಾಂಗಂ ಹರೇಃ ಶೇಷಃ ಪ್ರಾದುರ್ಭಾವಸಮನ್ವಿತಃ' ಎಂಬಂತೆ

ಶ್ರೀಹರಿಯ ಕಾರ್ಯಸಾಧನೆಯಲ್ಲಿ ಶೇಷದೇವರು ಮೂರನೆಯ ಸೇವಕರಾಗಿದ್ದಾರೆ.

ಪ್ರಶ್ನೆ - ಯಾವ ರೀತಿಯಲ್ಲಿ ಶೇಷದೇವರು ಭಗವಂತನ ಸೇವಕರಾಗಿದ್ದಾರೆಂದು ತಿಳಿಯಬೇಕು ?

ಉತ್ತರ - ಮೂಲರೂಪದಲ್ಲಷ್ಟೇ ಅಲ್ಲದೆ ಅವತಾರ ರೂಪಗಳಲ್ಲೂ ಕೂಡ ಶೇಷದೇವರು ಪ್ರಧಾನಸೇವಕರಾಗಿದ್ದಾರೆ. 'ಪ್ರಾರ್ದುಭಾವನರಶ್ಚೈವ ಲಕ್ಷ್ಮಣೋ ಬಲ ಏವ ಚ' ನರ ಲಕ್ಷ್ಮಣ ಬಲರಾಮ ಈ ಮೂರು ಅವತಾರಗಳಿಂದ ಭಗವಂತನ ಸೇವೆಯನ್ನು ಮಾಡುವುದರಲ್ಲಿ ಮೂರನೇ ಸ್ಥಾನಗಳಿಸಿದ್ದಾರೆ.

ಪ್ರಶ್ನೆ - ಶೇಷದೇವರು ಕೇವಲ ಮೂರು ಅವತಾರಗಳಷ್ಟೆ ಮಾಡಿದಾರೆಯೇ? ಅಥವಾ ಇನ್ನು ಬೇರೆ ಅವತಾರಗಳು ಇವೆಯೇ ?

ಉತ್ತರ - ಇದಕ್ಕೂ ಕೂಡ ತಾತ್ಪರ್ಯನಿರ್ಣಯದ ಶ್ಲೋಕವೇ ಉತ್ತರಿಸುತ್ತಿದೆ. 'ರುದ್ರಾತ್ಮಕತ್ವಾಚ್ಚೇಷಸ್ಯ ಶುಕೋ ದ್ರೌಣಿಶ್ಚ ತತ್ತನೂ । ಇಂದ್ರೇ ನರಾಂಶಸಂಪತ್ತ್ಯಾ ಪಾರ್ಥೋಽಪೀಷತ್ತದಾತ್ಮಕಃ ॥' ಹಿಂದಿನ ಕಲ್ಪದಲ್ಲಿ ಶೇಷದೇವರೇ ರುದ್ರ ದೇವರಾಗಿದ್ದರು. ಆದ್ದರಿಂದ ರುದ್ರದೇವರ ಅವತಾರಸ್ವರೂಪರಾದ ಶುಕಾಚಾರ್ಯರು ಅಶ್ವತ್ಥಾಮಾಚಾರ್ಯರು ಕೂಡ ಶೇಷದೇವರ ಸ್ವರೂಪವೇ ಆಗಿರುತ್ತಾರೆ. ಅರ್ಜುನನಲ್ಲಿ ನರನ ಅಂಶವಿರುವುದರಿಂದ ಅರ್ಜುನನೂ ಕೂಡ ಅಂಶತಃ ಶೇಷಾವತಾರನೇ ಆಗಿದ್ದಾನೆ. ಈ ದೃಷ್ಟಿಯಿಂದ ಭಗವಂತನ ಸೇವೆಯಲ್ಲಿ ಮೂರನೇ ಸ್ಥಾನವನ್ನು ಹೊಂದಿದ್ದಾರೆಂದು ತಿಳಿಯಬೇಕು.

ಪ್ರಶ್ನೆ - ರುದ್ರದೇವರ ಅವತಾರರೆನಿಸಿದ ಅಶ್ವತ್ಥಾಮಾಚಾರ್ಯರಿಗಿಂತ ಅರ್ಜುನನು ಹೇಗೆ ಉತ್ತಮನಾಗಲು ಸಾಧ್ಯ ?

ಉತ್ತರ - 'ನರಾವೇಶಾದನ್ಯಥಾ ತು ದ್ರೌಣಿಃ ಪಶ್ಚಾತ್ ತತೋಽಪರೇ' ಎಂಬಂತೆ ಶೇಷದೇವರ ಆವೇಶವು ಅರ್ಜುನನಲ್ಲಿತ್ತು. ಆದ್ದರಿಂದಲೇ ಅಶ್ವತ್ಥಾಮಾಚಾರ್ಯರಿಗಿಂತ ಹೆಚ್ಚಿನ ಭೂಭಾರಹರಣಕಾರ್ಯವು ಅರ್ಜುನನಲ್ಲಿ ಇದೆ ಎಂದು ತಿಳಿಯಬೇಕು.

ಪ್ರಶ್ನೆ - ಭಗವಂತನ ಅನುಜನಾದ ನರನೇ ಶ್ರೀರಾಮನ ಅನುಜನಾಗಿ ಲಕ್ಷ್ಮಣನಾದ. ಇವನು ಕೃಷ್ಣಾವತಾರದಲ್ಲಿ ಏಕೆ ಅಣ್ಣನಾದ ?

ಉತ್ತರ - 'ಅಧಿಕಂ ಯೈಃ ಕೃತಂ ತತ್ರ ತೈರೂನಂ ಕೃತಮತ್ರ ತತ್' ಎಂಬಂತೆ ರಾಮಾವತಾರದಲ್ಲಿ ಅಧಿಕಸೇವೆ ಮಾಡಿದ ಲಕ್ಷ್ಮಣನೇ ಕೃಷ್ಣಾವತಾರದಲ್ಲಿ ಬಲರಾಮನಾಗಿ ಹುಟ್ಟಿ ಕಡಿಮೆ ಸೇವೆ ಮಾಡಿದ. ಇದರಿಂದ ಅಧಿಕಪುಣ್ಯವು ಹ್ರಾಸವಾಗಿ ಸಮಾನವಾಯಿತು. ಇದೇ ಶಾಸ್ತ್ರಗುಹ್ಯ.

## ಶೇಷದೇವರ ಕುಲ, ಶೇಷದೇವರ ಅವತಾರ

ಪ್ರಶ್ನೆ - ಜೀವನದಲ್ಲಿ ಯಾವ ಕಷ್ಟವಾದರೂ ಬರಲಿ ಸೆರೆವಾಸ ಮಾತ್ರ ಬೇಡವೇ ಬೇಡ. ಒಂದುವೇಳೆ ಸೆರೆಮನೆಗೆ ಹೋಗುವ ಪರಿಸ್ಥಿತಿ ಬಂದರೆ ಏನು ಮಾಡಬೇಕು ?

ಉತ್ತರ - ಶೇಷದೇವರ ಸ್ವಪ್ನದಲ್ಲಿ ನರಸಿಂಹದೇವರೇ ಬಂದು ಇದಕ್ಕೆ ಪರಿಹಾರ ನೀಡಿದ್ದಾರೆ. ನರಸಿಂಹ ಅಷ್ಟೋತ್ತರ ಸ್ತೋತ್ರವನ್ನು ಸಾವಿರ ಬಾರಿ ಪಠನೆ ಮಾಡಿದರೆ ಕೂಡಲೇ ಕಾರಾಗೃಹದ ಭಯ ಹಾಗೂ ಕಾರಗೃಹಬಂಧನ ಪರಿಹಾರವಾಗುತ್ತದೆಂದು ಹೇಳಿದ್ದಾರೆ -

ಯಸ್ತು ಶಂಕಲಯಾ ಬದ್ಧಃ ........... ಸಹಸ್ರಂ ಪಾಠಯೇತ್ ವಿಪ್ರೈಃ ಬಂಧಾತ್ ಶೀಘ್ರಂ ಉಚ್ಯತೇ ॥

ಪ್ರಶ್ನೆ - ನನಗೆ 30 ವರ್ಷವಾದರೂ ವಿವಾಹವಾಗುತ್ತಿಲ್ಲ. ಜ್ಯೋತಿಷ್ಕರನ್ನು ವಿಚಾರಿಸಿದರೆ ರಾಹುದೋಷವಿದೆ ಎನ್ನುತ್ತಾರೆ. ಇದರ ಪರಿಹಾರಕ್ಕೆ ಸುಲಭ ಉಪಾಯವೇನು ?

ಉತ್ತರ - ಬಂಗಾರದ ನಾಗರತಾಳಿಯನ್ನು ಕಂಠದಲ್ಲಿ ಧರಿಸಬೇಕು. ಧರಿಸುವ ಮೊದಲು ಶೇಷದೇವರನ್ನು ಆವಾಹನೆ ಮಾಡಿ ಪೂಜಿಸಿ ನನ್ನ ದೇಹದಲ್ಲಿದ್ದು ರಕ್ಷಿಸಿರಿ ಎಂದು ಅನುಸಂಧಾನ ಮಾಡಬೇಕು. ಅನಂತರ ಪ್ರತಿನಿತ್ಯ ಶೇಷದೇವರನ್ನು ಪ್ರತಿಪಾದನೆ ಮಾಡುವ ವೇದಮಂತ್ರವನ್ನು ಅಥವಾ ಸ್ತೋತ್ರವನ್ನು ಪಠಿಸಬೇಕು. ಹೆಣ್ಣು ಮಕ್ಕಳು ಹರಿಕಥಾಮೃತಸಾರದ 32ನೇ ಸಂಧಿಯ 9 ಶ್ಲೋಕವನ್ನು 8 ಬಾರಿ ಹೇಳಿಕೊಳ್ಳಬೇಕು -

ಯೋಗಿಗಳ ಹೃದಯಕೆ ನಿಲುಕದ, ನಿಗಮಾಗಮೈಕವಿನುತನ ಪರಮಾನುರಾಗದಿ ದ್ವಿಸಹಸ್ರ ಜಿಹ್ವೆಗಳಿಂದ ವರ್ಣಿಸುವ ಭೋಗಗನ ಪಾತಾಳವ್ಯಾಪ್ತನ ಯೋಗನಿದ್ರಾಸ್ಪದನೆನಿಪ ಗುರು ನಾಗರಾಜನ ಪದಕೆ ನಮಿಸುವೆ ಮನದೊಳನವರತ ॥

'ರಾಹುಃ ಸರ್ಪಗಣಃ ಸ್ಮೃತಃ' ಎಂಬಂತೆ ಸರ್ಪದೋಷವನ್ನು ರಾಹು ಜಾತಕದಲ್ಲಿ ಸೂಚಿಸುತ್ತಾನೆ.

ಪ್ರಶ್ನೆ - ಜಾತಕದಲ್ಲಿ ಪಂಚಮಶುದ್ಧಿ ಇರಬೇಕು ಇಲ್ಲದಿದ್ದರೆ ಮಕ್ಕಳಾಗುವುದಿಲ್ಲ ಎನ್ನುತ್ತಾರೆ. ಏನಿದಕ್ಕೆ ಕಾರಣ ?

ಉತ್ತರ - ತಿಥಿಗಳಲ್ಲಿ ಪಂಚಮಿಯು ಹೇಗೆ ಸರ್ಪಗಳಿಗೆ ಪ್ರಶಸ್ತವೋ ಆದರಂತೆ ಜಾತಕದಲ್ಲಿ 5ನೇ ಸ್ಥಾನವು ಕೂಡ ಪ್ರಶಸ್ತ. ನಾಗಗಳ ಅನುಗ್ರಹ ಇದ್ದರೆ ಪಂಚಮ ಸ್ಥಾನವು ಶುದ್ಧವಾಗಿರುತ್ತದೆ. ಶಾಪಾದಿಗಳು ಇದ್ದರೆ ಪಂಚಮ ಸ್ಥಾನವು ಶುದ್ಧವಾಗಿರುವುದಿಲ್ಲ. ಸತ್ಪುತ್ರಪ್ರಾಪ್ತಿಗೆ ಪಂಚಮಶುದ್ಧಿ ಇರಲೇಬೇಕು. ಅದಿಲ್ಲದಿದ್ದರೆ ನಾಗಾರಾಧನೆಯನ್ನು ವಿಶೇಷವಾಗಿ ಮಾಡಿ ಅನುಗ್ರಹವನ್ನು ಪಡೆದುಕೊಳ್ಳಬೇಕು.

ಪ್ರಶ್ನೆ - ಭಗವಂತನ ಯೋಗರೂಪದ ಹಿಂದೆ ಅಥವಾ ಕೆಲವು ಯೋಗಿಗಳ ತಲೆಯ ಹಿಂದೆ ಏಳು ಹೆಡೆಯ ಸರ್ಪ ಇರುತ್ತದೆ. ಏನಿದರ ಆಂತರ್ಯ?

ಉತ್ತರ - ಇದು ವೈರಾಗ್ಯದ ಪ್ರತೀಕ. ಮೂಲಾಧಾರದಲ್ಲಿ ಕುಂಡಲದಂತೆ ಸುತ್ತಿಕೊಂಡು ಮಲಗಿರುವ ಕುಂಡಲಿನೀಶಕ್ತಿಯನ್ನು ಜಾಗೃತಗೊಳಿಸಿ ಸಹಸ್ರಾರದಲ್ಲಿ ಅರಳಿಸಲಾಗಿದೆ ಎಂಬುದೇ ಇದರ ಅರ್ಥ. ಯಾರು ಕುಂಡಲಿನೀ ಶಕ್ತಿಯನ್ನು ಸಹಸ್ರಾರದಲ್ಲಿ ಅರಳಿಸಿರುತ್ತಾರೋ ಅವರು ಮೋಕ್ಷವನ್ನೇ ಹೊಂದುತ್ತಾರೆ.

ಪ್ರಶ್ನೆ - ಈ ಕುಂಡಲಿನೀಶಕ್ತಿಯನ್ನು ಜಾಗೃತಿಗೊಳಿಸುವುದು ಹೇಗೆ?

ಉತ್ತರ - ಶೇಷದೇವರ ಅನುಗ್ರಹವನ್ನು ಮೊದಲು ಅವಶ್ಯ ಸಂಪಾದಿಸಬೇಕು. ಅನಂತರ ಭಸ್ತ್ರಿಕಾಪ್ರಾಣಾಯಾಮ ಧ್ಯಾನ ವೈರಾಗ್ಯಗಳಿಂದ ಇದು ಸಾಧ್ಯವಾಗುತ್ತದೆ, ಯಾರಿಗೆ ಕುಂಡಲಿನೀಶಕ್ತಿ ಜಾಗೃತವಾಗಿರುತ್ತದೋ ಅವನು ತ್ರಿಕಾಲಜ್ಞಾನಿಯಾಗುತ್ತಾನೆ. ಮೆದುಳಿನ ಏಳುಭಾಗಗಳಲ್ಲಿರುವ

ಎಲ್ಲ ಭಾಗಗಳು ಕೆಲಸ ಮಾಡುತ್ತವೆ. ಅಂತಿಮವಾಗಿ ಮೋಕ್ಷವನ್ನೆ ಹೊಂದುತ್ತಾನೆ. ಮುಮುಕ್ಷುವಾದವನು ಕುಂಡಲನೀಶಕ್ತಿಯನ್ನು ಜಾಗೃತಗೊಳಿಸಲೇ ಬೇಕು.

ಪ್ರಶ್ನೆ - ನರಸಿಂಹದೇವರ ಹಿಂದೆ ಹಾಗೂ ಹಯಗ್ರೀವದೇವರ ಹಿಂದೆ ಛತ್ರರೂಪದಲ್ಲಿ ಶೇಷದೇವರು ಸದಾ ನೆಲೆಸಿರುತ್ತಾರೆ. ವಾಸ್ತವಿಕವಾಗಿ ಸಂಕರ್ಷಣರೂಪದ ಹಿಂದೆ ಮಾತ್ರ ಇರಬೇಕು. ಏನಿದರ ಆಂತರ್ಯ?

ಉತ್ತರ - ಸಂಕರ್ಷಣನು ಶೇಷದೇವರ ಅಂತರ್ಯಾಮಿ ಎಂಬುದು ಸತ್ಯ. ಆದರೆ ರುದ್ರಪದವಿಯಿಂದಲೂ ವಿಶೇಷವಾಗಿ ನರಸಿಂಹದೇವರ ಉಪಾಸನೆಯಲ್ಲೇ ನಿರತರಾಗಿರುವರು. ಹಾಗೂ ಪೌರುಷೇಯ-ಗ್ರಂಥಗಳಿಗೆ ಅಭಿಮಾನಿಗಳಾಗಿರುವುದರಿಂದ ಹಯಗ್ರೀವದೇವರ ಉಪಾಸನೆಯಲ್ಲೂ ನಿರತರಾಗಿರುವರು. ತಮ್ಮಲ್ಲಿರುವ ಬಲವನ್ನು ನರಸಿಂಹದೇವರಿಂದ ಪಡೆದು ಹಯಗ್ರೀವದೇವರಿಂದ ಜ್ಞಾನವನ್ನು ಪಡೆದಿರುವರು. ಅಂದಮಾತ್ರಕ್ಕೆ ಸಂಕರ್ಷಣನು ಉಪಾಸ್ಯನಲ್ಲ ಎಂದೇನಿಲ್ಲ.

ಪ್ರಶ್ನೆ - ಶೇಷದೇವರಿಗಷ್ಟೆ ಅಲ್ಲದೆ ಎಲ್ಲಾ ನಾಗಗಳಿಗೂ ಸಂಕರ್ಷಣನೇ ಉಪಾಸ್ಯ ಮೂರ್ತಿಯಾಗಿರುವನೇ?

ಉತ್ತರ - 'ವರುಣಸ್ಯಾನುಗಾಃ ನಾಗಾಃ ತತ್ರ ಮತ್ಸ್ಯಾಕೃತಿಃ ಹರಿಃ' ಎಂಬ ತಾತ್ಪರ್ಯ ನಿರ್ಣಯದ ಮಾತಿನಂತೆ ಎಲ್ಲ ನಾಗಗಳು ವರುಣನ ಅನುಚರರಾಗಿರುವರು. ಅಂತರ್ಯಾಮಿಯಾದ ಮತ್ಸ್ಯರೂಪವನ್ನು ಉಪಾಸನೆ ಮಾಡುವರು. ಈ ದೃಷ್ಟಿಯಲ್ಲಿ ಮತ್ಸ್ಯರೂಪದ ಉಪಾಸನೆಯಲ್ಲಿ ಶೇಷದೇವರು ಅಗ್ರೇಸರರು ಆಗಿದ್ದಾರೆಂದು ತಿಳಿಯಬೇಕು. ನಾರಾಯಣವರ್ಮದಲ್ಲೂ ಕೂಡ 'ಜಲೇಷು ಮಾಂ ರಕ್ಷ್ಯತು ಮತ್ಸ್ಯಮೂರ್ತಿಃ ಯಾದೋಗಣೇಭ್ಯೋ ವರುಣಸ್ಯ ಪಾಶಾತ್' ಎಂಬುದಾಗಿ ವರುಣನ ಆಯುಧವಾದ ಹಾವುಗಳಿಂದ ರಕ್ಷಣೆಯನ್ನು ಮತ್ಸ್ಯರೂಪಿಯ ಬಳಿ ಪ್ರಾರ್ಥಿಸಲಾಗಿದೆ.

ಪ್ರಶ್ನೆ - ಉದ್ಧವಗೀತೆಯಲ್ಲಿ ಶ್ರೀಕೃಷ್ಣದೇವರು 'ಸರ್ಪಾಣಾಂ ಅಸ್ಮಿ ವಾಸುಕಿಃ' ಸರ್ಪಗಳಲ್ಲಿ ವಾಸುಕಿಯಾಗಿದ್ದೇನೆ. 'ನಾಗೇಂದ್ರಾಣಾಂ

ಅನಂತೋಽಹಂ' ನಾಗೇಂದ್ರರಲ್ಲಿ ಅನಂತನಾಗಿದ್ದೇನೆ ಎಂಬುದಾಗಿ ತಿಳಿಸಿದ್ದಾನೆ. ಹಾಗೂ ಭಗವದ್ಗಿತೆಯಲ್ಲಿಯೂ ಕೂಡ 'ಸರ್ಪಾಣಾಂ ಅಸ್ಮಿ ವಾಸುಕಿಃ' ಸರ್ಪಗಳಲ್ಲಿ ವಾಸುಕಿಯಾಗಿದ್ದೇನೆ. 'ಅನಂತಾಶ್ಚಾಸ್ಮಿ ನಾಗಾನಾಂ' ನಾಗಗಳಲ್ಲಿ ಅನಂತನಾಗಿದ್ದಾನೆ ಎಂದು ಹೇಳಿದ್ದಾನೆ. ಸರ್ಪ ಹಾಗೂ ನಾಗ ಒಂದೇ ಆಗಿರುವಾಗ ಎರಡು ವಿಭೂತಿ- ರೂಪಗಳನ್ನು ಏಕೆ ತಿಳಿಸಿರುವನು ?

ಉತ್ತರ - ಪುರಾಣಗಳು ಸರ್ಪವಂಶವನ್ನೇ ಬೇರೆ ಹೇಳಿವೆ. ನಾಗವಂಶವನ್ನೇ ಬೇರೆ ಹೇಳಿವೆ. ಸರ್ಪಗಳಿಗೆ ವಾಸುಕಿಯು ರಾಜನಾಗಿರುವನು. ನಾಗಗಳಿಗೆ ಶೇಷನು ರಾಜನಾಗಿರುವನು. ಈ ವಾಸುಕಿ ಮತ್ತು ಶೇಷನಲ್ಲಿ ಭಗವಂತನು ವಿಭೂತಿರೂಪದಿಂದ ನೆಲೆಸಿದ್ದಾನೆ.

ಪ್ರಶ್ನೆ - ಶೇಷದೇವರ ಸಾಕ್ಷಾತ್ ತಮ್ಮನೇ ವಾಸುಕಿಯಾದ್ದರಿಂದ ನಾಗವಂಶದವನಾದ ಇವನನ್ನು ಸರ್ಪವಂಶಕ್ಕೆ ರಾಜನೆಂದು ಹೇಗೆ ಹೇಳುವುದು?

ಉತ್ತರ - ನಕ್ಷತ್ರನಾಗದಿದ್ದರೂ ನಕ್ಷತ್ರಗಳಿಗೆ ಚಂದ್ರನು ರಾಜನಾದಂತೆ ಸರ್ಪಗಳಿಗೆ ವಾಸುಕಿಯನ್ನು ರಾಜನನ್ನಾಗಿ ಹೇಳಬಹುದು.

ಪ್ರಶ್ನೆ - ಎಲ್ಲಾ ನಾಗಗಳು ಕಶ್ಯಪರಿಂದ ಕದ್ರುದೇವಿಯಲ್ಲಿ ಜನಿಸಿದವೆಂದು ತಿಳಿದಿದ್ದೇವೆ. ಸರ್ಪಗಳು ಯಾರಿಂದ ಜನಿಸಿದವು?

ಉತ್ತರ - ದಂದಶೋಕಾದಯಃ ಸರ್ಪಾಃ ರಾಜನ್ ಕ್ರೋಧವಶಾದ್ ಪ್ರಜಾಃ' ಕಶ್ಯಪರ ಮಡದಿಯಾದ ಕ್ರೋಧವಶಳಲ್ಲಿ ಈ ಸರ್ಪಗಳು ಜನ್ಮತಾಳಿವೆ.

ಪ್ರಶ್ನೆ - ಯಾವ ಶಾಲಗ್ರಾಮದಲ್ಲಿ ಶೇಷದೇವರ ಸನ್ನಿಧಾನವಿರುತ್ತದೆ?

ಉತ್ತರ - ಎಲ್ಲಾ ಶಾಲಗ್ರಾಮಗಳಲ್ಲಿ ಭಗವಂತನ ಸನ್ನಿಧಾನ ಮಾತ್ರವಿರುತ್ತದೆ. ಆದರೆ ಶೇಷಕುಂಡಲಶಾಲಗ್ರಾಮದಲ್ಲಿ ಶೇಷನಲ್ಲಿ ಭಗವಂತನ ಸನ್ನಿಧಾನ ಇದೆ. ಭಗವಂತನ ಸೇವಕನಾಗಿ ಶೇಷನ ಸನ್ನಿಧಾನವನ್ನು ಚಿಂತಿಸಬೇಕು. ಹಾಗೂ ಅನಂತಪದ್ಮನಾಭ ಶಾಲಗ್ರಾಮದಲ್ಲೂ ಕೂಡ ಆಸನವಾಗಿ ಶೇಷನು ನೆಲಿಸಿರುವನು.

ಪ್ರಶ್ನೆ - ಶೇಷಕುಂಡಲ ಶಾಲಗ್ರಾಮದ ಲಕ್ಷಣವೇನು? ಅನಂತ ಪದ್ಮನಾಭ ಶಾಲಿಗ್ರಾಮದ ಲಕ್ಷಣವೇನು?

ಉತ್ತರ - ಹಾವಿನಂತೆ ಸುರುಳಿಸುತ್ತಿ ಮೇಲೊಂದು ಚಕ್ರವಿರುವ ಶಾಲಗ್ರಾಮವನ್ನು ಶೇಷಕುಂಡಲಶಾಲಗ್ರಾಮ ಎನ್ನುತ್ತಾರೆ. ಏಳು ವದನಗಳಿದ್ದು 14 ಚಕ್ರಗಳಲ್ಲಿ ಉರುಟಾಗಿರುವ ಶಾಲಗ್ರಾಮವನ್ನು ಅನಂತಪದ್ಮನಾಭ ಶಾಲಗ್ರಾಮ ಎನ್ನುತ್ತಾರೆ. ಇವೆರಡರ ಪೂಜೆಯಿಂದ ಹೇರಳವಾದ ಭೌತಿಕ ಸಂಪತ್ತನ್ನು ಪಡೆಯುವನು.

ಪ್ರಶ್ನೆ - ಮಂಗಳಾರತಿ ಮಾಡುವಾಗ ಭಗವಂತನ ಎಲ್ಲ ಆಯುಧಗಳ ಹೆಸರಿನಲ್ಲಿ ಆರತಿ ಮಾಡುವ ಕ್ರಮವಿದೆ. ಹಾಗೆ ನಿರಂತರ ಭಗವಂತನ ಆರಾಧನೆಯಲ್ಲಿ ತೊಡಗಿದ ಶೇಷದೇವರ ನೆನಪಿಗೆ ಯಾವ ಆರತಿ ?

ಉತ್ತರ - ಐದು ಹೆಡೆಯಿಂದ ಕೂಡಿರುವ ಶೇಷಾರತಿಯನ್ನು ಮಾಡಲೇಬೇಕು. ಆಗ ಶೇಷದೇವರಿಂದ ಮಂಗಳಾರತಿ ಮಾಡಿಸಿಕೊಂಡ ಭಗವಂತನು ನಮಗೆ ಶೀಘ್ರವಾಗಿ ಅನುಗ್ರಹ ಮಾಡುವನು.

ಪ್ರಶ್ನೆ - ನಮ್ಮ ದೇಹದಲ್ಲಿ ಮುಖ್ಯವಾಗಿ ಶೇಷದೇವರ ಸನ್ನಿಧಾನ ಎಲ್ಲಿದೆ?

ಉತ್ತರ - ಕರ್ಣಕುಂಡಲಗಳಲ್ಲಿ ಶೇಷದೇವರ ವಿಶೇಷ ಸನ್ನಿಧಾನವಿದೆ. ಅದಕ್ಕಿಂತಲೂ ಮುಖ್ಯವಾಗಿ ಯಾವ ಬ್ರಾಹ್ಮಣರಕ್ಷಣೆಗಾಗಿ ಯಜ್ಞೋಪವೀತವನ್ನು ಧರಿಸುತ್ತೇವೋ ಅದರಲ್ಲಿ ಒಟ್ಟು 9 ತಂತುಗಳಿವೆ. ಅವುಗಳಲ್ಲಿ 3ನೇ ತಂತುವಿನಲ್ಲಿ ಶೇಷದೇವರಿದ್ದಾರೆ. ನರಸಿಂಹದೇವರು ಉಗ್ರರೂಪವನ್ನು ಧರಿಸಿದಾಗ ಶೇಷದೇವರೇ ಯಜ್ಞೋಪವೀತವಾಗಿರುತ್ತಾರೆಂಬ ಉಲ್ಲೇಖವಿದೆ.

ಪ್ರಶ್ನೆ - ಶೇಷದೇವರ ಲೋಕ ಹೇಗಿದೆ?

ಉತ್ತರ - ಹದಿನಾಕು ಲೋಕಗಳಲ್ಲಿ ಕೊನೆಯ ಲೋಕವೇ ಪಾತಾಳಲೋಕ - ಇದೇ ನಾಗಲೋಕ. ಇದರಲ್ಲಿ ಅನೇಕ ಸಂಖ್ಯೆಯಲ್ಲಿ ಬಗೆಬಗೆಯ ನಾಗಗಳಿವೆ. ಪ್ರತಿಯೊಂದು ಕೂಡ ಮರಣರಹಿತವಾಗಿವೆ. ಈ ಲೋಕದಲ್ಲಿರುವ ರಸಾಯನವನ್ನು ಪಾನ ಮಾಡಿದವರಿಗೆ ರೋಗ ರುಜಿನಗಳೇ ಬರುವುದಿಲ್ಲ. ಸ್ವರ್ಗಕ್ಕಿಂತಲೂ ಮಿಗಿಲಾದ ಅರಮನೆಗಳು

ಇಲ್ಲಿ ಕಂಗೊಳಿಸುತ್ತವೆ. ಭೀಮಸೇನ ದೇವರು ಈ ನಾಗಲೋಕಕ್ಕೆ ತೆರಳಿ ರಸಾಯನ ಪಾನ ಮಾಡಿ ಹತ್ತಾರುಸಾವಿರ ಆನೆಯ ಬಲವನ್ನು ಪಡೆದಿದ್ದರೆಂಬ ಉಲ್ಲೇಖ ಮಹಾಭಾರತದಲ್ಲಿದೆ. ಈ ಎಲ್ಲ ನಾಗಗಳಿಗೆ ಸಾರ್ವಭೌಮರಾದವರೇ ಶೇಷದೇವರು. ಶ್ರೀಕೃಷ್ಣನೂ ಕೂಡ ಕಾಳಿಂಗಮರ್ದನದಲ್ಲಿ ಇದೇ ನಾಗಲೋಕಕ್ಕೆ ತೆರಳಿ ನಾಗಕನ್ನಿಕೆಯರಿಂದ ಸ್ತುತ್ಯನಾಗಿದ್ದನು.

ಪ್ರಶ್ನೆ - ಪ್ರಳಯಾಗ್ನಿಯು ಶೇಷದೇವರ ಮುಖದಿಂದ ಹೊರಹೊಮ್ಮುತ್ತದೆ ಎನ್ನುತ್ತಾರೆ. ಆದ್ದರಿಂದ ಪ್ರಳಯವು ಶೇಷದೇವರಿಂದ ಆಗುತ್ತದಲ್ಲವೆ ?

ಉತ್ತರ - ಹೌದು ! ಅಷ್ಟೇ ಅಲ್ಲದೆ ಯಜ್ಞದಲ್ಲೂ ಕೂಡ ನಾವು ಸಮರ್ಪಿಸುವ ಎಲ್ಲ ಆಹುತಿಗಳನ್ನು ಭಸ್ಮ ಮಾಡುವವರೂ ಕೂಡ ಶೇಷದೇವರೇ ಆಗಿದ್ದಾರೆ. ಆದ್ದರಿಂದ ಯಜ್ಞಕುಂಡದಲ್ಲಿ ಶೇಷದೇವರ ಆಕೃತಿಯನ್ನು ನಿರ್ಮಾಣ ಮಾಡಿ ಆಹುತಿ ನೀಡಬೇಕೆಂದು ಪ್ರಮಾಣವಿದೆ - 'ತತ್ರ ಯೋನಿಂ ಪ್ರಕುರ್ವೀತ ಮೇಖಲೋಪರಿ ಸರ್ಪವತ್ । ಊರ್ಧ್ವೇ ಷಡಂಗುಲಂ ಪ್ರೋಕ್ತಂ ಸರ್ಪಸ್ಯ ಫಣವದ್ಭವೇತ್ ।

ಪ್ರಶ್ನೆ - ಯಾವ ಸಂದರ್ಭದಲ್ಲಿ ನಾವು ಶೇಷದೇವರನ್ನು ಚಿಂತನೆ ಮಾಡಬೇಕು?

ಉತ್ತರ - ಸಂಧ್ಯಾವಂದನೆಯಲ್ಲಿ ಆಸನಶುದ್ಧಿಯ ಸಂದರ್ಭದಲ್ಲಿ ಶೇಷನನ್ನು ಚಿಂತನೆ ಮಾಡಲೇಬೇಕು. 'ಅಂ ಅನಂತಾಸನಾಯ ನಮಃ' ಎಂದು ಹೇಳುವ ಮೂಲಕ ಇವನ ಚಿಂತನೆ ನಡೆಸದಿದ್ದರೆ ಆಸನಶುದ್ಧಿಯಾಗದು. ಮುಂದಿನ ಧ್ಯಾನಾದಿಗಳೂ ಕೂಡ ಅಪೂರ್ಣವಾಗುವವು.

ಪ್ರಶ್ನೆ - ಪ್ರತಿಮೆಯಲ್ಲಷ್ಟೇ ಅಲ್ಲದೆ ಬೇರೆಲ್ಲಿ ಪ್ರತಿನಿತ್ಯ ಶೇಷದೇವರನ್ನು ಪೂಜಿಸಬೇಕು?

ಉತ್ತರ - ಗೋಪುಚ್ಛದಲ್ಲಿ ಶೇಷನೇ ನಿತ್ಯಸನ್ನಿಹಿತ. ಗೋವಿನ ಪೂಜೆಯೆಂದರೆ ಗೋಪುಚ್ಛಭಾಗದಲ್ಲೇ ಗೋವಿನ ಪೂಜೆಯು ಸಂಪ್ರದಾಯಗತವಾಗಿದೆ. ಗೋಪೂಜೆಯು ನಿತ್ಯಕರ್ಮವಾದ್ದರಿಂದ ಅಲ್ಲಿ ಶೇಷನ ಪೂಜೆಯನ್ನೇ ಮಾಡಬೇಕು.

ಪ್ರಶ್ನೆ - ಶೇಷದೇವರನ್ನು ಯಾರು ವಿಶೇಷವಾಗಿ ಪೂಜಿಸುತ್ತಾರೆ?

ಉತ್ತರ - ಶೇಷನ ಮಡದಿಯಾದ ವಾರುಣಿಯೇ ವಿಶೇಷವಾಗಿ ಪೂಜಿಸುವಳು. ತದನಂತರ ಹರಿವಂಶದ ವಿಷ್ಣುಪರ್ವ ಹೇಳುವಂತೆ ವಾಸುಕಿಯು ಭಕ್ತಿಯಿಂದ ಅಣ್ಣನಾದ ಶೇಷನನ್ನು ಪೂಜಿಸುವನು. ಕರ್ಕೋಟಕ ಹಾಗೂ ಕಂಬಳಾಶ್ವತರರು ಆ ಶೇಷನಿಗೆ ಚಾಮರಸೇವೆಯನ್ನು ನಿರಂತರ ಮಾಡುವರು.

ಪ್ರಶ್ನೆ - ಗೋಕರ್ಣದಲ್ಲಿ ಸುಬ್ರಹ್ಮಣ್ಯಕ್ಷೇತ್ರದಲ್ಲಿ ಹಾಗೂ ಉಡುಪಿಯಲ್ಲಿ ಶೇಷದೇವರ ಸನ್ನಿಧಾನ ಇದೆ ಎಂದು ಹೇಳುತ್ತಾರೆ. ಆದ್ದರಿಂದ ಈ ಮೂರು ಕ್ಷೇತ್ರಗಳಲ್ಲಿ ವಿಶೇಷವಾಗಿ ಶೇಷದೇವರನ್ನು ಆರಾಧಿಸಬೇಕಲ್ಲವೆ?

ಉತ್ತರ - ಸರ್ವಥಾ ತಪ್ಪು. ಕರ್ಕೋಟಕಸ್ಯ ಗೋಕರ್ಣೇ ಪಾತಾಳ-ಬಿಲಮಾದ್ರುತಮ್‌ಸುಬ್ರಹ್ಮಣ್ಯೇ ವಾಸುಕೇಸ್ತು ಬಿಲಂ ಖ್ಯಾತಂ ಇಳಾತಳೇ 'ರೌಪ್ಯಪೀಠೇ ತಕ್ಷಕಸ್ಯ' ಎಂಬ ಮಾತಿನಂತೆ ಗೋಕರ್ಣದಲ್ಲಿ ಕರ್ಕೋಟಕನು ಸುಬ್ರಹ್ಮಣ್ಯದಲ್ಲಿ ವಾಸುಕಿಯು, ಉಡುಪಿಯಲ್ಲಿ ತಕ್ಷಕನು ಇದ್ದಾನೆ. ಹೊರತು ಶೇಷದೇವರು ಇರುವುದಿಲ್ಲ. ಇದನ್ನು ತಪ್ಪಾಗಿ ಭಾವಿಸಿದ್ದಾರೆ.

ಪ್ರಶ್ನೆ - ಶೇಷ ಎಂದರೇನು ?

ಉತ್ತರ - 'ಶೇಷತಿ ಸಂಕರ್ಷತೀತಿ ಶೇಷಃ' ಎಂಬ ನಿಷ್ಪತ್ತಿಯಿಂದ ಆಕರ್ಷಣೆ ಮಾಡುವ ಶಕ್ತಿಯನ್ನು ಹೊಂದಿದವನು. ಸಮಗ್ರ ಬ್ರಹ್ಮಾಂಡವನ್ನೇ ತನ್ನ ಆಕರ್ಷಣ ಶಕ್ತಿಯಿಂದ ಧರಿಸಿದವನು ಎಂದರ್ಥ. ಅಥವಾ ಶೇಷಃ ಸರ್ವಯಶಃಪ್ರದಃ ಎಂಬಂತೆ ಎಲ್ಲರಿಗೂ ಯಶಸ್ಸನ್ನು ಹಾಗೂ ಸಂಪತ್ತನ್ನು ನೀಡುವವನು ಎಂದರ್ಥ.

ಪ್ರಶ್ನೆ - ಸರ್ಪಬಲಿಯನ್ನು ಆಚರಿಸಬೇಕೆನ್ನುತ್ತಾರೆ. ಹಾಗೆಯೇ ಶೇಷದೇವರಿಗೂ ಕೂಡ ಬಲಿಪ್ರಧಾನವಿದೆಯೇ?

ಉತ್ತರ - ಬೋಧಾಯನರು ಬಲಿಹರಣದ ಅನಂತರ ಸರ್ಪಬಲಿಯನ್ನು ವಿಧಿಸಿದ್ದಾರೆ. ಬಲಿಹರಣದಂತೆ ಸರ್ಪಬಲಿಯನ್ನು ಪ್ರತಿವರ್ಷಗಳಲ್ಲಿ

ಪ್ರತಿಮಾಸಗಳಲ್ಲಿ ಆಚರಿಸಬೇಕೆಂದು ಹೇಳಿದ್ದಾರೆ. ಇದರಲ್ಲಿ ಮುಖ್ಯವಾಗಿ ಕೇಂದ್ರಸ್ಥಾನದಲ್ಲಿ ಶೇಷದೇವರೇ ನೆಲೆಸಿರುತ್ತಾರೆ. ಪೂರ್ವದಿಕ್ಕಿನಲ್ಲಿ ಶ್ರೀಹರಿಯ ಹಿಂದೆ ನೆಲೆಸಿರುವ ಶೇಷನಿಗೆ ಮೊದಲು ಬಲಿ ಪ್ರದಾನ ಮಾಡಬೇಕು. ಅನಂತರ ಶೇಷದೇವರ ಅನುಚರರಿಗೆ ಬಲಿಪ್ರದಾನ ಮಾಡಬೇಕು. ಇದೊಂದು ಬಹು ಮುಖ್ಯವಾದ ಹಾಗೂ ಮಾಡಲೇಬೇಕಾದ ಕರ್ಮಾಚರಣೆ.

ಪ್ರಶ್ನೆ - ಶೇಷದೇವರು ಯಾವ ಯುಗದಲ್ಲಿ ವಿಶೇಷವಾಗಿ ದೇವರನ್ನು ಆರಾಧನೆ ಮಾಡುತ್ತಾರೆ ?

ಉತ್ತರ - ಅನಂತತಕ್ಷಕಶ್ಚೈವ ವಾಸುಕಿಃ ಶಂಖಪಾಲಕಃ ।
ಯುಗಕ್ರಮೇಣ ತಿಷ್ಠಂತಿ ಶ್ರೀನಿವಾಸಸ್ಯ ಸನ್ನಿಧೌ ॥
ಎಂಬ ಪ್ರಮಾಣದಂತೆ ಕೃತಯುಗದಲ್ಲಿ ಶೇಷದೇವರು ವಿಶೇಷವಾಗಿ ಭಗವಂತನ ಆರಾಧನೆಯನ್ನು ಮಾಡುತ್ತಾರೆ. ವಾಸುಕಿಯು ತ್ರೇತಾಯುಗದಲ್ಲಿ ತಕ್ಷಕನು ದ್ವಾಪರಯುಗದಲ್ಲಿ, ಶಂಖಪಾಲನು ಕಲಿಯುಗದಲ್ಲಿ ಶ್ರೀನಿವಾಸನ ಆರಾಧನೆಯನ್ನು ಮಾಡುತ್ತಾರೆ. ಹೀಗೆ ಶೇಷಧರ್ಮಪರ್ವದಲ್ಲಿ ಹೇಳಿದ್ದಾರೆ.

ಪ್ರಶ್ನೆ - ಅನಂತಕುಲ ನಾಗಕುಲಗಳಲ್ಲಿ ಶ್ರೇಷ್ಠವಾದವು ಎಷ್ಟು? ಹಾಗೂ ಯಾವುದು ?

ಉತ್ತರ - ಎಂಟು ಪ್ರಸಿದ್ಧವಾದ ನಾಗಗಳಿವೆ. 1. ಶೇಷ, 2. ವಾಸುಕಿ, 3. ತಕ್ಷಕ, 4. ಕರ್ಕೋಟಕ, 5. ಪದ್ಮ, 6. ಮಹಾಪದ್ಮ, 7. ಶಂಖಪಾಲ, 8. ಕುಲಿಕ. ಈ ಎಂಟು ಮಂದಿ ಎಂಟು ದಿಕ್ಕುಗಳಲ್ಲಿ ನೆಲಿಸಿದ್ದಾರೆ. ಪೂರ್ವದಿಂದ ಪ್ರಾರಂಭಿಸಿ ಈಶಾನ್ಯದ ತನಕ ಎಂಟು ದಿಕ್ಕುಗಳಲ್ಲಿ ವಾಸಿಸುತ್ತಾರೆ. ಹಾಗೂ ಒಬ್ಬೊಬ್ಬರು ಒಂದೊಂದು ಬಣ್ಣಗಳಿಂದ ಕೂಡಿದ್ದಾರೆ. ಶೇಷದೇವರು ಮಾತ್ರ ಶ್ವೇತವರ್ಣದಿಂದ ಕೂಡಿದ್ದಾರೆ. ಉಳಿದವರು ಕೆಂಪು ಹಳದಿ ಕಪ್ಪು ಬಣ್ಣಗಳಿಂದ ಕೂಡಿದ್ದಾರೆ.

ಪ್ರಶ್ನೆ - ಶೇಷದೇವರ ಅನಂತರ ಬರುವ ಇವರ ಕಕ್ಷ್ಯಾತಾರತಮ್ಯ ಹೇಗೆ ತಿಳಿಯಬೇಕು ?

ಉತ್ತರ - ಯಾರು ಯಾವ ಕಕ್ಷ್ಯದಲ್ಲಿ ಬರುತ್ತಾರೆಂದು ಸ್ಪಷ್ಟವಾದ ಆಧಾರ ಸಿಗುವುದಿಲ್ಲ. ಆದರೆ ಶೇಷದೇವರ ತಮ್ಮ ಎನಿಸಿದ ವಾಸುಕಿಯು

ವಿನಾಯಕ ಇರುವ ಕಕ್ಷ್ಯದಲ್ಲಿ ಬರಬಹುದೆಂದು ಉಳಿದರು ಅವನಿಗಿಂತ ಕೆಳಗಿದ್ದಾರೆ ಎಂದು ಸಾಮಾನ್ಯವಾಗಿ ತಿಳಿಯಬಹುದು.

ಪ್ರಶ್ನೆ - ಶೇಷದೇವರ ಬಗ್ಗೆ ಸಾಮಾನ್ಯವಾಗಿ ತಿಳಿದಿದ್ದಾಯಿತು. ಉಳಿದ ನಾಗಗಳ ಬಗ್ಗೆ ಸ್ಥೂಲವಾಗಿ ಪರಿಚಯಿಸಬಹುದೆ?

ಉತ್ತರ - ಅಮೃತಮಥನಕಾಲದಲ್ಲಿ ಅಜಿತನ ಆವೇಶವನ್ನು ಹೊಂದಿ ಮಂದರವನ್ನು ಸುತ್ತಿ ಹಗ್ಗವಾದವನೇ ವಾಸುಕಿ. ಮಹಾಸಾಧಕನಾದರೂ ಪರೀಕ್ಷಿತ್‌ರಾಜನನ್ನು ಕಚ್ಚಿ ಕೊಲ್ಲುವ ಮೂಲಕ ಹೆಸರು ಪಡೆದವನೇ ತಕ್ಷಕ. ನಳಮಹಾರಾಜನಿಗೆ ನೈಜರೂಪ ಹೋಗುವಂತೆ ಮಾಡಿ ಉಪಕರಿಸಿ ದಮಯಂತಿಯನ್ನು ಪುನಃ ಒಟ್ಟಾಗುವಂತೆ ಉಪಕರಿಸಿದವನೇ ಕರ್ಕೋಟಕ. ನಾಗಲೋಕಕ್ಕೆ ತೆರಳಿದಾಗ ಭೀಮಸೇನದೇವರಿಗೆ ಬಹುಬಗೆಯಲ್ಲಿ ಉಚರಿಸಿದವರು ಪದ್ಮ ಮೊದಲಾದ ನಾಗಗಳು. ಮಹಾಪದ್ಮನು ಸೂರ್ಯರಥವನ್ನು ಹೊರುವವನು. ಧರ್ಮಾರಣ್ಯ ಎಂಬ ಬ್ರಾಹ್ಮಣನಿಗೆ ಸೂರ್ಯನಾರಾಯಣನ ಬಗ್ಗೆ ಉಪದೇಶಿಸಿದವನು. ಶಂಖದ್ವೀಪದಲ್ಲಿ ಉತ್ತಮ ಸಾಧನೆ-ಗೈಯುತ್ತಿರುವವನೇ ಶಂಖಪಾಲ. ಶ್ರೀಕೃಷ್ಣಪರಮಾತ್ಮನ ನಾಟ್ಯಕ್ಕೆ ರಂಗಮಂಟಪವನ್ನಾಗಿ ನೀಡಿದ ಮಹಾಭಾಗ್ಯಶಾಲಿಯೇ ಕುಲಿಕ, ಇವನೇ ಕಾಳಿಂಗ.

ಪ್ರಶ್ನೆ - ಈ ನಾಗಗಳನ್ನು ಯಾವಾಗ ಪೂಜಿಸಬೇಕು? ಹಾಗೂ ಪೂಜಿಸುವ ಅನಿವಾರ್ಯತೆ ಏನು?

ಉತ್ತರ - ಜಾತಕದಲ್ಲಿ ಯಾರಿಗೆ ರಾಹುದೋಷ ಇರುತ್ತದೋ ಅವರು ಅವಶ್ಯವಾಗಿ ಈ ನಾಗಗಳನ್ನು ಪೂಜಿಸಬೇಕು. ಹಾಗೂ ದೋಷವಿಲ್ಲದವರೂ ಕೂಡ ನಾಗಪಂಚಮಿ ಇತ್ಯಾದಿ ಹಬ್ಬಗಳಲ್ಲಿ ಈ ಎಂಟು ನಾಗಗಳನ್ನು ವಿಶೇಷವಾಗಿ ಪೂಜೆಮಾಡಬೇಕು. ಆಶ್ಲೇಷ ಬಲಿಯಲ್ಲಿ ಸರ್ಪಬಲಿಯಲ್ಲಿ ನಾಗಾರಾಧನೆಯಲ್ಲಿ ಈ ಎಂಟು ನಾಗಗಳ ಪೂಜೆ ಅತ್ಯಂತ ಅವಶ್ಯ. ಈ ಎಂಟು ನಾಗಗಳಂತೆ ಇನ್ನು ಅನೇಕ ನಾಗಗಳನ್ನು ಪುರಾಣಗಳಲ್ಲಿ ಹೇಳಲಾಗಿದೆ.

* * * *

# ನಾಗರಪಂಚಮಿ ಅಡುಗೆಗಳು

**ಸೂಚನೆ** : ಇಂದು ಎಣ್ಣೆಯಲ್ಲಿ ಯಾವುದನ್ನೂ ಕರೆಯಬಾರದು. ಒಗ್ಗರಣೆ ಮಾಡಬಾರದು. ಕಬ್ಬಿಣದ ಬಾಣಲೆಗಳಲ್ಲಿ ಯಾವುದೇ ಪದಾರ್ಥಗಳನ್ನು ಸಿದ್ಧಪಡಿಸಬಾರದು.

೧) ತಂಬಿಟ್ಟು,

೨) ಕಡಲೆಕಾಳು ಉಸುಳಿ (ಒಗ್ಗರಣೆ ಹಾಕಬಾರದು)

೩) ಭತ್ತದ ಅರಳಿನ ಪಂಚಕಜ್ಜಾಯ

೪) ಉಪ್ಪು ಎಣ್ಣೆಗಳಿಲ್ಲದ ಅಡುಗೆ ಮಾಡಬೇಕು

೫) ಹಾಲಿನ ಪಾಯಸವಿಶೇಷ

೬) ಕರ್ಚಿಕಾಯಿ ಕಡುಬು (ಕುಚ್ಚಿದ ಕಡುಬು)

೭) ಕೋಸಂಬರಿಗಳು

೮) ಎಳ್ಳುಂಡೆ.

## ಕಡಲೆಕಾಳು ಪಲ್ಯ

ಕಡಲೆಕಾಳನ್ನು ಐದಾರು ಗಂಟೆ ನೀರಿನಲ್ಲಿ ನೆನೆಸಿ, ನೀರು ಬಸಿದು ಇಡಿ. ಕಾಯಿತುರಿ, ಜೀರಿಗೆ ಎರಡನ್ನೂ ಸೇರಿಸಿ ರುಬ್ಬಿ. ರುಬ್ಬಿದ ಮಿಶ್ರಣಕ್ಕೆ ಮಾವಿನ ಹುಳಿ ಪುಡಿ, ಬೆಲ್ಲದ ಪುಡಿ, ಕಾಳು ಮುಳುಗುವಷ್ಟು ನೀರು ಸೇರಿಸಿ. ಬೇಯಿಸಿ. (ಬೆಲ್ಲ ಹಾಕಿದರೆ ಕಾಳು ಬೇಯುವುದಿಲ್ಲ.)

ಕಡಲೆಕಾಳು ಪಲ್ಯವನ್ನು ದೇವರಿಗೆ ಅರ್ಪಣೆ ಮಾಡಿ ಧನ್ಯ ಎನ್ನಿರಿ.

## ತೆಂಗಿನ ಕಾಯಿ ಹಾಲು

ಕಾಯಿ ತುರಿಗೆ ಮುಕ್ಕಾಲು ಕಪ್ ನೀರು ಹಾಕಿ ನುಣ್ಣಗೆ ರುಬ್ಬಿ. ಜಾಲರಿಯಲ್ಲಿ ಅಥವಾ ತೆಳು ಬಿಳಿ ಬಟ್ಟೆಯಲ್ಲಿ ಸೋಸಿ. ಸೋಸಿ ಬಂದ ಮೊದಲ ಗಟ್ಟಿ ಕಾಯಿಹಾಲನ್ನು ತೆಗೆದಿಡಿ. ಇದೇ ಕಾಯಿತುರಿಯನ್ನು ಇನ್ನೂ ಮೂರು ಸಲ ರುಬ್ಬ ಬಹುದು. ಹೀಗೆ ರುಬ್ಬಿ ಸೋಸಿ ಬಂದ ಕಾಯಿಹಾಲಿನ ನೀರನ್ನು ಪಾಯಸ ಬೇಯಿಸಲು ಉಪಯೋಗಿಸಿ.

ಬೇಕಾಗುವ ಸಾಮಗ್ರಿ – ಕಾಯಿತುರಿ ೩ ಕಪ್.

## ಅಕ್ಕಿಪಾಯಸ

ಬೇಕಾಗುವ ಸಾಮಗ್ರಿ – ಅಕ್ಕಿ- ೨ ಕಪ್, ನೀರು - ೬ ಕಪ್, ಬೆಲ್ಲ - ೨ವರೆ ಕಪ್, ಏಲಕ್ಕಿಪುಡಿ - ೧ ಟೀ ಚಮಚ.

ನೀರನ್ನು ಪಾತ್ರೆಯಲ್ಲಿ ಕುದಿಯಲು ಇಡಿ. ಕುದಿಯುವ ನೀರಿಗೆ ತೊಳೆದ ಅಕ್ಕಿ ಹಾಕಿ. ಅಕ್ಕಿ ಬೇಯುತ್ತ ಬರುವಾಗ ಬೆಲ್ಲ ಹಾಕಿ ಕುದಿಯಲು ಬಿಡಿ. ಕುದಿಯುವಾಗ ಕಾಯಿ ಹಾಲಿನ ನೀರನ್ನು ಹಾಕಿ. ಉಪ್ಪು ಹಾಕಿ ಕೆಳಗಿಳಿಸಿ. ಅನಂತರ ಗಟ್ಟಿ ಕಾಯಿಹಾಲು ಹಾಕಿ. ಏಲಕ್ಕಿಪುಡಿ ಬೆರೆಸಿ.

## ಕೆಸು ಪಲ್ಯ

ಬೇಕಾಗುವ ಸಾಮಗ್ರಿ – ಕೆಸುವಿನ ಎಲೆ ೭-೮; ಅಕ್ಕಿ ಒಂದೂವರೆ ಕಪ್; ಕಾಯಿ ತುರಿ - ಕಾಲು ಕಪ್; ಮಾವಿನಹುಳಿ ಪುಡಿ - ೧ ಟೀ ಚಮಚ; ಬೆಲ್ಲದ ಪುಡಿ - ೨ ಟೀ ಚಮಚ; ಕರಿಮೆಣಸಿನ ಕಾಳು - ೮ರಿಂದ೧೦; ಜೀರಿಗೆ - ೧ ಟೀ ಚಮಚ.

ಕೆಸುವಿನ ಎಲೆಯನ್ನು ಸಣ್ಣಗೆ ಹೆಚ್ಚಿ. ಅಕ್ಕಿಯನ್ನು ಎರಡು ಗಂಟೆ ನೀರಿನಲ್ಲಿ ನೆನೆಸಿ. ಅಕ್ಕಿ, ಕಾಯಿತುರಿ, ಮಾವಿನ ಹುಳಿಪುಡಿ, ಬೆಲ್ಲದ ಪುಡಿ, ಕರಿಮೆಣಸು, ಜೀರಿಗೆ, ಉಪ್ಪು, ಅರಿಶಿನಪುಡಿ ಹಾಕಿ ರವೆಯ ತರಿಗೆ ಹದವಾಗಿ ನೀರು ಹಾಕಿ ರುಬ್ಬಿ. ಹಿಟ್ಟು ಗಟ್ಟಿಯಾಗಿರಬೇಕು.

ಹೆಚ್ಚಿದ ಎಲೆ ಹಾಕಿ ಕಲಸಿ ಉಂಡೆ ಮಾಡಿ. ಇಡ್ಲಿ ಪಾತ್ರೆಯಲ್ಲಿ ಅರ್ಧ ಗಂಟೆ ಬೇಯಿಸಿ ಬೆಂದ ಉಂಡೆಗಳನ್ನು ಮಾಡಿಟ್ಟುಕೊಳ್ಳಿ. ಬಾಣಲೆಯಲ್ಲಿ ಉಂಡೆಯ ಪುಡಿ ಹಾಕಿ ಕಲಸಿ.

## ಅರಳುಪಲ್ಯ

ಬೇಕಾಗುವ ಸಾಮಗ್ರಿಗಳು – ಅರಳು - ೨ ಕಪ್; ಸಾಸಿವೆ ೧ ಟೀಚಮಚ; ಕಾಯಿತುರಿ - ೧ ಟೇಬಲ್ ಚಮಚ; ಬೆಲ್ಲದ ಪುಡಿ - ೧ ಟೀ ಚಮಚ; ಮಾವಿನಕಾಯಿ ಪುಡಿ - ೧ ಟೀ ಚಮಚ.

ಬೆಲ್ಲ, ಮಾವಿನಪುಡಿ ಹಾಕಿ ಕಾಲು ಕಪ್ ನೀರು ಹಾಕಿ ಚೆನ್ನಾಗಿ ಬಾಣಲೆಯಲ್ಲಿ ಕುದಿಸಿ. ತಣ್ಣೀರಿನಲ್ಲಿ ಅರಳು ತೊಳೆದು ಬಾಣಲೆಯ ಮಸಾಲೆ ನೀರಿಗೆ ಹಾಕಿ, ಮಗುಚಿ. ಸಾಸಿವೆ, ಕಾಯಿತುರಿ ರುಬ್ಬಿ ಹಾಕಿ ಮತ್ತೊಮ್ಮೆ ಮಗುಚಿ.

|| ಇಲ್ಲಿಗೆ ನಾಗರಪಂಚಮೀ ವ್ರತವಿಧಾನವು ಮುಗಿಯಿತು ||

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥
ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ನಾಗಪಂಚಮೀ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ
ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ
ಶ್ರೀಲಕ್ಷ್ಮೀಹಯಗ್ರೀವದೇವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ



ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),

ಗಿರಿನಗರ, ಬೆಂಗಳೂರು - 560 085

# ಮಂಗಳಗೌರಿ ಪೂಜಾವಿಧಾನ

ಶ್ರಾವಣ ಮಾಸದ ಮಂಗಳವಾ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಮಂಗಳಗೌರಿ ಪೂಜಾವಿಧಾನ

ಶ್ರಾವಣ ॥ ಮಂಗಳವಾರ

ಇದು ಸ್ತ್ರೀಯರಿಗಾಗಿ

ವಿದ್ವಾನ್ ॥ ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :
ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),
ಗಿರಿನಗರ, ಬೆಂಗಳೂರು-೮೫

**ಮಂಗಳಗೌರಿ ಪೂಜಾವಿಧಾನ** ಶಾಲಿವಾಹನ ಶಕೆ ೧೯೪೩ ಶಾರ್ವರಿ॥ ಶ್ರಾವಣ ॥ ಶುದ್ಧ ॥ ಪೂರ್ಣಿಮೆ (ದಿನಾಂಕ:೩-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥ-ಶ್ರೀಪಾದಂಗಳವರ ಕರಕಮಲಗಳಿಂದ ಭಾರತೀರಮಣಹೃದಯ-ಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು : ೧೦೯


4271, 2ನೇ ಮೇನ್, ಗಿರಿನಗರ,
ಸೀತಾಸರ್ಕಲ್ ಹತ್ತಿರ, ಬೆಂಗಳೂರು-85
ದೂರವಾಣಿ : 9141495120

ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಶ್ರೀಮತಿ ನಾಗಲತಾ

ಮುದ್ರಣ : ಮುಕ್ತಿಪಥ ಮುದ್ರಣಾಲಯ,
ಬೆಂಗಳೂರು.

**ಶಾಸ್ತ್ರನಿಧಿ ಬಿ. ವೆಂಕಟೇಶಾಚಾರ್ಯ ಮೆಮೋರಿಯಲ್ ಟ್ರಸ್ಟ್‌ನ** ಆರ್ಥಿಕ ನೆರವಿನಿಂದ ಈ ಪುಸ್ತಕವು ಪ್ರಕಾಶನಗೊಂಡಿದೆ.

ಈ ಟ್ರಸ್ಟ್‌ನ ಮುಖ್ಯಾಧಿಕಾರಿಗಳಾದ **ಚಕ್ರಪಾಣಿಯವರು ಹಾಗೂ ಬಾಡಿಗಾರ್ಡ್ ಭೀಮಣ್ಣನವರು ಇವರು ಮಾಡಿದ ಸೇವೆ.**

## ಸ್ತ್ರೀಯರಿಗೆ ಸೂಚನೆ

ಮಂಗಳಗೌರಿ ಪೂಜೆಯನ್ನು ವಿವಾಹಿತರಾದ ಸ್ತ್ರೀಯರು ಮಾಡಬೇಕು. ಆದರೆ ಈ ಪುಸ್ತಕದಲ್ಲಿ ನೀಡಿರುವ ಪೂಜೆಯ ಮಂತ್ರಗಳನ್ನು ಯಾರ ಅಪೇಕ್ಷೆಯೂ ಇಲ್ಲದೆ ಸ್ವತಂತ್ರವಾಗಿ ನೋಡಿಕೊಂಡು ಮಾಡಬಹುದು. ಪುರೋಹಿತರ ಮೂಲಕ ಅಥವಾ ಪತಿಯ ಮೂಲಕ ಮಂತ್ರ ಹೇಳಿಸಿ ಪೂಜೆ ಮಾಡುವುದೇ ಉತ್ತಮ ಪಕ್ಷ. ಆದರೆ ಅದು ಸಾಧ್ಯವಾಗದೆ ಇದ್ದಾಗ, ಈ ಪುಸ್ತಕದಲ್ಲಿ ನೀಡಿದ ಮಂತ್ರಗಳನ್ನು ಹೇಳಿಕೊಂಡು ಪೂಜೆ ಮಾಡಬಹುದು. ಶ್ಲೋಕಗಳನ್ನೂ ಕೂಡ ಹೇಳಿಕೊಂಡು ಪೂಜೆ ಮಾಡುವ ಸಂಪ್ರದಾಯ ನಿಮ್ಮಲ್ಲಿ ಇಲ್ಲದಿದ್ದರೆ ಇದೇ ಪುಸ್ತಕದ ಕೊನೆಯಲ್ಲಿ ಇರುವ ಹಾಡನ್ನು ಹೇಳಿಕೊಂಡು ಪೂಜೆಯನ್ನು ಮಾಡಬಹುದು. ಕಥಾಭಾಗದ ಅನುವಾದ ಓದಿ ಕಪ್ಪನ್ನು ಹಿಡಿಯಬಹುದು. ಅಥವಾ ಕೊನೆಯಲ್ಲಿ ನೀಡಿದ ಕಥೆಯ ಹಾಡನ್ನು ಹೇಳುತ್ತಾ ಕಪ್ಪನ್ನು ಹಿಡಿಯಬಹುದು. 'ಆತ್ಮನ್ಯೈವ ಕೃತೇ ಹೋಮೇ ಶಕ್ತಿತೋ ಗುರುದಕ್ಷಿಣಾ' ಎಂದು ಶ್ರೀಮದಾಚಾರ್ಯರು ತಂತ್ರಸಾರಸಂಗ್ರಹದಲ್ಲಿ ಹೇಳಿದಂತೆ ತಾವೇ ಪೂಜೆ ಮಾಡಿದಾಗ ಯಥಾಶಕ್ತಿ ದಕ್ಷಿಣೆಯನ್ನು ವಾಯನದಾನದ ಜೊತೆ ಬ್ರಾಹ್ಮಣರಿಗೆ ನೀಡಬೇಕು.

# ವಿಷಯಾನುಕ್ರಮಣಿಕೆ

# ಮುನ್ನುಡಿ

ವಿವಾಹಿತರಾದ ಸ್ತ್ರೀಯರು ಮೊದಲ ಐದುವರ್ಷಗಳಲ್ಲಿ ಶ್ರಾವಣಮಾಸದ ಪ್ರತಿ ಮಂಗಳವಾರಗಳಲ್ಲಿ ಮಾಡಬೇಕಾದ ಮಂಗಳಗೌರಿ ಪೂಜೆಯನ್ನು ಇಲ್ಲಿ ನೀಡಲಾಗಿದೆ. ಮತ್ತು ಮಂಗಳಗೌರಿ ಪೂಜೆಗೆ ಉಪಯುಕ್ತವಾದ ಎಲ್ಲ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಶಾಸ್ತ್ರಗಳಲ್ಲಿ ಹೇಳಿರುವುದಕ್ಕಿಂತ ವಿಭಿನ್ನವಾದ ಸಂಪ್ರದಾಯವು ಈಗಿನ ಮನೆಗಳಲ್ಲಿ ಕಾಣುತ್ತೇವೆ. ಆ ಸಂಪ್ರದಾಯಗಳನ್ನೆಲ್ಲ ಸಂಗ್ರಹಿಸಿರುವುದಿಲ್ಲ. ಧರ್ಮಗ್ರಂಥದಲ್ಲಿ ಯಾವರೀತಿಯಲ್ಲಿ ಪೂಜೆಯನ್ನು ಹೇಳಿದ್ದಾರೋ, ಅದರ ಪ್ರಕಾರವೇ ಇಲ್ಲಿ ಮಾಹಿತಿಯನ್ನು ಹಾಗೂ ಪೂಜಾವಿಧಾನವನ್ನು ನೀಡಲಾಗಿದೆ. ಪಾರ್ವತಿಯ ಒಂದು ರೂಪವೇ ಮಂಗಳಗೌರಿಯಾದ್ದರಿಂದ ರುದ್ರದೇವರ ಜೊತೆಯೇ ಪೂಜಿಸಬೇಕು. ಅಂತರ್ಯಾಮಿಗಳಾದ ಲಕ್ಷ್ಮೀನಾರಾಯಣರನ್ನೂ ಪೂಜಿಸಬೇಕು.

ಮಂಗಳಗೌರಿಯ ಪೂಜೆಯ ಬಗ್ಗೆ ಒಂದು ಪುಸ್ತಕದಲ್ಲಿ ಇದ್ದಂತೆ ಮತ್ತೊಂದು ಪುಸ್ತಕದಲ್ಲಿ ಇರುವುದಿಲ್ಲ. ಕಥೆಯಲ್ಲೂ ಕೂಡ ಬಹಳಷ್ಟು ವಿಕ್ಷೇಪಗಳಿವೆ. ಆಶ್ಚರ್ಯವೆಂದರೆ ಕಥಾಭಾಗದ ಮೂಲವನ್ನು ಸಂಗ್ರಹ ಮಾಡದೇ ಕನ್ನಡದ ಕಥೆಯನ್ನಷ್ಟೇ ಎಲ್ಲರೂ ಮುದ್ರಿಸಿದ್ದಾರೆ. ಆದ್ದರಿಂದ ಕಥೆಯಲ್ಲೂ ಕೂಡ ಸಂವಾದವು ಸಿಗುವುದಿಲ್ಲ. ಈ ಪುಸ್ತಕದಲ್ಲಿ ವ್ರತರಾಜ ಎಂಬ ಪ್ರಾಚೀನ ಗ್ರಂಥದಿಂದ ಕಥೆಯ ಮೂಲಪಾಠವನ್ನು ಸಂಗ್ರಹಿಸಿ, ಅನುವಾದ ನೀಡಲಾಗಿದೆ. ವ್ರತರಾಜಗ್ರಂಥವು ಪ್ರಾಮಾಣಿಕವಾಗಿದೆ ಹಾಗೂ ಅನುಸರಿಸಲು ಯೋಗ್ಯವಾಗಿದೆ. ಏಕೆಂದರೆ ಶ್ರೀಸತ್ಯಧರ್ಮತೀರ್ಥರು ದಶಮಸ್ಕಂಧದ ವ್ಯಾಖ್ಯಾನದಲ್ಲಿ ಈ ವ್ರತರಾಜಗ್ರಂಥದ ಉಲ್ಲೇಖವನ್ನು ಮಾಡಿರುತ್ತಾರೆ.

ಸ್ತ್ರೀಯರು ಮಂಗಳಗೌರಿಯ ಕಥೆಯ ಅನುವಾದದ ಭಾಗವನ್ನು ಓದುತ್ತಾ ಕಪ್ಪನ್ನು ಹಿಡಿಯಬಹುದು. ಅಥವಾ ಸಂಪ್ರದಾಯದ ಹಾಡನ್ನು ಹೇಳುತ್ತಾ ಕಪ್ಪನ್ನು ಹಿಡಿಯಬಹುದು. ೧೬ ಬತ್ತಿಗಳ ದೀಪವನ್ನು ಗೌರಿಗೆ ಹಚ್ಚಿ ಅದನ್ನು ಮುತ್ತೈದೆಯರಿಗೆ ದಾನ ಮಾಡಬೇಕು. ಮಂಗಳಗೌರಿ ಪೂಜೆಯನ್ನು ಮಾಡುವ ಗೃಹಿಣಿಯು ಉಪ್ಪಿಲ್ಲದ ಪದಾರ್ಥಗಳನ್ನೇ ತಿನ್ನಬೇಕು.

ಮಂಗಳಗೌರೀ ಪೂಜೆಯನ್ನು ಪ್ರತಿಯೊಬ್ಬ ಸ್ತ್ರೀಯು ಆಚರಿಸಿ, ತನ್ನ ಪತಿಯ ಆಯುಷ್ಯದ ಅಭಿವೃದ್ಧಿಗೆ ಪ್ರಯತ್ನ ಪಟ್ಟು ಉತ್ತಮ ಗೃಹಿಣಿಯಾಗಿ, ಕೀರ್ತಿಶಾಲಿಯಾಗಿ, ಸಚ್ಚಾರಿತ್ರ್ಯವಂತಳಾಗಿ, ಆದರ್ಶಮಹಿಳೆಯಾಗಿ ಜೀವನ ನಡೆಸಲು ಈ ಕೃತಿಯು ಕೈದೀವಿಗೆಯಾಗಲಿ.

ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ಶಾಸ್ತ್ರನಿಧಿ ಬಿ. ವೆಂಕಟೇಶಾಚಾರ್ಯ ಮೆಮೋರಿಯಲ್ ಟ್ರಸ್ಟ್‌ನ ಮುಖ್ಯಾಧಿಕಾರಿಗಳಾದ ಚಕ್ರಪಾಣಿಯವರಿಗೆ ಹಾಗೂ ಬಾಡಿಗಾರ್ಡ್ ಭೀಮಣ್ಣನವರು ಮತ್ತು ಇವರ ಕುಟುಂಬವರ್ಗದವರಿಗೆ ಆಯುಷ್ಯ ಆರೋಗ್ಯಗಳ ಜೊತೆ ಈ ಜ್ಞಾನಯಜ್ಞದ ಪುಣ್ಯರಾಶಿಯು ದೊರಕಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ

# ಮಂಗಳಗೌರಿಪೂಜೆಗೆ ಸಾಮಗ್ರಿಗಳು

* ಗೋದಿಹಿಟ್ಟಿನ ದೊಡ್ಡ ದೀಪವನ್ನು ಹಣತೆಯ ರೂಪದಲ್ಲಿ ತಯಾರಿಸಿ, ತುಪ್ಪವನ್ನು ತುಂಬಬೇಕು. ೧೬ ಬತ್ತಿಗಳನ್ನು ಅದರಲ್ಲಿ ಜೋಡಿಸಬೇಕು.

  ಅಪಾಮಾರ್ಗಪತ್ರ, ಗರಿಕೆ, ದತ್ತೂರಪತ್ರ, ಬಿಲ್ವಪತ್ರ ಇವುಗಳು ಹದಿನಾರು ಸಂಖ್ಯೆಯಲ್ಲಿರಬೇಕು.

* ತ್ರಿಕೋನಾಕಾರದ ಎರಡು ಅಥವಾ ಐದು ರವಿಕೆಗಳನ್ನು ಸಿದ್ಧಪಡಿಸಿಕೊಳ್ಳಬೇಕು. ೩೨ ಅಡಿಕೆಗಳು, ಎರಡು ಕೊಬ್ಬರಿ ಬಟ್ಟಲು, ಅವಶ್ಯಕತೆಯಿದ್ದಷ್ಟು ದೋರಗಳು, ಮರದಬಾಗಿಣ, ೩೨ ವೀಳ್ಯದೆಲೆ. ತಾಯಿಗೆ ನೀಡುವ ಕಂಚಿನ ಪಾತ್ರೆ. ಅರಿಶಿನ, ಕುಂಕುಮ, ಹರಿನಿರ್ಮಾಲ್ಯ, ತೀರ್ಥ, ಘಂಟಾಮಣಿ, ಶಂಖ, ಪೂಜಾಸಾಮಗ್ರಿಗಳು, ಪಂಚಾಮೃತದ ದ್ರವ್ಯಗಳು, ಬಿಡಿ ಹೂಗಳು, ಪುಷ್ಪಮಾಲೆಗಳು, ಕಲಶ, ಧಾನ್ಯ, ಅರಿಶಿನಕೊಂಬು, ಅಡಿಕೆ, ಮಂತ್ರಾಕ್ಷತೆ, ನಾಣ್ಯಗಳು, ಕೂರ್ಚ, ೫ ಬಗೆಯ ಚಿಗುರುಗಳು, ತೆಂಗಿನಕಾಯಿ, ಎರಡು ರೇಷ್ಮೆವಸ್ತ್ರ, ಸಂಕಲ್ಪದ ಪರಿಕರಗಳು, ಕಾಡಿಗೆ, ಸಿಂಧೂರ, ಬಳೆ, ಕಾಲುಂಗುರ, ಆಭರಣಗಳು, ೪ ಗೆಜ್ಜೆವಸ್ತ್ರ, ಗಂಧ, ಅಕ್ಷತೆ, ಹೂವುಗಳು, ತುಳಸೀಪತ್ರ, ಹಲಗಾರತಿ, ಮಂಗಳಾರತಿಗೆ ಬತ್ತಿಗಳು, ದೀಪಗಳು. ವ್ರತ ಇಲ್ಲದಿದ್ದರೆ ೫ ಬಗೆಯ ಹಣ್ಣುಗಳು, ಶಾಖಾವ್ರತವಿದ್ದರೆ ೧೬ ಮಾವಿನಹಣ್ಣುಗಳು.

# ಮಂಗಳಗೌರಿಪೂಜೆಯ ಬಗ್ಗೆ ತಿಳಿಯಬೇಕಾದ ಮಾಹಿತಿಗಳು

* ವಿವಾಹಾತ್ ಪ್ರಥಮಂ ವರ್ಷಮಾರಭ್ಯ ಆಪಂಚವರ್ಷಕವ್ ।
ಶ್ರಾವಣೇ ಮಾಸಿ ಭೌಮೇಷು ಚತುರ್ಷ ವ್ರತಮಾಚರೇತ್ ॥ (ವ್ರತರಾಜ)

ವಿವಾಹವಾದ ಮೊದಲನೆಯ ವರ್ಷದಿಂದ ಐದುವರ್ಷಗಳು ಈ ಮಂಗಳಗೌರೀ ವ್ರತವನ್ನು ಆಚರಿಸಬೇಕು. ಶ್ರಾವಣಮಾಸದ ಮಂಗಳವಾರದಲ್ಲಿ ಈ ವ್ರತವನ್ನು ನಡೆಸಬೇಕು.

* ಪ್ರಥಮೇ ವತ್ಸರೇ ಮಾತುಃ ಗೇಹೇ ಕರ್ತವ್ಯಮೇವ ಚ ।
ತತೋ ಭರ್ತೃಗೃಹಂ ಕಾರ್ಯಮವಶ್ಯಂ ಸ್ತ್ರೀಭಿರಾದರಾತ್ ॥

ವಿವಾಹವಾದ ಮೊದಲನೆಯ ವರ್ಷದಲ್ಲಿ ತಾಯಿ ಮನೆಯಲ್ಲಿ ಮಾಡಬೇಕು. ನಂತರ ಗಂಡನ ಮನೆಯಲ್ಲಿ ಸ್ತ್ರೀಯರು ಅವಶ್ಯವಾಗಿ ಗಂಡನ ಮನೆಯಲ್ಲಿ ಮಂಗಳಗೌರೀವ್ರತವನ್ನು ಆಚರಿಸಬೇಕು.

* ಯಶಸ್ಯಂ ಪುಣ್ಯದಂ ಧನ್ಯಂ ಭರ್ತುರಾಯುಷ್ಯವರ್ಧನಮ್ ।

ಮಂಗಳಗೌರೀವ್ರತವು ಯಶಸ್ಸನ್ನು ನೀಡುತ್ತದೆ. ಪುಣ್ಯಪ್ರದವಾಗಿದೆ. ಇದನ್ನು ಆಚರಿಸಿದವರ ಜೀವನವು ಸಾರ್ಥಕವಾಗುತ್ತದೆ. ಎಲ್ಲದಕ್ಕಿಂತ ಮುಖ್ಯವಾಗಿ ಗಂಡನ ಆಯುಷ್ಯವು ವೃದ್ಧಿಯಾಗುತ್ತದೆ.

* ವಿವಾಹಿತಳಾದ ಪತಿವ್ರತೆಯು ಮೊದಲ ಐದುವರ್ಷಗಳ ಕಾಲ ಮಂಗಳಗೌರಿಪೂಜೆಯನ್ನು ಶ್ರಾವಣಮಾಸದಲ್ಲಿ ಆಚರಿಸಬೇಕು.

* ಶ್ರಾವಣಮಾಸದಲ್ಲಿ ಒಟ್ಟು ೪ ಮಂಗಳವಾರಗಳು ಬರುತ್ತವೆ. ಆ ನಾಕೂ ಮಂಗಳವಾರಗಳಲ್ಲಿ ಈ ಪುಸ್ತಕದಲ್ಲಿ ನೀಡಿದ ಪೂಜೆಯನ್ನು ಮಾಡಿ, ಕಥೆಯನ್ನು ಓದಬೇಕು ಮತ್ತು ಉಪ್ಪಿಲ್ಲದ ಊಟವನ್ನೇ ಮಾಡಬೇಕು.

* ಸ್ತ್ರೀಯರಿಗಾಗಿಯೇ ಈ ಪೂಜೆಯು ವಿಹಿತವಾಗಿದೆ. ವೇದಮಂತ್ರಗಳನ್ನು ಸ್ತ್ರೀಯರು ಪಠಿಸಬಾರದು.

* ಎಡಗೈಯಲ್ಲಿ ಗಂಟೆಯನ್ನು ಬಾರಿಸುತ್ತಾ, ಬಲಗೈಯಲ್ಲಿ ಮಂಗಳಾರತಿಯನ್ನೂ ಕೂಡ ಸ್ತ್ರೀಯರು ಮಾಡಬಾರದು. ಗಂಟೆಯನ್ನು ಬಾರಿಸದೆ ಆರತಿಯನ್ನಷ್ಟೇ ಮಾಡಬೇಕು.

* ದೇವರ ಪೂಜೆಯನ್ನು ಮುಗಿಸಿದ ಮೇಲೆ ಮಂಗಳಗೌರಿ ಪೂಜೆಯನ್ನು ಮಾಡಬೇಕು. ಗೆಳತಿಯರನ್ನು ಅಥವಾ ಮುತ್ತೈದೆಯರನ್ನು ಕರೆದು ಸಂಭ್ರಮದಿಂದ ಮಂಗಳಗೌರಿ ಪೂಜೆಯನ್ನು ಮಾಡಬೇಕು. ಬಂದ ಮುತ್ತೈದೆಯರಿಗೆ ಅರಿಶಿನ ಕುಂಕುಮ, ಹೂವು, ಎಲೆ ಅಡಿಕೆ, ನೆನೆಸಿದ ಕಡಲೆಕಾಳು, ಹಣ್ಣು, ದಕ್ಷಿಣೆ ಇವುಗಳನ್ನು ಕೊಟ್ಟು ಸತ್ಕಾರ ಮಾಡಬೇಕು. ಮಂಗಳಗೌರಿಪೂಜೆಯನ್ನು ಮೊದಲ ವರ್ಷ ತಾಯಿಯ ಮನೆಯಲ್ಲಿ ಮಾಡಬೇಕು. ಅನಂತರ ಮುಂದಿನ ನಾಕೂ ವರ್ಷಗಳು ಗಂಡನ ಮನೆಯಲ್ಲಿ ಮಾಡಬೇಕು.

* ಮೊದಲನೆಯ ವರ್ಷ ಭೀಮನ ಅಮಾವಾಸ್ಯೆಯಂದು ಮಂಗಳಗೌರಿ-ಪೂಜೆಯನ್ನು ಮಾಡಬೇಕೆನ್ನುತ್ತಾರೆ. ಆದರೆ ಅಮಾವಾಸ್ಯೆಯಂದು ಮಂಗಳಗೌರಿಯ ಪೂಜೆಯನ್ನು ಪ್ರಾರಂಭ ಮಾಡಬಾರದು ಎಂಬ ಉದ್ದೇಶದಿಂದ ಆಷಾಢ ಮಾಸದ ಕೃಷ್ಣಪಕ್ಷದ ದ್ವಾದಶಿಯ ಪ್ರದೋಷ ಸಮಯದಲ್ಲಿ ಮಂಗಳಗೌರಿಯ ಪೂಜೆಯನ್ನು ಪ್ರಾರಂಭ ಮಾಡುತ್ತಾರೆ.

* ದ್ವಾದಶಿಯ ದಿವಸ ಮಂಗಳವಾರ ಇರಬೇಕೆಂಬ ನಿಯಮವಿಲ್ಲ. ಏಕೆಂದರೆ ಪ್ರದೋಷ ಕಾಲದಲ್ಲಿ ಶಿವ-ಪಾರ್ವತಿಯರು ವಿಶೇಷಸಾನ್ನಿಧ್ಯವನ್ನು ಹೊಂದಿರುತ್ತಾರೆ. ಯಾರು ಪ್ರದೋಷಕಾಲದಲ್ಲಿ ಶಿವ-ಪಾರ್ವತಿಯರನ್ನು ಪೂಜಿಸುತ್ತಾರೋ, ಅವರಿಗೆ ಸಂಪೂರ್ಣವಾಗಿ ಅನುಗ್ರಹ ಮಾಡುತ್ತಾರೆ. ಈ ದೃಷ್ಟಿಯಿಂದ ಐದುವರ್ಷಗಳಲ್ಲಿ ನಡೆಸುವ ಮಂಗಳಗೌರಿ ಪೂಜೆಯನ್ನು ಆಷಾಢಮಾಸದ ಕೃಷ್ಣಪಕ್ಷದ ದ್ವಾದಶಿಯ ಸಾಯಂಕಾಲದಲ್ಲಿ ಪ್ರಾರಂಭ ಮಾಡುವುದು ಅತ್ಯಂತ ಅರ್ಥಪೂರ್ಣವಾಗಿದೆ.

* ಕೇವಲ ಗೌರಿಯನ್ನು ಪೂಜಿಸುವುದು ಶಾಸ್ತ್ರನಿಷಿದ್ಧವಾಗಿದೆ. ರುದ್ರದೇವರ ತೊಡೆಯಲ್ಲಿ ಕುಳಿತ ಮಂಗಳಗೌರಿಯನ್ನೇ ಪೂಜಿಸಬೇಕು. ಮತ್ತು ಶಿವಪಾರ್ವತಿಯರ ಅಂತರ್ಗತರಾದ ಭಾರತೀರಮಣಮುಖ್ಯಪ್ರಾಣದೇವರನ್ನು ಅವರ ಅಂತರ್ಯಾಮಿಯಾದ ಜಯಾಪತಿ ಸಂಕರ್ಷಣನನ್ನು ಪ್ರತೀಕ್ಷಣವು ಸ್ಮರಣೆ ಮಾಡುತ್ತಿರಬೇಕು. ಭಗವಂತನಿಗೆ ಮಾಡುವ ಪೂಜೆಯೆಂದು ನಿಶ್ಚಯಜ್ಞಾನ ಪಡೆದಿರಬೇಕು.

## ಮಂಗಳಗೌರಿಪೂಜೆಯ ವ್ರತದ ಬಗ್ಗೆ

ಉಪವಾಸ, ಹೋಮ, ಜಾಗರ, ದಾನ, ಅನ್ನಸಂತರ್ಪಣೆ ಇವುಗಳ ಜೊತೆ ವೈಭವದಲ್ಲಿ ಮಂಟಪವನ್ನು ನಿರ್ಮಾಣ ಮಾಡಿ, ಪೂಜೆಯನ್ನು ದೀಕ್ಷಾಕ್ರಮದಲ್ಲಿ ಮಾಡುವುದೇ ವ್ರತ ಎಂದು ಕರೆಸಿಕೊಳ್ಳುತ್ತದೆ. ಈ ಸಂಪ್ರದಾಯವು ಇಂದು ಕಾಣಿಸುತ್ತಿಲ್ಲ. ಪ್ರತಿಯೊಂದು ಹಬ್ಬಗಳಿಗೂ ಇದೇ ಕ್ರಮದಲ್ಲಿ ವ್ರತಗಳನ್ನು ಧರ್ಮಶಾಸ್ತ್ರವು ಹೇಳುತ್ತದೆ. ಮಂಗಳಗೌರೀ ವ್ರತದ ಬಗ್ಗೆಯೂ ಉಪವಾಸ, ಹೋಮಹವನಾದಿಗಳನ್ನು ವ್ರತರಾಜವು ವರ್ಣಿಸುತ್ತವೆ. ಆದರೆ ಈ ಪುಸ್ತಕದಲ್ಲಿ ಅವುಗಳ ಬಗ್ಗೆ ಮಾಹಿತಿಯನ್ನು ನೀಡಿರುವುದಿಲ್ಲ. ಅವುಗಳ ವಿಧಾನವನ್ನೂ ಕೂಡ ನೀಡಿರುವುದಿಲ್ಲ. ಆದಕಾರಣ ಮಂಗಳಗೌರಿಯ ವ್ರತ ಎಂಬ ಹೆಸರನ್ನು ಈ ಪುಸ್ತಕಕ್ಕೆ ನೀಡದೇ ಮಂಗಳಗೌರಿ ಪೂಜಾವಿಧಾನ ಎಂದೇ ಹೇಳಲಾಗಿದೆ.

ನಾವು ಮಾಡುವ ಅಲ್ಪಕಾಲದ ಪೂಜೆಯನ್ನು ವ್ರತವೆಂದು ಸರ್ವಥಾ ಯಾರೂ ಭಾವಿಸಬಾರದು. ಅಲ್ಪಪೂಜೆಯನ್ನು ಪೂಜೆಯೆಂದಷ್ಟೇ ಭಾವಿಸಿ, ಯಥಾಶಕ್ತಿ ಮಾಡಿದ ಪೂಜೆಯಿಂದ ಮಂಗಳಗೌರಿಯು ಪ್ರಸನ್ನಳಾಗಲಿ ಎಂದಷ್ಟೇ ಪ್ರಾರ್ಥಿಸಬೇಕು. ಬೇರೆ ಪುಸ್ತಕಗಳಲ್ಲಿಯೂ ಕೂಡ ಇದನ್ನು ಗಮನಿಸಬೇಕು. ಯಾವುದೇ ಪುಸ್ತಕದಲ್ಲಿ ವ್ರತ ಎಂದು ಬರೆಯದೇ ಪೂಜಾವಿಧಾನ ಎಂದು ಬರೆಯಲು ಇದೇ ಕಾರಣವಿರುತ್ತದೆ.

# ಮಂಗಳಗೌರಿ ಪೂಜೆಗೆ ಸಿದ್ಧತೆಗಳು

* ದೇವರ ಮುಂದೆ ದೇವರಿರುವ ಪೀಠಕ್ಕಿಂತಲೂ ಕೆಳಗೆ ಒಂದು ಪೀಠವನ್ನು ಸಿದ್ಧಗೊಳಿಸಬೇಕು. ಗೋಮಯದಿಂದ ಸ್ಥಳವನ್ನು ಶುದ್ಧಿಗೊಳಿಸಿ ಪೀಠವನ್ನಿಟ್ಟು ಅಷ್ಟದಲ ಕಮಲವನ್ನು ಬರೆದು, ಅದರ ಮೇಲೆ ಒಂದು ಸೇರು ಅಕ್ಕಿ ಇರುವ ಹರಿವಾಣವನ್ನಿಡಬೇಕು. ಅಕ್ಕಿಯಲ್ಲಿ ಅರಿಶಿನದ ಕೊಂಬು, ಅಡಿಕೆಬೆಟ್ಟ, ನಾಣ್ಯಗಳನ್ನು ಹಾಕಿರಬೇಕು.

* ಅಕ್ಕಿಯ ಮೇಲೆ ಬೆಳ್ಳಿಯ ಕಲಶವನ್ನಿಡಬೇಕು. ಕಲಶದಲ್ಲಿ ಪೂರ್ಣ ನೀರನ್ನು ತುಂಬಿಸಿ ಪಂಚಪಲ್ಲವಗಳನ್ನು ರತ್ನನಾಣ್ಯಗಳನ್ನು ಹಾಕಿ ಅದರ ಮೇಲೆ ತೆಂಗಿನ ಕಾಯಿಯನ್ನಿಟ್ಟು ತೆಂಗಿನಕಾಯಿಗೆ ಹಾಗೂ ಕಲಶಕ್ಕೆ ಅಲಂಕಾರವನ್ನು ಮಾಡಬೇಕು. ಹೀಗೆ ಮಾಡುವಾಗ ಲಕ್ಷ್ಮೀಶೋಭಾನಪದ ಹೇಳಿಕೊಳ್ಳಬೇಕು.

* ತೆಂಗಿನಕಾಯಿಗೆ ತುಪ್ಪವನ್ನು ಸವರಿ, ಅರಿಶಿನವನ್ನು ಹಚ್ಚಿ, ಗೌರಿಮುಖವನ್ನು ಇಟ್ಟಿರಬೇಕು. ಈ ಕಲಶದ ಎಡ ಮತ್ತು ಬಲಭಾಗಗಳಲ್ಲಿ ಕೊಬ್ಬರಿಬಟ್ಟಲು-ಗಳನ್ನಿಡಬೇಕು. ಅದರೊಳಗೆ ಎಂಟು ಅಡಿಕೆಬೆಟ್ಟಗಳನ್ನು ಹಾಕಿರಬೇಕು.

* ತ್ರಿಕೋನಾಕಾರದಲ್ಲಿ ಮಡಿಸಿದ ಎರಡು ಕಣಗಳನ್ನು ಎರಡು ಬದಿಯಲ್ಲಿ ಇಡಬೇಕು. ಕೆಲವರು ಐದನ್ನು ಇಡುತ್ತಾರೆ.

* ಕಲಶದ ಮುಂದೆ ೩೨ ವೀಳ್ಯದೆಲೆಗಳನ್ನು, ಹದಿನಾರು ಅಡಿಕೆ ಚೂರುಗಳನ್ನು ಇಡಬೇಕು.

* ಪುಷ್ಪಂ ಮಂಡಪಿಕಾ ಕಾರ್ಯಾ ಕದಲೀಸ್ತಂಬಮಂಡಿತಾ ।
  ನಾನಾವಿಧೈಃ ಫಲೈಶ್ಚೈವ ಪಟ್ಟಕೂಲಯಾಶ್ಚ ಭೂಷಯೇತ್ ॥

  ಮಂಗಳಗೌರಿಯ ಮಂಟಪವನ್ನು ಹೂವಿನಿಂದ ಅಲಂಕರಿಸಬೇಕು. ಬಾಳೇಕಂಬಗಳನ್ನು ಇಡಬೇಕು. ಹಾಗೂ ಅನೇಕ ಬಗೆಯ ಹಣ್ಣಗಳಿಂದಲೂ ಅಲಂಕಾರ ಮಾಡಬೇಕು. ಮಾವಿನ ಸೊಪ್ಪಿನಿಂದ ತೋರಣವನ್ನು ಕಟ್ಟಬೇಕು.

ಮಂಗಳಗೌರಿ ಪೂಜೆ

* ಮಂಟಪದಲ್ಲಿ ಬೆಳ್ಳಿಯ ತಟ್ಟೆಯನ್ನಿಟ್ಟು ಅಕ್ಕಿಯನ್ನು ಹಾಕಿ, ಅದರ ಮೇಲೆ ಸುವರ್ಣ, ಬೆಳ್ಳಿ, ತಾಮ್ರದ ಮಂಗಳಗೌರಿಯ ಪ್ರತಿಮೆಯನ್ನು ಇಡಬೇಕು. ಇದು ಸಾಧ್ಯವಾಗದಿದ್ದರೆ ಅರಿಶಿನದಿಂದ ಗೋಪುರ ಮಾಡಿ, ಅಲ್ಲಿ ಗೌರಿಯನ್ನು ಆವಾಹನೆ ಮಾಡಬೇಕು.

* ಕೆಲವರು ಅರಿಶಿನ ಗೋಪುರ ಮಾಡಿ, ಮಂಗಳಗೌರಿಯನ್ನು ಪೂಜಿಸುತ್ತಾರೆ. ಆದರೆ ಪ್ರತಿಯೊಂದು ಪೂಜೆಗಳಲ್ಲಿಯೂ ಕಲಶದಲ್ಲಿಯೇ ದೇವತೆಗಳ ಆವಾಹನೆಯನ್ನು ಶಾಸ್ತ್ರವು ವಿಧಾನ ಮಾಡಿರುವುದರಿಂದ, ಈ ಪುಸ್ತಕದಲ್ಲಿ ಕಲಶದಲ್ಲಿ ಮಂಗಳಗೌರಿಯನ್ನು ಆವಾಹನೆ ಮಾಡಿ ಪೂಜಿಸುವ ವಿಧಾನವನ್ನಷ್ಟೇ ತಿಳಿಸಲಾಗಿದೆ.

  ಅನ್ಯಧಾತುಮಯೀಂ ವಾಪಿ ಸ್ವಶಕ್ತ್ಯಾ ತತ್ರ ಪೂಜಯೇತ್ ।

  ಸಂಪ್ರದಾಯದಂತೆ ಅರಿಶಿನ ಗೋಪುರವನ್ನು ಮಾಡಿ, ಮಂಗಳಗೌರಿಯನ್ನು ಪೂಜಿಸುವುದು ಸಂಪ್ರದಾಯಕ್ಕೆ ಬಿಟ್ಟ ವಿಚಾರ.

* ಪೂಜೆ ಮಾಡುವ ಸನ್ನಿಧಾನ ಸ್ಥಳದಲ್ಲಿ ಪ್ಲಾಸ್ಟಿಕ್‌ವಸ್ತುಗಳನ್ನು ಇಡುವುದು ಉಚಿತವಲ್ಲ. ಕಬ್ಬಿಣ, ಸ್ಟೀಲ್, ಹಿತ್ತಾಳೆ ಸಾಮಗ್ರಿಗಳನ್ನೂ ಕೂಡ ಪೂಜಾಸನ್ನಿಧಾನ ಸ್ಥಳದಲ್ಲಿ ಇಡಬಾರದು. ತಾಮ್ರ, ಬೆಳ್ಳಿ, ಬಂಗಾರ, ಪಂಚಲೋಹ, ಕಂಚು, ಮರ ಇವುಗಳಿಂದ ಸಿದ್ಧಗೊಂಡ ಸಾಮಗ್ರಿಗಳನ್ನಷ್ಟೇ ಉಪಯೋಗಿಸಿ ಪೂಜೆಯನ್ನು ಮಾಡಬೇಕು.

* ಅತ್ತೆಮನೆಯವರು ಕೊಟ್ಟ ಕಂಚಿನ ಪಾತ್ರೆಯಲ್ಲಿ ಅರಿಶಿನ ಕುಂಕುಮ, ಉತ್ತತ್ತಿ, ಅಡಿಕೆಬೆಟ್ಟ, ಒಣಕೊಬ್ಬರಿ ಇವುಗಳನ್ನು ಹಾಕಿ, ಕಣದಿಂದ ಆ ಪಾತ್ರೆಯ ಬಾಯಿಯನ್ನು ಕಟ್ಟಿ ಸಿಪ್ಪೆ ಸುಲಿಯದ ತೆಂಗಿನಕಾಯಿಯನ್ನು ಅದರ ಮೇಲಿಟ್ಟು ಗೌರಿಗೆ ಸಮರ್ಪಣೆ ಮಾಡಲು ಸಿದ್ಧಗೊಳಿಸಬೇಕು. ಗೌರಿಗೆ ಸಮರ್ಪಣೆ ಮಾಡಿದ ಮೇಲೆ ತಾಯಿಗೆ ಇದನ್ನು ಮಗಳು ಕೊಡಬೇಕು. ಇದನ್ನು ತೆಗೆದುಕೊಂಡ ನಂತರ ತಾಯಿಯು ಮಗಳಿಗೆ ಆರತಿ ಮಾಡಬೇಕು.

ಮಂಗಳಗೌರಿ ಪೂಜೆ

* ಮಂಗಳಗೌರಿಗೆ ಉತ್ತರಾಣಿ ಎಲೆಗಳು ಬಹಳ ಪ್ರಿಯವಾಗಿವೆ. ಹಾಗೂ ಗರಿಕೆಗಳೂ ಕೂಡ ಪ್ರಿಯವಾಗಿವೆ. ಇವುಗಳನ್ನು ಪೂಜೆಗೆ ಅವಶ್ಯವಾಗಿ ಉಪಯೋಗಿಸಬೇಕು.

* ದೂರ್ವಾದಲೈಃ ಷೋಡಶಭಿಃ ಅಪಾಮಾರ್ಗದಲೈಸ್ತಥಾ ।
ಷೋಡಶೋನ್ಮಿತವರ್ತೀಭಿಃ ತಾವದ್ದೀಪಾಂಶ್ಚ ದೀಪಯೇತ್ ॥

ಹದಿನಾರು ಗರಿಕೆಗಳಿಂದ ಪೂಜಿಸಬೇಕು. ಹದಿನಾರು ಅಪಾಮಾರ್ಗ (ಉತ್ತರಾಣಿ)ಯಿಂದ ಪೂಜಿಸಬೇಕು. ಹದಿನಾರು ಬತ್ತಿಗಳಿಂದ ಹದಿನಾರು ದೀಪಗಳನ್ನು ಹಚ್ಚಿ ಪೂಜಿಸಬೇಕು.

* ಕಡಲೆಬೇಳೆಯ ಕೋಸಂಬರಿ ಹಾಗೂ ಮೊಸರನ್ನದ ನೈವೇದ್ಯವನ್ನು ಅವಶ್ಯವಾಗಿ ಮಾಡಬೇಕು.

* ಷೋಡಶ್ಯಾಪಿ ಸುವಾಸಿನ್ಯೋ ಭೋಜನೀಯಾಃ ಪ್ರಯತ್ನತಃ ।
ಮಾತ್ರೇ ದದ್ಯಾದ್ ವಾಯನಂ ತು ಪ್ರಕಾರಂ ಶೃಣು ತಸ್ಯ ಚ ॥

ಮಂಗಳಗೌರಿಗೆ ಹದಿನಾರು ಸಂಖ್ಯೆ ಬಹಳ ಇಷ್ಟವಾದ್ದರಿಂದ ಎಲ್ಲವನ್ನು ಹದಿನಾರು ಸಂಖ್ಯೆಯಲ್ಲಿಯೇ ಮಾಡುವುದು ಶ್ರೇಷ್ಠವಾಗಿದೆ. ಆದ್ದರಿಂದ ಹದಿನಾರು ಮಂದಿ ಸುವಾಸಿನಿಯರಿಗೆ ಬಾಗಿಣ ಕೊಡುವುದು ಅತ್ಯಂತ ಶ್ರೇಷ್ಠವಾಗಿದೆ.

* ಹದಿನಾರು ಎಳೆಗಳ ಹದಿನಾರು ಗಂಟನ್ನು ಹಾಕಿದ ದೋರವನ್ನು ಸಿದ್ಧಪಡಿಸಿಕೊಂಡು ಪೂಜಿಸಬೇಕು.

* ಪೂಜೆಯ ಮೊದಲು ಈ ಪುಸ್ತಕದಲ್ಲಿ ನೀಡಿದ ದೋರಸ್ಥಾಪನ ಮಂತ್ರವನ್ನು ಹೇಳಿ, ದೋರವನ್ನಿಟ್ಟು ಮುಂದೆ ಮಾಡುವ ಗೌರಿಪೂಜೆಯ ಜೊತೆ ದೋರದಲ್ಲಿ ಗೌರಿಗೂ ಕೂಡ ಪೂಜೆಯನ್ನು ಮಾಡಬೇಕು. ದೋರ ಪೂಜೆಯ ಕ್ರಮ ಇಂದು ಬಿಟ್ಟೇ ಹೋಗಿದೆ.

* ಪೂಜಿಸಿದ ದೋರವನ್ನು ಪತಿಯ ಮೂಲಕವೇ ಕಟ್ಟಿಸಿ ಕೊಳ್ಳಬೇಕು. ಮೊದಲು ಎಡಗೈ ತಾಕಿಸಿ, ಬಲಗೈಗೆ ಕಟ್ಟಿಸಿಕೊಳ್ಳಬೇಕು. ಮತ್ತು ದೋರಕ್ಕೆ ಹೂವನ್ನು ಕಟ್ಟಿರಬೇಕು. ಕಟ್ಟಿದ ಮೇಲೆ ಅರಿಶಿನಕುಂಕುಮವನ್ನು ಹಚ್ಚಿ, ಗೌರಿಯು ಮಾಂಗಲ್ಯವನ್ನು ಅಭಿವೃದ್ಧಿ ಮಾಡಲಿ ಎಂಬುದಾಗಿ ಪತಿಯಿಂದ ಆಶೀರ್ವಾದ ಪಡೆದುಕೊಳ್ಳಬೇಕು. ಮುತ್ತೈದೆಯರಿಂದಲೂ ಕೂಡ ದೋರವನ್ನು ಕೆಲವರು ಕಟ್ಟಿಸಿಕೊಳ್ಳುತ್ತಾರೆ.

* ಕಟ್ಟಿಸಿಕೊಂಡ ದೋರವನ್ನು ಸ್ವರ್ಣಗೌರಿಯ ಹಬ್ಬದಂದು ವಿಸರ್ಜನೆ ಮಾಡುತ್ತಾರೆ. ಯಾವುದೇ ಕಾರಣಕ್ಕೂ ಶ್ರಾವಣ ಮಾಸ ಮುಗಿಯುವ ತನಕ ದೋರವನ್ನು ಬಿಚ್ಚಬಾರದು. ಕೆಲವರು ಮರುದಿವಸವೇ ದೋರವನ್ನು ತೆಗೆದುಬಿಡುತ್ತಾರೆ. ಇದು ಶಾಸ್ತ್ರೀಯವಲ್ಲ. ಪೂಜೆ ಮಾಡುವ ನಾಕು ವಾರಗಳಲ್ಲಿಯೂ ಬಲಗೈಯಲ್ಲಿ ದೋರವು ಇರಬೇಕು. ಅಥವಾ ಪ್ರತಿ ವಾರ ನಡೆಸುವ ಪೂಜೆಯಲ್ಲಿ ಹಳೆಯ ದೋರವನ್ನು ಬಿಚ್ಚಿ ಹೊಸ ದೋರ ಕಟ್ಟಿಕೊಳ್ಳಬೇಕು. ಕೊನೆಯದ್ದನ್ನು ಸ್ವರ್ಣಗೌರಿ ಹಬ್ಬದಂದು ವಿಸರ್ಜನೆ ಮಾಡಬೇಕು.

* ದೋರಕ್ಕೆ ಕೆಲವರು ಐದು ಗಂಟುಗಳನ್ನಷ್ಟೇ ಹಾಕುತ್ತಾರೆ. ಹದಿನಾರು ಗಂಟುಗಳ ದೋರವನ್ನು ಕಟ್ಟಿಕೊಳ್ಳಬೇಕೆಂಬುದು ಪೂಜಾಗ್ರಂಥಗಳ ಅಭಿಪ್ರಾಯವಾಗಿದೆ. ಬಹುಷಃ ಐದುವರ್ಷಗಳ ಪೂಜೆಯ ಉದ್ದೇಶದಿಂದ ಐದು ಗಂಟುಗಳನ್ನು ಹಾಕಬೇಕೆಂಬ ಸಂಪ್ರದಾಯ ಬಂದಿರಬಹುದು. ಹದಿನಾರು ಗಂಟುಗಳನ್ನು ಹಾಕಿ, ಹದಿನಾರು ಉಪಚಾರಗಳನ್ನು ಮಾಡಿ, ಹದಿನಾರು ಮುತ್ತೈದೆಯರಿಗೆ ದಾನನೀಡಿ, ಹದಿನಾರು ದೀಪವನ್ನು ಹಚ್ಚಿ, ಹದಿನಾರು ಗಂಟುಗಳ ದೋರವನ್ನು ಕಟ್ಟಿಕೊಳ್ಳುವುದೇ ಶಾಸ್ತ್ರಸಮ್ಮತವಾಗಿದೆ.

* ಯಾರಿಗೆ ಮಂಗಳವಾರದಂದು ಪೂಜೆ ಮಾಡಲು ಸಾಧ್ಯವೇ ಆಗುವುದಿಲ್ಲವೋ, ಮೈಲಿಗೆ ಮೊದಲಾದ ದೋಷಗಳು ಬಂದಿರುತ್ತವೋ,ಅವರು ಶುಕ್ರವಾರದಂದು

ಮಂಗಳಗೌರಿ ಪೂಜೆಯನ್ನು ಮಾಡಬೇಕು. ಅಂದೂ ಸಹ ಸಾಧ್ಯವಾಗದಿದ್ದರೆ ಬಿಟ್ಟಿರುವ ಪೂಜೆಯನ್ನು ಸ್ವರ್ಣಗೌರೀಪೂಜೆಯಂದು ಆಚರಿಸಬೇಕೆಂಬ ಸಂಪ್ರದಾಯವಿದೆ.

* ಏಕಾದಶಿಯಂದು ಮಂಗಳವಾರ ಬಂದರೆ ಕೆಲವರು ಪೂಜಿಸುವುದೇ ಇಲ್ಲ. ಆದರೆ ಅಂದು ಗೌರಿಮಂಟಪವನ್ನು ಸಿದ್ಧಗೊಳಿಸಿ, ಆವಾಹನೆ ಮೊದಲಾದವುಗಳನ್ನು ಮಾಡಿ, ಸ್ನಾನಾದಿ ಪೂಜೆಯನ್ನು ಮಾಡಿ, ನಿರ್ಮಾಲ್ಯತೀರ್ಥವನ್ನು ನೀಡಿ, ಮರುದಿವಸ ಷೋಡಶೋಪಚಾರ ಪೂಜೆಯನ್ನು ಮಾಡಬೇಕು.

* ದ್ವಾದಶಿಯ ದಿವಸ (ಬುಧವಾರದಂದು) ಗೌರಿಗೆ ದೇವರಪೂಜೆಯ ಅನಂತರ ಎಲ್ಲ ಬಗೆಯ ಉಪಚಾರ ಪೂಜೆಗಳನ್ನು ನೀಡಿ, ಮಂಗಳಗೌರಿಹಬ್ಬವನ್ನು ಸಮರ್ಪಣೆ ಮಾಡಬೇಕು.

* ಮಂಗಳಗೌರಿ ಪೂಜೆ ಮಾಡುವವರು ಅಶುಚಿಯಾಗಿದ್ದರೆ ಶುಚಿರ್ಭೂತರಾದ ಮೇಲೆ ಮಂಗಳವಾರದ ಪೂಜೆಯನ್ನು ಆಚರಿಸಬೇಕು. ಅಥವಾ ಶುಕ್ರವಾರದಂದು ಪೂಜಿಸುವುದು ಶ್ರೇಷ್ಠವಾಗಿದೆ. ಯಾವುದೇ ಕಾರಣಕ್ಕೂ ಶ್ರಾವಣಮಾಸದಲ್ಲಿ ನಾಕು ಮಂಗಳಗೌರಿ ಪೂಜೆಯನ್ನು ಬಿಡಬಾರದು.

* ಮಂಗಳಗೌರಿಯ ಪೂಜೆಯನ್ನು ಮಾಡುವ ಕಲಶವು ಪೂರ್ವಾಭಿಮುಖವಾಗಿ ಇರಬೇಕು. ಉತ್ತರಾಭಿಮುಖವಾಗಿಯೂ ಕೂಡ ಇಡಬಹುದು.

* ಪೂಜೆ ಮಾಡುವ ದಿವಸ ಎರೆದುಕೊಳ್ಳಬೇಕು. ಮತ್ತು ಶುಚಿಯಾದ ವಸ್ತ್ರಗಳನ್ನು ಶಾಸ್ತ್ರೀಯಕ್ರಮದಲ್ಲಿ ಧಾರಣೆಮಾಡಿ, ಪೂಜೆಯನ್ನು ಮಾಡಬೇಕು.

* ಪೂಜೆಗೋಸ್ಕರ ಸಂಗ್ರಹ ಮಾಡಿದ ಪತ್ರೆಗಳನ್ನು, ಪುಷ್ಪಗಳನ್ನು, ಹೂ ಮಾಲೆಗಳನ್ನು ಮೊದಲು ಲಕ್ಷ್ಮೀನಾರಾಯಣರಿಗೆ ಸಮರ್ಪಿಸಿ, ಅನಂತರ ಭಾರತೀರಮಣರಿಗೆ ಸಮರ್ಪಿಸಿ, ಶಿವಪಾರ್ವತಿಯರಿಗೆ ಸಮರ್ಪಿಸಬೇಕು.

ಭಗವಂತನಿಗೆ ನಿವೇದನೆ ಮಾಡದೇ ಇರುವ ಯಾವುದೇ ಪದಾರ್ಥವನ್ನು ಮಂಗಳಗೌರಿಯು ಸ್ವೀಕರಿಸುವುದಿಲ್ಲ.

* ಹದಿನಾರು ಪೂಜೆಯನ್ನು ಗಮನವಿಟ್ಟು ಮಾಡಬೇಕು. ಹದಿನಾರು ಪೂಜೆಗೂ ಬೇಕಾಗುವ ಹದಿನಾರು ಸಾಮಗ್ರಿಗಳನ್ನು ಮೊದಲು ಗಮನವಿಟ್ಟು ಸಿದ್ಧಪಡಿಸಿಕೊಳ್ಳಬೇಕು.

* ಹದಿನಾರು ಎಳೆಯ ಗೆಜ್ಜೆವಸ್ತ್ರವನ್ನು ಸಿದ್ಧಪಡಿಸಿಕೊಂಡು ಪೂಜಾಸಮಯದಲ್ಲಿ ಮಂಗಳಗೌರಿಗೆ ಸಮರ್ಪಿಸಬೇಕು.

* ಚಿನ್ನದ ಆಭರಣಗಳನ್ನು ಬಳೆ ಮೊದಲಾದವುಗಳನ್ನು ಮಂಗಳಗೌರಿಗೆ ಪೂಜಾಸಂದರ್ಭದಲ್ಲಿ ಸಮರ್ಪಿಸುವುದನ್ನು ಮರೆಯಬಾರದು.

* ಮುಂದೆ ನೀಡಿದ ಅಡುಗೆಗಳನ್ನು ತಯಾರು ಮಾಡಿ, ಎಲ್ಲವನ್ನೂ ಲಕ್ಷ್ಮೀನಾರಾಯಣರಿಗೆ ಸಮರ್ಪಣೆ ಮಾಡಿ, ಮುಖ್ಯಪ್ರಾಣದೇವರಿಗೆ ಸಮರ್ಪಣೆ ಮಾಡಿ, ಅನಂತರ ಶಿವಪಾರ್ವತಿಯರಿಗೆ ಸಮರ್ಪಣೆ ಮಾಡಬೇಕು.

* ಒಂದು ತಟ್ಟೆಯಲ್ಲಿ ಮಾಡಿದ ಎಲ್ಲಾ ಪದಾರ್ಥಗಳನ್ನು ಪ್ರತ್ಯೇಕವಾಗಿ ತೆಗೆದಿಟ್ಟು, ಅದನ್ನು ಮಂಗಳಗೌರಿಯ ಮುಂದಿಟ್ಟು ಕ್ರಮಪ್ರಕಾರವಾಗಿ ನೈವೇದ್ಯ ಮಾಡಬೇಕು. ನೈವೇದ್ಯ ಮಾಡಿದ ಪ್ರಸಾದವನ್ನು ಯೋಗ್ಯರೀತಿಯಲ್ಲಿಯೇ ಸ್ವೀಕರಿಸಬೇಕು.

* ಬ್ರಾಹ್ಮಣರಿಗೆ ಅಥವಾ ಮುತ್ತೈದೆಯರಿಗೆ ನೀಡುವ ಉಪಾಯನವನ್ನು ಪೂಜೆಯ ಮೊದಲೇ ಸಿದ್ಧಪಡಿಸಿಕೊಂಡು, ಮಂಗಳಗೌರಿಗೆ ಸಮರ್ಪಣೆ ಮಾಡಬೇಕು.

* ಗೋಧಿಹಿಟ್ಟನ್ನು ಕಲಿಸಿ, ಹಣತೆಯನ್ನು ಮಾಡಿ, ಹದಿನಾರು ಬತ್ತಿಗಳನ್ನಿಟ್ಟು ಯಥೇಚ್ಛವಾಗಿ ತುಪ್ಪವನ್ನು ಹಾಕಿ, ಮಂಗಳಗೌರಿಯ ಮುಂದೆ ದೀಪವನ್ನು ಬೆಳಗಬೇಕು. ಮತ್ತು ಮಂಗಳಾರತಿಯ ಸಮಯದಲ್ಲಿ ಹದಿನಾರು ಆರತಿಗಳನ್ನು ಮಾಡಬೇಕು. ಹದಿನಾರು ದೀಪಗಳನ್ನು ತಟ್ಟೆಯಲ್ಲಿಟ್ಟು ಆರತಿ ಮಾಡಬೇಕು.

ಮಂಗಳಗೌರಿ ಪೂಜೆ

* ತಂಬಿಟ್ಟಿನಲ್ಲಿ ಹದಿನಾರು ಹೂ ಬತ್ತಿಗಳನ್ನಿಟ್ಟು ಆರತಿ ಮಾಡಬೇಕು. ಮತ್ತು ಕದಲಾರತಿಯನ್ನೂ ಕೂಡ ಮಾಡಬೇಕು. ಹೆಣ್ಮಕ್ಕಳು ಮಂಗಳಾರತಿ ಬತ್ತಿ ಉಪಯೋಗಿಸಿ ಮಂಗಳಾರತಿ ಮಾಡುವ ಸಂಪ್ರದಾಯವಿಲ್ಲ.

* ಮುತ್ತೈದೆಯರಿಗೆ ನೀಡುವ ಉಪಾಯನದಲ್ಲಿಯೂ ಹದಿನಾರು ಪದಾರ್ಥಗಳು ಇರಬೇಕು. ಬಾಗಿಣದಲ್ಲಿಯೂ ಕೂಡ ಹದಿನಾರು ಪದಾರ್ಥಗಳಿರಬೇಕು.

* ಬಾಗಿಣದಲ್ಲಿ ಇರುವ ಪದಾರ್ಥಗಳ ಬಗ್ಗೆ ಅದನ್ನು ನೀಡುವ ಕ್ರಮದ ಬಗ್ಗೆ ಸ್ವರ್ಣಗೌರಿಪುಸ್ತಕವನ್ನು ನೋಡಿ ಆದರ ಪ್ರಕಾರ ಬಾಗಿಣವನ್ನು ದಾನ ಮಾಡಬೇಕು.

* ಸಾಯಂಕಾಲದಂದು ಮಂಗಳಗೌರಿಗೆ ಆರತಿಯನ್ನು ಮಾಡಿ, ಸಕ್ಕರೆ, ಉತ್ತತ್ತಿಗಳ ನೈವೇದ್ಯವನ್ನು ಮಾಡಬೇಕು. ಮರುದಿವಸವೇ ಮಂಗಳಗೌರಿ ಕಲಶದ ವಿಸರ್ಜನೆಯನ್ನು ಮಾಡಬೇಕೆಂದು ಪೂಜಾ ಶಾಸ್ತ್ರವು ಹೇಳುತ್ತದೆ.

* ಮಂಗಳಗೌರಿಪೂಜೆಯನ್ನು ಮಾಡಿದ ಮೇಲೆ ಕಥೆಯನ್ನು ಹಾಡುತ್ತಾ, ಓದುತ್ತಾ ಅಥವಾ ಕೇಳುತ್ತಾ ಮಸಿ ಸಂಗ್ರಹವನ್ನು  ಮಾಡಬೇಕು.

* ತಟ್ಟೆಯ ಕೆಳಭಾಗಕ್ಕೆ ಅಥವಾ ಮೊಗಚಕೈಗೆ ತುಪ್ಪವನ್ನು ಸವರಿ, ಇಲ್ಲಿ ಅನುವಾದದ ಕಥಾಭಾಗವನ್ನು ಓದುತ್ತಾ ಹದಿನಾರು ಎಳೆಯ ಗೋಧಿಹಿಟ್ಟಿನ ದೀಪದ ಮೇಲೆ ಹಿಡಿಯಬೇಕು. ಆಗ ಮೊಗಚು ಕೈನ ಕೆಳಗೆ ಕಾಡಿಗೆಯು ಕಟ್ಟುತ್ತದೆ. ಅಥವಾ ಇಲ್ಲಿ ನೀಡಿದ ಮಂಗಳಗೌರೀ ಹಾಡನ್ನೂ ಕೂಡ ಹೇಳುತ್ತಾ ಕಾಡಿಗೆಯನ್ನು ಸಿದ್ಧಗೊಳಿಸಬೇಕು.

* ಮಗಳು ಹೀಗೆ ಕಾಡಿಗೆಯನ್ನು ಸಿದ್ಧಗೊಳಿಸಬೇಕಾದರೆ ತಾಯಿಯು ಜಾವಳವನ್ನು ಮಾಡುತ್ತಾಳೆ. ಅಂದರೆ ಮಗಳ ಕಾಲಿಗೆ ಓಕುಳಿಯನ್ನು ಹಚ್ಚಿ (ಎರಡು ಕಾಲುಗಳಿಗೆ ಸುತ್ತಲೂ ಅರಿಶಿನ ಕುಂಕುಮವನ್ನು ಹಚ್ಚುತ್ತಾಳೆ). ಜಡೆಯನ್ನು ಹಾಕಿ, ಹೂವು ಮುಡಿಸುತ್ತಾಳೆ. ತಾಯಿಯ ಮನೆಯಲ್ಲಿ

ಮಂಗಳಗೌರಿ ಪೂಜೆ ಮಾಡುವಾಗ ಮಾತ್ರ ಈ ಕ್ರಮವಿದೆ. ಅತ್ತೆಮನೆಯಲ್ಲಿ ಇರುವುದಿಲ್ಲ.

* ಮೊಗಚುಕೈನಲ್ಲಿ ಕಟ್ಟಿದ ಕಾಡಿಗೆಯನ್ನು ಮೊದಲು ತಾಯಿಗೆ, ಅನಂತರ ಮುತ್ತೈದೆಯರಿಗೆ ನೀಡಿ, ಅನಂತರ ತಾನು ಧಾರಣೆ ಮಾಡಬೇಕು. ಕಾಡಿಗೆಯನ್ನು ಅಂದೇ ವಿಸರ್ಜನೆ ಮಾಡಬಾರದು.

* ಕಲಶದಲ್ಲಿ ಮಂಗಳಗೌರಿಯನ್ನು ಆವಾಹನೆ ಮಾಡುವಾಗ ರುದ್ರದೇವರ ತೊಡೆಯಲ್ಲಿ ಕುಳಿತ ಮಂಗಳಗೌರಿಯನ್ನೇ ಆವಾಹನ ಮಾಡಬೇಕು. ಮತ್ತು ಅಂತರ್ಯಾಮಿಯಾದ ಜಯಾಪತಿ ಸಂಕರ್ಷಣನನ್ನು ಆವಾಹನೆ ಮಾಡಿ, ಮುಖ್ಯವಾಗಿ ಪೂಜಿಸಬೇಕು.

* ಮೊದಲ ವರ್ಷ ಕನಿಷ್ಠ ಪಕ್ಷ ಐದು ದಂಪತಿಗಳನ್ನು ಕರೆದು, ಊಟ ಹಾಕಬೇಕು. ಮುಂದಿನ ವರ್ಷಗಳಲ್ಲಿ ಸ್ವಯಂ ಪಾಕಕ್ಕೆ ಬಾಗಿಣದ ಜೊತೆ ಪದಾರ್ಥಗಳನ್ನಾದರೂ ಕೊಡಬೇಕು.

* ಉಪ್ಪಿಲ್ಲದ ಊಟವನ್ನು ಮಾಡಬೇಕೆಂದು ಕಥಾಭಾಗವು ಹೇಳುತ್ತದೆ. ಇದನ್ನು ಪ್ರಯತ್ನಪಟ್ಟು ಅನುಷ್ಠಾನ ಮಾಡಬೇಕು.

* ಕೆಲವರು ತಾಯಿಗೆ ಕೊನೆಯ ವರ್ಷ ಬಾಗಿಣ ನೀಡುತ್ತಾರೆ. ಆದರೆ ವ್ರತರಾಜದಲ್ಲಿ ಮೊದಲನೆಯ ವರ್ಷವೇ ತಾಯಿಗೆ ಬಾಗಿಣವನ್ನು ಕಂಚಿನ ಪಾತ್ರೆ ದಾನವನ್ನು ನೀಡಬೇಕೆಂದು ಹೇಳಿದೆ. ಮತ್ತು ಮೊದಲನೆಯ ವರ್ಷ ತಾಯಿಯ ಮನೆಯಲ್ಲಿ ಪೂಜೆಯನ್ನು ಮಾಡುವುದರಿಂದ ಆಗಲೇ ಕೊಡುವುದು ಸೂಕ್ತವಾಗಿದೆ.

* ಮಂಗಳಗೌರೀ ವ್ರತವನ್ನು ಐದುವರ್ಷಗಳ ಕಾಲ ಮಾಡಿದರೆ ಸಾಕು. ಮುಂದಿನ ವರ್ಷಗಳಲ್ಲಿ ಮಾಡುವ ಸಂಪ್ರದಾಯವು ಇರುವುದಿಲ್ಲ.

* ಮಂಗಳಗೌರೀಪೂಜೆಯನ್ನು ಶ್ರದ್ಧೆಯಿಂದ ಮಾಡಿದಾಗ ಪತಿ-ಪತ್ನಿಯರಲ್ಲಿ ಅನುಬಂಧವು ನಿರಂತರವಾಗಿರುತ್ತದೆ. ಪುತ್ರ-ಪೌತ್ರಾಭಿವೃದ್ಧಿಯು ಆಗುತ್ತದೆ. ಸದ್ಗೃಹಿಣಿಯಾಗಿ ಬದುಕುವ ಉತ್ತಮ ಅವಕಾಶವು ದೊರಕುತ್ತದೆ. ಮಾಡಿದ ಪಾಪಗಳೆಲ್ಲವೂ ಪರಿಹಾರವಾಗಿ ಶಿವಪಾರ್ವತಿಯರ ವಿಶೇಷ ಅನುಗ್ರಹವಾಗುತ್ತದೆ.

## ಮಾಂಗಲ್ಯಭಾಗ್ಯಕ್ಕೆ ಕಾರಣಳಾದ ಮಂಗಳಗೌರಿ

## ಮಾಂಗಲ್ಯಸೂತ್ರದ ಒಂದು ಅಪೂರ್ವವಿಚಾರ

ವಿವಾಹಿತರಾದ ಪ್ರತಿಯೊಬ್ಬ ಮುತ್ತೈದೆಯರು ಮಾಂಗಲ್ಯಸೂತ್ರವನ್ನು ದೀಕ್ಷಾಸೂತ್ರವಾಗಿ ಗಂಡನ ಕೈಯಿಂದ ಕಟ್ಟಿಸಿಕೊಳ್ಳುತ್ತಾರೆ. ಈ ಮಾಂಗಲ್ಯಸೂತ್ರಕ್ಕೆ ಅಭಿಮಾನಿದೇವತೆ ಎಂದರೆ ಗೌರಿ. ಆದ್ದರಿಂದಲೇ ಇವಳು ಮಂತಳಗೌರೀ ಎಂದು ಕರೆಸಿಕೊಳ್ಳುತ್ತಾಳೆ. ವಿವಾಹದಿಂದ ಕೊನೆಯತನಕವೂ ತಮ್ಮ ಸೌಮಾಂಗಲ್ಯದ ಪ್ರತೀಕವಾಗಿ ಮಾಂಗಲ್ಯಸೂತ್ರವನ್ನು ಧಾರಣೆ ಮಾಡುತ್ತಾರೆ. ಎಲ್ಲಾ ಮುತ್ತೈದೆಯರಿಗೆ ಮಾಂಗಲ್ಯಭಾಗ್ಯವನ್ನು ನೀಡುವ ದೇವಿಯಾದ ಇವಳನ್ನು ಮಂಗಳಗೌರೀ ಎಂಬ ಅನುಸಂಧಾನದಿಂದ ಪ್ರತಿಯೊಬ್ಬ ಸ್ತ್ರೀಯು ಪೂಜೆ ಮಾಡಲೇಬೇಕು. ಮಾಂಗಲ್ಯ ಎಂದರೆ ಮಂಗಲ ಎಂದೇ ಅರ್ಥ.

ಮಂಗಲ ಶಬ್ದದ ಮೇಲೆ 'ಷ್ಯಞ್' ಪ್ರತ್ಯಯವು ಬಂದು ಮಾಂಗಲ್ಯ ಎಂಬ ಶಬ್ದವು ನಿಷ್ಪನ್ನವಾಗಿದೆ. ಸ್ವಾರ್ಥದಲ್ಲಿ ಷ್ಯಞ್ ಪ್ರತ್ಯಯವು ಬಂದಿರುವುದರಿಂದ ಮಾಂಗಲ್ಯಶಬ್ದಕ್ಕೂ ಕೂಡ ಮಂಗಳ ಎಂದರ್ಥ. 'ಮಂಗಲಂ ಭಗವಾನ್ ವಿಷ್ಣುಃ ಮಂಗಲಂ ಮಧುಸೂದನಃ' ಎಂಬಂತೆ ನಿಜವಾಗಿಯೂ ಕೂಡ ಮಂಗಲ ಎನಿಸಿದವನು ಭಗವಂತನಾದ ಮಹಾವಿಷ್ಣುಮಾತ್ರ . ಅನಂತರ ಲಕ್ಷ್ಮೀದೇವಿಯೂ ಮಂಗಳ ಎಂದು ಕರೆಸಿಕೊಳ್ಳುತ್ತಾಳೆ. ಮಂ ವಿಘ್ನಂ ಗಿಲತಿ ಪರಿಹರತಿ – ಮಹಾಲಕ್ಷ್ಮೀ. ಎಲ್ಲರ ವಿಘ್ನಗಳನ್ನ ಪರಿಹಾರ ಮಾಡುವುದರಿಂದ ಲಕ್ಷ್ಮೀದೇವಿಯು ಮಂಗಳ ಎಂದು ಕರೆಸಿಕೊಳ್ಳುತ್ತಾಳೆ.

## ಮಂಗಳಗೌರಿ ಪೂಜೆ

ಗೃಹಸ್ಥಜೀವನಕ್ಕೆ ಕಾಲಿಟ್ಟ ಆ ಸಾಧ್ವಿಶಿರೋಮಣಿಗೆ ಜೀವನದಲ್ಲಿ ಪ್ರತಿಕ್ಷಣವೂ ಬರುವ ನೂರಾರು ವಿಘ್ನಗಳನ್ನು ಪರಿಹಾರ ಮಾಡುವುದಕ್ಕೆ ಯಾವ ಮಾಂಗಲ್ಯ ಸೂತ್ರವನ್ನು ಕಂಠದಲ್ಲಿ ಧರಿಸುತ್ತಾರೋ ಅದು ಎಲ್ಲ ವಿಘ್ನಗಳನ್ನು ಪರಿಹಾರ ಮಾಡುವುದರಿಂದ ಮಂಗಳಸೂತ್ರವೆಂದು ಕರೆಸಿಕೊಳ್ಳುತ್ತದೆ. ಈ ಮಂಗಳಸೂತ್ರದಲ್ಲಿ ತಾಳಿ, ಹವಳ, ಮುತ್ತು, ಚಿನ್ನದ ಗುಂಡು ಹಾಗೂ ಕರಿಮಣಿಗಳು ಇರುತ್ತವೆ. ಇವುಗಳ ಜೋಡಣೆಯಲ್ಲಿ ಹಾಗೂ ಸಂಖ್ಯೆಯಲ್ಲಿ ಸಂಪ್ರದಾಯಭೇದವಿದೆ.

ಮಾಂಗಲ್ಯಸೂತ್ರದ ಬಗ್ಗೆ ಎಲ್ಲಿಯೂ ಕೂಡ ಸ್ಪಷ್ಟವಾದ ಆಧಾರವು ದೊರಕುವುದಿಲ್ಲ. ಲಕ್ಷ್ಮೀಶೋಭಾನೆ ಪದದಲ್ಲಿ ಶ್ರೀಮದ್ ವಾದಿರಾಜತೀರ್ಥ ಗುರುಸಾರ್ವಭೌಮರು ಹೀಗೆ ಹೇಳಿದ್ದಾರೆ -

**ಕಂಬುಕಂಠದ ಸುತ್ತ ಕಟ್ಟಿದ ಮಂಗಳಸೂತ್ರ**
**ಅಂಬುಜವೆರಡು ಕರಯುಗದಿ**
**ಅಂಬುಜವೆರಡು ಕರಯುಗದಿ ಧರಿಸಿ ಪೀ-**
**ತಾಂಬರವುಟ್ಟು ಮೆರೆದಳು ||**

ಎಂದು. ಇದಕ್ಕೂ ಮೊದಲು ಯಾವ ಗ್ರಂಥಗಳಲ್ಲಿಯೂ, ಯಾವುದೇ ಪ್ರಯೋಗ ಗ್ರಂಥದಲ್ಲಿಯೂ ಕೂಡ ಮಾಂಗಲ್ಯಸೂತ್ರದ ಬಗ್ಗೆ ಉಲ್ಲೇಖವು ದೊರಕುವುದಿಲ್ಲ. ಆದರೆ ಪಾರಸ್ಕರ ಗೃಹ್ಯಸೂತ್ರದಲ್ಲಿ ಒಂದು ಉಲ್ಲೇಖವಿದೆ -

**ವಿವಾಹೇ ವೃದ್ಧಾನಾಂ ಸ್ತ್ರೀಣಾಂ ಚ ವಚನಂ ಕುರ್ಯುಃ ಸೂತ್ರೇ ಅನಪವಿದ್ಧಮಪಿ**
**ವಧುವರಯೋಃ ಮಂಗಳಸೂತ್ರಂ ಗಲೇ ಮಾಲಾಧಾರಣಂ ||**

ಎಂದು ನಾವು ಅನುಷ್ಠಾನ ಮಾಡುವುದಕ್ಕಾಗಿ ಮಾನವಗೃಹ್ಯಸೂತ್ರ, ಪಾರಸ್ಕರಗೃಹ್ಯಸೂತ್ರ, ಗೌತಮ ಗೃಹ್ಯಸೂತ್ರ ಹಾಗೂ ಸ್ವಶಾಖೋಕ್ತಗೃಹ್ಯಸೂತ್ರವನ್ನು ಅನುಸರಿಸುತ್ತೇವೆ. ಅವುಗಳಲ್ಲಿ ಒಂದಾದ ಪಾರಸ್ಕರಗೃಹ್ಯಸೂತ್ರವು ಹೀಗೆ ಹೇಳುತ್ತದೆ- ''ಹಿಂದಿನ ಸೂತ್ರಗಳಲ್ಲಿ ಮಂಗಳಸೂತ್ರದ ಬಗ್ಗೆ ಉಲ್ಲೇಖವಿಲ್ಲದಿದ್ದರೂ ಕೂಡ

ವಧುವಿನ ಕಂಠದಲ್ಲಿ ಕಟ್ಟಬೇಕು'' ಎಂದು ಉಲ್ಲೇಖವನ್ನು ನೀಡಿದೆ. ಹಾಗೂ ಮತ್ತೊಂದು ಪ್ರಯೋಗಗ್ರಂಥದಲ್ಲಿ ಹೀಗಿದೆ -

ಮಾಂಗಲ್ಯಸೂತ್ರಂ ಮಹತಾಮನುಗ್ರಹಪುರಸ್ಸರಂ
ಪಾಣಿಭ್ಯಾಂ ತು ಸಮಾದಾಯ ವರಃ ಪ್ರತ್ಯಙ್ಮುಖಃಸ್ಥಿತಃ ।
ಆಶ್ಛಾದ್ಯ ನೂತನಂ ವಾಸೋ ವರಂ ಮಂಗಲಸೂತ್ರಕಂ
ಸುವರ್ಣಮಣಿಸಂಯುಕ್ತಂ ಬಧ್ನೀಯಾತ್ ಕನ್ಯಕಾಗಲೇ ॥

ಹಿರಿಯರ ಆಶೀರ್ವಾದವನ್ನು ಪಡೆದು ಎರಡು ಕೈಗಳಿಂದ ಮಾಂಗಲ್ಯಸೂತ್ರವನ್ನು ಹಿಡಿದು, ವರನು ವಧುವಿನ ಎದುರಿನಲ್ಲಿ ಕುಳಿತು ಈ ಮಾಂಗಲ್ಯಸೂತ್ರವನ್ನು ಕಟ್ಟಬೇಕು. ಅದು ಸುವರ್ಣಮಣಿಯಿಂದ ಕೂಡಿರಬೇಕು. ವಧುವಿನ ಕಂಠದಲ್ಲಿ ಅದನ್ನು ಕಟ್ಟಬೇಕು ಎಂಬುದಾಗಿ ಹೇಳಲಾಗಿದೆ. ಇವೆರಡರ ಆಧಾರದಿಂದ ಮಾಂಗಲ್ಯಸೂತ್ರವು ಪ್ರಾಚೀನವೆಂದು ಸಿದ್ಧವಾಗುತ್ತದೆ.

ಈ ಮಾಂಗಲ್ಯಸೂತ್ರದಲ್ಲಿ ಸುವರ್ಣದ ಗುಂಡುಗಳಿರುತ್ತವೆ. ಗೃಹಸ್ಥರಾದವರೆಲ್ಲರೂ ಅವಶ್ಯವಾಗಿ ಚಿನ್ನವನ್ನು ಧಾರಣೆಮಾಡಬೇಕಾದ್ದರಿಂದ, ತನ್ಮೂಲಕ ದಾರಿದ್ರ್ಯವು ಪರಿಹಾರವಾಗುವುದರಿಂದ, ಸುವರ್ಣದ ಗುಂಡುಗಳನ್ನು ಇದರಲ್ಲಿ ಹಾಕಿರಬೇಕು. ಇದರಂತೆ ಹವಳಗಳನ್ನೂ ಕೂಡ ಹಾಕಿರಬೇಕು. ಇದರಿಂದ ಕುಜದೋಷವು ಪರಿಹಾರವಾಗುತ್ತದೆ. ಕುಜನ ಅನುಗ್ರಹವಾಗಿ ಸಂತತಿಯು ಅಭಿವೃದ್ಧಿಯಾಗುತ್ತದೆ. ಮನೋಕಾರಕನಾದ ಚಂದ್ರನ ಅನುಗ್ರಹಕ್ಕಾಗಿ ಮುತ್ತುಗಳನ್ನೂ ಕೂಡ ಇದರಲ್ಲಿ ಜೋಡಿಸಬೇಕು. ಸಂಸಾರವನ್ನು ಸಾಗಿಸಲು ಮುಖ್ಯವಾಗಿ ಮನೋಧೈರ್ಯ, ಮನಸ್ಸಿನ ಶುದ್ಧತೆ ಇವುಗಳು ಅವಶ್ಯಕವಾದ್ದರಿಂದ ಚಂದ್ರನ ಅನುಗ್ರಹಕ್ಕಾಗಿ ಮುತ್ತನ್ನು ಧಾರಣೆ ಮಾಡಬೇಕು. ಲಕ್ಷ್ಮೀದೇವಿಯ ಅನುಗ್ರಹಕ್ಕಾಗಿ ತಾಳಿಯನ್ನು ಧರಿಸಬೇಕು. ಹಾಗೂ ಕರಿಮಣಿಗಳನ್ನೂ ಕೂಡ ಇವುಗಳಲ್ಲಿ ಪೋಣಿಸಿರಬೇಕು. ಇದು ಶನಿದೇವನ ಅನುಗ್ರಹವನ್ನು ಸೂಚಿಸುತ್ತವೆ. ನೀಲಮಣಿಯು ಎರಡುವಿಧವಾಗಿದೆ - ಕೃಷ್ಣನೀಲ ಹಾಗೂ ಇಂದ್ರನೀಲ ಎಂದು. ಇವೆರಡಕ್ಕೂ ಕೂಡ

ಶನಿಯೇ ಅಧಿಪತಿಯಾಗಿದ್ದಾನೆ. ಕೃಷ್ಣನೀಲಮಣಿಯು ಕರಿಮಣಿಯಂತೆ ಕಡುಕಪ್ಪಾಗಿ ಇರುತ್ತದೆ. ಆದರೆ ಯಾರು ಸಂತತಿಕಾಮರಾಗಿರುತ್ತಾರೋ ನೀಲಮಣಿಯನ್ನು ಹಾಗೂ ವಜ್ರವನ್ನು ಧರಿಸಬಾರದೆಂದು ರತ್ನಶಾಸ್ತ್ರವು ತಿಳಿಸುತ್ತದೆ. ಆದ್ದರಿಂದ ನೀಲಮಣಿಯ ಪ್ರತೀಕವಾಗಿ ಕರಿಮಣಿಯನ್ನು ಎಲ್ಲರೂ ಪೋಣಿಸುತ್ತಾರೆ.

ಹಿಂದಿನ ಕಾಲದಲ್ಲಿ ಮಣ್ಣನ್ನು ಸುಟ್ಟ ಕರಿಮಣಿಗಳನ್ನು ರಚಿಸುತ್ತಿದ್ದರು. ಆದರೆ ಈಗ ಇದು ಸಾಧ್ಯವಾಗುತ್ತಿಲ್ಲ. ಇದರ ಬದಲಾಗಿ ಗಾಜಿನ ಕರಿಮಣಿಗಳನ್ನು ಹಾಕಿಕೊಳ್ಳುತ್ತಾರೆ. ಸರ್ವಥಾ ಪ್ಲಾಸ್ಟಿಕ್ ಕರಿಮಣಿಗಳನ್ನು ಉಪಯೋಗಿಸಬಾರದು. ಗಾಜು ಸಹ ಮಣ್ಣಿನಿಂದಲೇ ನಿರ್ಮಾಣವಾಗುವುದರಿಂದ ಇದು ದೋಷವೆನಿಸುವುದಿಲ್ಲ. ಕರಿಮಣಿಗಳನ್ನು ಹಾಕಿಕೊಳ್ಳುವುದರಿಂದ ಆಯುಷ್ಯವು ಅಭಿವೃದ್ಧಿಯಾಗುತ್ತದೆ. ಸಂಕಷ್ಟಗಳು ಕಡಿಮೆಗೊಳ್ಳುತ್ತವೆ. ಏಕೆಂದರೆ ಶನಿದೇವನ ಅನುಗ್ರಹವಾಗುತ್ತದೆ. ಆದ್ದರಿಂದ ಹವಳವನ್ನು ಕುಜನ ಅನುಗ್ರಹಕ್ಕಾಗಿ, ಮುತ್ತನ್ನು ಚಂದ್ರನ ಅನುಗ್ರಹಕ್ಕಾಗಿ, ಚಿನ್ನವನ್ನು ಶುಕ್ರನ ಅನುಗ್ರಹಕ್ಕಾಗಿ, ಕರಿಮಣಿಯನ್ನು ಶನಿದೇವನ ಅನುಗ್ರಹಕ್ಕಾಗಿ ಕಂಠದಲ್ಲಿ ಧಾರಣೆ ಮಾಡಬೇಕು ಎಂಬುದಾಗಿ ಜ್ಯೋತಿಷಿಗಳು ಅಭಿಪ್ರಾಯಪಡುತ್ತಾರೆ. ಕೆಲವು ಜ್ಯೋತಿಷಿಗಳು ಕರಿಮಣಿಯ ಸಂಖ್ಯೆಯನ್ನೂ ಕೂಡ ಒಂದೊಂದು ರಾಶಿಯವರಿಗೆ ಒಂದೊಂದು ರೀತಿಯಲ್ಲಿ ವಿಧಾನ ಮಾಡುತ್ತಾರೆ. ಅದು ಹೀಗಿದೆ - ಮೇಷ, ವೃಶ್ಚಿಕ ೨೧ ಕರಿಮಣಿ, ವೃಷಭ, ತುಲಾ ೪೦ ಕರಿಮಣಿ, ಮಿಥುನ, ಕನ್ಯಾ ೩೪ ಕರಿಮಣಿ, ಕರ್ಕಾಟಕ ೨೦ ಕರಿಮಣಿ, ಸಿಂಹ ೧೮ ಕರಿಮಣಿ, ಧನು, ಮೀನ ೩೨ ಕರಿಮಣಿ, ಕುಂಭ, ಮಕರ ೩೮ ಕರಿಮಣಿ, ಸಂಖ್ಯಾಶಾಸ್ತ್ರದ ಬಲದಿಂದ ಈ ಸಂಖ್ಯೆಯಲ್ಲಿ ಕರಿಮಣಿಗಳ ಧಾರಣೆಯನ್ನು ತಿಳಿಸುತ್ತಾರೆ. ಆದರೆ ಇದಕ್ಕೆ ನಿಖರವಾದ ಮಾಹಿತಿಯು ದೊರಕುವುದಿಲ್ಲ. ಸಂಖ್ಯೆಗೆ ಅನುಗುಣವಾಗಿ ಕರಿಮಣಿಯನ್ನು ಧಾರಣೆ ಮಾಡುವವರು ಎಡಭಾಗದಲ್ಲಿ ೩೬, ಬಲಭಾಗದಲ್ಲಿ ೩೬ ಮಣಿಗಳನ್ನು ಧರಿಸಬಹುದು. ಭಗವಂತನ ೩೬೦೦೦ ಸ್ತ್ರೀರೂಪಗಳ ಹಾಗೂ ಪುರುಷರೂಪಗಳ ಚಿಂತನೆಗೆ ಇದು ಪೂರಕವಾಗುತ್ತದೆ. ಅಥವಾ ೫೧

ಭಗವದ್-ರೂಪಗಳ ಪ್ರತೀಕವಾಗಿ ೫೧ ಕರಿಮಣಿಗಳನ್ನು ಧರಿಸಬಹುದು. ಅಥವಾ ೧೦೧ ಭಗವದ್-ರೂಪಗಳ ಪ್ರತೀಕವಾಗಿ ೧೦೧ ಕರಿಮಣಿಗಳನ್ನು ಧರಿಸಬಹುದು.

ಕೆಲವರು ಚಿನ್ನದಲ್ಲಿಯೇ ಮಾಂಗಲ್ಯವನ್ನು ಪೋಣಿಸಿಕೊಂಡು ಹಾಕಿಕೊಳ್ಳುತ್ತಾರೆ. ಕೆಲವರು ದಾರದಲ್ಲಿಯೇ ಪೋಣಿಸಿಕೊಂಡು ಹಾಕಿಕೊಳ್ಳುತ್ತಾರೆ. ಇದೆರಡೂ ಕೂಡ ತಪ್ಪಲ್ಲ. ಆದರೆ ನೈಲಾನ್ ದಾರದಲ್ಲಿ ಕರಿಮಣಿಗಳನ್ನು ಪೋಣಿಸಿ ಹಾಕಿಕೊಳ್ಳುವುದು ತಪ್ಪು. ಇದು ಶಾಸ್ತ್ರೀಯವಲ್ಲ. ಕಲಿಯುಗದಲ್ಲಿ ಎಲ್ಲ ವರ್ಣದವರಿಗೂ ಕಾರ್ಪಾಸದ ದಾರವನ್ನೇ ವಿಧಾನ ಮಾಡಿದ್ದರಿಂದ, ಹತ್ತಿಯ ದಾರದಲ್ಲಿಯೇ ಕರಿಮಣಿಗಳನ್ನೂ, ಮಾಂಗಲ್ಯವನ್ನೂ ಪೋಣಿಸಿಕೊಂಡು ಹಾಕಿಕೊಳ್ಳಬೇಕು. ತಂತು ಎಂದರೆ ಸುವರ್ಣದ ತಂತುವೂ ಕೂಡ ಆಗುತ್ತದೆ. ಆದರೆ ಪುರುಷರು ಹೇಗೆ ಸುವರ್ಣದ ಯಜ್ಞೋಪವೀತವನ್ನು ಧರಿಸದೇ ಹತ್ತಿಯಿಂದ ಮಾಡಿದ ಯಜ್ಞೋಪವೀತವನ್ನು ಧರಿಸುತ್ತಾರೋ, ಹಾಗೆಯೇ ಸ್ತ್ರೀಯರು ಹತ್ತಿಯ ದಾರದಲ್ಲಿಯೇ ಮಾಂಗಲ್ಯವನ್ನು ಧರಿಸಬೇಕು. ಇದರಿಂದ ಎಲ್ಲ ರೀತಿಯಲ್ಲಿಯೂ ಆಯುಷ್ಯವೂ, ಆರೋಗ್ಯವೂ ಅಭಿವೃದ್ಧಿಯಾಗಿ ಭಗವಂತನ ಅನುಗ್ರಹವಾಗುತ್ತದೆ. ಇಂಥ ಶ್ರೇಷ್ಠವಾದ ಮಾಂಗಲ್ಯಸೂತ್ರವನ್ನು ಇಂದು, ಲಕ್ಷ್ಮೀದೇವಿಗೂ ಹಾಗೂ ಗೌರೀದೇವಿಗೂ ಸಮರ್ಪಣೆಯನ್ನು ಮಾಡಬೇಕು.

ಇಲ್ಲಿಯ ತನಕ ಮಾಡಿದ ಚಿಂತನೆಯಿಂದ ಮಂಗಳಗೌರಿ ಎಂದರೆ ಮಾಂಗಲ್ಯಗೌರಿ ಎಂದರ್ಥ. ಮಾಂಗಲ್ಯಭಾಗ್ಯವನ್ನು ನೀಡುವ ಪಾರ್ವತೀದೇವೀ ಎಂಬುದು ಇದರ ಅಭಿಪ್ರಾಯ. ಹಾಗಾಗಿ ಮಾಂಗಲ್ಯಭಾಗ್ಯದ ಪ್ರಾಪ್ತಿಗಾಗಿ ಪ್ರತಿಯೊಬ್ಬರೂ ಮಂಗಳಗೌರಿ ವ್ರತವನ್ನು ಆಚರಿಸಬೇಕು. ಹಾಗೂ ತಾವು ಧರಿಸುವ ಮಾಂಗಲ್ಯವನ್ನು ಲಕ್ಷ್ಮೀನಾರಾಯಣರಿಗೆ ಹಾಗೂ ಭಾರತೀರಮಣಮುಖ್ಯಪ್ರಾಣ-ದೇವರಿಗೆ ಉಮಾಮಹೇಶ್ವರರಿಗೆ, ವಿಶೇಷವಾಗಿ ಮಂಗಳಗೌರಿಗೆ ಸಮರ್ಪಿಸಬೇಕು.

॥ ಶ್ರೀಕೃಷ್ಣಾರ್ಪಣಮಸ್ತು ॥

॥ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ ॥

# ಮಂಗಳಗೌರಿಪೂಜೆ

## ಆಚಮನಮ್

ಕೇಶವಾಯ ನಮಃ । ನಾರಾಯಣಾಯ ನಮಃ । ಮಾಧವಾಯ ನಮಃ। ಗೋವಿಂದಾಯ ನಮಃ। ವಿಷ್ಣವೇ ನಮಃ। ಮಧುಸೂದನಾಯ ನಮಃ। ತ್ರಿವಿಕ್ರಮಾಯ ನಮಃ। ವಾಮನಾಯ ನಮಃ। ಶ್ರೀಧರಾಯ ನಮಃ। ಹೃಷೀಕೇಶಾಯ ನಮಃ। ಪದ್ಮನಾಭಾಯ ನಮಃ। ದಾಮೋದರಾಯ ನಮಃ। ಸಂಕರ್ಷಣಾಯ ನಮಃ। ವಾಸುದೇವಾಯ ನಮಃ। ಪ್ರದ್ಯುಮ್ನಾಯ ನಮಃ। ಅನಿರುದ್ಧಾಯ ನಮಃ। ಪುರುಷೋತ್ತಮಾಯ ನಮಃ। ಅಧೋಕ್ಷಜಾಯ ನಮಃ। ನಾರಸಿಂಹಾಯ ನಮಃ। ಅಚ್ಯುತಾಯ ನಮಃ। ಜನಾರ್ದನಾಯ ನಮಃ। ಉಪೇಂದ್ರಾಯ ನಮಃ। ಹರಯೇ ನಮಃ। ಶ್ರೀ ಕೃಷ್ಣಾಯ ನಮಃ।

(ಆಚಮನವನ್ನು ಎರಡು ಬಾರಿ ಮಾಡಬೇಕು)

## ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ[೧] ಶಾಲೀವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ ಪ್ರಭವಾದಿ

---

(೧) ಶಾರ್ವರೀ ಸಂವತ್ಸರದಲ್ಲಿ 'ತ್ರಿಚತ್ವಾರಿಂಶದಧಿಕೇ ಏಕೋನವಿಂಶತಿತಮೇ' (೧೯೪೩) ಎಂದು ಹೇಳಬೇಕು. ಕಾಲಪ್ರವಾಹದಲ್ಲಿ ಇದನ್ನು ಹೇಳುವ ಸಂಪ್ರದಾಯ ಬಿಟ್ಟುಹೋಗಿದೆ. ಇದನ್ನು ಹೇಳದಿದ್ದರೆ ಶಾಲಿವಾಹನಶಕೆಯಲ್ಲಿ ಅನೇಕಬಾರಿ ಪ್ರಭವಾದಿ ಸಂವತ್ಸರಗಳು ಆವೃತ್ತಿಯಾಗುವುದರಿಂದ ಕಾಲಗಣನೆ ನಿಖರವಾಗುವುದಿಲ್ಲ.

ಷಷ್ಟಿಸಂವತ್ಸರಾಣಾಂ ಮಧ್ಯೇ .......... ನಾಮ ಸಂವತ್ಸರೇ– ದಕ್ಷಿಣಾಯನೇ ವರ್ಷ-ಋತೌ ಶ್ರಾವಣಮಾಸೇ ಶುಕ್ಲಪಕ್ಷೇ ........ ಶುಭತಿಥೌ .....ವಾಸರಯುಕ್ತಾಯಾಂ– ....ಶುಭನಕ್ಷತ್ರ .... ಶುಭಯೋಗ– .... ಶುಭಕರಣ– ಏವಂಗುಣವಿಶೇಷಣವಿಶಿಷ್ಟಾಯಾಮ್ ಅಸ್ಮಾಕಂ ಸಹ ಕುಟುಂಬಾನಾಂ ಕ್ಷೇಮಸ್ಥೈರ್ಯವಿಜಯವೀರ್ಯಆಯುರಾರೋಗ್ಯಾಭಿವೃದ್ಧ್ಯರ್ಥಂ, ಧರ್ಮಾರ್ಥ-ಕಾಮಮೋಕ್ಷಾಖ್ಯ-ಚತುರ್ವಿಧಪುರುಷಾರ್ಥ ಸಿದ್ಧ್ಯರ್ಥಂ,ಪುತ್ರ-ಪೌತ್ರಾದ್ಯಭಿವೃದ್ಧ್ಯರ್ಥಂ ಇಷ್ಟಾರ್ಥ-ಸಿದ್ಧ್ಯರ್ಥಂ, ಸಮಸ್ತದುರಿತೋಪಕ್ಷಯಾರ್ಥಂ ಜ್ಞಾನಭಕ್ತಿವೈರಾಗ್ಯಸಿದ್ಧ್ಯರ್ಥಂ ಚ ಸಕಲ ವಿಘ್ನಪರಿಹಾರದ್ವಾರಾ ಭಗವದನುಗ್ರಹಸಿದ್ಧ್ಯರ್ಥಂ, ವಿಶೇಷತಃ ಅಖಂಡಸೌಭಾಗ್ಯಪ್ರಾಪ್ತ್ಯರ್ಥಂ ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತಶ್ರೀಲಕ್ಷ್ಮೀನಾರಾಯಣಪ್ರೇರಣಯಾ ಶ್ರೀಲಕ್ಷ್ಮೀನಾರಾಯಣಪ್ರೀತ್ಯರ್ಥಂ ಮಂಗಳಗೌರಿಪೂಜಾಂ ಕರಿಷ್ಯೇ ।

ಹೂ ಮಂತ್ರಾಕ್ಷತೆಗಳನ್ನು ಕೈಯಲ್ಲಿ ಹಿಡಿದುಕೊಂಡು ನೀರು ಹಾಕಿಸಿ ಅರ್ಘ್ಯಪಾತ್ರೆಯಲ್ಲಿ ಬಿಡಬೇಕು.

## ೧೬ ಬತ್ತಿಯ ದೀಪ ಹಚ್ಚಬೇಕು

ದೀಪಃ ಪಾಪಹರೋ ನೄಣಾಂ ದೀಪ ಆಪನ್ನಿವಾರಕಃ ।
ದೀಪೋ ವಿಧತ್ತೇ ಸುಕೃತಂ ದೀಪಃ ಸಂಪತ್ಪ್ರದಾಯಕಃ ॥

ದೀಪಜ್ಯೋತಿ ಪರಬ್ರಹ್ಮ ದೀಪಜ್ಯೋತಿಃ ಜನಾರ್ದನಃ ।
ದೀಪೋ ಹರತು ಮೇ ಪಾಪಂ ಸಂಧ್ಯಾದೀಪ ನಮೋಽಸ್ತು ತೇ ॥

ಶುಭಂ ಕುರುಷ್ವ ಕಲ್ಯಾಣಂ ಆರೋಗ್ಯಂ ಸುಖಸಂಪದಮ್ ।
ಮಮ ಬುದ್ಧಿ ಪ್ರಕಾಶಂ ಚ ದೀಪಜ್ಯೋತಿರ್ನಮೋಽಸ್ತು ತೇ ॥

ಭೋ ದೀಪ ಬ್ರಹ್ಮರೂಪಸ್ತ್ವಂ ಕರ್ಮಸಾಕ್ಷಿ ಇಹಾರ್ಹಸಿ ।
ಯಾವತ್ ಕರ್ಮಸಮಾಪ್ತಿಃ ಸ್ಯಾತ್ ತಾವತ್ ತ್ವಂ ಸುಸ್ಥಿರೋ ಭವ ॥

ಕೈಮುಗಿದು ದೀಪದಲ್ಲಿ ಗೌರಿಯು ಬಂದು ನೆಲೆಸುವಂತೆ ಪ್ರಾರ್ಥಿಸಿರಿ.

## ಭೂತೋಚ್ಚಾಟನೆ ಮಾಡಬೇಕು

ಅಪಸರ್ಪಂತು ತೇ ಭೂತಾಃ ಯೇ ಭೂತಾಃ ಭುವಿ ಸಂಸ್ಥಿತಾಃ ।
ಯೇ ಭೂತಾಃ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ॥

ಅಪಕ್ರಾಮಂತು ಯೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ ।
ತೇಷಾಮಪ್ಯವಿರೋಧೇನ ಪೂಜಾಕರ್ಮ ಸಮಾರಭೇ ॥

## ಗುರುಗಣಪತಿ ಪೂಜೆ ಮಾಡಬೇಕು

ಪ್ರತಿಯೊಂದು ಪೂಜೆಯ ಪ್ರಾರಂಭದಲ್ಲಿ ಗುರುಗಳಿಗೆ ಹಾಗೂ ಗಣಪತಿಗೆ ಪೂಜೆ ಮಾಡಬೇಕು.

ಶ್ರೀಗುರುಭ್ಯೋ ನಮಃ । ಆದಿಗುರುಭ್ಯೋ ನಮಃ । ಮೂಲಗುರುಭ್ಯೋ ನಮಃ । ಪರಮಗುರುಭ್ಯೋ ನಮಃ । ಶ್ರೀವೇದವ್ಯಾಸಾಯ ನಮಃ । ಆಶ್ವಲಾಯನಾ-ಚಾರ್ಯೇಭ್ಯೋ ನಮಃ ।

ದೇವರ ಬಲಭಾಗದಲ್ಲಿ ಬರೆದ ಶ್ರೀಕಾರದಲ್ಲಿ ಗಂಧಾಕ್ಷತೆ ಪುಷ್ಪಗಳಿಂದ ಗುರುಗಳನ್ನು ಪೂಜಿಸಬೇಕು.

ಅಸ್ಮದ್ ಗುರುಸಮಾರಂಭಾಂ ಟೀಕಾಕೃತ್ಪಾದಮಧ್ಯಗಾಮ್ ।
ಶ್ರೀಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಮ್ ॥
ಆಪಾದಮೌಳಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥
ಶ್ರೀಗುರುಭ್ಯೋ ನಮಃ ಅನುಜ್ಞಾಂ ದೇಹಿ ।

ಮಂಗಳಗೌರಿ ಪೂಜೆ

ಶ್ರೀಕಾರದ ಪಕ್ಕದಲ್ಲಿ ಬರೆದ ಷಟ್ಕೋಣಮಂಡಲದಲ್ಲಿ ಬೆಳ್ಳಿಯ ಗಣಪತಿಯನ್ನಿಟ್ಟು ಪೂಜಿಸಬೇಕು. ಬೆಳ್ಳಿಗಣಪತಿ ಇಲ್ಲದಿದ್ದಲ್ಲಿ ಅಡಿಕೆಬೆಟ್ಟ, ಅರಿಶಿನಕೊಂಬುಗಳಲ್ಲಿ ಗಣಪತಿ ಆವಾಹನೆ ಮಾಡಿ ಪೂಜಿಸಬೇಕು.

ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ।
ಲಂಬೋದರಶ್ಚ ವಿಕಟೋ ವಿಘ್ನರಾಜೋ ಗಣಾಧಿಪಃ ॥೧॥

ಧೂಮಕೇತುರ್ಗಣಾಧ್ಯಕ್ಷೋ ಫಾಲಚಂದ್ರೋ ಗಜಾನನಃ।
ದ್ವಾದಶೈತಾನಿ ನಾಮಾನಿ ಯಃ ಪಠೇಚ್ಛೃಣುಯಾದಪಿ ॥೨॥

ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ।
ಸಂಗ್ರಾಮೇ ಸರ್ವಕಾರ್ಯೇಷು ವಿಘ್ನಸ್ತಸ್ಯ ನ ಜಾಯತೇ ॥೩॥

ಅಭೀಪ್ಸಿತಾರ್ಥಸಿದ್ಧ್ಯರ್ಥಂ ಪೂಜಿತೋ ಯಃ ಸುರೈರಪಿ।
ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥೪॥

ಗಣಪತಿಗೆ ಮಂತ್ರಾಕ್ಷತೆ ಹಾಕಿ

ಶ್ರೀಮಹಾಗಣಪತಯೇ ನಮಃ ॥ ಗಣಪತಿಮ್ ಆವಾಹಯಾಮಿ। ಮಹಾಗಣಪತಯೇ ನಮಃ। ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ। ಆವಾಹಯಾಮಿ ಆವಾಹನಂ ಸಮರ್ಪಯಾಮಿ। ಸ್ವಾಗತಂ ಸಮರ್ಪಯಾಮಿ। ಆಸನಂ ಸಮರ್ಪಯಾಮಿ। ಪುಷ್ಪಾಣಿ ಸಮರ್ಪಯಾಮಿ।

ಬೆಲ್ಲ ನೈವೇದ್ಯ ಮಾಡಿ - ಮಹಾಗಣಪತಯೇ ನಮಃ॥ ನೈವೇದ್ಯಾರ್ಥೇ ಗುಡೋಪಹಾರಮಹಾನ್ನೈವೇದ್ಯಂ ನಿವೇದಯಾಮಿ। ತಾಂಬೂಲಂ ಸಮರ್ಪಯಾಮಿ। ನೀರಾಜನಂ ಸಮರ್ಪಯಾಮಿ। ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ।

ವಕ್ರತುಂಡ ಮಹಾಕಾಯ ಬಾಲಸೂರ್ಯಸಮಪ್ರಭ।
ಅವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥

ಶ್ರೀಮಹಾಗಣಪತಯೇ ನಮಃ। ಪ್ರಾರ್ಥನಾಂ ಸಮರ್ಪಯಾಮಿ ॥ ಹೇ ದೇವ! ನಿರ್ವಿಘ್ನಂ ಕುರು ॥

ಎಂದು ಪ್ರಾರ್ಥಿಸಿ ಕೈಮುಗಿದು ನಾನು ಮುಂದೆ ಆಚರಿಸುವ ಪೂಜೆ ಸಾಂಗೋಪಾಂಗವಾಗಿ ನಡೆದು ಫಲಪ್ರದವಾಗಲಿಯೆಂದು ಪ್ರಾರ್ಥಿಸಿರಿ.

## ಕಲಶಪೂಜಾ

ಒಂದು ಕಲಶದಲ್ಲಿ ನೀರು ತುಂಬಿಸಿ ಕೆಳಗಿನ ಶ್ಲೋಕ ಹೇಳಿ ಈ ಕಲಶದ ನೀರನ್ನೇ ಮುಂದೆ ಪೂಜೆಗೆ ಉಪಯೋಗಿಸಬೇಕು.

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥೧॥

ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ ॥೨॥

ಅಂಗೈಶ್ಚ ಸಹಿತಾಃ ಸರ್ವೇ ಕಲಶಾಂಬುಸಮಾಶ್ರಿತಾಃ ।
ಶಾಂತಿಃ ಪುಷ್ಟಿಶ್ಚ ಗಾಯತ್ರೀ ಸಾವಿತ್ರೀ ಚ ಸರಸ್ವತೀ ॥೩॥

ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ ।
ಸರ್ವೇ ಸಮುದ್ರಾಃ ಸರಿತಸ್ತೀರ್ಥಾನಿ ಜಲದಾ ನದಾಃ ॥೪॥

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು ॥೫॥

ಆವಾಹಿತದೇವತಾಭ್ಯೋ ನಮಃ। ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ। ಆವಾಹಯಾಮಿ ಆವಾಹನಂ ಸಮರ್ಪಯಾಮಿ। ಸ್ವಾಗತಂ ಸಮರ್ಪಯಾಮಿ। ಆಸನಂ ಸಮರ್ಪಯಾಮಿ। (ಕಲಶದ ಒಳಗೆ ಹೂ ಮತ್ತು ಮಂತ್ರಾಕ್ಷತೆ ಹಾಕಿರಿ) ನಾನಾವಿಧಪರಿಮಳಪುಷ್ಪಾಣಿ ಸಮರ್ಪಯಾಮಿ। ಕಲಶದೇವತಾಭ್ಯೋ ನಮಃ

ನೈವೇದ್ಯಾರ್ಥೇ ಗುಡೋಪಹಾರ (ಬಾಳೆಹಣ್ಣು ಇಟ್ಟುಕೊಂಡರೆ ಕದಳೀಫಲಂ ಎಂದು ಹೇಳಬೇಕು.) ಮಹಾನೈವೇದ್ಯಂ ಸಮರ್ಪಯಾಮಿ। ತಾಂಬೂಲಂ ಸಮರ್ಪಯಾಮಿ। ನೀರಾಜನಂ ಸಮರ್ಪಯಾಮಿ। ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ। ಕಲಶದೇವತಾಭ್ಯೋ ನಮಃ। ಸರ್ವೋಪಚಾರಪೂಜಾಂ ಸಮರ್ಪಯಾಮಿ। (ಈ ಕಲಶೋದಕವನ್ನು ಷೋಡಶೋಪಚಾರಪೂಜೆಗೆ ಬಳಸಬೇಕು).

## ಪೀಠಪೂಜಾ -

ಸರ್ವಾಭ್ಯಃ ಪೀಠದೇವತಾಭ್ಯೋ ನಮಃ ।

## ಷೋಡಶದೋರಸ್ಥಾಪನಮ್

(ಹದಿನಾರು ಗ್ರಂಥಿಗಳುಳ್ಳ ದೋರವನ್ನು ಕಲಶದ ಮುಂದೆ ಇಡಬೇಕು. ಮತ್ತು ಮುಂದೆ ಮಾಡುವ ಆವಾಹನೆ ಹಾಗೂ ಷೋಡಶೋಪಚಾರಗಳನ್ನು ದೋರಕ್ಕೂ ಮಾಡಬೇಕು.)

ದೇವ್ಯಾಸ್ತು ಪುರತಃ ಸಮ್ಯಕ್ ನವಸೂತ್ರಂ ಪ್ರಕಲ್ಪಯೇತ್ ।
ನವಗ್ರಂಥಿಸಮಾಯುಕ್ತಂ ಕುಂಕುಮೇನ ವಿರಾಜಿತಮ್ ॥
ದ್ವಾದಶಗ್ರಂಥಿಯುಕ್ತಂ ವಾ ಉಪಕಲ್ಪ್ಯ ಪ್ರಪೂಜಯೇತ್ ।

## ಕಲಶದಲ್ಲಿ ಮಂಗಳಗೌರಿಯ ಆವಾಹನೆ

ಅಸ್ಮಿನ್ ಕಲಶೇ ಮಂಗಳಗೌರಿಸಹಿತ ಮಹಾರುದ್ರದೇವಸ್ಯ, ತದಂತರ್ಯಾಮಿ ಭಾರತೀರಮಣಮುಖ್ಯಪ್ರಾಣಸ್ಯ, ತದಂತರ್ಯಾಮಿ ಮಹಾಲಕ್ಷ್ಮೀಸಹಿತ ನಾರಾಯಣಸ್ಯ ವಿಶೇಷಸಾನ್ನಿಧ್ಯತಾಸಿದ್ಧ್ಯರ್ಥಂ ಆವಾಹನಂ ಕರಿಷ್ಯೇ ।

ಯಾವ ಕಲಶದಲ್ಲಿ ಮಂಗಳಗೌರಿಯನ್ನು ಪೂಜಿಸಲಾಗುತ್ತದೋ ಆ ಕಲಶದಲ್ಲಿ ಮಂಗಳಗೌರಿಯನ್ನು ಎಡತೊಡೆಯಲ್ಲಿ ಕುಳ್ಳಿರಿಸಿಕೊಂಡ ಮಹಾರುದ್ರದೇವರನ್ನು ಆವಾಹನೆ ಮಾಡಬೇಕು. ಒಂದು ಪುಷ್ಪವನ್ನು ಹಿಡಿದುಕೊಂಡು ಕಣ್ಮುಚ್ಚಿ ಹೀಗೆ ಧ್ಯಾನ ಮಾಡಬೇಕು. ಕೈಲಾಸಪರ್ವತದಲ್ಲಿ ಮಹಾರುದ್ರದೇವರ ವಾಮಾಂಕಸ್ಥಿತಳಾದ ಮಂಗಳಗೌರಿಯು

ಈಗ ಮನೆಗೆ ಬಂದಿದ್ದಾಳೆ. ಮತ್ತು ಈ ಕಲಶದಲ್ಲಿ ಕುಳಿತುಕೊಳ್ಳುತ್ತಿದ್ದಾಳೆ. ಅನಂತರ ಮಂಗಳಗೌರಿಸಹಿತ ಮಹಾರುದ್ರದೇವರು ಕಣ್ಣುಗಳನ್ನು ತೆರೆದಿದ್ದಾರೆಂದು ಭಾವಿಸಬೇಕು. ಅಥವಾ ನನ್ನ ಹೃದಯದಲ್ಲಿ ಇರುವ ಬಿಂಬರೂಪಿಯಾದ ಪರಮಾತ್ಮನ ಸೇವೆಯಲ್ಲಿ ನಿರತರಾದ ಶಿವಪಾರ್ವತಿಯರು ಈ ಕಲಶದಲ್ಲಿ ಬಂದು ನೆಲೆಸಿದ್ದಾರೆಂದು ಭಾವಿಸಬೇಕು.

ಏಹ್ಯೇಹಿ ಮಹಾರುದ್ರಾದೇವವಾಮಾಂಕಸ್ಥಿತ ಮಂಗಳಗೌರಿ! ಪೀಠಸ್ಥಿತ ಏತದ್ಧಾತು-ಮಯಕಲಶಾಂತಃಸ್ಥಿತತೇಜಸ್ಸಾರಮಯಭೂತಪ್ರತಿಮಾಯಾಂ ಆವಾಹಯಾಮಿ 'ಶ್ರೀಮಂಗಳಗೌರ್ಯೈ ನಮಃ ಶ್ರೀ' ಎಂದು ಹನ್ನೆರಡು ಬಾರಿ ಕಲಶ ಮುಟ್ಟಿ ಜಪಿಸಿರಿ.

* * * *

# ಮಂಗಳಗೌರಿ ಷೋಡಶೋಪಚಾರ ಪೂಜೆ

## ಆವಾಹನೆ

### ಹೂ ಏರಿಸಬೇಕು

ಸುಮಧ್ಯಮಾಂ ಸುವಸನಾಂ ಚಂದ್ರಬಿಂಬಾಧರಾನ್ವಿತಾಂ ।

ಆವಾಹಯಾಮಿ ದೇವೀಂ ತ್ವಾಂ ಸರ್ವದಾ ಶುಭಕಾರಿಣೀಂ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಆವಾಹಯಾಮಿ ಆವಾಹನಂ ಸಮರ್ಪಯಾಮಿ ॥

## ಆಸನ

### ಹೂ ಅಕ್ಷತೆಗಳನ್ನು ಪೀಠದಲ್ಲಿ ಹಾಕಬೇಕು

ರೌಪ್ಯೇಣ ಚಾಸನಂ ರತ್ನಮಾಣಿಕ್ಯಶೋಭಿತಂ ।

ಮಯಾನೀತಂ ಗೃಹಾಣ ತ್ವಂ ಗೌರೀ ಕಾಮಾರಿವಲ್ಲಭೇ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಆಸನಂ ಸಮರ್ಪಯಾಮಿ ॥

## ಪಾದ್ಯ

### ಒಂದು ಉದ್ಧರಣೆ ನೀರನ್ನು ದೇವಿಯ ಪಾದಗಳಿಗೆ ತೋರಿಸಿ ಅರ್ಘ್ಯಪಾತ್ರೆಗೆ ಹಾಕಬೇಕು

ಮಹಾದೇವಿ ಜಗನ್ನಾಥೇ ಶ್ವೇತಾಂಬರವಿಭೂಷಿತೇ ।

ಪಾದ್ಯಂ ಗೃಹಾಣ ದೇವಿ ತ್ವಂ ಗಂಧಪುಷ್ಪಾಕ್ಷತೈರ್ಯುತಂ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ ॥

## ಅರ್ಘ್ಯ

### ಒಂದು ಉದ್ಧರಣೆ ನೀರನ್ನು ದೇವಿಯ ಕೈಗಳಿಗೆ ತೋರಿಸಿ ಅರ್ಘ್ಯಪಾತ್ರೆಗೆ ಹಾಕಬೇಕು.

ಗಂಧಪುಷ್ಪಾಕ್ಷತೈರ್ಯುಕ್ತಂ ದಿವ್ಯಂ ಸಂಪಾದಿತಂ ಮಯಾ ।

ಅರ್ಘ್ಯಂ ಗೃಹಾಣ ದೇವಿ ತ್ವಂ ಮಯಾ ದತ್ತಂ ಸುರೇಶ್ವರಿ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ ॥

## ಆಚಮನ

### ಒಂದು ಉದ್ಧರಣೆ ನೀರನ್ನು ದೇವಿಗೆ ತೋರಿಸಿ ಅರ್ಘ್ಯಪಾತ್ರೆಗೆ ಹಾಕಬೇಕು

ಕಾಮಾರಿವಲ್ಲಭೇ ದೇವಿ ಕುರ್ವಾಚಮನಮಂಬಿಕೇ ।

ನಿರಂತರಮಹಂ ವಂದೇ ಚರಣೌ ತವ ಪಾರ್ವತೀ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಆಚಮನೀಯಂ ಸಮರ್ಪಯಾಮಿ ॥

## ಮಧುಪರ್ಕ

### ಕುಡಿಯಲು ಮಧುಪರ್ಕ ನೀಡಬೇಕು

ದಧಿ ಮಧ್ವಾಜ್ಯಸಂಯುಕ್ತಂ ಶರ್ಕರಾಕ್ಷೀರಸಂಯುತಂ ।

ಮಧುಪರ್ಕಂ ಗೃಹಾಣೇದಂ ಸರ್ವಾಭೀಷ್ಟಪ್ರದಾಯಿನಿ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಮಧುಪರ್ಕಂ ಸಮರ್ಪಯಾಮಿ ॥

## ಪಂಚಾಮೃತಸ್ನಾನ

### ಹೂ ಅನ್ನು ಪಂಚಾಮೃತದಲ್ಲಿ ಅದ್ದಿ ದೇವಿಗೆ ಪ್ರೋಕ್ಷಿಸಬೇಕು

ಸುರಭೇಸ್ತು ಸಮುದ್ಭೂತಂ ದೇವಾನಾಮಪಿ ದುರ್ಲಭಮ್ ।

ಪಯೋ ದದಾಮಿ ದೇವೇಶಿ ಸ್ನಾನಾರ್ಥಂ ಪ್ರತಿಗೃಹ್ಯತಾಮ್ ॥

ಮಂಗಳಗೌರ್ಯೈ ನಮಃ । ಕ್ಷೀರೇಣ ಸ್ನಪಯಾಮಿ ॥

ಮಂಗಳಗೌರ್ಯೈ ನಮಃ । ದಧಿ ಸ್ನಾನಂ ಸಮರ್ಪಯಾಮಿ ॥
ಮಂಗಳಗೌರ್ಯೈ ನಮಃ । ಘೃತಸ್ನಾನಂ ಸಮರ್ಪಯಾಮಿ ॥
ಮಂಗಳಗೌರ್ಯೈ ನಮಃ । ಮಧುಸ್ನಾನಂ ಸಮರ್ಪಯಾಮಿ ॥
ಮಂಗಳಗೌರ್ಯೈ ನಮಃ । ಶರ್ಕರಾಸ್ನಾನಂ ಸಮರ್ಪಯಾಮಿ ॥

ಮಂಗಳಗೌರ್ಯೈ ನಮಃ । ಫಲೋದಕೇನ ಸ್ನಪಯಾಮಿ ॥

ಫಲತೋಯೈಃ ಗಂಧತೋಯೈಃ ನಾರಿಕೇಲಕುಶೋದಕೈಃ ।
ಸ್ನಾನಂ ಪುಣ್ಯಜಲೈರ್ಯುಕ್ತಂ ಗೃಹಾಣ ಸುರನಾಯಕಿ ॥

ಹೂವಿನಿಂದ, ನೀರು, ಗಂಧದ ನೀರು, ಎಳನೀರು, ದರ್ಭೆಯ ನೀರು ಇವುಗಳನ್ನು ಪ್ರೋಕ್ಷಿಸಬೇಕು.

## ಶುದ್ಧೋದಕಸ್ನಾನ

### ತೀರ್ಥದಿಂದ ಪ್ರೋಕ್ಷಣೆ ಮಾಡಬೇಕು

ಗಂಗಾ ಗೋದಾವರೀ ಕೃಷ್ಣಾ ಗೌತಮೀ ನರ್ಮದಾ ಜಲೈಃ ।
ಸ್ನಾನಾರ್ಥಂ ಆಹೃತಂ ಮಾತಃ ಸ್ವೀಕುರುಷ್ವ ಹರಿಪ್ರಿಯೇ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಶುದ್ಧೋದಕಸ್ನಾನಂ ಸಮರ್ಪಯಾಮಿ ॥

ಸ್ನಾನಾಂಗಮಾಚಮನಂ ಸಮರ್ಪಯಾಮಿ ॥ (ಒಂದು ಉದ್ದರಣೆ ನೀರು ಬಿಡಬೇಕು)

## ವಸ್ತ್ರ

### ಗೆಜ್ಜೆ ವಸ್ತ್ರವನ್ನು ದೇವಿಗೆ ಸಮರ್ಪಿಸಬೇಕು

ವಸ್ತ್ರಂ ಚ ಸೋಮದೈವತ್ಯಂ ಲಜ್ಜಾಯಾಸ್ತು ನಿವಾರಣಮ್ ।
ಪ್ರಯಚ್ಛಾಮಿ ತವ ಪ್ರೀತ್ಯೈ ಮಮೇಷ್ಟಾರ್ಥಪ್ರದಾ ಭವ ॥
ಪೀತವಸ್ತ್ರದ್ವಯಂ ದೇವಿ ತುಭ್ಯಂ ದಾಸ್ಯಾಮಿ ಪಾರ್ವತಿ ।
ಚಂದ್ರಮೌಳಿಪ್ರಿಯೇ ದೇವಿ ಸದಾ ಮೇ ವರದಾ ಭವ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ವಸ್ತ್ರಯುಗ್ಮಂ ಸಮರ್ಪಯಾಮಿ ॥

## ಮಾಂಗಲ್ಯಸಮರ್ಪಣೆ

ಮಾಂಗಲ್ಯಂ ಮಣಿಸಂಯುಕ್ತಂ ಮುಕ್ತಾಫಲಸಮನ್ವಿತಮ್ ।
ಉತ್ತಮಂ ಗುಣಸೂತ್ರಂ ಗೃಹಾಣ ಶುಭಲಕ್ಷದೇ ॥

## ಆಭರಣ

### ವಿವಿಧ ಆಭರಣ ಸಮರ್ಪಿಸಬೇಕು

ವಜ್ರಮಾಣಿಕ್ಯವೈಢೂರ್ಯ ಮುಕ್ತಾವಿದ್ರುಮಮಂಡಿತಮ್ ।
ಪುಷ್ಪರಾಗಸಮಾಯುಕ್ತಂ ಭೂಷಣಂ ಪ್ರತಿಗೃಹ್ಯತಾಮ್ ।
ಕಿರೀಟಹಾರಕೇಯೂರ ಕಂಕಣಾದಿ ವಿಭೂಷಣೈಃ ।
ಅಲಂಕರೋಮಿ ತ್ವಾಂ ಭಕ್ತ್ಯಾ ಸರ್ವಾಲಂಕಾರಕಾರಿಣೇ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯ್ಯೆ ನಮಃ । ಆಭರಣಾನಿ ಸಮರ್ಪಯಾಮಿ ॥

## ಗಂಧ

### ಹೂ ಅನ್ನು ಗಂಧದಲ್ಲಿ ಅದ್ದಿ ದೇವಿಗೆ ಹಚ್ಚಬೇಕು

ಕುಂಕುಮಾಗರುಕರ್ಪೂರಂ ಕಸ್ತೂರೀ ಚಂದನಾದಿಕಂ ।
ವಿಲೇಪನಂ ಮಹಾದೇವಿ ಗಂಧಂ ಸ್ವೀಕರು ಶಾಂಕರಿ ॥
ಗಂಧಂ ಗೃಹಾಣ ದೇವೇಶಿ ಉತ್ತಮಂ ದಿವ್ಯಚಂದನಂ ।
ವಿಲೇಪನಂ ಸುರಾಧೀಶೇ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯ್ಯೆ ನಮಃ । ದಿವ್ಯಪರಿಮಳಗಂಧಾನ್ ಸಮರ್ಪಯಾಮಿ ॥

## ಅಕ್ಷತಾಃ

### ಮಂತ್ರಾಕ್ಷತೆಯನ್ನು ದೇವಿಗೆ ಸಮರ್ಪಿಸಬೇಕು

ರಂಜಿತಾಃ ಕುಂಕುಮೌಘೇನ ಹರಿದ್ರಾಕ್ತಾಸ್ತಥಾಕ್ಷತಾಃ ।
ತವಾಲಂಕರಣಾರ್ಥಾಯ ಪ್ರದತ್ತಾಃ ಸರ್ವಮಂಗಳೇ ॥
ಶಾಲೀಯಾನ್ ಚಂದ್ರಸಂಕಾಶಾನ್ ಹರಿದ್ರಾಮಿಶ್ರಿತಾನ್ ಶುಭಾನ್ ।
ಅಕ್ಷತಾಂಶ್ಚಾರ್ಪಯೇ ತುಭ್ಯಂ ಗೃಹಾಣ ಪರಮೇಶ್ವರಿ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಅಕ್ಷತಾನ್ ಸಮರ್ಪಯಾಮಿ ॥

## ಹರಿದ್ರಾಚೂರ್ಣ

### ಅರಿಶಿನ ಏರಿಸಬೇಕು

ಸೌಭಾಗ್ಯ ಶುಭದೇ ದೇವಿ ಸರ್ವಮಂಗಲದಾಯಿನೀ ।
ಹರಿದ್ರಾಂ ತೇ ಪ್ರದಾಸ್ಯಾಮಿ ಗೃಹಾಣ ಪರಮೇಶ್ವರಿ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಹರಿದ್ರಾಚೂರ್ಣಂ ಸಮರ್ಪಯಾಮಿ ॥

## ಕುಂಕುಮಚೂರ್ಣ

### ಕುಂಕುಮ ಏರಿಸಬೇಕು

ಕುಂಕುಮಂ ಕಾಂತಿದಂ ದಿವ್ಯಂ ಸರ್ವಕಾರ್ಯಫಲಪ್ರದಮ್ ।
ಕುಂಕುಮೇನಾರ್ಚಿತೇ ದೇವಿ ಗೃಹಾಣ ವರದಾ ಭವ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಕುಂಕುಮಚೂರ್ಣಂ ಸಮರ್ಪಯಾಮಿ ॥

## ಸಿಂಧೂರಚೂರ್ಣ - ಮಂಗಳದ್ರವ್ಯ

### ಸಿಂಧೂರ, ಕಾಡಿಗೆ, ಗಂಧೂಡಿ ಇತ್ಯಾದಿಗಳನ್ನು ಅರ್ಪಿಸುವುದು

ಹರಿದ್ರಾಕುಂಕುಮಂ ಚೈವ ಸಿಂಧೂರಂ ಕಜ್ಜಲಾಧಿಕಂ ।

ನೀಲಲೋಹಿತತಾಟಂಕೇ ಮಂಗಲದ್ರವ್ಯಮೀಶ್ವರಿ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಸಿಂಧೂರಚೂರ್ಣಂ, ಮಂಗಳದ್ರವ್ಯಾಣಿ ಸಮರ್ಪಯಾಮಿ ॥

## ಪುಷ್ಪಮಾಲಿಕೆ

### ಪುಷ್ಪಮಾಲೆ ಅರ್ಪಿಸಬೇಕು

ಚಂಪಕಾ ಕುಂದಮಂದಾರ ಮಾಲತೀಬೃಹತೀ ಸುಮೈಃ ।

ಪುಷ್ಪೈರ್ಬಿಲ್ವದಳೋಪೇತೈಃ ಪೂಜಯಾಮಿ ಶಿವಪ್ರಿಯಾಮ್ ॥

ಜಾಜೀಪುನ್ನಾಗಮಂದಾರಕೇತಕೀಚಂಪಕಾನಿ ಚ ।

ಪುಷ್ಪಾಣಿ ತವ ಪೂಜಾರ್ಥಮರ್ಪಯಾಮಿ ಸದಾಶಿವೇ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಪುಷ್ಪಮಾಲಿಕಾಂ ಸಮರ್ಪಯಾಮಿ ॥

## ಅಥ ಅಂಗಪೂಜಾ

ಶ್ರೀ ಉಮಾಯೈ ನಮಃ - ಪಾದೌ ಪೂಜಯಾಮಿ ॥

ಗೌರ್ಯೈ ನಮಃ - ಗುಲ್ಫೌ ಪೂಜಯಾಮಿ ॥

ಶ್ವೇತವಸನಾಯೈ ನಮಃ - ಜಂಘೇ ಪೂಜಯಾಮಿ ॥

ಪಾರ್ವತ್ಯೈ ನಮಃ - ಜಾನುನೀ ಪೂಜಯಾಮಿ ॥

ಜಗನ್ಮಾತ್ರೇ ನಮಃ - ಕಟಿಂ ಪೂಜಯಾಮಿ ॥

ಮೂಲಪ್ರಕೃತ್ಯೈ ನಮಃ - ನಾಭಿಂ ಪೂಜಯಾಮಿ ॥

ಅಂಬಿಕಾಯ್ಯೆ ನಮಃ - ಉದರಂ ಪೂಜಯಾಮಿ ॥
ಅನ್ನಪೂರ್ಣಾಯ್ಯೆ ನಮಃ - ಸ್ತನೌ ಪೂಜಯಾಮಿ ॥
ಶಿವಸುಂದರ್ಯ್ಯೆ ನಮಃ - ವಕ್ಷಸ್ಥಲಂ ಪೂಜಯಾಮಿ ॥
ಮಹಾಬಲಾಯ್ಯೆ ನಮಃ - ಬಾಹೂ ಪೂಜಯಾಮಿ ॥
ವರಪ್ರದಾಯ್ಯೆ ನಮಃ - ಹಸ್ತಾನ್ ಪೂಜಯಾಮಿ ॥
ಕಂಬುಕಂಠ್ಯೆ ನಮಃ - ಕಂಠಂ ಪೂಜಯಾಮಿ ॥
ಬ್ರಹ್ಮವಿದ್ಯಾಯ್ಯೆ ನಮಃ - ಜಿಹ್ವಾಂ ಪೂಜಯಾಮಿ ॥
ಶಾಂಕರ್ಯ್ಯೆ ನಮಃ - ಮುಖಂ ಪೂಜಯಾಮಿ ॥
ಶ್ರಿಯ್ಯೆ ನಮಃ - ನೇತ್ರೇ ಪೂಜಯಾಮಿ ॥
ರುದ್ರಾಣ್ಯೈ ನಮಃ - ಕರ್ಣೌ ಪೂಜಯಾಮಿ ॥
ಸರ್ವಮಂಗಳಾಯ್ಯೆ ನಮಃ - ಲಲಾಟಂ ಪೂಜಯಾಮಿ ॥
ಸರ್ವೇಶ್ವರ್ಯ್ಯೆ ನಮಃ - ಶಿರಃ ಪೂಜಯಾಮಿ ॥
ಮಂಗಳಗೌರ್ಯ್ಯೆ ನಮಃ ಸರ್ವಾಣ್ಯಂಗಾನಿ ಪೂಜಯಾಮಿ ॥

## ಪತ್ರ ಪೂಜಾ

### (ಪತ್ರಗಳಿಂದ ಪೂಜಿಸಬೇಕು)

ಶ್ರೀ ಉಮಾಯ್ಯೆ ನಮಃ । ಬಿಲ್ವಪತ್ರಂ ಸಮರ್ಪಯಾಮಿ ॥
ಗೌರ್ಯ್ಯೆ ನಮಃ । ಚಂಪಕಪತ್ರಂ ಸಮರ್ಪಯಾಮಿ ॥
ಪಾರ್ವತ್ಯೈ ನಮಃ । ದೂರ್ವಾಪತ್ರಂ ಸಮರ್ಪಯಾಮಿ ॥
ಜಗನ್ಮಾತ್ರೇ ನಮಃ । ಅರ್ಕಪತ್ರಂ ಸಮರ್ಪಯಾಮಿ ॥
ಜಗತ್ಪ್ರತಿಷ್ಠಾಯ್ಯೆ ನಮಃ । ಕರವೀರಪತ್ರಂ ಸಮರ್ಪಯಾಮಿ ॥
ಅನ್ನಪೂರ್ಣಾಯ್ಯೆ ನಮಃ । ತುಳಸೀಪತ್ರಂ ಸಮರ್ಪಯಾಮಿ ॥
ಶಿವಸುಂದರ್ಯ್ಯೆ ನಮಃ । ದಾಡಿಮಪತ್ರಂ ಸಮರ್ಪಯಾಮಿ ॥
ಅಂಬಿಕಾಯ್ಯೆ ನಮಃ । ದತ್ತೂರಪತ್ರಂ ಸಮರ್ಪಯಾಮಿ ॥
ವರಪ್ರದಾಯ್ಯೆ ನಮಃ । ಮಲ್ಲಿಕಾಪತ್ರಂ ಸಮರ್ಪಯಾಮಿ ॥

ಕಂಬುಕಂಠ್ಯೈ ನಮಃ । ಯೂಥಿಕಾಪತ್ರಂ ಸಮರ್ಪಯಾಮಿ ॥
ಬ್ರಹ್ಮವಿದ್ಯಾಯೈ ನಮಃ । ಜಾಜೀಪತ್ರಂ ಸಮರ್ಪಯಾಮಿ ॥
ಶಿವಾಯೈ ನಮಃ । ಮರುವಕಪತ್ರಂ ಸಮರ್ಪಯಾಮಿ ॥
ತ್ರಿಪುರಸುಂದರ್ಯೈ ನಮಃ । ದವನಪತ್ರಂ ಸಮರ್ಪಯಾಮಿ ॥
ತ್ರಿಪುರೈಶ್ವರ್ಯೈ ನಮಃ ನಿಂಬಪತ್ರಂ ಸಮರ್ಪಯಾಮಿ ॥
ರುದ್ರಾಣ್ಯೈ ನಮಃ । ಕಾಮಸಂಜೀವಿನೀಪತ್ರಂ ಸಮರ್ಪಯಾಮಿ ॥
ಹರಪ್ರಿಯಾಯೈ ನಮಃ । ವಿಷ್ಣುಕ್ರಾಂತಿಪತ್ರಂ ಸಮರ್ಪಯಾಮಿ ॥
ಮಂಗಳಗೌರ್ಯೈ ನಮಃ ॥ ನಾನಾವಿಧಪತ್ರಾಣಿಪೂಜಾಂ ಸಮರ್ಪಯಾಮಿ ॥

## ಅಥ ಪುಷ್ಪ ಪೂಜಾ

### (ಪುಷ್ಪಗಳಿಂದ ಅರ್ಚಿಸಬೇಕು)

ಶ್ರೀ ಗಿರಿಜಾಯೈ ನಮಃ । ಮಲ್ಲಿಕಾಪುಷ್ಪಂ ಸಮರ್ಪಯಾಮಿ (ಮಲ್ಲಿಗೆ)
ದಾಕ್ಷಾಯಿಣ್ಯೈ ನಮಃ । ಜಾಜೀಪುಷ್ಪಂ ಸಮರ್ಪಯಾಮಿ (ಜಾಜೀ)
ಉಮಾಯೈ ನಮಃ । ಕರವೀರಪುಷ್ಪಂ ಸಮರ್ಪಯಾಮಿ (ಕಣಗಲೆ)
ದುರ್ಗಾಯೈ ನಮಃ । ಕಮಲಪುಷ್ಪಂ ಸಮರ್ಪಯಾಮಿ (ತಾವರೆ)
ಗೌರ್ಯೈ ನಮಃ । ಪುನ್ನಾಗಪುಷ್ಪಂ ಸಮರ್ಪಯಾಮಿ (ಸುರಹೊನ್ನೆ)
ಕಾಳ್ಯೈ ನಮಃ । ಸೇವಂತಿಕಾಪುಷ್ಪಂ ಸಮರ್ಪಯಾಮಿ (ಸೇವಂತಿಗೆ)
ಹೈಮವತ್ಯೈ ನಮಃ । ಕುಂದಕಪುಷ್ಪಂ ಸಮರ್ಪಯಾಮಿ (ದುಂಡುಮಲ್ಲಿಗೆ)
ಈಶ್ವರವಲ್ಲಭಾಯೈ ನಮಃ । ಚಂಪಕಪುಷ್ಪಂ ಸಮರ್ಪಯಾಮಿ (ಸಂಪಿಗೆ)
ಶಿವಾಯೈ ನಮಃ । ಕೇತಕೀಪುಷ್ಪಂ ಸಮರ್ಪಯಾಮಿ (ತಾಳೆಹೂ)
ಭವಾನ್ಯೈ ನಮಃ । ಉತ್ಪಲಪುಷ್ಪಂ ಸಮರ್ಪಯಾಮಿ (ನೈದಿಲೆ)
ರುದ್ರಾಣ್ಯೈ ನಮಃ । ಪಾರಿಜಾತಪುಷ್ಪಂ ಸಮರ್ಪಯಾಮಿ (ಪಾರಿಜಾತ)
ಶರ್ವಾಣ್ಯೈ ನಮಃ । ಜಪಾಪುಷ್ಪಂ ಸಮರ್ಪಯಾಮಿ (ದಾಸವಾಳ)
ಸರ್ವಮಂಗಳಾಯೈ ನಮಃ । ಸ್ಥಲಪದ್ಮಪುಷ್ಪಂ ಸಮರ್ಪಯಾಮಿ(ಗುಲಾಬಿ ಡೇರಾ)
ಅಪರ್ಣಾಯೈ ನಮಃ । ನಂದ್ಯಾವರ್ತಪುಷ್ಪಂ ಸಮರ್ಪಯಾಮಿ (ನಂಜಬಟ್ಟು)
ಜಗನ್ಮಂಗಳಾಯೈ ನಮಃ । ದಾಡಿಮಪುಷ್ಪಂ ಸಮರ್ಪಯಾಮಿ (ದಾಳಿಂಬೆ ಹೂ)

ಜಗಜ್ಜನನ್ಯೈ ನಮಃ । ಪಾಟಲಿಪುಷ್ಪಂ ಸಮರ್ಪಯಾಮಿ (ಪಾದರಿ)
ಶಿವವಲ್ಲಭಾಯ್ಯೈ ನಮಃ । ಕಲ್ಹಾರಪುಷ್ಪಂ ಸಮರ್ಪಯಾಮಿ (ಬೆಟ್ಟ ದಾವರಿ)

ಶ್ರೀ ಮಂಗಳಗೌರ್ಯೈ ನಮಃ ನಾನಾವಿಧನಾನಾವರ್ಣಪರಿಮಳಪುಷ್ಪಾಣಿ ಸಮರ್ಪಯಾಮಿ

## ಅಷ್ಟೋತ್ತರ ಶತನಾಮಪೂಜಾ

ಶ್ರೀ ರಜತಾಚಲಶೃಂಗಾಗ್ರಮಧ್ಯಸ್ಥಾಯ್ಯೈ ನಮಃ ।
ಹಿಮಾಚಲಮಹಾವಂಶಪಾವನಾಯ್ಯೈ ನಮಃ ।
ಶಂಕರಾರ್ಧಾಂಗಸೌಂದರ್ಯಶರೀರಾಯ್ಯೈ ನಮಃ ।
ಲಸನ್ಮರಕತಸ್ವಚ್ಛವಿಗ್ರಹಾಯ್ಯೈ ನಮಃ ।
ಮಹಾತಿಶಯಸೌಂದರ್ಯಲಾವಣ್ಯಾಯ್ಯೈ ನಮಃ ।
ಶಶಾಂಕಶೇಖರಪ್ರಾಣವಲ್ಲಭಾಯ್ಯೈ ನಮಃ ।
ಸದಾಪಂಚದಶಾತ್ಮೈಕ್ಯಸ್ವರೂಪಾಯ್ಯೈ ನಮಃ ।
ವಜ್ರಮಾಣಿಕ್ಯಕಿರೀಟಾಯ್ಯೈ ನಮಃ ।
ಕಸ್ತೂರಿತಿಲಕೀಭೂತನಿಟಿಲಾಯ್ಯೈ ನಮಃ ॥೧೦॥
ವಿಕಚಾಂಭೋರುಹದಲಲೋಚನಾಯ್ಯೈ ನಮಃ ।
ಶರಚ್ಚಾಂಪೇಯಪುಷ್ಪಾಭನಾಸಿಕಾಯ್ಯೈ ನಮಃ ।
ಲಸತ್ಕಾಂಚನತಾಟಂಕಯುಗಲಾಯ್ಯೈ ನಮಃ ।
ಮಣಿದರ್ಪಣಸಂಕಾಶಕಪೋಲಾಯ್ಯೈ ನಮಃ ।
ತಾಂಬೂಲಪೂರಿತಸ್ಮೇರವದನಾಯ್ಯೈ ನಮಃ ।
ಸುಪಕ್ವದಾಡಿಮೀಬೀಜರದಾಯ್ಯೈ ನಮಃ ।
ತ್ರಿವಲೀಯುಕ್ತಕಂಬುಕಂಧರಾಯ್ಯೈ ನಮಃ ।
ಗಿರೀಶಬದ್ಧಮಾಂಗಲ್ಯಮಂಗಲಾಯ್ಯೈ ನಮಃ ।
ಪದ್ಮಪಾಶಾಂಕುಶಸತ್ಕರಾಬ್ಜಾಯ್ಯೈ ನಮಃ ॥೨೦॥
ಪದ್ಮಕೈರವಮಂದಾರಸುಮಾಲಿನ್ಯೈ ನಮಃ ।
ಸುವರ್ಣಕುಂಭಯುಗ್ಮಾಭಸಂಕುಚಾಯ್ಯೈ ನಮಃ ।
ರಮಣೀಯಚತುರ್ಬಾಹುಸಂಯುಕ್ತಾಯ್ಯೈ ನಮಃ ।

ಕನಕಾಂಗದಕೇಯೂರಭೂಷಿತಾಯೈ ನಮಃ ।
ಬೃಹತ್‌ಸೌವರ್ಣಸೌಂದರ್ಯವಸನಾಯೈ ನಮಃ ।
ಬೃಹನ್ನಿತಂಬವಿಲಸಜ್ಜಘನಾಯೈ ನಮಃ ।
ಸೌಭಾಗ್ಯಜಾತಶೃಂಗಾರಮಧ್ಯಮಾಯೈ ನಮಃ ।
ದಿವ್ಯಭೂಷಣಸಂದೋಹರಂಜಿತಾಯೈ ನಮಃ ।
ಪಾರಿಜಾತಗುಣಾಧಿಕ್ಯಪದಾಬ್ಜಾಯೈ ನಮಃ ।
ಸಂಪದ್ಮರಾಗಸಂಕಾಶಚರಣಾಯೈ ನಮಃ ॥೩೦॥
ಶ್ರೀಕಂಠನೇತ್ರಕುಮುದಚಂದ್ರಿಕಾಯೈ ನಮಃ ।
ಸಚಾಮರಶಚ್ಯಾದಿದೇವತಾವೀಜಿತಾಯೈ ನಮಃ ।
ಭಕ್ತರಕ್ಷಣದಾಕ್ಷಿಣ್ಯಕಟಾಕ್ಷಾಯೈ ನಮಃ ।
ಭೂತೇಶಾಲಿಂಗನೋದ್ಭೂತಪುಲಕಾಂಗ್ಯೈ ನಮಃ ।
ಅನಂಗಜನಕಾಪಾಂಗವೀಕ್ಷಣಾಯೈ ನಮಃ ।
ಶಚೀಮುಖಾಮರವಧೂಸೇವಿತಾಯೈ ನಮಃ ।
ಲೀಲಾಕಲ್ಪಿತಬ್ರಹ್ಮಾಂಡಮಂಡಿತಾಯೈ ನಮಃ ।
ಅಣಿಮಾದಿಮಹಾಶಕ್ತಿಸಂವೃತಾಯೈ ನಮಃ ।
ಏಕಾತಪತ್ರಸಾಮ್ರಾಜ್ಯದಾಯಕಾಯೈ ನಮಃ ।
ಸನಕಾದಿಸಮಾರಾಧ್ಯಪಾದುಕಾಯೈ ನಮಃ ॥೪೦॥
ದೇವರ್ಷಿಭಿಸ್ತೂಯಮಾನಾऽತ್ಮವೈಭವಾಯೈ ನಮಃ ।
ಮತ್ತೇಭವಕ್ತ್ರ-ಷಡ್ವಕ್ತ್ರವತ್ಸಲಾಯೈ ನಮಃ ।
ಚಕ್ರರಾಜಮಧ್ಯವರ್ತ್ಯೈ ನಮಃ ।
ಚಿದಗ್ನಿಕುಂಡಸಂಭೂತಸುದೇಹಾಯೈ ನಮಃ ।
ಶಶಾಂಕಖಂಡಸಂಯುಕ್ತಮಕುಟಾಯೈ ನಮಃ ।
ಮತ್ತಹಂಸವಧೂಮಂದಗಮನಾಯೈ ನಮಃ ।
ವಂದಾರುಜನಸಂದೋಹವಂದಿತಾಯೈ ನಮಃ ।
ಅಂತರ್ಮುಖಜನಾನಂದಫಲದಾಯೈ ನಮಃ ।
ಪತಿವ್ರತಾಂಗನಾಭೀಷ್ಟಫಲದಾಯೈ ನಮಃ ।
ಅವ್ಯಾಜಕರುಣಾಪೂರಪೂರಿತಾಯೈ ನಮಃ ।

ನಿರಂಜನಚಿದಾನಂದಸಂಯುಕ್ತಾಯೈ ನಮಃ ॥೫೦॥
ಸಹಸ್ರಸೂರ್ಯಸಂಯುಕ್ತಪ್ರಕಾಶಾಯೈ ನಮಃ ।
ರತ್ನಚಿಂತಾಮಣಿಗೃಹಮಧ್ಯಸ್ಥಾಯೈ ನಮಃ ।
ಹಾನಿವೃದ್ಧಿಗುಣಾಧಿಕ್ಯರಹಿತಾಯೈ ನಮಃ ।
ಮಹಾಪದ್ಮಾಟವೀಟಮಧ್ಯನಿವಾಸಾಯೈ ನಮಃ ।
ಜಾಗ್ರತ್‌ಸ್ವಪ್ನಸುಷುಪ್ತೀನಾಂ ಸಾಕ್ಷೀಭೂತ್ಯೈ ನಮಃ ।
ಮಹಾಪಾಪೌಘಪಾಪಾನಾಂ ವಿನಾಶಿನ್ಯೈ ನಮಃ ।
ದುಷ್ಟಭೀತಿಮಹಾಭೀತಿಭಂಜನಾಯೈ ನಮಃ ।
ಸಮಸ್ತದೇವಜನಪ್ರೇರಕಾಯೈ ನಮಃ ।
ಸಮಸ್ತಹೃದಯಾಂಭೋಜನಿಲಯಾಯೈ ನಮಃ ।
ಅನಾಹತಮಹಾಪದ್ಮಮಂದಿರಾಯೈ ನಮಃ ॥೬೦॥
ಸಹಸ್ರಾರಸರೋಜಾತವಾಸಿತಾಯೈ ನಮಃ ।
ಪುನರಾವೃತ್ತಿರಹಿತಪುರಸ್ಥಾಯೈ ನಮಃ ।
ಲೋಪಾಮುದ್ರಾರ್ಚಿತಶ್ರೀಮಚ್ಚರಣಾಯೈ ನಮಃ ।
ಸಹಸ್ರರತಿಸೌಂದರ್ಯಶರೀರಾಯೈ ನಮಃ ।
ಭಾವನಾಮಾತ್ರಸಂತುಷ್ಟಹೃದಯಾಯೈ ನಮಃ ।
ಸತ್ಯಸಂಪೂರ್ಣವಿಜ್ಞಾನಸಿದ್ಧಿದಾಯೈ ನಮಃ ।
ದಕ್ಷಾಧ್ವರಭೇದಸಾಧನಾಯೈ ನಮಃ ।
ಶ್ರೀನಾಥಸೋದರೀಭೂತ್ವಾ ಶೋಭಿತಾಯೈ ನಮಃ ।
ಚಂದಶೇಖರಭಕ್ತಾರ್ತಿಭಂಜನಾಯೈ ನಮಃ ।
ಸರ್ವೋಪಾಧಿವಿನಿರ್ಮುಕ್ತಚೈತನ್ಯಾಯೈ ನಮಃ ॥೭೦॥
ನಾಮಪಾರಾಯಣಾಭೀಷ್ಟಫಲದಾಯೈ ನಮಃ ।
ಸೃಷ್ಟಿಸ್ಥಿತಿತಿರೋಧಾನಸಂಕಲ್ಪಾಯೈ ನಮಃ ।
ಶ್ರೀ ಷೋಡಶಾಕ್ಷರೀಮಂತ್ರಮಧ್ಯಗಾಯೈ ನಮಃ ।
ಅನಾದ್ಯಂತಸ್ವಯಂಭೂತದಿವ್ಯಮೂರ್ತ್ಯೈ ನಮಃ ।
ಭಕ್ತಹಂಸಪರೀಮುಖ್ಯನಿಯೋಗಾಯೈ ನಮಃ ।
ಮಾತೃಮಂಡಲಸಂಯುಕ್ತಲಲಿತಾಯೈ ನಮಃ ।

ಭಂಡದೈತ್ಯಮಹಾಸ್ತ್ರನಾಶನಾಯೈ ನಮಃ ।
ಕ್ರೂರಭಂಡಶಿರಶ್ಛೇದನಿಪುಣಾಯೈ ನಮಃ ।
ಚಂಡಮುಂಡನಿಶುಂಭಾದಿಖಂಡನಾಯೈ ನಮಃ ।
ರಕ್ತಾಕ್ಷರಕ್ತಜಿಹ್ವಾದಿಶಿಕ್ಷಣಾಯೈ ನಮಃ ॥೮೦॥
ಮಹಿಷಾಸುರದೋರ್ವೀರ್ಯನಿಗ್ರಹಾಯೈ ನಮಃ ।
ಅಭ್ರಕೇಶಮಹೋತ್ಸಾಹಕರಣಾಯೈ ನಮಃ ।
ಮಹೇಶಯುಕ್ತನಟನತತ್ಪರಾಯೈ ನಮಃ ।
ನಿಜಭರ್ತೃಮುಖಾಂಭೋಜಚಿಂತನಾಯೈ ನಮಃ ।
ವೃಷಭಧ್ವಜವಿಜ್ಞಾನಭಾವನಾಯೈ ನಮಃ ।
ಜನ್ಮಮೃತ್ಯುಜರಾರೋಗಭಂಜನಾಯೈ ನಮಃ ।
ವಿಧೇಯಮುಕ್ತವಿಜ್ಞಾನಸಿದ್ಧಿದಾಯೈ ನಮಃ ।
ಕಾಮಕ್ರೋಧಾದಿಷಡ್ವರ್ಗನಾಶನಾಯೈ ನಮಃ ।
ರಾಜರಾಜಾರ್ಚಿತಪದಸರೋಜಾಯೈ ನಮಃ ।
ಸರ್ವವೇದಾಂತಸಂಸಿದ್ಧತತ್ತ್ವಾಯೈ ನಮಃ ॥೯೦॥
ಶ್ರೀವೀರಭಕ್ತವಿಜ್ಞಾನನಿಧಾನಾಯೈ ನಮಃ ।
ಅಶೇಷದುಷ್ಟದನುಜಸೂದನಾಯೈ ನಮಃ ।
ಸಾಕ್ಷಾಚ್ಛ್ರೀದಕ್ಷಿಣಾಮೂರ್ತಿಮನೋಜ್ಞಾಯೈ ನಮಃ ।
ಹಯಮೇಧಾಗ್ರಸಂಪೂಜ್ಯಮಹಿಮಾಯೈ ನಮಃ ।
ದಕ್ಷಪ್ರಜಾಪತಿಸುತಾವೇಷಾಢ್ಯಾಯೈ ನಮಃ ।
ಸುಮಬಾಣೇಕ್ಷುಕೋದಂಡಮಂಡಿತಾಯೈ ನಮಃ ।
ನಿತ್ಯಯೌವನಮಂಗಲಾಯೈ ನಮಃ ।
ಮಹಾದೇವಸಮಾಯುಕ್ತಶರೀರಾಯೈ ನಮಃ ।
ಮಹಾದೇವರತೌತ್ಸುಕಮಹಾದೇವ್ಯೈ ನಮಃ ।
ಶ್ರೀಮಂಗಲಗೌರ್ಯೈ ನಮಃ ॥೧೦೦॥

॥ಅಷ್ಟೋತ್ತರಶತನಾಮಪೂಜಾಂ ಸಮರ್ಪಯಾಮಿ ॥

## ಧೂಪ

ದೇವದ್ರುಮರಸೋದ್ಭೂತಃ ಕಾಲಾಗರುಸಮನ್ವಿತಃ ।
ಆಘ್ರೇಯತಾಂ ಅಯಂ ಧೂಪಃ ಭವಾನಿ ಘ್ರಾಣತರ್ಪಣಾ ॥

ಮಹಾರುದ್ರದೇವವಾಮಾಂಕಸ್ಥಿತ ಮಂಗಳಗೌರ್ಯೈ ನಮಃ । ಧೂಪಮಾಘ್ರಾಪಯಾಮಿ ॥

## ಏಕಾರ್ತಿದೀಪ

ಸಾಜ್ಯಂ ತ್ರಿವರ್ತಿ ಸಂಯುಕ್ತಂ ವಹ್ನಿನಾ ಯೋಜಿತಂ ಮಯಾ ।
ಗೃಹಾಣ ಮಂಗಳಂ ದೀಪಂ ತ್ರೈಲೋಕ್ಯತಿಮಿರಾಪಹಮ್ ॥
ಭಕ್ತ್ಯಾ ದೀಪಂ ಪ್ರಯಚ್ಛಾಮಿ ದೇವ್ಯೈ ತೇ ಭಕ್ತಿಪೂರ್ವಕಮ್ ।
ತ್ರಾಹಿ ಮಾಂ ನರಕಾತ್ ಘೋರಾತ್ ದಿವ್ಯಜ್ಯೋತಿರ್ನಮೋಽಸ್ತು ತೇ ॥

ಶ್ರೀ ಮಂಗಳಗೌರ್ಯೈನಮಃ ಏಕಾರ್ತಿದೀಪಂ ದರ್ಶಯಾಮಿ ॥

## ನೈವೇದ್ಯ

ಅನ್ನಂ ಚತುರ್ವಿಧಂ ಸ್ವಾದುರಸೈಃ ಷಡ್ಭಿಃ ಸಮನ್ವಿತಂ ।
ಭಕ್ಷ್ಯಭೋಜ್ಯಸಮಾಯುಕ್ತಂ ನೈವೇದ್ಯಂ ಪ್ರತಿಗೃಹ್ಯತಾಂ ॥
ಖರ್ಜೂರ ನಾರಿಕೇಳಾಢ್ಯಂ ನಾನಾ ಭಕ್ಷ್ಯಸಮನ್ವಿತಂ ।
ಶಾಲ್ಯಾನ್ನಂ ಷಡ್ರಸೋಪೇತಂ ನೈವೇದ್ಯಂ ಸ್ವೀಕರುಷ್ವ ಮೇ ॥

ಎಂದು ಹೇಳಿ ಕೈಯಲ್ಲಿ ಹೂ ತೆಗೆದುಕೊಂಡು ನೈವೇದ್ಯದ ಮೇಲೆ ಪ್ರೋಕ್ಷಿಸಿ ನಂತರ ಕೆಳಗಿನ ಮಂತ್ರ ಹೇಳುತ್ತಾ ನೈವೇದ್ಯ ಮತ್ತು ಫಲಗಳನ್ನು ದೇವರಿಗೆ ತೋರಿಸುವುದು. ಭಗವಂತನಿಗೆ ಹಾಗೂ ಮುಖ್ಯಪ್ರಾಣದೇವರಿಗೆ ಸಮರ್ಪಿಸಿದ ನೈವೇದ್ಯವನ್ನೇ ಮಂಗಳಗೌರಿಗೆ ನಿವೇದನೆ ಮಾಡಬೇಕು.)

ಶ್ರೀ ಮಂಗಳಗೌರ್ಯೈ ನಮಃ ನಾರಿಕೇಳಫಲನ್ನೈವೇದ್ಯಂ ಸಮರ್ಪಯಾಮಿ, ಕದಳೀಫಲನ್ನೈವೇದ್ಯಂ ಸಮರ್ಪಯಾಮಿ, ಗೋಧೂಮಪಿಷ್ಟ ನೈವೇದ್ಯಂ ಸಮರ್ಪಯಾಮಿ, ಮುದ್ಗದಳ, ಚಣಕದಳ ನೈವೇದ್ಯಂ ಸಮರ್ಪಯಾಮಿ, ಸಮಸ್ತವಿಧ-ಫಲಭಕ್ಷ್ಯಭೋಜ್ಯ ಮಹಾನ್ನೈವೇದ್ಯಂ ಸಮರ್ಪಯಾಮಿ। ಮಧ್ಯೇಮಧ್ಯೇ ಪಾನೀಯಂ ಸಮರ್ಪಯಾಮಿ । ಉತ್ತರಾಪೋಶನಂ ಸಮರ್ಪಯಾಮಿ । ಹಸ್ತ-ಪ್ರಕ್ಷಾಳನಂ ಸಮರ್ಪಯಾಮಿ । ಮುಖ ಪ್ರಕ್ಷಾಳನಂ ಸಮರ್ಪಯಾಮಿ । ಪಾದಪ್ರಕ್ಷಾಳನಂ ಸಮರ್ಪಯಾಮಿ । ಕರೋದ್ವರ್ತನಂ ಸಮರ್ಪಯಾಮಿ । ಪುನರಾಚಮನೀಯಂ ಸಮರ್ಪಯಾಮಿ ।

## ತಾಂಬೂಲಮ್

ಪೂಗೀಫಲಸಮಾಯುಕ್ತಂ ನಾಗವಲ್ಲೀದಲೈರ್ಯುತಂ ।
ಕರ್ಪೂರಚೂರ್ಣಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥

ಮಹಾರುದ್ರದೇವವಾಮಾಂಕಸ್ಥಿತ ಮಂಗಳಗೌರ್ಯೈ ನಮಃ । ತಾಂಬೂಲಂ ಸಮರ್ಪಯಾಮಿ ॥

## ಸುವರ್ಣಪುಷ್ಪದಕ್ಷಿಣೆ

ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ ।
ಅನಂತಪುಣ್ಯಫಲದಂ ಅತಃ ಶಾಂತಿಂ ಪ್ರಯಚ್ಛ ಮೇ ॥

ಮಹಾರುದ್ರದೇವವಾಮಾಂಕಸ್ಥಿತ ಮಂಗಳಗೌರ್ಯೈ ನಮಃ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ॥

## ಆರತಿ

### (ಹದಿನಾರು ಹೂಬತ್ತಿ ಇಟ್ಟು ಆರತಿ ಮಾಡಿ)

ವರ್ತಿತ್ರಯಸಮಾಯುಕ್ತಂ ಕರ್ಪೂರೇಣ ಸಮನ್ವಿತಂ ।
ನೀರಾಜನಂ ಗೃಹಾಣೇದಂ ಮಯಾ ದತ್ತಂ ಮಹೇಶ್ವರಿ ॥

## ಗೌರಿಗೆ ಆರತಿ ಮಾಡಬೇಕು

ಮಂಗಳಾರತಿಯನೆತ್ತಿದಳು । ಮುದ್ದು ಅಂಗನೆ ರುಕ್ಮಿಣಿ ಮಂಗಳಗೌರಿಗೆ ॥ಪ॥ ಶಿರನ ಸಾಲಿಗೆ ಹಚ್ಚಿಬಟ್ಟು । ಕೊಂಡು । ಕೊರಳ ಮಧ್ಯದಿ ರಾಜಿಪ ಹತ್ಯೆಗಟ್ಟು ॥ ಹರಿಯ ಧ್ಯಾನದಿ ಚಿತ್ತವಿಟ್ಟು । ನರ । ಹರಿಗೆ ವಲ್ಲಭೆ ನಾ ಅದೇನೆಂಬ ಗುಟ್ಟು ॥೧॥ ವಕ್ಷಸ್ಥಳವ ನೋಡಿದಳು ॥ ಬಹಳ । ದಕ್ಷಿಣ್ಯವೇಕೋ ಧನ್ಯನಾದೆನೆನಲು ॥ ಮತ್ಸ್ಯಲೋಚನೆ ನಾಚುತಿಹಳು । ಪಾಂಡವ । ಪಕ್ಷಿಯ ಕೈಪಿಡಿದು ರಥದಿ ನಡೆಯುತಿಹಳು ॥೨॥ ಪ್ರತಿದಿನ ರಾಯನಾಗಿರಲು । ಅತಿ । ಹಿತದಿಂ ಪಾಂಡವರಿಗೊಲಿವೆನೆಂಬಳು ರತಿಪತಿ ಪಿತನ ಕೈಹಿಡಿಯಲು । ದಾಕ್ಷಿಣ್ಯವೇಕೋ ಧನ್ಯನಾದೆನೆನಲು ॥೩॥

## ಮಂತ್ರಪುಷ್ಪ

### ಕೈಯಲ್ಲಿ ಹೂ ಅಕ್ಷತೆ ಹಿಡಿಯುವುದು.

ಚಂಪಕೈಃ ಶತಪತ್ರೈಶ್ಚ ಕಲ್ಹಾರೈಃ ಕರವೀರಕೈಃ ।
ಪಾಟಲ್ಯೈರ್ಬಕುಳ್ಯೈರ್ಯುಕ್ತಂ ಗೃಹಾಣ ಕುಸುಮಾಂಜಲಿಮ್ ॥

ಮಹಾರುದ್ರದೇವವಾಮಾಂಕಸ್ಥಿತ ಮಂಗಳಗೌರ್ಯೈ ನಮಃ । ವೇದೋಕ್ತಮಂತ್ರಪುಷ್ಪಂ ಸಮರ್ಪಯಾಮಿ ॥

ಕೈಯಲ್ಲಿರುವ ಹೂ ಅಕ್ಷತೆಯನ್ನು ಗೌರಿಗೆ ಅರ್ಪಿಸುವುದು.

## ಪ್ರದಕ್ಷಿಣ ನಮಸ್ಕಾರ

### ಪತಿ-ಪತ್ನಿಯರು ಒಟ್ಟಿಗೆ ಮೂರು ಪ್ರದಕ್ಷಿಣೆ ನಮಸ್ಕಾರ ಮಾಡಬೇಕು.

ನಮಸ್ತೇ ದೇವಿ ಕಲ್ಯಾಣಿ ನಮಸ್ತೇ ವಿಶ್ವವಂದಿತೇ ।

ನಮೋ ಭಕ್ತಾರ್ತಿನಾಶಿನ್ಯೈ ಭವಾನ್ಯೈ ತೇ ನಮೋ ನಮಃ ॥

ಪ್ರದಕ್ಷಿಣತ್ರಯಂ ದೇವಿ ಪ್ರಯತ್ನೇನ ಮಯಾ ಕೃತಂ ।
ತೇನ ಪಾಪಾನಿ ಸರ್ವಾಣಿ ವ್ಯಪೋಹತು ಸದಾ ಮಮ ॥

ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ ।
ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ ।
ಪಾಪೋಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪಸಂಭವಾ ॥
ತ್ರಾಹಿ ಮಾಂ ಕೃಪಯಾ ದೇವಿ ಶರಣಾಗತವತ್ಸಲೇ ।
ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।
ತಸ್ಮಾತ್ಕಾರುಣ್ಯಭಾವೇನ ರಕ್ಷ ರಕ್ಷ ಮಹೇಶ್ವರಿ ॥

ಮಹಾರುದ್ರದೇವವಾಮಾಂಕಸ್ಥಿತ ಮಂಗಳಗೌರ್ಯೈ ನಮಃ । ಪ್ರದಕ್ಷಿಣ ನಮಸ್ಕಾರಾನ್ ಸಮರ್ಪಯಾಮಿ ॥

## ಪ್ರಸನ್ನಾರ್ಘ್ಯಮ್

ಹೂ ಮಂತ್ರಾಕ್ಷತೆ ಕೈಯಲ್ಲಿ ತೆಗೆದುಕೊಂಡು ಮಂಡಿ ಊರಿ ಕುಳಿತುಕೊಳ್ಳಬೇಕು. ಪತಿಯು ಬೊಗಸೆ ತುಂಬ ನೀರು ಹಾಕಬೇಕು. ನೀರನ್ನು ಪತ್ನಿಯು ಅರ್ಘ್ಯಪಾತ್ರೆಯಲ್ಲಿ ಬಿಡುವುದು.

ಗಂಗಾದಿಪುಣ್ಯಸಲಿಲೈಃ ಗಂಧಮಾಲ್ಯಾದಿ ವಾಸಿತೈಃ ।
ಅರ್ಘ್ಯಂ ದಾಸ್ಯಾಮಿ ವರದೇ ಗೃಹಾಣ ಹರವಲ್ಲಭೇ ॥
ಪುನರರ್ಘ್ಯಂ ಪ್ರದಾಸ್ಯಾಮಿ ಮಂಗಳೇ ಶಿವಸುಂದರಿ ।
ಸರ್ವಪಾಪಕ್ಷಯಂ ಕೃತ್ವಾ ರಕ್ಷ ಮಾಂ ಶರಣಾಗತಾಮ್ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಇದಮರ್ಘ್ಯಂ ಇದಮರ್ಘ್ಯಂ ಇದಮರ್ಘ್ಯಂ ॥

## ಪೂರ್ಣಫಲಸಮರ್ಪಣ

ಒಂದು ತೆಂಗಿನ ಕಾಯಿಯನ್ನು ತಾಂಬೂಲದಲ್ಲಿಟ್ಟು ದೇವಿಯ ಬಲಭಾಗದಲ್ಲಿ ಇಡಬೇಕು.

ಇದಂ ಫಲಂ ಮಯಾ ದೇವಿ ಸ್ಥಾಪಿತಂ ಪುರತಸ್ತವ ।
ತೇನ ಮೇ ಸುಫಲಾವಾಪ್ತಿರ್ಭವೇಜ್ಜನ್ಮನಿ ಜನ್ಮನಿ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಪೂರ್ಣಫಲಂ ಸಮರ್ಪಯಾಮಿ ॥

## ದೋರಗ್ರಹಣ

ದೇವಿಯ ಹತ್ತಿರ ಇಟ್ಟಿರುವ ದೋರವನ್ನು ಕೆಳಗಿನ ಶ್ಲೋಕ ಹೇಳಿ ತೆಗೆದುಕೊಂಡು ಪತಿಗೆ ಕೊಟ್ಟು ನಮಿಸಿ ಕಟ್ಟಲು ಪ್ರಾರ್ಥಿಸಬೇಕು.

ಭಕ್ತಪ್ರಿಯೇ ಮಹಾದೇವಿ ಸರ್ವೈಶ್ವರ್ಯಪ್ರದಾಯಿನೀ
ಸೂತ್ರಂ ತೇ ಧಾರಯಿಷ್ಯಾಮಿ ಮಮಾಭೀಷ್ಟಂ ಚ ತ್ವಂ ಕುರು ॥

## ದೋರಬಂಧನ

ದೇವಿಯನ್ನು ದೀರ್ಘಾಯುಷ್ಯ ಸೌಮಾಂಗಲ್ಯಗಳ ಜೊತೆ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಪತ್ನಿಗೆ ನೀಡೆಂದು ಪ್ರಾರ್ಥಿಸಿ ಪತಿಯು ಕಟ್ಟಬೇಕು. ಪತ್ನಿಯು ಈ ಶ್ಲೋಕ ಹೇಳಬೇಕು.

ನಮಃ ಶಿವಕಾಂತಾಯೈ ಹ್ರೀಂ ನಮಶ್ಶಿವಶಕ್ತಯೇ ।
ಶ್ರೀಂ ನಮೋ ಜಗತಾಂ ಮಾತ್ರೇ ಮಮ ಭೂಯಾನ್ಮನೋರಥಃ ॥
ಪುತ್ರಾನ್ ದೇಹಿ ಧನಂ ದೇಹಿ ಸೌಭಾಗ್ಯಂ ದೇಹಿ ಸುವ್ರತೇ ।
ಅನ್ಯಾಂಶ್ಚ ಸರ್ವಕಾಮಾಂಶ್ಚ ದೇಹಿ ದೇವಿ ನಮೋಸ್ತು ತೇ ॥
ಇತಿ ದೋರಬಂಧನಮ್ ।

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಮನೋಽಭೀಷ್ಟಪ್ರಾರ್ಥನಾಂ ಸಮರ್ಪಯಾಮಿ ॥

## ವಾಯನದಾನ

ತಟ್ಟೆಯಲ್ಲಿ ಅಕ್ಕಿ, ಎರಡು ತೆಂಗಿನಕಾಯಿಗಳು, ಬೆಲ್ಲದ ಅಚ್ಚು, ಹಣ್ಣುಗಳನ್ನಿಟ್ಟು ಎಲೆ ಅಡಕೆಯ ಜೊತೆಗೆ ಯಥಾಶಕ್ತಿ ದಕ್ಷಿಣೆ ಇಟ್ಟು, ಒಂದು ಸಣ್ಣ ತಟ್ಟೆಯನ್ನು ತೆಂಗಿನ ಕಾಯಿಗಳ ಮೇಲೆ ಮುಚ್ಚುವುದು. ಪುರೋಹಿತರ ಎದುರಿಗೆ ಮಂಡಲ ಮಾಡಿ ಅದರ ಮೇಲೆ ಉಪಾಯನದಾನದ ತಟ್ಟೆಯನ್ನಿಟ್ಟು ಕುಳಿತುಕೊಂಡು ಹೀಗೆ ಹೇಳಬೇಕು. (ಸಂಕಲ್ಪ ಮಾಡಬೇಕು)

ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ ।
ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ ।
ಪಾಪಾಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪಸಂಭವಾ ॥
ತ್ರಾಹಿ ಮಾಂ ಕೃಪಯಾ ದೇವಿ ಶರಣಾಗತವತ್ಸಲೇ ।
ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।
ತಸ್ಮಾತ್ಕಾರುಣ್ಯಭಾವೇನ ರಕ್ಷ ರಕ್ಷ ಮಹೇಶ್ವರಿ ॥

ಮಹಾರುದ್ರದೇವವಾಮಾಂಕಸ್ಥಿತ ಮಂಗಳಗೌರ್ಯೈ ನಮಃ । ಪ್ರದಕ್ಷಿಣ ನಮಸ್ಕಾರಾನ್ ಸಮರ್ಪಯಾಮಿ ॥

## ಪ್ರಸನ್ನಾರ್ಘ್ಯಮ್

ಹೂ ಮಂತ್ರಾಕ್ಷತೆ ಕೈಯಲ್ಲಿ ತೆಗೆದುಕೊಂಡು ಮಂಡಿ ಊರಿ ಕುಳಿತುಕೊಳ್ಳಬೇಕು. ಪತಿಯು ಬೊಗಸೆ ತುಂಬ ನೀರು ಹಾಕಬೇಕು. ನೀರನ್ನು ಪತ್ನಿಯು ಅರ್ಘ್ಯಪಾತ್ರೆಯಲ್ಲಿ ಬಿಡುವುದು.

ಗಂಗಾದಿಪುಣ್ಯಸಲಿಲೈಃ ಗಂಧಮಾಲ್ಯಾದಿ ವಾಸಿತೈಃ ।
ಅರ್ಘ್ಯಂ ದಾಸ್ಯಾಮಿ ವರದೇ ಗೃಹಾಣ ಹರವಲ್ಲಭೇ ॥
ಪುನರರ್ಘ್ಯಂ ಪ್ರದಾಸ್ಯಾಮಿ ಮಂಗಳೇ ಶಿವಸುಂದರಿ ।
ಸರ್ವಪಾಪಕ್ಷಯಂ ಕೃತ್ವಾ ರಕ್ಷ ಮಾಂ ಶರಣಾಗತಾಮ್ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಇದಮರ್ಘ್ಯಂ ಇದಮರ್ಘ್ಯಂ ಇದಮರ್ಘ್ಯಂ ॥

## ಪೂರ್ಣಫಲಸಮರ್ಪಣ

ಒಂದು ತೆಂಗಿನ ಕಾಯಿಯನ್ನು ತಾಂಬೂಲದಲ್ಲಿಟ್ಟು ದೇವಿಯ ಬಲಭಾಗದಲ್ಲಿ ಇಡಬೇಕು.

ಇದಂ ಫಲಂ ಮಯಾ ದೇವಿ ಸ್ಥಾಪಿತಂ ಪುರತಸ್ತವ ।
ತೇನ ಮೇ ಸುಫಲಾವಾಪ್ತಿರ್ಭವೇಜ್ಜನ್ಮನಿ ಜನ್ಮನಿ ॥

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಪೂರ್ಣಫಲಂ ಸಮರ್ಪಯಾಮಿ ॥

## ದೋರಗ್ರಹಣ

ದೇವಿಯ ಹತ್ತಿರ ಇಟ್ಟಿರುವ ದೋರವನ್ನು ಕೆಳಗಿನ ಶ್ಲೋಕ ಹೇಳಿ ತೆಗೆದುಕೊಂಡು ಪತಿಗೆ ಕೊಟ್ಟು ನಮಿಸಿ ಕಟ್ಟಲು ಪ್ರಾರ್ಥಿಸಬೇಕು.

ಭಕ್ತಪ್ರಿಯೇ ಮಹಾದೇವಿ ಸರ್ವೈಶ್ವರ್ಯಪ್ರದಾಯಿನೀ
ಸೂತ್ರಂ ತೇ ಧಾರಯಿಷ್ಯಾಮಿ ಮಮಾಭೀಷ್ಟಂ ಚ ತ್ವಂ ಕುರು ॥

## ದೋರಬಂಧನ

ದೇವಿಯನ್ನು ದೀರ್ಘಾಯುಷ್ಯ ಸೌಮಾಂಗಲ್ಯಗಳ ಜೊತೆ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಪತ್ನಿಗೆ ನೀಡೆಂದು ಪ್ರಾರ್ಥಿಸಿ ಪತಿಯು ಕಟ್ಟಬೇಕು. ಪತ್ನಿಯು ಈ ಶ್ಲೋಕ ಹೇಳಬೇಕು.

ನಮಃ ಶಿವಕಾಂತಾಯೈ ಹ್ರೀಂ ನಮಶ್ಶಿವಶಕ್ತಯೇ ।
ಶ್ರೀಂ ನಮೋ ಜಗತಾಂ ಮಾತ್ರೇ ಮಮ ಭೂಯಾನ್ಮನೋರಥಃ ॥
ಪುತ್ರಾನ್ ದೇಹಿ ಧನಂ ದೇಹಿ ಸೌಭಾಗ್ಯಂ ದೇಹಿ ಸುವ್ರತೇ ।
ಅನ್ಯಾಂಶ್ಚ ಸರ್ವಕಾಮಾಂಶ್ಚ ದೇಹಿ ದೇವಿ ನಮೋಸ್ತು ತೇ ॥
ಇತಿ ದೋರಬಂಧನಮ್ ।

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ । ಮನೋಽಭೀಷ್ಟಪ್ರಾರ್ಥನಾಂ ಸಮರ್ಪಯಾಮಿ ॥

## ವಾಯನದಾನ

ತಟ್ಟೆಯಲ್ಲಿ ಅಕ್ಕಿ, ಎರಡು ತೆಂಗಿನಕಾಯಿಗಳು, ಬೆಲ್ಲದ ಅಚ್ಚು, ಹಣ್ಣುಗಳನ್ನಿಟ್ಟು ಎಲೆ ಅಡಕೆಯ ಜೊತೆಗೆ ಯಥಾಶಕ್ತಿ ದಕ್ಷಿಣೆ ಇಟ್ಟು, ಒಂದು ಸಣ್ಣ ತಟ್ಟೆಯನ್ನು ತೆಂಗಿನ ಕಾಯಿಗಳ ಮೇಲೆ ಮುಚ್ಚುವುದು. ಪುರೋಹಿತರ ಎದುರಿಗೆ ಮಂಡಲ ಮಾಡಿ ಅದರ ಮೇಲೆ ಉಪಾಯನದಾನದ ತಟ್ಟೆಯನ್ನಿಟ್ಟು ಕುಳಿತುಕೊಂಡು ಹೀಗೆ ಹೇಳಬೇಕು. (ಸಂಕಲ್ಪ ಮಾಡಬೇಕು)

ಅದ್ಯ ಪೂರ್ವೋಚ್ಚರಿತ ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಮಮ ಶ್ರೀಮಂಗಳಗೌರಿವ್ರತ ಸಾದ್ಗುಣ್ಯಾರ್ಥಂ ಉಪಾಯನದಾನಮಹಂ ಕರಿಷ್ಯೇ –

ಪುರೋಹಿತರಿಗೆ (ಬ್ರಾಹ್ಮಣರಿಗೆ) ಗಂಧ, ಹೂವು ಕೊಡುವುದು.

ಇಮೇ ಗಂಧಾಃ ಇಮಾನಿ ಪುಷ್ಪಾಣಿ, ಗಂಧಪುಷ್ಪಧೂಪದೀಪಸಕಲಾರಾಧನೈಃ ಸ್ವರ್ಚಿತಮ್ । ಎಂದು ಹೇಳಿ ನೀರುಮಂತ್ರಾಕ್ಷತೆ ಬಿಡುವುದು. ಆಮೇಲೆ ನೀರನ್ನು ಸಣ್ಣ ತಟ್ಟೆಯ ಮೇಲೆ ಪ್ರೋಕ್ಷಿಸುವುದು.

ವಿಷ್ಣೋ ಉಪಾಯನದಾನಂ ರಕ್ಷಸ್ವ - ಎಂದು ಹೇಳಿ ತಟ್ಟೆಯನ್ನು ಅತ್ತ ಇಟ್ಟು ಎರಡು ತೆಂಗಿನಕಾಯಿಗಳ ಮೇಲೆ ಪತ್ನಿಯಿಂದ ನೀರು ಹಾಕಿಸಿ, ''ಇದಂ ಉಪಾಯನದಾನಮ್''-

ಉಪಾಯನದಾನ ಕೊಡುವಾಗ ಹೇಳುವ ಮಂತ್ರ –

ವಾಯನಂ ತೇ ಪ್ರದಾಸ್ಯಾಮಿ ವ್ರತಸಂಪೂರ್ತಿಹೇತವೇ ।
ಪ್ರೀತಯೇ ದ್ವಿಜವರ್ಯಾಯ ಸಹಿರಣ್ಯಂ ದದಾಮ್ಯಹಮ್ ॥
ಇಂದಿರಾ ಪ್ರತಿಗೃಹ್ಣಾತಿ ಇಂದಿರಾ ವೈ ದದಾತಿ ಚ ।
ಇಂದಿರಾ ತಾರಕಾ ದ್ವಾಭ್ಯಾಂ ಇಂದಿರಾಯೈ ನಮೋ ನಮಃ ॥

## ಪುನಃ ಪೂಜಾ

ಛತ್ರಂ ಸಮರ್ಪಯಾಮಿ । ಚಾಮರೇ ವೀಜಯಾಮಿ । ನೃತ್ಯಂ ದರ್ಶಯಾಮಿ। ಗೀತಂ ಶ್ರಾವಯಾಮಿ । ದರ್ಪಣಂ ದರ್ಶಯಾಮಿ । ಅಶ್ವಾರೋಹಣಂ ಗಜಾ-ರೋಹಣಂ ಸಮರ್ಪಯಾಮಿ । ಸಮಸ್ತರಾಜೋಪಚಾರದೇವೋಪಚಾರ ಋಷ್ಯೋಪಚಾರ ಸರ್ವೋಪಚಾರಪೂಜಾಂ ಸಮರ್ಪಯಾಮಿ ।

## ಪ್ರತ್ಯಾವಾಹನೆ

ಹೂ ಮಂತ್ರಾಕ್ಷತೆ ಏರಿಸಿರಿ.

ಮಹಾರುದ್ರದೇವವಾಮಾಂಕಸ್ಥಿತಮಂಗಳಗೌರ್ಯೈ ನಮಃ ಪ್ರತ್ಯಾವಾಹನಂ ಸಮರ್ಪಯಾಮಿ । ಯಥಾಸ್ಥಾನಂ ಉದ್ವಾಸಯಾಮಿ.

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

'ಅನೇನ ಮಯಾ ಕೃತೇನ ಶ್ರೀಮಂಗಳಗೌರಿಪೂಜಾಕರಣೇನ ಅಸ್ಮತ್ಸ್ವಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತಶ್ರೀಮಂಗಳಗೌರಿಸಹಿತ ಮಹಾರುದ್ರ-ದೇವಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತಶ್ರೀಲಕ್ಷ್ಮೀನಾರಾಯಣಃ ಪ್ರಿಯತಾಂ ಸುಪ್ರೀತೋ ಸುಪ್ರಸನ್ನೋ ವರದೋ ಭವತು' ಎಂದು ಹೇಳಿ ಮಂತ್ರಾಕ್ಷತೆ ನೀರನ್ನು ಬಿಡುವುದು.

## ಮಂಗಳಗೌರಿದೇವಿಯ ವಿಸರ್ಜನಾ ಪೂಜೆ

ಮರುದಿವಸ ಬೆಳಿಗ್ಗೆ ವಿಸರ್ಜನೆ ಮಾಡಬೇಕು. ಆಚಮನ ಮಾಡಿ, ದೇಶಕಾಲಗಳನ್ನು ಉಚ್ಚರಿಸಿ ಸಂಕ್ಷೇಪವಾಗಿ ೧೬ ಉಪಚಾರಗಳನ್ನು ಸಮರ್ಪಿಸಬೇಕು.

ಶ್ರೀ ಗಿರಿಜಾಯೈ ನಮಃ । – ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ ।
ಶ್ರೀ ದಾಕ್ಷಾಯಿಣ್ಯೈ ನಮಃ । – ಆವಾಹಯಾಮಿ, ಆವಾಹನಂ ಸಮರ್ಪಯಾಮಿ
ಶ್ರೀ ಉಮಾಯೈ ನಮಃ । – ಅರ್ಘ್ಯಂ ಸಮರ್ಪಯಾಮಿ
ಶ್ರೀ ಗೌರ್ಯೈ ನಮಃ । – ಪಾದ್ಯಂ ಸಮರ್ಪಯಾಮಿ
ಶ್ರೀ ಕಾಳ್ಯೈ ನಮಃ । – ಆಚಮನಂ ಸಮರ್ಪಯಾಮಿ
ಶ್ರೀ ಹೈಮವತ್ಯೈ ನಮಃ । – ಮಧುಪರ್ಕಂ ಸಮರ್ಪಯಾಮಿ
ಶ್ರೀ ಈಶ್ವರವಲ್ಲಭಾಯೈ ನಮಃ । - ಪುನರಾಚಮನಂ ಸಮರ್ಪಯಾಮಿ
ಶ್ರೀ ಶಿವಾಯೈ ನಮಃ । – ಸ್ನಾನಂ ಸಮರ್ಪಯಾಮಿ
ಶ್ರೀ ಭವಾನ್ಯೈ ನಮಃ । – ವಸ್ತ್ರಂ ಸಮರ್ಪಯಾಮಿ

ಶ್ರೀ ಮಂಗಳದೇವತಾಯೈ ನಮಃ । – ಮಾಂಗಲ್ಯಂ ಸಮರ್ಪಯಾಮಿ
ಶ್ರೀ ರುದ್ರಾಣ್ಯೈ ನಮಃ । – ಗಂಧಂ ಸಮರ್ಪಯಾಮಿ
ಶ್ರೀ ಶರ್ವಾಣ್ಯೈ ನಮಃ । – ಅಕ್ಷತಾನ್ ಸಮರ್ಪಯಾಮಿ
ಶ್ರೀ ಸರ್ವಮಂಗಳಾಯೈ ನಮಃ । – ಪುಷ್ಪಂ ಸಮರ್ಪಯಾಮಿ
ಶ್ರೀ ಅಪರ್ಣಾಯೈ ನಮಃ । – ಧೂಪಂ ಸಮರ್ಪಯಾಮಿ
ಶ್ರೀ ಲೋಕಮಂಗಳಾಯೈ ನಮಃ । – ದೀಪಂ ಸಮರ್ಪಯಾಮಿ
ಓಂ ಪ್ರಸನ್ನವದನಾಯೈ ನಮಃ । – ನೈವೇದ್ಯಂ ಸಮರ್ಪಯಾಮಿ
ಓಂ ಜಗಜ್ಜನನ್ಯೈ ನಮಃ । – ಮಹಾಮಂಗಳನೀರಾಜನಂ ಸಮರ್ಪಯಾಮಿ
(ಆರತಿಮಾಡಿ)
ಓಂ ಶಿವವಲ್ಲಭಾಯೈ ನಮಃ । – ಮಂತ್ರಪುಷ್ಪಂ ಸಮರ್ಪಯಾಮಿ
ಓಂ ಮಂಗಳಗೌರ್ಯೈ ನಮಃ । – ಪ್ರದಕ್ಷಿಣನಮಸ್ಕಾರಾನ್ ಸಮರ್ಪಯಾಮಿ

## ಉದ್ವಾಸನೆ

### ಹೂ ಮಂತ್ರಾಕ್ಷತೆ ಏರಿಸಿ ಕಲಶನ್ನು ಕದಲಿಸಬೇಕು.

ಯಾಂತು ದೇವಗಣಾಃ ಸರ್ವೇ ಪೂಜಾಮಾದಾಯ ಮತ್ಕೃತಾಮ್ ।
ಇಷ್ಟಕಾಮ್ಯಾರ್ಥಸಿದ್ಧ್ಯರ್ಥಂ ಪುನರಾಗಮನಾಯ ಚ ॥

ಅನೇನ ಶ್ರೀಮಂಗಳಗೌರಿ ವಿಸರ್ಜನಪೂಜನೇನ ಅಸ್ಮತ್ಸ್ವಂತರ್ಗತ ಶ್ರೀ-ಮಂಗಳಗೌರಿಸಹಿತ ಮಹಾರುದ್ರದೇವಾಂತರ್ಗತ ಶ್ರೀಲಕ್ಷ್ಮೀನಾರಾಯಣಾತ್ಮಕ ಜಯಾಪತಿ ಶ್ರೀ ಸಂಕರ್ಷಣಃ ಪ್ರೀಯತಾಂ ಸುಪ್ರೀತೋ ಸುಪ್ರಸನ್ನೋ ವರದೋ ಭವತು' ಶ್ರೀಮಧ್ವೇಶಾರ್ಪಣಮಸ್ತು.

* * * *

# ಮಂಗಳಗೌರೀ ಕಥೆ

## ಯುಧಿಷ್ಠಿರ ಉವಾಚ

ನಂದನಂದನ ಗೋವಿಂದ ಶೃಣ್ವತೋ ಬಹುಲಾಃ ಕಥಾಃ ।
ಶ್ರುತ್ವಾ ಉತ್ಕೃಷ್ಟಪುತ್ರ್ಯಾಯುಃ ಪ್ರದಂ ಬ್ರೂಹಿ ವ್ರತಂ ಮಮ ॥೧॥

ಯುಧಿಷ್ಠಿರನು ಪ್ರಶ್ನಿಸುತ್ತಾನೆ - ನಂದಗೋಪನ ಕಂದನಾದ ಗೋವಿಂದನೇ! ನಿನ್ನ ಮುಖಾರವಿಂದದಿಂದ ಅನೇಕ ಕಥೆಗಳನ್ನು ಕೇಳುತ್ತಲೇ ಇದ್ದೇನೆ. ಈಗ ಪುತ್ರಿಗೆ ಆಯುಷ್ಯವನ್ನು ನೀಡುವಂಥ (ಪುತ್ರಿಗೆ ವೈಧವ್ಯವನ್ನು ಪರಿಹರಿಸುವಂಥ) ಉತ್ತಮವಾದ ವ್ರತದ ಬಗ್ಗೆ ನನಗೆ ತಿಳಿಸು.

## ಶ್ರೀಕೃಷ್ಣ ಉವಾಚ

ಅವೈಧವ್ಯಕರಂ ವಕ್ಷ್ಯೇ ವ್ರತಂ ಚಾರಿನಿಷೂದನ ।
ಶೃಣು ತ್ವಂ ಸಾವಧಾನಃ ಸನ್ ಕಥಾಂ ವಕ್ಷ್ಯೇ ಪುರಾತನೀಮ್ ॥೨॥

ಶ್ರೀಕೃಷ್ಣನು ಧರ್ಮರಾಜನನ್ನು ಕುರಿತು ಉಪದೇಶಿಸುತ್ತಿದ್ದಾನೆ - ಶತ್ರುಸಂಹಾರಕನೇ! ಪುತ್ರನಿಗೆ ಆಯುಷ್ಯವನ್ನು ನೀಡುವಂಥ, ಪುತ್ರಿಯ ವೈಧವ್ಯವನ್ನು ಪರಿಹರಿಸುವಂಥ ಉತ್ತಮವಾದ ವ್ರತದ ಬಗ್ಗೆ ನಿನಗೆ ತಿಳಿಸುತ್ತೇನೆ. ಕೇಳು - ಏಕಾಗ್ರಮನದಿಂದ ಪ್ರಾಚೀನವಾದ ಈ ಕಥೆಯನ್ನು ಕೇಳುವವನಾಗು.

ಕುಂಡಿನಂ ನಾಮ ನಗರಂ ಖ್ಯಾತಸ್ತತ್ರ ದ್ವಿಜಪ್ರಿಯಃ ।
ಆಸೀದ್ವಣಿಗ್ ಧರ್ಮಪಾಲೋ ನಾಮ್ನಾ ಬಹುಧನೋಽಪಿ ಸಃ ॥೩॥

ಕುಂಡಿನಾ ಎಂಬ ನಗರವಿತ್ತು. ಅಲ್ಲಿ ಧರ್ಮಪಾಲ ಎಂಬ ಒಬ್ಬ ವೈಶ್ಯನಿದ್ದನು. ಅವನು ದೇವಬ್ರಾಹ್ಮಣರಿಗೆ ಅತ್ಯಂತ ಇಷ್ಟನಾಗಿದ್ದನು. ಹೆಸರಿಗೆ ತಕ್ಕಂತೆ ಧರ್ಮಪುರುಷನಾಗಿದ್ದನು. ಬಹಳ ಧನವುಳ್ಳವನೂ ಕೂಡ ಆಗಿದ್ದನು.

ಸಪತ್ನೀಕೋ ಹ್ಯಪುತ್ರೋಽಸೌ ನಾಸ್ತೀತಿವ್ಯಾಕುಲೋ ಹೃದಿ ।
ತಸ್ಯ ಗೇಹೇ ಭಸ್ಮಲಿಪ್ತೋ ದೇಹೇ ರುದ್ರಾಕ್ಷಧಾರಕಃ ॥೪॥

ಈ ಧನಿಕನಿಗೆ ಒಳ್ಳೆಯ ಹೆಂಡತಿಯು ಇದ್ದಳು. ಆದರೆ ಪುತ್ರಸಂತಾನವಿರಲಿಲ್ಲ. ಇದರಿಂದ ಬಹಳ ಚಿಂತಾಕ್ರಾಂತನಾಗಿದ್ದನು. ಇವನ ಮನೆಗೆ ಭಸ್ಮವನ್ನು ಧರಿಸಿದ ರುದ್ರಾಕ್ಷಿಮಣಿಯನ್ನು ಕಂಠದಲ್ಲಿ ಹಾಕಿಕೊಂಡ ಒಬ್ಬ ಭಿಕ್ಷುವು ಭಿಕ್ಷೆಗಾಗಿ ಬರುತ್ತಿದ್ದನು.

ಜಟಿಲೋ ಭಿಕ್ಷುಕೋ ನಿತ್ಯಮಾಗಚ್ಛನ್ ಪ್ರಿಯದರ್ಶನಃ ।
ಅನ್ನಂ ನಾಂಗೀಚಕಾರಾಸಾವಿತಿ ದೃಷ್ಟ್ವಾಽಬಲಾವದತ್ ॥೫॥

ಪ್ರತಿನಿತ್ಯ ಜಟಾಧಾರಿಯಾದ ಆ ಭಿಕ್ಷುವು ಭಿಕ್ಷೆ ಬೇಡಲು ಇವನ ಮನೆಗೆ ಬರುತ್ತಿದ್ದನು. ನೋಡಲು ಅತ್ಯಂತ ಆಕರ್ಷಣೀಯವಾದ ರೂಪವನ್ನು ಹೊಂದಿದ್ದನು. ಭಿಕ್ಷೆ ಹಾಕುವುದಕ್ಕಾಗಿ ಗೃಹಿಣಿಯು ಬಂದರೆ ಅವಳನ್ನು ನೋಡಿ, ಭಿಕ್ಷೆಯನ್ನು ಸ್ವೀಕರಿಸದೇ ಸುಮ್ಮನೆ ಮುಂದೆ ಹೋಗುತ್ತಿದ್ದನು, ಇದರಿಂದ ದುಃಖಿತಳಾದ ಅಬಲೆಯು ಒಮ್ಮೆ ಗಂಡನನ್ನು ಕುರಿತು ಹೀಗೆ ಹೇಳುತ್ತಾಳೆ -

ಸ್ವಾಮಿನ್ನಯಂ ಸದಾಽಯಾತಿ ಭಿಕ್ಷುಕೋ ಜಟಿಲೋ ಗೃಹೇ ।
ನ ಸ್ವೀಕರೋತ್ಯಸ್ಮದನ್ನಮಿತಿ ದೃಷ್ಟ್ವಾ ಮಮಾಧಿಕಮ್ ॥೬॥
ದುಃಖಂ ಪ್ರಜಾಯತೇ ನಿತ್ಯಂ ಶ್ರುತ್ವಾ ಭಾರ್ಯಾ ವಚೋಽಬ್ರವೀತ್ ॥

''ಸ್ವಾಮಿಯೇ ! ನಮ್ಮ ಮನೆಗೆ ನಿತ್ಯವೂ ಜಟಾಧಾರಿಯಾದ ಈ ಭಿಕ್ಷುವು ಭಿಕ್ಷೆಗಾಗಿ ಬರುತ್ತಾನೆ. ಭಿಕ್ಷೆ ನೀಡುವಷ್ಟರಲ್ಲಿ ಮುಂದಿನ ಮನೆಗೆ ತೆರಳಿಬಿಡುತ್ತಾನೆ. ನನ್ನ ಭಿಕ್ಷೆಯನ್ನು ಎಂದೂ ಸಹ ಸ್ವೀಕರಿಸುವುದಿಲ್ಲ. ಇದರಿಂದ ನನಗೆ ದುಃಖವಾಗುತ್ತಿದೆ''. ಹೆಂಡತಿಯ ಈ ಮಾತನ್ನು ಕೇಳಿ ಆ ಧನಿಕನು ಉತ್ತರಿಸಿದನು-

ಧರ್ಮಪಾಲ ಉವಾಚ

ಪ್ರಿಯೇ ಕದಾಚಿದ್‌ಗುಪ್ತಾ ತ್ವಂ ಸಸುವರ್ಣಾಂಗಣೇ ಭವ ॥೭॥
ಯದಾ ಭಿಕ್ಷಾರ್ಥಮಾಯಾತಿ ಭಿಕ್ಷೋರ್ವಸ್ತ್ರಾಂತರೇ ತ್ವಯಾ ।
ತದಾ ತಸ್ಯ ಪ್ರದೇಯಾನಿ ಸುವರ್ಣಾನಿ ಪ್ರಿಯೇಽನಘೇ ॥೮॥

ಧರ್ಮಪಾಲನು ಉತ್ತರಿಸುತ್ತಾನೆ - ಪ್ರಿಯೇ ! ಒಮ್ಮೆ ಹೀಗೆ ಮಾಡು - ಸುವರ್ಣವನ್ನು ಮುಚ್ಚಿಟ್ಟುಕೊಂಡು ಕಾಯುತ್ತಿರು. ಯಾವಾಗ ಭಿಕ್ಷೆಗಾಗಿ ಆ ಭಿಕ್ಷುವು ಬರುತ್ತಾನೋ, ಅವನ ಜೋಳಿಗೆಯ ಒಳಗೆ ಸುವರ್ಣಗಳನ್ನು ಹಾಕಿಬಿಡು. ಪಾಪರಹಿತಳಾದ ಪ್ರಿಯಳೇ ! ಹೀಗೆ ಮಾಡುವುದರಿಂದ ನಿನ್ನ ದುಃಖವು ಪರಿಹಾರವಾಗುತ್ತದೆ.

ಅನಂತರಂ ತಸ್ಯ ಭಾರ್ಯಾಽಚೀಕರಸ್ತ್ವಾಮಿನೋದಿತಮ್ ।
ಜಟಿಲೇನ ತು ಸಾ ಶಪ್ತಾಽಪತ್ಯಂ ತೇ ನ ಭವಿಷ್ಯತಿ ॥೯॥

ಅನಂತರ ಪತ್ನಿಯು ಪತಿಯ ಮಾತಿನಂತೆ ಮಾಡಿದಳು. ಇದರಿಂದ ಆ ಜಟಾಧಾರಿಗೆ ಸಿಟ್ಟುಬಂದಿತು. 'ನಿನಗೆ ಸಂತಾನವೇ ಆಗುವುದು ಬೇಡ' ಎಂದು ಶಪಿಸಿಬಿಟ್ಟನು.

ಶ್ರುತ್ವಾ ಭಿಕ್ಷೋರಿದಂ ವಾಕ್ಯಂ ದುಃಖಿತಾ ತಮುವಾಚ ಹ ।
ಸ್ವಾಮಿನ್ ಶಪ್ತಾ ತ್ವಯಾ ಪಾಪಾಂ ಶಾಪಾದುದ್ಧರ ಸಂಪ್ರತಿ ॥೧೦॥

ಭಿಕ್ಷುವಿನ ಶಾಪದ ಮಾತುಗಳನ್ನು ಕೇಳಿ, ಮತ್ತಷ್ಟು ಆ ಗೃಹಿಣಿಯು ದುಃಖಿತಳಾದಳು. ಆ ಭಿಕ್ಷುವಿನ ಬಳಿ ಪ್ರಾರ್ಥಿಸಿದಳು - ''ಸ್ವಾಮಿ ! ನಾನು ಪಾಪಿಷ್ಠಳಾಗಿದ್ದೇನೆ. ನನಗೆ ಶಾಪವನ್ನು ನೀಡಬೇಡಿರಿ. ಶಾಪದಿಂದ ನನ್ನನ್ನು ಉದ್ಧಾರ ಮಾಡಿರಿ.

ಇತ್ಯುಕ್ತ್ವಾ ತಸ್ಯ ಚರಣೌ ವವಂದೇ ದೀನಭಾಷಿಣೀ ।

ಹೀಗೆ ದುಃಖಿಸುತ್ತಾ ಭಿಕ್ಷುವಿನ ಚರಣಗಳಲ್ಲಿ ಬಿದ್ದಳು. ದುಃಖದ ಮಾತುಗಳನ್ನೇ ಹೇಳುತ್ತಿದ್ದಳು.

ಜಟಿಲ ಉವಾಚ

ಭರ್ತುಃ ಸಮೀಪೇ ವಕ್ತವ್ಯಂ ತ್ವಯಾ ಪುತ್ರಿ ಮಮಾಜ್ಞಯಾ ॥೧೧॥
ನೀಲವಸ್ತ್ರಃ ಸಮಾರುಹ್ಯಾ ನೀಲಾಶ್ವಂ ಗಚ್ಛ ಕಾನನಮ್ ।
ಖನನಂ ತತ್ರ ಕರ್ತವ್ಯಂ ಯತ್ರಾಶ್ವಸ್ತೇ ಸ್ಖಲಿಷ್ಯತಿ ॥೧೨॥

ಜಟಾಧಾರಿಯು ಉತ್ತರಿಸುತ್ತಾನೆ - ಸಾಧ್ವಿಯೇ ! ನಾನು ಹೇಳಿದಂತೆ ಮಾಡು, ಶಾಪವು ಪರಿಹಾರವಾಗುತ್ತದೆ. ನಿನ್ನ ಗಂಡನ ಬಳಿ ತೆರಳಿ ನಾನು ಈಗ ಹೇಳುವುದನ್ನು ತಿಳಿಸು. ಕಪ್ಪು ಬಟ್ಟೆಯನ್ನು ಉಟ್ಟುಕೊಂಡು, ಕಪ್ಪು ಕುದುರೆಯನ್ನು ಹತ್ತಿ, ಕಾಡಿಗೆ ತೆರಳಬೇಕು. ಕಾಡಿನಲ್ಲಿ ತೆರಳುವಾಗ ಯಾವ ಸ್ಥಳದಲ್ಲಿ ಕುದುರೆಯು ಮುಗ್ಗರಿಸುತ್ತದೋ, ಅಲ್ಲಿ ನೆಲವನ್ನು ಅಗೆಯಬೇಕು.

ರಮ್ಯಂ ಪಕ್ಷಿಭಿರಾಯುಕ್ತಂ ಮೃಗಸಂಘದ್ರುಮಾಕುಲಮ್ ।
ಸುವರ್ಣರಚಿತಂ ರತ್ನಮಾಣಿಕ್ಯಾದಿವಿಭೂಷಿತಮ್ ॥೧೩॥

ಅಗೆದಾಗ ಅಲ್ಲಿ ಅದ್ಭುತವಾದ ದೇವಾಲಯವು ಕಾಣಿಸುತ್ತದೆ. ಅದು ಅತ್ಯಂತ ರಮ್ಯವಾಗಿದೆ. ಅನೇಕ ಪಕ್ಷಿಗಳ ಕಲರವದಿಂದ ಕೂಡಿದೆ. ಅನೇಕ ಮೃಗಗಳು ಅಲ್ಲಿರುತ್ತವೆ. ಮರಬಳ್ಳಿಗಳಿವೆ. ಸುವರ್ಣದಿಂದ ರಚಿತವಾಗಿದೆ. ರತ್ನಮಾಣಿಕ್ಯಾದಿ-ಗಳಿಂದ ಅಲಂಕೃತವಾಗಿದೆ.

ನಾನಾಪುಷ್ಪೈಃ ಸಮಾಯುಕ್ತಂ ದೃಶ್ಯಂ ದೇವಾಲಯಂ ತತಃ ।
ವರ್ತತೇ ತತ್ರಭವತೀ ಭವಾನೀ ಭಕ್ತವತ್ಸಲಾ ॥೧೪॥

ಅನೇಕ ಪುಷ್ಪಗಳಿಂದ ಕಂಗೊಳಿಸುವ ಒಂದು ದೇವಾಲಯವು ಅಲ್ಲಿ ಕಾಣಿಸುತ್ತದೆ. ಆ ದೇವಾಲಯದಲ್ಲಿ ಶ್ರೇಷ್ಠಳಾದ ಭಕ್ತವತ್ಸಲಳಾದ ಭವಾನೀದೇವಿಯು ಸನ್ನಿಹಿತಳಾಗಿರುತ್ತಾಳೆ.

ಆರಾಧಯ ತ್ವಂ ಮನಸಾ ಯಥಾವಿಧ್ಯುದ್ಧರಿಷ್ಯತಿ ।
ತ್ವಾಂ ಭವಾನೀತಿ ವಚನಂ ಶ್ರುತ್ವಾ ಭಿಕ್ಷೋಃ ಸುಖಪ್ರದಮ್ ॥೧೫॥
ವವಂದೇ ತಸ್ಯ ಚರಣೌ ಪುನಃ ಪುನರರಿಂದಮ ।
ತದೈವ ಕಾಲೇ ಜಟಿಲಸ್ತ್ವಂತರ್ಭೂತೋ ಬಭೂವ ಸಃ ॥೧೬॥

ಅವಳನ್ನು ಅತ್ಯಂತ ಭಕ್ತಿಯಿಂದ ನೀನು ಆರಾಧನೆ ಮಾಡಬೇಕು. ಆಗ ಆ ಭವಾನಿಯು ಶಾಪದಿಂದ ವಿಮುಕ್ತಳನ್ನಾಗಿ ಮಾಡುತ್ತಾಳೆ. ಭಿಕ್ಷುವಿನ ಈ ಮಾತನ್ನು ಕೇಳಿ ಬಹಳ ಸಂತೋಷವಾಯಿತು. ಭಿಕ್ಷುವಿನ ಪಾದಕಮಲಗಳಲ್ಲಿ ಪುನಃ ಪುನಃ ಆ

ಗೃಹಿಣಿಯು ನಮಸ್ಕಾರವನ್ನು ಮಾಡಿದಳು. ಅದೇ ಸಂದರ್ಭದಲ್ಲಿ ಆ ಜಟಾಧಾರಿಯು ಮರೆಯಾದನು. ಕಾಣಸಲೇ ಇಲ್ಲ.

ಸಾವದತ್ಪತಿಮತ್ರೇಹಿ ಶೃಣು ಭಿಕ್ಷೂಕ್ತಮಾದರಾತ್ ।
ಯಥೋಕ್ತಮವದದ್ಭರ್ತಾ ತತ್‌ಶ್ರುತ್ವಾ ವಾಕ್ಯಮಾದರಾತ್ ॥೧೭॥

ನಡೆದ ಎಲ್ಲಾ ಘಟನೆಯನ್ನು ಗಂಡನ ಬಳಿ ತಿಳಿಸಿದಳು. ಆ ಭಿಕ್ಷುವು ಶಾಪಕೊಟ್ಟಿದ್ದನ್ನು, ಅದರ ಪರಿಹಾರದ ಉಪಾಯವನ್ನೆಲ್ಲಾ ವಿವರಿಸಿದಳು. ಪತ್ನಿಯ ಮಾತುಗಳನ್ನು ಕೇಳಿ, ಪತಿಯು ಅತ್ಯಂತ ಶ್ರದ್ಧೆಯಿಂದ ಕೇಳಿದನು.

ನೀಲವಸ್ತ್ರ : ಸಮಾರುಹ್ಯ ನೀಲಾಶ್ವಂ ಪ್ರಸ್ಥಿತೋ ವನಮ್ ।
ಗಚ್ಛನ್ನಾನಾವಿಧಾನ್ ವೃಕ್ಷಾನ್‌ಪಥಿ ಪಶ್ಯನ್ ಭಯಾಕುಲಃ ॥೧೮॥

ಕಪ್ಪುಬಟ್ಟೆಯನ್ನು ಧರಿಸಿ, ಕಪ್ಪು ಕುದುರೆಯನ್ನು ಏರಿ ಕಾಡಿಗೆ ಹೊರಟನು. ಹೋಗುತ್ತಿರುವಾಗ ಅನೇಕ ಬಗೆಯ ಮರಗಳನ್ನು ನೋಡಿದನು. ಅತ್ಯಂತ ಭಯದಿಂದ ಕೂಡಿದ್ದನು.

ಮೃಗಾನ್ ಸಿಂಹಾನ್ ದಂದಶೂಕಾನ್ ಪಥಿ ಪಶ್ಯನ್ ಭಯಾಕುಲಃ ।
ದದರ್ಶಾಸೌ ತಟಾಕಂ ಚ ಬಾಹುಲ್ಯೇನ ವಿರಾಜಿತಮ್ ॥೧೯॥

ಆ ಕಾಡಿನಲ್ಲಿ ಭಯಂಕರವಾದ ಸಿಂಹಗಳಿದ್ದವು, ಚಿರತೆಗಳಿದ್ದವು, ಅನೇಕ ಕ್ರೂರ ಪ್ರಾಣಿಗಳಿದ್ದವು. ಇವುಗಳನ್ನೆಲ್ಲಾ ನೋಡುತ್ತಾ, ರಾಜನು ಮುಂದೆ ಸಾಗಿದನು. ಅಲ್ಲೊಂದು ಕೆರೆಯು ಕಾಣಿಸಿತು. ಬಹಳ ವಿಶಾಲವಾಗಿತ್ತು. ಅದನ್ನು ಕಂಡನು.

ರಕ್ತನೀಲೋತ್ಪಲೈಶ್ಚಕ್ರವಾಕದ್ವಂದ್ವೈಶ್ಚ ರಾಜಿತಮ್ ।
ಸ್ನಾನಂ ಚಕಾರ ತತ್ರಾಸೌ ತರ್ಪಣಾದ್ಯಪಿ ಭೂರಿಶಃ ॥೨೦॥

ಕೆಂಪುಬಣ್ಣದ ಹಾಗೂ ಕಪ್ಪುಬಣ್ಣದ ಹೂವುಗಳಿಂದ ಚಕ್ರವಾಕಗಳ ಜೋಡಿಯಿಂದ ಆ ಕೆರೆಯು ವಿರಾಜಿಸುತ್ತಿತ್ತು. ಕುದುರೆಯಿಂದ ಇಳಿದು ಅಲ್ಲಿ ಸ್ನಾನವನ್ನು ಮಾಡಿದನು. ತರ್ಪಣಾದಿಗಳನ್ನು ನೀಡಿದನು.

ಪುನರಶ್ವಂ ಸಮಾರುಹ್ಯ ಜಗಾಮ ಗಹನಂ ವನಮ್ ।
ಸ್ಖಲಿತಂ ವಾಜಿನಂ ಪಶ್ಯನ್ನಶ್ವಾದುತ್ತೀರ್ಯ ತತ್‌ಕ್ಷಣಮ್ ॥೨೧॥

ಪುನಃ ಕುದುರೆಯನ್ನು ಹತ್ತಿ, ಗಹನವಾದ ಆ ಕಾಡಿನ ಒಳಗೆ ಪ್ರವೇಶಿಸಿದನು. ಅಲ್ಲೊಂದು ಸ್ಥಳದಲ್ಲಿ ಕುದುರೆಯು ಮುಗ್ಗರಿಸಿತು. ಅದೇಕ್ಷಣದಲ್ಲಿ ರಾಜನು ಕುದುರೆಯಿಂದ ಕೆಳಗಿಳಿದು ಇಲ್ಲಿ ಏನಿದೆ ? ಎಂಬುದಾಗಿ ಅವಲೋಕಿಸಿದನು.

ಚಖಾನ ಪೃಥಿವೀಂ ತತ್ರ ಯಾವದ್ದೇವಾಲಯಂ ಮುದಾ ।
ದದರ್ಶ ಚ ಮಹಾಸ್ಥೂಲಂ ದೇವಾಲಯಮಸೌ ಯುತಮ್ ॥೨೨॥

ಭೂಮಿಯನ್ನು ಅಗೆದನು. ಅಲ್ಲೊಂದು ದೇವಾಲಯವು ಕಂಡಿತು. ಅದನ್ನು ನೋಡಿ ಬಹಳ ಸಂತೋಷಪಟ್ಟನು. ಬೃಹತ್ತಾದ ಆ ದೇವಾಲಯವು ದಿವ್ಯವಾಗಿ ಕಂಗೊಳಿಸುತ್ತಿತ್ತು.

ರತ್ನೈರ್ಮುಕ್ತಾಫಲೈಶ್ಚೈವ ಮಾಣಿಕ್ಯೈಶ್ಚಾಪಿ ಸರ್ವತಃ ।
ಪೂಜಯಾಮಾಸ ಜಟಿಲವಾಕ್ಯಂ ಸ್ಮೃತ್ವಾತಿವಿಸ್ಮಿತಃ ॥೨೩॥

ಮನೋಹರವಾದ ರತ್ನಗಳಿಂದ ಮುತ್ತು ಮಾಣಿಕ್ಯಗಳಿಂದ ಆ ದೇವಾಲಯವು ಶೋಭಿಸುತ್ತಿತ್ತು. ಆ ಭಿಕ್ಷುವಿನ ಮಾತುಗಳನ್ನೇ ಸ್ಮರಿಸಿಕೊಳ್ಳುತ್ತಾ, ಅತ್ಯಂತ ಆಶ್ಚರ್ಯದಿಂದ ಆ ರಾಜನು ದೇವಾಲಯದಲ್ಲಿರುವ ದೇವಿಯನ್ನು ಪೂಜಿಸಿದನು.

ಸುವರ್ಣಯುಕ್ತವಸ್ತ್ರಾಣಿ ಚಂದನಾನ್ಯಕ್ಷತಾನ್ ಶುಭಾನ್ ।
ಚಂಪಕಾದೀನಿ ಪುಷ್ಪಾಣಿ ಧೂಪಂ ದೀಪಂ ವಿಶೇಷತಃ ॥೨೪॥

ಸುವರ್ಣದಿಂದ ಕೂಡಿದ ವಸ್ತ್ರಗಳನ್ನು ದೇವಿಗೆ ಸಮರ್ಪಣೆ ಮಾಡಿದನು. ಗಂಧವನ್ನು ಸಮರ್ಪಿಸಿದನು. ಮಂತ್ರಾಕ್ಷತೆಯಿಂದ ಅರ್ಚಿಸಿದನು. ಕಾಡಿನಲ್ಲಿರುವ ಸಂಪಿಗೆ, ಜಾಜಿ, ಸೇವಂತಿಕಾ ಮೊದಲಾದ ಹೂವುಗಳನ್ನು ಸಂಗ್ರಹಿಸಿ ಅರ್ಚಿಸಿದನು. ಧೂಪಾರತಿ ಮಾಡಿದನು. ದೀಪವನ್ನು ಬೆಳಗಿದನು.

ನಾನಾಪಕ್ವಾನ್ನಸಂಯುಕ್ತಂ ರಸೈಃ ಷಡ್‌ಭಿಃ ಸಮನ್ವಿತಮ್ ।
ನಾನಾಶಾಕೈಃ ಸಮಾಯುಕ್ತಂ ಸದುಗ್ಧಘೃತಶರ್ಕರಮ್ ॥೨೫॥

ಷಡ್ರೋರಸೋಪೇತವಾದ ಪಕ್ವಾನ್ನಗಳನ್ನು ದೇವಿಗೆ ಸಮರ್ಪಣೆ ಮಾಡಿದನು. ಭಕ್ಷ್ಯಭೋಜ್ಯಗಳನ್ನು ಸಿದ್ಧಪಡಿಸಿ, ದೇವಿಗೆ ಸಮರ್ಪಣೆ ಮಾಡಿದನು. ಅನೇಕ ಕಾಯಿ-ಪಲ್ಯಗಳನ್ನು, ಹಾಲು, ತುಪ್ಪ, ಸಕ್ಕರೆ ಮೊದಲಾದವುಗಳ ನೈವೇದ್ಯವನ್ನು ಮಾಡಿದನು.

ನೈವೇದ್ಯಂ ಘೃತಸಂಯುಕ್ತಂ ಚಂದನಂ ಮಲಯಾದ್ರಿಜಮ್ ।
ಸಂಪಾದ್ಯ ತುಷ್ಟಹೃದಯಃ ಫಲತಾಂಬೂಲದಕ್ಷಿಣಾಃ ॥೨೬॥

ತುಪ್ಪದಿಂದ ಅಭಿಘಾರ ಮಾಡಿ, ನೈವೇದ್ಯವನ್ನು ಸಮರ್ಪಣೆ ಮಾಡಿದನು. ಮಲಯಾದ್ರಿಯಲ್ಲಿ ಹುಟ್ಟಿದ ಚಂದನವನ್ನು ಸಮರ್ಪಿಸಿ, ಷೋಡಶೋಪಚಾರ ಪೂಜೆಯನ್ನು ಭಕ್ತಿಯಿಂದ ಮಾಡಿದನು. ಇದರಿಂದ ರಾಜನಿಗೆ ಬಹಳ ಸಂತೋಷವಾಯಿತು. ನೈವೇದ್ಯದ ಅನಂತರ ಫಲವನ್ನು, ತಾಂಬೂಲವನ್ನು, ದಕ್ಷಿಣೆಯನ್ನು, ದೇವಿಗೆ ಸಮರ್ಪಿಸಿದನು.

ಶ್ರದ್ಧಯಾ ಪೂಜಯಾಮಾಸ ಧರ್ಮಪಾಲೋ ಮಹಾಧನಃ ।
ಜಜಾಪ ಮಂತ್ರಾನ್ ಗುಪ್ತೋಽಸೌ ಸಗುಣಧ್ಯಾನಪೂರ್ವಕಮ್ ॥೨೭॥

ಹೀಗೆ ಅತ್ಯಂತ ಶ್ರದ್ಧೆಯಿಂದ ಧನಿಕನಾದ ಆ ಧರ್ಮಪಾಲನು ಆ ದೇವಿಯನ್ನು ಪೂಜೆ ಮಾಡಿದನು. ಅನಂತರ ಗೋಪ್ಯವಾಗಿ ಮಂತ್ರಗಳನ್ನು ಜಪಿಸುತ್ತಾ ಆ ದೇವಿಯ ಧ್ಯಾನದಲ್ಲಿ ಮಗ್ನನಾದನು.

ದೇವೀ ಭಕ್ತಂ ಸಮಾಗತ್ಯ ಲೋಭಯಾಮಾಸ ಸಾದರಮ್ ।
ಪ್ರಸನ್ನಾವದದತ್ರೇಯಂ ಪೂಜಾ ಸಂಪಾದಿತಾ ಕಥಮ್ ॥೨೮॥

ಇವನ ಭಕ್ತಿಗೆ ಮೆಚ್ಚಿದ ದೇವಿಯು ಪ್ರತ್ಯಕ್ಷಳಾದಳು. ಪ್ರಸನ್ನಳಾಗಿ ಆ ಭಕ್ತನನ್ನು ಕುರಿತು ಹೀಗೆ ಹೇಳಿದಳು - ಭಕ್ತಶ್ರೇಷ್ಠನೇ ! ಈ ಅರಣ್ಯದಲ್ಲಿ ಅಸಾಧ್ಯವಾದ ಈ ಎಲ್ಲ ವಸ್ತುಗಳನ್ನು ಸಂಗ್ರಹಿಸಿ, ಭಕ್ತಿಪೂರ್ವಕವಾಗಿ ನನ್ನನ್ನು ಪೂಜೆ ಮಾಡಿರುವಿ.

ಯೇನ ಸಂಪಾದಿತಾ ತಸ್ಮೈ ದದಾಮಿ ವರಮದ್ಭುತಮ್ ।
ಇತಿ ಶ್ರುತ್ವಾ ಧರ್ಮಪಾಲೋ ದೇವ್ಯಗ್ರೇ ಪ್ರಾಂಜಲಿಃ ಸ್ಥಿತಃ ॥೨೯॥

ಅಸಾಧ್ಯವಾದ ವಸ್ತುಗಳ ಸಂಪಾದನೆಯಿಂದ ನೀನು ಮಾಡಿದ ಪೂಜೆಯಿಂದ ನಾನು ಪ್ರಸನ್ನಳಾಗಿರುವೆನು. ನಿನಗೆ ಅದ್ಭುತವಾದ ವರವನ್ನು ಕೊಡುತ್ತೇನೆ. ದೇವಿಯ ಈ ಮಾತನ್ನು ಕೇಳಿ ದೇವಿಯ ಮುಂದೆ ಕೈಮುಗಿದು ನಿಂತುಕೊಂಡನು.

ಭಗವತ್ಯುವಾಚ

ಧರ್ಮಪಾಲ ತ್ವಯಾ ಸಮ್ಯಕ್ ಪೂಜಾ ಸಂಪಾದಿತಾಽನಘ ।
ವರಂ ಯಾಚಯ ಮದ್ಭಕ್ತ ದದಾಮಿ ಬಹುಲಂ ಧನಮ್ ॥೩೦॥

ಧರ್ಮಪಾಲನೇ ! ನನ್ನನ್ನು ಭಕ್ತಿಯಿಂದ ಪೂಜೆ ಮಾಡಿರುವಿ. ಆದ್ದರಿಂದಲೇ ನೀನೀಗ ಪಾಪರಹಿತನಾಗಿರುವಿ. ನಿನಗೆ ಅಪೇಕ್ಷಿತವಾದ ವರವನ್ನು ಕೇಳಿಕೋ, ನನ್ನ ಭಕ್ತನಾಗಿರುವಿ. ನಿನಗೆ ಯಥೇಚ್ಛವಾದ ಹಣವನ್ನು ಕೊಡಲು ನಾನು ಸಿದ್ಧಳಾಗಿರುವೆನು.

ಧರ್ಮಪಾಲ ಉವಾಚ

ಬಹುಲಾ ಧನಸಂಪತ್ತಿರ್ವರ್ತತೇ ತ್ವತ್ ಪ್ರಸಾದತಃ ।
ಅಪತ್ಯಂ ಪ್ರಾಪ್ತುಮಿಚ್ಛಾಮಿ ಪಿತೄಣಾಂ ತಾರಕಂ ಶುಭಮ್ ॥೩೧॥

ಧರ್ಮಪಾಲನು ಪ್ರಾರ್ಥಿಸಿದನು. ದೇವೀ ! ನಿನ್ನ ಪ್ರಸಾದದಿಂದ ನನ್ನ ಬಳಿ ಅಪಾರವಾದ ಧನಸಂಪತ್ತು ಈಗಾಗಲೇ ಇದೆ. ಅದರ ಅಪೇಕ್ಷೆ ನನಗೆ ಇರುವುದಿಲ್ಲ. ನನಗೆ ಪುತ್ರಸಂತಾನವು ಇಲ್ಲದ ಕಾರಣ, ಪಿತೃಗಳ ಉದ್ಧಾರಕನಾದ ಪುತ್ರನನ್ನು ನನಗೆ ದಯಪಾಲಿಸು.

ಆಯಾತಿ ಭಿಕ್ಷುಕೋ ಗೇಹೇ ಗೃಹ್ಣಾತಿ ನ ಮದನ್ನಕಮ್ ।
ತೇನ ಮೇ ಬಹುಲಂ ದುಃಖಂ ಸಭಾರ್ಯಸ್ಯೋಪಜಾಯತೇ ॥೩೨॥

ನಮ್ಮ ಮನೆಗೊಬ್ಬ ಭಿಕ್ಷು ಬರುತ್ತಾನೆ. ನಾವು ನೀಡಿದ ಅನ್ನವನ್ನು ಸ್ವೀಕರಿಸುವುದಿಲ್ಲ. ಹಾಗೆಯೇ ಮುಂದೆ ತೆರಳುತ್ತಾನೆ. ಇದರಿಂದ ನನಗೂ ನನ್ನ ಪತ್ನಿಗೂ ಬಹಳ ದುಃಖವಾಗಿದೆ.

ಇತಿ ದೀನವಚಃ ಶ್ರುತ್ವಾ ದೇವೀ ವಚನಮಬ್ರವೀತ್ ॥

ದಯದಿಂದ ಕೂಡಿದ ಭಕ್ತನ ಮಾತುಗಳನ್ನು ಕೇಳಿದ ದೇವಿಯು ಮುಂದಿನ ಮಾತುಗಳನ್ನು ಹೇಳುತ್ತಾಳೆ.

ದೇವ್ಯುವಾಚ

ಧರ್ಮಪಾಲಕ ತೇऽದೃಷ್ಟೇऽಪತ್ಯಂ ನಾಸ್ತಿ ಸುಖಪ್ರದಮ್ ||೩೩||

ತಥಾಪಿ ಕಿಂ ಯಾಚಯಸಿ ಕನ್ಯಾಂ ವಿಗತಭರ್ತೃಕಾಮ್ ।

ಪುತ್ರಮಲ್ಪಾಯುಷಂ ವಾಥಾಪ್ಯಂಧಂ ದೀರ್ಘಾಯುಷಂ ಸುತಮ್ ||೩೪||

ದೇವಿಯು ಹೇಳುತ್ತಾಳೆ - ಧರ್ಮಪಾಲಕನೇ ! ನಿನ್ನ ಪೂರ್ವಜನ್ಮದ ಕರ್ಮದ ಪ್ರಕಾರ ನಿನಗೆ ಮಕ್ಕಳಿಂದ ಸುಖಪಡುವ ಯೋಗವು ಇರುವುದಿಲ್ಲ. ಆದ್ದರಿಂದ ಹುಟ್ಟಿದ ಮೇಲೆ ವಿಧವೆಯಾಗುವ ಮಗಳು ಬೇಕೋ ? ಅಲ್ಪಾಯುಷ್ಯವನ್ನು ಹೊಂದಿದ ಸುಂದರನಾದ ಮಗನು ಬೇಕೋ ? ಅಥವಾ ಕುರುಡನಾಗಿ ಬಹುಕಾಲ ಬದುಕುವ ಮಗನು ಬೇಕೋ ? ಈ ಮೂರು ವರದಲ್ಲಿ ಒಂದನ್ನು ಕೇಳು.

ಧರ್ಮಪಾಲ ಉವಾಚ

ಪುತ್ರಮಲ್ಪಾಯುಷಂ ದೇಹಿ ತಾವತಾ ಕೃತಕೃತ್ಯತಾಮ್ ।

ಪ್ರಾಪ್ನೋಮಿ ಚೋದ್ಧರಿಷ್ಯಾಮಿ ಪಿತ್ರ್‍ಂಶ್ಚ ಮಮ ಘೋರಗಾನ್ ||೩೫||

ಧರ್ಮಪಾಲನು ಪ್ರಾರ್ಥಿಸುತ್ತಾನೆ - ತಾಯಿ ! ಅಲ್ಪಾಯುಷ್ಯವುಳ್ಳ ಶ್ರೇಷ್ಠನಾದ ಮಗನನ್ನೇ ನನಗೆ ಕರುಣಿಸು. ಇದರಿಂದ ನಾನು ಕೃತಕೃತ್ಯನಾಗುತ್ತೇನೆ. ನನ್ನ ಪಿತೃಗಳನ್ನು ಘೋರ ನರಕದಿಂದ ಮೋಚನೆ ಮಾಡಿ, ಉದ್ಧಾರಹೊಂದುತ್ತೇನೆ.

ದೇವ್ಯುವಾಚ

ಮತ್ ಪಾರ್ಶ್ವೇ ವರ್ತಮಾನಸ್ಯ ನಾಭಾವಾರುಹ್ಯ ಶುಂಡಿನಃ ||೩೬||

ತತ್ಪಾರ್ಶ್ವವರ್ತಿಚೂತಸ್ಯ ಗೃಹೀತ್ವಾ ಫಲಮದ್ಭುತಮ್ ।

ಪತ್ನ್ಯೈ ದೇಯಂ ತತಃ ಪುತ್ರೋ ಭವಿಷ್ಯತಿ ನ ಸಂಶಯಃ ||೩೭||

ದೇವಿಯು ಭಕ್ತನಿಗೆ ಹೇಳುತ್ತಾಳೆ - ಭಕ್ತನೇ ! ನನ್ನ ಪಕ್ಕದಲ್ಲಿ ಗಣಪತಿಯ ವಿಗ್ರಹವಿದೆ. ಅದನ್ನು ಹತ್ತಿ, ಅದರ ಪಕ್ಕದಲ್ಲಿರುವ ಮಾವಿನ ಮರದಲ್ಲಿ ಒಂದು ಅದ್ಭುತವಾದ ಫಲವನ್ನು ಕಿತ್ತು, ಅದನ್ನು ನಿನ್ನ ಪತ್ನಿಗೆ ತಿನ್ನಲು ನೀಡು. ಖಂಡಿತವಾಗಿಯೂ ನಿನಗೆ ಶ್ರೇಷ್ಠನಾದ ಪುತ್ರನು ಹುಟ್ಟುತ್ತಾನೆ. ಇದರಲ್ಲಿ ಸಂಶಯವಿಲ್ಲ.

ಇತಿ ದೇವೀವಚಃ ಶ್ರುತ್ವಾ ಗತ್ವಾ ತತ್ಪಾರ್ಶ್ವ ಏವ ಚ ।
ನಾಭಿಂ ಗಜಮುಖಸ್ಯಾಥಾರುಹ್ಯ ಜಗ್ರಾಹ ಮೋಹತಃ ॥೩೮॥

ದೇವಿಯ ಮಾತುಗಳನ್ನು ಕೇಳಿದ ಆ ಧರ್ಮಪಾಲನು ಆ ಗಣಪತಿ ವಿಗ್ರಹದ ಬಳಿ ತೆರಳಿದನು. ದೇವಿಯ ಪಕ್ಕದಲ್ಲಿರುವ ಗಜಮುಖನ ನಾಭಿಯನ್ನು ಹತ್ತಿ, ಹಣ್ಣನ್ನು ಕೊಯ್ದನು.

ಫಲಾನ್ಯುತ್ತೀರ್ಯ ಚ ತತಃ ಫಲಮೇಕಂ ದದರ್ಶ ಸಃ ।
ಏವಂ ಪುನಃ ಪುನಃ ಕುರ್ವನ್ ಫಲಮೇಕಂ ದದರ್ಶ ಸಃ ॥೩೯॥

ಫಲವನ್ನು ಕಿತ್ತಿ ಕೆಳಗಿಳಿದ ಮೇಲೆ ಮತ್ತೊಂದು ಫಲವನ್ನು ಆ ಮರದಲ್ಲಿ ಕಂಡನು. ಅದನ್ನು ಕೀಳುವುದಕ್ಕಾಗಿ ಮೋಹದಿಂದ ಪುನಃ ಆ ಗಣಪತಿಯನ್ನು ಹತ್ತಿ ಕಿತ್ತನು. ಕೆಳಗಿಳಿದಾಗ ಮತ್ತೊಂದು ಹಣ್ಣನ್ನು ಕಂಡು ಅದನ್ನು ಕುಯ್ಯಲು ಪುನಃ ಹತ್ತಿದನು. ಹೀಗೆ ಅನೇಕ ಬಾರಿ ಹತ್ತಿ ಹಣ್ಣುಗಳನ್ನು ಕಿತ್ತನು.

ಕ್ರುದ್ಧೋ ಗಣಪತಿಶ್ಚಾಥ ಧರ್ಮಪಾಲಾಯ ಶಪ್ತವಾನ್ ।
ಷೋಡಶೇ ವತ್ಸರೇ ಪ್ರಾಪ್ತೇ ತೇಽಹಿಃ ಪುತ್ರಂ ದಶಿಷ್ಯತಿ ॥೪೦॥

ಇದರಿಂದ ಗಣಪತಿಯು ಕ್ರುದ್ಧನಾದನು. ದುರಾಸೆಯಿಂದ ನೀನು ಪುನಃ ಹಣ್ಣುಗಳನ್ನು ಕೊಯ್ಯುತ್ತಿರುವಿ. ಆದ್ದರಿಂದ ನಿನಗೆ ಹುಟ್ಟುವ ಮಗನು ಹದಿನಾರನೆಯ ವರ್ಷದಲ್ಲಿ ಹಾವು ಕಚ್ಚಿ ಸಾಯುತ್ತಾನೆ ಎಂಬುದಾಗಿ ಶಾಪವನ್ನು ನೀಡಿದನು.

ಧರ್ಮಪಾಲಃ ಫಲಂ ಸಮ್ಯಕ್ ವಸ್ತ್ರೇ ಬದ್ಧ್ವಾಽಗಮದ್ಗೃಹಮ್ ।
ಫಲಂ ಪತ್ನ್ಯೈ ದದೌ ಸಾಪಿ ಭಕ್ಷಯಿತ್ವಾ ಪತಿವ್ರತಾ ॥೪೧॥

ಧರ್ಮಪಾಲನು ಹಣ್ಣನ್ನು ತೆಗೆದುಕೊಂಡು ವಸ್ತ್ರದಲ್ಲಿ ಕಟ್ಟಿ, ತನ್ನ ಮನೆಗೆ ತೆರಳಿದನು. ಆ ಹಣ್ಣನ್ನು ಪತ್ನಿಗೆ ನೀಡಿ, ತಿನ್ನಲು ಹೇಳಿದನು. ಆ ಪತಿವ್ರತೆಯು ಹಣ್ಣನ್ನು ತಿಂದಳು.

ಗರ್ಭಂ ಸಾ ಧಾರಯಾಮಾಸ ಪತ್ಯಾ ಸಹ ಸುಸಂಗತಾ ।
ಸಂಪೂರ್ಣೇ ನವಮೇ ಮಾಸೇ ಪ್ರಾಸೂತ ಸುತಮುತ್ತಮಮ್ ॥೪೨॥

ಪತಿಯ ಸಂಗಮ ಮಾಡಿದ ಪತ್ನಿಯು ಗರ್ಭವತಿಯಾದಳು. ನವಮಾಸ ತುಂಬಿದ ಮೇಲೆ ಉತ್ತಮನಾದ ಮಗನನ್ನು ಹಡೆದಳು.

ಜಾತಕರ್ಮ ಚಕಾರಾಸ್ಯ ಪಿತಾ ಸಂತುಷ್ಟಮಾನಸಃ ।
ಷಷ್ಠೀಪೂಜಾಂ ಚಕಾರಾಸ್ಯಷಷ್ಠೇ ತು ದಿವಸೇ ತತಃ ॥೪೩॥

ಮಗನ ಜನನದಿಂದ ತಂದೆಗೆ ಬಹಳ ಸಂತೋಷವಾಯಿತು. ಹುಟ್ಟಿದ ಮಗುವಿಗೆ ಜಾತಕರ್ಮ ಸಂಸ್ಕಾರವನ್ನು ಮಾಡಿದನು. ಕುಲಪದ್ಧತಿಯಂತೆ ಆರನೆಯ ದಿವಸ ಷಷ್ಠೀದೇವತಾ ಪೂಜೆಯನ್ನು ಮಾಡಿದನು.

ದ್ವಾದಶೇಽಹನಿ ಸಂಪ್ರಾಪ್ತೇ ಶಿವನಾಮ್ನಾಽಽಜುಹಾವ ತಮ್ ।
ಷಷ್ಠೇ ಮಾಸಿ ಚಕಾರಾಸಾವನ್ನಪ್ರಾಶನಮದ್ಭುತಮ್ ॥೪೪॥

ಹನ್ನೆರಡನೆಯ ದಿವಸ ಪ್ರಾಪ್ತವಾದಾಗ ವೈಭವದಿಂದ ನಾಮಕರಣ ಸಂಸ್ಕಾರವನ್ನು ಮಾಡಿದನು. ಮಗುವಿಗೆ 'ಶಿವ' ಎಂದು ಹೆಸರಿಟ್ಟನು. ಆರನೆಯ ತಿಂಗಳಲ್ಲಿ ಅನ್ನಪ್ರಾಶನ ಸಂಸ್ಕಾರವನ್ನೂ ಕೂಡ ಮಾಡಿದನು.

ತೃತೀಯೇ ವತ್ಸರೇ ಚೂಡಾಮಷ್ಟಮೇಽಬ್ದೇ ಹ್ಯನುತ್ತಮಮ್ ।
ಕೃತ್ವೋಪನಯನಂ ಪಾರ್ಥ ವಿಪ್ರೋಽಭೂತ್ತುಷ್ಟಮಾನಸಃ ॥೪೫॥

ಮೂರನೆಯ ವರ್ಷದಲ್ಲಿ ಚೌಲಸಂಸ್ಕಾರವನ್ನು ಮಾಡಿದನು. ಎಂಟನೆಯ ವರ್ಷದಲ್ಲಿ ಶ್ರೇಷ್ಠನಾದ ಮಗನಿಗೆ ಉಪನಯನ ಸಂಸ್ಕಾರವನ್ನು ಮಾಡಿದನು. ಯುಧಿಷ್ಠಿರನೇ ! ಇದರಿಂದ ಆ ವಿಪ್ರನಿಗೆ ಬಹಳ ಸಂತೋಷವಾಯಿತು.

ದಶಮೇ ವತ್ಸರೇ ಪ್ರಾಪ್ತೇಽಬ್ರವೀದ್ಭಾರ್ಯಾ ಪತಿವ್ರತಾ ।

ಆ ಮಗುವಿಗೆ ಹತ್ತನೇ ವರ್ಷವು ಬರುತ್ತಿರಲು ಪತಿವ್ರತೆಯು ಗಂಡನನ್ನು ಕುರಿತು ಹೀಗೆ ಹೇಳಿದಳು -

ಭಾರ್ಯೋವಾಚ

ಬಾಲಕಸ್ಯ ವಿವಾಹೋಽಪಿ ಕರ್ತವ್ಯಃ ಸುಮುಹೂರ್ತಕೇ ॥೪೬॥

ಪತ್ನಿಯು ಹೇಳಿದಳು. ಸ್ವಾಮಿ ! ಸರಿಯಾದ ಸಮಯಕ್ಕೆ ಒಳ್ಳೆಯ ಮುಹೂರ್ತದಲ್ಲಿ ವಿವಾಹ ಸಂಸ್ಕಾರವೂ ಕೂಡ ನಡೆಯಬೇಕು.

ಧರ್ಮಪಾಲ ಉವಾಚ

ಮಯಾ ಸಂಕಲ್ಪಿತಂ ಕಾಶ್ಯಾಂ ಗಮನಂ ಬಾಲಕಸ್ಯ ತತ್ ।
ಕೃತ್ವಾ ಸಮಾಯಾತು ತತೋ ವಿವಾಹೋಽಸ್ಯ ಭವಿಷ್ಯತಿ ॥೪೭॥

ಧರ್ಮಪಾಲನು ಉತ್ತರಿಸಿದನು. ಪ್ರಿಯೆ ! ನಾನೂ ಸಹ ಸಂಕಲ್ಪ ಮಾಡಿದ್ದೇನೆ. ನಮ್ಮ ಮಗನನ್ನು ಮೊದಲು ಕಾಶೀಯಾತ್ರೆಗೆ ಕಳಿಸೋಣ. ಅನಂತರ ಸರಿಯಾದ ಸಮಯಕ್ಕೆ ವಿವಾಹವನ್ನು ಮಾಡೋಣ.

ಪುತ್ರೋಽಸೌ ಪ್ರೇಷಿತಸ್ತೇನ ಶಾಲಕೇನ ಸಮನ್ವಿತಃ ।
ವಾರಾಣಸ್ಯಾಂ ಪ್ರಸ್ಥಿತೋಽಸೌ ಗೃಹಿತ್ವಾ ಬಹುಲಂ ಧನಮ್ ॥೪೮॥

ಅನಂತರ ಭಾವಮೈದುನನ ಜೊತೆ ತನ್ನ ಮಗನನ್ನು ಕಾಶೀಯಾತ್ರೆಗೆ ಕಳುಹಿಸಿದನು. ಭಾವಮೈದುನನ ಕೈಗೆ ಬೇಕಾದಷ್ಟು ಹಣವನ್ನು ಕೊಟ್ಟು ತನ್ನ ಮಗನನ್ನು ಕಳುಹಿಸಿದನು.

ಕುರ್ವಂತೌ ಪಥಿ ಸದ್ಧರ್ಮಂ ಪ್ರತಿಷ್ಠಾಪುರಮೀಯತುಃ ।
ಕ್ರೀಡಂತ್ಯಃ ಕನ್ಯಕಾ ದೃಷ್ಟಾಸ್ತತ್ರ ದೇಶೇ ಮನೋರಮೇ ॥೪೯॥

ಸೋದರಮಾವ ಹಾಗೂ ಸೋದರಳಿಯ ಇಬ್ಬರೂ ಕೂಡ ಒಟ್ಟಾಗಿ ಕಾಶೀಯಾತ್ರೆಗೆ ಹೊರಟರು. ಅನೇಕ ಪುಣ್ಯಕ್ಷೇತ್ರಗಳನ್ನು ದಾಟಿ. ದಾನ-ಧರ್ಮಗಳನ್ನು

ಮಾಡುತ್ತಾ, ಪ್ರತಿಷ್ಠಾವೆಂಬ ನಗರಕ್ಕೆ ಸೇರಿದರು. ಅಲ್ಲಿ ಹೆಣ್ಣುಮಕ್ಕಳು ಆಟವಾಡುತ್ತಿದ್ದರು. ಅತ್ಯಂತ ಮನೋಹರರಾಗಿ ಕಾಣಿಸುತ್ತಿದ್ದರು.

**ತಾಸಾಂ ಸಮಾಜೇ ಗೌರಾಂಗೀ ಸುಶೀಲಾ ನಾಮಕನ್ಯಕಾ ।**
**ತಯಾ ಸಹ ಸಖೀ ಕಾಚಿಚ್ಚಕಾರ ಕಲಹಂ ೦ ಭೃಶಮ್ ॥೫೦॥**

ಆ ಹುಡುಗಿಯರ ಗುಂಪಿನಲ್ಲಿ ಸುಂದರಿಯಾದ ಶುಭ್ರಳಾಗಿ ಕಂಗೊಳಿಸುತ್ತಿರುವ ಸುಶೀಲಾ ಎಂಬ ಹುಡುಗಿ ಇದ್ದಳು. ಅವಳನ್ನು ಮತ್ತೊಬ್ಬ ಗೆಳತಿಯು ಬಹಳ ಬೈಯ್ಯುತ್ತಿದ್ದಳು.

**ಗಾಲನಂ ಚಾದದೌ ತಸ್ಯೈ ರಂಡೇಽಭಾಗ್ಯೇ ಮುಹುರ್ಮುಹುಃ ॥**

ನೀನು ರಂಡೆ, ನೀನು ಮುಂಡೆ ಎಂಬುದಾಗಿ ಆ ಹುಡುಗಿಗೆ ಬೈಯ್ಯುತ್ತಿದ್ದಳು. ಪುನಃ ಪುನಃ ಬೈಯ್ಯುತ್ತಿದ್ದಳು.

**ಸುಶೀಲೋವಾಚ**

**ಸಖಿ ತ್ವಯಾ ಗಾಲನಂ ಮೇ ವ್ಯರ್ಥಂ ದತ್ತಂ ಶುಭಾನನೇ ॥೫೧॥**
**ಜನನ್ಯಾ ಮೇ ಮಾನವತ್ಯಾಶ್ಚಾಸ್ತಿ ಗೌರೀವ್ರತಮ್ ಶುಭಮ್ ।**
**ತಸ್ಯ ಪ್ರಸಾದಾತ್ಸಕಲಾಃ ಸಂಬಂಧಿನ್ಯಃ ಪ್ರಿಯಾಃ ಸ್ತ್ರಿಯಃ ॥೫೨॥**

ಸುಶೀಲೆ ಎಂಬ ಹುಡುಗಿಯು ಉತ್ತರಿಸಿದಳು - ಗೆಳತಿ ! ನೀನು ನನಗೆ ಏನು ಬೈದರೂ ಅದು ವ್ಯರ್ಥ. ಸುಂದರ ಮುಖದವಳೇ ! ಕೇಳು ಹೇಳುವೆನು - ನನ್ನ ತಾಯಿ ಅತ್ಯಂತ ಶ್ರೇಷ್ಠವಾದ, ಮಂಗಳಗೌರಿ ವ್ರತವನ್ನು ನಿರಂತರ ಆಚರಣೆ ಮಾಡುವಳು. ಅವಳ ಪ್ರಸಾದದಿಂದ ಅವಳ ಎಲ್ಲಾ ಸಂಬಂಧಿಕರಾದ ಪ್ರಿಯರಾದ ಸ್ತ್ರೀಯರು ಸುವಾಸಿನಿಯಾಗಿ ಬದುಕುವರು.

**ಆಜನ್ಮಾವಿಧವಾ ಜಾತಾಃ ಕಿಂ ಪುನಃ ಕನ್ಯಕಾ ಧ್ರುವಮ್ ।**
**ವಕ್ಷ್ಯೇ ತಸ್ಯ ಪ್ರಭಾವಂ ಕಿಂ ವ್ರತರಾಜಸ್ಯ ಭಾಮಿನೀ ॥೫೩॥**

ಆ ವ್ರತದ ಮಹಿಮೆಯಿಂದ ಪ್ರತಿಯೊಬ್ಬರೂ ಯಾವಜ್ಜೀವ ವೈಧವ್ಯವನ್ನು ಹೊಂದಲಾರರು. ಹೀಗಿರುವಾಗ ಕನ್ಯೆಯರು ಮಾಂಗಲ್ಯಭಾಗ್ಯವನ್ನು

ಹೊಂದುತ್ತಾರೆಂದು ಹೇಳಬೇಕಾಗಿಲ್ಲ. ಆ ಮಂಗಳಗೌರೀವ್ರತವು ವ್ರತರಾಜ ಎನಿಸಿದೆ. ಭಾಮಿನೀ ! ಅದರ ಪ್ರಭಾವವನ್ನು ಹೇಳುತ್ತೇನೆ ಕೇಳು.

ಪೂಜನೇ ಧೂಪಗಂಧೋಽಯಂ ಯತ್ರ ತತ್ರ ಸುಖಂ ಭವೇತ್ ।
ಇತಿ ಶ್ರುತ್ವಾ ತತೋ ವಾಕ್ಯಂ ವಿಸ್ಮಯೋತ್ಫುಲ್ಲಲೋಚನಃ ॥೫೪॥

ಮಂಗಳಗೌರೀವ್ರತವನ್ನು ಮಾಡುವಾಗ ಯಾವ ಸ್ಥಳದಲ್ಲಿ ಧೂಪದ ಗಂಧವು ಬರುತ್ತದೋ, ಆ ಸ್ಥಳದಲ್ಲಿರುವ ಪ್ರತಿಯೊಬ್ಬರಿಗೂ ಸನ್ಮಂಗಳವು ಉಂಟಾಗುತ್ತದೆ. ಸುಶಿಲೆಯ ಈ ಮಾತನ್ನು ಅತ್ಯಂತ ಆಶ್ಚರ್ಯದಿಂದ ಅರಳಿದ ಕಣ್ಣುಗಳಿಂದ ಸೋದರಮಾವನು ಕೇಳಿಸಿಕೊಂಡನು.

ಮಾತುಲಶ್ಚಿಂತಯಾಮಾಸ ಬಾಲಕಸ್ಯ ಪ್ರಿಯಂ ತತಃ ।
ಶತಜೀವೀ ಭವೇದೇಷ ಏತದ್ಧಸ್ತಾಕ್ಷತಾ ಯದಿ ॥೫೫॥

ಪತಂತ್ಯಮುಷ್ಯ ಶಿರಸಿ ವಿಭಾವ್ಯೇತಿ ಪುನಃ ಪುನಃ ।
ಸುಶೀಲಾಮೇವ ಪಶ್ಯನ್ ಸವಿಸ್ಮಯೋತ್ಫುಲ್ಲಲೋಚನಃ ॥೫೬॥

ಆಗ ಸೋದರಮಾವನು ಹೀಗೆ ಆಲೋಚನೆ ಮಾಡಿದನು. ನನ್ನ ಸೋದರಳಿಯನಿಗೆ ನಾನು ಪ್ರಿಯವನ್ನು ಮಾಡಬೇಕು. ಇವನು ನೂರು ವರ್ಷಗಳ ಕಾಲ ಸುಖವಾಗಿ ಬದುಕಬೇಕು. ಅದಕ್ಕಾಗಿ ಈ ಹುಡುಗಿಯ ತಾಯಿಯ ಕೈಯಲ್ಲಿ ಇವನ ತಲೆಯ ಮೇಲೆ ಮಂತ್ರಾಕ್ಷತೆಯನ್ನು ಹಾಕಿಸಬೇಕು. ಇದರ ಬಗ್ಗೆ ಪುನಃ ಪುನಃ ಯೋಚನೆ ಮಾಡುತ್ತಾ, ಆ ಸುಶಿಲಾ ಎಂಬ ಹುಡುಗಿಯನ್ನೇ ಆಶ್ಚರ್ಯದಿಂದ ಗಮನಿಸುತ್ತಿದ್ದನು.

ಸುಶೀಲಾ ಪ್ರಸ್ತುತಾ ಗೇಹೇ ತದನು ಪ್ರಸ್ಥಿತಾವುಭೌ ।
ಸ್ವಗೃಹಂ ಪ್ರಾಪ ಗೌರಾಂಗೀ ನಿಕಟೇ ತದ್‌ಗೃಹಸ್ಯ ತೌ ॥೫೭॥

ಅನಂತರ ಆ ಸುಶೀಲೆಯು ತನ್ನ ಮನೆಗೆ ತೆರಳಿದಳು. ಅವಳನ್ನೇ ಅನುಸರಿಸಿ, ಇವರಿಬ್ಬರೂ ಕೂಡ ಹೊರಟರು. ಸುಶೀಲೆಯು ಮನೆಯನ್ನು ಪ್ರವೇಶಿಸಿದ ಮೇಲೆ ಇವರಿಬ್ಬರು ಮನೆಯ ಸಮೀಪದಲ್ಲಿ ನೆಲೆಸಿದರು.

ಸ ತಟಾಕೇ ರಮ್ಯದೇಶೇ ವಾಸಂ ಚಕ್ರತುರಾದರಾತ್ ।
ವಿವಾಹಕಾಲೇ ಸಂಪ್ರಾಪ್ತೇ ಸುಶೀಲಾಜನಕೋ ಹರಿಃ ॥೫೮॥

ಹೀಗಿರುವಾಗ ಸುಶೀಲೆಯ ತಂದೆಯು ಮಗಳಿಗೆ ವಿವಾಹಕಾಲವು ಪ್ರಾಪ್ತವಾಗಿದೆ ಎಂದು ಯೋಚನೆ ಮಾಡಿದನು.

ವಿವಾಹೋದ್ಯೋಗವಾನ್ ಜಾತೋ ನಿಶ್ಚಿಕಾಯ ಹರಂ ವರಮ್ ।
ಅಸಮರ್ಥಂ ಹರಂ ದೃಷ್ಟ್ವಾ ತನ್ಮಾತಾಪಿತರಾವುಭೌ ॥೫೯॥

ಸುಶೀಲೆಯ ತಂದೆಯಾದ ಹರಿಯು ಮಗಳಿಗೆ ವಿವಾಹ ಮಾಡಬೇಕೆಂದು ಕ್ರಿಯಾಶೀಲನಾದನು. ಹರ ಎಂಬ ವರನು ಯೋಗ್ಯನಾಗಿದ್ದಾನೆಂದು ತಿಳಿದನು. ಹರನ ತಂದೆ - ತಾಯಿಯ ತನ್ನ ಮಗಳನ್ನು ಮಗನಿಗೆ ಕೊಡುತ್ತೇನೆಂದು ಹೇಳಿದನು. ಅವರು ನಮ್ಮ ಮಗನು ಅಸಮರ್ಥನಾಗಿದ್ದಾನೆಂದು ತಿಳಿಸಿದರು.

ಯಯಾಚತುಃ ಶಿವಂ ಬದ್ಧಾಂಜಲೀ ವಿನಯಯುಕ್ತಕೌ ।
ಉಪಸ್ಥಿತೋ ವರಪಿತರಾವೂಚತುಃ ವಿವಾಹೋ ನೌ ಪುತ್ರಸ್ಯ ಶುಭಯಾ ಹರೇಃ ॥೬೦॥

ಕೈಮುಗಿದು ವಿನಯಭರಿತರಾಗಿ ಶಿವನನ್ನು ಆ ತಂದೆತಾಯಿಯರು ಪ್ರಾರ್ಥಿಸಿದರು. ನಮ್ಮ ಮಗನಿಗೆ ಹರಿಯ ಮಗಳಾದ ಸುಶೀಲೆಯ ಜೊತೆ ವಿವಾಹವು ಉಪಸ್ಥಿತವಾಗಿದೆ. ಆದರೆ ಇದು ಸಾಧ್ಯವಿಲ್ಲ.

ಸುಶೀಲಯಾ ಕನ್ಯಯಾಽಯಮಸಮರ್ಥಶ್ಚ ದೃಶ್ಯತೇ ।
ಅತೋ ದೇಯಃ ಶಿವಃ ಶ್ರೀಮಾನ್ ಲಗ್ನಕಾಲೇ ತ್ವಯಾ ವಿಭೋ ॥೬೦॥
ಲಗ್ನಂ ಭವಿಷ್ಯತಿ ತತೋ ದೇಯೋಽಸ್ಮಾಭಿಃ ಶಿವಸ್ತವ ।

ಕನ್ಯೆಯಾದ ಸುಶೀಲೆಯ ಜೊತೆ ವಿವಾಹವಾಗಲು ನಮ್ಮ ಮಗನು ಅಸಮರ್ಥನಾಗಿದ್ದಾನೆ. ಆದ್ದರಿಂದ ಲಗ್ನಕಾಲದಲ್ಲಷ್ಟೇ ನಿಮ್ಮ ಮಗನನ್ನು ಕೊಡಿರಿ. ಅನಂತರ ಶಿವನನ್ನು ಹಿಂತಿರುಗಿಸುತ್ತೇವೆ.

## ಮಾತುಲ ಉವಾಚ

**ಅವಶ್ಯಂ ಲಗ್ನಕಾಲೇऽಸೌ ಶಿವೋ ಗ್ರಾಹ್ಯಃ ಪ್ರಿಯಂವದಃ ।**
**ತತೋ ಮುಹೂರ್ತೇ ಸಂಪ್ರಾಪ್ತೇ ವಿವಾಹಮಕರೋಚ್ಛಿವಃ ॥೬೨॥**

ಆಗ ಸೋದರಮಾವನು ಉತ್ತರಿಸಿದನು - ಅವಶ್ಯವಾಗಿ ನಮ್ಮ ಶಿವನನ್ನು ಕೊಡುತ್ತೇನೆ. ಲಗ್ನಕಾಲದಲ್ಲಿ ಇವನನ್ನು ಸ್ವೀಕರಿಸಿರಿ ಎಂದು ಪ್ರಿಯವಾದ ಮಾತುಗಳನ್ನು ಹೇಳಿದನು. ಅನಂತರ ಮುಹೂರ್ತವು ಪ್ರಾಪ್ತವಾದಾಗ ಶಿವನ ಜೊತೆ ವಿವಾಹವನ್ನು ಮಾಡಿದರು.

**ಟಿಪ್ಪಣಿ** - ಸುಶೀಲೆಯ ಜೊತೆ ಅಳಿಯನಿಗೆ ವಿವಾಹ ಮಾಡಿಸಬೇಕೆಂಬ ಉದ್ದೇಶದಿಂದ ಸೋದರಮಾವನು ಸುಶೀಲೆಯ ಮನೆಯ ಬಳಿಯೇ ಒಂದು ಕುಟೀರದಲ್ಲಿ ವಾಸ ಮಾಡಿದ. ಅಲ್ಲಿಯೇ ಸಮೀಪದಲ್ಲಿ 'ಹರ' ಎಂದ ಹೆಸರಿನ ಮತ್ತೊಬ್ಬ ಬಾಲಕನಿದ್ದ. ಇವನ ತಂದೆತಾಯಿಗಳಿಗೆ ಶಿವ ಹಾಗೂ ಸೋದರಮಾವನ ಪರಿಚಯವಾಯಿತು.ಕೆಲವು ದಿವಸಗಳು ಕಳೆದ ಮೇಲೆ ಸುಶೀಲೆಯ ತಂದೆ-ತಾಯಂದಿರು ಮಾತನಾಡಿಕೊಂಡರು ''ಮಗಳು ಪ್ರಾಪ್ತವಯಸ್ಕಳಾಗಿದ್ದಾಳೆ. ಸೂಕ್ತ ಸಯಮದಲ್ಲಿ ವಿವಾಹ ಮಾಡುವುದು ನಮ್ಮ ಕರ್ತವ್ಯವಾಗಿದೆ. ಆದ್ದರಿಂದ ವರನನ್ನು ಹುಡುಕಬೇಕು'' ಹೀಗೆ ಪರಸ್ಪರ ಮಾತನಾಡಿಕೊಂಡಮೇಲೆ ಸುಶೀಲೆಯು ತಂದೆಗೆ ಹರ ಎಂಬ ವರನಿಗೆ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಬೇಕೆಂಬ ಆಸೆಯಿತ್ತು. ಅನೇಕ ದಿವಸಗಳಿಂದ ಪರಿಚಯವಿದ್ದ ಕಾರಣ, ಇನ್ನು ಕೆಲವು ಕಾರಣಗಳು ಇದ್ದಿದ್ದರಿಂದ ಹರನಿಗೆ ಹೇಗಾದರೂ ಮಾಡಿ ವಿವಾಹ ಮಾಡಬೇಕೆಂಬ ಉತ್ಕಟ ಅಪೇಕ್ಷೆಯು ಸುಶೀಲೆಯ ತಂದೆಯದ್ದಾಗಿತ್ತು. ಒಮ್ಮೆ ಹರನ ಮನೆಗೆ ಸುಶೀಲೆಯ ತಂದೆಯು ಹೋದನು. ಹರನ ತಂದೆ ತಾಯಂದಿರ ಬಳಿ ಹೀಗೆ ವಿಜ್ಞಾಪನೆ ಮಾಡಿದನು - ''ನಮ್ಮ ಮಗಳನ್ನು ನಿಮ್ಮ ಮಗನಿಗೆ ಕೊಟ್ಟು ವಿವಾಹ ಮಾಡಬೇಕೆಂಬ ಉತ್ಕಟ ಅಪೇಕ್ಷೆಯು

**ಸ ತಟಾಕೇ ರಮ್ಯದೇಶೇ ವಾಸಂ ಚಕ್ರತುರಾದರಾತ್ ।**
**ವಿವಾಹಕಾಲೇ ಸಂಪ್ರಾಪ್ತೇ ಸುಶೀಲಾಜನಕೋ ಹರಿಃ ॥೫೮॥**

ಹೀಗಿರುವಾಗ ಸುಶೀಲೆಯ ತಂದೆಯು ಮಗಳಿಗೆ ವಿವಾಹಕಾಲವು ಪ್ರಾಪ್ತವಾಗಿದೆ ಎಂದು ಯೋಚನೆ ಮಾಡಿದನು.

**ವಿವಾಹೋದ್ಯೋಗವಾನ್ ಜಾತೋ ನಿಶ್ಚಿಕಾಯ ಹರಂ ವರಮ್ ।**
**ಅಸಮರ್ಥಂ ಹರಂ ದೃಷ್ಟ್ವಾ ತನ್ಮಾತಾಪಿತರಾವುಭೌ ॥೫೯॥**

ಸುಶೀಲೆಯ ತಂದೆಯಾದ ಹರಿಯು ಮಗಳಿಗೆ ವಿವಾಹ ಮಾಡಬೇಕೆಂದು ಕ್ರಿಯಾಶೀಲನಾದನು. ಹರ ಎಂಬ ವರನು ಯೋಗ್ಯನಾಗಿದ್ದಾನೆಂದು ತಿಳಿದನು. ಹರನ ತಂದೆ - ತಾಯಿಯ ತನ್ನ ಮಗಳನ್ನು ಮಗನಿಗೆ ಕೊಡುತ್ತೇನೆಂದು ಹೇಳಿದನು. ಅವರು ನಮ್ಮ ಮಗನು ಅಸಮರ್ಥನಾಗಿದ್ದಾನೆಂದು ತಿಳಿಸಿದರು.

**ಯಯಾಚತುಃ ಶಿವಂ ಬದ್ಧಾಂಜಲೀ ವಿನಯಯುಕ್ತಕೌ ।**
**ಉಪಸ್ಥಿತೋ ವರಪಿತರಾವೂಚತುಃ ವಿವಾಹೋ ನೌ ಪುತ್ರಸ್ಯ ಶುಭಯಾ ಹರೇಃ ॥೬೦॥**

ಕೈಮುಗಿದು ವಿನಯಭರಿತರಾಗಿ ಶಿವನನ್ನು ಆ ತಂದೆತಾಯಿಯರು ಪ್ರಾರ್ಥಿಸಿದರು. ನಮ್ಮ ಮಗನಿಗೆ ಹರಿಯ ಮಗಳಾದ ಸುಶೀಲೆಯ ಜೊತೆ ವಿವಾಹವು ಉಪಸ್ಥಿತವಾಗಿದೆ. ಆದರೆ ಇದು ಸಾಧ್ಯವಿಲ್ಲ.

**ಸುಶೀಲಯಾ ಕನ್ಯಯಾಽಯಮಸಮರ್ಥಶ್ಚ ದೃಶ್ಯತೇ ।**
**ಅತೋ ದೇಯಃ ಶಿವಃ ಶ್ರೀಮಾನ್ ಲಗ್ನಕಾಲೇ ತ್ವಯಾ ವಿಭೋ ॥೬೧॥**
**ಲಗ್ನಂ ಭವಿಷ್ಯತಿ ತತೋ ದೇಯೋಽಸ್ಮಾಭಿಃ ಶಿವಸ್ತವ ।**

ಕನ್ಯೆಯಾದ ಸುಶೀಲೆಯ ಜೊತೆ ವಿವಾಹವಾಗಲು ನಮ್ಮ ಮಗನು ಅಸಮರ್ಥನಾಗಿದ್ದಾನೆ. ಆದ್ದರಿಂದ ಲಗ್ನಕಾಲದಲ್ಲಷ್ಟೇ ನಿಮ್ಮ ಮಗನನ್ನು ಕೊಡಿರಿ. ಅನಂತರ ಶಿವನನ್ನು ಹಿಂತಿರುಗಿಸುತ್ತೇವೆ.

## ಮಾತುಲ ಉವಾಚ

ಅವಶ್ಯಂ ಲಗ್ನಕಾಲೇऽಸೌ ಶಿವೋ ಗ್ರಾಹ್ಯಃ ಪ್ರಿಯಂವದಃ ।
ತತೋ ಮುಹೂರ್ತೇ ಸಂಪ್ರಾಪ್ತೇ ವಿವಾಹಮಕರೋಚ್ಛಿವಃ ॥೬೨॥

ಆಗ ಸೋದರಮಾವನು ಉತ್ತರಿಸಿದನು - ಅವಶ್ಯವಾಗಿ ನಮ್ಮ ಶಿವನನ್ನು ಕೊಡುತ್ತೇನೆ. ಲಗ್ನಕಾಲದಲ್ಲಿ ಇವನನ್ನು ಸ್ವೀಕರಿಸಿರಿ ಎಂದು ಪ್ರಿಯವಾದ ಮಾತುಗಳನ್ನು ಹೇಳಿದನು. ಅನಂತರ ಮುಹೂರ್ತವು ಪ್ರಾಪ್ತವಾದಾಗ ಶಿವನ ಜೊತೆ ವಿವಾಹವನ್ನು ಮಾಡಿದರು.

**ಟಿಪ್ಪಣಿ** - ಸುಶೀಲೆಯ ಜೊತೆ ಅಳಿಯನಿಗೆ ವಿವಾಹ ಮಾಡಿಸಬೇಕೆಂಬ ಉದ್ದೇಶದಿಂದ ಸೋದರಮಾವನು ಸುಶೀಲೆಯ ಮನೆಯ ಬಳಿಯೇ ಒಂದು ಕುಟೀರದಲ್ಲಿ ವಾಸ ಮಾಡಿದ. ಅಲ್ಲಿಯೇ ಸಮೀಪದಲ್ಲಿ 'ಹರ' ಎಂದ ಹೆಸರಿನ ಮತ್ತೊಬ್ಬ ಬಾಲಕನಿದ್ದ. ಇವನ ತಂದೆತಾಯಿಗಳಿಗೆ ಶಿವ ಹಾಗೂ ಸೋದರಮಾವನ ಪರಿಚಯವಾಯಿತು.ಕೆಲವು ದಿವಸಗಳು ಕಳೆದ ಮೇಲೆ ಸುಶೀಲೆಯ ತಂದೆ-ತಾಯಂದಿರು ಮಾತನಾಡಿಕೊಂಡರು ''ಮಗಳು ಪ್ರಾಪ್ತವಯಸ್ಕಳಾಗಿದ್ದಾಳೆ. ಸೂಕ್ತ ಸಯಮದಲ್ಲಿ ವಿವಾಹ ಮಾಡುವುದು ನಮ್ಮ ಕರ್ತವ್ಯವಾಗಿದೆ. ಆದ್ದರಿಂದ ವರನನ್ನು ಹುಡುಕಬೇಕು'' ಹೀಗೆ ಪರಸ್ಪರ ಮಾತನಾಡಿಕೊಂಡಮೇಲೆ ಸುಶೀಲೆಯು ತಂದೆಗೆ ಹರ ಎಂಬ ವರನಿಗೆ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಬೇಕೆಂಬ ಆಸೆಯಿತ್ತು. ಅನೇಕ ದಿವಸಗಳಿಂದ ಪರಿಚಯವಿದ್ದ ಕಾರಣ, ಇನ್ನು ಕೆಲವು ಕಾರಣಗಳು ಇದ್ದಿದ್ದರಿಂದ ಹರನಿಗೆ ಹೇಗಾದರೂ ಮಾಡಿ ವಿವಾಹ ಮಾಡಬೇಕೆಂಬ ಉತ್ಕಟ ಅಪೇಕ್ಷೆಯು ಸುಶೀಲೆಯ ತಂದೆಯದ್ದಾಗಿತ್ತು. ಒಮ್ಮೆ ಹರನ ಮನೆಗೆ ಸುಶೀಲೆಯ ತಂದೆಯು ಹೋದನು. ಹರನ ತಂದೆ ತಾಯಂದಿರ ಬಳಿ ಹೀಗೆ ವಿಜ್ಞಾಪನೆ ಮಾಡಿದನು - ''ನಮ್ಮ ಮಗಳನ್ನು ನಿಮ್ಮ ಮಗನಿಗೆ ಕೊಟ್ಟು ವಿವಾಹ ಮಾಡಬೇಕೆಂಬ ಉತ್ಕಟ ಅಪೇಕ್ಷೆಯು

ಇದೆ. ತಾವು ಅಂಗೀಕರಿಸಬೇಕು'' ಎಂದು. ಆದರೆ ಹರನ ತಂದೆ-ತಾಯಂದಿರಿಗೆ ಇದು ಇಷ್ಟವಾಗಲಿಲ್ಲ. ನಮ್ಮ ಮಗನು ಅಸಮರ್ಥನಾಗಿದ್ದಾನೆ. ನಿಮ್ಮ ಮಗಳ ಜೊತೆ ವಿವಾಹವು ಯುಕ್ತವಾಗುವುದಿಲ್ಲವೆಂದು ಹೇಳಿದರು. ಆದರೂ ಕೂಡ ಆ ಸುಶೀಲೆಯ ತಂದೆಯು ಬಹಳ ಬಲವಂತ ಮಾಡಿದನು. ಇಂಥ ದಿವಸ ವಿವಾಹ ಮಾಡಿಕೊಡುತ್ತೇನೆ. ಅದಕ್ಕೆ ತಾವೆಲ್ಲರೂ ಬಂದು ನನ್ನ ಮಗಳನ್ನು ತಮ್ಮ ಮಗನಿಗೆ ಸ್ವೀಕರಿಸಲೇಬೇಕು ಎಂದು ಪುನಃ ಪುನಃ ಒತ್ತಾಯ ಮಾಡಿದನು. ಸುಶೀಲೆಯ ತಂದೆಯು ಮನೆಗೆ ತೆರಳಿದನು. ಆಗ ಕೆಲವು ದಿವಸಗಳಿಂದ ಪರಿಚಯವಾದ ಹೊಸದಾಗಿ ಆಗಮಿಸಿದ ಶಿವನು ತನ್ನ ಮಗನಾದ ಹರನ ರೀತಿಯಲ್ಲಿಯೇ ಇದ್ದನು. ಅವನಿಗೆ ತಮ್ಮ ಮಗನ ವೇಷವನ್ನು ಹಾಕಿ ವಿವಾಹ ಮಾಡೋಣ ಎಂದು ಹರನ ತಂದೆ-ತಾಯಂದಿರು ಉಪಾಯ ಹೂಡಿದರು. ಶಿವನು ಇರುವ ಮನೆಗೆ ಹರನ ತಂದೆ-ತಾಯಂದಿರು ತೆರಳಿದರು. ಅತ್ಯಂತ ವಿನಯದಿಂದ ಶಿವನ ಬಳಿ ಹಾಗೂ ಶಿವನ ಸೋದರಮಾವನ ಬಳಿ ಹೀಗೆ ಪ್ರಾರ್ಥಿಸಿದರು - ''ಸುಶೀಲೆಯ ತಂದೆಯು ನನ್ನ ಮಗನಿಗೆ ಮಗಳನ್ನು ಕೊಡುತ್ತೇನೆಂದು ಒತ್ತಾಯ ಮಾಡುತ್ತಿದ್ದಾನೆ. ಆದರೆ ನನ್ನ ಮಗನು ಅವಳನ್ನು ವಿವಾಹವಾಗಲು ಸಮರ್ಥನಾಗಿರುವುದಿಲ್ಲ. ಹಾಗಾಗಿ ನೀವೇ ಇಂದು ನಮಗೆ ದೊಡ್ಡ ಉಪಕಾರವನ್ನು ಮಾಡಬೇಕು. ವಿವಾಹ ನಡೆಯುವ ಲಗ್ನ ಸಮಯದಲ್ಲಿ ಶಿವನು ಆಗಮಿಸಬೇಕು. ಲಗ್ನಕಾಲದಲ್ಲಿ ಆ ಸುಶೀಲೆಯ ಜೊತೆ ಮಾಂಗಲ್ಯಬಂಧನವನ್ನು ಮಾಡಬೇಕು. ಅನಂತರ ಮುಹೂರ್ತ ಮುಗಿದ ಮೇಲೆ ಶಿವನನ್ನು ಮರಳಿ ಕಳುಹಿಸುವ ಜವಾಬ್ದಾರಿಯನ್ನು ನಾವು ಭರಿಸುತ್ತೇವೆ''. ಇವರ ಪ್ರಾರ್ಥನೆಯನ್ನು ಕೇಳಿದ ಸೋದರ ಮಾವನು ಹೀಗೆ ಉತ್ತರಿಸಿದನು - ''ಅವಶ್ಯವಾಗಿ ಒಪ್ಪಿಕೊಳ್ಳುತ್ತೇನೆ. ಲಗ್ನ ಕಾಲದಲ್ಲಿ ನನ್ನ ಸೋದರಳಿಯನಾದ ಶಿವನನ್ನು ಕಳುಹಿಸುತ್ತೇನೆ, ಚಿಂತೆ ಮಾಡಬೇಡಿರಿ'' ಎಂಬ ಭರವಸೆಯ ಮಾತುಗಳನ್ನು ಹೇಳಿದನು. ಏಕೆಂದರೆ ಸೋದರಮಾವನಿಗೆ ಕೂಡ ಹೇಗಾದರೂ ಸುಶೀಲೆಯ ಜೊತೆ ವಿವಾಹ ಮಾಡಬೇಕೆಂಬ ಅಪೇಕ್ಷೆಯೂ ಇತ್ತು. ಮಾತು ಕೊಟ್ಟಂತೆ ಮುಹೂರ್ತ ಕಾಲದಲ್ಲಿ ಶಿವನನ್ನು ಕರೆದುಕೊಂಡು ಹೋದನು. ವಿವಾಹವು ಶಿವನ ಜೊತೆ ನಡೆಯಿತು. ವಿವಾಹಕ್ಕಿಂತ ಮೊದಲು ಹರನು ಇದ್ದನು.

ವಿವಾಹ ಸಮಯದಿಂದ ಶಿವನು ಸುಶೀಲೆಯ ಜೊತೆ ಇದ್ದನು. ಭಾಗವಹಿಸಿದ ಬಂಧು-ಬಾಂಧವರಿಗೆ ಸಂಶಯವೇ ಬರಲಿಲ್ಲ. ಸುಶೀಲೆಯು ತಂದೆ-ತಾಯಂದಿರಿಗೂ ಕೂಡ ಇವನು ಹರನಲ್ಲವೆಂದು ತಿಳಿಯಲೇ ಇಲ್ಲ. ಪ್ರತಿಯೊಬ್ಬರೂ ಕೂಡ ಶಿವನನ್ನು ಹರನೆಂದೇ ತಿಳಿದುಬಿಟ್ಟರು. ಮತ್ತು ವಿವಾಹವಾದ ದಿವಸ ಸುಶೀಲೆಯ ಜೊತೆ ಶಿವನು ಮಲಗಿಕೊಂಡನು. ಹಾಗಾಗಿ ಸುಶೀಲೆಗೆ ಇವನು ಹರನಲ್ಲ, ಹರನ ಜೊತೆ ತನಗೆ ವಿವಾಹವಾಗಿಲ್ಲ ಎಂಬ ಅರಿವಾಯಿತು.

ತತ್ರೈವ ಶಯನಂ ಚಕ್ರೇ ಸ ಸುಶೀಲಃ ಪ್ರಿಯಂವದಃ ॥೬೩॥
ಸ್ವಪ್ನೇ ಸಾ ಮಂಗಲಾಗೌರೀ ಮಾತೃರೂಪೇಣ ಭಾಸ್ವತಾ ।
ಸುಶೀಲಾಮವದತ್ಸಾಧ್ವೀ ಹಿತಂ ವಚನಮೇವ ಚ ॥೬೪॥

ಅನಂತರ ಮುಹೂರ್ತವು ಪ್ರಾಪ್ತವಾದಾಗ ವಿವಾಹವು ವಿಜೃಂಭಣೆಯಿಂದ ನಡೆಯಿತು. ವಿವಾಹದ ದಿವಸ ಸುಶೀಲೆಯ ಜೊತೆ ಆ ಶಿವನು ಮಲಗಿದ್ದನು. ಸ್ವಪ್ನದಲ್ಲಿ ಸುಶೀಲೆಗೆ ಮಂಗಳಗೌರಿಯು ಕಾಣಿಸಿಕೊಂಡಳು. ಮಾತೃರೂಪದಿಂದ ಶೋಭಿಸುತ್ತಿದ್ದಳು. ಅಂಥ ಮಂಗಳಗೌರಿಯು ಸುಶೀಲೆಯನ್ನು ಕುರಿತು ಹಿತವಾದ ವಚನವನ್ನು ಹೇಳಿದಳು.

## ಗೌರ್ಯುವಾಚ

ಸುಶೀಲೇ ತವ ಗೌರಾಂಗಿ ಭರ್ತುರ್ದಂಶಾರ್ಥಮಾಗತಃ ।
ಮಹಾನ್ ಭುಜಂಗ ಉತ್ತಿಷ್ಠ ದುಗ್ಧಂ ಸ್ಥಾಪಯ ತತ್ಪುರಃ ॥೬೫॥

ಮಂಗಳಗೌರಿಯು ಹೇಳುತ್ತಾಳೆ - ಎಲೈ ಸುಶೀಲೆಯೇ ! ಶುಭ್ರವರ್ಣದವಳೇ! ನಿನ್ನ ಗಂಡನನ್ನು ಕಚ್ಚಲು ದೊಡ್ಡ ಸರ್ಪವು ಆಗಮಿಸುತ್ತಿದೆ. ಎದ್ದೇಳು ! ಆ ಸರ್ಪದ ಮುಂದೆ ಹಾಲಿನ ಪಾತ್ರೆಯನ್ನು ಇಡು.

**ಟಿಪ್ಪಣಿ** - ಈಗ ಶಿವನಿಗೆ ೧೬ ವರ್ಷ. ಗಣಪತಿಯ ಶಾಪದಂತೆ ಹಾವು ಕಚ್ಚುತ್ತದೆ.

**ಘಟಂ ಚ ಸ್ಥಾಪಯಾಶು ತ್ವಂ ತನ್ಮಧ್ಯೇ ಸ ಗಮಿಷ್ಯತಿ ।**
**ಕೂರ್ಪಾಸಮಂಗಾನ್ನಿಷ್ಕಾಸ್ಯ ಬಂಧನೀಯಸ್ತ್ವಯಾ ಘಟಃ ॥೬೬॥**

ದೊಡ್ಡದಾದ ಒಂದು ಘಟವನ್ನು ತಂದಿಡು. ಸರ್ಪವು ಆ ಘಟದ ಒಳಗಡೆ ಹೋಗುತ್ತದೆ. ಅದರ ಬಾಯಿಗೆ ನಿನ್ನ ರವಿಕೆಯ ಬಟ್ಟೆಯನ್ನು ಭದ್ರವಾಗಿ ಕಟ್ಟಿಬಿಡು.

**ಪ್ರಾತರುತ್ಥಾಯ ದೇಹಿ ತ್ವಂ ಮಾತ್ರೇ ವಾಯನಕಂ ಶುಭಮ್ ।**
**ಇತಿ ಗೌರೀವಾಚಃ ಶ್ರುತ್ವಾ ಸುಶೀಲಾ ಕ್ಷಣಮುತ್ಥಿತಾ ॥೬೭॥**

ಬೆಳಿಗ್ಗೆ ಎದ್ದು ನಿನ್ನ ತಾಯಿಗೆ ಆ ಪಾತ್ರೆಯನ್ನು ವಾಯನದಾನವನ್ನಾಗಿ ನೀಡು. ಹೀಗೆ ಹೇಳಿ ಅಂತರ್ಧಾನಳಾದಳು. ಮಂಗಳಗೌರಿಯ ಮಾತಿನಂತೆ ಸುಶೀಲೆಯು ಆ ಕ್ಷಣದಲ್ಲಿಯೇ ಎಚ್ಚೆತ್ತುಕೊಂಡಳು.

**ದದರ್ಶಾಗ್ನೇ ನಿಃಶ್ವಸಂತಂ ಕೃಷ್ಣಸರ್ಪಂ ಮಹಾಭಯಮ್ ।**
**ತತಶ್ಚಕಾರ ಗೌರ್ಯುಕ್ತಂ ಪ್ರವೃತ್ತಾ ನಿದ್ರಿತುಂ ತತಃ ॥೬೮॥**

ಎದ್ದು ನೋಡುವಷ್ಟರಲ್ಲಿ ತನ್ನೆದುರು ಭಯಂಕರವಾದ ಭುಸುಗುಟ್ಟುತ್ತಿರುವ ಕೃಷ್ಣಸರ್ಪವಿತ್ತು. ಸುಶೀಲೆಯು ಧೈರ್ಯವನ್ನು ತಂದುಕೊಂಡು ಮಂಗಳಗೌರಿಯು ಹೇಳಿದಂತೆ ಹಾಲಿನ ಬಟ್ಟಲನ್ನು ಅದರ ಮುಂದಿಟ್ಟು ಘಟದಲ್ಲಿ ಆ ಹಾವನ್ನು ಬಂಧಿಸಿ ಮಲಗಿದಳು.

**ಉವಾಚ ವರ ಆಸನ್ನಃ ಕ್ಷುಲ್ಲಗ್ನಾ ಮಹತೀ ಮಮ ।**
**ಭಕ್ಷಣಾಯ ತು ದೇಹಿ ತ್ವಂ ಲಡ್ಡುಕಾದಿಕಮುತ್ತಮಮ್ ॥೬೯॥**

ಸ್ವಲ್ಪ ಹೊತ್ತಿನಲ್ಲಿ ಆ ವರನಿಗೆ ಎಚ್ಚರವಾಯಿತು. ಬಹಳ ಹಸಿವೆಯಿಂದ ಪೀಡಿತನಾಗಿದ್ದನು. ತನ್ನ ಹೆಂಡತಿಯನ್ನು ಎಬ್ಬಿಸಿ, ಪ್ರಿಯೆ ! ನನಗೆ ಬಹಳ ಹಸಿವಾಗುತ್ತಿದೆ. ತಿನ್ನಲು ಉಂಡೆ ಮೊದಲಾದವುಗಳನ್ನು ನನಗೆ ನೀಡು ಎಂದು ಹೇಳಿದನು.

**ಶ್ರುತ್ವೇತಿ ವಾಕ್ಯಂ ಪಾತ್ರೇ ಸಾ ದದೌ ಲಡ್ಡುಕಮುತ್ತಮಮ್ ।**
**ಭಕ್ಷಯಿತ್ವಾ ಶಿವೋ ಹೈಮೇ ತಸ್ಮಿನ್ ಪಾತ್ರೇಽಂಗುಲೀಯಕಮ್ ॥೭೦॥**

ದತ್ವಾ ತತ್‌ಸ್ಥಾಪಯಾಮಾಸ ಸ್ಥಲೇ ಗುಪ್ತೇ ಶುಭಾನನಃ ।
ಸುಖೇನ ಶಯನಂ ಚಕ್ರೇ ಪೃಥಿವ್ಯಾಂ ಸರ್ವಕೋವಿದಃ ॥೭೦॥

ಅನಂತರ ಆ ಸುಶೀಲೆಯು ಪತಿಯ ಮಾತಿನಂತೆ ರುಚಿಕರವಾದ ಉಂಡೆಗಳನ್ನು ತಿನ್ನಲು ಪತಿಗೆ ನೀಡಿದಳು. ಶಿವನು ಅದನ್ನು ತಿಂದು ಅದೇ ಬಂಗಾರದ ಪಾತ್ರೆಯಲ್ಲಿ ತಾನು ಹಾಕಿಕೊಂಡ ಉಂಗುರವನ್ನು ಯಾರಿಗೂ ತಿಳಿಯದಂತೆ ಇಟ್ಟನು. ಅನಂತರ ಸರ್ವಕೋವಿದನಾದ ಅವನು ಸುಖವಾಗಿ ಮಲಗಿದನು.

ತತಃ ಪ್ರಭಾತಸಮಯೇ ಶಿವ ಆಗಾತ್‌ಗೃಹಂ ಸ್ವಕಮ್ ।
ಸ್ನಾನಶುದ್ಧಾ ಸುಶೀಲಾ ಸಾ ಮಾತ್ರೇ ವಾಯನಕಂ ದದೌ ॥೭೧॥

ಅನಂತರ ಪ್ರಭಾತಕಾಲದಲ್ಲಿ ಶಿವನು ತನ್ನ ಮನೆಗೆ ಆಗಮಿಸಿದನು. ಸ್ನಾನವನ್ನು ಮಾಡಿ ಶುದ್ಧಳಾದ ಸುಶೀಲೆಯು ತನ್ನ ತಾಯಿಗೆ ವಾಯನದಾನವನ್ನು ನೀಡಿದಳು.

ಮಾತಾ ದದರ್ಶ ತನ್ಮಧ್ಯೇ ಮುಕ್ತಾಹಾರಮನುತ್ತಮಮ್ ।
ದದೌ ಪ್ರಿಯಾಯೈ ಕನ್ಯಾಯೈ ಸಹಸಾ ತುಷ್ಟಮಾನಸಾ ॥೭೩॥

ರವಿಕೆಯಿಂದ ಕಟ್ಟಿದ ಆ ಪಾತ್ರೆಯನ್ನು ತೆಗೆದು ತಾಯಿಯು ನೋಡಿದಳು. ಒಂದು ಮುತ್ತಿನ ಹಾರವಿತ್ತು. ಅದನ್ನು ತೆಗೆದು ತನ್ನ ಪ್ರಿಯಳಾದ ಮಗಳಿಗೆ ಸಂತೋಷ ಮನಸ್ಸಿನಿಂದ ನೀಡಿದಳು.

ಕ್ರೀಡಾಕಾಲೇ ತು ಸಂಪ್ರಾಪ್ತೇ ಹರ ಆಗಾತ್ತು ಮಂಡಪೇ ।
ಆದೇಶಯತ್ಸುಶೀಲಾಂ ತಾಂ ಕ್ರೀಡಾರ್ಥಂ ಜನನೀ ತತಃ ॥೭೪॥

ಆಟದ ಸಮಯವು ಬಂದಾಗ ಮಂಟಪಕ್ಕೆ ಹರನು ಬಂದನು. ಹರನ ಜೊತೆ ಆಟವಾಡಲು ತಾಯಿಯು ಸುಶೀಲೆಗೆ ಆಜ್ಞೆ ಮಾಡಿದಳು.

ಸುಶೀಲೋವಾಚ

ನಾಯಂ ವರೋ ಮೇ ಜನನಿ ಯೇನ ಪಾಣಿಗ್ರಹಃ ಕೃತಃ ।
ಅನೇನ ಸಹ ನಾಸ್ತೀಹ ಕ್ರೀಡನೇಚ್ಛಾ ತಥಾ ನ ಮೇ ॥೭೫॥

ಸುಶೀಲೆಯು ತನ್ನ ತಾಯಿಗೆ ಹೇಳಿದಳು. ಅಮ್ಮಾ! ಇವನು ನನ್ನ ಪತಿಯಲ್ಲ. ಯಾರ ಪಾಣಿಗ್ರಹಣವನ್ನು ನಾನು ಮಾಡಿರುವೆನೋ, ಅವನು ಇವನಲ್ಲ. ಇವನ ಜೊತೆ ಆಟವಾಡಲು ನನಗೆ ಇಚ್ಛೆಯು ಬರುತ್ತಿಲ್ಲ.

ಇತಿ ಶ್ರುತ್ವಾ ಸಮಾಕ್ರಾಂತೌ ಚಿಂತಯಾ ಪಿತರೌ ತತಃ ।
ಅನ್ನದಾನಮುಪಾಯಂ ಚ ಕನ್ಯಾಪತಿವಿಶೋಧನೇ ॥೭೬॥

ಮಗಳ ನಿಷ್ಠುರವಾದ ಮಾತುಗಳನ್ನು ಕೇಳಿ, ತಂದೆ-ತಾಯಿಯರು ಚಿಂತಾಕ್ರಾಂತರಾದರು. ತಮ್ಮ ಅಳಿಯ ಎಲ್ಲಿ ಹೋದನೆಂದು ಹುಡುಕಲು ಪ್ರಾರಂಭಿಸಿದರು. ಅದಕ್ಕಾಗಿ ಅನ್ನಸತ್ರವನ್ನು ಏರ್ಪಾಡು ಮಾಡಿದರು. ಅನ್ನಸತ್ರದಲ್ಲಿ ಭಾಗವಹಿಸುವ ಹೊಸ ವ್ಯಕ್ತಿಗಳಲ್ಲಿ ಯಾರು ತನ್ನ ಅಳಿಯನಾಗಿದ್ದನೆಂದು ಹುಡುಕುತ್ತಲೇ ಇದ್ದರು.

**ಟಿಪ್ಪಣಿ** - ಮಗಳು ಇಷ್ಟು ಹೇಳುವ ತನಕವೂ ತಂದೆತಾಯಿಯರಿಗೆ ಹರನು ಅಳಿಯನಲ್ಲ ಎಂಬ ವಿಚಾರ ತಿಳಿದೇ ಇರಲಿಲ್ಲ. ಈಗ ಮಗಳ ಮಾತು ಕೇಳಿ ಆಶ್ಚರ್ಯಚಕಿತರಾದರು.

ತದಾರಭ್ಯ ಚಕ್ರತುಸ್ತೌ ಪುರಾಣೋಕ್ತವಿಧಾನತಃ ।
ಸುಶೀಲಾಪಾದಯೋಶ್ಚಕ್ರೇ ಕ್ಷಾಲನಂ ಮುದ್ರಿಕಾನ್ವಿತಾ ॥೭೭॥
ಜಲಧಾರಾಂ ದದೌ ಮಾತಾ ಚಂದನಂ ಪುತ್ರಕೋ ಹರೇಃ ।
ಹರಿರ್ದದೌ ಚ ತಾಂಬೂಲಂ ಬುಭುಜುಸ್ತತ್ರ ಮಾನವಾಃ ॥೭೮॥

ಅಂದಿನಿಂದ ಪುರಾಣದಲ್ಲಿ ಹೇಳಿದಂತೆ ಹರಿದಂಪತಿಗಳು ಅನ್ನಸತ್ರವನ್ನು ಏರ್ಪಾಡು ಮಾಡಿದರು. ಮಗಳಾದ ಸುಶೀಲೆಯು ಉಂಗುರ ಹಾಕಿದ ಕೈಯಿನಿಂದ ಎಲ್ಲರ ಪಾದಗಳನ್ನು ತೊಳೆಯುತ್ತಿದ್ದಳು. ತಾಯಿಯು ನೀರನ್ನು ಹಾಕುತ್ತಿದ್ದಳು. ಹರಿಯ ಮಗನು ಗಂಧವನ್ನು ಹಚ್ಚುತ್ತಿದ್ದನು. ತಂದೆಯಾದ ಹರಿಯು ಎಲ್ಲರಿಗೂ ತಾಂಬೂಲವನ್ನು ಕೊಡುತ್ತಿದ್ದನು. ಬಂದ ಮಾನವರೆಲ್ಲರೂ ತೃಪ್ತಿಯಾಗುವಷ್ಟು ಊಟವನ್ನು ಮಾಡುತ್ತಿದ್ದರು.

ಇತಿ ರೀತ್ಯಾನ್ನದಾನಂ ತತ್‌ಪ್ರವೃತ್ತಂ ಭಿಕ್ಷುಸೌಖ್ಯದಮ್ ।
ತಾವುಭೌ ಪ್ರಸ್ಥಿತೌ ಕಾಶ್ಯಾಂ ಪ್ರಾಪ್ತೌ ಕಾಶೀಂ ಸುಖಪ್ರದಾಮ್ ॥೭೯॥

ಹೀಗೆ ಎಲ್ಲ ಭಿಕ್ಷುಗಳಿಗೆ ಸುಖಪ್ರದವಾದ ಅನ್ನದಾನವು ಊರಿನಲ್ಲಿ ಪ್ರಾರಂಭವಾಯಿತು. ಹೀಗಿರುವಾಗ ಸೋದರಮಾವ ಮತ್ತು ಸೋದರಳಿಯ ಇಬ್ಬರೂ ತಾವಿರುವ ಸ್ಥಳದಿಂದ ಕಾಶೀಯಾತ್ರೆಗೆ ಹೊರಟರು.

ನಿರ್ಮಲಾಂಭಸಿ ಗಂಗಾಯಾಃ ಸ್ನಾನಂ ಚಕ್ರತುರಾದರಾತ್ ।
ಸ್ವರ್ಗದ್ವಾರಂ ಪ್ರಸ್ಥಿತೌ ತೌ ಕುರ್ವಂತೌ ಧರ್ಮಮುತ್ತಮಮ್ ॥೮೦॥

ಅತ್ಯಂತ ನಿರ್ಮಲವಾದ ಪಾಪಪರಿಹಾರಕವಾದ ಗಂಗೆಯಲ್ಲಿ ಸ್ನಾನ ಮಾಡಿದರು. ಉತ್ತಮವಾದ ಧರ್ಮವನ್ನು ಆಚರಣೆ ಮಾಡುತ್ತಾ ಹರಿದ್ವಾರಕ್ಕೆ ತೆರಳಿದರು.

ಪೀತಾಂಬರಾಣಿ ದದತುರ್ಭಿಕ್ಷುಕಾಣಾಂ ಗೃಹೇ ಗೃಹೇ ।
ಆಶಿಷಶ್ಚ ದದುಸ್ತಸ್ಮೈ ಚಿರಂಜೀವೋ ಭವೇತಿ ತೇ ॥೮೧॥

ಅಲ್ಲಿರುವ ಎಲ್ಲ ಭಿಕ್ಷುಗಳ ಮನೆ ಮನೆಗೆ ತೆರಳಿ, ಪೀತಾಂಬರಗಳನ್ನು ನೀಡಿದರು. ಚಿರಂಜೀವೀ ಭವ ! ಎಂಬುದಾಗಿ ಅವರೆಲ್ಲರೂ ಹರನಿಗೆ ಆಶೀರ್ವಾದವನ್ನು ಮಾಡಿದರು.

ವಿಶ್ವೇಶ್ವರಂ ಸಮಾಯಾತೌ ನತ್ವಾಸ್ತುತ್ವಾ ಪುನಃ ಪುನಃ ।
ಸ್ವಯಂ ಗೃಹಂ ಪ್ರಸ್ಥಿತೌ ತೌ ಶಿವೋ ಮಾರ್ಗೇ ತತೋಽವದತ್ ॥೮೨॥

ಮರಳಿ ಬರುವಾಗ ಮಾರ್ಗಮಧ್ಯದಲ್ಲಿ ಕಾಶೀಕ್ಷೇತ್ರವು ಬಂದಿತು. ಅಲ್ಲಿರುವ ವಿಶ್ವೇಶ್ವರನನ್ನು ಸಂದರ್ಶಿಸಿ, ನಮಸ್ಕಾರವನ್ನು ಮಾಡಿ, ಪುನಃ ಪುನಃ ಸ್ತೋತ್ರವನ್ನು ಮಾಡುತ್ತಾ, ತಮ್ಮ ಮನೆಗೆ ಹಿಂತಿರುಗಿದರು. ಆಗ ಮಾರ್ಗಮಧ್ಯದಲ್ಲಿ ಹೀಗೆ ಆ ಶಿವನು ಹೇಳಿದನು.

ಶಿವ ಉವಾಚ

ಕಾಯೇ ಮೇ ಕಿಂಚಿದಸ್ವಾಸ್ಥ್ಯಂ ಮಾತುಲಂ ಪ್ರತಿಭಾತಿ ಹಿ ।
ತತಃ ಪ್ರಾಣೋತ್ಕ್ರಮೇ ತಸ್ಯ ಯಮದೂತಾ ಉಪಸ್ಥಿತಾಃ ॥೮೩॥

ಮಂಗಲಾಗೌರಿಕಾ ಚಾಪಿ ತೇಷಾಂ ಯುದ್ಧಮಭೂನ್ಮಹತ್ ।
ಜಿತ್ವಾ ತಾನ್ಸಮಂಗಲಾ ಪ್ರಾಣಾನ್ ದದೌ ತಸ್ಮೈ ಶಿವಾಯ ಚ ॥೮೪॥

ಮಾವ ನನ್ನ ದೇಹದಲ್ಲಿ ವಿಚಿತ್ರ ಸಂಕಟವಾಗುತ್ತದೆ ಎಂದು ಹೇಳುವಷ್ಟರಲ್ಲಿ ಮೂರ್ಛೆ ಹೋದನು. ಅವನ ಪ್ರಾಣೋತ್ಕ್ರಮಣವು ಆಯಿತು. ಆಗ ಯಮದೂತರು ಅಲ್ಲಿಗೆ ಆಗಮಿಸಿದರು. ಮಂಗಳಗೌರಿಯ ಜೊತೆ ಯಮದೂತರಿಗೆ ಯುದ್ಧವಾಯಿತು. ಯಮದೂತರನ್ನು ಮಂಗಳಗೌರಿಯು ಗೆದ್ದುಬಿಟ್ಟಳು. ಆ ಶಿವನ ಪ್ರಾಣಗಳನ್ನು ಯಮದೂತರಿಂದ ಕಸಿದುಕೊಂಡು, ಪುನಃ ಶಿವನಿಗೆ ನೀಡಿದಳು.

ಶಿವೋऽಕಸ್ಮಾದುತ್ಥಿತೋऽಸೌ ಮಾತುಲಂ ಪ್ರತ್ಯುವಾಚ ಹ ।
ಸ್ವಪ್ನೇ ಯುದ್ಧಂ ಮಯಾ ದೃಷ್ಟಂ ಮಂಗಲಾಯಮಭೃತ್ಯಯೋಃ ॥೮೫॥

ಆ ಶಿವನು ಅಕಸ್ಮಾತ್ತಾಗಿ ಮೇಲೆದ್ದನು. ನಿದ್ದೆಯಂತೆ ಎಚ್ಚೆತ್ತವನಂತೆ ಎದ್ದು ತನ್ನ ಸೋದರಮಾವನನ್ನು ಕುರಿತು ಹೇಳಿದನು. ಸ್ವಪ್ನದಲ್ಲಿ ಯಮಭಟರಿಗೂ ಮಂಗಳಗೌರಿಗೂ ಯುದ್ಧವಾದುದನ್ನು ನಾನು ಕಂಡೆನು.

ಜಿತಾಸ್ತೇ ಮಂಗಲಾಗೌರ್ಯಾ ತತೋऽಹಂ ಶಯನಚ್ಯುತಃ ।

ಆಗ ಮಂಗಳಗೌರಿಯೇ ಗೆದ್ದಳು. ನನಗೆ ಪ್ರಾಣವನ್ನು ದಾನ ಮಾಡಿದಳು. ಅನಂತರ ನಿದ್ದೆಯಿಂದ ನಾನು ಮೇಲೆದ್ದೆನು ಎಂದು ಭಾವುಕನಾಗಿ ಹೇಳಿದನು.

ಮಾತುಲ ಉವಾಚ

ಯಜ್ಜಾತಂ ಶಿವ ತಜ್ಜಾತಂ ನ ಸ್ಮರ್ತವ್ಯಂ ತ್ವಯಾ ಪುನಃ ॥೮೬॥
ಗಚ್ಛಾವ ಆವಾಂ ನಗರೇ ಪಿತರೌ ದ್ರಷ್ಟುಮುತ್ಸುಕೌ ।
ಪ್ರಸ್ಥಿತೌ ತೌ ತತಸ್ತಸ್ಮಾತ್ಪ್ರತಿಷ್ಠಾಪುರಮಾಪತುಃ ॥೮೭॥

ಮಗು ! ಏನು ನಡೆಯಿತೋ ಅದು ರುದ್ರದೇವರೇ ನಿಂತು ಮಾಡಿದ್ದಾರೆ. ಪುನಃ ಅದನ್ನು ನೆನಪು ಮಾಡಿಕೊಳ್ಳಬೇಡ. ಬಾ ನಮ್ಮ ನಗರಕ್ಕೆ ಹಿಂತಿರುಗೋಣ ಎಂದು ಹೇಳಿದನು. ಅವರಿಬ್ಬರು ತಂದೆ-ತಾಯಂದಿರನ್ನು ನೋಡುವ ಔತ್ಸುಕ್ಯದಿಂದ ತಮ್ಮ ನಗರಕ್ಕೆ ತೆರಳಿದರು. ಪುನಃ ಮಧ್ಯದಲ್ಲಿ ಪ್ರತಿಷ್ಠಾ ನಗರವು ಪ್ರಾಪ್ತವಾಯಿತು.

ರಮ್ಯೇ ತಡಾಗೇ ತತ್ರೈತೌ ಪಾಕಾರಂಭಂ ವಿಚಕ್ರತುಃ ।
ದೃಷ್ಟ್ವೈತೌ ಹರಿದಾಸೀಭಿರ್ಧೈರ್ಯೌದಾರ್ಯಧರೌ ಶುಭೌ ॥೮೮॥

ಆ ಪ್ರತಿಷ್ಠಾ ನಗರದಲ್ಲಿ ರಮ್ಯವಾದ ಸರೋವರದ ಬಳಿ ಸ್ವಯಂಪಾಕವನ್ನು ಮಾಡಿಕೊಳ್ಳಲು ಉದ್ಯುಕ್ತರಾಗುತ್ತಿದ್ದರು. ಇವರಿಬ್ಬರನ್ನು ಹರಿಯ ಆಳುಗಳು ನೋಡಿದರು. ಧೈರ್ಯ, ಔದಾರ್ಯಗಳನ್ನು ಹೊಂದಿರುವ, ಅತ್ಯಂತ ಶುಭಲಕ್ಷಣವನ್ನು ಹೊಂದಿದ ಇವರಿಬ್ಬರನ್ನು ಕಂಡರು.

ದಾಸ್ಯ ಊಚುಃ

ಅನ್ನದಾನಂ ಹರೇರ್ಗೇಹೇ ಪ್ರವೃತ್ತಂ ತತ್ರ ಗಮ್ಯತಾಮ್ ।

ಆಳುಗಳು ಹೇಳುತ್ತಾರೆ - ಪೂಜ್ಯರೇ ! ಹರಿಯು ತನ್ನ ಮನೆಯಲ್ಲಿ ಅನ್ನದಾನವನ್ನು ಏರ್ಪಡಿಸಿದ್ದಾನೆ. ನೀವಿಬ್ಬರೂ ಆ ಅನ್ನದಾನದಲ್ಲಿ ಪಾಲ್ಗೊಳ್ಳಿರಿ.

ಉಭಾವೂಚತುಃ

ಭೋ ದಾಸ್ಯೋ ಯಾತ್ರಿಕಾವಾವಾಂ ಗಚ್ಛಾವೋ ನ ಕ್ವಚಿದ್ಗೃಹೇ ॥೮೯॥
ಇತಿ ಶ್ರುತ್ವಾತಯೋರ್ವಾಕ್ಯಂ ದಾಸ್ಯೋ ಜಗ್ಮುಃ ಸ್ವಕಂ ಗೃಹಮ್ ।
ಸ್ವಸ್ವಾಮಿನಿಕಟೇ ವಾಕ್ಯಮವದನ್ ಸಾದರಂ ತದಾ ॥೯೦॥

ಹರಿಯ ದಾಸರೇ ! ನಾವು ಯಾತ್ರಿಕರು. ನಾವು ಮತ್ತೊಬ್ಬರ ಮನೆಯಲ್ಲಿ ಊಟವನ್ನು ಮಾಡುವುದಿಲ್ಲ. ನಾವು ಸ್ವಯಂಪಾಕಿಗಳು ಎಂದು ಉತ್ತರಿಸಿದರು. ಇವರಿಬ್ಬರ ಮಾತನ್ನು ಕೇಳಿ ಆ ದಾಸರು ಹರಿಯ ಬಳಿ ಈ ನಡೆದ ಘಟನೆಯನ್ನು ಸಂಪೂರ್ಣವಾಗಿ ಆದರದಿಂದ ತಿಳಿಸಿದರು.

ಸರ್ವಂ ದಾಸೀವಚಃ ಶ್ರುತ್ವಾತದರ್ಥಂ ಪ್ರಭುರಾದರಾತ್ ।
ಪ್ರೇಷಯಾಮಾಸ ಹಸ್ತ್ಯಾದಿರತ್ನವಸ್ತ್ರಾಣಿ ಭೂರಿಶಃ ॥೯೧॥

ತಮ್ಮ ಪರಿಚಾರಕರ ಮಾತುಗಳನ್ನು ಕೇಳಿದ ಆ ಹರಿಯು ಅವರಿಬ್ಬರು ಇರುವೆಡೆ ಆನೆ, ರತ್ನ, ವಸ್ತ್ರ ಎಲ್ಲವನ್ನೂ ಕೂಡ ಕಳುಹಿಸಿದನು.

ತದ್‌ದೃಷ್ಟ್ವಾ ವಿಸ್ಮಿತೌ ತೌ ಚ ಜಗ್ಮತುಶ್ಚ ಹರೇರ್ಗೃಹಮ್ ।
ಹರಿರ್ಮಾತುಲಮಭ್ಯರ್ಚ್ಯ ಶಿವಂ ಪೂಜಿತುಮಾಗತಃ ॥೯೨॥

ಸೋದರ ಮಾವ ಹಾಗೂ ಸೋದರಳಿಯನಿಗೆ ಇವೆಲ್ಲವನ್ನೂ ನೋಡಿ ಬಹಳ ಆಶ್ಚರ್ಯವಾಯಿತು. ಸಂತೋಷದಿಂದ ಹರಿಯ ಮನೆಗೆ ಇಬ್ಬರು ತೆರಳಿದರು. ಹರಿಯು ಸೋದರಮಾವನನ್ನು ಮೊದಲು ಪೂಜಿಸಿ, ಅನಂತರ ಶಿವನನ್ನು ಪೂಜಿಸಲು ಆಗಮಿಸಿದನು.

ಕ್ಷಾಲಯಂತಿ ಚ ಸಾ ಕನ್ಯಾ ಚರಣೌ ತಸ್ಯ ಸತ್ರಪಾ ।
ಅಭೂದ್ವರೋ ಮೇಽಯಮಿತಿ ಜನನೀಂ ಪ್ರತ್ಯುವಾಚ ಹ ॥೯೩॥

ಕನ್ಯೆಯಾದ ಆ ಸುಶೀಲೆಯು ಶಿವನ ಪಾದಗಳನ್ನು ಪ್ರಾಕ್ಷಾಲನೆ ಮಾಡಿದಳು. ಅವನ ಕಾಲುಗಳನ್ನು ಮುಟ್ಟಿದ ಕೂಡಲೇ ಇವನೇ ನನ್ನ ಪತಿ ಎಂದು ತಿಳಿದುಬಿಟ್ಟಳು. ತನ್ನ ತಾಯಿಯ ಬಳಿ ಬಂದು ಇವನೇ ನನ್ನ ಒಡೆಯ ಎಂದು ತಿಳಿಸಿದಳು.

ಹರಿಃ ಪಪ್ರಚ್ಛ ಸಾಶ್ಚರ್ಯಂ ಶಿವಂ ಮಂಗಲದರ್ಶನಮ್ ।

ಶುಭದರ್ಶನನಾದ ಆ ಶಿವನನ್ನು ಕುರಿತು ಹರಿಯು ಆಶ್ಚರ್ಯದಿಂದ ಪ್ರಶ್ನೆ ಮಾಡಿದನು.

ಹರಿರುವಾಚ

ಕಿಂಚಿಚ್ಚಿಹ್ನಂ ತವಾಸ್ತ್ಯತ್ರ ಬ್ರೂಹಿ ಮೇ ಶಿವ ದರ್ಶಯ ॥೯೪॥

ಶಿವನೇ ! ಈ ಮನೆಯಲ್ಲಿ ನಿನಗೆ ಸಂಬಂಧಪಟ್ಟ ಯಾವುದಾದರೂ ಚಿಹ್ನೆಯು ಇದೆಯೇ ಇದನ್ನು ನನಗೆ ತಿಳಿಸು. ಅಥವಾ ತೋರಿಸು.

ಹರೇಸ್ತು ತದ್ವಚಃ ಶ್ರುತ್ವಾ ಶಿವಃ ಸಂತುಷ್ಟಮಾನಸಃ ।
ಮಮೇದಂ ಚಿಹ್ನಮಸ್ತೀಹೇತ್ಯುಕ್ತ್ವಾ ತದ್‌ಗೃಹಮಾಗತಃ ॥೯೫॥

ಶಿವನು ಹರಿಯ ಮಾತನ್ನು ಕೇಳಿ, ಬಹಳ ಸಂತುಷ್ಟನಾದನು. ಹೌದು ! ನಾನು ಯಾರಿಗೂ ತಿಳಿಯದಂತೆ ಒಂದು ಚಿಹ್ನೆಯನ್ನು ಇಲ್ಲಿ ಇಟ್ಟಿದ್ದೇನೆ ಎಂಬುದಾಗಿ ಮನೆಯ ಒಳಗೆ ಆಗಮಿಸಿದನು.

ತತ ಆನೀಯ ತತ್ಪಾತ್ರಂ ದರ್ಶಯಾಮಾಸ ಸಾದರಮ್ ।
ತತ್ಪಾತ್ರಂ ಚ ಹರಿರ್ದೃಷ್ಟ್ವಾ ಕನ್ಯಾದಾನಂ ಚಕಾರ ಸಃ ॥೯೬॥

ಪಾತ್ರೆಯ ಒಳಗೆ ತಾನು ಇಟ್ಟಿರುವ ಉಂಗುರವನ್ನು ತೆಗೆದು ತೋರಿಸಿದನು. ಅದನ್ನು ಹರಿಯು ನೋಡಿ ಸಂತೋಷ ಪಟ್ಟನು. ತನ್ನ ಅನ್ನದಾನವು ಸಾರ್ಥಕವಾಯಿತೆಂದು- ಕೊಂಡನು. ಅವನಿಗೆ ಕನ್ಯಾದಾನವನ್ನು ಮಾಡಿದನು.

ದದೌ ರತ್ನಾನಿ ವಸ್ತ್ರಾಣಿ ಸುವರ್ಣಾನಿ ಬಹೂನ್ಯಪಿ ।
ತಾಮಾದಾಯ ಪ್ರಸ್ಥಿತೌ ತೌ ದದತೋ ಬಹುಲಂ ಧನಮ್ ॥೯೭॥

ಆ ವರನಿಗೆ ರತ್ನಗಳನ್ನೂ, ವಸ್ತ್ರಗಳನ್ನೂ, ಸುವರ್ಣಗಳನ್ನೂ ಬಹುಸಂಖ್ಯೆಯಲ್ಲಿ ನೀಡಿದನು. ಇದನ್ನೆಲ್ಲಾ ತೆಗೆದುಕೊಂಡು ಅವರಿಬ್ಬರು ಸುಶೀಲೆಯ ಜೊತೆ ತಮ್ಮ ಪಟ್ಟಣಕ್ಕೆ ಹೊರಟರು.

ಶ್ರಾವಣೇ ಮಾಸಿ ಸಂಪ್ರಾಪ್ತೇ ವ್ರತಂ ಭೌಮೇ ಚಕಾರ ಸಾ ।
ಭುಕ್ತ್ವಾ ಸರ್ವೇ ಪ್ರಸ್ಥಿತಾಸ್ತೇ ಯೋಜನಂ ಜಗ್ಮುರುತ್ತಮಾಃ ॥೯೮॥

ಮಾರ್ಗಮಧ್ಯದಲ್ಲಿ ಹೋಗುತ್ತಿರುವಾಗ ಶ್ರಾವಣಮಾಸವು ಪ್ರಾಪ್ತವಾಯಿತು. ಶ್ರಾವಣಮಾಸದ ಮಂಗಳವಾರದಂದು ಮಂಗಳಗೌರೀವ್ರತವನ್ನು ಸುಶೀಲೆಯು ಅನುಷ್ಠಾನ ಮಾಡಿದಳು. ವ್ರತವನ್ನು ಮುಗಿಸಿದ ಮೇಲೆ ಎಲ್ಲರೂ ಊಟವನ್ನು ಮಾಡಿ, ಯೋಜನದಷ್ಟು ದೂರ ಮುಂದೆ ನಡೆದರು.

ಸುಶೀಲೋವಾಚ

ಗೌರೀವಿಸರ್ಜನಂ ಚಾಪಿ ದೀಪ್ಯಮಾನಂ ತಥೈವ ಚ ।
ಕೃತ್ವಾ ಗಂತವ್ಯಮಸ್ಮಾಭಿಃ ಪಿತರೌ ದ್ರಷ್ಟುಮಾದರಾತ್ ॥೯೯॥

ಸುಶೀಲೆಯು ಆಗ ಹೇಳಿದಳು - ನಾನು ಗೌರೀವಿಸರ್ಜನೆಯನ್ನೂ ಕೂಡ ಮಾಡಬೇಕು. ಅನಂತರ ತಂದೆ-ತಾಯಿಯರನ್ನು ನೋಡಲು ತೆರಳೋಣ ಎಂದಳು.

ಪ್ರತ್ಯುಕ್ತಾ ಆಗತಾ ಯತ್ರ ಗೌರ್ಯಾ ಆವಾಹನಂ ಕೃತಮ್ ।
ತದ್ದೃಶುಸ್ತತ್ರ ಸೌವರ್ಣಂ ದೇವಾಲಯಮನುತ್ತಮಮ್ ॥೧೦೦॥

ಅದೇ ಸಂದರ್ಭದಲ್ಲಿ ಶಿವನ ತಾಯಿಯು ಯಾವ ಸ್ಥಳದಲ್ಲಿ ಗೌರಿಯ ಆವಾಹನೆಯನ್ನು ಪೂಜಿಸಿದ್ದಳೋ, ಆ ಸುವರ್ಣದೇವಾಲಯವನ್ನು ಅಲ್ಲಿ ಕಂಡರು.

ಗೌರೀವಿಸರ್ಜನಂ ದೀಪ್ಯಮಾನಂ ಸಾ ಚ ವ್ಯಚೀಕರತ್ ।
ತತಃ ಸರ್ವೇ ಪ್ರಸ್ಥಿತಾಸ್ತೇ ಪಿತರೌ ಪ್ರಷ್ಟುಮುತ್ಸುಕಾಃ ॥೧೧೧॥

ಸುಶೀಲೆಯು ಅಲ್ಲಿ ತಾನು ಮಾಡಿದ ಮಂಗಳಗೌರಿಯಪೂಜೆಯ ವಿಸರ್ಜನೆಯನ್ನು ಮಾಡಿದಳು. ಪುನಃ ಅಲ್ಲಿಂದ ತಂದೆ-ತಾಯಂದಿರನ್ನು ನೋಡುವುದಕ್ಕಾಗಿ ಉತ್ಸಾಹದಿಂದ ಹೊರಟರು.

ಕುಂಡಿನಾಸನ್ನದೇಶೇ ತಾನ್ ದೃಷ್ಟ್ವಾ ವಿಸ್ಮಯಿನೋ ಜನಾಃ ।
ಅಬ್ರುವಂಸ್ತೇ ಧರ್ಮಪಾಲಂ ಸೋಽತ್ಕಂಠಂ ಪ್ರಿಯದರ್ಶನಾಃ ॥೧೧೨॥

ಕುಂಡಿನಾ ನಗರವನ್ನು ಪ್ರವೇಶಿಸಿದರು. ಇವರನ್ನು ಎಲ್ಲ ಜನರು ಆಶ್ಚರ್ಯದಿಂದ ಕಂಡರು. ಉತ್ಸಾಹದಿಂದ ಧರ್ಮಪಾಲನನ್ನು ಕುರಿತು, ಎಲ್ಲ ಜನರು ಮಗನು ಬರುತ್ತಿರುವ ವಾರ್ತೆಯನ್ನು ತಿಳಿಸಿದರು.

ಜನಾ ಊಚುಃ

ಧರ್ಮಪಾಲಾದ್ಯ ತೇ ಪುತ್ರಃ ಸಭಾರ್ಯಃ ಶಾಲಕಸ್ತಥಾ ।
ಸಮಾಯಾತೋ ವಯಂ ದೃಷ್ಟ್ವಾ ಅಧುನೈವ ಸಮಾಗತಾಃ ॥೧೧೩॥

ಜನರು ಧರ್ಮಪಾಲನ ಮುಂದೆ ಹೇಳುತ್ತಾರೆ. ಧರ್ಮಪಾಲನೇ ! ನಿನ್ನ ಮಗ ಹೆಂಡತಿಯ ಜೊತೆ, ಸೋದರಮಾವನ ಜೊತೆ ಆಗಮಿಸುತ್ತಿದ್ದಾನೆ. ಇದನ್ನು ನಾವು ನೋಡಿದ್ದೇವೆ. ಈಗಲೇ ಅವರು ಬರುತ್ತಿದ್ದಾರೆ.

ಯಾವಜ್ಜನಾ ವದಂತ್ಯೇವಂ ತಾವತ್ಸೋಽಪಿ ಸಮಾಗತಃ ।
ನಮಸ್ಕಾರಾಂಶ್ಚಕಾರಾಸೌ ಪಿತೃಭ್ಯಾಂ ಪಿತೃವಲ್ಲಭಃ ॥೧೧೪॥

ಯಾವಾಗ ಎಲ್ಲ ಜನರು ಧರ್ಮಪಾಲನಿಗೆ ಹೀಗೆ ಹೇಳಿದರೋ, ಆ ಕ್ಷಣದಲ್ಲಿಯೇ ಆ ಧರ್ಮಪಾಲನು ತನ್ನ ಮಗನನ್ನು ನೋಡಲು ಎದ್ದು ಬಂದನು.

ತಂದೆಯ ಅತ್ಯಂತ ಪ್ರೀತಿಪಾತ್ರನಾದ ಮಗನು ಭಕ್ತಿಯಿಂದ ಹೆಂಡತಿಯ ಜೊತೆ ತಂದೆ-ತಾಯಂದಿರಿಗೆ ನಮಸ್ಕಾರವನ್ನು ಮಾಡಿದನು.

ಮಾತುಲೋಽಪಿ ನತಿಂ ಚಕ್ರೇ ಭಗಿನೀಧರ್ಮಪಾಲಯೋಃ ।
ಸುಶೀಲಾ ಶ್ವಶುರಂ ಚಾಪಿ ಶ್ವಶ್ರೂಂ ನತ್ವಾ ಸ್ಥಿತಾ ತದಾ ॥೧೦೫॥

ಸೋದರಮಾವನೂ ಕೂಡ ಅಕ್ಕನಿಗೆ ಹಾಗೂ ಭಾವನಿಗೆ ನಮಸ್ಕಾರವನ್ನು ಮಾಡಿದನು. ಅನಂತರ ಸುಶೀಲೆಯು ಮಾವನಿಗೆ ಹಾಗೂ ಅತ್ತೆಗೆ ನಮಸ್ಕಾರವನ್ನು ಮಾಡಿ ಕುಳಿತುಕೊಂಡಳು.

ಶ್ವಶ್ರೂರುವಾಚ

ಸುಶೀಲೇ ತದ್ವ್ರತಂ ಬ್ರೂಹಿ ಯದ್ವ್ರತಸ್ಯ ಪ್ರಭಾವತಃ ।
ಆಯುರ್ವೃದ್ಧಿಃ ಶಿಶೋರ್ಮೇಽಪಿ ಜಾತಾ ಕಮಲಲೋಚನೇ ॥೧೦೬॥

ಅತ್ತೆಯು ಸುಶೀಲೆಯನ್ನು ಕುರಿತು ಮಾತನಾಡಿದಳು. ಸುಶೀಲೆ ! ನೀನು ಯಾವ ವ್ರತವನ್ನು ಮಾಡುತ್ತಿರುವೆಯೋ, ಆ ವ್ರತದ ಪ್ರಭಾವದಿಂದ ನನ್ನ ಮಗನ ಆಯುಸ್ಸು ಅಭಿವೃದ್ಧವಾಗಿದೆ. ಕಮಲಲೋಚನೇ ! ಆ ವ್ರತದ ಬಗ್ಗೆ ನನಗೆ ತಿಳಿಸು.

ಸುಶೀಲೋವಾಚ

ನ ಜಾನೇಽಹಂ ವ್ರತಂ ಶ್ವಶ್ರೂರ್ಜಾನೇ ಮಾನವತೀಹರೌ ।
ಶ್ವಶುರಂ ಧರ್ಮಪಾಲಂ ಚ ಶ್ವಶ್ರೂಂ ಚ ಭವತೀಂ ತಥಾ ॥೧೦೭॥
ಮಂಗಲಾಂ ದೇವತಾಂ ಚೈವ ವರಂ ತು ಯುವಯೋಃ ಸುತಮ್ ।
ಇತ್ಯುಕ್ತ್ವಾ ಚ ಸುಶೀಲಾ ಸಾ ಬುಭುಜೇ ಸ್ವಾಂತಹರ್ಷಿತಾ ॥೧೦೮॥

ಸುಶೀಲೆಯು ಉತ್ತರಿಸುತ್ತಾಳೆ - ನಾನು ಯಾವ ವ್ರತವನ್ನು ತಿಳಿದ ಮಹಾತ್ಮಳಲ್ಲ. ನನಗೆ ನೀನೇ ಮಂಗಳಗೌರಿಯಿದ್ದಂತೆ. ಧರ್ಮಪಾಲನು ಪರಮೇಶ್ವರ ಇದ್ದಂತೆ. ನಿಮ್ಮಿಬ್ಬರ ಮಗನಾದ ಶಿವನು ನನ್ನ ಪ್ರಾಣವಲ್ಲಭನಾಗಿರುವನು. ಹೀಗೆ ಹೇಳಿ ಆ ಸುಶೀಲೆಯು ಎಲ್ಲರನ್ನು ಸಂತೋಷಪಡಿಸಿದಳು. ಅವರ ಸೇವೆಯಲ್ಲಿ ತಲ್ಲೀನಳಾದಳು.

### ಕೃಷ್ಣ ಉವಾಚ

ತಸ್ಮಾದ್‌ವ್ರತಮಿದಂ ಧರ್ಮ ಸ್ತ್ರೀಭಿಃ ಕಾರ್ಯಂ ಸದೈವ ತು ।

ಶ್ರೀಕೃಷ್ಣನು ಯುಧಿಷ್ಠಿರನನ್ನು ಕುರಿತು ಹೇಳುತ್ತಾನೆ - ಧರ್ಮರಾಜನೇ ಇಂಥ ಶ್ರೇಷ್ಠವಾದ ವ್ರತವನ್ನು ಎಲ್ಲ ಸ್ತ್ರೀಯರು ನಿರಂತರವಾಗಿ ಮಾಡಬೇಕು.

### ಯುಧಿಷ್ಠಿರ ಉವಾಚ

ಫಲಮಸ್ಯ ಶ್ರುತಂ ಕೃಷ್ಣ ವಿಧಾನಂ ಬ್ರೂಹಿ ಕೇಶವ ॥೧೦೯॥

ಯುಧಿಷ್ಠಿರನು ಪ್ರಶ್ನಿಸುತ್ತಾನೆ - ಶ್ರೀಕೃಷ್ಣನೇ ಈ ಮಂಗಳಗೌರೀವ್ರತದ ನನಗೆ ಫಲವನ್ನು ತಿಳಿಸು.

### ಕೃಷ್ಣ ಉವಾಚ

ವಿವಾಹಾತ್ಪ್ರಥಮಂ ವರ್ಷಮಾರಭ್ಯಾಪಂಚವತ್ಸರಮ್ ।
ಶ್ರಾವಣೇ ಮಾಸಿ ಭೌಮೇಷು ಚತುರ್ಷು ವ್ರತಮಾಚರೇತ್ ॥೧೧೦॥

ಶ್ರೀಕೃಷ್ಣನು ಉತ್ತರಿಸುತ್ತಾನೆ - ವಿವಾಹವಾದ ವರ್ಷದಿಂದ ಪ್ರಾರಂಭಮಾಡಿ, ಐದುವರ್ಷಗಳ ತನಕ ಈ ಮಂಗಳಗೌರಿವ್ರತವನ್ನು ಆಚರಿಸಬೇಕು. ಶ್ರಾವಣಮಾಸವು ಬಂದಾಗ ನಾಕು ಮಂಗಳವಾರಗಳಲ್ಲಿ ಈ ವ್ರತವನ್ನು ತಪ್ಪದೇ ಮಾಡಬೇಕು.

ಪ್ರಥಮೇ ಸಂವತ್ಸರೇ ಮಾತುರ್ಗೇಹೇ ಕರ್ತವ್ಯಮೇವ ಚ ।
ತತೋ ಭರ್ತೃಗೃಹೇ ಕಾರ್ಯಮವಶ್ಯಂ ಸ್ತ್ರೀಭಿರಾದರಾತ್ ॥೧೧೧॥

ಮೊದಲನೆಯ ವರ್ಷ ತಾಯಿಯ ಮನೆಯಲ್ಲಿ ಮಂಗಳಗೌರೀವ್ರತವನ್ನು ಅವಶ್ಯವಾಗಿ ಮಾಡಬೇಕು. ಮುಂದಿನ ನಾಕು ವರ್ಷಗಳ ಕಾಲ ಈ ಮಂಗಳಗೌರೀವ್ರತವನ್ನು ಸ್ತ್ರೀಯರು ಅತ್ಯಂತ ಭಕ್ತಿಶ್ರದ್ಧೆಗಳಿಂದ ಆಚರಿಸಬೇಕು.

ತತ್ರ ತು ಪ್ರಥಮೇ ವರ್ಷೇ ಸಂಕಲ್ಪ್ಯ ವ್ರತಮುತ್ತಮಮ್ ।
ರಮ್ಯೇ ಪೀಠೇ ಚ ಸಂಸ್ಥಾಪ್ಯ ಮಂಗಲಾಂ ಚ ತದಗ್ರತಃ ॥೧೧೨॥

ಮೊದಲನೆಯ ವರ್ಷ ಸಂಕಲ್ಪವನ್ನು ರಮ್ಯವಾದ ಪೀಠದಲ್ಲಿ ಮಂಗಳಗೌರಿಯನ್ನಿಟ್ಟು ಅವಳ ಮುಂದೆ ಕುಳಿತು ಹೀಗೆ ಮಾಡಬೇಕು -

ಗೋಧೂಮಪಿಷ್ಟರಚಿತಮುಪಲಂ ದೃಷದಂ ತಥಾ ।
ಮಹಾಂತಮೇಕಂ ದೀಪಂ ಚ ಘೃತೇನ ಪರಿಪೂರಿತಮ್ ॥೧೧೩॥

ಗೋಧಿಹಿಟ್ಟಿನಿಂದ ಒಂದು ದೊಡ್ಡ ಹಣತೆಯನ್ನು ತಯಾರು ಮಾಡಬೇಕು. ಅದರಲ್ಲಿ ತುಪ್ಪವನ್ನು ತುಂಬಿಸಬೇಕು.

ವರ್ತ್ಯಾ ಷೋಡಶಭಿಃ ಸೂತ್ರೈಃ ಕೃಪಯಾ ಸಹಿತಂ ನ್ಯಸೇತ್ ।
ಉಪಚಾರೈಃ ಷೋಡಶಭಿರ್ಗಂಧಪುಷ್ಪಾದಿಭಿಸ್ತಥಾ ॥೧೧೪॥

ಹದಿನಾರು ಬತ್ತಿಗಳನ್ನು ಅದರಲ್ಲಿ ಹಾಕಬೇಕು. ಹದಿನಾರು ಗಂಧ ಪುಷ್ಪ ಮೊದಲಾದ ಉಪಚಾರಗಳಿಂದ ಪೂಜಿಸಬೇಕು.

ಪತ್ರೈಃ ಪುಷ್ಪೈಃ ಷೋಡಶಭಿರ್ನಾನಾಧಾನ್ಯೈಶ್ಚ ಜೀರಕೈಃ ।
ದಾನ್ಯಾಕೈಸ್ತಂಡುಲೈಶ್ಚೈವ ಸ್ವಚ್ಛೈಃ ಷೋಡಶಸಂಖ್ಯಕೈಃ ॥೧೧೫॥

ಪತ್ರ , ಪುಷ್ಪ ಮೊದಲಾದವುಗಳಿಂದ ಹಾಗೂ ಹದಿನಾರು ಧಾನ್ಯಗಳಿಂದ ಜೀರಿಗೆ ಮೊದಲಾದವುಗಳಿಂದ ಧಾನ್ಯಗಳಿಂದ, ತಂಡುಲಗಳಿಂದ ಹೀಗೆ ಒಟ್ಟು ಎಲ್ಲವು ೧೬ ಸಂಖ್ಯೆಯಲ್ಲಿದ್ದು ಪೂಜೆಗೆ ತಯಾರು ಮಾಡಿಕೊಳ್ಳಬೇಕು.

ಅಪಾಮಾರ್ಗಸ್ಯ ಪತ್ರೈಶ್ಚ ದೂರ್ವಾಧತ್ತೂರಪತ್ರಕೈಃ ।
ಸರ್ವೈಃ ಷೋಡಶಸಂಖ್ಯಾಕೈರ್ಬಿಲ್ವಪತ್ರೈಶ್ಚ ಪಂಚಭಿಃ ॥೧೧೬॥

ಅಪಾಮಾರ್ಗಪತ್ರ , ಗರಿಕೆ ಪತ್ರ , ದತ್ತೂರ ಪತ್ರ , ಮೊದಲಾದ ಹದಿನಾರು ಪತ್ರೆಗಳನ್ನು, ಐದು ಬಿಲ್ವಪತ್ರೆಗಳನ್ನು ಸಂಗ್ರಹ ಮಾಡಬೇಕು.

ಪೂಜಯೇನ್ಮಂಗಲಾಂ ಗೌರೀಮಂಗಜಾಂ ತತಶ್ಚರೇತ್ ।
ಧೂಪಾದಿಕಂ ನಿವೇದ್ಯಾಥ ವಾಯನಂ ತು ಸಮರ್ಪಯೇತ್ ॥೧೧೭॥

ಅನಂತರ ಮಂಗಳಗೌರಿಯ ಪೂಜೆಯನ್ನು ಮಾಡಬೇಕು. ಧೂಪಾರತಿ ಮಾಡಬೇಕು, ನೈವೇದ್ಯವನ್ನು ಮಾಡಬೇಕು. ವಾಯನವನ್ನು ದಾನ ಮಾಡಬೇಕು.

ಬ್ರಾಹ್ಮಣಾಯ ತಥಾ ಮಾತ್ರೇಽನ್ಯಾಭ್ಯಶ್ಚೈವ ಯತ್ನತಃ ।
ಲಡ್ಡುಕಂಚುಕಿಸಂಯುಕ್ತಂ ಸವಸ್ತ್ರಫಲದಕ್ಷಿಣಮ್ ॥೧೧೮॥

ಬ್ರಾಹ್ಮಣರಿಗೆ, ತಾಯಿಗೆ, ಉಳಿದ ಸುವಾಸಿನಿಯರಿಗೆ ಪ್ರಯತ್ನಪೂರ್ವಕವಾಗಿ ವಾಯನದಾನ ಮಾಡಬೇಕು. ಉಂಡೆಗಳನ್ನು, ಕಣಗಳನ್ನು ಫಲದಕ್ಷಿಣೆ ಸಹಿತವಾಗಿ ದಾನ ಮಾಡಬೇಕು.

ನೀರಾಜನಂ ತತಃ ಕುರ್ಯಾದ್ದೀಪೈಃ ಷೋಡಶಸಂಖ್ಯಕೈಃ ।
ಭೋಕ್ತವ್ಯಾ ದೀಪಕಾಶ್ಚೈವ ಅನ್ನಂ ಲವಣವರ್ಜಿತಮ್ ॥೧೧೯॥

ಹದಿನಾರು ಭತ್ತಿಗಳನ್ನು ಜೋಡಿಸಿ ನೀರಾಜನ ಮಾಡಬೇಕು. ಉಪ್ಪಿಲ್ಲದೇ ತಯಾರು ಮಾಡಿದ ಅಡಿಗೆಯಿಂದ ಊಟವನ್ನು ಮಾಡಬೇಕು.

ರಾತ್ರೌ ಜಾಗರಣಂ ಕೃತ್ವಾ ಪ್ರಾತಃ ಸ್ನಾತ್ವಾ ಸಮಾಹಿತಾ ।
ವಿಸರ್ಜನಂ ಮಂಗಲಾಯಾ ದೀಪ್ಯಮಾನಂ ಕ್ರಮಾಚ್ಚರೇತ್ ॥೧೨೦॥

ರಾತ್ರಿಕಾಲ ಜಾಗರಣೆ ಮಾಡಬೇಕು. ಬೆಳಿಗ್ಗೆ ಎದ್ದು ಇಂದ್ರಿಯನಿಗ್ರಹವನ್ನು ಹೊಂದಿ, ವಿಸರ್ಜನಾಂಗ ಪೂಜೆಯನ್ನು ಮಾಡಿ, ದೀಪವನ್ನು ಬೆಳಗಿ, ಮಂಗಳಗೌರಿಯ ವಿಸರ್ಜನೆಯನ್ನು ಮಾಡಬೇಕು.

ಪಂಚಸಂವತ್ಸರೇಷ್ವೇವಂ ಕರ್ತವ್ಯಂ ಪತಿಮಿಚ್ಛುಭಿಃ ।

ಯಾರು ದೀರ್ಘಾಯುಷ್ಯವನ್ನು ಹೊಂದಿದ ಪತಿಯನ್ನು ಅಪೇಕ್ಷಿಸುತ್ತಾರೋ, ಅವರು ಹೀಗೆ ಐದು ವರ್ಷಗಳ ಕಾಲ ಮಂಗಳಗೌರೀವತ್ರವನ್ನು ಆಚರಿಸಬೇಕು.

ಯುಧಿಷ್ಠಿರ ಉವಾಚ

ಉದ್ಯಾಪನವಿಧಿಂ ಬ್ರೂಹಿ ವ್ರತರಾಜಸ್ಯ ಕೇಶವ ॥೧೨೧॥
ಯತೋ ನಿರುದ್ಯಾಪನಕಂ ವ್ರತಂ ನಿಷ್ಫಲಮುಚ್ಯತೇ ।

ಯುಧಿಷ್ಠಿರನು ಪುನಃ ಪ್ರಶ್ನಿಸಿದನು - ಶ್ರೀಕೃಷ್ಣನೇ ಮಂಗಳಗೌರಿಯ ಉದ್ಯಾಪನದ ವಿಧಿಯನ್ನು ತಿಳಿಸು. ಉದ್ಯಾಪನೆ ಮಾಡದೇ ಇರುವ ಯಾವ ಮಂಗಳಗೌರಿ ವ್ರತವು ನಿಷ್ಫಲವಾಗುತ್ತದೋ ಅಂಥ ಉದ್ಯಾಪನೆಯ ಬಗ್ಗೆ ಕೇಶವನೇ ಕೃಪೆಯಿಂದ ನನಗೆ ತಿಳಿಸು.

ಕೃಷ್ಣ ಉವಾಚ

ಪಂಚಮೇ ವತ್ಸರೇ ಪ್ರಾಪ್ತೇ ಕುರ್ಯಾದುದ್ಯಾಪನಂ ಶುಭಮ್ ॥೧೨೨॥

ಶ್ರಾವಣೇ ಮಾಸಿ ಭೌಮೇಷು ಮಹಾರಾಜ ನಿಬೋಧ ತತ್ ।
ಪ್ರಾತರುತ್ಥಾಯ ಸುಸ್ನಾತಾ ಸಂಕಲ್ಪ್ಯೋದ್ಯಾಪನಂ ತತಃ ॥೧೨೩॥

ಶ್ರೀಕೃಷ್ಣನು ಉತ್ತರಿಸಿದನು - ಐದನೆಯ ವರ್ಷವು ಪ್ರಾಪ್ತವಾದಾಗ ಮಂಗಳಗೌರಿಯ ವ್ರತದ ಉದ್ಯಾಪನೆ ಮಾಡಬೇಕು. ಶ್ರಾವಣಮಾಸದ ಮಂಗಳವಾರದಂದು ಆಚರಿಸಬೇಕಾದ ಕರ್ತವ್ಯವನ್ನು ತಿಳಿಸುತ್ತೇನೆ ಕೇಳು. ಬೆಳಿಗ್ಗೆ ಎದ್ದು ಎರೆದುಕೊಂಡು ಉದ್ಯಾಪನೆಯ ಸಂಕಲ್ಪವನ್ನು ಮಾಡಬೇಕು.

ಆಚಾರ್ಯಂ ವರಯೇತ್ತತ್ರ ವೇದವೇದಾಂಗಪಾರಗಮ್ ।
ಚತುಃಸ್ತಂಭಂ ಚತುರ್ದ್ವಾರಂ ಕದಲೀಸ್ತಂಭಮಂಡಿತಮ್ ॥೧೨೪॥

ಆಚಾರ್ಯಪುರುಷನನ್ನು ವರಣೆ ಮಾಡಬೇಕು. ಅವನು ವೇದವೇದಾಂಗ ಪಾರಂಗತನಾಗಿರಬೇಕು. ನಾಕು ದಿಕ್ಕುಗಳಲ್ಲಿ ಕಂಬವನ್ನು ನೆಟ್ಟು, ನಾಕು ದ್ವಾರಗಳನ್ನು ಮಾಡಿ, ಬಾಳೇ ಕಂಬಗಳಿಂದ ಅಲಂಕಾರವನ್ನು ಮಾಡಬೇಕು.

ಘಂಟಿಕಾಚಾಮರಯುತಂ ಮಂಡಪಂ ತತ್ರ ಕಾರಯೇತ್ ।
ಮಧ್ಯೇ ವಿತಾನಂ ಬಧ್ನೀಯಾತ್ಪಂಚವರ್ಣೈರಲಂಕೃತಮ್ ॥೧೨೫॥

ಸಣ್ಣ ಘಂಟೆಗಳನ್ನು ಕಟ್ಟಿರಬೇಕು. ಚಾಮರದಿಂದ ಕೂಡಿರಬೇಕು. ಮಧ್ಯದಲ್ಲಿ ತೋರಣವನ್ನು ಕಟ್ಟಿರಬೇಕು. ಐದು ವರ್ಣಗಳಿಂದ ಕೂಡಿದ ಫಲ-ಪುಷ್ಪಾದಿಗಳಿಂದ ಅಲಂಕಾರವನ್ನು ಮಾಡಿರಬೇಕು.

ತನ್ಮಧ್ಯೇ ವೇದಿಕಾಂ ರಮ್ಯಾಂ ಚತುರಸ್ರಾಂ ತು ಕಾರಯೇತ್ ।
ರೌಪ್ಯೇಣ ದೃಷದಂ ಕುರ್ಯಾತ್ಕಾಂಚನೇನೋಪಲಂ ತಥಾ ॥೧೨೬॥

ಅದರ ಮಧ್ಯದಲ್ಲಿ ರಮ್ಯವಾದ ಚತುರಸ್ರ ಪರಿಮಾಣದ ವೇದಿಕೆಯನ್ನು ನಿರ್ಮಾಣ ಮಾಡಬೇಕು. ಬೆಳ್ಳಿಯ ಅಥವಾ ಸುವರ್ಣದ ಪೀಠವನ್ನು ಮಾಡಬೇಕು.

ರೌಪ್ಯಹೇಮ್ನೋರಭಾವೇ ತು ಪಾಷಾಣಸ್ಯ ವಿಧೀಯತೇ ।
ತಸ್ಯಾಂ ತು ಲಿಂಗತೋಭದ್ರಂ ಲಿಖೇದ್ರಂಗೈಶ್ಚ ಪಂಚಭಿಃ ॥೧೨೭॥

ಬೆಳ್ಳಿ ಅಥವಾ ಬಂಗಾರದಿಂದ ಸಾಧ್ಯವಾಗದಿದ್ದರೆ ಕಲ್ಲಿನಿಂದಲೇ ನಿರ್ಮಾಣ ಮಾಡಬೇಕು. ಲಿಂಗತೋಭದ್ರಮಂಟಪವನ್ನು ರಚನೆ ಮಾಡಬೇಕು. ಐದು ಬಣ್ಣಗಳಿಂದ ಕೂಡಿದ ರಂಗವಲ್ಲಿಯಿಂದ ಲಿಂಗತೋಭದ್ರವನ್ನು ರಚನೆ ಮಾಡಬೇಕು.

ತಸ್ಯೋಪರಿ ನ್ಯಸೇದ್ವ್ರೀಹೀನ್ ದ್ರೋಣೇನ ಪರಿಸಮ್ಮಿತಾನ್ ।
ಸೌವರ್ಣಂ ರಾಜತಂ ತಾಮ್ರಂ ಕಲಶಂ ತತ್ರ ವಿನ್ಯಸೇತ್ ॥೧೨೮॥

ಅದರ ಮೇಲೆ ದ್ರೋಣಪರಿಮಾಣದಷ್ಟು (ಒಂದು ಸೇರು) ಅಕ್ಕಿಯನ್ನು ಹಾಕಬೇಕು. ಸುವರ್ಣದ, ಬೆಳ್ಳಿಯ ಅಥವಾ ತಾಮ್ರದ ಕಲಶವನ್ನು ಅದರ ಮೇಲಿಡಬೇಕು.

ಪಂಚರತ್ನಸಮಾಯುಕ್ತಂ ಸರ್ವೌಷಧಿಸಮನ್ವಿತಮ್ ।
ತಸ್ಯೋಪರಿ ನ್ಯಸೇತ್ಪಾತ್ರಂ ತಾಮ್ರಂ ವಾ ವೈಣವಂ ತಥಾ ॥೧೨೯॥

ಆ ಐದು ರತ್ನಗಳಿಂದ ಕೂಡಿ, ಎಲ್ಲ ಓಷಧಿಗಳಿಂದ ಕೂಡಿದ ಅದರ ಮೇಲೆ ಒಂದು ತಾಮ್ರದ ಪಾತ್ರವನ್ನು ಅಥವಾ ಬಿದರಿನ ಪಾತ್ರೆಯನ್ನು ಇಡಬೇಕು.

ತತ್ರ ಗೌರ್ಯಾ ನ್ಯಸೇನ್ಮೂರ್ತಿಂ ಕಾಂಚನೇನ ವಿನಿರ್ಮಿತಾಮ್ ।
ಗೌರೀರ್ಮಿಮಾಯಮಂತ್ರೇಣ ಪೂಜಯೇನ್ಮಂಗಲಾಂ ತತಃ ॥೧೩೦॥

ಅನಂತರ ಮಂಗಳಗೌರಿಯ ಮೂರ್ತಿಯನ್ನು ಬಂಗಾರದಲ್ಲಿ ನಿರ್ಮಾಣ ಮಾಡಿಸಿ, ಅಲ್ಲಿಡಬೇಕು. 'ಗೌರೀರ್ಮಿಮಾಯ' ಎಂಬ ಮಂತ್ರದಿಂದ ಪೂಜೆಯನ್ನು ಮಾಡಬೇಕು.

ರಾಜನ್ ಷೋಡಶದೀಪೈಶ್ಚ ಡಮರ್ವಾಕೃತಿಪಿಷ್ಟಜೈಃ ।
ಸೂತ್ರೈ ಷೋಡಶಗರ್ಭಯುಕ್ತವರ್ತಿಭಿಃ ಸಹಿತೈರ್ನೃಪ ॥೧೩೧॥

ಹದಿನಾರು ದೀಪಗಳಿಂದ, ಹದಿನಾರು ಬಗೆಯ ಪತ್ರೆಗಳಿಂದ, ಹದಿನಾರು ಪುಷ್ಪಗಳಿಂದ, ಹದಿನಾರು ಎಳೆ ಗೆಜ್ಜೆವಸ್ತ್ರದಿಂದ ಪೂಜೆಯನ್ನು ಮಾಡಬೇಕು.

ನೀರಾಜ್ಯ ರೌಪ್ಯದೀಪಂ ಚ ಸ್ವರ್ಣವರ್ತಿಯುತಂ ತಥಾ ।
ಸಮರ್ಪ್ಯ ರಾತ್ರಿಂ ನಿನಯೇತ್ಪುರಾಣಶ್ರವಣಾದಿಭಿಃ ॥೧೩.೨॥

ಬೆಳ್ಳಿಯ ದೀಪದಲ್ಲಿ ನೀರಾಜನವನ್ನು ಮಾಡಿ, ಸುವರ್ಣದ ದೀಪವನ್ನು ದಿನವಿಡೀ ಹಚ್ಚಿರಬೇಕು. ರಾತ್ರಿಯ ಕಾಲದಲ್ಲಿ ಪುರಾಣದ ಶ್ರವಣಾದಿಗಳನ್ನು ಮಾಡುತ್ತಾ ಕಾಲವನ್ನು ಕಳೆಯಬೇಕು.

ಪ್ರಾತರಗ್ನಿಂ ಪ್ರತಿಷ್ಠಾಪ್ಯ ಹೋಮಂ ಕುರ್ಯಾದ್ಯುಧಿಷ್ಠಿರ ।
ಗೌರೀರ್ಮಿಮಾಯಮಂತ್ರೇಣ ಘೃತಾಕ್ಷತತಿಲೈಸ್ತಥಾ ॥೧೩.೩॥

ಬೆಳಿಗ್ಗೆ ಎದ್ದು ಪ್ರಾತರಾಹ್ನಿಕಗಳನ್ನು ಮುಗಿಸಿ, ಅಗ್ನಿ ಪ್ರತಿಷ್ಠಾಪನೆ ಮಾಡಿ, ಹೋಮವನ್ನು ಆಚರಿಸಬೇಕು. ಯುಧಿಷ್ಠಿರನೇ ! 'ಗೌರೀರ್ಮಿಮಾಯ' ಎಂಬ ಮಂತ್ರದಿಂದ ಘೃತ, ಅಕ್ಷತ, ತಿಲಗಳಿಂದ ಆಹುತಿಯನ್ನು ನೀಡಬೇಕು.

ಬಿಲ್ವಪತ್ರೈರಷ್ಟಶತಾಹುತಿಭಿಶ್ಚ ಪೃಥಕ್‌ಪೃಥಕ್ ।
ಷೋಡಶಾಷ್ಟೌ ಚ ಚತುರಃ ಸಪತ್ನೀಕಾನ್ ದ್ವಿಜಾನ್ನೃಪ ॥೧೩.೪॥

ಹದಿನಾರು ಬಿಲ್ವಪತ್ರೆಗಳಿಂದ ಆಹುತಿಯನ್ನು ಪ್ರತ್ಯೇಕವಾಗಿ ನೀಡಬೇಕು. ಹದಿನಾರು, ಎಂಟು, ನಾಕು ಈ ಸಂಖ್ಯೆಯಲ್ಲಿ ಪತ್ನೀಸಹಿತರಾದ ಬ್ರಾಹ್ಮಣರಿಗೆ ದಾನವನ್ನು ಮಾಡಬೇಕು.

ವಸ್ತ್ರಾದಿಭಿಶ್ಚ ಸಂಪೂಜ್ಯ ಮಾತ್ರೇ ದದ್ಯಾತ್ತು ವಾಯನಮ್ ।
ಪಕ್ವಾನ್ನಪೂರಿತಂ ತಾಮ್ರಪಾತ್ರಂ ವಸ್ತ್ರಾದಿಸಂಯುತಮ್ ॥೧೩.೫॥

ದಂಪತಿಗಳನ್ನು ಪೂಜಿಸಿ, ವಸ್ತ್ರಾದಿಗಳನ್ನು ದಾನ ಮಾಡಬೇಕು. ತಾಯಿಗೆ ವಾಯನವನ್ನು ದಾನ ಮಾಡಬೇಕು. ಪಕ್ವಾನ್ನದಿಂದ ಪೂರಿತವಾದ ತಾಮ್ರಪಾತ್ರೆಯನ್ನು ವಸ್ತ್ರಾದಿಗಳ ಜೊತೆ ತಾಯಿಗೆ ನೀಡಬೇಕು.

ಪೀಠಂ ಸೋಪಸ್ಕರಂ ದತ್ವಾ ಆಚಾರ್ಯಾಯ ಚ ಗಾಂ ತಥಾ ।
ಬ್ರಾಹ್ಮಣಾನ್ ಪರಮಾನ್ನೇನ ಭೋಜಯಿತ್ವಾ ತತಃ ಸ್ವಯಮ್ ॥೧೩೬॥

ಎಲ್ಲ ಸಾಮಗ್ರಿಗಳಿಂದ ಆ ಪೀಠವನ್ನು ಆಚಾರ್ಯಪುರುಷನಿಗೆ ದಾನ ಮಾಡಬೇಕು. ಗೋದಾನವನ್ನು ಮಾಡಬೇಕು, ಬ್ರಾಹ್ಮಣರಿಗೆ ಪರಮಾನ್ನದಿಂದ ಊಟವನ್ನು ಮಾಡಿಸಬೇಕು. ಅನಂತರ ತಾನು ಊಟ ಮಾಡಬೇಕು.

ಭುಂಜೀತೇಷ್ಟಜನೈಃ ಸಾರ್ಧಂ ಮೌನೇನ ತು ಯುಧಿಷ್ಠಿರ ।
ಏವಂ ಕೃತೇ ವಿಧಾನೇऽಸ್ಮಿನ್ನಾರ್ಯವೈಧವ್ಯಮಾಪ್ನುಯಾತ್ ॥೧೩೭॥

॥ ಇತಿ ಭವಿಷ್ಯಪುರಾಣೇ ಮಂಗಲಾಗೌರೀವ್ರತಂ ವಿಧ್ಯುದ್ಯಾಪನಸಹಿತಂ ಸಂಪೂರ್ಣಮ್ ॥

ಅನಂತರ ತನ್ನ ಇಷ್ಟ ಜನರ ಜೊತೆ ಕುಳಿತು ಮೌನದಿಂದ ಊಟವನ್ನು ಮಾಡಿಬೇಕು. ಯುಧಿಷ್ಠಿರನೇ ! ಯಾರು ಹೀಗೆ ಮಂಗಳಗೌರೀವ್ರತ ಉದ್ಯಾಪನೆಯನ್ನು ಮಾಡುತ್ತಾರೋ, ಅವರಿಗೆ ವೈಧವ್ಯವು ಎಂದೂ ಸಹ ಬರುವುದಿಲ್ಲ.

ಇಲ್ಲಿಗೆ ಭವಿಷ್ಯಪುರಾಣದಲ್ಲಿ ಮಂಗಳಗೌರೀವ್ರತದ ಉದ್ಯಾಪನವಿಧಿಯು ಸಮಾಪ್ತವಾಯಿತು ॥

॥ ಶ್ರೀ ಕೃಷ್ಣಾರ್ಪಣಮಸ್ತು॥

# ಮಂಗಳಗೌರೀ ಹಾಡು

## ಹಾಡನ್ನು ಹೇಳುತ್ತಾ ಪೂಜಿಸುವ ವಿಧಾನ

### ೧. ಗೌರಿಯನ್ನು ಹಸೆಗೆ ಕರೆಯಬೇಕು

ಬಾರೇ ದಾಕ್ಷಾಯಿಣಿ । ತೋರುವ ಹಸೆಗೀಗ ॥ ನೀರಜಮುಖಿಯರ ವಾರಮಧ್ಯದಿ ಬೇಗ ॥ಪ॥ ಹೊಗಳುತಲಿರುವರು । ನಿಗಮ ಪಾಠಕರೆಲ್ಲ ॥ ನಗುನಗುತ ಬಾರೇ । ಸೋಗಯಿಪ ಹಸೆಗೀಗ ॥೧॥ ಮಣಿಭೂಷಣ ತೊಟ್ಟು । ಫಣಿಗೆ ಕುಂಕುಮವನಿಟ್ಟು ॥ ಮಣಿವರ ಸಲಹುವ । ಗುಣನಿಧಿ ಹಸೆಗೀಗ ॥೨॥ ಚರಣಪಲ್ಲವದೊಳು ಮೆರೆವ ನೂಪುರನಿಟ್ಟು ॥ ಗಿರಿಪುರಮಂದಿರೆ । ಸರಸಿಜಮುಖಿಗೌರಿ ॥೩॥

### ೨. ಗೌರಿಗೆ ಶೃಂಗಾರ ಮಾಡಬೇಕು

ಹರನರಸಿಗೆ ಮಾರ್ಜನಗೈಸಿ ಹರದೆ ತಾ । ಹರುಷದಿ ಪೀತಾಂಬರ ಉಡಿಸಿದಳು ॥ ಸರಸಿಜಾಕ್ಷಿ ಹರಳಿನಾಭರಣನಿಟ್ಟು । ಜರತಾರಿ ಕುಪ್ಪಸ ತೊಡಸಿದಳು ॥ಪ॥ ಗಂಧ ಕುಂಕುಮ ಮಕರಂದ ಪುಷ್ಪಗಳಿಂದ । ಚಂದದಿ ಪೂಜೆಯ ಮಾಡಿದಳು ॥ ಇಂದಿರೆಯರಸನ ವೃಂದ ತೋರಿಸು ಎಂದು । ಸುಂದರಿ ವಂದನೆ ಮಾಡಿದಳು ॥೧॥ ಮೋದದಿ ಪಂಚಪಕ್ವಾನ್ನಾದಿಗಳಿಂದ । ಆದರದಿ ನೈವೇದ್ಯವನಿಟ್ಟು ॥ ಯಾದವಕುಲರನ್ನ ಎದುರಿಗೆ ಬರುವಂತೆ । ಚದುರೆ ಎನಗೆ ವರ ನೀಡೆಂದಳು ॥೨॥ ಹರನ ರಾಣಿಗೆ ಹರುಷದಿ ಆರುತಿ ಎತ್ತಿ । ಹರುಷದಿ ವರಗಳ ಬೇಡಿದಳು । ದೊರೆ ವೆಂಕಟೇಶನು ತ್ವರದಿಂದ ಬಂದೆನ್ನ । ಕರ ಪಿಡಿಲೆಂದು ವರ ಬೇಡಿದಳು ॥೩॥

### ೩. ಗೌರಿಗೆ ಬಳೆ ಇಡಬೇಕು

ಬಳೆ ಬಂದೆವು ಬಾರೆ ಪಾರ್ವತಿದೇವಿ । ಬಳೆಗಾರನ ಕರೆಸಿದಳು । ಎಳೆಯ ತೆಂಗಿನಕಾಯಿ ಗೊನೆಯ ಬಾಳೆಹಣ್ಣು । ಬಳಿಯ ಪೂಜಿಸಿದಳು ಭಕ್ತಿಯಿಂದ ॥೧॥ ಕೃಷ್ಣನೆಂಬ ಸೆಟ್ಟಿ ಬಂದ ಪಾರ್ವತಿ ದೇವಿಗೆ । ಪಟ್ಟಿ ಮಾಡಿಹಿ ತಂದ ॥ ಪಟ್ಟಿ ನೀಲದ ಬಳೆ ಇಡಬೇಕೆನುತಲಿ । ಪುಟ್ಟಿ ಕಠಾಣಿ ತೆಗೆದು ಪಟ್ಟಕ್ಕೆ ಹಾಕಿದಳು ॥೨॥ ಹರನೆಂಬ ಸೆಟ್ಟಿ ಬಂದ ಪಾರ್ವತಿ ದೇವಿಗೆ । ಹರಡಿ ಮಾಡಿಸಿ ತಂದ ॥ ಹಲಿಗೆಯ ನೀಲದ ಬಳಿ ಇಡಬೇಕೆನುತ ಹವಳದ ಕಂಕಣ ತೆಗೆದು ಪಂಕಕೆ ಹಾಕಿದಳು ॥೩॥ ಶಂಕರನೆಂಬ ಸೆಟ್ಟಿ ಬಂದ ಪಾರ್ವತಿ ದೇವಿಗೆ । ವಂಕಿ ಮಾಡಿಸಿ ತಂದ ॥ ವಂಕಿ ನೀಲದ ಬಳಿ ಇಡಬೇಕೆನುತಲಿ। ವಂಕಿ ಕಂಕಣ ತೆಗೆದು ಪಂಕಕೆ ಹಾಕಿದಳು ॥೪॥

## ೪. ನೈವೇದ್ಯ ಇಡಬೇಕು

ನೈವೇದ್ಯಕ್ಕಿಟ್ಟರು ನಳಿನಾಕ್ಷಿಯರು ತಾವು । ಆ ವೇಳೆಯಲಿ ಹರುಗದಿ ॥ ಭಾವಜನನಿಯು ಮಾವು ನಿಂಬು ಫಲ ॥ ತೀವ್ರದಿಂದಲಿ ತನ್ನ ಸೆರಗನು ಮರೆ ಮಾಡಿ ॥ಪ॥ ಚಕ್ಕುಲಿ ಗಿಲಗಂಜಿ ಸಕ್ಕರಿ ನೊರೆ ಹಾಲು ॥ ಅಕ್ಕರದಿಂದಿಡುತ ॥ ಅಕ್ರೂರವರದನ ಅರಸಿಯರು ಬೇಗದಿ । ಪಕ್ಕನೆ ತಮ್ಮ ಸೆರಗನು ಮರೆ ಮಾಡಿ ॥ ಜಂಬೂ ನೀರಲ ದ್ರಾಕ್ಷ ಅಂಜೂರಿ ಫಲಗಳು । ಸಂಭ್ರಮದಿಂದಲಿ ॥ ಅಂಬುಧಿಶಯನನ ರಂಭೆ ತಾ ನಗುತಲಿ । ತುಂಬಿ ತಬಕದೊಳು ರಂಭಾಫಲಗಳನು ॥೨॥ ಪರಿಪರಿ ಶಾವಿಗೆ ಫೇಣಿ ಲಡ್ಡಿಗಿಗಳ । ಸರಸದಿಂದಿಡುತಲಿ ॥ ತರಿಸಿದ ತಾಂಬೂಲ ಬೆರಸಿ ಕರ್ಪೂರ ದಡಿಕಿ । ದೊರೆವೇಂಕಟೇಶನ ಅರಸಿಯು ನಲಿಯು ॥೩॥

## ೫. ಹೂ ಮುಡಿಸಬೇಕು

ಪಾಲಿಸೆಮ್ಮ ನೀನು ಪಾರಿಜಾತವನ್ನು । ಕೋಮಲೆ ವರವನ್ನು ಬೇಡಿಕೊಂಬೆ ನಾನು ॥ಪ॥ ಹಿಕ್ಕಿದಂಥ ಹೆರಳು ಮಲ್ಲಿಗೆಯ ಅರಳು । ಜಗವ ಮೋಹಿಸುವಳು ಎಮ್ಮ ರಕ್ಷಿಸುವಳು ॥೧॥ ತಾಯಿ ತ್ರಿಪುರ ಸುಂದರಿ ಕಾಯೇ ಗಜಗೌರೀ । ಗಿರಿರಾಜ ಕುಮಾರಿ ಮುರಧರ ಸೋದರಿ ॥೨॥ ವೆಂಕಟೇಶ ನರಸಿ ಬೇಡಿಕೊಂಬೆ ಸ್ಮರಿಸಿ । ಪುಷ್ಪವನ್ನು ಬೆರೆಸಿಕೊಂಡು ನಮ್ಮ ಕರಿಸಿ ॥೩॥

## ೬. ವರ ಕೇಳಬೇಕು

ವರವರ ಕೊಡ । ವೈಯಾರದಿ ನೋಡ । ವರಗಳ ನೀಡೆ ದುರಿತ ದೂಡೆ । ಪರಮ ಹರುಷದಿ ದಯಮಾಡೆ ॥ಪ॥ ಪರ್ವತಪುತ್ರಿ ಪರಮ ಪವಿತ್ರಿ । ತಾಯಿ ॥೧॥ ಕರಿಮುನನ್ನು । ಶಿರದೊಳು ನಿಮ್ಮ । ಒಪ್ಪುವ ಕುಸುಮ । ಬೇಕೆಮ್ಮ ॥೨॥ ಭಾಗ್ಯ ಸಂಪತ್ತು। ಶೀಘ್ರದಲ್ಲಿತ್ತು । ಅನುಗ್ರಹ ಮಾಡಿ । ಇವತ್ತು ॥೩॥

## ೭. ಗೌರಿಯ ಆರತಿಯ ಪದ

ಮಂಗಳಾರತಿಯನೆತ್ತಿದಳು । ಮುದ್ದು ಅಂಗನೆ ರುಕ್ಮಿಣಿ ಮಂಗಳಗೌರಿಗೆ ॥ಪ॥ ಶಿರನ ಸಾಲಿಗೆ ಹಚ್ಚಿಬಟ್ಟು । ಕೊಂಡು । ಕೊರಳ ಮಧ್ಯದಿ ರಾಜಿಪ ಹತ್ಯೆಗಟ್ಟು ॥ ಹರಿಯ ಧ್ಯಾನದಿ ಚಿತ್ತವಿಟ್ಟು। ನರ । ಹರಿಗೆ ವಲ್ಲಭೆ ನಾ ಆದೇನೆಂಬ ಗುಟ್ಟು ॥೧॥ ವಕ್ಷಸ್ಥಳವ ನೋಡಿದಳು ॥ ಬಹಳ । ದಕ್ಷಿಣ್ಯವೇಕೋ ಧನ್ಯನಾದೆನೆನಲು ॥ ಮತ್ಸ್ಯಲೋಚನೆ ನಾಚುತಿಹಳು । ಪಾಂಡವ । ಪಕ್ಷಿಯ ಕೈಪಿಡಿದು ರಥದಿ ನಡೆಯುತಿಹಳು ॥೨॥ ಪ್ರತಿದಿನ ರಾಯನಾಗಿರಲು । ಅತಿ । ಹಿತದಿಂ

ಪಾಂಡವರಿಗೊಲಿವೆನೆಂಬಳು ರತಿಪತಿ ಪಿತನ ಕೈಹಿಡಿಯಲು । ದಾಕ್ಷಿಣ್ಯವೇಕೋ ಧನ್ಯನಾದೆನೆನಲು ॥೩॥

## ೮. ಗೌರಿಯ ಕಥೆ

ಸೊಂಡಿಯ ಗಣಪತಿಗೆ ಶಾರದೆಗೆ ನಮಿಸಿ । ಒಂದೇ ಭಾವದಿ ಕರವ ಮುಗಿದು ॥ ಮಂಗಳಗೌರಿಯ ಕಥೆಯ ಪೂಜಿಸಿ । ಸಂಜೀವನಾಗಿ ॥ ಜಯ ಜಯ ಮಂಗಳಂ ॥ಪ॥ ರನ್ನದುಂಗುರ ತರಿಸಿದನಾತಾ । ಮುನ್ನಂತ ಸಭೆಯೊಳಗಿಡಿಸಿದನೀತಾ॥ ಮಾನುಣಿಯ ॥ ದಿನದಲಿ ಮದುವೆಯ ಮಾಡಿ ಧಾರೆಯನೆರೆದರು ಬೆಳವಳ್ಳಿ ಸಹಿತ ॥ಜಯ॥೧॥ ಬೆಳವಳ್ಳಿ ತಕ್ಕೊಂಡು ತಕ್ಷಣದಿ । ಹಡೆದ ತಾಯ ತಂದೆ ಪುರಕ್ಹೋಗಿ ॥ ನಾರಿಯರೆಲ್ಲರು ಹರಸಿದರಾಗ ನಿನ್ನೆ ಗುರುತೇ ನಂದರು ॥ಜಯ॥೨॥ ಬೆಟ್ಟದರಾಯ ನೀವ್ ಸಿಟ್ಟಾಗಲಾ ಬೇಡಿ । ಈ ಕ್ಷಣ ಕರಕೊಂಡು ಹೋಗೆನುತಲಿ ॥ ಅಪ್ಪಣೆ ತಕ್ಕೊಂಡು ಬಂದಳು ಗೌರಿ । ತಮ್ಮಪ್ಪನ ಸಹಿತ ॥ಜಯ॥೩॥ ಬೀಸುವ ಗಾಳಿ ಸೂಸುವ ಮಳೆಯು । ದೇಶದ ಮೇಲಿನಹಳ್ಳಿ ಕೊಳ್ಳಗಳು ॥ ಬೇಸಿಗೆ ಬರಲಿನ್ನಿಷ್ಟೇಕವಸರ । ನಾತಂದು ಕಳಿಸುವೆನು ॥ಜಯ॥೪॥ ಮಂಗಳಗೌರಿ ಮುಂದೆ ಮಂಗಳ ಪದವು । ಮಂಗಳ ಲೋಲೆಗೆ ಮಂಗಳ ಶೀಲೆಗೆ ॥ ಮಂಗಳ । ಯಮಗಿರಿರಾಯರ ಸತಿಗೆ । ಮಂಗಳ ಶಿವಸತಿಗೆ ಜಯ ॥೫॥

# ಶ್ರೀ ಮಂಗಳಗೌರಿಯ ಕಥೆಯ ಹಾಡು

ಪರಮ ಸಂತೋಷದಲಿ ಪತಿಯ ಪಾದಕ್ಕೆರಗಿ । ವರದ ಗಣಪತಿಗೆ ವಂದನೆಯ ಮಾಡಿ ॥ ಹರನರಸಿ ಮಂಗಳಗೌರಿದೇವಿಯ ಕಥೆಯ । ನೊರೆವೆ ಬಲ್ಲಂತ ಸಜ್ಜನರು ಕೇಳಿ ॥೧॥ ಕೌರವೇಶ್ವರನು ಕುಟಿಲದಿ ಜೂಜನಾಡಿ । ಪುರವ ಬಿಡ್ಹೊರಡಿಸಿದನೆ ಪಾಂಡವರನು ॥ ಅಡವಿಲಿ ವನವಾಸವನಾಚರಿಸುವ ದಿನವ । ಕಳೆಯುತ್ತಿದ್ದರು ಹರಿಯ ಧ್ಯಾನದಿಂದ ॥೨॥ ಒಂದು ದಿನ ಹರಿಯು ಕಾಮ್ಯಕವನಕೆ ನಡೆತರಲು । ಬಂದರೆದುರಿಗೆ ಧೌಮ್ಯಮುನಿಸಹಿತಲೆ ॥ ಬಂದು ಪಾಂಡವರು ಮುಯ್ಯಿಕ್ಕಿದರು. ವಂದಿಸಿದರೆ ಹರಿಪಾದ ದ್ವಂದ್ವದಲ್ಲಿ ದ್ರೌಪದೀದೇವಿ ಸಹಿತ ॥೩॥ ನಾರಾಯಣ ತಾನು ನಸುನಗುತ ದ್ರೌಪದಿಗೆ । ಹೇಳಿದನು ಪೂರ್ವಜನ್ಮದ ಕರ್ಮವ ॥ ಮಾಡಿ ಅನುಭವಿಸಿದಲ್ಲದೆ ಬಿಡದು । ನೀರೇ ನೀ ಬರಿದೆ ಚಿಂತಿಸಬೇಡವೆನುತ ॥೪॥ ಧರೆಯೊಳಗೆ ಉತ್ತಮದ ವ್ರತವು ಯಾವುದುಯೆಂದು । ನರಹರಿಯು ತನ್ನೊಳಗೆ ತಾನೆ ತಿಳಿದು ॥ ಹರನರಸಿ

ಮಂಗಳಗೌರಿದೇವಿ ವ್ರತವಾ । ಚರಿಸೆ ನಿಮ್ಮ ರಾಜ್ಯ ಸಾಧ್ಯವಹುದು ॥೫॥ ಶ್ರಾವಣಮಾಸದಲಿ ಐದು ಮಂಗಳವಾರ । ಈ ವ್ರತವು ಐದು ವರುಷವಾಚರಿಸಲು॥ ಯಾರು ಮಾಡಿದರು ಮನಸಿನ ಕಾರ್ಯವಾಗುವುದೆಂದು । ಭಾಮೆ ದ್ರೌಪದಿಗೆ ಹರಿ ನುಡಿದನಾಗ ॥೬॥ ಯಾರು ಮಾಡಿದವರು ವ್ರತದ ಮಹಿಮೆಗಳೇನು । ಏನು ಫಲವೆಂದು ದ್ರೌಪದಿ ಕೇಳಲು ॥ ನಾನು ಹೇಳುವೆನು ಕೇಳು ಮುನ್ನ ಕರ್ನಾಟ । ದೇಶದೊಳಗೊಬ್ಬ ದೊರೆಯಿರುತ್ತಿದ್ದನು ॥೭॥ ಮುನ್ನದೇ ಶ್ರೀಪಾಲನೆಂಬೊ ನಾಮದಲ್ಲಿ । ಸುವರ್ಣಾವತಿ ಎಂಬೊ ಪಟ್ಟಣದಲಿ । ತನ್ನ ವಲ್ಲಭೆ ಕನಕಮಂಜುಳೆ ಸಹಿತಲೆ । ಚೆನ್ನಾಗಿ ಧರೆಯ ಪಾಲಿಸುತ್ತಿದ್ದನು ॥೮॥ ಮಕ್ಕಳ್ಳಿಲ್ಲದೆ ಅವರು ಮನದ ಸಂತಾಪದಲಿ । ಬಿತ್ತಿದಾ ಸಸಿಗೆ ನೀರಿಲ್ಲವಂತೆ ॥ ಬತ್ತಿದಾ ಕೊಳದಂತೆ ಮನದಲ್ಲಿ ಮರುಗುತ್ತ ಮುಕ್ಕಣ ಹರನ ಧ್ಯಾನದಲ್ಲಿದ್ದರು ॥೯॥ ಪರಮ ಹರಿಭಕ್ತರು ತನಯರಿಲ್ಲದೆ ಅವರು । ಮೃಢನ ಪೂಜಿಸುತಿರಲು ಅನುಗಾಲವು ॥ ಹರ ತನ್ನ ಭಕ್ತರ ಮನದ ಚಿಂತೆಯ ತಿಳಿದು । ತಿರುಕ ನಂದದಲಿ ಭಿಕ್ಷೆಗೆ ಬಂದನು ॥೧೦॥ ಬಂದುದನು ಕಾಣುತ್ತ ಕನಕ ಮಂಜುಳಿ ಮುತ್ತ । ತಂದು ಮೊರದೊಳಗೆ ಭಿಕ್ಷೆಯ ನೀಡಲು ॥ ಮುಂದೆ ನಿಂತಿದ್ದಾಗ ಹರ ತಾನು ಮುಟ್ಟದೆ । ತಂದು ಈಶಾನ್ಯ ಮೂಲೆಗೆ ಚೆಲ್ಲಿದ ॥೧೧॥ ಯಾವಾಗ ಬಂದರೂ ನೀಡುವಳು ಭಿಕ್ಷವನು। ಮುರಹರ ಮುಟ್ಟದಲ್ಲಿಯೆ ಚೆಲ್ಲುವ ॥ ಏನು ಕಾರಣವೆಂದು ರಾಯ ಬಂದರೆ ಅವಳ ಭಾವವನು ಹೇಳಿದಳು ಚಿಂತೆಯಿಂದ ॥೧೨॥ ನಾಳೆ ಭಿಕ್ಷವ ನೀಡು ನಾನು ನೋಡುತಲಿರುವೆ । ಏನು ಕಾರಣವೆಂದು ಕೇಳು ಅವನ ॥ ಹೀಗೆ ಚಿಂತಿಸುತ ಸಮಯವ ಕಳೆಯೆ ಮರು ದಿವಸ । ಬಾಗಿಲಿಗೆ ಬಂದು ಭಿಕ್ಷಾಯೆಂದನು ॥೧೩॥ ಬಂದವನ ಕಾಣುತ್ತ ಕನಕಮಂಜುಳಿ ಮತ್ತು । ತಂದು ಮೊರದೊಳಗೆ ಭಿಕ್ಷವ ನೀಡಲು ॥ ಮನದ ಸಂಶಯವೇನು ಎಂದು ಕೇಳಿದರವನ ತನಯಿಲ್ಲದವರ ಭಿಕ್ಷೆ ಮುಟ್ಟೆನೆಂದ ॥೧೪॥ ಭಿಕ್ಷಕನು ಆಡಿದಾ ಕಷ್ಟದಾ ನುಡಿಕೇಳಿ । ಮಕ್ಕಳಿಲ್ಲದ ಜನ್ಮ ವ್ಯರ್ಥವೆಂದು ॥ ದುಃಖಿಸಿ ಸತಿ-ಪತಿಗಳಿಬ್ಬರು ಬಂದು । ಮುಕ್ಕಣ್ಣ ಹರನ ಚರಣಕೆ ಬಿದ್ದರು ॥೧೫॥ ಪರಮಭಕ್ತರ ಬಿಗಿದಪ್ಪಿ ತಕ್ಕೈಸಿ । ತನಯರಿಲ್ಲದೆ ಬಹಳ ನೊಂದೆ ಮಗನೆ ॥ ನಿನಗೆ ಮಕ್ಕಳ ಫಲವಿಲ್ಲ ಹದಿನಾರು ವರುಷ। ಆಯುಷ್ಯದ ಮಗನ ಕೊಡುವೆನೆಂದನು ॥೧೬॥ ಒಂದು ಫಲವನು ಕೊಟ್ಟು ನಂದೀಶ್ವರ ಹೋದ। ಮಂಜುಳೆಗೆ ಗರ್ಭ ಸ್ಥಿರವಾಯಿತಾಗ ॥ ಒಂಭತ್ತು ತಿಂಗಳು ತುಂಬಿ ಪಡೆದಳೆ ಭೂ । ಮಂಡಲ ವನಾಳುವ ಹರಿಭಕ್ತನ ॥೧೭॥ ಜ್ಯೋತಿಷ್ಯರ ಕಡೆಗೆ ಹೋಗಿ ಜಾತಕವ ಬರೆಸಿದನು । ಪ್ರೀತಿಯಿಂದಲೆ ನಾಮಕರಣವ ಮಾಡಿ ॥ ದೇವಪಾಲನು ತನ್ನ

ತನಯನಿಗೆ । ಚಂದ್ರಶೇಖರನೆಂಬ ಪೆಸರನು ಬರೆದನಾಗ ॥೧೮॥ ಆಡುವ ಬಾಲಕನ ನೋಡಿ ಹಿಗ್ಗುತ್ತಿರಲು। ಆದವು ಆರೇಳು ವರುಷಗಳಲ್ಲಿ ॥ ಮಾಡಿ ಮುಂಜಿ ಸಕಲ ವಿದ್ಯೆನು ಕಲಿಸಿದರು । ಆರೇಳು ವರುಷವಾಯಿತು ತನಯನಿಗೆ ॥೧೯॥ ಹದಿನಾರು ವರುಷವಾಲು ಅವಗೆ ತಾಯ್ತಂದೆ । ತಿಳಿದು ಕಂಟಕವು ಪರಿಹಾರವಾಗಲಿ ॥ ಎನುತ ಮಾವನ ಕರೆಸಿ ಕಾಶಿಗೆ ಮಗನ । ಕರಕೊಂಡು ಹೋಗೆಂದು ಒಪ್ಪಿಸಿದರು ॥೨೦॥ ಸೋದರಳಿಯನು ಸಹಿತ ತಾ ಬಂದನು । ಗೊಂಡಾರಣ್ಯವೆಂಬ ಪುರಮಧ್ಯದಲಿ ॥ ಆ ದೇಶದೊರೆ ಮಂಡೋರಾಯನ ಪುರದ । ಹೂವಿನ ತೋಟದಲಿ ನಿಂದರವರು ॥೨೧॥ ಮಂಡೋರಾಯನ ಮಗಳ ದಾಸಿಯರ ಕೂಡಿಕೊಂಡು । ಒಂದು ದಿನ ಹೂವಿನ ವನಕೆ ಬರಲು ॥ ಚಂದ್ರಶೇಖರನರಸಿ ಸೋಲು ಮುಡಿಗೆನುತಲೆ । ದುಂಡುಮಲ್ಲಿಗೆ ಹೂ ಕೊಯ್ಯುತಲಿದ್ದರು ॥೨೨॥ ರಾಜ ಪುತ್ರಿಯ ಸಂಗಾತ ಬಂದವರಲ್ಲಿ । ಹೂವ ಕೊಯ್ಯುವಾಗ ಒಬ್ಬಳು ಕೋಪಿಸಿ ॥ ರಾಜಾಧಿಪತಿಯ ಮಗಳೆಂದು ನೋಡದೆ ಅವಳು । ಬಹಳ ನಿಷ್ಠೂರದ ಮಾತು ನುಡಿದಳಾಗ ॥೨೩॥ ನುಡಿದ ಮಾತನು ಕೇಳಿ ನಗುತ ಮನದಲ್ಲಿ। ಮಂಗಳಗೌರಿ ದಯೆಯುಂಟುಯೆನೆಗೆ॥ ಮಂದಮತಿ ನೀ ನುಡಿದರೇನಾಯಿತೆನಗೆ । ಬಂದ ವಿಪತ್ತುಗಳ ಜೈಸುವೆನೆಂದಳು ॥೨೪॥ ಶ್ರಾವಣ ಮಾಸದಲಿ ನಾನು ಐದು । ಮಂಗಳವಾರ ಬಿಡದೆ ಪೂಜಿಸಿ ॥ ಪೂರ್ಣಾಯುಷ್ಯದ ಪತಿಯನು । ಬೇಡುವೆ ಹರನಲ್ಲಿ ವರವೆಂದಳು ॥೨೫॥ ಆ ಮಾತನಾಲೈಸಿ ಕೇಳಿದ ಸುಕುಮಾರ। ಮಾವಯ್ಯ ನೋಡು ಕನ್ಯೆಯ ಮಾತನು । ರೂಢಿಗೀಶ್ವರನ ದಯೆಯುಂಟಾದರೆ ನಮಗೆ । ಈ ಕನ್ಯೆ ನಮಗೆ ಆಗಬೇಕೆಂದು ನುಡಿದ ॥೨೬॥ ಮಾಡಿ ಸಂರಕ್ಷಣೆಯನು ಮಗಳ ಮದುವೆಗೆ ವರನು । ಹೇಳಿ ಕಳುಹಿದರೆ ದಿಬ್ಬಣದವರನು ॥ ಸಾಗಿ ಬಂದರೆ ಕುಷ್ಠಸಹಿತ ಮಂಡೋಪುರದ । ಹೂವಿನ ತೋಟದಲಿ ನಿಂದರವರು ॥೨೭॥ ಬಾಲಚಂದ್ರಮನಂತೆ ಹೊಳೆವ ಕುಮಾರನು । ಇವನು ನಮಗೊಂದು ಘಳಿಗೆಯೆರವು ॥ ನೀವು ಕೂಡಿರೆಂದು ದಿಬ್ಬಣದವರು ಮಾವನ ಕೇಳಲು । ಆಡಿದ ಮಾತಿಗೆ ನಕ್ಕಮಾವ ॥೨೮॥ ಬೆಳ್ಳಿ ಬಂಗಾರ ಧನ-ಧಾನ್ಯ ಎರವುಂಟು । ಚಿನ್ನ ಬೆಳ್ಳಿಯು ಮುಂತಾಗಿ ಉಂಟು ॥ ಕನ್ನಿಕೆಗೆ ವರನು ಎರವ ಕೇಳುವರ । ಕಣ್ಣಲಿ ನಾ ಕಾಣೆನಿತೆಂದು ಮಾವ ॥೨೯॥ ಕಾಲವು ಒದಗೀ ಹೊತ್ತಿಗ್ಹದಿನಾರು ವರುಷ। ನೋಡಲಾರೆವೆಂದು ಮನದಲರಿತು ॥ ಯಾರ ಪುಣ್ಯದಲಿ ಬದುಕಿದರೆ ಸಾಕು ಮದುವೆ। ಆಗು ಹೋಗೆಂದು ಕಳುಹಿಸಿದ ಮಾವನು ॥೩೦॥ ಬೃಹಸ್ಪತಿಯ ಕರೆಸಿ ನಕ್ಷತ್ರವನೆ ನೋಡಿಸಿ । ಮದುವೆಯ ಲಗ್ನ ನಿಶ್ಚಯವ

ಮಾಡಿ ॥ ಆ ಕುಷ್ಠಿಯ ಬಚ್ಚಿಟ್ಟು ಸುಕುಮಾರಗೆರೆದರೆ । ಧಾರೆ ಯಾರರಿಯದ ತೆರದಲಿ ॥೩೧॥ ಮಾಣಿಕದ ಗಿಂಡಿಲಿ ಭಾಗೀರಥಿ ತುಂಬಿ । ಪ್ರಾಣದೊಲ್ಲಭೆ ಸಹಿತ ಮಂಗಳಧಾರೆ ॥ ಬೇಗದಲಿ ಎರೆದು ವಿನಯದಲಿ ಮಂಡೋರಾಯ । ದಾನ ಧರ್ಮದಲಿ ತಣಿಸಿದ ವಿಪ್ರರ ॥೩೨॥ ಮಂಗಳಗೌರಿಯ ಮುಂದೆ ಗೃಹದೊಳು । ಸಂಗಾತಲುಂಡು ಇಬ್ಬರು ಮಲಗಿರೆ ॥ ಚಂದ್ರಶೇಖರರಾಯ ಸ್ವಸ್ಥದಿಂದ ಕೇಳಿ ಲಡ್ಡುಗೆ ತುಪ್ಪ । ತಂದು ಬೆಳ್ಳಿಯ ಪಾತ್ರೆಯಲ್ಲಿ ಕೈಗೆ ಕೊಡಲು ॥ ತಿಂದು ಉಂಗುರ ಸಡಲಿ ಬೀಳೆ ಪಾತ್ರೆಯೊಳಗೆ। ತಂದು ಇರಿಸಿದಳು ದೇವರ ಮನೆಯಲಿ ॥೩೪॥ ಮತ್ತೆ ಮಲಗಿರುವಾಗ ಘಟಸರ್ಪ ಮಂಚದ । ಬಳಿಗೆ ಬಂದಿತು ಆ ಸಮಯದಲಿ ॥ ಹರನರಸಿ ಮಂಗಳಗೌರಿಯನೆ ಪೂಜಿಸಿ । ಶಿರಸಿನಲಿ ತಂದು ಅಕ್ಷತೆ ತಳಿದಳು ॥೩೫॥ ತಳಿದ ಅಕ್ಷತೆಯು ಸರ್ಪನ ಮೇಲೆ ಬೀಳಲು । ಅದರಾಯುಷ್ಯವು ಸಂಪೂರ್ಣವಾಯಿತು॥ ಹರನರಸಿ ಮಂಗಳಗೌರಿಯು ದಯದಿಂದ । ಚಿರಂಜೀವಿಯಾಯುತ್ತ ಕೇಳೆಂದ ಹಹಿಯು ॥೩೬॥ ಆಗ ಕಂಡಳಿ ಪಣಿಯ ನೋಡಿ ಬೆರಗಾಗುತ್ತ । ಏನು ಕಾರಣ ಬಳಿಗೆ ಬಂದಿತೆಂದು ॥ ಬೇಗದಲಿ ತಂದು ಕಲಶವ ತುಂಬಿ ಕಂಚುಕಿ । ಬಾಯಿಕಟ್ಟಿರಿಸಿ ಮಲಗಿದಳು ಹರುಷದಿ ॥೩೭॥ ಆ ಹೊತ್ತಿನಿರುಳಲ್ಲಿ ಸತಿಪುರುಷರೊಂದಾಗಿ । ಬಹು ಸಂತೋಷದಲಿರುತಿದ್ದರು । ಆಯಿರುಳು ಕಳೆದು ಬೆಳಗಾಗೆ ಮಾವನ ಕೂಡೆ । ಯಾರಿಗ್ಹೇಳದೆ ಕಾಶಿಗ್ಹೊರಟ್ಹೋದರು ॥೩೮॥ ನಾರಾಯಣನ ಭಕ್ತ ಹೋದ ಕಾಶಿಗೆ ಅತ್ತ । ಯಾರು ಅರಿಯರು ಅರುಣ ಉದಯದಲಿ ॥ ಆ ಕುಷ್ಠಿಯ ತಂದು ಹಸೆ ಮೇಲೆ ಕುಳ್ಳಿರಿಸಿ । ಭಾಮೆಯನು ಹಸೆಗೆ ಬಾರೆಂದಾಗ ॥೩೯॥ ಬಂದು ಕಂಡಳೆ ಆಗ ಬಿಳಿಮೈಯನು ತನ್ನ । ಗಂಡನಲ್ಲವೆಂದು ಮನದಲರಿತು ॥ ಹೋಗು ಹೇಳಿದಳು ಒಂದು ವರುಷವು । ಗಂಡನೊಲ್ಲದ ವ್ರತವು ತನಗೆಂದಳು ॥೪೦॥ ತಂದೆಯಾಯನು ಕರೆದು ಹೇಳಿದಳು ನೀವು ಕೊಟ್ಟ । ಬಾಲಪ್ರಾಯದ ಗಂಡನಲ್ಲ ಇವನು ಏನು ಕುಟಿಲವೋ ಕಾಣೆ ಅರಿಯಬಾರದಿಂದು। ಸಾಗಿ ಕಳುಹಿಸಿ ದಿಬ್ಬಣದವರನು ॥೪೧॥ ತಂದೆಯ ಕರೆದು ನುಡಿದಳು ಒಂದು ವರುಷ ಅನ್ನಛತ್ರವನು ತಂದೆ ನೀ ಮಾಡಿಸೋ ಕೈವೀಳ್ಯವ ॥ ಚಂದದಲಿ ನಾ ಕೊಟ್ಟ ಗುರುತು ಹೇಳುವೆನು । ಹಾಗೆಂದು ಕೈವೀಳ್ಯವನು ಕೊಡುತ್ತಿದ್ದಳು ॥೪೨॥ ನಾಲ್ಕು ಕಡೆಗಳಲ್ಲಿ ದಾರಿ ಮಾರ್ಗದ ಒಳಗೆ । ಹೋಗಿ ಬರುವವರು ಅನ್ನವನುಣ್ಣುವುದು ॥ ರಾಯನ ಮಗಳ ಕೈವೀಳ್ಯವನೆ ತಕ್ಕೊಂಡು । ಹೋಗುವುದುಯೆಂದು ನೇಮಿಸಿದರಾಗ ॥೪೩॥ ರಾಜದೂತರ ಅಲ್ಲಲ್ಲಿಗಿರಿಸಿ ದಣಿದನು । ಮೀರು ಹೋಗುವವರನು ತಡೆದು

ನೀವು ॥ ಬೇಗದ ಬಂದು ಸುದ್ದಿಯ । ಮಾಡಿ ಎನುತಲೆ । ಆ ರೀತಿ ಆರು ತಿಂಗಳ ಕಳೆದಂತಾಯಿತು ॥೪೪॥ ಭಾಗೀರಥಿಗ್ಹೋಗಿ ಬೇಗ ಸ್ನಾನವ ಮಾಡಿ । ಆರೇಳು ಮಾಸಕೆ ಮಾವಳಿಯ ಬಂದರು ॥ ಕಾವಡಿ ಸಹಿತ ತಕ್ಕೊಂಡು ಮಂಡೋಪುರದ । ಊರ ಬಾಗಿಲಿಗೆ ಬಂದರಿಬ್ಬರು ॥೪೫॥ ಕಾಣುತ್ತ ಚಾರವವರೆ ಬೇಗ ಬಂದ್ಹೇಳಿದರು। ಬನ್ನಿರೆಂದ ಸನ್ಮಾನದಿಂದ ಕರೆತನ್ನಿರೆನಲು ॥ ಬೇಗದಲಿ ಮನ್ನಿಸಿ ಮನೆಗೆ ಕರೆತಂದರವರು। ವಾರಿಜಮುಖಿ ನೋಡಿ ಪ್ರೀತಿಯಿಂದಲಿ ತನ್ನ ॥೪೬॥ ತಂದೆಯನು ಕರೆಯಿಸಿ ನುಡಿದಳು । ಅಂದು ಈತನಿಗೆ ಧಾರೆಯ ನೆರೆದಿರಿ ॥ ನಂಬಿಕೆಯು ಏನೆಂದು ನುಡಿದರೆ ಒಳಗಿನಿಂದ । ತಂದು ಬಿಚ್ಚಿದಳೆ ಕಲಶವ ಸಭೆಯಲೆ ॥೪೭॥ ತೆಗೆದು ನೋಡಲು ಆ ಸರ್ಪ ಕಂಠಮಾಲೆ । ಸರವಾಗಿ ಇರಲು ಅಲ್ಲಿದ್ದ ಜನರು ॥ ಹರಸಿ ಕಂಠಕೆ ಹಾಕಿ ಸಂತೋಷದಿಂದಲೆ । ಮುತ್ತೈದೆ ಸೌಭಾಗ್ಯವನು ಪಡೆಯೆಂದರು ॥೪೮॥ ನಿನ್ನ ಗುರುತೇನೆಂದು ಬೆಸಗೊಂಡರೆ ಕಾಶಿಗೆ ॥ ನಮ್ಮ ಮಾನವನ ಕೂಡೆ ಹೋಗುತ್ತಿದ್ದೆ ॥ ನಿಮ್ಮ ಬೀಗನು ತನ್ನ ಮಗನು ಕುಷ್ಠಿಯು ಎಂದು ನಮ್ಮ ಕರೆತಂದು ಧಾರೆಯನೆರೆದ ॥೪೯॥ ಲಡ್ಡುಗೆ ತಿಂದ ಪಾತ್ರೆಯ ತಂದದರೊಳಗಿಂದ ಮುದ್ರೆಯುಂಗುರವ ತೋರಿಸಿದ ಜನರಿಗೆ ॥ ಪ್ರಜ್ವಲಿತವಾದ ಮುದ್ರೆಯ ಮೇಲೆ । ಚಂದ್ರಶೇಖರನೆಂಬ ಹೆಸರನು ಕಂಡರಾಗ ॥೫೦॥ ಮಂಡೋರಾಯ ತನ್ನ ಸುತೆಯ ತಕ್ಕೈಸಿದನು । ಇಂದೆನ್ನ ಕುಲಕೆ ತೀರ್ಥಿಯನು ತಂದೆ ॥ ಗಂಡ ನುಡಿದ ಮಾತು ಮೀರದೆ ಇರುವೆಯೆಂದು । ಚಂದದಲಿ ಸುತೆಯ ಮುದ್ದಾಡುತ್ತಿದ್ದ ॥೫೧॥ ಹೀಗೆ ಒಂದೆರಡೊರುಷ ಸ್ತ್ರೀ-ಪುರುಷರೊಂದಾಗಿ । ಬಹಳ ಸಂತೋಷದಲಿ ಇರುತಿರ್ದರು ॥ ತಾಯಿ-ತಂದೆಯ ನೆನೆದು ಹೋಗಬೇಕೆನುತಲಿ । ಮಾವನ ಕೂಡೆ ನುಡಿದ ವಿನಯದಿ ॥೫೨॥ ಸೋದರ ಮಾವ ನಮ್ಮೂರಿಗ್ಹೋಗೋಣೆನ್ನು । ತಾಯಿ-ತಂದೆಯ ನೋಡಬೇಕೆಂದರೆ ॥ ಆನೆ ಕುದುರೆ ಮಂದಿ ದಳ ಸಹಿತ । ಅಳಿಕ ಕುಮಾರಿಯನೆ ಕಳಿಸಿ ಚಿಂತಿಸುತಲಿದ್ದ ॥೫೩॥ ದಾರಿ ಮಾರ್ಗದಲಿ ಬರುವಾಗ ಶ್ರಾವಣ ಮಾಸ । ಆಗಲೊದಗಿತು ತನ್ನ ಮನದಲರಿತು ॥ ನುಡಿದಳು ಪತಿಯೊಡನೆ ನಗುತ ಸಂತೋಷದಲಿ । ಮಾಡಬೇಕಿಲ್ಲಿ ಗೌರಿ ವ್ರತವನೆಂದಳು ॥೫೪॥ ದಾರಿಲಿ ವ್ರತವನು ಮಾಡಬಾರದು ಕೇಳು । ಊರಿಗ್ಹೋದ ಮೇಲೆ ಮಾಡಬಹುದಲ್ಲವೆ ॥ ಕೇಳು ಕಿರಿಯಯ್ಯ ಒಂದೇ ಘಳಿಗೆ ತಡವಿಲ್ಲ ಬಾಲ್ಯದಲಿ ಹಿಡಿದ ಈ ವ್ರತವ ನಿಲ್ಲಿಸಲಿಲ್ಲವಯ್ಯ ॥೫೫॥ ಗಂಗೆಯಾ ತೀರದಲಿ ಮಿಂದು ಮಡಿಯನುಟ್ಟು। ಚಂದ್ರಶೇಖರನರಸಿ ಭಕ್ತಿಯಿಂದ ॥ ಗಂಧಾಕ್ಷತೆ ಪುಷ್ಪ ದೀಪ ಧೂಪಾದಿಯಿಂದ । ಮಂಗಳಾರತಿಯನೆತ್ತಿದಳು ಹರುಷದಿ ॥೫೬॥

ಹರನರಸಿ ಮಂಗಳಗೌರಿ ನೆಲಸಿದ ಠಾವು । ಮಣಿಪುರವೆಂಬ ಪಟ್ಟಣವಾಯಿತು ॥ ದೊರೆ ಮಕ್ಕಳುಂಡು ಕೈತೊಳೆದು ತಮ್ಮಯ್ಯನ । ಪುರದ ಸಮೀಪಕ್ಕೆ ಬಂದರವರು ॥೫೭॥ ಹರನ ವರದಲಿ ಕೊಟ್ಟ ತನಯನ ಮಾತುಗಳ । ಕೈಗೆ ಕೊಟ್ಟಾ ಮಗನು ಏನಾದನೊ । ಎನುತ ತಾಯ್ತಂದೆ ಮರಗುತಿರುತಿರೆ ನಿಮ್ಮ । ಮಗ ಬಂದನೆಂದು ನುಡಿದರು ಬಂದು ॥೫೮॥ ನುಡಿದ ಮಾತನು ಕೇಳುತ ಸಂತೋಷದ । ರಾಣಿಗೀ ಶುಭ ಹೇಳಿ ಕಳುಹಿಸಿದರೆ ॥ ರಾಣಿ ವಾಸವ ಬಿಟ್ಟು ಸಂತೋಷದಲಿ ಸುತನ ನೋಡಬೇಕೆಂಬ ತವಕದಲ್ಲಿದ್ದಳು ॥೫೯॥ ಶುಭವಾರ್ತೆ ನುಡಿದ ಚಾರರ ಮನ್ನಿಸಿ ಭೂಪ । ಉಡುಗೊರೆಯ ಆಭರಣ ತರಿಸಿ ಕೊಟ್ಟು ॥ ಕಲಶಗನ್ನಡಿಯ ತೋರಣ ರಚಿಸಿ ಪುರದೊಳಗೆ । ತನಯನ ಕಾಣಲುತ್ಸಾಹದಲ್ಹೊರಟು ॥೬೦॥ ದೂರದಲಿ ತನಯನ ಕಾಣುತಲೇ ಸಂಭ್ರಮದಿ । ಏನು ಕರುಣ ಹರಗೆ ನಮ್ಮ ಮೇಲೆ । ಕಾಲವಾದ ಮಗನ ಬದುಕಿಸಿ ಕರೆತಂದ । ಯಾರು ಸರಿಯಲ್ಲ ಪುಣ್ಯಕೆ ಜಗದೊಳು ॥೬೧॥ ಶುಭಲಗ್ನದಲಿ ಮಗನು ಪುರವ ಹೋಗುವೆನೆಂದು । ಪುರದ ಜನರೆಲ್ಲ ಸಂತೋಷದಿಂದ॥ ಅರಮನೆಗೆ ಬಂದು ತಾಯಿ-ತಂದೆ ಚರಣಕ್ಕೆ । ವಂದಿಸಿದರಾಗ ಸೊಸೆಮಗ ಸಹಿತಲೆ ॥೬೨॥ ವಂದಿಸಿದ ಸೊಸೆ ಮಗನ ಬಿಗಿದಪ್ಪಿ ತಕ್ಕೈಸಿ । ಮಗಳೆ ನೀನ್ಯಾವ ವ್ರತವನು ಮಾಡಿದೆ । ಎನುತ ಬೆಸಗೊಂಡರೆ ನಾನೇನರಿಯೆ ಪುರುಷನ । ಚರಣವೇ ಗತಿಯೆಂದು ಇರುತಿದ್ದೆನು ॥೬೩॥ ಮಂಜುಳೆಯು ತಮ್ಮನ ಬಿಗಿದಪ್ಪಿ ತಕ್ಕೈಸಿ । ತಂದಿತ್ತೆ ಹೋದ ಮಗನನ್ನು ಬದುಕಿಸಿ ॥ ಇಂದು ನೀ ಧರೆಯೊಳಗೆ ಮಾಡಿದುಪಕಾರವನು । ಎಂದಿಗಾದರೂ ನಿನ್ನ ಮರೆಯಬಹುದೆ ॥೬೪॥ ಅಕ್ಕಯ್ಯ ನಿನ್ನ ಹೊಟ್ಟೆ ಪುಣ್ಯದಲಿ ನನ್ನ । ಪುತ್ರ ಬದುಕಿದನು ಕೇಳೆಮ್ಮ ತಾಯಿ ॥ ಅಲ್ಪದಾಯುಷ್ಯ ಹೋಗಿ ಚಿರಂಜೀವಿಯಾಯ್ತಿವನ । ಮುತ್ತೈದೆ ತನ ಇವಳಿಗುಂಟಾಯಿತು ॥೬೫॥ ಸೃಷ್ಟಿಗೀಶ್ವರನರಸಿ ಗೌರಿಯನೆ ಪೂಜಿಸಿ ಮುತ್ತೈದೆತನವನು ಪಡೆದಳವಳು ॥ ಮುತ್ತೈದೆ ತನವನು ಪುತ್ರ ಸಂತಾನವನು ಕೊಟ್ಟು ರಕ್ಷಿಸುವ ಮಂಗಳ ಗೌರಿಗೆ ॥೬೬॥

ವರಗೌರಿ ಪಾಲಿಸು । ಧರೆಯೊಳು ಎಮ್ಮನ ॥ಪ॥ ಸಾರಿ ಬೇಡಿಕೊಂಬೆವೀಗ ಭರದೋಳು । ನಿನ್ನ ॥ಅ.ಪ.॥ ದುಷ್ಟನಾಶೀನಿ ಸೃಷ್ಟಿ ಪೋಷಣೆ ॥ ದೀನ ಪೋಷಕಳು। ಕ್ಷೋಣಿಯೋಳ್ ಕೃಷ್ಣೇಂದ್ರನನ್ನು । ಸಲಹು ಮಾತೆಯ ॥೧॥ ಧರೆಯೊಳು ಕಲ್ಯಾಣ ಪುರಿಯೊಳು ವಾಸಿಪ ವರನನ್ನು ಪೊರೆ ನೀ ಬೇಗೆ ಸಾರಸನೇತ್ರ ॥೨॥

॥ ಮಂಗಳಗೌರೀ ಕಥೆ ಹಾಡು ಸಮಾಪ್ತ ॥

**(ಶಾಖಾವ್ರತ ಮುಗಿದ ಮೇಲೆ ಈ ಅಡುಗೆಗಳನ್ನು ಮಾಡಬಹುದು. ಶಾಖಾವ್ರತವಿದ್ದರೆ ಭೀಮನ ಅಮಾವಾಸ್ಯೆ ಪುಸ್ತಕದಲ್ಲಿ ಕೊಟ್ಟಿರುವ ಅಡುಗೆಗಳನ್ನು ಮಾಡಬೇಕು. ದಧಿವ್ರತವಿದ್ದರೆ ಮೊಸರನ್ನು ಸರ್ವಥಾ ಉಪಯೋಗಿಸಬಾರದು.)**

## ಹೆಸರುಬೇಳೆ ಕೋಸಂಬರಿ

**ಬೇಕಾಗುವ ಪದಾರ್ಥಗಳು** : ಹೆಸರುಬೇಳೆ - 500 ಗ್ರಾಂ, ಹಸಿಮೆಣಸಿನಕಾಯಿ- 6, ಸೌತೇಕಾಯಿ - 1, ತೆಂಗಿನಕಾಯಿ - $^1/_4$ ಭಾಗ, ಇಂಗು - 1 ಚಿಟಿಕೆ, ಅವಶ್ಯವಾದಷ್ಟು ಕೊತ್ತಂಬರಿಸೊಪ್ಪು, ಉಪ್ಪು, ಸಾಸಿವೆ ಮತ್ತು ಎಣ್ಣೆ.

**ಮಾಡುವ ರೀತಿ** : ಶುದ್ಧಪಡಿಸಿದ ಹೆಸರುಬೇಳೆಯನ್ನು ನೆನೆಹಾಕಿ, ನೆಂದ ಬಳಿಕ ನೀರು ಬಸಿದು ಸಣ್ಣಗೆ ಹೆಚ್ಚಿದ ಸೌತೇಕಾಯಿ, ತೆಂಗಿನಕಾಯಿ, ಹಸಿಮೆಣಸಿನಕಾಯಿ, ಉಪ್ಪು ಬೆರೆಸಿ ಚೆನ್ನಾಗಿ ಕಲಸಿ. ನಂತರ ಸಾಸಿವೆ, ಇಂಗು ಒಗ್ಗರಣೆ ಹಾಕಿ ನೈವೇದ್ಯಕ್ಕೆ ಸಿದ್ಧಪಡಿಸಬೇಕು.

## ಕಡಲೆಬೇಳೆ ಕೋಸಂಬರಿ

**ಬೇಕಾಗುವ ಪದಾರ್ಥಗಳು** : ಕಡಲೆಬೇಳೆ - 500 ಗ್ರಾಂ, ಹಸಿಮೆಣಸಿನಕಾಯಿ - 4, ಸೌತೇಕಾಯಿ - 1, ತೆಂಗಿನಕಾಯಿ - $^1/_4$ ಭಾಗ, ಕೊತ್ತಂಬರಿಸೊಪ್ಪು, ಸಾಸಿವೆ, ಉಪ್ಪು, ಎಣ್ಣೆ, ಇಂಗು.

**ಮಾಡುವ ರೀತಿ** : ಸೌತೇಕಾಯಿ ಸಿಪ್ಪೆ ತೆಗೆದು ಸಣ್ಣಗೆ ಹೆಚ್ಚಿಕೊಂಡು, ಕಡಲೆಬೇಳೆಯನ್ನು ನೆನೆಹಾಕಿ, ಅದು ನೆಂದ ಬಳಿಕ ನೀರು ಬಸಿದು, ಸಣ್ಣಗೆ ಹೆಚ್ಚಿದ ಹಸಿಮೆಣಸಿನಕಾಯಿ, ಸೌತೇಕಾಯಿ, ತೆಂಗಿನಕಾಯಿ ತುರಿ, ಉಪ್ಪು, ಕೊತ್ತಂಬರಿ ಸೊಪ್ಪು ಎಲ್ಲಾ ಹಾಕಿ ಚೆನ್ನಾಗಿ ಮಿಶ್ರಣ ಮಾಡಿ, ಅನಂತರ ಸಾಸಿವೆ, ಇಂಗು ಒಗ್ಗರಣೆ ಹಾಕಿ ನೈವೇದ್ಯಕ್ಕೆ ಸಿದ್ಧಪಡಿಸಬೇಕು.

## ಸೌತೇಕಾಯಿ ಕೋಸಂಬರಿ

**ಬೇಕಾಗುವ ಪದಾರ್ಥಗಳು** : ಸೌತೇಕಾಯಿ - 1, ತೆಂಗಿನಕಾಯಿ - $^1/_4$ ಭಾಗ, ಕೊತ್ತಂಬರಿಸೊಪ್ಪು, ಸಾಸಿವೆ, ಉಪ್ಪು, ಎಣ್ಣೆ, ಇಂಗು.

**ಮಾಡುವ ರೀತಿ** : ಸೌತೇಕಾಯಿ ಸಿಪ್ಪೆ ತೆಗೆದು ಸಣ್ಣಗೆ ಹೆಚ್ಚಿಕೊಂಡು, ತೆಂಗಿನಕಾಯಿ ತುರಿ, ಉಪ್ಪು, ಕೊತ್ತಂಬರಿ ಸೊಪ್ಪು ಎಲ್ಲಾ ಹಾಕಿ ಚೆನ್ನಾಗಿ ಮಿಶ್ರಣ ಮಾಡಿ, ಅನಂತರ ಸಾಸಿವೆ, ಇಂಗು ಒಗ್ಗರಣೆ ಹಾಕಿ ನೈವೇದ್ಯಕ್ಕೆ ಸಿದ್ಧಪಡಿಸಬೇಕು.

## ಬಾದಾಮಿ ಹಲ್ವಾ

ಗೋಧಿಯನ್ನು 2-3 ದಿವಸ ನೆನೆಹಾಕಿದ ಬಳಿಕ ಅದನ್ನು ಚೆನ್ನಾಗಿ ಉಜ್ಜಿ ತೊಳೆದು ಆ ನೀರನ್ನು ಚೆಲ್ಲಬೇಕು. ಬಳಿಕ ಪ್ರತ್ಯೇಕ ನೀರನ್ನಾಗಲೀ ಹಾಲನ್ನಾಗಲೀ ತೆಂಗಿನಕಾಯಿಯ ಹಾಲನ್ನಾಗಲೀ ಹಾಕಿ, ನುಣ್ಣಗೆ ತಿರುವಿಕೊಂಡು, ಬಟ್ಟೆಯಿಂದ ಶೋಧಿಸಬೇಕು. ಶೋಧಿಸಿದ ಸಾರವನ್ನು 1 ಪಾತ್ರೆಗೆ ಹಾಕಿ 2-3 ಘಂಟೆಯ ಹೊತ್ತು ಇರಿಸಿದರೆ ಮೇಲೆ ನೀರು ನಿಲ್ಲುವುದು. ಆ ನೀರನ್ನು ಚೆಲ್ಲಬೇಕು. ಸುಮಾರು 1 ಸೇರಿನಷ್ಟು ಹಾಕಿ ಆ ಪಾತ್ರೆಯನ್ನು ಒಲೆಯ ಮೇಲಿಟ್ಟು ಹದನಾಗಿ ಕಾಯಿಸಿದ ಬಳಿಕ ಬಾದಾಮಿಯನ್ನು ಸಣ್ಣಗೆ ತಿರುವಿ ಅದರಲ್ಲಿ ಹಾಕಿ ರೂಲು ದೊಣ್ಣೆಯಿಂದ ಚೆನ್ನಾಗಿ ತಿರುವಬೇಕು. 1 ಸೇರು ಸಕ್ಕರೆ, ಏಲಕ್ಕಿ ಪುಡಿ, ಜಾಕಾಯಿ, ಜಾಪತ್ರೆಯ ಪುಡಿ, ಪಚ್ಚ ಕರ್ಪೂರ ಇವನ್ನು ಹಾಕಿ ಹೊಂದಿಸಲು ಘಮಘಮನೆ ವಾಸನೆ ಬರುವುದು. ಆಗ ಇದನ್ನು ಕೆಳಗೆ ತೆಗೆದು ಮುಚ್ಚಿಡಬೇಕು. ಕೇಸರಿಯ ನೀರು ಹಾಕಿದರೆ ಕೆಂಪಗಾಗುವುದು. ಯಾವ ರಂಗು ಬೇಕಾದರೂ ಮಾಡಿಕೊಳ್ಳಬಹುದು. ಮತ್ತು ಹಣ್ಣುಗಳ ಸಾರದಿಂದಲೂ ಈ ರೀತಿ ಮಾಡಿಕೊಳ್ಳಬಹುದು ಮತ್ತು ಹಣ್ಣುಗಳ ಸಾರದಿಂದಲೂ ಈ ರೀತಿ ಮಾಡಿಕೊಳ್ಳಬಹುದು. ಆದರೆ ಪಕ್ವವಾಗುವಾಗ ಈ ಸಾರವನ್ನು ಹಾಕಬೇಕು. ಮಾವಿನ ಹಣ್ಣು, ಸಿಹಿ ಕಿತ್ತಳೆಯ ಹಣ್ಣು, ಹಲಸಿನ ಹಣ್ಣು, ಬಾಳೆಯ ಹಣ್ಣು, ಕಲ್ಲಂಗಡಿ, ಖರ್ಜೂರ ಮುಂತಾದವು ಇವನ್ನು ಹಾಕಿ ಚೌಕನಾಗಿ ಬಿಲ್ಲೆ ಮಾಡಬಹುದು - ಹಾಗೆಯೇ ಚಮಚದಿಂದ ಬಿಡಿಸಬಹುದು. ಹಿಂದೆ ಹೇಳಿರುವ ಪಾಕಕ್ಕೆ ಹುರಿದ ಬಿಳಿಯ ಎಳ್ಳನ್ನು ಹಾಕಿ ವಾಸನಾದ್ರವ್ಯಗಳನ್ನು ಹಾಕಿ ಹೊಂದಿಸಿ, ಮಿಠಾಯಿ ಮಣೆಯ ಮೇಲೆ ಸುರಿದು ಸಮನಾಗಿ ಮಾಡಿ ಆರಿದ ಬಳಿಕ ಬಿಲ್ಲೆಗಳನ್ನು ಮಾಡುವುದು.

## ದೂದುಪೇಡಾ

ಹಿಂದೆ ವಿವರಿಸಿದ ಪ್ರಕಾರ 3-4 ಸೇರು ಹಾಲನ್ನು ಚೆನ್ನಾಗಿ ಕಾಯಿಸಿ ಸೌಟಿನಿಂದ ತಿರುವುತ್ತಿದ್ದರೆ ಹಾಲು ಗಟ್ಟಿಯಾಗಿ ಕೆನೆ ಕಟ್ಟುವುದು. ಅದನ್ನು ಕೆಂಡದ ಮೇಲೆ ಇಟ್ಟು ಕೆದಕುತ್ತಿದ್ದರೆ 1-2 ಘಂಟೆಯಲ್ಲಿಯೇ ಹಾಲು ಗಟ್ಟಿಯಾಗುವುದು. ಇದನ್ನು ಹಲ್ಲೆಯಿಂದ ಸರಿಯಾಗಿ ಹೊಂದಿಸಿ ಏಲಕ್ಕಿ ಪುಡಿ ಹಾಕಿ 1 ಪಾವು ಪುಡಿ ಸಕ್ಕರೆ ಹಾಕಿ ಹೊಂದಿಸಬಹುದು. ಆ ಮೇಲೆ ಕೈಗೆ ಗೋಧಿಹಿಟ್ಟನ್ನು ಸವರಿಕೊಂಡು ಹಾಲು ಕೆನೆಯನ್ನು ನಾದಿ 3-6 ಕಾಸಿನ ಆಗಲಕ್ಕೆ ಬಿಲ್ಲೆಗಳನ್ನು ಮಾಡಿ ಮುಚ್ಚಿಡುವುದು. ಸಿಹಿ ಹೆಚ್ಚಾಗಬೇಕಾದರೆ 2-3 ಪಾವು ಸಕ್ಕರೆ ಹಾಕಿದರೆ ಸರಿ ಹೋಗುವುದು.

## ಬೇಸನ್ ಲಾಡು

1 ಪಾವು ಕಡಲೆಯ ಹಿಟ್ಟನ್ನು 3 ಪಾವು ತುಪ್ಪಹಾಕುತ್ತಾ ಚೆನ್ನಾಗಿ ಹುರಿದು ಪರಿಮಳ ಬರಬೇಕು. ಹಾಲನ್ನು ಚುಮುಕಿಸಿ ಉದುರುದುರಾಗುವಂತೆ ಮಾಡಿ, ಪಕ್ವ ಮಾಡಬೇಕು ಇದನ್ನು ಕೆಳಗೆ ತೆಗೆದುಕೊಂಡು, ಸಕ್ಕರೆ ಹಾಕಿ, ಸರಿ ಹೊಂದಿಸಿ, ಹಾಲು ಚುಮುಕಿಸಿ, ಬಾದಾಮಿ, ಏಲಕ್ಕಿ ಪುಡಿ, ಲವಂಗ, ಪತ್ರೆ, ಕೇಸರ, ದ್ರಾಕ್ಷಿ, ಹಾಕಿ ಹೊಂದಿಸಿ, ಲಾಡುಗಳನ್ನು ಕಟ್ಟುವುದು ಅಥವಾ 1 ಸೇರು ಸಕ್ಕರೆಯನ್ನು ಹಾಕಿ ಪಾಕ ಮಾಡಿಕೊಂಡು ಹುರಿದ ಕಡಲೆಯ ಹಿಟ್ಟನ್ನು ಪಾಕಕ್ಕೆ ಸುರಿದು ಹಾಕಿ ತುಪ್ಪ ಹಾಕಿ ಹೊಂದಿಸಿ, ಉಂಡೆಯನ್ನು ಕಟ್ಟುವುದು.

## ಅಕ್ಕಿಯ ತಂಬಿಟ್ಟು

ನೆನೆದಕ್ಕಿಯನ್ನು ಕುಟ್ಟಿ ಶೋಧಿಸಿ, ಬೆಲ್ಲ ಅಥವಾ ಸಕ್ಕರೆಯ ಪಾಕದಲ್ಲಿ ಹಾಕಿ ಹಿಂದೆ ಹೇಳಿರುವ ಪ್ರಕಾರ ವಾಸನಾದ್ರವ್ಯಗಳನ್ನು ಹಾಕಿ, ಉಂಡೆ ಕಟ್ಟುವುದು. ಅಥವಾ ಆರತಿಯ ತಟ್ಟೆಯಲ್ಲಿ ಇಟ್ಟು ತುಪ್ಪಹಾಕಿ, ದೀಪ ಹಚ್ಚುವುದುಂಟು. ಗೋಧಿಹಿಟ್ಟು, ಹೆಸರಹಿಟ್ಟು, ಮೈದಾಹಿಟ್ಟು, ಕಡಲೇ ಹಿಟ್ಟುಗಳಿಂದಲೂ ಮಾಡಬಹುದು. ಆದರೆ ಅಕ್ಕಿ ಗೋಧಿಗಳಿಂದ ಮಾಡುವುದೇ ವಾಡಿಕೆಯಾಗಿದೆ.

## ಸಿಹಿ ಬೂಂದಿ

1 ಪಾವು ಕಡಲೆಯ ಹಿಟ್ಟನ್ನು ಲಾಡು ಮಾಡುವ ಹಾಗೆ ಕಲೆಸಿ, ಕಾಳುಗಳನ್ನು ಕರಿದು ಸಕ್ಕರೆ ಹಾಲು ಸೇರಿಸಿದ ಸಾರದಲ್ಲಿ ಹೊರಳಿಸಿ ತೆಗೆದರೆ ಸಿಹಿ ಬೂಂದಿಯಾಯಿತು. ಗೋಧಿಯ ಹಿಟ್ಟು, ಮೈದಾಹಿಟ್ಟು, ಹೆಸರ ಹಿಟ್ಟು, ಹುರಿಗಡಲೆಯ ಹಿಟ್ಟು, ಅಕ್ಕಿಯ ಹಿಟ್ಟು, ಉದ್ದಿನ ಹಿಟ್ಟು, ತೊಗರೀಬೇಳೆಯ ಹಿಟ್ಟು, ತಡಗುಣಿ ಬೇಳೆ ಇವುಗಳಿಂದಲೂ ಸಿಹಿ ಬೂಂದಿ ಮಾಡಬಹುದು. ಈ ಕಾಳುಗಳಿಗೆ ಉಪ್ಪಿನ ಪುಡಿ ಮೆಣಸಿನಪುಡಿ ಸ್ವಲ್ಪ ಸೇರಿಸಿದರೆ ಖಾರದ ಬೂಂದಿಯಾಯಿತು.

## ಬೊಂಬಾಯಿ ಬೋಂಡಾ

**ಬೇಕಾಗುವ ಪದಾರ್ಥಗಳು** : ಆಲೂಗಡ್ಡೆ - 250 ಗ್ರಾಂ., ಸಾಸಿವೆ - 1 ಚಮಚ, ಬಟಾಣಿ - 100 ಗ್ರಾಂ. ಖಾರದಪುಡಿ - 1 ಚಮಚ, ಹಸಿಮೆಣಸಿನಕಾಯಿ - 6, ಅರಿಶಿನಪುಡಿ - 2 ಚಿಟಿಕೆ, ಅವಶ್ಯಕವಾದಷ್ಟು ಉಪ್ಪು, ಕೊತ್ತಂಬರಿ ಸೊಪ್ಪು, ಎಣ್ಣೆ

**ಮಾಡುವ ರೀತಿ :**

ಆಲೂಗಡ್ಡೆಯನ್ನು ಬೇಯಿಸಿ ಸಿಪ್ಪೆ ತೆಗೆಯಿರಿ. ಬಟಾಣಿ ಸಹ ಬೇಯಿಸಿರಿ. ಹಸಿಮೆಣಸಿನಕಾಯಿ, ಕೊತ್ತಂಬರಿಸೊಪ್ಪು ಸಣ್ಣಗೆ ಹೆಚ್ಚಿಕೊಳ್ಳಿ. ಬಾಣಲಿಗೆ ಎಣ್ಣೆಹಾಕಿ (2 ಚಮಚ). ಎಣ್ಣೆ ಕಾದ ಬಳಿಕ ಸಾಸಿವೆ ಹಾಕಿ ಸಿಡಿಸಿ. ನಂತರ ಹಸಿಮೆಣಸಿನಕಾಯಿ, ಕೊತ್ತಂಬರಿಸೊಪ್ಪು, ಉಪ್ಪು ಹಾಕಿ ಹುರಿಯಿರಿ. ಆಮೇಲೆ ಬೆಂದ ಆಲೂಗಡ್ಡೆ, ಬಟಾಣಿ ಹಾಕಿ ಪಲ್ಯ ಮಾಡಿ ಕೆಳಗಿಳಿಸಿ. ಸ್ವಲ್ಪ ಹೊತ್ತು ಆರಿದ ಮೇಲೆ ಪಲ್ಯವನ್ನು ಸಣ್ಣ ಸಣ್ಣ ಗೋಲಿ ಗಾತ್ರದ ಉಂಡೆಗಳನ್ನು ಮಾಡಿಕೊಳ್ಳಿ. ಕಡಲೆಹಿಟ್ಟಿಗೆ ಒಂದು ಚಿಟಿಕೆ ಅರಿಶಿನ ಪುಡಿ, ಉಪ್ಪು, ಒಂದು ಚಮಚ ಖಾರದ ಪುಡಿ ಸೇರಿಸಿ ನೀರಾಕಿ ದೋಸೆ ಹಿಟ್ಟಿನಂತೆ ಕಲಿಸಿಕೊಳ್ಳಿ. ಬಾಣಲಿಗೆ ಎಣ್ಣೆ ಹಾಕಿ ಒಲೆಯ ಮೇಲಿಡಿ. ಎಣ್ಣೆ ಕಾದ ಬಳಿಕ ಪಲ್ಯದ ಉಂಡೆಗಳನ್ನು ಒಂದೊಂದಾಗಿ ತೆಗೆದುಕೊಂಡು ಹಿಟ್ಟಿನಲ್ಲಿ ಅದ್ದಿ ಬಾಣಲಿಗೆ ಹಾಕಿ ಹದವಾಗಿ ಬೋಂಡಾ ಕರಿಯಿರಿ.

## ಮೋದಕ

ಅಕ್ಕಿಯನ್ನು ನೆನೆಹಾಕಿ ನೆರಳಿನಲ್ಲಿ ಹರವಿ ಇದನ್ನು ಸಣ್ಣನಾಗಿ ಬೀಸಿ, ವಸ್ತ್ರದಿಂದ ಶೋಧಿಸಿದ ಹಿಟ್ಟು 1 ಪಾವನ್ನು ತೆಗೆದುಕೊಂಡು 1 ಅಥವಾ 2 ಪಾವು ನೀರನ್ನು

ಮತ್ತೊಂದು ಪಾತ್ರೆಗೆ ಹಾಕಿ ಕುದಿಸಿ ಅದಕ್ಕೆ ಸ್ವಲ್ಪ ತುಪ್ಪ ಹಾಕಿದ ಬಳಿಕ ಈ ಹಿಟ್ಟನ್ನು ಸುರಿದು ಸೌಟಿನ ಕಾವಿನಿಂದ ಚೆನ್ನಾಗಿ ಕೆದಕಿ ಕುದಿಹತ್ತಿದನಂತರ ಕೆಳಗೆ ತೆಗೆದುಕೊಂಡು ಈ ಹಿಟ್ಟನ್ನು ತೋಡಿಕೊಂಡು ತುಪ್ಪ ಹಚ್ಚಿ ನಾದಿ ಹದಮಾಡಿಕೊಳ್ಳಬೇಕು. ಬೆಂದ ತೊಗರೀ ಬೇಳೆಯಿಂದಲಾಗಲೀ, ಕಡಲೇಬೇಳೆಯಿಂದಾಗಲೀ, ಹೆಸರುಬೇಳೆ-ಯಿಂದಲಾಗಲೀ, ಹಿಂದೆ ಹೇಳಿದ ಪ್ರಕಾರ ಹೂರಣ ಮಾಡಿಕೊಂಡು ಸಿದ್ಧಪಡಿಸಿರುವ ಬೆಂದ ಅಕ್ಕೀ ಹಿಟ್ಟಿನ ಬಟ್ಟಲಲ್ಲಿ ಸೇರಿಸಿ ಕಡುಬು ಮಾಡಿ ಕರಿಯುವುದು ಅಥವಾ ನೀರಾವಿಯಲ್ಲಿ ಪಕ್ವ ಮಾಡುವುದು. ಅನಂತರ ನೈವೇದ್ಯ ಮಾಡಬೇಕು.

## ಕೊಬ್ಬರಿ ಹೋಳಿಗೆ

1 ಪಾವಿನಷ್ಟು ಒಣಕೊಬ್ಬರಿ ತುರಿಯನ್ನು ಅರ್ಧಪಾವು ನೆನೆದ ಅಕ್ಕಿಯನ್ನಾಗಲೀ, ರವೆಯನ್ನಾಗಲಿ ಹೊಂದಿಸಿ, ಒರಳಲ್ಲಿ ಹಾಕಿ ಕುಟ್ಟಿದ ಬಳಿಕ ಹದವಾಗಿ ತಿರುವಿ ಸಕ್ಕರೆಯನ್ನಾಗಲಿ ಬಿಳೀ ಬೆಲ್ಲವನ್ನಾಗಲಿ ಬೆರಸಿ, ಅದಕ್ಕೆ ಜಾಕಾಯಿ, ಲವಂಗ, ಏಲಕ್ಕಿ, ಪಚ್ಚಕರ್ಪೂರದ ಪುಡಿಯನ್ನು ಹಾಕಿ ಬೆರಸಿ, ಬಾಣಲೆಗೆ ತುಪ್ಪಹಾಕಿ ಸಣ್ಣ ಉರಿಯಲ್ಲಿ ಇದನ್ನು ಹುರಿದು, ಹೂರಣವನ್ನು ಮಾಡಿಕೊಂಡು, ಬಾಣಲೆಯನ್ನು ಕೆಳಗೆ ತೆಗೆದುಕೊಂಡು, ನಿಂಬೇಹಣ್ಣಿನ ಗಾತ್ರಕ್ಕೆ ಉಂಡೆಗಳನ್ನಾಗಿ ಮಾಡಿ ಬಟ್ಟೆಯನ್ನು ಹೊದ್ದಿಸಿಡಬೇಕು. ಒಂದು ಪಾವು ಹಸನಾದ ರವೆಯನ್ನಾಗಲಿ, ಗೋಧಿಯ ಹಿಟ್ಟನ್ನಾಗಲಿ ನೀರು ಹಾಕಿ ಕಲೆಸಿ ನಾದಿ ಕುಟ್ಟಿಡಬೇಕು. ಇದನ್ನು ಹಿತ್ತಾಳೆಯ ತಟ್ಟೆಯಲ್ಲಿ ಹಾಕಿ, ಎಳ್ಳೆಣ್ಣೆಯನ್ನು ಹಾಕಿ ಸವರಬೇಕು. ಇದರಲ್ಲಿ ಒಂದು ನಿಂಬೆಹಣ್ಣಿನ ಪ್ರಮಾಣದಷ್ಟನ್ನು ತೆಗೆದುಕೊಂಡು ಬಟ್ಟಲು ಮಾಡಿ, ಅದರೊಳಗೆ ಆ ಹೂರಣವನ್ನಿಟ್ಟು, ಮೇಲೆ ಮುಚ್ಚಿ ಚಂಡಿನಂತೆ ಮಾಡಿಡಬೇಕು - ಬಳಿಕ ಪೋಳುಪಾಟಿನಲ್ಲಿ, ಶೋಧಿಸಿದ ಅಕ್ಕಿಯ ಹಿಟ್ಟನ್ನು ಉದುರಿಸಿ, ಲಟ್ಟಣಿಗೆಯಿಂದ ತೆಳ್ಳಗೆ ದಪ್ಪ ಬಾಳೆಲೆಯಮಂದಕ್ಕೆ ಮೆಲ್ಲನೆ ಹರಿಯದಂತೆ ಲಟ್ಟಿಸಿ, ಕಾವಲಿಗೆ ಎಣ್ಣೆಯನ್ನು ಸವರಿ, ಪಕ್ವ ಮಾಡಿ ಮೊಗಚೆ ಹಾಕಿ, ಹದವಾಗಿ ಬೇಯಿಸಿ, ಮೊಗಚುವ ಕೈಯಿಂದ ತೆಗೆದು, ಪರಾತದಲ್ಲಿ ಹಾಕಿ ಮುಚ್ಚಿಡುವುದು. ಹೀಗೆಯೇ ಎಲ್ಲವನ್ನೂ ಮಾಡುವುದು. ಬಾಳೆ ಎಲೆಗೆ ಎಣ್ಣೆ ಸವರಿ, ತೆಳ್ಳಗೆ ತಟ್ಟಿ, ಹದನಾಗಿ, ಮೃದುವಾಗಿ, ಪಕ್ವ ಮಾಡುವುದು ಇದನ್ನು ಒಬ್ಬಟ್ಟು ಎನ್ನುವರು.

## ಬಾದಾಮಿ ಹೋಳಿಗೆ

1 ಪಾವು ಬಿಡಿಸಿದ ಬಾದಾಮಿಯನ್ನು ನೆನೆಸಿ ಸಿಪ್ಪೆ ತೆಗೆದು, ನೆನೆದ ರವೆ ಅಥವಾ ಅಕ್ಕಿಯನ್ನು ಹಾಕಿಕೊಂಡು ಹಾಲು ಚುಮುಕಿಸಿ ನುಣ್ಣಗೆ ತಿರುವಿ ಪಚ್ಚಕರ್ಪೂರ ಏಲಕ್ಕಿ,

ಜಾಕಾಯಿ, ಪತ್ರೆ, ಲವಂಗದ ಪುಡಿಗಳನ್ನು ಶೋಧಿಸಿದ ಸಕ್ಕರೆ, 1 ಪಾವು ಹಾಕಿ, ಹೊಂದಿಸಿ, ಹುರಿದು ಪಕ್ವ ಮಾಡಿಕೊಂಡು, ಹಿಂದೆ ಹೇಳಿದ ಪ್ರಕಾರ ಲಟ್ಟಿಸಬೇಕು. ಅಥವಾ ಅಕ್ಕಿಯ ಹಿಟ್ಟು ಹಾಕದೆ ಬಾಳೆಎಲೆಯ ಮೇಲೆ ತಟ್ಟಿ ಪಕ್ವ ಮಾಡುವುದು.

## ಖರ್ಜೂರದ ಹೋಳಿಗೆ

ಬಿಡಿಸಿದ ಖರ್ಜೂರವನ್ನು ಇವನ್ನು ಬಾಂಡ್ಲೆಯಲ್ಲಿ ಹುರಿದು ಹಾಲಿನಲ್ಲಿ ನೆನೆಸಿ, ಸ್ವಲ್ಪ ನೆನೆದ ರವೆಯನ್ನು ಸೇರಿಸಿ, ನುಣ್ಣಗೆ ತಿರುವಿ, ಹೋಳಿಗೆ ಮಾಡುವುದು. ಇದರಂತೆ ನೆಲಗಡಲೆಯ ಕಾಳಿನಿಂದಲೂ, ಹೋಳಿಗೆಯನ್ನು ಮಾಡಬಹುದು.

## ಕಾಯಿ ಹೋಳಿಗೆ

ಬಲಿತ ತೆಂಗಿನಕಾಯಿನ ತುರಿಗೆ ಸ್ವಲ್ಪ ಅಕ್ಕಿಯನ್ನು ಬೆರಸಿ, ಸಣ್ಣದಾಗಿ ತಿರುವಿ, ಬೆಲ್ಲವನ್ನಾಗಲಿ ಸಕ್ಕರೆಯನ್ನಾಗಲಿ ಹಾಕಿ, ಹೊಂದಿಸಿ ತಿರುವಿ, ಹದನಾದ ಮೇಲೆ ವಾಸನಾದ್ರವ್ಯಗಳನ್ನು ಹಾಕಿ, ಕಲಸಿ, ಬಾಣಲೆಯಲ್ಲಿ ಹದನಾಗಿ ಹುರಿದು ಹೊತ್ತದಂತೆ ಈಚೆಗೆ ತೆಗೆದುಕೊಂಡು ಹಿಂದೆ ಹೇಳಿರುವ ಪ್ರಕಾರ ಹೋಳಿಗೆಯನ್ನು ತೆಳ್ಳಗೆ ಮಾಡಿ ಪಕ್ವ ಮಾಡುವುದು.

* * * *

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ಮಂಗಳಗೌರಿ ಪೂಜೆ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ
ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ
ಶ್ರೀಲಕ್ಷ್ಮೀಹಯಗ್ರೀವದೇವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ



ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ).

ಗಿರಿನಗರ, ಬೆಂಗಳೂರು - 560 085

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಜ್ಯೋತಿರ್ಭೀಮೇಶ್ವರವ್ರತ

ಆಷಾಢ || ಬಹುಳ || ಅಮಾವಾಸ್ಯೆ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಜ್ಯೋತಿರ್ಭೀಮೇಶ್ವರವ್ರತ

## ದಿವಸೀಗೌರಿ ಪೂಜೆ

**ಆಷಾಢ || ಬಹುಳ || ಅಮಾವಾಸ್ಯೆ**

ವಿದ್ವಾನ್ || ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :
ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),
ಗಿರಿನಗರ, ಬೆಂಗಳೂರು-೮೫

'ಜ್ಯೋತಿರ್ಧರ್ಮೇಶ್ವರವ್ರತ' ಶಾಲಿವಾಹನ ಶಕೆ ೧೯೪೨ ಶಾರ್ವರಿ ॥ ಶ್ರಾವಣ ॥ ಶುದ್ಧ ॥ ಪೂರ್ಣಿಮೆ (ದಿನಾಂಕ:೩-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥ-ಶ್ರೀಪಾದಂಗಳವರ ಕರಕಮಲಗಳಿಂದ ಭಾರತೀರಮಣಹೃದಯಗುಹಾ-ನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು : ೧೨೮



ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಶ್ರೀಮತಿ ನಾಗಲತಾ

ಮುದ್ರಣ : ಮುಕ್ತಿಪಥ ಮುದ್ರಣಾಲಯ,
ಬೆಂಗಳೂರು.



ಶ್ರೀ ರವಿ ಕಾಳಾಪುರ, ಶ್ರೀಮತಿ ಸವಿತಾ ಕಾಳಾಪುರ ಮತ್ತು ಚಿ॥ ಅಧ್ರಿತರಾವ್ ಕಾಳಾಪುರ.

ಂರಿಭಕ್ತರಾದ ಶ್ರೀ ರವಿ ಕಾಳಾಪುರ, ಶ್ರೀಮತಿ ಸವಿತಾ ಕಾಳಾಪುರ ಇವರು ತಮ್ಮ 10ನೇ ರ್ಷದ ವಿವಾಹವಾರ್ಷಿಕೋತ್ಸವದ ಪ್ರಯುಕ್ತವಾಗಿ ಶ್ರೀಲಕ್ಷ್ಮೀನಾರಾಯಣರ ್ರೀಭಾರತೀಪ್ರಾಣರ ಶ್ರೀಉಮಾಮಹೇಶ್ವರರ ಅನುಗ್ರಹಕ್ಕಾಗಿ ಮಂಗಳಮಯ-ೀವನಕ್ಕಾಗಿ ಈ ಕೃತಿಯ ಸೇವೆಯನ್ನು ಸಲ್ಲಿಸಿರುತ್ತಾರೆ.

## ಸ್ತ್ರೀಯರಿಗೆ ಸೂಚನೆ :

ರುದ್ರದೇವರನ್ನು ಹಾಗೂ ಪಾರ್ವತಿಯನ್ನು ಗಂಡ-ಹೆಂಡಂದಿರು ಒಟ್ಟಿಗೆ ಕುಳಿತು ಪೂಜಿಸುವ ಕ್ರಮ ಅತ್ಯದ್ಭುತ. ಪುರೋಹಿತರ ಮೂಲಕ ಪೂಜೆ ಮಾಡುವುದು ಉತ್ತಮ ಪಕ್ಷ. ರುದ್ರದೇವರನ್ನು ಗಂಡನು, ಪಾರ್ವತಿಯನ್ನು ಹೆಂಡತಿಯು ಪೂಜಿಸಿ ಅಂತಿಮವಾಗಿ ಲಕ್ಷ್ಮೀನಾರಾಯಣರಿಗೆ ಸಮಗ್ರ ಪೂಜೆಯನ್ನು ಸಮರ್ಪಿಸ ಬೇಕು. ಪುರೋಹಿತರು ದೊರಕದೇ ಇದ್ದಾಗ, ಗಂಡನು ನ್ಯಾಸದ ತನಕ ಎಲ್ಲ ಪೂಜೆಯನ್ನು ಮಾಡಿ, ಮುಂದೆ ಮಂತ್ರವನ್ನು ಹೇಳುತ್ತಾ ಹೆಂಡತಿಯ ಮೂಲಕ ಷೋಡಶೋಪಚಾರ ಪೂಜೆಯನ್ನು ಮಾಡಿಸಬಹುದು. ಗಂಡನಿಗೂ ಕೂಡ ಪೂಜೆಯಲ್ಲಿ ಕುಳಿತುಕೊಳ್ಳಲು ಸಾಧ್ಯವಾಗದೇ ಇದ್ದಾಗ ಸ್ತ್ರೀಯರು ಷೋಡಶೋಪಚಾರ ಪೂಜೆಗಳನ್ನು ಮಾತ್ರ ಆಚರಿಸಬೇಕು. ಅಥವಾ ಈ ಪುಸ್ತಕದಲ್ಲಿ ನೀಡಿದ ದಿವಸೀಗೌರಿ ಹಬ್ಬದ ಹಾಡುಗಳನ್ನು ಹೇಳುತ್ತಾ ಪೂಜಿಸಬೇಕು. ಇದು ಸ್ತ್ರೀಯರು ಆಚರಿಸಲೇಬೇಕಾದ ಪೂಜೆ.

# ವಿಷಯಾನುಕ್ರಮಣಿಕೆ

# ಮುನ್ನುಡಿ

ಆಷಾಢಮಾಸದ ಅಮಾವಾಸ್ಯೆಯನ್ನು ಭೀಮನ ಅಮಾವಾಸ್ಯೆ ಎಂದೇ ಕರೆಯುತ್ತಾರೆ. ಜ್ಯೋತಿರ್ಭಿಮೇಶ್ವರವ್ರತವನ್ನು ಈ ದಿನ ಅನುಷ್ಠಾನ ಮಾಡಬೇಕು. ಕೆಲವರು 'ಪತಿಸಂಜೀವಿನಿವ್ರತ' ಎಂಬುದಾಗಿಯೂ ಇದನ್ನು ಕರೆಯುತ್ತಾರೆ. ದಿವಸೀಗೌರಿವ್ರತ, ದಿವಸೀಗೌರಿಪೂಜೆ, ಭೀಮನ ಅಮಾವಾಸ್ಯೆ, ಗಂಡನಪೂಜೆ ಇವುಗಳೆಲ್ಲಾ ಈ ವ್ರತಕ್ಕಿರುವ ಹೆಸರುಗಳು. ದಕ್ಷಿಣಭಾರತದಲ್ಲಿ ವ್ಯಾಪಕವಾಗಿ ಇದರ ಆಚರಣೆಯು ಇರುತ್ತದೆ. ಸ್ಕಾಂದಪುರಾಣದಲ್ಲಿ ಇದರ ಕಥೆಯಿದೆ ಎಂಬುದಾಗಿ ಬೇರೆ ಪ್ರಕಾಶನದವರು ಬರೆದಿದ್ದಾರೆ. ಆದರೆ ಹುಡುಕಿದಾಗ ಭವಿಷ್ಯಪುರಾಣದಲ್ಲಿ ಮತ್ತು ಸ್ಕಾಂದಪುರಾಣದಲ್ಲಿ ಈ ಕಥೆಯು ಸಿಗುತ್ತಿಲ್ಲ. ಆದರೆ ಸಂಪ್ರದಾಯಗತವಾದ ಪದ್ಯಗಳಲ್ಲಿ ಮತ್ತು ಪರಂಪರ ಪ್ರಾಪ್ತವಾದ ಐತಿಹ್ಯದಲ್ಲಿ ಈ ಕಥೆಯು ಪ್ರಸಿದ್ಧವಾಗಿದೆ. ಈ ದೃಷ್ಟಿಯಿಂದ ಜ್ಯೋತಿರ್ಭಿಮೇಶ್ವರವ್ರತದ ಕಥೆಯನ್ನು ಈ ಪುಸ್ತಕದಲ್ಲಿ ಸಂಗ್ರಹಿಸಲಾಗಿದೆ.

ಅವಿವಾಹಿತರು ಈ ವ್ರತವನ್ನು ಅನುಷ್ಠಾನ ಮಾಡುವುದರಿಂದ ಶೀಘ್ರವಾಗಿ ವಿವಾಹವಾಗುತ್ತದೆ. ವಿವಾಹಿತರಾದ ಸ್ತ್ರೀಯರು ಈ ವ್ರತವನ್ನು ಅನುಷ್ಠಾನ ಮಾಡುವುದರಿಂದ ಗಂಡನ ಆಯುಷ್ಯವು ಅಭಿವೃದ್ಧಿಯಾಗುತ್ತದೆ. ಆ ಕಾರಣದಿಂದ ಪ್ರತಿಯೊಬ್ಬರೂ ಈ ವ್ರತವನ್ನು ಅನುಷ್ಠಾನ ಮಾಡಬೇಕು. ತನ್ಮೂಲಕ ರುದ್ರದೇವರ ಹಾಗೂ ಪಾರ್ವತೀದೇವಿಯ ಅನುಗ್ರಹಕ್ಕೆ ಪಾತ್ರರಾಗಿ, ಇವರೀರ್ವರ ಮುಖಾಂತರ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಜಯಾಪತಿ ಸಂಕರ್ಷಣ ಮತ್ತು ಲಕ್ಷ್ಮೀನೃಸಿಂಹದೇವರ ಅನುಗ್ರಹವನ್ನು ಸಂಪಾದಿಸಿ, ಸಮಸ್ತ ಸನ್ಮಂಗಳಗಳನ್ನು ಪಡೆದುಕೊಳ್ಳಬೇಕು.

ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ಶ್ರೀ ರವಿ ಕಾಳಾಪುರ, ಶ್ರೀಮತಿ ಸವಿತಾ ಕಾಳಾಪುರ ಇವರ ಕುಟುಂಬವರ್ಗದವರಿಗೆ ಆಯುಷ್ಯ ಆರೋಗ್ಯಗಳ ಜೊತೆ ಈ ಜ್ಞಾನಯಜ್ಞದ ಪುಣ್ಯರಾಶಿಯು ದೊರಕಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ

## ಪಾನೀಯಮ್

ಕಸ್ತೂರೀಕುಂಕುಮಾದ್ಯೈಶ್ಚ ಗುಗ್ಗುಲಾದ್ಯೈಸ್ಸುಗಂಧಿತಮ್ ।
ಪಾನೀಯಮರ್ಪಯಾಮ್ಯದ್ಯ ಗೌರೀಶಂಕರ ತೇ ನಮಃ ॥

## ಉತ್ತರಾಪೋಶನಮ್

ನಿತ್ಯತೃಪ್ತ ಸದಾಧಾರ ಸರ್ವಾಭೀಷ್ಟಫಲಪ್ರದ ।
ಉತ್ತರಾಪೋಶನಂ ದೇವ ಪ್ರೀತ್ಯರ್ಥಂ ಗೃಹ್ಯತಾಂ ಶಿವ ॥

ಉಮಾಭೀಮೇಶ್ವರಾಂತರ್ಗತ ಪ್ರಾಣಸ್ಥಶ್ರೀಲಕ್ಷ್ಮೀನರಸಿಂಹಾಯ ನಮಃ । ಉತ್ತರಾಪೋಶನಂ ಸಮರ್ಪಯಾಮಿ ॥

## ಹಸ್ತಪ್ರಕ್ಷಾಲನಮ್

ದೇವದೇವ ಜಗನ್ನಾಥ ತ್ರಾಹಿ ಮಾಂ ಭಕ್ತವತ್ಸಲ ।
ಹಸ್ತಪ್ರಕ್ಷಾಲನಂ ದೇವ ಗೃಹಾಣ ಪರಮೇಶ್ವರ ॥

ಚಂದನಾಗರು ಕರ್ಪೂರಸುರಭಿ ಸ್ವಾದು ಶೀತಲಮ್ ।
ಕರೋದ್ವರ್ತನಕಂ ದೇವಿ ಗೃಹ್ಯತಾಂ ಭಕ್ತವತ್ಸಲೇ ॥

ಉಮಾಭೀಮೇಶ್ವರಾಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮಃ । ಹಸ್ತಪ್ರಕ್ಷಾಲನಂ । ಕರೋದ್ವರ್ತನಂ । ಮುಖಪ್ರಕ್ಷಾಲನಂ । ಗಂಡೂಷಾನ್ । ಪಾದಪ್ರಕ್ಷಾಲನಂ । ಆಚಮನಂ । ಮುಖವಾಸಃ ಸಮರ್ಪಯಾಮಿ ॥

## ತಾಂಬೂಲಮ್

ತಾಂಬೂಲಂ ಚ ಸಕರ್ಪೂರಕ್ರಮುಕಂ ಪರಮೇಶ್ವರ ।
ಏಲಾಲವಂಗಸಮ್ಮಿಶ್ರಮರ್ಪಯಾಮಿ ಪ್ರಸೀದ ಮೇ ॥

ಪೂಗೀಫಲಸಮಾಯುಕ್ತಂ ನಾಗವಲ್ಲೀದಲೈರ್ಯುತಂ ।
ಕರ್ಪೂರಚೂರ್ಣಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥

ಉಮಾಭೀಮೇಶ್ವರಾಂತರ್ಗತ ಪ್ರಾಣಸ್ಥಶ್ರೀಲಕ್ಷ್ಮೀನರಸಿಂಹಾಯ ನಮಃ । ತಾಂಬೂಲಂ ಸಮರ್ಪಯಾಮಿ ॥

## ದಕ್ಷಿಣಾ

ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ।
ದದಾಮಿ ದಕ್ಷಿಣಾಂ ತುಭ್ಯಂ ಗೌರೀಶ್ವರ ನಮೋಽಸ್ತು ತೇ ॥

ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ।
ಅನಂತಪುಣ್ಯಫಲದಂ ಅತಃ ಶಾಂತಿಂ ಪ್ರಯಚ್ಛ ಮೇ ॥

ಉಮಾಭೀಮೇಶ್ವರಾಂತರ್ಗತ ಪ್ರಾಣಸ್ಥಶ್ರೀಲಕ್ಷ್ಮೀನರಸಿಂಹಾಯ ನಮಃ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ॥

## ಫಲಾನಿ

ಕದಲೀನಾರಿಕೇಲಾನಿ ಮಾತುಲಂಗಂ ಚ ಚೂತಕಮ್ ।
ನಾರಂಗಪನಸಾದೀನಿ ಫಲಾನೀಶ ಗೃಹಾಣ ಭೋ ॥

ಉಮಾಭೀಮೇಶ್ವರಾಂತರ್ಗತ ಪ್ರಾಣಸ್ಥಶ್ರೀಲಕ್ಷ್ಮೀನರಸಿಂಹಾಯ ನಮಃ । ನಾನಾವಿಧಫಲಾನಿ ಸಮರ್ಪಯಾಮಿ ॥

## ನೀರಾಜನಮ್

### ಪತಿಯು ಮಹಾಮಂಗಳಾರತಿಯನ್ನು ಮಾಡಬೇಕು.

ವಿಶ್ವೇಶ್ವರ ವಿರೂಪಾಕ್ಷ ವಿಶ್ವವಂದ್ಯ ಸದಾಶಿವ ।
ದೀಪಮಾಲಾಂ ಪ್ರಯಚ್ಛಾಮಿ ಸುಪ್ರೀತೋ ಭವ ಸರ್ವದಾ ॥

ವರ್ತಿತ್ರಯಸಮಾಯುಕ್ತಂ ಕರ್ಪೂರೇಣ ಸಮನ್ವಿತಂ।
ನೀರಾಜನಂ ಗೃಹಾಣೇದಂ ಮಯಾ ದತ್ತಂ ಮಹೇಶ್ವರಿ ॥

ಶ್ರಿಯೇ ಜಾತಃ ಶ್ರಿಯ ಆ ನಿರಿಯಾಯ ಶ್ರಿಯಂ ವಯೋ ಜರಿತೃಭ್ಯೋ ದಧಾತಿ।
ಶ್ರಿಯಂ ವಸಾನಾ ಅಮೃತತ್ವಮಾಯನ್ ಭವಂತಿ ಸತ್ಯಾ ಸಮಿಥಾ ಮಿತದ್ರೌ ॥

ಉಮಾಭೀಮೇಶ್ವರಾಂತರ್ಗತ ಪ್ರಾಣಸ್ಥಶ್ರೀಲಕ್ಷ್ಮೀನರಸಿಂಹಾಯ ನಮಃ । ಮಹಾನೀರಾಜನಂ ಸಮರ್ಪಯಾಮಿ ॥

## ಮಂತ್ರಪುಷ್ಪಮ್

### ಪತಿ-ಪತ್ನಿಯರು ಬೊಗಸೆಯಿಂದ ಹೂವುಗಳನ್ನು ಹಾಕಬೇಕು.

ಶಂಕರಾಯ ನಮಸ್ತುಭ್ಯಂ ನಮಸ್ತ್ರೈಲೋಕ್ಯಪೂಜಿತ ।
ಪುಷ್ಪಾಂಜಲಿಂ ಮಯಾ ದತ್ತಂ ತ್ವಂ ಗೃಹಾಣ ಸುರೇಶ್ವರ ॥

ಚಂಪಕೈಃ ಶತಪತ್ರೈಶ್ಚ ಕಲ್ಹಾರೈಃ ಕರವೀರಕೈಃ ।
ಪಾಟಲೈರ್ಬಕುಳೈರ್ಯುಕ್ತಂ ಗೃಹಾಣ ಕುಸುಮಾಂಜಲಿಮ್ ॥

ಉಮಾಭೀಮೇಶ್ವರಾಂತರ್ಗತ ಪ್ರಾಣಸ್ಥಶ್ರೀಲಕ್ಷ್ಮೀನರಸಿಂಹಾಯ ನಮಃ । ಮಂತ್ರಪುಷ್ಪಂ ಸಮರ್ಪಯಾಮಿ ॥

ಉಮಾಭೀಮೇಶ್ವರಾಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನರಸಿಂಹಾಯ ನಮಃ । ಛತ್ರಂ, ಚಾಮರಂ, ವ್ಯಜನಂ, ದರ್ಪಣಂ, ನೃತ್ಯಂ, ಗೀತಂ, ವಾದಿತ್ರಂ, ಸಮಸ್ತರಾಜೋಪಚಾರಾನ್ ಸಮರ್ಪಯಾಮಿ ॥

## ಪ್ರದಕ್ಷಿಣಾನಿ

### ಪತಿ-ಪತ್ನಿಯರು ಒಟ್ಟಿಗೆ ಪ್ರದಕ್ಷಿಣೆ ಮಾಡಿ ನಮಸ್ಕಾರವನ್ನು ಮಾಡಬೇಕು.

ಭವಾಯ ಭವನಾಶನಾಯ ಮಹಾದೇವಾಯ ತೇ ನಮಃ ।
ರುದ್ರಾಯ ನೀಲಕಂಠಾಯ ಶರ್ವಾಯ ಶಶಿಮೌಲಯೇ ॥
ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ ।
ತಾನಿತಾನಿ ವಿನಶ್ಯಂತಿ ಪ್ರದಕ್ಷಿಣಪದೇಪದೇ ॥

ನಮಸ್ತೇ ದೇವಿ ಕಲ್ಯಾಣಿ ನಮಸ್ತೇ ವಿಶ್ವವಂದಿತೇ ।
ನಮೋ ಭಕ್ತಾರ್ತಿನಾಶಿನ್ಯೈ ಭವಾನ್ಯೈ ತೇ ನಮೋ ನಮಃ ॥
ಪ್ರದಕ್ಷಿಣತ್ರಯಂ ದೇವಿ ಪ್ರಯತ್ನೇನ ಮಯಾ ಕೃತಂ ।
ತೇನ ಪಾಪಾನಿ ಸರ್ವಾಣಿ ವ್ಯಪೋಹತು ಸದಾ ಮಮ ॥
ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ ।

ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ ।
ಪಾಪಾಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪಸಂಭವಃ ॥
ತ್ರಾಹಿ ಮಾಂ ಕೃಪಯಾ ದೇವಿ ಶರಣಾಗತವತ್ಸಲೇ ।
ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।
ತಸ್ಮಾತ್ಕಾರುಣ್ಯಭಾವೇನ ರಕ್ಷ ರಕ್ಷ ಮಹೇಶ್ವರಿ ॥

ಉಮಾಭೀಮೇಶ್ವರಾಂತರ್ಗತ ಪ್ರಾಣಸ್ಥಶ್ರೀಲಕ್ಷ್ಮೀನರಸಿಂಹಾಯ ನಮಃ । ಪದಕ್ಷಿಣಾನಿ ಸಮರ್ಪಯಾಮಿ ॥

## ನಮಸ್ಕಾರಃ

ಉಗ್ರಾಯೋಗ್ರಾಘನಾಶಾಯ ಭೀಮಾಯ ಭಯಹಾರಿಣೇ ।
ಈಶಾನಾಯ ನಮಸ್ತುಭ್ಯಂ ಪಶೂನಾಂ ಪತಯೇ ನಮಃ ॥
ನಮೋ ದೇವಾದಿದೇವಾಯ ನಮೋ ಭಕ್ತೇಪ್ಸಿತಪ್ರದ ।
ನಮಸ್ತೇ ದೇವ ದೇವೇಶ ಭಕ್ತಿಂ ಮೇ ಹ್ಯಚಲಾಂ ಕುರು ॥
ನಮಸ್ತುಭ್ಯಂ ಮಹಾದೇವ ನಮಸ್ತೇ ದಿವ್ಯಚಕ್ಷುಷೇ ।
ನಮಃ ಪಿನಾಕಹಸ್ತಾಯ ಮಹಾದೇವಾಯ ತೇ ನಮಃ ॥
ನಮಸ್ತೇ ಲೋಕಜನನೀ ನಮಸ್ತೇ ಶಿವವಲ್ಲಭೇ ।
ಹರಕಾಂತ ನಮಸ್ತೇಸ್ತು ತ್ರಾಹಿ ಮಾಂ ದುಃಖಸಾಗರಾತ್ ॥

ಉಮಾಭೀಮೇಶ್ವರಾಂತರ್ಗತ ಪ್ರಾಣಸ್ಥಶ್ರೀಲಕ್ಷ್ಮೀನರಸಿಂಹಾಯ ನಮಃ । ನಮಸ್ಕಾರಾನ್ ಸಮರ್ಪಯಾಮಿ ॥

## ಪ್ರಾರ್ಥನಾ

ಪಾಪೋಽಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪಸಂಭವಃ ।
ತ್ರಾಹಿ ಮಾಂ ಕೃಪಯಾ ದೇವ ಶರಣಾಗತವತ್ಸಲ ॥
ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।
ತಸ್ಮಾತ್ಕಾರುಣ್ಯಭಾವೇನ ರಕ್ಷರಕ್ಷ ಮಹೇಶ್ವರ ॥

## ಜ್ಯೋತಿರ್ಭೀಮೇಶ್ವರ ವ್ರತ

ಶಿವೋ ರುದ್ರಃ ಪಶುಪತಿಃ ನೀಲಕಂಠೋ ಮಹೇಶ್ವರಃ ।
ಹರಿಕೇಶೋ ವಿರೂಪಾಕ್ಷಃ ಪಿನಾಕೀ ತ್ರಿಪುರಾಂತಕಃ ।
ಶಂಭುಃ ಶೂಲೀ ಮಹಾದೇವೋ ತ್ರಿನೇತ್ರೋ ವೃಷಭಧ್ವಜಃ ॥

ಆತ್ಮಾ ತ್ವಂ ಗಿರಿಜಾ ಮತಿಃ ಪರಿಚರಾಃ ಪ್ರಾಣಾಶ್ಶರೀರಂ ಗೃಹಂ
ಪೂಜಾ ತೇ ವಿಷಯೋಪಭೋಗರಚನಾ ನಿದ್ರಾ ಸಮಾಧಿಸ್ಥಿತಿಃ ।
ಸಂಚಾರಃ ಪದಯೋಃ ಪ್ರದಕ್ಷಿಣವಿಧಿಃ ಸ್ತೋತ್ರಾಣಿ ಸರ್ವಾಗಿರೋ
ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಮ್ ॥
ಕರಚರಣಕೃತಂ ವಾ ಕರ್ಮವಾಕ್ಕಾಯಜಂ ವಾ
ಶ್ರವಣನಯನಜಂ ವಾ ಮಾನಸಂ ವಾಪರಾಧಮ್ ।
ವಿಹಿತಮವಿಹಿತಂ ವಾ ಸರ್ವಮೇತತ್ ಕ್ಷಮಸ್ವ
ಜಯಜಯ ಕರುಣಾಬ್ಧೇ ಶ್ರೀಮಹಾದೇವ ಶಂಭೋ ॥
ಹರ ಶಂಭೋ ಮಹಾದೇವ ವಿಶ್ವೇಶಾಮರವಲ್ಲಭ ।
ಶಿವ ಶಂಕರ ಸರ್ವಾತ್ಮನ್ನೀಲಕಂಠ ನಮೋಽಸ್ತು ತೇ ॥
ಮೃತ್ಯುಂಜಯಾಯ ರುದ್ರಾಯ ನೀಲಕಂಠಾಯ ಶಂಭವೇ ।
ಅಮೃತೇಶಾಯ ಶರ್ವಾಯ ಮಹಾದೇವಾಯ ತೇ ನಮಃ ॥
ಋಣರೋಗಾದಿದಾರಿದ್ರ್ಯಪಾಪಕ್ಷುದಪಮೃತ್ಯವಃ ।
ಭಯಶೋಕಮನಸ್ತಾಪಾ ನಶ್ಯಂತು ಮಮ ಸರ್ವದಾ ॥
ಪುತ್ರಾನ್ ದೇಹಿ ಧನಂ ದೇಹಿ ಸೌಭಾಗ್ಯಂ ದೇಹಿ ಸುವ್ರತೇ ।
ಅನ್ಯಾಂಶ್ಚ ಸರ್ವಕಾಮಾಂಶ್ಚ ದೇಹಿ ದೇವಿ ವರಪ್ರದೇ ॥
ಕರಿಷ್ಯಾಮಿ ವ್ರತಂ ದೇವಿ ತ್ವದ್-ಭಕ್ತ್ಯಾತ್ವತ್ಪರಾಯಣಾ ।
ವಾಂಛಿತಃ ದೇಹಿ ಮೇ ನಿತ್ಯಂ ತ್ವಯಿ ಭಕ್ತಿಮಚಂಚಲಾಮ್ ॥

ಉಮಾಭೀಮೇಶ್ವರಾಂತರ್ಗತ ಪ್ರಾಣಸ್ಥಶ್ರೀಲಕ್ಷ್ಮೀನರಸಿಂಹಾಯ ನಮಃ । ಪ್ರಾರ್ಥನಾಂ ಸಮರ್ಪಯಾಮಿ ॥

ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಮಹೇಶ್ವರ ।
ಯತ್ಪೂಜಿತಂ ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

ಅನೇನ ಅಮಾಭೀಮೇಶ್ವರವ್ರತೌ ಮಯಾ ಆಚರಿತೇನ ಉಮಾಭೀಮೇಶ್ವರಾಂತರ್ಗತ ಪ್ರಾಣಸ್ಥಶ್ರೀಲಕ್ಷ್ಮೀನರಸಿಂಹಪೂಜಾಕರಣೇನ ಉಮಾಮಹೇಶ್ವರಾಂತರ್ಗತಃ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನರಸಿಂಹಃ ಪ್ರೀಯತಾಂ ಶ್ರೀಕೃಷ್ಣಾರ್ಪಣಮಸ್ತು ॥

## ಅರ್ಘ್ಯಪ್ರದಾನಮ್

**ಪತಿ-ಪತ್ನಿಯರು ಉಮಾಮಹೇಶ್ವರರಿಗೆ ಅರ್ಘ್ಯವನ್ನು ನೀಡಬೇಕು.**

ಓಂ ವ್ಯೋಮಕೇಶ ನಮಸ್ತುಭ್ಯಂ ವ್ಯೋಮಾತ್ಮನ್ ವ್ಯೋಮರೂಪಿಣೇ ।
ನಕ್ಷತ್ರರೂಪಿಣೇ ತುಭ್ಯಂ ತಾರಕಾರ್ಘ್ಯಂ ನಮೋಽಸ್ತು ತೇ ॥

ಉಮಾಭೀಮೇಶ್ವರಾಂತರ್ಗತ ಪ್ರಾಣಸ್ಥಶ್ರೀಲಕ್ಷ್ಮೀನರಸಿಂಹಾಯ ನಮಃ । ಇದಮರ್ಘ್ಯಮ್ ॥

ಆಕಾಶದಿಕ್ ಶರೀರಾಯ ಗ್ರಹನಕ್ಷತ್ರಮಾಲಿನೇ ।
ಸುರಸಿದ್ಧಿನಿವಾಸಾಯ ದತ್ತಮರ್ಘ್ಯಂ ಸದಾಶಿವ ॥

ಉಮಾಭೀಮೇಶ್ವರಾಂತರ್ಗತ ಪ್ರಾಣಸ್ಥಶ್ರೀಲಕ್ಷ್ಮೀನರಸಿಂಹಾಯ ನಮಃ । ಇದಮರ್ಘ್ಯಮ್ ॥

ಗೌರೀವಲ್ಲಭ ದೇವೇಶ ಸರ್ಪಾಢ್ಯ ಶಶಿಶೇಖರ ।
ವರ್ಷಪಾಪನಿವೃತ್ತ್ಯರ್ಥಂ ದತ್ತಮರ್ಘ್ಯಂ ಸದಾಶಿವ ॥

ಉಮಾಭೀಮೇಶ್ವರಾಂತರ್ಗತ ಪ್ರಾಣಸ್ಥಶ್ರೀಲಕ್ಷ್ಮೀನರಸಿಂಹಾಯ ನಮಃ । ಇದಮರ್ಘ್ಯಮ್ ॥

## ಗೌರಿಗೆ ಅರ್ಘ್ಯ

ಜಗನ್ಮಾತ್ರೇ ನಮಸ್ತೇಽಸ್ತು ನಮಸ್ತೇ ಲೋಕನಾಯಿಕೇ।
ಇದಮರ್ಘ್ಯಂ ಪ್ರದಾಸ್ಯಾಮಿ ಗೃಹಾಣ ಪರಮೇಶ್ವರಿ॥

ಉಮಾಭೀಮೇಶ್ವರಾಂತರ್ಗತ ಪ್ರಾಣಸ್ಥಶ್ರೀಲಕ್ಷ್ಮೀನರಸಿಂಹಾಯ ನಮಃ । ಇದಮರ್ಘ್ಯಮ್ ॥

## ಪೂರ್ಣಫಲಸಮರ್ಪಣ

**ಒಂದು ತೆಂಗಿನ ಕಾಯಿಯನ್ನು ತಾಂಬೂಲದಲ್ಲಿಟ್ಟು ದೇವಿಯ ಬಲಭಾಗದಲ್ಲಿ ಇಡಬೇಕು.**

ಇದಂ ಫಲಂ ಮಯಾ ದೇವಿ ಸ್ಥಾಪಿತಂ ಪುರತಸ್ತವ।
ತೇನ ಮೇ ಸುಫಲಾವಾಪ್ತಿರ್ಭವೇಜ್ಜನ್ಮನಿ ಜನ್ಮನಿ॥

ಮಹಾರುದ್ರದೇವವಾಮಾಂಕಸ್ಥಿತಉಮಾಯೈ ನಮಃ । ಪೂರ್ಣಫಲಂ ಸಮರ್ಪಯಾಮಿ ॥

## ದೋರಗ್ರಹಣ

ದೇವಿಯ ಹತ್ತಿರ ಇಟ್ಟಿರುವ ದೋರವನ್ನು ಕೆಳಗಿನ ಶ್ಲೋಕ ಹೇಳಿ ತೆಗೆದುಕೊಂಡು ಕಟ್ಟಿಕೊಳ್ಳಬೇಕು.

ಭಕ್ತಪ್ರಿಯೇ ಮಹಾದೇವಿ ಸರ್ವೈಶ್ವರ್ಯಪ್ರದಾಯಿನೀ
ಸೂತ್ರಂ ತೇ ಧಾರಯಿಷ್ಯಾಮಿ ಮಮಾಭೀಷ್ಟಂ ಚಾ ತ್ವಂ ಕುರು ॥

## ವಾಯನದಾನ

ತಟ್ಟೆಯಲ್ಲಿ ಅಕ್ಕಿ, ಎರಡು ತೆಂಗಿನಕಾಯಿಗಳು, ಬೆಲ್ಲದ ಅಚ್ಚು, ಹಣ್ಣುಗಳನ್ನಿಟ್ಟು ಎಲೆ ಅಡಕೆಯ ಜೊತೆಗೆ ಯಥಾಶಕ್ತಿ ದಕ್ಷಿಣೆ ಇಟ್ಟು, ಒಂದು ಸಣ್ಣ ತಟ್ಟೆಯನ್ನು ತೆಂಗಿನ ಕಾಯಿಗಳ ಮೇಲೆ ಮುಚ್ಚುವುದು. ಪುರೋಹಿತರ ಎದುರಿಗೆ ಮಂಡಲ ಮಾಡಿ

ಅದರ ಮೇಲೆ ಉಪಾಯನದಾನದ ತಟ್ಟೆಯನ್ನಿಟ್ಟು ಕುಳಿತುಕೊಂಡು ಹೀಗೆ ಹೇಳಬೇಕು. (ಸಂಕಲ್ಪ ಮಾಡಬೇಕು)

ಅದ್ಯ ಪೂರ್ವೋಚ್ಚರಿತ ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಮಮ ಶ್ರೀವರಮಹಾಲಕ್ಷ್ಮೀವ್ರತ ಸಾದ್ಗುಣ್ಯಾರ್ಥಂ ಉಪಾಯನದಾನಮಹಂ ಕರಿಷ್ಯೇ –

ಪುರೋಹಿತರಿಗೆ (ಬ್ರಾಹ್ಮಣರಿಗೆ) ಗಂಧ, ಹೂವು ಕೊಡುವುದು.

ಇಮೇ ಗಂಧಾಃ ಇಮಾನಿ ಪುಷ್ಪಾಣಿ, ಗಂಧಪುಷ್ಪಧೂಪದೀಪಸಕಲಾರಾಧನೈಃ ಸ್ವರ್ಚಿತಮ್ । ಎಂದು ಹೇಳಿ ನೀರುಮಂತ್ರಾಕ್ಷತೆ ಬಿಡುವುದು. ಆಮೇಲೆ ನೀರನ್ನು ಸಣ್ಣ ತಟ್ಟೆಯ ಮೇಲೆ ಪ್ರೋಕ್ಷಿಸುವುದು.

ವಿಷ್ಣೋ ಉಪಾಯನದಾನಂ ರಕ್ಷಸ್ವ - ಎಂದು ಹೇಳಿ ತಟ್ಟೆಯನ್ನು ಅತ್ತ ಇಟ್ಟು ಎರಡು ತೆಂಗಿನಕಾಯಿಗಳ ಮೇಲೆ ಪತ್ನಿಯಿಂದ ನೀರು ಹಾಕಿಸಿ, ''ಇದಂ ಉಪಾಯನ-ದಾನಮ್'' -

## ಉಪಾಯನದಾನ ಕೊಡುವಾಗ ಹೇಳುವ ಮಂತ್ರ –

ವಾಯನಂ ತೇ ಪ್ರದಾಸ್ಯಾಮಿ ವ್ರತಸಂಪೂರ್ತಿಹೇತವೇ ।
ಪ್ರೀತಯೇ ದ್ವಿಜವರ್ಯಾಯ ಸಹಿರಣ್ಯಂ ದದಾಮ್ಯಹಮ್ ॥
ಇಂದಿರಾ ಪ್ರತಿಗೃಹ್ಣಾತಿ ಇಂದಿರಾ ವೈ ದದಾತಿ ಚ ।
ಇಂದಿರಾ ತಾರಕಾ ದ್ವಾಭ್ಯಾಂ ಇಂದಿರಾಯೈ ನಮೋ ನಮಃ ॥

## ಪುನಃ ಪೂಜಾ

## ಉದ್ವಾಸನೆ

ಯಾಂತು ದೇವಗಣಾಃ ಸರ್ವೇ ಪೂಜಾಂ ಆದಾಯಮತ್ಕೃತಾಂ
ಇಷ್ಟಕಾಮ್ಯಾರ್ಥಸಿದ್ಧ್ಯರ್ಥಂ ಪುನರಾಗಮನಾಯಚ ॥
ಘಂಟಾನಾದ ಮಾಡಿರಿ.

## ಕೃಷ್ಣಾರ್ಪಣ

ಆಚಮನ ಮಾಡಿ ಕೃಷ್ಣಾರ್ಪಣ ಬಿಡಬೇಕು

ಪ್ರೀಯತಾಂ ಶ್ರೀ ಕೃಷ್ಣಾರ್ಪಣಮಸ್ತು ॥

## ಸಮಾಪನಮ್

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ (ಮೇ) ॥

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾऽऽತ್ಮನಾ ವಾऽನುಸೃತಸ್ವಭಾವಃ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

ಅನೇನ ಮಧ್ಯಾಹ್ನಕಾಲೇ ಮಯಾ ಕೃತೇನ ................................. ಪೂಜಾಕರ್ಮಣಾ ಮಧ್ವಾಂತರ್ಗತಃ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಂ ॥ ಶ್ರೀಕೃಷ್ಣಾರ್ಪಣಮಸ್ತು ।

* * * * *

# ಭೀಮನ ಅಮಾವಾಸ್ಯೆಯ ಕಥೆ

ನೈಮಿಷಾರಣ್ಯದಲ್ಲಿ ಸೂತಪುರಾಣಿಕರ ಬಳಿ ಶೌನಕಾದಿಗಳು ಶ್ರದ್ಧೆಯಿಂದ ಪ್ರಶ್ನಿಸುತ್ತಿದ್ದಾರೆ. ''ಮಹಾತ್ಮರೇ ! ಹೆಣ್ಣಕ್ಕಳು ಯಾವ ವ್ರತವನ್ನು ಆಚರಿಸಬೇಕು. ಎಂಥ ವ್ರತವನ್ನು ಆಚರಿಸುವುದರಿಂದ ಒಳ್ಳೆಯ ಗಂಡನು ದೊರೆಯುತ್ತಾನೆ. ವಿವಾಹಿತರಾದ ಸ್ತ್ರೀಯರಿಗೆ ದೀರ್ಘಸೌಮಂಗಲ್ಯವು ಹೇಗೆ ಪ್ರಾಪ್ತವಾಗುತ್ತದೆ ? ಅವರ ಸಂಸಾರವು ಸುಖಸಂಪದ್ಭರಿತ ಹೇಗಾಗುತ್ತದೆ ? ಮತ್ತು ಗಂಡನಿಂದ ಬಹಳ ಸುಖವನ್ನು ಹೇಗೆ ಪಡೆಯುತ್ತಾಳೆ. ಈ ಎಲ್ಲ ಫಲಗಳನ್ನು ನೀಡುವಂಥ ಶ್ರೇಷ್ಠವಾದ ವ್ರತವು ಯಾವುದಿದೆ ? ಅದರ ಬಗ್ಗೆ ದಯವಿಟ್ಟು ತಾವು ನಮಗೆ ತಿಳಿಸಿಕೊಡಬೇಕು'' ಎಂಬುದಾಗಿ ಶೌನಕಾದಿಗಳು ಪ್ರಶ್ನಿಸುತ್ತಾರೆ.

ಶೌನಕಾದಿಗಳ ಪ್ರಶ್ನೆಗೆ ಸೂತಪುರಾಣಿಕರು ಉತ್ತರಿಸಲು ಪ್ರಾರಂಭ ಮಾಡುತ್ತಾರೆ - 'ಮುನಿಶ್ರೇಷ್ಠರೇ ! ನಿಮ್ಮ ಪ್ರಶ್ನೆಗೆ ಸಮಂಜಸವಾದ ಉತ್ತರವನ್ನು ನೀಡುತ್ತೇನೆ. ಯಾವ ವ್ರತವನ್ನು ಅನುಷ್ಠಾನ ಮಾಡುವುದರಿಂದ ವಿವಾಹವಾಗದ ಸ್ತ್ರೀಯರಿಗೆ ಉತ್ತಮ ಪತಿಯು ದೊರಕುತ್ತಾನೋ, ವಿವಾಹಿತರಾದ ಸ್ತ್ರೀಯರಿಗೆ ಪತಿಯಿಂದ ಶ್ರೇಯಸ್ಸಾಗುತ್ತದೋ, ಅಂಥ ವ್ರತವನ್ನು ನಿಮಗೆ ತಿಳಿಸುತ್ತೇನೆ. ಆಷಾಢಮಾಸದ ಅಮಾವಾಸ್ಯೆಯ ಸಾಯಂಕಾಲದಲ್ಲಿ ನಾನು ಮುಂದೆ ಹೇಳುವ ವ್ರತವನ್ನು ಆಚರಣೆ ಮಾಡಬೇಕು. ಜ್ಯೋತಿರ್ಭೀಮೇಶ್ವರವ್ರತ ಎಂಬುದಾಗಿ ಇದನ್ನು ಕರೆಯುತ್ತಾರೆ. ಈ ವ್ರತದ ಬಗ್ಗೆ ನಿಮಗೆ ವಿವರವಾಗಿ ತಿಳಿಸುತ್ತೇನೆ ಕೇಳಿರಿ -

ಸೌರಾಷ್ಟ್ರ ಎಂಬ ಸಂಪದ್ಭರಿತವಾದ ದೇಶವಿತ್ತು. ಅದನ್ನು ವಜ್ರಬಾಹು ಎಂಬ ರಾಜನು ಪರಿಪಾಲನೆ ಮಾಡುತ್ತಿದ್ದನು. ಆ ರಾಜನು ಅತ್ಯಂತ ಪರಾಕ್ರಮಶಾಲಿಯೂ, ಧೀರನೂ, ಬುದ್ಧಿವಂತನೂ ಆಗಿದ್ದನು. ಅವನಿಗೆ ಜಯಶೀಲ ಎಂಬ ಮಗನು ಹುಟ್ಟಿದನು. ತಂದೆಗೆ ತಕ್ಕಂತೆ ಮಗನೂ ಸಹ ಅತ್ಯಂತ ಸೌಂದರ್ಯವುಳ್ಳವನು, ಸದ್ಗುಣಶಾಲಿಯೂ ಆಗಿದ್ದನು. ಆದರೆ, ವಿಧಿಪ್ರೇರಣೆಯಂತೆ ಯೌವನಾವಸ್ಥೆಯಲ್ಲಿ ಆ ಕುಮಾರನು ಮೃತನಾದನು. ಇದರಿಂದ ವಜ್ರಬಾಹು ರಾಜನಿಗೆ ಬಹಳ

ಖೇದವಾಯಿತು. ಆತ್ಮಸ್ಥೈರ್ಯವನ್ನೇ ಕಳೆದುಕೊಂಡನು. ತನ್ನ ಮಗನ ಮರಣದಿಂದ ತನಗೆ ಸದ್ಗತಿಯೇ ಇರುವುದಿಲ್ಲ. ತನ್ನ ಪಿತೃಗಳಿಗೂ ಸದ್ಗತಿಯಾಗುವುದಿಲ್ಲ. ನಮಗೆ ತಿಲೋದಕವನ್ನು ನೀಡುವವರೇ ಯಾರೂ ಇಲ್ಲ ಎಂಬುದಾಗಿ ಗಾಢವಾಗಿ ಚಿಂತಾಕ್ರಾಂತನಾದನು.

ಹೀಗೆ ಆಲೋಚಿಸುತ್ತಿರುವಾಗ ಅವನಿಗೆ ಒಂದು ವಿಚಾರವು ಹೊಳೆಯಿತು. ಮೃತನಾದ ಈ ಪುತ್ರನಿಗೆ ವಿವಾಹವನ್ನು ಮಾಡುತ್ತೇನೆ. ಇವನನ್ನು ವಿವಾಹವಾಗುವ ಸ್ತ್ರೀ ಮೂಲಕ ತನಗೂ ತನ್ನ ಪಿತೃಗಳಿಗೂ ಸದ್ಗತಿಯಾಗುತ್ತದೆ ಎಂದು ಆಲೋಚನೆ ಮಾಡಿದನು.

ತನ್ನ ರಾಜ್ಯದಲ್ಲಿ ಹೀಗೆ ಡಂಗುರ ಸಾರಿದನು. ''ನನ್ನ ಮಗನು ಮರಣವನ್ನು ಹೊಂದಿದ್ದಾನೆ. ಇವನಿಗೆ ಯಾರು ಹೆಣ್ಣು ಕೊಟ್ಟು ಮದುವೆ ಮಾಡುತ್ತಾರೋ, ಅವರು ಅಪೇಕ್ಷಿಸಿದಷ್ಟು ಸಂಪತ್ತನ್ನು ನೀಡುತ್ತೇನೆ'' ಎಂದು.

ಈ ಡಂಗುರದ ವಾರ್ತೆಯನ್ನು ಅದೇ ರಾಜ್ಯದಲ್ಲಿರುವ ಒಬ್ಬ ಸುಸಂಸ್ಕೃತನು ವೇದಶಾಸ್ತ್ರ ಪಾರಂಗತನು ಆದ ಬ್ರಾಹ್ಮಣನು ಕೇಳಿಸಿಕೊಂಡನು. ದಟ್ಟದರಿದ್ರನಾಗಿದ್ದನು. ಬಡತನದಿಂದ ಬಹಳ ದುಃಖವನ್ನು ಅನುಭವಿಸಿದ್ದನು. ಅವನಿಗೆ ಸುಂದರಿಯಾದ ಒಬ್ಬಳು ಮಗಳಿದ್ದಳು. ಆ ಮಗಳನ್ನು ಮೃತನಾದ ರಾಜಕುಮಾರನಿಗೆ ವಿವಾಹ ಮಾಡಿಕೊಡುವುದರಿಂದ ತನ್ನ ಬಡತನವು ನಿವಾರಣೆಯಾಗುತ್ತದೆ. ತಾನು ಅತ್ಯಂತ ಶ್ರೀಮಂತನಾಗುತ್ತೇನೆ ಎಂಬ ಆಸೆಯು ಅವನಿಗುಂಟಾಯಿತು. ಪತಿವ್ರತೆಯಾದ ತನ್ನ ಪತ್ನಿಯ ಅನುಮತಿಯನ್ನು ಪಡೆದುಕೊಂಡು, ಸಂಪತ್ತಿನ ಆಸೆಗಾಗಿ ತನ್ನ ಮಗಳನ್ನು ಮೃತನಾದ ರಾಜಕುಮಾರನಿಗೆ ವಿವಾಹ ಮಾಡಿಕೊಟ್ಟನು. ರಾಜನ ಇಷ್ಟಾರ್ಥವು ನೆರವೇರಿತು. ಈ ಬ್ರಾಹ್ಮಣನ ಇಷ್ಟಾರ್ಥವೂ ಕೂಡ ನೆರವೇರಿತು. ಆದರೆ ಆ ಕುವರಿಯ ಸ್ಥಿತಿ ಅತ್ಯಂತ ಚಿಂತಾಕ್ರಾಂತವಾಗಿತ್ತು.

ವಿವಾಹ ಮಾಡಿದ ಮೇಲೆ ರಾಜನು ತನ್ನ ಮಗನ ಶವವನ್ನು ಸ್ಮಶಾನಕ್ಕೆ ಕಳುಹಿಸಿದನು. ಅಲ್ಲೊಂದು ಚಿತೆಯನ್ನು ಏರ್ಪಾಡು ಮಾಡಿದನು. ತನ್ನ ಸೊಸೆಯನ್ನು

ಕರೆದು ಆ ಚಿತೆಗೆ ಬೆಂಕಿ ಇಡುವಂತೆ ಆಜ್ಞೆ ಮಾಡಿದನು. ಆ ಸೊಸೆಯು ಅತ್ಯಂತ ಗುಣವಂತಳಾಗಿದ್ದಳು. ಅತ್ಯಂತ ದೈವಭಕ್ತಳಾಗಿದ್ದಳು. ಮಂಗಳದ್ರವ್ಯಗಳಿಂದ ಸುಶೋಭಿತಳಾಗಿದ್ದಳು. ಸರ್ವಾಭರಣಭೂಷಿತಳಾಗಿದ್ದಳು. ಪರಿಶುದ್ಧವಾದ ಮನಸ್ಸನ್ನು ಹೊಂದಿದ್ದಳು. ತನ್ನ ಹೃದಯದಲ್ಲಿ ಪರಮಾತ್ಮನನ್ನೇ ಧ್ಯಾನ ಮಾಡುತ್ತಿದ್ದಳು. ಯಾವುದೇ ಉದ್ವೇಗವಿಲ್ಲದೇ ಶಾಂತಚಿತ್ತದಿಂದ ತನ್ನ ಮಾವನ ಮಾತುಗಳನ್ನು ಶಿರಸಾವಹಿಸಿದಳು.

ಮಾವನ ಅಪ್ಪಣೆಯ ಪ್ರಕಾರ ಅಗ್ನಿಯನ್ನು ಕೈಯಲ್ಲಿ ಹಿಡಿದುಕೊಂಡು ತನ್ನ ಮೃತಪತಿಯ ಚಿತೆಗೆ ಅಗ್ನಿಸ್ಪರ್ಶ ಮಾಡಲು ಹೆಜ್ಜೆ ಹಾಕಿದಳು. ದೈವಲೀಲೆಯಂತೆ ಕೂಡಲೇ ಧಾರಾಕಾರವಾದ ಮಳೆ ಬಂದಿತು. ಚಿತೆಗಾಗಿ ಸಿದ್ಧಗೊಳಿಸಿದ್ದ ನಂದಿಹೋಯಿತು. ಸೂರ್ಯಾಸ್ತವಾಯಿತು. ಎಲ್ಲೆಡೆಯು ನೀರಿನ ಪ್ರವಾಹ ಪ್ರಾರಂಭವಾಯಿತು. ರಾತ್ರಿಯಾಗುತ್ತಾ ಕತ್ತಲೆ ಆವರಿಸಿತು. ಮಳೆ ನಿಲ್ಲುತ್ತಿಲ್ಲ, ಏನು ಮಾಡಬೇಕೆಂದು ರಾಜನಿಗೆ ಅರ್ಥವಾಗುತ್ತಿಲ್ಲ. ಸನ್ನಿವೇಶವು ಅತ್ಯಂತ ಭೀಕರವಾಗಿತ್ತು. ಉಪಾಯಕಾಣದ ರಾಜನು ತನ್ನ ಪರಿವಾರದ ಜೊತೆ ಅರಮನೆಗೆ ಹೊರಟು ಹೋದನು. ಆದರೆ ಸಾಧ್ವಿಪತಿವ್ರತೆಯಾದ ಆ ಕುವರಿಯು ಇಂಥ ಸನ್ನಿವೇಶದಲ್ಲಿ ಪತಿಯ ಶವವನ್ನು ಬಿಟ್ಟು ಹೋಗುವುದು ಅಧರ್ಮವಾಗುತ್ತದೆ ಎಂಬ ಭಾವನೆಯಿಂದ ಅಲ್ಲಿಯೇ ಉಳಿದುಕೊಂಡಳು. ಅವಳ ಮನದಲ್ಲಿ ಅತ್ಯಂತ ಭಯವು ಆವರಿಸಿತು. ದುಃಖವು ಉಲ್ಬಣವಾಯಿತು. ಅನನ್ಯವಾಗಿ ಪರಮಾತ್ಮನನ್ನು ಸ್ಮರಣೆ ಮಾಡುತ್ತಾ, ಪರಮಾತ್ಮನನ್ನು ಕೂಗಿ ಕರೆಯುತ್ತಾ ಹೀಗೆ ಮಾತನಾಡಿದಳು -

'ಓ ಕರುಣಾಸಾಗರನೇ ! ಮಹಾದೇವನೇ ! ಒಮ್ಮೆ ಕಾರುಣ್ಯಪೂರ್ಣವಾದ ದೃಷ್ಟಿಯಿಂದ ನನ್ನನ್ನು ನೋಡು. ನಿನ್ನ ಕಾರುಣ್ಯದಿಂದಲೇ ಹಿಂದೆ ಆ ಮಾರ್ಕಂಡೇಯನು ಚಿರಂಜೀವಿಯಾದನು. ಚ್ಯವನನು ದೀರ್ಘಾಯುಷ್ಯವನ್ನು ಹೊಂದಿದನು. ಅಗ್ನಿ ಹಾಗೂ ಮನ್ಮಥರು ಮರುಜೀವನವನ್ನೇ ಪಡೆದರು. ಶ್ವೇತವಾಹನರು ಪೂರ್ಣಾಯುಷ್ಯವನ್ನು ಪಡೆದರು. ನಿನ್ನ ಕಾರುಣ್ಯದ ಅತಿಶಯದಿಂದಲೇ ರತೀದೇವಿ ತನ್ನ ಪತಿಯನ್ನು ಪಡೆದಳು. ಮಾರ್ಕಂಡೇಯನ ಪತ್ನಿಯು ತನ್ನ ಪತಿಯನ್ನು ಪಡೆದಳು. ಅಗ್ನಿಯ ಪತ್ನಿಯರಾದ ಸ್ವಾಹಾ ಹಾಗೂ ಸ್ವಧಾದೇವಿಯರು ದೀರ್ಘಸೌಮಾಂಗಲ್ಯದ

ಭಾಗ್ಯವನ್ನು ಪಡೆದುಕೊಂಡರು. ಅನಂತರ ಪುತ್ರರನ್ನೂ ಕೂಡ ಪಡೆದರು. ಅವರ ಮುಂದೆ ನಾನೆಲ್ಲಿ ದೇವ ! ನಾನು ಮಾಡಿದ ಅಪರಾಧಗಳೇನು ? ನನಗೇಕೆ ಇಂಥ ಘೋರಶಿಕ್ಷೆಯು ಎದುರಾಗಿದೆ. ದಯಾಮಯನೇ ! ಅನಾಥಳಾದ ನನ್ನನ್ನೊಮ್ಮೆ ಕೃಪಾಪೂರ್ಣ ದೃಷ್ಟಿಯಿಂದ ನೋಡು. ನನ್ನನ್ನು ಕಾಪಾಡು. ನನಗೆ ಮಾಂಗಲ್ಯಭಾಗ್ಯವನ್ನು ಕರುಣಿಸು'' ಹೀಗೆ ಒಂದೇ ಮನದಿಂದ ಭಕ್ತ್ಯತಿಶಯದಿಂದ ಪ್ರಾರ್ಥನೆ ಮಾಡಿ, ಮಹಾದೇವನ ಪಾದವನ್ನು ನೆನೆಸಿಕೊಂಡು ಕುಸಿದುಬಿಟ್ಟಳು.

ದಯಾಸಾಗರನಾದ ಮಹಾದೇವನು ಇವಳ ಪ್ರಾರ್ಥನೆಗೆ ಪ್ರತ್ಯಕ್ಷನಾದನು. ಮಗಳೇ! ನಿನ್ನ ಪ್ರಾರ್ಥನೆಯೇನು ? ನಿನ್ನ ಅಪೇಕ್ಷೆ ಏನು ? ತಿಳಿಸು. ಅದನ್ನು ನಿನಗೆ ಕರುಣಿಸುತ್ತೇನೆ ಎಂದು ಹೇಳಿದನು. ಆಗ ಆ ಕುಮಾರಿಯು 'ದೀನರಕ್ಷಕನೇ ! ನನಗೆ ಮಾಂಗಲ್ಯಭಾಗ್ಯವನ್ನು ನೀಡು' ಎಂದು ಕೇಳಿಕೊಂಡಳು. ಆಗ ಮಹಾದೇವನು ಆ ಕುಮಾರಿಗೆ ಹೀಗೆ ಉಪದೇಶಿಸಿದನು - ''ಪುತ್ರಿಯೇ ! ನೀನು ಮಾಂಗಲ್ಯಭಾಗ್ಯವನ್ನು ಪಡೆಯಬೇಕೆಂದರೆ ಅತ್ಯಂತ ಶುಭಪ್ರದವಾದ ಒಂದು ವ್ರತವನ್ನು ಆಚರಣೆ ಮಾಡಬೇಕು. ಆ ವ್ರತದ ಬಗ್ಗೆ ನಾನೇ ನಿನಗೆ ತಿಳಿಸುತ್ತೇನೆ. ಆಷಾಢಮಾಸದ ಅಮಾವಾಸ್ಯೆಯ ದಿವಸ ಮಂಗಳಸ್ನಾನವನ್ನು ಮಾಡಿ, ಭಕ್ತಿಭಾವದಿಂದ ಜ್ಯೋತಿರ್ಭೀಮೇಶ್ವರ ಎಂಬ ವ್ರತವನ್ನು ಆಚರಣೆ ಮಾಡಬೇಕು. ಅದಕ್ಕಾಗಿ ಪೂಜಾಸ್ಥಳವನ್ನು ಶುದ್ಧಿಮಾಡಿ, ಐದು ಬಣ್ಣಗಳಿಂದ ರಂಗವಲ್ಲಿಯನ್ನು ಹಾಕಿ, ಸ್ಥಳವನ್ನು ಅಲಂಕಾರ ಮಾಡಬೇಕು. ಅದರಲ್ಲಿ ಅಕ್ಕಿಯರಾಶಿಯನ್ನು ಹಾಕಿ, ಅದರ ಮೇಲೆ ತುಪ್ಪದಿಂದ ಉರಿಯುವ ಎರಡು ದೀಪಸ್ತಂಭಗಳನ್ನಿಡಬೇಕು. ಅದರಲ್ಲಿ ನನ್ನನ್ನು ಹಾಗೂ ಪಾರ್ವತೀದೇವಿಯನ್ನು ಆವಾಹನೆ ಮಾಡಬೇಕು. ಆ ದೀಪಸ್ತಂಭದಲ್ಲಿ ನಾನು ಅಷ್ಟಮೂರ್ತಿಗಳ ಸಹಿತನಾಗಿ ನೆಲೆಸುತ್ತೇನೆ. ಆ ಅಷ್ಟಮೂರ್ತಿಗಳಲ್ಲಿ ಜ್ಯೋತಿಯೆಂಬ ಮೂರ್ತಿಯು ಒಂದಾಗಿದೆ. ಜ್ಯೋತಿರ್ಮಯವಾದ ನನಗೆ ಭೀಮೇಶ್ವರನೆಂಬ ಹೆಸರಿದೆ. ಈ ದೀಪಸ್ತಂಭದಲ್ಲಿ ನಾನು ಸನ್ನಿಹಿತನಾಗಿರುತ್ತೇನೆ. ಜ್ಯೋತಿಸ್ವರೂಪ-ನಾಗಿರುತ್ತೇನೆ. ನನ್ನನ್ನು ಚಂದ್ರನೆಂದು ಕರೆಯುತ್ತಾರೆ. ಮಹಾಲಿಂಗಸ್ವರೂಪನೂ ನಾನೇ ಆಗಿರುತ್ತೇನೆ. ಇಂಥ ನನ್ನನ್ನು ಹೀಗೆ ತಿಳಿದು ಭಯಭಕ್ತಿಗಳಿಂದ ಆರಾಧನೆ

ಮಾಡಬೇಕು''. ಈ ವ್ರತದ ಪೂಜಾಕ್ರಮ ಹೀಗಿದೆ - ಈ ಜ್ಯೋತಿರ್ಭೀಮೇಶ್ವರ ವ್ರತವನ್ನು ಯಾರು ಮಾಡುತ್ತಾರೋ, ಅವರು ಮೊದಲನೆಯ ವರ್ಷ ನೂರು ಕಡುಬುಗಳನ್ನು ನೈವೇದ್ಯ ಮಾಡಬೇಕು. ಎರಡನೆಯ ವರ್ಷ ಇನ್ನೂರು, ಮೂರನೆಯ ವರ್ಷ ಮುನ್ನೂರು, ಹೀಗೆ ಹೆಚ್ಚಿಸುತ್ತಾ ಒಂಭತ್ತು ವರ್ಷಗಳವರೆಗೆ ಕಡುಬುಗಳನ್ನು ನೈವೇದ್ಯ ಮಾಡಬೇಕು. ಅಕ್ಕಿಯ ಹಿಟ್ಟಿನಿಂದ ಈ ಕಡಬನ್ನು ಮಾಡಿರಬೇಕು. ಒಂಭತ್ತನೆಯ ವರ್ಷ ಒಂಬೈನೂರು ಕಡುಬುಗಳನ್ನು ಮಾಡಿ, ಅತಿಥಿಗಳಿಗೆ ದಾನ ಮಾಡಬೇಕು.

ಭಕ್ತಿಭಾವದಿಂದ ಹೀಗೆ ಜ್ಯೋತಿರ್ಭೀಮೇಶ್ವರ ವ್ರತವನ್ನು ಆಚರಿಸಿದರೆ, ನಿನ್ನ ಪತಿಯು ಬದುಕುತ್ತಾನೆ. ಮೇಲೆದ್ದೇಳುತ್ತಾನೆ. ಈ ವಿಷಯದಲ್ಲಿ ಸ್ವಲ್ಪವೂ ಸಂಶಯ ಪಡಬೇಡ. ಹಾಗೂ ನಿನಗೆ ದೀರ್ಘಸೌಮಾಂಗಲ್ಯ ಪ್ರಾಪ್ತಿಯಾಗುತ್ತದೆ. ಹೀಗೆ ಹೇಳಿ ಮಹಾದೇವರು ಅಂತರ್ಧಾನವನ್ನು ಹೊಂದಿದರು.

ಮಹಾದೇವನ ಅಪ್ಪಣೆಯಂತೆ ಅತ್ಯಂತ ಉತ್ಸಾಹ ಶ್ರದ್ಧೆಗಳಿಂದ ಆ ಹೆಣ್ಮಗಳು ಮಣ್ಣಿನ ದೀಪಸ್ತಂಭವನ್ನು ಮಾಡಿ, ಸಮೀಪದಲ್ಲಿದ್ದ ಆಲದೆಲೆಗಳನ್ನು ವೀಳೆದೆಳೆಗಳನ್ನಾಗಿ ಮಾಡಿ, ಅದರ ಕಾಯಿಗಳನ್ನೇ ಅಡಿಕೆಯನ್ನಾಗಿ ಭಾವಿಸಿ ಪೂಜೆಯನ್ನು ಪ್ರಾರಂಭ ಮಾಡಿದಳು. ಅಲ್ಲಿದ್ದ ಗರಿಕೆಯನ್ನು, ಹುಲ್ಲನ್ನು, ಹೂವುಗಳಿಂದ ಪೂಜಿಸಿದಳು. ಮಣ್ಣಿನಿಂದಲೇ ಕಡುಬುಗಳನ್ನು ಮಾಡಿ, ಮಹಾದೇವನಿಗೆ ಸಮರ್ಪಣೆ ಮಾಡಿದಳು. (ಪೂಜೆ ಮುಗಿದ ಮೇಲೆ ಭಂಡಾರ ಒಡೆಯಲು ಭೀಮನನ್ನೇ ಕರೆದಳಾದ್ದರಿಂದ ಭೀಮನ ಅಮಾವಾಸ್ಯೆಯೆಂದು ಕೆಲವು ಸಂಪ್ರದಾಯ, ಮಹಾದೇವರನ್ನೇ ಕರೆದಳು. ಅವರು ಭಂಡಾರ ಒಡೆದು ನಿನ್ನ ಗಂಡ ಭೀಮನಂತೆ ಚಿರಂಜೀವಿಯಾಗಲಿ ಎಂದು ಅನುಗ್ರಹಿಸಿದರಾದ್ದರಿಂದ ಭೀಮನ ಅಮಾವಾಸ್ಯೆಯೆಂದು ಇನ್ನೂ ಕೆಲವು ಸಂಪ್ರದಾಯ) ದೈವಪ್ರೇರಣೆಯಂತೆ ಇದ್ದಕ್ಕಿದ್ದಂತೆ ಒಂದು ದೊಡ್ಡ ರತ್ನಖಚಿತವಾದ ಕಂಬಗಳಿಂದ ಕೂಡಿದ ಒಂದು ಸುಂದರ ಅರಮನೆಯು ಸಿದ್ಧವಾಯಿತು. ಅದರ ಮೂಲೆಗಳಲ್ಲಿಯೂ ನವರತ್ನಗಳು ರಾಶಿರಾಶಿಯಾಗಿ ಬಿದ್ದಿದ್ದವು. ಗಂಡನು ಮಲಗಿದ

ಚಿತೆಯು ರತ್ನದ ಮಂಚದಂತೆ ಹೊಳೆಯುತ್ತಿತ್ತು. ಆ ರಾಜಕುಮಾರನು ನಿದ್ದೆಯಿಂದ ಎದ್ದವನಂತೆ ಬದುಕಿಬಂದನು. ಚತುರಂಗ ಬಲವೇ ಅಲ್ಲಿ ನಿಂತಿತ್ತು. ಇಂಥ ಸುಂದರ ಸನ್ನಿವೇಶವನ್ನು ಕಂಡು ಆ ಕುವರಿಯು ಆಶ್ಚರ್ಯಭರಿತಳಾದಳು. ಈ ರಾಜಕುಮಾರನು ನಿದ್ದೆಯಿಂದ ಎದ್ದವನಂತೆ ಪಕ್ಕದಲ್ಲಿದ್ದ ಕನ್ಯಾಮಣಿಯಿಂದ ನಡೆದ ಎಲ್ಲಾ ವೃತ್ತಾಂತವನ್ನು ಕೇಳಿ, ಆಶ್ಚರ್ಯಹೊಂದಿದನು. ಮೋಕ್ಷಾನಂದವನ್ನೇ ಅನುಭವಿಸಿದನು. ಮರುದಿವಸ ಎಲ್ಲ ರಾಜಭಟರು ಬಂದು ನೋಡಿ ಆಶ್ಚರ್ಯದಿಂದ ಅರಸನಿಗೆ ತಿಳಿಸಿದರು. ಅರಸನು ಬಂದು ನಡೆದ ಸಂಗತಿಯನ್ನು ಸೊಸೆ ಮೂಲಕ ತಿಳಿದು ಆನಂದ ಪಟ್ಟನು. ಪುತ್ರನನ್ನು ಗಾಢಾಲಿಂಗನ ಮಾಡಿಕೊಂಡು ಆನಂದವನ್ನು ಅನುಭವಿಸಿದನು. ಸೊಸೆಯನ್ನೂ ಕೂಡ ಸಮಾಧಾನ ಪಡಿಸಿದನು. ಎಲ್ಲ ಬ್ರಾಹ್ಮಣ ಮುತ್ತೈದೆಯರಿಗೆ ದಾನಧರ್ಮಗಳನ್ನು ಮಾಡಿ ಸಕಲರೊಡನೆ ಪುನಃ ಅಮಾಭೀಮೇಶ್ವರವ್ರತವನ್ನು ಆಚರಿಸಿ, ಮಹಾದೇವರಿಗೆ ಕೃತಜ್ಞತೆಯನ್ನು ಸಲ್ಲಿಸಿದನು. ಅತ್ಯಂತ ಸಂತೋಷದಿಂದ ಎಲ್ಲರ ಜೊತೆ ಅರಮನೆಗೆ ತೆರಳಿದನು. ಆ ರಾಜಕುಮಾರನು ತನ್ನ ಪತ್ನಿಯ ಜೊತೆ ಸುಖಸಂತೋಷದಿಂದ ಜೀವನವನ್ನು ನಡೆಸಿದನು. ಹೀಗೆ ಸೂತಪುರಾಣಿಕರು ಶೌನಕಾದಿಗಳಿಗೆ ಜ್ಯೋತಿರ್ಭೀಮೇಶ್ವರವ್ರತವನ್ನು ವರ್ಣನೆ ಮಾಡಿರುವರು.

ಸ್ಕಾಂದಪುರಾಣದಲ್ಲಿ ಅಮಾಭೀಮೇಶ್ವರವ್ರತ ಕಥೆಯು ಸಂಪೂರ್ಣವಾಯಿತು.

# ಪಾರ್ವತಿಯ ಕಥೆ

ಬ್ರಹ್ಮದೇವರ ವರಬಲದಿಂದ ತಾರಕಾಸುರನು ದೃಪ್ತನಾಗಿದ್ದನು. ದೇವಲೋಕವನ್ನು ಸೋಲಿಸಿದ್ದನು. ಸಕಲ ದೇವತೆಗಳು ಬ್ರಹ್ಮದೇವರನ್ನು ಮೊರೆಹೊಕ್ಕು ಪರಿಹಾರೋಪಾಯವನ್ನು ಪ್ರಾರ್ಥಿಸಿದರು. ಆಗ ಅವರಿಗೆ ಅಶರೀರವಾಣಿಯಾಯಿತು.

''ಸಮಸ್ತ ದೇವತೆಗಳೇ! ತಾರಕಾಸುರನು ಸಾಯದೇ ನಿಮಗೆ ಬದುಕಲು ಸಾಧ್ಯವಿಲ್ಲ. ಅವನನ್ನು ಕೊಲ್ಲುವ ಸಾಮರ್ಥ್ಯ ಈಗಿರುವ ಯಾವ ದೇವತೆಗಳಲ್ಲೂ ಇಲ್ಲ. ಅಂಥ ವೀರಪುರುಷನು ಹುಟ್ಟಿಬರಬೇಕಾಗಿದೆ. ಸಂಹಾರಕಾರಕನಾದ ಶಿವನಿಂದಲೇ ಆ ತಾರಕನನ್ನು ಕೊಲ್ಲಬಲ್ಲ ಮಗನು ಹುಟ್ಟಲು ಸಾಧ್ಯ. ಆದರೆ ಆ ಶಿವನು ಈಗ ವಿರಕ್ತನಾಗಿ ತಪಗೈಯ್ಯುತ್ತಿದ್ದಾನೆ. ಸಂಸಾರವೇ ಬೇಡವೆನ್ನುತ್ತಿದ್ದಾನೆ. ಶೈಲಾಗ್ರದಲ್ಲಿ ಕುಳಿತಿದ್ದಾನೆ. ಆವನ ಮನದಲ್ಲಿ ಕಾಮ ಹುಟ್ಟುವಂತೆ ಮಾಡಿರಿ. ಪ್ರೇಮ ಅಂಕುರಿಸುವಂತೆ ಪ್ರಯತ್ನಗೈಯ್ಯಿರಿ. ಆದಕ್ಕಾಗಿ ಪರ್ವತರಾಜನ ಕುವರಿಗೂ ರುದ್ರನಿಗೂ ಸಮಾಗಮ ಮಾಡಿಸಿರಿ. ಅದಕ್ಕೂ ಮೊದಲು ಪರ್ವತರಾಜನ ಬಳಿ ತೆರಳಿ, ಜಗದಂಬಿಕೆಯ ಜನನವಾಗುವಂತೆ ಪ್ರಾರ್ಥಿಸಿರಿ'' ಎಂದು.

ದೇವತೆಗಳೆಲ್ಲರೂ ಅಶರೀರವಾಣಿಯ ಪ್ರಕಾರ ಹಿಮಾಚಲಕ್ಕೆ ಬಂದರು. ಹಿಮವಂತನ ಬಳಿ ಪ್ರಾರ್ಥಿಸಿದರು -

'ಜನಿತವ್ಯಾ ತ್ವಯಾ ಕನ್ಯಾ ಶಿವಾರ್ಥಂ ಕಾರ್ಯಸಿದ್ಧಯೇ' ತಾರಕಾಸುರನ ಸಂಹಾರಕ್ಕಾಗಿ ರುದ್ರದೇವರು ವಿವಾಹವಾಗಬೇಕಾಗಿದೆ. ಅದಕ್ಕಾಗಿ ಅವರನ್ನು ವರಿಸುವ ಜಗದಂಬಿಕೆಯನ್ನು ನೀನು ಮಗಳನ್ನಾಗಿ ಪಡೆಯಬೇಕು. ಇದರಿಂದ ಸಮಸ್ತ ದೇವಲೋಕವನ್ನು ರಕ್ಷಣೆ ಮಾಡಿದ ಪುಣ್ಯ ನಿನಗೆ ಪ್ರಾಪ್ತವಾಗುತ್ತದೆ. ಹಿಮವಂತನೇ ತಡಮಾಡಬೇಡ. ಕೂಡಲೇ ನಿನ್ನ ತಪಃಶಕ್ತಿಯ ಫಲವಾಗಿ ಜಗದಂಬಿಕೆಯನ್ನು ಮಗಳಾಗಿ ಪಡೆದುಕೋ.

ಜ್ಯೋತಿರ್ಭೀಮೇಶ್ವರ ವ್ರತ

ದೇವತೆಗಳ ಪ್ರಾರ್ಥನೆಯ ಅನಂತರ ಹಿಮವಂತನು ತನ್ನ ಮಡದಿಗೆ ಹೀಗೆ ತಿಳಿಸಿದನು-

'ಜನಿತವ್ಯಾ ಸುಕನ್ಯೈಕಾ ಸುರಕಾರ್ಯಾರ್ಥಸಿದ್ಧಯೇ । ದೇವಾನಾಂ ಚ ಋಷೀಣಾಂ ಚ ತಥೈವ ಚ ತಪಸ್ವಿನಾಮ್॥' ದೇವತೆಗಳ ಕಾರ್ಯಕ್ಕೋಸ್ಕರ ಸುಂದರ ಕನ್ಯೆಯ ಜನ್ಮಕ್ಕೆ ನೀನು ಕಾರಣಳಾಗಬೇಕು. ಅಂಥ ಕನ್ಯೆಯಿಂದ ಸಮಸ್ತ ದೇವತೆಗಳಿಗೆ ಋಷಿಗಳಿಗೆ ಹಾಗೂ ತಪಸ್ವಿಗಳಿಗೆ ಅತ್ಯಂತ ಸಂತೋಷವಾಗುತ್ತದೆ'' ಎಂದು ತಿಳಿಸುತ್ತಾನೆ. ಯೋಗ್ಯಕಾಲದಲ್ಲಿ ಆ ಮೇನಾದೇವಿಯು ಗರ್ಭವತಿಯಾಗುತ್ತಾಳೆ. ಜಗದಂಬಿಕೆಯನ್ನೇ ಗರ್ಭದಲ್ಲಿ ಧರಿಸಿ ಕಾಂತಿಭರಿತಳಾಗುತ್ತಾಳೆ.

## ಪಾರ್ವತಿದೇವಿಯ ಅವತಾರ

ತತೋ ಜಗತ್ಯಾ ನಿರ್ವಾಣಹೇತುರ್ಹಿಮಗಿರಿಪ್ರಿಯಾ ।
ಬ್ರಾಹ್ಮಂ ಮುಹೂರ್ತೇ ಸುಭಗೇ ಪ್ರಾಸೂಯತ ಗೃಹಾರಣಂ ॥

ಎಲ್ಲರ ಮೋಕ್ಷಕ್ಕೆ ಕಾರಣಳಾದ ಜಗದಂಬಿಕೆಯನ್ನು ಹಿಮವಂತನ ಪತ್ನಿಯಾದ ಮೇನಾದೇವಿಯು ಬ್ರಾಹ್ಮೀ ಮುಹೂರ್ತದಲ್ಲಿ ಪಡೆದಳು. ಇದರಿಂದ ಸಮಸ್ತ ಲೋಕವೇ ಸಂತೋಷಪಟ್ಟಿತು.

ಪಾರ್ವತಿಯು ಅವತರಿಸಿದಾಗ ಪ್ರಕೃತಿಯ ವಾತಾವರಣದಲ್ಲಿ ಹಾಗೂ ಸಮಸ್ತ ಸಜ್ಜನರ ಮನಸ್ಸಿನಲ್ಲಿ ಅಪಾರ ಆನಂದವಾಯಿತು.

ತಸ್ಯಾಂ ತು ಜಾಯಮಾನಾಯಾಂ ಚಂದ್ರಮಸ್ಥಾಣುಜಂಗಮಾಃ ।
ಅಭವನ್ ಸುಖಿನಃ ಸರ್ವೇ ಸರ್ವಲೋಕನಿವಾಸಿನಃ ॥

ಪಾರ್ವತಿಯು ಅವತರಿಸಿದಾಗ ಸ್ಥಾವರ ಜಂಗಮಗಳಿಗೂ ಕೂಡ ಸಂತೋಷವಾಯಿತು. ಸಮಸ್ತ ಲೋಕದಲ್ಲಿ ವಾಸಿಸುತ್ತಿರುವ ಎಲ್ಲಾ ಸಜ್ಜನರ ಮನಸ್ಸು ಪ್ರಫುಲ್ಲವಾಯಿತು. ನರಕದಲ್ಲಿರುವ ಸಜ್ಜನರಿಗೂ ಕೂಡ ಸಂತೋಷವಾಯಿತು. ತಪಸ್ವಿಗಳ ಹೃದಯದಲ್ಲಿ ಭಗವಂತನು ಪ್ರಕಟನಾಗಿ ಅದರ ಕಠಿಣ ತಪಸ್ಸಿನ ಫಲವು

ಆ ಸಂದರ್ಭದಲ್ಲಿ ನೆರವೇರಿತು. ದೇವದುಂದುಭಿಗಳು ಮೊಳಗಿದವು. ದೇವತೆಗಳು ಪುಷ್ಪವೃಷ್ಟಿಗೈದರು. ಗಂಧರ್ವರು ಹಾಡಿದರು. ಅಪ್ಸರೆಯರು ನರ್ತನಗೈದರು. ಮುನಿಪುಂಗವರು ವೇದಘೋಷ ಮಾಡಿದರು. ಆದರೆ ದೈತ್ಯರಿಗೆ ಮಾತ್ರ ಭಯಾತಂಕಗಳು ಪ್ರಾರಂಭವಾದವು. ಭಗವಂತನಿಗೂ ಕೂಡ ಪಾರ್ವತಿಯ ಅವತಾರದಿಂದ ಬಹಳ ಸಂತೋಷವಾಯಿತು.

## ಪಾರ್ವತಿಯ ಜನನದಿಂದ ಪರಮಾತ್ಮನಿಗಾದ ಸಂತೋಷ

ಪಾರ್ವತಿಯ ಬಗ್ಗೆ ಪರಮಾತ್ಮನಿಗೆ ಎಲ್ಲಿಲ್ಲದ ವಾತ್ಸಲ್ಯವಿದೆ. ಆದ್ದರಿಂದಲೇ ಜಗತ್ತಿನಲ್ಲಿ ಎಲ್ಲಾ ಪತಿವ್ರತೆಯರ ಪಾತಿವ್ರತ್ಯಕ್ಕೆ ಇವಳನ್ನೇ ಅಭಿಮಾನಿನಿಯನ್ನಾಗಿ ಮಾಡಿರುತ್ತಾರೆ. ತಾನು ಅಕೂತಿ ಹಾಗೂ ದೇವಹೂತಿಯರ ಮಗನಾಗಿ ಅವತರಿಸಿದಾಗ ಪ್ರಸೂತಿಯ ಮಗಳಾಗಿ ಸತಿಯು ಅವತರಿಸುವಂತೆ ಅವಕಾಶವನ್ನು ನೀಡಿದ್ದಾನೆ. ಈ ದೃಷ್ಟಿಯಲ್ಲಿ ತನ್ನ ತಂಗಿಯನ್ನಾಗಿ ಮಾಡಿಕೊಂಡಿದ್ದಾನೆ. ಬೇರೆ ಯಾರಲ್ಲೂ ತೋರದ ವಾತ್ಸಲ್ಯವನ್ನು ಪಾರ್ವತಿಯ ವಿಷಯದಲ್ಲಿ ತೋರಿದ್ದಾನೆ.

## ಪಾರ್ವತಿಯು ಹೇಗೆ ಬೆಳೆದಳು ?

ಮಹಾಸತಿಯು ಕೆಲವೇ ದಿನಗಳಲ್ಲಿ ಹುಣ್ಣಿಮೆಯ ಚಂದ್ರನಂತೆ ಬೆಳೆದಳು. ಎಲ್ಲ ವಿದ್ಯೆಗಳು ಅವಳ ನಾಲಿಗೆಯ ಮೇಲೆ ನಲಿದಾಡಿದವು. ಜಗತ್ತಿನಲ್ಲೇ ಅತ್ಯಂತ ಸುಂದರಿಯಾಗಿದ್ದಳು, ಸೌಂದರ್ಯ, ಸೌಭಾಗ್ಯ, ಸುಜ್ಞಾನಗಳು ಪೂರ್ಣವಾಗಿ ತುಂಬಿದ್ದವು. ಪೂರ್ಣಚಂದ್ರನನ್ನು ಮೀರಿದ ದೇಹಕಾಂತಿಯಿಂದ ಕಂಗೊಳಿಸುತ್ತಿದ್ದಳು. ಹೀಗೆ ಎಲ್ಲಾ ಗುಣಗಳಿಂದ ತುಂಬಿದ ಈ ಕನ್ಯೆಯು ಪ್ರಾಯಕ್ಕೆ ಬಂದಳು.

ಸುರಲೋಕಾಧಿಪತಿಯಾದ ದೇವೇಂದ್ರನೇ ಪಾರ್ವತಿಯ ವಿವಾಹಕ್ಕೆ ಮಹಾಪ್ರಯತ್ನವನ್ನು ಮಾಡುತ್ತಾನೆ. ದೇವೇಂದ್ರನು ನಾರದರನ್ನು ಕರೆದು ಅರ್ಘ್ಯಪಾದ್ಯಾದಿಗಳಿಂದ ಉಪಚರಿಸಿ ಪಾರ್ವತಿಯು ಪರಮೇಶ್ವರನೊಡನೆ ವಿವಾಹವಾಗುವಂತೆ ತಾವು ಏರ್ಪಾಡು ಮಾಡಬೇಕೆಂದು ಬಿನ್ನವಿಸುತ್ತಾನೆ. ದೇವರಾಜನ

ದೇವತೆಗಳ ಪ್ರಾರ್ಥನೆಯ ಅನಂತರ ಹಿಮವಂತನು ತನ್ನ ಮಡದಿಗೆ ಹೀಗೆ ತಿಳಿಸಿದನು-

'ಜನಿತವ್ಯಾ ಸುಕನ್ಯೈಕಾ ಸುರಕಾರ್ಯಾರ್ಥಸಿದ್ಧಯೇ । ದೇವಾನಾಂ ಚ ಋಷೀಣಾಂ ಚ ತಥೈವ ಚ ತಪಸ್ವಿನಾಮ್॥' ದೇವತೆಗಳ ಕಾರ್ಯಕ್ಕೋಸ್ಕರ ಸುಂದರ ಕನ್ಯೆಯ ಜನ್ಮಕ್ಕೆ ನೀನು ಕಾರಣಳಾಗಬೇಕು. ಅಂಥ ಕನ್ಯೆಯಿಂದ ಸಮಸ್ತ ದೇವತೆಗಳಿಗೆ ಋಷಿಗಳಿಗೆ ಹಾಗೂ ತಪಸ್ವಿಗಳಿಗೆ ಅತ್ಯಂತ ಸಂತೋಷವಾಗುತ್ತದೆ'' ಎಂದು ತಿಳಿಸುತ್ತಾನೆ. ಯೋಗ್ಯಕಾಲದಲ್ಲಿ ಆ ಮೇನಾದೇವಿಯು ಗರ್ಭವತಿಯಾಗುತ್ತಾಳೆ. ಜಗದಂಬಿಕೆಯನ್ನೇ ಗರ್ಭದಲ್ಲಿ ಧರಿಸಿ ಕಾಂತಿಭರಿತಳಾಗುತ್ತಾಳೆ.

## ಪಾರ್ವತಿದೇವಿಯ ಅವತಾರ

ತತೋ ಜಗತ್ಯಾ ನಿರ್ವಾಣಹೇತುರ್ಹಿಮಗಿರಿಪ್ರಿಯಾ ।
ಬಾಹ್ಯಂ ಮೂಹೂರ್ತೇ ಸುಭಗೇ ಪ್ರಾಸೂಯತ ಗೃಹಾರಣಂ ॥

ಎಲ್ಲರ ಮೋಕ್ಷಕ್ಕೆ ಕಾರಣಳಾದ ಜಗದಂಬಿಕೆಯನ್ನು ಹಿಮವಂತನ ಪತ್ನಿಯಾದ ಮೇನಾದೇವಿಯು ಬ್ರಾಹ್ಮೀ ಮುಹೂರ್ತದಲ್ಲಿ ಪಡೆದಳು. ಇದರಿಂದ ಸಮಸ್ತ ಲೋಕವೇ ಸಂತೋಷಪಟ್ಟಿತು.

ಪಾರ್ವತಿಯು ಅವತರಿಸಿದಾಗ ಪ್ರಕೃತಿಯ ವಾತಾವರಣದಲ್ಲಿ ಹಾಗೂ ಸಮಸ್ತ ಸಜ್ಜನರ ಮನಸ್ಸಿನಲ್ಲಿ ಅಪಾರ ಆನಂದವಾಯಿತು.

ತಸ್ಯಾಂ ತು ಜಾಯಮಾನಾಯಾಂ ಚಂದ್ರಮಸ್ಥಾಣುಜಂಗಮಾಃ ।
ಅಭವನ್ ಸುಖಿನಃ ಸರ್ವೇ ಸರ್ವಲೋಕನಿವಾಸಿನಃ ॥

ಪಾರ್ವತಿಯು ಅವತರಿಸಿದಾಗ ಸ್ಥಾವರ ಜಂಗಮಗಳಿಗೂ ಕೂಡ ಸಂತೋಷವಾಯಿತು. ಸಮಸ್ತ ಲೋಕದಲ್ಲಿ ವಾಸಿಸುತ್ತಿರುವ ಎಲ್ಲಾ ಸಜ್ಜನರ ಮನಸ್ಸು ಪ್ರಫುಲ್ಲವಾಯಿತು. ನರಕದಲ್ಲಿರುವ ಸಜ್ಜನರಿಗೂ ಕೂಡ ಸಂತೋಷವಾಯಿತು. ತಪಸ್ವಿಗಳ ಹೃದಯದಲ್ಲಿ ಭಗವಂತನು ಪ್ರಕಟನಾಗಿ ಅದರ ಕಠಿಣ ತಪಸ್ಸಿನ ಫಲವು

ಆ ಸಂದರ್ಭದಲ್ಲಿ ನೆರವೇರಿತು. ದೇವದುಂದುಭಿಗಳು ಮೊಳಗಿದವು. ದೇವತೆಗಳು ಪುಷ್ಪವೃಷ್ಟಿಗೈದರು. ಗಂಧರ್ವರು ಹಾಡಿದರು. ಅಪ್ಸರೆಯರು ನರ್ತನಗೈದರು. ಮುನಿಪುಂಗವರು ವೇದಘೋಷ ಮಾಡಿದರು. ಆದರೆ ದೈತ್ಯರಿಗೆ ಮಾತ್ರ ಭಯಾತಂಕಗಳು ಪ್ರಾರಂಭವಾದವು. ಭಗವಂತನಿಗೂ ಕೂಡ ಪಾರ್ವತಿಯ ಅವತಾರದಿಂದ ಬಹಳ ಸಂತೋಷವಾಯಿತು.

## ಪಾರ್ವತಿಯ ಜನನದಿಂದ ಪರಮಾತ್ಮನಿಗಾದ ಸಂತೋಷ

ಪಾರ್ವತಿಯ ಬಗ್ಗೆ ಪರಮಾತ್ಮನಿಗೆ ಎಲ್ಲಿಲ್ಲದ ವಾತ್ಸಲ್ಯವಿದೆ. ಆದ್ದರಿಂದಲೇ ಜಗತ್ತಿನಲ್ಲಿ ಎಲ್ಲಾ ಪತಿವ್ರತೆಯರ ಪಾತಿವ್ರತ್ಯಕ್ಕೆ ಇವಳನ್ನೇ ಅಭಿಮಾನಿನಿಯನ್ನಾಗಿ ಮಾಡಿರುತ್ತಾರೆ. ತಾನು ಆಕೂತಿ ಹಾಗೂ ದೇವಹೂತಿಯರ ಮಗನಾಗಿ ಅವತರಿಸಿದಾಗ ಪ್ರಸೂತಿಯ ಮಗಳಾಗಿ ಸತಿಯು ಅವತರಿಸುವಂತೆ ಅವಕಾಶವನ್ನು ನೀಡಿದ್ದಾನೆ. ಈ ದೃಷ್ಟಿಯಲ್ಲಿ ತನ್ನ ತಂಗಿಯನ್ನಾಗಿ ಮಾಡಿಕೊಂಡಿದ್ದಾನೆ. ಬೇರೆ ಯಾರಲ್ಲೂ ತೋರದ ವಾತ್ಸಲ್ಯವನ್ನು ಪಾರ್ವತಿಯ ವಿಷಯದಲ್ಲಿ ತೋರಿದ್ದಾನೆ.

## ಪಾರ್ವತಿಯು ಹೇಗೆ ಬೆಳೆದಳು ?

ಮಹಾಸತಿಯು ಕೆಲವೇ ದಿನಗಳಲ್ಲಿ ಹುಣ್ಣಿಮೆಯ ಚಂದ್ರನಂತೆ ಬೆಳೆದಳು. ಎಲ್ಲ ವಿದ್ಯೆಗಳು ಅವಳ ನಾಲಿಗೆಯ ಮೇಲೆ ನಲಿದಾಡಿದವು. ಜಗತ್ತಿನಲ್ಲೇ ಅತ್ಯಂತ ಸುಂದರಿಯಾಗಿದ್ದಳು, ಸೌಂದರ್ಯ, ಸೌಭಾಗ್ಯ , ಸುಜ್ಞಾನಗಳು ಪೂರ್ಣವಾಗಿ ತುಂಬಿದ್ದವು. ಪೂರ್ಣಚಂದ್ರನನ್ನು ಮೀರಿದ ದೇಹಕಾಂತಿಯಿಂದ ಕಂಗೊಳಿಸುತ್ತಿದ್ದಳು. ಹೀಗೆ ಎಲ್ಲಾ ಗುಣಗಳಿಂದ ತುಂಬಿದ ಈ ಕನ್ಯೆಯು ಪ್ರಾಯಕ್ಕೆ ಬಂದಳು.

ಸುರಲೋಕಾಧಿಪತಿಯಾದ ದೇವೇಂದ್ರನೇ ಪಾರ್ವತಿಯ ವಿವಾಹಕ್ಕೆ ಮಹಾಪ್ರಯತ್ನವನ್ನು ಮಾಡುತ್ತಾನೆ. ದೇವೇಂದ್ರನು ನಾರದರನ್ನು ಕರೆದು ಅರ್ಘ್ಯಪಾದ್ಯಾದಿಗಳಿಂದ ಉಪಚರಿಸಿ ಪಾರ್ವತಿಯು ಪರಮೇಶ್ವರನೊಡನೆ ವಿವಾಹವಾಗುವಂತೆ ತಾವು ಏರ್ಪಾಡು ಮಾಡಬೇಕೆಂದು ಬಿನ್ನವಿಸುತ್ತಾನೆ. ದೇವರಾಜನ

ಸೂಚನೆಯಂತೆ ನಾರದರು ಪರ್ವತರಾಜನ ಕುವರಿಯಾದ ಪಾರ್ವತಿಯ ಬಳಿ ತೆರಳುತ್ತಾರೆ.

## ನಾರದರಿಗೂ ಹಿಮವಂತನಿಗೂ ಭೇಟಿ

ನಾರದರ ಆಗಮನವನ್ನು ಕಂಡು ಹಿಮವಂತನಿಗೆ ಎಲ್ಲಿಲ್ಲದ ಆಶ್ಚರ್ಯ ಸಂತೋಷಗಳು ಉಂಟಾಗುತ್ತವೆ. ದಂಪತಿಗಳು ಭಕ್ತಿಯಿಂದ ನಮಿಸುತ್ತಾರೆ. ಮಗಳಾದ ಪಾರ್ವತಿಯೂ ಕೂಡ ಭಕ್ತಿಯಿಂದ ನಮಸ್ಕಾರ ಮಾಡುತ್ತಾಳೆ. ಅನಂತರ ತನ್ನ ಕುಮಾರಿಯ ಬಗ್ಗೆ ಭವಿಷ್ಯವಚನವನ್ನು ನುಡಿಯಬೇಕೆಂದು ಪರ್ವತರಾಜನು ನಾರದರ ಬಳಿ ಪ್ರಶ್ನಿಸುತ್ತಾನೆ.

ನಾರದರು ಆಗ ಪರ್ವತರಾಜನನ್ನು ಕುರಿತು ಹೀಗೆ ಹೇಳಿದರು -

''ಚರಣೌ ಪದ್ಮಸಂಕಾಷೌ ಸ್ವಚ್ಛಾವಸ್ಯ ನಖೋಜ್ವಲೌ ।<br>
ಸುರಾಸುರಾಣಾಂ ನಮತಾಂ ಕಿರೀಟಮಣಿಕಾಂತಿಭಿಃ<br>
ವಿಚಿತ್ರವರ್ಣ್ಯೈಃ ಪಶ್ಯದ್ಭಿಃ ಸುಚ್ಛಾಯೌ ಪ್ರತಿಬಿಂಬಿತೌ ।<br>
ಏಷಾ ಭಾರ್ಯಾ ಜಗದ್‌ಭರ್ತುಃ ಪ್ರಶಾಂತಸ್ಯ ಮಹೀಧರ ।<br>
ಜನನೀ ಸರ್ವಲೋಕಸ್ಯ ಸಂಭೂತಾ ಭೂತಭಾವಿನೀ ಶಿವೇಯಂ .....॥''

ನಿನ್ನ ಮಗಳು ಸಾಮಾನ್ಯಳಲ್ಲ. ದೇವತೆಗಳೂ ಕೂಡ ಇವಳನ್ನು ನಮಿಸುತ್ತಾರೆ. ದೇವತೆಗಳ ಕಿರೀಟಗಳ ಸಾಲಿನ ಮಧ್ಯದಲ್ಲಿ ಇವಳ ಚರಣಕಮಲಗಳು ಕಂಗೊಳಿಸುತ್ತವೆ. ಆ ಕಿರೀಟಗಳ ರತ್ನಗಳಲ್ಲಿ ಇವಳ ಕಾಲುಗಳು ಪ್ರತಿಬಿಂಬಿತವಾಗುತ್ತವೆ. ಜಗದ್‌ಭರ್ತುವಾದ ಮಹಾದೇವನ ಕೈಹಿಡಿವ ಸೌಭಾಗ್ಯ ನಿನ್ನ ಮಗಳದ್ದಾಗಿದೆ. ಸಮಸ್ತ ಜಗತ್ತಿಗೆ ಮಂಗಳಪ್ರದಳಾಗಿದ್ದಾಳೆ. ಇಂಥ ಮಗಳನ್ನು ಪಡೆದದ್ದು, ಅದೆಷ್ಟೋ ಜನ್ಮಗಳ ಪುಣ್ಯವಾಗಿದೆ. ಹೀಗೆ ಪಾರ್ವತಿಯನ್ನು ಅದ್ಭುತವಾಗಿ ಪ್ರಶಂಸೆ ಮಾಡುತ್ತಾರೆ.

ಪರ್ವತರಾಜನ ಪ್ರಶ್ನೆಯಂತೆ ನಾರದರು ಉತ್ತರಿಸುತ್ತಾ, ರುದ್ರದೇವರು ಪಾರ್ವತಿಯನ್ನು ವರಿಸುವುದಕ್ಕಾಗಿಯೇ ಹಿಮಾಲಯದಲ್ಲಿ ಕುಳಿತು ತಪಸ್ಸನ್ನು

ಆಚರಿಸುತ್ತಿದ್ದಾರೆ. ದಕ್ಷಾಧ್ವರಪ್ರಸಂಗದಲ್ಲಿ ತನ್ನ ಸತಿಯು ಪ್ರಾಣತ್ಯಾಗ ಮಾಡಿದ ವಿಚಾರವನ್ನು ಕೇಳಿ, ದುಃಖಿತರಾಗಿ ರುದ್ರದೇವರು ಪುನಃ ಅವಳೇ ನನ್ನ ಹೆಂಡತಿಯಾಗಬೇಕು ಎಂಬ ಉದ್ದೇಶದಿಂದ ನಿನ್ನ ತಪ್ಪಲಿನಲ್ಲಿಯೇ ತಪಸ್ಸನ್ನು ಮಾಡುತ್ತಿದ್ದಾರೆ. ಅವರಿಗೆ ನಿನ್ನ ಮಗಳು ಪತ್ನಿಯಾಗುತ್ತಾಳೆ ಎಂಬ ವಿಚಾರವು ಪೂರ್ಣವಾಗಿ ತಿಳಿದಿದೆ. ಆದ್ದರಿಂದ ಆ ರುದ್ರದೇವರನ್ನು ಪ್ರಸನ್ನಗೊಳಿಸುವುದು ನಿನ್ನ ಮುಖ್ಯಕರ್ತವ್ಯವಾಗಿದೆ. ಜಗತ್‌ಭರ್ತೃಗಳಾದ ರುದ್ರದೇವರು ನಿನ್ನ ಸ್ಥಳದಲ್ಲಿ ತಪಸ್ಸನ್ನು ಆಚರಿಸುತ್ತಿರುವುದು ನಿನ್ನ ಸೌಭಾಗ್ಯವಾಗಿದೆ. ಪಾರ್ವತಿ ಪರಮೇಶ್ವರರಿಬ್ಬರಿಗೂ ವಿವಾಹವನ್ನು ಮಾಡಿಸಿ, ಸಮಸ್ತ ಜಗತ್ತಿಗೆ ಮಂಗಳವನ್ನು ಉಂಟುಮಾಡುವ ಮಹಾಪುಣ್ಯ ನಿನ್ನನ್ನು ಕಾಯುತ್ತಿದೆ. ತಡಮಾಡದೇ ಮಹಾದೇವನನ್ನು ಸಮೀಪಿಸಿ, ಆರಾಧನೆಗೈದು, ತೃಪ್ತಿಪಡಿಸಿ ನಿನ್ನ ಮಗಳನ್ನು ವಿವಾಹ ಮಾಡಿಕೊಡು. ಹೀಗೆ ಮಾರ್ಗದರ್ಶವನ್ನು ಮಾಡಿ, ನಾರದರು ಅಲ್ಲಿಂದ ಹೊರಡುತ್ತಾರೆ.

ನಾರದರ ಮಾರ್ಗದರ್ಶನದಂತೆ ಹಿಮವಂತನು ಮಹಾದೇವನನ್ನು ಭೇಟಿ ಮಾಡಿದನು.

ಅದೊಂದು ಸುಮುಹೂರ್ತಕಾಲದಲ್ಲಿ ಗಿರಿರಾಜನು ತನ್ನ ಮಗಳನ್ನು ಕರೆದುಕೊಂಡು ಶಿಖರಶ್ರೇಣಿಯಲ್ಲಿ ತಪಗೈಯ್ಯುತ್ತಿರುವ ಮಹಾದೇವರ ದರ್ಶನಕ್ಕೆ ತೆರಳುತ್ತಾನೆ. ಗಂಗಾಧರನಾಗಿ, ಜಟಾಜೂಟನಾಗಿ ಸರ್ಪಾಭರಣಭೂಷಿತನಾಗಿ, ತಪೋಮುದ್ರೆಯನ್ನು ಧರಿಸಿ, ಜಪಮಾಲೆಯನ್ನು ಹಿಡಿದು, ಅರ್ಧೋನ್ಮೀಲಿತನಯನನಾಗಿ ಹೃದಯಕಮಲದಲ್ಲಿ ಭಗವಂತನನ್ನೇ ತದೇಕಾಗ್ರಮನಸ್ಸಿನಿಂದ ಕಾಣುತ್ತಾ ತಪಸ್ಸಿನಲ್ಲಿ ನಿರತರಾದ ಮಹಾದೇವರನ್ನು ಸಂದರ್ಶನ ಮಾಡಲು ಬಯಸುತ್ತಾನೆ. ಆದರೆ ಗುಹೆಯ ದ್ವಾರದಲ್ಲಿ ನಂದಿಯು ಆ ಹಿಮವಂತನನ್ನು ತಡೆಯುತ್ತಾನೆ. ಬಂದ ಮಾತ್ರಕ್ಕೆ ರುದ್ರದೇವರ ದರ್ಶನ ಇವನಿಗಾಗುವುದಿಲ್ಲ.

ರುದ್ರದೇವರ ಶ್ರೇಷ್ಠತೆಯನ್ನು ಅರಿತ ಹಿಮವಂತನಿಗೆ ಎಲ್ಲಿಲ್ಲದ ವಿನಯಭಕ್ತಿಗಳು ತುಂಬಿರುತ್ತವೆ. ನಂದಿಯು ಬೇಡವೆಂದು ತಡೆದರೂ ಅವನಿಗೆ ಸ್ವಲ್ಪವೂ ಕೋಪವು

ಸೂಚನೆಯಂತೆ ನಾರದರು ಪರ್ವತರಾಜನ ಕುವರಿಯಾದ ಪಾರ್ವತಿಯ ಬಳಿ ತೆರಳುತ್ತಾರೆ.

## ನಾರದರಿಗೂ ಹಿಮವಂತನಿಗೂ ಭೇಟಿ

ನಾರದರ ಆಗಮನವನ್ನು ಕಂಡು ಹಿಮವಂತನಿಗೆ ಎಲ್ಲಿಲ್ಲದ ಆಶ್ಚರ್ಯ ಸಂತೋಷಗಳು ಉಂಟಾಗುತ್ತವೆ. ದಂಪತಿಗಳು ಭಕ್ತಿಯಿಂದ ನಮಿಸುತ್ತಾರೆ. ಮಗಳಾದ ಪಾರ್ವತಿಯೂ ಕೂಡ ಭಕ್ತಿಯಿಂದ ನಮಸ್ಕಾರ ಮಾಡುತ್ತಾಳೆ. ಅನಂತರ ತನ್ನ ಕುಮಾರಿಯ ಬಗ್ಗೆ ಭವಿಷ್ಯವಚನವನ್ನು ನುಡಿಯಬೇಕೆಂದು ಪರ್ವತರಾಜನು ನಾರದರ ಬಳಿ ಪ್ರಶ್ನಿಸುತ್ತಾನೆ.

ನಾರದರು ಆಗ ಪರ್ವತರಾಜನನ್ನು ಕುರಿತು ಹೀಗೆ ಹೇಳಿದರು -

''ಚರಣೌ ಪದ್ಮಸಂಕಾಶೌ ಸ್ವಚ್ಛಾವಸ್ಯ ನಖೋಜ್ವಲೌ ।
ಸುರಾಸುರಾಣಾಂ ನಮತಾಂ ಕಿರೀಟಮಣಿಕಾಂತಿಭಿಃ
ವಿಚಿತ್ರವರ್ಣೈಃ ಪಶ್ಯದ್ಭಿಃ ಸುಚ್ಛಾಯೌ ಪ್ರತಿಬಿಂಬಿತೌ ।
ಏಷಾ ಭಾರ್ಯಾ ಜಗದ್‌ಭರ್ತುಃ ಪ್ರಶಾಂತಸ್ಯ ಮಹೀಧರ ।
ಜನನೀ ಸರ್ವಲೋಕಸ್ಯ ಸಂಭೂತಾ ಭೂತಭಾವಿನೀ ಶಿವೇಯಂ .....॥''

ನಿನ್ನ ಮಗಳು ಸಾಮಾನ್ಯಳಲ್ಲ. ದೇವತೆಗಳೂ ಕೂಡ ಇವಳನ್ನು ನಮಿಸುತ್ತಾರೆ. ದೇವತೆಗಳ ಕಿರೀಟಗಳ ಸಾಲಿನ ಮಧ್ಯದಲ್ಲಿ ಇವಳ ಚರಣಕಮಲಗಳು ಕಂಗೊಳಿಸುತ್ತವೆ. ಆ ಕಿರೀಟಗಳ ರತ್ನಗಳಲ್ಲಿ ಇವಳ ಕಾಲುಗಳು ಪ್ರತಿಬಿಂಬಿತವಾಗುತ್ತವೆ. ಜಗದ್‌ಭರ್ತುವಾದ ಮಹಾದೇವನ ಕೈಹಿಡಿವ ಸೌಭಾಗ್ಯ ನಿನ್ನ ಮಗಳದ್ದಾಗಿದೆ. ಸಮಸ್ತ ಜಗತ್ತಿಗೆ ಮಂಗಳಪ್ರದಳಾಗಿದ್ದಾಳೆ. ಇಂಥ ಮಗಳನ್ನು ಪಡೆದದ್ದು, ಅದೆಷ್ಟೋ ಜನ್ಮಗಳ ಪುಣ್ಯವಾಗಿದೆ. ಹೀಗೆ ಪಾರ್ವತಿಯನ್ನು ಅದ್ಭುತವಾಗಿ ಪ್ರಶಂಸೆ ಮಾಡುತ್ತಾರೆ.

ಪರ್ವತರಾಜನ ಪ್ರಶ್ನೆಯಂತೆ ನಾರದರು ಉತ್ತರಿಸುತ್ತಾ, ರುದ್ರದೇವರು ಪಾರ್ವತಿಯನ್ನು ವರಿಸುವುದಕ್ಕಾಗಿಯೇ ಹಿಮಾಲಯದಲ್ಲಿ ಕುಳಿತು ತಪಸ್ಸನ್ನು

ಆಚರಿಸುತ್ತಿದ್ದಾರೆ. ದಕ್ಷಾಧ್ವರಪ್ರಸಂಗದಲ್ಲಿ ತನ್ನ ಸತಿಯು ಪ್ರಾಣತ್ಯಾಗ ಮಾಡಿದ ವಿಚಾರವನ್ನು ಕೇಳಿ, ದುಃಖಿತರಾಗಿ ರುದ್ರದೇವರು ಪುನಃ ಅವಳೇ ನನ್ನ ಹೆಂಡತಿಯಾಗಬೇಕು ಎಂಬ ಉದ್ದೇಶದಿಂದ ನಿನ್ನ ತಪ್ಪಲಿನಲ್ಲಿಯೇ ತಪಸ್ಸನ್ನು ಮಾಡುತ್ತಿದ್ದಾರೆ. ಅವರಿಗೆ ನಿನ್ನ ಮಗಳು ಪತ್ನಿಯಾಗುತ್ತಾಳೆ ಎಂಬ ವಿಚಾರವು ಪೂರ್ಣವಾಗಿ ತಿಳಿದಿದೆ. ಆದ್ದರಿಂದ ಆ ರುದ್ರದೇವರನ್ನು ಪ್ರಸನ್ನಗೊಳಿಸುವುದು ನಿನ್ನ ಮುಖ್ಯಕರ್ತವ್ಯವಾಗಿದೆ. ಜಗತ್‌ಭರ್ತೃಗಳಾದ ರುದ್ರದೇವರು ನಿನ್ನ ಸ್ಥಳದಲ್ಲಿ ತಪಸ್ಸನ್ನು ಆಚರಿಸುತ್ತಿರುವುದು ನಿನ್ನ ಸೌಭಾಗ್ಯವಾಗಿದೆ. ಪಾರ್ವತಿ ಪರಮೇಶ್ವರರಿಬ್ಬರಿಗೂ ವಿವಾಹವನ್ನು ಮಾಡಿಸಿ, ಸಮಸ್ತ ಜಗತ್ತಿಗೆ ಮಂಗಳವನ್ನು ಉಂಟುಮಾಡುವ ಮಹಾಪುಣ್ಯ ನಿನ್ನನ್ನು ಕಾಯುತ್ತಿದೆ. ತಡಮಾಡದೇ ಮಹಾದೇವನನ್ನು ಸಮೀಪಿಸಿ, ಆರಾಧನೆಗೈದು, ತೃಪ್ತಿಪಡಿಸಿ ನಿನ್ನ ಮಗಳನ್ನು ವಿವಾಹ ಮಾಡಿಕೊಡು. ಹೀಗೆ ಮಾರ್ಗದರ್ಶವನ್ನು ಮಾಡಿ, ನಾರದರು ಅಲ್ಲಿಂದ ಹೊರಡುತ್ತಾರೆ.

ನಾರದರ ಮಾರ್ಗದರ್ಶನದಂತೆ ಹಿಮವಂತನು ಮಹಾದೇವನನ್ನು ಭೇಟಿ ಮಾಡಿದನು.

ಅದೊಂದು ಸುಮುಹೂರ್ತಕಾಲದಲ್ಲಿ ಗಿರಿರಾಜನು ತನ್ನ ಮಗಳನ್ನು ಕರೆದುಕೊಂಡು ಶಿಖರಶ್ರೇಣಿಯಲ್ಲಿ ತಪಗೈಯ್ಯುತ್ತಿರುವ ಮಹಾದೇವರ ದರ್ಶನಕ್ಕೆ ತೆರಳುತ್ತಾನೆ. ಗಂಗಾಧರನಾಗಿ, ಜಟಾಜೂಟನಾಗಿ ಸರ್ಪಾಭರಣಭೂಷಿತನಾಗಿ, ತಪೋಮುದ್ರೆಯನ್ನು ಧರಿಸಿ, ಜಪಮಾಲೆಯನ್ನು ಹಿಡಿದು, ಅರ್ಧೋನ್ಮೀಲಿತನಯನನಾಗಿ ಹೃದಯಕಮಲದಲ್ಲಿ ಭಗವಂತನನ್ನೇ ತದೇಕಾಗ್ರಮನಸ್ಸಿನಿಂದ ಕಾಣುತ್ತಾ ತಪಸ್ಸಿನಲ್ಲಿ ನಿರತರಾದ ಮಹಾದೇವರನ್ನು ಸಂದರ್ಶನ ಮಾಡಲು ಬಯಸುತ್ತಾನೆ. ಆದರೆ ಗುಹೆಯ ದ್ವಾರದಲ್ಲಿ ನಂದಿಯು ಆ ಹಿಮವಂತನನ್ನು ತಡೆಯುತ್ತಾನೆ. ಬಂದ ಮಾತ್ರಕ್ಕೆ ರುದ್ರದೇವರ ದರ್ಶನ ಇವನಿಗಾಗುವುದಿಲ್ಲ.

ರುದ್ರದೇವರ ಶ್ರೇಷ್ಠತೆಯನ್ನು ಅರಿತ ಹಿಮವಂತನಿಗೆ ಎಲ್ಲಿಲ್ಲದ ವಿನಯಭಕ್ತಿಗಳು ತುಂಬಿರುತ್ತವೆ. ನಂದಿಯು ಬೇಡವೆಂದು ತಡೆದರೂ ಅವನಿಗೆ ಸ್ವಲ್ಪವೂ ಕೋಪವು

ಬರುವುದಿಲ್ಲ. ಕ್ಷಣಮಾತ್ರ ಸ್ತಬ್ಧನಾಗಿ ನಿಲ್ಲುತ್ತಾನೆ. ಪುನಃ ನಂದಿಯ ಬಳಿ ಪ್ರಾರ್ಥಿಸುತ್ತಾನೆ. ಆಗ ನಂದಿಯು ರುದ್ರದೇವರ ಅಣತಿಯನ್ನು ಪಡೆದು, ಮಹಾರುದ್ರದೇವರ ದರ್ಶನಕ್ಕೆ ಅನುಕೂಲ ಮಾಡಿಕೊಡುತ್ತಾನೆ.

## ರುದ್ರದೇವರನ್ನು ಕಂಡ ಹಿಮಾಚಲನಿಗೆ ಯಾವ ಭಾವ ಮೂಡಿತು?

ಕಪರ್ದಿನಂ ಚಂದ್ರಕಲಾವಿಭೂಷಣಂ ವೇದಾಂತವೇದ್ಯೇ ಪರಮಾತ್ಮನಿಶ್ಚಿತಂ ।
ವವಂದ ಶೀರ್ಷ್ಣಾ ಚ ತದಾ ಹಿಮಾಚಲಃ ಪರಾಂ ಮುದಾಮಾಪ್ಯದಹೀನಸತ್ವಃ ॥

ನಾರಿನ ತೊಗಲನ್ನು ಉಟ್ಟ, ಚಂದ್ರಕಲೆಯನ್ನು ಶಿರದಲ್ಲಿ ಧರಿಸಿದ, ಸಮಸ್ತ ವೇದಪ್ರತಿಪಾದ್ಯನಾದ ಪರಮಾತ್ಮನಲ್ಲೇ ನೆಟ್ಟ ಮನಸ್ಸುಳ್ಳ, ಆ ರುದ್ರದೇವರನ್ನು ಕಂಡು ದೂರದಿಂದಿಲೇ ಸಾಷ್ಟಾಂಗ ನಮಿಸಿದನು. ಆ ಹಿಮಾಚಲನ ಮನಸ್ಸು ಅತ್ಯಂತ ಪ್ರಫುಲ್ಲವಾಯಿತು. ತನ್ನ ಜೀವನವೇ ಧನ್ಯವೆಂಬ ಭಾವ ಮೂಡಿತು.

ಮಹಾದೇವರೇ ! ನಾನೇ ಧನ್ಯ ! ನಿಮ್ಮ ದಿವ್ಯದರ್ಶನದಿಂದ ಈ ಹಿಮವಂತ ಇಂದು ಭಾಗ್ಯವಂತನಾಗಿದ್ದಾನೆ.

'ಸಭಾಗ್ಯೋಽಹಂ ಮಹದೇವ ಪ್ರಸಾದಾತ್ ತವ ಶಂಕರ ।
ಪ್ರತ್ಯಹಂ ಚಾಗಮಿಷ್ಯಾಮಿ ದರ್ಶನಾರ್ಥಂ ತವ ಪ್ರಭೋ ॥'

ಪ್ರತಿನಿತ್ಯ ತಮ್ಮ ದರ್ಶನಕ್ಕಾಗಿ ನಾನು ಆಗಮಿಸುವೆ. ತಮ್ಮ ಆರಾಧನೆಗೈದು ಧನ್ಯನಾಗುವೆ. ನನ್ನ ಜೊತೆ ನನ್ನ ಮಗಳಾದ ಪಾರ್ವತಿಯೂ ಕೂಡ ತಮ್ಮ ದರ್ಶನಕ್ಕಾಗಿ ಆಗಮಿಸುವಳು.

ಪರ್ವತೇಂದ್ರನೇ ! ನನ್ನ ದರ್ಶನಕ್ಕೆ ಬರಲು ನಿನಗೆ ಯಾವ ಅಭ್ಯಂತರವೂ ಇಲ್ಲ. ಆದರೆ ನಿನ್ನ ಮಗಳು ಮಾತ್ರ ಬರುವುದು ಬೇಡ. ಇದು ತಪೋಭೂಮಿ. ಹೆಣ್ಣುಮಕ್ಕಳಿಗೆ ಇಲ್ಲಿ ಅವಕಾಶವಿರುವುದಿಲ್ಲ. ಅದರಲ್ಲೂ ನಿನ್ನ ಮಗಳು

ಸೌಂದರ್ಯಶಾಲಿನೀ, ಮಧುರಭಾಷಿಣಿಯಾಗಿರುವಳು. ಆದ್ದರಿಂದ ಇವಳನ್ನು ನೀನು ಕರೆದುಕೊಂಡು ಬರಬಾರದು. ನೀನೊಬ್ಬನೇ ಬಂದು ದರ್ಶನ ಮಾಡಿ ತೆರಳಬೇಕು.

## ರುದ್ರದೇವರನ್ನು ಮಾತನಾಡಿಸಿದ ಧೀರೆ

ಆಗ ಮುಗ್ಧ ಬಾಲೆಯಾದ ಪಾರ್ವತಿಯು ಧೈರ್ಯವಾಗಿಯೇ ಮಹಾದೇವರ ಬಳಿ ಪ್ರಾರ್ಥಿಸುತ್ತಾಳೆ. ದೇವೋತ್ತಮರೇ ! ತಾವು ತಪಸ್ಸನ್ನು ಆಚರಿಸುತ್ತಿದ್ದೀರಿ. ತಪಃಶಕ್ತಿ ಸಂಪನ್ನರೂ ಆಗಿರುತ್ತೀರಿ. ಈ ತಪೋನುಷ್ಠಾನಕ್ಕೆ ವಿಘ್ನ ಬರುತ್ತದೆಂಬ ಕಾರಣಕ್ಕಾಗಿ ನನ್ನನ್ನು ಬರಬಾರದೆಂದು ನಿಷೇಧ ಮಾಡುತ್ತಿದ್ದೀರಿ. ಅರ್ಥಾತ್ ಪ್ರಕೃತಿಯ ಬಂಧನದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲವೆಂಬ ಚಿಂತೆ ನಿಮಗಿದೆ ಅಲ್ಲವೇ? ಆಗ ಮಹಾದೇವರು ಆ ಪಾರ್ವತಿಗೆ ಉತ್ತರಿಸುತ್ತಾರೆ. ಕಲ್ಯಾಣಿಯೇ! ಪ್ರಕೃತಿಯೆಂದರೆ ಮಾಯೇ ! ಆ ಪ್ರಕೃತಿಯನ್ನು ಗೆಲ್ಲಬೇಕೆಂಬ ಉದ್ದೇಶದಿಂದಲೇ ನಾನು ತಪೋನಿರತನಾಗಿದ್ದೇನೆ. ಆದಕ್ಕೆ ವಿಘ್ನ ಬರುತ್ತದೆಂಬ ಕಾರಣಕ್ಕಾಗಿಯೇ ನಿನಗೆ ಇಲ್ಲಿ ಬರಲು ಅವಕಾಶವಿರುವುದಿಲ್ಲ.

ಆಗ ಪಾರ್ವತಿಯು ಪ್ರತ್ಯುತ್ತರ ನೀಡಿದಳು

ಯದುಕ್ತಂ ಪರಯಾ ವಾಚಾ ವಚನಂ ಶಂಕರ ! ತ್ವಯಾ ।
ಸಾ ಕಿಂ ಪ್ರಕೃತಿರ್ನೈವ ಸ್ಯಾದತೀತಸ್ತಾಂ ಭವಾನ್‌ಕಥಮ್ ॥
ಯಚ್ಛೃಣೋಷಿ ಯದಶ್ನಾಸಿ ಯಚ್ಚ ಪಶ್ಯಸಿ ಶಂಕರ ! ।
ವಾಗ್ವಾದೇನ ಚ ಕಿಂ ಕಾರ್ಯಮಸ್ಮಾಕಂ ಚಾಧುನಾ ಪ್ರಭೋ ! ॥

ಉತ್ತಮವಾದ ವಾಣಿಯಿಂದ ನೀವು ಏನನ್ನು ಹೇಳಿದ್ದೀರೋ, ಅದೂ ಕೂಡ ಪ್ರಕೃತಿಯಲ್ಲವೇ? ಹೀಗಿರುವಾಗ ಪ್ರಕೃತಿಯಿಂದ ತಾವು ಅತೀತರು ಹೇಗಾಗುತ್ತೀರಿ? ಈ ಸಂಪೂರ್ಣವಾದ ವಿಶ್ವವು ಪ್ರಕೃತಿಯಿಂದಲೇ ಆವೃತವಾಗಿವೆ. ಪ್ರಕೃತಿಯ ಅಧಿ ೕನವಾಗಿಯೇ, ಕೇಳುವಿಕೆ, ನೋಡುವಿಕೆ, ತಿನ್ನುವಿಕೆ, ಕುಡಿಯುವಿಕೆ ಮೊದಲಾದ ಎಲ್ಲಾ

ಕಾರ್ಯಗಳು ನಡೆಯುತ್ತವೆ. ಹೀಗಿರುವಾಗ ತಾವು ಪ್ರಕೃತಿಯಿಂದ ಅತೀತರಾಗಲು ಹೇಗೆ ಸಾಧ್ಯ ? ಮತ್ತು ಪ್ರಕೃತಿಯನ್ನು ಮೀರಿದ ಮೇಲೆ ನಾನು ಈ ಆಶ್ರಮಕ್ಕೆ ಬಂದರೆ ಯಾವ ತಪ್ಪಿದೆ ? ಎಂದು ಹೇಳಿ ತಾನು ಹೆಚ್ಚು ಮಾತನಾಡುವುದಿಲ್ಲ. ಸ್ತ್ರೀಯರಿಗೆ ಹೆಚ್ಚು ಮಾತನಾಡುವುದು ಭೂಷಣವಲ್ಲ ಎಂಬುದಾಗಿ ವಿನಯಪೂರ್ವಕವಾಗಿ ತನ್ನ ಮಾತನ್ನು ಮುಗಿಸುತ್ತಾಳೆ. ಅವಳ ಮಾತಿಗೆ ಒಪ್ಪಿದ ಮಹಾದೇವರು ತಂದೆಯ ಜೊತೆ ನೀನೂ ಕೂಡ ಪ್ರತಿನಿತ್ಯ ದರ್ಶನಕ್ಕೆ ಬರಬಹುದೆಂದು ಒಪ್ಪಿಗೆಯನ್ನು ನೀಡುತ್ತಾರೆ.

ಗಿರಿಜೆಯ ಕೈಯನ್ನು ಹಿಡಿಯಬಹುದೆಂಬ ಉದ್ದೇಶದಿಂದ ಪರ್ವತರಾಜನು ಮಾಡಿದ ಈ ಉಪಾಯವು ವ್ಯರ್ಥವಾಯಿತು. ಅನೇಕ ದಿವಸಗಳ ಕಾಲ ಅವಳು ತೆರಳಿ ದರ್ಶನವನ್ನು ಮಾಡಿದರೂ, ಒಮ್ಮೆಯೂ ಪಾರ್ವತಿಯನ್ನು ಮಹಾದೇವರು ಕಣ್ಣೆತ್ತಿಯೂ ನೋಡುವುದಿಲ್ಲ, ಮಾತನಾಡುವುದೂ ಇಲ್ಲ. ಹೀಗಿರುವಾಗ ಅವಳ ಮೇಲೆ ಅನುರಾಗವಂತು ದೂರತೋಪಾಸ್ತ. ಇದನ್ನೆಲ್ಲಾ ಗಮನಿಸಿದ ಪರ್ವತರಾಜನಿಗೆ ಬಹಳ ಚಿಂತೆಯೇ ಪ್ರಾರಂಭವಾಯಿತು. ಮಗಳ ವಿವಾಹ ಹೇಗೆ ಎಂಬ ಭಯವುಂಟಾಯಿತು. ಹಿಮವಂತರಾಜನಿಗೆ ಅಷ್ಟೇ ಅಲ್ಲದೇ, ಇಂದ್ರಾದಿದೇವತೆಗಳಿಗೆ, ಸಪ್ತಋಷಿಗಳಿಗೂ ಕೂಡ ಪಾರ್ವತಿ ಪರಮೇಶ್ವರರ ವಿವಾಹ ಯಾವಾಗ ಆಗುತ್ತದೆ ಎಂಬ ಚಿಂತೆ ಕಾಡಲು ಪ್ರಾರಂಭಿಸಿತು.

ಹೀಗಿರುವಾಗ ಇಂದ್ರದೇವರು ಮನ್ಮಥನನ್ನು ಕರೆಸಿ ಅವನ ಸಹಾಯದಿಂದ ರುದ್ರದೇವರಿಗೆ ಪಾರ್ವತಿಯ ಮೇಲೆ ಅನುರಾಗವನ್ನು ಮೂಡಿಸುವಂತೆ ಪ್ರಯತ್ನವನ್ನು ಪಡುತ್ತಾರೆ. ಆದರೆ ಮನ್ಮಥನು ಮಹಾರುದ್ರದೇವರ ತಪೋಭಂಗವನ್ನು ಮಾಡಲು ಪ್ರಯತ್ನವನ್ನು ಪಟ್ಟು ತಾನೇ ಭಸ್ಮವಾಗಿ ಹೋಗುತ್ತಾನೆ. ಪಾರ್ವತಿಯ ಮೇಲೆ ಅನುರಾಗವುಂಟಾಗಿ ವಿವಾಹವನ್ನು ಮಾಡಿಸಲು ಅಸಮರ್ಥನಾಗುತ್ತಾನೆ. ಮನ್ಮಥನು ಭಸ್ಮನಾದ ಮೇಲೆ ಅವನ ಪತ್ನಿಯಾದ ರತಿದೇವಿಯು ರುದ್ರದೇವರನ್ನು ದೀನಳಾಗಿ ಪ್ರಾರ್ಥಿಸುತ್ತಾಳೆ. ಪಾತಿವ್ರತ್ಯದ ಸಿದ್ಧಿಗಾಗಿ ಮಂತ್ರವೊಂದನ್ನು ಪಠಿಸುತ್ತಾಳೆ. ಆದಕ್ಕೆ ಒಲಿದ ರುದ್ರದೇವರು ಅವಳಿಗೆ ಮಾಂಗಲ್ಯಸೌಭಾಗ್ಯವನ್ನು ಕರುಣಿಸುತ್ತಾರೆ. ಹಾಗೂ

ಅನಂಗನಾಗಿಯೇ ಮನ್ಮಥನು ಜನಿಸುತ್ತಾನೆ. ಅವನ ಮಡದಿಯಾಗಿ ನೀನು ಸಂತೋಷವಾಗಿರು ಎಂಬುದಾಗಿ ಅನುಗ್ರಹಿಸಿ, ಯಾವ ಸ್ಥಳದಲ್ಲಿ ತಪಸ್ಸನ್ನು ಆಚರಿಸುತ್ತಿದ್ದರೋ, ಅಲ್ಲಿಂದ ಹೊರಟು ಹೋಗುತ್ತಾರೆ. ಏನೇ ಆದರೂ ಪಾರ್ವತಿಯನ್ನು ವಿವಾಹ ಮಾಡಿಕೊಳ್ಳುವ ಇಚ್ಛೆಯನ್ನು ಲವಲೇಶವೂ ಕೂಡ ಮಾಡುವುದಿಲ್ಲ. ಇದರಿಂದ ದೇವತೆಗಳಿಗೆ ಮತ್ತಷ್ಟು ಚಿಂತೆ ಪ್ರಾರಂಭವಾಗುತ್ತದೆ.

## ವಿವಾಹಕ್ಕಾಗಿ ಪಾರ್ವತಿಯ ತಪಸ್ಸು

ಎಲ್ಲಾ ದೇವತೆಗಳು ಮನ್ಮಥನನ್ನು ಮುಂದೆ ಮಾಡಿಕೊಂಡು, ರುದ್ರದೇವರನ್ನು ಗೆಲ್ಲಲು ಸೋತು ಹೋದರು. ಮನ್ಮಥನೇ ಸುಟ್ಟುಭಸ್ಮನಾಗಿ ಅನಂಗನಾದನು. ಹೀಗಿದ್ದಾಗ ಪಾರ್ವತಿಯ ವಿಷಯದಲ್ಲಿ ರುದ್ರದೇವರಿಗೆ ಅನುರಾಗ ಮೂಡುವುದು ಬಹಳ ಕಠಿಣವೆಂದು ಎಲ್ಲಾ ದೇವತೆಗಳು ಚಿಂತಾಕ್ರಾಂತರಾದರು. ಆ ಸಂದರ್ಭದಲ್ಲಿ ತಪಸ್ಸಿನಿಂದಷ್ಟೇ ರುದ್ರದೇವರನ್ನು ಗೆಲ್ಲಲು ಸಾಧ್ಯ ಎಂದು ಪಾರ್ವತಿಯು ನಿಶ್ಚಲವಾದ ಮನಸ್ಸನ್ನು ಮಾಡಿದಳು.

ಜಗನ್ಮಾತೆಯಾದ ಪಾರ್ವತಿಯ ತಪಸ್ಸಿಗೆ ವಿಘ್ನ ಮಾಡುವವರು ಯಾರೂ ಇಲ್ಲ. ಆದರೆ ಬಂಧುಗಳ ಅಂತಃಕರಣ ಪ್ರೀತಿಗಳೇ ವಿಘ್ನವಾಗಿ ಬಂದವು. ಪಾರ್ವತಿಯ ತಂದೆ, ತಾಯಿ ಬಂಧು-ಬಳಗದವರು ಕಠಿಣವಾದ ತಪಸ್ಸನ್ನು ಆಚರಿಸಬೇಡವೆಂದು ತಡೆದರು. ಆದರೆ ಅವರ ಮಾತಿಗೆ ಪಾರ್ವತಿಯು ಹೀಗೆ ಉತ್ತರಿಸಿದಳು -

'ನಾಗಚ್ಛಾಮಿ ಗೃಹಂ ಮಾತಾಸ್ತಾತ ! ಮೇ ಶ್ರುಣು ತತ್ವತಃ' ನಾನು ಸರ್ವಥಾ ಮನೆಗೆ ಬರುವುದಿಲ್ಲ. ತಪಸ್ಸನ್ನು ಮಾಡಿ, ರುದ್ರದೇವರನ್ನು ಪ್ರಸನ್ನೀಕರಿಸಿಕೊಳ್ಳುವುದು ನಿಶ್ಚಯ. ಇದರಲ್ಲಿ ಸಂಶಯವಿಲ್ಲ. ಮನೆಗೆ ಬರಬೇಕೆಂದು ತಾವು ಸರ್ವಥಾ ಹೇಳಬೇಡಿರಿ.

ಪಾರ್ವತಿಯ ತಂದೆಯಾದ ಹಿಮವಂತನು ಮನೆಗೆ ಬರಬೇಕೆಂದು ಪರಿಪರಿಯಾಗಿ ಹೇಳುತ್ತಲೇ ಇದ್ದನು. ತಾಯಿಯಂತು ಬಿಕ್ಕಿ-ಬಿಕ್ಕಿ ಅತ್ತಳು. ನೀನಿನ್ನೂ

ಸಣ್ಣ ಹುಡುಗಿ, ನೀನಿಲ್ಲಿ ತಪಸ್ಸಿಗೆ ಕುಳಿತರೆ ನಾವು ಹೇಗೆ ತಾನೇ ಬದುಕಬೇಕೆಂದು ಗೋಳಾಡಿದರು. ಆದ್ದರಿಂದಲೇ ಪಾರ್ವತಿಗೆ ಉಮಾ ಎಂಬ ಹೆಸರು ರೂಢಿಗೆ ಬಂದಿತು. 'ಮಾ' ಎಂದರೆ ಬೇಡ ಎಂದರ್ಥ. 'ಉ' ಎಂದರೆ ನಿಶ್ಚಯ ಎಂದರ್ಥ. 'ನಿಶ್ಚಯವಾಗಿ ನೀನು ತಪಸ್ಸಿಗೆ ಕುಳಿತುಕೊಳ್ಳಬೇಡ' ಎಂದು ಪಾರ್ವತಿಯ ತಂದೆ-ತಾಯಂದಿರು ಹೇಳಿದ್ದರಿಂದಲೇ ಅವಳಿಗೆ 'ಉಮಾ' ಎಂಬ ಹೆಸರು ಬಂದಿತು. ವಾಸ್ತವಿಕವಾಗಿ ಜಗತ್ತಿಗೆ ಮಾತೆಯಾದ್ದರಿಂದ ಅವಳಿಗೆ ಉಮಾ ಎಂಬ ಹೆಸರು ಸಾರ್ಥಕವಾಗಿದೆ. 'ಉ' ಶಬ್ದಕ್ಕೆ ಉತ್ಕೃಷ್ಟಳಾದವಳು ಎಂದರ್ಥ. 'ಮಾ' ಎಂದರೆ ತಾಯಿಯಾದವಳು ಎಂದರ್ಥ.

ಪಾರ್ವತಿಯ ಸೇವೆಗಾಗಿ ಅನೇಕ ಸಖಿಯರು ಇದ್ದರು. ಜಯಾ, ವಿಜಯಾ, ಮಾಧವೀ, ಸುಲೋಚನಾ, ಸುಶ್ರುತಾ, ಶ್ರುತಾ, ಸುಖೀಪರ, ಪ್ರಮ್ಲೋಚ, ಸುಭಗಾ, ಶ್ಯಾಮಾ, ಚಿತ್ರಾಂಗೀ, ಆರುಣೀ, ಸ್ವಧಾ ಹೀಗೆ ಅನೇಕ ಸಖಿಯರು ಪಾರ್ವತಿಯನ್ನು ಸೇವಿಸುತ್ತಿದ್ದರು.

ಪಾರ್ವತಿಯು ತ್ರಿಕಾಲದಲ್ಲಿಯೂ ಶಿವನನ್ನು ಅರ್ಚಿಸುತ್ತಿದ್ದಳು. ಉಳಿದ ಸಮಯದಲ್ಲಿ ಶಿವಮಂತ್ರವನ್ನು ನಿರಂತರ ಜಪಿಸುತ್ತಿದ್ದಳು.

ಪ್ರಾರಂಭದಲ್ಲಿ ಒಮ್ಮೆ ಮಾತ್ರ ಆಹಾರವನ್ನು ಸ್ವೀಕಾರ ಮಾಡುತ್ತಿದ್ದಳು. ಅನಂತರ ಹಣ್ಣು-ಹಂಪಲುಗಳನ್ನಷ್ಟೇ ಒಮ್ಮೆ ತಿನ್ನುತ್ತಿದ್ದಳು. ಕೆಲವು ದಿವಸಗಳು ಕಳೆದ ಮೇಲೆ ಒಣಗಿದ ಎಲೆಗಳನ್ನಷ್ಟೇ ತಿನ್ನುತ್ತಿದ್ದಳು.

'ಶುಷ್ಕಾಣಿ ಚ ಪರ್ಣಾನಿ ನಾಶಿತಾನಿ ತಯಾ ಯದಾ ।
ಅಪರ್ಣೇತಿ ಚ ವಿಖ್ಯಾತಾ ಬಭೂವ ತನುಮಧ್ಯಮಾ'

ಕೆಲವು ದಿವಸಗಳು ಕಳೆದ ಮೇಲೆ ಎಲೆಗಳನ್ನೂ ಕೂಡ ಬಿಟ್ಟಳು. ಆದ್ದರಿಂದಲೇ ಅವಳಿಗೆ ಅಪರ್ಣಾ ಎಂಬ ಹೆಸರು ಬಂದಿತು. ಕೇವಲ ಗಾಳಿಯನ್ನಷ್ಟೇ ಸ್ವೀಕಾರ ಮಾಡುತ್ತಿದ್ದಳು. ಕೆಲವು ದಿವಸಗಳು ಕಳೆದ ಮೇಲೆ ಗಾಳಿಯನ್ನೂ ಕೂಡ ಸ್ವೀಕರಿಸದೇ

ತಪಸ್ಸನ್ನು ಮಾಡಲು ಪ್ರಾರಂಭಿಸಿದಳು. ಅನಂತರ ಒಂದೇ ಕಾಲಿನಲ್ಲಿ ನಿಂತು ತಪಸ್ಸನ್ನು ಮಾಡುತ್ತಿದ್ದಳು. ಹೀಗೆ ಅವಳ ತಪಸ್ಸನ್ನು ಕಠಿಣಾತಿಕಠಿಣತಮ ಆಗಿತ್ತು. ನೀರಜಾಕ್ಷಿಯ ಆ ನಿರಾಹಾರದ ತಪಸ್ಸು ಅಲ್ಲಿರುವ ಪರಿಸರದ ಪುಣ್ಯಾಶ್ರಮದಲ್ಲಿದ್ದ ವಯೋವೃದ್ಧ, ತಪೋವೃದ್ಧರೆಲ್ಲರೂ ಬೆರಗಾಗಿ ನೋಡುತ್ತಿದ್ದರು. ಬಲಗಾಲಿನ ಹೆಬ್ಬೆರಳಿನಲ್ಲಿ ನಿಂತು ತಪಸ್ಸನ್ನು ಮಾಡುತ್ತಿದ್ದಳು. 'ಏವಂ ದಿವ್ಯಸಹಸ್ರಾಣಿ ವರ್ಷಾಣಿ ಚ ತತಾಪ ವೈ' ಹೀಗೆ ಒಂದುಸಾವಿರ ವರ್ಷಗಳ ಕಾಲ ಪಾರ್ವತಿಯು ತಪಸ್ಸನ್ನು ಮಾಡಿದಳು.

## ಪಾರ್ವತಿಯ ಕಠಿಣವಾದ ತಪಸ್ಸಿನ ಪರಿಣಾಮ

ಜಗತ್ತೇ ಸಂತಪ್ತವಾಯಿತು. ದೇವತೆಗಳೆಲ್ಲರೂ ಬ್ರಹ್ಮದೇವರ ಬಳಿ ಹೋಗಿ ಶರಣಾಗತರಾದರು. ಆಗ ಬ್ರಹ್ಮದೇವರು ಎಲ್ಲ ದೇವತೆಗಳನ್ನು ಕರೆದುಕೊಂಡು, ಕ್ಷೀರಸಾಗರ ಸಮೀಪಕ್ಕೆ ತೆರಳಿದರು. ವೇದಮಂತ್ರಗಳಿಂದ ಮಹಾವಿಷ್ಣುವನ್ನು ಸ್ತೋತ್ರ ಮಾಡಿದರು. ದೇವತೆಗಳ ಸ್ತೋತ್ರದಿಂದ ಪ್ರಸನ್ನನಾದ ಶ್ರೀಹರಿಯು ಕಾರುಣ್ಯಪೂರ್ಣವಾದ ದೃಷ್ಟಿಯಿಂದ ಅನುಗ್ರಹ ಮಾಡಿದನು.

'ಜ್ಞಾತ್ವಾ ಬ್ರಹ್ಮಾ ಜಗಾಮಾಽಽಶು ಕ್ಷೀರಾಬ್ಧಿಂ ಪರಮಾದ್ಭುತಮ್ ।
ತತ್ರ ಸುಪ್ತಂ ಸುಪರ್ಯಂಕೇ ಶೇಷಾಖ್ಯೇ ಚಾತಿಶೋಭನೇ ।
ಲಕ್ಷ್ಮ್ಯಾ ಪಾದೋಪಯುಗಲಂ ಸೇವ್ಯಮಾನಂ ನಿರಂತರಮ್ ॥
ದೂರ ಸ್ಥೇನಾಽಪಿ ತಾರ್ಕ್ಷ್ಯೇಣ ನತಕಂಧರಧಾರಿಣಾ ।
ಸೇವ್ಯಮಾನಂ ಶ್ರಿಯಾ ಕಾಂತ್ಯಾ ಕ್ಷಾಂತ್ಯಾ ವೃತ್ಯಾ ದಯಾದಿಭಿಃ ॥
ನವಶಕ್ತಿಯುತಂ ವಿಷ್ಣುಂ ಪಾರ್ಷದೈಃ ಪರಿವಾರಿತಮ್ ।
ಕುಮುದೋಽಥ ಕುಮುದ್ವಾಂಶ್ಚ ಸನಕಶ್ಚ ಸನಂದನಃ ।
ಸನಾತನೋ ಮಹಾಭಾಗಃ ಪ್ರಸುಪ್ತೋ ವಿಜಯೋಽರಿಜಿತ್ ।
ಜಯಂತಶ್ಚ ಜಯತ್ಸೇನೋ ಜಯಶ್ಚೈವ ಮಹಾಪ್ರಭಃ ।
ಸನತ್ಕುಮಾರಃ ಸುತಪಾ ನಾರದಶ್ಚೈವ ತುಂಬುರುಃ ।

ಪಾಂಚಜನ್ಯೋ ಮಹಾಶಂಖೋ ಗದಾಕೌಮೋದಕೀ ತಥಾ ॥
ಸುದರ್ಶನಂ ತಥಾ ಚಾಪಂ ಶಾರ್ಙ್ಗಂ ಚ ಪರಮಾದ್ಭುತಮ್ ।
ಏತಾನಿ ವೈ ರೂಪವಂತಿ ದೃಷ್ಟಾನಿ ಪರಮೇಷ್ಠಿನಾ ॥

ಆ ಕ್ಷೀರಸಾಗರವು ಅತ್ಯದ್ಭುತವಾಗಿದೆ - ಅಲ್ಲಿ ಆಶ್ಚರ್ಯಕರವಾದ ಶೇಷಪರ್ಯಂಕ. ಅದರಲ್ಲಿ ಪರಮಾತ್ಮನು ಪವಡಿಸಿದ್ದಾನೆ. ಅವನ ಕೋಮಲ ಪಾದಗಳನ್ನು ಲಕ್ಷ್ಮೀದೇವಿಯು ಒತ್ತುತ್ತಿದ್ದಾಳೆ. ದೂರದಲ್ಲಿ ಗರುಡನು ತಲೆಬಾಗಿ ಕೈಮುಗಿದು ನಿಂತಿದ್ದಾನೆ. ಸುತ್ತಲೂ ಪಾರ್ಷದರು, ಕುಮುದ, ಕುಮುದ್ವಂತ, ಸನಕ, ಸನಂದನ, ಸನಾತನ, ಪ್ರಸುಪ್ತ, ವಿಜಯ, ಅರಿಜಯ, ಜಯಂತ, ಜಯತ್ಸೇನ, ಜಯ, ಸನತ್‌ಕುಮಾರ, ಸುತಪ, ನಾರದ ತುಂಬುರು ಮೊದಲಾದ ಭಗವತ್ ಪರಿವಾರದವರೆಲ್ಲರೂ ಕೈಮುಗಿದು ನಿಂತಿದ್ದಾರೆ. ಭಗವಂತನ ಕೈಂಕರ್ಯಕ್ಕಾಗಿ ಕಾಯುತ್ತಿದ್ದಾರೆ. ಸುದರ್ಶನಚಕ್ರ , ಪಾಂಚಜನ್ಯ , ಶಂಖ, ಕೌಮೋದಕೀ, ಶಾರ್ಙ್ಗಧನುಸ್ಸು ಕೈಗಳಲ್ಲಿ ಶೋಭಿಸುತ್ತಿವೆ. ಇಂಥ ಭಗವಂತನಿಗೆ ಬ್ರಹ್ಮದೇವರು ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಹೇಳಿದರು.

''ಹೇ ಭಗವನ್ ! ಪಾರ್ವತಿಯು ಉಗ್ರವಾದ ತಪಸ್ಸನ್ನು ಮಾಡುತ್ತಿದ್ದಾಳೆ. ಅದರ ಪ್ರಭಾವದಿಂದ ಸಮಸ್ತಲೋಕವೇ ಸಂತಪ್ತವಾಗಿವೆ. ಅದಕ್ಕಾಗಿ ದೇವತೆಗಳಾದ ನಾವೆಲ್ಲರೂ ಬಂದು ನಿನಗೆ ಶರಣಾಗತರಾಗಿದ್ದೇವೆ''.

ಶೇಷಪರ್ಯಂಕದಿಂದ ಶ್ರೀಹರಿಯು ಮೇಲೆದ್ದು ಕುಳಿತನು. ವಾತ್ಸಲ್ಯಪೂರ್ಣ ದೃಷ್ಟಿಯಿಂದ ಅವರೆಲ್ಲರನ್ನೂ ಅನುಗ್ರಹ ಮಾಡಿದನು. ದೇವತೆಗಳೇ ! ನಾವೆಲ್ಲರೂ ಸೇರಿ, ಆ ರುದ್ರದೇವರ ಬಳಿ ತೆರಳೋಣ. 'ಆ ಹಿಮವಂತನ ಪುತ್ರಿಯಾದ ಪಾರ್ವತಿಯನ್ನು ವಿವಾಹವಾಗು' ಎಂಬುದಾಗಿ ಕೇಳಿಕೊಳ್ಳೋಣ. ಆಗ ರುದ್ರದೇವನು ಒಪ್ಪಿಕೊಂಡು ಖಂಡಿತವಾಗಿಯೂ ಗಿರಿಜೆಯನ್ನು ವಿವಾಹವಾಗುತ್ತಾನೆ ಎಂಬುದಾಗಿ ಅಭಯದಾನವನ್ನು ಮಾಡಿದನು. ಎಲ್ಲ ದೇವತೆಗಳು ವಿಷ್ಣುವಿನ ಜೊತೆ ರುದ್ರದೇವರ ದರ್ಶನಕ್ಕೆ ತೆರಳಿದರು.

ಜಟಾಧಾರಿಯಾದ ರುದ್ರದೇವರು ಅಲ್ಲಿ ಸಮಾಧ್ಯವಸ್ಥೆಯಲ್ಲಿ ಯೋಗಾಸನದಲ್ಲಿ ಕುಳಿತಿದ್ದಾರೆ. ವಕ್ಷಃಸ್ಥಳದಲ್ಲಿ ವಾಸುಕಿಯು ಯಜ್ಞೋಪವೀತ-ವಾಗಿದ್ದಾನೆ. ಕಂಬಲ ಮತ್ತು ಅಶ್ವತರ ಎಂಬೆರಡು ನಾಗಗಳು ಕರ್ಣಕುಂಡಲರಾಗಿದ್ದಾರೆ. ಕರ್ಕೋಟಕ ಹಾಗೂ ಪುಲಹ ಎಂಬೆರಡು ನಾಗಗಳು ತೋಳಿನ ಆಭರಣವಾಗಿದ್ದಾರೆ. ಶಂಖ ಪದ್ಮ ಎಂಬೆರಡು ನಾಗಗಳು ಕೈಯ ಆಭರಣಗಳಾಗಿದ್ದಾರೆ. ಹುಲಿಯ ಚರ್ಮವನ್ನು ಉಟ್ಟಿದ್ದಾರೆ. ಆನೆಯ ತೊಗಲನ್ನು ಹೊದ್ದಿದ್ದಾರೆ. ತಲೆಯಲ್ಲಿ ಗಂಗೆಯನ್ನು ಧರಿಸಿದ್ದಾರೆ. ಜಟೆಯಲ್ಲಿ ಚಂದ್ರನನ್ನು ಧರಿಸಿದ್ದಾರೆ. ಸಮಸ್ತ ದೇಹವು ಕರ್ಪೂರದಂತೆ ಬೆಳ್ಳಗೆ ಶೋಭಿಸುತ್ತಿದೆ. ಕೊರಳು ಕಪ್ಪುಬಣ್ಣದಿಂದ ಕೂಡಿದೆ. ನಂದೀಶ್ವರನು ಎದುರು ಕುಳಿತಿದ್ದಾನೆ.

ಯಜ್ಞೋಪವೀತವಿಧಿನಾ ಉರಸಾ ಬಿಭ್ರತಂ ವೃತಮ್ ।
ವಾಸುಕಿಂ ಸರ್ಪರಾಜಂ ಚ ಕಂಬಲಾಶ್ವತರೌ ತಥಾ ॥
ಕರ್ಣದ್ವಯೇ ಧಾರಯಂತಂ ತಥಾ ಕರ್ಕೋಟಕೇನ ಹಿ ।
ಪುಲಹೇನ ಚ ಬಾಹುಭ್ಯಾಂ ಧಾರಯಂತಂ ಚ ಕಂಕಣೇ ॥
ಸನ್ನೂಪುರೇ ಶಂಖಕಪದ್ಮಕಾಭ್ಯಾಂ ಸಂಧಾರಯಂತಂ ಚ ವಿರಾಜಮಾನಮ್ ।
ಕರ್ಪೂರಗೌರಂ ಶಿತಕಂಠಮದ್ಭುತಂ ವೃಷಾನ್ವಿತಂ ದೇವವರಂ ದದರ್ಶುಃ ॥

ಈ ಶ್ಲೋಕದಲ್ಲಿ ಹೇಳಿದಂತೆ ರುದ್ರದೇವರ ಸ್ವರೂಪವನ್ನು ಧ್ಯಾನ ಮಾಡಬೇಕು.

ತಮ್ಮ ದೂತರ ಮೂಲಕ ದೇವತೆಗಳು ಬಂದ ವಿಷಯ ರುದ್ರದೇವರಿಗೆ ತಿಳಿಯಿತು. ಸಮಾಧ್ಯವಸ್ಥೆಯಿಂದ ಹೊರಬಂದು ಎಲ್ಲಾ ದೇವತೆಗಳನ್ನು ಕುರಿತು ಬಂದ ಕಾರಣವೇನೆಂದು ಕೇಳಿದರು. ಆಗ ದೇವತೆಗಳು ತಾರಕಾಸುರನ ಸಂಹಾರಕ್ಕಾಗಿ ಸುಪುತ್ರನೊಬ್ಬನು ತಮ್ಮಿಂದ ಹುಟ್ಟಬೇಕಾಗಿದೆ. ಅದಕ್ಕಾಗಿ ಪಾರ್ವತಿಯನ್ನು ವಿವಾಹವಾಗಬೇಕೆಂದು ಪ್ರಾರ್ಥನೆ ಮಾಡಿದರು.

ಚತುರ್ಮುಖಬ್ರಹ್ಮದೇವರೂ ಕೂಡ ರುದ್ರದೇವರನ್ನು ಸಂದರ್ಭಕ್ಕನುಗುಣವಾಗಿ ವಿಶೇಷವಾಗಿ ಪ್ರಶಂಸೆ ಮಾಡಿದರು.

ನಮೋ ರುದ್ರಾಯ ದೇವಾಯ ಮದನಾಂತಕರಾಯ ಚ ।
ಭರ್ಗಾಯ ಭೂರಿಭಾಗ್ಯಾಯ ತ್ರಿನೇತ್ರಾಯ ತ್ರಿವಿಷ್ಟಪೇ ॥

ಇತ್ಯಾದಿಯಾಗಿ ಪ್ರಶಂಸೆ ಮಾಡುತ್ತಾ 'ಬ್ರಹ್ಮಾದಯಃ ಸುರಗಣಾಃ' ಎಂಬ ಶ್ಲೋಕದಲ್ಲಿ ಬ್ರಹ್ಮಾದಿ ದೇವತೆಗಳೂ ಕೂಡ ತಮ್ಮ ಅನುಚರರೆಂದು ಪ್ರಶಂಸೆ ಮಾಡಿದ್ದಾರೆ. ಭಾಗವತದ ಪಂಚಮಸ್ಕಂಧದಲ್ಲಿಯೂ ಕೂಡ ಇದೇ ರೀತಿಯ ಶ್ಲೋಕಗಳು ಬರುತ್ತವೆ. ರುದ್ರದೇವರ ಅಂತರ್ಯಾಮಿಯಾದ ಭಗವಂತನನ್ನೇ ಈ ರೀತಿಯಲ್ಲಿ ಸ್ತೋತ್ರ ಮಾಡಿದ್ದಾರೆಂದು ಶ್ರೀಮದಾಚಾರ್ಯರು ನಿರ್ಣಯವನ್ನು ನೀಡಿದ್ದಾರೆ.

ದೇವತೆಗಳ ಪ್ರಾರ್ಥನೆಗೆ ರುದ್ರದೇವರು 'ನಿಮ್ಮ ಮನೋಭೀಷ್ಟೆಯನ್ನು ಸಕಾಲದಲ್ಲಿ ಈಡೇರಿಸುತ್ತೇನೆ, ಚಿಂತೆ ಮಾಡದಿರಿ' ಎಂಬ ಆಶ್ವಾಸನೆಯನ್ನು ನೀಡಿ ಕಳುಹಿಸಿದರು.

## ಪಾರ್ವತಿಯ ತಪಸ್ಸಿಗೆ ಒಲಿದರು ರುದ್ರದೇವರು

ದೇವತೆಗಳು ತೆರಳಿದ ಮೇಲೆ ಸ್ವಲ್ಪ ಕಾಲದಲ್ಲಿಯೇ ಪಾರ್ವತಿಯ ತಪಸ್ಸಿನಿಂದ ರುದ್ರದೇವರಿಗೆ ಮಹದಾನಂದವಾಯಿತು. ಅವಳ ತ್ಯಾಗ ಹಾಗೂ ಭಕ್ತಿಗಳಿಗೆ ವಶರಾದರು. ಅವಳ ಜೊತೆ ವಿನೋದಕ್ಕಾಗಿ ಬ್ರಹ್ಮಚಾರಿಯ ವೇಷವನ್ನು ಧಾರಣೆ ಮಾಡಿ, ಪಾರ್ವತಿಯ ತಪೋಭೂಮಿಗೆ ಆಗಮಿಸಿದರು. ಅವಳ ಪರೀಕ್ಷೆಯ ಉದ್ದೇಶವೂ ಕೂಡ ಬ್ರಹ್ಮಚಾರಿಯ ವೇಷದಲ್ಲಿತ್ತು.

ಬ್ರಹ್ಮಚಾರಿಯಾಗಿ ಬಂದ ರುದ್ರದೇವರು ಪಾರ್ವತಿಯ ಬಳಿ ನೇರವಾಗಿ ಮಾತನಾಡುವುದೇ ಇಲ್ಲ. ಪಾರ್ವತಿಯು ಸಮಾಧ್ಯವಸ್ಥೆಯಲ್ಲಿ ರುದ್ರದೇವರನ್ನೇ ಚಿಂತನೆಗೈಯ್ಯುತ್ತಿದ್ದಳು. ಬ್ರಹ್ಮಚಾರಿಯು ಬಂದು ಅವಳ ಸಖಿಯರ ಜೊತೆ ಮಾತನಾಡಲು ಪ್ರಾರಂಭಿಸಿದನು. ಅಂಗನಾಮಣಿಗಳೇ ! ಈ

ಸರ್ವಾಂಗಸುಂದರಿಯಾದ ಸ್ತ್ರೀ ಯಾರು? ಭೀಕರವಾದ ಈ ಗಿರಿಶಿಖರಕ್ಕೆ ಏಕೆ ಬಂದಿದ್ದಾಳೆ? ಅವಳ ತಪಸ್ಸಿನ ಉದ್ದೇಶವೇನು ? ಎಂದು ಪ್ರಶ್ನಿಸಿದನು.

ಜಯಾ ಎಂಬ ಸಖಿಯೋರ್ವಳು ಪಾರ್ವತಿಯ ಪೂರ್ಣಪರಿಚಯವನ್ನು ತಿಳಿಸಿದಳು.

ಬ್ರಹ್ಮಚಾರಿಯು ಗಹಗಹಿಸಿ ನಕ್ಕುಬಿಟ್ಟನು. ನಿಮ್ಮ ಗೆಳತಿಯು ಬಹಳ ಮುಗ್ಧೆಯಾಗಿರುಳು. ಆ ರುದ್ರನಿಗೋಸ್ಕರ ತಪಸ್ಸು ಮಾಡುವ ಅವಶ್ಯಕತೆಯೇ ಇರುವುದಿಲ್ಲ. ಎಲ್ಲಾ ಅಮಂಗಳಗಳ ಸ್ವರೂಪನೇ ಆ ರುದ್ರನಾಗಿದ್ದಾನೆ ಎಂಬುದಾಗಿ ಛೇಡಿಸಿದನು. ಈ ಸಂದರ್ಭದಲ್ಲಿ ರುದ್ರದೇವರ ಅವಹೇಳನದ ಮಾತುಗಳನ್ನು ಕೇಳಿ ಪಾರ್ವತಿಯು ಸಮಾಧ್ಯವಸ್ಥೆಯಿಂದ ಜಾಗೃತಳಾದಳು.

ಬ್ರಹ್ಮಚಾರಿಯ ಜೊತೆ ಪಾರ್ವತಿಯು ಮಾತನಾಡುವುದೇ ಇಲ್ಲ. ತಾನು ಮಾತನಾಡುವುದಿಲ್ಲವೆಂದೂ ಕೂಡ ಸಖಿಯರ ಜೊತೆ ಹೇಳುತ್ತಾಳೆ. 'ಶಿವದ್ರೋಹಿಯ ಜೊತೆ ನೀವು ಮಾತನಾಡಿದ್ದು ತಪ್ಪು. ಇವನನ್ನು ಈ ಕ್ಷಣವೇ ಇಲ್ಲಿಂದ ಕಳುಹಿಸಿರಿ' ಎಂದು ಸಿಟ್ಟಿನಿಂದ ಗುಡುಗಿದಳು.

> ಯೇ ನಿಂದಕಾಶ್ಚ ಪಾಪಾಶ್ಚ ಕೃತಾಘ್ನಾ ವೇದದೂಷಕಾಃ ।
> ವೇದಭ್ರಷ್ಟಾ ಹ್ಯಪ್ರತಿಷ್ಠಾ ಅವಾಚ್ಯಾಸ್ತೇ ಮನೀಷಿಭಿಃ ॥
> ಮಹತಾಂ ನಿಂದನಂ ಶ್ರುತ್ವಾ ಯೇ ನ ಯಾಂತಿ ತ್ವರಾನ್ವಿತಾಃ ।
> ಸ್ಥಾನಾಂತರಂ ಹ್ಯಪ್ರತಿಷ್ಠಾಸ್ತೇಪಿ ಸ್ಯುಃ ಪಾಪಿನೋ ಜನಾಃ ॥

ಯಾರು ದೊಡ್ಡವರನ್ನು ನಿಂದೆ ಮಾಡುತ್ತಾರೋ, ವೇದಗಳನ್ನು ದೂಷಿಸುತ್ತಾರೋ, ವೇದಮಾರ್ಗದಿಂದ ಭ್ರಷ್ಟರಾಗಿರುತ್ತಾರೋ, ಇವರೆಲ್ಲರೂ ಕೂಡ ಮಹಾಪಾಪಿಗಳು, ಕೃತಘ್ನರು. ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ ಯಾವುದೇ ಶ್ರೇಯಸ್ಸು ಅವರಿಗಿರುವುದಿಲ್ಲ. ಅವರ ಜೊತೆ ಮಾತನಾಡಬಾರದು.

ಅವರೇನಾದರೂ ಕಿವಿಗೆ ಕೇಳುವಂತೆ ಮಹಾತ್ಮರ ನಿಂದೆಯನ್ನು ಮಾಡಿದರೆ, ಅವರನ್ನು ನಿಗ್ರಹ ಮಾಡಬೇಕು. ಇಲ್ಲದಿದ್ದರೆ ಅಲ್ಲಿಂದ ಹೊರಟು ಹೋಗಬೇಕು.

ಹೀಗೆ ಪಾರ್ವತಿಯ ಅಪ್ಪಣೆಯಂತೆ ವಿಜಯಾ ಎಂಬ ಗೆಳೆತಿಯು ಸಿಟ್ಟಿನಿಂದ ಆ ಬ್ರಹ್ಮಚಾರಿಗೆ 'ಇಲ್ಲಿಂದ ತೆರಳು' ಎಂದು ಗದರಿಸಿದಳು.

ಬ್ರಹ್ಮಚಾರಿಯು ಆಗ ಇದ್ದಕ್ಕಿದ್ದಂತೆ ಅದೃಶ್ಯನಾಗಿಬಿಟ್ಟನು. ಎಲ್ಲಿಂದ ಬಂದ, ಎಲ್ಲಿಗೆ ಹೋದ ? ಎಂದೇ ಯಾರಿಗೂ ತಿಳಿಯಲಿಲ್ಲ. ಎಲ್ಲಾ ಗೆಳತಿಯರು ಆಚ್ಚರಿಯಿಂದ ಎಲ್ಲೆಡೆಯೂ ಹುಡುಕಲು ಪ್ರಾರಂಭ ಮಾಡಿದರು. ಬ್ರಹ್ಮಚಾರಿಯು ಎಲ್ಲಿಯೂ ಕಾಣಿಸಲೇ ಇಲ್ಲ.

ಅಂತರ್ಧಾನನಾದ ಮೇಲೆ ಬಂದ ವ್ಯಕ್ತಿಯು ರುದ್ರನೇ ಇರಬಹುದೆಂದು ಪಾರ್ವತಿಗೆ ಆನಿಸಿತು. ಪುನಃ ಸಮಾಧ್ಯವಸ್ಥೆಗೆ ತೆರಳಿ ರುದ್ರದೇವರನ್ನು ಭಕ್ತ್ಯುದ್ರೇಕದಿಂದ ಧ್ಯಾನಿಸಲು ಪ್ರಾರಂಭ ಮಾಡಿದಳು. ಕೂಡಲೇ ನನಗೆ ದರ್ಶನ ನೀಡಿ ಉದ್ಧರಿಸು ಎಂದು ಭಾವುಕಳಾದಳು. ಹೃದಯದಲ್ಲಿ ಯಾವ ರುದ್ರದೇವರ ಬಿಂಬವನ್ನು ಕಾಣುತ್ತಾ ಧ್ಯಾನ ಮಾಡುತ್ತಿದ್ದಳೋ, ಅದೇ ರೂಪವು ಪಾರ್ವತಿಯ ಎದುರು ಪ್ರಕಟಗೊಂಡಿತು.

## ಪ್ರತ್ಯಕ್ಷರಾದರು ರುದ್ರದೇವರು

ಸಾವಿರಾರು ವರ್ಷಗಳ ಕಾಲ ಕಠಿಣವಾದ ತಪಸ್ಸನ್ನು ಮಾಡಿದ ಪಾರ್ವತೀದೇವಿಗೆ ರುದ್ರದೇವರು ದರ್ಶನವಿತ್ತರು. ಸಂಪೂರ್ಣ ಪ್ರಸನ್ನರಾದರು. ಹಸನ್ಮುಖಿಗಳಾಗಿ ಪಾರ್ವತಿಯ ಎದುರು ನಿಂತರು.

ಆಗ ಪಾರ್ವತಿಯು ಹೀಗೆ ಪ್ರಾರ್ಥಿಸಿದಳು -

ತ್ವಂ ನಾಥೋ ಮಮ ದೇವೇಶ ! ತ್ವಯಾ ಕಿಂ ವಿಸ್ಮೃತಂ ಪುರಾ ।
ದಕ್ಷಯಜ್ಞವಿನಾಶಂ ಚ ಯದರ್ಥಂ ಕೃತವಾನ್ ಪ್ರಭೋ ! ।
ಸ ತ್ವಂ ಸಾಹಂ ಸಮುತ್ಪನ್ನಾ ಮೇನಾಯಾಂ ಕಾರ್ಯಸಿದ್ಧಯೇ ॥

''ಪ್ರಭೋ ! ನೀನು ನಾಥ. ನಾನು ನಿನ್ನ ಚರಣದಾಸಿ. ತಮಗೆ ನೆನಪಿರಬಹುದು. ಹಿಂದಿನ ದುರಂತ ಘಟನೆ. ದಕ್ಷಯಜ್ಞದಲ್ಲಿ ತಮ್ಮನ್ನೇ ಸ್ಮರಿಸಿಕೊಂಡು ಆತ್ಮಾರ್ಪಣೆ ಮಾಡಿಕೊಂಡೆ. ಅದೇ ದಾಕ್ಷಾಯಿಣಿಯಾದ ನಾನು ಇಂದು ಹಿಮವಂತನ ಮಡದಿಯಾದ ಮೇನಾದೇವಿಯ ಉದರದಲ್ಲಿ ಹುಟ್ಟಿ, ಹೈಮವತಿಯಾಗಿರುವೆನು. ತಮ್ಮಲ್ಲಿ ನನ್ನ ಒಂದು ಕಳಕಳಿಯ ಪ್ರಾರ್ಥನೆ. ದೇವತೆಗಳು ದುಃಖಿತರಾಗಿದ್ದಾರೆ. ತಮ್ಮ ಅನುಗ್ರಹಾಕಾಂಕ್ಷಿಗಳಾಗಿದ್ದಾರೆ. ಲೋಕದಲ್ಲಿ ಸಜ್ಜನರು ಸಂಕಟ ಪಡುತ್ತಿದ್ದಾರೆ. ತಾರಕಾಸುರನು ಲೋಕಗಳಿಗೆ ಕಂಟಕನಾಗಿದ್ದಾನೆ. ಅದಕ್ಕಾಗಿ ತಮ್ಮಿಂದ ಮಹಾಶಕ್ತಿಯ ಅವತಾರವಾಗಬೇಕಾಗಿದೆ. ಅದಕ್ಕಾಗಿ ತಾವು ನನ್ನನ್ನು ವರಿಸಿ, ಎನ್ನನ್ನು ಉದ್ಧಾರ ಮಾಡಬೇಕು. ಆದಕ್ಕಾಗಿ ನನ್ನ ತಂದೆಯಾದ ಹಿಮವಂತನ ಬಳಿ ತಾವು ತೆರಳಿ ನನ್ನನ್ನು ಮದುವೆ ಮಾಡಿಕೊಡಬೇಕೆಂದು ಕೇಳಿಕೊಳ್ಳಬೇಕು. ನಮ್ಮ ತಂದೆಯು ಸಂತೋಷ ಮನಸ್ಸಿನಿಂದ ತಮಗೆ ವಿವಾಹ ಮಾಡಿಕೊಡುವವರೆಗೆ ನಾನು ತಮ್ಮನ್ನು ಕೈ ಹಿಡಿಯಲಾಗದು' ಇತ್ಯಾದಿಯಾಗಿ ತಲೆತಗ್ಗಿಸಿ ವಿನಯಪೂರ್ವಕವಾಗಿ ಪ್ರಾರ್ಥಿಸಿದಳು.

## ಪಾರ್ವತಿಯ ತಪಸ್ಸಿಗೆ ಹೀಗೆ ವರವನ್ನಿತ್ತರು

ಕಲ್ಯಾಣಿಯೇ ! ನಿನ್ನನ್ನು ಬಿಟ್ಟು ನಾನು ಮತ್ತೊಬ್ಬರನ್ನು ವರಿಸಲಾರೆ. ಹಿಂದೆಯೂ ನೀನೇ ಎನ್ನ ಪತ್ನಿ. ಮುಂದೆ ಎಂದೆಂದೂ ನೀನೇ ಪತ್ನಿ. ನಿನ್ನ ಪಾಣಿಗ್ರಹಣವನ್ನು ಖಂಡಿತವಾಗಿಯೂ ಮಾಡುತ್ತೇನೆ. ತಪಸ್ಸನ್ನು ಸಾಕುಗೊಳಿಸು. ಆದರೆ ನಿನ್ನ ತಂದೆಯ ಬಳಿ ತೆರಳಿ ಯಾಚನೆ ಮಾಡಲಾರೆ. ಯಾರ ಬಳಿಯೂ 'ದೇಹಿ' ಎಂದು ಕೇಳಲಾರೆ. ಆದರೂ ನಿನ್ನ ಅಪೇಕ್ಷೆಯನ್ನು ಈಡೇರಿಸುತ್ತೇನೆಂದು ತಿಳಿಸಿ ಅಂತರ್ಧಾನವನ್ನು ಹೊಂದಿದರು.

ರುದ್ರದೇವರು ಪಾರ್ವತಿಗೆ ವರವನ್ನು ನೀಡಿದ್ದಾಗಿದೆ. ಇದೀಗ ಪಾರ್ವತೀಕಲ್ಯಾಣದ ಶುಭಘಟ್ಟ. ಅದೃಶ್ಯರಾದ ರುದ್ರದೇವರು ಕೈಲಾಸಪರ್ವತಕ್ಕೆ ಬಂದು ಸಪ್ತರ್ಷಿಗಳನ್ನು ಕರೆಸಿ ತಮ್ಮ ಮನೋಗತವನ್ನು ತಿಳಿಸುತ್ತಾರೆ. ತಮ್ಮ ಪರವಾಗಿ

ಅವರೇನಾದರೂ ಕಿವಿಗೆ ಕೇಳುವಂತೆ ಮಹಾತ್ಮರ ನಿಂದೆಯನ್ನು ಮಾಡಿದರೆ, ಅವರನ್ನು ನಿಗ್ರಹ ಮಾಡಬೇಕು. ಇಲ್ಲದಿದ್ದರೆ ಅಲ್ಲಿಂದ ಹೊರಟು ಹೋಗಬೇಕು.

ಹೀಗೆ ಪಾರ್ವತಿಯ ಅಪ್ಪಣೆಯಂತೆ ವಿಜಯಾ ಎಂಬ ಗೆಳೆತಿಯು ಸಿಟ್ಟಿನಿಂದ ಆ ಬ್ರಹ್ಮಚಾರಿಗೆ 'ಇಲ್ಲಿಂದ ತೆರಳು' ಎಂದು ಗದರಿಸಿದಳು.

ಬ್ರಹ್ಮಚಾರಿಯು ಆಗ ಇದ್ದಕ್ಕಿದ್ದಂತೆ ಅದೃಶ್ಯನಾಗಿಬಿಟ್ಟನು. ಎಲ್ಲಿಂದ ಬಂದ, ಎಲ್ಲಿಗೆ ಹೋದ ? ಎಂದೇ ಯಾರಿಗೂ ತಿಳಿಯಲಿಲ್ಲ. ಎಲ್ಲಾ ಗೆಳತಿಯರು ಆಚ್ಚರಿಯಿಂದ ಎಲ್ಲೆಡೆಯೂ ಹುಡುಕಲು ಪ್ರಾರಂಭ ಮಾಡಿದರು. ಬ್ರಹ್ಮಚಾರಿಯು ಎಲ್ಲಿಯೂ ಕಾಣಿಸಲೇ ಇಲ್ಲ.

ಅಂತರ್ಧಾನನಾದ ಮೇಲೆ ಬಂದ ವ್ಯಕ್ತಿಯು ರುದ್ರನೇ ಇರಬಹುದೆಂದು ಪಾರ್ವತಿಗೆ ಅನಿಸಿತು. ಪುನಃ ಸಮಾಧ್ಯವಸ್ಥೆಗೆ ತೆರಳಿ ರುದ್ರದೇವರನ್ನು ಭಕ್ತ್ಯುದ್ರೇಕದಿಂದ ಧ್ಯಾನಿಸಲು ಪ್ರಾರಂಭ ಮಾಡಿದಳು. ಕೂಡಲೇ ನನಗೆ ದರ್ಶನ ನೀಡಿ ಉದ್ಧರಿಸು ಎಂದು ಭಾವುಕಳಾದಳು. ಹೃದಯದಲ್ಲಿ ಯಾವ ರುದ್ರದೇವರ ಬಿಂಬವನ್ನು ಕಾಣುತ್ತಾ ಧ್ಯಾನ ಮಾಡುತ್ತಿದ್ದಳೋ, ಅದೇ ರೂಪವು ಪಾರ್ವತಿಯ ಎದುರು ಪ್ರಕಟಗೊಂಡಿತು.

## ಪ್ರತ್ಯಕ್ಷರಾದರು ರುದ್ರದೇವರು

ಸಾವಿರಾರು ವರ್ಷಗಳ ಕಾಲ ಕಠಿಣವಾದ ತಪಸ್ಸನ್ನು ಮಾಡಿದ ಪಾರ್ವತೀದೇವಿಗೆ ರುದ್ರದೇವರು ದರ್ಶನವಿತ್ತರು. ಸಂಪೂರ್ಣ ಪ್ರಸನ್ನರಾದರು. ಹಸನ್ಮುಖಿಗಳಾಗಿ ಪಾರ್ವತಿಯ ಎದುರು ನಿಂತರು.

ಆಗ ಪಾರ್ವತಿಯು ಹೀಗೆ ಪ್ರಾರ್ಥಿಸಿದಳು -

ತ್ವಂ ನಾಥೋ ಮಮ ದೇವೇಶ ! ತ್ವಯಾ ಕಿಂ ವಿಸ್ಮೃತಂ ಪುರಾ ।
ದಕ್ಷಯಜ್ಞವಿನಾಶಂ ಚ ಯದರ್ಥಂ ಕೃತವಾನ್ ಪ್ರಭೋ ! ।
ಸ ತ್ವಂ ಸಾಹಂ ಸಮುತ್ಪನ್ನಾ ಮೇನಾಯಾಂ ಕಾರ್ಯಸಿದ್ಧಯೇ ॥

''ಪ್ರಭೋ ! ನೀನು ನಾಥ. ನಾನು ನಿನ್ನ ಚರಣದಾಸಿ. ತಮಗೆ ನೆನಪಿರಬಹುದು. ಹಿಂದಿನ ದುರಂತ ಘಟನೆ. ದಕ್ಷಯಜ್ಞದಲ್ಲಿ ತಮ್ಮನ್ನೇ ಸ್ಮರಿಸಿಕೊಂಡು ಆತ್ಮಾರ್ಪಣೆ ಮಾಡಿಕೊಂಡೆ. ಅದೇ ದಾಕ್ಷಾಯಿಣಿಯಾದ ನಾನು ಇಂದು ಹಿಮವಂತನ ಮಡದಿಯಾದ ಮೇನಾದೇವಿಯ ಉದರದಲ್ಲಿ ಹುಟ್ಟಿ, ಹೈಮವತಿಯಾಗಿರುವೆನು. ತಮ್ಮಲ್ಲಿ ನನ್ನ ಒಂದು ಕಳಕಳಿಯ ಪ್ರಾರ್ಥನೆ. ದೇವತೆಗಳು ದುಃಖಿತರಾಗಿದ್ದಾರೆ. ತಮ್ಮ ಅನುಗ್ರಹಾಕಾಂಕ್ಷಿಗಳಾಗಿದ್ದಾರೆ. ಲೋಕದಲ್ಲಿ ಸಜ್ಜನರು ಸಂಕಟ ಪಡುತ್ತಿದ್ದಾರೆ. ತಾರಕಾಸುರನು ಲೋಕಗಳಿಗೆ ಕಂಟಕನಾಗಿದ್ದಾನೆ. ಅದಕ್ಕಾಗಿ ತಮ್ಮಿಂದ ಮಹಾಶಕ್ತಿಯ ಅವತಾರವಾಗಬೇಕಾಗಿದೆ. ಅದಕ್ಕಾಗಿ ತಾವು ನನ್ನನ್ನು ವರಿಸಿ, ಎನ್ನನ್ನು ಉದ್ಧಾರ ಮಾಡಬೇಕು. ಆದಕ್ಕಾಗಿ ನನ್ನ ತಂದೆಯಾದ ಹಿಮವಂತನ ಬಳಿ ತಾವು ತೆರಳಿ ನನ್ನನ್ನು ಮದುವೆ ಮಾಡಿಕೊಡಬೇಕೆಂದು ಕೇಳಿಕೊಳ್ಳಬೇಕು. ನಮ್ಮ ತಂದೆಯು ಸಂತೋಷ ಮನಸ್ಸಿನಿಂದ ತಮಗೆ ವಿವಾಹ ಮಾಡಿಕೊಡುವವರೆಗೆ ನಾನು ತಮ್ಮನ್ನು ಕೈ ಹಿಡಿಯಲಾಗದು' ಇತ್ಯಾದಿಯಾಗಿ ತಲೆತಗ್ಗಿಸಿ ವಿನಯಪೂರ್ವಕವಾಗಿ ಪ್ರಾರ್ಥಿಸಿದಳು.

## ಪಾರ್ವತಿಯ ತಪಸ್ಸಿಗೆ ಹೀಗೆ ವರವನ್ನಿತ್ತರು

ಕಲ್ಯಾಣಿಯೇ ! ನಿನ್ನನ್ನು ಬಿಟ್ಟು ನಾನು ಮತ್ತೊಬ್ಬರನ್ನು ವರಿಸಲಾರೆ. ಹಿಂದೆಯೂ ನೀನೇ ಎನ್ನ ಪತ್ನಿ. ಮುಂದೆ ಎಂದೆಂದೂ ನೀನೇ ಪತ್ನಿ. ನಿನ್ನ ಪಾಣಿಗ್ರಹಣವನ್ನು ಖಂಡಿತವಾಗಿಯೂ ಮಾಡುತ್ತೇನೆ. ತಪಸ್ಸನ್ನು ಸಾಕುಗೊಳಿಸು. ಆದರೆ ನಿನ್ನ ತಂದೆಯ ಬಳಿ ತೆರಳಿ ಯಾಚನೆ ಮಾಡಲಾರೆ. ಯಾರ ಬಳಿಯೂ 'ದೇಹಿ' ಎಂದು ಕೇಳಲಾರೆ. ಆದರೂ ನಿನ್ನ ಅಪೇಕ್ಷೆಯನ್ನು ಈಡೇರಿಸುತ್ತೇನೆಂದು ತಿಳಿಸಿ ಅಂತರ್ಧಾನವನ್ನು ಹೊಂದಿದರು.

ರುದ್ರದೇವರು ಪಾರ್ವತಿಗೆ ವರವನ್ನು ನೀಡಿದ್ದಾಗಿದೆ. ಇದೀಗ ಪಾರ್ವತೀಕಲ್ಯಾಣದ ಶುಭಘಟ್ಟ. ಅದೃಶ್ಯರಾದ ರುದ್ರದೇವರು ಕೈಲಾಸಪರ್ವತಕ್ಕೆ ಬಂದು ಸಪ್ತರ್ಷಿಗಳನ್ನು ಕರೆಸಿ ತಮ್ಮ ಮನೋಗತವನ್ನು ತಿಳಿಸುತ್ತಾರೆ. ತಮ್ಮ ಪರವಾಗಿ

ಹಿಮವಂತನ ಬಳಿ ಸಪ್ತರ್ಷಿಗಳೇ ಹೋಗಿ ಪಾರ್ವತಿಯನ್ನು ವಿವಾಹ ಮಾಡಿಕೊಡುವಂತೆ ಕೇಳಲು ತಿಳಿಸುತ್ತಾರೆ.

ಸಪ್ತರ್ಷಿಗಳು ಹಿಮವಂತನ ಬಳಿ ತೆರಳಿ 'ಪರ್ವತಸಾರ್ವಭೌಮನೇ ! ಗಂಗಾಧರನನ್ನು ವಿವಾಹವಾಗಬೇಕೆಂದು ನಿನ್ನ ಮಗಳು ತಪಸ್ಸು ಮಾಡಿದ್ದಾಳೆ. ರುದ್ರದೇವರು ಆ ತಪಸ್ಸಿಗೆ ಮೆಚ್ಚಿದ್ದಾರೆ. ಈ ಗಿರಿಜೆಯು ಆ ಗಿರೀಶನ ಕೈ ಹಿಡಿದು ಕೃತಾರ್ಥಳಾಗಲಿ' ಎಂದು ತಿಳಿಸುತ್ತಾರೆ.

ಆದರೆ ಗಿರಿರಾಜನಿಗೆ ಗೊಂದಲವೇ ಉಂಟಾಯಿತು. ಹತ್ತಾರು ಮಹೀಧರರ ಬಳಿ ವಿಚಾರಿಸಲು ಮುಂದಾದನು. ಆದರೆ ಅವನ ಪತ್ನಿಯಾದ ಮೇನಾದೇವಿಯು ಬಹಳ ಸಂತೋಷದಿಂದ ಒಪ್ಪಿದಳು. ಈ ಮಗಳು ನನ್ನ ಹೊಟ್ಟೆಯಲ್ಲಿ ಎಂದು ಹುಟ್ಟಿದಳೋ ಅಂದೇ ಕೈಲಾಸವಾಸಿಯ ಕೈಯನ್ನು ಹಿಡಿಯುತ್ತಾಳೆ ಎಂಬುದು ನಿಶ್ಚಯವಾಗಿತ್ತು. ಇಂದು ಆ ಸುಕ್ಷಣವು ಒದಗಿದೆ ಎಂದು ಸಂತೋಷ ಪಟ್ಟಳು. ಮತ್ತು ದೇವಸಂಕಲ್ಪಕ್ಕೆ ವಿರುದ್ಧವಾದ ಸಂಕಲ್ಪವನ್ನು ನಾವು ಮಾಡಬಾರದು. 'ಅಸ್ತು' ಎಂದು ಹೇಳಿ ನಾವು ಪುಣ್ಯಭಾಗಿಗಳಾಗಬೇಕು. ಇದರಲ್ಲಿ ವಿಚಾರ ಮಾಡುವುದೇ ಅಪರಾಧವಾಗುತ್ತದೆ ಎಂದು ತನ್ನ ಪತಿಗೂ ಕೂಡ ಬುದ್ಧಿ ಹೇಳಿದಳು. ಆಗ ವಿಧಿ ಪೂರ್ವಕವಾಗಿ ಪಾಣಿಗ್ರಹಣವನ್ನು ಮಾಡಿಕೊಳ್ಳಬೇಕೆಂದು ಪರ್ವತರಾಜನು ಮಹಾದೇವನಿಗೆ ಸಪ್ತರ್ಷಿಗಳ ಮೂಲಕ ಹೇಳಿಕಳುಹಿಸಿದನು.

## ಪಾರ್ವತೀ ಪರಮೇಶ್ವರರ ವಿವಾಹದ ಸಿದ್ಧತೆ

ಸಪ್ತರ್ಷಿಗಳು ಪರಮೇಶ್ವರನ ಬಳಿ ತೆರಳಿ ಆನಂದದ ಸಂದೇಶವನ್ನು ತಿಳಿಸಿದರು. ಆಗ ಪರಮೇಶ್ವರನೇ ಸಪ್ತರ್ಷಿಗಳ ಜೊತೆ ಚರ್ಚಿಸಲು ಪ್ರಾರಂಭಿಸಿದನು. ವಿವಾಹವು ಹೇಗೆ ವೈವಭೋಪೇತವಾಗಿ ನಡೆಯಬೇಕು. ಯಾರನ್ನು ಆ ವಿವಾಹಕ್ಕೆ ಕರೆಸಬೇಕು. ಎಲ್ಲವನ್ನು ವಿಚಾರ ಮಾಡೋಣ ಬನ್ನಿರಿ ಎಂದನು.

ಜ್ಯೋತಿರ್ಭೀಮೇಶ್ವರ ವ್ರತ

ಅಖಿಲಾಂಡಕೋಟಿಬ್ರಹ್ಮಾಂಡನಾಯಕನಾದ ಮಹಾವಿಷ್ಣುವನ್ನೇ ಮೊದಲು ಆಮಂತ್ರಣ ಮಾಡಬೇಕೆಂದು ಅಲ್ಲಿ ನಿಶ್ಚಯ ಮಾಡಿದರು. ಅನಂತರ ಚತುರ್ಮುಖಬ್ರಹ್ಮ, ವಾಯುದೇವರು, ಇಂದ್ರ-ಚಂದ್ರಾದಿ ದೇವತೆಗಳು, ಮರುತ್ ಗಣಗಳು, ಪ್ರಮಥಗಣಗಳು ಎಲ್ಲರನ್ನೂ ಕೂಡ ಹೇಗೆ ಆಹ್ವಾನ ಮಾಡಬೇಕು. ಬಂದವರಿಗೆಲ್ಲಾ ಹೇಗೆ ವ್ಯವಸ್ಥೆಯನ್ನು ಮಾಡಬೇಕು. ಇತ್ಯಾದಿ ವಿಚಾರಗಳನ್ನು ರುದ್ರದೇವರು ಸಪ್ತರ್ಷಿಗಳ ಬಳಿ ತಿಳಿಸಿದರು.

ರುದ್ರದೇವರು ನಾರದರನ್ನು ಕರೆಸಿ ಹೇಳುತ್ತಾರೆ - ''ನಾರದರೇ ! ಈ ಕ್ಷಣವೇ ತಾವು ವೈಕುಂಠಕ್ಕೆ ತೆರಳಿರಿ. ಜಗದೊಡೆಯನಾದ ನನ್ನ ಸ್ವಾಮಿಯಾದ ಆ ಭಗವಂತನಿಗೆ ನಾನು ಪಾರ್ವತಿಯ ಜೊತೆ ವಿವಾಹವಾಗುತ್ತಿದ್ದೇನೆಂಬ ಶುಭಸುದ್ದಿಯನ್ನು ತಿಳಿಸಿರಿ. ಭಗವಂತನು ಲಕ್ಷ್ಮೀಸಹಿತನಾಗಿ, ಗರುಡಾರೂಢನಾಗಿ ಬಂದು ನವದಂಪತಿಗಳನ್ನು ಅನುಗ್ರಹಿಸಬೇಕು. ಅವನ ಅನುಗ್ರಹಕ್ಕಾಗಿಯೇ ನಾನು ಪಾರ್ವತಿಯ ಪಾಣಿಗ್ರಹಣವನ್ನು ಮಾಡುತ್ತಿದ್ದೇನೆ. ಅವನ ಅನುಗ್ರಹಕ್ಕಿಂತ ದೊಡ್ಡದು ಮತ್ತೊಂದು ಎನಗಿಲ್ಲ''. ಈ ಎಲ್ಲ ವಿಷಯವನ್ನು ಅವನಿಗೆ ತಿಳಿಸಿ ಆಮಂತ್ರಿಸಿರಿ. ಪರಮೇಶ್ವರನ ಆಜ್ಞೆಯಂತೆ ನಾರದರು ತತ್‌ಕ್ಷಣದಲ್ಲಿಯೇ ವೈಕುಂಠಕ್ಕೆ ಪ್ರಯಾಣ ಬೆಳೆಸಿದರು. ಅಲ್ಲಿ ಲಕ್ಷ್ಮೀಕಾಂತನನ್ನು ಕಂಡು ಉಚ್ಚಕಂಠದಿಂದ ಸ್ತುತಿಸಿದರು. ರುದ್ರದೇವರು ತಿಳಿಸಿದಂತೆ ಪಾರ್ವತೀ ಪರಮೇಶ್ವರರ ವಿವಾಹಕ್ಕೆ ಆಹ್ವಾನ ನೀಡಿದರು. ತನ್ನ ಮೊಮ್ಮಗನ ವಿವಾಹದ ವಿಚಾರವನ್ನು ತಿಳಿದ ಭಗವಂತನಿಗೆ ಆನಂದವೋ ಆನಂದ. ಸಂಭ್ರಮವೋ ಸಂಭ್ರಮ. ನಾರದರು ತಿಳಿಸಿದ ಎಲ್ಲ ವಿಷಯವನ್ನು ಪುನಃ ಲಕುಮಿಯ ಎದುರು ಆ ಭಗವಂತನು ಹೇಳುತ್ತಾನೆ. ಸಂತೋಷ ಪಡುತ್ತಾನೆ. ನಾನೇ ಮುಂದೆ ನಿಂತು ಈ ವಿವಾಹವನ್ನು ನಡೆಸುತ್ತೇನೆಂದು ಭರವಸೆ ನೀಡುತ್ತಾನೆ. ಹೀಗೆ ಪಾರ್ವತೀ ಪರಮೇಶ್ವರರ ವಿವಾಹದ ಸಂಭ್ರಮಾಚರಣೆ ಪ್ರಾರಂಭವಾಯಿತು.

# ಗಿರಿಜಾ ಕಲ್ಯಾಣ

ಸರ್ವೋತ್ತಮನಾದ ಮಹಾವಿಷ್ಣುವು ಲಕ್ಷ್ಮಿಯ ಸಹಿತನಾಗಿ ವೈಕುಂಠದಿಂದ ಕೈಲಾಸ ಶಿಖರಕ್ಕೆ ಅತ್ಯಂತ ಉತ್ಸಾಹದಲ್ಲಿ ವೈಭವೋಪೇತವಾಗಿ ಆಗಮಿಸಿದ್ದಾನೆ. ಮಹಾರುದ್ರದೇವರ ವಿವಾಹವನ್ನು ನೋಡಿ, ಆನಂದಿಸುವುದಕ್ಕಾಗಿ ಸಂತೋಷಭರಿತನಾಗಿದ್ದಾನೆ. ರುದ್ರದೇವರು ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಸ್ವಾಗತ ಮಾಡಿದ್ದಾರೆ. ನನ್ನ ವಿವಾಹಕ್ಕೆ ತಾವು ಆಗಮಿಸಿರುವುದು ನನ್ನ ಮಹಾಸೌಭಾಗ್ಯ. ಇಂದು ಎನ್ನ ಜನ್ಮ ಸಾರ್ಥಕವಾಯಿತು. ನನ್ನ ತಪಸ್ಸೆಲ್ಲವೂ ಫಲಿಸಿತು. ಸಾಕ್ಷಾತ್ ಲಕ್ಷ್ಮೀನಾರಾಯಣರೇ ನಿಂತು ವಿವಾಹ ಮಾಡುವ ಇಂಥಾ ಸೌಭಾಗ್ಯ ಎನ್ನ ಬಿಟ್ಟು ಬೇರೆ ಯಾರಿಗೆ ತಾನೇ ದೊರಕಲು ಸಾಧ್ಯ ಎಂಬುದಾಗಿ ಭಾವುಕರಾಗಿ ಮಾತನಾಡಿದ್ದಾರೆ. ಮತ್ತು ವಿವಾಹಕ್ಕಾಗಿ ಏನೇನು ಕರ್ತವ್ಯಗಳನ್ನು ಮಾಡಬೇಕು. ಅದನ್ನು ನನಗೆ ತಿಳಿಸಬೇಕೆಂದು ಭಗವಂತನ ಬಳಿ ಪ್ರಶ್ನಿಸುತ್ತಿರುತ್ತಾರೆ. ಆಗಲೇ ಬ್ರಹ್ಮಲೋಕದಿಂದ ಸರಸ್ವತಿಯು ಜೊತೆಗೆ ಹಂಸಾರೂಢರಾದ ಚತುರ್ಮುಖಬ್ರಹ್ಮದೇವರು ತ್ವರೆಯಿಂದ ಆಗಮಿಸಿದ್ದಾರೆ. ಮಹಾರುದ್ರದೇವರು ಚತುರ್ಮುಖಬ್ರಹ್ಮದೇವರನ್ನು ಸಾಷ್ಟಾಂಗ ನಮಿಸಿ ಜೀವೋತ್ತಮರಾದ ತಾವು ನನ್ನ ವಿವಾಹಕ್ಕೆ ಆಗಮಿಸಿರುವುದು ನನ್ನ ಸುಕೃತವೆಂದು ಸ್ತುತಿಸಿದ್ದಾರೆ. ಭಾರತೀದೇವಿಯಿಂದ ಸಹಿತರಾದ ವಾಯುದೇವರು ಮಹಾರುದ್ರದೇವರ ವಿವಾಹಕ್ಕೆ ಆಗಮಿಸಿದ್ದಾರೆ. ಸ್ವರ್ಗಲೋಕದಿಂದ ಶಚೀದೇವಿಯಿಂದ ಸಹಿತನಾಗಿ ದೇವೇಂದ್ರನು ಐರಾವತವನ್ನೇರಿ ವಿವಾಹಕ್ಕೆ ಆಗಮಿಸಿದ್ದಾನೆ. ಚಂದ್ರಲೋಕದಿಂದ ಚಂದ್ರನು, ಸೂರ್ಯಲೋಕದಿಂದ ಸೂರ್ಯನು ಅಷ್ಟದಿಕ್ಪಾಲಕರು, ಸಮಸ್ತದೇವತೆಗಳು, ಕರ್ಮಜದೇವತೆಗಳು, ಅಜಾನಜ ದೇವತೆಗಳು, ಯಕ್ಷರು, ಕಿನ್ನರರು, ವಿದ್ಯಾಧರರು, ಗಂಧರ್ವರು, ಅಪ್ಸರೆಯರು, ಮಹರ್ಷಿಗಳು, ಬ್ರಹ್ಮರ್ಷಿಗಳು, ರಾಜರ್ಷಿಗಳು, ನಾಗರು, ದಾನವರು, ಹೀಗೆ ಪ್ರತಿಯೊಬ್ಬರೂ ಕೂಡ ಪಾರ್ವತಿ ಪರಮೇಶ್ವರರ ವಿವಾಹಕ್ಕೆ ಉಲ್ಲಾಸ ಉತ್ಸಾಹಗಳಿಂದ ತ್ವರೆಯಿಂದ ಬಂದಿದ್ದಾರೆ. ಅಷ್ಟೇ ಅಲ್ಲದೇ, ಅಸುರರು, ದಾನವರು,

ಮನುಷ್ಯೋತ್ತಮರೂ ಕೂಡ ಅಲ್ಲಿಗೆ ಆಗಮಿಸಿದ್ದಾರೆ. ಆಗಮಿಸಿದ ಪ್ರತಿಯೊಬ್ಬರೂ ಮಹಾರುದ್ರದೇವರ ದಿವ್ಯಸ್ವರೂಪವನ್ನು ಕಂಡು ನಿಬ್ಬೆರಗಾಗಿ ಭಕ್ತಿಭಾವುಕರಾಗಿ ಸಾಷ್ಟಾಂಗ ನಮಿಸಿದ್ದಾರೆ. ಆಶ್ಚರ್ಯಚಕಿತರಾಗಿದ್ದಾರೆ. ಇಂಥಾ ವಿವಾಹದಲ್ಲಿ ಪಾಲ್ಗೊಂಡಿರುವುದು ತಮ್ಮ ಸೌಭಾಗ್ಯವೆಂದು ಭಾವಿಸಿದ್ದಾರೆ. ತಮ್ಮೆಲ್ಲರ ಸಂತೋಷದ ಪರಾಕಾಷ್ಠದ ದಿವಸವೆಂದು ಭಾವಿಸಿದ್ದಾರೆ. ತಪಸ್ಸಿನ ಫಲವು ಫಲಿಸಿತೆಂದು ತೃಪ್ತರಾಗಿದ್ದಾರೆ.

ಮಹಾವಿಷ್ಣುವು ರುದ್ರದೇವರನ್ನು ಕುರಿತು ಹೇಳಿದನು. ಶಂಭುವೇ ! ಗೃಹ್ಯಸೂತ್ರದಲ್ಲಿ ಹೇಳಿದ ಪ್ರಕಾರ ವಿವಾಹವಾಗಬೇಕು. ಮೊದಲು ನಾಂದಿಮುಖಶ್ರಾದ್ಧವನ್ನು ಆಚರಿಸಬೇಕು. ಅನಂತರ ಮಂಟಪದ ಸ್ಥಾಪನೆಯಾಗಬೇಕು ಎಂಬುದಾಗಿ ಆಜ್ಞೆಯನ್ನು ಮಾಡಿದನು. ಅದರ ಪ್ರಕಾರ ಪರಮೇಶ್ವರನು ವಿವಾಹದ ಪೂರ್ವಸಿದ್ಧತೆಯನ್ನು ಮಾಡಿದನು. ನಾಂದೀಸ್ಥಾಪನೆಯನ್ನು ಮಾಡಿ, ಮಂಟಪಸ್ಥಾಪನೆಯನ್ನು ಮಾಡಿ, ನವಗ್ರಹಪೂಜೆಯನ್ನೂ ಕೂಡ ಆಚರಿಸಿದನು. ಅತ್ರಿ, ವಸಿಷ್ಠ, ಗೌತಮ, ಗುರು, ಭೃಗು, ಕಣ್ವ, ಬೃಹಸ್ಪತಿ, ಶಕ್ತಿ, ಪರಾಶರ, ಮಾರ್ಕಂಡೇಯ, ಶಿಲಾವಾಕ, ಶೂನ್ಯಪಾಲ, ಅಕ್ಷತ, ಶಮ, ಅಗಸ್ತ್ಯ, ಚ್ಯವನ, ಶಿಲಾದ, ಗರ್ಗ ಮೊದಲಾದ ಬ್ರಹ್ಮರ್ಷಿಗಳು ಆ ವಿವಾಹದ ಪೌರೋಹಿತ್ಯವನ್ನು ಮಾಡಿಸುತ್ತಿದ್ದರು. ಆಯಾ ಸಂದರ್ಭದಲ್ಲಿ ಏನೇನು ಮಾಡಬೇಕೆಂಬುದನ್ನು ತಿಳಿದು ಅಚ್ಚುಕಟ್ಟಾಗಿ ಶುಭಕರ್ಮಗಳನ್ನು ಆಚರಿಸುತ್ತಿದ್ದರು.

ಮಹಾರುದ್ರದೇವರಿಗೆ ಋಗ್ವೇದ, ಯಜುರ್ವೇದ, ಸಾಮವೇದಗಳಿಂದ ಅನೇಕ ಮಂಗಳಗಳನ್ನು ಘೋಷಣೆ ಮಾಡಿದರು. ಅಭ್ಯಂಜನ ಸ್ನಾನಗಳನ್ನು ಮಾಡಿಸಿದರು. ಮುತ್ತೈದೆಯರು ಮುತ್ತಿನ ಆರತಿಯನ್ನು ಎತ್ತಿದರು. ಹೀಗೆ ವಿವಾಹ ಕಾರ್ಯವು ಪ್ರಾರಂಭವಾಯಿತು.

## ಜ್ಯೋತಿರ್ಭೀಮೇಶ್ವರ ವ್ರತ

ಅಭ್ಯಂಜನ ಸ್ನಾನವನ್ನು ಮಾಡಿದ ನಂತರ ಮಹಾರುದ್ರದೇವರು ಕಂಗೊಳಿಸುತ್ತಿದ್ದರು.

ಮಹಾರುದ್ರದೇವರು ಧರಿಸಿದ ಮುಂಡಗಳ ಮಾಲೆಯೇ ಮುತ್ತಿನ ಹಾರವಾಯಿತು. ಧರಿಸಿದ ಸರ್ಪಗಳೆಲ್ಲವೂ ಸುವರ್ಣಾಭರಣಗಳಾಗಿ ಪರಿಣಾಮ ಹೊಂದಿದವು. ಗಜಚರ್ಮ, ವ್ಯಾಘ್ರಚರ್ಮಗಳು ದಿವ್ಯಪೀತಾಂಬರಗಳಾದವು. ಹಣೆಯಲ್ಲಿದ್ದ ಮೂರನೆಯ ಕಣ್ಣು ಉತ್ತಮ ತಿಲಕದಂತೆ ಕಂಗೊಳಿಸಿತು. ದ್ವಾದಶನಾಮಗಳನ್ನು ಧರಿಸಿ, ಶಂಖ-ಚಕ್ರಾದಿ ಪಂಚಮುದ್ರೆಗಳನ್ನು ಧಾರಣೆ ಮಾಡಿ, ಊರ್ಧ್ವಪುಂಡ್ರವನ್ನು ಧರಿಸಿದ ಮಹಾರುದ್ರದೇವರ ದಿವ್ಯಕಾಂತಿ ಎಂಥವರಿಗೂ ಚೇತೋಹಾರಿಯಾಗಿತ್ತು. ಹೀಗೆ ಕಂಗೊಳಿಸುತ್ತಿದ್ದ ಮಹಾರುದ್ರದೇವರನ್ನು ಆನೆಯ ಮೇಲೆ ಕುಳ್ಳಿರಿಸಿದರು. ಅವರ ತಲೆಯ ಮೇಲೆ ಶ್ವೇತಛತ್ರವಿತ್ತು. ಹಣೆಯ ಮೇಲೆ ಚಂದ್ರನಿದ್ದನು. ಎಡ-ಬಲಭಾಗಗಳಲ್ಲಿ ಚಿನ್ನದ ಹಿಡಿಕೆಯ ಚಾಮರಗಳು ಬೀಸುತ್ತಿದ್ದವು. ಸುತ್ತಲೂ ಮಹರ್ಷಿಗಳು ವೇದಪಾರಾಯಣವನ್ನು ಮಾಡುತ್ತಿದ್ದರು. ಮುಂದೆ ಗರುಡಾರೂಢನಾದ ಮಹಾವಿಷ್ಣು ಚತುರ್ಮುಖಬ್ರಹ್ಮ ಹಾಗೂ ವಾಯುದೇವರು ತೆರಳುತ್ತಿದ್ದರು. ಇಂದ್ರ, ಚಂದ್ರ ಮೊದಲಾದ ಲೋಕಪಾಲಕರು ದಿಕ್ಪಾಲಕರು ಶಿವನ ಜೊತೆಯಲ್ಲಿ ತಮ್ಮ ತಮ್ಮ ವಾಹನಗಳಲ್ಲಿ ಆರೂಢರಾಗಿದ್ದರು. ಭೇರಿಗಳ ಭಾಂಕಾರ ಮೊಳಗಿತು. ಶಂಖದ ಧ್ವನಿ ದಿಕ್ಕುಗಳನ್ನು ಆವರಿಸಿತು. ಡೊಳ್ಳು, ಡಮರುಗ, ದುಂದುಭಿ ಮೊದಲಾದ ವಾದ್ಯಗಳ ಘೋಷವು ಮಂಗಳಮಯ ವಾತಾವರಣವನ್ನು ಸೃಷ್ಟಿ ಮಾಡಿದವು. ರುದ್ರದೇವರ ಹಿಂದೆ ಸಮಸ್ತ ದೇವತೆಗಳು, ಸಿದ್ಧರು ನಿಂತಿದ್ದರು. ಭರದ್ವಾಜರೇ ಮೊದಲಾದ ಅನೇಕ ಮಹರ್ಷಿಗಳು ಕೂಡ ಮಹಾರುದ್ರ ದೇವರ ಜೊತೆ ಆಗಮಿಸಿದ್ದರು. ಬೇತಾಳರು, ಬ್ರಹ್ಮರಾಕ್ಷಸರು, ಭೂತಪ್ರೇತ-ಪಿಶಾಚಾದಿಗಳು, ಪ್ರಮಥಗಣಗಳು, ಚಂಡಿ ಮೊದಲಾದವರು, ಶಾಕಿನೀ ಮೊದಲಾದವರು ಲಕ್ಷ-ಲಕ್ಷ ಸಂಖ್ಯೆಯಲ್ಲಿ ಆಗಮಿಸಿದ್ದರು. ಮೆರವಣಿಗೆಯು ಹೊರಟಿತು. ಮುಂಭಾಗದಲ್ಲಿ ಅಪ್ಸರೆಯರು ನರ್ತನ ಮಾಡಿದರು. ಗಂಧರ್ವರು ಗಾಯನ ಮಾಡಿದರು.

ಶುದ್ಧಸ್ಫಟಿಕ ಕಾಂತಿಯುಳ್ಳ ಗಜಾರೂಢರಾದ ಮಹಾರುದ್ರದೇವರು ಪಾಣಿಗ್ರಹಣಕ್ಕಾಗಿ ಶ್ರೇಷ್ಠ ಪರ್ವತವಾದ ಹಿಮಾಲಯವನ್ನು ಕುರಿತು ಹೊರಟರು.

ಮಹಾರುದ್ರದೇವರ ಮತ್ತು ಪಾರ್ವತಿಯ ವಿವಾಹಕ್ಕೆ ಹಿಮವಂತನು ದೇವಶಿಲ್ಪಿಯಾದ ವಿಶ್ವಕರ್ಮನನ್ನು ಕರೆಯಿಸಿ ಚೇತೋಹಾರಿಯಾದ ಕಲ್ಯಾಣಮಂಟಪವನ್ನು ರಚನೆ ಮಾಡಿಸಿದ್ದನು. ಆ ಮಂಟಪವು ಸಮಸ್ತ ಸೌಂದರ್ಯದಿಂದ ಕಂಗೊಳಿಸುತ್ತಿತ್ತು. ಅತ್ಯಂತ ಆಶ್ಚರ್ಯಭರಿತವಾಗಿತ್ತು. ಹತ್ತುಸಾವಿರ ಯೋಜನಗಳಷ್ಟು ವಿಸ್ತಾರವಾಗಿತ್ತು. ಅನೇಕ ಸರೋವರಗಳಿದ್ದವು. ಲಕ್ಷಾಂತರ ಸಂಖ್ಯೆಯಲ್ಲಿ ಆಗಮಿಸಿದ ದೇವತೆಗಳಿಗೆ, ಋಷಿಮುನಿಗಳಿಗೆ ಇಳಿದುಕೊಳ್ಳಲು ಪ್ರತ್ಯೇಕವಾದ ಭವನಗಳಿದ್ದವು. ಸಿಂಹ, ಹಂಸ, ನವಿಲು, ಕುದುರೆ, ಜಿಂಕೆ ಇವುಗಳನ್ನು ಕೃತಕವಾಗಿ ನಿರ್ಮಾಣ ಮಾಡಲ್ಪಟ್ಟರೂ ಜೀವಂತವಾಗಿರುವಂತೆ ಕಾಣಿಸುತ್ತಿತ್ತು. ಚಾಮರಗಳನ್ನು ಹಿಡಿದು ಬೀಸುತ್ತಿರುವ ಚಿತ್ರಗಳು, ಕೃತ್ರಿಮಪುರುಷರು ಪುಷ್ಪಮಾಲೆಗಳನ್ನು ಧರಿಸಿರುವುದು ಇವೇ ಮೊದಲಾದ ಚಿತ್ರಗಳು ಹಾಗೂ ಗೊಂಬೆಗಳು ನಿಜವಾಗಿರುವಂತೆ ಕಾಣಿಸುತ್ತಿದ್ದವು. ಕ್ಷೀರಸಾಗರದಿಂದ ಪ್ರಾದುರ್ಭೂತಳಾದ ಮಹಾಲಕ್ಷ್ಮಿಯು ವಿವಾಹಮಂಟಪದಲ್ಲಿ ಚಿತ್ರಿತಳಾಗಿದ್ದಳು. ಸಾಕ್ಷಾತ್ ಲಕ್ಷ್ಮಿಯೇ ವಿವಾಹಮಂಟಪವಾಗಿ ಪರಿಣಮಿಸಿದ್ದಾಳೆಂಬಂತೆ ಕಾಣಿಸುತ್ತಿತ್ತು. ಸಭೆಯ ಬಾಗಿಲಿನಲ್ಲಿ ನಂದಿಯು ಚಿತ್ರಿತನಾಗಿದ್ದನು. ಇಷ್ಟೇ ಅಲ್ಲದೇ ಆಯಾ ದೇವತೆಗಳ ಭವನಗಳಲ್ಲಿ ಆಯಾ ದೇವತೆಗಳಿಗೆ ಸಂಬಂಧಪಟ್ಟ ಚಿತ್ರಗಳನ್ನು, ಬೊಂಬೆಗಳನ್ನು ರಚಿಸಿದ್ದನು. ಸ್ವರ್ಗಲೋಕವನ್ನು ಮೀರಿಸುವಂತಿತ್ತು. ಅತ್ಯದ್ಭುತವಾದ ವಿವಾಹಮಂಟಪದ ಸೌಂದರ್ಯವನ್ನು ಸವಿಯಲೇ ಎಲ್ಲರೂ ಕೌತುಕರಾಗಿದ್ದರು.

ನಾರದರು ಹಿಮವಂತನಿಗೆ ರುದ್ರದೇವರು ಬರುತ್ತಿರುವ ವಿಷಯ ತಿಳಿಸಿದರು. ಸ್ವಾಗತಕ್ಕೆ ಸಕಲ ಸಿದ್ಧತೆಗಳನ್ನು ಮಾಡಿಕೊಳ್ಳುವಂತೆ ಸೂಚನೆ ಮಾಡಿದರು. ಮತ್ತು ತನ್ನ ಪರ್ವತಕ್ಕೆ ಬರುವ ಮೊದಲೇ ರುದ್ರದೇವರನ್ನು ಕಂಡು ಸ್ವಾಗತ ಮಾಡುವಂತೆ

ಮಾರ್ಗದರ್ಶನ ಮಾಡಿದರು. ಅನಂತರ ಅದೇ ನಾರದರು ರುದ್ರದೇವರ ಬಳಿ ಬಂದು ಅಲ್ಲಿ ನಡೆದ ಸಿದ್ಧತೆಗಳ ಬಗ್ಗೆ ತಿಳಿಸಿದರು. ಇಂದ್ರಾದಿ ದೇವತೆಗಳ ಸಮೀಪದಲ್ಲಿ ವಿಶ್ವಕರ್ಮನಿರ್ಮಿತವಾದ ಭವನದ ಬಗ್ಗೆ ಸುಂದರವಾಗಿ ವರ್ಣನೆಯನ್ನು ಮಾಡಿದರು. ನಾರದರ ಮಾರ್ಗದರ್ಶನದಂತೆ ಹಿಮವಂತನು ಮೇನಾದೇವಿಯ ಜೊತೆ ಸ್ವಾಗತ ಮಾಡುವುದಕ್ಕಾಗಿ ಆಗಮಿಸಿದನು. ಮೆರವಣಿಗೆಯಲ್ಲಿ ಆಗಮಿಸುತ್ತಿದ್ದ ಮಹಾರುದ್ರದೇವರ ಸೌಂದರ್ಯದ ಪರಾಕಾಷ್ಠೆಯನ್ನು ಕಂಡು ಅತ್ಯಂತ ಅಚ್ಚರಿ ಭರಿತನಾದನು. ಮೇನಾದೇವಿಯು ತನ್ನ ಮಗಳ ಜನ್ಮವು ಸಾರ್ಥಕವಾಯಿತು. ಹಿಮವಂತರಾಜ ಮತ್ತು ಮೇನಾದೇವಿಯರು ರುದ್ರದೇವರನ್ನು ಸಂದರ್ಶನ ಮಾಡಿದ ಆ ಸುಮಂಗಲ ಸಮಯದಲ್ಲಿ ದೇವತೆಗಳು ಮಂದಾರಪುಷ್ಪವೃಷ್ಟಿಯನ್ನು ಮಾಡಿದರು. ವಿವಾಹ ಮಂಟಪಕ್ಕೆ ಬಂದ ಮೇಲೆ ರುದ್ರದೇವರು ಗಜರಾಜನಿಂದ ಕೆಳಗೆ ಇಳಿದರು. ಸಕಲ ವೈಭವೋಪೇತವಾದ ವರಪೂಜೆಯನ್ನು ಹಿಮವಂತರಾಜ ಹಾಗೂ ಅವನ ಕಡೆಯವರು ಅಲ್ಲಿ ನಡೆಸಿದರು. ಮಂಗಳಪೀಠದ ಮೇಲೆ ರುದ್ರದೇವರನ್ನು ಕೂಡಿಸಿ, ಮೇನಾದೇವಿಯು ತನ್ನ ಸಖೀಜನರ ಜೊತೆ ಆರತಿಯನ್ನು ಬೆಳಗಿದಳು. ಮಧುಪರ್ಕ ಮೊದಲಾದ ವಿಧಿಗಳನ್ನು ವೈಭವೋಪೇತವಾಗಿ ಆಚರಿಸಿದಳು. ರುದ್ರದೇವರ ಪರಮಾದ್ಭುತವಾದ ಅನಿರ್ವಾಚ್ಯವಾದ ಸೌಂದರ್ಯರಾಶಿಯನ್ನು ಕಂಡು ಪ್ರತಿಯೊಬ್ಬರೂ ನಿಬ್ಬೆರಗಾದರು. ಪ್ರತಿಯೊಬ್ಬರ ಬಾಯಿಯಲ್ಲಿ ರುದ್ರದೇವರ ಸೌಂದರ್ಯದ ವರ್ಣನೆಯೇ ತುಂಬಿತ್ತು.

## ವರಪೂಜೆಯ ವೈಭವ

ಎಲ್ಲ ಪರ್ವತರಾಜರ ಪತ್ನಿಯರು ಸರ್ವಾಲಂಕಾರ ವಿಭೂಷಿತರಾಗಿದ್ದರು. ಮೇನಾದೇವಿಯ ಸಖಿಯರಾದ ಅವರೆಲ್ಲರೂ ಒಂದೊಂದು ಬಗೆಯಲ್ಲಿ ವರಪೂಜೆಯನ್ನು ಮಾಡುವುದಕ್ಕಾಗಿ ಪಾಲ್ಗೊಂಡಿದ್ದರು. ಮಂಗಳರೂಪಿಯಾದ ಶಿವನಿಗೆ ವರಪೂಜೆಯಲ್ಲಿ ಮತ್ತಷ್ಟು ಮಂಗಳದ ಘೋಷಣೆಗಳನ್ನು ಜಯಕಾರದ ಘೋಷಣೆಗಳನ್ನು ಮಾಡುತ್ತಿದ್ದರು. ಬಗೆಬಗೆಯ ಮಂಗಳವಾದ್ಯಗಳು

ದಿಕ್ಕು-ವಿದಿಕ್ಕುಗಳಲ್ಲಿ ಪ್ರತಿಧ್ವನಿಸಿದವು. ಮೇನಾದೇವಿಯು ಅದೇ ಸಂದರ್ಭದಲ್ಲಿ ಆರತಿಯನ್ನು ಮಾಡಿದಳು. ಹೀಗೆ ಸಮಸ್ತ ದೇವತೆಗಳು ಋಷಿಮುನಿಗಳೆಲ್ಲರೂ ವರಪೂಜೆಯಲ್ಲಿ ಪಾಲ್ಗೊಂಡು ಹಿಂದೆ-ಮುಂದೆ ಎಂದೂ ನೋಡಲು, ಕೇಳಲು ಸಾಧ್ಯವಾಗದಷ್ಟು ವೈಭವದಲ್ಲಿ ವರಪೂಜೆಯ ಕಾರ್ಯಕ್ರಮವು ವಿಜೃಂಭಣೆಯಿಂದ ನಡೆಯಿತು.

## ಶಿವ-ಪಾರ್ವತಿಯರ ವಿವಾಹ ಮಹೋತ್ಸವದ ವರ್ಣನೆ

ವಿವಾಹದ ದಿವಸ ಉಷಃಕಾಲದಲ್ಲಿ ಎಲ್ಲಾ ಪತಿವ್ರತಾಸ್ತ್ರೀಯರು ಎದ್ದು ರುದ್ರದೇವರಿಗೆ ಆರತಿಯನ್ನು ಬೆಳಗಿದರು. ಕ್ಷೀರಾಭಿಷೇಕವನ್ನು ಮಾಡಿದರು. ಅಭ್ಯಂಗಸ್ನಾನವನ್ನು ಮಾಡಿಸಿದರು. ಮಂಗಳಸ್ನಾನವನ್ನು ಮಾಡಿಸಿ, ಸಕಲವಿಧವಾದ ಆಭರಣಗಳನ್ನು ನೀಡಿ ಅಲಂಕರಿಸಿದರು. ಅನಿರ್ವಾಚ್ಯ- ಸೌಂದರ್ಯದ ರಾಶಿಯಂತಿರುವ ರುದ್ರದೇವರ ಆ ಸ್ವರೂಪವನ್ನು ಪ್ರತಿಯೊಬ್ಬರೂ ಎವೆಯಿಕ್ಕದೇ ನೋಡುತ್ತಿದ್ದರು. ಸುಮುಹೂರ್ತಕಾಲವು ಸನ್ನಿಹಿತವಾದಾಗ ಗರ್ಗಾಚಾರ್ಯರು ವಿವಾಹದ ಪೌರೋಹಿತ್ಯಕಾರ್ಯವನ್ನು ಪ್ರಾರಂಭ ಮಾಡಿದರು.

ಹಿಮವಂತನ ಮಗಳಾದ ಗಿರಿಜೆಯು ಸರ್ವಾಲಂಕಾರವಿಭೂಷಿತಳಾಗಿದ್ದಳು. ಪ್ರಾತಃಕಾಲದಲ್ಲಿ ಮಂಗಳಸ್ನಾನವನ್ನು ಮಾಡಿ, ಅತ್ಯಂತ ಶುದ್ಧವಾಗಿ ಕಂಗೊಳಿಸುತ್ತಿದ್ದಳು. ತನ್ನ ಅಂತರ್ಯಾಮಿಯಾದ ಲಕ್ಷ್ಮೀದೇವಿಯನ್ನು ವಿಶೇಷವಾಗಿ ಪೂಜಿಸಿದಳು.

ಗರ್ಗಾಚಾರ್ಯರು 'ಪುಣ್ಯಾಹಕಾಲವು ಸನ್ನಿಹಿತವಾಗಿದೆ'. ವರನನ್ನು ಕರೆದುಕೊಂಡು ಬನ್ನಿರಿ ಎಂಬುದಾಗಿ ಆಜ್ಞೆಯನ್ನು ಮಾಡಿದರು. ಆ ಸಂದರ್ಭದಲ್ಲಿ ಎಲ್ಲೆಡೆಯೂ ವಾದ್ಯಘೋಷಗಳು ಮೊಳಗಿದವು. ಎರಡೂ ಪಕ್ಷದವರು ಪುಣ್ಯಾಹ ಕಾರ್ಯವನ್ನು ಮುಗಿಸಿದ ಮೇಲೆ ವಿವಾಹ ಕಾರ್ಯಕ್ರಮವು ಪ್ರಾರಂಭವಾಯಿತು.

ಸರ್ವಾಭರಣಭೂಷಿತೆಯೂ ಕೋಮಲಾಂಗಿಯೂ ಆದ ಪಾರ್ವತಿಯು ಅಂತರ್ವೇದಿಯನ್ನು ಪ್ರವೇಶಿಸಿದಳು. ಮುತ್ತು-ರತ್ನ, ವಜ್ರ-ವೈಢೂರ್ಯ, ಮಾಣಿಕ್ಯ

ಮೊದಲಾದ ಆಭರಣಗಳಿಂದ ಅಲಂಕೃತಳಾಗಿದ್ದಳು. ಲಕ್ಷ್ಮೀದೇವಿಯಂತೆ ಕಂಗೊಳಿಸುತ್ತಿದ್ದಳು. ಅವಳಿದ್ದ ಹಸೆಗೆ ಮಹಾರುದ್ರದೇವರನ್ನು ಬ್ರಹ್ಮದೇವರು ಹಾಗೂ ಮಹಾವಿಷ್ಣು ಇಬ್ಬರು ಕೈಹಿಡಿದು ಕರೆದುಕೊಂಡು ಬಂದರು. ಬೃಹಸ್ಪತ್ಯಾಚಾರ್ಯರೇ ಮೊದಲಾದವರು ಲಗ್ನವನ್ನು ನಿರೀಕ್ಷಿಸುತ್ತಿದ್ದರು. ಗರ್ಗಾಚಾರ್ಯರು ಘಟಿಕಾಲಯದಲ್ಲಿ ಕುಳಿತು ಲಗ್ನದ ಘಳಿಗೆಗಾಗಿ ಕಾಯುತ್ತಿದ್ದರು. ಲಗ್ನವು ಪ್ರಾಪ್ತವಾದಾಗ 'ಓಂ ಪುಣ್ಯಾಹಂ' ಎಂಬುದಾಗಿ ಉಚ್ಚರಿಸಿದರು. ಆ ಸಂದರ್ಭದಲ್ಲಿ ದಿಕ್ಕು-ವಿದಿಕ್ಕುಗಳಲ್ಲಿ ವೇದಘೋಷಗಳು ಮೊಳಗಿದವು. ಮಂಗಳಾಷ್ಟಕಗಳನ್ನು ಎಲ್ಲರೂ ಉಚ್ಚರಿಸಿದರು. ಅಂತಃಪಟವನ್ನು ಮಧ್ಯದಲ್ಲಿ ಹಿಡಿದಿದ್ದರು. ಪಾರ್ವತೀ ಹಾಗೂ ಪರಮೇಶ್ವರರಿಬ್ಬರು ಕೈಯಲ್ಲಿ ಅಕ್ಷತೆಯನ್ನು ಹಿಡಿದುಕೊಂಡಿದ್ದರು. ಸರಿಯಾದ ಲಗ್ನದಲ್ಲಿ ಗರ್ಗಾಚಾರ್ಯರ ಮಾರ್ಗದರ್ಶನದಂತೆ ಅಂತಃಪಟವನ್ನು ಸರಿಸಲಾಯಿತು. ಪಾರ್ವತಿಯು ಅಂಜಲಿಯಿಂದ ಶಿವನ ಮೇಲೆ ಅಕ್ಷತೆಯ ಸುವೃಷ್ಟಿಗೈದಳು. ಅನಂತರ ರುದ್ರದೇವರೂ ಕೂಡ ಸತೀದೇವಿಯ ಮೇಲೆ ಅಕ್ಷತೆಕಾಳುಗಳನ್ನು ಹಾಕಿ ಆಶೀರ್ವದಿಸಿದರು. ಪಾರ್ವತಿಯು ರುದ್ರದೇವರ ಮುಖಕಮಲವನ್ನು ನೋಡಿದಳು. ರುದ್ರದೇವರು ಪಾರ್ವತಿಯ ನಾಭಿಸರಸ್ಸನ್ನು ಕಂಡರು. ಅನಂತರ ಅಕ್ಷತೆ, ಕುಶ ಮೊದಲಾದವುಗಳಿಂದ ಗಿರಿಜೆಯು ರುದ್ರದೇವರನ್ನು ಪೂಜಿಸಿದಳು.

ಓಂ ಪುಣ್ಯೇತಿ ಪ್ರಣಿಗದನ್ ಗರ್ಗೋ ವಧ್ವಂಜಲಿಂ ದಧೇ ।
ಪಾರ್ವತ್ಯಕ್ಷತಪೂರ್ಣಂ ಚ ಶಿವೋಪರಿ ವವರ್ಷ ವೈ ॥
ತಯಾ ಸಂಪೂಜಿತೋ ರುದ್ರೋ ದಧ್ಯಕ್ಷತ ಕುಶಾದಿಭಿಃ ।
ಮುದಾ ಪರಮಯಾ ಯುಕ್ತಾ ಪಾರ್ವತೀ ರುಚಿರಾನನಾ ॥
ವಿಲೋಕಯಂತೀ ಶಂಭುಂ ತಂ ಯದರ್ಥೇ ಪರಮಂ ತಪಃ ।
ಕೃತಂ ಪುರಾ ಮಹಾದೇವ್ಯಾ ಪರೇಷಾಂ ಪರಮಂ ಮಹತ್ ॥

ಯಾರಿಗಾಗಿ ಅತ್ಯಂತ ಶ್ರೇಷ್ಠವಾದ ಯಾರಿಂದಲೂ ಮಾಡಲಸಾಧ್ಯವಾದ ತಪಸ್ಸನ್ನು ಆಚರಿಸಿದಳೋ, ಅದರ ಫಲವನ್ನು ಇಂದು ಅನುಭವಿಸಿ ತಾನೇ ಧನ್ಯಳೆಂದು ಭಾವಿಸಿದಳು. ಪಾರ್ವತಿಯು ಮಹಾರುದ್ರದೇವರ ಮುಖವನ್ನೇ ನೋಡುತ್ತಿದ್ದಳು.

ಆ ಸಂದರ್ಭದಲ್ಲಿ ಸನಕಾದಿ ಋಷಿಗಳು ಗರ್ಗಾಚಾರ್ಯರು ರುದ್ರದೇವರನ್ನು ಕುರಿತು ಹೀಗೆ ಹೇಳಿದರು - ತ್ರಿಲೋಚನನೇ ! ಪಾರ್ವತೀದೇವಿಗೆ ನೀನು ಪ್ರತಿಯಾಗಿ ಪೂಜೆಯನ್ನು ಮಾಡಬೇಕು ಎಂದು. ಅದರ ಪ್ರಕಾರ ರುದ್ರದೇವರೂ ಕೂಡ ಪ್ರತಿಯಾಗಿ ಪೂಜೆಯನ್ನು ಮಾಡಿದರು. ಪಾರ್ವತೀ-ಪರಮೇಶ್ವರರಿಬ್ಬರು ಒಟ್ಟಿಗೆ ಕುಳಿತುಕೊಂಡರು. ಮಹಾಲಕ್ಷ್ಮೀದೇವಿ, ಸರಸ್ವತೀದೇವಿ ಮೊದಲಾದವರು ಆರತಿಯನ್ನು ಬೆಳಗಿದರು. ಅರುಂಧತಿದೇವಿಯೂ ಕೂಡ ನವದಂಪತಿಗಳಿಗೆ ಆರತಿಯನ್ನು ಮಾಡಿದಳು. ಪ್ರತಿಯೊಬ್ಬರೂ ಅಡಿಗಡಿಗೂ ಮಹದಾನಂದಭರಿತರಾಗುತ್ತಿದ್ದರು. ಈ ಸಂದರ್ಭದಲ್ಲಿ ಗರ್ಗಾಚಾರ್ಯರು ಹೇಳಿದ ಪ್ರಕಾರ ಹಿಮವಂತರಾಜನು ಕನ್ಯಾದಾನವನ್ನು ಮಾಡಲು ಉದ್ಯುಕ್ತನಾದನು. ಆಗ ಮೇನಾದೇವಿಯು ಸುವರ್ಣಕಲಶಗಳನ್ನು ತೆಗೆದುಕೊಂಡಳು. ಬ್ರಹ್ಮದೇವರ ಹಾಗೂ ಮಹಾವಿಷ್ಣುವಿನ ದಿವ್ಯಸನ್ನಿಧಾನದಲ್ಲಿ ಹಿಮವಂತರಾಜನಿಗೆ ತನ್ನ ಮಗಳನ್ನು ದಾನ ಮಾಡುವ ಅತ್ಯಂತ ಪುಣ್ಯಕಾಲವು ಪ್ರಾಪ್ತವಾಯಿತು. ಗರ್ಗಾಚಾರ್ಯರು ಮಾಡಿಸಿದ ಸಂಕಲ್ಪದ ಪ್ರಕಾರ ಕನ್ಯಾದಾನವನ್ನು ಮಾಡುತ್ತೇನೆ ಎಂಬುದಾಗಿ ಸಂಕಲ್ಪವನ್ನು ಮಾಡಿದನು.

ಬ್ರಹ್ಮಣಾ ಸಹ ಸಂಗತ್ಯಾ ವಿಷ್ಣುನಾ ಚ ತಥೈವ ಚ ।
ಸಾರ್ಥಂ ಪುರೋಧಸಾ ಚೈವ ಗರ್ಗೇಣ ಸುಮಹಾತ್ಮನಾ ।
ಕನ್ಯಾದಾನಂ ಕರೋಮ್ಯದ್ಯ ದೇವದೇವಸ್ಯ ಶೂಲಿನಃ ॥

ಆ ಸಂದರ್ಭದಲ್ಲಿ ಎಲೈ ವಿಪ್ರರೇ ! ರುದ್ರದೇವರ ಗೋತ್ರ ಯಾವುದು ? ಕುಲ ಯಾವುದು ? ಎಂಬುದಾಗಿ ತಿಳಿಸಿರಿ ಎಂದು ಕೇಳಿದನು. ಆದರೆ ಯಾವ ಬ್ರಾಹ್ಮಣರೂ ಕೂಡ ಉತ್ತರವನ್ನು ನೀಡಲಿಲ್ಲ. ರುದ್ರದೇವರಿಗೆ ಒಂದು ಬಗೆಯಲ್ಲಿ ವಿಷಾದವಾಯಿತು. ಆಗ ನಾರದರು ಆ ಹಿಮವಂತನನ್ನು ಕುರಿತು ಉತ್ತರಿಸಿದರು.

ಗಿರಿರಾಜನೇ ಪರಮೇಶ್ವರನ ಕುಲಗೋತ್ರಗಳು ಯಾವುದೂ ಇರುವುದಿಲ್ಲ. ಸಕಲ ಕುಲಗೋತ್ರದವರಿಗೆ ಸದ್ಗತಿಯನ್ನು ನೀಡುವ ಶ್ರೇಷ್ಠನಾದ ದೇವನೇ ಈ

ಮಹಾರುದ್ರದೇವನು. ಸಮಸ್ತ ಜಗತ್ತನ್ನು ಸೃಷ್ಟಿಸುವ, ಸಂಹಾರ ಮಾಡುವ ಸಾಮರ್ಥ್ಯವಿರುವವನು ಎಂದು ಹೇಳಿದರು. (ಋಷಿಮುನಿಗಳು ದೇವತೆಗಳಿಗಿಂತ ಅತ್ಯಂತ ಅಧಮರಾಗಿರುತ್ತಾರೆ. ಅವರಿಂದ ಕುಲಗೋತ್ರಗಳು ಪ್ರಾರಂಭವಾಗಿವೆ. ಅವರಿಗಿಂತ ಉತ್ತಮರಾದ ದೇವತೆಗಳಿಗೆ ಯಾವುದೇ ಕುಲಗೋತ್ರಗಳಿರುವುದಿಲ್ಲ. ಋಷಿಮುನಿಗಳ ವಂಶದಲ್ಲಿ ಆಗಮಿಸಿದ ಮನುಷ್ಯರಿಗೆ ಕುಲಗೋತ್ರಗಳು ಇರುತ್ತವೆ. ದೇವತೆಗಳು ಮನುಷ್ಯರಾಗಿ ಅವತರಿಸಿದಾಗಷ್ಟೇ ಅವರಿಗೆ ಕುಲಗೋತ್ರಗಳು ಇರುತ್ತವೆ. ನಿಜರೂಪದಲ್ಲಿ ಇರುವುದಿಲ್ಲ ಎಂಬ ಭ್ರಾಂತಿ ಬರುತ್ತದೆ. ಆದರೆ ಸಕಲದೇವತೆಗಳು ಕಶ್ಯಪರಿಂದ ಹುಟ್ಟಿದಾಗ ಕಾಶ್ಯಪರೇ ಆಗುತ್ತಾರೆ. ಬ್ರಹ್ಮದೇವರಿಂದ ಹುಟ್ಟಿದಾಗ ಬ್ರಹ್ಮಗೋತ್ರದವರಾಗುತ್ತಾರೆ).

## ಕನ್ಯಾದಾನ ಮಾಡಿ ಧನ್ಯನಾದ ಹಿಮವಂತ

ಸಕಲ ಪರ್ವತಶ್ರೇಷ್ಠರು ಹಿಮವಂತನನ್ನು ಕುರಿತು ಹೇಳುತ್ತಾರೆ - ಪರ್ವತರಾಜನೇ! ಕನ್ಯಾದಾನದ ಸುಮುಹೂರ್ತ ಕಾಲವು ಪ್ರಾಪ್ತವಾಗಿದೆ. ಮಹಾರುದ್ರದೇವರು ನಿನಗೆ ಅಳಿಯನಾಗಿ ದೊರತಿದ್ದು ನಿನ್ನ ಭಾಗ್ಯೋದಯವೆಂದೇ ತಿಳಿದುಬಿಡು. ಏನನ್ನೂ ಯೋಚನೆ ಮಾಡದೇ, ಆ ಪರಮೇಶ್ವರನಿಗೆ ಗಿರಿಜೆಯನ್ನು ಕೊಟ್ಟು ವಿವಾಹ ಮಾಡು ಎಂದು ಹೇಳಿದರು. ಚತುರ್ಮುಖ ಬ್ರಹ್ಮದೇವರ ಹಾಗೂ ಪರಮಾತ್ಮನ ಅನುಜ್ಞೆಯನ್ನು ಪಡೆದ ಹಿಮವಂತನು ಹೀಗೆ ಸಂಕಲ್ಪವನ್ನು ಮಾಡಿದನು - ಓ ಪರಮೇಶ್ವರನೇ ! ನಾನು ನನ್ನ ಮಗಳಾದ 'ಪಾರ್ವತಿ' ಎಂಬ ಕನ್ಯೆಯನ್ನು ನಿನಗೆ ದಾನ ಮಾಡುತ್ತೇನೆ. ನೀನು ಇವಳನ್ನು ಭಾರ್ಯೆಯನ್ನಾಗಿ ಪರಿಗ್ರಹ ಮಾಡು.

ಇಮಾಂ ಕನ್ಯಾಂ ತುಭ್ಯಮಹಂ ದದಾಮಿ ಪರಮೇಶ್ವರ ।
ಭಾರ್ಯಾರ್ಥಂ ಪ್ರತಿಗೃಹ್ಣೀಷ್ವ ಮಂತ್ರೇಣಾನೇನ ದತ್ತವಾನ್ ।
ಅಸ್ಮೈ ರುದ್ರಾಯ ಮಹತೇ ದೇವದೇವಾಯ ಶಂಭವೇ ।
ಕನ್ಯಾ ದತ್ತಾ ಮಹೇಶಾಯ ಗಿರೀಂದ್ರೇಣ ಮಹಾತ್ಮನಾ ॥

ಹೀಗೆ ಹೇಳಿ ಧಾರೆಯನ್ನು ಎರೆದು ಕನ್ಯಾದಾನವನ್ನು ಮಾಡಿದನು.

ಜ್ಯೋತಿರ್ಭೀಮೇಶ್ವರ ವ್ರತ

ಅನಂತರ ಕಮಲೇಕ್ಷಣರಾದ ಪಾರ್ವತೀ-ಪರಮೇಶ್ವರರು ಅಂತರ್ವೇದಿಯಿಂದ ಹೊರಗೆ ಬಂದರು. ಅನಂತರ ಹೋಮಕಾರ್ಯವು ನಡೆಯಿತು. ಹೋಮವೆಲ್ಲವೂ ಮುಗಿದ ಮೇಲೆ ಪಾರ್ವತೀ ಪರಮೇಶ್ವರರನ್ನು ಉಚ್ಚಕಂಠದಿಂದ ಆಶೀರ್ವಾದ ಮಂತ್ರಗಳನ್ನು ಹೇಳಿ, ಎಲ್ಲಾ ದೇವತೆಗಳು, ಬ್ರಾಹ್ಮಣರು ಶಿವ-ಪಾರ್ವತಿಯರ ತಲೆಯ ಮೇಲೆ ರತ್ನಾಕ್ಷತೆ, ಮಂತ್ರಾಕ್ಷತೆಗಳನ್ನು ಹಾಕಿದರು. ದೇವಲೋಕದ ಮಂಗಳಾಂಗಿಯರು ಆ ಮಹಾದೇವ ದಂಪತಿಗಳಿಗೆ ಆರತಿಯನ್ನು ಬೆಳಗಿದರು. ಹಿಮಾಚಲದ ಮುತ್ತೈದೆಯರು, ಋಷಿಪತ್ನಿಯರು ಬೇರೆ ಬೇರೆಯಾಗಿ ಬಂದು ವಧು-ವರರಿಗೆ ಆರತಿಯನ್ನು ಬೆಳಗಿದರು. ಗಂಧರ್ವರೇ ಮೊದಲಾದವರು ಶಿವ-ಪಾರ್ವತಿಯರನ್ನು ಕೊಂಡಾಡಿದರು.

ಹಿಮವಂತನು ಆಗಮಿಸಿದ ಬ್ರಾಹ್ಮಣರಿಗೆ, ಋತ್ವಿಜರಿಗೆ, ಮುನಿಮಹರ್ಷಿಗಳಿಗೆ ಯಥೇಚ್ಛ ದಾನ-ದಕ್ಷಿಣೆಗಳನ್ನು ನೀಡಿದನು. ಅಮೂಲ್ಯವಾದ ರತ್ನಗಳನ್ನು ಉಡುಗೊರೆಯನ್ನಾಗಿ ನೀಡಿದನು. ಹೀಗೆ ವಿವಾಹ ಕಾರ್ಯವು ಮುಗಿಯುತ್ತಿರಲು ಪ್ರತಿಯೊಬ್ಬರಿಗೂ ಸುಗ್ರಾಸ ಭೋಜನವನ್ನು ಏರ್ಪಾಡು ಮಾಡಿದ್ದನು. ಮಹಾವಿಷ್ಣುವಿಗೆ ಮೊದಲು ಸಮಸ್ತ ಪದಾರ್ಥಗಳನ್ನು ಸಮರ್ಪಿಸಿದನು. ಅನಂತರ ಚತುರ್ಮುಖಬ್ರಹ್ಮದೇವರಿಗೆ ಭೋಜನವನ್ನು ಬಡಿಸಿ, ಉಳಿದೆಲ್ಲ ದೇವತೆಗಳಿಗೆ ತೃಪ್ತಿಪಡುವಷ್ಟು, ವಿವಿಧ ಭಕ್ಷ್ಯಭೋಜ್ಯಗಳನ್ನು ಬಡಿಸಿದನು. ಎಲ್ಲಾ ಶಿವಗಣದವರು ಭೋಜನವನ್ನು ಬಡಿಸಿದರು. ಹನ್ನೊಂದು ಕೋಟಿ ಸಂಖ್ಯೆಯಲ್ಲಿ ಶಿವಭಕ್ತರು ಪಾರ್ವತೀ-ಪರಮೇಶ್ವರರ ವಿವಾಹಕ್ಕೆ ಆಗಮಿಸಿದ್ದರು. ಮೂವತ್ಮೂರು ಕೋಟಿ ದೇವತೆಗಳು ಬಂದಿದ್ದರು. ಕೋಟ್ಯಂತರ ಸಂಖ್ಯೆಯಲ್ಲಿ ಋಷಿಮುನಿಗಳೂ ಕೂಡ ವಿವಾಹಮಹೋತ್ಸವಕ್ಕೆ ಆಗಮಿಸಿದ್ದರು. ಪ್ರತಿಯೊಬ್ಬರೂ ಕೂಡ ಭೋಜನದಿಂದ, ಆತಿಥ್ಯದಿಂದ ತುಷ್ಟರಾದರು, ಸಂತೃಪ್ತರಾದರು. ತಾವೇ ಧನ್ಯರೆಂದು ಭಾವಿಸಿದರು. ಪರ್ವತರಾಜನು ಅಳಿಯನಾದ ಮಹಾರುದ್ರದೇವರಿಗೆ ಅಸಂಖ್ಯವಾದ ರತ್ನಾಭರಣಗಳನ್ನಿಟ್ಟು ಪೂಜಿಸಿದನು. ಶಿವಪರಿವಾರದವರೆಲ್ಲರಿಗೂ ವಿಶೇಷವಾಗಿ ಸತ್ಕಾರಗಳನ್ನು ಮಾಡಿ ಗೌರವಿಸಿದನು.

ಶಿವ-ಪಾರ್ವತಿಯರ ವಿವಾಹಮಂಗಳವು ಪ್ರತಿಯೊಬ್ಬರ ಮನಸ್ಸಿಗೆ ಆನಂದವನ್ನು ತಂದಿತು. ಪ್ರತಿಯೊಬ್ಬರ ಅಮಾಂಗಲ್ಯಗಳು ಪರಿಹಾರವಾದವು. ತ್ರಿಲೋಕಗಳಲ್ಲಿ ಪ್ರತಿಯೊಬ್ಬರೂ ಅಂದು ಪುಣ್ಯಶಾಲಿಗಳಾದರು. ಪರಮಪುರುಷನಾದ ಮಹೇಶ್ವರನಿಗೆ ಕನ್ಯಾದಾನವನ್ನು ಮಾಡಿ ಧನ್ಯನಾದ ಆ ಹಿಮವತ್‌ಪರ್ವತನು ಭಕ್ತಿಯಿಂದ ಶಿವ ನಾಮೋಚ್ಚಾರಣೆಯನ್ನು ಮಾಡಿದನು -

ತೇ ಧನ್ಯಾಸ್ತೇ ಮಹಾತ್ಮಾನಃ ಕೃತಕೃತ್ಯಾಸ್ತ ಏವ ಹಿ ।
ದ್ವ್ಯಕ್ಷರಂ ನಾಮ ಯೇಷಾಂ ವೈ ಜಿಹ್ವಾಗ್ರೇ ಸಂಸ್ಥಿತಂ ಸದಾ ॥
ಶಿವ ಇತ್ಯಕ್ಷರಂ ನಾಮ ಯ್ಯೆರುದೀರಿತಮದ್ಯ ವೈ ।
ತೇ ವೈ ಮನುಷ್ಯರೂಪೇಣ ರುದ್ರಾ ಸ್ಯುರ್ನಾತ್ರ ಸಂಶಯಃ ॥

'ಶಿವ' ಎಂಬ ಎರಡೇ ಅಕ್ಷರಗಳನ್ನು ಉಚ್ಚಾರ ಮಾಡಿದರೂ ಸಾಕು ಅವನು ಮಹಾತ್ಮನೆಂದು ಕರೆಸಿಕೊಳ್ಳುತ್ತಾನೆ. ಅವನ ಜನ್ಮವು ಸಾರ್ಥಕವಾಗುತ್ತದೆ. ಭೂಲೋಕದಲ್ಲಿ ಅವನು ಬಂದದ್ದೇ ಸಾರ್ಥಕವಾಗುತ್ತದೆ. ಭಕ್ತಿಯಿಂದ ಯಾರು ಶಿವನಾಮವನ್ನು ಪಠಿಸುತ್ತಾನೋ, ಅವನು ಮನುಷ್ಯದೇಹದಲ್ಲಿರುವ ದೇವತೆಯೇ ಆಗಿರುತ್ತಾನೆ. ಇಂಥ ಶ್ರೇಷ್ಠನಾದ ಶಿವನಿಗೆ ಕನ್ಯಾದಾನವನ್ನು ಮಾಡಿದ ಆ ಹಿಮಾಲಯನೇ ನಿಜವಾಗಿಯೂ ಕೂಡ ಧನ್ಯನಾದವನು.

## ತವರು ಮನೆಯಿಂದ ಗಂಡನ ಮನೆಗೆ ತೆರಳಿದ ಪಾರ್ವತಿ

ಚೈತ್ರ ಶುಕ್ಲ, ತೃತೀಯಾ ಶಿವ ಪಾರ್ವತಿಯ ವಿವಾಹವಾದನು. (ಅಗ್ನಿಪುರಾಣ ೧೭೮-೧-೨೦)

ಒಟ್ಟು ನಾಕು ದಿವಸಗಳ ಕಾಲ ವೈಭವದಲ್ಲಿ ಶಿವ-ಪಾರ್ವತಿಯರ ವಿವಾಹವು ನಡೆಯುತ್ತದೆ. ಐದನೆಯ ದಿವಸ ಸಾಕ್ಷಾತ್ ಮಹಾವಿಷ್ಣುವೇ ವರಪಕ್ಷದಲ್ಲಿದ್ದು ಕನ್ಯಾಪಕ್ಷದವರಿಗೆ ಔತಣವನ್ನು ಏರ್ಪಾಡು ಮಾಡುತ್ತಾನೆ. ಸ್ವತಃ ತಾನೇ ಪ್ರತಿಯೊಬ್ಬರಿಗೂ ಪೂಜೆಯನ್ನು ಮಾಡಿ ಸತ್ಕಾರವನ್ನು ಮಾಡುತ್ತಾನೆ. ಅನಂತರ

ಪ್ರತಿಯೊಬ್ಬರೂ ತಮ್ಮ ತಮ್ಮ ಆವಾಸಸ್ಥಾನಗಳಿಗೆ ಹಿಂತಿರುಗುತ್ತಾರೆ. ಮಹಾರುದ್ರದೇವರು ಪಾರ್ವತಿಯನ್ನು ಕರೆದುಕೊಂಡು, ಕೈಲಾಸ ಪರ್ವತಕ್ಕೆ ತೆರಳುತ್ತಾರೆ. ಆ ಸಂದರ್ಭದಲ್ಲಿ ಪ್ರತಿಯೊಬ್ಬರಿಗೂ ಅಪಾರವಾದ ದುಃಖವಾಗುತ್ತದೆ. ಪರ್ವತರಾಜನು ಅವನ ವಂಶದವರು ಬಂಧು-ಬಾಂಧವರು ಪ್ರತಿಯೊಬ್ಬರಿಗೂ ದುಃಖವು ಉಮ್ಮಳಿಸುತ್ತದೆ. ಮಂಗಳಕಾರ್ಯದಲ್ಲಿ ಕಣ್ಣೀರನ್ನಿಡಬಾರದೆಂದು ಭಾವಿಸಿ ತಡೆದುಕೊಳ್ಳುತ್ತಾರೆ.

ರುದ್ರದೇವರು ಪಾರ್ವತೀದೇವಿಯನ್ನು ಕರೆದುಕೊಂಡು ಕೈಲಾಸಕ್ಕೆ ಬರುತ್ತಾರೆ. ಮಾನಸಸರೋವರದ ಪ್ರಶಾಂತ ವಾತಾವರಣದಲ್ಲಿ ಅವಳನ್ನು ಕರೆದುಕೊಂಡು ಬಂದು ಅವಳಿಗೆ ಸಂಪೂರ್ಣವಾಗಿ ತೃಪ್ತಿ ಪಡಿಸುತ್ತಾರೆ. ರುದ್ರದೇವರಿಗೆ ಪಾರ್ವತಿಯ ಮೇಲೆ ಅದೆಷ್ಟು ಪ್ರೇಮವು ಉಲ್ಬಣಿಸಿತು ಎಂದರೆ ತಮ್ಮ ದೇಹದ ಅರ್ಧಭಾಗದಲ್ಲಿಯೇ ಪಾರ್ವತೀದೇವಿಯನ್ನು ಸೇರಿಸಿಕೊಳ್ಳುತ್ತಾರೆ. ಅರ್ಧನರನಾರೀಶ್ವರರಾಗುತ್ತಾರೆ. ಎಡತೊಡೆಯಲ್ಲಿ ಪಾರ್ವತಿದೇವಿಯನ್ನು ಕುಳ್ಳಿರಿಸಿಕೊಂಡು ನಿರಂತರವಾಗಿ ತತ್ತ್ವೋಪದೇಶವನ್ನು ಮಾಡುತ್ತಾರೆ. ಅವಳು ಕೇಳುವ ಪ್ರತಿಯೊಂದು ಪ್ರಶ್ನೆಗಳಿಗೂ ಉತ್ತರಿಸುತ್ತಾ, ಪರಮಾತ್ಮ ತತ್ತ್ವವನ್ನು ಸಂಪೂರ್ಣವಾಗಿ ತಿಳಿಸುತ್ತಾರೆ. ಪಾರ್ವತಿಯ ಜೊತೆ ಆಟವಾಡುತ್ತಾರೆ. ಅತ್ಯಂತ ಶುದ್ಧ ಪ್ರೇಮಯುಕ್ತನಾದ ಪತಿಯು ಹೆಂಡತಿಯನ್ನು ಹೇಗೆ ನೋಡಿಕೊಳ್ಳಬೇಕೆಂಬುದನ್ನು ರುದ್ರದೇವರು ಮಾಡಿ ತೋರಿಸಿರುತ್ತಾರೆ.

ಪಾರ್ವತಿಯನ್ನು ಬಿಟ್ಟು ಒಂದು ಕ್ಷಣವು ರುದ್ರದೇವರು ಇರುತ್ತಿರಲಿಲ್ಲ. ರುದ್ರದೇವರನ್ನು ಬಿಟ್ಟು, ಪಾರ್ವತೀದೇವಿಯು ಒಂದು ಕ್ಷಣವೂ ಇರುತ್ತಿರಲಿಲ್ಲ. ಶಬ್ದ ಮತ್ತು ಅರ್ಥಗಳು ಹೇಗೆ ಒಟ್ಟಾಗಿ ಇರುತ್ತವೆಯೋ, ಮಾತು ಮನಸ್ಸುಗಳು ಯಾವಾಗಲೂ ಒಂದಾಗಿಯೇ ಇರುತ್ತವೋ, ಹೂ ಮತ್ತು ಹೂವಿನ ಪರಿಮಳವು ಹೇಗೆ ಒಂದಾಗಿ ಇರುತ್ತವೋ, ಅದರಂತೆ ಪಾರ್ವತೀ-ಪರಮೇಶ್ವರರು ನಿರಂತರ ಒಟ್ಟಾಗಿಯೇ ಇರುತ್ತಿದ್ದರು.

## ಗಿರಿಜಾ ಕಲ್ಯಾಣವನ್ನು ಕೇಳುವುದರಿಂದ ದೊರಕುವ ಫಲ

ಯಾರು ಗಿರಿಜಾಕಲ್ಯಾಣವನ್ನು ಹೇಳುತ್ತಾರೋ, ಕೇಳುತ್ತಾರೋ ಅವರಿಗೆ ಕಲ್ಯಾಣವಾಗುತ್ತದೆ. ಪ್ರೇಮಮಯ ಜೀವನ ನಡೆಸುವ ಸಂಗಾತಿ ದೊರಕುತ್ತಾರೆ. ಎಂದಿಗೂ ದಾಂಪತ್ಯದಲ್ಲಿ ಉಚ್ಚಿತ್ತಿಯು ಬರುವುದಿಲ್ಲ. ನಿರಂತರ ಅವರ ಮನೆಯಲ್ಲಿ ಭಗವದಾರಾಧನೆಯು ನಡೆಯುತ್ತದೆ. ಮನೆಗೆ ಅತಿಥಿ-ಅಭ್ಯಾಗತರು ಆಗಮಿಸುತ್ತಾರೆ. ತತ್ವೋಪದೇಶಕರ ಸಂಪರ್ಕವಾಗುತ್ತದೆ. ಪುರಂದರದಾಸರು ಹೇಳುವಂತೆ - ಕಣ್ಣಿಲ್ಲದವರಿಗೆ ಕಣ್ಣು ಬರುತ್ತದೆ, ಮಾತಿಲ್ಲದವರಿಗೆ ಮಾತು ಬರುತ್ತದೆ. ಬಡವರಿಗೆ ಶ್ರೀಮಂತಿಕೆಯು ಬರುತ್ತದೆ. ಯಾರು ಗಿರಿಜಾಕಲ್ಯಾಣವನ್ನು ಮಾಡುತ್ತಾರೋ ಅವರಿಗೆ ಸಂಪತ್ತು ಉತ್ತಮ ಪದವಿ ಯಥೇಚ್ಛವಾಗಿ ದೊರಕುತ್ತವೆ. ಯಾರು ಗಿರಿಜಾಕಲ್ಯಾಣವನ್ನು ಬರೆಯುತ್ತಾರೋ, ಪಾರಾಯಣ ಮಾಡುತ್ತಾರೋ, ಅವರಿಗೆ ಸತ್-ಸಂತಾನವಾಗುತ್ತದೆ. ರೋಗಿಗಳಿಗೆ ರೋಗವು ಗುಣವಾಗುತ್ತದೆ. ವಿಶೇಷವಾಗಿ ಸೋಮವಾರ, ಹುಣ್ಣಿಮೆ, ಅಮಾವಾಸ್ಯೆ ಪ್ರತಿಪತ್ ಈ ದಿವಸಗಳಲ್ಲಿ ಹಾಗೂ ನವರಾತ್ರಿಯ ಪರ್ವಕಾಲಗಳಲ್ಲಿ ಮನೆಮಂದಿಯೆಲ್ಲರೂ ಕುಳಿತು ಗಿರಿಜಾಕಲ್ಯಾಣವನ್ನು ಶ್ರವಣ ಮಾಡಿದರೆ ಇಷ್ಟಾರ್ಥಗಳೆಲ್ಲವೂ ಈಡೇರುತ್ತವೆ.

''ಮಂಗಳ ಜಯವೆನ್ನಿ ಮಂಗಳ ಶುಭವೆನ್ನಿ ಚಂದ್ರಶೇಖರಪಾರ್ವತಿಯು ಕಂಗಳು
ತೆರೆದು ಕಟಾಕ್ಷ್ಯದಿ ನೋಡಲು ಹಿಂಗುವುದು ಸಕಲ ಪಾಪಗಳು''

ರುದ್ರದೇವರಿಗೆ ಜಯವಾಗಲೀ ! ಪಾರ್ವತೀದೇವಿಗೆ ಜಯವಾಗಲೀ ! ಗಿರಿಜಾಕಲ್ಯಾಣವನ್ನು ಕೇಳಿದ, ಚಿಂತಿಸಿದ, ಮನನ ಮಾಡಿದ ಎಲ್ಲಾ ಶಿವಭಕ್ತರಿಗೂ ಮಂಗಳವಾಗಲಿ.

## ಶಿವ-ಪಾರ್ವತಿಯರ ವಿಹಾರ

ಜಾತು ವೀಣಾನಿನಾದೇನ ಕದಾಚಿಚ್ಚಿತ್ರಲೇಖನೈಃ ।
ವಿಜಹ್ರತುಶ್ಶಿವೌ ಸ್ವೈರಮೇಕದಾ ಮಂಡನೈರ್ಮಿಥಃ ॥

ವಿವಾಹವಾದ ಮೇಲೆ ಇಬ್ಬರು ಹೀಗೆ ಆದರ್ಶಪ್ರಾಯವಾಗಿ ವಿಹಾರವನ್ನು ಮಾಡಿದರು. ಕೆಲವು ಕಾಲ ವೀಣಾವಾದನ ಮಾಡುತ್ತಿದ್ದರು. ಕೆಲವು ಕಾಲ ಚಿತ್ರವನ್ನು ಬಿಡಿಸುತ್ತಿದ್ದರು. ಪರಸ್ಪರ ಒಬ್ಬರಿಗೊಬ್ಬರು ಅಲಂಕಾರವನ್ನು ಮಾಡಿಕೊಳ್ಳುತ್ತಿದ್ದರು. ಹೀಗೆ ಯಥೇಚ್ಛವಾಗಿ ವಿಹಾರವನ್ನು ಮಾಡಿದರು.

ಜಾತು ವಿದ್ಯಾಗಮಾಲಾಪೈಃ ಕದಾಚಿಚ್ಚಿತ್ರವಸ್ತುಭಿಃ ।
ಏಕದಾ ಲೋಕವೃತ್ತಾಂತೈರ್ದಂಪತಿಭ್ಯಾಂ ವಿನೋದಿತಂ ॥

ತಾವು ಕಲಿತ ವಿದ್ಯೆಯ ಕುರಿತಾದ ಸಂವಾದ. ಶಾಸ್ತ್ರ ವಿಷಯಕ ಮಾತುಗಳು. ವಿಚಿತ್ರವಾದ ವಸ್ತುಗಳೊಂದಿಗೆ ಆಡಿ ಸಂತೋಷ ಪಡುತ್ತಿದ್ದರು. ಮತ್ತೊಮ್ಮೆ ಪ್ರಪಂಚದ ವ್ಯವಹಾರದಲ್ಲಿ ತೊಡಗಿಕೊಂಡು ವಿನೋದ ಮಾಡುತ್ತಿದ್ದರು.

ಪುಷ್ಪಾವಚಯನೈರ್ಜಾತು ಕದಾಚಿದ್ವಾರಿಖೇಲನೈಃ ।
ಆದೀಪತ್ಯಾಂ ಚ ರಾಗಾದ್ರ್ಯೈ ದೋಲಾಕೇಳಿಭಿರೇಕದಾ ॥

ಮತ್ತೊಮ್ಮೆ ಕಾಡಿಗೆ ಹೋಗಿ ಪುಷ್ಪವನ್ನು ಸಂಗ್ರಹಿಸುತ್ತಿದ್ದರು. ಸರೋವರದಲ್ಲಿ ಮುಳುಗಿ ಜಲಖೇಲಿಗಳಿಂದ ಕ್ರೀಡಿಸುತ್ತಿದ್ದರು. ಮತ್ತೊಮ್ಮೆ ದೋಣಿಯಲ್ಲಿ ಕುಳಿತು ವಿಹಾರ ಮಾಡುತ್ತಿದ್ದರು. ಕೆಲವೊಮ್ಮೆ ವಾದ್ಯಸಂಗೀತಮಗ್ನರಾಗುತ್ತಿದ್ದರು. ಹೀಗೆ ಶಿವ-ಪಾರ್ವತಿಯರು ಪ್ರೇಮಾದ್ರ್ರಭಾವದಿಂದ ಕಂಗೊಳಿಸಿದರು.

ಮೈನಾಕೇನಾರ್ಚಿತೌ ಜಾತು ಮೇನಯಾ ಜಾತು ಪೂಜಿತೌ ।
ಜಾತ್ವರ್ಹಿತೌ ಹಿಮವತಾ ದಂಪತೀ ತೌ ವಿನೋದಿತೌ ॥

ಮೈನಾಕ, ಮೇನೆ, ಹಿಮವಂತ ಮೊದಲಾದ ಬಂಧುಜನರ ಜೊತೆ ಕುಳಿತು ಸಂಭ್ರಮವನ್ನು ಹೊಂದುತ್ತಿದ್ದರು. ಹೀಗೆ ಬಂಧು-ಬಾಂಧವರ ಜೊತೆ ಬೆರೆತು ಸಂಸಾರದ ಕಲೆಯನ್ನು ತಿಳಿಸುತ್ತಿದ್ದರು.

ಜಾತು ದ್ಯೂತವಿನೋದೇನ ಗೀತಗೋಷ್ಠ್ಯಾ ಕದಾಚನ ।
ಏಕದಾ ದಾನಲೀಲಾಭಿಃ ಶಿವೌ ಚಿಕ್ರೀಡತುಶ್ಚಿರಂ ॥

ಕೆಲವೊಮ್ಮೆ ಪಗಡೆಯಾಟವಾಡುತ್ತಿದ್ದರು. ಇನ್ನೂ ಕೆಲವೊಮ್ಮೆ ಸಂಗೀತವನ್ನು ಕೇಳುತ್ತಾ, ಸಂಗೀತವನ್ನು ಹೇಳುತ್ತಾ ಭಗವಂತನನ್ನು ಸ್ತುತಿಸುತ್ತಿದ್ದರು. ಗೀತಗೋಷ್ಠಿಯಿಂದ ಎಲ್ಲರನ್ನು ಆಕರ್ಷಣೆ ಮಾಡುತ್ತಿದ್ದರು. ಕೆಲವೊಮ್ಮೆ ಆ ದಂಪತಿಗಳು ದಾನ ಮಾಡುವುದರಲ್ಲಿಯೇ ತಲ್ಲೀನರಾಗಿರುತ್ತಿದ್ದರು. ಹೀಗೆ ಅವರ ಕ್ರೀಡೆಗಳು ಬಹುಮುಖವಾಗಿದ್ದವು.

ಇತಿ ತೌ ಪಿತರೌ ಚರಾಚರಾಣಾಂ
ನಿವಸಂತೌ ಕನಕಾಚಲಾದಿಕೇಷು ।
ರುಚಿರೇಷು ಪದೇಷು ಕಾಮಭೋಗಾ
ನತಿಹೃದ್ಯಾನ್ಸುಚಿರಂ ಕಿಲಾನ್ವಭೂತಾಂ ॥

ಹೀಗೆ ಚರಾಚರ ಪ್ರಪಂಚಕ್ಕೆ ತಂದೆತಾಯಿಗಳಾದ ಶಿವಶಿವೆಯರು ಮೇರುಪರ್ವತ ಮೊದಲಾದ ಮನೋಹರ ಸ್ಥಳಗಳಲ್ಲಿ ವಾಸಿಸುತ್ತಾ, ಹೃದಂಯಗಮವಾದ ವಿಹಾರವನ್ನು ಬಹಳ ಕಾಲ ಅನುಭವಿಸಿದರು.

## ಷಣ್ಮುಖ ಹಾಗೂ ಗಣಪತಿಯರನ್ನು ಹಡೆದಳು ಪಾರ್ವತಿ

ಕ್ರಮೇಣ ದೌರ್ಹೃದವತೀ ಭೂತ್ವಾ ಪ್ರಾಸೂತ ಪಾರ್ವತೀ ।
ಗಜಾನನಂ ಚ ಹೇರಂಬಂ ಸೇನಾನ್ಯಂ ಚ ಷಡಾನನಂ ॥

ಕಾಲಕ್ರಮದಲ್ಲಿ ಪಾರ್ವತಿಯು ಗರ್ಭವತಿಯಾದಳು. ಗಣೇಶ ಮತ್ತು ಸುಬ್ರಹ್ಮಣ್ಯರನ್ನು ಹಡೆದಳು. ಮೊದಲು ಷಣ್ಮುಖನನ್ನು ಹಡೆದಳು. ಅನಂತರ ಗಣಪತಿಯನ್ನು ಹಡೆದಳು ಎಂಬುದಾಗಿ ಇದೇ ಸ್ಕಾಂದಪುರಾಣದ ಹದಿನೇಳನೆಯ ಅಧ್ಯಾಯದಲ್ಲಿ ಹೇಳಲಾಗಿದೆ. ಆದ್ದರಿಂದ ವಿವಾಹವಾದ ಮೇಲೆ ರುದ್ರದೇವರ ದೇಹಸಂಗದಿಂದ ಪಾರ್ವತಿಯು ಗರ್ಭವನ್ನು ಪಡೆದೇ ಷಣ್ಮುಖನನ್ನು ಹಾಗೂ ಗಣಪತಿಯನ್ನು ಪ್ರಸವಿಸಿದ್ದಾಳೆ. ಲೋಕದಲ್ಲಿ ಪ್ರಸಿದ್ಧವಿರುವ ಷಣ್ಮುಖ ಹಾಗೂ

ಗಣಪತಿಯ ಜನನವನ್ನು ಕಾಲಾಂತರದಲ್ಲಿ ನಡೆಸಿದ ಮತ್ತೊಂದು ಬಗೆಯ ಸೃಷ್ಟಿಯೆಂದೇ ತಿಳಿಯಬೇಕು. ಪಾರ್ವತಿಯ ಗರ್ಭದಿಂದ ಹುಟ್ಟಿರುವುದನ್ನು ಅಲ್ಲಗೆಳೆಯಬಾರದು.

ಹೀಗೆ ಪಾರ್ವತಿಯ ಗರ್ಭದಿಂದ ಜನಿಸಿದ ಷಣ್ಮುಖಜನ ದೇವತೆಗಳ ಸೇನಾನಾಯಕನಾಗುವನು. ತಾರಕಾಸುರನನ್ನು ಕೊಂದು ಸಕಲದೇವತೆಗಳ ಸಂತೋಷಕ್ಕೆ ಪಾತ್ರನಾಗುವನು.

ಇಲ್ಲಿಗೆ ಗಿರಿಜಾಕಲ್ಯಾಣ ಪ್ರಸಂಗವು ಸಮಾಪ್ತವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

## ದಿವಸೀಗೌರಿ ಪೂಜೆ ಹಾಡು

ಶಕ್ತಿಗಣೇಶನ ಯುಕ್ತಿಯಿಂದ ಬಲಗೊಂಡು
ಭಕ್ತಿಪೂರ್ವಕವಾಗಿ ಸತಿಯರೆಲ್ಲಾ
ಮುತ್ತೈದೆತನಗಳಾ ಸೆರಗೊಡ್ಡಿ ಬೇಡುತಲೆ
ಅರ್ಥಿಯಿಂದಲೇ ಪೂಜಿಸಿದರು ॥1॥
ಜ್ಯೋತಿಗೆ ಸಕಲ ಸನ್ಮಾತ್ರೆಗೆ (ಪ್ರತಿಯೊಂದು ನುಡಿಗೂ ಇದನ್ನು ಹೇಳಬೇಕು)

ಕಟ್ಲರಾಯಗೇ ಪುತ್ರ ಹುಟ್ಟಿದನೆಂದು
ವಿಪ್ರಜೋಯಿಸರೆಲ್ಲಾ ನೆರೆದು
ಅರ್ಥಿಯಿಂದಲೇ ಜಾತಕರ್ಮವನೇ ಮಾಡಿ
ಇಟ್ಟರೇ ಪೆಸರ ಕಾಳಿಂಗರಾಯನೆಂದು ॥2॥ ಜ್ಯೋತಿಗೆ ಸಕಲ ಸನ್ಮಾತ್ರೆಗಡ

ಕಟ್ಲರಾಯನ ಮಗ ಕಾಳಿಂಗರಾಯನೂ
ಅರ್ಥಿಯಿಂದಲೇ ಬೇಟೆಗೆನಲು ವಿ
ಚಿತ್ರದ ಹುಲಿಕಂಡು ಮೂರ್ಛೆ ಹೋದಾನೆಂದು
ಬೇಗದಿಂದಲೆ ಬಂದ್ಹೇಳಿದರೂ ॥3॥ ಜ್ಯೋತಿಗೆ ಸಕಲ ಸನ್ಮಾತ್ರೆಗೆ

ಪಟ್ಟೆಯ ಸೆರಗಿನಲಿ ಹತ್ತುಸಾವಿರ ಹೊನ್ನಾ
ಆ ಕ್ಷಣದಲಿ ತಂದು ಕಟ್ಟಿದರೂ
ಸತ್ತ ಶವಕೇ ಹೆಣ್ಣುಕೊಟ್ಟೀರಾ ಎಂದೂ
ಪಟ್ಟಣದೊಳಗೆಲ್ಲಾ ಸಾರಿದರೂ ॥4॥ ಜ್ಯೋತಿಗೆ ಸಕಲ ಸನ್ಮಾತ್ರೆಗೆ

ಶಾಲೆಯಾ ಸೆರಗಿನಲಿ ಆರುಸಾವಿರ ಹೊನ್ನು
ಆ ಕ್ಷಣದಲಿ ತಂದು ಕಟ್ಟಿದಾರೂ
ಹೋದ ಶವಕೇ ಹೆಣ್ಣುಕೊಟ್ಟೀರಾ ಎಂದೂ
ಪಾಳ್ಯದ ಒಳಗೆಲ್ಲಾ ಸಾರಿದರೂ ॥5॥ ಜ್ಯೋತಿಗೆ ಸಕಲ ಸನ್ಮಾತ್ರೆಗೆ

ಅಣ್ಣ ಅತ್ತಿಗೆ ಹತ್ತಿರ ಕನ್ನಿಕೇಯನು ಬಿಟ್ಟು

ಪುಣ್ಯಪುರುಷರು ಕಾಶಿಗೇ ಹೋಗಿರಲು
ಮಾನ್ಯವರ ಮಗ ತಾನು ಮೂರ್ಛೆ ಹೋದನೆಂದೂ
ಬೇಗದಲಿ ಬಂದು ಹೇಳಿದಾರೂ ॥6॥ ಜ್ಯೋತಿಗೆ ಸಕಲ ಸನ್ಮಾತ್ರೆಗೆ

ಅಣ್ಣ ಅತ್ತಿಗೆ ಕುಳಿತು ಆಲೋಚನೆ ಮಾಡಿ
ಕನ್ನಿಕೆಯನು ತಾವು ಕೊಡುವೆವೆಂದೂ
ಹೊನ್ನು ಭಂಡಾರವೂ ಚಿನ್ನದಾ ಜೋಳಿಗೆ
ಕನ್ನಿಕೆ ಸಹವಾಗಿ ನಮಗೆಂದರು ॥7॥ ಜ್ಯೋತಿಗೆ ಸಕಲ ಸನ್ಮಾತ್ರೆಗೆ

ಹೊನ್ನು ಅವರಿಗೆ ಕೊಟ್ಟು ಹೆಣ್ಣು ಕರಕೊಂಡು
ದೇವರಾ ಮನದಲೀ ನೆನೆಯೆಂದರೂ
ಹೆಣ್ಣೆ ನಿನ್ನ ಪುಣ್ಯವಾ ಕಂಡವರ್ಯಾರೆಂದೂ
ಚಂದುಳ್ಳ ಅರಮನೆಗೆ ಕರೆದೊಯ್ದರೂ ॥8॥ ಜ್ಯೋತಿಗೆ ಸಕಲ ಸನ್ಮಾತ್ರೆಗೆ

ಸತ್ತೀಗೆ ದಂಡಿಗೆ ವಿಚಿತ್ರದಾಕಹಳೆಗಳೂ
ಮುತ್ತೈದೇರು ಧವಳವನೆ ಪಾಡುತ್ತಾ
ಅತ್ತೆ ಮಾವಂದೀರು ದುಃಖವನೇ ಮಾಡುತ್ತಾ
ಸತ್ತ ಶವಕೆ ಧಾರೆ ಎರೆದರಾಗ ॥9॥ ಜ್ಯೋತಿಗೆ ಸಕಲ ಸನ್ಮಾತ್ರೆಗೆ

ಕಾರಂಬೊ ಕತ್ತಲೆ ಘೋರೆಂಬೋ ಮಳೆ ಸುರಿಯೇ
ಅರಣ್ಯದೊಳಗೆ ತಂದಿಟ್ಟರಾಗ ।
ನಾರಿ ನಿನ್ನ ಗಂಡನ್ನ ಕಾಯ್ದುಕೋ ಎಂದೂ
ಘೋರಾನೆ ಅಲ್ಲಿಂದ ತೆರಳಿದರೂ ॥10॥ ಜ್ಯೋತಿಗೆ ಸಕಲ ಸನ್ಮಾತ್ರೆಗೆ

ಒಂದು ಗಲ್ಲದಿ ಹಾಲು ಒಂದು ಗಲ್ಲದಿ ಬೆಣ್ಣೆ
ಕಂದಮ್ಮ ನಿನಗೇಕೆ ಕಡುದುಃಖವೂ
ರಂಭೆ ಬಾರೆಯನ್ನ ಮಂದಿರಕೇಯೆಂದೂ
ಚಂದುಳ್ಳ ಸೊಸೆಯಾ ಕರೆದಾ ಮಾವ ॥11॥ ಜ್ಯೋತಿಗೆ ಸಕಲ ಸನ್ಮಾತ್ರೆಗೆ

ಹತ್ತಿಯ ಎಲೆಯಂತೆ ಚಿಕ್ಕ ಕಾಳಿಂಗನಾ

ಹೆತ್ತೆಲೆ ಅತ್ತೆ ನನಗಾಗಿ ನೀನು
ಚಿಕ್ಕ ಕಾಳಿಂಗನಾ ಬಿಟ್ಟರೆ ನಾನೀಗ
ವಿಷ್ಣುಲೋಕಕೆ ಮೆಚ್ಚೆಕಾಣೆ ॥12॥ ಜ್ಯೋತಿಗೆ ಸಕಲ ಸನ್ಮಾತ್ರೆಗೆ

ಆಗ ಶಿದ್ದಿಗೆ ಮುರಿದೂ ಟಾಣದೀವಿಗೆ ಮಾಡಿ
ಶೀಘ್ರದಿ ಮರಳು ಮುಷ್ಟಿಕೆಯ ಮಾಡಿ
ನಾರಬತ್ತಿ ನೀರು ಎಣ್ಣೆಯನ್ಹಾಕಿ
ತಾನಾಗ ಅಲ್ಲಿ ನೋಹಿಯ ನೂತಳು ॥13॥ ಜ್ಯೋತಿಗೆ ಸಕಲ ಸನ್ಮಾತ್ರೆಗೆ

ಹಿಂದಕ್ಕೆ ಮಾಡಿದ ಕಾಲದೀವಿಗೆ ನೋಹಿ
ತಮ್ಮ ಭಂಡಾರವನೊಡೆದನಾಗ
ಇಂದು ಭಂಡಾರವನೊಡೆವೊರಿನ್ಯಾರೆಂದು
ಅಂಗನೇ ತುಂಬಿದಳು ಕಣ್ಣೀರನೂ ॥14॥ ಜ್ಯೋತಿಗೆ ಸಕಲ ಸನ್ಮಾತ್ರೆಗೆ

ಪಾರ್ವತಿ ಪರಮೇಶ್ವರ ಸಹಿತ ಬರುತಿರಲಾಗ
ಭೋರೆಂಬೊ ಧ್ವನಿಗಳು ಆಗುತಿದೆ
ನಾರಿ ಇದೇನೆಂದು ಚೋದ್ಯವಕೇಳಲು
ಹಿಂದಿನ ವೃತ್ತಾಂತ ಅರುಹಿದಾಳೂ ॥15॥ ಜ್ಯೋತಿಗೆ ಸಕಲ ಸನ್ಮಾತ್ರೆಗೆ

ಪಾರ್ವತಿ ಪರಮೇಶ್ವರಾ ಸಹಿತ ಅಲ್ಲಿಗ್ಗೆ ಬಂದು
ಮಹಲಿಂಗ ಭಂಡಾರ ಒಡೆದನಾಗ ।
ತಂದು ಕಮಂಡಲ ಉದಕವಾ ತಳೆಯಲು । ಭೂ
ಮಂಡಲಾಪತಿ ಮೈಮುರಿದೆದ್ದನು ॥16॥ ಜ್ಯೋತಿಗೆ ಸಕಲ ಸನ್ಮಾತ್ರೆಗೆ

ಅಡವಿ ಪಟ್ಟಣವಾಗಿ ಗಿರಿತುರಗ ರಥವಾಗಿ
ಮೃಡ ಪಾರ್ವತಿಯು ಬಂದು ಕಥೆಯ ಹೇಳೇ
ಅವಿಯೊಳಗೆ ನೋಹಿಯನೂತದ್ದು
ಪೊಡವಿಯೊಳಗೆಲ್ಲಾ ಸಾರಿದರೂ ॥17॥ ಜ್ಯೋತಿಗೆ ಸಕಲ ಸನ್ಮಾತ್ರೆಗೆ

* * * *

## ಪಾರ್ವತೀ ಕಲ್ಯಾಣ

**(ಈ ಹಾಡನ್ನು ಹೇಳಿಕೊಂಡೇ ಸ್ತ್ರೀಯರು ಪೂಜೆಯನ್ನು ಮಾಡಬಹುದು. ಆಗ ಹಿಂದೆ ನೀಡಿದ ಮಂತ್ರವಿಧಾನವನ್ನು ಅನುಸರಿಸುವ ಅವಶ್ಯಕತೆ ಇರುವುದಿಲ್ಲ.)**

ಅಂಗಜ ಜನಕಗೆ ಮಂಗಳ ಮಹಿಮಗೆ
ಹಿಂಗದೆ ಲಕ್ಷ್ಮಿಗೆರಗುವೆವು ।
ಹಿಂಗದೆ ಪ್ರೇಮದಾನಂದತೀರ್ಥರ
ಪಾದಾಂಬುಜಕ್ಕೆರಗಿ ವಂದಿಸುವೆನು ॥1॥

ಗಂಗೆಯ ಜಡೆಯಲ್ಲಿ ಧರಿಸಿಪ್ಪದೇವನೆ
ನಂದಿವಾಹನನೆ ಶಂಕರನೆ ।
ಅಂಬಿಕದೇವಿಯ ಅಮರವಂದಿತನೆ
ನಂಜುಂಡ ಪಾಲಿಸು ನಿಜಮತಿಯ ॥2॥

ಶಿವಕಥೆಗಳ ಕೇಳಿ ಭವಬಂಧ ಹರಿವುದು
ಶಿವನ ಪ್ರಾರ್ಥನೆಯ ಮಾಡಿದರೆ ।
ಮನದ ಇಷ್ಟವು ಬೇಕಾದವರಂಗಳ
ಪರಮೇಶ್ವರ ಕರುಣಿಸುವ ॥3॥

ಒಂದು ದಿವಸ ಗಿರಿರಾಜ ಓಲಗದಿ
ಆನಂದದಿಂದಲಿ ಕುಳ್ಳಿರಲು ।
ಅಂದಿಗೆ ಕಿರುಗೆಜ್ಜೆಘಲಿರೆನ್ನುತಲಿ ಬಾಲೆ
ಬಂದಳಾಗಲೆ ಪಾರ್ವತಿಯು ॥4॥

ಆವಣಿ ವಾಲೆಯು ಅಲಿಗಲಿಗಾಡುತ್ತ
ಹೂವಿನ ಜಡೆ ನಲಿಯುತಲಿ ।
ಆಭರಣವು ಘಮ್ಮುಘಲಿರೆನ್ನುತಲಿ ಬಾಲೆ
ಬಂದಳಾಗಲೆ ಪಾರ್ವತಿಯು ॥5॥

ಬಂದ ಮಗಳ ಬಿಗಿದಪ್ಪಿ ಮುದ್ದಾಡುತ್ತಾ
ಚೆಂದದಿ ತೊಡೆಯ ಮೇಲಿಟ್ಟು।
ಮುಂಗುರುಳನು ವಾ ಸರಿಸುತ್ತಾ ಮೋಹದಿ
ಚೆಂದದಿ ಗಿರಿರಾಜನಿದ್ದ ॥6॥

ಗಗನ ಮಾರ್ಗದಿ ವೀಣೆ ಸ್ವರಗೈಯುತ್ತಾ
ಬಂದ ನಾರದ ನೋಲಗಕೆ।
ಬಂದ ಮುನಿಗೆ ಷೋಡಶೋಪಚಾರವು
ವಂದನೆಗಳ ಮಾಡುವರು ॥7॥

ವಂದಿಸಿ ಕರಮುಗಿಯುತಲಿ ಗಿರಿರಾಜ
ಇಂದು ಕೃತಾರ್ಥ ತಾನೆಂದ।
ಪುತ್ರಿಯು ಅತಿ ಜಾಣೆ ಕಡು ಚೆಲುವೆಯು
ಮಕ್ಕಳೊಳಗೆ ಮಾಣಿಕ್ಯವು ॥8॥

ತಕ್ಕ ವರನ ಕಾಣೆ ಸುರನರಾದಿಗಳಲ್ಲಿ
ಪುತ್ರಿಗೆ ವರನ್ಯಾರೆಂದ।
ಮುನ್ನಿವಳ ಹೋಲುವ ಸತಿಯರ ನಾಕಾಣೆ
ನನ್ನ ಮಗಳ ಚೆಲುವಿಕೆಯ ॥9॥

ಕನ್ನಿಕೆ ಯಾರಿಗೆ ಕೊಡಲೆಂದೆನುತಲಿ
ಬಣ್ಣಿಸಿದನು ಗಿರಿರಾಜ।
ಹಿಂದೆ ದಕ್ಷಗೆ ಮಗಳಾಗಿ ಜನಿಸಿ
ಪತಿನಿಂದ್ಯವ ಕಿವಿಲಯಲ್ಲಿ ಕೇಳಿ ॥10॥

ತಂದೆಯ ಮುಂದೆ ಶರೀರವ ಬಿಟ್ಟಳು
ಬಂದಳು ನಿನ್ನರಮನೆಗೆ।
ಎಷ್ಟು ಜನ್ಮದ ತಪಸಿನ ಫಲದಿಂದ
ಪಾರ್ವತಿ ಮಗಳಾಗಿ ನಿನಗೆ ॥11॥

ಭೂತೇಶ ಶಿವಬಂದು ಅಳಿಯನಾಗುವ
ಪುಣ್ಯರಾಶಿ ನಿನಗೆ ಸರಿಯುಂಟೆ।
ಸಕಲ ಲೋಕೇಶನೆ ಅಳಿಯನಾಗುವನು
ಸಕಲ ಲೋಕದ ತಾಯಿ ಮಗಳು ॥12॥

ಪ್ರಕಟಿಸುವರೆ ನಿನ್ನ ಭಾಗ್ಯವ ಪುಣ್ಯವ
ಸುಕೃತವನೇನ ಬಣ್ಣಿಸುವೆ।
ಇಂತೆಂದು ರಾಯದ ಕೊಂಡಾಡಿ ನಾರದ
ಇಂದ್ರ ಲೋಕಕೆ ಮುನಿಹೋದ ॥13॥

ಇಂದು ಮೌಳಿಯ ಮನದಲ್ಲಿ ಧ್ಯಾನಿಸುತ್ತ
ಚೆಂದದಿ ಗಿರಿರಾಜನಿದ್ದ।
ಕೇಳುತ್ತ ಪಾರ್ವತಿ ಬಹಳ ಸಂತೋಷದಿ
ತಾಯಿ ತಂದೆಗೆ ಅಭಿನಮಿಸಿ ॥14॥

ಸೋಮಶೇಖರನನ್ನು ತಪದಿಂದ
ಓಲಿಸುವೆ ಬೇಗ ಎನ್ನನು ಕಳುಹೆಂದ್ಲು।
ತುಪ್ಪ ಅನ್ನವನುಂಡು ಪಟ್ಟೆ ಮಂಚದಲಿರುವ
ಚಿಕ್ಕವಳಿಗೆ ತಪಸ್ಸುಂಟೆ ॥15॥

ಬಾಲೆ ನಿನ್ನನು ಬಿಟ್ಟು ಇರುವುದೆ ನಾವೆ
ಹ್ಯಾಂಗೆ ಅರಣ್ಯದಲಿ ಹೇಗಿರುವೆ।
ನಿರ್ಮಲ ಮನದಲ್ಲಿ ಭಜಿಸಿದಲ್ಲದೆ ಶಿವ
ಸುಮ್ಮನೆ ನಮಗೊಲಿಯುವನೆ ॥16॥

ನಿಮ್ಮ ಅನುಜ್ಞೆಯ ಮೇಲೆ ತಪವನ್ನು
ಮಾಡುವೆ ಸೋಮಶೇಖರನ ಮೆಚ್ಚಿಸುವೆ।
ಭಾವ ಭಕ್ತಿಯಿಂದ ಭಜಿಸಿದಲ್ಲದೆ ಶಿವ
ಪ್ರೇಮದಿ ನಮಗೊಲಿಯುವನೆ ॥17॥

ಈಗ ನಿಮ್ಮನುಜ್ಞೆಯ ಮೇಲೆ ತಪವನ್ನು
ಮಾಡಿ ನಾಗಭೂಷಣನ ಮೆಚ್ಚಿಸುವೆ ।
ಮಗಳ ಮಾತನು ಕೇಳಿ ತಲೆ ತೂಗಿ ಗಿರಿರಾಜ
ನರರೂಪಿನ ನಾರಿಯಲ್ಲ ॥18॥

ಹರನ ಶರೀರದ ಅರ್ಧಾಂಗಿ ಇವಳೆಂದು
ಮಗಳ ತಪಕೆ ಕಳುಹಿದನು ।
ಮಗಳಿಗೆ ಅಂಗರಕ್ಷೆ ಪರಿವಾರವು
ವನದ ಸುತ್ತಲು ನಿಲ್ಲಿಸಿದನು ॥19॥

ನಡೆದಳು ಪಾರ್ವತಿ ವನಕೆ ಸಂತೋಷದಿ
ಹರನ ಪಾದವ ಧ್ಯಾನಿಸುತ್ತಾ ।
ಮಿಂದಳು ನದಿಯಲ್ಲಿ ನಾರು ಸೀರೆಯನುಟ್ಟು
ಅಂಗನೆ ಜಡೆಗಳ ಹೆಣೆದು ॥20॥

ಅಂಗನೆ ವಿಭೂತಿ ರುದ್ರಾಕ್ಷಿ
ಆನಂದದಿಂದಲಿ ಧರಿಸಿದಳು ।
ಅಷ್ಟದಿಕ್ಕಿಗೆ ಕೈಯ್ಯ ಮುಗಿದು ಪ್ರಾರ್ಥಿಸಿಕೊಂಡು
ನಿಷ್ಠೆಯಿಂ ತಪವ ನಿಶ್ಚಯಿಸಿ ॥21॥

ಮುಕ್ಕಣ್ಣ ಹರನ ಮೂರುತಿಯನು ಧ್ಯಾನಿಸುತಲಿ
ಮಿತ್ರೆ ತಾ ತಪಸು ಮಾಡಿದಳು ।
ಬಂದನು ಒಬ್ಬ ರಾಕ್ಷಸ ಮಾಯ ರೂಪಿನಲಿ
ಅಂಗನೆಯನು ಮಾತಾಡಿಸಿದನು ॥22॥

ಚೆಂದುಳ್ಳ ಹೆಣ್ಣೆ ನಿನ್ನ ಕೊಂಡ್ಹೋಗಿ ಎನ್ನ
ಅಂಗನೆಯನು ಮಾಡಿಕೊಂಬೆ ।
ಎಂದಸುರನ ಧ್ವನಿ ಕೇಳುತ್ತ ಪಾರ್ವತಿ
ಕಂಗಳು ತೆರೆದು ನೋಡಿದಳು ॥23॥

ನಿಂದುಗ ದೃಷ್ಟಿಲಿ ನೋಡಲು ಅಸುರನು
ಬೆಂದು ಹೋದನು ಆ ಕ್ಷಣವೇ ।
ನೋಡಲು ಅಸುರನು ಬೂದಿಯಾಗ್ಹೋಗಲು
ಪಾರ್ವತಿ ಮನದಲ್ಲಿ ಮರುಗಿ ॥24॥

ಯಾರು ಬಂದರು ಗಂಡು ಹೆಣ್ಣಾಗಲಿ ಎಂದು
ಬಾಲೆ ತಾ ಶಪಿಸಿ ನುಡಿದಳು ।
ಹರನೊಬ್ಬನಲ್ಲದೆ ಸುರನರಾದಿಗಳು
ಮೃಗಕುಲ ಪಕ್ಷಿಜಾತಿಗಳು ॥25॥

ವನಕೆ ಬಂದರೆ ಗಂಡು ಹೆಣ್ಣಾಗಲಿಯೆಂದು
ವನಿತೆ ತಾ ಶಪಿಸಿ ನುಡಿದಳು ।
ಇಂತೆಂದು ಶಾಪವ ಕೊಟ್ಟು
ಕಂಗಳು ಮುಚ್ಚಿನಿಂದಳು ತಪವ ನಿಷ್ಠೆಯಲಿ ॥26॥

ಆರು ತಿಂಗಳು ತಪಸನು ಮಾಡಲು ಬಾಲೆ
ಫಾಲಲೋಚನ ತಾನರಿತು ।
ಪಾರ್ವತಿ ತಪದಿಂದ ಬಳಲಿದಳೆನ್ನುತಲಿ
ಬೇಗದಿಂದಲಿ ಶಿವ ಬಂದ ॥27॥

ನಂದಿ ಸಕಲ ಪರಿವಾರವೆಲ್ಲವನು
ಹಿಂದೆ ನಿಲ್ಲಿಸಿದನಾಕ್ಷಣದಿ ।
ಬಂದನು ಶಿವ ತಾನು ವಿಪ್ರವೇಷದಲ್ಲಿ
ಅಂಗನೆಯನು ಮಾತಾಡಿಸಿದನು ॥28॥

ಬಂದದ್ದನರಿಯದೆ ಬಾಲೆಕಂಗಳು ಮುಚ್ಚಿ
ನಿಂದಳು ತಪದ ನಿಷ್ಠೆಯಲಿ ।
ಅಂಗನೆ ಧ್ಯಾನಿಪ ಮೂರ್ತಿಯ ಸೆಳೆದನು
ಕಂಗಳು ತೆರೆದು ನೋಡಿದಳು ॥29॥

ನಾರಿ ನಿನ್ಯಾತಕೆ ತಪವನ್ನು ಮಾಡುವೆ
ಯಾರ ಚಿಂತಿಸುವೆ ಚಿತ್ತದಲಿ ।
ಏನು ಇಷ್ಟವು ಮನಸಿನ ಬಯಕೆಗಳೆಂದು
ಕೇಳಿದನಾ ವಿಪ್ರನಗುತ ॥30॥

ಚಂದ್ರಶೇಖರ ತನ್ನ ಪತಿಯಾಗಬೇಕೆಂದು
ನಿಂದೆನು ತಪದ ನಿಷ್ಠೆಯಲಿ ।
ಸೋಮಶೇಖರ ತನ್ನ ಪತಿಯಾಗಬೇಕೆಂದು
ಮಾಡಿದ ತಪದ ನಿಷ್ಠೆಯಲಿ ॥31॥

ಹುಚ್ಚು ಮರುಳು ಮಂಕು ಚಿಕ್ಕ ಬುದಿಟಳಿಯು
ನಿನಗೆ ಚಿತ್ತದ ಭ್ರಮೆ ಹಿಡಿದುಹುದೆ ।
ಮುಕ್ಕಣ್ಣ ಶಿವನ್ಯಾವ ಚೆಲುವನು
ಎಂದು ಹೇಳಿ ಮಿತ್ರೆ ನೀನು ಬಯಸಿದೆಯೆ ॥32॥

ರೂಪಿಲ್ಲ ಗುಣವಿಲ್ಲ ಶ್ರೀಕಾರ ಮೊದಲಿಲ್ಲ
ಬೇಕೆಂಬೊ ಐಶ್ವರ್ಯವಿಲ್ಲ ।
ಪಿನಾಕಿ ಮದುವೆಯಾಗಿ ಏನುಂಡೆ ನೀನು
ವನಿತೆ ನಿನಗೆ ಗುಣವಿಲ್ಲ ॥33॥

ಅರಿಯದವಳು ನೀನು ಹರನು ಮುದುಕನು
ವರ ಅವ ನಿನಗೆಂತಾಗುವನು ।
ನಗುವರು ಎಲ್ಲ ತಪವನ್ನು ಮಾಡಿ
ಮುದಿಯಾನ ಗೌರಿ ಪಡೆದಳೆಂದೆನುತಾ ॥34॥

ಹರನ ಬೇಕೆಂಬೊ ಹೆಣ್ಮಕ್ಕಳ ನಾ ಕಾಣೆ
ಮರುಳು ನೀನೊಬ್ಬಳ ಕಂಡೆ ।
ನಗುವರು ನಿನ್ನ ಸಂಗಾತಿಯರೆಲ್ಲರೂ
ಬಿಡು ತಪವನು ಗುಣವಲ್ಲ ॥35॥

ಈ ಪರಿ ಶಿವನ ನಿಂದಿಸಿ ನುಡಿಯಲು
ಕಾಂತೆ ಕೋಪ ಉಕ್ಕುತ್ತಾ ಒಡಲೊಳಗೆ ।
ಪಿನಾಕಿಯ ಮಹಿಮೆ ನೀನೇನು ಬಲ್ಲೆಯೇ
ಕಾಕು ಬ್ರಾಹ್ಮಣನೇ ಹೋಗೆಂದಳು ॥36॥

ಇಂದ್ರಾದಿ ಕೋಟಿ ದೇವರ್ಕಳೆಲ್ಲರು ಶಿವನ
ಅಂಘ್ರಿನಿಂದ್ವಾಲೈಸೋರು ।
ನಂದಿ ವಾಹನ ಮಹಿಮೆ ಏನು ಬಲ್ಲೆಯೊ
ಮಂದಮತಿಯೆ ಹೋಗೆಂದಳು ॥37॥

ತೆತ್ತಿಸೆ ಕೋಟಿ ದೇವರ್ಕಳೆಲ್ಲರು ಶಿವನ
ಹತ್ತಿರ ನಿಂದೊಲೈಸೋರು ।
ಪ್ರತ್ಯಕ್ಷ ಶಿವನ ಮಹಿಮೆ ಏನು ಬಲ್ಲೆಯೊ
ಹುಚ್ಚು ಬ್ರಾಹ್ಮಣನೇ ಹೋಗೆಂದಳು ॥38॥

ಮಿತ್ರೆ ತಾ ನುಡಿದಳು ವಿಪ್ರನೆಂದು ಬಿಟ್ಟೆ
ಮತ್ತೊಬ್ಬರಾದರೆ ಈಗ ।
ತಕ್ಕ ಬುದ್ಧಿಯನ್ಹೇಳಿ ಕಳುಹುವೆ
ಇಷ್ಟರಲ್ಲೆ ಹೋಗೆಂದಳು ॥39॥

ನೋಡಿದನು ಪಾರ್ವತಿ ಮನದ ಭಕ್ತಿಗಳನ್ನು
ಬೇಗದಿ ಶಿವ ಕೈಯ ಹಿಡಿದ ।
ನೋಡುತ್ತ ನಡುಗುತ್ತ ಅಂಜುತ್ತಲೇ ಶಿವ
ತೋರಿದನೇ ನಿಜ ರೂಪ ॥40॥

ಜಾಹ್ನವಿ ಜಡೆಯಲ್ಲಿ ಪಾಲದಿ ಚಂದ್ರರು
ಮೂರು ಕಣ್ಣಿನ ಮುಖಕಾಂತಿ ।
ನೀಲಕಂಠನು ಚತುರ್ಭುಜ ಮೂರ್ತಿಯ
ಬಾಲೆಗೆ ಶಿವ ತೋರಿಸಿದ ॥41॥

ಬಿಡಿಸಿದ ಜಡೆನಾರು ಸೀರೆಯ ಶಿವ ತಾನು
ಕೊಡರಿಂದ ಮೈಯ ಧೂಳುಗಳ ।
ಕೊಡಿಸಿದ ಸರ್ವಾಭರಣವ ಗೌರಿಗೆ
ಉಡಿಕೊಟ್ಟದಿವ್ಯಾಂಬರವ ॥42॥

ಬಳಲಿದಳೆನ್ನುತ್ತ ಗಿರಿಜೆಯ ಮನ್ನಿಸಿ
ತೊಡೆಯ ಮೇಲೆ ಕುಳ್ಳಿರಿಸಿ ।
ಬಂದರು ನಂದಿ ಸಮಸ್ತರು ಸಹಿತವಾಗಿ
ಕರೆದರು ಹೂವಿನ ಮಳೆಯ ॥43॥

ಕಾಮಧೇನು ಕಲ್ಪವೃಕ್ಷವು ತುಂಬುರು
ನಾರದ ರಂಭೆ ಊರ್ವಶಿಯು ।
ದೇವೇಂದ್ರರು ಅಷ್ಟದೊರೆಗಳು ವಸುಗಳು
ವಿವಾಹಕ್ಕೆ ಬಂದರತಿಯಲಿ ॥44॥

ಮುನ್ನೂರು ಮೂವತ್ತು ಮೂರು ಕೋಟಿ ದೇವರು
ಬ್ರಹ್ಮದೇವರು ಹರಿಸಹಿತ ।
ಪನ್ನಗಧರನ ಮಹಿಮೆ ನೋಡಬಂದರು
ಉನ್ನಂತ ಅಧಿಕ ಸಂಭ್ರಮದಿ ॥45॥

ಪಾರ್ವತಿಗೆ ಶಿವ ಒಲಿದನು ಎಂದ್ಹೇಳಿ
ಬೇಗದಿ ಗಿರಿರಾಜಗ್ಹೇಳೆ ।
ಬಹಳ ಸಂತೋಷದಿ ಬಂದನು ಗಿರಿರಾಜ
ದೇವನಂಘ್ರಿಗೆ ನಮಿಸಿದನು ॥46॥

ಭಕ್ತವತ್ಸಲ ಕರುಣಾಕರ ಶಂಕರ
ರಕ್ಷಿಸಬೇಕು ನೀವೀಗ ।
ಭಕ್ತಿಯಿಂದಲಿ ಗಿರಿರಾಜ ಸ್ತುತಿಸಿದ
ಆರ್ತಿಲಿ ಶಿವಮನ್ನಿಸಿದ ॥47॥

ಚಂದ್ರಶೇಖರ ಪಾರ್ವತಿದೇವಿ ಸಹಿತ
ಹೊನ್ನಂದಣವ ಏರಿದರು ।
ಭೋರೆಂಬ ವಾದ್ಯಮುತ್ತೈದೆಯರು
ಪಾಡಲು ಬಂದರು ಮಾವನ ಮನೆಗೆ ॥48॥

ಬಾಗಿಲಲ್ಲಿ ಹರನ ಪಾರ್ವತಿಯ ಪಾದವ
ತೊಳೆದು ಆರುತಿಗಳನು ಎತ್ತಿದರು ।
ಆರುತಿಗಳನ್ನೆತ್ತಿ ವೇದಮಂತ್ರಗಳಿಂದ
ದೇವ ಬಂದನು ಮಂಟಪಕೆ ॥49॥

ಎಡದಲ್ಲಿ ಬ್ರಹ್ಮನು ಬಲದಲ್ಲಿ ಶ್ರೀವಿಷ್ಣು
ನಡುವೆ ಶಂಕರನು ಕುಳ್ಳಿರಲು ।
ಸುರನರಾದಿಗಳು ಚಾಮರವ ಬೀಸುತಲಿರೆ
ಹರನು ಕುಳ್ಳಿರೆ ಠೀವಿಯಲಿ ॥50॥

ತೆತ್ತಿಸೆ ಕೋಟಿ ಸೂರ್ಯಪ್ರಕಾಶದಿ
ಇಟ್ಟಾಭರಣವು ಹಳೆಯೆ ।
ಕಟ್ಟಿದ್ದ ಬಾಷಿಂಗ ಕೈಯ ಕಂಕಣದಿಂದ
ಒಪ್ಪಿದ ಶಿವ ಹಸೆಯ ಮೇಲೆ ॥51॥

ಮುಡಿದ ಹೂವಿನ ಜಡೆ ಹರಳೋಲೆ ಬಂದಿಯ
ಕಡಗ ಕಂಕಣ ಬಾಷಿಂಗವು ।
ಉದಯದ ರವಿಕೋಟಿ ಹೊಳೆದಂತೆ ಪಾರ್ವತಿ
ಹರನ ಸನ್ನಿಧಿಯಲ್ಲೊಪ್ಪಿದಳು ॥52॥

ನವರತ್ನ ಪೀಠದಿ ಹರ ಬಂದು ಕುಳಿತಿರೆ
ಗಿರಿರಾಜ ಮೇನಕೆ ಸಹಿತ ।
ಹರನ ಪಾದವನು ತೊಳೆದು ತೀರ್ಥವನು
ಶಿರದಲ್ಲಿ ಧರಿಸಿದನಾಗ ॥53॥

ಮಾಡಿದರು ಮಧುಪರ್ಕ ಪೂಜೆಯ
ಆಭರಣ ಸಕಲ ಸಂಭ್ರಮದಿ ।
ಪೂಜೆಯ ಮಾಡಿದರು ಹರನ ಪಾದಗಳಿಗೆ
ಧಾರೆಯನೆರೆದ ಶೀಘ್ರದಲಿ ॥54॥

ಚಿಕ್ಕವಳು ನಮ್ಮ ಅರಿಯದ ಬಾಲೆಯು
ರಕ್ಷಿಸಬೇಕು ಪಾರ್ವತಿಯ ।
ಪ್ರತ್ಯಕ್ಷ ಶಿವನಿಗೆ ಧಾರೆಯ ನೆರೆದನು
ಉತ್ಸಾಹದಿ ಗಿರಿರಾಜ ॥55॥

ಈ ಪರಿಯಲಿ ದಿವಸ ನಾಲ್ಕು ಸಂಭ್ರಮಣ
ಅನೇಕ ಉತ್ಸವಗಳ ನಡೆಸಿ ।
ಪಿನಾಕಿಗೂ ಗೌರಿಗೂ ನಾಗವಲ್ಲಿಯ ಮಾಡಿ
ಬೇಕೆಂಬೊ ಉಡುಗೊರೆಯನಿತ್ತ ॥56॥

ಭಕ್ಷ್ಯಪಾಯಸ ಘೃತ ಮೃಷ್ಟಾನ್ನವು ಮಧು
ಮಕ್ಕಳೆಲ್ಲರ ಪಂಕ್ತಿಯಲಿ ।
ಚಿತ್ರಾನ್ನಗಳಿಂದ ವಿಪ್ರವರಣೆಸಿದೆ
ಕೊಟ್ಟನೊ ವೀಳ್ಯ ದಕ್ಷಿಣೆಯ ॥57॥

ಬಾಲೆಯರಿಗೆ ಮರದ ಬಾಗಿನಗಳ ಕೊಟ್ಟು
ಬಂದವರನ್ನು ಮನ್ನಿಸಿದ ।
ಕದಳಿ ತೆಂಗಿನಕಾಯಿ ಪದುಮತಾವರೆ ಹೂವು
ಅರಳು ಮಲ್ಲಿಗೆ ಹೂವೀಳ್ಯವನು ॥58॥

ಪರಮೇಶ್ವರನಿಗೆ ಕಾಣಿಕೆಯಿತ್ತರು ನಿಜ
ಭಕ್ತರೆಲ್ಲ ವಂದಿಸುತ್ತಾ ।
ಅಷ್ಟದಿಕ್ಕಿನ ರಾಯರುಗಳು ದೊರೆಗಳು
ನಿಷ್ಠೆಯಿಂದಲಿ ತಪದಿ ಋಷಿಗಳು ॥59॥

ಪಟ್ಟವಾಳಿಯ ಚೌಳಿಯನೊದಿಸಿದರು
ಪ್ರತ್ಯಕ್ಷ ಶಿವಗೂ ಪಾರ್ವತಿಗೂ ।
ಪೀತಾಂಬರ ಸೆರಗಿನ ಸೀರೆ ಹಚ್ಚಡ
ನೂತನ ದಿವ್ಯಾಂಬರವು ॥60॥

ಪ್ರೀತಿಲಿ ನಾರಾಯಣರೋದಿಸಿದರು ಸಂಪ್ರೀತಿಲಿ
ಶಿವಗೂ ಪಾರ್ವತಿಗೂ ।
ಸಣ್ಣಂಚಿನ ಸೀರೆ ಚಿನ್ನದ ಸೆರಗಿನ
ಉನ್ನತದಿವ್ಯಾಂಬರವು ॥61॥

ಬ್ರಹ್ಮದೇವರು ಜವಳಿಯನೋದಿಸಿದರು
ಪನ್ನಗಧರಗೂ ಪಾರ್ವತಿಗೂ ।
ಮಿತ್ರೆ ಮೇನಕಾದೇವಿ ಮುತ್ತಿನ ಹಸೆಯಿಟ್ಟು
ತಟ್ಟೆಯಲಿ ಹೊಸ ಮುತ್ತು ತುಂಬಿ ॥62॥

ಪಟ್ಟೆಯನುಡಿಸಿ ಪಾರ್ವತಿಯ ಬಟ್ಟನು
ಉಟ್ಟು ಮುತ್ತು ಸೊಬಲನು ತುಂಬಿದಳು ।
ಅಪ್ಪಿಕೊಳ್ಳುತ ಮುದ್ದಾಡಿ ಬುದ್ಧಿಯನ್ಹೇಳಿ
ಮಿತ್ರೆ ಮೇನಕೆ ಗಿರಿರಾಜ ॥63॥

ಅಕ್ಕ ಪಾರ್ವತಿ ನಿನ್ನ ಬಿಟ್ ಹ್ಯಾಗೆ ಇರುವೆವು
ಆರ್ತಿಯಿಂದಲಿ ಬಂದರವರು ।
ಹಿಡಿದರಿಶಿನ ಬಣ್ಣ ಬಂಡಾರ ವಸ್ತುವು
ವಡವೆಯು ಕಂಚು ಮುಟ್ಟುಗಳು ॥64॥

ಹರಿವಾಣ ಪೆಟ್ಟಿಗೆ ಜವಳಿಯ ಪಿಂಡಿಯು
ಮಗಳಿಗೆ ಬಳುವಳಿಯಿಟ್ಟು ।
ರಜತಗಿರಿಯ ಕೈಲಾಸಕ್ಕೆ ಬಂದಾರು
ಗೃಹಪ್ರವೇಶದ ಉತ್ಸವ ॥65॥

ಹೋದಲ್ಲಿ ದೇವಪತ್ನಿಯರು ಆರುತಿಯನ್ನೆತ್ತಿ
ನಾಗಭೂಷಣಗೂ ಪಾರ್ವತಿಗೂ ।
ಬಂದಲ್ಲಿ ದೇವಪತ್ನಿಯರು ಆರುತಿಯನ್ನೆತ್ತಿ
ನಂದಿವಾಹನಗೂ ಪಾರ್ವತಿಗೂ ॥66॥

ನಿಂದಲ್ಲಿ ದೇವಪತ್ನಿಯರು ಆರುತಿಯನ್ನೆತ್ತಿ
ಚಂದ್ರಶೇಖರಗೂ ಪಾರ್ವತಿಗೂ ।
ಬಂದನು ಕೈಲಾಸಗಿರಿಯಲ್ಲಿ ನಂಜುಂಡ
ಲಿಂಗನಿದ್ದನು ಹರುಷದಲಿ ॥67॥

ಅಂತಕಾಂತಕ ಬಂದು ಕಂತು ಸಂಹರ ಬಂದ
ಶಂಕರ ಶಿವತಾನು ಬಂದ ।
ಕಾಂತೆ ಪಾರ್ವತಿದೇವಿ ಸಹಿತ ಬಂದಾನೆಂದು
ಸಂತೋಷದಿ ಕಹಳೆ ಹಿಡಿದವು ॥68॥

ದಾರವಾಳಿಯ ಸೀರೆ ಹೂವಿನ ಸರಗಳು
ಬೇಗದಿ ಶಿವತರಿಸಿದನು ।
ಲಕ್ಷ್ಮೀಸರಸ್ವತೀ ದೇವಿಯರಿಗಿತ್ತನು
ಅತ್ಯಂತ ಅಧಿಕ ಸಂಭ್ರಮದಿ ॥69॥

ಮುತ್ತೈದೆ ಹೇಳಿದರೆ ಇಟ್ಟೋಲೆ ಸ್ಥಿರವಾಗಿ
ಕಕ್ಷಿಲ್ಲದವರು ಹೇಳಿದರೆ ।
ಕಕ್ಷಿಯು ಬರುವುದು ಬಡವರು ಹೇಳಿದರೆ
ಹೆಚ್ಚಿನ ಪದವಿ ಸೇರುವುದು ॥70॥

ಬರಡು ಹೇಳಿದರೆ ಕಂದನ್ನೆತ್ತಿಕೊಂಬುವಳು
ಹೆಳವ ಕೇಳಿದರೆ ನಡೆಯುವನು ।
ಮದುವೆಯಿಲ್ಲದವರು ಹೇಳಿದರೆ
ವಿವಾಹ ಒದಗುತ್ತ ಕಂಕಣ ಬಹುದು ॥71॥

ಸೋಮವಾರ ಅಮಾವಾಸ್ಯೆ ಶಿವರಾತ್ರಿ ಪೌರ್ಣಮೆ
ಪಾಡ್ಯವು ಮನೆಮಂದಿಯಲ್ಲಿ।
ಸೋಮಶೇಖರನ ವಿವಾಹವ ಹೇಳಿದರೆ
ಬೇಡಿದಿಷ್ಟಾರ್ಥ ಕೊಡುವನು ॥72॥

ಮಂಗಳ ಜಯವೆನ್ನಿ ಮಂಗಳ ಶುಭವೆನ್ನಿ
ಚಂದ್ರಶೇಖರ ಪಾರ್ವತಿಯು।
ಕಂಗಳು ತೆರೆದು ಕಟಾಕ್ಷದಿ ನೋಡಲು
ಹಿಂಗೋದು ಸಕಲ ಪಾಪಗಳು ॥73॥

ಚಂದ್ರಶೇಖರ ಪಾರ್ವತಿ ದೇವಿ ಮದುವೆ
ಚಂದದಿ ಹೇಳಿ ಕೇಳಿದರೆ।
ತಂದೆ ಪುರಂದರವಿಠಲ ತಾನೊಲಿದು
ಕುಂದದ ಭಾಗ್ಯ ಕೊಡುವನು ॥74॥

॥ ಶ್ರೀ ಕೃಷ್ಣಾರ್ಪಣಮಸ್ತು ॥

ಶಾಖಾವ್ರತದಲ್ಲಿ ಜ್ಯೋರ್ಭೀಮೇಶ್ವರ ಹಬ್ಬವು ಬರುತ್ತದೆ. ಆದ್ದರಿಂದ ವ್ರತಕ್ಕೆ ಬಾರದ ಪದಾರ್ಥಗಳಿಂದ ಅಡುಗೆಯನ್ನು ಮಾಡಬಾರದು. ಯಾರು ವ್ರತವನ್ನು ಮಾಡುವುದಿಲ್ಲವೋ ಅವರೂ ಕೂಡ ಅವ್ರತದ ಅಡುಗೆಯನ್ನು ಮಾಡಿ ದೇವರಿಗೆ ಸಮರ್ಪಿಸಬಾರದು. ಮತ್ತು ಹಬ್ಬದ ದಿವಸ ಅವ್ರತದ ಅಡುಗೆ ಮಾಡಬಾರದು. ವ್ರತದ ಅಡುಗೆಯನ್ನು ಮಾಡಬೇಕು.

## ಶಾಖಾವ್ರತದಲ್ಲಿ ಮಾಡಬಹುದಾದ ಅಡುಗೆಗಳು

ಈ ವ್ರತದಲ್ಲಿ ಎಲ್ಲ ಬಗೆಯ ಬೇಳೆಗಳು ಬರುತ್ತದೆ. ಹಾಗೂ ಬೇಳೆಯಿಂದ ಮಾಡಿದ ಉದ್ದಿನಹಿಟ್ಟು, ಕಡಲೆಹಿಟ್ಟು ಮೊದಲಾದವುಗಳೂ ಕೂಡ ಬರುತ್ತದೆ. ಮೆಣಸಿನಕಾಯಿಯ ಬದಲು ಮೆಣಸನ್ನು, ಹುಣಸೇ ಹುಳಿಯ ಬದಲು ಮಾವಿನ ಚಟ್ಟನ್ನು ಮತ್ತು ನೆಲ್ಲಿಕಾಯಿಯ ಚಟ್ಟನ್ನು ಬಳಸಬೇಕು. ಕೆಲವರು ಸಾಸಿವೆಯನ್ನು ಉಪಯೋಗಿಸುತ್ತಾರೆ.

ತೊಗರಿಬೇಳೆ ಹಾಗೂ ಹೆಸರುಕಾಳನ್ನು ಒಟ್ಟಿಗೆ ಬೇಯಿಸಿ, ಅದಕ್ಕೆ ಉಪ್ಪು ಹಾಗೂ ಬೆಲ್ಲವನ್ನು ಹಾಕಿ ಒಗ್ಗರಣೆಯನ್ನು ಹಾಕಿ ನೈವೇದ್ಯಮಾಡಬಹುದು.

ಹೆಸರುಕಾಳಿನ ಪಲ್ಯ , ಕಡ್ಲೆಬೇಳೆಗಳ ಕೋಸಂಬರಿಗಳನ್ನು ಮಾಡಬಹುದು. ತೆಂಗಿನಕಾಯಿಯ ಚಟ್ನಿಯನ್ನೂ ಕೂಡ ಮಾಡಬಹುದು.

* ಶ್ಯಾವಿಗೆ ಪಾಯಸ
* ಅಕ್ಕಿಪಾಯಸ
* ಹೋಳಿಗೆ
* ರವೆ ಉಂಡೆ
* ಲಡ್ಡು
* ಬೇಸನ್ ಲಡ್ಡು
* ಬುತ್ತಿ ಅನ್ನ

* ಮೆಣಸುಚಿತ್ರಾನ್ನ
* ಅವಲಕ್ಕಿ
* ಗೋಧಿಹಿಟ್ಟನ್ನು ಬೆರೆಸಿ ಮಾಡುವ ಬೋಂಡ

ಇವುಗಳನ್ನು ಈ ಹಬ್ಬದಲ್ಲಿ ಮಾಡಬೇಕು.

ದ್ರಾಕ್ಷಿ, ಗೋಡಂಬಿ, ಏಲಕ್ಕಿ ಮೊದಲಾದ ವ್ರತಕ್ಕೆ ಬಾರದ ಪದಾರ್ಥಗಳನ್ನು ಉಪಯೋಗಿಸಬಾರದು.

## ಗೋಧಿ ಭಕ್ಷ್ಯ

ಈ ಹಬ್ಬದಲ್ಲಿ ಗೋಧಿಯಿಂದ ಭಕ್ಷ್ಯವನ್ನು ಮಾಡಬೇಕೆಂಬ ಸಂಪ್ರದಾಯವಿದೆ. ಆದ್ದರಿಂದ ಲಕ್ಕೋಟೆ ಹೋಳಿಗೆಯನ್ನು ಮಾಡಬಹುದು. ಗೋಧಿಹಿಟ್ಟನ್ನು ನೀರಿನಲ್ಲಿ ಕಲೆಸಿ, ತುಪ್ಪಹಾಕಿ ಚೆನ್ನಾಗಿ ಕುಟ್ಟಬೇಕು. ನಿಂಬೆಹಣ್ಣಿನ ಗಾತ್ರಕ್ಕೆ ಮಾಡಿಕೊಂಡು ಮುಚ್ಚಿಡಬೇಕು. ಹೂರಣ ಮಾಡಿಕೊಳ್ಳಬೇಕು. ತುಪ್ಪ ಹಾಕಿ ಹೊಂದಿಸಿಕೊಳ್ಳಬೇಕು. ಸಿದ್ಧಪಡಿಸಿರುವ ಕಣಕವನ್ನು ಲಟ್ಟಿಸಿ ಹೂರಣವನ್ನು ಮಧ್ಯದಲ್ಲಿ ಸಮಾನವಾಗಿ ಸೇರಿಸಿ, ನಾಕು ಕಡೆಯನ್ನು ಮಡಿಸಿ, ಕಾವಲಿಯ ಮೇಲೆ ಬೇಯಿಸಬೇಕು. ಹೀಗೆ ಗೋಧಿಹಿಟ್ಟಿನಿಂದ ಹೋಳಿಗೆ ಮಾಡಿದರೆ ಲಕ್ಕೋಳಿಗೆ ಮಾಡುವುದು ವಿಶೇಷ.

## ಬೇಳೆ ಸಾರು

ಹೆಸರು ಬೇಳೆ ಅಥವಾ ತೊಗರಿಬೇಳೆಯನ್ನು ಚೆನ್ನಾಗಿ ಬೇಯಿಸಬೇಕು. ಅದಕ್ಕೆ ಮಾವಿನಪುಡಿ, ರುಚಿಗೆ ತಕ್ಕಷ್ಟು ಉಪ್ಪು, ಜೀರಿಗೆ ಪುಡಿ, ಕರಿಮೆಣಸಿನ ಪುಡಿ, ಬೆಲ್ಲ ಇವುಗಳನ್ನು ಕುದಿಸಿ ತುಪ್ಪದ ಒಗ್ಗರಣೆಯನ್ನು ಹಾಕಿದರೆ ಸಾರು ಸಿದ್ಧವಾಗುತ್ತದೆ.

## ನೆಲ್ಲಿಚಟ್ಟು ಸಾರು

ನೆಲ್ಲಿಚಟ್ಟು, ಕರಿಮೆಣಸು, ತೆಂಗಿನಕಾಯಿ ಇವುಗಳನ್ನು ನುಣ್ಣಗೆ ರುಬ್ಬಿ, ನಾಕು ಲೋಟ ನೀರು ಬೆರೆಸಿ ಕುದಿಸಬೇಕು. ಉಪ್ಪು, ಬೆಲ್ಲವನ್ನು ಹಾಕಿ, ಒಗ್ಗರಣೆಯನ್ನು ಹಾಕಿದರೆ ನೆಲ್ಲಿಚಟ್ಟು ಸಾರು ಸಿದ್ಧವಾಗುತ್ತದೆ.

## ಅರಳುಪಲ್ಯ

ತಕ್ಕಷ್ಟು ಅರಳನ್ನು ತೆಗೆದುಕೊಂಡು, ರುಚಿಗೆ ತಕ್ಕ ಬೆಲ್ಲ, ಉಪ್ಪು, ತೆಂಗಿನಕಾಯಿ, ಇವುಗಳನ್ನು ಸೇರಿಸಿ ಪಲ್ಯವನ್ನು ಸಿದ್ಧಗೊಳಿಸಬೇಕು.

## ಹೆಸರುಕಾಳು ಪಲ್ಯ

ಹೆಸರುಕಾಳನ್ನು ಚೆನ್ನಾಗಿ ಬೇಯಿಸಿ ತೆಂಗಿಕಾಯಿ, ಒಗ್ಗರಣೆಗಳನ್ನು ಸೇರಿಸಿದರೆ ಪಲ್ಯವು ಸಿದ್ಧವಾಗುತ್ತದೆ.

* * * *

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥
ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ಜ್ಯೋತಿರ್ಭೀಮೇಶ್ವರ ವ್ರತ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ ಶ್ರೀಲಕ್ಷ್ಮೀಹಯಗ್ರೀವದೇವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಭಜನಮಾಲಾ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

# ಭಜನಮಾಲಾ

ಇದು ಸ್ತ್ರೀಯರಿಗಾಗಿ

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :
ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ.),
ಬೆಂಗಳೂರು.

''**ಭಜನಮಾಲಾ** - ಇದು ಸ್ತ್ರೀಯರಿಗಾಗಿ'' ಶಾರ್ವರಿ || ಶ್ರಾವಣ || ಶುದ್ಧ ಹುಣ್ಣಿಮೆ (ದಿನಾಂಕ 03.08.2020) ಶುಭ ಪರ್ವ ಕಾಲದಲ್ಲಿ ಈ ಕೃತಿಯನ್ನು ಪಲಿಮಾರು ಮಠಾಧೀಶರಾದ ಶ್ರೀಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರ ಕರಕಮಲಗಳ ಮೂಲಕ ಭಾರತೀರಮಣಹೃದಯ ಗುಹಾನಿವಾಸಿಗಳಾದ ಶ್ರೀ ಲಕ್ಷ್ಮೀ- ಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : **2020**



ಪ್ರಕಾಶಕರು : **ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ)**
**4171, 2ನೇ ಮೇನ್, ಗಿರಿನಗರ, ಸೀತಾಸರ್ಕಲ್ ಹತ್ತಿರ,**
**ಬೆಂಗಳೂರು-85.**
**ದೂರವಾಣಿ : 9141495120**

ಸಂಪಾದನೆ : **ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ**

ಪ್ರತಿಗಳು : **1000**

ಪುಟಗಳು : vi + 120 = 126

ಅಕ್ಷರಜೋಡಣೆ : **ಶರತ್ ಚಂದ್ರ, ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್**
**ಮೈಸೂರು. ✆ : 7899779255**

ಮುಖಪುಟ : **ಶ್ರೀವಿಶ್ವಾತ್ಮಾ, ಕಾರ್ತಿಕ ಜೋಷಿ**

ಮುದ್ರಕರು : **ಮುಕ್ತಿಪಥ ಮುದ್ರಣಾಲಯ**
(ಪಿ. ಮಂಜುನಾಥ)
ಬೆಂಗಳೂರು.



ಬಹಳ ಚತುರೆಯೂ ವಿದ್ಯಾಪ್ರವೀಣಳೂ ಆದ ಕುಮಾರಿ|| ಶ್ರಾವ್ಯ ಆಕಸ್ಮಿಕವಾಗಿ ಹರಿಪಾದ ಸೇರಿದ್ದಾಳೆ. ಕಲ್ಲಕುರ್ಚಿ ಫ್ಯಾಮಿಲಿಗೆ ಮಾಣಿಕ್ಯ ಪ್ರಾಯಳಾಗಿದ್ದ ಇವಳ ಸ್ಮರಣೆಗಾಗಿ ಈ ಜ್ಞಾನಸೇವೆಯನ್ನು ಮಾಡಲಾಗಿದೆ. ಇದರಿಂದ ಪ್ರಾಪ್ತವಾಗುವ ಪುಣ್ಯರಾಶಿಯು ಶ್ರಾವ್ಯಳಿಗೆ ತಲುಪಿ ಎಲ್ಲಾ ರೀತಿಯಲ್ಲಿಯೂ ಅವಳಿಗೆ ಶ್ರೇಯಸ್ಸಾಗಲಿ ಎಂದು ಪ್ರಾರ್ಥಿಸುತ್ತೇವೆ.

**ಕಲ್ಲಕುರ್ಚಿ ಫ್ಯಾಮಿಲಿ ಬೋಸ್ಟನ್**
**ಯು.ಎಸ್.ಎ.**

---

## ವಿಷಯಾನುಕ್ರಮಣಿಕೆ

★ ★ ★ ★

# ಮುನ್ನುಡಿ

ಸ್ತ್ರೀಯರ ಸಾಧನೆಗಾಗಿ ಈ ಪುಸ್ತಕವು ಹೊರಟಿದೆ. ಪ್ರಾರಂಭದಲ್ಲಿ ಗುರುಮಂತ್ರ ಹಾಗೂ ಕೃಷ್ಣಮಂತ್ರಗಳನ್ನು ಅರ್ಥಸಹಿತವಾಗಿ ನೀಡಲಾಗಿದೆ. ಅನಂತರ ಸ್ತ್ರೀಯರು ಮಾಡಬೇಕಾದ ಪೂಜಾ ಕ್ರಮವನ್ನು ಪದ್ಯರೂಪದಲ್ಲಿ ನೀಡಲಾಗಿದೆ. ತುಳಸೀ ಪೂಜೆ, ಗೌರೀಪೂಜೆ, ಹೊಸ್ತಿಲಪೂಜೆ ಇವೆಲ್ಲದರ ವಿಧಾನವನ್ನು ಹಾಡುಗಳ ಸಹಿತವಾಗಿ ಇಲ್ಲಿ ನೀವು ಕಾಣಬಹುದು. ಅನಂತರ ದಿನನಿತ್ಯ ಹೇಳಿಕೊಳ್ಳಬೇಕಾದ ಹಾಡುಗಳನ್ನು, ಸುಳಾದಿಗಳನ್ನು ಸಂಗ್ರಹಿಸಲಾಗಿದೆ ಮತ್ತು ನಿತ್ಯವೂ ಬೆಳಿಗ್ಗೆಯ ಹೊತ್ತಿನಲ್ಲಿ ಸೃಷ್ಟಿ ಚಿಂತನೆಯು ಮಾಡಬೇಕು ಮತ್ತು ರಾತ್ರಿಯ ಹೊತ್ತಿನಲ್ಲಿ ಲಯಚಿಂತನೆಯನ್ನು ಮಾಡಬೇಕು. ಅದನ್ನೂ ಕೂಡ ನೀವಿಲ್ಲಿ ಗದ್ಯರೂಪವಾಗಿ ಕಾಣಬಹುದು. ಎಲ್ಲ ಸಾಧಕಿಯರು ಇದರ ಸದುಪಯೋಗವನ್ನು ಪಡೆದುಕೊಳ್ಳಬೇಕು.

ಅತ್ಯಂತ ಚತುರೆಯೂ, ಪ್ರವೀಣಳೂ ಆದ ಕುಮಾರಿ ಶ್ರಾವ್ಯಳು ಆಕಸ್ಮಿಕವಾಗಿ ಹರಿಪಾದವನ್ನು ಸೇರಿದ್ದಾಳೆ. ಈ ಗ್ರಂಥದಿಂದ ಪ್ರಾಪ್ತವಾಗುವ ಪುಣ್ಯರಾಶಿಯು ಇವಳಿಗೆ ದೊರಕಲಿ. ಶ್ರೀಹರಿ-ವಾಯು-ಗುರುಗಳ ಪೂರ್ಣಾನುಗ್ರಹವು ಪ್ರಾಪ್ತವಾಗಲಿ. ಇವಳ ಸ್ಮರಣೆಗಾಗಿ ಈ ಕೃತಿಯನ್ನು ಪ್ರಕಾಶನವನ್ನು ಮಾಡಿದ ಕಲ್ಲಕುರ್ಚಿ ಫ್ಯಾಮಿಲಿ ಬೋಸ್ಟನ್, ಯು.ಎಸ್.ಎ ಇವರಿಗೂ ಉತ್ತಮ ಸಾಧನೆಯು ನಡೆಯಲಿ. ಶ್ರೀನಿವಾಸ ಕಲ್ಲಕುರ್ಚಿ ಇವರ ಉಪಕಾರವನ್ನು ಎಂದೆಂದೂ ನಾನು ಮರೆಯಲಾರೆ. ಇವರ ಪ್ರೋತ್ಸಾಹಕ್ಕೆ ಅನಂತ ಕೃತಜ್ಞತೆಗಳು.

**ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ**

ಸಂಪಾದಕರು, ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ)

ಬೆಂಗಳೂರು

॥ ಶ್ರೀಃ ॥

## ಭಗವಂತನ ಚಿಂತನೆ

ಪ್ರತಿದಿನ ಪ್ರಾತಃಕಾಲ ತುಲಸೀವಂದನದ ನಂತರ ದೇವರ ಮುಂದೆ ಪಠಿಸಿರಿ

**ಅನಂತಕೋಟಿ ಬ್ರಹ್ಮಾಂಡನಾಯಕ ರಮಾಬ್ರಹ್ಮರುದ್ರೇಂದ್ರಾದಿವಂದ್ಯ ಭಕ್ತವತ್ಸಲ ಭವರೋಗವೈದ್ಯ ಶರಣಾಗತವಜ್ರಪಂಜರ ಆಪದ್ಬಾಂಧವ ಅನಾಥಬಂಧೋ ಅನಿಮಿತ್ತಬಂಧೋ ಪತಿತಪಾವನ ಮಹಾರೋಗನಿವಾರಣ ಮಹಾದುರಿತನಿವಾರಣ ಮಹಾಭಯನಿವಾರಣ ಮಹಾಬಂಧವಿಮೋಚನ ಭಯಕೃತದ್ಭಯವಿನಾಶನ ಕೃಪಾವಾರಿಧೇ ದೇವದೇವೋತ್ತಮ ದೇವಶಿಖಾಮಣೇ ಕಪಟನಾಟಕಸೂತ್ರಧಾರ ನಿತ್ಯರೊಳುನಿತ್ಯ ಸತ್ಯಸಂಕಲ್ಪ ಮುಕ್ತಾಮುಕ್ತನಿಯಾಮಕ ಮೋಕ್ಷಧರ ಸುವೈಕುಂಠಪತೇ ವೈಕುಂಠವಿಹಾರಿನ್ ತ್ರಿಧಾಮನ್ ತ್ರಿಗುಣವರ್ಜಿತ ಜಗಜ್ಜನ್ಮಾಧಿಕರಣ ಜಗತ್ಪತೇ ಜಗದತ್ಯಂತಭಿನ್ನ ಜಗದೀಶ ಜಗದುದ್ಧಾರ ಜಗತ್ಸ್ವಾಮಿನ್ ಜಗದ್ವಿಲಕ್ಷಣ ಜಗನ್ನಾಥ ವಿಶ್ವಕುಟುಂಬಿನ್ ವಿರಾಟಮೂರ್ತೇ ಹೇ ಮಂಗಳಾಂಗ ಹೇ ಶುಭಾಂಗ ಪರಮಮಂಗಳಮೂರ್ತೇ ಕೋಮಲಾಂಗ ನೀಲಮೇಘಶ್ಯಾಮ ಇಂದುವದನ ಬಹುಸುಂದರ ಇಂದಿರಾವಂದಿತಚರಣ ವೃಕೋದರವಂದ್ಯ ಕೇಶವಾದಿರೂಪ ಅಜಾದಿರೂಪ ವಿಶ್ವಾದಿರೂಪ ಆತ್ಮಾದಿರೂಪ ಅನಿರುದ್ಧಾದಿರೂಪ ಅನ್ನಮಯಾದಿರೂಪ ಅನೇಕಮಂತ್ರ ಪ್ರತಿಪಾದ್ಯ ಸರ್ವಸಾರಭೋಕ್ತಃ ಅಷ್ಟೈಶ್ವರ್ಯಪ್ರದಾತಃ ಶ್ರೀಂಕಾರಶಬ್ದವಾಚ್ಯ ವಿಶಿಷ್ಟತಾರತಮ್ಯವಾಚ್ಯ ಅನಂತಾನಂತಶಬ್ದವಾಚ್ಯ ಅಣುಮಹದ್ರೂಪ ಶಂಖಚಕ್ರಪೀತಾಂಬರಧಾರಿನ್ ಕಮಲಾಕ್ಷ ಕಮಲನಾಭ ವೈಜಯಂತಿವನಮಾಲಾಶೋಭಿತ ಕೌಸ್ತುಭಭೂಷಿತ ಸುವರ್ಣವರ್ಣ ನವರತ್ನಕುಂಡಲಧಾರಿನ್ ಕಸ್ತೂರಿಶ್ರೀಗಂಧಲೇಪನ ಗರುಡಾರೂಢಶೋಭಿತ ಕಾಮಧೇನೋ ಶ್ರೀವತ್ಸಲಾಂಛನ ಕಲ್ಪವೃಕ್ಷ ಚಿಂತಾಮಣೇ ಕ್ಷೀರಾಬ್ಧಿಶಾಯಿನ್ ಶೇಷಶಾಯಿನ್ ವಟಪತ್ರಶಾಯಿನ್ ಖಗವಾಹನ ದೇಶಕಾಲಗುಣಾತೀತ ಅನಂತಬ್ರಹ್ಮನ್ ಅನಂತಶಕ್ತೇ ಅನಂತಮೂರ್ತೇ ಅನಂತಕೀರ್ತಿ ಪುರುಷೋತ್ತಮ ಅಕ್ರೂರವರದ ಅಂಬರೀಷವರದ ನಾರದವರದ ಪ್ರಹ್ಲಾದವರದ ಗಜೇಂದ್ರವರದ ಮುಚುಕುಂದವರದ ಧ್ರುವವರದ ವಿಭೀಷಣವರದ ಕುಲಾಲಭೀಮಸಂರಕ್ಷಕ ಪುಂಡರೀಕವರದ ಪರಾಶರವರದ ಪಾರ್ಥಸಾರಥೇ**

ಪಾಪವಿದೂರ ಅರಿಜನಪ್ರಚಂಡ ಚಾಣೂರ ಮಲ್ಲಮುಷ್ಟಿಕಾಸುರಮರ್ದನ ಕಾಳಿಂದೀಕೂಲವನಕಂಠೀರವ ಮದನಗೋಪಾಲ ವೇಣುಗೋಪಾಲ ವೇಣುನಾದಪ್ರಿಯ ಷೋಡಶಸಹಸ್ರ ಗೋಪಿಕಾಪ್ರೀತಿವಿಲಾಸ ಅಹಲ್ಯಾಶಾಪವಿಮೋಚನ ದ್ರೌಪದ್ಯಭಿಮಾನರಕ್ಷಕ ದುಷ್ಟಜನಮರ್ದನ ಶಿಷ್ಟಜನಪರಿಪಾಲನ ಮುಕುಂದ ಮುರಾರೇ ಕಂಸಾರೇ ಅಸುರಾರೇ ದೈತ್ಯಕುಲಸಂಹಾರ ಕ್ಷಾತ್ರಕುಲಾಂತಕ ಸೋಮಕಾಸುರಾಂತಕ ಹಿರಣ್ಯಾಕ್ಷಹಿರಣ್ಯಕಶಿಪು ಸಂಹಾರ ರಾವಣಕುಂಭಕರ್ಣಮರ್ದನ ಶಿಶುಪಾಲದಂತವಕ್ರ ಶಿರಚ್ಛೇದನ ರಘುಕುಲೋದ್ಭವ ದಶರಥಕೌಸಲ್ಯಾನಂದನ ಸಿಂಧುವರದ ಸೀತಾಪತೇಶ್ರೀರಾಮಚಂದ್ರ ಯದುಕುಲೋತ್ಪನ್ನ ಯದುಕುಲೋದ್ಧಾರಿನ್ ಯದುಕುಲತಿಲಕ ಯದುಕುಲಶ್ರೇಷ್ಠ ವಸುದೇವದೇವಕೀನಂದನ ಯಶೋದಾಕಂದ ವೃಂದಾವನವಾಸಿನ್ ಗೋಪಕುಮಾರ ಗೋಕುಲದ್ವಾರಕವಾಸ ಗೋವರ್ಧನೋದ್ಧಾರಿನ್ ಕಾಲಿಯಮರ್ದನ ಪೂತನಾಪ್ರಾಣಾಹಾರಿನ್ ಶಕಟಾಸುರಮರ್ದನ ಪಾಂಡವಬಂಧೋ ಪಾಂಡವಪ್ರಿಯ ಸುಧಾಮಸುಖ ರುಕ್ಮಿಣೀವಲ್ಲಭ ಸತ್ಯಭಾಮಾಪ್ರಿಯ ಗೋಪೀಜನಜಾರ ನವನೀತಚೋರ ಗೋಪಾಲಕೃಷ್ಣ ಗಂಗಾಜನಕ ಪ್ರಯಾಗಮಾಧವ ಕಾಶೀಬಿಂದುಮಾಧವ ಪಂಪಾಪತಿಗುಲಗಂಜಿಮಾಧವ ರಾಮೇಶ್ವರಸೇತುಮಾಧವ ಬದರೀನಾರಾಯಣ ಶ್ರೀರಂಗನಾಥ ವಡ್ಡಿಶ್ರೀಜಗನ್ನಾಥ ಉಡುಪಿಶ್ರೀಕೃಷ್ಣ ಮೇಲುಕೋಟೆ ಚೆಲುವರಾಯಸ್ವಾಮಿನ್ ಬೇಲೂರಚೆನ್ನಿಗರಾಯಸ್ವಾಮಿನ್ ಅಹೋಬಲನರಸಿಂಹ ಪಾಂಡುರಂಗವಿಟ್ಠಲ ಶ್ರೀಶೈಲವಾಸ ಅರುಣಾಚಲನಿಲಯ ವೃಷಭಾಚಲವಿಹಾರಿನ್ ಅನಂತಶಯನ ದರ್ಭಶಯನ ಕಪಿಲ ಹಯಗ್ರೀವ ದತ್ತಾತ್ರೇಯ ಶಿಂಶುಮಾರ ಧನ್ವಂತರೇ ಮಮಸ್ವಾಮಿನ್ ಸರ್ವಸ್ವಾಮಿನ್ ಜಗದಂತರ್ಯಾಮಿನ್ ಜಗದೀಶ ಪ್ರಾಣೇಶ ದ್ವಿಜ-ಫಣಿಪ-ಮೃಡೇಶ ಶ್ರೀರಮಣ ಭೂರಮಣ ದುರ್ಗಾರಮಣ ಶ್ರೀಲಕ್ಷ್ಮೀವೇಂಕಟರಮಣ ಭಾರತೀರಮಣಮುಖ್ಯಪ್ರಾಣಾಂತರ್ಗತ ಸೀತಾಪತಿಶ್ರೀರಾಮಚಂದ್ರ ಸಾಕ್ಷಾತ್ ಮನ್ಮಥಮನ್ಮಥ ಹರಿವಿಟ್ಠಲ ಪುಂಡರೀಕವರದ ಪಾಂಡುರಂಗವಿಟ್ಠಲ ಪುರಂದರವಿಟ್ಠಲ.

# ಮುತ್ತೈದೆಯರು ನಿತ್ಯವೂ ಮಾಡಬೇಕಾದ ಜಪ ಅರ್ಥಸಹಿತ

ಸುವಾಸಿನಿಯರು ಮೈತೊಳೆದುಕೊಂಡು ಮಡಿಬಟ್ಟೆಯನ್ನು ಧರಿಸಿ ಪೂರ್ವ ಅಥವಾ ಉತ್ತರಾಭಿಮುಖವಾಗಿ ಕುಳಿತುಕೊಂಡು ಜಪವನ್ನು ಆರಂಭಿಸಬೇಕು. ಮೊದಲು ಉದ್ಧರಣೆಯಲ್ಲಿ ನೀರು ತೆಗೆದುಕೊಂಡು–

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂಗತೋಽಪಿ ವಾ ।**
**ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥**

ಎಂದು ಹೇಳಿ ತಲೆಯ ಮೇಲೆ ಪ್ರೋಕ್ಷಿಸಿಕೊಳ್ಳಬೇಕು. ಅನಂತರ ಗೋಪೀಚಂದನವನ್ನು ಎಡಗೈ ಹೆಬ್ಬೆಟ್ಟಿನ ಹಿಂದೆ ನೀರಿನಲ್ಲಿ ತೇಯ್ದು ಹಣೆಯಲ್ಲಿ ಒಂದು ಪುಂಡ್ರವನ್ನು ಧರಿಸಬೇಕು. ಅನಂತರ ಗೋಪೀಚಂದನ ಅದ್ದಿ ಹಣೆಯಲ್ಲಿ ಗದಾ ಮತ್ತು ನಾರಾಯಣಮುದ್ರೆ ಧರಿಸಬೇಕು. ಆಮೇಲೆ ಎರಡು ಕೈಗಳ ಬಾಹುಮೂಲಗಳಲ್ಲಿ ಎರಡು ಕಣ್ಣಿನ ಪಕ್ಕದ ಕಪೋಲಗಳಲ್ಲಿ ಚಕ್ರಶಂಖಗಳನ್ನು ಧರಿಸಬೇಕು. ಕುತ್ತಿಗೆಯ, ಎಡ, ಬಲಪಾರ್ಶ್ವಗಳಲ್ಲಿ ಧರಿಸಬೇಕು. ಪಕ್ಕೆಗಳಲ್ಲೂ ಬೆನ್ನಿನ ಹಿಂದೆಯೂ ಒಂದು ಗದಾ, ನಾರಾಯಣ ಮುದ್ರೆಗಳನ್ನು ಧರಿಸಬೇಕು. ಅನಂತರ ಅರಿಶಿನ ಕುಂಕುಮವನ್ನು ಧಾರಣಮಾಡಬೇಕು. ಕಾಡಿಗೆ ಸಿಂಧೂರಗಳನ್ನು ಧರಿಸಬೇಕು.

(ಮುದ್ರಾಧಾರಣೆ ಹಣೆಯಲ್ಲಿ ಮಾತ್ರವೆಂಬ ಸಂಪ್ರದಾಯಭೇದವಿದೆ)

ಹೀಗೆ ಮಾಡುವಾಗ ಶ್ರೀವಾದಿರಾಜತೀರ್ಥರಿಂದ ವಿರತವಾದ ಕನ್ನಡದ ಲಘು ವಾಯುಸ್ತುತಿಯನ್ನು ಹೇಳಬಹುದು.

## ಆಚಮನ

ಅನಂತರ ಕೇಶವಾಯ ನಮಃ । ನಾರಾಯಣಾಯ ನಮಃ । ಮಾಧವಾಯ ನಮಃ । ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ । ತ್ರಿವಿಕ್ರಮಾಯ ನಮಃ । ವಾಮನಾಯ ನಮಃ । ಶ್ರೀಧರಾಯ ನಮಃ । ಹೃಷೀಕೇಶಾಯ ನಮಃ । ಪದ್ಮನಾಭಾಯ ನಮಃ । ದಾಮೋದರಾಯ ನಮಃ । ಸಂಕರ್ಷಣಾಯ ನಮಃ । ವಾಸುದೇವಾಯ ನಮಃ । ಪ್ರದ್ಯುಮ್ನಾಯ ನಮಃ । ಅನಿರುದ್ಧಾಯ ನಮಃ । ಪುರುಷೋತ್ತಮಾಯ ನಮಃ । ಅಧೋಕ್ಷಜಾಯ ನಮಃ । ನಾರಸಿಂಹಾಯ ನಮಃ

। ಅಚ್ಯುತಾಯ ನಮಃ । ಜನಾರ್ದನಾಯ ನಮಃ । ಉಪೇಂದ್ರಾಯ ನಮಃ । ಹರಯೇ ನಮಃ । ಶ್ರೀಕೃಷ್ಣಾಯ ನಮಃ ।। ಎಂದು ಎರಡು ಬಾರಿ ಹೇಳಬೇಕು.

## ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತ- ಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ....... ಶಾಲೀವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ ........ ಆಯನೇ ..... ಋತು ....... ಮಾಸೇ ......... ಪಕ್ಷೇ ..... ಶುಭತಿಥೌ ...... ವಾಸರಯುಕ್ತಾಯಾಂ .... ಶುಭನಕ್ಷತ್ರೇ ..... ಶುಭಯೋಗೇ ....... ಶುಭಕರಣೇ ಏವಂಗುಣವಿಶೇಷಣ ವಿಶಿಷ್ಟಾಯಾಂ ಶ್ರೀ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಕೃಷ್ಣಪ್ರೇರಣಯಾ ಶ್ರೀಕೃಷ್ಣಪ್ರೀತ್ಯರ್ಥಂ ಗುರುಮಂತ್ರಜಪಂ ಶ್ರೀಕೃಷ್ಣಷಡಕ್ಷರಮಂತ್ರ ಜಪಂ ಚ ಕರಿಷ್ಯೇ।।

(ಒಂದು ಉದ್ಧರಣೆ ನೀರು ಬಿಡಬೇಕು).

## ಭೂತೋಚ್ಚಾಟನೆ

ಭೂತಗಳನ್ನು ಓಡಿಸಿರಿ

ಅಪಸರ್ಪಂತ್ವಿತ್ಯಸ್ಯ ಮಂತ್ರಸ್ಯ ವಾಮದೇವ ಋಷಿಃ । ಅನುಷ್ಟುಪ್ ಛಂದಃ । ಸತ್ಯೋ ದೇವತಾ । ಸಮಸ್ತಭೂತೋಚ್ಚಾಟನೇ ವಿನಿಯೋಗಃ ।।

ಅಪಸರ್ಪಂತು ತೇ ಭೂತಾ ಯೇ ಭೂತಾ ಭುವಿ ಸಂಸ್ಥಿತಾಃ ।
(ಯೇ ಭೂತಾ ಅಂತರಿಕ್ಷಸ್ಥಾಃ ಯೇ ಭೂತಾ ದಿವಿ ಸಂಸ್ಥಿತಾಃ ।।)
ಯೇ ಭೂತಾ ವಿಘ್ನಕರ್ತಾರಸ್ತೇ ಗಚ್ಛಂತು ಶಿವಾಜ್ಞಯಾ ।

ಭುವಿ= ಭೂಮಿಯಲ್ಲಿ, ಸಂಸ್ಥಿತಾಃ= ವಾಸಮಾಡುವ, ಯೇಭೂತಾಃ= ಭೂತಗಳೆಲ್ಲವೂ, ಅಪಸರ್ಪಂತು= ಹೊರಗೆ ಹೋಗಲಿ, ವಿಘ್ನಕರ್ತಾರಃ= ಸತ್ಕಾರ್ಯಗಳಿಗೆ ವಿಘ್ನ ಮಾಡುವಂಥಾ, ತೇ ಭೂತಾಃ= ಆ ಎಲ್ಲ ಭೂತಗಳು, ಶಿವಾಜ್ಞಯಾ= ರುದ್ರದೇವರ ಆಜ್ಞಾದಿಂದ, ನಶ್ಯಂತಂ= ನಾಶವಾಗಲಿ.

ಅಪಕ್ರಾಮಂತು ತೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ ।
ಯೇಚಾತ್ರ ನಿವಸಂತ್ಯೇವ ದೇವತಾ ಭುವಿ ಸಂತತಂ ।।

(ಭೂತಪ್ರೇತಪಿಶಾಚಾ ಯೇ ಯೇ ಚಾನ್ಯೇ ಭುವಿ ಭಾರಕಾಃ ।)
ತೇಷಾಮಪ್ಯವಿರೋಧೇನ ಬ್ರಹ್ಮಕರ್ಮ ಸಮಾರಭೇ ॥
ನಿರಸ್ತಃ ಪರಾವಸುಃ । ಇದಮಹಮರ್ವಾವಸೋಃ ಸದನೇ ಸೀದಾಮಿ ।

ಕ್ರೂರಾಶ್ಚೈವತು ರಾಕ್ಷಸಾಃ= ಕ್ರೂರರಾದ ರಾಕ್ಷಸರು, ಭೂತಾದ್ಯಾಃ= ಭೂತಗಳೇ ಮೊದಲಾದವುಗಳು, ಅಪಕ್ರಾಮಂತು= ಹೊರಟು ಹೋಗಲಿ, ಅತ್ರ= ಈ ಭೂಮಿಯಲ್ಲಿ, ಸತತಂ= ಯಾವಾಗಲೂ, ನಿವಸಂತಿ= ವಾಸಮಾಡುವ, ಯಾಃ= ಯಾವ ಯಾವ ದೇವತಾಃ= ದೇವತೆಗಳೋ, ತೇಷಾಮಪಿ= ಆ ದೇವತೆಗಳಿಗೂ, ಅವಿರೋಧೇನ= ವಿರೋಧವಲ್ಲದಂತೆ, ಬ್ರಹ್ಮಕರ್ಮ= ವೇದೋಕ್ತ ಕರ್ಮವನ್ನು, ಸಮಾರಭೇ= ಪ್ರಾರಂಭಿಸುತ್ತೇನೆ.

## ಆಸನಶುದ್ಧಿ

ಕುಳಿತ ಆಸನ ಮುಟ್ಟಿ ಪ್ರಾರ್ಥಿಸಿರಿ

ಪೃಥ್ವೀತಿ ಮಂತ್ರಸ್ಯ ಮೇರುಪೃಷ್ಠ ಋಷಿಃ । ಸುತಲಂ ಛಂದಃ । ಕೂರ್ಮೋ ದೇವತಾ। ಆಸನೇ ವಿನಿಯೋಗಃ ॥

ಪೃಥ್ವಿ ತ್ವಯಾ ಧೃತಾ ಲೋಕಾಃ ದೇವಿ ತ್ವಂ ವಿಷ್ಣುನಾ ಧೃತಾ ।
ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಮ್ ॥
ಮಾಂ ಚ ಪೂತಂ ಕುರು ಧರೇ ನತೋಽಸ್ಮಿ ತ್ವಾಂ ಸುರೇಶ್ವರಿ ।
ಆಸನೇ ಸೋಮಮಂಡಲೇ ಕೂರ್ಮಸ್ಕಂಧೇ ಉಪವಿಷ್ಟೋಽಸ್ಮಿ ॥

'ಶ್ರೀಂ ಮಂ ಮಂಡೂಕಾಯ ನಮಃ, ಶ್ರೀಂ ಕುಂ ಕೂರ್ಮಾಯ ನಮಃ, ಶ್ರೀಂ ವಂ ವರಾಹಾಯ ನಮಃ, ಶ್ರೀಂ ಶೇಷಾಯ ನಮಃ, ಶ್ರೀಂ ಕಂ ಕಾಲಾಗ್ನಿರುದ್ರಾಯ ನಮಃ, ಶ್ರೀಂ ವಂ ವಜ್ರಾಸನಾಯ ನಮಃ' (ಎಂದು ಹೇಳುತ್ತಾ ಆಸನಮುಟ್ಟಿ ಜಪಿಸಬೇಕು. ಆಮೇಲೆ ದಿಗ್ಬಂಧನವನ್ನು ಮಾಡಬೇಕು). ಪೃಥ್ವಿಮುದ್ರೆಯನ್ನು ತೋರಿಸಬೇಕು, ಯಂತ್ರವನ್ನು ಬರೆದು ಅದರ ಮೇಲೆ ಕುಳಿತುಕೊಳ್ಳಬೇಕು ಎಂದು ಪ್ರಮಾಣವಿದೆ.

ಪೃಥ್ವೀ= ಪೃಥಿವಿಯೇ, ಲೋಕಾಃ= ಊರ್ಧ್ವ ಅಧೋಲೋಕಗಳು, ತ್ವಯಾ= ನಿನ್ನಿಂದ, ಧೃತಾಃ= ಧರಿಸಲ್ಪಟ್ಟಿವೆ. ದೇವಿ= ಪೃಥಿವೀನಾಮಕ ದೇವಿಯೇ, ತ್ವಂ= ನೀನು, ವಿಷ್ಣುನಾ= ವ್ಯಾಪ್ತನಾದ ಪರಮಾತ್ಮನಿಂದ, ಧೃತಾ= ಧರಿಸಲ್ಪಟ್ಟಿದ್ದೀ. ದೇವಿ= ಹೇ ಪೃಥಿವೀ ದೇವತೆಯೇ, ಮಾಂ= ನನ್ನನ್ನು, ಧಾರಯ= ಧರಿಸು, ಆಸನಂ= ನಾನು ಕುಳಿತಿರುವ, ಆಸನವನ್ನೂ ಪವಿತ್ರಂ ಕುರು= ಪವಿತ್ರವನ್ನಾಗಿ ಮಾಡು, ಸುರೇಶ್ವರಿ= ದೇವತಾ ಶ್ರೇಷ್ಠಳೆ, ತ್ವಾಂ= ನಿನ್ನನ್ನು, ನತೋಸ್ಮಿ= ನಮಸ್ಕಾರ ಮಾಡುತ್ತೇನೆ.

## ದಿಗ್ಬಂಧನೆ

ಹತ್ತು ದಿಕ್ಕುಗಳಲ್ಲಿ ತೋರ್ಬೆರಳು ಹಾಗೂ ಮಧ್ಯದ ಬೆರಳನ್ನು ಒಟ್ಟುಗೂಡಿಸಿ ತೋರಿಸಬೇಕು. ಇದುವೇ ನಾರಾಚ ಮುದ್ರೆ.

**ಪೂರ್ವಾದಿ ದಿಶಂ ಬಧ್ನಾಮಿ । ಸುದರ್ಶನ ಚಕ್ರಾಯ ನಮಃ ॥**

(ಪೂರ್ವಾದಿ ಹತ್ತುದಿಕ್ಕುಗಳನ್ನು ಯಾರೂ ಬರದಂತೆ ತಡೆಯುತ್ತೇನೆ ಎಂದು ಕಬ್ಬಿನ ಆಕಾರದಲ್ಲಿ ಬೆರಳನ್ನು ಸುತ್ತ ತೋರಿಸಿ ಬಂಧನ ಮಾಡುವುದು)

## ಅಥ ಕರಶುದ್ಧಿ

ಕೈಗಳ ಶುದ್ಧಿ

**ಮಣಿಬಂಧೇ ಪ್ರಕೋಷ್ಠೇ ಚ ಕೂರ್ಪರೇ ಹಸ್ತಸಂಧಿಷು ।**
**ತತ್ಪೃಷ್ಠಪಾರ್ಶ್ವಯೋಶ್ಚೈವ ಕರಶುದ್ಧಿರುದಾಹೃತಾ ॥**
**ಶ್ರೀ ಯಂ ಶ್ರೀ, ಶ್ರೀ ರಂ ಶ್ರೀ, ಶ್ರೀ ವಂ ಶ್ರೀ ॥**

(ಕೈಗಳ ಸಮೀಪ, ಕಂಕಣಕಟ್ಟುವ ಜಾಗ, ಮೊಳಕೈ ಮುಂಭಾಗ, ಮುಂಗೈ ಮತ್ತು ಕೈ ಬೆರಳುಗಳ ಸಂಧಿಗಳಲ್ಲಿಯೂ ಅಂಗೈ ಎರಡು ಪಾರ್ಶ್ವಗಳಲ್ಲಿಯೂ ಸ್ಪರ್ಶದಿಂದಾಗುವ ಶುದ್ಧಿಯೇ ಕರಶುದ್ಧಿ)

## ಪಾಪಪುರುಷನ ಚಿಂತನೆ

ಎಡ ಹೊಟ್ಟೆಯನ್ನು ಮುಟ್ಟಿ

**ಬ್ರಹ್ಮಹತ್ಯಾಶಿರಸ್ಕಂ ಚ ಸ್ವರ್ಣಸ್ತೇಯ ಭುಜದ್ವಯಮ್ ।**
**ಸುರಾಪಾನ ಹೃದಾಯುಕ್ತಂ ಗುರುತಲ್ಪಕಟಿದ್ವಯಮ್ ॥**
**ತತ್ಸಂಯೋಗಪದದ್ವಂದ್ವಂ ಅಂಗ ಪ್ರತ್ಯಂಗ ಪಾತಕಮ್ ।**
**ಉಪಪಾತಕ ರೋಮಾಣಂ ರಕ್ತಶ್ಮಶ್ರುವಿಲೋಚನಮ್ ।**
**ಖಡ್ಗಚರ್ಮಧರಂ ಕೃಷ್ಣಂ ಕುಕ್ಷೌ ಪಾಪಂ ವಿಚಿಂತಯೇತ್ ॥**

ಪಾಪ ಪುರುಷನ ಸ್ವರೂಪವನ್ನು ಈ ಮಂತ್ರ ತಿಳಿಸುತ್ತಿದೆ - ಬ್ರಹ್ಮಹತ್ಯೆಯಿಂದಾದ ಪಾಪವೇ ಅವನ ತಲೆ, ಬಂಗಾರ ಕದ್ದ ಪಾಪವೇ ಅವನ ಎರಡು ಕೈಗಳು, ಸೂರಾಪಾನದ ಪಾಪವೇ ಹೃದಯ, ಗುರುಪತ್ನೀಗಮನಪಾಪವೇ ಅವನ ಎರಡು ಟೊಂಕಗಳು, ಈ ನಾಲ್ಕು ಮಂದಿ ಪಾತಕಿಗಳ ಸಹವಾಸದಿಂದಾದ ಪಾಪವೇ ಅವನ ಕಾಲುಗಳು. ಅವನ ಉಳಿದ ಅಂಗ, ಉಪಾಂಗಗಳೆಲ್ಲವೂ ಬೇರೆ ಪಾತಕಿಗಳಿಂದಾಗಿವೆ. ಉಪಪಾತಕಗಳೇ

ಅವನ ರೋಮಗಳು. ಕೆಂಪು ಮೀಸೆ, ಕಣ್ಣುಗಳು, ಖಡ್ಗ ಮತ್ತು ಗುರಾಣಿಗಳು ಧರಿಸಿದ ಆಯುಧಗಳು. ಬಣ್ಣ ಕಪ್ಪು.ಇಂತಹ ಪಾಪಪುರುಷನನ್ನು ಹೊಟ್ಟೆಯ ಎಡಬದಿಯಲ್ಲಿ ಚಿಂತಿಸಬೇಕು.

## ನಾಭಿಯನ್ನು ಮುಟ್ಟಿ

**ಷಟ್ಕೋಣಮಂಡಲಮಧ್ಯಸ್ಥೋ ನೀಲವರ್ಣೋ ವಾಯ್ವಂತರ್ಗತ ಶ್ರೀಪ್ರದ್ಯುಮ್ನೋ ಭಗವಾನ್ ಮಚ್ಛರೀರಸ್ಥ ಪಾಪಪುರುಷಂ ವಾಯುನಾ ಶೋಷಯತು** (ಶ್ರೀ ಯಂ ಶ್ರೀ ೬ ಸಾರಿ ಜಪಿಸಬೇಕು).

ನಾಭಿಮೂಲದಲ್ಲಿರುವ ಷಟ್ಕೋಣಾಕಾರ ಚಕ್ರದ ಮಧ್ಯದಲ್ಲಿರುವ ನೀಲವರ್ಣನಾದ ವಾಯುದೇವರ ಅಂತರ್ಯಾಮಿಯಾದ ಶಂಖಗದಾಬ್ಜ ಚಕ್ರಾಯುಧಧಾರಿ ಶ್ರೀಪ್ರದ್ಯುಮ್ನನಾಮಕಪರಮಾತ್ಮನು ನನ್ನ ಶರೀರದಲ್ಲಿ ಸೇರಿಕೊಂಡಿರುವ ಪಾಪಪುರುಷನನ್ನು ವಾಯುವಿನಿಂದ ಶೋಷಣೆ ಮಾಡಲಿ ಎಂದು ಪ್ರಾರ್ಥಿಸಿ ಶ್ರೀ ಯಂ ಶ್ರೀ ಎಂಬ ಬೀಜಮಂತ್ರವನ್ನು ೬ ಸಲ ಜಪಿಸಿ ಪಾಪಪುರುಷನು ಒಣಗಿದನೆಂದು ತಿಳಿಯಬೇಕು.

**ತ್ರಿಕೋಣಮಂಡಲಮಧ್ಯಸ್ಥೋ ರಕ್ತವರ್ಣಃ ಅಗ್ನ್ಯಂತರ್ಗತ ಶ್ರೀಸಂಕರ್ಷಣೋ ಭಗವಾನ್ ಮಚ್ಛರೀರಸ್ಥ ಪಾಪಪುರುಷಂ ಅಗ್ನಿನಾ ನಿರ್ದಹತು** ಶ್ರೀ ರಂ ಶ್ರೀ ೧೨ ಸಾರಿ ಜಪಿಸಬೇಕು. ತಂ ದಗ್ಧಂ ಭಾವಯೇತ್ ತದ್ಭಸ್ಮ ವಾಮನಾಸುಪುಟೇನ ಬಹಿರ್ನಿಸ್ಸಾರಯೇತ್.

ಪಾಪಪುರುಷನನ್ನು ಹೃದಯಕ್ಕೆ ತಂದು ತ್ರಿಕೋಣಮಂಡಲ ಮಧ್ಯದಲ್ಲಿ ರಕ್ತವರ್ಣನಾಗಿ ಅಗ್ನಿಯ ಒಳಗಿರುವ ಶಂಖ-ಅಬ್ಜ-ಅರಿಗದಾಧಾರಿಯಾದ ಷಡ್ಗುಣೈಶ್ವರ್ಯಸಂಪನ್ನನಾದ ಸಂಕರ್ಷಣಮೂರ್ತಿಯೇ ನನ್ನ ಶರೀರದಲ್ಲಿರುವ ಪಾಪಪುರುಷನನ್ನು ಅಗ್ನಿಯಿಂದ ಭಸ್ಮಮಾಡು ಎಂಬುದಾಗಿ ಬೇಡಿಕೊಳ್ಳಬೇಕು. ಶ್ರೀ ರಂ ಶ್ರೀ ಎಂಬ ಬೀಜಮಂತ್ರವನ್ನು ೧೨ ಸಲ ಉಚ್ಚರಿಸಿ ಪಾಪಪುರುಷನು ಸುಟ್ಟನೆಂದು ತಿಳಿದು ಅವನ ಭಸ್ಮವನ್ನು ಎಡಗಡೆಯ ಮೂಗಿನ ಹೊಳ್ಳೆಯಿಂದ ಹೊರಗಡೆ ಬರುವಂತೆ ಉಸಿರು ಬಿಡಬೇಕು.

ಕೈಯಲ್ಲಿ ನೀರು ತೆಗೆದುಕೊಂಡು ಪಾದಗಳನ್ನೂ ಕೈಗಳನ್ನೂ ಒರೆಸಿಕೊಳ್ಳಬೇಕು.

## ತಲೆಯನ್ನು ಮುಟ್ಟಿರಿ

**ವರ್ತುಲಮಂಡಲಮಧ್ಯಸ್ಥಃ ಶ್ವೇತವರ್ಣಃ ವರುಣಾಂತರ್ಗತ ಶ್ರೀವಾಸುದೇವೋ ಭಗವಾನ್ ಮಚ್ಛರೀರಮಮೃತವೃಷ್ಟ್ಯಾ ವರುಣೇನ ಅಪ್ಲಾವಯತು ।। ಶ್ರೀ ವಂ ಶ್ರೀ ೨೪ ಸಲ ಜಪಿಸಬೇಕು. ಸ್ವಶರೀರಂ ಪ್ರಕ್ಷಾಲಿತಂ ಭಾವಯೇತ್ । ಶ್ರೀಪರಮಾತ್ಮಾನಂ ತೇನೈವ ಮಾರ್ಗೇಣ ಹೃದಯೇ ಸ್ಥಾಪಯೇತ್ ।)**

**ದುಂಡು ಆಕಾರದ ಮಂಡಲದ ಮಧ್ಯದಲ್ಲಿ ಬಿಳಿಬಣ್ಣವುಳ್ಳವನೂ ವರುಣ ದೇವರ ಅಂತರ್ಯಾಮಿಯೂ ಆಗಿರುವ ಶಂಖ-ಚಕ್ರ-ಪದ್ಮ- ಗದಾಧಾರಿಯಾಗಿ ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀ ವಾಸುದೇವನೇ, ನನ್ನ ಶರೀರದಲ್ಲಿ ವರುಣನಿಂದ ಅಮೃತವೃಷ್ಟಿ ಮಾಡಿಸು. ಶ್ರೀ ವಂ ಶ್ರೀ ಎಂಬ ಬೀಜಮಂತ್ರವನ್ನು ೨೪ ಸಲ ಜಪ ಮಾಡಬೇಕು. ಸಕಲತೀರ್ಥಾಭಿಮಾನಿದೇವತೆಗಳನ್ನು ಪ್ರಾರ್ಥಿಸಿ ಅವಭೃಥಸ್ನಾನ ಮಾಡಿ ಶುದ್ಧನಾದೆನೆಂದು ತಿಳಿದು ಸರ್ವಾಂಗವನ್ನು ಸ್ಪರ್ಶಿಸಬೇಕು. ನಾಭಿಯಲ್ಲಿ ಅನಿರುದ್ಧನನ್ನು, ಹೃದಯದಲ್ಲಿ ಪ್ರದ್ಯುಮ್ನನನ್ನು, ಕಂಠದಲ್ಲಿ ಸಂಕರ್ಷಣನನ್ನು, ಭ್ರೂ ಮಧ್ಯದಲ್ಲಿ ವಾಸುದೇವನನ್ನು ಶಿರಸ್ಸಿನಲ್ಲಿ ನಾರಾಯಣನನ್ನು ಧ್ಯಾನ ಮಾಡಿ ತಲೆಯ ಮೇಲೆ ಕೂಡಿಸಿಕೊಂಡಿರುವ ಶ್ರೀಪರಮಾತ್ಮನನ್ನು ಹೃದಯದಲ್ಲಿ ನಿಲ್ಲಿಸಬೇಕು.**

## ಗುರುನಮಸ್ಕಾರ

ಶ್ರೀಗುರುಭ್ಯೋ ನಮಃ । ಶ್ರೀ ಪರಮಗುರುಭ್ಯೋ ನಮ । ಶ್ರೀ ಸರ್ವಗುರುಭ್ಯೋ ನಮಃ । ಶ್ರೀ ಸರ್ವದೇವತಾಭ್ಯೋ ನಮಃ । ಶ್ರೀಮದಾನಂದತೀರ್ಥ ಭಗತ್ಪಾದಾಚಾರ್ಯೇಭ್ಯೋ ನಮಃ । ಶ್ರೀವೇದವ್ಯಾಸಾಯ ನಮಃ । ಶ್ರೀ ಭಾರತ್ಯೈ ನಮಃ । ಶ್ರೀ ಸರಸ್ವತ್ಯೈ ನಮಃ, ವಾಯವೇ ನಮಃ, ಬ್ರಹ್ಮಣೇ ನಮಃ । ಶ್ರೀಮಹಾಲಕ್ಷ್ಮ್ಯೈಃ ನಮಃ । ಶ್ರೀ ಲಕ್ಷ್ಮೀನಾರಾಯಣಾಯ ನಮಃ ।। ಎಂದು ಹೇಳಿ ೧೦೮ ಸಲ ಶ್ರೀ ರಾಘವೇಂದ್ರಾಯ ನಮಃ ಎಂದು ಜಪ ಮಾಡಬೇಕು. ಈ ಪ್ರಕಾರ ಗುರು ಮಂತ್ರವನ್ನು ಅರ್ಥಸಹಿತ ಗುರುಮುಖೇನ ತಿಳಿದು ಮಾಡಿದರೆ ದೀರ್ಘಾಯುವೂ ಸತ್ಕರ್ಮಿಯೂ ಆಗಿರುತ್ತಾರೆ. ಈ ಮಂತ್ರವನ್ನು ಜಪಿಸದೆಯೂ ಶ್ರೀ ಕೃಷ್ಣಮಂತ್ರವನ್ನು ಜಪಿಸಬಹುದು.

## ಶ್ರೀಗುರುರಾಘವೇಂದ್ರ ಧ್ಯಾನಶ್ಲೋಕ

**ತಪ್ತಕಾಂಚನಸಂಕಾಶಂ ಅಕ್ಷಮಾಲಾ ಕಮಂಡಲಂ**
**ದೋರ್ಭ್ಯಾಂ ದಧಾನಂ, ಕಾಷಾಯವಸನಂ ರಾಮಮಾನಸಂ ।**

ಯೋಗೀಂದ್ರತೀರ್ಥವಂದ್ಯಾಂಘ್ರಿಂ ತುಲಸೀದಾಮಭೂಷಿತಂ
ಜ್ಞಾನಭಕ್ತಿತಪಃಪೂರ್ಣಂ ಧ್ಯಾಯೇತ್ ಸರ್ವಾರ್ಥಸಿದ್ಧಯೇ ॥

★ ★ ★ ★

# ಕೃಷ್ಣಮಂತ್ರಜಪ

## ಪ್ರಾಣಾಯಾಮ

(ಮೂಗಿನ ಎಡರಂಧ್ರದ್ವಾರಾ ಮೊದಲಿದ್ದ ವಾಯುವನ್ನು ಹೊರಗೆ ಹಾಕಿ ಆ ಮೂಗನ್ನು ಬಿಗಿಹಿಡಿದು ವಾಯುವನ್ನು ಬಲರಂಧ್ರದ್ವಾರದಿಂದ ತುಂಬಿ ಬ್ರಹ್ಮರಂಧ್ರಕ್ಕೆ ತಗಲಿಸಿ ನಾವು ಜಪಿಸುವ ಮಂತ್ರದ ಭಗವದ್ರೂಪವನ್ನು ಧ್ಯಾನಿಸುವುದೇ ಪ್ರಾಣಾಯಾಮವು. ರೇಚಕ, ಪೂರಕ, ಕುಂಭಕ ಇವು ಪ್ರಾಣಾಯಾಮದ ಅಂಗಗಳು. ಇವುಗಳನ್ನು ಗುರುಗಳಿಂದ ತಿಳಿದು ಕೃಷ್ಣಮಂತ್ರದಿಂದ ಪ್ರಾಣಾಯಾಮ ಮಾಡಬೇಕು.

## ಷಡಂಗನ್ಯಾಸ

ಶ್ರೀಪೂರ್ಣಪ್ರಜ್ಞಾತ್ಮನೇ ಹೃದಯಾಯ ನಮಃ ।
ಶ್ರೀಪೂರ್ಣಐಶ್ವರ್ಯಾತ್ಮನೇ ಶಿರಸೇ ಸ್ವಾಹಾ ।
ಶ್ರೀಪೂರ್ಣಪ್ರಭಾತ್ಮನೇ ಶಿಖಾಯೈ ವೌಷಟ್ ।
ಶ್ರೀಪೂರ್ಣಾನಂದಾತ್ಮನೇ ಕವಚಾಯ ಹುಂ ।
ಶ್ರೀಪೂರ್ಣತೇಜಾತ್ಮನೇ ನೇತ್ರಾಭ್ಯಾಂ ವೌಷಟ್ ।
ಶ್ರೀಪೂರ್ಣಶಕ್ತ್ಯಾತ್ಮನೇ ಅಸ್ತ್ರಾಯಫಟ್ ।

(ಹೃದಯದಲ್ಲಿರುವ ಹೃದಯನಾಮಕನಾದ ಸಂಪೂರ್ಣಜ್ಞಾನಮಯನಾದ ಪರಮಾತ್ಮನಿಗೆ ನಾನು ನಮಸ್ಕಾರ ಮಾಡುತ್ತೇನೆ ಎಂದು ಹೃದಯವನ್ನು ಮುಟ್ಟಬೇಕು.

ಶ್ರೀಪರಿಪೂರ್ಣ ಐಶ್ವರ್ಯಯುಕ್ತನಾದ ಪರಮಾತ್ಮನು ತಲೆಯ ಮೇಲಿದ್ದು ಶಿರೋನಾಮಕನಾಗಿದ್ದಾನೆ. ಅವನಿಗೆ ನಾನು ನಮಸ್ಕಾರ ಮಾಡುತ್ತೇನೆ ಎಂದು ತಲೆಯನ್ನು ಮುಟ್ಟಬೇಕು.

ಶ್ರೀಸಂಪೂರ್ಣ ಅಸದೃಶಕಾಂತಿಯುಳ್ಳ ಪರಮಾತ್ಮನೇ, ನನ್ನ ತಲೆಯ ಹಿಂಬದಿಯಲ್ಲಿದ್ದು ಶಿಖಾನಾಮಕನಾದ ನಿನಗೆ ನಮಸ್ಕಾರಗಳು ಎಂದು ತಲೆಯ ಹಿಂಬದಿಯನ್ನು ಮುಟ್ಟಬೇಕು.

ಶ್ರೀಪರಿಪೂರ್ಣನಾದ ಆನಂದದಿಂದ ಯುಕ್ತನಾದ ಪರಮಾತ್ಮನೇ ನನ್ನ ಮೈಗೆ ಕವಚದಂತಿದ್ದು ಕವಚನಾಮಕನಾದ ನಿನಗೆ ನಮಸ್ಕಾರವು ಎಂದು ಎರಡು ಕೈಗಳನ್ನು ಕವಚದಂತೆ ಮೊಳಕೈಗಳನ್ನು ವಕ್ಷಃಸ್ಥಳಕ್ಕೆ ತಗಲುವಂತೆ ಮಾಡಬೇಕು.

ಶ್ರೀಪರಿಪೂರ್ಣತೇಜಸ್ಸುಳ್ಳ ಪರಮಾತ್ಮನೇ ನನ್ನ ಕಣ್ಣುಗಳಲ್ಲಿದ್ದು ನೇತ್ರನಾಮಕನಾದ ನಿನಗೆ ನಮಸ್ಕಾರ. ಕಣ್ಣನ್ನು ಮುಟ್ಟಬೇಕು.

ಶ್ರೀಪರಿಪೂರ್ಣನಾದ ಅಸದೃಶಸಾಮರ್ಥ್ಯವುಳ್ಳ ಪರಮಾತ್ಮ, ನೀನು ನನ್ನ ತಲೆಯ ಸುತ್ತಲೂ ಇರುವವನಾಗಿ ದೈತ್ಯರನ್ನು ಓಡಿಸುವ ನಿನಗೆ ನಮಸ್ಕಾರ. ಒಂದು ಸಲ ಚಪ್ಪಾಳೆ ತಟ್ಟಬೇಕು.

ಈ ರೀತಿ ಅಂಗನ್ಯಾಸ ಮಾಡಿ ಶ್ರೀಕೃಷ್ಣನನ್ನು ಧ್ಯಾನಿಸಬೇಕು.

ಅಸ್ಯ ಶ್ರೀಕೃಷ್ಣಷಡಕ್ಷರಮಹಾಮಂತ್ರಸ್ಯ ಬ್ರಹ್ಮಾಋಷಿಃ । ಗಾಯತ್ರೀಛಂದಃ ಶ್ರೀಕೃಷ್ಣೋ ದೇವತಾ । ಶ್ರೀಕೃಷ್ಣಪ್ರೀತ್ಯರ್ಥೇ ಜಪೇ ವಿನಿಯೋಗಃ ।

(ಶ್ರೀಪರಮಾತ್ಮನ ಆರು ಅಕ್ಷರಗಳುಳ್ಳ ಈ ಮಂತ್ರಕ್ಕೆ ಬ್ರಹ್ಮದೇವರೇ ಋಷಿಗಳು. (ತಲೆಯನ್ನು ಮುಟ್ಟಬೇಕು) ಶ್ರೇಷ್ಠವಾದ ಗಾಯತ್ರಿಯೇ ಛಂದಸ್ಸು (ಮುಖವನ್ನು ಮುಟ್ಟಬೇಕು). ಶ್ರೀಕೃಷ್ಣನೇ ದೇವತೆಯು (ಹೃದಯವನ್ನು ಮುಟ್ಟಬೇಕು).

## ಧ್ಯಾನ

**ಧ್ಯಾಯೇದ್ಧರಿನ್ಮಣಿನಿಭಂ ಜಗದೇಕವಂದ್ಯಂ**
**ಸೌಂದರ್ಯಸಾರಮರಿಶಂಖವರಾಭಯಾನಿ ।**
**ದೋರ್ಭಿರ್ದಧಾನಮಜಿತಂ ಸರಸಂ ಚ ಭೈಷ್ಮೀ-**
**ಸತ್ಯಾಸಮೇತಮಖಿಲಪ್ರದಮಿಂದಿರೇಶಮ್ ॥**

ಉತ್ತಮವಾದ ಇಂದ್ರನೀಲಮಣಿಯಂತೆ ಕಾಂತಿಯುಳ್ಳವನು. ಜಗತ್ತಿನಿಂದ ನಮಸ್ಕರಿಸಲ್ಪಡುವವನು, ಸೌಂದರ್ಯವೇ ಸಾರವಾಗಿವುಳ್ಳವನು, ನಾಲ್ಕುಕೈಗಳಲ್ಲಿ ಚಕ್ರ, ಶಂಖ, ವರದಮುದ್ರೆ, ಅಭಯಮುದ್ರೆಗಳನ್ನು ಧರಿಸಿದವನು, ಅಜೇಯನಾಗಿ ನಗುಮುಖದವನು, ರುಕ್ಮಿಣೀಸತ್ಯಭಾಮಾ ಸಹಿತನಾಗಿ, ಇಂದಿರಾರಮಣನಾದ ಆ ಶ್ರೀಕೃಷ್ಣನು ತಮ್ಮ ಅಭೀಷ್ಟಗಳನ್ನು ಕೊಡುವವನು, ಹೀಗೆಂದು ಧ್ಯಾನಿಸಬೇಕು.

ಶ್ರೀಮನ್ಮಧ್ವಾಚಾರ್ಯಾಣಾಂ ಹೃತ್ಕಮಲಮಧ್ಯನಿವಾಸಿ ವಾಸುದೇವಸಂಕರ್ಷಣ ಪ್ರದ್ಯುಮ್ನಾನಿರುದ್ಧಾದಿ ಅನಂತ ಅವತಾರಾತ್ಮಕ ಶ್ರೀಭೈಷ್ಮಿಸತ್ಯಾಸಮೇತ

ಶ್ರೀಗೋಪಾಲಕೃಷ್ಣ ಪ್ರೇರಣಯಾ ಶ್ರೀಗೋಪಾಲಕೃಷ್ಣಪ್ರೀತ್ಯರ್ಥಂ ಯಥಾಶಕ್ತಿ ಶ್ರೀಕೃಷ್ಣಷಡಕ್ಷರಜಪತರ್ಪಣಾಖ್ಯಂ ಕರ್ಮಕರಿಷ್ಯೇ (ನೀರು ಬಿಡಬೇಕು).

|| ಶ್ರೀ ಕ್ಲೀಂ ಕೃಷ್ಣಾಯ ನಮಃ ಶ್ರೀ ||

ಶ್ರೀಮನ್ಮಧ್ವಾಚಾರ್ಯರ ಹೃದಯದಲ್ಲಿ ವಾಸಿಸುವ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಮೊದಲಾದ ನಾಲ್ಕುರೂಪದಿಂದ ಆರಂಭಿಸಿ ಅನಂತ ಅವತಾರರೂಪಿಯಾದ ಶ್ರೀ ರುಕ್ಮಿಣೀಸತ್ಯಭಾಮಾಸಮೇತ ಶ್ರೀಗೋಪಾಲಕೃಷ್ಣನ ಪ್ರೇರಣಾನುಸಾರ ಮತ್ತು ಅವನ ಪ್ರೀತಿಗಾಗಿ ನನ್ನ ಶಕ್ತಿ ಇದ್ದಷ್ಟು ಶ್ರೀ ಕ್ಲೀಂ ಕೃಷ್ಣಾಯ ನಮಃ ಶ್ರೀ ಎಂಬ ೬ ಅಕ್ಷರವುಳ್ಳ ಮಂತ್ರವನ್ನು ಜಪಿಸುತ್ತೇನೆ. ಶ್ರೀ ಕ್ಲೀಂ ಕೃಷ್ಣಾಯ ನಮಃ ಶ್ರೀ ಎಂದು ೧೦೦೮ ಅಥವಾ ೧೦೮ ಸಾರಿ ಕಮಲಾಕ್ಷಿಮಣಿಯಿಂದ ಜಪಿಸಬೇಕು).

ಶ್ರೀ ಕ್ಲೀಂ ಕೃಷ್ಣಾಯ ನಮಃ ಶ್ರೀ ಎಂದು ೧೦ಕ್ಕೆ ೧ ರಂತೆ ತರ್ಪಣ ಕೊಡಬೇಕು. ಪುನಃ ಪ್ರಾಣಾಯಾಮ, ಅಂಗನ್ಯಾಸ, ಕರನ್ಯಾಸ, ಧ್ಯಾನವನ್ನು ಹಿಂದಿನಂತೆ ಮಾಡಬೇಕು.

**ಅನೇನ ಗುರುಮಂತ್ರ ಕೃಷ್ಣಷಡಕ್ಷರ ಮಂತ್ರ ಜಪತರ್ಪಣೇನ ಅಸ್ಮತ್ಸತ್ಯಂತರ್ಗತ ಶ್ರೀಮನ್ ಮಧ್ವಾಚಾರ್ಯಾಣಾಂ ಶ್ರೀಗೋಪಾಲಕೃಷ್ಣಪ್ರೀಯತಾಮ್ । ಪ್ರೀತೋ ವರದೋ ಭವತು||**

(ಶ್ರೀಕೃಷ್ಣ! ನಿನ್ನ ಜಪ-ಚಿಂತನೆ ನಿನಗೆ ಅರ್ಪಣೆ ಎಂದು ಸಮರ್ಪಣೆ ಮಾಡಬೇಕು).

### ಕೆಳಗಿನ ಮಂತ್ರಗಳನ್ನು ಪಠಿಸಿರಿ

ಸರ್ವೇಭ್ಯೋ ತತ್ತ್ವಾಭಿಮಾನಿದೇವತಾಭ್ಯೋ ನಮಃ ।

ಸರ್ವೇಭ್ಯೋ ಮಾತೃಕಾಭಿಮಾನಿದೇವತಾಭ್ಯೋ ನಮಃ ।

ಸೂರ್ಯನಾರಾಯಣಾಯ ನಮಃ || (10 ಬಾರಿ ಹೇಳಬೇಕು)

ಶ್ರೀಭೂಸಹಿತ ನಾರಾಯಣಾಯ ನಮಃ || (30 ಬಾರಿ ಹೇಳಬೇಕು)

ಇಂದ್ರಾಯ ನಮಃ । ಅಗ್ನಯೇ ನಮಃ । ಯಮಾಯ ನಮಃ । ನಿರ್ಋತಯೇ ನಮಃ । ವರುಣಾಯ ನಮಃ । ವಾಯವೇ ನಮಃ । ಸೋಮಾಯ ನಮಃ । ರುದ್ರಾಯ ನಮಃ । ಅನಂತಾಯ ನಮಃ । ಬ್ರಹ್ಮಣೇ ನಮಃ । ಮಾತೃಭ್ಯೋ ನಮಃ। ಪಿತೃಭ್ಯೋ ನಮಃ । ಅಸ್ಮತ್ ಪತಯೇ ನಮಃ । ಸಂಧ್ಯಾಯೈ ನಮಃ । ದುರ್ಗಾಯೈ ನಮಃ ||

## ಹಂಸಮಂತ್ರಃ

ಪೂರ್ವೇದ್ಯುಃ ಸೂರ್ಯೋದಯಮಾರಭ್ಯ ಅದ್ಯ ಪ್ರಾತಃ ಸೂರ್ಯೋದಯ ಪರ್ಯಂತಂ ಮದ್ದೇಹೇ ಸ್ಥಿತ್ವಾ ಮುಖ್ಯಪ್ರಾಣೇನ ಕೃತೇನ ಷಟ್‌ಶತಾಧಿಕ ಏಕವಿಂಶತ್ ಸಹಸ್ರಸಂಖ್ಯಾಕಶ್ವಾಸರೂಪಹಂಸಮಂತ್ರಜಪೇನ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಹಂಸರೂಪೀಪರಮಾತ್ಮಾ ಪ್ರೀಯತಾಂ । ಶ್ರೀಕೃಷ್ಣಾರ್ಪಣಮಸ್ತು ॥

## ಕೃಷ್ಣಾರ್ಪಣ

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಸ್ಸಂಧ್ಯಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ ॥

ತಪಃ= ತಪಸ್ಸು, ಸಂಧ್ಯಾ= ಸಂಧ್ಯಾವಂದನ, ಕ್ರಿಯಾದಿಷು= ಕರ್ಮಗಳಲ್ಲಿ, ಯಸ್ಯ= ಯಾವ ಪರಮಾತ್ಮನ, ಸ್ಮೃತ್ಯಾ= ಸ್ಮರಣೆಯಿಂದಲೂ, ನಾಮೋಕ್ತ್ಯಾಚ= ನಾಮೋಚ್ಚಾರಣ ದಿಂದಲೂ, ನ್ಯೂನಂ= ಲೋಪವಾದವುಗಳು, ಸಂಪೂರ್ಣತಾಂ= ಸಂಪೂರ್ಣತ್ವವನ್ನು, ಯಾತಿ= ಹೊಂದುತ್ತವೋ, ಸದ್ಯಃ= ಈಗ, ತಂ= ಆ, ಅಚ್ಯುತಂ= ನಾಶರಹಿತನಾದ ಪರಮಾತ್ಮನನ್ನು, ವಂದೇ= ನಮಸ್ಕರಿಸುತ್ತೇನೆ, ರಮಾಪತೇ= ಲಕ್ಷ್ಮೀಪತಿಯಾದ ಪರಮಾತ್ಮನೇ, ಮಂತ್ರಹೀನಂ= ಮಂತ್ರಹೀನವಾಗಿಯೂ, ಕ್ರಿಯಾಹೀನಂ= ಕರ್ಮ ಹೀನವಾಗಿಯೂ, ಭಕ್ತಿಹೀನಂ= ಭಕ್ತಿರಹಿತವಾಗಿಯೂ, ಮಯಾ= ನನ್ನಿಂದ, ಯತ್ಕೃತಂ= ಯಾವುದು ಮಾಡಲ್ಪಟ್ಟಿತೋ, ತತ್= ಅದು, ಮೇ= ನನಗಾಗಿ, ಪರಿಪೂರ್ಣಂ= ಸಂಪೂರ್ಣ ಫಲಪ್ರಾಪ್ತಿಗೆ ಕಾರಣವು, ಅಸ್ತು= ಆಗಲಿ.

ಅನೇನ ಗುರುಮಂತ್ರ ಕೃಷ್ಣಮಂತ್ರ ಜಪಕರಣೇನ ಅಸ್ಮತ್ತತ್ವ್ಯಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸವಿತೃನಾಮಕ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಮ್ । ಪ್ರೀತೋ ವರದೋ ಭವತು ॥

ಮಧ್ಯೇಮಂತ್ರತಂತ್ರಸ್ವರವರ್ಣಪರ್ವಲೋಪಪ್ರಾಯಶ್ಚಿತ್ತಾರ್ಥಂ ನಾಮತ್ರಯಮಂತ್ರಜಪಂ ಕರಿಷ್ಯೇ ॥

ಅಚ್ಯುತಾಯ ನಮಃ । ಅನಂತಾಯ ನಮಃ । ಗೋವಿಂದಾಯ ನಮಃ ॥

ಅಚ್ಯುತಾನಂತ ಗೋವಿಂದೇಭ್ಯೋ ನಮೋ ನಮಃ ॥

ಅನೇನ= ಈ, ಪ್ರಾತಃ ಸಂಧ್ಯಾವಂದನೇನ= ಪ್ರಾತಃ ಸಂಧ್ಯಾಕರ್ಮದಿಂದ, ಭಗವಾನ್=

ಷಡ್ಗುಣೈಶ್ವರ್ಯಸಂಪನ್ನನಾದ, ಶ್ರೀಮಧ್ವಾಚಾರ್ಯಾಣಾಂ= ಶ್ರೀಮಧ್ವಾಚಾರ್ಯರ, ಹೃತ್ಕಮಲಮಧ್ಯನಿವಾಸೀ= ಹೃದಯಕಮಲ ಮಧ್ಯದಲ್ಲಿ ವಾಸ ಮಾಡಿಕೊಂಡಿರುವ, ಅನಂತಕಲ್ಯಾಣಗುಣಪರಿಪೂರ್ಣಃ= ಅನಂತ ಕಲ್ಯಾಣ ಗುಣಗಳಿಂದ ಪೂರ್ಣನಾದ, ಕ್ಷೀರಾಬ್ಧಿಶಾಯೀ= ಕ್ಷೀರಸಾಗರದಲ್ಲಿ ಶಯನ ಮಾಡಿರುವ, ನಿರ್ದೋಷಜ್ಞಾನಾನಂದಾತ್ಮಕಃ= ದೋಷಲೇಶವೂ ಇಲ್ಲದ ಜ್ಞಾನಾನಂದಾತ್ಮಕನಾದ, ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಸವಿತೃನಾಮಕ ಶ್ರೀಲಕ್ಷ್ಮೀನಾರಾಯಣಃ= ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಲಕ್ಷ್ಮೀನಾರಾಯಣನು, ಪ್ರೀಯತಾಂ= ಪ್ರೀತನಾಗಲಿ, ಪ್ರೀತಃ= ಪ್ರೀತನಾಗಿ, ವರದೋ ಭವತು= ವರವನ್ನು ಕೊಡಲಿ.

**ಕಾಯೇನ ವಾಚಾ ಮನಸೇಂದ್ರಿಯೈರ್ವಾ**
**ಬುದ್ಧ್ಯಾತ್ಮನಾ ವಾ ಅನುಸೃತಸ್ವಭಾವಃ ।**
**ಕರೋಮಿ ಯದ್ಯತ್ ಸಕಲಂ ಪರಸ್ಮೈ**
**ನಾರಾಯಣಾಯೇತಿ ಸಮರ್ಪಯಾಮಿ ॥**

ಕಾಯೇನ= ದೇಹದಿಂದಲೂ, ವಾಚಾ= ವಾಕ್ಕಿನಿಂದಲೂ, ಮನಸಾ= ಮನಸ್ಸಿನಿಂದಲೂ, ಇಂದ್ರಿಯೈಃವಾ= ಇಂದ್ರಿಯಗಳಿಂದಲೂ, ಬುದ್ಧ್ಯಾ= ಬುದ್ಧಿಯಿಂದಲೂ, ಆತ್ಮನಾವಾ= ಪ್ರಾಣದಿಂದಲೂ, ಸ್ವಭಾವಃ= ಸ್ವಭಾವವನ್ನು, ಅನುಸೃತ್ಯ= ಅನುಸರಿಸಿದವನಾಗಿ, ಯದ್ಯತ್= ಯಾವುದು ಯಾವುದು, ಕರೋಮಿ= ಮಾಡುತ್ತೇನೋ, ಸಮಸ್ತಂ= ಆಸಮಸ್ತವನ್ನೂ, ಪರಸ್ಮೈ= ಉತ್ತಮನಾದಂಥಾ, ನಾರಾಯಣಾಯ= ನಾರಾಯಣನಿಗೆ, (ಅಹಂ= ನಾನು), ಸಮರ್ಪಯಾಮಿ= ಅರ್ಪಣೆ ಮಾಡುತ್ತೇನೆ.

**ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ಚ ಯದ್ಭವೇತ್ ।**
**ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥**

ಯತ್= ಯಾವುದು ಅಕ್ಷರಪದಭ್ರಷ್ಟಂ= ಅಕ್ಷರ, ಪದಗಳ ಹೀನತೆಯು, ಚ= ಮತ್ತು, ಯತ್= ಯಾವುದು, ಮಾತ್ರಾಹೀನಂ= ಮಾತ್ರಾ ಕಾಲಗಳ ಹೀನತೆಯೂ, ಭವೇತ್= (ನನ್ನಿಂದ) ಉಂಟಾಯಿತೋ, ತತ್ಸರ್ವಂ= ಅವೆಲ್ಲವೂ, ಕ್ಷಮ್ಯತಾಂ= ಕ್ಷಮಿಸಲ್ಪಡಲಿ. ದೇವ= ಕ್ರೀಡಾದಿಗುಣ ವಿಶಿಷ್ಟನಾದ, ನಾರಾಯಣ= ದೋಷದೂರನಾದ, ಗುಣಪೂರ್ಣನಾದ ನಾರಾಯಣನೇ, ತೇ= ನಿನಗೆ, ನಮಃ= ನಮಸ್ಕಾರವು, ಅಸ್ತು= ಇರಲಿ.

ಅಸ್ಮದ್ಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸವಿತೃನಾಮಕ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಂ ಪ್ರೀತೋ ವರದೋ ಭವತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★ ★

## ಹಂಸಮಂತ್ರಃ

ಪೂರ್ವೇದ್ಯುಃ ಸೂರ್ಯೋದಯಮಾರಭ್ಯ ಅದ್ಯ ಪ್ರಾತಃ ಸೂರ್ಯೋದಯ ಪರ್ಯಂತಂ ಮದ್ದೇಹೇ ಸ್ಥಿತ್ವಾ ಮುಖ್ಯಪ್ರಾಣೇನ ಕೃತೇನ ಷಟ್‌ಶತಾಧಿಕ ಏಕವಿಂಶತ್ ಸಹಸ್ರಸಂಖ್ಯಾಕಶ್ವಾಸರೂಪಹಂಸಮಂತ್ರಜಪೇನ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಹಂಸರೂಪೀಪರಮಾತ್ಮಾ ಪ್ರೀಯತಾಂ । ಶ್ರೀಕೃಷ್ಣಾರ್ಪಣಮಸ್ತು ॥

## ಕೃಷ್ಣಾರ್ಪಣ

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಸ್ಸಂಧ್ಯಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ ॥

ತಪಃ= ತಪಸ್ಸು, ಸಂಧ್ಯಾ= ಸಂಧ್ಯಾವಂದನ, ಕ್ರಿಯಾದಿಷು= ಕರ್ಮಗಳಲ್ಲಿ, ಯಸ್ಯ= ಯಾವ ಪರಮಾತ್ಮನ, ಸ್ಮೃತ್ಯಾ= ಸ್ಮರಣೆಯಿಂದಲೂ, ನಾಮೋಕ್ತ್ಯಾಚ= ನಾಮೋಚ್ಚಾರಣ ದಿಂದಲೂ, ನ್ಯೂನಂ= ಲೋಪವಾದವುಗಳು, ಸಂಪೂರ್ಣತಾಂ= ಸಂಪೂರ್ಣತ್ವವನ್ನು, ಯಾತಿ= ಹೊಂದುತ್ತವೋ, ಸದ್ಯಃ= ಈಗ, ತಂ= ಆ, ಅಚ್ಯುತಂ= ನಾಶರಹಿತನಾದ ಪರಮಾತ್ಮನನ್ನು, ವಂದೇ= ನಮಸ್ಕರಿಸುತ್ತೇನೆ, ರಮಾಪತೇ= ಲಕ್ಷ್ಮೀಪತಿಯಾದ ಪರಮಾತ್ಮನೇ, ಮಂತ್ರಹೀನಂ= ಮಂತ್ರಹೀನವಾಗಿಯೂ, ಕ್ರಿಯಾಹೀನಂ= ಕರ್ಮ ಹೀನವಾಗಿಯೂ, ಭಕ್ತಿಹೀನಂ= ಭಕ್ತಿರಹಿತವಾಗಿಯೂ, ಮಯಾ= ನನ್ನಿಂದ, ಯತ್ಕೃತಂ= ಯಾವುದು ಮಾಡಲ್ಪಟ್ಟಿತ್ತೋ, ತತ್= ಅದು, ಮೇ= ನನಗಾಗಿ, ಪರಿಪೂರ್ಣಂ= ಸಂಪೂರ್ಣ ಫಲಪ್ರಾಪ್ತಿಗೆ ಕಾರಣವು, ಅಸ್ತು= ಆಗಲಿ.

ಅನೇನ ಗುರುಮಂತ್ರ ಕೃಷ್ಣಮಂತ್ರ ಜಪಕರಣೇನ ಅಸ್ಮತ್ತತ್ವ್ಯಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸವಿತೃನಾಮಕ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಮ್ । ಪ್ರೀತೋ ವರದೋ ಭವತು ॥

ಮಧ್ಯೇಮಂತ್ರತಂತ್ರಸ್ವರವರ್ಣಪರ್ವಲೋಪಪ್ರಾಯಶ್ಚಿತ್ತಾರ್ಥಂ ನಾಮತ್ರಯಮಂತ್ರಜಪಂ ಕರಿಷ್ಯೇ ॥

ಅಚ್ಯುತಾಯ ನಮಃ । ಅನಂತಾಯ ನಮಃ । ಗೋವಿಂದಾಯ ನಮಃ ॥

ಅಚ್ಯುತಾನಂತ ಗೋವಿಂದೇಭ್ಯೋ ನಮೋ ನಮಃ ॥

ಅನೇನ= ಈ, ಪ್ರಾತಃ ಸಂಧ್ಯಾವಂದನೇನ= ಪ್ರಾತಃ ಸಂಧ್ಯಾಕರ್ಮದಿಂದ, ಭಗವಾನ್=

ಷಡ್ಗುಣ್ಯೈಶ್ವರ್ಯಸಂಪನ್ನನಾದ, ಶ್ರೀಮಧ್ವಾಚಾರ್ಯಾಣಾಂ= ಶ್ರೀಮಧ್ವಾಚಾರ್ಯರ, ಹೃತ್ಕಮಲಮಧ್ಯನಿವಾಸೀ= ಹೃದಯಕಮಲ ಮಧ್ಯದಲ್ಲಿ ವಾಸ ಮಾಡಿಕೊಂಡಿರುವ, ಅನಂತಕಲ್ಯಾಣಗುಣಪರಿಪೂರ್ಣಃ= ಅನಂತ ಕಲ್ಯಾಣ ಗುಣಗಳಿಂದ ಪೂರ್ಣನಾದ, ಕ್ಷೀರಾಬ್ಧಿಶಾಯೀ= ಕ್ಷೀರಸಾಗರದಲ್ಲಿ ಶಯನ ಮಾಡಿರುವ, ನಿರ್ದೋಷಜ್ಞಾನಾನಂದಾತ್ಮಕಃ= ದೋಷಲೇಶವೂ ಇಲ್ಲದ ಜ್ಞಾನಾನಂದಾತ್ಮಕನಾದ, ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಸವಿತೃನಾಮಕ ಶ್ರೀಲಕ್ಷ್ಮೀನಾರಾಯಣಃ= ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಲಕ್ಷ್ಮೀನಾರಾಯಣನು, ಪ್ರೀಯತಾಂ= ಪ್ರೀತನಾಗಲಿ, ಪ್ರೀತಃ= ಪ್ರೀತನಾಗಿ, ವರದೋ ಭವತು= ವರವನ್ನು ಕೊಡಲಿ.

**ಕಾಯೇನ ವಾಚಾ ಮನಸೇಂದ್ರಿಯೈರ್ವಾ**
**ಬುದ್ಧ್ಯಾತ್ಮನಾ ವಾ ಅನುಸೃತಸ್ವಭಾವಃ ।**
**ಕರೋಮಿ ಯದ್ಯತ್ ಸಕಲಂ ಪರಸ್ಮೈ**
**ನಾರಾಯಣಾಯೇತಿ ಸಮರ್ಪಯಾಮಿ ॥**

ಕಾಯೇನ= ದೇಹದಿಂದಲೂ, ವಾಚಾ= ವಾಕ್ಕಿನಿಂದಲೂ, ಮನಸಾ= ಮನಸ್ಸಿನಿಂದಲೂ, ಇಂದ್ರಿಯೈಃವಾ= ಇಂದ್ರಿಯಗಳಿಂದಲೂ, ಬುದ್ಧ್ಯಾ= ಬುದ್ಧಿಯಿಂದಲೂ, ಆತ್ಮನಾವಾ= ಪ್ರಾಣದಿಂದಲೂ, ಸ್ವಭಾವಃ= ಸ್ವಭಾವವನ್ನು, ಅನುಸೃತ್ಯ= ಅನುಸರಿಸಿದವನಾಗಿ, ಯದ್ಯತ್= ಯಾವುದು ಯಾವುದು, ಕರೋಮಿ= ಮಾಡುತ್ತೇನೋ, ಸಮಸ್ತಂ= ಆಸಮಸ್ತವನ್ನೂ, ಪರಸ್ಮೈ= ಉತ್ತಮನಾದಂಥಾ, ನಾರಾಯಣಾಯ= ನಾರಾಯಣನಿಗೆ, (ಅಹಂ= ನಾನು), ಸಮರ್ಪಯಾಮಿ= ಅರ್ಪಣೆ ಮಾಡುತ್ತೇನೆ.

**ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ಚ ಯದ್ಭವೇತ್ ।**
**ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥**

ಯತ್= ಯಾವುದು ಅಕ್ಷರಪದಭ್ರಷ್ಟಂ= ಅಕ್ಷರ, ಪದಗಳ ಹೀನತೆಯು, ಚ= ಮತ್ತು, ಯತ್= ಯಾವುದು, ಮಾತ್ರಾಹೀನಂ= ಮಾತ್ರಾ ಕಾಲಗಳ ಹೀನತೆಯೂ, ಭವೇತ್= (ನನ್ನಿಂದ) ಉಂಟಾಯಿತೋ, ತತ್ಸರ್ವಂ= ಅವೆಲ್ಲವೂ, ಕ್ಷಮ್ಯತಾಂ= ಕ್ಷಮಿಸಲ್ಪಡಲಿ. ದೇವ= ಕ್ರೀಡಾದಿಗುಣ ವಿಶಿಷ್ಟನಾದ, ನಾರಾಯಣ= ದೋಷದೂರನಾದ, ಗುಣಪೂರ್ಣನಾದ ನಾರಾಯಣನೇ, ತೇ= ನಿನಗೆ, ನಮಃ= ನಮಸ್ಕಾರವು, ಅಸ್ತು= ಇರಲಿ.

ಅಸ್ಮದ್ಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸವಿತೃನಾಮಕ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಂ ಪ್ರೀತೋ ವರದೋ ಭವತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★ ★

## ನದನದಿಗಳನ್ನು ಸ್ಮರಿಸಿ ಪುನೀತರಾಗಿ

ನದನದಿಗಳನು ಸ್ಮರಿಸಿರೋ ನದನದಿಗಳನು ಸ್ಮರಿಸಿ ಹೃದಯ ನಿರ್ಮಳರಾಗಿ ಮುದದಿಂದ ನಿಮ್ಮ ಮನದಧಮತನ ಬಿಟ್ಟ ಸಂಪದವಿಗೆ ಸೋಪಾನದಂತಾಗುವದು ಶ್ರೀಪದಮನಾಭನು ವೊಲಿವನು ।।ಪ।। ಸಿಂಧು ಮರುದ್ಧೃತಿ ಹೇಮವತಿ ನೇಮಿ ನೇತ್ರವತಿ ತರುಣಿಸುತೆ ನರ್ಮದಾ ಗಾಯತ್ರಿ ಗೋಮತಿ ಗರುಡ ಸಾಧರ್ಮಾ ಸರಸ್ವತಿ ಮಣಿಮುಕ್ತ ಮುಕ್ತನದಿಯು ಪ್ರಣತ ವರದಕಾಗಿಣಿ ಕೃಷ್ಣವೇಣಿ ವೇದವತಿ ಹರಿದ್ಧೃತಿ ಇಂದ್ರಾಣಿ ಪುನಃ ಪುನಃ ವಾಣಿವಂ ಜರಫಣಿ ಭೀಮರಥಿನೀ ।।೧।। ಧಾರಿ ತುಂಗಾ ಭದ್ರಿಗಣಪತಿ ಶತಭಾಗ ನಾರದಿ ಉಭಯಪಿನಾಕಿ ಚಿತ್ರವತೀ ಮೂರು ಲೋಕೋದ್ಭವ ಭವಾನೀ ಚಾರು ಗಂಡಿಕೆ ಸರಯು ಶ್ರೋಣಿ ಭದ್ರನೀಲ ಕ್ಷೀರನದಿ ಪಾಪಘ್ನ ಮಹಾನದಿ ಅಘನಾಶಿ ವಾರಿಜಾಪ್ತಾವತಿ ಸುವರ್ಣ ಮುಖರೀ ವಿಸ್ತಾರ ಹಾಟಕ ಅತ್ರಿಣೀ ।।೨।। ಸುಲಭ ಮಂದಾಕಿನಿ ಕೌಮೋದಕಿ ಶಾಂತಿ ಕಪಿಲ ಚಂದ್ರಭಾಗ ಅರುಣೀ ಪೊಳೆವ ಕಾಳಾವತಿ ತ್ರಿಪಥಿ ಗೌರಿ ಕುಂತಿ ಅಳಕನಂದನ ಅಮಲವತಿ ಭೀಮಸಂಭೆ ಸೀತಾಂಬ್ರಪರ್ಣಿಯು ಜಯ ಮಂ ಸತಿ ಸತ್ಯವತಿ ವೈಷ್ಣವೀ ।।೩।। ಕನಿಕ ಶುಕ್ಲಾವತೀ ಬಾಹುನದಿಗೋವಿಂದ ಮಿನಗುವ ಭೋಗವತಿ ಕಾಶ್ಯಪಿಂಕಾಳಿಂದಿ ಅನುಸಿಂಧು ಐರಾವತಿ ಋಣ ವಿಮೋಚನ ಮಯೂರ ಸಂಭವೆ ನಿತ್ಯ ಪುಷ್ಕರಣಿ ಪಯೋಶ್ವಿನಿ ಮಹಾಪಗ ಭದ್ರ ಭೈರವಿ ವಿಚಿತ್ರ ನದಿಗಳನು ।।೪।। ಅರುಣೋದಯಲೆದ್ದು ಧರೆಯೊಳುಗಳ್ಳ ಬಲು ಸರಿತಗಳ ನೆನೆದು ಪುಳಕೋತ್ಸವದಲಿ ಪರಮ ಧನ್ಯರಾಗಿ ಪಾಪಗಳ ಪೋಗಾಡಿ ನಿರುತ ಮಾರುತ ಮತದಲೀ ಚರಿಸಿ ನಿಜಭಕುತಿಯಲಿ ಹಗಲು ಇರಳು ಇನಿತು ಸಿರಿಯರಸ ವಿಜಯವಿಟ್ಠಲನ ಚರಣಾಂಬುಜವ ಸರಸದಿಂದಲಿ ಧ್ಯಾನಗೈದು ಈ ನದಿಗಳಲಿ ಕರುಣದಲಿ ತಿಳಿದು ನಿತ್ಯಾ ।।೫।।

★ ★ ★ ★

## ಮಾನಸ ಪೂಜೆ ಮಾಡಿರಿ

ನಾರಾಯಣ ನಿಮ್ಮ ನಾಮವ ನೆನೆದು ನಾಲಿಗೆ ತುದಿಯಲಿ ಅಮೃತವ ಸುರಿದು ರಾಮನಾಮದ ಸಾರವ ತಿಳಿದು ಅಚ್ಯುತ ನಾಮವ ಭಕ್ತಿಯಿಂದ ನೆನೆದು ಅನಂತನಾಮವ ಗುಣಕಥೆ ಕೇಳಿ ಕುಸುಮನಾಭನ ಅಂಗಳದೊಳಗೆ ಕುಂಕುಮ ಕಸ್ತೂರಿ ಥಳಿಯನೆ ಹಾಕಿ ವೃಂದಾವನಕೆಂದು ಗೋಮಯತಂದು ಸಾರಿಸಿ ಮುತ್ತಿನ ಚೌಕಳಿ ತುಂಬಿ ಶಂಖ ಚಕ್ರ ಗದಾ ಪದ್ಮಗಳಿಂದ ಅಲಂಕಾರದಪಂಚಣಗಿ ತುಂಬಿ ಸಕಲ ತೀರ್ಥಗಳೆಂಬೋ ಗಂಗೆಯಲಿ

ಮಿಂದು ದೇವಾಂಗ ಪಠಾವಳಿಯನೊಗೆದು ಗಿಂಡೀಲಿ ಉದಕ ಝಾರಿಲಿ ತುಂಬಿ ನೇಮದಿಂದಲಿ ಶ್ರೀಕೃಷ್ಣತುಳಸಿಗೆರೆದು ಅನೇಕ ಜನ್ಮದ ಪಾಪವ ಕಳೆದು ಪಠಾವಳಿಯಲಿ ಬತ್ತಿಯ ಮಾಡಿ ಅಚ್ಚಕರಿ ಆಕಳ ತುಪ್ಪವ ತುಂಬಿ ಮುತ್ತು ಮಾಣಿಕವೆಂಬೋ ಠಾಣಾದೀವಿಗೆ ದೇವರ ಜಗುಲಿಗೆ ಇದಿರಾಗಿಟ್ಟು ಗೋವಿಂದಾ ನಿನಗರ್ಪಿತವೆಂದು ಶ್ರೀಕೃಷ್ಣಾ ನಿನಗರ್ಪಿತವೆಂದು ಪಂಚಾಮೃತದ ಅಭಿಷೇಕ ಮಾಡಿ ಆಚಮನಂಗಳ ಕೇಶವಗಿಟ್ಟು ಆಭರಣಂಗಳ ಶ್ರೀಹರಿಗಿಟ್ಟು ಮುಂಗೈಮುರಾರಿ ಮುಕುಂದಗಿಟ್ಟು ಅಂದಿಗಿ ಪಾಟಲಿ ಗೋವಿಂದಗಿಟ್ಟು ಮುತ್ತಿನವಂಕಿ ವಿಟ್ಠಲಗಿಟ್ಟು ಪಾರಿಜಾತ ಹೊನ್ನುಹೂ ಮಲ್ಲಿಗೆ ಸಂಪಿಗೆ ಕ್ಯಾದಿಗಿ ದವನ ಮುಂಗೈ ಚೆಲುವ ಮಾಣಿಕ ಸೂರ್ಯ ಚಂದ್ರರಿಗಿಂತ ಹೆಚ್ಚಾಗಿ ಹೊಳೆವ ಹೊನ್ನ ಹರಿವಾಣ ತಂದಿರಿಸಿ ಶಾಲ್ಯಾನ್ನ ಸೂಪಗಳ ಬಡಿಸಿ ಪರಮಾನ್ನ ಭಕ್ಷಗಳ ಬಡಿಸಿ ಗಾಯತ್ರಿ ಮಂತ್ರದಲಿ ಪ್ರೋಕ್ಷಿಸಿ ಜ್ಞಾನದಿಂದ ಪಂಚಪ್ರಾಣನ ಸ್ಮರಿಸಿ ನೈವೇದ್ಯಂಗಳ ಕ್ರಮದಿಂದ ಬಡಿಸಿ ಶ್ರೀಕೃಷ್ಣಾ ನಿನಗರ್ಪಿತವೆಂದು । ಇತಿ ಮಾನಸ ಪೂಜೆ ಮಾಡಿದವರಿಗೆ ಅನಂತಾನಂತ ಮುಕ್ತಿಕೊಡುವ ಪುರಂದರವಿಟ್ಠಲ ॥

★ ★ ★ ★ ★

## ಅಭಿಷೇಕದ ಕಾಲದಲ್ಲಿ ಇದನ್ನು ಹೇಳಿರಿ

ಚರಣ ತೊಳೆದು ಜಲಪಾನ ಮಾಡುವೆನು ॥ಪ॥ ನೀರೊಳಗೆ ನಿಂತುಕೊಂಬೆ । ಬೆಣ್ಣೆ ಬಾರ ಪೊಟ್ಟರೆ ನಗುವಳು ನಿನ್ನ ರಂಭೆ । ಮೋರೆ ತಗ್ಗಿಸಿರೆಂಬೆ । ಜಗದಿ । ನರಸಿಂಹನಾಂಗಿ ಪೂಜೆಯ ಗೊಂಬೆ ॥೧॥ ಬಲಿಯ ದಾನವ ಬೇಡಿದೆಯಲ್ಲೋ । ಕ್ಷತ್ರ ಕುಲ ಸವರಿ ಕೊಡಲಿಯ ಪಿಡಿದ್ಯಲ್ಲೋ । ಬಲವಂತ ನಿನಗೆದುರಿಲ್ಲೋ । ನಿನ್ನ । ರಾಜ್ಯವ ತಂದು ರಾಜ್ಯ ಪಾಲಿಸಿದ್ಯಲ್ಲೋ ॥೨॥ ಗೋಕುಲದೊಳು ಇದ್ದೆಯಲ್ಲೋ । ಲೋಕ । ಪಾಕು ಮಾಡಲು ಬುದ್ಧನಾದ್ಯಲ್ಲೋ । ಏಕೆ ಹಯವನೇರಿದ್ಯಲ್ಲೋ । ನಮ್ಮ । ಸಾಕುವ ಹಯವದನ ನೀನೇ ಬಲ್ಲೆಲೋ ॥೩॥

★ ★ ★ ★ ★

## ಅಲಂಕಾರ ಮಾಡುವಾಗ ಹೇಳಿರಿ

ಈ ಪರಿಯ ಸೊಬಗಾವ ದೇವರಲಿ ಕಾಣೆ ॥ಪ॥ ಗೋಪೀಜನಪ್ರಿಯ ಗೋಪಾಲಗಲ್ಲದೆ ॥ಅ.ಪ॥ ದೊರೆಯತನದಲ್ಲಿ ನೋಡೆ ಧರಣಿದೇವಿಗೆ ರಮಣ ಸಿರಿಯತನದಲಿ ನೋಡೆ ಶ್ರೀಕಾಂತನು ಹಿರಿಯತನದಲಿ ನೋಡೆ ಸರಸಿಜೋದ್ಭವನಯ್ಯ

## ನದನದಿಗಳನ್ನು ಸ್ಮರಿಸಿ ಪುನೀತರಾಗಿ

ನದನದಿಗಳನು ಸ್ಮರಿಸಿರೋ ನದನದಿಗಳನು ಸ್ಮರಿಸಿ ಹೃದಯ ನಿರ್ಮಳರಾಗಿ ಮುದದಿಂದ ನಿಮ್ಮ ಮನದಧಮತನ ಬಿಟ್ಟು ಸಂಪದವಿಗೆ ಸೋಪಾನದಂತಾಗುವದು ಶ್ರೀಪದಮನಾಭನು ವೊಲಿವನು ॥ಪ॥ ಸಿಂಧು ಮರುದ್ಧೃತಿ ಹೇಮವತಿ ನೇಮಿ ನೇತ್ರವತಿ ತರುಣಿಸುತೆ ನರ್ಮದಾ ಗಾಯತ್ರಿ ಗೋಮತಿ ಗರುಡ ಸಾಧರ್ಮಾ ಸರಸ್ವತಿ ಮಣಿಮುಕ್ತ ಮುಕ್ತನದಿಯು ಪ್ರಣತ ವರದಕಾಗಿಣಿ ಕೃಷ್ಣವೇಣಿ ವೇದವತಿ ಹರಿದ್ಧೃತಿ ಇಂದ್ರಾಣಿ ಪುನಃ ಪುನಃ ವಾಣಿವಂ ಜರಫಣಿ ಭೀಮರಥಿನೀ ॥೧॥ ಧಾರಿ ತುಂಗಾ ಭದ್ರಿಗಣಪತಿ ಶತಭಾಗ ನಾರದಿ ಉಭಯಪಿನಾಕಿ ಚಿತ್ರವತೀ ಮೂರು ಲೋಕೋದ್ಭವ ಭವಾನೀ ಚಾರು ಗಂಡಿಕೆ ಸರಯು ಶ್ರೋಣಿ ಭದ್ರನೀಲ ಕ್ಷೀರನದಿ ಪಾಪಘ್ನ ಮಹಾನದಿ ಅಘನಾಶಿ ವಾರಿಜಾಪ್ತಾವತಿ ಸುವರ್ಣ ಮುಖರೀ ವಿಸ್ತಾರ ಹಾಟಕ ಅತ್ರಿಣೀ ॥೨॥ ಸುಲಭ ಮಂದಾಕಿನಿ ಕೌಮೋದಕಿ ಶಾಂತಿ ಕಪಿಲ ಚಂದ್ರಭಾಗ ಅರುಣೀ ಪೊಳೆವ ಕಾಳಾವತಿ ತ್ರಿಪಥಿ ಗೌರಿ ಕುಂತಿ ಅಳಕನಂದನ ಅಮಲವತಿ ಭೀಮಸಂಭೆ ಸೀತಾಂಬ್ರಪರ್ಣಿಯು ಜಯ ಮಂ ಸತಿ ಸತ್ಯವತಿ ವೈಷ್ಣವೀ ॥೩॥ ಕನಿಕ ಶುಕ್ಲಾವತೀ ಬಾಹುನದಿಗೋವಿಂದ ಮಿನಗುವ ಭೋಗವತಿ ಕಾಶ್ಯಪಿಂಕಾಳಿಂದಿ ಅನುಸಿಂಧು ಐರಾವತಿ ಋಣ ವಿಮೋಚನ ಮಯೂರ ಸಂಭವೆ ನಿತ್ಯ ಪುಷ್ಕರಣಿ ಪಯೋಶ್ವಿನಿ ಮಹಾಪಗ ಭದ್ರ ಭೈರವಿ ವಿಚಿತ್ರ ನದಿಗಳನು ॥೪॥ ಅರುಣೋದಯಲೆದ್ದು ಧರೆಯೊಳುಗಳ್ಳ ಬಲು ಸರಿತಗಳ ನೆನೆದು ಪುಳಕೋತ್ಸವದಲಿ ಪರಮ ಧನ್ಯರಾಗಿ ಪಾಪಗಳ ಪೋಗಾಡಿ ನಿರುತ ಮಾರುತ ಮತದಲೀ ಚರಿಸಿ ನಿಜಭಕುತಿಯಲಿ ಹಗಲು ಇರಳು ಇನಿತು ಸಿರಿಯರಸ ವಿಜಯವಿಟ್ಠಲನ ಚರಣಾಂಬುಜವ ಸರಸದಿಂದಲಿ ಧ್ಯಾನಗೈದು ಈ ನದಿಗಳಲಿ ಕರುಣದಲಿ ತಿಳಿದು ನಿತ್ಯಾ ॥೫॥

★ ★ ★ ★

## ಮಾನಸ ಪೂಜೆ ಮಾಡಿರಿ

ನಾರಾಯಣ ನಿಮ್ಮ ನಾಮವ ನೆನೆದು ನಾಲಿಗೆ ತುದಿಯಲಿ ಅಮೃತವ ಸುರಿದು ರಾಮನಾಮದ ಸಾರವ ತಿಳಿದು ಅಚ್ಯುತ ನಾಮವ ಭಕ್ತಿಯಿಂದ ನೆನೆದು ಅನಂತನಾಮವ ಗುಣಕಥೆ ಕೇಳಿ ಕುಸುಮನಾಭನ ಅಂಗಳದೊಳಗೆ ಕುಂಕುಮ ಕಸ್ತೂರಿ ಥಳಿಯನೆ ಹಾಕಿ ವೃಂದಾವನಕೆಂದು ಗೋಮಯತಂದು ಸಾರಿಸಿ ಮುತ್ತಿನ ಚೌಕಳಿ ತುಂಬಿ ಶಂಖ ಚಕ್ರ ಗದಾ ಪದ್ಮಗಳಿಂದ ಅಲಂಕಾರದಪಂಚಣಗಿ ತುಂಬಿ ಸಕಲ ತೀರ್ಥಗಳೆಂಬೋ ಗಂಗೆಯಲಿ

ಮಿಂದು ದೇವಾಂಗ ಪಠಾವಳಿಯನೊಗೆದು ಗಿಂಡೀಲಿ ಉದಕ ಝೂರಿಲಿ ತುಂಬಿ ನೇಮದಿಂದಲಿ ಶ್ರೀಕೃಷ್ಣತುಳಸಿಗೆರೆದು ಅನೇಕ ಜನ್ಮದ ಪಾಪವ ಕಳೆದು ಪಠಾವಳಿಯಲಿ ಬತ್ತಿಯ ಮಾಡಿ ಅಚ್ಚಕರಿ ಆಕಳ ತುಪ್ಪವ ತುಂಬಿ ಮುತ್ತು ಮಾಣಿಕವೆಂಬೋ ಠಾಣಾದೀವಿಗೆ ದೇವರ ಜಗುಲಿಗೆ ಇದಿರಾಗಿಟ್ಟು ಗೋವಿಂದಾ ನಿನಗರ್ಪಿತವೆಂದು ಶ್ರೀಕೃಷ್ಣಾ ನಿನಗರ್ಪಿತವೆಂದು ಪಂಚಾಮೃತದ ಅಭಿಷೇಕ ಮಾಡಿ ಆಚಮನಂಗಳ ಕೇಶವಗಿಟ್ಟು ಆಭರಣಂಗಳ ಶ್ರೀಹರಿಗಿಟ್ಟು ಮುಂಗೈಮುರಾರಿ ಮುಕುಂದಗಿಟ್ಟು ಅಂದಿಗಿ ಪಾಟಲಿ ಗೋವಿಂದಗಿಟ್ಟು ಮುತ್ತಿನವಂಕಿ ವಿಟ್ಠಲಗಿಟ್ಟು ಪಾರಿಜಾತ ಹೊನ್ನುಹೂ ಮಲ್ಲಿಗೆ ಸಂಪಿಗೆ ಕ್ಯಾದಿಗಿ ದವನ ಮುಂಗೈ ಚೆಲುವ ಮಾಣಿಕ ಸೂರ್ಯ ಚಂದ್ರರಿಗಿಂತ ಹೆಚ್ಚಾಗಿ ಹೊಳೆವ ಹೊನ್ನ ಹರಿವಾಣ ತಂದಿರಿಸಿ ಶಾಲ್ಯಾನ್ನ ಸೂಪಗಳ ಬಡಿಸಿ ಪರಮಾನ್ನ ಭಕ್ಷಗಳ ಬಡಿಸಿ ಗಾಯತ್ರಿ ಮಂತ್ರದಲಿ ಪ್ರೋಕ್ಷಿಸಿ ಜ್ಞಾನದಿಂದ ಪಂಚಪ್ರಾಣನ ಸ್ಮರಿಸಿ ನೈವೇದ್ಯಂಗಳ ಕ್ರಮದಿಂದ ಬಡಿಸಿ ಶ್ರೀಕೃಷ್ಣಾ ನಿನಗರ್ಪಿತವೆಂದು । ಇತಿ ಮಾನಸ ಪೂಜೆ ಮಾಡಿದವರಿಗೆ ಅನಂತಾನಂತ ಮುಕ್ತಿಕೊಡುವ ಪುರಂದರವಿಟ್ಠಲ ॥

★ ★ ★ ★ ★

## ಅಭಿಷೇಕದ ಕಾಲದಲ್ಲಿ ಇದನ್ನು ಹೇಳಿರಿ

ಚರಣ ತೊಳೆದು ಜಲಪಾನ ಮಾಡುವೆನು ॥ಪ॥ ನೀರೊಳಗೆ ನಿಂತುಕೊಂಬೆ । ಬೆಣ್ಣೆ ಬಾರ ಪೊಟ್ಟರೆ ನಗುವಳು ನಿನ್ನ ರಂಭೆ । ಮೋರೆ ತಗ್ಗಿಸಿರೆಂಬೆ । ಜಗದಿ । ನರಸಿಂಹನಾಂಗಿ ಪೂಜೆಯ ಗೊಂಬೆ ॥೧॥ ಬಲಿಯ ದಾನವ ಬೇಡಿದೆಯಲ್ಲೋ । ಕ್ಷತ್ರ ಕುಲ ಸವರಿ ಕೊಡಲಿಯ ಪಿಡಿದ್ಯಲ್ಲೋ । ಬಲವಂತ ನಿನಗೆದುರಿಲ್ಲೋ । ನಿನ್ನ । ರಾಜ್ಯವ ತಂದು ರಾಜ್ಯ ಪಾಲಿಸಿದ್ಯಲ್ಲೋ ॥೨॥ ಗೋಕುಲದೊಳು ಇದ್ದೆಯಲ್ಲೋ । ಲೋಕ । ಪಾಕು ಮಾಡಲು ಬುದ್ಧನಾದ್ಯಲ್ಲೋ । ಏಕೆ ಹಯವನೇರಿದ್ಯಲ್ಲೋ । ನಮ್ಮ । ಸಾಕುವ ಹಯವದನ ನೀನೇ ಬಲ್ಲೆಲೋ ॥೩॥

★ ★ ★ ★ ★

## ಅಲಂಕಾರ ಮಾಡುವಾಗ ಹೇಳಿರಿ

ಈ ಪರಿಯ ಸೊಬಗಾವ ದೇವರಲಿ ಕಾಣೆ ॥ಪ॥ ಗೋಪೀಜನಪ್ರಿಯ ಗೋಪಾಲಗಲ್ಲದೆ ॥ಅ.ಪ॥ ದೊರೆಯತನದಲ್ಲಿ ನೋಡೆ ಧರಣಿದೇವಿಗೆ ರಮಣ ಸಿರಿಯತನದಲಿ ನೋಡೆ ಶ್ರೀಕಾಂತನು ಹಿರಿಯತನದಲಿ ನೋಡೆ ಸರಸಿಜೋದ್ಭವನಯ್ಯ

ಗುರುವೃತನದಲಿ ನೋಡೆ ಜಗದಾದಿಗುರುವು ||೧|| ಪಾವನತ್ವದಿ ನೋಡೆ ಅಮರಗಂಗಾಜನಕ ದೇವತ್ವದಲಿ ನೋಡೆ ದಿವಿಜರೊಡೆಯ ಲಾವಣ್ಯದಲಿ ನೋಡೆ ಲೋಕಮೋಹಕನಯ್ಯ ಆವಾ ಧೈರ್ಯದಿ ನೋಡೆ ಲೋಕಮೋಹಕನಯ್ಯ ||೨|| ಗಗನದಲಿ ಸಂಚರಿಪ ಗರುಡದೇವನೆ ತುರುಗ ಜಗತೀಧರ ಶೇಷ ಪರಿಯಂಕ ಶಯನ ನಿಗಮಗೋಚರ ಪುರಂದರವಿಠಲಗಲ್ಲದೆ ಮಿಗಿಲಾದ ದೈವಗಳಿಗೀ ಭಾಗ್ಯವುಂಟೆ ||೩||

★ ★ ★ ★ ★

## ನೈವೇದ್ಯದಲ್ಲಿ ಇದನ್ನು ಹೇಳಿರಿ

ಭೂಮ ಇಡುಬಾರೆ ದ್ರುಪದರಾಯನರಸಿ ಭೀಮಧರ್ಮಾರ್ಜುನ ನಕುಲ ಸಾದೇವ ದ್ರೌಪದಿ ಕುಳಿತ ಎಲೆಗೆ ||ಪ|| ಮಂಡಿಗೆ ಗುಳ್ಳೋರಿಗೆಯು ಬುಂದ್ಯ ಚಕ್ಕುಲಿ ಕರ್ಜಿಕಾಯಿ ಚೆಂದದ ಶಾಲ್ಯಾನ್ನ ಶಾವಿಗೆ ಫೇಣಿಗಳು ಎಣ್ಣೋರಿಗೆಯು ||೧|| ಹಪ್ಪಳ ಸಂಡಿಗೆಯು ಶಾವಿಗೆ ಬಟ್ಟಪಿಮಾಲತಿಯು ಗೌಲಿ ಬಟ್ಟಲೋಳ್ ತುಂಬಿತ್ತು ಪರಡಿ ಪಾಯಸ ಘೃತ ಸಕ್ಕರೆಯು ||೨|| ಕುಂದಣದ್ಧರಿವಾಣ ಪಿಡಿದು ಕುಸುಮಮಲ್ಲಿಗೆ ಮುಡಿದು ನಡೆದು ಬಂದು ಭೇಮೇಶಕೃಷ್ಣನ ಸಖರ್ಹೊಂದಿ ಕುಳಿತರು ಕೃಷ್ಣೆಸಹಿತ ||೩||

★ ★ ★ ★ ★

## ನೈವೇದ್ಯದ ಹಾಡು-೧

ಆರೋಗಣೆಯ ಮಾಡೋ । ಸಾರಸುಖದ ಒಡೆಯಾ ||ಪ|| ಸತ್ಯವಾದ ಜಗಕೆ ಕರ್ತೃಕಾರಣ ನೀನೆ ಮುಕ್ತಿದಾಯಕ ನಿತ್ಯತೃಪ್ತ ನೀನಹುದಯ್ಯ ಸತ್ಯವಾದವತಾರ ಸಕಲ ಗುಣಪರಿಪೂರ್ಣ ಮುಕ್ತಿದಾಯಕ ಹರಿ ಪರಮ ದಯಾಳೋ ||೧|| ಅಣುರೇಣು ಕೂಪದೊಳು ಅಂಡಜಾಂಡಗಳೆರಡು ಘನ ಕೃಪಾಂಬುಧಿ ನಿನ್ನ ಪೊಗಳಲಳವೇ ಫಣಿಶಾಯಿಯಾಗಿದ್ದ ಭುವನ ವ್ಯಾಪಕ ಹರಿಯ ಘನ ಭಕುತಿಯಲಿ ಅಜ್ಜಭವರು ಪೂಜಿಸುವರೊ ||೨|| ಗಂಗೆ ಗೋದಾವರಿಯು ತುಂಗಭದ್ರೆ ಯಮುನೆ ರಂಗ ಸನ್ನಿಧಿ ಯಾದ ಕಾವೇರಿಯು ಮಂಗಳ ಭೀಮರಥಿ ಮಜ್ಜನಕೆ ಅಣಿ ಮಾಡಿ ಅಂಗಜನಯ್ಯನ ಭಾವೆಂದು ಪೋಗಳೇ ||೩|| ಗಂಧ ಕಸ್ತೂರಿ ಪುನಗು ಚಂದಾದ ಜುವಾಜಿ ಮುಂದೆ ಕುಂಕುಮದ ಗಂಧ ಕೇಸರಿಯ ಲೇಪ ಚೆಂದಾದ ಕೇದಿಗೆ ಮಡಿವಾಳ ಸಂಪಿಗೆಯು ಕಂದರ್ಪನಯ್ಯನ ಒಪ್ಪಿತು ಮಲ್ಲಿಗೆಯು ||೪|| ರನ್ನ ಮಯವಾಗಿದ್ದ ಹೊನ್ನಮಂಟಪದೊಳಗೆ ಸ್ವರ್ಣ ಪಾತ್ರೆಗಳಲ್ಲಿ ಸ್ವಯಂಪಾಕವು ನಿನ್ನ ಸೊಸೆ ವಾಣಿ

ಭಾರತಿದೇವಿ ಕಡುಜಾಣೆ ಚೆನ್ನಾಗಿ ನೈವೇದ್ಯವನ್ನೆ ಮಾಡುವಳೋ ||೫|| ದೆಸೆ ದೆಸೆಗೆ ಪರಿಮಳದ ಕುಶಲದ ಚಿತ್ರಾನ್ನ ಬಿಸಿದೋಸೆ ಬೆಣ್ಣೆ ಲೇಹ್ಯದ ಪೇಯವು ಬಸಿರೊಳೊಗೆ ಈರೇಳು ಜಗುವ ಇಂಬಿಟ್ಟವಗೆ ನಸುನಗುತ ಇಂದಿರಾ ದೇವಿ ಬಡಿಸೆ ||೬|| ಆ ಕಮಲೆ ಮಾಡಿದ್ದು ನಾಕುಬಗೆ ಘೃತ ಸೂಪ ಲೋಕಪತಿಗನುವಾದ ದಿವ್ಯಾನ್ನವು ಬೇಕಾದ ಪಂಚಭಕ್ಷ್ಯ ರಸಾಯನವು ಏಕಾಂತದಲಿ ನಿಮ್ಮ ದೇವಿ ಬಡಿಸೆ ||೭|| ನೂರು ಯೋಜನದಗಲ ಸರಸಿಜ ಬ್ರಹ್ಮಾಂಡ ಹದಿನಾರು ಬಣ್ಣದ ಚಿನ್ನದ ಹರಿವಾಣವೂ ಸಾರೆ ಎಲೆ ಪೊಂಬಟ್ಟು ಎಂಬ ಸಾಗರದೊಳಗೆ ಮೇರುಮಂದರವೆಂಬ ದೀಪಗಳ ಬೆಳಗೇ ||೮|| ಖಳರ ಕುಲವೈರಿಗೆ ತಿಳಿನೀರು ಮಜ್ಜಿಗೆಯು ಎಳೆನೀರು ಪಾನಕ ಶೀತಲುದಕ ಬಳಿಲಿದಿರಿ ಬಳಿಲಿದಿರಿ ಎನುತ ಹಯವದನನಿಗೆ ನಳಿನಾಕ್ಷಿ ಕರ್ಪೂರದ ವೀಳ್ಯವನೆ ಕೊಡುತ ||೯||

★ ★ ★ ★

## ನೈವೇದ್ಯದ ಹಾಡು-೨

ಫಲಹಾರವ ಮಾಡೋ ಪರಮ ಪುರುಷನೇ । ಜಲಜಾಕ್ಷಿ ಲಕುಮಿಯ ಕರಕಂಜದಿಂದ ||ಪ|| ಕದಳಿ ಕಾಬಾಳೆ ಖರ್ಜೂರ ಕಿತ್ತಳೆಯು । ಬದರಿ ಹಲಸು ಮಾವು ದ್ರಾಕ್ಷಂಗಳು । ಮಧುರವಾದ ಮಾದಾಳ ತೆಂಗಿನಕಾಯಿ । ಮೊದಲಾದ ಪರಿಪರಿಸುಫಲಂಗಳು ||೧|| ಉತ್ತತ್ತೆ ಜೇನು ಅಂಜೂರ ಶೇವು । ಮತ್ತೆ ದಾಳಿಂಬೆ ನಿಂಬೆ ಜಂಬುಗಳು । ಕತ್ತರಿಸಿದ ಕಬ್ಬು ಬಾದಾಮಿ ಗುಗ್ಗುರಿಯು । ಅತ್ತಿ ಪನ್ನೀರೆಳೆ ನೆನೆಗಡಲೆಯು ||೨|| ಹಾಲು ಸಕ್ಕರೆ ಬೆಣ್ಣೆ ತುಪ್ಪ ಶೀಕರಣೆಗಳು । ಸಾಲು ರಸಾಯನ ಎಳೆನೀರುಗಳು । ಮೂರು ಲೋಕದೊಡೆಯ ಹಯವದನ । ವೆಂಕಟರಾಯ ಪಾಲಿಸೋ ಶ್ರೀವರಕರಕಂಜದಿಂದ ||೩||

★ ★ ★ ★

## ನೈವೇದ್ಯದ ಹಾಡು-೩

ಏಳು ಆರೋಗಣೆಗೆ ಯಾಕೆ ತಡವೋ । ಆಲಸ್ಯ ಮಾಡದಲೆ ಮೂಲರಾಮಚಂದ್ರ ||ಪ|| ಕುಡಿಬಾಳೆ ಎಲೆ ಹಾಕಿ ಸಡಗರದಿಂದೆಡೆ ಮಾಡಿ । ಮಣೆಹಾಕಿ ಮುತ್ತಿನ ಮಣೆಗಳಿಟ್ಟು । ಮುಡಿಸಿ ದೀಪಗಳಚ್ಚಿ ಉದಕ ರಂಗೋಲ್ಯಾಕಿ ಬಡಿಸಲು ಶ್ರೀದೇವಿ ಬಂದು ನಿಂತಿಹಳೋ ||೧|| ಪುಡಿ ಉಪ್ಪು ಚಟ್ನಿ ಕೋಸಂಬರುಪ್ಪಿನ ಕಾಯಿ । ಪಡವಲ ಕಾಯಿ

ಚವಳೀಕಾಯಿಯಾ । ಅಡವಿ ಗುಳ್ಳದ ಪಲ್ಯ ಅಂಬೋಡೆ, ಫೇಣಿಗಳು । ಬಡಿಸಲು ಶ್ರೀದೇವಿ ಬಂದು ನಿಂತಿಹಳೋ ॥೨॥ ಎಣ್ಣೋರಿಗತಿ ರಸವು ಸಣ್ಣಶ್ಯಾವಿಗೆ ಫೇಣಿ । ಅನ್ನದಭ್ಯಾಸ್ನ ಕ್ಷೀರಾನ್ನಗಳನು । ಬೆಣ್ಣೆ ದೋಸೆ ಹುಗ್ಗಿ ಕಾಯ್ಹಾಲು ಬಡಿಸಲು । ಬಣ್ಣಿಸಿ ಶ್ರೀದೇವಿ ಬಂದು ನಿಂತಿಹಳೋ ॥೩॥ ಗಂಧ ಕಸ್ತೂರಿ ಪನಗು । ಕರ್ಪೂರ ವೀಳವನು । ಚಂದಾದಿ ಮಡಿಚಿ ಕೈಲ್ಹಿಡಿದುಕೊಂಡು । ರಂಬೆ ಜಾನಕಿದೇವಿ ಹಿಡಿದು ನಿಂತಿಹಳೋ ॥೪॥ ನಿತ್ಯತೃಪ್ತನೆ ನಿನ್ನ ಉದರದೊಳಿದ್ದಿಹ । ಉತ್ತಮ ಪುರುಷನೆ ಉಣಲಿ ಏಳೋ । ತೃಪ್ತದಾಯಕ ನಮ್ಮ ಗೋಪಾಲ ವಿಟ್ಠಲನೆ । ಭಕ್ತರ ಭಿನ್ನಪವ ನೀ ಕೇಳ ಬಾರೋ ॥೫॥

★ ★ ★ ★

## ವಾಯುದೇವರ ಪೂಜೆಯ ಹಾಡು

ಭಾರತೀಶನಿಗೆ ನಮೋ ನಮೋ । ಭಾರವ ಪೊತ್ತಗೆ ನಮೋ ನಮೋ । ಚಾರು ಚರಿತ ಶ್ರೀರಾಮನಾಮವ ಸಾರುವ ಭಕುತಗೆ ॥ಅ॥ ಅಂಜನ ಪುತ್ರಗೆ ನಮೋ ನಮೋ ಮಂಜುಳ ಗಾತ್ರಗೆ ನಮೋ ನಮೋ ಕಂಜಾಷೀಯ ಪದ ಕಂಬ ಕೆರಗಿ ಭವ ಭಂಜಕ ಹನುಮಗೆ ನಮೋ ನಮೋ ॥೧॥ ಕುಂತೆ ಆತ್ಮಜಗೆ ನಮೋ ನಮೋ ಸಂತತ ಸ್ತ್ರೀಯಗೆ ನಮೋ ನಮೋ ಹಂತ ಕೌರವ ಅಂತ ಕತ್ಮ ಬಲವಂತ ಭೀಮನಿಗೆ ನಮೋ ನಮೋ ॥೨॥ ಮಧ್ಯಗೇಹನಿಗೆ ನಮೋ ನಮೋ ಮುದ್ದು ಮುನಿವರಗೆ ನಮೋ ನಮೋ ಅದ್ವೈತ ಶಾಸ್ತ್ರ ಅಪದ್ದಗೈದ ಗುರು ಮಧ್ವರಾಯಗೆ ನಮೋ ನಮೋ ॥೩॥ ಲೋಕ ಪೂಜ್ಯನಿಗೆ ನಮೋ ನಮೋ ಭೀಕರ ರೂಪಗೆ ನಮೋ ನಮೋ ಏಕ ವಿಂಶತಿ ಕುಭಾಷ್ಯವ ಖಂಡಿಸಿ ಶೇಖರ ಮಾಡ್ದವಗೆ ನಮೋ ನಮೋ ॥೪॥ ಹರಿಯ ರೂಪನಿಗೆ ನಮೋ ನಮೋ ದುರುಳ ಶಿಕ್ಷರಿಗೆ ನಮೋ ನಮೋ ವರದೇಂದ್ರ ವಿಟ್ಠಲನ ಧ್ಯಾನವ ಮಾಡುವ ಹರುಷ ತೀರ್ಥರಿಗೆ ನಮೋ ನಮೋ ॥೫॥

★ ★ ★ ★

## ತುಲಸೀಪೂಜೆ

ಪ್ರಾತಃಕಾಲದಲ್ಲೊಮ್ಮೆ ತುಳಸೀವೃಂದಾವನಪೂರ್ತಿಯಾಗಿ ಒದ್ದೆಯಾಗುವಂತೆ ನೀರು ಹಾಕಿ, ರಂಗೋಲಿಯಿಟ್ಟು ಬಂದಿರುವ ಮುತ್ತೈದೆಯು ಪತಿಯ ದೇವಪೂಜಾನಂತರ ಸರ್ವಾಲಂಕಾರಭೂಷಿತಳಾಗಿ ಹರಿನ್ನೆರ್ಮಾಲ್ಯವನ್ನು ಮುಡಿದು ಮಂಗಳದ್ರವ್ಯಗಳೊಡನೆ ತುಲಸೀಪೂಜೆಯನ್ನು ಮಾಡಬೇಕು.

## ತುಳಸೀಪೂಜೆಯ ಹಾಡುಗಳು

(ಆರತಿ ಬೆಳಗಿರಿ ನಾರಿ ತುಳಸಮ್ಮಗೆ ।
ಕೋರಿವಾ ವರಗಳ ಕೊಡುವಾಕೆಗೆ ॥ಪ॥ ೧ ಇತ್ಯಾದಿ)

ಕಲ್ಯಾಣಂ ತುಳಸಿ ಕಲ್ಯಾಣಮ್ ।
ಕಲ್ಯಾಣವೇ ನಮ್ಮ ಕೃಷ್ಣ ಶ್ರೀತುಳಸಿಗೆ ।
ಬಲ್ಲಿದ ಶ್ರೀ ವಾಸುದೇವನಿಗೆ ॥ಪ॥

ಅಂಗಳದೊಳಗೆಲ್ಲ ತುಳಸಿಯು ವನ ಮಾಡಿ ।
ಶೃಂಗಾರವ ಮಾಡಿ ಶೀಘ್ರದಿಂದ ।
ಕಂಗಳ ಪಾಪವ ಪರಿಹರಿಸುವ ಮುದ್ದು
ರಂಗ ಬಂದಲ್ಲಿ ನೆಲೆಸಿದನು ॥೧॥

ಮಿಂದು ಮಡಿಯನ್ನುಟ್ಟು ಸಂದೇಹವ ಬಿಟ್ಟು ।
ತಂದ ಶ್ರೀಗಂಧಾಕ್ಷತೆಗಳಿಂದ ।
ಸಿಂಧುಶಯನ ವೃಂದಾವನದಿ ಪೂಜಿಸೆ ।
ಕುಂದದ ಭಾಗ್ಯವ ಕೊಡತಿಹಳು ॥೨॥

ಭಕ್ಷ್ಯಭೋಜ್ಯಂಗಳ ನೈವೇದ್ಯವನಿತ್ತು ।
ಲಕ್ಷಬತ್ತಿಯ ದೀಪವ ಹಚ್ಚಿ ।
ಅಧೋಕ್ಷಜ ಸಹಿತ ವೃಂದಾವನ ಪೂಜಿಸೆ
ಸಾಕ್ಷಾತ್ ಮೋಕ್ಷವ ಕೊಡುತಿಹಳು ॥೩॥

ಉತ್ಥಾನ ದ್ವಾದಶಿ ದಿವಸದಲಿ ಕೃಷ್ಣ-
ಉತ್ತಮ ತುಳಸಿಗೆ ವಿವಾಹವ ।
ಚಿತ್ತನಿರ್ಮಲರಾಗಿ ಮಾಡಿದವರಿಗೆ ।
ಉತ್ತಮ ಗತಿ ಈವ ಪುರಂದರ ವಿಟ್ಠಲ ॥೪॥

ಪ್ರಸೀದ ತುಲಸೀದೇವಿ ಪ್ರಸೀದ ಹರಿವಲ್ಲಭೇ ।
ಕ್ಷೀರೋದಮಥನೋದ್ಭೂತೇ ತುಲಸೀ ತ್ವಾಂ ನಮಾಮ್ಯಹಮ್ ॥

ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ತುಲಸಿಯ ಸನಿಹದಲ್ಲಿ ದೀಪವನ್ನು ಬೆಳಗಬೇಕು.

ಚವಳೀಕಾಯಿಯಾ । ಅಡವಿ ಗುಳ್ಳದ ಪಲ್ಯ ಅಂಬೋಡೆ, ಫೇಣಿಗಳು । ಬಡಿಸಲು ಶ್ರೀದೇವಿ ಬಂದು ನಿಂತಿಹಳೋ ॥೨॥ ಎಣ್ಣೋರಿಗತಿ ರಸವು ಸಣ್ಣಶ್ಯಾವಿಗೆ ಫೇಣಿ । ಅನ್ನದಭ್ಯಾನ್ನ ಕ್ಷೀರಾನ್ನಗಳನು । ಬೆಣ್ಣೆ ದೋಸೆ ಹುಗ್ಗಿ ಕಾಯ್ಹಾಲು ಬಡಿಸಲು । ಬಣ್ಣಿಸಿ ಶ್ರೀದೇವಿ ಬಂದು ನಿಂತಿಹಳೋ ॥೩॥ ಗಂಧ ಕಸ್ತೂರಿ ಪನಗು । ಕರ್ಪೂರ ವೀಳವನು । ಚಂದಾದಿ ಮಡಿಚಿ ಕೈಲ್ಹಿಡಿದುಕೊಂಡು । ರಂಬೆ ಜಾನಕಿದೇವಿ ಹಿಡಿದು ನಿಂತಿಹಳೋ ॥೪॥ ನಿತ್ಯತೃಪ್ತನೆ ನಿನ್ನ ಉದರದೊಳಿದ್ದಿಹ । ಉತ್ತಮ ಪುರುಷನೆ ಉಣಲಿ ಏಳೋ । ತೃಪ್ತದಾಯಕ ನಮ್ಮ ಗೋಪಾಲ ವಿಟ್ಠಲನೆ । ಭಕ್ತರ ಭಿನ್ನಪವ ನೀ ಕೇಳ ಬಾರೋ ॥೫॥

★ ★ ★ ★

## ವಾಯುದೇವರ ಪೂಜೆಯ ಹಾಡು

ಭಾರತೀಶನಿಗೆ ನಮೋ ನಮೋ । ಭಾರವ ಪೊತ್ತಗೆ ನಮೋ ನಮೋ । ಚಾರು ಚರಿತ ಶ್ರೀರಾಮನಾಮವ ಸಾರುವ ಭಕುತಗೆ ॥ಅ॥ ಅಂಜನ ಪುತ್ರಗೆ ನಮೋ ನಮೋ ಮಂಜುಳ ಗಾತ್ರಗೆ ನಮೋ ನಮೋ ಕಂಜಾಕ್ಷೀಯ ಪದ ಕಂಬ ಕೆರಗಿ ಭವ ಭಂಜಕ ಹನುಮಗೆ ನಮೋ ನಮೋ ॥೧॥ ಕುಂತೆ ಆತ್ಮಜಗೆ ನಮೋ ನಮೋ ಸಂತತ ಸ್ತ್ರೀಯಗೆ ನಮೋ ನಮೋ ಹಂತ ಕೌರವ ಅಂತ ಕತ್ಮ ಬಲವಂತ ಭೀಮನಿಗೆ ನಮೋ ನಮೋ ॥೨॥ ಮಧ್ಯಗೇಹನಿಗೆ ನಮೋ ನಮೋ ಮುದ್ದು ಮುನಿವರಗೆ ನಮೋ ನಮೋ ಅದ್ವೈತ ಶಾಸ್ತ್ರ ಅಪದ್ದಗ್ಗೆದ ಗುರು ಮಧ್ವರಾಯಗೆ ನಮೋ ನಮೋ ॥೩॥ ಲೋಕ ಪೂಜ್ಯನಿಗೆ ನಮೋ ನಮೋ ಭೀಕರ ರೂಪಗೆ ನಮೋ ನಮೋ ಏಕ ವಿಂಶತಿ ಕುಭಾಷ್ಯವ ಖಂಡಿಸಿ ಶೇಖರ ಮಾಡ್ದವಗೆ ನಮೋ ನಮೋ ॥೪॥ ಹರಿಯ ರೂಪನಿಗೆ ನಮೋ ನಮೋ ದುರುಳ ಶಿಕ್ಷರಿಗೆ ನಮೋ ನಮೋ ವರದೇಂದ್ರ ವಿಟ್ಠಲನ ಧ್ಯಾನವ ಮಾಡುವ ಹರುಷ ತೀರ್ಥರಿಗೆ ನಮೋ ನಮೋ ॥೫॥

★ ★ ★ ★

## ತುಲಸೀಪೂಜೆ

ಪ್ರಾತಃಕಾಲದಲ್ಲೊಮ್ಮೆ ತುಳಸೀವೃಂದಾವನಪೂರ್ತಿಯಾಗಿ ಒದ್ದೆಯಾಗುವಂತೆ ನೀರು ಹಾಕಿ, ರಂಗೋಲಿಯಿಟ್ಟು ಬಂದಿರುವ ಮುತ್ತೈದೆಯು ಪತಿಯ ದೇವಪೂಜಾನಂತರ ಸರ್ವಾಲಂಕಾರಭೂಷಿತಳಾಗಿ ಹರಿನ್ನೆರ್ಮಾಲ್ಯವನ್ನು ಮುಡಿದು ಮಂಗಳದ್ರವ್ಯಗಳೊಡನೆ ತುಲಸೀಪೂಜೆಯನ್ನು ಮಾಡಬೇಕು.

## ತುಳಸೀಪೂಜೆಯ ಹಾಡುಗಳು

(ಆರತಿ ಬೆಳಗಿರಿ ನಾರಿ ತುಳಸಮ್ಮಗೆ ।
ಕೋರಿವಾ ವರಗಳ ಕೊಡುವಾಕೆಗೆ ॥ಪ॥ ೧ ಇತ್ಯಾದಿ)

ಕಲ್ಯಾಣಂ ತುಳಸಿ ಕಲ್ಯಾಣಮ್ ।
ಕಲ್ಯಾಣವೇ ನಮ್ಮ ಕೃಷ್ಣ ಶ್ರೀತುಳಸಿಗೆ ।
ಬಲ್ಲಿದ ಶ್ರೀ ವಾಸುದೇವನಿಗೆ ॥ಪ॥

ಅಂಗಳದೊಳಗೆಲ್ಲ ತುಳಸಿಯು ವನ ಮಾಡಿ ।
ಶೃಂಗಾರವ ಮಾಡಿ ಶೀಘ್ರದಿಂದ ।
ಕಂಗಳ ಪಾಪವ ಪರಿಹರಿಸುವ ಮುದ್ದು
ರಂಗ ಬಂದಲ್ಲಿ ನೆಲೆಸಿದನು ॥೧॥

ಮಿಂದು ಮಡಿಯನ್ನುಟ್ಟು ಸಂದೇಹವ ಬಿಟ್ಟು ।
ತಂದ ಶ್ರೀಗಂಧಾಕ್ಷತೆಗಳಿಂದ ।
ಸಿಂಧುಶಯನ ವೃಂದಾವನದಿ ಪೂಜಿಸೆ ।
ಕುಂದದ ಭಾಗ್ಯವ ಕೊಡತಿಹಳು ॥೨॥

ಭಕ್ಷ್ಯಭೋಜ್ಯಂಗಳ ನೈವೇದ್ಯವನಿತ್ತು ।
ಲಕ್ಷಬತ್ತಿಯ ದೀಪವ ಹಚ್ಚಿ ।
ಅಧೋಕ್ಷಜ ಸಹಿತ ವೃಂದಾವನ ಪೂಜಿಸೆ
ಸಾಕ್ಷಾತ್ ಮೋಕ್ಷವ ಕೊಡುತಿಹಳು ॥೩॥

ಉತ್ಥಾನ ದ್ವಾದಶಿ ದಿವಸದಲಿ ಕೃಷ್ಣ-
ಉತ್ತಮ ತುಳಸಿಗೆ ವಿವಾಹವ ।
ಚಿತ್ತನಿರ್ಮಲರಾಗಿ ಮಾಡಿದವರಿಗೆ ।
ಉತ್ತಮ ಗತಿ ಈವ ಪುರಂದರ ವಿಟ್ಠಲ ॥೪॥

ಪ್ರಸೀದ ತುಲಸೀದೇವಿ ಪ್ರಸೀದ ಹರಿವಲ್ಲಭೇ ।
ಕ್ಷೀರೋದಮಥನೋದ್ಭೂತೇ ತುಲಸೀ ತ್ವಾಂ ನಮಾಮ್ಯಹಮ್ ॥

ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ತುಲಸಿಯ ಸನಿಹದಲ್ಲಿ ದೀಪವನ್ನು ಬೆಳಗಬೇಕು.

ಪ್ರದೀಪಂ ಯಾ ತು ಸಂಧ್ಯಾಯಾಂ ಸ್ಥಾಪಯೇತ್ ತುಲಸೀತಟೇ ।
ಸಾ ಯಾತಿ ಮಂದಿರಂ ವಿಷ್ಣೋಃ ಕುಲಕೋಟಿಸಮನ್ವಿತಾ ॥

(ಪದ್ಮಪುರಾಣ)

★ ★ ★ ★ ★

## ತುಳಸಿಗೆ ಆರತಿ ಮಾಡುವಾಗ

ಬೆಳಗಿರೆ ಆರುತಿಯ ಶ್ರೀ ತುಳಸಿಗೆ ॥ಪ॥ ಬೆಳಗಿರೆ ಆರುತಿ ತುಳಸಿದೇವಿಗೆ ನಿತ್ಯ ಲಲನೆಯರೆಲ್ಲ ಮಂಗಳವೆಂದು ಪಾಡುತ ॥ಅ.ಪ॥ ಸುಧೆಯ ಕಲಶದೊಳು ಮಧುವೈರಿನಯನದ ಮುದ ಜಲಬೀಳಲು ಉದುಭವಿಸಿದಳೆಂದು ॥೧॥ ದರುಶನ ಮಾತ್ರದಿ ದುರಿತಗಳೋಡಿಸಿ ಸ್ಥಿರವಾದ ಸೌಭಾಗ್ಯ ಕರುಣಿಸುವಳೆಂದು ॥೨॥ ಇಳೆಯೊಳು ಕಾರ್ಪರ ನಿಲಯ ಶ್ರೀನರಹರಿ ಒಲುಮೆಯ ಪಡೆದ ಶ್ರೀ ತುಳಸಿದೇವಿಗೆ ಬೇಗ ॥೩॥

★ ★ ★ ★ ★

## ಗೌರೀಪೂಜೆ

ಸ್ತ್ರೀಯರು ಸುವಾಸಿನಿ ಸ್ತ್ರೀಯರನ್ನು ಆರಾಧಿಸುವುದಕ್ಕೆ ಗೌರಿಪೂಜೆಯೆಂದು ಹೆಸರು. ಗೌರೀಪೂಜೆಯನ್ನು ಸ್ತ್ರೀಯರೇ ನಡೆಸಬೇಕು. ಪುರುಷರು ಪೂಜಿತರಾದ ಗೌರಿಸ್ವರೂಪಿಣಿ ಮುತ್ತೈದೆಯರಿಗೆ ನಮಸ್ಕರಿಸುವುದು ಮಾತ್ರ . ಈ ಗೌರೀಪೂಜೆಯೇ ಸ್ವಲ್ಪ ವಿಸ್ತರಿಸಲ್ಪಟ್ಟು ಗೌರೀಪೆಟ್ಟಿಗೆ-ಪ್ರತಿಮೆಗಳ ಪೂಜೆಯೂ ಕೆಲವೆಡೆ ಸಂಪ್ರದಾಯವಾಗಿದೆ. ಗೌರೀಪೂಜೆಗಾಗಿ ಈ ಹಾಡು–

ಭದ್ರಾಣಿ ದೇಹಿ ಮೇ ಗೌರಿ । ಗೌರೀ ಭದ್ರಾಣಿ ದೇಹಿ ಮೇ ಗೌರಿ ।
ಭದ್ರಾಣಿ ದೇಹಿ ಗೌರಿ ರುದ್ರಾಣಿ ಭೂರ್ಯಾಭರಣೆ ॥ ಪ॥

ಗರ್ವಾದಿನಿರ್ಮಿತಾನಿ ದುರ್ವಾದಸಂಭೃತಾನಿ ।
ಸರ್ವಾಣಿ ಪಾತಕಾನಿ ಶರ್ವಾಣಿಭಿಂದಿತಾನಿ ॥೧॥

ಅಂಭೋಜನಾಭಭಕುತೇ ರಂಭೋರು ಶಂಭುದಯಿತೇ ।
ಗಾಂಭೀರ್ಯಸುಗುಣಸಹಿತೇ ಕುಂಭೋದ್ಭವಾದಿವಿನುತೇ ॥೨॥

ಇಂದೀವರಾಭನಯನೇ ವಂದಿತಹಯವದನೆ ।
ಕುಂದಕುಡ್ಮಲರದನೆ ಚಂದ್ರಸಹಸ್ರವದನೆ ॥೩॥ ಭದ್ರಾಣಿ....

★ ★ ★ ★

**ಭಗವಂತ ಗೌರಿದೇವಿಗೆ ಹೀಗೆ ವರವಿತ್ತ-**
**ಭವ ಸೌಭಾಗ್ಯದಾ ಲೋಕೇ ಸರ್ವಾಸಾಮಪಿ ಯೋಷಿತಾಮ್ ।**

## ಹೊಸ್ತಿಲ ಪೂಜೆ

ಹೊಸ್ತಿಲನ್ನು ತೊಳೆಯುವುದು. ರಂಗೋಲಿ ಅಥವಾ ಶೇಡಿಯಿಂದ ಸ್ವಸ್ತಿಕ. ಪದ್ಮಾದಿಗಳನ್ನು ಬರೆಯುವುದು. ಮಂಗಳದ್ರವ್ಯ- ಪುಷ್ಪಪತ್ರಗಳಿಂದ (ದೀಪದಿಂದಲೂ) ಅಲಂಕರಿಸುವುದು. ತಂಬಿಗೆ ಅಥವಾ ಗಿಂಡಿಯಲಿ ಪೂರ್ಣಜಲವನ್ನು ಹೊಸ್ತಿಲಲ್ಲಿಟ್ಟು ದ್ವಾರಲಕ್ಷ್ಮಿಯನ್ನೂ ಸರಸ್ವತಿ, ಗೌರಿಯರನ್ನೂ ಸ್ಮರಿಸುತ್ತಾ-

**ಹ್ರೀಂಕಾರೂಪಿಣಿ ದೇವಿ ವೀಣಾಪುಸ್ತಕಧಾರಿಣಿ ।**
**ವೇದಮಾತರ್ನಮಸ್ತುಭ್ಯಂ ಮಾಂಗಲ್ಯಂ ದೇಹಿ ಮೇ ಸದಾ ॥**

ಈ ಶ್ಲೋಕ ಹೇಳಿ ಲಕ್ಷ್ಮೀಸಂಬಂಧಿ ಹಾಡುಗಳನ್ನು ಹಾಡುತ್ತಾ ನಮಿಸಬೇಕು. ಆ ಮೇಲೆ ಗಿಂಡಿಯ ನೀರನ್ನು ತುಳಸೀವೃಂದಾವನಕ್ಕೆ ಹಾಕಿ ತುಳಸೀ ಪೂಜೆ ಮಾಡುವುದು.

ಹೊಸ್ತಿಲ ನಡು ಬರೆದು ಗಿಂಡಿಯಿಟ್ಟ ಮೇಲೆ ಪೂಜೆ ಮುಗಿಯುವ ತನಕ ಯಾರೂ ಹೊಸ್ತಿಲು ದಾಟುವಂತಿಲ್ಲ.

ದೇವರ ಕೋಣೆಯ ಹೊಸ್ತಿಲಿಗೆ ಹೊರಗಿನಿಂದಲೂ ಉಳಿದ ಹೊಸ್ತಿಲಿಗೆ ಒಳಗಿನಿಂದಲೂ ಪೂಜೆ.

ಹೊಸ್ತಿಲಲ್ಲಿ ಚಿತ್ತಾರ ಬರೆದು ಅಲಂಕರಿಸುವುದು ಒಬ್ಬರೇ ಆದರೂ ಮನೆಯ ಎಲ್ಲಾ ಸ್ತ್ರೀಯರು ಸಮೂಹದಲ್ಲಾದಗಲೀ ಪ್ರತ್ಯೇಕವಾಗಿಯಾಗಲೀ ನಮಸ್ಕರಿಸಬೇಕು.

ಸ್ನಾನವಾದ ನಂತರ ಹೊಸ್ತಿಲಪೂಜೆ ಮಾಡುವುದು ಉತ್ತಮ.

★ ★ ★ ★

## ಶ್ರೀ ಲಕ್ಷ್ಮೀ ಶೋಭಾನೆ

ಶೋಭಾನವೆನ್ನಿರೆ ಸುರರೊಳು ಸುಭಗನಿಗೆ ಶೋಭಾನವೆನ್ನಿ ಸುಗುಣನಿಗೆ ಶೋಭಾನವೆನ್ನಿರೆ ತ್ರಿವಿಕ್ರಮರಾಯಗೆ ಶೋಭಾನವೆನ್ನಿ ಸುರಪ್ರಿಯಗೆ । ಶೋಭಾನೇ ॥ಪ॥ ಲಕ್ಷ್ಮೀನಾರಾಯಣರ ಚರಣಕ್ಕೆ ಶರಣೆಂಬೆ ಪಕ್ಷಿವಾಹನ್ನಗೆರಗುವೆ । ಪಕ್ಷಿವಾಹನ್ನಗೆರಗುವೆ ಅನುದಿನ ರಕ್ಷಿಸಲಿ ನಮ್ಮ ವಧೂವರರ । ಶೋಭಾನೇ ॥ ೧ ॥ ಪಾಲಸಾಗರವನ್ನು ಲೀಲೆಯಲಿ ಕಡೆಯಲು ಬಾಲೆ ಮಹಾಲಕ್ಷುಮಿ ಉದಿಸಿದಳು ।

ಬಾಲೆ ಮಹಾಲಕ್ಷ್ಮಿ ಉದಿಸಿದಳಾ ದೇವಿ ಪಾಲಿಸಲಿ ನಮ್ಮ ವಧುವರರ ।।೨।। ಬೊಮ್ಮನ ಪ್ರಳಯದಲಿ ತನ್ನರಸಿಯೊಡಗೂಡಿ ಸುಮ್ಮನೆಯಾಗಿ ಮಲಗಿಪ್ಪ। ನಮ್ಮ ನಾರಾಯಣಗೂ ಈ ರಮ್ಮೆಗಡಿಗಡಿಗೂ ಜನ್ಮವೆಂಬುದು ಅವತಾರ ।।೩।। ಕಂಬು ಕಂಠದ ಸುತ್ತ ಕಟ್ಟಿದ ಮಂಗಳಸೂತ್ರ ಅಂಬುಜವೆರಡು ಕರಯುಗದಿ । ಅಂಬುಜವೆರಡು ಕರಯುಗದಿ ಧರಿಸಿ ಪೀತಾಂಬರನುಟ್ಟು ಮೆರೆದಳು ।।೪।। ಒಂದು ಕರದಿಂದ ಅಭಯವನೀವಳೆ ಮತ್ತೊಂದು ಕೈಯಿಂದ ವರಗಳ ।। ಕುಂದಿಲ್ಲದಾನಂದ ಸಂದೋಹ ಉಣಿಸುವ ಇಂದಿರೆ ನಮ್ಮ ಸಲಹಲಿ ।।೫।। ಪೊಳೆವ ಕಾಂಚಿಯ ದಾಮ ಪೊಳೆವ ಕಿಂಕಿಣಿಗಳು ನಲಿವ ಕಾಲಂದುಗೆ ಘಲುಕೆನಲು । ನಳನಳಿಸುವ ಮುದ್ದುಮೊಗದ ಚೆಲುವೆ ಲಕ್ಷ್ಮಿ ಸಲಹಲಿ ನಮ್ಮ ವಧುವರರ ।।೬।। ರನ್ನದ ಮೊಲೆಗಟ್ಟು ಚಿನ್ನದಾಭರಣಗಳ ಚೆನ್ನೆಮಹಾಲಕ್ಷ್ಮಿ ಧರಿಸಿದಳೆ। ಚೆನ್ನೆ ಮಹಾಲಕ್ಷ್ಮಿ ಧರಿಸಿದಳಾ ದೇವಿ ತನ್ನ ಮನೆಯ ವಧುವರರ ಸಲಹಲಿ ।।೭।। ಕುಂಭಕುಚದ ಮೇಲೆ ಇಂಬಿಟ್ಟ ಹಾರಗಳು ತುಂಬಿಗುರುಳ ಮುಖಕಮಲ ತುಂಬಿಗುರುಳ ಮುಖಕಮಲದ ಮಹಲಕ್ಷ್ಮಿ ಜಗ ದಂಬೆ ವಧುವರರ ಸಲಹಲಿ ।।೮।। ಮುತ್ತಿನ ಓಲೆಯನಿಟ್ಟಳೆ ಮಹಾಲಕ್ಷ್ಮಿ ಕಸ್ತೂರಿ ತಿಲಕ ಧರಿಸಿದಳೆ ಕಸ್ತೂರಿ ತಿಲಕ ಧರಿಸಿದಳಾ ದೇವಿ ಸರ್ವತ್ರ ವಧುವರರ ಸಲಹಲಿ ।।೯।। ಅಂಬುಜ ನಯನಗಳ ಬಿಂಬಾಧರದ ಶಶಿ ಬಿಂಬದಂತೆಸೆವ ಮೂಗುತಿ ಮಣಿಯ ಶಶಿ ಬಿಂಬದಂತೆಸೆವ ಮೂಗುತಿಮಣಿಯ ಮಹಲಕ್ಷ್ಮೀ ಉಂಬುದಕೀಯಲಿ ವಧುವರರ್ಗೆ ।।೧೦।। ಮುತ್ತಿನಕ್ಷತೆಯಿಟ್ಟು ನವರತ್ನದ ಮುಕುಟವ ನೆತ್ತಿಯ ಮೇಲೆ ಧರಿಸಿದಳೆ । ನೆತ್ತಿಯ ಮೇಲೆ ಧರಿಸಿದಳಾದೇವಿ ತನ್ನ ಭಕ್ತಿಯ ಜನರ ಸಲಹಲಿ ।।೧೧।। ಕುಂದ ಮಂದಾರ ಜಾಜಿ ಕುಸುಮಗಳ ವೃಂದವ ಚೆಂದದ ತುರುಬಿಲಿ ತುರುಬಿದಳೆ । ಕುಂದಣ ವರ್ಣದ ಕೋಮಲೆ ಮಹಾಲಕ್ಷ್ಮಿ ಕೃಪೆ ಯಿಂದ ವಧುವರರ ಸಲಹಲಿ ।।೧೨।। ಎಂದೆಂದೂ ಬಾಡದ ಅರವಿಂದ ಮಾಲೆಯ ಇಂದಿರೆ ಪೊಳೆವ ಕೊರಳಲ್ಲಿ । ಇಂದಿರೆ ಪೊಳೆವ ಕೊರಳಲ್ಲಿ ಧರಿಸಿದಳೆ ಅವಳಿಂದು ವಧುವರರ ಸಲಹಲಿ ।।೧೩।। ದೇವಾಂಗ ಪಟ್ಟೆಯ ಮೇಲು ಹೊದ್ದಿಕೆಯ ಭಾವೆ ಮಹಾಲಕ್ಷ್ಮಿ ಧರಿಸಿದಳೆ । ಭಾವೆ ಮಹಾಲಕ್ಷ್ಮಿ ಧರಿಸಿದಳಾ ದೇವಿ ತನ್ನ ಸೇವಕ ಜನರ ಸಲಹಲಿ ।।೧೪।। ಈ ಲಕ್ಷ್ಮಿದೇವಿಯ ಕಾಲುಂಗುರ ಘಲುಕೆನಲು ಲೋಲಾಕ್ಷಿ ಮೆಲ್ಲನೆ ನಡೆ ತಂದಳು । ಸಾಲಾಗಿ ಕುಳ್ಳಿರ್ದ ಸುರರ ಸಭೆಯ ಕಂಡು ಆಲೋಚಿಸಿದಳು ಮನದಲ್ಲಿ ।।೧೫।। ತನ್ನ ಮಕ್ಕಳ ಕುಂದ ತಾನೆ ಪೇಳುವುದಕ್ಕೆ

ಮನ್ನದಿ ನಾಚಿ ಮಹಾಲಕ್ಷ್ಮಿ । ತನ್ನಾಮದಿಂದಲಿ ಕರೆಯದೆ ಒಬ್ಬೊಬ್ಬರ ಉನ್ನಂತ ದೋಷಗಳನೆಣಿಸಿದಳು ॥೧೬॥ ಕೆಲವರು ತಲೆಯೂರಿ ತಪಗೈದು ಪುಣ್ಯವ ಗಳಿಸಿದ್ದರೇನೂ ಫಲವಿಲ್ಲ। ಜ್ವಲಿಸುವ ಕೋಪದಿ ಶಾಪವ ಕೊಡುವರು ಲಲನೆಯನಿವರು ಒಲಿಸುವರೆ ॥೧೭॥ ಎಲ್ಲಶಾಸ್ತ್ರಗಳೋದಿ ದುರ್ಲಭ ಜ್ಞಾನವ ಕಲ್ಲಿಸಿ ಕೊಡುವ ಗುರುಗಳು । ಬಲ್ಲಿದ ಧನಕ್ಕೆ ಮರುಳಾಗಿ ಇಬ್ಬರು ಸಲ್ಲದ ಪುರೋಹಿತಕ್ಕೊಳಗಾದರು ॥೧೮॥ ಕಾಮನಿರ್ಜಿತನೊಬ್ಬ ಕಾಮಿನಿಗೆ ಸೋತೊಬ್ಬ ಭಾಮಿನಿಯ ಹಿಂದೆ ಹಾರಿದವ । ಕಾಮಾಂಧನಾಗಿ ಮುನಿಯ ಕಾಮಿನಿಗೈದಿದನೊಬ್ಬ ಕಾಮದಿ ಗುರುತಲ್ಪಗಾಮಿಯೊಬ್ಬ ॥೧೯॥ ನಶ್ವರೈಶ್ವರ್ಯವ ಬಯಸುವನೊಬ್ಬ ಪರ ರಾಶ್ರಯಿಸಿಬಾಳುವ ಈಶ್ವರನೊಬ್ಬ । ಹಾಸ್ಯವ ಮಾಡಿ ಹಲ್ಲುದುರಿಸಿಕೊಂಡವನೊಬ್ಬ ಅದೃಶ್ಯಾಂಘ್ರಿಯೊಬ್ಬ ಒಕ್ಕಣ್ಣನೊಬ್ಬ ॥೨೦॥ ಮಾವನ ಕೊಂದೊಬ್ಬ ಮರುಳಾಗಿಹನು ಗಡ ಹಾರ್ವನಕೊಂದೊಬ್ಬ ಬಳಲಿದ । ಜೀವರ ಕೊಂದೊಬ್ಬ ಕುಲಗೇಡಿ ಎಂದೆನಿಸಿದ ಶಿವನಿಂದನೊಬ್ಬ ಬಯಲಾದ ॥೨೧॥ ಧರ್ಮ ಉಂಟೊಬ್ಬನಲಿ ಹೆಮ್ಮೆಯ ಹೆಸರಿಗೆ ಅಮ್ಮಮ್ಮ ತಕ್ಕ ಗುಣವಿಲ್ಲ । ಕ್ಷಮ್ಮೆಯ ಬಿಟ್ಟೊಬ್ಬ ನರಕದಲಿ ಜೀವರ ಮರ್ಮವ ಮೆಟ್ಟಿ ಕೊಲಿಸುವ ॥೨೨॥ ಖಳನಂತೆ ಒಬ್ಬ ತನಗೆ ಸಲ್ಲದ ಭಾಗ್ಯವ ಬಲ್ಲಿದಗಂಜಿ ಬರಿಗೈದ । ದುರ್ಲಭ ಮುಕ್ತಿಗೆ ದೂರವೆಂದೆನಿಸುವ ಪಾತಾಳತಳಕ್ಕೆ ಇಳಿದ ಗಡ ॥೨೩॥ ಎಲ್ಲರಾಯುಷ್ಯವ ಶಿಂಶುಮಾರದೇವ ಸಲ್ಲೀಲೆಯಿಂದ ತೊಲಗಿಸುವ । ಒಲ್ಲೆ ನಾನಿವರ ನಿತ್ಯ ಮುತ್ತೈದೆಯೆಂದು ಬಲ್ಲವರೆನ್ನ ಭಜಿಸುವರು ॥೨೪॥ ಪ್ರಕೃತಿಯ ಗುಣದಿಂದ ಕಟ್ಟುವಡೆದು ನಾನಾ ವಿಕೃತಿಗೊಳಗಾಗಿ ಭವದಲ್ಲಿ । ಸುಖದುಃಖವುಂಬ ಬೊಮ್ಮಾದಿ ಜೀವರು ದುಃಖಕೆ ದೂರಳೆನಿಪ ಎನಗೆಣೆಯೆ ॥೨೫॥ ಒಬ್ಬನಾವನ ಮಗ ಮತ್ತೊಬ್ಬನಾವನ ಮೊಮ್ಮಗ ಒಬ್ಬನವನಿಗೆ ಶಯನಾಹ । ಒಬ್ಬನವನ ಪೋರುವ ಮತ್ತಿಬ್ಬರಾವನಿಗಂಜಿ ಅಬ್ಬರದಲಾವಾಗ ಸುಳಿವರು ॥೨೬॥ ಒಬ್ಬನಾವನ ನಾಮಕಂಜಿ ಬೆಚ್ಚುವ ಗಡ । ಸರ್ಬರಿಗಾವ ಅಮೃತವ । ಸರ್ಬರಿಗಾವ ಅಮೃತವನುಣಿಸುವ ಅವನೊಬ್ಬನೆ ನಿರನಿಷ್ಟ ನಿರವದ್ಯ ॥೨೭॥ ನಿರನಿಷ್ಟ ನಿರವದ್ಯ ಎಂಬ ಶ್ರುತ್ಯರ್ಥವ ಒರೆದು ನೋಡಲು ನರಹರಿಗೆ ನರಕಯಾತನೆ ಸಲ್ಲ ದುರಿತಾತಿದೂರನಿಗೆ ಮರುಳ ಮನ ಬಂದಂತೆ ನುಡಿಯದಿರು ॥೨೮॥ ಒಂದೊಂದು ಗುಣಗಳು ಇದ್ದಾವು ಇವರಲ್ಲಿ ಸಂದಣಿಸಿವೆ ಬಹು ದೋಷ । ಕುಂದೆಳ್ಳಷ್ಟಿಲ್ಲದ ಮುಕುಂದನೆ ತನಗೆಂದು ಇಂದಿರೆ ಪತಿಯ ನೆನೆದಳು ॥೨೯॥ ದೇವರ್ಷಿ ವಿಪ್ರರ

ಕೊಂದು ತನ್ನುದರದೊಳಿಟ್ಟು ತೀವಿರ್ದ ಹರಿಗೆ ದುರಿತವ ಭಾವಜ್ಞರೆಂಬರೆ ಆಲದೆಲೆಯ ಮೇಲೆ ಶಿವನ ಲಿಂಗವ ನಿಲಿಸುವರೆ ? ॥೩೦॥ ಹಸಿವು ತೃಷೆ ಜರೆ ಮರಣ ರೋಗರುಜಿನಗಳೆಂಬ ಅಸುರ ಪಿಶಾಚಿಗಳ ಭಯವೆಂಬ । ವ್ಯಸನ ಬರಬಾರದು ಎಂಬ ನಾರಾಯಣಗೆ ಪಶು ಮೊದಲಾಗಿ ನೆನೆಯದು ॥೩೧॥ ತಾ ದುಃಖಿಯಾದರೆ ಸುರಾರ್ತಿಯಂ ಕಳೆದು ಮೋದವೀವುದಕೆ ಧರೆಗಾಗಿ ಮಾಧವ ಬಾಹನೆ ಕೆಸರೊಳು ಮುಳುಗಿದವ ಪರರ ಬಾಧಿಪ ಕೆಸರ ಬಿಡಿಸುವನೆ ? ॥೩೨॥ ಬೊಮ್ಮನಾಲಯದಲ್ಲಿ ಇದ್ದವಗೆ ಲಯ ಉಂಟೆ ಜನ್ಮಲಯವಿಲ್ಲದವನಿಗೆ ಅಮ್ಮಿಯನುಣಿಸಿದ್ದ ಯಶೋದೆಯಾಗಿದ್ದಳೆ ಅಮ್ಮ! ಇವಗೆ ಹಸಿ ತೃಷೆಯುಂಟೆ ? ॥೩೩॥ ಆಗ ಭಕ್ಷ ಭೋಜ್ಯವಿತ್ತು ಪೂಜಿಸುವ ಯೋಗಿಗಳಿಗುಂಟೆ ಧನಧಾನ್ಯ! ಆಗ ದೊರಕೊಂಬುದೆ ಪಾಕಮಾಡುವ ವಹ್ನಿ ಮತ್ತಾಗಲೆಲ್ಲಿಹುದು ವಿಚಾರಿಸಿರೊ ॥೩೪॥ ರೋಗವನೀವ ವಾತ ಪಿತ್ತಶ್ಲೇಷ್ಮ ಆಗ ಕೂಡುವುದೆ ರಮೆಯೊಡನೆ । ಭೋಗಿಸುವವಗೆ ದುರಿತವ ನೆನೆವರೆ ಈ ಗುಣನಿಧಿಗೆ ಎಣೆಯುಂಟೆ ॥೩೫॥ ರಮ್ಮೆದೇವಿಯರನ್ನಪ್ಪಿಕೊಂಡಿಪ್ಪುದು ರಮ್ಮೆಯರಸಗೆ ರತಿ ಕಾಣಿರೋ । ಅಮ್ಮೋಘವೀರ್ಯವು ಚಲಿಸಿದರೆ ಪ್ರಳಯದಲಿ ಕುಮ್ಮಾರರ‍್ಯಾಕೆ ಜನಿಸರು? ॥೩೬॥ ಏಕತ್ರ ನಿರ್ಣೀತ ಶಾಸ್ತ್ರಾರ್ಥ ಪರತ್ರಾಪಿ ಬೇಕೆಂಬ ನ್ಯಾಯವ ತಿಳಿದುಕೋ । ಶ್ರೀ ಕೃಷ್ಣನೊಬ್ಬನೆ ಸರ್ವದೋಷಕ್ಕೆ ಸಿಲುಕ್ಕನೆಂಬೋದು ಸಲಹಲಿಕೆ ॥೩೭॥ ಎಲ್ಲ ಜಗವ ನುಂಗಿ ದಕ್ಕಿಸಿಕೊಂಡವಗೆ ಸಲ್ಲದು ರೋಗರುಜಿನವು ಬಲ್ಲ ವೈದ್ಯರ ಕೇಳಿ ಅಜೀರ್ತಿ ಮೂಲವಲ್ಲ ದಿಲ್ಲ ಸಮಸ್ತ ರುಜಿನವು ॥೩೮॥ ಇಂಥ ಮೂರುತಿಯ ಒಳಗೊಂಬ ನರಕ ಬಹುಭ್ರಾಂತ ನೀನೆಲ್ಲಿಂದ ತೋರುವೆಲೋ? ಸಂತೆಯ ಮರುಳ ಹೋಗೆಲೊ ನಿನ್ನ ಮಾತ ಸಂತರು ಕೇಳಿ ಸೊಗಸರು ॥೩೯॥ ಶ್ರೀನಾರಾಯಣರ ಜನನಿ ಜನಕರ ನಾನೆಂಬ ವಾದಿ ನುಡಿಯಲೊ । ಜಾಣರದರಿಂದರಿಯ ಮೂಲ ರೂಪವ ತೋರಿ ಶ್ರೀ ನಾರಸಿಂಹನ ಅವತಾರ ॥೪೦॥ ಅಂಬುಧಿಯ ಉದಕದಲಿ ಒಡೆದು ಮೂಡಿದ ಕೂರ್ಮ ಎಂಬ ಶ್ರೀಹರಿಯ ಪಿತನಾರು ಎಂಬ ಶ್ರೀಹರಿಯ ಪಿತನಾರು ಅದರಿಂದ ಸ್ವಯಂಭುಗಳೆಲ್ಲ ಅವತಾರ ॥೪೧॥ ದೇವಕಿಯ ಗರ್ಭದಲಿ ದೇವನವತರಿಸಿದ ಭಾವವನು ಬಲ್ಲ ವಿವೇಕಿಗಳು । ಈ ವಸುಧೆಯೊಳಗೆ ಕೃಷ್ಣಗೆ ಜನ್ಮವ ಆವ ಪರಿಯಲ್ಲಿ ನುಡಿವೆಯೊ? ॥೪೨॥ ಆಕಳಿಸುವಾಗ ಯಶೋದಾದೇವಿಗೆ ದೇವ ತನ್ನೊಳಗೆ ಹುದುಗಿದ್ದ । ಭುವನವೆಲ್ಲವ

ತೋರಿದ್ದುದಿಲ್ಲವೆ ಆ ವಿಷ್ಣು ಗರ್ಭದೊಳಡಗುವನೆ? ||೪೩|| ಆನೆಯ ಮಾನದಲಿ ಅಡಗಿಸಿದವರುಂಟೆ ಅನೇಕ ಕೋಟಿ ಅಜಾಂಡವ । ಅಣು ರೋಮ ಕೂಪದಲಿ ಆಳ್ದ ಶ್ರೀಹರಿಯ ಜನನಿ ಜಠರವು ಒಳಗೊಂಬುದೆ ||೪೪|| ಅದರಿಂದ ಕೃಷ್ಣನಿಗೆ ಜನ್ಮವೆಂಬುದು ಸಲ್ಲ ಮದನನಿವನ ಕುಮಾರನು । ಕದನದಿ ಕಣೆಗಳ ಇವನೆದೆಗೆಸೆವನೆ ಸುದತೇರಿಗಿವನೆಂತು ಸಿಲುಕುವನೆ ? ||೪೫|| ಅದರಿಂದ ಕೃಷ್ಣನಿಗೆ ಪರನಾರೀ ಸಂಗವ ಕೋವಿದರಾದಬುಧರು ನುಡಿವರೆ ಸದರವೆ ಈ ಮಾತು ಸರ್ವವೇದಂಗಳು ಮುದದಿಂದ ತಾವು ಸ್ತುತಿಸುವುವು ||೪೬|| ಎಂದ ಭಾಗವತದ ಚೆಂದಾದ ಮಾತನು ಮಂದ ಮಾನವ ಮನಸಿಗೆ । ತಂದುಕೊ ಜಗಕೆ ಕೈವಲ್ಯವೀವ ಮುಕುಂದಗೆ ಕುಂದು ಕೊರತೆ ಸಲ್ಲದು ||೪೭|| ಹತ್ತು ವರ್ಷದ ಕೆಳಗೆ ಮಕ್ಕಳಾಟಿಕೆಯಲ್ಲಿ ಚಿತ್ತ ಸ್ತ್ರೀಯರಿಗೆ ಎರಗುವುದೆ ? ಅರ್ತಿಯಿಂದರ್ಚಿಸಿದ ಗೋಕುಲದ ಕನ್ನೆಯರ ಸತ್ಯಸಂಕಲ್ಪ ಬೆರೆತಿದ್ದ ||೪೮|| ಹತ್ತು ಮತ್ತಾರು ಸಾಸಿರ ಸ್ತ್ರೀಯರಲ್ಲಿ ಹತ್ತು ಹತ್ತೆನಿಪ ಕ್ರಮದಿಂದ । ಪುತ್ರರ ವೀರ್ಯದಲಿ ಸೃಷ್ಟಿಸಿದವರುಂಟೆ? ಅರ್ತಿಯ ಸೃಷ್ಟಿ ಹರಿಗಿದು ||೪೯|| ರೋಮ ರೋಮ ಕೂಪ ಕೋಟಿ ವೃಕಂಗಳ ನಿರ್ಮಿಸಿ ಗೋಪಾಲರ ತೆರಳಿಸಿದ । ನಮ್ಮ ಶ್ರೀ ಕೃಷ್ಣನು ಮಕ್ಕಳ ಸೃಜಿಸುವ ಮಹಿಮ್ಮೆ ಬಲ್ಲವರಿಗೆ ಸಲಹಲಿಕೆ ||೫೦|| ಮಣ್ಣನೇಕೆ ಮೆದ್ದೆಎಂಬ ಯಶೋದೆಗೆ ಸಣ್ಣ ಬಾಯೊಳಗೆ ಜಗಂಗಳ । ಕಣ್ಣಾರೆ ತೋರಿದ ನಮ್ಮ ಶ್ರೀಕೃಷ್ಣನ ಘನ್ನತೆ ಬಲ್ಲವರಿಗೆ ಸಲಹಲಿಕೆ ||೫೧|| ನಾರದ ಸನಕಾದಿ ಮೊದಲಾದ ಯೋಗಿಗಳು ನಾರಿಯರಿಗೆ ಮರುಳಾದರೆ । ಓರಂತೆ ಶ್ರೀಕೃಷ್ಣನ ಅಡಿಗಡಿಗೆರಗುವರೆ ಆರಾಧಿಸುತ್ತ ಭಜಿಸುವರೆ? ||೫೨|| ಅಂಬುಜ ಸಂಭವ ತ್ರಿಯಂಬಕ ಮೊದಲಾದ ನಂಬಿದವರಿಗೆ ವರವಿತ್ತ । ಸಂಭ್ರಮದ ಸುರರು ಎಳ್ಳಷ್ಟು ಕೋಪಕ್ಕೆ ಇಂಬಿದ್ದರಿವನ ಭಜಿಸುವರೆ? ||೫೩|| ಅವನುಂಗುಷ್ಠವ ತೊಳೆದ ಗಂಗಾದೇವಿ ಪಾವನಳೆನಿಸಿ ಮೆರೆಯಳೆ? ಜೀವನ ಸೇರುವ ಪಾಪವ ಕಳೆವಳು ಈ ವಾಸುದೇವಗೆ ಎಣೆಯುಂಟೆ? ||೫೪|| ಕಿಲ್ಬಿಷವಿದ್ದರೆ ಅಗ್ರ ಪೂಜೆಯನ್ನು ಸರ್ಬರಾಯರ ಸಭೆಯೊಳಗೆ । ಉಬ್ಬಿದ ಮನದಿಂದ ಧರ್ಮಜ ಮಾಡುವನೆ? ಕೊಬ್ಬದಿರೆಲೊ ಪರವಾದಿ ||೫೫|| ಸಾವಿಲ್ಲದ ಹರಿಗೆ ನರಕ ಯಾತನೆ ಸಲ್ಲ ಜೀವಂತರಿಗೆ ನರಕದಲಿ । ನೋವನೀವನೆ ನಿಮ್ಮ ಯಮದೇವನು ಗೋವ ನೀ ಹರಿಯ ಗುಣವರಿಯ! ||೫೬|| ನರಕವಾಳುವ ಯಮಧರ್ಮರಾಯ ತನ್ನ ನರಜನ್ಮದೊಳಗೆ ಪೊರಳಿಸಿ । ಮರಳಿ ತನ್ನರಕದಲಿ ಪೊರಳಿಸಿ ಕೊಲುವನು ಕುರು ನಿನ್ನ

ಕುಹಕ ಕೊಳದಲ್ಲಿ ॥೫೭॥ ಬೊಮ್ಮನ ನೂರು ವರುಷ ಪರಿಯಂತ ಪ್ರಳಯದಲಿ ಸುಮ್ಮನೆಯಾಗಿ ಮಲಗಿರ್ದ । ನಮ್ಮ ನಾರಾಯಣಗೆ ಹಸಿ ತೃಷೆ ಜರಾ ಮರಣದು ಷಡ್ಮರ್ಗಗಳ ದುಃಖಗಳು ತೊಡಿಸುವರೆ ॥೫೮॥ ರಕ್ಕಸರಸ್ತ್ರಗಳಿಂದ ಗಾಯ ಒಡೆಯದ ಅಕ್ಷಯ ಕಾಯದ ಸಿರಿಕೃಷ್ಣ। ತುಚ್ಛ ಯಮಭಟರ ಶಸ್ತ್ರಕಳುಕುವನಲ್ಲ ಹುಚ್ಚ ನೀಹರಿಯ ಗುಣವರಿಯ ॥೫೯॥ ಕಿಚ್ಚ ನುಂಗಿದನು ನಮ್ಮ ಶ್ರೀ ಕೃಷ್ಣನು ತುಚ್ಛ ನರಕದೊಳು ಅನಲನಿಗೆ ಬೆಚ್ಚುವನಲ್ಲ ಅದರಿಂದಿವಗೆ ನರಕ ಮೆಚ್ಚುವರಲ್ಲ ಬುಧರೆಲ್ಲ ॥೬೦॥ ಮನೆಯಲ್ಲಿ ಕ್ಷಮೆಯ ತಾಳ್ದ ವೀರಭಟ ರಣರಂಗದಲ್ಲಿ ಕ್ಷಮಿಸುವನೆ ? ಅಣುವಾಗಿ ನಮ್ಮ ಹಿತಕೆ ಮನದೊಳಗಿನ ಕೃಷ್ಣ ಮುನಿವ ಕಾಲಕ್ಕೆ ಮಹತ್ತಾಹ ॥೬೧॥ ತಾಯ ಪೊಟ್ಟೆಯಿಂದ ಮೂಲರೂಪವ ತೋರಿ ಆಯುಧ ಸಹಿತ ಪೊರವಂಟ । ನ್ಯಾಯ ಕೋವಿದರು ಪುಟ್ಟಿದನೆಂಬರೆ ? ಬಾಯಿಗೆ ಬಂದಂತೆ ಬೊಗಳದಿರು ॥೬೨॥ ಉಟ್ಟಪೀತಾಂಬರ ತೊಟ್ಟ ಭೂಷಣಂಗಳು ಇಟ್ಟ ನವರತ್ನದ ಮುಕುಟವು ಮೆಟ್ಟಿದ ಕುರುಹ ಎದೆಯಲ್ಲಿ ತೋರಿದ ಶ್ರೀವಿಟ್ಠಲ ಪುಟ್ಟಿದನೆನಬಹುದೆ? ॥೬೩॥ ಋಷಭ್ಹಂಸಮೇಷ ಮಹಿಷಮೂಷಕ ವಾಹನನೇರಿ ಮಾನಿಸರಂತೆ ಸುಳಿವ ಸುರರೆಲ್ಲ। ಎಸೆವ ದೇವೇಶಾನರ ಸಹಸಕ್ಕೆ ಮಣಿದರು ಕುಸುಮನಾಭನಿಗೆ ಸರಿಯುಂಟೆ ॥೬೪॥ ಒಂದೊಂದು ಗುಣಗಳು ಇದ್ದಾವು ಇವರಲ್ಲಿ ಸಂದಣಿಸಿವೆ ಬಹುದೋಷ। ಕುಂದೆಳ್ಳಷ್ಟಿಲ್ಲದ ಮುಕುಂದನೆ ತನಗೆಂದು ಇಂದಿರೆ ಪತಿಯ ನೆನೆದಳು ॥೬೫॥ ಇಂತು ಚಿಂತಿಸಿ ರಮೆ ಸಂತ ರಾಮನ ಪದವ ಸಂತೋಷ ಮನದಿ ನೆನೆವುತ್ತ । ಸಂತೋಷ ಮನದಿ ನೆನೆವುತ್ತ ತನ್ನ ಶ್ರೀಕಾಂತನಿದ್ದೆಡೆಗೆ ನಡೆದಳು ॥೬೬॥ ಕಂದರ್ಪ ಕೋಟಿಗಳ ಗೆಲುವ ಸೌಂದರ್ಯದ ಚೆಂದವಾಗಿದ್ದ ಚೆಲುವನ । ಇಂದಿರೆ ಕಂಡು ಇವನೆ ತನಗೆ ಪತಿಯೆಂದವನ ಬಳಿಗೆ ನಡೆದಳು ॥೬೭॥ ಇತ್ತರದ ಸುರರ ಸುತ್ತ ನೋಡುತ್ತ ಲಕ್ಷ್ಮಿ ಚಿತ್ತವ ಕೊಡದೆ ನಸು ನಗುತ । ಚಿತ್ತವ ಕೊಡದೆ ನಸು ನಗುತ ಬಂದು ಪುರುಷೋತ್ತಮನ ಕಂಡು ನಮಿಸಿದಳು ॥೬೮॥ ನಾನಾ ಕುಸುಮಗಳಿಂದ ಮಾಡಿದ ಮಾಲೆಯ ಶ್ರೀ ನಾರಿ ತನ್ನ ಕರದಲ್ಲಿ। ಪೀನ ಕಂಧರದ ತ್ರಿವಿಕ್ರಮ ರಾಯನ ಕೊರಳೀನ ಮೇಲಿಟ್ಟು ನಮಿಸಿದಳು ॥೬೯॥ ಉಟ್ಟ ಪೊಂಬಟ್ಟೆಯು ತೊಟ್ಟಾಬರಣಗಳು ಇಟ್ಟ ನವರತ್ನ ಮುಕುಟವು । ದುಷ್ಟ ಮರ್ದನನೆಂಬ ಕಡೆಯ ಪೆಂಡೆಗಳ ಒಟ್ಟಿದ್ದ ಹರಿಗೆ ವಧುವಾದಳು ॥೭೦॥ ಕೊಂಬು ಚೆಂಗಹಳೆಗಳು ತಾಳ ಮದ್ದಳೆಗಳು ತಂಬಟೆ ಭೇರಿ ಪಟಹಗಳು । ಭೊಂ

ಭೋಂ ಎಂಬ ಶಂಖಡೊಳ್ಳು ಮೌರಿಗಳು ಅಂಬುಧಿಯ ಮನೆಯಲೆಸೆದವು ॥೭೧॥ ಅರ್ಘ್ಯ ಪಾದ್ಯಾಚಮನ ಮೊದಲಾದ ಷೋಡಶನರ್ಘ್ಯ ಪೂಜೆಯಿತ್ತನಳಿಯಗೆ । ಒಗ್ಗಿದ ಮನದಿಂದ ಧಾರೆಯೆರೆದನೆ ಸಿಂಧು ಸದ್ಗತಿಯಿತ್ತು ಸಲಹೆಂದ ॥೭೨॥ ವೇದೋಕ್ತ ಮಂತ್ರ ಪೇಳಿ ವಸಿಷ್ಠ ನಾರದ ಮೊದಲಾದ ಮುನೀಂದ್ರರು ಪಠಣದಿಂದ । ವಧುವರರ ಮೇಲೆ ಶೋಭಾನಕ್ಷತೆಯನು ಮೋದವೀವುತ್ತ ತಳೆದರು ॥೭೩॥ ಸಂಭ್ರಮದಿಂದಂಬರದಿ ದುಂದುಭಿ ಮೊಳಗಲು ತುಂಬುರು ನಾರದರು ತುತಿಸುತ್ತ । ತುಂಬುರು ನಾರದರು ತುತಿಸುತ್ತ ಪಾಡಿದರು ಪೀತಾಂಬರಧರನ ಮಹಿಮೆಯ ॥೭೪॥ ದೇವನಾರಿಯರೆಲ್ಲ ಬಂದೊದಗಿ ಪಾಠಕರು ಓವಿ ಪಾಡುತ್ತ ಕುಣಿದರು । ದೇವ ತರುವಿನ ಹೂವಿನ ಮಳೆಗಳ ಶ್ರೀವರನ ಮೇಲೆ ಕರೆದರು ॥೭೫॥ ಮುತ್ತು ರತ್ನಗಳಿಂದ ತೆತ್ತಿಸಿದ ಹಸೆಯ ನವರತ್ನ ಮಂಟಪದಿ ಪಸರಿಸಿ ನವರತ್ನ ಮಂಟಪದಿ ಪಸರಿಸಿ ಕೃಷ್ಣನ ಮುತ್ತೈದೆಯರೆಲ್ಲ ಕರೆಸಲು ॥೭೬॥ ಶೇಷಶಯನನೆ ಬಾ ದೋಷದೂರನೆ ಬಾ ಭಾಸುರ ಕಾಯ ಹರಿಯೆ ಬಾ । ಭಾಸುರ ಕಾಯ ಹರಿಯೆ ಬಾ ಶ್ರೀ ಕೃಷ್ಣ ವಿಲಾಸದಿಂದೆಮ್ಮ ಹಸೆಗೆ ಬಾ ॥೭೭॥ ಕಂಜಲೋಚನನೆ ಬಾ ಮಂಜುಳಮೂರ್ತಿ ಬಾ ಕುಂಜರವರದಾಯಕನೇ ಬಾ । ಕುಂಜರ ವರದಾಯಕನೆ ಬಾ ಶ್ರೀ ಕೃಷ್ಣ ನಿರಂಜನ ನಮ್ಮ ಹಸೆಗೆ ಬಾ ॥೭೮॥ ಆದಿಕಾಲದಲ್ಲಿ ಆಲದೆಲೆಯ ಮೇಲೆ ಶ್ರೀದೇವಿಯರೊಡನೆ ಪವಡಿಸಿದ ಶ್ರೀದೇವಿಯರೊಡನೆ ಪವಡಿಸಿದ ಶ್ರೀ ಕೃಷ್ಣ ಮೋದದಿಂದೆಮ್ಮಯ ಹಸೆಗೆ ಬಾ ॥೭೯॥ ಆದಿ ಕಾರಣನಾಗಿ ಆಗ ಮಲಗಿದ್ದು ಮೋದ ಜೀವರ ತನ್ನುದರದಲಿ । ಮೋದ ಜೀವರ ತನ್ನುದರದಲಿ ಇಂಬಿಟ್ಟ ಅನಾದಿ ಮೂರುತಿಯೆ ಹಸೆಗೆ ಬಾ ॥೮೦॥ ಚಿನ್ಮಯವೆನಿಪ ನಿಮ್ಮ ಮನೆಗಳಲ್ಲಿ ಜ್ಯೋತಿರ್ಮಯವಾದ ಪದ್ಮದಲ್ಲಿ । ರಮ್ಮೆಯರೊಡಗೂಡಿ ರಮಿಸುವ ಶ್ರೀ ಕೃಷ್ಣ ನಮ್ಮ ಮನೆಯ ಹಸೆಗೆ ಬಾ ॥೮೧॥ ನಾನಾವತಾರದಲಿ ನಂಬಿದ ಸುರರಿಗೆ ಆನಂದವೀವ ಕರುಣಿ ಬಾ ಆನಂದವೀವ ಕರುಣಿ ಬಾ ಶ್ರೀ ಕೃಷ್ಣ ಶ್ರೀ ನಾರಿಯರೊಡನೆ ಹಸೆಗೆ ಬಾ ॥೮೨॥ ಬೊಮ್ಮನ ಮನೆಯಲ್ಲಿ ರನ್ನದ ಪೀಠದಿ ಕುಳಿತು ಒಮ್ಮನದಿ ನೇಹನ ಮಾಡುವ । ನಿರ್ಮಲ ಪೂಜೆಯ ಕೈಗೊಂಬ ಪರ ಬೊಮ್ಮಮೂರುತಿಯೆ ಹಸೆಗೆ ಬಾ ॥೮೩॥ ಮುಖ್ಯಪ್ರಾಣನ ಮನೆಯಲ್ಲಿ ಭಾರತಿಯಾಗ ಲಿಕ್ಕಿ ಬಡಿಸಿದ ರಸಾಯನವ । ಸಕ್ಕರೆಕೂಡಿದ ಪಾಯಸ ಸವಿಯುವ ರಕ್ಕಸವೈರಿಯೆ ಹಸೆಗೆ ಬಾ ॥೮೪॥ ರುದ್ರನ ಮನೆಯಲ್ಲಿ ರುದ್ರಾಣಿ ದೇವಿಯರು ಭದ್ರ ಮಂಟಪದಿ ಕುಳ್ಳಿರಿಸಿ । ಸ್ವಾದ್ವನ್ನಗಳನು ಬಡಿಸಲು ಕೈಗೊಂಬ ಮುದ್ದು

ನರಸಿಂಹ ಹಸೆಗೆ ಬಾ ||೮೫|| ಗರುಡನ ಮೇಲೇರಿ ಗಗನ ಮಾರ್ಗದಲ್ಲಿ ತರತರದಿ ಸ್ತುತಿಪ ಸುರಸ್ತ್ರೀಯರ | ಮೆರೆವ ಗಂಧರ್ವರ ಗಾನವ ಸವಿಯುವ ನರಹರಿ ನಮ್ಮ ಹಸೆಗೆ ಬಾ ||೮೬|| ನಿಮ್ಮಣ್ಣನ ಮನೆಯ ಸುಧರ್ಮ ಸಭೆಯಲ್ಲಿ ಉಮ್ಮೆಯರಸ ನಮಿಸಿದ | ಧರ್ಮ ರಕ್ಷಕನೆನಿಪ ಕೃಷ್ಣ ಕೃಪೆಯಿಂದ ಪರಮ ಮೂರುತಿಯೆ ಹಸೆಗೆ ಬಾ ||೮೭|| ಇಂದ್ರನ ಮನೆಗ್ಹೋಗಿ ಅದಿತಿಗೆ ಕುಂಡಲವಿತ್ತು ಅಂದದ ಪೂಜೆಯ ಕೈಗೊಂಡು | ಅಂದದ ಪೂಜೆಯ ಕೈಗೊಂಡು ಸುರತರುವ ಇಂದಿರೆಗಿತ್ತ ಹರಿಯೆ ಬಾ ||೮೮|| ನಿಮ್ಮ ನೆನೆವ ಮುನಿ ಹೃದಯದಲಿನೆಲಸಿದ ಧರ್ಮರಕ್ಷಕನೆನಿಸುವ | ಸಮ್ಮತವಾಗಿದ್ದ ಪೂಜೆಯ ಕೈಗೊಂಬ ನಿಸ್ಸೀಮ ಮಹಿಮ ಹಸೆಗೆ ಬಾ ||೮೯|| ಮುತ್ತಿನ ಸತ್ತಿಗೆ ನವರತ್ನದ ಚಾಮರ ಸುತ್ತ ನಲಿವ ಸುರಸ್ತ್ರೀಯರ | ನೃತ್ಯವ ನೋಡುತ್ತ ಚಿತ್ರ ವಾದ್ಯಂಗಳ ಸಂಪತ್ತಿನ ಹರಿಯೆ ಹಸೆಗೆ ಬಾ ||೯೦|| ಎನಲು ನಗುತ ಬಂದು ಹಸೆಯ ಮೇಲೆ ಕುಳಿತು ವನಿತೆ ಲಕುಮಿಯೊಡಗೂಡಿ | ಅನಂತ ವೈಭವದಿ ಕುಳಿತ ಕೃಷ್ಣನ ನಾಲ್ಕು ದಿನದುತ್ಸವವ ನಡೆಸಿದರು ||೯೧|| ಅತ್ತೇರೆನಿಪ ಗಂಗೆ ಯಮುನೆ ಸರಸ್ವತಿ ಭಾರತಿ ಮೊದಲಾದ ಸುರಸ್ತ್ರೀಯರು | ಮುತ್ತಿನಕ್ಷತೆಯನು ಶೋಭನವೆನುತ ತಮ್ಮರ್ತಿಯಳಿಗೆ ತಳಿದರು ||೯೨|| ರತ್ನದಾರತಿಗೆ ಸುತ್ತ ಮುತ್ತನೆ ತುಂಬಿ ಮುತ್ತೈದೆಯರೆಲ್ಲ ಧವಳದ | ಮುತ್ತೈದೆಯರೆಲ್ಲ ಧವಳದ ಪದನ ಪಾಡುತ್ತಲೆತ್ತಿದರೆ ಸಿರಿವರಗೆ ||೯೩|| ಬೊಮ್ಮ ತನ್ನರಸಿ ಕೂಡೆ ಬಂದೆರಗಿದ ಉಮ್ಮೆಯರಸ ನಮಿಸಿದ | ಅಮ್ಮರರೆಲ್ಲರು ಬಗೆಬಗೆ ಉಡುಗೊರೆಗಳ ರಮ್ಮೆಯರಸಗೆ ಸಲಿಸಿದರು ||೯೪|| ಸತ್ಯ ಲೋಕದ ಬೊಮ್ಮ ಕೌಸ್ತುಭ ರತ್ನವನಿತ್ತ ಮುಕ್ತ ಸುರರು ಮುದದಿಂದ | ಮುತ್ತಿನ ಕಂಠೀಸರ ಮುಖ್ಯಪ್ರಾಣನಿತ್ತ ಮಸ್ತಕ ಮಣಿಯ ಶಿವನಿತ್ತ ||೯೫|| ತನ್ನರಸಿ ಕೂಡೆ ಸವಿ ನುಡಿ ನುಡಿವಾಗ ವದನ್ನದಲ್ಲಗ್ನಿ ಕೆಡದಂತೆ | ವಹ್ನಿ ಪ್ರತಿಷ್ಠೆಯ ಮಾಡಿ ಅವನೊಳಗಿದ್ದತನ್ನಾಹುತಿಯಿತ್ತ ಸುರರಿಗೆ ||೯೬|| ಕೊಬ್ಬಿದ ಖಳರೋಡಿಸಿ ಅಮೃತಾನ್ನ ಊಟಕ್ಕೆ ಉಬ್ಬಿದ ಹರುಷದಲಿ ಉಣಿಸಲು | ಉಬ್ಬಿದ ಹರುಷದಿ ಉಣಿಸಬೇಕೆಂದು ಸಿಂಧು ಸರ್ಬರಿಗೆಡೆಯ ಮಾಡಿಸಿದ ||೯೭|| ಮಾವನ ಮನೆಯಲ್ಲಿ ದೇವರಿಗೌತಣವ ದಾನವರು ಕೆಡಿಸದೆ ಬಿಡರೆಂದು ದಾನವರು ಕೆಡಿಸದೆ ಬಿಡರೆಂದು ಶ್ರೀಕೃಷ್ಣದೇವ ಸ್ತ್ರೀವೇಷವ ಧರಿಸಿದ ||೯೮|| ತನ್ನ ಸೌಂದರ್ಯದಿಂದನ್ನಂತ ಮಡಿಯಾದ ಲಾವಣ್ಯದಿ ಮೆರೆವ ನಿಜ ಪತಿಯ | ಹೆಣ್ಣುರೂಪವ ಕಂಡು ಕನ್ಯೆ ಮಹಾಲಕ್ಷ್ಮಿ ಇವಗನ್ಯರೇಕೆಂದು ಬೆರಗಾದಳು ||೯೯||

ಲಾವಣ್ಯಮಯವಾದ ಹರಿಯ ಸ್ತ್ರೀವೇಷಕ್ಕೆ ಭಾವುಕರೆಲ್ಲ ಮರುಳಾಗೆ । ಮಾವರ ಸುಧೆಯ ಕ್ರಮದಿಂದ ಬಡಿಸಿ ತನ್ನ ಸೇವಕ ಸುರರಿಗುಣಿಸಿದ । ॥೧೦೦॥ ನಾಗನ ಮೇಲೆ ತಾ ಮಲಗಿದ್ದಾಗ ಆಗಲೆ ಜಗವ ಜತನದಿ । ಆಗಲೆ ಜಗವ ಜತನದಿ ಧರಿಸೆಂದು ನಾಗಬಲಿಯ ನಡೆಸಿದ ॥೧೦೧॥ ಕ್ಷುಧೆಯ ಕಳೆವ ನವರತ್ನದ ಮಾಲೆಯ ಮುದದಿಂದ ವಾರಿಧಿ ವಿಧಿಗಿತ್ತ । ಚದುರ ಹಾರವ ವಾಯುದೇವರಿಗಿತ್ತ ವಿಧುವಿನ ಕಲೆಯ ಶಿವಗಿತ್ತ ॥೧೦೨॥ ಶಕ್ರ ಮೊದಲಾದ ದಿಕ್ಪಾಲಕರಿಗೆ ಸೊಕ್ಕಿದ ಚೌದಂತ ಗಜಂಗಳ । ಉಕ್ಕಿದ ಮನದಿಂದ ಕೊಟ್ಟ ವರುಣ ದೇವ ಮದು ಮಕ್ಕಳಾಯುಷ್ಯವ ಬೆಳೆಸೆಂದ ॥೧೦೩॥ ಮತ್ತೆ ದೇವೇಂದ್ರಗೆ ಪಾರಿಜಾತವನಿತ್ತ ಚಿತ್ತವ ಸೆಳೆವಪ್ಸರ ಸ್ತ್ರೀಯರ । ಹತ್ತು ಸಾವಿರ ಕೊಟ್ಟ ವರುಣ ದೇವ ಹರಿಭಕ್ತಿಯ ಮನದಿ ಬೆಳೆಸೆಂದ ॥೧೦೪॥ ಪೊಳೆವ ನವರತ್ನದ ರಾಶಿಯ ತೆಗೆತೆಗೆದು ಉಳಿದ ಅಮರರಿಗೆ ಸಲಿಸಿದ । ಉಳಿದ ಅಮರರಿಗೆ ಸಲಿಸಿದ ಸಮುದ್ರ ಕಳುಹಿದನವರ ಮನೆಗಳಿಗೆ ॥೧೦೫॥ ಉನ್ನಂತ ನವರತ್ನ ಮಯವಾದ ಅರಮನೆಯ ಚೆನ್ನೇಮಗಳಿಂದ ವಿರಚಿಸಿ । ತನ್ನ ಅಳಿಯಗೆ ಸ್ಥಿರವ ಮಾಡಿಕೊಟ್ಟ ಇನ್ನೊಂದು ಕಡೆಯಡಿ ಇಡದಂತೆ ॥೧೦೬॥ ಹಯವದನ ತನ್ನ ಪ್ರಿಯಳಾದ ಲಕ್ಷುಮಿಗೆ ಜಯವಿತ್ತ ಕ್ಷೀರಾಂಬುಧಿಯಲ್ಲಿ। ಜಯವಿತ್ತ ಕ್ಷೀರಾಂಬುಧಿಯಲ್ಲಿ ಶ್ರೀ ಕೃಷ್ಣ ದಯದಿ ನಮ್ಮೆಲ್ಲರ ಸಲಹಲಿ ॥೧೦೭॥ ಈ ಪದವ ಮಾಡಿದ ವಾದಿರಾಜೇಂದ್ರಮುನಿಗೆ ಶ್ರೀಪತಿಯಾದ ಹಯವದನ । ತಾಪವ ಕಳೆದು ತನ್ನ ಶ್ರೀ ಚರಣಸಮೀಪದಲ್ಲಿಟ್ಟು ಸಲಹಲಿ ॥೧೦೮॥ ಇಂತು ಸ್ವಪ್ನದಲ್ಲಿ ಕೊಂಡಾಂಡಿಸಿಕೊಂಡ ಲಕ್ಷ್ಮೀಕಾಂತನ ಕಂದನೆನಿಸಿದ । ಸಂತರ ಮೆಚ್ಚಿನ ವಾದಿರಾಜೇಂದ್ರ ಮುನಿಪಂಥದಿ ಪೇಳಿದ ಪದವಿದು ॥೧೦೯॥ ಶ್ರೀಯರಸ ಹಯವದನಪ್ರಿಯ ವಾದಿರಾಜರಾಯ ರಚಿಸಿದ ಪದವಿದು । ಆಯುಷ್ಯ ಭವಿಷ್ಯ ದಿನದಿನಕೆ ಹೆಚ್ಚುವುದು ನಿರಾಯಾಸದಿಂದ ಸುಖಿಪರು ॥೧೧೦॥ ಬೊಮ್ಮನ ದಿನದಲ್ಲಿ ಒಮ್ಮೊಮ್ಮೆ ಈ ಮದುವೆ ಕ್ರಮ್ಮದಿ ಮಾಡಿ ವಿನೋದಿಸುವ । ನಮ್ಮ ನಾರಾಯಣಗೂ ಈ ರಮ್ಮೆಗಡಿಗಡಿಗೂ ಅಸುರಮ್ಮೋಹನವೆ ನರನಟನೆ ॥೧೧೧॥ ಮದುವೆಯ ಮನೆಯಲ್ಲಿ ಈ ಪದನ ಪಾಡಿದರೆ ಮದುಮಕ್ಕಳಿಗೆ ಮುದವಹುದು । ವಧುಗಳಿಗೆ ಓಲೆಭಾಗ್ಯ ದಿನದಿನಕೆ ಹೆಚ್ಚುವುದು ಮದನನಯ್ಯನ ಕೃಪೆಯಿಂದ ॥೧೧೨॥

★ ★ ★

## ಶ್ರೀಮದ್-ವಾದಿರಾಜತೀರ್ಥಗುರುಸಾರ್ವಭೌಮರು ವಿರಚಿಸಿದ

# ಗಜೇಂದ್ರಮೋಕ್ಷ

ಶ್ರೀನಾಥ ಪಾರ್ವತಿಯ ನಾಥ ಶರಣೆಂಬೆ ನಾರಾಯಣ ಕೃಷ್ಣ। ವಾಣಿ ಭಾರತಿಯ ಗಜಮುಖನ ಬಲಗೊಂಬೆ ॥ ನಾನು ಬಲ್ಲಷ್ಟು ಪೇಳುವೆನು ಈ ಕಥೆಯ । ಶ್ರೀನಾಥ ಗಜರಾಜಗೊಲಿದ ಸಂಗತಿ ॥೧॥ ಛಪ್ಪನ್ನ ದೇಶ ದೇಶದ ರಾಯಗೊಳಗೆ । ಉತ್ತಮದ ದೇಶಗೌಳಾದೇಶದಲ್ಲಿ ॥ ವಿಷ್ಣುಭಕ್ತರೊಳು ಇಂದ್ರದ್ಯುಮ್ನ ನೃಪನು । ಮತ್ತೆ ಭೂಸುರರ ಪಾಲಿಸುತ್ತಿದ್ದ ತಾನು ॥೨॥ ಚಿತ್ತದಲ್ಲಿ ನರಹರಿಯ ನೆನೆದು ಚಿಂತಿಸುತ । ಪುತ್ರಮಿತ್ರಾದಿ ಬಂಧುಗಳ ವರ್ಜಿಸುತ ॥ ಧ್ಯಾನದಲ್ಲಿ ನರಹರಿಯ ನೆನೆದು ಚಿಂತಿಸುತ । ಆನೆಕುದುರೆಯ ರಾಜ್ಯಗಳನು ತ್ಯಜಿಸುತ್ತ ॥೩॥ ಸರ್ಪಶಯನನ ಧ್ಯಾನದಲ್ಲಿದ್ದ ತಾನು । ಮತ್ತೆ ತ್ರಿಕೂಟಪರ್ವತಕ್ಕಾಗಿ ಬಂದು ॥ ನಾಗಶಯನನ ಧ್ಯಾನದಲ್ಲಿದ್ದ ತಾನು । ಮೇರು ಮಂದರದ ಸಮೀಪಕ್ಕೆ ಬಂದು ॥೪॥ ಸಿದ್ಧ ಕಿನ್ನರರು ಗಂಧರ್ವರಿಗೆ ಸ್ಥಾನ । ಎದ್ದೆದ್ದು ಕುಣಿವ ಮಗಖಗಗಳ ಸೀಮ ॥ ಎತ್ತ ನೋಡಲು ನಾಲ್ಕು ದೇಶ ವಿಸ್ತೀರ್ಣ । ಸುತ್ತ ಸುವರ್ಣಮಯ ವಸ್ತುಗಳ ಧಾಮ ॥೫॥ ಹಲವು ನದಿ ಹಲವು ಕೊಳ ಹಲವು ಸರೋವರದಿ । ಹಲವು ಪರಿ ಪುಷ್ಪಗಳು ಮೆರೆವ ಅಳಿಕುಲದಿ ॥ ಚೆಲುವ ಗಂಧರ್ವ ಕಿನ್ನರಿಯರ ಸ್ಥಾನ । ಕುಣಿವ ನವಿಲುಗಳ ಗಿಳಿ ಕೋಗಿಲೆಯ ಗಾನ ॥೬॥ ಬಂದು ನದಿಯಲ್ಲಿ ಸ್ನಾನವನೇ ಮಾಡಿದನು । ಚಂದದಿಕ್ಕಿದನು ದ್ವಾದಶನಾಮಗಳು ॥ ಸಂಧ್ಯಾವಂದನೆ ಮಾಡಿ ಪದ್ಮ ಆಸನದಿ । ಇಂದಿರಾಪತಿಯ ಮನದೊಳಗಿರಿಸಿ ತಾನು ॥೭॥ ಅಂದಾಗ ಆಯೆಡೆಗೆ ಅಗಸ್ತ್ಯ ಮುನಿ ಬಂದ । ನಿಂದಿರ್ದು ವಂದನೆಯ ಮಾಡಲಿಲ್ಲೆಂದ ॥ ಎಂದೆನುತ ಮನದಿ ಕೋಪಿಸುತ ಶಾಪಿಸಿದ । ಕುಂಜರದ ರೂಪಾಗಿ ಜನಿಸು ಹೋಗೆಂದ ॥೮॥ ತಪ್ಪುಂಟು ಮಹರ್ಷಿಯೆ ಕೇಳು ಬಿನ್ನಪವ । ಉಶ್ಶಾಪ ಎಂದಿಗಾಗುವುದೆನುತ ಪೇಳು ॥ ವಿಷ್ಣುಚಕ್ರವು ಬಂದು ನಿನ್ನಲ್ ಸೋಕುತಲೆ । ಉಶ್ಶಾಪ ಅಂದಿಗಾಗುವುದೆಂದು ಪೇಳೆ ॥೯॥ ಜ್ಞಾನವಡಗಿದವು ಅಜ್ಞಾನವಾವರಿಸೆ । ಸೂರ್ಯ ಮುಳುಗಿದನು ಕತ್ತಲೆ ಮುಸುಕಂತೆ ॥ ಧ್ಯಾನಿಸುತ ಹಿಂದು ಮುಂದಾಗಿ ಕುಳಿತಿರಲು । ಆನೆಯಾದನು ನೃಪನು ಆ ಕ್ಷಣದಿ ತಾನು ॥೧೦॥ ಮೇರುಪರ್ವತ ಕದಲಿ ಇಳಿದು ಬರುವಂತೆ । ಮೀಲುಮದ ಕೀಳು ಮದ ಸುರಿಯೆ ಕುಂಭದಲಿ ॥ ಕಾಡಾನೆ ಕರಿಯಾನೆ ಮರಿಯಾನೆ ಸಹಿತ । ಕೂಡಿಕೊಂಡೆಲ್ಲ ಒಂದಾಗಿ ಸಂಭ್ರಮಿಸಿ ॥೧೧॥ ಕಾಡಾನೆಯಾಗ್ಹಲವು

ಮಕ್ಕಳನೆ ಪಡೆದು । ಕಾನನದೊಳಗೆ ಸಂಚರಿಸುತ್ತಿದ್ದ ತಾನು ॥ ಘಟ್ಟ ಬೆಟ್ಟಗಳ ಹತ್ತುತಲೆ ಇಳಿಯುತಲೆ । ಹಿಟ್ಟುಹಿಟ್ಟಾಗಿ ಕಲ್ಮರವ ತುಳಿಯುತಲೆ ॥೧೨॥ ದಟ್ಟಡವಿಯೊಳಗೆ ಸಂಚರವ ಮಾಡುತಲೆ । ಬತ್ತಿದವು ಕೆರೆಯೊರೆಯು ಬೇಸಿಗೆಯು ಬರಲು ॥ ಕಂಡಕಂಡಲ್ಲಿ ಏರುತಲಿ ಇಳಿಯುತಲಿ ತುಂಡುತುಂಡಾಗಿ ಗಿಡಮರದ ಮುರಿಯುತಲಿ । ತಂಡ-ತಂಡದಲ್ಲಿದ್ದ ತನ್ನ ಸತಿ ಸುತರು ॥೧೩॥ ಬೆಂಡಾಗಿ ಹಸಿವು ತೃಷೆಯಿಂದ ಬಳಲಿದರು । ಬಾಳೆ ಕಿತ್ತಳೆ ನಿಂಬೆ ಚೂತ ಮಾದಲವು ॥ ದಾಳಿಂಬ ದ್ರಾಕ್ಷಿ ಖರ್ಜೂರ ಪೇರಳೆಯು । ಮೇಲಾದ ಫಲಪುಷ್ಪದಿಂದ ಶೋಭಿಸಲು ತಾವರೆ ಕೊಳವೊಂದು ಕಂಡ ಗಜರಾಜ ॥೧೪॥ ನವರತ್ನ ಮುತ್ತು ಮಾಣಿಕ್ಯ ಸೊಪಾನ । ಕೊಳದ ಸುತ್ತಲು ಮುತ್ತಿ ಚಕ್ರವಾಕಗಳು ॥ ನಲಿಯುತಿವೆ ಚೆಲವು ಹಕ್ಕಿಗಳು ಹಂಸಗಳು । ಪರಿಮಳಿಸುವಾ ಕೊಳವೆ ಹೊಕ್ಕ ಗಜರಾಜ ॥೧೫॥ ಹೊಡೆಯುತಲಿ ಬಡೆಯುತಲಿ ಕುಡಿಯುತಲಿ ನೀರ । ಮಡುವಿನಲ್ಲಿ ಚಲ್ಲುತಲಿ ನಲಿದುವೊಂದಾಗಿ ॥ ಕಾಡಾನೆ ಕರಿಯಾನೆ ಮರಿಯಾನೆ ಸಹಿತ । ಕೂಡಿಕೊಂಡಿರಲಿಂತು ಸಂಭ್ರಮದಿ ಜಲದಿ ॥೧೬॥ ಮುನಿಯ ಶಾಪದಲೊಂದು ಮಕರಿ ಮಡುವಿನೊಳು । ಹಲವು ಕಾಲದಿ ತಪಿಸಿ ಜೀವಿಸುತ್ತಿರಲು ॥ ಮದಗಜವು ಪೊಕ್ಕ ಮಡುವನೆ ಕಲಕುತಿರಲು । ತಡೆಯದಾ ಮಕರಿ ಹಿಡಿಯಿತು ಕರಿಯ ಕಾಲು ॥೧೭॥ ಅತ್ತಿತ ನೋಡಿದನು ಸುತ್ತ ನೋಡಿದನು । ಎತ್ತನೋಡಿದರು ಬಿಡದು ಆ ಮಕರಿ ಕಾಲು ॥ ಎಳೆದೊಮ್ಮೆ ನೋಡಿದನು ಸೆಳೆದೊಮ್ಮೆ ನೋಡಿದನು । ಸೆಳೆದು ಕೊಡಹಿದರು ಬಿಡದಾ ಮಕರಿ ಕಾಲು ॥೧೮॥ ಹಾಗೊಮ್ಮೆ ನೋಡಿದನು ಸೆಳೆದೊಮ್ಮೆ ನೋಡಿದನು । ಹೇಗೆ ನೋಡಿದರು ಬಿಡದು ಆ ಮಕರಿ ಕಾಲು ॥ ತಮ್ಮ ಸತಿ ಸುತರೆಲ್ಲ ಸೆಳೆದರೊಂದಾಗಿ । ತಮ್ಮ ಕೈಲಾಗದೆಂದೆನುತ ತಿರುಗಿದರು ॥೧೯॥ ಎನ್ನ ಪುಣ್ಯದ ಫಲವು ಹೋಗಿ ನೀವೆಂದ । ದುಮ್ಮಾನದಿಂದ ದೂರದಲ್ಲಿದ್ದರವರು ॥ ಕಚ್ಚುತಲಿ ಸೆಳೆಯುತಲಿ ಆ ಮಕರಿ ಕಾಲು । ರಕ್ತಮಯವಾಗಿ ತುಂಬಿತು ಕೊಳದ ನೀರು ॥೨೦॥ ಅಕ್ಕಟಾ ಎನಗಿನ್ನು ಗತಿಯಾರು ಎನುತ । ದಿಕ್ಕುಗೆಟ್ಟಂತೆ ಮೊರೆಯಿಟ್ಟ ಗಜರಾಜ ॥ ಅಚ್ಚುತಾನಂತ ಶ್ರೀಹರಿಯೆನ್ನ ಕಾಯೋ । ಸಚ್ಚಿದಾನಂದ ಸರ್ವೇಶ್ವರನೆ ಕಾಯೋ ॥೨೧॥ ಭಕ್ತ ವತ್ಸಲನೆ ಭವಭಂಜನನೆ ಕಾಯೋ । ಕಷ್ಟಪಡುತ್ತೇನೆ ಕರುಣಿಸಿ ಕರುಣಿ ಕಾಯೋ ॥ ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳ ಇಂಬಿಟ್ಟು ಸಲಹೋ ಜಗದೀಶ್ವರನೆ ಕಾಯೋ । ಜಂಗಮಸ್ಥಾವರದೊಳಗೆ ಪರಿಪೂರ್ಣ ॥೨೨॥ ಎಂಬಂಥ ನೀ ಎನ್ನ ಬಂಧನವ ಬಿಡಿಸೋ । ಆರೇಳು ಭುವನವನು ಹೃದಯದೊಳಗಿಟ್ಟೆ ॥ ಕಾದುಕೋ ಎಂದು ಗಜರಾಜ ಮೊರೆಯಿಟ್ಟ । ಆಹಾರ ನಿದ್ರೆ

ಇಲ್ಲದೆ ಸಾವಿರೊರುಷ ಬಹಳ ನೊಂದನ್ನೆ ಸ್ವಾಮಿ ಕಾಯೋ ಬಾಯೆಂದ ।।೨೩।। ವೇದಗಳ ಕದ್ದುಕೊಂಡೊಯ್ದು ದಾನವನ । ಸಾಧಿಸಿದೆ ಭೇದಿಸಿದೆ ಅವನ ।। ಭೇದಿಸಿದೆ ಆದಿ ನಿಗಮವ ತಂದು ಕಮಲಜನಿಗಿತ್ತೆ । ವೇದಾಂತವೇದ್ಯ ಮತ್ಸ್ಯವತಾರ ಶರಣು ।।೨೪।। ಸುರಾಸುರರು ಪಾಲ್ಗಡಲ ಮಥಿಸುತಿರಲು । ಮುರವೈರಿ ಹಾಸಿಗೆಯ ಹುರಿ ಮಾಡಿಕೊಂಡು ।। ಭರದಿ ಮಂದರಗಿರಿಯು ಇಳಿಯುತಿರೆ ಬಂದು । ಗಿರಿಯನೆತ್ತಿದ ಕೂರ್ಮ ಹರಿ ನಿನಗೆ ಶರಣು ।।೨೫।। ಸುರುಳಿ ಸುತ್ತಿದ ಭೂಮಿ ದಾಡೆಯಲಿ ತಂದೆ । ದುರುಳ ಹಿರಣ್ಯಾಕ್ಷನನು ಬೇಗದಲಿ ಕೊಂದೆ ।। ಧರಣಿದೇವಿಯನು ಸದಮಲದೊಳು ಗೆದ್ದೆ। ವರಹಾವತಾರ ಶ್ರೀಹರಿ ನಿನಗೆ ಶರಣು ।।೨೬।। ಬಾಲಕನು ಕರೆಯಲಿಕೆ ಕಂಬದಲಿ ಬಂದೆ । ಸೀಳಿ ರಕ್ಕಸನ ಕರುಳಿನ ಮಾಲೆ ಹಾಕಿದೆ ।। ಶೀಲ ಪ್ರಹ್ಲಾದನಿಗೆ ಅಭಯವನು ಇತ್ತೆ । ಶ್ರೀಲಕ್ಷ್ಮೀವೊಡನಿದ್ದ ನರಸಿಂಹ ಶರಣು ।।೨೭।। ಬಲಿಯ ಬಳಿ ದಾನವ ಬೇಡಿ ಬ್ರಹ್ಮಚಾರಿಯಾಗಿ । ನೆಲವನೆಲ್ಲವ ಮೂರು ಅಡಿ ಮಾಡಿ ಅಳದೆ ।। ಅಳೆದ ಪಾದದಲಿ ಭಾಗೀರಥಿಯ ತಂದೆ । ಚೆಲುವೆ ವಾಮನಮೂರ್ತಿ ತ್ರಿವಿಕ್ರಮನೆ ಶರಣು ।।೨೮।। ದುಷ್ಟಕ್ಷತ್ರಿಯರ ನೃಪರ ಕುಲವ ಸಂಹರಿಸಿ । ರಕ್ತದಲಿ ಸ್ನಾನ ತರ್ಪಣವ ನೀ ಕೊಟ್ಟೆ ।। ಮತ್ತೆ ವೇದಾಂತ ಶಾಸ್ತ್ರಗಳ ನೆರೆ ಓದಿ । ವಿಪ್ರ ಭಾರ್ಗವರಾಮ ಹರಿ ನಿನಗೆ ಶರಣು ।।೨೯।। ಹರನ ಬಿಲ್ಲನೆ ಮುರಿದು ಧರಣಿಜೆಯ ತಂದೆ । ದುರುಳ ರಾವಣನ ಶಿರಗಳ ಹತ್ತು ತರಿದೆ ।। ವರವಿಭೀಷಣಗವನ ರಾಜ್ಯಗಳನಿತ್ತೆ । ಶರಣರಕ್ಷಕ ಸೀತಾಪತಿ ರಾಮ ಶರಣು ।।೩೦।। ಮಧುರೆಯಲಿ ಹುಟ್ಟಿ ಗೋಕುಲದಲ್ಲಿ ಬೆಳೆದೆ । ತರಳತನದಲಿ ಹಾಲು ಬೆಣ್ಣೆಗಳ ಮೆದ್ದೆ ।। ತರುವ ಕಾಯುತ ಕೊಂದೆ ಹಲವು ರಕ್ಕಸರ । ಬಲರಾಮಕೃಷ್ಣ ಗೋಪಾಲಕನೆ ಶರಣು ।।೩೧।। ತ್ರಿಪುರರಸತಿಯರ ವ್ರತ ಅಪಹರಿಸಿದವನೆ । ಪೃಥಿವಿಯೊಳು ಅಶ್ವತ್ಥನಾಗಿ ಮೆರೆದವನೆ ।। ಬಿಸಿಗಣ್ಣ ಹರಗೆ ಅಂಬಾಗಿ ನಿಂತವನೆ । ಪಶುಪತಿ ಪ್ರಿಯ ಬೌದ್ಧ ಅವತಾರ ಶರಣು ।।೩೨।। ವರ್ಣಾಶ್ರಮಗಳೆಲ್ಲ ಒಂದಾಗಿ ಇರಲು । ಬಿನ್ನಾಣದಿಂದ ತುರುಗವನೇರಿಕೊಂಡು ।। ಬನ್ನಬಡಿಸುತ ಹಲವು ಪಾತಕರ ಕೊಂದೆ । ಬ್ರಹ್ಮಸ್ವರೂಪ ಕಲ್ಕ್ಯವತಾರ ಶರಣು ।।೩೩।। ಅರಿಯದಂತಿರದೆ ಅಚ್ಯುತ ರಕ್ಷಿಸೆನ್ನ । ಮರೆಯದೆಂದಿರದೆ ಮಾಧವ ರಕ್ಷಿಸೆನ್ನ ।। ಕೇಳೆನೆಂದೆನದೆ ಕೇಶವ ರಕ್ಷಿಸೆನ್ನ ।।೩೪।। ಕಾಯಕಂಜದ ಪ್ರಾಣ ಹೋಗುತಿದೆ ಮುನ್ನ । ಯಾವಾಗ ಹರಿಬಂದು ಕಾಯ್ವನೋ ಎನ್ನ ।। ಚೀರಿದನು ಕೂಗಿ ಮೊರೆಯಿಟ್ಟ ಗಜರಾಜ । ದಾನವಾಂತಕನು ಕಿವಿಗೊಟ್ಟು ಕೇಳಿದನು ।।೩೫।। ಕ್ಷೀರಾಬ್ಧಿಯಲ್ಲಿ ವೈಕುಂಠ ನೆಲಸಿದ್ದ। ಶೇಷನಾ ಹಾಸಿಗೆಯ

ಮೇಲೆ ಕುಳ್ಳಿರ್ದ ॥ ಶ್ರೀಲಕ್ಷ್ಮಿ ಸಮ್ಮೇಳನದಿಂದ ಒಪ್ಪಿರಲು । ಆಲಯಿಸಿ ಕೇಳಿದನೆ ಅಜನ ಪೆತ್ತವನು ॥೩೬॥ ಶಂಖ-ಚಕ್ರಗಳಿಲ್ಲವೆಂದು ಶಂಕಿಸದೆ । ಬಿಂಕದಿಂ ಗರುಡನ್ನ ಪೆಗಲೇರಿಸಿಕೊಳದೆ ॥ ಪಂಕಜಾಕ್ಷಿಯ ಕೂಡ ತಾನು ಉಸಿರಿಸದೆ । ಪಂಕಜನಾಭ ಬಂದನು ಕೊಳದ ಕಡೆಗೆ ॥೩೭॥ ಸಜ್ಜೆ ಉಪ್ಪರಿಗೆಯಿಂದಿಳಿದು ಬರುವಾಗ । ವಜ್ರಕುಂಟಲ ಕದಪು ಹಾರಗಳು ಹೊಳೆಯೆ ॥ ಹೊದ್ದ ಪೀತಾಂಬರವು ನೆಲಕೆ ಅಲೆಯುತಲಿ । ಎದ್ದು ಬಂದನು ದಯಾಸಮುದ್ರ ಬಂದಂತೆ ॥೩೮॥ ಸಿಂಧುಸುತೆ ಪತಿಯೆಲ್ಲಿ ಪೋದನೋ ಎನುತ । ಮಂದಗಮನೆಯು ಬರಲು ಪುರವೆಲ್ಲ ತೆರಳೆ ॥ ವಂದಿಸದ ಗರುಡ ಗಂಧರ್ವರೊಗ್ಗಿನಲಿ । ಅಂದಾಗ ಶಂಖಚಕ್ರವ ಕೂಡೀಬರಲು ॥೩೯॥ ಹರಿಯು ಗರುಡನನೇರಿ ಕರಿಯತ್ತ ಬರಲು । ಹರ-ಪಾರ್ವತಿಯರು ನಂದಿಯನೇರಿಕೊಳ್ಳುತ ॥ ಶಿರವ ಮೇಲಿನ ಗಂಗೆ ತುಳುಕಾಡುತಿರಲು । ಹರ ಬಂದ ಕೈಲಾಸಪುರದಿಂದ ಇಳಿದು ॥೪೦॥ ತೊಡೆಯ ಮೇಲಿಂದ ಗೌರಿದೇವಿಯಳ ಸಹಿತ । ಮುಡಿಯ ಮೇಲಿನ ಗಂಗೆ ತುಳುಕಾಡುತಿರಲು ॥ ಹರಪಾರ್ವತಿದೇವಿ ವೃಷಭವನ್ನೇರಿ । ಹರಬಂದ ಕೈಲಾಸಪುರದಿಂದ ಇಳಿದು ॥೪೧॥ ದೇವರ್ಷಿ ಬ್ರಹ್ಮರ್ಷಿ ರಾಜರ್ಷಿ ಸಹಿತ । ದೇವಪುತ್ರಾದಿ ಸನಕಾದಿಗಳೂ ಕೂಡಿ ॥ ಸುಮ್ಮನೇ ನಾರದನಂದು ನಡೆತಂದ । ಧರ್ಮಸ್ವರೂಪರೆಲ್ಲಾ ನೆರೆದರೆಂದು ॥೪೨॥ ಬಂದ ಚಕ್ರವನು ಕರಕಮದಲಿ ತೆಗೆದು । ಸಂಧಿಸಿಟ್ಟನು ಮಕರಿ ಹಲ್ಲುಮುರಿವಂತೆ ॥ ಅಂದಾಗ ಅವನ ಶಾಪ ಉಶ್ಯಾಪವಾಗಿ । ಗಂಧರ್ವ ರೂಪಿನಲಿ ನಿಂತಿತಾ ಮಕರಿ ॥೪೩॥ ಹರಿಯ ಸುದರ್ಶನವು ಮದಗಜಕೆ ಸೋಕುತಲೆ । ಒದಗಿದವು ಶಂಖ ಚಕ್ರ ನಾಲ್ಕು ಕೈಗಳಲಿ ॥ ಉಟ್ಟ ಪೀತಾಂಬರವು ಕಿರೀಟ ಕುಂಡಲವು । ಎಳೆತುಳಸಿ ಮಾಲೆಗಳು ಕೊರಳೊಳೊಪ್ಪಿದವು ॥೪೪॥ ಜಯ ಜಯ ಜಗನ್ನಾಥ ಜಯವಿಶ್ವ ಮೂರ್ತಿ । ಜಯ ಜಯ ಜನಾರ್ದನ ಜಯ ವಿಶ್ವರೂಪ ॥ ಜಯತು ಸರ್ವೋತ್ತಮನೆ ಕ್ಷೀರಾಬ್ಧಿಶಯನ । ಜಯವೆಂದು ಪದಗಳಿಗೆ ಬಂದು ಎರಗಿದನು ॥೪೫॥ ಇಂದಿವನ ಭಾಗ್ಯವನು ನೋಡುವರು ಕೆಲವರು । ಇಂದಿರಾಪತಿಯ ಕೊಂಡಾಡುವರು ಕೆಲವರು ॥ ಮಂದಾರ ಹೂಮಳೆಯ ಕರೆಯುತ್ತ ಸುರರು । ದುಂದುಭಿ ವಾದ್ಯಗಳ ವೈಭವಗಳಿರಲು ॥೪೬॥ ಸಿರಿಸಹಿತ ಹರಿಯು ಗರುಡನೇರಿಕೊಂಡು । ಕರಿರಾಜನೊಡನೆ ವೈಕುಂಠಕ್ಕೆ ಬರಲು ॥ ಹರಪಾರ್ವತಿಯರು ಕೈಲಾಸಕ್ಕೆ ತೆರಳೆ । ತರತರದ ವಾಹನದಿ ಸುರರು ತೆರಳಿದರು ॥೪೭॥ ಹೊತ್ತಾರೆ ಎದ್ದು ಈ ಕತೆ ಹೇಳಿ ಕೇಳಿದವರಿಗೆ । ದುಃಸ್ವಪ್ನ ದುರ್ಬುದ್ಧಿ ದುರ್ವ್ಯಸನ ತರಿವುದು ॥ ಸರ್ಪಾರಿ ವಾಹನನ ಧ್ಯಾನದೊಳಗಿರಲು । ಸತ್ಸಂಗ ಸಾಯುಜ್ಯ ಪದವಿ

ದೊರಕುವುದು ॥೪೮॥ ಹರಿಯ ನೆನೆ ಹರಿಯ ನೆನೆ ಹರಿಯ ನೆನೆ ಮನವೆ । ಮರೆಯದಲೆ ಮಾಧವನ ನೆನೆ ಕಂಡ್ಯ ಮನವೆ ॥ ಹರಿಯ ನೆನೆದವರಿಗೆ ಪರಮ ಪದವಿಯು ಉಂಟು । ಕರಿರಾಜವರದನ್ನ ಶರಣೆಂದು ಭಜಿಸು ॥೪೯॥ ಜಯತು ಧ್ರುವ ರಾಯನಿಗೆ ವರವಿತ್ತ ದೇವ । ಜಯತು ಪ್ರಲ್ಹಾದಗಭಯವನಿತ್ತ ದೇವ ॥ ಜಯತು ದ್ರೌಪದಿಯಭಿಮಾನ ಕಾಯ್ದ ದೇವಾ । ಜಯತು ಜಯ ಹಯವದನ ಶ್ರೀವಾಸುದೇವ ॥೫೦॥

★ ★ ★ ★

### ಶ್ರೀಪುರಂದರದಾಸರು ವಿರಚಿಸಿದ

## ಗಜೇಂದ್ರಮೋಕ್ಷ

ಹರಿಯೇನಾರಾಯಣ ನಮೋ । ಹರಿಯೇನಾರಾಯಣ ನಮೋ ನಾಗೇಂದ್ರ ಶಯನಾಯ । ನಾರದಾದ್ಯಖಿಳ ಮುನಿನಮಿತ ಚರಣಾಂಭೋಜ ಸಾರಿದರೆ ಪೊರೆವ ಕಂಸಾರಿ ರಕ್ಷಿಪುದೆನ್ನ ಕಾರುಣ್ಯದಿಂದೊಲಿದು । ಹರಿಯೇನಾರಾಯಣ । ನಮೋ ॥ಪ॥ ಪಾಂಡ್ಯ ದೇಶದೊಳಗೆ ಇಂದ್ರದ್ಯುಮ್ನನೆಂಬ ಭೂ । ಮಂಡಲಾಧಿಪನು ವೈರಾಗ್ಯದಲಿ ಹರಿಪಾದ । ಪುಂಡರೀಕ ಧ್ಯಾನಪರನಾಗಿ ತಪದೊಳಿರೆ ಚಂಡತಾಪಸನಗಸ್ತ್ಯ ಹಿಂಡು ಶಿಷ್ಯರುವೆರಸಿ ಬರಲಿ ಸತ್ಕರಿಸಿದರೆ ಕಂಡು । ಗಜಯೋನಿಯೊಲಿ ಜನಿಸು ಪೋಗೆನುತಲುದ್ದಂಡ ಶಾಪವನಿತ್ತು ಮುನಿ ಪೋಗುತ್ತಿರಲತ್ತ ಕುಂಡಾಲನಾದವನರಸ । ಹರಿಯೇನಾರಾಯಣ । ನಮೋ ॥೧॥ ಕ್ಷೀರಸಾಗರತಡಿಯಲಯುತ ಯೋಜನದಗಲ । ಮೇರುವ ತ್ರೀಕೂಟ ಪರ್ವತ ಶೃಂಗತ್ರಯದಲ್ಲಿ । ರಾರಾಜಿಸುವಮಳ ರಜತಕಾಂಚನದಮಲ ನಾರಾಯಣೇಶರಿಂದ । ಪಾರಿಜಾತಾಂಭೋಜ ತುಳಸಿ ಮಲ್ಲಿಗೆ ಜಾಜೀ । ಸೌರಂಭದಶ್ವತ್ಥ ಪೂಗ ಪುನ್ನಾಗ ಜಂಬೀರಾದಿ ತರು ಗುಲ್ಮ ಖಗ ಮೃಗಗೆಸೆವಲ್ಲಿ ವಾರಣೇಂದ್ರನು ಮೆರೆದನು ॥ ಹರಿಯೇನಾರಾಯಣ । ನಮೋ॥೨॥ ಆನೆ ಹೆಣ್ಣಾನೆ ಮರಿಯಾನೆಗಳು ಸಹಿತಲಾ ಕಾನನದಿ ತೊಳಲುತ್ತ ಬೇಸಿಗೆಯ ಬಿಸಿಲಿಂದ । ತಾ ನೀರಡಿಸಿ ಬಂದುದೊಂದು ಸರಸಿಗೆ ಸಲಿಲ ಪಾನಾಭಿಲಾಷೆಯಿಂದ ॥ ನಾನಾ ಪ್ರಕಾರದಲಿ ಜಲಕ್ರೀಡೆಯಾಡುತಿರೆ । ಏನಿದೆತ್ತ । ರಭಸವೆಂದುಗ್ರ ಕೋಪದಿಂ । ದಾನೆಗಳೆ ಬಾಯ್ದೆರೆದು ನುಂಗಿತೋಂದಂಘ್ರಿಯನದೇನೆಂಬೆನಾಕ್ಷಣದೊಳು ॥ಹರಿಯೇನಾರಾಯಣ। ನಮೋ ॥೩॥ ಒತ್ತಿಪಿಡಿದೆವುತ್ತಿರಲೆತ್ತಣವಿದೇನೆನುತ । ಮತ್ತಗಜರಾಜ ದೌಡೆತ್ತಿ ಘೀಳಿಡು ತಲೆಳೆ

ದೊತ್ತಿ ದಂಡೆಗೆ ನಡುಮಡುವಿನೊಳಗೆತ್ತೆಳೆದುದಾ ನೆಗಳೆ ॥ ಇತ್ತಂಡವಿತ್ತು ಕಾದುತ್ತ ಸಾವಿರ ವರ್ಷವು । ವಿಸ್ತರಿತೇನೆಂಬ ಮತ್ತಾ ಗಜೇಂದ್ರಂಗೆ । ಸತ್ವ ತಗ್ಗಿತು ತನ್ನ ಚಿತ್ತದಲಿ ಧ್ಯಾನಿಸುತ ಮತ್ತಾರು ತನಗೆನುತಲಿ । ಹರಿಯೇನಾರಾಯಣ । ನಮೋ ॥೪॥ ಬಂದುದಾ ಸಮಯದಲಿ ಹಿಂದೆ ಮಾಡಿದ ಪುಣ್ಯ । ದಿಂದ ದಿವ್ಯ ಜ್ಞಾನ ಕಂದೆರೆದು ಕೈಮುಗಿದು । ವಂದಿಸುತ ಮನದೊಳಗರವಿಂದನಾಭಾಚ್ಯುತ ಮುಕುಂದ ಮುನಿವೃಂದವಂದ್ಯ । ಇಂದಿರಾರಮ । ಗೋವಿಂದ ಕೇಶವ ಭಕ್ತ । ಬಂದು ಕರುಣಾಸಿಂಧು ತಂದೆ ನೀ ಸಲಹೆನ್ನ । ಇಂದು ಸಿಲುಕಿದೆನು ಬಲು ದಂದುಗದ ಮಾಯಾಪ್ರಬಂಧದಿಂ ನೆಗಳೆಯಿಂದ ॥ ಹರಿಯೇನಾರಾಯಣ । ನಮೋ॥೫॥ ಪರಮಾತ್ಮ ಪರಮೇಶ ಪರಿಪೂರ್ಣ ಪರತತ್ವ । ಪರತರ ಪರಂಜ್ಯೋತಿ ಪರಮಪಾವನಮೂರ್ತಿ । ಉರುತರಪರಬ್ರಹ್ಮ ಆನಂದ ಪರಮೇಷ್ಠಿಪರಾತ್ಪರ ಪರಮಪುರುಷ ॥ ನಿರುಪಮ ನಿಜಾನಂದ ನಿರ್ಭಯ ನಿರಾವರಣ ॥ ನಿರವಧಿಕ ನಿರ್ಗುಣ ನಿರಂಜನ ನಿರಾಧಾರ । ನಿರವದ್ಯ ನಿಸ್ಸಂಗ ನಿಶ್ಚಿಂತ ನಿತ್ಯನೆ ನೋಯಿಸಿದೆ ಸಲಹೆನ್ನನಿಂದು ಹರಿಯೇನಾರಾಯಣ । ನಮೋ ॥೬॥ ಇಂತೆನುತ ಮೂರ್ಛೆಯಲಿ ಕಂಪಿತ ಕಂಠಧ್ವನಿಯೋ । ಳಂತರಾತ್ಮಕನ ನೆನೆಯುತ್ತಳುತ್ತಿರಲತ್ತ । ನಂತಮಹಿಮನು ಕೇಳಿ ಕರುದಿಂದಾಕ್ಷಣಾ ನಂತಶಯನನದಿಂದೆದ್ದನು ॥ ಸಂತಸದಿ ಸಿರಿಸಹಿತ ಗರುಡವಾಹನನಾಗಿ ಚಿಂತೆ ಬೇಡೆಳೆ ಬೇಡ ನುತ ಹಸ್ತವನಿತ್ತೇ । ಕಾಂತ ಭಕ್ತನ ಬಳಿಗೆ ಬಂದೆರಡು ಕೈಗಳಿಂದದಂತಿರಾಜನನು ನೆಗಹಿದ ॥ ಹರಿಯೇನಾರಾಯಣ । ನಮೋ ॥೭॥ ನೆಗಳಿ ಬಾಯನು ಚಕ್ರದಲಿ ಸೀಳಿ ಕರಿವರನ । ಉಗುವ ಕರುಣದಲಿ ಮೈದಡಹಲ್ಕೆ ಗಜಜನ್ಮ । ತಾಗೆದುದಾಕ್ಷಣವೆ ಮಣಿ ಮುಕುಟಕುಂಡಲದಿಂದ ಮಿಗೆ ಶೋಭಿಸುತಲೆಸೆದನು । ವಿಗಡ ದೇವಲಮುನಿಯ ಶಾಪದಲಿ ಮುಂದು ಭೂ । ಮಿಗೆ ನಕ್ರವಾಗಿ ಹೂ ಹೂ ಎಂಬ ಗಂಧರ್ವ । ನಗಧರನ ಕಂಡು ನಿಜಗತಿ ಗೈದುದರಮರೊಳ್ಮಿಗೆ ಮೆರೆದೋಲೈಸುತ ॥ ಹರಿಯೇನಾರಾಯಣ। ನಮೋ ॥೮॥ ಮಣಿಮಯ ಕಿರೀಟಕುಂಡಲ ಹಾರ ಕೌಸ್ತುಭದಿ । ಮಿನುಗುತಿಹ ವೈಜಯಂತಿ ಭೂಷಣಾವಲಿಯ । ಫಣೆಯ ಕಸ್ತೂರಿತಿಲಕ ನಾಮದಿಂದೆಸೆವುತಿಹ ವರ ಶಂಖ ಚಕ್ರದಿಂದ ಝಣ । ಝಣಿತ ನೂಪುರದ ದಂತಪಂಕ್ತಿಯ ಕೃಪೇ । ಕ್ಷಣದ ಸಿರಿಮೊಗದ ಪೀತಾಂಬರಾಲಂಕೃತದಿ । ಮಣಿದು ಜಯ ಜಯುವೆಂಬ ಸುರಸಿದ್ದಿಸಾಧ್ಯಸಂದಣಿಯೊಳಗೆ ॥ ಹರಿಯೇನಾರಾಯಣ । ನಮೋ ॥೯॥ ಹರಿಯ ಸ್ತುತಿಗೈದಂಘ್ರಿಗೆರಗಲಾ ಭೂಪನಾ । ದರದಿಂದ ಸತ್ಕರಿಸಿ ಶರಧಿ ಶ್ವೇತದ್ವೀಪ । ಗಿರಿಶೃಂಗ ವಾರಾಶಿ ತರು ಶೇಷ ವಾಲ್ಮೀಕಿ

ಮುನಿ ಧರಣಿ ಧ್ರುವ ಲಕ್ಷ್ಮಿಯು ॥ ಹರ ಗಿರಿಜೆ ವಿಧಿ ವಾಣಿ ನಾರದ ಪ್ರಹ್ಲಾದ । ಗರುಡ ಗೋವಿಪ್ರರ್ಷಿ ಗಂಗಾರ್ಕ ಚಂದ್ರಾಗ್ನಿನ । ಸಿರಿ ವತ್ಸ ಶಂಖ ಚಕ್ರಾದ್ಯವತಾರಗಳ ಸ್ಮರಿಸುವವರ ಕಾಯ್ದನೆಂದಾ ॥ ಹರಿಯೇನಾರಾಯಣ । ನಮೋ ॥೧೦॥ ಆವನಿದುದನುದಯಕಾಲದೊಳೆದ್ದು ನಿಜಭಕ್ತಿ । ಭಾವಶುದ್ಧಿಗಳಿಂದ ಪೇಳಿ ಕೇಳ್ವನೋ ಅವನ । ಸಾವಿರಾರ್ಜನ್ಮಗಳ ಸಂಚಿತಘರಾಶಿಗಳು ತಾವೆ ಹತವಾದವೆಂದೆಂದು ॥ ಶ್ರೀ ವಾಸುದೇವನ ಜ್ಞಾಪಿಸಿ ಗಜೇಂದ್ರ ಸಹಿ (ತಾವಿಹಂಗಾಧಿ ಪನನೇರಿ ವೈಕುಂಠಕ್ಕೆ । ದೇವ ವಿಜಯಂಗೈದ ಪುರಂದರ ವಿಠಲನ ಸೇವಕರಿಗಿದು ಚಿತ್ರಮೇ ॥ ಹರಿಯೇನಾರಾಯಣ । ನಮೋ ॥೧೧॥

★ ★ ★ ★

## ಭಗವದ್ಗೀತಾಸಾರ

ಕೇಳಯ್ಯ ಎನ್ನ ಮಾತು ಪಾರ್ಥನೆ ಗೀತಾದರ್ಥನೆ ॥ ಪ ॥ ಶ್ಲೋ । ಕುರುಕ್ಷೇತ್ರದಿ ಎನ್ನವರು ಪಾಂಡವರು ಪೇಳೋ ಸಂಜಯಾ ಏನು ಮಾಡುವರು ಕೂಡಿ । ಕೇಳಯ್ಯ ಅರಸನೆ ನೋಡಿ ಪಾಂಡವರ ಸೇನಾ ಮಾತನಾಡಿದ ನಿನ್ನ ಸುತ ದ್ರೋಣಗಿಂತು ॥ಪ॥ ಕೇಳಿ ತಾ ಪಾರ್ಥನು ಕುರು ದಂಡ ರಣದಲಿ ಚಂಡ । ಗಾಂಡೀವ ಕರದಂಡ ಅಚ್ಯುತ ಪಿಡಿರಥ ನಡೆ ಮುಂದ ಬಹು ತ್ವರದಿಂದ । ನೋಡುವೆ ನೇತ್ರದಿಂದ ॥ ಗುರುಹಿರಿಯರ ಕೂಡ ಯಾಕೆಂದ ಯುದ್ಧ ಸಾಕೆಂದು । ಭಿಕ್ಷವೆ ಸುಖವೆಂದ ॥ ಕುಂತಿಸುತ ಈ ಮಾತು ಉಚಿತಲ್ಲ ನಿನಗಿದು ಸಲ್ಲ । ಪಿಡಿ ಗಾಂಡೀವ ಬಿಲ್ಲ ॥೧॥ ಶ್ಲೋ । ಬಾಲ್ಯ ಯೌವನ ಮುಪ್ಪುತನ ದೇಹದಲ್ಲಿ ಇಂಥ ದೇಹಕೆ ಮೋಹ ಮತ್ಯಾಕಿಲ್ಲಿ । ಕಾಯ್ದು ಕೊಲ್ಲುವ ನಾನು ಇರುತಿರಲು ಇಲ್ಲಿ ಬಿಲ್ಲು ಪಿಡಿದು ಕೀರ್ತಿಪಡೆ ಲೋಕದಲ್ಲಿ ॥ ಪ । ಶಸ್ತ್ರದಂಜಿಕೆಯಿಲ್ಲ ಜೀವಕ್ಕೆ ಈ ದೇಹಕ್ಕೆ । ಪಾವಕನ ದಾಹಕ್ಕೆ । ಉದಕಗಳಿಂದ ವೇದನೆ ಯಾಕೆ ಜೀವಕ್ಕೆ । ಮಾರುತನ ಶೋಷಕ್ಕೆ ನಿತ್ಯ ಅಭೇದ್ಯ ತಾ ಜೀವನ ಸನಾತನ । ವಸ್ತ್ರಾದ್ಹಾಂಗೆ ಈ ತನುವು । ಆದಾವು ಹೋದಾವು ನಿನಗಯ್ಯ ನನಗಿಲ್ಲಯ್ಯ । ಅದನಾ ಬಲ್ಲೆನಯ್ಯಾ ॥೨॥ ಶ್ಲೋ । ಜ್ಞಾನ ದೊಡ್ಡದು ಕರ್ಮಬಂಧನವ ಬಿಟ್ಟು ಕರ್ಮ ಬಿಟ್ಟರೆ ಪ್ರತ್ಯವಾಯವದೆಷ್ಟು । ಫಲ ಬಿಟ್ಟು ನೀ ಮಾಡು ಸತ್ಕರ್ಮಗಳ ಸಮ ದೇಹಕೆ ಫಲಕರ್ಮ ಕಾರಣವಲ್ಲ ॥ ಪ । ಕರ್ಮದಲ್ಲೆ ನಿನಗಧಿಕಾರ ಫಲ ತಾ ದೂರ । ಧನಂಜಯಗೋಸ್ಕರ । ಜ್ಞಾನ ದೊಡ್ಡದು ಕರ್ಮ ದೂರಯ್ಯ ಇತ್ತ ಬಾರಯ್ಯ ।

ಯೋಗಬುದ್ಧಿ ಮಾಡಯ್ಯ । ಜಿತ ಬುದ್ಧಿ ಯಾವುದ್ಯೆ ಕೇಶವ ಜಗತ್ಪಾಶವ । ನೋಡದೇ ಪರಮೇಶ । ಗೋವಿಂದನಲಿ ಮನವಿಟ್ಟವ ಕಾಮ ಬಿಟ್ಟವ । ಜಿತ ದೇಹ ತಾನಾದಾ ॥೩॥ ಶ್ಲೋ । ಜ್ಞಾನ ದೊಡ್ಡದು ಕರ್ಮದಲ್ಲ್ಯಾಕೆ ಎನ್ನ ಬುದ್ಧಿ ಮೋಹಿನಿ ಕೃಷ್ಣ ಕೇಳಯ್ಯ ಬಿನ್ನಪ ॥ ಕರ್ಮವಿಲ್ಲದೆ ಮೋಕ್ಷವುಂಟೆ ಇನ್ನು ಕರ್ಮ ಮೋಕ್ಷದ ಬುದ್ಧಿಗೆ ಬೀಜವಲ್ಲೆ ॥ ಪ । ಯುದ್ಧ ಕರ್ಮವ ಮಾಡೋ ಪಾಂಡವ ರಣ ತಾಂಡವ । ವೈರಿ ಷಂಢನೆಂಬುವ । ಜನರೆಲ್ಲ ಮಾಳ್ಪರೋ ನಿನ್ನ ನೋಡಿ ಮತ್ತೆನ್ನ ನೋಡಿ । ನೋಡಿದರ ನೀ ಬೇಡಿ । ಎನಗ್ಯಾಕೆ ಪೇಳಯ್ಯ ಜನಕರ್ಮ ಕ್ಷತ್ರಿಯ ಧರ್ಮ । ನಷ್ಟವಾಗುವದು ಧರ್ಮ । ಅರ್ಪಿಸು ಎನ್ನಲ್ಲಿ ಸರ್ವವು ಬಿಟ್ಟು ಗರ್ವವು । ತಿಳಿ ಎನ್ನೊಳು ಸರ್ವವು ॥೪॥ ಶ್ಲೋ । ಯೋಗ ಸನ್ಯಾಸ ಎರಡು ಮುಕ್ತಿಗೆ ದೃಢವು ಭೋಗವರ್ಜಿತ ಕೀಳು ಸನ್ಯಾಸಿಯಿರವು । ಹೇಗೆ ಪದ್ಮಕೆ ವಾರಿಯ ಲೇಪವಿಲ್ಲ ಹಾಗೆ ಭಕ್ತಿಗೆ ಸಂಸ್ಕೃತಿಯು ಇಲ್ಲ ॥ ಪ । ಅಜನಲ್ಲಿ ದ್ವಿಜನಲ್ಲಿ ಗಜದಲ್ಲಿ ಸಮನಾನಲ್ಲಿ । ಭಜಿಪರ ಮನದಲ್ಲಿ ಮನಸು ಯಾರ ಜೀವಕೆ ಬಂದು ಇತ್ತ ಬಾರೆಂದು । ಮತ್ತೆ ವೈರಿ ದಾರೆಂದು । ಲೋಷ್ಠ ಕಾಂಚನ ನೋಡು ಸಮಮಾಡಿ ಆಸನ ಹೂಡಿ । ನಾಸಿಕ ತುದಿ ನೋಡಿ । ಧ್ಯಾನ ಮಾಡು ಹರಿ ಅಲ್ಲಿಹ ಅವನಲ್ಲಿಹ । ಯೋಗ ಸನ್ನಿಹಿತನವನೇ ಶ್ಲೋ । ಯಾರ ಭಕ್ತಿಯು ಎನ್ನ ಪಾದಾಬ್ಜದಲ್ಲಿ ಘೋರ ಸಂಸಾರ ಯಾತನೆ ಅವರಿಗೆಲ್ಲಿ । ಶರೀರವೇ ಕ್ಷೇತ್ರವೆಂತೆಂದು ತಿಳಿಯೋ । ಮರಿಯದೆ ಕ್ಷೆತ್ರಜ್ಞನೆಂದನ್ನ ತಿಳಿಯೋ । ಪ । ಶರೀರದೊಳಗಿದ್ದು ಪಾಪಿಲ್ಲ ದುಃಖಲೇಪಿಲ್ಲ । ಆಕಾಶವು ಎಲ್ಲಾ । ಯಾತರಿಂದುಟ್ಟಿತ್ತು ಈ ಗುಣ ಮೂರು ಸದ್ಗುಣ । ಕೇಳಯ್ಯ ಫಲ್ಗುಣ । ಸುಖದುಃಖ ಸಮಮಾಡಿ ನೋಡಿ ನೀ । ಈಡ್ಯಾಡು ನೀ । ಬ್ರಹ್ಮನ ನೋಡು ನೀ । ಸೂರ್ಯ ಚಂದ್ರರ ತೇಜ ನನದಯ್ಯ ಗುಡಾಕೇಶಯ್ಯ । ಅನ್ನ ಪಚನ ನನ್ನದಯ್ಯ ॥೬॥ ಶ್ಲೋ । ನಾನೇ ಉತ್ತಮ ಮನಸು ಎನ್ನಲ್ಲಿ ಮಾಡೋ ಜ್ಞಾನ ಅಜ್ಞಾನ ಪೇಳುವೆ ತಿಳಿದು ನೋಡೋ । ಜ್ಞಾನ ದುರ್ಲಭ ಅವರ ಭಕ್ತಿಗಳಂತೆ ನಾನು ಕೊಡುವೆನು ಫಲವ ಮನಸು ಬಂದಂತೆ ॥ ಪ । ಸ್ಮರಣೆ ಮಾಡುತ ದೇಹ ಬಿಡುವರೋ ನನ್ನ ಪಡೆವರೋ । ಬಲು ಭಕ್ತಿ ಮಾಡುವರೋ । ಅನಂತ ಚೇತನ ಸುಳಿವೆನು ಹರಿ ಸುಲಭನು । ಮತ್ತೆ ಜನನವಿಲ್ಲವಗೆ । ಎನ್ನ ಭಕ್ತರಿಗಿಲ್ಲ ನಾಶವು ಸ್ವರ್ಗದಾಶವು । ಬಿಟ್ಟು ಚರಣ ಭಕುತಿಯ ॥೭॥ ಶ್ಲೋ । ಕೃಷ್ಣ ತೋರಿಸು ನಿನ್ನ ವಿಭೂತಿ ರೂಪ । ಇಷ್ಟ ಪೂರ್ತಿಯು ಆಗಲೊ ಎನಗೆ ಶ್ರೀಪ । ರಾಮ ನಾನಯ್ಯ ರಾಜರ ಗುಂಪಿನಲ್ಲಿ ಸೋಮ ನಾನಯ್ಯ ತಾರಕ

ಮಂಡಲದಲಿ ॥ ಪ । ಅಕ್ಷರದೊಳಗೆ ಅಕಾರನು ಗುಣಸಾರನು । ಪಕ್ಷಿಗಳಲಿ ನಾನು ಗರುಡನು । ಸಕಲ ಜಾತಿಗಳಲ್ಲಿ ಶ್ರೇಷ್ಠತನದಲಿ । ಎನ್ನ ರೂಪ ತಿಳಿಯಲ್ಲಿ । ತೋರಿಸೋ ಶ್ರೀಕೃಷ್ಣ ನಿನ್ನ ರೂಪ ನಾನಾ ರೂಪ । ಅರ್ಜುನ ನೋಡೋ ರೂಪ । ಕಂಡನು ತನ್ನನ್ನು ಸಹಿತದಿ ಹರಿ ದೇಹದಿ । ಬ್ರಹ್ಮಾಂಡಗಳಲ್ಲಿ ॥ ೮ ॥ ಶ್ಲೋ । ಕ್ಷರ ಅಕ್ಷರ ಎರಡಕ್ಕೂ ಉತ್ತಮನು ನಾನು । ಘೋರ ನರಕದ ಲೋಭ ಕಾಮನು ನಾನು । ಸಾರ ದಾನವು ಸಜ್ಜನರ ಹಸ್ತದಲ್ಲಿ ಭೂರಿ ದಕ್ಷಿಣೆ ನೀಡೋ ಸತ್ಪಾತ್ರರಲ್ಲಿ ॥ ಪ । ಸರ್ವ ದಾನದಕಿಂತ ಎನಭಕ್ತಿ ಕೇಳೋ ಭೂಶಕ್ತಿ । ಮಾಡಯ್ಯ ವಿರಕ್ತಿ । ಕೃಷ್ಣ ಹರಣವಾಯ್ತು ನಿನ್ನಿಂದ ಮೋಹ ಎನ್ನಿಂದ । ಬಹು ಸುವಾಕ್ಯದಿಂದ । ಕೃಷ್ಣ ಭೀಮಾನುಜರ ಸಂವಾದ ಮಹ ಸುಖಪ್ರದ । ಧೃತರಾಷ್ಟ್ರ ಕೇಳಿದ । ಬಲ್ಲೆನು ವ್ಯಾಸರ ದಯದಿಂದ ಮನಸಿನಿಂದ । ಕೃಷ್ಣನಲ್ಲೇ ಜಯವೆಂದ ॥೯॥

★ ★ ★ ★

## ನಾರಾಯಣವರ್ಮ

**ರಾಗ : ಶಂಕರಾಭರಣ** **ಧ್ರುವತಾಳ**

ಶ್ರೀನಾರಾಯಣವರ್ಮ, ಪ್ರಕ್ರಿಯೆ, ದೇಶಕಾಲ, ನಿಯಾಮಕನಾದ ಶ್ರೀಹರಿಯ ರೂಪ, ಚಿಂತನೆ, ಕಾಲೋಪಾಸನೆ, ಧ್ಯಾನ ರಕ್ಷಿಸುವ ಭಕ್ತರ ನಾನಾ ರೂಪದಿಂದ । ಅಕ್ಷರ ಪುರುಷ ರಮಣ ಕರುಣಾಂಬುಧಿ । ಅಕ್ಷಿ ಮೊದಲಾದ ಕಾರ್ಯದಲ್ಲಿದ್ದು ಭಕ್ತರ । ಶಿಕ್ಷೆ ಮಾಡುವ ಉಕ್ಕು ತಗ್ಗಿಸುವ । ಈಕ್ಷಿಸುತಿಪ್ಪನು ಒಳಗೆ ಹೊರಗಿದ್ದು ಬಿಡದೆ । ದೀಕ್ಷಬದ್ಧನಾಗಿ ದೀನಬಂಧು । ಅಕ್ಷಯ ಕೊಡುತಲಿ ಆವಾವಕಾಲಕ್ಕೆ । ಮೋಕ್ಷಕ್ಕೆ ಸಾಧನ ಮಾಡಿಸುತ್ತ । ಲಕ್ಷಣ ಮೂರುತಿ ಕೇವಲ ನಂಬಿದವರು । ಲಕ್ಷ ಕೋಟಿ ಜನರ ನಡುವೆ ಇರಲು । ಲಕ್ಷ್ಮೀ ಸಹಿತ ಬಂದು ಕಾವಾನು ಆಪದ್ಧರ್ಮ । ರಕ್ಷಕನೆಂಬೊ ಬಿರುದು ಕೂಗುತಿದಕೋ । ಭಿಕ್ಷುಕ ಭಾಗ್ಯವಂತನೆಂಬೊ ವೈಷಮ್ಯವಿಲ್ಲಾ । ಲಕ್ಷ ಇಟ್ಟು ಮೇಲೆ ಒಪ್ಪಿಸಿಕೊಡನೋ । ವಕ್ಷಸ್ಥಳದ ಮೇಲೆ ಒದ್ದ ಬ್ರಾಹ್ಮಣನ । ಉಪೇಕ್ಷ ಮಾಡದಲೆ ಮನ್ನಿಸಿದ ನೋಡು । ಈ ಕ್ಷಿತಿ ಮಧ್ಯದಲಿ ಇನ್ನೊಂದು ದೈವವುಂಟೆ । ತ್ರ್ಯಕ್ಷ ಜನಕ ಮೊದಲಾದವರು । ರಕ್ಷಿಸಬೇಕೆಂದು ಕರವ ಜೋಡಿಸಿ । ಅಪೇಕ್ಷದಿಂದಲೆ ಸ್ತುತಿಸಿ ಬೆಂಡಾಹರೋ । ತೀಕ್ಷ್ಣವಾಗಿ ಹರಿಯ ಕಾಣಬೇಕೆನೆ ಪ್ರ । ತ್ರ್ಯಕ್ಷ ಸೋಮನ ಶ್ರುತಿಯಲಿ ಕಾಣಿರೊ । ವೃಕ್ಷ ಸ್ಥಾವರ ಜಂಗಮ ನಾಲ್ಕು ಎಂಭತ್ತು ಜೀವಿಗಳನ್ನು ಚಕ್ರದಂತೆ । ಚಕ್ಷುಲವನೋಟದಿಂದ

ಬೊಮ್ಮಾಂಡಾವರ್ಣ ಮಹಾ । ಲಕ್ಷ್ಮೀ ಸಮೇತ ಸದಾ ಸರಸರಗಿದ್ದಾನೆ । ಆಕ್ಷಣದಿಂದಲಿ ತೃಣಮಾಯಾರಂದದಿ ಪ । ರೋಕ್ಷ ತಾನಾಗಿ ಇನಿತು ತಿರುಗಿಸುವ । ಕುಕ್ಷಿಗೋಸುಗವಲ್ಲ ಸರ್ವ ಸ್ವಾಂತತ್ರ್ಯ ನಿತ್ಯ । ದಕ್ಷಕ ಸುಖ ಸಂಪೂರ್ಣ ಇಂಥವರನ್ನ । ಲಕ್ಷ್ಮಿಗೆ ತಾಹನೇನೊ ಸ್ವರತಾ ನಿರ್ದೋಕಷಮಣಿ । ಆಕ್ಷೀಣ ಬಲವಂತ ಸ್ವಪ್ರಕಾಶಾ । ಸಾಕ್ಷಾತ್ಕಾರ ಸ್ವಭಾವ ಕಾಲಾದಿಯಲ್ಲೀ ಸಮ । ಕಕ್ಷಿಗಳಿಲ್ಲ ಕಾಣೊ ಚಿಂತಿಸಿದರು । ನಕ್ಷತ್ರ ಗಣ ಪುಲಿನರಾಶೀ ಪರಾಗ ಸಂಖ್ಯ । ನೀಕ್ಷಿಸಿ ಎಣಿಸಬಹುದೋ ಇದು ತೀರದು । ಸಾಕ್ಷಿಪ್ರೇರಕ ಕರ್ತಕಾರಯಿತ ಅನಾದಿಯಿಂದ । ಸೂಕ್ಷ್ಮ ಶರೀರದೊಳು ಮಹಾತ್ಮ ತರದೀ । ಪಕ್ಷಿನಾಮಕದೇವ ವಾಸವಾಗಿಪ್ಪ ವಿಶ್ವ । ಚಕ್ಷು ನಾರಾಯಣಾ ಬಿಂಬವ್ಯಾಪ್ತಿ । ದಕ್ಷಿಣಾದೇವಿ ರಮಣ ವಿಜಯವಿಟ್ಠಲ ಬಲು । ಪಕ್ಷಪಾತಿ ಕಾಣೊ ಒಮ್ಮೆ ನೆನಸಿದರೂ ॥೧॥

### ಮಟ್ಟತಾಳ

ಸ್ಥಳದಲ್ಲಿ ವಾಮನ ಅಟವ್ಯ ನರಸಿಂಹ । ಜಲದಲ್ಲಿ ಮತ್ಸ್ಯಗಗನದಿ ತ್ರಿವಿಕ್ರಮಾ । ಕುಲಗಿರಿಯಲ್ಲಿಪರಶುರಾಮನು ಮಾರ್ಗ । ದಲಿ ಭೂವರಾಹಾತ್ಮಾ ಬಲು ಪ್ರವಾಸದಲಿ। ಸಲಕ್ಷ್ಮಣ ಭರತಾಗ್ರಜ ಜಾನಕಿಪತಿ ರಾಮಾ । ತಿಳಿವದು ಈ ವಿಧದಿ ರಕ್ಷಕ ಮೂರ್ತಿಗಳ। ಬಲಮರ್ದನಿ ಪಾದ ವಿಜಯವಿಟ್ಠಲರೇಯ । ಒಲಿದು ಸಂಗಡಿಲಿದ್ದು ಸುಖವೇ ಕೊಡುತಿಪ್ಪಾ ॥೨॥

### ತ್ರಿವಿಡಿತಾಳ

ಮತ್ತೆ ನಿಖಿಳಾ ಪ್ರಮಾದ ರಕ್ಷಕ ಶುಭ । ಮೂರ್ತಿ ನಾರಾಯಣಾತ್ಮಕನೋ । ನ್ಮತ್ತವೂನ್ಮಾದಹ್ರಾಸಕನೇ ನರನಾಮಕಸ್ವಾಮಿ । ದತ್ತನೂ ಆ ಯೋಗದ್ರಕ್ಷಕನಾಗಿಪ್ಪಾ । ಮೊತ್ತ ಕರ್ಮಾಕರ್ಮ ಬಂಧಮೋಚಕ ಕಪಿಲಾತ್ಮಕ ಸ । ನತ್ಕುಮಾರನು ಯೋಗ್ಯತಾವ ಕಾಮಕೆ ಇನ್ನೂ (ತಾಪಸಕಾಮ ಎನ್ನು) । ಭೃತ್ಯಧರ್ಮವೇ ಮರದು ಪತಿದೇವ ಹೇಳನ ಕೃತ್ತಿಗೆ ಹಯಗ್ರೀವ ಪಾಲಿಸುತಿಪ್ಪನು । ತತ್ವೇಶರ ಕೂಡ ಅರ್ಚನೆಮಾಡದೆ ಹರಿಗೆ । ತುತ್ತು ಈಯದೆ ಲಕ್ಷಣ ಕರ್ಮ ಸ್ಮರಣರ । ಹಿತ್ತವಾಗಿದ್ದ ಪೂಜಿಯಾ ದೋಷಹ ಮಹಿದಾ। ಸಾತ್ಮಕ ಹರಿಯೆನ್ನು ಅಶೇಷ ನಿರಯವಾ । ಉತ್ತರಿಸುವಾ ಕೂರ್ಮ ಧನ್ವಂತರಿದೇವಾ । ಪತ್ಯ ರಕ್ಷಕಾ ದ್ವಂದ್ವಾಭಯ ಪರಿಹಾರಕ । ಕೀರ್ತಿ ಪುರುಷ ಋಷಭ ಯಜ್ಞಕೃತಫಲದಲ್ಲಿ । ನಿತ್ಯ ಯಜ್ಞಾತ್ಮಕ ಸುರನಾಯಕಾ । ವೃತ್ತಿ ಕ್ರೋಧಾವೇಶ ಕಳೆವ ಬಲಭದ್ರಾತ್ಮಕಾ । ಸತ್ಯಸಂಕಲ್ಪನೋ ಪರಮಾತ್ಮನೋ । ಸತ್ಯವತೀಸೂನು ಸಂಪ್ರಮೋಹ ಬಿಡಿಪಾ ।

ಮಿಥ್ಯಾಜ್ಞಾನಿಗಳ ಸಂಗವ ಹರಿಸುವ ಬುದ್ಧಿ । ಚಿತ್ತಾದಿಯಲಿ ಕಲಿಯ ಕಲ್ಮಷವಿರೆ ನು । ಗೊತ್ತುವಾ ಕಲ್ಕಿರೂಪವೆನಿಸಿ । ಸತ್ಯಾಪರಾಮಣ್ಯ (ಯಣ)ಸ್ವಾಮಿ ವಿಜಯವಿಟ್ಠಲ ಸ । ರ್ವತ್ರದಲ್ಲಿ ಇದ್ದು ಅಘನಾಶಮಾಡುವಾ ॥೩॥

**ಅಟ್ಟತಾಳ**

ಪದ ಜಾನು ಉರು ರಕ್ಷಕ ಅಜಾ ಅಣಿಮಾಯಜ್ಞ । ಮೃದುಕಟಿ ಅಚ್ಯುತಾ ಜಠರಾ ಹಯಗ್ರೀವಾ । ಪದುಮನಾಭ ನಾಭಿ ಗುಹ್ಯೇಂದ್ರಿಯನಿರುದ್ಧಾ । ಹೃದಯ ವಕ್ಷಸ್ಥಳ ಕೇಶವಾ ಈಶಾನಾ । ಇದೇ ಸಿದ್ಧಾಕರ ಸ್ವ ಆತ್ಮ (ಕಂಠಸ್ವಾತ್ಮಕ) ಭುಜೆ ವಿಷ್ಣು । ವದನ ಉರುಕ್ರಮಾ ಶ್ರೋತ್ರ ಈಶ್ವರನೆನ್ನು । ಎದುರಿಗೆ ಚಕ್ರಿಯಾತ್ಮಕ ಪೃಷ್ಠ ಭಾಗಕ್ಕೆ । ಗದಾಧರ ಪಾರ್ಶ್ವಕ್ಕೆ ಧನುರ್ಧಾರಿ ಕಾಣೊ । ತದುಪರಿ ಉಪೇಂದ್ರ ಕ್ಷಿತಿಗೆ ತಾ ರಕ್ಷನೋ । ಮುದದಿಂದಲಿ ಸಮಾ ಅಂತಿಗೆ ಹಲಧರಾ । ಒದಗಿ ಇಂದ್ರಿಯಗಳಿಗೆ ಹೃಷಿಕೇಶ । ಸದಮಲ ಪ್ರಾಣಚಿತ್ತಾ । ಮನೋಬುದ್ಧಿಗೆ । ಪದುಮೇಶ ನಾರಾಯಣ ದೇವ ಶ್ವೇ । ತದ್ವೀಪದವಾಸಿ ಯೋಗೇಶ್ವರ ಪೃಶ್ನಿಗರ್ಭ (ಪ್ರಶನಿಗರ್ಭ) ಇದೇ ಸತ್ಯವೆನ್ನಿ ಆತ್ಮನಿಗೆ ಪರಶುರಾಮಾ । ಪದೋಪದಿಗೆ ಕ್ರೀಡಾ ಶಯನಾವ್ರಜಾಸಿನಾ । ವಿಧಕ್ಕೆ ಗೋವಿಂದ ಮಾಧವ ವೈಕುಂಠ ಶ್ರೀಪತಿ । ಪದಪ್ರದಾತಾ ನಮ್ಮ ವಿಜಯವಿಟ್ಠಲ ಸ । ನ್ನಿಧಿಯಾಗಿ ಇರುತಿಪ್ಪಾ ಆನಂದ ಕೊಡುತಲಿ ॥೪॥

**ಆದಿತಾಳ**

ಮುನ್ನೆ ಕೇಳುವದು ಭೋಕ್ತಾ ರಕ್ಷಕ ಯಜ್ಞಭೋಕ್ತ । ಉನ್ಮಾದ ಅಪಸ್ಮಾರ ಅರ್ಭಕ ಗೃಹಾ ಯಾತೂ । ಧಾನ್ಯ ಕೂಷ್ಮಾಂಡ ಭೂತಪ್ರೇತ ಪೈಶಾಚಿ ಡಾಕಿಣ್ಯಾ ಶಾಕಿನಿ ದೇಹ ಪ್ರಾಣೇಂದ್ರಿಯಗಳಲ್ಲಿ । ಭಿನ್ನಾ ದುಸ್ವಪ್ನ ದುಷ್ಟ ಮೋಹೋತ್ಪಾತಾ ಬಾಲ ಯೌ । ವನ ವೃದ್ಧಾಪ್ಯ ವಿಡಿದು ನಾನಾ ಭಯ ವಿಚಿತ್ರಾ । ಘನ್ನವಾಗಿ ಬಂದರೆ ವಿಶ್ವನಾಮಕನ । ಚೆನ್ನಾಗಿ ನೆನಿಸುವುದು ಯಮನೇಮನದಿಂದ । ಇನ್ನು ಈ ವಿಚಾರಕ್ಕೆ ಸುಲಭ ಮಾರ್ಗವೆ ಉಂಟು । ಅನಂತರೂಪಗಳು ಸರ್ವತ್ರದಲ್ಲಿ ಇಪ್ಪವು । ಇನಿತು ಜ್ಞಾನದಲ್ಲಿ ಇದರೊಳಗಾವ ಒದಗೆ । ನಿನ್ನ ಚಿತ್ತಕ್ಕೆ ಬಂದದ್ದು ಸ್ಮರಿಸೆ ನಿರ್ಭಯವೋ । ಧನ್ಯ ನಾಗಲೊ ಜೀವಿ ಈ ಬಗ್ಗೆ ಕೊಂಡಾಡಿ । ಪುಣ್ಯ ಸಂಪಾದಿಸು ಅರಿಷ್ಟ ಪೋಗಾಡು । ಸಣ್ಣೋಪಾಯವೆ ಉಂಟು ಒಂದೆರಡು ಮೂರು ನಾಲ್ಕು । ಭಿನ್ನ ಆರೇಳು ಎಂಟು ಒಂಭತ್ತು ಈರೈದು । ಹನ್ನೊಂದು ಹನ್ನೆರಡು ಈ ಪ್ರಕಾರವೆ ಹರಿಯಾ । ಉನ್ನತ ಪ್ರೇರಣೆ ಸ್ವಾಮಿತ್ವ ತಿಳಿಯಬೇಕು ।

ತಿನ್ನಲಾಗಿ ಮೇಲಿದ್ದರಸ ಪೋದ ಮಾವಿನ । ಹಣ್ಣಿನಂದದಿ ಎಲ್ಲ ಅನುಭವ ನೋಡಿಕೊಳಿರಿ । ಮನ್ನಿಸಿ ಓದಿ ಕೇಳಿ ಲಾಲಿಸಿದವರಿಗೆ । ಇನಿತು ಆಗುವದು ದೀಪದಿಂದಲಿ ದೀಪವ । ಬಿನ್ನಾಣದಲಿ ಪಚ್ಚಿಕೊಂಡು ಪೋದಂತೆ ಇದು । ಪುಣ್ಯ ತಂದುಕೊಡುವದು ಹರಿಕಥಾಮೃತ ನಿತ್ಯ । ಪೂರ್ಣ ಗುಣಾರ್ಣವ ಹರಿ ವಿಜಯವಿಟ್ಠಲ। ತನ್ನ ತೋರಿಸಿ ತನ್ನ ಪದವಿಯ (ನೀವಾ) ಕೊಡುವಾ ॥೫॥ ಭಗವನ್ಮೂರ್ತಿಗಳನ್ನು ಚಿಂತಿಸು ಅಲ್ಲಲ್ಲಿ । ಅಘ ನಿರ್ಲೇಪನಾಗು ವಿಜಯವಿಟ್ಠಲ ಪೊಳಿವಾ ॥ ೬ ॥

★ ★ ★ ★

## ನಾರಾಯಣವರ್ಮ

ಜಲದಲ್ಲಿ ಮಚ್ಚಾವತಾರನಾಗಿ । ಸ್ಥಳದಲ್ಲಿ ವಾಮನನಾಗಿ ರಕ್ಷಿಸಯ್ಯ ನಮ್ಮನೆನೆಪರಾ ಆಕಾಶದಲ್ಲಿ ತ್ರಿವಿಕ್ರಮನಾಗಿ ರಕ್ಷಿಸು । ಮಾರ್ಗದಲ್ಲಿ ವರಾಹನಾಗಿ ರಕ್ಷಿಸು । ಭಯವಾದಲ್ಲಿ ನಾರಸಿಂಹನಾಗಿ ರಕ್ಷಿಸಯ್ಯ ನಮ್ಮನ್ನಿವು ॥ ಅಶ್ವಗಳಲ್ಲಿ ನಲನಾಗಿ ರಕ್ಷಿಸು । ಅಯೋಗಿಗಳಿಗೆ ದತ್ತಾತ್ರೇಯನಾಗಿ ಕರ್ಮಬಂಧನ ಗಳಾ ಕಳೆದು ರಕ್ಷಿಸಯ್ಯಾ । ನಮ್ಮ ಕಪಿಲ ಮೂರುತಿಯಾಗಿ । ಕಾಮ ವಿಷಯಗಳಲ್ಲಿ ಕುಮಾರನಾಗಿ ರಕ್ಷಿಸು । ದುರ್ಮಾರ್ಗಗಳಲ್ಲಿ ಹಯಗ್ರೀವನಾಗಿ ಅನ್ಯ ದೇವತಾ ಭಜನೆಗಳಲ್ಲಿ ರಕ್ಷಿಸಯ್ಯಾ । ನಮ್ಮ ವಿಶ್ವ ಮೂರುತಿಯಾಗಿ । ನರಕಗಳಲ್ಲಿ ಕೂರ್ಮನಾಗಿ ರಕ್ಷಿಸು । ಆಪತ್ಕಾಲದಲ್ಲಿ ಧನ್ವಂತರಿಯಾಗಿ ನಾನು ನನ್ನದು ಎಂಬ ವಿಷಯಗಳಲ್ಲಿ ರಕ್ಷಿಸಯ್ಯಾ ನಮ್ಮ ಮಹಿದಾಸ ಮೂರುತಿಯಾಗಿ । ಪಾಖಂಡ ಮತದಲ್ಲಿ ಬೌದ್ಧನಾಗಿ ರಕ್ಷಿಸು । ಅಕ್ರೋಧ ವಿಷಯಗಳಲ್ಲಿ ಬಲರಾಮನಾಗಿ । ಅಜ್ಞಾನ ವಿಷಯದಲ್ಲಿ ರಕ್ಷಿಸಯ್ಯಾ ನಮ್ಮ ವೇದವ್ಯಾಸ ಮೂರುತಿಯಾಗಿ ಅನಿತ್ಯ ಫಲಗಳಿಂದ ವೃಷಭನಾಗಿ ರಕ್ಷಿಸು । ಅನ್ಯಮತ ದೋಷಹರಿಸಿ ನಮ್ಮ ಕಲಿಯುಗದ ಕಲ್ಮಷ ಕಳೆದು ರಕ್ಷಿಸಯ್ಯಾ ನಮ್ಮ ಕಲ್ಕಿ ಮೂರುತಿಯಾಗಿ । ಪ್ರಾತಃಕಾಲದಲ್ಲಿ ಕೇಶವ ನಮ್ಮ ರಕ್ಷಿಸು ಸಂಗಮ ಕಾಲದಲ್ಲಿ ಗೋವಿಂದನಾಗಿ । ಪರಾಣ್ಣ ಕಾಲದಲ್ಲಿ ರಕ್ಷಿಸಯ್ಯಾ ನಮ್ಮ ನಾರಾಯಣನಾಗಿ । ಮಧ್ಯಾಹ್ನ ಕಾಲದಲ್ಲಿ ವಿಷ್ಣು ನಮ್ಮ ರಕ್ಷಿಸು । ಅಪರಾಹ್ಣ ಕಾಲದಲ್ಲಿ ಮಧುಸೂದನನಾಗಿ । ಸಾಯಾನ್ಹ ಕಾಲದಲ್ಲಿ ರಕ್ಷಿಸಯ್ಯ । ನಮ್ಮ ಮಾಧವನಾಗಿ । ನಿಶಿ ಕಾಲದಲ್ಲಿ ಪದ್ಮನಾಭ ನಮ್ಮ ರಕ್ಷಿಸು। ಅರ್ಧರಾತ್ರಿಯಲ್ಲಿ ಹೃಷಿಕೇಶನಾಗಿ । ಅಪರಾತ್ರಿಯಲ್ಲಿ ಶ್ರೀವತ್ಸ ಮೂರುತಿಯಾಗಿ ಉಷಃಕಾಲದಲ್ಲಿ ಜನಾರ್ದನ ನಮ್ಮನ್ನಿವು ॥ ಸರ್ವಕಾಲವ ಸಂಧಿಸಿ ಹರಿ ಚಕ್ರವೇ, ನಿಮ್ಮ ಅತಿಜಾಲ ಪ್ರಭೆಗಳಿಂದ ಪ್ರಳಯ ಕಾಲದ ಅಗ್ನಿಯಂತೆ

ಮಿಥ್ಯಾಜ್ಞಾನಿಗಳ ಸಂಗವ ಹರಿಸುವ ಬುದ್ಧಿ । ಚಿತ್ತಾದಿಯಲಿ ಕಲಿಯ ಕಲ್ಮಷವಿರೆ ನು । ಗೊತ್ತುವಾ ಕಲ್ಕಿರೂಪವೆನಿಸಿ । ಸತ್ಯಾಪರಾಮಣ್ಯ (ಯಣ)ಸ್ವಾಮಿ ವಿಜಯವಿಟ್ಠಲ ಸ । ರ್ವತ್ರದಲ್ಲಿ ಇದ್ದು ಅಘನಾಶಮಾಡುವಾ ॥೩॥

**ಅಟ್ಟತಾಳ**

ಪದ ಜಾನು ಉರು ರಕ್ಷಕ ಅಜಾ ಅಣಿಮಾಯಜ್ಞ । ಮೃದುಕಟಿ ಅಚ್ಯುತಾ ಜಠರಾ ಹಯಗ್ರೀವಾ । ಪದುಮನಾಭ ನಾಭಿ ಗುಹ್ಯೇಂದ್ರಿಯನಿರುದ್ಧಾ । ಹೃದಯ ವಕ್ಷಸ್ಥಳ ಕೇಶವಾ ಈಶಾನಾ । ಇದೇ ಸಿದ್ಧಾಕರ ಸ್ವ ಆತ್ಮ (ಕಂಠಸ್ವಾತ್ಮಕ) ಭುಜೆ ವಿಷ್ಣು । ವದನ ಉರುಕ್ರಮಾ ಶ್ರೋತ್ರ ಈಶ್ವರನೆನ್ನು । ಎದುರಿಗೆ ಚಕ್ರಿಯಾತ್ಮಕ ಪೃಷ್ಠ ಭಾಗಕ್ಕೆ । ಗದಾಧರ ಪಾರ್ಶ್ವಕ್ಕೆ ಧನುರ್ಧಾರಿ ಕಾಣೊ । ತದುಪರಿ ಉಪೇಂದ್ರ ಕ್ಷಿತಿಗೆ ತಾ ರಕ್ಷನೋ । ಮುದದಿಂದಲಿ ಸಮಾ ಅಂತಿಗೆ ಹಲಧರಾ । ಒದಗಿ ಇಂದ್ರಿಯಗಳಿಗೆ ಹೃಷಿಕೇಶ । ಸದಮಲ ಪ್ರಾಣಚಿತ್ತಾ । ಮನೋಬುದ್ಧಿಗೆ । ಪದುಮೇಶ ನಾರಾಯಣ ದೇವ ಶ್ವೇ । ತದ್ವೀಪದವಾಸಿ ಯೋಗೇಶ್ವರ ಪೃಶ್ನಿಗರ್ಭ (ಪ್ರಶನಿಗರ್ಭ) ಇದೇ ಸತ್ಯವೆನ್ನಿ ಆತ್ಮನಿಗೆ ಪರಶುರಾಮಾ । ಪದೋಪದಿಗೆ ಕ್ರೀಡಾ ಶಯನಾವ್ರಜಾಸಿನಾ । ವಿಧಕ್ಕೆ ಗೋವಿಂದ ಮಾಧವ ವೈಕುಂಠ ಶ್ರೀಪತಿ । ಪದಪ್ರದಾತಾ ನಮ್ಮ ವಿಜಯವಿಟ್ಠಲ ಸ । ನ್ನಿಧಿಯಾಗಿ ಇರುತಿಪ್ಪಾ ಆನಂದ ಕೊಡುತಲಿ ॥೪॥

**ಆದಿತಾಳ**

ಮುನ್ನೆ ಕೇಳುವದು ಭೋಕ್ತಾ ರಕ್ಷಕ ಯಜ್ಞಭೋಕ್ತ । ಉನ್ಮಾದ ಅಪಸ್ಮಾರ ಅರ್ಭಕ ಗೃಹಾ ಯಾತೂ । ಧಾನ್ಯ ಕೂಷ್ಮಾಂಡ ಭೂತಪ್ರೇತ ಪೈಶಾಚಿ ಡಾಕಿಣ್ಯಾ ಶಾಕಿನಿ ದೇಹ ಪ್ರಾಣೇಂದ್ರಿಯಗಳಲ್ಲಿ । ಭಿನ್ನಾ ದುಸ್ವಪ್ನ ದುಷ್ಟ ಮೋಹೋತ್ಪಾತಾ ಬಾಲ ಯೌ । ವನ ವೃದ್ಧಾಪ್ಯ ವಿಡಿದು ನಾನಾ ಭಯ ವಿಚಿತ್ರಾ । ಘನ್ನವಾಗಿ ಬಂದರೆ ವಿಶ್ವನಾಮಕನ । ಚೆನ್ನಾಗಿ ನೆನಿಸುವುದು ಯಮನೇಮನದಿಂದ । ಇನ್ನು ಈ ವಿಚಾರಕ್ಕೆ ಸುಲಭ ಮಾರ್ಗವೆ ಉಂಟು । ಅನಂತರೂಪಗಳು ಸರ್ವತ್ರದಲ್ಲಿ ಇಪ್ಪವು । ಇನಿತು ಜ್ಞಾನದಲ್ಲಿ ಇದರೊಳಗಾವ ಒದಗೆ । ನಿನ್ನ ಚಿತ್ತಕ್ಕೆ ಬಂದದ್ದು ಸ್ಮರಿಸೆ ನಿರ್ಭಯವೋ । ಧನ್ಯ ನಾಗಲೊ ಜೀವಿ ಈ ಬಗ್ಗೆ ಕೊಂಡಾಡಿ । ಪುಣ್ಯ ಸಂಪಾದಿಸು ಅರಿಷ್ಟ ಪೋಗಾಡು । ಸಣ್ಣೋಪಾಯವೆ ಉಂಟು ಒಂದೆರಡು ಮೂರು ನಾಲ್ಕು । ಭಿನ್ನ ಆರೇಳು ಎಂಟು ಒಂಭತ್ತು ಈರೈದು । ಹನ್ನೊಂದು ಹನ್ನೆರಡು ಈ ಪ್ರಕಾರವೆ ಹರಿಯಾ । ಉನ್ನತ ಪ್ರೇರಣೆ ಸ್ವಾಮಿತ್ವ ತಿಳಿಯಬೇಕು ।

ತಿನ್ನಲಾಗಿ ಮೇಲಿದ್ದರಸ ಪೋದ ಮಾವಿನ । ಹಣ್ಣಿನಂದದಿ ಎಲ್ಲ ಅನುಭವ ನೋಡಿಕೊಳಿರಿ । ಮನ್ನಿಸಿ ಓದಿ ಕೇಳಿ ಲಾಲಿಸಿದವರಿಗೆ । ಇನಿತು ಆಗುವದು ದೀಪದಿಂದಲಿ ದೀಪವ । ಬಿನ್ನಾಣದಲಿ ಪಚ್ಚಿಕೊಂಡು ಪೋದಂತೆ ಇದು । ಪುಣ್ಯ ತಂದುಕೊಡುವದು ಹರಿಕಥಾಮೃತ ನಿತ್ಯ । ಪೂರ್ಣ ಗುಣಾರ್ಣವ ಹರಿ ವಿಜಯವಿಟ್ಠಲ। ತನ್ನ ತೋರಿಸಿ ತನ್ನ ಪದವಿಯ (ನೀವಾ) ಕೊಡುವಾ ॥೫॥ ಭಗವನ್ಮೂರ್ತಿಗಳನ್ನು ಚಿಂತಿಸು ಅಲ್ಲಲ್ಲಿ । ಅಘ ನಿರ್ಲೇಪನಾಗು ವಿಜಯವಿಟ್ಠಲ ಪೊಳಿವಾ ॥ ೬ ॥

★ ★ ★ ★

## ನಾರಾಯಣವರ್ಮ

ಜಲದಲ್ಲಿ ಮಚ್ಛಾವತಾರನಾಗಿ । ಸ್ಥಲದಲ್ಲಿ ವಾಮನನಾಗಿ ರಕ್ಷಿಸಯ್ಯ ನಮ್ಮನೆಪರಾ ಆಕಾಶದಲ್ಲಿ ತ್ರಿವಿಕ್ರಮನಾಗಿ ರಕ್ಷಿಸು । ಮಾರ್ಗದಲ್ಲಿ ವರಾಹನಾಗಿ ರಕ್ಷಿಸು । ಭಯವಾದಲ್ಲಿ ನಾರಸಿಂಹನಾಗಿ ರಕ್ಷಿಸಯ್ಯ ನಮ್ಮನ್ನಿವು ॥ ಅಶ್ವಗಳಲ್ಲಿ ನಲನಾಗಿ ರಕ್ಷಿಸು । ಅಯೋಗಿಗಳಿಗೆ ದತ್ತಾತ್ರೇಯನಾಗಿ ಕರ್ಮಬಂಧನ ಗಳಾ ಕಳೆದು ರಕ್ಷಿಸಯ್ಯಾ । ನಮ್ಮ ಕಪಿಲ ಮೂರುತಿಯಾಗಿ । ಕಾಮ ವಿಷಯಗಳಲ್ಲಿ ಕುಮಾರನಾಗಿ ರಕ್ಷಿಸು । ದುರ್ಮಾರ್ಗಗಳಲ್ಲಿ ಹಯಗ್ರೀವನಾಗಿ ಅನ್ಯ ದೇವತಾ ಭಜನೆಗಳಲ್ಲಿ ರಕ್ಷಿಸಯ್ಯಾ । ನಮ್ಮ ವಿಶ್ವ ಮೂರುತಿಯಾಗಿ । ನರಕಗಳಲ್ಲಿ ಕೂರ್ಮನಾಗಿ ರಕ್ಷಿಸು । ಆಪತ್ಕಾಲದಲ್ಲಿ ಧನ್ವಂತರಿಯಾಗಿ ನಾನು ನನ್ನದು ಎಂಬ ವಿಷಯಗಳಲ್ಲಿ ರಕ್ಷಿಸಯ್ಯಾ ನಮ್ಮ ಮಹಿದಾಸ ಮೂರುತಿಯಾಗಿ । ಪಾಖಂಡ ಮತದಲ್ಲಿ ಬೌದ್ಧನಾಗಿ ರಕ್ಷಿಸು । ಅಕ್ರೋಧ ವಿಷಯಗಳಲ್ಲಿ ಬಲರಾಮನಾಗಿ । ಅಜ್ಞಾನ ವಿಷಯದಲ್ಲಿ ರಕ್ಷಿಸಯ್ಯಾ ನಮ್ಮ ವೇದವ್ಯಾಸ ಮೂರುತಿಯಾಗಿ ಅನಿತ್ಯ ಫಲಗಳಿಂದ ವೃಷಭನಾಗಿ ರಕ್ಷಿಸು । ಅನ್ಯಮತ ದೋಷಹರಿಸಿ ನಮ್ಮ ಕಲಿಯುಗದ ಕಲ್ಮಷ ಕಳೆದು ರಕ್ಷಿಸಯ್ಯಾ ನಮ್ಮ ಕಲ್ಕಿ ಮೂರುತಿಯಾಗಿ । ಪ್ರಾತಃಕಾಲದಲ್ಲಿ ಕೇಶವ ನಮ್ಮ ರಕ್ಷಿಸು ಸಂಗಮ ಕಾಲದಲ್ಲಿ ಗೋವಿಂದನಾಗಿ । ಪರಾಣ್ಣ ಕಾಲದಲ್ಲಿ ರಕ್ಷಿಸಯ್ಯಾ ನಮ್ಮ ನಾರಾಯಣನಾಗಿ । ಮಧ್ಯಾಹ್ನ ಕಾಲದಲ್ಲಿ ವಿಷ್ಣು ನಮ್ಮ ರಕ್ಷಿಸು । ಅಪರಾಹ್ಣ ಕಾಲದಲ್ಲಿ ಮಧುಸೂದನನಾಗಿ । ಸಾಯಾನ್ನ ಕಾಲದಲ್ಲಿ ರಕ್ಷಿಸಯ್ಯ । ನಮ್ಮ ಮಾಧವನಾಗಿ । ನಿಶಿ ಕಾಲದಲ್ಲಿ ಪದ್ಮನಾಭ ನಮ್ಮ ರಕ್ಷಿಸು। ಅರ್ಧರಾತ್ರಿಯಲ್ಲಿ ಹೃಷಿಕೇಶನಾಗಿ । ಅಪರಾತ್ರಿಯಲ್ಲಿ ಶ್ರೀವತ್ಸ ಮೂರುತಿಯಾಗಿ ಉಷಃಕಾಲದಲ್ಲಿ ಜನಾರ್ದನ ನಮ್ಮನ್ನಿವು ॥ ಸರ್ವಕಾಲವ ಸಂಧಿಸಿ ಹರಿ ಚಕ್ರವೇ, ನಿಮ್ಮ ಅತಿಜಾಲ ಪ್ರಭೆಗಳಿಂದ ಪ್ರಳಯ ಕಾಲದ ಅಗ್ನಿಯಂತೆ

ಬೇಗ ಸುಡು ವೈರಿಗಳ ಸೈನ್ಯವನ್ನು, ವಿಷ್ಣುವಾಯು ಒಡಗೂಡಿ ತೃಣವ ಸುಡುವಂತೆ. ವಿಷ್ಣುಶಂಖವೇ, ನಿಮ್ಮ ಧನಿ ದುರಿದು ಎದು ರಾಕ್ಷಸರಾ ಎಡೆಗೂಡಿಸಿ, ಭಯ ಬಿಡಿಸಿ, ಲಯವು ಮಾಡಿ, ವಿಭೂತಿ ಗಂಧರ್ವರಾ ಪುಷ್ಟಾಂಡ ಓಡಿಸಿ ನಮ್ಮನ್ನು ಸಲಹಬೇಕೆಂದು ಪ್ರಾರ್ಥನೆಯು ಮಾಡಿದೆ. ಶತಚಂದ್ರಪ್ರಭೆಯಂತೆ ಹೊಳೆಯುವ ಹಲಗೆಯೂ, ನಮ್ಮ ಅತಿ ಪ್ರೇಮದಿಂದ ವೈರಿಗಳ ಕಣ್ಣಿಗೆ ಕಾಣಬಾರದಂತೆ ಮಾಡಿ, ತೋರುವಾ ನಿಮ್ಮ ದಿವ್ಯ ತೇಜವನೆಂಬೆನು, ಸಾಮವೇದಕ್ಕೆ ಅಭಿಮಾನಿಯಾದ ಗರುಡವನು ಏರಿ ವಿಷ್ಣು ಮುಕ್ತಾಭರಣ ಕೌಸ್ತುಭಾಭರಣ ರತ್ನಗಳಿಂದ ಅವತಾರ ಮೂರುತಿಗಳಿಂದ ಶ್ರೀಹರಿ ಎದ್ದು ರಕ್ಷಿಸಲಿ, ಸರ್ವ ದುರಿತಗಳೆಲ್ಲ ಅಂಜಿ ಓಡುತಿಹವು.

ಈ ಪರಿಯಿಂದ ವಿಶ್ವ ವ್ಯಾಪಕನಾಗಿ ಒಳ ಹೊರಗೆ ವ್ಯಾಪಕನಾಗಿ ರಕ್ಷಿಸಿದ ನಮ್ಮ ಶ್ರೀಮದ್ ಗುರುವಂತರ್ಯಾಮಿ ಶ್ರೀಮದಾನಂದತೀರ್ಥ.

|| ಶ್ರೀಕೃಷ್ಣಾರ್ಪಣಮಸ್ತು ||

★ ★ ★ ★

## ನರಸಿಂಹ ಸುಳಾದಿ

### ಧ್ರುವತಾಳ

ದುರಿತವನಕುಠಾರಿ ದುರ್ಜನ ಕುಲವೈರಿ ಶರಣಾಗತವಜ್ರಪಂಜರ ಕುಂಜರ ವರಸಂರಕ್ಷಕ ಜನ್ಮಮರಣರಹಿತ, ಮಹಿತ, ಪರಮಕರುಣಾಸಿಂಧು, ಭಕುತಬಂಧು ಸ್ವರತ ಸ್ವತಂತ್ರ ಜಗದ್ಭರಿತ ಚಿತ್ಸುಖಪೂರ್ಣ ಹರಿಯೇ ! ಕ್ಷರಾಕ್ಷರಪುರುಷೋತ್ತಮ ಉರುಗಾಯ ವೈಕುಂಠವರಮಂದಿರ ಚಂದಿರ ತರಣಿಕೋಟಿಸಂಕಾಶ, ವಿಮಲಕೇಶ ಧುರದೊಳಗರ್ಜುನನ ತುರಗ ನಡೆಸಿದ ಸಂ-ಗರ ಭಯಂಕರ ಲೋಕೈಕವೀರ ನರಸಿಂಹ! ನಿನ್ನ ಪಾದಕ್ಕೆರಗಿ ಬೇಡಿಕೊಂಬೆ ಮೊರೆಹೊಕ್ಕ ದಾಸಗೆ ಬಂದ ಭಯವ ಪರಿಹರಿಸಿ ಸೌಖ್ಯವ ಕರುಣಿಸು ದಯದಿಂದ ಸರುವರಂತರ್ಯಾಮಿ ಲೋಕಸ್ವಾಮಿ ಸ್ಮರಣೆಮಾತ್ರದಿ ಅಜಾಮಿಳಗೆ ಮುಕ್ತಿಯನಿತ್ತೆ ಅರಿದೆನೋ ನೀನೀಗ ಪೊರೆವುದೆಮ್ಮ ಸುರವಕಾಮದ ಜಗನ್ನಾಥವಿಠಲ! ಭಕ್ತ ಪರಿಪಾಲಕನೆಂಬ ಬಿರುದು ನಿನ್ನದಲ್ಲವೇ ||೧||

### ಮಟ್ಟತಾಳ

ವಿಧಿಪಿತ ನೀನಲ್ಲದೆ ನಿಧಿಪತಿಗಳು ಉಂಟೇ? ಸದನನಾಗಿ ಇಪ್ಪೆ ನಿನ್ನ ದಾಸರಿಗಾಗಿ ಮಧುಸೂದನ ಜಗನ್ನಾಥವಿಠಲರೇಯ ನಿಧನನೆನಿಸಿಕೊಂಡೆ ನಿನ್ನ ದ್ವೇಷಿಗಳಿಗೆ ||೨||

**ರೂಪಕತಾಳ**

ಮೂರು ಲೋಕಸ್ವಾಮಿ ಸರ್ವಜ್ಞ ಸುಖಪೂರ್ಣ ಪ್ರೇರಕ ಸಾಕ್ಷಿ ಕಾರಣಕಾರ್ಯ ದೋಷಾತಿ-ದೂರ ಸದ್ಗುಣಸಾಂದ್ರ ಸಜ್ಜನಾಂಬುಧಿಚಂದ್ರ ಸಾರಕರ್ತ ಜಗಕೆ ನೀನಿರೆ ಎಮ್ಮ ಮನೋರಥ ಸಲಿಸುವುದೇನಸಾಧ್ಯವೋ ನಿನಗೆ? ಕ್ರೂರ ಮಾನವರ ಸಂಹಾರ ಮಾಡಿದ ಗುರು ಮಾರುತನಿಂದತಿ ಶೀಘ್ರವಾಗಿ ನೀ ರಕ್ಷಿಸೆಂದು ಪ್ರಾರ್ಥಿಸುವೆ ಭಕ್ತಗೆ ಭೂರಿ ಸಾರ ಭಾಗ್ಯವನಿತ್ತು ಕೃಪೆಮಾಡು ಅನುದಿನ ಶೂರ ಜಗನ್ನಾಥವಿಠಲ ನೀನಲ್ಲದಿ ನ್ನಾರು ಭಕ್ತರ ಕಾವ ಕರುಣಿಗಳು ಜನಗದಿ ॥೩॥

**ಝಂಪೆತಾಳ**

ಪಿತನಿಂದ ನೊಂದ ಪ್ರಹ್ಲಾದನನು ಕಾಯ್ದು ದೇವತೆಗಳಿಗೆ ಬಂದ ಭಯವ ಪರಿಹರಿಸಿದೆ ದ್ರೌಪತಿಯ ಮೊರೆ ಕೇಳಿ ದಿವ್ಯಾಂಬರವ ಕರುಣಿಸಿದೆ ಕ್ಷಿತಿಜನಾಲಯದಿ ಬಳಲುವ ಬಾಲೆಯರ ದ್ವಾರಾವತಿಗೆ ಕರೆದೊಯ್ದು ಒಲಿದವರ ಪೋಷಿಸಿದೆ ಮಾರುತಿಯ ಕರದಿಂ ಬೃಹದ್ರಥನ ಕುವರನ ಕೊಲಿಸಿ ಪೃಥುವಿಪರ ಬಿಡಿಸಿ ಪಾಲಿಸಿದೆ ಕರುಣದಲಿ ಕುರು ಪತನದೋಳ್ ಪಾಂಡವರ ಗೆಲಿಸಿ ಕೀರ್ತಿಯನಿತ್ತೆ ಶತಮೋದನಸ್ತ್ರದಿಂದಲಿ ಗರ್ಭದೊಳಗೆ ಪೀಡಿತನಾದ ಶಿಶು ಪರೀಕ್ಷಿತನ ಸಂತೈಸಿದೆ ಶಿತಿಕಂಠಗೊಲಿದು ನಾಯಕನಾಗಿ ಮುಪ್ಪುರದ ಸತಿಯರನು ಒಲಿಸಿ ಕೀರುತಿಯಿತ್ತೆ ಭಕ್ತನಿಗೆ ಮಿತಿಯುಂಟೆ ನಿನ್ನ ಕರುಣಕೆ, ದೇವಪತಿ? ಸಾಂಪ್ರತ ಬೇಡಿಕೊಂಬೆ ಬಿನ್ನಪ ಕೇಳಜಸ್ರ ಸಂಸ್ತುತಿಪ ಭಕುತರ ಮನೋರಥವ ಪೂರೈಸು ಸುವ್ರತನಾಮ ಶ್ರೀ ಜಗನ್ನಾಥವಿಠಲ ಭಾಗವತಜನಪ್ರಿಯ ನೀನೇ ಗತಿ ಎಮಗೆ ಇಹಪರದಿ ॥೪॥

**ತ್ರಿಪುಟತಾಳ**

ನೀ ಸಲಹಲಿನ್ನಾರು ಮೂಲೋಕದೊಳುಬಂದಡ್ಡೈಸುವರು ಒಳಹೊರಗೆ? ದಾನವ ದಿವೌಕಸರು ನಿನಗೆ ಸಮರ್ಪಕ ಕಾರ್ಯ ಮಹಾಸುಖದಿ ನಡೆಸುವರು ನಿರುತ ಲಕ್ಷ್ಮಿ ದಾಸಿ ಎಂದೆನಿಪಳು ನಿನ್ನರಮನೆಯಲ್ಲಿ ದೇಶಕಾಲಗುಣಕರ್ಮಾದಿಗಳು ನಿನಗಾವಾಸಕೆ ಯೋಗ್ಯವಾದ ಸ್ಥಾನವೆನಿಪುವು. ಈಶ ಲೋಕಕೆ ಲೇಶಾಯಾಸ ಕಾಣೆನೋ ಕರುಣಾಸಮುದ್ರನೇ! ಒಲಿದು ಎಮ್ಮ ಮನದ ಅಭಿಲಾಷೆ ಪೂರೈಸೆಂದು ಬೇಡಿದೆನೋ ವೇದವ್ಯಾಸ! ಕೀಟಗೆ ಒಲಿದು ಕೊಟ್ಟಿ ಮಹಾಸಿಂಹಾಸನವನೇರಿಸಿ ನೀ ಪೊರೆದೆಯೋ, ಪರಾಶರಾತ್ಮಜ, ನಿನ್ನ ಗುಣಗಳ ಬಣ್ಣಿಸೆ ನಾ ಸಮರ್ಥನೆ ಎಂದೆಂದಿಗಾದರೂ, ದೇವ?

ನೀ ಸುಲಭನೆಂದಾಶ್ರಯಿಸಿಂದು ನಾ ಬಿನ್ನೈಸಿದೆನೋ ಈ ರೀತಿಯಲ್ಲಿ. ಸರುವಾಸುನಿಲಯ ಶ್ರೀಜಗನ್ನಾಥವಿಠಲರೇಯ, ಈಸು ಮಾತುಗಳೇಕೆ? ಮನ್ಮನದ ಆಸೆ ಪೂರ್ತಿಯ ಮಾಡಿ ಎಮ್ಮನು ದಯದಿ ಉದಾಸಿಸದೆ ಅನುದಿನ ನೋಳ್ಪುದು? ॥೫॥

**ಅಟ್ಟತಾಳ**

ನಿಗಮತತಿಗಳಿಗೆ ವೇದ್ಯವಾಗದ ನಿನ್ನ ಅಗಣಿತಮಹಿಮೆ ಲಕುಮಿ ಬೊಮ್ಮಭವಾದಿಗಳು ತಾವರಿಯರು ಸಾಕಲ್ಯದಿಂದ; ಜೀವಿಗಳಿಗೆ ಗೋಚರಿಸುವುದೇ ನಿನ್ನ ರೂಪ? ಭಗವಂತ, ನೀನೆ ದಯಾಳುವೆಂದುರಿದು ನಾ ಪೊಗಳಿದೆನೊ ಯಥಾಮತಿಯೊಳಗೆ ಲೇಶ ಬಗೆಯದಿರೆನ್ನಪರಾಧಕೋಟಿಗಳ ಜಗತೀಪತಿ ತನ್ನ ಮಗುವಿನ ತೊದಲು ಮಾತುಗಳನೆ ಕೇಳಿ ತಾ ನಗುತ ಕಾಮಿತ ಬಗೆ ಬಗೆಯಿಂದ ಪೂರ್ತಿಸಿ ಮಿಗೆ ಹರುಷದಿಂದ ಬಿಗಿದಪ್ಪಿ ಮೋದಿಪನಲ್ಲದೆ ಶಿಶುವಿನ ತೆಗೆದು ಬಿಸುಟು ಮತ್ತೆ ಹಗೆಗೊಂಬನೇನೋ? ತ್ರೈಯುಗನೆ, ಬಿಡದೆ ಪಾಡಿ ಪೊಗಳುವ ದಾಸಗೀ ಬಗೆ ಬಡತನವೇಕೆ ಸಂಸಾರದೊಳಗೆ? ನಾಲ್ಮೊಗನಯ್ಯ ಅರ್ಥಕಾಮದೊಳಗಿಪ್ಪ ಈರ್ವಗೆ ರೂಪ ಒಂದಾಗೆ ಆವದಸಾಧ್ಯವೋ? ಗಗನೆ ಭೂ ಪಾತಾಳ ವ್ಯಾಪ್ತರೂಪಗೆ ಕರ ಮುಗಿವೆ ಗೋಚರಿಸೆವ್ಮ್ಮ ದೃಗುಯುಗಗಳಿಗಿಂದು ಯುಗವರ್ತ ಶ್ರೀಜಗನ್ನಾಥವಿಠಲ ನರಮೃಗನಾಗಿ ಕಂಭದಿಂದೊಗೆದು ಬಂದೊದಗಿದೆ ॥೬॥

**ಆದಿ ತಾಳ**

ಶ್ರೀನಿಧಿ! ಪ್ರತಿದೇಹಂಗಳಲಿ ಗತಿ ನೀನಲ್ಲದೇ ಎಮಗಾರಿಹಪರದಲ್ಲಿ? ಆ ನಳಿನಭವ ಭವಾದ್ಯನಿಮಿಷರ ನಿಜಾನಂದವರಿತು ಫಲಗಳ ಕೊಡುವೆ ಮಹಾನುಭಾವ! ಎಮ್ಮಭಿಮತ ಸಲಿಸುವ ದೇನಚ್ಚರಿ? ನಿನ್ನರಸಿ ಲಕುಮಿ ಕಡೆಗಾಣಳು ಪರಮೈಶ್ವರ್ಯದ ಪ್ರಾಂತ ಚಿದಾನಂದಮಯನೆ, ಪ್ರಣತರ ಅಧಿಕಾರಾನುಸಾರ ನಡೆಸುವ ಮುಖ್ಯಪ್ರಾಣಪತಿಗೆ ನೂತನ ವಿಜ್ಞಾಪನವೇನುಂಟೆನ್ನನುದಿನದಲಿ ಮಾಳ್ಪುದು? ಮಾನದ ಗುರು ಜಗನ್ನಾಥವಿಠಲ ಕರುಣಾನಿಧಿ ಸರ್ವದ ಸುಲಭ ನೀನಲ್ಲವೆ? ॥೭॥

**ಜತೆ**

ಚಟುಲಕಾರ್ಯಗಳ ಸಂಘಟನೆ ಮಾಡುವಿಯೋ, ನಿಷ್ಕುಟಿಲ ಜಗನ್ನಾಥವಿಠಲ ದೇವೋತ್ತಮ ॥

# ಶ್ರೀ ಕಪಿಲ ದೇವರ ಸ್ತೋತ್ರ ಸುಳಾದಿ

**ರಾಗ : ತೋಡಿ** **ಧ್ರುವ : ತಾಳ**

ಸಿದ್ದಿದಾಯಕ ಶಿಷ್ಟಜನ ಪರಿಪಾಲ । ಶುದ್ಧಾತ್ಮ ಸುಗುಣಸಾಂದ್ರ ಸುಖವಾರಿಧಿ । ನಿದ್ರಾರಮಣನಿರ್ವಿಕಾರ । ಚಿದ್ದೇಹ ಸರ್ವಕಾಲ ಸುಂದರಸಾರ । ನಿದ್ರಾರಹಿತ ಪದ್ಮಸಂಭವ ಬಲಿ ಪ್ರಕ್ಷಾಲಿತ ಪಾದ ಮಹಾ । ಹೃದ್ರೋಗ ನಾಶ ವೈಕುಂಠವಾಸ । ವಿದ್ಯಾತೀತ ವಿಶ್ವನಾಟಕ ನಾರಾಯಣ । ವಿದ್ಯ ಉದ್ಧಾರಕ ಉದಧಿ ಸದನಾ । ಸಿದ್ಧಾದಿ ವಿನುತ ಸಂತತ ಪಾತಾಳವಾಸಿ । ಬುದ್ದಿ ವಿಶಾಲ ಮಹಿಮ ಪಾಪಹಾರಿ। ಖದ್ಯೋತವರ್ಣ ಸಕಲ ವ್ಯಾಪ್ತ ಆಕಾಶ ಅಮಿತ । ಬದ್ಧವಿಚ್ಛೇದ ನಾನಾ ರೂಪತ್ಮಕ । ಅದ್ವೈತಕಾಯಾ ಮಾಯಾರಮಣ ರಾಜೀವ ನೇತ್ರಾ । ಅದ್ವಯ ಅನಾದಿ ಪುರುಷ ಚಿತ್ರ । ಕರ್ದಮ ಮುನಿಸೂನು ವಿಜಯ ವಿಠ್ಠಲ ಕಪಿಲ । ನಿರ್ದೋಷಕರುಣಾಬ್ಧಿ ಸರ್ವರಾಧಾರಿ ॥೧॥

**ಮಟ್ಟತಾಳ**

ಆದಿಮನ್ವಂತರದಿ ಜನಿಸಿದ ಮಹದೈವ । ಆದಿಪೂರಬೊಮ್ಮ ಬೊಮ್ಮನಯ್ಯ ಜೀಯಾ। ಸಾಧು ಜನರ ಪ್ರಿಯಾ ಸಂತತ ಮುನಿತಿಲಕ । ಬೋಧ ಶರೀರ ಭಕುತರ ಮನೋಹರ ಹರಿ । ಮಾಧವ ಸಿರಿ ವಿಜಯ ವಿಠ್ಠಲ ವಿಮಲೇಶಾ । ಮೋದ ಮತಿಯ ಕೊಡುವ ಕಪಿಲ ಭಗವನ್ಮೂರ್ತಿ ॥೨॥

**ತ್ರಿವಿಡಿತಾಳ**

ಘನಮಹಿಮ ಗೌಣಾಂಡದೊಳಗೆ ಲೀಲೆಯಿಂದ । ಜನಿಸಿ ಮೆರೆದ ಬಿಂದು ಸರೋವರದಲ್ಲಿ । ಮಿನುಗುವ ದ್ವಯ ಹಸ್ತ ಅಪ್ರಾಕೃತ ಕಾಯ । ಇನನಂತೆ ಒಪ್ಪುವ ಶಿರೋರುಹವೋ ॥ ಕನಕ ಪುತ್ಥಳಿಯಂತೆ ಕಾಂತಿ ತ್ರಿಭುವನಕ್ಕೆ । ಅನವರತ ತುಂಬಿ ಸೂಸುತಲಿದಕೋ । ಜನನಿದೇಹವೂತಿಗೆ ಉಪದೇಶವನು ಮಾಡಿ । ಗುಣ ಮೊದಲಾದ ತತ್ವವ ತಿಳಿಸಿದೆ । ತನುವಿನೊಳಗೆ ನೀನೆ ತಿಳಿದು ತಿಳಿದೆ ನಿತ್ಯ । ಜನರನ್ನು ಪಾಲಿಸುವ ಕಪಿಲಾಖ್ಯನೆ । ಅನುದಿನ ನಿನ್ನ ಧ್ಯಾನವ ಮಾಡಿ ಮಣಿಯಿಂದ । ಎಣಿಸುವ ಸುಜನಕ್ಕೆ ಜ್ಞಾನ ಕೊಡುವೆ । ಎಣೆಗಾಣೆ ನಿನ್ನ ಲೋಚನದ ಶಕ್ತಿಗೆ ಸಗರ । ಜನಪ ನಂದರನ್ನು ಭಂಗಿಸಿದೆ । ಅನುಮಾನವಿದಕಿಲ್ಲ ನಿನ್ನ ನಂಬಿದ ಮೂಢಮನುಜನಿಗೆ ಪದವಿ ಬರುವದಯ್ಯ । ಮುನಿಕುಲೋತ್ತಮ ಕಪಿಲ ವಿಜಯ ವಿಠ್ಠಲರೇಯ । ಎನಗೆ ಯೋಗ ಮಾರ್ಗವನು ತೋರೋ ತವಕದಿಂದ ॥೩॥

**ಅಟ್ಟತಾಳ**

ಕಪಿಲ ಕಪಿಲಯೆಂದು ಪ್ರಾತಃಕಾಲದಲೆದ್ದು । ಸುಪುತ ಸಾರಿಗೆಯಲಿ ನುಡಿದ ಮಾನವಗೆ । ಅಪಜಯ ಮೊದಲಾದ ಕ್ಲೇಶಗಳೊಂದಿಲ್ಲಾ। ಅಪರಿಮಿತ ಸೌಖ್ಯ ಅವನ ಕುಲಕೋಟಿಗೆ । ಗುಪುತ ನಾಮವಿದು ಮನದೊಳಗಿಡುವುದು । ಕಪಟ ಜೀವರು ಈತನು ಒಬ್ಬ ಋಷಿಯೆಂದು । ತಪಿಸುವರು ಕಾಣೋ ನಿತ್ಯ ನರಕದಲ್ಲಿ। ಕೃಪಣ ವತ್ಸಲ ನಮ್ಮ ವಿಜಯ ವಿಠ್ಠಲರೇಯ । ಕಪಿಲಾವತಾರ ಬಲ್ಲವಗೆ ಬಲು ಸುಲಭ ॥೪॥

**ಆದಿತಾಳ**

ಬಲಹಸ್ತದಲಿ, ಯಜ್ಞಶಾಲೆಯಲಿ, ಕಂಗಳ ಕಪ್ಪಿನಲ್ಲಿ ಹೃದಯಸ್ಥಾನ ನಾಭಿಯಲ್ಲಿ ಜಲಧಿ ಗಂಗಾ ಸಂಗಮದಲ್ಲಿ ಗಮನದಲ್ಲಿ । ತುಲಸಿ ಪತ್ರದಲ್ಲಿ ತುರಗ ತುರುವಿನಲ್ಲಿ । ಮಲಗುವ ಮನೆಯಲ್ಲಿ ನೈವೇದ್ಯ ಸಮಯದಲ್ಲಿ । ಬಲು ಕರ್ಮ ಬಂಧಗಳು ಮೋಚಕವಾಗುವಲ್ಲಿ । ಚಲುವನಾದವನಲ್ಲಿ ವಿದ್ಯೆ ಪೇಳುವನಲ್ಲಿ । ಫಲದಲ್ಲಿ ಪ್ರತಿಕೂಲವಿಲ್ಲದ ಸ್ಥಳದಲ್ಲಿ। ಬೆಳೆದ ದರ್ಭದಲ್ಲಿ ಅಗ್ನಿಯಲ್ಲಿ ಹರಿವ । ಜಲದಲ್ಲಿ ಜಾಂಬುದ ನದಿಯಲ್ಲಿ ಶ್ಲೋಕದಲ್ಲಿ । ಬಲಿಮುಖ ಬಳಗದಲ್ಲಿ ಆಚಾರಶೀಲನಲ್ಲಿ । ಘಳಿಗೆ ಆರಂಭದಲ್ಲಿ ಪಶ್ಚಿಮ ಭಾಗದಲ್ಲಿ । ಪೊಳೆವ ಮಿಂಚಿನಲ್ಲಿ ಬಂಗಾರದಲ್ಲಿ ಇನಿತು। ಕಾಲಕಾಲಕ್ಕೆ ಬಿಡದೆ ಸ್ಮರಿಸು ಕಪಿಲ ಪರಮಾತ್ಮನ್ನ। ಗೆಲುವುಂಟು ನಿನಗೆಲವೊ ಸಂಸಾರದಿಂದ ವೇಗ । ಕಲಿಯುಗದೊಳಗಿದೆ ಕೊಂಡಾಡಿದವರಿಗೆ । ಖಳರ ಅಂಜಿಕೆಯಿಲ್ಲ ನಿಂದಲ್ಲೆ ಶುಭಯೋಗ । ಬಲವೈರಿನುತ ನಮ್ಮ ವಿಜಯ ವಿಠ್ಠಲರೇಯಾ । ಇಳೆಯೊಳಗೆ ಕಪಿಲಾವತಾರನಾಗಿ ನಮ್ಮ ಭಾರವಹಿಸಿದ ॥೫॥

**ಜತೆ**

ತಮ ಪರಿಚ್ಛೇದ ಈತನ ಸ್ಮರಣೆ ನೋಡು । ಹೃತ್ಕಮಲದೊಳಗೆ ವಿಜಯ ವಿಠ್ಠಲನ್ನ ಚರಣಾಬ್ಜ ॥೬॥

★ ★ ★ ★

## ಧನ್ವಂತರಿ ಸುಳಾದಿ

**ಧ್ರುವತಾಳ**

ಆಯುರ್ವರ್ಧ್ದಿಯಾಗೋದು ಶ್ರೇಯಸ್ಸು ಬರುವುದು । ಕಾಯ ನಿರ್ಮಲಿನ ಕಾರಣವಾಹೋದು । ಮಾಯಾ ಹಿಂದಾಗುವುದು ನಾನಾರೋಗದ ಬೀಜ

ಬೇಯಿಸಿ ಕಳೆವುದು ವೇಗಾದಿಂದ । ನಾಯಿ ಮೊದಲಾದ ಕುತ್ಸಿತ ದೇಹನಿ- । ಕಾಯವಾಯಿತು ದುಷ್ಕರ್ಮದಿಂದ । ಕ್ರಿಯಮಾಣಸಂಚಿತ ಭರಿತವಾಗಿದ್ದ ದುಃಖ । ಹೇಯಸಾಗರದೊಳು ಬಿದ್ದು ಬಳಲಿ । ನೋಯಿಸಿಕೊಂಡು ನೆಲೆಗಾಣದೆ ಒಮ್ಮೆ ತನ್ನ । ಬಾಯಲ್ಲಿ ವೈದ್ಯಮೂರ್ತಿ ಶ್ರೀಧನ್ವಂತರಿ । ರಾಯರಾ ಔಷಧಿ ನಿಯಾಮಕಕರ್ತಾ । ಶ್ರೀಯರಸನೆಂದು ತುತಿಸಲಾಗಿ । ತಾಯಿ ಒದಗಿ ಬಂದು ಬಾಲನ್ನ ಸಾಕಿದಂತೆ । ನೋಯಗೊಡದೆ ನಮ್ಮನು ಪಾಲಿಪ । ನಯ್ಯ ದೇವಾದಿಗಳಿಗೆಲ್ಲ ಧರ್ಮಜ್ಞ ಗುಣಸಾಂದ್ರ । ಶ್ರೇಯಸ್ಸು ಕೊಡುವನು ಭಜಕರಿಗೆ । ಮಾಯಾಮಾತ್ರದಿಂದ ಜಗವೆಲ್ಲ ವ್ಯಾಪಿಸಿ ಸ ನ್ನ್ಯಾಯವಂತನಾಗಿ ಚೇಷ್ಟೆ ಮಾಳ್ಪ । ವಾಯುವಂದಿತ ನಿತ್ಯ ವಿಜಯವಿಠಲರೇಯ । ಪ್ರೀಯನು ಕಾಣೋ ನಮಗೆ ಅನಾದಿರೋಗ ಕಳೆವ ॥೧॥

**ಮಟ್ಟತಾಳ**

ಧನ್ವಂತರಿ ಶ್ರೀಧನ್ವಂತರಿ ಎಂದು । ಸನ್ನುತಿಸಿ ಸತತಾವಿಚ್ಛಿನ್ನ ಜ್ಞಾನದಿಂದ । ನಿನ್ನವ ನಿನ್ನವನೆಂದು ಘನತೆಯಲಿ ನೆನೆವ । ಮನುಜ ಭುವನದೊಳು ಧನ್ಯನೋ ಧನ್ಯನೋ । ಘನ್ನಮೂರುತಿ ಒಲಿವ ವಿಜಯವಿಠಲ ಸುಪ್ರ । ಸನ್ನ ಸತ್ಯನೆಂದು ಬಣ್ಣಿಸು ಬಹುವಿಧದಿ ॥೨॥

**ತ್ರಿಪುಟತಾಳ**

ಶಶಿಕುಲೋದ್ಭವ ದೀರ್ಘತಮನಂದನ ದೇವ । ಶಶಿವರ್ಣಪ್ರಕಾಶ ಪ್ರಭುವೆ ವಿಭುವೆ ಶಶಿಮಂಡಲಸಂಸ್ಥಿತ ಕಲಶ ಕಲಶಪಾಣಿ । ಬಿಸಜಲೋಚನ ಆಶ್ವಿನೇಯವಂದ್ಯ । ಶಶಿಗರ್ಭಭೂರುಹ ಲತೆ ತಾಪ ಓಡಿಸುವ । ಔಷಧಿ ತುಳಸಿ ಜನಕ ವಾಸುದೇವ । ಅಸುರನಿರ್ಜರತತಿ ನೆರೆದು ಗಿರಿಯ ತಂದು । ಮಿಸುಕದೆ ಮಹೋದಧಿ ಮಥಿಸಲಾಗಿ । ನಸುನಗುತ ಪುಟ್ಟಿದೆ ಪೀಯೂಷಘಟಧರಿಸಿ । ಅಸಮದೈವವೇ ನಿನ್ನ ಮಹಿಮೆಗೆ ನಮೋ ನಮೋ । ಬಿಸಜಸಂಭವರುದ್ರ ಮೊದಲಾದ ದೇವತಾ- । ಋಷಿನಿಕರ ನಿನ್ನ ಕೊಂಡಾಡುವುದು । ದಶದಿಶದಲಿ ಮೆರೆವ ವಿಜಯವಿಠಲ ಭಿಷಕು । ಅಸು ಇಂದ್ರಿಯಂಗಳ ರೋಗನಿವಾರಣ ॥೩॥

**ಅಟ್ಟತಾಳ**

ಶರಣು ಶರಣು ಧನ್ವಂತರಿ ತಮೋಗುಣನಾಶ । ಶರಣು ಆರ್ತಜನಪರಿಪಾಲಕ ದೇವ । ತರುವೇ ಭವತಾಪಹರಣ ದಿತಿಸುತ । ಹರಣ ಮೋಹಕಲೀಲಾ ಪರಮ ।

ಪೂರಣ ಬ್ರಹ್ಮ, ಬ್ರಹ್ಮ ಉದ್ಧಾರಕ । ಉರುಪರಾಕ್ರಮ ಉರುಕ್ರಮ ಉರಗಶಾಯೀ । ವರಕಿರೀಟ ಮಹಮಣಿ ಕುಂಡಲಕರ್ಣ । ಮಿರುಗುವ ಹಸ್ತಕಂಕಣ ಹಾರಪದಕತಾಂ । ಬರಕಾಂಚೀಪೀತಾಂಬರ ಚರಣಭೂಷಾ । ಸಿರಿವತ್ಸಲಾಂಛನ ವಿಜಯವಿಠಲರೇಯ । ತರಣಿಗಾತುರ ಜ್ಞಾನಮುದ್ರಾಂಕಿತಹಸ್ತ ॥೪॥

**ಆದಿತಾಳ**

ಏಳುವಾಗಲಿ ಮತ್ತೆ ತಿರುಗುವಾಗಲಿ । ಬೀಳುವಾಗಲಿ ನಿಂದು ಕುಳ್ಳಿರುವಾಗಲಿ । ಹೇಳುವಾಗಲಿ ವಾರ್ತೆ ಕೇಳುವಾಗಲಿ ಕರೆದು । ಪೇಳುವಾಗಲಿ ಪೋಗಿ ಸತ್ಕರ್ಮ ಮಾಡೂವಾಗ । ಬಾಳುವಾಗಲಿ ಭೋಜನ ನಾನಾ ಷಡ್ರಸ ಸಂ- । ಮೇಳವಾಗಲಿ ಮತ್ತೆ ಪುತ್ರಾದಿಗಳೊಡನೆ । ಖೇಳವಾಗಲಿ ಮನುಜ ಮರೆಯದೆ ಒಮ್ಮೆ ತನ್ನ । ನಾಲಿಗೆ ಕೊನೆಯಲ್ಲಿ ಧನ್ವಂತರಿ ಎಂದು । ಕಾಲ ಅಕಾಲದಲ್ಲಿ ಸ್ಮರಿಸಿದ ಮಾನವಗೆ । ವ್ಯಾಳೆವ್ಯಾಳೆಗೆ ಬಾಹೋ ಭವಬೀಜಪರಿಹಾರ । ನೀಲಮೇಘಶ್ಯಾಮ ವಿಜಯವಿಠಲರೇಯ । ವಾಲಗ ಕೊಡೂವನು ಮುಕ್ತರ ಸಂಗದಲಿ ॥೫॥

**ಜತೆ**

ಧಂ ಧನ್ವಂತರಿ ಎಂದು ಪ್ರಣವಪೂರ್ವಕದಿಂದ ವಂದಿಸಿ ನೆನೆಯಲು ವಿಜಯವಿಠಲ ಒಲಿವಾ ॥

★ ★ ★ ★

### ಶ್ರೀವಿಜಯದಾಸಾರ್ಯವಿರಚಿತ

## ಶ್ರೀದುರ್ಗಾಸ್ತೋತ್ರ ಸುಳಾದಿ

**ರಾಗ:ಭೈರವಿ** **ಧ್ರುವತಾಳ**

ದುರ್ಗಾ ದುರ್ಗೆಯೇ ಮಹದುಷ್ಟಜನ ಸಂಹಾರೆ, ದುರ್ಗಾಂತರ್ಗತ ದುರ್ಗೆ ದುರ್ಲಭೆ ಸುಲಭೆ, ದುರ್ಗಮವಾಗಿದೆ ನಿನ್ನ ಮಹಿಮೆ ಬೊಮ್ಮ, ಭರ್ಗಾದಿಗಳಿಗೆಲ್ಲ ಗುಣಿಸಿದರೂ, ಸ್ವರ್ಗ ಭೂಮಿ ಪಾತಳ ವ್ಯಾಪುತದೇವಿ, ವರ್ಗಕ್ಕೆ ಮೀರಿದ ಬಲು ಸುಂದರೀ, ದುರ್ಗಣದವರ ಬಾಧೆ ಬಹಳವಾಗಿದೆ ತಾಯಿ, ದುರ್ಗತಿಹಾರೆ ನಾನು ಪೇಳುವದೇನು, ದುರ್ಗಂಧವಾಗಿದೆ ಸಂಸ್ಕೃತಿ ನೋಡಿದರೆ, ನಿರ್ಗಮ ನಾ ಕಾಣೆನಮ್ಮ ಮಂಗಳಾಂಗೆ, ದುರ್ಗೆ ಹೇ ದುರ್ಗೆ ಮಹಾ ದುರ್ಗೆ ಭೂದುರ್ಗೆ ವಿಷ್ಣು ದುರ್ಗೆ ದುರ್ಜಯ ದುರ್ಧರ್ಷೆ ಶಕ್ತಿ, ದುರ್ಗಕಾನನ ಗಹನ ಪರ್ವತಘೋರ ಸರ್ಪ, ಗರ್ಗರ

ಶಬ್ದ ವ್ಯಾಘ್ರ ಕರಡಿ ಮೃತ್ಯು, ವರ್ಗ ಭೂತ ಪ್ರೇತ ಪೈಶಾಚಿ ಮೊದಲಾದ, ದುರ್ಗುಣ ಸಂಕಟಪ್ರಾಪ್ತವಾಗೆ, ದುರ್ಗಾದುರ್ಗೆ ಎಂದು ಉಚ್ಚಸ್ವರದಿಂದ ನಿರ್ಗಳಿತನಾಗಿ ಒಮ್ಮೆ ಕೂಗಿದರೂ, ಸ್ವರ್ಗಾಪವರ್ಗದಲ್ಲಿ ಹರಿಯೊಡನೆ ಇದ್ದರೂ ಸುರರ್ಗಣ ಜಯ ಜಯವೆಂದು ಪೊಗಳುತಿರೆ, ಕರ್ಗಳಿಂದಲಿ ಎತ್ತಿ ಸಾಕುವ ಸಾಕ್ಷಿಭೂತೆ, ನೀರ್ಗುಡಿದಂತೆ ಲೋಕ ಲೀಲೆ ನಿನಗೆ, ಸ್ವರ್ಗಂಗಾಜನಕ ನಮ್ಮ ವಿಜಯವಿಠ್ಠಲನಂಘ್ರಿ ದುರ್ಗಾಶ್ರಯ ಮಾಡಿ ಬದುಕುವಂತೆ ಮಾಡು ॥೧॥

## ಮಟ್ಟತಾಳ

ಅರಿದರಾಂಕುಶ ಶಕ್ತಿ ಪರಶು ನೇಗಲಿಖಡ್ಗ, ಸರಸಿಜ ಗದೆ ಮುದ್ಗರ ಚಾಪಮಾರ್ಗಣ, ವರ ಅಭಯ ಮುಸಲ ಪರಿ ಪರಿ ಆಯುಧವ, ಧರಿಸಿ ಮೆರೆವ ಲಕುಮಿ ಸರಸಿಜ ಭವ ರುದ್ರ, ಸರುವ ದೇವತೆಗಳ ಕರುಣಾಪಾಂಗದಲ್ಲಿ, ನಿರೀಕ್ಷಿಸಿ ಅವರವರ ಸ್ವರೂಪ ಸುಖಕೊಡುವ, ಸಿರಿಭೂಮಿ ದುರ್ಗಾ ಸರ್ವೋತ್ತಮ ನಮ್ಮ ವಿಜಯವಿಠ್ಠಲನಂಘ್ರಿ, ಪರಮ ಭಕುತಿಯಿಂದ ಸ್ಮರಿಸುವ ಜಗಜ್ಜನನಿ ॥೨॥

## ತ್ರಿವಿಡತಾಳ

ಸ್ತುತಿ ಮಾಡುವಿ ನಿನ್ನ ಕಾಳಿ ಮಹಾಕಾಳಿ, ಉನ್ನತ ಬಾಹು ಕರಾಳವದನೆ ಚಂದಿರೆ ಮುಖೆ, ಧೃತಿ ಶಾಂತಿ ಬಹುರೂಪೆ ರಾತ್ರಿ ರಾತ್ರಿಂ ಚರಣೆ ಸ್ಥಿತಿಯೆ ನಿದ್ರಾಭದ್ರೆ ಭಕ್ತವತ್ಸಲೇ ಭವ್ಯೇ, ಚತುರಷ್ಟದ್ವಿಹಸ್ತೆ ಹಸ್ತಿ ಹಸ್ತಿ ಗಮನೆ ಅದ್ಭುತ ಪ್ರಬಲೆ ಪ್ರವಾಸೆ ದುರ್ಗಾರಣ್ಯವಾಸೆ, ಕ್ಷಿತಿ ಭಾರಹರಣೆ ಕ್ಷೀರಾಬ್ಧಿ ತನಯೆ ಸದ್ಗತಿ ಪ್ರದಾತೆ ಮಾಯಾ ಶ್ರೀಯೆ ಇಂದಿರೆ ರಮೆ ದಿತಿ ಜಾತೆ ನಿಗ್ರಹೆ ನಿರ್ಧೂತ ಕಲ್ಮಷೆ, ಪ್ರತಿಕೂಲ ಭೇದೆ ಪೂರ್ಣಬೋಧೆ ರೌದ್ರೇ, ಅತಿಶಯ ರಕ್ತ ಜಿಹ್ವಾಲೋಲೆ ಮಾಣಿಕ್ಯ ಮಾಲೆ, ಜಿತಕಾಮೇ ಜನನಮರಣರಹಿತೆ ಖ್ಯಾತೆ, ಘೃತಪಾತ್ರ ಪರಮಾನ್ನ ತಾಂಬೂಲಹಸ್ತೆ, ಸುವ್ರತೆ ಪತಿವ್ರತೆ ತ್ರಿನೇತ್ರೆ ರಕ್ತಾಂಬರೆ, ಶತಪತ್ರನಯನೇ ನಿರುತಕನ್ಯೆ ಉದಯಾರ್ಕ, ಶತಕೋಟಿಸನ್ನಿಭೆ ಹರಿ ಅಂಕಸಂಸ್ಥೆ, ಶ್ರುತಿತತಿನುತೆ ಶುಕ್ಲಶೋಣಿತರಹಿತೇ, ಅಪ್ರತಿಹತೆ ಸರ್ವದಾ ಸಂಚಾರಿಣಿ ಚತುರೆ, ಚತುರೆ ಕಪರ್ದಿಯೆ ಅಂಭ್ರಣಿ ಹ್ರೀ, ಉತ್ಪತ್ತಿಸ್ಥಿತಿಲಯಕರ್ತೆ ಶುಭ್ರೆ ಶೋಭನಗಾತ್ರೆ, ಪತಿತಪಾವನೆ ಧನ್ಯೆ ಸರ್ವೌಷಧಿಯಲಿದ್ದು, ಹತ ಮಾಡು ಕಾಡುವ ರೋಗಂಗಳಿಂದ, ಕ್ಷಿತಿಯೋಳು ಸುಖದಿಂದ ಬಾಳುವ ಮತಿಯಿತ್ತು, ಸತತ ಕಾಯಲಿಬೇಕು ದುರ್ಗಾ ದುರ್ಗೆ, ಚ್ಯುತದೂರ ವಿಜಯವಿಠಲರೇಯನ ಪ್ರಿಯೆ ಕೃತಾಂಜಲಿಯಿಂದ ತಲಿಬಾಗಿ ನಮಿಸುವೆ ॥೩॥

### ಮಟ್ಟತಾಳ

ಶ್ರೀಲಕ್ಷ್ಮಿ ಕಮಲಾ ಪದ್ಮಾ ಪದ್ಮಿನಿ ಕಮಲಾಲಯೆ ರಮಾ ವೃಷಕಪಿ ಧನ್ಯೆ ವದ್ಧಿ ವಿಶಾಲೆ ಯಜ್ಞೆ ಇಂದಿರೆ ಹಿರಣ್ಯಾ ಹರಿಣಿ, ವಾಲಯ ಸತ್ಯಾ ನಿತ್ಯಾನಂದೆ ತ್ರಾಯಿಸುಧಾ ಸುಶೀಲೆ, ಸುಗಂಧಸುಂದರಿ ವಿದ್ಯಾಶೀಲ ಸುಲಕ್ಷಣಾ ದೇವಿ ನಾನಾರೂಪಗಳಿಂದ ಮೆರೆವ ಮೃತ್ಯುನಾಶೆ, ವಾಲಗ ಕೂಡ ಸಂತರ ಸನ್ನಿಧಿಯಲ್ಲಿ ಕಾಲಕಾಲಕೆ ಎನ್ನ ಭಾರವಹಿಸುವ ತಾಯಿ, ಮೇಲುಮೇಲು ನಿನ್ನ ಶಕ್ತಿ ಕೀರ್ತಿ ಬಲು ಕೇಳಿಕೇಳಿ ಬಂದೆ ಕೇವಲ ಈ ಮನ ಗಾಳಿಯಂತೆ ಪರ ದ್ರವ್ಯಕ್ಕೆ ಪೋಪುದು ಏಳಲ ಮಾಡದೆ ಉದ್ಧಾರ ಮಾಡು ಕೈಲಾಸಪುರದಲ್ಲಿ ಪೂಜೆಗೊಂಬ ದೇವಿ ಮೂಲಪ್ರಕೃತಿ ಸರ್ವವರ್ಣಾಭಿಮಾನಿನಿ ಪಾಲಸಾಗರಶಾಯಿ ವಿಜಯವಿಠಲನೊಳು ಲೀಲೆಯಾಡುವ ನಾನಾಭರಣಭೂಷಣೆ ॥೪॥

### ಆದಿತಾಳ

ಗೋಪಿನಂದನೆ ಮುಕ್ತೆ ದೈತ್ಯಸಂತತಿಗೆ ಸಂತಾಪಕೊಡುತಿಪ್ಪ ಮಹಾಕಠೋರೆ ಉಗ್ರೆ ರೂಪವೈಲಕ್ಷಣೆ ಅಜ್ಞಾನಕಭಿಮಾನಿನಿ ತಾಪತ್ರಯವಿನಾಶೆ ಓಂಕಾರೆ ಹೂಂಕಾರೆ ಪಾಪಿ ಕಂಸಗೆ ಭಯ ತೋರಿದ ಬಾಲಲೀಲೆ ವ್ಯಾಪುತೆ ಧರ್ಮಮಾರ್ಗಪ್ರೇರಣೆ ಅಪ್ರಾಕೃತೆ ಸ್ವಾಪದಲ್ಲಿ ನಿನ್ನ ನೆನೆಸಿದ ಶರಣರ್ಗೆ ಅಪಾರವಾಗಿದ್ದ ವಾರಿಧಿಯಂತೆ ಮಹಾ-ಆಪತ್ತು ಬಂದಿರಲು ಹಾರಿ ಪೋಗೋದು ಸಪ್ತದ್ವೀಪನಾಯಕೆ ನರಕನಿರ್ಲೇಪೆ ತಮೋಗುಣದ ವ್ಯಾಪಾರಮಾಡಿಸಿ ಭಕ್ತಜನರ್ಗೆ ಪುಣ್ಯಸೋಪಾನ ಮಾಡಿಕೊಡುವ ಸೌಭಾಗ್ಯವಂತೆ ದುರ್ಗೆ ಪ್ರಾಪುತವಾಗಿ ಎನ್ನ ಮನದಲಿ ನಿಂದು ದುಃಖ-ಕೂಪದಿಂದಲಿ ಎತ್ತಿ ಕಡೆಮಾಡು ಜನ್ಮಂಗಳ ವಾಣಿಸೌಪರ್ಣಿ ಮೊದಲಾದ ಸತಿಯರು ನಿತ್ಯನಿನ್ನ ಆಪಾದಮೌಳಿ ತನಕ ಭಜಿಸಿ ಭವ್ಯರಾದರು ನಾ ಪೇಳುವುದೇನು ಪಾಂಡವರ ಮನೋಭೀಷ್ಟೆ ಈ ಪಂಚ ಭೌತಿಕದಲ್ಲಿ ಆವ ಸಾಧನೆ ಕಾಣೆ ಶ್ರೀಪತಿನಾಮ ಒಂದೇ ಜಿಹ್ವಾಗ್ರದಲ್ಲಿ ನೆನೆವ ಔಪಾಸನೆ ಕೊಡು ರುದ್ರಾದಿಗಳ ವರದೆ ತಾಪಸಜನಪ್ರಿಯ ವಿಜಯವಿಠಲರೇಯನ ಶ್ರೀಪಾದರ್ಚನೆ ಮಾಳ್ಪ ಶ್ರೀಭೂದುರ್ಗಾವರ್ಣಾತ್ರಯೆ ॥೫॥

### ಜತೆ

ದುರ್ಗೆ ಹಾ ಹೇ ಹೋ ಹಾ ದುರ್ಗೆ ಮಂಗಳದುರ್ಗೆ ದುರ್ಗತಿ ಕೊಡದಿರು ವಿಜಯವಿಠಲಪ್ರಿಯೇ ॥

★ ★ ★ ★

# ಪ್ರಾಣದೇವರ ಸುಳಾದಿ

ಕೋತಿಯಾದರೆ ಬಿಡೆನೊ ಬಲುಪರಿ, ಭೂತಳದೊಳು ಪಾರ್ಯಾಡಲು ಬಿಡೆನೊ, ಖ್ಯಾತಿತೊರೆದು ಕಚ್ಚುಟ ಹಾಕಲು ಬಿಡೆನೊ, ಚಾತುರ ಬಿಟ್ಟರೆ ಬಿಡೆನೊ ನಾ ಬಿಡನೊ,ಭೀತಿಬೀರಲು ಬಿಡೆನೊ ಮಾತು, ಮಾತಿಗೆ ಹಲ್ಲು ತೋರಲು ಬಿಡೆನೊ, ಗಾತುರ ಗಗನಕ್ಕೆ ಬೆಳಿಸಲು ಬಿಡೆನೊ, ಕೋತಿ ಸೇವಿಸಲು ಬಿಡೆನೊ, ಆತುರದಲಿ ವನದಿ ಲಂಘಿಸಿದರೆ ಬಿಡೆ, ಆತರುಗಳ ಕಿತ್ತಲು ಬಿಡೆನೊ, ವೀತಿಹೊತ್ರನ ಬಾಲದಲ್ಲಿ ಇಟ್ಟರೆ ಬಿಡೆ, ಜಾತಿ ಧರ್ಮವ ಬಿಟ್ಟರೆ ಬಿಡೆನೊ, ಈ ತೆರದಲ್ಲಿ ನೀನು ಇದ್ದರೇನಯ್ಯ ಬೆ, ನ್ನಾತು ಕೇಳುವದು. ನಾ ಬಿಡಬಲ್ಲನೇ, ತಾತಾ ಇನ್ನಿದರಿಂದ ಆವದಾದರು ಬರಲಿ, ದಾತಾ ಮತ್ತಿದರಿಂದ ಏನಾದರಾಗಲಿ, ಸೋತು ಹಿಂದಗದು ಪೋದರೆ ನಿನ್ನ ಪದದಾಣೆ, ಯಾತಕ್ಕೆ ಸಂಶಯವೂ ಬಿಡೆನೊ ಬಿಡೆನೊ ಖದ್ಯೋತ ಮಂಡಲ ಪೋಗಲು ಬಿಡೆನೊ, ಮಾತು ಪೊಳ್ಳಾದರೆ ನೂರೊಂದು ಕುಲ ಎನ್ನ, ಗೊತ್ರದವರಿಗೆ ಗತಿ ಎಲ್ಲೆದೋ, ವಾತನ್ನಮಗವಾತ ಆತನ್ನ ರೂಪವ, ಗಾತುರದಲ್ಲಿನಿನ್ನೊಳಗೆ ತೋರೊ, ಜ್ಯೋತಿರ್ಮಯ ರೂಪ ವಿಜಯವಿಠಲರೇಯನ, ದೂತದುರ್ಜನಹಾರಿ ದುಃಖನಿವಾರಿ ॥೧॥

**ಅಟ್ಟತಾಳ**

ಭೂತಳದೊಳಗೆ ಇದ್ದ ಭೂಮಿ ಸುತ್ತಲು ಬಿಡೆ, ಭೀತಿನಾಮವನ್ನು ಇಟ್ಟುಕೊಂಡರೆ ಬಿಡೆ, ನೀ ತಿರುದುಂಡರೆ ಬಿಡೆನೊ ಬಿಡೆನೊ ಆ, ರಾತಿಗಳಿಗೆ ಸೋತು ಅಡವಿ ಸೇರಲು ಬಿಡೆನೊ, ಸೋತುಮತನ ಬಿಟ್ಟು ಅಡಿಗಿ ಮಾಡಲು ಬಿಡೆ, ಘಾತಕ ನೀನಾಗಿ ಕುಲವ ಕೊಂದರೆ ಬಿಡೆ, ಮಾತುಗಾರಿಕೆಯಿಂದ ಯತಿಯಾದರೆ ಬಿಡೆನೊ, ಪ್ರೀತಿ ಸಲಹೊ ಎನ್ನ ಸಾಕದಿದ್ದರೆ ನಿನ್ನ, ಪೂತರೆ ದ್ವಿತೀಯೇಶನಿಂದು ಪೊಗಳಲ್ಯಾಕೆ, ನಾಥನಲ್ಲ ನಿನ್ನ ಮಂತ್ರಿತನವೇನೋ, ಪೋತಭಾವ ನಮ್ಮ ವಿಜಯ ವಿಠ್ಠಲರೇಯನ, ಆತುಮನದೊಳಗಿಟ್ಟ ಭಾರತೀರಮಣಾ ॥೨॥

**ತ್ರಿವಿಡತಾಳ**

ಭಾರವೆ ನಾನೊಬ್ಬ ಶರಣಾ ನಿನಗಲ್ಲವೇ, ಬಾರಿ ಬಾರಿಗೆ ನಿನ್ನ ಅಹಿಕ ಸೌಖ್ಯ, ಮೀರದೆ ಕೊಡು ಎಂದು ಬೇಡಿ ಬ್ಯಾಸರಿಸು ವಿಸ್ತಾರವಾಗಿ ಗುರುವೆ ಕಾಡಿದೆನೇ, ಧಾರುಣಿಯೊಳು ಪುಟ್ಟಿ ಪಾರುಗಾಣದ ಸಂಸಾರಹೇಯವೆಂದು ಕೇಳಿ ನಿನಗೆ, ದೂರಿದೆನೊ ಇದು ದೈನ್ಯದಿಂದಲಿ ವಿಚಾರಿಸಿದರೊಳಿತು ಇಲ್ಲದಿದ್ದರೆ ಲೇಸೆ, ಸಾರಿ

ಸಾರಿಗೆ ನಿನ್ನ ಸೌಭಾಗ್ಯ ಚರಣವ, ತೋರಿಸಿ ಧನ್ಯನ್ನ ಮಾಡೆಂದೆನೊ, ಕಾರುಣ್ಯದಲಿ ಕೈಟಭಾರಿ ಪ್ರಿಯನೆ, ಆರನ್ನ ಕಾಣೆನೊ ನಿನ್ನ ವಿನಾ, ಕೀರುತಿ ಅಪಕೀರ್ತಿ ನಿನ್ನದಯ್ಯಾ, ವಾರಣಾವರವಂದ್ಯ ವಿಜಯವಿಠಲರೇಯನ, ಸೇರುವ ಪರಿಮಾಡೊ ತಾರತಮ್ಯ ಭಾವದಲಿ ||೩||

### ಅಟ್ಟತಾಳ

ನೀನು ಒಲಿಯೇ ಹರಿ ತಾನೆ ಒಲಿವನಯ್ಯಾ, ನೀನು ಮುನಿದೆಡೆ ಹರಿ ತಾನೆ ಮುನಿದನು, ಏನೆಂಬೆ ನಿನ್ನ ಮೇಲಣ ಹರಿಕಾರುಣ್ಯ, ನೀನಲ್ಲದಿಲ್ಲದ ಸ್ಥಾನದಿ ತಾನಿಲ್ಲ, ಪ್ರಾಣೇಶ ನಮೋ ನಮೋ ನಿನ್ನ ಪಾದಾಬ್ಜಕ್ಕೆ, ವಾನರೇಶ ಸುಗ್ರೀವ ವಾಲಿ ಸಾಕ್ಷಿ, ಜ್ಞಾನೇಶ ಭಕ್ತಿ ವಿರಕ್ತೇಶ ಅಮರೇಶ, ಆನಂದ ಆನಂದ ಮೂರುತಿ ಗುರುರಾಯ, ಪಾಣಿಗ್ರಹಣ ಮಾಡು ಪತಿತಪಾವನ ದೇವ, ಪ್ರಾಣೇಂದ್ರಿಯಗಳು ದೇಹ ಚೇತನ ಚಿತ್ತವ, ಧ್ಯಾನ ಮಾಡಲಿ ಸರ್ವ ನಿನ್ನಾಧೀನವೆಂದು, ನೀನಿರೆಲಾವಾಗ ಅನ್ಯ ಜನರಿಗೆ ಮತ್ತಾನು, ಜಿನ್ನೈಪೇನು ದೇಹತ್ಯಾಗವ, ಶ್ರೀನಾಥ ವಿಜಯವಿಠಲರೇಯನ ಪಾದ, ರೇಣು ಧರಿಸಿದ ಸರ್ವರುದ್ಧಾರೀ ||೪||

### ಆದಿತಾಳ

ಎಲ್ಲ ಕಾಲದಲ್ಲಿ ನಿನ್ನಲ್ಲಿ ಭಕ್ತಿ ಇಪ್ಪ, ಸಲ್ಲಲಿತ ಮನುಜರ ಪದಪಾಂಸುವಶಿರದಲ್ಲಿ ಧರಿಸುವಂತೆ ಸಂತತ ಮತಿಯಿತ್ತು, ಬಲ್ಲಿದ ಕಾಮ ಬಿಡಿಸು ಬಲವಂತ ಗುಣವಂತ, ಬಲ್ಲವ ಭವದೂರ ನೀನೆ ಗತಿಯೊ ಜಗ, ದೊಲ್ಲಭ ಮುಂದಣ ವಾಣೀಶ ಸುಖಪೂರ್ಣ ಅಲ್ಲದಿದ್ದರೆ ಎನ್ನ ಕಾವ ಕರುಣಿಯ ಕಾಣೆ, ಮಲ್ಲಮರ್ದನ ನಮ್ಮ ವಿಜಯವಿಠ್ಠಲರೇಯನ, ನಿಲ್ಲಿಸಿ ಮನದಲ್ಲಿ ಪ್ರತಿಕೂಲವಾಗಿದೆ ||೫||

### ಜತೆ

ಅನಂತ ಜನುಮಕ್ಕೆ ನೀನೆ ಗುರು ಎಂಬ, ಜ್ಞಾನವೇ ಕೊಡು ಜೀಯಾ ವಿಜಯವಿಠ್ಠಲದಾಸಾ ||೬||

★ ★ ★ ★

## ಕನ್ನಡ ಲಘು ವಾಯುಸ್ತುತಿ

ಶ್ರೀಮದ್ವಿಷ್ಣ್ವಾಜ್ಞೆಯಿಂದ ಜನಿಸಿ ಪವನನು ಕೇಸರೀ ಕ್ಷೇತ್ರದಲ್ಲಿಕಂಜಾಕ್ಷೀ ಸೀತೆಗಾಗಿ ಲವಣಜಲಧಿಯಂ ಲಂಘಿಸಿ ಲಂಕೆಯಲ್ಲಿ। ಇದ್ದಂಥಾ ರಾವಣನ್ನು ರಘುಪನ ಕರದಿ

ನಿಂಗಿಸಿ ಭೂಮಿಯಿಂದ ಕೂಡಿದ್ದಾ ರಾಘವನ್ನು ಭಜಿಸಿ ಮೆರೆದಿ ಕಿಂಪೂರುಷಾ ಖಂಡದಲ್ಲಿ ||೧|| ಆ ವಾಯು ಭೀಮನಾಗಿ ಸುರವರ ಬಲದಿಂ ಕೋಬ್ಬಿದಾ ಮಾಗದನ್ನು ಕಿರ್ಮೀರಂ ಕೀಚಕನ್ನು ಬಕಮುಖಖಲರಂ ದುಷ್ಟದುರ್ಯೋಧನನ್ನು । ಕೊಂದು ರಾಜಾಶ್ವಮೇಧ ಪ್ರಮುಖಮಖಗಳಂ ಮಾಡಿ ಕೃಷ್ಣಾರ್ಪಣೆಂದು ರಾಜಾಧೀರಾಜನಾಗಿ ಸುಜನರಪತಿಯು ಮೆರೆದನು ಸಾಧು ಬಂಧು ||೨|| ಪ್ರಾಗ್ ಜನ್ಮದ್ವೇಷದಿಂದ ಕಲಿಯಲಿ ಮಣಿಮಾನ್ ಸಂಕರಾಚಾರ್ಯನಾಗಿ ಬ್ರಹ್ಮಾಹಂ ನಿರ್ಗಣೋಹಂ ವಿತಥ ವಚನದಿಂ ಎಲ್ಲರಂ ಕೆಡಿಸಲಾಗಿ । ಅಜ್ಞಾನಾಖ್ಯಾನದಿಂದ ಸುಜನರ ಮತಿಯು ಮ್ಲಾನವಂ ಪೊಂದಿರಲು ಶ್ರೀಶಾಜ್ಞಾ ಶಿರದಿ ವಹಿಸಿ ಕುರುಕುಲ ಪತಿಯೂ ಆದನೂ ಮಧ್ವಸೂರ್ಯಾ || ಸರ್ವಜ್ಞ ಶ್ರೀಶನೇನೇ ವಿಧಿಭವಮುಖರು ಶ್ರೀಹರೀ ದಾಸರೇನೇ ಸತ್ಯೇವೇ ಈ ಜಗತ್ತು ಜನವು ತ್ರಿವಿಧವು ನಿತ್ಯ ಪಂಚಪ್ರಭೇದ । ಈಶಾಧೀನೇವೇ ಸರ್ವಶ್ರುತಿಗಿದನುಗುಣಾ ಅಂದದೇವೇ ಪ್ರಮಾಣಾ ಹೀಗೆಂದು ಮಧ್ವಸೂರ್ಯ ತಿಳಿಸಿ ಸುಜನಕೆ ಆದನು ದಿವ್ಯಮೋದಾ ||೪|| ಕೇಳೆಂದು ಮಾಯಿವಾದೀ ಸಕಲಸುರಪನು ಎಂದಿಗೂ ಅಲ್ಪಜ್ಞನಲ್ಲಾ ಜಿಜ್ಞಾಸ್ಯ ಬ್ರಹ್ಮನಾರಾಯಣ ಸಕಲಜಗತ್ಪರಿಮಿತಿಯನ್ನು ಬಲ್ಲ । ನೀನರಿಯೋ ನಿನ್ನ ನಾರಿ ಹಗಲು ಇರುಳಲಿ ಜಾರವಾಮಾಡುವೋದು ಬ್ರಹ್ಮಾಹಂ ನಿರ್ಗುಣೆಂಬೋ ವಿತಥ ವಚನವು ಹ್ಯಾಂಗ ನೀ ಆಡವೋದು ||೫|| ಮಾಯಾವಾದಿಗೆ ಮಾನಹೀನಜನಕೆ ಶುದ್ಧಿಲ್ಲದಾ ನಾಯಿಗೆ ಮಾಯೀ ಸಂಕರಗೆ ಸಮೀರನಗದಾ ಪೆಟ್ಟಿಂದಲೇ ಮುಕ್ತಿಯು । ನಿತ್ಯಂಧಂತಮ ಅಹುದೆಂದು ತಿಳಿದು ಅಜ್ಞಾನವಂ ವರ್ಜಿಸಿ ಶ್ರೀಮುದ್ರಾಸಹ ಗೋಪೀಚಂದನವನು ದೇಹಂಗಳಲ್ಯರ್ಚಿಸಿ ||೬||

|| ಇತಿ ಶ್ರೀವಾದಿರಾಜವಿರಚಿತ ಕನ್ನಡಲಘುವಾಯುಸ್ತುತಿಃ ಸಮಾಪ್ತಾ ||

★ ★ ★ ★

## ಶ್ರೀರುಕ್ಮಿಣಿ ಸ್ವಯಂವರ ಹಾಡು

ಬಂದು ಮಧುರೆಗೆ ತಾ ಕೊಂದು ಮಾತುಳನ । ಬಂಧನ ರಹಿತವಾಗಲು ಮಾತಾಪಿತರು ||೧|| ಜರೆಯಸುತನ ಬಾಧೆಯು ಘನವಾಗುತಿರಲು । ಜಲದೊಳು ದ್ವಾರಕಾಪುರವ ನಿರ್ಮಿಸಿದ ||೨|| ಯದುನಂದನ ತನ್ನಗ್ರಜ ಬಲರಾಮನ ಕೂಡ । ಮುದದಿಂದಾವಾಸ ಯಾದವರ ಸಹಿತಾಗಿ ||೩|| ಇರುತಿರೆ ರುಕುಮ ತನ್ನನುಜೆ ಸಹಿತಾಗಿ । ಚೆಲುವ ಸುಂದರಿಗೆ ಬ್ಯಾಗ್ವಿವಾಹದುತ್ಸದವು ||೪|| ಅಕ್ಕರದನುಜೆ ರುಕ್ಮಿಣೀದೇವಿಗಿನ್ನು

ಸಾರಿಗೆ ನಿನ್ನ ಸೌಭಾಗ್ಯ ಚರಣವ, ತೋರಿಸಿ ಧನ್ಯನ್ನ ಮಾಡೆಂದೆನೊ, ಕಾರುಣ್ಯದಲಿ ಕೈಟಭಾರಿ ಪ್ರಿಯನೆ, ಆರನ್ನ ಕಾಣೆನೊ ನಿನ್ನ ವಿನಾ, ಕೀರುತಿ ಅಪಕೀರ್ತಿ ನಿನ್ನದಯ್ಯಾ, ವಾರಣಾವರವಂದ್ಯ ವಿಜಯವಿಠಲರೇಯನ, ಸೇರುವ ಪರಿಮಾಡೊ ತಾರತಮ್ಯ ಭಾವದಲಿ ॥೩॥

**ಅಟ್ಟತಾಳ**

ನೀನು ಒಲಿಯೇ ಹರಿ ತಾನೆ ಒಲಿವನಯ್ಯಾ, ನೀನು ಮುನಿದೆಡೆ ಹರಿ ತಾನೆ ಮುನಿದನು, ಏನೆಂಬೆ ನಿನ್ನ ಮೇಲಣ ಹರಿಕಾರುಣ್ಯ, ನೀನಲ್ಲದಿಲ್ಲದ ಸ್ಥಾನದಿ ತಾನಿಲ್ಲ, ಪ್ರಾಣೇಶ ನಮೋ ನಮೋ ನಿನ್ನ ಪಾದಾಬ್ಜಕ್ಕೆ, ವಾನರೇಶ ಸುಗ್ರೀವ ವಾಲಿ ಸಾಕ್ಷಿ, ಜ್ಞಾನೇಶ ಭಕ್ತಿ ವಿರಕ್ತೇಶ ಅಮರೇಶ, ಆನಂದ ಆನಂದ ಮೂರುತಿ ಗುರುರಾಯ, ಪಾಣಿಗ್ರಹಣ ಮಾಡು ಪತಿತಪಾವನ ದೇವ, ಪ್ರಾಣೇಂದ್ರಿಯಗಳು ದೇಹ ಚೇತನ ಚಿತ್ತವ, ಧ್ಯಾನ ಮಾಡಲಿ ಸರ್ವ ನಿನ್ನಾಧೀನವೆಂದು, ನೀನಿರಲಾವಾಗ ಅನ್ಯ ಜನರಿಗೆ ಮತ್ತಾನು, ಬಿನ್ನೈಪೇನು ದೇಹತ್ಯಾಗವ, ಶ್ರೀನಾಥ ವಿಜಯವಿಠಲರೇಯನ ಪಾದ, ರೇಣು ಧರಿಸಿದ ಸರ್ವರುದ್ಧಾರೀ ॥೪॥

**ಆದಿತಾಳ**

ಎಲ್ಲ ಕಾಲದಲ್ಲಿ ನಿನ್ನಲ್ಲಿ ಭಕ್ತಿ ಇಪ್ಪ, ಸಲ್ಲಲಿತ ಮನುಜರ ಪದಪಾಂಸುವಶಿರದಲ್ಲಿ ಧರಿಸುವಂತೆ ಸಂತತ ಮತಿಯಿತ್ತು, ಬಲ್ಲಿದ ಕಾಮ ಬಿಡಿಸು ಬಲವಂತ ಗುಣವಂತ, ಬಲ್ಲವ ಭವದೂರ ನೀನೆ ಗತಿಯೊ ಜಗ, ದೊಲ್ಲಭ ಮುಂದಣ ವಾಣೀಶ ಸುಖಪೂರ್ಣ ಅಲ್ಲದಿದ್ದರೆ ಎನ್ನ ಕಾವ ಕರುಣಿಯ ಕಾಣೆ, ಮಲ್ಲಮರ್ದನ ನಮ್ಮ ವಿಜಯವಿಠ್ಠಲರೇಯನ, ನಿಲ್ಲಿಸಿ ಮನದಲ್ಲಿ ಪ್ರತಿಕೂಲವಾಗಿದೆ ॥೫॥

**ಜತೆ**

ಅನಂತ ಜನುಮಕ್ಕೆ ನೀನೆ ಗುರು ಎಂಬ, ಜ್ಞಾನವೇ ಕೊಡು ಜೀಯಾ ವಿಜಯವಿಠ್ಠಲದಾಸಾ ॥೬॥

★ ★ ★ ★

## ಕನ್ನಡ ಲಘು ವಾಯುಸ್ತುತಿ

ಶ್ರೀಮದ್ವಿಷ್ಣ್ವಾಜ್ಞೆಯಿಂದ ಜನಿಸಿ ಪವನನು ಕೇಸರೀ ಕ್ಷೇತ್ರದಲ್ಲಿಕಂಜಾಕ್ಷೀ ಸೀತೆಗಾಗಿ ಲವಣಜಲಧಿಯಂ ಲಂಘಿಸಿ ಲಂಕೆಯಲ್ಲಿ। ಇದ್ದಂಥಾ ರಾವಣನ್ನು ರಘುಪನ ಕರದಿ

ನಿಂಗಿಸಿ ಭೂಮಿಯಿಂದ ಕೂಡಿದ್ದಾ ರಾಘವನ್ನು ಭಜಿಸಿ ಮೆರೆದಿ ಕಿಂಪೂರುಷಾ ಖಂಡದಲ್ಲಿ ||೧|| ಆ ವಾಯು ಭೀಮನಾಗಿ ಸುರವರ ಬಲದಿಂ ಕೋಬ್ಬಿದಾ ಮಾಗದನ್ನು ಕಿರ್ಮೀರಂ ಕೀಚಕನ್ನು ಬಕಮುಖಖಲರಂ ದುಷ್ಟದುರ್ಯೋಧನನ್ನು । ಕೊಂದು ರಾಜಾಶ್ವಮೇಧ ಪ್ರಮುಖಮಖಗಳಂ ಮಾಡಿ ಕೃಷ್ಣಾರ್ಪಣೆಂದು ರಾಜಾಧೀರಾಜನಾಗಿ ಸುಜನರಪತಿಯು ಮೆರೆದನು ಸಾಧು ಬಂಧು ||೨|| ಪ್ರಾಗ್ ಜನ್ಮದ್ವೇಷದಿಂದ ಕಲಿಯಲಿ ಮಣಿಮಾನ್ ಸಂಕರಾಚಾರ್ಯನಾಗಿ ಬ್ರಹ್ಮಾಹಂ ನಿರ್ಗಣೋಹಂ ವಿತಥ ವಚನದಿಂ ಎಲ್ಲರಂ ಕೆಡಿಸಲಾಗಿ । ಅಜ್ಞಾನಾಖ್ಯಾನದಿಂದ ಸುಜನರ ಮತಿಯು ಮ್ಲಾನವಂ ಪೊಂದಿರಲು ಶ್ರೀಶಾಜ್ಞಾ ಶಿರದಿ ವಹಿಸಿ ಕುರುಕುಲ ಪತಿಯೂ ಆದನೂ ಮಧ್ವಸೂರ್ಯಾ || ಸರ್ವಜ್ಞ ಶ್ರೀಶನೇನೇ ವಿಧಿಭವಮುಖರು ಶ್ರೀಹರೀ ದಾಸರೇನೇ ಸತ್ಯೇವೇ ಈ ಜಗತ್ತು ಜನವು ತ್ರಿವಿಧವು ನಿತ್ಯ ಪಂಚಪ್ರಭೇದ । ಈಶಾಧೀನೇವೇ ಸರ್ವಶ್ರುತಿಗಿದನುಗುಣಾ ಅಂದದೇವೇ ಪ್ರಮಾಣಾ ಹೀಗೆಂದು ಮಧ್ವಸೂರ್ಯ ತಿಳಿಸಿ ಸುಜನಕೆ ಆದನು ದಿವ್ಯಮೋದಾ ||೪|| ಕೇಳೆಂದು ಮಾಯಿವಾದೀ ಸಕಲಸುರಪನು ಎಂದಿಗೂ ಅಲ್ಪಜ್ಞನಲ್ಲಾ ಜಿಜ್ಞಾಸ್ಯ ಬ್ರಹ್ಮನಾರಾಯಣ ಸಕಲಜಗತ್ಪರಿಮಿತಿಯನ್ನು ಬಲ್ಲ । ನೀನರಿಯೋ ನಿನ್ನ ನಾರಿ ಹಗಲು ಇರುಳಲಿ ಜಾರವಾಮಾಡುವೋದು ಬ್ರಹ್ಮಾಹಂ ನಿರ್ಗುಣೆಂಬೋ ವಿತಥ ವಚನವು ಹ್ಯಾಂಗ ನೀ ಆಡವೋದು ||೫|| ಮಾಯಾವಾದಿಗೆ ಮಾನಹೀನಜನಕೆ ಶುದ್ಧಿಲ್ಲದಾ ನಾಯಿಗೆ ಮಾಯೀ ಸಂಕರಗೆ ಸಮೀರನಗದಾ ಪೆಟ್ಟಿಂದಲೇ ಮುಕ್ತಿಯು । ನಿತ್ಯಂಧಂತಮ ಅಹುದೆಂದು ತಿಳಿದು ಅಜ್ಞಾನವಂ ವರ್ಜಿಸಿ ಶ್ರೀಮುದ್ರಾಸಹ ಗೋಪೀಚಂದನವನು ದೇಹಂಗಳಲ್ಯರ್ಚಿಸಿ ||೬||

|| ಇತಿ ಶ್ರೀವಾದಿರಾಜವಿರಚಿತ ಕನ್ನಡಲಘುವಾಯುಸ್ತುತಿಃ ಸಮಾಪ್ತಾ ||

★ ★ ★ ★

# ಶ್ರೀರುಕ್ಮಿಣಿ ಸ್ವಯಂವರ ಹಾಡು

ಬಂದು ಮಧುರೆಗೆ ತಾ ಕೊಂದು ಮಾತುಳನ । ಬಂಧನ ರಹಿತವಾಗಲು ಮಾತಾಪಿತರು ||೧|| ಜರೆಯಸುತನ ಬಾಧೆಯು ಘನವಾಗುತಿರಲು । ಜಲದೊಳು ದ್ವಾರಕಾಪುರವ ನಿರ್ಮಿಸಿದ ||೨|| ಯದುನಂದನ ತನ್ನಗ್ರಜ ಬಲರಾಮನ ಕೂಡ । ಮುದದಿಂದಾವಾಸ ಯಾದವರ ಸಹಿತಾಗಿ ||೩|| ಇರುತಿರೆ ರುಕುಮ ತನ್ನನುಜೆ ಸಹಿತಾಗಿ । ಚೆಲುವ ಸುಂದರಿಗೆ ಬ್ಯಾಗ್ವಿವಾಹದುತ್ಸದವು ||೪|| ಅಕ್ಕರದನುಜೆ ರುಕ್ಮಿಣೀದೇವಿಗಿನ್ನು

। ಚಿಕ್ಕ ಚೆನ್ನಿಗನಾದ ತಕ್ಕ ವರನ್ಯಾರು ॥೫॥ ವಸುಧೆಪಾಲರ ಮಧ್ಯ ಶಿಶುಪಾಲೀಲಗಧಿಕ । ಕುಸುಮಗಂಧನಿಗೆ ನಿಶ್ಚಯನ ಮಾಡಿದರು ॥೬॥ ಅಗ್ರಜನ್ವಾಕ್ಯವ ಕೇಳಿ ಮನದಲ್ಯೋಚಿಸುತ । ಘನಮಹಿಮೆಗೆ ಓಲೆ ಬರೆದಳು ಲಿಖಿತ ॥೭॥ ನೀನೆ ಮುರವೈರಿ ಸರುವಾಂತರಯಾಮಿ । ನಿನ್ನ ಸ್ಮರಣೆ ದರುಶನ ಮಾತ್ರಕೆ ಪರಮಲಾಭೆನಗೆ ॥೮॥ ಎಂದೆಂದಿಗೆನಕೂಡಾನಂದವ ಬಟ್ಟು । ಇಂದೆ ಕೈಬಿಟ್ಟು ದೂರಿಂದ ನೋಡುವರೆ ॥೯॥ ಪ್ರಾಣಪತಿ ನೀ ಪಾಣಿ ಗ್ರಾಣ (ಗ್ರಹಣ) ಮಾಡದಲೆ ಇರೆ । ಪ್ರಾಣ ಉಳಿಯದು ಕೇಳೆನ್ನಾಸೆ ಹುಸಿಯಲ್ಲ ॥೧೦॥ ಸರ್ವವಂದಿತ ನಿನ್ನ ಅರಮನೆದ್ವಾರ । ಕಾದಿರುವೋ ಭೃತ್ಯರಿಗೊಪ್ಪಿಸಿಕೊಡದೆ ಕರುಣಾಳು ॥೧೧॥ ದೇಶಕಾಲಕೆ ನಾ ನಿನ್ನ ಸಮಳ್ವಾಸುದೇವ । ಗುಣಕಸಮಳೆಂದು ಉದಾಸೀನ ಮಾಡಬ್ಯಾಡ ॥೧೨॥ ವಕ್ಷಸ್ಥಳದ ವಾಸಿಯ ತುಚ್ಛ ಮಾಡದಲೆ । ಲಕ್ಷೀಲೆ ಕರೆದೊಯ್ಯೊ ಪಕ್ಷಿವಾಹನನೆ ॥೧೩॥ ಎನ್ನಬಿನ್ನಪ ಕೇಳಿ ಮನ್ನಿಸೊ ಕೃಷ್ಣ । ಪನ್ನಂಗಶಯನ ನಿನ್ನ ಪಾದಕ್ಕೆರಗುವೆನು ॥೧೪॥ ಸುರರ್ವಂದಿತ ಪಾದ ಉರಗ ಮೆಟ್ಟಿದ ಪಾದ । ನಿನ್ನ ಧ್ವಜವಜ್ರಾಂಕುಶ ಪಾದಕ್ಕೆರಗಿ ನಮಿಸುವೆನು ॥೧೫॥ ಬರೆದ ಓಲೆಗೆ ಹಚ್ಚಿ ಅರೆದರಿಷಿಣವ । ಕರವ ಜೋಡಿಸಿ ಕೃಷ್ಣಗೆ ಕರೆದು ಬ್ರಾಹ್ಮಣನ ॥೧೬॥ ಜಗದೀಶಗೆ ಪತ್ರವ ಜಾಣೆ ತಾ ಬರೆದು । ದ್ವಿಜನ ಕೈಯಲಿ ಕೊಟ್ಟು ಕಳುಹೆ ದ್ವಾರಕೆಗೆ ॥೧೭॥ ವ್ಯಾಳ್ಯ ವೀರುವುದೆಂದು ಎದ್ದಾಗ ರುಕುಮ । ಭೇರಿ ತಾಡನ ಮಾಡಿಸೆ ಭೋರೆಂಬೊ ರಭಸ ॥೧೮॥ ಎರೆದು ಮುಡಿಯನ್ಹಿಕ್ಕಿ ಜಡೆಯಬಂಗಾರ । ಚೌರಿ ರಾಗಟೆ ಗೊಂಡ್ಯ ಧರಗೆ ಮುಟ್ಟುತ್ತಿರೆ ॥೧೯॥ ಅಚ್ಚ ಜರತಾರಿ ಹೊಳೆವಷ್ಟಪತ್ರಿಕೆಯು । ಮ್ಯಾಲೊಪ್ಪುವೊ ಪಟ್ಟೆನೊಡ್ಯಾಣ ಸರಿಸಿಟ್ಟು ॥೨೦॥ ಕಂಕಣ ಚೂಡ್ಯ ದ್ವಾರ್ವ್ಯಹರಡಿ ಕೈಕಟ್ಟು । ಮ್ಯಾಲ್ವೊಂಕಿ ನಾಗಮುರಿಗೆಗೊಪ್ಪುವ ಕಂಚುಕ ಕೊಟ್ಟು ॥೨೧॥ ಹರಳು ಮಾಣಿಕ್ಯದ್ವಾಲೆ ಬುಗುಡಿ ಬಾವುಲಿಯು । ಹೊಳೆವೂ ಮುತ್ತಿನ ಮೂಗುತಿ ಥಳಥಳಿಸುತಲಿ ॥೨೨॥ ಹಾರ ಪದಕದ ಮಧ್ಯ ಮೇಲಾದೇಕಾವಳಿಯು । ತೋರ ಮುತ್ತಿನ ದಂಡೆ ಲೊಲ್ಯಾಡುತಿರಲು ॥೨೩॥ ಕನ್ನಡ್ಯಂದದಿ ಗಲ್ಲ ಕಳೆಯ ಸುರಿಸುತಲಿ । ಸಣ್ಣ ಮುತ್ತಿನ ಗೊಂಚಲು ಸರಗಳೆಯುತಲಿ ॥೨೪॥ ಝುಗರಝುಗಿಸುತ ಬಂದಳು ಜಗದ ಮೋಹಿನಿಯು । ಮುಗುಳು ನಗೆಯಿಂದ ಮೂರ್ಜಗವ ಮೋಹಿಸುತ ॥೨೫॥ ಗೆಜ್ಜೆ ಸರಪಳಿ ಅಂದಿಗೆ ಹೆಜ್ಜೆ ಸರಿಸಿಡುತ । ನಿರ್ಜರೇಶನ ಮಾರ್ಗದ ನಿರೀಕ್ಷಣದಿಂದ ॥೨೬॥ ಸುತ್ತ ಮತ್ತೈದೇರು ಕತ್ತಿಕೈ ಭಟರು । ತುತ್ತೂರಿ ವಾದ್ಯ ಭೇರಿ ತಮ್ಮಟೆ ಕಾ (ಕಹ)ಳೆ ॥೨೭॥

ನಡೆದು ರುಕ್ಮಿಣಿ ಹೊಕ್ಕಳು ಗುಡಿಯ ಮಹಾದ್ವಾರ । ಮೃಡನರಸಿಯ ಪೂಜಿಸೆ ದೃಢಭಕ್ತಿಯಲಾಗ ।।೨೮।। ಹಿರಿಯ ಮುತ್ತೈದೇರಿಗೆ ಮರದ ಬಾಗಿನವ । ಅರೆದರಿಷಿಣ ಕುಂಕುಮ ಕರದಲ್ಲಿ ಗಂಧ ।।೨೯।। ಕಡಲೆ ಕಬ್ಬು ಕಾಯಿ ಉಡಿಯ ತುಂಬುತಲಿ । ಕಡಲಶಯನನ ಮಾರ್ಗವ ಬಿಡದೆ ನೋಡುತಲಿ ।।೩೦।। ಮಂಗಳಗೌರಿಯೆದುರಿಗೆ ಮುತ್ತೈದೇರು । ಅಂಗನೆ ಬೈಷ್ಮಿ ಪೀಠದಲಿ ಕುಳ್ಳಿರಿಸಿ ।।೩೧।। ಮಂಗಳಾಂಗನು ನಿನ್ನ ಪತಿಯಾಗಲೆಂದು । ಮಂಗಳಸೂತ್ರ ಬಂಧನ ಮಾಡಲು ನಗುತ ।।೩೨।। ಮಾರನಯ್ಯನ ಮೋರೆ ನೋಡಿದಾಕ್ಷಣದಿ । ಮಹಾದ್ವಾರದಿ ಮುತ್ತು ಸೂರ್ಯಾಡೇನೀಕ್ಷಣದಿ ।।೩೩।। ಹರನ್ವಲ್ಲಭೆ ತೋರೆ ಮುರಹರನ ಕರಿವರನ । ಭಯಹರನ ಶ್ರೀಧರನ ಕೂಡುವೆನೀ ದೇವರನು ।।೩೪।। ಮಚ್ಚಲೋಚನೆ ಧ್ಯಾನ ಅಚ್ಯುತನಲ್ಲೇ ಇಡೆ । ಭಕ್ತವತ್ಸಲ ಬಂದನೆಂದಚ್ಚರಿಸಿದರು ।।೩೫।। ಹತವಾದ ಪ್ರಾಣ ಬರಲತಿ ಹರುಷವ್ಹ್ಯಾಗೋ । ರಥವ ಕಾಣುತ ರುಕ್ಮಿಣಿ ಕೃತಕೃತ್ಯಳಾಗ ।।೩೬।। ಸೃಗಾಲದ ಮಧ್ಯ ಒಂದು ಸಿಂಹ ಹೊಕ್ಕಂತೆ ಶ್ರೀನಾಥ । ರುಕ್ಮಿಣಿಯ ಸ್ವೀಕಾರ ಮಾಡಿದನು ।।೩೭।। ರಥವು ಮುಂದಕೆ ಸಾಗೆ ಪಥವು ತೋರದಲೆ । ಅತಿ ಬಾಯ ಬಿಡುತ ಶ್ರೀಪತಿಯ ಬೆನ್ನತ್ತಿ ।।೩೮।। ಬಂದ ರುಕುಮನ ಗಡ್ಡ ಮಂಡಿ ಸವರುತಲಿ । ಬಂಧನ ರಥಕೆ ಮಾಡಿದ ನಂದಸುತನು ।।೩೯।। ವಾರೆನೋಟದಿ ನೋಡಿ ಮೋರೆತಗ್ಗಿಸಿದ । ನಾರಿ ರುಕ್ಮಿಣಿಯ ಮುಖ ನೋಡಿ ಶ್ರೀಕೃಷ್ಣ ।।೪೦।। ಕರುಣವಿರಲಿಕ್ಕೆ ನೀ ಬರೆದ್ಯಾತಕೆ ಓಲೆ । ತಿಳಿಯಲಿಲ್ಲವೆ ಎಂದೀಪರಿ ಹಾಸ್ಯದಿ ನುಡಿದ ।।೪೧।। ಒಡಹುಟ್ಟಿದವನಲ್ಲಿ ಕಡುಮೋಹವಿನ್ನೂ । ಹಿಡಿಯದೆನ್ನೊಳು ಕೋಪ ಬಿಡು ರುಕ್ಮಿಣಿ ಎಂದ ।।೪೨।। ಪಂಚಜಾಕ್ಸಿಗೆ ಹೇಳಿ ಶಂಕಾರಿಷಿಣ (ಸಂಕರ್ಷಣ)ನು । ಮುಂಚೆ ಬಿಡಿಸ್ಯವನ ಬಂದರು ದ್ವಾರಾವತಿಗೆ ।।೪೩।। ಪರಮ ಸಂಭ್ರಮದಿಂದ ಹರಿಯು ರುಕ್ಮಿಣಿಗೆ । ಹರಸುತ್ಹಾಕಿದರು ಶಿರದಲಿ ಮಂತ್ರಾಕ್ಷತೆಯ ।।೪೪।। ಕಟ್ಟಿ ಕರಿಮಣಿ ಮಂಗಳ ಸೂತ್ರ ಕೊರಳಲ್ಲಿ । ಹಚ್ಚಿದ (ಅ)ರಿಶಿಣ ಕುಂಕುಮ ಹರಿ ತಾನ್ಹರುಷದಲಿ ।।೪೫।। ಸುರರು ಜಯಜಯವೆಂದು ಹರಿಯು ರುಕ್ಮಿಣಿಗೆ । ವಿವಾಹದುತ್ಸವಕಾಲಕೆ ಕರೆದರ್ಹೂವುಮಳೆಯ ।।೪೬।। ಪಟ್ಟದ್ವಲ್ಲಭೆ ಕೂಡಿ ಶ್ರೇಷ್ಠ ಭೀಮೇಶ- । ಕೃಷ್ಣ ದ್ವಾರಕೆಯಲ್ಹಾವಾಸ ಮಾಡಿದನು ।।೪೭।।

★ ★ ★ ★

# ನಳಚರಿತ್ರೆ ಹಾಡು

## ಧ್ವನಿ-೧

ಉಮೆಯ ಸುತನ ಚರಣಕಮಲಕೆ ನಮಿಸಿ ಪೇಳುವೆ ನಾನು ಹರುಷದಿ । ರಮೆಯ ರಮಣನ ಕರುಣದಿಂದಲಿ ನಳನ ಕಥೆಗಳನು ॥೧॥ ಕಂತುಪಿತನ ಕರುಣದಲಿ ದಮಯಂತಿ ಬಂದಾಪತ್ತು ಕಳೆದು । ಸಂತೋಷದಿ ಸಾಮ್ರಾಜ್ಯವಾಳಿದ ಕಥೆಯ ಪೇಳುವೆನು ॥೨॥ ಸತ್ಯವಂತನೆಂಬೊ ನಳ ತಾ ಪೃಥಿವಿಪತಿ ರಾಜಾಧಿರಾಜನು । ಭೃತ್ಯನಾಗಿ ಭೀಮೇಶಕೃಷ್ಣಗೆ ಭಕ್ತನೆನಿಸುವನು ॥೩॥

## ವಚನ-೨

ಬಲವಂತನಾದ ನಳರಾಯನಾಖ್ಯಾನದಲಿ । ಕಲಿಬಾಧೆಯಿಂದ ಕಡೆಗಾಗುವರು ಜನರೆಲ್ಲ । ಬಲರಾಮನನುಜನನುಗ್ರ(ಹ) ದಿಂದೀಕಥೆಯ । ಸುಲಭದಿಂದ್ಹೇಳಿ ಕೇಳುವರು ಸಜ್ಜನರು ॥

## ಧ್ವನಿ-೩

ಹಸ್ತಿನಾವತಿಯ ಪಟ್ಟಣದಿ ಪಾಂಡವರು ಲೆತ್ತ ಜೂಜುಗಳಾಡುತ । ಕೆಟ್ಟ ಕೌರವಗೆ ಸೋತೆಲ್ಲ ರಾಜ್ಯಗಳನು ಬಿಟ್ಟಡವಿಗೆ ಪೋದರು ॥೧॥ ವನಜಾಕ್ಷಿ ದ್ರೌಪದಿಯನು ಕೂಡಿಧರ್ಮ ವನವಾಸದಲ್ಲಿರಲು । ಘನಮಹಿಮನು ಬೃಹದಶ್ವನೆಂಬುವ ಮುನಿ ವನಕಾಗ ನಡೆತಂದನು ॥೨॥ ಬಂದ ಮುನಿಗೆ ವಂದಿಸುತ ಧರ್ಮರಾಯ ಆನಂದದಿಂದಲಿ ಪೂಜಿಸಿ । ಬಂದ್ವನವಾಸದ್ವಾರ್ತೆಗಳ ಹೇಳುತಲಾಗ ಮುಂದೇನುಗತಿ ಎಂದನು ॥೩॥ ಖಳದುಶ್ಶಾಸ(ನ)ನು ಎಳೆದು ದ್ರೌಪದಿಯ ದುರುಳರ ಸಭೆಯೊಳಗೆ । ಸೆಳೆದನು ಉಟ್ಟ ಸೀರೆಗಳ ಎಂದೆನುತಲಿ ಬಳಲುತ್ಹೇಳಿಕೊಂಡ ॥೪॥ ಸಣ್ಣಮಲ್ಲಿಗೆ ಪೋಲುವಂಥ ದ್ರೌಪದಿಯ ಅರಣ್ಯವಾಸಗಳ ನೋಡಿ । ಇನ್ನೀಸಂತಾಪ ಸೈರಿಸಲಾರೆನೆಂತೆಂದು ಕಣ್ಣಲುದಕ ತಂದನು ॥೫॥ ಪಟ್ಟದರಸಿ ಅನುಜರ ಸಹಿತಾಗಿ ಶ್ರೀಕೃಷ್ಣನನುಗ್ರಹದಿಂದ । ಸತ್ಯಧರ್ಮವ ನಡೆಸುತಲಿದ್ದ ರಾಜಗೆ ಮತ್ತೆಲ್ಲಿವನವಾಸವು ॥೬॥ ಪೃಥಿವಿನಾಳುವ ನಳರಾಯನೆಂಬಾತನು ಸತಿಸುತರನು ಅಗಲಿ । ಅತಿದುಃಖದಿಂದ ಭೀಮೇಶಕೃಷ್ಣನ ಪಾದ ಗತಿಯೆಂದು ತಿರುಗಿದನು ॥೭॥

## ವಚನ-೪

ದಾರ ಮಗನಾತ ನಳರಾಯನೆಂಬುವ ಶ್ರೇಷ್ಠ। ಘೋರ ಅರಣ್ಯವಾಸ್ಯಾಕೆ ಬಂದಿತು ಕಷ್ಟ॥ ಕೇಳಿ ಸಂತಾಪವಾಗುವುದೆನ್ನ ಮನಕೆನಲು। ಹೇಳುವೆನು ನಳನ ಕಥೆ ಕೇಳೆಂದನಾ ಮುನಿಪನು ॥

## ಧ್ವನಿ-೫

ಸಾಕು ಸಂತಾಪ ಮನಸ್ವ್ಯಾಕುಲವಾಗಿದೆ ನೀ ಕೇಳಿ ನಿಶ್ಚಿಂತನಾಗೋ ರಾಜ ॥ಪ॥ ವಸುಧೆಪಾಲನೆ ಕೇಳೊ ನಿಷಧದೇಶಾಧಿಪತಿ ಕುಶಲದಿಂದಿದ್ದನಾ ವೀರಸೇನ। ಹೆಸರಾದ ಮಗನು ನಳರಾಯನೆಂಬಾತನು ದೆಸೆವಂತನಾದ ಭೂಲೋಕದೊಳಗೆ ॥೧॥ ಗುಣದಲ್ಲಿ ಗಂಭೀರ ಮಣಿಯಂತೆ ಮೈಬಣ್ಣ ಕಳೆಯು ಚೆಲ್ವಿಕೆಯು ಕಾಮನ ಪೋಲ್ವುದು। ನಳರಾಯನಲ್ಲೀಗುಣಗಳ ಕೇಳಿ ದಮಯಂತಿ ಮರುಳಾಗಿ ಮನಸಿಟ್ಟಳಾತನಲ್ಲೆ ॥೨॥ ಸತ್ಯ ಪ್ರತಿಜ್ಞೆ ಮೀರುವನಲ್ಲ ನಳರಾಯ ಕೊಟ್ಟ ಭಾಷೆಗಳ ತಪ್ಪುವನಲ್ಲವೋ। ಅತ್ಯಂತ ಹರುಷದಿಂದಾಗ ತಾ ಭೀಮೇಶಕೃಷ್ಣನ್ನ ಭಜಿಸಿ ಭಕ್ತಿಯಲಿದ್ದನು ॥೩॥

## ವಚನ-೬

ಅವನಿಯೊಳಗೊಬ್ಬ ವಿದರ್ಭದೇಶಾಧಿಪತಿ ಭುವನದೊಳು ಭೀಮರಾಯನೆಂದು ಹೆಸರಾದ। ದಮನೆಂಬೊ ಋಷಿಯ ವರದಿಂದ ಮೂರು ಗಂಡುತನಯರ್ಹುಟ್ಟಲು ದಮನ ಹೆಸರೆಂದು ಕರೆಯುತ್ತ ಪಡೆದನಾಗ ॥ ದಮಯಂತಿ ಎಂಬುವ ಮಗಳ ಎರಡು ಪಾದಗಳು ಎಳೆ ಮಾವಿನಾ ತಳಿಲಂತೆ। ನಡೆದರಾಗಜ ನೋಡಿ ನನಗೆ ಮಿಗಿಲೆಂಬುವುದು ನಡುವ ನೋಡುತ ಸಿಂಹ ನಾಚಿ ಬೆರಗಾಗುವುದು ॥ ಕಡಗಬಳೆಕರ ಬಾಳೆದಿಂಡಿನಂ(ತೆ) ತೋರುವುದು ಜಡೆಯ ನೋಡುತ ಸರ್ಪ ಮಡುವ ಸೇರ್ಪುದು ಪೋಗಿ। ಉಡುರಾಜ ನೋಡ ಮುಖಕಾಂತಿಗೆ ಕಪ್ಪಾದ ಬಿಳಿ ಮುತ್ತು ಪುಟ್ಟ ಕರಡಿಗೆಯಂಥ ಬಾಯಿಂದ ॥ ನುಡಿದ ಮಾತಿಗೆ ಮರುಳುಗೊಂಡುವಾ ಗಿಳಿಹಿಂಡು ಒಡೆದು ದಾಳಿಂಬ್ರ ಬಾಯ್ಬಿಡಲು ದಂತಕೆ ಹವಳ। ಕುಡಿಯೆಂತ ತುಟಿಕೆಂಪು ಕದಪು ಕನ್ನಡಿಯಂತೆ ಮುಡಿಯ ಸಂಪಿಗೆತೆನೆಯು ಮೂಗುಮಾಟಕೆ ಬಾಡೆ ॥ ಕಡೆಗಣ್ಣು ಕಮಲದೆಸಳಂತೆ ತಿದ್ದಿದ ಹುಬ್ಬು ಕಡಲಂತೆ ಗುಣಕೊಂದು ಕಡಿಮ್ಮಿಲ್ಲುದ್ದಾಗಿರಲು। ಕಡುಮುದ್ದು ಕಾಮನ್ವಲ್ಲಭೆಗೆಸಮ ಚೆಲ್ವಿಕೆಯು ಸಡಗರದ ಶುಭ ಲಕ್ಷಣವ ಕೇಳಿ ನಳರಾಯ ॥ ಮಡದ್ಯಾಗಲೆನುತ ಮನಸಿಟ್ಟು ದಮಯಂತಿರಲಿ। ಬಿಡದೆ ಭೀಮೇಶಕೃಷ್ಣನ ಬೇಡಿಕೊಳ್ಳುತ್ತಿದ್ದನು ॥

# ನಳಚರಿತ್ರೆ ಹಾಡು

## ಧ್ವನಿ-೧

ಉಮೆಯ ಸುತನ ಚರಣಕಮಲಕೆ ನಮಿಸಿ ಪೇಳುವೆ ನಾನು ಹರುಷದಿ । ರಮೆಯ ರಮಣನ ಕರುಣದಿಂದಲಿ ನಳನ ಕಥೆಗಳನು ॥೧॥ ಕಂತುಪಿತನ ಕರುಣದಲಿ ದಮಯಂತಿ ಬಂದಾಪತ್ತು ಕಳೆದು । ಸಂತೋಷದಿ ಸಾಮ್ರಾಜ್ಯವಾಳಿದ ಕಥೆಯ ಪೇಳುವೆನು ॥೨॥ ಸತ್ಯವಂತನೆಂಬೊ ನಳ ತಾ ಪೃಥಿವಿಪತಿ ರಾಜಾಧಿರಾಜನು । ಭೃತ್ಯನಾಗಿ ಭೀಮೇಶಕೃಷ್ಣಗೆ ಭಕ್ತನೆನಿಸುವನು ॥೩॥

## ವಚನ-೨

ಬಲವಂತನಾದ ನಳರಾಯನಾಖ್ಯಾನದಲಿ । ಕಲಿಬಾಧೆಯಿಂದ ಕಡೆಗಾಗುವರು ಜನರೆಲ್ಲ । ಬಲರಾಮನನುಜನನುಗ್ರ(ಹ) ದಿಂದೀಕಥೆಯ । ಸುಲಭದಿಂದ್ಹೇಳಿ ಕೇಳುವರು ಸಜ್ಜನರು ॥

## ಧ್ವನಿ-೩

ಹಸ್ತಿನಾವತಿಯ ಪಟ್ಟಣದಿ ಪಾಂಡವರು ಲೆತ್ತ ಜೂಜುಗಳಾಡುತ । ಕೆಟ್ಟ ಕೌರವಗೆ ಸೋತೆಲ್ಲ ರಾಜ್ಯಗಳನು ಬಿಟ್ಟಡವಿಗೆ ಪೋದರು ॥೧॥ ವನಜಾಕ್ಷಿ ದ್ರೌಪದಿಯನು ಕೂಡಿಧರ್ಮ ವನವಾಸದಲ್ಲಿರಲು । ಘನಮಹಿಮನು ಬೃಹದಶ್ವನೆಂಬುವ ಮುನಿ ವನಕಾಗ ನಡೆತಂದನು ॥೨॥ ಬಂದ ಮುನಿಗೆ ವಂದಿಸುತ ಧರ್ಮರಾಯ ಆನಂದದಿಂದಲಿ ಪೂಜಿಸಿ । ಬಂದ್ವನವಾಸದ್ವಾರ್ತೆಗಳ ಹೇಳುತಲಾಗ ಮುಂದೇನುಗತಿ ಎಂದನು ॥೩॥ ಖಳದುಶ್ಯಾಸ(ನ)ನು ಎಳೆದು ದ್ರೌಪದಿಯ ದುರುಳರ ಸಭೆಯೊಳಗೆ । ಸೆಳೆದನು ಉಟ್ಟ ಸೀರೆಗಳ ಎಂದೆನುತಲಿ ಬಳಲುತ್ಹೇಳಿಕೊಂಡ ॥೪॥ ಸಣ್ಣಮಲ್ಲಿಗೆ ಪೋಲುವಂಥ ದ್ರೌಪದಿಯ ಅರಣ್ಯವಾಸಗಳ ನೋಡಿ । ಇನ್ನೀಸಂತಾಪ ಸೈರಿಸಲಾರೆನೆಂತೆಂದು ಕಣ್ಣಲುದಕ ತಂದನು ॥೫॥ ಪಟ್ಟದರಸಿ ಅನುಜರ ಸಹಿತಾಗಿ ಶ್ರೀಕೃಷ್ಣನನುಗ್ರಹದಿಂದ । ಸತ್ಯಧರ್ಮವ ನಡೆಸುತಲಿದ್ದ ರಾಜಗೆ ಮತ್ತೆಲ್ಲಿ ವನವಾಸವು ॥೬॥ ಪೃಥಿವಿನಾಳುವ ನಳರಾಯನೆಂಬಾತನು ಸತಿಸುತರನು ಅಗಲಿ । ಅತಿದುಃಖದಿಂದ ಭೀಮೇಶಕೃಷ್ಣನ ಪಾದ ಗತಿಯೆಂದು ತಿರುಗಿದನು ॥೭॥

## ವಚನ-೪

ದಾರ ಮಗನಾತ ನಳರಾಯನೆಂಬುವ ಶ್ರೇಷ್ಠ। ಘೋರ ಅರಣ್ಯವಾಸ್ಯಾಕೆ ಬಂದಿತು ಕಷ್ಟ।। ಕೇಳಿ ಸಂತಾಪವಾಗುವುದೆನ್ನ ಮನಕೆನಲು । ಹೇಳುವೆನು ನಳನ ಕಥೆ ಕೇಳೆಂದನಾ ಮುನಿಪನು ।।

## ಧ್ವನಿ-೫

ಸಾಕು ಸಂತಾಪ ಮನಸ್ವ್ಯಾಕುಲವಾಗಿದೆ ನೀ ಕೇಳಿ ನಿಶ್ಚಿಂತನಾಗೋ ರಾಜ ।।ಪ।। ವಸುಧೆಪಾಲನೆ ಕೇಳೊ ನಿಷಧದೇಶಾಧಿಪತಿ ಕುಶಲದಿಂದಿದ್ದನಾ ವೀರಸೇನ । ಹೆಸರಾದ ಮಗನು ನಳರಾಯನೆಂಬಾತನು ದೆಸೆವಂತನಾದ ಭೂಲೋಕದೊಳಗೆ ।।೧।। ಗುಣದಲ್ಲಿ ಗಂಭೀರ ಮಣಿಯಂತೆ ಮೈಬಣ್ಣ ಕಳೆಯು ಚೆಲ್ವಿಕೆಯು ಕಾಮನ ಪೋಲ್ವುದು । ನಳರಾಯನಲ್ಲೀಗುಣಗಳ ಕೇಳಿ ದಮಯಂತಿ ಮರುಳಾಗಿ ಮನಸಿಟ್ಟಳಾತನಲ್ಲೆ ।।೨।। ಸತ್ಯ ಪ್ರತಿಜ್ಞೆ ಮೀರುವನಲ್ಲ ನಳರಾಯ ಕೊಟ್ಟ ಭಾಷೆಗಳ ತಪ್ಪುವನಲ್ಲವೋ । ಅತ್ಯಂತ ಹರುಷದಿಂದಾಗ ತಾ ಭೀಮೇಶಕೃಷ್ಣನ್ನ ಭಜಿಸಿ ಭಕ್ತಿಯಲಿದ್ದನು ।।೩।।

## ವಚನ-೬

ಅವನಿಯೊಳಗೊಬ್ಬ ವಿದರ್ಭದೇಶಾಧಿಪತಿ ಭುವನದೊಳು ಭೀಮರಾಯನೆಂದು ಹೆಸರಾದ । ದಮನೆಂಬೊ ಋಷಿಯ ವರದಿಂದ ಮೂರು ಗಂಡುತನಯರ್ಹುಟ್ಟಲು ದಮನ ಹೆಸರೆಂದು ಕರೆಯುತ್ತ ಪಡೆದನಾಗ ।। ದಮಯಂತಿ ಎಂಬುವ ಮಗಳ ಎರಡು ಪಾದಗಳು ಎಳೆ ಮಾವಿನಾ ತಳಿಲಂತೆ । ನಡೆದರಾಗಜ ನೋಡಿ ನನಗೆ ಮಿಗಿಲೆಂಬುವುದು ನಡುವ ನೋಡುತ ಸಿಂಹ ನಾಚಿ ಬೆರಗಾಗುವುದು ।। ಕಡಗಬಳೆಕರ ಬಾಳೆದಿಂಡಿನಂ(ತೆ) ತೋರುವುದು ಜಡೆಯ ನೋಡುತ ಸರ್ಪ ಮಡುವ ಸೇರ್ಪುದು ಪೋಗಿ । ಉಡುರಾಜ ನೋಡ ಮುಖಕಾಂತಿಗೆ ಕಪ್ಪಾದ ಬಿಳಿ ಮತ್ತು ಪುಟ್ಟ ಕರಡಿಗೆಯಂಥ ಬಾಯಿಂದ ।। ನುಡಿದ ಮಾತಿಗೆ ಮರುಳುಗೊಂಡುವಾ ಗಿಳಿಹಿಂಡು ಒಡೆದು ದಾಳಿಂಬ್ರ ಬಾಯ್ಬಿಡಲು ದಂತಕೆ ಹವಳ । ಕುಡಿಯೆಂತ ತುಟಿಕೆಂಪು ಕದಪು ಕನ್ನಡಿಯಂತೆ ಮುಡಿಯ ಸಂಪಿಗೆತೆನೆಯು ಮೂಗುಮಾಟಕೆ ಬಾಡೆ ।। ಕಡೆಗಣ್ಣುಕಮಲದೆಸಳಂತೆ ತಿದ್ದಿದ ಹುಬ್ಬು ಕಡಲಂತೆ ಗುಣಕೊಂದು ಕಡಿಮ್ಮಿಲ್ಲುದ್ದಾಗಿರಲು । ಕಡುಮುದ್ದು ಕಾಮನ್ವಲ್ಲಭೆಗೆಸಮ ಚೆಲ್ವಿಕೆಯು ಸಡಗರದ ಶುಭ ಲಕ್ಷಣವ ಕೇಳಿ ನಳರಾಯ ।। ಮಡದ್ಯಾಗಲೆನುತ ಮನಸಿಟ್ಟು ದಮಯಂತಿರಲಿ । ಬಿಡದೆ ಭೀಮೇಶಕೃಷ್ಣನ ಬೇಡಿಕೊಳ್ಳುತ್ತಿದ್ದನು ।।

## ಧ್ವನಿ-೭

ಒಂದು ದಿನದಿ ಬ್ಯಾಟೆಗೆನುತ ಬಂದ ರಾಜನು । ಕಂಡ ರಾಜಹಂಸಪಕ್ಷಿ ಬರುವ್ಹೊ ಭರವನು ॥೧॥ ತುಂಡು ತುಂಡಾಗಿ ಚಂದ್ರಮನಂಬರದಿಂದಲಿ । ಬಂದು ಭೂಮಿಯಲ್ಲಿ ಬಿದ್ದನೋ ಏನೆಂದು ನೋಡಿದ ॥೨॥ ಸಾಲು ಸಾಲು ಚಂದ್ರಮನಂತ್ವಿಶಾಲವಾಗಿರೆ । ಹಾಲು ಸೊರೆಯುಂತಿದ್ದ ಪಕ್ಕ ಹರವಿಕೊಂಡಿದೆ ॥೩॥ ಸಂಪಿಗೆಯ ವನದ ಮಧ್ಯ ತಂಪಿನಿಂದಲಿ । ಗುಂಪು ಗುಂಪಾಗಾಡೋಪಕ್ಷಿ ಸಂಪು ನೋಡಿದ ॥೪॥ ದೊರೆಯು ಕರದಿಂದ್ಹಿಡಿಯಲ್ಹೋದ ಸರ್ವಪಕ್ಷಿಯು । ಭರದಿಂದ್ಹಾರಲು ಹಿರಿಯದೊಂದ್ಕೈಸೆರೆಯು ಸಿಕ್ಕಿತು ॥೫॥ ಬಿಡುಬಿಡೆನ್ನ ಹಿಡಿದು ಹೀಗೆ ತಡೆವ್ಹೋದ್ಯಾತಕೋ । ಒಡೆಯ ನಿನಗೊಂದ್ವಾರ್ತೆ ಹೇಳುವೆ ಸಡಗರ ಸುದ್ದಿ ॥೬॥ ಎಂಥ ರೂಪವಂತೋ ದಮಯಂತಿಗೆ ನೀನು । ಕಾಂತನಾಗುವಂತೆ ನಾ ಮಾಡುವೆನು ಮತೀಗ ॥೭॥ ಹವಳ ಮುತ್ತು ಕೂಡಿಸಿದಂತವಳಿಗೆ ನಿನಗೆ । ಬಿಳಿಯೆಲೆ ಅಡಕೆ ಸುಣ್ಣದಂತೆ ಸೊಗಸು ಕಾಂಬೋದು ॥೮॥ ಎನ್ನ ಮಾತು ಕೇಳೊ ರಾಜ ಮನ್ನಿಸಿ ಬ್ಯಾಗ । ನಿನ್ನಗೊಂದುಪಕಾರ ಮಾಡುವೆನು ಮತ್ತೀಗ ॥೯॥ ಅಂದ ಮಾತು ಕೇಳಿ ಬಿಟ್ಟಆನಂದದಿ ರಾಜ । ಮುಂದೆ ಭೀಮೇಶಕೃಷ್ಣಗೆ ಗತಿಯೆಂದು ಹಾರಿತು ॥೧೦॥

## ವಚನ-೮

ಕುಸುಮಲೋಚನೆ ಕುಸುಮಕೆನುತ ಬರುತಿರಲಾಗ । ಶಶಿವರ್ಣಪಕ್ಷಿ ಶಾವಂತಿಗೆವನದೊಳಗೆ ॥ ಪಸರಿಸುತ ರೆಕ್ಕೆ ಪರಮರ್ಥಿಲ್ಹಾರಾಡುತಿರೆ । ಹೊಸ ಹಂಸ ನೋಡಿ ಬೆರಗಾಗುತಲಿ ದಮಯಂತಿ ॥ ನಸುನಗುತಲ್ಹಿಡಿದು ಕೈ ಕೊಸರಿಕೊಂಡ್ಹೋಗುವುದು ಕುಶಲಮಾಡಲಿ ಕರೆಯೆ ಬಂದು ಕೈ ಸೇರುವುದು । ಹತನಾದ ಮುದ್ದು ಮುಖ ನೋಡಿ ಮಾತಾಡುವುದು ॥ ವಸುಧೆ ಮ್ಯಾಲೇನ್ವರ್ತಮಾನ ಹೇಳನುತಿರಲು । ಶಶಿವದನೆ ನಿನ್ನ ನವಯೌವನಕೆ ತಕ್ಕಂಥ ॥ ದೆಸೆವಂತನಾದ ನಳರಾಯನೆಂಬುವ ದೊರೆಯು । ಪುರುಷನಾದರೆ ನಿನ್ನ ಪುಣ್ಯಕ್ಕೆ ಸರಿಯಿಲ್ಲ ॥ ಮೊಸರು ತಂದ್ಹಾಲಿಗ್ಹೆಪ್ಪಿಟ್ಟಂತೆ ಕೂಡುವುದು । ಮಿಸುಣಿಮಾಣಿಕ್ಯ ಮುತ್ತು ಬೆರಸಿದಂತೆ ತೋರುವುದು ॥ ಅರಸನರಸಿಯು ಆಗಿ ಸರಸುಖಬಡುವಾಗ್ಗೆ । ನೆನಸಿಕೊಂಬುವಿ ಎನ್ನ ಮಾತು ಮರೆಯದೆ ನೀನು ಮನಸು ಬಂದರೆ ಮಾಡಿಕೊಂಡು ಮಕ್ಕಳ ಪಡೆದು ॥ ಬಿಸಜಾಕ್ಷಿ ನೀನು ಭೀಮೇಶಕೃಷ್ಣನ ದಯದಿ । ಹರುಷದಿಂದಲಿ ಬಾಳು ನಳನ್ವಾರ್ತೆಗಳನು ಕೇಳು ॥

## ಧ್ವನಿ-೯

ಅಮ್ಮ ಕೇಳಿದ್ವಾರ್ತೆಯ ನಮ್ಮ ರಾಜನ ಕೀರ್ತಿಯ । ಮನ್ಮಥನ ರೂಪ ಲಾವಣ್ಯ ಸುಂದರಮೂರ್ತಿಯ ॥ಪ॥ ಸಜ್ಜನ ಶಿರೋಮಣಿ ಸರ್ವಾಂಗ ವಜ್ರದ ಖಣಿ । ಸಾಮ್ರಾಜ್ಯಧಾರುಣೀಧಣಿ ನೀನಾಗೆ ಪಟ್ಟದ ರಾಣಿ ॥೧॥ ತ್ಯಾಗದಲ್ಲಿ ಕರ್ಣನು ಭೋಗಕಾಮರೇಂದ್ರನು । ಸಾಗರಕ್ಕೆ ಸರಿಯುಗುಣ ಸತ್ಯದಲಿ ಧರ್ಮರಾಯನು ॥೨॥ ಭೀಮರಾಯಗೆ ಹೇಳಿಕೋ ಭೀಮೇಶಕೃಷ್ಣಗೆ ಬೇಡಿಕೋ । ಆ ನಳನ್ನ ಮಾಡಿಕೋ ಅನಂತಸುಖವು ನೋಡಿಕೋ ॥೩॥

## ವಚನ-೧೦

ಪಕ್ಷಿಮಾತನು ಕೇಳಾಪೇಕ್ಷೆ ಹುಟ್ಟಿತು ಮನಕೆ ಇಕ್ಷುಚಾಪನ ಶರದಿಂದ ಮೋಹಿತಳಾಗಿ । ಲಕ್ಷ್ಮೀವಲ್ಲಭ ಹರಿಯ ಸಾಕ್ಷಿಯಿಂದ್ಹೇಳುವೆನು ಸಾಕ್ಷಾನ್‌ಪತಿಯು ನಳನೆಂದು ನೇಮಿಸಿಕೊಂಡೆ ॥ ಅಕ್ಷದಿಂದಿನ್ನೊಬ್ಬ ಪತಿಯ ನೋಡುವಳಲ್ಲ ರಕ್ಷಿಸೀಗೆನ್ನ ಸ್ವಯಂವರಕೆ ಬರಹೇಳೆನಲು । ಆ ಕ್ಷಣದಲ್ಹೋಗಿ ನಳರಾಯಗ್ವಾರ್ತೆಯ ತಿಳಿಸಿ ತಕ್ಷಣದಲ್ಹ್ಯಾಂತರಿಕ್ಷಕ್ಕೆ ನಡೆದಿತಾಗ ॥

## ಧ್ವನಿ-೧೧

ನಳನ ವಾರ್ತೆಗಳ ಕೇಳುವ ತನ್ನ ಮನದಲ್ಲಿ ಅಳಲುತ ಬಳಲುತಲಿ ಸೆಳೆಮಂಚದಲ್ಲಿ ಮಲಗಿ ಮೋಹನಾಂಗಿ ತಾ ಕಳೆಗುಂದಿ ಮುಖಪದ್ಮವು ॥೧॥ ಅನ್ನಪಾನಗಳ ಒಲ್ಲಳು ತನ್ನ ದೇಹಕ್ಕೆ ಬಣ್ಣದ್ವಸ್ತ್ರವನುಡದೆ ಸುಣ್ಣ ಬಿಳಿಯೆಲೆ ಅಡಕೆ ತಾಂಬೂಲವ ಕಣ್ಣಲಿ ನೋಡದಂತೆ ॥೨॥ ಮರುಗ ಮಲ್ಲಿಗೆ ಜಾಜಿ ಸಂಪಿಗೆ ಸರವನು ತುರುವಿಗೆ ಮುಡಿಯದಂತೆ ಸರಿಗೆಳತಿಯರನು ಕರೆದು ಮಾತಾಡದೆ ಮರುಗುತ ಸೊರಗಿದಳು ॥೩॥ ಮುತ್ತು ಮಾಣಿಕ್ಯ ಚಿನ್ನ ಸರ ಪದಕ ನವರತ್ನದಾಭರಣಗಳ ಬಿಚ್ಚಿಬಿಪ್ಪ (ಸುಟ)ಳು ಜಡೆ ಬಂಗಾರ ರಾಗಟೆ ಹಚ್ಚದೆ ಶ್ರೀಗಂಧವ ॥೪॥ ಕಾಮ ಮೋಹಗಳಿಂದ ಪರವಶವಾಗಿದೆ ಸಾಮಜಗಮನೆ ತಾನು ಭೀಮೇಶಕೃಷ್ಣನ ದಯದಿಂದ ನಳದೊರೆ ತೋರಿಸೀಗೆಂದೆನುತ ॥೫॥

## ವಚನ-೧೨

ಬಂದು ದೂತಿಯರೆಲ್ಹೇಳೆ ಭೀಮರಾಯಗೆ ನಿನ್ನ ನಂದನೆಯ ಮನಸು ನಳಿನಾಯನಲ್ಹೊಂದಿಹುದು । ಕಂದಿಕುಂದಿದಳೆನುತ ಕೇಳುತಾಕ್ಷಣದಲ್ಲಿ ಬಂದು ಬಿಗಿದಪ್ಪಿ

ತೊಡೆಯಲ್ಲಿಟ್ಟು ಮುದ್ದಿಸುತ ।। ಮುಂಗುರುಳು ತಿದ್ದಿ ಮುಖ ಬೆವರುಗಳನ್ನೊರೆಸುತ್ತ ಸಂದೇಹ ಬ್ಯಾಡ ಸ್ವಯಂವರವ ಮಾಡುವೆ ಮನಕ್ಕೆ । ಬಂದ ರಾಯರಿಗೊಲಿದು ವನಮಾಲೆ ಹಾಕೆನುತ ಆನಂದಬಡಿಸಿದ ಮಗಳನು ।।

## ಧ್ವನಿ-೧೩

ತಿಳಿಸಿದ ಸ್ವಯಂವರವ ರಾಯರಿಗೆಲ್ಲ ಕಳಿಸಿ ಪತ್ರಿಕವ ।।ಪ।। ಊರು ಶೃಂಗರಿಸುತ ಉತ್ತಮಗಂಧ ತಳಿರುತೋರಣ ಕಟ್ಟುತ್ತ ಬೀದಿ ಬೀದಿಗೆ ಬಿಡಾರ ಮಂಟಪ ಮಧ್ಯಹಾದಿಗ್ಗುಂದರ ಹಾಕಿ ಹಲವು ಕನ್ನಡಿನಿಟ್ಟು ಬಾರಿ ಬಾರಿಗೆ । ನೂರು ಸಾವಿರ ಭೇರಿ ಬಡಿಸಿ ಭೀಮರಾಯ ಮಾದುವನು ತಾ ಮಗಳಸ್ವಯಂವರ ನೋಡಲು ಜನ ಬರಬೇಕೆಂದು ।।೧।। ದೊರೆ ನಡೆಸಿದ ಕಾರ್ಯವ ನಾರದರಿಂದ ಸುರದೇವತೆಗಳು ಕೇಳಿ ನರಲೋಕದೊಳಗೆ ನಮ್ಮಂಥ ಪುರುಷರಿಲ್ಲ ದೊರೆ ಭೀಮರಾಯಗೆ ಅಳಿಯನಾಗುವೆನೆಂದು । ಇಂದ್ರನು ಯಮನು ವರುಣನು ಕುಬೇರ ಅಗ್ನಿ ಕೂಡಿಕೊಂಡು ಬರುವ ಮಾರ್ಗದಿ ಕಂಡು ನಳನ ನಾಮ ಕೇಳಿಕೊಂಡಾಗ ।।೨।। ಶ್ರೇಷ್ಠ ರಾಜನೆ ನೀ ನಮ್ಮ ಮನಸಿನ ಅಭೀಷ್ಟವ ಗೆಲಿಸೆಂದರು ಎತ್ತರಾಗಲಿ ಉತ್ತಮರೆ ನಿಮ್ಮ ಕಾರ್ಯವಗತ್ಯ ಮಾಡುವೆನೆಂದರಿಗ್ವಚನವ ಕೊಟ್ಟ । ಇವತ್ತು ನೀನು ಪೋಗಿ ಇಂದ್ರಾದಿಗಳು ಬಂದರೆನುತ ಹೇಳಿ ಮಿತ್ರೆದಮಯಂತಿ ನಿಮ್ಮ ಪತ್ನಿಯಾಗುವಂತೆ ಮಾಡು ।।೩।। ಅಂದ ಮಾತನು ಕೇಳುತ ರಾಜನು ಭಾಳ ಸಂದೇಹದಲಿ ನುಡಿದ ಮಂದಗಮನೆಯಲ್ಲಿ ಮನಸಿಟ್ಟು ನಾನೀಗ ಬಂದೆನೀ ಕಾರ್ಯಕ್ಕೀಗೆಂದು ನುಡಿದನಾಗ । ಮುಂದೆ ಮಾತುಕೊಟ್ಟು ನಮಗೆ ಹಿಂದೆ ತಪ್ಪಿದರೆ ವಚನ ಬಂದೀತಪಕೀರ್ತಿ ಎನ್ನಲ್ಲೌದೆಂದು ತಿಳಿದನು ತನ್ನ ಮನದಿ ।।೪।। ಸಂತೋಷದಲಿ ಬಂದನು ರಾಜನು ದಮಯಂತಿಯಿದ್ದರಮನೆಗೆ ನಿಂತು ನೋಡುತ ಕರ ಮುಗಿದು ವಂದಿಸುತಿರೆ ಅಂತರಂಗದ ಮಾತಭ್ಯಂತರಿಲ್ಲದೆ ಹೇಳಿ । ಇಂಥ ಇಂದ್ರಾದಿಗಳು ನಿನ್ನ ಕಾಂತರಾಗುವಂತೆ ಮಾಡಿಕೋ ಕಂತುಪಿತ ಭೀಮೇಶಕೃಷ್ಣನು ಕರುಣದಿಂದೀಗೊಲಿವ ನಿಮಗೆ ।।೫।।

## ವಚನ-೧೪

ನುಡಿದ ನುಡಿ ಕೇಳುತಲಿ ಕಡುಕೋಪದಿಂದಾಗ ಮುಡಿ ಬಾಗಿ ಮುಂದೆ ಮೂರ್ಛೆಜ್ಞೆನಿಕ್ಕುತ ಬಂದು । ಕಡೆಗಣ್ಣಲಿಂದ ಕಾಂತನ ಮುಖವ ನೋಡುತಲಿ ನುಡಿದಳು ವಿನಯದ ಮಾತು ನಾಗವೇಣಿ ಹರುಷದಿ ।।

## ಧ್ವನಿ-೧೫

ದಾವ ದೇಶ ಬಂದ ಕಾರ್ಯವೇನು ನಿಮ್ಮ ನಾಮವ ಕೇಳರಿಯೆ । ಮೋರೆ ನೋಡಲು ಸುಂದರ ಚೆಲ್ವಿಕೆಯು ತೋರೆ ಮಾರನ್ನ ಸರಿಯೆ ॥೧॥ ಸಾರ್‍ಯದಿ ಬರದಿರು ಸಾರಸಮುಖಿ ನೀ ದೂರ ಹಿಂದಕೆ ಸರಿಯೆ । ವಾರಿಜಾಕ್ಷಿ ವೈಯಾರಿ ಕೇಳು ನಾ ನಳರಾಯನೆಂಬೊ ದೊರೆಯೇ ॥೨॥ ಕಾಂತರಾದರೇಕಾಂತದೊಳೇನಿದು ನಿಂತು ಮಾತಾಡುವುದು । ಸಂತೋಷದಲಿ ಜಂತದ್ದಲಿಗೆ ಮಂಚದಲ್ಲಿ ಕುಳ್ಳಿರಬಹುದು ॥೩॥ ಹರಿಣಾಕ್ಷಿಯೆ ಕೇಳು ಸುರದೇವತೆಗಳು ಹೊರಗೆ ಬಂದಿಹರಿನ್ನು । ಪರಮಧನ್ಯಳೆಂದೆನಿಸುವಿ ನೀನು ಕರೆದು ಕೂಡವರನ್ನು ॥೪॥ ಪಕ್ಷಿರಾಜ ನಿಮಗೇಳ್ಳಿದ ಮಾತು ಲಕ್ಷಿಗೆ (ಕ್ಷ್ಯಕ್ಕೆ) ಬರದೇನೊ । ಸಾಕ್ಷಾತಪತಿ ನೀವೆಂದು ನಂಬಿದೆನಪೇಕ್ಷೆ ಹುಟ್ಟಿದೇನು ॥೫॥ ಗಜಗಮನೆಯೆ ಕೇಳು ಗಜವಾಹನ ಬಂದೊದಗಿ ಮಾರ್ಗದಲ್ಲಿ । ಮೊದಲೆ ಮಾತು ತಕ್ಕೊಂಡನು ನಾ ತಿಳಿಯದಲೆ ಮೋಸಹೋದೆ ॥೬॥ ಯಾತರ ಮಾತಿದು ಏನುಸೋಜಿಗ ಪ್ರಖ್ಯಾತಪುರುಷ ನಿಮಗೆ । ಪ್ರೀತಿಯಿಂದಲಿ ಕೊರಳಿಗೆ ನಾ ಪಾರಿಜಾತ ಮಾಲ್ಹ್ಯಾಕುವೆನು ॥೭॥ ಇಂದುವದನೆ ನಿನ್ನಿಂದಕೀರ್ತಿ ಹೊಂದಲಾರೆ ನಾನು । ಬಂದದ್ದಿಲ್ಲಿಗೆ ಭಾಳಪರಾಧ ಈ ಬಂಧನಕ್ಕೊಳಗಾದೆ ॥೮॥ ಮನಬಂದವರಿಗೆ ಮಾಲೆ ಹಾಕುವೆ ನಾ ನಿಮಗಿಲ್ಲಕೀರ್ತಿ ಬಹು । ಜನರೊಳಗೆ ಬಂದೀತು ನಿಮಗೆ ಬಹುಮಾನವು ಕೀರ್ತಿ ॥೯॥ ಒಲ್ಲೆ ನಾನು ಶಚಿವಲ್ಲಭ ನಿನಗೆ ನಲ್ಲನಾಗಲಿ ಇಂದ್ರ । ಬಲ್ಲಷ್ಟೇಳ್ಳುವೆ ಭಾಳ ಮೂರ್ಖತನ ಮಾಡೊದೇನು ಚೆಂದ ॥೧೦॥ ಸ್ವಯಂವರ ಕಾಲಿಕೆ ಸರಿಬಂದವರಿಗೆ ಒಲಿವುದೆ ನಮಗಿಷ್ಟ । ಪರಮಧನ್ಯರೆಂದೆನಿಸಿರಿ ನಿಮಗೆ ಒಲಿವ ಭೀಮೇಶಕೃಷ್ಣ ॥೧೧॥

## ವಚನ-೧೬

ಅಂದ ಮಾತನು ಕೇಳಾನಂದದಿಂದಲಿ ನಗುತ । ಬಂದು ಇಂದ್ರಾದಿಗಳಿಗ್ವಂದಿಸುತ ಕರಮುಗಿದು ॥ ಮಂದಗಮನೆಯ ಮನಸು ಬಾರದು ನಿಮ್ಮಲ್ಲಿ । ಹೊಂದಿಕೊಂಬುವುದು ನಿಜವೆಂದು ಪೇಳುವಳೆನಗೆ ॥ ಮುಂದಿನುಪಾಯ ಚಿಂತಿಸಬಹುದು ನೀವೆನಲು । ಅಂದ ಮಾತಿಗೆ ಕೋಪದಿಂದಿಂದ್ರ ನುಡಿದನಾಗ ॥

## ಧ್ವನಿ-೧೭

ಏನಿದು ಛಲವೊ ಮಾನಿನಿ ರನ್ನೆಗೆ ಏನಿದು ಛಲವೋ । ಮಾನವಿಲ್ಲದೆ ನುಡಿದಳೋ ಮೊಹನ್ನೆ ಏನಿದು ಛಲವೋ ॥ಪ॥ ಸುರಪತಿಗಳಿಗಿಂತ ನರಪತಿ ಅಧಿಕನೆ । ಗರುವ

ಮುರಿದು ನಾನು ಬರುವೆನೀಕ್ಷಣದಿ ॥೧॥ ಲಗ್ನಕಾಲಕ್ಕೆ ಹೋಗಿ ವಿಘ್ನ ಮಾಡುವೆನೆಂದು । ಸ್ವರ್ಗಾಧಿಪತಿಯು ಭಾಳಾಗ್ರ(ಹ)ದಿನುಡಿದ ॥೨॥ ಭೀಮೇಶಕೃಷ್ಣ(ನ) ದಯ ದಾರಿಗುಂಟಾಗುವುದೋ । ಭೀಮನಂದನೆಯ ಬಿಂಕ ಮುರಿದು ಬರುವೋಣ ॥೩॥

## ವಚನ-೧೮

ಹೀಗೆಂದು ನುಡಿಯುತಲಿ ಸಾಗಿಬಂದರು ತಾವು ನಾಗವೇಣಿಯ ಸ್ವಯಂವರಾಗೋ ಮಂಟಪದಲ್ಲಿ। ಬ್ಯಾಗ ನಳರಾಯನಿದ್ದ್ಹಾಗೆ ರೂಪವಲ್ಲಿ ಧರಿಸಿ ಹೋಗಿ ತಾವೆಲ್ಲ ಸಾಲಾಗಿ ನಿಂತಿರಲಿಲ್ಲ ಸೋಗಿನ ಗೊಂಬ್ಯಂತೆ ಚಿತ್ರಾಂಗಿ ಬರವೋ ಬಗೆ-

## ಧ್ವನಿ-೧೯

ಬಂದಳಿಂದುವದನೆ ಹಂದರದೊಳಗೆ । ಮಂದಗಮನೆಯು ಮಹಾಸುಂದರಾಂಗಿ ॥ಪ॥ ಉಟ್ಟಪೀತಾಂಬರವು ಪಟ್ಟವೊಡ್ಯಾಣವದು ಪುತ್ಥಳಿಸದ ಚಂದ್ರಹಾರ ಪದಕ । ಕಟ್ಟಾಣಿ ಸರಿಗೆ ಏಕಾವಳಿಯು ಕೊರಳಲ್ಲಿ ಕಟ್ಟಿದ್ದಡ್ಡಿಕೆ ಮುತ್ತು ಕಮಲಾಕ್ಷಿಗೆ ॥೧॥ ದ್ವಾರ್ಯ ಕಂಕಣ ಹರಡಿ ಹಸ್ತ ಕಡಗವಿಟ್ಟು ನಾಗಮುರಿಗೆ ವಂಕಿ ಒಲೆವ ಗೊಂಡ್ಯ । ಭಾರಿ ಬಾಬೂಬಂದು ಬಂಗಾರದ ಬುಟ್ಟಾದಾರಿ ಕುಪ್ಪಸ ತೊಟ್ಟು ತೋಳಿನಲ್ಲಿ ॥೨॥ ಹೆರಳುಬಂಗಾರ ರಾಗಟೆ ಗೊಂಡ್ಯ ಕ್ಯಾದಿಗೆಯು ಅರಳುಮಲ್ಲಿಗೆ ಪಾರಿಜಾತ ಮುಡಿದು । ಪರಿಮಳವು ದಿವ್ಯ ಕೇಸರಿ ಗಂಧ ಬುಕ್ಕಿಟ್ಟು ಪಣೆಗೆ ಕಸ್ತೂರಿಕುಂಕುಮ ಹೊಳೆಯುತ ॥೩॥ ಝೂಲಕ ಬುಗುಡಿ ಚಂದರ ಬಾಳ್ಯದ ಬೆಳಕು ವಾಲೆ ಸರಪಳಿಯು ಮುತ್ತಿನ ಗೊಂಚಲು । ಸಾಲು ಕುಂದಣದಾಣಿಮುತ್ತಿನ ಮುಕುರ್ಯ ಬುಲಾಕು ಬೇಸರಿ ಗಲ್ಲದಲ್ಲೊಲ್ಹೊಳೆಯುತ ॥೪॥ ಪಿಲ್ಯಕಾಲುಂಗುರವು ಉಲ್ಲು ರುಳಿ ಪೈಜಣವು ಮೆಲ್ಲನೊಂದೊಂದು ಹೆಜ್ಜೆಯನಿಕ್ಕುತ । ಪುಲ್ಲಾಕ್ಷ ಭೀಮೇಶಕೃಷ್ಣನ್ನ ಸ್ಮರಿಸುತ್ತ ನಲ್ಲನಾಗಲಿ ನಳರಾಯನೆಂದು ॥೫॥

## ವಚನ-೨೦

ಬಂಗಾರಭಾರಕ್ಕೆ ಬಳುಕುತಲಿ ಝುಳುಕುತಲಿ ಶೃಂಗಾರ ಸಿರಿವುಳ್ಳಮುಖ ಮುದ್ದು ಸುರಿಯುತಲಿ ಮುಂಗಾರಮಿಂಚಿನಂತ್ಹೊಳೆಯುತಲಿ ಪೊಳೆಯುತಲಿ ಹೊಂಗ್ಯಾದಿಗೆಯಂತೆ ಮೈಬಣ್ಣ ನಡುಸಣ್ಣ ಕಂಗಳ ಕಡೆನೋಟ (ಅ) ನಂಗನ್ನ ಸಿರಿಕಾಟ । ಅಂಗನೆಯ ಜನರೆಲ್ಲ ದಂಗಾಗಿ ನೋಡುತಿರೆ ಉಂಗುರದ ಬೆರಳಿಂದ ಮುಂಗುರುಳು

ತಿದ್ದುತಲಿ ಅಂಗುಲಿಯ ತುದಿಯಿಂದ ಕಂಜಮಾಲೆಯ ಹಿಡಿದು ಮಂಗಳಾಂಗನೆ ಬಂದಳಂಗಳದ ಮಂಟಪಕ್ಕೆ ॥

## ಧ್ವನಿ-೨೧

ಸರಸಿಜಾಕ್ಷಿ ಬಂದಳು ಸರಸ್ವತಿ ಪೂಜಿಸಿ । ಅರಿತುಕೊಳ್ಳದೆ ತನ್ನ ಪತಿಯ ಗುರುತು ತಿಳಿಯದೆ ॥೧॥ ಸುರರ ಚರಣಕ್ಕೆರಗಿ ಕರವ ಮುಗಿದು ನಿಂತಳು । ದೊರೆಯ ತೋರದಿರಲು ಹಿಂದಿನ ಕಥೆಯ ಹೇಳಿದಳು ॥೨॥ ಹಿಂದಕ್ಕೊಬ್ಬ ಅರಸು ಸಿರಿ ಯತಿರಾಜನು । ನಂದನೆ ಸುಕನ್ಯಳೆಂಬೊ ಕನ್ನಿಕೆ ಪಡೆದನು ॥೩॥ ಬೇಟೆನಗುತ ಬಂದದ ಚ್ಯವನ ಋಷಿಗಳಾಶ್ರಮ । ತೋಟ ಕಂಡು ಊಟಕೆನುತ ಇಳಿದ ರಾಜನು ॥೪॥ ಹಣ್ಣು ಹೂವಿಗೆನುತ ಬಂದವಳ್ವಲ್ಮೀಕದೊಳು । ಹೊನ್ನಿಹುಳದಂತ್ಹೊಳೆವೊ ಕಣ್ಣಿಗೆ ಕಂಟಕವೂರಿದಳು ॥೫॥ನೇತ್ರ ಒಡೆದು ರಕ್ತಸುರಿಯೆ ಬಂದಜನರಿಗೆ । ಮೂತ್ರಮಲವು ಕಟ್ಟಿ ಹೊಟ್ಟ್ಯುಬ್ಬರಿಸಿ ಬಿದ್ದರು ॥೬॥ ಆಶ್ರಮಕ್ಕೆ ಬಂದರೆ ನಮಗೀಶ್ರಮವಾಯಿತು । ಭೂಸುರಾಗ್ರಾಣಿಗೇನು ತಪು ನಡೆಸೀರೆಂದರು ॥೭॥ ತಪ್ಪು ನನ್ನದೆನುತ ಮಗಳು ಒಪ್ಪಿಕೊಂಡಳು । ಮತ್ತೆ ತನ್ನ ಪಿತನ ಕರೆದು ನೋಡಿರೆಂದಳು ॥೮॥ ಎನ್ನ ಜನಕೆ ಕ್ಷೇಮವಾದರೆ ಇನ್ನು ನಿಮಗೆ । ಸುಕನ್ಯಳನ್ನು ಕೊಟ್ಟು ಧಾರೆಯೆರೆವೆನೆಂದನು ॥೯॥ ಒಡೆದು ಹುತ್ತ ಗಿಡವ ಕಿತ್ತು ನಡುಗೋ ಶಿರದಲ್ಲಿ। ಜಡೆಯ ಕಟ್ಟಿ ನಡುವ ಬಾಗುತ ನಡೆದು ಬಂದರು ॥೧೦॥ ಅಸ್ಥೀಚರ್ಯ ಬಿಳಿಯ ಕೂದಲು ವ್ಯಾಪ್ತವಾಗಿರೆ । ರೆಪ್ಪೆಗ್ಹುಬ್ಬು ಇಳಿದು ಕಣ್ಣು ಮುಚ್ಚಿಕೊಂಡಿರೆ ॥೧೧॥ ವದನದಲ್ಲಿ ದಂತವಿಲ್ಲ ಒಣಗಿ ದೇಹವು । ಒದಗಿ ಮುಪ್ಪು ಒದರಿಕೊಂಡರು ಕೇಳವು ಕಿವಿಗಳು ॥೧೨॥ ದೊರೆಯೆ ನಿನ್ನ ಮಗಳ ಕರಿ ಸುರಗಿಲೆನಗೆರಿ । ಸರಿಯಾಗ್ವರದಕ್ಷಿಣೆ ಕೊಟ್ಟೆನಗೆ ಧಾರೆಯನೆರಿ ॥೧೩॥ ಚರಣ ತೊಳೆದು ಕಟ್ಟಿಕೊರಳ ಮಂಗಳಸೂತ್ರದ ಮಗಳ । ಧಾರೆಯೆರೆದುಕೊಟ್ಟು ಮನೆಗೆ ನಡೆದನು ॥೧೪॥ ಭಕ್ತಿಯಿಂದ ಪತಿಯ ಸೇವೆ ಮಾಡುತ್ತಿದ್ದಳು । ಜತ್ತಿಲಿಳಿದು ಬಂದರಶ್ವಿನಿ ದೇವತೆಗಳು ॥೧೫॥ ಚಿಕ್ಕವಯಸು ಚೆಲುವ ರೂಪ ಮಾಡಿಕೊಟ್ಟರೆ । ಮತ್ತೆ ನೀವು ಬೇಡಿದಿಷ್ಟ ಕೊಡುವೆನೆಂದಳು ॥೧೬॥ ಯಜ್ಞದಲ್ಲಿ ಭಾಗ ನಮಗೆ ಬರಲುಂಟಾದರೆ । ಅನರ್ಘ್ಯವಾದ ರೂಪ ಮಾಡಿಕೊಂಡುವೆವೆಂದರೆ ॥೧೭॥ ಮೂರುಮಂದಿ ಮಡುವಿನೊಳಗೆ ಮುಣುಗುತಿದ್ದರು । ಬಂಗಾರ ಪ್ರತಿಮೆಯಂಥ ರೂಪ ಆಗಿ ನಿಂತರು ॥೧೮॥ ವಯಸು ಹದಿನಾರುವರುಷ ಒಂದೇ ಪ್ರಾಯದ ಪುರುಷರನ್ನು ಕಂಡು

ಮುರಿದು ನಾನು ಬರುವೆನೀಕ್ಷಣದಿ ॥೧॥ ಲಗ್ನಕಾಲಕ್ಕೆ ಹೋಗಿ ವಿಘ್ನ ಮಾಡುವೆನೆಂದು । ಸ್ವರ್ಗಾಧಿಪತಿಯು ಭಾಳಾಗ್ರ(ಹ)ದಿನುಡಿದ ॥೨॥ ಭೀಮೇಶಕೃಷ್ಣ(ನ) ದಯ ದಾರಿಗುಂಟಾಗುವುದೋ । ಭೀಮನಂದನೆಯ ಬಿಂಕ ಮುರಿದು ಬರುವೋಣ ॥೩॥

## ವಚನ-೧೮

ಹೀಗೆಂದು ನುಡಿಯುತಲಿ ಸಾಗಿಬಂದರು ತಾವು ನಾಗವೇಣಿಯ ಸ್ವಯಂವರಾಗೋ ಮಂಟಪದಲ್ಲಿ। ಬ್ಯಾಗ ನಳರಾಯನಿದ್ದಾಗೆ ರೂಪವಲ್ಲಿ ಧರಿಸಿ ಹೋಗಿ ತಾವೆಲ್ಲ ಸಾಲಾಗಿ ನಿಂತಿರಲಿಲ್ಲ ಸೋಗಿನ ಗೊಂಬ್ಯಂತೆ ಚಿತ್ರಾಂಗಿ ಬರವೋ ಬಗೆ-

## ಧ್ವನಿ-೧೯

ಬಂದಳಿಂದುವದನೆ ಹಂದರದೊಳಗೆ । ಮಂದಗಮನೆಯು ಮಹಾಸುಂದರಾಂಗಿ ॥ಪ॥ ಉಟ್ಟಪೀತಾಂಬರವು ಪಟ್ಟವೊಡ್ಯಾಣವದು ಪುತ್ಥಳಿಸದ ಚಂದ್ರಹಾರ ಪದಕ । ಕಟ್ಟಾಣಿ ಸರಿಗೆ ಏಕಾವಳಿಯು ಕೊರಳಲ್ಲಿ ಕಟ್ಟಿದ್ದಡ್ಡಿಕೆ ಮುತ್ತು ಕಮಲಾಕ್ಷಿಗೆ ॥೧॥ ದ್ವಾರ್ಯ ಕಂಕಣ ಹರಡಿ ಹಸ್ತ ಕಡಗವಿಟ್ಟು ನಾಗಮುರಿಗೆ ವಂಕಿ ಒಲೆವ ಗೊಂಡ್ಯ । ಭಾರಿ ಬಾಬೂಬಂದು ಬಂಗಾರದ ಬುಟ್ಟಾದಾರಿ ಕುಪ್ಪಸ ತೊಟ್ಟು ತೋಳಿನಲ್ಲಿ ॥೨॥ ಹೆರಳುಬಂಗಾರ ರಾಗಟೆ ಗೊಂಡ್ಯ ಕ್ಯಾದಿಗೆಯು ಅರಳುಮಲ್ಲಿಗೆ ಪಾರಿಜಾತ ಮುಡಿದು । ಪರಿಮಳವು ದಿವ್ಯ ಕೇಸರಿ ಗಂಧ ಬುಕ್ಕಿಟ್ಟು ಪಣೆಗೆ ಕಸ್ತೂರಿಕುಂಕುಮ ಹೊಳೆಯುತ ॥೩॥ ಝೂಲಕ ಬುಗುಡಿ ಚಂದರ ಬಾಳ್ಯದ ಬೆಳಕು ವಾಲೆ ಸರಪಳಿಯು ಮುತ್ತಿನ ಗೊಂಚಲು । ಸಾಲು ಕುಂದಣದಾಣಿಮುತ್ತಿನ ಮುಕುರ್ಯ ಬುಲಾಕು ಬೇಸರಿ ಗಲ್ಲದಲ್ಹೊಳೆಯುತ ॥೪॥ ಪಿಲ್ಯಕಾಲುಂಗುರವು ಉಲ್ಲು ರುಳಿ ಪೈಜಣವು ಮೆಲ್ಲನೊಂದೊಂದು ಹೆಜ್ಜೆಯನಿಕ್ಕುತ । ಪುಲ್ಲಾಕ್ಷ ಭೀಮೇಶಕೃಷ್ಣನ್ನ ಸ್ಮರಿಸುತ್ತ ನಲ್ಲನಾಗಲಿ ನಳರಾಯನೆಂದು ॥೫॥

## ವಚನ-೨೦

ಬಂಗಾರಭಾರಕ್ಕೆ ಬಳುಕುತಲಿ ಝುಳುಕುತಲಿ ಶೃಂಗಾರ ಸಿರಿವುಳ್ಳಮುಖ ಮುದ್ದು ಸುರಿಯುತಲಿ ಮುಂಗಾರಮಿಂಚಿನಂತ್ಹೊಳೆಯುತಲಿ ಪೊಳೆಯುತಲಿ ಹೊಂಗ್ಯಾದಿಗೆಯಂತೆ ಮೈಬಣ್ಣ ನಡುಸಣ್ಣ ಕಂಗಳ ಕಡೆನೋಟ (ಅ) ನಂಗನ್ನ ಸಿರಿಕಾಟ । ಅಂಗನೆಯ ಜನರೆಲ್ಲ ದಂಗಾಗಿ ನೋಡುತಿರೆ ಉಂಗುರದ ಬೆರಳಿಂದ ಮುಂಗುರುಳು

ತಿದ್ದುತಲಿ ಅಂಗುಲಿಯ ತುದಿಯಿಂದ ಕಂಜಮಾಲೆಯ ಹಿಡಿದು ಮಂಗಳಾಂಗನೆ ಬಂದಳಂಗಳದ ಮಂಟಪಕ್ಕೆ ॥

## ಧ್ವನಿ-೨೧

ಸರಸಿಜಾಕ್ಷಿ ಬಂದಳು ಸರಸ್ವತಿ ಪೂಜಿಸಿ । ಅರಿತುಕೊಳ್ಳದೆ ತನ್ನ ಪತಿಯ ಗುರುತು ತಿಳಿಯದೆ ॥೧॥ ಸುರರ ಚರಣಕ್ಕೆರಗಿ ಕರವ ಮುಗಿದು ನಿಂತಳು । ದೊರೆಯ ತೋರದಿರಲು ಹಿಂದಿನ ಕಥೆಯ ಹೇಳಿದಳು ॥೨॥ ಹಿಂದಕ್ಕೊಬ್ಬ ಅರಸು ಸಿರಿ ಯತಿರಾಜನು । ನಂದನೆ ಸುಕನ್ಯಳೆಂಬೊ ಕನ್ನಿಕೆ ಪಡೆದನು ॥೩॥ ಬೇಟೆನಗುತ ಬಂದದ ಚ್ಯವನ ಋಷಿಗಳಾಶ್ರಮ । ತೋಟ ಕಂಡು ಊಟಕೆನುತ ಇಳಿದ ರಾಜನು ॥೪॥ ಹಣ್ಣು ಹೂವಿಗೆನುತ ಬಂದವಳ್ವಲ್ಮೀಕದೊಳು । ಹೊನ್ನಿಹುಳದಂತ್ಹೊಳೆವೊ ಕಣ್ಣಿಗೆ ಕಂಟಕವೂರಿದಳು ॥೫॥ನೇತ್ರ ಒಡೆದು ರಕ್ತಸುರಿಯೆ ಬಂದಜನರಿಗೆ । ಮೂತ್ರಮಲವು ಕಟ್ಟಿ ಹೊಟ್ಟ್ಯುಬ್ಬರಿಸಿ ಬಿದ್ದರು ॥೬॥ ಆಶ್ರಮಕ್ಕೆ ಬಂದರೆ ನಮಗೀಶ್ರಮವಾಯಿತು । ಭೂಸುರಾಗ್ರಾಣಿಗೇನು ತಪು ನಡೆಸೀರೆಂದರು ॥೭॥ ತಪ್ಪು ನನ್ನದೆನುತ ಮಗಳು ಒಪ್ಪಿಕೊಂಡಳು । ಮತ್ತೆ ತನ್ನ ಪಿತನ ಕರೆದು ನೋಡಿರೆಂದಳು ॥೮॥ ಎನ್ನ ಜನಕೆ ಕ್ಷೇಮವಾದರೆ ಇನ್ನು ನಿಮಗೆ । ಸುಕನ್ಯಳನ್ನು ಕೊಟ್ಟು ಧಾರೆಯೆರೆವೆನೆಂದನು ॥೯॥ ಒಡೆದು ಹುತ್ತ ಗಿಡವ ಕಿತ್ತು ನಡುಗೋ ಶಿರದಲ್ಲಿ । ಜಡೆಯ ಕಟ್ಟಿ ನಡುವ ಬಾಗುತ ನಡೆದು ಬಂದರು ॥೧೦॥ ಅಸ್ತೀಚರ್ಯ ಬಿಳಿಯ ಕೂದಲು ವ್ಯಾಪ್ತವಾಗಿರೆ । ರೆಪ್ಪೆಗ್ಹುಬ್ಬು ಇಳಿದು ಕಣ್ಣು ಮುಚ್ಚಿಕೊಂಡಿರೆ ॥೧೧॥ ವದನದಲ್ಲಿ ದಂತವಿಲ್ಲ ಒಣಗಿ ದೇಹವು । ಒದಗಿ ಮುಪ್ಪು ಒದರಿಕೊಂಡರು ಕೇಳವು ಕಿವಿಗಳು ॥೧೨॥ ದೊರೆಯೆ ನಿನ್ನ ಮಗಳ ಕರಿ ಸುರಗಿಲೆನಗೆರಿ । ಸರಿಯಾಗ್ವರದಕ್ಷಿಣೆ ಕೊಟ್ಟೆನಗೆ ಧಾರೆಯನೆರಿ ॥೧೩॥ ಚರಣ ತೊಳೆದು ಕಟ್ಟಿಕೊರಳ ಮಂಗಳಸೂತ್ರದ ಮಗಳ । ಧಾರೆಯೆರೆದುಕೊಟ್ಟು ಮನೆಗೆ ನಡೆದನು ॥೧೪॥ ಭಕ್ತಿಯಿಂದ ಪತಿಯ ಸೇವೆ ಮಾಡುತ್ತಿದ್ದಳು । ಜತ್ತಿಲಿಳಿದು ಬಂದರಶ್ವಿನಿ ದೇವತೆಗಳು ॥೧೫॥ ಚಿಕ್ಕವಯಸು ಚೆಲುವ ರೂಪ ಮಾಡಿಕೊಟ್ಟರೆ । ಮತ್ತೆ ನೀವು ಬೇಡಿದಿಷ್ಟ ಕೊಡುವೆನೆಂದಳು ॥೧೬॥ ಯಜ್ಞದಲ್ಲಿ ಭಾಗ ನಮಗೆ ಬರಲುಂಟಾದರೆ । ಅನರ್ಘ್ಯವಾದ ರೂಪ ಮಾಡಿಕೊಂಡುವೆವೆಂದರೆ ॥೧೭॥ ಮೂರುಮಂದಿ ಮಡುವಿನೊಳಗೆ ಮುಣುಗುತಿದ್ದರು । ಬಂಗಾರ ಪ್ರತಿಮೆಯಂಥ ರೂಪ ಆಗಿ ನಿಂತರು ॥೧೮॥ ವಯಸು ಹದಿನಾರುವರುಷ ಒಂದೇ ಪ್ರಾಯದ ಪುರುಷರನ್ನು ಕಂಡು

ಪಾದಕ್ಕೆರಗಿ ನಿಂತಳು ॥೧೯॥ ಪ್ರೀತಿಲೆನ್ನ ಪತಿಯ ಎನಗೆ ತೋರಿಸಿಕೊಡುವುದು । ಭೂತದಳಿ ನಿಮ್ಮ ಪ್ರಖ್ಯಾತಿ ನಡೆವುದು ॥೨೦॥ ಪತಿವ್ರತಾಧರ್ಮಗಳ ನೋಡಿ ಪರಮ ಹರುಷದಿ । ಅತಿ ಕರುಣದಿ ಸತಿಪತಿಯರ ಕೂಡಿಸಿ ನಡೆದರು ॥೨೧॥ ತಪಸ್ಸಿನಿಂದ ಸಕಲ ಸಂಪತ್ತು ಒದಗಿತು । ಸುಖದಲಿ ಸುಕನ್ಯ ಸಂತೋಷ ಹೊಂದಿದಳು ॥೨೨॥ ಜನಕ ಬಂದು ವನಕೆ ಮಗಳ ನೋಡಿ ಕೋಪದಿ । ವನಕೆ ಬಾರದಾ ಮುದುಕನ ಕೊಂದೊಗೆದ್ಯಾ ಎಂದಳು ॥೨೩॥ ಪುಂಡಗಾರ ಪತಿಯ ಕೂಡಿಕೊಂಡು ರಮಿಸುವ್ಯಾ । ಪ್ರಚಂಡಳೆನ್ನ ಕುಲಕೆ ಅಪಕೀರ್ತಿ ಹೊರಿಸಿದ್ಯಾ ॥೨೪॥ ಮಗಳ ಕೂಡ ಮಾತನಾಡದೆ ಮುಖವ ನೋಡದೆ । ತಿರುಗಿ ಪೋಗುತ ಪಿತನ ಕಂಡು ಕರವ ಮುಗಿದಳು ॥೨೫॥ ಯಾಗಮಾಡಿ ಭಾಗವ ಕೊಡುವುದರಿಗೆನುತಲಿ । ನಾಗವೇಣಿ ನಗುತ ಪಿತಗೆ ಹೇಳಿಕೊಂಡಳು ॥೨೬॥ ತಂದೆ ಚರಣಕ್ಕೆರಗಿ ಅಶ್ವಿನೀದೇವತೆಗಳು । ಬಂದೀರೂಪವ ಮಾಡಿಕೊಟ್ಟರೆಂದು ನುಡಿದಳು ॥೨೭॥ ಆ ಕಾಲದಲಿ ಅಶ್ವಿನಿದೇವೆಗಳ ಮಹಿಮೆಯು । ಪಾಕಶಾಸನ ನಿಮ್ಮ ಕೀರ್ತಿ ಈ ಕಾಲದಿ ನಡೆವುದು ॥೨೮॥ ಕಂತುಪಿತ ಭೀಮೇಶಕೃಷ್ಣ ಕರುಣದಿಂದಲಿ । ಪಂಥಗೆಲಿಸಿ ಪಾಲಿಸೆನುತ ಬೇಡಿಕೊಂಡಳು ॥೨೯॥

## ವಚನ-೨೨

ಇಂತೀಪರಿ ಮಾತಿನಿಂದ ದಮಯಂತಿ ಪ್ರಾರ್ಥಿಸುತ್ತಿರಲು ಅಂತರಂಗದಲಿ ದಯ ಹುಟ್ಟಿ ಅಮರಾದಿಗಳು ಅಂತರದಿ ನಿಂತವನಿ ಬಿಟ್ಟು ಎವೆ ಹಾಕದಿರೆ ಸಂಪಿಗೆಯು ಕೊರಳ ಶಾವಂತಿಗೆಯು ಬಾಡದಿರೆ । ನಿಂತು ಭೂಮಿಯಲಿ ಎವೆಯಿಕ್ಕುತ್ತಿದೆ ಬೆವರುತಿರೆ ಕಾಂತನ್ನ ನೋಡುತಲಿ ಕಮಲಮಾಲೆಯ ಪಿಡಿದು ಸಂತೋಷದಿಂದ್ಹಾಕಿದಳು ನಳನ ಕೊರಳಿಗಾಗ ॥

## ಧ್ವನಿ-೨೩

ಸುರರು ಜಯ ಜಯವೆಂದರು ದಮಯಂತಿಯ ಶಿರದಿ ಸುರಿಸಿ ಮಂತ್ರಾಕ್ಷತೆಯ । ಸುರರು ಜಯ ಜಯವೆಂದು ಸುರಗಿಲೆರೆದು ಬಂದು ಸುರಗಿ ಶಾವಂತಿಗೆ ತಂದು ತರುಪಿಗ್ಹಾಕಿದರಂದು ॥ಪ॥ ಚರಣ ತೊಳೆದು ಹಚ್ಚಿಕುಂಕುಮ ಪಣೆಗೆ । ಗಿರಿಜಾಪೂಜೆಯ ಮಾಡಿ ಕರದಿ ಕಂಕಣ ಕಟ್ಟಿ ॥೧॥ ಅಂತರಪಟ್ಟವ್ಹಿಡಿದು ಅಷ್ಟಪತ್ರಿಕೆ ಉಡಿಸಿ । ನಿಂತು ಅರಿಷಿಣುದಕ ಸಂತೋಷದಿಂದಲ್ಹಾಕಿ ॥೨॥ ಮಂಗಳಾಷ್ಟಕವ್ಹೇಳಿ ಮಂಗಳಸೂತ್ರ ಕಟ್ಟಿ । ಮಂಗಳಾಂಗಿಗೆ ಮಂಗಳಾರತಿ ಬೆಳಗುತ ॥೩॥ ಕಾಲಮಿಂಚುಗಳು ಕಾಚಾಳಿಕುಪ್ಪಸ

ತೊಡಿಸಿ । ಮ್ಯಾಲೆ ಅರುಂಧತಿಯ ನೋಡಿ ಲಾಜಾಹೋಮವ ಮಾಡಿ ॥೪॥ ಸುತ್ತಿಸಾಡ್ಯವ ಅಕ್ಕಿ ಉಪ್ಪಿನಾನೆಯ ಬೇಡಿ । ತೊಟ್ಟಿಲೊಳು ಕಂದನ್ನ ಭಾಳರ್ತಿಜೋಗುಳವ ಪಾಡಿ ॥೫॥ ಮೃಷ್ಟಾನ್ನವನು ಉಣಿಸಿ ವಸ್ತ್ರ ಆಭರಣ ತೊಡಿಸಿ । ಹಸ್ತಿ ತೇಜಿಗಳ ಸಮಸ್ತ ಭಾಗ್ಯವ ಕೊಡಸಿ ॥೬॥ ಭೀಮರಾಯನ ಮಗಳ ನೋಡಿ ಹಿಗ್ಗುತಲಿ । ಭೀಮೇಶಕೃಷ್ಣನ್ನ ದಯಕೆ ಪಾತ್ರಳಾಗಿರು ಎಂದು ॥೭॥

## ವಚನ-೨೪

ಪಿತನ ಅಪ್ಪಣೆಗೊಂಡು ಜತೆಯಾಗಿ ಬಂದು । ದೇವತೆಗಳಿಗೆ ಎರಗಿ ಕರಮುಗಿದು ನಿಂತಿರಲಾಗ ॥ ಅತಿಕರುಣದಿಂದ ಶಚೀಪತಿ ನೋಡಿ ತಾ ಬ್ಯಾಗ । ಹಿತದಿಂದ ಕೊಡುವೆನೆಂದನಾಗ ತಾ ವರಗಳನ್ನು ॥

## ಧ್ವನಿ-೨೫

ಕೊಡುವೆನು ಹಿಡಿ ಹಿಡಿ ಪೊಡವೀಶ ವರವ ಕೊಡುವೆನು । ಹಿಡಿ ಹಿಡಿ ತಡಮಾಡದೆ ಉಡಿಯೊಡ್ಡಿ ಬೇಡಿಕೋ ನಾ ॥ಪ॥ ಇಂದ್ರನು ನುಡಿದ ಪ್ರತ್ಯಕ್ಷ ನಿನ್ನಜ್ಞದಿ । ಬಂದು ಭಾಗವ ಕೊಂಬೆನೆಂದು ಕೊಟ್ಟ್ವರವ ॥೧॥ ಯಮಧರ್ಮ ನುಡಿದನು ನಿಮ್ಮ ಧರ್ಮಕಾಮ್ಯಾರ್ಥ । ಸಮನಾಗಿಯಿರಲೆಂದು ಸಂತೋಷದ್ವರವರ ॥೨॥ ಅಗ್ನಿಯು ನುಡಿದ ನಿನ್ನಡಿಗೆಕಾರ್ಯಗಳಲ್ಲಿ । ಸಿದ್ಧಾಗಿರುವೆನೆಂದು ಶೀಘ್ರದಿಂದ್ವರವ ॥೩॥ ವರುಣನು ನುಡಿದ ನೀ ಕರೆಯೆ ಕಾರಂಜ್ಯಾಗಿ । ಬರುವುದು ನಿಜವೆಂದು ಸ್ಥಿರವಾಗಿ ವರವ ॥೪॥ ಭೀಮೇಶಕೃಷ್ಣನ ದಯದಿಂದ ಧನ ರಾಜ್ಯ । ಆಳೆಂದು ಕೊಟ್ಟ ಕುಬೇರ ತಾನ್ವರವ ॥೫॥

## ವಚನ-೨೬

ಪಡೆದು ವರಗಳನು ಉಡುಗೊರೆ ವೀಳ್ಯ ತಕ್ಕೊಂಡು ಒಡಗೂಡಿ ಸತಿಸಹಿತ ನಡೆದ ತನ ಪಟ್ಟಣಕೆ ಪಡೆದಳಾಗ ಇಂದ್ರಸೇನನೆಂಬುವ ಸುತನ । ಒಡಹುಟ್ಟಿದಳು ಇಂದ್ರಸೇನಿ ಎಂಬುವ ಮಗಳು ಮುದದಿಮಕ್ಕಳ ಕೂಡ ಕಡುಹರುಷದಿಂದಾಗ ಸಡಗರದಿ ಸಾಮ್ರಾಜ್ಯವಾಳುತ್ತಿದ್ದ ರಾಜನು ॥

## ಧ್ವನಿ-೨೭

ಸುರರು ವರವ ಕೊಟ್ಟು ನಡೆದರು ತಮ್ಮ ಲೋಕಕೆ । ಭರದಿ ಬರುವ ಮಾರ್ಗದಿ

ಕಲಿದ್ವಾಪರರ ಕಂಡರು ॥೧॥ ಎತ್ತ ಪೋಗುವಿರಯ್ಯ ಮತ್ತೆಲ್ಲಿ ಪಯಣವು । ಸತ್ಯವ ಪೇಳೆನುತಲಿ ಸಹಸ್ರಾಕ್ಷ ನುಡಿದನು ॥೨॥ ಕಂಡು ಬರುವೆ ದಮಯಂತಿ ಸ್ವಯಂವರದ ಉತ್ಸವ । ಖಂಡಿತವಾಗಿ ಅವಳ ಮಾಡಿಕೊಂಡು ಬರುವೆನು ॥೩॥ ನಳನು ಮಾಡಿಕೊಂಡು ನಡೆದ ತನ್ನ ದೇಶಕೆ । ತಿಳಿಯದೆ ಪೋಗುವರೆ ಹಿಂದಕೆ ತಿರುಗಿರೆಂದರು ॥೪॥ ಕೊಟ್ಟ ವರವು ಅವರನೀಗ ಪಾಲಿಸುವುದು । ಶ್ರೇಷ್ಠ ಭೀಮೇಶಕೃಷ್ಣ ರಕ್ಷಿಸಲೆನುತ ನಡೆದರು ॥೫॥

## ವಚನ-೨೮

ನುಡಿದ ನುಡಿ ಕೇಳುತಲಿ ಕಂಡುಕೋಪದಿಂ ಕಲಿಯು ಖಡಖಡನೆ ಹಲ್ಲು ಕಡಿಯುತಾಗ ಮಾತಾಡಿದನು ಮಡದಿಮಕ್ಕಳನಗಲಿಸಿ ಅಡವಿಗಟ್ಟುವೆ ನಳನ । ಬಿಡದೆ ಹನ್ನೆರಡ್ವರುಷ ಕಾಮ ವಶವಾಗದಿರೆ ನಡೆದು ಪುಷ್ಕರನೆಂಬೋ ರಾಜನೆದುರಿಗೆ ಬಂದು ಕಡು ಹರುಷದಿಂದ ಕಲಿ ಹೇಳಿಕೊಂಬುವುದು ಮತ್ತೇನೆಂದರೆ-॥

## ಧ್ವನಿ-೨೯

ರಾಜ ಕೇಳೆನ್ನ ಮಾತನು ಹೇ ರಾಜಾಧಿರಾಜ ಕೇಳೆನ್ನ ಮಾತನು । ರಾಜ ಲಾಲಿಸೆನ್ನ ಮಾತು ಈ ಜಗತ್ತಿನೊಳಗೆ ಶ್ರೇಷ್ಠ ರಾಜ ಕೇಳೆನ್ನ ಮಾತನು ॥ಪ॥ ಸಹಜವಾದ ಮಾತಿನಿಂದ ಪುಷ್ಕರ ದೊರೆಯೆ ನೀನು । ಜೂಜಿನಾಟವನ್ನು ಆಡಿ ಮೋಜಿನಿಂದ ಬರವೋಣೀಗ ॥೧॥ ಆಗ್ರಹದಿಂದಲಾಟವಾಡಿ ಶೀಘ್ರದಿಂದ ಗೆಲಿಸುವೆನು । ನಿರ್ಭಾಗ್ಯನಾಗಿ ತಿರುಗಲವನು ಶ್ಲಾಘ್ಯವಲ್ಲವೇನೊ ನಿನಗೆ ॥೨॥ ವಿಗಡಮಾಯದಿಂದಲವನ ಪಗಡೆಯಾಡಿ ಸೋಲಿಸುವೆನು । ಅಗಡು ಮಾಡಿ ನಳನ ತಾರತಿಗುಡಿ(ರಿ) ಯಂದದಿ ತಿರುಗಿಸುವೆನು ॥೩॥ ಮಡದಿ ಮಕ್ಕಳನಗಲಿಸವನ ಅಡವಿಗ್ಹಚ್ಚಿ ನಳನ ರಾಜ್ಯ । ಸಡಗರ ಸಂಪತ್ತು ನೀನು ಪಡೆಯೊ ಪರಮ ಹರುಷದಿಂದ ॥೪॥ ಪಾಶ(ಕ)ದೊಳಗೆ ಪೊಕ್ಕು ಅವನ ಮೋಸಮಾಡಿ ಸೋಲಿಸುವೆನು । ಭೀಮೇಶಕೃಷ್ಣನ ದಯದಿ ನೀನು ಲೇಸುಕಾಂಬುವ್ಯಲ್ಲೊ ಮುಂದೆ ॥೫॥

## ವಚನ-೩೦

ಕಲಿ ನುಡಿದ ಕಠಿಣ ಮಾತುಗಳ ಪುಷ್ಕರ ಕೇಳಿ । ಎಲಿಯೆಲಾ ಏನು ಸೋಜಿಗಸುದ್ದಿ ಹೇಳುವಿಯೋ ॥ ಪರಮ ಧಾರ್ಮಿಕ ನಮಗಣ್ಣನಾಗಲು ಬೇಕು ಅವನ ಕೂಡಾಟ ಸಲ್ಲದು । ಬೇಡ ಹೋಗೆನಲು ಚಲದಿಂದಲ್ಹೊಕ್ಕ ತಾ ಪುಷ್ಕರನ ಹೃದಯದಲ್ಲಿ ॥

## ಧ್ವನಿ-೩೧

ಕಲಿ ಪುಷ್ಕರನಲಿ ವಾಸವಾಗಿರೆ ಚಲವು ಹುಟ್ಟಿ। ನಳನ ತಾನು ಗೆಲುವೆನುತಲಿ ॥೧॥ ದಂಡು ಬಲವನು ಹಿಂಡು ಜನರನು ಪ್ರಚಂಡ । ಬುದ್ಧಿಯಿಂದ ಕೂಡಿಕೊಂಡು ಬರುವನು ॥೨॥ ಬರುವ ದೊರೆಯನು ಎದುರಗೊಳ್ಳುತ । ನರರು ಮಾಡಿ ಸಿಂಹಾಸನದಿ ಕುಳ್ಳಿರಿಸಿದನು ॥೩॥ ರಾಜಭೋಜನಕೂಡ ಮಂಡಿಗೆ ಕ್ಷೀರ । ಸಕ್ಕರೆ ಘೃತ ಮೃಷ್ಟಾನ್ನ ಮಾಡೆ ಭೋಜನ ॥೪॥ ಅಡಿಕೆ ವೀಳ್ಯವ ಮಡಿಚಿ ಮೆಲ್ಲುತ ಅರಸರೆ । ನೀವು ಬಂದ ಕಾರುಣೆನುತ ಕೇಳಿದ ॥೫॥ ಸತ್ಯವಂತನೆ ನಿಮ್ಮ ಸಂಗಡ । ಲೆತ್ತಪಗಡೆನಾಡೋ ಇಚ್ಛೆಯಿಂದ ಬಂದೆನು ॥೬॥ ಪರವು ಆಪ್ತರೇ ಪಂಥಗಡೆಯು । ತರವೆ ನಮ್ಮ ನಿಮ್ಮ ಗುಚಿತವಲ್ಲವೆಂದನು ॥೭॥ ಅಂದ ಮಾತನು ಕೇಳುತಾ ಕಲಿ । ಬಂದು ನಳನ ದೇಹದಲ್ಲಾವೇಶವಾದನು ॥೮॥ ಕುಶಲದಿಂದಲಿ ಕುಳಿತೀಗಾಡುವ । ವಸುಧೆಪತಿ ಭೀಮೇಶಕೃಷ್ಣನಲಿ ಬ್ಯಾಗೆನುತಲಿ ॥೯॥

## ವಚನ-೩೨

ಚಿತ್ರ ಚಾವುಡಿಯಲ್ಲಿ ರತ್ನದ್ಹಲಿಗೆಯನ್ಹಾಕಿ ಮುತ್ತು ಮಾಣಿಕ್ಯ ಚಿನ್ನ ನೀಲಪಚ್ಚು ಕಾಯಿ ಅರ್ಥಿಯಿಂದಿಟ್ಟು । ಆಡುವ ಕಾಲದಲ್ಲಾಗ(ಕಲಿ) ಹೊಕ್ಕದೋ ಪುರ ಪಾಸಿ ಹಾಕುವೊ ಕಾಯಲ್ಲಿ ಮತ್ತೊಂದು ಮಾತನು ನುಡಿದ ಪುಷ್ಕರರಾಜನು ॥

## ಧ್ವನಿ-೩೩

ರಾಜ ನಿನ್ನ ಮೋಜಿನ ಆಟಿಕೆ ಜೂಜುಪಂಥ ಮತ್ತೇನಯ್ಯ । ಈ ಜಗದೊಳಗತಿ ಧೈರ್ಯದಿ ಹರಿಶ್ಚಂದ್ರಾಯನ ಸರಿ ನೀನಾಗಯ್ಯ ॥ಪ॥ ಸೋತರೆ ನನ್ನ ರಾಜ್ಯ ಭಂಡಾರದ ಸೋಸಿಲಿಂದ ನೀನಾಳಯ್ಯ । ನೀ ಸೋತರೆ ಪರದೇಶಿಯಂದದಿ ದೇಶದೇಶವ ತಿರುಗುವುದಯ್ಯ ॥೧॥ ಪೃಥಿವಿಗೊಡೆಯ ಪರಾಜಿತನಾಗುವೆನೆಂದತಿ ಸಂತಾಪವು ಬ್ಯಾಡಯ್ಯ । ಹಿತಂದೆನ್ನನು ಗೆದ್ದು ನೀ ಸೀತಾಪತಿ (ಯಂತೆ ದೊರೆತನ) ಯಂದೊರೆತನ ಆಳಯ್ಯ ॥೨॥ ಈ ಮಹಾ ಆಟವ ಆಡುವೆ ನಾನು ಪ್ರೇಮದಿಂದ ನೀ ಆಡಯ್ಯ । ಭೀಮೇಶಕೃಷ್ಣನ ದಯವಾರಿಗೆ ಉಂಟಾಗೋದು ಮುಂದಕೆ ನೋಡಯ್ಯ ॥೩॥

## ವಚನ-೩೪

ಒಳಿತಾಯಿತೆಂದಾಗ ತುಳುಕಾಡುತಿರುವಂಥ । ನಳಚಕ್ರವರ್ತಿಯ ನೋಡುತಲಾಗ

ಜನರೆಲ್ಲ ॥ ಮಿಡುಕುತಲಿ ಬಂದ್ಹೇಳುತಿರಲಾಗ ದಮಯಂತಿ । ಬಳುಕುತಲಿ ಬಂದ್ಹೇಳಿಕೊಂಬೊ ಮಾತುಗಳು ಮತ್ತೇನೆಂದರೆ- ॥

## ಧ್ವನಿ-೩೫

ಕಾಂತ ಕೇಳು ಗುಣಶಾಂತ ಶ್ರೀಮಂತ ಈ ಪಗಡೆಪಂಥ । ನಿಂತು ಪೇಳುವೆ ಬ್ಯಾಡೋ ಬಲವಂತ ॥ಪ॥ ಆಡುತಿರಲಾ ಸ್ನೇಹಿತಜನರು ಬೇಡೆಂದು ಪೇಳೆ ನೋಡಲಾರದೆ । ಪೋಗೆ ಸಜ್ಜನರು ಮಾಡಬಾರದ ಕಾರ್ಯವಿದು ಎನುತ ದುರ್ಜನರು ನಗುತ ॥೧॥ ಪಾಸಿಯಲ್ಲಿ ಪರಮ ಕಷ್ಟವು ಇದರೊಳಗೆ ಒಂದು ಸಾಸಿವ್ಯಷ್ಟು ಸುಖವು । ಹುಟ್ಟಿದು ದೇಶಭ್ರಷ್ಟನಾಗಿ ತಿರುಗುವುದು ಲೇಸೆಂದು ತಿಳಿಯೋ ॥೨॥ ಅಕ್ಕರದಲಿ ನೀನು ಹಡೆದಂಥ ಈ ಚಿಕ್ಕಮುದ್ದು ಮಕ್ಕಳನ್ನು ನೋಡೋ ದಯವಂತ । ದುಃಖ ಭಾಳಾಸ್ವ್ಯಕ್ತವಾಗುವುದೋ ಕರುಣ್ಹುಟ್ಟದ್ಹೋಯ್ತೊ ॥೩॥ ಬಲಿಯ ಯಜ್ಞದಿ ಬಂದು ವಾಮನನು ಮೂರ್ಹೆಜ್ಜೆದಾನ ಕೊಡುವೆನೆನುತಲಿ ಪೇಳ ದಾನವನು । ಗುರುವು ಶುಕ್ರಾಚಾರಿ ಮಾತು ಕೇಳದಲೆ ಬಲಿ ಬಲು ಭಂಗಬಟ್ಟನೊ ॥೪॥ ಮಂದಬುದ್ಧಿ ಹುಟ್ಟಿತ್ತೊ ನಿಮಗೆ ಈ ಸೆರಗನೊಡ್ಡಿ ಬಂದು ಬೇಡಿಕೊಂಬೆನೋ । ನಿಮಗೆ ಬಂದು ಭೀಮೇಶಕೃಷ್ಣನು ಹೀಗೆಂದು ನಿಮಗಿದ ಪ್ರೇರಿಸಿದನೋ ॥೫॥

## ವಚನ-೩೬

ಎಷ್ಟು ಹೇಳಿದರು ದಯಹುಟ್ಟವಲ್ಲದು ದೊರೆಗೆ ಇಷ್ಟನ್ನ ಕಡೆಗೆ ಕಣ್ಣೆತ್ತಿ ನೋಡುವರಲ್ಲ । ಮತ್ತೇನು ಇದಕೆ ಉಪಾಯವೀಗೆಂದೆನುತ ಬೃಹಚ್ಚೈನಳೆಂಬಂಥ ಬೋನಗಿತ್ತಿಯ ಕರೆಸಿ ॥ ವಾರ್ಷ್ಣೇಯನೆಂಬೊ ವೈನಾದ ದೂತನ ಕಳಿಸಿ ಕಟ್ಟಿ ನಾಲಕು ತೇಜಿ ಹೆಚ್ಚಿನಂದಣ ತರಿಸಿ । ಮಕ್ಕಳಿಬ್ಬರನು ಮೋಹದಲಿ ಕುಳ್ಳಿರಿಸಿ ಬ್ಯಾಗ ಇವತ್ತೆ ನೀನೀಗ ವಿದರ್ಭದೇಶಕೆ ಪೋಗಿ ಬಿಟ್ಟವರ ॥ ಭೀಮರಾಯನ ಬದಿಯಲ್ಲೊಂದಿನ್ನು ಇಷ್ಟಬಂದಲ್ಲಿ ನೀವಿರಲು ಬಹುದೆಂದೆನುತ ಅಪ್ಪಣೆಯಂತೆ । ಅವರಪ್ಪಗೊಪ್ಪಿಸಿಕೊಟ್ಟು ಮತ್ತೆ ವಾರ್ಷ್ಣೆಯು ಋತುಪರಣನಲ್ಲೊಂದಿರಲು ಇತ್ತ ದಮಯಂತಿ ಪ್ರಲಾಪಿಸುವುದು ಮತ್ತೇನೆಂದರೆ- ॥

## ಧ್ವನಿ-೩೭

ಹ್ಯಾಗೆ ಮಾಡಲಮ್ಮ ನಾ ಇನ್ನ್ಹ್ಯಾಗೆ ಮಾಡಲೆ ॥ಪ॥ ಭರದಿ ಆಟದಲ್ಲೆ ಹೋಗಿ ಸೆರಗನೊಡ್ಡಿ ಬೇಡಿಕೊಂಡೆ । ತಿರುಗಿ ನೋಡರೆನ್ನ ಕಡೆಗೆ ಕರುಣಹುಟ್ಟುದ್ಹೋಯಿತು ಮೊರೆಗೆ ॥೧॥ ಹಂಡ್ಯ ಭಾಂಡ್ಯಗಳೆಲ್ಲ ಸೋತ । ಹಿಂಡು ಗೋವತ್ಸಗಳನು ಸೋತ

ದಂಡು ಮಾರ್ಬಲ ಸಹಿತ ಕೋಟಿ ಖಂಡುಗ ಧನ ಧಾನ್ಯವ ಸೋತು ॥೨॥ ಬೆಳ್ಳಿ ಬಂಗಾರವನು ಸೋತ ಒಳ್ಳೆ ವಸ್ತ್ರಾಭರಣವ ಸೋತ । ಹಳ್ಳಿಪಳ್ಳಿ ಸಹಿತವಾಗಿ ಎಲ್ಲ ನಿಷಧದೇಶವ ಸೋತ ॥೩॥ ರಾಜ್ಯಲಕ್ಷ್ಮಿಯನ್ನು ಸೋತ ತೇಜಿ ಗಜ ರಥಗಳನು ಸೋತ । ರಾಜಹಿಡಿವೋ ಛತ್ರಛಾಮರ ಜೂಜಿನ ಪಣಕಿಟ್ಟು ಸೋತ ॥೪॥ ಉಪ್ಪರೀಗ್ಗರಮನೆಯ ಸೋತ ಹತ್ತುವೋ ಸಿಂಹಾಸನ ಸೋತ । ಕಪ್ಪಖಜಾನೆಗಳ ಏಳು ಕೊಪ್ಪರೀಗ್ಹಣಹೊನ್ನು ಸೋತ ॥೫॥ ಕಂಠಿ ಕಂಠಾಭರಣವ ಸೋತ ಟೊಂಕದುಡಿದಾರುಂಗುರ ಸೋತ । ಒಂಟಿ ಮುತ್ತು ಕರ್ಣಕುಂಡಲ ಕಂಕಣ ಕರಭೂಷಣ ಸೋತ ॥೬॥ ಹೊದ್ದ ಜರದ ಛಾದರ ಸೋತ ಮುದ್ರೆಮೋ (ಮೋಹ) ರಂಗುರವನು ಸೋತ । ವಜ್ರಬಿಗಿದ ಮುತ್ತಿನ ಮುಂದಾಸನ ಪಣಕ್ಕಿಟ್ಟು ಸೋತ ॥೭॥ ಗೆದ್ದೆನೆಂದು ಪುಷ್ಕರ ನಗುತ ತಿದ್ದಿತನ್ನ ಮೀಸೆಗಳನು । ಮುದ್ದುದಮಯಂತಿಯ ಪಣಕ್ಕಿಟ್ಟು ಗೆದ್ದು ನೀ ಹೋಗೆಂದು ನುಡಿದ ॥೮॥ ಅಂದ ಮಾತನು ಕೇಳುತ ರಾಜ ಕೇಡದಂತೆ ಕುಪಿತನಾಗಿ । ಮುಂದೆ ಭೀಮೇಶಕೃಷ್ಣನೆ ಗತಿಯೆಂದು ಮಾರ್ಗವನ್ಹಿಡಿದು ನಡೆದ ॥೯॥

## ವಚನ-೩೮

ದೊರೆ ಹೊರಡುತಿರಲಾಗ ತ್ವರಿತದಲಿ ದಮಯಂತಿ ಸರ್ವ ಆಭರಣ ಬಿಚ್ಚೊಗೆದಳರಮನೆಯಲ್ಲಿ। ಭರದಿಂದ ಬಂದಾಗ ಪುರದ ಹೊರಗಿರುವಂಥ ಮರದ ನೆರಳಲಿ ಕುಳಿತರಾಗಿಬ್ಬರೊಂದಾಗಿ ॥ ಕರುಣದಿಂದೂರ ಜನರನ್ನ ಪಾನವ ಕೊಡಲು ಮುದದಿಂದ ಮೂರುದಿವಸ ಅಲ್ಲಾಸವಾಗಿರಲು । ಅದಕೇಳಿ ಪುಷ್ಕರನು ಅತಿ ಕೋಪದಿಂದಾಗ ನಳಗನ್ನ ಕೊಟ್ಟವರ ನಾ ಶಿಕ್ಷಿಸುವೆನೆಂದು ॥ ಪರಮ ಸಂಭ್ರಮದಿ ಡಂಗುರ ಹೊಯಿಸೆ ಊರಲ್ಲಿ ಇದು ನಮ್ಮ ವಿಧಿ ಬರೆದ । ಬರಹ ತಪ್ಪದು ಎನುತ ಒಡಗೂಡಿ ಸತಿ ಸಹಿತ ನದೆದ ನಳಮಹಾರಾಜನು ॥

## ಧ್ವನಿ-೩೯

ಎನು ಮಾಡಲೆನ್ನ ಸತಿ ಮುಂದೇನು ಗತಿ । ಕಾನನದೊಳಿಬ್ಬರೆ ಮತ್ತಿಲ್ಲವೆ ಜತಿ ॥ಪ॥ ಅಡವಿಯಲ್ಲಿ ನಡೆದು ಮೆಲ್ಲನ್ಹೆಜ್ಜೆಯಿಕ್ಕುತ । ಒಡೆದು ಕಾಲಂಗುಷ್ಟ ರಕ್ತಸಿಡಿದು ಚಿಮ್ಮುತ ॥೧॥ ಕರಡಿ ಹುಲಿಯು ಸಿಂಹ ಖಡ್ಗಾಮೃಗವ ಕಂಡಳು । ನಡುಗುತ ಕರಪಿಡಿದು ಕಾಂತನ್ನಪ್ಪಿಕೊಂಡಳು ॥೨॥ ಹೆಗಲಮ್ಯಾಲೆ ಕೈಯನ್ಹಾಕಿ ಮುಖವ ನೋಡುತ । ಸುಗುಣೆ ಸೂಕ್ಷ್ಮಗೊಂಬೆ ಸುಮ್ಮನ್ಹೆದರೋದ್ಯಾಕೆಂದ ॥೩॥ ಇಂಥ ಗುಡ್ಡ ಗಂಹ್ವರ ಈ

ಕಾಂತಾರದೊಳು । ನಿಂತು ಸಿಂಹ ನಿನ್ನ ಟೊಂಕ ನೋಡಿ ನಡೆವುದೆ ॥೪॥ ಮಡದಿ ನಿನ್ನ ಸಡಗರದ ನಡಿಗೆಯು ಚೆಂದ । ಅಡವಿ ಗಜವು ನೋಡಿ ಭಾಳಾರ್ಭಟಿಸಿ ಬರುವುದೆ ॥೫॥ ಜಿಂಕೆ ಹಿಂಡು ಮರಿಗಳೆಲ್ಲ ಝೇಂಕರಿಸುತ । ತಮ್ಮಂಥ ನೇತ್ರವೆಂದು ನೋಡಿ ಭ್ರಾಂತಿ ಗೊಂಡವೆ ॥೬॥ ಸರ್ಪನೋಡುತ್ತೆರಳಿಗ್ಹೆಡೆಯ ಎತ್ತಿ ಬರುವುದೆ । ಎತ್ತಿಕೊಂಡು ನಡೆಯಲಿಕ್ಕೆ ಶಕ್ತಿ ಸಾಲದೆ ॥೭॥ ಬಿಸಿಲಿನಲ್ಲಿ ಮುಖದಕಮಲ ಬಾಡಿ ಕಂದಿತೆ । ಶಶಿಯಬಿಂಬದಂಥ ಕಾಂತಿ ಕಳೆಯುಗುಂದಿತೆ ॥೮॥ ಮಲ್ಲಿಗೆ ಹಾಸಿಕೆಯ ಮಂಚದಲ್ಲಿ ಮಲಗುವಿ । ಕಲ್ಲಿನ್ಹಾಳಿಕ್ಕಲ್ಲಿ ಕಠಿಣ ಶಯನವಾಯಿತೆ ॥೯॥ ಕ್ಷೀರ ಘೃತ ಮಂಡಿಗೆ ಫೇಣಿ ಬೂರಾಸಕ್ಕರೆ । ಸಾರ ಸವಿ ಮೃಷ್ಟಾನ್ನಭೋಜನ ದೂರವಾಯಿತೆ ॥೧೦॥ ಕಾರೆ ಕವಳೆ ಬೋರೆ ಬೆಳವಲ್ಹಣ್ಣು ಮೆಲ್ಲುತ । ಘೋರಾರಣ್ಯದಲ್ಲಿ ಇಂಥ ಕಾಲ ಕಳೆಯುತ ॥೧೧॥ ಕುಡಿವ ನೀರು ಮಡಚಿ ವೀಳ್ಯ ಕೊಡುವರಿಲ್ಲದೆ । ಮಡುವಿನೊಳಗೆ ಇಳಿದು ನೀರು ಕುಡಿವಂತಾಯಿತೆ ॥೧೨॥ ಹರಸಿ ಎಣ್ಣೆ ಬೆರೆಸಿ ನೀರು ಎರೆಸಿ ಮೈಯ್ಯನು । ಒರೆಸಿ ಭಾಳಾದರಿಸಿ ಪರಾಂಬರಿಸೋರಿಲ್ಲದೆ ॥೧೩॥ ಬುಟ್ಟಾದಾರಿ ನಿರಿ ಜರತಾರಿ ಉಟ್ಟಂಥ ಸೀರೆ । ಬಿಟ್ಟರ್‍ವ್ಹೆಗೆದುಡಿವೋರಿಲ್ಲೆ ಪಟ್ಟದ ನಾರಿ ॥೧೪॥ ಅಚ್ಚ ಮುತ್ತು ಪಚ್ಚ ನವರತ್ನಾಭರಣವು । ಅಚ್ಚದರಸಿಗಿಟ್ಟಲಂಕಾರ ನೋಡೋರಿಲ್ಲವೆ ॥೧೫॥ ಬಿಡಿಮಲ್ಲಿಗೆ ಪಾರಿಜಾತ ಗಿಡದ ಸಂಪಿಗೆ । ಜಡೆಯನ್ಹಾಕಿ ಬಳಲುವಿ । ಎನ್ನಿಂದ ನಿನಗೀ ದುಃಖ ಸಂತಾಪ್ಯೆಂದು ಪೋಗುವುದೆ ॥೧೭॥ ಸ್ವರ್ಗದಿಂದ ಅಗ್ನಿಯಲ್ಲಾದರೂ, ವಿಷವ ಕೊಂಡು ಮಡಿವೆನೆ । ಶೀಘ್ರದಿಂದ್ಹಾರುತ ಪ್ರಾಣಬಿಡುವೆನೆಂದೆಯೆ ॥೧೯॥ ಅಗ್ರಾ (ಗ್ರಹ) ದಿಂದಲೆನ್ನ ಕೂಡಿ ಹಿಗ್ಗಿಲಿಂದಲಿ । ನಿರ್ಭಾಗ್ಯನ ಕೈಹಿಡಿದು ಇಷ್ಟು ಸುಖವಬಟ್ಟೆಯೆ ॥೨೦॥ ಇಂಥ ಮಾತು ಕೇಳಿ ದಮಯಂತಿ ನುಡಿದಳು । ಸಂತಾಪವ್ಯಾತಕೋ ಸ್ವಾಮಿತಂದಾಪತ್ತಿಗೆ ॥೨೧॥ ಪತಿಯ ಬಿಟ್ಟ ಪಾತಕರಿಗೆ ಗತಿಯು ಇಲ್ಲವೆ । ದೇವತೆಗಳು ನೋಡಿದಕೆ ಸನ್ಮತಿಯ ಬಡುವರೆ ॥೨೨॥ ನೇಮದಿಂದ ನಿನ್ನ ಪಾದ ನಂಬಿಕೊಂಡೆವೊ । ಭೀಮೇಶಕೃಷ್ಣನೆ ನಮ್ಮ ಕಾಯೋ ಎಂದಳು ॥೨೩॥

## ವಚನ-೪೦

ಸತಿಪತಿಯರಿಬ್ಬರೊಂದಾಗಿ ಪ್ರಲಾಪಿಸುತ । ಅತಿದುಃಖದಿಂದ ಬರುತಿರಲು ಅರಣ್ಯದಲಿ । ಕೌತುಕದಿಂದ ಬಂದಾಡುತಿರುವೋ ಪಕ್ಷಿಯ ನೋಡಿ । ಹಿತದಿಂದಲಾಗ ತೋರಿಸುತಿದ್ದ ತನ್ನ ಮಡದಿದಾಗ ॥

## ಧ್ವನಿ-೪೧

ಪಕ್ಷಿನೋಡೆ ಪರಮಸುಂದರಿ । ಈ ಅಡವಿಲಾಡೋ ಪಕ್ಷಿನೋಡೆ ಪರಮಸುಂದರಿ ಇಕ್ಷುಚಾಪನ ಪಿತನು ನಮಗೆ ಇಲ್ಲೆಸೃಷ್ಟಿ ಮಾಡಿಕೊಟ್ಟ ।।ಪ।। ಮಂಗಳಾಂಗಿ ಮುಖವು ನೋಡೆ ಬಂಗಾರದ ರೆಕ್ಕೆ ಹೊಳೆವೊ । ಕಂಗಳು ಮಾಣಿಕ್ಯದಂತೆ ಶೃಂಗಾರವಾಗ್ಹಾರಾಡುವಂಥ ।।೧।। ಕ್ಲೇಶದಿಂದ ಮೂರು ಉಪವಾಸವೆಂದು ತಿಳಿದು ನಾವು । ವಾಸುದೇವನು ನಮಗೆ ಇಂಥ ಗ್ರಾಸಮಾಡಿಕೊಟ್ಟನಿಲ್ಲೆ ।।೨।। ಆರುಪಕ್ಷಿ ಸಿಕ್ಕರೆ ನಮಗೆ ಮೂರುದಿನದ ಆಹಾರವಾಯ್ತು । ಸಾರ್‍ಯಲ್ಹೋಗಿ ಹಿಡಿವೆನೆಂದರೆ ದೂರದಲ್ಹೋಗ್ಹಾರುವಂಥ ।।೩।। ಉಟ್ಟವಸನ ಬಿಚ್ಚಿನಾ ಉಪಾಯದಿಂದ ಹಿಡಿವೆನೆನಲು । ತಟ್ಟನೆ ಹೋಗಿಯದನೆ ಮಟ್ಟಿಕಟ್ಟಿಕೊಂಡ್ಹೋಗ್ಹಾರುವಂಥ ।।೪।। ನಳನೆ ನಿನ್ನ ಜೂಜಿನಲ್ಲಿ ಹಲವು ಭಾಗ್ಯ ಗೆಲಿದುಕೊಂಡು । ಚಲದಿ ನೀನು ಉಟ್ಟವಸ್ತ್ರ ಸೆಳದ ಕಲಿ ನಾನೆಂದು ತಿಳಿಯೋ ।।೫।। ಮರದ ಮ್ಯಾಲೆ ಕುಳಿತು ಪಕ್ಷಿ ಮಾತನಾಡುತಿರಲು ಕೇಳಿ । ತಲೆಯ ತಗ್ಗಿಸಿನೆಲಕೆ ಬಿದ್ದು ನಳನು ನಾಚಿಕಿಂದ ನುಡಿದ ।।೬।। ಹತ್ತಾವತಾರದೊಳಗೊಂಬತ್ತು ತಾನು ಇಟ್ಟುಕೊಂಡು ಶ್ರೇಷ್ಠ । ಭೀಮೇಶಕೃಷ್ಣನಮಗೆ ಕೊಟ್ಟನೀಗೊಂದು ಬೌದ್ಧಾವತಾರ ।।೭।।

## ವಚನ-೪೨

ಬಿದ್ದಪತಿಯನು ನೋಡಿ ಬ್ಯಾಗದಲಿ ದಮಯಂತಿ । ಅರ್ಧಾಂಗಿ ನಾ ಬದಿಯಲ್ಲಿದ್ದು ಫಲವೇನೆಂದು ।। ಅರ್ಧ ಸೀರೆಯನುಡಿಸಿ ಆದರದಿ ಸೆರಗು ಹೊದಿಸಿ । ಪದ್ಮಪಾಣಿಯ ಪಿಡಿದು ನಡೆದಳರಣ್ಯಕಾಗ ।।

## ಧ್ವನಿ-೪೩

ಇದು ನೋಡೆ ಮದಗಜಮನಲೆ ಬಾ ಚಂದಿರವದನೆ ಇದು ನೋಡೆ ಇದು ನೋಡೆ ನೀ । ಎನ್ನಲ್ಲಿರುತೀಮಕ್ಕಳು ಭಾಗ್ಯ ಮರೆತೆ ಮನಕೆ ಭಾಳ ಕೊರತೆ ಪತಿವರತೆ ।।ಪ।। ಇದು ನೋಡೆ ವಿಂಧ್ಯಪರ್ವತವು ವಿದರ್ಭ । ದೇಶದ ಭೀಮರಾಯನ ಪುರದ ಮಂದಿರಮಾರ್ಗ ।।೧।। ರಾಜಪುತ್ರಿಯೆ ನೋಡೆ ಚೇದೀದೇಶದ ಹಾದಿ । ವೀರಬಾಹುವಿನ ಪಟ್ಟಣಿಲ್ಲೆ ಇರುವುದೆ ।।೨।। ಸತಿ ನೋಡೆ ಋತುಪರಣನ ರಾಜ್ಯವಿದು । ಸೀತಾಪತಿ ಆಳಿದಂಥ ಅಯೋಧ್ಯಾ ಪಟ್ಟಣ ದಾರಿ ।।೩।। ಉತ್ತರ ಪೂರ್ವ ಪಶ್ಚಿಮ

ದಕ್ಷಿಣದ ದಾರಿ । ನಿರೀಕ್ಷಣವಿಂದೀಗ ನಕ್ಷತ್ರಮುಖಿಯೆ ॥೪॥ ಅಂದ ಮಾತನು ಕೇಳಿ ಸಂದೇಹದಿಂದಲಿ । ಇಂದು ಈ ಮಾರ್ಗನೋಡೆಂದ ಕಾರಣವೇನಿದು ॥೫॥ ಸುಪಾಣಿ ಮುತ್ತಿನಂತ್ಹೊಳೆವೊ ಸೂಕ್ಷಾಂಗಿಯೆ । ನಿಮ್ಮಪ್ಪನ ಮನೆಯಲ್ಹೋಗ್ವೊಪ್ಪದಲ್ಲಿರು ಎಂದ ॥೬॥ ಇಂದು ನಾವಿಬ್ಬರು ತಂದೆವುಂದಿರಕೋಗ್ಹಿ । ಕಂದರ ಒಡಗೂಡ್ಯಾನಂದವಾಗಿರೋಣೆಂದಳು ॥೭॥ ಕೆಟ್ಟುನಂಟರಮನೆ ಸೇರಿಕೊಂಬುವದಕ್ಕಿಂತ । ಅಟ್ಟಡವಿಯಲ್ಲಾವಾಸವೆ ಲೇಸೆಂದೆನುತ ॥೮॥ ಸುಗುಣ ಭೀಮೇಶಕೃಷ್ಣನ್ನ ಪದಾಂಬುಜ । ಯುಗಳವೆ ಗತಿಯೆಂದ್ಹಾಗ್ಹಿಲ್ಲೆ ಇರುವೋಣೆಂದ ॥೯॥

## ವಚನ-೪೪

ಪಟ್ಟದರಸನ ಮಾತೆ ಕೇಳುತಲಿ ದಮಯಂತಿ । ಉತ್ತರವ ಕೊಡುವ ಕಣ್ಣೆಂದುದಕ ಸುರಿಸುತಲಿ ॥ ಅಟ್ಟ ಅರಣ್ಯದಲಿ ಬಿಟ್ಟುನಿಮ್ಮೊಬ್ಬರನೆ । ಹೆತ್ತವರ ಮನೆಯ ಸುಖಯೆನಗೆ ಸಮ್ಮತವಿಲ್ಲ॥ ಕಷ್ಟದಾರಿದ್ರ್ಯ ಸಂತಾಪ ಹೊಂದಿರಲಿನ್ನು । ಪತ್ನಿಕಾಣುತ ಮನಕೆ ಪರಮ ಹರುಷಾಗುವುದು । ಎಷ್ಟು ಬಾಂಧವರಿದ್ದರೇನು ಈ ಪ್ರಾಣಕ್ಕೆ ಮುಖ್ಯ ಮಡದಿಯ ॥ ಸರಿಯು ಮತ್ತೊಬ್ಬರಾಗುವರೆ ಚಿತ್ತ । ಚಂಚಲವಾಗಿ ಚಿಂತೆಮಾಡುವುದ್ಯಾಕೆ । ನಿತ್ಯದಲಿ ಬೆನ್ನಟ್ಟಿ ನೆರಳಂತಿರುವೆನು ॥

## ಧ್ವನಿ-೪೫

ಮಡದಿಮಾತನು ಕೇಳಿ ಕಡು ಹರುಷದಿ ರಾಜ ಕೋಮಲಾಂಗಿ । ದೃಢವಾದ ಮನಸು ನೋಡುತ ಬೆರಗಾದನು ಕೋಮಲಾಂಗಿ ॥೧॥ ಹೊತ್ತು ಮುಣುಗಿ ಕತ್ತಲು ಕವಿದಿತು ನೋಡೆ ಕೋಮಲಾಂಗಿ । ಇವತ್ತಿನ ರಾತ್ರಿ ಇಲ್ಲಿರುವೋಣೀಗೆಂದನು ಕೋಮಲಾಂಗಿ ॥೨॥ ನಡುಮಾರ್ಗದಲ್ಲಿ ಚಾವಡಿಯೊಂದಕಂಡನು ಕೋಮಲಾಂಗಿ । ಒಡಗೂಡಿ ಸತಿಯ ಆವಾಸ ಮಾಡಿದನಲ್ಲೆ ಕೋಮಲಾಂಗಿ ॥೩॥ ಬಿಚ್ಚಿ ಸೆರಗನಾಗ ಬೀಸುತ ಗಾಳಿಯ ಕೋಮಲಾಂಗಿ । ಒಕ್ಕುತಿದ್ದಳು ತನ್ನ ಪತಿಯ ಪಾದಗಳನ್ನು ಕೋಮಲಾಂಗಿ ॥೪॥ ಬಿಸಿಲಲ್ಲಿ ದಣಿದು ಭಾಳಸ್ಹಿದು ಬಂದಿಯೆ ನೀನು ಕೋಮಲಾಂಗಿ । ವಸುಧೆಮ್ಯಾಲಾದರು ವಿಶ್ರಮಿಸಿಕೊ ಎಂದನು ಕೋಮಲಾಂಗಿ ॥೫॥ ಮಣ್ಣು ಹುಡಿಯಮ್ಯಾಲೆ ಮಲಗಿ ಮಾತಾಡುತ ಕೋಮಲಾಂಗಿ । ಕಣ್ಣು ಮುಚ್ಚಲು ಗಾಢನಿದ್ರೆ ಬಂದೊದಗಿತು ಕೋಮಲಾಂಗಿ ॥೬॥ ಮಲಗಿದ ಸತಿನೋಡಿ ಘನಕ್ಲೇಶದಿಂದಾಗ

ಕೋಮಲಾಂಗಿ । ಮನದೊಳಗೊಂದು ಆಲೋಚನೆ ಮಾಡಿದ ಕೋಮಲಾಂಗಿ ॥೭॥ ಇಂದುವದನೆಯನ್ನು ಇಲ್ಲೆ ಬಿಟ್ಹೋದರೆ ಕೋಮಲಾಂಗಿ । ತಂದೆಮಂದಿರ ಕ್ಹೋಗ್ಯಾನಂದವಾಗಿರುವಳು ಕೋಮಲಾಂಗಿ ॥೮॥ ಸುತ್ತ ನೋಡಲು ಕಲಿ ಕತ್ತಿ ಬಿಟ್ಟಿರಲೊಂದು ಕೋಮಲಾಂಗಿ । ಉಟ್ಟ ಸೀರೆಯನರ್ಧ ಹರಿದುಕೊಂಡನು ಬ್ಯಾಗ ಕೋಮಲಾಂಗಿ ॥೯॥ ಗಟ್ಟಿ ಮನಸ್ಸು ಮಾಡಿ ತತ್ಣನೆ ನಡೆದನು ಕೋಮಲಾಂಗಿ । ಚಿತ್ತ ಚಂಚಲನಾಗಿ ತಿರುಗೋಡಿ ಬಂದನು ಕೋಮಲಾಂಗಿ ॥೧೦॥ ಮುಂಗುರುಳನೆ ತಿದ್ದಿ ಮುಖಬೆವರೊರೆಸುತ್ತ ಕೋಮಲಾಂಗಿ । ರಂಗುತುಟಿಗೆ ಚುಮ್ಮನಂಗಳ ಕೊಡುತಲಿ ಕೋಮಲಾಂಗಿ ॥೧೧॥ ನಡೆದು ಹೋದನು ನಾಲ್ಕು ಮೂರ್ಛೆಜ್ಞೆನಿಕ್ಕುತ ಕೋಮಲಾಂಗಿ । ಕಡೆಗೆ ಕಾಲೇಳದೆ ತಿರುಗಿ ತಾ ಬಂದನು ಕೋಮಲಾಂಗಿ ॥೧೨॥ ಅಂಗನೆ ಅಂಗಧೂಳನೆಲ್ಲ ಒರೆಸುತ ಕೋಮಲಾಂಗಿ । ಆಲಿಂಗನೆ ಕೊಟ್ಟು ಕಂಗಳ ಜಲ ಒರೆಸುತ ಕೋಮಲಾಂಗಿ ॥೧೩॥ ಅತ್ತ ಪೋಗುವ ಇತ್ತ ಬರುವೋನು ಭರದಿಂದ ಕೋಮಲಾಂಗಿ । ತೊಟ್ಟಿಲು ತೂಗುವಂದದಿ ತಿರುಗ್ಯಾಡುತ ಕೋಮಲಾಂಗಿ ॥೧೪॥ ಅಂಬುಜಾಕ್ಷಿ ನಿನ್ನ ಹಂಬಲ ಬಿಡದಲ್ಲೆ ಕೋಮಲಾಂಗಿ । ಜಾಂಬೂನಪುತ್ಥಳಿಗೊಂಬೆ ನಿನ್ನಗಲುವೆ ಕೋಮಲಾಂಗಿ ॥೧೫॥ ಎನ್ನ ನಂಬಿದರೀಗ ನಿನ್ನ ಬಿಟ್ಹೋಗುವೆ ಕೋಮಲಾಂಗಿ । ಎನ್ನಂಥ ಪಾತಕರಿನ್ನಿಲ್ಲ ಜಗದೊಳು ಕೋಮಲಾಂಗಿ ॥೧೬॥ ದಾರನ ದಾರಿ ಕೇಳುವಿ ದಮಯಂತಿಯೇ ಕೋಮಲಾಂಗಿ । ದಾರ ದಾರಳುಯೆಂದು ಹೇಳಿಕೊಂಬುವಿಯೆ ನೀ ಕೋಮಲಾಂಗಿ ॥೧೭॥ ಒಬ್ಬಳೆ ನೀನು ವಿದರ್ಭದೇಶಕೆ ಪೋಗಿ ಕೋಮಲಾಂಗಿ । ವೈದರ್ಭಿ ನೀ ಪಿತನ ಮಂದಿರವ ಸೇರುವುದ್ಯಾಗೆ ಕೋಮಲಾಂಗಿ ॥೧೮॥ ಎಚ್ಚರವಿಲ್ಲದಾಕೆಯ ಮುಂದೆ ಕುಳಿತಿನ್ನು ಕೋಮಲಾಂಗಿ । ಹುಚ್ಚುಗೊಂಡಂತೆ ತಾ ಮಾತನಾಡುತಲಿದ್ದ ಕೋಮಲಾಂಗಿ ॥೧೯॥ ಈಪರಿಯಿಂದ ಪ್ರಲಾಪ ನೋಡುತಲಿ ಕೋಮಲಾಂಗಿ । ಕೋಪದಿ ತನ್ನ ಪ್ರತಾಪವ ತೋರಿದ ಕೋಮಲಾಂಗಿ ॥೨೦॥ ಕಲಿಕೊಟ್ಟ ಕಠಿಣ ಮನಸು ಕಲ್ಲೆದೆಯ ಮಾಡಿ ಕೋಮಲಾಂಗಿ । ಕರುಣವಿಲ್ಲದೆ ದಾರಿಹಿಡಿದು ತಾ ನಡೆದನು ಕೋಮಲಾಂಗಿ ॥೨೧॥ ಪೃಥಿವಿ ಚಂದ್ರಮ ಸೂರ್ಯ ದಿಕ್ಕುಪಾಲಕರೆಲ್ಲ ಕೋಮಲಾಂಗಿ । ಮತ್ತೆನ್ನ ಸತಿಯ ಸಂರಕ್ಷಿಸಲೆಂದನು ಕೋಮಲಾಂಗಿ ॥೨೨॥ ವೃಕ್ಷಜಾತಿಗಳಂಥ ವೃಕ್ಷದೇವತೆಗಳು ಕೋಮಲಾಂಗಿ । ಸಾಕ್ಷಾತ ಹರಿ ತಾ ರಕ್ಷಿಸಲೆಂದು ನಡೆದನು ಕೋಮಲಾಂಗಿ ॥೨೩॥ ತಿರುಗಿ ತಿರುಗಿ ನೋಡಿ ಸುರಿಸುತ ಕಣ್ಣೀರ ಕೋಮಲಾಂಗಿ । ಪರಮ ಕ್ಲೇಶಗಳಿಂದ ಭರದಿಂದ ನಡೆದನು ಕೋಮಲಾಂಗಿ ॥೨೪॥

ಸಾಮಜಗಮನೆಯ ಸರ್ವರಕ್ಷಕನಾದ ಕೋಮಲಾಂಗಿ । ಭೀಮೇಶಕೃಷ್ಣ ರಕ್ಷಿಸಲೆಂದು ನಡೆದನು ಕೋಮಲಾಂಗಿ ॥೨೫॥

## ವಚನ-೪೬

ನಾಗವೇಣಿಯ ಬಿಟ್ಟು ನಡೆದ ನಳಮಹಾರಾಜ । ಆಗ ಬೆಳಗಾಯಿತರವಿಂದ ಮೊಗ್ಗರಳಿದವು ಕೋಳಿ ॥ ಕೋಗಿಲೆ ಹಂಸ ಗಿಳಿ ಗರುಡಪಕ್ಷಿಗಳು । ಕೂಗುತಿರೆ ಧ್ವನಿಯ ಕೇಳುತಲಾಗ ದಮಯಂತಿ । ಬ್ಯಾಗನೆಚ್ಚೆತ್ತೆದ್ದು ಕುಳಿತು ಹರಿಗ್ವಂದಿಸುತ । ಸೋಗೆಗಣ್ಣಿಂದ ನೋಡುತ ಪತಿಯ ಕಾಣದಲೆ ॥ ಈಗರ್ಧಸೀರೆ ಹರಿದುತ್ತೆತ್ತ ಪೋಗಿಹನು । ಆಗರಕೆ ಪೋಗಿ ಮಾಗಿದ ಫಲವ ಹುಡುಕುವನೊ ॥ ನಾಗಸಂಪಿಗೆ ದವನ ಕ್ಯಾದಿಗೆಯ ಕೊಯ್ತುಂದು । ಈಗೆನ್ನ ಮುಡಿಗೆ ಮುಡಿಸುವೋನೆಂಬ ಸಂಭ್ರಮವು ॥ ಭೋಗದರಸನ ಬಿಟ್ಟು ಬಾಳ ಹೊತ್ತಯ್ತೆನುತ । ಆಗ ತನ್ನೆದೆಯ ಗಟ್ಟಿಸುತ ಭುಗಿಲೆನ್ನುತಿರೆ ಬ್ಯಾಗನ್ನೊರ್ಧಟ್ಟೊರ್ಧಟು ತನ್ನ ಕಾಂತನ್ನ ಕರೆಯೋ ಬಗೆ-॥

## ಧ್ವನಿ-೪೭

ಸುಂದರ ಸುಗುಣ ಬಾ ಬಾರೆದ್ಮು ಕರೆದಳಂಬುಜಾಕ್ಷಿ ॥ಪ॥ ಅಂದವಲ್ಲ ಚೆಂದವಲ್ಲ ಮಂದಿ ಒಳಗೆ ಮಾನವಲ್ಲ । ಕುಂದು ಬಂದಿತು ನಿಮ್ಮ ಕುಲಕೆ ಎಂದಿಗಾದರು ತಪ್ಪಲಿಲ್ಲ ॥೧॥ ಬ್ಯಾಡ ಬ್ಯಾಡವೆಂದು ನಾನು ಬೇಡಿಕೊಂಡ್ಡೇಳಿದೆನು ನಿಮಗೆ । ಕಾಡಿನೊಳಗೆ ಬಿಟ್ಟು ಎನ್ನ ಓಡಿ ಹೋಗೋದುಚಿತವಲ್ಲ ॥೨॥ ಮರದ ಹಿಂದೆ ಅಡುಗೆ ನಿನ್ನ ಮೋರೆ ನೋಡಿ ಕರೆವೆ ನಾನು । ಪರಮ ಹಾಸ್ಯ ಮಾಡುವೋದು ತರವೆಯೆನ್ನಕೂಡ ಕಾಂತ ॥೩॥ ಚೂತ ಕದಳಿ ವೃಕ್ಷಗಳಿಂದ ಚಾತಕ ಗಿಳಿ ಪಕ್ಷಿಗಳಿರ । ಜೂ (ದ್ಯೂ)ತನಾಡಿ ಸೋತು ಬಂದ ನಾಥ ನಳನ ಕಂಡಿರೇನೆ ॥೪॥ ನೆಲ್ಲಿ ಹೇರಳೆ ನಿಂಬೆಗಳಿರ ಬಲ್ಲಿದಾಶ್ವತ್ಥಗಳಿರ । ಎಲ್ಲರೊಳಗೆ ಶ್ರೇಷ್ಠ ತುಳಸಿ ನಲ್ಲನಳನ ಕಂಡಿರೇನೆ ॥೫॥ ಬದರಿಮರವೆ ಬೆಳೆದ ತೆಂಗು ಗಗನಮುಟ್ಟೋ ಆಡೆವೃಕ್ಷ । ಒದರಿಕೊಂಡರು ಕೇಳದೇನು ಬಿದಿರಿನಂತೆ ಇರುವಿರಲ್ಲ ॥೬॥ ಶೋಕದಿಂದ ಬಂದೆ ನಾನಶೋಕ ವೃಕ್ಷ ನಿನ್ನ ಮುಂದೆ । ನಾ ಕೈಮುಗಿದು ಕೇಳಿಕೊಂಬೆ ಅಶೋಕಳನ್ನ ಮಾಡುಯೆನ್ನ ॥೭॥ ಅಂದು ಹರಿಶ್ಚಂದ್ರ ತನ್ನ ಹೆಂಡತಿಯು ಮಗನ ಮಾರಿ । ಕೊಂಡ ಕಠಿಣ ಬುದ್ಧಿ ನಿನಗೆ ಬಂದು ಸೇರಿಕೊಂಡಿತೇನೊ ॥೮॥ ಇಂದ್ರ ಬಿಟ್ಟು ಸ್ವರ್ಗ ಶಚಿಯು ಬಂದ ನಹುಷಗೊಪ್ಪಿಸಿ ರಾಜ್ಯ । ಬಂದು ಕಮಲನಾಳದಲ್ಲಿ ಹೊಂದಿಕೊಂಡಂತಾಯಿತೀಗ ॥೯॥ ಎಷ್ಟು ಬಾಯಿ ಬಿಟ್ಟಿರು ನಿನ್ನ ಭೆಟ್ಟಿಯಾಗೋರೆತನ

ಕಾಣೆ । ಬಿಟ್ಟು ಅರಣ್ಯದಲ್ಲಿ ಕಷ್ಟಕ್ಕೆ ಗುರಿಮಾಡಿದೆನ್ನ ॥೧೦॥ ಆದರದಲಿ ಬಂದೆ ನಿನ್ನ ಆದರವು ತಪ್ಪಿತೆನಗೆ । ಶ್ರೀಧರ ಭೀಮೇಶಕೃಷ್ಣ ನೀ ದಯದಿ ಕಾಯೊ ಎನ್ನ ॥೧೧॥

## ವಚನ-೪೮

ಬಡಬಡನೆ ನಡೆಯುತಲಿ ಎಡವ್ಯೆಡವಿ ಬೀಳುತಲಿ । ಕಡೆಗಣ್ಣಲಿಂದುದಕ ದಡದಡನೆ ಸುರಿಸುತಲಿ ॥ ಜಡೆಮುಡಿಯು ಬಿಟ್ಟಾಗ ಹುಡಿಯಲ್ಲಿ ಹೊರಳುತಿರೆ । ಅಡವಿಯಲ್ಲಾರ್ಭಟಿಸುತ ಬಂದು ಘಟಸರ್ಪ ಕಡಿದು ॥ ಉಂಗುಷ್ಟ ಮ್ಯೆಗೆ ಸುತ್ತಿ ನುಂಗುತಿರೆ ಕಡುವಿಷವು ತಲೆಗೇರಿ । ಕಣ್ಣು ಮುಚ್ಚುತ್ತಲಿರಲು ಹಿಡಿದು ಕೊಡಲಿಯನಾಗ ಬಂದೊಬ್ಬ ಕಿರಾತ ॥ ಹೆಡೆಯ ಸೀಳುತ ಸರ್ಪ ಕಡಿದು ತುಂಡನು ಮಾಡಿ ಗಿಡದ ಔಷಧದ ಮ್ಯೆಗ್ಹಚ್ಚಿ । ವಿಷವನು ಕಳೆದು ಮಡದಿ ಮೂರ್ಛೆಯ ತಿಳಿಯೆ ಮಾತನಾಡುವುದು ಮತ್ತೇನೆಂದರೆ- ॥

## ಧ್ವನಿ-೪೯

ದಾರೆ ನಿನಗೆ ದಾರಿ ತೋರುವೆ ನೀರಜಮುಖಿ । ನೀರೆ ನೀರು ನೆರಳು ತೋರುವೆ ಬಾರೆ ಬಾ ಮುಖಿ ॥ಪ॥ ಸ್ವಚ್ಛವಾದ ದಿವ್ಯ ಸರೋವರವ ಕಂಡಳು । ತೋರುವೆ ಬಾರೆ ಬಾ ಮುಖಿ ॥ಪ॥ ಸ್ವಚ್ಛವಾದ ದಿವ್ಯ ಸರೋವರವ ಕಂಡಳು । ಮಚ್ಚಲೋಚನೆ ಮ್ಯೆಯ ತೊಳೆದು ಮಡಿಯನುಟ್ಟಳು ॥೧॥ ಮಧುರವಾದ ಫಲವ ತಂದು ಎದುರಿಗಿಟ್ಟನು । ಮಧುರವಾಣಿ ಅವನು ಮೆದ್ದು ಮುದದಿ ಕುಳಿತಳು ॥೨॥ ಹಣ್ಣು ಮೆದ್ದು ಹರಿವ ಜಲವ ಕುಡಿದು ಕುಳಿತಿರೆ । ಹೆಣ್ಣೆ ಬಾರೆದ್ಮು ಕಣ್ಣುಸನ್ನೆ ಮಾಡಿ ಕರೆದನು ॥೩॥ ಪತಿವ್ರತಾ ಧರ್ಮಗಳು ಎನ್ನ ಪಾಲಿಸುವವು । ಪತಿತ ನಿನ್ನ ಹತವ ಮಾಡ್ವೇನೆಂದು ನುಡಿದಳು ॥೪॥ ಗಂಡನಿಲ್ಲದವಳಿಗಿಷ್ಟು ಗರುವ ಯಾತಕೆ । ಹೆಂಡತ್ಯಾಗಿರೆನುತ ಮುಂಗ್ಯೆ ಪಿಡಿಯಲ್ಹೋದನು ॥೫॥ ದೃಷ್ಟಿ ತೆಗೆದು ನೋಡಲಾಗ ದುಷ್ಟ ದುರುಳನು । ಸುಟ್ಟು ಭಸ್ಮವಾಗಿ ಯಮಪಟ್ಟಣಕ್ಹೊರಟನು ॥೬॥ ತಿರುಗಿ ನೋಡದ್ಹಾಗೆ ತಾನು ಭರದಿ ನಡೆದಳು । ಸರ್ವಋಷಿಗಳಾಶ್ರಮವ ಕಂಡು ನಿಂತಳು ॥೭॥ ಸ್ನಾನ ನೇಮ ಜಪವು ಅಗ್ನಿ ಹೋಮ ಕಂಡಳು । ನೇಮದಿಂದಲವರ ಪಾದಕ್ಕೆರಗಿ ನಿಂತಳು ॥೮॥ ಮುತ್ತೈದೆ ಆಗಿ ನೀ ಪುತ್ರರನೆ ಪಡೆಯೆಂದು । ಸತ್ಯವಂತೆ ಸುಖದಿ ಬಾಳೆಂದ್ಹರಸುತಿದ್ದರು ॥೯॥ ಸುಗುಣೆ ದಾರ ಮಗಳೆ ನೀನು ಸುಂದರಾಂಗಿಯೆ । ಯುಗಳಲೋಚನೆ ಇಲ್ಲಿ ಬಂದ ಬಗೆ ಹೇಳೆ ನೀ ॥೧೦॥ ನಾನು ದಮಯಂತಿ ನಳರಾಯನರಸಿಯು । ಭೀಮನೆಂದರೆ ಬಿಟ್ಟ ಪತಿಯ ಹುಡುಕುತಿದ್ದೆನು

॥೧೧॥ ಜ್ಞಾನದೃಷ್ಟಿಯಿಂದ ನೋಡೇವೆ ನಿನ್ನ ಅರಸನ । ನೀನು ಸ್ವಲ್ಪದಿವಸದಲ್ಲಿ ಕಾಂಬೀಯೆಂದರು ॥೧೨॥ ನುಡಿದ ನುಡಿಯ ಕೇಳುತಾಗ ಪಡೆದಳ್ಹರುಷವ । ಅಡಗೆ ಋಷಿಗಳಾಶ್ರಮ ಕಾನಡವಿಯಾಯಿತು ॥೧೩॥ ಸುಚಿಯಯೆಂಬೊ ಸಾಹುಕಾರ ಸರಕನೇರಿಸಿ । ಸಕಲ ಜನರ ಸಹಿತವಾಗಿ ಬರುತಲಿದ್ದನು ॥೧೪॥ ಎತ್ತಿನ ವ್ಯಾಪಾರದವರು ಎದುರು ಬರುತಿರೆ । ಮತ್ತೆ ನೋಡುತಲವರ ಬೆನ್ನತ್ತಿ ನಡೆದಳು ॥೧೫॥ ಭಾನು ಮುಣುಗೆ ಬಯಲೊಳು ಭರದಿ ನಿದ್ರೆಲಿ ಮಲಗಿರೆ । ಮಾನವಂತೆ ಮರದ ಹಿಂದೆ ಅಡಗಿ ಕುಳಿತಿರೆ ॥೧೬॥ ಓಡುತೋಡುತ ಬಂದವು ಕಾಡಾನೆ ಹಿಂಡುಗಳು । ನೋಡದವರ ತುಳಿದು ತುಂಡು ಮಾಡುತಿದ್ದುವು ॥೧೭॥ ಕಣ್ಣು ಮೂಗು ಕಿವಿಯು ಕೈ ಕಾಲು ಕತ್ತರಿಸೆ । ಬಿನ್ನ ಭಿನ್ನವಾದವೆಂದು ಚೀರುತಿದ್ದರು ॥೧೮॥ ಮಣಿಯುಭದ್ರನೆಂಬೊ ನಮ್ಮ ಮನೆಯ ದೇವರ । ಶರಣು ಮಾಡದೆ ಬಂದೆ ನಾನೀಪರಿಯು ಆಯಿತು ॥೧೯॥ ಭೂತ ಪ್ರೇತವೋ ಪಿಶಾಚೋ ಪೀಡಾರಾಕ್ಷಸೊ । ಘಾತಕಳೇ ನೀನ್ಯಾತಕಿಲ್ಲಿ ಬಂದೆಯೆನುತಲಿ ॥೨೦॥ ಕವಣೆಕಲ್ಲುಕರದಿಂ ಪಿಡಿದು ಒಗೆಯುತಿದ್ದರು । ಸರ್ವಜನರ ಬಿಟ್ಟು ದೂರದಲ್ಲೆನಡೆದಳು ॥೨೧॥ ಭರದಿಂದೋಡುತ ಬರುತ ದೊಡ್ಡ ಪುರವ ಕಂಡಳು । ಇಲ್ಲಿರುವ ದೊರೆಯು ದಾರೆಂದೆನುತ ಕೇಳುತಿದ್ದಳು ॥೨೨॥ ಚೇದಿದೇಶ ಚೆಲುವ ವೀರಬಾಹುವಿನ ಪುರ । ಸುಬಾಹುಯೆಂಬೊ ರಾಜ ರಾಜ್ಯ ಆಳುತಿದ್ದನು ॥೨೩॥ ಕೇಳಿ ಮನಕೆ ಭಾಳ ಹರುಷದಿಂದ ನುಡಿದಳು । ಕಾಳಿಮರ್ದನನ ಕರುಣವೆನ್ನಲ್ಲಾಯಿತೆಂದಳು ॥೨೪॥ ಬಂದು ಭೀಮೇಶಕೃಷ್ಣ ಬಂಧುಗಳೊಳಗೆ ಬಿಟ್ಟನು । ಹಾಗೆಂದು ತನ್ನ ಮನಕೆ ಭಾಳಾನಂದಬಟ್ಟಳು ॥೨೫॥

## ವಚನ-೫೦

ಪುರದೊಳಗೆ ಬರುವಂಥ ಪೂರ್ಣೇಂದುವುುಖಿ ನೋಡಿ । ಪರವು ಆಶ್ಚರ್ಯದಿಂದಾಗ ಬಾಲಕರೆಲ್ಲ॥ ಕರದಿ ಚಪ್ಪಾಳೆಯಿಕ್ಕುತ ಸುತ್ತ ಬರುತಿರಲು । ಸೆರಗ ಶಿರದಲ್ಹೊದ್ದು ಮರ್ಯಾದೆಯಿಂದಾಗ ॥ ಬರುತಿರಲು ರಾಜಬೀದಿಯಲಿ ದಮಯಂತಿಯನು । ದೊರೆಜನನಿ ಕಂಡು ತಾ ಕರೆಸಿ ಕೇಳುವುದು ಮತ್ತೇನೆಂದರೆ-॥

## ಧ್ವನಿ-೫೧

ಅಮ್ಮಯ್ಯಾ ನೀನ್ಯಾರು ಪೇಳೆ ನಿಮ್ಮೊರ್ತಮಾನ । ಸುಮ್ಮನಿರುವೊದ್ಯಾತಕೊಂದು ಮಾತು ಪೇಳಮ್ಮ ॥ಪ॥ ದಾವ ಲೋಕದಿಂದ ಬಂದೆ ಆಯತಾಕ್ಷಿಯೆ । ವಾಯುದೇವರರಸಿ

ನೀ ಭಾರತಿಯಯೇನಮ್ಮ ॥೧॥ ಇಂದುವದನೆ ನಿನ್ನ ದೇಹ ಚೆಂದ ಚೆಲ್ವಿಕೆಯ ನೋಡೆ । ಇಂದ್ರನರಸಿ ಶಚಿಯೊ ನೀ ದಾರೆಂದು ಪೇಳಮ್ಮ ॥೨॥ ಇಂದೀವರಾಕ್ಷಿಯೆ ನೀನು ಬಂದ ಕಾರಣವ ಹೇಳೆ । ಚಂದ್ರನರಸಿ ರೋಹಿಣಿಯೊ ನೀ ದಾರು ಪೇಳಮ್ಮ ॥೩॥ ವಾರಿಜಮುಖಿಯೇ ನಿನ್ನ ಮೋರೆನೋಡಿ ಮರುಳುಗೊಂಡೆ । ಸೂರ್ಯನರಸಿ ಸಂಜ್ಞಾ ದೇವೇರಾದರ್ಹೇಳಮ್ಮ ॥೪॥ ಅಷ್ಟೂರೊಳಗೆ ಶ್ರೇಷ್ಠಳೆ ಉತ್ಕೃಷ್ಟ ಉತ್ತಮಳೇ ನೀನು । ವಶಿಷ್ಠರರಸಿ ಅರುಂಧತಿಯೋ ನೀದಾರ್ಹೇಳಮ್ಮ ॥೫॥ ಬಾಗಿ ಬಳುಕಿ ಭರದಿ ನೀನು ಯೋಗದಿಂದ ಬರಲು ಕಂಡು । ಸಾಗರನರಸಿ ಭಾಗೀರಥಿ ನೀನಾದರ್ಹೇಳಮ್ಮ ॥೬॥ ಕೋಮಲಗಾತ್ರೆಯೇ ನೀನು ಪ್ರೇಮದಿ ಪೇಳುವುದೆನಗೆ । ನೀನು ಯಮಧರ್ಮನರಸಿ ಶ್ಯಾಮಲ್ಯೇನಮ್ಮ ॥೭॥ ಹೊಳೆವೋ ಚಿನ್ನದ ಗೊಂಬ್ಯಂತೆ ತೊಳೆದ ಮುತ್ತಿನಂಥ ಕಾಂತಿ । ನಳನ ಸತಿ ದಮಯಂತ್ಯೊ ನೀ ತಿಳಿಯ ಪೇಳಮ್ಮ ॥೮॥ ಪೃಥಿವಿಯೊಳು ನಿನ್ನಂಥ ರೂಪವತಿಯರ ನಾ ಕಾಣೆನೆಲ್ಲೊ। ಮನ್ಮಥನ ಸತಿ ರತಿದೇವಿಯೋ ನೀ ದಾರು ಪೇಳಮ್ಮ ॥೯॥ ಮುದ್ದುಮೋಹನ್ನೆಯೆ ನಿನ್ನ ತಿದ್ದಿ ಮಾಡಿದವರು ಯಾರೆ । ರುದ್ರನರಸಿ ಗೌರಿ ನೀನಾಗಿದ್ದರ್ಹೇಳಮ್ಮ ॥೧೦॥ ಚಂಚಲಾಕ್ಷಿ ನಿನ್ನ ದೇಹ ಮಿಂಚಿನಂತೆ ಹೊಳೆವೊ ಕಾಂತಿ । ವಿರಿಂಚಿಯರಸಿ ವಾಣಿ ಪಂಚನಿಲ್ಲದ್ಹೇಳಮ್ಮ ॥೧೧॥ ನಾಥರಿಲ್ಲದಾಗ ನೀನನಾಥಳಾಗಿ ಬಂದೀಯಲ್ಲೆ। ಪ್ರಖ್ಯಾತ ರಾಮರರಸಿ ನೀ ಸೀತಾಂಗನ್ಯೇನಮ್ಮ ॥೧೨॥ ಎಲ್ಲರೊಳಗೆ ಅಧಿಕವಾದ ಚೆಲ್ವೆ ನಿನ್ನ ಚಂದ ಮುಖವು । ಬಲ್ಲಿದ ಗೌತಮರ ಸತಿ ನೀ ಅಹಲ್ಯೆಯೇನಮ್ಮ ॥೧೩॥ ಲಕ್ಷ್ಯಯಿಟ್ಟು ನೋಡಲಿಕ್ಕೆ ಅಕ್ಷವೆರಡು ಸಾಲದ್ದರಿಯ । ವೃಕ್ಷಸ್ಥಳದ ವಾಸಿ ಶ್ರೀಮಾಲಕ್ಷ್ಮಿಯೇನಮ್ಮ ॥೧೪॥ ಸತ್ಯವಾಗ್ಹೇಳೆ ಭೀಮೇಶಕೃಷ್ಣನ ಪಟ್ಟದರಸೇರೊಳು । ಸತ್ಯಭಾಮೆ ರುಕ್ಮಿಣಿಯೊ ನೀ ದಾರು ಪೇಳಮ್ಮ ॥೧೫॥

## ವಚನ-೫೨

ಮಾತೆ ಕೇಳಮ್ಮ ಮರ್ಯಾದೆ ಬಿಟ್ಹೇಳುವೆನು । ಯಾತಕೆನಗೆಲ್ಲ ದೇವತೆಗಳ್ಹೆಂಡಿರ ಸಾಕ್ಷಿ ॥ ಭೂತಳದೊಳೊಬ್ಬ ರಾಜನ ಮಡದಿ ನಾನೀಗ । ದ್ಯೂತ ಪಗಡೆಯನಾಡಿ ಸೋತು ಅಡವಿಗೆ ಬಂದ ॥ ಪ್ರೀತಿಪತಿಯೆನ್ನ ಬಿಟ್ಹೋದಕಾರಣದಿಂದ । ಆತನ್ನ್ಹುಡುಕುತಲಿ ಆತುರದಿ ಬಂದೆನೆ ನಾನು ॥ ನೀ ತಡೆಯದೆನಗೆ ಅಪ್ಪಣೆ ಕೊಟ್ಟು ಕಳುಹಿಸೆನಲು । ಆ ತರುಣಿ ಮಾತೆ ಕೇಳುತ ರಾಜಜನನಿ ಮತ್ತೇನೆಂದಳು ಎಂದರೆ-॥

## ಧ್ವನಿ-೫೩

ಹೋಗಬ್ಯಾಡ್ಹೋಗಬ್ಯಾಡ ನಾಗವೇಣಿ ನೀನೆಲ್ಲೂ । ಹೋಗಬ್ಯಾಡ್ಹೋಗಬ್ಯಾಡ ॥ಪ॥ ಅಚ್ಚಮುತ್ತಿನಂತ್ಹೊಳೆವೊ ಮಚ್ಚಲೋಚನೆಯ ನೀ ಹುಚ್ಚಿಯಂ(ತೆ)ತಿರುಗುವೋದುಚಿತವಲ್ಲೀಗ ॥೧॥ ಪರರ ಮಂದಿರವಾಸ ಪರಮಕಷ್ಟವೆ ತಾಯೆ । ದೊರೆಗಳ ಮನೆಯಲ್ಲಿ ಸ್ಥಿರವಾಗಿ ಇರುವೋರೆ ॥೨॥ ಮಕ್ಕಳಂದದಿ ನೋಡಿ ಮನ್ನಿಸುವೆನೆ ತಾಯೆ । ಅಕ್ಕತಂಗಿಯರಂತಃಕರ(ಣ)ದಿ ನೋಡುವೆನೆ ॥೩॥ ಇಂದು ನಮ್ಮನೆಯಲ್ಲೆ ಹೊಂದಿಕೊಂಡಿರೆ ನೀ । ಸುನಂನನ ಬದಿಯಲ್ಲಿ ಮಂದಗಮನೆಯೆ ॥೪॥ ನಾನಾ ದೇಶಗಳಲ್ಲಿ ನಾನು ಈ ಪ್ರಯತ್ನ ಮಾಡಿ ನಾರಿ । ನಿಮ್ಮರಸನ ಕರೆಸಿ ಕೂಡಿಸುವೆ ॥೫॥ ಜನನಿಯಂದದಿ ನಿನ್ನ ಮನದಿ ತಿಳಿದೇನಮ್ಮ । ವಿಷಯದಲ್ಲೊಂದು ಮಾತು ಈಗ ಹೇಳುವೆನೆ ॥೬॥ ಹಿಂಡುಕೆಲಸವ ಹೇಳಲೊಂದು ಮಾಡುವಳಲ್ಲ । ಗಂಡಸರೊಳು ಮಾತನಾಡಿ ನಾನರಿಯೆ ॥೭॥ ಪತಿಯ ವಾರ್ತೆಯ ತಂದು ಪೇಳ್ವ ಗಂಡಸರೊಳು । ಹಿತದಿಮಾತಾಡುವೆನತಿ ಹರುಷದಲಿ ॥೮॥ ಎಂಜಲನ್ನವನು ತಂದಿಟ್ಟರುಂಬುವಳಲ್ಲ । ಅಂಜದೆ ಅನುಗಾಲುಪವಾಸ ಮಾಡುವೆನೆ ॥೯॥ ಹಿಕ್ಕಿ ಜಡೆಗೆ ಹೂವು ಕಟ್ಟಿಮುಡಿಸಲು ಬಲ್ಲೆ । ಮತ್ತೆ ನಿನ್ನ ಮಗಳ ಶೃಂಗಾರ ಮಾಡುವೆನೆ ॥೧೦॥ ಅಣ್ಣ ಅತ್ತಿಗೆಯಂತೆ ನಿನ್ನ ಮಗ ಸೊಸೆಯನು । ಮುನ್ನ ತಿಳಿದು ಕಾಲವನ್ನು ಕಳೆವನೆ ॥೧೧॥ ಈ ಸಮಯದಲಿ ಭೀಮೇಶಕೃಷ್ಣನ ನಿಜ । ದಾಸಿಯಂತಿಳದಲ್ಯಾವಾಸ ಮಾಡಿದಳು ॥೧೨॥

## ವಚನ-೫೪

ಮಂದಗಮನೆಯು ತಾ ಸುನಂದನ ಬದಿಯಲ್ಲಿ । ಹೊಂದಿಕೊಂಡಿರಲು ಬಿಟ್ಹೋದ ನಳರಾಯ ತಾ ॥ ಮುಂದೇನು ಮಾಡಿದ ಕಥೆಯ ವಿಸ್ತಾರವನು ಚಂದವಾಗ್ಹೇಳಬೇಕೆಂದು । ಧರ್ಮಜ ನುಡಿಯೆ ಆನಂದದಿಂದ್ಹೇಳುತಿದ್ದಾಗ ಬೃಹದಶ್ವಮುನಿಯು ॥

## ಧ್ವನಿ-೫೫

ನಡೆದ ನಡೆದ ನಳಮಾರಾಯನು ಮಡದಿಯನ್ನು ಬಿಟ್ಟು । ನಡೆದ ನಡೆದ ನಳರಾಯನು ॥ಪ॥ ಮಲಗಿದಂಥ ಸತಿಯ ಬಿಟ್ಟು ಮನಸಿನಲ್ಲಿ ವ್ಯಾಕುಲವಾಗಿ । ನನ್ನ ಸತಿಯನು ನಾ ಇನ್ನ್ಯಾಗೆ ಕಾಂಬೇನೆಂದು ಕಳವಳಿಸುತ ॥೧॥ ಘೋರ ಅರಣ್ಯದಲಿ

ಭೋರುಗುಟ್ಟುತ್ತ ಪೆಳೆಯ ಒಳಗೆ ಕ್ರೂರವಾದ ಸರ್ಪ ನಳನ ಕೂಗಿ ಕರೆದು ಹೇಳಿತಾಗ ||೨|| ಸುತ್ತಮುತ್ತ ಕಾಡುಕಿಚ್ಚು ಹತ್ತಿಬರೆ ಪ್ರಾಣಹತ್ಯವಾಗೋದು । ಎತ್ತಿಯೆನ್ನ ಕಡೆಗೆ ಬಿಟ್ಟರೆ ಪ್ರತ್ಯುಪಕಾರ ಮಾಡುವೆನೆಂದು ||೩|| ಎತ್ತಿ ಕಡೆಗೆ ಬ್ಬಿಡುತಿರಲು ಮತ್ತೆ ನೀರು ನೆರಳಿನಲ್ಲಿ। ಹತ್ತು ಹೆಜ್ಜೆ ಎಣಿಸುತೆನ್ನ ಹೊತ್ತು ಹಾಕೆಂದಿತಾಗ ||೪|| ಒಂದು ಎರಡು ಮೂರುಯೆನುತೊಂಬತ್ತು ಹೆಜ್ಜೆಯೆಣಿಸುತ್ಹೋಗಿ । ಹತ್ತು ಎಂದು ಬಿಡಲು ಮೈಗ್ಹತ್ತಿಕೊಂಡು ಸುತ್ತಿದ ನಾಗ ||೫|| ಕಚ್ಚಿ ವಿಷವು ಅಂಗವೆಲ್ಲ ಕಪ್ಪಿನಿಂದ ವ್ಯಾಪ್ತವಾಗೆ । ವಕ್ರವಾದುದಂದಮುಖವು ಸೊಟ್ಟ ಗಣ್ಣಿಂದ ಕೆಟ್ಟಿತು ದೇಹ ||೬|| ಬೆಳೆದ ಹೊಟ್ಟೆ ಕಾಲು ಕೈ ಸೊರಗಿ ಸಣ್ಣವಾಗಿ ಪಾದ । ತಿರುಗೆ ಮೂಗುವರೆಗೆ ಗೋಣು ಶಿರವ ತೂಗುತ ನಿಂತನಾಗ ||೭|| ನಾನು ಮಾಡಿದುಪಕಾರಕ್ಕೆ ನೀನು ಯೇನು ಮಾಡಿದ್ಯೆನುತ । ಹೀನಮನುಜನಾದೆನೆಂದು ತಾನು ಕೋಪಿಸುತ್ತಿದ್ದನಾಗ ||೮|| ಇಳೆಯ ಮ್ಯಾಲೆ ಜನರು ನಿನ್ನ ತಿಳಿಯಬಾರದೆಂದು ನಾನು । ನಳನೆ ನಿನ್ನ ಚೆಲುವ ರೂಪ ಕಳೆಯ ಕೆಡಿಸಿಬಿಟ್ಟೆನೆಂದ ||೯|| ನಿನಗೆ ಜೋಡುವಸ್ತ್ರಕೊಡುವೆ ತನುವಿನಲ್ಲಿ ಹಾಕಿಕೊಂಡರೆ । ಕನಕಪ್ರತಿಮೆಯಂಥ ರೂಪ ದಿನಕರನ ಪ್ರಕಾಶ ಕಾಂಬುವಿ ||೧೦|| ವಸ್ತ್ರಕೊಟ್ಟು ಮಾತೆಶಾಪದಿ ಮುಕ್ತನಾಗೆ ಕಾರ್ಕೋಟಕನು । ಇತ್ತ ನಳನು ಋತುಪರಣನ ರಾಜಮಂದಿರಕೆ ಬಂದ ||೧೧|| ನೋಡಿದ ಋತುಪರಣನು ಮಾತಾಡಿ ಕೇಳಿದ ನಿನ್ನ ತಿದ್ದಿ । ಮಾಡಿದಂಥ ಬ್ರಹ್ಮನ ಬುದ್ಧಿ ಕುಶಲ ಭಾಳೆಂದು ನಸುನಗುತಲಿ ||೧೨|| ದಾವ ದೇಶ ನೀನು ಬಂದ ಕಾರ್ಯವೇನು ನಿನಗೆಯಿಟ್ಟ । ನಾಮವೇನು ನನ್ನ ಮುಂದೆ ಹೇಳಬೇಕೆಂದು ಕೇಳಿದನಾಗ ||೧೩|| ನಾನು ಬಾಹುಕನೆಂಬೊ ಬಡವ ಬಲ್ಲೆ ತೇಜಿಗಳ ಪರೀಕ್ಷೆ । ಎಲ್ಲರೊಳಗೆ ಸಾರಥಿ ಕಾರ್ಯದಲ್ಲಿ ನಿಪುಣನೆಂಬುವರೆನಗೆ ||೧೪|| ಅಶ್ವಗಳ ಪರೀಕ್ಷೆಯಲ್ಲಿ ಅಧಿಕವಾದ ಪ್ರೌಢ ನಾನು । ಇಟ್ಟುಕೊಂಡರೆ ನಿನಗೆ ಎನ್ನಲಿದ್ದ ಗುಣವು ತಿಳಿವುದೆಂದ ||೧೫|| ಧೀರ ನಿನ್ನ ರಥವ ನಾನು ಶೂರತನದಿ ನಡೆಸುವೆನು । ಭಾರಿ ಸಂಬಳ ತಿಂಗಳಿಗೊಮ್ಮೆ ನೂರುವರಾಹ ನೀ ಕೊಡಬೇಕೆಂದು ||೧೬|| ಎನ್ನ ಮನೆಯಲ್ಲಿರುಯೆಂದೆನುತ ಮನ್ನಿಸ್ಹೇಳುತಿರಲು ರಾಜ । ಅನ್ಯಜನಕೆ ತನ್ನ ಗುಣವು ತಿಳಿಯದಂತೆ ಕಳೆವ ಕಾಲ ||೧೭|| ಇಂಥಾ ಗುಣವಂತೆ ದಮಯಂತಿಯ ಬಿಟ್ಟಗಲಿ ಭಾಳ । ಭ್ರಾಂತನಾದೆನೆಂದು ತನ್ನಂತರಂಗದಿ ಚಿಂತಿಸುತ್ತಿದ್ದ ||೧೮|| ಕನಸಿನಲ್ಲಿ ಮನಸಿನಲ್ಲಿ ನೆನೆಸುತಾಗ ತನ್ನ ಸತಿಯ । ನಿರುತದಲಿ ಭೀಮೇಶಕೃಷ್ಣನ ಸ್ಮರಿಸುತ ತಾನಿರುತಿದ್ದನಾಗ ||೧೯||

## ವಚನ-೫೬

ಅತ್ತ ನಳರಾಯ ಋತುಪರಣನಲ್ಲೊಂದಿರಲು । ಇತ್ತ ವಿದರ್ಭದೇಶದ ಭೀಮರಾಯ ತಾ ॥ ಮತ್ತೆ ಮಗಳು ಅಳಿಯ ಎತ್ತ ಪೋದರೆಂದು । ಭೃತ್ಯರನೆ ಕರೆಸಿ ಮಾತಾಡುವುದು ಮತ್ತೇನೆಂದರೆ- ॥

## ಧ್ವನಿ-೫೭

ಮತ್ತೆ ಮಗಳು ಅಳಿಯ ಎತ್ತ ಪೋದರೆಂದು । ಭೃತ್ಯರನು ಕಳಿಸಿದನು ಭೀಮರಾಯ ॥ ಉತ್ತರ ಪೂರ್ವ ಪಶ್ಚಿಮ ದಕ್ಷಿಣದ ದೇಶ । ಸುತ್ತಿ ಬನ್ನಿರಿ ಸುದ್ದಿ ತನ್ನಿರೆಂದು ॥ಪ॥ ಹಳ್ಳಿಪಳ್ಳಿಯ ತಿರುಗಿ ಹಳ್ಳಕೊಳ್ಳವ ಸುತ್ತಿ ಎಲ್ಲ ದಿಗ್ದೇಶಗಳ ತಿರುಗಿಕೊಂಡು । ಎಲ್ಲ್ಯಾದರು ದಮಯಂತಿಯನು ಕಂಡರೆ ಪಲ್ಲಕ್ಕಿಯೇರಿಸಿ ಕರೆದುತನ್ನಿ ॥೧॥ ಅಂಗಡಿಬೀದಿ ಜನಸಂದಣಿಯೊಳಗೆಲ್ಲ ಸಂಗೀತಗಾಯನದ ಗುಂಪಿನಲ್ಲಿ । ಕಂಡಲ್ಲಿ ನಮ್ಮ ನಳರಾಯ ದಮಯಂತಿಯನು ಅಂದಣೇರಿಸಿ ನೀವು ಕರೆದುತನ್ನಿ ॥೨॥ ಆಡಿದ ಮಾತು ತಪ್ಪುವನಲ್ಲ ನಾನೀಗ ಬೇಡಿದಿಷ್ಟಾರ್ಥವನು ಕೊಡುವೆ ನಿಮಗೆ । ನೋಡಿ ಮಾತಾಡಿ ಒಡಗೂಡಿ ನಳರಾಯನ್ನ ಗಾಡಿಯೇರಿಸಿ ನೀವು ಕರೆದುತನ್ನಿ ॥೩॥ ಹಾದಿಹಾದಿಯ ಹುಡುಕುತ್ಹೋದರು ಜನರು ಸುದೇವನೆಂಬುವ ಸುಜನ ಬ್ರಾಹ್ಮಣನೊಬ್ಬ । ಚೇದಿದೇಶದಲಿ ಸುಬಾಹು ಎಂಬುವ ದೊರೆಯು ಆಳುತಿರುವಂಥ ಪಟ್ಟಣಕೆ ಬಂದ ॥೪॥ ಕೋಟೆಗೋಪುರ ಸುತ್ತಿ ತೋಟಮಲ್ಲಿಗೆ ದವನ ಪಾಟಲ ಚಂಪಕವು ಪಾರಿಜಾತ । ಊಟಶಾಲೆ ಪಾಠಶಾಲೆ ಸರೋವರವ ದಾಟಿ ದಮಯಂತಿಯನು ಹುಡುಕುತಿದ್ದ ॥೫॥ ಬಾಜಾರದೊಳಗೆಲ್ಲ ಆಜುಬಾಜು ಮನೆಯು ರಾಜನುಪ್ಪರಿಗೆ ಕನ್ನಡಿಯ ಮಾಲು (ಮಹಲು) । ತೇಜಿ ಗಜಗಳ ಕಟ್ಟೋಮಂದಿರವ ನೋಡುತಲಿ ರಾಜನರಮನೆಯ ಹೊಕ್ಕನು ಬ್ಯಾಗನೆ ॥೬॥ ಗಕ್ಕನ್ಹೋಗರಮನೆಯ ಹೊಕ್ಹೊಕ್ಕು ನೋಡುತಲಿ ಚಿಕ್ಕ ಸುನಂದನ ಮಂದಿರದಲಿ । ಅಕ್ಕತಂಗಿಗೆ ಜಡೆಯ ಹಿಕ್ಕಿ ಹೂವ ಮುಡಿಸುತಿರೆ ಸಿಕ್ಕಳೆಂದೆನುತ ಸಂತೋಷದಿಂದ ॥೭॥ ಚೆದುರ ಮಾತಿನ ಚಪಲ ಚಂದ್ರಮುಖಿಯಳ ಕಂಡು ಎದುರಿಗೆ ಬಂದು ತಾ ಕುಳಿತನಾಗ । ಮುದದಿಂದ ಮುದ್ದುದಮಯಂತಿಮುಖ ನೋಡುತಲಿ ಮಧುರವಾಣಿ ಮಾತನಾಡೆನ್ನುತ ॥೮॥ ಅಮ್ಮಯ್ಯ ನೀ ದಾರ ಮಗಳು ಪೇಳೆ ನಿಮ್ಮಮ್ಮ ಗೀರಾಜಯೇನಾಗುವ । ನಮ್ಮ ಭೀಮರಾಯನಳಿಯ ನಳರಾಯಗೆ ಇನ್ನು ನೀ ಏನಾದರಾಗಬೇಕೆ ॥೯॥ ಅಂದ ಮಾತನು ಕೇಳಿ ನೊಂದು ದುಃಖಿತಳಾಗಿ ಮುಂದಲೆಯ

ಬಾಗಿ ಮುಖವನು ತಗ್ಗಿಸಿ ತುಂಬಿ । ಕಣ್ಣಿಂದ ಜಲಗಳನಾಗ ಸುರಿಸುತ್ತ ಒಂದೊಂದು ಮಾತನಾಡುತಲಿದ್ದಳು ।।೧೦।। ದಾವ ದೇಶವು ದಾವಪುರದ ಪುರಾಣಿಕನು ನಾಮವೇನು ಬಂದ ಕಾರ್ಯವೇನು । ನೀನು ನಿರ್ಭಯದಿಂದ ಈ ರಾಜನ ಮಂದಿರಕೆ ಬಂದೇನು ಕಾರಣ ಎನ್ನಿ ಚ್ಚಾರಿಸುವಿ ।।೧೧।। ನಂದು ವಿದರ್ಭದೇಶವು ಕುಂಡಲೀನಗರದಿಂದ ಸುದೇವನೆಂಬುವ ಬ್ರಾಹ್ಮಣ । ಬಂದೆ ಭೀಮರಾಯನಾಜ್ಞೆಯನು ವೀರದಲೆ ಕಂಡು ದಮಯಂತಿ ಕರಕೊಂಡು ಹೋಗುವೆ ।।೧೨।। ಗಂಡಹೆಂಡರು ಮೂರು ಗಂಡುಮಕ್ಕಳು ಸೊಸೆಯರಿಂದ ಕೂಡಿ ಕ್ಷೇಮವಾಗಿಪ್ರೋರೆ । ಕುಂದಣರ್ಧರಳಿನಂತ್ಹೊಳೆವೊ ಮೊಮ್ಮಕ್ಕಳ ಆನಂದದಿಂದಾರಾಜ ಲಾಲಿಸುವನೆ ।।೧೩।। ಪುತ್ಥಳಿಗೊಂಬೆಯಂತ್ಹೊಳೆವೊ ಮೊಮ್ಮಕ್ಕಳು ಹೆತ್ತವರ ನೆನಸಿ ಬಡವಾದವೇನು । ಮತ್ತೆ ಮಗಳು ಅಳಿಯ ಎತ್ತ ಪೋದರೆಂದು ಚಿತ್ತದಲಿ ಚಿಂತ್ಯವರಿಗ್ಹುಟ್ಟಿತೇನು ।।೧೪।। ಹಗಲು ಇರುಳು ತನ್ನ ಮಗಳು ಅಳಿಯನ ಧ್ಯಾನ ತೆಗೆಯದೆ ರಾಜ ಸಂತಾಪದಿಂದ । ಜಗದೊಡೆಯ ಭೀಮೇಶಕೃಷ್ಣನೇ ಗತಿಯೆಂದು ಬಗೆಬಗೆಯಲಿ ಬೇಡಿಕೊಳುತಿದ್ದನು ।।೧೫।।

## ವಚನ-೫೮

ತಂದೆತಾಯಿಗಳ್ವಾರ್ತೆ ಕೇಳಿ ಮಕ್ಕಳ ಸುದ್ದಿ । ಗಂಡ ಬಿಟ್ಟು ಹೋದನೆಂಬಂಥ ಸಂತಾಪದಲಿ ।। ಅಂದಾಗ ಅಳುತ ಕುಳಿತಿರಲಾಗ ದಮಯಂತಿ । ಕಂಡು ಸುನಂದನು ಕಡುಬ್ಯಾಗದಿಂದ್ಹೋಗಿ ।। ಬಂದ ಬ್ರಾಹ್ಮಣನ ಮುಂದಳುತಿಹಳು ಸೈರಂಧ್ರಿ । ಇಂದೇನು ಸೋಜಿಗವು ಇದು ತಿಳಿಯದಮ್ಮಯ್ಯ ।। ಬಂದು ನೋಡೆಂದು ಕರೆತಂದು ತೋರಿದಳಾಗ । ಕಂಡಾಗ ಮಾತೆ ಮಾತಾಡುವುದು ಮತ್ತೇನೆಂದರೆ- ।।

## ಧ್ವನಿ-೫೯

ದಾರು ನೀನು ಅರಿಯೆ ನಾನು ವಾರಿಜಾಕ್ಷಿ ಆಳುವುದೇನು । ಅಪಾರವಾದ ದುಃಖಬಡುವೋ ಕಾರಣವೇನು ।।೧।। ಬಡಬ್ರಾಹ್ಮಣ ನೀ ದಾರು ಹುಡುಗಿ ಯಾತಕಿಷ್ಟು ದುಃಖ । ಬಡುವಳ್ಯಾತಕೆನ್ನ ಮುಂದೆ ತಡೆಯದ್ಹೇಳಿಗ ।।೨।। ನಾಮ ದಮಯಂತಿ ಕಥೆ ಭೀಮಭೂಪಾಲನ ಪುತ್ರಿ । ಪ್ರೇಮದಿಂದ ಕಂಡು ಕರೆದು ಕೇಳಿದೆ ನಾನು ।।೩।। ಗುರುತು ಏನು ದಮಯಂತಿ ಅರಿತುಕೊಂಡದ್ಹ್ಯಾಗೋ ನೀನು । ಕರೆತಾರೆಂದು ಕಳಿಸಿದವರ್ಯಾರ್ವರ್ತಮಾನ್ಹೇಳು ।।೪।। ಭೀಮರಾಯ ಹೇಳಿದಂಥ ಭಾಳ ಶುಭಲಕ್ಷಣವು । ಕೂಡಿಕೊಂಡಾವೀ ಶರೀರದಲ್ಲಾಗ ।।೫।। ಮಚ್ಚಲೋಚನದಿ ಒಂದು ಹೆಚ್ಚಿನ

ಲಕ್ಷಣಗಳುಂಟು । ಮತ್ತೆ ಮುಖದ ಮ್ಯಾಲೆ ಉತ್ತಮದ ಲಕ್ಷಣ ॥೬॥ ಹಚ್ಚಿ(ದ) ಕುಂಕುಮದ ನಡುವೆ ಹಚ್ಚಿದ ಜ್ಯೋತಿಗಳಂತೆ । ಅಚ್ಚ ಕೆಂಪುವರ್ಣದ ಮಾಣಿಕ್ಯ ಹೊಳೆದಿತು ॥೭॥ ಮೋಡಮುಸುಕಿ(ದ) ಚಂದ್ರನಂತೆ ಧೂಳು ಮುಸುಕೀಕೆಯಲ್ಲಿ। ಕಾಣವಲ್ಲದೊಂದು ಶುಭಲಕ್ಷಣವೀಗ ॥೮॥ ಅಂದಮಾತು ಕೇಳುತ ಸುನಂದನು ಸುವರ್ಣದ । ತಂಬಿಗೆಯಲಿ ಬಿಸಿನೀರು ತಂದುಕೊಟ್ಟಳು ॥೯॥ ತಿಕ್ಕಿತಿಕ್ಕಿ ತೊಳೆದು ಮುಖವ ವಸ್ತ್ರದಿಂದ ಒರೆಸುತಿರಲು । ಪಕ್ಕನೆದ್ದು ಪಣೆಯಲ್ಲಿ ಮಾಣಿಕ್ಯ ಹೊಳೆದಿರೆ ॥೧೦॥ ಒಪ್ಪಿಕೊಂಡು ಮಗಳು ಎನುತ ಅಪ್ಪಿಕೊಂಡು ತೊಡೆಯಲಿಟ್ಟು। ಸರ್ಪವೇಣಿ ನಿನಗೆ ಈ ಸಂತಾಪವ್ಯಾಕಿನ್ನು ॥೧೧॥ ಬಂದನು ಸುಬಾಹು ಕಂಗಳಿಂದ ಜಲವ ಸುರಿಸುತಾಗ । ಮಂಗಳಾಂಗಿ ನಿನ್ನ ಕೂಡ ಮಾತನಾಡದೆ ॥೧೨॥ ದಾಸಿಯೆಂದು ತಿಳಿದು ನಿನ್ನು ದಾಸೀನವ ಮಾಡಿದೆವೆ ಏ ಶುಭಾಂಗಿ ನಿನ್ನ ಗುರುತು ತಿಳಿಯದ್ಹೋದೆವೆ ॥೧೩॥ ಅರಸು ನಳರಾಯನನ್ನು ಕರೆಸಿ ನಿನ್ನ ಕೂಡಿಸುವೆನು । ಸರಸಿಜಾಕ್ಷಿ ನಿನ್ನ ಮನಕೆ ಹರುಷ ಮಾಡಿಕೋ ॥೧೪॥ ಅಚ್ಚ ಜರತಾರಿ ಸೀರೆ ಕುಪ್ಪಸ ರಾಗಟೆ ಚಂದ್ರರತ್ನ । ಮಾಣಿಕ್ಯದಾಭರಣ ತಂದು ಕೊಡಿಸಿದ ॥೧೫॥ ಅರಸನಗಲಿ ವಸ್ತ್ರಾಭರಣ ಸೊಗಸು ಯಾತಕೆನ್ನ ಪತಿಯು । ಉಡಿಸಿಹೋದನರ್ಧಸೀರೆ ಬಿಡುವೋಳಲ್ಲೀಗ ॥೧೬॥ ಬಂದು ತಾ ಸುನಂದಳನಾನಂದದಿಂದ ಎತ್ತಿಕೊಂಡು । ತಂಗಿ ನಿನ್ನ ಕೂಡ ನಾ ಆವಾಸ ಮಾಡದೆ ॥೧೭॥ ಹೋಗಿ ಬರುವೆನಣ್ಣ(ಮ್ಮ)ಎಂದು ಬಾಗಿ ಮಾತೆ ಚರಣಕ್ಕೆರಗಿ । ಬ್ಯಾಗ ಬಂದಂದಣವನೇರಿ ಸಾಗಿನಡೆದಳು ॥೧೮॥ ಸತ್ಯವಂತೆ ಬಂದು ತನ್ನ ಹೆತ್ತವರ ಚರಣಕ್ಕೆರಗಿ । ಎತ್ತಿಕೊಂಡು ಮಕ್ಕಳ ಮುದ್ದಾಡುತ್ತಿದ್ದಳು ॥೧೯॥ ಹಡೆದ ತಾಯಿತಂದೆ ಮಗಳ ತೊಡೆಯಲಿಟ್ಟು । ಮುದ್ದಿಸುತ ಮಗಳೆ ನಿನಗೆ ಇನ್ನು ಈ ಸಂತಾಪವ್ಯಾತಕೆ ॥೨೦॥ ಚಿಂತೆಬ್ಯಾಡವಮ್ಮ ದಮಯಂತಿ ನಿನ್ನ ಕಾಂತನನ್ನು । ಕಂತುಪಿತ ಭೀಮೇಶಕೃಷ್ಣ ಕರೆಸಿಕೊಡುವನು ॥೨೧॥

## ವಚನ-೬೦

ಧರೆಮ್ಯಾಲೆ ದೊರೆಯ ಹುಡುಕುತ ಹೋದ ಜನರೆಲ್ಲ ತಿರುಗಿಬಂದು । ವಾರ್ತೆ ಹೇಳಿದನೊಬ್ಬ ಬ್ರಾಹ್ಮಣನು ಅರಿತುಕೊಳ್ಳಮ್ಮ । ಅಯೋಧ್ಯೆಯಲಿ ಋತುಪರಣ ನರಮನೆಯೊಳಗೊಬ್ಬ। ಅಶ್ವರಕ್ಷಕನಾಗಿ ಇರುತಿರುವನೊಬ್ಬ ಬಾಹುಕನೆಂಬ ನಾಮದಲಿ ॥ ತೆರೆದುನೋಡಲು ಕಣ್ಣ ಸಾಧ್ಯವಾತನ ರೂಪ । ಮರುಗುವನು ನಿತ್ಯರಾತ್ರಿಯಲಿ

ಸತಿಯಳ ನೆನಸಿ ॥ ವರಮೋಹನಾಂಗಿಯೆಲ್ಲಿರುವೆ ನೀ ಎಂದೆನುತ । ಕರೆದು ಕೇಳಿದನು ಜೀವಲನೆಂಬೊ ಮನುಜನ್ನ ॥ ಇರುತಿರುವ ಇಂದ್ರಪ್ರಜ್ಞಾನಿಯೆಂಬುವನೊಬ್ಬ । ಪರಮ ಸ್ನೇಹಿತ ಎನಗೆ ಅವನ ಸುದ್ದಿ ಎಂಬುವನು ॥ ಇರುವ ವಾರ್ತೆಗಳಿಷ್ಟು ಅರಿತುಕೋ ಎಂದೆನಲು । ಅರಿತು ದಮಯಂತಿ ಮಾತಾಡುವುದು ಮತ್ತೇನೆಂದರೆ- ॥

## ಧ್ವನಿ-೬೧

ಕರುಣದಿಂದ್ಹೋಗೋ ಏ ಪರಣಾದ । ನೆಂಬೊ ಬ್ರಾಹ್ಮಣನೆ ಕರುಣದಿಂದ್ಹೋಗೋ ಏ ಷರಣಾದ ಚರಣಕ್ಕೆರಗಿ ನಾ ಶರಣೆಂಬುವೆನೊ ಪರಣಾದನೆ ಋತುಪರಣನ ಮನೆಗೆ ॥ಪ॥ ಘೋರಾರಣ್ಯದಿ ನಾರಿಯ ಬಿಟ್ಟರ್ಧ- । ಸೀರೆಯನ್ನರಿದುಟ್ಹೋಗುವರೇನೆಂದು ॥೧॥ ಕಂಡಕಂಡ ಗಂಡಸರನು ಕೇಳುತ ಬಂದುತ್ತರ । ಕೊಡಲ್ಹಿಂದಕೆ ಬಾರೆಂದು ॥೨॥ ಭೀಮೇಶಕೃಷ್ಣನ ದಯದಿಂದೆನಗೆ । ಪ್ರೇಮದ ಪತಿಪಾದವನು ತೋರಿಸೊ ॥೩॥

## ವಚನ-೬೨

ಆಡಿದ್ವಚನವ ಕೇಳುತಾಗ್ಹೊರಟ ಪರಣಾದ ನೋಡಿ ನಳರಾಯನೊಡಗೂಡಿ । ಮಾತಾಡಿದನು ಕಾಡ ಅರಣ್ಯದಲಿ ಗಾಢನಿದ್ರೆಯಲ್ಲಿ ॥ ಮಾಡಿಕೊಂಡಂಥ ಮಡದಿಯ ಬಿಟ್ಟು ಪೋಗುವರೆ । ಮೂಢಮೂರ್ಖರು ಉಂಟೆ ಈ ಜಗದೊಳಗೆಂದಿನ್ನು ॥ ಆಡಿದ ಮಾತಿಗುತ್ತರ ಕೇಳಿ ಬಾ ಬಂದು । ಬ್ಯಾಗ ದಮಯಂತಿ ಮುಂದ್ಹೇಳೋ ಮಾತುಗಳು ಮತ್ತೇನೆಂದರೆ- ॥

## ಧ್ವನಿ-೬೩

ಕಂಡುಬಂದನೆ ದಮಯಂತಿ ನಿನ್ನ ಗಂಡನ । ನೋಡಿ ಬಂದೆನೆ ಭಾಗ್ಯವಂತಿ ॥ಪ॥ ಆತನ ರೂಪ ಲಾವಣ್ಯಯಿನ್ನು ಭೂತಗಳಿಗೆ ಬಾರದ ಮಸಿಬಣ್ಣ । ದಂತವಕ್ರ ಕೈಕಾಲು ಸಣ್ಣ ಇನ್ನು ಮಾತಲಿ ಚಪಲ ಮೋರೆಯು ಸೊಟ್ಟಗಣ್ಣ ॥೧॥ ಸತ್ಯವಂತೆಯು ಆಗಿ ತಾನು ಉತ್ತಮಪತಿಯಲ್ಲಿ ಕೋಪವ ಮಾಡುವ್ದೇನು ನಿತ್ಯಸತಿಯ ನೆನಸುವನು । ಅಟ್ಟಾರಣ್ಯದಿ ಬಿಟ್ಟು ಬಂದರೆ ಭಯವೇನು ॥೨॥ ಪಿತನ ಮಂದಿರ ಸೇರಲೆಂದ ಅತಿ ಕಷ್ಟದಿಂದ ಆಕೆಯ ಬಿಟ್ಟು ಬಂದ । ಪತಿವರತಾ ಧರ್ಮದಿಂದ ಶ್ರೀಪತಿಯು ಭೀಮೇಶಕೃಷ್ಣನೆ ಕಾಯ್ವೋನೆಂದ ॥೩॥

## ಧ್ವನಿ-೬೫

ಹೋಗಿಬಾರಯ್ಯ ಸುದೇವ ಬ್ಯಾಗದಲಿ । ಸಾಗಿ ದಮಯಂತಿಸ್ವಯಂವರವೆಂದು ಹೇಳುತಲಿ ॥ಪ॥ ಮತಿವಂತ ನೀ ಪೋಗಿ ಋತುಪರಣನಲಿ । ಅತಿ ಬ್ಯಾಗದಿಂದಲಯೋಧ್ಯಾ ಪಟ್ಟಣಕೆ ॥೧॥ ಬರೆದು ಓಲೆಯನು ಬ್ರಾಹ್ಮಣಗೆ ತಾ ಕೊಟ್ಟು । ದೊರೆ ಋತುಪರಣನ ಕರೆದು ಮುಂದಿಟ್ಟು ॥೨॥ ಓಡಿಹೋದನು ನಳರಾಯನೆಂಬರಸು । ಮಾಡಿಕೊಂಬುವಳೀಗ ಮತ್ತೊಬ್ಬ ಅರಸು ॥೩॥ ಸೋಸಿಲಿಂದ ಭೀಮರಾಯ ಕರೆಸಿದನು । ದೇಶದೇಶದ ರಾಜರೆಲ್ಲ ಬಂದಿಹರು ॥೪॥ ಬಹಳ ತ್ವರಿತದಿ ಲಗ್ನಮಾಡೋ ಸಂಭ್ರಮದಿ । ನಾಳೆಉದಯಕೆ ತಪ್ಪದ್ವೇ (ಪ್ಪವೇ)ಳ್ಯ ಮೀರುವುದು ॥೫॥ ಸಾಧ್ಯವಾದರೆ ನೀನಾಗೋದಾತಗಳಿಯ । ಮುದ್ದುದಮಯಂತಿ ಮೋಹದ ಅರಗಿಳಿಯ ॥೬॥ ಸಾಮಜಗಮನೆಗೆ ಸಮನಾದ ವರನ । ಭೀಮೇಶಕೃಷ್ಣ ಕೊಡಿಸುವ ಸುಂದರನ ॥೭॥

## ವಚನ-೬೬

ಇಂಥ ಮಾತನು ಕೇಳಿ ಭ್ರಾಂತಿಗೊಂಡನು ಮನದಿ । ಕಾಂತನಾಗುವೆನು ರಮಯಂತಿಗೆ ನಾನೆಂದು ॥ ಸಂತೋಷದಿಂದ ಬಾಹುಕನ । ಕರೆದ್ಹೇಳೊ ಮಾತುಗಳು ಮತ್ತೇನೆಂದರೆ-॥

## ಧ್ವನಿ-೬೭

ಬಾರೊ ಬಾರೊ ಬಾಹುಕನೆ ತೋರೊ । ಸಾರಥಿ ಕಾರ್ಯವ ಬಾರೊ ಬಾರೊ ॥ಪ॥ ಅಬ್ಬರದಿ ಮಾಡುವ ವಿದರ್ಭದೇಶದೊಳಗೆ ತಾನು । ಉಬ್ಬಿಲಿಂದ ಭೀಮರಾಯ ವೈದರ್ಭಿನೀಸ್ವಯಂವರವ ॥೧॥ ಲಗ್ನಮಾಡಿಕೊಂಡಾನಳ ನಿರ್ಭಾಗ್ಯನಾಗಿ ತಿರುಗಲವನು । ಹಿಗ್ಗಿಲಿಂದ ಪೋಗಿ ನಾ ಸೌಭಾಗ್ಯವಂತೆಯ ಕೊಡುವೆ ॥೨॥ ಮಧುರವಾಣಿಮದುವೆ ಕೇಳಿ ಮದನಬಾಣವೆನ್ನನು । ಹೃದಯಸೀಳದೀ ವಿರಹತಾಪದಿ ಒದಗಿಪೋಗುವಾದ್ಹ್ಯಗೆಲೊ ॥೩॥ ದೂರದಾರಿ ನೂರುಗಾವುದ ಸಾರ್ಯವಲ್ಲಸಾಧ್ಯವೊ । ಮಾರನಶರಕಾಟಕಳೆದು ಮಾಡೋ ಎನಗುಪಕಾರವ ॥೪॥ ನೀನು ತೇಜಿ ನಡೆಸೊ ನಾ ಕೂತಂಥ ರಥವನೋಡಿಸೊ । ಶ್ರೀಕಾಂತ ಭೀಮೇಕೃಷ್ಣನೆ ದಮಯಂತಿಗೆನ್ನನು ಕೂಡಿಸೊ ॥೫॥

## ವಚನ-೧೮

ಅಂದ ಮಾತನು ತನ್ನೆಂಡತಿಗೆ । ಗಂಡನಾಗುವಂಥ ಗಂಡು ನೀನ್ಯಾರೆನುತ । ಕೆಂಡದಂತೆ ಕುಪಿತನಾಗಿ ತನ್ನ ಮನದೊಳಗೆ । ಮುಂದೆ ಮಾವಗೆ ಮಾತನಾಡುವುದು ಮತ್ತೇನೆಂದರೆ- ॥

## ಧ್ವನಿ-೧೯

ಸೈಯೊ ಸೈ ಸೈ ಭೀಮನಾ(ನೆ) ಎಲ್ಲಿ ಹೋಯಿತಭಿಮಾನ ॥ಪ॥ ಯಾತಕೆರಡನೆ ಸ್ವಯಂವರ ಪ್ರಖ್ಯಾತ ನಳ ಯಾತಕೆ ಬಾರ । ನೂತನಾಂಗಿ ಸುಂದರ ನೀನಾಗಬಹುದಾಕೆಗೆ ವರ ॥೧॥ ಬಿಟ್ಟನೆಂದು ಮಿಡುಕೋಳೊ ಕಷ್ಟಬಟ್ಟು ಹುಡುಕೋಳೊ । ಶ್ರೇಷ್ಠಪತೀವರತಿ ತನ್ನ ಗುಟ್ಟು ನವುಗೆ ತಿಳಿಸ್ಯಾಳೊ ॥೨॥ ಎನ್ನ ನೆನಸಿ ವುರಗೋಳೊ ಸಂಪನ್ನಳೆನಿಸಿಕೊಂಬೋಳೊ । ಘನ್ನಮಹಿಮ ಭೀಮೇಶಕೃಷ್ಣ ಎನ್ನ ಪತಿ ತೋರೆಂಬೋಳೊ ॥೩॥

## ವಚನ-೨೦

ನಾನವಳ ಬಿಟ್ಟು ಬಂದಂಥ ಕಾರಣದಿಂದ । ತಾನೊಬ್ಬ ಪತಿಯ ಲಗ್ನವ ಮಾಡಿಕೊಂಬುವಳು ॥ ಮೋಹರಗಿಳಿಯೆನ್ನ ಮುದ್ದುದಮಯಂತಿ ಮುಖ । ಹ್ಯಾಗೆ ಕಾಂಬುವೆನೆಂದು ಸಾಗಿ ತೇಜಿಯ ಲಾಯಕೆ- ॥

## ಧ್ವನಿ-೨೧

ರಥಿಕನಾದ ಋತುಪರಣಗೆ ತಾ ಸಾರಥಿಯಾದನು ನಳನು । ಸತಿಯ ನೋಡುವೆನೆಂಬೊ ಸಂಭ್ರಮದಲಿ ಅತಿ ತ್ವರಿತದಿ ತಾ ರಥವ ನಡೆಸಿದ ॥ಪ॥ ಹಿಡಿದು ನಾಲ್ಕು ತೇಜಿಗಳನು ತಂದು ಹೂಡಿದನಾ ರಥಕಾಗ । ನಡುವೆ ರಾಜ ಹಿಂದ್ವಾರ್ಷ್ಣೇಯನು ರಥ ನಡೆಸೊ ಸಾರಥಿ ತಾನಾಗಿ ಕುಳಿತನು ॥೧॥ ಮೂರುಹೆಜ್ಜೆನಿಕ್ಕುತಲಾ ಕುದುರೆ ಮುಗ್ಗರಿಸುತ ಬಿದ್ದಿತು ನೆಲಕೆ । ಭಾರೀತೇಜಿಗಳನೆಬಿಟ್ಟು ನೀನೀ ಬಡತೇಜಿಗಳನೆ ಕಟ್ಟಿದಿ ಯಾಕೆಂದ ॥೨॥ ತಟ್ಟನಿಳಿದು ಎಬ್ಬಿಸಿ ತೇಜಿಯಮೈಗಸ್ತವೆಳೆದು ಬೆನ್ನು ಚಪ್ಪರಿಸಿ ಸತ್ಯವಾಗಿ ಹೇಳುವೆ ತೇಜಿಗೆ ಶುಭಲಕ್ಷಣಗಳು ಭಾಳುಂಟೆಂದ್ಹೇಳಿದ ॥೩॥ ವಾಯುವೇಗ ಮನೋವೇಗದಿ ಕುದುರೆ ಹಾರುತಿದ್ದುವು ಗಿರಿಗಂಹ್ವರವ । ಮ್ಯಾಲ್ಹೊದ್ವಸ್ತ್ರ ಬಿದ್ದಿತು ನಿಲ್ಲೆನುತಿರೆ ನೂರುಗಾವುದ ಹಿಂದಾಯಿತೀಗೆಂದ ॥೪॥ ಬಾಹುಕ ನಿನ್ನ ಬಾಹುಬಲಗಳ

ತೋರೊ ಎನಗೆ ಈ ಕ್ಷಣದಲ್ಲಿ ನಾ । ಹೋಗೀಗ ಭೀಮೇಶಕೃಷ್ಣನ ದಯದಲಿ ದಮಯಂತಿಯ ಕೊಡುವೆನು ॥೫॥

## ವಚನ-೭೨

ಭಯದಿಂದ ರಥವ ನಡೆಸುತ ಬರುವ ಮಾರ್ಗದಲಿ । ಬುರುಗಾಲದ ಮರವ ಕಂಡರಾಕ್ಷಣದಲ್ಲಿ॥ ಇಲ್ಲಿರುವೊ ಕಾಯಿಗಳು ಎಲೆಯೆಷ್ಟುಂಟು ಹೇಳೆನಲು । ಸರಿಯಾಗಿ ನಾನು ಹೇಳುವೆನೆಂದನಾ ರಾಜನು- ॥

## ಧ್ವನಿ-೭೩

ಕೇಳೊ ರಾಜ ನಿನ್ನಯ ಮಾತು ಸಾಜ ಸಾಜವಾದರೀಗೆನ್ನಮನಕೆ ನಿಜ । ಕೇಳೊ ರಾಜ ನಿನ್ನಯ ಮಾತು ಸಾಜ ॥ಪ॥ ಆಡುವೋ ಮಾತ ಕೇಳಿದನು । ತಾ ಓಡುವೋ ರಥ ನಿಲ್ಲಿಸಿದನು ॥೧॥ ಸುತ್ತ ಬೆಳೆದ ಮರ ದೊರೆಯೆ । ಇದಕ್ಕೆಷ್ಟು ಎಲೆಕಾಯುಂಟೊ ದೊರೆಯೆ ॥೨॥ ಎರಡುಸಾವಿರತೊಂಬತ್ತೈದು । ಇದಕ್ಕೆಲೆಕಾಯಿಗಳು ನೋಡು ಕೊಯ್ದು ॥೩॥ ಮತ್ತೆರಡು ದೊಡ್ಡ ಟೊಂಗೆಯಲಿ । ಪತ್ರಕಾಯ್ಗಳ್ನು ಸರಿಯಾಗಿ ॥೪॥ ಹತ್ತು ಸಾವಿರ ಮ್ಯಾಲೊಂದು । ಯದನ್ನತ್ತಿ ನೋಡೋ ನೀ ಬಂದು ॥೫॥ ಸರಸರನೆ ಏರಿದ ಮ್ಯಾಲಕೆ ಟೊಂಗೆ । ಮುರಿದು (ಬಿಸಾ)ಕಿದ ನೆಲಕೆ ॥೬॥ ಎಣಿಸಿಕೊಂಡನು ಹೇಳಿದಷ್ಟೊ । ಗುಣಿಸಿಕೊಂಡರಾಯಿತು ಮನದಷ್ಟು ॥೭॥ ಹೊತ್ತು ಹೋಯಿತು ಬಾಹುಕನೆ । ನಿನಗೆಷ್ಟು ಹೇಳಲೋ ಅರ್ಭಕನೆ ॥೮॥ ದಾರಿಯೊಳಗೆ ನೀ ನಿಂತಿ । ಮತ್ಯಾರಿಗಾಗೊಳೋ ದಮಯಂತಿ ॥೯॥ ವಿಘ್ನವಾಗಿದೆ ಎನಗೀಗ ಬಂದು । ಲಗ್ನಮಾಡಿಸೋ ನೀ ಬ್ಯಾಗ ॥೧೦॥ ಇವತ್ತಿನೊಳಗೆ ನಾ ಇನ್ನು । ಊರುಮುಟ್ಟಿಸುವೆನು ಕೇಳೊ ನಿನ್ನ ॥೧೧॥ ಭೀಮೇಶಕೃಷ್ಣನ ಧ್ಯಾನ ಮಾಡೊ । ಮುಂದಾಗೋ ಕಾರ್ಯವ ನೀ ನೋಡೊ ॥೧೨॥

## ವಚನ-೭೪

ದೊರೆ ನಿನ್ನ ಮಾತೆನಗೆ ಖರೆಯ ಬಂದಿತು ಈಗ । ಗುರುವಾಗಿಯೆನಗಿನ್ನು ಗೋಪ್ಯದಿಂದೀಮಂತ್ರ ॥ ಸರಿಯಾಗಿ ಹೇಳಬೇಕೆಂದು ಬಾಹುಕ ತಾನು । ಪರಮ ಆದರದಿಂದ ಕೇಳಕೊಂಬುವುದು ಮತ್ತೇನೆಂದರೆ- ॥

## ಧ್ವನಿ-೭೫

ಏ ವಸುಧೀಶ ಮಾಡೆನಗುಪದೇಶ । ಈ ಸಮಯದಿ ಹುಟ್ಟಿತೆನಗೆ ಉಲ್ಲಾಸ ॥ಪ॥

ಅಕ್ಷಹೃದಯವಿದ್ಯಾಪೇಕ್ಷ್ಯವಾಗಿದೆ । ಎನಗೀಕ್ಷಣದಲ್ಲಿ ಹೇಳಲಕ್ಷ್ಯಮಾಡದಲೆ ॥೧॥ ವಿನಯದಿಂದ್ಹೇಳಿಕೊಂಬುವೆನು ಪಾಗಾಡಿವಿದ್ಯೆ । ಘನಗುಣವಂತ ನೀ ಎನಗೆ ಪೇಳುವುದೊ ॥೨॥ ಅಶ್ವಹೃದಯ ಮಂತ್ರ ಅಧಿಕ ಲೋಕದೊಳಿದು । ಅವಶ್ಯ ಹೇಳುವೆನೆಂದನಾಗ ಋತುಪರಣ ॥೩॥ ಬರುವ ಕಾಲಗಳಲ್ಲಿ ಕರೆದು ನಿನಗೆ ವಿದ್ಯೆ । ಸರಿಯಾಗ್ಹೇಳುವೆನೀಗ ತ್ವರಿಯ ಬೇಡೆಂದ ॥೪॥ ತ್ವರಿಯವಿದ್ದರೆ ನೀ ಮತ್ತೊಬ್ಬ ಸಾರಥಿಕೂಡ । ಭರದಿ ರಥನಡೆಸುತ ಪುರವ ಸೇರೆಂದ ॥೫॥ ಇಂಥ ಸಾರಥಿ ಬಿಟ್ಟರೀಗ ರಥ ನಡೆಯದು । ದಮಯಂತಿ ದಾರಿಗೆ ವನಮಾಲೆ ಹಾಕುವಳೊ ॥೬॥ ಮೊದಲೆ ಕಲಿಸುವೆ ಅಕ್ಷಹೃದಯವಿದ್ಯವನೆಂದು । ಮುಂದದಿಂದ್ಹೇಳಿದ ಋತುಪರಣ ನಳದೊರೆಗೆ ॥೭॥ ಅಕ್ಷಯಹೃದಯಮಂತ್ರ ಆಗ ಪಾಗಾಡಿವಿದ್ಯೆ । ಆಕ್ಷಣದಲ್ಲಿ ಕಲಿತ ಆಗ ನಳದೊರೆಯು ॥೮॥ ಅಕ್ಷಹೃದಯಮಂತ್ರ ಕುಕ್ಷಿಯಲ್ಹೊಗಲಾಗ । ಶಿಕ್ಷೆಯಾಯಿತು ಕಲಿಗಾಕ್ಷಣದಲ್ಲೆ ॥೯॥ ಗಿರಿಗಿರಿ ಹೊಟ್ಟೆಯಲಿ ತಿರುತಿರುಗಿ । ನಳ ಗರಳಸಹಿತ ಕಾರಿಕೊಂಡನಾ ಕಾಲಿಯ ॥೧೦॥ ಬಿದ್ದನಾಗಲೆ ಕಲಿ ಶುದ್ಧನಾದನು । ನಳ ಗೆದ್ದ ಭೀಮೇಶಕೃಷ್ಣನ ದಯದಿ ರಾಜ್ಯವನು ॥೧೧॥

## ವಚನ-೭೬

ಸಿಡಿದು ಬಿದ್ದಂಥ ಕಲಿಯನು ನೋಡಿ ನಳರಾಯ । ಕಡುಕೋಪದಿಂದ ತಾ ಕೊಡುವೆ ಶಾಪವನೆಂದು ॥ ನುಡಿದ ನುಡಿ ಕೇಳುತಲಿ ಅಡಿಗೆರಗಿ ಮುಡಿಬಾಗಿಕೊಂಡು । ಕಲಿ ತಾನ್ಹೇಳಿಕೊಂಡೂ ಮಾತುಗಳು ಮತ್ತೇನೆಂದರೆ – ॥

## ಧ್ವನಿ-೭೭

ಕೋಪಮಾಡಬ್ಯಾಡೊ ನಳ ಭೂಪ ಎನ್ನ ಪಾಲಿಸೊ । ಪಾಪಿ ನಾನು ನಿನ್ನನು ನಾನಾಪರಿ(ಯಿ)ಂದ ಕಾಡಿದೆ ॥ಪ॥ ಇಷ್ಟುದಿವಸದಿ ನಿನ್ನ ಹೊಟ್ಟೆಯೊಳಗಿದ್ದೆನೊ । ದುಷ್ಟ ಸರ್ಪರಾಜನ್ವಿಷದಿ ಸುಟ್ಟು ಸುಣ್ಣವಾದೆನೊ ॥೧॥ ಮೂರು ವರುಷದಿ ನಿನ್ನ ಶರೀರದೊಳಿದ್ದೆನೊ । ಕ್ರೂರ ಕಾರ್ಕೋಟಕ ಎನಗೆ ಭಾರಿ ಶಿಕ್ಷೆ ಮಾಡಿದ ॥೨॥ ನಿನ್ನ ಕಚ್ಚಿ ತನ್ನ ವಿಷದಿ (ನ್ನ ವ್ಯ)ಥೆ ಬಡಿಸಿದ । ಪನ್ನಗರಾಜನ ಪಾದಕಿನ್ನು ನಾ ನಮಿಸುವೆ ॥೩॥ ಶಾಪವ್ಯಾತಕಿನ್ನು ವಿಷದ ತಾಳತಾಳಲಾರೆನೊ । ಅಪರಾಧ ಕ್ಷಮಿಸೊ ನಿನ್ನ ಪಾದಕ್ಕೆರಗುವೆ ॥೪॥ ಚಿಂತೆ ಬ್ಯಾಡವಿನ್ನು ದಮಯಂತಿ ನಿನ್ನ ಮಕ್ಕಳ । ಸಂತೋಷದಿ ಕೂಡಿ ನೀ ನಿಶ್ಚಿಂತನಾಗಿರ್ಹೋಗಯ್ಯ ॥೫॥ ಪಾಶ(ಶಕ) ಪಗಡೆಯನಾಡಿ ಪುಷ್ಕರನ್ನ

ಸೋಲಿಸೊ । ದೇಶಭ್ರಷ್ಟನಾಗಲವ ನೀ ನಿಷ(ಧ) ದೇಶವಾಳಯ್ಯ ॥೬॥ ಭೀತಿ ಯಾತಕಿನ್ನು ನಾನಾ ಭೀತ್ಯಾಕಾಮರದೊಳು । ನೀತವಾಗಿ ಸೇರಿಕೊಂಬೆ ಪ್ರಖ್ಯಾತನಾಗಿರ್‍ಹೋಗಯ್ಯ ॥೭॥ ಕಲಿಯ ಕಾರ್ಕೋಟಕ ಋತುಪರಣ ದಮಯಂತಿಯ । ನಳನೆ ಕೇಳ್ ನಮ್ಮೈವರನ್ನು ಸ್ಮರಣೆಮಾಡುತಿಪ್ಪೊರ ॥೮॥ ಏಳು ಜನ್ಮದಲಿ ಕಲಿ ಬಾಧೆಯಿಲ್ಲದವರಿಗೆ । ಬಾಳೆಲೊ ಸಂತಾನ ಸಂಪತ್ತಲಿ ಭಾಳ್ಹರುಷದಿ ॥೯॥ ನಳನ ದಮಯಂತಿ ಕಥೆಯ ಕೇಳಿದವರ । ಸುಲಭದಿ ಭೀಮೇಶಕೃಷ್ಣ ಒಲಿದು ಕಾಯ್ವನವರ ॥೧೦॥

## ವಚನ-೭೮

ದೊರೆಗೆ ವರಗಳ ತಾನು ಕೊಟ್ಟಾಗ ಕಲಿ ಹೋಗಿ । ಬರುಗಾಲದಾ ಮರವ ಸೇರಿಕೊಂಡಾಕ್ಷಣದಿ ॥ ಪರಮ ಸಂಭ್ರಮದಿಂದ ಬಂದಾಗ ನಳರಾಯ । ಭರದಿಂದಲೇರಿ ನಡೆಸುತಲಿದ್ದ ನಾ ರಥವನು ॥

## ಧ್ವನಿ-೭೯

ದಾರೆ ಬಂದವರಿಲ್ಲಿಗೆ ದಮಯಂತಿ ನೋಡೆ ದಾರೆ ಬಂದವರಿಲ್ಲಿಗೆ । ದಾರೆ ಬಂದವರಿಲ್ಲೆ ಮುರುಸಂಜೆಯಲ್ಲಿ ಊರು ಕಾಣದೆ ಕೆಂಧೂಳು ಮುಸುಕಿತಲ್ಲೆ ॥ಪ॥ ಧಡ ಧಡ ರಥ ಶಬ್ದ ಸಿಡಿಲು ಬಡಿದಂತೆ ಕೇಳಿ । ತಡೆಯದೆ ನಮ್ಮ ಕಿವಿ ಒಡೆದು ಹೋಗುತಾವಲ್ಲೆ ॥೧॥ ಪುಂಡ ಪುಷ್ಕರ ನಿನ್ನ ಗಂಡನ್ನೋಡಿಸಿದಂತೆ । ಇಂದು ಈ ಊರಿಗ್ಯಾರೋ ದಂಡು ಬಂದಿತು ಎಂದು ॥೨॥ ಅತಿವೇಗದಿಂದ ಬಂದ ರಥದ ಘೋಷಕ್ಕೆ ನಿನ್ನ । ಸುತರ ಕರೆತಂದ ತೇಜಿ ಪ್ರತಿಧ್ವನಿ ಕೊಡುತಾವೆ ॥೩॥ ತಟ್ಟನೆ ಬಂತು ರಥ ಪಟ್ಟಣದೊಳಗಿದ್ದ ಪುಟ್ಟಮಕ್ಕಳು । ಮೆಟ್ಟಿ ಮೆಟ್ಟಿ ಬೀಳುತಾವಲ್ಲೆ ॥೪॥ ದಿಡ್ಡಿ ಕಿಂಡಿಯ ಒಳಗೆ ದೊಡ್ಡ ರಥ ನಡೆಸುತ । ಬಾಡಿದ್ದ ಮೊಗ್ಗು ಬಾಯ್ ಬಿಟ್ಟು ಅರಳಿದುವಲ್ಲೆ ॥೫॥ ಸಂದಿಯೊಳಗೆ ದೊಡ್ಡ ಅಂದಣವನು ನಡೆಸುತ । ಬಂದ ಎನ್ನ ಪತಿಯು ನಿಜವೆಂದು ತಿಳಿದಳು ಮನದಿ ॥೬॥ ಶಕ್ರ ಪಾರ್ಥರ ಸಾರಥಿಗಳಿಗೆ ಸಮ । ನಳಚಕ್ರವರ್ತಿಯ ಬಿಟ್ಟು ಮತ್ಯಾರಿನ್ನಿಲ್ಲವೆಂದು ॥೭॥ ಪುರದ ಬೀದಿಯಲಿ ಸ್ವಯಂವರದ ಗದ್ದಲವಿಲ್ಲ । ಇದು ಏನು ಸೋಜಿಗವೆಂದು ಮನದಲ್ಲ್ಯೋಚಿಸಿದನು ॥೮॥ ಎದುರಿಗೆ ಬಂದು ಭೀಮರಾಯ ತಾ ಕರೆತಂದು । ಸದರು ಸಿಂಹಾಸನದಲ್ಲಿ ಕುಳ್ಳಿರಿಸಿದ ॥೯॥ ಏನುಕಾರಣ ನೀವು ಬಂದಿರೆನುತಲಿ । ಮಾನಮಾಡುತ ಭೀಮರಾಯ ತಾ ಕೇಳಿದನು ॥೧೦॥ ಇಷ್ಟು ದಿವಸ ನಿನ್ನ ಭೆಟ್ಟಿ ಅಪೇಕ್ಷೆಯೆನಗಿತ್ತು । ಇವತ್ತೆ ಕೂಡಿ ಬಂದನೀಗೆನುತಿದ್ದ ॥೧೧॥ ಬೇಕಾದ

ಭಕ್ಷ್ಯ ಪರಮಾನ್ನ ಉಣಿಸೆ ರಾಜ । ಹಾಕಿಕೊಂಡರು ತಾಂಬೂಲ ಹರುಷದಿಂದ ॥೧೨॥ ಭೀಮೇಶಕೃಷ್ಣನ ಧ್ಯಾನಮಾಡುತ ಋತುಪರಣರಾಯ । ಮಲಗಿದ ದೊಡ್ಡ ತೂಗುಮಂಚದ ಮೇಲೆ ॥೧೩॥

## ವಚನ-೮೦

ಅಂದಣವ ನಿಲಿಸಿ ಅದರ್ಹಿಂದೆ ತೇಜಿಯ ಕಟ್ಟಿ। ಬಂದು ಬಾಹುಕನು ಕುಳಿತಿರುವಂಥ ಕಾಲದಲಿ ॥ ಅಂದಾಗ ತನ್ನ ದಾಸಿಯ ಕರೆಸಿ ತಾನಾಕೆ । ಮುಂದ್ಹೇಳಿಕೊಂಬೋ ಮಾತುಗಳು ಮತ್ತೇನೆಂದರೆ- ॥

## ಧ್ವನಿ-೮೧

ಮತ್ತ್ಹೋಗಿ ಬಾರೆ ಮಂಗಳಗಾತ್ರೆ ನೀನು । ಚಿತ್ತದ್ವಲ್ಲಭನ ಚಿಂತೆಯಲಿದ್ದೆ ನಾನು ॥ಪ॥ ಕೇಸನಿ ನೀ ಎನ್ನ ದಾಸಿ ನೀ ಎನ್ನ ಮಾತು । ಉದಾಶ(ಸೀ) ನ ಮಾಡದ್ಹೋಗಿ ಸಮಯದಲಿ ॥೧॥ ಅಂದ ಮಾತನು ಕೇಳಿ ಬಂದಳು ದಾಸಿ ತಾ । ಅಂದಣಕ್ಹೋಂದಿ ನಿಂತಾಗ ನುಡಿದಳು ॥೨॥ ದೇಶ ದಾವುದು ನಿಮ್ಮ ವಾಸವೆಲ್ಲಿಹುದು । ಹೆಸರೇನ್ಹೇಳೆನುತ ಕೇಸನಿ ತಾ ಕೇಳಿದಳು ॥೩॥ ದೂರದೇಶವು ನಾವಿರುವೋದಯೋಧ್ಯೆ । ಕರೆವಂಥ ನಾಮ ಬಾಹುಕನೆಂಬೋದೆನಗೆ ॥೪॥ ನುಡಿದ ಮಾತನು ಕೇಳಿ ನಡೆದು ಬಂದಾತನ । ಒಡನುಡಿದ್ವಾರ್ತೆ ಹೇಳಿದಳಾಕ್ಷಣದಿ ॥೫॥ ಎನ್ನ ಮಕ್ಕಳ ಕರೆಕೊಂಡ್ಹೋಗಾತನ ಮುಂದೆ । ಮನ್ನಿಸುವನೊ ಮಾತನಾಡದಿರುವೊನೊ ॥೬॥ ಕರೆದು ಮಕ್ಕಳ ಕರದಿಂದಪ್ಪಿಕೊಂಡನು । ಕಡು ಮೋಹದಿಂದ ತೊಡೆಯಲಿಟ್ಟನಾಗ ॥೭॥ ಗಲ್ಲವ ಪಿಡಿದು ಮುದ್ದಾಡುತ ಮಕ್ಕಳ । ಚೆಲ್ಲಿದ ಕಣ್ಣೀರುಗಳ ಸುರಿಸುತಲಿ ॥೮॥ ಪರರ ಮಕ್ಕಳ ಕಂಡು ಸುರಿಸುವಿ ಕಣ್ಣೀರು । ಪರಮ ಆಶ್ಚರ್ಯವೇನೆಂದು ಕೇಳಿದಳು ॥೯॥ ಚಿಕ್ಕ ಮಕ್ಕಳ ಬಿಟ್ಟು ಬಂದೆನು ಬಹುದೂರ । ಈ ಮಕ್ಕಳ ಕಂಡೀಗ ದುಃಖ ಬಂತೆಂದ ॥೧೦॥ ಆಡಿದ ಮಾತು ಕೇಳುತಲಾಗ ಕೇಸನಿ । ಓಡಿಬಂದ್ವಾರ್ತೆ ಹೇಳಿದಳಾಕ್ಷಣದಿ ॥೧೧॥ ತಡೆಯದೆ ನೀನ್ಹೋಗಡಿಗೆಗಗ್ನಿನೀರು । ಕೊಡ ಹೊತ್ತು ತರುವನೊ ಹ್ಯಾಗೆ ಮಾಡುವನೊ ॥೧೨॥ ಬೆಟ್ಟನಿಂದಲಿ ನೆಲ ಕೆದರುತಿರಲು ಕಂಡು । ಪುಟಿದ್ಹರಿದವಮ್ಮ ಸ್ವಚ್ಛಜಲವು ॥೧೩॥ ಕೊಡಗಳ ತುಂಬಿಟ್ಟು ಹಿಡಿದ್ಹುಲ್ಲು ಬೀಸಲು ಕಿಡಿಕಿಡಿ । ಹಾರ್‍ಯಗ್ನಿ ಉರಿಯಾದನಮ್ಮ ॥೧೪॥ ಚಿನ್ನದ ಹರಿವಾಣವನ್ನು ಕೈಯಲ್ಲಿ ಕೊಟ್ಟು । ಅನ್ನ ಶಾಖ ಪಾಕವ ಬೇಡಿ ತಾರಮ್ಮ ॥೧೫॥ ಹಸ್ತಾಳೆ ರಾಜಪುತ್ರಿಯು ನಿಮ್ಮಡಿಗೆಯನ್ನು । ಅಪೇಕ್ಷಿಸಿರುವೋಳಿಗ

ನೀಡಬೇಕೆನುತ ॥೧೬॥ ಮುಸಿ ಮುಸಿ ನಗುತಲಿ ಬಿಸಿಬಿಸಿ ಅಡಿಗೆಯ । ಹಸನಾಗಿ ತೆಗೆದಿಟ್ಟ ತನ್ನ ಹಸ್ತದಿಂದ ॥೧೭॥ ಎನ್ನಲ್ಲ್ಯಾತಕೆಯಿಷ್ಟು ಎಡತಾಕುವ್ಯೆಲೆ ದಾಸಿ । ಇನ್ನೊಮ್ಮ್ಯಾದರು ಇಲ್ಲಿ ಬರಿದಿರೀಗೆಂದ ॥೧೮॥ ಕುದಿವೊ ಪಾತ್ರೆಯಲ್ಲಿ ತೆಗೆದನು ಕೈಯಿಟ್ಟು । ಇದನುಂಡು ರುಚಿನೋಡಿ ತಿಳಿದುಕೊಳ್ಳಮ್ಮ ॥೧೯॥ ಉಂಡು ರುಚಿಯ ನೋಡಿಕೊಂಡಳು । ಮನದಲ್ಲಿ ಬಂದಯೆನ ಪತಿಯು ನಿಜವೆಂದು ತಿಳಿದಳು ॥೨೦॥ ಮಾತೆಯ ಕರೆಸಿ ಮಾತ್ಹೇಳಿಕೊಂಡಳು ಎನ್ನ । ಪ್ರೀತಿಪತಿಯ ಕರೆಸೆಂದು ನುಡಿದಳು ॥೨೧॥ ಇನ್ನೊಮ್ಮ್ಯಾದರು ಇಲ್ಲಿ ಬರದಿರೆಂದೆನುತಲಿ । ಕಣ್ಣು ತೆಗೆದು ಕೋಪ ಮಾಡಿದನಮ್ಮ ॥೨೨॥ ಪುಣ್ಯಕ್ಕೆ ಪಾತ್ರಳಾಗುವಿಯೇ ಭೀಮೇಶಕೃಷ್ಣನ್ನ । ಧ್ಯಾನವ ಮಾಡು ಹೋಗಿಬಾರಮ್ಮ ॥೨೩॥

## ವಚನ-೮೨

ಸತ್ಯವಂತೆಯು ಆಕೆ ಉತ್ತಮ ಪತಿವರತಿ ಮತ್ತೊಂದು ಮಾತನಾಡುವಳಂತೆ । ನಿಮಕೂಡ ಚಿತ್ತಕ್ಕೆ ತಂದು ದಯಮಾಡಿ ಬನ್ನಿರಿ ಎಂದು ॥ ಹಸ್ತಳ ಮುಗಿದ್ಹೇಳಿಕೊಂಬೊ ದಾಸಿಯ ನೋಡಿ । ನಕ್ಕು ನಳರಾಯ ಮಾತಾಡುವುದು ಮತ್ತೇನೆಂದರೆ- ॥

## ಧ್ವನಿ-೮೩

ಕಾಂತೆ ಕರೆದಳ್ಯೇತನಕೆನ್ನೊಳೇಕಾಂತವೇನಿದು । ಭ್ರಾಂತಿಗೊಂಡಳೇನು ನಾ ತನ್ನ ಕಾಂತನಲ್ಲವೆ ॥ಪ॥ ಹಗರಣವಾಗಿವೆ ಮಾತಿನ ಬಗೆಯು ತಿಳಿಯದು ॥ ಸುಗುಣೆ ಸುಂದರಳೆನ್ನ ನೋದಿ ನಗುವೋಳಲ್ಲವೆ ॥೧॥ ರಾತ್ರಿಯಲ್ಲಿ ಹೋದರೆನಗಪಕೀರ್ತಿ ಬರುವುದು । ಈ ವಾರ್ತೆ ಕೇಳಿ ದೊರೆಯು ಶಿಕ್ಷೆ ಪೂರ್ತಿಮಾಡುವ ॥೨॥ ಮಂದಗಮನೆ ಮಾತು ಎನ್ನ ಮನಕೆ ತಿಳಿದಿತು । ಇಂದು ಭೀಮೇಶಕೃಷ್ಣ ಪತಿಯ ತಂದು ಕೂಡಿಸುವ ॥೩॥

## ವಚನ-೮೪

ಪನ್ನಂಗವೇಣಿ ತಾ ಪರಮ ಆದರದಿಂದ । ಎನ್ನಂಥ ಪಾಪಿ ಪಾತಕಿ(ಯ) ಯಾಕೆ ಕರೆಸಿದಳೊ ॥ ಇನ್ನಾದರ್ಹೋಗಿ ನಾ ಕೇಳಿ ಬರುವೆನೆಂದು । ಚಿನ್ನದುಪ್ಪರಿಗೆಯನು ಏರಿ ಬರುತಿರಲಾಗ ॥ ರನ್ನ ಮಾಣಿಕ್ಯದ ಮಣೆ ಹಾಕಿ ಕುಳ್ಳಿರಿಸಿನ್ನು । ಎನ್ನಮ್ಮ ನಾನು ಕರೆತಂದೆನೀತನ ಈಗ ॥ ನಿನ್ನ ಮನಸಿನ ಮಾತನಾಡಿಕೋ ಎಂದೆನಲು । ಚಿನ್ನದಗೊಂಬ್ಯಂತೆ ಚಿತ್ರಾಂಗಿ ಬರುವೊ ಬಗೆ- ॥

## ಧ್ವನಿ-೮೫

ಕ್ಷೇಮವೇ ನಮ್ಮ ರಾಯ ಸುಂದರ ಕಾಯ । ಭೂಮಿಗೊಡೆಯ ಮಹರಾಯ ॥ಪ॥ ಸಂತೋಷದಿಂದೆದ್ದಳು ತನ್ನ ಮನ ಸಂತಾಪವೆಲ್ಲ ಬಿಟ್ಟು ಜಂತದ ಗೊಂಬೆಯಂತಾದ ದಮಯಂತಿ । ತಾ ಅಂತರಂಗದ ಮಾತು ನಿಂತಾಡುತಿದ್ದಳು ॥೧॥ ತಲೆಯ ತಗ್ಗಿಸಿಕೊಂಡನು ಬಾಹುಕ ತಾನು ನೆಲವ ನೋಡುತ ಕುಳಿತ ಚೆಲುವ ಪತಿವರತಿ । ತಾ ಚಂದ್ರನಂತ್ಹೊಳೆಯುತ ಹಲವು ಬಗೆಯಲಿಂದ ಒಲಿಸಿ ಕೊಂಬುವೆನೆಂದು ॥೨॥ ಮಾವ ವೀರಸೇನನ ಉದರದಲ್ಲಿ ನೀವೆ ಹುಟ್ಟಿದಿರಿ ಎಂದು ಭಾವಿಸಿಕೊಂಡು । ನಾ ಭಾವ ಭಕ್ತಿಲಿ ಬಂದೆ ಮತ್ತ್ಯಾಅ ಪುರುಷನ ಕಣ್ಣೆತ್ತಿ ನೋಡುವಳಲ್ಲ ॥೩॥ ಇಂದ್ರಾದಿ ಸುರರು ಬಂದು ಎನ್ನ ಮಾಡಿಕೊಂಡೇನೆಂದ ಕಾಲಕ್ಕೆ ಅಂದು । ನಾನವರನಲಕ್ಷ್ಯ ಮಾಡಿದರಿಂದ ಇಂದು ಎನಗೆ ದೋಷ ಬಂದು ಸುತ್ತಿತೋ ಏನೋ ॥೪॥ ಭೂಪಾಲ ನಿಮಗೆ ಇಂಥ ಈ ಕೆಟ್ಟ ಕುರೂಪವ ಕೊಟ್ಟವರು ದಾ(ವ)ಪಾಪಿ । ಹೇಳಬೇಕೆನ್ನ ಮುಂದವರನು ಶಾಪವ ಕೊಟ್ಟು ನಾ ಸುಟ್ಟು ಬಿಡುವೆನೀಗ ॥೫॥ ಅಟ್ಟಾರಣ್ಯದಲ್ಲಿ ಎನ್ನನು ನೋಡಾ ಉಟ್ಟ ಸೀರೆಯ ಹರಿದು ಬಿಟ್ಟ । ಹೋದರೆಂಬೊ ಸಿಟ್ಟಿಲ್ಲ ಎನಗೀಗ ಗಟ್ಟ್ಯಾಗಿ ನಿಮಪಾದ ಮುಟ್ಟಿ ಹೇಳುವೆನೀಗ ॥೬॥ ಕಾಮ ಮೋಹಗಳ ಎಲ್ಲ ಎನ್ನಲಿದ್ದ ಪ್ರೇಮಂತಃಕರಣಗಳ । ಭೀಮೇಶಕೃಷ್ಣ ತಾ ಬಿಡಿಸಿಬಿಟ್ಟನೋ ಏನೋ ತಾ ಪಡೆದಿಲ್ಲೆ ಎನ್ನಂಥ ಮಕ್ಕಳನೀಗ ॥೭॥

## ವಚನ-೮೬

ನಿಂತ್ಹೇಳಿಕೊಂಬೊ ದಮಯಂತಿ ಮಾತನು ಕೇಳಿ । ಇಂಥ ಪತಿವರತಿ ಈ ಲೋಕದೊಳಗಿಲ್ಲೆಂದು । ಅಂತಃಕರಣವ ಅಡಗಿಸಿ ತನ್ನ ಮನದೊಳಗೆ । ಸಂತೋಷದಿಂದ ತಾ ಮಾತಾಡುವು ಮತ್ತೇನೆಂದರೆ- ॥

## ಧ್ವನಿ-೮೭

ನೀನಿಲ್ಲಿ ಬಾರದಿರೆ ನಾ ನಳನೆನ್ನದಿರೆ ವಾರಿಜಾಕ್ಷಿ ವೈಯಾರಿ । ನಿನಗೀ ಬುದ್ಧಿದಾರು ಕಲಿಸಿದರ್‍ಹೇಳೆ ॥ಪ॥ ಸರ್ಪವೇಣಿ ನೀ ನಳಗೆ ತಪ್ಪೇನು ಮಾಡಿದೆಯೆ । ಒಪ್ಪಾಗದಲೆ ಬಿಟ್ಹೋದ ಪತಿಯನು ನೀ ಮತ್ತ್ಯಾಕೆ ನೆನಸುವಿಯೆ ॥೧॥ ಕಂಡ ಕಂಡವರಿಗೆ ನಿನ್ನ ಗಂಡನೆಂಬುವರೇನೆ । ಪುಂಡತನವು ತರವಲ್ಲೆ ನಾರಿ ನಿನ್ನ ಕಂಡವರು ಕೆಂಡವರಿಗೆ ನಿನ್ನ ಗಂಡನೆಂಬುವರೇನೆ । ಪುಂಡತನವು ತರವಲ್ಲೆ ನಾರಿ ನಿನ್ನ ಕಂಡವರು ನಗುವರಲ್ಲೆ ॥೨॥

ಮಂಗನಂಥವನಲ್ಲೇ ಮನಸು ಮಾಡುವ್ರೋರೇನೆ । ಮಂಗಳಾಂಗಿ ಎನ್ನ ಮಾಡಿಕೊಂಡರೆ ಮುಂದೂ ಭಂಗತಪ್ಪದು ನಿನಗೆ ।।೩।। ರಥಿಕ ಋತುಪರಣನ ಹಿತದಿಂದ ನೀ ಕರೆಸಿ । ಸಾರಥಿಗೆ ಒಲಿದು ವನಮಾಲೆ ಹಾಕುವುದು ಸನ್ಮತವೇನೆ ನಿನ್ನ ಮನಕೆ ।।೪।। ಮಾಡಿಕೊಂಬ ಋತುಪರಣ ಕೂಡಿಕೊಂಡರೆ ನಾನು । ಓಡಿ ಹೋದಂಥ ನಳ ಬಂದರೆ ನಿನ್ನ ಗತಿಯೇನಾಗೋದೆ ಮುಂದೆ ।।೫।। ಶಂಬಾರಿಯ ಶರವು ಬಂದು ಬೀಸುವುದೇನೆ । ಹಂಬಲಿಸುವಿ ಮತ್ತೊಬ್ಬ ಪುರುಷನ ಏನೆಂಬೋರೆ ಜನಯಿದಕೆ ।।೬।। ಸಾಮಜಗಮನೆ ಸೋಮವದನೆ ನೀನು । ಭೀಮೇಶಕೃಷ್ಣನ ಧ್ಯಾನ ಮಾಡುತಿದ್ದರೆ ನಿನ್ನ ಪ್ರೇಮದ ಪತಿ ಕಾಂಬುವೆ ।।೭।।

## ವಚನ-೮೮

ಇಷ್ಟು ನಿಷ್ಠೂರ ಮಾತುಗಳ ಕೇಳುತ ತನ್ನ । ಹೊಟ್ಟೆಯೊಳಗಲಗು ನೆಟ್ಟಂತಾಗಿ ಮನದಲ್ಲಿ ।। ಸೃಷ್ಟಿಮಾಡಿದ ಬ್ರಹ್ಮ ಇಷ್ಟೆ ಬರೆದ । ಪಣೆಯಲ್ಲಿಷ್ಟು ವ್ಯಥೆ ಬಟ್ಟು ಬದುಕಿರೊದ್ಯಾತಕೀಪ್ರಾಣ ।। ಬಿಟ್ಟು ಹೋಗಲಿ ಎಂದು ಬಿದ್ದಳಾ ಧರಣಿಯಲಿ । ನಿಟ್ಟುಸಿರ ಬಿಡುತ ನೀರಜಾಕ್ಷಿ ಮೈಯಲ್ಲಿ।। ಕೆಟ್ಟ ಬೆವರುದ್ಬಟ್ಟ ಗದುಗುಟ್ಟ್ಯೊರಳುತಿರಲಾಗ । ಇಷ್ಟು ನೋಡುತ ಕರುಣ ಹುಟ್ಟಲು ತಾ ।। ನುಡಿದ ಶ್ರೇಷ್ಠ ಪತಿವರತಿ ಈಕೆಯ ಕೂಡಿಕೊಂಡಿನ್ನು । ಪಟ್ಟದರಸಿಯ ಪರಮ ಹರುಷ ಬಡಿಸೆಂದೆನಲು ।। ಗಟ್ಯ್ಯಾಗಿ ನುಡಿದ ಆಕಾಶವಾಣಿಯ ಕೇಳಿ । ತಟ್ಟನೆದ್ದಾಗ ಅಂಗನೆಯ ಮುಖ ನೋಡುತಲಿ ।। ಮುಟ್ಟೆಬ್ಬಿಸುತ ತನ್ನ ರೆಟ್ಟಿಂದ ಬಿಗಿದಪ್ಪಿ । ಇಟ್ಟು ತೊಡೆಯಲ್ಲಿ ವಿನಯದ ಮಾತನಾಡುತಿದ್ದ।।

## ಧ್ವನಿ-೮೯

ನೋಡೆ ಮನಸಾರ ಬಂದ ನಳ । ತಾ ಸುಂದರ ನೋಡೆ ಮನಸಾರ ।।ಪ।। ಅಂಗನೆಯನು ಆಲಿಂಗನೆ ಮಾಡುತ । ಕಂಗಳ ಜಲ ಕರದಿಂದ್ವೊರೆಸಿದನು ।।೧।। ಕಾರ್ಕೋಟಕನು ಕೊಟ್ಟ ವಸ್ತ್ರವ ಪಿಡಿದಿನ್ನು । ತಿಕ್ಕಿಕೊಂಡನು ತನ್ನ ದೇಹದಲ್ಲಾಗ ।।೨।। ಕನಕ ಪ್ರತಿಮೆಯಂಥ ರೂಪವು ತಾನಾಗಿ । ದಿನಕರನಂತೆ ಪ್ರಕಾಶ ತೋರಿದನು ।।೩।। ಮನ್ಮಥ ರೂಪ ಲಾವಣ್ಯ ಸುಂದರನಾದ । ತನ್ನ ಪತಿಯು ನೋಡಿ ಮನದಲ್ಲಿ ಹಿಗ್ಗಿದಳು ।।೪।। ಕೆಟ್ಟಕಲಿಯು ಚಲವಿಟ್ಟು ನಿನ್ನಲಿ । ರಾಜ್ಯಭ್ರಷ್ಟನ ಮಾಡಿ ನಿನ್ನ ಬಿಟ್ಟೋಡಿಸಿದನೆ ।।೫।। ಮೂರು ವರುಷ ನಿನ್ನ ಅಗಲಿದ್ದೆನಗ್ಹತ್ತು । ಸಾವಿರ ಯುಗವಾಗಿ ತೋರಿತೀಗೆಂದ

॥೬॥ ಮುದ್ದರಗಿಳಿಯೆ ಮೋಹದ ರಾಣಿ ನಿನಬಿಟ್ಟು। ನಿದ್ರೆಹಸಿವೆ ತೊರೆದಿದ್ದೆನೀಗೆಂದ ॥೭॥ ಪುಣ್ಯವಂತೆಯೆ ನೀನು ಪುಷ್ಕರನ ಗೆದ್ದು। ನಮ್ಮ ರಾಜ್ಯವ ನಾವಿನ್ನಾಳುವ್ವೋಣೆಂದ ॥೮॥ ಸತಿಪತಿಯರು ಸನ್ಮತವಾಗಿ ಕುಳಿತಿರೆ। ದೇವತೆಗಳು ನೋಡಿ ತಾವು ಅತಿಹರುಷದಲಿ ॥೯॥ ಇಂದ್ರಾದಿಸುರರು ದುಂದುಮಿ ಭೇರಿ ಬಡಿಸುತ। ಮಂದಾರಮಲ್ಲಿಗೆ ಮಳೆಯ ಕರೆದರು ॥೧೦॥ ಜಾಜಿಮಲ್ಲಿಗೆ ಪಾರಿಜಾತ ಸಂಪಿಗೆ ನಳರಾಯ। ದಮಯಂತಿಯ ಮ್ಯಾಲೆ ಕರೆದರು ॥೧೧॥ ನಳಿನಾಕ್ಷ ಭೀಮೇಶಕೃಷ್ಣನ ದಯದಿಂದ। ನಳದಮಯಂತಿ ಕೂಡಿದರು ಸಂಭ್ರಮದಿ ॥೧೨॥

## ವಚನ-೯೦

ಸಾಮಜಗಮನೆ ತಾ ಸರ್ವ ಸಂಭ್ರಮದಿಂದ। ಪ್ರೇಮದ ಪತಿ ಬಂದನೆಂಬಂಥ ವಾರ್ತೆಯನು ॥ ಭೀಮರಾಯಗೆ ಹೇಳಿ ಕಳಿಸುತಿರೆ। ಕೇಸನಿಯು ಬ್ಯಾಗ ಬಂದ್ಹೇಳುವಂಥ ಮಾತುಗಳು ಮತ್ತೇನೆಂದರೆ- ॥

## ಧ್ವನಿ-೯೧

ಕೇಳೋ ರಾಜ ಮನೆಗೆ ಬಂದ ನಳ ಸುಂದರ ಏಳು। ಏಳಿನ್ನೆಷ್ಟು ನಿದ್ರೆ ಹೇಳುವೆನು ಹರುಷದ ಸುದ್ದಿ ॥ಪ॥ ಋತುಪರಣರಾಯನಲ್ಲಿ ರಥವನೋಡಿಸಿದ। ಸಾರಥಿಯು ತಾನು ಸುಂದರ ಮೂರುತಿಯು ಆಗಿ ಕುಳಿತಿನೀಗ ॥೧.। ಕಾಮರತಿಯಂತಿರುವ್ವೊ ಚೆಲ್ವಿಕೆ ಸೋಮಸೂರ್ಯರಂತೆ ಹೊಳೆವ। ಮೋರೆ ನೋಡುತ ಜನರು ಮೋಹದಿಂದ ಮೂರ್ಛೆಗೊಂಬುವರೀಗ ॥೨॥ ಮರುಗ ಮಲ್ಲಿಗೆ ಪಾರಿಜಾತ ಸುರಗಿ ಶಾವಂತಿಗೆಯ ಕುಸುಮ। ಸುರರು ನೆರೆದು ನಿನ್ನ ಮಗಳ ಶಿರದಲ್ಹೂಮಳೆ ಕರೆದರಾಗ ॥೩॥ ಇಂಥ ಪತಿವರತಿ ದಮಯಂತಿ ಸರಿಯಿನ್ನಿಲ್ಲವೆಂದು। ಅಂತರಿಕ್ಷದಲ್ಲಿ ಆಕಾಶವಾಣಿ ಆಯಿತಾಗ ॥೪॥ ಭೀಮರಾಯ ನೀನು ಬೇಡಿದಿಷ್ಟಫಲವ ಕೊಟ್ಟು ತಾ। ಭೀಮೇಶಕೃಷ್ಣ ತನ್ನ ದಯವ ಸೂರೆಮಾಡಿದ ಸುಗುಣ ನಿಮಗೆ ॥೫॥

## ವಚನ-೯೨

ಅಳಿಯನ್ವಾರ್ತೆಯ ಕೇಳಿ ಅತಿಬ್ಯಾಗದಿಂದಾಗ। ಬೆಳಗಾಗಲವರನು ಕರೆಸಿ ನೋಡುವೆನೆನುತ॥ ಕೊರಳಿಗೆ ಹಾಕಿದ ಚಂದ್ರಹಾರ ಪಚ್ಚದ ಪದಕ। ಬಿಳಿಯ ಹೂವಿನ ಸೀರೆ ಬಟ್ಟಮುತ್ತಿನ ಕುಪ್ಪಸ ॥ ಸಡಗರದಿ ಕೊಟ್ಟ ಉಡುಗೊರೆ ವೀಳ್ಯ ತಕ್ಕೊಂಡು ನಡೆದು। ಬಮ್ಮಾಗ ಕೇಸನಿ ಹೇಳಿದ್ವಾರ್ತೆ ಕೇಳುತಲಿ ತಾ ಕುಳಿತಿದ್ದಳಾಗ ॥

## ಧ್ವನಿ-೯೩

ಬೆಳಗಾಯಿತೊ ಬೆಳಗಾಯಿತೊ ರಾಜ । ಅರಳಿದವರವಿಂದ ಆಕಾಶದಿ ಭಾನು ಬಂದ ॥ಪ॥ ಸಂಪಿಗೆಣ್ಣೆಯನ್ಹಚ್ಚಿ ಜಂತದ್ಹಣಿಗೆಲ್ಹಿಕ್ಕಿ । ದಮಯಂತಿ ರಾಜಗೆ ಬಿಸಿನೀರನೆರೆದರು ॥೧॥ ಬಿಚ್ಚಿ ಬಿಸುಟರು ಅರ್ಧ ಸೀರೆಗಳನು ಬ್ಯಾಗ । ಅಚ್ಚ ಜರದ ಪೀತಾಂಬರ ಉಡಿಸೋರು ॥೨॥ ಪಚ್ಚೆ ಯಂಚಿನ ಕುಬುಸ ತೊಟ್ಟಳಾ ತೋಳಿನಲಿ । ಜತ್ತಿಲಿಟ್ಟರು ನಾಗಮುರಿಗೆ ವಂಕಿಯನು ॥೩॥ ಹರಡಿ ಕಂಕಣ ಹಸ್ತಕಡಗ ಕಮಲದ್ವಾರ್‍ಯ । ನಡುವಿಗಿಟ್ಟರು ನವರತ್ನದ ಮುಖಪಟ್ಟಿ ॥೪॥ ಚೌರಿ ರಾಗಟೆ ಗೊಂಡ್ಯ ಹೆರಳುಬಂಗಾರವು । ಸರಿಗೆ ಕಟ್ಟಾಣಿ ಸರ ಪದಕವ್ಹಾಕಿದರು ॥೫॥ ವಾಲೆ ಬುಗುಡಿ ಗಲ್ಲಕ್ಕೊಲೆವೊ ಗೊಂಚಲು ಮುತ್ತು । ನೀಲವೇಣಿಗ್ಹೂವ್ವಿನ ಮಾಲೆ ಮುಡಿಸಿದರು ॥೬॥ ಗೆಜ್ಜೆ ಪೈಜಣ ರುಳಿ ವಜ್ರ ಬುಲಾಕನಿಟ್ಟು । ತಿದ್ದಿ ಕುಂಕುಮ ಹಣೆಗಿಟ್ಟು ಮುತ್ತಿನ ಚಟ್ಟು ॥೭॥ ಬಣ್ಣದರಿಷಿಣ ಗಂಧ ಭಾರಿ ಮುತ್ತಿನ ಮುಕುರ್‍ಯ । ಕಣ್ಣಕಾಡಿಗೆ ಕಮಲಾಕ್ಷಿಗ್ಹಚ್ಚಿದರು ॥೮.। ಅಳಿಯಗುಡಿಸಿದರಾಗ ಬಿಳಿಯ ಪೀತಾಂಬರ । ಕೊರಳಿಗ್ಹಾಕಿದರು ಕಂಠೀಪದಕ ಮುತ್ತಿನ ಸರ ॥೯॥ ರಂಗುಮಾಣಿಕ್ಯ ಬಿಗಿದ ಅಂಗಿ ಮುಂಡಾಸವನಿಟ್ಟು । ಉಂಗುರುಡಿದಾರ ಒಂತಿಮುತ್ತು ಬಾವುಲಿನಿಟ್ಟು ॥೧೦॥ ಕುಂದಣ ಕೆತ್ತಿದ್ವಜ್ರ ಕಡಗ ತೋಡ್ಯವನಿಟ್ಟು। ತಂದು ಪಣೆಗಿಟ್ಟರು ಮಾಣಿಕ್ಯದ ಅಕ್ಷತೆಬಿಟ್ಟು॥೧೧॥ ಗಂಡಹೆಂಡಿರು ಕೂಡಿ ಗಜದಅಂಬಾರಿಯೇರಿ । ಕಂದರ ಒಡಗೂಡ್ಯಾನಂದದಿ ಕುಳಿತರು ॥೧೨॥ ಭೇರಿ ಬಡಿದು ಕಾಳೆ ಹಿಡಿದು ಮಂಗಳವಾದ್ಯ । ಭಾರಿ ಪಾತರದವರ ಬಜಾರದಿ ಕುಣಿಸುತ ॥೧೩॥ ಆನೆಯಿಳಿದು ಅರಮನೆಗೆ ಬಂದರು ಬ್ಯಾಗ । ರಾಜಸಿಂಹಾಸನದಲ್ಲಿ ಕುಳಿತರು ॥೧೪॥ ಗಂಧ ಕುಂಕುಮ ಕುಸುಮ ತಂದರುಡುಗೊರೆ ವೀಳ್ಯ । ಬಂದ ಬ್ರಾಂಬರಿಗ್ನಿಡಿಹೊನ್ನು ದಕ್ಷಿಣೆ ಕೊಟ್ಟ ॥೧೫॥ ಮಗಳು ಅಳಿಯನ ನೋಡಿ ಮನದಿ ಹಿಗ್ಗುತ ರಾಜ । ಮುಗುಳುನಗೆ ನಗುತೊಂದು ಮಾತನಾಡಿದನು ॥೧೬॥ ಹಿಂದೆ ಮಾಡಿದ ಪುಣ್ಯ ಬಂದು ಒದಗಿತೀಗ । ಇಂದು ಭೀಮೇಶಕೃಷ್ಣನ ದಯವು ನಮಗಾಯಿತೆಂದ ॥೧೭॥

## ವಚನ-೯೪

ಪರಮ ಸಂಭ್ರಮದಿಂದ ಕುಳಿತಿರಲು ದಮಯಂತಿ । ಸರ್ವ ಜನರೆಲ್ಲಸಂತೋಷದಲಿ ನೋಡುತಿರೆ ॥ ಶಿರವ ಬಾಗಿಸಿ ತನ್ನ ಕರವ ಜೋಡಿಸಿಕೊಂಡು ದೊರೆಗೆ । ಋತುಪರಣ ಬಂದ್ಹೇಳಿಕೊಂಬುವುದು ಕರುಣದಲಿ ನೀ ಪಾಲಿಸೆಂದು ॥

## ಧ್ವನಿ-೯೫

ಏನು ಹೇಳಲೀಗೆನ್ನಪರಾಧವ ನೀನೆ ರಕ್ಷಿಸೊ ದೊರೆಯೆ । ಮಾನಾಭಿಮಾನಗಳಿಲ್ಲದೆ ನಾನಿಂಥ ಮಾನವಂತೆಯರಲ್ಲಿ ಮನಸು ಮಾಡಿದೆನೀಗ ॥ಪ॥ ಮೂಢ ಮೂರ್ಖ ನಾನಾಡಿದ ಮಾತನು ನೋಡಿ ತಪ್ಪಿಡ್ಡಿಯದಿರೊ । ಆಡು ಬಂದಾನೆಯ ಮಾದಿಕೊಂಬುವೋದುಂಟೆ ಹೇಡಿಯಂದದಿ ಮುಖವಿಲ್ಲದ್ಹೋಗುವೆನೀಗ ॥೧॥ ವರ ಮಣಿಮಯದ ಆಭರಣಕ್ಕೆ ಅಲ್ಪ ಕಬ್ಬಿಣ ಸರಿ ಆಗುವುದೇ ಪರಮ ಪತಿವರತೆ । ಪಾವಕನಂತಿರುವೋಳೀಕೆ ಚರಣಕ್ಕೆರಗುವೆ ನಾ ಕರುಣಿಸೀಗೆನ್ನ ತಾಯಿ ॥೨॥ ಸ್ವಯಂವರವೆಂದು ನಾ ಬಂದೆನಿಲ್ಲಿಗೆ ಭಾಳ ಸ್ವಯಂವರವಾಯಿತೀಗ । ಬಯ್ವೋರೊಯೆನ್ನ ಭಾಳಾಡಿಕೊಂಬೊರೋ ಜನ ಅಯ್ಯೋ ಎನ್ನಿವ್ಧಿ ಬರೆದಿದ್ದ ನೀ ಪಣೆಯಲ್ಲಿ ॥೩॥ ಇಂದ್ರ ಚಂದ್ರನು ನಹುಷರಾಯ ರಾವಣರಂತೆ ಕುಂದು ಪಡೆದೆ ಲೋಕದಿ । ಇಂದೀಗೆನ್ನಿಂದ ನೀ ಕಪ್ಪ ಕೊಂಬುವ ಧಣಿಯೆಂದು ತಿಳಿಯಲಿಲ್ಲ ಮಂದಬುದ್ಧಿಯಲಿ ॥೪॥ ಭೀಮರಾಯನ ಪುತ್ರಿ ಕಾಮಿಸಿಲ್ಲಿಗೆ ಬಂದೆ ನಾ ಮಹಾಪಾತಕಿಯೊ । ಪ್ರೇಮದಿಂದೆನ್ನನು ಸಲಹಬೇಕೆನುತಲಿ ಭೀಮೇಶಕೃಷ್ಣಗೆ ಬೇಡಿಕೊಂಬುವೆನೀಗ ॥೫॥

## ವಚನ-೯೬

ಮತಿತಪ್ಪಿದವನು ನಾನೆಂದ್ಹೇಳಿಕೊಂಬಂಥ ಋತುಪರಣರಾಯನ್ನ ನೋಡುತಲಿ ನಳರಾಯ । ಅತಿಕರುಣದಿಂದ ಕರಪಿಡಿದು ಕುಳ್ಳಿರಿಸ್ಯಾಗ ಹಿತದಿಂದಲಾಡುತಿರುವಂಥ ಮಾತುಗಳು ಮತ್ತೇನೆಂದರೆ- ॥

## ಧ್ವನಿ-೯೭

ಸರಿಸರಿ ನೀಯೆನ್ನನರಿ ಈ ಪರಿ ಹೇಳೋರೇನೊ । ದೊರೆ ಸರಿಸರಿ ನೀಯೆನ್ನನರಿ ॥ಪ॥ ನಿನ್ನ ಮಂದಿರದಲಿ ಮುನ್ನ ಮೂರು ವರುಷದಿ । ಅನ್ನಪಾನದಿಂದ ಕಾಲವನ್ನು ಕಳೆದೆನೊ ದೊರೆ ॥೧॥ ಮೂರುವರುಷದ ಮ್ಯಾಲಾರುಮೂರು ವರ್ಷಗಳ । ಧೀರ ನಿನ್ನ ಕೈಲೆ ಕಪ್ಪ ನಾನು ತೆಗೆದುಕೊಂಡೆ ಭೂಪ ॥೨॥ ಕಾಮಕ್ರೋಧ ಮದವೆಂಬೊ ಮತ್ಸರ ಮರವನೇರಿ । ಜಾರಿಬಿದ್ದೆ ಭವಾಂಬುಧಿಯೇರಿಯೇರಲಾರೆ ದೊರೆ ॥೩॥ ಹೆಣ್ಣು ಹೊನ್ನು ಮಣ್ಣು ಮುರು ಅನ್ವಯ ಗಿಡದ ಬೇರು । ಇನ್ನು ನೀ ಇದನು ಮೀರು ಚೆನ್ನಾಗ್ಹರಿಲೋಕ ಸೇರು ॥೪॥ ವಿಷಯ ಕೆಟ್ಟದೆಂದು ಜನವಶವ ಮಾಡಿಕೊಂಡು ಮನ । ವಸುಧೆಪಾಲ ಹರಿಯನ್ನು ಭಜಿಸುವರು ಅನುದಿನ ॥೫॥ ಆದರದಿಂದಲಿ ಆಕ್ಷಹೃದಯ

ವಿದ್ಯವನ್ಹೇಳಿ । ಚಾದರ ಶಾಲುಗಳುಡುಗೊರೆ ವೀಳ್ಯ ಕೊಟ್ಟನಾಗ ।।೬।। ಹತ್ತಿ ರಥ ಅಯೋಧ್ಯಾ ಪಟ್ಟಣಕ್ಕೆ ಬಂದನಾಗ । ಭೃತ್ಯನಾಗಿ ಭೀಮೇಶಕೃಷ್ಣನ ಭಜಿಸುತಿದ್ದ ।।೭।।

## ವಚನ-೯೮

ಅತ್ತ ಋತುಪರಣ ಅಯೋಧ್ಯೆಯಲ್ಲೊಂದಿರಲು । ಇತ್ತ ನಳರಾಯ ತನ್ನ ಪಟ್ಟಣಕ್ಕೆ ಪೈಣಾಗಿ ।। ಅತ್ತೆ ಮಾವರ ಚರಣಕ್ಕೆರಗಿ ಅಪ್ಪಣೆಗೊಂಡು । ಮತ್ತಾಗ ನಿಷಧದೇಶಕ್ಕೆ ಹೊರಟ್ಹೋದನಾಗ-।।

## ಧ್ವನಿ-೯೯

ಬಂದನು ರಾಜ ಭಾಸ್ಕರ ತೇಜ ಬಂದನು ರಾಜ । ದಂಡು ನೂರ್ಬಲ ಕೂಡಿಕೊಂಡು ತನ್ನ ಪುರಕ್ಕೆ ಬಂದನು ರಾಜ ।।ಪ।। ಆರುನೂರು ಕಾಲಾಳು ಕುದುರೆ । ಹದಿನಾರು ಆನೆಗಳು ಆಯುಧ ಸಹಿತಾಗಿ ।।೧।। ಊರ ಮುಂದೆ ಬಂದು ಭೇರಿ ಬಡಿಸಿದನು । ಶೂರರಾದವರೆನ್ನೆದುರಿಗೆ ಬನ್ನಿರೆಂದು ।।೨।। ಊರುಕಾದಿರುವಂಥ ದ್ವಾರಪಾಲಕರೆಲ್ಲ ಸಾರಿ ಹೇಳಿದರು ಪುಷ್ಕರಗೆ ವಾರ್ತೆಯನು ।।೩।। ಪುಷ್ಕರ ನಿನ್ನ ಪುರಕ್ಕೆ ಲೋಷ್ಕರ ಬಂದಿತೀಗ । ಮುಷ್ಕರನಾಗಿ ಮೂಲೆಗೆಕೂಡಬ್ಯಾಡ ।।೪।। ಹೇಳಿದಾಕ್ಷಣದಲ್ಲೆ ಭಾಳ ದಂಡನು ಕೂಡಿ । ಕಾಳಗಕ್ಕಾಗಿ ಬಂದು ಕೇಳಿದ ನಗುತ ।।೫।। ಸೋತುಹೋದವ ನೀನ್ಯಾತಕೆ ಬಂದೀಯೆಂದು ಘಾತಕತನದಿಂದ ಮಾತನಾಡಿದನು ।।೬।। ಯುದ್ಧಕ್ಕೆ ನೀನು ಸನ್ನದ್ಧನಾಗುವುದೆಂದು । ಗೆದ್ದು ಎನ್ನನು ರಾಜ್ಯವಾಳು ನೀನೆಂದ ।।೭।। ಒಲ್ಲದಿದ್ದರೆ ಯಾಗ ಪಗಡೆನಾದುವೋಣೆಂದ ಚೆಲ್ವೆ ದಮಯಂತಿ ಪಣಕ್ಕಿಡು ನೀನೆಂದ ।।೮।। ಸ್ವಲ್ಪದಂಡನು ಗೆದ್ದರೇನು ಬರುವುದೆಂದು । ಅಲ್ಪ ಮನುಜ ದಮಯಂತಿನಿಡೆಂದ ।।೯।। ಶರಣರಕ್ಷಕನೆಂಬೋ ಬಿರುದು ಭೀಮೇಶಕೃಷ್ಣ। ಕರುಣದಿಂದೆನ್ನ ಪಾಲಿಸೆಂದು ಕುಳಿತನು ।।೧೦।।

## ವಚನ-೧೦೦

ಜಂಬುಕಾನಾ ರತ್ನಕಂಬಳ್ಯಾ ಪ್ಹಿಕೆಯಲ್ಲಿ । ರಂಭದಮಯಂತಿ ಪಣಕಿಟ್ಟನು ನಳರಾಯ ।। ಇಂದಿರೇಶೆನ್ನಕಾಯಲಿಯೆಂದು ಕುಳಿತಾಗ । ಸಂಭ್ರಮ್ಮದಿಂದ ಕುಳಿತಾಡೋ ಬಗೆ- ।।

## ಧ್ವನಿ-೧೦೧

ಪಗಡೆ ಯಾಡಿದ ಪುಷ್ಕರರಾಜನೊಡಗೂಡಿ ನಳದೊರೆ ಪಗಡೆಯಾಡಿದ । ಪಗಡೆಯಾಡಿದ ಬಹುಸಡಗರದಿಂದಲಿ ಬಿಡಿಮುತ್ತು ಬಿಗಿದ್ವಜ್ರ ಕಡಗದ ಕೈಯಿಂದ ॥ಪ॥ ಮುತ್ತು ಮಾಣಿಕ್ಯ ಚಿನ್ನ ಪಚ್ಚೆಯ ಪಗಡೆ । ರತ್ನದ್ಹಲಿಗೆಲಿಟ್ಟು ಲೆತ್ತವನ್ಹಾಕಿದ ॥೧॥ ಹಿಡಿದ ಪಾಸಿಯ ಬಿಡದ್ಹಾಗ್ಹಾಕುತ । ಮಡದಿ ದಮಯಂತಿಯ ಮೊದಲೆ ತಾ ಗೆದ್ದ ॥೨॥ ಛತ್ರಚಾಮರ ರತ್ನ ಮೋ(ಮೊಹ) ರುಂಗುವ । ಸಮಸ್ತ ಭಾಗ್ಯವ ಸರಸರನೆ ತಾ ಗೆದ್ದ ॥೩॥ ನಿಷಧದೇಶ ಪುಷ್ಕರನ ರಾಜ್ಯವು । ಅರಸು ಸಿಂಹಾಸನಕ್ಕಧಿಪತಿಯಾದನು ॥೪॥ ಸತಿಸುರತರನು ಸಹಿತಾಗಿ ಪುಷ್ಕರನ । ಅತಿಹರುಷದಿ ಗೆದ್ದನು ನಳದೊರೆಯು ॥೫॥ ದ್ಯೂತದೊಳಗೆ ತಾ ಸೋತುಪುಷ್ಕರನು । ಕೋತಿಯಂದದಿ ತನ್ನ ಮೂತಿ ತಗ್ಗಿಸಿದ ॥೬॥ ಅಳಲುತ ಬಳಲುತ ಅಳುವೋ ಪುಷ್ಕರನ । ನಳಮಾರಾಜ ತಾ ನಗುತ ನೋಡಿದನು ॥೭॥ ಮನ್ನಿಸಿ ಮಾತನಾಡಿದ ಕರುಣದಲಿ । ನಿನ್ನ ರಾಜ್ಯವ ನೀನಾಳಿಕೊ ಎಂದ ॥೮॥ ಹೆಂಡಿರು ಮಕ್ಕಳು ಸಹಿತ ಪುಷ್ಕರನ । ಪುಂಡೆಬ್ಬಿಸಿ ಗಡಿದಾಟಿಸಿ ಬಿಟ್ಟ ॥೯॥ ತನ್ನ ಸತಿ ಸುತರನು ಕರೆಸಿಕೊಂಡಾಕ್ಷಣ । ಘನ ಹರುಷದಿ ರಾಜ್ಯವನಾಳಿದನು ॥೧೦॥ ನಿತ್ಯದಿ ಭೀಮೇಶಕೃಷ್ಣನ ಭಜಿಸುತ । ಪತ್ನಿ ಸಹಿತ ದೊರೆಪಟ್ಟವನಾಳಿದ ॥೧೧॥

## ವಚನ-೧೦೨

ದೊರೆಯು ಯಜ್ಞವ ಮಾಡುತಿರಲು ಸಂಭ್ರಮದಿಂದ । ಸುರಪತಿಯು ಬಂದು ಪ್ರತ್ಯಕ್ಷ ಭಾಗವ ಕೊಂಡ ॥ ಕೆರೆ ಕೂಪ ಕಾವಲು ಗೋಪುರವು ಹರಿಯ ದೇವಾಲಯವು । ಸಿರಿಸಹಿತ ಪೂಜೆಯನಿಡಿಸುತಿದ್ದನಾಗ ॥ ಅನ್ನಛತ್ರಗಳು ಅರವಂಟಿಕೆಯು ಭೂದಾನ । ಕನ್ಯಾಹಿರಣ್ಯ ಕರಿತುರಗ ಗೋವುಗಳ ದಾನ ॥ ತನ್ನ ಪಂಕ್ತಿಲಿ ನಿತ್ಯ ಬ್ರಾಹ್ಮಣ । ಬಹುಜನರನ್ನು ಸುಖಬಡಿಸುತಿದ್ದ ॥ ಸ್ನಾನ ಹೋಮವು ನಿತ್ಯ ಜಪತಪವು ಅನುಷ್ಠಾನ । ನೇಮನಿಷ್ಠೆಯಲಿ ಇರುತಿದ್ದ ಗುಣನಿಧಾನ ॥ ಭೂಮಿಪತಿ ಭೀಮೇಶಕೃಷ್ಣ ನದಯ ಪಡೆದು । ತಾ ಮಹಾ ಸಂಪತ್ತಿಲಿದ್ದ ನಳಮಹಾರಾಜನು- ॥

## ಧ್ವನಿ-೧೦೩

ಜಯಜಯ ಜಯವೆನ್ನಿರೆ ಜನರು । ನಳದೊರೆಯ ಕಥೆಯ ಕೇಳಿರೆ ॥ಪ॥ ಚಕ್ರವರ್ತಿಯಾದ ನಳೋಪಾಖ್ಯಾನವ ಕೇಳಿದರೆ । ಚಕ್ರಧಾರಿ ಒಲಿದು ಸಾಲೋಕ್ಯಪದವಿ ಪಡೆವರಿನ್ನು ॥೧॥ ಸಂತೋಷದಿಂದಲಿ ದಮಯಂತಿ ಕಥೆಯ ಕೇಳಿದರೆ । ಸಂತಾನ

ಸಂಪತ್ತಲಿ ದಂಪತಿ ಸುಖಬಾಳ್ವೋರಿನ್ನು ॥೨॥ ಅಕ್ಕರದಿಂದ್ಹೆಣ್ಣುಗಂಡು ಮಕ್ಕಳನು ಪಡೆದು । ಮೊಮ್ಮಕ್ಕಳ ಸಹಿತಾಗಿ ಪಲ್ಲಕ್ಕಿ ಪದವಿ ಪಡೆದವರಿನು ॥೩॥ ಬತ್ತ ಧಾನ್ಯ ಬೆಳೆಸೋರೊ ಭಾಳಾರ್ಥ ದಾನ ಗಳಿಸೋರು । ಸತ್ಯವಂತರಾಗಿ ಆಯುಷ್ಯಕೀರ್ತಿ ಪಡೆವರಿನ್ನು ॥೪॥ ಅನ್ನಗೋವು ದಾನ ಕನ್ಯಾದಾನ ತೀರ್ಥಯಾತ್ರೆ ಫಲವು । ಇನ್ನು ಈ ಕಥೆ ಕೇಳಿದರೆ ಮನ್ನಿಸಿ ಕೊಡುವನು ಹರಿಯು ॥೫॥ ಕಷ್ಟದುರಿತ ಬಂದರ್ಹಿಂದಕಟ್ಟಿಸುತಲಿನ್ನು । ಬೇಡಿದಿಷ್ಟ ಫಲವ ಕೊಡುವ ನಳಚರಿತ್ರೆಯ ಕೇಳಿದರಿನ್ನು ॥೬॥ ಕಲಿಯ ಬಾಧೆಯೆಂಬೋದೇಳು ಜನುಮಜನುಮಕ್ಕು ಬಾರದು । ನಳನ ಕಥೆ ಕೇಳಿದರೆ ಒಲಿವನು ಭೀಮೇಶಕೃಷ್ಣ ॥೭॥

## ವಚನ-೧೦೪

ಕಾರ್ಕೋಟಕನು ಋತುಪರಣ ದಮಯಂತಿ । ನಳ ಚಕ್ರವರ್ತಿ ಕಥೆಯ ಭಕ್ತಿಂದ ಕೇಳಿದರೆ ॥ ಕೆಟ್ಟ ಕಲಿಬಾಧೆ ಬರದು ನಾಶವಾಗುವುದು । ಇಷ್ಟಫಲ ಭೀಮೇಶಕೃಷ್ಣ ಕರುಣಿಸಿ ಕೊಡುವನು- ॥

## ಧ್ವನಿ-೧೦೫

ಎತ್ತಿ ಬೆಳಗಿರೆ ಮುತ್ತಿನಾರತಿಯ ನಳ ಚಕ್ರವರ್ತಿ ರಾಜಭೂಪಾಲಗೆ । ಅಚ್ಚದರಸಿಯ ಸಹಿತ ಕುಳಿತ ನಳರಾಯಗೆ ಅಚ್ಚಕೆಂಪಿನ ಕದಲಾರತಿಯ ॥ಪ॥ ಕಲಿಸಿಕೊಂಡಾಗಕ್ಷ ಹೃದಯವನ್ನು ಕಲಿಯು ಕಾರ್ಕೋಟಕನ ಕರುಣವನ್ನು । ಪಡೆದು ಪಗಡೆಯನಾಡಿ ಪುಷ್ಕರನ ತಾ ಗೆದ್ದು ಸಡಗರದಿ ರಾಜ್ಯವಾಳಿದ ರಾಜಗೆ ॥೧॥ ಹತ್ತಿ ಸಿಂಹಾಸನದಿ ಕುಳಿತಿರಲು ಎತ್ತಿ ಚಾಮರವನ್ನು ಬೀಸುತಿರಲು । ಮುತ್ತೈದೇರೆಲ್ಲ ಮುದದಿಂದ ಪಾಡುತ್ತ ಹಚ್ಚಿ ಜ್ಯೋತಿಗಳ ಹರಿವಾಣದೊಳಗೆ ॥೨॥ ರುಳಿಗೆಜ್ಜೆ ಪೈಜಣವು ಕಾಲುಪೆಂಡೆ ಹೆರಳುಬಂಗಾರ ರಾಗಟೆಯು ಗೊಂಡ್ಯ । ಹೊಳೆವೊ ಕುಂದಣ ಮುತ್ತಿನ್ವಾಲೆ ಮೂಗುತಿಯಿಟ್ಟು ಕಳೆಯ ಸುರಿವಂಥ ಕಮಲಾಕ್ಷಿಗೀಗ ॥೩॥ ವಂಕಿ ಬಾಜೂಬಂದು ನಾಗಮುರಿಗೆ ಕಂಕಣದ್ವಾರ್ಯ ಕಟ್ಟಾಣಿ ಸರಿಗೆ । ಕುಂಕುಮ ಗಂಧ ಬುಕ್ಕಿಟ್ಟು ಮಲ್ಲಿಗೆ ಮುಡಿದಲಂಕಾರವಾದ ದಮಯಂತಿಗೀಗ ॥೪॥ ಜಾಂಬೂನಜರದ ಪೀತಾಂಬರುಟ್ಟು ಕುಂದಣಂಚನ ಕುಪ್ಪಸವ ತೊಟ್ಟು । ಹೊಂದಿ ಕುಳಿತಿರಲು ಭೀಮೇಶಕೃಷ್ಣನ ಪಾದ್ಯಾನಂದದಿಂದಕ್ಷಂತಿಟ್ಟರಸುತ ॥೫॥

★ ★ ★ ★

# ಸುಧಾಮಚರಿತ್ರೆ ಹಾಡು

ರಾಮ ರಾಮ ರಾಮ ರಾಮ । ರಾಮ ರಾಮ ರಾಮ ರಾಮ । ರಾಮ ರಾಮ ರಾಮ ಕೋ । ದಂಡ ರಾಘವ ॥ ಹರನ ಪುತ್ರ ಗಣಪ ನಿಮಗೆ । ತರಗು ಚುಕಲಿಯನೀವೆ । ವರಮತಿಯ ಪಾಲಿಸಯ್ಯ । ವಸ್ತುಮೂರಿತ ॥ ಉರುತರಾದ ಶೃಂಗಪುರದ । ಸರಸ್ವತೀಯಮ್ಮ ನಿಮಗೆ । ಕರವ ಮಗಿದು ಬೇಡುವೆನು । ಕರುಣಿಸಂಬಿಕೆ ॥೧॥ ರಾಮ ರಂಗಸ್ವಾಮಿ ಸು। ದಾಮಗೊಲಿದ ಕಥೆಯ ಸಾರ । ಪ್ರೇಮದಿಂದ ಬರೆವೆ ಶ್ರೀ । ರಾಮಚರಿತೆಯ ॥ ಭೂಮಿ ಮೇಲೆ ಈ ಕಥೆಯ । ಪ್ರೇಮದಿಂದ ಪೇಳಿದರಿಗೆ । ಶ್ರೀಮಹಾಲಕ್ಷ್ಮಿಯೊಲಿದು । ಸಿರಿವನೀವಳು ॥೨॥ ಗುರುಗಳಿಗೆ ಮಾತಾಪಿತರು । ಹಿರಿಯರುಗಳ ಚರಣಕೆರಗಿ । ಹರಿಯ ನಮಚರಿತೆಯನ್ನು । ಒರೆದು ಪೇಳುವೆ ॥ ಇರುವನೊಬ್ಬ ವಿಪ್ರನಲ್ಲಿ । ಪರಮ ದಾರಿದ್ರನಾಗಿ । ಹರಿಯ ನೆನೆದು ಕಾಲವನ್ನೆ । ಕಳೆಯುತ್ತಿದ್ದನು ॥೩॥ ನಡೆಯಲರಿಯ ಧರಣಿ ನೋಯ । ನುಡಿಯಲರಿಯ ಗರ್ಜಿಸುತ್ತ । ಕಡಿಯಲರಿಯ ಮರನ ಕುಡಿಯ । ಚಿವುಟಲರಿಯನು ॥ ತಡೆಯಲರಿಯ ಸಾಧುಜನರ । ಹಿಡಿಯಲರಿಯ ಪರರ ವಸ್ತು । ಒಡವೆಯನ್ನು ಮುಟ್ಟಲರಿಯ । ಬಡವನಾದರೂ ॥೪॥ ವೃತ್ತಿಕ್ಷೇತ್ರಾದಿಗಳಲಿ । ಸುತ್ತಿ ಸುಳಿದು ಧರೆಯ ಮೇಲೆ । ನಿತ್ಯ  ಯಾಚನವ ಮಾಡಿ । ನೀಲವರ್ಣನ ॥ ಮೂರ್ತಿಧ್ಯಾನವನ್ನೆ ಮಾಡಿ । ಭಿಕ್ಷೆಯನ್ನು ಬೇಡಿ ತಂದು । ಪತ್ನಿಸಹಿತ ಪ್ರಾಣಧಾ । ರಣೆಯ ಮಾಡಿದ ॥೫॥ ಭಿಕ್ಷೆಯನ್ನು ಬೇಡಿ ತರಲು । ಲಕ್ಷ್ಯವೆಂದು ಜೋಕೆ ಮಾಡಿ । ಅಕ್ಷಯಾ ಪಾತ್ರೆಯಲ್ಲಿ । ಶಾಕಪಾಕವ ॥ ಆ ಕ್ಷಣದಿಂದ ಮಾಡಿ । ಪತಿಯ ಸಂತೋಷಪಡಿಸಿ । ಕುಕ್ಷಿಯನ್ನು ಪೊರೆದು ಹರಿಯ । ನೆನೆವುತಿರ್ದಳು ॥೬॥ ದಾರಿದ್ರ್ಯದುಃಖ ಜಗಕೆ । ತೋರದಂತೆ ಗೃಹವ ಶೃಂ । ಗಾರವನ್ನೆ ಮಾಡಿ ಶಂಖ । ಚಕ್ರ ಪದ್ಮದಿ । ಹರಿದ್ರಾ ಕುಂಕುಮವು । ಅರುಣವನ್ನೆ ಶೃಂಗರಿಸಿ । ನಾರಾಯಣನ ನಾಮವನ್ನೆ । ನೆನೆವುತಿರ್ದಳು ॥೭॥ ಸ್ನಾನ ಸಂಧ್ಯಾನ ಜಪವು । ಮಾನಸವು ಹರಿಯ ಪೂಜೆ । ದಾನ ಧರ್ಮ ವೈಶ್ವದೇವ । ಅತಿಥಿ ಸತ್ಕರ । ನೇಮದಿಂದ ಮಾಡಿ ಕಾಮ । ಧೇನುವಿಗೆ ಕವಳವಿತ್ತು । ಮಾನಿನಿಯ ಸಹಿತ ಉಂಡ। ನುಳಿದ ಭಾಗವ ॥೮॥ ಪತಿವ್ರತೆ ತನ್ನ ಪ್ರಾಣ । ಪತಿಯ ಸೇವೆಯನ್ನು ಮಾಡಿ । ಅತಿಶಯಾದಿಂದ ಬಿ । ನ್ನಪವ ಮಾಡಲು ॥ ಪಿತರ ವಗರದವರು ಸಂ । ಗತಿಯಲಾಡಿ ಬೆಳೆದವಾರು ಹಿತವರಾರಿಲ್ಲವೆಂದು । ನುಡಿಯಲಂಗನೆ ॥೯॥ ಹೆತ್ತ ತಾಯಿವರ್ಗದವರು

। ಜೊತೆಯಲಾಡಿ ಬೆಳೆದವಾರು । ಶಾಸ್ತ್ರಪಾಠ ಸಕಲ ವೇ । ದಾಂತ ವಿಪ್ರರು ॥ ನಿತ್ಯದಲ್ಲಿ ಪೋಗಿ ಸಕಲ । ಪೃಥ್ವಿಯನ್ನೆ ತಿರುಗುವಾಗ । ಇತ್ತ ಬಾರೆಂದು ಕರೆವ । ಹಿತವರಿಲ್ಲವೆ ॥೧೦॥ ಪತ್ನಿಯೆಂದ ಮಾತ ಕೇಳಿ । ಅತಿರಯಿಂದ ವಿಪ್ರ ನುಡಿದ । ಮಿತ್ರರೆನಗೆ ರಾಮಕೃಷ್ಣ। ಭಕ್ತವತ್ಸಲ ॥ ರಿಕ್ತ ಹಸ್ತದಲ್ಲಿ ಪೋಗಿ । ನಿತ್ಯ ಸದ್ಗುಣಾ ದಿವ್ಯ । ಮೂರ್ತಿಯನ್ನು ಕಾಣಬಾರ । ದೆಂದು ನುಡಿದನು ॥೧೧॥ ಪ್ರಾಣಪದಕ ಹರಿಯ ಪೋಗಿ । ಕಾಣಬೇಕಾದರೆ ಕೈ । ಕಾಣಿಕೇಗೆ ಕಾಣೆನೆಂದು । ಮನದಿ ನೊಂದನು ॥ ರಾಣಿ ಹೋಗಿ ನೆರೆಕೆರೇ । ಪ್ರಾಣಿಗಳ ಮನವನೊಲಿಸಿ । ಕಾಣಿಕೇಗೆ ತಂದಳೊಂದು । ಮುಷ್ಟಿ ಪೃಥುಕವ ॥೧೨॥ ಮುಷ್ಟಿ ಪೃಥುಕವನ್ನೇ ತಂದು । ಕಟ್ಟಿ ಜೀರ್ಣವಸ್ತ್ರದಲ್ಲಿ ಪಟ್ಟದೊಲ್ಲಭನ ಕೈಯ । ಕೊಟ್ಟಳಂಗನೆ ॥ ಕೃಷ್ಣ ಮೂರುತಿಯ ಮುಂದೆ । ಇಟ್ಟು ಕರವ ಮುಗಿದು ನಮ್ಮ । ಕಷ್ಟವನ್ನು ಪೇಳಿ ಬನ್ನಿ । ರೆನುತ ನುಡಿದಳು ॥೧೩॥ ಕೊಟ್ಟ ಪೃಥುಕವನ್ನೆ ದೊಡ್ಡ। ಮೂಟೆಯನ್ನೆ ಕಟ್ಟಿ ಹೆಗಲೊ।ಳಿಟ್ಟುಕೊಂಡು ನಡೆದ ವಿಪ್ರ । ಹರಿಯ ಧ್ಯಾನದಿ । ಬಟ್ಟೆಯನ್ನೆ ಮೆಟ್ಟಿ ಬರಲು । ಬಲಕೆ ಬಂತು ವಾಯಸವು ॥ ಕೃಷ್ಣಪಕ್ಷಿ ಕೃಷ್ಣಯೆಂದು । ಎಡಕೆ ಹೋಯಿತು ॥೧೪॥ ಉತ್ತಮಾ ಶಕುನಾದ ನಿ । ಮಿತ್ತವನ್ನೆ ಕಂಡು ವಿಪ್ರ । ಚಿತ್ತದಲ್ಲಿ ಪರಮ ಸಂ । ತೋಷಪಟ್ಟನು । ಕೃಷ್ಣಮೂರುತಿಯು ನಮಗೆ । ಸಕಲ ಸಂಪದವನೀವ । ಅಚ್ಯುತಾನಂತ ರಕ್ಷಿ। ಸೆಂದು ನುಡಿದನು ॥೧೫॥ ಶುದ್ಧ ಜಲಗಳೆಲ್ಲ ನಮ್ಮ । ಸುಗುಣ ಹರಿಯ ಚರಣಕೆಂದ । ಪದ್ಮ ಪುಷ್ಪ ಪಾರಿಜಾತ । ಲಕ್ಷ್ಮಿಗೆಂದನು। ಮಧ್ಯಮಾರ್ಗದಲ್ಲಿ ಬೆಳೆದ । ಮರುಗ ಮಲ್ಲಿಗೆ ಜಾಜಿ । ಪದ್ಮನಾಭ ಗರ್ಪಿಸುತ್ತ । ಮುಂದೆ ನಡೆದನು ॥೧೬॥ ಹರಿವ ಜಲಗಳೆಲ್ಲ ಶ್ರೀ । ಹರಿಯ ದಿವ್ಯ ಚರಣಕೆಂದ । ಪರಿಪರಿಯ ಸುಪುಷ್ಪವೆಲ್ಲ। ಲಕ್ಷ್ಮಿಗೆಂದನು ॥ ಕೆರೆಯಲ್ಲಿದ್ದ ತಾವರೇಯು । ಕೆಲದಲ್ಲಿದ್ದ ಕೇದಿಗೇಯು । ನರಮೃಗರೂಪ ನಾರ । ಸಿಂಹಗೆಂದನು॥೧೭॥ ಎಳೆಯ ತುಳಸಿದಳವು ನಮ್ಮ । ನಳಿನನಾಭನ ಕೃಷ್ಣಗೆಂದ । ಸುಳಿವಡೆದ ಬಿಳಿಯೆಲೆ ಶ್ರೀ । ಲಕ್ಷ್ಮಿಗೆಂದನು ॥ ಕಳಿತ ಖರ್ಜೂರ ದ್ರಾಕ್ಷೆ । ನಳಿನನಾಭ- ಗರ್ಪಿಸುತ್ತ । ಥಳಥಳೀಪ ದ್ವಾರಕೇಯ । ಬಳಿಗೆ ಬಂದನು ॥೧೮॥ ಬಿಸಿಲು ಸೆಕೆಗೆ । ಸುದಾಮ । ನೆರಳು ತಂಪಿನಲ್ಲಿ ನಿಂತು । ತೃಷೆಗೆ ರಾಮನಾಮವೆಂಬ । ರಸವ ಚಿಮ್ಮುತ ॥ ಹಸಿದುದಾಗ ಹರಿಯ ನಾಮ । ಹುಣ್ಣಿಗಳನೆ ಭುಂಜಿಸುತ್ತ । ನಸುನಗುತ್ತ ನಡೆದ ವಿಪ್ರ । ಹರಿಯ ಧ್ಯಾನದಿ ॥೧೯॥ ದೂರದಿಂದ ಕಂಡು ವಿಪ್ರ । ದ್ವಾರಕೇಯ ನಗರವನ್ನು ಸಾರಿ ಮೈಯುಬ್ಬಿ ಸಂ ।

ತೋಷಪಟ್ಟನು ।। ನಾರಾಯಣ ನಾಮವನ್ನು। ಪಾರಾಯಣ ಮಾಡಿಕೊಂಡು । ಘೋರನಯ್ತಂದ ವಿಪ್ರ । ರಾಜದ್ವಾರಕೆ ।।೨೦।। ಗೊಲ್ಲರೆಲ್ಲ ಕಂಡು ವಿಪ್ರ । ನಿಲ್ಲು ಹೋಗಬೇಡವೆನಲು । ತಲ್ಲಣೇಸಿ ನೆನೆದ ತನ್ನ । ತಂದೆ ಕೃಷ್ಣನ ।। ಪುಲ್ಲನಾಭನೀಗೆ ಪೂರ್ವ । ದಲ್ಲಿ ಮಿತ್ರನೆಂಬುದೊಂದು। ಸೊಲ್ಲ ಹೋಗಿ ಹೇಳಿ ಲಕ್ಷ್ಮೀ । ರಮಣಗೆಂದನು ।।೨೧।। ಎಂದ ಮಾತ ಕೇಳುತಾ ಬಂದರಾಗ ಚಾರಕರು । ಇಂದಿರಾಪತಿಗೆ ಬಿ । ನ್ನಪವ ಮಾಡಲು ।। ಹಿಂದೆ ತಮ್ಮ ಮಿತ್ರನಂತೆ ಹೆಸರು ಸುದಾನಮಂತೆ । ಬಂದು ಬಾಗಿಲಲ್ಲಿ ನಿಂದ । ನೆಂದು ನುಡಿದರು ।।೨೨।। ಕರುಣನಿಧಿಯು ಬೇಗದಿಂದ । ಕರೆದು ತನ್ನಿರೆನಲು ವಿಪ್ರ । ವರದಿ ಬಂದು ಹರಿಯ ದಿವ್ಯ । ಚರಣಕೆರಗಿದ ।। ಕರಗಳಿಂದ ಶಿರವನೆತ್ತಿ । ಭರದಿ ಮೈದಡವಿ ಕೃಷ್ಣ । ಇರದೆ ಮಚಂದಲ್ಲಿ ಕು । ಳ್ಳಿರಿಸಿಕೊಂಡನು ।।೨೩।। ಬಿಸಿಲೊಳಗೆ ಬಂದಿರೆಂದು । ಬೀಸಣಿಗೆಯಿಂದ ಬೀಸಿ । ತೃಷೆಗೆ ತರಿಸಿಕೊಟ್ಟರಾಗ । ಗುಡವು ಜಲಗಳ ।। ಹಸಿದು ಬಂದ ವಿಪ್ರನೆಂದು । ಹಣ್ಣು ಸಕ್ಕರೆಯ ಕೊಡಿಸಿ । ನಸುನಗುತ್ತ ಕೇಳಿದಾನು । ಕುಶಲವಾರ್ತೆಯ ।।೨೪।। ಬರವು ತಡೆದುದ್ಯಾತಕಯ್ಯ । ಬಂದುದಿಲ್ಲ ಬಹಳ ದಿವಸ । ವರ ವಿವಾಹ ನಿಮಗೆ ದಾವ । ಕಡೆಯಲಾಯಿತು ।। ಮರೆತು ಬಿಟ್ಟಿರೇನು ನಮ್ಮ । ಕರೆಯಲಿಲ್ಲವಯ್ಯ ನೀ । ವಿರುವ ಕ್ಷೇತ್ರದಾವ ಕಡೆಯ । ಲಾಯಿತೆಂದನು ।।೨೫।। ಮದನಪಿತನ ಕರುಣದಿಂದ । ಮದುವೆಯಾಯಿತಯ್ಯ ನಮಗೆ । ಪದಮುನಾಭ ನಿಮ್ಮ ಪಾದ । ದ್ವಯದ ಕೃಪೆಯಲಿ ।। ಮೊದಲು ಬಂದುದಿಲ್ಲ ಬಹಳ । ಮುಂದೆಗೆಟ್ಟು ಭಂಗಪಟ್ಟು। ವಧುವು ತನ್ನ ಕಳುಹಿಕೊಟ್ಟ। ಳೆಂದು ನುಡಿದನು ।।೨೬।। ಇಂದಿರಾಪತಿಯ ವಿಪ್ರ । ವಿನಯದಿಂದ ಮಾತನಾಡೆ । ಹಿಂದಿನಾಧ್ಯಾಯವಿಲ್ಲಿ। ಸಂದುಹೋಯಿತು ।। ಹಿಂದೆ ತಾವು ಗುರುಗಳಲ್ಲಿ। ಒಂದಾಗಿ ಓದಿ ಬೆಳೆದ । ಅಂದವನ್ನೆ ನೆನೆದು ಸಂ । ತೋಷಪಟ್ಟರು ।।೨೭।। ಗುರುಪತ್ನಿಯೊಂದು ದಿವಸ । ಕರೆದು ಕೆಲಸವನ್ನು ಹೇಳಿ । ಮುರಿದು ತನ್ನಿ ಕಾಷ್ಠವೆ । ದೆನುತ ಹೇಳಲು ।। ಸುರರು ಮಳೆಯ ಹೊಯ್ಯುತಿರಲು । ಭರದಿ ಕಾನನದ ಒಳಗೆ । ಗುರುಗಳು ಕಂಡು ನಮ್ಮ । ಕರೆದು ಒಯ್ದರು ।।೨೮।। ಗುರುಗಳ ಪಂಕ್ತಿಯಲ್ಲಿ। ಪರಮ ಸಂತೋಷದಿಂದ । ಹರುಷದಿಂದ ಮೃಷ್ಟಾನ್ನ । ಗಳನೆ ಸವಿದೆವು ।। ಗುರುಕುಮಾರಕರಿಗೆ ಎಲ್ಲ । ಸ್ಥಿರಂಜೀವಿ ಪದವಿನಿತ್ತು । ಹರಸಿದಿರಿ ದೀರ್ಘಾಯುಷ್ಯ । ರಾಗಿರೆನುತಲಿ ।।೨೯।। ಸತ್ಯಮೂರ್ತಿ ಸರಸದಿಂದ ಭ್ರಾತೃಭಾವದಿಂದ ನ । ಮ್ಮತ್ತಿಗೇನು ಕಳುಹಿಕೊಟ್ಟಳ । ಪೂರ್ವದೊಸ್ತುವ ।। ಚಿತ್ತದಲ್ಲಿ ಚಿಂತೆ ಬೇಡ ।

ಇತ್ತ ತನ್ನಿರೆನ್ನಲು ವಿಪ್ರ । ಮಸ್ತಕವ ಬಾಗಿ ಲಜ್ಜೆ। ಯಿಂದ ನಿಂತನು ।।೩೦।। ಭಕ್ತಿವರ್ಜ್ಯವಾಗಿ ತಂದ । ಮುತ್ತು ರತ್ನ ಕೆಲಸವಿಲ್ಲ। ಭಕ್ತಿಯಿಂದ ತಂದುದೊಂದು । ಪತ್ರ ಪುಷ್ಪವು ।। ಚಿತ್ತದಲ್ಲಿ ಚಿಂತೆ ಬೇಡ । ಬೇಗ ತನ್ನಿರೆನಲು ಸ್ವರ್ಣ । ಪಾತ್ರೆಯಲ್ಲಿ ಪೃಥುಕವನ್ನೆ। ಸುರಿದ ವಿಪ್ರನು ।।೩೧।। ಮುಷ್ಟಿ ಪೃಥುಕವನ್ನೆ ರಾಮ । ಕೃಷ್ಣರೊಂದು ಬಾರಿ ಮೆಲ್ಲೆ। ಕಷ್ಟ ದಾರಿದ್ರ್ಯವೆಲ್ಲ । ದಹಿಸಿ ಹೋಯಿತು ।। ಮುಷ್ಟಿಯಲ್ಲಿ ಮೂರು ಕಾಳು । ತಿರುಗಿ ರಾಮಕೃಷ್ಣರು ಮೆಲ್ಲೆ। ಶ್ರೇಷ್ಠವಾದ ವೈಕುಂಠ । ಪದಕೆ ವಿಪ್ರನು ।।೩೨।। ಮಲ್ಲಿಗೆಯ ಮುಡಿಯ ಲಕ್ಷ್ಮಿ। ವಲ್ಲಭನ ಕರವ ಪಿಡಿದು। ಅಲ್ಲಿಂದ ವಿಪ್ರ ತಂದ- । ಪೂರ್ವದೊಸ್ತುವ ।। ಎಲ್ಲವನ್ನು ನೀವೆ ಸ್ವಾಮಿ । ಮೆಲ್ಲಬಹುದೆ ನಮಗೆ ಕೊಡದೆ ನ । ಮೆಲ್ಲರಿಗೆ ಕೊಡಬೇಕೆಂದು ನುಡಿದಳಂಗನೆ ।।೩೩।। ಎಂದ ಮಾತ ಕೇಳಿ ಗೋ । ವಿಂದ ತಾನು ನಸುನಗುತ್ತ । ಇಂದು ಮುಖಿಯರಿಗೆ ಎಲ್ಲ। ಕರೆದುಕೊಟ್ಟನು ।। ಬಂಧುಬಳಗೆಲ್ಲ ಕೊಟ್ಟು। ಮಂದಿ ಮಾರ್ಬಲಕೆ ಕೊಟ್ಟು। ಹಿಂದೆ ಮಿಕ್ಕ ಪೃಥುಕ ಜೋಕೆ । ಎಂದು ನುಡಿದನು ।।೩೪।। ಹೊತ್ತು ಹೋಯಿತಯ್ಯ ವಿಪ್ರ । ಹಸಿದು ಬಂದಿರೇಳಿ ಭೋಜ । ನೋತ್ತರದಿ ಮಾತನಾಡ। ಬಹುದು ಎಂದನು ।। ಸತ್ಯಗಂಗೆಗೆ ಹೋಗಿ। ನಿತ್ಯಕರ್ಮವನ್ನೆ ಮಾಡಿ । ಅಚ್ಯುತನ ಪಂಕ್ತಿಗಾಗಿ । ಬಂದ ವಿಪ್ರನು ।।೩೫।। ಕೃಷ್ಣನಾ ಪಂಕ್ತಿಯಲ್ಲಿ। ಮೃಷ್ಟಾನ್ನಗಳನೆ ಸವಿದು। ಇಷ್ಟಗಂಗೆಗೆ ಹೋಗಿ। ಕರವ ತೊಳೆದರು ।। ಇಟ್ಟಗದ್ದಿಗೇಲಿ ಕುಳಿತು । ಪಟ್ಟಿ ವೀಳ್ಯವನ್ನೆ ಹಿಡಿದು । ಕೊಟ್ಟ ತಾಂಬೂಲ ಚ । ರ್ವಣವ ಮಾಡಿದ ।।೩೬।। ಇಂದಿರಾಪತಿಯು ವಿಪ್ರ ವಿನಯದಿಂದ ಮಾತನಾಡಿ ರಂಜಿಸುವ ರಾಜ ಮಂ । ದಿರವರ ತೋರಿದ ।। ಅಂಜಬೇಡ ವಿಪ್ರನೆನಲು । ಅಧಿಕ ಸಂತೋಷದಿಂದ । ಸಂಜಗೆ ಅಮೃತಾನ್ನ ಭೋ । ಜನಗಳಾದುವು ।।೩೭।। ಶ್ರಮಿಸಿ ಬಂದ ವಿಪ್ರನೆಂದು । ಶಾಲು ಪಟ್ಟೆಗಳನೆ ಹಾಸಿ । ವಿಶ್ರಮಿಸಿಕೊಳ್ಳಿರೆನುತ । ನುಡಿದ ಕೃಷ್ಣನು ।। ಅಮರವಂದಿತನೆ ತನ್ನ। ಆದಿಲಕ್ಷ್ಮಿಯು ಸಹಿತ। ಕಮಲನಾಭನ ಹೋಗಿ ವಿ। ಶ್ರಮಿಸಿಕೊಂಡನು ।।೩೮।। ಅರಣುನುದಯದಲ್ಲಿ ಎದ್ದು। ಸುರನದೀಲಿ ಸ್ನಾನ ಮಾಡಿ । ಪರಮಾತ್ಮ ಅಪ್ಪಣೆಯ । ಪಾಲಿಸೆಂದನು ।। ತ್ವರಿತವಿಟ್ಟು ಯಾತಕಯ್ಯ । ಇರಲುಬಹುದು ಎರಡು ದಿವಸ । ಬರವ ತಡೆದು ಬಹಳ ದಿವಸ । ಕಾಗಿ ಬಂದಿರಿ ।।೩೯।। ನೆರೆಹೊರೆಯಿಲ್ಲ ನಮಗೆ । ತರುಣಿಯೊಬ್ಬಳೆನುತ ಪೇಳೆ । ಹರುಷದಿಂದ ಹೋಗಿ ಬನ್ನಿ। ರೆನುತ ನುಡಿದನು ।। ಕೃಷ್ಣ ನಪ್ಪಣೆಯ ಕೊಂಡು । ತಟ್ಟನೆ ಅಲ್ಲಿಂದ ಬಂದು । ಅಷ್ಟಮ ಸ್ತ್ರೀಯರಪ್ಪ ।

ಣೆಯ ಕೇಳಿದ ||೪೦|| ತ್ವರಿತವಿಷ್ಣು ಯಾತಕಯ್ಯ | ಇರಲುಬಹುದು ಎರಡು ದಿವಸ | ಕಷ್ಟಪಟ್ಟು ಬಂದಿರೆಂದ | ಆದಿಲಕ್ಷ್ಮಿಯು || ನೆರೆ ಹೊರೆಯಿಲ್ಲ ನಮಗೆ | ತರುಣಿಯೊಬ್ಬಳೆನುತ ಪೇಳೆ | ಹರುಷದಿಂದ ಹೋಗಿ ಬನ್ನಿ | ರೆನುತ ನುಡಿದಳು ||೪೧|| ರಾಜಗೋಪಾಲ ತನ್ನ | ರಾಜದ್ವಾರ ತನಕ ಬಂದು | ರಾಜಸಮ್ಮೇಳದಿಂದ | ಕಳುಹಿಸಿಕೊಟ್ಟನು || ಮೂಜಗಕ್ಕಧಿಕವಾದ| ಮುತ್ತು ರತ್ನ ಅಂದವಾದ | ತೇಜಿಯನ್ನು ಹಿಡಿದರೇ | ತಂದು ವಿಪ್ರಗೆ ||೪೨|| ಝುಗಝುಗಿಪ ಚಿತ್ರ ದಂಗಿ | ಜಗಿಯ ತಂದು ತೊಡಿಸಿದರೆ | ಅಗಣಿತ ರತ್ನದಾಭರಣ | ತಂದು ಇಟ್ಟರು || ಬಗೆ ಬಗೇ ಕೊಂಬು ಕಹಳೆ | ವಾದ್ಯಗೀತ ರಭಸದಿಂದ | ಹೊಗಳಿದರೆ | ಹರಿಯ ಭಕ್ತ | ಪೋಪನೆನುತಲಿ ||೪೩|| ನಿರ್ಮಲಮೂರ್ತಿ ವಿಶ್ವ | ಕರ್ಮನಾಗ ಕರೆಯ ಕಳುಹಿ | ನಮ್ಮ ನಗರಿಗಿಂತ ಅಧಿಕ | ಇಮ್ಮಡಿಯಾಗಿ || ರಮ್ಯವಾದ ಮುತ್ತು ರತ್ನ | ಕುಂದಣದ ಕೆಲಸದಿಂದ ನಿರ್ಮಿಸಯ್ಯ ರಾಜಗೃಹವ | ವಿಪ್ರಗೆಂದನು ||೪೪|| ಸುಪ್ಪಣಿ ಸುವರ್ಣಮಯದ | ಉಪ್ಪರಿಗೆ ಕಂಡು ವಿಪ್ರ | ತಪ್ಪಿತೇನು ದಾರಿಯೆನುತ | ಮನದಿ ನೆನೆದನು|| ಅಪ್ರತಿಮ ಆದಿಮಹಿಮ | ಸರ್ಪಶಯನ ಕೊಟ್ಟ ಭಾಗ್ಯ | ತಪ್ಪಲಿಲ್ಲ ದಾರಿಯೆಂದು ಹರುಷಬಟ್ಟನು ||೪೫|| ಇಂದುಮುಖಿಯು ಹರುಷದಿಂದ | ತುಂಬಿ ಸುವರ್ಣ ಕಲಶ ಜಲವ | ತಂದು ತನ್ನ ಪತಿಯ ಪಾದ | ವನ್ನೆ ತೊಳೆದಲು || ಇಂದಿರಾಪತಿಯ ಪೋಗಿ | ಕಂಡ ಕಾರಣದಿಂದ | ಬಂದುದೀ ಭಾಗ್ಯ ಸಂ | ದೇಹವಿಲ್ಲವು ||೪೬|| ಎತ್ತ ನೋಡ ಸುವರ್ಣಮಯದ | ರತ್ನ ಹೊನ್ನರಾಶಿಗಳು | ಮತ್ತೆ ವಿದ್ವಾಂಸರೆಲ್ಲ ವೇ | ದಾಂತ ಘೋಷಣೆ || ಸುತ್ತಲಿದ್ದ ಪಕ್ಷಿಗಳು | ಹಸ್ತವನ್ನೇ ಮುಗಿದು ಸೇವೆ | ವೃತ್ತಿಯನ್ನೇ ಮಾಡುತಿಹುದ | ಕಂಡ ವಿಪ್ರನು ||೪೭|| ಅರ್ತಿಯಿಂದ ವಿಪ್ರ ತಾ ಅ | ಶ್ವತ್ಥವೃಕ್ಷ ನಡಿಸಿ ಮೇಲೆ | ಕಟ್ಟಿಸಿದ ಕೆರೆಯ ತರುವಿ | ಕಟ್ಟೆ ಕಾಲುವೆ || ಬಟ್ಟೆಯಲ್ಲಿ ಸಾಲು ಸಸಿಗ | ಳಿಟ್ಟು ಅರವಟ್ಟಿಗೆಯ | ಕೃಷ್ಣಗರ್ಪಿತವ ಮಾಡಿ | ಕರವ ಮುಗಿದನು ||೪೮|| ಅನ್ನದಾನ ಹೊನ್ನು ದಾನ | ಕನ್ಯಾದಾನ ಕಪಿಲದಾನ | ತನ್ನ ಪಂಕ್ತಿಯಲ್ಲಿ ಬ್ರಾ | ಹ್ಮಣರ ಭೋಜನ || ಉನ್ನತವಾದ ದಾನ | ಧರ್ಮಗಳನೆ ಮಾಡಿ ವಿಪ್ರ | ಪನ್ನಗಶಯನಗ | ರ್ಪಿತವ ಮಾಡಿದ ||೪೯|| ಅಗ್ನಿಹೋತ್ರ ಯಜ್ಞ ಸೂತ್ರ | ಯಜ್ಞ ಪೌಂಡ್ರಿಕಧರ್ಮ | ಶಾಸ್ತ್ರಪಾಠ ಸಕಲ ವೇ | ದಾಂತವಿಪ್ರರು || ಮಧ್ಯಾಹ್ನ ಕಾಲದಲ್ಲಿ ಹಸಿದು ಬಂದ ವಿಪ್ರರಿಗೆ | ದಧ್ಯನ್ನ ಕ್ಷೀರದಿಂದ | ತೃಪ್ತಿ ಬಡಿಸಿದ ||೫೦)) ಮನಸು ಪೂರ್ಣ ಪಕ್ವವಾಗಿ | ಶರೀರಧರ್ಮ ನಿತ್ಯವಾಗಿ

। ಹರಿಯು ಕೊಟ್ಟ ಭಾಗ್ಯವೆಲ್ಲ ಹರಿಗೆ ಅರ್ಪಿಸಿ ॥ ಸತಿಯು ಪತಿಯು ಹೋಗಿ ಲಕ್ಷ್ಮೀ । ಪತಿಯ ಸನ್ನಿದಿಯಿರಲು। ಚತುರ್ಮುಖ ಬ್ರಹ್ಮ ಶಾ । ಶ್ವತಗಳಾದುವು ॥೫೧॥ ಆದಿತ್ಯವಾರ ದಿನಗಳಲ್ಲಿ ಬಾಲೆಯರು ಹೇಳಿದರೆ । ಬಾಲ ಸಂತಾನ ಕೊಟ್ಟು। ರಕ್ಷಿಸುವನು ॥ ಬಾಲಕರಿಲ್ಲದ ಬಾಲೆಯರು । ಹೇಳಿದರೆ ಈ ಪದವ ಸಾಲು ಸಂತಾನ ಕೊಟ್ಟು । ರಕ್ಷಿಸುವನು ॥೫೨॥ ಪೃಥ್ವಿಯೊಳಗೆ ಈ ಕಥೆಯ । ಕೇಳಿದವರಿಗೆ ಪೇಳಿದವರಿಗೆ । ಪುರಂದರವಿಠಲ ಸಂ । ಪದವನೀವನು ॥

ಸುಲಭನೆ ಶ್ರೀಹರಿ ಎಮಗೆ ॥ಪ॥ ಅಡವಿತುಳಸಿಯ ತಂದು ಆಜ್ಞೆಯಿಲ್ಲದೆ ಜಲ । ಮುಡುಪು ಕಟ್ಟಿಸುವಂಥ ಸುಲಭನೆ ॥೧॥ ಮುಷ್ಟಿ ತುಂಬವಲಕ್ಕಿ ಕೊಟ್ಟ ಸುಧಾಮೆ ॥೨॥ ಅಷ್ಟ ಪದವಿಯನಿತ್ತ ಗುರುಡವಾಹನ ಕೃಷ್ಣ ॥ ಬಡವ ಬಲ್ಲಿದನಾಗಿ ಚಿಕ್ಕ ದೊಡ್ಡವನಾಗಿ । ಕೊಟ್ಟು ರಕ್ಷಿಸು ಎಮ್ಮ ಪುರಂದರವಿಠಲ ॥೩॥

## ಫಲಶ್ರುತಿ

ಈ ಸುಧಾಮನ ಕಥೆಯ ಈ ವಸುಧೆಯೊಳಗೆ । ಭೂಸುರರಾಗಲಿ ಭೂಭುಜರು । ವೈಶ್ಯ ಶೂದ್ರಾದಿಗಳು ಪಠಿಸೆ ಶುಭಕರವಾಗಿ । ಕ್ಷುದ್ರ ಬುದ್ಧಿಯ ತೊರೆದು ನಿರುಪದ್ರರಾಗುವರು ॥ ಲೇಸಾಗಿ ಆದಿತ್ಯವಾರದಲ್ಲಿ ॥ ಅಪಾರಭಕ್ತಿಯಲಿ ದೀಪವನೆ ಹಚ್ಚಿ ಕಾಪಾಡು । ಎಂತೆಂದು ಕರಗಳನೆ ಮುಗಿದು । ಸಂಧ್ಯಾವೇಳೆಯಲ್ಲಿ ಹರಿಮಂದಿರದಿ ಪಠಿಸೆ । ಚಂದದಿಂದಲಿ ಕಥೆಯ ಅಂದ ಮಾನವರಿಗೆ । ಸಂದೇಹ ಕಳೆದು ಸಕಲ ಸಂಪತ್ತು ಕೊಡುವ । ಮಧ್ವೇರು ಪವಿತ್ರ ಪುತ್ರವತಿಯರಾಗುವರು । ಏನೇನು ಕಾರ್ಯಗಳನೀಕ್ಷಿಸಲಿ । ಮನದಿ ಸಾಹಸ ಕೊಡಿಸುವುದು ಸಂದೇಹವಿಲ್ಲ। ಮಾನನಿಧಿ ಶ್ರೀಮಧ್ವಮತದ ಅಭಿಮಾನಿ । ಶ್ರೀನಿಧಿ ನರಸಿಂಹ ವಿಜಯವಿಟ್ಠಲರೇಯ ॥

॥ ಶ್ರೀಕೃಷ್ಣಾರ್ಪಣಮಸ್ತು ॥

ಸುಧಾಮಚರಿತ್ರೆ ಹಾಡು ಮುಗಿದುದು.

★ ★ ★ ★

## ಆರತಿ ಹಾಡುಗಳು

ಮತ್ಸ್ಯಾವತಾರ ಶ್ರೀಹರಿಯ ಅಕ್ಷಗಂಗಳದೊಂದು ಬೆಳಕು । ನಿತ್ಯವೇದವ ತಂದ ಬೆಳಕು ತುಂಬಿತು ದ್ವಾರಾವತಿಗೆ ।। ಕೂರ್ಮಾವತಾರ ಶ್ರೀಹರಿಯ ಹೇಮಗಿರಿಯ ತಂದ ಬೆಳಕು । ಬಲ್ಲಿದ ಕಾಯನ್ನ ಬೆಳಕು ತುಂಬಿತು ದ್ವಾರಾವತಿಗೆ ।। ವರಾಹಾವತಾರ ಶ್ರೀಹರಿಯ ಹೊಳೆದ ಕೋರೆದಾಡೆಯ ಬೆಳಕು । ದ್ಧಾರುಣಿಯ ನೆಗವಿದ ಬೆಳಕು ತುಂಬಿತು ದ್ವಾರಾವತಿಗೆ ।। ನರಮೃಗರೂಪ ಶ್ರೀಹರಿಯ ಮೆರೆವೊ ನಖದ ಬೆಳಕು । ಉರಿಗಣ್ಣುಜ್ವಾಲೆಯ ಬೆಳಕು ತುಂಬಿತು ದ್ವಾರಾವತಿಗೆ ।। ವಾಮನಾವತಾರ ಶ್ರೀಹರಿಯ ಭೂಮಿಯನಳೆದೊಂದು ಬೆಳಕು । ಬಾಲಕ ತನಯನ ಬೆಳಕು ತುಂಬಿತು ದ್ವಾರಾವತಿಗೆ।। ಭಾರ್ಗವಾವತಾರ ಶ್ರೀಹರಿಯ ಮೆರೆವೊ ಬಲುಭುಜದೊಂದು ಬೆಳಕು । ದುರುಳಕ್ಷತ್ರಿಯರ ಗೆದ್ದ ಬೆಳಕು ತುಂಬಿತು ದ್ವಾರಾವತಿಗೆ ।। ದಶರಥತನಯ ಶ್ರೀಹರಿಯ ಎಸೆವೊ ಬಿಲ್ಲುಬಾಣದ ಬೆಳಕು । ಶಶಿವದನಯು ತಂದ ಬೆಳಕು ತುಂಬಿತು ದ್ವಾರಾವತಿಗೆ।। ಗೋಪಿ ಮುದ್ದಾಡಿದ ಬೆಳಕು । ದೇವಕ್ಕಿತನಯನ ಬೆಳಕು ತುಂಬಿತು ದ್ವಾರಾವತಿಗೆ ।। ಬೌದ್ಧಾವತಾರ ಶ್ರೀಹರಿಯ ಬುದ್ಧಿಪಲ್ಲಟದೊಂದು ಬೆಳಕು । ರುದ್ರನ್ನಗೆಲಿದೊಂದು ಬೆಳಕು ತುಂಬಿತು ದ್ವಾರಾವತಿಗೆ ।। ಕಲ್ಕ್ಯವತಾರ ಶ್ರೀಹರಿಯ ಹೊಳೆವಾಖಂಡದೊಂದು ಬೆಳಕು । ಗುರು ಹಯವದನನ್ನ ಬೆಳಕು ತುಂಬಿತು ದ್ವಾರಾವತಿಗೆ ।।

## ಮಂಗಳಾರತಿ ಮಾಡುವಾಗ ಹೇಳಬೇಕಾದ ಹಾಡು

ಆರತಿಯೆತ್ತಿದರೆ ಕೇಶವ ನಾರಾಯಣಗೆ ।।ಪ।। ಶಾಶ್ವತವೀವ ಮಾಧವ ವಾಸವವಂದ್ಯ ಗೋವಿಂದಗಾರತಿಯನೆತ್ತಿದರೆ ।।ಅ.ಪ।। ದ್ವಾಪರ ರಹಿತ ಶ್ರೀವಿಷ್ಣುವಿಗೆ ಅಪಾರ ಮಧುಸೂದನಗೆ ಪಾಪರಹಿತ ತ್ರಿವಿಕ್ರಮಗಾರತಿಯನೆತ್ತಿದರೆ ।। ಸಾಧುಸೇವಿತ ವಾಮನಗೆ ಶ್ರೀಧರ ಹೃಷೀಕೇಶನಿಗೆ ಆದಿಮೂರುತಿ ಪದ್ಮನಾಭಗಾರತಿಯನೆತ್ತಿದರೆ ।। ದಾಮೋದರ ವಾಲುಳ್ಳವಗೆ ಪ್ರೇಮದಿ ಸಂಕರ್ಷಣನಿಗೆ ಕಾಮಿತಾರ್ಥವನೀವ ವಾಸುದೇವಗಾರತಿಯನೆತ್ತಿದರೆ ।। ಅನಿರುದ್ಧ ಪುರುಷೋತ್ತಮಗೆ ವಿನಯದಿಂದಲಿ ಅಧೋಕ್ಷಜಗಾರತಿಯನೆತ್ತಿದರೆ ।। ನರಸಿಂಹರೂಪನಾದವಗೆ ವರದ ಮೂರುತಿ ಅಚ್ಯುತಗೆ ಅರಿಭಯಂಕರ ಜನಾರ್ದನಗಾರತಿಯನೆತ್ತಿದರೆ ।। ಉಪೇಂದ್ರನೆಂದೆನಿಸಿಕೊಂಡವಗೆ ಅಪಾರಮಹಿಮ ಶ್ರೀಹರಿಗೆ ಗೋಪಾಲಮೂರುತಿ ಶ್ರೀಕೃಷ್ಣಗಾರತಿಯನೆತ್ತಿದರೆ ।। ಚತುರವಿಂಶತಿಮೂರುತಿಗಳ ಅತಿಶಯ ಧವಳವ ಪಾಡೆ ಸತುಪುರುಷರಿಷ್ಟಾರ್ಥವೀವನು ಸಿರಿ ಹಯವದನ ।।

## ಶ್ರೀವಾದಿರಾಜತೀರ್ಥರು ರಚಿಸಿದ ಅಕ್ಷಯಪಾತ್ರೆ ಹಾಡು

ಎದ್ದರು ವನವಾಸಕ್ಕೆ ಬುದ್ಧಿವಂತ ಪಾಂಡವರು । ಅಲ್ಲಿದ್ದ ಜನರು ಅಲ್ಲಿ ಇರಲಾರೆಂದು ಸಿದ್ಧರಾದರು ॥ ಏನು ಮಾಡಿದನು ಪಾಪಿ ಮೂಢ ಶಕುನಿಯ ಮಾತು ಕೇಳಿ ಅಡಿ ಪಗಡೆ ಸೋಲಿಸಿ ಅವರನು ಅಡವಿಗಟ್ಟಿದ ದುಷ್ಟ ದುರ್ಯೋಧನನು ನಿಮಗೆ ಪಗಡೆಯಾಡಿ ಸೋಲಿಸಿದ ವಾರ್ತೆಯ ನೀವು ಕಳುಹಿಸುತಿರೆ ಹೀಗೆ ಧನವು ದ್ರವ್ಯವು ಇದ್ದ ಇವನಿಗೆ ದಯಾಧರ್ಮ ಎಳ್ಳಷ್ಟು ಬೇಡವೆ ಲೋಭ ಮೋಹ ಪಾಶದಿಂದ ಬಿಗಿದುಕೊಂಡರು ವಿಪ್ರರ ಮಾತು ಕೇಳಿ ಧೌಮ್ಯಾಚಾರ್ಯರ ಪಾದಕ್ಕೆರಗಿ ಅವರು ಹೇಳಿದಂತೆ ಮಾಡಿದ ಧರ್ಮಜ ಸೂರ್ಯೋಪಾಸನೆಯನ್ನು ಕಂಡು ಸೂರ್ಯಪ್ರತ್ಯಕ್ಷನಾಗಿ ಏನು ಬೇಕು ಬೇಡು ಎಂದು ವರವ ಕೊಟ್ಟನು ಲಕ್ಷಕೋಟಿ ಬ್ರಾಹ್ಮಣರ ಭೋಜನ ಆಲಸ್ಯವಿಲ್ಲದಂತೆ ಮಾಡಿಸಬೇಕು ಎಂಬ ಮಾತನ್ನು ಕೇಳಿ ಕೊಟ್ಟ ಸೂರ್ಯ ಅಕ್ಷಯಪಾತ್ರೆಯ ಸ್ವಚ್ಛವಾಗಿ ತೊಳೆದು ಪತ್ನಿಯ ಕೈಯಲ್ಲಿ ಕೊಟ್ಟ ಅಚ್ಯುತನ ನಾಮ ನಮಗೆ ಹಾಸಿಗೆ ತಲೆದಿಂಬು ಅಕ್ಷಯಪಾತ್ರೆಯ ಕೊಟ್ಟು ತೆರಳಿದ ಸೂರ್ಯ ಇಷ್ಟವಾದ ವನದೊಳಗೆ ಅಷ್ಟೈಶ್ವರ್ಯದಿಂದಿದ್ದರು ಪಂಚಪಾಂಡವರು ಮುತ್ತೈದೆಯರು ಉದಯ ಕಾಲದಲ್ಲಿ ಈ ಪದವ ಹೇಳಿ ಕೇಳಿದರೆ ಅಷ್ಟೈಶ್ವರ್ಯಕೊಟ್ಟು ಪುತ್ರಸಂತಾನ ಕೊಟ್ಟು ರಕ್ಷಿಸುವ ನಮ್ಮ ಹಯವದನ ॥

## ಅನ್ನದಾನ ಮಹಿಮಾ ಸುಳಾದಿ

### ಧ್ರುವತಾಳ

ಉತ್ತಮರಿಗೆ ಒಂದು ತುತ್ತನ್ನ ದಾನದಿಂದ । ಇತ್ತವನ ಹತ್ತು ಹೆತ್ತು ಬಂದು । ಸಪುತ್ರ ಗೋತ್ರಾಕಿಲ ಹತ್ತಿ ಹೊಂದಿದವರು । ಸುತ್ತಣ ಪರಿವಾರ ಎತ್ತಲೆತ್ತ ಉಳ್ಳವರು । ಅತ್ಯಂತವಾದ ಪಾಪಮೊತ್ತದಾಸಕ್ತರಾಗಿ । ಮರ್ತ್ಯಲೋಕದಲಿ ಆಪತ್ತು ಬಡುತಲಿರೆದೆ । ಹೆತ್ತ ಜನನಿಯಂತೆ ಎತ್ತಿಕೊಂಡೊಯ್ದು, ಪುನರಾ । ವರ್ತಿ ಇಲ್ಲದ, ಲೋಕದತ್ತ ಸೇರಿಸುವುದು । ಎತ್ತಲೂ ಸರಿಗಾಣದೆ ಕ್ಷುದಾತುರರಾಗಿ ಬಂದ । ಸ್ವೋತ್ತಮರಿಗಿತ್ತ ಫಲ ಚಿತ್ತದಲ್ಲಿ ಎಣಿಸೆ । ನಿತ್ಯ ಕರುಣವ ಪಡೆದು ಸತ್ಪಥ ನಡೆಯುವರು ॥೧॥

### ಮಟ್ಟತಾಳ

ಹರಿಸರ್ವೋತ್ತಮನೆಂಬೋ ಜ್ಞಾನ । ಮರುತದೇವನ ಮತವೆಂಬೋ ಮತದಿ । ಹರಿಗುರು ಭಕುತಿ ಎಂಬೋ ಭಕುತಿ ನಿರಂತರದಲ್ಲಿ । ವಿರಕುತರಾಗಿ ಚರಿಸುವ ಜ್ಞಾನಿಗಳ

ಸಂಗದಲ್ಲಿ । ಹರಿ ಕಥಾ ಶ್ರವಣ ನಿರುಮಲ ಮನದಿ ಎರೆಗುತಲಿಪ್ಪಾ । ಚರಣೆಯ ಮಾನವನು ಧರೆಯೊಳಗವೆ ಪರಮೋತ್ತಮನೋ । ಅರಿದೀಪರಿಯಲ್ಲಿ ವಿಜಯವಿಟ್ಠಲ ಹರಿಯೆ । ಶರಣಾಗಲಿಬೇಕು ತಾರತಮ್ಯವ ತಿಳಿದು ॥೨॥

## ತ್ರಿವಿಡತಾಳ

ಬಂದ ಅತಿಥಿಯನು ತನ್ನಯ ಬಾಗಿಲ । ಮುಂದೆ ಕಾಣುತ್ತಲಿವೆ ಎಂದು ಎದಿರುಗೊಂಡು । ವಂದಿಸಿ ಕರ ಮುಗಿದು ದ್ವಂದ್ವ ಪಾದಕ್ಕೆರಗಿ । ತಂದೆ ಆವಲ್ಲಿಂದ ದಯಮಾಡಿ ಬಂದಿರಿ ಎಂದು । ಒಂದೊಂದು ಮಾತನು ಆನಂದದಿಂದಲಿ ಪೇಳಿ । ರೆಂದು ಪೀಠವನಿತ್ತು ಚಂದದಿಂದಲಿ ನಲಿದು । ಮಂದಿರದೊಳಗೆ ವಸುಂಧರ ವಿಬುಧನ್ನ । ಮಂದಹಾಸದಲಿ ನಯದಿಂದ ಕುಳ್ಳಿರಿಸಿ ಜಲ । ದಿಂದ ಚರಣ ತೊಳಿದಾನಂದ ಭರಿತನಾಗಿ । ಸಂದೇಹ ಬಿಟ್ಟು ಸೊಬಗಿನಿಂದ ಶಿರದ ಮೇಲೆ । ಬಿಂದು ಮಾತುರ ಜಲ, ಬಂಧು ಬಳಗ ಕೂಡಿ । ಕುಂದರೆ ಧರಿಸಿ ತಾ ಮಂದಿರದಲ್ಲಿ ಚೆಲ್ಲಿ । ಒಂದೊಂದು ಪರಿಯಲ್ಲಿ ಪೊಂದಿ ಸುಖದಲ್ಲಿರು । ಮಂದರಧರ ನಮ್ಮ ವಿಜಯವಿಟ್ಠಲ ಹರಿಯೆ । ಎಂದೆಂದಿಗೂ ಬಿಡದೆ ವಂದಿಸು ಮನದಲ್ಲಿ ॥೩॥

## ಅಟ್ಟತಾಳ

ಜೀವೇಶರೊಂದೊಂದು ಪೇಳುವ ಪಾಪಿಗೆ । ಶ್ರೀವೈಷ್ಣವೋತ್ತಮನು, ಕರೆದು ತುತ್ತನ್ನವ । ಪಾವನನಾಗುವೆನೆಂದು ಇತ್ತರೆ, ಅದು । ಪಾವಕನೊಳು ಹಾಕಿದಂತೆ ಬಯಲಾಗಿ । ಯಾವತ್ತೂ ಪುಣ್ಯವು ನಾಶವಾಗುವುದು । ಆವಾವ ಕಾಲಕ್ಕೆ ಯುಳ್ಳನಿತು ಕಾಣೆ । ದೇವೇಶ ವಿಜಯವಿಟ್ಠಲ ಜಗದೊಡೆಯನಾ ಈವನೇತ್ರನ ಪದ ತಾವರೆ ಭಜಿಪಂಗೆ । ಕೋವಿದನಾಗಿ ಇತ್ತವಗೆ ಸರಿಗಾಣೇ ॥೪॥

## ಆದಿತಾಳ

ಅನ್ನ ಇತ್ತರೆ ಅದು ಭವನವಾಗಿ ತೋರುವುದು । ಅನ್ನವೀಯದಿರೆ ಅದು ಕಾನನಕೆ ಸರಿ ಎನ್ನಿ । ಅನ್ನದಿಂದಲಿ, ಬಂದ ಘನದುರಿತಹರ ಕಾಣೋ । ಅನ್ನದಿಂದಲಿ, ಸರ್ವಪುಣ್ಯ ಫಲಿಸುವುದು । ಅನ್ನ ಇತ್ತವನೆ ಕೀರ್ತಿ ಉನ್ನತವಾಗಿ ತ್ರಿಭು । ವನದೊಳಗೆ ತುಂಬಿ ಚೆನ್ನಾಗಿ ಪೊಳೆವನಯ್ಯ । ಅನ್ನದಾನಕ್ಕಿಂತ ಇನ್ನು ಮಿಗಿಲು ದಾನಗಳಿಲ್ಲ । ಹೊನ್ನು ಹಣ ಕೊಡಲು ಅಗಣ್ಯ ಅನ್ನದಾನಕ್ಕೆ । ಅನಂತಕಾಲ ಮುಖವನ್ನೆ ಮಾಡಲು ವಿಪ್ರ । ಗುಣಿಸುದುದಕ್ಕೆ

ಸರಿಯೆನ್ನ ಬಹುದೇ ತಿಳಿದು । ಅನಂತ ಮೂರುತಿ ವಿಜಯವಿಟ್ಠಲರೇಯ । ಅನ್ನವನೀವನೆಂದು ಮನ್ನಿಸಿ ಸಲಹುವ ॥೫॥

**ಜತೆ**

ಅತಿಥಿ ಅಭ್ಯಾಗತನ ಸಂತೋಷ ಪಡಿಸಲು । ಸತತ ಪೊಳೆವ ವಿಜಯವಿಟ್ಠಲ ಮನಸಿನೊಳು ॥೬॥

★ ★ ★ ★ ★

## ಶ್ರೀಕೃಷ್ಣಪಾರಿಜಾತದ ಹಾಡು

ಶ್ಲೋಕ : ದ್ವಾರಾವತಿಯಲಿ ದನುಜದಲ್ಲಣ ಮುಕುಂದ ಸಾರೆ ರುಕ್ಮಿಣಿಸಹಿತ ಆನಂದದಿಂದ ವಾರಿಜಾಂಬಕ ವಾಲಗದೊಳು ಚಂದ ನಾರಂದಮುನಿ ತಾ ಪಾರಿಜಾತವ ತಂದ ॥೧॥ ಪದ : ಬಲ್ಲಿದ ಮುನಿಯ ಕುಳ್ಳಿರಿಸಿದ ಸತ್ಕರಿಸಿದ ಪುಷ್ಪಯಾರಿಗೆ ಎಂದ ವಲ್ಲಭೆರುಕ್ಮಿಣಿಗಲ್ಲದೆ ಬ್ಯಾರೆ ಸಲ್ಲದು ಎಲ್ಲ ನೀನು ಬಲ್ಲದೆ ಇಂತೆಂದ ಈ ಸುದ್ದಿ ಸತ್ಯಭಾಮೆಗೆ ತಂದು ಹೇಳಿದರಂದು ಕೇಳಿದಳಾಕೆ ನಿಂದು ತಲ್ಲಣಿಸುತ ಎದೆ ಧಿಗಿಲೆಂದು ಭುಗಿಭುಗಿಲೆಂದು ಮನದಲ್ಲಿ ಅತಿನೊಂದು ॥೧॥ ಶ್ಲೋಕ : ಇಂದ್ರಲೋಕದ ಚಂದದ ಕುಸುಮವನ್ನು ಮಂದಗಮನೆಯ ಮುಡಿಗೆ ತಾ ಮುಡಿಸಿದನು ಎಂದು ಎನ್ನೊಳು ಎರವು ಇಲ್ಲವು ಕಾಣೆ ಇಂದು ಮಾಡಿದ ಕುಹಕವ ಕೃಷ್ಣ ತಾನು ॥೨॥ ಪದ : ಹರಿಯು ಮಾದಿದ ಮಾಟವನು ಕಂಡೆನು ನಾನು ಇನ್ನಾರಿಗೆ ಪೇಳುವೆನು ಪರಿಮಳದ ಪಾರಿಜಾತದ ಹೂವ ತಂದನು ಭಾಮೆ ರುಕ್ಮಿಣಿ ತನ್ನ ಜೀವ ಸರಿ ಬಂದ ಮಡದಿಗೆ ಮುಡಿಸಿದ ಶೃಂಗರಿಸಿದ ಬಹುಪ್ರೀತಿ ಬಡಿಸಿದ ಬರಿಯ ಮಾತಿನ ಬನ್ನಣೆಯಿಲ್ಲ ಸ್ನೇಹ ತನಗಲ್ಲಿ ಠಕ್ಕುಠವಳಿಗಳಿಲ್ಲ ॥೨॥ ಶ್ಲೋಕ : ಮೆಚ್ಚಿ ಬಂದೆನೆ ಮೋಹಕ್ಕೆ ಮರುಳಾದೆನೆ ಹಚ್ಚಿರೆ ಮಾತ ಹರಿಯು ತಾ ಕೇಳಿದೆನೆ ನೆಚ್ಚಿ ಇದ್ದೆನೆ ಎನ್ನೊಳು ವಂಚಿಸಿದನೆ ರಚ್ಚೆಗಿಕ್ಕಿದ ರಂಪು ಮಾದಿದ ಕಾಣೆ ॥೩॥ ಪದ : ಮಾರನಟ್ಟುಳಿ ತಾಳಲಾರೆನೆ ಮುಖದೋರನೆ ಇನ್ನೇನು ತೆರನೆ ತೋರಿಸೆ ಕೃಷ್ಣನ್ನ ಅಮ್ಮಯ್ಯ ಕೇಳು ದಮ್ಮಯ್ಯ ಕಂತು ಕಮಲಜನಯ್ಯ ಬಾರದಿದ್ದರೆ ಪ್ರಾಣ ಉಳಿಯದು ಮತ್ತೆ ಅಳಿವುದು ಏನೆಂದು ತಿಳಿಯದು ಸಾರಿದ ಸರಿಬಂದ ಸತಿಯ ಬಹುರತಿಯ ಬಹು ಪ್ರೀತಿ ಇದ್ದವ(ಳ) ॥೩॥ ಶ್ಲೋಕ : ಮಳೆ ಇಲ್ಲದ ಮೇಘವಿದ್ಯಾತಕಮ್ಮ ಬೆಳೆ ಇಲ್ಲದ ಭೂಮಿ ಮತ್ಯಾತಕಮ್ಮ ಗಿಳಿ ಇಲ್ಲದ ಗೂಡು

ತಾನ್ಯಾತಕಮ್ಮ ತಾಳಲಾರೆನೊ ಶ್ರೀ ಕೃಷ್ಣನಿಲ್ಲದೆ ಎಮ್ಮ ॥೪॥ ಪದ : ಯಾಕೆನ್ನ ಬ್ರಹ್ಮ ಪುಟ್ಟಿಸಿದನೊ ಸೃಷ್ಟಿಸಿದನೊ ಮಾತೆನ್ನಾ್ಯಕ ಪಡೆದಳೊ ಸಾಕಿನ್ನು ಹೆಣ್ಣು ಜನ್ಮದ ಬಾಳು ಯಾತಕೆ ಹೇಳು ತಾಕಲೆನ್ನಯ ಗೋಳು ಕುಹಕ ಪೇಳ್ದ ನಾರದ ಸಿದ್ಧ ಎಂಬುದು ಬದ್ಧ ಮೂರುಲೋಕ ಪ್ರಸಿದ್ಧ ಶ್ರೀಕೃಷ್ಣಂಗೆ ಎನಗೆ ಭೇದವ ಮಾಡಿ ಹೋದನು ಓಡಿ ತನಗ್ಯಾಕಿದು ಬ್ಯಾಡಿ ॥೪॥ ಶ್ಲೋಕ : ಬಿಸಜಾಕ್ಷನ ಬಹಳ ನಂಬಿದ್ದೆ ನಾನು ವಶವಾದನೆ ಒಲಿದು ರುಕ್ಮಿಣಿಗೆ ತಾನು ಶಶಿಮುಖಿಯಳೆ ಸವತಿ ಅಟ್ಟುಳಿ ಇದೇನು ಆಸೆಬಟ್ಟೆನೆ ಬಹಳ ವಸುದೇವ ಸುತಗೆ ॥೫॥ ಪದ : ಸಿಟ್ಟಿನಿಂದಲಿ ಘುಡಘುಡಿಸುತ ಆರ್ಭಟಿಸುತ ಎಲ್ಲರೊಡನೆ ಕೋಪಿಸುತ ತೊಟ್ಟತ್ತೊಡಿಗೆ ಈಡಾಡುತ ಬಿಸಾಡುವ ನನಗ್ಯಾಕಿದು ಎಂದು ಪಟ್ಟಿ ಮಂಚದ ಮೇಲೆ ಒರುಗುತ ತಾ ಎರಗುತ ಮನದೊಳು ಮರುಗುತ ಇಷ್ಟು ಮಾಡುವುದಿದು ನೀತವೆ ಪ್ರಖ್ಯಾತವೆ ಸುರಪಾರಿಜಾತವೆ ॥೫॥ ಶ್ಲೋಕ : ದೇವಲೋಕದ ಹೂವ ತನಗಿಲ್ಲವಲ್ಲ ಭಾವೆ ಎನ್ನೊಳು ಮುನಿಯದೆ ಬಿಡುವಳಲ್ಲ ಅವ ಪರಿಯಲಿ ತಿಳಿದು ಹೇಳುವೆನು ಸೊಲ್ಲ ಜೀವದೊಲ್ಲಭೆಯೊಡನೆ ಪಂಥವು ಸಲ್ಲ ॥೬॥ ಪದ : ಮಂದಗಮನೆ ಮುನಿದಿಹಳು ಎನ್ನ ಪ್ರಿಯಳೊ । ಎನ್ನೊಡನೆ ನುಡಿಯಳೊ । ಇಂದು ಅಲ್ಲಿಗೆ ಹೋಗದಿದ್ದರೆ ಇಲ್ಲಿದ್ದರೆ ಅಪ್ರಬುದ್ಧನಾದರೆ ಕುಂದು ಎನ್ನ ವ್ಯಾಲಿಡುವಳೊ ಸ್ನೇಹಬಿಡುವಳೊ ಕೋಪವನು ತಾಳುವಳೊ ಇಂ-ತೆಂದು ನುಡಿದ ಮುಕುಂದ ನಿತ್ಯಾನಂದನು ಬಾಗಿಲೊಳು ನಿಂದನು ॥೬॥ ಶ್ಲೋಕ : ಚಿತ್ತದೊಲ್ಲಭೆ ಚದುರೆ ಮೋಹನಾಕಾರೆ ಮುತ್ತುರತ್ನವ ಮನೆಯೊಳಗೆಲ್ಲ ಬೀರಿ ಎತ್ತ ಹೋದಳೊ ಎನ್ನ ಪ್ರಾಣದ ನಾರಿ ಸತ್ಯಭಾಮೆಯ ಸುಳುಹು ಕಾಣೆನು ತೋರಿ ॥೭॥ ಪದ : ಕನ್ನಡಿ ಕದಪಿನ ಜಾಣೆಯ ಸುಪ್ರವೀಣೆಯ ಕೋಕಿಲವಾಣಿಯ ಇನ್ನೆಲ್ಲಿ ಹೋದಳು ತೋರಿಸೆ ಹತ್ರ ಸೇರಿಸೆ ಬಂದೆನು ಹಾರೈಸಿ ನಿಂತವರು ಕಣ್ಣು ಸನ್ನೆಯ ಮಾಡಿ ತೋರ್ವದು ನೋಡಿ ಮೆಲ್ಲಗೆ ಮಾತಾಡಿ ॥೭॥ ಶ್ಲೋಕ : ಹಾಸಿ ಮಲಗಿದ್ದ ಸತಿಯ ಕಂಡು ಬೀಸಣಿಕೆಯಲಿ ಬೀಸಿದ ಕೃಷ್ಣ ತಾನು ಸೂಸು ಪರಿಮಳ ಪಾರಿಜಾತದ ಹೂವ ಹಾ-ರೈಸಿ ಕಂಗಳು ತೀರ ನೋಡಿದಳು ಕಾಂತೆ ॥೮॥ ಪದ : ಕಂಡಳು ಕಾರುಣ್ಯಮೂರ್ತಿಯ ಸತ್ಕೀರ್ತಿಯ ಫಲ್ಗುಣನ ಸಾರಥಿಯ ಇಲ್ಲಿಗ್ಯಾತಕೆ ಬಂದೆ ಹೋಗೆಂದು ಅತ್ತಸಾಗೆಂದು ಇದು ಏನು ಸೋಗೆಂದು ಹಿಂಡು ಸ್ತ್ರೀಯರ ಶಿರೋರನ್ನಳೆ ಮೋಹನ್ನಳೆ ಮುನಿಸ್ಯಾತಕೆನ್ನೊಡನೆ ಕಂಡ ಕನಸು ಎಂದು ಭಾವಿಸೆ ಎನ್ನಜೀವಿಸೆ ಅಪರಾಧವ ಕ್ಷಮಿಸೆ ॥೮॥ ಶ್ಲೋಕ : ಅಕ್ಕರಿಂದಲೆ ರುಕ್ಮಿಣಿಗೆ ಇತ್ತ ಹೂವ ಮಿಕ್ಕ ಸತಿಯರಿಗ್ಯಾತಕೆಂಬ ಭಾವ ಕಕ್ಕುಲಾತಿಯ ಕಂಡೆ ನಿನ್ನಲ್ಲಿ ಜೀವ ಸೊಕ್ಕಬ್ಯಾಡವೊ

ಸಾಕು ಹೋಗೆಲೊ ಗೋವ ||೯|| ಪದ : ಮಲಯಜಗಂಧಿ ಮರನ ತಂದು ನಿಲಿಸುವೆನಿಂದು ಮನ್ನಿಸೆ ಕೃಪಾಸಿಂಧು ಬಲರಾಮ ನಂದಗೋಪಸಾಣೆ ತಪ್ಪೆನು ಕಾಣೆ ಕೋಕಿಲಸ್ವರಗಾನೆ ಛಲವ್ಯಾತಕೆಂದು ತಕ್ಕೈಸಿದ ಸಂತೈಸಿದ ತೊಡೆಯಲ್ಲಿ ಕುಳ್ಳಿರಿಸಿದ ಹೆಳವನಕಟ್ಟೆಯ ರಂಗನು ಕೃಪಾಂಗನು ದೇವೋತ್ತುಂಗ ವಿಕ್ರಮನು ||೯||

★ ★ ★ ★ ★

## ಶ್ರೀಕೃಷ್ಣಚರಿತ್ರೆಯ ಹಾಡು

ಬಗೆಬಗೆ ಆಟಗಳೆಲ್ಲಿ ಕಲಿತೆಯೊ ಜಗದ ಮೋಹಕನೆ ||ಪ|| ಖಗವರ ಗಮನನೆ ಅಗಣಿತ ಮಹಿಮನೆ | ಜಗದೊಳು ನೀ ಬಹು ಮಿಗಿಲಾಗಿ | ಪರಿ ||ಅ.ಪ|| ಒಬ್ಬಳ ಬಸಿರಿಂದಲಿ ಬಂದು-ಮ | ತ್ತೊಬ್ಬಳ ಕೈಯಿಂದಲಿ ಬೆಳೆದು || ಕೊಬ್ಬಿದ ಭೂಭಾರವನಿಳುಹಲು ಇಂಥ | ತಬ್ಬಿಬ್ಬಾಟಗಳೆಲ್ಲಿ ಕಲಿತೆಯೊ ||೧|| ಮಗುವಾಗಿ ಪೂತಣಿ ಮೊಲೆಯ-ಉಂಡು | ನಗುತಲವಳ ಅಸುವನೆ ಕೊಂಡು | ಅಗಹರ ನೀ ಗೋಪಿಯೊಳು ಜನಿಸಿ ಇಂಥ | ಸೊಗಸಿನ ಆಟಗಳೆಲ್ಲಿ ಕಲಿತೆಯೊ ||೨|| ಲೋಕರಂತೆ ನೀ ಮಣ್ಣನು ತಿನಲು | ತಾ ಕೋಪಿಸಿ ಜನನಿಯು ಬೇಗ || ಓಕರಿಸೆನ್ನಲು ಬಾಯೊಳು ಸಕಲ | ಲೋಕವ ತೋರಿದುದೆಲ್ಲಿ ಕಲಿತೆಯೊ ||೩|| ಮಡುವ ಧುಮುಕಿ ಕಾಳಿಂಗನ ಪಿಡಿದು | ಪಡೆಯ ಮೇಲೆ ಕುಣಿದಾಡುತಿರೆ || ಮಡದಿಯರು ನಿನ್ನ ಬಿಡದೆ ಬೇಡಲು | ಕಡುದಯೆದೋರಿದುದೆಲ್ಲಿ ಕಲಿತೆಯೊ ||೪|| ಒಂದುಪಾದಭೂಮಿಯಲಿ ವ್ಯಾಪಿಸಿ ಮ-| ತ್ತೊಂದುಪಾದಗಗನಕ್ಕಿಡಲು || ಅಂದದಿ ಬಲಿಯ ಶಿರದಿ ಮೂರನೆಯದಿಟ್ಟು | ಬಂಧಿಸಿದಾಟಗಳೆಲ್ಲಿ ಕಲಿತೆಯೊ ||೫|| ಭರದಿ ಭಸ್ಮಾಸುರ ವರವನು ಪಡೆದು | ಹರನು ಶಿರದಿ ಕರವಿಡ ಬರಲು || ತರುಣಿರೂಪವ ತಾಳಿ ಉದಿಹಸ್ತದವನ | ಮರುಳುಗೊಳಿಸಿದುದನೆಲ್ಲಿ ಕಲಿತೆಯೊ ||೬|| ಜಗಕೆ ಮೂಲನೆಂದು ನಾಗರಾಜ ಕರೆಯೆ | ಖಗವಾಹನನಾಗದೆ ನೀ ಬಂದು || ನಗುತ ನಗುತ ಆ ವಿಗಡನಕ್ರನ ಕೊಂದ | ಹಗರಣದಾಟಗಳೆಲ್ಲಿ ಕಲಿತೆಯೊ ||೭|| ವೇದಗಳರಸಿಯು ಕಾಣದ ಬ್ರಹ್ಮ ನೀ- | ನಾದರದಲಿ ವಿದುರನ ಗೃಹದಿ || ಮೋದದಿ ಒಕ್ಕುಡಿತೆಯ ಪಾಲನೆ ಕೊಂಡು | ಹಾದಿಯೊಳ್ ಹರಸಿದುದೆಲ್ಲ ಕಲಿತೆಯೊ ||೮|| ಡಂಬಕಹಿರಣ್ಯಕಶಿಪು ಪ್ರಹ್ಲಾದನ | ಹಂಬಲವಿಲ್ಲದೆ ಶಿಕ್ಷಿಸಲು || ಸ್ತಂಭದಿ ಭಕ್ತಗೆ ರೂಪವ ತೋರಿ | ಸಂಭ್ರಮವಿತ್ತುದನೆಲ್ಲಿ ಕಲಿತೆಯೊ ||೯|| ಚಕ್ರಧರನೆ ಜರಾತನಯನೊಂದಿಗೆ ಕಾದಿ |

ಸಿಕ್ಕಿ ಓಡಿದವನಿವನೆಂದೆನಿಸಿ ॥ ಭಕ್ತಭೀಮನ ಕೈಯಲಿ ಕೊಲ್ಲಿಸಿದ । ಠಕ್ಕಿ ನಾಟಗಳನೆಲ್ಲಿ ಕಲಿತೆಯೊ ॥೧೦॥ ಆ ಶಿರವಾತನ ತಂದೆಯ ಕರದೊಳು । ಸೂಸುತ ರಕ್ತವ ಬೀಳುತಿರೆ । ಸೋಸಿ ನೋಡದೆ ರುಂಡ ಬಿಸುಡಲವನ ಶಿರ । ಸಾಸಿರ ಮಾಡಿದುದೆಲ್ಲಿ ಕಲಿತೆಯೊ ॥೧೧॥ ಪ್ರಾಣ ಸೆಳೆವನೀ ದಿನವೆಂದರ್ಜುನ । ಧೇನಿಸದಲೆ ಸೈಂಧವಗೆನಲು ॥ ಕಾಣದಂತೆ ಸೂರ್ಯಗೆ ಚಕ್ರವನಿಟ್ಟು । ಬಾಣ ಹೊಡಿಸಿದುದನೆಲ್ಲಿ ಕಲಿತೆಯೊ ॥೧೨॥ ಸರ್ಪನ ಬಾಣವು ಉರಿಯುತ ಬರಲು ಕಂ-। ದರ್ಪನ ಪಿತ ನೀ ಕರುಣದಲಿ ॥ ತಪ್ಪಿಸಿ ಪಾರ್ಥನ ರಥ ನೆಲಕೊತ್ತಿ । ತೋರ್ಪಡಿಸಿದಾಟವೆಲ್ಲಿ ಕಲಿತೆಯೊ ॥೧೩॥ ದುರುಳದುಃಶಾಸನ ದ್ರೌಪದಿ ಸೀರೆಯ । ಕರದಿಂದ ಸಭೆಯೊಳು ಸೆಳೆಯುತಿರೆ । ಹರಿಶ್ರೀ ಕೃಷ್ಣ ನೀ ಪೊರೆಯೆನಲಾಕ್ಷಣ । ಅರಿವೆ ರೂಪದೆ ಬಂದುದೆಲ್ಲಿ ಕಲಿತೆಯೊ ॥೧೪॥ ಕುರುಪತಿ ಸಭೆಯೊಳು ಗುರುವಿನಿಂದಿರುತ । ಸಿರಿಕೃಷ್ಣನು ಬರೆ ವಂದಿಸದೆ ॥ ಸ್ಥಿರವಾಗಿ ಕುಳಿತಿರೆ ಚರಣದಿ ಧರೆಮೆಟ್ಟಿ । ಕುರುಪನನುರುಳಿಸಿದ್ದೆಲ್ಲಿ ಕಲಿತೆಯೊ ॥೧೫॥ ದುರಿಯೋಧನ ಪಾಂಡವರ ಶಿಕ್ಷಿಸಲು । ಮೊರೆಯಿಡಲವನ ಮರುಳುಗೊಳಿಸಿ ॥ ಧುರದೊಳುಪಾರ್ಥಗೆ ಸಾರಥಿಯಾಗಿ ನೀ । ಕುರುಕುಲವಳಿದುದನೆಲ್ಲಿ ಕಲಿತೆಯೊ ॥೧೬॥ ಪತಿಶಾಪದಿ ಶಿಲೆಯಾದ ಅಹಲ್ಯೆಯ । ಹಿತದಿಂದವಳನು ಉದ್ಧರಿಸಿ ॥ ಪತಿಯೊಡಗೂಡಿಸಿ ಪತಿವ್ರತೆಯೆನಿಸಿದ ಅ-। ಮಿತಮಹಿಮೆಯ ಕೃತಿಯೆಲ್ಲಿಕಲಿತೆಯೊ ॥೧೭॥ ಅಂಬರೀಷ ದ್ವಾದಶಿ ವ್ರತ ಸಾಧಿಸೆ । ಡೊಂಬೆತನದಿದೂರ್ವಾಸಬರೆ ॥ ಇಂದುಧರಾಂಶನು ರಾಜನ ಪೀಡಿಸ-। ಲಂದು ಚಕ್ರದಿ ಕಾಯ್ದುದೆಲ್ಲಿ ಕಲಿತೆಯೊ ॥೧೮॥ ಕುಲಛಲಗಳನಳಿದ ಅಜಮಿಳ ಸರಸದಿ । ಹೊಲತಿಯ ಕೂಡಿರೆ ಮರಣ ಬರೆ ॥ ಬಲು ಮೋಹದ ಸುತ ನಾರಗನೊದರಲು । ಒಲಿದು ಗತಿಯನಿತ್ತುದೆಲ್ಲಿಕಲಿತೆಯೊ ॥೧೯॥ ಬಡತನ ಪಾರ್ವನ ಬಿಡದೆ ಬಾಧಿಸಲು । ಮಡದಿಯ ನುಡಿಕೇಳಿ ಆಕ್ಷಣದಿ ॥ ಒಡೆಯ ನೀನವನೊಪ್ಪಿಡಿಯವಲನು ಕೊಂಡು । ಕಡುಭಾಗ್ಯನಿತ್ತುದನೆಲ್ಲಿ ಕಲಿತೆಯೊ ॥೨೦॥ ಎಂದೆಂದು ನಿನ್ನ ಗುಣವೃಂದಗಳೆಣಿಸಲು । ಇಂದಿರೆಬೊಮ್ಮನಿಗಸದಳವು ॥ ಮಂದರಧರಸಿರಿಪುರಂದರವಿಠಲನೆ । ಚೆಂದ-ಚೆಂದದಾಟಗಳೆಲ್ಲಿ ಕಲಿತೆಯೊ ॥೨೧॥

★ ★ ★ ★ ★

## ಸೃಷ್ಟಿ ಚಿಂತನೆ

ನಿತ್ಯವೂ ಪ್ರಾತಃಕಾಲದ ಸೃಷ್ಟಿ ಚಿಂತನೆಯನ್ನು ಮಾಡಬೇಕು ಹಾಗೂ ಯುಗಾದಿಯ ದಿವಸ ಸೃಷ್ಟಿ ಚಿಂತನೆಯನ್ನು ಮಾಡಬೇಕು.

ಆದಿಯಲ್ಲಿ ಪ್ರಳಯಕಾಲದ ಸಮುದ್ರದಲ್ಲಿ ಶೂನ್ಯನಾಮಕನಾದ ಪರಮಾತ್ಮನು ಪವಡಿಸಿದ್ದನು. ಏಳುಕೋಟಿ ಯೋಜನದ ಶಿಶುವಾದ ಇವನು ತನ್ನ ಉದರದಲ್ಲಿ ಸರ್ವಜಗತ್ತನ್ನು ಇಟ್ಟುಕೊಂಡು ರಮಾರೂಪಳಾದ ಜಲಧಿಯಲ್ಲಿ ಐವತ್ತು ಕೋಟಿ ಯೋಜನಾದ ವಟಪತ್ರಳಾದ ಪತ್ನಿಯ ಮೇಲೆ ಪವಡಿಸಿದ್ದನು. ಶ್ರೀ-ಭೂ ರೂಪಗಳಿಂದ ಆಲಂಗಿತನಾಗಿ ಮಲಗಿದ್ದನು. ಎಂಬತ್ತೇಳೂವರೆ ವರ್ಷ ಹೀಗೆ ಕಳೆಯಿತು. ವೇದಾಭಿಮಾನಿಗಳಾದ ದುರ್ಗಾದೇವಿಯರು ತಮ್ಮ ಪತಿಯ ಪಾದಗಳನ್ನು ತೊಡೆಯ ಮೇಲೆ ಇಟ್ಟುಕೊಂಡು ಒತ್ತುತ್ತಾ ಸ್ತೋತ್ರ ಮಾಡಿ ಎಬ್ಬಿಸಿದರು.

ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನಾರಾಯಣ, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ, ಮತ್ಸ್ಯಾದಿ ದಶರೂಪಗಳು, ಯಜ್ಞ, ವಿಭು, ಹರಿ, ಸತ್ಯಸೇನಾ, ವಿಶ್ವಜಿತ್, ವಾಮನ, ಸಾರ್ವಭೌಮ, ಯೋಗೇಶ್ವರ, ಬೃಹದ್ಭಾನು, ಕೇಶವಾದಿ ಚತುರ್ವಿಂಶತಿ ರೂಪಗಳು, ಅಜಾದಿ ಐವತ್ತೊಂದು ರೂಪಗಳು, ನಾರಾಯಣಾದಿ ಶತರೂಪಗಳು, ವಿಶ್ವಾದಿ ಸಹಸ್ರರೂಪಗಳು, ಪರಾದಿ ಬಹುರೂಪಗಳು- ಹೀಗೆ ದೀಪದಿಂದ ದೀಪಾಂತರವು ಹುಟ್ಟುವಂತೆ ತನ್ನ ಅನೇಕ ರೂಪಗಳನ್ನು ಸೃಷ್ಟಿ ಮಾಡಿದನು.

ಅನಂತರ ಭಗವಂತನ ರೂಪಗಳಿಗೆ ಅನುಗುಣವಾಗಿ ತನ್ನ ರೂಪಗಳಿಗೆ ಅನುರೂಪವಾಗಿ ರಮೆಯ ರೂಪಗಳನ್ನೂ ಕೂಡ ದೀಪದಿಂದ ದೀಪಾಂತರವು ಹುಟ್ಟುವಂತೆ ಸೃಷ್ಟಿ ಮಾಡಿದನು- ಪ್ರಬೋಧಾ, ಮಾಯಾ, ಜಯಾ, ಕೃತೀ, ಶಾಂತಾ, ಲಕ್ಷ್ಮೀ, ವೇದಾ, ವೇದವತೀ, ಧಾತ್ರಿ, ಮಹಾಲಕ್ಷ್ಮೀ, ಸುಖಾಲಯ, ಭಾರ್ಗವೀ, ಸೀತಾ, ರುಗ್ಮಿಣಿ, ಸುಪ್ರಭಾ, ಪ್ರಭಾ, ಶ್ರೀ ಮೊದಲಾದ ಕೇಶವಾದಿ ರೂಪಗಳ ಭಾರ್ಯಾ ರೂಪಗಳು, ಶ್ರೀ, ಲಕ್ಷ್ಮೀ, ಕಮಲಾ, ಪದ್ಮಾ, ಪದ್ಮಿನೀ, ಕಮಲಾಲಯಾ, ರಮಾ, ವೃಷಾಕಪೀ, ಧನ್ಯಾ, ಬುದ್ಧೀ, ಯಜ್ಞಾ, ಇಂದಿರಾ, ಹಿರಣ್ಯಾ, ಹರಣೀ, ಸತ್ಯಾ, ನಿತ್ಯಾ, ಆನಂದಾ, ಪ್ರಜ್ಞಾ, ಸಖಾ, ಸುಗಂಧಾ, ಸುಂದರೀ, ವಿದ್ಯಾ, ಸುಪರ್ಣಾ, ಸುಲಕ್ಷಣಾ - ಇವೇ ಮೊದಲಾದ ರಮೆಯ ರೂಪಗಳು ಪ್ರಾದುರ್ಭೂತವಾದವು.

ವಾಸುದೇವನು ಮೊದಲು ತನ್ನ ದೇಹದೊಳಗಿರುವ ಲಿಂಗದೇಹ ಭಂಗವಾದವರಿಗೆ ಮೋಕ್ಷವನ್ನು ದಯಪಾಲಿಸಿದನು. ಸಂಕರ್ಷಣನು ಸೃಷ್ಟಿಗೆ ಪ್ರತಿಬಂಧಕವಾದ ತಮಸ್ಸನ್ನು ಪಾನ ಮಾಡಿದನು. ವಾಸುದೇವನಿಂದ ಚತುರ್ಮುಖ ದೇವರು ಹುಟ್ಟಿದರು. ಸಂಕರ್ಷಣನಿಂದ ವಾಯುದೇವರು ಹುಟ್ಟಿದರು. ಪ್ರದ್ಯುಮ್ನನು ತನ್ನ ಉದರದಲ್ಲಿ ಸರ್ವಜಗತ್ತನ್ನು ಇಟ್ಟುಕೊಂಡು ಅನಿರುದ್ಧನಿಗೆ ನೀಡಿದನು. ಇವನು ಮೂಲಪ್ರಕೃತಿಯ ದೆಸೆಯಿಂದ ಜಡಪ್ರಕೃತಿಯನ್ನು ಸೃಷ್ಟಿ ಮಾಡಿದನು. ಸಾತ್ವಿಕ, ರಾಜಸ, ತಾಮಸ ಎಂಬ ಪ್ರಭೇದವನ್ನು ತಾಳಿತು. ಇವುಗಳಿಂದ ಮಹತ್ತತ್ವವನ್ನು ಸೃಷ್ಟಿ ಮಾಡಿದನು. ಮಹತ್ತತ್ವದ ದೆಸೆಯಿಂದ ಅಹಂಕಾರ ತತ್ತ್ವವು ಹುಟ್ಟಿತು. ಅಹಂಕಾರ ತತ್ತ್ವದಲ್ಲಿರುವ ತಮೋಭಾಗದಿಂದ ಮನಸ್ಸು ಹುಟ್ಟಿತು. ಮನಸ್ತತ್ತ್ವದಲ್ಲಿರುವ ತಮೋಭಾಗದಿಂದ ಬುದ್ಧಿತತ್ತ್ವವು ಹುಟ್ಟಿತು. ಈ ಬುದ್ಧಿತತ್ತ್ವವು ಮೂರು ಭಾಗವಾಯಿತು. ಸತ್ವಭಾಗದಿಂದ ವೈಖಾರಿಕ ಎಂಬ ಹೆಸರುಳ್ಳ ದೇವತೆಗಳ ದೇಹವು ಹುಟ್ಟಿದವು. ರಜೋಭಾಗದಿಂದ ಹತ್ತು ಇಂದ್ರಿಯಗಳು ಹುಟ್ಟಿದವು. ತಮೋಭಾಗದಿಂದ ಪಂಚತನ್ಮಾತ್ರಗಳು ಹುಟ್ಟಿದವು. ಆಕಾಶದಿಂದ ಶಬ್ದಗುಣವು ಹುಟ್ಟಿತು. ವಾಯುವಿನಿಂದ ಸ್ಪರ್ಶಗುಣವು ಹುಟ್ಟಿತು. ತೇಜಸ್ಸಿನಿಂದ ರೂಪಗುಣವು ಹುಟ್ಟಿತು. ನೀರಿನಿಂದ ರಸೋಗುಣವು ಹುಟ್ಟಿತು. ಪೃಥಿವಿಯಿಂದ ಗಂಧಗುಣವು ಹುಟ್ಟಿತು.

ಬ್ರಹ್ಮಪದಯೋಗ್ಯರಾದ ಚತುರ್ಮುಖ ಬ್ರಹ್ಮದೇವರು ಮೊದಲು ಹುಟ್ಟಿದರು. ಬ್ರಹ್ಮಪದವಿಗೆ ಯೋಗ್ಯರಾದ ವಾಯುದೇವರು ಅನಂತರ ಹುಟ್ಟಿದರು. ಇದೇ ಪದವಿಗೆ ಯೋಗ್ಯರಾದ ಉಳಿದ ತೊಂಬತ್ತೆಂಟು ಮಂದಿ ಋಜುದೇವತೆಗಳು ಹುಟ್ಟಿದರು. ಅನಂತರ ಸರಸ್ವತೀದೇವಿ ಹಾಗೂ ಭಾರತೀದೇವಿಯರು ಹುಟ್ಟಿದರು. ಜೀವನಿಯಾಮಕನಾದ ಶೇಷದೇವರು, ಕಾಲನಿಯಾಮಕರಾದ ಗರುಡದೇವರು, ಮನೋನಿಯಾಮಕರಾದ ರುದ್ರದೇವರು ಹುಟ್ಟಿದರು. ಅನಂತರ ಷಣ್ಮಹಿಷಿಯರು ಹುಟ್ಟಿದರು. ಸೌಪರ್ಣೀ, ವಾರುಣೀ, ಪಾರ್ವತೀದೇವಿಯರನ್ನು, ಇಂದ್ರ-ಕಾಮರನ್ನು, ಅಹಂಕಾರಿಕ ಪ್ರಾಣದೇವರನ್ನು, ಅನಿರುದ್ಧ-ರತಿ-ಸ್ವಾಯಂಭುವ ಮನು-ದಕ್ಷಪ್ರಜಾಪತಿ, ಬೃಹಸ್ಪತ್ಯಾಚಾರ್ಯರು, ಶಚೀದೇವಿಯರು ಜನಿಸಿದರು. ಇದೇ ರೀತಿಯಾಗಿ ಸ್ವೋತ್ತಮ ದೇವತೆಗಳಿಂದ ಸ್ವಾಧಮ ದೇವತೆಗಳು ಜನಿಸಿದರು. ಇದುವೇ ಸೃಷ್ಟಿ ಚಿಂತನೆ.

## ಲಯ ಚಿಂತನೆ

ನಿತ್ಯವೂ ರಾತ್ರಿಯ ಕಾಲದಲ್ಲಿ ಇದನ್ನು ಚಿಂತನೆ ಮಾಡಬೇಕು ಹಾಗೂ ಫಾಲ್ಗುಣ ಮಾಸದ ಕೃಷ್ಣಪಕ್ಷದ ಅಮಾವಾಸ್ಯೆಯ ದಿವಸ ಇದನ್ನು ಚಿಂತನೆ ಮಾಡಬೇಕು.

ಶರೀರವು ಅನ್ನದಲ್ಲಿ, ಅನ್ನವು ಧಾನ್ಯದಲ್ಲಿ, ಧಾನ್ಯವು ಭೂಮಿಯಲ್ಲಿ, ಭೂಮಿಯು ಅಪ್‌ನಲ್ಲಿ, ಅಪ್ ತೇಜಸ್ಸಿನಲ್ಲಿ, ತೇಜಸ್ಸು ವಾಯುವಿನಲ್ಲಿ, ವಾಯುವು ಆಕಾಶದಲ್ಲಿ ಲಯವನ್ನು ಹೊಂದಿತು. ಇಂದ್ರಿಯಗಳು ಮನಸ್ಸಿನಲ್ಲಿ, ಮನಸ್ಸು ಬುದ್ಧಿತತ್ತ್ವದಲ್ಲಿ, ಬುದ್ಧಿತತ್ತ್ವವು ಅಹಂಕಾರತತ್ತ್ವದಲ್ಲಿ, ಅಹಂಕಾರತತ್ತ್ವವು ಮಹತ್ತತ್ತ್ವದಲ್ಲಿ, ಮಹತ್ತತ್ತ್ವವು ಗುಣತ್ರಯದಲ್ಲಿ, ಗುಣತ್ರಯವು ಮೂಲಪ್ರಕೃತಿಯಲ್ಲಿ, ಮೂಲಪ್ರಕೃತಿಯು ನಾರಾಯಣನಲ್ಲಿ ಲಯವನ್ನು ಹೊಂದಿತು.

ಇದೇ ರೀತಿಯಾಗಿ ಅಧಮದೇವತೆಗಳು ಸ್ವೋತ್ತಮರಲ್ಲಿ ಲಯವನ್ನು ಹೊಂದುತ್ತಾರೆ. ಪುರುಷ ದೇವತೆಗಳು ಪುರುಷ ದೇವತೆಗಳಲ್ಲಿ, ಸ್ತ್ರೀಯ ದೇವತೆಗಳು ಸ್ತ್ರೀಯದೇವತೆಗಳಲ್ಲಿ ಲಯಹೊಂದುತ್ತಾರೆಂದು ತಿಳಿಯಬೇಕು.

ಇಲ್ಲಿಗೆ ಲಯ ಚಿಂತನೆಯು ಸಮಾಪ್ತವಾಯಿತು.

★ ★ ★ ★ ★

ಸೃಷ್ಟಿ-ಸ್ಥಿತಿ-ಲಯ ಚಿಂತನೆಗಾಗಿ ದೇವತಾ ತಾರತಮ್ಯವನ್ನು ಇಲ್ಲಿ ನೀಡಲಾಗಿದೆ

## ತಾರತಮ್ಯ

**೧. ಪರಮಪುರುಷ ನಾರಾಯಣ :**

ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ ಬುದ್ಧ ಕಲ್ಕಿ ದತ್ತ, ಹಯಗ್ರೀವ, ಐತರೇಯ, ವೇದವ್ಯಾಸ, ಕಪಿಲ, ವೈಕುಂಠ, ವೃಷಭ, ಯಜ್ಞ, ಧನ್ವಂತರಿ, ಮೋಹಿನೀ, ತಾಪಸಮನು, ನಾರಾಯಣ, ಹರಿ, ಕೃಷ್ಣ ಉಪೇಂದ್ರ, ಇವೇ ಮೊದಲಾದ ಅವತಾರಗಳು ನಾರಾಯಣನ ಸಾಕ್ಷಾದವತಾರಗಳು ಎಂದು ಪ್ರಸಿದ್ಧವಾಗಿವೆ.

**೨. ಸರ್ವೋತ್ತಮಳಾದ ಪ್ರಕೃತಿ ಎನಿಸಿದ ಮಹಾಲಕ್ಷ್ಮಿಯು:**

ಶ್ರೀ, ಭೂ, ದುರ್ಗಾ, ಅಂಭ್ರಣೀ, ಹ್ರೀ, ಮಹಾಲಕ್ಷ್ಮೀ, ದಕ್ಷಿಣಾ, ಸೀತಾ, ಜಯಂತೀ, ಸತ್ಯಾ, ರುಗ್ಮಿಣೀ, ಎಂಬ ಅವತಾರಗಳು ಸಾಕ್ಷಾತ್ ಲಕ್ಷ್ಮೀ ಎಂದೇ ಹೇಳಲ್ಪಡುತ್ತವೆ.

**೩. ಚತುರ್ಮುಖ ಬ್ರಹ್ಮ, ಮುಖ್ಯಪ್ರಾಣನು:**

ಪ್ರಾಣ, ಸೂತ್ರ, ಬ್ರಹ್ಮ, ಚಿತ್ತ, ವಾಯು, ಬಲ, ಧೃತಿ, ಸ್ಥಿತಿ, ಯೋಗ, ವೈರಾಗ್ಯ, ಜ್ಞಾನ, ಪ್ರಜ್ಞಾ, ಸ್ಮೃತಿ, ಸುಖ, ಮೇಧಾ, ಮುಕ್ತಿ, ವಿಷ್ಣುಭಕ್ತಿ, ಆದಿಗೋಪ, ಮಹಾಪ್ರಭು, ಋಜು, ಸುಮಾನ, ವಿಜ್ಞಾತಾ, ಮಹಾಧ್ಯಾತಾ, ಮಹಾಗುರು, ಹನೂಮಾನ್, ಭೀಮ, ಶ್ರೀಮದಾನಂದತೀರ್ಥ ಮುಂತಾದ ರೂಪಗಳು ಮೂಲರೂಪದಂತೆಯೇ ಇವೇ. ಬ್ರಹ್ಮದೇವನು ಹಿಂದೆ ಹೀಗೆಯೇ ಅವತರಿಸಿದ್ದ.

**೪. ಚತುರ್ಮುಖನ ಪತ್ನೀ ಸರಸ್ವತೀ, ಮುಖ್ಯಪ್ರಾಣಪತ್ನೀ ಭಾರತೀ:**

ಸರಸ್ವತೀ, ಗಾಯತ್ರೀ, ಶ್ರದ್ಧಾ, ಆದ್ಯಾ, ಪ್ರೀತಿ, ಸರ್ವವೇದಾತ್ಮಾ, ಬುದ್ಧಿ ಅನುಭೂತಿ, ಸುಖಾತ್ಮಿಕಾ, ಗುರುಭಕ್ತಿ, ಹರಿಪ್ರಿಯಾ, ಸರ್ವಮಂತ್ರಾತ್ಮಿಕಾ, ಶಿವಕನ್ಯಾ, ಇಂದ್ರಸೇನಾ, ದ್ರೌಪದೀ, ಕಾಶಿಜಾ, ಚಂದ್ರಾ, ಮುಂತಾದ ರೂಪಗಳು ಭಾರತಿಯ ಮೂಲರೂಪದಂತೆಯೇ, ಸರಸ್ವತೀಯೂ ಭಾರತೀ ಆಗಿದ್ದಾಗ ಈ ರೂಪಗಳಿಂದ ಪ್ರಸಿದ್ಧಳು.

**೫. ಗರುಡ ಶೇಷ ರುದ್ರ (ಏಕಾದಶ ರುದ್ರರಲ್ಲಿ ಪ್ರಧಾನನಾದ ರುದ್ರ)**

ಶೇಷದೇವನು ಸದಾಶಿವ, ಊರ್ಧ್ವತಪ, ಅಹಂಕಾರ, ನರ, ಲಕ್ಷ್ಮಣ, ಬಲರಾಮ, ಶುಕ, ಸದ್ಯೋಜಾತ, ವಾಮದೇವ, ಘೋರ, ತತ್ಪುರುಷ, ದುರ್ವಾಸ, ಅಶ್ವತ್ಥಾಮ, ಔರ್ವ, ಜೈಗೀಷವ್ಯ ರೂಪಗಳಿಂದ ಪ್ರಸಿದ್ಧನು. ರುದ್ರದೇವನೂ ಹೀಗೆಯೇ.

**೬. ನಾರಾಯಣನು ಕೃಷ್ಣನಾಗಿ ಪ್ರಕಟಗೊಂಡಾಗ ಷಣ್ಮಹಿಷಿಯರಾದವರು**

ನೀಲಾ, ಭದ್ರಾ, ಮಿತ್ರವಿಂದಾ, ಕಾಳಿಂದೀ, ಲಕ್ಷಣಾ, ಜಾಂಬವತೀ. ಇವರಲ್ಲಿ ಜಾಂಬವತಿಯು ಮುಖ್ಯಳು. ಲಕ್ಷ್ಮೀದೇವಿಯ ವಿಶೇಷವಾದ ಆವೇಶದಶೆಯಲ್ಲಿ ಶೇಷತುಲ್ಯಳು.

೭. ಗರುಡಪತ್ನೀ ಸುಪರ್ಣೀ, ಶೇಷಪತ್ನೀ ವಾರುಣೀ, ರುದ್ರಪತ್ನಿ ಪಾರ್ವತಿಯರು.

**೮. ಪುರಂದರ(ಇಂದ್ರ) ಕಾಮನು**

ವಾಲಿ, ಗಾಧಿ, ವಿಕುಕ್ಷಿ, ಪಾರ್ಥ, ಇಷ್ಟು ಪುರಂದರನ ಅವತಾರಗಳಾದರೇ; ಸುದರ್ಶನ, ಭರತ, ಪ್ರದ್ಯುಮ್ನ, ಸ್ಕಂದ, ಸನತ್ಕುಮಾರ, ಕಾಮನ ಅವತಾರಗಳು.

೯. ಅಹಂಕಾರಿಕ ಪ್ರಾಣ. ನಲವತ್ತೊಂಭತ್ತು ಮರುತ್ತುಗಳಲ್ಲಿ ಪ್ರಧಾನ

೧೦. ಪುರಂದರ ಪತ್ನೀ ಶಚೀ, ಕಾಮಪತ್ನೀ ರತಿ, ಕಾಮಪುತ್ರ ಅನಿರುದ್ಧ, ಬೃಹಸ್ಪತಿ, ಸ್ವಾಯಂಭುವಮನು, ದಕ್ಷಪ್ರಜಾಪತಿ.

೧೧. ಸ್ಪರ್ಶಾಭಿಮಾನಿ ಪ್ರವಹವಾಯು ೪೯ ಮರುತ್ತುಗಳಲ್ಲಿ ಎರಡನೆಯವನು.

೧೨. ಚಂದ್ರ, ಸೂರ್ಯ, ಸೂರ್ಯಪುತ್ರ, ಯಮ, ಸ್ವಾಯಂಭುವಮನುವಿನ ಪತ್ನೀ ಶತರೂಪಾ.

ದ್ವಾದಶಾದಿತ್ಯರಲ್ಲಿ ಸೂರ್ಯ ಮೂರನೆಯವ. ಮೊದಲನೆಯವ ಅದಿತಿಯಲ್ಲಿ ಅವತರಿಸಿದ ವಾಮನ ವಿಷ್ಣು. ಇಂದ್ರನ ತಮ್ಮನಾಗಿ ಹುಟ್ಟಿದವನೆಂದು ಅವನನ್ನು ಉಪೇಂದ್ರನೆಂದು ಹೇಳುತ್ತಾರೆ. ಎರಡನೆಯವ ಎಂಟನೆಯ ಕಕ್ಷೆಯಲ್ಲಿ ಬರುವ ಪುರಂದರನೆಂಬ ಇಂದ್ರನು ಅದಿತಿಯಲ್ಲಿ ಮೊದಲೇ ಹುಟ್ಟಿದ್ದ.

೧೩. ವರುಣ. ದ್ವಾದಶಾದಿತ್ಯರಲ್ಲಿ ನಾಲ್ಕನೆಯವ

೧೪. ನಾರದ. ವಾಯುದೇವರ ಶಿಷ್ಯ

೧೫. ಅಗ್ನಿ ಅಷ್ಟವಸುಗಳಲ್ಲಿ ಮುಖ್ಯನು ವರುಣಪುತ್ರ ಭೃಗುಮುನಿ ದಕ್ಷಪ್ರಜಾಪತಿಯ ಪತ್ನೀ ಸ್ವಾಯಂಭುವಮನುಪುತ್ರೀ ಪ್ರಸೂತಿ.

೧೬. ವೈವಸ್ವತಮನು, ವಿಶ್ವಾಮಿತ್ರ, (ಸಪ್ತರ್ಷಿಗಳು) ಮರೀಚಿ, ಅತ್ರಿ, ಅಂಗಿರಾ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ.

೧೭. ಮಿತ್ರ, (ದ್ವಾದಶಾದಿತ್ಯರಲ್ಲಿ ಐದನೆಯವ) ನಿರಋತಿ, ಬೃಹಸ್ಪತಿಪತ್ನೀ ತಾರಾ, ಪ್ರವಹ, ವಾಯು ಪತ್ನೀ ಪ್ರವಾಹೀ.

೧೮. ವಿಘ್ನಾಧಿಪತಿ - ಭೂತಾಕಾಶಾಭಿಮಾನೀ ಗಣಪತಿ, ಕುಬೇರ, ವಾಯುಪುತ್ರ, ವಿಶ್ವಕ್ಸೇನ, ಸೂರ್ಯಪುತ್ರರಾದ ಅಶ್ವಿನೀದೇವತೆಗಳು ನಾಸತ್ಯದಸ್ರರು. ಪ್ರಧಾನ ವಸುವಾದ ಅಗ್ನಿಯನ್ನು ಬಿಟ್ಟು ಉಳಿದ ಸಪ್ತ ವಸುಗಳು - ದ್ರೋಣ, ಪ್ರಾಣ, ಧ್ರುವ, ಅರ್ಕ, ದೋಷ, ವಸ್ತು, ವಿಭಾವಸು, (ವಿಭಾವಸುವನ್ನೇ 'ದ್ಯು' ವಸು ಎನ್ನಲಾಗಿದೆ, ಅಗ್ನಿ - ವಹ್ನಿ - ವೈಶ್ವಾನರ ಎಂಬ ನಾಮಾಂತರಗಳೂ ಇವರಿಗಿದೆ. ಹಿಂದೆ ಹೇಳಿದ ಐದು, ಮುಂದೆ ಹೇಳುವ ಒಬ್ಬ ಆದಿತ್ಯನನ್ನು ಬಿಟ್ಟು ಉಳಿದ ಆರುಮಂದಿ ಆದಿತ್ಯರು ಈ ಕಕ್ಷೆಯಲ್ಲಿದ್ದಾರೆ. ಅರ್ಯಮಾ, ಪೂಷಾ, ತ್ವಷ್ಟಾ, ಸವಿತಾ, ಭಗ, ಧಾತಾ, ಎಂದು

(ಈ ದ್ವಾದಶ ಆದಿತ್ಯರಿಗೂ ಬೇರೇ ಬೇರೇ ಗ್ರಂಥಗಳಲ್ಲಿ ಬೇರೇ ಬೇರೇ ಹೆಸರುಗಳಿವೆ.) ದೇವತೆಗಳಿಗೆ ಅನೇಕ ಹೆಸರು ಎಂಬುದು ಪ್ರಸಿದ್ಧವಾಗಿದೆ. ಹತ್ತುಮಂದಿ ವಿಶ್ವೇದೇವತೆಗಳು ಕ್ರತು, ದಕ್ಷ, ಸವ, ಸತ್ಯ, ಕಾಮ, ಕಾಲ, ಧುರಿ, ಲೋಚನ, ಪುರೂರವ, ಆರ್ದ್ರವ, ಎಂದು. ಏಕಾದಶ ರುದ್ರರಲ್ಲಿ ಪ್ರಧಾನನನ್ನು ಬಿಟ್ಟು ಉಳಿದ ಹತ್ತು ರೈವತ, ಓಜ, ಭವ, ಭೀಮ, ವಾಮ, ಉಗ್ರ, ವೃಷಾಕಪಿ, ಅಜೈಕಪಾತ್, ಅಹಿರ್ಬುಧ್ನಿ, ವಿರೂಪಾಕ್ಷ. (ರುದ್ರರುಗಳಿಗೂ ಬೇರೆ ಬೇರೆ ಹೆಸರುಗಳಿವೆ.) ೪೯ ಮರುತ್ತುಗಳಲ್ಲಿ ಅಹಂಕಾರಿಕ ಪ್ರಾಣ, ಪ್ರವಹವಾಯು ಬಿಟ್ಟು ಉಳಿದ ೪೯ ಮರುತ್ತುಗಳು - ನಾಗ, ಕೂರ್ಮ, ಕಕಲ, ದೇವದತ್ತ, ಧನಂಜಯ, ಆವಹ, ಉದ್ವಹ, ಪರಾವಹ, ವಿವಹ, ಸಂವಹ, ಶಂಭು, ಶಂಕು, ಕಲ, ಶ್ವಾಸ, ಅನಲ, ಅನಿಲ, ಪ್ರತಿಭ, ಕುಮುದ, ಕಾಂತ, ಶುಚಿ, ಶ್ವೇತ, ಅಜಿತ, ಗುರು, ಸಂಜ್ಞ, ಪ್ರವರ್ತಕ, ಕಾಲ, ವಕ್ಷ, ಸೌಮ್ಯ, ಕಪಿ, ಜಡ, ಮಂಡೂಕ, ಸಂತತ, ಸಿದ್ಧ, ರಕ್ತ, ಕೃಷ್ಣ ಪಿಕ, ಶುಕ, ಯತಿ, ಭೀಮ, ಹನುಪಿಂಗ, ಕಂಪನ, (ಮರುತ್ತುಗಳಿಗೂ ಬೇರೆ ಬೇರೆ ನಾಮಗಳಿವೆ. ನಿರ್ದಿಷ್ಟವಾದ ಒಂದು ರೂಪವೆಂದಿಲ್ಲ) ಪಿತೃಪತಿಗಳಲ್ಲಿ ಒಬ್ಬ 'ಕವ್ಯವಾಹನ' ಎಂಬ ಅಗ್ನಿ (ಮೂರು ಪ್ರಧಾನ ಪಿತೃಪತಿಗಳಲ್ಲಿ ಇಬ್ಬರು ಯಮ ಸೋಮರು ೧೨ನೇ ಕಕ್ಷೆಯಲ್ಲಿ ಬಂದಿದ್ದಾರೆ.) ಋಭುಗಳು ಮೂರು - ಋಭು, ವಿಭ್ವಾ, ವಾಜ ಎಂದು. ದ್ಯಾವಾ ಪೃಥಿವೀ ಅಭಿಮಾನಿನಿಗಳಾದ ದೇವತೆಗಳು. ಪ್ರಧಾನವಾಯುಪುತ್ರ ಭೂತವಾಯುಮಾನೀ ಮರೀಚಿ. (ಆಕಾಶಾಭಿಮಾನಿ ಭೂತವಾಯ್ವಭಿಮಾನಿಗಳು ಸಮಾನರೆಂದು ಐತರೇಯಭಾಷ್ಯದಲ್ಲಿದೆ.)

೧೯. ಪ್ರಧಾನ ಅಗ್ನಿ ಪುತ್ರನಾದ ಭೂತಾಗ್ನಿ ಅಭಿಮಾನಿಯಾದ ಪಾವಕ, ಪಾದಾಭಿಮಾನಿಗಳಾದ ಇಂದ್ರಪುತ್ರರು ಯಜ್ಞ ಎಂದು ಹೆಸರುಳ್ಳ ಜಯಂತ, ಶಂಭುಗಳು ದೈತ್ಯಗುರು ಶುಕ್ರಾಚಾರ್ಯರು. ಅವರ ಸಹೋದರ ಚ್ಯವನರು. ಬೃಹಸ್ಪತಿ ಸಹೋದರ ವಿಚಥ್ಯರು. ಹಿಂದೆ ಹೇಳಿದ ಸನತ್ಕುಮಾರನನ್ನು ಬಿಟ್ಟು ಉಳಿದ ಮೂರುಮಂದಿ ಬ್ರಹ್ಮನ ಮಾನಸ ಪುತ್ರರಾದ ಋಷಿಗಳು ಸನಕ, ಸನಂದನ, ಸನಾತನರು. ಊರ್ಧ್ವರೇತಸ್ಕರಾದ ಏಳುಮಂದಿ ಋಷಿಗಳು. ಈ ಹತ್ತು ಹಿಂದೆ ಹೇಳಿದ ಸನತ್ಕುಮಾರಾದಿ ಹತ್ತು ಮಂದಿಯನ್ನು ಬಿಟ್ಟು ಕಶ್ಯಪರೇ ಮೊದಲಾದ ಎಂಭತ್ತು ಜನ ಗೃಹಸ್ಥ ಋಷಿಗಳು. ಮುಂದಿನ ಮನ್ವಂತರಾಧಿಪತಿಗಳಾದ ಏಳುಮಂದಿ ಇಂದ್ರರು. ಬಲಿ, ಅದ್ಭುತ, ಶಂಭು, ವಿಧೃತಿ, ಋತಧಾಮಾ, ದಿವಸ್ಪತಿ, ಶುಚಿ ಎಂದು. (ಕಳೆದ ಮನ್ವಂತರಗಳಲ್ಲಿ

ಮೊದಲನೆಯ ಮನ್ವಂತರಾಧಿಪ ಯಜ್ಞನಾಮಕ ಶ್ರೀಹರಿಯೇ ಆಗಿದ್ದಾನೆ. ಎರಡನೆಯ ಸ್ವಾರೋಚಿಷ ಮನ್ವಂತರಕ್ಕೆ ರೋಚನ ನಾಮಕ ವಾಯು. ಮೂರನೆಯ ಉತ್ತಮ ಮನ್ವಂತರಕ್ಕೆ ಸತ್ಯಜಿತ್ ನಾಮಕನಾದ ಯಮನು ಇಂದ್ರ, ನಾಲ್ಕು ಮತ್ತು ಐದನೇ ಮನ್ವಂತರಗಳಿಗೆ ತಾಪಸ-ರೈವತಗಳೆಂದು ಹೆಸರು. ಇವುಗಳಿಗೆ ತ್ರಿಶಿಖ ವಿಭು ಎಂಬ ಹೆಸರಿನ ನಾಸತ್ಯ ದಸ್ರರು ಅಶ್ವಿನಿದೇವತೆಗಳು ಇಂದ್ರರು. ಆರನೆಯ ಚಾಕ್ಷುಷ ಮನ್ವಂತರಕ್ಕೆ ಮಂದ್ರದ್ಯುಮ್ನ, ಅವನೇ ಏಳನೇ ವೈವಸ್ವತಮನ್ವಂತರದಲ್ಲಿ ಪುರಂದರನಾಮಕ ಇಂದ್ರನು. (ಇವನೇ ಎಂಟನೆ ಕಕ್ಷೆಯಲ್ಲಿನ ಇಂದ್ರನು). ಹಿಂದೆ ಹೇಳಿದ ಮೂವರನ್ನು ಬಿಟ್ಟು ಉಳಿದ ಹನ್ನೊಂದು ಮನುಗಳು- ಸ್ವಾರೋಚಿಷ, ಉತ್ತಮ, ರೈವತ, ಚಾಕ್ಷುಷ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರ ಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿ, (ಮೊದಲನೆಯ ಸ್ವಾಯಂಭುವ ಮನು ಹತ್ತನೆ ಕಕ್ಷ್ಯೆಯಲ್ಲಿ ಬಂದ. ನಾಲ್ಕನೇ ತಾಪಸಮನು ಸ್ವಯಂ ವಿಷ್ಣುವೇ ಏಳನೇ ವೈವಸ್ವತ ಮನು ಹದಿನಾರನೇ ಕಕ್ಷ್ಯೆಯಲ್ಲಿ ಬಂದ. ಉಳಿದ ಹನ್ನೊಂದು ಮಂದಿ ಈ ಕಕ್ಷ್ಯೆಯಲ್ಲಿದ್ದಾರೆ.) ಹತ್ತುಮಂದಿ ಪಿತೃಪತಿಗಳಲ್ಲಿ ಹಿಂದೆ ಹೇಳಿದ ಯಮ, ಸೋಮ, ಕವ್ಯವಾಹರನ್ನು ಬಿಟ್ಟು ಉಳಿದ ಏಳುಮಂದಿ- ಸೋಮಸದರು, ಅಗ್ನಿಷ್ವಾತ್ತರು, ಸೋಮಪರು, ಹರಿರ್ಭುಜ, ಆಜ್ಯಪರು, ಸುಕಾಲಿನರು ಎಂದು. ಎಂಟುಮಂದಿ ವಿಷ್ಣುವಿನ ದ್ವಾರಪಾಲಕರು ಜಯ, ವಿಜಯ, ಚಂಡ, ಪ್ರಚಂಡ, ನಂದ, ಸುನಂದ, ಕುಮುದ, ಕುಮುದೇಕ್ಷಣ ಎಂದು. ಎಂಟುಮಂದಿ ಪ್ರಧಾನ ಗಂಧರ್ವರು, ಎಂಟುಮಂದಿ ಪ್ರಧಾನ ಅಪ್ಸರೆಯರು. ವಿಶ್ವಕರ್ಮಾ, ಚಿತ್ರಗುಪ್ತ, ಸೂರ್ಯಸಾರಥಿ ಅರುಣ, ನಂದೀ ಐರಾವತ, ಸುರಭಿ, ಕಲ್ಪವೃಕ್ಷಾದಿ ದೇವತೆಗಳು. ಹಗಲು-ರಾತ್ರಿ ದೇವತೆಗಳು. ಪೂರ್ಣಿಮಾ-ಅಮಾವಾಸ್ಯೆ ದೇವತೆಗಳು, ಅಭಿಜಿದ್- ವಿಷುವದ್ದೇವತೆಗಳು ಓಷಧಿ ವನಸ್ಪತ್ಯಭಿಮಾನಿಗಳು, ಹವಿಸ್ಸು ಕಪಾಲಾಭಿಮಾನಿಗಳು, ಕರ್ಮದಿಂದ ದೇವತ್ವವನ್ನು ಪಡೆದ ನೂರು ಮಂದಿ ರಾಜರ್ಷಿಗಳು ಪೃಥು, ಕಾರ್ತವೀರ್ಯ, ಶಶಬಿಂದು, ಪ್ರಿಯವ್ರತ, ಉತ್ತಾನಪಾದ, ಮಾಂಧಾತಾ, ಗಯಾ, ಕಕುಸ್ಥ, ನಹುಷ, ಅಂಬರೀಷ, ಋಷಭಪುತ್ರ ಭರತ, ದುಷ್ಯಂತಪುತ್ರ ಭರತ, ಮರುತ, ಹರಿಶ್ಚಂದ್ರ, ಪ್ರಹ್ಲಾದ, ಪರೀಕ್ಷಿತನೇ ಮೊದಲಾದವರು.

೨೦. ದ್ವಾದಶಾದಿತ್ಯರಲ್ಲಿ ಕೊನೆಯವ ಪರ್ಜನ್ಯ. ಅನಿರುದ್ಧನ ಭಾರ್ಯೆ ಉಷಾ ವಿರಾಟ್ ಎಂಬುವಳು, ಚಂದ್ರಭಾರ್ಯೆ ರೋಹಿಣೀ, ಸೂರ್ಯ ಭಾರ್ಯೆ ಸಂಜ್ಞಾ,

ಯಮಭಾರ್ಯೆ ಶ್ಯಾಮಲಾ, ವರುಣಭಾರ್ಯೆ ಗಂಗಾ.

೨೧. ಕೆಲವರು ಅನಾಖ್ಯಾತರಾದ ದೇವತೆಗಳು. (ಈ ಕಕ್ಷ್ಯೆಯನ್ನು ಕೆಲವರು ಒಪ್ಪರು)

೨೨. ಅಗ್ನಿಭಾರ್ಯೆ ವಾಗಭಿಮಾನಿನೀ ಸ್ವಾಹಾ.

೨೩. ಜಲಾಭಿಮಾನೀ- ಬುಧ.

೨೪. ಅಶ್ವಿಭಾರ್ಯೆ ನಾಮಮಾನಿನೀ ಉಷಾ.

೨೫. ಕುಜ. (ಇವನೇ ೧೦ನೇ ಕಕ್ಷ್ಯೆಯವ ಎಂದು ಕೆಲವರು.)

೨೬. ಪೃಥಿವೀ ಅಭಿಮಾನಿನೀ ಶನಿ.

೨೭. ವರುಣಪುತ್ರ ಕರ್ಮಮಾನೀ ಪುಷ್ಕರ.

೨೮. ಕೃಷ್ಣನ ಪತ್ನಿಯರಾಗಿ ಹುಟ್ಟಿದ ಅಗ್ನಿಪುತ್ರರು ೧೬,೧೦೦.

೨೯. ಅನಾಖ್ಯಾತರಾದ ಆಜಾನಜ ದೇವತೆಗಳು. ನೂರು ಗಂಧರ್ವರು. ನೂರು ಮಂದಿ ಅಪ್ಸರೆಯರು. (ಹಿಂದೆಹೇಳಿದ ನೂರು ಮಂದಿ ಋಷಿಗಳನ್ನು ಬಿಟ್ಟು ನೂರುಕೋಟಿ ಋಷಿಗಳಿದ್ದಾರೆ.)

೩೦. ಹಿಂದೆ ಹೇಳಿದ ಏಳು ಸಂಖ್ಯೆಯ ಪಿತೃಪತಿಗಳ ಸಂತತಿಗಳಾದ ಚಿರ ಪಿತೃಗಳು.

೩೧. ಹಿಂದೆ ಹೇಳಿದ ಗಂಧರ್ವರು- ಅಪ್ಸರೆಯರು ೧೦೮. ಇವರನ್ನು ಬಿಟ್ಟು ಉಳಿದ ಗಂಧರ್ವರು -ಅಪ್ಸರೆಯರು.

೩೨. ಮನುಷ್ಯಗಂಧರ್ವರು.

ಇಲ್ಲಿಗೆ ತಾರತಮ್ಯವು ಮುಗಿಯಿತು.

★ ★ ★ ★ ★

ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

ಅಸ್ಮದ್ಗುರ್ವಂತರ್ಗತ ಶ್ರೀಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕರಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಈ ಕೃತಿಕುಸುಮವು ಸಮರ್ಪಿತವಾಗಿದೆ.

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★ ★ ★

## ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ




ಪ್ರಕಾಶನ :

**ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ).**

ಗಿರಿನಗರ, ಬೆಂಗಳೂರು - 560 085

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶನೀ

# ರಾಮನವಮೀ

ಚೈತ್ರ || ಶುದ್ಧ || ನವಮೀ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ರಾಮನವಮೀ

ಚೈತ್ರ ॥ ಶುದ್ಧ ॥ ನವಮಿ


ವಿದ್ವಾನ್ ॥ ಬೆಮ್ಮತ್ತಿ ವೇಂಕಟೇಶಾಚಾರ್ಯ,

ಬೆಂಗಳೂರು.



ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),

ಗಿರಿನಗರ, ಬೆಂಗಳೂರು-೮೫

**'ರಾಮನವಮಿ'** ಶಾಲಿವಾಹನ ಶಕೆ ೧೯೪೩ ಶಾರ್ವರಿ ॥ ಶ್ರಾವಣ ॥ ಶುದ್ಧ ॥ ಪೂರ್ಣಿಮೆ (ದಿನಾಂಕ:೩-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪರಮಪೂಜ್ಯ ಶ್ರೀ ವಿದ್ಯಾಧೀಶತೀರ್ಥ-ಶ್ರೀಪಾದಂಗಳವರ ಕರಕಮಲಗಳಿಂದ ಭಾರತೀರಮಣಹೃದಯ-ಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು : ೧೦೩



ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಸುಬ್ಬಣ್ಣ ಕೆಂಪದಾಳಿಹಳ್ಳಿ
ದೂರವಾಣಿ : 9141311280

ಮುದ್ರಣ : ಮುಕ್ತಿಪಥ ಮುದ್ರಣಾಲಯ,
ಬೆಂಗಳೂರು.



ದಿ|| ಕುಂ || ಸೌ|| ಗಿರಿಜಕಲ್ಯಾಣಿ ಹೆಚ್.ಎಸ್., (೧೯೪೮-೨೦೧೭) ಹಿಂದೂಪುರ

ಇವರ ಸ್ಮರಣಾರ್ಥ ಬೆಂಗಳೂರು ನಗರದಲ್ಲಿರುವ ಇವರ ಮಕ್ಕಳಾದ ಶ್ರೀ ಹೆಚ್. ಎಸ್. ಸುಧೀಂದ್ರ, ಶ್ರೀ ಹೆಚ್.ಎಸ್. ರಾಮಮೋಹನ್, ಮತ್ತು ಶ್ರೀಮತಿ ಕೆ. ರಾಧಮೋಹನ್ ಅವರು ಮಾಡಿದ ಸೇವೆ.

**ರಾಮನವಮಿಯಂದು ರಾಮನಾಮವನ್ನು ಬರೆಯುವ ಸಂಕಲ್ಪ ಮಾಡಿರಿ, ಬರೆಯುತ್ತಿದ್ದರೆ ಇಂದು ಕನಿಷ್ಠ ೧೦೦೮ ಬಾರಿ ಶ್ರೀರಾಮ ಎಂದು ಬರೆಯಿರಿ. ನೂರು ಬಾರಿ ಬರೆದ ಮೇಲೆ 'ಶ್ರೀರಾಮಃ ಶರಣಂ ಮಮ' ಎಂದು ಬರೆಯಿರಿ, ೧೦೦೦ ಬಾರಿ ಬರೆದ ಮೇಲೆ ಈ ಕೆಳಗಿನಶ್ಲೋಕವನ್ನು ಬರೆಯಿರಿ. ಮತ್ತು ದಿನ ಪೂರ್ತಿ ಈ ಶ್ಲೋಕವನ್ನು ಮನಸ್ಸಿನಲ್ಲಿ ಹೇಳಿಕೊಳ್ಳಿರಿ –**

**ಆಪದಾಮಪಹರ್ತಾರಂ ದಾತಾರಂ ಸರ್ವಸಂಪದಾಮ್ ।**
**ಲೋಕಾಭಿರಾಮಂ ಶ್ರೀರಾಮಂ ಭೂಯೋ ಭೂಯೋ ನಮಾಮ್ಯಹಮ್ ॥**

**ಜಯತ್ಯಜೋಽಕ್ಷೀಣಸುಖಾತ್ಮಬಿಂಬಃ**
**ಸ್ವೈಶ್ವರ್ಯಕಾಂತಿಪ್ರತತಃ ಸದೋದಿತಃ ।**
**ಸ್ವಭಕ್ತಸಂತಾಪದುರಿಷ್ಟಹಂತಾ**
**ರಾಮಾವತಾರೋ ಹರಿರೀಶಚಂದ್ರಮಾಃ ॥**

# ವಿಷಯಾನುಕ್ರಮಣಿಕೆ

# ಮುನ್ನುಡಿ

ವರ್ಷದಲ್ಲೇ ಬಹುದೊಡ್ಡ ಹಬ್ಬವಿದು. ಪ್ರಯತ್ನಪೂರ್ವಕವಾಗಿ ದೇವರಿಗೆ ಪಂಚಾಮೃತಾಭಿಷೇಕವನ್ನು ಮಾಡಲೇ ಬೇಕು. ತಳಿರು ತೋರಣಗಳಿಂದ ಮನೆಯನ್ನು ಸಿಂಗರಿಸಬೇಕು. ಕೃಷ್ಣಾಷ್ಟಮಿಯ ಪುಸ್ತಕದಲ್ಲಿ ಪೂಜೆಯ ಬಗ್ಗೆ ಹೇಗೆ ಸಂಕ್ಷೇಪವಾಗಿ ನೀಡಿ, ವಿಷ್ಣುಸಹಸ್ರನಾಮಾವಳಿಯ ಅರ್ಚನೆಯನ್ನು ಅಥವಾ ಪಾರಾಯಣವನ್ನು ಮಾಡಬೇಕೆಂದು ತಿಳಿಸಲಾಗಿದೆಯೋ ಅದರಂತೆ 'ರಾಮನವಮೀ' ಎಂಬ ಈ ಪುಸ್ತಕದಲ್ಲಿಯೂ ಕೂಡ ರಾಮದೇವರ ಪೂಜೆಯನ್ನು ಅತ್ಯಂತ ಸಂಕ್ಷೇಪವಾಗಿ ನೀಡಿ ರಾಮನಾಮಲೇಖನದ ಬಗ್ಗೆ ಹೆಚ್ಚು ಮಹತ್ವವನ್ನು ಸಾರಲಾಗಿದೆ.

ರಾಮರಾಮೇತಿ ರಾಮೇತಿ ರಮೇ ರಾಮೇ ಮನೋರಮೇ ।
ಸಹಸ್ರನಾಮ ತತ್ತುಲ್ಯಂ ರಾಮನಾಮ ವರಾನನೇ ॥

ಗುಹ್ಯಾದ್ ಗುಹ್ಯತರವಾದ ರಾಮನಾಮ ಲೇಖನದಿಂದ ಬರುವ ಫಲವನ್ನು ರುದ್ರದೇವರು ತಮ್ಮ ಪ್ರಿಯಪತ್ನಿಯಾದ ಪಾರ್ವತಿಗೆ ಏಕಾಂತದಲ್ಲಿ ತಿಳಿಸಿದ್ದಾರೆ. ಒಮ್ಮೆ ರಾಮ ಎಂದು ಹೇಳಿದರೆ ಸಾಕು, ವಿಷ್ಣುಸಹಸ್ರನಾಮವನ್ನು ಪಠಿಸಿದ ಪುಣ್ಯವು ಬರುತ್ತದೆ. ಶ್ರೀರಾಮ ಎಂದು ಒಮ್ಮೆ ಬರೆದರೆ ಅದಕ್ಕಿಂತಲೂ ನೂರು ಪಟ್ಟು ಹೆಚ್ಚು ಪುಣ್ಯವು ಬರುತ್ತದೆ. ಇಷ್ಟು ಸುಲಭವಾಗಿ ಜೀವನದಲ್ಲಿ ಸಾಧನೆಯು ಆಗುತ್ತಿರುವಾಗ ಇದನ್ನು ಬಿಟ್ಟು ಇತರ ಲೌಕಿಕಕೆಲಸಗಳಿಂದ ನಮಗೆ ಆಗಬೇಕಾದದ್ದು ಕೂಡ ಏನು?

ಈ ದೃಷ್ಟಿಯಿಂದ ಪ್ರತಿಯೊಬ್ಬರೂ ರಾಮನಾಮವನ್ನು ಬರೆಯಲೇ ಬೇಕು. ಬರೆಯದೇ ಕಾಲಹರಣ ಮಾಡಬಾರದು. ನಮ್ಮ ಸಂಸ್ಥೆಯಿಂದ ಪ್ರಕಾಶನಗೊಂಡ ರಾಮನಾಮಲೇಖನಯಜ್ಞದ ಒಂದು ಪುಸ್ತಕದಲ್ಲಿ ೧೦೦೦೦ ಶ್ರೀರಾಮ ಎಂದು ಬರೆಯಬಹುದು. ಅಂಥ ಹತ್ತು ಪುಸ್ತಕಗಳನ್ನು ಬರೆದರೆ ಒಂದು ಲಕ್ಷವಾಗುತ್ತದೆ. ಆದರ ಸಂಕಲ್ಪವನ್ನು ಇಂದು ಮಾಡಬೇಕು. ಮತ್ತು ಆಯಾ ದಿವಸಗಳಲ್ಲಿ ಮಾಡುವ ಸತ್ಕರ್ಮಗಳನ್ನು ಶ್ರೀರಾಮಚಂದ್ರದೇವರಿಗೆ ಸಮರ್ಪಣೆ ಮಾಡಬೇಕು. ನಿರಂತರ ಮನಸ್ಸಿನಲ್ಲಿ ಭಗವಂತನ ನಾಮಸ್ಮರಣೆಯನ್ನು ಮಾಡುತ್ತಿರಬೇಕು.

ಹರೇ ರಾಮ ಹರೇ ರಾಮ ರಾಮರಾಮ ಹರೇ ಹರೇ ।

ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣಕೃಷ್ಣ ಹರೇ ಹರೇ ॥

ಎಂಬ ಈ ಮಂತ್ರವನ್ನು ಹಾಗೂ 'ಶ್ರೀರಾಮಾಯ ನಮಃ' ಎಂಬ ಮಂತ್ರವನ್ನು, 'ಶ್ರೀಕೃಷ್ಣಾಯ ನಮಃ' ಎಂಬ ಮಂತ್ರವನ್ನು ಹಾಗೂ 'ಶ್ರೀಮುಖ್ಯಪ್ರಾಣಾಯ ನಮಃ' ಎಂಬ ಮಂತ್ರವನ್ನು ಮೈಲಿಗೆ ಮಡಿ ಎಂಬ ವ್ಯತ್ಯಾಸವಿಲ್ಲದೇ ಪ್ರತಿಯೊಬ್ಬರೂ ಸ್ಮರಣೆ ಮಾಡಬಹುದು. ಇದಕ್ಕೆ ಯಾವ ನಿರ್ಬಂಧಗಳೂ ಕೂಡ ಇರುವುದಿಲ್ಲ. ನಾಮಸ್ಮರಣೆಯಿಲ್ಲದೇ ಕಾಲ ಕಳೆಯಬಾರದು. ಈ ದೃಷ್ಟಿಯಿಂದ ರಾಮನಾಮದ ಬಗ್ಗೆ ಎಲ್ಲರೂ ಜಾಗರೂಕರಾಗಬೇಕೆಂದೂ ಈ ಪುಸ್ತಕದಲ್ಲಿ ತಿಳಿಸಲಾಗಿದೆ.

ಮತ್ತು ಮಾಧವನ ಕಾಲನಿರ್ಣಯ, ತಿಥಿತತ್ತ್ವ, ಹೇಮಾದ್ರಿ, ನಿರ್ಣಯಸಿಂಧು, ವ್ರತರಾಜ, ವ್ರತಕೌಸ್ತುಭ, ವ್ರತರತ್ನಾಕರ, ವ್ರತರತ್ನಮಾಲಾ ಇವೇ ಮೊದಲಾದ ಪುಸ್ತಕಗಳ ಆಧಾರದಿಂದ ರಾಮನವಮಿಯ ಆಚರಣೆಯ ಬಗ್ಗೆಯೂ ಸಾಕಷ್ಟು ವಿಚಾರಗಳ ಸಂಗ್ರಹವನ್ನು ಈ ಪುಸ್ತಕದಲ್ಲಿ ನೀವು ಕಾಣಬಹುದು. ಮತ್ತು ರಾಮದೇವರ ಕುರಿತಾದ ಹಾಡುಗಳು ರಾಮನವಮಿಯಂದು ಮಾಡಬೇಕಾದ ಅಡುಗೆಗಳು ಇವುಗಳ ಬಗ್ಗೆಯೂ ಮಾಹಿತಿಯನ್ನು ಇದರಿಂದ ಪಡೆಯಬಹುದು.

ಚೈತ್ರಮಾಸದ ಶುಕ್ಲಪಕ್ಷದ ಪ್ರತಿಪತ್ ದಿವಸದಿಂದ ರಾಮನವಮಿಯ ತನಕ ಒಂಭತ್ತು ದಿವಸಗಳ ಕಾಲ ರಾಮೋತ್ಸವದ ಆಚರಣೆಯನ್ನು ಯಥಾಶಕ್ತಿ ಮಾಡಬೇಕು. ತಾತ್ಪರ್ಯನಿರ್ಣಯದಲ್ಲಿ ಶ್ರೀಮಧ್ವಾಚಾರ್ಯರು ಉಪದೇಶಿಸಿದ ರಾಮಚರಿತ್ರೆಯನ್ನು ಪಾರಾಯಣ ಮಾಡಬೇಕು. ವಾಲ್ಮೀಕಿ ರಾಮಾಯಣದ ಪಾರಾಯಣವನ್ನು ಮಾಡಬೇಕು. ಸಾಧ್ಯವಾಗದಿದ್ದರೆ ಈ ಪುಸ್ತಕದಲ್ಲಿ ನೀಡಿದ ಒಂದೊಂದು ಕಾಂಡದ ಒಂದೊಂದು ಶ್ಲೋಕಗಳ ಮೂಲಕ ರಾಮದೇವರ ಆಯಾಯ ರೂಪಗಳ ಚಿಂತನೆಯನ್ನು ಮಾಡಬೇಕು. ಹೀಗೆ ರಾಮನವಮಿಯ ಆಚರಣೆಯನ್ನು ರಾಮನಾಮಸ್ಮರಣೆಯ ಅಭಿವೃದ್ಧಿಯ ಮೂಲಕ ಸಾರ್ಥಕ ಪಡಿಸಿಕೊಳ್ಳೋಣ.

ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ಬೆಂಗಳೂರಿನಲ್ಲಿರುವ ಶ್ರೀ ಹೆಚ್. ಎಸ್. ಸುಧೀಂದ್ರ, ಶ್ರೀ ಹೆಚ್. ಎಸ್. ರಾಮಮೋಹನ್, ಮತ್ತು ಶ್ರೀಮತಿ ಕೆ. ರಾಧ ಮೋಹನ್‌ರವರಿಗೆ ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ-ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಇವರ ಮಾತೃಶ್ರೀಯವರಿಗೆ ಈ ಜ್ಞಾನಯಜ್ಞದ ಪುಣ್ಯರಾಶಿಯು ತಲುಪಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ

## ರಾಮನವಮಿಗೆ ಬೇಕಾಗುವ ಸಾಮಗ್ರಿಗಳು

* ಸುಂದರವಾದ ರಾಮದೇವರ ಫೋಟೋ.
* ಮಂಟಪದಲ್ಲಿ ರಾಮದೇವರನ್ನು ಪ್ರತಿಷ್ಠೆ ಮಾಡಿ ಪೂಜಿಸುವುದಾದರೆ, ಅದಕ್ಕೆ ಬೇಕಾದ ಸಕಲ ಸಿದ್ಧತೆ.
* ಕಲಶದಲ್ಲಿ ರಾಮದೇವರನ್ನು ಆವಾಹನೆ ಮಾಡಿ ಪೂಜಿಸುವುದಾದರೆ, ವರಮಹಾಲಕ್ಷ್ಮೀ ಮೊದಲಾದ ಪುಸ್ತಕಗಳಲ್ಲಿ ನೀಡಿದ ಕ್ರಮದಂತೆ ಕಲಶ ಪ್ರತಿಷ್ಠಾಪನಾದಿಗಳಲ್ಲಿ ಉಪಯುಕ್ತವಾದ ಸಕಲ ಸಾಮಗ್ರಿಗಳು.
* ಮಾವಿನಸೊಪ್ಪು ತೋರಣ, ಬಾಳೇಕಂಬ, ಅರಿಶಿನ-ಕುಂಕುಮ, ಮಂತ್ರಾಕ್ಷತೆ, ರಂಗವಲ್ಲಿ.
* ರಾಮಾಯಣ ಪುಸ್ತಕ.
* ಈ ಪುಸ್ತಕದ ಕೊನೆಯಲ್ಲಿ ನೀಡಿದ ಅಡುಗೆ ಉಪಯುಕ್ತವಾದ ಎಲ್ಲ ಪದಾರ್ಥಗಳು.
* ಪಂಚಾಮೃತಾಭಿಷೇಕಕ್ಕೆ ಅವಶ್ಯಕವಾದ ಸಕಲ ಪದಾರ್ಥಗಳು.
* ವೀಳ್ಯದೆಲೆ, ಅಡಿಕೆ, ತೆಂಗಿನಕಾಯಿ ಮೊದಲಾದವು.
* ಅನಿಷಿದ್ಧವಾದ ಹೂವುಗಳು, ತುಳಸಿ, ಮಂಗಳಾರತಿಗೆ ಬತ್ತಿಗಳು ಹಾಗೂ ಪೂಜಾ ಸಾಮಗ್ರಿಗಳು.
* ವಾಯನದಾನಕ್ಕೆ ಬೇಕಾಗುವ ಸಕಲ ಸಾಮಗ್ರಿಗಳು ಹಾಗೂ ದಕ್ಷಿಣೆ.
* ದೀಪದ ಕಂಬಗಳು, ಬಾಳೇಹಣ್ಣು, ಕರ್ಪೂರ, ದ್ರಾಕ್ಷಿ ಮೊದಲಾದ ನೈವೇದ್ಯ ಪದಾರ್ಥಗಳು.
* ರಾಮನಾಮಲೇಖನಕ್ಕಾಗಿ ರಾಮನಾಮಲೇಖನಯಜ್ಞದ ಪುಸ್ತಕ, ಪೆನ್ನು.
* ರಾಮದೇವರಿಗಾಗಿ ಒಂದು ತೊಟ್ಟಿಲು.
* ಅರ್ಘ್ಯಕ್ಕಾಗಿ ಶುದ್ಧವಾದ ಹಾಲು.

* * * *

# ರಾಮನವಮಿಯ ಸಿದ್ಧತೆಗಳು

* ಅರುಣೋದಯಕಾಲದಲ್ಲಿ ಎದ್ದ ಕೂಡಲೇ ಹಾಸಿಗೆಯಲ್ಲಿ ಕುಳಿತು ಕಣ್ಮುಚ್ಚಿ, ಹೃದಯದಲ್ಲಿ ಶ್ರೀರಾಮಚಂದ್ರನನ್ನು ಆಪಾದಮೌಳಿಪರ್ಯಂತ ಚಿಂತಿಸ-ಬೇಕು.

* ಶ್ರೀರಾಮಚಂದ್ರನು ಸೀತಾಲಕ್ಷ್ಮಣಸಹಿತನಾಗಿ ಹನುಮಂತದೇವರಿಂದ ವಂದಿತನಾಗಿ ನಮ್ಮ ಹೃದಯಸಿಂಹಾಸನದಲ್ಲಿ ಕುಳಿತಿದ್ದಾನೆಂದು ಧ್ಯಾನಮಾಡಬೇಕು. ಶ್ರೀರಾಮಚಂದ್ರನ ಕಾಲುಗಳನ್ನು ಮುಟ್ಟಿ, ಸಾಷ್ಟಾಂಗ ನಮಿಸಿ, ಕಣ್ಣೀರಿಡುತ್ತಾ ಅವನ ಅನುಗ್ರಹವನ್ನು ಪ್ರಾರ್ಥಿಸಬೇಕು. ಶ್ರೀರಾಮನಿಗೆ ಜಯಕಾರವನ್ನು ಹೇಳಬೇಕು. ಮಂಗಳವನ್ನು ಹಾಡಬೇಕು. 'ಅಜ್ಞಾನದ ಹೊದಿಕೆಯಲ್ಲಿ ಕುರುಡನಾದ ನನ್ನನ್ನು ಉದ್ಧರಿಸು' ಎಂದು ಪ್ರಾರ್ಥಿಸಿ 'ಇಂದಿನ ರಾಮನವಮಿಯ ಆಚರಣೆಯನ್ನು ಯಥಾಶಕ್ತಿ ನೀನೇ ನನ್ನಲ್ಲಿ ನಿಂತು ಮಾಡಿಸಿಕೋ' ಎಂದು ಪ್ರಾರ್ಥಿಸಿ ಎದ್ದೇಳಬೇಕು.

* ಎದ್ದ ಕೂಡಲೇ ದೇವರ ಮನೆಯಲ್ಲಿರುವ ಭಗವಂತನ ದರ್ಶನವನ್ನು ಮಾಡಿ, ಸಜ್ಜನರನ್ನು ದರ್ಶನ ಮಾಡಿ, ಹಸು, ತುಳಸಿ ಮೊದಲಾದವುಗಳ ದರ್ಶನವನ್ನು ಮಾಡಿ ಕನ್ನಡಿಯಲ್ಲಿ ಮುಖವನ್ನು ನೋಡಿ ನಿತ್ಯ ಶೌಚಾಚಾರಗಳನ್ನು ಆಚರಿಸಬೇಕು.

* ಪ್ರತಿಯೊಬ್ಬರೂ ಅತ್ಯಂತ ವೈಭವದಿಂದ ರಾಮನವಮಿಯನ್ನು ಆಚರಣೆ ಮಾಡಬೇಕು. ಅದಕ್ಕಾಗಿ ಹಿಂದಿನ ದಿವಸಗಳಲ್ಲಿಯೇ ಪೂಜೆಗೆ ಎಲ್ಲ ಸಿದ್ಧತೆಗಳನ್ನು ಮಾಡಿಕೊಳ್ಳಬೇಕು.

* ಎಲ್ಲಾ ಬಗೆಯ ಪಾಪಗಳ ಪರಿಹಾರಕ್ಕೆ ರಾಮನಾಮಸ್ಮರಣೆಯನ್ನು ಪುರಾಣಗಳಲ್ಲಿ ಬಹಳವಾಗಿ ಹೇಳುತ್ತಾರೆ. ಆದ್ದರಿಂದ ''ಶ್ರೀರಾಮಾಯ ನಮಃ'' ಎಂಬ ಮಂತ್ರವನ್ನು ಪ್ರತಿಯೊಬ್ಬರೂ ಸದಾಕಾಲ ಮನಸ್ಸಿನಲ್ಲಿ ಹೇಳುತ್ತಲೇ ಇರಬೇಕು.

* ಶ್ರೇಷ್ಠ ಗುರುಗಳಿಂದ ಬೀಜಾಕ್ಷರ ಸಹಿತವಾದ ರಾಮಮಂತ್ರವನ್ನು ಉಪದೇಶ ಪಡೆದುಕೊಂಡು ಅಕ್ಷರಲಕ್ಷ ಜಪ ಮಾಡಿ ರಾಮನವಮಿಯ ದಿವಸ ರಾಮಮಂತ್ರದ ಹೋಮ ಮಾಡುವುದರಿಂದ ರಾಮದೇವರ ಅನುಗ್ರಹವಾಗುತ್ತದೆ. ಮಾಡಿದ ಪಾಪಗಳು ಪರಿಹಾರವಾಗುತ್ತವೆ.

* ರಾಮನವಮಿಯಂದು ಭಗವಂತನಿಗೆ ಪಂಚಾಮೃತಾಭಿಷೇಕವನ್ನು ಮಾಡಲೇ ಬೇಕು. ಅದಕ್ಕಾಗಿ ಪಂಚಾಮೃತದ ಸಿದ್ಧತೆಗಳನ್ನು ಪೂಜೆಯ ಮೊದಲೇ ಮಾಡಿಟ್ಟುಕೊಳ್ಳಬೇಕು.

* ಕೋಸಂಬರಿ, ಪಾನಕ, ಹೋಳಿಗೆ, ಮಾವಿನ ಕಾಯಿಯ ಚಿತ್ರಾನ್ನ, ಪಂಚಭಕ್ಷ ಪರಮಾನ್ನ ಇಷ್ಟು ಅಡಿಗೆಗಳ ಜೊತೆ ಉಳಿದ ಅಡಿಗೆಗಳನ್ನು ಮಾಡಿ ಭಗವಂತನಿಗೆ ಸಮರ್ಪಣೆ ಮಾಡಬೇಕು.

* ಬ್ರಾಹ್ಮಣರನ್ನು ಕರೆದು ಭೋಜನ ಮಾಡಿಸುವುದರಿಂದ ಅತ್ಯಧಿಕವಾದ ಫಲವು ಬರುತ್ತದೆಂದು ಸ್ಕಾಂದಪುರಾಣವು ತಿಳಿಸುತ್ತದೆ. ಅನ್ನದಾನದಿಂದ ರಾಮದೇವರಿಗೆ ಬಹಳ ಸಂತೋಷವಾಗುತ್ತದೆ.

* ಅನ್ನ ಸಂತರ್ಪಣೆಗೆ ಹಿಂದಿನ ದಿನವೇ ಬ್ರಾಹ್ಮಣ-ಮುತ್ತೈದೆಯರಿಗೆ ಆಹ್ವಾನ ಕೊಡಬೇಕು.

* ದೇವರ ಪೂಜೆಯ ಜೊತೆಯೇ ಈ ಪುಸ್ತಕದಲ್ಲಿ ನೀಡಿದ ರಾಮದೇವರ ಪೂಜಾಮಂತ್ರಗಳನ್ನು ಹೇಳಿಕೊಂಡು ಪೂಜೆಯನ್ನು ಮಾಡಬೇಕು.

* ತಳಿರು, ತೋರಣಗಳಿಂದ ಮನೆಯ ಬಾಗಿಲನ್ನು ದೇವರ ಮನೆಯನ್ನು ಸಿಂಗರಿಸಬೇಕು.

* ರಾಮಭಜನೆ, ರಾಮಕಥಾಶ್ರವಣ, ರಾಮಾಯಣಪಾರಾಯಣ, ತಾತ್ಪರ್ಯನಿರ್ಣಯದಲ್ಲಿ ರಾಮಾಯಣ ಕಥೆಯ ಪಾರಾಯಣ, ರಾಮದೇವರ ಪೂಜಾ ದರ್ಶನ, ರಾಮದೇವಸ್ಥಾನಗಮನ ಇವುಗಳನ್ನು ಯಥಾಶಕ್ತಿ ಆಚರಣೆ ಮಾಡಬೇಕು.
* ರಾಮನವಮಿಯಂದು ಉಪವಾಸ ಮಾಡಬೇಕೆಂದು ಸ್ಕಂದಪುರಾಣವು ಹೇಳುತ್ತದೆ. ಆದರೆ ಉಪವಾಸ ಮಾಡಲೇಬೇಕೆಂಬ ನಿಯಮವು ಇರುವುದಿಲ್ಲ. ಭಗವಂತನ ದಶಾವತಾರಗಳ ದಿವಸಗಳಲ್ಲಿ ಕೃಷ್ಣಾಷ್ಟಮಿಯಂದು ಮಾತ್ರ ಉಪವಾಸವು ಕಡ್ಡಾಯವೆಂದು ಶ್ರೀಮಧ್ವಾಚಾರ್ಯರು ನಿರ್ಣಯವನ್ನು ನೀಡಿದ್ದಾರೆ.

ನಿತ್ಯಮಾಡುವ ದೇವರ ಪೂಜೆಯ ಜೊತೆ ಶ್ರೀರಾಮಚಂದ್ರದೇವರ ಪೂಜೆಯನ್ನು ಮಾಡಬೇಕು. ನಮ್ಮ ಸಂಸ್ಥೆಯಿಂದ ಪ್ರಕಟಣೆಗೊಂಡ ದೇವರಪೂಜೆಯ ಪುಸ್ತಕದಲ್ಲಿರುವ ಮಂತ್ರಗಳ ಜೊತೆ ಮುಂದಿನ ಮಂತ್ರಗಳನ್ನು ಸೇರಿಸಿಕೊಂಡು ಪೂಜಿಸಬೇಕು.

ಆದ್ದರಿಂದ ಶಂಖಪೂಜೆ, ಕಲಶಪೂಜೆ, ಪೀಠಪೂಜೆ, ಆವಾಹನೆ ಮೊದಲಾದವುಗಳನ್ನು ದೇವರ ಪೂಜೆಯಲ್ಲಿ ಮಾಡುವಂತೆ ಮಾಡಬೇಕು.

* ರಾಮದೇವರ ಪ್ರತಿಮೆಯು ಮನೆಯಲ್ಲಿದ್ದರೆ ಅದರ ಮುಂದೆ ಕಲಶವನ್ನಿಟ್ಟು ಪೂಜಿಸಬೇಕು. ಶ್ರೀರಾಮದೇವರ ಪ್ರತಿಮೆಯು ಇಲ್ಲದಿದ್ದರೆ ಕೇವಲ ಕಲಶದಲ್ಲಿ ಶ್ರೀರಾಮಚಂದ್ರದೇವರನ್ನು ಆವಾಹನೆ ಮಾಡಿ ಪೂಜಿಸಬೇಕು.
* ಪ್ರತಿಯೊಂದು ವ್ರತಗಳಲ್ಲಿಯೂ ಕಲಶದಲ್ಲಿಯೇ ದೇವತೆಗಳನ್ನು ಆವಾಹನೆ ಮಾಡಿ ಪೂಜಿಸುವ ಕ್ರಮವಿದೆ. ಆದ್ದರಿಂದ ರಾಮನವಮಿಯಂದೂ ಕೂಡ ಕಲಶದಲ್ಲಿಯೇ ಭಗವಂತನನ್ನು ಆವಾಹನೆಮಾಡಿ ಪೂಜಿಸಬೇಕೆಂಬುದು ಪೂಜಾಗ್ರಂಥಗಳ ಅಭಿಪ್ರಾಯ.
* ಪ್ರಧಾನ ಕಲಶದ ಮೇಲೆ ರಾಮಯಂತ್ರವನ್ನು ಇಡಬೇಕು. ಮತ್ತು ಸೀತಾ-ರಾಮಪ್ರತಿಮೆಗಳನ್ನು ಇಡಬೇಕು. ಪ್ರಾಣಪ್ರತಿಷ್ಠೆ ಮೊದಲಾದವುಗಳನ್ನು ಆಚರಿಸಿ, ಷೋಡಶೋಪಚಾರಗಳಿಂದ ಪೂಜಿಸಬೇಕು.

* ಮನೆಯಲ್ಲಿ ರಾಮದೇವರ ಮೂರ್ತಿ ಹಾಗೂ ಶಾಲಗ್ರಾಮಗಳಿದ್ದಾಗ ಪ್ರತ್ಯೇಕವಾಗಿ ಕಲಶಗಳನ್ನಿಟ್ಟು ಪೂಜಿಸುವ ಸಂಪ್ರದಾಯವು ಕೆಲವು ಕಡೆ ಕಾಣಿಸುವುದಿಲ್ಲ. ಆದರೆ ಪ್ರತ್ಯೇಕವಾಗಿ ಕಲಶವನ್ನಿಟ್ಟು ಪೂಜಿಸುವುದೇ ಶಾಸ್ತ್ರವಿಧಾನ. ಆದ್ದರಿಂದ ಅವರವರ ಸಂಪ್ರದಾಯಕ್ಕೆ ಅನುಗುಣವಾಗಿ ಪೂಜಾವಿಧಾನವನ್ನು ಅನುಸರಿಸಬೇಕು.
* ರಾಮನವಮಿಯ ದಿವಸ ಮಧ್ಯಾಹ್ನ ಪೂಜೆಯೇ ವಿಶೇಷ. ಉಳಿದ ದಿವಸಗಳಂದು ಕಥಂಚಿತ್ ಪ್ರಾತಃಕಾಲದ ಪೂಜೆಯು ಸಾಧುವಾಗುತ್ತದೆ. ಆದರೆ ರಾಮನವಮಿಯ ದಿವಸ ಮಧ್ಯಾಹ್ನದಲ್ಲಿಯೇ ಪೂಜೆಯನ್ನು ಮಾಡಬೇಕು.
* ಅಭಿಜಿನ್ ಮುಹೂರ್ತದಲ್ಲಿ ಶ್ರೀರಾಮದೇವರು ಅವತಾರವನ್ನು ಮಾಡಿರುತ್ತಾರೆ. ಆ ಸಂದರ್ಭದಲ್ಲಿ ಈ ಕೆಳಗಿನ ಶ್ಲೋಕವನ್ನು ಹೇಳಿ ಅರ್ಘ್ಯವನ್ನು ನೀಡಲೇ ಬೇಕು.

  ಕೌಸಲ್ಯಾಗರ್ಭಸಂಭೂತ ಸದಾ ಸೌಮಿತ್ರಿವತ್ಸಲ ।
  ಜಾನಕೀಸಹಿತೋ ರಾಮ ಗೃಹಾಣಾರ್ಘ್ಯಂ ನಮೋಽಸ್ತು ತೇ ॥
  ಕೌಸಲ್ಯಾನಂದನೋ ವೀರ ರಾವಣಾಸುರಮರ್ದನ ।
  ಸೀತಾಪತೇ ನಮಸ್ತುಭ್ಯಂ ಗೃಹಾಣಾರ್ಘ್ಯಂ ನಮೋಽಸ್ತು ತೇ ॥
  ಭ್ರಾತೃಭಿಃ ಸಹಿತಾಯ ಸೀತಾಪತಯೇ ಶ್ರೀರಾಮಚಂದ್ರಾಯ
  ಇದಮರ್ಘ್ಯಮಿದಮರ್ಘ್ಯಮಿದಮರ್ಘ್ಯಮ್ ॥
  ಭಾರತೀರಮಣಮುಖ್ಯಪ್ರಾಣಾಂತರ್ಗತ ಸೀತಾಪತೇ ಶ್ರೀರಾಮಚಂದ್ರಾಯನಮಃ
  ಇದಮರ್ಘ್ಯಮ್ ಇದಮರ್ಘ್ಯಮ್ ಇದಮರ್ಘ್ಯಮ್ ॥
* ರಾಮನವಮಿಯ ದಿವಸ ಮಧ್ಯಾಹ್ನಕಾಲದಲ್ಲಿ ಪೂಜಿಸುವುದು. ಈ ಮಂತ್ರದಿಂದ ಅರ್ಘ್ಯವನ್ನು ನೀಡುವುದೇ ಪ್ರಧಾನ ಕರ್ತವ್ಯವಾಗಿದೆ.
* ಅವಶ್ಯವಾಗಿ ರಾಮದೇವರನ್ನು ತೊಟ್ಟಿಲಿಗೆ ಹಾಕಿ ಜೋಗುಳವನ್ನು ಪಾಡಿ ಪೂಜಿಸಬೇಕು.

ಇಲ್ಲಿಗೆ ರಾಮನವಮಿಯ ದಿವಸ ಅನುಸರಿಸಲೇ ಬೇಕಾದ
ಕರ್ತವ್ಯಗಳು ಮುಗಿದವು.

## ರಾಮನವಮಿ ಉಪವಾಸ ಮಾಡಬೇಕೇ?

ರಾಮನವಮಿಯ ದಿವಸ ಉಪವಾಸ ಮಾಡಬೇಕಾಗಿಲ್ಲ. ಧರ್ಮಶಾಸ್ತ್ರಗಳಲ್ಲಿ ಎಲ್ಲಿಡೆಯೂ ಉಪವಾಸದ ಮಹಿಮೆಯನ್ನು ಸಾರಲಾಗಿದೆ. ಆದರೆ ಸ್ಮೃತಿಮುಕ್ತಾವಲಿಕಾರರು ಉಪವಾಸ ಮಾಡಬೇಕಾಗಿಲ್ಲ ಎಂಬುದನ್ನು ತಮ್ಮ ಗ್ರಂಥದಲ್ಲಿ ಸಮರ್ಥನೆ ಮಾಡಿದ್ದಾರೆ. ಭರದ್ವಾಜಸಂಹಿತೆಯಲ್ಲಿ ಉಪವಾಸ ಮಾಡಬೇಕಾಗಿಲ್ಲ ಎಂಬುದಾಗಿ ಸಮರ್ಥನೆ ಮಾಡಿದ್ದಾರೆ -

ಸರ್ವಾಸಾಂ ತು ಜಯಂತೀನಾಂ ಶ್ರೇಷ್ಠಾ ಕೃಷ್ಣಾಷ್ಟಮೀ ಮತಾ ।
ಯಸ್ಮಾತ್ ಸನ್ನಿಹಿತಾತ್ಯಂತಂ ತತ್ರೈವೋಪವಸೇನ್ನರಃ ॥
ಸರ್ವಾಸ್ವಪಿ ಜಯಂತೀಷು ಪೂಜಾ ಕಾರ್ಯಾ ವಿಶೇಷತಃ ।
ಸಾನ್ನಿಧ್ಯ ಏವ ಕರ್ತವ್ಯೋ ಹ್ಯುಪವಾಸೋ ನ ದೂರಗೇ ॥

ಎಲ್ಲ ಜಯಂತಿಗಳಲ್ಲಿ ಕೃಷ್ಣಾಷ್ಟಮಿಯೇ ಶ್ರೇಷ್ಠವಾಗಿದೆ. ನಾವಿರುವ ಕಾಲಕ್ಕೆ ಕೃಷ್ಣಾವತಾರವೇ ಅತ್ಯಂತ ಸಮೀಪವಾಗಿರುವುದರಿಂದ ಶ್ರೀಕೃಷ್ಣನು ಹುಟ್ಟಿದ ದಿವಸವೇ ಉಪವಾಸವನ್ನು ಮಾಡಬೇಕು. ಆದರೆ ಪ್ರತಿಯೊಂದು ಜಯಂತಿಗಳಲ್ಲಿಯೂ ವಿಶೇಷವಾದ ಪೂಜೆಯನ್ನು ಆಚರಿಸಬೇಕು. ಆದರೆ ಸನ್ನಿಹಿತವಾದ ಅವತಾರದ ದಿವಸ ಮಾತ್ರ ಉಪವಾಸವನ್ನು ಮಾಡಬೇಕು. ದೂರದಲ್ಲಿರುವ ಅವತಾರದ ಜಯಂತಿಗಳಲ್ಲಿ ಉಪವಾಸವನ್ನು ಮಾಡಬಾರದು.

ಹೀಗೆ ಹೇಳಿದ್ದರಿಂದ ಕೃಷ್ಣಾಷ್ಟಮಿಯ ದಿವಸ ಉಪವಾಸ ಮಾಡಲೇಬೇಕು. ಉಳಿದ ಭಗವಂತನ ಅವತಾರದ ದಿವಸಗಳಲ್ಲಿ ಉಪವಾಸವನ್ನು ಮಾಡಬೇಕಾಗಿಲ್ಲ.

ಭಗವಂತನು ಮಧ್ಯಾಹ್ನಕಾಲದಲ್ಲಿ ಶ್ರೀರಾಮಚಂದ್ರನಾಗಿ ಅವತಾರವನ್ನು ಮಾಡಿದ್ದಾನೆ. ಆದ್ದರಿಂದ ಬೆಳಿಗ್ಗೆ ಉಷಃಕಾಲದಲ್ಲಿ ಎದ್ದು, ಆಹ್ನಿಕಾದಿಗಳನ್ನು ಮುಗಿಸಿ, ಮಧ್ಯಾಹ್ನಕಾಲದಲ್ಲಿಯೇ ವಿಶೇಷವಾಗಿ ಪೂಜೆಯನ್ನು ಆಚರಣೆ ಮಾಡಬೇಕು. ಹಾಗೂ 'ಕೌಸಲ್ಯ ಗರ್ಭಸಂಭೂತ' ಎಂಬ ಶ್ಲೋಕದಿಂದ ಮಧ್ಯಾಹ್ನಕಾಲದ ಅಭಿಜಿನ್ ಮುಹೂರ್ತದಲ್ಲಿ ಅರ್ಘ್ಯವನ್ನು ನೀಡಬೇಕು. ಅನಂತರ ಅತಿಥಿ-ಅಭ್ಯಾಗತರಿಗೆ

ಅನ್ನಸಂತರ್ಪಣೆಯನ್ನು ಮಾಡಿ, ಪಾನಕ, ಕೋಸಂಬರಿಗಳ ದಾನವನ್ನು ಭೋಜನವನ್ನು ಮಾಡಬೇಕು. ಇದುವೇ ಶಿಷ್ಟಾಚಾರ ಪರಂಪರಾ ಪ್ರಾಪ್ತವಾಗಿದೆ.

(ಈ ಪುಸ್ತಕದಲ್ಲಿ ವ್ರತದ ಆಚರಣೆಯನ್ನು ಹೇಳುವಾಗ ಉಪವಾಸದ ಬಗ್ಗೆಯೂ ಹೇಳಲಾಗಿದೆ. ಇದು ಕೇವಲ ಪುರಾಣಗಳಲ್ಲಿ ಏನಿದೆ ಎಂಬುದರ ವಿಚಾರ.)

## ರಾಮನವಮಿಯ ಕಾಲನಿರ್ಣಯ

* ಮಾಧವನ ಕಾಲನಿರ್ಣಯವು ಹೇಳುವಂತೆ ಮಧ್ಯಾಹ್ನದ ಕಾಲದಲ್ಲಿ ನವಮಿಯು ಎರಡು ದಿನಗಳನ್ನು ವ್ಯಾಪಿಸಿದ್ದರೆ ಆ ಎರಡು ದಿನಗಳಲ್ಲಿ ಮೊದಲನೆಯ ದಿನ ಮಾತ್ರ ನವಮಿಯು ಇರುವುದಾದರೆ ಅಂದು ರಾಮನವಮಿಯ ವ್ರತವನ್ನು ಆಚರಣೆ ಮಾಡಬೇಕು. ಎರಡೂ ದಿನಗಳಲ್ಲಿ ಮಧ್ಯಾಹ್ನಕಾಲದಲ್ಲಿ ನವಮಿಯು ಇರುವುದಾದರೆ ಅಥವಾ ಒಂದು ದಿನವೂ ಕೂಡ ಮಧ್ಯಾಹ್ನ ಕಾಲಕ್ಕೆ ನವಮಿಯು ಇಲ್ಲದೇ ಇದ್ದರೆ ದಶಮಿಯಿಂದ ಕೂಡಿದ ನವಮಿಯಂದೇ ರಾಮನವಮಿಯನ್ನು ಆಚರಣೆ ಮಾಡಬೇಕು. ಅಷ್ಟಮಿಯ ಸಂಪರ್ಕವನ್ನು ಹೊಂದಿದ ನವಮಿಯಂದು ರಾಮನವಮಿಯ ಆಚರಣೆ ಮಾಡಬಾರದು.

  ನವಮೀ ಚಾಷ್ಟಮೀ ವಿದ್ಧಾ ತ್ಯಾಜ್ಯಾ ವಿಷ್ಣುಪರಾಯಣೈಃ ।
  ಉಪೋಷಣಂ ನವಮ್ಯಾಂ ಚ ದಶಮ್ಯಾಂ ಚೈವ ಪಾರಣಮ್ ॥

* ನವಮಿಯು ಪುನರ್ವಸು ನಕ್ಷತ್ರದೊಂದಿಗೆ ಕೂಡಿದ್ದರೆ ಅಂದು ಮಾಡುವ ರಾಮನವಮಿಗೆ ಅತ್ಯಂತ ಪಾವಿತ್ರ್ಯವಿದೆ. ಆದರೆ ಪುನರ್ವಸು ನಕ್ಷತ್ರದಿಂದ ಕೂಡಿರುವ ನವಮಿಗೆ ಅಷ್ಟಮಿಯು ಸಂಪರ್ಕವಿದ್ದರೆ ಅದನ್ನು ಪರಿತ್ಯಾಗಮಾಡಬೇಕು.

* ಕೃಷ್ಣಾಚಾರ್ಯರೂ ಸಹ ತಮ್ಮ ಸ್ಮೃತಿಮುಕ್ತಾವಲೀ ಗ್ರಂಥದಲ್ಲಿ 'ದಶಮೀ-ಯುಕ್ತಾ ರಾಮನವಮೀ ಕರ್ತವ್ಯಾ' ಎಂಬುದಾಗಿ ನಿರ್ಣಯ ನೀಡಿದ್ದಾರೆ.

* ಹಿಂದಿನ ದಿವಸ ಅಷ್ಟಮೀಸಂಪರ್ಕವಿರುವ ನವಮಿಯಿದ್ದು ಆ ನವಮಿಯು ಮಧ್ಯಾಹ್ನ ಕಾಲದಲ್ಲಿದ್ದರೂ ಕೂಡ ಮರುದಿವಸ ಮಧ್ಯಾಹ್ನಕಾಲದಲ್ಲಿ ನವಮಿಯು ಇಲ್ಲದೇ ಪುನರ್ವಸು ನಕ್ಷತ್ರವಿಲ್ಲದಿದ್ದರೂ ಮರುದಿವಸವೇ ರಾಮನವಮಿಯನ್ನು ಆಚರಣೆ ಮಾಡಬೇಕು.

* ಯಾವುದೇ ಕಾರಣಕ್ಕೂ ಅಷ್ಟಮಿಯ ಸಂಪರ್ಕವಿರುವ ನವಮಿಯಂದು ರಾಮನವಮಿಯನ್ನು ಆಚರಣೆ ಮಾಡಬಾರದು.

* ಅಧಿಕಚೈತ್ರಮಾಸದಲ್ಲಿ ರಾಮನವಮಿಯನ್ನು ಆಚರಣೆ ಮಾಡಬಾರದು. ನಿಜಚೈತ್ರಮಾಸದಲ್ಲಿಯೇ ರಾಮನವಮಿಯನ್ನು ಆಚರಣೆ ಮಾಡಬೇಕು.

## ರಾಮನವಮಿವ್ರತದ ಮಹತ್ವ

* ರಾಮನವಮಿವ್ರತವನ್ನು ಪ್ರತಿಯೊಬ್ಬರೂ ಆಚರಣೆ ಮಾಡಬೇಕು ಎಂದು ಕೆಲವು ವಾಕ್ಯಗಳು ಹೇಳುತ್ತವೆ. ರಾಮಭಕ್ತರಷ್ಟೇ ಮಾಡಬೇಕೆಂದು ಕೆಲವು ವಾಕ್ಯಗಳೂ ಹೇಳುತ್ತವೆ. ಕಾಮ್ಯಫಲವನ್ನು ಅಪೇಕ್ಷಿಸುವವರು ರಾಮನವಮಿವ್ರತವನ್ನು ಮಾಡಬೇಕೆಂದು ಇನ್ನು ಕೆಲವು ವಾಕ್ಯಗಳು ಹೇಳುತ್ತವೆ.

* ಆಗಸ್ತ್ಯಸಂಹಿತೆಯಲ್ಲಿ ಉಪದೇಶಿಸಿದ ಆಗಸ್ತ್ಯರ ಮಾತುಗಳ ಸಾರಾಂಶ ಹೀಗಿದೆ – ಪ್ರತಿಯೊಬ್ಬರಿಗೂ ವಿಧಿಸಲ್ಪಟ್ಟ ಕರ್ಮಗಳು ಮೋಕ್ಷಸಾಧನ-ವಾಗಬೇಕೆಂದರೆ ರಾಮನವಮೀ ವ್ರತ(ದ ಆಚರಣೆಯು ಮುಖ್ಯ). ಅಶುಚಿಯಾದವನು ಪಾಪಿಯಾದವನು ಈ ಶ್ರೇಷ್ಠವ್ರತವನ್ನು ಆಚರಿಸುವುದರಿಂದ ಜಗತ್ತಿನಲ್ಲಿ ಮಾನ್ಯನಾಗುತ್ತಾನೆ. ಶ್ರೀರಾಮನು ಹೇಗೆ ಗೌರವಾನ್ವಿತನಾಗಿದ್ದನೋ ಅವನಂತೆ ತನ್ನ ಭಕ್ತನನ್ನೂ ಕೂಡ ಗೌರವಾನ್ವಿತನನ್ನಾಗಿ ಮಾಡುತ್ತಾನೆ. ರಾಮನಿಗೆ ವಿರುದ್ಧವಾಗಿ ನಡೆದ ನರಾಧಮನು ಕುಂಭೀಪಾಕವೆಂಬ ಘೋರನರಕದಲ್ಲಿ ಬೇಯುತ್ತಾನೆ. ಒಂದು ರಾಮನವಮಿಯನ್ನು ಶ್ರದ್ಧೆಯಿಂದ ಆಚರಿಸಿದರೂ ಆ ಮನುಷ್ಯನ ಇಷ್ಟಾರ್ಥಗಳೆಲ್ಲವೂ ಕೈಗೂಡುತ್ತವೆ. ಪಾಪದಿಂದ ಮುಕ್ತನಾಗುತ್ತಾನೆ.

* ರಾಮನವಮಿಯ ವ್ರತವನ್ನು ಶ್ರದ್ಧೆಯಿಂದ ಆಚರಣೆ ಮಾಡಬೇಕು. ರಾತ್ರಿಯ ಕಾಲದಲ್ಲಿ ನೆಲದ ಮೇಲೆ ಕುಳಿತು ರಾಮಭಜನೆಯನ್ನು ಮಾಡುತ್ತಾ ಜಾಗರಣೆ ಮಾಡಬೇಕು. ಸದಾ ಎಂಬ ಶಬ್ದಪ್ರಯೋಗವನ್ನು ಮಾಡುವ ಮೂಲಕ ಈ ವ್ರತವನ್ನು ನಿತ್ಯವೆಂದು ಸೂಚಿಸಿದ್ದಾರೆ. ಶಾಸ್ತ್ರವಚನಗಳಲ್ಲಿ ಪಾಪಪರಿಹಾರವೇ ಮುಖ್ಯಫಲವೆಂದು ಹೇಳಿರುವುದರಿಂದ ಈ ವ್ರತವು ಕಾಮ್ಯವೆಂದು ಕೆಲವರು ಹೇಳುತ್ತಾರೆ. ಆದರೆ ನಿರ್ಣಯಸಿಂಧು, ತಿಥಿತತ್ತ್ವ ಮೊದಲಾದ ಗ್ರಂಥಗಳಲ್ಲಿ ಸಂಯೋಗಪೃಥಕ್ತ್ವ ಎಂಬ ಮೀಮಾಂಸಾನ್ಯಾಯದಂತೆ ಈ ವ್ರತವು ನಿತ್ಯವೂ ಹೌದು ಕಾಮ್ಯವೂ ಹೌದು ಎಂದು ನಿರ್ಣಯಸಿದ್ದಾರೆ. ಯಾರು ಇಂದ್ರಿಯ ಸಾಮರ್ಥ್ಯವನ್ನು ಬಯಸುತ್ತಾನೋ ಅವನು ಮೊಸರಿನಿಂದ ಹೋಮವನ್ನು ಮಾಡಬೇಕು. ಸ್ವತಂತ್ರವಾದ ಎರಡು ಬೇರೆ ಬೇರೆ ವಾಕ್ಯಗಳಲ್ಲಿ ಮೊಸರನ್ನು ಪ್ರತ್ಯೇಕವಾಗಿ ವಿಧಾನ ಮಾಡಿರುವುದರಿಂದ ದಧಿಹೋಮವು ನಿತ್ಯವೂ ಆಗಿದೆ ಕಾಮ್ಯವೂ ಆಗಿದೆ ಎಂದು ತಿಳಿಯಬೇಕು.

ಹೇಮಾದ್ರಿಯಲ್ಲಿ ನಿರ್ಣಯಸಿಂಧುವಿನಲ್ಲಿ ವ್ರತರಾಜದಲ್ಲಿ ಹೇಳಲ್ಪಟ್ಟ ರಾಮ-ನವಮೀ ವ್ರತವಿಧಾನವನ್ನು ಸಂಗ್ರಹವಾಗಿ ಹೀಗೆ ಹೇಳಬಹುದು – ಚೈತ್ರಶುಕ್ಲ ಅಷ್ಟಮಿಯ ದಿವಸ ರಾಮಭಕ್ತನು ಸ್ನಾನಸಂಧ್ಯಾವಂದನಾದಿಗಳನ್ನು ಆಚರಣೆ ಮಾಡಬೇಕು. ಅನಂತರ ಶ್ರೋತ್ರಿಯನೂ ರಾಮಭಕ್ತನೂ, ರಾಮಪೂಜಕನೂ, ರಾಮಮಂತ್ರಜ್ಞನೂ, ವೇದಜ್ಞನೂ ಆದ ಬ್ರಾಹ್ಮಣನನ್ನು ಆಮಂತ್ರಣ ಮಾಡಬೇಕು. ಅವನನ್ನು ಸ್ವಾಗತ ಮಾಡಿ ಪೂಜಿಸಿ, ಅವನಿಗೆ ರಾಮನ ಪ್ರತಿಮೆಯನ್ನು ದಾನ ಮಾಡುತ್ತೇನೆಂದು ಸಂಕಲ್ಪ ಮಾಡಬೇಕು. ಅನಂತರ ಆ ರಾಮಭಕ್ತನಿಗೆ ಅಭ್ಯಂಜನವನ್ನು ಮಾಡಿಸಿ, ಸ್ನಾನ ಮಾಡಿಸಬೇಕು. ಶ್ವೇತ ವಸ್ತ್ರಗಳನ್ನು ಶ್ವೇತಪುಷ್ಪಗಳನ್ನು ನೀಡಿ ಸಾತ್ವಿಕ ಆಹಾರವನ್ನು ಭೋಜನ ಮಾಡಿಸಬೇಕು. ಅನಂತರ ಉಳಿದ ಆಹಾರವನ್ನು ತಾನು ಭುಂಜಿಸಬೇಕು. ನಿರಂತರ ರಾಮಧ್ಯಾನವನ್ನು ಮಾಡುತ್ತಲೇ ಇರಬೇಕು. ಅವನ ಬಳಿ ರಾಮದೇವರ ಕಥೆಯನ್ನು ಕೇಳಬೇಕು. ರಾಮದೇವರ ಮಹತ್ವವನ್ನೂ ಕೂಡ ಕೇಳಿ ತಿಳಿದುಕೊಳ್ಳಬೇಕು. ಸಾಯಂಕಾಲದಲ್ಲಿ ಸಂಧ್ಯಾವಂದನೆ ಮೊದಲಾದವುಗಳನ್ನು

ಮಾಡಿ ಪುನಃ ರಾಮದೇವರ ಪೂಜೆ ಮಾಡಿ ಸಂಗೀತ ಭಜನೆ ಮೊದಲಾದವುಗಳಲ್ಲಿ ಭಾಗವಹಿಸಬೇಕು. ರಾತ್ರಿಯ ಕಾಲದಲ್ಲಿ ರಾಮಭಜನೆಯನ್ನು ಮಾಡುತ್ತಾ ನಿರಾಹಾರಿಯಾಗಿರಬೇಕು. ಹಗಲು ರಾತ್ರಿಗಳಲ್ಲಿ ರಾಮದೇವರ ಪಾದಕಮಲಗಳಲ್ಲಿ ಮನಸ್ಸನ್ನು ಇಟ್ಟಿರಬೇಕು.

ಮರುದಿವಸ ಬೆಳಿಗ್ಗೆ ಉಷಃಕಾಲದಲ್ಲಿ ಸ್ನಾನಾದಿ ನಿತ್ಯಕರ್ಮಗಳನ್ನು ಆಚರಣೆ ಮಾಡಬೇಕು. ಸೂರ್ಯೋದಯದಲ್ಲಿ ಗಾಯತ್ರೀಜಪ, ಸಂಧ್ಯಾವಂದನೆ ಮೊದಲಾದವುಗಳನ್ನು ಮಾಡಬೇಕು. ಮನೆಯ ಉತ್ತರದಿಕ್ಕಿನಲ್ಲಿ ಒಂದು ಮಂಟಪವನ್ನು ಮೊದಲೇ ಮಾಡಿರಬೇಕು. ಆ ಮಂಟಪವು ಪೂರ್ವಾದಿ ನಾಲ್ಕು ದ್ವಾರಗಳನ್ನು ಹೊಂದಿರಬೇಕು. ತೋರಣಗಳಿಂದ ಧ್ವಜಗಳಿಂದ ಪುಷ್ಪಗಳಿಂದ ಅಲಂಕೃತವಾಗಿರಬೇಕು. ಪೂರ್ವದ ಬಾಗಿಲನ್ನು ಶಂಖಚಕ್ರ ಹಾಗೂ ಹನುಮಂತನಿಂದ, ದಕ್ಷಿಣದ ಬಾಗಿಲನ್ನು ಗರುಡ ಬಿಲ್ಲು ಬಾಣಗಳಿಂದ ಅಲಂಕರಿಸಿರಬೇಕು. ಪಶ್ಚಿಮದ ಬಾಗಿಲನ್ನು ಗದೆ, ಕತ್ತಿ, ತೋಳುಬಂದಿಗಳಿಂದ, ಉತ್ತರದ ಬಾಗಿಲನ್ನು ಪದ್ಮ ಸ್ವಸ್ತಿಕ ಚಿಹ್ನೆಗಳಿಂದ, ನೀಲಮಣಿಗಳಿಂದಲೂ ಅಲಂಕರಿಸಿರಬೇಕು. ಮಂಟಪದಲ್ಲಿ ನಾಲ್ಕು ಮೊಳದ ಎತ್ತರದ ಪೀಠವನ್ನು ಮಾಡಿ ಅಲ್ಲಿ ಸ್ತೋತ್ರ ಸಂಗೀತ ನಾಟ್ಯಗಳ ವ್ಯವಸ್ಥೆ ಮಾಡಬೇಕು. ಬ್ರಾಹ್ಮಣರಿಂದ ಆಶೀರ್ವಚನ ಪಡೆಯ ಬೇಕು. ಅನಂತರ ಹೀಗೆ ಸಂಕಲ್ಪ ಮಾಡಬೇಕು –

''ಇಂದು ರಾಮನವಮಿಯ ದಿವಸ ನಾನು ಸಂಪೂರ್ಣ ಉಪವಾಸವನ್ನು ಮಾಡುತ್ತೇನೆ. ರಾಮಧ್ಯಾನದಲ್ಲಿಯೇ ನಿರತನಾಗುತ್ತೇನೆ. ರಾಮನ ಸುವರ್ಣ ಪ್ರತಿಮೆಯನ್ನು ಮಾಡಿಸಿ ಶ್ರೀರಾಮನ ಪ್ರೀತ್ಯರ್ಥವಾಗಿ ದಾನ ಮಾಡುತ್ತೇನೆ. ಶ್ರೀರಾಮನು ನನ್ನ ಅನಂತಪಾಪಗಳನ್ನು ಪರಿಹಾರ ಮಾಡಲಿ'' ಎಂದು.

ಶ್ರೀರಾಮದೇವರ ಪ್ರತಿಮೆಯನ್ನು ಒಂದು ಪೀಠದ ಮೇಲೆ ಇಡಬೇಕು. ಪ್ರತಿಮೆ ಹೀಗಿರಬೇಕು – ಎರಡು ಕೈಗಳಿರಬೇಕು. ಎಡತೊಡೆಯ ಮೇಲೆ ಸೀತಾದೇವಿಯನ್ನು

ಕುಳ್ಳಿರಿಸಿಕೊಂಡಿರಬೇಕು. ಎಡಗೈಯಿಂದ ಆ ಸೀತೆಯನ್ನು ಆಲಿಂಗನೆ ಮಾಡಿರಬೇಕು. ಬಲಗೈಯಲ್ಲಿ ಜ್ಞಾನಮುದ್ರೆಯನ್ನು ಧರಿಸಿರಬೇಕು. ಇಂಥ ಪ್ರತಿಮೆಗೆ ಪಂಚಾಮೃತಾಭಿಷೇಕವನ್ನು ಮೂಲಮಂತ್ರದಿಂದ ನ್ಯಾಸ ಮೊದಲಾದವುಗಳನ್ನು ಅನುಷ್ಠಾನ ಮಾಡಬೇಕು. ವೈಭವದಿಂದ ಪೂಜೆಯನ್ನು ಮಾಡಬೇಕು. ಉತ್ಸವಗಳನ್ನು ಆಚರಿಸಬೇಕು. ರಾತ್ರಿಯ ಕಾಲದಲ್ಲಿ ಪುನಃ ಜಾಗರಣೆಯನ್ನು ಮಾಡುತ್ತಾ ರಾಮಭಕ್ತರ ಸಂಗದಲ್ಲಿರಬೇಕು. ರಾಮಕಥೆಯನ್ನು ಶ್ರವಣ ಮಾಡಬೇಕು. ರಾಮಸ್ತೋತ್ರಗಳನ್ನು ಹಾಡುತ್ತಾ ಇರಬೇಕು. ಮರುದಿವಸ ಪ್ರಾತಃಕಾಲದಲ್ಲಿ ಸಾಧಕನು ಸ್ನಾನಸಂಧ್ಯಾವಂದನಾದಿಗಳನ್ನು ಮಾಡಿ ರಾಮಪ್ರತಿಮೆಗೆ ಷೋಡಶೋಪಚಾರ ಪೂಜೆಗಳನ್ನು ಮಾಡಬೇಕು. ಮೂಲಮಂತ್ರದಿಂದ ವೇದಿಕೆಯ ಮಧ್ಯದಲ್ಲಿ ಕುಂಡವನ್ನು ಹಾಕಿ ಹೋಮವನ್ನು ಮಾಡಬೇಕು. ೧೦೮ ಆಹುತಿಗಳನ್ನು ನೀಡಬೇಕು. ತುಪ್ಪ ಮಿಶ್ರಿತವಾದ ಪಾಯಸದಿಂದ ಆಹುತಿಯನ್ನು ನೀಡಬೇಕು. ಅನಂತರ ಆಚಾರ್ಯ ಪುರುಷನಿಗೆ ಎರಡು ಕರ್ಣಕುಂಡಲಗಳನ್ನು ಬೆರಳಿಗೆ ಉಂಗುರಗಳನ್ನು ಪುಷ್ಪಗಳನ್ನು ವಸ್ತ್ರಗಳನ್ನು ಧರಿಸಿದ ಶ್ರೀರಾಮನ ಪ್ರತಿಮೆಯನ್ನು ದಾನ ಮಾಡಬೇಕು. ಅನಂತರ ಮಂತ್ರದಲ್ಲಿರುವಂತೆ ಹೀಗೆ ಅನುಸಂಧಾನ ಮಾಡಬೇಕು –

'ಶ್ರೀರಾಮನೇ! ಇಂದು ವಸ್ತ್ರಾಭರಣಗಳಿಂದ ಅಲಂಕೃತವಾಗಿರುವ ನಿನ್ನ ಪ್ರತಿಮೆ-ಯನ್ನು ನಾನು ದಾನ ಮಾಡುತ್ತಿದ್ದೇನೆ. ನೀನು ನನಗೆ ಅನುಗ್ರಹ ಮಾಡು'.

ಹೀಗೆ ಸಂಕಲ್ಪವನ್ನು ಮಾಡಿ ಆಚಾರ್ಯನಿಗೂ ಉಳಿದ ಬ್ರಾಹ್ಮಣರಿಗೂ ಚಿನ್ನ ಗೋವು ಪಂಚೆ ಧಾನ್ಯ ಮೊದಲಾದವುಗಳನ್ನು ಯಥಾಶಕ್ತಿ ದಾನ ಮಾಡಬೇಕು. ಬ್ರಾಹ್ಮಣರ ಜೊತೆ ಭೋಜನವನ್ನು ಮಾಡಬೇಕು. ಹೀಗೆ ಮಾಡುವುದರಿಂದ ಬ್ರಹ್ಮಹತ್ಯಾದಿ ಮಹಾಪಾತಕಗಳು ಪರಿಹಾರವಾಗುತ್ತವೆ. ಈ ವ್ರತವನ್ನು ಮಾಡಿದವನು ತನ್ನ ಕೈಯ್ಯಲ್ಲಿಯೇ ಮುಕ್ತಿಯನ್ನು ಇಟ್ಟುಕೊಂಡಂತಾಗುವನು. ಮತ್ತು ಸೂರ್ಯ-ಗ್ರಹಣದ ಸಮಯದಲ್ಲಿ ಕುರುಕ್ಷೇತ್ರದಲ್ಲಿ ತುಲಾಪುರುಷವೆಂಬ ದಾನವನ್ನು ಮಾಡಿದ್ದರ ಫಲವು ಬರುತ್ತದೆ.

ಹೇಮಾದ್ರಿಯಲ್ಲಿ ಮತ್ತೂ ಒಂದು ಹೆಚ್ಚಿನ ವಿಚಾರವಿದೆ – ರಾಮನ ಪ್ರತಿಮೆಯ ಜೊತೆ ಭರತ ಮತ್ತು ಶತ್ರುಘ್ನರ ಪ್ರತಿಮೆಗಳನ್ನೂ ಧನುರ್ಧಾರಿಯಾದ ಲಕ್ಷ್ಮಣನ ಪ್ರತಿಮೆಯನ್ನೂ ದಶರಥ ಕೌಸಲ್ಯೆಯರ ಪ್ರತಿಮೆಯನ್ನು ಮಾಡಿಸಿ, ಪೂಜಿಸಿ ದಾನ ಮಾಡಬೇಕು ಎಂದು.

ಹೀಗೆ ರಾಮನವಮೀ ವ್ರತವನ್ನು ಶ್ರದ್ಧೆಯಿಂದ ಆಚರಣೆ ಮಾಡಬೇಕು. ಸ್ಕಂದಪುರಾಣದಲ್ಲಿ ಹಾಗೂ ಉಳಿದ ವ್ರತಗ್ರಂಥಗಳಲ್ಲಿ ಏಕಕಂಠದಿಂದ ಈ ವಿಚಾರವನ್ನು ನಿರ್ಣಯಿಸಲಾಗಿದೆ. ಇಷ್ಟನ್ನು ಆಚರಣೆ ಮಾಡಲು ಸಾಧ್ಯವಾಗದಿದ್ದರೆ ಪ್ರತಿಮಾದಾನ ಒಂದನ್ನು ಬಿಟ್ಟು ಉಳಿದೆಲ್ಲ ಉತ್ಸವಗಳನ್ನು ಆಚರಣೆ ಮಾಡಬೇಕು. ಅದೂ ಸಾಧ್ಯವಾಗದಿದ್ದರೆ ಯಥಾಶಕ್ತಿ ಯಥಾಮತಿ ಯಥಾದ್ರವ್ಯ ಮನೆಯಲ್ಲಿರುವ ಬಂಧುಗಳೆಲ್ಲರೂ ಸೇರಿ ರಾಮನವಮಿ ಉತ್ಸವವನ್ನು ಆಚರಿಸಬೇಕು. ಏತನ್ಮೂಲಕ ಶ್ರೀರಾಮಚಂದ್ರದೇವರ ಕೃಪಾಕಟಾಕ್ಷಕ್ಕೆ ಪಾತ್ರರಾಗಿ ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕು.

## ರಾಮದೇವರ ಅವತಾರಕಾಲ

* ಚೈತ್ರಮಾಸದ ಶುಕ್ಲಪಕ್ಷದ ನವಮಿಯ ದಿವಸ ಮಧ್ಯಾಹ್ನಕಾಲದಲ್ಲಿ ಅಷ್ಟಮಿಯ ಸಂಪರ್ಕವಿಲ್ಲದ ತಿಥಿಯಲ್ಲಿ ಪುನರ್ವಸು ನಕ್ಷತ್ರವಿದ್ದಾಗ ಶ್ರೀರಾಮಚಂದ್ರನು ಅವತಾರ ಮಾಡಿದನು.

* ಶ್ರೀರಾಮನು ಅವತಾರ ಮಾಡಿದಾಗ ಚಂದ್ರ ಹಾಗೂ ಬೃಹಸ್ಪತಿಗ್ರಹಗಳು ಯತಿಯಲ್ಲಿದ್ದರು. ಪಂಚಗ್ರಹಗಳು ಉಚ್ಚದಲ್ಲಿದ್ದರು. ಪೂರ್ವದಲ್ಲಿ ಉದಯುವಾಗುತ್ತಿದ್ದ ಲಗ್ನವು ಕರ್ಕಾಟಕದಲ್ಲಿತ್ತು. ಸೂರ್ಯನು ಮೇಷರಾಶಿಯಲ್ಲಿ ಉಚ್ಚನಾಗಿದ್ದನು. ಇಂಥ ಸುಮುಹೂರ್ತದಲ್ಲಿ ಶ್ರೀರಾಮಚಂದ್ರನು ಕೌಸಲ್ಯೆಯ ಗರ್ಭದಿಂದ ಅವತಾರ ಮಾಡಿದನು.

* ೨೪ನೆಯ ತ್ರೇತಾಯುಗದಲ್ಲಿ ಶ್ರೀರಾಮನ ಅವತಾರವಾಯಿತೆಂದು ಹಲ- ವರು ಹೇಳುತ್ತಾರೆ. ೨೮ನೆಯ ತ್ರೇತಾಯುಗದಲ್ಲಿ ರಾಮದೇವರು ಅವತಾರವನ್ನು ಮಾಡಿದ್ದಾರೆ. (ಈ ವಿಷಯವನ್ನು ನನ್ನ ಸಂಪಾದನೆಯ ರಾಮಾಯಣ ಪುಸ್ತಕದಲ್ಲಿ ವಿವರಿಸಲಾಗಿದೆ).

* ಕಲಶದಲ್ಲಿ ಪೂಜಿಸುವುದಾದರೆ ಹೀಗೆ ಮಾಡಬೇಕು – ಬೆಳ್ಳಿಯ ಎರಡು ದೊಡ್ಡ ಕಲಶಗಳನ್ನಿಡಬೇಕು. ಆವೆರಡರಲ್ಲಿ ಶ್ರೀರಾಮಚಂದ್ರದೇವರನ್ನು ಹಾಗೂ ಸೀತಾದೇವಿಯನ್ನು ಆವಾಹನೆ ಮಾಡಬೇಕು. ಸುತ್ತಲೂ ಲಕ್ಷ್ಮಣ, ಭರತ, ಶತ್ರುಘ್ನ, ಹಾಗೂ ಹನುಮಂತದೇವರಿಗೆ ಪ್ರತ್ಯೇಕವಾದ ಕಲಶಗಳನ್ನು ಇಡಬೇಕು. ಪ್ರತಿಯೊಂದು ಕಲಶಗಳನ್ನು ಗಂಧ, ಅಕ್ಷತಾ, ಪುಷ್ಪ, ತೆಂಗಿನ ಕಾಯಿ, ಬಂಗಾರ, ರತ್ನ, ಬೆಳ್ಳಿ ಇವುಗಳಿಂದ ಅಲಂಕರಿಸಿರಬೇಕು. ಮತ್ತು ಆ ಕಲಶಗಳಿಗೆ ಹಸಿದಾರವನ್ನು ಸುತ್ತಿರಬೇಕು. ಮತ್ತು ಅನಂತಪೂಜೆಯಲ್ಲಿ ಹೇಳಿದಂತೆ ಭೂಪ್ರಾರ್ಥನೆ ಕಲಶಪೂಜೆ ಮೊದಲಾದವುಗಳನ್ನು ವಿಧಿಪ್ರಕಾರವಾಗಿ ಮಾಡಬೇಕು.

॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ ॥

# ಶ್ರೀರಾಮದೇವರ ಪೂಜೆ

ಶ್ರೀಗುರುಭ್ಯೋ ನಮಃ । ಶ್ರೀ ಪರಮಗುರುಭ್ಯೋ ನಮಃ ॥

ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥

ಸರ್ವದಾ ಸರ್ವಕಾರ್ಯೇಷು ನಾಸ್ತಿ ತೇಷಾಮಮಂಗಲಮ್ ।
ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನೋ ಹರಿಃ ॥

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ ।
ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ ॥

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ ॥

ನಮಸ್ತೇ ಪ್ರಾಣೇಶ ಪ್ರಣತವಿಭವಾಯಾವನಿಮಗಾಃ
ನಮಃ ಸ್ವಾಮಿನ್ ರಾಮಪ್ರಿಯತಮ ಹನೂಮನ್ ಗುರುಗುಣ ।
ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟಭಗವನ್
ನಮಃ ಶ್ರೀಮನ್‌ಮಧ್ವ ಪ್ರದಿಶ ಸುದೃಶಂ ನೋ ಜಯ ಜಯ ॥

ಮೃತ್ಯುಂಜಯ ನಮಸ್ತುಭ್ಯಂ ಮೃತ್ಯುಂ ಹರ ನಮಾಮ್ಯಹಮ್ ।
ಸರ್ವಮೃತ್ಯುವಿನಾಶಾಯ ಮೃತ್ಯುಂಜಯ ನಮೋ ನಮಃ ॥

ದುಷ್ಟಾನಾಂ ವಿಘ್ನಕರ್ತಾ ಸುಚರಿತ ಸುಜನಸ್ತೋಮವಿಘ್ನಾಪಹರ್ತಾ
ತಸ್ಮಾದ್ ವಿಘ್ನಾಧಿಪೋऽಹಂ ಮತ ಇತಿ ಸುಧಿಯಾಂ ಸ್ಪಷ್ಟಮಾಜ್ಞಾಪನಾಯ।
ಪೌಲಸ್ತ್ಯೇಚ್ಛಾಂತರಾಯಃ ಸುರಮುನಿನಿಕರಾಭೀಷ್ಟಸಂಪ್ರಾಪ್ತ್ಯುಪಾಯಃ
ಶ್ರೇಯೋ ವಿಘ್ನಾಧಿರಾಜಃ ಪ್ರದಿಶತು ಸತತಂ ಭೂರಿಗೌರೀತನೂಜಃ॥

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ।
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇऽಂಘ್ರಿಯುಗಂ ಸ್ಮರಾಮಿ॥

ನಮಸ್ತುಭ್ಯಂ ಭಗವತೇ ರಾಘವಾಯ ಮಹಾತ್ಮನೇ।
ರಾವಣಾದಿಜಗದ್ವೈರಿನಿಬರ್ಹಣಮಹೌಜಸೇ॥

## ಆಚಮನಮ್

ಕೇಶವಾಯ ಸ್ವಾಹಾ। ನಾರಾಯಣಾಯ ಸ್ವಾಹಾ। ಮಾಧವಾಯ ಸ್ವಾಹಾ। ಗೋವಿಂದಾಯ ನಮಃ। ವಿಷ್ಣವೇ ನಮಃ। ಮಧುಸೂದನಾಯ ನಮಃ। ತ್ರಿವಿಕ್ರಮಾಯ ನಮಃ। ವಾಮನಾಯ ನಮಃ। ಶ್ರೀಧರಾಯ ನಮಃ। ಹೃಷೀ-ಕೇಶಾಯ ನಮಃ। ಪದ್ಮನಾಭಾಯ ನಮಃ। ದಾಮೋದರಾಯ ನಮಃ। ಸಂಕರ್ಷ-ಣಾಯ ನಮಃ। ವಾಸುದೇವಾಯ ನಮಃ। ಪ್ರದ್ಯುಮ್ನಾಯ ನಮಃ। ಅನಿರು-ದ್ಧಾಯ ನಮಃ। ಪುರುಷೋತ್ತಮಾಯ ನಮಃ। ಅಧೋಕ್ಷಜಾಯ ನಮಃ। ನಾರ-ಸಿಂಹಾಯ ನಮಃ। ಅಚ್ಯುತಾಯ ನಮಃ। ಜನಾರ್ದನಾಯ ನಮಃ। ಉಪೇಂ-ದ್ರಾಯ ನಮಃ। ಹರಯೇ ನಮಃ। ಶ್ರೀ ಕೃಷ್ಣಾಯ ನಮಃ।

(ಆಚಮನವನ್ನು ಎರಡು ಬಾರಿ ಮಾಡಬೇಕು)

## ಪ್ರಾಣಾಯಾಮ

ಓಂ ಪ್ರಣವಸ್ಯ ಪರಬ್ರಹ್ಮಋಷಿಃ ಪರಮಾತ್ಮಾ ದೇವತಾ ದೈವೀ ಗಾಯತ್ರೀ ಛಂದಃ ಪ್ರಾಣಾಯಾಮೇ ವಿನಿಯೋಗಃ।

ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಂ ಸತ್ಯಂ । ಓಂ ತತ್ಸವಿತುರ್ವರೇಣ್ಯಮ್ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಓಮಾಪೋಜ್ಯೋಽತಿ ರಸೋಽಮೃತಂ ಬ್ರಹ್ಮ ಭೂರ್ಭುವಸ್ಸ್ವರೋಮ್ ।

## ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ......... ಶಾಲೀವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಉತ್ತರಾಯನೇ ವಸಂತಋತೌ ಚೈತ್ರಮಾಸೇ ಶುಕ್ಲಪಕ್ಷೇ ನವಮ್ಯಾಂ ಶುಭತಿಥೌ । ಸಮಸ್ತದುರಿತಕ್ಷಯದ್ವಾರಾ ಶ್ರೀಸೀತಾರಾಮಚಂದ್ರಪ್ರೀತ್ಯರ್ಥಂ ಮಮ ... ಗೋತ್ರೋದ್ಭವಸ್ಯ .... ನಕ್ಷತ್ರೇ ರಾಶೌ ಜಾತಸ್ಯ .... ನಾಮಧೇಯಸ್ಯ ... ಸಪುತ್ರಪುತ್ರೀಕಸ್ಯ , ಸಪತ್ನೀಕಸ್ಯ , ಸಕುಟುಂಬಸ್ಯ ಕ್ಷೇಮಸ್ಥೈರ್ಯವಿಜಯಾಯುರಾರೋಗ್ಯ ಐಶ್ವರ್ಯಾಭಿವೃದ್ಧ್ಯರ್ಥಂ ಸಮಸ್ತದುರಿತೋಪಶಾಂತ್ಯರ್ಥಂ ಸಮಸ್ತಸನ್ಮಂಗಲಾವಾಪ್ತ್ಯರ್ಥಂ ಧರ್ಮಾದಿಚತುರ್ವಿಧಪುರುಷಾರ್ಥಸಿದ್ಧ್ಯರ್ಥಂ, ಮನೋವಾಕ್ಕಾಯಕರ್ಮಭಿಃ ಜ್ಞಾನಾಽಜ್ಞಾನಕೃತದೋಷಪರಿಹಾರಾರ್ಥಂ, ಆಪ್ತೋರ್ಯಾಮಾದಿ ಸರ್ವಕ್ರತುಫಲಸಿದ್ಧ್ಯರ್ಥಂ, ಸರ್ವವ್ರತಸಮಸ್ತತೀರ್ಥಸ್ನಾನ ಸಕಲಪುಣ್ಯಕ್ಷೇತ್ರಸಂದರ್ಶನಫಲಸಿದ್ಧ್ಯರ್ಥಂ, ಚತುರ್ವೇದ ಅಷ್ಟಾದಶಪುರಾಣೇತಿಹಾಸ ಪಠಣಶ್ರವಣಫಲಸಿದ್ಧ್ಯರ್ಥಂ, ಪುತ್ರಪೌತ್ರಾದ್ಯವಿಚ್ಛಿನ್ನಸಂತತಿಪ್ರಾಪ್ತ್ಯರ್ಥಂ, ಆಧಿಭೌತಿಕಾದಿತಾಪತ್ರಯನಿವೃತ್ತ್ಯರ್ಥಂ ಗ್ರಹಾಣಾಮಾನುಕೂಲ್ಯತಾಸಿದ್ಧ್ಯರ್ಥಂ, ಅಸ್ಮದ್ಗು -ರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಸೀತಾಲಕ್ಷ್ಮಣಭರತಶತ್ರುಘ್ನಸಮೇತಶ್ರೀರಾಮಚಂದ್ರಸ್ಯ ಪೂರ್ಣಾನುಗ್ರಹಸಿದ್ಧ್ಯರ್ಥಂ ಭಗವತೋ

ವೀರ್ಯೇಣ, ಭಗವತೋ ಬಲೇನ, ಭಗವತಃಕರ್ಮಣಾ ಭಗವತಃ ಪ್ರೇರಿತೋऽಹಂ ಶ್ರೀರಾಮಚಂದ್ರಸ್ಯ ಪೂಜಾಂ ಕರಿಷ್ಯೇ ।

## ದೀಪ ಹಚ್ಚಬೇಕು

ದೀಪಃ ಪಾಪಹರೋ ನೃಣಾಂ ದೀಪ ಆಪನ್ನಿವಾರಕಃ ।
ದೀಪೋ ವಿಧತ್ತೇ ಸುಕೃತಂ ದೀಪಃ ಸಂಪತ್ಪ್ರದಾಯಕಃ ॥

ದೀಪಜ್ಯೋತಿ ಪರಬ್ರಹ್ಮ ದೀಪಜ್ಯೋತಿಃ ಜನಾರ್ದನಃ ।
ದೀಪೋ ಹರತು ಮೇ ಪಾಪಂ ಸಂಧ್ಯಾದೀಪ ನಮೋऽಸ್ತು ತೇ ॥

ಶುಭಂ ಕುರುಷ್ವ ಕಲ್ಯಾಣಂ ಆರೋಗ್ಯಂ ಸುಖಸಂಪದಮ್ ।
ಮಮ ಬುದ್ಧಿ ಪ್ರಕಾಶಂ ಚ ದೀಪಜ್ಯೋತಿರ್ನಮೋऽಸ್ತು ತೇ ॥

ಭೋ ದೀಪ ಬ್ರಹ್ಮರೂಪಸ್ತ್ವಂ ಕರ್ಮಸಾಕ್ಷಿ ಇಹಾರ್ಹಸಿ ।
ಯಾವತ್ ಕರ್ಮಸಮಾಪ್ತಿಃ ಸ್ಯಾತ್ ತಾವತ್ ತ್ವಂ ಸುಸ್ಥಿರೋ ಭವ ॥

ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ ।
ಹವ್ಯವಾಡ್ ಜುಹ್ವಾಸ್ಯಃ ॥

## ಘಂಟಾನಾದ ಮಾಡಬೇಕು

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।
ಕುರ್ವೇ ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ॥

## ಭೂತೋಚ್ಚಾಟನೆ ಮಾಡಬೇಕು

ಅಪಸರ್ಪಂತು ಯೇ ಭೂತಾಃ ಯೇ ಭೂತಾಃ ಭುವಿ ಸಂಸ್ಥಿತಾಃ ।
ಯೇ ಭೂತಾಃ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ॥

ಅಪಕ್ರಾಮಂತು ಯೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ ।
ತೇಷಾಮಪ್ಯವಿರೋಧೇನ ಪೂಜಾಕರ್ಮ ಸಮಾರಭೇ ॥

(ದೇವರ ಪೂಜೆಯ ಜೊತೆಯಲ್ಲಿಯೇ ರಾಮದೇವರ ಪೂಜೆಯನ್ನು ಮಾಡಬೇಕಾದ್ದರಿಂದ ಶಂಖ ಪೂಜೆ, ಕಲಶಪೂಜೆಗಳನ್ನು ದೇವರ ಪೂಜೆಯಲ್ಲಿ ನೀಡಿದಂತೆ ಮಾಡಬೇಕು. ಹಾಗೂ ನಮ್ಮ ಸಂಸ್ಥೆಯಿಂದ ಮುದ್ರಿತವಾದ ದೇವರ ಪೂಜೆ ಪುಸ್ತಕವನ್ನು ಇಟ್ಟುಕೊಂಡು ಅದರ ಜೊತೆ ಈ ಕೆಳಗಿನ ಮಂತ್ರಗಳನ್ನು ಸೇರಿಸಿ ಪೂಜಿಸಬೇಕು. ಅನಂತವ್ರತದಲ್ಲಿರುವ ಕಲಶಸ್ಥಾಪನಾದಿ ಮಂತ್ರಗಳನ್ನು ಪಠಿಸಿ, ಕಲಶಸ್ಥಾಪನೆಯನ್ನು ಮಾಡಿ, ಅದರಲ್ಲಿ ಕೆಳಗಿನ ಮಂತ್ರದಿಂದ ಆವಾಹನೆ ಮಾಡಿ ಪೂಜಿಸಬೇಕು.)

## ಆವಾಹನಂ

ಶ್ಯಾಮಂ ರವೀಂದ್ವಮಿತದೀಧಿತಿಕಾಂತಿಯುಕ್ತಂ
ಜ್ಞಾನಂ ಶರಂ ಚ ದಧತಂ ಪ್ರಿಯಯಾ ಸಮೇತಮ್ ।
ಸ್ವಾತ್ಮಸ್ವರೂಪಮಮಿತಂ ಹನುಮನ್ಮುಖೇಷು
ಸಂದರ್ಶಯಂತಮಜಿತಂ ಸ್ಮರತೋರುಗೀರ್ಭಿಃ ॥

ಆವಾಹಯಾಮಿ ವಿಶ್ವೇಶಂ ಜಾನಕೀವಲ್ಲಭಂ ಪ್ರಭುಮ್ ।
ಕೌಸಲ್ಯಾತನಯಂ ವಿಷ್ಣುಂ ಶ್ರೀರಾಮಂ ಪ್ರಕೃತೇಃ ಪರಮ್ ॥

ಶ್ರೀರಾಮಾಗಚ್ಛ ಭಗವನ್ ರಘುವೀರ ನೃಪೋತ್ತಮ ।
ಜಾನಕ್ಯಾ ಸಹ ರಾಜೇಂದ್ರ ಸುಸ್ಥಿರೋ ಭವ ಸರ್ವದಾ ॥

ರಾಮಚಂದ್ರ ಮಹೇಷ್ವಾಸ ರಾವಣಾಂತಕ ರಾಘವ ।
ಯಾವತ್ ಪೂಜಾಂ ಸಮಾಪ್ಯೇಽಹಂ ತಾವತ್ ತ್ವಂ ಸನ್ನಿಧೋ ಭವ ॥

ಓಂ ಭೂಃ ಸೀತಾಸಹಿತಶ್ರೀರಾಮಚಂದ್ರಮಾವಾಹಯಾಮಿ ।
ಓಂ ಭುವಃ ಸೀತಾಸಹಿತಶ್ರೀರಾಮಚಂದ್ರಮಾವಾಹಯಾಮಿ ।
ಓಂ ಸ್ವಃ ಸೀತಾಸಹಿತಶ್ರೀರಾಮಚಂದ್ರಮಾವಾಹಯಾಮಿ ।
ಓಂ ಭೂರ್ಭುವಸ್ವಃ ಸೀತಾಸಹಿತಶ್ರೀರಾಮಚಂದ್ರಮಾವಾಹಯಾಮಿ ।

ಲಕ್ಷ್ಮಣಮಾವಾಹಯಾಮಿ; ಭರತಮಾವಾಹಯಾಮಿ, ಶತ್ರುಘ್ನಮಾವಾಹ-ಯಾಮಿ, ಹನೂಮಂತಮ್ ಆವಾಹಯಾಮಿ, (ಆಯಾಯ ಕಲಶಗಳನ್ನು ಮುಟ್ಟಿ ವ್ಯಾಹೃತಿಗಳಿಂದ ಪ್ರತ್ಯೇಕವಾಗಿ ಆವಾಹನೆ ಮಾಡಬೇಕು)

ಕೋಮಲಾಕ್ಷಂ ವಿಶಾಲಾಕ್ಷಮ್ ಇಂದ್ರನೀಲಸಮಪ್ರಭಮ್ ।
ದಕ್ಷಿಣಾಂಗೇ ದಶರಥಂ ಪುತ್ರಾವೇಕ್ಷಣತತ್ಪರಮ್ ॥

ಪೃಷ್ಠತೋ ಲಕ್ಷ್ಮಣಂ ದೇವಂ ಸಚ್ಛತ್ರಂ ಕನಕಪ್ರಭಮ್ ।
ಪಾರ್ಶ್ವೇ ಭರತಶತ್ರುಘ್ನೌ ತಾಲವೃಂತಕರಾವುಭೌ ॥
ಅಗ್ರೇಽವ್ಯಗ್ರಂ ಹನೂಮಂತಂ ರಾಮಾನುಗ್ರಹಕಾಂಕ್ಷಿಣಮ್ ।
(ರಾಮಸ್ಯ ಜನನೀ ಚಾಸಿ ರಾಮಾತ್ಮಕಮಿದಂ ಜಗತ್ ।
ಅತಸ್ತ್ವಾಂ ಪೂಜಯಿಷ್ಯಾಮಿ ಲೋಕಮಾತಃ ನಮೋಽಸ್ತು ತೇ ॥)

ಇತಿ ಸನ್ನಿಧಾಪನಮ್ ।

ರಘುನಾಯಕ ರಾಜರ್ಷೇ ನಮೋ ರಾಜೀವಲೋಚನ ।
ರಘುನಂದನ ಮೇ ದೇವ ಶ್ರೀರಾಮಾಭಿಮುಖೋ ಭವ ॥

ಇತಿ ಸಮ್ಮುಖೀಕರಣಮ್ ।

ಆವಾಹಿತೋ ಭವ । ಸ್ಥಾಪಿತೋ ಭವ । ಸನ್ನಿರುದ್ಧೋ ಭವ । ಅವಕುಂಠಿತೋ ಭವ । ಸುಪ್ರಸನ್ನೋ ಭವ । ವರದೋಭವ । ಪ್ರಸೀದ । ಪ್ರಸೀದ । (ಆವಾಹನಾದಿ ಷಣ್ಮುದ್ರೆಗಳನ್ನು ತೋರಿಸಬೇಕು.) ಓಂ ರಾಂ ರಾಘವಾಯ ನಮಃ (ಅಷ್ಟವಾರಂ) ಓಂ ಓಂ ನಮೋ ನಾರಾಯಣಾಯ ಓಂ (ಅಷ್ಟವಾರಂ)

## ಆಸನ

### ಮಂತ್ರಾಕ್ಷತೆ ಹಾಕಿರಿ

ರಾಜಾಧಿರಾಜ ರಾಜೇಂದ್ರ ರಾಮಚಂದ್ರ ಮಹೀಪತೇ ।
ರತ್ನಸಿಂಹಾಸನಂ ತುಭ್ಯಂ ದಾಸ್ಯಾಮಿ ಸ್ವೀಕುರು ಪ್ರಭೋ ॥

## ಪಾದ್ಯ

### ಉದ್ಧರಣೆಯಿಂದ ನೀರು ಬಿಡಿರಿ

ತ್ರೈಲೋಕ್ಯಪಾವನ ಅನಂತ ನಮಸ್ತೇ ರಘುನಾಯಕ ।
ಪಾದ್ಯಂ ಗೃಹಾಣ ರಾಜರ್ಷೇ ನಮೋ ರಾಜೀವಲೋಚನ ॥

## ಅರ್ಘ್ಯ

### ಬೊಗಸೆಯಿಂದ ನೀರು ಬಿಡಿರಿ

ಪರಿಪೂರ್ಣಾನಂದ ನಮೋ ರಾಮಾಯ ವೇಧಸೇ ।

ಗೃಹಾಣಾರ್ಘ್ಯಂ ಮಯಾ ದತ್ತಂ ಕೃಷ್ಣ ವಿಷ್ಣೋ ಜನಾರ್ದನ ॥

## ಆಚಮನ

### ಕಾಲು ತೊಳೆಯಿರಿ

ನಮಃ ಸತ್ಯಾಯ ಶುದ್ಧಾಯ ನಿತ್ಯಾಯ ಜ್ಞಾನರೂಪಿಣೇ ।
ಗೃಹಾಣಾಚಮನಂ ನಾಥ ಸರ್ವಲೋಕೈಕನಾಯಕ ॥

## ಮಧುಪರ್ಕ

### ಕುಡಿಯಲು ಮಧುಪರ್ಕ ನೀಡಿರಿ

ನಮಃ ಶ್ರೀವಾಸುದೇವಾಯ ತತ್ತ್ವಜ್ಞಾನಸ್ವರೂಪಿಣೇ ।
ಮಧುಪರ್ಕಂ ಗೃಹಾಣೇದಂ ಜಾನಕೀಪತಯೇ ನಮಃ ॥

## ಪಂಚಾಮೃತಸ್ನಾನಂ

### ಪಂಚಾಮೃತಾಭಿಷೇಕ ಮಾಡಿರಿ

ಪಂಚಾಮೃತಂ ಮಯಾನೀತಂ ಪಯೋ ದಧಿ ಘೃತಂ ಮಧು ?।
ಶರ್ಕರಾ ಚೇತಿ ತದ್ಭಕ್ತ್ಯಾ ದತ್ತಂ ತೇ ಪ್ರತಿಗೃಹ್ಯತಾಮ್ ॥

## ಸ್ನಾನ

### ಅಭಿಷೇಕ ಮಾಡಿರಿ

ಬ್ರಹ್ಮಾಂಡೋದರಮಧ್ಯಸ್ಥೈಸ್ತೀರ್ಥೈಶ್ಚ ರಘುನಂದನ ।
ಸ್ನಾಪಯಿಷ್ಯಾಮ್ಯಹಂ ಭಕ್ತ್ಯಾ ತ್ವಂ ಪ್ರಸೀದ ಜನಾರ್ದನ ॥

## ವಸ್ತ್ರ

### ಗೆಜ್ಜೆವಸ್ತ್ರ ಏರಿಸಿರಿ

ತಪ್ತಕಾಂಚನಸಂಕಾಶಂ ಪೀತಾಂಬರಮಿದಂ ಹರೇ ।
ತ್ವಂ ಗೃಹಾಣ ಜಗನ್ನಾಥ ರಾಮಚಂದ್ರ ನಮೋಽಸ್ತು ತೇ ॥

## ಯಜ್ಞೋಪವೀತ

### ಯಜ್ಞೋಪವೀತ ಸಮರ್ಪಿಸಿರಿ

ಶ್ರೀರಾಮಾಚ್ಯುತ ಯಜ್ಞೇಶ ಶ್ರೀಧರಾನಂತ ರಾಘವ ।
ಬ್ರಹ್ಮಸೂತ್ರಂ ಸೋತ್ತರೀಯಂ ಗೃಹಾಣ ರಘುನಂದನ ॥

## ಗಂಧ

### ಗಂಧ ಹಚ್ಚಿರಿ

ಕುಂಕುಮಾಗರುಕಸ್ತೂರೀಕರ್ಪೂರೋನ್ಮಿಶ್ರಚಂದನಮ್ ।
ತುಭ್ಯಂ ದಾಸ್ಯಾಮಿ ರಾಜೇಂದ್ರ ಶ್ರೀರಾಮ ಸ್ವೀಕುರು ಪ್ರಭೋ ॥

## ಅಕ್ಷತಾ

### ಮಂತ್ರಾಕ್ಷತೆ ಏರಿಸಿರಿ

ಅಕ್ಷತಾಂಶ್ಚ ಸುರಶ್ರೇಷ್ಠ ಕುಂಕುಮಾಕ್ತಾ ಸುಶೋಭಿತಾಃ ।
ಮಯಾ ನಿವೇದಿತಾ ಭಕ್ತ್ಯಾ ಗೃಹಾಣ ಪರಮೇಶ್ವರ ॥

# ಪುಷ್ಪ

## ಹೂವು ಏರಿಸಿರಿ

ತುಲಸೀಕುಂದಮಂದಾರಜಾತೀಪುನ್ನಾಗಚಂಪಕೈಃ।
ಕದಂಬಕರವೀರೈಶ್ಚ ಕುಸುಮೈಃ ಶತಪತ್ರಕೈಃ ॥
ನೀಲಾಂಬುಜೈರ್ಬಿಲ್ವಪತ್ರೈಃ ಪುಷ್ಪಮಾಲ್ಯೈಶ್ಚ ರಾಘವ।
ಪೂಜಯಿಷ್ಯಾಮ್ಯಹಂ ಭಕ್ತ್ಯಾ ಗೃಹಾಣ ತ್ವಂ ಜನಾರ್ದನ ॥

# ಅಂಗಪೂಜೆ

## ತುಳಸಿ ಏರಿಸಿರಿ

ರಾಮಚಂದ್ರಾಯ ನಮಃ ಪಾದೌ ಪೂಜಯಾಮಿ
ರಾಜೀವಲೋಚನಾಯ ನಮಃ ಗುಲ್ಫೌ ಪೂಜಯಾಮಿ
ರಾವಣಾಂತಕಾಯನಮಃ ಜಾನುನೀ ಪೂಜಯಾಮಿ
ವಾಚಸ್ಪತಯೇ ನಮಃ ಊರೂ ಪೂಜಯಾಮಿ
ವಿಶ್ವರೂಪಾಯ ನಮಃ ಜಂಘೇ ಪೂಜಯಾಮಿ
ತ್ರಿವಿಕ್ರಮಾಯ ನಮಃ ಕಟಿಂ ಪೂಜಯಾಮಿ
ವಿಶ್ವಾಮಿತ್ರಪ್ರಿಯಾಯ ನಮಃ ನಾಭಿಂ ಪೂಜಯಾಮಿ
ಧೃತವಿಶ್ವಾಯ ನಮಃ ಉದರಂ ಪೂಜಯಾಮಿ
ಪರಮಾತ್ಮನೇ ನಮಃ ಹೃದಯಂ ಪೂಜಯಾಮಿ
ಸಂವತ್ಸರಾಯ ನಮಃ ಉರಃ ಪೂಜಯಾಮಿ
ಶ್ರೀಕಂಠಾಯ ನಮಃ ಕಂಠಂ ಪೂಜಯಾಮಿ
ಸರ್ವಾಸ್ತ್ರಧಾರಿಣೇ ನಮಃ ಬಾಹೂ ಪೂಜಯಾಮಿ
ರಘೂದ್ವಹಾಯ ನಮಃ ಮುಖಂ ಪೂಜಯಾಮಿ
ಪದ್ಮನಾಭಾಯ ನಮಃ ಜಿಹ್ವಾಂ ಪೂಜಯಾಮಿ
ದಾಮೋದರಾಯ ನಮಃ ದಂತಾನ್ ಪೂಜಯಾಮಿ
ಸೀತಾಪತಯೇ ನಮಃ ಲಲಾಟಂ ಪೂಜಯಾಮಿ

| | |
|---|---|
| ಸಹಸ್ರಶಿರಸೇ ನಮಃ | ಶಿರಃ ಪೂಜಯಾಮಿ |
| ರಾಮಾಯ ನಮಃ | ಶಂಖಂ ಪೂಜಯಾಮಿ |
| ಸೀತಾಪತಯೇ ನಮಃ | ಚಕ್ರಂ ಪೂಜಯಾಮಿ |
| ಸರ್ವಾತ್ಮನೇ ನಮಃ | ಸರ್ವಾಂಗಂ ಪೂಜಯಾಮಿ |

## ಅಷ್ಟೋತ್ತರಶತನಾಮಾವಳಿ

### ಪುಷ್ಪ ಅಥವಾ ತುಳಸಿಯಿಂದ ಅರ್ಚಿಸಿರಿ

ಶ್ರೀರಾಮಾಯ ನಮಃ
ಶ್ರೀರಾಮಭದ್ರಾಯ ನಮಃ
ಶ್ರೀರಾಮಚಂದ್ರಾಯ ನಮಃ
ಶ್ರೀಶಾಶ್ವತಾಯ ನಮಃ
ಶ್ರೀರಾಜೀವಲೋಚನಾಯ ನಮಃ
ಶ್ರೀಶ್ರೀಮತೇ ನಮಃ
ಶ್ರೀರಾಜೇಂದ್ರಾಯ ನಮಃ
ಶ್ರೀರಘುಪುಂಗವಾಯ ನಮಃ
ಶ್ರೀಜಾನಕೀವತ್ಸಲಾಯ ನಮಃ
ಶ್ರೀಜೈತ್ರಾಯ ನಮಃ
ಶ್ರೀಜಿತಾಮಿತ್ರಾಯ ನಮಃ
ಶ್ರೀಜನಾರ್ದನಾಯ ನಮಃ
ಶ್ರೀವಿಶ್ವಾಮಿತ್ರಪ್ರಿಯಾಯ ನಮಃ
ಶ್ರೀದಾಂತಾಯ ನಮಃ
ಶ್ರೀಶರಣಾಗತತ್ರಾಣತತ್ಪರಾಯ ನಮಃ
ಶ್ರೀವಾಲಿಪ್ರಮಥನಾಯ ನಮಃ
ಶ್ರೀವಾಗ್ಮಿನೇ ನಮಃ
ಶ್ರೀಸತ್ಯವಾಚೇ ನಮಃ

ರಾಮನವಮಿ

ಶ್ರೀಸತ್ಯವಿಕ್ರಮಾಯ ನಮಃ
ಶ್ರೀಸತ್ಯವ್ರತಾಯ ನಮಃ
ಶ್ರೀವ್ರತಧರಾಯ ನಮಃ
ಶ್ರೀಸದಾಹನುಮದಾಶ್ರಯಾಯ ನಮಃ
ಶ್ರೀಕೌಸಲ್ಯೇಯಾಯ ನಮಃ
ಶ್ರೀಖರಧ್ವಂಸಿನೇ ನಮಃ
ಶ್ರೀವಿರಾಧವಧಪಂಡಿತಾಯ ನಮಃ
ಶ್ರೀವಿಭೀಷಣವರಪ್ರದಾತ್ರೇ ನಮಃ
ಶ್ರೀಹರಕೋದಂಡಖಂಡನಾಯ ನಮಃ
ಶ್ರೀಸಪ್ತತಾಳಭೇತ್ರೇ ನಮಃ
ಶ್ರೀದಶಗ್ರೀವಶಿರೋಹರಾಯ ನಮಃ
ಶ್ರೀಜಾಮದಗ್ನ್ಯಮಹಾದರ್ಪದಮನಾಯ ನಮಃ
ಶ್ರೀತಾಟಕಾಂತಕಾಯ ನಮಃ
ಶ್ರೀವೇದಾಂತಸಾರಾಯ ನಮಃ
ಶ್ರೀವೇದಾತ್ಮನೇ ನಮಃ
ಶ್ರೀಭವರೋಗಭೇಷಜಾಯ ನಮಃ
ಶ್ರೀದೂಷಣತ್ರಿಶಿರೋ ಹಂತ್ರೇ ನಮಃ
ಶ್ರೀತ್ರಿಮೂರ್ತಯೇ ನಮಃ
ಶ್ರೀತ್ರಿಗುಣಾತ್ಮಕಾಯ ನಮಃ
ಶ್ರೀತ್ರಿವಿಕ್ರಮಾಯ ನಮಃ
ಶ್ರೀತ್ರಿಲೋಕಾತ್ಮನೇ ನಮಃ
ಶ್ರೀಪುಣ್ಯಚಾರಿತ್ರಕೀರ್ತನಾಯ ನಮಃ
ಶ್ರೀತ್ರಿಲೋಕರಕ್ಷಕಾಯ ನಮಃ
ಶ್ರೀಧನ್ವಿನೇ ನಮಃ
ಶ್ರೀದಂಡಕಾರಣ್ಯಪುಣ್ಯಕೃತೇ ನಮಃ

ರಾಮನವಮಿ

ಶ್ರೀಅಹಲ್ಯಾಶಾಪದಮನಾಯ ನಮಃ

ಶ್ರೀಪಿತೃಭಕ್ತಾಯ ನಮಃ

ಶ್ರೀವರಪ್ರದಾಯ ನಮಃ

ಶ್ರೀಜಿತೇಂದ್ರಿಯಾಯ ನಮಃ

ಶ್ರೀಜಿತಕ್ರೋಧಾಯ ನಮಃ

ಶ್ರೀಜಿತಾಮಿತ್ರಾಯ ನಮಃ

ಶ್ರೀಜಗದ್ಗುರವೇ ನಮಃ

ಶ್ರೀಯಕ್ಷವಾನರಸಂಘಾತಿನೇ ನಮಃ

ಶ್ರೀಚಿತ್ರಕೂಟಸಮಾಶ್ರಯಾಯ ನಮಃ

ಶ್ರೀಜಯಂತತ್ರಾಣವರದಾಯ ನಮಃ

ಶ್ರೀಸುಮಿತ್ರಾಪುತ್ರಸೇವಿತಾಯ ನಮಃ

ಶ್ರೀಸರ್ವದೇವಾಧಿದೇವಾಯ ನಮಃ

ಶ್ರೀಮೃತವಾನರಜೀವಿತಾಯ ನಮಃ

ಶ್ರೀಮಾಯಾಮಾರೀಚಹಂತ್ರೇ ನಮಃ

ಶ್ರೀಮಹಾದೇವಾಯ ನಮಃ

ಶ್ರೀಮಹಾಭುಜಾಯ ನಮಃ

ಶ್ರೀಸರ್ವದೇವಸ್ತುತಾಯ ನಮಃ

ಶ್ರೀಸೌಮ್ಯಾಯ ನಮಃ

ಶ್ರೀಬ್ರಹ್ಮಣ್ಯಾಯ ನಮಃ

ಶ್ರೀಮುನಿಸಂಸ್ತುತಾಯ ನಮಃ

ಶ್ರೀಮಹಾಯೋಗಿನೇ ನಮಃ

ಶ್ರೀಮಹೋದರಾಯ ನಮಃ

ಶ್ರೀಸುಗ್ರೀವೇಪ್ಸಿತರಾಜ್ಯದಾಯ ನಮಃ

ಶ್ರೀಸರ್ವಪುಣ್ಯಾಧಿಕಫಲಾಯ ನಮಃ

ಶ್ರೀಸ್ಮೃತಸರ್ವಾಘನಾಶನಾಯ ನಮಃ

ರಾಮನವಮಿ

ಶ್ರೀಆದಿಪುರುಷಾಯ ನಮಃ

ಶ್ರೀಪರಮಪುರುಷಾಯ ನಮಃ

ಶ್ರೀಪುಣ್ಯೋದಯಾಯ ನಮಃ

ಶ್ರೀದಯಾಸಾಗರಾಯ ನಮಃ

ಶ್ರೀಪುರಾಣಪುರುಷೋತ್ತಮಾಯ ನಮಃ

ಶ್ರೀಸ್ಮಿತವಕ್ತ್ರಾಯ ನಮಃ

ಶ್ರೀಮಿತಭಾಷಿಣೇ ನಮಃ

ಶ್ರೀಪುರಾಣಪುರುಷೋತ್ತಮಾಯ ನಮಃ

ಶ್ರೀಪೂರ್ವಭಾಷಿಣೇ ನಮಃ

ಶ್ರೀರಾಘವಾಯ ನಮಃ

ಶ್ರೀಅನಂತಗುಣಗಂಭೀರಾಯ ನಮಃ

ಶ್ರೀಧೀರೋದಾತ್ತಗುಣೋತ್ತಮಾಯ ನಮಃ

ಶ್ರೀಮಾಯಾಮಾನುಷಚಾರಿತ್ರಾಯ ನಮಃ

ಶ್ರೀಮಹಾದೇವಾಧಿಪೂಜಿತಾಯ ನಮಃ

ಶ್ರೀಸೇತುಕೃತೇ ನಮಃ

ಶ್ರೀಜಿತವಾರಾಶಯೇ ನಮಃ

ಶ್ರೀಸರ್ವತೀರ್ಥಮಯಾಯ ನಮಃ

ಶ್ರೀಹರಯೇ ನಮಃ

ಶ್ರೀಶ್ಯಾಮಾಂಗಾಯ ನಮಃ

ಶ್ರೀಸುಂದರಾಯ ನಮಃ

ಶ್ರೀಶೂರಾಯ ನಮಃ

ಶ್ರೀಪೀತವಾಸಸೇ ನಮಃ

ಶ್ರೀಧನುರ್ಧರಾಯ ನಮಃ

ಶ್ರೀಸರ್ವಯಜ್ಞಾಧಿಪಾಯ ನಮಃ

ಶ್ರೀಯಜ್ವಿನೇ ನಮಃ

ಶ್ರೀಜರಾಮರಣವರ್ಜಿತಾಯ ನಮಃ
ಶ್ರೀವಿಭೀಷಣಪ್ರತಿಷ್ಠಾತ್ರೇ ನಮಃ
ಶ್ರೀಸರ್ವಾವಗುಣವರ್ಜಿತಾಯ ನಮಃ
ಶ್ರೀಪರಮಾತ್ಮನೇ ನಮಃ
ಶ್ರೀಪರಬ್ರಹ್ಮಣೇ ನಮಃ
ಶ್ರೀಸಚ್ಚಿದಾನಂದವಿಗ್ರಹಾಯ ನಮಃ
ಶ್ರೀಪರಂಜ್ಯೋತಿಷೇ ನಮಃ
ಶ್ರೀಪರಂಧಾಮ್ನೇ ನಮಃ
ಶ್ರೀಪರಾಕಾಶಾಯ ನಮಃ
ಶ್ರೀಪರಾತ್ಪರಾಯ ನಮಃ
ಶ್ರೀಪತಿತಪಾರಗಾಯ ನಮಃ
ಶ್ರೀಪಾರಾಯಣಾಯ ನಮಃ
ಶ್ರೀಸರ್ವದೇವಾತ್ಮಕಾಯ ನಮಃ
ಶ್ರೀಪರಸ್ಮೈ ನಮಃ
ಶ್ರೀರಾಮಾಯ ನಮಃ

ಅಷ್ಟೋತ್ತರಶತನಾಮಾವಳಿಪೂಜಾಂ ಸಮರ್ಪಯಾಮಿ ।

## ಧೂಪ

### ಧೂಪಾರತಿ ಮಾಡಿರಿ

ವನಸ್ಪತ್ಯುದ್ಭವೋ ದಿವ್ಯೋ ಗಂಧಾಢ್ಯೋ ಗಂಧ ಉತ್ತಮಃ ।
ರಾಮಚಂದ್ರ ಮಹೀಪಾಲ ಧೂಪೋಽಯಂ ಪ್ರತಿಗೃಹ್ಯತಾಮ್ ॥

## ದೀಪ

### ದೀಪಾರತಿ ಮಾಡಿರಿ

ಜ್ಯೋತಿಷಾಂ ಪತಯೇ ತುಭ್ಯಂ ನಮೋ ರಾಮಾಯ ವೇಧಸೇ ।
ಗೃಹಾಣ ದೀಪಕಂ ಚೈವ ತ್ರೈಲೋಕ್ಯತಿಮಿರಾಪಹಮ್ ॥

## ನೈವೇದ್ಯ

### ನೈವೇದ್ಯ ಸಮರ್ಪಿಸಿರಿ

ಇದಂ ದಿವ್ಯಾನ್ನಮಮೃತಂ ರಸೈಃ ಷಡ್ಭಿಃ ಸಮನ್ವಿತಮ್ ।
ರಾಮಚಂದ್ರೇಶ ನೈವೇದ್ಯಂ ಸೀತೇಶ ಪ್ರತಿಗೃಹ್ಯತಾಮ್ ॥

## ಫಲ

### ಫಲ ಸಮರ್ಪಿಸಿರಿ

ಇದಂ ಫಲಂ ಮಯಾ ದೇವ ಸ್ಥಾಪಿತಃ ಪುರತಃ ಸ್ತವ ।
ತೇನ ಮೇ ಸಫಲಾವಾಪ್ತಿ ಭವೇಜ್ಜನ್ಮನಿ ಜನ್ಮನಿ ॥

## ತಾಂಬೂಲ

### ತಾಂಬೂಲ ಸಮರ್ಪಿಸಿರಿ

ನಾಗವಲ್ಲೀದಲೈರ್ಯುಕ್ತಂ ಪೂಗೀಫಲಸಮನ್ವಿತಮ್ ।
ತಾಂಬೂಲಂ ಗೃಹ್ಯತಾಂ ರಾಮ ಕರ್ಪೂರಾದಿಸಮನ್ವಿತಮ್ ॥

## ದಕ್ಷಿಣಾ

### ದಕ್ಷಿಣೆ ಸಮರ್ಪಿಸಿರಿ

ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ ।
ಅನಂತಪುಣ್ಯಫಲದಂ ಅತಃ ಶಾಂತಿಂ ಪ್ರಯಚ್ಛ ಮೇ ॥

## ನೀರಾಜನ

### ಮಂಗಳಾರತಿ ಮಾಡಿರಿ

ನೃತ್ಯೈರ್ಗೀತೈಶ್ಚ ವಾದ್ಯೈಶ್ಚ ಪುರಾಣಪಠನಾದಿಭಿಃ ।
ಪೂಜೋಪಚಾರೈರಖಿಲೈಃ ಸಂತುಷ್ಟೋ ಭವ ರಾಘವ ॥
ಮಂಗಲಾರ್ಥಂ ಮಹೀಪಾಲ ನೀರಾಜನಮಿದಂ ಹರೇ ।
ಸಂಗೃಹಾಣ ಜಗನ್ನಾಥ ರಾಮಚಂದ್ರ ನಮೋಽಸ್ತು ತೇ ॥

## ಮಂತ್ರಪುಷ್ಪಾಂಜಲಿ

### ಬೊಗಸೆಯಲ್ಲಿ ಹೂವು ಸಮರ್ಪಿಸಿರಿ

ನಮೋ ದೇವಾಧಿದೇವಾಯ ರಘುನಾಥಾಯ ಶಾರ್ಙ್ಗಿಣೇ ।
ಚಿನ್ಮಯಾನಂತರೂಪಾಯ ಸೀತಾಯಾಃ ಪತಯೇ ನಮಃ ॥

## ಪ್ರದಕ್ಷಿಣಾ

### ಪ್ರದಕ್ಷಿಣೆ ಮಾಡಿರಿ

ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾಸಮಾನಿ ಚ ।
ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣಪದೇ ಪದೇ ॥

## ಅರ್ಘ್ಯ

### ಶಂಖದಲ್ಲಿ ಹಾಲು ಹಾಕಿ ಅರ್ಘ್ಯವನ್ನು ನೀಡಬಹುದು ಅಥವಾ ಬೊಗಸೆಯಲ್ಲಿ ಅರ್ಘ್ಯ ನೀಡಿರಿ

ಪ್ರತಿಯೊಬ್ಬರೂ ಅರ್ಘ್ಯನೀಡಬೇಕು.

ದಶಾನನವಧಾರ್ಥಾಯ ಧರ್ಮಸಂಸ್ಥಾಪನಾಯ ಚ ।
ರಾಕ್ಷಸಾನಾಂ ವಧಾರ್ಥಾಯ ದೈತ್ಯಾನಾಂ ನಿಧನಾಯ ಚ ॥
ಪರಿತ್ರಾಣಾಯ ಸಾಧೂನಾಂ ಜಾತೋ ರಾಮಃ ಸ್ವಯಂ ಹರಿಃ ।
ಗೃಹಾಣಾರ್ಘ್ಯಂ ಮಯಾ ದತ್ತಂ ಭ್ರಾತೃಭಿಃ ಸಹಿತೋಽನಘ ॥
ರಾಮಚಂದ್ರಾಯ ನಮಃ । ಇದಮರ್ಘ್ಯಂ, ಇದಮರ್ಘ್ಯಂ, ಇದಮರ್ಘ್ಯಂ।

ಕೌಸಲ್ಯಾಗರ್ಭಸಂಭೂತ ಸದಾ ಸೌಮಿತ್ರಿವತ್ಸಲ ।
ಜಾನಕೀಸಹಿತೋ ರಾಮ ಗೃಹಾಣಾರ್ಘ್ಯಂ ನಮೋಽಸ್ತು ತೇ ॥
ಕೌಸಲ್ಯಾನಂದನೋ ವೀರ ರಾವಣಾಸುರಮರ್ದನ ।
ಸೀತಾಪತೇ ನಮಸ್ತುಭ್ಯಂ ಗೃಹಾಣಾರ್ಘ್ಯಂ ನಮೋಽಸ್ತು ತೇ ॥

ಭ್ರಾತೃಭಿಃ ಸಹಿತಾಯ ಸೀತಾಪತಯೇ ಶ್ರೀರಾಮಚಂದ್ರಾಯ
ಇದಮರ್ಘ್ಯಮಿದಮರ್ಘ್ಯಮಿದಮರ್ಘ್ಯಮ್ ॥
ಭಾರತೀರಮಣಮುಖ್ಯಪ್ರಾಣಾಂತರ್ಗತ ಸೀತಾಪತೇ ಶ್ರೀರಾಮಚಂದ್ರಾಯನಮಃ
ಇದಮರ್ಘ್ಯಮ್ ಇದಮರ್ಘ್ಯಮ್ ಇದಮರ್ಘ್ಯಮ್ ॥

## ಪ್ರಾರ್ಥನೆ

ರಾಮದ್ವಾದಶನಾಮ –

ಪ್ರಥಮಂ ಶ್ರೀಕರಂ ವಿದ್ಯಾತ್ ದ್ವಿತೀಯಂ ದಾಶರಥ್ಯಕಮ್ ।
ತೃತೀಯಂ ರಾಮಚಂದ್ರಂ ಚ ಚತುರ್ಥಂ ರಾವಣಾಂತಕಮ್ ।
ಪಂಚಮಂ ಲೋಕಪೂಜ್ಯಂ ಚ ಷಷ್ಠಕಂ ಜಾನಕೀಪ್ರಿಯಮ್ ।
ಸಪ್ತಮಂ ವಾಸುದೇವಂ ಚ ರಾಘವೇಂದ್ರಂ ತಥಾಷ್ಟಮಮ್ ।
ನವಮಂ ಪುಂಡರೀಕಾಕ್ಷಂ ದಶಮಂ ಲಕ್ಷ್ಮಣಾಗ್ರಜಮ್ ।
ಏಕಾದಶಂ ಚ ಗೋವಿಂದಂ ದ್ವಾದಶಂ ಸೇತುಬಂಧನಮ್ ॥

ಜಯತ್ಯಜೋಽಕ್ಷೀಣಸುಖಾತ್ಮಬಿಂಬಃ
ಸ್ವೈಶ್ವರ್ಯಕಾಂತಿಪ್ರತತಃ ಸದೋದಿತಃ ।
ಸ್ವಭಕ್ತಸಂತಾಪದುರಿಷ್ಟಹಂತಾ
ರಾಮಾವತಾರೋ ಹರಿರೀಶಚಂದ್ರಮಾಃ ॥ (ಮ.ಭಾ.ತಾ.ನಿ.)

ರಾಘವ ರಾಘವ ರಾಕ್ಷಸಶತ್ರೋ - ಮಾರುತಿವಲ್ಲಭ ಜಾನಕಿಕಾಂತ ।
ಖರತರ - ನಿಶಿಚರ - ದಹನ ಪರಾಮೃತ
ರಘುವರ ಮಾನದ ಭವ ಮಮ ಶರಣಮ್ ॥ (ದ್ವಾ.ಸ್ತೋ.)

ಶ್ಯಾಮಂ ರವೀಂದ್ವಮಿತದೀಧಿತಿಕಾಂತಿಯುಕ್ತಂ
ಜ್ಞಾನಂ ಶರಂ ಚ ದಧತಂ ಪ್ರಿಯಯಾ ಸಮೇತಮ್ ।
ಸ್ವಾತ್ಮಸ್ವರೂಪಮಮಿತಂ ಹನುಮನ್ಮುಖೇಷು
ಸಂದರ್ಶಯಂತಮಜಿತಂ ಸ್ಮರತೋರುಗೀರ್ಭಿಃ ॥

ಕೃತ್ಸ್ನಪ್ರಸಾದಸುಮುಖಃ ಕಲಯಾ ಕಲೇಶ
ಇಕ್ಷ್ವಾಕುವಂಶ ಅವತೀರ್ಯ ಗುರೋರ್ನಿದೇಶೇ
ತಿಷ್ಠನ್ ವನೇ ಸದಯಿತಾನುಜ ಆದಿದೇಶ
ಯಸ್ಮಿನ್ ವಿರುದ್ಧ್ಯ ದಶಕಂಧರ ಆರ್ತಿಮಾರ್ಚ್ಛತ್ ॥ (ಭಾಗ.)

## ಕ್ಷಮಾಪಣಮ್

ನ ಜಾನೇ ಕರ್ಮ ಯತ್ಕಿಂಚಿನ್ನಾಪಿ ಲೌಕಿಕವೈದಿಕೇ ।
ನ ವಿಷೇಧವಿಧೀ ವಿಷ್ಣೋ ತವ ದಾಸೋಽಸ್ಮಿ ಕೇವಲಮ್ ॥

ಅಪರಾಧಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ ।
ತಾನಿ ಸರ್ವಾಣಿ ಮೇ ದೇವ ಕ್ಷಮಸ್ವ ಪುರುಷೋತ್ತಮ ॥

ಆಪಾದಮೌಲಿಪರ್ಯಂತಂ ಪಶ್ಯತಃ ಪುರುಷೋತ್ತಮಮ್ ।
ಪಾತಕಾನಿ ವಿನಶ್ಯಂತಿ ಕಿಂ ಪುನಶ್ಚೋಪಪಾತಕೈಃ ।
ಸುಪೂಜಿತಂ ಹರಿಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೇ ॥

ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮ ಚಾಖಿಲಮ್ ।
ತಥಾಽಪಿ ಮತ್ಕೃತಾ ಪೂಜಾ ತತ್ಪ್ರಸಾದೇನ ನಾನ್ಯಥಾ ॥

ತದ್ಭಕ್ತ್ಯಾ ಸಫಲಂ ಮಹ್ಯಂ ತತ್ಪ್ರಸಾದಃ ಪುನಃ ಪುನಃ ।
ಕರ್ಮನ್ಯಾಸೋ ಹರೇರೇವಂ ವಿಭೋಸ್ತೃಪ್ತಿಕರಃ ಸದಾ ॥

ಸ್ವವಂದನಂ ಯಥಾ ಪಿತ್ರಾ ಕಾರಿತಂ ಶಿಶುಕರ್ತೃಕಮ್ ।
ಏವಂ ಪೂಜಾ ವಿಷ್ಣ್ವಧೀನಾ ಭವೇಜ್ಜೀವಕೃತೇತ್ಯಪಿ ॥

ಮಾದೃಶೋ ನ ಪರಃ ಪಾಪೀ ತ್ವಾದೃಶೋ ನ ದಯಾಪರಃ ।
ದಾಸೋಽಯಮಿತಿ ಮಾಂ ಮತ್ವಾ ಕ್ಷಮಸ್ವ ಪುರುಷೋತ್ತಮ ॥

ಪಾಪೋಽಹಂ ಪಾಪಕರ್ಮಾಽಹಂ ಪಾಪಾತ್ಮಾ ಪಾಪಸಂಭವಃ ।
ತ್ರಾಹಿ ಮಾಂ ಪುಂಡರೀಕಾಕ್ಷ ಶರಣಾಗತವತ್ಸಲ ॥

ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।ಫಿ
ತಸ್ಮಾತ್ ಕಾರುಣ್ಯಭಾವೇನ ರಕ್ಷ ರಕ್ಷ ಜನಾರ್ದನ ॥
ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥
ಓಂ ಓಂ ನಮೋ ಭಗವತೇ ವಾಸುದೇವಾಯ ಓಂ । ......................
ಪ್ರಾರ್ಥನಾಂ ಸಮರ್ಪಯಾಮಿ ॥

## ಉದ್ವಾಸನೆ

ಯಾಂತು ದೇವಗಣಾಃ ಸರ್ವೇ ಪೂಜಾಂ ಆದಾಯಮತ್ಕೃತಾಂ
ಇಷ್ಟಕಾಮ್ಯಾರ್ಥಸಿದ್ಧ್ಯರ್ಥಂ ಪುನರಾಗಮನಾಯಚ ॥
ಘಂಟಾನಾದ ಮಾಡಿರಿ.

## ಕೃಷ್ಣಾರ್ಪಣ

ಆಚಮನ ಮಾಡಿ ಕೃಷ್ಣಾರ್ಪಣ ಬಿಡಬೇಕು

ಪ್ರೀಯತಾಂ ಶ್ರೀ ಕೃಷ್ಣಾರ್ಪಣಮಸ್ತು ॥

## ಸಮಾಪನಮ್

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ (ಮೇ) ॥
ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾऽऽತ್ಮನಾ ವಾऽನುಸೃತಸ್ವಭಾವಃ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

ಅನೇನ ಮಧ್ಯಾಹ್ನಕಾಲೇ ಮಯಾ ಕೃತೇನ ..............................ಪೂಜಾ-ಕರ್ಮಣಾ ಮಧ್ವಾಂತರ್ಗತಃ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಂ ॥ ಶ್ರೀಕೃಷ್ಣಾರ್ಪಣ-ಮಸ್ತು ।

(ಇತಿ ತುಲಸೀದಲಾನಿ ಸಮರ್ಪ್ಯ, ತತ್ತುಲಸೀಂ ಗೃಹೀತ್ವಾ) ಪ್ರಸೀದ ಭಗವನ್ ಆಗಚ್ಛಾಽಗಚ್ಛ । ಭಗವಂತಂ ಸಶ್ರೀಕಂ ಸಪರಿವಾರಂ ಶ್ರೀಲಕ್ಷ್ಮೀನಾರಾಯಣಂ ಮಮ ಹೃತ್ಕಮಲೇ (ಅನ್ಯಗೃಹೇ ಚೇತ್ - ಸೂರ್ಯಮಂಡಲೇ) ಪ್ರಾವಾಹಯಾಮಿ । (ಇತಿ ಪ್ರಾವಾಹ್ಯ ತುಲಸೀಂ ಕರ್ಣಯೋರ್ಧೃತ್ವಾ, ಹೃದಯೇ ಹಸ್ತಂ ನ್ಯಸ್ತ)

ಯಾಚೇಹಂ ತ್ವಾಂ ಹೃಷೀಕೇಶ ನಮಾಮಿ ಪುರುಷೋತ್ತಮ ।
ಹೃದಯೇ ಕುರು ಸಂವಾಸಂ ಶ್ರಿಯಾ ಸಹ ಜಗತ್ಪತೇ ॥

ಇತಿ ಪ್ರಾರ್ಥ್ಯ, ಆತ್ಮನಿ ಮಾತೃಕಾನ್ಯಾಸತತ್ವನ್ಯಾಸೌ ಕೃತ್ವಾ ಘಂಟಾನಾದಂ ಕುರ್ಯಾತ್

ಹೀಗೆ ಶ್ರೀರಾಮಚಂದ್ರದೇವರಿಗೆ ಪೂಜೆಯನ್ನು ಮಾಡಿ, ಶ್ರೀರಾಮದೇವರನ್ನು ತೊಟ್ಟಿಲಿನಲ್ಲಿ ಇಟ್ಟು ಜೋಗುಳವನ್ನು ಹಾಡಬೇಕು. ಮತ್ತು ತೊಟ್ಟಿಲಿನಲ್ಲಿರುವ ಶ್ರೀರಾಮದೇವರಿಗೆ ಮಂಗಳಾರತಿಯನ್ನು ಮಾಡಿ ನಮಿಸಬೇಕು.

॥ ಕೃಷ್ಣಾರ್ಪಣಮಸ್ತು ॥

# ರಾಮನವಮೀವ್ರತದ ಆಚರಣೆ
## ಶ್ರೀರಾಮಚಂದ್ರನ ಪ್ರಾದುರ್ಭಾವದ ಬಗ್ಗೆ

ಅಗಸ್ತ್ಯಃ –

ರಹಸ್ಯಂ ಕಥಯಿಷ್ಯಾಮಿ ಸುತೀಕ್ಷ್ಣ ಮುನಿಸತ್ತಮ ।
ಚೈತ್ರೇ ನವಮ್ಯಾಂ ಪ್ರಾಕ್‌ಪಕ್ಷೇ ದಿವಾಪುಣ್ಯೇ ಪುನರ್ವಸೌ ॥ 1 ॥
ಉದಯೇ ಗುರುಗೌರಾಂಶೇ ಸ್ವೋಚ್ಚಸ್ಥೇ ಗ್ರಹಪಂಚಕೇ ।
ಮೇಷೇ ಪೂಷಣಿ ಸಂಪ್ರಾಪ್ತೇ ಲಗ್ನೇ ಕರ್ಕಟಕಾಹ್ವಯೇ ॥ 2 ॥
ಆವಿರಾಸೀತ್ ಸ ಕಲಯಾ ಕೌಸಲ್ಯಾಯಾಂ ಪರಃ ಪುಮಾನ್ ।
ತಸ್ಮಿನ್ ದಿನೇ ತು ಕರ್ತವ್ಯಮುಪವಾಸವ್ರತಂ ಸದಾ ॥ 3 ॥

ಅಗಸ್ತ್ಯರು ಹೇಳುತ್ತಾರೆ – ಸುತೀಕ್ಷ್ಣಮುನಿಸತ್ತಮರೇ ಅತ್ಯಂತರಹಸ್ಯವನ್ನು ಹೇಳುತ್ತೇನೆ. ಕೇಳಿರಿ. ಚೈತ್ರಮಾಸ ಶುಕ್ಲಪಕ್ಷ ನವಮಿಯ ಹಗಲಿನಲ್ಲಿ ಚಂದ್ರನು ಪುನರ್ವಸು ನಕ್ಷತ್ರದಲ್ಲಿದ್ದನು. ಗುರುವಿನ ಉದಯವಾಗಿತ್ತು. ಗ್ರಹಗಳು ಉಚ್ಚದಲ್ಲಿದ್ದವು. ಮೇಷದಲ್ಲಿ ಸೂರ್ಯನು ಉಚ್ಚನಾಗಿದ್ದನು. ಲಗ್ನವು ಕರ್ಕಾಟಕವಾಗಿತ್ತು. ಆಗ ಕೌಸಲ್ಯಾದೇವಿಯಲ್ಲಿ ಸರ್ವೋತ್ತಮನಾದ ಭಗವಂತನು ಶ್ರೀರಾಮಚಂದ್ರನಾಗಿ ಅವತಾರವನ್ನು ಮಾಡಿದನು. ಆ ದಿವಸದಂದು ಉಪವಾಸವನ್ನು ಮಾಡಬೇಕು.

## ಸಂಪತ್ತಿಗೆ ಅನುಗುಣವಾಗಿ ವೈಭವದಿಂದ ಪೂಜಿಸಬೇಕು

ತತ್ರ ಜಾಗರಣಂ ಕುರ್ಯಾದ್ ರಘುನಾಥಪುರೋ ಭುವಿ ।

ರಘುನಾಥನ ಎದುರಿನಲ್ಲಿಯೇ ಜಾಗರಣೆಯನ್ನು ಕೂಡ ಮಾಡಬೇಕು. ನಿರಂತರ ಕೀರ್ತನೆಯನ್ನು ಮಾಡಬೇಕು.

ಪ್ರತಿಮಾಯಾಂ ಯಥಾಶಕ್ತಿ ಪೂಜಾ ಕಾರ್ಯಾ ಯಥಾವಿಧಿಃ ॥ 4 ॥
ಪ್ರಾತರ್ನವಮ್ಯಾಂ ಸ್ನಾತ್ವೈವ ಕೃತ್ವಾ ಸಂಧ್ಯಾದಿಕಾ ಕ್ರಿಯಾಃ ।
ಸಂಪೂಜ್ಯ ವಿಧಿವದ್ ರಾಮಂ ಭಕ್ತ್ಯಾ ವಿತ್ತಾನುಸಾರತಃ ॥ 5 ॥

ಶ್ರೀರಾಮಚಂದ್ರದೇವರ ಪ್ರತಿಮೆಯಲ್ಲಿ ಶಕ್ತ್ಯನುಗುಣವಾಗಿ ವಿಧಿ ಹೇಳುವಂತೆ ಪೂಜೆಯನ್ನು ಮಾಡಬೇಕು. ನವಮಿಯ ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಿ ಸಂಧ್ಯಾವಂದನೆ ಮೊದಲಾದ ನಿತ್ಯಾಹ್ನಿಕೆಗಳನ್ನು ಮುಗಿಸಿ, ವಿಧಿಯು ಹೇಳುವಂತೆ ಶ್ರೀರಾಮಚಂದ್ರನನ್ನು ತಮ್ಮ ಸಂಪತ್ತಿಗೆ ಅನುಗುಣವಾಗಿ ವೈಭವವನ್ನು ಆಚರಿಸಿ ಭಕ್ತಿಯಿಂದ ಪೂಜೆ ಮಾಡಬೇಕು.

## ರಾಮನವಮಿ ಮಾಡಬೇಕಾದ ದಾನಗಳು

ಬ್ರಾಹ್ಮಣಾನ್ ಭೋಜಯೇತ್ ಸಮ್ಯಕ್ ದಕ್ಷಿಣಾಭಿಶ್ಚ ತೋಷಯೇತ್ ।
ಗೋಭೂತಿಲಹಿರಣ್ಯಾದ್ಯೈರ್ವಸ್ತ್ರಾಲಂಕಾರಭೂಷಣೈಃ ॥ 6 ॥

ಬ್ರಾಹ್ಮಣರಿಗೆ ಸಂತೋಷವಾಗುವಂತೆ ಊಟವನ್ನು ಬಡಿಸಬೇಕು. ದಕ್ಷಿಣೆಗಳನ್ನು ಯಥೇಚ್ಛವಾಗಿ ಕೊಟ್ಟು ಸಂತೋಷಪಡಿಸಬೇಕು. ಅಷ್ಟೇ ಅಲ್ಲದೇ ಗೋದಾನ, ಭೂದಾನ, ತಿಲದಾನ, ಹಿರಣ್ಯದಾನ, ವಸ್ತ್ರದಾನ, ವಿವಿಧ ಅಲಂಕಾರಗಳ ದಾನವನ್ನು ಮಾಡಬೇಕು.

## ರಾಮಭಕ್ತರ ಸಹವಾಸವನ್ನು ಮಾಡಬೇಕು

ರಾಮಭಕ್ತಾನ್ ಪ್ರಯತ್ನೇನ ಪ್ರೀಣಯೇತ್ ಪರಯಾ ಮುದಾ ।
ಏವಂ ಯಃ ಕುರುತೇ ಭಕ್ತ್ಯಾ ಶ್ರೀರಾಮನವಮೀವ್ರತಮ್ ॥ 7 ॥

ರಾಮಭಕ್ತರಿಗೆ ಸಂತೋಷಪಡಿಸಬೇಕು. ಪ್ರಯತ್ನಪೂರ್ವಕವಾಗಿ ಅವರ ಸೇವೆಯನ್ನು ಮಾಡಬೇಕು. ಹೀಗೆ ಭಕ್ತಿಯಿಂದ ಶ್ರೀರಾಮನವಮಿಯ ವ್ರತವನ್ನು ಆಚರಿಸಬೇಕು.

## ರಾಮನವಮಿವ್ರತಾಚರಣೆಯಿಂದ ವೈಕುಂಠಪ್ರಾಪ್ತಿ

ಅನೇಕಜನ್ಮಸಿದ್ಧಾನಿ ಪಾಪಾನಿ ಸುಬಹೂನಿ ಚ ।
ಭಸ್ಮೀಕೃತ್ಯ ವ್ರಜತ್ಯೇವ ತದ್ವಿಷ್ಣೋಃ ಪರಮಂ ಪದಮ್ ॥ 8 ॥

ರಾಮನವಮಿಯ ವ್ರತಾಚರಣೆಯಿಂದ ಅನೇಕ ಜನ್ಮಗಳಲ್ಲಿ ಸಂಪಾದನೆ ಮಾಡಿದ ಅನೇಕಪಾಪಗಳು ಸುಟ್ಟು ಭಸ್ಮವಾಗುತ್ತವೆ. ಭಗವಂತನಾದ ಮಹಾವಿಷ್ಣುವಿನ ಸ್ಥಾನವು ದೊರಕುತ್ತದೆ.

## ರಾಮನವಮೀವ್ರತವನ್ನು ಎಲ್ಲರೂ ಆಚರಿಸಬೇಕು

ಸರ್ವೇಷಾಮಪ್ಯಯಂ ಧರ್ಮೋ ಭುಕ್ತಿಮುಕ್ತ್ಯೇಕಸಾಧನಃ ।
ಅಶುಚಿರ್ವಾಪಿ ಪಾಪಿಷ್ಠಃ ಕೃತ್ವೇದಂ ವ್ರತಮುತ್ತಮಮ್ ॥ 9 ॥
ಪೂಜ್ಯಃ ಸ್ಯಾತ್ ಸರ್ವಭೂತಾನಾಂ ಯಥಾ ರಾಮಸ್ತಥೈವ ಸಃ ।

ಪ್ರತಿಯೊಬ್ಬರೂ ಕೂಡ ರಾಮನವಮಿವ್ರತವನ್ನು ಆಚರಣೆ ಮಾಡಬೇಕು. ಭಗವಂತನಲ್ಲಿ ಭಕ್ತಿಯು ಉಂಟಾಗಿ ಮುಕ್ತಿಯು ದೊರಕಬೇಕೆಂದರೆ ಈ ವ್ರತವನ್ನು ಆಚರಿಸಲೇ ಬೇಕು. ಅಶುಚಿಯಾಗಿರಲಿ ಪಾಪಿಷ್ಠನಾಗಿರಲಿ ಉತ್ತಮವಾದ ಈ ವ್ರತವನ್ನು ಆಚರಣೆ ಮಾಡಿದರೆ ಲೋಕದಲ್ಲಿ ಪೂಜ್ಯನಾಗುತ್ತಾನೆ. ಸರ್ವಭೂತಗಳ ನಡುವೆ ಶ್ರೇಷ್ಠನಾಗುತ್ತಾನೆ. ಶ್ರೀರಾಮಚಂದ್ರನು ಹೇಗೆ ಶ್ರೇಷ್ಠನಾದನೋ ಅದರಂತೆ ಈ ಭಕ್ತನೂ ಕೂಡ ತನ್ನ ಯೋಗ್ಯತೆಗೆ ಅನುಗುಣವಾಗಿ ಶ್ರೇಷ್ಠನಾಗುತ್ತಾನೆ.

ಯಸ್ತು ರಾಮನವಮ್ಯಾಂ ವೈ ಭುಂಕ್ತೇ ಸ ತು ನರಾಧಮಃ ॥ 10 ॥
ಕುಂಭೀಪಾಕೇಷು ಘೋರೇಷು ಪತತ್ಯೇವ ನ ಸಂಶಯಃ ।

ಯಾರು ರಾಮನವಮಿಯ ದಿವಸ ವ್ರತ ಮತ್ತು ಪೂಜೆಗಳನ್ನು ಮಾಡದೇ ಊಟವನ್ನು ಮಾಡುತ್ತಾನೋ ಅಂಥ ನರಾಧಮನು ಕುಂಭೀಪಾಕವೆನಿಸಿದ ಘೋರ ನರಕಕ್ಕೆ ತೆರಳು(ಬೀಳು)ತ್ತಾನೆ. ಇದರಲ್ಲಿ ಸಂಶಯವಿಲ್ಲ.

## ರಾಮನವಮಿಯನ್ನು ಆಚರಿಸದಿದ್ದರೆ ಉಳಿದ ವ್ರತಗಳಿಗೆ ಫಲವಿಲ್ಲ

ಅಕೃತ್ವಾ ರಾಮನವಮೀವ್ರತಂ ಸರ್ವವ್ರತೋತ್ತಮಮ್ ॥ 11 ॥
ವ್ರತಾನ್ಯನ್ಯಾನಿ ಕುರುತೇ ನ ತೇಷಾಂ ಫಲಭಾಗ್ ಭವೇತ್ ।
ರಹಸಿ ಕೃತಪಾಪಾನಿ ಪ್ರಖ್ಯಾತಾನಿ ಬಹೂನ್ಯಪಿ ॥ 12 ॥

ಮಹಾಂತಿ ಚ ಪ್ರಣಶ್ಯಂತಿ ಶ್ರೀರಾಮನವಮೀವ್ರತಾತ್ ।
ಏಕಾಮಪಿ ನರೋ ಭಕ್ತ್ಯಾ ಶ್ರೀರಾಮನವಮೀಂ ಮುನೇ ॥ 13 ॥
ಉಪೋಷ್ಯ ಕೃತಕೃತ್ಯಃ ಸ್ಯಾತ್ ಸರ್ವಪಾಪೈಃ ಪ್ರಮುಚ್ಯತೇ ।

ಯಾರು ಸರ್ವವ್ರತಗಳಲ್ಲಿ ಶ್ರೇಷ್ಠವಾದ ರಾಮನವಮೀವ್ರತವನ್ನು ಮಾಡುವುದಿಲ್ಲವೋ ಇದನ್ನು ಬಿಟ್ಟು ಬೇರೆ ವ್ರತಗಳನ್ನಷ್ಟೇ ಮಾಡುತ್ತಾನೋ ಅವನಿಗೆ ಉಳಿದ ಯಾವ ವ್ರತಗಳಿಂದ ಯಾವುದೇ ಫಲವೂ ಕೂಡ ಬರುವುದಿಲ್ಲ. ರಹಸ್ಯದಲ್ಲಿ ಮಾಡಲ್ಪಟ್ಟ ಪಾಪಗಳೆಲ್ಲವೂ ರಾಮನವಮೀ ವ್ರತದ ಆಚರಣೆಯಿಂದ ಪರಿಹಾರವಾಗುತ್ತವೆ. ಮಹಾಪಾಪಗಳೂ ಕೂಡ ನಾಶವಾಗುತ್ತವೆ. ಶ್ರೀರಾಮನವಮಿಯ ವ್ರತವನ್ನು ಒಮ್ಮೆ ಆಚರಿಸಿದರೂ ಸಾಕು ಅವನು ಕೃತಕೃತ್ಯನಾಗುತ್ತಾನೆ. ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ.

## ರಾಮದೇವರ ಪ್ರತಿಮೆಯನ್ನು ದಾನ ಮಾಡಬೇಕು

ನರೋ ರಾಮನವಮ್ಯಾಂ ತು ಶ್ರೀರಾಮಪ್ರತಿಮಾಪ್ರದಃ ॥ 14 ॥
ವಿಧಾನೇನ ಮುನಿಶ್ರೇಷ್ಠ ಸ ಮುಕ್ತೋ ನಾತ್ರ ಸಂಶಯಃ ।

ಶ್ರೀರಾಮನವಮಿಯ ದಿವಸ ರಾಮದೇವರ ಪ್ರತಿಮೆಯನ್ನು ದಾನ ಮಾಡಬೇಕು. ಮುನಿಶ್ರೇಷ್ಠನೇ! ವಿಧಿಪ್ರಕಾರವಾಗಿ ಪ್ರತಿಮಾದಾನಮಾಡಿದವನು ಮೋಕ್ಷವನ್ನೇ ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವೇ ಇಲ್ಲ.

ಸುತೀಕ್ಷ್ಣಃ –
ಶ್ರೀರಾಮಪ್ರತಿಮಾದಾನವಿಧಾನಂ ವಾ ಕಥಂ ಮುನೇ ॥15॥
ಕಥಯ ತ್ವಂ ಹಿ ರಾಮೇಽಪಿ ಭಕ್ತಸ್ಯ ಮಮ ವಿಸ್ತರಾತ್ ।

ಸುತೀಕ್ಷ್ಣನು ಪ್ರಶ್ನಿಸುತ್ತಾನೆ – ಶ್ರೀರಾಮಪ್ರತಿಮೆಯ ದಾನದ ವಿಧಾನವೇನು? ಅದನ್ನು ತಾವು ನನಗೆ ತಿಳಿಸಿರಿ. ರಾಮಭಕ್ತನಾದ ನನಗೆ ಆ ಪ್ರತಿಮಾದಾನದ ವಿಧಾನವನ್ನು ವಿಸ್ತಾರವಾಗಿ ತಿಳಿಸಿರಿ.

## ಅಷ್ಟಮೀದಿವಸವೇ ಪ್ರತಿಮಾದಾನಸಂಕಲ್ಪ ಮಾಡಬೇಕು

ಅಗಸ್ತ್ಯಃ –

ಕಥಯಿಷ್ಯಾಮಿ ತದ್ ವಿದ್ವನ್ ಪ್ರತಿಮಾದಾನಮುತ್ತಮಮ್ ॥ 16 ॥

ವಿಧಾನಂ ಚಾಪಿ ಯತ್ನೇನ ಯತಸ್ತ್ವಂ ವೈಷ್ಣವೋತ್ತಮಃ ।
ಅಷ್ಟಮ್ಯಾಂ ಚೈತ್ರಮಾಸೇ ತು ಶುಕ್ಲಪಕ್ಷೇ ಜಿತೇಂದ್ರಿಯಃ ॥ 17 ॥

ದಂತಧಾವನಪೂರ್ವಂ ತು ಪ್ರಾತಃ ಸ್ನಾಯಾದ್ ಯಥಾವಿಧಿ ।
ನದ್ಯಾಂ ತಡಾಗೇ ಕೂಪೇ ವಾ ಹ್ರದೇ ಪ್ರಸ್ರವಣೇಽಪಿ ವಾ ॥ 18 ॥

ಅಗಸ್ತ್ಯರು ಸುತೀಕ್ಷ್ಣನಿಗೆ ತಿಳಿಸುತ್ತಾರೆ – ಎಲೈ ಸುತೀಕ್ಷ್ಣನೇ! ರಾಮಪ್ರತಿಮೆಯ ದಾನವು ಅತ್ಯುತ್ತಮವಾಗಿದೆ. ಅದರ ಬಗ್ಗೆ ನಿನಗೆ ತಿಳಿಸುತ್ತೇನೆ. ನೀನೂ ಸಹ ವೈಷ್ಣವೋತ್ತಮನಾಗಿರುವಿ. ಯತ್ನಪೂರ್ವಕವಾಗಿ ನಾನು ಹೇಳುವ ವಿಧಿಗಳನ್ನು ಆಚರಣೆ ಮಾಡು. ಚೈತ್ರಮಾಸದ ಶುಕ್ಲಪಕ್ಷದಲ್ಲಿ ಬರುವ ಅಷ್ಟಮಿಯ ದಿವಸ ಹೀಗೆ ಮಾಡಬೇಕು. ಬ್ರಾಹ್ಮೀಮುಹೂರ್ತದಲ್ಲಿ ಎದ್ದು ದಂತಧಾವನವನ್ನು ಮಾಡಿ, ನದಿಯಲ್ಲಿ, ಸರೋವರದಲ್ಲಿ, ಅಥವಾ ಇಳಿಯುವ ಭಾವಿಯಲ್ಲಿ ಸ್ನಾನವನ್ನು ವಿಧಿ ಪ್ರಕಾರವಾಗಿ ಮಾಡಬೇಕು.

ತತಃ ಸಂಧ್ಯಾದಿಕಾಃ ಕಾರ್ಯಾಃ ಸಂಸ್ಮರನ್ ರಾಘವಂ ಹೃದಿ ।
ಗೃಹಮಾಸಾದ್ಯ ವಿಪ್ರೇಂದ್ರ ಕುರ್ಯಾದೌಪಾಸನಾದಿಕಮ್ ॥ 19 ॥

ಅನಂತರ ಸಂಧ್ಯಾವಂದನೆ ಮೊದಲಾದ ನಿತ್ಯಾಹ್ನಿಕಗಳನ್ನು ಪೂರೈಸಬೇಕು. ಪ್ರತಿಕ್ಷಣವೂ ಶ್ರೀರಾಮಚಂದ್ರನನ್ನು ಸ್ಮರಣೆ ಮಾಡಬೇಕು. ವಿಪ್ರೇಂದ್ರನೇ! ಮನೆಗೆ ಬಂದು ಔಪಾಸನಾದಿಗಳನ್ನು ಆಚರಿಸಬೇಕು.

## ರಾಮಭಕ್ತನಾದ ಸತ್ಪಾತ್ರನಿಗೆ ದಾನ ಮಾಡಬೇಕು

ದಾಂತಂ ಕುಟುಂಬಿನಂ ವಿಪ್ರಂ ವೇದಶಾಸ್ತ್ರಪರಂ ಸದಾ ।
ಶ್ರೀರಾಮಪೂಜಾನಿರತಂ ಸುಶೀಲಂ ದಂಭವರ್ಜಿತಮ್ ॥ 20 ॥

ವಿಧಿಜ್ಞಂ ರಾಮಮಂತ್ರಾಣಾಂ ರಾಮಮಂತ್ರೈಕಸಾಧನಮ್ ।
ಆಹೂಯ ಭಕ್ತ್ಯಾ ಸಂಪೂಜ್ಯ ವೃಣುಯಾತ್ ಪ್ರಾರ್ಥಯನ್ನಿತಿ ॥ 21 ॥

ದಾನವನ್ನು ಯಾವ ವಿಪ್ರನಿಗೆ ಕೊಡುತ್ತೇವೋ ಆ ವಿಪ್ರನು ಜಿತೇಂದ್ರಿಯನಾಗಿರಬೇಕು. ಕುಟುಂಬಿಯಾಗಿರಬೇಕು. ವೇದಾದಿಶಾಸ್ತ್ರಗಳನ್ನು ಅಧ್ಯಯನ ಮಾಡಿರಬೇಕು. ಶ್ರೀರಾಮಚಂದ್ರನ ಪೂಜೆಯಲ್ಲಿ ನಿರತನಾಗಿರಬೇಕು. ಶೀಲವಂತನಾಗಿರಬೇಕು. ಅವನಲ್ಲಿ ಅಹಂಕಾರಾದಿಗಳು ಇರಬಾರದು. ರಾಮಮಂತ್ರ ಮೊದಲಾದವುಗಳನ್ನು ಜಪಿಸುತ್ತಿರಬೇಕು. ಅಂಥ ಭಕ್ತನನ್ನು ಕರೆದು ಆಚಾರ್ಯವರಣವನ್ನು ಮಾಡಿ ಅವನ ಬಳಿ ಪ್ರಾರ್ಥಿಸಬೇಕು.

ಶ್ರೀರಾಮಪ್ರತಿಮಾದಾನಂ ಕರಿಷ್ಯೇಽಹಂ ದ್ವಿಜೋತ್ತಮ ।
ತತ್ರಾಚಾರ್ಯೋ ಭವ ಪ್ರೀತಃ ಶ್ರೀರಾಮೋಽಸಿ ತ್ವಮೇವ ಚ ॥ 22 ॥

ದ್ವಿಜೋತ್ತಮನೇ ಇಂದು ನಾನು ಶ್ರೀರಾಮಪ್ರತಿಮೆಯನ್ನು ದಾನ ಮಾಡುತ್ತಿರುವೆನು. ತಾವೇ ನನಗೆ ಆಚಾರ್ಯರು. ತಮ್ಮಲ್ಲಿ ಶ್ರೀರಾಮಚಂದ್ರನು ಸನ್ನಿಹಿತನಾಗಿದ್ದಾನೆ. ಹೀಗೆ ಆ ವಿಪ್ರೋತ್ತಮನನ್ನು ಪೂಜೆ ಮಾಡಿ ಸತ್ಕರಿಸಬೇಕು.

## ಬ್ರಾಹ್ಮಣಾರಾಧನೆಯ ಕ್ರಮ

ಇತ್ಯುಕ್ತ್ವಾ ಪೂಜ್ಯವಿಪ್ರಂ ತಂ ಸ್ನಾಪಯಿತ್ವಾ ತತಃ ಪರಮ್ ।
ತೈಲೇನಾಭ್ಯರ್ಚ್ಯ ತತ್ಸ್ನಾಯಾತ್ ಚಿಂತಯನ್ ರಾಘವಂ ಹೃದಿ ॥ 23 ॥

ಆ ವಿಪ್ರಶ್ರೇಷ್ಠನನ್ನು ಪ್ರಾರ್ಥನೆ ಮಾಡಿ ಅವನಿಗೆ ಸ್ನಾನವನ್ನು ಮಾಡಿಸಬೇಕು. ಎಣ್ಣೆ ಹಚ್ಚಿ ಅಭ್ಯಂಗ ಮಾಡಿಸಬೇಕು. ನಿರಂತರ ತನ್ನ ಹೃದಯದಲ್ಲಿ ಶ್ರೀರಾಮಚಂದ್ರನನ್ನು ಚಿಂತನೆ ಮಾಡುತ್ತಲೇ ಇರಬೇಕು.

ಶ್ವೇತಾಂಬರಧರಃ ಶ್ವೇತಗಂಧಮಾಲ್ಯಾನಿ ಧಾರಯೇತ್ ।
ಅರ್ಚಿತೋ ಭೂಷಿತಶ್ಚೈವಂಕೃತಮಾಧ್ಯಾಹ್ನಿಕಕ್ರಿಯಃ ॥ 24 ॥

ತತಃ ಭೋಜಯೇದ್ ಭಕ್ತ್ಯಾ ಸಾತ್ವಿಕಾನ್ನೈಃ ಸುವಿಸ್ತರಮ್ ।
ಭುಂಜೀತ ಸ್ವಯಮಪ್ಯೇವಂ ಹೃದಿ ರಾಮಮನುಸ್ಮರನ್ ॥ 25 ॥

ಬಿಳಿಯ ವಸ್ತ್ರಗಳನ್ನು ಆ ವಿಪ್ರನಿಗೆ ಉಡಿಸಬೇಕು. ಗಂಧವನ್ನು ಹಚ್ಚ ಬೇಕು. ಶ್ವೇತಪುಷ್ಪದ ಮಾಲೆಯನ್ನು ಕಂಠದಲ್ಲಿ ಹಾಕಬೇಕು. ಇನ್ನು ಅನೇಕ ರೀತಿಯಲ್ಲಿ ಅಲಂಕಾರವನ್ನು ಮಾಡಬೇಕು. ತಾನು ಮಾಧ್ಯಾಹ್ನಿಕ ಸಂಧ್ಯಾವಂದನೆಯನ್ನು ಮಾಡಿ, ಆಚಾರ್ಯನಿಗೆ ಭೋಜನವನ್ನು ಬಡಿಸಬೇಕು. ಬಡಿಸುವ ಅನ್ನವು ಸಾತ್ವಿಕವಾಗಿರಬೇಕು. ಅನೇಕ ಪದಾರ್ಥಗಳನ್ನು ಭೋಜನಕ್ಕಾಗಿ ಸಿದ್ಧಗೊಳಿಸಿರಬೇಕು. ಭಕ್ತಿಯುತನಾಗಿ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ಅನಂತರ ತನ್ನ ಹೃದಯದಲ್ಲಿ ನಿರಂತರ ಶ್ರೀರಾಮಚಂದ್ರನ ಸ್ಮರಣೆಯನ್ನು ಬಿಡದೇ ತಾನು ಭೋಜನವನ್ನು ಮಾಡಬೇಕು.

## ರಾಮನವಮಿಯ ಆಚರಣೆ

ಏಕಭುಕ್ತವ್ರತೀ ತತ್ರ ಸಹಾಚಾರ್ಯೋ ಜಿತೇಂದ್ರಿಯಃ ।
ಶೃಣ್ವನ್ ರಾಮಕಥಾಂ ದಿವ್ಯಾಮಹಃಶೇಷಂ ನಯೇನ್ಮುನೇ ॥ 26 ॥

ಸಾಯಂ ಸಂಧ್ಯಾದಿಕಾಃ ಕುರ್ಯಾತ್ ಕ್ರಿಯಾ ರಾಮಮನುಸ್ಮರನ್ ।
ಆಚಾರ್ಯಸಹಿತೋ ರಾತ್ರಾವಧಃಶಾಯೀ ಜಿತೇಂದ್ರಿಯಃ ॥ 27 ॥

ವಸೇತ್ ಸ್ವಯಂ ನ ಚೈಕಾಂತೇ ಶ್ರೀರಾಮಾರ್ಪಿತಮಾನಸಃ ।
ತತಃ ಪ್ರಾತಃ ಸಮುತ್ಥಾಯ ಸ್ನಾತ್ವಾ ಸಂಧ್ಯಾಂ ಯಥಾವಿಧಿ ॥ 28 ॥

ಶ್ರೀರಾಮಚಂದ್ರನ ಭಕ್ತಿಯನ್ನು ಎಡಬಿಡದೇ ಮಾಡುತ್ತಲೇ ಇರಬೇಕು. ಜಿತೇಂದ್ರಿಯನಾಗಿರಬೇಕು. ರಾಮಭಕ್ತರಾದ ಆಚಾರ್ಯರ ಜೊತೆ ವಾಸ ಮಾಡಬೇಕು. ಅವರ ಬಳಿ ಶ್ರೀರಾಮಚಂದ್ರನ ಕಥೆಯನ್ನು ಕೇಳಬೇಕು. ಶ್ರೀರಾಮನ ದಿವ್ಯಚರಿತ್ರೆಯನ್ನು ಸಾಯಂಕಾಲದ ತನಕ ಕೇಳುತ್ತಾ ಕಾಲವನ್ನು ಕಳೆಯಬೇಕು. ಸಾಯಂಕಾದಲ್ಲಿ ಸಂಧ್ಯಾವಂದನಾದಿಗಳನ್ನು ಆಚರಿಸಬೇಕು. ಶ್ರೀರಾಮನ ಸ್ಮರಣೆಯನ್ನು ಹೃದಯದಲ್ಲಿ ಮಾಡುತ್ತಿರಬೇಕು. ಆಚಾರ್ಯ ಪುರುಷನ ಜೊತೆ ರಾತ್ರಿಯ ಕಾಲದಲ್ಲಿ ನೆಲದ ಮೇಲೆ ಮಲಗಿಕೊಳ್ಳಬೇಕು. ಜಿತೇಂದ್ರಿಯನಾಗಿರಬೇಕು. ಏಕಾಂತದಲ್ಲಿ ಒಬ್ಬನೇ

ಇರಬಾರದು. ಶ್ರೀರಾಮಚಂದ್ರನ ಚರಿತ್ರೆಯಲ್ಲಿಯೇ ಮನಸ್ಸಿಟ್ಟಿರಬೇಕು. ಅನಂತರ ರಾಮನವಮಿಯ ದಿವಸ ಬ್ರಾಹ್ಮೀಮುಹೂರ್ತದಲ್ಲಿ ಏಳಬೇಕು. ಸಂಧ್ಯಾಕಾಲದಲ್ಲಿ ನಿತ್ಯಾಹ್ನಿಕಗಳನ್ನು ವಿಧಿಪ್ರಕಾರವಾಗಿ ಆಚರಿಸಬೇಕು.

ಪ್ರಾತಃ ಸರ್ವಾಣಿ ಕರ್ಮಾಣಿ ಶೀಘ್ರಮೇವ ಸಮಾಪಯೇತ್ ।
ತತಃ ಸ್ವಸ್ಥಮನಾ ಭೂತ್ವಾ ವಿದ್ವದ್ಭಿಃ ಸಹಿತೋಽನಘ ॥ 29 ॥

ಪ್ರಾತಃಕಾಲದಲ್ಲಿ ಎಲ್ಲ ಕರ್ಮಗಳನ್ನೂ ಶೀಘ್ರವಾಗಿಯೇ ಮುಗಿಸಬೇಕು. ಅನಂತರ ಏಕಾಗ್ರ ಮನಸ್ಸಿನಿಂದ ಎಲ್ಲ ವಿದ್ವಾಂಸರ ಜೊತೆ ಸೇರಬೇಕು.

## ರಾಮಮಂಟಪದ ನಿರ್ಮಾಣ

ಸ್ವಗೃಹಸ್ಯೋತ್ತರೇ ದೇಶೇ ದ್ವಾರಸ್ಯೋಜ್ಜ್ವಲಮಂಡಪಮ್ ।
ಚತುರ್ದ್ವಾರಂ ಪತಾಕಾಢ್ಯಂ ಸವಿತಾನಂ ಸತರೋಣಮ್ ॥ 30 ॥

ಮನೋಹರಂ ಮಹೋತ್ಸೇಧಂ ಪುಷ್ಪಾದ್ಯೈಃ ಸಮಲಂಕೃತಮ್ ।
ಶಂಖಚಕ್ರಹನೂಮದ್ಭಿಃ ಪ್ರಾಗ್ದ್ವಾರೇ ಸಮಲಂಕೃತಮ್ ॥ 31 ॥

ತನ್ನ ಮನೆಯ ಉತ್ತರಭಾಗದಲ್ಲಿ ರಾಮದೇವರ ಪ್ರತಿಮೆಯ ದಾನಕ್ಕಾಗಿ ಒಂದು ಉಜ್ಜ್ವಲವಾದ ಮಂಟಪವನ್ನು ಸಿದ್ಧಗೊಳಿಸಿರಬೇಕು. ಆ ಮಂಟಪಕ್ಕೆ ನಾಕು ದ್ವಾರಗಳಿರಬೇಕು. ಪತಾಕವಿರಬೇಕು. ತೋರಣಗಳಿಂದ ಅಲಂಕೃತವಾಗಿರಬೇಕು. ಮನೋಹರವಾಗಿರಬೇಕು. ಚಿಗುರು ಹೂವು ಮೊದಲಾದವುಗಳಿಂದ ಅಲಂಕೃತವಾಗಿರಬೇಕು. ಶಂಖ, ಚಕ್ರ, ಹನುಮಂತದೇವರ ಪಟ ಮೊದಲಾದವುಗಳನ್ನು ಪೂರ್ವದಿಕ್ಕಿನ ಬಾಗಿಲಿನಲ್ಲಿ ಹಾಕಿರಬೇಕು.

ಗರುತ್ಮಚ್ಛಾರ್ಙ್ಗಬಾಣೈಶ್ಚ ದಕ್ಷಿಣೇ ಸಮಲಂಕೃತಮ್ ।
ಗದಾಖಡ್ಗಾಂಗದೈಶ್ಚೈವ ಪಶ್ಚಿಮೇ ಚ ವಿಭೂಷಿತಮ್ ॥ 32 ॥

ಪದ್ಮಸ್ವಸ್ತಿಕನೀಲೈಶ್ಚ ಕೌಬೇರ್ಯಾಂ ಸಮಲಂಕೃತಮ್ ।
ಮಧ್ಯೇ ಹಸ್ತಚತುಷ್ಕಾಢ್ಯಂ ವೇದಿಕಾಯುಕ್ತಮಾಯತಮ್ ॥ 33 ॥

ಗರುಡ ಶಾರ್ಙ್ಗ ಬಾಣಗಳನ್ನು ದಕ್ಷಿಣದಿಕ್ಕಿನಲ್ಲಿ ಹಾಕಿರಬೇಕು. ಗದಾ ಖಡ್ಗ ಅಂಗದ ಮೊದಲಾದವುಗಳನ್ನು ಪಶ್ಚಿಮದಿಕ್ಕಿನಲ್ಲಿ, ಪದ್ಮ ಸ್ವಸ್ತಿಕ ನೀಲ ಇವುಗಳನ್ನು ಉತ್ತರ ದಿಕ್ಕಿನಲ್ಲಿ ಹಾಕಿರಬೇಕು. ಆ ವೇದಿಕೆಯು ನಾಲ್ಕು ಮೊಳಗಳಷ್ಟು ವಿಸ್ತಾರವಾಗಿರಬೇಕು.

ಪ್ರವಿಶ್ಯ ಗೀತನೃತ್ಯೈಶ್ಚ ವಾದ್ಯೈಶ್ಚಾಪಿ ಸಮನ್ವಿತಮ್ ।
ಪುಣ್ಯಾಹಂ ವಾಚಯಿತ್ವಾ ಚ ವಿದ್ವದ್ಭಿಃ ಪ್ರೀತಮಾನಸೈಃ ॥ 34 ॥

ಅಂಥ ಮಂಟಪವನ್ನು ಗೀತ, ನೃತ್ಯ, ವಾದ್ಯಗಳ ಸಹಿತವಾಗಿ ಪ್ರವೇಶ ಮಾಡಬೇಕು. ಸಂತುಷ್ಟಮನಸ್ಕರಾದ ವಿದ್ವಾಂಸರಿಂದ ಪುಣ್ಯಾಹವನ್ನು ಹೇಳಿಸಬೇಕು.

## ಪ್ರತಿಮಾ ದಾನದ ಸಂಕಲ್ಪ

ತತಃ ಸಂಕಲ್ಪಯೇದ್ ದೇವಂ ರಾಮಮೇವ ಸ್ಮರನ್ ಮುನೇ ।
ಅಸ್ಯಾಂ ರಾಮನವಮ್ಯಾಂ ತು ರಾಮಾರಾಧನತತ್ಪರಃ ॥ 35 ॥

ಉಪೋಷ್ಯಾಷ್ಟಸು ಯಾಮೇಷು ಪೂಜಯಿತ್ವಾ ಯಥಾವಿಧಿ ।
ಇಮಾಂ ಸ್ವರ್ಣಮಯೀಂ ರಾಮಪ್ರತಿಮಾಂ ತು ಪ್ರಯತ್ನತಃ ॥ 36 ॥

ಶ್ರೀರಾಮಪ್ರೀತಯೇ ದಾಸ್ಯೇ ರಾಮಭಕ್ತಾಯ ಧೀಮತೇ ।
ಪ್ರೀತೋ ರಾಮೋ ಹರತ್ವಾಶು ಪಾಪಾನಿ ಸುಬಹೂನಿ ಮೇ ॥ 37 ॥

ಅನೇಕಜನ್ಮಸಂಸಿದ್ಧಾನ್ಯಭ್ಯಸ್ತಾನಿ ಮಹಾಂತಿ ಚ ।

ಮಂಟಪದಲ್ಲಿ ಪ್ರವೇಶ ಮಾಡಿ ಶ್ರೀರಾಮಚಂದ್ರನನ್ನೇ ಸ್ಮರಣೆ ಮಾಡುತ್ತಾ ಹೀಗೆ ಸಂಕಲ್ಪ ಮಾಡಬೇಕು. ಈ ರಾಮನವಮಿಯ ಪರ್ವಕಾಲದಲ್ಲಿ ಶ್ರೀರಾಮಚಂದ್ರನನ್ನು ವಿಧಿಪ್ರಕಾರವಾಗಿ ಪೂಜಿಸಿದ ಈ ಸ್ವರ್ಣಮಯವಾದ ರಾಮಪ್ರತಿಮೆಯನ್ನು ಶ್ರೀರಾಮಚಂದ್ರನ ಆರಾಧನೆಯಲ್ಲೇ ಆಸಕ್ತರಾದ ಎಂಟು ಯಾಮಗಳಲ್ಲಿ ಉಪವಾಸವಿದ್ದು ಬುದ್ಧಿವಂತರಾದ ರಾಮಭಕ್ತರಿಗೆ ಶ್ರೀರಾಮಚಂದ್ರನ ಪ್ರೀತಿಗಾಗಿ ದಾನ ಮಾಡುತ್ತಿದ್ದೇನೆ. ನನ್ನ ವಿಷಯದಲ್ಲಿ ಶ್ರೀರಾಮಚಂದ್ರನು

ಪ್ರೀತನಾಗಲಿ. ನನ್ನೆಲ್ಲ ಅನೇಕ ಪಾಪಗಳನ್ನು ಪರಿಹರಿಸಲಿ. ಅನೇಕ ಜನ್ಮಗಳಿಂದ ಕೂಡಿಟ್ಟು ಕೊಂಡಿರುವ ಪುನಃ ಪುನಃ ಮಾಡಲ್ಪಟ್ಟ ದೊಡ್ಡ ದೊಡ್ಡ ಪಾಪಗಳೆಲ್ಲವೂ ಶ್ರೀರಾಮಚಂದ್ರನ ಅನುಗ್ರಹದಿಂದ ಪರಿಹಾರವಾಗಲಿ.

ಸರ್ವತೋಭದ್ರಮಂಡಲವನ್ನು ಬರೆದು ಅಲ್ಲಿ ರಾಮಕಲಶವನ್ನಿಡಬೇಕು

ವಿಲಿಖೇತ್ ಸರ್ವತೋಭದ್ರಂ ವೇದಿಕೋಪರಿ ಸುಂದರಮ್ ॥ 38 ॥

ರಾಮದೇವರ ಕುರಿತಾದ ಸರ್ವತೋಭದ್ರಮಂಡಲವನ್ನು ವೇದಿಕೆಯ ಮೇಲೆ ಸುಂದರವಾಗಿ ಬರೆಯಬೇಕು.

ಮಧ್ಯೇ ತೀರ್ಥೋದಕೈರ್ಯುಕ್ತಂ ಪಾತ್ರಂ ಸಂಸ್ಥಾಪ್ಯ ಚಾರ್ಚಿತಮ್ ।
ಸೌವರ್ಣೇ ರಾಜತೇ ತಾಮ್ರೇ ಪಾತ್ರೇ ಷಟ್‌ಕೋಣಮಾಲಿಖೇತ್ ॥ 39 ॥

ಮಧ್ಯದಲ್ಲಿ ಅನೇಕ ತೀರ್ಥೋದಕಗಳಿಂದ ಕೂಡಿರುವ ಕಲಶವನ್ನಿಡಬೇಕು. ಅದರಲ್ಲಿ ಶ್ರೀರಾಮದೇವರನ್ನು ಭಕ್ತಿಯಿಂದ ಪೂಜಿಸಬೇಕು. ಸುವರ್ಣ ಅಥವಾ ಬೆಳ್ಳಿ ಅಥವಾ ತಾಮ್ರ ಕಲಶವನ್ನು ಷಟ್ಕೋಣಮಂಡಲಮಧ್ಯದಲ್ಲಿ ಇಡಬೇಕು.

## ಶ್ರೀರಾಮಪ್ರತಿಮೆಯ ಲಕ್ಷಣ

ತತ್ರ ಸ್ವರ್ಣಮಯೀಂ ರಾಮಪ್ರತಿಮಾಂ ಪಲಮಾತ್ರತಃ ।
ನಿರ್ಮಿತಾಂ ದ್ವಿಭುಜಾಂ ರಮ್ಯಾಂ ವಾಮಾಂಕಸ್ಥಿತಜಾನಕೀಮ್ ॥ 40 ॥

ಬಿಭ್ರತೀಂ ದಕ್ಷಿಣೇ ಹಸ್ತೇ ಜ್ಞಾನಮುದ್ರಾಂ ಮಹಾಮುನೇ ।
ವಾಮೇನಾಧಃಕರೇಣಾರಾದ್ ದೇವೀಮಾಲಿಂಗ್ಯ ಸಂಸ್ಥಿತಾಮ್ ॥ 41 ॥

ಸಿಂಹಾಸನೇ ರಾಜತೇ ಚ ಪಲದ್ವಯವಿನಿರ್ಮಿತೇ ।

ಶ್ರೀರಾಮನ ಪ್ರತಿಮೆಯು ಬಂಗಾರದ್ದಾಗಿರಬೇಕು. ೧೭೬ ಗುಲಗಂಜಿಯಷ್ಟು ಭಾರವುಳ್ಳ ಅಥವಾ ೪ ಕರ್ಷವೆನಿಸಿದ ಪಲಭಾರದ್ದಾಗಿರಬೇಕು. ಆ ಪ್ರತಿಮೆಗೆ ಎರಡು ಕೈಗಳಿರಬೇಕು. ಎಡಗೈಯ್ಯನ್ನು ಜಾನಕಿಯ ಮೇಲಿಟ್ಟಿರಬೇಕು. ಬಲಗೈಯಲ್ಲಿ ಜ್ಞಾನಮುದ್ರೆಯಿರಬೇಕು. ಎಡಗೈಯಿಂದ ಸೀತಾದೇವಿಯನ್ನು ಆಲಿಂಗನ

ಮಾಡಿರಬೇಕು. ಶೋಭಿಸುವ ಸಿಂಹಾಸನದಲ್ಲಿ ಕುಳಿತಿರಬೇಕು. ಎರಡು ಪಲಗಳ ಭಾರದಲ್ಲಿ ಆದರ ಸಿಂಹಾಸನವನ್ನು ನಿರ್ಮಾಣ ಮಾಡಿರಬೇಕು.

## ಭಕ್ತಿಯ ರಾಮಪೂಜೆ

ಪಂಚಾಮೃತಸ್ನಾನಪೂರ್ವಂ ಸಂಪೂಜ್ಯ ವಿಧಿವತ್ ತತಃ ॥ 42 ॥

ಮೂಲಮಂತ್ರೇಣ ನಿಯತೋ ನ್ಯಾಸಪೂರ್ವಮತಂದ್ರಿತಃ ।
ದಿವೈವಂ ವಿಧಿವತ್ ಕೃತ್ವಾ ರಾತ್ರೌ ಜಾಗರಣಂ ತತಃ ॥ 43 ॥

ದಿವ್ಯಾಂ ರಾಮಕಥಾಂ ಶ್ರುತ್ವಾ ರಾಮಭಕ್ತಿಸಮನ್ವಿತಃ ।
ಗೀತನೃತ್ಯಾದಿಭಿಶ್ಚೈವ ರಾಮಸ್ತೋತ್ರೈರನೇಕಧಾ ॥ 44 ॥

ರಾಮಾಷ್ಟಕೈಶ್ಚ ಸಂಸ್ತುತ್ಯ ಗಂಧಪುಷ್ಪಾಕ್ಷತಾದಿಭಿಃ ।
ಕರ್ಪೂರಾಗರುಕಸ್ತೂರೀಕಲ್ಹಾರಾದ್ಯೈರನೇಕಧಾ ॥ 45 ॥

ಸಂಪೂಜ್ಯವಿಧಿವದ್ ಭಕ್ತ್ಯಾ ದಿವಾರಾತ್ರಂ ನಯೇದ್ ಬುಧಃ ।

ರಾಮಪ್ರತಿಮೆಗೆ ಪಂಚಾಮೃತಸ್ನಾನವನ್ನು ಮಾಡಿಸಬೇಕು. ಭಕ್ತಿಯಿಂದ ಪೂಜೆ ಮಾಡಬೇಕು. ಮೂಲಮಂತ್ರದಿಂದ ೧೪ ಬಾರಿ ನ್ಯಾಸವನ್ನು ಮಾಡಬೇಕು. ಏಕಾಗ್ರಚಿತ್ತನಾಗಿರಬೇಕು. ಹೀಗೆ ವಿಧಿಪ್ರಕಾರವಾಗಿ ಹಗಲಿನ ಕಾಲದಲ್ಲಿ ಪೂಜೆಯನ್ನು ಮಾಡಿ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಬೇಕು. ಶ್ರೀರಾಮಚಂದ್ರನ ದಿವ್ಯಕಥೆಯನ್ನು ವಿದ್ವಾಂಸರಿಂದ ಶ್ರವಣ ಮಾಡಬೇಕು. ರಾಮಭಕ್ತಿಯನ್ನು ಅಚಲವಾಗಿ ಹೊಂದಿರಬೇಕು. ಶ್ರೀರಾಮನ ಚರಿತ್ರೆಯ ಕುರಿತಾದ ಪದ್ಯಗಳನ್ನು ಹಾಡಬೇಕು. ಶ್ರೀರಾಮಚಂದ್ರನ ಚರಿತ್ರೆಯನ್ನು ಬಿತ್ತರಿಸುವ ನರ್ತನಾದಿಗಳನ್ನು ಮಾಡಬೇಕು. ಬಗೆ ಬಗೆಯ ರಾಮಸ್ತೋತ್ರಗಳನ್ನು ಪಠಿಸಬೇಕು. ರಾಮಾಷ್ಟಕಗಳಿಂದ ಶ್ರೀರಾಮಚಂದ್ರನನ್ನು ಸ್ತುತಿಸಬೇಕು. ಗಂಧ, ಪುಷ್ಪ, ಅಕ್ಷತೆಗಳಿಂದ ಪೂಜಿಸಬೇಕು. ಕರ್ಪೂರ, ಅಗರು, ಕಸ್ತೂರಿ ಕಲ್ಹಾರಪುಷ್ಪ ಮೊದಲಾದ ಅನೇಕ ಪೂಜಾಸಾಮಗ್ರಿಗಳಿಂದ ದೇವರನ್ನು ಸಂತೋಷಪಡಿಸಬೇಕು. ಹೀಗೆ ವಿಧಿಪ್ರಕಾರ ಭಕ್ತಿಯಿಂದ ಹಗಲು ರಾತ್ರಿ ಶ್ರೀರಾಮಚಂದ್ರನ ಪೂಜೆಯನ್ನು ಮಾಡುತ್ತಲೇ ಕಾಲವನ್ನು ಕಳೆಯಬೇಕು.

# ರಾಮಮಂತ್ರ ಹೋಮ

ತತಃ ಪ್ರಾತಃ ಸಮುತ್ಥಾಯ ಸ್ನಾನಸಂಧ್ಯಾದಿಕಾಃ ಕ್ರಿಯಾಃ ॥ 46 ॥

ಸಮಾಪ್ಯ ವಿಧಿವದ್ ರಾಮಂ ಪೂಜಯೇದ್ ವಿಧಿವನ್ಮುನೇ।
ತತೋ ಹೋಮಂ ಪ್ರಕುರ್ವೀತ ಮೂಲಮಂತ್ರೇಣ ಮಂತ್ರವಿತ್ ॥ 47 ॥

ಪೂರ್ವೋಕ್ತಪದ್ಮಕುಂಡೇ ವಾ ಸ್ಥಂಡಿಲೇ ವಾ ಸಮಾಹಿತಃ।
ಲೌಕಿಕಾಗ್ನೌ ವಿಧಾನೇನ ಶತಮಷ್ಟೋತ್ತರಂ ಮುನೇ ॥ 48 ॥

ಸಾಜ್ಯೇನ ಪಾಯಸೇನೈವ ಸ್ಮರನ್ ರಾಮಮನನ್ಯಧೀಃ।
ತತೋ ಭಕ್ತ್ಯಾ ಸುಸಂತೋಷ್ಯ ಆಚಾರ್ಯಂ ಪೂಜಯೇನ್ಮುನೇ ॥ 49 ॥

ಮುನಿಯೇ! ಮರುದಿವಸ ಬೆಳಿಗ್ಗೆ ಬ್ರಾಹ್ಮೀಮುಹೂರ್ತದಲ್ಲೆದ್ದು ಸ್ನಾನಸಂಧ್ಯಾ-ವಂದನೆಗಳನ್ನು ಆಚರಿಸಬೇಕು. ಅನಂತರ ಶ್ರೀರಾಮಚಂದ್ರನನ್ನು ವಿಧಿಪ್ರಕಾರ ಪುನಃ ಪೂಜೆ ಮಾಡಬೇಕು. ಮಂತ್ರಜ್ಞನು ರಾಮಮಂತ್ರ ಹೋಮವನ್ನು ಮಾಡಬೇಕು. ಹಿಂದೆ ಹೇಳಿದ ಪದ್ಮಕುಂಡದಲ್ಲಿ ಅಥವಾ ಸ್ಥಂಡಿಲದಲ್ಲಿ ಬರೆದು ಅದರಲ್ಲಿ ಹೋಮಕುಂಡವನ್ನು ಸ್ಥಾಪನೆ ಮಾಡಿ ಲೌಕಿಕಾಗ್ನಿಯಲ್ಲಿ ೧೦೮ ಬಾರಿ ಆಹುತಿಯನ್ನು ನೀಡಬೇಕು. ತುಪ್ಪದಿಂದ ಕೂಡಿರುವ ಪಾಯಸವೇ ಆಹುತಿಯಾಗಿರುತ್ತದೆ. ಆಗ ಶ್ರೀರಾಮಚಂದ್ರನನ್ನು ಏಕಾಗ್ರಚಿತ್ತನಾಗಿ ಧ್ಯಾನ ಮಾಡುತ್ತಿರಬೇಕು. ಭಕ್ತಿಯಿಂದ ಆಚಾರ್ಯಪುರುಷನನ್ನು ಸಂತೋಷಪಡಿಸಿ ಪೂಜೆ ಮಾಡಬೇಕು.

## ದಾನಸಂಕಲ್ಪ

ಕುಂಡಲಾಭ್ಯಾಂ ಸರತ್ನಾಭ್ಯಾಮಂಗುಲೀಯೈರನೇಕಧಾ।
ಗಂಧಪುಷ್ಪಾಕ್ಷತೈರ್ವಸ್ತ್ರೈರ್ವಿಚಿತ್ರೇಷು ಮನೋಹರೈಃ ॥ 50 ॥

ತತೋ ರಾಮಂ ಸ್ಮರನ್ ದದ್ಯಾಮಿಮಂ ಮಂತ್ರಮುದೀರಯೇತ್।

ಶ್ರೀರಾಮಚಂದ್ರನು ಕುಂಡಲಗಳನ್ನು ಧಾರಣೆ ಮಾಡಿದ್ದಾನೆ. ರತ್ನಗಳಿಂದ ಕೂಡಿರುವ ಉಂಗುರಗಳನ್ನು ಧರಿಸಿದ್ದಾನೆ. ಗಂಧ ಪುಷ್ಪ,ಅಕ್ಷತೆ, ವಸ್ತ್ರಗಳಿಂದ

ವಿಭೂಷಿತನಾಗಿದ್ದಾನೆ. ಆ ಶ್ರೀರಾಮಚಂದ್ರನು ಮನೋಹರನಾಗಿದ್ದಾನೆ. ಶ್ರೀರಾಮಚಂದ್ರನನ್ನು ಸ್ಮರಣೆ ಮಾಡುತ್ತಾ ಈ ಮಂತ್ರವನ್ನು ಪಠಿಸಬೇಕು.

'ಇಮಾಂ ಸ್ವರ್ಣಮಯೀಂ ರಾಮಪ್ರತಿಮಾಂ ಸಮಲಂಕೃತಾಮ್ ॥ 51 ॥

ಚಿತ್ರವಸ್ತ್ರಯುಗಚ್ಛನ್ನಾಂ ರಾಮೋಽಹಂ ರಾಘವಾಯ ತೇ ।
ಶ್ರೀರಾಮಪ್ರೀತಯೇ ದಾಸ್ಯೇ ತುಷ್ಟೋ ಭವತು ರಾಘವಃ' ॥ 52 ॥

'ಇಮಾಂ ಸ್ವರ್ಣಮಯೀಂ ರಾಮಪ್ರತಿಮಾಂ ಸಮಲಂಕೃತಾಮ್ । ಚಿತ್ರವಸ್ತ್ರಯುಗಚ್ಛನ್ನಾಂ ರಾಮೋಽಹಂ ರಾಘವಾಯ ತೇ । ಶ್ರೀರಾಮಪ್ರೀತಯೇ ದಾಸ್ಯೇ ತುಷ್ಟೋ ಭವತು ರಾಘವಃ' ॥ ಸ್ವರ್ಣನಿರ್ಮಿತವಾದ ಅಲಂಕೃತವಾದ ಈ ರಾಮಪ್ರತಿಮೆಯನ್ನು ದಾನ ಮಾಡುತ್ತಿದ್ದೇನೆ. ದಾನ ಕೊಡುವ ನನ್ನಲ್ಲಿ ದಾನ ತೆಗೆದುಕೊಳ್ಳುವ ಬ್ರಾಹ್ಮಣನಲ್ಲಿ ಶ್ರೀರಾಮಚಂದ್ರನೇ ನೆಲೆಸಿ ಈ ದಾನವನ್ನು ಮಾಡಿಸುತ್ತಿದ್ದಾನೆ. ಈ ದಾನದಿಂದ ಶ್ರೀರಾಮಚಂದ್ರನು ಪ್ರೀತನಾಗಲಿ. ಹೀಗೆ ಹೇಳಿ ದಾನ ಮಾಡಬೇಕು.

## ದಾನದಿಂದ ದೊರೆಯುವ ಫಲ

ಇತಿ ದತ್ವಾ ವಿಧಾನೇನ ದದ್ಯಾದ್ ವೈ ದಕ್ಷಿಣಾಂ ಧ್ರುವಮ್ ।
ಅನ್ಯೇಭ್ಯಶ್ಚ ಯಥಾಶಕ್ತ್ಯಾ ಗೋಹಿರಣ್ಯಾದಿ ಭಕ್ತಿತಃ ॥ 53 ॥

ಹೀಗೆ ರಾಮಪ್ರತಿಮೆಯನ್ನು ದಾನ ಮಾಡಬೇಕು. ಯಥೇಚ್ಛವಾಗಿ ದಕ್ಷಿಣೆಯನ್ನು ದಾನ ಮಾಡಬೇಕು. ಅನ್ನದಾನ ಮಾಡಬೇಕು. ಯಥಾಶಕ್ತಿ ಗೋದಾನ, ಹಿರಣ್ಯದಾನಾದಿಗಳನ್ನು ಭಕ್ತಿಯಿಂದ ಮಾಡಬೇಕು.

ದದ್ಯಾದ್ ವಾಸೋಯುಗಂ ಧಾನ್ಯಂ ತಥಾಲಂಕರಣಾನಿ ಚ ।
ಏವಂ ಯಃ ಕುರುತೇ ರಾಮಪ್ರತಿಮಾದಾನಮುತ್ತಮಮ್ ॥ 54 ॥

ಬ್ರಹ್ಮಹತ್ಯಾದಿ ಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ।
ತುಲಾಪುರುಷದಾನಾದಿಫಲಮಾಪ್ನೋತಿ ಸುವ್ರತ ॥ 55 ॥

ಅನೇಕಜನ್ಮಸಂಸಿದ್ಧಪಾಪೇಭ್ಯೋ ಮುಚ್ಯತೇ ಧ್ರುವಮ್ ।
ಬಹುನಾತ್ರ ಕಿಮುಕ್ತೇನ ಮುಕ್ತಸ್ತಸ್ಯ ಕರೇ ಸ್ಥಿತಾ ॥ 56 ॥
ಕುರುಕ್ಷೇತ್ರೇ ಮಹಾಪುಣ್ಯೇ ಸೂರ್ಯಪರ್ವಣ್ಯಶೇಷತಃ ।
ತುಲಾಪುರುಷದಾನಾದ್ಯೈಃ ಕೃತ್ಯೈರ್ಯಾವಲ್ಲಭ್ಯತೇ ಫಲಮ್ ॥ 57 ॥
ತತ್ಫಲಂ ಲಭತೇ ಮರ್ತ್ಯೋ ದಾನೇನಾನೇನ ಸುವ್ರತ ।

ಎರಡು ವಸ್ತ್ರಗಳನ್ನು ಧಾನ್ಯಗಳನ್ನು ಅಲಂಕಾರಸಾಮಗ್ರಿಗಳನ್ನು ಆ ದಾನಕಾಲದಲ್ಲಿ ನೀಡಬೇಕು. ಯಾರು ಹೀಗೆ ರಾಮಪ್ರತಿಮೆಯನ್ನು ದಾನ ಮಾಡುತ್ತಾನೋ ಅವನಿಗೆ ಬ್ರಹ್ಮಹತ್ಯಾದಿ ಪಾಪಗಳೆಲ್ಲವೂ ನಾಶವಾಗುತ್ತವೆ. ಈ ವಿಷಯದಲ್ಲಿ ಸಂಶಯವಿಲ್ಲ. ಅನೇಕ ಜನ್ಮಗಳಲ್ಲಿ ಸಂಪಾದನೆಮಾಡಿದ ಪಾಪಗಳೆಲ್ಲವೂ ಪರಿಹಾರವಾಗುತ್ತವೆ. ಹೆಚ್ಚು ಹೇಳುವುದಕ್ಕೇನಿದೆ? ಮುಕ್ತಿಯೇ ಕರಗತವಾಗುತ್ತದೆ ಎಂಬ ಒಂದೇ ಮಾತು ಸಾಕು. ಮಹಾಪುಣ್ಯಸ್ಥಳವೆನಿಸಿದ ಕುರುಕ್ಷೇತ್ರದಲ್ಲಿ ಸೂರ್ಯಗ್ರಹಣದಲ್ಲಿ ತುಲಾಪುರುಷ ದಾನವನ್ನು ಮಾಡಿದಾಗ ಎಷ್ಟು ಫಲವು ದೊರಕುತ್ತದೋ ಅಷ್ಟು ಫಲವು ಇದರಿಂದ ದೊರೆಯುತ್ತದೆ.

## ರಾಮನವಮೀವ್ರತವನ್ನು ಯಾರು ಮಾಡಬೇಕು

ಸುತೀಕ್ಷ್ಣಃ –
ಪ್ರಾಯೇಣ ಹಿ ನರಾಃ ಸರ್ವೇ ದರಿದ್ರಾಃ ಕೃಪಣಾ ಮುನೇ ॥ 58 ॥
ಕೈಃ ಕರ್ತವ್ಯಂ ಕಥಮಿದಂ ವ್ರತಂ ಬ್ರೂಹಿ ಮಹಾಮುನೇ ।

ಅಗಸ್ತ್ಯಮುನಿಗಳೇ ಸಾಮಾನ್ಯವಾಗಿ ಎಲ್ಲ ಮನುಷ್ಯರೂ ದರಿದ್ರರೂ ದೀನರೂ ಆಗಿರುತ್ತಾರೆ. ನೀವು ಹೇಳಿದ ಈ ರಾಮನವಮೀವ್ರತವನ್ನು ಯಾರು ಮಾಡಬೇಕು ಹೇಗೆ ಮಾಡಬೇಕು ಅದನ್ನು ನನಗೆ ತಿಳಿಸಿರಿ.

## ಹಣವಿಲ್ಲದವರೂ ಕೂಡ ರಾಮನವಮಿಯನ್ನು ಆಚರಿಸಬೇಕು

ಅಗಸ್ತ್ಯಃ –
ದರಿದ್ರಶ್ಚ ಮಹಾಭಾಗ ಸ್ವಸ್ಯ ವಿತ್ತಾನುಸಾರತಃ ॥ 59 ॥

ಪಲಾರ್ಧೇನ ತದರ್ಧೇನ ತದರ್ಧಾರ್ಧೇನ ವಾ ಪುನಃ ।
ವಿತ್ತಶಾಠ್ಯಮಕೃತ್ವೈವ ಕುರ್ಯಾದೇವಂ ವ್ರತಂ ಮುನೇ ॥ 60 ॥
ಯದಿ ಘೋರತರಂ ದುಷ್ಟಂ ಪಾತಕಂ ನೇಹತೇ ಕ್ವಚಿತ್ ।
ಅಕಿಂಚನೋऽಪಿ ಯತ್ನೇನ ಉಪೋಷ್ಯ ನವಮೀದಿನೇ ॥ 61 ॥
ಏಕಚಿತ್ತೋऽಪಿ ವಿಧಿವತ್ ಸರ್ವಪಾಪೈಃ ಪ್ರಮುಚ್ಯತೇ ।

ಅಗಸ್ತ್ಯರು ಉತ್ತರಿಸುತ್ತಾರೆ –

ಮಹಾಭಾಗ್ಯಶಾಲಿಯೇ! ತನ್ನ ದುಡ್ಡಿನ ಅನುಕೂಲಕ್ಕೆ ಅನುಗುಣವಾಗಿ ದರಿದ್ರನೂ ಕೂಡ ಈ ವ್ರತವನ್ನು ಆಚರಿಸ ಬೇಕು. ಅರ್ಧ ಪಲದಷ್ಟು ಅಥವಾ ಅದರ ಅರ್ಧದಷ್ಟಾದರೂ ತ್ಯಾಗ ಮಾಡಿದರೆ ಸಾಕು. ಆಚರಣೆ ಮಾಡದೇ ಇರಬಾರದು. ಯಾವುದೇ ಕಾರಣಕ್ಕೂ ವಿತ್ತಶಾಠ್ಯವನ್ನು ಮಾಡಬಾರದು. ಒಂದು ವೇಳೆ ಅತ್ಯಂತ ಘೋರವಾದ ದುಷ್ಟವಾದ ಪಾತಕವನ್ನು ಪರಿಹರಿಸಿಕೊಳ್ಳಲು ಯಾರು ಇಷ್ಟಪಡುತ್ತಾನೋ ಅಂಥವನು ಬಡವನಾಗಿದ್ದರೂ ಕೂಡ ಪ್ರಯತ್ನಪೂರ್ವಕವಾಗಿ ರಾಮನವಮೀ ವ್ರತವನ್ನು ಆಚರಣೆ ಮಾಡಬೇಕು. ರಾಮನವಮಿಯ ದಿವಸ ಉಪವಾಸ ಮಾಡಬೇಕು. ಒಂದೇ ಮನಸ್ಸಿನಿಂದ ಹೀಗೆ ಆಚರಣೆ ಮಾಡುವವನು ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ.

## ರಾಮನವಮಿಯಂದು ದಾನ ಮಾಡಲೇಬೇಕು

ಪ್ರಾತಃ ಸ್ನಾನಂ ಚ ಕೃತ್ವಾ ಸಂಧ್ಯಾದಿಕಾಃ ಕ್ರಿಯಾಃ ॥ 62 ॥
ಗೋಭೂತಿಲಹಿರಣ್ಯಾದಿ ದದ್ಯಾತ್ ವಿತ್ತಾನುಸಾರತಃ ।
ಶ್ರೀರಾಮಚಂದ್ರಭಕ್ತೇಭ್ಯೋ ವಿದ್ವದ್ಭ್ಯಃ ಶ್ರದ್ಧಯಾನ್ವಿತಃ ॥ 63 ॥
ಪಾರಣಂ ತ್ವಥ ಕುರ್ವೀತ ಬ್ರಾಹ್ಮಣೈಶ್ಚ ಸ್ವಬಂಧುಭಿಃ ।
ಏವಂ ಯಃ ಕುರುತೇ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥ 64 ॥

ರಾಮನವಮಿಯ ದಿವಸ ಪ್ರಾತಃಕಾಲದಲ್ಲಿ ಸ್ನಾನ ಸಂಧ್ಯಾವಂದನೆಗಳನ್ನು ಶಾಸ್ತ್ರೋಕ್ತರೀತಿಯಲ್ಲಿ ಮಾಡಬೇಕು. ಗೋದಾನ, ಹಿರಣ್ಯದಾನ, ವಿವಿಧಸಂಪತ್ತುಗಳ

ದಾನವನ್ನು ತಮ್ಮ ಹಣದ ಅನುಕೂಲಕ್ಕೆ ತಕ್ಕಂತೆ ವಿಪ್ರರಿಗೆ ನೀಡಬೇಕು. ಶ್ರೀರಾಮಚಂದ್ರನ ಭಕ್ತರಾದ ಜ್ಞಾನಿಗಳಿಗೆ ಅತ್ಯಂತ ಶ್ರದ್ಧೆಯಿಂದ ದಾನ ಮಾಡಬೇಕು. ಮರುದಿವಸ ಎಲ್ಲ ಬಂಧುಗಳ ಜೊತೆ ಮತ್ತು ಬ್ರಾಹ್ಮಣರ ಜೊತೆ ಪಾರಣೆಯನ್ನು ಮಾಡಬೇಕು. ಯಾರು ಭಕ್ತಿಯಿಂದ ಹೀಗೆ ರಾಮನವಮೀ ವ್ರತವನ್ನು ಆಚರಿಸುತ್ತಾರೋ ಅವರು ಎಲ್ಲ ಬಗೆಯ ಪಾಪಗಳಿಂದ ಮುಕ್ತರಾಗುತ್ತಾರೆ.

## ಯೋಗ್ಯತೆಗಿಂತ ಕಡಿಮೆ ಮಟ್ಟದಲ್ಲಿ ದಾನಾದಿಗಳನ್ನು ಮಾಡಬಾರದು

ಪ್ರಾಪ್ತೇ ಶ್ರೀರಾಮನವಮೀ ದಿನೇ ಮರ್ತ್ಯೋ ವಿಮೂಢಧೀಃ ।
ಉಪೋಷಣಂ ನ ಕುರುತೇ ಕುಂಭೀಪಾಕೇಷು ಪಚ್ಯತೇ ॥65॥

ಯತ್ಕಿಂಚಿದ್ ರಾಮಮುದ್ದಿಶ್ಯ ಕ್ರಿಯತೇ ನ ಸ್ವಶಕ್ತಿತಃ ।
ರೌರವೇ ಸ ತು ಮೂಢಾತ್ಮಾ ಪಚ್ಯತೇ ನಾತ್ರ ಸಂಶಯಃ ॥66॥

ರಾಮನವಮಿಯು ಬಂದಾಗಲೂ ಕೂಡ ಮೂಢನಾಗಿರುವ ವ್ಯಕ್ತಿಯು ಉಪ-ವಾಸವನ್ನು ಮಾಡಿ ಪೂಜೆಯನ್ನು ಮಾಡದಿದ್ದರೆ ಕುಂಭೀಪಾಕ ನರಕದಲ್ಲಿ ದುಃಖವನ್ನು ಅನುಭವಿಸುತ್ತಾನೆ. ಇನ್ನು ಯಾರು ತನ್ನ ಶಕ್ತಿಗೆ ಅನುಗುಣವಾಗಿ ರಾಮನವಮಿಯನ್ನು ಆಚರಿಸದೇ ನೆಪಕ್ಕೆ ಮಾತ್ರ ರಾಮನವಮಿಯನ್ನು ಮಾಡುತ್ತಾನೋ ಅಂಥ ಮೂರ್ಖನು ರೌರವ ನರಕದಲ್ಲಿ ಬೀಳುತ್ತಾನೆ. ಈ ವಿಷಯದಲ್ಲಿ ಸಂಶಯವೇ ಇಲ್ಲ.

## ಮೂಲಮಂತ್ರದ ಬಗ್ಗೆ ಪ್ರಶ್ನೆ

ಸುತೀಕ್ಷ್ಣಃ –

ಯಾಮಾಷ್ಟಕೇ ತು ಪೂಜಾ ವೈ ತತ್ರ ಚೋಕ್ತಾ ಮಹಾಮುನೇ ।
ಮೂಲಮಂತ್ರೇಣ ಸಂಯುಕ್ತಾ ತಾಂ ಕಥಾಂ ವದ ಸುವ್ರತ ॥ 67 ॥

ಸುತೀಕ್ಷ್ಣಮುನಿಯು ಪ್ರಶ್ನಿಸುತ್ತಾರೆ. – ಮಹಾಮುನಿಯೇ! ಎಂಟು ಯಾಮಗಳಲ್ಲಿ ಯಾವ ರಾಮದೇವರ ಪೂಜೆಯನ್ನು ಮಾಡಬೇಕೆಂದು ಹೇಳಿದ್ದೀರೋ ಅದರ ಬಗ್ಗೆ

ಪಲಾರ್ಧೇನ ತದರ್ಧೇನ ತದರ್ಧಾರ್ಧೇನ ವಾ ಪುನಃ ।
ವಿತ್ತಶಾಠ್ಯಮಕೃತ್ವೈವ ಕುರ್ಯಾದೇವಂ ವ್ರತಂ ಮುನೇ ॥ 60 ॥

ಯದಿ ಘೋರತರಂ ದುಷ್ಟಂ ಪಾತಕಂ ನೇಹತೇ ಕ್ವಚಿತ್ ।
ಅಕಿಂಚನೋಽಪಿ ಯತ್ನೇನ ಉಪೋಷ್ಯ ನವಮೀದಿನೇ ॥ 61 ॥

ಏಕಚಿತ್ತೋಽಪಿ ವಿಧಿವತ್ ಸರ್ವಪಾಪೈಃ ಪ್ರಮುಚ್ಯತೇ ।

ಅಗಸ್ತ್ಯರು ಉತ್ತರಿಸುತ್ತಾರೆ –

ಮಹಾಭಾಗ್ಯಶಾಲಿಯೇ! ತನ್ನ ದುಡ್ಡಿನ ಅನುಕೂಲಕ್ಕೆ ಅನುಗುಣವಾಗಿ ದರಿದ್ರನೂ ಕೂಡ ಈ ವ್ರತವನ್ನು ಆಚರಿಸ ಬೇಕು. ಅರ್ಧ ಪಲದಷ್ಟು ಅಥವಾ ಅದರ ಅರ್ಧದಷ್ಟಾದರೂ ತ್ಯಾಗ ಮಾಡಿದರೆ ಸಾಕು. ಆಚರಣೆ ಮಾಡದೇ ಇರಬಾರದು. ಯಾವುದೇ ಕಾರಣಕ್ಕೂ ವಿತ್ತಶಾಠ್ಯವನ್ನು ಮಾಡಬಾರದು. ಒಂದು ವೇಳೆ ಅತ್ಯಂತ ಘೋರವಾದ ದುಷ್ಟವಾದ ಪಾತಕವನ್ನು ಪರಿಹರಿಸಿಕೊಳ್ಳಲು ಯಾರು ಇಷ್ಟಪಡುತ್ತಾನೋ ಅಂಥವನು ಬಡವನಾಗಿದ್ದರೂ ಕೂಡ ಪ್ರಯತ್ನಪೂರ್ವಕವಾಗಿ ರಾಮನವಮೀ ವ್ರತವನ್ನು ಆಚರಣೆ ಮಾಡಬೇಕು. ರಾಮನವಮಿಯ ದಿವಸ ಉಪವಾಸ ಮಾಡಬೇಕು. ಒಂದೇ ಮನಸ್ಸಿನಿಂದ ಹೀಗೆ ಆಚರಣೆ ಮಾಡುವವನು ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ.

## ರಾಮನವಮಿಯಂದು ದಾನ ಮಾಡಲೇಬೇಕು

ಪ್ರಾತಃ ಸ್ನಾನಂ ಚ ಕೃತ್ವಾ ಸಂಧ್ಯಾದಿಕಾಃ ಕ್ರಿಯಾಃ ॥ 62 ॥

ಗೋಭೂತಿಲಹಿರಣ್ಯಾದಿ ದದ್ಯಾತ್ ವಿತ್ತಾನುಸಾರತಃ ।
ಶ್ರೀರಾಮಚಂದ್ರಭಕ್ತೇಭ್ಯೋ ವಿದ್ವದ್ಭ್ಯಃ ಶ್ರದ್ಧಯಾನ್ವಿತಃ ॥ 63 ॥

ಪಾರಣಂ ತ್ವಥ ಕುರ್ವೀತ ಬ್ರಾಹ್ಮಣೈಶ್ಚ ಸ್ವಬಂಧುಭಿಃ ।
ಏವಂ ಯಃ ಕುರುತೇ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥ 64 ॥

ರಾಮನವಮಿಯ ದಿವಸ ಪ್ರಾತಃಕಾಲದಲ್ಲಿ ಸ್ನಾನ ಸಂಧ್ಯಾವಂದನೆಗಳನ್ನು ಶಾಸ್ತ್ರೋಕ್ತರೀತಿಯಲ್ಲಿ ಮಾಡಬೇಕು. ಗೋದಾನ, ಹಿರಣ್ಯದಾನ, ವಿವಿಧಸಂಪತ್ತುಗಳ

ದಾನವನ್ನು ತಮ್ಮ ಹಣದ ಅನುಕೂಲಕ್ಕೆ ತಕ್ಕಂತೆ ವಿಪ್ರರಿಗೆ ನೀಡಬೇಕು. ಶ್ರೀರಾಮಚಂದ್ರನ ಭಕ್ತರಾದ ಜ್ಞಾನಿಗಳಿಗೆ ಅತ್ಯಂತ ಶ್ರದ್ಧೆಯಿಂದ ದಾನ ಮಾಡಬೇಕು. ಮರುದಿವಸ ಎಲ್ಲ ಬಂಧುಗಳ ಜೊತೆ ಮತ್ತು ಬ್ರಾಹ್ಮಣರ ಜೊತೆ ಪಾರಣೆಯನ್ನು ಮಾಡಬೇಕು. ಯಾರು ಭಕ್ತಿಯಿಂದ ಹೀಗೆ ರಾಮನವಮೀ ವ್ರತವನ್ನು ಆಚರಿಸುತ್ತಾರೋ ಅವರು ಎಲ್ಲ ಬಗೆಯ ಪಾಪಗಳಿಂದ ಮುಕ್ತರಾಗುತ್ತಾರೆ.

## ಯೋಗ್ಯತೆಗಿಂತ ಕಡಿಮೆ ಮಟ್ಟದಲ್ಲಿ ದಾನಾದಿಗಳನ್ನು ಮಾಡಬಾರದು

ಪ್ರಾಪ್ತೇ ಶ್ರೀರಾಮನವಮೀ ದಿನೇ ಮರ್ತ್ಯೋ ವಿಮೂಢಧೀಃ ।
ಉಪೋಷಣಂ ನ ಕುರುತೇ ಕುಂಭೀಪಾಕೇಷು ಪಚ್ಯತೇ ॥65॥

ಯತ್ಕಿಂಚಿದ್ ರಾಮಮುದ್ದಿಶ್ಯ ಕ್ರಿಯತೇ ನ ಸ್ವಶಕ್ತಿತಃ ।
ರೌರವೇ ಸ ತು ಮೂಢಾತ್ಮಾ ಪಚ್ಯತೇ ನಾತ್ರ ಸಂಶಯಃ ॥66॥

ರಾಮನವಮಿಯು ಬಂದಾಗಲೂ ಕೂಡ ಮೂಢನಾಗಿರುವ ವ್ಯಕ್ತಿಯು ಉಪ-ವಾಸವನ್ನು ಮಾಡಿ ಪೂಜೆಯನ್ನು ಮಾಡದಿದ್ದರೆ ಕುಂಭೀಪಾಕ ನರಕದಲ್ಲಿ ದುಃಖವನ್ನು ಅನುಭವಿಸುತ್ತಾನೆ. ಇನ್ನು ಯಾರು ತನ್ನ ಶಕ್ತಿಗೆ ಅನುಗುಣವಾಗಿ ರಾಮನವಮಿಯನ್ನು ಆಚರಿಸದೇ ನೆಪಕ್ಕೆ ಮಾತ್ರ ರಾಮನವಮಿಯನ್ನು ಮಾಡುತ್ತಾನೋ ಅಂಥ ಮೂರ್ಖನು ರೌರವ ನರಕದಲ್ಲಿ ಬೀಳುತ್ತಾನೆ. ಈ ವಿಷಯದಲ್ಲಿ ಸಂಶಯವೇ ಇಲ್ಲ.

## ಮೂಲಮಂತ್ರದ ಬಗ್ಗೆ ಪ್ರಶ್ನೆ

ಸುತೀಕ್ಷ್ಣಃ –

ಯಾಮಾಷ್ಟಕೇ ತು ಪೂಜಾ ವೈ ತತ್ರ ಚೋಕ್ತಾ ಮಹಾಮುನೇ ।
ಮೂಲಮಂತ್ರೇಣ ಸಂಯುಕ್ತಾ ತಾಂ ಕಥಾಂ ವದ ಸುವ್ರತ ॥ 67 ॥

ಸುತೀಕ್ಷ್ಣಮುನಿಯು ಪ್ರಶ್ನಿಸುತ್ತಾರೆ. – ಮಹಾಮುನಿಯೇ! ಎಂಟು ಯಾಮಗಳಲ್ಲಿ ಯಾವ ರಾಮದೇವರ ಪೂಜೆಯನ್ನು ಮಾಡಬೇಕೆಂದು ಹೇಳಿದ್ದೀರೋ ಅದರ ಬಗ್ಗೆ

ನನಗೆ ಮತ್ತಷ್ಟು ತಿಳಿಸಿರಿ. ಮತ್ತು ಪೂಜೆಯ ಕಾಲದಲ್ಲಿ ಪಠಿಸಬೇಕಾದ ಮುಖ್ಯವಾದ ಮೂಲಮಂತ್ರದ ಬಗ್ಗೆಯೂ ತಿಳಿಸಿರಿ.

## ರುದ್ರದೇವರಿಂದ ರಾಮಮಂತ್ರದ ಮಹಿಮೆ

ಅಗಸ್ತ್ಯಃ –

ಸರ್ವೇಷಾಂ ರಾಮಮಂತ್ರಾಣಾಂ ಮಂತ್ರರಾಜಂ ಷಡಕ್ಷರಮ್ ।

(ಇದಂ ತು ಸ್ಕಾಂದೇ ಮೋಕ್ಷಖಂಡೇ ಶ್ರೀರಾಮಂ ಪ್ರತಿ ರುದ್ರಗೀತಾಯಾಂ ರುದ್ರವಾಕ್ಯಮ್ ।)

ಮುಮೂರ್ಷೋರ್ಮಣಿಕರ್ಣ್ಯಾಂತೇ ಅರ್ಧೋದಕನಿವಾಸಿನಃ ॥ 68 ॥
ಅಹಂ ದಿಶಾಮಿ ತೇ ಮಂತ್ರಂ ತಾರಕಸ್ಯೋಪದೇಶತಃ ।
ಶ್ರೀರಾಮ ರಾಮ ರಾಮೇತಿ ಏತತ್ ತಾರಕಮುಚ್ಯತೇ ॥ 69 ॥
ಅತಸ್ತ್ವಂ ಜಾನಕೀನಾಥ ಪರಂ ಬ್ರಹ್ಮಾಭಿಧೀಯಸೇ ।
ತಾರಕಂ ಬ್ರಹ್ಮ ಚೇತ್ಯುಕ್ತಂ ತೇನ ಪೂಜಾ ಪ್ರಶಸ್ಯತೇ ॥ 70 ॥

ಅನೇಕ ರಾಮಮಂತ್ರಗಳಿವೆ. ಅವುಗಳಲ್ಲಿ 'ರಾಂ ರಾಮಾಯ ನಮಃ' ಎಂಬ ಷಡಕ್ಷರಗಳುಳ್ಳ ಮಂತ್ರವೇ ಶ್ರೇಷ್ಠವಾಗಿದೆ.

(ಇದು ಸ್ಕಾಂದಪುರಾಣದ ಮೋಕ್ಷಖಂಡದಲ್ಲಿ ರುದ್ರಗೀತೆಯಲ್ಲಿ ಬರುವ ರುದ್ರದೇವರ ವಾಕ್ಯವಾಗಿದೆ) –

ಯಾರು ಮಣಿಕರ್ಣಿಕಾಘಾಟಿನಲ್ಲಿ ಗಂಗಾಜಲವನ್ನು ಬಾಯಲ್ಲಿ ಹಾಕಿಸಿಕೊಳ್ಳುತ್ತಾ ಮರಣವನ್ನು ಹೊಂದುವ ಕ್ಷಣಗಳಲ್ಲಿರುತ್ತಾನೋ ಅಂಥವನ ಕಿವಿಯಲ್ಲಿ ಕುಳಿತು ನಾನೇ ರಾಮಮಂತ್ರವನ್ನು ಜಪಿಸುತ್ತೇನೆ. ಶ್ರೀರಾಮ ಶ್ರೀರಾಮ ಶ್ರೀರಾಮ ಎಂದು ಜಪವನ್ನು ಮಾಡುತ್ತೇನೆ. ಇದುವೇ ಸಂಸಾರಕ್ಕೆ ತಾರಕವಾಗಿದೆ. ಶ್ರೀರಾಮಚಂದ್ರನೇ ನಿನ್ನ ಈ ನಾಮವು ಸಂಸಾರವನ್ನು ದಾಟಿಸುವುದರಿಂದಲೇ ಜಾನಕೀನಾಥನಾದ ನೀನು ಪರಬ್ರಹ್ಮನಾಗಿರುವಿ. ಸಂಸಾರವನ್ನು ದಾಟಿಸುವ ಬ್ರಹ್ಮನಾಗಿರುವಿ. ಆದ್ದರಿಂದಲೇ ಆ ರಾಮಮಂತ್ರದಿಂದಲೇ ಪೂಜೆಯನ್ನು ಮಾಡಬೇಕು.

# ರಾಮದೇವರ ಪೂಜೆ

ಪೀಠಾಂಗದೇವತಾನಾಂ ತು ಆವೃತ್ತೀನಾಂ ತಥೈವ ಚ ।
ಆದಾವೇವ ಪ್ರಕುರ್ವೀತ ದೇವಸ್ಯ ಪ್ರೀತಿಮಾನಸಃ ॥ 71 ॥

ಉಪಚಾರೈಃ ಷೋಡಶಾಭಿಃ ಪೂಜಾ ಕಾರ್ಯಾ ಯಥಾವಿಧಿ ।
ಆವಾಹನಂ ಸ್ಥಾಪನಂ ಚ ಸಮ್ಮುಖೀಕರಣಂ ತಥಾ ॥ 72 ॥

ಏವಂ ಮುದ್ರಾಂ ಪ್ರಾರ್ಥನಾಂ ಚ ಪೂಜಾಮುದ್ರಾಂ ಪ್ರಯತ್ನತಃ ।
ಶಂಖಪೂಜಾಂ ಪ್ರಕುರ್ವೀತ ಪೂರ್ವೋಕ್ತವಿಧಿನಾ ತತಃ ॥ 73 ॥

ಕಲಶಂ ವಾಮಭಾಗೇ ಚ ಪೂಜಾದ್ರವ್ಯಾಣಿ ಚಾದರಾತ್ ।
ಪೀಠೇ ಸಂಪೂಜ್ಯ ಯತ್ನೇನ ಆತ್ಮಾನಂ ಮಂತ್ರಮುಚ್ಚರೇತ್ ॥ 74 ॥

ಪಾತ್ರಾಸಾದನಮಪ್ಯೇವಂ ಕುರ್ಯಾದ್ ಯಾಮೇಷ್ವತಂದ್ರಿತಃ ।
ಪೀತಾಂಬರಾಣಿ ದೇವಾಯ ಪ್ರಾರ್ಪಯನ್ ಅರ್ಚಯೇತ್ ಸುಧೀಃ ॥ 75 ॥

ಸ್ವರ್ಣಯಜ್ಞೋಪವೀತಾನಿ ದದ್ಯಾದ್ ದೇವಾಯ ಭಕ್ತಿತಃ ।
ನಾನಾರತ್ನವಿಚಿತ್ರಾಣಿ ದದ್ಯಾದಾಭರಣಾನಿ ಚ ॥ 76 ॥

ಹಿಮಾಂಬುಘೃಷ್ಟಂ ರುಚಿರಂ ಘನಸಾರಮನೋಹರಮ್ ।
ಕ್ರಮಾತ್ ತು ಮೂಲಮಂತ್ರೇಣ ಉಪಚಾರಾನ್ ಪ್ರಕಲ್ಪಯೇತ್ ॥ 77 ॥

ಕಲ್ಹಾರೈಃ ಕೇತಕೇಜಾತ್ಯೈಃ ಪುನ್ನಾಗಾದ್ಯೈಃ ಪ್ರಪೂಜಯೇತ್ ।
ಚಂಪಕೈಃ ಶತಪತ್ರೈಶ್ಚ ಸುಗಂಧೈಃ ಸುಮನೋಹರೈಃ ॥ 78 ॥

ಪಾದ್ಯಚಂದನಧೂಪೈಶ್ಚ ತತ್ತನ್ಮಂತ್ರೈಃ ಪ್ರಪೂಜಯೇತ್ ।
ಭಕ್ಷ್ಯಭೋಜ್ಯಾದಿಕಂ ಭಕ್ತ್ಯಾ ದೇವಾಯ ವಿಧಿನಾರ್ಪಯೇತ್ ॥ 79 ॥

ಯೇನ ಸೋಪಸ್ಕರಂ ದೇವಂ ದತ್ತ್ವಾ ಪಾಪೈಃ ಪ್ರಮುಚ್ಯತೇ ।
ಜನ್ಮಕೋಟಿಕೃತೈರ್ಘೋರೈರ್ನಾನಾರೂಪೈಶ್ಚ ದಾರುಣೈಃ ॥ 80 ॥

ವಿಮುಕ್ತಃ ಸ್ಯಾತ್ ಕ್ಷಣಾದೇವ ರಾಮ ಏವ ಭವೇನ್ಮುನೇ ।

ಯಾರು ಭಗವಂತನ ಪ್ರೀತಿಯನ್ನು ಹೊಂದಲು ಅಪೇಕ್ಷಿಸುತ್ತಾರೋ ಅವರು ರಾಮಮಂತ್ರವನ್ನೇ ಹೇಳುತ್ತಾ ಪೂಜೆ ಮಾಡಬೇಕು. ಅದನ್ನೇ ಪುನಃ ಪುನಃ ಆವೃತ್ತಿ ಮಾಡಬೇಕು. ಪೀಠಾದಿಪೂಜೆಗಳನ್ನೂ ಈ ಮಂತ್ರದಿಂದಲೇ ಮಾಡತಕ್ಕದ್ದು. ಷೋಡಶೋಪಚಾರಪೂಜೆಗಳನ್ನು ವಿಧ್ಯನುಸಾರವಾಗಿ ಮಾಡಬೇಕು. ಆವಾಹನೆ, ಸಂಸ್ಥಾಪನೆ, ಸಮ್ಮುಖೀಕರಣ, ಪ್ರಾರ್ಥನಾ ಮುದ್ರೆ, ಪೂಜಾಮುದ್ರೆ ಇವುಗಳನ್ನು ಪ್ರಯತ್ನಪೂರ್ವಕವಾಗಿ ಮಾಡಬೇಕು. ಶಂಖಪೂಜೆಯನ್ನು ಹಿಂದೆ ಹೇಳಿದ ವಿಧ್ಯನುಸಾರವಾಗಿ ಮಾಡಬೇಕು. ಅನಂತರ ಕಲಶಪೂಜೆಯನ್ನು ಮಾಡಬೇಕು. ಎಡಭಾಗದಲ್ಲಿ ಪೂಜಾದ್ರವ್ಯಾದಿಗಳನ್ನು ಇಟ್ಟಿರಬೇಕು. ಪೀಠಪೂಜೆಯನ್ನು ಮಾಡಬೇಕು. 'ಆತ್ಮಾನಂ' ಎಂಬ ಮಂತ್ರವನ್ನು ಉಚ್ಚಾರಣೆ ಮಾಡಿ ಆವಾಹನೆಯನ್ನು ಮಾಡಬೇಕು. ಪಾತ್ರಾಸಾದನಗಳನ್ನು ಮಾಡಿ ಜಿತೇಂದ್ರಿಯನಾಗಿದ್ದು ಮುಂದಿನ ಷೋಡಶೋಪಚಾರ ಪೂಜೆಯನ್ನು ಪ್ರಾರಂಭ ಮಾಡಬೇಕು. ಭಗವಂತನಾದ ಶ್ರೀರಾಮಚಂದ್ರನಿಗೆ ಪೀತಾಂಬರವನ್ನು ಉಡಿಸಿ ಹೊದಿಸಬೇಕು.? ಅರ್ಚನೆ ಮಾಡಬೇಕು. ಸ್ವರ್ಣಯಜ್ಞೋಪವೀತವನ್ನು ಹಾಕಬೇಕು. ಭಕ್ತಿಪುರಸ್ಸರವಾಗಿ ಅನೇಕ ರತ್ನಗಳಿಂದ ಕಂಗೊಳಿಸುವ ವಿಚಿತ್ರವಾದ ಆಭರಣಗಳನ್ನು ಸಮರ್ಪಣೆ ಮಾಡಬೇಕು. ತಣ್ಣಗಿನ ಪಾನಕವನ್ನು ರುಚಿಯಾದ ಭಕ್ಷಭೋಜ್ಯಗಳನ್ನು ಕ್ರಮವಾಗಿ ಮೂಲಮಂತ್ರವನ್ನು ಹೇಳುವ ಮೂಲಕ ಸಮರ್ಪಣೆ ಮಾಡಬೇಕು. ಕಲ್ಹಾರ ಕೇತಕೀ ಜಾತೀ ಮುಂತಾದ ಕುಸುಮಗಳಿಂದ ಅರ್ಚನೆ ಮಾಡಬೇಕು. ಸಂಪಿಗೆ, ಕಮಲ ಇನ್ನೂ ಅನೇಕ ಬಗೆಯ ಸುಗಂಧ ಕುಸುಮಗಳಿಂದ ಪೂಜಿಸಬೇಕು. ಗಂಧವನ್ನು ಧೂಪವನ್ನು ಆಯಾ ಮಂತ್ರಗಳಿಂದಲೇ ಸಮರ್ಪಣೆ ಮಾಡಬೇಕು. ಭಕ್ಷ ಭೋಜ್ಯಾದಿಗಳನ್ನು ಭಕ್ತಿಯಿಂದ ಭಗವಂತನಿಗೆ ಸಮರ್ಪಣೆ ಮಾಡಬೇಕು. ಹೀಗೆ ಯಾರು ಎಲ್ಲಾ ಪೂಜಾ ಪರಿಕರಗಳನ್ನು ಸಂಗ್ರಹ ಮಾಡಿ ಪೂಜೆ ಮಾಡುತ್ತಾನೋ ಅವನಿಗೆ ಕೋಟಿ ಜನ್ಮಗಳಿಂದ ಅನೇಕ ರೂಪಗಳಿಂದ ಆಚರಿಸಲ್ಪಟ್ಟ ಪಾಪಗಳೆಲ್ಲವೂ ಆ ಕ್ಷಣದಲ್ಲಿಯೇ ಪರಿಹಾರವಾಗುತ್ತವೆ.

## ಏಕಾಂತದಲ್ಲಿ ಕುಳಿತು ರಾಮಮಂತ್ರವನ್ನು ಜಪಿಸಬೇಕು

ಶ್ರದ್ದಧಾನಸ್ಯ ದಾತವ್ಯಂ ಶ್ರೀರಾಮನವಮೀವ್ರತಮ್ ॥ 81 ॥

ಸರ್ವಲೋಕಹಿತಾಯೇದಂ ಪವಿತ್ರಂ ಪಾಪನಾಶನಮ್ ।
ಲೋಹೇನ ನಿರ್ಮಿತಂ ವಾಪಿ ಶಿಲಯಾ ದಾರುಣಾಪಿ ವಾ ॥ 82 ॥

ಏಕೇನೈವ ಪ್ರಕಾರೇಣ ಯಸ್ಮೈ ಕಸ್ಮೈ ಚ ವಾ ಮುನೇ ।
ಕೃತಂ ಸರ್ವಂ ಪ್ರಯತ್ನೇನ ಯತ್ಕಿಂಚಿದಪಿ ಭಕ್ತಿತಃ ॥ 83 ॥

ಜಪೇದೇಕಾಂತಮಾಸೀನೋ ಯಾವತ್ಸ ದಶಮೀದಿನಮ್ ।
ಅನೇನ ಸ್ಯಾತ್ ಪುನಃ ಪೂಜಾ ದಶಮ್ಯಾಂ ಭೋಜಯೇದ್ ದ್ವಿಜಮ್ ॥ 84 ॥

ಭಕ್ತ್ಯಾ ಭೋಜ್ಯೈರ್ಬಹುವಿಧೈಃ ದದ್ಯಾದ್ ಭಕ್ತ್ಯಾ ಚ ದಕ್ಷಿಣಾಮ್ ।
ಕೃತಕೃತ್ಯೋ ಭವೇತ್ ತೇನ ಸದ್ಯೋ ರಾಮಃ ಪ್ರಸೀದತಿ ॥ 85 ॥

ರಾಮನವಮಿಯಂದು ಶ್ರದ್ಧೆಯನ್ನು ಹೊಂದಿ ದಾನವನ್ನು ಮಾಡಬೇಕು. ಸರ್ವಲೋಕಕ್ಕೆ ಹಿತಕರವಾದ ಪವಿತ್ರವಾದ ಲೋಹದಿಂದ ನಿರ್ಮಿಸಲ್ಪಟ್ಟ ಅಥವಾ ಶಿಲೆಯಿಂದ ನಿರ್ಮಿಸಲ್ಪಟ್ಟ ಮರದಿಂದ ನಿರ್ಮಿಸಲ್ಪಟ್ಟ ರಾಮದೇವರ ಪ್ರತಿಮೆಯನ್ನು ದಾನ ಮಾಡಬೇಕು. ಈ ಮೇಲೆ ಹೇಳಿದ ಯಾವುದೇ ಒಂದು ಪ್ರಕಾರದಲ್ಲಿ ಯಾರಿಗಾದರೂ ಒಬ್ಬ ರಾಮಭಕ್ತನಿಗೆ ದಾನ ಮಾಡಲೇ ಬೇಕು. ಯಾರು ಹೀಗೆ ಪ್ರಯತ್ನಪೂರ್ವಕವಾಗಿ ದಾನ ಮಾಡುತ್ತಾನೋ ಮತ್ತು ಸ್ವಲ್ಪವಾದರೂ ಭಕ್ತಿಯನ್ನು ಮಾಡುತ್ತಾನೋ ಅವನು ಪುಣ್ಯವಂತನಾಗುತ್ತಾನೆ. ಏಕಾಂತದಲ್ಲಿ ಕುಳಿತು ರಾಮಮಂತ್ರವನ್ನು ಜಪ ಮಾಡಬೇಕು. ದಶಮೀ ದಿನ ಬರುವ ತನಕ ರಾಮಮಂತ್ರವನ್ನು ಜಪಿಸುತ್ತಲೇ ಇರಬೇಕು. ಪುನಃ ದಶಮೀಯಂದು ಸಂಕ್ಷೇಪವಾಗಿ ರಾಮದೇವರ ಪೂಜೆಯನ್ನು ಮಾಡಿ, ಬ್ರಾಹ್ಮಣರಿಗೆ ಊಟವನ್ನು ಹಾಕಿ ರಾಮನವಮೀ ವ್ರತವನ್ನು ಸಮರ್ಪಣೆ ಮಾಡಬೇಕು.

## ಉಪದೇಶಪಡೆದು ರಾಮಮಂತ್ರವನ್ನು ಜಪಿಸಬೇಕು

ತೂಷ್ಣೀಂ ತಿಷ್ಠನ್ನರೋ ವಾಪಿ ಪುನರಾವೃತ್ತಿವರ್ಜಿತಃ ।
ದ್ವಾದಶಾಬ್ದೇ ಕೃತೇನಾಪಿ ಯತ್ಪಾಪಂ ಚಾಪಿ ಮುಚ್ಯತೇ ॥ 86 ॥

ವಿಲಯಾತಿ ತತ್ಸರ್ವಂ ಶ್ರೀರಾಮನವಮೀವ್ರತಮ್ ।
ಜಪಂ ಚ ರಾಮಮಂತ್ರಾಣಾಂ ಯೋ ನ ಜಾನಾತಿ ತಸ್ಯ ವೈ ॥ 87 ॥

ಉಪೋಷ್ಯ ಸಂಸ್ಮರೇದ್ ರಾಮಂ ನ್ಯಾಸಪೂರ್ವಮತಂದ್ರಿತಃ ।
ಗುರೋರ್ಲಬ್ಧಮಿಮಂ ಮಂತ್ರಂ ನ್ಯಸೇನ್ನ್ಯಾಸಪುರಃಸರಮ್ ॥ 88 ॥

ಯಾಮೇ ಯಾಮೇ ಚ ವಿಧಿನಾ ಕುರ್ಯಾತ್ ಪೂಜಾಂ ಸಮಾಹಿತಃ ।
ಮುಮುಕ್ಷುಶ್ಚ ಸದಾ ಕುರ್ಯಾಚ್ಛ್ರೀರಾಮನವಮೀವ್ರತಮ್ ।
ಮುಚ್ಯತೇ ಸರ್ವಪಾಪೇಭ್ಯೋ ಯಾತಿ ಬ್ರಹ್ಮಸನಾತನಮ್ ॥ 89 ॥

॥ ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಮ್
ಅಗಸ್ತ್ಯಸುತೀಕ್ಷ್ಣಸಂವಾದೇ ರಾಮನವಮೀವ್ರತವಿಧಿಃ ಸಮಾಪ್ತಾ ॥

ಯಾರು ರಾಮನವಮೀಯನ್ನು ಹೀಗೆ ಆಚರಿಸುತ್ತಾರೋ ಅವನು ಬೇರೆ ಯಾವುದೇ ಪ್ರಯತ್ನವನ್ನು ಮಾಡದೇ ಇದ್ದರೂ ಹನ್ನೆರಡು ವರ್ಷಗಳಿಂದ ಮಾಡಲ್ಪಟ್ಟ ಪಾಪಗಳೆಲ್ಲದರಿಂದಲೂ ಮುಕ್ತನಾಗುತ್ತಾನೆ. ಎಲ್ಲಾ ಪಾಪಗಳೂ ರಾಮನವಮೀ ವ್ರತದಿಂದ ಪರಿಹಾರವಾಗುತ್ತವೆ. ಯಾರಿಗೆ ಈ ರಾಮಮಂತ್ರದ ಮಹಿಮೆಯು ತಿಳಿದಿರುವುದಿಲ್ಲವೋ ಅವನಿಗೂ ಇದರ ಮಹಿಮೆಯನ್ನು ತಿಳಿಸಬೇಕು. ಸ್ವತಃ ತಾನು ರಾಮಮಂತ್ರವನ್ನು ಜಪ ಮಾಡಬೇಕು. ಗುರುಗಳಿಂದ ರಾಮಷಡಕ್ಷರಮಂತ್ರವನ್ನು ಉಪದೇಶ ಪಡೆದುಕೊಳ್ಳಬೇಕು. ಆದೇ ಮಂತ್ರವನ್ನು ದೇಹದಲ್ಲಿ ನ್ಯಾಸ ಮಾಡಿಕೊಳ್ಳಬೇಕು. ಪ್ರತಿಯಾಮದಲ್ಲೂ ಎದ್ದು ಜಪ ಮಾಡಬೇಕು. ಈ ಮಂತ್ರವನ್ನು ಹೇಳುತ್ತಲೇ ಪೂಜೆಯನ್ನು ಮಾಡಬೇಕು. ಮತ್ತು ಮೋಕ್ಷವನ್ನು ಬಯಸುವವನು ರಾಮನವಮೀ ವ್ರತವನ್ನು ಆಜೀವನ ನಡೆಸಬೇಕು. ಆಗ ಎಲ್ಲ ಪಾಪಗಳಿಂದ ಮುಕ್ತನಾಗಿ ಸನಾತನವಾದ ಬ್ರಹ್ಮನ ಸಾಮೀಪ್ಯವನ್ನು ಹೊಂದುತ್ತಾನೆ.

ಇಲ್ಲಿಗೆ ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಅಗಸ್ತ್ಯಮುನಿ ಹಾಗೂ ಸುತೀಕ್ಷ್ಣಮುನಿಗಳ ಸಂವಾದದಲ್ಲಿ ರಾಮನವಮೀ ವ್ರತದ ವಿಧಿಯು ಸಂಪೂರ್ಣವಾಯಿತು.

# ಶ್ರೀರಾಮನಾಮಲೇಖನ

ವ್ರತೋದ್ಯಾಪನವಿಧಿಃ –

ಪಾರ್ವತ್ಯುವಾಚ –

ಧನ್ಯಾಸ್ಮ್ಯನುಗೃಹೀತಾಸ್ಮಿ ಕೃತಾರ್ಥಾಸ್ಮಿ ಜಗತ್ಪ್ರಭೋ ।
ವಿಚ್ಛಿನ್ನೋ ಮೇಽತ್ರ ಸಂದೇಹಃ ಗ್ರಂಥಿರ್ಭವದನುಗ್ರಹಾತ್ ॥

ಪಾರ್ವತಿಯು ಬಿನ್ನವಿಸುತ್ತಿದ್ದಾಳೆ – ಜಗತ್‌ಪ್ರಭುವೇ! ನಾನು ಧನ್ಯಳಾಗಿದ್ದೇನೆ. ನಿನ್ನ ಅನುಗ್ರಹಕ್ಕೆ ಪಾತ್ರಳಾಗಿದ್ದೇನೆ. ಕೃತಕೃತ್ಯಳಾಗಿದ್ದೇನೆ. ನನ್ನ ಮನಸ್ಸಿನಲ್ಲಿರುವ ಸಂಶಯದ ಪ್ರತಿಯೊಂದು ಎಳೆಗಳೂ ನಿನ್ನ ಅನುಗ್ರಹದಿಂದ ಪರಿಹಾರವಾಗಿವೆ. ಇದರಲ್ಲಿ ಸ್ವಲ್ಪವೂ ಸಂಶಯವಿಲ್ಲ.

ತನ್ಮುಖಾದ್ಗಲಿತಂ ರಾಮತತ್ತ್ವಾಮೃತರಸಾಯನಮ್ ।
ಪಿಬತೋ ಮೇ ಮನೋ ದೇವ ನ ತೃಪ್ಯತಿ ಭಯಾಪಹಮ್ ॥

ನಿನ್ನ ಮುಖದಿಂದ ಹೊರಬಂದ ಶ್ರೀರಾಮತತ್ತ್ವವೆಂಬ ಅಮೃತದ ರಸಾಯನವನ್ನು ನನ್ನ ಮನಸ್ಸು ಬಹಳಷ್ಟು ಪಾನ ಮಾಡುತ್ತಿದೆ. ಆದರೂ ಕೂಡ ಅದಕ್ಕೆ ತೃಪ್ತಿಯಾಗುತ್ತಿಲ್ಲ.

ಶ್ರೀರಾಮಸ್ಯಾಮೃತಂ ನಾಮ ಶ್ರುತಂ ಸಂಕ್ಷೇಪತೋ ಮಯಾ ।
ಇದಾನೀಂ ಶ್ರೋತುಮಿಚ್ಛಾಮಿ ವಿಸ್ತರೇಣ ಸ್ಫುಟಾಕ್ಷರಮ್ ॥

ಶ್ರೀರಾಮನ ನಾಮವು ಅಮೃತವಾಗಿದೆ ಎಂಬುದನ್ನು ಸಂಕ್ಷೇಪವಾಗಿ ನಾನು ಕೇಳಿದ್ದೇನೆ. ಈಗ ಅತ್ಯಂತ ಸ್ಪಷ್ಟವಾಗಿ ಅದನ್ನು ಕೇಳಲು ಇಚ್ಛಿಸುತ್ತೇನೆ. ವಿಸ್ತಾರವಾಗಿ ನನಗೆ ಶ್ರೀರಾಮನಾಮದ ಮಹಿಮೆಯನ್ನು ತಿಳಿಸು.

ಶ್ರೀಮಹಾದೇವಃ –

ಶೃಣು ದೇವಿ ಪ್ರವಕ್ಷ್ಯಾಮಿ ಗುಹ್ಯಾದ್ ಗುಹ್ಯತರಂ ಮಹತ್ ।
ಪ್ರಾಪ್ನೋತಿ ಪರಮಾಂ ಸಿದ್ಧಿಂ ದೀರ್ಘಾಯುಃ ಪುತ್ರಸಂಪದಮ್ ॥

ಮಹದೇವರು ಉತ್ತರಿಸುತ್ತಿದ್ದಾರೆ – ದೇವಿ! ಶ್ರೀರಾಮನಾಮಾಮೃತವು ಗುಹ್ಯಮಂತ್ರಗಳಲ್ಲಿಯೇ ಅತ್ಯಂತ ಗುಹ್ಯವಾಗಿದೆ. ಇದರ ಮಹಿಮೆಯನ್ನು ನಿನಗೆ ಈಗ ತಿಳಿಸುತ್ತೇನೆ. ಕೇಳು. ಜೀವನದ ಪರಮಸಿದ್ಧಿಯೆಂದರೆ ಅದು ರಾಮನಾಮಾ-ಮೃತವಾಗಿದೆ. ದೀರ್ಘವಾದ ಆಯುಷ್ಯವನ್ನು ಪುತ್ರಸಂಪತ್ತನ್ನು ಇದರಿಂದ ಪಡೆದು ಕೊಳ್ಳುತ್ತಾರೆ.

ರಾಮನಾಮ ಲಿಖೇದ್ ಯಸ್ತು ಲಕ್ಷಕೋಟಿಶತಾದಧಿ ।
ಏಕೈಕಮಕ್ಷರಂ ಪುಂಸಾಂ ಮಹಾಪಾತಕನಾಶನಮ್ ॥

ಶ್ರೀರಾಮನ ನಾಮವನ್ನು ಯಾವ ವ್ಯಕ್ತಿಯು ಲಕ್ಷ ಬಾರಿ, ಕೋಟಿ ಬಾರಿ ಅಥವಾ ಶತಕೋಟಿ ಬಾರಿ ಬರೆಯುತ್ತಾನೋ ಅವನು ಬರೆದ ಒಂದೊಂದು ಅಕ್ಷರಗಳೂ ಮಹಾಪಾತಕವನ್ನು ನಾಶ ಮಾಡುತ್ತವೆ.

ಸಕಾಮೋಽಪಿ ಲಭೇದ್ ಯಸ್ತು ನಿಷ್ಕಾಮೇನ ತು ಕಿಂ ಪುನಃ ।
ಇಹೈವ ಸುಖಮಾಪ್ನೋತಿ ಅಂತೇ ಚ ಪರಮಂ ಪದಮ್ ॥

ಕಾಮನೆಗಳನ್ನು ಹೊಂದಿ ರಾಮನಾಮವನ್ನು ಬರೆದರೂ ಉತ್ತಮ ಫಲವನ್ನು ಹೊಂದುತ್ತಾನೆ. ಹೀಗಿರುವಾಗ ನಿಷ್ಕಾಮಿಯಾಗಿ ರಾಮನಾಮವನ್ನು ಬರೆದಾಗ ಅವನಿಗೆ ಬರುವ ಫಲವನ್ನು ಹೇಗೆ ತಾನೆ ವರ್ಣಿಸಲಿ? ಇಲ್ಲಿಯೂ ಸುಖವನ್ನು ಹೊಂದುತ್ತಾನೆ; ಅಂತಿಮವಾಗಿ ಮೋಕ್ಷವನ್ನೇ ಹೊಂದುತ್ತಾನೆ.

ಆದಾವಂತೇ ಚ ಮಧ್ಯೇ ಚ ವ್ರತಸ್ಯೋದ್ಯಾಪನಂ ಚರೇತ್ ।
ಉದ್ಯಾಪನಂ ವಿನಾ ನೈವ ಫಲಸಿದ್ಧಿಮವಾಪ್ನುಯಾತ್ ॥
ತಸ್ಮಾತ್ ಸರ್ವಪ್ರಯತ್ನೇನ ನಾಮ್ನಾಂ ಉದ್ಯಾಪನಂ ಕುರು ॥

ರಾಮನಾಮ ಲೇಖನದ ಸಂಕಲ್ಪವನ್ನು ಮಾಡಿದಾಗ ಮೊದಲು ಮಧ್ಯ ಹಾಗೂ ಕೊನೆಯಲ್ಲಿ ರಾಮನಾಮಲೇಖನ ವ್ರತದ ಉದ್ಯಾಪನೆಯನ್ನು ಮಾಡಬೇಕು. ಉದ್ಯಾಪನೆ ಮಾಡದೇ ವ್ರತವನ್ನು ಮಾಡಿದರೆ ಪರಿಪೂರ್ಣವಾದ ಫಲವನ್ನು ಪಡೆದಕೊಳ್ಳಲು ಸಾಧ್ಯವಾಗುವುದಿಲ್ಲ. ಆ ಕಾರಣದಿಂದ ಸಂಪೂರ್ಣಪ್ರಯತ್ನವನ್ನು ಪಟ್ಟು ರಾಮನಾಮದ ಉದ್ಯಾಪನೆಯನ್ನು ಮಾಡಬೇಕು.

ಪಾರ್ವತ್ಯುವಾಚ –

ನತಾಽಸ್ಮಿ ದೇವದೇವೇಶ ಭಕ್ತಾನುಗ್ರಹಕಾರಕ ।
ನಾಮ್ನಾಮುದ್ಯಾಪನಂ ಬ್ರೂಹಿ ವಿಸ್ತರೇಣ ಮಮ ಪ್ರಭೋ ॥

ಪಾರ್ವತಿಯು ಪ್ರಶ್ನಿಸುತ್ತಾಳೆ – ದೇವತೆಗಳಿಗೂ ದೇವತೆಯಾದ ಪ್ರಭುವೇ! ನಿನಗೆ ಭಕ್ತಿಯಿಂದ ನಮಸ್ಕರಿಸುತ್ತೇನೆ. ನೀನು ಭಕ್ತರಿಗೆ ಅನುಗ್ರಹವನ್ನು ಮಾಡುವುದರಲ್ಲಿಯೇ ಆಸಕ್ತನಾಗಿರುವಿ. ಆ ಕಾರಣದಿಂದ ರಾಮನಾಮವ್ರತದ ಉದ್ಯಾಪನೆಯನ್ನು ಹೇಗೆ ಮಾಡಬೇಕೆಂದು ನನಗೆ ವಿಸ್ತಾರವಾಗಿ ತಿಳಿಸು.

ಶ್ರೀಶಿವಃ –

ಶೃಣು ದೇವಿ ಪ್ರವಕ್ಷ್ಯಾಮಿ ವಿಸ್ತರೇಣ ಯಥಾವಿಧಿ ।
ನಾಮ್ನಾಮುದ್ಯಾಪನಂ ಚಾತ್ರ ಭಕ್ತ್ಯಾ ರಾಮಪ್ರಸಾದತಃ ॥

ರುದ್ರದೇವರು ಉತ್ತರಿಸುತ್ತಾರೆ – ದೇವಿ! ವಿಧಿಪ್ರಕಾರವಾಗಿ ಮಾಡಬೇಕಾದ ರಾಮ ನಾಮಲೇಖನದ ಉದ್ಯಾಪನೆಯನ್ನು ನಿನಗೆ ವಿಸ್ತಾರವಾಗಿ ತಿಳಿಸುತ್ತೇನೆ. ಶ್ರೀರಾಮದೇವರ ಪ್ರಸಾದದಿಂದ ಅವರಲ್ಲಿರುವ ಭಕ್ತಿಯಿಂದ ಇದನ್ನು ನಿನಗೆ ತಿಳಿಸಲು ನಾನು ಸಮರ್ಥನಾಗಿದ್ದೇನೆ.

ಸೌವರ್ಣಂ ಸುಂದರಂ ಕುರ್ಯಾತ್ ಸೀತಾರಾಮಂ ಸಲಕ್ಷ್ಮಣಮ್ ।
ಹನೂಮತ್ಪ್ರತಿಮಾಂ ತತ್ರ ಚತುರ್ಥಾಂಶೇನ ಹಾಟಕೈಃ ॥

ಮೊದಲು ಅತ್ಯಂತಸುಂದರವಾದ ಸುವರ್ಣಲೋಹದಿಂದ ಸೀತೆಯ ಜೊತೆಗೂಡಿದ ಶ್ರೀರಾಮನ ಪ್ರತಿಮೆಯನ್ನು ಮಾಡಿಸಬೇಕು. ಲಕ್ಷ್ಮಣನಿಂದಲೂ ಕೂಡ ಕೂಡಿರಬೇಕು. ಶ್ರೀರಾಮನ ಪಾದಕಮಲಗಳಲ್ಲಿ ಕೈಮುಗಿಯುತ್ತಿರುವ ಹನುಮಂತನ ಪ್ರತಿಮೆಯನ್ನು ಮಾಡಿಸಬೇಕು. ಇದು ಚತುರ್ಥಾಂಶವಿದ್ದರೆ ಸಾಕು.

ಸುವರ್ಣಸ್ಯ ಪ್ರಮಾಣಂ ತು ಪಲಾಷ್ಟಕಮುದೀರಿತಮ್ ।
ಅಶಕ್ತಶ್ಚೇತ್ ಪಲೇನೈವ ತದರ್ಧಾರ್ಧೇನ ವಾ ಪುನಃ ॥

ಸುವರ್ಣಪ್ರತಿಮೆಯ ಪ್ರಮಾಣವು ಎಂಟು ಪಲಗಳ ಪರಿಮಾಣದಲ್ಲಿರಬೇಕು. ಅಶಕ್ತನಾದಲ್ಲಿ ನಾಕು ಪಲಗಳಿರಬಹುದು. ಇನ್ನೂ ಅಶಕ್ತನಾದಲ್ಲಿ ಎರಡು ಪಲಗಳಿದ್ದರೂ ಸಾಕು.

ಶ್ರೀರಾಮಪ್ರತಿಮಾಂ ಕೃತ್ವಾ ವಿತ್ತಶಾಠ್ಯಂ ನ ಕಾರಯೇತ್ ।
ರಾಜತೇನಾಸನಂ ಕುರ್ಯಾನ್ಮಾಷೈಃ ಷೋಡಶಸಮ್ಮಿತೈಃ ॥

ವಿತ್ತಶಾಠ್ಯವನ್ನು ಬಿಟ್ಟು ಪ್ರಾಮಾಣಿಕನಾಗಿ ಶ್ರೀರಾಮಪ್ರತಿಮೆಯನ್ನು ತಯಾರು ಮಾಡಬೇಕು. ಆ ಸುವರ್ಣಪ್ರತಿಮೆಗೆ ಬೆಳ್ಳಿಯ ಪೀಠವನ್ನು ಮಾಡಿಸಬೇಕು. ಎಂಟು ಮಾಷಗಳಷ್ಟು ಪ್ರಮಾಣದಲ್ಲಿ ಅದು ಇರಬೇಕು.

ಪೀತವಸ್ತ್ರೇಣ ಸಂವೇಷ್ಟ್ಯ ಸ್ಥಾಪಯೇತ್ ತಂಡುಲೋಪರಿ ।
ತಂಡುಲಾನಾಂ ಪ್ರಮಾಣಂ ತು ಭವೇದ್ ದ್ರೋಣಚತುಷ್ಟಯಮ್ ॥

ಅಕ್ಕಿಯನ್ನು ತೆಗೆದುಕೊಂಡು ತಟ್ಟೆಯಲ್ಲಿಟ್ಟು ಅದರ ಮೇಲೆ ಈ ಪ್ರತಿಮೆಯನ್ನಿಡಬೇಕು. ಹಳದಿ ಬಟ್ಟೆಯನ್ನು ಅದಕ್ಕೆ ಉಡಿಸಿರಬೇಕು. ಆ ಅಕ್ಕಿಯ ಪ್ರಮಾಣವು ನಾಕು ದ್ರೋಣದಷ್ಟು ಪರಿಮಾಣದಲ್ಲಿರಬೇಕು.

ಶುಚೌ ದೇಶೇ ಗೃಹೇ ತೀರ್ಥೇ ಮಂಟಪಂ ಕಾರಯೇತ್ಸುಧೀಃ ।
ತೋರಣಾನಿ ಚತುರ್ದ್ವಾರೇ ಬಂಧಯೇದಾಮ್ರಪಲ್ಲವೈಃ ॥
ಭೂಮೌ ಗೋಮಯಲಿಪ್ತಾಯಾಂ ಸರ್ವತೋಭದ್ರಸಂಯುತಮ್ ॥

ಶುಚಿಯಾದ ಪ್ರದೇಶದಲ್ಲಿ ಮನೆಯಲ್ಲಿ ಅಥವಾ ತೀರ್ಥದಲ್ಲಿ ಜ್ಞಾನಿಯಾದವನು ಸುಂದರಮಂಟಪವನ್ನು ರಚನೆ ಮಾಡಬೇಕು. ನಾಕು ಬಾಗಿಲುಗಳಲ್ಲಿ ತೋರಣವನ್ನು ಕಟ್ಟಿರಬೇಕು. ಮಾವಿನ ಮರದ ಚಿಗುರುಗಳನ್ನು ಎಲ್ಲೆಡೆಯೂ ಕಟ್ಟಿರಬೇಕು. ಭೂಮಿಯನ್ನು ಗೋಮಯದಿಂದ ಶುದ್ಧಿಗೊಳಿಸಬೇಕು. ಅನಂತರ ಸರ್ವತೋಭದ್ರ ಮಂಡಲವನ್ನು ಹಾಕಬೇಕು.

ಸಿಂಚಯೇತ್ ಸಪ್ತಧಾನ್ಯೇನ ನಾನಾ ರತ್ನೈಸ್ತು ಶೋಭನಮ್ ।
ಕುಂಭಾನಷ್ಟಾ ಚ ಪೂರ್ವಾಧಿಸ್ಥಾಪಯೇದ್ ಅವ್ರಣಾನ್ ಶುಭಾನ್ ॥

ಕುಂಭಮೇಕಂ ಮಧ್ಯದೇಶೇ ಸ್ಥಾಪಯೇತ್ ತಂಡುಲೋಪರಿ ।
ಗಂಗಾಜಲೇನ ಸಂಪೂರ್ಯ ಪಂಚರತ್ನೈಃ ಸಪಲ್ಲವೈಃ ॥

ಅಕ್ಕಿಯ ಮಧ್ಯದಲ್ಲಿ ಒಂದು ಕುಂಭವನ್ನಿಡಬೇಕು. ಗಂಗಾಜಲದಿಂದ ಅದನ್ನು ತುಂಬಿಸಬೇಕು. ಐದು ರತ್ನಗಳನ್ನು ಐದು ಬಗೆಯ ಚಿಗುರುಗಳನ್ನು ಆ ಕಲಶಕ್ಕೆ ಹಾಕಬೇಕು.

ನಾರಿಕೇಳಫಲಾನ್ಯಷ್ಟಾ ಏಕಂ ರಾಮಾಯ ದಾಪಯೇತ್ ।
ಆಚಾರ್ಯಂ ವರಯೇತ್ ತತ್ರ ವೇದಶಾಸ್ತ್ರವಿಶಾರದಮ್ ॥

ಎಂಟು ತೆಂಗಿನಕಾಯಿಗಳನ್ನು ತೆಗೆದುಕೊಳ್ಳಬೇಕು. ಒಂದನ್ನು ಶ್ರೀರಾಮನಿಗೆ ಕೊಡಬೇಕು. ಅನಂತರ ವೇದಶಾಸ್ತ್ರವಿಶಾರದನಾದ ಆಚಾರ್ಯನನ್ನು ವರಣ ಮಾಡಬೇಕು.

ಬ್ರಹ್ಮಾದಿಋತ್ವಿಜಾನ್ ತತ್ರ ವರಣಂ ಕಾರಯೇತ್ ತತಃ ।
ಮಧುಪರ್ಕೇಣ ಸಂಪೂಜ್ಯ ವಸ್ತ್ರಾಲಂಕಾರಭೂಷಣೈಃ ॥

ಬ್ರಹ್ಮ ಮೊದಲಾದ ಋತ್ವಿಜರ ವರಣವನ್ನು ಮಾಡಬೇಕು. ಮಧುಪರ್ಕದಿಂದ ಪೂಜಿಸಬೇಕು. ವಸ್ತ್ರಾಲಂಕಾರಭೂಷಣಗಳನ್ನು ನೀಡಬೇಕು.

ಋತ್ವಿಜಾನ್ ಷೋಡಶಾನಷ್ಟೌ ವರಯೇದ್ ವೇದಪಾರಗಾನ್ ।
ಸ್ನಾತ್ವಾ ನಿತ್ಯಂ ವಿಧಾಯಾದೌ ಪೂಜಯೇದ್ ಗಣನಾಯಕಮ್ ॥

೧೬ ಋತ್ವಿಜರನ್ನು ಹೀಗೆ ವರಣ ಮಾಡಬೇಕು. ಅವರೆಲ್ಲರೂ ವೇದಪಾರಂಗತ-ರಾಗಿರಬೇಕು. ನಿತ್ಯವಿಧಿ ಸ್ನಾನವನ್ನು ಪೂರೈಸಬೇಕು. ಗಣನಾಯಕನಾದ ಗಣಪತಿಯನ್ನು ಆಗ ಪೂಜಿಸಬೇಕು.

ಪುಣ್ಯಾಹಂ ವಾಚಯಿತ್ವಾ ತು ಪೂಜಯೇದ್ ರಾಘವಂ ತತಃ ।
ತತೋಽಗ್ನಿಂ ಚ ಪ್ರತಿಷ್ಠಾಪ್ಯ ಸ್ವಶಾಖೋಕ್ತವಿಧಾನತಃ ॥

ಬ್ರಾಹ್ಮಣರಿಂದ ಪುಣ್ಯಾಹವನ್ನು ನಡೆಸಬೇಕು. ಅನಂತರ ಶ್ರೀರಾಮಚಂದ್ರನ

ಪೂಜೆಯನ್ನು ಮಾಡಬೇಕು. ಸ್ವಶಾಖೆಯಲ್ಲಿ ಹೇಳಿದ ಪ್ರಕಾರ ಅಗ್ನಿಪ್ರತಿಷ್ಠಾಪನೆಯನ್ನು ಮಾಡಬೇಕು.

ವಿಷ್ಣುಸೂಕ್ತೇನ ಹೋತವ್ಯಂ ಮೂಲಮಂತ್ರೇಣ ವಾ ಪುನಃ ।
ನವಗ್ರಹಾಂಶ್ಚ ದಿಕ್ಪಾಲಾನತ್ರಾನುಕ್ತಾಂಶ್ಚ ಹೋಮಯೇತ್ ॥

ವಿಷ್ಣುಸೂಕ್ತದಿಂದ ನಾರಾಯಣಾಷ್ಟಾಕ್ಷರಮಂತ್ರದಿಂದ ಹೋಮವನ್ನು ಮಾಡಬೇಕು. ನವಗ್ರಹದೇವತೆಗಳನ್ನು ಹಾಗೂ ದಿಕ್ಪಾಲಕರನ್ನು ಇನ್ನೂ ಇಲ್ಲಿ ಹೇಳದ ವಿಧಿಯಲ್ಲಿ ಸೇರುವ ದೇವತೆಗಳನ್ನುದ್ದೇಶಿಸಿ ಹೋಮವನ್ನು ಮಾಡಬೇಕು.

ಹೋಮಾಂತೇ ಪೂಜನಂ ಕುರ್ಯಾದ್ ರಾಮಚಂದ್ರಾದಿದೇವತಾನ್ ।
ಪೂಜಯಿತ್ವಾ ತತೋ ಹುತ್ವಾ ಬಲಿಂ ಪೂರ್ಣಾಹುತಿಂ ತತಃ ॥

ಹೋಮದ ಕೊನೆಯಲ್ಲಿ ಶ್ರೀರಾಮಚಂದ್ರದೇವರನ್ನು ಪೂಜೆ ಮಾಡಬೇಕು. ಅನಂತರ ಬಲಿಯನ್ನು ಕೊಟ್ಟು ಪೂರ್ಣಾಹುತಿಯನ್ನು ನೀಡಬೇಕು.

ಶ್ರೇಯಃ ಸಂಪಾದ್ಯ ದಾನಂ ಚ ಅಭಿಷೇಕಂ ಸಮರ್ಪಯೇತ್ ।
ರಾಮಂ ನತ್ವಾಽರ್ಚಯಿತ್ವಾ ಚ ಪ್ರಾರ್ಥಯಿತ್ವಾ ಪುನಃ ಪುನಃ ॥

ಶ್ರೇಯಸ್ಸನ್ನು ಸಂಪಾದಿಸಿ ದಾನ ಮಾಡಿ, ಶ್ರೀರಾಮಚಂದ್ರನಿಗೆ ಆ ಕಲಶದಿಂದ ಅಭಿಷೇಕವನ್ನು ಮಾಡಬೇಕು. ಶ್ರೀರಾಮಚಂದ್ರನನ್ನು ನಮಿಸಬೇಕು. ಅರ್ಚಿಸಬೇಕು. ಪ್ರಾರ್ಥಿಸಬೇಕು. ಹೀಗೆ ಅನೇಕ ಬಾರಿ ಮಾಡಬೇಕು.

ಆಚಾರ್ಯಂ ಯೋಜಯೇತ್ ಪಶ್ಚಾತ್ ಸುವರ್ಣೈರ್ವಸ್ತ್ರಧೇನುಭಿಃ ।
ಪ್ರತಿಮಾಂ ರಾಮಮಂತ್ರೇಣ ಆಚಾರ್ಯಾಯ ನಿವೇದಯೇತ್ ॥

ಅನಂತರ ಸುವರ್ಣ, ವಸ್ತ್ರ, ಹಸುಗಳ ದಾನವನ್ನು ಆಚಾರ್ಯರಿಗೆ ಮಾಡಬೇಕು. ರಾಮಮಂತ್ರದಿಂದ ಶ್ರೀರಾಮನ ಪ್ರತಿಮೆಯನ್ನು ಆಚಾರ್ಯಪುರುಷರಿಗೆ ದಾನ ಮಾಡಬೇಕು.

''ನತೋಽಸ್ಮಿ ದೇವದೇವೇಶ ಬಹುಬುದ್ಧಿಮಹಾತ್ಮಭಿಃ ।
ಯತ್ಕಿಂಚಿತ್ಕುರುತೇ ಕರ್ಮಪಾಶಾದ್ಧೃದಿ ಮುಮುಕ್ಷುಭಿಃ ॥

ದೇವದೇವೇಶನೇ! ಭಕ್ತಿಯಿಂದ ನಮಸ್ಕಾರವನ್ನು ಮಾಡುತ್ತೇನೆ. ಕರ್ಮ-ಪಾಶದಿಂದ ನನ್ನನ್ನು ಮೋಚನೆಗೊಳಿಸು. ಮುಮುಕ್ಷುಗಳು ತಮ್ಮ ಚಾಣಾಕ್ಷತನದಿಂದ ಮಹಾತ್ಮರಾಗಿ ನಿನ್ನನ್ನು ನಿರಂತರ ನಮಿಸುತ್ತಾರೆ.

ಮಾಯಯಾ ಗುಣಮಯ್ಯಾ ತ್ವಂ ಸೃಜಸ್ಸವ ಸುವಿಂಪಸಿ ।
ತತಸ್ತ್ವತ್ಪಾದಕಮಲೇ ಭಕ್ತಿರೇವ ಸದಾಸ್ತು ಮೇ ॥

ಮಾಯೆಯಿಂದ ನೀನು ಈ ಜಗತ್ತನ್ನು ಸೃಷ್ಟಿಮಾಡುವಿ. ನಿನ್ನ ಚರಣಕಮಲಗಳಲ್ಲಿ ನಿರಂತರ ಭಕ್ತಿಯಷ್ಟೇ ಎನಗಿರಲಿ.

ಸಂಸಾರಾಯಾಸತಪ್ತಾನಾಂ ಭಿಷಜಂ ಭಕ್ತಿರೇವ ತೇ ।
ಸೀತಾಸೌಮಿತ್ರಿಹನುಮದ್ಭಕ್ತಿಂ ದೇಹಿ ನರೇಶ್ವರ ।
ದಾನೇನಾನೇನ ಮೇ ರಾಮ ಭಕ್ತಿಮುಕ್ತಿಪ್ರದೋ ಭವ ॥''

ಸಂಸಾರದಿಂದ ಆಯಾಸಗೊಂಡು ಸಂತಪ್ತರಾದವರಿಗೆ ನಿನ್ನ ಭಕ್ತಿಯೊಂದೇ ಔಷಧವಾಗಿದೆ. ಸೀತೆಯ ವಿಷಯದಲ್ಲಿ, ಲಕ್ಷ್ಮಣನ ವಿಷಯದಲ್ಲಿ, ಹನುಮಂತನ ವಿಷಯದಲ್ಲಿಯೂ ಕೂಡ ನನಗೆ ಭಕ್ತಿಯು ಹೆಚ್ಚಲಿ. ಈ ದಾನದಿಂದ ಶ್ರೀರಾಮಚಂದ್ರನಲ್ಲಿ ಭಕ್ತಿಯು ಅಭಿವೃದ್ಧವಾಗಲಿ, ಮುಕ್ತಿಯು ದೊರಕಲಿ.

ಪ್ರತಿಮಾದಾನಸಿದ್ಧ್ಯರ್ಥಂ ಶಕ್ತ್ಯಾ ಸ್ವರ್ಣಂ ಚ ದಾಪಯೇತ್ ।
ದಾನಂ ಯದ್ದಕ್ಷಿಣಾಹೀನಂ ತತ್ಸರ್ವಂ ನಿಷ್ಫಲಂ ಭವೇತ್ ॥

ಪ್ರತಿಮಾದಾನದ ಸಿದ್ಧಿಗೋಸ್ಕರ ಯಥಾಶಕ್ತಿ ಸುವರ್ಣದಾನವನ್ನು ಕೂಡ ಮಾಡಬೇಕು. ದಕ್ಷಿಣೆಯಿಲ್ಲದ ದಾನವು ನಿಷ್ಫಲವಾಗುತ್ತದೆ.

ಬ್ರಾಹ್ಮಣಾನ್ ಶತಸಾಹಸ್ರಂ ಭೋಜಯೇನ್ಮಧುಸರ್ಪಿಷಾ ।
ಪಕ್ವಾನ್ನೈಃ ಸ್ವಾದುಭರಿತೈರ್ಲಡ್ಡುಕೈಃ ಶರ್ಕರಾನ್ವಿತೈಃ ॥

ನೂರು ಮಂದಿ ಬ್ರಾಹ್ಮಣರಿಗೆ ಊಟವನ್ನು ಕೂಡ ಮಾಡಿಸಬೇಕು. ಆ ಭೋಜನದಲ್ಲಿ ತುಪ್ಪ ಜೇನುತುಪ್ಪ ಮೊದಲಾದವುಗಳನ್ನು ಬಡಿಸಬೇಕು. ಪಕ್ವಾನ್ನಗಳಿಂದ

ಅನೇಕ ಬಗೆಯ ಲಡ್ಡುಗಳಿಂದ, ಸಕ್ಕರೆಯಿಂದ ರಚಿಸಿದ ಭಕ್ಷ್ಯಗಳಿಂದ ಆ ಬ್ರಾಹ್ಮಣರನ್ನು ಸಂತೋಷ ಪಡಿಸಬೇಕು.

ಋತ್ವಿಗ್ಭ್ಯೋ ದಕ್ಷಿಣಾಂ ದದ್ಯಾದ್ ವಿತ್ತಶಾಠ್ಯಂ ನ ಕಾರಯೇತ್ ।
ತದಂತೇ ಘೃತಪಾತ್ರಂ ಚ ತಿಲಪಾತ್ರಂ ಚ ದಾಪಯೇತ್ ॥

ಋತ್ವಿಜರಿಗೆ ಯಥಾಶಕ್ತಿ ದಕ್ಷಿಣೆಯನ್ನು ನೀಡಬೇಕು. ಅವರ ಅಪೇಕ್ಷೆಗೆ ತಕ್ಕಷ್ಟು ದಾನವನ್ನು ಮಾಡಬೇಕು. ತುಪ್ಪದ ಪಾತ್ರೆಯನ್ನು ಎಳ್ಳಿನ ಪಾತ್ರೆಯನ್ನು ಕೂಡ ದಾನ ಮಾಡಬೇಕು.

ಶಯ್ಯಾಂ ಚ ರಥಧಾಮಾದಿ ದಶದಾನಾನಿ ಶಕ್ತಿತಃ ।
ಅಶಕ್ತಶ್ಚೇತ್ ಸ್ವರ್ಣಮೇಕಂ ದತ್ವಾ ರಾಮಂ ರಮೇತ್ಪುನಃ ॥

ಹಾಸಿಗೆಯನ್ನು ವಾಹನವನ್ನು ಮನೆಯನ್ನು ಹೀಗೆ ಒಟ್ಟು ಹತ್ತುದಾನಗಳನ್ನು ಯಥಾಶಕ್ತಿ ನೀಡಬೇಕು. ಶಕ್ತಿಯಿಲ್ಲದಿದ್ದರೆ ಸುವರ್ಣದಾನವನ್ನು ಮಾಡಲೇಬೇಕು. ಈ ಮೂಲಕ ಶ್ರೀರಾಮಚಂದ್ರನನ್ನು ಸಂತೋಷಪಡಿಸಬೇಕು.

ಉಮಾಮಹೇಶ್ವರೌ ಪೂಜ್ಯೌ ಭೋಜಯೇದ್ವಯಕಂ ತಥಾ ।
ಕುಮಾರೀಣಾಂ ಶತಂ ಭೋಜ್ಯಂ ಯೋಗಿರಾಜಂ ಚ ಭೋಜಯೇತ್ ॥

ಉಮಾಮಹೇಶ್ವರರನ್ನು ಅನಂತರ ಪೂಜಿಸಬೇಕು. ನೂರು ಮಂದಿ ಕುಮಾರಿಯರಿಗೆ ಊಟ ಹಾಕಬೇಕು. ಸನ್ಯಾಸಿಗಳಿಗೂ ಕೂಡ ಊಟವನ್ನು ಹಾಕಬೇಕು.

ಕ್ಷೇತ್ರಪಾಲಬಲಿಂ ದತ್ವಾ ಧ್ಯಾತ್ವಾ ರಾಮಂ ಸದಾ ಜಪೇತ್ ।
ಬ್ರಹ್ಮಾದಿಭಿಸ್ತು ತತ್ಪುಣ್ಯಂ ವಕ್ತುಂ ಶಕ್ತಿಃ ನ ಕಿಂಚನ ॥

ಕ್ಷೇತ್ರಪಾಲನಿಗೆ ಬಲಿದಾನವನ್ನು ಮಾಡಬೇಕು. ನಿರಂತರ ಶ್ರೀರಾಮನನ್ನು ಧ್ಯಾನ ಮಾಡುತ್ತಲೇ ಈ ಎಲ್ಲ ಕಾರ್ಯಗಳನ್ನು ಮಾಡಬೇಕು. ಯಾರು ಹೀಗೆ ಉದ್ಯಾಪನೆಯನ್ನು ಮಾಡುತ್ತಾನೋ ಇವನ ಪುಣ್ಯವನ್ನು ಬ್ರಹ್ಮಾದಿದೇವತೆಗಳಿಂದಲೂ ಕೂಡ ಹೇಳಿ ಮುಗಿಸಲು ಸಾಧ್ಯವಾಗುವುದಿಲ್ಲ.

ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ ।
ಏಕೇನ ರಾಮನಾಮ್ನಾ ತು ತತ್ಫಲಂ ಲಭತೇ ನರಃ ॥

ಒಮ್ಮೆ 'ಶ್ರೀರಾಮ' ಎಂದು ಬರೆಯುವುದರಿಂದ ಸಾವಿರ ಅಶ್ವಮೇಧಯಾಗವನ್ನು ಮಾಡಿದ ಪುಣ್ಯವು ಬರುತ್ತದೆ. ನೂರು ವಾಜಪೇಯಯಾಗ ಮಾಡಿದ ಪುಣ್ಯವು ಬರುತ್ತದೆ.

ನಾರೀ ವಾ ಪುರುಷೋ ವಾऽಪಿ ಶೂದ್ರೋ ವಾಪ್ಯಧಮೋ ನರಃ ।
ರಾಮನಾಮ್ನಾತು ಮುಕ್ತಾಸ್ತೇ ಸತ್ಯಂ ಸತ್ಯಂ ವರಾನನೇ ॥

ವರಾನನೆಯೇ! ಸ್ತ್ರೀಯಾಗಲೀ ಪುರುಷನಾಗಲೀ ಶೂದ್ರನಾಗಲಿ ಅಧಮನಾದ ಮನುಷ್ಯನಾಗಲೀ ಯಾರು ರಾಮನಾಮವನ್ನು ಹೀಗೆ ಬರೆಯುತ್ತಾನೆಯೋ ಅವನು ಮೋಕ್ಷವನ್ನೇ ಹೊಂದುತ್ತಾನೆ. ಇದು ಸತ್ಯ .

ಮೂಲೇ ಕಲ್ಪದ್ರುಮಸ್ಯಾಖಿಲಮಣಿವಿಲಸದ್ರತ್ನಸಿಂಹಾಸನಸ್ಥಂ
ಕೋದಂಡಂ ಧಾರಯಂತಂ ಲಲಿತಕರಯುಗೇನಾರ್ಪಿತಾಂ ಲಕ್ಷ್ಮಣೇನ ।
ವಾಮಾಂಕಸ್ಥಸ್ಯ ಸೀತಾಂ ಭರತಧೃತಮಹಾಮೌಕ್ತಿಕಛತ್ರಕಾಂತಂ
ಶತ್ರುಘ್ನಂ ಚಾಮರಾಭ್ಯಾಂ ವಿಲಸಿತಮನಿಶಂ ರಾಮಚಂದ್ರಂ ಭಜೇಹಮ್ ॥

ಕಲ್ಪದ್ರುಮದ ಕೆಳಗಡೆ ಎಲ್ಲ ಮಣಿಗಳಿಂದ ಪ್ರಕಾಶಮಾನವಾದ ರತ್ನಸಿಂಹಾಸನ-ದಲ್ಲಿ ಕುಳಿತಿರುವ, ಕೋದಂಡವನ್ನು ಧರಿಸಿದ, ಕೋಮಲವಾದ ಕೈಗಳಿಂದ ಇಡಲ್ಪಟ್ಟ, ಲಕ್ಷ್ಮಣನಿಂದ ಕೂಡಿದ, ಎಡತೊಡೆಯಲ್ಲಿ ಕುಳ್ಳಿರಿಸಿಕೊಂಡ ಸೀತೆಯುಳ್ಳ , ಭರತನಿಂದ ಧರಿಸಿದ ಮುತ್ತಿನ ಛತ್ರವುಳ್ಳ, ಶತ್ರುಘ್ನನಿಂದ ಬೀಸಲ್ಪಟ್ಟ ಚಾಮರವುಳ್ಳ , ಹೀಗೆ ಪ್ರಕಾಶಮಾನನಾದ ಶ್ರೀರಾಮಚಂದ್ರನನ್ನು ನಿರಂತರ ಭಜಿಸುತ್ತೇನೆ.

ವಂದಾಮಹೇ ಮಹೇಶಾನಾಚಂಡಕೋದಂಡಖಂಡನಮ್ ।
ಜಾನಕೀಹೃದಯಾನಂದಂ ಚಂದನಂ ರಘುನಂದನಮ್ ॥

ಮಹೇಶ್ವರನಾದ ಶ್ರೀರಾಮಚಂದ್ರನಿಗೆ, ಕೋದಂಡಪಾಣಿಯಾದವನಿಗೆ ಭಕ್ತಿ-ಯಿಂದ ನಮಸ್ಕರಿಸುತ್ತೇನೆ. ಸೀತೆಯ ಮನಸ್ಸಿಗೆ ಸಂತೋಷವನ್ನು ನೀಡುವ ರಘು-ನಂದನನಿಗೆ ನಮೋ ನಮಃ.

ಚರಿತಂ ರಘುನಾಥಸ್ಯ ಶತಕೋಟಿಪ್ರವಿಸ್ತರಮ್ ।
ಏಕೈಕಮಕ್ಷರಂ ಪುಂಸಾಂ ಮಹಾಪಾತಕನಾಶನಮ್ ॥

ನೂರು ಕೋಟಿ ಶ್ಲೋಕಗಳಿಂದ ಕೂಡಿದ ರಘುನಾಥನ ಚರಿತ್ರೆಯನ್ನು ಯಾರು ಬರೆಯುತ್ತಾರೋ ಒಂದೊಂದು ಅಕ್ಷರವೂ ಕೂಡ ಅವರ ಮಹಾಪಾತಕವನ್ನು ಪರಿಹರಿಸುತ್ತದೆ.

ಇತಿ ಶ್ರೀಭವಿಷ್ಯೋತ್ತರಪುರಾಣೇ ಉಮಾಮಹೇಶ್ವರಸಂವಾದೇ
ರಾಮಲೇಖನೋದ್ಯಾಪನಂ ಸಂಪೂರ್ಣಮ್ ॥

ಇಲ್ಲಿ ಭವಿಷ್ಯೋತ್ತರಪುರಾಣದಲ್ಲಿ ಉಮಾಮಹೇಶ್ವರಸಂವಾದದಲ್ಲಿ ಬರುವ ರಾಮನಾಮಲೇಖನೋದ್ಯಾಪನೆಯು ಸಮಾಪ್ತವಾಯಿತು.

## ಶ್ರೀರಾಮನಾಮ ಲೇಖನದ ವಿಧಾನ

ಏವಂ ಶತಂ ಸಹಸ್ರಂ ವಾ ಲಿಖೇನ್ನಿಯಮಪೂರ್ವಕಮ್ ।
ಶತಸ್ಯಾಂತೇ ಶತಸ್ಯಾಂತೇ ಶ್ರೀರಾಮಃ ಶರಣಂ ಮಮ ।
ಇಮಮಷ್ಟಾಕ್ಷರಂ ವಿಲಿಖ್ಯೈವ ಸಮಾಪಯೇತ್ ॥

ಶ್ರೀರಾಮ ಎಂಬುದಾಗಿ ನೂರು, ಸಾವಿರಬಾರಿ ನಿಯಮಪೂರ್ವಕವಾಗಿ ಬರೆಯಬೇಕು. ನೂರು ಬಾರಿ ಬರೆದ ಮೇಲೆ 'ಶ್ರೀರಾಮಃ ಶರಣಂ ಮಮ' ಎಂದು ಬರೆಯಬೇಕು. ಈ ಅಷ್ಟಾಕ್ಷರವನ್ನು ಬರೆದು ಶ್ರೀರಾಮನಿಗೆ ಸಮರ್ಪಿಸಬೇಕು.

ಶತಂ ವಾಪಿ ಸಹಸ್ರಂ ವಾ ನಿಯಮಾತ್ ತ್ರಿವಾಸರಮ್ ।
ಪೂರ್ವಾಹ್ನ ಏವ ವಿಲಿಖೇದ್ ಧ್ಯಾಯನ್ ರಾಮಪದಾಂಬುಜೌ ॥

ಮೂರು ದಿವಸಗಳ ಕಾಲ ನೂರು ಬಾರಿ ಅಥವಾ ಸಾವಿರಬಾರಿ ಪೂರ್ವಾಹ್ಣದಲ್ಲಿಯೇ ಶ್ರೀರಾಮನನ್ನು ಧ್ಯಾನಿಸುತ್ತಾ, ಶ್ರೀರಾಮಪದಾಸಕ್ತನಾಗಿ ಶ್ರೀರಾಮ ಎಂದು ಬರೆಯಬೇಕು.

ತಾನಿ ನಾಮಾನ್ಯಥಾಭ್ಯರ್ಚ್ಯ ಭುಂಜೀತೈಃ ತನ್ನಿವೇದಿತಮ್ ।
ಆಕೋಟ್ಯಾ ಲಕ್ಷಮಪಿ ವಾ ಲಿಖೇದುದ್ಯಾಪಯೇತ್ ತತಃ ॥

ಬರೆದ ನಾಮಗಳಿಗೆ ಭಕ್ತಿಯಿಂದ ಪೂಜಿಸಬೇಕು. ಅನಂತರ (ಅವನಿಗೆ ನಿವೇದಿತವಾದ) ಊಟವನ್ನು ಮಾಡಬೇಕು. ಕೋಟಿ ಬಾರಿ, ಲಕ್ಷಬಾರಿ ಬರೆದ ಮೇಲೆ ಉದ್ಯಾಪನೆಯನ್ನು ಮಾಡಬೇಕು.

ಆಪದಾಮಪಹರ್ತಾರಂ ದಾತಾರಂ ಸರ್ವಸಂಪದಾಮ್ ।
ಲೋಕಾಭಿರಾಮಂ ಶ್ರೀರಾಮಂ ಭೂಯೋ ಭೂಯೋ ನಮಾಮ್ಯಹಮ್ ॥

ಇತ್ಯಾಪದುಧೃತ್ಯ ಮನುಂ ಸರ್ವಸಂಪತ್ಸಮೃದ್ಧಿದಮ್ ।
ಸಹಸ್ರಾಂತೇ ಸಹಸ್ರಾಂತೇ ವಿಲಿಖೇಲ್ಲೇಖಕೋ ಜನಃ ॥

ಈ ಮಂತ್ರವನ್ನು ಸಾವಿರಬಾರಿ ಶ್ರೀರಾಮ ಎಂದು ಬರೆದ ಮೇಲೆ ಬರೆಯಬೇಕು. ಇದರಿಂದ ಎಲ್ಲಾ ಆಪತ್ತುಗಳು ಪರಿಹಾರವಾಗುತ್ತವೆ.

ಐಹಿಕಾಮುಷ್ಮಿಕೀ ಸಿದ್ಧಿಃ ಲಭತೇ ನಾತ್ರ ಸಂಶಯಃ ।
ದೇಹಾವಸಾನೇ ಪ್ರಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥
ಇತಿ ನಾಮನಾಮಕೋಟಿಲೇಖನವಿಧಿಃ ಸಂಪೂರ್ಣಃ

ಐಹಿಕವಾದ ಆಮುಷ್ಮಿಕವಾದ ಎಲ್ಲ ಸಿದ್ಧಿಗಳು ಉಂಟಾಗುತ್ತವೆ ಇದರಲ್ಲಿ ಸಂಶಯವಿಲ್ಲ. ದೇಹವನ್ನು ದಾಟಿದ ಮೇಲೆ ವೈಕುಂಠವನ್ನೇ ಹೊಂದುತ್ತಾನೆ.

ಇಲ್ಲಿಗೆ ರಾಮನಾಮದ ಲೇಖನವಿಧಿಯು ಸಮಾಪ್ತವಾಯಿತು.

## ಏಳು ಕಾಂಡಗಳಿಂದ ಏಳು ರೂಪಗಳ ಚಿಂತನೆ

ಬಾಲಕಾಂಡೇ –

ಕಾಕಪಕ್ಷಧರಂ ದೇವಂ ವನಮಾಲಾವಿಭೂಷಿತಮ್ ।
ಶ್ರೀರಾಮಂ ಬಾಲಕಂ ಧ್ಯಾಯೇದ್ ಬಾಲಕಾಂಡೇ ಮುನೀಶ್ವರ ॥

ಅಯೋಧ್ಯಾಕಾಂಡೇ –

ಸೀತಾದೇವಿಯುತಂ ವೀರಂ ಸರ್ವಭೂಷಣಭೂಷಿತಮ್ ।
ಸೀತಾಪತಿಂ ಹರಿಂ ಧ್ಯಾಯೇದಯೋಧ್ಯಾಕಾಂಡ ಉತ್ತಮೇ ॥

ಆರಣ್ಯಕಾಂಡೇ –

ಜಟಿಲಂ ಚೀರವಸನಂ ದಂಡಕಾರಣ್ಯವಾಸಿನಮ್ ।
ಮುನಿವೇಷಧರಂ ಧ್ಯಾಯೇದರಣ್ಯೇ ಕಾಂಡ ಉತ್ತಮೇ ॥

ಕಿಷ್ಕಿಂಧಾಕಾಂಡೇ –

ಸುಗ್ರೀವಾದಿಯುತಂ ಶ್ರೀಶಂ ಭಕ್ತಾಂಕಾವೃತಮೀಶ್ವರಮ್ ।
ಸರ್ವದೇವೋತ್ತಮಂ ಧ್ಯಾಯೇತ್ ಕಿಷ್ಕಿಂಧಾಕಾಂಡ ಉತ್ತಮೇ ॥

ಸುಂದರಕಾಂಡೇ –

ಚಂದ್ರಬಿಂಬಸಮಾಕಾರಂ ವಾಂಛಿತಾರ್ಥಪ್ರದಾಯಕಮ್ ।
ಹನುಮತ್ಸೇವಿತಂ ಧ್ಯಾಯೇತ್ ಸೌಂದರೇ ಕಾಂಡ ಉತ್ತಮೇ ॥

ಯುದ್ಧಕಾಂಡೇ –

ರಾವಣಾದಿನಿಹಂತಾರಂ ಬ್ರಹ್ಮರುದ್ರಾದಿಸೇವಿತಮ್ ।
ಸೀತಾದೇವಿಯುತಂ ಯುದ್ಧೇ ರಾಮಂ ಧ್ಯಾಯೇದ್ ಹೃದಂಬುಜೇ ॥

ಉತ್ತರಕಾಂಡೇ –

ಅಗಸ್ತ್ಯಾದಿಮುನಿಸ್ತುತ್ಯಂ ವಾಂಛಿತಾರ್ಥಪ್ರದಾಯಕಮ್ ।
ಸರ್ವದೇವೋತ್ತಮಂ ಧ್ಯಾಯೇದುತ್ತರೇ ಕಾಂಡ ಉತ್ತಮೇ ॥

# ಚತುರ್ಥೋಽಧ್ಯಾಯಃ

ಅಥಾಭ್ಯವರ್ಧಂಶ್ಚತುರಾಃ ಕುಮಾರಾ ನೃಪಸ್ಯ ಗೇಹೇ ಪುರುಷೋತ್ತಮಾದ್ಯಾಃ ।
ನಿತ್ಯಪ್ರವೃದ್ಧಸ್ಯ ಚ ತಸ್ಯ ವೃದ್ಧಿರಪೇಕ್ಷ್ಯ ಲೋಕಸ್ಯ ಹಿ ಮಂದದೃಷ್ಟಿಮ್ ॥1॥

ನಿರೀಕ್ಷ್ಯ ನಿತ್ಯಂ ಚತುರಃ ಕುಮಾರಾನ್ ಪಿತಾ ಮುದಂ ಸಂತತಮಾಪ ಚೋಚ್ಚಮ್।
ವಿಶೇಷತೋ ರಾಮಮುಖೇಂದುಬಿಂಬಮವೇಕ್ಷ್ಯ ರಾಜಾ ಕೃತಕೃತ್ಯ ಆಸೀತ್ ॥2॥

ತನ್ಮಾತರಃ ಪೌರಜನಾ ಅಮಾತ್ಯಾ ಅಂತಃಪುರಾ ವೈಷಯಿಕಾಶ್ಚ ಸರ್ವೇ ।
ಅವೇಕ್ಷಮಾಣಾಃ ಪರಮಂ ಪುಮಾಂಸಂ ಸ್ವಾನಂದತೃಪ್ತಾ ಇವ ಸಂಬಭೂವುಃ ॥3॥

ತತಸ್ಸುವಂಶೇ ಶಶಿನಃ ಪ್ರಸೂತೋ ಗಾಧೀತಿ ಶಕ್ರಸ್ತನುಜೋಽಸ್ಯ ಚಾಸೀತ್ ।
ವರೇಣ ವಿಪ್ರತ್ವಮವಾಪ ಯೋಽಸೌ ವಿಶ್ವಸ್ಯ ಮಿತ್ರಂ ಸ ಇಹಾಜಗಾಮ ॥4॥

ತೇನಾರ್ಥಿತೋ ಯಜ್ಞರಿರಕ್ಷಯೈವ ಕೃಚ್ಛ್ರೇಣ ಪಿತ್ರಾಽಸ್ಯ ಭಯಾದ್ವಿಸೃಷ್ಟಃ ।
ಜಗಾಮ ರಾಮಃ ಸಹ ಲಕ್ಷ್ಮಣೇನ ಸಿದ್ಧಾಶ್ರಮಂ ಸಿದ್ಧಜನಾಭಿವಂದ್ಯಃ ॥5॥

ಅನುಗ್ರಹಾರ್ಥಂ ಸ ಋಷೇರವಾಪ ಸಲಕ್ಷ್ಮಣೋಽಸ್ತ್ರಂ ಮುನಿತೋ ಹಿ ಕೇವಲಮ್।
ವವಂದಿರೇ ಬ್ರಹ್ಮಮುಖಾಃ ಸುರೇಶಾಸ್ತಮಸ್ತ್ರರೂಪಾಃ ಪ್ರಕಟಾಃ ಸಮೇತ್ಯ ॥6॥

ಅಥೋ ಜಘಾನಾಶು ಶರೇಣ ತಾಟಕಾಂ ವರಾದ್ವಿಧಾತುಸ್ತದನನ್ಯವಧ್ಯಾಮ್ ।
ರರಕ್ಷ ಯಜ್ಞಂ ಚ ಮುನೇರ್ನಿಹತ್ಯ ಸುಬಾಹುಮೀಶಾನಗಿರಾ ವಿಮೃತ್ಯುಮ್ ॥7॥

ಶರೇಣ ಮಾರೀಚಮಥಾರ್ಣವೇಽಕ್ಷಿಪದ್ವಚೋ ವಿರಿಂಚಸ್ಯ ತು ಮಾನಯಾನಃ ।
ಅವಧ್ಯತಾ ತೇನ ಹಿ ತಸ್ಯ ದತ್ತಾ ಜಘಾನ ಚಾನ್ಯಾನ್ ರಜನೀಚರಾನಥ ॥8॥

ತದಾ ವಿದೇಹೇನ ಸುತಾಸ್ವಯಂವರೋ ವಿಘೋಷಿತೋ ದಿಕ್ಷು ವಿದಿಕ್ಷು ಸರ್ವಶಃ ।
ನಿಧಾರ್ಯ ತದ್ಗಾಧಿಸುತಾನುಯಾಯೀ ಯಯೌ ವಿದೇಹಾನನುಜಾನುಯಾತಃ ॥9॥

ಅಥೋ ಅಹಲ್ಯಾಂ ಪತಿನಾಽಭಿಶಪ್ತಾಂ ಪ್ರಧರ್ಷಣಾದಿಂದ್ರಕೃತಾಚ್ಛಿಲೀಕೃತಾಮ್ ।
ಸ್ವದರ್ಶನಾನ್ಮಾನುಷತಾಮುಪೇತಾಂ ಸುಯೋಜಯಾಮಾಸ ಸ ಗೌತಮೇನ ॥10॥

ಬಲಂ ಸ್ವಭಕ್ತೇರಧಿಕಂ ಪ್ರಕಾಶಯನ್ನನುಗ್ರಹಂ ಚ ತ್ರಿದಶೇಷ್ವತುಲ್ಯಮ್ ।
ಅನನ್ಯಭಕ್ತಾಂ ಚ ಸುರೇಶಕಾಂಕ್ಷಯಾ ವಿಧಾಯ ನಾರೀಂ ಪ್ರಯಯೌ ತಯಾಽರ್ಚಿತಃ ॥11॥

ಶ್ಯಾಮಾವದಾತೇ ಜಗದೇಕಸಾರೇ ಸ್ವನಂತಚಂದ್ರಾಧಿಕಕಾಂತಿಕಾಂತೇ ।
ಸಹಾನುಜೇ ಕಾರ್ಮುಕಬಾಣಪಾಣೌ ಪುರೀಂ ಪ್ರವಿಷ್ಟೇ ತುತುಷುರ್ವಿದೇಹಜಾಃ ॥12॥

ಪಪುರ್ನಿತಾಂತಂ ಸರಸಾಕ್ಷಿಭೃಂಗೈರ್ವರಾನನಾಬ್ಜಂ ಪುರುಷೋತ್ತಮಸ್ಯ ।
ವಿದೇಹನಾರೀನರವರ್ಯಸಂಘಾ ಯಥಾ ಮಹಾಪೌರುಷಿಕಾಸ್ತದಂಘ್ರಿಮ್ ॥13॥

ತದಾ ವಿದೇಹಃ ಪ್ರತಿಲಭ್ಯ ರಾಮಂ ಸಹಸ್ರನೇತ್ರಾವರಜಂ ಗವಿಷ್ಠಮ್ ।
ಸಮರ್ಚಯಾಮಾಸ ಸಹಾನುಜಂ ತಮೃಷಿಂ ಚ ಸಾಕ್ಷಾತ್ ಜ್ವಲನಪ್ರಕಾಶಮ್ ॥14॥

ಮೇನೇ ಚ ಜಾಮಾತರಮಾತ್ಮಕನ್ಯಾಗುಣೋಚಿತಂ ರೂಪನವಾವತಾರಮ್ ।
ಉವಾಚ ಚಾಸ್ಮಾ ಋಷಿರುಗ್ರತೇಜಾಃ ಕುರುಷ್ವ ಜಾಮಾತಾರಮೇನಮಾಶ್ವಿತಿ ॥15॥

ಸ ಆಹ ಚೈನಂ ಪರಮಂ ವಚಸ್ತೇ ಕರೋಮಿ ನಾತ್ರಾಸ್ತಿ ವಿಚಾರಣಾ ಮೇ ।
ಶೃಣುಷ್ವ ಮೇಽಥಾಪಿ ಯಥಾ ಪ್ರತಿಜ್ಞಾ ಸುತಾಪ್ರದಾನಾಯ ಕೃತಾ ಪುರಸ್ತಾತ್ ॥16॥

ತಪೋ ಮಯಾ ಚೀರ್ಣಮುಮಾಪತೇಃ ಪುರಾ ವರಾಯುಧಾವಾಪ್ತಿಧೃತೇನ ಚೇತಸಾ ।
ಸ ಮೇ ದದೌ ದಿವ್ಯಮಿದಂ ಧನುಸ್ತದಾ ಕಥಂಚನಾಚಾಲ್ಯಮೃತೇ ಪಿನಾಕಿನಮ್ ॥17॥

ನ ದೇವದೈತ್ಯೋರಗದೇವಗಾಯಕಾ ಅಲಂ ಧನುಶ್ಚಾಲಯಿತುಂ ಸವಾಸವಾಃ ।
ಕುತೋ ನರಾಸ್ತದ್ವರತೋ ಹಿ ಕಿಂಕರಾಃ ಸಹಾನಸೈವಾತ್ರ ಕೃಷಂತಿ ಕೃಚ್ಛ್ರ ರತಃ ॥18॥

ಅಧಾರ್ಯಮೇತದ್ಧನುರಾಪ್ಯ ಶಂಕರಾದಹಂ ನೃಣಾಂ ವೀರ್ಯಪರೀಕ್ಷಣೇ ಧೃತಃ ।
ಸುತಾರ್ಥಮೇತಾಂ ಚಕರ ಪ್ರತಿಜ್ಞಾಂ ದದಾಮಿ ಕನ್ಯಾಂ ಯ ಇದಂ ಹಿ ಪೂರಯೇತ್ ॥19॥

ಇತೀರಿತಾಂ ಮೇ ಗಿರಮಭ್ಯವೇತ್ಯ ದಿತೇಃ ಸುತಾ ದಾನವಯಕ್ಷರಾಕ್ಷಸಾಃ ।
ಸಮೇತ್ಯ ಭೂಪಾಶ್ಚ ಸಮೀಪಮಾಶು ಪ್ರಗೃಹ್ಯ ತಚ್ಚಾಲಯಿತುಂ ನ ಶೇಕುಃ ॥20॥

ಸಂಸ್ವಿನ್ನಗಾತ್ರಾಃ ಪರಿವೃತ್ತನೇತ್ರಾ ದಶಾನನಾದ್ಯಾಃ ಪತಿತಾ ವಿಮೂರ್ಛಿತಾಃ ।
ತಥಾಽಪಿ ಮಾಂ ಧರ್ಷಯಿತುಂ ನ ಶೇಕುಃ ಸುತಾಕೃತೇ ತೇ ವಚನಾತ್ಸ್ವಯಂಭುವಃ ॥21॥

ಪುರಾ ಹಿ ಮೇಽದಾತ್ ಪ್ರಭುರಬ್ಜಜೋ ವರಂ ಪ್ರಸಾದಿತೋ ಮೇ ತಪಸಾ ಕಥಂಚನ।
ಬಲಾನ್ನ ತೇ ಕಶ್ಚಿದುಪೈತಿ ಕನ್ಯಕಾಂ ತದಿಚ್ಛುಭಿಸ್ತೇ ನ ಚ ಧರ್ಷಣೇತಿ ॥22॥

ತತಸ್ತು ತೇ ನಷ್ಟಮದಾ ಇತೋ ಗತಾಃ ಸಮಸ್ತಶೋ ಹ್ಯಸ್ತನ ಏವ ಪಾರ್ಥಿವಾಃ ।
ತತೋ ಮಮಾಯಂ ಪರಿಪೂರ್ಯ ಮಾನಸಂ ವೃಣೋತು ಕನ್ಯಾಮಯಮೇವ ಮೇಽರ್ಥಿತಃ

ತಥೇತಿ ಚೋಕ್ತೋ ಮುನಿನಾ ಸ ಕಿಂಕರೈರನಂತಭೋಗೋಪಮಮಾಶ್ವಥಾನಯತ್ ।
ಸಮೀಕ್ಷ್ಯ ತದ್ವಾಮಕರೇಣ ರಾಘವಃ ಸಲೀಲಮುದ್ಧೃತ್ಯ ಹಸನ್ನಪೂರಯತ್ ॥24॥

ವಿಕೃಷ್ಯಮಾಣಂ ತದನಂತರಾಧಸಾ ಪರೇಣ ನಿಸ್ಸೀಮಬಲೇನ ಲೀಲಯಾ ।
ಅಭಜ್ಯತಾಸಹ್ಯಮಮುಷ್ಯ ತದ್ಬಲಂ ಪ್ರಸೋಢುಮೀಶಂ ಕುತ ಏವ ತದ್ಭವೇತ್ ॥25॥

ಸ ಮಧ್ಯತಸ್ತತ್ತ್ವಿಭಜ್ಯ ಲೀಲಯಾ ಯಥೇಕ್ಷುದಂಡಂ ಶತಮನ್ಯುಕುಂಜರಃ ।
ವಿಲೋಕಯನ್ ವಕ್ತ್ರಮೃಷೇರವಸ್ಥಿತಃ ಸಲಕ್ಷ್ಮಣಃ ಪೂರ್ಣತನುರ್ಯಥಾ ಶಶೀ ॥26॥

ತಮಬ್ಜನೇತ್ರಂ ಪೃಥುತುಂಗವಕ್ಷಸಂ ಶ್ಯಾಮಾವದಾತಂ ಚಲಕುಂಡಲೋಜ್ಜ್ವಲಮ್ ।
ಶಶಕ್ಷತೋತ್ಥೋಪಮಚಂದನೋಕ್ಷಿತಂ ದದರ್ಶ ವಿದ್ಯುದ್ವಸನಂ ನೃಪಾತ್ಮಜಾ ॥27॥

ಅಥೋ ಕರಾಭ್ಯಾಂ ಪ್ರತಿಗೃಹ್ಯ ಮಾಲಾಮಮ್ಲಾನಪದ್ಮಾಂ ಜಲಜಾಯತಾಕ್ಷೀ ।
ಉಪೇತ್ಯ ಮಂದಂ ಲಲಿತೈಃ ಪದೈಸ್ತಾಂ ತದಂಸ ಆಸಜ್ಯ ಚ ಪಾರ್ಶ್ವತೋಽಭವತ್॥28॥

ತತಃ ಪ್ರಮೋದೋ ನಿತರಾಂ ಜನಾನಾಂ ವಿದೇಹಪುರ್ಯಾಮಭವತ್ಸಮಂತಾತ್ ।
ರಾಮಂ ಸಮಾಲೋಕ್ಯ ನರೇಂದ್ರಪುತ್ರ್ಯಾ ಸಮೇತಮಾನಂದನಿಧಿಂ ಪರೇಶಮ್ ॥29॥

ಲಕ್ಷ್ಮ್ಯಾ ಸಮೇತೇ ಪ್ರಕಟಂ ರಮೇಶೇ ಸಂಪ್ರೇಷಯಾಮಾಸ ತದಾಽಽಶು ಪಿತ್ರೇ ।
ವಿದೇಹರಾಜೋ ದಶದಿಗ್ರಥಾಯ ಸ ತನ್ನಿಶಮ್ಯಾಶು ತುತೋಷ ಭೂಮಿಪಃ ॥30॥

ಅಥಾತ್ಮಜಾಭ್ಯಾಂ ಸಹಿತಸ್ಸಭಾರ್ಯೋ ಯಯೌ ಗಜಸ್ಯಂದನಪತ್ತಿಯುಕ್ತಯಾ ।
ಸ್ವಸೇನಯಾಽಗ್ರೇ ಪ್ರಣಿಧಾಯ ಧಾತೃಜಂ ವಸಿಷ್ಠಮಾಶ್ವೇವ ಸ ಯತ್ರ ಮೈಥಿಲಃ ॥31॥

ಸ ಮೈಥಿಲೇನಾತಿತರಾಂ ಸಮರ್ಚಿತೋ ವಿವಾಹಯಾಮಾಸ ಸುತಂ ಮುದಂಭರಃ ।
ಪುರೋಹಿತೋ ಗಾಧಿಸುತಾನುಮೋದಿತೋ ಜುಹಾವ ವಹ್ನಿಂ ವಿಧಿನಾ ವಸಿಷ್ಠಃ ॥32॥

ತದಾ ವಿಮಾನಾವಲಿಭಿರ್ನಭಸ್ತಲಂ ದಿದೃಕ್ಷತಾಂ ಸಂಕುಲಮಾಸ ನಾಕಿನಾಮ್ ।
ಸುರಾನಕಾ ದುಂದುಭಯೋ ವಿನೇದಿರೇ ಜಗುಶ್ಚ ಗಂಧರ್ವವರಾಃ ಸಹಸ್ರಶಃ ॥33॥

ವಿಜಾನಮಾನಾ ಜಗತಾಂ ಹಿ ಮಾತರಂ ಪುರಾಽರ್ಥಿತುಂ ನಾಯಯುರತ್ರ ದೇವತಾಃ ।
ತದಾ ತು ರಾಮಂ ರಮಯಾ ಯುತಂ ಪ್ರಭುಂ ದಿದೃಕ್ಷವಶ್ಚಕ್ರುರಲಂ ನಭಸ್ತಲಮ್ ॥34॥

ಯಥಾ ಪುರಾ ಸಾಗರಜಾಸ್ವಯಂಬರೇ ಸುಮಾನಸಾನಾಮಭವತ್ ಸಮಾಗಮಃ ।
ತಥಾ ಹ್ಯಭೂತ್ಸರ್ವದಿವೌಕಸಾಂ ತದಾ ತಥಾ ಮುನೀನಾಂ ಸಹಭೂಭೃತಾಂ ಭುವಿ ॥35॥

ಪ್ರಗೃಹ್ಯ ಪಾಣಿಂ ಚ ನೃಪಾತ್ಮಜಾಯಾ ರರಾಜ ರಾಜೀವಸಮಾನನೇತ್ರಃ ।
ಯಥಾ ಪುರಾ ಸಾಗರಜಾಸಮೇತಃ ಸುರಾಸುರಾಣಾಮಮೃತಾಬ್ಧಿಮಂಥನೇ ॥36॥

ಸ್ವಲಂಕೃತಾಸ್ತತ್ರ ವಿಚೇರುರಂಗನಾ ವಿದೇಹರಾಜಸ್ಯ ಹಿ ಯಾಶ್ಚ ಯೋಷಿತಃ ।
ಮುದಾ ಸಮೇತಂ ರಮಯಾ ರಮಾಪತಿಂ ವಿಲೋಕ್ಯ ರಾಮಾಯ ದದೌ ಧನಂ ನೃಪಃ
॥37॥

ಪ್ರಿಯಾಣಿ ವಸ್ತ್ರಾಣಿ ರಥಾನ್ ಸಕುಂಜರಾನ್ ಪರಾರ್ಘ್ಯರತ್ನಾನ್ಯಖಿಲಸ್ಯ ಚೇಶಿತುಃ ।
ದದೌ ಚ ಕನ್ಯಾತ್ರಯಮುತ್ತಮಂ ಮುದಾ ತದಾ ಸ ರಾಮಾವರಜೇಭ್ಯ ಏವ ॥38॥

ಮಹೋತ್ಸವಂ ತಂ ತ್ವನುಭೂಯ ದೇವತಾ
ನರಾಶ್ಚ ಸರ್ವೇ ಪ್ರಯಯುರ್ಯಥಾಽಗತಮ್ ।
ಪಿತಾ ಚ ರಾಮಸ್ಯ ಸುತೈಃ ಸಮನ್ವಿತೋ
ಯಯಾವಯೋಧ್ಯಾಂ ಸ್ವಪುರೀಂ ಮುದಾ ತತಃ ॥39॥

ತದಂತರೇ ಸೋಽಥ ದದರ್ಶ ಭಾರ್ಗವಂ ಸಹಸ್ರಲಕ್ಷಾಮಿತಭಾನುದೀಧಿತಿಮ್ ।
ವಿಭಾಸಮಾನಂ ನಿಜರಶ್ಮಿಮಂಡಲೇ ಧನುರ್ಧರಂ ದೀಪ್ತಪರಶ್ವಧಾಯುಧಮ್ ॥40॥

ಅಜಾನತಾಂ ರಾಘವಮಾದಿಪೂರುಷಂ ಸಮಾಗತಂ ಜ್ಞಾಪಯಿತುಂ ನಿದರ್ಶನೈಃ ।
ಸಮಾಹ್ವಯಂತಂ ರಘುಪಂ ಸ್ಪೃಧೇವ ನೃಪೋ ಯಯಾಚೇ ಪ್ರಣಿಪತ್ಯ ಭೀತಃ ॥41॥

ನ ಮೇ ಸುತಂ ಹಂತುಮಿಹಾರ್ಹಸಿ ಪ್ರಭೋ ವಯೋಗತಸ್ಯೇತ್ಯುದಿತಃ ಸ ಭಾರ್ಗವಃ ।
ಸುತತ್ರಯಂ ತೇ ಪ್ರದದಾಮಿ ರಾಘವಂ ರಣೇ ಸ್ಥಿತಂ ದ್ರಷ್ಟುಮಿಹಾಗತೋಽಸ್ಮ್ಯಹಮ್
॥42॥

ಸ ಇತ್ಥಮುಕ್ತ್ವಾ ನೃಪತಿಂ ರಘೂತ್ತಮಂ ಭೃಗೂತ್ತಮಃ ಪ್ರಾಹ ನಿಜಾಂ ತನುಂ ಹರಿಃ ।
ಅಭೇದಮಜ್ಞೇಷ್ವಪಿ ದರ್ಶಯನ್ ಪರಂ ಪುರಾತನೋಽಹಂ ಹರಿರೇಷ ಇತ್ಯಪಿ ॥43॥

ಶೃಣುಷ್ವ ರಾವವು ತ್ವಮಿಹೋದಿತಂ
ಮಯಾ ಧನುರ್ದ್ವಯಂ ಪೂರ್ವಮಭೂನ್ಮಹಾದ್ಭುತಮ್ ।
ಉಮಾಪತಿಸ್ತ್ವೇಕಮಧಾರಯತ್ತತೋ
ರಮಾಪತಿಶ್ಚಾಪರಮುತ್ತಮೋತ್ತಮಮ್ ॥44॥

ತದಾ ತು ಲೋಕಸ್ಯ ನಿದರ್ಶನಾರ್ಥಿಭಿಃ
ಸಮರ್ಥಿತಾ ತೌ ಹರಿಶಂಕರೌ ಸುರೈಃ ।
ರಣೇ ಸ್ಥಿತೌ ವಾಂ ಪ್ರಸಮೀಕ್ಷಿತುಂ
ವಯಂ ಸಮರ್ಥಯಾಮೋಽತ್ರ ನಿದರ್ಶನಾರ್ಥಿನಃ ॥45॥

ತತೋ ಹಿ ಯುದ್ಧಾಯ ರಮೇಶಶಂಕರೌ
ವ್ಯವಸ್ಥಿತೌ ತೌ ಧನುಷೀ ಪ್ರಗೃಹ್ಯ ।
ಯತೋಽಂತರಸ್ಯೈಷ ನಿಯಾಮಕೋ
ಹರಿಸ್ತತೋ ಹರೋಽಗ್ರೇಽಸ್ಯ ಶಿಲೋಪಮೋಭೂತ್ ॥46॥

ಶಶಾಕ ನೈವಾಥ ಯದಾಽಭಿವೀಕ್ಷಿತುಂ ಪ್ರಸ್ಪಂದಿತುಂ ವಾ ಕುತ ಏವ ಯೋದ್ಧುಮ್ ।
ಶಿವಸ್ತದಾ ದೇವಗಣಾಸ್ಸಮಸ್ತಾಃ ಶಶಂಸುರುಚ್ಚೈರ್ಜಗತೋ ಹರೇರ್ಬಲಮ್ ॥47॥

ಯದೀರಣೇನ್ನೈವ ವಿನ್ಯೆಷ ಶಂಕರಃ ಶಶಾಕ ನ ಪ್ರಶ್ವಸಿತುಂ ಚ ಕೇವಲಮ್ ।
ಕಿಮತ್ರ ವಕ್ತವ್ಯಮತೋ ಹರೇರ್ಬಲಂ ಹರಾತ್ಪರಂ ಸರ್ವತ ಏವ ಚೇತಿ ॥48॥

ತತಃ ಪ್ರಣಮ್ಯಾಶು ಜನಾರ್ದನಂ ಹರಃ ಪ್ರಸನ್ನದೃಷ್ಟ್ಯಾ ಹರಿಣಾಽಭಿವೀಕ್ಷಿತಃ ।
ಜಗಾಮ ಕೈಲಾಸಮಮುಷ್ಯ ತದ್ಧನುಸ್ತ್ವಯಾ ಪ್ರಭಗ್ನಂ ಕಿಲ ಲೋಕಸನ್ನಿಧೌ ॥49॥

ಧನುರ್ಯದನ್ಯದ್ಧರಿಹಸ್ತಯೋಗ್ಯಂ ತತ್ಕಾರ್ಮುಕಾತ್ ಕೋಟಿಗುಣಂ ಪುನಶ್ಚ ।
ವರಂ ಹಿ ಹಸ್ತೇ ತದಿದಂ ಗೃಹೀತಂ ಮಯಾ ಗೃಹಾಣೈತದತೋ ಹಿ ವೈಷ್ಣವಮ್ ॥50॥

ಯದೀದಮಾಗೃಹ್ಯ ವಿಕರ್ಷಸಿ ತ್ವಂ
ತದಾ ಹರಿರ್ನಾತ್ರ ವಿಚಾರ್ಯಮಸ್ತಿ ।

ಇತಿ ಬ್ರುವಾಣಃ ಪ್ರದದೌ ಧನುರ್ವರಂ
ಪ್ರದರ್ಶಯನ್ ವಿಷ್ಣುಬಲಂ ಹರಾದ್ವರಮ್ ॥51॥

ಪ್ರಗೃಹ್ಯ ತಚ್ಚಾಪವರಂ ಸ ರಾಘವಶ್ಚಕಾರ ಸಜ್ಯಂ ನಿಮಿಷೇಣ ಲೀಲಯಾ ।
ಚಕರ್ಷ ಸಂಧಾಯ ಶರಂ ಚ ಪಶ್ಯತಸ್ಸಮಸ್ತಲೋಕಸ್ಯ ಚ ಸಂಶಯಂ ನುದನ್ ॥52॥

ಪ್ರದರ್ಶಿತೇ ವಿಷ್ಣುಬಲೇ ಸಮಸ್ತಶೋ ಹರಾಚ್ಚ ನಿಸ್ಸಂಖ್ಯತಯಾ ಮಹಾಧಿಕೇ ।
ಜಗಾದ ಮೇಘೌಘಗಭೀರಯಾ ಗಿರಾ ಸ ರಾಘವಂ ಭಾರ್ಗವ ಆದಿಪೂರುಷಃ ॥53॥

ಅಲಂ ಬಲಂ ತೇ ಜಗತೋಽಖಿಲಾದ್ವರಂ
ಪರೋಽಸಿ ನಾರಾಯಣ ಏವ ನಾನ್ಯಥಾ ।
ವಿಸರ್ಜಯಸ್ವೇಹ ಶರಂ ತಪೋಮಯೇ
ಮಹಾಸುರೇ ಲೋಕಮಯೇ ವರಾದ್ವಿಭೋಃ ॥54॥

ಪುರಾಽತುಲೋ ನಾಮ ಮಹಾಸುರೋಽಭವದ್ವರಾತ್ಸ
ತು ಬ್ರಹ್ಮಣ ಆಪ ಲೋಕತಾಮ್।
ಪುನಶ್ಚ ತಂ ಪ್ರಾಹ ಜಗದ್ಗುರುರ್ಯದಾ
ಹರಿರ್ಜಿತಃ ಸ್ಯಾದ್ಧಿ ತದೈವ ವಧ್ಯಸೇ ॥55॥

ಅತೋ ವಧಾರ್ಥಂ ಜಗದಂತಕಸ್ಯ
ಸರ್ವಾಜಿತೋಽಹಂ ಜಿತವದ್ವ್ಯವಸ್ಥಿತಃ ।
ಇತೀರಿತೇ ಲೋಕಮಯೇ ಸ ರಾಘವೋ
ಮುಮೋಚ ಬಾಣಂ ಜಗದಂತಕೇಽಸುರೇ ॥56॥

ಪುರಾ ವರೋಽನೇನ ಶಿವೋಪಲಂಭಿತೋ ಮುಮುಕ್ಷಯಾ ವಿಷ್ಣುತನುಪ್ರವೇಶನಮ್ ।
ಸ ತೇನ ರಾಮೋದರಗೋ ಬಹಿರ್ಗತಸ್ತದಾಜ್ಞಯೈವಾಶು ಬಭೂವ ಭಸ್ಮಸಾತ್ ॥57॥

ಇತೀವ ರಾಮಾಯ ಸ ರಾಘವಃ ಶರಂ ವಿಕರ್ಷಮಾಣೋ ವಿನಿಹತ್ಯ ಚಾಸುರಮ್ ।
ತಪಸ್ತದೀಯಂ ಪ್ರವದನ್ಮುಮೋದ ತದೀಯಮೇವ ಹ್ಯಭವತ್ ಸಮಸ್ತಮ್ ॥58॥

ನಿರಂತರಾನಂದವಿಬೋಧಸಾರಃ ಸ ಜಾನಮಾನೋಽಖಿಲಮಾದಿಪೂರುಷಃ ।
ವದನ್ ಶೃಣೋತೀವ ವಿನೋದತೋ ಹರಿಸ್ಸ ಏಕ ಏವ ದ್ವಿತನುರ್ಮುಮೋದ ॥59॥

ಸ ಚೇಷ್ಟಿತಂ ಚೈವ ನಿಜಾಶ್ರಯಸ್ಯ ಜನಸ್ಯ ಸತ್ತತ್ತ್ವವಿಬೋಧಕಾರಣಮ್ ।
ವಿಮೋಹಕಂ ಚಾನ್ಯತಮಸ್ಯ ಕುರ್ವನ್ ಚಿಕ್ರೀಡ ಏಕೋಽಪಿ ನರಾಂತರೇ ಯಥಾ॥60॥

ತತಸ್ಸ ಕಾರುಣ್ಯನಿಧಿರ್ನಿಜೇ ಜನೇ
ನಿತಾಂತಮೈಕ್ಯಂ ಸ್ವಗತಂ ಪ್ರಕಾಶಯನ್ ।
ದ್ವಿಧೇವ ಭೂತ್ವಾ ಭೃಗುವರ್ಯ ಆತ್ಮನಾ
ರಘೂತ್ತಮೇನೈಕ್ಯಮಗಾತ್ ಸಮಕ್ಷಮ್ ॥61॥

ಸಮೇತ್ಯ ಚೈಕ್ಯಂ ಜಗತೋಽಭಿಪಶ್ಯತಃ ಪ್ರಣುದ್ಯ ಶಂಕಾಮಖಿಲಾಂ ಜನಸ್ಯ ।
ಪ್ರದಾಯ ರಾಮಾಯ ಧನುರ್ವರಂ ತದಾ ಜಗಾಮ ರಾಮಾನುಮತೋ ರಮಾಪತಿಃ ॥62॥

ತತೋ ನೃಪೋಽತ್ಯರ್ಥಮುದಾಽಭಿಪೂರಿತಃ ಸುತೈಃ ಸಮಸ್ತೈಃ ಸ್ವಪುರೀಮವಾಪ ಹ ।
ರೇಮೇಽಥ ರಾಮೋಽಪಿ ರಮಾಸ್ವರೂಪಯಾ ತಯೈವ ರಾಜಾತ್ಮಜಯಾ ಹಿ ಸೀತಯಾ ॥63॥

ಯಥಾ ಪುರಾ ಶ್ರೀರಮಣಃ ಶ್ರಿಯಾ ತಯಾ ರತೋ ನಿತಾಂತಂ ಹಿ ಪಯೋಧಿಮಧ್ಯೇ ।
ತಥಾ ತ್ವಯೋಧ್ಯಾಪುರಗೋ ರಘೂತ್ತಮೋಽಪ್ಯುವಾಸ ಕಾಲಂ ಸುಚಿರಂ ರತಸ್ತಯಾ ॥64॥

ಇಮಾನಿ ಕರ್ಮಾಣಿ ರಘೂತ್ತಮಸ್ಯ ಹರೇರ್ವಿಚಿತ್ರಾಣ್ಯಪಿ ನಾದ್ಭುತಾನಿ ।
ದುರಂತಶಕ್ತೇರಥ ಚಾಸ್ಯ ವೈಭವಂ ಸ್ವಕೀಯಕರ್ತವ್ಯತಯಾಽನುವರ್ಣ್ಯತೇ ॥65॥

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ
ಮಹಾಭಾರತತಾತ್ಪರ್ಯನಿರ್ಣಯೇ ರಾಮಚರಿತೇ ಅಯೋಧ್ಯಾಪ್ರವೇಶೋ ನಾಮ
ಚತುರ್ಥೋಽಧ್ಯಾಯಃ ॥

# ರಾಮದೇವರ ಮೇಲಿನ ಹಾಡುಗಳು

-೧-

ರಾಗ: ಬಿಲಹರಿ ತಾಳ: ಛಾಪು

ರಾಮ ರಾಮ ರಾಮ ಎನ್ನಿರೋ ಇಂಥಾ
ಸ್ವಾಮಿಯ ನಾಮವ ಮರೆಯದಿರೊ ॥ ಪ ॥

ತುಂಬಿದ ಪಟ್ಟಣಕೊಂಭತ್ತು ಬಾಗಿಲು
ಸಂಭ್ರಮದರಸುಗಳೈದು ಮಂದಿ
ಡಂಭಕತನದಿಂದ ಕಾಯುವ ದೇಹವ
ನಂಬಿ ನೆಚ್ಚಿ ನೀವು ಕೆಡಬೇಡಿರೊ ॥ 1 ॥

ನೆಲೆಯಿಲ್ಲವೀಕಾಯ ಎಲುವಿನ ಹಂದರ
ಬಲಿದು ಸುತ್ತಿದ ಚರ್ಮದ ಹೊದಿಕೆ
ಮಲಮೂತ್ರಂಗಳು ಕೀವು ಕ್ರಿಮಿಗಳುಳ್ಳ
ಹೊಲಸು ತೊಗಲು ಮೆಚ್ಚಿ ಕೆಡಬೇಡಿರೊ ॥ 2 ॥

ಹರಬ್ರಹ್ಮಸುರರಿಗೆ ವಂದ್ಯನು ಆಗಿಪ್ಪ
ಹರಿ ಸರ್ವೋತ್ತಮ ಎಂದೆನ್ನಿರೊ
ಪುರಂದರವಿಠಲನ ಚರಣವ ಭಜಿಸಿರೋ
ದುರಿತಭಯಗಳಿಂದ ದೂರಾಗಿರೊ ॥ 3 ॥

-೨-

ರಾಗ : ಕಾಂಬೋಧಿ ತಾಳ: ಝಂಪೆ

ಈಗ ಮಾಡೆಲೊ ರಾಮಧ್ಯಾನವ ನೀ
ಮೂಗನಾಗಿರಬೇಡ ಎಲೆ ಮಾನವ ॥ ಪ ॥

ಕಾಲನದೂತರು ಕರೆವಾಗ ನೀ
ಕಾಲಗೆಟ್ಟು ಕಣ್ಣು ಬಿಡುವಾಗ

ನಾಲಿಗೆ ಸೆಳಕೊಂಡು ಜ್ಞಾನ ಕೆಟ್ಟಿರುವಾಗ
ನೀಲವರ್ಣನ ಧ್ಯಾನ ಬರುವುದೇನಯ್ಯ ॥ 1 ॥

ಸತಿ ಸುತರೆಂಬ ಸಂದಣಿಯೊಳು ನೀ
ಮತಿಭ್ರಷ್ಟನಾಗಿ ಮನದೊಳು
ಸತತ ಶ್ರೀಲಕ್ಷ್ಮೀಪತಿಯನು ನೆನೆದರೆ ಸ
ದ್ಗತಿ ಸನ್ಮಾರ್ಗ ಪಾರಂಪದವೀವನಯ್ಯ ॥ 2 ॥

ಯಮದೂತರು ಬಂದು ಎಳೆವಾಗ
ನೀ ನರಳುತ್ತ ಹೊತ್ತು ಕಳೆವಾಗ
ಗುರುಪುರಂದರವಿಠಲನ ನಾಮವು
ಕಾಲವಾಗೋ ಸಮಯಕ್ಕೆ ಬರುವದೇನಯ್ಯ ॥ 3 ॥

-೩-

ಕರೆದರೂ ಧ್ವನಿ ಕೇಳದೆ। ರಘುರಾಮಚಂದ್ರ।
ಮರುಕವಾಗದೇ ನಿನಗೆ ॥ ಪ ॥

ಮರುತನಂದದಿ ನಿನ್ನ ಪೂಜಿಸಲರಿಯೆನು।
ಭರತನಂದದಿ ನಿನ್ನ ಸೇವಿಸಲರಿಯೆನು ॥ ಅ.ಪ. ॥

ಮಕರಿ ಬಾಧೆಗೆ ಸಿಲುಕಿದಾ।
ಕರಿರಾಜನಂದು ಪೊರೆಯೋ ಶ್ರೀಹರಿ ಎನಲು।
ಕರಿಯ ಮೊರೆಯ ಕೇಳೀ ತ್ವರಿತದಿಂದಲಿ ಬಂದು।
ಕರಿರಾಜನಂದು ಉದ್ಧರಿಸಲಿಲ್ಲವೆ ದೇವಾ ॥ 1 ॥

ದುರುಳ ರಕ್ಕಸನು ತನ್ನ ಶಿಶುವನ್ನೇ ಪಿಡಿದು।
ತೋರೋ ಶ್ರೀಹರಿಯ ಎನಲು।
ತರಳ ಪ್ರಹ್ಲಾದನ ಕರುಣ ವಾಕ್ಯವ ಕೇಳಿ।
ತ್ವರಿತದಿ ಕಂಭದಿಂ ಬರಲಿಲ್ಲವೆ ದೇವ ॥ 2 ॥

ವಾಮನಮೂರುತಿಯೆ ಬಲಿರಾಜನ ಯಾಗ ಮಂಟಪಕೆ ಪೋಗಿ।
ಮೂರು ಪಾದಗಳನ್ನು ಭೂಮಿ ದಾನವ ಬೇಡಿ।
ಬಲಿಯ ನೆಲಕೆ ತುಳಿದ ರಘು ರಾಮವಿಟ್ಠಲನೆ ॥ 3 ॥

-೪-

ಜೈ ಜೈ ರಾಮ ಹರೇ ಜೈ ಜೈ ಕೃಷ್ಣ ಹರೇ ॥ ಪ ॥

ರಾಮ ಹರೇ ಹರೇ ರಾಮ ಹರೇ। ಕೃಷ್ಣ ಹರೇ ಹರೇ ಕೃಷ್ಣ ಹರೇ ॥ ಅ.ಪ. ॥

ಕೌಸಲ್ಯಜ ವರವಂಶೋದ್ಭವ ಸುರಸಂಸೇವಿತಪದ ರಾಮ ಹರೇ।
ಕಂಸಾದ್ಯಸುರರ ಧ್ವಂಸಗೈಯ್ದ ಯದುವಂಶೋದ್ಭವ ಕೃಷ್ಣ ಹರೇ ॥ 1 ॥

ಮುನಿಮಖರಕ್ಷಕ ದನುಜರ ಶಿಕ್ಷಕ ಫಣಿಧರಸನ್ನುತ ರಾಮ ಹರೇ।
ಘನವರ್ಣಾಂಗ ಸುಮನಸರೊಡೆಯ ಶ್ರೀವನಜಾಸನಪಿತ ಕೃಷ್ಣ ಹರೇ ॥ 2 ॥

ತಾಟಕಾಖರಮಧುಕೈಟಭಾರಿ ಪಾಪಾಟವಿ ಸುರಮುಖ ರಾಮ ಹರೇ।
ಆಟದಿ ಫಣಿಮಾಲ್ಯಾಟವನಾಡಿದ ಖೇಟವಾಹ ಶ್ರೀಕೃಷ್ಣ ಹರೇ ॥ 3 ॥

ಶಿಲೆಯ ಪಾದರಜದಲಿ ಸ್ತ್ರೀ ಮಾಡಿದ ಸುಲಲಿತಮಹಿಮ ಶ್ರೀರಾಮ ಹರೇ।
ಬಲುವಕ್ರವಾಗಿದ್ದ ಅಬಲೆಯ ಕ್ಷಣದಲಿ ಚಲುವೆಯ ಮಾಡಿದ ಕೃಷ್ಣ ಹರೇ ॥ 4 ॥

ಹರಧನು ಭಂಗಿಸಿ ಹರುಷದಿ ಜಾನಕೀಕರವ ಪಿಡಿದ ಶ್ರೀ ರಾಮಹರೇ।
ಸಿರಿ ರುಕ್ಮಿಣಿಯನು ತ್ವರದಲಿ ವರಿಸಿದ ಕರುಣಾಕರ ಶ್ರೀಕೃಷ್ಣ ಹರೇ ॥ 5 ॥

ಜನಕ ಪೇಳೆ ಲಕ್ಷ್ಮಣ ಸೀತಾಸಹ ವನಕೆ ತೆರಳಿದ ಶ್ರೀ ರಾಮ ಹರೇ।
ವನಕೆ ಪೋಗಿ ತನ್ನನುಗರೊಡನೆ ಗೋವನು ಪಾಲಿಪ ಶ್ರೀಕೃಷ್ಣ ಹರೇ ॥ 6 ॥

ಚದುರೆ ಶಬರಿಯಿತ್ತ ಬದರಿಯ ಫಲವದು ಮುದದಿ ಸೇವಿಸಿದ ಶ್ರೀ ರಾಮ ಹರೇ।
ವಿದುರನ ಕ್ಷೀರಕೆ ಒದಗಿ ಪೋದ ಪದುಮನಾಭ ಶ್ರೀಕೃಷ್ಣ ಹರೇ ॥ 7 ॥

ಸೇವಿತ ಹನುಮ ಸುಗ್ರೀವನ ಸಖ ಜಗತ್ಪಾವನ ಪರತರ ಶ್ರೀ ರಾಮ ಹರೇ।
ದೇವಕಿವಸುದೇವರ ಸೆರೆ ಬಿಡಿಸಿದ ದೇವ ದೇವ ಶ್ರೀಕೃಷ್ಣ ಹರೇ ॥ 8 ॥

ಧರೆಯೊಳಜ್ಞಜನರ ಮೋಹಿಪುದಕೆ ಹರನ ಪೂಜಿಸಿದ ಶ್ರೀರಾಮ ಹರೇ ।
ಹರನ ಪ್ರಾರ್ಥಿಸಿ ವರವನು ಪಡೆದ ಚರಿತೆ ಅಗಾಧವು ಶ್ರೀಕೃಷ್ಣ ಹರೇ ॥ 9 ॥

ಗಿರಿಗಳಿಂದ ವರಶರಧಿಯ ಬಂಧಿಸಿದ ಪರಮ ಸಮರ್ಥ ಶ್ರೀರಾಮ ಹರೇ ।
ಗಿರಿಯನು ತನ್ನ ಕಿರು ಬೆರಳಲೆತ್ತಿ ಗೋಪರನು ಕಾಯ್ದ ಶ್ರೀಕೃಷ್ಣ ಹರೇ ॥ 10 ॥

ಖಂಡಿಸಿ ದಶಶಿರ ಚೆಂಡಾಡಿದ ಕೋದಂಡಪಾಣಿ ಶ್ರೀರಾಮ ಹರೇ ।
ಪಾಂಡುತನಯರಿಂ ಚಂಡ ಕೌರವರ ದಿಂಡುಗೆಡುಹಿಸಿದ ಶ್ರೀಕೃಷ್ಣ ಹರೇ ॥ 11 ॥

ತವಕದಲಯೋಧ್ಯಾಪುರಕೈದಿದ ತನ್ಮುವತಿಯೊಡನೆ ಶ್ರೀ ರಾಮ ಹರೇ ।
ರವಿಸುತತನಯಗೆ ಪಟ್ಟವಗಟ್ಟಿದ ಭವತಾರಕ ಶ್ರೀಕೃಷ್ಣ ಹರೇ ॥ 12 ॥

ಭರತನು ಪ್ರಾರ್ಥಿಸಲ್ ಅರಸತ್ವವ ಸ್ವೀಕರಿಸಿದ ತ್ವರದಲಿ ಶ್ರೀರಾಮ ಹರೇ ।
ವರಧರ್ಮಾದ್ಯರ ಧರೆಯೊಳು ಮೆರೆಸಿದ ಪರಮಕೃಪಾಕರ ಶ್ರೀಕೃಷ್ಣ ಹರೇ ॥ 13 ॥

ಅತುಳಮಹಿಮ ಸದ್ಯತಿಗಳ ಹೃದಯದಿ ಸತತ ವಿರಾಜಿಪ ಶ್ರೀರಾಮ ಹರೇ ।
ಸಿತವಾಹನಸಾರಥಿ ಎನಿಸಿದ ಸುರರತಿ ಪೂಜಿತಪದ ಶ್ರೀಕೃಷ್ಣ ಹರೇ ॥ 14 ॥

ರಾಮ ರಾಮ ಎಂದು ನೇಮದಿ ಭಜಿಪರ ಕಾಮಿತಫಲದ ಶ್ರೀರಾಮ ಹರೇ ।
ಪ್ರೇಮದಿ ಭಕ್ತರ ಪಾಲಿಪ ಶ್ರೀವರದೇಶವಿಟ್ಠಲ ಶ್ರೀಕೃಷ್ಣ ಹರೇ ॥ 15 ॥

-ಶ್ರೀ-

ರಾಮನ ಪೂಜಿಸಲಿಲ್ಲ । ಮೈ ಮರೆತನಲ್ಲಾ ॥ ಪ ॥

ಬಾಲತ್ವದಲಿ ಬಲು ಲೀಲೆಯಿಂದಲಿ ನಾನು ।
ಕಾಲವ ಕಳದೆನಲ್ಲ ಮೈ ಮರೆತನಲ್ಲ ॥ 1 ॥

ಸತಿಸುತರೇ ಎನಗೆ ಗತಿಎಂದು ತಿಳಿದು ನಾ ।
ಮತಿಗೆಟ್ಟು ಭ್ರಾಂತನಾದೆನಲ್ಲ ಮೈ ಮರೆತನಲ್ಲ ॥ 2 ॥

ಹೊನ್ನು ಗಳಿಸಿ ನಾನು ಅನ್ನವನಿಕ್ಕಲಿಲ್ಲ ।
ಚೆನ್ನ ಆದಿಕೇಶವನ ನಂಬಲಿಲ್ಲ ಮೈ ಮರೆತನಲ್ಲ ॥ 3 ॥

-೬-

ರಾಮಾ ನೀನೆ ಪಾಲಿಸೋ। ರಘು ರಾಮ ನೀನೇ ಪಾಲಿಸೋ ॥ ಪ ॥

ದಶರಥನುದರದಿ ಜನಿಸಿದನೆ। ಶಿಲೆಯಾದ ಅಹಲ್ಯೆಯ ಸಲಹಿದನೆ।
ಮುನಿಯಾಗ ಪಾಲಿಸಿ। ಧನುವನ್ನೇ ಮುರಿದು ನೀ ಗುಣನಿಧಿ ತಂದಾತನೇ ॥ 1 ॥

ಮಾತೆಯ ವಾಕ್ಯವ ಕೇಳಿದನೆ। ಸೀತಾಸಮೇತಾಗಿ ವನ ತೆರಳಿದನೆ।
ಪ್ರೀತಿಯೋಳ್ ಅನುಜನ್ನ ಕೂಡಿ ವನದಿ ಪ್ರಖ್ಯಾತ ಸೀತಾರಾಮನೆ ॥ 2 ॥

ಮಾರೀಚ ಮಾಯಾದಿ ತೋಡಿದನೆ। ಧೀರ ದಶಕಂಠನು ಚೋರನಾಗಿ।
ನಾರಿಯ ಒಯ್ಯಲು। ಓರ್ವನೆ ವನದಿ ಸಂಚಾರವ ಮಾಡಿದನೆ ॥ 3 ॥

ಪಕ್ಷಿಯ ವಚನವ ಕೇಳಿದನೆ। ಆ ಕ್ಷಣ ಮಾರುತಿ ಕೂಡಿದನೆ।
ಕಿಷ್ಕಿಂಧೆ ಸೇರುತ್ತ ಸುಗ್ರೀವ ಸ್ನೇಹದಿ। ವಾಲಿಯ ಕೊಂದಾತನೆ ॥ 4 ॥

ದೂತನ ಲಂಕೆಗೆ ಕಳುಹಿದನೆ। ಸೀತಾವೃತ್ತಾಂತವ ಕೇಳಿದನೆ।
ಸೇತುವೆ ಕಟ್ಟಿ ವಿಭೀಷಣಗೆ ಪಟ್ಟಾಭಿಷೇಕವ ಮಾಡಿದನೆ ॥ 5 ॥

ರಾಕ್ಷಸವಂಶ ನಾಶವಗೈದು। ರಾವಣನನುಜನ್ನ ಸಂಹರಿಸಿ।
ನಾರಿಯ ಕದ್ದಂಥ ಚೋರನ ಕೊಂದವನೆ ಧೀರ ರಾಮಚಂದ್ರನೆ ॥ 6 ॥

ಪಂಕಜನೇತ್ರನೆ ಪಾಲಿಪುದು। ಓಂಕಾರವಾಚ್ಯನೆ ಲಾಲಿಪುದು।
ಶಂಕರಮಿತ್ರನೆ ಸಂಕಟ ಹರಿಸೋ ಶ್ರೀ ವೇಂಕಟವಿಟ್ಠಲನೆ ॥ 7 ॥

-೭-

ಸುಮ್ಮನೆ ದೊರಕುವುದೇ ಶ್ರೀರಾಮನ ದಿವ್ಯನಾಮವು।
ಜನ್ಮಜನ್ಮಾಂತರದ ದುಷ್ಕರ್ಮ ಹೋದವಗಲ್ಲದೆ ॥ ಪ ॥

ಕಂತುಪಿತನ ಮೂರುತಿಯ ತನ್ನಂತರಂಗದೊಳಿಟ್ಟು।
ಚಿಂತೆ ಎಲ್ಲ ಬಿಟ್ಟು ನಿಶ್ಚಿಂತನಾದವಗಲ್ಲದೆ ॥ 1 ॥

ಭಕ್ತಿರಸದಲಿ ತನ್ನ ಚಿತ್ತಪರವಶನಾಗಿ।
ಅಚ್ಯುತನ ನಾಮವನು ಬಚ್ಚಿಟ್ಟುಕೊಂಡವಗಲ್ಲದೆ ॥ 2 ॥

ತನ್ನೊಳಗೆ ಇದ್ದ ಮೂರುತಿಯ ಕಣ್ಣೊಳಗೆ ತಂದರೆ ।
ಆನಂದ ಪೂರ್ಣ ಪುರಂದರವಿಠಲನ ನೋಡಿದವಗಲ್ಲದೆ ॥ 3 ॥

- ೮ -

ನೋಡು ನೋಡೆಂಥಾ ರಘುವೀರ ದೀನೋದ್ಧಾರ ॥ ಪ ॥

ತನು ಮನ ಧನಗಳ ತನಗೊಪ್ಪಿಸದೆ
ನೆನೆವ ಮನುಜರಿಗೆ ದೂರಾದೂರಾ ॥1॥

ಸೇರಿದ ಸುಜನರ ದೂರುವ ದುರುಳರ
ಬೇರಿಗೆರೆವ ಬಿಸಿ ನೀರಾ ನೀರಾ ॥2॥

ಶ್ರೀದವಿಠಲ ನಿಜಪಾದಾಶ್ರಿತರಪರಾಧ
ವ ಮನಸಿಗೆ ತಾರಾ ತಾರಾ ॥3॥

- ೯ -

ರಾಮಾ ಸದ್ಗುಣಗಣಧಾಮಾ ನಿರ್ಜರ ಸಾರ್ವ-
ಭೌಮಾ ದನುಜಕುಲಭೀಮಾ ಭೀಮಾ ರಘು ಸದ್ವಂಶದೊಳು
ದ್ದಾಮಾ ಕಾದುಕೋ ನಿನ್ನ ಭಕ್ತ-
ಸ್ತೋಮ ಮಂಗಳನಾಮ ಹನುಮ-
ತ್ಪ್ರೇಮಾತಮ ಸೀತಾ ಮನೋಭಿರಾಮ ॥ ಪ ॥

ಸರಸಿಜೋದ್ಭವನ ಮಂದಿರದೊಳರ್ಚನೆಗೊಂಡು
ನಿರುತಾ ಪಾವನತರ ಚರಿತಾ
ಸರ್ವದೇವರ ದೇವ ಇಕ್ಷ್ವಾಕರ ರಸನ್ವಯ ನೃ-
ಪರಕರವಾರಿರುಹ ಪೂಜಿತನಾಗಿ ದಶರಥಾ
ನರಸಿ ಜಠರದಿ ಜನಿಸಿ ಮೆರೆದಿಹ ರಾಮಾ ॥ 1 ॥

ಗಾಧಿನಂದನನ ಸುಮೇಧಾ ರಕ್ಷಿಸಿದಾ-
ಗಾಧನಂದ ಬಲಬೋಧಾ

ಮೇದಿನಿ ಜಾತಳನೊಲಿಸಲು
ಮಾಧವನ ಧನು ಮುರಿದ ನೀಲ ಪ-
ಯೋಧರ ಶಾಮಲ ಸುಮನಸ ವಿ-
ರೋಧಿ ಲೋಕಮಯ ಸದೆದ ರಘುರಾಮಾ ॥ 2 ॥

ಚತುರವಿಂಶತಿ ದಶಶತ ಸಹಸ್ರ-
ಜಿತಾದ್ಯಮಿತಾ ಆದ್ಯಮಿತ ರೂಪ ಜಗನ್ನಮಿತಾ
ಅತುಳ ಭುಜಬಲ ರಾವಣನ ಸಂ-
ತತಿ ಸವರಿ ಲಂಕಾಧಿಪತ್ಯ
ನತ ವಿಭೀಷಣಗಿತ್ತಾ ವರದೇಂದ್ರ-
ಯತಿವರದ ಜಗನ್ನಾಥವಿಠ್ಠಲ ರಾಮಾ ॥ 3 ॥

## ರಾಮಾರ್ಪಣ

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಅನುಸೃತಸ್ವಭಾವಃ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥ 1 ॥

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯೇನ ಮಾರ್ಗೇಣ ಮಹೀಂ ಮಹೀಶಾಃ ।
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವಂತು ॥ 2 ॥

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।
ದೇಶೋಽಯಂ ಕ್ಷೋಭರಹಿತಃ ಸಜ್ಜನಾಃ ಸಂತು ನಿರ್ಭಯಾಃ ॥ 3 ॥

ಅಪುತ್ರಾಃ ಪುತ್ರಿಣಃ ಸಂತು ಪುತ್ರಿಣಃ ಸಂತು ಪೌತ್ರಿಣಃ ।
ಅಧನಾಃ ಸಧನಾಃ ಸಂತು ಜೀವಂತು ಶರದಾಂ ಶತಮ್ ॥ 4 ॥

ಉಪನಯತು ಮಂಗಳಂ ನಃ ಸಕಲಜಗನ್ಮಂಗಳಾಲಯಃ ಶ್ರೀಮಾನ್ ।
ದಿನಕರಕಿರಣನಿಬೋಧಿತನವನಳಿನದಳ ನಿಭೇಕ್ಷಣೋ ರಾಮಃ ॥ 5 ॥

ಜಯತಿ ರಘುವಂಶತಿಲಕಃ ಕೌಸಲ್ಯಾಹೃದಯನಂದನೋ ರಾಮಃ ।
ದಶವದನನಿಧನಕಾರೀ ದಾಶರಥಿಃ ಪುಂಡರೀಕಾಕ್ಷ ॥ 6 ॥

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥ 7 ॥

ಮಂಗಳಂ ಕೋಸಲೇಂದ್ರಾಯ ಮಹನೀಯ ಗುಣಾತ್ಮನೇ ।
ಚಕ್ರವರ್ತಿತನೂಜಾಯ ಸಾರ್ವಭೌಮಾಯ ಮಂಗಳಮ್ ॥ 1 ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ಬೇಲದ ಹಣ್ಣಿನ ಪಾನಕ

**ಬೇಕಾಗುವ ಪದಾರ್ಥಗಳು :**

ಉಂಡೆಬೆಲ್ಲ - 750 ಗ್ರಾಂ. ಬೇಲದ ಹಣ್ಣು - 6 ಯಾಲಕ್ಕಿ - 5

**ಮಾಡುವ ರೀತಿ :**

ಬೇಲದ ಹಣ್ಣನ್ನು ತಿರುಳನ್ನು ಒಂದು ಪಾತ್ರೆಗೆ 3 ಲೀಟರ್ ನೀರಾಕಿ ಬೇಲದ ತಿರುಳನ್ನು ಹಾಕಿ ಒಲೆಯ ಮೇಲಿಟ್ಟು ಸಣ್ಣ ಉರಿಯಲ್ಲಿ ಕಾಯಿಸಿ. ನಂತರ ಅದಕ್ಕೆ ಬೆಲ್ಲ, ಯಾಲಕ್ಕಿ ಪುಡಿ, 2 ಚಮಚ ತುಪ್ಪ ಹಾಕಿ ಕೆಳಗಿಳಿಸಿ. ನಂತರ ಬಿಳಿ ಬಟ್ಟೆಯಲ್ಲಿ ಈ ಪಾನಕವನ್ನು ಶೋಧಿಸಿ ಆರಿದ ಮೇಲೆ ನೈವೇದ್ಯವನ್ನು ಮಾಡಿರಿ.

## ಮಜ್ಜಿಗೆ

ಕಡೆದ ಮಜ್ಜಿಗೆಯನ್ನು ತೆಳ್ಳಗಿರುವ ವಸ್ತ್ರದಿಂದ ಶೋಧಿಸಿ ಇದಕ್ಕೆ ಉಪ್ಪಿನ ಪುಡಿಯನ್ನು ಹಾಕಬೇಕು. ಮಾವಿನ ಹೀಚುಗಳನ್ನು ತಂದು ತೊಳೆದು ಹೋಳು ಮಾಡಿ ಹಾಕಬೇಕು. ಕರಿಬೇವು ಏಲಕ್ಕಿ ಹಾಕಿ ಹೊಂದಿಸಬೇಕು. ಅಥವಾ ಹಸಿರು ಮೆಣಸಿನಕಾಯಿ ಕೊತ್ತುಂಬರಿ ಸೊಪ್ಪು ಶುಂಠಿ ಹಾಕಿ ಒಗ್ಗರಣೆ ಮಾಡಿ ನಿಂಬೇಹಣ್ಣಿನ ರಸವನ್ನು ಹಿಂಡಿ ಇದನ್ನು ಶುಭ್ರವಾದ ವಸ್ತ್ರದಿಂದ ಶೋಧಿಸಿ ನೈವೇದ್ಯ ಮಾಡಿರಿ.

ಕಡೆದ ಮೊಸರನ್ನು ಬಟ್ಟೆಯಲ್ಲಿ ಹಾಕಿ ಶೋಧಿಸಿ ಅದರ ನೀರನ್ನು ಚೆಲ್ಲಬೇಕು. ಈ ಗಟ್ಟಿಯನ್ನು ಒಂದು ಮಡಕೆಗೆ ಹಾಕಿ ಕಡೆಗೋಲಿನಿಂದ ಕಡೆದು ಮಾವಿನ ಚಿಗುರು ಶುಂಠಿ ಉಪ್ಪಿನ ಪುಡಿ ಇವನ್ನು ಹಾಕಿ ತುಪ್ಪದಿಂದ ಒಗ್ಗರಿಸಿ ನೈವೇದ್ಯ ಮಾಡಬೇಕು.

## ಹೆಸರುಬೇಳೆ/ಕಡಲೆಬೇಳೆ ಕೋಸಂಬರಿ

**ಬೇಕಾಗುವ ಪದಾರ್ಥಗಳು :**

ಒಂದು ಪಾವು ಹೆಸರುಬೇಳೆ / ಕಡಲೆಬೇಳೆ, ಒಂದು ಹೋಳು ತೆಂಗಿನಕಾಯಿ, ಕೊತ್ತಂಬರಿ ಸೊಪ್ಪು ಒಂದು ಕಟ್ಟು, ಆರೇಳು ಹಸಿ ಮೆಣಸಿನಕಾಯಿ, ಚೂರು ಇಂಗು, ಸಾಸಿವೆ, ಕಡಲೇಕಾಯಿ ಎಣ್ಣೆ ಹಾಗೂ ಉಪ್ಪಿನ ಪುಡಿ.

**ತಯಾರಿಸುವ ವಿಧಾನ :**

ಶುದ್ಧಗೊಳಿಸಿದ ಹೆಸರುಬೇಳೆ/ಕಡಲೆಬೇಳೆಯನ್ನು ಚೆನ್ನಾಗಿ ತೊಳೆದು ನೆನೆ ಹಾಕಬೇಕು. ಒಂದೆರಡು ಗಂಟೆಗಳ ಕಾಲ ಚೆನ್ನಾಗಿ ನೆನೆದ ಬಳಿಕ ಬಸಿ ಹಾಕಬೇಕು. ತೆಂಗಿನಕಾಯಿಯನ್ನು ತುರಿದಿಟ್ಟುಕೊಂಡಿರಬೇಕು. ಬಸಿ ಹಾಕಿರುವ ಬೇಳೆಯನ್ನು ಸ್ಟೀಲ್ ಬೇಸನ್‌ಗೆ ಹಾಕಿಕೊಳ್ಳಬೇಕು. ಹಸಿ ಮೆಣಸಿನಕಾಯಿಯನ್ನು ಸಣ್ಣ ಸಣ್ಣಗೆ ಹೆಚ್ಚಿಟ್ಟುಕೊಂಡಿರಬೇಕು. ಬಾಣಲೆಯನ್ನು ಒಲೆಯ ಮೇಲಿರಿಸಿ ಮೂರು ಚಮಚ ಎಣ್ಣೆಯನ್ನು ಹಾಕಬೇಕು. ಎಣ್ಣೆ ಕಾದ ನಂತರ ಸಾಸಿವೆ ಹಾಕಿ, ಸಾಸಿವಿ ಸಿಡಿದ ನಂತರ ಸಣ್ಣಗೆ ಹೆಚ್ಚಿಟ್ಟುಕೊಂಡ ಹಸಿಮೆಣಸಿನಕಾಯಿ, ಕೊತ್ತಂಬರಿ ಸೊಪ್ಪು, ಇಂಗು ಹಾಕಿ ಒಗ್ಗರಣೆ ಮಾಡಿಕೊಳ್ಳಬೇಕು. ಪಾತ್ರೆ ಅಥವಾ ಬೇಸನ್‌ನಲ್ಲಿ ಹಾಕಿಕೊಂಡ ಹೆಸರುಬೇಳೆಗೆ ಒಗ್ಗರಣೆ ಕಾಯಿತುರಿ ಹಾಗೂ ರುಚಿಗೆ ತಕ್ಕಷ್ಟು ಉಪ್ಪು ಸೇರಿಸಿ ಚೆನ್ನಾಗಿ ಕೈಯಾಡಿಸಬೇಕು.

## ನಿಂಬೆಹಣ್ಣಿನ ಪಾನಕ

**ಬೇಕಾಗುವ ಪದಾರ್ಥಗಳು :**

ಎರಡು ಅಥವಾ ಮೂರು ದಪ್ಪನೆಯ ನಿಂಬೆಹಣ್ಣುಗಳು, ಒಂದು ಪಾತ್ರೆಯಲ್ಲಿ ನೀರು, ಸಕ್ಕರೆ, ಕೇಸರಿಬಣ್ಣದ ಚಿಟಿಕೆ, ಪಚ್ಚಕರ್ಪೂರ ಮತ್ತು ಏಲಕ್ಕಿ.

**ತಯಾರಿಸುವ ವಿಧಾನ :**

ನಿಂಬೆಹಣ್ಣುಗಳನ್ನು ಎರಡಾಗಿ ಸೀಳಿ ರಸವನ್ನು ನೀರಿರುವ ಪಾತ್ರೆಗೆ ಹಿಂಡಿ, ಸಕ್ಕರೆ ಬೆರೆಸಿ ಒಂದು ಚಿಟಿಕೆ ಕೇಸರಿ ಬಣ್ಣವನ್ನು ಹಾಕಿ, ಒಂದು ಚೂರು ಪಚ್ಚಕರ್ಪೂರ ಹಾಗೂ ಏಲಕ್ಕಿ ಪುಡಿಯನ್ನು ಹಾಕಿ ಪಾನಕವನ್ನು ನೈವೇದ್ಯ ಮಾಡಬೇಕು.

## ಮಾವಿನಕಾಯಿ ಚಿತ್ರಾನ್ನ

**ಬೇಕಾಗುವ ಪದಾರ್ಥಗಳು :**

ಅರ್ಧ ಕೆ.ಜಿ. ಅಕ್ಕಿ, ಎರಡು ದಪ್ಪನೆಯ ಮಾವಿನ ಕಾಯಿ, ತೆಂಗಿನ ಕಾಯಿ ಒಂದು ಹೋಳು, ಐದಾರು ಹಸಿ ಅಥವಾ ಒಣಮೆಣಸಿನಕಾಯಿ, ಕಡಲೆಬೇಳೆ,

ಉದ್ದಿನಬೇಳೆ, ಒಂದು ಚಮಚ ಸಾಸಿವೆ, ಅರಿಶಿನ, ಕಡಲೆಕಾಯಿ ಬೀಜ, ಕರಿಬೇವು ಮತ್ತು ಇಂಗು, ಉಪ್ಪು, ಕಡಲೆಕಾಯಿ ಎಣ್ಣೆ.

**ತಯಾರಿಸುವ ವಿಧಾನ** : ಮಾವಿನ ಕಾಯಿ ಸಿಪ್ಪೆ ಹೆರೆದು, ಸಣ್ಣ ಸಣ್ಣ ಹೋಳುಗಳಾಗಿ ಹೆಚ್ಚಿಟ್ಟುಕೊಂಡು ಒರಳಿನಲಿ ಹೋಳುಗಳು, ಒಂದು ಚಿಟಿಕೆ ಅರಿಶಿನ, ಉಪ್ಪನ್ನು ಹಾಕಿ ಚೆನ್ನಾಗಿ ರುಬ್ಬಿ, ಬಾಣಲೆಯನ್ನು ಒಲೆಯ ಮೇಲಿರಿಸಿ ಅರ್ಧ ಬಟ್ಟಲು ಎಣ್ಣೆ ಹಾಕಿ ಸಾಸಿವೆ, ಕಡಲೆಬೇಳೆ, ಕಡಲೆಕಾಯಿ ಬೀಜ, ಉದ್ದಿನಬೇಳೆ, ಕರಿಬೇವು ಹಾಕಿ ಒಗ್ಗರಣೆ ಮಾಡಿಕೊಂಡು ರುಬ್ಬಿಟ್ಟುಕೊಂಡ ಮಾವಿನಕಾಯಿ ಚಟ್ನಿಯನ್ನು ಬಾಣಲೆಗೆ ಹಾಕಿ ಚೆನ್ನಾಗಿ ಕೆದಕಿ ಅನಂತರ ಅದನ್ನು ಅನ್ನಕ್ಕೆ ಹಾಕಿ ಚೆನ್ನಾಗಿ ಕಲಸುತ್ತಾ ಮಾವಿನಕಾಯಿ ಚಿತ್ರಾನ್ನವನ್ನು ಸಿದ್ಧಗೊಳಿಸಬೇಕು. ಅನಂತರ ನೈವೇದ್ಯಕ್ಕೆ ಮಂಡಲದ ಮೇಲಿಡಬೇಕು.

## ಮೊಸರನ್ನ

**ಬೇಕಾಗುವ ಪದಾರ್ಥಗಳು :**

ಅಕ್ಕಿ - 500 ಗ್ರಾಂ.
ಸೀಡ್‌ಲೆಸ್ ದ್ರಾಕ್ಷಿ - 50 ಗ್ರಾಂ.
ಹಸಿಮೆಣಸಿನಕಾಯಿ - 5
ಸಾಸಿವೆ - 1 ಚಮಚ
ಒಗ್ಗರಣೆಗೆ ಎಣ್ಣೆ
ತೆಂಗಿನಕಾಯಿ - $^1/_2$ ಭಾಗ
ಮೊಸರು - $^1/_2$ ಲೀ.
ಹಸಿಶುಂಠಿ - 1 ಚೂರು
ಸೌತೇಕಾಯಿ - 1 ತುಂಡು

**ಮಾಡುವ ರೀತಿ :**

ಅಕ್ಕಿಯನ್ನು ತೊಳೆದು ಅನ್ನ ಮಾಡಿಕೊಳ್ಳಿ (ಅನ್ನ ಮುದ್ದೆಯಾಗಿದ್ದರೆ ಚೆನ್ನ). ಈ ಅನ್ನಕ್ಕೆ ಸೌತೇಕಾಯಿ, ಹಸಿಶುಂಠಿಯನ್ನು ಸಣ್ಣಗೆ ಹೆಚ್ಚಾಕಿ. ನಂತರ ದ್ರಾಕ್ಷಿ, ಉಪ್ಪು, ಬಾಣಲಿಯಲ್ಲಿ ಸಿಡಿಸಿದ ಒಗ್ಗರಣೆ, ಹಸಿಮೆಣಸಿನಕಾಯಿ, ತುರಿದ ತೆಂಗಿನಕಾಯಿ ಮೊಸರು ಹಾಕಿ ಚೆನ್ನಾಗಿ ಕಲಿಸಿ. ಬೇಕಿದ್ದರೆ ಎರಡು ಚಮಚ ಸಕ್ಕರೆ ಹಾಕಬಹುದು.

## ಹೆಸರುಕಾಳು ಕೋಸಂಬರಿ

**ಬೇಕಾಗುವ ಪದಾರ್ಥಗಳು :** ಕಾಲು ಕೆ.ಜಿ. ಹೆಸರುಕಾಳು, ಒಂದು ಹೋಳು ತೆಂಗಿನಕಾಯಿ, ಕೊತ್ತಂಬರಿ ಸೊಪ್ಪು ಒಂದು ಕಟ್ಟು, ಇಂಗು, ಸಾಸಿವೆ, ಕಡಲೆಕಾಯಿ ಎಣ್ಣೆ ಮತ್ತು ಪುಡಿ ಉಪ್ಪು.

**ತಯಾರಿಸುವ ವಿಧಾನ :** ಶುದ್ಧಗೊಳಿಸಿದ ಹೆಸರುಕಾಳನ್ನು ಚೆನ್ನಾಗಿ ತೊಳೆದು ಒ,ದು ದಿನ ಪೂರಾ ನೆನೆ ಹಾಕಿಡಬೇಕು. ಮರುದಿನ ನೀರನ್ನು ಬಸಿದು ನೆನೆದ ಕಾಳನ್ನು ಒಂದು ಪಾತ್ರೆಯಲ್ಲಿರಿಸಿ ಮುಚ್ಚಿ ಒಂದು ದಿನ ಹಾಗೆಯೇ ಇಡಬೇಕು. ಮೂರನೆಯ ದಿನ ಚೆನ್ನಾಗಿ ಮೊಳಕೆ ಬಂದ ಕಾಳುಗಳಿಗೆ ಕಾಯಿತುರಿ ಮತ್ತು ಒಗ್ಗರಣೆ ಹಾಕಿ ಮೊಳಕೆಗಳು ಒಡೆಯದಂತೆ ಕಲಸಿ (ಚಮಚ ಬಳಸಬಹುದು) ರುಚಿಗೆ ತಕ್ಕಷ್ಟು ಉಪ್ಪು ಸೇರಿಸಿ ಸಿದ್ಧಗೊಳಿಸಬೇಕು. ಅನಂತರ ನೈವೇದ್ಯಕ್ಕೆ ಮಂಡಲದ ಮೇಲಿಡಬೇಕು.

## ಪಂಚಭಕ್ಷ್ಯಗಳು

## ಕಡಲೆಬೇಳೆ ಹೋಳಿಗೆ

**ಬೇಕಾಗುವ ಪದಾರ್ಥಗಳು :** ಕಡಲೆಬೇಳೆ 1/4 ಕೆ.ಜಿ., ಮೈದಾಹಿಟ್ಟು 1/4 ಕೆ.ಜಿ., ಬೆಲ್ಲ 1/4 ಕೆ.ಜಿ., ಏಲಕ್ಕಿ ಪುಡಿ ಸ್ವಲ್ಪ, ಎಣ್ಣೆ-250 ಗ್ರಾಂ.

**ಮಾಡುವ ರೀತಿ:** ಒಂದು ಪಾತ್ರೆಯಲ್ಲಿ ನೀರನ್ನು ಹಾಕಿ ಒಲೆಯ ಮೇಲಿಡಿ. ಕುದಿಯಲು ತೊಡಗಿದ ಮೇಲೆ ಸ್ವಚ್ಛಗೊಳಿಸಿದ ಕಡಲೆಬೇಳೆಯನ್ನು ತೊಳೆದು ಅದರಲ್ಲಿ ಹಾಕಿ. (ಅದು ಬೇಯುವಷ್ಟರಲ್ಲಿ ಬೆಲ್ಲವನ್ನು ಕುಟ್ಟಿ ಪುಡಿ ಮಾಡಿಕೊಳ್ಳಿ. ಮೈದಾಹಿಟ್ಟನ್ನು ಜರಡಿ ಹಿಡಿದುಕೊಳ್ಳಿ). ಚೆನ್ನಾಗಿ ಬೆಂದ ಮೇಲೆ ಒಲೆಯ ಉರಿಯನ್ನು ಆರಿಸಿ ಕಡಲೆಬೇಳೆ ಕಟ್ಟನ್ನು ಬಗ್ಗಿಸಿ ಬೇಳೆಯನ್ನು ಏಲಕ್ಕಿ ಪುಡಿ, ಬೆಲ್ಲದ ಪುಡಿಯೊಂದಿಗೆ ಸೇರಿಸಿದ ಅರೆಯುವ ಕಲ್ಲಿನಲ್ಲಿ ಹಾಕಿ ನಯವಾಗಿ ಅರೆಯಿರಿ. ಮೈದಾ ಹಿಟ್ಟಿಗೆ ಎಣ್ಣೆ,

ನೀರು ಅರಿಶಿನಪುಡಿ, ಸೇರಿಸಿ ಕಲಸಿಕೊಳ್ಳಿ. ನಂತರ ಇನ್ನಷ್ಟು ಎಣ್ಣೆನ್ನು ಹಾಕಿ ಚೆನ್ನಾಗಿ ನಾದಿ ಲಿಂಬೆಹಣ್ಣಿನ ಗಾತ್ರದ ಉಂಡೆ ತಯಾರಿಸಿಕೊಳ್ಳಿ. ಆದನ್ನು ಕೈಯಲ್ಲಿ ತೆಗೆದುಕೊಂಡು ಬಟ್ಟಲಿನಂತೆ ಮಾಡಿ ಆದರಲ್ಲಿ ಹೂರಣದ ಉಂಡೆಯನ್ನು ಇಟ್ಟು' ಅದನ್ನು ಮುಚ್ಚಿ. ನಂತರ ಒಂದು ಬಾಳೆ ಎಲೆಯ ತುಂಡನ್ನು ನೀರಿನಲ್ಲಿ ತೊಳೆದು ಬಟ್ಟೆಯಿಂದ ಒರೆಸೆ ಒಲೆಯ ಮುಂದೆ ಹಿಡಿಯಿರಿ. ಬಿಸಿಗೆ ಎಲೆ ಮೃದುವಾಗುತ್ತದೆ. ನಂತರ ಅದಕ್ಕೆ ಸವರಿ ಹೂರಣ ತುಂಬಿತದ ಕಣತದ ಉಂಡೆಯನ್ನಿಟ್ಟು ಲಟ್ಟಣಿಗೆಯಿಂದ ದುಂಡಾಗಿ ಲಟ್ಟಿಸಿ. ಆಮೇಲೆ ಅದನ್ನು ಕಾದ ಕಾವಲಿಯ ಮೇಲೆ ಹಾಕಿ ಬೇಯಿಸಿಕೊಳ್ಳಿ. (ಬೇಕಿದ್ದರೆ ಹೋಳಿಗೆ ಬೇಯಿಸುವಾಗ ಸ್ವಲ್ಪ ಎಣ್ಣೆಯನ್ನು ಹಾಕಬಹುದು) ಎರಡೂ ಬದಿ ಚೆನ್ನಾಗಿ ಬೆಂದಮೇಲೆ ಹೋಳಿಗೆಯನ್ನು ಮೊಗಚೆಕ್ಕೆಯಿಂದ ತೆಗೆದು, ಅನಂತರ ನೈವೇದ್ಯಕ್ಕೆ ಮಂಡಲದ ಮೇಲಿಡಬೇಕು.

## ಮೈಸೂರು ಪಾಕ್

**ಬೇಕಾಗುವ ಪದಾರ್ಥಗಳು :**

ಸಕ್ಕರೆ - 750 ಗ್ರಾಂ
ಬೆಣ್ಣೆ ಕಾಯಿಸಿದ ತುಪ್ಪ - 750 ಗ್ರಾಂ
ಕಡಲೆಹಿಟ್ಟು - 750 ಗ್ರಾಂ

**ಮಾಡುವ ರೀತಿ :**

ಒಳ್ಳೆಯ ಕಡಲೆಹಿಟ್ಟನ್ನು ಜರಡಿ ಹಿಡಿದುಕೊಳ್ಳಿ. ಒಂದು ಪಾತ್ರೆಯಲ್ಲಿ ಒಂದೂವರೆ ಪಾವು ನೀರು ಹಾಗೂ ಸಕ್ಕರೆಯನ್ನು ಸೇರಿಸಿ ಒಲೆಯ ಮೇಲಿಡಿ. ಉರಿ ಸಣ್ಣದಾಗಿರಲಿ. ಸಕ್ಕರೆಯನ್ನು ಕರಗಿಸಿ ಪಾಕ ಮಾಡಿದ ಮೇಲೆ ಕಡಲೆ ಹಿಟ್ಟನ್ನು ಪಾಕದಲ್ಲಿ ನಿಧಾನವಾಗಿ ಬಿಡುತ್ತಾ ಮೊಗಚು ಕೈನಿಂದ ಗೊಟಾಯಿಸುತ್ತೀರಿ. ಕಡಲೆಹಿಟ್ಟು ಬೆಂದಮೇಲೆ ತುಪ್ಪ ಸೇರಿಸಿ ಕೆದಕಿರಿ. ನಂತರ ತುಪ್ಪ ಸವರಿದ ಸ್ಟೀಲ್ ತಟ್ಟೆಯಲ್ಲಿ ಮೈಸೂರುಪಾಕನ್ನು ಸುರಿದು ಹರಡಿ. ಸ್ವಲ್ಪ ಹೊತ್ತು ಆರಿದ ಮೇಲೆ ಚಾಕುವಿನಿಂದ ನಿಮಗೆ ಬೇಕಾದ ಆಕಾರಕ್ಕೆ ತುಂಡು ಮಾಡಿರಿ.

## ಬೂದುಕುಂಬಳಕಾಯಿ ಹಲ್ವ

**ಬೇಕಾಗುವ ಪದಾರ್ಥಗಳು :**

ಬೂದುಕುಂಬಳಕಾಯಿ - 1 ಕೆ.ಜಿ. ಹಾಲು - 1/2 ಲೀ.

ಸಕ್ಕರೆ - 500 ಗ್ರಾಂ. ಗೋಡಂಬಿ ದ್ರಾಕ್ಷಿ - 50 ಗ್ರಾಂ.

ತುಪ್ಪ - 150 ಗ್ರಾಂ. ಯಾಲಕ್ಕಿ - 10

**ಮಾಡುವ ರೀತಿ :**

ಮೊದಲು ಬೂದುಕುಂಬಳಕಾಯಿ ಸಿಪ್ಪೆ ತೆಗೆದು ತಿರುಳನ್ನು ಕೊಬ್ಬರಿ ತುರಿಯಂತೆ ತುರಿದುಕೊಳ್ಳಿ. ಒಂದು ಅಗಲವಾದ ಪಾತ್ರೆಗೆ ಹಾಲಾಕಿ ಒಲೆಯ ಮೇಲಿಡಿ. ಹಾಲು ಕಾದ ಬಳಿಕ ತುರಿದ ಬೂದುಕುಂಬಳಕಾಯನ್ನು ಹಾಲಿಗೆ ಹಾಕಿ ಕೆದಕಿರಿ. ಕುಂಬಳಕಾಯಿ ಬೆಂದ ಮೇಲೆ ಯಾಲಕ್ಕಿ ಪುಡಿ, ಸಕ್ಕರೆ ಹಾಕುವುದು. ಮಿಶ್ರಣ ಚೆನ್ನಾಗಿ ಬೆರೆತ ನಂತರ ತುಪ್ಪದಲ್ಲಿ ಕರಿದ ಗೋಡಂಬಿ-ದ್ರಾಕ್ಷಿ ಹಾಕಿ ಚೆನ್ನಾಗಿ ಬೆರೆಸಿ. ಬೇಕಿದ್ದರೆ ಒಂದು ಚಿಟಿಕೆ ಕೇಸರಿ ಬಣ್ಣ ಮಿಶ್ರಣ ಮಾಡಬಹುದು.

## ಬಾದಾಮಿ ಹಲ್ವ

**ಬೇಕಾಗುವ ಪದಾರ್ಥಗಳು :**

ಹಾಲು - 300 ಗ್ರಾಂ. ಬಾದಾಮಿ ಬೀಜ - 250 ಗ್ರಾಂ.

ಸಕ್ಕರೆ - 250 ಗ್ರಾಂ. ಯಾಲಕ್ಕಿ - 5 ಗ್ರಾಂ.

ತುಪ್ಪ - 250 ಗ್ರಾಂ. ಕೇಸರಿ - 1 ಚಿಟಿಕೆ

**ಮಾಡುವ ರೀತಿ :**

ಬಾದಾಮಿಯನ್ನು ನೀರಿನಲ್ಲಿ ಕುದಿಸಿ. ಕುದಿದ ಮೇಲೆ ನೀರನ್ನೆಲ್ಲ ತೆಗೆದು ಬಾದಾಮಿಯನ್ನು ಒರಳಿನಲ್ಲಿ ರುಬ್ಬುವುದು. ರುಬ್ಬಿದ ಬಾದಾಮಿಯನ್ನು ಬಾಣಲಿಗೆ ತೆಗೆದುಕೊಂಡು ಅದಕ್ಕೆ ಸಕ್ಕರೆ ಸೇರಿಸಿ ಒಲೆಯ ಮೇಲಿಡಿ. ನಂತರ ನೀರಲ್ಲಿ ನೆನೆಹಾಕಿದ ಕೇಸರಿಯನ್ನು ಅರೆದು ಬಾದಾಮಿಗೆ ಮಿಶ್ರಣ ಮಾಡಿ. ಆಮೇಲೆ ಬಾಣಲೆಯನ್ನು ಒಲೆಯ ಮೇಲಿಟ್ಟು ತಿರುವುತ್ತಿರಿ. ಮಿಶ್ರಣ ದೋಸೆ ಹಿಟ್ಟಿನಂತಾಗುತ್ತದೆ. ನಂತರ ಬಿಸಿ

ತುಪ್ಪ ಹಾಕಿ ಚೆನ್ನಾಗಿ ಗೊಟಾಯಿಸಿರಿ. ಆಮೇಲೆ ತುಪ್ಪದಲ್ಲಿ ಕರಿದ ಗೋಡಂಬಿ-ದ್ರಾಕ್ಷಿ, ಯಾಲಕ್ಕಿ ಹಾಕಿ. ಸ್ವಲ್ಪ ಗಟ್ಟಿಯಾದ ನಂತರ ಕೆಳಗಿಳಿಸಿ.

## ಕಡುಬು

**ಬೇಕಾಗುವ ಪದಾರ್ಥಗಳು :**

ಚಿರೋಟಿ ರವೆ - 500 ಗ್ರಾಂ.
ಕೊಬ್ಬರಿ - 300 ಗ್ರಾಂ.
ಮೈದಾ ಹಿಟ್ಟು - 500 ಗ್ರಾಂ.
ಗಸಗಸೆ - 50 ಗ್ರಾಂ.
ಸಕ್ಕರೆ - 400 ಗ್ರಾಂ.
ಕರಿಯಲು ಎಣ್ಣೆ - ಅಗತ್ಯದಷ್ಟು

**ಮಾಡುವ ರೀತಿ :**

ಕೊಬ್ಬರಿಯನ್ನು ತುರಿದುಕೊಂಡು ಸಕ್ಕರೆಗೆ ಬೆರೆಸಿ, ಸ್ವಲ್ಪ ನೀರು ಹಾಕಿ ಒಲೆಯ ಮೇಲಿಡಿ. ಅದು ತಳ ಹಿಡಿಯದಂತೆ ಕೆದಕುತ್ತಿರಿ. ಅದು ಪೂರ್ಣ ಆದಮೇಲೆ ಕೆಳಗಿಳಿಸಿ. ಚಿರೋಟಿ ರವೆ; ಮೈದಾಹಿಟ್ಟನ್ನು ಒಂದುಗೂಡಿಸಿ, ಒಂದು ಚಮಚ ಉಪ್ಪಿನ ಪುಡಿ ಹಾಗೂ ಸ್ವಲ್ಪ ತುಪ್ಪ ಸ್ವಲ್ಪ ಹಾಕಿಕೊಂಡು ಚಪಾತಿ ಹಿಟ್ಟಿನಂತೆ ಮಾಡಿಕೊಳ್ಳಿ . ಅನಂತರ ಹಿಟ್ಟನ್ನು ಉಂಡೆಗಳನ್ನಾಗಿ ಮಾಡಿಕೊಂಡು ಒಂದೊಂದೇ ಹಿಟ್ಟನ್ನು ಲಟ್ಟಿಸಿ, ಅದರೊಳಗೆ ಹೂರಣ ಇಟ್ಟು (ಹೂರಣಕ್ಕೆ ಗಸಗಸೆ ಬೆರೆಸಿರಬೇಕು) ಮುಚ್ಚಿ. ಕಡುಬಿನ ಅಚ್ಚಿಗೆ ಹಾಕಿ ತೆಗೆಯಿರಿ. ಎಲ್ಲ ಹಿಟ್ಟನು ಇದೇ ರೀತಿ ಮಾಡಿಕೊಂಡ ನಂತರ ಬಾಣಲಿಗೆ ಎಣ್ಣೆಹಾಕಿ ಒಲೆಯ ಮೇಲಿಡಿ. ಎಣ್ಣೆ ಕಾದ ನಂತರ ಕಡುಬನ್ನು ಹದವಾಗಿ ಕರಿಯಿರಿ.

## ಲಾಡು

**ಬೇಕಾಗುವ ಪದಾರ್ಥಗಳು :**

ಕಡಲೆಹಿಟ್ಟು - 500 ಗ್ರಾಂ.
ಯಾಲಕ್ಕಿ - 10
ಸಕ್ಕರೆ - 400 ಗ್ರಾಂ
ಕೇಸರಿ ಬಣ್ಣ - 1 ಚಮಚ
ಹಾಲು - 150 ಗ್ರಾಂ.
ಕರಿಯಲು ತುಪ್ಪ - ಅಗತ್ಯವಿದ್ದಷ್ಟು
ಗೋಡಂಬಿ ದ್ರಾಕ್ಷಿ- 50 ಗ್ರಾಂ.

**ಮಾಡುವ ರೀತಿ :**

ಕಡಲೆಹಿಟ್ಟನ್ನು ತುಪ್ಪದಲ್ಲಿ ಹುರಿದಿಟ್ಟುಕೊಳ್ಳಿ . ನಂತರ ಸಕ್ಕರೆ ಪುಡಿ ಮಾಡಿ ಹಿಟ್ಟಿನ ಜೊತೆ ಸೇರಿಸಿ. ತುಪ್ಪದಲ್ಲಿ ಹುರಿದ ಗೋಡಂಬಿ- ದ್ರಾಕ್ಷಿಯನ್ನು ಹಿಟ್ಟಿಗೆ ಸೇರಿಸಿದ

ಬಳಿಕ ಯಾಲಕ್ಕಿ ಪುಡಿ, ಕೇಸರಿ ಬಣ್ಣ ಹಾಕಿ ಮಿಶ್ರಣ ಮಾಡಿ. ಹಾಲನ್ನು ಹಾಕಿಕೊಂಡು ಮತ್ತೆ ಮಿಶ್ರಣ ಮಾಡಿ. ಎಲ್ಲಾ ಮಿಶ್ರಣ ಆದ ಬಳಿಕ ಉಂಡೆ ಕಟ್ಟಿ. ಇದೇ ರೀತಿ ರವೆ ಲಾಡು ಮಾಡಬಹುದು. ಆದರೆ ಕೇಸರಿ ಬಣ್ಣ ಅದಕ್ಕೆ ಬೇಕಾಗಿಲ್ಲ.

## ಸಜ್ಜಪ್ಪ

**ಬೇಕಾಗುವ ಪದಾರ್ಥಗಳು :**

ಬೆಲ್ಲ - 1 ಕೆ.ಜಿ.
ತೆಂಗಿನಕಾಯಿ - 2
ಮೈದಾಹಿಟ್ಟು - 500 ಗ್ರಾಂ.
ಚಿರೋಟಿ ರವೆ - 500 ಗ್ರಾಂ.
ತುಪ್ಪ - 500 ಗ್ರಾಂ.
ಎಣ್ಣೆ - 200 ಗ್ರಾಂ.

**ಮಾಡುವ ರೀತಿ :**

ಒಂದು ಪಾವು ರವೆ ತೆಗೆದಿರಿಸಿಕೊಂಡು ಉಳಿದ ರವೆಯನ್ನು ಸ್ವಲ್ಪ ತುಪ್ಪ ಹಾಕಿಕೊಂಡು ಹುರಿಯಿರಿ. ಆಮೇಲೆ ಒಂದು ಪಾತ್ರೆಯಲ್ಲಿ ಅರ್ಧ ಸೇರು ನೀರಿಟ್ಟು ಬೆಲ್ಲ ಹಾಕಿರಿ. ಬೆಲ್ಲ ಕರಗಿದ ನಂತರ ತೆಂಗಿನತುರಿ, ಒಂದು ಚಮಚ ಯಾಲಕ್ಕಿ ಪುಡಿ, ಹುರಿದ ರವೆಯನ್ನು ಹಾಕಿ ಮೊಗಚು ಕೈನಿಂದ ಗೊಟಾಯಿಸಿ. ಬೇಕಿದ್ದರೆ ಸ್ವಲ್ಪ ಗೋಡಂಬಿಯನ್ನು ಹುರಿದು ಈ ಮಿಶ್ರಣಕ್ಕೆ ಸೇರಿಸಬಹುದು. ಹೂರಣ ಆದ ಬಳಿಕ ಕೆಳಗಿಳಿಸಿ. ಉಳಿದ ರವೆಗೆ ಮೈದಾಹಿಟ್ಟು ಒಂದು ಚಿಟಿಕೆ ಉಪ್ಪು ಹಾಕಿ, ಸ್ವಲ್ಪ ನೀರು ಸೇರಿಸಿ ಪೂರಿ ಹಿಟ್ಟಿನಂತೆ ಕಲಿಸಿರಿ. ಹಿಟ್ಟನ್ನು ಚೆನ್ನಾಗಿ ನಾದಿದ ನಂತರ ಸಣ್ಣ ನಿಂಬೆಹಣ್ಣಿನ ಗಾತ್ರದ ಉಂಡೆಗಳನ್ನು ಮಾಡಿ ಅದರೊಳಗೆ ಹೂರಣ ತುಂಬಿಸಿ ಮುಚ್ಚಿದ ಬಳಿಕ ಬಾಳೆ ಎಲೆಯ ಮೇಲಾಗಲಿ, ಕೈಯಿಂದಾಗಲಿ ತಟ್ಟಿ ತುಪ್ಪದಲ್ಲಿ ಹದವಾಗಿ ಕರಿದು ತೆಗೆಯಿರಿ.

## ಬಟವೀಪಾಯಸ

ಬೆಳ್ಳಗಿರುವ ಹಸನಾದ ದಪ್ಪ ರವೆಯನ್ನು ಅಗಲವಾದ ತಟ್ಟೆಗೆ ಹಾಕಬೇಕು. ಅದಕ್ಕೆ ನೀರು ಚುಮಿಕಿಸಿ ತಡ ಪುಡಿಯಾಗಿ ಕಲಸಿ ಹರವಬೇಕು. ಆ ಬಳಿಕ ಅದಕ್ಕೆ

ಸ್ವಲ್ಪ ಗೋಧಿ ಹಿಟ್ಟನ್ನು ಅದರ ಮೇಲೆ ಉದುರಿಸಿ, ಅಂಗೈಯ್ಯಿಗೆ ತುಪ್ಪ ಸವರಿಕೊಂಡು ಉಜ್ಜಿದರೆ ಸಣ್ಣ ಸಣ್ಣ ತೊಗರಿಕಾಳಿನಂತೆ ಆಗುವುದು. ಹೀಗೆಯೇ ಎಲ್ಲವನ್ನು ಮಾಡಿಕೊಂಡು ಬಿಸಲಲ್ಲಿ ಒಣಗಿಸಿ ಮುಚ್ಚಿಟ್ಟು ಶ್ಯಾವಿಗೆ ಪಾಯಸದಂತೆ ಮಾಡಬೇಕು. ಇದು ಸಾವಕಾಶವಾಗಿ ಬೇಯುವುದು.

## ಶಾವಿಗೆ ಪಾಯಸ (ಪರಮಾನ್ನ)

**ತಯಾರಿಸುವ ವಿಧಾನ** : ಶಾವಿಗೆಯನ್ನು ಬಾಣಲೆಯಲ್ಲಿ ತುಪ್ಪ ಹಾಕಿ ಹುರಿದುಕೊಳ್ಳುವುದು. ಒಲೆಯ ಮೇಲೆ ಪಾತ್ರೆಯಲ್ಲಿ ನೀರಿಡಿ. ನೀರು ಕುದಿದ ಮೇಲೆ ಅಳತೆಗೆ ತಕ್ಕಷ್ಟು ಸಕ್ಕರೆಯನ್ನು ಹಾಕಿ, ಸಕ್ಕರೆ ಕರಗಿದ ಮೇಲೆ ಕೆಳಗಿಳಿಸಿ ತುಪ್ಪದಲ್ಲಿ ಹುರಿದ ದ್ರಾಕ್ಷಿ, ಗೋಡಂಬಿಯನ್ನು ಶಾವಿಗೆಗೆ ಹಾಕಿ ಏಲಕ್ಕಿ ಪುಡಿ ಮತ್ತು ಕೇಸರಿದಳವನ್ನು ಹಾಕಿ ಕಾದು ಆರಿದ ಹಾಲನ್ನು ಹಾಕಿ ಸೌಟಿನಿಂದ ಆಡಿಸಿ ಮುಚ್ಚಿಟ್ಟು. ಅನಂತರ ನೈವೇದ್ಯಕ್ಕೆ ಮಂಡಲದ ಮೇಲಿಡಬೇಕು.

## ಆಂಬೋಡೆ

**ಬೇಕಾಗುವ ಪದಾರ್ಥಗಳು** : ಅರ್ಧ ಕೆ.ಜಿ. ಕಡಲೆ ಬೇಳೆ, ಒಣಮೆಣಸಿನಕಾಯಿ ಏಳೆಂಟು, ತೆಂಗಿನಕಾಯಿ ಒಂದು ಹೋಳು, ಕೊತ್ತಂಬರಿ ಸೊಪ್ಪು ಒಂದು ಕಂತೆ, ಕರಿಬೇವು ಸೊಪ್ಪು, ಎಣ್ಣೆ, ಉಪ್ಪು ಮತ್ತು ಹಸಿಶುಂಠಿ.

**ಮಾಡುವ ರೀತಿ:** ಬೇಳೆಯನ್ನು ಚೆನ್ನಾಗಿ ನೆನೆಹಾಕಿ, ನೆಂದ ಬಳಿಕ ಕಡಲೆ ಬೇಳೆ ಒಣಮೆಣಸಿನಕಾಯಿ, ತೆಂಗಿನತುರಿ, ಉಪ್ಪು ಇವುಗಳನ್ನು ಒರಳಿನಲ್ಲಿ ತರಿತರಿಯಾಗುವಂತೆ ರುಬ್ಬಿ, ಕರಿಬೇವು, ಕೊತ್ತಂಬರಿ ಸೊಪ್ಪು, ಹಸಿಶುಂಠಿ ಚೂರುಗಳನ್ನು ಸಣ್ಣಗೆ ಹೆಚ್ಚಿಕೊಂಡು ರುಬ್ಬಿದ ಮಸಾಲೆಗೆ ಬೆರೆಸಿ.

ಎಣ್ಣೆಯನ್ನು ಬಾಣಲೆಗೆ ಹಾಕಿ ಒಲೆಯ ಮೇಲಿಡಿ. ಕಡಲೆಬೇಳೆ ಹಿಟ್ಟನ್ನು ಸಣ್ಣ ಉಂಡೆಗಳನ್ನಾಗಿ ಮಾಡಿಕೊಂಡು ಅಂಗೈ ಮೇಲಿಟ್ಟು ತಟ್ಟಿ, ಕಾದ ಎಣ್ಣೆಲ್ಲಿ ಹಾಕಿ, ಕೆಂಪಾಗುವವರೆಗೂ ಕರಿದು ಜಾಲರಿಯ ಸಹಾಯದಿಂದ ಎಣ್ಣೆ ಬಸಿದು ಆಂಬೋಡೆಯನ್ನು ತಯಾರಿಸಿ, ಅನಂತರ ನೈವೇದ್ಯಕ್ಕೆ ಮಂಡಲದ ಮೇಲಿಡಬೇಕು.

* * * *

ರಾಮನವಮಿಯ ವ್ರತವನ್ನು ಆಚರಿಸುವುದರ ಜೊತೆಯಲ್ಲಿ ನಿತ್ಯವೂ ರಾಮನಾಮಲೇಖನದ ಸಂಕಲ್ಪವನ್ನು ಇಂದು ಅವಶ್ಯವಾಗಿ ಪ್ರತಿಯೊಬ್ಬರೂ ಮಾಡಬೇಕು. ಹಾಗೂ ನಿತ್ಯವೂ ರಾಮನಾಮ-ಲೇಖನವನ್ನು ಬರೆದು, ಎಲ್ಲ ಆಪತ್ತುಗಳಿಂದ ಪಾರಾಗಿ ಭಗವದನುಗ್ರಹಕ್ಕೆ ಪಾತ್ರರಾಗಬೇಕು.

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥
ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ರಾಮನವಮಿ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ ಶ್ರೀಲಕ್ಷ್ಮೀಹಯಗ್ರೀವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ವರಮಹಾಲಕ್ಷ್ಮೀ ಹಬ್ಬ

ಶ್ರಾವಣ || ಶುದ್ಧ || ಎರಡನೆಯ ಶುಕ್ರವಾರ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ವರಮಹಾಲಕ್ಷ್ಮೀಪೂಜೆ

ಶ್ರಾವಣ ॥ ಎರಡನೆಯ ಶುಕ್ರವಾರ ॥


ವಿದ್ವಾನ್॥ ಬೆಮ್ಮತ್ತಿ ವೇಂಕಟೇಶಾಚಾರ್ಯ,

ಬೆಂಗಳೂರು.



ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),

ಗಿರಿನಗರ, ಬೆಂಗಳೂರು-೮೫

**ವರಮಹಾಲಕ್ಷ್ಮೀವ್ರತ** ಶಾಲಿವಾಹನ ಶಕೆ ೧೯೪೩ ಶಾರ್ವರಿ ॥ ಶ್ರಾವಣ ॥ ಶುದ್ಧ ॥ ಪೂರ್ಣಿಮೆ (ದಿನಾಂಕ: ೩-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥ-ಶ್ರೀಪಾದಂಗಳವರಕರಕಮಲಗಳಿಂದ ಭಾರತೀರಮಣಹೃದಯಗುಹಾ-ನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು : ೧೦೭


4171, 2ನೇ ಮೇನ್, ಗಿರಿನಗರ,
ಸೀತಾಸರ್ಕಲ್ ಹತ್ತಿರ, ಬೆಂಗಳೂರು-85
ದೂರವಾಣಿ : 9141495120

ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಸುಬ್ಬಣ್ಣ ಕೆಂಪದಾಳಿಹಳ್ಳಿ,
ದೂರವಾಣಿ : 9141311280

ಮುದ್ರಣ : ಮುಕ್ತಿಪಥ ಮುದ್ರಣಾಲಯ,
ಬೆಂಗಳೂರು.



ದಿ|| ಶ್ರೀ ಚಾಗಲೆಟ್ಟಿ ಕೃಷ್ಣಮೂರ್ತಿ, ದಿ || ಸುಂದರಮ್ಮ

ಹರಿಭಕ್ತರಾದ ಶ್ರೀ ಸಿ.ಕೆ. ನರಸಿಂಹಮೂರ್ತಿ ಹಾಗೂ ಶ್ರೀಮತಿ ಸರೋಜಮ್ಮ ದಂಪತಿಗಳು ತಮ್ಮ ತಂದೆ-ತಾಯಿಯವರ ಸ್ಮರಣಾರ್ಥ ಈ ಕೃತಿಯ ಸೇವೆಯನ್ನು ಸಲ್ಲಿಸಿರುತ್ತಾರೆ.

## ಸ್ತ್ರೀಯರಿಗೆ ಸೂಚನೆ

ಪತಿಯು ಮಂತ್ರವನ್ನು ಪಠಿಸಬೇಕು. ಪತ್ನಿಯು ಪೂಜಿಸಬೇಕು. ಲಕ್ಷ್ಮೀನಾರಾಯಣರನ್ನು ಒಟ್ಟಿಗೆ ಪತಿ-ಪತ್ನಿಯರು ಪೂಜಿಸುವುದು ಅರ್ಚಿಸುವುದು ಶ್ರೇಯಸ್ಕರ. ಪತಿಯು ಬೇರೆಡೆ ತೆರಳಿದ್ದರೆ ಬ್ರಾಹ್ಮಣ-ಮುತ್ತೈದೆಯರನ್ನು ಕರೆಯಿಸಿ ಪೂಜೆ ಮಾಡಿಸಬಹುದು. ಯಾವುದೂ ಆಗದಿದ್ದರೆ ಈ ಕೃತಿಯ ಮೂರನೆಯ ವಿಭಾಗದಲ್ಲಿ ನೀಡಿದ ಹಾಡುಗಳಿಂದಲೇ ಲಕ್ಷ್ಮಿಯನ್ನು ಪೂಜಿಸಬಹುದು. ಲಕ್ಷ್ಮೀದೇವಿಯು ಶ್ರೀಮನ್ನಾರಾಯಣನ ವಾಮಾಂಕಸ್ಥಿತಳಾಗಿದ್ದಾಳೆಂಬುದನ್ನು ಮರೆಯಬಾರದು.

# ವಿಷಯಾನುಕ್ರಮಣಿಕೆ

# ಮುನ್ನುಡಿ

ಶ್ರಾವಣಮಾಸದ ಎರಡನೆಯ ಶುಕ್ರವಾರದಂದು ಪ್ರತಿಯೊಬ್ಬರೂ ವರಮಹಾ-ಲಕ್ಷ್ಮೀಹಬ್ಬವನ್ನು ವೈಭವದಲ್ಲಿ ಆಚರಿಸುತ್ತಾರೆ. ಪ್ರತಿಯೊಬ್ಬರಿಗೂ ಸಂಪತ್ತಿನ ಅಪೇಕ್ಷೆಯು ಇರುತ್ತದೆ. ಆದಕ್ಕಾಗಿ ಲಕ್ಷ್ಮಿಯನ್ನು ಪೂಜೆ ಮಾಡಿದರೆ ಸಂಪತ್ತು ಸಿಗುತ್ತದೆಂಬ ವಿಶ್ವಾಸದಿಂದ ಈ ಹಬ್ಬವನ್ನು ಆಚರಿಸುತ್ತಾರೆ.

ನಮಗೆ ಸಂಪತ್ತು ದೊರೆಯುವುದು ಎಷ್ಟು ಮುಖ್ಯವೋ ದೊರೆತ ಸಂಪತ್ತು ನಮ್ಮನ್ನು ಉದ್ಧಾರದ ಕಡೆ ಕರೆದುಕೊಂಡು ಹೋಗಬೇಕು. ಅಧಃಪತನದ ಕಡೆ ಕರೆದುಕೊಂಡು ಹೋಗಬಾರದೆಂಬುದೂ ಅಷ್ಟೇ ಮುಖ್ಯ. ಬಡತನದಲ್ಲಿ ದಾರಿ ತಪ್ಪುವ ಅವಕಾಶಗಳು ಇರುವುದೇ ಇಲ್ಲ. ಆದರೆ ಸಿರಿವಂತಿಕೆಯಲ್ಲಿ ಪ್ರತಿಕ್ಷಣಗಳಲ್ಲಿಯೂ ದಾರಿತಪ್ಪುವ ಸನ್ನಿವೇಶಗಳು ಎದುರಾಗುತ್ತವೆ. ಆದ್ದರಿಂದ ಲಕ್ಷ್ಮೀದೇವಿಯ ಬಳಿ ಸಂಪತ್ತನ್ನು ಕೇಳಿದರೆ ಸಾಲದು, ಅದರಿಂದ ನಮ್ಮ ಉದ್ಧಾರವಾಗುವಂತೆ ಕೇಳಬೇಕು. ಮತ್ತು ಎಲ್ಲ ರೀತಿಯಲ್ಲಿಯೂ ಲಕ್ಷ್ಮೀದೇವಿ ಅನುಗ್ರಹಿಸಿದ ಸಂಪತ್ತುಗಳು ನಮಗೆ ಕ್ಷೇಮವನ್ನುಂಟು ಮಾಡಬೇಕು. ಈ ದೃಷ್ಟಿಯಿಂದ ಈ ಪುಸ್ತಕವನ್ನು ರಚಿಸಲಾಗಿದೆ. ಅತ್ಯಂತ ಸಾತ್ವಿಕರೀತಿಯಲ್ಲಿ ವರಮಹಾಲಕ್ಷ್ಮೀಹಬ್ಬದ ಆಚರಣೆಯ ಕ್ರಮವನ್ನು ನೀಡಲಾಗಿದೆ. ಈ ಕ್ರಮದಲ್ಲಿ ಯಾರು ವರಮಹಾಲಕ್ಷ್ಮೀಹಬ್ಬವನ್ನು ಆಚರಿಸುತ್ತಾರೋ ಅವರಿಗೆ ಎಲ್ಲ ಬಗೆಯ ಸಂಪತ್ತುಗಳು ದೊರಕುತ್ತವೆ ಮತ್ತು ಅದರಿಂದ ಕ್ಷೇಮವು ಸಹ ಉಂಟಾಗುತ್ತದೆ.

ವೀರಮಿತ್ರೋದಯ, ವ್ರತವಿವೇಕ, ವ್ರತರತ್ನಮಾಲಾ ಮೊದಲಾದ ಪುಸ್ತಕಗಳ ಆಧಾರದಲ್ಲಿ ಈ ಕೃತಿಯನ್ನು ಪ್ರಕಟನೆ ಮಾಡಲಾಗುತ್ತಿದೆ. ಈ ಪುಸ್ತಕದಲ್ಲಿ ನೀಡಿರುವ

ಕಥಾಭಾಗದ ಶ್ಲೋಕಗಳನ್ನು ಉಡುಪಿಯ ಮಧ್ವಸಿದ್ಧಾಂತಗ್ರಂಥಾಲಯದ ಪುಸ್ತಕದಿಂದ ಸಂಗ್ರಹಿಸಲಾಗಿದೆ. ಹಾಗೂ ಉಳಿದ ಶ್ಲೋಕಗಳನ್ನು ಪುರಾಣಗಳ ಆಧಾರದಿಂದ ಸಂಗ್ರಹಿಸಲಾಗಿದೆ. ಲಕ್ಷ್ಮಿಯ ಉಪಾಸಕರು ಅತ್ಯಂತ ಎಚ್ಚರಿಕೆಯಿಂದ ಈ ಪುಸ್ತಕದಲ್ಲಿ ಹೇಳಿದ ಕ್ರಮಗಳನ್ನು ಅನುಷ್ಠಾನ ಮಾಡಿ ಲಕ್ಷ್ಮಿಯ ಕೃಪೆಗೆ ಪಾತ್ರರಾಗಿ ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕೆಂದು ಕಳಕಳಿಯಾಗಿ ಬಯಸುತ್ತೇನೆ.

ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ಶ್ರೀ ಸಿ.ಕೆ. ನರಸಿಂಹಮೂರ್ತಿ ಹಾಗೂ ಶ್ರೀಮತಿ ಸರೋಜಮ್ಮ ದಂಪತಿಗಳಿಗೆ ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ- ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಇವರ ಮಾತಾ-ಪಿತೃಗಳಿಗೆ ಈ ಜ್ಞಾನಯಜ್ಞದ ಪುಣ್ಯರಾಶಿಯು ತಲುಪಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ.

# ಆಚಾರ-ವಿಚಾರ

# ವರಮಹಾಲಕ್ಷ್ಮೀಹಬ್ಬದ ಬಗ್ಗೆ ಅತ್ಯಪೂರ್ವವಿಚಾರಗಳು

॥ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ॥

## ವರಮಹಾಲಕ್ಷ್ಮೀಹಬ್ಬಕ್ಕೆ ಬೇಕಾದ ಸಾಮಗ್ರಿಗಳು

* ಅರಿಶಿನ, ಕುಂಕುಮ.
* ತಳಿರು ತೋರಣ.
* ಮಂತ್ರಾಕ್ಷತೆ.
* ಬೆಳ್ಳಿ ಕಲಶ.
* ಅಡಿಕೆ ಹಾಗೂ ೩೨ ವಿಳ್ಯದೆಲೆ.
* ಕಮಲ, ಕೇದಿಗೆ, ಸಂಪಿಗೆ ಪುಷ್ಪಗಳು.
* ದವನ, ಮರುಗ, ಮೊದಲಾದ ಪತ್ರೆಗಳು.
* ಅಲಂಕರಿಸಿದ ಕಲಶ, (ಸಾಧ್ಯವಾದರೆ ಎರಡು ಕಲಶ)
* ಕಲಶಕ್ಕೆ ವಸ್ತ್ರ, ಬೆಳ್ಳಿಯ ಮುಖವಾಡ.
* ಕಿವಿಯೋಲೆ, ಮೂಗುತಿ.
* ಕಾಲುಂಗುರ, ಬಳೆ.
* ಉಪಾಯನ ದಾನಕ್ಕೆ ಸಿದ್ಧತೆ.
* ಪಂಚಾಮೃತಸಾಮಗ್ರಿಗಳು.
* ಹಸಿಯ ದಾರದಿಂದ ಮಾಡಿದ ಹನ್ನೆರಡು ಎಳೆಯ ಹನ್ನೆರಡು ಗಂಟಿನ ಕೆಂಪುದಾರ.
* ಆರತಿ ತಟ್ಟೆ.

* ಉಳಿದ ಪೂಜಾಸಾಮಗ್ರಿಗಳು.
* ೪ ಗೆಜ್ಜೆ ವಸ್ತ್ರ.
* ಎರಡು ಮೊರದ ಬಾಗಿನ
* ಕಾಡಿಗೆ
* ಸಿಂಧೂರ.
* ದೀಪಗಳು.
* ೪ ತೆಂಗಿನಕಾಯಿ.
* ೫ ಬಗೆಯ ಚಿಗುರುಗಳು.
* ಚಿಲ್ಲರೆ.
* ೫ ಬಗೆಯ ಹಣ್ಣುಗಳು.

* * * *

ಈ ಶ್ಲೋಕವನ್ನು ಕನಿಷ್ಠ ನೂರೆಂಟುಬಾರಿ ಹೇಳಿಕೊಳ್ಳಿರಿ. ನಿಮ್ಮೆಲ್ಲ ಇಷ್ಟಾರ್ಥಗಳು ನೆರವೇರುವುದನ್ನು ಕಿಂಚಿತ್ತೂ ಸಂಶಯವಿಲ್ಲ.

ಹಯವದನ ತನ್ನ ಪ್ರಿಯಳಾದ ಲಕುಮಿಗೆ
ಜಯವಿತ್ತು ಕ್ಷೀರಾಂಬುಧಿಯಲ್ಲಿ।
ಜಯವಿತ್ತಕ್ಷೀರಾಂಬುಧಿಯಲ್ಲಿ ಶ್ರೀಕೃಷ್ಣ
ದಯದಿ ನಮ್ಮೆಲ್ಲರ ಸಲಹಲಿ ॥

# ವರಮಹಾಲಕ್ಷ್ಮೀಹಬ್ಬದ ಬಗ್ಗೆ
## ಅಪೂರ್ವವಿಚಾರಗಳು

ಶುಕ್ಲೇ ಶ್ರಾವಣಿಕೇ ಮಾಸಿ ಪೂರ್ಣಿಮೋಪಾಂತ್ಯಭಾರ್ಗವೇ ।

ವರಲಕ್ಷ್ಮ್ಯಾ ವ್ರತಂ ಕಾರ್ಯಂ ...............

ಎಂಬುದಾಗಿ ವ್ರತವಿವೇಕದಲ್ಲಿ ಹೇಳಿದಂತೆ ಶ್ರಾವಣಮಾಸದ ಹುಣ್ಣಿಮೆಯ ಮೊದಲು ಬರುವ ಶುಕ್ರವಾರದಂದು ವರಮಹಾಲಕ್ಷ್ಮೀವ್ರತವನ್ನು ಆಚರಣೆ ಮಾಡ-ಬೇಕು.

* ಶ್ರಾವಣಮಾಸದ ಎರಡನೆಯ ಶುಕ್ರವಾರದಂದು ಪೂಜಿಸಬೇಕೆಂಬುದು ಒಟ್ಟು ಅಭಿಪ್ರಾಯ.
* ಆದರೆ ಎರಡನೆಯ ಶುಕ್ರವಾರ ಏಕಾದಶೀ ಬಂದಲ್ಲಿ ಅಂದು ಸರ್ವಥಾ ನೈವೇದ್ಯಾದಿಗಳನ್ನು ಸಮರ್ಪಿಸಬಾರದು. 'ಭಗವಂತಂ ಹರಿಂ ವಿನಾ' ಎಂಬ ಪ್ರಮಾಣದಂತೆ ಏಕಾದಶಿಯಂದು ಲಕ್ಷ್ಮೀದೇವಿಗೂ ಕೂಡ ನೈವೇದ್ಯ ಸಮರ್ಪಿಸಬಾರದು. ಹಾಗಾಗಿ ಅಂಥ ಸಂದರ್ಭದಲ್ಲಿ ಮೊದಲನೆಯ ಶುಕ್ರವಾರವೇ ವರಮಹಾಲಕ್ಷ್ಮೀವ್ರತವನ್ನು ಆಚರಿಸಬೇಕು.
* ಪೂರ್ವದಿಕ್ಕು ಅಥವಾ ಉತ್ತರದಿಕ್ಕಿಗೆ ಅಭಿಮುಖವಾಗಿಯೇ ಲಕ್ಷ್ಮಿಯ ಕಲಶವನ್ನು ಪ್ರತಿಷ್ಠಾಪನೆ ಮಾಡಬೇಕು.
* ವರಮಹಾಲಕ್ಷ್ಮೀವ್ರತವನ್ನು ಹನ್ನೆರಡು ವರ್ಷಗಳ ಕಾಲ ಆಚರಿಸಬೇಕು.
* ಕೇವಲ ಪೂಜೆಯು ವ್ರತ ಎಂದು ಕರೆಸಿಕೊಳ್ಳುವುದಿಲ್ಲ. ವ್ರತಾನುಷ್ಠಾನದಲ್ಲಿ ಅನ್ನಸಂತರ್ಪಣೆ, ಹೋಮ, ಜ್ಞಾನಸತ್ರ, ಉಪವಾಸ ಮೊದಲಾದ ವಿಧಿ-ವಿಧಾನಗಳಿವೆ. ಪುಸ್ತಕಗಳಲ್ಲಿ ಅದರ ಬಗ್ಗೆ ಮಾಹಿತಿ ಇರುವುದಿಲ್ಲ. ಪುರೋಹಿತರ ಬಳಿಯೇ ನೀವು ಅದನ್ನು ಕೇಳಿ ತಿಳಿದುಕೊಳ್ಳಬೇಕು.

* ವ್ರತದ ಸಂಕಲ್ಪವಿಲ್ಲದವರೂ ಕೂಡ ಜೀವನಪರ್ಯಂತವಾಗಿ ವರ-ಮಹಾಲಕ್ಷ್ಮೀಪೂಜೆಯನ್ನು ಆಚರಿಸಲೇಬೇಕು.

* ಹನ್ನೆರಡು ಗಂಟುಗಳ ದೋರವನ್ನು ಪೂಜಿಸಿ, ಗಂಡನು ಹೆಂಡತಿಯ ಕೈಗೆ ಕಟ್ಟಬೇಕು.

* ಶ್ರಾವಣಮಾಸದ ಎರಡನೆಯ ಶುಕ್ರವಾರವು ಪೂರ್ಣಿಮೆಯ ದಿವಸವೇ ಬಂದರೆ ಬಹಳ ಶ್ರೇಷ್ಠವಾದದ್ದು.

* 'ಕ್ಲೇಶೋಽಧಿಕತರಸ್ತೇಷಾಂ ಅವ್ಯಕ್ತಾಸಕ್ತಚೇತಸಾಂ' – ಎಂಬ ಕೃಷ್ಣನು ಮಾಡಿದ ಕಟ್ಟುನಿಟ್ಟಾದ ನಿಯಮದಂತೆ ಕೇವಲ ಲಕ್ಷ್ಮೀಯನ್ನು ಪೂಜಿಸಿದರೆ ಬಹಳ ಕಷ್ಟವನ್ನೇ ಜೀವನದಲ್ಲಿ ಅನುಭವಿಸಬೇಕಾಗುತ್ತದೆ.

* ಪ್ರಾಣದೇವನ ಹೃದಯಸಿಂಹಾಸನದಲ್ಲಿ ತನ್ನ ತೊಡೆಯಲ್ಲಿ ವರಮಹಾಲಕ್ಷ್ಮಿಯನ್ನು ಕುಳ್ಳಿರಿಸಿಕೊಂಡ ನಾರಾಯಣನನ್ನೇ ಪೂಜಿಸಬೇಕು. ಹೀಗೆ ಪೂಜಿಸಿದಾಗ ಸಂಪೂರ್ಣಫಲವು ದೊರಕುತ್ತದೆ.

* ಕಲಶಕ್ಕೆ ಲಕ್ಷ್ಮಿಯ ಅಲಂಕಾರವನ್ನು ಮಾಡಿ ಪೂಜಿಸುವಾಗ ಭಗವಂತನ ಜೊತೆಯಲ್ಲಿಯೇ ಪೂಜಿಸಬೇಕು.

* ಕೆಲವರು ಒಂದೇ ಕಲಶವನ್ನಿಟ್ಟು ಪೂಜಿಸುತ್ತಾರೆ. ಕೆಲವರು ಎರಡು ಕಲಶವನ್ನಿಟ್ಟು ಲಕ್ಷ್ಮೀನಾರಾಯಣರ ಅನುಸಂಧಾನದಿಂದ ಪೂಜಿಸುತ್ತಾರೆ. ಕೆಲವರು ಎರಡು ಕಲಶಗಳನ್ನು ಒಂದರ ಮೇಲೊಂದಿಡುತ್ತಾರೆ. ಕೆಲವರು ಎಡ ಬಲಭಾಗಗಳಲ್ಲಿ ಇಡುತ್ತಾರೆ. ಕಲಶವನ್ನು ಎಡ ಬಲಭಾಗಗಳಲ್ಲಿಡುವುದೇ ಸೂಕ್ತ. ಮತ್ತು ಭಗವಂತನ ಪ್ರತೀಕದ ಜೊತೆ ಪೂಜಿಸುವುದರಿಂದ ಒಂದು ಕಲಶವನ್ನಿಟ್ಟು ಪೂಜಿಸಿದರೂ ಸಾಕು.

* ಎಂಟು ದಿಕ್ಕುಗಳಲ್ಲಿ ಲಕ್ಷ್ಮಿಯ ಎಂಟು ರೂಪಗಳನ್ನು ಚಿಂತಿಸಿ, ಮಧ್ಯದಲ್ಲಿ ವರಮಹಾಲಕ್ಷ್ಮೀಸಹಿತ ನಾರಾಯಣನನ್ನು ಚಿಂತಿಸಿ ಪೂಜೆ ಮಾಡುವುದು ಅತ್ಯಂತ

ಪ್ರಶಸ್ತವಾಗಿರುತ್ತದೆ. ಅಷ್ಟಲಕ್ಷ್ಮೀಚಿಂತನಾಕ್ರಮವನ್ನು ಮುಂದೆ ಪ್ರತ್ಯೇಕವಾಗಿ ನೀಡಲಾಗಿದೆ.

* ಯಂತ್ರವನ್ನು ರಚಿಸಿ ಯಂತ್ರದ ಮಧ್ಯದಲ್ಲಿ ಕಲಶವನ್ನು ಇಟ್ಟು ಪೂಜಿಸುವುದು ಶ್ರೇಷ್ಠವಾದುದು.

* ಎಂಟು ದಿಕ್ಕುಗಳಲ್ಲಿ ಅಷ್ಟಲಕ್ಷ್ಮೀರೂಪಗಳ ಬೀಜಾಕ್ಷರಗಳನ್ನು ಬರೆದು ಮಧ್ಯದಲ್ಲಿ ವರಮಹಾಲಕ್ಷ್ಮೀ ಸಹಿತನಾದ ನಾರಾಯಣನ ಬೀಜಮಂತ್ರವನ್ನು ಬರೆದು ಆ ಯಂತ್ರದ ಮೇಲೆ ಕಲಶವನ್ನಿಟ್ಟು ಪೂಜಿಸಿದರೆ ಪೂಜೆಯು ಬೇಗ ಸಿದ್ಧಿಸುತ್ತದೆ.

* ಕೆಲವರು ಕಲಶವನ್ನಿಡದೇ ಕೇವಲ ಯಂತ್ರದ ಮೇಲೆ ಗೋಮಯ ಹಾಗೂ ದೀಪಗಳನ್ನಿಟ್ಟು ಪೂಜಿಸುವುದೂ ಉಂಟು. ಆದರೆ ಕಲಶವನ್ನಿಟ್ಟು ಪೂಜಿಸುವುದೇ ಸಂಪ್ರದಾಯಾಗತವಾಗಿದೆ.

* ಬ್ರಾಹ್ಮೀಮುಹೂರ್ತದಲ್ಲಿ ಎದ್ದು, ಸೂರ್ಯೋದಯ ಸಮಯದಲ್ಲಿ ವರಮಹಾಲಕ್ಷ್ಮೀಪೂಜೆಯನ್ನು ಮಾಡುವುದು ಅತ್ಯಂತ ಮನೋಭೀಷ್ಟದಾಯಕವಾಗಿದೆ. ಅನುಕೂಲವಾಗದಿದ್ದಲ್ಲಿ ಸಾಯಂಕಾಲದ ಸೂರ್ಯಾಸ್ತದ ಸಮಯದಲ್ಲಿಯೂ ವರಮಹಾಲಕ್ಷ್ಮಿಯ ಪೂಜೆಯನ್ನು ಮಾಡುವುದು ಶ್ರೇಯಸ್ಕರವಾಗಿದೆ.

* ವರಮಹಾಲಕ್ಷ್ಮಿಯನ್ನು ಸೂರ್ಯೋದಯ ಹಾಗೂ ಸೂರ್ಯಾಸ್ತ ಎರಡೂ ಹೊತ್ತುಗಳಲ್ಲಿ ಪೂಜಿಸುವುದರಿಂದ ಎಲ್ಲ ಮನೋಭೀಷ್ಟಗಳು ಈಡೇರುತ್ತವೆ.

* ಶುಕ್ರವಾರದಂದು ಸಾಮಾನ್ಯವಾಗಿ ೧೦.೩೦ ರಿಂದ ೧೨.೦೦ ಗಂಟೆಯ ತನಕ ರಾಹುಕಾಲವಿರುತ್ತದೆ. ಆ ಸಂದರ್ಭದಲ್ಲಿ ಪೂಜಿಸುವುದಕ್ಕಿಂತ ಸೂರ್ಯೋದಯ ಸೂರ್ಯಾಸ್ತಗಳ ಕಾಲದಲ್ಲಿ ಪೂಜಿಸುವುದೇ ಶ್ರೇಷ್ಠವಾಗಿದೆ.

* ವರಮಹಾಲಕ್ಷ್ಮೀ ಹಬ್ಬವು ಕೆಲವೊಮ್ಮೆ ದಶಮೀ ತಿಥಿಯ ಒಳಗೆ ಬಂದರೆ ಶಾಕವ್ರತವಿರುತ್ತದೆ. ಆ ಸಂದರ್ಭದಲ್ಲಿ ಯಾವುದೇ ಶಾಕಪದಾರ್ಥಗಳನ್ನು

ನೈವೇದ್ಯ ಮಾಡಬಾರದು. ದ್ವಾದಶಿಯ ಅನಂತರ ಬಂದರಷ್ಟೇ ಮೊಸರನ್ನು ಬಿಟ್ಟು ಉಳಿದೆಲ್ಲಾ ಪದಾರ್ಥಗಳನ್ನು ಸಮರ್ಪಣೆ ಮಾಡಬಹುದು.

* * * *

## ವರಮಹಾಲಕ್ಷ್ಮೀ ಪೂಜೆಯ ಸಿದ್ಧತೆಗಳು

* ಬೆಳಿಗ್ಗೆ ಎದ್ದ ಕೂಡಲೇ ವರಮಹಾಲಕ್ಷ್ಮೀಹಬ್ಬದ ಆಚರಣೆಯನ್ನು ಸಂಕಲ್ಪ ಮಾಡಿರಿ. ರಾತ್ರಿ ಮಲಗುವಾಗ ಅವಶ್ಯವಾಗಿ ಸಮರ್ಪಣೆ ಮಾಡಿರಿ. ಈ ವಿಚಾರ ತುಂಬಾ ಮುಖ್ಯ. ಯಾವುದೇ ಕಾರಣಕ್ಕೂ ಇದನ್ನು ಮರೆಯಬಾರದು.

* ವರಮಹಾಲಕ್ಷ್ಮಿಯನ್ನು ಪ್ರತಿಷ್ಠಾಪನೆ ಮಾಡುವ ಸ್ಥಳದಲ್ಲಿ ಅಕ್ಕಿಹಿಟ್ಟಿನಿಂದ ಅಷ್ಟದಳಪದ್ಮವನ್ನು ಬರೆಯಬೇಕು. ಎಂಟು ವರ್ಣಗಳಿಂದ ಅದು ಶೋಭಿಸುತ್ತಿರಬೇಕು. ಇಲ್ಲದಿದ್ದರೆ ಕೆಂಪುವರ್ಣದಿಂದ ಆ ಪದ್ಮವು ಶೋಭಿಸುತ್ತಿರಬೇಕು.

* ಆದರ ಮೇಲೆ ಬಾಳೆಯ ಎಲೆಯನ್ನು ಹಾಸಬೇಕು. ದೇವರ ಬಲಗಡೆ ಬಾಳೆ ಎಲೆಯ ಕುಡಿ ಬರಬೇಕು.

* ಬಾಳೆಎಲೆಯ ಮೇಲೆ ಬೆಳ್ಳಿಯ ಹರಿವಾಣವಿಟ್ಟು, ಅದರಲ್ಲಿ ಒಂದು ಸೇರು ಅಕ್ಕಿಯನ್ನು ಹಾಕಿ, ಅದರಲ್ಲಿ ನಾಕು ಅಡಿಕೆಗಳು, ಎರಡು ಅರಿಶನ ಬೇರು, ಬೆಳ್ಳಿಯ ನಾಣ್ಯಗಳು ಇವುಗಳನ್ನು ಹಾಕಬೇಕು. ಕಲಶಕ್ಕೆ ಅಲಂಕರಿಸುವ ಮುಖ ಬೆಳ್ಳಿಯದ್ದಾಗಿರಬೆಕು. ಕಂಚಿನ ಮುಖವೂ ಗ್ರಾಹ್ಯ. ಆದರೆ ಹಿತ್ತಾಳೆಮುಖ ಪ್ರಶಸ್ತವಲ್ಲ. ಪೂಜಾಸಾಮಗ್ರಿಗಳು ಹಿತ್ತಾಳೆಯದ್ದಾಗಿರಬಾರದೆಂದು ಸ್ಪಷ್ಟ ನಿಷೇಧವಿದೆ.

ಸೌವರ್ಣಾನೀಹ ರೂಪ್ಯಾಣಿ ಕಂಸ್ಯಾನಿ ತದಸಂಭವೇ ।
ಅನ್ಯಾನ್ಯಪಿ ಹಿ ಕಾರ್ಯಾಣಿ ದಾರುಜಾನ್ಯಪಿ ಜಾನತಾ ॥
ನಾಯಸಾನ್ಯಪಿ ಕಾರ್ಯಾಣಿ ಪೈಪ್ಪಲಾನಿ ನತು ಕ್ವಚಿತ್ ।
ನಚ ಸೀಸಮಯಾನೀಹ ಶಸ್ಸಂತೇ ತ್ರಪುಜಾನ್ಯಪಿ ॥

ಎಂಬ ನಿರ್ಣಯಸಿಂಧುವಿನಲ್ಲಿ ಆಧರಿಸಿದ ಪ್ರಮಾಣದಂತೆ ಸುವರ್ಣ, ಬೆಳ್ಳಿ, ಕಂಚು ಹಾಗೂ ಮರದ ಪಾತ್ರೆಗಳಷ್ಟೇ ಗ್ರಾಹ್ಯ. ಕಬ್ಬಿಣ ಹಾಗೂ ಹಿತ್ತಾಳೆಯ ಪಾತ್ರೆಗಳು ಸರ್ವಥಾ ನಿಷಿದ್ಧವಾಗಿದೆ. 'ತೀರ್ಥಂ ಪಿತ್ತಲಯೋಗಾಚ್ಚ ಸುರಾ ಭವತಿ ತತ್‌ಕ್ಷಣಾತ್' ಎಂಬ ಪ್ರಮಾಣದಂತೆಯೂ ಹಿತ್ತಾಳೆ ಪಾತ್ರೆಗಳು ಪೂಜೆಗೆ ಅವಿಹಿತವಾದಾಗ ಅವುಗಳಿಂದ ತಯಾರಿಸಿದ ಮೂರ್ತಿಗಳೂ ಕೂಡ ನಿಷಿದ್ಧವೇ ಆಗಿವೆ. ಆದ್ದರಿಂದ ಈಗ ದೊರೆಯುವ ಹಿತ್ತಾಳೆಯ ದೇವಿಮುಖಗಳನ್ನು ಉಪಯೋಗಿಸುವುದು ಬೇಡ.

* ಆವಾಹನೆ ಮಾಡಲ್ಪಡುವ ಕಲಶಕ್ಕೆ ಮಾಂಗಲ್ಯವನ್ನು ಅವಶ್ಯವಾಗಿ ಕಟ್ಟ- ಬೇಕು. ಲಕ್ಷ್ಮೀಗೋಸ್ಕರ ಪ್ರತ್ಯೇಕವಾಗಿ ಚಿನ್ನದ ಮಾಂಗಲ್ಯವನ್ನು ತಂದಿಟ್ಟುಕೊಂಡಿರ- ಬೇಕು. ಸಾಧ್ಯವಾಗದಿದ್ದಲ್ಲಿ ಮೂರು ಕವಲು ಒಡೆದ ಅರಿಶಿನಬೇರನ್ನು ಮಾಂಗಲ್ಯರೂಪದಲ್ಲಿ ಕಟ್ಟಬೇಕು.

* ಮೂರು ಕಣ್ಣು ಕಾಣಿಸದ ತೆಂಗಿನ ಕಾಯಿಯನ್ನು ಕಲಶದ ಮೇಲೆ ಇಡ- ಬೇಕು.

* ತೆಂಗಿನ ಕಾಯಿಗೆ ಎರಡು ಚಮಚ ತುಪ್ಪವನ್ನು ಎಲ್ಲೆಡೆ ಹಚ್ಚಿ, ಅರಿಶಿನದ ಪುಡಿಯನ್ನು ಎಲ್ಲೆಡೆ ಉದುರಿಸಬೇಕು. ಆಗ ತೆಂಗಿನ ಕಾಯಿಯು ಸಂಪೂರ್ಣ ಹಳದಿ ಬಣ್ಣವಾಗುತ್ತದೆ. ಮತ್ತು ಅರಿಶಿನವೂ ಕೂಡ ಉದುರುವುದಿಲ್ಲ. ಇಂಥ ಹಳದಿ ಬಣ್ಣದ ತೆಂಗಿನ ಕಾಯಿಯನ್ನು ಕಲಶದ ಮೇಲೆ ಇಡುವುದು ಅತ್ಯಂತ ಶ್ರೇಯಸ್ಕರವಾಗಿರುತ್ತದೆ.

* ಹಸಿದಾರವನ್ನು ಕಲಶಕ್ಕೆ ಆಮೂಲಾಗ್ರವಾಗಿ ಸುತ್ತುವುದು ಕೂಡ ಶ್ರೇಷ್ಠ- ವಾಗಿದೆ.

* ಕಲಶಕ್ಕೆ ಐದು ಚಿಗುರುಗಳನ್ನು ಹಾಕಬೇಕು. ಐದು ಚಿಗುರುಗಳೂ ಕನಿಷ್ಠಪಕ್ಷ ಐದು ಎಲೆಗಳಿಂದ ಕೂಡಿರಬೇಕು. ಐದು ವೀಳ್ಯೆದೆಲೆಯನ್ನು ಇಡುವುದು ಮರೆಯಬಾರದು.

* ಪುಣ್ಯಾಹಕಲಶದ ವೇದಮಂತ್ರಗಳನ್ನು ಪಠಿಸಿ ಕಲಶಪ್ರತಿಷ್ಠಾಪನೆಯನ್ನು ಪತಿಯು ಮಾಡಬೇಕು. ಅನಂತವ್ರತದ ಪುಸ್ತಕದಲ್ಲಿ ಈ ಮಂತ್ರಗಳಿವೆ. ಮತ್ತು ನ್ಯಾಸಗಳ

ಮೂಲಕ ಆವಾಹನೆಯನ್ನು ಪತಿಯು ಮಾಡುವುದರಿಂದ ದಿವ್ಯಸನ್ನಿಧಾನ ಬರುತ್ತದೆ.

* ಸ್ತ್ರೀಯರಿಗೆ ವೇದಮಂತ್ರಗಳಲ್ಲಿ ಅಧಿಕಾರವಿರುವುದಿಲ್ಲ. ನ್ಯಾಸಾದಿಗಳ ಮೂಲಕ ಆವಾಹನೆ ಮಾಡುವ ಅಧಿಕಾರವು ಕೂಡ ಸರ್ವಥಾ ಇರುವುದಿಲ್ಲ.

* ಮನೆಗೆ ಆಗಮಿಸಿದ ಮುತ್ತೈದೆಯನ್ನು ಸ್ವಾಗತ ಮಾಡಿ ಸತ್ಕರಿಸುವಂತೆ ಲಕ್ಷ್ಮಿಯನ್ನು ಹಾಡಿನ ಮೂಲಕ ಸ್ವಾಗತಿಸಿ ಸ್ತ್ರೀಯರು ಪೂಜಿಸಬೇಕು.

* ಕಲಶಕ್ಕೆ ದೇವರಿಗೋಸ್ಕರವೇ ತಂದ ಒಡವೆಗಳಿಂದ ಅಲಂಕರಿಸಬೇಕು. ಇಲ್ಲದ ಪಕ್ಷದಲ್ಲಿ ತಾವು ಧಾರಣೆ ಮಾಡುವ ಎಲ್ಲ ಒಡವೆಗಳನ್ನು ಹಿಂದಿನ ರಾತ್ರಿ ಹಾಲಿನಲ್ಲಿ ಅಥವಾ ಅರಿಶಿನದ ನೀರಿನಲ್ಲಿ ನೆನೆಯಿಟ್ಟು, ಚೆನ್ನಾಗಿ ತೊಳೆದು, ಅಗ್ನಿಸ್ಪರ್ಶಮಾಡಿಸಿ ಲಕ್ಷ್ಮೀದೇವಿಗೆ ಸಮರ್ಪಣೆ ಮಾಡಬೇಕು.

* ಯಾವುದೇ ಪೂಜೆಯ ಪ್ರಾರಂಭದಲ್ಲಿ ಗಣಪತಿಪೂಜೆಯನ್ನು ಮಾಡ-ಬೇಕಾದ್ದರಿಂದ ಲಕ್ಷ್ಮಿಯ ಕೆಳಗೆ ವೀಳ್ಯೆದೆಲೆಯ ಮೇಲೆ ಅಡಿಕೆ ಬೆಟ್ಟವನ್ನು ಅಥವಾ ಅರಿಶಿನದ ಗಣಪತಿಯನ್ನು ಅಥವಾ ಗಣಪತಿಯ ವಿಗ್ರಹವನ್ನಿಟ್ಟು ಪೂಜಿಸಬೇಕು.

* ವರಮಹಾಲಕ್ಷ್ಮೀಹಬ್ಬದಂದು ಬೇಳೆಯ ಒಬ್ಬಟ್ಟು, ಸಜ್ಜಿಗೆ, ಕೋಸಂಬರಿ ಇವುಗಳನ್ನು ಮಾಡಲೇಬೇಕೆಂಬ ಸಂಪ್ರದಾಯವಿದೆ.

* ನೈವೇದ್ಯದ ಸಮಯದಲ್ಲಿ ಒಂದು ತಟ್ಟೆಯಲ್ಲಿ ಪಂಚಭಕ್ಷ್ಯ- ಪರಮಾನ್ನ-ಗಳನ್ನು ಮತ್ತೊಂದು ತಟ್ಟೆಯಲ್ಲಿ ಪಂಚ ಫಲಗಳನ್ನು, ಮತ್ತೊಂದು ತಟ್ಟೆಯಲ್ಲಿ ಮರದ ಬಾಗಿಣವನ್ನು ಮತ್ತೊಂದು ತಟ್ಟೆಯಲ್ಲಿ ಎಲೆ ಅಡಿಕೆ ಬಳೆ ಹೂಗಳನ್ನೂ ಪಂಚಾಮೃತ- ವನ್ನೂ ಮತ್ತೊಂದು ತಟ್ಟೆಯಲ್ಲಿ ೩೨ ರೂಪಾಯಿಗೂ ಕಮ್ಮಿಯಿಲ್ಲದಷ್ಟು ಚಿಲ್ಲರೆಯನ್ನು ನೈವೇದ್ಯದ ಸಮಯದಲ್ಲಿ ಸಮರ್ಪಣೆ ಮಾಡಬೇಕು. ಮನೆಯಲ್ಲಿರುವ ಎಲ್ಲ ಹಣವನ್ನು ತಟ್ಟೆಯಲ್ಲಿಟ್ಟು ಸಮರ್ಪಿಸುವುದೇ ಶ್ರೇಷ್ಠ.

* ತುಪ್ಪದ ದೀಪವನ್ನು ಹಚ್ಚಬೇಕು. ಎಳ್ಳೆಣ್ಣೆ ದೀಪಕ್ಕೆ ತುಪ್ಪವನ್ನು ಸರ್ವಥಾ ಸೇರಿಸಬಾರದು. ಮಂಗಳಾರತಿ ಬತ್ತಿಗಳು ಕೂಡ ತುಪ್ಪದಲ್ಲಿ ನೆಂದಿರಬೇಕು.

* ಪೂಜೆಯ ಪ್ರಾರಂಭದಲ್ಲಿ ಇಷ್ಟದೇವರಿಗೆ ಕುಲದೇವರಿಗೆ ನಮಿಸುವುದನ್ನು ಮರೆಯಬಾರದು.

* ವರಮಹಾಲಕ್ಷ್ಮೀ ಹಬ್ಬದಲ್ಲಿ ಕುಂಕುಮಾರ್ಚನೆಯನ್ನು ಮಾಡಲೇ ಬೇಕು. ಬೆಳಗಿನ ಪೂಜಾ ಸಮಯದಲ್ಲಿ ಸಾಧ್ಯವಾಗದಿದ್ದರೆ ಸಾಯಂಕಾಲದ ಸಮಯದಲ್ಲಿ ಕುಂಕುಮಾರ್ಚನೆಯನ್ನು ಮಾಡಬಹುದು.

* ತರ್ಜನೀಬೆಟ್ಟನ್ನು ಬಿಟ್ಟು ಉಳಿದ ಬೆರಳುಗಳಿಂದಷ್ಟೇ ಕುಂಕುಮಾ- ರ್ಚನೆಯನ್ನು ಮಾಡಬೇಕು.

* ಅರಿಶಿನಕ್ಕೆ ಸುಣ್ಣವನ್ನು ಬೆರಸಿ ಕೆಂಪು ಬಣ್ಣ ಮಾಡಿ ಕೆಂಪಾರತಿಯನ್ನು ಮಾಡಲೇಬೇಕು.

* ವರಮಹಾಲಕ್ಷ್ಮೀಯನ್ನು ಶುಕ್ರವಾರದ ದಿವಸವೇ ವಿಸರ್ಜನೆ ಮಾಡುವುದು ಬೇಡ. ಮರುದಿವಸ ಸಂಕ್ಷೇಪವಾಗಿ ಪೂಜಿಸಿ ವಿಸರ್ಜನೆ ಮಾಡಬೇಕು. ಮತ್ತು ಈ ಪುಸ್ತಕದಲ್ಲಿ ನೀಡಿದ ವಿಸರ್ಜನಾಪೂಜೆಯನ್ನು ಅವಶ್ಯ ಮಾಡಬೇಕು.

* ಮರುದಿವಸವೇ (ವಿಸರ್ಜನೆ ಮಾಡಿದ ದಿವಸ) ಅರಿಶಿನ ಹಚ್ಚಿದ ಕಾಯಿಯನ್ನು, ಬಿಸಿನೀರಿನಲ್ಲಿ ತೊಳೆದು, ಭಕ್ಷ್ಯವನ್ನು ಮಾಡಿ ಸೇವಿಸಬೇಕು.

* ಕಲಶದ ನೀರನ್ನು ಎಲ್ಲೆಡೆ ಪ್ರೋಕ್ಷಣೆ ಮಾಡಿ, ತಾನೂ ಪ್ರೋಕ್ಷಣೆ ಮಾಡಿ- ಕೊಂಡು ವಿಸರ್ಜನೆ ಮಾಡಬೇಕು.

* ಪೂಜೆಗಾಗಿ ಇಟ್ಟ ಅಕ್ಕಿಯನ್ನು ಅನ್ನ ಮಾಡಿಕೊಂಡು ಊಟ ಮಾಡಬೇಕು.

* ಪ್ರತಿಯೊಬ್ಬ ಗೃಹಸ್ಥರೂ ವರಮಹಾಲಕ್ಷ್ಮೀಪೂಜೆಯನ್ನು ಆಚರಿಸಬೇಕು.

* ಪತ್ನೀಸಹಿತನಾಗಿಯೇ ಪೂಜಿಸಬೇಕು.

* ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಕೇಳಿ ಅದಕ್ಕೆ ಪೂರಕವಾದ ಕಾಮನೆಗಳನ್ನಷ್ಟೇ ಲಕ್ಷ್ಮೀನಾರಾಯಣರಲ್ಲಿ ಪ್ರಾರ್ಥಿಸಬೇಕು.

* ಉಪಾಯನದಾನವನ್ನು ಕೊಡಲೇಬೇಕು. ಒಂದು ಕಲಶವನ್ನು, ಒಂದು ಸೇರು ಅಕ್ಕಿಯನ್ನು, ೫ ಹಣ್ಣುಗಳು, ತೆಂಗಿನಕಾಯಿಯನ್ನು ಉಪಾಯನದಾನದಲ್ಲಿ ನೀಡಬೇಕು.

* ತಾವರೆ ಹೂವು, ಮಲ್ಲಿಗೆ ಹೂವು, ಪನ್ನೀರು ಗುಲಾಬಿ ಇಂಥ ಸುವಾಸನೆ ಇರುವ ಪುಷ್ಪಗಳಿಂದಷ್ಟೇ ಪೂಜೆಯನ್ನು ಮಾಡಬೇಕು.

* ಪರಿಮಳವಿಲ್ಲದ ಹೂವುಗಳಿಂದ ಪೂಜೆಯನ್ನು ಮಾಡಬಾರದು.

* ಮಂಟಪಕ್ಕೆ ಯಾವುದೇ ಪ್ಲಾಸ್ಟಿಕ್ ಸಾಮಗ್ರಿಗಳಿಂದ ಅಲಂಕಾರ ಮಾಡುವುದು. ಹಾಗೂ ವಿದ್ಯುದ್ದೀಪಗಳಿಂದಲೂ ಅಲಂಕಾರ ಮಾಡುವುದು ಉತ್ತಮಪಕ್ಷವಲ್ಲ.

## 'ಇಂತಹವರ ಮನೆಗೆ ನಾನು ಬರುವುದಿಲ್ಲ'
## ಬ್ರಹ್ಮವೈವರ್ತಪುರಾಣದಲ್ಲಿ ಲಕ್ಷ್ಮೀದೇವಿಯ ಮಾತು

* ಯಾವ ವ್ಯಕ್ತಿಯು ಗುರುಗಳನ್ನು, ದೇವತೆಗಳನ್ನು ಭಗವಂತನನ್ನು, ತಾಯಿಯನ್ನು, ತಂದೆಯನ್ನು, ಬಾಂಧವರನ್ನು ಗೌರವಭಾವದಿಂದ ಪೂಜಿಸುವುದಿಲ್ಲವೋ ಆ ಕಾರಣದಿಂದಲೇ ಅವನ ವಿಷಯದಲ್ಲಿ ಗುರುದೇವತಾದಿಗಳು ಅತೃಪ್ತ-ರಾಗಿರುತ್ತಾರೋ ಮತ್ತು ಅತಿಥಿ ಅಭ್ಯಾಗತರನ್ನು ಆದರ ಮಾಡುವುದಿಲ್ಲವೋ, ಪಿತೃದೇವತೆಗಳ ಅನುಗ್ರಹವನ್ನು ಪಡೆದಿರುವುದಿಲ್ಲವೋ ಅಂತಹವರ ಮನೆಗೆ ನಾನು ಹೋಗುವುದಿಲ್ಲ ಎನ್ನುತ್ತಾಳೆ ಮಹಾಲಕ್ಷ್ಮೀ – ''ಯಂ ಯಂ ರುಷ್ಟೋ ಗುರುರ್ದೇವೋ ಮಾತಾ ತಾತಶ್ಚ ಬಾಂಧವಃ । ಅತಿಥಿಃ ಪಿತೃಲೋಕಾಶ್ಚ ನ ಯಾಮಿ ತಸ್ಯ ಮಂದಿರಮ್''.

* ಯಾರು ಸುಳ್ಳನ್ನೇ ಹೇಳುತ್ತಿರುತ್ತಾನೋ, ಯಾವಾಗಲೂ ಯಾರು ಏನು ಕೇಳಿದರೂ 'ಇಲ್ಲ' ಎಂದು ಉತ್ತರಿಸುತ್ತಾನೋ, ಸತ್ವವಿಲ್ಲದವನಾಗಿರುತ್ತಾನೋ,

ಕೆಟ್ಟ ನಡತೆಯನ್ನೇ ಚಾರಿತ್ರ್ಯವನ್ನಾಗಿ ಮಾಡಿಕೊಂಡಿರುತ್ತಾನೋ ಅಂತಹವರ ಮನೆಗೆ ನಾನು ತೆರಳಲಾರೆ ಎನ್ನುತ್ತಾಳೆ ಜಗದರಸಿ. ''ಮಿಥ್ಯಾವಾದೀ ಚ ಯಃ ಶಶ್ವನ್ನಾಸ್ತೀತಿ ವಾಚಕಃ ಸದಾ । ಸತ್ತ್ವಹೀನಶ್ಚ ದುಃಶೀಲೋ ನ ಗೇಹಂ ತಸ್ಯ ಯಾಮ್ಯಹಮ್ ॥

* ಯಾರು ಸತ್ಯವನ್ನು ಹೇಳುವುದಿಲ್ಲವೋ, ಅಡ ಇಟ್ಟ ವಸ್ತುವನ್ನು ಅಪಹಾರಮಾಡುತ್ತಾನೋ, ಸುಳ್ಳುಸಾಕ್ಷಿಯನ್ನು ನೀಡಿ ವಂಚಿಸುತ್ತಾನೋ, ವಿಶ್ವಾಸಕ್ಕೆ ಘಾತಕನಾಗಿರುತ್ತಾನೋ, ಮಾಡಿದ ಉಪಕಾರಕ್ಕೆ ಕೃತಘ್ನನಾಗಿರುತ್ತಾನೋ ಅಂತಹವನ ಮನೆಗೆ ನಾನು ನುಸುಳುವುದೂ ಇಲ್ಲ ಎನ್ನುತ್ತಾಳೆ ಜಗದಂಬೆ – ''ಸತ್ಯಹೀನಃ ಸ್ಥಾಪ್ಯ-ಹಾರೀ ಮಿಥ್ಯಾಸಾಕ್ಷ್ಯ-ಪ್ರದಾಯಕಃ। ವಿಶ್ವಾಸಘ್ನಃ ಕೃತಘ್ನೋ ಯೋ ನ ಯಾಮಿ ತಸ್ಯ ಮಂದಿರಮ್॥''.

* ಚಿಂತೆಯಲ್ಲಿಯೇ ಮುಳುಗಿ ಕಾಲಹರಣ ಮಾಡುತ್ತಾನೋ, ವಿನಾಕಾರಣ ಭಯಪಡುತ್ತಾನೋ, ಧೈರ್ಯವಿಲ್ಲದೇ ಶತ್ರುಗಳ ಬಾಧೆಗೆ ಒಳಪಡುತ್ತಾನೋ, ಅನೇಕ ಅತಿಪಾತಕಗಳನ್ನು ಮಾಡಿ ದುಷ್ಟನಾಗಿರುತ್ತಾನೋ ಯಾರು ಸಾಲವನ್ನೇ ಮಾಡುತ್ತಿರುತ್ತಾನೋ, ಅತ್ಯಂತ ಕೃಪಣನಾಗಿರುತ್ತಾನೋ ಅಂತಹವನ ಮನೆಗೆ ನಾನೇಕೆ ತೆರಳಲಿ ಎನ್ನುತ್ತಾಳೆ ಸಂಪದಭಿಮಾನಿನಿ – ''ಚಿಂತಾಗ್ರಸ್ತೋ ಭಯಗ್ರಸ್ತಃ ಶತ್ರುಗ್ರಸ್ತೋಽತಿ- ಪಾತಕೀ। ಋಣಗ್ರಸ್ತೋಽತಿಕೃಪಣೋ ನ ಗೇಹಂ ಯಾಮಿ ಪಾಪಿನಾಮ್''.

* ಯಾರಿಗೆ ಸತ್ಕಾರ್ಯಗಳಲ್ಲಿ ದೀಕ್ಷೆ ಇರುವುದಿಲ್ಲವೋ, ಯಾವಾಗಲೂ ದುಃಖಿಯಾಗಿರುತ್ತಾನೋ, ಅಲ್ಪಮತಿಯಾಗಿರುತ್ತಾನೋ, ಸ್ತ್ರೀಜಿತನಾಗಿರುತ್ತಾನೋ, ಮತ್ತೊಬ್ಬ ಪುರುಷರ ಒಡನಾಟವುಳ್ಳ ಹೆಣ್ಣಿನ ಗಂಡನಾಗಿರುತ್ತಾನೋ, ಅಥವಾ ಪುಂಶ್ಚಲಿಯಾದ ಹೆಣ್ಣಿನ ಪುತ್ರನಾಗಿರುತ್ತಾನೋ ಅಂಥವನ ಮನೆಗೂ ನಾನು ಕಾಲಿಡುವುದಿಲ್ಲ ಎನ್ನುತ್ತಾಳೆ ಲೋಕಮಾತೆಯಾದ ಇಂದಿರಾದೇವಿ. – ''ದೀಕ್ಷಾಹೀನಶ್ಚ ಶೋಕಾರ್ತೋ ಮಂದಧೀಃ ಸ್ತ್ರೀಜಿತಃ ಸದಾ । ಪುಂಶ್ಚಲೀಪತಿಪುತ್ರೌ ಯೌ ತದ್ಗೇಹಂ ನೈವ ಯಾಮ್ಯಹಮ್ ॥''

* ಪುಂಶ್ಚಲಿಯಾದ (ಪರಪುರುಷನ ಜೊತೆ ಬಹಳವ್ಯವಹರಿಸುವ) ಸ್ತ್ರೀಯಿಂದ ತಯಾರಿಸಲ್ಪಟ್ಟ ಅನ್ನವನ್ನು ಯಾರು ಊಟ ಮಾಡುತ್ತಾನೋ ಯಾವಾಗಲೂ ಅತ್ಯಂತ ಭೋಗಾಸಕ್ತಿಯುಳ್ಳವನಾಗಿರುತ್ತಾನೋ, ಶೂದ್ರರ ಅನ್ನವನ್ನು ತಿನ್ನುತ್ತಾನೋ, ಮತ್ತು ಶೂದ್ರರ ಮನೆಯಲ್ಲಿ ಯಜ್ಞಯಾಗಾದಿಗಳನ್ನು ಮಾಡಿಸುತ್ತಾನೋ ಅಂತಹವರ ಮನೆಗೆ ನಾನು ಎಂದೆಂದೂ ಹೋಗಲಾರೆ - ಎನ್ನುತ್ತಾಳೆ ಮಹಾಲಕುಮಿ – ''ಪುಂಶ್ಚಲ್ಯನ್ನಂ ಚಾ-ವೀರಾನ್ನಂ ಯೋ ಭುಂಕ್ತೇ ಕಾಮತಃ ಸದಾ । ಶೂದ್ರಾನ್ನಭೋಜೀ ತದ್ಯಾಜೀ ತದ್ಗೇಹಂ ನೈವ ಯಾಮ್ಯಹಮ್॥''

* ಕೆಟ್ಟ ಮಾತನಾಡುವವನ ಮನೆಯಲ್ಲಿ, ಯಾವಾಗಲೂ ಜಗಳವಾಡುತ್ತಿರು-ವವನ ಮನೆಯಲ್ಲಿ ಕಲಿಯು ನಿರಂತರ ಇದ್ದು ಬಿಡುತ್ತಾನೆ. ಅದು ಪಾಪದ ಮನೆಯೆಂದೇ ಕರೆಸಿಕೊಳ್ಳುತ್ತದೆ. ಮತ್ತು ಸ್ತ್ರೀಯರಿಗೆ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟು ಪುರುಷರು ಬುದ್ಧಿಯನ್ನು ಕಳೆದುಕೊಂಡು ಅವರ ಕೈಕೆಳಗೆ ಕೆಲಸ ಮಾಡುತ್ತಿರುತ್ತಾರೋ ಇಂಥವರ ಮನೆಗೆ ನಾನು ಹೋಗುವುದಿಲ್ಲ - ಎನ್ನುತ್ತಾಳೆ ಇಂದಿರಾದೇವಿ – ಯೋ ದುರ್ವಾಕ್ ಕಲಹಾವಿಷ್ಟಃ ಕಲಿಃ ಶಶ್ವದಘಾಲಯೇ । ಸ್ತ್ರೀಪ್ರಧಾನಾ ಗೃಹೇ ಯಸ್ಯ ನ ಯಾಮಿ ತಸ್ಯ ಮಂದಿರಮ್ ॥''

* ಯಾರ ಮನೆಯಲ್ಲಿ ಸರ್ವೋತ್ತಮನಾದ ಭಗವಂತನ ಪೂಜೆ, ಅವನ ಆರಾಧನೆ, ಶ್ರೀಹರಿಯ ಗುಣಕೀರ್ತನೆಗಳು ನಡೆಯುವುದಿಲ್ಲವೋ, ಮತ್ತು ಭಗವಂತನ ಪ್ರಶಂಸೆಯನ್ನು ಮಾಡಲು ಉತ್ಸಾಹವೇ ಇರುವುದಿಲ್ಲವೋ ಅಂತಹವನ ಮನೆಯನ್ನು ನಾನು ತಿರುಗಿಯೂ ನೋಡುವುದಿಲ್ಲ - ಎಂದು ಎಚ್ಚರಿಸುತ್ತಾಳೆ ನಾರಾಯಣನ ರಾಣಿ – ''ಯತ್ರ ನಾಸ್ತಿ ಹರೇಃ ಪೂಜಾ ತದೀಯಗುಣಕೀರ್ತನಮ್ । ನೋತ್ಸುಕಶ್ಚ ಪ್ರಶಂಸಾಯಾಂ ನ ಯಾಮಿ ತಸ್ಯ ಮಂದಿರಮ್ ॥''.

* ಕನ್ಯೆಯನ್ನೂ, ಅನ್ನವನ್ನೂ, ವೇದವನ್ನೂ ಮಾರಾಟಮಾಡಿಕೊಂಡು ಹಣ ಸಂಪಾದನೆ ಮಾಡುತ್ತಾನೋ, ಮನುಷ್ಯರನ್ನು ಕೊಲ್ಲುತ್ತಾನೋ ಅಥವಾ

ಮತ್ತೊಬ್ಬರಿಗೆ ಹಿಂಸೆ ನೀಡುತ್ತಾನೋ ಅಂತಹವರ ಮನೆ, ಮನೆಯೇ ಅಲ್ಲ. ಅದು ನರಕ. ಅಂಥ ನರಕಕ್ಕೆ ನಾನೇಕೆ ಹೋಗಬೇಕು - ಎಂಬುದಾಗಿ ಹೇಳುತ್ತಾಳೆ ದುರ್ಗಾಮಾತೆ – ''ಕನ್ಯಾನ್ನವೇದವಿಕ್ರೇತಾ ನರಘಾತೀ ಚ ಹಿಂಸಕಃ । ನರಕಾಗಾರಸದೃಶಂ ನ ಯಾಮಿ ತಸ್ಯ ಮಂದಿರಮ್ ॥''.

* ದಾನಮಾಡಿದ್ದನ್ನು ಯಾರು ಪುನಃ ಅಪಹಾರಮಾಡುತ್ತಾನೋ, ಅಥವಾ ಮತ್ತೊಬ್ಬರು ಕೊಟ್ಟ ಪದಾರ್ಥವನ್ನೇ ಅಪಹಾರ ಮಾಡುತ್ತಾನೋ, ಭಗವಂತನ ವಿಚಾರವನ್ನು ನಿರಂತರ ಮಾಡುತ್ತಿರುವ ಬ್ರಾಹ್ಮಣರ ವೃತ್ತಿಗೆ ವಿಘ್ನವನ್ನು ಉಂಟು-ಮಾಡುತ್ತಾನೋ, ಅಥವಾ ದೇವಸ್ವವನ್ನು ಅಪಹಾರ ಮಾಡುತ್ತಾನೋ, ಯಾವುದೇ ದಾನಗಳನ್ನು ಮಾಡುವ ಸ್ವಭಾವವನ್ನು ಇಟ್ಟುಕೊಂಡಿರುವುದಿಲ್ಲವೋ ಅಂಥವನ ಮಂದಿರಕ್ಕೆ ನಾನು ಹೋಗಲಾರೆ ಎನ್ನುತ್ತಾಳೆ ಶ್ರೀದೇವಿ. – ''ಸ್ವದತ್ತಾಂ ಪರದತ್ತಾಂ ವಾ ಬ್ರಹ್ಮವೃತ್ತಿಂ ಸುರಸ್ಯ ಚ । ಯೋ ಹರೇದ್ ದಾನಹೀನಶ್ಚ ನ ಯಾಮಿ ತಸ್ಯ ಮಂದಿರಮ್

* ಸತ್ಕರ್ಮವನ್ನು ಮಾಡಿ, ಜಿಪುಣತನದಿಂದ ಮೂರ್ಖತನದಿಂದ ದಕ್ಷಿಣೆ- ಯನ್ನೇ ನೀಡುವುದಿಲ್ಲವೋ, ಅಂಥವನು ನಿಜವಾಗಿಯೂ ಕೂಡ ಪಾಪಿಯಾಗಿರುತ್ತಾನೆ. ಅವನಿಗೆ ಯಾವುದೇ ಪುಣ್ಯವು ಬರುವುದಿಲ್ಲ. ಅಂಥ ಪುಣ್ಯಹೀನನ ಮನೆಗೂ ನಾನು ಹೋಗುವುದಿಲ್ಲವೆನ್ನುತ್ತಾಳೆ ದಕ್ಷಿಣಾದೇವಿ. – ''ಯತ್ಕರ್ಮ ದಕ್ಷಿಣಾಹೀನಂ ಮೂಢಧೀಃ ಕುರುತೇ ಶಠಃ । ಸ ಪಾಪೀ ಪುಣ್ಯಹೀನಶ್ಚ ನ ಯಾಮಿ ತಸ್ಯ ಮಂದಿರಮ್ ॥''

* ತಾಯಿಯನ್ನು ರಕ್ಷಿಸಬೇಕು. ತಂದೆಯನ್ನು ರಕ್ಷಣೆ ಮಾಡಬೇಕು. ಹೆಂಡತಿ- ಯನ್ನು ಗುರುಪತ್ನಿಯನ್ನು ಗುರುಗಳನ್ನು ಕೂಡ ರಕ್ಷಣೆ ಮಾಡಬೇಕು. ಅನಾಥೆಯಾದ ಸಹೋದರಿಯನ್ನು, ಕನ್ಯೆಯನ್ನು, ಯಾರ ಆಶ್ರಯವೂ ಇಲ್ಲದ ಬಂಧುಜನರನ್ನು ಶ್ರದ್ಧೆಯಿಂದ ರಕ್ಷಿಸಬೇಕು. ಯಾರು ಕಾರ್ಪಣ್ಯದೋಷಕ್ಕೆ ತುತ್ತಾಗಿ ಹೀಗೆ ಪೋಷಣೆ ಮಾಡುವುದಿಲ್ಲವೋ ದುಡಿದದ್ದನ್ನು ಕೇವಲ ಕೂಡಿಡುವುದೇ ಸ್ವಭಾವವನ್ನಾಗಿ ಮಾಡಿಕೊಂಡಿರುತ್ತಾನೋ ಅಂಥವನ ಮನೆಯೂ ಕೂಡ

ನರಕಪ್ರಾಯವೇ ಆಗಿರುತ್ತದೆ. ನಾನಲ್ಲಿಗೆ ತೆರಳುವುದಿಲ್ಲವೆಂದು ಮುನಿಗಳ ಬಳಿ ಹೇಳುತ್ತಾಳೆ ಲೋಕಮಾತೆ – "ಮಾತರಂ ಪಿತರಂ ಭಾರ್ಯಾಂ ಗುರುಪತ್ನೀಂ ಗುರುಂಚ ತಮ್ । ಅನಾಥಾಂ ಭಗಿನೀಂ ಕನ್ಯಾಮನನ್ಯಾಶ್ರಯಬಾಂಧವಾನ್। ಕಾರ್ಪಣ್ಯಾದ್ ಯೋ ನ ಪುಷ್ಣಾತಿ ಸಂಚಯಂ ಕುರುತೇ ಸದಾ । ತದ್ಗೃಹಾನ್ನರಕಾಕಾರಾನ್ನ ಯಾಮಿ ತಾನ್ ಮುನೀಶ್ವರಾಃ ॥".

* ಮೂತ್ರವನ್ನು, ಮಲವನ್ನೂ ಉತ್ಸರ್ಜನೆ ಮಾಡಿದ ಮೇಲೆ ಯಾವ ಮೂರ್ಖನು ಅದನ್ನು ನೋಡುತ್ತಾನೋ, ಕಾಲು ತೊಳೆದುಕೊಂಡು, ಒರೆಸಿಕೊಳ್ಳದೇ ಹಾಗೆಯೇ ಯಾರು ಮಲಗುತ್ತಾನೋ ಅಂಥವನ ಮನೆಗೆ ನಾನು ಹೋಗುವುದಿಲ್ಲ ಎನ್ನುತ್ತಾಳೆ ಮಂಗಳಾದೇವಿ – ಮೂತ್ರಂ ಪುರೀಷಮುತ್ಸೃಜ್ಯ ಯಸ್ತತ್ ಪಶ್ಯತಿ ಮಂದಧೀಃ । ಯಃ ಶೇತೇ ಸ್ನಿಗ್ಧಪಾದೇನ ನ ಯಾಮಿ ತಸ್ಯ ಮಂದಿರಮ್ ॥".

* ಕಾಲುಗಳನ್ನು ತೊಳೆದು ಒರೆಸಿಕೊಂಡು ಶುಭ್ರವಾಗಿಸಿ ಮಲಗಿಕೊಳ್ಳಬೇಕು. ಹೀಗೆ ಮಾಡದವನ ಮನೆಗೆ ಮತ್ತು ನಗ್ನನಾಗಿ ಯಾರು ಮಲಗಿಕೊಳ್ಳುತ್ತಾನೋ, ಬಹಳನಿದ್ರೆ ಮಾಡುತ್ತಾನೋ, ಸಂಧ್ಯಾಕಾಲದಲ್ಲಿ ಮಲಗಿರುತ್ತಾನೋ, ಹಗಲೂ ಸಹ ಮಲಗುತ್ತಾನೋ ಅಂಥವನ ಮಂದಿರಕ್ಕೆ ನಾನು ಹೋಗುವುದಿಲ್ಲ ಎನ್ನುತ್ತಾಳೆ ಭಾರ್ಗವಿ- ದೇವಿ – "ಅಧೌತಪಾದಶಾಯೀ ಯೋ ನಗ್ನಃ ಶೇತೇಽತಿನಿದ್ರಿತಃ। ಸಂಧ್ಯಾಶಾಯೀ ದಿವಾಶಾಯೀ ನ ಯಾಮಿ ತಸ್ಯ ಮಂದಿರಮ್ ॥".

* ಮೊದಲು ತೈಲವನ್ನು ತಲೆಗೆ ಹಚ್ಚಿಕೊಂಡು ಮತ್ತೊಬ್ಬರನ್ನು ಮುಟ್ಟುತ್ತಾನೋ ಅಥವಾ ಅನಂತರ ದೇಹಕ್ಕೆ ಎಣ್ಣೆಯನ್ನು ಹಚ್ಚಿಕೊಳ್ಳುತ್ತಾನೋ ಅಂಥವನ ಮಂದಿರಕ್ಕೆ ನಾನು ಹೋಗುವುದಿಲ್ಲ. "ಮೂರ್ಧ್ನಿ ತೈಲಂ ಪುರೋ ದತ್ತ್ವಾ ಯೋಽನ್ಯದಂಗ-ಮುಪಸ್ಪೃಶೇತ್ । ದದಾತಿ ಪಶ್ಚಾದ್ ಗಾತ್ರೇ ವಾ ನ ಯಾಮಿ ತಸ್ಯ ಮಂದಿರಮ್ ॥"

* ನೆತ್ತಿಯಲ್ಲಿ ತೈಲವನ್ನು ಹಚ್ಚಿಕೊಂಡು ಅಥವಾ ಶರೀರಕ್ಕೆ ಎಣ್ಣೆಯನ್ನು ಹಚ್ಚಿಕೊಂಡು ಯಾರು ಮೂತ್ರಪುರೀಷಗಳ ಉತ್ಸರ್ಜನವನ್ನು ಮಾಡುತ್ತಾರೋ ಅಥವಾ

ಎಣ್ಣೆಯನ್ನು ಹಚ್ಚಿಕೊಂಡು ನಮಸ್ಕಾರ ಮಾಡುತ್ತಾರೋ ಪುಷ್ಪವನ್ನು ತರುತ್ತಾರೋ ಅಂಥವರ ಮನೆಗೆ ನಾನು ಹೋಗುವುದಿಲ್ಲ ಎನ್ನುತ್ತಾಳೆ ಕ್ಷೀರಸಾಗರಕನ್ನಿಕೆ – ''ದತ್ವಾ ತೈಲಂ ಮೂರ್ಧ್ನಿ ಗಾತ್ರೇ ವಿಣ್ಮೂತ್ರಂ ಯಃ ಸಮುತ್ಸೃಜೇತ್ । ಪ್ರಣಮೇದಾಹರೇತ್ ಪುಷ್ಪಂ ನ ಯಾಮಿ ತಸ್ಯ ಮಂದಿರಮ್ ॥''

* ಯಾರು ಹುಲ್ಲನ್ನು ಉಗುರಿನಿಂದ ಕೀಳುತ್ತಾರೋ, ಉಗುರಿನಿಂದ ಭೂಮಿಯ ಮೇಲೆ ಯಾರು ಬರೆಯುತ್ತಾರೋ, ಯಾರ ಶರೀರದಲ್ಲಿ ಮತ್ತು ಕಾಲಿನಲ್ಲಿ ಕೊಳೆಯಿರುತ್ತದೋ ಅಂಥವರ ಮನೆಗೆ ನಾನು ಹೋಗುವುದಿಲ್ಲ ಎನ್ನುತ್ತಾಳೆ ರಮಾದೇವಿ – ''ತೃಣಂ ಛಿನತ್ತಿ ನಖರೈರ್ನಖರೈರ್ವಿಲಿಖೇನ್ಮಹೀಮ್ । ಗಾತ್ರೇ ಪಾದೇ ಮಲಂ ಯಸ್ಯ ನ ಯಾಮಿ ತಸ್ಯ ಮಂದಿರಮ್ ॥''

* ಯಾವ ವಕ್ತಿಯ ಹಲ್ಲು ಬಟ್ಟೆಗಳು ಕೊಳೆಯಾಗಿರುತ್ತವೋ, ತಲೆಯು ಒಣಗಿ ಹೋಗಿರುತ್ತದೋ, ವಿಕೃತವಾಗಿ ಮುಷ್ಟಿಯಿಂದ ಊಟ ಮಾಡುತ್ತಾನೋ, ವಿಕೃತವಾಗಿ ನಗುತ್ತಾನೋ ಅಂಥವನ ಮನೆಗೆ ನಾನು ಹೋಗುವುದಿಲ್ಲ ಎನ್ನುತ್ತಾಳೆ ಕಮಲಾದೇವಿ – ''ದಶನಂ ವಸನಂ ಯಸ್ಯ ಸಮಲಂ ರೂಕ್ಷಮಸ್ತಕಮ್ । ವಿಕೃತೌ ಗ್ರಾಸಹಾಸೌ ಚ ನ ಯಾಮಿ ತಸ್ಯ ಮಂದಿರಮ್ ॥

* ಮಂತ್ರವನ್ನು ಹೇಳಿಕೊಂಡು ದುಡ್ಡು ಸಂಪಾದನೆ ಮಾಡುವವನ, ತಾನು ಕಲಿತ ವಿದ್ಯೆಯನ್ನು ಮಾರಾಟ ಮಾಡುವವನ, ಸಮಗ್ರಗ್ರಾಮಕ್ಕೆ ಯಾಗವನ್ನು ಮಾಡಿಸುವವನ, ವೈದ್ಯನಾದವನ, ಅಡಿಗೆ ಮಾಡುವವನ, ಹರಿಪೂಜೆಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡಿರುವವನ ಮನೆಗೆ ನಾನು ಹೋಗುವುದಿಲ್ಲ ಎಂದು ಎಚ್ಚರಿಸುತ್ತಾಳೆ ವರಮಹಾಲಕ್ಷ್ಮೀದೇವಿ (ನಾವು ಕಲಿತ ಮಂತ್ರಗಳು ವಿದ್ಯೆಗಳು ಹಾಗೂ ಆಚರಿಸುವ ದೇವಪೂಜಾದಿಸತ್ಕರ್ಮಗಳು ಯಜ್ಞಯಾಗಾದಿಗಳೆಲ್ಲವೂ ಭಗವಂತನ ಅಪರೋಕ್ಷಜ್ಞಾನಕ್ಕಾಗಿಯೇ ವಿನಿಯೋಗವಾಗಬೇಕು. ಭಗವಂತನನ್ನು ಮರೆತು ಹಣಸಂಪಾದನೆಗಾಗಿ ಅದು ವಿನಿಯೋಗವಾದರೆ ಪುಣ್ಯವು ಬಾರದೇ ಪಾಪವೇ ಬರುತ್ತದೆ ಎಂಬುದು ಈ ಶ್ಲೋಕದ ಭಾವ. ಮತ್ತು ವೈದ್ಯನು ಅಡಿಗೆಭಟ್ಟನು ಪಂಕ್ತಿಬಾಹಿರನಾಗಿರುತ್ತಾನೆ. ಈ ವಿಷಯವನ್ನು

ಶಾಸ್ತ್ರದಲ್ಲಿ ಅನೇಕ ಕಡೆ ತಿಳಿಸಿದ್ದಾರೆ. ಆದ್ದರಿಂದ ಬ್ರಾಹ್ಮಣರಿಗೆ ಪಾಠ,ಪ್ರವಚನ, ಯಜ್ಞ,ಯಾಗಾದಿ ಸತ್ಕರ್ಮಗಳಷ್ಟೇ ವಿಹಿತವಾಗಿವೆ.) – ''ಮಂತ್ರವಿದ್ಯೋಪಜೀವೀ ಚ ಗ್ರಾಮಯಾಜೀ ಚಿಕಿತ್ಸಕಃ। ಸೂಪಕೃದ್ದೇವಲಶ್ಚೈವ ನ ಯಾಮಿ ತಸ್ಯ ಮಂದಿರಮ್ ॥''

* ವಿವಾಹವನ್ನು ಮತ್ತು ಧರ್ಮಕಾರ್ಯಗಳನ್ನು ಯಾರು ನಿಲ್ಲಿಸುತ್ತಾನೋ, ಹಗಲಿನಲ್ಲಿ ಮೈಥುನವನ್ನು ಮಾಡುತ್ತಾನೋ ಅಂಥವನ ಮನೆಗೆ ನಾನು ಹೋಗುವುದಿಲ್ಲ ಎನ್ನುತ್ತಾಳೆ ವರಮಹಾಲಕ್ಷ್ಮೀದೇವಿ – 'ವಿವಾಹಂ ಧರ್ಮಕಾರ್ಯಂ ವಾ ಯೋ ನಿಹಂತಿ ಚ ಕೋಪತಃ। ದಿವಾಮೈಥುನಕಾರೀ ಯೋ ನ ಯಾಮಿ ತಸ್ಯ ಮಂದಿರಮ್ ॥'.

ಬ್ರಹ್ಮವೈವರ್ತಪುರಾಣದ ಗಣೇಶಖಂಡದಲ್ಲಿ ಲಕ್ಷ್ಮೀಚರಿತ್ರೆಯೆಂಬ ೨೩ನೆಯ ಅಧ್ಯಾಯವು ಇಲ್ಲಿಗೆ ಮುಗಿಯುತ್ತದೆ.

* * * * *

## ಲಕ್ಷ್ಮಿಯ ಅನುಗ್ರಹ ಬೇಕೇ?

* ಬ್ರಹ್ಮವೈವರ್ತಪುರಾಣದ ಈ ಮಾತುಗಳನ್ನು ಗಮನವಿಟ್ಟು ಓದಬೇಕು. ಅದರಂತೆ ನಡೆದುಕೊಳ್ಳಬೇಕು. ಲಕ್ಷ್ಮಿಗೆ ಇಷ್ಟವಾಗದ ರೀತಿಯಲ್ಲಿ ನಡುವಳಿಕೆ ಇಟ್ಟು-ಕೊಂಡು ವರಮಹಾಲಕ್ಷ್ಮಿ ಹಬ್ಬದ ದಿವಸ ವೈಭವೋಪೇತವಾಗಿ ಪೂಜಾದಿಗಳನ್ನು ಮಾಡುವುದರಿಂದ ಲಕ್ಷ್ಮೀದೇವಿಯ ಅನುಗ್ರಹವಾಗುವುದಿಲ್ಲ. ಸನ್ನಡತೆಗಳಿದ್ದಾಗ ಮಾತ್ರ ಲಕ್ಷ್ಮೀದೇವಿಯ ಅನುಗ್ರಹವಾಗುತ್ತದೆ.

* ಪ್ರತಿಯೊಬ್ಬರು ವರಮಹಾಲಕ್ಷ್ಮೀಹಬ್ಬದ ದಿವಸ ತಾವು ಆಚರಿಸುತ್ತಿರುವ ಅನೇಕ ಕೆಟ್ಟ ಕೆಲಸಗಳನ್ನು, ದುಶ್ಚಟಗಳನ್ನು, ಅಧರ್ಮ ಚಟುವಟಿಕೆಗಳನ್ನು ಪರಿತ್ಯಾಗ ಮಾಡುತ್ತೇನೆಂಬ ಸಂಕಲ್ಪ ಮಾಡಬೇಕು. ಇದೇ ನಿಜವಾದ ಹಬ್ಬದ ಆಚರಣೆ.

* ಎಲ್ಲ ಕೆಟ್ಟ ಕೆಲಸಗಳನ್ನು ಒಟ್ಟಿಗೆ ಬಿಡಲು ಸಾಧ್ಯವಾಗದಿದ್ದರೆ ಪ್ರತಿವರ್ಷವು ಒಂದೊಂದು ಕೆಟ್ಟ ಕೆಲಸಗಳನ್ನು ಬಿಡುತ್ತೇನೆಂದು ಸಂಕಲ್ಪಮಾಡಿ ಪರಿತ್ಯಾಗ

ಮಾಡಬೇಕು. ಆಗ ಕೆಲವೇ ವರ್ಷಗಳಲ್ಲಿ ಲಕ್ಷ್ಮೀದೇವಿಯ ಸಂಪೂರ್ಣಾನುಗ್ರಹಕ್ಕೆ ಪಾತ್ರನಾಗಿ ಲಕ್ಷ್ಮೀನಾರಾಯಣರ ಸಾನ್ನಿಧ್ಯವನ್ನು ಪಡೆದುಕೊಂಡು ಜೀವನವನ್ನು ಸಾರ್ಥಕ ಮಾಡಿಕೊಳ್ಳಬಹುದು.

* * * * *

## ಅಷ್ಟಲಕ್ಷ್ಮಿಯ ಬಗ್ಗೆ ಒಂದು ವಿಚಾರ

ಯಾವುದೇ ಶಾಸ್ತ್ರದಲ್ಲಿ ಅಷ್ಟಲಕ್ಷ್ಮಿಯ ಬಗ್ಗೆ ಉಲ್ಲೇಖವು ಕಾಣಿಸುವುದಿಲ್ಲ. ಯಾವುದೇ ದಾಸರಾಯರ ಪದ್ಯಗಳಲ್ಲಿಯೂ ಕೂಡ ಅಷ್ಟಲಕ್ಷ್ಮಿಯ ಬಗ್ಗೆ ಉಲ್ಲೇಖವು ಕಾಣಿಸುವುದಿಲ್ಲ. ''ಪಡಿಪೂಜೆ, ಕಥೆಹಾಡು'' ಎಂಬ ಸಂಪ್ರದಾಯದ ಒಂದು ಹಾಡಿನಲ್ಲಿ ಆದಿಲಕ್ಷ್ಮಿಯ ಬಗ್ಗೆ ಉಲ್ಲೇಖವಿದೆ. ಮತ್ತು ಈ ಹಾಡಿನಲ್ಲಿ ಧಾನ್ಯಲಕ್ಷ್ಮಿ, ಭಾಗ್ಯಲಕ್ಷ್ಮಿ ಎಂಬ ಹೆಸರುಗಳುಳ್ಳ ಸ್ತ್ರೀಯರನ್ನು ನಿಂದಿಸಲಾಗಿದೆ. ಅರ್ಥಾತ್ ಕೇವಲ ಧಾನ್ಯ ಮೊದಲಾದವುಗಳಿದ್ದರೆ ಸಾಲದು, ಶ್ರದ್ಧಾಭಕ್ತಿಗಳಿರಬೇಕೆಂದು ಪ್ರತಿಬಿಂಬಿಸ-ಲಾಗಿದೆ. ಮತ್ತು ಯಾರ ಮನೆಯಲ್ಲಿ ಶ್ರದ್ಧೆ, ಭಕ್ತಿ, ಸ್ವಚ್ಛತೆ, ಔದಾರ್ಯ ಮೊದಲಾದ-ವುಗಳಿರುತ್ತವೋ ಅಂಥವರ ಮನೆಯಲ್ಲಿ ನಾನು ನೆಲೆಸುತ್ತೇನೆಂದು ಆದಿಲಕ್ಷ್ಮಿಯು ಪ್ರತಿಜ್ಞೆ ಮಾಡುತ್ತಾಳೆ. ಸಂಪ್ರದಾಯದ ಈ ಹಾಡನ್ನು ಯಾರು ರಚಿಸಿದ್ದಾರೆಂಬ ಉಲ್ಲೇಖವಿಲ್ಲ.

ಹೀಗಿರುವಾಗ ಅಷ್ಟಲಕ್ಷ್ಮಿಯ ಚಿಂತನೆ ಎಲ್ಲಿಂದ ಬಂತು? ಏಕಿಷ್ಟು ವ್ಯಾಪಕವಾಗಿ ಜಗತ್ತಿನಲ್ಲಿದೆ? ಎಂಬ ಕುತೂಹಲದಿಂದ ಸಂಶೋಧನೆ ಮಾಡಿ ಉತ್ತರವನ್ನು ಕಂಡು ಕೊಳ್ಳುವುದೇ ಅತ್ಯಂತಕಠಿಣವಾಗಿದೆ. ಸಂಪ್ರದಾಯವು ವ್ಯಾಪಕವಾಗಿ ಬಂದಿರುವು-ದರಿಂದ ಅಷ್ಟಲಕ್ಷ್ಮಿಯ ಚಿಂತನೆ ಹಾಗೂ ಪೂಜೆಗಳನ್ನು ಬಿಡುವ ಅವಶ್ಯಕತೆ ಇರುವುದಿಲ್ಲ. ಮತ್ತು ಭಗವಂತನು ಹೇಗೆ ಅನಂತಾವತಾರಗಳನ್ನು ಸ್ವೀಕರಿಸುತ್ತಾನೋ ಅದರಂತೆ ಜಗದರಸಿಯಾದ ಮಹಾಲಕ್ಷ್ಮೀದೇವಿಯೂ ಕೂಡ ಅನಂತಾವತಾರಗಳನ್ನು ಸ್ವೀಕರಿಸುತ್ತಾಳೆ. ಅವುಗಳ ಮಧ್ಯದಲ್ಲಿ ಆದಿಲಕ್ಷ್ಮೀ, ಧಾನ್ಯಲಕ್ಷ್ಮೀ ಮೊದಲಾದ ರೂಪಗಳೂ ಕೂಡ ಇರುತ್ತವೆ. ಹೀಗೆ ಚಿಂತನೆ ಮಾಡುವುದು ಪ್ರಮೇಯದೃಷ್ಟಿಯಿಂದ

ತಪ್ಪಾಗುವುದಿಲ್ಲ. ಅಷ್ಟಲಕ್ಷ್ಮಿಯ ರೂಪದ ಚಿಂತನೆಗೆ ಒಂದು ಪುಟ್ಟ ಆಧಾರವನ್ನು ನೀಡಬಹುದು. ತಂತ್ರಸಾರಸಂಗ್ರಹದ ೪ನೆಯ ಅಧ್ಯಾಯದಲ್ಲಿ ಅಷ್ಟೈಶ್ವರ್ಯಪ್ರದಶ್ಚೈವ ಎಂದು ಹಂಸಮಂತ್ರವು ಅಷ್ಟೈಶ್ವರ್ಯಗಳನ್ನು ನೀಡುತ್ತದೆಂದು ಹೇಳಿದ್ದಾರೆ. ಈ ಎಂಟು ಐಶ್ವರ್ಯಗಳಿಗೆ ಲಕ್ಷ್ಮೀದೇವಿಯೇ ಅಭಿಮಾನಿಯಾಗುತ್ತಾಳೆ. ಪ್ರಾತಃಸಂಕಲ್ಪಗದ್ಯದಲ್ಲಿ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು ಹೀಗೆ ಹೇಳಿದ್ದಾರೆ – ''ಶ್ರೀದೇವ್ಯಾದಿ-ರಮಾರೂಪಾಷ್ಟಕಾಭಿಮನ್ಯಮಾನ - ಶಂಖಚಕ್ರವರಾಭಯಯುಕ್ತಹಸ್ತಚತುಷ್ಟಯೋ-ಪೇತಾ'' ಈ ವಿಶೇಷಣದಲ್ಲಿ ಶ್ರೀದೇವಿ ಮೊದಲಾದ ಎಂಟು ರೂಪಗಳಿಂದ ಅಭಿಮನ್ಯಮಾನವಾದ ಚಕ್ರಶಂಖ ಮೊದಲಾದ ಎಂಟು ಆಯುಧಗಳನ್ನು ಭಗವಂತನು ಧರಿಸಿದ್ದಾನೆಂದು ಹೇಳಿದ್ದಾರೆ. ಈ ಲಕ್ಷ್ಮೀದೇವಿಯ ಎಂಟುರೂಪಗಳನ್ನೂ ವಿಶೇಷವಾಗಿ ಉಪಾಸನೆ ಮಾಡಿ ನಮ್ಮ ಅಭೀಷ್ಟಗಳನ್ನು ಪಡೆದುಕೊಳ್ಳಬಹುದು. ಅತ್ಯಂತಸ್ಪಷ್ಟವಾದ ಪ್ರಮಾಣವು ಪಂಚರಾತ್ರಾಗಮದ ಶ್ರೀಪ್ರಶ್ನಸಂಹಿತೆಯಲ್ಲಿ ದೊರಕುತ್ತದೆ –

> ಧಾನ್ಯಲಕ್ಷ್ಮೀಂ ಪಲಾಶಾಭಾಂ ಧ್ಯಾನಗುಚ್ಛಭುಜಾನ್ವಿತಾಮ್ ।
> ಮುಖ್ಯಹಸ್ತಾಂಜಲಿಪುಟಾಃ ಪಶ್ಚಾದ್ಧಸ್ತಾಯುಧೈರ್ಯುತಾಃ ॥

ಪಲಾಶದಂತೆ ಕಾಂತಿಯುಳ್ಳ ಎರಡು ಹಸ್ತಗಳಿಂದ ಪರಮಾತ್ಮನನ್ನು ನಮಸ್ಕರಿಸುತ್ತಿರುವ, ಉಳಿದ ಎರಡು ಹಸ್ತಗಳಿಂದ ಧಾನ್ಯದ ತೆನೆಗಳನ್ನು ಧರಿಸಿರುವ ಧಾನ್ಯಲಕ್ಷ್ಮೀಯನ್ನು ಧ್ಯಾನಮಾಡುತ್ತೇನೆ ಎಂದು.

ಒಬ್ಬ ಮನುಷ್ಯನಿಗೆ ಅತ್ಯಂತ ಅನಿವಾರ್ಯವಾದ ಹಾಗೂ ಆವಶ್ಯಕವಾದ ಎಲ್ಲ ಸಂಪತ್ತುಗಳ ರೂಪದಲ್ಲಿ ಲಕ್ಷ್ಮಿಯ ಈ ಎಂಟು ರೂಪಗಳನ್ನು ಪರಿಗಣಿಸಲಾಗಿದೆ. ಅದಕ್ಕೆ ಲಕ್ಷ್ಮೀದೇವಿಯೇ ಅಭಿಮಾನಿಯಾಗಬೇಕು. ಲಕ್ಷ್ಮೀದೇವಿಯ ಈ ಎಂಟು ರೂಪಗಳನ್ನು ಆರಾಧನೆ ಮಾಡುವುದರಿಂದ ಅಷ್ಟೈಶ್ವರ್ಯಗಳು ನಮಗೆ ಬಂದೊದ-ಗುತ್ತವೆ. ಒಂದು ಮಾತ್ರ ಕಠಿಣವಾದ ಎಚ್ಚರಿಕೆ – ಕೇವಲ ಅಷ್ಟಲಕ್ಷ್ಮಿಯ ರೂಪಗಳನ್ನು ಚಿಂತನೆ ಮಾಡುವುದರಿಂದ, ಆರಾಧನೆ ಮಾಡುವುದರಿಂದ ಕ್ಷಣಿಕವಾದ ಐಶ್ವರ್ಯಗಳು ಲಭಿಸಬಹುದು. ಆದರೆ ಆತ್ಯಂತಿಕವಾಗಿ ದುಃಖವನ್ನೇ ಅನುಭವಿಸಬೇಕಾಗುತ್ತದೆ.

ಆದ್ದರಿಂದ ಭಗವಂತನ ಎಂಟುರೂಪಗಳ ಜೊತೆ ಎಂಟು ಲಕ್ಷ್ಮೀರೂಪಗಳನ್ನೂ ಆರಾಧನೆ ಮಾಡಿ ಶಾಶ್ವತವಾದ ಎಂಟು ಬಗೆಯ ಸಂಪತ್ತುಗಳನ್ನು ಪಡೆದು ಕೃತಕೃತ್ಯರಾಗಬೇಕು.

ನಾರಾಯಣ ಮೊದಲಾದ ರೂಪಗಳ ಜೊತೆ ಧನಲಕ್ಷ್ಮೀ ಮೊದಲಾದ ಲಕ್ಷ್ಮಿಯ ಎಂಟುರೂಪಗಳನ್ನು ಆರಾಧಿಸುವುದು ಸೂಕ್ತವೆಂದು ಯೋಚಿಸಿ, ಕಲ್ಪಿಸಿ ಇಲ್ಲಿ ಬರೆಯಲಾಗಿದೆ.

## ಅಷ್ಟಲಕ್ಷ್ಮಿಯ ಆರಾಧನೆ

ಆದಿಲಕ್ಷ್ಮೀಸಹಿತನಾರಾಯಣಾಯ ನಮಃ; ನಾರಾಯಣನ ಜೊತೆ ಕುಳಿತ ಆದಿ-ಲಕ್ಷ್ಮಿಯನ್ನು ಆರಾಧನೆಯನ್ನು ಯಾವುದೇ ಕಾರ್ಯಗಳ ಪ್ರಾರಂಭದಲ್ಲಿ ಮಾಡಬೇಕು. ಇದರಿಂದ ನಿರ್ವಿಘ್ನವಾಗಿ ಆ ಕಾರ್ಯಗಳು ಪರಿಸಮಾಪ್ತವಾಗುತ್ತವೆ.

ಧನಲಕ್ಷ್ಮೀಸಹಿತಶ್ರೀಕರನಾರಾಯಣಾಯ ನಮಃ - ಧಾನ್ಯಸಮೃದ್ಧಿಯು ಆಗುತ್ತದೆ.

ಧೈರ್ಯಲಕ್ಷ್ಮೀಸಹಿತನಾರಸಿಂಹಾಯನಮಃ – ಧೈರ್ಯಪ್ರಾಪ್ತಿಯಾಗುತ್ತದೆ.

ಗಜಲಕ್ಷ್ಮೀಸಹಿತಗಜೇಂದ್ರವರದಾಯ ನಮಃ – ಗೋ ಮುಂತಾದ ಪ್ರಾಣಿ ಸಂಪತ್ತು ಹೆಚ್ಚುತ್ತದೆ.

ಸಂತಾನಲಕ್ಷ್ಮೀಸಹಿತಗೋಪಾಲಕೃಷ್ಣಾಯ ನಮಃ – ಪುತ್ರಸಂತಾನವು ಪ್ರಾಪ್ತವಾಗುತ್ತದೆ.

ವಿಜಯಲಕ್ಷ್ಮೀಸಹಿತಶ್ರೀರಾಮಾಯ ನಮಃ – ಸಕಲ ಕಾರ್ಯಗಳಲ್ಲಿ ವಿಜಯವು ಲಭಿಸುತ್ತದೆ.

ವಿದ್ಯಾಲಕ್ಷ್ಮೀಸಹಿತಹಯಗ್ರೀವಾಯ ನಮಃ – ವಿದ್ಯೆಯು ಪ್ರಾಪ್ತವಾಗುತ್ತದೆ.

ಧನಲಕ್ಷ್ಮೀಸಹಿತಶ್ರೀನಿವಾಸಾಯ ನಮಃ – ಐಶ್ವರ್ಯಪ್ರಾಪ್ತಿಯಾಗುತ್ತದೆ.

ಭಗವಂತನ ನಾರಾಯಣಾದಿ ಎಂಟುರೂಪಗಳು ಪ್ರಸಿದ್ಧವಾಗಿವೆ. ಲಕ್ಷ್ಮಿಯ ಎಂಟು ರೂಪಗಳೂ ಪ್ರಸಿದ್ಧವಾಗಿವೆ. ಎರಡನ್ನೂ ಸೇರಿಸಿ ಪೂಜಿಸುವುದು ಸಂಪೂರ್ಣಫಲದಾಯಕವಾಗುತ್ತದೆ. ಇದರ ಬಗ್ಗೆ ಎಲ್ಲಿಯೂ ಆಧಾರವಿರುವುದಿಲ್ಲ. 'ವಿಷ್ಣುನಾ ಸಹಿತಾ ಧ್ಯಾತಾ ಸಾಪಿ ತುಷ್ಟಾಂ ಪರಾಂಗತಿಮ್' ಎಂಬ ಪ್ರಮಾಣದ ಆಧಾರದಿಂದ ಹೀಗೆ ಬರೆಯಲಾಗಿದೆ.

* * * * *

॥ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ॥

# ಶ್ರೀವರ-ಮಹಾಲಕ್ಷ್ಮೀಪೂಜೆ

(ಷೋಡಶೋಪಚಾರಪೂಜೆಯ ತನಕ ಪತಿಯು ಮಾಡಬೇಕು. ಅನಂತರ ಪತಿಯು ಮಂತ್ರ ಹೇಳಿದಾಗ ಪತ್ನಿಯು ಪೂಜಿಸಬೇಕು. ಸಂಕಲ್ಪವನ್ನು ಪತ್ನಿಯಿಂದ ಮಾಡಿಸಬೇಕು.)

ಕೈಮುಗಿದು ಪ್ರಾರ್ಥಿಸಿರಿ

ಶ್ರೀ ಗುರುಭ್ಯೋ ನಮಃ । ಶ್ರೀ ಪರಮ ಗುರುಭ್ಯೋನಮಃ ॥
ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥
ಸರ್ವದಾ ಸರ್ವಕಾರ್ಯೇಷು ನಾಸ್ತಿ ತೇಷಾಮಮಂಗಲಮ್ ।
ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನೋ ಹರಿಃ ॥
ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥
ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ ।
ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ ॥
ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ ॥
ನಮಸ್ತೇ ಪ್ರಾಣೇಶ ಪ್ರಣತವಿಭವಾಯಾವನಿಮಗಾಃ
ನಮಃ ಸ್ವಾಮಿನ್ ರಾಮಪ್ರಿಯತಮ ಹನೂಮನ್ ಗುರುಗುಣ ।
ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟಭಗವನ್

ನಮಃ ಶ್ರೀಮನ್‌ಮಧ್ವ ಪ್ರದಿಶ ಸುದೃಶಂ ನೋ ಜಯ ಜಯ ॥
ಮೃತ್ಯುಂಜಯ ನಮಸ್ತುಭ್ಯಂ ಮೃತ್ಯುಂ ಹರ ನಮಾಮ್ಯಹಮ್ ।
ಸರ್ವಮೃತ್ಯುವಿನಾಶಾಯ ಮೃತ್ಯುಂಜಯ ನಮೋ ನಮಃ ॥
ದುಷ್ಟಾನಾಂ ವಿಘ್ನಕರ್ತಾ ಸುಚರಿತ ಸುಜನಸ್ತೋಮವಿಘ್ನಾಪಹರ್ತಾ
ತಸ್ಮಾದ್ ವಿಘ್ನಾಧಿಪೋಽಹಂ ಮತ ಇತಿ ಸುಧಿಯಾಂ ಸ್ಪಷ್ಟಮಾಜ್ಞಾಪನಾಯ ।
ಪೌಲಸ್ತ್ಯೇಚ್ಛಾಂತರಾಯಃ ಸುರಮುನಿನಿಕರಾಭೀಷ್ಟಸಂಪ್ರಾಪ್ತ್ಯುಪಾಯಃ
ಶ್ರೇಯೋ ವಿಘ್ನಾಧಿರಾಜಃ ಪ್ರದಿಶತು ಸತತಂ ಭೂರಿಗೌರೀತನೂಜಃ ॥
ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ।
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ॥

## ಆಚಮನ

### ಎರಡು ಬಾರಿ ಆಚಮನ ಮಾಡಿರಿ

ಕೇಶವಾಯ ನಮಃ । ನಾರಾಯಣಾಯ ನಮಃ । ಮಾಧವಾಯ ನಮಃ । ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ । ತ್ರಿವಿಕ್ರಮಾಯ ನಮಃ । ವಾಮನಾಯ ನಮಃ । ಶ್ರೀಧರಾಯ ನಮಃ । ಹೃಷೀಕೇಶಾಯ ನಮಃ । ಪದ್ಮನಾಭಾಯ ನಮಃ । ದಾಮೋದರಾಯ ನಮಃ । ಸಂಕರ್ಷಣಾಯ ನಮಃ । ವಾಸುದೇವಾಯ ನಮಃ । ಪ್ರದ್ಯುಮ್ನಾಯ ನಮಃ । ಅನಿರುದ್ಧಾಯ ನಮಃ । ಪುರುಷೋತ್ತಮಾಯ ನಮಃ । ಅಧೋಕ್ಷಜಾಯ ನಮಃ । ನಾರಸಿಂಹಾಯ ನಮಃ । ಅಚ್ಯುತಾಯ ನಮಃ । ಜನಾರ್ದನಾಯ ನಮಃ । ಉಪೇಂದ್ರಾಯ ನಮಃ । ಹರಯೇ ನಮಃ । ಶ್ರೀ ಕೃಷ್ಣಾಯ ನಮಃ ।

## ಸಂಕಲ್ಪಮಾಡಿರಿ

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾ-

ವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತ-ಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ (೧) ಶಾಲೀವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ ಪ್ರಭವಾದಿ ಷಷ್ಟಿಸಂವತ್ಸರಾಣಾಂ ಮಧ್ಯೇ .......... ನಾಮ ಸಂವತ್ಸರೇ– ದಕ್ಷಿಣಾಯನೇ ವರ್ಷ-ಋತೌ ಶ್ರಾವಣಮಾಸೇ ಶುಕ್ಲಪಕ್ಷೇ ........ ಶುಭತಿಥೌ .....ವಾಸರಯುಕ್ತಾಯಾಂ– ....ಶುಭನಕ್ಷತ್ರ .... ಶುಭಯೋಗ– .... ಶುಭಕರಣ– ಏವಂಗುಣವಿಶೇಷಣ-ವಿಶಿಷ್ಟಾಯಾಮ್ ಅಸ್ಮಾಕಂ ಸಹ ಕುಟುಂಬಾನಾಂ ಕ್ಷೇಮಸ್ಥೈರ್ಯವಿಜಯವೀರ್ಯ-ಆಯುರಾರೋಗ್ಯಾಭಿವೃದ್ಧ್ಯರ್ಥಂ, ಧರ್ಮಾರ್ಥಕಾಮಮೋಕ್ಷಾಖ್ಯ-ಚತುರ್ವಿಧ-ಪುರುಷಾರ್ಥಸಿದ್ಧ್ಯರ್ಥಂ, ಪುತ್ರ-ಪೌತ್ರಾದ್ಯಭಿವೃದ್ಧ್ಯರ್ಥಂ ಇಷ್ಟಾರ್ಥಸಿದ್ಧ್ಯರ್ಥಂ, ಸಮಸ್ತದುರಿತೋಪಕ್ಷಯಾರ್ಥಂ ಜ್ಞಾನಭಕ್ತಿವೈರಾಗ್ಯಸಿದ್ಧ್ಯರ್ಥಂ ಚ ಸಕಲ ವಿಘ್ನ-ಪರಿಹಾರದ್ವಾರಾ ಭಗವದನುಗ್ರಹಸಿದ್ಧ್ಯರ್ಥಂ, ವಿಶೇಷತಃ ಅಖಂಡಸೌಭಾಗ್ಯ-ಪ್ರಾಪ್ತ್ಯರ್ಥಂ ಅಸ್ಮತ್‌ಪತ್ಯಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ-ಶ್ರೀಲಕ್ಷ್ಮೀನಾರಾಯಣಪ್ರೇರಣಯಾ ಶ್ರೀಲಕ್ಷ್ಮೀನಾರಾಯಣಪ್ರೀತ್ಯರ್ಥಂ ಶ್ರೀಮನ್ನಾರಾ-ಯಣವಾಮಾಂಕಸ್ಥಿತಶ್ರೀವರಮಹಾಲಕ್ಷ್ಮೀಪೂಜಾಂ ಕರಿಷ್ಯೇ ।

ಹೂ ಮಂತ್ರಾಕ್ಷತೆಗಳನ್ನು ಕೈಯಲ್ಲಿ ಹಿಡಿದುಕೊಂಡು ನೀರು ಹಾಕಿಕೊಂಡು ಅರ್ಘ್ಯಪಾತ್ರೆಯಲ್ಲಿ ಬಿಡಬೇಕು.

## ಪತ್ನಿಯು ದೀಪ ಹಚ್ಚಬೇಕು

ದೀಪಃ ಪಾಪಹರೋ ನೄಣಾಂ ದೀಪ ಆಪನ್ನಿವಾರಕಃ ।
ದೀಪೋ ವಿಧತ್ತೇ ಸುಕೃತಂ ದೀಪಃ ಸಂಪತ್ಪ್ರದಾಯಕಃ ॥
ದೀಪಜ್ಯೋತಿ ಪರಬ್ರಹ್ಮ ದೀಪಜ್ಯೋತಿಃ ಜನಾರ್ದನಃ ।

---

(೧) ಶಾರ್ವರೀ ಸಂವತ್ಸರದಲ್ಲಿ 'ತ್ರಿಚತ್ವಾರಿಂಶದಧಿಕೇ ಏಕೋನವಿಂಶತಿತಮೇ' (೧೯೪೩) ಎಂದು ಹೇಳಬೇಕು. ಕಾಲಪ್ರವಾಹದಲ್ಲಿ ಇದನ್ನು ಹೇಳುವ ಸಂಪ್ರದಾಯ ಬಿಟ್ಟುಹೋಗಿದೆ. ಇದನ್ನು ಹೇಳದಿದ್ದರೆ ಶಾಲಿವಾಹನಶಕೆಯಲ್ಲಿ ಅನೇಕಬಾರಿ ಪ್ರಭವಾದಿ ಸಂವತ್ಸರಗಳು ಆವೃತ್ತಿಯಾಗುವುದರಿಂದ ಕಾಲಗಣನೆ ನಿಖರವಾಗುವುದಿಲ್ಲ.

ದೀಪೋ ಹರತು ಮೇ ಪಾಪಂ ಸಂಧ್ಯಾದೀಪ ನಮೋಽಸ್ತು ತೇ ॥
ಶುಭಂ ಕುರುಷ್ವ ಕಲ್ಯಾಣಂ ಆರೋಗ್ಯಂ ಸುಖಸಂಪದಮ್ ।
ಮಮ ಬುದ್ಧಿ ಪ್ರಕಾಶಂ ಚ ದೀಪಜ್ಯೋತಿರ್ನಮೋಽಸ್ತು ತೇ ॥
ಭೋ ದೀಪ ಬ್ರಹ್ಮರೂಪಸ್ತ್ವಂ ಕರ್ಮಸಾಕ್ಷಿ ಇಹಾರ್ಹಸಿ ।
ಯಾವತ್ ಕರ್ಮಸಮಾಪ್ತಿಃ ಸ್ಯಾತ್ ತಾವತ್ ತ್ವಂ ಸುಸ್ಥಿರೋ ಭವ ॥

## ಪತಿಯು ಘಂಟಾನಾದ ಮಾಡಬೇಕು

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।
ಕುರ್ವೇ ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ॥

## ಭೂತೋಚ್ಚಾಟನೆ ಮಾಡಬೇಕು

ಅಪಸರ್ಪಂತು ತೇ ಭೂತಾಃ ಯೇ ಭೂತಾಃ ಭುವಿ ಸಂಸ್ಥಿತಾಃ ।
ಯೇ ಭೂತಾಃ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ॥
ಅಪಕ್ರಾಮಂತು ಯೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ ।
ತೇಷಾಮಪ್ಯವಿರೋಧೇನ ಪೂಜಾಕರ್ಮ ಸಮಾರಭೇ ॥

## ಪತಿಯು ಗುರುಗಣಪತಿ ಪೂಜೆ ಮಾಡಬೇಕು

ಪ್ರತಿಯೊಂದು ಪೂಜೆಯ ಪ್ರಾರಂಭದಲ್ಲಿ ಗುರುಗಳಿಗೆ ಹಾಗೂ ಗಣಪತಿಗೆ ಪೂಜೆ ಮಾಡಬೇಕು.

ಶ್ರೀಗುರುಭ್ಯೋ ನಮಃ । ಆದಿಗುರುಭ್ಯೋ ನಮಃ । ಮೂಲಗುರುಭ್ಯೋ ನಮಃ । ಪರಮಗುರುಭ್ಯೋ ನಮಃ । ಶ್ರೀವೇದವ್ಯಾಸಾಯ ನಮಃ । ಆಶ್ವಲಾಯನಾ-ಚಾರ್ಯೇಭ್ಯೋ ನಮಃ ।

ದೇವರ ಬಲಭಾಗದಲ್ಲಿ ಬರೆದ ಶ್ರೀಕಾರದಲ್ಲಿ ಗಂಧಾಕ್ಷತೆ ಪುಷ್ಪಗಳಿಂದ ಗುರುಗಳನ್ನು ಪೂಜಿಸಬೇಕು.

ಅಸ್ಮದ್ ಗುರುಸಮಾರಂಭಾಂ ಟೀಕಾಕೃತ್ಪಾದಮಧ್ಯಗಾಮ್ ।
ಶ್ರೀಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಮ್ ॥

ಆಪಾದಮೌಳಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥

ಶ್ರೀಗುರುಭ್ಯೋ ನಮಃ ಅನುಜ್ಞಾಂ ದೇಹಿ ।

ಶ್ರೀಕಾರದ ಪಕ್ಕದಲ್ಲಿ ಬರೆದ ಷಟ್ಕೋಣಮಂಡಲದಲ್ಲಿ ಬೆಳ್ಳಿಯ ಗಣಪತಿಯನ್ನಿಟ್ಟು ಪೂಜಿಸಬೇಕು. ಬೆಳ್ಳಿಗಣಪತಿ ಇಲ್ಲದಿದ್ದಲ್ಲಿ ಅಡಿಕೆಬೆಟ್ಟು, ಅರಿಶಿನಕೊಂಬುಗಳಲ್ಲಿ ಗಣಪತಿ ಆವಾಹನೆ ಮಾಡಿ ಪೂಜಿಸಬೇಕು.

ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ ।
ಲಂಬೋದರಶ್ಚ ವಿಕಟೋ ವಿಘ್ನರಾಜೋ ಗಣಾಧಿಪಃ ॥1॥

ಧೂಮಕೇತುರ್ಗಣಾಧ್ಯಕ್ಷೋ ಫಾಲಚಂದ್ರೋ ಗಜಾನನಃ ।
ದ್ವಾದಶೈತಾನಿ ನಾಮಾನಿ ಯಃ ಪಠೇಚ್ಛೃಣುಯಾದಪಿ ॥2॥

ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ ।
ಸಂಗ್ರಾಮೇ ಸರ್ವಕಾರ್ಯೇಷು ವಿಘ್ನಸ್ತಸ್ಯ ನ ಜಾಯತೇ ॥3॥

ಅಭೀಪ್ಸಿತಾರ್ಥಸಿದ್ಧ್ಯರ್ಥಂ ಪೂಜಿತೋ ಯಃ ಸುರೈರಪಿ ।
ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥4॥

ಗಣಪತಿಗೆ ಸಂಕ್ಷೇಪವಾಗಿ ಷೋಡಶೋಪಚಾರ ಪೂಜೆ ಮಾಡಬೇಕು.

ಶ್ರೀಮಹಾಗಣಪತಯೇ ನಮಃ । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ । ಆವಾಹಯಾಮಿ ಆವಾಹನಂ ಸಮರ್ಪಯಾಮಿ । ಸ್ವಾಗತಂ ಸಮರ್ಪಯಾಮಿ । ಆಸನಂ ಸಮರ್ಪಯಾಮಿ । ಪಾದಯೋಃ ಪಾದ್ಯಂ ಸಮರ್ಪಯಾಮಿ । ಅರ್ಘ್ಯಂ ಸಮರ್ಪಯಾಮಿ । ಆಚಮನಂ ಸಮರ್ಪಯಾಮಿ । ಮಧುಪರ್ಕಂ ಸಮರ್ಪಯಾಮಿ । ಪುನರಾಚಮನಂ ಸಮರ್ಪಯಾಮಿ । ಸ್ನಾನಂ ಸಮರ್ಪಯಾಮಿ । ವಸ್ತ್ರಂ ಸಮರ್ಪಯಾಮಿ । ಉಪವೀತಂ ಸಮರ್ಪಯಾಮಿ । ಆಭರಣಂ ಸಮರ್ಪಯಾಮಿ। ಗಂಧಂ ಸಮರ್ಪಯಾಮಿ । ಪುಷ್ಪಾಣಿ ಸಮರ್ಪಯಾಮಿ । ಧೂಪಮಾಘ್ರಾಪ-

ಯಾಮಿ । ದೀಪಂ ದರ್ಶಯಾಮಿ ।

ಮಹಾಗಣಪತಯೇ ನಮಃ ॥ ನೈವೇದ್ಯಾರ್ಥೇ ಗುಡೋಪಹಾರಮಹಾ-ನೈವೇದ್ಯಂ ನಿವೇದಯಾಮಿ । ತಾಂಬೂಲಂ ಸಮರ್ಪಯಾಮಿ । ನೀರಾಜನಂ ಸಮರ್ಪಯಾಮಿ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ । ಮಹಾಮಂಗಳ-ನೀರಾಜನಂ ಸಮರ್ಪಯಾಮಿ ।

ದುಷ್ಟಾನಾಂ ವಿಘ್ನಕರ್ತಾ ಸುಚರಿತಸುಜನಸ್ತೋಮವಿಘ್ನಾಪಹರ್ತಾ
ತಸ್ಮಾದ್ವಿಘ್ನಾಧಿಪೋಽಹಂ ಮತ ಇತಿ ಸುಧಿಯಾಂ ಸ್ಪಷ್ಟಮಾಜ್ಞಾಪನಾಯ ।
ಪೌಲಸ್ತ್ಯೇಚ್ಛಾಂತರಾಯಃ ಸುರಮುನಿನಿಕರಾಭೀಷ್ಟಸಂಪ್ರಾಪ್ತ್ಯುಪಾಯಃ
ಶ್ರೇಯೋ ವಿಘ್ನಾಧಿರಾಜಃ ಪ್ರದಿಶತು ಸತತಂ ಭೂರಿ ಗೌರೀತನೂಜಃ ॥

ಮಂತ್ರಪುಷ್ಪಂ ಸಮರ್ಪಯಾಮಿ । ಧ್ಯಾನಾವಾಹನಾದಿಸರ್ವೋಪಚಾರಪೂಜಾಃ ಸಮರ್ಪಯಾಮಿ ॥

ವಕ್ರತುಂಡ ಮಹಾಕಾಯ ಬಾಲಸೂರ್ಯಸಮಪ್ರಭ ।
ಅವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥
ರಕ್ತಾಂಬರೋ ರಕ್ತತನೂ ರಕ್ತಮಾಲ್ಯಾನುಲೇಪನಃ ।
ಮಹೋದರೋ ಗಜಮುಖಃ ಪಾಶದಂತಾಂಕುಶಾಭಯೇ ।
ಬಿಭ್ರದ್ ಧ್ಯೇಯೋ ವಿಘ್ನಹರಃ ಕಾಮದಸ್ತ್ವರಯಾ ಹ್ಯಯಮ್ ॥

ಶ್ರೀಮಹಾಗಣಪತಯೇ ನಮಃ । ಕ್ಷಿಪ್ರಪ್ರಸಾದಾಯ ನಮಃ । ಪ್ರಾರ್ಥನಾಂ ಸಮರ್ಪಯಾಮಿ ॥ ಹೇ ದೇವ! ನಿರ್ವಿಘ್ನಂ ಕುರು ॥

ಎಂದು ಇಬ್ಬರೂ ಮಂತ್ರಾಕ್ಷತೆ ಹಾಕಿ ಕೈಮುಗಿದು ನಾವು ಮುಂದೆ ಆಚರಿಸುವ ಪೂಜೆ ಸಾಂಗೋಪಾಂಗವಾಗಿ ನಡೆದು ಫಲಪ್ರದವಾಗಲಿ ಎಂದು ಪ್ರಾರ್ಥಿಸಬೇಕು.

## ಪತಿಯು ಕಲಶಪೂಜೆ ಮಾಡಬೇಕು

ಯಾವುದೇ ದೇವತಾರಾಧನೆ ಮಾಡುವ ಮೊದಲು ಕಲಶಪೂಜೆ ಮಾಡುವುದು ಸಂಪ್ರದಾಯ. ಕೆಲವರು ದೇವರ ಪೂಜೆಯಲ್ಲಿಯೇ ಈ ಕಲಶವನ್ನು ಇಟ್ಟು ಪೂಜಿಸುತ್ತಾರೆ.

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥1॥

ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ ॥2॥

ಅಂಗೈಶ್ಚ ಸಹಿತಾಃ ಸರ್ವೇ ಕಲಶಾಂಬುಸಮಾಶ್ರಿತಾಃ ।
ಶಾಂತಿಃ ಪುಷ್ಟಿಶ್ಚ ಗಾಯತ್ರೀ ಸಾವಿತ್ರೀ ಚ ಸರಸ್ವತೀ ॥3॥

ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ ।
ಸರ್ವೇ ಸಮುದ್ರಾಃ ಸರಿತಸ್ತೀರ್ಥಾನಿ ಜಲದಾ ನದಾಃ ॥4॥

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥5॥

ಆವಾಹಿತದೇವತಾಭ್ಯೋ ನಮಃ । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ। ಆವಾಹಯಾಮಿ ಆವಾಹನಂ ಸಮರ್ಪಯಾಮಿ । ಸ್ವಾಗತಂ ಸಮರ್ಪಯಾಮಿ । ಆಸನಂ ಸಮರ್ಪಯಾಮಿ । ಅರ್ಘ್ಯಂ ಸಮರ್ಪಯಾಮಿ । ಪಾದ್ಯಂ ಸಮರ್ಪಯಾಮಿ । ಆಚಮನಂ ಸಮರ್ಪಯಾಮಿ । ಮಧುಪರ್ಕಂ ಸಮರ್ಪಯಾಮಿ । ಪುನರಾಚಮನಂ ಸಮರ್ಪಯಾಮಿ । ಸ್ನಾನಂ ಸಮರ್ಪಯಾಮಿ। ವಸ್ತ್ರಯುಗ್ಮಂ ಸಮರ್ಪಯಾಮಿ । ಉಪವೀತಂ ಸಮರ್ಪಯಾಮಿ । ಆಭರಣಂ ಸಮರ್ಪಯಾಮಿ। ಗಂಧಂ ಸಮರ್ಪಯಾಮಿ । ಅಕ್ಷತಾನ್ ಸಮರ್ಪಯಾಮಿ । ನಾನಾ- ವಿಧಪರಿಮಳಪುಷ್ಪಾಣಿ ಸಮರ್ಪಯಾಮಿ । ಧೂಪಮಾಘ್ರಾಪಯಾಮಿ ದೀಪಂ ದರ್ಶಯಾಮಿ । ಕಲಶದೇವತಾಭ್ಯೋ ನಮಃ ನೈವೇದ್ಯಾರ್ಥೇ ಗುಡೋಪಹಾರ (ಬಾಳೆಹಣ್ಣು ಇಟ್ಟುಕೊಂಡರೆ ಕದಳೀಫಲಂ ಎಂದು ಹೇಳಬೇಕು.)

ಮಹಾನೈವೇದ್ಯಂ ಸಮರ್ಪಯಾಮಿ। ತಾಂಬೂಲಂ ಸಮರ್ಪಯಾಮಿ। ನೀರಾಜನಂ ಸಮರ್ಪಯಾಮಿ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ । ಮಂತ್ರಪುಷ್ಪಂ ಸಮರ್ಪಯಾಮಿ । ಕಲಶದೇವತಾಭ್ಯೋ ನಮಃ । ಸರ್ವೋಪಚಾರಪೂಜಾಂ ಸಮರ್ಪಯಾಮಿ । (ಈ ಕಲಶೋದಕವನ್ನು ಷೋಡಶೋಪಚಾರಪೂಜೆಗೆ ಬಳಸಬೇಕು).

## ಪತಿಯು ಪೀಠಪೂಜೆ ಮಾಡಬೇಕು.

ಪೀಠಮಧ್ಯೇ(೧) ಪರದೇವತಾಯೈ ನಮಃ । ಶ್ರೀಗುರುಭ್ಯೋ ನಮಃ । ಸರ್ವದೇವತಾಭ್ಯೋ ನಮಃ। ಸರ್ವಗುರುಭ್ಯೋ ನಮಃ। ಗರುಡಾಯ ನಮಃ। ವೇದವ್ಯಾಸಾಯ ನಮಃ। ದುರ್ಗಾಯೈ ನಮಃ। ಸರಸ್ವತ್ಯೈ ನಮಃ। ಧರ್ಮಾಯ ನಮಃ । ಜ್ಞಾನಾಯ ನಮಃ । ವೈರಾಗ್ಯಾಯ ನಮಃ । ಐಶ್ವರ್ಯಾಯ ನಮಃ । ಅಧರ್ಮಾಯ ನಮಃ । ಅಜ್ಞಾನಾಯ ನಮಃ । ಅವೈರಾಗ್ಯಾಯ ನಮಃ । ಅನೈಶ್ವರ್ಯಾಯ ನಮಃ।

ಪರಮಪುರುಷಾಯ ನಮಃ। ಆಧಾರರೂಪಿಣ್ಯೈ ಶಕ್ತ್ಯೈ ನಮಃ। ವಿಷ್ಣು-ಕೂರ್ಮಾಯ ನಮಃ । ವಾಯುಕೂರ್ಮಾಯ ನಮಃ। ಅನಂತಾಯ ನಮಃ । ಪೃಥಿವ್ಯೈ ನಮಃ। ಕ್ಷೀರಸಾಗರಾಯ ನಮಃ। ಶ್ವೇತದ್ವೀಪಾಯ ನಮಃ। ಮಹತೇ ದಿವ್ಯರತ್ನಮಂಟಪಾಯ ನಮಃ। ಪಂ ಪದ್ಮಾಯ ನಮಃ। ಅಂ ಅರ್ಕಮಂಡಲಾಯ ನಮಃ। ಉಂ ಸೋಮಮಂಡಲಾಯ ನಮಃ। ಮಂ ವಹ್ನಿಮಂಡಲಾಯ ನಮಃ। ಸತ್ವಾಭಿಮಾನಿನ್ಯೈ ಶ್ರಿಯೈ ನಮಃ । ರಜೋಭಿಮಾನಿನ್ಯೈ ಭೂಮ್ಯೈ ನಮಃ । ತಮೋಽಭಿಮಾನಿನ್ಯೈ ದುರ್ಗಾಯೈ ನಮಃ। ಆತ್ಮನೇ ನಮಃ। ಅಂತರಾತ್ಮನೇ ನಮಃ। ಪರಮಾತ್ಮನೇ ನಮಃ। ಜ್ಞಾನಾತ್ಮನೇ ನಮಃ। ವಿಮಲಾಯೈ ನಮಃ। ಉತ್ಕರ್ಷಿಣ್ಯೈ ನಮಃ। ಜ್ಞಾನಾಯೈ ನಮಃ। ಕ್ರಿಯಾಯೈ ನಮಃ। ಯೋಗಾಯೈ ನಮಃ। ಪ್ರಹ್ವ್ಯೈ ನಮಃ। ಸತ್ಯಾಯೈ ನಮಃ। ಈಶಾನಾಯೈ ನಮಃ। ಅನುಗ್ರಹಾಯೈ

---

(೧) ವರಮಹಾಲಕ್ಷ್ಮಿಗೆ ಪ್ರತ್ಯೇಕವಾಗಿ ಪೀಠ ಇರುವುದಿಲ್ಲ. ಭಗವಂತನ ಪೀಠದಲ್ಲಿಯೇ ಭಗವಂತನ ಜೊತೆಗೆ ಕುಳಿತಿರುತ್ತಾಳೆ. ಆದ್ದರಿಂದ ತಂತ್ರಸಾರದಲ್ಲಿ ನೀಡಿದ ಪೀಠಪೂಜೆ ಮಾಡಬೇಕು.

ನಮಃ । ಭಗವತಃ ಶ್ರೀಲಕ್ಷ್ಮೀನಾರಾಯಣಸ್ಯ ಯೋಗಪೀಠಾತ್ಮನೇ ಶ್ರೀಮದನಂತಾಯ ನಮಃ । ಸರ್ವಾಭ್ಯಃ ಪೀಠದೇವತಾಭ್ಯೋ ನಮಃ ।

## ನವದೋರಸ್ಥಾಪನಮ್

(ಒಂಭತ್ತು ಅಥವಾ ಹನ್ನೆರಡು ಗ್ರಂಥಿಗಳುಳ್ಳ ದೋರವನ್ನು ಕಲಶದ ಮುಂದೆ ಇಡುವುದು. ಮತ್ತು ಮುಂದೆ ಮಾಡುವ ಆವಾಹನೆ ಹಾಗೂ ಷೋಡಶೋಪಚಾರ-ಗಳನ್ನು ದೋರಕ್ಕೂ ಮಾಡಬೇಕು.)

ದೇವ್ಯಾಸ್ತು ಪುರತಃ ಸಮ್ಯಕ್ ನವಸೂತ್ರಂ ಪ್ರಕಲ್ಪಯೇತ್ ।
ನವಗ್ರಂಥಿಸಮಾಯುಕ್ತಂ ಕುಂಕುಮೇನ ವಿರಾಜಿತಮ್ ॥
ದ್ವಾದಶಗ್ರಂಥಿಯುಕ್ತಂ ವಾ ಉಪಕಲ್ಪ್ಯ ಪ್ರಪೂಜಯೇತ್ ।

## ಪತಿಯು ಕಲಶದಲ್ಲಿ ಲಕ್ಷ್ಮೀದೇವಿಯನ್ನು ಆವಾಹನೆ ಮಾಡಬೇಕು

(೧) ಅಸ್ಮಿನ್ ಕಲಶೇ ವರಮಹಾಲಕ್ಷ್ಮೀಸಹಿತನಾರಾಯಣಸ್ಯ ವಿಶೇಷಸಾನ್ನಿಧ್ಯತಾ-ಸಿದ್ಧ್ಯರ್ಥಂ ತತ್ವನ್ಯಾಸಮಾತೃಕಾನ್ಯಾಸಪೂರ್ವಕಂ ಮೂಲಮಂತ್ರೇಣ ಸೃಷ್ಟಿಸ್ಥಿತಿ-ಲಯನ್ಯಾಸಾದಿಕಂ ಕರಿಷ್ಯೇ ।

ಯಾವ ಕಲಶದಲ್ಲಿ ವರಮಹಾಲಕ್ಷ್ಮಿಯನ್ನು ಪೂಜಿಸಲಾಗುತ್ತದೋ ಆ ಕಲಶದಲ್ಲಿ ಲಕ್ಷ್ಮೀ-ನಾರಾಯಣರನ್ನು ಆವಾಹನೆ ಮಾಡಬೇಕು.

ಏಹ್ಯೇಹಿ ಶ್ರೀರಾಮಕೃಷ್ಣವೇದವ್ಯಾಸಾದ್ಯನಂತಾವತಾರರೂಪಾವಯವಗುಣ-ಕ್ರಿಯಾತ್ಮಕಂ ಭಗವಂತಂ ಶ್ರೀವರಮಹಾಲಕ್ಷ್ಮೀನಾರಾಯಣಂ ಪೀಠಸ್ಥಿತ ಏತದ್ಧಾತು-ಮಯಕಲಶಾಂತಃಸ್ಥಿತತೇಜಸ್ಸಾರಮಯಭೂತಪ್ರತಿಮಾಂತಃಸ್ಥಿತ ಶ್ರೀಮುಖ್ಯಪ್ರಾಣ-ಪ್ರತಿಮಾಮಧ್ಯೇ ರಮಯಾ ಸಹ ಕ್ಷೀರನೀರವದಾಸೀನಸ್ವಪ್ರತಿಮಾಯಾಂ ಆವಾಹಯಾಮಿ ॥

---

(೧) ಪತಿಯು ಕಲಶಪ್ರತಿಷ್ಠಾಪನ ಮಂತ್ರಗಳನ್ನು ಹೇಳಿ ಕಲಶಪ್ರತಿಷ್ಠಾಪನೆ ಮಾಡಬೇಕು. ಅನಂತವ್ರತದ ಪುಸ್ತಕದಲ್ಲಿ ಮಂತ್ರಗಳಿರುತ್ತವೆ. ಅನಂತರ ಕಲಶದಲ್ಲಿ ವರಮಹಾಲಕ್ಷ್ಮಿಯನ್ನು ಆವಾಹನೆ ಮಾಡಬೇಕು. ನ್ಯಾಸಾದಿಗಳನ್ನು ಕೂಡ ಅಲ್ಲಿ ಹೇಳಿದಂತೆಯೇ ಮಾಡುವುದು.

ಭೋ ಸ್ವಾಮಿನ್ ಜಗತಾಂ ನಾಥ ಯಾವತ್ಪೂಜಾವಸಾನಕಮ್ ।
ತಾವತ್ ಸಂಪ್ರೀತಿಭಾವೇನ ಕಲಶೇಽಸ್ಮಿನ್ ಸನ್ನಿಧಿಂ ಕುರು ॥
ಯಾಗಾವಸಾನಪರ್ಯಂತಮತ್ರ ಸ್ಥಿತ್ವಾ ಜನಾರ್ದನ ।
ಭಕ್ತಸ್ಯ ಮಮ ಪೂಜಾಂ ಚ ಗೃಹೀತ್ವಾ ಪಾಹಿ ಮಾಂ ಪ್ರಭೋ ॥
ಕೌಶೇಯಪೀತವಸನಾಮ್ ಅರವಿಂದನೇತ್ರಾಮ್
ಪದ್ಮದ್ವಯಾಭಯವರೋದ್ಯತಪದ್ಮಹಸ್ತಾಮ್ ।
ಉದ್ಯಚ್ಛತಾರ್ಕಸದೃಶಾಂ ಪರಮಾಂಕಸಂಸ್ಥಾಂ
ಧ್ಯಾಯೇದ್ ವಿಧೀಶನತಪಾದಯುಗಾಂ ಜನಿತ್ರೀಮ್ ॥
ಶ್ರೀಂ ಶ್ರಿಯೈ ನಮಃ । ಶ್ರಿಯಮಾವಾಹಯಾಮಿ ।
ಕೌಶೇಯನೀಲವಸನಾಮ್ ಅರವಿಂದನೇತ್ರಾಂ
ತಾಂಬೂಲನೀಲಕುಸುಮಾಭಯ ಸದ್ವರೇತಾಮ್ ।
ಶ್ಯಾಮಾಂಗಕಾಂತಿಸಹಿತಾಂ ಪರಮಾಂಕಸಂಸ್ಥಾಂ
ಧ್ಯಾಯೇದ್ ವಿಧೀಶನತಪಾದಯುಗಾಂ ಜನಿತ್ರೀಮ್ ॥
ಭೂಂ ಭುವೇ ನಮಃ । ಭೂಮಾವಾಹಯಾಮಿ ।
ಕೌಶೇಯರಕ್ತವಸನಾಂ ಕಮಲತ್ರಿನೇತ್ರಾಂ
ಚಕ್ರಾಬ್ಜತರ್ಜನಸುಶೂಲಯುತಾಬ್ಜಹಸ್ತಾಮ್ ।
ಉದ್ಯಚ್ಛತಾರ್ಕಸದೃಶಾಂ ಪರಮಾಂಕಸಂಸ್ಥಾಂ
ಧ್ಯಾಯೇದ್ ವಿಧೀಶನತಪಾದಯುಗಾಂ ಜನಿತ್ರೀಮ್ ॥
ದುಂ ದುರ್ಗಾಯೈ ನಮಃ । ದುರ್ಗಾಮಾವಾಹಯಾಮಿ ।

ಶ್ರೀ-ಭೂ-ದುರ್ಗಾ-ಅಂಭ್ರಣೀ- ಹ್ರೀ- ಮಾಯಾ-ಜಯಾ- ಕೃತಿ-ಶಾಂತಿ-ಲಕ್ಷ್ಮೀ- ಜಯಂತೀ-ಜಾನಕೀ-ಸತ್ಯಾ-ರುಗ್ಮಿಣೀ- ಸ್ವಯಂಪ್ರೀತಾಖ್ಯ ವರಮಹಾಲಕ್ಷ್ಮೀ-ರೂಪಾನ್ ಶ್ರೀಮನ್ನಾರಾಯಣರೂಪೈಃ ಸಾಕಮ್ ಆವಾಹಯಾಮಿ ।

ಆವಾಹಿತಾ ಭವ । ಸ್ಥಾಪಿತಾ ಭವ । ಸನ್ನಿಹಿತಾ ಭವ । ಸನ್ನಿರುದ್ಧೋ ಭವ । ಅವಕುಂಠಿತಾ ಭವ । ಸುಪ್ರಸನ್ನಾ ಭವ । ವರದಾ ಭವ । ಪ್ರಸೀದ । ಪ್ರಸೀದ । (ಆವಾಹನಾದಿ ಸಪ್ತಮುದ್ರೆಗಳನ್ನು ತೋರಿಸಬೇಕು)

* * * *

## (೧) ಧ್ಯಾನ

### ಕೈಮುಗಿಯಿರಿ

ಪದ್ಮಾಸನೇ ಪದ್ಮಕರೇ ಸರ್ವಲೋಕೈಕಪೂಜಿತೇ ।
ನಾರಾಯಣಪ್ರಿಯೇ ದೇವಿ ಸುಪ್ರೀತಾ ಭವ ಸರ್ವದಾ ॥

ವರದಾಂ ಚ ಶುಭಾಂ ಪದ್ಮದ್ವಯಾಸಕ್ತಚತುರ್ಭುಜಾಮ್ ।
ನಾನಾಭರಣದೀಪ್ತಾಂಗೀಂ ಧ್ಯಾಯೇತ್ ಪದ್ಮೋಪರಿಸ್ಥಿತಾಮ್ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಧ್ಯಾಯಾಮಿ, ಧ್ಯಾನಂ ಸಮರ್ಪಯಾಮಿ ।

* * * *

## ಆವಾಹನೆ

### ಮಂತ್ರಾಕ್ಷತೆ ಹಾಕಿರಿ

ನಾರಾಯಣಿ ಮಹಾಲಕ್ಷ್ಮೀ ದುಗ್ಧಸಾಗರವಾಸಿನಿ ।
ಗುಣತ್ರಯಧರೇ ದೇವೀ ಮಹಾಲಕ್ಷ್ಮೀ ನಮೋಽಸ್ತು ತೇ ॥

ಕ್ಷೀರೋದಾರ್ಣವಸಂಭೂತೇ ಕಮಲೇ ಕಮಲಾಲಯೇ ।
ಸುಸ್ಥಿರಾ ಭವ ಮೇ ಗೇಹೇ ಸುರಾಸುರನಮಸ್ಕೃತೇ ॥

ಸರ್ವಮಂಗಲಮಾಂಗಲ್ಯೇ ವಿಷ್ಣುವಕ್ಷಸ್ಥಲಾಲಯೇ ।
ಆವಾಹಯಾಮಿ ದೇವಿ ತ್ವಾಂ ಸುಪ್ರೀತಾ ಭವ ಸರ್ವದಾ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಆವಾಹಯಾಮಿ – ಆವಾಹನಂ ಸಮರ್ಪಯಾಮಿ ।

---

(೧) ಮುಂದೆ ಪತಿಯು ಮಂತ್ರ ಹೇಳಿದಾಗ ಪತ್ನಿಯು ಪೂಜೆ ಮಾಡಬೇಕು.

## ಆಸನ

### ಆಸನದ ಮೇಲೆ ಮಂತ್ರಾಕ್ಷತೆ ಹಾಕಿರಿ.

ವಜ್ರವೈಢೂರ್ಯರತ್ನಾದಿನವರತ್ನವಿರಾಜಿತಮ್ ।
ಸಿಂಹಾಸನಂ ಪ್ರದಾಸ್ಯಾಮಿ ಗೃಹ್ಯತಾಮಿದಮುತ್ತಮಮ್ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ರತ್ನಸಿಂಹಾಸನಂ ಸಮರ್ಪಯಾಮಿ ।

## ಅರ್ಘ್ಯ

### ದೇವಿಯ ಕೈಗಳಿಗೆ ನೀರು ತೋರಿಸಿ ಅರ್ಘ್ಯಪಾತ್ರೆಗೆ ಹಾಕುವುದು

ಶುದ್ಧೋದಕಂ ಚ ಪಾತ್ರಸ್ಥಂ ಗಂಧಪುಷ್ಪಾದಿಮಿಶ್ರಿತಮ್ ।
ಅರ್ಘ್ಯಂ ದಾಸ್ಯಾಮಿ ತೇ ದೇವಿ ಗೃಹಾಣ ಸುರಪೂಜಿತೇ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಹಸ್ತಯೋಃ ಅರ್ಘ್ಯಂ ಸಮರ್ಪಯಾಮಿ ।

## ಪಾದ್ಯ

### ಒಂದು ಉದ್ಧರಣೆ ನೀರನ್ನು ದೇವಿಯ ಕಾಲುಗಳಿಗೆ ತೋರಿಸಿ ಅರ್ಘ್ಯ ಪಾತ್ರೆಗೆ ಹಾಕುವುದು

ಸುವಾಸಿತಜಲಂ ರಮ್ಯಂ ಸರ್ವತೀರ್ಥಸಮುದ್ಭವಮ್ ।
ಪಾದ್ಯಂ ಗೃಹಾಣ ದೇವಿ ತ್ವಂ ಸರ್ವದೇವನಮಸ್ಕೃತೇ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಪಾದಯೋಃ ಪಾದ್ಯಂ ಸಮರ್ಪಯಾಮಿ ।

## ಆಚಮನ

### ಮೂರು ಉದ್ಧರಣೆ ನೀರನ್ನು ದೇವಿಯ ಕೈಯ ಹತ್ತಿರ ತೋರಿಸಿ ಅರ್ಘ್ಯಪಾತ್ರೆಗೆ ಬಿಡುವುದು

ಸುವರ್ಣಕಲಶಾನೀತಂ ಚಂದನಾಗರುಸಂಯುತಮ್ ।

ಗೃಹಾಣಾಚಮನಂ ದೇವಿ ಮಯಾ ದತ್ತಂ ಶುಭಪ್ರದೇ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಮುಖೇ ಆಚಮನೀಯಂ ಸಮರ್ಪಯಾಮಿ ।

## ಮಧುಪರ್ಕ

### ಜೇನುತುಪ್ಪ ಸಮರ್ಪಿಸುವುದು

ವಿಶುದ್ಧೇ ರಾಜಿತೇ ಪಾತ್ರೇ ದಧಿಮಧ್ವಾಜ್ಯಸಂಯುತಮ್ ।

ಮಧುಪರ್ಕಂ ಗೃಹಾಣೇದಂ ಮಯಾ ತವ ಸಮರ್ಪಿತಮ್ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಮಧುಪರ್ಕಂ ಸಮರ್ಪಯಾಮಿ ।

## ಪಂಚಾಮೃತಸ್ನಾನ

### ಪಂಚಾಮೃತದ್ರವ್ಯಗಳಿಂದ ಪ್ರೋಕ್ಷಣೆ ಮಾಡುವುದು

ಸ್ನಾನಂ ಪಂಚಾಮೃತಕೃತಂ ದೇವದೇವಸುರಾರ್ಚಿತೇ ।

ಗೃಹಾಣ ದಧಿಮಧ್ವಾಜ್ಯಶರ್ಕರಾಕ್ಷೀರಸಂಯುತಮ್ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಪಂಚಾಮೃತಸ್ನಾನಂ ಕರಿಷ್ಯೇ ।

**ಹಾಲು –**

ಸುರಭೇಸ್ತು ಸಮುದ್ಭೂತಂ ದೇವಾನಾಮಪಿ ದುರ್ಲಭಮ್ ।

ಪಯೋ ದದಾಮಿ ದೇವೇಶಿ ಸ್ನಾನಾರ್ಥಂ ಪ್ರತಿಗೃಹ್ಯತಾಮ್ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಕ್ಷೀರೇಣ ಸ್ನಪಯಾಮಿ ।

**ಮೊಸರು –**

ಚಂದ್ರಮಂಡಲಸಂಕಾಶಂ ಸರ್ವದೇವಪ್ರಿಯಂ ಹಿ ತತ್ ।

ದದಾಮಿ ದಧಿ ದೇವೇಶಿ ಸ್ನಾನಾರ್ಥಂ ಪ್ರತಿಗೃಹ್ಯತಾಮ್ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ದಧ್ನಾ ಸ್ನಪಯಾಮಿ ।

**ತುಪ್ಪ–**

ಸುರಾಣಾಮಾಜ್ಯಮಾಹಾರಂ ಆಜ್ಯಂ ಯಜ್ಞೇ ಪ್ರತಿಷ್ಠಿತಮ್ ।

ತೇಜಃ ಪವಿತ್ರಂ ಪರಮಂ ಸ್ನಾನಾರ್ಥಂ ಪ್ರತಿಗೃಹ್ಯತಾಮ್ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಘೃತಸ್ನಾನಂ ಸಮರ್ಪಯಾಮಿ ।

**ಜೇನುತುಪ್ಪ–**

ಇದಂ ಮಧು ಮಯಾ ದೇವಿ ದತ್ತಂ ತುಷ್ಟ್ಯರ್ಥಮೇವ ಚ ।

ಗೃಹಾಣ ದೇವ ದೇವೇಶಿ ಮಮ ಶಾಂತಿಪ್ರದಾ ಭವ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಮಧುಸ್ನಾನಂ ಸಮರ್ಪಯಾಮಿ ।

**ಬೆಲ್ಲ –**

ಇಕ್ಷುದಂಡಾತ್ ಸಮುದ್ಭೂತಂ ಶರ್ಕರಾಂ ಮಧುರಾಂ ಶುಭಾಮ್ ।

ಸ್ನಾನಾಯತೇ ಮಯಾ ದತ್ತಾಂ ಗೃಹಾಣ ಪರಮೇಶ್ವರಿ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಶರ್ಕರಾಸ್ನಾನಂ ಸಮರ್ಪಯಾಮಿ ।

**ಫಲೋದಕ–**

ಫಲತೋಯ್ಯೈಃ ಗಂಧತೋಯ್ಯೈಃ ನಾರಿಕೇಲಕುಶೋದಕೈಃ ।

ಸ್ನಾನಂ ಪುಣ್ಯಜಲೈರ್ಯುಕ್ತಂ ಗೃಹಾಣ ಸುರನಾಯಕಿ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಫಲೋದಕೇನ ಸ್ನಪಯಾಮಿ ।

## ಶುದ್ಧೋದಕಸ್ನಾನ

### ವಿಭಾಗಿಸಿದ ದೇವತೀರ್ಥದಿಂದ ಪ್ರೋಕ್ಷಿಸುವುದು

ಗಂಗಾಗೋದಾವರೀ ಕೃಷ್ಣಾ ಗೌತಮೀ ನರ್ಮದಾ ಜಲೈಃ ।

ಸ್ನಾನಾರ್ಥಮ್ ಆಹೃತಂ ಮಾತಾ ಸ್ವೀಕುರುಷ್ವ ಹರಿಪ್ರಿಯೇ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಶುದ್ಧೋದಕಸ್ನಾನಂ ಸಮರ್ಪಯಾಮಿ । ಸ್ನಾನಾಂಗಮಾಚಮನಂ ಸಮರ್ಪಯಾಮಿ ।

## ವಸ್ತ್ರ

### ಎರಡು ಗೆಜ್ಜೆ ವಸ್ತ್ರ ಸಮರ್ಪಿಸುವುದು

ವಂದಿತಾಂಘ್ರಿಯುಗೇ ದೇವಿ ದುಕೂಲಂ ಚ ಹರಿಪ್ರಿಯೇ ।

ಸುವರ್ಣಮಿಶ್ರಿತಂ ದೇವಿ ಗೃಹಾಣ ಹರಿವಲ್ಲಭೇ ॥

ಜಾಂಬೂನದಕೃತಂ ರಮ್ಯಂ ಮುಕ್ತಾಮಣಿವಿರಾಜಿತಮ್ ।

ಪದ್ಮಹಸ್ತೇ ಮಹಾಲಕ್ಷ್ಮೀ ಗೃಹ್ಯತಾಮ್ ಉತ್ತರೀಯಕಮ್ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ವಸ್ತ್ರಯುಗ್ಮಂ ಸಮರ್ಪಯಾಮಿ ।

## ವಿಭೂಷಣ

### ಅನೇಕ ಆಭರಣಗಳನ್ನು ಸಮರ್ಪಿಸುವುದು

ಕೇಯೂರಕಂಕಣೇ ದಿವ್ಯೇ ಹಾರನೂಪುರಮೇಖಲಾಃ ।

ವಿಭೂಷಣಾನ್ಯಮೂಲ್ಯಾನಿ ಗೃಹಾಣ ಋಷಿಪೂಜಿತೇ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಉಪವೀತಂ ಸಮರ್ಪಯಾಮಿ ।

## ಕಂಠಸೂತ್ರ

### ಮಾಂಗಲ್ಯವನ್ನು ಸಮರ್ಪಿಸುವುದು

ಮಾಂಗಲ್ಯಮಣಿಸಂಯುಕ್ತಂ ಮುಕ್ತಾಫಲಸಮನ್ವಿತಮ್ ।
ದತ್ತಂ ಮಂಗಲಸೂತ್ರಂ ತೇ ಗೃಹಾಣ ಹರಿವಲ್ಲಭೇ ॥

ಪಟ್ಟಸೂತ್ರಭವಂ ದಿವ್ಯಂ ಸ್ವರ್ಣಪೂರ್ಣಾಕೃತೀಯುತಮ್ ।
ಸೌಮಂಗಲ್ಯಾಭಿವೃದ್ಧ್ಯರ್ಥಂ ಕಂಠಸೂತ್ರಂ ದದಾಮಿ ತೇ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ನಾರಾಯಣಹಸ್ತೇನ ಮಂಗಳಸೂತ್ರಂ ಸಮರ್ಪಯಾಮಿ ।

## ಕರಿಮಣಿ

### ಕರಿಮಣಿ ಸಮರ್ಪಿಸುವುದು

ಕಾಂಚೀವಲಯಯುಗ್ಮಂ ಚ ಹಾರನೂಪುರಯುಗ್ಮಕಮ್ ।
ಮಾಲಾಂ ಕೃಷ್ಣಮಣಿನಾ ಚ ಸ್ವರ್ಣಭೂಷಣಮರ್ಪಯೇತ್ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಮಾಲಿಕಾಂ ಸಮರ್ಪಯಾಮಿ ।

## ಅರಿಶಿನ

### ಅರಿಶಿನ ಸಮರ್ಪಿಸುವುದು

ಸೌಭಾಗ್ಯವರ್ಧಿನೀ ದೇವಿ ಸರ್ವಮಂಗಳಕಾರಿಣೀ ।
ಹರಿದ್ರಾ ತೇ ಪ್ರದಾಸ್ಯಾಮಿ ಗೃಹಾಣ ಹರಿವಲ್ಲಭೇ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಹರಿದ್ರಾಚೂರ್ಣಂ ಸಮರ್ಪಯಾಮಿ ।

# ಕುಂಕುಮ

## ಕುಂಕುಮದಿಂದ ಪೂಜೆ

ಕುಂಕುಮಂ ಕಾಂತಿದಂ ದಿವ್ಯಂ ಸರ್ವಕಾಮಫಲಪ್ರದಮ್ ।
ಸರ್ವದೇವೈಶ್ಚ ಸಂಪೂಜ್ಯೇ ಗೃಹಾಣ ಪರಮೇಶ್ವರಿ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಕುಂಕುಮಚೂರ್ಣಂ ಸಮರ್ಪಯಾಮಿ ।

# ಸಿಂಧೂರ

## ಸಿಂಧೂರದಿಂದ ಪೂಜೆ

ಮಹಾದೇವಿ ನಮಸ್ತುಭ್ಯಂ ಸಂಧ್ಯಾವದರುಣಪ್ರಭಮ್ ।
ವೀರಾಲಂಕರಣಂ ದಿವ್ಯಂ ಸಿಂಧೂರಂ ಪ್ರತಿಗೃಹ್ಯತಾಮ್ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಸಿಂಧೂರಂ ಸಮರ್ಪಯಾಮಿ ।

# ಕಾಡಿಗೆ

## ಕಾಡಿಗೆ ಹಚ್ಚುವುದು

ಕಾಮೇಶದಯಿತೇ ದೇವಿ ಕಾಮಿನೀ ವಿಷ್ಣುವಲ್ಲಭೇ ।
ಕಜ್ಜಲಂ ಕಾಮದೇ ದೇವಿ ಕೃಪಯಾ ಸ್ವೀಕುರುಷ್ವ ಮೇ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಕಜ್ಜಲಂ ಸಮರ್ಪಯಾಮಿ ।

# ಗಂಧ

## ಗಂಧ ಸಮರ್ಪಿಸುವುದು

ಚಂದನಾಗರುಸಂಭೂತಂ ಘನಸಾರೇಣ ಸಂಯುತಮ್ ।
ಗಂಧಂ ಗೃಹಾಣ ದೇವಿ ತ್ವಂ ವರದೇ ವಿಷ್ಣುವಲ್ಲಭೇ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಗಂಧಂ ಸಮರ್ಪಯಾಮಿ ।

## ಅಕ್ಷತೆ

### ಅಕ್ಷತೆ ಸಮರ್ಪಿಸುವುದು

ಅಕ್ಷತಾನ್ ಕುಂಕುಮಯುತಾನ್ ಶಾಲೀಯಾನ್ ಕಣವರ್ಜಿತಾನ್ ।
ದೇವಾದ್ಯೈರರ್ಚಿತಪದೇ ಗೃಹಾಣ ತ್ವಂ ಸುಮಧ್ಯಮೇ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮೈ ನಮಃ ಅಕ್ಷತಾನ್ ಸಮರ್ಪಯಾಮಿ ।

## ಅಲಂಕಾರ

### ಆಭರಣಗಳಿಂದ ಅಲಂಕಾರ ಮಾಡುವುದು

ಹಾರಗ್ರೈವೇಯತಾಟಂಕಕಂಕಣಾಂಗುಳಿಭೂಷಣಮ್ ।
ಕಾಂಚೀನೂಪುರಮುಖ್ಯಾನಿ ಭೂಷಣಾನಿ ದದಾಮಿ ತೇ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮೈ ನಮಃ ನಾನಾವಿಧಾನಿ ಸಕಲಾಭರಣಾನಿ ಸಮರ್ಪಯಾಮಿ ।

## ಪುಷ್ಪ

### ಹೂಮಾಲಿಕೆಯನ್ನರ್ಪಿಸುವುದು

ಮಂದಾರೈಃ ಪಾರಿಜಾತಾದ್ಯೈಃ ಮಲ್ಲಿಕೈಃ ಜಾತಿಕೇಸರೈಃ ।
ಚಂಪಕೈರ್ಯೂಥಿಕಾಪುಷ್ಪೈಃ ಗ್ರಥಿತಾಂ ಸ್ವೀಕುರುಷ್ವ ಮೇ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮೈ ನಮಃ ಪುಷ್ಪಮಾಲಿಕಾಂ ಸಮರ್ಪಯಾಮಿ ।

* * * *

## ಅಥಾಂಗಪೂಜಾ

### ಮಂತ್ರಾಕ್ಷತೆಯಿಂದ ಅರ್ಚಿಸುವುದು

| | | |
|---|---|---|
| ಶ್ರೀರಮಾಯೈ ನಮಃ | ಪಾದೌ ಪೂಜಯಾಮಿ | ಪಾದಗಳು |
| ಶ್ರೀಕ್ಷೀರಾಬ್ಧಿತನಯಾಯೈ | ಗುಲ್ಫೌ ಪೂಜಯಾಮಿ | ಹಿಮ್ಮಡಿ |
| ಶ್ರೀಪದ್ಮಾಯೈ ನಮಃ | ಜಾನುನೀ ಪೂಜಯಾಮಿ | ಮೊಣಕಾಲು |
| ಶ್ರೀಕಮಲಾಯೈ ನಮಃ | ಜಂಘೇ ಪೂಜಯಾಮಿ | ಮಂಡಿ |
| ಶ್ರೀಸರ್ವಸಂಪತ್ಪ್ರದಾಯಿನ್ಯೈ | ಊರೂ ಪೂಜಯಾಮಿ | ತೊಡೆ |
| ಶ್ರೀಇಂದಿರಾಯೈ ನಮಃ | ಕಟಿಂ ಪೂಜಯಾಮಿ | ಸೊಂಟ |
| ಶ್ರೀವಿಷ್ಣುವಲ್ಲಭಾಯೈ ನಮಃ | ನಾಭಿಂ ಪೂಜಯಾಮಿ | ಹೊಕ್ಕಳು |
| ಶ್ರೀಕಮಲವಾಸಿನ್ಯೈ ನಮಃ | ಕುಕ್ಷಿಂ ಪೂಜಯಾಮಿ | ಕಿಬ್ಬೊಟ್ಟೆ |
| ಶ್ರೀಸರ್ವದಾಯಿನ್ಯೈ ನಮಃ | ಉದರಂ ಪೂಜಯಾಮಿ | ಹೊಟ್ಟೆ |
| ಶ್ರೀಹರಿಪ್ರಿಯಾಯೈ ನಮಃ | ಹೃದಯಂ ಪೂಜಯಾಮಿ | ಹೃದಯ |
| ಶ್ರೀಮಂಗಳದೇವತಾಯೈ | ವಕ್ಷಃಸ್ಥಲಂ ಪೂಜಯಾಮಿ | ಎದೆ |
| ಶ್ರೀಶ್ರಿಯೈ ನಮಃ | ಸ್ತನೌ ಪೂಜಯಾಮಿ | ಸ್ತನಗಳು |
| ಶ್ರೀಲೋಕಮಾತ್ರೇ ನಮಃ | ಬಾಹೂ ಪೂಜಯಾಮಿ | ಬಾಹುಗಳು |
| ಶ್ರೀಕಮಲಹಸ್ತಾಯೈ ನಮಃ | ಹಸ್ತಾನ್ ಪೂಜಯಾಮಿ | ಕೈಗಳು |
| ಶ್ರೀವರಪ್ರದಾಯೈ ನಮಃ | ಭುಜೌ ಪೂಜಾಯಾಮಿ | ಭುಜಗಳು |
| ಶ್ರೀಕಂಬುಕಂಠ್ಯೈ ನಮಃ | ಕಂಠಂ ಪೂಜಯಾಮಿ | ಕುತ್ತಿಗೆ |
| ಶ್ರೀಶ್ರುತಿಸ್ತುತಾಯೈ ನಮಃ | ಶ್ರೋತ್ರೇ ಪೂಜಯಾಮಿ | ಕಿವಿಗಳು |
| ಶ್ರೀಲೋಕಜನನ್ಯೈ ನಮಃ | ನೇತ್ರಾಣಿ ಪೂಜಯಾಮಿ | ಕಣ್ಣುಗಳು |
| ಶ್ರೀಪ್ರಸನ್ನವದನಾಯೈ ನಮಃ | ಮುಖಂ ಪೂಜಯಾಮಿ | ಮುಖ |
| ಶ್ರೀಇಂದಿರಾಯೈ ನಮಃ | ಲಲಾಟಂ ಪೂಜಯಾಮಿ | ಹಣೆ |
| ಶ್ರೀಕ್ಷೀರಸಾಗರಕನ್ಯಕಾಯೈ | ಶಿರಃ ಪೂಜಯಾಮಿ | ತಲೆ |

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಸರ್ವಾಂಗಾನಿ ಪೂಜಯಾಮಿ ॥

# ಅಥ ದೋರಗ್ರಂಥಿಪೂಜಾ

## ಮಂತ್ರಾಕ್ಷತೆಯಿಂದ ದೋರವನ್ನು ಪೂಜಿಸುವುದು

| | |
|---|---|
| ಶ್ರೀರಮಾಯೈ ನಮಃ | ಪ್ರಥಮಗ್ರಂಥಿಂ ಪೂಜಯಾಮಿ |
| ಶ್ರೀಸರ್ವಮಂಗಳಾಯೈ ನಮಃ | ದ್ವಿತೀಯಗ್ರಂಥಿಂ ಪೂಜಯಾಮಿ |
| ಶ್ರೀಕಮಲವಾಸಿನ್ಯೈ ನಮಃ | ತೃತೀಯಗ್ರಂಥಿಂ ಪೂಜಯಾಮಿ |
| ಶ್ರೀಮನ್ಮಥಜನನ್ಯೈ ನಮಃ | ತುರೀಯಗ್ರಂಥಿಂ ಪೂಜಯಾಮಿ |
| ಶ್ರೀವಿಷ್ಣುವಲ್ಲಭಾಯೈ ನಮಃ | ಪಂಚಮಗ್ರಂಥಿಂ ಪೂಜಯಾಮಿ |
| ಶ್ರೀಕ್ಷೀರಾಬ್ಧಿಕನ್ಯಕಾಯೈ ನಮಃ | ಷಷ್ಠಗ್ರಂಥಿಂ ಪೂಜಯಾಮಿ |
| ಶ್ರೀಲೋಕಮಾತ್ರೇ ನಮಃ | ಸಪ್ತಮಗ್ರಂಥಿಂ ಪೂಜಯಾಮಿ |
| ಶ್ರೀಜಗಜ್ಜನನ್ಯೈ ನಮಃ | ಅಷ್ಟಮಗ್ರಂಥಿಂ ಪೂಜಯಾಮಿ |
| ಶ್ರೀಪದ್ಮಹಸ್ತಾಯೈ ನಮಃ | ನವಮಗ್ರಂಥಿಂ ಪೂಜಯಾಮಿ |
| ಶ್ರೀಭಾರ್ಗವ್ಯೈ ನಮಃ | ದಶಮಗ್ರಂಥಿಂ ಪೂಜಯಾಮಿ |
| ಶ್ರೀಪುಷ್ಟ್ಯೈ ನಮಃ | ಏಕಾದಶಗ್ರಂಥಿಂ ಪೂಜಯಾಮಿ |
| ಶ್ರೀತುಷ್ಟ್ಯೈ ನಮಃ | ದ್ವಾದಶಗ್ರಂಥಿಂ ಪೂಜಯಾಮಿ |

# ಅಥ ಪುಷ್ಪಪೂಜಾ

## ಪುಷ್ಪಗಳಿಂದ ಪೂಜಿಸುವುದು

| | | |
|---|---|---|
| ಶ್ರೀರಮಾಯೈ ನಮಃ | ಜಾಜೀಪುಷ್ಪಂ ಸಮರ್ಪಯಾಮಿ | (ಜಾಜೀ) |
| ಶ್ರೀಇಂದಿರಾಯೈ ನಮಃ | ಕೇತಕೀಪುಷ್ಪಂ ಸಮರ್ಪಯಾಮಿ | (ಕೇತಕೀ) |
| ಶ್ರೀಪದ್ಮಪ್ರಿಯಾಯೈ ನಮಃ | ಪುನ್ನಾಗಪುಷ್ಪಂ ಸಮರ್ಪಯಾಮಿ | (ಸುರಹೊನ್ನೆ) |
| ಶ್ರೀಕಮಲವಾಸಿನ್ಯೈ ನಮಃ | ಕಮಲಪುಷ್ಪಂ ಸಮರ್ಪಯಾಮಿ | (ತಾವರೆ) |
| ಶ್ರೀಹರಿಪ್ರಿಯಾಯೈ ನಮಃ | ಮಲ್ಲಿಕಾಪುಷ್ಪಂ ಸಮರ್ಪಯಾಮಿ | (ಮಲ್ಲಿಗೆ) |
| ಶ್ರೀಲೋಕಮಾತ್ರೇ ನಮಃ | ಪಾರಿಜಾತಪುಷ್ಪಂ ಸಮರ್ಪಯಾಮಿ | (ಪಾರಿಜಾತ) |
| ಶ್ರೀವಿಷ್ಣುವಲ್ಲಭಾಯೈ ನಮಃ | ಉತ್ಪಲಪುಷ್ಪಂ ಸಮರ್ಪಯಾಮಿ | (ನೈದಿಲೆ) |
| ಶ್ರೀಭಾರ್ಗವ್ಯೈ ನಮಃ | ಸೇವಂತಿಕಾಪುಷ್ಪಂ ಸಮರ್ಪಯಾಮಿ | (ಸೇವಂತಿಗೆ) |

ಶ್ರೀಲೋಕೈಶ್ವರ್ಯೈ ನಮಃ  ಸುಗಂಧರಾಜಪುಷ್ಪಂ ಸಮರ್ಪಯಾಮಿ

ಶ್ರೀತುಷ್ಟ್ಯೈ ನಮಃ  ಸ್ಥಲಪದ್ಮಪುಷ್ಪಂ ಸಮರ್ಪಯಾಮಿ  (ಗುಲಾಬಿ)

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ನಾನಾವಿಧ-ಪರಿಮಳಪುಷ್ಪಾಣಿ ಸಮರ್ಪಯಾಮಿ

## ಅಥ ಅಷ್ಟೋತ್ತರಶತನಾಮ ಪೂಜಾ

### ಅರಿಶಿನ ಕುಂಕುಮದಿಂದ ಅರ್ಚನೆ ಮಾಡಿರಿ

೧) ಶ್ರೀಶ್ರಿಯೈ ನಮಃ
೨) ಶ್ರೀಪದ್ಮಾಯೈ ನಮಃ
೩) ಶ್ರೀಮುಕುಂದಮಹಿಷ್ಯೈ ನಮಃ
೪) ಶ್ರೀಕಮಲಾಯೈ ನಮಃ
೫) ಶ್ರೀ ಲಕ್ಷ್ಮ್ಯೈ ನಮಃ
೬) ಶ್ರೀಲೋಕೇಶ್ವರ್ಯೈ ನಮಃ
೭) ಶ್ರೀಮಾಯಾಯೈ ನಮಃ
೮) ಶ್ರೀಕ್ಷೀರಾಬ್ಧಿಸುತಾಯೈ ನಮಃ
೯) ಶ್ರೀವಿರಿಂಚಿಜನನ್ಯೈ ನಮಃ
೧೦) ಶ್ರೀಸರ್ವಾಭೀಷ್ಟಪ್ರದಾಯೈ ನಮಃ (೧೦)
ಶ್ರೀಕಮಲಪ್ರಿಯಾಯೈ ನಮಃ
ಶ್ರೀಕಮಲಹಸ್ತಾಯೈ ನಮಃ
ಶ್ರೀತ್ರೈಲೋಕ್ಯಜನನ್ಯೈ ನಮಃ
ಶ್ರೀಅರವಿಂದಮಂದಿರಾಯೈ ನಮಃ
ಶ್ರೀವಿಷ್ಣುವಕ್ಷಃಸ್ಥಲಸ್ಥಿತಾಯೈ ನಮಃ
ಶ್ರೀತ್ರಿಪುರಸುಂದರ್ಯೈ ನಮಃ
ಶ್ರೀಕಮಲಪ್ರಿಯಾಯೈ ನಮಃ
ಶ್ರೀಸುವದನಾಯೈ ನಮಃ
ಶ್ರೀಸುಕುಚಾಯೈ ನಮಃ
ಶ್ರೀಸುಭುಜಾಯೈ ನಮಃ (೨೦)
ಶ್ರೀಸುನೇತ್ರಾಯೈ ನಮಃ
ಶ್ರೀಸುಕಪೋಲಾಯೈ ನಮಃ
ಶ್ರೀಸುಕುಂತಲಾಯೈ ನಮಃ
ಶ್ರೀಹೇಮಗಾತ್ರ್ಯೈ ನಮಃ
ಶ್ರೀಸುವಾಸಿನ್ಯೈ ನಮಃ
ಶ್ರೀಅಣುಮಧ್ಯಾಯೈ ನಮಃ
ಶ್ರೀವಿಪುಲನಿತಂಬಾಯೈ ನಮಃ
ಶ್ರೀರಂಭೋರವೇ ನಮಃ
ಶ್ರೀರಮಣೀಯಾಯೈ ನಮಃ
ಶ್ರೀವೇದಾಂತವೇದ್ಯಾಯೈ ನಮಃ (೩೦)
ಶ್ರೀಕಮಲಾಂಘ್ರ್ಯೈ ನಮಃ
ಶ್ರೀಕಮಲವಾಸನಾಯೈ ನಮಃ
ಶ್ರೀಚಂದ್ರಾನನಾಯೈ ನಮಃ
ಶ್ರೀಸುಂದರವದನಾಯೈ ನಮಃ
ಶ್ರೀಬಿಂಬಾಧರಾಯೈ ನಮಃ
ಓಂಕಂಬುಕಂಠ್ಯೈ ನಮಃ

ಶ್ರೀಹರಿವಲ್ಲಭಾಯೈ ನಮಃ
ಶ್ರೀಇಂದಿರಾಯೈ ನಮಃ
ಶ್ರೀರಮಾಯೈ ನಮಃ
ಶ್ರೀಸುರಾರ್ಚಿತಾಯೈ ನಮಃ (೪೦)
ಶ್ರೀಭಕ್ತವತ್ಸಲಾಯೈ ನಮಃ
ಶ್ರೀಹಂಸಗಾಮಿನ್ಯೈ ನಮಃ
ಶ್ರೀಹಂಸಾರೂಢಾಯೈ ನಮಃ
ಶ್ರೀತ್ರಿದಶವಂದಿತಾಯೈ ನಮಃ
ಶ್ರೀಕಮಲಾಕ್ಷ್ಯೈ ನಮಃ
ಶ್ರೀಕನಕಾಭಾಯೈ ನಮಃ
ಶ್ರೀಸುನಾಸಾಯೈ ನಮಃ
ಶ್ರೀದುರ್ಗಾಯೈ ನಮಃ
ಶ್ರೀವಿಶ್ವರೂಪಿಣ್ಯೈ ನಮಃ
ಶ್ರೀಸಂವರ್ತಕಾಯೈ ನಮಃ (೫೦)
ಶ್ರೀವಿಶ್ವವಿನುತಾಯೈ ನಮಃ
ಶ್ರೀಅನಂತಮೂರ್ತ್ಯೈ ನಮಃ
ಶ್ರೀಆದಿಮೂರ್ತ್ಯೈ ನಮಃ
ಶ್ರೀಸಕಲಾಧಾರಾಯೈ ನಮಃ
ಶ್ರೀಅವ್ಯಕ್ತಾಯೈ ನಮಃ
ಶ್ರೀಜಗದ್ರೂಪಾಯೈ ನಮಃ
ಶ್ರೀಚಿತ್ತಜಮಾತ್ರೇ ನಮಃ
ಶ್ರೀಚಿತ್ಸ್ವರೂಪಾಯೈ ನಮಃ
ಶ್ರೀಚಿದಾನಂದಾಯೈ ನಮಃ
ಶ್ರೀಅಸುರಮರ್ದಿನ್ಯೈ ನಮಃ (೬೦)
ಶ್ರೀಕಲುಷಮರ್ದಿನ್ಯೈ ನಮಃ
ಶ್ರೀಗರುಡವಾಹನಾಯೈ ನಮಃ
ಶ್ರೀಚಕ್ರಹಸ್ತಾಯೈನಮಃ
ಶ್ರೀಶಂಖಹಸ್ತಾಯೈ ನಮಃ
ಶ್ರೀವೀರಾಸನಾಯೈ ನಮಃ
ಶ್ರೀವಿದ್ಯುತ್‌ಪ್ರಭಾಯೈ ನಮಃ
ಶ್ರೀವಿದ್ಯಾಪ್ರದಾಯಿನ್ಯೈ ನಮಃ
ಶ್ರೀಸದಾನಂದಾಯೈ ನಮಃ
ಶ್ರೀಸರ್ವಲೋಕಪ್ರಿಯಾಯೈ ನಮಃ
ಶ್ರೀಸರ್ವದೇವಪ್ರಿಯಾಯೈ (೭೦)
ಶ್ರೀಸರ್ವರಾಜಾರ್ಥದಾಯೈ ನಮಃ
ಶ್ರೀಸೃಷ್ಟಿಸ್ಥಿತಿಲಯಕರ್ತ್ರ್ಯೈ ನಮಃ
ಶ್ರೀಶುಚಿಸ್ಮಿತಾಯೈ ನಮಃ
ಶ್ರೀಶುದ್ಧವರ್ಣಾಯೈ ನಮಃ
ಶ್ರೀಸಿದ್ಧವೃಂದಾರಕವಂದಿತಾಯೈ ನಮಃ
ಶ್ರೀಈಶಪೂಜಿತಾಯೈ ನಮಃ
ಶ್ರೀಧಾನ್ಯಲಕ್ಷ್ಮ್ಯೈ ನಮಃ
ಶ್ರೀಭೂಮ್ಯೈ ನಮಃ
ಶ್ರೀಮಹಾಲಕ್ಷ್ಮ್ಯೈ ನಮಃ
ಶ್ರೀಸಿದ್ಧಲಕ್ಷ್ಮ್ಯೈ ನಮಃ (೮೦)
ಶ್ರೀಶ್ರೀವರಲಕ್ಷ್ಮ್ಯೈ ನಮಃ
ಶ್ರೀಲಕ್ಷ್ಮ್ಯೈ ನಮಃ
ಶ್ರೀಪದ್ಮಾಯೈ ನಮಃ
ಶ್ರೀಬ್ರಹ್ಮಾರ್ಚಿತಾಯೈ ನಮಃ
ಶ್ರೀಖಡ್ಗಧರಾಯೈ ನಮಃ
ಶ್ರೀಗದಾಧರಾಯೈ ನಮಃ

ಶ್ರೀಧನುರ್ಧರಾಯೈ ನಮಃ
ಶ್ರೀವಿಜಯಲಕ್ಷ್ಮ್ಯೈ ನಮಃ
ಶ್ರೀಸಂತಾನಲಕ್ಷ್ಮ್ಯೈ ನಮಃ
ಶ್ರೀಸರಸ್ವತ್ಯೈ ನಮಃ
ಶ್ರೀಸಕಲಸಾಮ್ರಾಜ್ಯಲಕ್ಷ್ಮ್ಯೈ ನಮಃ
ಶ್ರೀಅಷ್ಟಲಕ್ಷ್ಮ್ಯೈ ನಮಃ
ಶ್ರೀಪದ್ಮಾಲಯಾಯೈ ನಮಃ
ಶ್ರೀಹರಿಪ್ರಿಯಾಯೈ ನಮಃ
ಶ್ರೀ ಧಾತ್ರ್ಯೈ ನಮಃ
ಶ್ರೀ ಭಾರ್ಗವ್ಯೈ ನಮಃ
ಶ್ರೀಲೋಕಮಾತ್ರೇ ನಮಃ
ಶ್ರೀವರಲಕ್ಷ್ಮ್ಯೈ ನಮಃ
ಶ್ರೀಸೌಭಾಗ್ಯಲಕ್ಷ್ಮ್ಯೈ ನಮಃ (೯೦)
ಶ್ರೀಧಾನ್ಯಲಕ್ಷ್ಮ್ಯೈ ನಮಃ
ಓಂಶಾಂತಿಲಕ್ಷ್ಮ್ಯೈ ನಮಃ
ಶ್ರೀಗಜಲಕ್ಷ್ಮ್ಯೈ ನಮಃ
ಶ್ರೀಧನಲಕ್ಷ್ಮ್ಯೈ ನಮಃ
ಶ್ರೀಕಮಲಾಲಯಾಯೈ ನಮಃ (೧೦೦)
ಶ್ರೀಇಂದಿರಾಯೈ ನಮಃ
ಶ್ರೀ ಸುಖಾಲಯಾಯೈ ನಮಃ
ಶ್ರೀ ರೇವತ್ಯೈ ನಮಃ
ಶ್ರೀರಮಾಯೈ ನಮಃ (೧೦೮)

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಅಷ್ಟೋತ್ತರಶತ-ನಾಮಪೂಜಾಂ ಸಮರ್ಪಯಾಮಿ ।

## ಧೂಪ

### ಧೂಪಾರತಿ ಮಾಡಿರಿ

ಚಂದನಾಗರುಕರ್ಪೂರಶ್ವೇತಗುಗ್ಗುಳಸಂಯುತಮ್ ।
ಕಪಿಲಾಘೃತಸಂಯುಕ್ತಂ ಧೂಪೋಽಯಂ ಪ್ರತಿಗೃಹ್ಯತಾಮ್ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ – ಧೂಪಮಾಘ್ರಾ-ಪಯಾಮಿ ।

## ಏಕಾರ್ತಿದೀಪ

### ಏಕಾರತಿ ದೀಪ ಬೆಳಗಿರಿ

ಘೃತಾಕ್ತವರ್ತಿಸುಸಂಯುಕ್ತಮಂಧಕಾರವಿನಾಶಕಮ್ ।
ದೀಪಂ ದಾಸ್ಯಾಮಿ ತೇ ದೇವಿ ಗೃಹಾಣ ಮುದಿತಾಭವ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ – ಏಕಾರ್ತಿದೀಪಂ ದರ್ಶಯಾಮಿ ।

ಪತ್ರಪುಷ್ಪಾಣಿ ಸಮರ್ಪಯಾಮಿ । (ಹಲಗಾರತಿಯ ತುದಿಯಲ್ಲಿ ಹಾಕಿಟ್ಟ ಹೂವು ಮಂತ್ರಾಕ್ಷತೆಗಳನ್ನು ಸಮರ್ಪಿಸುವುದು)

## ನೈವೇದ್ಯ

ಧೂಪದೀಪಾನಂತರ ಈ ಪುಸ್ತಕದ ಕೊನೆಯಲ್ಲಿ ಬರೆದ ಅಡುಗೆಗಳನ್ನು ಮಾಡಿ, ದೇವರೆದುರು ಮಂಡಲ ಮಾಡಿ ಅಲ್ಲಿ ಇಡಬೇಕು. ಹಾಗೂ ನೀರು ಅನೇಕ ಬಗೆಯ ಹಣ್ಣುಗಳು, ಹಾಲು, ಮೊಸರು, ತುಪ್ಪಗಳನ್ನು ಮತ್ತೊಂದು ಮಂಡಲದಲ್ಲಿ ಇಡಬೇಕು.

ಗುಡಮುದ್ಗಾದಿಸಂಯುಕ್ತಂ ಪೂರ್ಣಗರ್ಭಂ ಮನೋಹರಮ್ ।
ಮೋದಕಾಪೂಪಸಂಯುಕ್ತಂ ದಧ್ಯನ್ನಂ ಮಧುಪಾಯಸಮ್ ॥

ನಾನಾಪಾಕಸಮಾಯುಕ್ತಂ ಸೂಪಂ ಶಾಲ್ಯನ್ನಸಂಯುತಮ್ ।
ರಸಾಯನೋಪದಂಶಾದಿ ನೈವೇದ್ಯಂ ಪ್ರತಿಗೃಹ್ಯತಾಮ್ ॥

ನೈವೇದ್ಯಂ ಷಡ್ರಸೋಪೇತಂ ದಧಿಮಧ್ವಾಜ್ಯಸಂಯುತಮ್ ।
ನಾನಾಭಕ್ಷ್ಯಫಲೋಪೇತಂ ಗೃಹಾಣ ಹರಿವಲ್ಲಭೇ ॥

ಘನಸಾರಸುಗಂಧೇನ ಮಿಶ್ರಿತಂ ಪುಷ್ಪವಾಸಿತಮ್ ।
ಪಾನೀಯಂ ಗೃಹ್ಯತಾಂ ದೇವಿ ಶೀತಲಂ ಸುಮನೋಹರಮ್ ॥

ಸತ್ಯಂತ್ವರ್ತೇನ ಪರಿಷಿಂಚಾಮಿ ।

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ । ನಾನಾವಿಧ-ನೈವೇದ್ಯಂ ಸಮರ್ಪಯಾಮಿ । ನಾರಿಕೇಳಫಲಕದಲೀಫಲಾದಿ ನಾನಾವಿಧಫಲಾನಿ ಸಮರ್ಪಯಾಮಿ । (ನಿವೇದಯಾಮಿ)

ಮುಖದ ಮೇಲೆ ಬಟ್ಟೆ ಹಾಕಿಕೊಂಡು ನಾರಾಯಣಾಷ್ಟಾಕ್ಷರ ಲಕ್ಷ್ಮೀಮಂತ್ರಗಳನ್ನು ಯಥಾಶಕ್ತಿ ಜಪಿಸಬೇಕು.

ಗಂಡೂಷಂ, ಸಮರ್ಪಯಾಮಿ,
ಹಸ್ತಪ್ರಕ್ಷಾಳನಂ ಸಮರ್ಪಯಾಮಿ,
ಪಾದಪ್ರಕ್ಷಾಲನಂ ಸಮರ್ಪಯಾಮಿ,
ಹಸ್ತಯೋಃ ಪುನರಾಚಮನಂ ಸಮರ್ಪಯಾಮಿ ॥

## ತಾಂಬೂಲ

### ವಿಳ್ಯದೆಲೆ ಸಮರ್ಪಿಸಿರಿ

ಪೂಗೀಫಲಸಮಾಯುಕ್ತಂ ನಾಗವಲ್ಲೀದಳೈರ್ಯುತಮ್ ।

ಕರ್ಪೂರಚೂರ್ಣಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ – ತಾಂಬೂಲಂ ಸಮರ್ಪಯಾಮಿ । ತಾಂಬೂಲಾನಂತರೇ ಆಚಮನಂ ಸಮರ್ಪಯಾಮಿ ।

## ದಕ್ಷಿಣೆ

### ಮನೆಯಲ್ಲಿರುವ ಎಲ್ಲ ಹಣವನ್ನು ಒಂದು ತಟ್ಟೆಯಲ್ಲಿಟ್ಟು ಸಮರ್ಪಣೆ ಮಾಡಿರಿ.

ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ ।

ಅನಂತಪುಣ್ಯಫಲದಂ ಅತಃ ಶಾಂತಿಂ ಪ್ರಯಚ್ಛ ಮೇ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ – ಸುವರ್ಣಪುಷ್ಪ-ದಕ್ಷಿಣಾಂ ಸಮರ್ಪಯಾಮಿ ।

## ಮಹಾಮಂಗಳಾರತಿ

### ಲಕ್ಷ್ಮಿಯಹಾಡುಗಳನ್ನು ಪಠಿಸುತ್ತಾ ಬಗೆ ಬಗೆಯ ಆರತಿಗಳನ್ನು ಮಾಡಿರಿ. ಕನಿಷ್ಠಪಕ್ಷ ೫ ನಿಮಿಷವಾದರೂ ಮಂಗಳಾರತಿ ಮಾಡಿರಿ.

ಜ್ಯೋತಿರ್ಮಯಸ್ವರೂಪಾಯೈ ಸರ್ವಲೋಕತಮೋಪಹೇ ।

ನೀರಾಜನಂ ಪ್ರದಾಸ್ಯಾಮಿ ಗೃಹ್ಯತಾಂ ಭಕ್ತವತ್ಸಲೇ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ ಮಹಾಮಂಗಳ-ನೀರಾಜನಂ ಸಮರ್ಪಯಾಮಿ ।

## ಮಂತ್ರಪುಷ್ಪ

### ಬೊಗಸೆಯಿಂದ ಹೂವು ತುಳಸಿಗಳನ್ನು ಯಥೇಚ್ಛ ಸಮರ್ಪಿಸಿರಿ.

ಪದ್ಮಾಸನೇ ಪದ್ಮಕರೇ ಸರ್ವಲೋಕೈಕಪೂಜಿತೇ ।

ನಾರಾಯಣಪ್ರಿಯೇ ದೇವಿ ಸುಪ್ರೀತಾ ಭವ ಸರ್ವದಾ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ - ವೇದೋಕ್ತಮಂತ್ರ - ಪುಷ್ಪಾಣಿ ಸಮರ್ಪಯಾಮಿ ।

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ - ಛತ್ರ - ಚಾಮರ - ವ್ಯಜನ - ದರ್ಪಣ - ನೃತ್ಯ - ಗೀತಾ - ವಾದ್ಯಾಂದೋಲಿಕಾದಿ ಸಮಸ್ತರಾಜೋಪಚಾರಪೂಜಾಃ ಸಮರ್ಪಯಾಮಿ ।

## ಪ್ರದಕ್ಷಿಣನಮಸ್ಕಾರ

### ಪತಿ-ಪತ್ನಿಯರು ಒಟ್ಟಿಗೆ ಕನಿಷ್ಠ ನಾಕು ನಮಸ್ಕಾರ ಮಾಡಿರಿ

''ಪದ್ಮಾಸನೇ ಪದ್ಮಕರೇ ಸರ್ವಲೋಕೈಕಪೂಜಿತೇ ॥

ನಾರಾಯಣಪ್ರಿಯೇ ದೇವಿ ಸುಪ್ರೀತಾ ಭವ ಸರ್ವದಾ'' ।

ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ ।

ತಾನಿ ತಾನಿ ಪ್ರಣಶ್ಯಂತಿ ಪ್ರದಕ್ಷಿಣ ಪದೇ ಪದೇ ॥

ನಮಸ್ತೇ ಲೋಕಜನನೀ ನಮಸ್ತೇ ವಿಷ್ಣುವಲ್ಲಭೇ ।

ಹರಿಕಾಂತೇ ನಮಸ್ತೇಽಸ್ತು ತ್ರಾಹಿ ಮಾಂ ದುಃಖಸಾಗರಾತ್ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ – ಪ್ರದಕ್ಷಿಣನಮಸ್ಕಾರಾನ್ ಸಮರ್ಪಯಾಮಿ ॥

## ಪ್ರಾರ್ಥನೆ

**ದೀರ್ಘಾಯುಷ್ಯ ಸೌಮಾಂಗಲ್ಯಗಳ ಪ್ರಾರ್ಥನೆಯ ಜೊತೆಗೆ ಹರಿಭಕ್ತಿ, ತತ್ವಜ್ಞಾನ, ವಿರಕ್ತಿಗಳ ಪ್ರಾರ್ಥನೆ ಮಾಡಿರಿ.**

ದೀರ್ಘಮಾಯುರ್ಧನಂ ಧಾನ್ಯಂ ಸೌಮಾಂಗಲ್ಯಂ ಚ ಪುತ್ರತಾಮ್ ।
ದೇಹಿ ಮೇ ದೇವಿ ಸುಪ್ರೀತೇ ಪಶುರತ್ನಾದಿಸಂಪದಃ ॥

ಶ್ರೀದೇವೀ ಪ್ರಥಮಂ ನಾಮ ದ್ವಿತೀಯಂ ಅಮೃತೋದ್ಭವಾ ।
ತೃತೀಯಂ ಕಮಲಾ ಪ್ರೋಕ್ತಾ ಚತುರ್ಥಂ ಚಂದ್ರಲೋಚನಾ ।
ಪಂಚಮಂ ವಿಷ್ಣುಪತ್ನೀ ಚ ಷಷ್ಠಂ ಶ್ರೀವೈಷ್ಣವೀ ತಥಾ ।
ಸಪ್ತಮಂ ತು ವರಾರೋಹಾ ಹ್ಯಷ್ಟಮಂ ಹರಿವಲ್ಲಭಾ ।
ನವಮಂ ಶಾರ್ಙ್ಗಿಣೀ ಪ್ರೋಕ್ತಾ ದಶಮಂ ದೇವದೇವಿಕಾ ।
ಏಕಾದಶಂ ಮಹಾಲಕ್ಷ್ಮೀಃ ದ್ವಾದಶಂ ಲೋಕಸುಂದರೀ ॥

ನಮಃ ಶ್ರಿಯೈ ಲೋಕಮಾತ್ರೇ ಬ್ರಹ್ಮಮಾತ್ರೇ ನಮೋ ನಮಃ ।
ನಮಸ್ತೇ ಪದ್ಮನೇತ್ರಾಯೈ ಪದ್ಮಮುಖ್ಯೈ ನಮೋ ನಮಃ ।
ಪ್ರಸನ್ನಮುಖಪದ್ಮಾಯೈ ಪದ್ಮಕಾಂತ್ಯೈ ನಮೋ ನಮಃ ।
ನಮೋ ಬಿಲ್ವವನಸ್ಥಾಯೈ ವಿಷ್ಣುಪತ್ನ್ಯೈ ನಮೋ ನಮಃ । (ಬ್ರಹ್ಮಾಂಡ)

ಕೌಶೇಯಪೀತವಸನಾಮ್ ಅರವಿಂದನೇತ್ರಾಂ
ಪದ್ಮದ್ವಯಾಭಯವರೋದ್ಯತಪದ್ಮಹಸ್ತಾಮ್ ।
ಉದ್ಯಚ್ಛತಾರ್ಕಸದೃಶೀಂ ಪರಮಾಂಕಸಂಸ್ಥಾಂ
ಧ್ಯಾಯೇದ್ವಿಧೀಶನತಪಾತಯುಗಾಂ ಜನಿತ್ರೀಮ್ ॥

ಪದ್ಮಪ್ರಿಯೇ ಪದ್ಮಿನಿ ಪದ್ಮಹಸ್ತೇ ಪದ್ಮಾಲಯೇಪದ್ಮದಳಾಯತಾಕ್ಷಿ ।
ವಿಶ್ವಪ್ರಿಯೇ ವಿಷ್ಣುಮನೋನುಕೂಲೇ ತ್ವತ್ಪಾದಪದ್ಮಂ ಮಯಿ ಸನ್ನಿಧತ್ಸ್ವ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ । ಪ್ರಾರ್ಥನಾಂ ಸಮರ್ಪಯಾಮಿ ।

## ಅರ್ಘ್ಯ

### ಪತಿಪತ್ನಿಯರು ಶಂಖದಿಂದ ದೇವಿಯ ಮುಂದಿರುವ ತಟ್ಟೆಯಲ್ಲಿ ಅರ್ಘ್ಯವನ್ನು ನೀಡಬೇಕು.

ಕ್ಷೀರೋದಾರ್ಣವಸಂಭೂತೇ ವಿಷ್ಣುಪತ್ನೀ ಸುಶೋಭನೇ ।

ಅರ್ಘ್ಯಂ ಗೃಹೀತ್ವಾ ತ್ವಂ ದೇವಿ ಸರ್ವಾಭೀಷ್ಟಂ ಚ ದೇಹಿ ಮೇ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ । ಇದಮರ್ಘ್ಯಂ ಇದಮರ್ಘ್ಯಂ ಇದಮರ್ಘ್ಯಮ್ ॥

## ದೋರಗ್ರಹಣ

### ದೇವಿಯ ಹತ್ತಿರ ಇಟ್ಟಿರುವ ದೋರವನ್ನು ಕೆಳಗಿನ ಶ್ಲೋಕ ಹೇಳಿ ತೆಗೆದುಕೊಳ್ಳುವುದು.

ದಾರಿದ್ರ್ಯಸಾಗರೇ ಮಗ್ನಾ ಭೀತ್ಯಾಽಹಂ ಭವಭೀತಿಭಿಃ ।

ದೋರಂ ಗೃಹ್ಣಾಮಿ ಕಮಲೇ ಮಮಾಭೀಷ್ಟಪ್ರದಾ ಭವ ॥

ಕೆಳಗಿನ ಮಂತ್ರವನ್ನು ಹೇಳುತ್ತಾ ದೋರವನ್ನು ಕಣ್ಣಿಗೆ ಒತ್ತಿಕೊಳ್ಳುವುದು.

ಕಮಲೇ ದೋರರೂಪೇಣ ಸ್ಥಿತೇ ಸರ್ವಾಘಹಾರಿಣೀ ।

ನಮಃ ತ್ರೈಲೋಕ್ಯಜನನೀ ದಾರಿದ್ರ್ಯಂ ಮೇ ನಿವಾರಯ ॥

ದೋರವನ್ನು ಪತಿಯಿಂದ ಕಟ್ಟಿಸಿಕೊಳ್ಳುವಾಗ ಹೇಳುವ ಶ್ಲೋಕ.

ದ್ವಾದಶಗ್ರಂಥಿಸಂಯುಕ್ತಂ ಕೃತ್ವಾ ದ್ವಾದಶತಂತುಭಿಃ ।

ಧಾರಯಾಮಿ ಮಹಾದೇವಿ ಸೂತ್ರಂ ತೇ ಸರ್ವಮಂಗಲೇ ॥

ಹಳೆಯ ದಾರವನ್ನು ಬಿಚ್ಚುವಾಗ ಹೇಳುವ ಶ್ಲೋಕ.

ದಾಮೋದರಿ ನಮಸ್ತೇಽಸ್ತು ನಮಸ್ತೇ ಲೋಕನಾಯಕೀ ।

ನಮಸ್ತೇಽಸ್ತು ಮಹಾಲಕ್ಷ್ಮೀ ತ್ರಾಹಿ ಮಾಂ ಪರಮೇಶ್ವರಿ ॥

ಹೂವು ಮಂತ್ರಾಕ್ಷತೆಗಳಿಂದ ದೇವಿಯನ್ನು ಪೂಜಿಸುವುದು.

ದೇವಿ ಸರ್ವಜಗದ್ರೂಪೇ ದೇವತಾನಾಮಭೀಷ್ಟದೇ ।

ಪುಷ್ಪಾಂಜಲಿಂ ಪ್ರದಾಸ್ಯಾಮಿ ಸರ್ವಸಿದ್ಧಿಪ್ರದಾಯಿನೀ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ – ಪುಷ್ಪಾಂಜಲಿಂ ಪ್ರದಾಸ್ಯಾಮಿ । ಹೂವು ಮಂತ್ರಾಕ್ಷತೆ ಸಮರ್ಪಿಸುವುದು.

## ವಾಯನದಾನ

ತಟ್ಟೆಯಲ್ಲಿ ಅಕ್ಕಿ , ಎರಡು ತೆಂಗಿನಕಾಯಿಗಳು, ಬೆಲ್ಲದ ಅಚ್ಚು, ಹಣ್ಣುಗಳನ್ನಿಟ್ಟು ಎಲೆ ಅಡಕೆಯ ಜೊತೆಗೆ ಯಥಾಶಕ್ತಿ ದಕ್ಷಿಣೆ ಇಟ್ಟು, ಒಂದು ಸಣ್ಣ ತಟ್ಟೆಯನ್ನು ತೆಂಗಿನ ಕಾಯಿಗಳ ಮೇಲೆ ಮುಚ್ಚುವುದು. ಪುರೋಹಿತರ ಎದುರಿಗೆ ಮಂಡಲ ಮಾಡಿ ಅದರ ಮೇಲೆ ಉಪಾಯನದಾನದ ತಟ್ಟೆಯನ್ನಿಟ್ಟು ಕುಳಿತುಕೊಂಡು ಹೀಗೆ ಹೇಳಬೇಕು. (ಸಂಕಲ್ಪ ಮಾಡಬೇಕು)

ಅದ್ಯ ಪೂರ್ವೋಚ್ಚರಿತ ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಮಮ ಶ್ರೀವರಮಹಾಲಕ್ಷ್ಮೀವ್ರತ ಸಾದ್ಗುಣ್ಯಾರ್ಥಂ ಉಪಾಯನದಾನಮಹಂ ಕರಿಷ್ಯೇ –

ಪುರೋಹಿತರಿಗೆ (ಬ್ರಾಹ್ಮಣರಿಗೆ) ಗಂಧ, ಹೂವು ಕೊಡುವುದು.

ಇಮೇ ಗಂಧಾಃ ಇಮಾನಿ ಪುಷ್ಪಾಣಿ, ಗಂಧಪುಷ್ಪಧೂಪದೀಪಸಕಲಾರಾಧನೈಃ ಸ್ವರ್ಚಿತಮ್ । ಎಂದು ಹೇಳಿ ನೀರುಮಂತ್ರಾಕ್ಷತೆ ಬಿಡುವುದು. ಆಮೇಲೆ ನೀರನ್ನು ಸಣ್ಣ ತಟ್ಟೆಯ ಮೇಲೆ ಪ್ರೋಕ್ಷಿಸುವುದು.

ವಿಷ್ಣೋ ಉಪಾಯನದಾನಂ ರಕ್ಷಸ್ವ - ಎಂದು ಹೇಳಿ ತಟ್ಟೆಯನ್ನು ಅತ್ತ ಇಟ್ಟು ಎರಡು ತೆಂಗಿನಕಾಯಿಗಳ ಮೇಲೆ ಪತ್ನಿಯಿಂದ ನೀರು ಹಾಕಿಸಿ, ''ಇದಂ ಉಪಾಯನ-ದಾನಮ್'' -

## ಅರ್ಘ್ಯ

**ಪತಿಪತ್ನಿಯರು ಶಂಖದಿಂದ ದೇವಿಯ ಮುಂದಿರುವ ತಟ್ಟೆಯಲ್ಲಿ ಅರ್ಘ್ಯವನ್ನು ನೀಡಬೇಕು.**

ಕ್ಷೀರೋದಾರ್ಣವಸಂಭೂತೇ ವಿಷ್ಣುಪತ್ನೀ ಸುಶೋಭನೇ ।
ಅರ್ಘ್ಯಂ ಗೃಹೀತ್ವಾ ತ್ವಂ ದೇವಿ ಸರ್ವಾಭೀಷ್ಟಂ ಚ ದೇಹಿ ಮೇ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ । ಇದಮರ್ಘ್ಯಂ ಇದಮರ್ಘ್ಯಂ ಇದಮರ್ಘ್ಯಮ್ ॥

## ದೋರಗ್ರಹಣ

**ದೇವಿಯ ಹತ್ತಿರ ಇಟ್ಟಿರುವ ದೋರವನ್ನು ಕೆಳಗಿನ ಶ್ಲೋಕ ಹೇಳಿ ತೆಗೆದುಕೊಳ್ಳುವುದು.**

ದಾರಿದ್ರ್ಯಸಾಗರೇ ಮಗ್ನಾ ಭೀತ್ಯಾಽಹಂ ಭವಭೀತಿಭಿಃ ।
ದೋರಂ ಗೃಹ್ಣಾಮಿ ಕಮಲೇ ಮಮಾಭೀಷ್ಟಪ್ರದಾ ಭವ ॥

ಕೆಳಗಿನ ಮಂತ್ರವನ್ನು ಹೇಳುತ್ತಾ ದೋರವನ್ನು ಕಣ್ಣಿಗೆ ಒತ್ತಿಕೊಳ್ಳುವುದು.

ಕಮಲೇ ದೋರರೂಪೇಣ ಸ್ಥಿತೇ ಸರ್ವಾಘಹಾರಿಣೇ ।
ನಮಃ ತ್ರೈಲೋಕ್ಯಜನನೀ ದಾರಿದ್ರ್ಯಂ ಮೇ ನಿವಾರಯ ॥

ದೋರವನ್ನು ಪತಿಯಿಂದ ಕಟ್ಟಿಸಿಕೊಳ್ಳುವಾಗ ಹೇಳುವ ಶ್ಲೋಕ.

ದ್ವಾದಶಗ್ರಂಥಿಸಂಯುಕ್ತಂ ಕೃತ್ವಾ ದ್ವಾದಶತಂತುಭಿಃ ।
ಧಾರಯಾಮಿ ಮಹಾದೇವಿ ಸೂತ್ರಂ ತೇ ಸರ್ವಮಂಗಲೇ ॥

ಹಳೆಯ ದಾರವನ್ನು ಬಿಚ್ಚುವಾಗ ಹೇಳುವ ಶ್ಲೋಕ.

ದಾಮೋದರಿ ನಮಸ್ತೇಽಸ್ತು ನಮಸ್ತೇ ಲೋಕನಾಯಕೀ ।
ನಮಸ್ತೇಽಸ್ತು ಮಹಾಲಕ್ಷ್ಮೀ ತ್ರಾಹಿ ಮಾಂ ಪರಮೇಶ್ವರಿ ॥

ಹೂವು ಮಂತ್ರಾಕ್ಷತೆಗಳಿಂದ ದೇವಿಯನ್ನು ಪೂಜಿಸುವುದು.

ದೇವಿ ಸರ್ವಜಗದ್ರೂಪೇ ದೇವತಾನಾಮಭೀಷ್ಟದೇ ।

ಪುಷ್ಪಾಂಜಲಿಂ ಪ್ರದಾಸ್ಯಾಮಿ ಸರ್ವಸಿದ್ಧಿಪ್ರದಾಯಿನೀ ॥

ಶ್ರೀಮನ್ನಾರಾಯಣವಾಮಾಂಕಸ್ಥಿತವರಮಹಾಲಕ್ಷ್ಮ್ಯೈ ನಮಃ – ಪುಷ್ಪಾಂಜಲಿಂ ಪ್ರದಾಸ್ಯಾಮಿ । ಹೂವು ಮಂತ್ರಾಕ್ಷತೆ ಸಮರ್ಪಿಸುವುದು.

## ವಾಯನದಾನ

ತಟ್ಟೆಯಲ್ಲಿ ಅಕ್ಕಿ , ಎರಡು ತೆಂಗಿನಕಾಯಿಗಳು, ಬೆಲ್ಲದ ಅಚ್ಚು, ಹಣ್ಣುಗಳನ್ನಿಟ್ಟು ಎಲೆ ಅಡಕೆಯ ಜೊತೆಗೆ ಯಥಾಶಕ್ತಿ ದಕ್ಷಿಣೆ ಇಟ್ಟು, ಒಂದು ಸಣ್ಣ ತಟ್ಟೆಯನ್ನು ತೆಂಗಿನ ಕಾಯಿಗಳ ಮೇಲೆ ಮುಚ್ಚುವುದು. ಪುರೋಹಿತರ ಎದುರಿಗೆ ಮಂಡಲ ಮಾಡಿ ಅದರ ಮೇಲೆ ಉಪಾಯನದಾನದ ತಟ್ಟೆಯನ್ನಿಟ್ಟು ಕುಳಿತುಕೊಂಡು ಹೀಗೆ ಹೇಳಬೇಕು. (ಸಂಕಲ್ಪ ಮಾಡಬೇಕು)

ಅದ್ಯ ಪೂರ್ವೋಚ್ಚರಿತ ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಮಮ ಶ್ರೀವರಮಹಾಲಕ್ಷ್ಮೀವ್ರತ ಸಾದ್ಗುಣ್ಯಾರ್ಥಂ ಉಪಾಯನದಾನಮಹಂ ಕರಿಷ್ಯೇ –

ಪುರೋಹಿತರಿಗೆ (ಬ್ರಾಹ್ಮಣರಿಗೆ) ಗಂಧ, ಹೂವು ಕೊಡುವುದು.

ಇಮೇ ಗಂಧಾಃ ಇಮಾನಿ ಪುಷ್ಪಾಣಿ, ಗಂಧಪುಷ್ಪಧೂಪದೀಪಸಕಲಾರಾಧನೈಃ ಸ್ವರ್ಚಿತಮ್ । ಎಂದು ಹೇಳಿ ನೀರುಮಂತ್ರಾಕ್ಷತೆ ಬಿಡುವುದು. ಆಮೇಲೆ ನೀರನ್ನು ಸಣ್ಣ ತಟ್ಟೆಯ ಮೇಲೆ ಪ್ರೋಕ್ಷಿಸುವುದು.

ವಿಷ್ಣೋ ಉಪಾಯನದಾನಂ ರಕ್ಷಸ್ವ - ಎಂದು ಹೇಳಿ ತಟ್ಟೆಯನ್ನು ಅತ್ತ ಇಟ್ಟು ಎರಡು ತೆಂಗಿನಕಾಯಿಗಳ ಮೇಲೆ ಪತ್ನಿಯಿಂದ ನೀರು ಹಾಕಿಸಿ, ''ಇದಂ ಉಪಾಯನ-ದಾನಮ್'' -

**ಉಪಾಯನದಾನ ಕೊಡುವಾಗ ಹೇಳುವ ಮಂತ್ರ –**

ವಾಯನಂ ತೇ ಪ್ರದಾಸ್ಯಾಮಿ ವ್ರತಸಂಪೂರ್ತಿಹೇತವೇ ।
ಪ್ರೀತಯೇ ದ್ವಿಜವರ್ಯಾಯ ಸಹಿರಣ್ಯಂ ದದಾಮ್ಯಹಮ್ ॥
ಇಂದಿರಾ ಪ್ರತಿಗೃಹ್ಣಾತಿ ಇಂದಿರಾ ವೈ ದದಾತಿ ಚ ।
ಇಂದಿರಾ ತಾರಕಾ ದ್ವಾಭ್ಯಾಂ ಇಂದಿರಾಯೈ ನಮೋ ನಮಃ ॥

## ಪುನಃ ಪೂಜಾ
## ಮತ್ತೆ ಪೂಜೆ ಮಾಡಿರಿ

ಛತ್ರಂ ಸಮರ್ಪಯಾಮಿ । ಚಾಮರೇ ವೀಜಯಾಮಿ । ನೃತ್ಯಂ ದರ್ಶಯಾಮಿ। ಗೀತಂ ಶ್ರಾವಯಾಮಿ । ದರ್ಪಣಂ ದರ್ಶಯಾಮಿ । ಅಶ್ವಾರೋಹಣಂ ಗಜಾರೋಹಣಂ ಸಮರ್ಪಯಾಮಿ । ಸಮಸ್ತರಾಜೋಪಚಾರ ದೇವೋಪಚಾರ ಋಷ್ಯೋಪಚಾರ ಸರ್ವೋಪಚಾರಪೂಜಾಂ ಸಮರ್ಪಯಾಮಿ ।

## ಫಲಸಮರ್ಪಣೆ

**ಒಂದು ಕಾಯನ್ನು ಎಲೆ ಅಡಿಕೆ ಜೊತೆಗೆ ಇರಿಸಿ, ಅದನ್ನು ದೇವಿಯ ಬಲಭಾಗದಲ್ಲಿಡುವುದು.**

ಇದಂ ಫಲಂ ಮಯಾ ದೇವಿ ಸ್ಥಾಪಿತಂ ಪುರತಸ್ತವ ।
ತೇನ ಮೇ ಸಫಲಾವಾಪ್ತಿಃ ಭವೇಜ್ಜನ್ಮನಿ ಜನ್ಮನಿ ॥

## ಶ್ರೀಕೃಷ್ಣಾರ್ಪಣ ಎನ್ನಿರಿ

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾಂತಿ ಸದ್ಯೋ ವಂದೇ ತಮಚ್ಯುತಮ್ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

'ಅನೇನ ಶ್ರೀವರಮಹಾಲಕ್ಷ್ಮೀಪೂಜಾಕರಣೇನ ಅಸ್ಮತ್ತ್ಯಂತರ್ಗತ ಶ್ರೀಭಾರತೀ-ರಮಣಮುಖ್ಯಪ್ರಾಣಾಂತರ್ಗತಶ್ರೀವರಮಹಾಲಕ್ಷ್ಮೀಸಹಿತನಾರಾಯಣಃ ಸುಪ್ರೀತೋ ಸುಪ್ರಸನ್ನೋ ವರದೋ ಭವತು' ಎಂದು ಹೇಳಿ ಮಂತ್ರಾಕ್ಷತೆ ನೀರನ್ನು ಬಿಡುವುದು.

## ಪ್ರಸಾದಸ್ವೀಕಾರ

### ಪ್ರಸಾದವನ್ನು ಸ್ವೀಕರಿಸಿ ಧನ್ಯ ಎನ್ನಿರಿ

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ಲಕ್ಷ್ಮೀ ನಾರಾಯಣಿ ನಮೋಽಸ್ತು ತೇ ॥

ಶ್ರೀಕೃಷ್ಣಾರ್ಪಣಮಸ್ತು

ಇಲ್ಲಿಗೆ ವರಮಹಾಲಕ್ಷ್ಮೀಪೂಜಾವಿಧಾನವು ಸಮಾಪ್ತವಾಯಿತು.

— * * * —

## ಲಕ್ಷ್ಮೀದೇವಿಯ ವಿಸರ್ಜನೆ ಪೂಜೆ

ಶನಿವಾರ ಬೆಳಿಗ್ಗೆ ವಿಸರ್ಜನೆ ಮಾಡಬೇಕು. ಆಚಮನ ಮಾಡಿ, ದೇಶಕಾಲಗಳನ್ನು ಉಚ್ಚರಿಸಿ ದೇವರ ವಾಮಾಂಕಸ್ಥಿತಳಾದ ಲಕ್ಷ್ಮೀದೇವಿಗೆ ಸಂಕ್ಷೇಪವಾಗಿ ೧೬ ಉಪಚಾರಗಳನ್ನು ಸಮರ್ಪಿಸಬೇಕು.

ಶ್ರೀರಮಾಯ್ಯೆ ನಮಃ । – ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ ।

ಶ್ರೀಕ್ಷೀರಾಬ್ಧಿತನಯಾಯ್ಯೆ ನಮಃ । – ಆವಾಹಯಾಮಿ, ಆವಾಹನಂ ಸಮರ್ಪಯಾಮಿ

ಶ್ರೀಪದ್ಮಾಯ್ಯೆ ನಮಃ । – ಅರ್ಘ್ಯಂ ಸಮರ್ಪಯಾಮಿ

ಶ್ರೀಕಮಲಾಯ್ಯೆ ನಮಃ । – ಪಾದ್ಯಂ ಸಮರ್ಪಯಾಮಿ

ಶ್ರೀಸರ್ವಸಂಪತ್ಪ್ರದಾಯಿನ್ಯೈ ನಮಃ । – ಆಚಮನಂ ಸಮರ್ಪಯಾಮಿ

**ಉಪಾಯನದಾನ ಕೊಡುವಾಗ ಹೇಳುವ ಮಂತ್ರ –**

ಪಾಯನಂ ತೇ ಪ್ರದಾಸ್ಯಾಮಿ ವ್ರತಸಂಪೂರ್ತಿಹೇತವೇ ।
ಪ್ರೀತಯೇ ದ್ವಿಜವರ್ಯಾಯ ಸಹಿರಣ್ಯಂ ದದಾಮ್ಯಹಮ್ ॥
ಇಂದಿರಾ ಪ್ರತಿಗೃಹ್ಣಾತಿ ಇಂದಿರಾ ವೈ ದದಾತಿ ಚ ।
ಇಂದಿರಾ ತಾರಕಾ ದ್ವಾಭ್ಯಾಂ ಇಂದಿರಾಯೈ ನಮೋ ನಮಃ ॥

## ಪುನಃ ಪೂಜಾ
## ಮತ್ತೆ ಪೂಜೆ ಮಾಡಿರಿ

ಛತ್ರಂ ಸಮರ್ಪಯಾಮಿ। ಚಾಮರೇ ವೀಜಯಾಮಿ। ನೃತ್ಯಂ ದರ್ಶಯಾಮಿ। ಗೀತಂ ಶ್ರಾವಯಾಮಿ । ದರ್ಪಣಂ ದರ್ಶಯಾಮಿ । ಅಶ್ವಾರೋಹಣಂ ಗಜಾ-ರೋಹಣಂ ಸಮರ್ಪಯಾಮಿ । ಸಮಸ್ತರಾಜೋಪಚಾರ ದೇವೋಪಚಾರ ಋಷ್ಯೋಪಚಾರ ಸರ್ವೋಪಚಾರಪೂಜಾಂ ಸಮರ್ಪಯಾಮಿ ।

## ಫಲಸಮರ್ಪಣೆ

**ಒಂದು ಕಾಯನ್ನು ಎಲೆ ಅಡಿಕೆ ಜೊತೆಗೆ ಇರಿಸಿ, ಅದನ್ನು ದೇವಿಯ ಬಲಭಾಗದಲ್ಲಿಡುವುದು.**

ಇದಂ ಫಲಂ ಮಯಾ ದೇವಿ ಸ್ಥಾಪಿತಂ ಪುರತಸ್ತವ ।
ತೇನ ಮೇ ಸಫಲಾವಾಪ್ತಿಃ ಭವೇಜ್ಜನ್ಮನಿ ಜನ್ಮನಿ ॥

## ಶ್ರೀಕೃಷ್ಣಾರ್ಪಣ ಎನ್ನಿರಿ

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾಂತಿ ಸದ್ಯೋ ವಂದೇ ತಮಚ್ಯುತಮ್ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

'ಅನೇನ ಶ್ರೀವರಮಹಾಲಕ್ಷ್ಮೀಪೂಜಾಕರಣೇನ ಅಸ್ಮತ್ಸ್ವತ್ಯಂತರ್ಗತ ಶ್ರೀಭಾರತೀ-ರಮಣಮುಖ್ಯಪ್ರಾಣಾಂತರ್ಗತಶ್ರೀವರಮಹಾಲಕ್ಷ್ಮೀಸಹಿತನಾರಾಯಣಃ ಸುಪ್ರೀತೋ ಸುಪ್ರಸನ್ನೋ ವರದೋ ಭವತು' ಎಂದು ಹೇಳಿ ಮಂತ್ರಾಕ್ಷತೆ ನೀರನ್ನು ಬಿಡುವುದು.

## ಪ್ರಸಾದಸ್ವೀಕಾರ
### ಪ್ರಸಾದವನ್ನು ಸ್ವೀಕರಿಸಿ ಧನ್ಯ ಎನ್ನಿರಿ

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ಲಕ್ಷ್ಮೀ ನಾರಾಯಣಿ ನಮೋಽಸ್ತು ತೇ ॥

ಶ್ರೀಕೃಷ್ಣಾರ್ಪಣಮಸ್ತು

ಇಲ್ಲಿಗೆ ವರಮಹಾಲಕ್ಷ್ಮೀಪೂಜಾವಿಧಾನವು ಸಮಾಪ್ತವಾಯಿತು.

— * * * —

## ಲಕ್ಷ್ಮೀದೇವಿಯ ವಿಸರ್ಜನೆ ಪೂಜೆ

ಶನಿವಾರ ಬೆಳಿಗ್ಗೆ ವಿಸರ್ಜನೆ ಮಾಡಬೇಕು. ಆಚಮನ ಮಾಡಿ, ದೇಶಕಾಲಗಳನ್ನು ಉಚ್ಚರಿಸಿ ದೇವರ ವಾಮಾಂಕಸ್ಥಿತಳಾದ ಲಕ್ಷ್ಮೀದೇವಿಗೆ ಸಂಕ್ಷೇಪವಾಗಿ ೧೬ ಉಪಚಾರಗಳನ್ನು ಸಮರ್ಪಿಸಬೇಕು.

ಶ್ರೀರಮಾಯೈ ನಮಃ । – ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ ।

ಶ್ರೀಕ್ಷೀರಾಬ್ಧಿತನಯಾಯೈ ನಮಃ । – ಆವಾಹಯಾಮಿ, ಆವಾಹನಂ ಸಮರ್ಪಯಾಮಿ

ಶ್ರೀಪದ್ಮಾಯೈ ನಮಃ । – ಅರ್ಘ್ಯಂ ಸಮರ್ಪಯಾಮಿ

ಶ್ರೀಕಮಲಾಯೈ ನಮಃ । – ಪಾದ್ಯಂ ಸಮರ್ಪಯಾಮಿ

ಶ್ರೀಸರ್ವಸಂಪತ್ಪ್ರದಾಯಿನ್ಯೈ ನಮಃ । – ಆಚಮನಂ ಸಮರ್ಪಯಾಮಿ

ಶ್ರೀಇಂದಿರಾಯೈ ನಮಃ । – ಮಧುಪರ್ಕಂ ಸಮರ್ಪಯಾಮಿ

ಶ್ರೀಸರ್ವದಾಯಿನ್ಯೈ ನಮಃ । - ಪುನರಾಚಮನಂ ಸಮರ್ಪಯಾಮಿ

ಶ್ರೀಕಮಲವಾಸಿನ್ಯೈ ನಮಃ । – ಸ್ನಾನಂ ಸಮರ್ಪಯಾಮಿ

ಶ್ರೀಹರಿಪ್ರಿಯಾಯೈ ನಮಃ । – ವಸ್ತ್ರಂ ಸಮರ್ಪಯಾಮಿ

ಶ್ರೀಮಂಗಳದೇವತಾಯೈ ನಮಃ । – ಮಾಂಗಲ್ಯಂ ಸಮರ್ಪಯಾಮಿ

ಶ್ರೀಶ್ರಿಯೈ ನಮಃ । – ಗಂಧಂ ಸಮರ್ಪಯಾಮಿ

ಶ್ರೀಲೋಕಮಾತ್ರೇ ನಮಃ । – ಅಕ್ಷತಾನ್ ಸಮರ್ಪಯಾಮಿ

ಶ್ರೀಕಮಲಹಸ್ತಾಯೈ ನಮಃ । – ಪುಷ್ಪಂ ಸಮರ್ಪಯಾಮಿ

ಶ್ರೀವರಪ್ರದಾಯೈ ನಮಃ । – ಧೂಪಂ ಸಮರ್ಪಯಾಮಿ

ಶ್ರೀಲೋಕಜನನ್ಯೈ ನಮಃ । – ದೀಪಂ ಸಮರ್ಪಯಾಮಿ

ಶ್ರೀಪ್ರಸನ್ನವದನಾಯೈ ನಮಃ । – ನೈವೇದ್ಯಂ ಸಮರ್ಪಯಾಮಿ

ಶ್ರೀಇಂದಿರಾಯೈ ನಮಃ । – ಮಹಾಮಂಗಳನೀರಾಜನಂ ಸಮರ್ಪಯಾಮಿ

ಶ್ರೀಕ್ಷೀರಸಾಗರಕನ್ಯಕಾಯೈ ನಮಃ । – ಮಂತ್ರಪುಷ್ಪಂ ಸಮರ್ಪಯಾಮಿ

ಶ್ರೀವರಮಹಾಲಕ್ಷ್ಮ್ಯೈ ನಮಃ । – ಪ್ರದಕ್ಷಿಣನಮಸ್ಕಾರಾನ್ ಸಮರ್ಪಯಾಮಿ

## ಉದ್ವಾಸನೆ

ಯಾಂತು ದೇವಗಣಾಃ ಸರ್ವೇ ಪೂಜಾಮಾದಾಯ ಮತ್ಕೃತಾಮ್ ।
ಇಷ್ಟಕಾಮ್ಯಾರ್ಥಸಿದ್ಧ್ಯರ್ಥಂ ಪುನರಾಗಮನಾಯ ಚ ॥

ಅನೇನ ಶ್ರೀವರಮಹಾಲಕ್ಷ್ಮೀವಿಸರ್ಜನಪೂಜನೇನ ಅಸ್ಮತ್ತತ್ವ್ಯಂತರ್ಗತ ಶ್ರೀಭಾರತೀ- ರಮಣಮುಖ್ಯಪ್ರಾಣಾಂತರ್ಗತ ಶ್ರೀವರಮಹಾಲಕ್ಷ್ಮೀಸಹಿತನಾರಾಯಣಃ ಸುಪ್ರೀತೋ ಸುಪ್ರಸನ್ನೋ ವರದೋ ಭವತು' ಶ್ರೀಮಧ್ವೇಶಾರ್ಪಣಮಸ್ತು.

* * * * *

# ಸ್ವತಃ ಸ್ತ್ರೀಯರೇ ಪೂಜಿಸುವ ವಿಧಾನ

-೧-

## ಕಲಶದಲ್ಲಿ ನೀರು ತುಂಬಿ ತೆಂಗಿನಕಾಯಿ ಇಟ್ಟು ಅಲಂಕರಿಸಿ (ಪೂರ್ಣಕುಂಭದಂತೆ), ಲಕ್ಷ್ಮಿಯನ್ನು ಕರೆಯಬೇಕು

ರಾಗ : ಮಧ್ಯಮಾವತಿ ತಾಳ : ಆದಿ

ಭಾಗ್ಯದ ಲಕ್ಷ್ಮೀ ಬಾರಮ್ಮಾ - ನಮ್ಮಮ್ಮಾ ನೀ ಸೌ-
ಭಾಗ್ಯದ ಲಕ್ಷ್ಮೀ ಬಾರಮ್ಮಾ ||ಪ||

ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ ।
ಗೆಜ್ಜೆಯ ಕಾಲಿನ ಧ್ವನಿಯ ಮಾಡುತ ॥
ಸಜ್ಜನ ಸಾಧು ಪೂಜೆಯ ವೇಳೆಗೆ ।
ಮಜ್ಜಿಗೆಯೊಳಗಿನ ಬೆಣ್ಣೆಯಂತೆ ||1||

ಕನಕವೃಷ್ಟಿಯ ಕರೆಯುತ ಬಾರೆ ।
ಮನಕೆ ಮತಿಯ ಸಿದ್ಧಿಯ ತೋರೆ ॥
ದಿನಕರ ಕೋಟಿ ತೇಜದಿ ಹೊಳೆಯುತ ।
ಜನಕರಾಜನ ಕುಮಾರಿ ಸೀತೆ ||2||

ಸಂಖ್ಯೆಯಿಲ್ಲದಾ ಭಾಗ್ಯವ ಕೊಟ್ಟು ।
ಕಂಕಣ ಕೈಯಾ ತಿರುವುತ ಬಾರೆ ॥
ಕುಂಕುಮಾಂಕಿತೇ ಪಂಕಜಲೋಚನೆ ।
ವೆಂಕಟರಾಯನ ಮೋಹದ ರಾಣಿ ||3||

ಅತ್ತಿತ್ತಗಲದೆ ಭಕ್ತರ ಮನೆಯಲಿ ।
ನಿತ್ಯಮಂಗಲವು ನಿತ್ಯ ಮಹೋತ್ಸವ ॥

ಸತ್ಯವ ತೋರುವ ಸಜ್ಜನರಿಗೆ ನೀ ।
ಚಿತ್ತದಿ ಹೊಳೆಯುವ ಪುತ್ಥಳಿಗೊಂಬೆ ॥4॥

ಸಕ್ಕರೆ ತುಪ್ಪದ ಕಾಲುವೆ ಹರಿಸಿ ।
ಶುಕ್ರವಾರದ ಪೂಜೆಯ ಕೊಂಬೆ ॥
ಆಕ್ಕರವುಳ್ಳ ಅಳಗಿರಿ ರಂಗನ
ಶಕ್ತ ಪುರಂದರ ವಿಠಲನ ರಾಣಿ ॥5॥

-೨-

## ಮಂತ್ರಾಕ್ಷತೆ ಹಾಕಿ ಕೈಮುಗಿದು ಲಕ್ಷ್ಮಿಯನ್ನು ಕರೆಯಬೇಕು

ಬಾರೇ ಭಾಗ್ಯದ ನಿಧಿಯೇ । ಬಾರೇ ಶ್ರೀಜಾನಕಿಯೇ ॥ಪ॥

ಬಾರೆ ಬಾರೆ ಚಕೋರ ಸುಖಾಗ್ರಪ್ರಜೆ ।
ಸೇರಿದೆ ತವ ಪದ ವಾರಿಜನಿಲಯೇ ॥ಅಪ॥

ಕೃತಿ ಶಾಂತ ಜಯ ಮಾಯೆ । ಕ್ಷಿತಿಜೆ ಕೋಮಲಕಾಯೇ ।
ಶಿತ ಕಳೇವರ ವಿದಿಶತ ಕೃತಸುಮ ಸಸ ।
ತತಿ ಸುತೆ ಪಾವನ ರತಿಪತಿ ತಾಯೇ ॥1॥

ಮಂಗಳ ಮಂದಭರಿತ ತಿಂಗಳಮುಖಿ ಸೀತೆ ।
ಇಂಗಡಲಜೆ ಕೃಪಾಂಗಿಯೆ ಎನ್ನುತ ।
ರಂಗದಿ ಮಾನವಸಿಂಗನ ತೋರೆ ॥2॥

ಶಾಮಸುಂದರರಾಣಿ ವಾಮಾಕ್ಷಿ ಕಲ್ಯಾಣಿ ।
ಕಾಮಿನಿ ಮಣಿ ಸತ್ಯಭಾಮೆ ರುಕ್ಮಿಣಿ ।
ಗೋಮಿನ ರಮೆ ಶುಭನಾಮೆ ಲಲಾಮೆ ॥3॥

-೩-

## ಹೊಸ್ತಿಲಿನಿಂದ ಲಕ್ಷ್ಮೀಯ ಹೆಜ್ಜೆಗಳನ್ನು ಬರೆದು ಲಕ್ಷ್ಮೀ ಬಂದಳೆಂದು ಭಾವಿಸಬೇಕು.

ಬಾರೆ ನಮ್ಮನಿತನಕ ಭಾಗ್ಯದ ದೇವಿ । ಬಾರೆ ನಮ್ಮನಿತನಕ ॥ಪ॥

ಬಾರೆ ನಮ್ಮನಿತನಕ ಬಹಳ ಕರುಣದಿಂದ ಜೋಡಿಸಿ ಕರಗಳ ಎರಗುವೆ ಚರಣಕೆ ॥

ಹರಡಿ ಕಂಕಣ ದುಂಡು ಕರದಲ್ಲಿ ಹೊಳೆಯುತ ।
ಸರಗಿ ಸರವು ಚಂದ್ರಹಾರಗಳೆಲೆಯುತ ॥1॥

ಜರದ ಪೀತಾಂಬರ ನಿರಿಗೆಗಳೆಲೆಯುತ ।
ತರುಳನ ಮ್ಯಾಲೆ ತಾಯಿ ಕರುಣವಿಟ್ಟು ಬೇಗನೆ ॥2॥

ಮಂದಗಮನೆ ನಿನಗೆ ವಂದಿಸಿ ಬೇಡುವೆ ।
ಇಂದಿರೇಶನ ಕೂಡ ಇಂದು ನಮ್ಮನಿತನಕ ॥3॥

-೪-

## ಆಗಮಿಸಿದ ಲಕ್ಷ್ಮೀದೇವಿಗೆ ನಮಿಸಿ ಭಾಗ್ಯವೆಂದು ತಿಳಿಯಬೇಕು.

ಬಾರೇ ವೇಂಕಟರಮಣಿ । ಶ್ರೀ ಶ್ರೀದೇವಿ (ಭಾಗ್ಯದ ದೇವಿ) ॥ಪ॥

ಬಾರೇ ವೇಂಕಟರಮಣಿ ಪಾರಾಯಣ ಕೇಳೆ ।
ಚಾರುವದನೆ ಉಪಹಾರಕಾಲಕೆ ನಿತ್ಯ ॥ಅ.ಪ.॥

ಏನು ಪುಣ್ಯವೆ ನಂದು ಪಾರಾಯಣೆ?। ನೀನೆ ಕೇಳುತ ಬಂದು ।
ಹೀನಮಾನವನಿಗೆ ನೀನು ಬರುವಿಯೆಂಬೊ ।
ಜ್ಞಾನವಿಲ್ಲದೆ ಉಚ್ಚ ಸ್ಥಾನದೊಳಗೆ ಕೂಡೆ ॥1॥

ಸ್ವಪ್ನದೊಳಗೆ ಬರುವಿ । ಶ್ರೀದೇವಿ ಕ್ಷಿಪ್ರ-ತನದಿ ಪೋಗುವಿ ।

ಸರ್ಪಶಯನ ನಮ್ಮಪ್ಪ ಗೋಕುಲಬಾಲನಪ್ಪಿ ಕೊಂಬುವ ಸುಖ ಒಪ್ಪಿಸಿ
ಬೇಗನೆ ॥2॥

ಮಂಗಳಾಂಗಿಯೆ ನಿನ್ನ ಕಾಣದೆ ಬಲು ಭಂಗಪಡುವೆನಮ್ಮ।
ಗಂಗಜನಕ ಸಿರಿರಂಗನಂಕದಿ ಕೂತು ಭೃಂಗಕುಂತಳೆ
ಹೃದಯಾಂಗಳದೊಳಗಾಡೆ ॥3॥

ಎಲ್ಲ ದೇವತೆಗಳು ತಡೆದಿಹೆ ಫುಲ್ಲವಾರಿಜನಯನೆ । ಗೊಲ್ಲ ಬಾಲನ ಪದ
ಪಲ್ಲವ ನೋಡದೆ ನಿಲ್ಲವಲ್ಲದು ಮನ ಸೊಲ್ಲು ಲಾಲಿಸು ಬೇಗ ॥4॥

ಇಂದಿರೇಶನ ರಾಣಿ ಎನ್ನಯ ಮನ ಮಂದಿರದೊಳು ಬಾ ನೀ ।
ನಂದಗೋಕುಲಬಾಲ ಕಂದರನೆತ್ತಿ ಕರ ತಿಂದು ತೋರಿಸೆ
ಅರವಿಂದನಯನೆ ಲಕ್ಷ್ಮೀ

—ಶ್ರೀ—

## ಲಕ್ಷ್ಮೀದೇವಿಯ ಕಾಲು ತೊಳೆಯಬೇಕು, ಆಚಮನ ನೀಡಬೇಕು

ಸಾರ ಸಾಕ್ಷೇರು ವರ ಲಕ್ಷ್ಮಿ ದೇವೇರಿಗೆ
ಪಾದ ಪೂಜೆಯ ಮಾಡಿ ಧನ್ಯರಾಗಿ ಪ

ಧನ್ಯರಾಗಿ ಮಾನ್ಯರಾಗಿ ಭಾಗ್ಯವಂತರಾಗಿ ಸಂಪನ್ನರಾಗಿ ಅ.ಪ.

ಹಾರ ಕೇಯೂರ ಕಂಕಣ ಗೊಂಡ್ಯಾ
ತೋರ ಒಡ್ಯಾಣ ನಾಗ-ಭೂಷ
ವಾಲೆ ನಾಗರ ಬೇಸರಿ ಬಾಳ್ಯ
ಪೂರ್ವದ ಬುಗುಡಿ ಬುಲಾಕು ಮಕುರು ॥1॥

ಕುಂದಮಂದಾರ ಸುಗಂಧಿ ಪುಷ್ಪ
ಚೆಂದದ ಪರಿಮಳ ಆರ್ಯ
ಅಂದದಿ ಪೂಜೆ ಅರ್ಘ್ಯ ಪಾದ್ಯ
ಕುಂದಣ ಪೀಠವು ದೀಪಧೂಪ ॥2॥

ನಾರಿಕೇಳ ಅಂಜುರ ಕದಳಿ ಹಲಸು
ಸಾರ ದಾಳಿಂಬ ಉತ್ತತ್ತಿ ದ್ರಾಕ್ಷಿ
ಬೋರೆ ಗೋಡಂಬಿ ಸೇಬು ಮಾವು ಕಿತ್ತಳೆ
ನೀರೆ ತಾಂಬೂಲ ನೀಡಿ ಭಕ್ತಿಯಿಂದ ||3||

ಮಂಡಿಗೆ ಫೇಣಿ ಚಿರೋಟಿ ಲಾಡು
ಸಂಡಿಗೆ ಹಪ್ಪಳಾಂಬೋಡೆ ಬೂಂದ್ಯಾ
ತಂಡ ತಂಡದ ಪಾಯಸ ಕ್ಷೀರ ತುಪ್ಪ
ಮಂಡಲವ ಮಾಡಿ ನೈವೇದ್ಯಕಿಟ್ಟು ||4||

ಮಂಗಳಾರ್ತಿ ಮಾಡಿರೆ ಮನ್ಮಥ ಪಿತನಿಗೆ
ಮಂಗಳೆಂದು ಪಾಡಿರೆ ಗಂಗಾಜನಕನಿಗೆ
ಆರುತಿ ಮಾಡಿರೆ ಜಾನಕಿಗೆ
ಶುಭ ಮಂಗಳ ಶ್ರೀರಘುರಾಮ ವಿಟ್ಠಲಗೆ ||5||

-೬-

## ಕುಡಿಯಲು ಮಧುಪರ್ಕ ನೀಡಿ, ಆಚಮನ ನೀಡಬೇಕು

ರಾಗ : ತೋಡಿ ತಾಳ : ಆದಿ

ವೇಣೀ ಮಾಧವನ ತೋರಿಸೆ ಜಾಣೆ
ತ್ರಿವೇಣಿ ಕಾಣದೆ ನಿಲ್ಲಲಾರೆನೆ ||ಪ||

ಕಾಣುತ ಭಕ್ತರ ಕರುಣದಿ ಸಲಹುವ
ಜಾಣೆ ತ್ರಿವೇಣಿ ಸಾರೆ ಸುಖವಾಣಿ ||ಅ.ಪ||

ಬಂದೆನೆ ಬಹಳ ದೂರದಿ ಭವಸಾಗರತರಣಿ ।
ನಿಂದೆನೆ ನಿನ್ನ ತೀರದಿ ಒಂದು ಗಳಿಗೆ ಹರಿಯಗಲಿ ನಾನಿರಲಾರೆ
ಮಂದಗಮನೆ ಎನ್ನ ಮುಂದಕೆ ಕರೆಯೆ ||1||

ಶರಣಾಗತರ ಪಾಲಿಪುದು ತರಳೆ ನಿನ್ನ ಬಿರುದು । ಕರುಣದಿಂದೆನ್ನ ಪೊರೆಯೆ
ಸ್ಮರಣೆ ಮಾತ್ರದಿ ಭವತಾಪವ ಹರಿಸುವ
ಸ್ಮರನ ಪಿತ ಮುರಹರನ ಕರುಣದಿ ||2||

ಸುಜನರಿಗೆಲ್ಲಾಧಾರಳೆ ಸುಖಶೀಲೆ ಕೇಳೆ । ಕುಜನ ಸಂಗವನು ಕೀಳೆ
ನಿಜಪದವಿಯನೀವ ಹಯವದನನ ಪಾದ ವಾರಿಜ
ತೋರಿಸೆ ಮದಗಜಗಮನೆ ||3||

-೭-

## ಲಕ್ಷ್ಮೀದೇವಿಗೆ ಪಂಚಾಮೃತಸ್ನಾನ ಹಾಗೂ ಶುದ್ಧೋದಕಸ್ನಾನ ಮಾಡಿಸಬೇಕು.

ಕ್ಷೀರವಾರಿಧಿ ಕನ್ನಿಕೆ ಮಾರ ಜನಕೆ
ಈರೇಳು ಲೋಕನಾಯಿಕೆ ||ಪ||

ವಾರವಾರಕೆ ನಿನ್ನನಾರಾಧಿಪುದಕ್ಕೆ
ಚಾರುಮನಸು ಕೊಡು ದೂರ ನೋಡುತಲೆ ||ಅ.ಪ.||

ಶ್ರೀಧರಾದುರ್ಗಾ ಅಂಭ್ರಣಿ ನಿತ್ಯ ಕಲ್ಯಾಣಿ ವೇದವತಿಯೆ ರುಕ್ಮಿಣಿ
ವೇದ ವೇದಾಂತದಭಿಮಾನಿ ವಾರಿಜಪಾಣಿ ಆದಿ ಮಧ್ಯಾಂತ ಗುಣಶ್ರೇಣಿ
ಸಾಧುಜನರ ಹೃದಯಾಬ್ಜ ವಿರಾಜಿತೆ
ಖೇದಗೊಳಿಪ ಕಾಮಕ್ರೋಧಗಳೋಡಿಸಿ
ನೀ ದಯೆದಿಂದ ಮೇಲಾದ ಗತಿಗೆ ಪಂಚ-
ಭೇದ ಮತಿ ಕೊಡು ಮಾಧವಪ್ರೀಯಳೆ ||1||

ಶ್ರೀ ಮಾಯಾ ಜಯಾ ಕೃತಿ ಶಾಂತಿ ದೇವಿ ಜಯಂತಿ ನಾಮದಲಿಪ್ಪ ಜಯವಂತಿ
ಕೋಮಲವಾದ ವೈಜಯಂತಿ ಧರಿಸಿದ ಶಾಂತಿ
ಸೋಮಾರ್ಕಕೋಟಿ ಮಿಗೆ ಕಾಂತಿ

ತಾಮರಸಾಂಬಿಕೆ ರಮೆ ಲಕುಮಿ ಸತ್ಯಭಾಮೆ ಭವಾರಣ್ಯ ಧೂಮಕೇತಳೆ
ಯಾಮ ಯಾಮಕೆ ಹರಿ ನಾಮವ ನುಡಿಸು
ಉತ್ತಮರೊಡನೆ ಪರಿಣಾಮವೀವುದು ||2||

ನಾನಾ ಆಭರಣ ಭೂಷಿತೆ ಧಾರುಣಿ ಜಾತೆ ಜ್ಞಾನಿಗಳ ಮನಃಪ್ರೀತೆ
ಅನಾದಿಯಿಂದ ಪ್ರಖ್ಯಾತೆ ಆದಿದೇವತೆ ಗಾನವಿಲೋಲೆ ಸುರಗೀತೆ
ನೀನೆ ಗತಿ ಎನಗಾದರೊಬ್ಬರ ಕಾಣೆ
ದಾನಿ ಇಂದಿರೆದೇವಿ ನಾನಾಪರಿಯಲಿ
ಶ್ರೀನಿಧಿ ವಿಜಯವಿಟ್ಠಲನ ಮೂರುತಿಯನ್ನು
ಧ್ಯಾನದೊಳಿಡುವಂತೆ ಜ್ಞಾನ ಭಕುತಿ ಕೊಡೆ ||3||

- ೮ -

## ಲಕ್ಷ್ಮೀದೇವಿಗೆ ಎರಡು ವಸ್ತ್ರಗಳನ್ನು ಚೆನ್ನಾಗಿ ಉಡಿಸಬೇಕು

ರಾಗ : ಶಂಕರಾಭರಣ ತಾಳ : ಆದಿ

ಒಲಿದೆ ಏತಕಮ್ಮ ಲಕುಮಿ ವಾಸುದೇವಗೆ ||ಪ||

ಹಲವಂಗದವನ ಹವಣೆ ತಿಳಿದು ತಿಳಿದು ತಿಳಿಯದ್ಹಾಗೆ ||ಅ||

ಕಮಲಗಂಧಿ ಕೋಮಲಾಂಗಿ ಸುಂದರಾಬ್ಜವದನೆ ನೀನು
ರಮಣ ಮತ್ಸ್ಯ ಕಠಿಣಕಾಯ ಸೂಕರಾಸ್ಯನು
ರಮಣೀಯ ಸ್ವರೂಪಿ ನೀನು ಅಮಿತ ಘೋರರೂಪನವನು
ನಮಿಪರಿಷ್ಟದಾನಿ ನೀನು ದಾನವ ಬೇಡುವನಿಗೆ ||1||

ಜಾಣೆ ರತ್ನಾಕರನ ಮಗಳು ನೀನು ಶುದ್ಧ ಭೃಗುಜನವನು
ಆನಂದಾಬ್ಜಸದನೆ ನೀನು, ವನವಾಸಿ ಅವನು
ಮಾನೆ ಪತಿವ್ರತೆಯು ನೀನು ನಾನಾ ಯೋಷಿತ್ಕಾಮಿ ಅವನು
ಜ್ಞಾನೆ ಚಿತ್ರವಸನೆ ನೀನು ಹೀನ ಚೈಲದವನಿಗೆ ||2||

ಲಲಿತೆ ಚಾರುಶೀಲೆ ನೀನು ಕಲಿಕಿ ಕಲಹಪ್ರಿಯನವನು
ಕುಲದ ಕುರುಹು ಇಲ್ಲ ಗುಣದ ನೆಲೆಯ ಕಂಡಿಲ್ಲ
ಹಲವು ಕಾಲದವನು ಅವನ ಬಳಗ ಬಂಧು ನಿಷ್ಕಿಂಚನರು
ಜಲದಿ ಆಲದೆಲೆಯ ಮೇಲೆ ಮಲಗಿ ಬೆರಳ ಸವಿವವನಿಗೆ ||3||

ಅವನ ವಾರ್ತೆ ಕೇಳಿದವರು ಒಲ್ಲರು ಸಂಸಾರವನ್ನು
ಅವನ ಮೂರ್ತಿ ನೋಡಿದವರು ಮನೆಯ ಧನವ ಬಿಡುವರು
ಅವನ ಪುರಕೆ ಪೋದ ಜನರು ಒಮ್ಮೆಗನ್ನ ಹಿಂದಿರುಗರು
ಅವನು ತಾನೆ ತನಯರ ತನ್ನವಯದಿಂದ ಪಡೆದವಗೆ ||4||

ಸ್ವರತಾऽನಪೇಕ್ಷಾऽಕಾಮಿ ನಿದ್ರಾಹೀನ ಅನಶನಿಯು
ಸ್ವರುಶರೂಪ ವಾಚ್ಯಶಬ್ದ ಅಮಿತಭೋಕ್ತನು
ಗುರು ಗೋಪಾಲವಿಟ್ಠಲನು ನಿರುತ ತನ್ನ ವಕ್ಷದೊಳು
ಅರಮನೆಯ ಮಾಡಿಕೊಟ್ಟು ಮರುಳುಮಾಡಿದ ಮಾಯಾವಿಗೆ ||5||

## ಶಿರದಿಂದ ಕಾಲಿನ ತನಕ ಎಲ್ಲ ಆಭರಣಗಳನ್ನು ಸಮರ್ಪಿಸಬೇಕು

ಶ್ರೀಮಹಾಲಕ್ಷ್ಮಿಯ ಅಲಂಕರಿಸಿ ಕರೆದರು ||ಪ.||

ಕೇಶವ ನಿಮ್ಮ ನಾಮ ಮಾಂಗಲ್ಯಸೂತ್ರ ತಾಳಿ
ನಾರಾಯಣ ನಿಮ್ಮ ನಾಮ ತಾಳಿ ಪದಕವು ।
ಮಾಧವ ನಿಮ್ಮ ನಾಮ ಸುರಗಿ ಸಂಪಿಗೆ ಮೊಗ್ಗು
ಗೋವಿಂದ ನಿಮ್ಮ ನಾಮ ಗೋಧಿಯ ಸರವು ||1||

ವಿಷ್ಣುವೆ ನಿಮ್ಮ ನಾಮ ರತ್ನ ಕುಂಡಲಗಳು
ಮಧುಸೂದನ ನಿಮ್ಮ ನಾಮ ಮಾಣಿಕ್ಯದ ಹರಳು ।
ತ್ರಿವಿಕ್ರಮ ನಿಮ್ಮ ನಾಮ ವಂಕಿ ನಾಗಮುರುಗಿಯು
ವಾಮನ ನಿಮ್ಮ ನಾಮ ಓಲೆ ಏಕಾವಳಿಯು ||2||

ಶ್ರೀಧರ ನಿಮ್ಮ ನಾಮ ಒಳ್ಳೆ ಮುತ್ತಿನ ಹಾರ
ಹೃಷೀಕೇಶ ನಿಮ್ಮ ನಾಮ ಕಡಗ ಗೆಜ್ಜೆಯು ।
ಪದ್ಮನಾಭ ನಿಮ್ಮ ನಾಮ ಮುತ್ತಿನಡ್ಡಿಕೆಯು
ದಾಮೋದರ ನಿಮ್ಮ ನಾಮ ರತ್ನದ ಪದಕವು ॥3॥

ಸಂಕರ್ಷಣ ನಿಮ್ಮ ನಾಮ ವಂಕಿ ತೋಳಾಯಿತು
ವಾಸುದೇವ ನಿಮ್ಮ ನಾಮ ಒಲಿದ ತೋಡೆ ।
ಪ್ರದ್ಯುಮ್ನ ನಿಮ್ಮ ನಾಮ ಹಸ್ತ ಕಂಕಣ ಬಳೆ
ಅನಿರುದ್ಧ ನಿಮ್ಮ ನಾಮ ಮುಕುರ ಬುಲಾಕು ॥4॥

ಪುರುಷೋತ್ತಮ ನಿಮ್ಮ ನಾಮ ಹೊಸ ಮುತ್ತಿನ ಮೂಗುತಿ
ಅಧೋಕ್ಷಜ ನಿಮ್ಮ ನಾಮ ಚಂದ್ರ ಸೂರ್ಯ ।
ನಾರಸಿಂಹ ನಿಮ್ಮ ನಾಮ ಚೌರಿ ರಾಗಟಿ ಗೊಂಡ್ಯ
ಅಚ್ಯುತ ನಿಮ್ಮ ನಾಮ ಮುತ್ತಿನ ಬೊಟ್ಟು ॥5॥

ಜನಾರ್ದನ ನಿಮ್ಮ ನಾಮ ಜರಿಯ ಪೀತಾಂಬರ
ಉಪೇಂದ್ರ ನಿಮ್ಮ ನಾಮ ಕಡಗ ಗೆಜ್ಜೆಯು ।
ಶ್ರೀಹರಿ ನಿಮ್ಮ ನಾಮ ಕಂಚು ಅಂಕಿಯ ತುಳಸಿ
ಶ್ರೀಕೃಷ್ಣ ನಿಮ್ಮ ನಾಮ ನಡುವಿನೊಡ್ಯಾಣವು ॥6॥

ಸರಸಿಜಾಕ್ಷ ನಿಮ್ಮ ನಾಮ ಅರಿಶಿಣ ಎಣ್ಣೆ ಹಚ್ಚಿ
ಪಂಕಜಾಕ್ಷ ನಿಮ್ಮ ನಾಮ ಕುಂಕುಮ ಕಾಡಿಗೆಯು ।
ಪುರಂದರವಿಟ್ಠಲ ನಿಮ್ಮ ನಾಮ ಸರ್ವಾಭರಣವು
ನಿಲುವುಗನ್ನಡಿಯಲಿ ಲಲನೆಯ ತೋರಿಸುತ ॥7॥

-೧೦-

## ಅರಿಶಿನ, ಕುಂಕುಮ, ಕಾಡಿಗೆ, ಬಳೆ, ಕಾಲುಂಗುರ, ಕಿವಿಯ ಓಲೆ, ಮೂಗುಬಟ್ಟುಗಳನ್ನು ಸಮರ್ಪಿಸಬೇಕು

ರಾಗ: ತೋಡಿ ತಾಳ: ಆದಿ

ಶ್ರೀಮಹಾಲಕುಮಿದೇವಿಯೆ ಕೋಮಲಾಂಗಿಯೆ -ಸಾಮಗಾಯನಪ್ರಿಯೆ ||ಪ||

ಹೇಮಗರ್ಭಕಾಮಾರಿಶಕ್ರಸುರಸ್ತೋಮವಂದಿತಳೆ -ಸೋಮಸೋದರಿಯೆ ||ಅ||

ಬಟ್ಟ ಕುಂಕುಮ ನೊಸಲೊಳೆ -ಮುತ್ತಿನ ಹೊಸ ಕಠಾಣಿ ತ್ರಿವಳಿ ಕೊರಳೊಳೆ
ಇಟ್ಟ ಪೊನ್ನೋಲೆ ಕಿವಿಯೊಳೆ- ಪವಳದ ಕೈಯಕಟ್ಟು ಕಂಕಣ ಕೈಬಳೆ
ತೊಟ್ಟ ಕುಪ್ಪಸ ಬಿಗಿದುಟ್ಟ ಪೀತಾಂಬರ- ಘಟ್ಟಿವಡ್ಯಾಣ ಕಾಲಂದಿಗೆ ರುಳಿಗೆಜ್ಜೆ
ಬೆಟ್ಟಲಿ ಪೊಳೆವುದು ವೆಂಟಿಕೆ ಕಿರುಪಿಲ್ಲಿ -ಇಟ್ಟು ಶೋಭಿಸುವ ಅಷ್ಟಸಂಪನ್ನೆ ||೧||

ಸಕಲಶುಭಗುಣಭರಿತಳೆ- ಏಕೋದೇವಿಯೆ ವಾಕು ಲಾಲಿಸಿ ನೀ ಕೇಳೆ
ನೋಕನೀಯನ್ನ ಮಹಲೀಲೆ -ಕೊಂಡಾಡುವಂಥ ಏಕಮನವ ಕೊಡು ಶೀಲೆ
ಬೇಕು ಬೇಕು ನಿನ್ನ ಪತಿಪಾದಾಬ್ಜವ- ಏಕಾಂತದಿ ಪೂಜಿಪರ ಸಂಗವ ಕೊಡು
ಲೋಕದ ಜನರಿಗೆ ನಾ ಕರವೊಡ್ಡದಂತೆ -ನೀ ಕರುಣಿಸಿ ಕಾಯೆ ರಾಕೇಂದುವದನೆ ||೨||

ಮಂದರೋದ್ಧರನರಸಿಯೆ ಇಂದಿರೆ -ಎನ್ನ ಕುಂದುದೋಷಗಳಳಿಯೆ
ಅಂದ ಸೌಭಾಗ್ಯದ ಸಿರಿಯೆ ತಾಯೆ -ನಾ ನಿನ್ನ ಕಂದನು ಮುಂದಕ್ಕೆ ಕರೆಯೆ
ಸಿಂಧುಶಯನ ಸಿರಿ ವಿಜಯವಿಠಲರೇಯ ಎಂದೆಂದಿಗೆ ಮನದಿಂದಗಲದೆ ಆ-
ನಂದದಿಂದಲಿ ಬಂದು ಮುಂದೆ ಕುಣಿಯುವಂತೆ -
ವಂದಿಸಿ ಪೇಳಮ್ಮ ಸಿಂಧುಸುತೆಯಳೆ ||೩||

-೧೧-

## ಪತ್ರಗಳಿಂದ ಅಲಂಕಾರ ಮಾಡಬೇಕು

ಇಂಥವನಿಗ್ಯಾಂಗೆ ಮನಸೋತೆ। ಬಲು ಪಂಥವಾಡಿದ ಜಗನ್ಮಾತೆ ॥ಪ॥

ಆವಾಗ ನಾರುವ ಮೈಯ್ಯ। ಮಾರಿ ತೋರಿ ಆಡುವ ಕಾಲಕೈಯ್ಯ।
ಕೋರಿಯಿಂದ ಕೊಸರಿ ಕೊಂಡಾಸುರನ।
ಪೋರನಿಗಾಗಿ ದೊಡ್ಡ ಧೀರನ ಶೀಳಿದ ॥1॥

ಬಡಬ್ರಾಹ್ಮಣನೆಂದು ತಿಳಿದ। ತನ್ನ ಹಡೆದ ತಾಯಿಯ ಶಿರಕಡಿದ।
ಮಡದಿ ತಮ್ಮರ ಕೂಡಿ ಅಡವಿಯ ಸೇರಿದ।
ಕಡು ಕೋಪಿ ಬಲ್ಲವ ಬಾಧೆಯನುಳಿಸಿದ ॥2॥

ಬತ್ತಲೆ ನಿಂತಿದ್ದನಾಗ। ತೇಜ ಹತ್ತಿ ಮೆರೆವನೀವ ಹಿಂಗ।
ಸಂತತ ಭಕುತರ ಸಲಹುವ ಹೆಳವನಕಟ್ಟಿ।
ಇಂಥ ರಂಗಯ್ಯನಿಗೇನೆಂದು ಮನಕೊಟ್ಟೆ ॥3॥

-೧೨-

## ಪುಷ್ಪಾದಿಗಳಿಂದ ಅಲಂಕಾರ ಮಾಡಬೇಕು

ಜಯ ಕೋಲ್ಹಾಪುರನಿಲಯೇ ಭಜದಿಷ್ಟೇತರವಿಲಯೇ।
ತವ ಪಾದೌ ಹೃದಿ ಕಲಯೇ ರತ್ನರಚಿತವಲಯೇ ॥1॥

ಜಯ ಜಯ ಸಾಗರಜಾತೇ ಕುರು ಕರುಣಾಂ ಮಯಿ ಭೀತೇ।
ಜಗದಂಬಾಭಿಧಯಾ ತೇ ಜೀವತಿ ತವ ಪೋತೇ ॥2॥

ಜಯ ಜಯ ಸಾಗರಸದನೇ ಜಯ ಕಾಂತ್ಯಾ ಜಿತಮದನೇ।
ಜಯ ದುಷ್ಟಾಂತಕಕದನೇ ಕುಂದಮುಕುಲರದನೇ ॥3 ॥

ಸುರರಮಣೀನುತಚರಣೇ ಸುಮನಃಸಂಕಟಹರಣೇ।
ಸುಸ್ವರರಂಜಿತವೀಣೇ ಸುಂದರನಿಜಕಿರಣೇ ॥4॥

ಕುಂಕುಮರಂಜಿತಫಾಲೇ ಕುಂಜರಬಾಂಧವಲೋಲೇ ।
ಕಲಧೌತಾಮಲಚೇಲೇ ಕೃಂತಕುಜನಜಾಲೇ ॥5॥

ಭಜದಿಂದೀವರಸೋಮೇ ಭವಮುಖ್ಯಾಮರಕಾಮೇ ।
ಭಯಮೂಲಾಳಿವಿರಾಮೇ ಭಂಜಿತಮುನಿಭೀಮೇ ॥6॥

ಧೃತಕರುಣಾರಸಪೂರೇ ಧನದಾನೋತ್ಸವಧೀರೇ ।
ಧ್ವನಿಲವನಿಂದಿತಕೀರೇ ಧೀರದನುಜದಾರೇ ॥7॥

ಸುರಹೃತ್ಪಂಜರಕೀರೇ ಸುಮಗೇಹಾರ್ಪಿತಹಾರೇ ।
ಸುಂದರಕುಂಜವಿಹಾರೇ ಸುರವರಪರಿವಾರೇ ॥8॥

ವರಕಬರೀಧೃತಕುಸುಮೇ ವರಕನಕಾಧಿಕಸುಷಮೇ ।
ವನನಿಲಯಾದಯಭೀಮೇ ವದನವಿಜಿತಸೋಮೇ ॥9॥

ಮದಕಲಭಾಲಸಗಮನೇ ಮಧುಮಥನಾಲಸನಯನೇ ।
ಮೃದುಲೋಲಾಲಕರಚನೇ ಮಧುರಸರಸಗಾನೇ ॥10॥

ವ್ಯಾಘ್ರಪುರೀವರನಿಲಯೇ ವ್ಯಾಸಪದಾರ್ಪಿತಹೃದಯೇ ।
ಕುರು ಕರುಣಾಂ ಮಯಿ ಸದಯೇ ವಿವಿಧನಿಗಮಗೇಯೇ ॥11॥

-೧೩-

## ಧೂಪ-ದೀಪಗಳನ್ನು ಸಮರ್ಪಿಸಬೇಕು

ವೆಂಕಟಾದ್ರಿ ನಿಲಯನ ಪಂಕಜನಾಭನ ತೋರವ್ವ ಲಕುಮಿ ॥ಪ॥

ವಸುದೇವ ದೇವಕಿ ಕಂದಾ - ನಮ್ಮಶಶಿಮುಖಿಯರೊಡನೆ
ಆನಂದಾಪಶುಗಳ ಕಾಯ್ದ ಗೋವಿಂದ - ನಮ್ಮಬಿಸಜನಾಭ ಮುಕುಂದಾ ॥1॥

ಸಾಮಜರಾಜ ವರದಾ - ಬಲುಪ್ರೇಮದಿ ಭಕುತರ ಪೊರೆದಾಆ ಮಹಾ
ದಿತಿಜರ ತರಿದಾ - ನಿಸ್ಸೀಮ ಮಹಾಮಹಿಮನಾಗಿ ಮೆರೆದ - ನಮ್ಮ ॥2॥

ಉರಗಗಿರಿಯಲಿಪ್ಪ - ಅಂದು ಮರುತನ ಹೆಗಲೇರಿ ಬಪ್ಪ-
ಶರಣರಿಗೊರವಿತ್ತ ತಪ್ಪ ಸಿರಿ ಮೋಹನವಿಠ್ಠಲ ತಿಮ್ಮಪ್ಪ - ನಮ್ಮಪ್ಪನ ||3||

-೧೪-

## ನೈವೇದ್ಯಮಾಡಬೇಕು

ರಾಗ : ಆರಭಿ ತಾಳ : ಆದಿ

ಕಾಪಾಡೆಲೆ ಸಕಲಾಪದ್ಧಾರಿಣಿ ಕೊಲ್ಲಾಪುರಗತ ಕಮಲೆ ||ಪ||

ಈ ಪರಿ ಹರಿಯ ದಯಾಪಾತ್ರಳೆ ಶುಭ-
ನೂಪುರಾದಿ ಸುಕಲಾಪೆ ಶೋಭಿತೆ ಭ್ರೂ-
ಚಾಪ ಚಲನದಿಂದ ಪವಮಾನನಿ-
ಗೆ ಪದದೇ ಭವತಾಪಗಳಳಿದು ||ಅ.ಪ||

ಇಂದೀವರವರಮಂದಿರನಂದಿನಿ ಚಂದ್ರಜಯಿಪ ವದನೆ
ಬೃಂದಾರಕ ಮುನಿವಂದಿತ ಪದಯುಗೆ ಕುಂದಕುಟ್ಮಲರದನೆ
ಮದನೆ ಮುಕುಂದ ಹೃದಯಸದನೆ
ಇಂದ್ರನೀಲನಭ ಸುಂದರತನು ಗುಣ-
ಸಾಂದ್ರ ಇಂದುಮುಖಿ ಮಂದರಧರಗೋ-
ವಿಂದ ಬಂಧುನುತೆ ಬೃಂದಾವನಪತಿ
ನಂದನಂದನನಾನಂದಿನಿ ವಂದಿತೆ ||1||

ಕನ್ಯಾಮಣಿ ಜಗನ್ಮಾನ್ಯಾಮೃತ ಪಾವನ್ನಾಧರ ಬಿಂಬೆ
ಘನ ಕಲಶ ಕುಚವನ್ನು ಧರಿಪ ಕಟಿಸಣ್ಣ
ಘನನಿತಂಬೆ ಅಂಬೆ ಚಿನ್ನಪುತ್ಥಳಿ ಬೊಂಬೆ
ಅನ್ನವಸನ ಧನಧಾನ್ಯಕಾಗಿ ಪರರ
ನ್ನ ಯಾಚಿಸಿ ಬಲು ಖಿನ್ನನಾಗುತಲಿ

ನಿನ್ನನು ಮರೆದೆನು ಎನ್ನವಗುಣಗ-
ಳನ್ನು ಎಣಿಸದಿರು ಮನ್ನಿಸು ಬಿನ್ನಪ ||2||

ಲೋಲಕುಂಡಲ ಕಪೋಲ ಶೋಭಿತ ಕೀಲಾಲಜಾತಪಾಣಿ
ಕೇಳಿಲಿ ಯಮುನಾಕೂಲದಿ ಹರಿ ದು-
ಕೂಲಚೋರನ ರಾಣಿ ಜಾಣೆ ಶುಶ್ರೋಣೆ ಜಗತ್ರಾಣೆ
ಕಾಳಕೂಟಸಮ ಕೀಳು ವಿಷಯದಲಿ
ಬೀಳುವುದೆನ್ನ ಮನ ಕೀಳಿಸಿ ಶ್ರೀಗೋ-
ಪಾಲವಿಠಲನನುಗಾಲ ಸೇವಿಪಂತೆ
ಶೀಲವೀಯೆಯೆಂದು ಕೇಳುವೆ ಲಾಲಿಸೆ ||3||

-೧೫-

## ಕದಲಾರತಿ ಮಾಡಬೇಕು

ತಾಯೇ ನಿನ್ನ ಪದತೋಯಜಕೆರಗುವೆ ।
ಮಾಯಾದೇವಿ ಹರಿಕಾಯನಿವಾಸಿನಿ ||ಪ||

ಬುದ್ಧಿಯ ಪ್ರೇರಿಸೆ - ಪ್ರದ್ಯುಮ್ನನ ಸತಿ ಕರ್ದಮಜಾಲಯೆ ಭದ್ರಶರೀರೆ ||1||

ಇಂಗಡಲಾತ್ಮಜೆ -ಅಂಗನಾ ಕುಲಮಣಿ ರಂಗಪದಕಂಜಭೃಂಗ ಸರೋಮಣಿ ||2||

ಪ್ರಾಣೇಶವಿಟ್ಠಲಮಾನಿನಿ ಯನ್ನಯ ಹೀನಯೆಣಿಸದೆ ಪೋಷಿಸುವುದು ಮತಿ ||3||

-೧೬-

## ಮಂಗಳಾರತಿ ಮಾಡಬೇಕು

ರಾಗ - ಕಲ್ಯಾಣಿ ತಾಳ - ಆದಿ

ಎತ್ತಿರೆ ನವರತ್ನದಾರತಿ ಕರ್ತೃರಂಗನ ರಾಣಿಗೆ ||ಪ||

ಉತ್ತಮೋತ್ತಮ ಲೋಲನಾದ ವಿಷ್ಣುವಿನ ಕಲ್ಯಾಣಿಗೆ ||ಅ.ಪ.||

ಶುದ್ಧಸ್ನಾನವ ಮಾಡಿ ನದಿಯೊಳು ವಜ್ರಪೀಠಕೆ ಕುಳಿಸಿರೆ
ತಿದ್ದಿ ತಿಲಕವನಿಟ್ಟು ಹರುಷದಿ ಮುದ್ದು ಮಂಗಳಗೌರಿಗೆ ||1||

ಎರೆದು ಪೀತಾಂಬರವನುಡಿಸಿ ಸರ್ವಾಭರಣ ರಚಿಸಿರೆ
ಹರಳಿನ್ಮ್ಯೋಲೆ ಮೂಗುತಿನಿಟ್ಟು ಮುದ್ದು ಮಹಲಕ್ಷ್ಮಿ ದೇವಿಗೆ ||2||

ಅಚ್ಚಮಲ್ಲಿಗೆ ಲಕ್ಷಸಂಪಿಗೆ ಎತ್ತಿರೆ ನಿನ್ನ ಪಾದಕೆ
ಉತ್ತಮೋತ್ತಮಲೋಲನಾದ ವಿಷ್ಣುವಿನ ಕಲ್ಯಾಣಿಗೆ ||3||

ಹುಟ್ಟು ಬಡವಿಯ ಕಷ್ಟ ಕಳೆದು ಕೊಟ್ಟಳರಸನ ಸಿರಿಯನು
ಹೆತ್ತಕುವರನ ತೋರಿದಂಥ ಶುಕ್ರವಾರದ ಗೌರಿಗೆ ||4||

ಹರಿಯ ವಂಚಿಸಿ ಕರವೀರದೊಳು ಭರದಿ ಸ್ಥಿರವಾಗಿರುವಳೆ
ಪರಮಭಕ್ತರಿಗ್ವರವ ಕೊಡುವೋ ನಿಗರ್ವಿನಿಂದಲಿ ಒಲವೊ ದೇವಿಗೆ ||5||

ನಿಗಮವೇದ್ಯಳೆ ನಿನ್ನ ಗುಣಗಳ ಬಗೆ ಬಗೆಯಲಿ ಪೊಗಳುವೆ
ತೆಗೆದು ಭಾಗ್ಯವ ನೀಡುವಂಥ ಭೀಮೇಶಕೃಷ್ಣನ ಮಡದಿಗೆ ||6||

-೧೭-

## ಬೊಗಸೆಯಲ್ಲಿ ಹೂವುಗಳನ್ನು ಸಮರ್ಪಿಸಬೇಕು

ರಾಗ : ತೋಡಿ ತಾಳ : ತ್ರಿವಿಡಿ

ಇಂದಿರೆ ಇಂದುವದನೇ ಸರಸಿಜಸದನೇ
ನಿಂದಿತ ಜನಸೂದನೆ ||ಪ||

ವಂದಿಸುವೆನೆ ಅರವಿಂದಗಂಧಿನಿ
ಮಂದಿರದಲಿ ಗೋವಿಂದನ ತೋರಿಸೆ ||ಅ.ಪ||

ಮೂಲೋಕಮಾತೆ ವಿಖ್ಯಾತೆ ಕೈವಲ್ಯದಾತೆ
ಪಾಲಗಡಲ ಸಂಭೂತೆ ಕಾಲ ದೇಶದಿ ವ್ಯಾಪಿತೆ ಭಜಕರಪ್ರೀತೆ
ಶೀಲೆ ಸಂಪೂರ್ಣ ಗುಣವ್ರಾತೇ

ಫಾಲನಯನ ತ್ರಿದಶಾಲಯ ಪ್ರಮುಖರ
ಪಾಲಿಸುತಿಹೆ ಮಂದಜಾಲಜನಕೆ ರಮೇ
ಶ್ರೀಲತಾಂಗಿ ನಿನ್ನಾಳುಗಳೊಳು ಹರಿ
ಲೀಲೆಯ ಮನದಲಿ ಆಲೋಚನೆ ಕೊಡೆ ||1||

ಲೋಕನಾಯಕಿ ಲಕುಮಿ ಶ್ರೀ ಸಾರ್ವ ಭೌಮೆ
ಶೋಕರಹಿತ ಸುನಾಮೆ ನಾಕಜವನಧಿ ಸೋಮೆ ದೇವಲಲಾಮೆ
ಸಾಕಾರವಂತೆ ಗುಣ ಸ್ತೋಮೆ
ನೀ ಕರುಣಿಸಿ ಅವಲೋಕಿಸಿ ಎನ್ನಯ
ಕಾಕುಮತಿಯ ಕಳೆದೇಕಾಂತದಿ ನಿತ್ಯ
ಏಕ ಮನದಿ ಹರಿ ಶ್ರೀ ಕರಪದಧ್ಯಾನ
ನೀ ಕರುಣಿಸು ನಿರಾಕರಿಸದಲೆ ||2||

ಜಾತರಹಿತ ಜಯವಂತೆ ದೈತ್ಯಕೃತಾಂತೆ
ಸೀತಾಂಶುಕೋಟಿ ಮಿಗೆಕಾಂತೆ
ಘಾತಕದೂರೆ ನಿಜಪಂಥೆ ನಿತ್ಯಾ ನಿಶ್ಚಿಂತೆ
ನೀತದೂರಾದಿ ಮಧ್ಯಾಂತೆ
ಭೂತನಾಥ ಪುರುಹೂತ ಮುಖಾವರ-
ವ್ರಾತ ವಿನುತೆ ಅತಿಪ್ರೀತಿಯಿಂದಲಿ ನಮ್ಮ
ವಾತಜನಕ ಜಗನ್ನಾಥ ವಿಠಲನ
ಮಾತು ಮಾತಿಗೆ ನೆನೆವಾತುರ ಮನ ಕೊಡೇ ||3||

-೧೮-

## ಪ್ರಾರ್ಥನೆ ಮಾಡಬೇಕು

ಧನಧಾನ್ಯವಿತ್ತು ಮರ್ತ್ಯರ ಪೊರೆವೆ ಎಂದೆಂದು
ಮನೆಗಿಂಬುಕೊಂಡು ರಕ್ಷಿಸಿದೆ

ದಿನದಿನದಿ ಚರಣವಿಟ್ಟರೆ ನೊಂದುಕೊಳೆ ನಿನ್ನ
ಗುಣಕೆ ಭೂದೇವಿ ಸರಿಗಾಣೆ ಸಕಲಮುನಿ-
ಜನರ ಪೊರೆವುದು ನಿಮ್ಮಾಣೆ ನಾರಾಯಣ ಬಂದು
ನಿನ್ನ ಸಲಹುವ ಪ್ರವೀಣೆ ||1||

ಸಪ್ತಸಮುದ್ರಗಳ ಪೊತ್ತಿಪ್ಪೆ ನಿತ್ಯ ಸಮಸ್ತ
ಪರ್ವತಭಾರವ ನೀ ತಾಳ್ವೆ
ಉತ್ತಮ ತ್ರಿವಿಕ್ರಮನ ರಥೋತ್ಸವವೆ ಮೊದಲಾದ
ಪವಿತ್ರಾಂಕುರಾರ್ಪಣಕೆ ನೀ ಬಂದು ವರಿಯ
ಸುತ್ತಿನ ಪವಳಿಯೊಳಗೆ ನಿಂದು ನಮಗೆ
ಮುಕ್ತಿ ಪದವೀವುದಕೆ ಬಾ ಕೃಪಾಸಿಂಧು ||2||

ನಿನಗೆ ದ್ರೋಹವ ಮಾಡಿದ ಹಿರಣ್ಯಾಕ್ಷನೆಂಬ ದುರ್ಜನ
ದನುಜನ ವರಾಹನಾಗಿ ಮೊನೆಯ ದಾಡೆಯ
ಕೊನೆಯಲಿಂದು ಕೊಂದು ನಿನ್ನ ಮನೋಹರ
ತೊಡೆಯಲಿಟ್ಟುಕೊಂಡ ಸಿರಿ ಹಯವದನ
ಹರಿಯಕರ ಕರಿಭೇರುಂಡ ಸಿರಿಗೆ ಸರಿಯೆನಿಸಿ
ನಿನ್ನನು ಪೊರೆಯುತಲಿಹನು ಕಂಡಾ ||3||

-೧೯-

## ನಮಸ್ಕಾರ ಮಾಡಬೇಕು

ನಮಸ್ತೆ ವಿಮಲೆ ಕೋಮಲೆ ರಮಾದೇವಿ ।
ನಮಸ್ತೇ ನಮಸ್ತೇ ||ಪ||

ತರುಣಿ ಶಿರೋಮಣಿ ನಿನ್ನ ಶೀಲಸೌಂದರ್ಯವನು
ಧರೆಯೊಳು ವರ್ಣಿಸುವ ಕವಿಯು ದಾವ

ಸ್ವರಮಣನೆನಿಪ ರಮಣನುರದೊಳೆಂದೆಂದು ನೀ-
ನರಮನೆಯ ಮಾಡಿ ಭಾಪುರೆ ಮೆರೆದೆಲೆಲೆ ॥1॥

ತನ್ನ ಮೈಯಿಂದ ಮಕ್ಕಳ ಸೃಜಿಸಿ ಯುಗಯುಗದಿ
ನಿನ್ನ ತಾರುಣ್ಯ ಲಾವಣ್ಯಗಳನು
ಮನ್ನಿಸಿ ಪೊರೆವ ಹರಿಯ ಪಟ್ಟದ ರಮಣಿ ಜಗ-
ನ್ಮಾನ್ಯೆ ಚೈತನ್ಯೆ ಲಾವಣ್ಯೆ ಗುಣಗಣಸದನೆ ॥2॥

ನಿನಂಗವಪ್ಪಲು ನೋಡಲು ಮುಖವ ಚುಂಬಿಸಲು
ಅನಂತಕರವಕ್ತ್ರನೇತ್ರಗಳು
ಪೂರ್ಣ ಹಯವದನ ಕೈಕೊಂಡ ನಿನ್ನ ಗಂಡ
ಸ್ವರ್ಣಸಮವರ್ಣೆ ಕರ್ಣಾಯತಾಕ್ಷಿ ॥3॥

## -೨೦-

## ಬಾಗಿನ ನೀಡಬೇಕು

ರಾಗ: ಮಧ್ಯಮಾವತಿ ತಾಳ:ಅಟ

ಪಾಲಿಸೆ ಪದುಮಾಲಯೆ ನೀನೆ ಗತಿ ॥ಪ ॥

ಬಾಲಕನು ತಾನಾಗಿ ಗೋಪಿಗೆ -ಲೀಲೆಯಿಂದಲಿ ನಂದಗೋಕುಲ-
ಬಾಲೆಯರ ಮೋಹಿಸುತ ಅಸುರರ -ಕಾಲನೆನಿಸಿದ ಬಾಲಕನ ಪ್ರಿಯೆ ॥ಅ.ಪ॥

ಅನ್ಯರ ನೆನೆಯಲೊಲ್ಲೆ ನಿನ್ನಯ ಪಾದ-ವನ್ನು ನಂಬಿದೆ ನೀ ಬಲ್ಲೆ ತಡಮಾಡದೆ
ಚೆಣ್ಣ ಕರೆಯಲು ಘನ್ನಮಹಿಮನು- ಉನ್ನತದ ರೂಪಿನಲಿ ಗುಣಸಂ-
ಪನ್ನ ರಕ್ಕಸರನ್ನು ಸೀಳಿದ -ಪನ್ನಗಾದ್ರಿನಿವಾಸೆ ಹರಿಪ್ರಿಯೆ ॥1॥

ಅರಿಯದ ತರಳನೆಂದು ಶ್ರೀಪತಿ ಸತಿ -ಕರುಣದಿ ಸಲಹೆ ಬಂದು ಕರುಣಾಸಿಂಧು
ಸರಸಿಜಾಸನ ರುದ್ರರೀರ್ವರ -ವರದಿ ಮೂರ್ಖನಸುರ ಬಾಧಿಸೆ
ಹರಿವರರ ದಂಡೆತ್ತಿ ಬಹುಮುಖ -ದುರುಳನ ಶಿರ ತರಿದವನ ಪ್ರಿಯೆ ॥2॥

ಅಜಮನಸಿಜಜನನಿ ಅಂಬುಜಪಾಣಿ -ಭುಜಗಸನ್ನಿಭವೇಣಿ ನಿತ್ಯಕಲ್ಯಾಣಿ
ಕುಜನಮರ್ದನ ವಿಜಯವಿಠಲನ -ಭಜಿಸಿಪಾಡುವ ಭಕ್ತಕೂಟವ
ನಿಜದಿ ಸಲಹುವೆನೆಂಬ ಬಿರುದುಳ್ಳ- ವಿಜಯಸಾರಥಿ ವಿಶ್ವಂಭರಪ್ರಿಯೆ ||3||

-೨೧-

## ಛತ್ರಚಾಮರಾದಿ ಉಪಚಾರ ಸಮರ್ಪಿಸಬೇಕು

ರಾಗ - ತೋಡಿ ತಾಳ - ಆಟತಾಳ

ಏನು ಧನ್ಯಳೋ ಲಕುಮಿ -ಎಂಥ ಮಾನ್ಯಳೋ ||ಪ ||
ಸಾನುರಾಗದಿಂದ ಹರಿಯ -ತಾನೆ ಸೇವೆ ಮಾಡುತಿಹಳು ||ಅ. ಪ||

ಕೋಟಿ ಕೋಟಿ ಭೃತ್ಯರಿರಲು - ಹಾಟಕಾಂಬರನ ಸೇವೆ
ಸಾಟಿಯಿಲ್ಲದೆ ಮಾಡಿ ಪೂರ್ಣ-ನೋಟದಿಂದ ಸುಖಿಸುತಿಹಳು ||1||

ಛತ್ರ ಚಾಮರ ವ್ಯಜನ ಪರಿ-ಯಂಕ ಪಾತ್ರರೂಪದಲ್ಲಿ ನಿಂತು
ಚಿತ್ರಚರಿತನಾದ ಹರಿಯ -ನಿತ್ಯ ಸೇವೆ ಮಾಡುತಿಹಳು ||2||

ಸರ್ವಸ್ಥಳದಿ ವ್ಯಾಪ್ತನಾದ -ಸರ್ವದೋಷರಹಿತನಾದ
ಸರ್ವವಂದ್ಯನಾದ ಪುರಂ-ದರವಿಠಲನ್ನ ಸೇವಿಸುವಳು ||3||

-೨೨-

## ಮಂತ್ರಾಕ್ಷತೆ ಹಾಕಿ ಉದ್ವಾಸನೆ ಮಾಡಬೇಕು

ಭಾಗ್ಯವೆ ಪಾಲಿಸೆನ್ನಗೆ । ಶ್ರೀಭಾರ್ಗವಿ ಜನನಿ ||ಪ||

ಭಾಗ್ಯವೇ ಪಾಲಿಸು ಭಾರ್ಗವಿ ಕಮಲಜ ।
ಭಾಗ್ಯದ-ನಿಮಿಷವರ್ಗ-ಸೇವಿತೆ ||ಅ.ಪ.||

ಹರಿಸರ್ವೋತ್ತಮ ಗುರುಸುಖತೀರ್ಥರು । ಹರ-ಫಣಿವಿಪಶಕ್ರಾದಿಗಳು ।
ತರತಮಭೇದ ಮೂರೆರಡು ಸತ್ಯವೆಂದರಿತು ಮನದಿ ಬಲು ಹರುಷ ಬಡುತಲಿಹ
||1||

ಕಾಮಕ್ರೋಧಗಳ ಗೆಲಿದು ಸತತನಿ-ಷ್ಕಾಮಭಕ್ತಿಯಲಿ ಮನವುಬ್ಬಿ।
ರಾಮ ರಾಮ ಎಂದು ಪ್ರೇಮದಿ ಪಾಡುತ।
ರೋಮಾಂಚಿತತನುವಲಿ ನರ್ತಿಪ ಸೌಭಾಗ್ಯ ॥2॥

ದುರ್ಜನಸಂಗ ವಿವರ್ಜಿಸಿ ನಿರುತದಿ ಸಜ್ಜನಸಂಗಸುಖವ ಬಯಸಿ।
ಅರ್ಜುನಸಖನ ಪದಾಬ್ಜಧ್ಯಾನದೊಳು। ಗರ್ಜಿಸುತಲಿ ನಿರ್ಲಜ್ಜನೆನಿಪಸೌಭಾಗ್ಯ॥

ನಾನು ನನ್ನದೆಂಬ ಹೀನಮತಿಯ ಕಳೆದೇನು ಮಾಡುತಿಹ ಕರ್ಮಗಳ।
ಶ್ರೀನಿವಾಸನ ಪ್ರೇರಣೆ ಎಂದು ಸದಾನುರಾಗದಲಿ ಅರ್ಪಿಸುವ ಸೌಭಾಗ್ಯ ॥4॥

ಸೂಸುವ ಭಕ್ತಿ ವಿರಕ್ತಿ ಜ್ಞಾನಧನರಾಶಿಯ ಕೊಟ್ಟೀ ಭವ ಸುಖದಾ।
ಆಸೆಯ ಬಿಡಿಸಿ ವರದೇಶವಿಟ್ಠಲನ ದಾಸರ ದಾಸರ ದಾಸನೆನಿಪ ಸೌಭಾಗ್ಯ ॥5॥

– ೨೩ –

## ನಮ್ಮ ಮನೆಯಲ್ಲಿದ್ದು ನಿರಂತರ ರಕ್ಷಿಸೆಂದು ಪ್ರಾರ್ಥಿಸಿ, ಕೃಷ್ಣಾರ್ಪಣ ಎನ್ನಬೇಕು.

ರಾಗ ಶ್ರೀ ತಾಳ - ಅಟ

ಶ್ರೀ ವರಲಕ್ಷ್ಮಿದೇವಿ ಶ್ರೀ ವರಲಕ್ಷ್ಮಿದೇವಿ ॥ಪ॥

ಸೌಭಾಗ್ಯವೀಯೆ ಸದಯೆ ಸಾಮ್ರಾಜ್ಯವೀಯೆ ಜನನೀ
ಸಕಲಲೋಕಕೆ ಸಾಕ್ಷಿಯಾಗಿರುವ ತಾಯೆ ॥1॥

ಶ್ರಾವಣ ಶುಕ್ರವಾರ ದಿನದಲಿ ಸಕಲಾಭೀಷ್ಟವೀಯೆ
ಶರಣಾಗತರನು ಕರುಣದಿ ಕಾಯಲು ಬಾ ಬಾ ॥2॥

ಕೊಲ್ಹಾಪುರದಲಿ ನೆಲೆಸಿ ಸಲ್ಲೀಲೆಯಿಂದಲೀ ಇರುವಾ
ಪರಮಪುರುಷ ಶ್ರೀಪುರಂದರವಿಟ್ಠಲನ ರಾಣಿ ॥3॥

॥ ಶ್ರೀಮಧ್ವೇಶಾರ್ಪಣಮಸ್ತು ॥

* * * * *

# ಶ್ರೀವರಮಹಾಲಕ್ಷ್ಮೀ ವ್ರತಕಥೆ

ಶೌನಕಾದ್ಯಾ ಮುನಿಶ್ರೇಷ್ಠಾಃ ಸೂತಂ ದೃಷ್ಟ್ವಾ ಮಹಾಮುನಿಮ್ ।
ಲೋಕಾನಾಂ ಚ ಹಿತಾರ್ಥಾಯ ಪಪ್ರಚ್ಛುರ್ವ್ರತಮುತ್ತಮಮ್ ॥೧॥

ಮುನಿಶ್ರೇಷ್ಠರಾದ ಶೌನಕಾದಿ ಋಷಿಗಳು ಮಹಾಮುನಿಗಳಾದ ಸೂತಪುರಾಣಿಕರನ್ನು ನೋಡುತ್ತಾ, ಸಮಸ್ತಸಜ್ಜನರ ಹಿತಕ್ಕಾಗಿ ಶ್ರೇಷ್ಠವ್ರತದ ಬಗ್ಗೆ ಪ್ರಶ್ನಿಸಿದರು.

ಋಷಯಃ ಊಚುಃ –

ವದ ಸೂತ ಮಹಾಭಾಗ ಸರ್ವಶಾಸ್ತ್ರಾರ್ಥಕೋವಿದ ।
ಯೇನ ಚೀರ್ಣೇನ ಮರ್ತ್ಯಾನಾಂ ಸರ್ವಸೌಭಾಗ್ಯಸಂಪದಃ ॥೨॥
ತದ್ವ್ರತಂ ಬ್ರೂಹಿ ನೋ ಬ್ರಹ್ಮನ್ ಸರ್ವಕಾರ್ಯಾರ್ಥಸಿದ್ಧಯೇ ।

ಮಹಾಭಾಗ್ಯಶಾಲಿಗಳಾದ, ಎಲ್ಲ ಶಾಸ್ತ್ರಗಳ ಮರ್ಮವನ್ನು ಅರಿತು ಉತ್ತಮವಾಗಿ ಹೇಳುವ ಕೌಶಲ್ಯವನ್ನು ಪಡೆದ ಸೂತಪುರಾಣಿಕರೇ ಸಜ್ಜನರಾದ ಮನುಷ್ಯರು ಯಾವ ವ್ರತವನ್ನು ಮಾಡುವುದರಿಂದ ಎಲ್ಲ ಬಗೆಯ ಸೌಭಾಗ್ಯಗಳನ್ನು ಪಡೆದುಕೊಳ್ಳುತ್ತಾರೋ ಅದರ ಬಗ್ಗೆ ನಮಗೆ ತಿಳಿಸಿರಿ. ಆ ವ್ರತವನ್ನು ಆಚರಣೆ ಮಾಡುವುದರಿಂದ ಎಲ್ಲ ಅಭೀಷ್ಟಗಳೂ ನೆರವೇರಬೇಕು.

ಶ್ರೀಸೂತ ಉವಾಚ –

ಕೈಲಾಸಶಿಖರೇ ರಮ್ಯೇ ನಾನಾಗಣಸಮಾವೃತೇ ॥೩॥
ನದೀನಿರ್ಝರಕಾಸಾರತೀರ್ಥಬೃಂದಸಮಾಕುಲೇ ।
ಪಾಟಲಾಶೋಕಪುನ್ನಾಗಚೂತಜಂಬೂಕಪಿತ್ಥಕೈಃ ॥೪॥

ಸೂತಪುರಾಣಿಕರು ಶೌನಕಾದಿ ಋಷಿಗಳನ್ನು ಕುರಿತು ಶ್ರೇಷ್ಠವ್ರತದ ಬಗ್ಗೆ ಹೇಳಲು ಪ್ರಾರಂಭ ಮಾಡಿದರು – ಶೌನಕಾದಿ ಋಷಿಗಳೇ! ಕೈಲಾಸಶಿಖರವು ಅತ್ಯಂತ

ರಮ್ಯವಾಗಿದೆ. ರುದ್ರದೇವರ ಪ್ರಮಥಗಣಗಳಿಂದ ಪರಿವೃತವಾಗಿದೆ. ಅಲ್ಲಿ ನಿರ್ಮಲವಾದ ಪ್ರವಾಹದಿಂದ ನದಿಗಳು ಹರಿಯುತ್ತಿವೆ. ಅನೇಕ ತೀರ್ಥಗಳ ಸಮೂಹವೇ ಅಲ್ಲಿದೆ. ಪಾಟಲ, ಆಶೋಕ, ಪುನ್ನಾಗ, ಮಾವು, ನೇರಳೆ, ಬೆಳಲೆ ಈ ಎಲ್ಲ ಮರಗಳು ಹೂವು ಹಣ್ಣುಗಳಿಂದ ಅಲ್ಲಿ ಕಂಗೊಳಿಸುತ್ತಿವೆ.

ಶ್ರೀಫಲೈಃ ಪನಸೈರ್ವೃಕ್ಷೈರ್ನಾರಂಗೈಃ ಪಿಪ್ಪಲೈರ್ವೃತೈಃ ।
ಕಲ್ಪದ್ರುಮಸಮೈಃ ಕೀರ್ಣೇ ಕಾಮಧೇನುಸಮಾವೃತೇ ॥೫॥

ಬಿಲ್ವವೃಕ್ಷ, ಹಲಸಿನ ಮರ, ನಾರಂಗವೃಕ್ಷ, ಪಿಪ್ಪಲಿ ಮರ ಈ ಎಲ್ಲ ಮರಗಳೂ ಕಲ್ಪವೃಕ್ಷಕ್ಕೆ ಸಮಾನವಾಗಿ ಅತ್ಯಂತ ಸುಂದರವಾಗಿ ಬೆಳೆದು ನಿಂತಿವೆ. ಕಾಮಧೇನುಗಳೂ ಕೂಡ ಅಲ್ಲಿವೆ.

ಚಿಂತಾಮಣಿಪುರೋಗೈಶ್ಚ ರತ್ನೈರನ್ಯೈಃ ಸುಸಂವೃತೇ ।
ಬ್ರಹ್ಮೇಂದ್ರಾದಿಸುರಾಕೀರ್ಣೇ ಋಷಿಸಂಘನಿಷೇವಿತೇ ॥೬॥

ಚಿಂತಾಮಣಿ ಮೊದಲಾದ ಅಪೂರ್ವರತ್ನಗಳು ಅಲ್ಲಿವೆ. ಬ್ರಹ್ಮದೇವರು ಇಂದ್ರದೇವರು, ಮೊದಲಾದ ಶ್ರೇಷ್ಠದೇವತೆಗಳು ಅಲ್ಲಿ ನೆಲೆಸಿದ್ದಾರೆ. ಶ್ರೇಷ್ಠ ಋಷಿಮುನಿಗಳಿಂದಲೂ ಅದು ಸೇವಿಸಲ್ಪಟ್ಟಿದೆ.

ರುದ್ರೈರ್ವಸುಭಿರಾದಿತ್ಯೈರ್ವಿಶ್ವೇದೇವೈರ್ಮರುದ್ಗಣೈಃ ।
ಯಕ್ಷರಾಕ್ಷಸಗಂಧರ್ವಸಿದ್ಧವಿದ್ಯಾಧರಾನ್ವಿತೇ ॥೭॥

ಏಕಾದಶರುದ್ರರು, ಅಷ್ಟವಸುಗಳು, ದ್ವಾದಶಾದಿತ್ಯರು, ವಿಶ್ವೇದೇವತೆಗಳು, ೪೯ ಮರುದ್ದೇವತೆಗಳು, ಯಕ್ಷರು, ರಾಕ್ಷಸರು, ಗಂಧರ್ವರು, ಸಿದ್ಧರು, ವಿದ್ಯಾಧರರೂ ಕೂಡ ಆ ಕೈಲಾಸಶಿಖರದಲ್ಲಿ ನೆಲೆಸಿದ್ದಾರೆ.

ಮಂದಾರವಿಟಪಕ್ರಾಂತೇ ಸರ್ವರತ್ನೋಜ್ಜ್ವಲೇ ಶುಭೇ ।
ಸ್ವರ್ಣಸಿಂಹಾಸನಾಸೀನಂ ಶಂಕರಂ ಲೋಕಶಂಕರಮ್ ॥೮॥

ಮಂದಾರವೃಕ್ಷದಿಂದ ಕೂಡಿದ, ನವರತ್ನಗಳ ಪ್ರಭೆಯಿಂದ ಜಾಜ್ವಲ್ಯಮಾನವಾದ, ಅತ್ಯಂತ ಮಂಗಳಪ್ರದವಾದ, ಸ್ವರ್ಣಮಯವಾದ ಸಿಂಹಾಸನದಲ್ಲಿ ಮಹಾರುದ್ರ-ದೇವರು ಕುಳಿತಿದ್ದಾರೆ.

ಪ್ರಣಿಪತ್ಯ ಮಹಾದೇವೀ ಪಾರ್ಶ್ವೇ ಸ್ಥಿತ್ವಾ ಕೃತಾಂಜಲಿಃ ।
ಪಪ್ರಚ್ಛ ಗೌರೀ ಸಂತುಷ್ಟಾ ಲೋಕಾನುಗ್ರಹಕಾಂಕ್ಷಯಾ ॥೯॥

ಇಂಥ ಮಹಾರುದ್ರದೇವರನ್ನು ಭಕ್ತಿಯಿಂದ ನಮಸ್ಕಾರವನ್ನು ಮಾಡಿ, ಮಹಾದೇವಿಯಾದ ಪಾರ್ವತಿಯು ಕೈಮುಗಿದು ಅವರ ತೊಡೆಯ ಮೇಲೆ ಕುಳಿತುಕೊಳ್ಳುತ್ತಾಳೆ. ಸಮಸ್ತಸಜ್ಜನಪ್ರಪಂಚಕ್ಕೆ ಅನುಗ್ರಹ ಮಾಡುವ ದೃಷ್ಟಿಯಿಂದ ಆ ಗೌರಿಯು ಸಂತೋಷಮನದಿಂದ ಮಹಾದೇವರ ಬಳಿ ಪ್ರಶ್ನಿಸುತ್ತಾಳೆ.

ಪಾರ್ವತ್ಯುವಾಚ

ಭಗವನ್ ಸರ್ವಲೋಕೇಶ ಸರ್ವಭೂತದಯಾನಿಧೇ ।
ಯದ್ರಹಸ್ಯಮಿದಂ ನೃಣಾಂ ಸರ್ವಸೌಭಾಗ್ಯದಾಯಕಮ್ ॥೧೦॥
ವ್ರತಂ ಬ್ರೂಹಿ ಸುರಶ್ರೇಷ್ಠ ಕೃಪಯಾ ಮಮ ಶಂಕರ ।

ಪಾರ್ವತಿಯು ಪ್ರಶ್ನಿಸುತ್ತಾಳೆ – ಸಮಸ್ತಲೋಕಗಳಿಗೆ ಒಡೆಯರಾದ, ಸಕಲಪ್ರಾಣಿಗಳಲ್ಲಿ ಕಾರುಣ್ಯವುಳ್ಳ, ಬ್ರಹ್ಮಜ್ಞಾನಿಗಳಾದ, ಸ್ವಾಮಿಯೇ! ಸಮಸ್ತಸಜ್ಜನರಿಗೆ ಎಲ್ಲ ಬಗೆಯ ಸೌಭಾಗ್ಯಗಳನ್ನು ನೀಡುವ, ರಹಸ್ಯವನ್ನು ನನಗೆ ತಿಳಿಸಿರಿ. ಅಂಥ ಶ್ರೇಷ್ಠವಾದ ವ್ರತವನ್ನು ಕೃಪೆ ಮಾಡಿ ನನಗೆ ಉಪದೇಶಿಸಿರಿ.

ಈಶ್ವರ ಉವಾಚ

ಶೃಣು ಭದ್ರೇ ಪ್ರವಕ್ಷ್ಯಾಮಿ ಸಾವಧಾನಮನಾ ಭವ ॥೧೧॥
ವ್ರತಾನಾಮುತ್ತಮಂ ಕಾಮ್ಯಂ ಸರ್ವಸೌಭಾಗ್ಯಕಾರಣಮ್ ।
ಸರ್ವಸಂಪತ್ಪ್ರದಂ ಕೀರ್ತಿಪುತ್ರಪೌತ್ರಪ್ರವರ್ಧನಮ್ ॥೧೨॥

ಮಹಾದೇವರು ಪಾರ್ವತಿಗೆ ಉಪದೇಶಿಸುತ್ತಿದ್ದಾರೆ – ಮಂಗಳಸ್ವರೂಪಳೇ! ಏಕಾಗ್ರತೆಯಿಂದ ಕೇಳು. ಎಲ್ಲ ವ್ರತಗಳಲ್ಲಿ ಶ್ರೇಷ್ಠವಾದ ವ್ರತದ ಬಗ್ಗೆ ನಿನಗೆ ಈಗ ಹೇಳುತ್ತೇನೆ. ಈ ವ್ರತವು ಎಲ್ಲ ಬಗೆಯ ಇಷ್ಟಾರ್ಥಗಳನ್ನು ಈಡೇರಿಸುತ್ತದೆ. ಸಮಸ್ತಸೌಭಾಗ್ಯಗಳಿಗೆ ಕಾರಣವಾಗಿದೆ. ಗೃಹಸ್ಥನಿಗೆ ಅವಶ್ಯಕವಾದ ಎಲ್ಲ ಬಗೆಯ ಸಂಪತ್ತುಗಳನ್ನು ಇದೊಂದೇ ವ್ರತವು ನೀಡುತ್ತದೆ. ಅಷ್ಟೇ ಅಲ್ಲದೆ ಕೀರ್ತಿಯನ್ನು ಮಕ್ಕಳನ್ನು ಮೊಮ್ಮಕ್ಕಳನ್ನು ನೀಡುವ ವ್ರತವಾಗಿದೆ.

ಶುಕ್ಲೇ ಶ್ರಾವಣಿಕೇ ಮಾಸಿ ಪೂರ್ಣಿಮೋಪಾಂತ್ಯಭಾರ್ಗವೇ ।
ವ್ರತಂ ಸಮಾಚರೇತ್ಸಮ್ಯಗಭೀಷ್ಟಂ ಚ ಭವೇದ್ ಧ್ರುವಮ್ ॥೧೩॥

ಶ್ರಾವಣಮಾಸದ ಶುಕ್ಲಪಕ್ಷದಲ್ಲಿ ಹುಣ್ಣಿಮೆಯ ಹಿಂದಿನ ಶುಕ್ರವಾರದಂದು ಈ ವ್ರತವನ್ನು ಆಚರಣೆ ಮಾಡಬೇಕು. ಅತ್ಯಂತಶ್ರದ್ಧೆಯಿಂದ ವೈಭವೋಪೇತವಾಗಿ ಈ ವ್ರತವನ್ನು ಆಚರಿಸಿದಾಗ ನಿಶ್ಚಯವಾಗಿ ಎಲ್ಲ ಅಭೀಷ್ಟಗಳು ನೆರವೇರುತ್ತವೆ.

ಪಾರ್ವತ್ಯುವಾಚ

ವಿಧಿನಾ ಕೇನ ಕರ್ತವ್ಯಂ ತತ್ರ ಕಾ ನಾಮ ದೇವತಾ ।
ಕೇನ ಚಾಽಽರಾಧಿತಾ ಪೂರ್ವಂ ಬ್ರೂಹಿ ಶಂಭೋ ಸವಿಸ್ತರಮ್ ॥೧೪॥

ಪಾರ್ವತಿಯು ಪ್ರಶ್ನಿಸುತ್ತಾಳೆ – ಸ್ವಾಮಿ! ಯಾವ ವಿಧಿಪ್ರಕಾರವಾಗಿ ಈ ವ್ರತವನ್ನು ಆಚರಣೆ ಮಾಡಬೇಕು? ಯಾವ ದೇವತೆಯನ್ನು ಪೂಜಿಸಬೇಕು? ಮತ್ತು ಹಿಂದೆ ಈ ವ್ರತವನ್ನು ಯಾರು ಅನುಷ್ಠಾನ ಮಾಡಿದ್ದರು? ಓ ಶಂಭುವೇ! ವಿಸ್ತಾರವಾಗಿ ಇದನ್ನೆಲ್ಲ ನನಗೆ ವಿವರಿಸಿರಿ.

ವರಲಕ್ಷ್ಮೀರಿತಿ ಖ್ಯಾತಾ ದೇವತಾ ಶೃಣು ಪಾರ್ವತಿ ।
ಯೇ ಚೇಷ್ಟಾರ್ಥಕಾಮಿನೋ ಲೋಕೇ ಸ್ತ್ರಿಯೋ ವಾ ಪುರುಷಾಶ್ಚ ವಾ ॥೧೫॥

ಪಾರ್ವತಿಯೇ! ಕೇಳುವವಳಾಗು. ಈ ವ್ರತದಲ್ಲಿ ವರಲಕ್ಷ್ಮಿಯನ್ನು ಆರಾಧನೆ ಮಾಡಬೇಕು. ಅವಳೇ ದೇವತೆಯಾಗಿದ್ದಾಳೆ. ಪುರುಷರಾಗಲೀ ಸ್ತ್ರೀಯರಾಗಲೀ ಅವರ ಏನೇ ಅಭೀಷ್ಟಗಳಿದ್ದರೂ ಈ ವ್ರತವನ್ನೇ ಆಚರಿಸಬೇಕು.

ಶುಕ್ಲೇ ಶ್ರಾವಣಿಕೇ ಮಾಸಿ ಪೂರ್ಣಿಮೋಪಾಂತ್ಯಭಾರ್ಗವೇ ।
ವ್ರತಂ ಕುರ್ವಂತಿ ದೇವೇಶ್ಯೇ ತೇಷಾಮಿಷ್ಟಂ ಭವೇದ್ ಧ್ರುವಮ್ ॥೧೬॥

ಶ್ರಾವಣಮಾಸದ ಶುಕ್ಲಪಕ್ಷದಲ್ಲಿ ಹುಣ್ಣಿಮೆಯ ಹಿಂದಿನ ಶುಕ್ರವಾರದಂದು ಯಾರು ಈ ವರಮಹಾಲಕ್ಷ್ಮೀ ವ್ರತವನ್ನು ಆಚರಿಸುತ್ತಾರೋ ಅವರ ಎಲ್ಲ ಮನೋಭೀಷ್ಟಗಳೂ ನೆರವೇರುತ್ತವೆ.

ಅತ್ರೇತಿಹಾಸಂ ವಕ್ಷ್ಯಾಮಿ ಪುಣ್ಯಂ ತು ಶೃಣು ಪಾರ್ವತಿ ।
ಕುಂಡಿನಂ ನಾಮ ನಗರಂ ಸರ್ವಮಂಗಲಮಂಡಿತಮ್ ॥೧೭॥

ಪಾರ್ವತಿಯೇ! ಈ ವರಮಹಾಲಕ್ಷ್ಮೀವ್ರತದ ಬಗ್ಗೆ ನಿನಗೊಂದು ಇತಿಹಾಸವನ್ನು ಹೇಳುತ್ತೇನೆ. ಇದು ಅತ್ಯಂತ ಪುಣ್ಯಕರವಾಗಿದೆ. ಕೇಳು. ಎಲ್ಲ ಮಂಗಳಮಯವಾದ ಅಲಂಕಾರವಸ್ತುಗಳಿಂದ ಸಿಂಗರಿಸಲ್ಪಟ್ಟ ಕುಂಡಿನಪುರ ಎಂಬ ಒಂದು ನಗರವಿತ್ತು.

ಹೇಮಪ್ರಾಕಾರಸಹಿತಂ ಚಾಮೀಕರಗೃಹೋಜ್ಜ್ವಲಮ್ ।
ತತ್ರಾಭೂದ್ ಬ್ರಾಹ್ಮಣೀ ಕಾಚಿತ್ ನಾಮ್ನಾ ಚಾರುಮತೀ ಶುಭಾ ॥೧೮॥

ಆ ಕುಂಡಿನ ಎಂಬ ನಗರದಲ್ಲಿ ಭಂಗಾರದ ಗೋಡೆಗಳಿದ್ದವು. (ಚಾಮೀಕರ = ಸುವರ್ಣ) ಸುವರ್ಣದ ಮನೆಗಳಿಂದ ಉಜ್ಜ್ವಲವಾಗಿತ್ತು. ಅಲ್ಲಿ ಚಾರುಮತಿಯೆಂಬ ಉತ್ತಮಳಾದ ಒಬ್ಬ ಬ್ರಾಹ್ಮಣಸ್ತ್ರೀಯು ಇದ್ದಳು.

ಪತಿಭಕ್ತಿಮತೀ ಸಾಧ್ವೀ ಪತಿಶುಶ್ರೂಷಣೇ ರತಾ ।
ದಾರಿದ್ರ್ಯಾತ್ ಖಿದ್ಯಮಾನಾಽಪಿ ಸತತಂ ಮೃದುಭಾಷಿಣೀ ॥೧೯॥

ಗಂಡನಲ್ಲಿ ಅತ್ಯಂತಭಕ್ತಿಯುಳ್ಳವಳಾಗಿದ್ದಳು. ನಿರಂತರ ಪತಿಶುಶ್ರೂಷೆಯಲ್ಲಿಯೇ ಆಸಕ್ತಳಾಗಿದ್ದಳು. ಸಾಧ್ವಿಯೆಂದೇ ಪ್ರಸಿದ್ಧಳಾಗಿದ್ದಳು. ದಾರಿದ್ರ್ಯದಿಂದ ಪೀಡಿತಳಾಗಿದ್ದರೂ ಕೂಡ ನಿತ್ಯವಾಗಿ ಮೃದುವಾಗಿ ಮಾತನಾಡುವ ಸ್ವಭಾವವುಳ್ಳವಳಾಗಿದ್ದಳು.

ಪತಿಶುಶ್ರೂಷಣಂ ಕೃತ್ವಾ ಸಾ ಕದಾಚಿತ್ ಪತಿವ್ರತಾ ।
ಸಮಾಪ್ಯ ಸರ್ವಕರ್ಮಾಣಿ ರಾತ್ರೌ ಶಯನಮಾಗತಾ ॥೨೦॥

ಒಂದು ದಿನ ಆ ಸಾಧ್ವಿಯು ಪತಿಸೇವೆಯನ್ನು ಶ್ರದ್ಧೆಯಿಂದ ಮಾಡಿ, ಮನೆಯ ಎಲ್ಲ ಕೆಲಸಗಳನ್ನೆಲ್ಲ ಮುಗಿಸಿ, ರಾತ್ರಿಯಲ್ಲಿ ಮಲಗಿದಳು.

ಪೂರ್ವಪುಣ್ಯಪ್ರಭಾವೇನ ಸ್ವಪತ್ಯಾಃ ಸಾ ಸುಲೋಚನೇ ।
ವರಲಕ್ಷ್ಮೀಸ್ತದಾ ಸ್ವಪ್ನೇ ತಾಮುವಾಚೇತಿ ಪಾರ್ವತಿ ॥೨೧॥

ಪಾರ್ವತಿ! ಮಲಗಿ ನಿದ್ರಿಸುತ್ತಿರುವಾಗ ಅವಳಿಗೆ ತನ್ನ ಪತಿಯ ಪೂರ್ವಪುಣ್ಯ-ಪ್ರಭಾವದಿಂದ ಸ್ವಪ್ನದಲ್ಲಿ ವರಲಕ್ಷ್ಮಿಯು ಕಾಣಿಸಿದಳು. ಮತ್ತು ಅವಳನ್ನು ಕುರಿತು ಹೀಗೆ ಮಾತನಾಡಿದಳು.

ಉತ್ತಿಷ್ಠೋತ್ತಿಷ್ಠ ಶೀಘ್ರಂ ತ್ವಂ ವರಲಕ್ಷ್ಮ್ಯಾಗತಾಽಸ್ಮ್ಯಹಮ್ ।
ಹಿತಂ ಬ್ರವೀಮಿ ತೇ ವತ್ಸೇ ಶೃಣು ಸರ್ವಾರ್ಥಸಾಧನಮ್ ॥೨೨॥

'ಓ ಸಾಧ್ವಿಯೇ! ಬೇಗ ಮೇಲೆ ಎದ್ದೇಳು. ನಾನು ವರಲಕ್ಷ್ಮಿಯು ಬಂದಿದ್ದೇನೆ. ಮಗು! ನಿನಗೆ ಹಿತವಾದದ್ದನ್ನೇ ಹೇಳುತ್ತೇನೆ. ನಿನ್ನ ಎಲ್ಲ ಇಷ್ಟಾರ್ಥಗಳಿಗೆ ಇದು ಸಾಧನವಾಗುತ್ತದೆ.

ಶುಕ್ಲಪಕ್ಷೇ ಪೌರ್ಣಮಾಸ್ಯಾಂ ಶ್ರಾವಣ್ಯಾಂ ತು ಭೃಗೋರ್ದಿನೇ ।
ಮತ್ಪೂಜನಂ ಪ್ರಕರ್ತವ್ಯಂ ವರಂ ದಾಸ್ಯಾಮಿ ಕಾಂಕ್ಷಿತಮ್ ॥೨೩॥

ಶ್ರಾವಣಮಾಸದ ಶುಕ್ಲಪಕ್ಷದ ಹುಣ್ಣಿಮೆಯ ಹಿಂದಿರುವ ಶುಕ್ರವಾರದಂದು ನನ್ನ ಪೂಜೆಯನ್ನು ಶ್ರದ್ಧೆಯಿಂದ ಮಾಡು. ಆಗ ನಿನಗೆ ಅಭೀಷ್ಟವಾದದ್ದೆಲ್ಲವನ್ನೂ ವರವನ್ನಾಗಿ ನಾನು ನೀಡುತ್ತೇನೆ.

ವರಲಕ್ಷ್ಮೀತಿ ಮನ್ನಾಮ ವರದಾ ಹರಿವಲ್ಲಭಾ ।
ಮತ್ಪೂಜಾಂ ಯೇ ಪ್ರಕುರ್ವಂತಿ ಸುಭಕ್ತ್ಯಾ ಭೃಗುವಾಸರೇ ॥೨೪॥
ತೇಷಾಮಿಷ್ಟಾಂಶ್ಚ ಕಾಮಾಂಶ್ಚ ಪ್ರದಾಸ್ಯಾಮಿ ನ ಸಂಶಯಃ ।

ನನ್ನನ್ನು ವರಲಕ್ಷ್ಮೀ ಎಂದೇ ಕರೆಯುತ್ತಾರೆ. ನಾನು ಭಕ್ತರಿಗೆ ವರವನ್ನು ನೀಡುವುದರಿಂದಲೇ ಈ ಹೆಸರನ್ನು ಹೊಂದಿದ್ದೇನೆ. ಭಗವಂತನ ಪ್ರಿಯಳಾಗಿದ್ದೇನೆ. ಯಾವ ಭಕ್ತರು ಶುಕ್ರವಾರದಲ್ಲಿ ಭಗವಂತನ ಜೊತೆಗಿರುವ ನನ್ನನ್ನು ಭಕ್ತಿಯಿಂದ ಪೂಜಿಸುತ್ತಾರೋ ಅವರಿಗೆ ಎಲ್ಲ ಇಷ್ಟಾರ್ಥಗಳನ್ನು ಕಾಮನೆಗಳನ್ನು ನೀಡುತ್ತೇನೆ. ಈ ವಿಷಯದಲ್ಲಿ ಸಂಶಯವಿಲ್ಲ.

ಮತಿರ್ಯಸ್ಯ ಪ್ರಜಾಯೇತ ಮತ್ಪೂಜಾರ್ಥಂ ಮಮ ಪ್ರಿಯೇ ॥೨೫॥
ತಸ್ಯೇಷ್ಟಾರ್ಥವರಂ ಶೀಘ್ರಂ ದಾಸ್ಯಾಮಿ ಕಮಲೇಕ್ಷಣೇ।
ಜನ್ಮಾಂತರಸಹಸ್ರೇಷು ಸುಕೃತಸ್ಯ ಪ್ರಭಾವತಃ ॥೨೬॥
ಮದ್ವ್ರತಾಚರಣೇ ಬುದ್ಧಿಃ ಸಂಪ್ರಜಾಯೇತ ಶೋಭನೇ।

ಅಂದು ಅತ್ಯಂತಭಕ್ತಿಶ್ರದ್ಧೆಗಳಿಂದ ನನ್ನನ್ನು ಪೂಜೆ ಮಾಡಬೇಕೆಂಬ ಅಪೇಕ್ಷೆಯು ಯಾರಿಗೆ ಉಂಟಾಗುತ್ತದೋ ಅವರನ್ನು ನಾನು ಉದ್ಧಾರ ಮಾಡುತ್ತೇನೆ. ತಾವರೆಯಂತೆ ಕಣ್ಣುಗಳುಳ್ಳ ಭಕ್ತಳೇ! ಯಾರಿಗೆ ನನ್ನನ್ನು ಪೂಜೆ ಮಾಡಬೇಕೆಂಬ ಅಪೇಕ್ಷೆ ಇರುತ್ತದೋ ಅವರಿಗೆ ಶೀಘ್ರವಾಗಿ ಇಷ್ಟಾರ್ಥವರಗಳನ್ನು ನೀಡುತ್ತೇನೆ.

ಸಾವಿರಾರು ಜನ್ಮಗಳಲ್ಲಿ ಸಂಪಾದನೆ ಮಾಡಲ್ಪಟ್ಟ ಪುಣ್ಯದ ಪ್ರಭಾವದಿಂದಷ್ಟೇ ನನ್ನ ವರಮಹಾಲಕ್ಷ್ಮೀವ್ರತದ ಆಚರಣೆಯನ್ನು ಮಾಡಲು ಬುದ್ಧಿಯು ಹುಟ್ಟುತ್ತದೆ.

ಯೋ ವಾ ಕರೋತಿ ಮತ್ಪೂಜಾಂ ಸ ಶೂರಃ ಸ ಚ ಪಂಡಿತಃ ॥೨೭॥
ಸ ಶ್ಲಾಘ್ಯಃ ಸ ಕುಲೀನಶ್ಚ ಸ ವಿದ್ವಾನ್ ಸ ವಶೀ ಶುಭೇ।
ಸರ್ವಂ ಮಮ ಪ್ರಭಾವೇನ ಲಭತೇ ನಾತ್ರ ಸಂಶಯಃ ॥೨೮॥

ನನಗೆ ಸಂಬಂಧಪಟ್ಟ ಈ ವರಮಹಾಲಕ್ಷ್ಮೀವ್ರತವನ್ನು (ಪೂಜೆಯನ್ನು) ಯಾವನು ಮಾಡುತ್ತಾನೋ ಅವನೇ ನಿಜವಾದ ಪರಾಕ್ರಮಿಯು; ಪಂಡಿತನು. ಅವನು ಪ್ರಶಂಸೆಗೆ ಪಾತ್ರನಾದವನು. ಉತ್ತಮವಂಶದ ಪರಂಪರೆಯಲ್ಲಿ ಹುಟ್ಟಿದವನು. ವಿದ್ವಾಂಸನು. ಸ್ವತಂತ್ರನು. ಭದ್ರಸ್ವರೂಪಳೇ! ಅವನು ಎಲ್ಲ ಅಭೀಷ್ಟಗಳನ್ನು ನನ್ನ ಪ್ರಭಾವದಿಂದ ಪಡೆದುಕೊಳ್ಳುತ್ತಾನೆ. ಈ ವಿಷಯದಲ್ಲಿ ಸಂಶಯವೇ ಇಲ್ಲ.

ಇತ್ಯುಕ್ತ್ವಾ ಕಮಲಾ ಸ್ವಪ್ನೇ ತತ್ರೈವಾಂತರಧೀಯತ ।
ತತಶ್ಚಾರುಮತೀ ತಸ್ಮಾತ್ ಸ್ವಪ್ನಾದುತ್ಥಾಯ ಸಂಭ್ರಮಾತ್ ॥೨೯॥

ಹೀಗೆ ಶ್ರೀಹರಿಯ ಪತ್ನಿಯಾದ ಕಮಲೆಯು ಸ್ವಪ್ನದಲ್ಲಿ ಭಕ್ತಳಿಗೆ ಅನುಗ್ರಹವನ್ನು ಮಾಡಿ, ಅದೃಶ್ಯಳಾದಳು. ಅನಂತರ ಸ್ವಪ್ನದಿಂದ ಎಚ್ಚೆತ್ತುಕೊಂಡ ಆ ಪತಿವ್ರತೆಯ ಸಂಭ್ರಮಕ್ಕೆ ಪಾರವೇ ಇಲ್ಲ.

ತತ್ಸರ್ವಂ ಕಥಯಾಮಾಸ ಬಂಧೂನಾಂ ಪುರತಸ್ತದಾ ।
ಶ್ರುತ್ವಾ ತದ್ಬಾಂಧವಾಃ ಸರ್ವೇ ಸಾಧು ಸಾಧ್ವಿತಿ ಚಾಬ್ರುವನ್ ॥೩೦॥

ತನಗೆ ಇಷ್ಟರಾದ ಎಲ್ಲ ಬಂಧುಗಳ ಜೊತೆ ತನಗೆ ನಡೆದ ಸ್ವಪ್ನಘಟನೆಯನ್ನು ಹಂಚಿಕೊಂಡಳು. ಆ ಸ್ವಪ್ನವೃತ್ತಾಂತವನ್ನು ಕೇಳಿದ ಸಮಸ್ತಬಾಂಧವರು 'ಬಹಳ ಸಂತೋಷ, ಬಹಳ ಒಳ್ಳೆಯ ಸ್ವಪ್ನ' ಎಂಬುದಾಗಿ ಪ್ರಶಂಸೆ ಮಾಡಿದರು.

ತತಶ್ಚಾರುಮತೀಮುಖ್ಯಾಃ ಕಾಂಕ್ಷಮಾಣಾ ಭೃಗೋರ್ದಿನಮ್ ।
ಭಾಗ್ಯೋದಯೇನ ಸಂಪ್ರಾಪ್ತೇ ವರಲಕ್ಷ್ಮೀದಿನೇ ತದಾ ॥೩೧॥

ಅನಂತರ ಆ ಪತಿವ್ರತೆಯು ಹಾಗೂ ಅವಳ ಎಲ್ಲ ಬಾಂಧವರೂ ಶ್ರಾವಣಮಾಸದ ಹುಣ್ಣಿಮೆಯ ಹಿಂದಿನ ಶುಕ್ರವಾರವು ಯಾವಾಗ ಬರುತ್ತದೆಂದು ನಿರೀಕ್ಷೆ ಮಾಡುತ್ತಲೇ ಇದ್ದರು. ಹೀಗಿರುವಾಗ ಅವರ ಭಾಗ್ಯೋದಯದಂತೆ ಶುಕ್ರವಾರವು ಬಂದಿತು.

ಪೂರ್ವೋಕ್ತೇನ ಪ್ರಕಾರೇಣ ತೇಽಕುರ್ವನ್ ವ್ರತಮುತ್ತಮಮ್ ।
ತತೋ ದೇವೀಪ್ರಭಾವೇಣ ಬಹುಭಾಗ್ಯಮುಪಾಯಯೌ ॥೩೨॥

ಹಿಂದೆ ಹೇಳಿದ ಕ್ರಮದಂತೆ ಆ ಎಲ್ಲ ಬಂಧುಬಾಂಧವರು ಶ್ರೇಷ್ಠವಾದ ವರ-ಮಹಾಲಕ್ಷ್ಮೀವ್ರತದ ಆಚರಣೆಯನ್ನು ಅತ್ಯಂತ ಶ್ರದ್ಧಾಭಕ್ತಿಗಳಿಂದ ಮಾಡಿದರು. ವರಮಹಾಲಕ್ಷ್ಮೀದೇವಿಯ ಅನುಗ್ರಹದಿಂದ ಬಹುಭಾಗ್ಯವನ್ನು ಪಡೆದುಕೊಂಡರು.

ವರಲಕ್ಷ್ಮೀಪ್ರಸಾದೇನ ಸರ್ವಾಭರಣಭೂಷಿತಾಃ ।
ಪುತ್ರಪೌತ್ರೈಃ ಪರಿವೃತಾ ಧನಧಾನ್ಯಸಮನ್ವಿತಾಃ ॥೩೩॥

ಅನ್ನದಾನರತಾ ನಿತ್ಯಂ ಬಂಧುಪೋಷಣತತ್ಪರಾಃ ।
ಸಕಲೈಶ್ವರ್ಯಭೋಗಾಂತೇ ಪ್ರಾಪುರ್ವಿಷ್ಣೋಃ ಪರಾಂ ಗತಿಮ್ ॥೩೪॥

ವರಮಹಾಲಕ್ಷ್ಮೀದೇವಿಯ ಅನುಗ್ರಹದಿಂದ ಪ್ರತಿಯೊಬ್ಬರೂ ಸರ್ವಾಭರಣ ಭೂಷಿತರಾದರು. ಮಕ್ಕಳನ್ನೂ ಮೊಮ್ಮಕ್ಕಳನ್ನೂ ಪಡೆದರು. ಧನಧಾನ್ಯಗಳಿಂದ ಸಮೃದ್ಧರಾದರು.

ತಾವಷ್ಟೇ ಶ್ರೀಮಂತರಾಗಲಿಲ್ಲ. ನಿತ್ಯದಲ್ಲಿಯೂ ಅನ್ನದಾನವನ್ನು ಮಾಡಿ ಉಪಕರಿಸುತ್ತಿದ್ದರು. ಬಂಧುಬಾಂಧವರ ಪೋಷಣೆಯನ್ನು ಮಾಡುತ್ತಿದ್ದರು. ಎಲ್ಲ ಐಶ್ವರ್ಯಗಳನ್ನು ಹೀಗೆ ಭೋಗಿಸಿದ ಮೇಲೆ ಅಂತಿಮವಾಗಿ ಮಹಾವಿಷ್ಣುವಿನ ಸ್ಥಾನವಾದ ಮೋಕ್ಷವನ್ನೇ ಪಡೆದರು.

ಅನ್ಯೋನ್ಯಂ ಬಾಂಧವಾಃ ಸರ್ವೇ ಶ್ರುತ್ವಾ ಚಾರುಮತೀಮುಖಾತ್ ।
ವರಲಕ್ಷ್ಮೀವ್ರತಂ ಕೃತ್ವಾ ಪ್ರಾಪುರ್ಭಾಗ್ಯಂ ಚ ಪಾರ್ವತಿ ॥೩೫॥

ಪಾರ್ವತಿ! ಎಲ್ಲ ಬಾಂಧವರೂ ಪರಸ್ಪರವಾಗಿ ಚಾರುಮತಿಯ ಮಾರ್ಗದರ್ಶನದಂತೆ ಈ ವರಮಹಾಲಕ್ಷ್ಮೀವ್ರತವನ್ನು ಆಚರಿಸಿದರು. ಮತ್ತು ಭಾಗ್ಯಸಂಪನ್ನರಾದರು.

ಪಾರ್ವತ್ಯುವಾಚ

ವರಲಕ್ಷ್ಮೀವ್ರತಸ್ಯಾಸ್ಯ ವಿಧಿಂ ಬ್ರೂಹಿ ಸುರಾರ್ಚಿತ ।
ವ್ರತಮೇತತ್ ಕಥಂ ಕಾರ್ಯಂ ಶ್ರೋತುಮಿಚ್ಛಾಮಿ ಶಂಕರ ॥೩೬॥

ಪಾರ್ವತಿಯು ಪ್ರಶ್ನಿಸುತ್ತಾಳೆ – ದೇವತೆಗಳಿಂದ ಪೂಜಿಸಲ್ಪಟ್ಟ ದೇವನೇ! ಈ ವರಮಹಾಲಕ್ಷ್ಮೀವ್ರತದ ವಿಧಿಯ ಬಗ್ಗೆ ನನಗೆ ತಿಳಿಸು. ಈ ವ್ರತವನ್ನು ಆಚರಣೆ ಮಾಡಬೇಕು. ಅದನ್ನು ಶ್ರದ್ಧೆಯಿಂದ ನಾನು ಕೇಳಲು ಅಪೇಕ್ಷಿಸುತ್ತೇನೆ.

ಈಶ್ವರ ಉವಾಚ

ಶ್ರಾವಣೇ ಶುಕ್ಲಪಕ್ಷೇ ತು ಪೂರ್ಣಿಮೋಪಾಂತ್ಯಭಾರ್ಗವೇ ।
ಸ್ನಾತ್ವಾ ಮಧ್ಯಾಹ್ನವೇಲಾಯಾಂ ಧೃತ್ವಾ ವಸ್ತ್ರಂ ಸುಶೋಭನಮ್ ॥೩೭॥

ರುದ್ರದೇವರು ಉತ್ತರಿಸುತ್ತಾರೆ – ಶ್ರಾವಣಮಾಸದ ಶುಕ್ಲಪಕ್ಷದಲ್ಲಿ ಹುಣ್ಣಿಮೆಯ ಹಿಂದೆ ಆಗಮಿಸುವ ಶುಕ್ರವಾರದ ಮಧ್ಯಾಹ್ನದಲ್ಲಿ ಸ್ನಾನವನ್ನು ಮಾಡಬೇಕು. ಶುಭ್ರವಾದ ವಸ್ತ್ರಗಳನ್ನು ಧರಿಸಬೇಕು.

ತತಃ ಪ್ರಕಲ್ಪಯೇತ್ ಶುದ್ಧದೇಶೇ ಮಂಟಪಮುತ್ತಮಮ್ ।
ತನ್ಮಧ್ಯೇಽಷ್ಟದಲಂ ಪದ್ಮಂ ಪಂಚವರ್ಣಸಮನ್ವಿತಮ್ ॥೩೮॥

ಅನಂತರ ಪರಿಶುದ್ಧವಾದ ಪ್ರದೇಶದಲ್ಲಿ ಮಂಟಪವನ್ನು ಸಿದ್ಧಗೊಳಿಸಬೇಕು. ಅದರಲ್ಲಿ ಎಂಟು ದಳಗಳ ಕಮಲವನ್ನು ಐದು ಬಣ್ಣಗಳಿಂದ ರಚಿಸಬೇಕು.

ನೂತನೈಸ್ತಂಡುಲೈಃ ಪೂರ್ಣಕುಂಭೇ ಸವಟಪಲ್ಲವೇ ।
ಫಲಾನ್ವಿತೇಽರ್ಚಿತೇ ರಮ್ಯೇ ದೇವೀಮಾವಾಹಯೇತ್ ಶುಭಾಮ್ ॥೩೯॥

ಆ ಪದ್ಮದ ಮೇಲೆ ಹೊಸದಾದ ಅಕ್ಕಿಯನ್ನು ಹಾಕಬೇಕು. ಆ ಅಕ್ಕಿಯ ಮೇಲೆ ಪೂರ್ಣಕುಂಭವನ್ನಿಡಬೇಕು. ಅದರಲ್ಲಿ ಐದು ಬಗೆಯ ಚಿಗುರೆಲೆಗಳನ್ನು ಹಾಕಿ, ತೆಂಗಿನ ಕಾಯಿಯನ್ನಿಡಬೇಕು. ಹೀಗೆ ರಮ್ಯವಾದ ಆ ಕಲಶದಲ್ಲಿ ಶುಭ್ರಳಾದ ಶ್ರೀಹರಿಯ ಮಡದಿಯಾದ ಮಹಾಲಕ್ಷ್ಮೀದೇವಿಯನ್ನು ಆವಾಹನೆ ಮಾಡಬೇಕು.

ಕಲ್ಪೋಕ್ತೇನ ಪ್ರಕಾರೇಣ ಭಕ್ತ್ಯಾ ತಾಮರ್ಚಯೇದ್ ವ್ರತೀ ।

ವ್ರತವನ್ನು ಆಚರಿಸುವವನು ವ್ರತಕಲ್ಪದಲ್ಲಿ ಹೇಳಿದ ಪ್ರಕಾರದಂತೆ ಭಕ್ತಿಯಿಂದ ಆ ವರಮಹಾಲಕ್ಷ್ಮಿಯನ್ನು ಅರ್ಚನೆ ಮಾಡಬೇಕು –

''ಪದ್ಮಾಸನೇ ಪದ್ಮಕರೇ ಸರ್ವಲೋಕೈಕಪೂಜಿತೇ ॥೪೦॥
ನಾರಾಯಣಪ್ರಿಯೇ ದೇವಿ ಸುಪ್ರೀತಾ ಭವ ಸರ್ವದಾ'' ।

''ಪದ್ಮಾಸನೇ ಪದ್ಮಕರೇ ಸರ್ವಲೋಕೈಕಪೂಜಿತೇ। ನಾರಾಯಣಪ್ರಿಯೇ ದೇವಿ ಸುಪ್ರೀತಾ ಭವ ಸರ್ವದಾ'' – ''ಪದ್ಮದಲ್ಲಿ ಕುಳಿತು ಪದ್ಮವನ್ನು ಹಿಡಿದು ಸಕಲಲೋಕ-ಗಳಿಂದ ಪೂಜಿತಳಾಗಿ ನಾರಾಯಣನಿಗೆ ಪ್ರಿಯಳಾಗಿ ನಮ್ಮನ್ನು ಉದ್ಧರಿಸುವ ದೇವಿಯೇ! ನೀನು ಸುಪ್ರೀತಳಾಗು''

ಮಂತ್ರೇಣಾನೇನ ಸಕಲಾನುಪಚಾರಾಯನ್ ಯಥಾಕ್ರಮಮ್ ॥೪೧॥
ದೇವ್ಯಾ ಗೋಧೂಮಚೂರ್ಣೇನ ಪೂರ್ಣಗರ್ಭಾಂಶ್ಚ ಕಾರಯೇತ್।
ಅಥವಾ ಶಾಲಿಪಿಷ್ಟೇನ ಯಥಾಶಕ್ತ್ಯನುಸಾರತಃ ॥೪೨॥

ಈ ಮಂತ್ರದಿಂದ ಎಲ್ಲಾ ಉಪಚಾರಗಳನ್ನು ಮಾಡಿ, ದೇವಿಯ ಅನುಗ್ರಹವನ್ನು ಪಡೆದುಕೊಳ್ಳಬೇಕು. ಅನಂತರ ಆ ವರಮಹಾಲಕ್ಷ್ಮೀದೇವಿಗೆ ಗೋಧಿಹಿಟ್ಟಿನ ಹೂರಣದ ಹೋಳಿಗೆಯನ್ನು (ಹೂರಣ ತುಂಬಿದ ಕಡುಬುಗಳನ್ನು) ನೈವೇದ್ಯ ಮಾಡಬೇಕು. ಅಥವಾ ಅಕ್ಕಿಹಿಟ್ಟಿನಿಂದಲೂ ಕೂಡ ಹೂರಣದ ಭಕ್ಷವನ್ನು ಶಕ್ತಿಗೆ ಅನುಗುಣವಾಗಿ ಮಾಡಬೇಕು.

ಫಲಾದಿಭಿಃ ಪ್ರಯತ್ನೇನ ನೈವೇದ್ಯಂ ಪರಿಕಲ್ಪಯೇತ್।
ಮುಖವಾಸನತಾಂಬೂಲಂ ನೀರಾಜನಮತಃ ಪರಮ್ ॥೪೩॥

ಭಕ್ಷ್ಯವನ್ನು ಸಮರ್ಪಿಸಿದ ಮೇಲೆ ಅನೇಕ ಫಲಗಳನ್ನು ನೈವೇದ್ಯ ಮಾಡಬೇಕು. ಪ್ರಯತ್ನಪೂರ್ವಕವಾಗಿ ಫಲಗಳನ್ನು ಸಂಗ್ರಹ ಮಾಡಬೇಕು. ಫಲಸಮರ್ಪಣೆ ಮಾಡಿ ಮೇಲೆ ಮುಖವಸ್ತ್ರವನ್ನು ತಾಂಬೂಲವನ್ನು ಸಮರ್ಪಿಸಿ ಮಹಾಮಂಗಳಾರತಿಯನ್ನು ಮಾಡತಕ್ಕದ್ದು.

ಮಂತ್ರಪುಷ್ಪಂ ಚ ಕೃತ್ವಾಽಥ ಪ್ರದಕ್ಷಿಣನಮಸ್ಕ್ರಿಯಾಃ।
ಪುನರರ್ಘ್ಯಂ ಮಂತ್ರತಶ್ಚ ದೋರಂ ಬದ್ಧ್ವಾ ತತಃ ಪರಮ್ ॥೪೪॥

ಮಂತ್ರಪುಷ್ಪವನ್ನು ಸಮರ್ಪಿಸಿ, ಪ್ರದಕ್ಷಿಣೆ ನಮಸ್ಕಾರಗಳನ್ನು ಹಾಕಿ, ವರಮಹಾ-ಲಕ್ಷ್ಮೀದೇವಿಗೆ ಅರ್ಘ್ಯಪ್ರದಾನವನ್ನು ಮಾಡಬೇಕು. ಕೊನೆಯಲ್ಲಿ ಅವಳಿಗೆ ಸಮರ್ಪಿಸಿದ ದೋರವನ್ನು ಕೈಯ್ಯಲ್ಲಿ ಕಟ್ಟಿಕೊಳ್ಳಬೇಕು.

ಪ್ರದದ್ಯಾದ್ ದ್ವಾದಶಾಪೂಪಾನ್ ಪೂಗಪರ್ಣಸಮನ್ವಿತಾನ್ ।
ಉಪಾಯನಂ ದ್ವಿಜಾಗ್ರ್ಯಾಯ ದದ್ಯಾತ್ ಸಫಲದಕ್ಷಿಣಾಮ್ ॥೪೫॥

ವರಮಹಾಲಕ್ಷ್ಮೀದೇವಿಗೆ ಸಮರ್ಪಿಸಿದ ಕಡುಬುಗಳಲ್ಲಿ ಹನ್ನೆರಡು ಕಡುಬುಗಳನ್ನು ಬ್ರಾಹ್ಮಣಶ್ರೇಷ್ಠನಿಗೆ ದಾನ ಮಾಡಬೇಕು. ಬ್ರಾಹ್ಮಣಶ್ರೇಷ್ಠನಿಗೆ ಉಪಾಯನವನ್ನು ನೀಡಬೇಕು. ಆ ಉಪಾಯನದಲ್ಲಿ ಫಲತಾಂಬೂಲ ದಕ್ಷಿಣೆಗಳನ್ನು ಕೂಡ ಇಟ್ಟಿರಬೇಕು.

ಭಕ್ತ್ಯಾ ದೇವೀಸಮೀಪೇ ತು ಗೃಹೀತ್ವಾ ಕುಸುಮಾಕ್ಷತಾನ್ ।
ಶ್ರುತ್ವೇಮಾಂ ಚ ಕಥಾಂ ಪುಣ್ಯಾಂ ಬಂಧುಭಿಃ ಸಹ ಪಾರ್ವತಿ ॥೪೬॥

ಪಾರ್ವತಿಯೇ! ವರಮಹಾಲಕ್ಷ್ಮೀದೇವಿಯ ಹೂವು ಅಕ್ಷತೆ ಮೊದಲಾದ ಪ್ರಸಾದವನ್ನು ಭಕ್ತಿಯಿಂದ ಸ್ವೀಕರಿಸಬೇಕು. ಅನಂತರ ಅವಳ ಮಹಿಮೆಯನ್ನು ಹೇಳುವ ಈ ಕಥೆಯನ್ನು ಬಂಧುಜನರ ಜೊತೆ ಕುಳಿತುಕೊಂಡು ಕೇಳಬೇಕು.

ಸುವಾಸಿನೀಭಿಃ ಸಹಿತಾ ಹವಿಷ್ಯಂ ಚ ಸಮಾಚರೇತ್ ।
ಏತದ್ ವ್ರತೋತ್ತಮಂ ಯೇ ತು ಕುರ್ವಂತಿ ಮನುಜಾ ಭುವಿ ॥೪೭॥

ತೇಷಾಂ ಪುತ್ರಾಂಶ್ಚ ಪೌತ್ರಾಶ್ಚ ಭವಿಷ್ಯಂತಿ ನ ಸಂಶಯಃ ।
ಇದಂ ಸತ್ಯಮಿದಂ ಸತ್ಯಂ ನಾರೀ ಭದ್ರಾಣಿ ಪಶ್ಯತಿ ॥೪೮॥

ಸುವಾಸಿನಿಯರ ಸಹಿತಳಾಗಿ ಹವಿಷ್ಯಪದಾರ್ಥವನ್ನು ಸ್ವೀಕರಿಸಬೇಕು. ಶ್ರೇಷ್ಠವಾದ ಈ ವ್ರತವನ್ನು ಯಾರು ಆಚರಿಸುತ್ತಾರೋ ಅವರು ಪುತ್ರರನ್ನು ಪೌತ್ರರನ್ನು ಪಡೆಯುತ್ತಾರೆ. ಈ ವಿಷಯದಲ್ಲಿ ಸಂಶಯವಿಲ್ಲ. ಓ ನಾರಿಯೇ ಇದು ಸತ್ಯ ! ಇದು ಸತ್ಯ ! ಅವರು ಎಲ್ಲ ಬಗೆಯ ಮಂಗಳಮಯಜೀವನವನ್ನೇ ಕಾಣುತ್ತಾರೆ.

ಇತಿ ಚಾರುಮತೀಮುಖ್ಯಾ ಉಪಲಬ್ಧಮನೋರಥಾಃ ।
ಪುಣ್ಯಾ ಚಾರುಮತೀ ಚೈವ ಭೂಯೋ ಭಾಗ್ಯವತೀ ಚಿರಮ್ ॥೪೯॥

ಹೀಗೆ ಚಾರುಮತಿ ಮೊದಲಾದವರ ಅಭೀಷ್ಟಗಳೆಲ್ಲವೂ ವರಮಹಾಲಕ್ಷ್ಮೀವ್ರತದ ಆಚರಣೆಯಿಂದ ನೆರವೇರಿದವು. ಪುಣ್ಯತಮಳಾದ ಆ ಚಾರುಮತಿಯು ಚಿರಕಾಲ ಅತ್ಯಂತಭಾಗ್ಯವತಿಯಾದಳು.

ಯ ಇದಂ ಶೃಣುಯಾನ್ನಿತ್ಯಂ ಶ್ರಾವಯೇದ್ ವಾ ಸಮಾಹಿತಃ ।
ತಸ್ಯ ಶ್ರೇಯಾಂಸಿ ಸರ್ವಾಣಿ ಭವಿಷ್ಯಂತಿ ನ ಸಂಶಯಃ ॥೫೦॥

ಯಾರು ಈ ವ್ರತವನ್ನು ಅತ್ಯಂತಶ್ರದ್ಧೆಯಿಂದ ಕೇಳುತ್ತಾನೋ ಅಥವಾ ಹೇಳು-ತ್ತಾನೋ ಅವನಿಗೆ ಎಲ್ಲ ಬಗೆಯ ಶ್ರೇಯಸ್ಸುಗಳು ಪ್ರಾಪ್ತವಾಗುತ್ತವೆ. ಈ ವಿಷಯದಲ್ಲಿ ಸಂಶಯವಿಲ್ಲ.

ಇತೀದಂ ಕಥಿತಂ ದೇವ್ಯೈಃ ಪಾರ್ವತ್ಯೈ ಶಂಭುನಾ ಪುರಾ ।
ಸರ್ವಪಾಪಪ್ರಶಮನಂ ಸರ್ವಸಂಪತ್ಕರಂ ನೃಣಾಮ್ ॥೫೧॥

ಹಿಂದೆ ಮಹಾದೇವರು ಪಾರ್ವತಿಗೆ ಈ ವರಮಹಾಲಕ್ಷ್ಮೀವ್ರತದ ಕಥೆಯನ್ನು ಹೇಳಿದರು. ಇದು ಸಕಲವಿಧವಾದ ಪಾಪಗಳಿಗೆ ಪರಿಹಾರಕವಾಗಿದೆ. ಎಲ್ಲ ಬಗೆಯ ಸಂಪತ್ತುಗಳ ಪ್ರಾಪ್ತಿಗೆ ಉಪಾಯವೂ ಆಗಿದೆ.

ಯೇ ಕುರ್ವಂತಿ ವ್ರತಮಿದಂ ಭಕ್ತ್ಯಾ ಶೃಣ್ವಂತಿ ವಾ ನರಾಃ ।
ಶ್ರಾವಯಿಷ್ಯಂತಿ ಯೇ ತೇ ವೈ ಕೃತಾರ್ಥಾಃ ಸ್ಯುರ್ನ ಸಂಶಯಃ ॥೫೨॥

॥ ಇತಿ ಭವಿಷ್ಯೋತ್ತರಪುರಾಣೇ ಉಮಾಮಹೇಶ್ವರಸಂವಾದೇ
ವರಮಹಾಲಕ್ಷ್ಮೀವ್ರತಕಥಾ ಸಂಪೂರ್ಣಾ ॥

ಯಾವ ಮನುಷ್ಯನು ಈ ವರಮಹಾಲಕ್ಷ್ಮೀವ್ರತದ ಕಥೆಯನ್ನು ಭಕ್ತಿಯಿಂದ ಕೇಳುತ್ತಾನೋ, ಅಥವಾ ಮತ್ತೊಬ್ಬರಿಗೆ ಹೇಳುತ್ತಾನೋ. ಅವರೇ ನಿಜವಾಗಿಯೂ ಕೂಡ ಕೃತಾರ್ಥರಾದವರು. ಈ ವಿಷಯದಲ್ಲಿ ಸ್ವಲ್ಪವೂ ಸಂಶಯವಿಲ್ಲ.

ಹೀಗೆ ಭವಿಷ್ಯೋತ್ತರಪುರಾಣದಲ್ಲಿಬರುವ ಉಮಾಮಹೇಶ್ವರಸಂವಾದದಲ್ಲಿ
ವರಮಹಾಲಕ್ಷ್ಮೀವ್ರತದ ಕಥೆಯು ಸಮಾಪ್ತವಾಯಿತು.

॥ ಶ್ರೀಮಧ್ವೇಶಾರ್ಪಣಮಸ್ತು ॥

* * * * *

# ವರಮಹಾಲಕ್ಷ್ಮೀಹಬ್ಬದ ಅಡುಗೆಗಳು

(1) ಗುಡಾನ್ನ/ ಬೆಲ್ಲದನ್ನ

(2) ಹಾಲುಪಾಯಸ

(3) ಎಲ್ಲಾ ಬೆಲ್ಲ ಹಾಗೂ ತುಪ್ಪ ಹಾಕಿದ ಸಿಹಿ ತಿಂಡಿಗಳು

## ಹೆಸರುಬೇಳೆ ಕೋಸಂಬರಿ

ಒಂದು ಪಾವು ಹೆಸರುಬೇಳೆ, ಒಂದು ಹೋಳು ತೆಂಗಿನಕಾಯಿ, ಕೊತ್ತಂಬರಿ ಸೊಪ್ಪು ಒಂದು ಕಟ್ಟು, ಆರೇಳು ಹಸಿ ಮೆಣಸಿನಕಾಯಿ, ಚೂರು ಇಂಗು, ಸಾಸಿವೆ, ಕಡಲೆಕಾಯಿ ಎಣ್ಣೆ ಹಾಗೂ ಉಪ್ಪಿನ ಪುಡಿ.

### ತಯಾರಿಸುವ ವಿಧಾನ

ಶುದ್ಧಗೊಳಿಸಿದ ಹೆಸರುಬೇಳೆಯನ್ನು ಚೆನ್ನಾಗಿ ತೊಳೆದು ನೀರಿನಲ್ಲಿ ನೆನೆಹಾಕಬೇಕು. ಒಂದೆರಡು ಗಂಟೆಗಳ ಕಾಲ ಚೆನ್ನಾಗಿ ನೆನೆದ ಬಳಿಕ ಬಸಿ ಹಾಕಬೇಕು. ತೆಂಗಿನ ಕಾಯನ್ನು ತುರಿದಿಟ್ಟುಕೊಳ್ಳಬೇಕು. ಬಸಿ ಹಾಕಿರುವ ಬೇಳೆಯನ್ನು ಬೇಸಿನ್‌ಗೆ ಹಾಕಿಕೊಳ್ಳಬೇಕು. ಹಸಿಮೆಣಸಿನಕಾಯಿಯನ್ನು ಸಣ್ಣ ಸಣ್ಣಗೆ ಹೆಚ್ಚಿಕೊಂಡಿರಬೇಕು. ಬಾಣಲೆಯನ್ನು ಒಲೆಯ ಮೇಲಿರಿಸಿ ಮೂರು ಚಮಚ ಎಣ್ಣೆಯನ್ನು ಹಾಕಬೇಕು. ಎಣ್ಣೆ ಕಾದ ನಂತರ ಸಾಸಿವೆ ಹಾಕಿ, ಸಾಸಿವೆ ಸಿಡಿದ ನಂತರ ಸಣ್ಣಗೆ ಹೆಚ್ಚಿಟ್ಟುಕೊಂಡ ಹಸಿಮೆಣಸಿನಕಾಯಿ, ಕೊತ್ತಂಬರಿ ಸೊಪ್ಪು , ಇಂಗು ಹಾಕಿ ಒಗ್ಗರಣೆ ಮಾಡಿಕೊಳ್ಳಬೇಕು. ಪಾತ್ರೆಯಲ್ಲಿ ಹಾಕಿಕೊಂಡ ಹೆಸರುಬೇಳೆಗೆ ಒಗ್ಗರಣೆ, ಕಾಯಿ ತುರಿ ಹಾಗೂ ರುಚಿಗೆ ತಕ್ಕಷ್ಟು ಉಪ್ಪು ಸೇರಿಸಿ ಕೈಯಾಡಿಸಬೇಕು. (ಸಣ್ಣಗೆ ಕತ್ತರಿಸಿಕೊಂಡ ಕೊತ್ತಂಬರಿ ಸೊಪ್ಪು ಸೇರಿಸಬೇಕು). ಒಂದು ನಿಂಬೆಹಣ್ಣಿನ ರಸವನ್ನು ಹಿಂಡಿ ಸೌಟಿನಿಂದ ಕೈಯಾಡಿಸಬೇಕು. ಆನಂತರ ಭಗವಂತನಿಗೆ ಸಮರ್ಪಣೆ ಮಾಡಿ ಭಗವಂತನ ಎಡತೊಡೆಯಲ್ಲಿ ಅನುಗ್ರಹೋನ್ಮುಖಿಯಾಗಿ ಕುಳಿತ ವರಮಹಾಲಕ್ಷ್ಮಿದೇವಿಗೆ ಸಮರ್ಪಿಸಿ ಧನ್ಯ ಎನ್ನಿರಿ.

# ವರಮಹಾಲಕ್ಷ್ಮೀಹಬ್ಬದ ಅಡುಗೆಗಳು

(1) ಗುಡಾನ್ನ/ ಬೆಲ್ಲದನ್ನ

(2) ಹಾಲುಪಾಯಸ

(3) ಎಲ್ಲಾ ಬೆಲ್ಲ ಹಾಗೂ ತುಪ್ಪ ಹಾಕಿದ ಸಿಹಿ ತಿಂಡಿಗಳು

## ಹೆಸರುಬೇಳೆ ಕೋಸಂಬರಿ

ಒಂದು ಪಾವು ಹೆಸರುಬೇಳೆ, ಒಂದು ಹೋಳು ತೆಂಗಿನಕಾಯಿ, ಕೊತ್ತಂಬರಿ ಸೊಪ್ಪು ಒಂದು ಕಟ್ಟು, ಆರೇಳು ಹಸಿ ಮೆಣಸಿನಕಾಯಿ, ಚೂರು ಇಂಗು, ಸಾಸಿವೆ, ಕಡಲೆಕಾಯಿ ಎಣ್ಣೆ ಹಾಗೂ ಉಪ್ಪಿನ ಪುಡಿ.

### ತಯಾರಿಸುವ ವಿಧಾನ

ಶುದ್ಧಗೊಳಿಸಿದ ಹೆಸರುಬೇಳೆಯನ್ನು ಚೆನ್ನಾಗಿ ತೊಳೆದು ನೀರಿನಲ್ಲಿ ನೆನೆಹಾಕಬೇಕು. ಒಂದೆರಡು ಗಂಟೆಗಳ ಕಾಲ ಚೆನ್ನಾಗಿ ನೆನೆದ ಬಳಿಕ ಬಸಿ ಹಾಕಬೇಕು. ತೆಂಗಿನ ಕಾಯನ್ನು ತುರಿದಿಟ್ಟುಕೊಳ್ಳಬೇಕು. ಬಸಿ ಹಾಕಿರುವ ಬೇಳೆಯನ್ನು ಬೇಸಿನ್‌ಗೆ ಹಾಕಿಕೊಳ್ಳಬೇಕು. ಹಸಿಮೆಣಸಿನಕಾಯಿಯನ್ನು ಸಣ್ಣ ಸಣ್ಣಗೆ ಹೆಚ್ಚಿಕೊಂಡಿರಬೇಕು. ಬಾಣಲೆಯನ್ನು ಒಲೆಯ ಮೇಲಿರಿಸಿ ಮೂರು ಚಮಚ ಎಣ್ಣೆಯನ್ನು ಹಾಕಬೇಕು. ಎಣ್ಣೆ ಕಾದ ನಂತರ ಸಾಸಿವೆ ಹಾಕಿ, ಸಾಸಿವೆ ಸಿಡಿದ ನಂತರ ಸಣ್ಣಗೆ ಹೆಚ್ಚಿಟ್ಟುಕೊಂಡ ಹಸಿಮೆಣಸಿನಕಾಯಿ, ಕೊತ್ತಂಬರಿ ಸೊಪ್ಪು , ಇಂಗು ಹಾಕಿ ಒಗ್ಗರಣೆ ಮಾಡಿಕೊಳ್ಳಬೇಕು. ಪಾತ್ರೆಯಲ್ಲಿ ಹಾಕಿಕೊಂಡ ಹೆಸರುಬೇಳೆಗೆ ಒಗ್ಗರಣೆ, ಕಾಯಿ ತುರಿ ಹಾಗೂ ರುಚಿಗೆ ತಕ್ಕಷ್ಟು ಉಪ್ಪು ಸೇರಿಸಿ ಕೈಯಾಡಿಸಬೇಕು. (ಸಣ್ಣಗೆ ಕತ್ತರಿಸಿಕೊಂಡ ಕೊತ್ತಂಬರಿ ಸೊಪ್ಪು ಸೇರಿಸಬೇಕು). ಒಂದು ನಿಂಬೆಹಣ್ಣಿನ ರಸವನ್ನು ಹಿಂಡಿ ಸೌಟಿನಿಂದ ಕೈಯಾಡಿಸಬೇಕು. ಆನಂತರ ಭಗವಂತನಿಗೆ ಸಮರ್ಪಣೆ ಮಾಡಿ ಭಗವಂತನ ಎಡತೊಡೆಯಲ್ಲಿ ಅನುಗ್ರಹೋನ್ಮುಖಿಯಾಗಿ ಕುಳಿತ ವರಮಹಾಲಕ್ಷ್ಮೀದೇವಿಗೆ ಸಮರ್ಪಿಸಿ ಧನ್ಯ ಎನ್ನಿರಿ.

## ಕಡಲೆಬೇಳೆ ಕೋಸಂಬರಿ

**ಬೇಕಾಗುವ ಪದಾರ್ಥಗಳು** – ಒಂದು ಪಾವು ಕಡಲೆಬೇಳೆ ಹಾಗೂ ಹೆಸರುಬೇಳೆ ಕೋಸಂಬರಿಗೆ ಹಾಕುವ ಇನ್ನಿತರ ಸಾಮಾನುಗಳು.

**ತಯಾರಿಸುವ ವಿಧಾನ** – ಹೆಸರು ಬೇಳೆ ಕೋಸಂಬರಿ ತಯಾರಿಸುವ ವಿಧಾನವನ್ನೇ ಇಲ್ಲಿ ಅನುಸರಿಸಬೇಕು. ಹೆಸರುಬೇಳೆ ಬದಲಿಗೆ ಕಡಲೆಬೇಳೆಯನ್ನು ಬಳಸಬೇಕಾಗುತ್ತದೆ.

## ಸೌತೆಕಾಯಿ ಕೋಸಂಬರಿ

ಹೆಸರುಬೇಳೆ ಅಥವಾ ಕಡಲೆಬೇಳೆ ಕೋಸಂಬರಿಗೆ ಸಿಪ್ಪೆ ತೆಗೆದ ಸೌತೆಕಾಯಿಯ ಸಣ್ಣ ಸಣ್ಣ ಚೂರುಗಳನ್ನು ಬೆರೆಸಿ ಚೆನ್ನಾಗಿ ಕೈಯಾಡಿಸಿದರೆ ಸೌತೆಕಾಯಿ ಕೋಸಂಬರಿ ಸಿದ್ಧವಾಗುತ್ತದೆ. ಯಾವ ಬೇಳೆಯೂ ಇಲ್ಲದೆ ಬರಿಯ ಸೌತೆಕಾಯಿಯ ಚೂರುಗಳಿಗೆ ತೆಂಗಿನ ತುರಿ ಮತ್ತು ಒಗ್ಗರಣೆ ಹಾಕಿ ಕೋಸಂಬರಿ ಮಾಡಬೇಕು. ಈ ರೀತಿ ತಯಾರಿಸಿದ ಸ್ವಾದಿಷ್ಟವಾದ ಕೋಸಂಬರಿಯನ್ನು ಭಗವಂತನಿಗೆ ಸಮರ್ಪಣೆ ಮಾಡಿ ಭಗವಂತನ ಎಡತೊಡೆಯಲ್ಲಿ ಅನುಗ್ರಹೋನ್ಮುಖಿಯಾಗಿ ಕುಳಿತ ವರಮಹಾಲಕ್ಷ್ಮೀದೇವಿಗೆ ಸಮರ್ಪಿಸಿ ಧನ್ಯ ಎನ್ನಿರಿ.

## ದೊಣ್ಣೆಮೆಣಸಿನಕಾಯಿ ಪಲ್ಯ

**ಬೇಕಾಗುವ ಪದಾರ್ಥಗಳು** – ದೊಣ್ಣೆ ಮೆಣಸಿನಕಾಯಿ 750 ಗ್ರಾಂ; ತೆಂಗಿನ ಕಾಯಿ 1/4 ಭಾಗ, ಕಡಲೆಹಿಟ್ಟು - 150 ಗ್ರಾಂ, ಬೆಲ್ಲ - 1 ಚಿಕ್ಕತುಂಡು. ಪಲ್ಯದ ಪುಡಿ 2 ಚಮಚ, ಉಪ್ಪು, ಸಾಸಿವೆ ಮತ್ತು ಎಣ್ಣೆ.

**ಮಾಡುವ ವಿಧಾನ** – ಮೆಣಸಿನಕಾಯಿಯನ್ನು ತೊಳೆದು ಸಣ್ಣಗೆ ಹೆಚ್ಚಿಟ್ಟುಕೊಳ್ಳಿ. ಬೀಜ ಬೇರ್ಪಡಿಸಿ. ಬಾಣಲಿಗೆ ಎಣ್ಣೆ ಹಾಕಿ ಒಲೆಯ ಮೇಲಿಡಿ. ಎಣ್ಣೆ ಕಾದ ಬಳಿಕ ಸಾಸಿವೆ ಹಾಕಿ ಒಗ್ಗರಣೆ ಮಾಡಿ. ನಂತರ ಹೆಚ್ಚಿದ ಮೆಣಸಿನಕಾಯಿ ಹಾಕಿ ಚೆನ್ನಾಗಿ ಹುರಿಯಿರಿ. ಇದಕ್ಕೆ ಕಡಲೆ ಹಿಟ್ಟು , ಪಲ್ಯದ ಪುಡಿ, ಬೆಲ್ಲದ ಪುಡಿ,

ತೆಂಗಿನ ತುರಿ, ಉಪ್ಪು ಸೇರಿಸಿ ಚೆನ್ನಾಗಿ ಕೆದಕಿ ಕೆಳಗಿಳಿಸಿ. (ಕಡಲೆ ಹಿಟ್ಟು ಮೆಣಸಿನ ಕಾಯಿ ಹೋಳುಗಳಿಗೆ ಚೆನ್ನಾಗಿ ಸೇರುವಂತಿರಬೇಕು). ಅನಂತರ ಭಗವಂತನಿಗೆ ಸಮರ್ಪಣೆ ಮಾಡಿ ಭಗವಂತನ ಎಡತೊಡೆಯಲ್ಲಿ ಅನುಗ್ರಹೋನ್ಮುಖಿಯಾಗಿ ಕುಳಿತ ವರಮಹಾಲಕ್ಷ್ಮೀದೇವಿಗೆ ಸಮರ್ಪಿಸಿ ಧನ್ಯ ಎನ್ನಿರಿ.

## ತರಕಾರಿಗಳ ಪಲ್ಯ

**ಬೇಕಾಗುವ ಪದಾರ್ಥಗಳು** – ಹುರುಳಿಕಾಯಿ 1/4 ಕೆ.ಜಿ., ಹಸಿಬಟಾಣಿಕಾಯಿ 1/2 ಕೆ.ಜಿ. ಉಪ್ಪು, ಸಾಸಿವೆ, ಎಣ್ಣೆ, ಪಲ್ಯದ ಪುಡಿ 1 ಚಮಚ.

**ಮಾಡುವ ರೀತಿ** – ಬಟಾಣಿಯನ್ನು ಪ್ರತ್ಯೇಕವಾಗಿ ಬೇಯಿಸಿಕೊಳ್ಳಿ, ಹುರುಳಿ-ಕಾಯಿಯನ್ನು ಸಣ್ಣಗೆ ಹೆಚ್ಚಿ ಬೇಯಿಸಿಕೊಳ್ಳಿ. ತರಕಾರಿಗಳು ಬೆಂದ ನಂತರ ದೊಡ್ಡ ಬಾಣಲಿಗೆ ಎಣ್ಣೆ ಹಾಕಿ ಸಾಸಿವೆ ಒಗ್ಗರಣೆ ಮಾಡಿಕೊಳ್ಳಿ. ಬಾಣಲಿಗೆ ಬೆಂದ ಬಟಾಣಿ, ಹುರುಳಿಕಾಯಿ, ತುರಿದ ತೆಂಗಿನಕಾಯಿ ಸೇರಿಸಿ ಹುರಿಯಿರಿ. ಆಮೇಲೆ ಸ್ವಲ್ಪ ಉಪ್ಪು, ಪಲ್ಯದ ಪುಡಿ ಹಾಕಿ ಕೆದಕಿ. ಕೆಳಗಿಳಿಸಿ. ಅನಂತರ ಭಗವಂತನಿಗೆ ಸಮರ್ಪಣೆ ಮಾಡಿ ಭಗವಂತನ ಎಡತೊಡೆಯಲ್ಲಿ ಅನುಗ್ರಹೋನ್ಮುಖಿಯಾಗಿ ಕುಳಿತ ವರಮಹಾಲಕ್ಷ್ಮೀ-ದೇವಿಗೆ ಸಮರ್ಪಿಸಿ ಧನ್ಯ ಎನ್ನಿರಿ.

## ಬೆಂಡೆಕಾಯಿ ಗೊಜ್ಜು

**ಬೇಕಾಗುವ ಪದಾರ್ಥಗಳು** – ಕಾಲು ಕೆ.ಜಿ. ಬೆಂಡೆಕಾಯಿ, ಹಸಿಮೆಣಸಿನಕಾಯಿ, ಕೊತ್ತಂಬರಿ ಸೊಪ್ಪು, ತೆಂಗಿನಕಾಯಿ ಒಂದು ಹೋಳು, ಸಾಸಿವೆ, ಎಣ್ಣೆ, ಉಪ್ಪು ಮತ್ತು ಹುಣಿಸೆಹಣ್ಣು.

**ತಯಾರಿಸುವ ವಿಧಾನ** – ತೆಂಗಿನತುರಿ, ಮೆಣಸಿನಕಾಯಿ, ಕೊತ್ತಂಬರಿ ಸೊಪ್ಪು, ಸಾಸಿವೆ ಇವುಗಳನ್ನು ಒರಳಿನಲ್ಲಿ ಹಾಕಿ ರುಬ್ಬಿ, ಬೆಂಡೆಕಾಯಿ ಹೋಳುಗಳನ್ನು ಬಾಣಲೆಯಲ್ಲಿ ತೊಟ್ಟು ಎಣ್ಣೆ ಹಾಕಿಕೊಂಡು ಹುರಿಯಿರಿ. ರುಬ್ಬಿಟ್ಟುಕೊಂಡ ಮಿಶ್ರಣವನ್ನು ಬಾಣಲೆಗೆ ಹಾಕಿ ಹುಣಿಸೆ ಹಣ್ಣುಹಿಂಡಿ ಉಪ್ಪು ಬೆರೆಸಿ. ಸಾಸಿವೆ ಒಗ್ಗರಣೆ

ಹಾಕಿ. (ಸ್ವಲ್ಪ ಸಮಯ ಹದವಾದ ಶಾಖದಲ್ಲಿ ಚಮಚದಿಂದ ಕಲೆಸಿರಿ). ಈ ರೀತಿ ತಯಾರಿಸಿದ ಗೊಜ್ಜು ನೈವೇದ್ಯದ ಜೊತೆಯಲ್ಲಿ ಭಗವಂತನಿಗೆ ಸಮರ್ಪಣೆ ಮಾಡಿ ಭಗವಂತನ ಎಡತೊಡೆಯಲ್ಲಿ ಅನುಗ್ರಹೋನ್ಮುಖಿಯಾಗಿ ಕುಳಿತ ವರಮಹಾಲಕ್ಷ್ಮೀದೇವಿಗೆ ಸಮರ್ಪಿಸಿ ಧನ್ಯ ಎನ್ನಿರಿ.

## ಪಂಚಭಕ್ಷ್ಯಗಳು

### ಕಡುಬು

**ಬೇಕಾಗುವ ಪದಾರ್ಥಗಳು** – ಚಿರೋಟಿ ರವೆ 500 ಗ್ರಾಂ, ಮೈದಾಹಿಟ್ಟು - 500 ಗ್ರಾಂ, ಸಕ್ಕರೆ - 400 ಗ್ರಾಂ, ಕೊಬ್ಬರಿ - 300 ಗ್ರಾಂ, ಕರಿಯಲು ಎಣ್ಣೆ - ಅಗತ್ಯವಿದ್ದಷ್ಟು.

**ಮಾಡುವ ವಿಧಾನ** – ಕೊಬ್ಬರಿಯನ್ನು ತುರಿದುಕೊಂಡು ಸಕ್ಕರೆ ಬೆರೆಸಿ, ಸ್ವಲ್ಪ ನೀರು ಹಾಕಿ ಒಲೆಯ ಮೇಲಿಡಿ, ಅದು ತಳ ಹಿಡಿಯದಂತೆ ಕೆದಕುತ್ತಿರಿ. ಅದು ಹೊಂದಿಕೊಂಡು ಗಟ್ಟಿಯಾದ ಮೇಲೆ ಅದನ್ನು ಕೆಳಗಿಳಿಸಿ. ಸ್ವಲ್ಪ ಗಸಗಸೆ ಬೆರೆಸಿರಿ. ಚಿರೋಟಿ ರವೆ ಹಾಗೂ ಮೈದಾಹಿಟ್ಟನ್ನು ಒಂದು ಗೂಡಿಸಿ ಚಪಾತಿ ಹಿಟ್ಟಿನಂತೆ ಕಲೆಸಿ ಚೆನ್ನಾಗಿ ನಾದಿರಿ. ಅನಂತರ ಹಿಟ್ಟನ್ನು ಉಂಡೆ ಮಾಡಿ, ಹೂರಣವನ್ನು ಮಧ್ಯದಲ್ಲಿ ಇಟ್ಟು, ಕಡುಬಿನ ಅಚ್ಚಿಗೆ ಹಾಕಿ ತೆಗೆಯಿರಿ. ಎಲ್ಲ ಉಂಡೆಗಳನ್ನೂ ಈ ರೀತಿ ಕಡುಬಿನಾಕಾರದಲ್ಲಿ ಅಚ್ಚಿಗೆ ಹಾಕಿ ತೆಗೆದಿಟ್ಟ ನಂತರ ಬಾಣಲೆಗೆ ಎಣ್ಣೆ ಹಾಕಿ ಒಲೆಯ ಮೇಲಿಡಿ. ಎಣ್ಣೆ ಕಾದನಂತರ ಕಡುಬನ್ನು ಹದವಾಗಿ ಕರೆಯಿರಿ. ಕರಿದ ಕಡುಬುಗಳನ್ನು ಭಗವಂತನಿಗೆ ಸಮರ್ಪಣೆ ಮಾಡಿ ಭಗವಂತನ ಎಡತೊಡೆಯಲ್ಲಿ ಅನುಗ್ರಹೋನ್ಮುಖಿಯಾಗಿ ಕುಳಿತ ವರಮಹಾಲಕ್ಷ್ಮೀದೇವಿಗೆ ಸಮರ್ಪಿಸಿ ಧನ್ಯ ಎನ್ನಿರಿ.

### ಅನ್ನದ ಕೇಸರಿಬಾತ್

**ಬೇಕಾಗುವ ಪದಾರ್ಥಗಳು –**

ಅಕ್ಕಿ - 1 ಕೆ.ಜಿ. ಸಕ್ಕರೆ - 500 ಗ್ರಾಂ, ತುಪ್ಪ - 150 ಗ್ರಾಂ, ಗೋಡಂಬಿ ದ್ರಾಕ್ಷಿ - 50 ಗ್ರಾಂ, ಏಲಕ್ಕಿ- 10, ಕೇಸರಿ ಬಣ್ಣ - 1 ಚಿಟಿಕೆ.

**ಮಾಡುವ ರೀತಿ** – ಅಕ್ಕಿಯನ್ನು ಚೆನ್ನಾಗಿ ತೊಳೆದು ಒಂದು ಪಾತ್ರೆಗೆ ಹಾಕಿ. ಅಕ್ಕಿ ಬೇಯುವಷ್ಟು ನೀರು ಹಾಕಿ ಒಲೆಯ ಮೇಲಿಡಿ. ಅಕ್ಕಿ ಮುಕ್ಕಾಲು ಬೆಂದ ಮೇಲೆ ಸಕ್ಕರೆ ಹಾಕಿರಿ. ನಂತರ ಕೇಸರಿ ಬಣ್ಣ, ಏಲಕ್ಕಿ ಪುಡಿ ಹಾಕಿ ಕೆದಕಿರಿ. ಅಕ್ಕಿ ಪೂರ್ತಿ ಬೆಂದ ಮೇಲೆ ತುಪ್ಪದಲ್ಲಿ ಕರಿದ ಗೋಡಂಬಿ - ದ್ರಾಕ್ಷಿ ಹಾಕಿ ಗೊಟಾಯಿಸಿರಿ. ಕೇಸರಿಬಾತ್ ಗಟ್ಟಿಯಾಗಿರಬಾರದು. (ತುಪ್ಪ ಹಾಕಿ ಗೊಟಾಯಿಸಿರಿ). ಸ್ವಲ್ಪ ನೀರಾಗಿದ್ದರೆ ಚೆನ್ನಾಗಿರುತ್ತೆ. ಅನಂತರ ಭಗವಂತನಿಗೆ ಸಮರ್ಪಣೆ ಮಾಡಿ ಭಗವಂತನ ಎಡತೊಡೆಯಲ್ಲಿ ಅನುಗ್ರಹೋನ್ಮುಖಿಯಾಗಿ ಕುಳಿತ ವರಮಹಾಲಕ್ಷ್ಮೀದೇವಿಗೆ ಸಮರ್ಪಿಸಿ ಧನ್ಯ ಎನ್ನಿರಿ.

## ಸಜ್ಜಪ್ಪ

**ಸಾಮಗ್ರಿಗಳು** –

1. ಮೈದಾ ಹಿಟ್ಟು - 1/2 ಕಪ್
2. ಚಿರೋಟಿ ರವೆ - 1 ಕಪ್
3. ತುಪ್ಪ - 1 ಚಮಚ
4. ಉಪ್ಪು - 1/2 ಚಮಚ

**ಹೂರಣಕ್ಕೆ**

1. ಕಾಯಿತುರಿ - 1 ಕಪ್
2. ಒಣ ಕೊಬ್ಬರಿಯ ಸಣ್ಣ ತುರಿ - 1 ಕಪ್
3. ಬೆಲ್ಲ 1 1/2 ಕಪ್
4. ಗಸಗಸೆ - 2 ಚಮಚ
5. ಏಲಕ್ಕಿ ಪುಡಿ - 1 ಚಮಚ
6. ಕರಿಯಲು ಎಣ್ಣೆ

**ಕಣಕ ಮಾಡುವ ವಿಧಾನ** – ಮೊದಲಿಗೆ ಮೈದಾ, ಚಿರೋಟಿರವೆ, ತುಪ್ಪ ಹಾಗೂ ಉಪ್ಪನ್ನು ಸೇರಿಸಿ ಕಲೆಸಿರಿ. ಸ್ವಲ್ಪ ಸ್ವಲ್ಪವೇ ನೀರನ್ನು ಹಾಕಿಕೊಂಡು ಚಪಾತಿ ಹಿಟ್ಟಿನ ಹದಕ್ಕೆ ಕಲೆಸಿಕೊಳ್ಳಿ. ಒದ್ದೆ ಬಟ್ಟೆಯಲ್ಲಿ 1-2 ಗಂಟೆಗಳ ಕಾಲ ಮುಚ್ಚಿಡಿ.

**ಹೂರಣ ಮಾಡುವ ವಿಧಾನ** - ಗಸಗಸೆಯನ್ನು 1-2 ನಿಮಿಷಗಳ ಕಾಲ ಹುರಿಯಿರಿ. ಚಿರೋಟಿ ರವೆಯನ್ನು ಹುರಿಯಿರಿ. ದಪ್ಪತಳದ ಬಾಣಲೆಯಲ್ಲಿ ಬೆಲ್ಲ ಹಾಕಿ ಕರಗಿಸಿರಿ. ಕರಗಿದ ಬೆಲ್ಲಕ್ಕೆ 2 ತರಹದ ಕೊಬ್ಬರಿಯನ್ನು ಹಾಕಿ ಸ್ವಲ್ಪ ಗಟ್ಟಿ ಆಗುವ ತನಕ ಕೈ ಆಡಿಸಿರಿ. ಗಸಗಸೆ, ಚಿರೋಟಿ ರವೆ, ಏಲಕ್ಕಿ ಪುಡಿ ಹಾಕಿರಿ.

1. ಕಲಸಿದ ಹಿಟ್ಟನ್ನು ಚೆನ್ನಾಗಿ ನಾದಿ, ಸಣ್ಣ ಉಂಡೆಗಳನ್ನು ಮಾಡಿರಿ.
2. ಬಾಣಲೆಯಲ್ಲಿ ಎಣ್ಣೆ/ ತುಪ್ಪ ಕಾಯಲು ಇಡಿ.
3. ಉಂಡೆಯನ್ನು ಬಟ್ಟಲಾಕಾರದಲ್ಲಿ ಮಾಡಿ, ಹೂರಣವನ್ನು ತುಂಬಿರಿ. ತುದಿಗಳನ್ನು ಮುಚ್ಚಿ.
4. ನಾಜೂಕಾಗಿ ಪೂರಿಯ ಆಕಾರದಲ್ಲಿ ಲಟ್ಟಿಸಿ, ಮಧ್ಯಾಗ್ನಿಯಲ್ಲಿ ಕಾದ ಎಣ್ಣೆಯಲ್ಲಿ/ ತುಪ್ಪದಲ್ಲಿ ಚಿನ್ನದ ಬಣ್ಣ ಬರುವವರೆಗೆ ಕರಿದರೆ ನೈವೇದ್ಯಕ್ಕೆ ಸಜ್ಜಪ್ಪ ಸಿದ್ಧ. ಅನಂತರ ಭಗವಂತನಿಗೆ ಸಮರ್ಪಣೆ ಮಾಡಿ ಭಗವಂತನ ಎಡತೊಡೆಯಲ್ಲಿ ಅನುಗ್ರಹೋನ್ಮುಖಿಯಾಗಿ ಕುಳಿತ ವರಮಹಾಲಕ್ಷ್ಮೀದೇವಿಗೆ ಸಮರ್ಪಿಸಿ ಧನ್ಯ ಎನ್ನಿರಿ.

## ಪದರು ಫೇಣಿ

**ಬೇಕಾಗುವ ಪದಾರ್ಥಗಳು** – ಮೈದಾ ಹಿಟ್ಟು 500 ಗ್ರಾಂ, ಸಕ್ಕರೆ - 400 ಗ್ರಾಂ, ತುಪ್ಪ - 200 ಗ್ರಾಂ, ಅಡಿಗೆ ಸೋಡಾ - 1 ಚಿಟಿಕೆ, ಕೇಸರಿ ಬಣ್ಣ - 1 ಚಿಟಿಕೆ.

**ಮಾಡುವ ರೀತಿ** – ಮುಕ್ಕಾಲುಭಾಗ ಹಿಟ್ಟಿಗೆ ಅಡಿಗೆ ಸೋಡಾ, ಕಾಲು ಭಾಗ ತುಪ್ಪ , ಸ್ವಲ್ಪ ನೀರುಹಾಕಿಕೊಂಡು ಚಪಾತಿ ಹಿಟ್ಟಿನಂತೆ ಗಟ್ಟಿಯಾಗಿ ಕಲಸಿಕೊಳ್ಳಿ. ನಂತರ ಸಕ್ಕರೆ ಪಾಕ ತಯಾರಿಸಿಕೊಳ್ಳಿ. ಈ ಪಾಕಕ್ಕೆ ಕೇಸರಿ ಬಣ್ಣ ಸೇರಿಸಿ. ಕಲಸಿದ

ಹಿಟ್ಟನ್ನು ಉಳಿದ ಹಿಟ್ಟಿನ ಸಹಾಯದಿಂದ ಚಪಾತಿಗೆ ಲಟ್ಟಿಸುವಂತೆ ಲಟ್ಟಿಸಿ ಒಂದರ ಮೇಲೆ ಒಂದರಂತೆ ಹಾಕಿ ಸುರಳಿ ಸುತ್ತಿರಿ. ಅದನ್ನು ಒಂದೊಂದು ತುಂಡು ಕತ್ತರಿಸಿ (ಕಬ್ಬಿನ ತುಂಡಿನಂತೆ) ತುಂಡುಗಳನ್ನು ನೇರವಾಗಿ ಲಟ್ಟಿಸಿ ತುಪ್ಪದಲ್ಲಿ ಕರಿದು ಪಾಕದಲ್ಲಿ ಹಾಕಿ, ಹತ್ತು ನಿಮಿಷ ಬಿಟ್ಟು ತೆಗೆಯಿರಿ. ಅನಂತರ ಭಗವಂತನಿಗೆ ಸಮರ್ಪಣೆ ಮಾಡಿ ಭಗವಂತನ ಎಡತೊಡೆಯಲ್ಲಿ ಅನುಗ್ರಹೋನ್ಮುಖಿಯಾಗಿ ಕುಳಿತ ವರಮಹಾಲಕ್ಷ್ಮೀ-ದೇವಿಗೆ ಸಮರ್ಪಿಸಿ ಧನ್ಯ ಎನ್ನಿರಿ.

## ಮೋಹನ್ ಲಾಡು

**ಬೇಕಾಗುವ ಪದಾರ್ಥಗಳು** – ಗೋಧಿ ಹಿಟ್ಟು 2 ಬಟ್ಟಲು, ಸಕ್ಕರೆ - 4 ಬಟ್ಟಲು, ಏಲಕ್ಕಿ ಪುಡಿ ಸ್ವಲ್ಪ, ತುಪ್ಪ - 1 ಬಟ್ಟಲು, ಕೊಬ್ಬರಿ ತುರಿ - 1 ಹಿಡಿ, ಗೋಡಂಬಿ ದ್ರಾಕ್ಷಿ - 50 ಗ್ರಾಂ, ಕೇಸರಿ ಕಲರ್ - ಸ್ವಲ್ಪ. ಕರಿಯಲು ಬೇಕಾದಷ್ಟು ತುಪ್ಪ.

**ಮಾಡುವ ವಿಧಾನ** - ಗೋಧಿ ಹಿಟ್ಟನ್ನು ಜರಡಿ ಆಡಿ ಶುದ್ಧಿ ಮಾಡಿಕೊಳ್ಳಿ. ಅದಕ್ಕೆ ಕೇಸರಿ ಬಣ್ಣ ಮತ್ತು ನೀರನ್ನು ಬೆರೆಸಿ ಕಲಸಿ ನಾದಿಕೊಳ್ಳಿ. ಒಂದು ಬಾಣಲಿಯಲ್ಲಿ ತುಪ್ಪ ಹಾಕಿ ಒಲೆಯ ಮೇಲಿಡಿ. ಬಳಿಕ ಕಲಸಿದ ಗೋಧಿ ಹಿಟ್ಟಿನಿಂದ ಚಿಕ್ಕ ಚಿಕ್ಕ ಉಂಡೆಗಳನ್ನು ಮಾಡಿಕೊಳ್ಳಿ. ಚಪಾತಿ ಲಟ್ಟಿಸುವ ಮಣೆಯಲ್ಲಿ ಆ ಉಂಡೆಗಳನ್ನು ಇಟ್ಟು ಪೂರಿ ಲಟ್ಟಿಸುವಂತೆ ಲಟ್ಟಿಸಿ ಕಾದ ತುಪ್ಪದಲ್ಲಿ ಕರಿಯಿರಿ. ಆಮೇಲೆ ಆ ಪೂರಿಯನ್ನು ಪುಡಿ ಪುಡಿ ಮಾಡಿ ಅದಕ್ಕೆ ಕುಟ್ಟಿಕೊಂಡ ಪುಡಿಸಕ್ಕರೆ, ಏಲಕ್ಕಿ ಪುಡಿ, ಹಾಲಿನಲ್ಲಿ ನೆನೆಸಿದ ಕೇಸರಿ, ತುಪ್ಪದಲ್ಲಿ ಹುರಿದ ದ್ರಾಕ್ಷಿಗೋಡಂಬಿ ಮತ್ತು ಕಾಯಿಸಿಟ್ಟುಕೊಂಡ ಬಿಸಿ ತುಪ್ಪವನ್ನು ಹಾಕಿ ಚೆನ್ನಾಗಿ ಹೊಂದಿಕೊಳ್ಳುವಂತೆ ಕಲಸಿ ಉಂಡೆಗಳನ್ನು ಕಟ್ಟಿ. ಹೀಗೆ ತಯಾರಿಸಿದ ಮೋಹನ್ ಲಾಡುಗಳನ್ನು ಭಗವಂತನಿಗೆ ಸಮರ್ಪಣೆ ಮಾಡಿ ಭಗವಂತನ ಎಡತೊಡೆಯಲ್ಲಿ ಅನುಗ್ರಹೋನ್ಮುಖಿಯಾಗಿ ಕುಳಿತ ವರಮಹಾಲಕ್ಷ್ಮೀದೇವಿಗೆ ಸಮರ್ಪಿಸಿ ಧನ್ಯ ಎನ್ನಿರಿ.

## ಸಕ್ಕರೆ ಪೊಂಗಲ್

**ಬೇಕಾಗುವ ಪದಾರ್ಥಗಳು** – ಒಂದು ಕೆ.ಜಿ. ಅಕ್ಕಿ, ಸಕ್ಕರೆ, ಕೊಬ್ಬರಿ ಗಿಟಕು, ಗೋಡಂಬಿ ದ್ರಾಕ್ಷಿ ಐವತ್ತು ಗ್ರಾಂ, ಏಲಕ್ಕಿ ಕಾಯಿ ಐದಾರು, ಕಾಲು ಕೆ.ಜಿ. ತುಪ್ಪ.

**ತಯಾರಿಸುವ ವಿಧಾನ** – ಅನ್ನ ಮಾಡಿಕೊಳ್ಳಿ, ಅನ್ನ ಒಲೆಯ ಮೇಲಿರುವಾಗಲೇ ಸಕ್ಕರೆ ಹಾಕಿ ಜೊತೆಗೆ ತುಪ್ಪವನ್ನು ಹಾಕಿ ಅನ್ನ ಗಟ್ಟಿಯಾಗುವವರೆಗೂ ಗೊಟಾಯಿಸಿ. ಅನಂತರ ದ್ರಾಕ್ಷಿಗೋಡಂಬಿಯನ್ನು ತುಪ್ಪದಲ್ಲಿ ಹುರಿದು ಅನ್ನಕ್ಕೆ ಹಾಕಿ ಜೊತೆಗೆ ಏಲಕ್ಕಿ ಪುಡಿ ಸೇರಿಸಿ, ಪಾತ್ರೆ ಕೆಳಗಿಟ್ಟು ಕೊಬ್ಬರಿ ತುರಿ ಹಾಕಿ. ಅನಂತರ ಭಗವಂತನಿಗೆ ಸಮರ್ಪಣೆ ಮಾಡಿ ಭಗವಂತನ ಎಡತೊಡೆಯಲ್ಲಿ ಅನುಗ್ರಹೋನ್ಮುಖಿಯಾಗಿ ಕುಳಿತ ವರಮಹಾಲಕ್ಷ್ಮೀದೇವಿಗೆ ಸಮರ್ಪಿಸಿ ಧನ್ಯ ಎನ್ನಿರಿ.

## ನಿಂಬೆಕಾಯಿ ಗೊಜ್ಜಿನ ಅನ್ನ

**ಬೇಕಾಗುವ ಪದಾರ್ಥಗಳು** – ಅರ್ಧ ಕೆ.ಜಿ. ಅಕ್ಕಿ. ನಾಲ್ಕು ನಿಂಬೆ ಹಣ್ಣು, ನಾಲ್ಕೈದು ಒಣಮೆಣಸಿನಕಾಯಿ, ಒಂದು ಚಮಚ ಸಾಸಿವೆ, ಕಡಲೆಬೇಳೆ, ಉದ್ದಿನ ಬೇಳೆ, ಒಂದು ಚಿಟಿಕೆ ಅರಿಶಿನ, ಉಪ್ಪು, ಗೋಡಂಬಿ 25 ಗ್ರಾಂ, ಕರಿಬೇವು, ಎಣ್ಣೆ ಮತ್ತು ಹಸಿ ಕಡಲೆಕಾಯಿ ಬೀಜ. ಕಾಯಿತುರಿ

**ಮಾಡುವ ವಿಧಾನ** – ಕಾಯಿತುರಿ, ಮೆಣಸಿನಕಾಯಿ, ಸಾಸಿವೆ, ಅರಿಶಿನ ಮತ್ತು ಉಪ್ಪು ಇವೆಲ್ಲವನ್ನೂ ಒರಳಿನಲ್ಲಿ ಹಾಕಿ ರುಬ್ಬಿಟ್ಟುಕೊಳ್ಳಿ. ಅನ್ನ ಮಾಡಿರಬೇಕು. ಒಲೆಯ ಮೇಲಿಟ್ಟ ಬಾಣಲೆಯಲ್ಲಿ ಎಣ್ಣೆ ಹಾಕಿ ಸಾಸಿವೆ ಸಿಡಿಸಿ, ರುಬ್ಬಿಟ್ಟುಕೊಂಡ ಮಿಶ್ರಣವನ್ನು ಬಾಣಲೆಗೆ ಹಾಕಿ, ನಿಂಬೆಕಾಯಿ ರಸವನ್ನು ಅದಕ್ಕೆ ಬೆರೆಸಿ ಗೊಟಾಯಿಸಿ ಬಾಣಲೆ ಕೆಳಗಿಳಿಸಿ. ಅನ್ನಕ್ಕೆ ಒಗ್ಗರಣೆ (ಒಗ್ಗರಣೆಗೆ ಕಡಲೆಕಾಯಿ ಬೀಜ, ಗೋಡಂಬಿ ಮುಂತಾದವನ್ನು ಸೇರಿಸಿ) ತಯಾರಿಸಿ ಹಾಕಿ. ನಿಂಬೆಹಣ್ಣಿನ ಗೊಜ್ಜನ್ನು ಸೇರಿಸಿ ಕಲೆಸಿ. ಅನಂತರ ಭಗವಂತನಿಗೆ ಸಮರ್ಪಣೆ ಮಾಡಿ ಭಗವಂತನ ಎಡತೊಡೆಯಲ್ಲಿ ಅನುಗ್ರಹೋನ್ಮುಖಿಯಾಗಿ ಕುಳಿತ ವರಮಹಾಲಕ್ಷ್ಮೀದೇವಿಗೆ ಸಮರ್ಪಿಸಿ ಧನ್ಯ ಎನ್ನಿರಿ.

## ಆಂಬೊಡೆ

**ಬೇಕಾಗುವ ಪದಾರ್ಥಗಳು** – ಅರ್ಧ ಕೆ.ಜಿ. ಕಡಲೆಬೇಳೆ, ಒಣಮೆಣಸಿನಕಾಯಿ ಏಳೆಂಟು, ತೆಂಗಿನ ಕಾಯಿ ಒಂದು ಹೋಳು, ಕೊತ್ತಂಬರಿ ಸೊಪ್ಪು ಒಂದು ಕಂತೆ, ಕರಿಬೇವಿನ ಸೊಪ್ಪು, ಎಣ್ಣೆ, ಉಪ್ಪು ಮತ್ತು ಹಸಿಶುಂಠಿ.

**ತಯಾರಿಸುವ ವಿಧಾನ** – ಕಡಲೆಬೇಳೆಯನ್ನು ಚೆನ್ನಾಗಿ ನೀರಿನಲ್ಲಿ ನೆನೆಸಿ. ನೆಂದ ಬಳಿಕ ಕಡಲೆಬೇಳೆ, ಒಣಮೆಣಸಿನಕಾಯಿ, ತೆಂಗಿನ ತುರಿ, ಉಪ್ಪು ಇವುಗಳನ್ನು ಒರಳಿನಲ್ಲಿ ತರಿ ತರಿಯಾಗುವಂತೆ ರುಬ್ಬಿ, ಕರಿಬೇವು, ಕೊತ್ತಂಬರಿ ಸೊಪ್ಪು, ಹಸಿ ಶುಂಠಿಗಳನ್ನು ರುಬ್ಬಿದ ಮಿಶ್ರಣಕ್ಕೆ ಬೆರೆಸಿ. ಎಣ್ಣೆಯನ್ನು ಬಾಣಲೆಗೆ ಹಾಕಿ ಒಲೆಯ ಮೇಲಿಡಿ. ಕಡಲೆಬೇಳೆ ಹಿಟ್ಟನ್ನು ಸಣ್ಣ ಸಣ್ಣ ಉಂಡೆಗಳನ್ನಾಗಿ ಮಾಡಿಕೊಂಡು ಅಂಗೈ ಮೇಲಿಟ್ಟು ತಟ್ಟಿ ಕಾದ ಎಣ್ಣೆಯಲ್ಲಿ ಹಾಕಿ ಕೆಂಪಾಗುವವರೆಗೂ ಕರಿದು ಜಾಲರಿಯ ಸಹಾಯದಿಂದ ಎಣ್ಣೆ ಬಸಿದು ಒಂದು ಪಾತ್ರೆಯಲ್ಲಿ ಹಾಕಿಡಿ. ಅನಂತರ ಹೀಗೆ ಸಿದ್ಧವಾದ ಆಂಬೊಡೆಯನ್ನು ಭಗವಂತನಿಗೆ ಸಮರ್ಪಣೆ ಮಾಡಿ ಭಗವಂತನ ಎಡತೊಡೆಯಲ್ಲಿ ಅನುಗ್ರಹೋನ್ಮುಖಿಯಾಗಿ ಕುಳಿತ ವರಮಹಾಲಕ್ಷ್ಮೀದೇವಿಗೆ ಸಮರ್ಪಿಸಿ ಧನ್ಯ ಎನ್ನಿರಿ.

## ಮೊಸರು ವಡೆ

**ಬೇಕಾಗುವ ಪದಾರ್ಥಗಳು** – ಅರ್ಧ ಕೆ.ಜಿ. ಉದ್ದಿನಬೇಳೆ. ಕಾಳು ಮೆಣಸು 10-12, ಎಣ್ಣೆ, ಮೊಸರು, ಒಗ್ಗರಣೆಗೆ ಸಾಸಿವೆ, ಹಸಿಮೆಣಸಿನಕಾಯಿ, ಒಂದು ಹೋಳು ತೆಂಗಿನ ಕಾಯಿ. ಹಸಿ ಶುಂಠಿ.

**ತಯಾರಿಸುವ ವಿಧಾನ** – ಉದ್ದಿನಬೇಳೆಯನ್ನು ನೀರಿನಲ್ಲಿ ಚೆನ್ನಾಗಿ ತೊಳೆದು ಎರಡರಿಂದ ಮೂರು ಗಂಟೆಗಳ ಕಾಲ ನೆನೆ ಹಾಕಿ. ಆ ಬಳಿಕ ನೀರು ಬಸಿದು ಉದ್ದಿನಬೇಳೆಗೆ ಉಪ್ಪು ಹಾಕಿ ರುಬ್ಬಿಕೊಳ್ಳಿ. ರುಬ್ಬಿದ ಹಿಟ್ಟಿಗೆ ಮೆಣಸನ್ನು ಕುಟ್ಟಿ ಹಾಕಿಕೊಳ್ಳಿ. ಒಲೆಯ ಮೇಲೆ ಬಾಣಲೆ ಇಟ್ಟು ಎಣ್ಣೆ ಹಾಕಿ. ಎಣ್ಣೆ ಕಾದ ಬಳಿಕ ಸ್ವಲ್ಪ ಸ್ವಲ್ಪವಾಗಿ ಹಿಟ್ಟನ್ನು ತೆಗೆದುಕೊಂಡು ತಟ್ಟಿ ಎಣ್ಣೆಯಲ್ಲಿ ಹಾಕಿ ಕರಿಯಿರಿ.

ನಸುಗೆಂಪಾಗುವ ತನಕ ಕರಿದು ಎಣ್ಣೆ ಬಸಿದು ಒಂದು ಪಾತ್ರೆಯಲ್ಲಿ ಹಾಕುತ್ತ ಬನ್ನಿ. ಒಂದು ಪಾತ್ರೆಯಲ್ಲಿ ಬಿಸಿನೀರು ಕಾಸಿಟ್ಟುಕೊಳ್ಳಿ. ಆ ಬಿಸಿನೀರಿಗೆ ಕರಿದ ವಡೆಗಳನ್ನು ಹಾಕಿ. ನಂತರ ವಡೆಗಳನ್ನು ತೆಗೆದು ಒಗ್ಗರಣೆ ಹಾಕಿದ ಮೊಸರಿನಲ್ಲಿ ಹಾಕಿಡಿ. ಚೆನ್ನಾಗಿ ಮೊಸರಿನಲ್ಲಿ ನೆಂದ ಮೇಲೆ ಒಂದೊಂದೇ ವಡೆಯನ್ನು ತೆಗೆದು ತಟ್ಟೆಯಲ್ಲಿಟ್ಟುಕೊಳ್ಳಿ. ಅನಂತರ ಭಗವಂತನಿಗೆ ಸಮರ್ಪಣೆ ಮಾಡಿ ಭಗವಂತನ ಎಡತೊಡೆಯಲ್ಲಿ ಅನುಗ್ರಹೋನ್ಮುಖಿಯಾಗಿ ಕುಳಿತ ವರಮಹಾಲಕ್ಷ್ಮೀದೇವಿಗೆ ಸಮರ್ಪಿಸಿ ಧನ್ಯ ಎನ್ನಿರಿ.

## ಮೊಸರನ್ನ

**ಬೇಕಾಗುವ ಪದಾರ್ಥಗಳು** – ಅರ್ಧ ಕೆ.ಜಿ. ಅಕ್ಕಿ, ಒಂದು ಸೇರು ಗಟ್ಟಿ ಮೊಸರು, ಒಂದು ಹೋಳು ತೆಂಗಿನಕಾಯಿ, ಅರ್ಧ ಚಮಚೆ ಮೆಂತ್ಯ, ಹಸಿಮೆಣಸಿನಕಾಯಿ ಏಳೆಂಟು, ಕೊತ್ತುಂಬರಿ ಸೊಪ್ಪು ಎರಡು ಕಟ್ಟು, ಹಸಿ ಶುಂಠಿ ಒಂದೆರಡು ಚೂರು ಮತ್ತು ಒಗ್ಗರಣೆಗೆ ತುಪ್ಪ. ರುಚಿಗೆ ತಕ್ಕಷ್ಟು ಉಪ್ಪು.

**ಮಾಡುವ ವಿಧಾನ** – ಅಕ್ಕಿಯನ್ನು ಚೆನ್ನಾಗಿ ತೊಳೆದು ಉದುರುದುರಾಗಿ ಅನ್ನ ಮಾಡಿಕೊಂಡು ಆರಲು ಬಿಡಿ. ಬಾಣಲೆಯನ್ನು ಒಲೆಯ ಮೇಲಿಟ್ಟು ಬಾಣಲೆಗೆ ತುಪ್ಪ ಹಾಕಿ ಸಾಸಿವೆ ಸಿಡಿಸಿ, ಮೆಂತ್ಯ, ಹೆಚ್ಚಿಟ್ಟ ಮೆಣಸಿನಕಾಯಿ, ಕೊತ್ತಂಬರಿ ಸೊಪ್ಪು ಹಾಕಿ ಚೆನ್ನಾಗಿ ಕದಡಿ ಒಗ್ಗರಣೆ ಮಾಡಿಕೊಳ್ಳಿ. ಅನ್ನವನ್ನು ಒಂದು ತಟ್ಟೆಯಲ್ಲಿ ಹಾಕಿಕೊಂಡು ಕಾಯಿತುರಿ ಉಪ್ಪು ಹಾಕಿ, ಮೊಸರು ಹಾಕಿ ಕಲಸಿ. ಹಸಿ ಶುಂಠಿಯನ್ನು ಸಣ್ಣಗೆ ಹೆಚ್ಚಿ ಅಥವಾ ಜಜ್ಜಿ ಹಾಕಿ. ಮಾಡಿಟ್ಟುಕೊಂಡ ಒಗ್ಗರಣೆಯನ್ನು ಹಾಕಿ ಇನ್ನೊಮ್ಮೆ ಚೆನ್ನಾಗಿ ಕಲಸಿ. ದಾಳಿಂಬೆ ಬೀಜಗಳನ್ನು ಹಾಗೂ ಹೆಚ್ಚಿದ ಸೀಡ್‌ಲೆಸ್ ದ್ರಾಕ್ಷಿಯನ್ನು ಕೂಡ ಸೇರಿಸಬಹುದು. ಅನಂತರ ಭಗವಂತನಿಗೆ ಸಮರ್ಪಣೆ ಮಾಡಿ ಭಗವಂತನ ಎಡತೊಡೆಯಲ್ಲಿ ಅನುಗ್ರಹೋನ್ಮುಖಿಯಾಗಿ ಕುಳಿತ ವರಮಹಾಲಕ್ಷ್ಮೀದೇವಿಗೆ ಸಮರ್ಪಿಸಿ ಧನ್ಯ ಎನ್ನಿರಿ.

ವರಮಹಾಲಕ್ಷ್ಮೀಹಬ್ಬದ ಆಚರಣೆಯ ವಿಧಿ-ವಿಧಾನವು ಇಲ್ಲಿಗೆ ಪರಿಪೂರ್ಣವಾಯಿತು.

* * * * *

ಯತ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥
ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತವರಮಹಾಲಕ್ಷ್ಮೀ-
ನಾರಾಯಣಃ ಪ್ರೀಯತಾಂ ಪ್ರೀತೋ ವರದೋ ಭವತು ॥

॥ಶ್ರೀಕೃಷ್ಣಾರ್ಪಣಮಸ್ತು॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

ವರಮಹಾಲಕ್ಷ್ಮೀವ್ರತ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ ಶ್ರೀಲಕ್ಷ್ಮೀಹಯಗ್ರೀವದೇವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *




ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),

ಗಿರಿನಗರ, ಬೆಂಗಳೂರು - 560 085

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ನವರಾತ್ರಿ

ಆಶ್ವೀನ || ಶುದ್ಧ || ಪ್ರತಿಪತ್



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ನವರಾತ್ರಿ ಪಾಡ್ಯ ಮಹಾನವಮೀ ವಿಜಯದಶಮೀ

ವಿದ್ವಾನ್ ॥ ಚೆಮ್ಮತ್ತಿ ವೇಂಕಟೇಶಾಚಾರ್ಯ,

ಬೆಂಗಳೂರು.

ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),

ಗಿರಿನಗರ, ಬೆಂಗಳೂರು-೮೫

'ನವರಾತ್ರಿ, ಮಹಾನವಮಿ, ವಿಜಯದಶಮೀ' ಶಾಲಿವಾಹನ ಶಕೆ ೧೯೪೩ ಶಾರ್ವರಿ ॥ ಶ್ರಾವಣ ॥ ಶುದ್ಧ ॥ ಪೂರ್ಣಿಮೆ (ದಿನಾಂಕ: ೩-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥಶ್ರೀಪಾದಂಗಳವರಕರಕಮಲಗಳಿಂದ ಭಾರತೀ-ರಮಣಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು : ೧೨೮



ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಶ್ರೀಮತಿ ನಾಗಲತಾ

ಮುದ್ರಣ : ಮುಕ್ತಿಪಥ ಮುದ್ರಣಾಲಯ,
ಬೆಂಗಳೂರು.



ವಿದ್ವಾನ್ ಓಂಕಾರ ಚಿಂಚೋಳಿ ಕೃಷ್ಣಾಚಾರ್ಯರು

ಚತುಶ್ಶಾಸ್ತ್ರಪಾರಂಗತರಾದ ಚಿಂಚೋಳಿ ಕೃಷ್ಣಾಚಾರ್ಯರು ಶ್ರೀಸತ್ಯಧ್ಯಾನತೀರ್ಥರ ಅಚ್ಚುಮೆಚ್ಚಿನ ಶಿಷ್ಯರಾಗಿ ಆಪ್ತಕಾರ್ಯದರ್ಶಿಗಳೂ ಆಗಿದ್ದರು. ಶ್ರೀಸತ್ಯಧ್ಯಾನತೀರ್ಥರ ಹೃದಯವಾಣಿಯಂತೆ ಉಪನ್ಯಾಸ ಮಾಡುತ್ತಿದ್ದ ಉತ್ತಮ ವಾಗ್ಮಿಗಳಾದ ನಮ್ಮ ತೀರ್ಥರೂಪರ ಸ್ಮರಣಾರ್ಥವಾಗಿ ಈ ಕೃತಿಯ ಸೇವೆಯನ್ನು ಸಲ್ಲಿಸಲಾಗಿದೆ. ಇದರಿಂದ ಪ್ರಾಪ್ತವಾಗುವ ಪುಣ್ಯರಾಶಿಯು ನಮ್ಮ ಪ್ರಾತಃಸ್ಮರಣೀಯರಾದ ತೀರ್ಥರೂಪರಿಗೆ ಸಲ್ಲಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀಮತಿ ಮೀನಾಕ್ಷಿ ಶ್ರೀಪಾಂಡುರಂಗಾಚಾರ್ಯ ಓಂಕಾರ

## ನವರಾತ್ರಿಯ ಸಂದರ್ಭದಲ್ಲಿ ವೇಂಕಟೇಶದೇವರನ್ನು ವಿಶೇಷವಾಗಿ ಆರಾಧನೆ ಮಾಡಬೇಕು

ಮಾಯಾವೀ ಪರಮಾನಂದಂ ತ್ಯಕ್ತ್ವಾ ವೈಕುಂಠಮುತ್ತಮಮ್ ।
ಸ್ವಾಮಿಪುಷ್ಕರಿಣೀತೀರೇ ರಮಯಾ ಸಹ ಮೋದತೇ ॥

ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥಪ್ರದಾಯಿನೇ ।
ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯ ತೇ ನಮಃ ॥

# ವಿಷಯಾನುಕ್ರಮಣಿಕೆ

## ನವರಾತ್ರಿ-ಪಾಡ್ಯ



## ಮಹಾನವಮೀ-ಆಯುಧಪೂಜೆ-ವಾಹನಪೂಜೆ

**ವಿಜಯದಶಮೀ-ಶಮೀಪೂಜೆ**

# ಮುನ್ನುಡಿ

ವರ್ಷದ ಬಹುದೊಡ್ಡ ಹಬ್ಬವೆಂದರೆ ಅದು ನವರಾತ್ರಿ. ಒಂಬತ್ತು ರಾತ್ರಿಗಳಲ್ಲಿ ದುರ್ಗೆಯನ್ನು ಪೂಜಿಸಬೇಕಾದ್ದರಿಂದ ನವರಾತ್ರಿ ಎಂದು ಪ್ರಸಿದ್ಧವಾಗಿದೆ. ಈ ಪರ್ವಕಾಲದಲ್ಲಿ ಸಾಧಕರು ಯಾವ ರೀತಿಯಲ್ಲಿ ಸಾಧನೆ ಮಾಡಬಹುದೆಂಬ ಪಟ್ಟಿಯನ್ನು ನೀವು ಈ ಕೃತಿಯಲ್ಲಿ ಕಾಣಬಹುದು. ಮತ್ತು ನವರಾತ್ರಿಯ ಪಾಡ್ಯದಲ್ಲಿ ಮಾಡಬಹುದಾದ ಎಲ್ಲ ಕರ್ತವ್ಯಗಳನ್ನು ಸಂಗ್ರಹಿಸಲಾಗಿದೆ. ಮಹಾನವಮಿಯ ಶುಭಪರ್ವಕಾಲದಲ್ಲಿ ಆಚರಿಸಬೇಕಾದ ವಾಹನಪೂಜೆ ಹಾಗೂ ಆಯುಧಪೂಜೆಗಳ ಬಗ್ಗೆ ಅತ್ಯಪೂರ್ವ ವಿಚಾರಗಳನ್ನು ತಿಳಿಸಲಾಗಿದೆ. ಹಾಗೂ ಸಾಧಕರು ಯಾವುದೇ ವಾಹನವನ್ನು ಖರೀದಿ ಮಾಡಿದಾಗ ಅದನ್ನು ಪೂಜಿಸುವ ವಿಧಿವಿಧಾನವನ್ನೂ ಕೂಡ ಇಲ್ಲಿ ತಿಳಿಸಲಾಗಿದೆ. ಆದ್ದರಿಂದ ಈ ಪುಸ್ತಕವನ್ನು ಕೇವಲ ನವರಾತ್ರಿಯ ಸಂದರ್ಭದಲ್ಲಷ್ಟೇ ಉಪಯೋಗಿಸದೇ ಉಳಿದ ಸಂದರ್ಭದಲ್ಲೂ ಕೂಡ ಉಪಯೋಗಿಸಲು ಯೋಗ್ಯವಾಗಿದೆ. ವಿಜಯದಶಮಿಯ ಬಗ್ಗೆ ಅಪೂರ್ವ-ವಿಷಯಗಳನ್ನು ತಿಳಿಸುವುದರ ಜೊತೆಯಲ್ಲಿ ಶಮೀಪೂಜೆಯ ವಿಧಾನವನ್ನು ಇದಂ ಪ್ರಥಮತಯಾ ಅತ್ಯಂತ ನಿಖರವಾಗಿ ತಿಳಿಸಲಾಗಿದೆ. ಸಾಧಕರು ಈ ಕೃತಿಯ ಸದುಪಯೋಗವನ್ನು ಸಂಪೂರ್ಣವಾಗಿ ಪಡೆದುಕೊಳ್ಳುತ್ತಾರೆಂಬ ಭರವಸೆಯೂ ಕೂಡ ಇದೆ. ಅನುಗ್ರಹದಿಂದಷ್ಟೇ ಈ ಕೃತಿಯ ಸಂಪಾದನೆಯು ಸಾಧ್ಯವಾಗಿದೆ.

ಶ್ರೀಹರಿವಾಯುಗುರುಗಳ ಅನುಗ್ರಹದಿಂದಷ್ಟೇ ಈ ಕೃತಿಯ ಸಂಪಾದನೆಯು ಸಾಧ್ಯವಾಗಿದೆ. ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ಶ್ರೀಮತಿ ಮೀನಾಕ್ಷಿ ಶ್ರೀಪಾಂಡುರಂಗಾಚಾರ್ಯ ಓಂಕಾರ ಇವರಿಗೆ ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ-ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಇವರ ತೀರ್ಥರೂಪರಿಗೆ ಈ ಜ್ಞಾನಯಜ್ಞದ ಪುಣ್ಯರಾಶಿಯು ತಲುಪಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ.

## ನವರಾತ್ರಿ ಪೂಜೆಗೆ ಬೇಕಾಗುವ ಸಾಮಗ್ರಿಗಳು

* ಅರಿಶಿನ ಕುಂಕುಮ, ಮಂತ್ರಾಕ್ಷತೆ.
* ಮಾವಿನ ಸೊಪ್ಪು.
* ಚಿಗುರೆಲೆಗಳು.
* ವಿವಿಧ ಬಗೆಯ ಪುಷ್ಪಗಳು.
* ಪತ್ರಗಳು.
* ತುಳಸೀ.
* ಗಂಧಾಕ್ಷತೆ.
* ಕುಲಸ್ವಾಮಿಯ ಚಿತ್ರ.
* ದುರ್ಗೆಯ ಫೋಟೋ.
* ೫ ಗೆಜ್ಜೆವಸ್ತ್ರ.
* ಕಲಶ ಸ್ಥಾಪನೆಗೆ ಬೇಕಾಗುವ ಮುಂದೆ ಹೇಳುವ ಎಲ್ಲಾ ಸಾಮಗ್ರಿಗಳು.
* ಕುಮಾರಿಪೂಜೆಗೆ ಬೇಕಾಗುವ ಸಾಮಗ್ರಿಗಳು.
* ಅಖಂಡದೀಪಕ್ಕೆ ಉಪಯುಕ್ತವಾದ ಸಾಮಗ್ರಿಗಳು.
* ಸಕಲ ಪೂಜಾ ಪರಿಕರಗಳು, ದಾನ ಮಾಡಲು ಬೇಕಾಗುವ ಸಾಮಗ್ರಿಗಳು ಹಾಗೂ ದಕ್ಷಿಣೆ.
* ಹಬ್ಬದ ಅಡುಗೆಗಳು.

## ನವರಾತ್ರಿಯಲ್ಲಿ ಏನು ಮಾಡಬೇಕು ?

ಒಂದುವಾರ ಭಗವಂತನಿಗೆ ಅಶೋಕಪುಷ್ಪಗಳಿಂದ ಅರ್ಚನೆ ಮಾಡುತ್ತಾ, ಎಲೆಗಳನ್ನು ಹಾಗೂ ಆ ಹೂವುಗಳನ್ನು ಸೇವನೆ ಮಾಡಿದರೆ ಸಂತಾನವಾಗದವರಿಗೆ ಸಂತಾನವು ಆಗುತ್ತದೆಂದು ಆಯುರ್ವೇದವು ಹೇಳುತ್ತದೆ. ಅಶೋಕವೃಕ್ಷದ ಈ ಮಹತ್ವವನ್ನು ಅರಿತು ನವರಾತ್ರಿಯ ಮೊದಲ ದಿವಸದಲ್ಲಿ ಅಶೋಕವೃಕ್ಷದ ಪೂಜೆಯನ್ನು ಪ್ರತಿಯೊಬ್ಬರೂ ಆಚರಿಸಬೇಕು.

೧. ಬೆಳಿಗ್ಗೆ ಅರುಣೋದಯಕಾಲದಲ್ಲಿ ಎದ್ದು ಭಗವಂತನನ್ನು ಸ್ಮರಣೆ ಮಾಡಬೇಕು.ನವರಾತ್ರಿಯ ಪರ್ವಕಾಲಗಳಲ್ಲಿ ಭಗವಂತನ ವಿಶೇಷ ಅನುಗ್ರಹವಾಗುವಂತೆ ಪ್ರಾರ್ಥಿಸಬೇಕು. ಹೃದಯದಲ್ಲಿ ಭಗವಂತನನ್ನು ಸ್ಮರಿಸಿ ಸಾಷ್ಟಾಂಗ ನಮಿಸಬೇಕು. ಶೌಚಾಚಾರಗಳನೆಲ್ಲಾ ಮುಗಿಸಿ ಅಭ್ಯಂಗ ಸ್ನಾನವನ್ನು ಮಾಡಬೇಕು.

೨. ಪುರುಷರು ಸೂರ್ಯೋದಯದ ಮೊದಲೇ ಸ್ನಾನವನ್ನು ಮಾಡಿ ನಿರ್ಮಾಲ್ಯಾಭಿಷೇಕವನ್ನು ಪೂರೈಸಿ ಸಂಧ್ಯಾವಂದನೆ, ಜಪ, ತಪಾದಿ ಅನುಷ್ಠಾನಗಳನ್ನು ಶ್ರದ್ಧೆಯಿಂದ ಆಚರಿಸಬೇಕು. ಅನಂತರ, ಗಂಡಹೆಂಡತಿಯರಿಬ್ಬರೂ ಭಗವಂತನ ಮುಂದೆ ಕುಳಿತು ಸಂಕಲ್ಪಪೂರ್ವಕವಾಗಿ ನವರಾತ್ರಿಯ ಪೂಜೆಯನ್ನು ಪ್ರಾರಂಭಮಾಡಬೇಕು.

೪. ಪೂಜಾ ಪದ್ಧತಿಯನ್ನು ಮುಂದೆ ನೀಡಲಾಗಿದೆ. ಅದರ ಪ್ರಕಾರವೇ ಪೂಜೆಯನ್ನು ಮಾಡಬೇಕು.

೫. ಒಂದು ಮಣ್ಣಿನ ಗಡಿಗೆಯನ್ನು ತೆಗೆದುಕೊಂಡು ಅದರಲ್ಲಿ ಶುದ್ಧವಾದ ಮಣ್ಣನ್ನು ಹಾಕಿ ಭತ್ತದ ಕಾಳುಗಳನ್ನು ಹಾಗೂ ನವಗ್ರಹಗಳ ಧಾನ್ಯಗಳನ್ನು ಬಿತ್ತಬೇಕು. ಹೊಲದಲ್ಲಿ ಬೀಜಬಿತ್ತುವ ಕ್ರಮದಲ್ಲಿಯೇ ಈ ಘಟದಲ್ಲಿ ನವಗ್ರಹದ ಕಾಳುಗಳನ್ನು ಹಾಕಬೇಕು. ಮೊಳಕೆ ಬರಲು ಅನುಕೂಲವಾಗುವಷ್ಟು ನೀರನ್ನು ಹಾಕಬೇಕು.

೬. ಆ ಗಡಿಗೆಗೆ ಅರಿಶಿನ ಕುಂಕುಮಗಳನ್ನು ಹಚ್ಚಬೇಕು, ಹಸಿದಾರವನ್ನು ಸುತ್ತಿರಬೇಕು. ಮುಂದೆ ಹೇಳಿದ ಕ್ರಮದಲ್ಲಿ ಈ ಗಡಿಗೆಯಲ್ಲಿಯೇ ದುರ್ಗಾದೇವಿಯನ್ನು ಆವಾಹನೆ ಮಾಡಿ ಪೂಜೆಮಾಡಬೇಕು. ಹಾಗೂ ಲಕ್ಷ್ಮೀನಾರಾಯಣರನ್ನು ಪೂಜೆ ಮಾಡಬೇಕು.

೭. ಪಕ್ಕದಲ್ಲಿ ಕುಲದೇವರನ್ನು ಆವಾಹನೆ ಮಾಡಿ ಪೂಜೆ ಮಾಡಬೇಕು. ಕುಲದೇವರ ವಿಗ್ರಹಗಳಿದ್ದು ಅದಕ್ಕೆ ಪ್ರತಿನಿತ್ಯ ಪೂಜೆಯನ್ನು ಮಾಡುವ ಪಕ್ಷದಲ್ಲಿ ಆ ಪ್ರತಿಮೆಯಲ್ಲಿಯೇ ವಿಶೇಷ ಸನ್ನಿಧಾನವು ಮೂಡುವಂತೆ ಅನುಸಂಧಾನ ಮಾಡಬೇಕು. ಅಥವಾ ಈ ಗಡಿಗೆಯಲ್ಲಿಯೇ ಕುಲದೇವರನ್ನು ಆವಾಹನೆ ಮಾಡಿ ಪೂಜೆ ಮಾಡಬಹುದು.

೮. ಕೆಲವರು ಬೊಂಬೆಯನ್ನು ಒಂಬತ್ತು ದಿವಸಗಳ ಕಾಲ ಇಡುತ್ತಾರೆ. ಅದರಲ್ಲಿ ಪಟ್ಟದ ಬೊಂಬೆಯ ಪೂಜೆಯನ್ನು ಇಂದು ಪ್ರಾರಂಭಮಾಡಬೇಕು. ಶ್ರೀನಿವಾಸ ಪದ್ಮಾವತಿದೇವಿಯರ ಸನ್ನಿಧಾನವನ್ನು ಪಟ್ಟದ ಬೊಂಬೆಯಲ್ಲಿ ಭಾವಿಸುತ್ತಾರೆ. ಇಂದಿನಿಂದ ಒಂಬತ್ತು ದಿವಸಗಳಕಾಲ ಆರತಿ ನೈವೇದ್ಯಗಳನ್ನು ಸಮರ್ಪಿಸುತ್ತಾರೆ. ಹಾಗೂ ಉಳಿದ ಬೊಂಬೆಗಳಿಂದ ರಾಮಾಯಣ, ಮಹಾಭಾರತ ಮೊದಲಾದ ಕಥೆಗಳು ಸ್ಮರಣೆಗೆ ಬರುವ ರೀತಿಯಲ್ಲಿ ಜೋಡಿಸುತ್ತಾರೆ. ಈ ಸಂಪ್ರದಾಯವಿದ್ದವರು ಅಂಕುರ ಗಡಿಗೆಯ ಜೊತೆಯಲ್ಲಿಯೇ ಪಟ್ಟದ ಬೊಂಬೆಯ ಪೂಜೆಯನ್ನು ಪ್ರಾರಂಭ ಮಾಡಬೇಕು.

೯. ನವರಾತ್ರಿ ದೀಪವನ್ನು ಹಚ್ಚುವ ಸಂಪ್ರದಾಯ ಅನೇಕರ ಮನೆಯಲ್ಲಿರುತ್ತದೆ. ಅಂತವರು ತಮ್ಮ ಕುಲದೇವರಿಗೆ ಎರಡು ದೀಪಗಳನ್ನು ಇಂದಿನ ಬೆಳಗ್ಗೆ ದಿವಸ ಹಚ್ಚಿ ಪ್ರಾರಂಭಮಾಡಬೇಕು. ಅಖಂಡ ದೀಪವನ್ನು ಹಚ್ಚುವ ಸಂಪ್ರದಾಯವಿದ್ದರೆ ಒಂಭತ್ತು ದಿವಸಗಳ ಕಾಲ ಒಂದು ಕ್ಷಣಕಾಲವೂ ಸಹ ದೀಪವು ಶಾಂತವಾಗದಂತೆ ಎಚ್ಚರವಹಿಸಬೇಕು.

೧೦. ಅಖಂಡ ದೀಪದ ಸಂಕಲ್ಪವಿದ್ದಾಗ ದೀಪದ ಬತ್ತಿಯನ್ನು ಸರಿಮಾಡುವಾಗ ಅಥವಾ ಬದಲಾಯಿಸುವಾಗ ಅದೇ ದೀಪದಲ್ಲಿ ಮತ್ತೊಂದು ಬತ್ತಿಯನ್ನಿಟ್ಟು

ಆದಕ್ಕೆ ದೀಪವನ್ನು ಹಚ್ಚಿ ಈ ಬತ್ತಿಯನ್ನು ಸರಿಮಾಡಬೇಕು. ಅಥವಾ ಬತ್ತಿಯನ್ನೇ ಬದಲಾಯಿಸಬೇಕು. ಯಾವ ಬತ್ತಿಗೆ ದೀಪವನ್ನು ಹಚ್ಚಿಡುತ್ತೇವೋ ಅದೇ ದೀಪದಿಂದ ದೀಪವನ್ನು ಹಚ್ಚಬೇಕು.

೧೧. ಅಖಂಡ ದೀಪವನ್ನು ಹಚ್ಚುತ್ತೇನೆಂದು ಸಂಕಲ್ಪ ಮಾಡಿ ದೀಪವನ್ನು ಎಂದಾದರೂ ಒಮ್ಮೆ ಶಾಂತಗೊಳಿಸಿದರೆ ಅನಿಷ್ಟವಾಗುತ್ತದೆ, ಆದ್ದರಿಂದ ಧೃಢಮನಸ್ಸಿದ್ದರೆ ಮತ್ತು ಎಂದೂ ಎಲ್ಲೂ ಹೋಗದಿದ್ದರೆ ಮಾತ್ರ ಅಖಂಡ ದೀಪದ ಸಂಕಲ್ಪವನ್ನು ಮಾಡಬೇಕು.

೧೨. ಕೆಲವರ ಮನೆಯಲ್ಲಿ ಅಖಂಡ ದೀಪವನ್ನು ಹಚ್ಚಲೇಬೇಕೆಂಬ ಸಂಪ್ರದಾಯವಿರುತ್ತದೆ. ಅಂತವರು ಸಂಕಲ್ಪಪೂರ್ವಕವಾಗಿ ಒಂಭತ್ತು ದಿವಸಗಳಕಾಲ ಅಖಂಡ ದೀಪವನ್ನು ಹಚ್ಚಲೇಬೇಕು. ಸಂಪ್ರದಾಯ-ವಿಲ್ಲದಿದ್ದವರು ಮಾತ್ರ ತಮ್ಮ ಅನುಕೂಲತೆಯನ್ನು ನೋಡಿ ಅಖಂಡ ದೀಪವನ್ನು ಹಚ್ಚಬೇಕು.

೧೩. ಒಂದು ದೀಪವನ್ನು ಹಚ್ಚುವುದಕ್ಕಿಂತ ಎರಡು ದೀಪಗಳನ್ನು ಹಚ್ಚುವುದು ಶ್ರೇಷ್ಠವಾಗಿದೆ.

೧೪. ದೀಪವನ್ನು ಹಚ್ಚುವಾಗ ಮಂತ್ರವನ್ನು ಹೇಳಬೇಕು. (ಮುಂದೆ ಮಂತ್ರವನ್ನು ನೀಡಲಾಗಿದೆ) ಹಚ್ಚಿದಮೇಲೆ ದೀಪಾಭಿಮಾನಿ ದೇವತೆಗೆ ಅರಿಶಿನ, ಕುಂಕುವನ್ನು ಹಚ್ಚಿ ಸಂಕ್ಷೇಪವಾಗಿ ಪೂಜೆಯನ್ನು ಮಾಡಬೇಕು.

೧೫. ತುಪ್ಪದ ದೀಪವನ್ನು ಹಚ್ಚುವುದು ಬಹಳ ಶ್ರೇಷ್ಟ. ಸಾಧ್ಯವಾಗದಿದ್ದರೆ ಎಳ್ಳೆಣ್ಣೆಯ ದೀಪವನ್ನು ಹಚ್ಚಬೇಕು. ಎಳ್ಳೆಣ್ಣೆಯು ಶುದ್ಧವಾಗಿರಬೇಕು. ಗಾಣದ ಅಂಗಡಿಯಿಂದ ತಂದು ಹಚ್ಚುವುದು ಅತ್ಯಂತ ಸೂಕ್ತವಾದುದು.

೧೬. ಅಂಕುರ ಘಟಕ್ಕೆ ಮತ್ತು ಪಟ್ಟದ ಬೊಂಬೆಗೆ ಪೂಜೆಯನ್ನು ದೇವರ ಪೂಜೆಯ ನಂತರವೇ ಮಾಡಬೇಕು. ಹಾಗೂ ಕುಲದೇವರ ಪೂಜೆಯನ್ನು ಸಹ ಅಂಕುರ ಘಟದ ಜೊತೆಯಲ್ಲಿಯೇ ಮಾಡತಕ್ಕದ್ದು.

೧೭. ನವರಾತ್ರಿಯ ಕಾಲದಲ್ಲಿ ರಾಮಾಯಣ, ಭಗವದ್ಗೀತೆ, ಶ್ರೀನಿವಾಸಕಲ್ಯಾಣ, ಸಪ್ತಶತಿ ದುರ್ಗಾದೇವಿಯಸ್ತೋತ್ರ , ಮಧ್ವವಿಜಯ ಇವುಗಳನ್ನು ಯಥಾಶಕ್ತಿಪಾರಾಯಣ ಮಾಡಬೇಕು. ಸಂಪೂರ್ಣಪಾರಾಯಣ ಮಾಡುವುದರಿಂದ ಅಭೀಷ್ಟಫಲಗಳು ಈಡೇರುತ್ತವೆ.

## ಸ್ತ್ರೀಧರ್ಮ

೧. ನವರಾತ್ರಿಯ ಪರ್ವಕಾಲಗಳಲ್ಲಿ ಸ್ತ್ರೀಯರು ಅತ್ಯಂತ ಶ್ರದ್ಧೆಯಿಂದ ಭಗವಂತನ ಆರಾಧನೆಯನ್ನು ಅವಶ್ಯವಾಗಿ ಮಾಡಬೇಕು. ಮನೆಯಲ್ಲಿ ಪತಿಯ ಜೊತೆಗೆ ಸಂಪೂರ್ಣಸ ಹಕಾರದಿಂದ ಹಬ್ಬವನ್ನು ಆಚರಿಸುವುದೇ ಅವರಿಗೆ ವಿಶೇಷ ಫಲದಾಯಕವಾಗಿದೆ.

೨. ಹೆಣ್ಣು ಮಕ್ಕಳು ಮನೆಯ ಬಾಗಿಲಿಗೆ ಮಾವಿನ ತೋರಣವನ್ನು ಕಟ್ಟಬೇಕು. ಮನೆಯ ಮುಂದೆ ರಂಗವಲ್ಲಿಗಳನ್ನು ಹಾಕಿ ಸಿಂಗರಿಸಬೇಕು.

೩. ಮನೆಯಲ್ಲಿ ಹಬ್ಬದ ಆಚರಣೆಯನ್ನು ಮಾಡದೇ ಅಥವಾ ಪತಿಯು ಮಾಡುವ ಹರಿವಾಯುಗುರುಗಳ ಆರಾಧನೆಗೆ ಸಹಕಾರವನ್ನು ನೀಡದೇ ಮಠ, ಮಂದಿರಗಳಿಗೆ, ಭಜನಾಮಂಡಳಿಗಳಿಗೆ ಹೋಗುವುದು ಸರ್ವಥಾ ತಪ್ಪು, ಹೀಗಿರುವಾಗ ಉಳಿದ ಲೌಕಿಕ ಕಾರ್ಯಗಳಿಗೆ ತೆರಳುವುದಂತೂ ಮಹಾನಿಷಿದ್ಧವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಮಹಾ ಅನರ್ಥಕಾರಿ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

೪. ನವರಾತ್ರಿಗಿಂತ ಎರಡು ದಿನಗಳ ಮೊದಲು ದೇವರ ಪಾತ್ರೆಗಳನ್ನು ಚೆನ್ನಾಗಿ ತೊಳೆಯಬೇಕು. ದೇವರ ಮನೆಗೆ ಸುಣ್ಣವನ್ನು ಹಚ್ಚಬೇಕು. ಹಾಗೂ ಮನೆಯಲ್ಲಿ ಜೇಡರಬಲೆ ಮೊದಲಾದ ಧೂಳುಗಳನ್ನು ತೆಗೆದು ಶುದ್ಧಗೊಳಿಸಬೇಕು. ಸಂಪೂರ್ಣ ಮನೆಯನ್ನು ಗೋಮಯ ಗೋಮೂತ್ರಗಳನ್ನು ನೀರಿಗೆ ಬೆರೆಸಿ ಮನೆಯನ್ನು ಒರಿಸಬೇಕು. ಗೋಮಯ ಗೋಮೂತ್ರಗಳಿಂದ ಮನೆಯನ್ನು ಶುದ್ಧಗೊಳಿಸಿದಾಗ ಮನೆಯಲ್ಲಿರುವ ದುಷ್ಟಶಕ್ತಿಗಳೆಲ್ಲವೂ ಪರಿಹಾರವಾಗುತ್ತದೆ.

೫. ನವರಾತ್ರಿಯಲ್ಲಿ ಬೊಂಬೆ ಇಡುವ ಪದ್ಧತಿ ಇದ್ದರೆ ಅದರ ಸಿದ್ಧತೆಯನ್ನೂ ಕೂಡ ಮೊದಲೇ ಮಾಡಿಟ್ಟುಕೊಂಡಿರಬೇಕು.

೬. ನವರಾತ್ರಿಯ ಹಿಂದಿನ ದಿವಸ ಅಮಾವಾಸ್ಯೆಯಾದ ಕಾರಣ ಹಿಂದಿನ ದಿವಸ ತೋರಣಗಳನ್ನು ಕಟ್ಟುವುದು, ರಂಗವಲ್ಲಿಗಳನ್ನು ಹಾಕುವುದು, ದೇವರಿಗೂ ರಂಗವಲ್ಲಿಗಳನ್ನು ಹಾಕುವುದು, ಅಂಕುರ ಗಡಿಗೆಯನ್ನು ತಯಾರುಮಾಡುವುದು ಇವೆಲ್ಲವೂ ನಿಷಿದ್ಧವಾಗಿರುತ್ತದೆ. ಆದ್ದರಿಂದ ನವರಾತ್ರಿಯ ಮೊದಲನೆಯ ದಿವಸವೇ ಬೆಳಗ್ಗೆಯ ಕಾಲದಲ್ಲೇ ಇವೆಲ್ಲವನ್ನು ಮಾಡಬೇಕು.

೭. ನವರಾತ್ರಿಗಳಲ್ಲಿ ದಿನಕ್ಕೊಂದು ರಂಗವಲ್ಲಿಯನ್ನು ಮನೆಯ ಮುಂದೆ ಹಾಕಬೇಕು. ಮತ್ತು ಪ್ರತಿನಿತ್ಯ ಪೂಜೆಗಾಗಿ ಹೂವಿನ ಮಾಲೆಯನ್ನು ಕಟ್ಟಬೇಕು. ಗೆಜ್ಜೆವಸ್ತ್ರಗಳನ್ನು ಪೂಜೆಗಾಗಿ ಸಿದ್ಧಗೊಳಿಸಬೇಕು. ವಿಶೇಷ ಮಂಗಳಾರತಿಗಳನ್ನು ಸಿದ್ಧಗೊಳಿಸಬೇಕು. ಪ್ರತಿನಿತ್ಯ ಎದ್ದಕೂಡಲೇ ಹಾಸಿಗೆಯನ್ನು ಮಡಿಸಬೇಕು. ಕೊಳಕು ಬಟ್ಟೆಗಳನ್ನು ಮನೆಯ ಯಾವ ಮೂಲೆಯಲ್ಲೂ ಇಟ್ಟಿರಬಾರದು. ಒಗೆಯದ ಬಟ್ಟೆಗಳನ್ನು ಇಡಲೇ ಬಾರದು. ಮನೆಯ ಪ್ರತಿಯೊಂದು ಕೋಣೆಗಳನ್ನೂ ಗುಡಿಸಿ ಒರಿಸಬೇಕು. ಮನೆಯಲ್ಲಿ ಯಾವುದೇ ಅಮೇಧ್ಯಪದಾರ್ಥಗಳು, ಅಶುಚಿಯಾದ ಪದಾರ್ಥಗಳು ಇಲ್ಲದಂತೆ ಎಚ್ಚರ ವಹಿಸಬೇಕು. ದುರ್ಗಾದೇವಿಯ ಆಗಮನಕ್ಕಾಗಿ ಮನೆಯನ್ನು ಅತ್ಯಂತ ಶುಚಿರ್ಭೂತವಾಗಿಯೇ ಇಟ್ಟಿರಬೇಕು. ನಿಷಿದ್ಧವಾದ ಯಾವುದೇ ತರಕಾರಿಗಳನ್ನು, ಹಣ್ಣುಗಳನ್ನು ಸರ್ವಥಾ ಸೇವನೆ ಮಾಡಬಾರದು.

೮. ನವರಾತ್ರಿಯ ಕಾಲದಲ್ಲಿ ಪ್ರತಿನಿತ್ಯವೂ ಲಕ್ಷ್ಮೀಶೋಭಾನಪದ , ಶ್ರೀನಿವಾಸಕಲ್ಯಾಣ, ದುರ್ಗಾಸುಳಾದಿ, ಮಧ್ವನಾಮ ಇವುಗಳನ್ನು ಪಾರಾಯಣ ಮಾಡಬೇಕು. ಯಾವುದಾದರೂ ಹೆಚ್ಚಿನ ಅಪೇಕ್ಷೆಗಳಿದ್ದರೆ ಅದಕ್ಕನುಗುಣವಾಗಿ ಇನ್ನೂ ಹೆಚ್ಚಿನ ಪಾರಾಯಣಕ್ರಮವನ್ನು ಅಳವಡಿಸಿಕೊಳ್ಳಬೇಕು.

೯. ಮನೆಯಲ್ಲಿ ಸಣ್ಣಮಕ್ಕಳಿದ್ದರೆ ಅವರ ಮೂಲಕ ಮಂತ್ರಗಳನ್ನು ಹೇಳಿಸಬೇಕು. ಮಕ್ಕಳಿಗೆ ಸಮಯ ವ್ಯರ್ಥಮಾಡಿಸಬಾರದು. ಗುರುಗಳು ಶಿಷ್ಯರನ್ನು ಕಟ್ಟುನಿಟ್ಟಾಗಿ ಪರಿಪಾಲನೆ ಮಾಡುವಂತೆ ತಾಯಿಯಾದವಳು ಮಕ್ಕಳನ್ನು ಕಟ್ಟುನಿಟ್ಟಾಗಿ ನೋಡಿಕೊಳ್ಳಬೇಕು.

೧೦. ನವರಾತ್ರಿಯಲ್ಲಿ ಪ್ರತಿನಿತ್ಯ ಒಬ್ಬ ಹೆಣ್ಣುಮಗಳನ್ನು ಕರೆದು ಪೂಜೆಮಾಡಬೇಕು. ನವರಾತ್ರಿಯಲ್ಲಿ ಕುಮಾರಿಪೂಜೆಯನ್ನು ಮಾಡುವುದರಿಂದ ಬಹಳ ಬಹಳ ಪ್ರಯೋಜನವಿದೆ. ದಿನಕ್ಕೊಬ್ಬರನ್ನು ಕರೆಯಲು ಸಾಧ್ಯವಾಗದಿದ್ದರೆ ದುರ್ಗಾಷ್ಟಮಿಯ ದಿವಸ ಒಟ್ಟಿಗೆ ಒಂಭತ್ತು ಮಂದಿಯನ್ನು ಕರೆದು ಕುಮಾರಿಪೂಜೆಯನ್ನು ಮಾಡಬೇಕು.

೧೧. ಕುಮಾರಿಪೂಜೆಯ ವಿಧಾನವನ್ನು ಮುಂದೆ ನೀಡಲಾಗಿದೆ. ಎರಡು ವರ್ಷದಿಂದ ಹತ್ತು ವರ್ಷದೊಳಗಿನ ಹೆಣ್ಣುಮಕ್ಕಳನ್ನು ಕರೆಯಿಸಿ ಅವರಿಗೆ ಅಪೇಕ್ಷಿತವಾದ ವಸ್ತುಗಳನ್ನು ನೀಡಬೇಕು. ಪೆನ್ನು, ಪುಸ್ತಕ, ದಾಸರಾಯರಪದ್ಯದ ಪುಸ್ತಕಗಳನ್ನು ನೀಡಬೇಕು. ಉಡುಗೆ ತೊಡುಗೆಗಳನ್ನೂ ಕೂಡ ನೀಡಬೇಕು.

೧೨. ಹತ್ತುದಿವಸಗಳ ಕಾಲ ಪ್ರತಿನಿತ್ಯ ಮೊದಲೇ ಯೋಚನೆಮಾಡಿ ದಿನಕ್ಕೊಂದು ಭಕ್ಷವನ್ನು ಹಾಗೂ ಪುಳಿಯೋಗರೆ ಮೊದಲಾದವುಗಳನ್ನು ಮಾಡಬೇಕು. ಕೆಲವರು ಒಂಭತ್ತು ದಿವಸಗಳಕಾಲ ಈ ಕ್ರಮದಲ್ಲೇ ಅಡುಗೆಯನ್ನು ಮಾಡುತ್ತಾರೆ- ೧) ಕಾರದ ಪೊಂಗಲ್, ೨) ಪುಳಿಯೋಗರೆ, ೩) ಶರ್ಕರಾನ್ನ, ೪) ಗುಡಾನ್ನ, ೫) ದಧ್ಯನ್ನ, ೬)ಕೇಸರಿಬಾತ್, ೭) ಬಿಸಿಬೇಳೆಬಾತ್, ೮) ಪೊಂಗಲ್, ೯) ಪಾಯಸಾನ್ನ. ಹೀಗೆ ದಿನಕ್ಕೊಂದು ಬಗೆಯ ಅನ್ನವನ್ನು ಸಮರ್ಪಣೆ ಮಾಡುವುದು ಕೆಲವರ ಮನೆಯ ಸಂಪ್ರದಾಯ.

೧೩. ಪ್ರತಿನಿತ್ಯ ಕಮಲದಹೂವನ್ನು, ಪನ್ನೀರುಗುಲಾಬಿಯನ್ನು ನಾರಾಯಣನಿಗೆ ಹಾಗೂ ದುರ್ಗಾದೇವಿಗೆ ಸಮರ್ಪಣೆ ಮಾಡುವುದರಿಂದ ಅಭೀಷ್ಟಗಳು ನೆರವೇರುತ್ತವೆ.

# ನವರಾತ್ರಿಯಂದು ಮಾಡಬಾರದ ಕಾರ್ಯಗಳು

೧. ಕ್ಷೀರವ್ರತವಾದ್ದರಿಂದ ಹಾಲಿನಿಂದ ತಯಾರಿಸಿದ ಯಾವುದೇ ಪದಾರ್ಥಗಳನ್ನು ಉಪಯೋಗಿಸಬಾರದು. ನೈವೇದ್ಯವನ್ನು ಮಾಡಬಾರದು, ಹಾಲು, ಟೀ, ಕಾಫೀ ಮೊದಲಾದವುಗಳು ನಿಷಿದ್ಧವಾಗಿವೆ.

೨. ಮುಖಕ್ಷೌರ, ಉಗುರು ಕತ್ತರಿಸುವುದು ಮೊದಲಾದವುಗಳನ್ನು ಮಾಡಬಾರದು.

೩. ಷೋಡಶಕರ್ಮಗಳನ್ನು ಆಚರಿಸಬಾರದು.

೪. ಮೃತಾಶೌಚವಿದ್ದವರು ನವರಾತ್ರಿಯ ಹಬ್ಬವನ್ನು ಆಚರಣೆ ಮಾಡಬಾರದು. ಹಾಗೂ ತಂದೆತಾಯಿ ಸ್ವರ್ಗಸ್ಥರಾಗಿದ್ದರೆ ಒಂದು ವರ್ಷದ ಪರ್ಯಂತ ಯಾವುದೇ ಹಬ್ಬವನ್ನು ಆಚರಿಸುವಂತಿಲ್ಲ.

೫. ನವರಾತ್ರಿಯ ಕಾಲದಲ್ಲಿ ವಾಸಮಾಡುವ ಮನೆಯನ್ನು ಬಿಟ್ಟು ಬೇರೆ ಕಡೆ ವಾಸಮಾಡಬಾರದು, ಒಂಭತ್ತು ದಿವಸಗಳಕಾಲ ಮನೆಯಲ್ಲಿ ದೇವರ ಪೂಜೆ, ನೈವೇದ್ಯ ಮೊದಲಾದವುಗಳು ನಡೆಯಲೇ ಬೇಕು. ಆದ್ದರಿಂದ ಮನೆಗೆ ಬೀಗ ಹಾಕುವುದು ಸರ್ವಥಾ ತಪ್ಪು.

೬. ಪ್ರತಿನಿತ್ಯ ಅರುಣೋದಯಕಾಲದಲ್ಲಿ ಎದ್ದೇಳಬೇಕು. ರಾತ್ರಿ ಬೇಗ ಮಲಗಬೇಕು, ಆದರೆ, ಹಗಲು ಸರ್ವಥಾ ಮಲಗಬಾರದು.

೭. ನವರಾತ್ರಿದೀಪವನ್ನು ಇಡುವುದಾದರೆ ಎಂದೂ ಯಾವ ಕ್ಷಣದಲ್ಲೂ ದೀಪವು ಆರದಂತೆ ಎಚ್ಚರವಹಿಸಬೇಕು.

೮. ಪ್ರತಿಯೊಬ್ಬರೂ ನವರಾತ್ರಿಯನ್ನು ಆಚರಿಸಲೇಬೇಕು. ಸಾಧ್ಯವಾಗದಿದ್ದರೆ ಕೊನೆಯ ಮೂರು ದಿವಸವಾದರೂ ನವರಾತ್ರಿಯ ಹಬ್ಬವನ್ನು ಆಚರಿಸಬೇಕು. ಅಶ್ರದ್ಧೆಯಿಂದ, ಔದಾಸೀನ್ಯದಿಂದ ಕಾಲಹರಣ ಮಾಡಿದರೆ ಅನರ್ಥವನ್ನು ಅನುಭವಿಸಬೇಕಾಗುತ್ತದೆ.

## ಬಿಂಬರೂಪದ ಎಚ್ಚರವಿಲ್ಲದೇ ಏನು ಮಾಡಿದರೂ ವ್ಯರ್ಥ

ನಿತ್ಯವೂ ನಾವು ದೇವ ಪೂಜೆಯನ್ನು ಮಾಡುತ್ತೇವೆ. ವರ್ಷದ ಪರ್ವಕಾಲಗಳಲ್ಲಿ ಭಗವಂತನನ್ನು ಬಗೆಬಗೆಯಾಗಿ ಪೂಜಿಸುತ್ತೇವೆ. ವೈಭವದಲ್ಲಿ ಕೊಂಡಾಡುತ್ತೇವೆ. ಆದರೆ ಎಲ್ಲಿಯ ತನಕ ನಮಗೆ ಇದೆಲ್ಲವೂ ಬಿಂಬನ ಆರಾಧನೆ ಎಂಬ ಎಚ್ಚರ ಇರುವುದಿಲ್ಲವೋ, ಅಲ್ಲಿಯತನಕ ಮಾಡಿದ್ದೆಲ್ಲವೂ ವ್ಯರ್ಥ. ನಾವು ನಿತ್ಯವು ಮಾಡುವ ದೇವರ ಪೂಜೆಯು ಬಿಂಬನ ಪೂಜೆಯೇ ಆಗಿದೆ. ಹೃದಯದಲ್ಲಿ ಬಿಂಬನನ್ನು ಚಿಂತಿಸಿ, ಷೋಡಶೋಪಚಾರ ಪೂಜೆ ಮಾಡಲು ಮನಸ್ಸಿನ ಏಕಾಗ್ರತೆಯೇ ನಮ್ಮಿಂದ ಸಾಧ್ಯವಾಗುತ್ತಿಲ್ಲ. ಆದ್ದರಿಂದ ಆ ಬಿಂಬನನ್ನು ಪ್ರತಿಮೆಯಲ್ಲಿ ಸುಷುಮ್ನನಾಡಿಯ ಮೂಲಕ ಹೊರಗೆ ತಂದು ಇಟ್ಟು ಪೂಜಿಸಿ, ಪುನಃ ಹೃದಯಕಮಲದಲ್ಲಿ ಅವನಿಗಾಗಿ ನಾವು ಸಕಲ ಸತ್ಕರ್ಮಗಳನ್ನು ಸಮರ್ಪಣೆ ಮಾಡಬೇಕು. ಅವನಲ್ಲಿ ಶರಣಾಗತರಾಗಬೇಕು. ನಾವು ಮಾಡುವ ಪ್ರತಿಯೊಂದು ಕರ್ಮಗಳೂ ಕೂಡ ಅವನ ಆರಾಧನಾ ರೂಪವಾಗಿ ನಡೆಯಬೇಕು.

ಕೇವಲ ಪೂಜೆಯ ಸಂದರ್ಭದಲ್ಲಿ ಮಾತ್ರವಲ್ಲ. ಯಾವುದೇ ದೇವಸ್ಥಾನಗಳಿಗೆ ಹೋದರೂ ಕೂಡ ಅಲ್ಲಿ ಭಗವಂತನನ್ನು ದರ್ಶನ ಮಾಡುವಾಗ ಬಿಂಬರೂಪಿಯಾದ ಭಗವಂತನಿಂದ ಐಕ್ಯಚಿಂತನೆಯನ್ನು ಮಾಡಲೇಬೇಕು. ಹಾಗು ಶ್ರೀಮದಾಚಾರ್ಯರು ತಿಳಿಸಿದಂತೆ ಸತ್-ಚಿತ್-ಆನಂದ-ಆತ್ಮ ಎಂಬ ನಾಕು ಗುಣಗಳಿಂದ ಆ ಭಗವಂತನನ್ನು ಉಪಾಸನೆ ಮಾಡಬೇಕು. 'ಸಚ್ಚಿನಾಂದ ಆತ್ಮೇತಿ ಮಾನುಷೇಸ್ತು ಸರೇಶ್ವರೈಃ' (ಅಣುಭಾಷ್ಯ)

ನವರಾತ್ರಿಯಲ್ಲಿ ಭಗವಂತನನ್ನು ಪೂಜಿಸುವುದೇ ಮುಖ್ಯಕರ್ತವ್ಯ. ಅದಕ್ಕಾಗಿ ಈ ಅನುಸಂಧಾನವನ್ನು ಮಾಡಿಕೊಂಡು ಪ್ರತಿಯೊಬ್ಬರೂ ಬಿಂಬಸಾಕ್ಷಾತ್ಕಾರಕ್ಕಾಗಿ ಪ್ರಯತ್ನವನ್ನು ಪಡಬೇಕು.

## ಸಾಧಕರಿಗೆ ಕಿವಿಮಾತು

ನವರಾತ್ರಿಯಲ್ಲಿ ಬರುವ ವಿಜಯದಶಮಿಯಂದು ಸತ್ಯಲೋಕಾಧಿಪತಿಗಳಾದ ಶ್ರೀಮುಖ್ಯಪ್ರಾಣದೇವರು ಶ್ರೀಮಧ್ವಾಚಾರ್ಯರಾಗಿ ಅವತಾರ ಮಾಡಿರುವರು. ನವರಾತ್ರಿಯ ಪರ್ವಕಾಲವು ಶ್ರೀಮಧ್ವಾಚಾರ್ಯರಿಗೆ ಅತ್ಯಂತ ಪ್ರೀತಿಕರವಾಗಿದೆ. ಆದ್ದರಿಂದ ಯಾರಿಗೆ ಮುಖ್ಯಪ್ರಾಣದೇವರ ಅನುಗ್ರಹವು ಅಪೇಕ್ಷಿತವಾಗಿರುತ್ತದೋ ಅಂಥ ಸಾಧಕನು ತೃತೀಯಾ ದಿವಸ ವಾಯುಸ್ತುತಿ ಪುರಶ್ಚರಣೆಯನ್ನು ಪ್ರಾರಂಭ ಮಾಡಬೇಕು.

## ಪುರಶ್ಚರಣಪದ್ಧತಿ

ನಖಸ್ತುತಿಯನ್ನು ಹೇಳಿ ಮೊದಲಿನಿಂದ ಕೊನೆಯತನಕ ವಾಯುಸ್ತುತಿಯನ್ನು ಪಠನೆಮಾಡಿ ಕೊನೆಯಿಂದ ಮೊದಲತನಕ ವ್ಯುತ್ಕ್ರಮದಲ್ಲಿ ವಾಯುಸ್ತುತಿಯನ್ನು ಪಠನಮಾಡಬೇಕು. ಪುನಃ ಮೊದಲಿನಿಂದ ಕೊನೆಯತನಕ ವಾಯುಸ್ತುತಿಯನ್ನು ಹೇಳಬೇಕು. ಕೊನೆಯಲ್ಲಿ ಅಭೀಷ್ಟಶ್ಲೋಕವನ್ನು ನೂರೆಂಟು ಬಾರಿ ಹೇಳಬೇಕು. ಅನಂತರ ನಖಸ್ತುತಿಯನ್ನು ಹೇಳಬೇಕು. ಇದು ಒಂದು ದಿವಸದ ಪುರಶ್ಚರಣೆ, ಈ ಕ್ರಮದಲ್ಲಿ ಏಳುದಿವಸಗಳ ಕಾಲ ಪುರಶ್ಚರಣೆಯನ್ನು ಮಾಡಿ, ವಿಜಯದಶಮಿಯಂದು ಸಮರ್ಪಣೆ ಮಾಡಬೇಕು. ಹೀಗೆ ತೃತೀಯಾದಿಂದ ನವಮಿಯ ತನಕ ಏಳುದಿವಸಗಳ ಕಾಲ ಪುರಶ್ಚರಣೆಯನ್ನು ಮಾಡಿ, ವಿಜಯದಶಮಿಯಂದು ಹೋಮವನ್ನು ಮಾಡಬೇಕು. ಸದಾಚಾರ ಸದ್ವಿಚಾರ ಸಂಪನ್ನರಾದ ಜ್ಞಾನಿಗಳಾದ ದುಡ್ಡಿನ ಆಸೆಯಿಲ್ಲದ ಉತ್ತಮ ಪುರೋಹಿತರನ್ನು ಮನೆಗೆ ಕರೆಯಿಸಿ ಅವರಿಂದ ಹೋಮವನ್ನು ಮಾಡಿಸಿ, ಮುಖ್ಯಪ್ರಾಣದೇವರ ಅಂತರ್ಯಾಮಿಯಾದ ಭಗವಂತನಿಗೆ ಸಮರ್ಪಣೆ ಮಾಡಬೇಕು.

೧. ಯಾವ ಸಾಧಕನು ಹೀಗೆ ಪ್ರತೀವರ್ಷದ ನವರಾತ್ರಿಯಲ್ಲಿ ವಾಯುಸ್ತುತಿ ಪುರಶ್ಚರಣೆಯನ್ನು ಮಾಡುತ್ತಾನೋ, ಅಂಥವನಿಗೆ ಉತ್ತಮ ವಾಕ್‌ಶಕ್ತಿಯನ್ನು, ವಿದ್ಯಾಸಂಪತ್ತನ್ನು ಹರಿವಾಯುಗುರುಗಳ ಅನುಗ್ರಹವನ್ನು ಪಡೆದುಕೊಳ್ಳುತ್ತಾನೆ.

ಅವನು ನುಡಿದದ್ದೆಲ್ಲವೂ ಸತ್ಯವಾಗುತ್ತದೆ. ಅವನು ಅಂದುಕೊಂಡ ಅಭೀಷ್ಟಗಳೆಲ್ಲವೂ ನೆರವೇರುತ್ತವೆ. ಪ್ರತಿಯೊಂದು ಕಾರ್ಯಗಳು ಹರಿಪರವಾಗಿ ಸಾರ್ಥಕವಾಗುತ್ತವೆ. ಏಳುದಿವಸಗಳ ಕಾಲ ಕಷ್ಟವಾದರೂ ಕೂಡ ತಪೋರೂಪದಲ್ಲಿ ಈ ಪುರಶ್ಚರಣ ಪದ್ಧತಿಯನ್ನು ಮಾಡಿದರೆ ಅತ್ಯಂತಿಕವಾದ ಫಲಭಾಗಿಯಾಗುವುದರಲ್ಲಿ ಸಂಶಯವಿಲ್ಲ. ಮತ್ತು ಪ್ರತಿಯೊಂದು ಶ್ಲೋಕಗಳನ್ನು ಪಠಿಸಿದಾಗ ಶ್ರೀ ಮುಖ್ಯಪ್ರಾಣದೇವರಿಗೆ ತರ್ಪಣವನ್ನು ಕೊಡಬೇಕು. ಅದನ್ನು ಶುದ್ಧವಾದ ಜೇನುತುಪ್ಪದಲ್ಲಿಯೇ ಕೊಡಬೇಕು. ಅದು ಸಿಗದಿದ್ದಾಗ ಶುದ್ಧವಾದ ತುಪ್ಪ ಮೊದಲಾದವುಗಳಿಂದಲೂ ತರ್ಪಣವನ್ನು ನೀಡಬೇಕು.

೨. ಮಧ್ವವಿಜಯ ಪಾರಾಯಣವನ್ನು ವಿಜಯದಶಮಿಯ ದಿವಸ ಸಂಪೂರ್ಣವಾಗಿ ಮಾಡಬೇಕು. ಅಥವಾ ಪ್ರತಿಪತ್ ದಿವಸದಿಂದ ವಿಜಯದಶಮಿಯ ತನಕ ನಿತ್ಯವೂ ಯಥಾಶಕ್ತಿ ಪಾರಾಯಣ ಮಾಡಿ, ವಿಜಯದಶಮಿಯಂದು ಸಮರ್ಪಣೆ ಮಾಡಬೇಕು. ಶ್ರೀಮಧ್ವಾಚಾರ್ಯರ ಅನುಗ್ರಹವಾದರೆ, ಎಲ್ಲ ಸಂಪತ್ತುಗಳು ಪ್ರಾಪ್ತವಾಗುತ್ತವೆ. ಇರುವಷ್ಟರಲ್ಲಿ ನೆಮ್ಮದಿಯ ಬದುಕನ್ನು ಕಾಣಲು ಸಾಧ್ಯವಾಗುತ್ತದೆ. ಶ್ರೀಮಧ್ವಾಚಾರ್ಯರ ಅನುಗ್ರಹವು ಇಲ್ಲದಿದ್ದರೆ ಇರುವ ಸಂಪತ್ತೆಲ್ಲವೂ ವ್ಯರ್ಥ. ಬೇರೆ ಯಾವುದೇ ಮಾರ್ಗದಿಂದಲೂ ನೆಮ್ಮದಿಯು ದೊರಕುವುದಿಲ್ಲ. ಜೀವನದಲ್ಲಿ ಶ್ರೀಮಧ್ವಾಚಾರ್ಯರ ಅನುಗ್ರಹವೇ ಪರಮಮುಖ್ಯವಾದದ್ದು. ಅದಕ್ಕಿಂತ ಮಿಗಿಲಾದದ್ದು ಮತ್ತೊಂದಿಲ್ಲ. ನವರಾತ್ರಿಯ ಈ ಪರ್ವಕಾಲಗಳಲ್ಲಿ ಶ್ರೀಮಧ್ವಾಚಾರ್ಯರ ಅನುಗ್ರಹವನ್ನೇ ಮುಖ್ಯವಾಗಿ ಬಯಸಬೇಕು. ಉಳಿದ ಕಾಮನೆಗಳನ್ನೆಲ್ಲಾ ಗೌಣವನ್ನಾಗಿ ಮಾಡಿಕೊಳ್ಳಬೇಕು.

೩. ದುರ್ಗಾದೇವಿಯ ಮೇಲೆ ಶ್ರೀಮಧ್ವಾಚಾರ್ಯರಿಗೆ ಅತ್ಯಂತ ಭಕ್ತಿಯು ಇರುತ್ತದೆ. ಆದ್ದರಿಂದಲೇ ದುರ್ಗಾಕ್ಷೇತ್ರವಾದ ಪಾಜಕದಲ್ಲಿಯೇ ಅವತಾರವನ್ನು ಮಾಡಿರುತ್ತಾರೆ. ಮತ್ತು ದುರ್ಗೆಯು ಅವತಾರವೆತ್ತಿದ ನವರಾತ್ರಿಯಲ್ಲಿಯೇ ತಾವೂ ಸಹ ಅವತಾರವನ್ನು ಮಾಡಿರುತ್ತಾರೆ. ದುರ್ಗೆಯ ಪ್ರಾದುರ್ಭಾವದ

ಮರುದಿವಸ ಅವತಾರವನ್ನು ಮಾಡಿರುವುದರಿಂದ ತಾವು ದುರ್ಗಾದೇವಿಯ ಮಗು ಎಂಬುದನ್ನೂ ಕೂಡ ಇದರಿಂದ ತಿಳಿಸಿದ್ದಾರೆ. ಆದ್ದರಿಂದ ದುರ್ಗಾದೇವಿಯ ಆರಾಧನೆಯ ಜೊತೆಯಲ್ಲಿಯೇ ಶ್ರೀಮಧ್ವಾಚಾರ್ಯರ ಆರಾಧನೆಯನ್ನು ಮಾಡತಕ್ಕದ್ದು. ಶ್ರೀಮಧ್ವಾಚಾರ್ಯರ ಆರಾಧನೆಯ ಭರದಲ್ಲಿ ದುರ್ಗೆಯನ್ನು ಮತ್ತು ದುರ್ಗಾಪತಿಯಾದ ನರಸಿಂಹದೇವರನ್ನು ಸರ್ವಥಾ ಮರೆಯಬಾರದು. ನಿರಂತರ ನರಸಿಂಹದೇವರ ಹಾಗೂ ದುರ್ಗಾದೇವಿಯ ಆರಾಧನೆಯನ್ನು ಮಾಡುವ ಮೂಲಕ ಶ್ರೀಮಧ್ವಾಚಾರ್ಯರ ಆರಾಧನೆಯನ್ನು ಮಾಡಿ ಅವರ ಸಂಪೂರ್ಣ ಅನುಗ್ರಹಕ್ಕೆ ಪಾತ್ರರಾಗಬೇಕು.

೪. ವಿಜಯದಶಮಿಯ ದಿವಸ ಹೋಮವನ್ನು ಮಾಡುವುದಿದ್ದರೆ, ಅಥವಾ ಮಾಡದಿದ್ದರೂ ಕೂಡ, ಅನ್ನದಾನವನ್ನು ಮಾಡಬೇಕು. ದಂಪತಿಗಳನ್ನು ಕರೆಸಿ ಯಥಾಶಕ್ತಿ ದಾನವನ್ನು ನೀಡಿ ಊಟೋಪಚಾರಗಳನ್ನು ನೀಡಬೇಕು. ಹೀಗೆ ಅನ್ನದಾನವನ್ನು ಮಾಡುವುದರಿಂದಲೇ ಹಬ್ಬವು ಪರಿಪೂರ್ಣವಾಗುತ್ತದೆ.

## ಅಮಾಯುಕ್ತವಾದ ಪಾಡ್ಯದಂದು ನವರಾತ್ರಿ ಪ್ರಾರಂಭ ಮಾಡಬಾರದು

ಅಮಾಯುಕ್ತಾ ನ ಕರ್ತವ್ಯಾ ಪ್ರತಿಪತ್‌ಪೂಜನೀಯಽಮಾ
ಮೂಹೂರ್ತಮಾತ್ರಕರ್ತವ್ಯಾ ದ್ವಿತೀಯಾದಿಗುಣಾನ್ವಿತಾ
ಆದ್ಯಃ ಷೋಡಶನಾರೀಸ್ತು ಲಬ್ಧಾಯ ಕುರುತೇ ನರಃ
ಕಲಶಸ್ಥಾಪನೇ ತತ್ರ ಹ್ಯನಿಷ್ಟೇ ಜಾಯತೇ ಧ್ರುವಂ ॥ - (ದೇವೀ ಪುರಾಣ)

ಅಮಾವಾಸ್ಯೆಯಿಂದ ಕೂಡಿದ ಪಾಡ್ಯದಂದು ನನ್ನ ಪೂಜೆಯನ್ನು ಮಾಡಬಾರದು. ದ್ವಿತೀಯಾ ತಿಥಿಯಿಂದ ಕೂಡಿದ ಪಾಡ್ಯದಂದೇ, ಅಥವಾ ಶುದ್ಧ ಪಾಡ್ಯದಂದು ನನ್ನ ಪೂಜೆಯನ್ನು ಮಾಡಬೇಕು. ಯಾವ ಮನುಷ್ಯನು ಅಮಾವಾಸ್ಯೆಯಿಂದ ಕೂಡಿದ ಪ್ರತಿಪತ್ ತಿಥಿಯಲ್ಲಿ ಕಲಶಸ್ಥಾಪನೆಯನ್ನು ಮಾಡುತ್ತಾನೋ ಅವನು ಅನಿಷ್ಟವನ್ನೇ ಹೊಂದುತ್ತಾನೆ.

ಪ್ರತಿಯೊಂದಕ್ಕೂ ತಿಥಿಯೇ ಮುಖ್ಯವೆಂದು ಹೇಳುವ ವಚನ ಹೀಗಿದೆ -

ತಿಥಿಃಶರೀರಂ ತಿಥಿರೇವ ಕಾರಣಂ ತಿಥಿಃಪ್ರಮಾಣಂ ತಿಥಿರೇವ ಸಾಧನಮ್

ಆದ್ದರಿಂದ ತಿಥಿಯು ಅತ್ಯಂತ ಮುಖ್ಯವಾಗುತ್ತದೆ. ಅಮಾವಾಸ್ಯೆಯಿಂದ ಪ್ರತಿಪತ್ ತಿಥಿಯು ಸಂಪೂರ್ಣವಾಗಿ ನಿಷಿದ್ಧವಾಗಿದೆ ಎಂಬುದನ್ನು ಅನೇಕ ಗ್ರಂಥಗಳು ಸ್ಪಷ್ಟಪಡಿಸುತ್ತದೆ. ಆದ್ದರಿಂದ ಯಾವುದೇ ಕಾರಣಕ್ಕೂ ಅಮಾವಾಸ್ಯೆಯಿಂದ ಕೂಡಿದ ಪ್ರತಿಪತ್ ತಿಥಿಯನ್ನು ದೀಪಾವಳಿ ಆಚರಣೆಗೆ ಪರಿತ್ಯಾಗ ಮಾಡತಕ್ಕದ್ದು.

# ನವರಾತ್ರಿಯ ಆರಂಭದಲ್ಲಿ ಅಶೋಕವೃಕ್ಷವನ್ನು ಪೂಜಿಸಬೇಕು

**॥ ಶ್ರೀ ಕೃಷ್ಣ ಉವಾಚ ॥**

ಆಶ್ವಯುಚ್ಛುಕ್ಲಪಕ್ಷಸ್ಯ ಪ್ರಥಮೇಽಹ್ನಿ ದಿನೋದಯೇ ।
ಅಶೋಕಂ ಪೂಜಯೇದ್-ವೃಕ್ಷಂ ಪ್ರರೂಢಶುಭಪಲ್ಲವಂ ॥೧॥

ಶ್ರೀಕೃಷ್ಣನು ಹೇಳುತ್ತಾನೆ - ಎಲೈ ಧರ್ಮರಾಜನೇ ! ಆಶ್ವಯುಜ ಶುಕ್ಲ ಪ್ರತಿಪತ್ತಿನಲ್ಲಿ ಸೂರ್ಯೋದಯವಾದ ಮೇಲೆ ಸೊಗಸಾದ ಚಿಗುರುಗಳಿಂದ ಅಲಂಕೃತವಾದ ಅಶೋಕವೃಕ್ಷವನ್ನು ಪೂಜಿಸಬೇಕು.

ವಿರೂಢೈಃ ಸಪ್ತಧಾನ್ಯೈಶ್ಚ ಗುಣಕೈರ್ಮೋದಕೈಃ ಶುಭೈಃ ।
ಫಲೈಃ ಕಾಲೋದ್ಭವೈರ್ದಿವ್ಯೈರ್ನಾಲಿಕೇರೈಃ ಸದಾಡಿಮೈಃ ॥೨॥
ಪುಷ್ಪಧೂಪಾದಿನಾ ತದ್ವತ್ಪೂಜಯೇತ್ತದ್ದಿನೇಽನಘ ।
ಅಶೋಕಂ ಪಾಂಡವಶ್ರೇಷ್ಠ ಶೋಕಂ ನಾಪ್ನೋತಿ ಕುತ್ರಚಿತ್ ॥೩॥

ಸಪ್ತಧಾನ್ಯಗಳು, ಮೋದಕ, ಆ ಕಾಲದಲ್ಲಿ ದೊರೆಯುವ ಫಲಗಳು, ದಿವ್ಯವಾದ ನಾರಿಕೇಳ, ದಾಳಿಂಬೆ, ಈ ಫಲಗಳು ಮತ್ತು ಪುಷ್ಪ, ಧೂಪ, ಮೊದಲಾದವುಗಳನ್ನು ಸಮರ್ಪಿಸಿ ಪೂಜಿಸುವುದರಿಂದ ಪುರುಷನಿಗೆ ಯಾವ ವಿಷಯದಲ್ಲೂ ಶೋಕಪ್ರಾಪ್ತಿಯಾಗುವುದಿಲ್ಲ.

## ಅಶೋಕವ್ರತ ವಿಧಾನ

ಪಿತೃಭ್ರಾತೃಪತಿಶ್ವಶ್ರೂಶ್ವಶುರಾಣಾಂ ತಥೈವ ಚ ।
ಅಶೋಕ ಶೋಕಶಮನೋ ಭವ ಸರ್ವತ್ರ ನಃ ಕುಲೇ ॥೪॥
ಇತ್ಯುಚ್ಚಾರ್ಯ ತತೋ ದದ್ಯಾದರ್ಘ್ಯಂ ಶ್ರದ್ಧಾಸಮನ್ವಿತಮ್ ।
ಪತಾಕಾಭಿರಲಂಕೃತ್ಯ ಪ್ರಚ್ಛಾದ್ಯ ಶುಭವಾಸಸಾ ॥೫॥

ಎಲೈ ಅಶೋಕನೇ ! ತಂದೆ, ಅಣ್ಣ, ಮಾವ, ಅತ್ತೆ ಇವರುಗಳಿಗೂ, ಮತ್ತು ನಮ್ಮ ಕುಲದವರಿಗೂ ದುಃಖದಮನ ಮಾಡು ಎಂಬ ಅರ್ಥವುಳ್ಳ ''ಪಿತೃಭ್ರಾತೃಪತಿ ಶ್ವಶ್ರೂಶ್ವಶುರಾಣಾಂ ತಥೈವ ಚ। ಅಶೋಕಶೋಕಶಮನೋ ಭವ ಸರ್ವತ್ರನಃ ಕುಲೇ॥'' ಈ ಮಂತ್ರವನ್ನು ಹೇಳಿ ಶ್ರದ್ಧೆಯಿಂದ ಅರ್ಘ್ಯಪ್ರದಾನ ಮಾಡಿ ಪತಾಕೆಗಳಿಂದಲೂ ವಸ್ತ್ರಗಳಿಂದಲೂ ಆ ವೃಕ್ಷವನ್ನು ಅಲಂಕರಿಸಬೇಕು.

## ಪತಿ-ಪತ್ನಿಯರ ಅನುಬಂಧ

ದಮಯಂತೀ ಯಥಾ ಸ್ವಾಹಾ ಯಥಾ ವೇದವತೀ ಸತೀ ।
ತಥಾಶೋಕವ್ರತಾದಸ್ಮಾಜ್ಜಾಯತೇ ಪತಿವಲ್ಲಭಾ ॥೬॥

ಈ ಅಶೋಕ ವ್ರತಾನುಷ್ಠಾನ ಮಾಡಿದ ಸ್ತ್ರೀಯು ದಮಯಂತೀ, ಸ್ವಾಹಾ ಮತ್ತು ವೇದವತೀ, ಇವರುಗಳಂತೆ ಪತಿಗೆ ಅತ್ಯಂತ ಪ್ರೀತ್ಯಾಸ್ಪದಳಾಗುವಳು.

## ಅಶೋಕವ್ರತ ಸೀತೆಗೆ ಬಹಳ ಇಷ್ಟ

ವನೇ ವ್ರಜಂತ್ಯಾ ಸದ್ಧರ್ಮಃ ಸೀತಯಾ ಸಂಪ್ರದರ್ಶಿತಃ ।
ದೃಷ್ಟ್ವಾsಶೋಕಂ ವನೇ ಪಾರ್ಥ ಪಲ್ಲವಾಲಂಕೃತಾಂಬರಮ್ ॥೭॥

ಪೂರ್ವಕಾಲದಲ್ಲಿ ಸೀತಾದೇವಿಯು ಕಾಡಿನಲ್ಲಿ ಹೋಗುತ್ತಿರುವಾಗ ಪಲ್ಲವಾಲಂಕೃತವಾದ ಅಶೋಕವೃಕ್ಷವನ್ನು ನೋಡಿ ಅಲ್ಲಿಯೇ ಈ ವ್ರತವನ್ನಾಚರಿಸಿ ಈ ಸದ್ಧರ್ಮವನ್ನು ಪ್ರಸಿದ್ಧಿಗೆ ತಂದಳು.

ಕೃತ್ವಾ ಸಮೀಪೇ ಭರ್ತಾರಂ ದೇವರಂ ಚ ತಿಲಾಕ್ಷತೈಃ ।
ದೀಪಾಲಂಕೃತ ನೈವೇದ್ಯಧೂಪಸೂತ್ರಫಲಾರ್ಚನೈಃ ॥೮॥

ಯುಧಿಷ್ಠಿರನೇ ! ಮೈದುನನಾದ ಲಕ್ಷ್ಮಣನ ಜೊತೆ ಇರುವ ಪತಿಯನ್ನೂ ಸಮೀಪದಲ್ಲಿರಿಸಿಕೊಂಡು ತಿಲಾಕ್ಷತ ಧೂಪದೀಪ ನೈವೇದ್ಯ ಶುಭಫಲಾದಿಗಳಿಂದ ಅಶೋಕವೃಕ್ಷವನ್ನು ಸೀತೆಯು ಅರ್ಚಿಸಿದಳು.

ಅರ್ಚಯಿತ್ವಾ ಹ್ಯರ್ಥಿತೋऽಸೌ ರಕ್ತಾಶೋಕೋ ಯುಧಿಷ್ಠಿರ ।
ಮೈಥಿಲ್ಯಾ ಪ್ರಾಂಜಲಿರ್ಭೂತ್ವಾ ಶೃಣ್ವತೋ ರಾಘವಸ್ಯ ಚ ॥೯॥
ಚಿರಂ ಜೀವತು ಮೇ ವೃದ್ಧಃ ಶ್ವಶುರಃ ಕೋಸಲೇಶ್ವರಃ ।
ಭರ್ತಾ ಮೇ ದೇವರಾಶ್ಚೈವ ಜೀವಂತು ಭರತಾದಯಃ ।
ಕೌಸಲ್ಯಾಮಪಿ ಜೀವಂತೀಂ ಪಶ್ಯೇಯಮಿತಿ ಮೈಥಿಲೀ ॥೧೦॥

ಮತ್ತು ಬದ್ಧಾಂಜಲಿಯಾಗಿ ಪ್ರಾರ್ಥಿಸಿದಳು - ಶ್ರೀರಾಮನು ಕೇಳುವ ಹಾಗೆ "ವೃದ್ಧನೂ ಕೋಸಲೇಶ್ವರನೂ ಆದ ನನ್ನ ಮಾವನು ಚಿರಂಜೀವಿಯಾಗಲಿ ಮತ್ತು ನನ್ನ ಜೀವಿತೇಶ್ವರನಾದ ಪತಿಯು, ಭರತಾದಿ ಮೈದುನರೆಲ್ಲರೂ ಚಿರಂಜೀವಿಗಳಾಗಲಿ ಜೀವಸಹಿತಳಾದ ಕೌಸಲ್ಯೆಯನ್ನು ನೋಡುವ ಭಾಗ್ಯವು ನನ್ನದಾಗಲಿ".

ಯಯಾಚೇ ತಂ ಮಹಾಭಾಗಾ ದ್ರುಮಂ ಸತ್ಯೋಪಯಾಚನಮ್ ।
ಪ್ರದಕ್ಷಿಣಮುಪಾವೃತ್ಯ ತತಸ್ತೇ ಪ್ರಯಯುಃ ಪುನಃ ॥೧೧॥

ಎಂದು ಪ್ರಾರ್ಥನೆ ಮಾಡಿ ಆ ರಕ್ತಾಶೋಕವನ್ನು ಪ್ರದಕ್ಷಿಣೆ ಮಾಡಿ ಬಂದು, ಪತಿ ಮೈದುನ ಇವರ ಸಮೇತಳಾಗಿ ಮುಂದಕ್ಕೆ ಪ್ರಯಾಣ ಮಾಡಿದಳು.

## ಎಲ್ಲಾ ನಾರಿಯರು ಪೂಜೆ ಮಾಡಬೇಕು

ಏವಮನ್ಯಾಪಿ ಯಾ ನಾರೀ ಪೂಜಯೇದ್ಭುವಿ ತಂ ನಗಮ್ ।
ತಿಲತಂಡುಲಸಂಮಿಶ್ರೈರ್ಯವಗೋಧೂಮಸರ್ಷಪೈಃ ॥೧೨॥

ಪತಿವ್ರತೆಯಾದ ಸೀತಾಮಾತೆಯು ಈ ರೀತಿ ಭೂಲೋಕದಲ್ಲಿ ಈ ರಕ್ತಾಶೋಕವೃಕ್ಷವನ್ನು ತಿಲಮಿಶ್ರ ತಂಡುಲಗಳಿಂದಲೂ ಮತ್ತು ಯವ ಗೋಧುವೆ ಸಾಸುವೆ ಇವುಗಳಿಂದಲೂ ಪೂಜಿಸಿದಳು. ಆದರಂತೆ ಎಲ್ಲಾ ಸ್ತ್ರೀಯರೂ ಅಶೋಕವೃಕ್ಷ ಪೂಜೆಯನ್ನು ಮಾಡಬೇಕು.

ಕ್ಷಮಾಪ್ಯ ವಂದಯೇನ್ಮೂಲಂ ಪಾದಪಂ ರಕ್ತಪಲ್ಲವಂ ।
ಮಂತ್ರೇಣಾನೇನ ಕೌಂತೇಯ ಪ್ರಣಮ್ಯ ಸ್ತ್ರೀ ಪತಿವ್ರತಾ ॥೧೩॥
ಮಹಾವೃಕ್ಷ ಮಹಾಶಾಖ ಮಕರಧ್ವಜಮಂದಿರ ।
ಪ್ರಾರ್ಥಯೇ ತ್ವಾಂ ಮಹಾಭಾಗ ವನೋಪವನಭೂಷಣ ॥೧೪॥

ಕ್ಷಮಾಪ್ರಾರ್ಥನಾಪೂರ್ವಕವಾಗಿ ವೃಕ್ಷಮೂಲವನ್ನು ವಂದಿಸಿ " ದೊಡ್ಡ ಕೊಂಬೆಗಳುಳ್ಳ ಮಹಾವೃಕ್ಷವೇ ! ಮನ್ಮಥನ ಆವಾಸವೇ ! ಉದ್ಯಾನಕ್ಕೆ ಆಭರಣಪ್ರಾಯವಾಗಿದ್ದೀಯೆ; ನಿನ್ನನ್ನು ಪ್ರಾರ್ಥಿಸುತ್ತೇನೆ'' ಎಂಬ ಅರ್ಥವುಳ್ಳ

ಮಹಾವೃಕ್ಷ ಮಹಾಶಾಖ ಮಕರಧ್ವಜಮಂದಿರ ।
ಪ್ರಾರ್ಥಯೇ ತ್ವಾಂ ಮಹಾಭಾಗ ವನೋಪವನಭೂಷಣ

ಈ ಮಂತ್ರವನ್ನು ಹೇಳಿ ಪ್ರಾರ್ಥನೆ ಮಾಡಬೇಕು.

## ಶೋಕರಹಿತರಾಗಿರಿ

ಏವಮಾಭಾಷ್ಯ ತಂ ವೃಕ್ಷಂ ದತ್ವಾ ವಿಪ್ರಾಯ ದಕ್ಷಿಣಾಂ ।
ಸಖೀಭಿಃ ಸಹಿತಾ ಸಾಧ್ವೀ ತತಃ ಸ್ವಭವನಂ ವ್ರಜೇತ್ ॥೧೫॥

ಬಳಿಕ ಆ ಸಾಧ್ವಿಯು ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ಸಖೀ ಸಮೇತಳಾಗಿ ಸ್ವಗೃಹಕ್ಕೆ ಹೋಗಬೇಕು.

ಯಾಃ ಶೋಕನಾಶನಮಶೋಕತರುಂ ತರುಣ್ಯಃ ।
ಸಂಪೂಜಯಂತಿ ಕುಸುಮಾಕ್ಷತಧೂಪದೀಪೈಃ ।
ತಾಃ ಪ್ರಾಪ್ಯ ಸೌಖ್ಯಮತುಲಂ ಭುವಿ ಭರ್ತೃಜಾತಂ ।
ಗೌರೀಪದಂ ಪ್ರಮುದಿತಾಃ ಪುನರಾಪ್ನುವಂತಿ ॥೧೬॥

(ಭ.ಮ.ಪು.ಉ.ಪ. ೯ ಅಧ್ಯಾಯ)

ತರುಣಿಯರಾದ ಯಾವ ನಾರಿಯರು ಶೋಕನಾಶಕವಾದ ಈ ಅಶೋಕವೃಕ್ಷವನ್ನು ಪುಷ್ಪಾಕ್ಷತೆ ಧೂಪದೀಪಗಳಿಂದ ಪೂಜಿಸುವರೋ ಅವರು ಇಹದಲ್ಲಿ ಸಮಸ್ತಸುಖಗಳ ಜೊತೆ ಪತಿಸೌಖ್ಯವನ್ನು ಹೊಂದಿ ಪರದಲ್ಲಿ ಗೌರೀಸಾನ್ನಿಧ್ಯವನ್ನು ಪಡೆಯುವರು.

## ಅಶೋಕವೃಕ್ಷದ ಬಗ್ಗೆ ತಿಳಿಯಿರಿ

**ಟಿಪ್ಪಣಿ** - ವರ್ಷದ ಕೆಲವು ಪ್ರಧಾನ ದಿವಸಗಳಲ್ಲಿ ಕೆಲವು ಪ್ರಧಾನ ವೃಕ್ಷಗಳ ಪೂಜೆಯನ್ನು ಶಾಸ್ತ್ರವು ಹೇಳುತ್ತದೆ. ಆಶ್ವೀನ ಮಾಸದ ಶುಕ್ಲಪಕ್ಷದ ಪ್ರತಿಪತ್ ದಿವಸ ಅಶೋಕವೃಕ್ಷದ ಪೂಜೆಯನ್ನು ಭವಿಷ್ಯಪುರಾಣವು ಹೇಳುತ್ತದೆ. ಮನೆಯಲ್ಲಿ ತನ್ನಷ್ಟಕ್ಕೆ ದುಃಖಪಡುವ ಸ್ತ್ರೀಯರಿಗೆ ಈ ಪೂಜೆಯಿಂದ ಪರಿಹಾರ ಮಾರ್ಗಗಳು ಕಂಡು ಆ ದುಃಖಗಳೆಲ್ಲವೂ ಪರಿಹಾರವಾಗುತ್ತದೆ. ಅಶೋಕವೃಕ್ಷಕ್ಕೆ ಎಲ್ಲಿಲ್ಲದ ಮಹತ್ವವಿದೆ. ಮುಖ್ಯವಾಗಿ ಸೀತಾದೇವಿಯು ಶ್ರೀರಾಮಚಂದ್ರನ (ಆಪಾತತಃ) ವಿಯೋಗದಲ್ಲಿದ್ದಾಗ ಅಶೋಕವೃಕ್ಷದಡಿಯಲ್ಲಿಯೇ ಕುಳಿತಿದ್ದಳು. ಅಶೋಕವನ ಎಂಬುದೇ ಆ ಉದ್ಯಾನವನದ ಹೆಸರಾಗಿತ್ತು. ಅಶೋಕವೃಕ್ಷದ ಸೇವೆಯಿಂದಲೇ ತನ್ನ ದುಃಖಗಳನ್ನೆಲ್ಲವೂ ಪರಿಹಾರ ಮಾಡಿಕೊಂಡು ತನ್ನ ಜೀವನವನ್ನು ಹಸನ್ಮುಖಿಯನ್ನಾಗಿ ಮಾಡಿಕೊಂಡಳು. ಲೋಕಮಾತೆಯಾದ ಲಕ್ಷ್ಮೀದೇವಿಗೆ ಲವಲೇಶವೂ ದುಃಖವಿಲ್ಲದಿದ್ದರೂ ಸ್ತ್ರೀಯರು ಇಂಥ ಸಂದರ್ಭದಲ್ಲಿ ಏನು ಮಾಡಬೇಕೆಂಬುದನ್ನು ತಿಳಿಸಿಕೊಟ್ಟಳು. ಮತ್ತು ವನವಾಸ ಸಂದರ್ಭದಲ್ಲಿಯೂ ಅಶೋಕವ್ರತವನ್ನು ಮಾಡಿದ್ದಳೆಂದು ಇದೇ ಭವಿಷ್ಯಪುರಾಣವು ಹೇಳುತ್ತಿದೆ. ಆದ್ದರಿಂದಲೇ ಮುಂದೆ ರಾವಣನು ಕರೆದುಕೊಂಡು ಹೋದಾಗಲೂ ಅಶೋಕವ್ರತವನ್ನೇ ಒಂದು ವರ್ಷಗಳ ಕಾಲ ಆಚರಿಸಿದಳು.

ಈ ಅಶೋಕವೃಕ್ಷವು ಅತ್ಯಂತ ಸುಂದರವಾದ ಮರ. ಗೊಂಚಲು ಗೊಂಚಲು ಹೂವುಗಳ ನೋಡುವಿಕೆಯಿಂದಲೇ ಮನಸ್ಸಿಗೆ ಅತ್ಯಂತ ಮುದವಾಗುತ್ತದೆ. ಈ ವೃಕ್ಷವನ್ನು ಅತ್ಯಂತ ಪವಿತ್ರವೆಂದು ಶಾಸ್ತ್ರಗಳು ಉಲ್ಲೇಖಿಸುತ್ತವೆ. ಸಂಜೆಯ ವೇಳೆ ಈ ಮರದ ಹೂವುಗಳು ಅತ್ಯಂತ ಪರಿಮಳಭರಿತವಾಗಿರುತ್ತವೆ.

ಮನ್ಮಥನು ಧರಿಸಿದ ಐದು ಕುಸುಮಗಳಲ್ಲಿ ಅಶೋಕಪುಷ್ಪವು ಪ್ರಧಾನವಾದದ್ದು. ಸ್ತ್ರೀಪುರುಷರಲ್ಲಿ ಅನುರಾಗ ಮೂಡಿಸುವ ದಿವ್ಯಶಕ್ತಿಯನ್ನು ಹೊಂದಿದೆ. ಆದ್ದರಿಂದಲೇ ವಿಯೋಗವಾದಾಗ ಈ ಅಶೋಕಪುಷ್ಪದಿಂದ ಭಗವಂತನಿಗೆ ಅರ್ಚನೆ ಮಾಡಬೇಕು.

ಅಶೋಕಪುಷ್ಪದಲ್ಲಿ ಮನ್ಮಥನ ಸಾನ್ನಿಧ್ಯವಿದೆ. ಇಂಥ ಕುಸುಮದಿಂದ ಅರ್ಚನೆ ಮಾಡಿದಾಗ ಪತಿ-ಪತ್ನಿಯರಿಗೆ ಎಂದೂ ಕೂಡ ವಿಯೋಗವಾಗಲು ಸಾಧ್ಯವಿಲ್ಲ.

ಚರಕಸಂಹಿತೆಯು ಅಶೋಕವೃಕ್ಷದ ಔಷಧಿಯ ಅದ್ಭುತಗುಣಗಳನ್ನು ಉಲ್ಲೇಖಿಸಿದೆ. ಈ ಮರದ ತೊಗಟೆ, ಹೂವು, ಬೀಜ ಪ್ರತಿಯೊಂದೂ ಕೂಡ ಔಷಧ ಗುಣಗಳನ್ನು ಹೊಂದಿದೆ. ಇದರಿಂದ ತಯಾರು ಮಾಡಲ್ಪಟ್ಟ ಅಶೋಕಾರಿಷ್ಟ, ಅಶೋಕಘೃತಗಳು ಪ್ರಸಿದ್ಧವಾಗಿವೆ.

* * * * *

* ನವರಾತ್ರಿಯ ಶುಭಪರ್ವಕಾಲದಲ್ಲಿ ನಮ್ಮ ಸಂಸ್ಥೆಯಿಂದ ಮುದ್ರಿತವಾದ ದೇವರಪೂಜೆಯ ಪುಸ್ತಕವನ್ನು ನೋಡಿಕೊಂಡು ಅದರ ಪ್ರಕಾರ ಪೂಜೆಯನ್ನು ಆಚರಿಸಬೇಕು. ದಿನನಿತ್ಯ ಮಾಡುವ ಪೂಜೆಗಿಂತಲೂ ಹೆಚ್ಚು ಸಮಯವನ್ನು ಅದಕ್ಕಾಗಿ ವಿನಿಯೋಗಿಸಬೇಕು.
* ನವರಾತ್ರಿಗಳಲ್ಲಿ ನಿತ್ಯವೂ ದುರ್ಗಾಪೂಜೆಯನ್ನು ಮಾಡಬೇಕು. ಸಾಧ್ಯವಾಗದಿದ್ದರೆ, ದುರ್ಗಾಷ್ಟಮಿ ದಿವಸವಾದರೂ ಕೂಡ ದುರ್ಗೆಯ ಆರಾಧನೆಯನ್ನು ಮಾಡಬೇಕು. ಅದಕ್ಕಾಗಿ ದುರ್ಗಾಷ್ಟಮಿ ಪುಸ್ತಕದ ಉಪಯೋಗವನ್ನು ನಿತ್ಯವೂ ಮಾಡಿಕೊಳ್ಳಬೇಕು.
* ನವರಾತ್ರಿಯ ಮೊದಲ ದಿವಸ ಕುಮಾರಿಪೂಜೆ ಹಾಗೂ ಅಂಕುರಘಟದ ಪೂಜೆಯನ್ನು ಯಾರು ಮಾಡಲು ಬಯಸುತ್ತಾರೋ, ಅವರು ಇಲ್ಲಿ ಮುಂದೆ ಹೇಳಿದ ಕ್ರಮವನ್ನು ಅನುಷ್ಠಾನ ಮಾಡಬೇಕು.
* ಕುಲದೇವರ ಪೂಜೆಯನ್ನು ನವರಾತ್ರಿಯಲ್ಲಿ ಆಚರಿಸುವ ಪದ್ಧತಿಯು ಇದೆ. ಅವರವರ ಕುಲಸ್ವಾಮಿಯನ್ನು ಸ್ಮರಿಸಿ, ಮೊದಲ ದಿವಸವೇ ಪೂಜೆಯನ್ನು ಪ್ರಾರಂಭ ಮಾಡಬೇಕು.
* ನವರಾತ್ರಿಯಲ್ಲಿ ವೇಂಕಟೇಶಕಲ್ಯಾಣಕ್ಕೆ ಹೆಚ್ಚಿನ ಮಹತ್ವವಿದೆ. ಆದ್ದರಿಂದ ತಿರುಪತಿ ವೇಂಕಟಶದೇವರು ಯಾರಿಗೆ ಕುಲಸ್ವಾಮಿಯಾಗಿರುವನೋ, ಅವರು ನಿತ್ಯವೂ ಕೂಡ ಪೂಜೆಯನ್ನು ತಿರುಪತಿ ವೇಂಕಟೇಶದೇವರಿಗೆ ಮಾಡಬೇಕು.
* ಈ ಎಲ್ಲ ಕ್ರಮಗಳು ಸ್ವತಃ ಪೂಜಿಸುವವರೇ ತಿಳಿದುಕೊಳ್ಳಲು ಸಾಧ್ಯವಾಗಿರುವುದರಿಂದ ಇಲ್ಲಿ ಪ್ರತ್ಯೇಕವಾಗಿ ನೀಡಿರುವುದಿಲ್ಲ.

* * * *

# ಕುಮಾರಿ ಪೂಜೆ

|| ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ ||

ಶ್ರೀಗುರುಭ್ಯೋ ನಮಃ । ಶ್ರೀ ಪರಮಗುರುಭ್ಯೋ ನಮಃ ||

ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ||

ಸರ್ವದಾ ಸರ್ವಕಾರ್ಯೇಷು ನಾಸ್ತಿ ತೇಷಾಮಮಂಗಲಮ್ ।
ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನೋ ಹರಿಃ ||

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ||

ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ ।
ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ ||

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ ||

ನಮಸ್ತೇ ಪ್ರಾಣೇಶ ಪ್ರಣತವಿಭವಾಯಾವನಿಮಗಾಃ
ನಮಃ ಸ್ವಾಮಿನ್ ರಾಮಪ್ರಿಯತಮ ಹನೂಮನ್ ಗುರುಗುಣ ।
ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟಭಗವನ್
ನಮಃ ಶ್ರೀಮನ್‌ಮಧ್ವ ಪ್ರದಿಶ ಸುದೃಶಂ ನೋ ಜಯ ಜಯ ||

ಮೃತ್ಯುಂಜಯ ನಮಸ್ತುಭ್ಯಂ ಮೃತ್ಯುಂ ಹರ ನಮಾಮ್ಯಹಮ್ ।
ಸರ್ವಮೃತ್ಯುವಿನಾಶಾಯ ಮೃತ್ಯುಂಜಯ ನಮೋ ನಮಃ ||

ದುಷ್ಟಾನಾಂ ವಿಘ್ನಕರ್ತಾ ಸುಚರಿತ ಸುಜನಸ್ತೋಮವಿಘ್ನಾಪಹರ್ತಾ
ತಸ್ಮಾದ್ ವಿಘ್ನಾಧಿಪೋಽಹಂ ಮತ ಇತಿ ಸುಧಿಯಾಂ ಸ್ಪಷ್ಟಮಾಜ್ಞಾಪನಾಯ ।

ಪೌಲಸ್ತ್ಯೇಚ್ಛಾಂತರಾಯಃ ಸುರಮುನಿನಿಕರಾಭೀಷ್ಟಸಂಪ್ರಾಪ್ತ್ಯುಪಾಯಃ
ಶ್ರೇಯೋ ವಿಘ್ನಾಧಿರಾಜಃ ಪ್ರದಿಶತು ಸತತಂ ಭೂರಿಗೌರೀತನೂಜಃ ॥
ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ।
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ ॥

## ಆಚಮನಮ್

ಕೇಶವಾಯ ಸ್ವಾಹಾ । ನಾರಾಯಣಾಯ ಸ್ವಾಹಾ । ಮಾಧವಾಯ ಸ್ವಾಹಾ । ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ । ತ್ರಿವಿಕ್ರಮಾಯ ನಮಃ । ವಾಮನಾಯ ನಮಃ । ಶ್ರೀಧರಾಯ ನಮಃ । ಹೃಷೀಕೇಶಾಯ ನಮಃ । ಪದ್ಮನಾಭಾಯ ನಮಃ । ದಾಮೋದರಾಯ ನಮಃ । ಸಂಕರ್ಷಣಾಯ ನಮಃ । ವಾಸುದೇವಾಯ ನಮಃ । ಪ್ರದ್ಯುಮ್ನಾಯ ನಮಃ । ಅನಿರುದ್ಧಾಯ ನಮಃ । ಪುರುಷೋತ್ತಮಾಯ ನಮಃ । ಅಧೋಕ್ಷಜಾಯ ನಮಃ । ನಾರಸಿಂಹಾಯ ನಮಃ । ಅಚ್ಯುತಾಯ ನಮಃ । ಜನಾರ್ದನಾಯ ನಮಃ । ಉಪೇಂದ್ರಾಯ ನಮಃ । ಹರಯೇ ನಮಃ । ಶ್ರೀ ಕೃಷ್ಣಾಯ ನಮಃ ।

(ಆಚಮನವನ್ನು ಎರಡು ಬಾರಿ ಮಾಡಬೇಕು)

## ಪ್ರಾಣಾಯಾಮ

ಓಂ ಪ್ರಣವಸ್ಯ ಪರಬ್ರಹ್ಮಋಷಿಃ ಪರಮಾತ್ಮಾ ದೇವತಾ ದೈವೀ ಗಾಯತ್ರೀ ಛಂದಃ ಪ್ರಾಣಾಯಾಮೇ ವಿನಿಯೋಗಃ ।

ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಂ ಸತ್ಯಂ । ಓಂ ತತ್ಸವಿತುರ್ವರೇಣ್ಯಮ್ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಓಮಾಪೋಜ್ಯೋಽತಿ ರಸೋಽಮೃತಂ ಬ್ರಹ್ಮ ಭೂರ್ಭುವಸ್ಸ್ವರೋಮ್ ।

## ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ

ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲೀವಾಹನ-ಶಕೇ ಶಾಲೀವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ದಕ್ಷಿಣಾಯನೇ ವರ್ಷಋತೌ ಭಾದ್ರಪಮಾಸೇ ಶುಕ್ಲಪಕ್ಷೇ ಚತುರ್ದಶ್ಯಾಂ ಶುಭತಿಥೌ .... ವಾಸರಯುಕ್ತಾಯಾಂ ಶುಭನಕ್ಷತ್ರ ಶುಭಯೋಗ ಶುಭಕರಣ ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಅಸ್ಮಾಕಂ ಸಹಕುಟುಂಬಾನಾ ಕ್ಷೇಮಸ್ಥೈರ್ಯವಿಜಯವೀರ್ಯಅಭಯ ಆಯುರಾರೋಗ್ಯಐಶ್ವರ್ಯಾಭಿ-ವೃದ್ಧ್ಯರ್ಥಂ, ಸಮಸ್ತದುರಿತೋಪಶಾಂತ್ಯರ್ಥಂ, ಸಮಸ್ತಸನ್ಮಂಗಳಾರ್ಥಂ ಸಮಸ್ತ ಅಭ್ಯುದಯಾರ್ಥಂ ಚ, ಧರ್ಮಾರ್ಥ ಕಾಮಮೋಕ್ಷಚತುರ್ವಿಧಫಲಪುರುಷಾರ್ಥ-ಸಿದ್ಧ್ಯರ್ಥಂ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣ ಪ್ರೇರಣಯಾ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಪ್ರೀತ್ಯರ್ಥಂ ಯಥಾ ಮಮ ಇಹಜನ್ಮನೀ ದುರ್ಗಾಪ್ರೀತಿದ್ವಾರಾ ಸರ್ವಾಪಚ್ಛಾಂತಿಪೂರ್ವಕ-ದೀರ್ಘಾವಿಪುಲಧನಲಕ್ಷ್ಮೀಪುತ್ರಾದ್ಯವಿಚ್ಛಿಪ್ರಸಂತತಿ ಶ್ರೀಲಕ್ಷ್ಮೀಕೀರ್ತಿ ವೃದ್ಧಿಸ್ಥಿರ ಲಕ್ಷ್ಮೀಕೀರ್ತಿಲಾಭ ಶತ್ರು ಪರಾಜಯಸದಭೀಷ್ಟಸಿದ್ಧ್ಯರ್ಥಂ ಶಾರದವನಾತ್ರೇ ಪ್ರತಿಪದಿ ವಿಹಿತಂ ಕಲಶಸ್ಥಾಪನಂ, ದುರ್ಗಾಪೂಜಾಂ, ಕುಮಾರಿಪೂಜಾ, ದೀಪಸ್ಥಾಪನಾದಿ ಅಂಕುರಘಟಂ ಸ್ಥಾಪನಂ ಪೂಜಾದಿ ಕರ್ಮಕರಿಷ್ಯೇ.

## ಅಥ ವ್ರತ ವಿಧಾನಮ್

## ದೀಪ ಹಚ್ಚಬೇಕು

ದೀಪಃ ಪಾಪಹರೋ ನೃಣಾಂ ದೀಪ ಆಪನ್ನಿವಾರಕಃ ।
ದೀಪೋ ವಿಧತ್ತೇ ಸುಕೃತಂ ದೀಪಃ ಸಂಪತ್ಪ್ರದಾಯಕಃ ॥
ದೀಪಜ್ಯೋತಿ ಪರಬ್ರಹ್ಮ ದೀಪಜ್ಯೋತಿಃ ಜನಾರ್ದನಃ ।
ದೀಪೋ ಹರತು ಮೇ ಪಾಪಂ ಸಂಧ್ಯಾದೀಪ ನಮೋಽಸ್ತು ತೇ ॥
ಶುಭಂ ಕುರುಷ್ವ ಕಲ್ಯಾಣಂ ಆರೋಗ್ಯಂ ಸುಖಸಂಪದಮ್ ।
ಮಮ ಬುದ್ಧಿ ಪ್ರಕಾಶಂ ಚ ದೀಪಜ್ಯೋತಿರ್ನಮೋಽಸ್ತು ತೇ ॥

ಭೋ ದೀಪ ಬ್ರಹ್ಮರೂಪಸ್ತ್ವಂ ಕರ್ಮಸಾಕ್ಷಿ ಇಹಾರ್ಹಸಿ ।
ಯಾವತ್ ಕರ್ಮಸಮಾಪ್ತಿಃ ಸ್ಯಾತ್ ತಾವತ್ ತ್ವಂ ಸುಸ್ಥಿರೋ ಭವ ॥
ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ । ಹವ್ಯವಾಡ್ ಜುಹ್ವಾಸ್ಯಃ ॥

## ಘಂಟಾನಾದ ಮಾಡಬೇಕು

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।
ಕುರ್ವೇ ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ॥

## ಭೂತೋಚ್ಚಾಟನೆ ಮಾಡಬೇಕು

ಅಪಸರ್ಪಂತು ಯೇ ಭೂತಾಃ ಯೇ ಭೂತಾಃ ಭುವಿ ಸಂಸ್ಥಿತಾಃ ।
ಯೇ ಭೂತಾಃ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ॥
ಅಪಕ್ರಾಮಂತು ಯೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ ।
ತೇಷಾಮಪ್ಯವಿರೋಧೇನ ಪೂಜಾಕರ್ಮ ಸಮಾರಭೇ ॥

## ಗುರುಗಣಪತಿ ಪೂಜೆ ಮಾಡಬೇಕು

ಪ್ರತಿಯೊಂದು ಪೂಜೆಯ ಪ್ರಾರಂಭದಲ್ಲಿ ಗುರುಗಳಿಗೆ ಹಾಗೂ ಗಣಪತಿಗೆ ಮೊಟ್ಟಮೊದಲು ಪೂಜೆ ಮಾಡಬೇಕು.

ಶ್ರೀಗುರುಭ್ಯೋ ನಮಃ । ಆದಿಗುರುಭ್ಯೋ ನಮಃ । ಮೂಲಗುರುಭ್ಯೋ ನಮಃ। ಪರಮಗುರುಭ್ಯೋ ನಮಃ। ಶ್ರೀವೇದವ್ಯಾಸಾಯ ನಮಃ। ಆಶ್ವಲಾಯನಾ-ಚಾರ್ಯೇಭ್ಯೋ ನಮಃ।

ಬಲಭಾಗದಲ್ಲಿ ಬರೆದ ಶ್ರೀಕಾರದಲ್ಲಿ ಗಂಧಾಕ್ಷತೆ ಪುಷ್ಪಗಳಿಂದ ಗುರುಗಳನ್ನು ಪೂಜಿಸಬೇಕು.

ಅಸ್ಮದ್ ಗುರುಸಮಾರಂಭಾಂ ಟೀಕಾಕೃತ್ಪಾದಮಧ್ಯಗಾಮ್ ।
ಶ್ರೀಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಮ್ ॥
ಆಪಾದಮೌಳಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿಧ್ಯಂತಿ ಚ ಮನೋರಥಾಃ ॥
ಓಂ ಶ್ರೀಗುರುಭ್ಯೋ ನಮಃ ಅನುಜ್ಞಾಂ ದೇಹಿ ।

ಶ್ರೀಕಾರದ ಪಕ್ಕದಲ್ಲಿ ಬರೆದ ಷಟ್ಕೋಣಮಂಡಲದಲ್ಲಿ ಬೆಳ್ಳಿಯ ಗಣಪತಿಯನ್ನಿಟ್ಟು ಪೂಜಿಸಬೇಕು. ಬೆಳ್ಳಿಗಣಪತಿ ಇಲ್ಲದಿದ್ದಲ್ಲಿ ಅಡಿಕೆಬೆಟ್ಟು, ಅರಿಶಿನಕೊಂಬುಗಳಲ್ಲಿ ಗಣಪತಿ ಆವಾಹನೆ ಮಾಡಿ ಪೂಜಿಸಬೇಕು.

ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ ।
ಲಂಬೋದರಶ್ಚ ವಿಕಟೋ ವಿಘ್ನರಾಜೋ ಗಣಾಧಿಪಃ ॥೧॥
ಧೂಮಕೇತುರ್ಗಣಾಧ್ಯಕ್ಷೋ ಫಾಲಚಂದ್ರೋ ಗಜಾನನಃ ।
ದ್ವಾದಶೈತಾನಿ ನಾಮಾನಿ ಯಃ ಪಠೇಚ್ಛೃಣುಯಾದಪಿ ॥೨॥
ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ ।
ಸಂಗ್ರಾಮೇ ಸರ್ವಕಾರ್ಯೇಷು ವಿಘ್ನಸ್ತಸ್ಯ ನ ಜಾಯತೇ ॥೩॥
ಅಭೀಪ್ಸಿತಾರ್ಥಸಿದ್ಧ್ಯರ್ಥಂ ಪೂಜಿತೋ ಯಃ ಸುರೈರಪಿ ।
ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥೪॥

ಗಣಾನಾಂ ತ್ವಾ ಗೃತ್ಸಮದ ಋಷಿಃ । ಜಗತೀಛಂದಃ ಗಣಪತಿರ್ದೇವತಾ । ಗಣಪತ್ಯಾವಾಹನೇ ವಿನಿಯೋಗಃ ॥

ಓಂ ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪಮಶ್ರವಸ್ತಮಮ್ । ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆ ನಃ ಶೃಣ್ವನ್ನೂತಿಭಿಃ ಸೀದ ಸಾದನಮ್ ॥

## ಗಣಪತಿಗೆ ಸಂಕ್ಷೇಪವಾಗಿ ಷೋಡಶೋಪಚಾರ ಪೂಜೆ ಮಾಡಬೇಕು.

ಶ್ರೀಮಹಾಗಣಪತಯೇ ನಮಃ ॥ ಓಂ ಭೂಃ ಗಣಪತಿಮ್ ಆವಾಹಯಾಮಿ। ಓಂ ಭುವಃ ಗಣಪತಿಮ್ ಆವಾಹಯಾಮಿ । ಓಂ ಸ್ವಃ ಗಣಪತಿಮ್ ಆವಾಹಯಾಮಿ । ಓಂ ಭೂರ್ಭುವಃ ಸ್ವಃ ಗಣಪತಿಮ್ ಆವಾಹಯಾಮಿ । ಮಹಾಗಣಪತಯೇ ನಮಃ । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ । ಆವಾಹಯಾಮಿ ಆವಾಹನಂ ಸಮರ್ಪಯಾಮಿ । ಸ್ವಾಗತಂ ಸಮರ್ಪಯಾಮಿ । ಆಸನಂ ಸಮರ್ಪಯಾಮಿ । ಪಾದಯೋಃ ಪಾದ್ಯಂ ಸಮರ್ಪಯಾಮಿ । ಅರ್ಘ್ಯಂ

ಸಮರ್ಪಯಾಮಿ । ಆಚಮನಂ ಸಮರ್ಪಯಾಮಿ । ಮಧುಪರ್ಕಂ ಸಮರ್ಪಯಾಮಿ । ಪುನರಾಚಮನಂ ಸಮರ್ಪಯಾಮಿ । ಸ್ನಾನಂ ಸಮರ್ಪಯಾಮಿ । ವಸ್ತ್ರಂ ಸಮರ್ಪಯಾಮಿ । ಉಪವೀತಂ ಸಮರ್ಪಯಾಮಿ । ಆಭರಣಂ ಸಮರ್ಪಯಾಮಿ । ಗಂಧಂ ಸಮರ್ಪಯಾಮಿ । ಪುಷ್ಪಾಣಿ ಸಮರ್ಪಯಾಮಿ । ಧೂಪಮಾಘ್ರಾಪಯಾಮಿ । ದೀಪಂ ದರ್ಶಯಾಮಿ ।

ಮಹಾಗಣಪತಯೇ ನಮಃ ॥ ನೈವೇದ್ಯಾರ್ಥೇ ಗುಡೋಪಹಾರ-ಮಹಾನೈವೇದ್ಯಂ ನಿವೇದಯಾಮಿ । ತಾಂಬೂಲಂ ಸಮರ್ಪಯಾಮಿ । ನೀರಾಜನಂ ಸಮರ್ಪಯಾಮಿ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ।

ನಿಷುಸೀದೇತಿ ವೈರೂಪೋ ನಭಃಪ್ರಭೇದನ ಋಷಿಃ । ತ್ರಿಷ್ಟುಪ್ ಛಂದಃ । ಗಣಪತಿರ್ದೇವತಾ ಮಂತ್ರಪುಷ್ಪಾರ್ಚನೇ ವಿನಿಯೋಗಃ ।

ಓಂ ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಮ್ । ನ ಋತೇ ತ್ವತ್ ಕ್ರಿಯತೇ ಕಿಂ ಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ ॥

ಮಂತ್ರಪುಷ್ಪಂ ಸಮರ್ಪಯಾಮಿ । ಧ್ಯಾನಾವಾಹನಾದಿಸರ್ವೋಪಚಾರಪೂಜಾಃ ಸಮರ್ಪಯಾಮಿ ॥

ವಕ್ರತುಂಡ ಮಹಾಕಾಯ ಬಾಲಸೂರ್ಯಸಮಪ್ರಭ ।
ಅವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥
ರಕ್ತಾಂಬರೋ ರಕ್ತತನೂ ರಕ್ತಮಾಲ್ಯಾನುಲೇಪನಃ ।
ಮಹೋದರೋ ಗಜಮುಖಃ ಪಾಶದಂತಾಂಕುಶಾಭಯೇ ।
ಬಿಭ್ರದ್ ಧ್ಯೇಯೋ ವಿಘ್ನಹರಃ ಕಾಮದಸ್ತ್ವರಯಾ ಹ್ಯಯಮ್ ॥
ಶ್ರೀಮಹಾಗಣಪತಯೇ ನಮಃ । ಓಂ ಕ್ಷಿಪ್ರಪ್ರಸಾದಾಯ ನಮಃ ।
ಪ್ರಾರ್ಥನಾಂ ಸಮರ್ಪಯಾಮಿ ॥ ಹೇ ದೇವ! ನಿರ್ವಿಘ್ನಂ ಕುರು ॥

ಎಂದು ಪ್ರಾರ್ಥಿಸಿ ಕೈಮುಗಿದು ನಾನು ಮುಂದೆ ಆಚರಿಸುವ ಪೂಜೆ ಸಾಂಗೋಪಾಂಗವಾಗಿ ನಡೆದು ಫಲಪ್ರದವಾಗಲಿಯೆಂದು ಪ್ರಾರ್ಥಿಸಬೇಕು.

## ದೀಪಸ್ಥಾಪನೆ

ಸ್ನೇಹೋ ದೀಪಂ ಯಥಾ ಧೃತ್ವಾ ಸರ್ವಲೋಕೋಪಕಾರಕಃ ।
ತಥಾ ಭವಾನ್ ಮಮ ಜ್ಞಾನಂ ಹೃದಿ ಧಾರಯ ಸಂತತಮ್ ॥
ತದ್ಧೂಮಗಂಧಮಾಘ್ರಾಯ ಯಥಾ ಪೂತಾಶ್ಚ ಖೇಚರಾಃ ।
ತಥಾ ಪ್ರಜ್ವಲ ದೀಪ । ತ್ವಂ ಸಪ್ತಲೋಕಸಮಾಶ್ರಯಾಃ ॥
ದೀಪಃ ಪಾಪಹರೋ ನೃಣಾಂ ದೀಪ ಆಪನ್ನಿವಾರಕಃ ।
ದೀಪೋ ವಿಧತ್ತೇ ಸುಕೃತಂ ದೀಪಃ ಸಂಪತ್ಪ್ರದಾಯಕಃ ॥
ದೀಪಜ್ಯೋತಿ ಪರಬ್ರಹ್ಮ ದೀಪಜ್ಯೋತಿಃ ಜನಾರ್ದನಃ ।
ದೀಪೋ ಹರತು ಮೇ ಪಾಪಂ ಸಂಧ್ಯಾದೀಪ ನಮೋಽಸ್ತು ತೇ ॥
ಶುಭಂ ಕುರುಷ್ವ ಕಲ್ಯಾಣಂ ಆರೋಗ್ಯಂ ಸುಖಸಂಪದಮ್ ।
ಮಮ ಬುದ್ಧಿ ಪ್ರಕಾಶಂ ಚ ದೀಪಜ್ಯೋತಿರ್ನಮೋಽಸ್ತುತೇ ॥
ಭೋ ದೀಪ ಬ್ರಹ್ಮರೂಪಸ್ತ್ವಂ ಕರ್ಮಸಾಕ್ಷಿ ಇಹಾರ್ಹಸಿ ।
ಯಾವತ್ಕರ್ಮಸಮಾಪ್ತಿಃ ಸ್ಯಾತ್ ತಾವತ್ತ್ವಂ ಸುಸ್ಥಿರೋ ಭವ ॥

ಅನೇನ ದೀಪಸ್ಥಾಪನೇನ ಅಸ್ಮದ್ಗುರ್ವಂತರ್ಗತ ಭಾರತೀರಮಣಮುಖ್ಯ-ಪ್ರಾಣಾಂತರ್ಗತ ಕುಲಸ್ವಾಮಿ ಪ್ರೀಯತಾಂ ಶ್ರೀಕೃಷ್ಣಾರ್ಪಣಮಸ್ತು ॥

## ಅಂಕುರಘಟಸ್ಥಾಪನಾವಿಧಿ

### ಭೂಸ್ಪರ್ಶ ಮಾಡಿರಿ

ಅಥ ಕಲಶಪ್ರತಿಷ್ಠಾಪನಂ ಕರಿಷ್ಯೇ ॥

ಮಹೀ ದ್ಯೌರಿತಿ ಮೇಧಾತಿಥಿಃ ಕಾಣ್ವಋಷಿಃ । ಗಾಯತ್ರೀಛಂದಃ । ದ್ಯಾವಾಪೃಥಿವ್ಯೌದೇವತೇ । ಭೂಸ್ಪರ್ಶನೇ ವಿನಿಯೋಗಃ ॥

ಓಂ ಮಹೀ ದ್ಯೌಃ ಪೃಥಿವೀ ಚ ನ ಇಮಂ ಯಜ್ಞಂ ಮಿಮಿಕ್ಷತಾಮ್ । ಪಿಪೃತಾಂ ನೋ ಭರೀಮಭಿಃ ॥

## ನವಗ್ರಹ ಧಾನ್ಯ ಮುಟ್ಟಿರಿ

ಯೇನ ತೋಕಾಯಾತ್ರೇಯಃ ಶ್ಯಾವಾಶ್ವಃ ಋಷಿಃ । ಸತೋಬೃಹತೀಛಂದಃ । ಮರುತೋ ದೇವತಾಃ । ಧಾನ್ಯಸ್ಪರ್ಶನೇ ವಿನಿಯೋಗಃ ॥

ಓಂ ಯೇನ ತೋಕಾಯ ತನಯಾಯ ಧಾನ್ಯಂಗ್ಂ ಬೀಜಂ ವಹಧ್ವೇ ಅಕ್ಷಿತಮ್। ಅಸ್ಮಭ್ಯಂ ತದ್ಧತ್ತನ ಯದ್ವ ಈಮಹೇ ರಾಧೋ ವಿಶ್ವಾಯು ಸೌಭಗಮ್ ॥

ಓಷಧಯಃ ಅಥರ್ವಣೋ ಭಿಷಗ್ ಋಷಿಃ। ಅನುಷ್ಟುಪ್ ಛಂದಃ। ಓಷಧಯೋ ದೇವತಾಃ । ಧಾನ್ಯಸ್ಪರ್ಶನೇ ವಿನಿಯೋಗಃ ॥

ಓಮ್ ಓಷಧಯಃ ಸಂ ವದಂತೇ ಸೋಮೇನ ಸಹ ರಾಜ್ಞಾ । ಯಸ್ಮೈ ಕೃಣೋತಿ ಬ್ರಾಹ್ಮಣಸ್ತಂ ರಾಜನ್ ಪಾರಯಾಮಸಿ ॥

## ಘಟ ಮುಟ್ಟಿರಿ

ಆ ಕಲಶೇಷು ಗಾಧಿನೋ ವಿಶ್ವಾಮಿತ್ರಋಷಿಃ । ಗಾಯತ್ರೀಛಂದಃ ಪವಮಾನಃ ಸೋಮೋ ದೇವತಾ । ಕಲಶಾಭಿಮಂತ್ರಣೇ ವಿನಿಯೋಗಃ ॥

ಓಮ್ ಆ ಕಲಶೇಷು ಧಾವತಿ ಶ್ಯೇನೋ ವರ್ಮ ವಿ ಗಾಹತೇ। ಅಭಿ ದ್ರೋಣಾ ಕನಿಕ್ರದತ್॥

## ಹಸಿದಾರ ಸುತ್ತಿರಿ

ತಂತು ತನ್ವನ್ ದೇವಾ ಋಷಯಃ । ಜಗತೀಛಂದಃ । ಅಗ್ನಿರ್ದೇವತಾ । ಸೂತ್ರವೇಷ್ಟನೇ ವಿನಿಯೋಗಃ ॥

ಓಂ ತಂತುಂ ತನ್ವನ್ರಜಸೋ ಭಾನುಮನ್ವಿಹಿ ಜ್ಯೋತಿಷ್ಮತಃ ಪಥೋ ರಕ್ಷ ಧಿಯಾ ಕೃತಾನ್ । ಅನುಲ್ಬಣಂ ವಯತ ಜೋಗುವಾಮಪೋ ಮನುರ್ಭವ ಜನಯಾ ದೈವ್ಯಂ ಜನಮ್ ॥

## ಮಣ್ಣು ಹಾಗೂ ನೀರನ್ನು ಘಟಕ್ಕೆ ತುಂಬಿರಿ

ಇಮಂ ಮೇ ಸಿಂಧುಕ್ಷಿತ್ ಪ್ರೈಯಮೇಧ ಋಷಿಃ । ಜಗತೀ ಛಂದಃ । ನದ್ಯೋ ದೇವತಾಃ । ಜಲಪೂರಣೇ ವಿನಿಯೋಗಃ ॥

ಓಮ್ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಸ್ತೋಮಂ ಸಚತಾ ಪರುಷ್ಣ್ಯಾ । ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾऽऽರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥

ಓಂ ತಪೋಷ್ಪವಿತ್ರಂ ವಿತತಂ ದಿವಸ್ಪದೇ ಶೋಚಂತೋ ಅಸ್ಯ ತಂತವೋ ವ್ಯಸ್ಥಿರನ್ । ಅವಂತ್ಯಸ್ಯ ಪವೀತಾರಮಾಶವೋ ದಿವಸ್ಪೃಷ್ಠಮಧಿ ತಿಷ್ಠಂತಿ ಚೇತಸಾ ॥

## ಗಂಧ ಹಚ್ಚಿರಿ

ಓಂ ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಪಾಂ ಕರೀಷಿಣೀಮ್ । ಈಶ್ವರೀಂ ಸರ್ವಭೂತಾನಾಂ ತಾಮಿಹೋಪ ಹ್ವಯೇ ಶ್ರಿಯಮ್॥

## ಅಕ್ಷತೆ ಏರಿಸಿರಿ

ಅರ್ಚತ ಪ್ರಾರ್ಚತ ಪ್ರಿಯಮೇಧ ಆಂಗೀರಸ ಋಷಿಃ । ಅನುಷ್ಟುಪ್ ಛಂದಃ । ಇಂದ್ರೋ ದೇವತಾ । ಅಕ್ಷತನ್ಯಾಸೇ ವಿನಿಯೋಗಃ ॥

ಓಮ್ ಅರ್ಚತ ಪ್ರಾರ್ಚತ ಪ್ರಿಯಮೇಧಾಸೋ ಅರ್ಚತ। ಅರ್ಚಂತು ಪುತ್ರಕಾ ಉತ ಪುರಂ ನ ಧೃಷ್ಣ್ವರ್ಚತ ॥

## ಹೂ ಏರಿಸಿರಿ

ಆಯನೇ ತೇ ಸ್ತಂಬಮಿತ್ರಋಷಿಃ । ಅನುಷ್ಟುಪ್ ಛಂದಃ । ಅಗ್ನಿರ್ದೇವತಾ । ಪುಷ್ಪ ನ್ಯಾಸೇ ವಿನಿಯೋಗಃ ॥

ಓಮ್ ಆಯನೇ ತೇ ಪರಾಯಣೇ ದೂರ್ವಾ ರೋಹಂತು ಪುಷ್ಪಿಣೀಃ । ಹ್ರದಾಶ್ಚ ಪುಂಡರೀಕಾಣಿ ಸಮುದ್ರಸ್ಯ ಗೃಹಾ ಇಮೇ ।

## ಧಾನ್ಯಗಳನ್ನು ಮಣ್ಣಿನಲ್ಲಿ ಹಾಕಿರಿ

ಪೂರ್ಣಾ ದರ್ವಿ ವಿಶ್ವೇದೇವಾ ಋಷಯಃ । ಅನುಷ್ಟುಪ್ ಛಂದಃ । ಶತಕ್ರತು-ರ್ದೇವತಾ ।

ಓಂ ಪೂರ್ಣಾ ದರ್ವಿ ಪರಾ ಪತ ಸುಪೂರ್ಣಾ ಪುನರಾಪತ । ವಸ್ನೇವ ವಿ ಕ್ರೀಣಾವಹಾ ಇಷಮೂರ್ಜಂ ಶತಕ್ರತೋ ॥

ಓಂ ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾ ಯಾಶ್ಚ ಪುಷ್ಪಿಣೀಃ। ಬೃಹಸ್ಪತಿಪ್ರಸೂತಾಸ್ತಾನೋ ಮುಂಚಂತ್ವಂಹಸಃ ॥

ಅರ್ಘ್ಯಂ ಸಮರ್ಪಯಾಮಿ । ಪಾದ್ಯಂ.......। ಆಚಮನಂ.... । ಮಧುಪರ್ಕಂ... । ಪುನರಾಚಮನಂ..... । ಸ್ನಾನಂ... । ವಸ್ತ್ರಂ ...। ವಿಭೂಷಣಂ...। ಉಪವೀತಂ...। ಆಸನಂ...। ಗಂಧಂ...। ಪುಷ್ಪಂ ಸಮರ್ಪಯಾಮಿ ॥ ಶಿಂಶುಮಾರಾದಿಭ್ಯೋ ನಮಃ । ಕ್ರುದ್ಧೋಲ್ಕಾದ್ಯಾವರಣದೇವತಾಭ್ಯೋ ನಮಃ । ಅಥ ಧೂಪಮಾಘ್ರಾಪಯಾಮಿ । ದೀಪಂ ದರ್ಶಯಾಮಿ । ನೈವೇದ್ಯಾರ್ಥೇ ಅಮೃತೋಪಹಾರಮಹಾನೈವೇದ್ಯಂ ಸಮರ್ಪಯಾಮಿ ॥ ಪುನರ್ಧೂಪದೀಪೌ ಸಮರ್ಪಯಾಮಿ । ನೀರಾಜನಂ ಸಮರ್ಪಯಾಮಿ । ಛತ್ರಚಾಮರಾದ್ಯುಪಚಾರನ್ ಸಮರ್ಪಯಾಮಿ ॥ (ದ್ವಾದಶವಾರಮ್ ಅಷ್ಟಾಕ್ಷರಂ ಜಪೇತ್)

ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ?।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥
ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥

ಶ್ರೀಕೃಷ್ಣಾರ್ಪಣಮಸ್ತು

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

## ಅಂಕುರಘಟಸ್ಥಾಪನೆಯ ಬಗ್ಗೆ ಪ್ರಮಾಣಗಳು

ಪ್ರತಿಷ್ಠೆ, ದೀಕ್ಷಾಸ್ವೀಕಾರ, ವಿವಾಹ, ಉಪನಯನ ಮೊದಲಾದ ಎಲ್ಲ ಕಾರ್ಯಗಳ ಪ್ರಾರಂಭದಲ್ಲೂ ಅಂಕುರಾರ್ಪಣವನ್ನು ಮಾಡಬೇಕು ಎಂದು ಶಾಸ್ತ್ರಕಾರರ ಮತ-

ಪ್ರತಿಷ್ಠಾಯಾಂ ಚ ದೀಕ್ಷಾಯಾಂ ಸ್ನಾಪನೇ ಚೋತ್ಸವೇ ತಥಾ ।
ಸಂಪ್ರೋಕ್ಷಣೇ ಚ ಶಾಂತ್ಯರ್ಥಂ ವಿವಾಹೇ ಮೌಂಜಿಬಂಧನೇ ।
ಸರ್ವಮಂಗಲಕಾರ್ಯೇಷು ಕಾರಯೇದಂಕುರಾರ್ಪಣಮ್ ॥
ಪ್ರತಿಷ್ಠಾದಿವಸಾತ್ ಪೂರ್ವಂ ನವಮೇ ಸಪ್ತಮೇ ದಿನೇ ।
ಪಂಚಮೇ ವಾ ತೃತೀಯೇ ವಾ ಸದ್ಯೋ ವಾ ಚಾಂಕುರಾರ್ಪಣಮ್ ॥
ಪುಣ್ಯಾಹಘೋಷಣಂ ಕೃತ್ವಾ ಬ್ರಾಹ್ಮಣೈಃ ಸಹ ದೇಶಿಕಃ ।
ಮಂಗಲಾಂಕುರಯಜ್ಞಂ ಚ ಕುರ್ಯಾತ್ ತತ್ರೈವ ಚಾಹನಿ ।
ಸಪ್ತಮಾನ್ನವಮಾದ್ವಾಽಪಿ ಪ್ರಾಗೇವ ಯಜ್ಞಕರ್ಮಣಃ ॥
ಉತ್ಸವೇಷು ವಿವಿಧೇಷ್ವಪಿ ದೀಕ್ಷಾಸ್ಥಾಪನಾದಿಷು ಪವಿತ್ರವಿಧೌ ಚ ।
ಮಂಗಲಾಂಕುರವಿರೋಪಣಪೂರ್ವಂ ಮಂಗಲಂ ಭವತಿ ಕರ್ಮಕೃತಸ್ತು ॥
ಶಸ್ತಯೋಗದಿವಸಾತ್ತು ಪುರಸ್ತಾತ್ ಸಪ್ತಮೇಽಹನಿ ಶುಭೇ ನವಮೇ ವಾ ।
ಪಂಚಮೇಽಥ ಸುದಿನೇ ಸುಮುಹೂರ್ತೇ ಮಂಗಲಾಂಕುರವಿಧಿಂ ವಿದಧೀತ ॥

ಅಂಕುರಾರ್ಪಣವನ್ನು ಮಾಡುವ ಮೊದಲ ದಿನ ಉಪವಾಸವಿದ್ದು ನಾಂದೀಮುಖ ಶ್ರಾದ್ಧವನ್ನು ಮಾಡಿಕೊಳ್ಳಬೇಕು -

ಗುರುರ್ವಿಶುದ್ಧಃ ಪ್ರಾಗೇವ ಶುದ್ಧಾಹಾತ್ ಸಪ್ತಮೇಽಹನಿ ।
ಸಂಕಲ್ಪ್ಯೋಪೋಷ್ಯ ಕರ್ತವ್ಯಮಂಕುರಾರೋಪಣಂ ಶುಭಮ್ ॥
ಕುರ್ಯಾನ್ನಾಂದೀಮುಖಶ್ರಾದ್ಧಂ ಪೂರ್ವೇದ್ಯುಃ ಸ್ವಸ್ತಿವಾಚನಮ್ ।
ಸ್ವಗೃಹ್ಯೋಕ್ತಪ್ರಕಾರೇಣ ತದೇತದ್ವಿಧೀತ ವೈ ॥
ಸರ್ವತ್ರಾಭ್ಯುದಯಶ್ರಾದ್ಧಮಂಕುರೋತ್ಪಾದನಂ ತಥಾ ।
ಆದಾವೇದ ಪ್ರಕುರ್ವೀತ ಕರ್ಮಣೋಽಭ್ಯುದಯಾತ್ಮನಃ ॥

ವಿಧಾನದಂತೆ ರಚಿತವಾದ ಶರಾವಾದಿಪಾತ್ರೆಗಳಲ್ಲಿ ವಿಧಿಯಂತೆ ಆನೀತವಾದ ಮಣ್ಣನ್ನೂ ಒಣಗಿದ ಗೋಮಯಾದಿಗಳನ್ನೂ ತುಂಬಿ ಆ ಮೇಲೆ ಬೀಜವನ್ನು ಬಿತ್ತಬೇಕು. ಅದಕ್ಕೆ ತುಂಬಬೇಕಾದ ಮಣ್ಣನ್ನು ಪವಿತ್ರವಾದ ನದೀತೀರಕ್ಕೆ ಹೋಗಿ ಮಂತ್ರಪೂತವಾದ ಕೊಡಲಿಯಿಂದ ಅಗೆದು ಹಗಲಿನ ಹೊತ್ತಿನಲ್ಲಿ ತಂದಿರಿಸಬೇಕೆಂದು ವಿಧಿಯಿದೆ -

ಗಂಧಾದಿಭಿಶ್ಚ ಕುದ್ದಾಲಂ ಪೂಜಯಿತ್ವಾ ದಿನಾಂತರೇ ।
ಗೀತನೃತ್ಯಸಮಾಯುಕ್ತಂ ಗಜವಾಜಿಸಮನ್ವಿತಮ್ ॥
ಗುರ್ವಾದಯೋ ರಥಾರೂಢಾ ಗಜಾರೂಢಾಸ್ತಥಾ ಪರೇ ।
ಗತ್ವಾ ತೀರಂ ತಡಾಗಸ್ಯ ನದ್ಯಾಃ ಪುಷ್ಪವನಸ್ಯ ಚ ॥
ತತ್ರ ಶುದ್ಧಂ ಭುವೋ ಭಾಗಂ ದರ್ಭೈಃ ಸಂಮೃಜ್ಯ ಚಾಸ್ತ್ರತಃ ।
ಅಭ್ಯುಕ್ಷ್ಯ ಚಾರ್ಘ್ಯತೋಯೇನ ತತ್ತನ್ಮಂತ್ರ ಮನುಸ್ಮರನ್ ॥
ಹೃದಾ ಭೂಮಿಂ ಸಮಾವಾಹ್ಯ ಗಂಧಪುಷ್ಪೈಃ ಸಮರ್ಚಯೇತ್ ।
ಕುದ್ದಾಲೀಮಸ್ತ್ರಮಂತ್ರೇಣ ಖಾತ್ವಾ ಭೂಮಿಮಥೋ ಮೃದಮ್ ॥
ಗೃಹೀತ್ವಾ ವಾಮದೇವೇನ ಪೂರಯೇತ್ ಕಾಂಸ್ಯಪಾತ್ರಕೇ ।
ಹೃದಾ ಮೃದಂ ಚ ಸಂಮೃಜ್ಯ ವಸ್ತ್ರೇಣಾಽಚ್ಛಾದ್ಯ ಧಾರಯೇತ್ ॥
ಪುರಂ ವಾ ನಿಲಯಂ ವಾಽಪಿ ಸರ್ವಮಂಗಲನಿಃಸ್ವನೈಃ ।
ಗುರುಃ ಪ್ರದಕ್ಷಿಣಂ ಕೃತ್ವಾ ಮಂಡಪಂ ತ್ವಾನಯೇತ್ ತತಃ ।
ಏತತ್ ಕರ್ಮ ದಿವಾಕಾಲೇ ಕುರ್ಯಾದ್ ರಾತ್ರೌ ನ ಬುದ್ಧಿಮಾನ್ ॥

ಪಾತ್ರೆಗಳಲ್ಲಿ ಮಣ್ಣನ್ನು ತುಂಬಿದ ಮೇಲೆ - ಪೂರ್ವ ಅಥವಾ ಉತ್ತರಾಭಿಮುಖನಾಗಿ ಕುಳಿತು ಆ ಎಲ್ಲ ಬೀಜಗಳನ್ನು ಬೆರೆಸಿ ರಾತ್ರಿಯ ಕಾಲದಲ್ಲಿ ಆ ಪಾತ್ರೆಯಲ್ಲಿ ಅವನ್ನು ಬಿತ್ತಬೇಕು. ಬೀಜಗಳಿಗೆ ಚಂದ್ರನು ಅಭಿಮಾನಿಯಾದುದರಿಂದ ಅವನ್ನು ರಾತ್ರಿಯೇ ಬಿತ್ತುವುದು ಪ್ರಶಸ್ತವಾಗಿದೆ -

ಬೀಜಮುಖ್ಯೇನ ಮೂಲೇನ ಪ್ರಾಙ್ಮುಖೋ ವಾಽಪ್ಯುದಙ್ಮುಖಃ ।
ವಾಪಯೇತ್ ಸರ್ವಬೀಜಾನಿ ಪಾಲಿಕಾದಿಷ್ವನುಕ್ರಮಾತ್ ।
ಬೀಜಾನಾಮಧಿಪಃ ಸೋಮಸ್ತಸ್ಮಾದ್ರಾತ್ರೌ ತು ನಿರ್ವಪೇತ್ ॥
ಬೀಜೇಭ್ಯೋ ದೈವತೇಭ್ಯಶ್ಚ ಸ ರಾತ್ರೌ ಕಾಂತಿಮಾನ್ ಯತಃ ।
ತಸ್ಮಾದ್ ಗುರುಸ್ತು ಬೀಜಾನಿ ನಿಶಾಯಾಮೇವ ನಿರ್ವಪೇತ್ ॥

ಅಂಕುರಪಾತ್ರೆಗಳ ಪರಿಮಾಣಾದಿಗಳ ವಿವರ ಯೋಗದೀಪಿಕಾದಲ್ಲಿ ಬಂದಿದೆ-

ಕುರ್ಯಾದಂಕುರಪಾತ್ರಾಣೀ ದ್ವಾದಶ ದ್ವಿಷ್ಟಿರೇವ ವಾ ।
ಪಾಲಿಕಾ ಘಟಿಕಾಶ್ಚಾಥ ಶರಾವಾ ಇತಿ ತೇ ತ್ರಿಧಾ ॥

ಅಂಕುರ ಪಾತ್ರೆಗಳ ಸಂಖ್ಯೆ ೧೨, ವಿಶೇಷತಃ ೨೪ ಅಥವಾ ೩೬ ಇದ್ದರೂ ಸರಿಯೆ. ಆ ಪಾತ್ರೆಗಳು ಮೂರು ತೆರ : ಪಾಲಿಕೆಗಳು (ಪೇಲೆ), ಘಟಿಕೆಗಳು (ಪಂಚಮುಖಿ, ಗಡಿಗೆ) ಮತ್ತು ಶರಾವಗಳು (ಶ್ರಾವೆ, ಸರಾವ, ಬಟ್ಟಲು)

ಈ ಪಾತ್ರೆಗಳಲ್ಲಿ ಚಿಗುರಿದ ಮೊಳಕೆಯನ್ನು ಯಾರೂ ನೋಡದಂತೆ ಮುಚ್ಚಿಡಬೇಕು ಎನ್ನುವುದು ಸಂಪ್ರದಾಯ -

ಪ್ರರೂಢಾನ್ಯಂಕುರಾಣ್ಯನ್ಯೋ ನ ವೀಕ್ಷೇತ ಕದಾಚನ ।
ಆಚಾರ್ಯ ಏವ ಪ್ರವಿಶೇತ್ ತಚ್ಛಿಷ್ಯೋ ವಾ ತದಾಜ್ಞಯಾ ॥

ಬೇರೆಡೆ ಕೂಡ ಈ ಮಾತು ಬಂದಿದೆ -

ವಸ್ತ್ರೈರಾಚ್ಛಾದ್ಯ ಯತ್ನೇನ ಸುಗುಪ್ತಾನಿ ಚ ಕಾರಯೇತ್ ।

ಈ ಮೊಳಕೆ ಭವಿಷ್ಯದ ಫಲಸೂಚಕ ಎನ್ನುತ್ತಾರೆ -

ಯಜಮಾನಾಭಿವೃದ್ಧ್ಯರ್ಥಮಂಕುರಾನಿ ಪರೀಕ್ಷಯೇತ್ ।
ಸಮ್ಯಗೂರ್ಧ್ವಂ ಪ್ರರೂಢಾನಿ ಕೋಮಲಾನಿ ಸಿತಾನಿ ಚ ॥
ಧೂಮ್ರವರ್ಣಾನ್ಯಪೂರ್ಣಾನಿ ತಥಾ ತಿರ್ಯಗ್ಗತಾನಿ ಚ ।
ಶ್ಯಾಮಲಾನಿ ಚ ಕುಬ್ಜಾನಿ ವರ್ಜಯೇದಶುಭಾನಿ ತು ॥
ಅವೃಷ್ಟಿಂ ಕುರುತೇ ಕೃಷ್ಣಂ ಧೂಮ್ರಾಭಂ ಕಲಹಂ ತಥಾ ।
ಅಪೂರ್ಣಂ ಜನನಾಶಂ ಚ ದುರ್ಭಿಕ್ಷಂ ಶ್ಯಾಮಲಾಂಕುರಮ್ ॥
ತಿರ್ಯಗ್ಗತೇ ಭವೇದ್ ವ್ಯಾಧಿಃ ಕುಬ್ಜೇ ಶತ್ರುಭಯಂ ತಥಾ ।
ಅಶುಭೇ ಚಾಂಕುರೇ ಜಾತೇ ಶಾಂತಿಹೋಮಂ ಸಮಾಚರೇತ್ ॥

ಬೆಳ್ಳಗೆ, ನಸೆಯಾಗಿ ನೇರ ಬೆಳೆದ ಮೊಳಕೆ ಯಜಮಾನನಿಗೆ ಕ್ಷೇಮಕರ. ಕಂದು ಬಣ್ಣದ ಮೊಳಕೆ ಮುಂದಾಗುವ ಜಗಳದ ಸೂಚಕ. ಅರ್ಧಬೆಳೆದು ಮುರುಟಿದ ಮೊಳಕೆ ಸಾವಿನ ಸೂಚಕ. ಅಡ್ಡಕ್ಕೆ ತಿರುಗಿದ ಮೊಳಕೆ ರೋಗಗಳ ಸೂಚಕ. ಕಪ್ಪು

ಬಣ್ಣದ ಮೊಳಕೆ ಮುಂದಾಗುವ ಬರಗಾಲದ ಸೂಚಕ. ನೀಲಿ ಬಣ್ಣದ ಮೊಳಕೆ ದುರ್ಭಿಕ್ಷೆಯ ಸೂಚಕ. ಗಿಡ್ಡವಾಗಿ ಬೆಳವಣಿಗೆ ಕುಂಠಿತವಾದ ಮೊಳಕೆ ಶತ್ರುಗಳಿಂದ ಅಪಾಯದ ಸೂಚಕ. ಇಂಥ ದೋಷಗಳು ಕಂಡು ಬಂದಾಗ ಶಾಂತಿಹೋಮದಿಂದ ಪ್ರಾಯಶ್ಚಿತ್ತವನ್ನಾಚರಿಸಬೇಕು.

(ಆಧಾರ - ಪೂಜ್ಯ ವಿದ್ವಾನ್ ಬನ್ನಂಜೆ ಗೋವಿಂದಾಚಾರ್ಯರಿಂದ ಸಂಪಾದಿತ ವಾದ ತಂತ್ರಸಾರಸಂಗ್ರಹ ಪುಸ್ತಕದ ಸಂಗ್ರಹವಿದು.)

* * * *

# ಕುಮಾರಿಪೂಜಾ ವಿಧಾನ

ಜಗತ್ ಪೂಜ್ಯೇ ಜಗದ್ವಂದ್ಯೇ ಸರ್ವಶಕ್ತಿಸ್ವರೂಪಿಣಿ ।
ಪೂಜಾಂ ಗೃಹಾಣ ಕೌಮಾರಿ ಜಗನ್ಮಾರ್ತರ್ನಮೋಸ್ತು ತೇ ॥1॥
ತ್ರಿಪುರಾಂ ತ್ರಿಗುಣಾಧಾರಂ ತ್ರಿಮಾರ್ಗಜ್ಞಾನರೂಪಿಣೀಮ್ ।
ತ್ರೈಲೋಕ್ಯವಂದಿತಾಂ ದೇವೀಂ ತ್ರಿಮೂರ್ತಿಂ ಪೂಜಯೇತ್ತತಃ ॥2॥
ಕಾಲಾತ್ಮಿಕಾಂ ಕಾಲಭೀತಾಂ ಕಾರುಣ್ಯಹೃದಯಾಂ ಶಿವಾಮ್ ।
ಕಾರುಣ್ಯಜನನೀಂ ನಿತ್ಯಾಂ ಕಲ್ಯಾಣೀಂ ಪೂಜಯಾಮ್ಯಹಮ್ ॥3॥
ಅಣಿಮಾದಿಗುಣಾಧಾರಾಮಕಾರಾದ್ಯಕ್ಷರಾತ್ಮಿಕಾಮ್ ।
ಅನಂತಶಕ್ತಿಭೇದಾಂ ತಾಂ ರೋಹಿಣೀಂ ಪೂಜಯಾಮ್ಯಹಮ್ ॥4॥
ಕಾಮಚಾರೀಂ ಕಾಮರಾತ್ರೌ ಕಾಲಚಕ್ರಸ್ವರೂಪಿಣೀಮ್ ।
ಕಾಮದಾಂ ಕರುಣಾಧಾರಾಂ ಕಾಲಿಕಾಂ ಪೂಜಯಾಮ್ಯಹಮ್ ॥5॥
ಉಗ್ರಧ್ಯಾನಾಂ ಚೋಗ್ರರೂಪಾಂ ದುಷ್ಟಾಸುರನಿಬರ್ಹಿಣೀಮ್ ॥
ಚಾರ್ವಂಗೀಂ ಚಂಡಿಕಾಂ ಲೋಕೇ ಪೂಜಿತಾಂ ಪೂಜಯಾಮ್ಯಹಮ್ ॥6॥
ಸದಾನಂದಕರೀಂ ಶಾಂತಾಂ ಸರ್ವದೇವನಮಸ್ಕೃತಾಮ್ ।
ಸರ್ವಭೂತಾತ್ಮಿಕಾಂ ಲಕ್ಷ್ಮೀಂ ಶಾಂಭವೀಂ ಪೂಜಯಾಮ್ಯಹಮ್ ॥7॥
ದುರ್ಗಮೇ ದುಸ್ತರೇ ಯುದ್ಧೇ ಭಯದುಃಖವಿನಾಶಿನೀಮ್ ।
ಪೂಜಯಾಮಿ ಸದಾ ಭಕ್ತ್ಯಾ ದುರ್ಗಾಂ ದುರ್ಗತಿನಾಶಿನೀಮ್ ॥8॥

ಸುಂದರೀಂ ಸ್ವರ್ಣವರ್ಣಾಭಾಂ ಸರ್ವಸೌಭಾಗ್ಯದಾಯಿನೀಮ್ ।
ಸುಭದ್ರಜನನೀಂ ದೇವೀಂ ಸುಭದ್ರಾಂ ಪೂಜಯಾಮ್ಯಹಮ್ ॥9॥

## ಕೃಷ್ಣಾರ್ಪಣ

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ (ಮೇ) ॥
ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾऽऽತ್ಮನಾ ವಾऽನುಸೃತಸ್ವಭಾವಃ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

॥ ಇಲ್ಲಿಗೆ ಕುಮಾರೀಪೂಜೆಯು ಮುಗಿಯಿತು ॥

* * * *

## ನವರಾತ್ರಿಗಳಲ್ಲಿ ನಿತ್ಯಪಠಿಸಬೇಕಾದ ರಾತ್ರೀಸೂಕ್ತಮ್

### ಋಗ್ವೇದ ಸಂಹಿತಾ : ಮಂಡಲ-೧೦, ಅಷ್ಟಕ-೮, ಸೂಕ್ತ-೧೨೭

ಓಂ ರಾತ್ರೀ ವ್ಯಖ್ಯದಾಯತೀ ಪುರುತ್ರಾ ದೇವ್ಯ (ಅ) ೧ ಕ್ಷಭಿಃ । ವಿಶ್ವಾ ಅಧಿ ಶ್ರಿಯೋಧಿತ ॥೧॥ ಓರ್ವಪ್ರಾ ಅಮರ್ತ್ಯಾ ನಿವತೋ ದೇವ್ಯು (ಉ) ೧ ದ್ವತಃ । ಜ್ಯೋತಿಷಾ ಬಾಧತೇ ತಮಃ ॥೨॥ ನಿರುಸ್ವಸಾರಮಸ್ಕೃತೋಷಸಂ ದೇವ್ಯಾಯತೀ । ಅಪೇದು ಹಾಸತೇ ತಮಃ ॥೩॥ ಸಾನೋ ಅದ್ಯಯಸ್ಯಾ ವಯಂ ನಿ ತೇ ಯಾಮನ್ನವಿಕ್ಷ್ಮಹಿ । ವೃಕ್ಷೇ ನ ವಸತಿಂ ವಯಃ ॥೪॥ ನಿ ಗ್ರಾಮಾಸೋ ಅವಿಕ್ಷತ ನಿ ಪದ್ವಂತೋ ನಿ ಪಕ್ಷಿಣಃ । ನಿ ಶ್ಯೇನಾಸಶ್ಚಿದರ್ಥಿನಃ ॥೫॥ ಯಾವಯಾ

ವೃಕ್ಯ (ಅಂ) ೧ ವೃಕಂ ಯವಯಸ್ತೇನಮೂರ್ಮ್ಯೇ । ಅಥಾ ನಃ ಸುತರಾ ಭವ ॥೬॥

ಉಪ ಮಾ ಪೇಪಿಶತ್ತಮಃ ಕೃಷ್ಣಂ ವ್ಯಕ್ತಮಸ್ಥಿತ । ಉಷ ಋಣೇವ ಯಾತಯ ॥೭॥

ಉಪ ತೇ ಗಾ ಇವಾಕರಂ ವೃಣೀಷ್ವ ದುಹಿತರ್ದಿವಃ । ರಾತ್ರಿಸ್ತೋಮಂ ನ ಜಿಗ್ಯುಷೇ ॥೮॥

* * * * *

## ಶ್ರೀವೇಂಕಟೇಶಮಂಗಲಾಷ್ಟಕಮ್

ಶ್ರೀಕ್ಷೋಣ್ಯೌ ರಮಣೀಯುಗಂ ಸುರಮಣೀಪುತ್ರೋಪಿ ವಾಣೀಪತಿಃ
ಪೌತ್ರಶ್ಚಂದ್ರಶಿರೋಮಣೀ ಫಣಿಪತಿಃ ಶಯ್ಯಾ ಸುರಾಃ ಸೇವಕಾಃ ।
ತಾರ್ಕ್ಷ್ಯೋ ಯಸ್ಯ ರಥೋ ಮಹಚ್ಚ ಭವನಂ ಬ್ರಹ್ಮಾಂಡಮಾದ್ಯಃ ಪುಮಾನ್
ಶ್ರೀಮದ್ವೇಂಕಟಭೂದರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥1॥

ಯತ್ತೇಜೋ ರವಿಕೋಟಿಕೋಟಿಕಿರಣಾನ್ ಧಿಕ್ಕೃತ್ಯ ಜೇಜೀಯತೇ
ಯಸ್ಯ ಶ್ರೀವದನಾಂಬುಜಸ್ಯ ಸುಷಮಾ ರಾಕೇಂದುಕೋಟೀರಪಿ ।
ಸೌಂದರ್ಯಂ ಚ ಮನೋಭವಾನಪಿ ಬಹೂನ್ ಕಾಂತಿಶ್ಚ ಕಾದಂಬಿನೀಂ
ಶ್ರೀಮದ್ವೇಂಕಟಭೂದರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥2॥

ನಾನಾರತ್ನಕಿರೀಟಕುಂಡಲಮುಖ್ಯೈರ್ಭೂಷಾಗಣೈರ್ಭೂಷಿತಃ
ಶ್ರೀಮತ್ಕೌಸ್ತುಭರತ್ನಭವ್ಯಹೃದಯಃ ಶ್ರೀವತ್ಸಲಾಂಛನಃ ।
ವಿದ್ಯುದ್ವರ್ಣಸುವರ್ಣವಸ್ತ್ರರುಚಿರೋ ಯಃ ಶಂಖಚಕ್ರಾದಿಭಿಃ
ಶ್ರೀಮದ್ವೇಂಕಟಭೂದರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥3॥

ಯತ್ಫಾಲೇ ಮೃಗನಾಭಿಚಾರುತಿಲಕೋ ನೇತ್ರೇಽಬ್ಜಪತ್ರಾಯಿತೇ
ಕಸ್ತೂರೀಘನಸಾರಕೇಸರಮಿಲಚ್ಚ್ರೀಗಂಧಸಾರೋ ದ್ರವೈಃ ।
ಗಂಧೈರ್ಲಿಪ್ತತನುಃ ಸುಗಂಧಸುಮನೋಮಾಲಾಧರೋ ಯಃ ಪ್ರಭುಃ
ಶ್ರೀಮದ್ವೇಂಕಟಭೂದರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥4॥

ಏತದ್ದಿವ್ಯಪದಂ ಮಮಾಸ್ತಿಭುವಿ ತತ್ಸಂಪಶ್ಯತೇತ್ಯಾದರಾ-
ದ್ಭಕ್ತೇಭ್ಯಃ ಸ್ವಕರೇಣ ದರ್ಶಯತಿ ಯದ್ದೃಷ್ಟ್ವಾತಿಸೌಖ್ಯಂ ಗತಃ ।
ಏತದ್ಭಕ್ತಿಮತೋ ಮಹಾನಪಿ ಭವಾಂಭೋಧಿರ್ನದೀತಿ ಸ್ಮರನ್
ಶ್ರೀಮದ್ವೇಂಕಟಭೂದರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥5॥

ಯಃ ಸ್ವಾಮೀ ಸರಸಸ್ತಟೇ ವಿಹರತೇ ಶ್ರೀಸ್ವಾಮಿನಾಮ್ನಃ ಸದಾ
ಸೌವರ್ಣಾಲಯಮಂದಿರೋ ವಿಧಿಮುಖೈರ್ಬರ್ಹಿರ್ಮುಖೈಃ ಸೇವಿತಃ ।
ಯಃ ಶತ್ರೂನ್ ಹನಯನ್ ನಿಜಾನವತಿ ಚ ಶ್ರೀಭೂವರಾಹಾತ್ಮಕಃ
ಶ್ರೀಮದ್ವೇಂಕಟಭೂದರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥6॥

ಯೋ ಬ್ರಹ್ಮಾದಿಸುರಾನ್ಮುನೀಶ್ಚ ಮನುಜಾನ್ ಬ್ರಹ್ಮೋತ್ಸವಾಯಾಗತಾನ್
ದೃಷ್ಟ್ವಾ ಹೃಷ್ಟಮನಾ ಬಭೂವ ಬಹುಶಸ್ತೈರರ್ಚಿತಃ ಸಂಸ್ತುತಃ ।
ತೇಭ್ಯೋ ಯಃ ಪ್ರದದಾದ್ವರಾನ್ ಬಹುವಿಧಾನ್ ಲಕ್ಷ್ಮೀನಿವಾಸೋ ವಿಭುಃ
ಶ್ರೀಮದ್ವೇಂಕಟಭೂದರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥7॥

ಯೋ ದೇವೋ ಭುವಿ ವರ್ತತೇ ಕಲಿಯುಗೇ ವೈಕುಂಠಲೋಕಸ್ಥಿತೋ
ಭಕ್ತಾನಾಂ ಪರಿಪಾಲನಾಯ ಸತತಂ ಕಾರುಣ್ಯವಾರಾಂನಿಧಿಃ ।
ಶ್ರೀಶೇಷಾಖ್ಯಮಹೀಂದ್ರಮಸ್ತಕಮಣಿರ್ಭಕ್ತೈಕಚಿಂತಾಮಣಿಃ
ಶ್ರೀಮದ್ವೇಂಕಟಭೂದರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥8॥

ಶೇಷಾದ್ರಿ ಪ್ರಭುಮಂಗಲಾಷ್ಟಮಿದಂ ತುಷ್ಟೇನ ಯಸ್ಯೇಶಿತುಃ
ಪ್ರೀತ್ಯರ್ಥಂ ರಚಿತಂ ರಮೇಶಚರಣದ್ವಂದ್ವೈಕನಿಷ್ಠಾವತಾ ।
ವೈವಾಹ್ಯಾದಿಶುಭಕ್ರಿಯಾಸು ಪಠಿತಂ ಯೈಃ ಸಾಧು ತೇಷಾಮಪಿ
ಶ್ರೀಮದ್ವೇಂಕಟಭೂದರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥9॥

॥ ಇತಿ ಶ್ರೀವಾದಿರಾಜತೀರ್ಥಕೃತಂ ಶ್ರೀವೆಂಕಟೇಶಮಂಗಲಾಷ್ಟಕಮ್ ॥

* * * *

## ಶ್ರೀದುರ್ಗಾಸ್ತುತಿ

ಶ್ರೀವಾದಿರಾಜರು ತೀರ್ಥಪ್ರಬಂಧದಲ್ಲಿ ಮಾಡಿದ ದುರ್ಗಾಸ್ತುತಿ ಇದು. ಪರಶು, ಧನು, ಬಾಣ, ಗದೆ ಎಂಬ ನಾಲ್ಕು ತೀರ್ಥಗಳಿಂದ ಶೋಭಿಸುವ ವಿಮಾನಗಿರಿ ಎಂಬ ಬೆಟ್ಟದಲ್ಲಿ ಶ್ರೀಪರಶುರಾಮದೇವರು ಪ್ರತಿಷ್ಠಾಪಿಸಿದ ದುರ್ಗೆಯ ಸ್ತುತಿ ಇದು. ದುರ್ಗೆಯು ನಂದಗೋಪನ ಪುತ್ರಿಯಾಗಿ ಪ್ರಾದುರ್ಭೂತಳಾದುದರಿಂದ ಅವಳನ್ನು ಇಲ್ಲಿ ಕೃಷ್ಣನ ತಂಗಿ ಎಂದು ವರ್ಣಿಸಲಾಗಿದೆ. ಮಗನಾದ ವಾಯುದೇವರ ಮೇಲಣ ಪ್ರೀತಿಯಿಂದಾಗಿ ಆಚಾರ್ಯ ಮಧ್ವರ ಅವತಾರ ಸ್ಥಳವಾದ ಪಾಜಕದಲ್ಲಿರುವ ಈ ದುರ್ಗೆಯಲ್ಲಿ ವಿಶೇಷ ಸಾನ್ನಿಧ್ಯವಿದೆ.

ತ್ರಿಶೂಲಧಾರಿಣೀ, ಮಹಿಷಾಸುರ ಮರ್ದಿನೀ ಆದ ದುರ್ಗಾದೇವಿಯು ವಿಮಾನಗಿರಿಯಲ್ಲಿ ನೆಲೆಸಿ, ತನ್ನನ್ನು ಭಜಿಸುವವರಿಗೆ ಸ್ವರ್ಗಾಪವರ್ಗಗಳನ್ನು ಕೊಡುತ್ತಿರುವಳು. ಲಕ್ಷ್ಮಿಯು ಪ್ರಳಯಕಾಲದಲ್ಲಿ ಜಲದುರ್ಗೆಯಾಗಿರುವಳು. ಸೃಷ್ಟಿಯ ಆದಿಯಲ್ಲಿ ವೇದದಲ್ಲಿ ವಿಸ್ತಾರ ಹೊಂದಿದವಳು. ಈಗ ಸ್ಥಳದುರ್ಗೆಯಾಗಿರುವಳು ಎಂಬ ಕಾರಣದಿಂದ ಅವಳಲ್ಲಿ ದುರ್ಗಾಪದಮಾತೃತ್ವವು ಯುಕ್ತವಾದದ್ದು ಎಂದು ಶ್ರೀವಾದಿರಾಜರ ಅಭಿಪ್ರಾಯವಾಗಿದೆ.

ಬ್ರಹ್ಮಾದಿಗಳಿಂದಲೂ ತಿಳಿಯಲು ಸುಲಭಳಲ್ಲವಾದ್ದರಿಂದಲೂ, ದುಷ್ಟರಿಂದ ಯಾವ ರೀತಿಯಲ್ಲಿಯೂ ಪಡೆಯಲು ಅಸಾಧ್ಯಳಾದುದರಿಂದಲೂ ಸಜ್ಜನರಿಗೆ ಅಭಯಸ್ಥಾನವಾಗಿರುವುದರಿಂದಲೂ, ನಿಯಾಮಕಳಾಗಿ ಸಕಲ ಹೃದಯಗುಹಾವಾಸಿ-ಯಾದುದರಿಂದಲೂ ದುರ್ಗೆ ಎನಿಸಿರುವಳೆಂದು ಇಲ್ಲಿ ವರ್ಣಿಸಲಾಗಿದೆ.

ಪರಶ್ವಧಧನುರ್ಬಾಣಗದಾತೀರ್ಥೋಪಶೋಭಿತೇ ।
ಗಿರೌ ಯತ್ರ ಸುತಪ್ರೇಮ್ಣೇವಾಸ್ತೇ ನಿತ್ಯಂ ಹರಿಸ್ವಸಾ ॥1॥

ತ್ರಿಶೂಲಧಾರಿಣೀ ದೈತ್ಯಗಜಕುಂಭವಿದಾರಿಣೀ ।
ಗಿರೀಂದ್ರಶಿಖರಾವಾಸಾ ದುರ್ಗಾ ಸ್ವರ್ಗಾಪವರ್ಗದಾ ॥2॥

ಪ್ರಲಯೇ ಜಲದುರ್ಗಾऽಸಿ ಸರ್ಗಾದೌ ಗಿರಿವಿಸ್ತೃತಿಃ ।
ಇದಾನೀಂ ಸ್ಥಲದುರ್ಗಾऽಸಿ ದುರ್ಗೇ ತ್ವಂ ಸದ್ಗುಣಾರ್ಣವೇ ॥3॥

ದುರ್ಜ್ಞೇಯತ್ವಾದ್ದುಃಖದತ್ವಾದ್ದುಷ್ಪ್ರಾಪ್ಯತ್ವಾಚ್ಚ ದುರ್ಜನೈಃ ।
ಸತಾಮಭಯಭೂತ್ವಾಚ್ಚ ದುರ್ಗಾ ತ್ವಂ ಹೃದ್ಗುಹಾಶ್ರಯಾತ್ ॥4॥

॥ ಇತಿ ಶ್ರೀವಾದಿರಾಜತೀರ್ಥವಿರಚಿತಃ ತೀರ್ಥಪ್ರಬಂಧ (ವಿಮಾನಗಿರಿಸ್ಥ) ಶ್ರೀದುರ್ಗಾಸ್ತುತಿಃ ॥

* * * *

## ದುರ್ಗಾಸ್ತವಃ

ಸನ್ನದ್ಧಸಿಂಹಸ್ಕಂಧಸ್ಥಾಂ ಸ್ವರ್ಣವರ್ಣಾಂ ಮನೋರಮಾಮ್ ।
ಪೂರ್ಣೇಂದುವದನಾಂ ದುರ್ಗಾಂ ವರ್ಣಯಾಮಿ ಗುಣಾರ್ಣವಾಮ್ ॥1॥

ಕಿರೀಟ-ಹಾರ-ಗ್ರೈವೇಯ-ನೂಪುರಾಂಗದ-ಕಂಕಣೈಃ ।
ರತ್ನಕಾಂಚ್ಯಾ ರತ್ನಚಿತ್ರ-ಕುಚ-ಕಂಚುಕ-ತೇಜಸಾ ॥2॥

ವಿರಾಜಮಾನಾ ರುಚಿರಾಂಬರಾ ಕಿಂಕಿಣಿಮಂಡಿತಾ ।
ರತ್ನಮೇಖಲಯಾ ರತ್ನವಾಸೋಪರಿ ವಿಭೂಷಿತಾ ॥3॥

ವೀರಶೃಂಖಲಯಾ ಶೋಭಿ-ಚಾರುಪದ-ಸರೋರುಹಾ ।
ರತ್ನಚಿತ್ರಾಂಗುಲೀ-ಮುದ್ರಾ-ರತ್ನಕುಂಡಲಮಂಡಿತಾ ॥4॥

ವಿಚಿತ್ರಚೂಡಾಮಣಿನಾ ರತ್ನೋದ್ಯತ್ತಿಲಕೇನ ಚ ।
ಅನರ್ಘ್ಯನಾಸಾಮಣಿನಾ ಶೋಭಿತಾಸ್ಯ-ಸರೋರುಹಾ ॥5॥

ಭುಜಕೀರ್ತ್ಯಾ ರತ್ನಚಿತ್ರ-ಕಂಠಸೂತ್ರೇಣ ಚಾಂಕಿತಾ ।
ಪದ್ಮಾಕ್ಷಿಣೀ ಸುಬಿಂಬೋಷ್ಠೀ ಪದ್ಮಗರ್ಭಾದಿಭಿಃ ಸ್ತುತಾ ॥6॥

ಕಬರೀಭಾರವಿನ್ಯಸ್ತ-ಪುಷ್ಪ-ಸ್ತಬಕ-ವಿಸ್ತರಾ ।
ಕರ್ಣನೀಲೋತ್ಪಲ-ರುಚಾ ಲಸದ್ಭ್ರೂಮಂಡಲ-ತ್ವಿಷಾ ॥7॥

ಕುಂತಲಾನಾಂ ಚ ಸಂತತ್ಯಾ ಶೋಭಮಾನಾ ಶುಭಪ್ರದಾ ।

ತನುಮಧ್ಯಾ ವಿಶಾಲೋರಃಸ್ಥಲಾ ಪೃಥುನಿತಂಬಿನೀ ॥8॥
ಚಾರುದೀರ್ಘಭುಜಾ ಕಂಬುಗ್ರೀವಾ ಜಂಘಾಯುಗಪ್ರಭಾ ।
ಅಸಿಚರ್ಮ-ಗದಾಶೂಲ-ಧನುರ್ಬಾಣಾಂಕುಶಾದಿನಾ ॥9॥
ವರಾಭಯಾಭ್ಯಾಂ ಚಕ್ರೇಣ ಶಂಖೇನ ಚ ಲಸತ್ಕರಾ ।
ದಂಷ್ಟ್ರಾಗ್ರಭೀಷಣಾಸ್ಯೋತ್ಥ-ಹುಂಕಾರಾರ್ದಿತ-ದಾನವಾ ॥10॥
ಭಯಂಗರೀ ಸುರಾರೀಣಾಂ ಸುರಾಣಾಮಭಯಂಕರೀ ।
ಮುಕುಂದಕಿಂಕರೀ ವಿಷ್ಣುಭಕ್ತಾನಾಂ ಮೌಕ್ತಶಂಕರೀ ॥11॥
ಸುರಸ್ತ್ರೀಕಿಂಕರೀಭಿಶ್ಚ ವೃತಾ ಕ್ಷೇಮಂಕರೀ ಚ ನಃ ।
ಆದೌ ಮುಖೋದ್ಗೀರ್ಣನಾನಾऽಮ್ನಾಯಾ ಸರ್ಗಕರೀ ಪುನಃ ॥12॥
ನಿಸರ್ಗಮುಕ್ತಾ ಭಕ್ತಾನಾಂ ತ್ರಿವರ್ಗಫಲದಾಯಿನೀ ।
ನಿಶುಂಭಕುಂಭಸಂಹರ್ತ್ರೀ ಮಹಿಷಾಸುರಮರ್ದಿನೀ ॥13॥
ತಾಮಸಾನಾಂ ತಮಃಪ್ರಾಪ್ತ್ಯೈ ಮಿಥ್ಯಾಜ್ಞಾನಪ್ರವರ್ತಿಕಾ ।
ತಮೋऽಭಿಮಾನಿನೀ ಪಾಯಾದ್ದುರ್ಗಾ ಸ್ವರ್ಗಾಪವರ್ಗದಾ ॥14॥
ಇಮಂ ದುರ್ಗಾಸ್ತವಂ ಪುಣ್ಯಂ ವಾದಿರಾಜಯತೀರಿತಮ್ ।
ಪಠನ್ ವಿಜಯತೇ ಶತ್ರೂನ್ ಮೃತ್ಯುಂ ದುರ್ಗಾಣಿ ಚೋತ್ತರೇತ್ ॥15॥

॥ ಇತಿ ಶ್ರೀವಾದಿರಾಜಭಗವತ್ಪಾದವಿರಚಿತಾ ದುರ್ಗಾಸ್ತವಃ ಸಮಾಪ್ತಃ ॥

* * * *

## ಆಯುಧಪೂಜೆಯ ಮೊದಲು ತಿಳಿಯಲೇ ಬೇಕಾದ ವಿಚಾರ

* 'ಆಯುಧಾನಾಮಹಂ ವಜ್ರಂ' ಎಂಬುದಾಗಿ ಶ್ರೀಕೃಷ್ಣ ಪರಮಾತ್ಮನು ಭಗವದ್ಗೀತೆಯಲ್ಲಿ ಹೇಳಿದಂತೆ ಎಲ್ಲಾ ಆಯುಧಗಳಲ್ಲಿ ವಜ್ರಾಯುಧವೇ ಶ್ರೇಷ್ಠವಾಗಿದೆ. ಅದರಲ್ಲಿ ಭಗವಂತನು ವಜ್ರ ಎಂಬ ರೂಪದಿಂದ ನೆಲೆಸಿದ್ದಾನೆ. ಆಯುಧಪೂಜೆಯ ದಿವಸದಲ್ಲಿ ಮೊಟ್ಟಮೊದಲು ವಜ್ರಾಯುಧದಲ್ಲಿರುವ ಭಗವಂತನ ವಜ್ರ ಎಂಬ ರೂಪಕ್ಕೆ ಪೂಜೆಯನ್ನು ಸಲ್ಲಿಸಬೇಕು.
* ಆಯುಧಪೂಜೆಯ ದಿವಸ ಮಾತ್ರ ಆಯುಧಗಳಿಗೆ ಪೂಜಿಸುವುದಲ್ಲ. ಪ್ರತಿನಿತ್ಯವೂ ಕೂಡ ಪೂಜಾಸಂದರ್ಭದಲ್ಲಿ ಭಗವಂತನ ಆಯುಧಗಳಿಗೆ ಪೂಜೆಯನ್ನು ಮಾಡಬೇಕು. ''ಚಕ್ರಾಭಿಮಾನಿನ್ಯೈ ದುರ್ಗಾಯೈ ನಮಃ ಶಂಖಾಭಿಮಾನಿನ್ಯೈ ಶ್ರಿಯೇ ನಮಃ ಗದಾಭಿಮಾನಿನ್ಯೈ ಮುಖ್ಯಪ್ರಾಣಾಯ ನಮಃ ಪದ್ಮಾಭಿಮಾನಿನ್ಯೈಭೂಮ್ಯೈ ನಮಃ'' ಈ ನಾಕು ಆಯುಧಗಳಿಗೆ ಪೂಜೆ ಮಾಡಲೇ ಬೇಕು. ಉಳಿದ ಆಯುಧಗಳಿಗೂ ಪೂಜೆ ಸಲ್ಲಿಸಿದರೆ ವಿಶೇಷ ಫಲ ದೊರೆಯುತ್ತದೆ.
* ಆಯುಧಪೂಜೆಯ ದಿವಸ ಭಗವಂತನು ಧರಿಸಿದ ಆಯುಧಗಳಿಗೆ ಮತ್ತು ತದಂತರ್ಯಾಮಿಯಾದ ದೇವತೆಗಳಿಗೆ ಭಗವಂತನ ವಾಹನರಾದ ಗರುಡದೇವರಿಗೆ ಪೂಜೆಯನ್ನು ಸಲ್ಲಿಸಲೇ ಬೇಕು.
* ದುರ್ಗಾದೇವಿಯ ಆಯುಧಗಳಿಗೆ ಪೂಜೆ ಮಾಡಿದ ದಿವಸವಿದು ಎಂಬುದಾಗಿ ಶಾಸ್ತ್ರದಲ್ಲಿ ಹೇಳಲಾಗಿದೆ. ಆದ್ದರಿಂದ ಭಗವಂತನ ಪತ್ನಿಯಾದ ದುರ್ಗಾದೇವಿಯು ಧರಿಸಿದ ಹದಿನಾರು ಆಯುಧಗಳಿಗೆ ಪೂಜೆಯನ್ನು ಸಲ್ಲಿಸಬೇಕು.
* ಸಕಲದೇವತೆಗಳು ಧಾರಣೆ ಮಾಡುವ ಆಯುಧಗಳನ್ನು ಧ್ಯಾನ ಮಾಡಿ, ಮನಸಾ ನಮಿಸಬೇಕು. ಅನಂತರ ಮನೆಯಲ್ಲಿರುವ ಆಯುಧಗಳ ಪೂಜೆಯನ್ನು ಪ್ರಾರಂಭ ಮಾಡಬೇಕು.
* ಆಯುಧಪೂಜೆಯ ಮೊದಲು ಭವಿಷ್ಯಪುರಾಣದಲ್ಲಿ ಶ್ರೀಕೃಷ್ಣ ಪರಮಾತ್ಮನು ಯುಧಿಷ್ಠಿರನಿಗೆ ಉಪದೇಶಿಸಿದ ಆಯುಧಪೂಜೆಯ ಬಗ್ಗೆ ಇರುವ ಶ್ಲೋಕಗಳನ್ನು ಪಾರಾಯಣ ಮಾಡಬೇಕು.

* ಭವಿಷ್ಯಪುರಾಣದಲ್ಲಿರುವ ಶ್ಲೋಕವನ್ನು ಪಠಿಸುತ್ತಾ ಪೂಜೆಯನ್ನು ಮಾಡಬೇಕು.
* ಮನೆಯಲ್ಲಿರುವ ಕತ್ತಿ ಮೊದಲಾದ ಕಬ್ಬಿಣದ ಎಲ್ಲ ಆಯುಧಗಳಿಗೆ ಮತ್ತು ವಾಹನಗಳಿಗೆ ಪೂಜೆಯನ್ನು ಮಾಡಬೇಕು. ಇದರ ಬಗ್ಗೆ ಭವಿಷ್ಯಪುರಾಣವು ನಿಖರವಾಗಿ ಹೇಳಿದೆ.
* ಕೆಲವರು ಆಯುಧಪೂಜೆಯ ದಿವಸ ಆಯುಧಗಳಿಗೆ ಮಾತ್ರ ಪೂಜೆಯೆಂದು ತಿಳಿದಿದ್ದಾರೆ. ಆದರೆ ನಾವು ಕುಳಿತುಕೊಳ್ಳುವ ಆಸನ. ನಾವು ಉಪಯೋಗಿಸುವ ಕತ್ತಿ, ಚಾಕು, ಮೊದಲಾದವು, ವಾಹನ ಎಲ್ಲದಕ್ಕೂ ಪೂಜೆಯನ್ನು ಮಾಡಬೇಕೆಂದು ಶ್ರೀಕೃಷ್ಣನೇ ತಿಳಿಸಿರುತ್ತಾನೆ.
* ವರ್ಷಕ್ಕೆ ಒಮ್ಮೆಯಾದರೂ ಕೂಡ ಈ ಪದಾರ್ಥಗಳಿಗೆ ಪೂಜೆಯನ್ನು ಮಾಡಿ, ತದಂತರ್ಯಾಮಿಯಾದ ಭಗವಂತನ ಉಪಕಾರವನ್ನು ನೆನೆಯುವುದರಿಂದ ಮನೆಯಿಲ್ಲಿ ಅದೆಷ್ಟೋ ಅನಿಷ್ಟಗಳು ಪರಿಹಾರವಾಗಿ ಮಂಗಳವಾಗುತ್ತದೆ.
* ಮತ್ತು ಇವತ್ತಿನ ದಿವಸ ಬೂದುಗುಂಬಳಕಾಯಿಯಿಂದ ದೃಷ್ಟಿ ತೆಗೆಯುವ ವಾಡಿಕೆಯು ಇರುತ್ತದೆ.
* ಮನೆಯ ಪ್ರತಿಯೊಂದು ಕೋಣೆಗಳಿಗೆ ಬೂದುಗುಂಬಳಕಾಯಿಯಿಂದ ದೃಷ್ಟಿಯನ್ನು ತೆಗೆದು ಮನೆಯ ಮುಂದೆ ಈಶಾನ್ಯದಿಕ್ಕಿನಲ್ಲಿ ಕಪ್ಪು ಕಂಬಳಿಯ ದಾರದಿಂದ ಅದನ್ನು ಜೋತುಹಾಕುವ ಸಂಪ್ರದಾಯವಿದೆ. ಹೀಗೆ ಮಾಡುವುದರಿಂದ ಮನೆಗೆ ತಗುಲಿದ ದೃಷ್ಟಿಗಳೆಲ್ಲವೂ ಪರಿಹಾರವಾಗುತ್ತವೆ. ಹೆಚ್ಚು ದೃಷ್ಟಿ ಆದಾಗ ಆ ಕುಂಬಳಕಾಯಿಯು ಕೊಳೆತು ನಾರುತ್ತದೆ. ಆಗ ಅದನ್ನು ತೆಗೆದು ಬೇರೆ ಕುಂಬಳಕಾಯಿಯಿಂದ ದೃಷ್ಟಿಯನ್ನು ತೆಗೆದು ಅದೇ ಸ್ಥಳದಲ್ಲಿ ಇಡಬೇಕು.
* ಎಲ್ಲ ವಾಹನಗಳನ್ನು ಸ್ವಚ್ಛಗೊಳಿಸಿ, ಅವುಗಳಿಗೂ ಕೂಡ ಪೂಜೆಯನ್ನು ಮಾಡಿ, ಕುಂಬಳಕಾಯಿಯಿಂದ ದೃಷ್ಟಿಯನ್ನು ತೆಗೆದು, ನಿಂಬೆಹಣ್ಣಿನಿಂದಲೂ ಕೂಡ ದೃಷ್ಟಿಯನ್ನು ತೆಗೆದು ಪೂಜೆಯನ್ನು ಮಾಡಬೇಕು.

* * * *

**ಆಯುಧಪೂಜೆಯಂದು ಈ ಕೆಳಗೆ ನೀಡಿರುವ ಆಯುಧಗಳನ್ನು ಒಮ್ಮೆ ನೆನೆಸಿಕೊಂಡರೂ ಅದೆಷ್ಟೋ ಉಪದ್ರವಗಳು ಶತ್ರುಗಳು ನಷ್ಟರಾಗುತ್ತಾರೆ.**

## ಹಲಮುಖ ಆಯುಧ ಪ್ರಭೇದಗಳು

೧. ಶಕ್ತಿ, ೨. ಪ್ರಾಸ, ೩. ಕುಂತ, ೪. ಹಾಠಕ, ೫. ಬಿಂಡಿವಾಲ, ೬. ಶೂಲ, ೭. ತೋಮರ, ೮. ವರಾಹಕರ್ಣ, ೯. ಕಣಪ, ೧೦. ತ್ರಾಸಿಕಾ.

## ಧನುಸ್ಸಿನ ಪ್ರಭೇದಗಳು

೧. ಕಾರ್ಮುಕ, ೨. ಕೋದಂಡ, ೩. ದ್ರೋಣ, ೪. ಶಾರ್ಙ್ಗ.

## ಬಾಣದ ಪ್ರಭೇದಗಳು

೧. ಕರ್ಣೀ, ೨. ನಾಲೀಕ, ೩. ವಸ್ತಿ, ೪. ಸೂಚಿ, ೫. ಕಪಿಶಾ, ೬. ಲಿಪ್ತ, ೭. ಗವಾಸ್ತಿ, ೮. ಶ್ಲಿಷ್ಟ, ೯. ಶುರಪ್ರ, ೧೦. ಪೂತಿ, ೧೧. ಜಿಹ್ಮಗ, ೧೨. ವೈಸ್ತಿ, ೧೩. ನಾರಾಚ, ೧೪. ಅರ್ಧ ನಾರಾಚ, ೧೫. ಬಲ್ಲ, ೧೬. ವಿಪಾಟ, ೧೭. ಅಂಜಲಿ, ೧೮. ಅರ್ಧಚಂದ್ರ.

## ಖಡ್ಗಗಳ ಪ್ರಭೇದಗಳು

೧. ನಿಸ್ತ್ರಿಂಶ, ೨. ಮಂಡಲಾಗ್ರ, ೩. ಅಸಿಯಷ್ಟಿ, ೪. ಕಠಾರಿ, ೫. ಭರ್ಜಿ.

## ಕ್ಷುರಕಲ್ಪ

೧. ಪರಶು, ೨. ಕುಠಾರ, ೩. ಪಟ್ಟಿಸ, ೪. ಖನಿತ್ರ, ೫. ಕುದ್ದಾಲ, ೬. ಕ್ರಕಚ, ೭. ಕಾಂಡಚ್ಛೇದನ.

## ಗದೆ

೧. ಕೌಮೋದಕೀ ಮೊದಲಾದ ಮೂರು ಬಗೆ ಇವೆ.

## ಕವಚ ಆವರಣ

೧. ಲೋಪಜಾಲಿಕಾ, ೨. ಲೋಹಪಟ್ಟ, ೩. ಲೋಹಕವಚ, ೪. ಸೂತ್ರ ಕಂಟಕ, ೫. ಶಿಂಶುಮಾರ ಚರ್ಮ, ೬. ಖಾಡ್ಗಿ ಚರ್ಮ, ೭. ಹಸ್ತಿಚರ್ಮ.

## ವಾಹನದಿಂದ ಯಾವುದೇ ತೊಂದರೆಯಾಗದಿರಲು ಹೇಳಿಕೊಳ್ಳಬೇಕಾದ ಮಂತ್ರ

# ಅರಿಷ್ಟನಿವೃತ್ತಿ ಮಂತ್ರ

ಅಪೈತು ಮೃತ್ಯುರಮೃತಂ ನ ಆಗನ್ವೈವಸ್ವತೋ ನೋ ಅಭಯಂ ಕೃಣೋತು । ಪರ್ಣಂ ವನಸ್ಪತೇರಿವಾಭಿನಶ್ಶೀಯತ್ಯಾಗ್ಂ ರಯಿಸ್ಸಚತಾನ್ನಶ್ಶಚೀಪತಿಃ ॥ ಪರಂ ಮೃತ್ಯೋ ಅನುಪರೇಹಿ ಪಂಥಾಂ ಯಸ್ತೇ ಸ್ವಇತರೋ ದೇವಯಾನಾತ್ । ಚಕ್ಷುಷ್ಮತೇ ಶೃಣ್ವತೇ ತೇ ಬ್ರವೀಮಿ ಮಾ ನಃ ಪ್ರಜಾಗ್ಂ ರೀರಿಷೋ ಮೋತ ವೀರಾನ್॥ ವಾತಂ ಪ್ರಾಣಂ ಮನಸಾಽನ್ವಾರಭಾಮಹೇ ಪ್ರಜಾಪತಿಂ ಯೋ ಭುವನಸ್ಯ ಗೋಪಾಃ। ಸ ನೋ ಮೃತ್ಯೋಸ್ತ್ರಾಯತಾಂ ಪಾತ್ವಗ್ಂಹಸೋ ಜ್ಯೋಗ್ಜೀವಾ ಜರಾಮಶೀಮಹಿ॥ ಅಮುತ್ರಭೂಯಾದಧ ಯದ್ಯಮಸ್ಯ ಬೃಹಸ್ಪತೇ ಅಭಿಶಸ್ತೇರಮುಂಚಃ । ಪ್ರತ್ಯೌಹತಾಮಶ್ವಿನಾ ಮೃತ್ಯುಮಸ್ಮಾದ್ದೇವಾನಾಮಗ್ನೇ ಭಿಷಜಾ ಶಚೀಭಿಃ ॥ ಹರಿಗ್ಂ ಹರಂತಮನುಯಂತಿ ದೇವಾ ವಿಶ್ವಸ್ಯೇಶಾನಂ ವೃಷಭಂ ಮತೀನಾಮ್ । ಬ್ರಹ್ಮಸ್ವರೂಪಮನುಮೇದಮಾಗಾದಯನಂ ಮಾ ವಿವಧೀರ್ವಿಕ್ರಮಸ್ವ ॥ ಶಲ್ಕೈರಗ್ನಿಮಿಂಧಾನ ಉಭೌ ಲೋಕೌ ಸನೇಮಹಮ್ । ಉಭಯೋರ್ಲೋಕಯೋರ್ ಋದ್ಧ್ವಾಽತಿ ಮೃತ್ಯುಂ ತರಾಮ್ಯಹಮ್ ॥ ಮಾ ಛಿದೋ ಮೃತ್ಯೋ ಮಾ ವಧೀರ್ಮಾ ಮೇ ಬಲಂ ವಿವೃಹೋ ಮಾ ಪ್ರಮೋಷೀಃ। ಪ್ರಜಾಂ ಮಾ ಮೇ ರೀರಿಷ ಆಯುರುಗ್ರ ನೃಚಕ್ಷಸಂ ತ್ವಾ ಹವಿಷಾ ವಿಧೇಮ ॥ ಮಾ ನೋ ಮಹಾಂತಮುತ ಮಾ ನೋ ಅರ್ಭಕಂ ಮಾ ನ ಉಕ್ಷಂತಮುತ ಮಾ ನ ಉಕ್ಷಿತಮ್ । ಮಾ ನೋ ವಧೀಃ ಪಿತರಂ ಮೋತ ಮಾತರಂ ಪ್ರಿಯಾ ಮಾ ನಸ್ತನುವೋ ರುದ್ರರೀರಿಷಃ ॥ ಮಾ ನಸ್ತೋಕೇ ತನಯೇ ಮಾ ನ ಆಯುಷಿ ಮಾ ನೋ ಗೋಷು ಮಾ ನೋ ಅಶ್ವೇಷು ರೀರಿಷಃ । ವೀರಾನ್ಮಾ ನೋ ರುದ್ರ ಭಾಮಿತೋ ವಧೀರ್ ಹವಿಷ್ಮಂತೋ ನಮಸಾ ವಿಧೇಮ ತೇ ॥

## ಮೃತ್ಯುಂಜಯ ಮಂತ್ರ

ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಮ್ ।
ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಽಮೃತಾತ್ ॥ ಯೇ ತೇ ಸಹಸ್ರಮಯುತಂ ಪಾಶಾ ಮೃತ್ಯೋ ಮರ್ತ್ಯಾಯ ಹಂತವೇ । ತಾನ್, ಯಜ್ಞಸ್ಯ ಮಾಯಯಾ ಸರ್ವಾನವಯಜಾಮಹೇ ॥ ಮೃತ್ಯವೇ ಸ್ವಾಹಾ ಮೃತ್ಯವೇ ಸ್ವಾಹಾ ॥

* * * * *

## ಭವಿಷ್ಯಪುರಾಣದಲ್ಲಿ ಮಹಾನವಮಿ ಆಚರಣೆ

### ॥ ಶ್ರೀ ಕೃಷ್ಣ ಉವಾಚ ॥

ಪುಣ್ಯಾ ಮಹಾನವಮ್ಯಸ್ತಿ ತಿಥೀನಾಂ ಪ್ರವರಾ ತಿಥಿಃ ।
ಸಾನುಷ್ಠೇಯಾ ಸುರೈಸ್ಸರ್ವೈಃ ಪ್ರಜಾಪಾಲೈರ್ವಿಶೇಷತಃ ॥೧॥

ಶ್ರೀಕೃಷ್ಣನು ಹೇಳುತ್ತಾನೆ - ತಿಥಿಗಳಲ್ಲಿ ಮಹಾನವಮಿಯೆಂಬುದು ಶ್ರೇಷ್ಠವೂ ಪುಣ್ಯಕರವೂ ಆಗಿದೆ. ಆ ತಿಥಿಯಲ್ಲಿ ಆಚರಿಸಬೇಕೆಂದು ಉತ್ತಮವಾಗಿರುವ ವ್ರತಾದಿಗಳನ್ನು ದೇವತೆಗಳೂ ಸಹ ಅನುಷ್ಠಾನ ಮಾಡತಕ್ಕದ್ದಾಗಿದೆ. ಸುಕೃತವಿಶೇಷದಿಂದ ರಾಜರಾದವರು ಅದನ್ನು ವಿಶೇಷರೀತಿಯಿಂದ ವೈಭವವಾಗಿ ಆಚರಿಸಬೇಕು.

ಭವಾನುತ್ಥಾಪಯೇತ್ಪಾರ್ಥ ಸಂವತ್ಸರಸುಖಾಯ ವೈ ।
ಭೂತಪ್ರೇತಪಿಶಾಚಾನಾಂ ಪ್ರೀತ್ಯರ್ಥಂ ಚೋತ್ಸವಾಯ ವಾ ॥೨॥

ಅಯ್ಯಾ ಕುಂತೀಪುತ್ರನೇ ! ಸಂವತ್ಸರದಲ್ಲೆಲ್ಲಾ ಸುಖವಾಗಿರುವುದಕ್ಕಾಗಿಯೂ ಭೂತಪ್ರೇತ ಪಿಶಾಚಿಗಳ ಪ್ರೀತ್ಯರ್ಥವಾಗಿಯೂ ಅಥವಾ ಅವುಗಳ ಉತ್ಸವಾರ್ಥವಾಗಿಯೂ ನೀನೂ ಇದನ್ನು ಆಚರಿಸಬೇಕು ಎಂದನು.

## ಮಹಾನವಮಿ ಹೆಸರು ಬರಲು ಏನು ಕಾರಣ?

॥ ಯುಧಿಷ್ಠಿರ ಉವಾಚ ॥

ಕಸ್ಮಾತ್ಕಾಲಾತ್ಪ್ರವೃತ್ತೇಯಂ ನವಮೀ ಮಹಶಬ್ದಯಕ್ ।
ಕಿಮಾದಾವುಪಪನ್ನೋಽಸ್ತಿ ಭಗವನ್ನವಮೀವಿಧಿಃ ॥೩॥

ಯುಧಿಷ್ಠಿರನು ಹೇಳುತ್ತಾನೆ - ಷಡ್ಗುಣೈಶ್ವರ್ಯಸಂಪನ್ನನಾದ ದೇವನೇ ! ಈ ನವಮಿಯು ಮಹತ್‌ಶಬ್ದದಿಂದ ಕೂಡಿದ್ದಾಗಿ ಯಾವ ಕಾಲದಿಂದ ರೂಢಿಗೆ ಬಂದಿತು? ನವಮಿ ವಿಧಿಯು ಆದಿಯಿಂದಲೂ ಬಂದಿದೆಯೆ?

ಯಶೋದಾಗರ್ಭಸಂಭೂತೇರುತ ಯಾತ್ರಾ ಪ್ರವರ್ತತೇ ।
ಉತಾಹೋ ಪೂರ್ವಮೇವಾಸೀತ್ಕೃತತ್ರೇತಾಯುಗಾದಿಷು ॥

ಯಶೋದಾ ಗರ್ಭದಲ್ಲಿ ಹುಟ್ಟಿದಾಗಿನಿಂದ ಬಂತೇ ? ಅಥವಾ ಚೈತ್ರಯಾತ್ರೆಯಾದ ಬಳಿಕ ಬಂದಿತೇ ? ಅಥವಾ ಕೃತ, ತ್ರೇತಾ ಮುಂತಾದ ಹಿಂದಿನ ಯುಗಗಳಲ್ಲಿಯೂ ಇದ್ದಿತ್ತೇ?

## ಶ್ರೀಕೃಷ್ಣನು ನೀಡಿದ ಉತ್ತರ

॥ ಶ್ರೀ ಕೃಷ್ಣ ಉವಾಚ ॥

ಪಾರ್ಥ ಯಾ ಪರಮಾ ಶಕ್ತಿರನಂತಾ ಲೋಕವಿಶ್ರುತಾ ।
ಅದ್ಯಾ ಸರ್ವಗತಾ ಶುದ್ಧಾ ಭಾವಗಮ್ಯಾ ಮನೋಹರಾ ॥

ಶ್ರೀಕೃಷ್ಣನು ಹೇಳುತ್ತಾನೆ - ಅಯ್ಯಾ ಕುಂತೀಪುತ್ರನೇ ! ಲೋಕ ವಿಖ್ಯಾತವೂ ಅನಂತವೂ ಶ್ರೇಷ್ಠವೂ ಆದ ಆದಿಯೆಂಬ ಮೊದಲನೆಯದು ಸರ್ವದಲ್ಲಿಯೂ ಸೇರಿಕೊಂಡುದೂ ಶುದ್ಧವೂ ಭಾವನೆಗೆ ಮಾತ್ರ ಒಳಪಡತಕ್ಕದ್ದೂ ಮನೋಹರವೂ ಆಗಿದೆ.

## ನವರಾತ್ರಿ ನವದುರ್ಗೆ ಆರಾಧನೆ

ಆದ್ಯಾಷ್ಟಮೀ ಕಲಾಕಾಲೀ ದ್ವಿತೀಯಾ ಸರ್ವಮಂಗಳಾ ।
ಮಾಯಾ ಕಾತ್ಯಾಯನೀ ದುರ್ಗಾ ಚಾಮುಂಡಾ ಶಂಕರಪ್ರಿಯಾ ॥

ಧ್ಯಾಯಂತಿ ಯಾಂ ಯೋಗರತಾಂ ಸಾ ದೇವೀ ಪರಮೇಶ್ವರೀ ।
ರೂಪಭೇದೈರ್ನಾಮಭೇದೈರ್ಭವಾನೀ ಪೂಜ್ಯತೇ ಶಿವಾ ॥

ಮೊದಲನೆಯದಾಗಿ ಅಷ್ಟಮಿಯಲ್ಲಿರುವ ಆ ಕಲೆಯನ್ನು ಕಾಲೀ ಎಂದೂ, ಎರಡನೆಯದನ್ನು ಸರ್ವಮಂಗಳೇ ಎಂದೂ, ಹೀಗೆಯೇ ಮಾಯಾ ಕಾತ್ಯಾಯನೀ, ದುರ್ಗಾ, ಚಾಮುಂಡಾ, ಶಂಕರಪ್ರಿಯಾ, ಭವಾನೀ, ಪರಮೇಶ್ವರೀ ಮುಂತಾದ ನಾನಾ ಹೆಸರುಗಳಿಂದಲೂ ನಾನಾ ರೂಪಗಳಿಂದಲೂ ಯೋಗಸ್ಥೆಯಾದ ಆ ಮಂಗಳಸ್ವರೂಪಳು ಧ್ಯಾನಿಸಲ್ಪಡುತ್ತಾಳೆ ಮತ್ತು ಪೂಜಿಸಲ್ಪಡುತ್ತಾಳೆ.

ಅಷ್ಟಮ್ಯಾಂ ತು ನವಮ್ಯಾಂ ತು ದೇವದಾನವರಾಕ್ಷಸೈಃ ।
ಗಂಧರ್ವೈರುರಗೈರ್ಯಕ್ಷೈಃ ಪೂಜ್ಯತೇ ಕಿನ್ನರೈರ್ನರೈಃ ॥

ಈ ಅಷ್ಟಮಿ ನವಮಿಗಳಲ್ಲಿ ದೇವತೆಗಳು, ದಾನವರು, ರಾಕ್ಷಸರು, ಗಂಧರ್ವರು, ಉರುಗರು, ಯಕ್ಷರು, ಕಿನ್ನರರು, ಮಾನವರು, ಇವರುಗಳೆಲ್ಲರೂ ದೇವಿಯನ್ನು ವಿಶೇಷವಾಗಿ ಪೂಜಿಸುತ್ತಾರೆ.

ಅನ್ಯೇಷ್ವಪಿ ಯುಗೇಷ್ವಾದೌ ಸೃಷ್ಟೇಃ ಪೂರ್ವಂ ಪ್ರದರ್ಶಿತಾ ।
ಪೂಜ್ಯತೇಯಂ ಪುರಾ ದೇವೀ ತೇಭ್ಯಃ ಪೂರ್ವತರೈಃ ಶುಭೈಃ ॥

ಇದಕ್ಕಿಂತ ಹಿಂದಿನ ಇತರ ಯುಗಗಳಲ್ಲಿಯೂ ಸೃಷ್ಟಿಗಿಂತ ಪೂರ್ವದಲ್ಲಿಯೂ ಶುಭಲಕ್ಷಣರಾದ ಅತಿ ಪ್ರಾಚೀನವ್ಯಕ್ತಿಗಳು ಈ ದೇವಿಯನ್ನು ಈ ತಿಥಿಯಲ್ಲಿ ಆರಾಧಿಸಿದ್ದಾರೆ.

## ಮಹಾನವಮಿಯ ಆಚರಣೆ ಯಾವಾಗ ?

ಆಶ್ವಯುಜ್ಶುಕ್ಲಪಕ್ಷೇ ಚ ಯಾಽಷ್ಟಮೀ ಮೂಲಸಂಯುತಾ ।
ಸಾ ಮಹಾನವಮೀ ನಾಮ ತ್ರೈಲೋಕ್ಯೇಽಪಿ ಸುದುರ್ಲಭಾ ॥

ಆಶ್ವಯುಜಮಾಸದಲ್ಲಿ ಶುಕ್ಲಪಕ್ಷದಲ್ಲಿ ಮೂಲಾನಕ್ಷತ್ರಯುಕ್ತವಾದ ಅಷ್ಟಮಿಯ ಮಾರನೆಯದಿನದ ನವಮಿಯು ಮಹಾನವಮಿಯೆಂದು ಹೆಸರುಳ್ಳದ್ದಾಗಿದೆ. ಮೂರುಲೋಕಗಳಲ್ಲಿಯೂ ಸರ್ವಶ್ರೇಷ್ಠವಾಗಿದೆ.

ಕನ್ಯಾಗತೇ ಸವಿತರಿ ಶುಕ್ಲಪಕ್ಷೇಽಷ್ಟಮೀ ತು ಯಾ ।
ಮೂಲಾನಕ್ಷತ್ರಸಂಯುಕ್ತಾ ಸಾ ಮಾಹಾನವಮೀ ಸ್ಮೃತಾ ॥

ಸೂರ್ಯನು ಕನ್ಯಾರಾಶಿಗೆ ಬಂದಿರುವಾಗ ಶುಕ್ಲಪಕ್ಷದಲ್ಲಿ ಬರುವ ಅಷ್ಟಮಿಯು ಮೂಲಾನಕ್ಷತ್ರಯುಕ್ತವಾಗಿದ್ದರೆ ಆ ಮುಂದಿನ ನವಮಿಯು ಮಹಾನವಮಿಯೆನಿಸುವುದು ಎಂಬುದು ಒಂದುಮತ.

ಅಷ್ಟಮ್ಯಾಂ ಚ ನವಮ್ಯಾಂ ಚ ಜಗನ್ಮಾತರಮಂಬಿಕಾಂ ।
ಪೂಜಯಿತ್ವಾಽಽಶ್ವಿನೇ ಮಾಸಿ ವಿಶೋಕೋ ಜಯತಿ ದ್ವಿಷಃ ॥

ಆಶ್ವಯುಜಮಾಸದ ಶುಕ್ಲಪಕ್ಷದಲ್ಲಿ ಮೂಲಾನಕ್ಷತ್ರಯುಕ್ತವಾದ ಅಷ್ಟಮಿ ನವಮಿಗಳಲ್ಲಿ ಲೋಕಮಾತೆಯಾದ ಅಂಬಿಕೆಯನ್ನು ಪೂಜಿಸಿದ ಮಾನವನು ಶತ್ರುಗಳನ್ನೆಲ್ಲಾ ಗೆದ್ದು ದುಃಖರಹಿತನಾಗಿ ವಿರಾಜಿಸುತ್ತಾನೆ.

## ಮಹಾನವಮಿಯಂದು ಮಹಾದೇವಿಯ ಪೂಜೆ

ಸಂತರ್ಜಯಂತೀ ಹುಂಕಾರಃ ಖಡ್ಗಾದಿಭಿರಹರ್ನಿಶಂ ।
ನವಮ್ಯಾಂ ಪೂಜಿತಾ ದೇವೀ ದದಾತಿ ನವಮಂ ಫಲಂ ॥

ಖಡ್ಗ ಮೊದಲಾದವುಗಳನ್ನು ಧರಿಸಿ ಹುಂಕಾರ ಶಬ್ದ ಮಾಡುತ್ತಿರುವ ಭಯಂಕರೆಯಾದ ದೇವಿಯನ್ನು ನವಮಿಯ ದಿವಸ ಹಗಲೂ ರಾತ್ರಿಯೂ ಪೂಜಿಸಿದರೆ ಆ ದೇವಿಯು ನವಫಲವನ್ನು ಕೊಡುವಳು.

ಸಾ ಪುಣ್ಯಾ ಸಾ ಪವಿತ್ರಾ ಸಾ ಧರ್ಮಸುಖದಾಯಿನೀ ।
ತಸ್ಮಾತ್ಸದಾ ಪೂಜನೀಯಾ ಚಾಮುಂಡಾಮುಂಡಮಾಲಿನೀ ॥

ಆ ದೇವಿಯು ಪುಣ್ಯಸ್ವರೂಪಿಣಿಯೂ ಪರಿಶುದ್ಧೆಯೂ ಎನಿಸಿ ಧರ್ಮವಿರುದ್ಧವಲ್ಲದ ಸುಖವನ್ನು ಕೊಡತಕ್ಕವಳು. ಆದುದರಿಂದ ರುಂಡಮಾಲಾ ಧಾರಿಣಿಯಾದ ಆ ಚಾಮುಂಡಾಂಬೆಯನ್ನು ಯಾವಾಗಲೂ ಪೂಜಿಸಬೇಕು. (ಬೇರೆ ವಿಷಯವಿದ್ದದ್ದರಿಂದ ಮುಂದಿನ ೪ ಶ್ಲೋಕ ಬಿಟ್ಟಿದೆ).

## ಪ್ರಾಚೀನಕಾಲದಿಂದಲೂ ಮಹಾನವಮೀ

ಮನ್ವಂತರೇಷು ಸರ್ವೇಷು ಕಲ್ಪೇಷು ಕುರುನಂದನ ।
ತೇಷು ಸರ್ವೇಷು ಚೈವಾಸೀನ್ನವಮೀಯಂ ಪುರಾರ್ಚಿತಾ ॥

ಅಯ್ಯಾ ಕುರುವಂಶೋದ್ಭವನೇ ! ಪ್ರಾಚೀನ ಕಾಲದಿಂದಲೂ ಸಮಸ್ತ ಮನ್ವಂತರಗಳಲ್ಲಿಯೂ ಸಮಸ್ತ ಕಲ್ಪಗಳಲ್ಲಿಯೂ ಈ ನವಮಿಯು ಪೂಜ್ಯವೆನಿಸಿಕೊಂಡಿದೆ.

ಪ್ರಸಿದ್ಧಾನಾದಿನಿಧನಾ ವರ್ಷೇವರ್ಷೇ ಯುಧಿಷ್ಠಿರ ।
ಭೂಯೋಭೂಯೋಽವತಾರೈಶ್ಚ ಭವಾನೀ ಪೂಜ್ಯತೇ ಸುರೈಃ ॥

ಆದ್ಯಂತರಹಿತಳೂ, ಪ್ರಸಿದ್ಧಳೂ, ಆದ ಭವಾನಿಯು ಪ್ರತೀವರ್ಷವೂ ಅವತಾರವನ್ನೆತ್ತುತ್ತ ದೇವತೆಗಳಿಂದ ಮತ್ತೆ ಪೂಜಿತೆಯಾಗುತ್ತಾಳೆ.

ಅವತೀರ್ಣಾ ಭುವಿ ಸದಾ ನಿತ್ಯಂ ದೈತ್ಯನಿಬರ್ಹಿಣೇ ।
ಸ್ವರ್ಗಪಾತಾಲಮಧ್ಯೇಷು ಕರೋತಿ ಸ್ಥಿತಿಪಾಲನಂ ॥

ಆ ದೇವಿಯು ಹೀಗೆ ಅವತರಿಸಿ ದೈತ್ಯರನ್ನು ಧ್ವಂಸಮಾಡುತ್ತಾ ಸ್ವರ್ಗ ಮರ್ತ್ಯ ಪಾತಾಳ ಎಂಬ ಲೋಕತ್ರಯಗಳನ್ನೂ ಸುಸ್ಥಿತಿಯಲ್ಲಿ ರಕ್ಷಣೆ ಮಾಡುತ್ತಾಳೆ.

## ಯಶೋದೆಯಲ್ಲಿ ಅವತರಿಸಿದ ದುರ್ಗೆ

ಪುನಶ್ಚೈಷಾ ಮಹಾದೇವೀ ಯಶೋದಾಗರ್ಭಸಂಭವಾ ।
ಕಂಸಾಸುರಸ್ಯೋತ್ತಮಾಂಗೇ ಪಾದಂ ದತ್ವಾ ಗತಾಯುಷಃ ॥

ಈ ದೇವಿಯು ಯಶೋದೆಯ ಗರ್ಭದಲ್ಲಿ ಜನಿಸಿದಾಗ ಕಂಸಾಸುರನ ತಲೆಯನ್ನು ಮೆಟ್ಟಿ ಧ್ವಂಸ ಮಾಡಿಸಿದಳು.

ತತಃ ಪ್ರಭೃತಿ ಲೋಕೇಷು ಯಶೋದಾನಂದದಾಯಿನೀಂ ।
ವಿಂಧ್ಯಾಚಲೇ ಸ್ಥಾಪಯಿತ್ವಾ ಪುನಃ ಪೂಜಾ ಪ್ರವರ್ತಿತಾ ॥

ಅದು ಮೊದಲುಗೊಂಡು ಲೋಕಗಳಿಗೆ ಯಶಃಪ್ರದೆಯೂ ಆನಂದದಾಯಿನಿಯೂ ಆದ ಈ ದೇವಿಯನ್ನು ವಿಂಧ್ಯಪರ್ವತದಲ್ಲಿ ಸ್ಥಾಪಿಸಿ ಪೂಜಿಸತೊಡಗಿದರು.

ಪೂರ್ವಪ್ರವೃದ್ಧೋऽಪಿ ಪುನರ್ಭಗಿನ್ಯಾ ಮಹಿಮಾ ಕೃತಃ ।
ಭುವಿ ಸರ್ವೋಪಕಾರಾಯ ಸರ್ವೋಪದ್ರವಶಾಂತಯೇ ॥

ಹಿಂದಿನ ಕಾಲದಲ್ಲಿ ತನ್ನ ಮಹಿಮೆಯನ್ನು ಸಮೃದ್ಧಿಯಾಗಿ ತೋರಿಸಿದ ದೇವಿಯು ಈಗ ಭೂಲೋಕದಲ್ಲಿ ಸಮಸ್ತ ಉಪದ್ರವಗಳೂ ಶಾಂತವಾಗಿ ಸರ್ವರಿಗೂ ಉಪಕಾರವಾಗುವಂತೆ ತನ್ನ ಸಹೋದರಿಯ ಮಹಿಮೆ ತೋರುವಂತೆ ಮಾಡಿದಳು.

## ನವರಾತ್ರಿಯಲ್ಲಿ ಉಪವಾಸ

ಏವಂ ವಿಂಧ್ಯೋಪವಾಸಿನ್ಯಾ ನವರಾತ್ರೋಪವಾಸಿನಃ ।
ಏಕ ರಾತ್ರೇಣ ನಕ್ತೇನ ಸ್ವಶಕ್ತ್ಯಾಯಾಚಿತೇನ ವಾ ॥

ಈ ಪ್ರಕಾರ ವಿಂಧ್ಯವಾಸಿನಿಯ ಪ್ರೀತ್ಯರ್ಥವಾಗಿ ಒಂಬತ್ತು ರಾತ್ರೆಗಳಲ್ಲೂ ಉಪವಾಸ, ಇಲ್ಲವೇ ಒಂದು ರಾತ್ರಿ ಉಪವಾಸ ಅಥವಾ ನಕ್ತ ಭೋಜನ, ಅಯಾಚಿತವಾಗಿ ದೊರೆತ ಆಹಾರಸೇವನೆ ಈ ರೀತಿ ಶಕ್ತಿಯಿದ್ದಷ್ಟು ಮಟ್ಟಿಗೆ ಆರಾಧಿಸುವುದು.

ಯಜನ್ಯೈರ್ಯಾಜನ್ಯೈರ್ದೇವಾಃ ಸ್ಥಾನೇ ಸ್ಥಾನೇ ಪುರೇಪುರೇ ।
ಗೃಹೇ ಗೃಹೇ ಭಕ್ತಿಪರ್ರೈಗ್ರಾಮೇಗ್ರಾಮೇ ವನೇವನೇ ॥

ತಾವೇ ಪೂಜಿಸುವುದು ಇತರರಿಂದ ಪೂಜೆ ಮಾಡಿಸುವುದು, ಈ ಕಾರ್ಯಗಳನ್ನು ಎಲ್ಲಾ ನಗರಗಳಲ್ಲಿ ಗ್ರಾಮಗಳಲ್ಲಿ ಮನೆಮನೆಗಳಲ್ಲಿ ಪ್ರತಿಯೊಂದು ವನಗಳಲ್ಲಿಯೂ ಆಚರಿಸಬೇಕು.

ಸ್ನಾತೈಃ ಪ್ರಮುದಿತೈರ್ಹೃಷ್ಟೈರ್ಬ್ರಾಹ್ಮಣೈಃ ಕ್ಷತ್ರಿಯೈರ್ನೃಪೈಃ ।
ವೈಶ್ಯೈಃ ಶೂದ್ರೈರ್ಭಕ್ತಿ ಚಿತ್ತೈ ರ್ಮ್ಲೇಚ್ಛೈರನ್ಯೈಶ್ಚ ಮಾನವೈಃ ॥

ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಮ್ಲೇಚ್ಛರು ಮೊದಲಾದ ಸಕಲ ಮಾನವರೂ ಸ್ತ್ರೀಯರೂ ಸ್ನಾನಮಾಡಿ ಮನಸ್ಸಿನಲ್ಲಿ ಹರ್ಷಯುಕ್ತರಾಗಿ ಭಕ್ತಿಯಿಂದ ಕೂಡಿ ಆಚರಿಸಬೇಕಾದ ವಿಧಾನವನ್ನು ಹೇಳುತ್ತೇನೆ ಕೇಳು.

## ಪ್ರತಿಪತ್ ತಿಥಿಯಿಂದ ಹೀಗೆ ಮಾಡಬೇಕು

ಸ್ತ್ರೀಭಿಶ್ಚ ಕುರುಶಾರ್ದೂಲ ತದ್ವಿಧಾನಮಿದಂ ಶೃಣು ।
ಜಯಾಭಿಲಾಷೀ ನೃಪತಿಃ ಪ್ರತಿಪತ್ಪ್ರಭೃತಿಕ್ರಮಾತ್ ॥

ಜಯಶಾಲಿಯಾಗಬೇಕೆಂದು ಅಪೇಕ್ಷಿಸುವ ರಾಜನು ಅಶ್ವಯುಜ ಶುಕ್ಲಪ್ರತಿಪತ್ತು ಮೊದಲುಗೊಂಡು ಅಷ್ಟಮೀ ಪರ್ಯಂತ ಲೋಹಾಭಿಹಾರಿಕವೆಂಬ ಕರ್ಮವನ್ನು ಮಾಡಿಸಬೇಕು. (ಈ ಲೋಹಾಭಿಹಾರಿಕ ಕರ್ಮದ ವಿಧಾನವನ್ನು ಈ ಮುಂದೆ ಹೇಳಿದೆ.)

ಲೋಹಾಭಿಹಾರಿಕಂ ಕರ್ಮ ಕಾರಯೇದ್ಯಾವದಷ್ಟಮಿ ।
ಪ್ರಾಗುದಕ್ಪ್ರವಣೇ ದೇಶೇ ಪತಾಕಾಭಿರಲಂಕೃತಂ ॥

ಪೂರ್ವಕ್ಕೂ ಉತ್ತರಕ್ಕೂ ಇಳಿಜಾರಾಗಿರುವ ಪ್ರದೇಶದಲ್ಲಿ ಒಂಬತ್ತು ಹಸ್ತ ಏಳುಹಸ್ತ ಪ್ರಮಾಣವುಳ್ಳ ಸೊಗಸಾದ ಮಂಟಪವನ್ನು ರಚಿಸಿ, ಅದನ್ನು ಪತಾಕೆಗಳಿಂದ ಅಲಂಕರಿಸಬೇಕು. ಅದರ ಆಗ್ನೇಯ ಮೂಲೆಯಲ್ಲಿ ಒಂದು ಹಸ್ತ ಪ್ರಮಾಣದ ಚತುರಸ್ರಕುಂಡವನ್ನು ಶುಭಲಕ್ಷಣಯುತವಾಗಿ ರಚಿಸಬೇಕು.

## ಮಂಟಪ ರಚನೆ

ಮಂಡಪಂ ಕಾರಯೇದ್ದಿವ್ಯಂ ನವಸಪ್ತಕರಂ ವರಂ ।
ಆಗ್ನೇಯ್ಯಾಂ ಕಾರಯೇತ್ಕುಂಡಂ ಹಸ್ತಮಾತ್ರಂ ಸುಶೋಭನಂ ॥

ಅದಕ್ಕೆ ಮೂರು ಮೇಖಲೆಯನ್ನು ರಚಿಸಬೇಕು. ಅಭಯಪ್ರದವಾದ ಕುಂಡಯೋನಿಯನ್ನು ಅಶ್ವತ್ಥಪತ್ರಾಕೃತಿಯಾಗಿ ರಚಿಸಬೇಕು. ಬಳಿಕ ಆ ಕುಂಡದಲ್ಲಿ ಅಗ್ನಿಯಲ್ಲಿ ಪ್ರತಿಷ್ಠೆ ಮಾಡಬೇಕು.

## ನವಮಿಯಂದು ಹೀಗೆ ಮಾಡಬೇಕು

ಮೇಖಲಾತ್ರಯಸಂಯುಕ್ತಂ ಯೋನ್ಯಶ್ವತ್ಥದಲಾಭಯಾ ।
ರಾಜಚಿಹ್ನಾನಿ ಸರ್ವಾಣಿ ಶಸ್ತ್ರಾಣ್ಯಸ್ತ್ರಾಣಿ ಯಾನಿ ಚ ॥

ಅಸ್ತ್ರಗಳು ಶಸ್ತ್ರಗಳು ಇತರ ರಾಜಮರ್ಯಾದೆಯ ವಸ್ತುಗಳು ಇವನ್ನು ತರಿಸಿ ಆ ಮಂಟಪದಲ್ಲಿ ಅಧಿವಾಸ ಮಾಡಬೇಕು.

## ಆಯುಧಹೋಮ

ಆನೀಯ ಮಂಡಪೇ ತಾನಿ ಸರ್ವಾಣ್ಯೇವಾಧಿವಾಸಯೇತ್ ।
ತತಸ್ತು ಬ್ರಾಹ್ಮಣಃ ಸ್ನಾತಃ ಶುಕ್ಲಾಂಬರಧರಃ ಶುಚಿಃ ॥

ಸ್ನಾನ ಮಾಡಿ ಶುಭ್ರವಾದ ಮಡಿವಸ್ತ್ರಗಳನ್ನು ಧರಿಸಿದ ಬ್ರಾಹ್ಮಣರು ಓಂಕಾರಪೂರ್ವಕವಾಗಿ ಆಯಾ ಆಯುಧಗಳಿಗೆ ಉಕ್ತವಾದ ಮಂತ್ರವನ್ನುಚ್ಚರಿಸುತ್ತಾ ಅದರ ಅಭಿಮಾನಿದೇವತೆಗೆ ಆಜ್ಯಾಹುತಿಗಳನ್ನು ಕೊಡಬೇಕು.

## ಲೋಹಾಸುರನೇ ಲೋಹನಾದನು

ಓಂಕಾರಪೂರ್ವಕೈರ್ಮಂತ್ರೈಸ್ತಲ್ಲಿಂಗೈರ್ಜುಹುಯಾದ್ ಘೃತಂ ।
ಲೋಹನಾಮಾಭವತ್ಪೂರ್ವಂ ದಾನವಸ್ತು ಮಹಾಬಲಃ ॥
ಸ ದೈವೈಃ ಸಮರೇ ಕ್ರುದ್ಧೈರ್ಬಹುಧಾ ಶಕಲೀಕೃತಃ ।
ತದಂಗಸಂಭವಂ ಲೋಹಂ ಯತ್ಸರ್ವಂ ದೃಶ್ಯತೇ ಕ್ಷಿತೌ ॥

ಪೂರ್ವಕಾಲದಲ್ಲಿ ಮಹಾಪರಾಕ್ರಮಿಯಾದ ಲೋಹಾಸುರನೆಂಬ ದಾನವನಿದ್ದನು. ಅವನು ಮಾಡುವ ಘಾತುಕಕೃತ್ಯಗಳಿಂದ ದೇವತೆಗಳಿಗೆ ಕೋಪ ಬಂದಿತು. ಅವರು ಯುದ್ಧದಲ್ಲಿ ಅವನ ದೇಹವನ್ನು ಭಿನ್ನಭಿನ್ನವಾಗಿ ಮಾಡಿದರು. ಅವನ ದೇಹದ ಚೂರುಗಳೇ ಈ ಲೋಕದಲ್ಲಿ ಲೋಹಗಳಾಗಿ ಕಾಣುತ್ತಿವೆ.

## ಆಯುಧಹೋಮ ಎಂದರೆ ಶಸ್ತ್ರಾಸ್ತ್ರಮಂತ್ರ ಹೋಮ

ಶಸ್ತ್ರಾಸ್ತ್ರಮಂತ್ರೈರ್ಹೋತವ್ಯಂ ಪಾಯಸಂ ಘೃತಸಂಯುತಂ ।
ಹುತಶೇಷಂ ತುರಂಗಾಣಾಂ ಗಜಾನಾಮುಪಹಾರಯೇತ್ ॥

ಶಸ್ತ್ರಮಂತ್ರಗಳನ್ನು ಅಸ್ತ್ರಮಂತ್ರಗಳನ್ನು ಉಚ್ಚರಿಸುತ್ತಾ ಘೃತ ಮಿಶ್ರವಾದ ಪಾಯಸದ ಆಹುತಿಯಿಂದ ಹೋಮ ಮಾಡಬೇಕು. ಹೋಮ ಮಾಡಿ ಉಳಿದುದನ್ನು ಸೇನೆಯ ಆನೆ ಕುದುರೆಗಳಿಗೆ ಉಪಹಾರವಾಗಿ ಕೊಡಬೇಕು.

## ಲೋಹಾಭಿಹಾರಿಕಕರ್ಮ

ಲೋಹಾಭಿಹಾರಿಕಂ ಕರ್ಮ ತೇನೈತದೃಷಿಭಿಃ ಸ್ಮೃತಂ ।
ಬದ್ಧಪ್ರತಿಶರವ್ಯಂ ಚ ಗಜಾಶ್ವಸಮಲಂಕೃತಂ ॥

ಈ ಕರ್ಮವನ್ನೇ ಋಷಿವರ್ಯರು ಲೋಹಾಭಿಹಾರಿಕ ಕರ್ಮವೆನ್ನುವರು. ಧನುಸ್ಸು, ಶರ, ಖಡ್ಗ ಈ ಶಸ್ತ್ರಸಜ್ಜಿತರಾದ ಯೋಧರು ಹತ್ತಿದ ಆನೆ ಕುದುರೆಗಳನ್ನು ಅಲಂಕರಿಸಿ ನಂದಿವಾದ್ಯಘೋಷಸಮೇತ ಪ್ರತಿನಿತ್ಯವೂ ನಗರದ ಬೀದಿಗಳಲ್ಲೆಲ್ಲಾ ಮೆರವಣಿಗೆ ಮಾಡಿಸಬೇಕು.

ಗ್ರಾಮಯೇನ್ನಗರೇ ನಿತ್ಯಂ ನಂದಿಘೋಷಪುರಸ್ಸರಂ ।
ಪ್ರತ್ಯಹಂ ನೃಪತಿಃ ಸ್ನಾತ್ವಾ ಸಂಪೂಜ್ಯ ಪಿತೃದೇವತಾಃ ॥

ರಾಜನೂ ಸಹ ಸ್ನಾನ ಮಾಡಿ ನಿತ್ಯಕರ್ಮಾದಿಗಳನ್ನು ನೆರವೇರಿಸಿ ಪ್ರತಿದಿನವೂ ಪಿತೃದೇವತಾಪೂಜೆ ಮಾಡಬೇಕು.

## ವಟುವಿಗೆ ಭಿಕ್ಷಾನ್ನ ನೀಡಬೇಕು

ಪೂಜಯೇದ್ರಾಜಚಿಹ್ನಾನಿ ಫಲಮಾಲ್ಯಾನುಲೇಪನೈಃ ।
ಹುತಶೇಷಂ ಪ್ರದಾತವ್ಯಮೌಪನಾಯನಿಕೇ ದ್ವಿಜೇ ॥

ಬಳಿಕ ರಾಜಚಿಹ್ನೆಗಳಾದ ವಸ್ತುಗಳನ್ನು ಗಂಧಮಾಲ್ಯಾದಿಗಳಿಂದಲೂ ಫಲನಿವೇದನಾದಿಗಳಿಂದಲೂ ಪೂಜಿಸಬೇಕು. ಹೋಮಮಾಡಿ ಉಳಿದ ಹವಿಶ್ಶೇಷವನ್ನು ಉಪನಯವಾದ ವಟುವಿಗೆ ಕೊಡಬೇಕು.

ತಸ್ಯಾಭಿಹರಣಾದ್ರಾಜ್ಞೋ ವಿಜಯಃ ಸಮುದಾಹೃತಃ ।
ಪೂಜಾಮಂತ್ರಾನ್ ಪ್ರವಕ್ಷ್ಯಾಮಿ ಪುರಾಣೋಕ್ತಾನಹಂ ತವ ॥

ಈ ರೀತಿ ಬ್ರಹ್ಮಚಾರಿಯನ್ನು ಪೂಜಿಸಿ ಸತ್ಕರಿಸಿದರೆ ರಾಜನಿಗೆ ಜಯವು ಲಭಿಸುವುದು ಸಿದ್ಧ. ಆಯುಧಗಳನ್ನೂ ರಾಜಚಿಹ್ನೆಗಳನ್ನೂ ಪ್ರಾರ್ಥಿಸುವಾಗ ಹೇಳಬೇಕಾದ ಪುರಾಣೋಕ್ತವಾದ ಮಂತ್ರಗಳನ್ನು ಈಗ ನಾನು ನಿನಗೆ ಹೇಳುತ್ತೇನೆ.

## ಪ್ರತಿಯೊಂದು ಶಸ್ತ್ರಾಸ್ತ್ರಗಳಿಗೂ ಒಂದೊಂದು ಮಂತ್ರವಿದೆ

ಯೈಃ ಪೂಜಿತಾಃ ಪ್ರಯಚ್ಛಂತಿ ಕೀರ್ತಿಮಾಯುರ್ಯಶೋಬಲಂ ।

ಇನ್ನು ಯಾವುದಾದರೂ ಮಂತ್ರಹೇಳಿ ಪ್ರಾರ್ಥಿಸುವುದಕ್ಕಿಂತ ಯಥೋಕ್ತವಾದ ಈ ಮಂತ್ರಪೂರ್ವಕವಾಗಿ ಪ್ರಾರ್ಥನೆ ಮಾಡಿದರೆ ಕರ್ತೃವಿಗೆ ಕೀರ್ತಿ, ಆಯುರ್ವೃದ್ಧಿ, ಯಶಸ್ಸು, ಬಲ ಇವು ನಿಸ್ಸಂಶಯವಾಗಿ ಲಭಿಸುತ್ತವೆ.

## ಛತ್ರದ ಪ್ರಾರ್ಥನೆ

ಯಥಾಂಬುದಶ್ಛಾದಯತಿ ಶಿವಾಯೇಮಾಂ ವಸುಂಧರಾಂ ।

ತಥಾಚ್ಛಾದಯ ರಾಜಾನಂ ವಿಜಯಾರೋಗ್ಯವೃದ್ಧಯೇ ॥

ಛತ್ರಿಯನ್ನು ಪ್ರಾರ್ಥಿಸುವಾಗ ''ಎಲೈ ಶ್ವೇತಚ್ಛತ್ರಾಭಿಮಾನಿ ದೇವತೆಯೇ ! ಭೂಲೋಕದ ಶುಭೋದಯಕ್ಕಾಗಿ ಮೇಘವು ವಸುಂಧರೆಯನ್ನು ಆವರಿಸಿರುವಂತೆ ನೀನು ರಾಜನಿಗೆ ಜಯಲಾಭ ಆರೋಗ್ಯಲಾಭಗಳಿಗೆ ಅನುಕೂಲವಾದ ಆಚ್ಛಾದನವಾಗು'' ಎಂಬುದಾಗಿ ಹೇಳಬೇಕು. ಇದು ಛತ್ರಪ್ರಾರ್ಥನಾಮಂತ್ರದ ಅರ್ಥ.

## ಕುದುರೆಯ ದೀರ್ಘ ಪ್ರಾರ್ಥನೆ

ಗಂಧರ್ವಕುಲಜಾತಸ್ತ್ವಂ ಮಾಭೂಯಾಃ ಕುಲದೂಷಕಃ ॥

ಬ್ರಹ್ಮಣಃ ಸತ್ಯವಾಕ್ಯೇನ ಸೋಮಸ್ಯ ವರುಣಸ್ಯ ಚ ।

ಪ್ರಭಾವಾಚ್ಚ ಹುತಾಶಸ್ಯ ವರ್ಧಸ್ವ ತ್ವಂ ತುರಂಗಮ ॥

ಎಲೈ ತುರಗವೆ ! ಗಂಧರ್ವಕುಲದಲ್ಲಿ ಜನಿಸಿದ ನೀನು ನಿನ್ನ ಕುಲಕ್ಕೆ ಕಳಂಕವನ್ನು ತರುವಂತೆ ಆಗಬೇಡ. (ಮಹಾವೇಗಶಾಲಿಯಾಗು) ಬ್ರಹ್ಮನ ಸತ್ಯವಾಕ್ಯದಿಂದಲೂ, ಸೋಮ, ಅಗ್ನಿ, ವರುಣ ಇವರ ಅಂಶಪ್ರಭಾವದಿಂದಲೂ ನೀನು ವರ್ಧಿಸು.

ತೇಜಸಾ ಚೈವ ಸೂರ್ಯಸ್ಯ ಮುನೀನಾಂ ತಪಸಾ ಯಥಾ ।
ರುದ್ರಸ್ಯ ಬ್ರಹ್ಮಚರ್ಯೇಣ ಪವನಸ್ಯ ಬಲೇನ ಚ ॥

ಸೂರ್ಯನು ತೇಜೋವಿಶೇಷದಿಂದಲೂ ಮುನಿಗಳು ತಪಶ್ಶಕ್ತಿಯಿಂದಲೂ, ರುದ್ರನು ಬ್ರಹ್ಮಚರ್ಯದಿಂದಲೂ, ವಾಯುವು ಶಕ್ತಿ(ರಭಸ)ದಿಂದಲೂ, ಕೂಡಿರುವಂತೆ ನೀನು ವೇಗಯುಕ್ತನಾಗು.

ಸ್ಮರ ತ್ವಂ ರಾಜಪುತ್ರೋಽಸಿ ಕೌಸ್ತುಭಂ ಚ ಮಣಿಂ ಸ್ಮರ ।
ಯಾಂ ಗತಿಂ ಬ್ರಹ್ಮಹಾ ಗಚ್ಛೇತ್ಪಿತೃಹಾ ಮಾತೃಹಾ ತಥಾ ॥
ಭೂಮ್ಯರ್ಥೇಽನೃತವಾದೀ ಚ ಕ್ಷತ್ರಿಯಶ್ಚ ಪರಾಙ್ಮುಖಃ ।
ಸೂರ್ಯಾಚಂದ್ರಮಸೌ ವಾಯುಃ ಪಾವಕಶ್ಚ ನ ಯತ್ರ ವೈ ॥

ರಾಜನಿಗೆ ಪುತ್ರಪ್ರಾಯನೆಂಬುದನ್ನೂ ಕೌಸ್ತುಭಮಣಿಯನ್ನು ಧರಿಸಿರುವೆನೆಂಬುದನ್ನೂ ನೆನಪಿನಲ್ಲಿಡು. ಬ್ರಹ್ಮಹತ್ಯಮಾಡಿದವನು, ಪಿತೃಘಾತಿ, ಮಾತೃಹತ್ಯಮಾಡಿದವನು, ಭೂಮಿಲಾಭಕ್ಕಾಗಿ ಸುಳ್ಳಾಡಿದವನು, ರಣದಲ್ಲಿ ಹಿಮ್ಮೆಟ್ಟಿದ ಕ್ಷತ್ರಿಯ ಇವರೆಲ್ಲ ಸೂರ್ಯ, ಚಂದ್ರ, ಅಗ್ನಿ, ವಾಯು, ಇವರು ಯಾರೂ ಇಲ್ಲದೆ ಇರುವ ಮಹಾಂಧಕಾರಮಯವಾದ ನರಕಲೋಕಕ್ಕೆ ಶೀಘ್ರವಾಗಿ ಹೋಗಿ, ಅಲ್ಲಿ ಯಾವ ಕ್ಲೇಶವನ್ನು ಅನುಭವಿಸುವರೆಂಬುದನ್ನು ಸ್ಮರಿಸಿಕೊ. ನೀನು ಯುದ್ಧದಲ್ಲಿಯಾಗಲಿ, ಮಾರ್ಗದ ಪ್ರಯಾಣದಲ್ಲಿಯಾಗಲಿ ಇಂತಹ ಮನೋವಿಕಾರ ಹೊಂದಿದೆಯಾದರೆ ಮೇಲೆ ಹೇಳಿದವರು ಹೊಂದುವ ದುರ್ಗತಿಯನ್ನು ಹೊಂದಬೇಕಾದೀತು.

ವ್ರಜೇಚ್ಚ ತಾಂ ಗತಿಂ ಕ್ಷಿಪ್ರಂ ತಚ್ಚ ಪಾಪಂ ಭವತ್ಯೇತ್ಕಿಲ ।
ವಿಕೃತಿಂ ಯದಿ ಗಚ್ಛೇಸ್ತ್ವಂ ಯುದ್ಧೇಽಧ್ವನಿ ತುರಂಗಮ ॥
ರಿಪೂನ್ವಿಜಿತ್ಯ ಸಮರೇ ಸಹ ಭರ್ತ್ರಾ ಸುಖೀ ಭವ ॥

ಆದುದರಿಂದ ಎಲೈ ಅಶ್ವವೇ ! ಯುದ್ಧದಲ್ಲಿ ನಿನ್ನ ಯಜಮಾನನೊಡನೆ ಸಹಕರಿಸಿ, ಶತ್ರುಗಳನ್ನು ಜಯಿಸಿ ಸುಖವಾಗಿರು ಎಂದು ಪ್ರಾರ್ಥಿಸ ಬೇಕು. ಇದು ಅಶ್ವ ಪ್ರಾರ್ಥನಾಮಂತ್ರದ ಅರ್ಥ.

## ಧ್ವಜ ಪ್ರಾರ್ಥನೆ

ಶಕ್ರಕೇತೋ ಮಹಾವೀರ್ಯ ಸುಪರ್ಣಸ್ತ್ವಯ್ಯುಪಸ್ಥಿತಃ ।
ಪತತ್ರಿರಾಡ್-ವೈನತೇಯಸ್ತಥಾ ನಾರಾಯಣಧ್ವಜಃ ॥

ಎಲೈ ಇಂದ್ರಧ್ವಜವೇ ! ವಿನತಾಪುತ್ರನೂ, ಪಕ್ಷಿರಾಜನೂ, ಮಹಾವಿಷ್ಣುವಿನ ಧ್ವಜದಲ್ಲಿರುವವನೂ, ಮಹಾಬಲಶಾಲಿಯೂ ಎನಿಸಿದ, ಗರುಡನು ನಿನ್ನಲ್ಲಿದ್ದಾನೆ.

ಕಾಶ್ಯಪೇಯೋಽಮೃತೋ ಜ್ಞೇಯೋ ನಾಗಾರಿರ್ವಿಷ್ಣುವಾಹನಃ ।
ಅಪ್ರಮೇಯೋ ದುರಾಧರ್ಷೋ ದೇವಶತ್ರುನಿಷೂದನಃ ॥
ಗುರುತ್ಮಾನ್ ಮಾರುತಗತಿಸ್ತ್ವಯಿ ಸನ್ನಿಹಿತಃ ಸ್ಥಿತಃ ।
ಶಸ್ತ್ರವರ್ಮಾಯುಧಾನ್ಯೋಧಾನ್ರಕ್ಷಾಸ್ಮಾಂಶ್ಚ ರಿಪೂನ್ ದಹ ॥

ಕಶ್ಯಪಪುತ್ರನೂ, ಅಮೃತಸ್ವರೂಪನೂ, ಸರ್ಪವೈರಿಯೂ, ವಿಷ್ಣುವಾಹನನೂ, ಅಪರಿಮಿತಶಕ್ತಿಯುಳ್ಳವನೂ, ಧನುರ್ಧರನೂ, ದೇವವೈರಿಗಳಾದ ರಾಕ್ಷಸಧ್ವಂಸಕನೂ ಆದ ಗರುಡನೇ ! ವಾಯುವೇಗವು ನಿನ್ನಲ್ಲಿ ಸಹಜವಾಗಿ ನೆಲಸಿದೆ. ಆಯುಧ, ಕವಚ, ಶಸ್ತ್ರ, ಇವುಗಳನ್ನು ಧರಿಸಿರುವ ಯೋಧರಾದ ನಮ್ಮನ್ನು ರಕ್ಷಿಸು. ಶತ್ರುಗಳನ್ನು ಸುಟ್ಟುಬಿಡು ಎಂಬುದಾಗಿ ಧ್ವಜವನ್ನು ಪ್ರಾರ್ಥಿಸಬೇಕು.

## ಗಜಪ್ರಾರ್ಥನೆ

ಕುಮುದೈರಾವಣೌ ಪದ್ಮಃ ಪುಷ್ಪದಂತೋಽಥ ವಾಮನಃ ।
ಸುಪ್ರತೀಕೋಂಜನೋ ನೀಲಃ ಏತೇಽಷ್ಟೌ ದೇವಯೋನಯಃ ॥

ಕುಮುದ, ಐರಾವತ, ಪದ್ಮ, ಪುಷ್ಪದಂತ, ವಾಮನ, ಸುಪ್ರತೀಕ, ಅಂಜನ, ನೀಲ ಎಂಬ ಈ ಎಂಟೂ ದೇವಯೋನಿಗಳಾದ ಗಜಗಳು.

ಏತೇಷಾಂ ಪುತ್ರಪೌತ್ರಶ್ಚ ಬಲಾನ್ಯಷ್ಟೌ ಸಮಾಶ್ರಿತಾಃ ।
ಭದ್ರೋ ಮಂದ್ರೋ ಮೃಗಶ್ಚೈವ ಗಜಃ ಸಂಕೀರ್ಣ ಏವಚ ॥
ವನೇವನೇ ಪ್ರಸೂತಾಸ್ತೇ ಕರಿಯೋನಿಂ ಮಹಾಗಜಾಃ ॥

ಪಾಂತು ತ್ವಾಂ ವಸವೋ ರುದ್ರಾ ಆದಿತ್ಯಾಃ ಸಮರುದ್ಗಣಾಃ ।
ಭರ್ತಾರಂ ರಕ್ಷ ನಾಗೇಂದ್ರ ಸಮಯಂ ಪ್ರತಿಪಾಲಯನ್ ॥

ಅಯ್ಯಾ ಗಜೇಂದ್ರನೇ ! ಅಷ್ಟವಸುಗಳು, ಏಕಾದಶರುದ್ರರು, ದ್ವಾದಶಾದಿತ್ಯರು, ಸಪ್ತಮರುತ್ತುಗಳು, ಇವರುಗಳು ನಿನ್ನನ್ನು ರಕ್ಷಿಸಲಿ. ಸಮಯಾನುಸಾರವಾಗಿ ವರ್ತಿಸುತ್ತಾ ಯಜಮಾನನನ್ನು ರಕ್ಷಿಸಿಕೊಂಡು, ಯುದ್ಧದಲ್ಲಿ ಆತನು ಜಯಹೊಂದುವಂತೆ ಮಾಡು. ಇತರ ಪ್ರಯಾಣಕಾರ್ಯದಲ್ಲಿಯೂ ಶುಭಕರವಾಗುವಂತೆ ನಡೆದುಕೋ. ಸೋಮನಿಂದ ಸಂಪತ್ತು, ವಿಷ್ಣುವಿನ ಕೃಪೆಯಿಂದ ಶಕ್ತಿ, ಸೂರ್ಯನಿಂದ ತೇಜಸ್ಸು, ವಾಯುವಿನಿಂದ ವೇಗ, ಮೇರುಪರ್ವತದಿಂದ ಸ್ಥೈರ್ಯ, ರುದ್ರನಿಂದ ಜಯ. ಇಂದ್ರನಿಂದ ಯಶಸ್ಸು ಇವೆಲ್ಲಾ ಲಭಿಸಲಿ.

ಅವಾಪ್ನುಹಿ ಜಯಂ ಯುದ್ಧೇ ಗಮನೇ ಸ್ವಸ್ತಿ ನೋ ವ್ರಜ ।
ಶ್ರೀಸ್ತೇ ಸೋಮಾದ್ಬಲಂ ವಿಷ್ಣೋಸ್ತೇಜಃ ಸೂರ್ಯಾಜ್ಜವೋನಿಲಾತ್ ।
ಸ್ಥೈರ್ಯಂ ಮೇರೋರ್ಜಯಂ ರುದ್ರಾದ್ಯಶೋ ದೇವಾತ್ಪುರಂದರಾತ್
ಯುದ್ಧೇ ರಕ್ಷಂತು ನಾಗಾಸ್ತ್ವಾಂ ದಿಶಶ್ಚ ಸಹ ದೈವತೈಃ ।
ಅಶ್ವಿನೌ ಸಹ ಗಂಧರ್ವೈಃ ಪಾಂತು ತ್ವಾಂ ಸರ್ವತಃ ಸದಾ ॥

ದಿಙ್ನಾಗಗಳು ನಿನ್ನನ್ನು ಯುದ್ಧದಲ್ಲಿ ರಕ್ಷಿಸಲಿ. ದೇವತೆಗಳೊಡಗೂಡಿದ ದಿಕ್ಪಾಲಕರೂ ಗಂಧರ್ವಸಮೇತರಾದ ಅಶ್ವಿನೀದೇವತೆಗಳೂ ನಿನ್ನನ್ನು ಎಲ್ಲಾ ಕಡೆಯಲ್ಲೂ ಸರ್ವದಾ ಕಾಪಾಡಲಿ.

## ಪತಾಕಾ ಪ್ರಾರ್ಥನೆ

ಹುತುಭುಗ್ವಸವೋ ರುದ್ರಾ ವಾಯುಃ ಸೋಮೋ ಮಹರ್ಷಯಃ ।
ನಾಗಕಿನ್ನರಗಂಧರ್ವಯಕ್ಷಭೂತಗಣಾಗ್ರಹಾಃ ॥
ಪ್ರಮಥಾಶ್ಚ ಸಹಾದಿತ್ಯೈರ್ಭೂತೇಶೋ ಮಾತೃಭಿಃ ಸಹ ।
ಶಕ್ರಸೇನಾಪತಿಃ ಸ್ಕಂದೋ ವರುಣಶ್ಚಾಶ್ರಿತಾಸ್ತ್ವಯಿ ॥

ಎಲೈ ಪತಾಕೆಯೇ ! ಅಗ್ನಿ, ಅಷ್ಟವಸುಗಳು, ರುದ್ರರು, ವಾಯು, ಸೋಮ, ಮಹರ್ಷಿಗಳು, ನಾಗರು, ಕಿನ್ನರರು, ಗಂಧರ್ವರು, ಯಕ್ಷರು, ಭೂತಗಣಗಳು, ಪ್ರಮಥಗಣಗಳು, ಆದಿತ್ಯಾದಿ ನವಗ್ರಹಗಳು, ಭೂತೇಶ, ದೇವಸೇನಾನಿಯೆನಿಸಿ ಸಪ್ತಮಾತೃಸಮೇತನಾದ ಷಣ್ಮುಖಿ, ವರುಣ; ಇವರೆಲ್ಲಾ ನಿನ್ನಲ್ಲಿ ನೆಲೆಸಿ ನಮ್ಮ ಸಮಸ್ತ ಶತ್ರುಗಳನ್ನೂ ದಹಿಸಲಿ. ರಾಜನು ವಿಜಯಿಯಾಗಲಿ.

ಪ್ರದಹಂತು ರಿಪೂನ್ ಸರ್ವಾನ್ ರಾಜಾ ವಿಜಯಮೃಚ್ಛತು ।
ಯಾನಿ ಪ್ರಯುಕ್ತಾನ್ಯರಿಭಿರ್ದೂಷಣಾನಿ ಸಮಂತತಃ ॥

ಒಂದು ವೇಳೆ ಶತ್ರುಗಳು ಸರ್ವತ್ರ ದೂಷಣಕರವಾದ ವಿಧಾನವನ್ನು ಅನುಸರಿಸದ್ದ ಸಂದರ್ಭದಲ್ಲಿ, ನಿನ್ನ ತೇಜೋಮಹಿಮೆಯಿಂದ ಅವು ಶತ್ರುಪಕ್ಷದವರಿಗೆ ಬಾಧಕವಾಗಿ ಪರಿಣಮಿಸಿ ಅವರೇ ನಿಹತರಾಗಲಿ.

ಏತಾನಿ ಪರಶತ್ರೂಣಾಂ ಹತಾನಿ ತವ ತೇಜಸಾ ।
ಕಾಲನೇಮಿವಧೇ ಯುದ್ಧೇ ಯುದ್ಧೇ ತ್ರಿಪುರಘಾತನೇ ॥

ಕಾಲನೇಮಿಯನ್ನು ಧ್ವಂಸಮಾಡಲು ನಡೆಸಿದ ಯುದ್ಧದಲ್ಲಿಯೂ ತ್ರಿಪುರಾಸುರರೊಡನೆ ಮಾಡಿದ ಯುದ್ಧದಲ್ಲಿಯೂ ಈ ಪ್ರಕಾರವಾದ ನಿನ್ನ ಮಹಿಮೆಯು ಶೋಭಿಸಿದೆ.

ಹಿರಣ್ಯಕಶಿಪೋರ್ಯುದ್ಧೇ ಯುದ್ಧೇ ದೇವಾಸುರೇ ತಥಾ ।
ಶೋಭಿತಾಸಿ ತಥೈವಾದ್ಯ ಶೋಭಮಾನಾಸ್ತು ಭೂಪತೇ ॥

ಹಿರಣ್ಯ ಕಶಿಪುವಿನೊಡನೆ ಮಾಡಿದ ಯುದ್ಧದಲ್ಲಿಯೂ, ದೇವದಾನವರ ಯುದ್ಧದಲ್ಲಿಯೂ, ನೀನು ಯಾವ ಪ್ರಕಾರ ಬಹುವಾಗಿ ಶೋಭಿಸಿದೆಯೋ ಅದೇ ಪ್ರಕಾರ ಈ ಭೂಪತಿಗೂ ನಿನ್ನಿಂದ ಶೋಭೆ ಉಂಟಾಗಲಿ.

ನೀಲಾಂ ಶ್ವೇತಾಮಿಮಾಂ ದೃಷ್ಟ್ವಾ ನಶ್ಯಂತ್ವದ್ಯ ನೃಪಾರಯಃ ।
ವ್ಯಾಧಿಭಿರ್ವಿವಿಧೈರ್ಘೋರೈಃ ಶಸ್ತ್ರೈಶ್ಚ ಯುಧಿ ನಿರ್ಜಿತಾಃ ॥

ನೀಲವರ್ಣವೂ ಬಿಳಿಯಬಣ್ಣವೂ ಆಗಿರುವ ನಿನ್ನನ್ನು ನೋಡಿ ರಾಜನ ಶತ್ರುಗಳು ನಾನಾವಿಧವಾದ ವ್ಯಾಧಿಗಳಿಂದಲೂ ಯುದ್ಧದಲ್ಲಿ ಭಯಂಕರವಾದ ಶಸ್ತ್ರಗಳಿಂದಲೂ ಈ ದಿನವೇ ನಾಶವಾಗಲಿ.

ಸದ್ಯಃ ಸ್ವಸ್ಥಾ ಭವಂತಿ ಸ್ಮ ತ್ವದ್ವಾತೇನಾಪಮಾರ್ಜಿತಾಃ ।

ನಿನ್ನ ಚಲನದ ರಭಸದಿಂದ ಉತ್ಪನ್ನವಾದ ಜಂಝಾವಾತದಿಂದ ಶತ್ರುಗಳು ದೂಡಲ್ಪಟ್ಟು ಪರಾಜಿತರಾಗಿ ಕೂಡಲೆ ಸ್ವಸ್ಥಾನವನ್ನೈದುವರು.

ಪೂತನಾ ರೇವತೀ ನಾಮ್ನಾ ಕಾಲರಾತ್ರೀತಿ ಯಾ ಸ್ಮೃತಾ ।

ದಹಂತ್ವಾಶು ರಿಪೂನ್ ಸರ್ವಾನ್ ಪತಾಕೇ ತ್ವಾಮುಪಾಗತಾಃ ॥

ಎಲೈ ಪತಾಕೆಯೇ ! ಪೂತನಾ, ರೇವತೀ, ಕಾಲರಾತ್ರೀ ಎಂಬ ದೇವತೆಗಳೆಲ್ಲಾ ನಿನ್ನಲ್ಲಿ ಸಾನ್ನಿಧ್ಯ ಹೊಂದಿ ಜಾಗ್ರತೆಯಲ್ಲಿಯೇ ಸಮಸ್ತ ಶತ್ರುಗಳನ್ನೂ ಸುಟ್ಟುಬಿಡಲಿ ಎಂದು ಪ್ರಾರ್ಥಿಸಬೇಕು.

## ಖಡ್ಗಪ್ರಾರ್ಥನೆ

ಅಸಿಶ್ಚ ರಿಪುಹಾ ಖಡ್ಗಸ್ತೀಕ್ಷ್ಣಕರ್ಮಾ ದುರಾಸದಃ ।

ಶ್ರೀಗರ್ಭೋ ವಿಜಯಶ್ಚೈವ ಧರ್ಮಧಾರಸ್ತಥೈವ ಚ ॥

ಇತ್ಯಷ್ಟೌ ತವ ನಾಮಾನಿ ಸ್ವಯಮುಕ್ತಾನಿ ವೇಧಸಾ ।

ಖಡ್ಗವನ್ನು ಕುರಿತು ಹೇ ಖಡ್ಗಾಯುಧ ! ಅಸಿ, ರಿಪುಹಾ, ಖಡ್ಗ, ತೀಕ್ಷ್ಣಕರ್ಮ, ದುರಾಸದ, ಶ್ರೀಗರ್ಭ, ವಿಜಯ, ಧರ್ಮಧಾರ ಎಂಬ ಈ ಎಂಟೂ ನಿನ್ನ ನಾಮಗಳೆಂದು ಬ್ರಹ್ಮನು ಸಾಕ್ಷಾತ್ತಾಗಿ ಹೇಳಿದ್ದಾನೆ.

ನಕ್ಷತ್ರಂ ಕೃತ್ತಿಕಾ ತುಭ್ಯಂ ಗುರುರ್ದೇವೋ ಮಹೇಶ್ವರಃ ॥

ಹಿರಣ್ಯಂ ಚ ಶರೀರಂ ತೇ ಧಾತಾ ದೇವೋ ಜನಾರ್ದನಃ ।

ಪಿತಾ ಪಿತಾಮಹೋ ದೇವಸ್ತ್ವಂ ಮಾಂ ಪಾಲಯ ಸರ್ವದಾ ॥

''ನಿನ್ನದು ಕೃತ್ತಿಕಾನಕ್ಷತ್ರವು ಎತ್ತಿದುದು. ಷಡ್ಗುಣೈಶ್ವರ್ಯಸಂಪನ್ನನಾದ ಮಹೇಶ್ವರನೇ ನಿನ್ನ ಗುರು. ನಿನ್ನ ಅಂಗಾಂಗವು ಸ್ವರ್ಣಮಯವಾದುದು. ಸ್ವಾಮಿಯಾದ

ಜನಾರ್ದನನೇ ನಿನಗೆ ವಿಧಾಯಕನಾಗಿರುವನು. ಬ್ರಹ್ಮನೇ ನಿನ್ನ ಪಿತೃವೆನಿಸಿರುವನು. ಇಂಥ ನೀನು ನನ್ನನ್ನು ಸರ್ವದಾ ಕಾಪಾಡು'' ಎಂದು ಪ್ರಾರ್ಥಿಸಬೇಕು.

## ಕವಚಪ್ರಾರ್ಥನೆ

ಶರ್ಮಪ್ರದಸ್ತ್ವಂ ಸಮರೇ ವರ್ಮ ಸರ್ವಾಯಸೋ ಹ್ಯಸಿ ।
ರಕ್ಷ ಮಾಂ ರಕ್ಷಣೀಯೋಽಹಂ ತವ ವರ್ಮನ್ನಮೋಽಸ್ತುತೇ ॥

ಅನಂತರ ಲೋಹಕವಚವನ್ನು ಕುರಿತು ''ಎಲೈ ಕವಚವೇ ! ಯಾವದ್ವಿಶಿಷ್ಟವಾದ ನಿನ್ನ ರಚನೆಯೂ ಕಬ್ಬಿಣದಿಂದಲೇ ಆಗಿದೆ. ನಾನು ನಿನ್ನಿಂದ ರಕ್ಷಣೆ ಹೊಂದಲು ಅರ್ಹನಾಗಿದ್ದೇನೆ. ನೀನು ಯುದ್ಧಕಾಲದಲ್ಲಿ ನನ್ನನ್ನು ರಕ್ಷಿಸು, ನಿನಗೆ ನಮಸ್ಕಾರ'' ಎಂದು ಪ್ರಾರ್ಥಿಸಬೇಕು.

## ಭೇರಿಪ್ರಾರ್ಥನೆ

ದುಂದುಭೇ ತ್ವಂ ಸಪತ್ನಾನಾಂ ಘೋಷಾದ್ಧೃದಯಕಂಪನ ।
ಭವ ಭೂಮಿಪ ಸೈನ್ಯಾನಾಂ ತಥಾ ವಿಜಯವರ್ಧನಃ ॥

''ಎಲೈ ದುಂದುಭಿಯೇ ! ಅಸೂಯಾವಿಶಿಷ್ಟರಾದ ಪರರಾಜರ ಸೈನ್ಯಗಳ ಹೃದಯವನ್ನು ನಿನ್ನ ಮಹಾಶಬವು ಕಂಪನಗೊಳಿಸಿತು. ಮತ್ತು ಈ ರಾಜನ ಜಯವನ್ನು ಉತ್ತರೋತ್ತರ ಅಭಿವೃದ್ಧಿ ಪಡಿಸು.

ಯಥಾ ಜೀಮೂತಘೋಷೇಣ ಹೃಷ್ಯಂತಿ ವರವಾರಣಾಃ ।
ತಥಾಸ್ತು ತವ ಶಬ್ದೇನ ಹರ್ಷೋಽಸ್ಮಾಕಂ ಮುದಾವಹಃ ॥

ಮೇಘ ಧ್ವನಿಯಿಂದ ಶ್ರೇಷ್ಠವಾದ ಗಜಗಳು ಸಂತೋಷಪಡುವಂತೆ ನಿನ್ನ ಮಹಾಧ್ವನಿಯಿಂದ ನನ್ನ ಮನಸ್ಸು ಸಂತೋಷಭರಿತವಾಗಿದೆ.

ಯಥಾ ಜೀಮೂತಶಬ್ದೇನ ಸ್ತ್ರೀಣಾಂ ತ್ರಾಸೋಽಭಿಜಾಯತೇ ।
ತಥಾ ಚ ತವ ಶಬ್ದೇನ ತ್ರಸ್ಯಂತ್ವಸ್ಮದ್ದ್ವಿಷೋ ರಣೇ ॥

ಮೇಘಧ್ವನಿಯಿಂದ ಸ್ತ್ರೀಯರು ಹೇಗೆ ದಿಗಿಲುಪಡುವರೋ ಹಾಗೆ ನಿನ್ನ ಧ್ವನಿಯಿಂದ ನಮ್ಮ ಶತ್ರುಗಳನ್ನು ಯುದ್ಧದಲ್ಲಿ ಬಹಳ ತ್ರಾಸಪಡಿಸು''.

## ಧನುಸ್ಸಿನ ಪ್ರಾರ್ಥನೆ

ಸರ್ವಾಯುಧ ಮಹಾಮಾತ್ರ ಸರ್ವದೇವಾರಿಸೂದನ ।

ಚಾಪ ಮಾಂ ಸರ್ವದಾ ರಕ್ಷ ಸಾಕಂ ಸಾಯಕಸತ್ತಮೈಃ ॥

''ಸಮಸ್ತ ಆಯುಧಗಳಿಗೆ ಮಹಾಮಾತ್ರಸ್ವರೂಪಿಣಿಯೂ ಸಮಸ್ತರಾಕ್ಷಸರನ್ನು ಧ್ವಂಸಮಾಡತಕ್ಕದ್ದೂ ಆದ ಎಲೈ ಧನುಸ್ಸೇ! ಶ್ರೇಷ್ಠವಾದ ಬಾಣಗಳಿಂದ ಸಮೇತನಾದ ನನ್ನನ್ನು ಸರ್ವದಾ ರಕ್ಷಿಸು'' ಎಂದು ಪ್ರಾರ್ಥಿಸಬೇಕು. ಇದು ಧನುಃ ಪ್ರಾರ್ಥನಾಮಂತ್ರದ ಅರ್ಥ.

## ಶಂಖಪ್ರಾರ್ಥನೆ

ಪುಣ್ಯಸ್ತ್ವಂ ಶಂಖ ಪುಷ್ಪಾಣಾಂ ಮಂಗಲಾನಾಂ ಚ ಮಂಗಲಂ ।

ವಿಷ್ಣುನಾ ವಿಧೃತೋ ನಿತ್ಯಂ ಮನಃಶಾನ್ತಿಪ್ರದೋ ಭವ ॥

''ಎಲೈ ಶಂಖವೇ ! ನೀನು ವಸ್ತುಗಳಲ್ಲಿ ಅತಿಪುಣ್ಯಕರವೂ ಶುಭವಸ್ತುಗಳಲ್ಲಿ ಮಂಗಳಕರವೂ ಆಗಿರುವೆ. ವಿಷ್ಣುವು ನಿನ್ನನ್ನು ಸರ್ವದಾ ತನ್ನ ಹಸ್ತದಲ್ಲಿ ಧರಿಸಿದ್ದಾನೆ. ಇಂತಹ ಮಹಿಮೆಯುಳ್ಳ ನೀನು ನನಗೆ ಶಾಂತಿಯನ್ನು ಕರುಣಿಸು''.

## ಚಾಮರಪ್ರಾರ್ಥನೆ

ಶತಾಂಕಕರಸಂಕಾಶ ಹಿಮಡಿಂಡೀರ ಪಾಂಡುರ ।

ಪ್ರೋತ್ಸಾರಯಾಶು ದುರಿತಂ ಚಾಮರಾಮರವಲ್ಲಭ ॥

''ಬೆಳದಿಂಗಳಂತೆ ಪ್ರಕಾರ ಮಾನವೂ, ಮಂಜುಗೆಡ್ಡೆ, ಸಮುದ್ರದ ನೊರೆ, ಇವುಗಳಂತೆ ಶುಭ್ರವರ್ಣವೂ ಆದ ಚಾಮರವೇ ! ದೇವತೆಗಳಿಗೆ ಅತಿ ಪ್ರಿಯನಾದ ನೀನು ನಮ್ಮ ಪಾಪವನ್ನು ಜಾಗ್ರತೆ ಪರಿಹರಿಸು'' ಎಂದು ಪ್ರಾರ್ಥಿಸಬೇಕು. ಇದು ಚಾಮರ ಪ್ರಾರ್ಥನೆಯ ಮಂತ್ರದ ಅರ್ಥ.

## ಕತ್ತಿಯ ಪ್ರಾರ್ಥನೆ

ಸರ್ವಾಯುಧಾನಾಂ ಪ್ರಥಮಾ ನಿರ್ಮಿತಾಸಿ ಪಿನಾಕಿನಾ ।
ಶೂಲಾಯುಧಾದ್ವಿನಿಷ್ಕೃಷ್ಯ ಕೃತ್ವಾ ಮುಷ್ಟಿ ಪರಿಗ್ರಹಂ ॥

ಬಳಿಕ ಛುರಿಕಾಯುಧವನ್ನು ಕುರಿತು - ''ಎಲೈ ಸುರಗಿಯೇ ! ಸಮಸ್ತ ಆಯುಧಗಳಲ್ಲಿ ಮೊದಲನೆಯದಾಗಿ ಈಶ್ವರನಿಂದ ನಿರ್ಮಿತವಾಗಿರುವೆ. ಶೂಲಾಯುಧವನ್ನೇ ಪರಿಮಿತ ಮಾಡಿ ಕೈಯ ಹಿಡಿಯಲ್ಲಿ ಹಿಡಿಯುವಂತೆ ಅಡಕ ಮಾಡಲ್ಪಟ್ಟಿರುವಂತಿರುವೆ.

ಚಂಡಿಕಾಯಾಃ ಪ್ರದತ್ತಾಸಿ ಸರ್ವದುಷ್ಟನಿಬರ್ಹಿಣೀ ।
ತಥಾ ವಿಸ್ತಾರಿತಾ ಚಾಸಿ ದೇವಾನಾಂ ಪ್ರತಿಪಾದಿತಾ ॥

ಸಮಸ್ತ ದುಷ್ಟರನ್ನು ಧ್ವಂಸಮಾಡತಕ್ಕದ್ದೂ, ಚಾಮುಂಡಾಂಬೆಯ ಅನುಗ್ರಹದಿಂದ ಕೊಡಲ್ಪಟ್ಟುದೂ ಆಗಿ, ದೇವತೆಗಳಿಂದ ಪ್ರತಿಪಾದಿತವಾಗಿ, ವಿಸ್ತರಿಸಲ್ಪಟ್ಟುದಾಗಿರುವಿ.

ಸರ್ವಸತ್ವಾಂಗಭೂತಾಸಿ ಸರ್ವಾಶುಭನಿವಾರಿಣೀ ।
ಛಾರಿಕೇ ರಕ್ಷ ಮಾಂ ನಿತ್ಯಂ ಶಾಂತಿಂ ಯಚ್ಛ ನಮೋಽಸ್ತುತೇ ॥

ಮತ್ತು ಸರ್ವಪ್ರಾಣಿಗಳೂ ಶಕ್ತಿಯನ್ನು ತೋರ್ಪಡಿಸುವುದಕ್ಕೆ ಪ್ರಧಾನವಾದ ಅಂಗವೆನಿಸಿದ್ದೀಯೆ, ಮತ್ತು ಸಮಸ್ತ ಅಶುಭಗಳನ್ನೂ ಹೋಗಲಾಡಿಸಬಲ್ಲೆ. ಇಂತಹ ನೀನು ನಿತ್ಯವೂ ನನ್ನನ್ನು ಅಪಾಯದಿಂದ ರಕ್ಷಿಸಿ ಮನಸ್ಸಿಗೆ ಶಾಂತಿಯನ್ನು ಕೊಡು. ನಿನಗೆ ನಮಸ್ಕಾರ''.

## ಕನಕದಂಡ ಪ್ರಾರ್ಥನೆ

ಪ್ರೋತ್ಸಾರಣಾಯ ದುಷ್ಟಾನಾಂ ಸಾಧುಸಂಗ್ರಹಣಾಯ ಚ ।
ಬ್ರಹ್ಮಣಾ ನಿರ್ಮಿತಶ್ಚಾಸಿ ವ್ಯವಹಾರ ಪ್ರಸಿದ್ಧಯೇ ॥

ಬಳಿಕ ಕನಕದಂಡವನ್ನು ಕುರಿತು - ''ದುಷ್ಟನಿರ್ಮೂಲನೆ, ಸಜ್ಜನರಕ್ಷಣೆ, ಈ ವ್ಯವಹಾರಸಾಧನವಾಗಿ ಬ್ರಹ್ಮನಿಂದ ನಿರ್ಮಿತವಾದ ಓ, ಹೇಮದಂಡವೇ !

ಯಶೋ ದೇಹಿ ಸುಖಂ ದೇಹಿ ಜಯದೋ ಭವ ಭೂಪತೇಃ ।
ತಾಡಯಾಶು ರಿಪೂನ್ ಸರ್ವಾನ್ ಹೇಮದಂಡ ನಮೋऽಸ್ತು ತೇ ॥

ನೀನು ಈ ರಾಜನಿಗೆ ಜಯಲಾಭವುಂಟುಮಾಡು. ಯಶಸ್ಸನ್ನೂ ಸುಖವನ್ನೂ ದಯಪಾಲಿಸು. ಶತ್ರುಗಳನ್ನೆಲ್ಲಾ ಧ್ವಂಸಮಾಡು. ನಿನಗೆ ನಮಸ್ಕಾರ''.

## ಸಿಂಹಾಸನ ಪ್ರಾರ್ಥನೆ

ವಿಜಯೋ ಜಯದೋ ಜೇತಾ ರಿಪುಘಾತೀ ಪ್ರಿಯಂಕರಃ ।
ದುಃಖಹಾ ಧರ್ಮದಃ ಶಾಂತಃ ಸರ್ವಾರಿಷ್ಟವಿನಾಶನಃ ॥

''ಎಲೈ ಸಿಂಹಪೀಠವೇ ! ವಿಜಯ, ಜಯದ, ಜೇತಾ, ರಿಪುಘಾತಿ, ಪ್ರಿಯಂಕರ, ದುಃಖಹಾ, ಧರ್ಮದ, ಶಾಂತ, ಸರ್ವಾರಿಷ್ಟಗಳ, ವಿನಾಶನ

ಏತೇಷ್ಟೌ ಸನ್ನಿಧೌ ಯಸ್ಮಾತ್ತವ ಸಿಂಹಾ ಮಹಾಬಲಾ ।
ತೇನ ಸಿಂಹಾಸನೇತಿ ತ್ವಂ ವಿಪ್ರೈರ್ವೇದೇಷು ಗೀಯಸೇ ॥

ಈ ಎಂಟೂ ಸಂಪತ್ತುಗಳುಮಹಾಬಲಶಾಲಿಯಾದ ನಿನ್ನ ಸಿಂಹದ ಸಾನಿಧ್ಯದಿಂದ ಪ್ರಾಪ್ತವಾಗುವುವು. ಆದುದರಿಂದ ನಿನಗೆ ಸಿಂಹಾಸನವೆಂದು ಹೆಸರಾಯಿತು ಎಂಬ ವೇದೋಕ್ತಿಯನ್ನು ಬ್ರಾಹ್ಮಣರು ಪಠಿಸುತ್ತಾರೆ.

ತ್ವಯಿ ಸ್ಥಿತಃ ಶಿವಃ ಸಾಕ್ಷಾತ್ತ್ವಯಿ ಶಕ್ರಃ ಸುರೇಶ್ವರಃ ।
ತ್ವಯಿ ಸ್ಥಿತೋ ಹರಿರ್ದೇವಸ್ತ್ವದರ್ಥಂ ತಪ್ಯತೇ ತಪಃ ॥

ಪರಮೇಶ್ವರನು ಸಾಕ್ಷಾತ್ತಾಗಿ ನಿನ್ನಲ್ಲಿ ನೆಲಸಿರುವನು. ದೇವಾಧಿಪನಾದ ದೇವೇಂದ್ರನೂ, ದೇವದೇವನಾದ ಶ್ರೀಮಹಾವಿಷ್ಣು ಪರಮಾತ್ಮನೂ, ನಿನ್ನಲ್ಲಿಯೇ ಇರುವರು. ವೀರಾಗ್ರಣಿಗಳು ನಿನ್ನ ಪ್ರಾಪ್ತಿಗಾಗಿ ಮಹಾತಪಸ್ಸುಗಳನ್ನೇ ಮಾಡುತ್ತಾರೆ.

ನಮಸ್ತೇ ಸರ್ವತೋಭದ್ರ ಭದ್ರದೋ ಭವ ಭೂಪತೇಃ ।
ತ್ರೈಲೋಕ್ಯಜಯಸರ್ವಸ್ವ ಸಿಂಹಾಸನ ನಮೋऽಸ್ತು ತೇ ॥

ಸರ್ವತೋಭದ್ರಸ್ವರೂಪವಾದ ಸಿಂಹಾಸನವೇ ! ನಿನಗೆ ನಮಸ್ಕಾರ. ರಾಜನಿಗೆ ಶುಭಪರಂಪರೆಯನ್ನುಂಟುಮಾಡು, ತ್ರಿಲೋಕಗಳನ್ನು ಜಯಿಸು ಇದಕ್ಕೆ ಮೂಲಾಧಾರಸ್ವರೂಪವಾದ ನಿನಗೆ ನಮಸ್ಕಾರ'' ಎಂದು ಹೇಳಬೇಕು.

## ಈಗ ಧೂಪದೀಪನೈವೇದ್ಯ

ಲೋಹಾಭಿಹಾರಿಕಂ ಕರ್ಮ ಕೃತ್ವೇದಂ ಮಂತ್ರಪೂರ್ವಕಂ ।
ಫಲನೈವೇದ್ಯಕುಸುಮೈರ್ಧೂಪದೀಪವಿಲೇಪನೈಃ ॥
ಅಷ್ಟಮ್ಯಾಂ ಧಾವನಂ ಕೃತ್ವಾ ಪೂರ್ವಾಹ್ಣೇ ಸ್ನಾನಮಾಚರೇತ್ ॥

ಈ ರೀತಿ ಮಂತ್ರಪುರಸ್ಸರವಾಗಿ ಲೋಹಾಭಿಹಾರಿಕಕರ್ಮವನ್ನು ಆಚರಿಸಿ, ಗಂಧಪುಷ್ಪ ಧೂಪಾದಿಗಳಿಂದ ಅರ್ಚಿಸಿ, ಫಲಗಳು ತಾಂಬೂಲ ಇವನ್ನು ಸಮರ್ಪಣೆ ಮಾಡಬೇಕು. ನವಮಿಯ ಹಿಂದಿನದಿನ ಎಂದರೆ ಅಷ್ಟಮಿಯ ಪೂರ್ವಾಹ್ನದಲ್ಲೇ ಈ ವ್ರತಾಂಗವಾಗಿ ವಿಧ್ಯುಕ್ತರೀತಿ ದಂತಧಾವನಾದಿಗಳನ್ನಾಚರಿಸಿ ಸ್ನಾನ ಮಾಡಿ ಆಚರಿಸಬೇಕು.

* * * * *

# ವಾಹನ ಪೂಜೆ

**ಯಾವುದೇ ವಾಹನಗಳನ್ನು ಹೊಸದಾಗಿ ಖರೀದಿಸಿದಾಗ ಈ ಕೆಳಗಿನ ಮಂತ್ರಗಳಂತೆ ವಾಹನಪೂಜೆಯನ್ನು ಆಚರಿಸಬೇಕು. ಹಾಗೂ ನವರಾತ್ರಿಯ ಮಹಾನವಮಿಯ ಸಂದರ್ಭದಲ್ಲಿ ಪ್ರತಿಯೊಂದು ವಾಹನದಲ್ಲಿಯೂ ಇದೇ ಕ್ರಮದಲ್ಲಿ ಪೂಜೆಯನ್ನು ಆಚರಿಸಬೇಕು.**

## ಸಂಕಲ್ಪ

(ಆಚಮನ ಪ್ರಾಣಾಯಾಮ ಮಾಡಿ ದೇಶಕಾಲಗಳನ್ನುಚ್ಚರಿಸಿ ಹೀಗೆ ಸಂಕಲ್ಪ ಮಾಡಬೇಕು)

ಏವಂಗುಣವಿಶೇಷಣವಿಶಿಷ್ಟಾಯಾಂ ಅಸ್ಮಾಕಂ ಸಹಕುಟುಂಬಾನಾಂ ಕ್ಷೇಮ ಸ್ಥೈರ್ಯ ವಿಜಯ ವೀರ್ಯ ಆಯುರಾರೋಗ್ಯಸಿದ್ಧ್ಯರ್ಥಂ ಧರ್ಮಕಾಮ-ಮೋಕ್ಷಖ್ಯಚತುರ್ವಿದ ಪುರುಷಾರ್ಥಸಿದ್ಧ್ಯರ್ಥಂ ಸಮಸ್ತಸನ್ಮಂಗಳಾರ್ಥಂ ಪ್ರಯಾಣಕಾಲೇ ಅಪಘಾತದ್ಯನಿಷ್ಟಪರಿಹಾರಾರ್ಥಂ ಸಮಸ್ತವಿಘ್ನಪರಿಹಾರಾರ್ಥಂ ಉದ್ದೇಶಿತಫಲಪ್ರಾಪ್ತ್ಯರ್ಥಂ ವಾಹನಾಭಿಮಾನಿ ಗರುಡಾಂತರ್ಗತ ಪ್ರಾಣಸ್ಥ ಶ್ರೀಲಕ್ಷ್ಮೀನಾರಾಯಣ ಪೂಜಾಂ ಕರಿಷ್ಯೇ ॥

## ಶುದ್ಧೀಕರಣ

ಓಂ ಆಪೋ ಹಿ ಷ್ಠಾ ಮಯೋಭುವಃ । ತಾ ನ ಊರ್ಜೇ ದಧಾತನ ।

ಮಹೇ ರಣಾಯ ಚಕ್ಷಸೇ ॥ ಯೋ ವಃ ಶಿವತಮೋ ರಸಃ । ತಸ್ಯ

ಭಾಜಯತೇಹ ನಃ । ಉಶತೀರಿವ ಮಾತರಃ ॥ ತಸ್ಮಾ ಅರಂ ಗಮಾಮ ವಃ ।

ಯಸ್ಯ ಕ್ಷಯಾಯ ಜಿನ್ವಥ । ಅಪೋ ಜನಯಥಾ ಚ ನಃ ॥

ಶಂಖೋದಕದಿಂದ ವಾಹನದ ಒಳಗೆ ಹಾಗೂ ಹೊರಗೆ ಪ್ರೋಕ್ಷಣೆ ಮಾಡಬೇಕು.

## ಆವಾಹನೆ

ಓಂ ಓಂ ನಮೋ ನಾರಾಯಣಾಯ ಓಂ ಎಂದು ೧೨ ಬಾರಿ ವಾಹನ ಮುಟ್ಟಿ ಜಪಿಸಬೇಕು. ನರಸಿಂಹ ಮಂತ್ರ, ಕೃಷ್ಣಮಂತ್ರ, ರಾಮಮಂತ್ರ, ವೇದವ್ಯಾಸಮಂತ್ರ, ಶ್ರೀಕರಮಂತ್ರ, ಪರಶುರಾಮುಮಂತ್ರ, ಕ್ಷಾರಾಮಂತ್ರ, ಗರುಡಮಂತ್ರ, ಶಿವಪಂಚಾಕ್ಷರಮಂತ್ರ, ಗಣಪತಿಮಂತ್ರಗಳನ್ನು ಜಪಿಸುತ್ತಾ ಸನ್ನಿಧಾನ ಚಿಂತಿಸಬೇಕು.

ವಾಹನಾಭಿಮಾನಿ ದೇವತೆಯಾದ ಗರುಡದೇವರನ್ನು ವಿಶೇಷವಾಗಿ ಆವಾಹನೆ ಮಾಡಿ ಅದರಲ್ಲಿ 'ಸರ್ವೇಭ್ಯಃ ತತ್ವದೇವತಾಭ್ಯೋ ನಮಃ, ಸರ್ವೇಭ್ಯ ಮಾತೃಕಾದೇವತಾಭ್ಯೋ ನಮಃ' ಎನ್ನುತ್ತಾ ತತ್ವಾಭಿಮಾನಿ ದೇವತೆಗಳನ್ನು ಮಾತೃಕಾರೂಪಗಳನ್ನು ಚಿಂತಿಸಬೇಕು.

## ಷೋಡಶೋಪಚಾರ ಪೂಜೆ

ಸುಪರ್ಣಾಯ ನಮಃ । ಸುಪರ್ಣಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ (ಕೈ ಮುಗಿಯಬೇಕು)

ವೈನತೇಯಾಯ ನಮಃ । ವೈನತೇಯಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಆವಾಹಯಾಮಿ । ಆವಾಹನಮಂ ಸಮರ್ಪಯಾಮಿ (ನಿರ್ಮಾಲ್ಯ ತುಳಸಿ ಏರಿಸಬೇಕು)

ನಾಗಾಯೇ ನಮಃ । ನಾಗಾಯಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಅರ್ಘ್ಯಂ ಸಮರ್ಪಯಾಮಿ (ನೀರು ಬಿಡಬೇಕು)

ನಾಗಭೂಷಣಾಯ ನಮಃ । ನಾಗಭೂಷಣಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಪಾದ್ಯ ಸಮರ್ಪಯಾಮಿ (ನೀರು ಬಿಡಬೇಕು)

ವಿಷಾಂತಕಾಯ ನಮಃ । ವಿಷಾಂತಕಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಆಚಮನಂ ಸಮರ್ಪಯಾಮಿ (ಮೂರು ಬಾರಿ ನೀರು ಬಿಡಬೇಕು)

ಶಶಾಂಕಾಯ ನಮಃ । ಶಶಾಂಕಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಮಧುಪರ್ಕಂ ಸಮರ್ಪಯಾಮಿ (ನೀರು ಬಿಡಬೇಕು)

ಆದಿತ್ಯಾಯ ನಮಃ । ಆದಿತ್ಯಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಪುನರಾಚನಮನಂ ಸಮರ್ಪಯಾಮಿ (ಮೂರು ಉದ್ದರಣೆ ನೀರು ಬಿಡಬೇಕು)

ವಿಶ್ವತೋಮುಖಾಯ ನಮಃ। ವಿಶ್ವತೋಮುಖಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಸ್ನಾನಂ ಸಮರ್ಪಯಾಮಿ (ಶಂಖೋದಕದಿಂದ ಪ್ರೋಕ್ಷಣೆ ಮಾಡಬೇಕು)

ಗರುತ್ಮತೇ ನಮಃ। ಗರುತ್ಮಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ವಸ್ತ್ರಯುಗ್ಮಂ ಸಮರ್ಪಯಾಮಿ (ಗೆಜ್ಜೆವಸ್ತ್ರ ಏರಿಸಬೇಕು)

ಖಗಪತಯೇ ನಮಃ । ಖಗಪತ್ಯಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಉಪವೀತಂ ಸಮರ್ಪಯಾಮಿ (ಯಜ್ಞೋಪವೀತ ಸಮರ್ಪಿಸಬೇಕು)

ತಾರ್ಕ್ಷ್ಯಾಯ ನಮಃ । ತಾರ್ಕ್ಷ್ಯಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಗಂಧಂ ಸಮರ್ಪಯಾಮಿ (ಗೋಪೀಚಂದನದಿಂದ ದ್ವಾದಶ ನಾಮಗಳನ್ನು ಹಚ್ಚಿ ಪಂಚಮುದ್ರೆಗಳನ್ನು ಹಚ್ಚಿ ಅನಂತರ ಗಂಧವನ್ನು ಹಚ್ಚಬೇಕು)

ಕಶ್ಯಪನಂದನಾಯ ನಮಃ । ಕಶ್ಯಪನಂದನಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಅಕ್ಷತಾನ್ ಸಮರ್ಪಯಾಮಿ (ಅಕ್ಷತೆ, ಅರಿಶಿನ, ಕುಂಕುಮ, ಸಿಂಧೂರ ಇವುಗಳನ್ನು ವಾಹನದ ಹೊರಗೆ ಮತ್ತು ಒಳಗೆ ಶ್ರದ್ಧೆಯಿಂದ ಚೆನ್ನಾಗಿ ಕಾಣಿಸುವಂತೆ ಹಚ್ಚಬೇಕು)

ಪಕ್ಷಿರಾಜಾಯ ನಮಃ । ಪಕ್ಷಿರಾಜಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಆಭರಣಾನಿ ಸಮರ್ಪಯಾಮಿ (ಮಂತ್ರಾಕ್ಷತೆ ಏರಿಸಬೇಕು)

ಖಗೇಶ್ವರಾಯ ನಮಃ । ಖಗೇಶ್ವರಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ತುಳಸೀ ಪತ್ರಾಣಿ ಸಮರ್ಪಯಾಮಿ (ಹರಿನಿರ್ಮಾಲ್ಯ ತುಳಸೀ ಸಮರ್ಪಿಸಬೇಕು)

ನಾಗಾಂತರಾಯ ನಮಃ । ನಾಗಾಂತರಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ನಾನಾವಿಧ ಪರಿಮಳ ಪುಷ್ಪಾಣಿ ಸಮರ್ಪಯಾಮಿ (ನಿರ್ಮಾಲ್ಯ ಹೂಗಳಿಂದ ಪೂಜಿಸಬೇಕು)

ವಿಷ್ಣುರಥಾಯ ನಮಃ । ವಿಷ್ಣುರಥಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಧೂಪಮಾಘ್ರಾಪಯಾಮಿ (ಧೂಪಾರತಿ ಮಾಡಬೇಕು)

ಸುಪರ್ಣನಾಥಾಯ ನಮಃ । ಸುಪರ್ಣನಾಥಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ದೀಪಂ ದರ್ಶಯಾಮಿ

ಪನ್ನಗಾಶನಾಯ ನಮಃ । ಪನ್ನಗಾಶನಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಮಹಾನ್ನೈವೇದ್ಯಂ ನಿವೇದಯಾಮಿ.

ಹಣ್ಣುಕಾಯಿ ನೈವೇದ್ಯವನ್ನು ಮೊದಲು ನರಸಿಂಹದೇವರಿಗೆ ಸಮರ್ಪಣೆ ಮಾಡಿ ಮುಖ್ಯಪ್ರಾಣದೇವರಿಗೆ ನೈವೇದ್ಯ ಮಾಡಬೇಕು. ಆದರಲ್ಲಿ ಒಂದು ಅಥವಾ ಎರಡು ಹಣ್ಣುಗಳನ್ನು ತೆಗೆದು ಗರುಡದೇವರಿಗೆ ಸಮರ್ಪಿಸಿ ಅನಂತರ ಆದನ್ನು ಯೋಗ್ಯರೀತಿಯಲ್ಲಿ ಪ್ರಸಾದವನ್ನಾಗಿ ಸ್ವೀಕರಿಸಿ ವಿಸರ್ಜಿಸಬೇಕು.

ವಿಷ್ಣುರಥಾಯ ನಮಃ । ವಿಷ್ಣುರಥಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಮಂಗಳನೀರಾಜನಂ ಸಮರ್ಪಯಾಮಿ

ನರಸಿಂಹಸ್ತೋತ್ರ ಹೇಳುತ್ತಾ ಶ್ರದ್ಧೆಯಿಂದ ಮಂಗಳಾರತಿ ಮಾಡಬೇಕು. ಮೊದಲು ಕರ್ಪೂರದ ಆರತಿ ಅನಂತರ ಏಕಾರ್ತಿ ಮಾಡಿ ಪಂಚಾರತಿ ಮಾಡಬೇಕು.

ಅಮೃತಕಲಶಧಾರಿಣೇ ನಮಃ। ಅಮೃತಕಲಶಧಾರಿಣ್ಯಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಮಂತ್ರಪುಷ್ಪಂ ಸಮರ್ಪಯಾಮಿ

ಗರುಡಾಯ ನಮಃ । ಗರುಡಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಪ್ರದಕ್ಷಿಣ ನಮಸ್ಕಾರಾನ್ ಸಮರ್ಪಯಾಮಿ.

ವಾಹನಕ್ಕೆ ಪ್ರದಕ್ಷಿಣೆ ಮಾಡಿ ನಮಸ್ಕಾರ ಮಾಡಿ ಭಕ್ತಿಯಿಂದ ಪ್ರಾರ್ಥಿಸಬೇಕು. ನಮ್ಮ ದೇಹ ಮನಸ್ಸು ವಾಹನಗಳಲ್ಲಿ ಕುಳಿತು ನೀನೇ ರಕ್ಷಿಸೆಂದು ಶರಣಾಗತರಾಗಬೇಕು.

## ಬಲಿದಾನ

ಬ್ರಾಹ್ಮಣೇನ ಸದಾ ದೇಯಂ ಕೂಷ್ಮಾಂಡಂ ಬಲಿಕರ್ಮಣಿ ।

ಶ್ರೀಫಲಂ ವಾ ಸುರಾಧೀಶ ಭೇದಂ ನೈವ ತು ಕಾರಯೇತ್ ॥

ಮಾಷಾನ್ನೇನ ಬಲಿರ್ದೇಯೋ ಬ್ರಾಹ್ಮಣೇನ ವಿಜಾನತಾ ।

(ಈ ಮಂತ್ರವನ್ನು ಪುನರುಚ್ಚರಿಸುತ್ತಾ ವಾಹನದ ಸುತ್ತ ಭತ್ತದ ಅರಳು ಚೆಲ್ಲಬೇಕು)

## ಆಯುಧಪೂಜೆಯ ದಿವಸ ಪೂಜೆ ಮಾಡಿದ ಮೇಲೆ ಬೂದುಗುಂಬಳಕಾಯಿಗೆ ಕುಂಕುಮದ ನೀರನ್ನು ಹಾಕಿ ೮ ದಿಕ್ಕುಗಳಲ್ಲಿ ಕೆಳಗಿನ ಶ್ಲೋಕಗಳನ್ನು ಬಲಿಯನ್ನು ನೀಡಬೇಕು

ಬಲಿ ಗೃಹ್ಣಂತ್ವಿಮಂ ದೇವಾ ಆದಿತ್ಯಾ ವಸವಸ್ತಥಾ ।

ಮರುತಶ್ಚಾಶ್ವಿನೌ ರುದ್ರಾಃ ಸುಪರ್ಣಾಃ ಪನ್ನಗಾ ಗ್ರಹಾಃ ॥

ಅಸುರಾ ಯಾತುಧಾನಾಶ್ಚ ಪಿಶಾಚೋರಗರಾಕ್ಷಸಾಃ ।

ಡಾಕಿನ್ಯೋ ಯಕ್ಷಬೇತಾಲಾ ಯೋಗಿನ್ಯಃ ಪೂತನಾಃ ಶಿವಾಃ ॥

ಜಂಭಕಾಃ ಸಿದ್ಧಗಂಧರ್ವಾ ಮಾಲಾ ವಿದ್ಯಾಧರಾ ನಗಾಃ ॥

ದಿಕ್ಪಾಲಾ ಲೋಕಪಾಲಾಶ್ಚ ಯೇ ವಿಘ್ನವಿನಾಯಕಾಃ ।

ಜಗತಾಂ ಶಾಂತಿಕರ್ತಾರೋ ಬ್ರಹ್ಮಾದ್ಯಾಶ್ಚ ಮಹರ್ಷಯಃ ।

ಮಾ ವಿಘ್ನ ಮಾ ಚ ಮೇ ಪಾಪಂ ಮಾ ಸಂತು ಪರಿಪಂಥಿನಃ ।

ಸೌಮ್ಯಾ ಭವಂತು ತೃಪ್ತಾಶ್ಚ ಭೂತಪ್ರೇತಾಃ ಸುಖಾವಹಾಃ ॥

# ನರಸಿಂಹ ಸ್ತುತಿ

ಉದಯರವಿಸಹಸ್ರದ್ಯೋತಿತಂ ರೂಕ್ಷವೀಕ್ಷಂ ಪ್ರಲಯಜಲಧಿನಾದಂ ಕಲ್ಪಕೃದ್ವಹ್ನಿವಕ್ತ್ರಮ್
ಸುರಪತಿರಿಪುವಕ್ಷಶ್ಛೇದರಕ್ತೋಕ್ಷಿತಾಂಗಂ ಪ್ರಣತಭಯಹರಂ ತಂ ನಾರಸಿಂಹಂಽನತೋಽಸ್ಮಿ ॥

ಪ್ರಲಯರವಿಕರಾಲಾಕಾರರುಕ್ಚಕ್ರವಾಲಂ ವಿರಲಯದುರುರೋಚೀರೋಚಿತಾಶಾಂತರಾಲ ।
ಪ್ರತಿಭಯತಮಕೋಪಾತ್ಯುತ್ಕಟೋಚ್ಚಾಟ್ಟಹಾಸಿನ್ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ ॥೧॥

ಸರಸರಭಸಪಾದಾಪಾತಭಾರಾಭಿರಾವಪ್ರಕಿತಚಲಸಪ್ತದ್ವಂದ್ವಲೋಕಸ್ತುತಸ್ತ್ವಮ್ ।
ರಿಪುರುಧಿರನಿಷೇಕೇಣೈವ ಶೋಣಾಂಘ್ರಿಶಾಲಿನ್ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ ॥೨॥

ತವ ಘನಘನಘೋಷೋ ಘೋರಮಾಘ್ರಾಯ ಜಂಘಾಪರಿಘಮಲಘುಮೂರುವ್ಯಾಜತೇಜೋಗಿರಿಂ ಚ । ಘನವಿಘಟಿತಮಾಗಾದ್ದೈತ್ಯಜಂಘಾಲಸಂಘೋ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ ॥೩॥

ಕಟಕಿಕಟಕರಾಜದ್ಧಾಟಕಾಗ್ರ್ಯಸ್ಥಲಾಭಾ ಪ್ರಕಟಪಟತಟಿತ್ತೇ ಸತ್ಕಟಿಸ್ಥಾಽತಿಪಟ್ವೀ ।
ಕಟುಕಕಟುಕದುಷ್ಟಾಟೋಪದೃಷ್ಟಿಪ್ರಮುಷ್ಟೌ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ॥೪॥

ಪ್ರಖರನಖರವಜ್ರೋತ್ಖಾತರೂಕ್ಷಾರಿವಕ್ಷಃ ಶಿಖರಿಶಿಖರರಕ್ತೈ ರಾಕ್ತಸಂದೋಹದೇಹ ।
ಸುವಲಿಭಶುಭಕುಕ್ಷೇ ಭದ್ರಗಂಭೀರನಾಭೇ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ॥೫॥

ಸ್ಫುರಯತಿ ತವ ಸಾಕ್ಷಾತ್ ಸೈವ ನಕ್ಷತ್ರಮಾಲಾ ಕ್ಷಪಿತದಿತಿಜವಕ್ಷೋವ್ಯಾಪ್ತನಕ್ಷತ್ರಮಾರ್ಗಮ್।
ಅರಿದರಧರ ಜಾನ್ವಾಸಕ್ತಹಸ್ತದ್ವಯಾಹೋ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ ॥೬॥

ಕಟುವಿಕಟಸಟೌಘೋದ್ಘಟ್ಟನಾದ್ಭ್ರಷ್ಟಭೂಯೋ ಘನಪಟಲವಿಶಾಲಾಕಾಶಲಬ್ಧಾವಕಾಶಮ್।
ಕರಪರಿಘವಿಮರ್ದಪ್ರೋದ್ಯಮಂ ಧ್ಯಾಯತಸ್ತೇ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ ॥೭॥

ದಲಭಿಷ್ಕೋತ್ಕಂಠದಷ್ಟೋಷ್ಠವಿದ್ಯುತ್ ಸಟಶಠಕಠಿನೋರಃಪೀಠಭಿತ್ಸುಷ್ಠು ನಿಷ್ಠಾಮ್ ।
ಪಠತಿ ನು ತವ ಕಂಠಾಧಿಷ್ಠಘೋರಾಂತ್ರಮಾಲಾ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ ॥೮॥

ಹತಬಹುಮಿಹಿರಾಭಾಸಹ್ಯಸಂಹಾರರಂಹೋ ಹುತವಹ ಬಹುಹೇತಿಹ್ರೇಷಿಕಾನಂತಹೇತಿ।
ಅಹಿತವಿಹಿತಮೋಹಂ ಸಂವಹನ್ಸೈಂಹಮಾಸ್ಯಂ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ ॥೯॥

ಗುರುಗುರುಗಿರಿರಾಜತ್ಕಂದರಾಂತರ್ಗತೇ ವಾ ದಿನಮಣಿಮಣಿಶೃಂಗೇ ವಾಂತವಹ್ನಿಪ್ರದೀಪ್ತೇ। ದಧದತಿಕಟುದಂಷ್ಟ್ರೇ ಭೀಷಣೋಜ್ಜಿಹ್ವವಕ್ತ್ರೇ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ ॥೧೦॥

ಅಧರಿತವಿಬುಧಾಬ್ಧಿಧ್ಯಾನಧೈರ್ಯಂ ವಿದೀಧ್ಯದ್‌ವಿಧವಿಬುಧಧೀಶ್ರದ್ಧಾಪೀತೇಂದ್ರಾರಿ-ನಾಶಮ್ । ವಿದಧದತಿಕಟಾಹೋದ್ಘಟ್ಟನೇಽದ್ಧಾಟಹಾಸಂ ದಹ ದಹ ನರಸಿಂಹಾಸಹ್ಯ-ವೀರ್ಯಾಹಿತಂ ಮೇ ॥೧೧॥

ತ್ರಿಭುವನತೃಣಮಾತ್ರಾತ್ರಾಣತೃಷ್ಣಂ ತು ನೇತ್ರ-ತ್ರಯಮತಿಲಘಿತಾರ್ಚಿರ್ವಿಷ್ಟಪಾವಿಷ್ಟ-ಪಾದಮ್। ನವತರರವಿತಾಮ್ರಂ ಧಾರಯನ್ ರೂಕ್ಷವೀಕ್ಷಂ ದಹ ದಹ ನರಸಿಂಹಾಸಹ್ಯ-ವೀರ್ಯಾಹಿತಂ ಮೇ ॥೧೨॥

ಭ್ರಮದಭಿಭವಭೂಭೃದ್ಭೂರಿ ಭೂಭಾರಸದ್ಭಿದಭವನವವಿ ಭ್ರೂವಿಭ್ರಮಾದಭ್ರಶುಭ್ರ । ಋಭುಭವಭಯಭೇತ್ತರ್ಭಾಸಿ ಭೋ ಭೋ ವಿಭಾಭಿಃ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ ॥೧೩॥

ಶ್ರವಣಖಚಿತಚಂಚತ್ಕುಂಡಲೋಚ್ಚಂಡ(ಲ್ಲಾಸಿ, ಲ್ಲೋಲ) ಗಂಡ ಭ್ರುಕುಟಿಕಟುಲಲಾಟ-ಶ್ರೇಷ್ಠನಾಸಾರುಣೋಷ್ಠ । ವರದ ಸುರದ ರಾಜತ್ಕೇಸರೋತ್ಸಾರಿತಾರೇ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ ॥೧೪॥

ಕಟಿ(ಪ್ರವಿ)ಕಚಕಚರಾಜದ್ರತ್ನ ಕೋಟೀರಶಾಲಿನ್ ಗಲಗತಗಲ ದುಸ್ರೋದಾರರತ್ನಾಂಗದಾಢ್ಯ। ಕನಕಕಟಕಕಾಂಚೀಶಿಂಜಿನೀ ಮುದ್ರಿಕಾವನ್ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ ॥೧೫॥

ಅರಿದರಮಸಿಖೇಟೌ ಬಾಣಚಾಪೇ ಗದಾಂ ಸನ್ಮುಸಲಮಪಿ ಕರಾಭ್ಯಾಮಂಕುಶಂ ಪಾಶವರ್ಯಮ್। ಕರಯುಗಳಧೃತಾಂತ್ರಸ್ರಗ್ವಿಭಿನ್ನಾರಿವಕ್ಷೋ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ ॥೧೬॥

ಚಟ ಚಟ ಚಟ ದೂರಂ ಮೋಹಯ ಭ್ರಾಮಯಾರೀನ್ ಕಡಿ ಕಡಿ ಕಡಿ ಕಾಯಂ ಜ್ವಾರಯ ಸ್ಫೋಟಯಸ್ವ। ಜಹಿ ಜಹಿ ಜಹಿ ವೇಗಂ ಶಾತ್ರವಂ ಸಾನುಬಂಧಂ ದಹ ದಹ ನರಸಿಂಹಾಸಹ್ಯ-ವೀರ್ಯಾಹಿತಂ ಮೇ ॥೧೭॥

ವಿಧಿಭವವಿಬುಧೇಶಭ್ರಾಮಕಾಗ್ನಿ ಸ್ಫುಲಿಂಗಪ್ರಸವಿವಿಕಟದಂಷ್ಟ್ರೋಜ್ಜಿಹ್ವಮಕ್ತ್ರ ತ್ರಿನೇತ್ರ । ಕಲ ಕಲ ಕಲ ಕಾಮಂ ಪಾಹಿ ಮಾಂ ತೇ ಸುಭಕ್ತಂ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ ॥೧೮॥

ಕುರು ಕುರು ಕರುಣಾಂ ಸಾಂಕುರಾಂ ದೈತ್ಯಪೋತೇ ದಿಶ ದಿಶ ವಿಶದಾಂ ಮೇ ಶಾಶ್ವತೀಂ ದೇವದೃಷ್ಟಿಮ್ । ಜಯ ಜಯ ಜಯಮೂರ್ತೇಽನಾರ್ತಜೇತವ್ಯಪಕ್ಷಂ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ ॥೧೯॥

ಸ್ತುರಿತಿಯಮಹಿತಘ್ನೀ ಸೇವಿತಾ ನಾರಸಿಂಹೀ ತನುರಿವ ಪರಿಶಾಂತಾ ಮಾಲಿನೀ ಸಾಭಿತೋಽಲಮ್ ತದಖಿಲಗುರುಮಾಗ್ರ್ಯ ಶ್ರೀದರೂಪಾಲಸದ್ಭಿಃ ಸುನಿಯಮನಯಕೃತ್ಯೈಃ ಸದ್ಗುಣೈರ್ನಿತ್ಯಯುಕ್ತಾ ॥೨೦॥

ಲಿಕುಚತಿಲಕಸೂನುಃ ಸದ್ಧಿತಾರ್ಥಾನುಸಾರೀ ನರಹರಿನುತಿಮೇತಾಂ ಶತ್ರುಸಂಹಾರಹೇತುಮ್। ಅಕೃತ ಸಕಲಪಾಪಧ್ವಂಸಿನೀಂ ಯಃ ಪಠೇತ್ತಾಂ ವ್ರಜತಿ ನೃಹರಿಲೋಕಂ ಕಾಮಲೋಭಾದ್ಯಸಕ್ತಃ ॥೨೧॥

॥ ಇತಿ ಶ್ರೀಮತ್ಕವಿಕುಲತಿಲಕ ತ್ರಿವಿಕ್ರಮಪಂಡಿತಾರ್ಯಸುತ
ಶ್ರೀಮನ್ನಾರಾಯಣಪಂಡಿತಾಚಾರ್ಯ ವಿರಚಿತಃ ಶ್ರೀನೃಸಿಂಹಸ್ತುತಿಃ ॥

(ಉಚ್ಚಕಂಠದಿಂದ ಈ ಸ್ತೋತ್ರವನ್ನು ಅವಶ್ಯ ಪಠಿಸುತ್ತಾ ಚಕ್ರಗಳ ಕೆಳಗೆ ನಿಂಬೆಹಣ್ಣು ಇಟ್ಟು ವಾಹನವನ್ನು ಚಾಲನೆ ಮಾಡಬೇಕು.)

॥ ಇಲ್ಲಿಗೆ ವಾಹನಪೂಜೆಯ ವಿಧಿಯು ಸಮಾಪ್ತವಾಯಿತು ॥

# ಕೃಷ್ಣಾರ್ಪಣ

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

ಅನೇನ ವಾಹನಪೂಜಾಕರಣೇನ ಅಸ್ಮದ್ಗುರ್ವಂತರ್ಗತ ಗರುಡಾಂತರ್ಗತ
ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣ ಪ್ರೀಯತಾಮ್
ಶ್ರೀಕೃಷ್ಣಾರ್ಪಣಮಸ್ತು.

## ಶಮೀಪೂಜೆಯ ಸಾಮಗ್ರಿಗಳು

* ಶಮೀಗಿಡದ ಸುತ್ತಲೂ ಸ್ವಚ್ಛಗೊಳಿಸಿ ಸೆಗಣೆಯಿಂದ ಸಾರಿಸಿ ರಂಗೋಲಿ ಹಾಕಿರಬೇಕು.
* ಅರಿಶಿನ, ಕುಂಕುಮ, ರಂಗೋಲಿ, ತೆಂಗಿನಕಾಯಿ, ಬಾಳೇಹಣ್ಣು, ಪಂಚಕಜ್ಜಾಯ.
* ಭಗವಂತನಿಗೆ ಸಮರ್ಪಣೆ ಮಾಡಿದ ಹೂವು, ತುಳಸಿ, ಗಂಧ, ಅಕ್ಷತೆ, ತೀರ್ಥ.
* ಘಂಟಾಮಣಿ, ಕಲಶಗಳು, ಅರ್ಘ್ಯಪಾತ್ರೆ, ಆಸನ.
* ಎರಡು ದೀಪಸ್ತಂಭ, ಶಂಖ, ಸುದರ್ಶನ, ಮಂಗಳಾರತಿಗಳು.
* ಕಡ್ಲೆಹುರಿಹಿಟ್ಟನ್ನು ನೈವೇದ್ಯಕ್ಕಾಗಿ ಸಿದ್ಧಪಡಿಸಿಕೊಳ್ಳಬೇಕು.

## ವಿಜಯದಶಮಿಯಂದು ತಪ್ಪದೇ ಮಾಡಬೇಕಾದ ಕರ್ತವ್ಯಗಳು

* ಬನ್ನಿಪೂಜೆಯನ್ನು ವಿಜಯದಶಮಿಯ ಸಾಯಂಕಾಲ ತಪ್ಪದೇ ಮಾಡಬೇಕು. ಮನೆಯಿಂದ ಹೊರಗೆ ತೋಟದಲ್ಲಿರುವ ಬನ್ನಿಮರಕ್ಕೆ ಪೂಜೆಯನ್ನು ಮಾಡಬೇಕು.
* ಬನ್ನಿಮರವು ಇಲ್ಲದ್ದಿದರೆ, ಮೊದಲೇ ಒಂದು ಕುಂಡದಲ್ಲಿ ಶಮೀವೃಕ್ಷದ ಸಸಿಯನ್ನು ನೆಟ್ಟು ಪೂಜೆಯನ್ನು ಮಾಡಬೇಕು.
* ಶಮೀವೃಕ್ಷವನ್ನು ಪೂಜಿಸುವಾಗ ಸುದರ್ಶನ, ಚಕ್ರಾಂಕಿತ, ವಿಷ್ಣುಪಾದಗಳನ್ನಿಟ್ಟು ಪೂಜಿಸಬೇಕು.
* ನವರಾತ್ರಿಯ ಪ್ರತಿಪತ್ ದಿವಸ ಸ್ಥಾಪನೆ ಮಾಡಿದ ಅಂಕುರ ಗಡಿಗೆಯ ವಿಸರ್ಜನೆಯನ್ನು ಅಖಂಡದೀಪೋತ್ಸವದ ಸಮರ್ಪಣೆಯನ್ನು ಇಂದು ಬನ್ನಿಪೂಜೆ ಮುಗಿದ ಮೇಲೆ ಮಾಡಬೇಕು.
* ವಿಜಯದಶಮಿ ವಾಯುದೇವರಿಗೆ ಬಹಳ ಇಷ್ಟವಾದ ದಿವಸ. ಆದ್ದರಿಂದ ಮಧ್ವರೂಪದಿಂದ ಭೂಲೋಕದಲ್ಲಿ ಅದೂ ನಮ್ಮ ಕರ್ನಾಟಕದಲ್ಲಿಯೇ

ಅವತಾರವನ್ನು ಮಾಡಿರುವರು. ಆದ್ದರಿಂದ ಇಂದು ಮಧ್ವರಾಯರ ಅವತಾರದ ಚರಿತ್ರೆಯನ್ನು ಕೇಳಬೇಕು. ಹೇಳಬೇಕು. ಅವರ ಕುರಿತಾದ ಸ್ತೋತ್ರಗಳನ್ನು, ಹಾಡುಗಳನ್ನು ಪಠಿಸಬೇಕು.

* ಮಧ್ವವಿಜಯವನ್ನು ಪಾರಾಯಣ ಮಾಡಲು ಅನುಕೂಲವಿದ್ದವರು ಸಮಗ್ರವಾಗಿ ಪಾರಾಯಣವನ್ನು ಮಾಡಿದರೆ, ಅಭೀಷ್ಟಗಳೆಲ್ಲವೂ ಈಡೇರುತ್ತದೆ. ಎರಡನೇ ಸರ್ಗದ ಪಾರಾಯಣವನ್ನು ಮಾಡಲೇಬೇಕು.

* ನವರಾತ್ರಿಯ ಸಂದರ್ಭದಲ್ಲಿ ವಾಯುಸ್ತುತಿಯ ಪುರಶ್ಚರಣೆಯನ್ನು ಮಾಡುವ ಸಂಕಲ್ಪವಿದ್ದರೆ, ಪುರಶ್ಚರಣೆಯನ್ನು ಸಮಾಪ್ತಿಗೊಳಿಸಿ. ಇಂದಿನ ದಿವಸ ಅದರ ಹೋಮವನ್ನು ಮಾಡಬೇಕು.

* ಒಂಬತ್ತು ದಿವಸಗಳ ಕಾಲ ಆಚರಣೆ ಮಾಡಿಕೊಂಡು ಬಂದ ದುರ್ಗಾರಾಧನೆಯ ಸಮರ್ಪಣೆಯನ್ನು ಇಂದು ಮಾಡಿ, ದುರ್ಗೆಯ ಬಳಿ ವಿಜಯಭಾಗ್ಯದ ಪ್ರಾರ್ಥನೆಯನ್ನು ಮಾಡಬೇಕು.

* ಇಂದೇ ಶ್ರೀನಿವಾಸಕಲ್ಯಾಣವಾದ ಪರ್ವಕಾಲ. ಆದ್ದರಿಂದ ಶ್ರೀನಿವಾಸಕಲ್ಯಾಣದ ಚಿಂತನೆಯನ್ನು ಮಾಡಬೇಕು. ಅದರ ಕುರಿತಾದ ಪದ್ಯ ಹಾಗೂ ಸ್ತೋತ್ರಗಳ ಪಠಣೆಯನ್ನು ಮಾಡಬೇಕು.

* ಶ್ರೀರಾಮಚಂದ್ರನು ರಾವಣನನ್ನು ಕೊಂದು ವಿಜಯವನ್ನು ಸಾಧಿಸಿದ ಪರ್ವಕಾಲವೂ ಕೂಡ ಇಂದೇ ಆಗಿದೆ. ಹಾಗಾಗಿ ರಾಮಾಯಣಪಾರಾಯಣದ ಸಂಕಲ್ಪವನ್ನು ಮಾಡಿದ್ದರೆ ಇಂದು ಸಮರ್ಪಣೆ ಮಾಡಬೇಕು. ಇಲ್ಲದಿದ್ದರೆ ಇಂದು ಶ್ರೀರಾಮಪಟ್ಟಾಭಿಷೇಕದ ಚರಿತ್ರೆಯನ್ನು ಪಠಿಸಬೇಕು. ಅಥವಾ ಚರಿತ್ರೆಯನ್ನು ಕೇಳಬೇಕು.

* ಶ್ರೀರಾಮನ ಪಟ್ಟಾಭಿಷೇಕದ ಚಿಂತನೆಯನ್ನು ಮಾಡುವುದರಿಂದ ಜೀವನದಲ್ಲಿ ನಿರಂತರ ವಿಜಯವೇ ಪ್ರಾಪ್ತವಾಗುತ್ತದೆ. ಎಂದೆಂದೂ ಯಾವ ಹಂತದಲ್ಲೂ ಸೋಲು ಎಂಬುವುದೇ ಇರುವುದಿಲ್ಲ.

* ಪಾಂಡವರು ಹದಿನಾಕು ವರ್ಷಗಳ ಕಾಲ ವನವಾಸವನ್ನು ಮುಗಿಸಿ ಕೌರವರ ಬಳಿ ಗೆದ್ದ ಸುಮೂಹೂರ್ತ ಪರ್ವಕಾಲವೆಂದರೆ ಅದು ವಿಜಯದಶಮಿ. ಇಂದಿನ ದಿವಸವೇ ಶಮೀವೃಕ್ಷದಲ್ಲಿ ಇಟ್ಟಿದ್ದ ಎಲ್ಲ ಆಯುಧಗಳನ್ನು ತೆಗೆದುಕೊಂಡು, ಅರ್ಜುನನು ಉತ್ತರಗೋಗ್ರಹಣದ ಸಂದರ್ಭದಲ್ಲಿ ಯುದ್ಧವನ್ನು ಮಾಡಿ ಗೆದ್ದನು. ಇದರ ಬಗ್ಗೆ ಮಹಾಭಾರತದ ವಿರಾಟಪರ್ವದಲ್ಲಿ ಗೋಗ್ರಹಣಪರ್ವದಲ್ಲಿ ವಿವರವಾದ ವಿಚಾರವು ಪ್ರಸಕ್ತವಾಗಿದೆ. ಆದ್ದರಿಂದ ಇಂದು ಪಾಂಡವರ ವಿಜಯದ ಕಥೆಯನ್ನು ಕೇಳಿ ಅವರ ಅನುಗ್ರಹವನ್ನು ಪಡೆದುಕೊಳ್ಳಬೇಕು.

## ವಿಜಯದಶಮಿ ಮಾಡಬೇಕಾದ ಕೆಲಸಗಳು

* ಉಷಃಕಾಲದಲ್ಲಿ ಎದ್ದು ಶೌಚಾಚಾರಗಳನ್ನು ಮುಗಿಸಿ, ಭಗವಂತನಿಗೆ ಹಾಗೂ ತುಳಸಿಗೆ ಮನೆಯ ಮುಂದೆ ದೀಪಗಳನ್ನು ಹಚ್ಚಿ ನಮಿಸಬೇಕು. ತಳಿರುತೋರಣಗಳನ್ನು ಕಟ್ಟಬೇಕು.

* ಭಗವಂತನಿಗೆ ಪ್ರಯತ್ನಪೂರ್ವಕವಾಗಿ ಪಂಚಾಮೃತ ಅಭಿಷೇಕವನ್ನು ಮಾಡಬೇಕು.

* ಪ್ರತಿನಿತ್ಯ ಮಾಡುವ ಪೂಜೆಗಿಂತಲೂ ಹೆಚ್ಚಿನ ಸಮಯವನ್ನು ವಿನಿಯೋಗ ಮಾಡಿ, ಭಕ್ತಿಶ್ರದ್ಧೆಗಳಿಂದ ಷೋಡಶೋಪಚಾರ ಪೂಜೆಯನ್ನು ಆಚರಿಸಬೇಕು. ಹಾಗೂ ಪ್ರತಿನಿತ್ಯ ಮಾಡುವ ಅಡುಗೆಗಳಿಗಿಂತ ಹೆಚ್ಚಿನ ಅಡುಗೆಗಳನ್ನು ಮಾಡಿ, ಶಕ್ತಿಯಿದ್ದರೆ ಬ್ರಾಹ್ಮಣ ಭೋಜನವನ್ನು ಮಾಡಿಸಿ ಊಟವನ್ನು ಮಾಡಬೇಕು.

* ಪೂಜೆಯನ್ನು ಮಾಡಿದ ಮೇಲೆ ಗುರುಗಳ ಬಳಿ ತೆರಳಿ ಶಾಂತಿಪಾಠವನ್ನು ಹಾಕಿ, ಹೊಸ ವಿದ್ಯೆಯ ಅಧ್ಯಯನವನ್ನು ಪ್ರಾರಂಭ ಮಾಡಬೇಕು.

* ಪೂಜೆಯ ಸಮಯದಲ್ಲಿ ಸೀತಾರಾಮಚಂದ್ರರಿಗೆ, ಲಕ್ಷ್ಮೀನಾರಾಯಣರಿಗೆ, ಪದ್ಮಾವತಿ ಶ್ರೀನಿವಾಸನಿಗೆ ವಿಶೇಷ ಪೂಜೆಯನ್ನು ಮಾಡಬೇಕು. ಹಾಗೂ ಮುಖ್ಯಪ್ರಾಣದೇವರ ಅವತಾರರೂಪರಾದ ಮಧ್ವಾಚಾರ್ಯರಿಗೆ, ಅವರ ಬಾಲ್ಯರೂಪದ ವಾಸುದೇವಾಚಾರ್ಯರಿಗೆ ಭಕ್ತಿಶ್ರದ್ಧೆಗಳಿಂದ ಪೂಜೆಯನ್ನು ಮಾಡಬೇಕು.

* ವಾಸುದೇವರಿಗೆ ಹುರುಳಿಯು ಇಷ್ಟವಾದ್ದರಿಂದ ಹುರುಳಿಯ ಉಸುಳಿಯನ್ನು ಮಾಡಿ ನೈವೇದ್ಯವನ್ನು ಮಾಡಬೇಕು. ಇಂದು ಮಧ್ವಜಯಂತಿ ಆದ್ದರಿಂದ ಮಧ್ವವಿಜಯ ಪಾರಾಯಣವನ್ನು ಮಾಡಬೇಕು. ಸಾಧ್ಯವಾಗದ್ದಿದರೆ ಎರಡನೆಯ ಸರ್ಗದ ಪಾರಾಯಣವನ್ನಾದರೂ ಮಾಡಬೇಕು. ಸ್ತ್ರೀಯರು ಮಧ್ವನಾಮದ ಪಾರಾಯಣವನ್ನು ಮಾಡಬೇಕು.
* ತಾತ್ಪರ್ಯನಿರ್ಣಯದಲ್ಲಿ ಬರುವ ಸೀತಾರಾಮಕಲ್ಯಾಣದ ಶ್ಲೋಕಗಳನ್ನು ಪಠಿಸಬೇಕು. ಹಾಗೂ ಶ್ರೀನಿವಾಸಕಲ್ಯಾಣದ ಕೆಲವು ಶ್ಲೋಕಗಳನ್ನಾದರೂ ಪಠಿಸಬೇಕು.
* ಸಾಯಂಕಾಲದ ಗೋಧೂಳಿ ಮುಹೂರ್ತದಲ್ಲಿ ಶಮೀಪೂಜೆಯನ್ನು ಮಾಡಬೇಕು.
* ಶಮೀಪೂಜೆಯ ಅನಂತರ ಭಗವಂತನಿಗೆ, ಸಕಲ ದೇವತೆಗಳಿಗೆ, ಸಕಲ ಗುರುಗಳಿಗೆ ಶಮೀಯನ್ನು ಸಮರ್ಪಣೆ ಮಾಡಿ, ಮನೆಯಲ್ಲಿರುವ ಪ್ರತಿಯೊಬ್ಬರಿಗೂ ಶಮೀಯನ್ನು ನೀಡಿ ಆಶೀರ್ವಾದವನ್ನು ಪಡೆದುಕೊಂಡು, ಕಿರಿಯರಿಗೆ ಶಮಿಯನ್ನು ನೀಡಿ ಆಶೀರ್ವಾದವನ್ನು ಮಾಡಬೇಕು.
* ವಿಜಯದಶಮಿಯ ಪರ್ವಕಾಲ ದೊರೆಯುವುದು ವರ್ಷಕ್ಕೆ ಒಮ್ಮೆ ಮಾತ್ರ. ಆದ್ದರಿಂದ ಇದನ್ನು ಸಂಪೂರ್ಣವಾಗಿ ಸಾರ್ಥಕ ಮಾಡಿಕೊಂಡು ಜೀವನವನ್ನು ಧನ್ಯವನ್ನಾಗಿ ಮಾಡಿಕೊಳ್ಳಬೇಕು.

## ಶಮೀಪೂಜೆಯಿಂದ ದೊರಕುವ ಫಲ

* ಶಮೀವೃಕ್ಷದಲ್ಲಿ ಸಕಲದೇವತೆಗಳ ಹಾಗೂ ಲಕ್ಷ್ಮೀನಾರಾಯಣರ ದಿವ್ಯಸನ್ನಿಧಾನವು ಇಂದಿನ ದಿವಸ ವಿಶೇಷವಾಗಿ ಇರುತ್ತದೆ. ಆದ್ದರಿಂದ ಪ್ರಯತ್ನಪೂರ್ವಕವಾಗಿ ಪ್ರತಿಯೊಬ್ಬರೂ ಶಮಿಯ ಪೂಜೆಯನ್ನು ಶಮಿಯ ಆರಾಧನೆಯನ್ನು ಮಾಡಲೇಬೇಕು.
* ವರ್ಷಪೂರ್ತಿ ಮಾಡಿದ ಎಲ್ಲ ಪಾಪಗಳು ಶಮೀಪೂಜೆಯಿಂದ ಪರಿಹಾರವಾಗುತ್ತದೆ. ಕೆಟ್ಟಸ್ವಪ್ನಗಳು ಯಾವ ಕಷ್ಟಕಾರ್ಪಣ್ಯಗಳಿಗೆ

ಸೂಚಕವಾಗಿರುತ್ತವೋ, ಅವೆಲ್ಲವೂ ಪರಿಹಾರವಾಗುತ್ತವೆ. ಮುಂದೆ ದುಃಸ್ವಪ್ನಗಳು ಬೀಳುವುದಿಲ್ಲ.

* ಶಮೀವೃಕ್ಷದ ಒಂದೊಂದು ಎಲೆಯು ಬಂಗಾರಕ್ಕೆ ಸಮಾನವೆಂದು ಹಿರಿಯರು ಹೇಳುತ್ತಾರೆ. ಆದ್ದರಿಂದ ಶಮೀವೃಕ್ಷದ ಎಲೆಯನ್ನು ಬ್ರಾಹ್ಮಣರಿಗೆ ದಾನ ಮಾಡಬೇಕು. ಅವರ ಆಶೀರ್ವಾದವನ್ನು ಪಡೆದುಕೊಳ್ಳಬೇಕು.
* ಜೀವನದಲ್ಲಿ ಕೆಲವರಿಗೆ ಸಾಲವು ತೀರುವುದೇ ಇಲ್ಲ. ಬಂದ ರೋಗವು ಉಪಶಮನವೇ ಆಗುವುದಿಲ್ಲ. ಅಂಥವರು ಈ ವಿಜಯದಶಮಿಯ ಪರ್ವಕಾಲದಲ್ಲಿ ಒಂದು ತಾಮ್ರದ ಪಾತ್ರೆಯೊಳಗೆ ಉಪ್ಪು ಹಾಗೂ ಎಳ್ಳನ್ನು ಬೆರೆಸಿ, ಶಮೀವೃಕ್ಷಕ್ಕೆ ಹಾಕಬೇಕು. ತಮ್ಮ ಸಮಸ್ಯೆಯ ಪರಿಹಾರವನ್ನು ಪ್ರಾರ್ಥಿಸಬೇಕು. ಇದರಿಂದ ಅವರ ಸಾಲವು ಹಾಗೂ ರೋಗವು ಸಂಪೂರ್ಣವಾಗಿ ಪರಿಹಾರವಾಗುವುದರಲ್ಲಿ ಸಂಶಯವಿಲ್ಲ.
* ವಿಜಯದಶಮಿಯ ಈ ಪರ್ವಕಾಲದಲ್ಲಿ ಯಾರು ತೊಗರಿಕಾಳನ್ನು ದಾನ ಮಾಡುತ್ತಾರೋ, ಅಥವಾ ಅದನ್ನು ನೆನಸಿ ಹಸುವಿಗೆ ತಿನ್ನಿಸುತ್ತಾರೋ, ಅಂಥವರಿಗೆ ಶೀಘ್ರವಾಗಿ ವಿವಾಹವಾಗುತ್ತದೆ. (ತೊಗರಿಬೇಳೆಗಿಂತ ತೊಗರಿಕಾಳು ಶ್ರೇಷ್ಠ).
* ಪೂಜಿಸಿದ ಶಮೀವೃಕ್ಷದ ಎಲೆಯನ್ನು ಮನೆಯಲ್ಲಿರುವ ಎಲ್ಲ ಹಿರಿಯರಿಗೆ ನೀಡಿ ನಮಸ್ಕಾರವನ್ನು ಮಾಡಬೇಕು. ಹಾಗೂ ಹಿರಿಯರಿಂದ ಆ ಶಮೀಪತ್ರವನ್ನು ಆಶೀರ್ವಾದಪುರಸ್ಸರವಾಗಿ ಸ್ವೀಕಾರ ಮಾಡಬೇಕು. ಹೀಗೆ ಮಾಡುವುದರಿಂದ ಗುರುಹಿರಿಯರ ಅನುಗ್ರಹವು ಪೂರ್ಣವಾಗುತ್ತದೆ. ಜೀವನವು ಸಾರ್ಥಕವಾಗುತ್ತದೆ.
* ಶಮೀಪೂಜೆಯನ್ನು ಗೋಧೂಳೀ ಮುಹೂರ್ತದಲ್ಲಿಯೇ ಮಾಡಬೇಕು.

## ಶಮೀಪೂಜಾಕ್ರಮ

* ಪೂಜೆ ಮಾಡುವ ಮೊದಲು ಶಮೀವೃಕ್ಷದ ಸುತ್ತಲೂ ಸ್ಥಳವನ್ನು ಶುದ್ಧೀಕರಿಸಿರಬೇಕು. ಗೋಮಯದಿಂದ ಸಾರಿಸಿ ರಂಗವಲ್ಲ್ಯಾದಿಗಳನ್ನು ಹಾಕಿರಬೇಕು. ಹಾಗೂ ಕುಳಿತುಕೊಳ್ಳಲು ಸ್ಥಳಾವಕಾಶವನ್ನು ಮಾಡಿರಬೇಕು.

* ಶಮೀವೃಕ್ಷದ ಮುಳ್ಳುಗಳು ತುಂಬಾ ತೀಕ್ಷ್ಣವಾಗಿರುತ್ತವೆ. ಆ ಮುಳ್ಳುಗಳು ಸುತ್ತಮುತ್ತಲೂ ಎಲ್ಲೂ ಇರದಂತೆ ಜಾಗ್ರತೆ ವಹಿಸಬೇಕು.

* ವಿಜಯದಶಮಿಯ ಸಾಯಂಕಾಲದ ಗೋಧೂಳೀ ಮುಹೂರ್ತದಲ್ಲಿ ಶಮೀಪೂಜೆಯನ್ನು ವೈಭವದಿಂದ ಆಚರಿಸಬೇಕು.

* ಸಾಯಂಕಾಲದ ದೇವರ ಪೂಜೆಯನ್ನು ಮುಗಿಸಿ, ಅನಂತರ ಶಮೀಪೂಜೆಗೆ ಆವಶ್ಯಕವಾದ ಎಲ್ಲ ಸಾಮಗ್ರಿಗಳನ್ನು ತೆಗೆದುಕೊಂಡು ಮನೆಮಂದಿಯೆಲ್ಲರೂ ಶಮೀವೃಕ್ಷದ ಬಳಿ ತೆರಳಬೇಕು.

* ಜಾಗಂಟೆ, ಶಂಖ, ಗಂಟೆ ಇವುಗಳ ನಾದಘೋಷದೊಂದಿಗೆ ಶಮೀವೃಕ್ಷದ ಕಡೆಗೆ ದೀಪವನ್ನು ಹಚ್ಚಿಕೊಂಡು ತೆರಳಬೇಕು.

* ಯಾರು ಮನೆಯ ಹಿರಿಯರೋ, ಅವರು ಶಮೀಪೂಜೆಯನ್ನು ಭಕ್ತಿಶ್ರದ್ಧೆಗಳಿಂದ ಆಚರಿಸಬೇಕು. ಸಂಕಲ್ಪಪೂರ್ವಕವಾಗಿ, ಶಮೀವೃಕ್ಷದಲ್ಲಿ ತತ್ವನ್ಯಾಸ, ಮಾತೃಕಾನ್ಯಾಸ ಮೊದಲಾದವುಗಳಿಂದ ಆವಾಹನೆಯನ್ನು ಮಾಡಿ, ಮುಂದೆ ನೀಡಿದ ಕ್ರಮದಲ್ಲಿ ಶಮೀಪೂಜೆಯನ್ನು ಮಾಡತಕ್ಕದ್ದು.

* ಶಮೀಪೂಜೆಯಲ್ಲಿ ಕೇವಲ ತೆಂಗಿನಕಾಯಿ, ಬಾಳೇಹಣ್ಣು ಅಷ್ಟೇ ಅಲ್ಲದೇ, ಉಳಿದ ಫಲಗಳನ್ನೂ ಕೂಡ ಹಾಗೂ ತಿಂಡಿತಿನಿಸುಗಳನ್ನೂ ಕೂಡ ನೈವೇದ್ಯವನ್ನಾಗಿ ಸಮರ್ಪಣೆ ಮಾಡಬೇಕು.

* ಶಮೀವೃಕ್ಷವು ಭಗವಂತನ ಕುಲದೇವತೆ ಎಂದು ಶ್ರೀನಿವಾಸನೇ ಶ್ರೀನಿವಾಸಕಲ್ಯಾಣದಲ್ಲಿ ಹೇಳಿಕೊಂಡಿದ್ದಾನೆ. ಆದ್ದರಿಂದ ಶ್ರೀನಿವಾಸಪದ್ಮಾವತಿಯ ಆವಾಹನೆಯನ್ನು ಅಥವಾ ಲಕ್ಷ್ಮೀನಾರಾಯಣರ ಆವಾಹನೆಯನ್ನು ಮಾಡಿ, ಪೂಜೆಯನ್ನು ಮಾಡಬೇಕು.

* ಶಮೀಪೂಜೆಯು ಆದ ಬಳಿಕ ಪ್ರತಿಯೊಬ್ಬರು ಕನಿಷ್ಟಪಕ್ಷ ನಾಲ್ಕು ಪ್ರದಕ್ಷಿಣೆ ನಮಸ್ಕಾರವನ್ನು ಹಾಕಬೇಕು.

* ಪೂಜೆ ಆದ ಬಳಿಕ ಶಮೀವೃಕ್ಷದ ಎಲೆಗಳನ್ನು ಕಿತ್ತಿ ಅದರಲ್ಲಿ ಶಮೀದೇವಿಯ ಸಾನ್ನಿಧ್ಯಬರುವಂತೆ ಪ್ರಾರ್ಥಿಸಬೇಕು.
* ಶಮೀವೃಕ್ಷದ ಮೃತ್ತಿಕೆಯನ್ನೂ ಕೂಡ ಅವಶ್ಯವಾಗಿ ಮನೆಗೆ ತರಬೇಕು. ಹಾಗೂ ಪ್ರತಿಯೊಬ್ಬರಿಗೂ ಆ ಮೃತ್ತಿಕೆಯನ್ನು ಧಾರಣೆ ಮಾಡುವಂತೆ ಹೇಳಬೇಕು. ತಂದ ಶಮಿಯನ್ನು ಮೊದಲು ಭಗವಂತನಿಗೆ ಏರಿಸಿ, ನಮಸ್ಕಾರವನ್ನು ಮಾಡಿ, ಆಶೀರ್ವಾದವನ್ನು ಬೇಡಬೇಕು. ಅನಂತರ ಮುಖ್ಯಪ್ರಾಣದೇವರಿಗೆ, ತುಳಸಿಗೆ, ಸಕಲ ತತ್ವಾಭಿಮಾನಿದೇವತೆಗಳಿಗೆ, ಸಮಸ್ತ ಗುರುಗಳಿಗೆ ತಾರತಮ್ಯಪ್ರಕಾರವಾಗಿ ಶಮೀಪತ್ರವನ್ನು ನೀಡಿ ಅನುಗ್ರಹವನ್ನು ಪಡೆದುಕೊಳ್ಳಬೇಕು.
* ಮನೆಯಲ್ಲಿರುವ ಹಿರಿಯರಿಗೆ ಶಮೀಪತ್ರವನ್ನು ನೀಡಿ ಆಶೀರ್ವಾದ ಮಾಡುವಂತೆ ಪ್ರಾರ್ಥಿಸಬೇಕು. ಹೀಗೆ ಮನೆಯಲ್ಲಿರುವ ಪ್ರತಿಯೊಬ್ಬರೂ ಕೂಡ ಪರಸ್ಪರವಾಗಿ ಶಮೀಪತ್ರದ ವಿನಿಮಯವನ್ನು ಮಾಡಿಕೊಂಡು ಸಂತೋಷ ಉತ್ಸಾಹ, ಉಲ್ಲಾಸಗಳಿಂದ ವಿಜಯದಶಮಿಯ ಹಬ್ಬದ ಸಡಗರವನ್ನು ಅನುಭವಿಸಬೇಕು.
* ಸಂತೋಷ ಉತ್ಸಾಹಗಳಿದ್ದಲ್ಲಿಯೇ ಭಗವಂತನ ಸಾನ್ನಿಧ್ಯವಿರುತ್ತದೆ. ಹಬ್ಬದ ಸಂದರ್ಭಗಳಲ್ಲಿ ಮುಖವನ್ನು ಗಂಟುಹಾಕಿಕೊಳ್ಳುವುದು, ದುರಹಂಕಾರವನ್ನು ತೋರಿಸುವುದು, ಅಥವಾ ಔದಾಸೀನ್ಯವನ್ನು ಹೊಂದುವುದು. ಕಾರ್ಯಾಂತರಗಳಲ್ಲಿ ತಲ್ಲೀನರಾಗುವುದು ಇವುಗಳನ್ನು ಮಾಡಿದರೆ, ಆ ಮನೆಯಲ್ಲಿ ಕಲಿಯು ಆವರಿಸುತ್ತಾನೆ.

  ಆದ್ದರಿಂದ ವಿಧೇಯರಾಗಿದ್ದು, ಎಲ್ಲರ ಜೊತೆ ಬೆರೆತು ಮಕ್ಕಳ ಮನಸ್ಸಿನಂತೆ ಮನಸ್ಸನ್ನು ಶುದ್ಧವನ್ನಾಗಿ ಮಾಡಿಕೊಂಡು ವಿಜಯದಶಮಿಯ ಹಬ್ಬವನ್ನು ವಿಜೃಂಭಣೆಯಿಂದ ಆಚರಣೆ ಮಾಡಬೇಕು.

## ವಿಜಯದಶಮಿಯ ಮಹತ್ವ

* ವರ್ಷದ ಮೂರುವರೆ ದಿವಸದ ಪರ್ವಕಾಲಗಳಲ್ಲಿ ವಿಜಯದಶಮಿಯೂ ಕೂಡ ಒಂದು. ಇಂದಿನ ದಿವಸ ಮಾಡುವ ಪ್ರತಿಯೊಂದು ಸತ್ಕಾರ್ಯಗಳಿಗೂ ಅಕ್ಷಯಫಲವು ಇರುತ್ತದೆ.

* ಯುಗಾದಿ ಅಕ್ಷಯತೃತೀಯ ಹಾಗೂ ಬಲಿಪಾಡ್ಯಮಿಗಿಂತಲೂ ವಿಜಯದಶಮಿಯು ಹೆಚ್ಚು ಮಹತ್ವಪೂರ್ಣವಾಗಿದೆ. ಆದ್ದರಿಂದ ವಾಯುದೇವರು ವಿಜಯದಶಮಿಯನ್ನೇ ಆರಿಸಿಕೊಂಡು ಮಧ್ವರೂಪದಿಂದ ಅವತಾರವನ್ನು ಮಾಡಿರುವರು.
* ವಿಜಯದಶಮಿಯ ದಿವಸ ಆರಂಭ ಮಾಡಿದ ಕೆಲಸಗಳೆಲ್ಲವೂ ವಿಜಯವನ್ನು ನೀಡುತ್ತವೆ. ಇಂದಿನ ದಿವಸ ಯಾವುದೇ ತಿಥಿ, ನಕ್ಷತ್ರ, ಮುಹೂರ್ತಗಳನ್ನು ನೋಡದೇ, ಸತ್ಕಾರ್ಯಗಳನ್ನು ಪ್ರಾರಂಭ ಮಾಡಬಹುದೆಂದು ಧರ್ಮಶಾಸ್ತ್ರವು ಹೇಳುತ್ತದೆ.
* ನವರಾತ್ರಿಗಳಲ್ಲಿ ಒಂಬತ್ತು ದಿವಸಗಳ ಕಾಲ ದುರ್ಗೆಯ ಆರಾಧನೆಯನ್ನು ಮಾಡಬೇಕೆಂದು ಎಲ್ಲ ಪುರಾಣಗಳು ಹೇಳುತ್ತವೆ. ಅದರ ಪ್ರಕಾರವಾಗಿ ಜಗತ್ತಿನಲ್ಲಿ ಎಲ್ಲೆಡೆಯೂ ಕೂಡ ದುರ್ಗೆಯ ಆರಾಧನೆಯು ಅತ್ಯಂತ ವೈಭವದಿಂದ ನಡೆಯುತ್ತದೆ. ಇಂದಿನ ದಿವಸ ಆಚರಿಸಿದ ದುರ್ಗೆಯ ಆರಾಧನೆಯನ್ನು ಸಮರ್ಪಣೆ ಮಾಡಿ, ಅವಳ ಆಶೀರ್ವಾದವನ್ನು ಪಡೆದಾಗ ಅವಳು ತನ್ನ ಭಕ್ತರಿಗೆ ವಿಜಯವನ್ನು ನೀಡುತ್ತಾಳೆ. ಆದ್ದರಿಂದಲೇ ಇವತ್ತಿನ ದಿವಸಕ್ಕೆ ವಿಜಯದಶಮಿ ಎಂಬ ಹೆಸರು ಬಂದಿದೆ.
* ಶ್ರೀನಿವಾಸಕಲ್ಯಾಣವಾದ ದಿವಸವೂ ಕೂಡ ಇಂದೇ ಆಗಿದೆ. ಆದ್ದರಿಂದ ಈ ಪರ್ವಕಾಲದಲ್ಲಿ ಭಗವಂತನ ದುರ್ಗಾದೇವಿಯ ಹಾಗೂ ಮುಖ್ಯಪ್ರಾಣದೇವರ ಸಂಪೂರ್ಣ ಸಾನ್ನಿಧ್ಯ ಇರುತ್ತದೆ ಎಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.
* ಸರಸ್ವತಿಯನ್ನು ವಿಸರ್ಜನೆ ಮಾಡಿ, ಅಧ್ಯಯನವನ್ನು ಪ್ರಾರಂಭ ಮಾಡುವ ಶ್ರೇಷ್ಠ ದಿವಸವೂ ಕೂಡ ಇಂದೇ ಆಗಿದೆ. ಪ್ರತಿಯೊಬ್ಬರೂ ಕೂಡ ವಿಜಯದಶಮಿಯ ದಿವಸ ಗುರುಗಳ ಬಳಿ ಶಾಂತಿಪಾಠವನ್ನು ಕಡ್ಡಾಯವಾಗಿ ಹಾಕಲೇಬೇಕು.
* ಹೊಸ ವಿಷಯದ ಅಧ್ಯಯನವನ್ನು ಇಂದಿನ ದಿವಸ ಪ್ರಾರಂಭ ಮಾಡಬೇಕು. ಅದರಿಂದ ಯಾವ ವಿದ್ಯೆಯನ್ನು ಪಡೆಯಬೇಕೆಂಬ ಅಪೇಕ್ಷೆಯನ್ನು ಹೊಂದಿರುತ್ತೇವೋ, ಅದನ್ನು ಸಂಪೂರ್ಣವಾಗಿ ಪಡೆದುಕೊಂಡು ಅದರ

ಅನುಷ್ಠಾನವನ್ನು ಮಾಡುವಂತೆ ಭಗವಂತನು ಅನುಗ್ರಹಿಸುತ್ತಾನೆ. ಇಂದಿಗೂ ಕೂಡ ಪ್ರತಿಯೊಬ್ಬ ಶಿಷ್ಯರು ಗುರುಗಳ ಬಳಿ ಶಾಂತಿಪಾಠವನ್ನು ಹಾಕಿ ಅಧ್ಯಯನವನ್ನು ಪ್ರಾರಂಭ ಮಾಡುತ್ತಾರೆ.

* ಇಂದು ಅಧ್ಯಯನವನ್ನು ಪ್ರಾರಂಭ ಮಾಡಿದ ಮೇಲೆ ಮರುದಿವಸ (ಏಕಾದಶಿ ದಿವಸ) ತಪ್ಪದೇ ಅಧ್ಯಯನವನ್ನು ಮುಂದುವರೆಸಬೇಕು. ಇಲ್ಲದಿದ್ದರೆ ದ್ವಿತೀಯವಿಘ್ನ ಎಂಬ ದೋಷವು ಬಂದು, ಅಧ್ಯಯನವು ನಿಂತುಹೋಗುತ್ತದೆ.
* ವಿಜಯದಶಮಿಯ ಹಬ್ಬವನ್ನು ಭಗವಂತನಿಗೆ ವಿಶೇಷ ಪೂಜೆಯನ್ನು ಮಾಡುವ ಮೂಲಕ ಪ್ರಾರಂಭ ಮಾಡಬೇಕು. ಹಾಗೂ ವಿವಿಧ ಭಕ್ಷ್ಯಭೋಜ್ಯಗಳನ್ನು ಮಾಡಿ, ಭಗವಂತನಿಗೆ ಸಮರ್ಪಣೆಯನ್ನು ಮಾಡಿ, ಅನ್ನ ಸಂತರ್ಪಣೆಯನ್ನು ಮಾಡಬೇಕು. ಮನೆಯಲ್ಲಿ ಇರುವ ಪ್ರತಿಯೊಬ್ಬರೂ ಕೂಡ ಒಟ್ಟಾಗಿ ಈ ಹಬ್ಬವನ್ನು ಮಾಡುವುದರಿಂದ ಭಗವಂತನ ವಿಶೇಷ ಅನುಗ್ರಹವು ಪ್ರಾಪ್ತವಾಗುತ್ತದೆ.
* ತಾತ್ಪರ್ಯನಿರ್ಣಯದಲ್ಲಿ ಬರುವ ಸೀತಾರಾಮಕಲ್ಯಾಣದ ಶ್ಲೋಕಗಳನ್ನು ಪಠಿಸಬೇಕು. ಹಾಗೂ ಶ್ರೀನಿವಾಸಕಲ್ಯಾಣದ ಕೆಲವು ಶ್ಲೋಕಗಳನ್ನಾದರೂ ಪಠಿಸಬೇಕು.
* ಸಾಯಂಕಾಲದ ಗೋಧೂಳಿಮುಹೂರ್ತದಲ್ಲಿ ಶಮೀಪೂಜೆಯನ್ನು ಮಾಡಬೇಕು.
* ಶಮೀಪೂಜೆಯ ಅನಂತರ ಭಗವಂತನಿಗೆ, ಸಕಲ ದೇವತೆಗಳಿಗೆ, ಸಕಲ ಗುರುಗಳಿಗೆ ಶಮೀಯನ್ನು ಸಮರ್ಪಣೆ ಮಾಡಿ, ಮನೆಯಲ್ಲಿರುವ ಪ್ರತಿಯೊಬ್ಬರಿಗೂ ಶಮೀಯನ್ನು ನೀಡಿ ಆಶೀರ್ವಾದವನ್ನು ಪಡೆದುಕೊಂಡು, ಕಿರಿಯರಿಗೆ ಶಮಿಯನ್ನು ನೀಡಿ ಆಶೀರ್ವಾದವನ್ನು ಮಾಡಬೇಕು.
* ವಿಜಯದಶಮಿಯ ಪರ್ವಕಾಲ ದೊರೆಯುವುದು ವರ್ಷಕ್ಕೆ ಒಮ್ಮೆ ಮಾತ್ರ. ಆದ್ದರಿಂದ ಇದನ್ನು ಸಂಪೂರ್ಣವಾಗಿ ಸಾರ್ಥಕ ಮಾಡಿಕೊಂಡು ಜೀವನವನ್ನು ಧನ್ಯವನ್ನಾಗಿ ಮಾಡಿಕೊಳ್ಳಬೇಕು.

## ಕೃಷ್ಣಾಚಾರ್ಯಸ್ಮೃತಿಮುಕ್ತಾವಳಿಯಲ್ಲಿ ವಿಜಯದಶಮಿ

ನವಮ್ಯೈವ ಯುತಾ ಕಾರ್ಯಾ ಶುದ್ಧಾ ವಾ ಸರ್ವದಾ ಶುಭಾ ।
ದಾನೇ ಕೋಟಿಗುಣಂ ಪುಣ್ಯಂ ತಥೈವ ದಶಮೀದಿನೇ ॥
ವಿಜಯಾದಶಮೀ ಪ್ರೋಕ್ತಾ ಸಾ ಪುಣ್ಯಾ ಜಯದಾ ನೃಣಾಮ್ ।
ರಾಜ್ಞಾಂ ವೈರಿಜಯಸ್ತಸ್ಯಾಂ ಶತ್ರೂಣಾಂ ಪಾತಕಸ್ಯ ಚ ॥
ವಿಜಯಃ ಸ್ಯಾಚ್ಚ ತಸ್ಮಾತ್ತು ಮಹಾಪುಣ್ಯಫಲಪ್ರದಾ ।
ಕುರ್ವೀತ ಮಂಗಲಾನ್ಯಸ್ಯಾಂ ಸರ್ವದಾ ಮಂಗಲೇಪ್ಸುನಾ ॥
ದ್ರವ್ಯೈಃ ಸುಗಂಧಿಭಿಸ್ತೈಸ್ತೈರ್ಮನ್ಮೂರ್ತೀರ್ಬ್ರಾಹ್ಮಣಾನಪಿ ॥
ಸ್ನಾಪಯೇತ್ ತೇನ ಮಹತೀ ಪ್ರೀತಿರ್ಮೇ ಜಾಯತೇ ಧ್ರುವಮ್ ॥

ನವಮಿಯಿಂದ ಕೂಡಿರುವ ದಶಮಿಯಂದೇ ವಿಜಯದಶಮಿ ಆಚರಣೆ ಮಾಡಬೇಕು. ಏಕಾದಶಿಯಿಂದ ಕೂಡಿದ ದಶಮಿಯಂದು ವಿಜಯದಶಮಿ ಆಚರಣೆ ಮಾಡಬಾರದು. ನವಮಿಯಿಂದ ಕೂಡಿದ ದಶಮಿಯ ದಿನ ದಾನ ಮಾಡಿದರೆ ಕೋಟಿಪಾಲು ಪುಣ್ಯವು ಬರುತ್ತದೆ. ಪುಣ್ಯಕರವಾದ ದಶಮಿಯು ಮಾನವರಿಗೆ ವಿಜಯವನ್ನು ನೀಡುತ್ತದೆ. ಆದ್ದರಿಂದಲೇ ಇದಕ್ಕೆ ವಿಜಯದಶಮಿ ಎಂದು ಹೆಸರು ಸಾರ್ಥಕವಾಗಿದೆ. ರಾಜರಿಗೆ ಶತ್ರುಜಯವನ್ನು ನೀಡುವುದರಿಂದ ಇದಕ್ಕೆ ವಿಜಯದಶಮಿ ಎಂಬ ಹೆಸರು ಬಂದಿದೆ. ಮತ್ತು ಪ್ರತಿಯೊಬ್ಬರಿಗೂ ಅವರವರ ಶತ್ರುಗಳನ್ನು ಮತ್ತು ಮಾನಸಿಕ ಶತ್ರುಗಳನ್ನು ನಿಗ್ರಹ ಮಾಡಿ, ವಿಜಯವನ್ನು ಈ ವಿಜಯದಶಮಿಯು ತಂದುಕೊಡುತ್ತದೆ. ಪಾಪಗಳಿಂದ ಜಯವು ದೊರಕುತ್ತದೆ. ಆದ್ದರಿಂದ ವಿಜಯದಶಮಿಯು ಅತ್ಯಂತ ಮಹತ್ವದ ಪುಣ್ಯಪ್ರದವಾದ ದಿವಸವಾಗಿದೆ. ಯಾರು ಶುಭವನ್ನು ಅಪೇಕ್ಷಿಸಿ ಇಂದು ಹಬ್ಬವನ್ನು ಆಚರಿಸುತ್ತಾರೋ, ಅವರಿಗೆ ಎಲ್ಲ ಬಗೆಯ ಅಭೀಷ್ಟಗಳು ನೆರವೇರುತ್ತವೆ. ವಿಜಯದಶಮಿಯ ದಿವಸ ಪರಿಮಳಭರಿತವಾದ ವಸ್ತುಗಳಿಂದ ಬ್ರಾಹ್ಮಣರಿಗೆ ಸ್ನಾನವನ್ನು ಮಾಡಿಸಬೇಕು. ಇದರಿಂದ ಅತ್ಯಂತ ಸಂತೋಷವಾಗುತ್ತದೆಂದು ವರಾಹದೇವರು ಹೇಳಿದ್ದಾರೆ. ವರಾಹಪುರಾಣದಲ್ಲಿ ಬರುವ ಈ ಶ್ಲೋಕಗಳನ್ನು ಶ್ರೀಕೃಷ್ಣಾಚಾರ್ಯರು ತಮ್ಮ ಸ್ಮೃತಿಮುಕ್ತಾವಳಿ ಗ್ರಂಥದಲ್ಲಿ ಉಲ್ಲೇಖ ಮಾಡಿದ್ದಾರೆ.

# ಶಮೀವೃಕ್ಷದ ಬಗ್ಗೆ ಮಾಹಿತಿ

೧. ಶಮೀವೃಕ್ಷಕ್ಕೆ ಅಗ್ನಿಗರ್ಭ ಎಂದು ಹೆಸರು. ಹಿಂದಿನ ಕಾಲದಲ್ಲಿ ಇದರಿಂದಲೇ ಅರಣೀಮಥನವನ್ನು ಮಾಡುತ್ತಿದ್ದರು. ಈ ವೃಕ್ಷದ ಕಾಷ್ಠದಿಂದ ಬೆಂಕಿಯು ಬಹುಬೇಗ ಹುಟ್ಟುತ್ತದೆ.

೨. ಶಮೀವೃಕ್ಷಕ್ಕೆ ಇಷ್ಟು ಹೆಸರುಗಳು ಕೋಶಗಳಲ್ಲಿ ಪ್ರಸಿದ್ಧವಾಗಿವೆ - ೧. ಶಕ್ತುಫಲಾ, ೨. ಶಿವಾ, ೩. ಕ್ಷತ್ತುಫಲೀ, ೪. ಶಾಂತಾ, ೫. ತುಂಗಾ, ೬. ಕಚರೀಪುಫಲ, ೭. ಕೇಶಮಥನೀ, ೮. ಈಶಾನೀ, ೯. ಲಕ್ಷ್ಮೀ, ೧೦. ತಪನತನಯಾ, ೧೧. ಇಷ್ಟಾ, ೧೨. ಶುಭಕರೀ, ೧೩. ಹವಿರ್ಗಂಧಾ, ೧೪. ಮೇಧ್ಯಾ, ೧೫. ದುರಿತದಮನೀ, ೧೬. ಶಕ್ತುಫಲಿಕಾ, ೧೭. ಸಮುದ್ರಾ, ೧೮. ಮಂಗಲ್ಯಾ, ೧೯. ಸುರಭಿ, ೨೦. ಪಾಪಶಮನೀ, ೨೧. ಭದ್ರಾ, ೨೨. ಶಂಕರೀ, ೨೩. ಕೇಶಹಂತ್ರೀ, ೨೪. ಶಿವಫಲಾ, ೨೫. ಸುಪುತ್ರಾ, ೨೬. ಸುಖದಾ ಎಂದು ೨೬ ಹೆಸರುಗಳಿವೆ.

೩. ರಕ್ತಪಿತ್ತ, ಅತಿಸಾರ ಮೊದಲಾದ ದೋಷಗಳನ್ನು ಇದು ಪರಿಹರಿಸುತ್ತದೆ. ಕಂಪನ, ಕಾಸಾ, ಶ್ರಮ, ಶ್ವಾಸ, ಕುಷ್ಠ, ಅರ್ಷ, ಕ್ರಿಮಿ ಮೊದಲಾದ ದೋಷಗಳನ್ನು ಈ ವೃಕ್ಷವು ಪರಿಹಾರ ಮಾಡುತ್ತದೆ. ಆದರೆ ಉಷ್ಣಕಾರಕವೂ ಕೇಶನಾಶಕವೂ ಆಗಿರುತ್ತದೆ.

ಹೀಗೆ ಭಾವಪ್ರಕಾಶದಲ್ಲಿ ಹೇಳಿದ್ದಾರೆ -

ಶಮೀ ತಿಕ್ತಾ ಕಟುಃ ಶೀತಾ ಕಷಾಯಾ ರೇಚನೀ ಲಘುಃ ।
ಕಂಪಕಾಸಶ್ರಮಶ್ವಾಸಕುಷ್ಠಾರ್ಶಃ ಕೃಮಿಜಿತ್ ಸ್ಮೃತಾ ॥ (ಭಾವಪ್ರಕಾಶ)

ಈ ವೃಕ್ಷವು ಆಧಿಭೌತಿಕವಾಗಿ ರೋಗನಾಶಕವಾಗಿದೆ. ಆಧ್ಯಾತ್ಮಿಕವಾಗಿ ತೇಜೋವರ್ಧಕವಾಗಿದೆ. ಆಧಿದೈವಿಕವಾಗಿ ದೇವತಾಕ್ಷೇತ್ರವಾಗಿದೆ.

ಯೋಗವಿಘ್ನಗಳನ್ನು ದಾಟಿಸಿ ಪರಮಾತ್ಮನೆಡೆ ಕರೆದುಕೊಂಡು ಹೋಗುವ ದಿವ್ಯವೃಕ್ಷವಾಗಿದೆ.

* ಪ್ರಳಯಕಾಲದಲ್ಲಿ ಪರಮಾತ್ಮನು ಯೋಗನಿದ್ರೆಯಲ್ಲಿರುತ್ತಾನೆ. ಆಗ ಶ್ರೀದೇವಿಯು ಆಲದೆಲೆಯಾಗಿರುತ್ತಾಳೆ. ಭೂದೇವಿಯು ಜಲರೂಪ-ದಲ್ಲಿರುತ್ತಾಳೆ. ದುರ್ಗೆಯು ತಮೋರೂಪದಲ್ಲಿರುತ್ತಾಳೆ. ಮೊಟ್ಟಮೊದಲು ದುರ್ಗೆಯು ಎದ್ದು ತನ್ನ ತಮೋರೂಪವನ್ನು ಅವ್ಯಕ್ತವನ್ನಾಗಿ ಮಾಡಿ, ಪರಮಾತ್ಮನನ್ನು ಎಬ್ಬಿಸುತ್ತಾಳೆ. ಅನಂತರ ಜಲರೂಪದ ಭೂದೇವಿಯು ಆಲದೆಲೆಯ ರೂಪದಲ್ಲಿರುವ ಶ್ರೀದೇವಿಯು ಎದ್ದು ಆ ಭಗವಂತನನ್ನು ಯೋಗನಿದ್ರೆಯಿಂದ ಮೇಲೆಬ್ಬಿಸುತ್ತಾರೆ. ಮತ್ತು ಶ್ರೀ, ಭೂ, ದುರ್ಗಾರೂಪಗಳಲ್ಲಿ ದುರ್ಗಾರೂಪವು ಸಂಹಾರಕಾರಣವಾಗಿವೆ. ಆದ್ದರಿಂದ ಪ್ರತಿಯೊಂದು ಕ್ಷಣ ಸಂಹಾರದೆಡೆ ಧಾವಿಸುತ್ತಿರುವ ನಾವೆಲ್ಲರೂ ಮೊಟ್ಟಮೊದಲು ದುರ್ಗೆಯನ್ನೇ ಆರಾಧನೆ ಮಾಡಬೇಕು. ಶರಣಾಗತರಾಗಿ ರಕ್ಷಿಸೆಂದು ವರ ಬೇಡಬೇಕು.

* ಪ್ರತಿನಿತ್ಯವೂ ದುರ್ಗೆಯ ಆರಾಧನೆಯನ್ನು ಮಾಡಬೇಕು. ಇದು ಸಾಧ್ಯವಾಗದಿದ್ದಾಗ ನವರಾತ್ರಿಯ ಪರ್ವಕಾಲಗಳಲ್ಲಿ ಒಂದು ದಿನವೂ ಬಿಡದೇ ದುರ್ಗೆಯನ್ನು ಆರಾಧನೆ ಮಾಡಬೇಕು. ನರಸಿಂಹದೇವರ ಜೊತೆ ಕುಳಿತ, ದುರ್ಗೆಯ ಪೂಜೆ, ನಮಸ್ಕಾರ ಮೊದಲಾದವುಗಳನ್ನು ಮಾಡಿ, ಅವಳ ಅನುಗ್ರಹವನ್ನು ಪಡೆದುಕೊಳ್ಳಬೇಕು.

## ವಿಜಯದಶಮಿಯ ದಿವಸ ಈ ಕೆಳಗಿನ ಶ್ಲೋಕಗಳನ್ನು ಯಥಾಶಕ್ತಿ ಹೇಳಿಕೊಳ್ಳಬೇಕು

ಧರ್ಮೋ ವಿವರ್ಧತಿ ಯುಧಿಷ್ಠಿರಕೀರ್ತನೇನ

ಪಾಪಂ ಪ್ರಣಶ್ಯತಿ ವೃಕೋದರ ಕೀರ್ತನೇನ ।

ಶತ್ರುರ್ವಿನಶ್ಯತಿ ಧನಂಜಯಕೀರ್ತನೇನ

ಮಾದ್ರೀಸುತಾ ಕಥಯತಾಂ ನ ಭವಂತಿ ರೋಗಾಃ ॥

ತಂಪೂರ್ವಪಕ್ಷಸಿತಬಿಂಬಮಿವ ಪ್ರವೃದ್ಧಂ

ಯಾವದ್ ದ್ವಿಜೇಂದ್ರವನಿತಾ ಸುಷುವೇನ ತಾವತ್ ।

ಅಂಶೇನ ವಾಯುರವತೀರ್ಯ ಸರೂಪ್ಯಪೀಠೇ

ವಿಷ್ಣುಂ ಪ್ರಣಮ್ಯ ಭವನಂ ಪ್ರಯಯೌ ತದೀಯಮ್ ॥

****

# ಶಮೀಪೂಜಾವಿಧಾನ

**(ಶಮೀವೃಕ್ಷವು ದೊರೆಯದ ಪಕ್ಷದಲ್ಲಿ ಕುಂಡದಲ್ಲಿ ಶಮೀಗಿಡವನ್ನು ಹಾಕಿ ಪೂಜಿಸಬೇಕು, ಅದೂ ಸಾಧ್ಯವಾಗದಿದ್ದಲ್ಲಿ ಶಮೀಪತ್ರಗಳನ್ನೇ ದೇವರ ಮುಂದಿಟ್ಟು ಪೂಜಿಸಬೇಕು. ಶಮೀಪೂಜೆಯನ್ನು ಮಾಡದೇ ಇರಬಾರದು)**

ಶ್ರೀಗುರುಭ್ಯೋ ನಮಃ । ಶ್ರೀ ಪರಮಗುರುಭ್ಯೋನಮಃ ॥

ನಾರಾಯಣಾಯ ಪರಿಪೂರ್ಣಗುಣಾರ್ಣವಾಯ ।
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥

ಸರ್ವದಾ ಸರ್ವಕಾರ್ಯೇಷು ನಾಸ್ತಿ ತೇಷಾಮಮಂಗಲಮ್ ।
ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನೋ ಹರಿಃ ॥

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ ।
ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ ॥

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ ॥

ನಮಸ್ತೇ ಪ್ರಾಣೇಶ ಪ್ರಣತವಿಭವಾಯಾವನಿಮಗಾಃ
ನಮಃ ಸ್ವಾಮಿನ್ ರಾಮಪ್ರಿಯತಮ ಹನೂಮನ್ ಗುರುಗುಣ ।
ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟಭಗವನ್
ನಮಃ ಶ್ರೀಮನ್ಮಧ್ವ ಪ್ರದಿಶ ಸುದೃಶಂ ನೋ ಜಯ ಜಯ ॥

ಮೃತ್ಯುಂಜಯ ನಮಸ್ತುಭ್ಯಂ ಮೃತ್ಯುಂ ಹರ ನಮಾಮ್ಯಹಮ್ ।
ಸರ್ವಮೃತ್ಯುವಿನಾಶಾಯ ಮೃತ್ಯುಂಜಯ ನಮೋನಮಃ ॥

ದುಷ್ಟಾನಾಂ ವಿಘ್ನಕರ್ತಾ ಸುಚರಿತ ಸುಜನಸ್ತೋಮ ವಿಘ್ನಾಪಹರ್ತಾ
ತಸ್ಮಾದ್ ವಿಘ್ನಾಧಿಪೋಽಹಂ ಮತ ಇತಿ ಸುಧಿಯಾಂ ಸ್ಪಷ್ಟಮಾಜ್ಞಾಪನಾಯ ।
ಪೌಲಸ್ತ್ಯೇಚ್ಛಾಂತರಾಯಃ ಸುರಮುನಿಕಾಭೀಷ್ಟಸಂಪ್ರಾಪ್ತ್ಯುಪಾಯಃ
ಶ್ರೇಯೋ ವಿಘ್ನಾಧಿರಾಜಃ ಪ್ರದಿಶತು ಸತತಂ ಭೂರಿಗೌರೀತನೂಜಃ ॥
ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ।
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ ॥

## ಆಚಮನ

ಕೇಶವಾಯ ಸ್ವಾಹಾ । ನಾರಾಯಣಾಯ ಸ್ವಾಹಾ । ಮಾಧವಾಯ ಸ್ವಾಹಾ । ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ । ತ್ರಿವಿಕ್ರಮಾಯ ನಮಃ। ವಾಮನಾಯ ನಮಃ। ಶ್ರೀಧರಾಯ ನಮಃ। ಹೃಷೀಕೇಶಾಯ ನಮಃ । ಪದ್ಮನಾಭಾಯ ನಮಃ । ದಾಮೋದರಾಯ ನಮಃ । ಸಂಕರ್ಷಣಾಯ ನಮಃ। ವಾಸುದೇವಾಯ ನಮಃ। ಪ್ರದ್ಯುಮ್ನಾಯ ನಮಃ। ಅನಿರುದ್ಧಾಯ ನಮಃ। ಪುರುಷೋತ್ತಮಾಯ ನಮಃ। ಅಧೋಕ್ಷಜಾಯ ನಮಃ। ನಾರಸಿಂಹಾಯ ನಮಃ। ಅಚ್ಯುತಾಯ ನಮಃ। ಜನಾರ್ದನಾಯ ನಮಃ। ಉಪೇಂದ್ರಾಯ ನಮಃ। ಹರಯೇ ನಮಃ। ಶ್ರೀಕೃಷ್ಣಾಯ ನಮಃ।

(ಆಚಮನವನ್ನು ಎರಡುಬಾರಿ ಮಾಡಬೇಕು)

## ಪ್ರಾಣಾಯಾಮ

ಓಂ ಪ್ರಣವಸ್ಯ ಪರಬ್ರಹ್ಮಋಷಿಃ ಪರಮಾತ್ಮಾ ದೇವತಾ ದೈವೀ ಗಾಯತ್ರೀಛಂದಃ। ಪ್ರಾಣಾಯಾಮೇ ವಿನಿಯೋಗಃ।

ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಂ ಸತ್ಯಂ । ಓಂ ತತ್ಸವಿತುರ್ವರೇಣ್ಯಂ । ಭರ್ಗೋ ದೇವಸ್ಯ ಧೀಮಹಿ। ಧಿಯೋ ಯೋ ನಃ ಪ್ರಚೋದಯಾತ್॥ ಓಮಾಪೋಜ್ಯೋಽತಿರಸೋಽಮೃತಂ ಬ್ರಹ್ಮ ಭೂರ್ಭುವಸ್ವರೋಮ್ ॥

## ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯ ಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ ಪ್ರಭವಾದಿ ಷಷ್ಠಿಸಂವತ್ಸರಾಣಾಂ ಮಧ್ಯೇ ........... ನಾಮಸಂವತ್ಸರೇ ದಕ್ಷಿಣಾಯನೇ ಶರದ್ ಋತೌ, ಆಶ್ವೀನಮಾಸೇ ಶುಕ್ಲಪಕ್ಷೇ ದಶಮ್ಯಾಂ ಶುಭತಿಥೌ ............. ವಾಸರಯುಕ್ತಾಯಾಂ ......... ನಕ್ಷತ್ರೇ ...... ಯೋಗೇ..... ಕರಣೇ ಏವಂಗುಣವಿಶೇಷೇಣವಿಶಿಷ್ಟಾಯಾಂ ಶುಭತಿಥೌ, ಅಸ್ಮಾಕಂ ಸಹ ಕುಟುಂಬಾನಾಂ ಕ್ಷೇಮಸ್ಥೈರ್ಯವಿಜಯವೀರ್ಯ ಆಯುರಾರೋಗ್ಯಭಿವೃದ್ಧ್ಯರ್ಥ ಧರ್ಮಾರ್ಥಕಾಮ ಮೋಕ್ಷಾಖ್ಯಚತುರ್ವಿಧ- ಪುರುಷಾರ್ಥಸಿದ್ಧ್ಯರ್ಥಂ, ಪುತ್ರ-ಪೌತ್ರಾದ್ಯಭಿವೃದ್ಧ್ಯರ್ಥಂ, ಇಷ್ಟಾರ್ಥಸಿದ್ಧ್ಯರ್ಥಂ, ವಿಜಯದಶಮೀ ಪರ್ವಕಾಲೇ ಶಮೀಪೂಜಾಂ ಕರಿಷ್ಯೇ ॥

## ದೀಪ ಹಚ್ಚಬೇಕು

ದೀಪಃ ಪಾಪಹರೋ ನೃಣಾಂ ದೀಪ ಆಪನ್ನಿವಾರಕಃ ।
ದೀಪೋ ವಿಧತ್ತೇ ಸುಕೃತಂ ದೀಪಃ ಸಂಪತ್ಪ್ರದಾಯಕಃ ॥

ದೀಪಜ್ಯೋತಿ ಪರಬ್ರಹ್ಮ ದೀಪಜ್ಯೋತಿಃ ಜನಾರ್ದನಃ ।
ದೀಪೋಃ ಹರತು ಮೇ ಪಾಪಂ ಸಂಧ್ಯಾದೀಪ ನಮೋಽಸ್ತು ತೇ ॥

ಶುಭಂ ಕುರುಷ್ವ ಕಲ್ಯಾಣಂ ಆರೋಗ್ಯಂ ಸುಖಸಂಪದಮ್ ।
ಮಮ ಬುದ್ಧಿ ಪ್ರಕಾಶಂ ಚ ದೀಪಜ್ಯೋತಿರ್ನಮೋಽಸ್ತು ತೇ ॥

ಭೋ ದೀಪ ಬ್ರಹ್ಮರೂಪಸ್ತ್ವಂ ಕರ್ಮಸಾಕ್ಷಿ ಇಹಾರ್ಹಸಿ ।
ಯಾವತ್ ಕರ್ಮಸಮಾಪ್ತಿಃ ಸ್ಯಾತ್ ತಾವತ್ ತ್ವಂ ಸುಸ್ಥಿರೋ ಭವ ॥

## ಘಂಟಾನಾದ ಮಾಡಬೇಕು

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।
ಕುರ್ವೇ ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ॥

## ಭೂತೋಚ್ಚಾಟನೆ ಮಾಡಬೇಕು

ಅಪಸರ್ಪಂತು ತೇ ಭೂತಾಃ ಯೇ ಭೂತಾಃ ಭುವಿ ಸಂಸ್ಥಿತಾಃ ।
ಯೇ ಭೂತಾಃ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ॥

## ಗುರುಗಣಪತಿ ಪೂಜೆ ಮಾಡಬೇಕು

ಪ್ರತಿಯೊಂದು ಪೂಜೆಯ ಪ್ರಾರಂಭದಲ್ಲಿ ಗುರುಗಳಿಗೆ ಹಾಗೂ ಗಣಪತಿಗೆ ಮೊಟ್ಟಮೊದಲು ಪೂಜೆ ಮಾಡಬೇಕು.

ಶ್ರೀಗುರುಭ್ಯೋ ನಮಃ । ಆದಿಗುರುಭ್ಯೋ ನಮಃ । ಮೂಲಗುರುಭ್ಯೋ ನಮಃ। ಪರಮಗುರುಭ್ಯೋ ನಮಃ। ಶ್ರೀವೇದವ್ಯಾಸಾಯ ನಮಃ। ಆಶ್ವಲಾಯನಾ-ಚಾರ್ಯೇಭ್ಯೋ ನಮಃ।

ಬಲಭಾಗದಲ್ಲಿ ಬರೆದ ಶ್ರೀಕಾರದಲ್ಲಿ ಗಂಧಾಕ್ಷತೆ ಪುಷ್ಪಗಳಿಂದ ಗುರುಗಳನ್ನು ಪೂಜಿಸಬೇಕು.

ಅಸ್ಮದ್ ಗುರುಸಮಾರಂಭಾಂ ಟೀಕಾಕೃತ್ಪಾದಮಧ್ಯಗಾಮ್ ।
ಶ್ರೀಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಮ್ ॥

ಆಪಾದಮೌಳಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥

ಓಂ ಶ್ರೀಗುರುಭ್ಯೋ ನಮಃ ಅನುಜ್ಞಾಂ ದೇಹಿ ।

ಶ್ರೀಕಾರದ ಪಕ್ಕದಲ್ಲಿ ಬರೆದ ಷಟ್ಕೋಣಮಂಡಲದಲ್ಲಿ ಬೆಳ್ಳಿಯ ಗಣಪತಿಯನ್ನಿಟ್ಟು ಪೂಜಿಸಬೇಕು. ಬೆಳ್ಳಿಗಣಪತಿ ಇಲ್ಲದಿದ್ದಲ್ಲಿ ಅಡಿಕೆಬೆಟ್ಟು, ಅರಿಶಿನಕೊಂಬುಗಳಲ್ಲಿ ಗಣಪತಿ ಆವಾಹನೆ ಮಾಡಿ ಪೂಜಿಸಬೇಕು.

ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ ।
ಲಂಬೋದರಶ್ಚ ವಿಕಟೋ ವಿಘ್ನರಾಜೋ ಗಣಾಧಿಪಃ ॥೧॥

ಧೂಮಕೇತುರ್ಗಣಾಧ್ಯಕ್ಷೋ ಫಾಲಚಂದ್ರೋ ಗಜಾನನಃ ।
ದ್ವಾದಶೈತಾನಿ ನಾಮಾನಿ ಯಃ ಪಠೇಚ್ಛೃಣುಯಾದಪಿ ॥೨॥

ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ ।
ಸಂಗ್ರಾಮೇ ಸರ್ವಕಾರ್ಯೇಷು ವಿಘ್ನಸ್ತಸ್ಯ ನ ಜಾಯತೇ ॥೩॥

ಅಭೀಪ್ಸಿತಾರ್ಥಸಿದ್ಧ್ಯರ್ಥಂ ಪೂಜಿತೋ ಯಃ ಸುರೈರಪಿ ।
ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥೪॥

ಗಣಾನಾಂ ತ್ವಾ ಗೃತ್ಸಮದ ಋಷಿಃ । ಜಗತೀಛಂದಃ ಗಣಪತಿರ್ದೇವತಾ । ಗಣಪತ್ಯಾವಾಹನೇ ವಿನಿಯೋಗಃ ॥

ಓಂ ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪಮಶ್ರವಸ್ತಮಮ್ । ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆ ನಃ ಶೃಣ್ವನ್ನೂತಿಭಿಃ ಸೀದ ಸಾದನಮ್ ॥

## ಗಣಪತಿಗೆ ಸಂಕ್ಷೇಪವಾಗಿ ಷೋಡಶೋಪಚಾರ ಪೂಜೆ ಮಾಡಬೇಕು

ಶ್ರೀಮಹಾಗಣಪತಯೇ ನಮಃ ॥ ಓಂ ಭೂಃ ಗಣಪತಿಮ್ ಆವಾಹಯಾಮಿ। ಓಂ ಭುವಃ ಗಣಪತಿಮ್ ಆವಾಹಯಾಮಿ । ಓಂ ಸ್ವಃ ಗಣಪತಿಮ್ ಆವಾಹಯಾಮಿ । ಓಂ ಭೂರ್ಭುವಃ ಸ್ವಃ ಗಣಪತಿಮ್ ಆವಾಹಯಾಮಿ । ಮಹಾಗಣಪತಯೇ ನಮಃ । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ । ಆವಾಹಯಾಮಿ ಆವಾಹನಂ ಸಮರ್ಪಯಾಮಿ । ಸ್ವಾಗತಂ ಸಮರ್ಪಯಾಮಿ । ಆಸನಂ ಸಮರ್ಪಯಾಮಿ । ಪಾದಯೋಃ ಪಾದ್ಯಂ ಸಮರ್ಪಯಾಮಿ । ಅರ್ಘ್ಯಂ ಸಮರ್ಪಯಾಮಿ । ಆಚಮನಂ ಸಮರ್ಪಯಾಮಿ । ಮಧುಪರ್ಕಂ ಸಮರ್ಪಯಾಮಿ । ಪುನರಾಚಮನಂ ಸಮರ್ಪಯಾಮಿ । ಸ್ನಾನಂ

ಸಮರ್ಪಯಾಮಿ । ವಸ್ತ್ರಂ ಸಮರ್ಪಯಾಮಿ । ಉಪವೀತಂ ಸಮರ್ಪಯಾಮಿ । ಆಭರಣಂ ಸಮರ್ಪಯಾಮಿ । ಗಂಧಂ ಸಮರ್ಪಯಾಮಿ । ಪುಷ್ಪಾಣಿ ಸಮರ್ಪಯಾಮಿ । ಧೂಪಮಾಘ್ರಾಪಯಾಮಿ । ದೀಪಂ ದರ್ಶಯಾಮಿ ।

ಮಹಾಗಣಪತಯೇ ನಮಃ ॥ ನೈವೇದ್ಯಾರ್ಥೇ ಗುಡೋಪಹಾರ-ಮಹಾನೈವೇದ್ಯಂ ನಿವೇದಯಾಮಿ । ತಾಂಬೂಲಂ ಸಮರ್ಪಯಾಮಿ । ನೀರಾಜನಂ ಸಮರ್ಪಯಾಮಿ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ।

ನಿಷುಸೀದೇತಿ ವೈರೂಪೋ ನಭಃಪ್ರಭೇದನ ಋಷಿಃ । ತ್ರಿಷ್ಟುಪ್ ಛಂದಃ । ಗಣಪತಿರ್ದೇವತಾ ಮಂತ್ರಪುಷ್ಪಾರ್ಚನೇ ವಿನಿಯೋಗಃ ।

ಓಂ ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಮ್ । ನ ಋತೇ ತ್ವತ್ ಕ್ರಿಯತೇ ಕಿಂ ಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ ॥

ಮಂತ್ರಪುಷ್ಪಂ ಸಮರ್ಪಯಾಮಿ । ಧ್ಯಾನಾವಾಹನಾದಿಸರ್ವೋಪಚಾರಪೂಜಾಃ ಸಮರ್ಪಯಾಮಿ ॥

ವಕ್ರತುಂಡ ಮಹಾಕಾಯ ಬಾಲಸೂರ್ಯಸಮಪ್ರಭ ।<br>
ಅವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥

ರಕ್ತಾಂಬರೋ ರಕ್ತತನೂ ರಕ್ತಮಾಲ್ಯಾನುಲೇಪನಃ ।<br>
ಮಹೋದರೋ ಗಜಮುಖಃ ಪಾಶದಂತಾಂಕುಶಾಭಯೇ ।

ಬಿಭ್ರದ್ ಧ್ಯೇಯೋ ವಿಘ್ನಹರಃ ಕಾಮದಸ್ತ್ವರಯಾ ಹ್ಯಯಮ್ ॥<br>
ಶ್ರೀಮಹಾಗಣಪತಯೇ ನಮಃ । ಓಂ ಕ್ಷಿಪ್ರಪ್ರಸಾದಾಯ ನಮಃ ।

ಪ್ರಾರ್ಥನಾಂ ಸಮರ್ಪಯಾಮಿ ॥ ಹೇ ದೇವ! ನಿರ್ವಿಘ್ನಂ ಕುರು ॥

ಎಂದು ಪ್ರಾರ್ಥಿಸಿ ಕೈಮುಗಿದು ನಾನು ಮುಂದೆ ಆಚರಿಸುವ ಪೂಜೆ ಸಾಂಗೋಪಾಂಗವಾಗಿ ನಡೆದು ಫಲಪ್ರದವಾಗಲಿಯೆಂದು ಪ್ರಾರ್ಥಿಸಬೇಕು.

## ದೀಪಸ್ಥಾಪನೆ

ಸ್ನೇಹೋ ದೀಪಂ ಯಥಾ ಧೃತ್ವಾ ಸರ್ವಲೋಕೋಪಕಾರಕಃ ।
ತಥಾ ಭವಾನ್ ಮಮ ಜ್ಞಾನಂ ಹೃದಿ ಧಾರಯ ಸಂತತಮ್ ॥

ತದ್ಧೂಮಗಂಧಮಾಘ್ರಾಯ ಯಥಾ ಪೂತಾಶ್ಚ ಖೇಚರಾಃ ।
ತಥಾ ಪ್ರಜ್ವಲ ದೀಪ । ತ್ವಂ ಸಪ್ತಲೋಕಸಮಾಶ್ರಯಾಃ ॥

ದೀಪಃ ಪಾಪಹರೋ ನೃಣಾಂ ದೀಪ ಆಪನ್ನಿವಾರಕಃ ।
ದೀಪೋ ವಿಧತ್ತೇ ಸುಕೃತಂ ದೀಪಃ ಸಂಪತ್ಪ್ರದಾಯಕಃ ॥

ದೀಪಜ್ಯೋತಿ ಪರಬ್ರಹ್ಮ ದೀಪಜ್ಯೋತಿಃ ಜನಾರ್ದನಃ ।
ದೀಪೋ ಹರತು ಮೇ ಪಾಪಂ ಸಂಧ್ಯಾದೀಪ ನಮೋಽಸ್ತು ತೇ ॥

ಶುಭಂ ಕುರುಷ್ವ ಕಲ್ಯಾಣಂ ಆರೋಗ್ಯಂ ಸುಖಸಂಪದಮ್ ।
ಮಮ ಬುದ್ಧಿ ಪ್ರಕಾಶಂ ಚ ದೀಪಜ್ಯೋತಿರ್ನಮೋಽಸ್ತುತೇ ॥

ಭೋ ದೀಪ ಬ್ರಹ್ಮರೂಪಸ್ತ್ವಂ ಕರ್ಮಸಾಕ್ಷಿ ಇಹಾರ್ಹಸಿ ।
ಯಾವತ್ಕರ್ಮಸಮಾಪ್ತಿಃ ಸ್ಯಾತ್ ತಾವತ್ತ್ವಂ ಸುಸ್ಥಿರೋ ಭವ ॥

ಅನೇನ ದೀಪಸ್ಥಾಪನೇನ ಅಸ್ಮದ್ಗುರ್ವಂತರ್ಗತ ಭಾರತೀರಮಣಮುಖ್ಯ-ಪ್ರಾಣಾಂತರ್ಗತ ಕುಲಸ್ವಾಮಿ ಪ್ರೀಯತಾಂ ಶ್ರೀಕೃಷ್ಣಾರ್ಪಣಮಸ್ತು ॥

## ಕಲಶಪೂಜೆ

ಯಾವುದೇ ದೇವತಾರಾಧನೆ ಮಾಡುವ ಮೊದಲು ಕಲಶಪೂಜೆ ಮಾಡುವುದು ಸಂಪ್ರದಾಯ. ಕೆಲವರು ದೇವರ ಪೂಜೆಯಲ್ಲಿಯೇ ಈ ಕಲಶವನ್ನು ಇಟ್ಟು ಪೂಜಿಸುತ್ತಾರೆ.

ತತ್ತ್ವಾಯಾಮೀತಿ ಶುನಃಶೇಪಋಷಿಃ । ತ್ರಿಷ್ಟುಪ್ ಛಂದಃ । ವರುಣೋ ದೇವತಾ । ಕಲಶಮಧ್ಯೇ ವರುಣಾವಾಹನೇ ವಿನಿಯೋಗಃ ॥

ಓಂ ತತ್ವಾಯಾಮಿ ಬ್ರಹ್ಮಣಾ ವಂದಮಾನಸ್ತದಾ ಶಾಸ್ತೇ ಯಜಮಾನೋ ಹವಿರ್ಭಿಃ ಅಹೇಳಮಾನೋ ವರುಣೇಹ ಬೋಧ್ಯುರುಶಂಸ ಮಾ ನ ಆಯುಃ ಪ್ರ ಮೋಷೀಃ ॥

ಓಂ ಭೂಃ ವರುಣಮಾವಾಹಯಾಮಿ । ಓಂ ಭುವಃ ವರುಣಮಾ-ವಾಹಯಾಮಿ । ಓಂ ಸ್ವಃ ವರುಣಮಾವಾಹಯಾಮಿ । ಓಂ ಭೂರ್ಭುವಃಸ್ವಃ ವರುಣಮಾವಾಹಯಾಮಿ ।

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥೧॥

ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ ॥೨॥

ಅಂಗೈಶ್ಚ ಸಹಿತಾಃ ಸರ್ವೇ ಕಲಶಾಂಬುಸಮಾಶ್ರಿತಾಃ ।
ಶಾಂತಿಃ ಪುಷ್ಟಿಶ್ಚ ಗಾಯತ್ರೀ ಸಾವಿತ್ರೀ ಚ ಸರಸ್ವತೀ ॥೩॥

ಆಯಾಂತು ಮಮ(ಯಜಮಾನಸ್ಯ)ಶಾಂತ್ಯರ್ಥಂ ದುರಿತಕ್ಷಯಕಾರಕಾಃ ।
ಸರ್ವೇ ಸಮುದ್ರಾಃ ಸರಿತಸ್ತೀರ್ಥಾನಿ ಜಲದಾ ನದಾಃ ॥೪॥

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥೫॥

ಆವಾಹಿತದೇವತಾಭ್ಯೋ ನಮಃ । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ। ಆವಾಹಯಾಮಿ ಆವಾಹನಂ ಸಮರ್ಪಯಾಮಿ । ಸ್ವಾಗತಂ ಸಮರ್ಪಯಾಮಿ । ಆಸನಂ ಸಮರ್ಪಯಾಮಿ । ಅರ್ಘ್ಯಂ ಸಮರ್ಪಯಾಮಿ । ಪಾದ್ಯಂ ಸಮರ್ಪಯಾಮಿ । ಆಚಮನಂ ಸಮರ್ಪಯಾಮಿ । ಮಧುಪರ್ಕಂ ಸಮರ್ಪಯಾಮಿ । ಪುನರಾಚಮನಂ ಸಮರ್ಪಯಾಮಿ । ಸ್ನಾನಂ ಸಮರ್ಪಯಾಮಿ। ವಸ್ತ್ರಯುಗ್ಮಂ ಸಮರ್ಪಯಾಮಿ । ಉಪವೀತಂ ಸಮರ್ಪಯಾಮಿ । ಆಭರಣಂ

ಸಮರ್ಪಯಾಮಿ । ಗಂಧಂ ಸಮರ್ಪಯಾಮಿ । ಅಕ್ಷತಾನ್ ಸಮರ್ಪಯಾಮಿ । ನಾನಾವಿಧಪರಿಮಳಪುಷ್ಪಾಣಿ ಸಮರ್ಪಯಾಮಿ । ಧೂಪಮಾಘ್ರಾಪಯಾಮಿ ದೀಪಂ ದರ್ಶಯಾಮಿ । ಕಲಶದೇವತಾಭ್ಯೋ ನಮಃ ನೈವೇದ್ಯಾರ್ಥೇ ಗುಡೋಪಹಾರ (ಬಾಳೆಹಣ್ಣು ಇಟ್ಟುಕೊಂಡರೆ ಕದಳೀಫಲ ಎಂದು ಹೇಳಬೇಕು.) ಮಹಾನೈವೇದ್ಯಂ ಸಮರ್ಪಯಾಮಿ । ತಾಂಬೂಲಂ ಸಮರ್ಪಯಾಮಿ । ನೀರಾಜನಂ ಸಮರ್ಪಯಾಮಿ । ಸುವರ್ಣಪುಷ್ಪಂ ಸಮರ್ಪಯಾಮಿ । ಮಂತ್ರಪುಷ್ಪಂ ಸಮರ್ಪಯಾಮಿ । ಕಲಶದೇವತಾಭ್ಯೋ ನಮಃ । ಸರ್ವೋಪಚಾರಪೂಜಾಂ ಸಮರ್ಪಯಾಮಿ ।

## ತತ್ತ್ವನ್ಯಾಸಃ

ಓಂ ಓಂ ನಮೋ ನಾರಾಯಣಾಯ ಓಮ್ ॥ (ಎಂಬ ಮಂತ್ರದಿಂದ ಪ್ರಾಣಾಯಾಮ ಮಾಡಿರಿ) । ಏತೇಷಾಂ ತತ್ತ್ವಮಂತ್ರಾಣಾಮ್ ಅಂತರ್ಯಾಮೀ ಋಷಿಃ (ಶಿರಸಿ) ದೈವೀಗಾಯತ್ರೀ ಛಂದಃ (ಮುಖೇ) । ಶಕ್ತ್ಯಾದಿತತ್ತ್ವರೂಪೀ ಪುರುಷಾದಿತತ್ತ್ವಾಂತರ್ಯಾಮೀ ಶ್ರೀನಾರಾಯಣೋ ದೇವತಾ (ಹೃದಯೇ) ನ್ಯಾಸೇ ವಿನಿಯೋಗಃ ।

ಓಂ ಭೂಃ ಅಗ್ನ್ಯಾತ್ಮನೇ ಅನಿರುದ್ಧಾಯ ಹೃದಯಾಯ ನಮಃ । ಓಂ ಭುವಃ ವಾಯ್ವಾತ್ಮನೇ ಪ್ರದ್ಯುಮ್ನಾಯ ಶಿರಸೇ ಸ್ವಾಹಾ । ಓಂ ಸ್ವಃ ಸೂರ್ಯಾತ್ಮನೇ ಸಂಕರ್ಷಣಾಯ ಶಿಖಾಯೈ ವೌಷಟ್ । ಓಂ ಭೂರ್ಭುವಃಸ್ವಃ ಪ್ರಜಾಪತ್ಯಾತ್ಮನೇ ವಾಸುದೇವಾಯ ಕವಚಾಯ ಹುಮ್ । ಓಂ ಸತ್ಯಂ ನಾರಾಯಣಾಯ ಅಸ್ತ್ರಾಯ ಫಟ್ ।

ಪ್ರಧಾನೋಪಮವರ್ಣಾನಿ ದ್ವಿಭುಜಾನ್ಯಪ್ಯಶೇಷತಃ ।
ಕೃತಾಂಜಲಿಪುಟಾನ್ಯೇವ ಪ್ರಧಾನಂ ತಂ ಹರಿಂ ಪ್ರತಿ ॥

ಶಕ್ತ್ಯಾದಿತತ್ತ್ವರೂಪಿಪುರುಷಾದಿತತ್ತ್ವಾಂತರ್ಯಾಮಿಶ್ರೀನಾರಾಯಣಪ್ರೇರಣಯಾ ಶ್ರೀನಾರಾಯಣಪ್ರೀತ್ಯರ್ಥಂ ತತ್ತ್ವನ್ಯಾಸಂ ಕರಿಷ್ಯೇ ॥

ಓಂ ಪರಾಯ ಶಕ್ತ್ಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ। ಓಂ ಪರಾಯ ಪ್ರತಿಷ್ಠಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಓಂ ಪರಾಯ ಸಂವಿದಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಓಂ ಪರಾಯ ಸ್ಫೂರ್ತ್ಯಾತ್ಮನೇ ಶ್ರೀಲಕ್ಷ್ಮೀ-ನಾರಾಯಣಾಭ್ಯಾಂ ನಮಃ । ಓಂ ಪರಾಯ ಪ್ರವೃತ್ತ್ಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಓಂ ಪರಾಯ ಕಲಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಓಂ ಪರಾಯ ವಿದ್ಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಓಂ ಪರಾಯ ಮತ್ಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಓಂ ಪರಾಯ ನಿಯತ್ಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಓಂ ಪರಾಯ ಮಾಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ। ಓಂ ಪರಾಯ ಕಾಲಾತ್ಮನೇ ಶ್ರೀಲಕ್ಷ್ಮೀನಾರಾ-ಯಣಾಭ್ಯಾಂ ನಮಃ। ಓಂ ಪರಾಯ ಪುರುಷಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ॥೧೨॥ (ಈ ಹನ್ನೆರಡನ್ನು ಮಾಲಾಕಾರವಾಗಿ ಹೃದಯಮುಟ್ಟಿ ಜಪಿಸಬೇಕು.)

## ತತ್ತದವಯವೇಷು ದೇವತಾನ್ಯಾಸಃ

ಓಂ ಪರಾಯ ಅವ್ಯಕ್ತಾತ್ಮನೇ ಬ್ರಹ್ಮಣೀಭಾರತೀಭ್ಯಾಂ ನಮಃ ॥ (ಬಲಗೈ) ಓಂ ಪರಾಯ ಮಹದಾತ್ಮನೇ ಬ್ರಹ್ಮವಾಯುಭ್ಯಾಂ ನಮಃ॥ (ಎಡಗೈ) ಓಂ ಪರಾಯ ಅಹಂಕಾರಾತ್ಮನೇ ಗರುಡಶೇಷರುದ್ರೇಭ್ಯೋ ನಮಃ॥ (ಬಲತೊಡೆ) ಓಂ ಪರಾಯ ಮನ ಆತ್ಮನೇ ಸ್ಕಂದೇಂದ್ರಾಭ್ಯಾಂ ನಮಃ ॥ (ಎಡತೊಡೆ)

(ಬಲಗೈ ಐದು ಬೆರಳು) ಓಂ ಪರಾಯ ತ್ವಗಾತ್ಮನೇ ಪ್ರಾಣಾಯ ನಮಃ ॥ ಓಂ ಪರಾಯ ಶ್ರೋತ್ರಾತ್ಮನೇ ದಿಗ್ದೇವತಾಭ್ಯೋ ನಮಃ॥ ಓಂ ಪರಾಯ ಚಕ್ಷುರಾತ್ಮನೇ ಸೂರ್ಯಾಯ ನಮಃ ॥ ಓಂ ಪರಾಯ ಜಿಹ್ವಾತ್ಮನೇ ವರುಣಾಯ ನಮಃ ॥ ಓಂ ಪರಾಯ ಘ್ರಾಣಾತ್ಮನೇ ಅಶ್ವಿಭ್ಯಾಂ ನಮಃ ॥

(ಎಡಗೈ ಐದು ಬೆರಳು) ಓಂ ಪರಾಯ ವಾಗಾತ್ಮನೇ ವಹ್ನಯೇ ನಮಃ ॥ ಓಂ ಪರಾಯ ಪಾಣ್ಯಾತ್ಮನೇ ದಕ್ಷಾಯ ನಮಃ ॥ ಓಂ ಪರಾಯ ಪಾದಾತ್ಮನೇ

# ನರಸಿಂಹದೇವರ ಚರಿತ್ರೆ

ಹಿರಣ್ಯಕಶಿಪುವಿನ ಉಪದ್ರವವನ್ನು ತಾಳಲಾರದೆ ಸಮಸ್ತ ದೇವತೆಗಳು ಬ್ರಹ್ಮದೇವರನ್ನು ಮೊರೆಹೊಕ್ಕರು. ಬ್ರಹ್ಮದೇವರು ಸಮಸ್ತ ದೇವತೆಗಳನ್ನು ಕರೆದುಕೊಂಡು ಕ್ಷೀರಸಾಗರದ ಸಮೀಪಕ್ಕೆ ತೆರಳಿ ಭಗವಂತನನ್ನು ಸ್ತೋತ್ರ ಮಾಡಿದರು.

ಓಂ ನಮೋ ಭಗವತೇ ಮಹಾಪುರುಷಾಯ ಮಹಾತ್ಮನೇ ।
ವಿಶುದ್ಧಾನುಭವಾನಂದಸಂದೋಹಾಯಯತೋಽಭಯಮ್॥ ೭.೪.೨೪

ಪರಮಪುರುಷನಾದ ಭಗವಂತನೇ! ನಾವೆಲ್ಲ ದೇವತೆಗಳು ನಿನ್ನಲ್ಲೇ ಶರಣಾಗತರಾಗಿದ್ದೇವೆ. ನೀನು ಮಹಾತ್ಮನಾಗಿರುವಿ. ಷಡ್ಗುಣೈಶ್ವರ್ಯ- ಸಂಪನ್ನನಾಗಿರುವಿ. ವಿಶುದ್ಧವಾದ ಜ್ಞಾನಾನಂದಸ್ವರೂಪನಾಗಿರುವಿ. ನಮಗೆ ಬಂದಿರುವ ಭಯವು ನಿನ್ನಿಂದಲೇ ಈಗ ಪರಿಹಾರವಾಗಬೇಕು.

ದೇವತೆಗಳ ಪ್ರಾರ್ಥನೆಯನ್ನು ಭಗವಂತನು ಕೇಳಿಸಿಕೊಂಡನು. ಮೇಘದಂತೆ ಗಂಭೀರಧ್ವನಿಯಿಂದ ಉತ್ತರಿಸಿದನು - ಸಕಲ ದೇವತೆಗಳೇ! ಭಯಪಡಬೇಡಿ. ನಿಮಗೆಲ್ಲರಿಗೂ ಮಂಗಳವಾಗಲಿ. ಶುಭವಾಗಲಿ. ಕ್ಷುದ್ರದೈತ್ಯನಾದ ಹಿರಣ್ಯಕಶಿಪುವಿನ ಎಲ್ಲ ದೌರ್ಜನ್ಯವನ್ನು ನಾನು ನೋಡುತ್ತಿದ್ದೇನೆ. ಅದಕ್ಕೆ ಪರಿಹಾರವನ್ನು ಕೂಡ ನಾನೇ ಮಾಡುತ್ತೇನೆ. ಆ ಸಮಯಕ್ಕಾಗಿ ನೀವು ನಿರೀಕ್ಷಣೆ ಮಾಡಿರಿ.

ಯದಾ ದೇವೇಷು ವೇದೇಷು ಗೋಷು ವಿಪ್ರೇಷು ಸಾಧುಷು ।
ಧರ್ಮೇ ಮಯಿ ಚ ವಿದ್ವೇಷಃ ಸ ವಾ ಆಶು ವಿನಶ್ಯತಿ ॥

ಹಿರಣ್ಯಕಶಿಪು ಯಾವಾಗ ಬಹಳವಾಗಿ ದೇವತೆಗಳಲ್ಲಿ, ವೇದಗಳಲ್ಲಿ, ಹಸುಗಳಲ್ಲಿ ಮತ್ತು ಬ್ರಾಹ್ಮಣರಲ್ಲಿ ಸಾಧುಸಂತರಲ್ಲಿ ಧರ್ಮದಲ್ಲಿ ಮತ್ತು ನನ್ನಲ್ಲಿ ಅವನ ದ್ವೇಷವು ಇನ್ನಷ್ಟು ಹೆಚ್ಚಾಗುತ್ತದೋ ಆಗ ಅವನು ನನ್ನಿಂದ ವಿನಾಶವನ್ನು ಹೊಂದುವನು.

ನಿರ್ವೈರಾಯ ಪ್ರಶಾಂತಾಯ ಸ್ವಸುತಾಯ ಮಹಾತ್ಮನೇ ।
ಪ್ರಹ್ಲಾದಾಯ ಯದಾ ದ್ರುಹ್ಯೇದ್ ಹನಿಷ್ಯೇಽಪಿ ವರೋರ್ಜಿತಮ್ ॥

ಭಾಗ. ೭.೪.೨೮-೨೯

ಪ್ರಶಾಂತಚಿತ್ತನಾದ, ಬಹಳ ಸಾತ್ವಿಕನಾದ, ಮಹಾತ್ಮನಾದ, ಯಾರಲ್ಲೂ ವೈರವಿಲ್ಲದ ಅವನ ಮಗನನ್ನೇ ಯಾವಾಗ ದ್ವೇಷ ಮಾಡುವನೋ ಅವನಿಗೆ ಹಿಂಸೆಯನ್ನು ನೀಡುವನೋ ಆಗ ಅವನು ಎಷ್ಟೇ ಬಲಿಷ್ಠನಾಗಿದ್ದರೂ ಅವನನ್ನು ನಾನು ಬಿಡುವುದಿಲ್ಲ. ಸಂಹಾರ ಮಾಡಿಯೇ ತೀರುತ್ತೇನೆ. ಭಯಪಡದೇ ನಿಮ್ಮ ಕಾರ್ಯಗಳಲ್ಲಿ ತೊಡಗಿರಿ.

ಸಮಸ್ತದೇವತೆಗಳು ಭಗವಂತನ ಮಾತುಗಳನ್ನು ಕೇಳಿಸಿಕೊಂಡು ಸಜ್ಜನರ ವಿಷಯದಲ್ಲಿ ಅವನಿಗಿರುವ ಕಾರುಣ್ಯವನ್ನು ಮನನ ಮಾಡಿಕೊಂಡು, ಭಾವುಕರಾಗಿ ತಮ್ಮ ಸ್ಥಳಗಳಿಗೆ ಹಿಂತಿರುಗಿದರು.

## ಪ್ರಹ್ಲಾದನ ಜನನ ಮತ್ತು ಅವನ ಮಹಿಮೆ

ಪತಿಯ ಘೋರತಪಸ್ಸು ಮುಗಿಯಬೇಕು. ಮನೆಗೆ ಪತಿಯು ಬರಬೇಕು. ಆವಾಗಲೇ ಮಕ್ಕಳನ್ನು ಹಡೆಯುತ್ತೇನೆ ಎಂದು ಸಂಕಲ್ಪ ಮಾಡಿದ್ದ ಕಯಾದುವಿಗೆ ಪ್ರಹ್ಲಾದನು ಮಗನಾಗಿ ಈಗ ಹುಟ್ಟಿದ್ದಾನೆ. ಪ್ರಹ್ಲಾದನು ಹುಟ್ಟಿದಾಗ ಸಮಸ್ತದೇವತೆಗಳಿಗೆ ಸಂತೋಷವಾಗಿದೆ. ಎಲ್ಲೆಡೆಯೂ ಶುಭಶಕುನಗಳು ಉಂಟಾಗಿವೆ. ಬೆಳೆಯುತ್ತಿರುವ ಪ್ರಹ್ಲಾದನು ಅತ್ಯಂತ ಗುಣಭರಿತನಾಗುತ್ತಿದ್ದಾನೆ. ಅವನಿಗೆ ಆಟದ ಬಗ್ಗೆ ಆಸಕ್ತಿಯಿಲ್ಲ . ಬೇಡದ ಹರಟೆಗಳಲ್ಲಿಯೂ ಆಸಕ್ತಿಯಿಲ್ಲ . ಬಾಲ್ಯದಿಂದಲೂ ನಿರಂತರ ಭಗವಂತನ ಸ್ಮರಣೆಯನ್ನು ಮಾಡುತ್ತಲೇ ಬೆಳೆಯುತ್ತಿದ್ದಾನೆ.

ಆತ್ಮವತ್ ಸರ್ವಭೂತಾನಾಮೇಕಃ ಪ್ರಿಯಸುಹೃತ್ತಮಃ ।
ದಾಸವತ್ ಸನ್ನತಾರ್ಯಾಂಘ್ರಿಃ ಪಿತೃವದ್ದೀನವತ್ಸಲಃ ॥ ಭಾಗ.೭.೪.೩೨

ಪ್ರಹ್ಲಾದನಿಗೆ ಸಕಲ ಭೂತಗಳೂ ತನ್ನಂತೆಯೇ ಅತ್ಯಂತ ಪ್ರಿಯವಾಗಿವೆ. ಸಜ್ಜನರಿಗೆ ಪರಮಮಿತ್ರನಾಗಿದ್ದಾನೆ. ಪೂಜ್ಯರಲ್ಲಿ ದಾಸನಂತೆ ನಡೆದುಕೊಳ್ಳುತ್ತಾನೆ. ದುಃಖಿತರಲ್ಲಿ ತಂದೆಯಂತೆ ವರ್ತಿಸುತ್ತಾನೆ.

ಹೀಗೆ ಬಾಲ್ಯದಿಂದಲೇ ಅವನಲ್ಲಿ ಗುಣಗಳು ಹೆಮ್ಮರವಾಗಿ ಬೆಳೆಯುತ್ತಿವೆ. ದುಃಖದ ಪ್ರಸಂಗಗಳು ಎದುರಾದಾಗ ಅವನ ಮನಸ್ಸು ಕ್ಷೋಭೆಗೆ ಒಳಗಾಗುತ್ತಿರಲಿಲ್ಲ. ಸಹಜವಾಗಿ ಮಕ್ಕಳಿಗೆ ಆಸಕ್ತಿ ಮೂಡುವ ಆಟಿಕೆಗಳಲ್ಲಿ, ತಿನಿಸುಗಳಲ್ಲಿ ಇದು ಅನಿತ್ಯವೆಂಬ ಅರಿವನ್ನು ಹೊಂದಿದ್ದಾನೆ.

ಹೀಗೆ ಅಸುರಜಾತಿಯಲ್ಲಿ ಹುಟ್ಟಿದರೂ ಆಸುರೀಸ್ವಭಾವವು ಲವಲೇಶವೂ ಅವನಲ್ಲಿರಲಿಲ್ಲ. ಪುಟ್ಟ ಬಾಲಕನಲ್ಲಿರುವ ಮಹಾಗುಣಗಳನ್ನು ಬಹುದೊಡ್ಡ ಜ್ಞಾನಿಗಳೂ ಕೂಡ ನೋಡಿ ಕಲಿತುಕೊಳ್ಳುತ್ತಾರೆ.

ನಾರದರು ಧರ್ಮರಾಜನಿಗೆ ಪ್ರಹ್ಲಾದನ ಗುಣಗಳನ್ನು ವರ್ಣಿಸುತ್ತಾ, ಬಲು ಭಾವುಕರಾಗಿ ಹೀಗೆ ಹೇಳುತ್ತಾರೆ -

ಗುಣೈರಲಮಸಂಖ್ಯೇಯೈರ್ಮಾಹಾತ್ಮ್ಯಂ ತಸ್ಯ ಸೂಚ್ಯತೇ ।
ವಾಸುದೇವೇ ಭಗವತಿ ಯಸ್ಯ ನೈಸರ್ಗಿಕೀ ರತಿಃ ॥ ಭಾಗ.೭.೪.೩೭

ಪ್ರಹ್ಲಾದನಲ್ಲಿ ಹೇಳಿ ಮುಗಿಸದಷ್ಟು ಗುಣಗಳಿವೆ. ಅವುಗಳನ್ನೆಲ್ಲ ವಿವರವಾಗಿ ಹೇಳುವುದಕ್ಕಿಂತ ಯಾವ ಒಂದೇ ಒಂದು ಗುಣವನ್ನು ಹೇಳಿದ ಮಾತ್ರಕ್ಕೆ ಉಳಿದೆಲ್ಲ ಗುಣವನ್ನು ಹೇಳಿದಂತಾಗುತ್ತದೋ ಅಂತಹ ಬಹುದೊಡ್ಡಗುಣವೊಂದನ್ನು ನಿನ್ನ ಮುಂದೆ ಹೇಳುತ್ತೇನೆ. ಯುಧಿಷ್ಠಿರ! ಕೇಳು. ಭಗವಂತನಾದ ವಾಸುದೇವನಲ್ಲಿ ಆ ಪ್ರಹ್ಲಾದನಿಗೆ ಸ್ವಾಭಾವಿಕವಾಗಿ ಭಕ್ತಿಯು ನಿರಂತರವಾಗಿ ಪುಟಿಯುತ್ತಿತ್ತು.

ಪ್ರಹ್ಲಾದನು ಯಾವಾಗಲೂ ನಾರಾಯಣಧ್ಯಾನದಲ್ಲಿ ಮುಳುಗಿರುತ್ತಿದ್ದ. ಕುಳಿತಾಗ, ನಿಂತಾಗ, ತಿರುಗಿದಾಗ, ಊಟ ಮಾಡುವಾಗ ನಾರಾಯಣನ ಸ್ಮರಣೆ ಮಾಡುತ್ತಿದ್ದನು. ಗೋವಿಂದನ ಪ್ರೇಮವೀಕ್ಷಣೆಯನ್ನೇ ಸದಾ ನಿರೀಕ್ಷಿಸುತ್ತಿದ್ದನು. ಆ ಗೋವಿಂದನ ಚಿಂತನೆಯಲ್ಲಿಯೇ ಮುಳುಗಿರುತ್ತಿದ್ದನು. ಕೆಲವೊಮ್ಮೆ ನಗುತ್ತಾನೆ. ಜೋರಾಗಿ ಅಳುತ್ತಾನೆ. ಕುಣಿಯಲು ಪ್ರಾರಂಭ ಮಾಡುತ್ತಾನೆ. "ಹರೇ ಹರೇ" ಎಂದು ಗಟ್ಟಿಯಾಗಿ ಕೂಗುತ್ತಾನೆ. ಒಮ್ಮೊಮ್ಮೆ ಸ್ತಬ್ಧಚಿತ್ರದಂತೆ ಧ್ಯಾನಮಾಡುತ್ತಾ ಕುಳಿತು ಬಿಡುತ್ತಾನೆ. ಇದ್ದಕ್ಕಿದ್ದಂತೆ ರೋಮಾಂಚನದಿಂದ ಪುಳಕಿತನಾಗುತ್ತಾನೆ. ಎಷ್ಟರ ಮಟ್ಟಿಗೆ ಎಂದರೆ ಉಸಿರನ್ನು ಕೂಡ ಆಡುತ್ತಿರಲಿಲ್ಲ. ಆನಂದಬಾಷ್ಪಸುರಿಸುತ್ತಾ ಅರ್ಧಕಣ್ಣು ಮುಚ್ಚಿ ಹಾಗೆಯೇ ಇದ್ದು ಬಿಡುತ್ತಾನೆ. ಯುಧಿಷ್ಠಿರನೇ! ಇವನ ಹರಿಧ್ಯಾನದ ತತ್ಪರತೆಯನ್ನು ನೆನೆಸಿಕೊಂಡರೆ ನನಗೇ ರೋಮಾಂಚನವಾಗುತ್ತದೆ. ಇಂತಹ ಭಾಗ್ಯಶಾಲಿಯಾದ ಪ್ರಹ್ಲಾದನಿಗೆ ಅವನ ತಂದೆಯಾದ ಹಿರಣ್ಯಕಶಿಪುವು ಮಹಾದ್ರೋಹವನ್ನು ಮಾಡಲು ಪ್ರಾರಂಭ ಮಾಡಿದ.

# ಪ್ರಹ್ಲಾದನ ಗುರುಕುಲವಾಸ

ಪ್ರಹ್ಲಾದನನ್ನು ಹಿರಣ್ಯಕಶಿಪು ಗುರುಕುಲಕ್ಕೆ ಕಳುಹಿಸುತ್ತಿದ್ದಾನೆ. ದೈತ್ಯಗುರುಗಳಾದ ಶುಕ್ರಾಚಾರ್ಯರಿಗೆ ಶಂಡ, ಮರ್ಕ ಎಂಬ ಇಬ್ಬರು ಮಕ್ಕಳಿದ್ದಾರೆ. ಇವರು ಹಿರಣ್ಯಕಶಿಪುವಿನ ಗುರುಕುಲದಲ್ಲಿ ಪಾಠ ಹೇಳುತ್ತಿದ್ದಾರೆ. ಇವರ ಬಳಿಗೆ ಹಿರಣ್ಯಕಶಿಪು ಪ್ರಹ್ಲಾದನನ್ನು ಪಾಠಕೇಳಲು ಕಳುಹಿಸಿದನು. ಹಿರಣ್ಯಕಶಿಪುವಿಗೆ ಸಮ್ಮತವಾಗುವಂತೆ ಶಂಡ ಮರ್ಕರು ಪಾಠವನ್ನು ಮಾಡುತ್ತಿದ್ದರು. ಆದ್ದರಿಂದ ಪ್ರಹ್ಲಾದನು ಪಾಠ ಕೇಳುತ್ತಿದ್ದನೇ ಹೊರತು ಅದನ್ನು ಕಲಿಯುತ್ತಿರಲಿಲ್ಲ . ಅಭ್ಯಾಸ ಮಾಡುತ್ತಿರಲಿಲ್ಲ . ಅದೊಂದು ದಿವಸ ಹಿರಣ್ಯಕಶಿಪು ತನ್ನ ಮಗನಾದ ಪ್ರಹ್ಲಾದನನ್ನು ಪ್ರೀತಿಯಿಂದ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಕೇಳಿದನು - ಮಗುವೇ! ಗುರುಕುಲದಲ್ಲಿ ಚೆನ್ನಾಗಿ ಅಭ್ಯಾಸ ಮಾಡುತ್ತಿರುವಿಯಾ? ಏನು ಕಲಿತಿರುವೆ ಹೇಳು.

ಹಿರಣ್ಯಕಶಿಪುವಿನ ಪ್ರಶ್ನೆಗೆ ಪ್ರಹ್ಲಾದನು ನಗುತ್ತಾ ಉತ್ತರಿಸಿದನು -

ತತ್ಸಾಧು ಮನ್ಯೇಽಸುರವರ್ಯ ದೇಹಿನಾಂ
ಸದಾ ಸಮುದ್ವಿಗ್ನಧಿಯಾಮಸದ್ಗ್ರಹಾತ್।
ಹಿತ್ವಾಽತ್ಮಪಾತಂ ಗೃಹಮಂಧಕೂಪಂ
ವನಂ ಗತೋ ಯದ್ಧರಿಮಾಶ್ರಯೇತ ॥ – ಭಾಗ.೭.೫.೫

ಅಸುರಶ್ರೇಷ್ಠನೇ! ನಾನು ಹೀಗೆ ತಿಳಿದಿದ್ದೇನೆ. ಯಾವುದು ಸತ್ಸಿದ್ಧಾಂತಕ್ಕೆ ವಿರುದ್ಧವಾಗಿ ಇರುತ್ತದೋ ಅಂತಹ ದುರ್ಮತವನ್ನು ಆಶ್ರಯಿಸಿ ಕಡು-ಕತ್ತಲಿನ ಕೂಪದಲ್ಲಿ ಬೀಳುವುದರಿಂದ ನಮಗೆ ಅಧಃಪತನವೇ ಆಗುತ್ತದೆ. ಇಂಥ ಮನೆಯಲ್ಲಿ ವಾಸ ಮಾಡುವುದಕ್ಕಿಂತ ಕಾಡಿಗೆ ತೆರಳಿ ಶ್ರೀಹರಿಯನ್ನು ಆಶ್ರಯಿಸುವುದೇ ಶ್ರೇಷ್ಠ. ಗುರುಕುಲದಲ್ಲಿ ಇದನ್ನು ನಾನು ಅರಿತಿದ್ದೇನೆ.

ಪ್ರಹ್ಲಾದನ ಮಾತುಗಳನ್ನು ಕೇಳಿ ಹಿರಣ್ಯಕಶಿಪು ಜೋರಾಗಿ ನಕ್ಕನು. ತನ್ನ ಶತ್ರುವಾದ ವಿಷ್ಣುವಿನ ಅನುಯಾಯಿಗಳು ಯಾರೋ ಬಂದು ಇವನ ಮನಸ್ಸನ್ನು ಹಾಳುಮಾಡಿದ್ದಾರೆಂದು ಭಾವಿಸಿದನು. ಅನಂತರ ಶಂಡ-ಮರ್ಕರನ್ನು ಕರೆದು ವೈಷ್ಣವರಿಂದ ಇವನ ಮನಸ್ಸು ಹಾಳಾಗದಂತೆ ರಕ್ಷಣೆ ಮಾಡಿರೆಂದು ಆಜ್ಞೆ ಮಾಡಿದನು.

ಹಿರಣ್ಯಕಶಿಪುವಿನ ಅಪ್ಪಣೆಯಂತೆ ಶಂಡ-ಮರ್ಕರು ಗುರುಕುಲಕ್ಕೆ ಪ್ರಹ್ಲಾದನನ್ನು ಕರೆದುಕೊಂಡು ಹೋಗಿ ಪ್ರೀತಿಯಿಂದ ಅವನಿಗೆ ಉಪದೇಶಮಾಡಿದರು.

**ಶಂಡ-ಮರ್ಕರು** – ವತ್ಸ! ಪ್ರಹ್ಲಾದ! ನಿನಗೆ ಯಾರೂ ಕೆಟ್ಟ ಬುದ್ಧಿಯನ್ನು ಹೇಳುವವರಿಲ್ಲ. ಆದರೂ ಏಕೆ ಕೆಟ್ಟ ಬುದ್ಧಿಯನ್ನು ಕಲಿಯುತ್ತಿರುವಿ? ಗುರುಗಳ ಮುಂದೆ ಸತ್ಯವನ್ನು ಹೇಳು.

**ಪ್ರಹ್ಲಾದ** - ನಮ್ಮ ಬುದ್ಧಿಯು ಪರಮಾತ್ಮನ ಇಚ್ಛೆಯ ಅಧೀನವಾಗಿರುತ್ತದೆ. ಅವನೊಬ್ಬನೇ ಸ್ವತಂತ್ರ. ನಾವೆಲ್ಲರೂ ಅಸ್ವತಂತ್ರರು. ಬ್ರಹ್ಮಾದಿದೇವತೆಗಳೂ ಕೂಡ ಅವನ ಅಧೀನರೇ ಆಗಿದ್ದಾರೆ. ಅಯಸ್ಕಾಂತದ ಹತ್ತಿರ ಇಟ್ಟಿರುವ ಕಬ್ಬಿಣವು ಹೇಗೆ ತಾನಾಗಿಯೇ ಚಲಿಸುತ್ತದೋ ಅದರಂತೆ ಪರಮಾತ್ಮನ ಇಚ್ಛೆಯೆಂಬ ಅಯಸ್ಕಾಂತದಿಂದ ನನ್ನ ಬುದ್ಧಿಯೂ ಕೂಡ ಅವನ ವಿಷಯದಲ್ಲಿ ಸಹಜವಾಗಿ ಆಕರ್ಷಣೆಯನ್ನು ಹೊಂದುತ್ತಿದೆ. ನಿಮ್ಮ ಬುದ್ಧಿಗಿಂತ ವಿಲಕ್ಷಣವಾಗಿ ನನ್ನ ಬುದ್ಧಿಯು ಕೆಲಸ ಮಾಡುತ್ತಿದೆ. ಇಲ್ಲಿ ಬಂದು ಯಾರೂ ಕೂಡ ನನಗೆ ಇದನ್ನು ಹೇಳಿಕೊಡುತ್ತಿಲ್ಲ.

**ಶಂಡ-ಮರ್ಕರು** - ಈ ಪ್ರಹ್ಲಾದನಿಗೆ ಒಳ್ಳೆಯ ಮಾತಿನಲ್ಲಿ ಹೇಳಿದರೆ ಅರ್ಥವಾಗುವುದಿಲ್ಲ. ಇವನಿಗೆ ದಂಡಪ್ರಯೋಗ ಮಾಡಿಯೇ ಬುದ್ಧಿ ಹೇಳಬೇಕು. ಅಪ್ಪನ ಕುಲವನ್ನೇ ಸುಡಲು ಬೆಂಕಿಯಂತಿರುವ ಇವನನ್ನು ಈಗಲೇ ಹೊಡೆಯುತ್ತೇವೆ. ಬೆತ್ತದ ಕೋಲು ತನ್ನಿರಿ. ದೈತ್ಯರೆಂಬ ಗಂಧದ ಮರಗಳ ಕಾಡಿನಲ್ಲಿ ಮುಳ್ಳಿನ ಮರದಂತೆ ಬೆಳೆಯುತ್ತಿದ್ದಾನೆ. ಹೀಗೆ ಹೆದರಿಸಿ ಧರ್ಮ, ಅರ್ಥ, ಕಾಮಗಳ ಬಗ್ಗೆ ಉಪದೇಶ ಮಾಡಿದರು.

ಈ ಬಾರಿ ಪ್ರಹ್ಲಾದನು ತನ್ನ ತಂದೆಯ ಬಳಿ ಸರಿಯಾಗಿ ಉತ್ತರಿಸುತ್ತಾನೆ. ಅವನ ಪ್ರೀತಿಯನ್ನು ಗಳಿಸುತ್ತಾನೆಂದು ವಿಶ್ವಾಸವನ್ನು ಹೊಂದಿದ ಆ ಶಂಡ-ಮರ್ಕರು ಅವನ ತಾಯಿಯ ಮೂಲಕ ಸ್ನಾನ ಮಾಡಿಸಿ, ಅಲಂಕಾರ ಮಾಡಿಸಿ ಹಿರಣ್ಯಕಶಿಪುವಿನ ಮುಂದೆ ನಿಲ್ಲಿಸಿದರು. ಆಗ ಪ್ರಹ್ಲಾದನು ಭಕ್ತಿಯಿಂದ ತಂದೆಯ ಕಾಲುಗಳಿಗೆ ಬಿದ್ದು ನಮಿಸಿದನು. ಮಗುವಿನ ಭಕ್ತಿಯನ್ನು ಕಂಡು ಹಿರಣ್ಯಕಶಿಪು ಭಾವುಕನಾಗಿ ತನ್ನ ಎರಡೂ ಕೈಗಳಿಂದ ತಬ್ಬಿಕೊಂಡು ಕೆಲವು ಹೊತ್ತು ಪರಮಾನಂದವನ್ನೇ ಅನುಭವಿಸಿದನು. ಅನಂತರ ಆನಂದಬಾಷ್ಪದಿಂದ ಅವನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಪ್ರಶ್ನಿಸಿದನು.

**ಹಿರಣ್ಯಕಶಿಪು** - ಪ್ರಹ್ಲಾದ! ಮಗು! ಇಲ್ಲಿಯ ತನಕ ಗುರುಗಳ ಬಳಿ ಏನು ಕಲಿತಿರುವೆ. ಹೇಳುವಿಯಾ?

**ಪ್ರಹ್ಲಾದ** - ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್॥ ಭಾಗ.೭.೫.೨೩

ತಂದೆಯೇ! ವಿಷ್ಣುವಿನ ಮಹಿಮೆಯನ್ನು ಕೇಳಬೇಕು, ಕೀರ್ತನೆ ಮಾಡಬೇಕು, ಅವನನ್ನು ಸ್ಮರಿಸಬೇಕು, ವಿಷ್ಣುವಿನ ಪಾದಸೇವೆಯಲ್ಲಿಯೇ ತಲ್ಲೀನನಾಗಿರಬೇಕು. ಅರ್ಚನೆ ಮಾಡಬೇಕು. ಯಾವಾಗಲೂ ನಮಿಸಬೇಕು. ದಾಸ್ಯಭಾವವನ್ನು ತಾಳಬೇಕು. ಶ್ರೀಹರಿಯಲ್ಲಿ ಪರಮಸ್ನೇಹವನ್ನು ಮಾಡಬೇಕು. ಅಂತಿಮವಾಗಿ ತನ್ನನ್ನೇ ಸಮರ್ಪಣೆ ಮಾಡಿಕೊಳ್ಳಬೇಕು. ಹೀಗೆ ಯಾರು ನವವಿಧವಾದ ಭಕ್ತಿಯನ್ನು ಆಚರಿಸುತ್ತಾನೋ ಆಗಷ್ಟೇ ಅವನು ಗುರುಕುಲದಲ್ಲಿ ಅಧ್ಯಯನ ಮಾಡಿದ್ದು ಸಾರ್ಥಕವಾಗುತ್ತದೆ. ಆ ಅಧ್ಯಯನ ಮಾತ್ರ ಅತ್ಯುತ್ತಮ ಎನಿಸುತ್ತದೆ.

**ಹಿರಣ್ಯಕಶಿಪು** - ದುರ್ಬುದ್ಧಿಯನ್ನು ಹೊಂದಿದ ಶಂಡ-ಮರ್ಕರೇ! ಇದೇನು ನೀವು ಪಾಠವನ್ನು ಹೇಳಿಕೊಟ್ಟಿರುವುದು. ನನ್ನ ಶತ್ರುಪಕ್ಷವನ್ನು ಆಶ್ರಯಿಸಿದ ಅಸಾರವಾದ ವಿಷ್ಣುಭಕ್ತಿಯನ್ನು ಏಕೆ ಹೇಳಿಕೊಟ್ಟಿರುವಿರಿ?

**ಗುರುಪುತ್ರರು** - ಸ್ವಾಮೀ! ಪ್ರಭು! ರಕ್ಷಿಸು. ನಾವು ಅಂತಹ ತಪ್ಪು ಮಾಡಿಲ್ಲ. ನಿನ್ನ ವಿರುದ್ಧವಾಗಿ ನಡೆದುಕೊಂಡಿಲ್ಲ. ಸಹಜವಾಗಿ ಇವನಲ್ಲಿ ಈ ಗುಣವು ಬಂದಿದೆ. ನಮ್ಮ ಗುರುಕುಲದಲ್ಲಿ ಯಾರೂ ಕೂಡ ಬಂದು ಇವನಿಗೆ ಕೆಟ್ಟಬುದ್ಧಿಯನ್ನು ಹೇಳಿಕೊಟ್ಟಿಲ್ಲ.

**ಹಿರಣ್ಯಕಶಿಪು** - ಏ ದುಷ್ಟ! ಪ್ರಹ್ಲಾದ! ನನ್ನ ಆಜ್ಞೆಯನ್ನು ಮೀರಿ ಕೆಟ್ಟ ವಿದ್ಯೆಯನ್ನು ಕಲಿಯುತ್ತಿರುವಿ. ಯಾರು ನಿನಗೆ ಹೇಳಿಕೊಡುತ್ತಿದ್ದಾರೆ. ಸತ್ಯ ಹೇಳು.

ಮತಿರ್ನ ಕೃಷ್ಣೇ ಪರತಃ ಸ್ವತೋಽಪಿ ವಾ
ಮಿಥೋಽಭಿಪದ್ಯೇತ ಗೃಹವ್ರತಾನಾಮ್ ।
ಅದಾಂತಗೋಭಿರ್ವಿಶತಾಂ ತಮಿಸ್ರಂ
ಪುನಃಪುನಶ್ಚರ್ವಿತಚರ್ವಣಾನಾಮ್ ॥ ಭಾಗ.೭.೫.೩೦

**ಪ್ರಹ್ಲಾದ** - ಅಪ್ಪ ! ಭಗವಂತನ ಬಗ್ಗೆ ಆಸಕ್ತಿಯು ಸ್ವಪ್ರಯತ್ನದಿಂದ ಬರುವುದಿಲ್ಲ. ಇನ್ನೊಬ್ಬರು ಎಷ್ಟೇ ಬೋಧಿಸಿದರೂ ಬರುವುದಿಲ್ಲ. ಅದು ಸಹಜವಾಗಿಯೇ ಬರಬೇಕು. ಗೃಹಸ್ಥಾಶ್ರಮದಲ್ಲಿ ಎಲ್ಲರೂ ಸುಖಭೋಗಗಳಲ್ಲಿ ಲೋಲುಪರಾಗುತ್ತಾರೆ. ಇಂದ್ರಿಯನಿಗ್ರಹವಿಲ್ಲದೇ ನರಕಗಳಿಗೆ ಹೋಗುತ್ತಾರೆ. ಅವರಿಗೆ ಇಲ್ಲೂ ಸುಖವಿಲ್ಲ; ಮುಂದೆಯೂ ಸುಖವಿಲ್ಲ. ಇಂತಹವರಿಗೆ ಹರಿಭಕ್ತಿ ಬರಲು ಹೇಗೆ ಸಾಧ್ಯ?

**ಹಿರಣ್ಯಕಶಿಪು** -ವಧ್ಯತಾಮಾಶ್ವಯಂ ವಧ್ಯೋ ನಿಃಸಾರಯತ ನೈಋತಾಃ ॥
ಅಯಂ ಮೇ ಭ್ರಾತೃಹಾ ಶೋಚ್ಯೋ
ಹಿತ್ವಾ ಸ್ವಾನ್ ಸುಹೃದೋಽಧಮಃ ।
ಪಿತೃವ್ಯಹಂತುಃ ಪಾದೌ ಯೋ
ವಿಷ್ಣೋರ್ದಾಸವದರ್ಚತಿ ॥ ಭಾಗ. ೭.೫.೩೪-೩೫

ಓ ರಾಕ್ಷಸರೇ! ಇವನನ್ನು ಈಗಲೇ ಕೊಂದುಹಾಕಿ. ತಡಮಾಡಬೇಡಿ. ಕೂಡಲೇ ಕೊಲ್ಲಿ . ದೂರ ಎಸೆದು ಬಿಡಿ. ಇವನು ಏನು ಮಾಡುತ್ತಿದ್ದಾನೆ ಗೊತ್ತೋ, ನನ್ನ ತಮ್ಮನನ್ನು ಕೊಂದ ನನ್ನ ಶತ್ರುವಾದ ವಿಷ್ಣುವಿನ ದಾಸನಾಗಿದ್ದಾನೆ. ಕೇವಲ ಐದನೆಯ ವಯಸ್ಸಿನಲ್ಲಿಯೇ ಇವನು ಹೀಗಿದ್ದಾನೆ. ದುಷ್ಟನಂಬಿಕೆಯನ್ನು ಹೊಂದಿರುವ ಇವನು ಆ ವಿಷ್ಣುವಿಗೆ ಏನು ಉಪಕಾರ ಮಾಡುತ್ತಾನೆ; ನೋಡುತ್ತೇನೆ. ನಮ್ಮ ಶರೀರದಲ್ಲಿ ರೋಗಗ್ರಸ್ತವಾದ ಅಂಗವನ್ನು ಹೇಗೆ ಕಿತ್ತುಹಾಕುತ್ತೇವೋ ಅದರಂತೆ ನಮ್ಮ ಮನೆಯಲ್ಲಿ ಹುಟ್ಟಿದ ಇವನನ್ನು ಕೊಂದುಹಾಕಬೇಕು. ಆಗಷ್ಟೇ ನನ್ನ ಉದ್ದೇಶವು ಈಡೇರಲು ಸಾಧ್ಯ. ಇವನು ಮೇಲ್ನೋಟಕ್ಕೆ ಸಾಧುವಂತೆ ಕಾಣಿಸುತ್ತಾನೆ. ಮಹಾದುಷ್ಟನಾಗಿದ್ದಾನೆ. ನನಗೆ ಶತ್ರು ಆಗುತ್ತಿದ್ದಾನೆ. ಓ ಭಟರೇ! ಕೇಳಿರಿ. ಇವನಿಗೆ ವಿಷ ಹಾಕಿ ಕೊಲ್ಲಿರಿ. ಕೆಂಪಾಗಿ ಕಾದ ಹೆಂಚಿನ ಮೇಲೆ ಮಲಗಿಸಿ ಕಟ್ಟಿಬಿಡಿ. ಶೂಲದಿಂದ ಚುಚ್ಚಿರಿ. ಹೇಗೆ ಬೇಕಾದರೂ ಪರವಾಗಿಲ್ಲ . ಈಗಲೇ ಇವನನ್ನು ಕೊಂದು ಹಾಕಿರಿ.

**ರಾಜಭಟರು** - ದುಷ್ಟನಾದ ಪ್ರಹ್ಲಾದನೇ! ಬಾ. ನಮಗೆ ಪ್ರಭುವಿನ ಆದೇಶವಾಗಿದೆ. ಈಗಲೇ ನಿನ್ನನ್ನು ಕೊಂದು ಹಾಕುತ್ತೇವೆ.

ಹೀಗೆ ಹೇಳುತ್ತಾ ದರದರನೆ ಮಗುವನ್ನು ಎಳೆದುಕೊಂಡು ಹೋದರು. ಪ್ರಹ್ಲಾದನ ಮರ್ಮಸ್ಥಾನಗಳನ್ನು ಶೂಲಗಳಿಂದ ತಿವಿದರು. 'ಕೊಲ್ಲು', 'ಕತ್ತರಿಸು', 'ತುಂಡರಿಸು' ಎಂದು ಪರಸ್ಪರ ಕೂಗಿದರು. ಅವರಲ್ಲಿದ್ದ ಎಲ್ಲ ಆಯುಧಗಳನ್ನು ಪ್ರಯೋಗಿಸಿ ಕೊಲ್ಲಲು ಮಹಾಪ್ರಯತ್ನಪಟ್ಟರು.

**ನಾರದರು** - ಯುಧಿಷ್ಠಿರ! ಆ ರಾಕ್ಷಸರು ಎಷ್ಟೇ ಪ್ರಯತ್ನಪಟ್ಟರೂ ಭಕ್ತವರೇಣ್ಯನಾದ ಪ್ರಹ್ಲಾದನು ಸಾಯಲಿಲ್ಲ . ಬಂದು ರಾಜನ ಬಳಿ ನಡೆದ ಘಟನೆಯನ್ನು ವಿವರಿಸುತ್ತಾರೆ. ಆಗ ಹಿರಣ್ಯಕಶಿಪು ಭಟರಿಗೆ ಹೀಗೆ ಹೇಳುತ್ತಾನೆ.

**ಹಿರಣ್ಯಕಶಿಪು** - (ದೇಹ ಕಂಪಿಸುತ್ತಾ, ಕೆಂಪಾದ ಕಣ್ಣುಗಳನ್ನು ತಿರುಗಿಸುತ್ತಾ) ರಾಕ್ಷಸರೇ! ಪುಟ್ಟಮಗುವನ್ನು ಕೊಲ್ಲಲು ನಿಮಗೆ ಶಕ್ತಿಯಿಲ್ಲವೇ? ಅವನನ್ನು ಕೊಲ್ಲದಿದ್ದರೆ ನಿಮ್ಮನ್ನೇ ಕೊಂದು ಬಿಡುತ್ತೇನೆ. ಅನೇಕ ಉಪಾಯಗಳಿಂದ ಅವನನ್ನು ಕೊಂದು ಬರಬೇಕು. ನಮ್ಮ ಸೈನ್ಯದಲ್ಲಿರುವ ದಿಗ್ಗಜಗಳಿಂದ ನಿರಂತರ ಆ ಮಗುವನ್ನು ತುಳಿಸಿರಿ; ಕೊಠಡಿಯಲ್ಲಿ ತಳ್ಳಿ ಮಹಾಸರ್ಪಗಳನ್ನು ಬಿಟ್ಟು ಬಿಡಿ; ಇದಕ್ಕೂ ಬಗ್ಗದಿದ್ದರೆ ಮಾಟ ಮಂತ್ರಗಳನ್ನು ಮಾಡಿ ಕೊಂದುಹಾಕಿರಿ. ಮಹಾಪರ್ವತದ ಮೇಲೆ ಕರೆದೊಯ್ದು ತಳ್ಳಿಬಿಡಿರಿ; ಹಳ್ಳದಲ್ಲಿ ಹಾಕಿ ಮುಚ್ಚಿರಿ; ವಿಷ ಉಣಿಸಿರಿ; ಉಪವಾಸ ಹಾಕಿರಿ. ಒಟ್ಟು ಅವನನ್ನು ಕೊಲ್ಲಬೇಕು.

**ನಾರದರು** - ಅರಸನ ಅಪ್ಪಣೆಯಂತೆ ಆ ರಾಜಭಟರು ಎಲ್ಲವನ್ನೂ ಮಾಡಿದರು. ರಾಜನು ಹೇಳದೇ ಇರುವ ಅನೇಕ ಪ್ರಯೋಗಗಳನ್ನೂ ಕೂಡ ಮಾಡಿದರು. ಹಿಮದ ಮಧ್ಯ ಕೂಡಿಸಿದರು. ಅವನು ಸಾಯುವಂತೆ ರಭಸವಾಗಿ ಧಾಳಿಮಾಡಿದರು. ವಿಷಪ್ರಯೋಗವನ್ನು ಮಾಡಿದರು. ದೊಡ್ಡ ಪ್ರಪಾತವನ್ನು ಮಾಡಿ ಅದರ ತುಂಬ ಧಗಧಗನೆ ಉರಿಯುವ ಬೆಂಕಿಯನ್ನು ಹಚ್ಚಿ ಅದರೊಳಗೆ ಪ್ರಹ್ಲಾದನನ್ನು ತಳ್ಳಿದರು. ದೊಡ್ಡ ಬಂಡೆಗಲ್ಲನ್ನು ಅವನ ಸೊಂಟಕ್ಕೆ ಕಟ್ಟಿ ಸಮುದ್ರದ ಮಧ್ಯದಲ್ಲಿ ಎಸೆದರು. ದೊಡ್ಡ ಪರ್ವತವನ್ನೇ ಎತ್ತಿ ಅದರಿಂದ ಅವನನ್ನು ಮುಚ್ಚಿದರು. ಹೀಗೆ ದೈತ್ಯರು ಸಕಲಪ್ರಯತ್ನಗಳನ್ನು ಪಟ್ಟರೂ ಕೂಡ ಮರುಕ್ಷಣದಲ್ಲಿಯೇ ಪ್ರಹ್ಲಾದನು ಆ ಮರಣದಪ್ರಸಂಗದಿಂದ ಪಾರಾಗಿ ಬಂದು ಬಿಡುತ್ತಿದ್ದನು. ಸಮುದ್ರದಲ್ಲಿ ಹಾಕಿ ಬಂದೆವು ಇನ್ನು ಬರುವುದಿಲ್ಲ ಎಂದುಕೊಳ್ಳುವಷ್ಟರಲ್ಲಿಯೇ ಅರಮನೆಗೆ ಪ್ರಹ್ಲಾದನು ಬಂದು ನಿಂತಿರುತ್ತಿದ್ದನು. ಏಕಾಂತದಲ್ಲಿ ಹಿರಣ್ಯಕಶಿಪು ಕುಳಿತು ಪ್ರಹ್ಲಾದನ ಸಾಮರ್ಥ್ಯವನ್ನೇ ಚಿಂತಿಸಿದನು. ಆ ಚಿಂತೆಯಿಂದ ಇವನ ಶರೀರದ ಕಾಂತಿಯೇ ಬಾಡಿತು.

**ಶುಕ್ರಾಚಾರ್ಯರು** - ಪ್ರಭು! ಪ್ರಹ್ಲಾದನು ಇನ್ನೂ ಎಳೆಯ ಮಗು. ಸಣ್ಣವಯಸ್ಸಿನಲ್ಲಿ ಗುಣವಾಗಲೀ ದೋಷವಾಗಲೀ ಅರ್ಥವಾಗುವುದಿಲ್ಲ. ದೊಡ್ಡವನಾದ ಮೇಲೆ ನಿನ್ನನ್ನೇ ಅನುಸರಿಸುತ್ತಾನೆ. ತುಂಬಾ ಚಿಂತಿಸಬೇಡ.

**ಹಿರಣ್ಯಕಶಿಪು** - ತಾವು ಹೇಳಿದಂತೆಯೇ ಆಗಲಿ. ನನ್ನ ಬಯಕೆಯೂ ಅದೇ ಆಗಿದೆ. ಶಂಡ-ಮರ್ಕರೇ! ಇವನನ್ನು ಕರೆದುಕೊಂಡು ಹೋಗಿರಿ. ಅವನಿಗೆ ವಿಷ್ಣು ಎಂಬ ದೇವರಿಲ್ಲ. ಹಿರಣ್ಯಕಶಿಪುವೇ ದೇವರೆಂದು ಉಪದೇಶಿಸಿರಿ. ನನಗೆ ಅನುಕೂಲವಾಗುವ ಧರ್ಮಾರ್ಥಕಾಮಗಳ ಬಗ್ಗೆ ತಿಳಿ ಹೇಳಿರಿ.

**ಶಂಡ-ಮರ್ಕರು** - ತಾವು ಅಪ್ಪಣೆ ಮಾಡಿದಂತೆ ನಡೆಸಿಕೊಡುತ್ತೇವೆ.

ಹೀಗೆ ಹೇಳಿ ಶಂಡ-ಮರ್ಕರು ಪ್ರಹ್ಲಾದನನ್ನು ಕರೆದೊಯ್ದರು. ''ಹಿರಣ್ಯಕಶಿಪುವಿನ ಸ್ಮರಣೆಯನ್ನೇ ಮಾಡಬೇಕು. ಅವನೇ ಸರ್ವೋತ್ತಮ. ಅವನು ಹೇಳಿದ್ದೇ ಧರ್ಮ. ಹಣವನ್ನೇ ಜೀವನದಲ್ಲಿ ಸಂಪಾದನೆ ಮಾಡಬೇಕು. ಯಥೇಚ್ಛವಾಗಿ ಭೋಗ ಮಾಡಬೇಕು'' ಹೀಗೆಲ್ಲ ಪಾಠ ಮಾಡಲು ಪ್ರಾರಂಭ ಮಾಡಿದನು. ಆದರೆ ಪ್ರಹ್ಲಾದನು ಇವರ ಉಪದೇಶವನ್ನು ಒಪ್ಪಲಿಲ್ಲ.

**ನಾರದರು** - ಉಪಾಧ್ಯಾಯರು ಯಾವಾಗ ಪಾಠವನ್ನು ಹೇಳಿ ಮುಗಿಸಿ ತಮ್ಮ ಮನೆಗೆ ತೆರಳಿದರೋ ಆಗ ಪ್ರಹ್ಲಾದನು ಎಲ್ಲ ಬಾಲಕರ ಜೊತೆ ಸೇರಿದನು. ಎಲ್ಲ ಬಾಲಕರು ಪ್ರಹ್ಲಾದನ ಪ್ರಚಂಡಸಾಮರ್ಥ್ಯವನ್ನು ತಿಳಿದುಕೊಂಡಿದ್ದರು. ಪ್ರಹ್ಲಾದನನ್ನು ಸುತ್ತುವರೆದು ಕುಳಿತು ಅವನ ಬಳಿ ಉಪದೇಶವನ್ನು ಪಡೆದುಕೊಂಡರು. ಪ್ರಹ್ಲಾದನ ಸ್ನೇಹಿತರೆಲ್ಲರೂ ಸಾತ್ವಿಕರೂ ವಿಷ್ಣುಭಕ್ತರೂ ಆಗಿದ್ದರು.

## ಅಸುರಬಾಲಕರೂ ಕೂಡ ಹರಿಭಕ್ತರಾದರು

**ನಾರದರು** - ಯುಧಿಷ್ಠಿರ! ಪ್ರಹ್ಲಾದನು ಮಾಡಿದ ಉಪದೇಶದ ಪ್ರಭಾವದಿಂದ ಅಸುರಜಾತಿಯಲ್ಲಿ ಹುಟ್ಟಿದ್ದರೂ ಪುಟ್ಟ ಬಾಲಕರಾಗಿದ್ದರೂ ಕೂಡ ಅವನ ಸ್ನೇಹಿತರೆಲ್ಲರೂ ಹರಿಭಕ್ತರಾದರು. ಪ್ರಹ್ಲಾದನು ಹೇಳಿದಂತೆಯೇ ಅನುಷ್ಠಾನ ಮಾಡಿದರು. ತಮ್ಮ ಹೃದಯದಲ್ಲಿ ಭಗವಂತನನ್ನು ಕಂಡರು. ಪ್ರತಿಯೊಂದರಲ್ಲೂ ಭಗವಂತನನ್ನೇ ಚಿಂತನೆ ಮಾಡಿದರು. ಈಗ ಅಸುರ ಬಾಲಕರು ಪ್ರಹ್ಲಾದನ ಜೊತೆ ಗುರುಗಳಿಲ್ಲದೇ ಇದ್ದಾಗ ತತ್ವಜ್ಞಾನವನ್ನೇ ಉಪದೇಶವನ್ನಾಗಿ ಪಡೆದುಕೊಳ್ಳುತ್ತಾರೆ. ಭಗವಂತನ ನಾಮಸ್ಮರಣೆಯನ್ನು ಮಾಡುತ್ತಾರೆ. ಉಚ್ಚ ಕಂಠದಿಂದಲೂ ಧ್ವನಿ ಮಾಡುತ್ತಾರೆ. ಹರಿಸಂಕೀರ್ತನೆ ಮಾಡುತ್ತಾರೆ. ತಾಳ ತಟ್ಟಿ ಭಜನೆ ಮಾಡುತ್ತಾರೆ. ಆದರಿಂದ ಅನುಪಮವಾದ ಸಂತೋಷವನ್ನೂ ಕೂಡ ಅನುಭವಿಸುತ್ತಾರೆ.

ಯುಧಿಷ್ಠಿರ! ಕೆಲವೇ ಕಾಲದಲ್ಲಿ ದುಷ್ಟರಾದ ಶಂಡ ಮರ್ಕರಿಗೆ ಈ ವಿಚಾರವು ತಿಳಿದುಬಿಟ್ಟಿತು. ಪ್ರಹ್ಲಾದನು ಮಾತ್ರ ಹರಿಭಕ್ತನಾಗಿರುವುದಲ್ಲ ; ಅವನ ಎಲ್ಲ ಸ್ನೇಹಿತರನ್ನೂ ಕೂಡ ಹರಿಭಕ್ತರನ್ನಾಗಿ ಮಾಡಿದ್ದಾನೆ. ಇದರಿಂದ ಶಂಡ-ಮರ್ಕರು ಭಯಭೀತರಾದರು. ಕೂಡಲೇ ಅರಮನೆಗೆ ತೆರಳಿ ಹಿರಣ್ಯಕಶಿಪುವಿಗೆ ನಡೆಯುತ್ತಿರುವ ಎಲ್ಲ ಘಟನೆಗಳನ್ನು ವಿವರವಾಗಿ ಹೇಳಿ ಮಗನ ಮೇಲೆ ಕೋಪ ಹೆಚ್ಚುವಂತೆ ಪ್ರೇರಣೆ ಮಾಡಿದರು.

ಅಬ್ಬಬ್ಬಾ .... ಬಹು ಭಯಾನಕ. ಈಗ ಹಿರಣ್ಯಕಶಿಪುವಿನ ಕ್ರೋಧಾಗ್ನಿಯ ತೀಕ್ಷ್ಣತೆ ವರ್ಣಿಸಲು ಸಾಧ್ಯವೇ ಇಲ್ಲ. ತುಳಿದ ಹಾವಿನಂತೆ ಭುಸುಗುಟ್ಟುತ್ತಿದ್ದಾನೆ. ಕೋಪವನ್ನು ದೇಹದಲ್ಲಿ ತಡೆದುಕೊಳ್ಳಲೇ ಆಗುತ್ತಿಲ್ಲ . ಇಲ್ಲಿಯ ತನಕ ಕೊಲ್ಲಲು ತನ್ನ ಭಟರಿಗೆ ಹೇಳುತ್ತಿದ್ದನು. ಈಗ ತಾನೇ ಕೊಲ್ಲಬೇಕೆಂದು ಮನಸ್ಸು ಮಾಡಿದ್ದಾನೆ.

ಕೂಡಲೇ ಪ್ರಹ್ಲಾದನನ್ನು ಗುರುಕುಲದಿಂದ ಕರೆಯಿಸಿದನು. ಪ್ರಹ್ಲಾದನು ಅಂಜಲಿಬದ್ಧನಾಗಿ ವಿನಯದಿಂದ ತಂದೆಯ ಎದುರು ನಿಂತಿದ್ದಾನೆ. ಅಂಥ ಪುಟ್ಟ ಕಂದನಾದ ಪ್ರಹ್ಲಾದನಿಗೆ ಕಠೋರವಾದ ಮಾತುಗಳಿಂದ ಹಿರಣ್ಯಕಶಿಪು ನಿಂದನೆ ಮಾಡಲು ಪ್ರಾರಂಭ ಮಾಡಿದ್ದಾನೆ. ವಕ್ರದೃಷ್ಟಿಯಿಂದ ದುರು ದುರು ನೋಡುತ್ತಾ ಕಣ್ಣಿನಿಂದಲೇ ಸಾಯಿಸುವಂತೆ ನೋಡುತ್ತಿದ್ದಾನೆ.

**ಹಿರಣ್ಯಕಶಿಪು** – ಅವಿನೀತನೇ! ಮೂರ್ಖನೇ! ಕುಲಗೇಡಿಯೇ! ಬುದ್ಧಿಯಿಲ್ಲದವನೇ! ಅಧಮಾಧಮನೇ! ದ್ರೋಹಿಯೇ! ನನ್ನ ಆಜ್ಞೆಯನ್ನು ಮೀರಿದ ಅಹಂಕಾರಿಯೇ ....! ಈ ಕ್ಷಣ ನಿನ್ನನ್ನು ಯಮಪಟ್ಟಣಕ್ಕೆ ಕಳುಹಿಸುತ್ತೇನೆ. ಇನ್ನು ಮುಂದೆ ನಿನಗೆ ಯಾವ ರೀತಿಯಲ್ಲೂ ಕ್ಷಮೆಯಿಲ್ಲ .

ನಾನು ಕುಪಿತನಾದರೆ ಮೂರು ಲೋಕಗಳೇ ನಡುಗಿಹೋಗುತ್ತವೆ. ಹೀಗಿರುವಾಗ ಕೆಲಸಕ್ಕೆ ಬಾರದ ನಿನ್ನಂಥ ಬಾಲಿಶನನ್ನು ಸುಮ್ಮನೆ ಬಿಡಲು ಸಾಧ್ಯವೇ ಇಲ್ಲ. ನನಗಿರುವ ಬಲವನ್ನು ಈ ಮೂರುಲೋಕದಲ್ಲಿ ಯಾರೊಬ್ಬರಿಗೂ ತಡೆದುಕೊಳ್ಳಲು ಸಾಧ್ಯವಿಲ್ಲ.

**ಪ್ರಹ್ಲಾದ** – ನ ಕೇವಲಂ ಮೇ ಭವತಶ್ಚ ರಾಜನ್

ಸ ವೈ ಬಲಂ ಬಲಿನಾಂ ಚಾಪರೇಷಾಮ್।

ಪರಾವರೇऽಮೀ ಸ್ಥಿರಜಂಗಮಾ ಯೇ

ಬ್ರಹ್ಮಾದಯೋ ಯೇನ ವಶಂ ಪ್ರಣೀತಾಃ ॥ ಭಾಗ.೭.೮.೮

ಪೂಜ್ಯ ತಾತಪಾದನೇ! ನಿನಗಿರುವ ಬಲವೆಲ್ಲವೂ ಭಗವಂತನ ಅಧೀನ. ಸಕಲ ಬಲಿಷ್ಠರಿಗೂ ಬಲವನ್ನು ನೀಡುವವನು ಆ ಭಗವಂತನು ಮಾತ್ರ. ಸಮಸ್ತಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವ ಬ್ರಹ್ಮಾದಿಗಳಿಗೂ ಕೂಡ ಶಕ್ತಿ ನೀಡುವವನು ಆ ಭಗವಂತನು ಮಾತ್ರ. ಆದ್ದರಿಂದಲೇ ಸಮಸ್ತ ಸ್ಥಾವರಜಂಗಮಗಳು ಅವನ ಅಧೀನವಾಗಿವೆ.

ವಿನಯಪೂರ್ವಕವಾಗಿ ನಿನ್ನಲ್ಲಿ ಪ್ರಾರ್ಥಿಸುತ್ತೇನೆ. 'ನಾನೇ ದೇವರು' ಎಂಬ ಆಸುರೀಭಾವವನ್ನು ಬಿಟ್ಟುಬಿಡು. 'ಪರಮಾತ್ಮನು ಈಶ, ನಾನು ದಾಸ' ಎಂಬ ಭಾವನೆಯನ್ನು

ಹೊಂದು. ಎಲ್ಲೆಡೆಯೂ ಪರಮಾತ್ಮನಿದ್ದಾನೆ ಎಂದು ತಿಳಿಯುತ್ತಾ ಎಲ್ಲರನ್ನೂ ಸಮಾನವಾಗಿ ಕಾಣುತ್ತಾ ಭಗವಂತನ ಆರಾಧನೆಯನ್ನು ಮಾಡು. ಜಗತ್ತಿನಲ್ಲಿರುವ ಶತ್ರುಗಳನ್ನು ಸಂಹಾರ ಮಾಡುವ ಬದಲು ಶರೀರದ ಒಳಗೆ ಕುಳಿತ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎಂಬ ಆರುಮಂದಿ ದರೋಡೆಕಾರರನ್ನು ಮೊದಲು ಸಂಹರಿಸು. ಮನಸ್ಸನ್ನು ಗೆಲ್ಲದ ವ್ಯಕ್ತಿಯು ಜಗತ್ತನ್ನು ಗೆಲ್ಲಲು ಸಾಧ್ಯವಿಲ್ಲ .

**ಹಿರಣ್ಯಕಶಿಪು** - ಮುಚ್ಚು ಬಾಯಿ! ಮಾತನಾಡಬೇಡ. ನಾನೇ ದೇವರು; ನನಗಿಂತ ಮತ್ತೊಬ್ಬ ದೇವರಿಲ್ಲ. ನನ್ನ ಇದೇ ಕೈಗಳಿಂದ ನೀನು ಈಗ ಸಾಯುವಿ. ನನ್ನ ಶತ್ರುವಾದ ವಿಷ್ಣುವಿನ ಅಡಿಯಾಳಾಗಿರುವಿಯಾ ಮೂರ್ಖನೇ! ಸಾಯುವ ಮೊದಲು ಎಲ್ಲರೂ ಹೀಗೆ ತಲೆಕೆಟ್ಟು ಮಾತನಾಡುತ್ತಾರೆ.

**ಪ್ರಹ್ಲಾದ** - ತಂದೆ! ಆ ವಿಷ್ಣು ನಿನಗೆ ಶತ್ರುವಲ್ಲ . ಅವನಿಗೆ ಯಾರು ಶತ್ರುಗಳೂ ಇಲ್ಲ ; ಮಿತ್ರರೂ ಇಲ್ಲ. ಅವನು ಪ್ರತಿಯೊಬ್ಬರಲ್ಲೂ ಅಂತರ್ಯಾಮಿಯಾಗಿದ್ದು ಯಾವುದೇ ವಿಕಾರವನ್ನು ಹೊಂದದೆ ಎಲ್ಲರನ್ನೂ ನಿಯಂತ್ರಣ ಮಾಡುತ್ತಾನೆ.

**ಹಿರಣ್ಯಕಶಿಪು** - ನನ್ನ ತಮ್ಮನಾದ ಹಿರಣ್ಯಾಕ್ಷನನ್ನು ಮೋಸದಿಂದ ಅವನು ಕೊಂದಿದ್ದಾನೆ. ಹಂದಿಯ ವೇಷದಿಂದ ಬಂದು ಯಾರೂ ಇಲ್ಲದೇ ಇರುವ ಪಾತಾಳಕ್ಕೆ ತೆರಳಿ ಅಲ್ಲಿ ಕೊಂದಿರುವ ಆ ವಿಷ್ಣುವನ್ನು ದೇವರೆಂದು ಹೇಗೆ ಒಪ್ಪುವಿ? ಎಲ್ಲೆಡೆಯೂ ಇದ್ದರೆ ಇಲ್ಲೇಕೆ ಆ ನಿಮ್ಮ ವಿಷ್ಣು ಕಾಣಿಸುತ್ತಿಲ್ಲ?

**ಪ್ರಹ್ಲಾದ** - ಅಪ್ಪ! ಭಗವಂತನು ಅಣುರೇಣುತೃಣಕಾಷ್ಠ- ಪರಿಪೂರ್ಣನಾಗಿದ್ದಾನೆ. ಊರು, ಕಾಡು, ಆಕಾಶ, ಭೂಮಿ ಎಲ್ಲೆಡೆಯೂ ವ್ಯಾಪಿಸಿದ್ದಾನೆ. ಪ್ರತಿಯೊಬ್ಬರ ಹೃದಯದಲ್ಲೂ ನೆಲೆಸಿದ್ದಾನೆ. ಅವನಿಲ್ಲದೇ ಯಾವ ಕಾರ್ಯವೂ ಜಗತ್ತಿನಲ್ಲಿ ನಡೆಯಲು ಸಾಧ್ಯವಿಲ್ಲ . ನಿನ್ನಲ್ಲಿ , ನನ್ನಲ್ಲಿ ಪ್ರತಿಯೊಬ್ಬರಲ್ಲಿಯೂ ನಿಂತು ಈ ಎಲ್ಲ ಕಾರ್ಯಗಳನ್ನು ಮಾಡಿಸುತ್ತಿದ್ದಾನೆ.

**ಹಿರಣ್ಯಕಶಿಪು** - ಹಾಗಾದರೆ ಪರೀಕ್ಷೆ ಮಾಡಿಯೇ ಬಿಡೋಣ. ಇದೇ ಗದೆಯಿಂದ ನಿನ್ನನ್ನು ಈಗ ಕೊಲ್ಲುತ್ತೇನೆ.

ಯಸ್ತ್ವಯಾ ಮಂದಭಾಗ್ಯೋಕ್ತೋ ಮದನ್ಯೋ ಜಗದೀಶ್ವರಃ।
ಕ್ವಾಸೌ ಯದಿ ಸ ಸರ್ವತ್ರ ಕಸ್ಮಾತ್ ಸ್ತಂಭೇ ನ ದೃಶ್ಯತೇ ॥ ಭಾಗ.೭.೮.೧೩

ಮಂದಭಾಗ್ಯನೇ! 'ನಾನೇ ದೇವರು ನನಗಿಂತ ಮತ್ತೊಬ್ಬ ದೇವರಿಲ್ಲ. ' ಇದನ್ನು ಪುನಃ ಪುನಃ ನಿನಗೆ ಹೇಳುತ್ತಿದ್ದೇನೆ. ನಿನ್ನ ಆ ಜಗದೀಶ್ವರ ಎಲ್ಲಿದ್ದಾನೆ ತಿಳಿಸು. ಈಗ ನಿನ್ನನ್ನು ಕೊಲ್ಲುತ್ತೇನೆ. ನಿನ್ನನ್ನು ರಕ್ಷಿಸಲು ಅವನು ಬರುತ್ತಾನೆಯೇ? ಎಲ್ಲಿದ್ದಾನೆ ತಿಳಿಸು. ಈ ಕಂಬದಲ್ಲಿ ಇದ್ದಾನೆಯೇ? ಹಾಗಿದ್ದರೆ ಏಕೆ ಕಾಣಿಸುತ್ತಿಲ್ಲ? ನಿನ್ನ ಹರಿಯು ಇಲ್ಲಿ ಬಂದರೆ ಈಗಲೇ ಅವನ ತಲೆಯನ್ನು ಕಡಿದು ಹಾಕುತ್ತೇನೆ.

**ನಾರದರು -** ಮಹಾಬಲಿಷ್ಠನಾದ ಅಸುರವರೇಣ್ಯನಾದ ಹಿರಣ್ಯಕಶಿಪು ಹೀಗೆ ಸಿಟ್ಟಿನಿಂದ ಮಾತನಾಡುತ್ತಿದ್ದಾನೆ. ಭಗವದ್ಭಕ್ತನಾದ ಮಗನನ್ನು ಕೆಟ್ಟ ಮಾತುಗಳಿಂದ ಬೈಯ್ಯುತ್ತಿದ್ದಾನೆ. ಖಡ್ಗವನ್ನು ಹಿಡಿದು ಸಿಂಹಾಸನದಿಂದ ಮೇಲೆ ಹಾರಿ ಬಂದಿದ್ದಾನೆ. ತನ್ನ ಬಲಗಡೆ ಇದ್ದ ಉಕ್ಕಿನ ಕಂಬವನ್ನು ಮುಷ್ಟಿಯಿಂದ ಪ್ರಹಾರ ಮಾಡಿದ್ದಾನೆ. 'ಈ ಕಂಬದಲ್ಲಿ ನಿನ್ನ ದೇವರು ಇದ್ದರೆ ಈಗ ಬರಲಿ' ಎಂದು ಕಿರುಚುತ್ತಿದ್ದಾನೆ.

## ನರಸಿಂಹದೇವರ ಪ್ರಾದುರ್ಭಾವ

ಸತ್ಯಂ ವಿಧಾತುಂ ನಿಜಭೃತ್ಯಭಾಷಿತಂ
　　ವ್ಯಾಪ್ತಿಂ ಚ ಭೂತೇಷ್ವಖಿಲೇಷು ಚಾತ್ಮನಃ ।
ಅದೃಶ್ಯತಾತ್ಯದ್ಭುತರೂಪಮುದ್ವಹನ್
　　ಸ್ತಂಭೇ ಸಭಾಯಾಂ ನ ಮೃಗಂ ನ ಮಾನುಷಮ್॥ ೭.೮.೧೮

ತನ್ನ ಭೃತ್ಯನು ಹೇಳಿದ ಮಾತನ್ನು ಸತ್ಯವನ್ನಾಗಿ ಮಾಡಲು, ತಾನು ಸಕಲ ಭೂತಗಳಲ್ಲಿ ಅಂತರ್ಯಾಮಿಯಾಗಿರುತ್ತೇನೆ ಎಂಬುದನ್ನು ಸತ್ಯವನ್ನಾಗಿಸಲು ಪರಮಾತ್ಮನು ಅದ್ಭುತವಾದ ಮೃಗವೂ ಅಲ್ಲದ ಮನುಷ್ಯನೂ ಅಲ್ಲದ ರೂಪವನ್ನು ಧರಿಸಿ ಆ ಸಭಾಮಂಟಪದಲ್ಲಿದ್ದ ಕಂಬದಲ್ಲಿ ಕಾಣಿಸಿಕೊಂಡನು.

ಈಗ ಆ ಜ್ವಾಲೆಯ ಮಧ್ಯದಲ್ಲಿ ಒಂದು ಆಕೃತಿಯು ಹಿರಣ್ಯಕಶಿಪುವಿಗೆ ಸ್ಪಷ್ಟವಾಗಿ ಕಾಣಿಸುತ್ತಿದೆ. ಕಣ್ಣುಗಳು ಕರಗಿ ಸುಡುತ್ತಿರುವ ಚಿನ್ನದಂತೆ ಹೊಳೆಯುತ್ತಿವೆ. ಬೆಂಕಿಯು ಕಣ್ಣಿನಿಂದ ಚಿಮ್ಮುತ್ತಿದೆ. ಹೊಳೆಯುವ ಬಂಗಾರದ ಕೇಸರಗಳು ಕೊರಳ ಮೇಲೆ ತೂಗಾಡುತ್ತಿವೆ. ಭಯಂಕರವಾದ ಕೋರೆದಾಡೆಗಳು ಬಾಯಿ ತೆರೆದು ಮುಚ್ಚುತ್ತಿರುವಾಗ ಎದ್ದು ಕಾಣಿಸುತ್ತಿವೆ. ಹಲ್ಲುಗಳು ಕಚ್ಚಿದಾಗ ಕಟ ಕಟ ಶಬ್ದವು ಬರುತ್ತಿದ್ದು ಭಯಂಕರವಾಗಿವೆ. ಚೂರಿಯ ಅಲುಗಿನಂತೆ ನಾಲಿಗೆಯು ತೀಕ್ಷ್ಣವಾಗಿದೆ. ಹುಬ್ಬು ಗಂಟಿಕ್ಕಿದೆ. ಕಿವಿಗಳು ನಿಮಿರಿ ಸ್ತಬ್ಧವಾಗಿವೆ. ಪರ್ವತದ

ಗುಹೆಯಂತೆ ಬಾಯಿ ತೆರೆದಿದೆ. ಮೂಗಿನ ಹೊಳ್ಳೆಗಳು ಗುಹೆಯಂತೆ ಕಾಣಿಸುತ್ತಿವೆ. ಗಗನವನ್ನೇ ಮುಟ್ಟುವಷ್ಟು ಎತ್ತರದಲ್ಲಿ ಆ ನರಸಿಂಹನ ದೇಹವು ಬೆಳೆಯುತ್ತಿದೆ. ಬಿಳಿಯಾದ ಕೂದಲುಗಳು ಎಲ್ಲೆಡೆ ಹರಡಿವೆ. ನೂರಾರು ತೋಳುಗಳು ಎಲ್ಲ ದಿಕ್ಕುಗಳಲ್ಲಿ ಬೆಳೆದು ನಿಂತಿವೆ. ನಖವೆಂಬ ಆಯುಧಗಳು ಜಾಜ್ವಲ್ಯಮಾನವಾಗಿವೆ.

ಇಂಥ ಭಯಂಕರ ರೂಪವನ್ನು ಕಂಡ ಹಿರಣ್ಯಕಶಿಪು ಒಂದು ಕ್ಷಣ ಅವಿತುಕೊಳ್ಳುತ್ತಾನೆ. ಅನಂತರ ಹೀಗೆ ಆಲೋಚನೆ ಮಾಡುತ್ತಾನೆ- ಇವನು ಬಹುಷಃ ನನ್ನ ಶತ್ರುವಾದ ಶ್ರೀಹರಿಯೇ ಇರಬೇಕು. ಪ್ರಹ್ಲಾದನನ್ನು ಕೊಲ್ಲಲು ಹೊರಟ ನನ್ನನ್ನು ಕೊಲ್ಲುವುದಕ್ಕಾಗಿ ಬಂದಿರಬಹುದು. ಇವನಿಗೆ ಹೆದರಿ ನಾನು ಸುಮ್ಮನೆ ಇರಬಾರದು. ಹೀಗೆ ಯೋಚನೆ ಮಾಡಿ ಹಿರಣ್ಯಕಶಿಪು ಆ ನರಸಿಂಹನ ಮೇಲೆ ಯುದ್ಧಕ್ಕೆ ಹೊರಟಿದ್ದಾನೆ.

**ಹಿರಣ್ಯಕಶಿಪು** - ಯಾರು ನೀನು? ಇದು ಯಾವ ಮಾಯೆ? ಇಷ್ಟು ದಿವಸ ಎಲ್ಲಿ ಇದ್ದೆ? ನನಗೆ ಹೆದರಿದ ನೀನು ಇಂದೇಕೆ ಬಂದೆ? ಬದುಕಲು ಇಷ್ಟವಿದ್ದರೆ ಇಲ್ಲಿಂದ ತಪ್ಪಿಸಿಕೋ.

ಹೀಗೆ ಹೇಳುತ್ತಾ ಹಿರಣ್ಯಕಶಿಪು ತನ್ನ ಕೈಯ್ಯಲ್ಲಿದ್ದ ಗದೆಯನ್ನು ನರಹರಿಯ ಮೇಲೆ ಎಸೆಯುತ್ತಾನೆ. ಆಗ ನರಸಿಂಹನು ಆ ಗದೆಯನ್ನು ಹಿಡಿದು ಮುರಿದು ಚೂರು ಮಾಡಿ ದೂರ ಎಸೆಯುತ್ತಾನೆ. ಆ ಕ್ರೂರವಾದ ನೋಟ, ತೆರೆದುಕೊಂಡ ಗುಹೆಯಂಥ ಬಾಯಿ, ಬೆಂಕಿಯ ಕಿಡಿಗಳನ್ನುಗುಳುವ ಕಣ್ಣುಗಳು ಇಂಥ ನರಸಿಂಹನನ್ನು ಕಂಡು ಹಿರಣ್ಯಕಶಿಪುವಿನ ಭಟರು 'ರಕ್ಷಿಸು ರಕ್ಷಿಸು' ಎಂದು ಕೂಗುತ್ತಿದ್ದಾರೆ. ಆಗ ಹಿರಣ್ಯಕಶಿಪುವನ್ನು ಕೂಡಲೇ ಕೊಲ್ಲದೇ ಬೆಕ್ಕು ಇಲಿಯ ಜೊತೆಗೆ ಆಟವಾಡುವಂತೆ ನರಸಿಂಹನು ಹಿರಣ್ಯಕಶಿಪುವನ್ನು ಆಟವಾಡಿಸುತ್ತಾನೆ. ಹಿರಣ್ಯಕಶಿಪುವಿನ ಅಬ್ಬರವು ಮೊದಲು ಸೊಕ್ಕಿನ ಧ್ವನಿಯಾಗಿತ್ತು. ಅನಂತರ ವಿಕಾರದ ಭಯದ ಆತ್ಮರಕ್ಷಣೆಯ ಧ್ವನಿಯಾಗಿ ಪರಿವರ್ತನೆಗೊಂಡಿತು. ಈಗ ಹಿರಣ್ಯಕಶಿಪುವು ಶೂಲವನ್ನು ಕೈಗೆತ್ತಿಕೊಂಡು ನರಸಿಂಹನ ಮೇಲೆ ಗುರಿಯಿಟ್ಟು ಎಸೆಯುತ್ತಿದ್ದಾನೆ. ಆಗ ನರಸಿಂಹದೇವರು ಉಕ್ಕಿನ ಆ ಶೂಲವನ್ನು ತೆಗೆದುಕೊಂಡು ಮುರಿದು ದೂರ ಎಸೆಯುತ್ತಾರೆ. ಈಗ ಹಿರಣ್ಯಕಶಿಪು ಹಿಂದೆ ಹಿಂದೆ ಸರಿದಂತೆ ನರಸಿಂಹನು ಅವನ ಬಳಿ ಒಂದೊಂದೇ ಹೆಜ್ಜೆ ಇಡುತ್ತಾ ಆಗಮಿಸುತ್ತಿದ್ದಾನೆ. ತನ್ನ ಕೈಗಳಿಂದ ಅವನನ್ನು ಹಿಡಿಯಲು ಮುಂದೆ ಬರುತ್ತಿದ್ದಾನೆ.

ನರಸಿಂಹನ ಕೈಯ್ಯಲ್ಲಿ ಯಾವುದೇ ಆಯುಧಗಳಿಲ್ಲ. ಆದರೂ ಕೂಡ ಅವನೆದುರು ನಿಂತುಕೊಳ್ಳಲು ಕೂಡ ಹಿರಣ್ಯಕಶಿಪುವಿಗೆ ಸಾಧ್ಯವಾಗುತ್ತಿಲ್ಲ. ತನ್ನ ಬಳಿ ಇದ್ದ ಎಲ್ಲ

ಆಯುಧಗಳನ್ನೂ ಹುಡುಕಿ ಹುಡುಕಿ ದೇವರ ಮೇಲೆ ಎಸೆಯುತ್ತಿದ್ದಾನೆ. ಭಗವಂತನ ಜ್ವಾಲೆಯ ಮುಂದೆ ಆ ಆಯುಧಗಳು ಪುಡಿಪುಡಿಯಾಗಿವೆ. ಕೆಲವೊಂದು ಉರಿದು ಬೂದಿಯಾಗಿವೆ.

## ಹಿರಣ್ಯಕಶಿಪುವಿನ ಸಂಹಾರ

ಇದು ವೈಶಾಖಮಾಸದ ತ್ರಯೋದಶಿಯ ಸಾಯಂಕಾಲದ ಪರ್ವ- ಕಾಲ. ಈ ಸಂಧ್ಯಾಕಾಲಕ್ಕಾಗಿಯೇ ನರಸಿಂಹನು ನಿರೀಕ್ಷೆಮಾಡುತ್ತಿದ್ದನು. ಯಾವ ಸ್ಥಳವೂ ಸುರಕ್ಷಿತವಿಲ್ಲದೇ ಎಲ್ಲಿ ಹೋಗಬೇಕೆಂದು ತಿಳಿಯದೇ ಅಂಜುತ್ತಾ ಕುಳಿತ ಹಿರಣ್ಯಕಶಿಪುವನ್ನು ನರಸಿಂಹನು ಹಿಡಿಯಲು ಬರುತ್ತಿದ್ದಾನೆ. ಭಯಂಕರವಾದ ಕೋಪದಿಂದ ಮುಖವನ್ನು ಮೇಲೆತ್ತಿ ಘರ್ಜನೆ ಮಾಡುತ್ತಾನೆ. ನರಸಿಂಹನು ಅಡಿಅಡಿಗೂ ಅಬ್ಬರದ ಘರ್ಜನೆಯನ್ನೇ ಮಾಡುತ್ತಿದ್ದಾನೆ. ಇದರಿಂದ ಹಿರಣ್ಯಕಶಿಪುವಿನ ಕಾಲುಗಳು ಕುಸಿಯುತ್ತಿವೆ. ಏನಾದರೂ ರಕ್ಷಣೆ ಸಿಗಬಹುದೆಂದು ನಿರೀಕ್ಷಣೆ ಮಾಡುತ್ತಿದ್ದಾನೆ. ಚತುರ್ಮುಖಬ್ರಹ್ಮನ ವರ ವ್ಯರ್ಥವೆಂದು ಬಯ್ಯುತ್ತಿದ್ದಾನೆ. ತಾನು ಕೇಳಿಕೊಂಡ ಎಲ್ಲ ವರಗಳನ್ನು ನೆನಪು ಮಾಡಿಕೊಂಡು ಈ ವರವನ್ನೊಂದನ್ನು ಕೇಳಲಿಲ್ಲವೆಂದು ಮರುಗುತ್ತಿದ್ದಾನೆ. ತನ್ನಲ್ಲಿ ಹತ್ತಾರು ಸಾವಿರ ಆನೆಗಳ ಬಲವಿರುವುದನ್ನು ಕೂಡ ನೆನೆಪು ಮಾಡಿಕೊಳ್ಳುತ್ತಿದ್ದಾನೆ. ಇದೇ ನೆನೆಪಿನಲ್ಲಿ ನರಸಿಂಹಾಕೃತಿಯ ಕೈಗೆ ಸಿಲುಕದೆ ಅತ್ತಿತ್ತ ಸರಿದಾಡುತ್ತ ಓಡಾಡುತ್ತ ತಪ್ಪಿಸಿಕೊಳ್ಳುತ್ತಾ ಇಲಿಯಂತೆ ಆಗಿದ್ದಾನೆ. ಈಗ ಹಿರಣ್ಯಕಶಿಪುವಿಗೆ ತಪ್ಪಿಸಿಕೊಳ್ಳಲು ಸಾಧ್ಯವಾಗಿಲ್ಲ . ನರಸಿಂಹ ದೇವರ ಕೈಗಳು ತನ್ನ ಕಂಠದ ಹತ್ತಿರವೇ ಬಂದಿವೆ. ಹತ್ತಿರ ಬಂದ ಕೈಗಳಲ್ಲಿ ಭಯಂಕರವಾದ ಉಗುರುಗಳನ್ನು ನೋಡಿ ''ಮೋಸಹೋದೆ'' ಎನ್ನುತ್ತಾ ಚೀರುತ್ತಾನೆ. ಒಂದೊಂದು ಉಗುರುಗಳೂ ಕೂಡ ಸಾವಿರಾರು ಆಯುಧಗಳಿಗಿಂತ ಬಲಶಾಲಿಯಾಗಿರುವುದನ್ನು ಅನುಭವಿಸುತ್ತಾನೆ. ಈಗ ನರಸಿಂಹ-ಮೂರ್ತಿಯು ಗತ್ತಿನಿಂದ ಬಂದು ಒಂದೇ ಉಸಿರಿಗೆ ಹಾರಿ ಆ ಹಿರಣ್ಯಕಶಿಪುವನ್ನು ಹಿಡಿದಿದ್ದಾನೆ. ಹಾವನ್ನು ಹಿಡಿದ ಗರುಡವು ಆಟಕ್ಕೋಸ್ಕರ ಬಿಡುವಂತೆ ನರಸಿಂಹನೂ ಕೂಡ ಕ್ಷಣಕಾಲ ಅವನನ್ನು ಬಿಟ್ಟಿದ್ದಾನೆ. ಹಿರಣ್ಯಕಶಿಪು ಅವನ ಕೈಯ್ಯಿಂದ ತಪ್ಪಿಸಿಕೊಂಡು ಕೆಳಗೆ ಜಾರಿದ್ದಾನೆ. ಆಗ ಎಲ್ಲ ದೇವತೆಗಳೂ 'ಹಿರಣ್ಯಕಶಿಪು ತಪ್ಪಿಸಿಕೊಂಡ; ಸಾಯುತ್ತಾನೋ ಇಲ್ಲವೋ' ಎಂದು ಕೂಗುತ್ತಿದ್ದಾರೆ. ಕತ್ತಿ ಗುರಾಣಿಗಳನ್ನು ಹಿಡಿದು ವೇಗದಿಂದ ನರಸಿಂಹನ ಮೇಲೆ ಯುದ್ಧಕ್ಕೆ ಆಕ್ರಮಿಸಿದ್ದಾನೆ. ಕತ್ತಿಗುರಾಣಿಗಳ ಜೊತೆ ಗಿಡುಗಪಕ್ಷಿಯಂತೆ ವೇಗದಿಂದ ಎಲ್ಲೆಡೆಯೂ ಸಂಚರಿಸುತ್ತಿದ್ದಾನೆ. ಆಗ ಮಹಾಧ್ವನಿಯಿಂದ ಭೀಕರವಾದ ಅಟ್ಟಹಾಸವನ್ನು

ಮಾಡುತ್ತ ನರಸಿಂಹನು ಹಾವು ಇಲಿಯನ್ನು ಹೇಗೆ ಹಿಡಿಯುತ್ತದೋ ಹಾಗೆ ಹಿರಣ್ಯಕಶಿಪುವನ್ನು ಪುನಃ ಹಿಡಿದಿದ್ದಾನೆ. ಆ ನರಸಿಂಹನ ಕೈಯ ಹಿಡಿತದ ನೋವಿನಿಂದ ಹಿರಣ್ಯಕಶಿಪು ಬಳಲಿ ಬೆಂಡಾಗಿದ್ದಾನೆ. ಕೋಟಿ ಕೋಟಿ ನಿರಪರಾಧಿಗಳನ್ನು ಅಂಜಿಸಿ, ಅಂಜಿಕೆಯಿಂದಲೇ ಸಾಯಿಸಿ, ಸಕಲರಿಗೂ ಭಯಂಕರನಾದ ಹಿರಣ್ಯಕಶಿಪುವನ್ನು ನರಸಿಂಹನು ಅಂಜಿಕೆಯಿಂದಲೇ ಸಾಯಿಸುತ್ತಿದ್ದಾನೆ.

ಹಗಲೂ ಅಲ್ಲದ ರಾತ್ರಿಯೂ ಅಲ್ಲದ ಸಂಧ್ಯಾಕಾಲದಲ್ಲಿ, ಒಳಗೂ ಅಲ್ಲದ ಹೊರಗೂ ಅಲ್ಲದ ಹೊಸ್ತಿಲ ಮಧ್ಯದಲ್ಲಿ, ಮನುಷ್ಯನೂ ಅಲ್ಲದ ಮೃಗವೂ ಅಲ್ಲದ ನರಸಿಂಹನ ಆಕೃತಿಯಿಂದ, ಆಯುಧವೂ ಅಲ್ಲದ ಕೈಯ್ಯೂ ಅಲ್ಲದ ಉಗುರುಗಳಿಂದ ಹಿರಣ್ಯಕಶಿಪುವನ್ನು ಕೊಲ್ಲಲು ಭಗವಂತನು ಪ್ರವೃತ್ತನಾಗಿದ್ದಾನೆ. ಮೇಲೂ ಅಲ್ಲದೆ ಕೆಳಗೂ ಅಲ್ಲದೇ ತೊಡೆಯ ಮೇಲೆ ಮಲಗಿಸಿಕೊಂಡಿದ್ದಾನೆ. ಚತುರ್ಮುಖಬ್ರಹ್ಮದೇವರ ವರವನ್ನು ಮೀರದಂತೆ ಹಿರಣ್ಯಕಶಿಪುವನ್ನು ಹೊಸ್ತಿಲ ಮೇಲೆ ತನ್ನ ತೊಡೆಯ ಮೇಲೆ ಹಾಕಿಕೊಂಡಾಕ್ಷಣ ಹಿರಣ್ಯಕಶಿಪು ನಿಶ್ಚೇಷ್ಟಪಶುವಿನಂತೆ ಬಿದ್ದುಕೊಂಡಿದ್ದಾನೆ.

ನರಸಿಂಹನ ಕೋಪ ಸಪ್ತಲೋಕಗಳನ್ನೂ ದಾಟಿದಂತೆ ಕಾಣಿಸುತ್ತಿದೆ. ಅಟ್ಟಹಾಸದ ಘರ್ಜನೆಯನ್ನು ಪುನಃ ಪುನಃ ಮಾಡುತ್ತಿದ್ದಾನೆ. ಆ ಧ್ವನಿಯು ಅಲೆ ಅಲೆಯಂತೆ ಉಕ್ಕೇರುತ್ತಿದೆ. ಅರಮನೆಯ ಛಾವಣಿಯೇ ಹಾರಿ ಚದುರಿ ಬಿದ್ದಿದೆ. ಋಷಿಗಳು, ಮುನಿಗಳು, ಗಂಧರ್ವಚಾರಣರು, ವಿದ್ಯಾಧರರು, ಅಪ್ಸರೆಯರು ಇವರೆಲ್ಲರೂ ನರಸಿಂಹನ ರೂಪವನ್ನು ಕಂಡು ಭಯಭೀತರಾಗಿ ಲೋಕವೇ ಸುಟ್ಟು ಹೋಗುತ್ತದೆಂದು ತಿಳಿಯುತ್ತಿದ್ದಾರೆ. ನರಸಿಂಹದೇವರ ಘರ್ಜನೆಯಿಂದ ಅಪ್ಸರೆಯರು ಚದುರಿ- ಹೋಗಿದ್ದಾರೆ. ಗಂಧರ್ವರು ವಿದ್ಯಾಧರರೆಲ್ಲರೂ ಪಲಾಯನ ಮಾಡುತ್ತಿದ್ದಾರೆ.

ನರಸಿಂಹದೇವರು ಹಿಂದೆ ಘರ್ಜನೆ ಮಾಡಿರುವುದಕ್ಕಿಂತ ಇನ್ನೂ ಹೆಚ್ಚಿನ ಧ್ವನಿಮಾಡುತ್ತಾ ಘರ್ಜಿಸಿ ನಾಲಿಗೆಯಿಂದ ತಮ್ಮ ತುಟಿಗಳನ್ನು ನೆಕ್ಕುತ್ತಾ ಆ ಹಿರಣ್ಯಕಶಿಪುವಿನ ಹೊಟ್ಟೆಯನ್ನು ಉಗುರಿನಿಂದ ಸೀಳಿದ್ದಾರೆ. ಬಗೆದಿದ್ದಾರೆ. ಒಳಗಿರುವ ಕರುಳನ್ನು ಹೊರಗಡೆ ತೆಗೆದಿದ್ದಾರೆ. ತಾನೇ ಅದನ್ನು ಮಾಲೆಯನ್ನಾಗಿ ಹಾಕಿಕೊಂಡಿದ್ದಾರೆ. ಹೊಟ್ಟೆಯನ್ನು ಬಗೆದಾಗ ರಕ್ತವು ಚಿಮ್ಮಿದೆ. ಬಾಯಿ, ಮೂಗು, ಕಣ್ಣು, ಕಿವಿಗಳಿಂದಲೂ ರಕ್ತಚಿಮ್ಮಿದೆ. ನರಸಿಂಹದೇವರಿಗೆ ಆ ರಕ್ತದಿಂದಲೇ ಅಭಿಷೇಕವಾಗಿದೆ. ನರಸಿಂಹದೇವರ ಕೂದಲು ಕೇಸರಗಳೆಲ್ಲವೂ ರಕ್ತದಿಂದ ಕೆಂಪುಬಣ್ಣವಾಗಿವೆ.

ಆನೆಯನ್ನು ಕೊಂದ ಸಿಂಹದಂತೆ ಕಾಣುತ್ತಿದ್ದಾರೆ. ಹಿರಣ್ಯಕಶಿಪುವಿನ ಕರುಳನ್ನು ಕತ್ತಿನಲ್ಲಿ ಧರಿಸಿ ವಿಕಟವಾಗಿ ನಗುತ್ತಿದ್ದಾರೆ. ಕಟಕಟನೆ ಹಲ್ಲುಗಳನ್ನು ಕಡಿಯುತ್ತಿದ್ದಾರೆ. ವೀರಾವೇಶದಿಂದ ತಲೆಯನ್ನು ಅತ್ತಿತ್ತ ಆಡಿಸುತ್ತಿದ್ದಾರೆ. ನರಸಿಂಹನೆಂಬ ಸೂರ್ಯನಿಂದ ಸಿಡಿದ ಬೆಂಕಿಯ ಕಿಡಿಗಳು ಸುತ್ತಮುತ್ತಲೂ ಇರುವ ದೈತ್ಯರನ್ನು ಕೊಲ್ಲುತ್ತಿವೆ. ಆ ಕಿರಣಗಳಿಂದ ನರಸಿಂಹದೇವರ ಮುಖವು ಮತ್ತಷ್ಟು ಕಾಂತಿಯುಕ್ತವಾಗಿದೆ.

ಹಿರಣ್ಯಕಶಿಪುವು ಸತ್ತರೂ ಕೂಡ ನರಸಿಂಹದೇವರ ಕೋಪವು ಶಾಂತವಾಗುತ್ತಿಲ್ಲ. ಪುನಃ ಆರ್ಭಟಿಸುತ್ತಾರೆ. ಪುನಃ ಪುನಃ ಅವನ ಹೊಟ್ಟೆಯನ್ನು ಬಗೆಯುತ್ತಾರೆ. ಇದನ್ನು ನೋಡಿಯೇ ಅನೇಕ ಪಿಶಾಚಿಗಳು, ಶಾಕಿನಿ, ಡಾಕಿನಿ ಮೊದಲಾದವು ಪ್ರಾಣವನ್ನು ಬಿಟ್ಟಿವೆ.

ನರಸಿಂಹದೇವರು ಇಷ್ಟು ಭಯಾನಕ ರೂಪವನ್ನು ಹೊಂದಿದ್ದರೂ ಕೂಡ ಹಿರಣ್ಯಕಶಿಪುವಿನ ಭಟರು ನರಸಿಂಹನ ಮೇಲೆ ಯುದ್ಧಕ್ಕೆ ಬರುತ್ತಾರೆ. ಸಹಸ್ರಸಂಖ್ಯೆಯಲ್ಲಿ ಲಕ್ಷಾಂತರ ಸಂಖ್ಯೆಯಲ್ಲಿ ನರಸಿಂಹದೇವರ ಮೇಲೆ ಆಕ್ರಮಣ ಮಾಡುತ್ತಾರೆ. ಆಗ ಅವರೆಲ್ಲರನ್ನೂ ನರಸಿಂಹದೇವರು ತಮ್ಮ ನಖಗಳಿಂದಲೇ ಸಂಹಾರ ಮಾಡಿದ್ದಾರೆ.

ಪಾಂತ್ವಸ್ಮಾನ್ ಪುರುಹೂತವೈರಿಬಲವನ್ ಮಾತಂಗಮಾದ್ಯದ್ ಘಟಾ-
ಕುಂಭೋಚ್ಚಾದ್ರಿವಿಪಾಟನಾಧಿಕಪಟುಪ್ರತ್ಯೇಕವಜ್ರಾಯಿತಾಃ।
ಶ್ರೀಮತ್ ಕಂಠೀರವಾಸ್ಯಪ್ರತತಸುನಖರಾ ದಾರಿತಾರಾತಿದೂರ
ಪ್ರಧ್ವಸ್ತಧ್ವಾಂತಶಾಂತಪ್ರವಿತತಮನಸಾ ಭಾವಿತಾ ಭೂರಿಭಾಗೈಃ॥

ದೈತ್ಯರೆಂಬ ಮದಗಜಗಳ ಕುಂಭಸ್ಥಳವನ್ನು ಸೀಳುವುದರಲ್ಲಿ ಒಂದೊಂದು ಉಗುರುಗಳೂ ಕೂಡ ವಜ್ರಾಯುಧದಂತಿವೆ. ನರಸಿಂಹದೇವರ ಉಗುರುಗಳು ಎಲ್ಲೆಡೆಯೂ ವ್ಯಾಪ್ತವಾಗಿ ದೈತ್ಯರಿಗೆ ಗೋಚರಿಸುತ್ತಿವೆ. ಅಜ್ಞಾನವನ್ನು ಪರಿಹರಿಸುವ ದೇವತೆಗಳಿಗೆ ರಕ್ಷಣೆ ನೀಡಿದ ಇಂಥ ಉಗುರುಗಳು ನಮ್ಮನ್ನು ಸಲಹಲಿ ಎಂದು ಪ್ರಾರ್ಥಿಸುತ್ತಾರೆ ಶ್ರೀಮದಾಚಾರ್ಯರು.

ಈಗ ಅರಮನೆಯ ಸಭಾಮಂಟಪದಲ್ಲಿ ಎಲ್ಲೆಲ್ಲೂ ಶವಗಳೇ ಕಾಣಿಸುತ್ತಿವೆ. ಅರಮನೆಯ ಹೊರಗೂ ಕೂಡ ಶವಗಳೇ ಕಾಣಿಸುತ್ತಿವೆ. ಪ್ರಲಯವೇ ಬಂದಂತಾಗಿದೆ. ನರಸಿಂಹದೇವರ ವೇಗಕ್ಕೆ ಬೆಟ್ಟಗಳು ಹಾರಿವೆ. ಆಕಾಶ ಹಾಗೂ ದಿಕ್ಕುಗಳು ಮಂಕಾಗಿವೆ. ದಿಗ್ಗಜಗಳು ದಿಕ್ಕುಗಳನ್ನು ಬಿಟ್ಟು ಓಡುತ್ತಿವೆ. ಸಮುದ್ರಗಳು ಅಲ್ಲೋಲ- ಕಲ್ಲೋಲವಾಗಿವೆ. ಹೀಗೆ ಹಿರಣ್ಯಕಶಿಪುವನ್ನು ನಾಶ ಮಾಡಿ ಅವನ ಎಲ್ಲ ಅನುಚರರನ್ನೂ ಕೂಡ ನಾಶ ಮಾಡಿ ಭೀಕರವಾದ ಮುಖದಿಂದ

## ನರಸಿಂಹಜಯಂತಿ

ನರಸಿಂಹದೇವರು ಸಭೆಯಲ್ಲಿದ್ದ ಉತ್ತಮವಾದ ರಾಜಸಿಂಹಾಸನದಲ್ಲಿ ಕುಳಿತಿದ್ದಾರೆ. ನರಸಿಂಹದೇವರ ದರ್ಶನಕ್ಕಾಗಿ ಸಕಲ ದೇವತೆಗಳು ಗಗನಮಾರ್ಗದಿಂದ ಆಗಮಿಸುತ್ತಿದ್ದಾರೆ. ನಗಾರಿಗಳ ದುಂದುಭಿಗಳ ಶಬ್ದವು ಮೊಳಗಿದೆ. ಶ್ರೇಷ್ಠಗಂಧರ್ವರು ಹಾಡುತ್ತಿದ್ದಾರೆ. ಸ್ತ್ರೀಯರು ನರ್ತನ ಮಾಡುತ್ತಿದ್ದಾರೆ. ಸಕಲ ವಿಷ್ಣುಭಕ್ತರು ಅಲ್ಲಿಗೆ ತಲೆಯ ಮೇಲೆ ಕೈಜೋಡಿಸಿಕೊಂಡು ಬಂದು ನಮಸ್ಕಾರ ಮಾಡುತ್ತಿದ್ದಾರೆ.

ನರಸಿಂಹದೇವರು ಹಿರಣ್ಯಕಶಿಪುವನ್ನು ಕೊಂದಮೇಲೆ ಅತ್ಯಂತ ಭಯಂಕರವಾಗಿ ಸಿಟ್ಟಿನಲ್ಲಿ ಕುಳಿತಿದ್ದರು. ಅವರನ್ನು ಶಾಂತರನ್ನಾಗಿ ಮಾಡಲು ಎಲ್ಲ ದೇವತೆಗಳು ಪ್ರಯತ್ನಪಟ್ಟರು. ಮೊದಲು ಬ್ರಹ್ಮದೇವರು ಸ್ತೋತ್ರಮಾಡಿದರು. ಅನಂತರ ರುದ್ರದೇವರು, ಇಂದ್ರದೇವರು, ಋಷಿಗಳು, ಸಕಲ ಪಿತೃಗಳು, ಸಿದ್ಧರು, ವಿದ್ಯಾಧರರು, ನಾಗಗಳು, ಮನುಗಳು, ಪ್ರಜಾಪತಿಗಳು, ಗಂಧರ್ವರು, ಚಾರಣರು, ಯಕ್ಷರು, ಕಿಂಪುರುಷರು, ವೇತಾಲರು, ಕಿನ್ನರರು, ವಿಷ್ಣುಪಾರ್ಷದರು ಪ್ರತಿಯೊಬ್ಬರೂ ಪ್ರತ್ಯೇಕವಾಗಿ ಬಂದು ನರಸಿಂಹದೇವರನ್ನು ಪ್ರಶಂಸೆ ಮಾಡಿದರು. ಜಯಕಾರ ಹಾಕಿದರು. ಬಗೆ ಬಗೆಯಲ್ಲಿ ಪ್ರಾರ್ಥನೆ ಮಾಡಿದರು. ಆದರೂ ಕೂಡ ನರಸಿಂಹದೇವರ ಸಿಟ್ಟು ಸ್ವಲ್ಪವೂ ಶಾಂತವಾಗಲಿಲ್ಲ . ಕೊನೆಯಲ್ಲಿ ಚತುರ್ಮುಖಬ್ರಹ್ಮದೇವರು ಸಾಕ್ಷಾತ್ ಲಕ್ಷ್ಮೀದೇವಿಯನ್ನೇ ಪ್ರಾರ್ಥಿಸಿದರು. ಅವಳು ಬಂದು ಪ್ರಾರ್ಥನೆ ಮಾಡಿದರೂ ಕೂಡ ನರಸಿಂಹದೇವರ ಸಿಟ್ಟು ಶಾಂತವಾಗಲಿಲ್ಲ. (ಭಗವಂತನು ನಾಟಕವಾಡುವಂತೆ ಲಕ್ಷ್ಮೀದೇವಿಯೂ ಕೂಡ ನಾಟಕ ಮಾಡುತ್ತಾಳೆ. ಆದ್ದರಿಂದ ಲಕ್ಷ್ಮೀದೇವಿಯು ಸ್ತೋತ್ರಮಾಡಿದರೂ ಭಗವಂತನು ಶಾಂತನಾಗಲಿಲ್ಲ).

ಬ್ರಹ್ಮದೇವರು ಅಂತಿಮವಾಗಿ ಪ್ರಹ್ಲಾದನ ಬಳಿ ತೆರಳಿ ನೀನು ಸ್ವಾಮಿಯನ್ನು ಸಂತೋಷಪಡಿಸಿ ಕೋಪವನ್ನು ಶಾಂತಮಾಡು. ನಮ್ಮಿಂದ ಸಾಧ್ಯವಾಗುತ್ತಿಲ್ಲ ಎಂದು ಹೇಳುತ್ತಾರೆ. ಆಗ ಪ್ರಹ್ಲಾದನು ನೇರವಾಗಿ ತೆರಳಿ ನರಸಿಂಹದೇವರ ಪಾದ ಕಮಲದಲ್ಲಿ ಸಾಷ್ಟಾಂಗ ನಮಿಸುತ್ತಾನೆ.

ಸ್ವಪಾದಮೂಲೇ ಪತಿತಂ ತಮರ್ಭಕಂ
    ವಿಲೋಕ್ಯ ದೇವಃ ಕೃಪಯಾ ಪರಿಪ್ಲುತಃ।
ಉತ್ಥಾಪ್ಯ ತಚ್ಛೀರ್ಷ್ಣ್ಯದಧಾತ್ ಕರಾಂಬುಜಂ
    ಕಾಲಾಹಿನಿರ್ದಷ್ಟಧಿಯಾಂ ಕೃತಾಭಯಮ್॥ ಭಾಗ.೭.೯.೫

ತನ್ನ ಪಾದಮೂಲದಲ್ಲಿ ಬಿದ್ದ ಪ್ರಹ್ಲಾದ ಮಗುವನ್ನು ನರಸಿಂಹದೇವರು ಕೃಪಾಪೂರ್ಣವಾಗಿ ಮೇಲೆಬ್ಬಿಸಿದರು. ಅವನ ತಲೆಯ ಮೇಲೆ ಉಸಿರು ಬಿಡುತ್ತಲೇ ತನ್ನ ಅಭಯಹಸ್ತವನ್ನು ಇಟ್ಟರು. ನರಸಿಂಹದೇವರ ಕೈಗಳ ಸ್ಪರ್ಶದಿಂದ ಪ್ರಹ್ಲಾದನ ಎಲ್ಲ ಪಾಪವೂ ಪರಿಹಾರವಾಯಿತು. ಕೂಡಲೇ ಬಿಂಬದರ್ಶನವಾಯಿತು. ಸ್ವರೂಪಾನಂದವು ಅಭಿವ್ಯಕ್ತವಾಯಿತು. ರೋಮಾಂಚನವಾಯಿತು. ಭಕ್ತಿರಸವು ಉಕ್ಕಿತು. ಅಂತಃಕರಣ ಒದ್ದೆಯಾಯಿತು. ಕಣ್ಣುಗಳಲ್ಲಿ ಆನಂದಬಾಷ್ಪ ಸುರಿಯಿತು. ಹೃದಯದಲ್ಲಿ ಭಗವಂತನ ಬಿಂಬಮೂರ್ತಿಯನ್ನು ಕಾಣುತ್ತ ಧ್ಯಾನ ಮಾಡುತ್ತಾ ಪ್ರೇಮದಿಂದ ಗದ್ಗದಕಂಠದಲ್ಲಿ ಪ್ರಹ್ಲಾದನು ಪ್ರಾರ್ಥನೆಯನ್ನು ಮಾಡಿದನು. (ಪ್ರಹ್ಲಾದ ಮಾಡುವ ಪ್ರಾರ್ಥನೆಯ ಶ್ಲೋಕಗಳನ್ನು ಇದೇ ಪುಸ್ತಕದಲ್ಲಿ ಮಂತ್ರಸ್ತೋತ್ರ ವಿಭಾಗದಲ್ಲಿ ನೀಡಲಾಗಿದೆ. ಅದನ್ನು ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು.)

ಪ್ರಹ್ಲಾದನ ಸ್ತೋತ್ರದಿಂದ ನರಸಿಂಹದೇವರು ಸುಪ್ರಸನ್ನರಾದರು. ಹಾಗೂ ಪ್ರಹ್ಲಾದನಿಗೆ ಪರಿಪೂರ್ಣವಾಗಿ ಅನುಗ್ರವನ್ನು ಮಾಡಿ ಅಲ್ಲಿರುವ ಎಲ್ಲ ದೇವತೆಗಳಿಗೂ ಕೂಡ ಅನುಗ್ರಹವನ್ನು ಮಾಡಿ ಅದೃಶ್ಯರಾದರು.

ಅನಂತರ ಪ್ರಹ್ಲಾದನನ್ನು ದೈತ್ಯಸಿಂಹಾಸನದಲ್ಲಿ ಕುಳ್ಳಿರಿಸಿ ಅಭಿಷೇಕ ಮಾಡಿದ್ದಾರೆ. ಜಯವಿಜಯರು ಸನಕಾದಿಮುನಿಗಳ ಶಾಪದ ಪ್ರಭಾವದಿಂದ ದಿತಿಯ ಗರ್ಭದಲ್ಲಿ ಜನಿಸಿ ಭಗವಂತನಿಂದಲೇ ಮೃತರಾಗಿದ್ದಾರೆ. ಮುಂದೆ ರಾವಣ-ಕುಂಭಕರ್ಣರಾಗಿ ಹುಟ್ಟಿ ಶ್ರೀಹರಿಯಿಂದಲೇ ಮೃತರಾಗುತ್ತಾರೆ. ಅನಂತರ ಶಿಶುಪಾಲ-ದಂತವಕ್ರರಾಗಿ ಕೃಷ್ಣನಿಂದ ಹತರಾಗಿ ಕೃಷ್ಣನನ್ನು ಪ್ರವೇಶಿಸಿ ಶಾಪದಿಂದ ವಿಮುಕ್ತರಾಗುತ್ತಾರೆ. ದ್ವಾರಪಾಲಕರ ಸ್ಥಾನವನ್ನು ಪುನಃ ಅಲಂಕರಿಸುತ್ತಾರೆ.

ಯಾರು ನರಸಿಂಹದೇವರ ಈ ಚರಿತ್ರೆಯನ್ನು ಪ್ರಹ್ಲಾದರಾಜರ ಭಕ್ತಿಯ ಪ್ರಕರಣವನ್ನು ಪುನಃ ಪುನಃ ಓದುತ್ತಾರೋ, ಅವರಿಗೆ ಸಕಲ ಶತ್ರುಗಳ ಉಪದ್ರವವು ಪರಿಹಾರವಾಗುತ್ತದೆ. ಜ್ಞಾನಭಕ್ತಿವೈರಾಗ್ಯಗಳು ಸಿದ್ಧಿಸಿ ಮೋಕ್ಷವು ದೊರಕುತ್ತವೆ.

ಇಲ್ಲಿಗೆ ನರಸಿಂಹದೇವರ ಚರಿತ್ರೆಯು ಸಮಾಪ್ತವಾಯಿತು

॥ ಶ್ರೀ ಕೃಷ್ಣಾರ್ಪಣಮಸ್ತು ॥

* * * *

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ

# ನರಸಿಂಹದೇವರ ಕ್ಷೇತ್ರಗಳು

## ದೇವರಾಯನ ದುರ್ಗ, ತುಮಕೂರು ಜಿಲ್ಲೆ

(೧) ಭೋಗಾ ನರಸಿಂಹದೇವರು - ದುರ್ವಾಸಮುನಿಪ್ರತಿಷ್ಠಿತ (ಕೆಳಗಿನ ಬೆಟ್ಟ)

(೨) ಯೋಗಾ ನರಸಿಂಹದೇವರು – ಬ್ರಹ್ಮಪ್ರತಿಷ್ಠಿತ (ಮೇಲಿನ ಬೆಟ್ಟ)

## ಸೀಬಿ ಲಕ್ಷ್ಮೀನರಸಿಂಹ, ತುಮಕೂರು ಜಿಲ್ಲೆ

ರಾಷ್ಟ್ರಿಯ ಹೆದ್ದಾರಿ ೪ರಲ್ಲಿ ತುಮಕೂರಿನಿಂದ ಸುಮಾರು ೨೬ ಕಿ.ಮೀ. ದೂರದಲ್ಲಿದೆ. ಶ್ರೀನರಸಿಂಹದೇವರು ಇಲ್ಲಿ ಸ್ವಯಂವ್ಯಕ್ತ. ಶಾಲಿಹೋತ್ರಮುನಿಗಳಿಗೆ ಪ್ರತ್ಯಕ್ಷ.

## ಮಾರೇನ ಹಳ್ಳಿ ನರಸಿಂಹ, ಮೈಸೂರು ಜಿಲ್ಲೆ

ಇಲ್ಲಿನ ದೇವಾಲಯವು ಸುಮಾರು ೧೨೦೦ ವರ್ಷಗಳಷ್ಟು ಹಳೆಯದು.

## ಸುವರ್ಣಮುಖಿ ನರಸಿಂಹದೇವರು, ಜಂಪೇನಹಳ್ಳಿ, ತುಮಕೂರು ಜಿಲ್ಲೆ.

ಇಲ್ಲಿ ಸುವರ್ಣಮುಖಿ ನದಿಯು ಹರಿಯುತ್ತಿದ್ದರಿಂದ ಈ ಹೆಸರು ಬಂದಿದೆ.

## ಗುಂಜಾ ಶ್ರೀಲಕ್ಷ್ಮೀನರಸಿಂಹಸ್ವಾಮಿ, ಟಿ.ನರಸೀಪುರ, ಮೈಸೂರುಜಿಲ್ಲೆ

ಕಾವೇರಿ-ಕಪಿಲಾ ಸಂಗಮದಲ್ಲಿದೆ. ಕೈಯಲ್ಲಿ ಗುಲಗಂಜಿ ಹಿಡಿದಿರುವ ಶ್ರೀನರಸಿಂಹನು ಈ ಕ್ಷೇತ್ರದ ಸೇವನೆಯಿಂದ ಸಿಗುವ ಪುಣ್ಯವು ಕಾಶಿಗಿಂತ ಒಂದು ಗುಲಗಂಜಿ ತೂಕ ಹೆಚ್ಚು ಇದೆ ಎಂದು ತೋರಿಸುತ್ತಿದ್ದಾನೆ ಎಂಬ ಐತಿಹ್ಯವು ಈ ಕ್ಷೇತ್ರಕ್ಕಿದೆ. ೧೬ನೇ ಶತಮಾನದಲ್ಲಿ ಈ ದೇವಸ್ಥಾನವು ಮೈಸೂರಿನ ಅರಸರ ದಳವಾಯಿಯಿಂದ ಜೀರ್ಣೋದ್ಧಾರಗೊಂಡಿತು.

## ಯೋಗಾನರಸಿಂಹಸ್ವಾಮಿ, ಮೇಲುಕೋಟೆ

ಇಲ್ಲಿನ ನರಸಿಂಹದೇವರು ಪ್ರಹ್ಲಾದರಾಜ ಪ್ರತಿಷ್ಠಾಪಿಸಿದ್ದು. ಈ ಕ್ಷೇತ್ರ ದೇಗುಲಗಳ ನಾಡು ಎಂದೇ ಪ್ರಸಿದ್ಧ.

## ದಿಗ್ವಿಜಯ ಲಕ್ಷ್ಮೀನರಸಿಂಹಸ್ವಾಮಿ, ಬೆಂಗಳೂರು ಉತ್ತರಾದಿಮಠ.

ಅಧುನಾ ಉತ್ತರಾದಿಮಠಪೀಠಸ್ಥರಾದ ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರಿಂದ ಪ್ರತಿಷ್ಠಾಪಿಸಲ್ಪಟ್ಟ ಈ ಭವ್ಯಮೂರ್ತಿ ಪ್ರತಿನಿತ್ಯ ನೂರಾರು ಭಕ್ತರುಗಳಿಗೆ ಅನುಗ್ರಹವನ್ನು ಮಾಡುತ್ತಾ ಮೆರೆಯುತ್ತಿದೆ.

## ಶ್ರೀಗುರುನರಸಿಂಹಸ್ವಾಮಿ, ಸಾಲಿಗ್ರಾಮ, ಉಡುಪಿ ಜಿಲ್ಲೆ

ಶ್ರೀಗುರುನರಸಿಂಹಸ್ವಾಮಿ ನಾರದರಿಂದ ಪ್ರತಿಷ್ಠಾಪಿಸಲ್ಪಟ್ಟಿದೆ. ಉಗ್ರಮೂರ್ತಿಯಾದ ಈ ನರಸಿಂಹನನ್ನು ಕಟಾಕ್ಷೀಕರಿಸಿಕೊಳ್ಳಲು ಎದುರುಗಡೆ ಶ್ರೀ ಆಂಜನೇಯನ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಕದಂಬರ ಕಾಲದಲ್ಲಿ ಈ ನವೀಕರಣವನ್ನು ಮಾಡಿದ್ದಾರೆ.

## ಸಾವನದುರ್ಗ ನರಸಿಂಹಸ್ವಾಮಿ ದೇವಸ್ಥಾನ, ಮಾಗಡಿ ತಾ|| ರಾಮನಗರ ಜಿಲ್ಲೆ.

ಪಕ್ಕದಲ್ಲಿ ಲಕ್ಷ್ಮೀದೇವಿಯ ಗುಡಿಯಿದೆ. ಬಿಳಿಬೆಟ್ಟ, ಕರೀಬೆಟ್ಟ ಎಂದು ಹೆಸರಾಗಿರುವ ಮೇಲ್ಭಾಗದಲ್ಲಿ ಕೋಟೆಯನ್ನು ಹೊಂದಿರುವ ಈ ಗಿರಿಕ್ಷೇತ್ರ ನೋಡಲು ತುಂಬ ಮನೋಹರವಾಗಿದೆ.

## ಕುಬೇರ ನರಸಿಂಹದೇವಸ್ಥಾನ, ಸೋಮನಾಥಪುರ, ಮೈಸೂರು ಜಿಲ್ಲೆ

ಇಲ್ಲಿನ ನರಸಿಂಹಸ್ವಾಮಿಯ ವಿಶೇಷತೆ ಏನೆಂದರೆ ತನ್ನ ಹೆಬ್ಬೆರಳ ಮೇಲೆ ಇಡೀ ವಿಗ್ರಹ ನಿಂತಿರುವುದು. ಪಕ್ಕದಲ್ಲಿ ಲಕ್ಷ್ಮೀದೇವಿಯ ಗುಡಿ ಇದೆ. ಕುಬೇರನ ವಿಗ್ರಹವೂ

ಇದೆ. ಹಿಂಬದಿಯ ಕಾವೇರಿ ದಡದಲ್ಲಿ ಶ್ರೀರಾಮನು ವಿಶ್ರಮಿಸಿದ್ದೆಂದು ಹೇಳಲಾದ ಬಂಡೆಯೊಂದಿದೆ.

## ಅಭಯನರಸಿಂಹದೇವಸ್ಥಾನ, ಹಾದಿಗಲ್ಲು, ತೀರ್ಥಹಳ್ಳಿ, ಶಿವಮೊಗ್ಗ

ಶ್ರೀಲಕ್ಷ್ಮೀನರಸಿಂಹದೇವರು, ವಾದಿರಾಜರ ವೃಂದಾವನ, ಭೂತರಾಜರ ಪ್ರತಿಷ್ಠಾಪನೆಯುಳ್ಳ ಒಂದು ಧಾರ್ಮಿಕಕೇಂದ್ರವಾಗಿದೆ.

## ಶ್ರೀಲಕ್ಷ್ಮೀನರಸಿಂಹದೇವಸ್ಥಾನ, ಭದ್ರಾಜಲಾಶಯ, ಶಿವಮೊಗ್ಗಜಿಲ್ಲೆ

ಇಲ್ಲಿನ ವಿಗ್ರಹ ಭದ್ರಾಜಲಾಶಯದಲ್ಲಿ ಸಿಕ್ಕಿದ್ದು ಪ್ರತಿಷ್ಠಾಪನೆಗೊಂಡಿದೆ. ಪ್ರತಿ ಶನಿವಾರ ವಿಶೇಷಪೂಜೆ ನಡೆಯುತ್ತದೆ. ಕಾರ್ತಿಕಮಾಸದಲ್ಲಿ ಬಾಣ,ಬಿರುಸು, ಪಟಾಕಿಗಳೊಂದಿಗೆ ವಿಜೃಂಭಣೆಯೊಂದಿಗೆ ಅಲಂಕಾರಪೂಜೆ ನಡೆಯುತ್ತದೆ.

## ಶ್ರೀಲಕ್ಷ್ಮೀನರಸಿಂಹದೇವಸ್ಥಾನ, ಜಾವಗಲ್, ಹಾಸನಜಿಲ್ಲೆ

ಹೊಯ್ಸಳರಾಜ ವೀರ ಸೋಮೇಶ್ವರನಿಂದ ರೂಪುಗೊಂಡ ಈ ದೇವಸ್ಥಾನ ಈಗಲೂ ತನ್ನ ವಾಸ್ತುಶಿಲ್ಪ ಶ್ರೀಮಂತಿಕೆಯನ್ನು ಕಾಪಾಡಿಕೊಂಡಿದೆ.

## ಶ್ರೀನದೀ ನರಸಿಂಹದೇವಸ್ಥಾನ, ಚಿಕ್ಕಮಳೂರು, ಚನ್ನಪಟ್ಟಣ

ಕಣ್ವಾನದಿಯ ಪಕ್ಕದಲ್ಲಿ ಕಣ್ವಮಹರ್ಷಿಗಳಿಂದ ಪ್ರತಿಷ್ಠಾಪಿಸಲ್ಪಟ್ಟ ಈ ದೇವಸ್ಥಾನದಲ್ಲಿ ತೆಂಗಿನ ಪೂರ್ಣಫಲವನ್ನು ಹರಸಿಕೊಂಡು ದೇಗುಲದಲ್ಲಿ ಕಟ್ಟಿದರೆ ಇಷ್ಟಾರ್ಥ ನೆರವೇರುವುದೆಂದು ಪ್ರತೀತಿ ಇದೆ.

## ಹತ್ಯಾಳು ನರಸಿಂಹಸ್ವಾಮಿ ದೇವಸ್ಥಾನ, ತಿಪಟೂರು.

ಇಲ್ಲಿ ಶ್ರೀನರಸಿಂಹದೇವರು ಬೆಟ್ಟದ ಮೇಲೆ ವಿರಾಜಮಾನನಾಗಿದ್ದಾನೆ. ಈ ಹಿಂದೆ ರಜತಾದ್ರಿಪುರ ಎಂಬ ಹೆಸರು ಈ ಕ್ಷೇತ್ರಕ್ಕೆ ಇತ್ತು.

## ಹಲಸಿ ನರಸಿಂಹದೇವಸ್ಥಾನ, ಹಲಸಿ, ಬೆಳಗಾವಿ.

ಗಾತ್ರದಲ್ಲಿ ಚಿಕ್ಕದಾದ ಈ ಮೂರ್ತಿ ಇರುವುದು ಕದಂಬರ ಎರಡನೆಯ ರಾಜಧಾನಿಯಾದ ಹಲಸಿಯಲ್ಲಿ ನೆಲೆಸಿದೆ. ಕ್ರಿ.ಶ. ೯೮೦ರಲ್ಲಿ ನಿರ್ಮಾಣವಾದ ಅತ್ಯದ್ಭುತ ವಾಸ್ತುಶಿಲ್ಪವನ್ನೊಳಗೊಂಡ ದೇವಸ್ಥಾನವಾಗಿದೆ.

## ಶ್ರೀಅಂಗಾರಕನರಸಿಂಹಸ್ವಾಮಿ, ಮುಳಬಾಗಿಲು.

ಶ್ರೀಅಕ್ಷೋಭ್ಯತೀರ್ಥರ ಕರಕಮಲದಲ್ಲಿ ಮೂಡಿದ ಈ ಮೂರ್ತಿ ಮುಳಬಾಗಿಲಿನಲ್ಲಿದೆ. ಜಾಗ್ರತಸ್ಥಳವಾದ ಶ್ರೀಪಾದರಾಜರ ಮೂಲವೃಂದಾವನ, ನರಸಿಂಹತೀರ್ಥ, ಶ್ರೀವ್ಯಾಸರಾಜರ ಪ್ರತಿಷ್ಠಾಪಿತ ಶ್ರೀಹನುಮಂತ ಇತ್ಯಾದಿ ಪ್ರತೀಕಗಳುಳ್ಳ ಮಹಾಸನ್ನಿಧಾನವುಳ್ಳ ಕ್ಷೇತ್ರ.

## ಶ್ರೀಅಭಯಹಸ್ತನರಸಿಂಹಸ್ವಾಮಿ, ಹೊಸೂರು

ಈ ಜಾಗದಲ್ಲಿ ನಿವೇಶನ ಮಾಡಲು ನೆಲವನ್ನು ಅಗೆದಾಗ ಪುಷ್ಕರಿಣೀ ಸಮೇತ ಸ್ವಯಂಭೂ ಶ್ರೀನರಸಿಂಹಮೂರ್ತಿಯ ಬಂಡೆಯು ಸಿಕ್ಕಿದೆ. ಅದನ್ನು ಎತ್ತಲಾಗದೆ ಸಾಗಿಸಲೂ ಆಗದೇ ಇದ್ದಾಗ ಅಲ್ಲಿಯೇ ಪ್ರತಿಷ್ಠಾಪನೆಗೊಂಡು ಪೂಜೆ ನಡೆಯುತ್ತಿದೆ. ಹಿಂಭಾಗದಲ್ಲಿ ಶ್ರೀಸುದರ್ಶನಮೂರ್ತಿಯೂ ಇದೆ.

## ಶ್ರೀಯೋಗಾನರಸಿಂಹಸ್ವಾಮಿ, ಗೊರೂರು, ಹಾಸನಜಿಲ್ಲೆ.

ಹೇಮಾವತಿ ನದಿಯ ದಂಡೆಯಲ್ಲಿ ಗೋಕರ್ಣ ಋಷಿಯ ಪ್ರಾರ್ಥನೆಯ ಮೇರೆಗೆ ಯೋಗಾನರಸಿಂಹದೇವರು ಉದ್ಭವಮೂರ್ತಿಯಾಗಿ ನೆಲೆಸಿದ್ದಾರೆ. ವಿಶೇಷವಾಗಿ ಇದು ಪಶ್ಚಿಮಮುಖಿ. ಹೊಯ್ಸಳ ಶೈಲಿಯದು. ದಶಾವತಾರದ ಸುಂದರಮೂರ್ತಿಗಳು ದೇಗುಲಶಿಖರದಲ್ಲಿವೆ.

## ಶ್ರೀಲಕ್ಷ್ಮೀನರಸಿಂಹಸ್ವಾಮಿ, ಶೂರ್ಪಾಲಿ, ಬಾಗಲಕೋಟೆ

ಅಲ್ಲಿ ಶ್ರೀಪರಶುರಾಮದೇವರು ಬಂದು ವಿಶ್ರಮಿಸಿದ್ದರೆಂದೂ, ಆಗಿನ ಕಾಲದಿಂದಲೂ ಶೂರ್ಪಾಲಿ ನರಸಿಂಹದೇವಸ್ಥಾನದ ಮುಂದಿರುವ ಅಶ್ವತ್ಥಮರವು ಇದೆಯೆಂದು ಪ್ರತೀತಿ ಇದೆ. ಕೃಷ್ಣಾನದಿಯ ದಂಡದ ಮೇಲಿರುವ ಈ ಕ್ಷೇತ್ರ ಬಹಳ ಪ್ರಸಿದ್ಧಿ.

## ಶ್ರೀಭೋಗಾನರಸಿಂಹಸ್ವಾಮಿ, ಶಾಂತಿಗ್ರಾಮ, ಹಾಸನ ಜಿಲ್ಲೆ

ಹೆಚ್ಚು ಶಿಲ್ಪಕಲೆಯಿಲ್ಲದ ಸರಳ ಹಾಗೂ ದೇವಸ್ಥಾನದ ಗರ್ಭಗುಡಿ ಹೊರಗಡೆ ಅಪರೂಪದ ನವನಾರಸಿಂಹನ ಚಕ್ರಾಕಾರಕೆತ್ತನೆಯನ್ನು ತಾರಸಿಯನ್ನು ಹೊಂದಿದೆ. ಹತ್ತಿರದಲ್ಲಿ ಸೌಮ್ಯಕೇಶವನ ಸಾವಿರವರ್ಷ ಐತಿಹ್ಯದ ದೇವಸ್ಥಾನವಿದೆ.

## ಶ್ರೀಯೋಗಾನರಸಿಂಹ, ಬಗ್ಗವಳ್ಳಿ, ಚಿಕ್ಕಮಗಳೂರು ಜಿಲ್ಲೆ

ಹೊಯ್ಸಳದ ಕಾಲದ ೧೨ನೆಯ ಶತಮಾನದ ಅಪೂರ್ವ ತ್ರಿಕೂಟಾಚಲ. ಈ ದೇಗುಲದ ಮುಖ್ಯಮಂಟಪದಲ್ಲಿ ಚನ್ನಕೇಶವ, ನಾಲ್ಕಡಿಯ ಯೋಗಾನರಸಿಂಹ ಹಾಗೂ ತ್ರಿಪುರಸುಂದರಿಯ ಸುಂದರವಾದ ಕೆತ್ತನೆಯ ವಿಗ್ರಹಗಳುಳ್ಳ ದೇವಸ್ಥಾನ-ವಿದು.

## ಶ್ರೀ ಝುರಣಿ ನರಸಿಂಹ, ಬೀದರ್

ಎದೆ ಮಟ್ಟದ ನೀರಿನಲ್ಲೇ ಸುಮಾರು ಅರ್ಧ ಕಿ.ಮೀ. ಗುಹೆಯಲ್ಲಿ ನಡೆದು ಹೋದರೆ ನರಸಿಂಹದೇವರ ದರ್ಶನವಾಗುವುದು. ಝುರಾ ಎಂಬ ದಾನವನ ಕೋರಿಕೆಯ ಮೇರೆಗೆ ಇಲ್ಲಿ ಭಗವಂತನು ನೆಲೆಸಿರುವುದು ಅಪರೂಪ.

## ತೊರವಿ ನರಸಿಂಹ, ವಿಜಯಪುರ ಜಿಲ್ಲೆ.

ಇದೂ ಕೂಡ ಗುಹಾಲಯ, ನಾಲ್ಕು ಅಡಿ ಜಾಗದಲ್ಲಿ ಮೆಟ್ಟಲು ಇಳಿದು ಸುರಂಗದಂತಿರುವ ಸ್ಥಳದಲ್ಲಿ ಇಳಿದು ಹೋದರೆ ಮೂರು ಅಡಿ ಎತ್ತರದ ಅಷ್ಟಭುಜ ನರಸಿಂಹದೇವರ ದರ್ಶನವಾಗುತ್ತದೆ. ಹತ್ತನೆಯ ಶತಮಾನದಲ್ಲಿ ಚಾಲುಕ್ಯರ ಶತಮಾನದಲ್ಲಿ ರೂಪುಗೊಂಡ ಈ ಸ್ಥಳ ಅತ್ಯಂತ ಪ್ರಸಿದ್ಧಿ. ಪಕ್ಕದಲ್ಲೇ ಲಕ್ಷ್ಮೀ ಹಾಗೂ ಪ್ರಹ್ಲಾದರ ವಿಗ್ರಹಗಳಿವೆ. ನರಸಿಂಹತೀರ್ಥವೆಂಬ ಪುಷ್ಕರಿಣಿಯು ಕೂಡ ಇದೆ.

## ಶ್ರೀಘಾಟಿಸುಬ್ರಹ್ಮಣ್ಯ ನರಸಿಂಹ

ಸುಮಾರು ೬೦೦ ವರ್ಷಗಳ ಹಳೆಯ ಇತಿಹಾಸವಿರುವ ಈ ದೇಗುಲದ ಮೂರ್ತಿಯು ಅಪರೂಪವಾದ ಹುತ್ತದಲ್ಲಿ ಸಿಕ್ಕಿದ್ದಾಗಿದೆ. ಒಬ್ಬ ವ್ಯಾಪಾರಿ ಹಾಗೂ ಬ್ರಾಹ್ಮಣನ ಸ್ವಪ್ನದಲ್ಲಿ ಕಾಣಿಸಿಕೊಂಡು ಬಳ್ಳಾರಿ ಜಿಲ್ಲೆಯ ಸೊಂಡೂರು ರಾಜನ ಸಹಾಯದಿಂದ ಈ ದೇಗುಲವು ನಿರ್ಮಾಣವಾಗಿದೆ.

## ಕನಕಗಿರಿ ನರಸಿಂಹ, ಗಂಗಾವತಿ

ಹಂಪೆಯ ಸನಿಹದಲ್ಲಿರುವ ಈ ಕ್ಷೇತ್ರದಲ್ಲಿ ನರಸಿಂಹದೇವರು ಲಿಂಗರೂಪದ ಉದ್ಭವಮೂರ್ತಿ. ಕನಕ ಎಂಬ ಹೆಸರಿನ ಮುನಿಯು ಪ್ರಾರ್ಥಿಸಿ ನರಸಿಂಹದೇವರನ್ನು ಈ ಕ್ಷೇತ್ರದಲ್ಲಿ ನೆಲೆಸುವಂತೆ ಮಾಡಿದರೆಂದು ಇತಿಹಾಸ. ಇದು ಅನೇಕ ಶಿಲ್ಪಕಲೆಗಳಿಂದ ಶ್ರೀಮಂತವಾಗಿದೆ.

## (೧) ಯೋಗಾನರಸಿಂಹ, ಅಹೋಬಿಲ

ನವ ನಾರಸಿಂಹ ಕ್ಷೇತ್ರಗಳನ್ನೊಳಗೊಂಡ ಈ ಕ್ಷೇತ್ರವು ಆಂಧ್ರಪ್ರದೇಶದ ಅರಣ್ಯಪ್ರದೇಶದಲ್ಲಿದೆ. ಈ ನರಸಿಂಹದೇವರು ಕೆಳಗಿನ ಬೆಟ್ಟದಲ್ಲಿದೆ.

## (೨) ಛತ್ರವಟ ನರಸಿಂಹ, ಅಹೋಬಿಲ

ಇಲ್ಲಿನ ಒಂಭತ್ತು ನರಸಿಂಹದೇವರ ಮೂರ್ತಿಗಳಲ್ಲಿ ಛತ್ರವಟ ನರಸಿಂಹ-ಮೂರ್ತಿಯೇ ದೊಡ್ಡದು. ತಾಳ ಹಾಕುತ್ತಿರುವ ಭಂಗಿಯಲ್ಲಿರುವ ಈ ನರಸಿಂಹನು ಸಂಗೀತಪ್ರೇಮಿಯೆಂದು ಪ್ರತೀತಿ.

## (೩) ಶ್ರೀವರಾಹ ಅಥವಾ ಕ್ರೋಡನರಸಿಂಹ, ಅಹೋಬಿಲ

ವೇದಾದ್ರಿ ಹಾಗೂ ಗರುಡಾದ್ರಿ ಪರ್ವತಗಳ ನಡುವೆ ಈ ವರಾಹ ದೇವಾಲಯವಿದೆ. ಹಿರಣ್ಯಾಕ್ಷನನ್ನು ಕೊಂದ ಈ ವರಾಹಮೂರ್ತಿಗೆ ಸಿಂಹದ ಬಾಲವಿದೆ.

## (೪) ಶ್ರೀಮಾಲೋಲ ನರಸಿಂಹ, ಅಹೋಬಿಲ

ಮಾಲೋಲ ನರಸಿಂಹ ಲಕ್ಷ್ಮಿಯನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಶಾಂತಮೂರ್ತಿಯಾಗಿ ನೆಲೆಸಿದ್ದಾನೆ. ಅಭಯಹಸ್ತವುಳ್ಳ ಈ ನರಸಿಂಹದೇವರ ದೇವಸ್ಥಾನದ ಬಲದ ಸಣ್ಣದಾರಿಯಲ್ಲಿ ಹೋದರೆ ಪ್ರಹ್ಲಾದನ ಗುರುಕುಲವಿದೆ.

ಪ್ರಹ್ಲಾದ ಗುರುಕುಲದಲ್ಲೂ ಯೋಗ ಭಂಗಿಯಲ್ಲಿ ಕುಳಿತಿರುವ ನರಸಿಂಹದೇವರ ಮೂರ್ತಿಯಿದೆ.

## (೫) ಶ್ರೀಜ್ವಾಲಾನರಸಿಂಹ, ಅಹೋಬಿಲ

ಜ್ವಾಲಾನರಸಿಂಹ ಈ ನವನಾರಸಿಂಹಕ್ಷೇತ್ರಗಳಲ್ಲಿರುವ ಅತಿ ಎತ್ತರದ ದೇವಾಲಯ. ಅಷ್ಟಭುಜಗಳಿಂದ ಕೂಡಿದ ಹಿರಣ್ಯಕಶಿಪುವನ್ನು ಸೀಳುವ ಭಂಗಿಯಲ್ಲಿ ಈ ಮೂರ್ತಿಯಿದೆ. ಪಕ್ಕದಲ್ಲಿಯೇ ರಕ್ತಗುಂಡಂ ಎಂಬ ನೀರಿನ ಕುಂಡವಿದೆ. ದೇವಸ್ಥಾನದಿಂದ ಇನ್ನೂ ಮೇಲೆ ಹೋದರೆ ಶ್ರೀನರಸಿಂಹದೇವರು ಉದ್ಭವಿಸಿದ ಸ್ತಂಭವಿದೆ. ಅದಕ್ಕೆ ಉಗ್ರಸ್ತಂಭವೆಂದೂ ಕರೆಯುತ್ತಾರೆ.

## (೬) ಶ್ರೀಅಹೋಬಿಲ ನರಸಿಂಹ, ಅಹೋಬಿಲ

ಮಾಲೋಲ ನರಸಿಂಹದೇವರಿಂದ ಕೆಳಗಿಳಿದು ಬಂದರೆ ಬೆಟ್ಟದ ಕೆಳಗಿನ ಪ್ರದೇಶದಲ್ಲಿರುವ ಮೂರ್ತಿಯೇ ಈ ನರಸಿಂಹ. ಬಿಲದಲ್ಲಿರುವ ಈ ನರಸಿಂಹ ಮೂರ್ತಿಯು ಸಾಲಿಗ್ರಾಮಶಿಲೆಯಿಂದ ಕೂಡಿದೆ.

## (೭) ಭಾರ್ಗವ ನರಸಿಂಹ, ಅಹೋಬಿಲ

ಸುಮಾರು ೧೨೫-೧೩೦ ಮೆಟ್ಟಲುಗಳ ಕ್ರಮಿಸಿದರೆ ಭಾರ್ಗವ ನರಸಿಂಹನ ದರ್ಶನ ಪಡೆಯಬಹುದಾಗಿದೆ. ಈ ದೇವಸ್ಥಾನ ಕಾಡಿನಲ್ಲಿ ನಿರ್ಜನಪ್ರದೇಶದಲ್ಲಿದೆ. ದೇವಸ್ಥಾನದ ಪಕ್ಕದಲ್ಲಿ ಪುಷ್ಕರಿಣಿ ಇರುವುದು ವಿಶೇಷ. ಶಂಖಚಕ್ರ ಎರಡು ಕೈಗಳಲ್ಲಿ ಮತ್ತೆರಡು ಕೈಗಳಲ್ಲಿ ಹಿರಣ್ಯಕಶಿಪುವನ್ನು ಸೀಳುತ್ತಿರುವ ಭಂಗಿಯಲ್ಲಿ ಈ ಮೂರ್ತಿ ಇದೆ.

## (೮) ಪಾವನ ನರಸಿಂಹ, ಅಹೋಬಿಲ

ಬಲು ದುರ್ಗಮವಾದ ದಾರಿಯಲ್ಲಿ ಕಾಡಿನೊಳಗೆ ಸುಮಾರು ೮ ಕಿಮೀ ದೂರವನ್ನು ಜೀಪಿನ ಮುಖಾಂತರ ಹೋದರೆ ಈ ದೇವಸ್ಥಾನವನ್ನು ತಲುಪಬಹುದು. ದೇವಸ್ಥಾನದ ಸುತ್ತಲೂ ಅತಿ ಎತ್ತರದ ಬೆಟ್ಟಗಳನ್ನು ಕಾಣಬಹುದು. ಭಾರದ್ವಾಜ ಮುನಿಗಳು ಪ್ರತ್ಯಕ್ಷೀಕರಿಸಿಕೊಂಡ ಈ ನರಸಿಂಹ ಶಾಂತಮೂರ್ತಿ. ಲಕ್ಷ್ಮಿಯನ್ನು ತೊಡೆಯ ಮೇಲೆ ಕೂಡಿಸಿಕೊಂಡು ಭಕ್ತರಿಗೆ ಅಭಯಪ್ರದನಾದ ಈ ದೇವರ ದರ್ಶನವು ಅತ್ಯದ್ಭುತವಾದ ಅನುಭವವನ್ನು ಕೊಡುವುದಂತೂ ಸತ್ಯ .

## (೯) ಶ್ರೀಪ್ರಹ್ಲಾದವರದ ನಾರಸಿಂಹ

ಅಹೋಬಿಲಂ ಮುಖ್ಯಪಟ್ಟಣದಲ್ಲಿರುವ ಈ ದೇವಾಲಯ ಈ ನವ ನಾರಸಿಂಹಕ್ಷೇತ್ರಗಳುಳ್ಳ ಅಹೋಬಿಲದಲ್ಲಿಯೇ ಇರುವ ಅತ್ಯಂತ ದೊಡ್ಡದಾದ ದೇವಸ್ಥಾನ. ಈ ನಾರಸಿಂಹನನ್ನು ಸ್ವತಃ ಶ್ರೀನಿವಾಸದೇವರು ಕಲ್ಯಾಣಮಾಡಿಕೊಳ್ಳುವ ಮುಂಚೆ ಪ್ರತಿಷ್ಠಾಪಿಸಿದ್ದಾರೆಂದು ಪ್ರತೀತಿ ಇದೆ. ಗೋಡೆ ಕಂಬಗಳ ಮೇಲಿನ ಕೆತ್ತನೆ ಅಪರೂಪದ ಚಿತ್ತಾರ ಮನಮೋಹಕವಾಗಿದೆ.

## ಬಾಳೆ ಎಲೆ ನರಸಿಂಹಕ್ಷೇತ್ರ, ಬೆಂಗಳೂರು

ಬಾಳೆ ಎಲೆ ಎಂಬ ಊರಿನ ತೋಟದಲ್ಲಿ ಸಿಕ್ಕ ವಿಗ್ರಹವನ್ನು ಇಲ್ಲಿ ಪ್ರತಿಷ್ಠಾಪಿಸ-ಲಾಗಿದೆ. ಮಧು ಅಭಿಷೇಕ ಇಲ್ಲಿನ ವಿಶೇಷ.

## ಅರಕಲಗೂಡು ನರಸಿಂಹದೇವಸ್ಥಾನ

ಗೌತಮ ಋಷಿಗಳು ಸೂರ್ಯೋಪಾಸನೆ ಮಾಡಿ ನರಸಿಂಹದೇವರನ್ನು ಇಲ್ಲಿ ಪ್ರತ್ಯಕ್ಷೀಕರಿಸಿಕೊಂಡಿದ್ದಾರೆ. ಈ ದೇವಸ್ಥಾನವನ್ನು ಮೈಸೂರಿನ ಒಡೆಯರಾದ ಒಂದನೇ ನರಸಿಂಹ ಒಡೆಯರು ಜೀರ್ಣೋದ್ಧಾರ ಮಾಡಿದರೆಂದು ಇಲ್ಲಿನ ಶಿಲಾಶಾಸನವೊಂದರಿಂದ ತಿಳಿದು ಬರುತ್ತದೆ.

## ಶ್ರೀಲಕ್ಷ್ಮೀನರಸಿಂಹದೇವಸ್ಥಾನ, ನರಸಿಂಗಪುರ

ಚೆನ್ನೈನಿಂದ ಸುಮಾರು ೫೫ ಕಿ.ಮೀ. ದೂರದಲ್ಲಿರುವ ಈ ನರಸಿಂಗಪುರ-ನರಸಿಂಹದೇವಸ್ಥಾನ ಚೋಳರ ಕಾಲದಲ್ಲಿ ರೂಪುಗೊಂಡಿತು. ಇಲ್ಲಿನ ೧೪ ಶಿಲಾ-ಶಾಸನಗಳಲ್ಲಿ ೨ರಲ್ಲಿ ಚೋಳರ ಬಗ್ಗೆಯೂ ಉಳಿದ ೧೨ರಲ್ಲಿ ವಿಜಯನಗರದ ಶಾಸಕರ ಬಗ್ಗೆಯೂ ಸ್ಪಷ್ಟವಾದ ಉಲ್ಲೇಖವಿದೆ. ಇಲ್ಲಿನ ಗರುಡನ ವಿಶೇಷವಾದ ಮೂರ್ತಿಯ ಮೇಲೆ ಸರ್ಪಗಳಿವೆ.

## ಕೋನಕೊಂಡ ಶ್ರೀನರಸಿಂಹದೇವಸ್ಥಾನ, ರಾಜಮಂಡ್ರಿ, ಆಂಧ್ರಪ್ರದೇಶ.

ಬೆಟ್ಟದ ಮೇಲೆ ನೆಲೆಸಿರುವ ಈ ದೇವಸ್ಥಾನ ಸುಮಾರು ೧೩ನೇ ಶತಮಾನಕ್ಕೆ ಸೇರಿದ ಕೆತ್ತನೆಗಳನ್ನೊಳಗೊಂಡಿದೆ. ಪರಾಶರ ಋಷಿಗಳ ಪ್ರಾರ್ಥನೆಗೆ ಒಲಿದು ಸ್ವಯಂ ಪ್ರಕಟನಾದ ಈ ನರಸಿಂಹ. ಈ ಸ್ಥಳ ಬಹಳ ಜಾಗ್ರತ.

## ಅಂತರ್ವೇದಿ ಲಕ್ಷ್ಮೀನರಸಿಂಹ, ಈಸ್ಟ್ ಗೋದಾವರಿ, ಆಂಧ್ರಪ್ರದೇಶ

ವಸಿಷ್ಠ ಋಷಿಗಳ ಪ್ರಾರ್ಥನೆಯ ಮೇರೆಗೆ ಇಲ್ಲಿ ನೆಲಸಿರುವ ನರಸಿಂಹ ಭಕ್ತರಿಗೆ ಒಲಿಯುವ ಪರಮ ಭಕ್ತವಾತ್ಸಲ್ಯಮೂರ್ತಿ. ಒಂದು ಕಡೆ ನದಿ ಹಾಗೂ ಮತ್ತೊಂದು ಕಡೆ ಸಮುದ್ರದ ದೃಶ್ಯವನ್ನು ಹೊಂದಿರುವ ಈ ಕ್ಷೇತ್ರ ನೋಡಲು ನಯನ ಮನೋಹರ.

## ಮಲೆಯಾದ್ರಿ ನರಸಿಂಹ, ಮಲಕೊಂಡ, ಪ್ರಕಾಶಂ, ಆಂಧ್ರಪ್ರದೇಶ

ಈ ಪುಣ್ಯಕ್ಷೇತ್ರ ಅಗಸ್ತ್ಯರೂ ಹಾಗೂ ಮಾರ್ಕಂಡೇಯರೂ ತಪಸ್ಸು ಮಾಡಿದ ತಪೋಭೂಮಿ. ಶ್ರೀ ಸ್ವಾಮಿಯು ಲಕ್ಷ್ಮಿಯ ಕೋರಿಕೆಯ ಮೇಲೆ ಭೂಲೋಕದಲ್ಲಿ ಪ್ರಕಟನಾಗಲು ಗರುಡನಿಗೆ ಜಾಗವನ್ನು ಗುರುತಿಸಲು ಹೇಳಿದಾಗ ಗರುಡನು ದೇವನು ತನಗೆ ಇತ್ತ ಮಾಲೆಯನ್ನು ಇಟ್ಟು ಬಂದ ಸ್ಥಳ ಇದು. ಇಲ್ಲಿನ ವಿಶೇಷವೇನೆಂದರೆ ಮನುಷ್ಯರಿಗೆ ಶನಿವಾರ ಮಾತ್ರವೇ ಪೂಜೆಗೆ ಅವಕಾಶ. ಉಳಿದ ಆರುದಿನಗಳು ದೇವತೆಗಳು ಭಗವಂತನನ್ನು ಅರ್ಚಿಸುವರು. ಈ ಸ್ಥಳಕ್ಕೆ ಗೋವರ್ಧನಗಿರಿಯೆಂಬ ಹೆಸರೂ ಇದೆ.

## ಮಲ್ಲೂರು ಹೇಮಾಚಲ ಶ್ರೀಲಕ್ಷ್ಮೀನರಸಿಂಹ

ಇಲ್ಲಿನ ನರಸಿಂಹ ವಿಗ್ರಹವು ಮನುಷ್ಯದೇಹದಂತೆ ಮೆತ್ತಗಿದೆ. ಹಾಗೂ ರೋಮಗಳು ಬೆಳೆಯುತ್ತವೆ. ಈ ನರಸಿಂಹದೇವರ ವಿಗ್ರಹದ ನಾಭಿಯಿಂದ ಜಲವು ಉಕ್ಕಿ ಆ ಜಲದ ಸೇವನೆಯಿಂದ ಸಂತಾನವಾಗುವುದೆಂದು ಇಲ್ಲಿನ ಜನರ ಗಾಢವಾದ ನಂಬಿಕೆ. ಈ ವಿಗ್ರಹದ ಪಾದದ ಕೆಳಗೆ ಚಿಂತಾಮಣಿ ನದಿಯು ಹರಿಯುತ್ತದೆ. ಇಲ್ಲಿನ ಪ್ರಕೃತಿಸೌಂದರ್ಯ ಅನೇಕ ಅಪರೂಪದ ಗಿಡಮೂಲಿಕೆಗಳುಳ್ಳ ದಟ್ಟವಾದ ಕಾಡುಗಳಿಂದ ಕೂಡಿದೆ.

## ಶ್ರೀಮಟ್ಟಪಲ್ಲಿ ಲಕ್ಷ್ಮೀನರಸಿಂಹ, ಮಟ್ಟಪಲ್ಲಿ, ನಲ್ಗೊಂಡ, ತೆಲಂಗಾಣ

ಕೃಷ್ಣಾನದೀತೀರದಲ್ಲಿರುವ ಈ ಕ್ಷೇತ್ರ ಬಹಳ ಪ್ರಸಿದ್ಧ. ಇಲ್ಲಿ ಪ್ರಹ್ಲಾದ-ಸಮೇತನಾದ ಪದ್ಮಾಸನದಲ್ಲಿ ಕುಳಿತಿರುವ ಯೋಗಾನರಸಿಂಹದೇವರು ಸ್ವಯಂವ್ಯಕ್ತ. ಗುಹಾಲಯದಲ್ಲಿರುವ ಈ ನರಸಿಂಹ ಬಹಳ ಪ್ರಸಿದ್ಧನಾದವನು. ಮುಖ್ಯಗುಹೆ-ಯ ಪಕ್ಕದಲ್ಲಿ ಮತ್ತೊಂದು ಗುಹೆಯಿದ್ದು ಅಲ್ಲಿಂದ ಬ್ರಹ್ಮಾದಿಗಳು ಸೂಕ್ಷ್ಮರೂಪ-

ದಲ್ಲಿ ಬಂದು ಸ್ವಾಮಿಯ ದರ್ಶನ ಪಡೆಯುತ್ತಾರೆಂದು ಪ್ರತೀತಿ. ಇಲ್ಲಿ ರಾಜ್ಯಲಕ್ಷ್ಮೀ, ಗೋದಾಲಕ್ಷ್ಮಿ ಸ್ವಾಮಿಯ ಪಕ್ಕದಲ್ಲೇ ಇದ್ದಾರೆ. ಆಂಜನೇಯ ಈ ಕ್ಷೇತ್ರದ ಪಾಲಕ.

## ಪಾನಕನರಸಿಂಹ, ಮಂಗಳಗಿರಿ, ಗುಂಟೂರ್, ಆಂಧ್ರಪ್ರದೇಶ

ಕೃತಯುಗದಲ್ಲಿ ತೋತಾದ್ರಿ, ತ್ರೇತಾಯುಗದಲ್ಲಿ ಸ್ತುತ್ಯಾದ್ರಿ, ದ್ವಾಪರದಲ್ಲಿ ಮುಖ್ಯಾದ್ರಿ, ಕಲಿಯುಗದಲ್ಲಿ ಮಂಗಳಾದ್ರಿ ಎಂದು ಕರೆಯುವ ಈ ಸ್ಥಳದಲ್ಲಿ ಶ್ರೀನರಸಿಂಹದೇವರು ಪಾನಕಸ್ವೀಕಾರ ಮಾಡಿ ತನ್ನ ಕ್ರೋಧವನ್ನು ನಿಗ್ರಹಿಸಿ ಶಾಂತನಾಗುತ್ತಾನೆಂಬ ನಂಬಿಕೆ ಪ್ರಾಚೀನವಾದುದು. ಬೆಟ್ಟದ ಮೇಲೆ ನೆಲೆಸಿರುವ ಈ ವಿಶೇಷನರಸಿಂಹದೇವರ ದೇವಸ್ಥಾನದಲ್ಲಿ ಭಕ್ತರು ನೀಡುವ ಬೆಲ್ಲದ ಪಾನಕವನ್ನು ಅರ್ಧ ದೇವರಿಗೆ ಸಮರ್ಪಿಸಿ ಉಳಿದರ್ಧವನ್ನು ಭಕ್ತರಿಗೆ ನೀಡುವ ಸಂಪ್ರದಾಯವಿದೆ.

॥ ಶ್ರೀಮಧ್ವೇಶಾರ್ಪಣಮಸ್ತು ॥

# ನರಸಿಂಹಜಯಂತಿ ಹಬ್ಬದ ಅಡುಗೆಗಳು

1. ಹೆಸರುಬೇಳೆ/ಕಡಲೆಬೇಳೆ ಕೋಸಂಬರಿ.
2. ಸೌತೆಕಾಯಿ ಪಲ್ಯ.
3. ನಿಂಬೆಕಾಯಿ ಗೊಜ್ಜು.
4. ಮಾವಿನಕಾಯಿ ಚಿತ್ರಾನ್ನ.
5. ಮಾವಿನಹಣ್ಣಿನ ಸೀಕರಣೆ.
6. ನಿಂಬೆಹಣ್ಣಿನ ಪಾನಕ
7. ಬೇಲದ ಹಣ್ಣಿನ ಪಾನಕ
8. ಶ್ಯಾವಿಗೆ ಪಾಯಸ
9. ಪಂಚಭಕ್ಷ್ಯಗಳು
10. ಕಡ್ಲೆಬೇಳೆ ಹೋಳಿಗೆ
11. ಪಂಚಾನ್ನಗಳು
12. ಮಜ್ಜಿಗೆ
13. ಬುತ್ತಿ ಅನ್ನ
14. 5 ಬಗೆಯ ಹಣ್ಣುಗಳು
15. 5 ಬಗೆಯ ಖಾರ ಪದಾರ್ಥಗಳು

ಈ ಎಲ್ಲಾ ಅಡುಗೆಗಳ ವಿವರವನ್ನು ಯುಗಾದಿ, ರಾಮನವಮಿ, ಹನುಮಜ್ಜಯಂತಿ, ಅಕ್ಷಯತೃತೀಯಾ ಪುಸ್ತಕಗಳಲ್ಲಿ ನೀಡಲಾಗಿದೆ. ಅದನ್ನು ನೋಡಿ ತಿಳಿದುಕೊಳ್ಳಬೇಕು.

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮದ್ವೇಶಾರ್ಪಣಮಸ್ತು ॥

* * * *

ನರಸಿಂಹಜಯಂತಿ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ
ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ
ಶ್ರೀಲಕ್ಷ್ಮೀಹಯಗ್ರೀವದೇವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಸ್ವರ್ಣಗೌರಿವ್ರತ

ಭಾದ್ರಪದ || ಶುದ್ಧ || ತೃತೀಯಾ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಸ್ವರ್ಣಗೌರಿವ್ರತ

ಭಾದ್ರಪದ ॥ ಶುಕ್ಲ ॥ ತೃತೀಯಾ

ವಿದ್ವಾನ್॥ ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :
ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),
ಗಿರಿನಗರ, ಬೆಂಗಳೂರು-೮೫

ಸ್ವರ್ಣಗೌರಿವ್ರತ ಶಾಲಿವಾಹನ ಶಕೆ ೧೯೪೨ ಶಾರ್ವರಿ॥ ಶ್ರಾವಣ ॥ ಶುದ್ಧ ॥ ಪೂರ್ಣಿಮೆ (ದಿನಾಂಕ:೩-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥಶ್ರೀಪಾದಂಗಳವರ ಕರಕಮಲಗಳಿಂದ ಭಾರತೀರಮಣಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವ-ದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು : ೧೨೮



ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಶ್ರೀಮತಿ ನಾಗಲತಾ

ಮುಖಪುಟ : ಶ್ರೀವಿಶ್ವಾತ್ಮಾ
ಕಾರ್ತಿಕ ಜೋಷಿ

ಮುದ್ರಣ : ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.



ಹರಿಭಕ್ತರಾದ ಶ್ರೀ ಹೆಚ್. ದ್ವಾರಕಾನಾಥ್ ಹಾಗೂ ಶ್ರೀಮತಿ ನಾಗರತ್ನ

ನನ್ನ ತಂದೆ-ತಾಯಿಗಳಾದ ಶ್ರೀ ಹೆಚ್. ದ್ವಾರಕಾನಾಥ್ ಹಾಗೂ ಶ್ರೀಮತಿ ನಾಗರತ್ನ ಇವರು ಜನ್ಮನೀಡಿ ಸಾರ್ಥಕ ಜೀವನ ನಡೆಸಲು ಮುಖ್ಯಕಾರಣಕರ್ತೃಗಳಾಗಿದ್ದಾರೆ. ಇವರ ಎಪ್ಪತ್ತಮೂರನೆಯ ವರ್ಷದ ಈ ಶುಭಸಂದರ್ಭದಲ್ಲಿ ಇವರ ಅನುಗ್ರಹಕ್ಕಾಗಿ ಈ ಜ್ಞಾನಸೇವೆಯನ್ನು ನಡೆಸಿರುತ್ತೇವೆ. ಇದರಿಂದ ಪ್ರಾಪ್ತವಾಗುವ ಅಪಾರ ಪುಣ್ಯರಾಶಿಯು ಅವರಿಗೆ ತಲುಪಿ ಶ್ರೀಹರಿವಾಯುಗುರುಗಳು ನಮ್ಮನ್ನು ಹರಸಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀಗುರುಪ್ರಸಾದ್ ಹಾಗೂ ಶ್ರೀಮತಿ ಪದ್ಮಾವತಿ,
ಗಿರಿನಗರ, ಬೆಂಗಳೂರು.

## ಸ್ತ್ರೀಯರಿಗೆ ಸೂಚನೆ

ಸ್ವರ್ಣಗೌರಿ ಪೂಜೆಯನ್ನು ವಿವಾಹಿತರಾದ ಸ್ತ್ರೀಯರು ಮಾಡಬೇಕು. ಈ ಪುಸ್ತಕದಲ್ಲಿ ನೀಡಿರುವ ಪೂಜೆಯ ಮಂತ್ರಗಳನ್ನು ಯಾರ ಅಪೇಕ್ಷೆಯೂ ಇಲ್ಲದೆ ಸ್ವತಂತ್ರವಾಗಿ ನೋಡಿಕೊಂಡು ಮಾಡಬಹುದು. ಪುರೋಹಿತರ ಮೂಲಕ ಅಥವಾ ಪತಿಯ ಮೂಲಕ ಮಂತ್ರ ಹೇಳಿಸಿ ಪೂಜೆ ಮಾಡುವುದೇ ಉತ್ತಮ ಪಕ್ಷ. ಆದರೆ ಅದು ಸಾಧ್ಯವಾಗದೆ ಇದ್ದಾಗ, ಈ ಪುಸ್ತಕದಲ್ಲಿ ನೀಡಿದ ಮಂತ್ರಗಳನ್ನು ಹೇಳಿಕೊಂಡು ಪೂಜೆ ಮಾಡಬಹುದು. ಶ್ಲೋಕಗಳನ್ನೂ ಕೂಡ ಹೇಳಿಕೊಂಡು ಪೂಜೆ ಮಾಡುವ ಸಂಪ್ರದಾಯ ನಿಮ್ಮಲ್ಲಿ ಇಲ್ಲದ್ದಿದರೆ ಇದೇ ಪುಸ್ತಕದ ಕೊನೆಯಲ್ಲಿ ಇರುವ ಹಾಡನ್ನು ಹೇಳಿಕೊಂಡು ಪೂಜೆಯನ್ನು ಮಾಡಬಹುದು. ಕಥಾಭಾಗದ ಅನುವಾದ ಓದಬಹುದು 'ಆತ್ಮನೈವ ಕೃತೇ ಹೋಮೇ ಶಕ್ತಿತೋ ಗುರುದಕ್ಷಿಣಾ' ಎಂದು ಶ್ರೀಮದಾಚಾರ್ಯರು ತಂತ್ರಸಾರಸಂಗ್ರಹದಲ್ಲಿ ಹೇಳಿದಂತೆ ತಾವೇ ಪೂಜೆ ಮಾಡಿದಾಗ ಯಥಾಶಕ್ತಿ ದಕ್ಷಿಣೆಯನ್ನು ವಾಯನದಾನದ ಜೊತೆ ಬ್ರಾಹ್ಮಣರಿಗೆ ನೀಡಬೇಕು.

# ವಿಷಯಾನುಕ್ರಮಣಿಕೆ

# ಮುನ್ನುಡಿ

ಮಹಾರುದ್ರದೇವರ ತೊಡೆಯಲ್ಲಿ ಕುಳಿತ ಸ್ವರ್ಣಗೌರಿಯ ಪೂಜೆಯನ್ನು ಮಾಡಬೇಕು. ಅರ್ಧನಾರೀಶ್ವರ ರೂಪವನ್ನು ಚಿಂತನೆ ಮಾಡಿ ಪೂಜಿಸಿದರೆ, ಮತ್ತಷ್ಟು ಹೆಚ್ಚು ಫಲವು ದೊರಕುತ್ತದೆ. ಕೇವಲ ಗೌರಿಯ ಮುಖವನ್ನಷ್ಟೇ ಚಿಂತನೆ ಮಾಡಿ, ಪೂಜೆ ಮಾಡುವುದು ಪ್ರಶಸ್ತವಲ್ಲ.

ಉಮಾ ವೈ ವಾಕ್ ಸಮುದ್ದಿಷ್ಟಾ ಮನೋ ರುದ್ರ ಉದಾಹೃತಃ ।
ತದೇತನ್ ಮಿಥುನಂ ಜ್ಞಾತ್ವಾ ನ ದಾಂಪತ್ಯಾದ್ ವಿಹೀಯತೇ ॥

ಮಾತು ಮನಗಳ ಮೇಲನವೇ ಪಾರ್ವತೀ ಪರಮೇಶ್ವರರು. ಇವರೀರ್ವರ ಅರ್ಧನಾರೀಶ್ವರ ರೂಪವನ್ನು ಚಿಂತನೆ ಮಾಡಿದವರ ದಾಂಪತ್ಯಕ್ಕೆ ಎಂದೂ ಚ್ಯುತಿಯು ಬರುವುದಿಲ್ಲ ಎಂಬ ಸ್ಕಾಂದಪುರಾಣವಾಕ್ಯವನ್ನು ಶ್ರೀಮಧ್ವಾಚಾರ್ಯರು ಉಲ್ಲೇಖ ಮಾಡುತ್ತಾರೆ.

ಪಾರ್ವತೀ ಪರಮೇಶ್ವರರ ಪ್ರತಿಮೆಯನ್ನಿಟ್ಟು ಸ್ವರ್ಣಗೌರಿಯ ವ್ರತವನ್ನು ಆಚರಿಸಬೇಕಾಗಿಲ್ಲ. ಹೇಗೆ ರುದ್ರದೇವರಿಗೆ ಲಿಂಗಕ್ಕೆ ಮಾತ್ರ ಪೂಜೆಯೋ, ಅದರಂತೆ ಪಾರ್ವತೀ ದೇವಿಗೆ ಮುಖಕ್ಕೆ ಮಾತ್ರ ಪೂಜೆ ಎಂಬ ಸಂಪ್ರದಾಯವಿದೆ. ಆದ್ದರಿಂದ ಗೌರೀಮುಖದಲ್ಲಿ 'ಅರ್ಧನಾರೀಶ್ವರ' ಅಥವಾ ಪರಮೇಶ್ವರ ತೊಡೆಯ ಮೇಲೆ ಕುಳಿತ ಗೌರಿಯನ್ನು ಚಿಂತಿಸಿ ಪೂಜೆಯನ್ನು ಮಾಡಬೇಕು. ಪಾರ್ವತೀಪರಮೇಶ್ವರರ ಅಂತರ್ಯಾಮಿಯಾದ ಭಾರತೀಮುಖ್ಯಪ್ರಾಣದೇವರನ್ನು ಅವರ ಅಂತರ್ಯಾಮಿಯಾದ ಲಕ್ಷ್ಮೀನರಸಿಂಹದೇವರನ್ನು ಅವಶ್ಯವಾಗಿ ಚಿಂತನೆ ಮಾಡಬೇಕು.

ಸ್ವರ್ಣಗೌರೀವ್ರತದ ಬಗ್ಗೆ ತಿಳಿದುಕೊಳ್ಳಬೇಕಾದ ಅನೇಕ ಅಪೂರ್ವ ವಿಷಯಗಳನ್ನು, ಪಾರ್ವತೀದೇವಿಯ ಅನೇಕ ಮಹಿಮೆಗಳನ್ನು ಈ ಕೃತಿಯಲ್ಲಿ

ಸಂಗ್ರಹಿಸಲಾಗಿದೆ. ವ್ರತರಾಜ ಮೊದಲಾದ ಪುಸ್ತಕಗಳ ಪರಿಶೀಲನೆಯಿಂದ ಸ್ವರ್ಣಗೌರೀಪೂಜಾವಿಧಾನವನ್ನು ಹಾಗೂ ಸ್ವರ್ಣಗೌರೀವ್ರತದ ಕಥೆಯನ್ನೂ ಕೂಡ ಇದರಲ್ಲಿ ನೀಡಲಾಗಿದೆ. ಪ್ರತಿಯೊಬ್ಬರೂ ಇದರಲ್ಲಿರುವ ಅಪೂರ್ವವಿಷಯವನ್ನು ತಿಳಿದುಕೊಳ್ಳಬೇಕು. ಪ್ರತಿಯೊಬ್ಬರಿಗೂ ಇದರಿಂದ ಮೋಕ್ಷಸಾಧನೆಯು ಪರಿಪೂರ್ಣವಾಗುತ್ತದೆ. ಆದ್ದರಿಂದ ಈ ಪುಸ್ತಕದ ಸದುಪಯೋಗವನ್ನು ಎಲ್ಲ ಜಿಜ್ಞಾಸುಗಳು ಪಡೆದುಕೊಳ್ಳಬೇಕಾಗಿ ಕೇಳಿಕೊಳ್ಳುತ್ತೇನೆ.

ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ಶ್ರೀ ಗುರುಪ್ರಸಾದ್ ಹಾಗೂ ಶ್ರೀಮತಿ ಪದ್ಮಾವತಿ ದಂಪತಿಗಳಿಗೆ ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ-ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಇವರ ಮಾತಾ-ಪಿತೃಗಳಿಗೆ ಈ ಜ್ಞಾನಯಜ್ಞದ ಪುಣ್ಯರಾಶಿಯು ತಲುಪಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ.

## ಪೂಜೆಗೆ ಬೇಕಾಗುವ ಸಾಮಗ್ರಿಗಳು

೧. ಸಿದ್ಧಪಡಿಸಿದ ಗೌರಿಮಂಟಪ.

೨. ಹರಿನಿರ್ಮಾಲ್ಯ, ತೀರ್ಥ ಮೊದಲಾದವುಗಳು ಹಾಗೂ ಸಕಲ ಪೂಜೋಪಕರಣಗಳು.

೩. ಹದಿನಾರು ಎಳೆಯ ಗೆಜ್ಜೆವಸ್ತ್ರ.

೪. ಹದಿನಾರು ಎಳೆಯ ಹದಿನಾರು ಗಂಟಿನ ದೋರ.

೫. ಅರಿಶಿನ, ಕುಂಕುಮ, ಸಿಂಧೂರ, ಮಂತ್ರಾಕ್ಷತೆ.

೬. ಅಡಿಕೆ ಸುಣ್ಣ ಸಹಿತವಾಗಿ ೩೨ ವಿಳ್ಯದೆಲೆ.

೭. ಮಂಗಳಾರತಿ ಬತ್ತಿಗಳು, ತುಪ್ಪದ ದೀಪಗಳು, ಆರತಿಗಾಗಿ ಕರ್ಪೂರ.

೮. ಸುಗಂಧಭರಿತ ಹೂವಿನ ಮಾಲೆಗಳು, ಹೂವುಗಳು, ಗರಿಕೆ.

೯. ಅರಿಸಿನ ಕದಲಿಸಿದ ಸುಣ್ಣದ ನೀರು.

೧೦. ಪೂರ್ಣಫಲ.

೧೧. ಬಂಗಾರದ ಆಭರಣಗಳು ಮತ್ತು ಮುಂದೆ ತಿಳಿಸುವ ಗೌರಿ ಬಾಗಿಣಗಳು.

## ಮೊರದ ಬಾಗಿಣದ ಸಿದ್ಧತೆ

ಎರಡು ಮೊರಗಳನ್ನು ತೆಗೆದುಕೊಳ್ಳಬೇಕು. ಅರಿಸಿನ ಕುಂಕುಮವನ್ನು ಹಚ್ಚಿರಬೇಕು. ಒಂದು ರವಿಕೆಯನ್ನು ಅಗ್ರ ಮಾಡಿ ಇಡಬೇಕು. ಅದರಲ್ಲಿಡಬೇಕಾದ ಪದಾರ್ಥಗಳನ್ನು ಊಟಕ್ಕೆ ಕುಳಿತುಕೊಳ್ಳುವ ಬಾಳೆ ಎಲೆಗೆ ಹೇಗೆ ಬಡಿಸುತ್ತೇವೋ ಹಾಗೆಯೇ ಮೊರದಲ್ಲಿ ಜೋಡಿಸಬೇಕು. ಬೆಲ್ಲವನ್ನು ಪಾಯಸ ಹಾಕುವ ಸ್ಥಳದಲ್ಲಿ, ಕಡ್ಲೆಬೇಳೆ, ಹೆಸರುಬೇಳೆಯನ್ನು ಕೋಸಂಬರಿ ಹಾಕುವ ಜಾಗದಲ್ಲಿ ಇಡಬೇಕು. ಉಳಿದ ಪದಾರ್ಥಗಳನ್ನೂ ಕೂಡ ಇದೇ ಕ್ರಮದಲ್ಲಿ ತಿಳಿದು ಜೋಡಿಸಬೇಕು. ಈ ಕ್ರಮ ಬಿಟ್ಟು ಬೇರೆ ರೀತಿ ಇಡಬಾರದು.

೧. ಅರಿಶಿನ.

೨. ಕುಂಕುಮ.

೩. ಸಿಂಧೂರ.

೪. ಕಾಡಿಗೆ.

೫. ಬಿಚ್ಚೋಲೆ.

೬. ಹದಿನಾರು ಬಳೆ.

೭. ಸೀರೆ.
೮. ತೆಂಗಿನಕಾಯಿ.
೯. ಐದು ಬಾಳೇಹಣ್ಣು.
೧೦. ಅಕ್ಕಿ.
೧೧. ತೊಗರೀಬೇಳೆ.
೧೨. ಹೆಸರುಬೇಳೆ.
೧೩. ಕಡ್ಲೆಬೇಳೆ.
೧೪. ಉದ್ದಿನಬೇಳೆ.
೧೫. ಹುಣಸೇಹಣ್ಣು.
೧೬. ಹತ್ತಿ.
೧೭. ಉಪ್ಪು.
೧೮. ತಾಂಬೂಲ.
೧೯. ತುಪ್ಪ.
೨೦. ಬೆಳ್ಳಿಬಟ್ಟಲು.
೨೧. ತ್ರಿಕೋನಾಕಾರದ ಎರಡು ರವಿಕೆಗಳು.
೨೨. ಮರದ ಕನ್ನಡಿ.
೨೩. ಮರದ ಬಾಚಣಿಕೆ ಮೊದಲಾದವುಗಳು.
೨೪. ಐದು ಬಗೆಯ ಹಣ್ಣುಗಳು.
೨೫. ಒಂದು ದೋರ.
೨೬. ಚಕ್ರಾಂಕಿತ ಮುದ್ರೆಗಳು.

**ಗಮನಿಸಿ** : ಪ್ಲಾಸ್ಟಿಕ್ ಸಾಮಾನುಗಳನ್ನು ಬಾಗಿಣದಲ್ಲಿ ಇಡುವುದು ಶ್ರೇಷ್ಠವಲ್ಲ. ಕನ್ನಡಿ, ಬಾಚಣಿಕೆ, ಬಿಚ್ಚೋಲೆ ಪ್ರತಿಯೊಂದು ಕೂಡ ಅಂಗಡಿಯಲ್ಲಿ ಮರದ್ದು ಸಿಗುತ್ತದೆ. ಪ್ರಯತ್ನ ಪಟ್ಟು ತಂದು ನೀಡಿದರೆ ಹೆಚ್ಚು ಫಲವು ಬರುತ್ತದೆ. ತಾಮ್ರ, ಮರ, ಮಣ್ಣಿನ ಬಟ್ಟಲುಗಳಲ್ಲಿ ಧಾನ್ಯಗಳನ್ನು ತುಂಬಿಸಿ ಇಡಬೇಕು. ಸಾಧ್ಯವಾಗದಿದ್ದರೆ ಕಾಗದ ಕವರುಗಳಲ್ಲಿ ಇಡಬೇಕು. ಪ್ಲಾಸ್ಟಿಕ್ ಕವರುಗಳಲ್ಲಿ ಬೇಡ. ಪ್ಲಾಸ್ಟಿಕ್ ಸಾಮಗ್ರಿಗಳ ದಾನ ವಿಹಿತವಲ್ಲ.

**ಅಮ್ಮನಿಗೆ ನೀಡುವ ಬಾಗಿಣದಲ್ಲಿ ಉಪ್ಪನ್ನು ಇಡುವ ಪದ್ಧತಿ ಇರುವುದಿಲ್ಲ.**

* * * *

## ಬಾಗಿಣದ ಮಂತ್ರ

ಶ್ರಿಯಂ ಕುರು ಮಹಾಗೌರಿ ಅಶ್ರಿಯಂ ತ್ವಾಶು ನಾಶಯ ।
ಪ್ರಯಚ್ಛ ಸರ್ವಕಾಮಾನ್ ಮೇ ವಿಷ್ಣುವಕ್ಷಸ್ಥಲಸ್ಥಿತೇ ॥
ಪುತ್ರಾನ್ ದೇಹಿ ಯಶೋ ದೇಹಿ ಸೌಖ್ಯಂ ಸೌಭಾಗ್ಯಮೇವ ಚ ।
ಮಂತ್ರೈರೇತೈಃ ಮಹಾಲಕ್ಷ್ಮೀಂ ಪ್ರಾರ್ಥ್ಯ ಶ್ರೋತ್ರಿಯಯೋಷಿತಾಮ್ ॥

## ಮೊರದ ಬಾಗಿಣ

| | ಪದಾರ್ಥ | ಸನ್ನಿಹಿತರೂಪ | ಫಲಪ್ರಾಪ್ತಿ |
|---|---|---|---|
| ೧. | ಅರಿಶಿನ | ಸ್ವರ್ಣಗೌರಿ | ಸೌಭಾಗ್ಯಪ್ರಾಪ್ತಿ |
| ೨. | ಕುಂಕುಮ | ಪದ್ಮ | ಪಾತಿವ್ರತ್ಯದ ಸಿದ್ಧಿ |
| ೩. | ಸಿಂಧೂರ | ಶಚೀ | ಕಲಹನಿವಾರಣೆ (ಸಾಮರಸ್ಯ) |
| ೪. | ಕನ್ನಡಿ | ಮೇಧಾ | ದೋಷನಿವಾರಣೆ |
| ೫. | ಬಾಚಣಿಗೆ | ಸಾವಿತ್ರೀ | ಸೌಂದರ್ಯಪ್ರಾಪ್ತಿ |
| ೬. | ಕಾಡಿಗೆ | ವಿಜಯಾ | ತೇಜೋಭಿವೃದ್ಧಿ |
| ೭. | ಅಕ್ಕಿ | ಜಯಾ | ಆರೋಗ್ಯಪ್ರಾಪ್ತಿ |
| ೮. | ತೊಗರಿಬೇಳೆ | ದೇವಸೇನಾ | ಕುಜದೋಷನಿವಾರಣೆ |
| ೯. | ಉದ್ದಿನಬೇಳೆ | ಸ್ವಾಹಾ | ಅಪಮೃತ್ಯುನಿವಾರಣೆ |
| ೧೦. | ತೆಂಗಿನಕಾಯಿ | ಸ್ವಧಾ | ಇಷ್ಟಾರ್ಥಪ್ರಾಪ್ತಿ |
| ೧೧. | ವಿಳ್ಯೆದೆಲೆ | ಲೋಕಮಾತಾ | ಧನಪ್ರಾಪ್ತಿ |
| ೧೨. | ಅಡಿಕೆ | ಶಾಂತಿ | ಬ್ರಹ್ಮಹತ್ಯಾ ಪರಿಹಾರ |
| ೧೩. | ಫಲ | ಪುಷ್ಟಿ | ಸ್ತ್ರೀಶಾಪಪರಿಹಾರ |
| ೧೪. | ಬೆಲ್ಲ | ಧೃತಿ | ದಾರಿದ್ರ್ಯನಿವಾರಣೆ |
| ೧೫. | ವಸ್ತ್ರ | ತುಷ್ಟೀ | ಕುಲದೇವಾನುಗ್ರಹ |
| ೧೬. | ಹೆಸರುಬೇಳೆ | ಪಾರ್ವತಿ | ವಾಕ್ಸಿದ್ಧಿ |

* * * *

ಮೊರದ ಬಾಗಿಣವನ್ನು ಆರು, ಐದು ಅಥವಾ ಎರಡನ್ನು ದಾನಕ್ಕಾಗಿ ಸಿದ್ಧಮಾಡಿಕೊಳ್ಳಬೇಕು. ಎಳ್ಳುಂಡೆ, ತಂಬಿಟ್ಟು, ಪುರಿಉಂಡೆ ಅಕ್ಕಿ ಮೊದಲಾದವನ್ನು ಉಡಿತುಂಬಲು ಸಿದ್ಧಪಡಿಸಿಕೊಂಡು ಅವುಗಳನ್ನೂ ಕೂಡ ನೀಡಬೇಕು.

## ಗೌರಿಬಾಗಿಣದ ಮಹತ್ವ

ಹಿಮಾಲಯವು ಗೌರಿಯ ತವರುಮನೆ. ತವರುಮನೆಗೆ ಬಂದ ಗೌರಿಯು ನಮ್ಮ ಮನೆಗೂ ಬಂದಿದ್ದಾಳೆಂದು ಭಾವಿಸಿ ಗೌರಿಬಾಗಿನ ಕೊಡಬೇಕು. ಮುತ್ತೈದೆಯರು ನಮ್ಮ ಮನೆಗೆ ಬಂದಾಗ ಕೈ ಕಾಲು ತೊಳೆದು ಆಸನ ನೀಡಿ ಉಡಿ ತುಂಬಿ ಮೊರದ ಬಾಗಿನ ನೀಡಿ ಸತ್ಕರಿಸುವಂತೆ ಗೌರಿಯನ್ನು ಸತ್ಕರಿಸಬೇಕು. ಗೌರಿಗೆ ಅರ್ಘ್ಯ ಪಾದ್ಯಗಳನ್ನು ಸಮರ್ಪಿಸಿ ಅಕ್ಕಿಯಿಂದ ಉಡಿ ತುಂಬಿ ಬಾಗಿನವನ್ನು ನೀಡಬೇಕು. ಇದೇ ಗೌರಿಬಾಗಿನ ಎಂದು ಕರೆಯಿಸಿಕೊಳ್ಳುತ್ತದೆ. ಈ ಬಾಗಿನವನ್ನು ಅನಂತರ ಬೇರೆ ಮುತ್ತೈದೆಯರಿಗೆ ದಾನ ಮಾಡಬೇಕು.

## ಪೂಜಿಸುವ ಮೊದಲು

* ಭಾದ್ರಪದ ಶುಕ್ಲಪಕ್ಷ ತೃತೀಯಾ ತಿಥಿಯಂದು ಸ್ವರ್ಣಗೌರೀವ್ರತವನ್ನು ವಿಜೃಂಭಣೆಯಿಂದ ಆಚರಿಸಲಾಗುತ್ತದೆ. ಎಲ್ಲಾ ಮುತ್ತೈದೆಯರಿಗೆ ಸೌಭಾಗ್ಯವನ್ನು ನೀಡುವ ಹಬ್ಬವಿದು. ಪುತ್ರಪೌತ್ರಾದಿ ಸಂತಾನವನ್ನು ನೀಡುವ ಹಬ್ಬವೂ ಆಗಿದೆ. ಆದ್ದರಿಂದ ಸೌಭಾಗ್ಯಪ್ರಾಪ್ತಿಗಾಗಿ, ಪುತ್ರಪ್ರಾಪ್ತಿಗಾಗಿ ಈ ಹಬ್ಬವನ್ನು ಆಚರಿಸತಕ್ಕದ್ದು.
* ಕರ್ನಾಟಕ, ಆಂಧ್ರಪ್ರದೇಶ ಹಾಗೂ ತಮಿಳುನಾಡಿನಲ್ಲಿ ಈ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ಉತ್ತರಭಾರತದಲ್ಲಿ ಹರಿತಾಲಕೀವ್ರತವನ್ನಷ್ಟೇ ಆಚರಿಸುತ್ತಾರೆ.
* ಹರಿತಾಲಕೀವ್ರತವೂ ಕೂಡ ಸ್ವಣಗೌರೀವ್ರತದ ದಿವಸವೇ ಬರುತ್ತದೆ. ವ್ರತರಾಜದಲ್ಲಿ ಹೇಳಿದ ಹರಿತಾಲಕೀವ್ರತವೇ ಬೇರೆ. ಸ್ವರ್ಣಗೌರೀವ್ರತವೇ ಬೇರೆ. ಎರಡು ವ್ರತಗಳು ಭಾದ್ರಪದ ಶುಕ್ಲ ತೃತೀಯಾದಿವಸವೇ ಬರುತ್ತವೆ. ಕೆಲವರು ಹರಿತಾಲಕೀವ್ರತವನ್ನು ಆಚರಿಸುತ್ತಾರೆ. ಇನ್ನು ಕೆಲವರು ಸ್ವರ್ಣಗೌರೀವ್ರತವನ್ನು ಆಚರಿಸುತ್ತಾರೆ.
* ಕೆಲವರು ಅರಿಶಿನದ ಗೋಪುರವನ್ನು ಮಾಡಿ, ಕಲಶವನ್ನಿಟ್ಟು ಗೌರೀವ್ರತವನ್ನು ಆಚರಿಸುತ್ತಾರೆ. ಮಣ್ಣಿನ ಮೂರ್ತಿಯಲ್ಲಿ ಪೂಜಿಸುವುದಿಲ್ಲ.

* ಆದರೆ ಹೆಚ್ಚಿನ ಸಂಪ್ರದಾಯದಲ್ಲಿ ಮಣ್ಣಿನ ಪ್ರತಿಮೆಯಲ್ಲಿಯೇ ಗೌರೀಯನ್ನು ಆವಾಹನೆ ಮಾಡಿ, ಪೂಜಿಸುತ್ತಾರೆ.

* ಗಣೇಶ ಮೊದಲಾದ ಮೂರ್ತಿಗಳಿಗೆ ಸಂಪೂರ್ಣ ಆಕಾರವಿರುವಂತೆ. ಈ ಗೌರಿಗೆ ಇರುವುದಿಲ್ಲ. ಮುಖವನ್ನಷ್ಟೇ ಪೂಜಿಸುತ್ತಾರೆ.

* ರುದ್ರದೇವರನ್ನು ಲಿಂಗದಲ್ಲಿ ಮಾತ್ರ ಪೂಜಿಸುವಂತೆ ಗೌರೀದೇವಿಯನ್ನು ಮುಖದಲ್ಲಿ ಪೂಜಿಸುವ ಶಿಷ್ಟಾಚಾರ ಸಂಪ್ರದಾಯವಿದೆ. ಆದ್ದರಿಂದ ಗೌರಿಯ ಪೂರ್ಣ ಆಕೃತಿಯನ್ನು ರಚಿಸಿ, ಪೂಜಿಸಬೇಕಾಗಿಲ್ಲ. ಮುಖವನ್ನಷ್ಟೇ ಮಣ್ಣಿನಿಂದ ರಚಿಸಿ ಪೂಜಿಸಿದರೆ ಸಾಕು.

* ಮೂರ್ನಾಕು ದಿನಗಳ ಮೊದಲೇ ಕುಂಬಾರನ ಬಳಿ ತೆರಳಿ ಮಣ್ಣಿನಿಂದ ನಿರ್ಮಿಸಿದ ಗೌರೀಪ್ರತಿಮೆಯನ್ನು ತಂದು ಅದಕ್ಕೆ ಮುತ್ತೈದೆಯರು ಅರಿಶಿನ, ಸಿಂಧೂರ, ಕಾಡಿಗೆ ಮೊದಲಾದವುಗಳನ್ನು ಹಚ್ಚಿ ಅಲಂಕರಿಸಬೇಕು.

* ಈ ಪುಸ್ತಕದಲ್ಲಿ ನೀಡಿದ ಪೂಜಾವಿಧಾನವನ್ನು ಪುರೋಹಿತರ ಮಾರ್ಗದರ್ಶನದಲ್ಲಿ ಪತಿ-ಪತ್ನಿಯರು ಸೇರಿಯೇ ನಡೆಸಬೇಕು.

* ಪುರೋಹಿತರು ಇಲ್ಲದೇ ಇದ್ದಾಗ ಯಜಮಾನನೇ ಸ್ವತಃ ವೇದಮಂತ್ರಗಳನ್ನು ಹೇಳಬೇಕು. ಆವಾಹನೆ ಮೊದಲಾದವುಗಳನ್ನು ಮಾಡಬೇಕು. ಯಜಮಾನನ ಪತ್ನಿಯು ನೈವೇದ್ಯ ತಂದಿಡುವುದು, ಅರ್ಚನೆ ಮಾಡುವುದು, ಅರ್ಘ್ಯವನ್ನು ನೀಡುವುದು, ಗೆಜ್ಜೆವಸ್ತ್ರವನ್ನು ಸಮರ್ಪಣೆ ಮಾಡುವುದು, ಇತ್ಯಾದಿಗಳಲ್ಲಿ ಮಾತ್ರ ಭಾಗವಹಿಸಬೇಕು.

* ಒಂದು ವೇಳೆ ಮನೆಗೆ ಪುರೋಹಿತರು ಬರಲು ಅವಕಾಶವಿಲ್ಲದೇ ಯಜಮಾನನೂ ಕೂಡ ಇಲ್ಲದೇ ಇದ್ದಾಗ ದಾಸರಾಯರು ತಿಳಿಸಿಕೊಟ್ಟ ಗೌರಿಯ ಹಾಡುಗಳನ್ನು ಪಠಿಸುತ್ತಾ ಪೂಜಿಸಬೇಕು.

* ಶಿಷ್ಟಾಚಾರ ಸಂಪ್ರದಾಯದಲ್ಲಿ ಬಂದಂತೆ ಗೌರಿಯ ಹಾಡುಗಳನ್ನು ಹೇಳಿಕೊಂಡು ಸ್ತ್ರೀಯರು ಪೂಜಿಸಿದ ಮೇಲೆ ಈ ಪುಸ್ತಕದ ಕೊನೆಯಲ್ಲಿ ನೀಡಿದ ಕನ್ನಡದ ಕಥಾಭಾಗವನ್ನು ಓದಬೇಕು. ಮತ್ತು ಪ್ರಾರಂಭದ ಭಾಗದಲ್ಲಿ ನೀಡಿದ ಗೌರೀವ್ರತದ ವಿಚಾರಗಳನ್ನು ಅವಶ್ಯವಾಗಿ ಪ್ರತಿಯೊಬ್ಬರೂ ತಿಳಿದುಕೊಳ್ಳಬೇಕು.

# ಸ್ವರ್ಣಗೌರಿಯನ್ನು ಸ್ಥಾಪಿಸಲು ತಿಳಿಯಬೇಕಾದ ವಿಷಯ

೧. ದೇವರ ಪೀಠಕ್ಕಿಂತ ಕೆಳಭಾಗದಲ್ಲಿ ಒಂದು ಉತ್ತಮವಾದ ಪೀಠವನ್ನು ರಚನೆ ಮಾಡಬೇಕು. ಮರುದಿವಸ ಸ್ಥಾಪನೆ ಮಾಡುವ ಗಣೇಶನ ವಿಗ್ರಹವನ್ನು ಈ ಪೀಠದಲ್ಲಿಯೇ ಸ್ಥಾಪನೆ ಮಾಡಲು ಅವಕಾಶ ಮಾಡಿಕೊಳ್ಳಬೇಕು.

೨. ರೇಷ್ಮೆವಸ್ತ್ರವನ್ನು ಹೊದ್ದಿಸಿ, ಗಣಪತಿಗಿಂತ ಮೇಲೆ ಗೌರಿಯನ್ನು ಸ್ಥಾಪನೆ ಮಾಡಬೇಕು. ಯಾವುದೇ ಕಾರಣಕ್ಕೂ ಗಣಪತಿಯ ಕಾಲಿನ ಬಳಿ ಸ್ವರ್ಣಗೌರಿಯ ಪ್ರತಿಮೆಯನ್ನು ಇಡಬಾರದು. ಗೌರಿಯ ಕೆಳಗೆ ಗಣಪತಿಯ ಪ್ರತಿಮೆಯನ್ನು ಇಡಬೇಕು.

೩. ರೇಷ್ಮೆವಸ್ತ್ರದ ಮೇಲೆ ಬೆಳ್ಳಿಯ ತಟ್ಟೆಯನ್ನಿಟ್ಟು ಅಕ್ಕಿ, ಅಡಿಕೆಬೆಟ್ಟ, ಅರಿಶಿನದ ಕೊಂಬು ಇವುಗಳನ್ನು ಹಾಕಿ ಆ ತಟ್ಟೆಯಲ್ಲಿ ಗೌರಿಯ ಪ್ರತಿಮೆಯನ್ನು ಸ್ಥಾಪನೆ ಮಾಡಬೇಕು. ಕನ್ನಡಿ, ಕಲಶ, ತ್ರಿಕೋನಾಕಾರದಲ್ಲಿ ಮಡಚಿದ ಮೂರು ರವಿಕೆಗಳು, ಕಾಲುಂಗುರ, ಕಾಲ್ಗೆಜ್ಜೆ, ಡಾಬು, ಬಳೆಗಳು, ಮಾಂಗಲ್ಯ, ಕಿರೀಟ, ಚಿನ್ನದ ವಿವಿಧ ಹಾರಗಳು, ಮೂಗುಬೊಟ್ಟು, ಕಿವಿಓಲೆ ಇಷ್ಟನ್ನು ಅವಶ್ಯವಾಗಿ ಗೌರೀಪ್ರತಿಮೆಗೆ ಅಲಂಕರಿಸಬೇಕು. ಕಾಲುಂಗುರ, ಬಳೆ ಮೊದಲಾದವುಗಳನ್ನು ಪ್ರತಿಮೆಯ ಬಳಿ ಇಟ್ಟರೆ ಸಾಕು. ಹಾರಗಳಿಂದಷ್ಟೇ ಅಲಂಕರಿಸಿದರೆ ಸಾಕು.

೪. ಅಲಂಕರಿಸುವ ಚಿನ್ನದ ಹಾರಗಳು ತಾವು ಧರಿಸಿದ್ದಾಗಿದ್ದಲ್ಲಿ, ಅರಿಶಿನದ ನೀರಿನಿಂದ ತೊಳೆದು, ಅಗ್ನಿಸ್ಪರ್ಶ ಮಾಡಿ ಸಮರ್ಪಿಸಬೇಕು. ಮಂಟಪದ ಎಡ-ಬಲಭಾಗಗಳಲ್ಲಿ ಬಾಳೇಕಂಬಗಳನ್ನಿಡಬೇಕು. ಮಾವಿನಸೊಪ್ಪಿನ ತೋರಣವನ್ನು ಮಂಟಪಕ್ಕೆ ಕಟ್ಟಿರಬೇಕು. ಅಶ್ವತ್ಥ, ಹಲಸು, ಮೊದಲಾದ ಮರಗಳ ಚಿಗುರುಗಳಿಂದ ಅಲಂಕರಿಸಬೇಕು.

೫. ಪ್ಲಾಸ್ಟಿಕ್ ಸಾಮಗ್ರಿಗಳ ಅಲಂಕಾರ ವಸ್ತುಗಳನ್ನು ಮಂಟಪದಲ್ಲಿ ಇಡುವುದು ಶ್ರೇಷ್ಠವಲ್ಲ. ಹಾಗೂ ಕೊಂಡ ತುಳಸೀ ಪುಷ್ಪಗಳಿಂದ ಪೂಜೆಯನ್ನು ಮಾಡುವುದು ಶ್ರೇಷ್ಠವಲ್ಲ.

೬. ಹಿಂದಿನ ಕಾಲದ ಪದ್ಧತಿಯಂತೆ ಕನ್ನಡಿ, ಬಾಚಣಿಗೆ, ಕಾಡಿಗೆ ಇಡುವ ಡಬ್ಬ, ಬಿಚ್ಚೋಲೆ ಇವುಗಳೆಲ್ಲವೂ ಮರದಿಂದ ನಿರ್ಮಿತವಾಗಿರುವುದೇ ಶ್ರೇಷ್ಠವಾಗಿದೆ.

ಅಂಥದ್ದನ್ನು ಹುಡುಕಿ ತಂದಿಟ್ಟುಕೊಂಡಿರಬೇಕು. ಅಥವಾ ಬೆಳ್ಳಿ ಮೊದಲಾದ ಲೋಹಗಳು ಇನ್ನೂ ಶ್ರೇಷ್ಠ.

೭. ಸ್ವರ್ಣಗೌರೀವ್ರತದ ದಿವಸ ಹದಿನಾರು ಬಾಗಿಣಗಳನ್ನು ಕೊಡುವ ಸಂಪ್ರದಾಯವಿದೆ. ಸಾಧ್ಯವಾಗದಿದ್ದರೆ ಐದು ಬಾಗಿಣವನ್ನಾದರೂ ಕೊಡುತ್ತಾರೆ. ಹೊಸದಾಗಿ ವಿವಾಹವಾದ ಮುತ್ತೈದೆಯರು ಐದು ಬಾಗಿಣದಾನವನ್ನು ಐದು ವರ್ಷಗಳ ಕಾಲ ತಪ್ಪದೇ ಆಚರಿಸುತ್ತಾರೆ. ಅಮ್ಮನಿಗೋಸ್ಕರ ಪ್ರತ್ಯೇಕ ಬಾಗಿಣವನ್ನು ಸಮರ್ಪಿಸುತ್ತಾರೆ.

೮. ಹದಿನಾರು ಎಳೆಯ ದೋರವೊಂದನ್ನು ತೆಗೆದುಕೊಂಡು, ಹದಿನಾರು ಗಂಟುಗಳನ್ನು ಹಾಕಿ, ಸ್ವರ್ಣಗೌರಿಗೆ ಸಮರ್ಪಣೆ ಮಾಡಬೇಕು. ಹಾಗೂ ಬಾಗಿಣ ದಾನದ ಜೊತೆ ಈ ದೋರವನ್ನೂ ಕೂಡ ಅವಶ್ಯವಾಗಿ ದಾನ ಮಾಡಬೇಕು. ಆದ್ದರಿಂದ ಎಷ್ಟು ದೋರಗಳು ಅವಶ್ಯಕವೋ, ಅಷ್ಟನ್ನೂ ಕೂಡ ಗೌರಿಗೆ ಸಮರ್ಪಣೆ ಮಾಡಬೇಕು.

೯. ಪತಿಯು ಹದಿನಾರು ಗ್ರಂಥಿಗಳ ದೋರವನ್ನು ಪತ್ನಿಯಾದವಳಿಗೆ ಕಟ್ಟಬೇಕು. ಪತ್ನಿಯು ಮುತ್ತೈದೆಯರಿಗೆ ದೋರವನ್ನು ನೀಡಬೇಕು.

೧೦. ಸ್ವರ್ಣಗೌರಿ ಹಬ್ಬದಂದು ಬಾಗಿಣದಾನವೇ ತುಂಬಾ ವಿಶೇಷ. ಬಾಗಿಣದಾನವನ್ನು ಯಾರೂ ಮರೆಯಬಾರದು.

೧೧. ಗೌರೀತದಿಗೆಯಂದು ಒಬ್ಬಟ್ಟಿನ ಹೋಳಿಗೆಯನ್ನು ಮಾಡುವ ಸಂಪ್ರದಾಯವಿದೆ. ಅದರಂತೆ ತಂಬಿಟ್ಟಿನ ಆರತಿಯನ್ನೂ ಕೂಡ ಅವಶ್ಯವಾಗಿ ಆಚರಣೆ ಮಾಡಬೇಕು.

೧೨. ಸ್ವರ್ಣಗೌರಿಯ ಹಬ್ಬದಲ್ಲಿ ಮೊರದ ಬಾಗಿಣವನ್ನು ಕೊಡುವುದು, ತಂಬಿಟ್ಟಿನ ಆರತಿಯನ್ನು ಮಾಡುವುದು, ಹಾಗೂ ಹೂರಣದ ಹೋಳಿಗೆಯನ್ನು ಮಾಡುವುದು ಪ್ರಧಾನವಾಗಿರುತ್ತದೆ.

೧೩. ಗೌರಿಗೆ ನಿವೇದನೆ ಮಾಡುವ ಎಲ್ಲ ಪದಾರ್ಥಗಳನ್ನು ಮೊದಲು ಭಗವಂತನಿಗೆ, ಲಕ್ಷ್ಮೀದೇವಿಗೆ, ಮುಖ್ಯಪ್ರಾಣದೇವರಿಗೆ, ಸರಸ್ವತಿ-ಭಾರತೀದೇವಿಯರಿಗೆ ಸಮರ್ಪಣೆ ಮಾಡಿರಬೇಕು.

೧೪. ದೇವರ ಪೂಜೆಯ ಅನಂತರವೇ ಸ್ವರ್ಣಗೌರೀಪೂಜೆಯನ್ನು ಮಾಡತಕ್ಕದ್ದು.

೧೫. ಗಣೇಶನನ್ನು ವಿಸರ್ಜನೆ ಮಾಡುವ ದಿವಸ, ಗೌರಿಯ ಈ ಮಣ್ಣಿನ ಪ್ರತಿಮೆಯನ್ನೂ ಕೂಡ ವಿಸರ್ಜನೆ ಮಾಡಬೇಕು. ಮೊದಲು ಗಣಪತಿ ದೇವರನ್ನು ವಿಸರ್ಜನೆ ಮಾಡಿ, ಅನಂತರ ಗೌರಿ ಪ್ರತಿಮೆಯನ್ನು ವಿಸರ್ಜನೆ ಮಾಡಬೇಕು. ದೇವತೆಗಳು ಸ್ವೋತ್ತಮರಲ್ಲಿ ಲಯ ಹೊಂದುತ್ತಾರೆಂಬ ಅನುಸಂಧಾನ ಇದರ ಹಿಂದಿರಬೇಕು.

* * * *

## ಸ್ವರ್ಣಗೌರೀವ್ರತದ ಹಿನ್ನೆಲೆ

ದಕ್ಷಾಧ್ವರ ಪ್ರಸಂಗದಲ್ಲಿ ಸತೀದೇವಿಯು ದೇಹವನ್ನು ಪರಿತ್ಯಾಗ ಮಾಡಿದಳು. ಅನಂತರ ಹಿಮವಂತರಾಜ ಹಾಗೂ ಮೇನಾದೇವಿಯರಲ್ಲಿ ಮಗಳಾಗಿ ಹುಟ್ಟಿದಳು. ಪರ್ವತನ ಕುಮಾರಿಯಾದ್ದರಿಂದ ಪಾರ್ವತಿ ಎನಿಸಿದಳು. ದೇವಮಾನದ ಪ್ರಕಾರ ಒಂದು ಸಾವಿರ ವರ್ಷಗಳ ಕಾಲ ಘೋರವಾದ ತಪಸ್ಸನ್ನು ಆಚರಿಸಿ, ಮಹಾದೇವರನ್ನು ಪತಿಯನ್ನಾಗಿ ವರಿಸಿದಳು. ಪಾರ್ವತಿಯ ಸ್ವಯಂವರವನ್ನು ಪುರಾಣಗಳು ಅತ್ಯಂತ ಆಪ್ಯಾಯಮಾನವಾಗಿ ಬಣ್ಣಿಸಿವೆ. ಮಹಾದೇವರನ್ನು ವಿವಾಹವಾದ ಮೇಲೆ ಪಾರ್ವತಿಯು ಕೈಲಾಸಪರ್ವತಕ್ಕೆ ತೆರಳಿದಳು. ಕೆಲವು ವರ್ಷಗಳ ಕಾಲ ಕೈಲಾಸಪರ್ವತದಲ್ಲಿ ಇದ್ದ ಪಾರ್ವತಿಗೆ ತನ್ನ ತವರುಮನೆಗೆ ಒಮ್ಮೆ ಭೇಟಿ ನೀಡಬೇಕೆಂಬ ಅಪೇಕ್ಷೆಯು ಉಂಟಾಗುತ್ತದೆ. ಹಿಮಾಲಯವು ಅವಳ ತವರು ಭೂಮಿಯಾಗಿದೆ. ಅದುವೇ ನಮ್ಮ ಭಾರತದ ಪ್ರಧಾನಕ್ಷೇತ್ರವಾಗಿದೆ. ರುದ್ರದೇವರ ಅಪ್ಪಣೆಯನ್ನು ಪಡೆದುಕೊಂಡು, ಭಾರತಕ್ಷೇತ್ರದಲ್ಲಿರುವ ಹಿಮಾಲಯಕ್ಕೆ ಆಗಮಿಸುತ್ತಾಳೆ. ಅವಳು ತವರು ಮನೆಗೆ ಬಂದ ದಿವಸವೇ ಭಾದ್ರಪದ ಮಾಸದ ಶುಕ್ಲಪಕ್ಷದ ತೃತೀಯಾ ದಿವಸ. ರುದ್ರದೇವರ ಅಪ್ಪಣೆಯ ಪ್ರಕಾರ ಅಂದು ತವರು ಮನೆಗೆ ಬಂದ ಪಾರ್ವತಿಯು ಶಾಲಗ್ರಾಮವನ್ನು ಪೂಜಿಸುವ ಎಲ್ಲ ಹರಿಭಕ್ತರ, ಹಾಗೂ ಶಿವಭಕ್ತರ ಮನೆಗೆ ಭೇಟಿಯನ್ನು ನೀಡುತ್ತಾಳೆ. ಯಾರು ತನ್ನನ್ನು ಪತಿಯಾದ ರುದ್ರದೇವರ ಜೊತೆ ಪೂಜಿಸುತ್ತಾರೋ, ಅವರಿಗೆ ಸಂಪೂರ್ಣವಾಗಿ ಅನುಗ್ರಹವನ್ನು ಮಾಡಿ, ಮಾಂಗಲ್ಯಭಾಗ್ಯವನ್ನು ನೀಡಿ

ತೆರಳುತ್ತಾಳೆ. ತವರು ಮನೆಗೆ ತೆರಳಿದ ಪಾರ್ವತಿಯನ್ನು ಕಾಣುವುದಕ್ಕಾಗಿ ಮರುದಿವಸ ಮಹಾದೇವರು ತನ್ನ ಮಗನಾದ ಗಣೇಶನ ಜೊತೆ ಆಗಮಿಸುತ್ತಾರೆ. ಪಾರ್ವತಿಯು ಯಾವ ಮನೆಗೆ ಭೇಟಿಯನ್ನು ನೀಡಿರುತ್ತಾಳೋ, ಅವರೆಲ್ಲರ ಮನೆಗೆ ಮಹಾದೇವರು ಗಣಪತಿಯ ಜೊತೆ ಮರುದಿವಸ ಆಗಮಿಸುತ್ತಾರೆ. ಅದುವೇ ಗಣೇಶಚತುರ್ಥಿ ಎಂಬುದಾಗಿ ಪ್ರಸಿದ್ಧವಾಗಿದೆ.

ಹೀಗೊಂದು ಕಥೆಯು ಸ್ವರ್ಣಗೌರೀವ್ರತದ ಹಿನ್ನೆಲೆಯಲ್ಲಿ ಪ್ರಸಿದ್ಧವಾಗಿದೆ. ಪುರಾಣಗಳಲ್ಲಿ ಈ ಕಥೆಯು ಕಾಣದಿದ್ದರೂ ಕೂಡ ಹೆಚ್ಚು ಅರ್ಥಪೂರ್ಣವಾಗಿದೆ. ಮತ್ತು ಸಂಪ್ರದಾಯದ ಗೌರಿಹಾಡಿನಲ್ಲಿ ಈ ಕಥೆಯು ಹೃದಯಂಗಮವಾಗಿ ವರ್ಣಿತವಾಗಿದೆ. ಪಾರ್ವತಿಯು ಆಶೀರ್ವದಿಸಲು ನಮ್ಮ ಮನೆಗೆ ಆಗಮಿಸುತ್ತಾಳೆ ಎಂಬ ಭಾವನೆಯಲ್ಲಿ ಪೂಜಿಸುವುದು ಬಹಳ ಅರ್ಥಪೂರ್ಣವಾಗಿದೆ. ಹಿಮಾಲಯವು ಅವಳ ತವರುಮನೆಯಾದ್ದರಿಂದ ಅವಳ ಪ್ರೀತಿಪಾತ್ರರಾದ ಭಕ್ತರ ಮನೆಗೆ ಆಗಮಿಸುತ್ತಾಳೆ ಎಂಬ ಚಿಂತನೆಯೂ ಕೂಡ ಬಹಳ ಅರ್ಥಪೂರ್ಣವಾಗಿದೆ.

ಸ್ವರ್ಣಗೌರಿಯು ತವರು ಮನೆ ಎಂಬ ಭಾವನೆಯಿಂದ ನಮ್ಮ ಮನೆಗೆ ಅಭಿಮಾನ ಪೂರ್ವಕವಾಗಿ ಆಗಮಿಸುತ್ತಾಳೆ. ಆದರದಿಂದ ಅವಳನ್ನು ಬರಮಾಡಿಕೊಳ್ಳಬೇಕು. ಒಬ್ಬ ಅತಿಥಿಯು ನಮ್ಮ ಮನೆಗೆ ಬಂದಾಗ ಕಾಲ್ತೊಳೆದು ಆಸನ ಹಾಕಿ, ಅವರಿಗೆ ಇಷ್ಟವಾದ ಪದಾರ್ಥಗಳನ್ನು ನೀಡಿ ಹೇಗೆ ಸತ್ಕಾರ ಮಾಡುತ್ತೇವೋ, ಅದೇರೀತಿಯಾಗಿ ಪಾರ್ವತೀದೇವಿಗೆ ಎಲ್ಲ ಬಗೆಯ ಉಪಚಾರವನ್ನು ಮಾಡಿ ಪೂಜಿಸಬೇಕು.

ಗಮನಿಸಲೇಬೇಕಾದ ಪರಮ ಮುಖ್ಯವಿಚಾರ - ಕೇವಲ ಪಾರ್ವತಿಯನ್ನು ಪೂಜಿಸುವುದು ಅವಳಿಗೆ ಹೆಚ್ಚು ಇಷ್ಟವಾಗುವುದಿಲ್ಲ. ಮಹಾದೇವರ ತೊಡೆಯ ಮೇಲೆ ಪಾರ್ವತೀದೇವಿಯು ಕುಳಿತಿದ್ದಾಳೆ. ಇಂಥ ಪಾರ್ವತಿಗೆ ನಾನು ಪೂಜೆಯನ್ನು ಮಾಡುತ್ತಿದ್ದೇನೆ ಎಂಬ ಅನುಸಂಧಾನದಿಂದ ಪೂಜೆ ಮಾಡಬೇಕು. ಆಗ ಮಾತ್ರ ಪಾರ್ವತಿಗೆ ಹೆಚ್ಚು ಸಂತೋಷವಾಗುತ್ತದೆ. ಇನ್ನೂ ಹೆಚ್ಚಿನ ಫಲವನ್ನು ಪಡೆಯಬೇಕೆಂದರೆ

ಅರ್ಧನಾರೀಶ್ವರರೂಪಕ್ಕೆ ಪೂಜೆಯನ್ನು ಮಾಡಬೇಕು. ಪಾರ್ವತಿಯು ಮಹಾರುದ್ರದೇವರ ಅರ್ಧಾಂಗಿನೀ ಆಗಿರುವಳು. ಮಹಾದೇವರಿಗೆ ಪ್ರಾಣಸಮವಲ್ಲಭೆಯಾಗಿರುವಳು ಎಂಬುದಾಗಿ ಅನುಸಂಧಾನ ಮಾಡಿ ಪೂಜಿಸಬೇಕು. ಮಂಗಳಗೌರೀ ವ್ರತದಲ್ಲೂ ಕೂಡ ಹೀಗೆ ಅನುಸಂಧಾನ ಮಾಡತಕ್ಕದ್ದು.

ಉಮಾ ವೈ ವಾಕ್ ಸಮುದ್ದಿಷ್ಟಾ ಮನೋ ರುದ್ರ ಉದಾಹೃತಃ ।
ತದೇತನ್ಮಿಥುನಂ ಜ್ಞಾತ್ವಾ ನ ದಾಂಪತ್ಯಾದ್ ವಿಹೀಯತೇ ॥

ಮಾತು ಮನಗಳ ಮೇಲನ ಶಿವಶಿವೆಯರ ಮಿಲನ. ಹರಸಿ ಎಮ್ಮನನುದಿನ. ಇಹ ಪರ ಸುಖಕ್ಕೆ ಸುಲಭಸಾಧನ ಗೃಹಸ್ಥ ಜೀವನ. ಸತಿಯ ಪೂರ್ಣ ರಕ್ಷಣೆ ಪತಿಯ ಹೊಣೆ. ಪತಿಯ ಅನುಸರಣೆ ಸತಿಯ ಧರ್ಮ. ಇದುವೇ ದೇವರ ನಿಯಮ.

ಮನೆಯಲ್ಲಿ ಪತಿ-ಪತ್ನಿಯರು ಅನುಬಂಧದಲ್ಲಿ ನಿರಂತರ ಇರಬೇಕೆಂದರೆ. 'ಎಲ್ಲ ವಿಧವಾದ ಸಂಪತ್ತುಗಳು ದೊರಕಬೇಕೆಂದರೆ'. ಅರ್ಧನಾರೀಶ್ವರರೂಪದ ಚಿಂತನೆಯು ಅತ್ಯಂತ ಶ್ರೇಷ್ಠವಾಗಿದೆ. ಈ ಚಿಂತನೆಯ ಮೂಲಕ ಸ್ವರ್ಣಗೌರಿ ವ್ರತದ ಸಂಪೂರ್ಣಫಲವನ್ನು ಪ್ರತಿಯೊಬ್ಬರೂ ಪಡೆದುಕೊಳ್ಳಬೇಕು.

* * * * *

॥ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ ॥

# ಸ್ವರ್ಣಗೌರಿಪೂಜೆ

## ಆಚಮನ

(ಆಚಮನವನ್ನು ಎರಡು ಬಾರಿ ಮಾಡಿರಿ)

ಕೇಶವಾಯ ನಮಃ । ನಾರಾಯಣಾಯ ನಮಃ । ಮಾಧವಾಯ ನಮಃ। ಗೋವಿಂದಾಯ ನಮಃ। ವಿಷ್ಣವೇ ನಮಃ। ಮಧುಸೂದನಾಯ ನಮಃ। ತ್ರಿವಿಕ್ರಮಾಯ ನಮಃ। ವಾಮನಾಯ ನಮಃ। ಶ್ರೀಧರಾಯ ನಮಃ। ಹೃಷೀಕೇಶಾಯ ನಮಃ। ಪದ್ಮನಾಭಾಯ ನಮಃ। ದಾಮೋದರಾಯ ನಮಃ। ಸಂಕರ್ಷಣಾಯ ನಮಃ। ವಾಸುದೇವಾಯ ನಮಃ। ಪ್ರದ್ಯುಮ್ನಾಯ ನಮಃ। ಅನಿರುದ್ಧಾಯ ನಮಃ। ಪುರುಷೋತ್ತಮಾಯ ನಮಃ। ಅಧೋಕ್ಷಜಾಯ ನಮಃ। ನಾರಸಿಂಹಾಯ ನಮಃ। ಅಚ್ಯುತಾಯ ನಮಃ। ಜನಾರ್ದನಾಯ ನಮಃ। ಉಪೇಂದ್ರಾಯ ನಮಃ। ಹರಯೇ ನಮಃ। ಶ್ರೀ ಕೃಷ್ಣಾಯ ನಮಃ।

## ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ *ಶಾಲೀವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ ಪ್ರಭವಾದಿ ಷಷ್ಟಿಸಂವತ್ಸರಾಣಾಂ ಮಧ್ಯೇ .......... ನಾಮ ಸಂವತ್ಸರೇ– ದಕ್ಷಿಣಾಯನೇ ವರ್ಷ-ಋತೌ ಭಾದ್ರಪದೇಮಾಸೇ ಶುಕ್ಲಪಕ್ಷೇ ........ ಶುಭತಿಥೌ .....ವಾಸರಯುಕ್ತಾಯಾಂ–

---

*'ತ್ರಿಚತ್ವಾರಿಂಶದಧಿಕೇ ಏಕೋನವಿಂಶತಿತಮೇ' ಎಂದು ಶಾರ್ವರಿ ಸಂವತ್ಸರದಲ್ಲಿ ಹೇಳಬೇಕು. ಮುಂದಿನ ಸಂವತ್ಸರಗಳಲ್ಲಿ ಸಂಖ್ಯೆಯನ್ನು ವ್ಯತ್ಯಾಸ ಮಾಡಿಕೊಳ್ಳಬೇಕು.

....ಶುಭನಕ್ಷತ್ರ .... ಶುಭಯೋಗ– .... ಶುಭಕರಣ– ಏವಂಗುಣವಿಶೇಷಣ-ವಿಶಿಷ್ಟಾಯಾಮ್ ಅಸ್ಮಾಕಂ ಸಹ ಕುಟುಂಬಾನಾಂ ಕ್ಷೇಮಸ್ಥೈರ್ಯವಿಜಯವೀರ್ಯ-ಆಯುರಾರೋಗ್ಯಾಭಿವೃದ್ಧ್ಯರ್ಥಂ, ಧರ್ಮಾರ್ಥಕಾಮಮೋಕ್ಷಾಖ್ಯ-ಚತುರ್ವಿಧಪುರುಷಾರ್ಥ ಸಿದ್ಧ್ಯರ್ಥಂ, ಪುತ್ರ-ಪೌತ್ರಾದ್ಯಭಿವೃದ್ಧ್ಯರ್ಥಂ ಇಷ್ಟಾರ್ಥಸಿದ್ಧ್ಯರ್ಥಂ, ಸಮಸ್ತದುರಿತೋಪಕ್ಷಯಾರ್ಥಂ ಜ್ಞಾನಭಕ್ತಿವೈರಾಗ್ಯ-ಸಿದ್ಧ್ಯರ್ಥಂ ಚ ಸಕಲ ವಿಘ್ನಪರಿಹಾರದ್ವಾರಾ ಭಗವದನುಗ್ರಹಸಿದ್ಧ್ಯರ್ಥಂ, ವಿಶೇಷತಃ ಅಖಂಡಸೌಭಾಗ್ಯಪ್ರಾಪ್ತ್ಯರ್ಥಂ ಮಹಾರುದ್ರದೇವವಾಮಾಂಕಸ್ಥಿತ-ಸ್ವರ್ಣಗೌರ್ಯಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ-ಶ್ರೀಲಕ್ಷ್ಮೀನಾರಾಯಣಪ್ರೇರಣಯಾ ಶ್ರೀಲಕ್ಷ್ಮೀನಾರಾಯಣಪ್ರೀತ್ಯರ್ಥಂ ಸ್ವರ್ಣಗೌರಿಪೂಜಾಂ ಕರಿಷ್ಯೇ ।

ಹೂ ಮಂತ್ರಾಕ್ಷತೆಗಳನ್ನು ಕೈಯಲ್ಲಿ ಹಿಡಿದುಕೊಂಡು ನೀರು ಹಾಕಿಸಿ ಅರ್ಘ್ಯಪಾತ್ರೆಯಲ್ಲಿ ಬಿಡಬೇಕು.

## ದೀಪ ಹಚ್ಚಬೇಕು

ದೀಪಃ ಪಾಪಹರೋ ನೃಣಾಂ ದೀಪ ಆಪನ್ನಿವಾರಕಃ ।
ದೀಪೋ ವಿಧತ್ತೇ ಸುಕೃತಂ ದೀಪಃ ಸಂಪತ್ಪ್ರದಾಯಕಃ ॥
ದೀಪಜ್ಯೋತಿ ಪರಬ್ರಹ್ಮ ದೀಪಜ್ಯೋತಿಃ ಜನಾರ್ದನಃ ।
ದೀಪೋ ಹರತು ಮೇ ಪಾಪಂ ಸಂಧ್ಯಾದೀಪ ನಮೋಽಸ್ತು ತೇ ॥
ಶುಭಂ ಕುರುಷ್ವ ಕಲ್ಯಾಣಂ ಆರೋಗ್ಯಂ ಸುಖಸಂಪದಮ್ ।
ಮಮ ಬುದ್ಧಿ ಪ್ರಕಾಶಂ ಚ ದೀಪಜ್ಯೋತಿರ್ನಮೋಽಸ್ತು ತೇ ॥
ಭೋ ದೀಪ ಬ್ರಹ್ಮರೂಪಸ್ತ್ವಂ ಕರ್ಮಸಾಕ್ಷಿ ಇಹಾರ್ಹಸಿ ।
ಯಾವತ್ ಕರ್ಮಸಮಾಪ್ತಿಃ ಸ್ಯಾತ್ ತಾವತ್ ತ್ವಂ ಸುಸ್ಥಿರೋ ಭವ ॥

ಕೈಮುಗಿದು ದೀಪದಲ್ಲಿ ಗೌರಿಯು ಬಂದು ನೆಲೆಸುವಂತೆ ಪ್ರಾರ್ಥಿಸಿರಿ.

## ಭೂತೋಚ್ಚಾಟನೆ ಮಾಡಬೇಕು

ಅಪಸರ್ಪಂತು ತೇ ಭೂತಾಃ ಯೇ ಭೂತಾಃ ಭುವಿ ಸಂಸ್ಥಿತಾಃ ।
ಯೇ ಭೂತಾಃ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ॥
ಅಪಕ್ರಾಮಂತು ಯೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ ।
ತೇಷಾಮಪ್ಯವಿರೋಧೇನ ಪೂಜಾಕರ್ಮ ಸಮಾರಭೇ ॥

## ಗುರುಗಣಪತಿ ಪೂಜೆ ಮಾಡಬೇಕು

ಪ್ರತಿಯೊಂದು ಪೂಜೆಯ ಪ್ರಾರಂಭದಲ್ಲಿ ಗುರುಗಳಿಗೆ ಹಾಗೂ ಗಣಪತಿಗೆ ಪೂಜೆ ಮಾಡಬೇಕು. ಸ್ತ್ರೀಯರು ಸ್ವತಂತ್ರವಾಗಿ ಪೂಜೆ ಮಾಡುವುದಿದ್ದರೆ ಇಲ್ಲಿಂದ ೨೩ನೆಯ ಪುಟದ ತನಕ ಓದುವುದು ಬೇಡ. ಗಣಪತಿಯ ಹಾಡು ಹೇಳಿ ಗಣಪತಿ ಪೂಜೆ ಮಾಡಬೇಕು. ಗಂಗೆಯ ಹಾಡು ಹೇಳಿ ಕಲಶ ಪೂಜೆ ಮಾಡಬೇಕು.

ಶ್ರೀಗುರುಭ್ಯೋ ನಮಃ। ಆದಿಗುರುಭ್ಯೋ ನಮಃ। ಮೂಲಗುರುಭ್ಯೋ ನಮಃ। ಪರಮಗುರುಭ್ಯೋ ನಮಃ। ಶ್ರೀವೇದವ್ಯಾಸಾಯ ನಮಃ। ಆಶ್ವಲಾಯನಾ-ಚಾರ್ಯೇಭ್ಯೋ ನಮಃ।

ದೇವರ ಬಲಭಾಗದಲ್ಲಿ ಬರೆದ ಶ್ರೀಕಾರದಲ್ಲಿ ಗಂಧಾಕ್ಷತೆ ಪುಷ್ಪಗಳಿಂದ ಗುರುಗಳನ್ನು ಪೂಜಿಸಬೇಕು.

ಅಸ್ಮದ್ ಗುರುಸಮಾರಂಭಾಂ ಟೀಕಾಕೃತ್ಪಾದಮಧ್ಯಗಾಮ್ ।
ಶ್ರೀಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಮ್ ॥
ಆಪಾದಮೌಳಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥

ಶ್ರೀಗುರುಭ್ಯೋ ನಮಃ ಅನುಜ್ಞಾಂ ದೇಹಿ ।

ಶ್ರೀಕಾರದ ಪಕ್ಕದಲ್ಲಿ ಬರೆದ ಷಟ್ಕೋಣಮಂಡಲದಲ್ಲಿ ಬೆಳ್ಳಿಯ ಗಣಪತಿಯನ್ನಿಟ್ಟು ಪೂಜಿಸಬೇಕು. ಬೆಳ್ಳಿಗಣಪತಿ ಇಲ್ಲದಿದ್ದಲ್ಲಿ ಅಡಿಕೆಬೆಟ್ಟು, ಅರಿಶಿನಕೊಂಬುಗಳಲ್ಲಿ ಗಣಪತಿ ಆವಾಹನೆ ಮಾಡಿ ಪೂಜಿಸಬೇಕು.

ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ।
ಲಂಬೋದರಶ್ಚ ವಿಕಟೋ ವಿಘ್ನರಾಜೋ ಗಣಾಧಿಪಃ ॥೧॥

ಧೂಮಕೇತುರ್ಗಣಾಧ್ಯಕ್ಷೋ ಫಾಲಚಂದ್ರೋ ಗಜಾನನಃ।
ದ್ವಾದಶೈತಾನಿ ನಾಮಾನಿ ಯಃ ಪಠೇಚ್ಛೃಣುಯಾದಪಿ ॥೨॥

ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ।
ಸಂಗ್ರಾಮೇ ಸರ್ವಕಾರ್ಯೇಷು ವಿಘ್ನಸ್ತಸ್ಯ ನ ಜಾಯತೇ ॥೩॥

ಅಭೀಪ್ಸಿತಾರ್ಥಸಿದ್ಧ್ಯರ್ಥಂ ಪೂಜಿತೋ ಯಃ ಸುರೈರಪಿ।
ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥೪॥

**ಗಣಪತಿಗೆ ಮಂತ್ರಾಕ್ಷತೆ ಹಾಕಿ**

ಶ್ರೀಮಹಾಗಣಪತಯೇ ನಮಃ ॥ ಗಣಪತಿಮ್ ಆವಾಹಯಾಮಿ। ಮಹಾಗಣಪತಯೇ ನಮಃ। ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ। ಆವಾಹಯಾಮಿ ಆವಾಹನಂ ಸಮರ್ಪಯಾಮಿ। ಸ್ವಾಗತಂ ಸಮರ್ಪಯಾಮಿ। ಆಸನಂ ಸಮರ್ಪಯಾಮಿ। ಪುಷ್ಪಾಣಿ ಸಮರ್ಪಯಾಮಿ।

ಬೆಲ್ಲ ನೈವೇದ್ಯ ಮಾಡಿ - ಮಹಾಗಣಪತಯೇ ನಮಃ॥ ನೈವೇದ್ಯಾರ್ಥೇ ಗುಡೋಪಹಾರಮಹಾನ್ನೈವೇದ್ಯಂ ನಿವೇದಯಾಮಿ। ತಾಂಬೂಲಂ ಸಮರ್ಪಯಾಮಿ। ನೀರಾಜನಂ ಸಮರ್ಪಯಾಮಿ। ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ।

ವಕ್ರತುಂಡ ಮಹಾಕಾಯ ಬಾಲಸೂರ್ಯಸಮಪ್ರಭ।
ಅವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥

ಶ್ರೀಮಹಾಗಣಪತಯೇ ನಮಃ। ಪ್ರಾರ್ಥನಾಂ ಸಮರ್ಪಯಾಮಿ ॥ ಹೇ ದೇವ! ನಿರ್ವಿಘ್ನಂ ಕುರು ॥

ಎಂದು ಪ್ರಾರ್ಥಿಸಿ ಕೈಮುಗಿದು ನಾನು ಮುಂದೆ ಆಚರಿಸುವ ಪೂಜೆ ಸಾಂಗೋಪಾಂಗವಾಗಿ ನಡೆದು ಫಲಪ್ರದವಾಗಲಿಯೆಂದು ಪ್ರಾರ್ಥಿಸಿರಿ.

## ಕಲಶಪೂಜೆ

ಒಂದು ಕಲಶದಲ್ಲಿ ನೀರು ತುಂಬಿಸಿ ಕೆಳಗಿನ ಶ್ಲೋಕ ಹೇಳಿ ಈ ಕಲಶದ ನೀರನ್ನೇ ಮುಂದೆ ಪೂಜೆಗೆ ಉಪಯೋಗಿಸಬೇಕು.

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥೧॥

ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ ॥೨॥

ಅಂಗೈಶ್ಚ ಸಹಿತಾಃ ಸರ್ವೇ ಕಲಶಾಂಬುಸಮಾಶ್ರಿತಾಃ ।
ಶಾಂತಿಃ ಪುಷ್ಟಿಶ್ಚ ಗಾಯತ್ರೀ ಸಾವಿತ್ರೀ ಚ ಸರಸ್ವತೀ ॥೩॥

ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ ।
ಸರ್ವೇ ಸಮುದ್ರಾಃ ಸರಿತಸ್ತೀರ್ಥಾನಿ ಜಲದಾ ನದಾಃ ॥೪॥

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು ॥೫॥

ಆವಾಹಿತದೇವತಾಭ್ಯೋ ನಮಃ। ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ। ಆವಾಹಯಾಮಿ ಆವಾಹನಂ ಸಮರ್ಪಯಾಮಿ। ಸ್ವಾಗತಂ ಸಮರ್ಪಯಾಮಿ। ಆಸನಂ ಸಮರ್ಪಯಾಮಿ। (ಕಲಶದ ಒಳಗೆ ಹೂ ಮತ್ತು ಮಂತ್ರಾಕ್ಷತೆ ಹಾಕಿರಿ) ನಾನಾವಿಧಪರಿಮಳಪುಷ್ಪಾಣಿ ಸಮರ್ಪಯಾಮಿ। ಕಲಶದೇವತಾಭ್ಯೋ ನಮಃ ನೈವೇದ್ಯಾರ್ಥೇ ಗುಡೋಪಹಾರ (ಬಾಳೆಹಣ್ಣು ಇಟ್ಟುಕೊಂಡರೆ ಕದಳೀಫಲಂ ಎಂದು ಹೇಳಬೇಕು.) ಮಹಾನ್ನೈವೇದ್ಯಂ ಸಮರ್ಪಯಾಮಿ। ತಾಂಬೂಲಂ ಸಮರ್ಪಯಾಮಿ। ನೀರಾಜನಂ ಸಮರ್ಪಯಾಮಿ। ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ। ಕಲಶದೇವತಾಭ್ಯೋ ನಮಃ। ಸರ್ವೋಪಚಾರಪೂಜಾಂ ಸಮರ್ಪಯಾಮಿ। (ಈ ಕಲಶೋದಕವನ್ನು ಷೋಡಶೋಪಚಾರಪೂಜೆಗೆ ಬಳಸಬೇಕು).

## ಪೀಠಪೂಜೆ

ಸುವರ್ಣಮಂಟಪಾಯ ನಮಃ । ತನ್ಮಧ್ಯೇ ರತ್ನಸಿಂಹಾಸನಾಯ ನಮಃ । ಯೋಗಪೀಠಾಯ ನಮಃ । ತನ್ಮಧ್ಯೇ ಮಹಾರುದ್ರದೇವಾಯ ನಮಃ । ಮಹಾರುದ್ರದೇವಸ್ಯ ವಾಮಾಂಕೇ ಸ್ಥಿತಾಯೈ ಸ್ವರ್ಣಗೌರ್ಯೈ ನಮಃ । ಸರ್ವಾಭ್ಯಃ ಪೀಠದೇವತಾಭ್ಯೋ ನಮಃ । ಮಹಾರುದ್ರದೇವವಾಮಾಂಕಸ್ಥಿತ-ಸ್ವರ್ಣಗೌರ್ಯಂತರ್ಗತಪ್ರಾಣಸ್ಥಜಯಾಪತಿಸಂಕರ್ಷಣಾಯ ನಮಃ ।

## ದೋರಸ್ಥಾಪನೆ

(ಹದಿನಾರು ಗ್ರಂಥಿಗಳುಳ್ಳ ದೋರವನ್ನು ಕಲಶದ ಮುಂದೆ ಇಡಬೇಕು. ಮತ್ತು ಮುಂದೆ ಮಾಡುವ ಆವಾಹನೆ ಹಾಗೂ ಷೋಡಶೋಪಚಾರಗಳನ್ನು ದೋರಕ್ಕೂ ಮಾಡಬೇಕು.)

ದೇವ್ಯಾಸ್ತು ಪುರತಃ ಸಮ್ಯಕ್ ನವಸೂತ್ರಂ ಪ್ರಕಲ್ಪಯೇತ್ ।
ನವಗ್ರಂಥಿಸಮಾಯುಕ್ತಂ ಕುಂಕುಮೇನ ವಿರಾಜಿತಮ್ ॥
ದ್ವಾದಶಗ್ರಂಥಿಯುಕ್ತಂ ವಾ ಉಪಕಲ್ಪ್ಯ ಪ್ರಪೂಜಯೇತ್ ।

## ಕಲಶದಲ್ಲಿ ಹಾಗೂ ಮಣ್ಣಿನ ಪ್ರತಿಮೆಯಲ್ಲಿ ಹಾಗೂ ದೋರದಲ್ಲಿ ಸ್ವರ್ಣಗೌರಿಯ ಆವಾಹನೆ

ಅಸ್ಮಿನ್ ಕಲಶೇ ಮೃಣ್ಮಯಪ್ರತಿಮಾಯಾಂ ದೋರಾಯಾಂಚ ಸ್ವರ್ಣಗೌರಿಸಹಿತ ಮಹಾರುದ್ರದೇವಸ್ಯ, ತದಂತರ್ಯಾಮಿ ಭಾರತೀರಮಣಮುಖ್ಯಪ್ರಾಣಸ್ಯ, ತದಂತರ್ಯಾಮಿ ಮಹಾಲಕ್ಷ್ಮೀಸಹಿತ ನಾರಾಯಣಸ್ಯ ವಿಶೇಷಸಾನ್ನಿಧ್ಯತಾಸಿದ್ಧ್ಯರ್ಥಂ ಆವಾಹನಂ ಕರಿಷ್ಯೇ ।

ಯಾವ ಕಲಶದಲ್ಲಿ ಸ್ವರ್ಣಗೌರಿಯನ್ನು ಪೂಜಿಸಲಾಗುತ್ತದೋ ಮತ್ತು ಪ್ರತಿಮೆಯಲ್ಲಿ ಪೂಜಿಸಲಾಗುತ್ತದೋ, ಆ ಕಲಶದಲ್ಲಿ ಹಾಗೂ ಆ ಸ್ವರ್ಣಗೌರಿಯ ಮುಖದಲ್ಲಿ ಸ್ವರ್ಣಗೌರಿಯನ್ನು ಎಡತೊಡೆಯಲ್ಲಿ ಕುಳ್ಳಿರಿಸಿಕೊಂಡ ಮಹಾರುದ್ರದೇವರನ್ನು ಆವಾಹನೆ ಮಾಡಬೇಕು. ಒಂದು ಪುಷ್ಪವನ್ನು ಹಿಡಿದುಕೊಂಡು ಕಣ್ಮುಚ್ಚಿ ಹೀಗೆ ಧ್ಯಾನ ಮಾಡಬೇಕು- ಕೈಲಾಸಪರ್ವತದಲ್ಲಿ ಮಹಾರುದ್ರದೇವರ ವಾಮಾಂಕಸ್ಥಿತಳಾದ ಸ್ವರ್ಣಗೌರಿಯು ಈಗ ಮನೆಗೆ ಬಂದಿದ್ದಾಳೆ. ಮತ್ತು ಈ ಕಲಶದಲ್ಲಿ ಮತ್ತು ಪ್ರತಿಮೆಯಲ್ಲಿ

ಕುಳಿತುಕೊಳ್ಳುತ್ತಿದ್ದಾಳೆ. ಅನಂತರ ಸ್ವರ್ಣಗೌರಿಸಹಿತ ಮಹಾರುದ್ರದೇವರು ಕಣ್ಣುಗಳನ್ನು ತೆರೆದಿದ್ದಾರೆಂದು ಭಾವಿಸಬೇಕು. ಅಥವಾ ನನ್ನ ಹೃದಯದಲ್ಲಿ ಇರುವ ಬಿಂಬರೂಪಿಯಾದ ಪರಮಾತ್ಮನ ಸೇವೆಯಲ್ಲಿ ನಿರತರಾದ ಶಿವಪಾರ್ವತಿಯರು ಈ ಕಲಶದಲ್ಲಿ ಅಥವಾ ಈ ಪ್ರತಿಮೆಯಲ್ಲಿ ಬಂದು ನೆಲೆಸಿದ್ದಾರೆಂದು ಭಾವಿಸಬೇಕು. ದೋರದಲ್ಲಿಯೂ ಹೀಗೆಯೇ ಪ್ರಾರ್ಥಿಸಬೇಕು.

ಏಹ್ಯೇಹಿ ಮಹಾರುದ್ರಾದೇವವಾಮಾಂಕಸ್ಥಿತ ಸ್ವರ್ಣಗೌರಿ! ಪೀಠಸ್ಥಿತ ಏತದ್ಧಾತು-ಮಯಕಲಶಾಂತಃಸ್ಥಿತತೇಜಸ್ಸಾರಮಯಭೂತಪ್ರತಿಮಾಯಾಂ ಆವಾಹಯಾಮಿ 'ಶ್ರೀಸ್ವರ್ಣಗೌರ್ಯೈ ನಮಃ ಶ್ರೀ' ಎಂದು ಹನ್ನೆರಡು ಬಾರಿ ಕಲಶ ಮುಟ್ಟಿ ಜಪಿಸಿರಿ. ಮತ್ತು ಪ್ರತಿಮೆ ಮುಟ್ಟಿ ಜಪಿಸಿರಿ. ದೋರಾ ಮುಟ್ಟಿ ಜಪಿಸಿರಿ.

* * * *

# ಈಗ ಸ್ವರ್ಣಗೌರಿಗೆ ಷೋಡಶೋಪಚಾರ ಪೂಜೆ

## ಆವಾಹನೆ

**ಹೂ ಏರಿಸಬೇಕು. ಅನಂತರ ಕೆಳಗಿನ ಶ್ಲೋಕ ಹೇಳಿರಿ.**

**ಯಾವುದಾದರೂ ಗೌರಿಯ ಹಾಡು ಹೇಳಿ ಗೌರಿಯನ್ನು ಕರೆಯಿರಿ.**

ಸುಮಧ್ಯಮಾಂ ಸುವಸನಾಂ ಚಂದ್ರಬಿಂಬಾಧರಾನ್ವಿತಾಂ ।

ಆವಾಹಯಾಮಿ ದೇವೀಂ ತ್ವಾಂ ಸರ್ವದಾ ಶುಭಕಾರಿಣೀಂ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಆವಾಹಯಾಮಿ ಆವಾಹನಂ ಸಮರ್ಪಯಾಮಿ ॥

## ಆಸನ

**ಹೂ ಅಕ್ಷತೆಗಳನ್ನು ಪೀಠದಲ್ಲಿ ಹಾಕಬೇಕು**

ರೌಪ್ಯೇಣ ಚಾಸನಂ ರತ್ನಮಾಣಿಕ್ಯಶೋಭಿತಂ ।

ಮಯಾನೀತಂ ಗೃಹಾಣ ತ್ವಂ ಗೌರೀ ಕಾಮಾರಿವಲ್ಲಭೇ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಆಸನಂ ಸಮರ್ಪಯಾಮಿ ॥

## ಪಾದ್ಯ

### ಒಂದು ಉದ್ಧರಣೆ ನೀರನ್ನು ದೇವಿಯ ಪಾದಗಳಿಗೆ ತೋರಿಸಿ ಅರ್ಘ್ಯಪಾತ್ರೆಗೆ ಹಾಕಬೇಕು

ಮಹಾದೇವಿ ಜಗನ್ನಾಥೇ ಶ್ವೇತಾಂಬರವಿಭೂಷಿತೇ ।
ಪಾದ್ಯಂ ಗೃಹಾಣ ದೇವಿ ತ್ವಂ ಗಂಧಪುಷ್ಪಾಕ್ಷತೈರ್ಯುತಂ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಪಾದಯೋಃ ಪಾದ್ಯಂ ಸಮರ್ಪಯಾಮಿ ॥

## ಅರ್ಘ್ಯ

### ಒಂದು ಉದ್ಧರಣೆ ನೀರನ್ನು ದೇವಿಯ ಕೈಗಳಿಗೆ ತೋರಿಸಿ ಅರ್ಘ್ಯಪಾತ್ರೆಗೆ ಹಾಕಬೇಕು.

ಗಂಧಪುಷ್ಪಾಕ್ಷತೈರ್ಯುಕ್ತಂ ದಿವ್ಯಂ ಸಂಪಾದಿತಂ ಮಯಾ ।
ಅರ್ಘ್ಯಂ ಗೃಹಾಣ ದೇವಿ ತ್ವಂ ಮಯಾ ದತ್ತಂ ಸುರೇಶ್ವರೀ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ ಹಸ್ತಯೋಃ ಅರ್ಘ್ಯಂ ಸಮರ್ಪಯಾಮಿ ॥

## ಆಚಮನ

### ಒಂದು ಉದ್ಧರಣೆ ನೀರನ್ನು ದೇವಿಗೆ ತೋರಿಸಿ ಅರ್ಘ್ಯಪಾತ್ರೆಗೆ ಹಾಕಬೇಕು

ಕಾಮಾರಿವಲ್ಲಭೇ ದೇವಿ ಕುರ್ವಾಚಮನಮಂಬಿಕೇ ।
ನಿರಂತರಮಹಂ ವಂದೇ ಚರಣೌ ತವ ಪಾರ್ವತೀ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಆಚಮನಂ ಸಮರ್ಪಯಾಮಿ ॥

## ಮಧುಪರ್ಕ

### ಕುಡಿಯಲು ಮಧುಪರ್ಕ ನೀಡಬೇಕು

ದಧಿಮಧ್ವಾಜ್ಯಸಂಯುಕ್ತಂ ಶರ್ಕರಾಕ್ಷೀರಸಂಯುತಂ ।
ಮಧುಪರ್ಕಂ ಗೃಹಾಣೇದಂ ಸರ್ವಾಭೀಷ್ಟಪ್ರದಾಯಿನೀ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಮಧುಪರ್ಕಂ ಸಮರ್ಪಯಾಮಿ ॥

## ಪಂಚಾಮೃತಸ್ನಾನ

### ಹೂ ಅನ್ನು ಪಂಚಾಮೃತದಲ್ಲಿ ಅದ್ದಿ ದೇವಿಗೆ ಪ್ರೋಕ್ಷಿಸಬೇಕು

ಸುರಭೇಸ್ತು ಸಮುದ್ಭೂತಂ ದೇವಾನಾಮಪಿ ದುರ್ಲಭಮ್ ।
ಪಯೋ ದದಾಮಿ ದೇವೇಶಿ ಸ್ನಾನಾರ್ಥಂ ಪ್ರತಿಗೃಹ್ಯತಾಮ್ ॥
ಸ್ವರ್ಣಗೌರ್ಯೈ ನಮಃ । ಕ್ಷೀರೇಣ ಸ್ನಪಯಾಮಿ ॥
ಸ್ವರ್ಣಗೌರ್ಯೈ ನಮಃ । ದಧಿ ಸ್ನಾನಂ ಸಮರ್ಪಯಾಮಿ ॥
ಸ್ವರ್ಣಗೌರ್ಯೈ ನಮಃ । ಘೃತಸ್ನಾನಂ ಸಮರ್ಪಯಾಮಿ ॥
ಸ್ವರ್ಣಗೌರ್ಯೈ ನಮಃ । ಮಧುಸ್ನಾನಂ ಸಮರ್ಪಯಾಮಿ ॥
ಸ್ವರ್ಣಗೌರ್ಯೈ ನಮಃ । ಶರ್ಕರಾಸ್ನಾನಂ ಸಮರ್ಪಯಾಮಿ ॥
ಸ್ವರ್ಣಗೌರ್ಯೈ ನಮಃ । ಫಲೋದಕೇನ ಸ್ನಪಯಾಮಿ ॥

ಫಲತೋಯೈಃ ಗಂಧತೋಯೈಃ ನಾರಿಕೇಲಕುಶೋದಕೈಃ ।
ಸ್ನಾನಂ ಪುಣ್ಯಜಲೈರ್ಯುಕ್ತಂ ಗೃಹಾಣ ಸುರನಾಯಕೀ ॥

ಹೂವಿನಿಂದ, ನೀರು, ಗಂಧದ ನೀರು, ಎಳನೀರು, ದರ್ಭೆಯ ನೀರು ಇವುಗಳನ್ನು ಪ್ರೋಕ್ಷಿಸಬೇಕು.

## ಶುದ್ಧೋದಕಸ್ನಾನ

### ತೀರ್ಥದಿಂದ ಪ್ರೋಕ್ಷಣೆ ಮಾಡಬೇಕು

ಗಂಗಾ ಗೋದಾವರೀ ಕೃಷ್ಣಾ ಗೌತಮೀ ನರ್ಮದಾ ಜಲೈಃ ।
ಸ್ನಾನಾರ್ಥಂ ಆಹೃತಂ ಮಾತಃ ಸ್ವೀಕುರುಷ್ವ ಹರಿಪ್ರಿಯೇ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಶುದ್ಧೋದಕಸ್ನಾನಂ ಸಮರ್ಪಯಾಮಿ ॥

ಸ್ನಾನಾಂಗಮಾಚಮನಂ ಸಮರ್ಪಯಾಮಿ ॥ (ಒಂದು ಉದ್ಧರಣೆ ನೀರು ಬಿಡಬೇಕು)

## ವಸ್ತ್ರ

### ಗೆಜ್ಜೆ ವಸ್ತ್ರವನ್ನು ದೇವಿಗೆ ಸಮರ್ಪಿಸಬೇಕು

ವಸ್ತ್ರಂ ಚ ಸೋಮದೈವತ್ಯಂ ಲಜ್ಜಾಯಾಸ್ತು ನಿವಾರಣಮ್ ।
ಪ್ರಯಚ್ಛಾಮಿ ತವ ಪ್ರೀತ್ಯೈ ಮಮೇಷ್ಟಾರ್ಥಪ್ರದಾ ಭವ ॥
ಪೀತವಸ್ತ್ರದ್ವಯಂ ದೇವಿ ತುಭ್ಯಂ ದಾಸ್ಯಾಮಿ ಪಾರ್ವತೀ ।
ಚಂದ್ರಮೌಳಿಪ್ರಿಯೇ ದೇವಿ ಸದಾ ಮೇ ವರದಾ ಭವ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ವಸ್ತ್ರಯುಗ್ಮಂ ಸಮರ್ಪಯಾಮಿ ॥

## ಮಾಂಗಲ್ಯಸಮರ್ಪಣೆ

ಮಾಂಗಲ್ಯಂ ಮಣಿಸಂಯುಕ್ತಂ ಮುಕ್ತಾಫಲಸಮನ್ವಿತಮ್ ।
ಉತ್ತಮಂ ಗುಣಸೂತ್ರಂ ಗೃಹಾಣ ಶುಭಲಕ್ಷಣೇ ॥

## ಆಭರಣ

### ವಿವಿಧ ಆಭರಣ ಸಮರ್ಪಿಸಬೇಕು

ವಜ್ರಮಾಣಿಕ್ಯವೈಢೂರ್ಯ ಮುಕ್ತಾವಿದ್ರುಮಮಂಡಿತಮ್ ।
ಪುಷ್ಪರಾಗಸಮಾಯುಕ್ತಂ ಭೂಷಣಂ ಪ್ರತಿಗೃಹ್ಯತಾಮ್ ।
ಕಿರೀಟಹಾರಕೇಯೂರ ಕಂಕಣಾದಿ ವಿಭೂಷಣೈಃ ।
ಅಲಂಕರೋಮಿ ತ್ವಾಂ ಭಕ್ತ್ಯಾ ಸರ್ವಾಲಂಕಾರಕಾರಿಣೀ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಆಭರಣಾನಿ ಸಮರ್ಪಯಾಮಿ ॥

## ಗಂಧ

### ಹೂ ಅನ್ನು ಗಂಧದಲ್ಲಿ ಅದ್ದಿ ದೇವಿಗೆ ಹಚ್ಚಬೇಕು

ಕುಂಕುಮಾಗರುಕರ್ಪೂರಂ ಕಸ್ತೂರೀ ಚಂದನಾದಿಕಂ ।
ವಿಲೇಪನಂ ಮಹಾದೇವಿ ಗಂಧಂ ಸ್ವೀಕರು ಶಾಂಕರೀ ।
ಗಂಧಂ ಗೃಹಾಣ ದೇವೇಶಿ ಉತ್ತಮಂ ದಿವ್ಯಚಂದನಂ ।
ವಿಲೇಪನಂ ಸುರಾಧೀಶೇ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ದಿವ್ಯಪರಿಮಳಗಂಧಾನ್ ಸಮರ್ಪಯಾಮಿ॥

## ಅಕ್ಷತೆ

### ಮಂತ್ರಾಕ್ಷತೆಯನ್ನು ದೇವಿಗೆ ಸಮರ್ಪಿಸಬೇಕು

ರಂಜಿತಾಃ ಕುಂಕುಮೌಘೇನ ಹರಿದ್ರಾಕ್ತಾಸ್ತಥಾಕ್ಷತಾಃ ।
ತವಾಲಂಕರಣಾರ್ಥಾಯ ಪ್ರದತ್ತಾಃ ಸರ್ವಮಂಗಳೇ ॥
ಶಾಲೀಯಾನ್ ಚಂದ್ರಸಂಕಾಶಾನ್ ಹರಿದ್ರಾಮಿಶ್ರಿತಾನ್ ಶುಭಾನ್ ।
ಅಕ್ಷತಾಂಶ್ಚಾರ್ಪಯೇ ತುಭ್ಯಂ ಗೃಹಾಣ ಪರಮೇಶ್ವರೀ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಅಕ್ಷತಾನ್ ಸಮರ್ಪಯಾಮಿ ॥

## ಹರಿದ್ರಾಚೂರ್ಣ

### ಅರಿಶಿನ ಏರಿಸಬೇಕು

ಸೌಭಾಗ್ಯಶುಭದೇ ದೇವಿ ಸರ್ವಮಂಗಲದಾಯಿನೀ ।
ಹರಿದ್ರಾಂ ತೇ ಪ್ರದಾಸ್ಯಾಮಿ ಗೃಹಾಣ ಪರಮೇಶ್ವರೀ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಹರಿದ್ರಾಚೂರ್ಣಂ ಸಮರ್ಪಯಾಮಿ ॥

## ಕುಂಕುಮಚೂರ್ಣ

### ಕುಂಕುಮ ಏರಿಸಬೇಕು

ಕುಂಕುಮಂ ಕಾಂತಿದಂ ದಿವ್ಯಂ ಸರ್ವಕಾರ್ಯಫಲಪ್ರದಮ್ ।
ಕುಂಕುಮೇನಾರ್ಚಿತೇ ದೇವೀ ಗೃಹಾಣ ವರದಾ ಭವ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಕುಂಕುಮಚೂರ್ಣಂ ಸಮರ್ಪಯಾಮಿ ॥

## ಸಿಂಧೂರಚೂರ್ಣ - ಮಂಗಳದ್ರವ್ಯ

### ಸಿಂಧೂರ, ಕಾಡಿಗೆ, ಗಂಧೂಡಿ ಇತ್ಯಾದಿಗಳನ್ನು ಅರ್ಪಿಸುವುದು

ಹರಿದ್ರಾಕುಂಕುಮಂ ಚೈವ ಸಿಂಧೂರಂ ಕಜ್ಜಲಾದಿಕಂ ।
ನೀಲಲೋಹಿತತಾಟಂಕೇ ಮಂಗಲದ್ರವ್ಯಮೀಶ್ವರೀ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಸಿಂಧೂರಚೂರ್ಣಂ, ಮಂಗಳದ್ರವ್ಯಾಣಿ ಚ ಸಮರ್ಪಯಾಮಿ ॥

## ಪುಷ್ಪಮಾಲಿಕೆ

### ಪುಷ್ಪಮಾಲೆ ಅರ್ಪಿಸಬೇಕು

ಚಂಪಕಾಕುದಮಂದಾರಮಾಲತೀಬೃಹತೀಸುಮೈಃ ।
ಪುಷ್ಪೈರ್ಬಿಲ್ವದಳೋಪೇತೈಃ ಪೂಜಯಾಮಿ ಶಿವಪ್ರಿಯಾಮ್ ॥
ಜಾಜೀಪುನ್ನಾಗಮಂದಾರಕೇತಕೀಚಂಪಕಾನಿ ಚ।
ಪುಷ್ಪಾಣಿ ತವ ಪೂಜಾರ್ಥಮರ್ಪಯಾಮಿ ಸದಾಶಿವೇ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಪುಷ್ಪಮಾಲಿಕಾಂ ಸಮರ್ಪಯಾಮಿ ॥

## ಅಂಗಪೂಜೆ

### ದೇವಿಯ ಆಯಾ ಅಂಗಗಳನ್ನು ಹೂವಿನಿಂದ ಪೂಜಿಸಬೇಕು.

ಶ್ರೀ ಸ್ವರ್ಣಗೌರ್ಯೈ ನಮಃ - ಪಾದೌ ಪೂಜಯಾಮಿ ॥
ಶ್ರೀ ಕಾತ್ಯಾಯಿನ್ಯೈ ನಮಃ - ಜಾನುನೀ ಪೂಜಯಾಮಿ ॥
ಶ್ರೀ ಹೈಮವತ್ಯೈ ನಮಃ - ಊರೂ ಪೂಜಯಾಮಿ ॥
ಶ್ರೀ ಈಶ್ವರ್ಯೈ ನಮಃ - ಕಟಿಂ ಪೂಜಯಾಮಿ ॥
ಶ್ರೀ ಶಿವಪ್ರಿಯಾಯೈ ನಮಃ - ನಾಭಿಂ ಪೂಜಯಾಮಿ ॥
ಶ್ರೀ ಭವಾಯೈ ನಮಃ - ಗುಹ್ಯಂ ಪೂಜಯಾಮಿ ॥
ಶ್ರೀ ಅಪರ್ಣಾಯೈ ನಮಃ - ಉದರಂ ಪೂಜಯಾಮಿ ॥
ಶ್ರೀ ಪಾರ್ವತ್ಯೈ ನಮಃ - ಸ್ತನೌ ಪೂಜಯಾಮಿ ॥
ಶ್ರೀ ದುರ್ಗಾಯೈ ನಮಃ - ಹೃದಯಂ ಪೂಜಯಾಮಿ ॥
ಶ್ರೀ ಅಂಬಿಕಾಯೈ ನಮಃ - ಹಸ್ತಾನ್ ಪೂಜಯಾಮಿ ॥
ಶ್ರೀ ಕಂಬುಕಂಠ್ಯೈ ನಮಃ - ಕಂಠಂ ಪೂಜಯಾಮಿ ॥
ಶ್ರೀ ಅನ್ನಪೂರ್ಣಾಯೈ ನಮಃ - ಜಿಹ್ವಾಂ ಪೂಜಯಾಮಿ ॥
ಶ್ರೀ ಶಾಂಕರ್ಯೈ ನಮಃ - ಮುಖಂ ಪೂಜಯಾಮಿ ॥

| | |
|---|---|
| ಶ್ರೀ ಮೃಡಾನ್ಯೈ ನಮಃ | - ನಾಸಿಕಾಂ ಪೂಜಯಾಮಿ ॥ |
| ಶ್ರೀ ರುದ್ರಾಣ್ಯೈ ನಮಃ | - ಕರ್ಣೌ ಪೂಜಯಾಮಿ ॥ |
| ಶ್ರೀ ಗಿರಿಜಾಯ್ಯೆ ನಮಃ | - ಲಲಾಟಂ ಪೂಜಯಾಮಿ ॥ |
| ಶ್ರೀ ಮೇನಕಾತ್ಮಜಾಯ್ಯೆ ನಮಃ | - ಶಿರಃ ಪೂಜಯಾಮಿ ॥ |

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಸರ್ವಾಂಗಾನಿ ಪೂಜಯಾಮಿ ॥

## ಪುಷ್ಪಪೂಜೆ

### ಹೂವನ್ನು ದೇವಿಗೆ ಅರ್ಪಿಸುವುದು.

| | |
|---|---|
| ಶ್ರೀ ಜಗನ್ಮಾತ್ರೇ ನಮಃ | - ಜಾಜೀಪುಷ್ಪಂ ಸಮರ್ಪಯಾಮಿ ॥ |
| ಶ್ರೀ ಮಾನ್ಯಾಯ್ಯೆ ನಮಃ | - ಮಲ್ಲಿಕಾಪುಷ್ಪಂ ಸಮರ್ಪಯಾಮಿ ॥ |
| ಶ್ರೀ ಗಿರಿಸುತಾಯ್ಯೆ ನಮಃ | - ಗಿರಿಕರ್ಣಿಕಾಪುಷ್ಪಂ ಸಮರ್ಪಯಾಮಿ ॥ |
| ಶ್ರೀ ಕಾತ್ಯಾಯಿನ್ಯೈ ನಮಃ | - ಕೇತಕೀಪುಷ್ಪಂ ಸಮರ್ಪಯಾಮಿ ॥ |
| ಶ್ರೀ ಚಾಮುಂಡಾಯ್ಯೆ ನಮಃ | - ಚಂಪಕಪುಷ್ಪಂ ಸಮರ್ಪಯಾಮಿ ॥ |
| ಶ್ರೀ ಗಂಧರ್ವಸೇವಿತಾಯ್ಯೆ ನಮಃ | - ಸೇವಂತಿಕಾಪುಷ್ಪಂ ಸಮರ್ಪಯಾಮಿ ॥ |
| ಶ್ರೀ ಪಾರ್ವತ್ಯೈ ನಮಃ | - ಪಾರಿಜಾತಪುಷ್ಪಂ ಸಮರ್ಪಯಾಮಿ ॥ |

ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥಜಯಾಪತಿಸಂಕರ್ಷಣಾಯ ನಮಃ ಪುಷ್ಪಪೂಜಾಂ ಸಮರ್ಪಯಾಮಿ ॥

## ಪತ್ರಪೂಜೆ

### ಪತ್ರೆಗಳಿಂದ ಪೂಜಿಸುವುದು.

| | |
|---|---|
| ಶ್ರೀ ಮಾಯಾಯ್ಯೆ ನಮಃ | - ಮಾಚೀಪತ್ರಂ ಸಮರ್ಪಯಾಮಿ ॥ |
| ಶ್ರೀ ಸರ್ವಜನರಕ್ಷಿಣ್ಯೈ ನಮಃ | - ಸೇವಂತಿಕಾಪತ್ರಂ ಸಮರ್ಪಯಾಮಿ ॥ |
| ಶ್ರೀ ಶಿವಪ್ರಿಯಾಯ್ಯೆ ನಮಃ | - ಬಿಲ್ವಪತ್ರಂ ಸಮರ್ಪಯಾಮಿ ॥ |
| ಶ್ರೀ ಹೈಮವತ್ಯೈ ನಮಃ | - ತುಲಸೀಪತ್ರಂ ಸಮರ್ಪಯಾಮಿ ॥ |

ಶ್ರೀ ಕಾತ್ಯಾಯಿನ್ಯೈ ನಮಃ - ಕಸ್ತೂರಿಕಾಪತ್ರಂ ಸಮರ್ಪಯಾಮಿ ॥
ಶ್ರೀ ಮಂಗಳಪ್ರದಾಯಕಾಯ್ಯೆ ನಮಃ - ಮರುವಕಪತ್ರಂ ಸಮರ್ಪಯಾಮಿ ॥

## ನಾಮಪೂಜೆ

### ಅರಿಶಿನ ಕುಂಕುಮದಿಂದ ಅರ್ಚಿಸಿರಿ

೧) ಶ್ರೀ ಸ್ವರ್ಣಗೌರ್ಯೈ ನಮಃ
೨) ಶ್ರೀ ಕಾತ್ಯಾಯಿನ್ಯೈ ನಮಃ
೩) ಶ್ರೀ ಉಮಾಯ್ಯೆ ನಮಃ
೪) ಶ್ರೀ ಭದ್ರಾಯ್ಯೆ ನಮಃ
೫) ಶ್ರೀ ಹೈಮವತ್ಯೈ ನಮಃ
೬) ಶ್ರೀ ಈಶ್ವರ್ಯೈ ನಮಃ
೭) ಶ್ರೀ ಭವಾನ್ಯೈ ನಮಃ
೮) ಶ್ರೀ ಸರ್ವಪಾಪಹರಾಯ್ಯೆ ನಮಃ
೯) ಶ್ರೀ ಮೃಡಾನ್ಯೈ ನಮಃ
೧೦) ಶ್ರೀ ಚಂಡಿಕಾಯ್ಯೆ ನಮಃ
೧೧) ಶ್ರೀ ಗಿರಿಜಾಯ್ಯೆ ನಮಃ
೧೨) ಶ್ರೀ ಮೇನಕಾತ್ಮಜಾಯ್ಯೆ ನಮಃ
೧೩) ಓಂ ಬ್ರಾಹ್ಮ್ಯೈ ನಮಃ
೧೪) ಶ್ರೀ ಮಾಹೇಶ್ವರ್ಯೈ ನಮಃ
೧೫) ಶ್ರೀ ಕೌಮಾರ್ಯ್ಯೈ ನಮಃ
೧೬) ಶ್ರೀ ವೈಷ್ಣವ್ಯೈ ನಮಃ
೧೭) ಶ್ರೀ ವಾರಾಹ್ಯೈ ನಮಃ
೧೮) ಶ್ರೀ ಇಂದ್ರಾಣ್ಯೈ ನಮಃ
೧೯) ಶ್ರೀ ಚಾಮುಂಡಾಯ್ಯೆ ನಮಃ
೨೦) ಶ್ರೀ ಚಂಡಿಕಾಯ್ಯೆ ನಮಃ
೨೧) ಶ್ರೀ ದಾಕ್ಷಾಯಣ್ಯೈ ನಮಃ
೨೨) ಶ್ರೀ ಪರ್ವತರಾಜಪುತ್ರ್ಯೈ ನಮಃ
೨೩) ಶ್ರೀ ಚಂದ್ರಶೇಖರಪತ್ನ್ಯೈ ನಮಃ
೨೪) ಶ್ರೀ ಸರ್ವೋಪದ್ರವನಾಶಿನ್ಯೈ ನಮಃ

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ನಾಮಪೂಜಾಂ ಸಮರ್ಪಯಾಮಿ ॥

## ನೂತನದೋರಗ್ರಂಥಿಪೂಜೆ

**ದಾರಕ್ಕೆ ಅರಿಶಿನ ಕುಂಕುಮ ಅರ್ಪಿಸಿ ಹೂವಿನಿಂದ ಪೂಜಿಸುವುದು.**

ಶ್ರೀ ಸ್ವರ್ಣಗೌರ್ಯೈ ನಮಃ - ಪ್ರಥಮಗ್ರಂಥಿಂ ಪೂಜಯಾಮಿ ॥
ಶ್ರೀ ಮಹಾಗೌರ್ಯ್ಯೈ ನಮಃ - ದ್ವಿತೀಯಗ್ರಂಥಿಂ ಪೂಜಯಾಮಿ ॥

ಶ್ರೀ ಕಾತ್ಯಾಯಿನ್ಯೈ ನಮಃ - ತೃತೀಯಗ್ರಂಥಿಂ ಪೂಜಯಾಮಿ ॥
ಶ್ರೀ ಕೌಮಾರ್ಯೈ ನಮಃ - ಚತುರ್ಥಗ್ರಂಥಿಂ ಪೂಜಯಾಮಿ ॥
ಶ್ರೀ ಭದ್ರಾಯೈ ನಮಃ - ಪಂಚಮಗ್ರಂಥಿಂ ಪೂಜಯಾಮಿ ॥
ಶ್ರೀ ವಿಷ್ಣುಸೋದರ್ಯೈ ನಮಃ - ಷಷ್ಠಗ್ರಂಥಿಂ ಪೂಜಯಾಮಿ ॥
ಶ್ರೀ ಮಂಗಳದೇವತಾಯೈ ನಮಃ - ಸಪ್ತಮಗ್ರಂಥಿಂ ಪೂಜಯಾಮಿ ॥
ಶ್ರೀ ರಾಕೇಂದುವದನಾಯೈ ನಮಃ - ಅಷ್ಟಮಗ್ರಂಥಿಂ ಪೂಜಯಾಮಿ ॥
ಶ್ರೀ ಚಂದ್ರಶೇಖರಪತ್ನ್ಯೈ ನಮಃ - ನವಮಗ್ರಂಥಿಂ ಪೂಜಯಾಮಿ ॥
ಶ್ರೀ ವಿಶ್ವೇಶ್ವರಪ್ರಿಯಾಯೈ ನಮಃ - ದಶಮಗ್ರಂಥಿಂ ಪೂಜಯಾಮಿ ॥
ಶ್ರೀ ದಾಕ್ಷಾಯಿಣ್ಯೈ ನಮಃ - ಏಕಾದಶಗ್ರಂಥಿಂ ಪೂಜಯಾಮಿ ॥
ಶ್ರೀ ಕೃಷ್ಣವೇಣ್ಯೈ ನಮಃ - ದ್ವಾದಶಗ್ರಂಥಿಂ ಪೂಜಯಾಮಿ ॥
ಶ್ರೀ ಭವಾನ್ಯೈ ನಮಃ - ತ್ರಯೋದಶಗ್ರಂಥಿಂ ಪೂಜಯಾಮಿ ॥
ಶ್ರೀ ಲೋಲಲೋಚನಾಯೈ ನಮಃ - ಚತುರ್ದಶಗ್ರಂಥಿಂ ಪೂಜಯಾಮಿ ॥
ಶ್ರೀ ಮೇನಕಾತ್ಮಜಾಯೈ ನಮಃ - ಪಂಚದಶಗ್ರಂಥಿಂ ಪೂಜಯಾಮಿ ॥
ಶ್ರೀ ಸ್ವರ್ಣಗೌರ್ಯೈ ನಮಃ - ಷೋಡಶಗ್ರಂಥಿಂ ಪೂಜಯಾಮಿ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ನೂತನದೋರಗ್ರಂಥಿಂ ಪೂಜಯಾಮಿ ॥

## ಅಷ್ಟೋತ್ತರಶತನಾಮಪೂಜೆ

### ನೂರೆಂಟು ನಾಮಾವಳಿಗಳನ್ನು ಹೇಳುತ್ತಾ ಅರ್ಥಾನುಸಂಧಾನ ಮಾಡಿಕೊಂಡು ಹೂವು ಅಥವಾ ಮಂತ್ರಾಕ್ಷತೆಯಿಂದ ಅರ್ಚಿಸಿರಿ

ಶ್ರೀ ಶಿವಾಯೈ ನಮಃ ।
ಶ್ರೀ ನಾಮಾತ್ಮಿಕಾಯೈ ನಮಃ ।
ಶ್ರೀ ಬುದ್ಧಿತತ್ತ್ವಾಭಿಮಾನಿನ್ಯೈ ನಮಃ ।
ಶ್ರೀ ಪಾರ್ವತ್ಯೈ ನಮಃ ।
ಶ್ರೀ ಮಹಾಮಾಯಾಯೈ ನಮಃ ।
ಶ್ರೀ ಕಾತ್ಯಾಯನ್ಯೈ ನಮಃ ।
ಶ್ರೀ ಅಂಬಿಕಾಯೈ ನಮಃ ।
ಶ್ರೀ ಸೌಭಾಗ್ಯದಾಯಿನ್ಯೈ ನಮಃ ।
ಶ್ರೀ ದಾಂಪತ್ಯಪ್ರದಾಯೈ ನಮಃ ।
ಶ್ರೀ ಭಕ್ತಾಭೀಷ್ಟದಾಯೈ ನಮಃ ॥೧೦॥

ಶ್ರೀ ಲಲಿತಾಯೈ ನಮಃ । ಶ್ರೀ ಆದ್ಯಂತರಹಿತಾಯೈ ನಮಃ ।
ಶ್ರೀ ಅಹಂಕಾರತತ್ತ್ವಾಭಿಮಾನಿನ್ಯೈನಮಃ। ಶ್ರೀ ಸಮಸ್ತಲೋಕಜನನ್ಯೈ ನಮಃ ।
ಶ್ರೀ ಮಂಗಲಸ್ವರೂಪಾಯೈ ನಮಃ । ಶ್ರೀ ಬಾಲಾಯೈ ನಮಃ ।
ಶ್ರೀ ಬಿಲ್ವಪೂಜಿತಾಯೈ ನಮಃ । ಶ್ರೀ ಗಾಯತ್ರ್ಯೈ ನಮಃ ।
ಶ್ರೀ ನಾರಾಯಣ್ಯೈ ನಮಃ । ಶ್ರೀ ದೀನರಕ್ಷಿಣ್ಯೈ ನಮಃ ॥೨೦॥
ಶ್ರೀ ಚಂದ್ರಶೇಖರಾರ್ಧಾಂಗಿನ್ಯೈ ನಮಃ। ಶ್ರೀ ತನುಮಧ್ಯಾಯೈ ನಮಃ ।
ಶ್ರೀ ಅಪರಾಜಿತಾಯೈ ನಮಃ । ಶ್ರೀ ತ್ರಿಲೋಚನಾಯೈ ನಮಃ ।
ಶ್ರೀ ಸರ್ವೇಶ್ವರ್ಯೈ ನಮಃ । ಶ್ರೀ ಪರಮಾನಂದದಾಯಿನ್ಯೈ ನಮಃ ।
ಶ್ರೀ ಆನಂದವಿಗ್ರಹಾಯೈ ನಮಃ । ಶ್ರೀ ಈಷಣತ್ರಯಮುಕ್ತಾಯೈ ನಮಃ ।
ಶ್ರೀ ಹಾನಿವೃದ್ಧಿವಿವರ್ಜಿತಾಯೈ ನಮಃ। ಶ್ರೀ ಚೂಡಾಮಣಿವಿಭೂಷಿತಾಯೈ ನಮಃ ॥೩೦॥

ಶ್ರೀ ಭವಾರಣ್ಯದಾವಾನಲಯೈ ನಮಃ। ಶ್ರೀ ಭವರೋಗಘ್ನ್ಯೈನಮಃ ।
ಶ್ರೀ ಭಕ್ತಸೇವ್ಯಾಯೈ ನಮಃ । ಶ್ರೀ ಭಕ್ತಿಗಮ್ಯಾಯೈ ನಮಃ ।
ಶ್ರೀ ಭಾಗ್ಯದಾತ್ರ್ಯೈ ನಮಃ । ಶ್ರೀ ಸುವೇಷಾಯೈ ನಮಃ ।
ಶ್ರೀ ತ್ರಿಪುರಸುಂದರ್ಯೈ ನಮಃ । ಶ್ರೀ ಮುಕ್ತಿದಾತ್ರ್ಯೈ ನಮಃ ।
ಶ್ರೀ ರಾಜರಾಜೇಶ್ವರ್ಯೈ ನಮಃ । ಶ್ರೀ ವಿದ್ಯಾಪ್ರದಾಯಿನ್ಯೈ ನಮಃ ॥೪೦॥
ಶ್ರೀ ಇಂದ್ರಸೇವಿತಾಯೈ ನಮಃ । ಶ್ರೀ ಭಾವರೂಪಾಯೈ ನಮಃ ।
ಶ್ರೀ ವಿಶ್ವಮೋಹಿನ್ಯೈ ನಮಃ । ಶ್ರೀ ಶಾಂಕರ್ಯೈ ನಮಃ ।
ಶ್ರೀ ಶತ್ರುಸಂಹರ್ತ್ರ್ಯೈ ನಮಃ । ಶ್ರೀ ಶ್ರೀಮನ್ಮುನೀಂದ್ರಸೇವಿತಾಯೈ ನಮಃ।
ಶ್ರೀ ವಿಶ್ವೇಶ್ವರಪ್ರಿಯಾಯೈ ನಮಃ । ಶ್ರೀ ರಾಕೇಂದುವದನಾಯೈ ನಮಃ ।
ಶ್ರೀ ಚಂದ್ರಶೇಖರಪತ್ನ್ಯೈ ನಮಃ । ಶ್ರೀ ಕೃಷ್ಣವೇಣ್ಯೈ ನಮಃ ॥೫೦॥
ಶ್ರೀ ಗೂಢಾರ್ಥಬೋಧಿನ್ಯೈ ನಮಃ । ಶ್ರೀ ಸರ್ವಲಭ್ಯಾಯೈ ನಮಃ ।
ಶ್ರೀ ಪಾಶಾಂಕುಶಾಭಯವರಹಸ್ತಾಯೈ ನಮಃ । ಶ್ರೀ ಗಣೇಶಮಾತ್ರೇ ನಮಃ ।
ಶ್ರೀ ಗಂಭೀರಲೋಚನಾಯೈ ನಮಃ । ಶ್ರೀ ಗರ್ಭಪ್ರದಾಯೈ ನಮಃ ।
ಶ್ರೀ ಗರ್ಭಶೋಕನುದೇ ನಮಃ । ಶ್ರೀ ಹರವಲ್ಲಭಾಯೈ ನಮಃ ॥೬೦॥

| | |
|---|---|
| ಶ್ರೀ ಶಿವಾಯ್ಯೆ ನಮಃ। | ಶ್ರೀ ಸಂತತಿಪ್ರದಾಯ್ಯೆ ನಮಃ। |
| ಶ್ರೀ ಗರ್ಭಗೋಪ್ತ್ರ್ಯೈ ನಮಃ। | ಶ್ರೀ ಗೋದಾಯ್ಯೆ ನಮಃ। |
| ಶ್ರೀ ಗಣ್ಯಾಯ್ಯೆ ನಮಃ। | ಶ್ರೀ ಗಂಭೀರನಾಭ್ಯೈ ನಮಃ। |
| ಶ್ರೀ ಏಕರೂಪಾಯ್ಯೆ ನಮಃ। | ಶ್ರೀ ಕಲ್ಹಾರಭೂಷಿತಾಯ್ಯೆ ನಮಃ। |
| ಶ್ರೀ ದಾಂಪತ್ಯಸುಖಪ್ರದಾತ್ರ್ಯೈ ನಮಃ। | ಶ್ರೀ ಆಯುರ್ದಾತ್ರ್ಯೈ ನಮಃ ॥೭೦॥ |
| ಶ್ರೀ ಸೌಮಂಗಲ್ಯಪ್ರದಾತ್ರ್ಯೈ ನಮಃ। | ಶ್ರೀ ಕೀರ್ತಿದಾಯ್ಯೆ ನಮಃ। |
| ಶ್ರೀ ಹಿಮಾಲಯತನಯಾಯ್ಯೆ ನಮಃ। | ಶ್ರೀ ನಾರಾಯಣಪದಮಧುಪಾಯ್ಯೆ ನಮಃ। |
| ಶ್ರೀ ಶ್ರೀ ರಾಮಮಂತ್ರಜಾಪಕಾಯ್ಯೆ ನಮಃ। | ಶ್ರೀ ಅಮರಗಣವಂದಿತಾಯ್ಯೆ ನಮಃ। |
| ಶ್ರೀ ಗಜಗಮನಾಯ್ಯೆ ನಮಃ। | ಶ್ರೀ ಪರಮಪಾವನ್ಯೈ ನಮಃ। |
| ಶ್ರೀ ಪುಣ್ಯಫಲಪ್ರದಾಯಿನ್ಯೈ ನಮಃ। | ಶ್ರೀ ಪನ್ನಗವೇಣ್ಯೈ ನಮಃ ॥೮೦॥ |
| ಶ್ರೀ ಶರ್ವಾಣ್ಯೈ ನಮಃ। | ಶ್ರೀ ಕೋಕಿಲಸ್ವರಾಯ್ಯೆ ನಮಃ। |
| ಶ್ರೀ ಪ್ರಸನ್ನವದನಾಯ್ಯೆ ನಮಃ। | ಶ್ರೀ ಮುಕ್ತಾಫಲಹಾರಧರಾಯ್ಯೆ ನಮಃ। |
| ಶ್ರೀ ಸುರಪೂಜಿತಾಯ್ಯೆ ನಮಃ। | ಶ್ರೀ ಮಲ್ಲಿಕಾದಿಪುಷ್ಪಗಂಧಿನ್ಯೈ ನಮಃ। |
| ಶ್ರೀ ಸ್ವರ್ಗಜನಾರಾಧ್ಯಾಯ್ಯೆ ನಮಃ। | ಶ್ರೀ ಪುಂಡರೀಕಾಕ್ಷಾಯ್ಯೆ ನಮಃ। |
| ಶ್ರೀ ಪುಂಡರಿಕಾಕ್ಷಭಕ್ತ್ಯಾಯ್ಯೆ ನಮಃ। | ಶ್ರೀ ವೇದವೇದ್ಯಾಯ್ಯೆ ನಮಃ ॥೯೦॥ |
| ಶ್ರೀ ಔದಾರ್ಯಾದಿ ಗುಣಯುಕ್ತಾಯ್ಯೆ ನಮಃ। | ಶ್ರೀ ಚಿಂತಿತಫಲದಾತ್ರ್ಯೈ ನಮಃ। |
| ಶ್ರೀ ಷಡ್ವಿಂಶತಿಲಕ್ಷಣಾಯ್ಯೆ ನಮಃ। | ಶ್ರೀ ಕಮಲಾಯ್ಯೆ ನಮಃ। |
| ಶ್ರೀ ಭಾವರೂಪಾಯ್ಯೆ ನಮಃ। | ಶ್ರೀ ಭೂತಿದಾತ್ರ್ಯೈ ನಮಃ। |
| ಶ್ರೀ ಭಾಗ್ಯಪ್ರದಾಯ್ಯೆ ನಮಃ। | ಶ್ರೀ ಪಾಪಾಪಹಾರ್ಯ್ಯೈ ನಮಃ। |
| ಶ್ರೀ ಪುಣ್ಯಸ್ವರೂಪಾಯ್ಯೆ ನಮಃ। | ಶ್ರೀ ಮೃಡಾಯ್ಯೆ ನಮಃ ॥೧೦೦॥ |
| ಶ್ರೀ ಉಮಾಯ್ಯೆ ನಮಃ। | ಶ್ರೀ ಶಾಂತಿರೂಪಿಣ್ಯೈ ನಮಃ। |
| ಶ್ರೀ ರುದ್ರಾಣ್ಯೈ ನಮಃ। | ಶ್ರೀ ಕಾಳ್ಯೈ ನಮಃ। |
| ಶ್ರೀ ಮಹಾವಿದ್ಯಾಯ್ಯೆ ನಮಃ। | ಶ್ರೀ ಶಿವರೂಪಾಯ್ಯೆ ನಮಃ। |
| ಶ್ರೀ ಬುದ್ಧಿತತ್ವಾಭಿಮಾನಿನ್ಯೈ ನಮಃ। | ಶ್ರೀ ಶ್ರೀ ಸ್ವರ್ಣಗೌರ್ಯ್ಯೈ ನಮಃ ॥೧೦೮॥ |

## ಧೂಪ

### ಸ್ತ್ರೀಯರು ಗಂಟೆ ಬಾರಿಸುತ್ತಾ ಆರತಿ ಮಾಡುವ ಪದ್ಧತಿ ಇರುವುದಿಲ್ಲ. ಆದ್ದರಿಂದ ಧೂಪವನ್ನು ದೇವಿಗೆ ತೋರಿಸಿದರೆ ಸಾಕು.

ಶ್ರೀಖಂಡಲಾಕ್ಷಾಗರುಗುಗ್ಗುಳಾದ್ಯೈಃ ಖಚೋರಶ್ರೀವಾಸಮಧೂಕಯುಕ್ತೈಃ
ಸುವಾಸಿತಂ ಧೂಪಮಿದಂ ಗೃಹಾಣ ಭಕ್ತೌಘಸಂಪೂಜಿತಪಾದಪದ್ಮೇ ॥
ವನಸ್ಪತ್ಯುದ್ಭವೋ ದಿವ್ಯೋ ನಾನಾಗಂಧೈಶ್ಚ ಸಂಯುತಃ ।
ಆಘ್ರೇಯಸ್ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಮ್ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಧೂಪಮಾಘ್ರಾಪಯಾಮಿ ॥

## ದೀಪ

### ಎರಡು ತುಪ್ಪದ ದೀಪವನ್ನು ದೇವಿಗೆ ಬೆಳಗಿರಿ

ನಮಸ್ತೇಽಸ್ತು ಮಹಾದೇವಿ ನಮಸ್ತೇ ಜಗದೀಶ್ವರಿ ।
ದೀಪಂ ಗೃಹಾಣ ಸುಭಗೇ ಜಗದಾನಂದದಾಯಿನಿ ॥
ಭಕ್ತ್ಯಾ ದೀಪಂ ಪ್ರಯಚ್ಛಾಮಿ ದೇವ್ಯೈ ಚ ಪರಮಾತ್ಮನೇ ।
ತ್ರಾಹಿ ಮಾಂ ನರಕಾದ್ಘೋರಾದ್ದಿವ್ಯಜ್ಯೋತಿರ್ನಮೋಽಸ್ತು ತೇ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಧೂಪದೀಪಾನಂತರಂ ಆಚಮನಮ್ ಸಮರ್ಪಯಾಮಿ ॥

ಆಚಮನೀಯಾನಂತರಂ ಪರಿಮಳಪತ್ರಪುಷ್ಪಾಣಿ ಸಮರ್ಪಯಾಮಿ ॥
ಉದ್ಧರಣೆ ನೀರು ಅರ್ಘ್ಯಪಾತ್ರೆಗೆ ಹಾಕಿ ಹೂ ಅನ್ನು ಅರ್ಪಿಸುವುದು.

# ನೈವೇದ್ಯ

## ಪಾರ್ವತಿಯ ಹಾಡು ಹೇಳಿ ನೈವೇದ್ಯ ಮಾಡಿರಿ.

ಕಡ್ಲೆಬೇಳೆ ಹೋಳಿಗೆ, ಅಂಬೋಡೆ, ಪಾಯಸ, ಭಾತ್‌ಗಳನ್ನು ದೇವರಿಗೆ, ಪ್ರಾಣದೇವರಿಗೆ ಬೇರೆ ಬೇರೆ ಸಮರ್ಪಿಸಿ, ಅವುಗಳಲ್ಲಿ ಒಂದು ಭಾಗ ಪ್ರತ್ಯೇಕ ಮಾಡಿ ದೇವಿಗೆ ಸಮರ್ಪಿಸಬೇಕು. ನೈವೇದ್ಯ ಮಾಡುವ ಮೊದಲು ದೇವರ ತೀರ್ಥ ಹಾಗೂ ಪ್ರಾಣದೇವರ ತೀರ್ಥವನ್ನು ದೇವಿಗೆ ನೀಡಬೇಕು. ಹಾಗೂ ಕೆಳಗಿನ ಶ್ಲೋಕವನ್ನು ಪಠಿಸಿರಿ. (ಹಾಡು ಪುಸ್ತಕದ ಕೊನೆಯಲ್ಲಿದೆ)

ಅನ್ನಂ ಚತುರ್ವಿಧಂ ಸ್ವಾದು ರಸೈಃ ಷಡ್ಭಿಃ ಸಮನ್ವಿತಂ ।
ಭಕ್ಷ್ಯಭೋಜ್ಯಸಮಾಯುಕ್ತಂ ನೈವೇದ್ಯಂ ಪ್ರತಿಗೃಹ್ಯತಾಮ್ ॥
ನೈವೇದ್ಯಂ ಸಫಲಂ ಚೈವ ಭಕ್ಷ್ಯಭೋಜ್ಯೈಶ್ಚ ಸಂಯುತಂ ।
ದಧ್ನಾ ಘೃತೇನ ಸಂಯುಕ್ತಂ ಗೃಹಾಣ ಪರಮೇಶ್ವರೀ ॥
ಖರ್ಜೂರೀ-ಕದಳೀ-ರಸಾಲ-ಪನಸ-ದ್ರಾಕ್ಷಾ-ಕಪಿತ್ಥಾದಿಕಂ।
ರುಚ್ಯಂ ಸ್ವಾದುರಸಂ ಚ ಸತ್ಫಲಯುತಂ ಸಂಗೃಹ್ಯತಾಮುತ್ತಮಮ್ ॥

ಶ್ರೀ ಸ್ವರ್ಣಗೌರ್ಯೈ ನಮಃ ನಾರಿಕೇಳ ಫಲನೈವೇದ್ಯಂ ಸಮರ್ಪಯಾಮಿ, ಕದಳೀ ಫಲನೈವೇದ್ಯಂ ಸಮರ್ಪಯಾಮಿ, ಗೋಧೂಮಪಿಷ್ಟನೈವೇದ್ಯಂ ಸಮರ್ಪಯಾಮಿ, ಹೋಲಿಕಾ ನೈವೇದ್ಯಂ ಸಮರ್ಪಯಾಮಿ, ಸಮಸ್ತವಿಧಫಲಾನಿ ಭಕ್ಷ್ಯಭೋಜ್ಯಾನಿ ಸಮರ್ಪಯಾಮಿ । ಮಧ್ಯೇಮಧ್ಯೇ ಪಾನೀಯಂ ಸಮರ್ಪಯಾಮಿ। ಉತ್ತರಾಪೋಶನಂ ಸಮರ್ಪಯಾಮಿ । ಹಸ್ತ-ಪ್ರಕ್ಷಾಳನಂ ಸಮರ್ಪಯಾಮಿ । ಮುಖಪ್ರಕ್ಷಾಳನಂ ಸಮರ್ಪಯಾಮಿ । ಪಾದಪ್ರಕ್ಷಾಳನಂ ಸಮರ್ಪಯಾಮಿ । ಕರೋದ್ವರ್ತನಂ ಸಮರ್ಪಯಾಮಿ । ಪುನರಾಚಮನಂ ಸಮರ್ಪಯಾಮಿ । (೫ ಬಾರಿ ಉದ್ಧರಣೆ ನೀರನ್ನು ಅರ್ಘ್ಯಪಾತ್ರೆಗೆ ಹಾಕುವುದು)

## ತಾಂಬೂಲ

**೩.೨ ವಿಳ್ಯೆದೆಲೆಯಲ್ಲಿ ಅಡಿಕೆ ಇಟ್ಟು ದೇವಿಗೆ ಸಮರ್ಪಿಸಿರಿ**

ಪೂಗೀಫಲಸಮಾಯುಕ್ತಂ ನಾಗವಲ್ಲೀದಳೈರ್ಯುತಂ ।
ಕರ್ಪೂರಚೂರ್ಣಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ತಾಂಬೂಲಂ ಸಮರ್ಪಯಾಮಿ ॥

## ಸುವರ್ಣಪುಷ್ಪದಕ್ಷಿಣೆ

**ಯಥಾಶಕ್ತಿ ದಕ್ಷಿಣೆಯನ್ನು ವಿಳ್ಯೆದೆಲೆ ಮೇಲೆ ಇಡಬೇಕು.**

ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ ।
ಅನಂತಪುಣ್ಯಫಲದಂ ಅತಃ ಶಾಂತಿಂ ಪ್ರಯಚ್ಛ ಮೇ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ॥

## ಮಹಾಮಂಗಳಾರತಿ

**ಕದಲಾರತಿ ಮಾಡಿ ದೀಪದಿಂದ ಆರತಿಯನ್ನು ದೇವಿಗೆ ಬೆಳಗುವುದು. ಹಾಡು ಹೇಳುತ್ತಾ ಆರತಿ ಮಾಡಿರಿ. ಹಾಗೂ ಈ ಶ್ಲೋಕ ಪಠಿಸಿರಿ.**

ವರ್ತಿದ್ವಯಸಮಾಯುಕ್ತಂ ಕರ್ಪೂರೇಣ ಸಮನ್ವಿತಂ ।
ನೀರಾಜನಂ ಗೃಹಾಣೇದಂ ಮಯಾ ದತ್ತಂ ಮಹೇಶ್ವರೀ ॥
ನೀರಾಜನಂ ಸ್ವೀಕುರು ದೇವಿ ದೇವಿ ನೀಲೋತ್ಪಲಶ್ಯಾಮಲವಾರಿಜಾಕ್ಷೀ ।
ಗೃಹಾಣ ದುರ್ಗೇ ಸುರಮೌಳಿರತ್ನ-ಮರೀಚನೀರಾಜಿತ-ಪಾದಪದ್ಮೇ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಮಹಾಮಂಗಳಾರತಿನೀರಾಜನಂ ಸಮರ್ಪಯಾಮಿ ॥

ಉತ್ತರನೀರಾಜನಾನಂತರಂ ಆಚಮನಂ ಸಮರ್ಪಯಾಮಿ ॥
ಆಚಮನೀಯಾನಂತರಂ ಪರಿಮಳಪತ್ರಪುಷ್ಪಾಣಿ ಸಮರ್ಪಯಾಮಿ ॥
ಮಂಗಳಾರತಿಯ ನಂತರ ಒಂದು ಉದ್ಧರಣೆ ನೀರನ್ನು ಅರ್ಘ್ಯಪಾತ್ರೆಗೆ ಹಾಕುವುದು.

## ಹೂವನ್ನು ಅರ್ಪಿಸುವುದು

ಚಂಪಕೈಶ್ಶತಪತ್ರೈಶ್ಚ ಕಲ್ಹಾರೈಃ ಕರವೀರಕೈಃ ।
ಪಾಟಲೈರ್ಬಕುಳೈರ್ಯುಕ್ತಂ ಗೃಹಾಣ ಕುಸುಮಾಂಜಲಿಮ್ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ವೇದೋಕ್ತಮಂತ್ರಪುಷ್ಪಂ ಸಮರ್ಪಯಾಮಿ॥

## ಪ್ರದಕ್ಷಿಣನಮಸ್ಕಾರ

ನಮಸ್ತೇ ದೇವಿ ಕಲ್ಯಾಣೀ ನಮಸ್ತೇ ವಿಶ್ವವಂದಿತೇ ।
ನಮೋ ಭಕ್ತಾರ್ತಿನಾಶಿನ್ಯೈ ಭವಾನ್ಯೈ ತೇ ನಮೋ ನಮಃ ॥
ಪ್ರದಕ್ಷಿಣತ್ರಯಂ ದೇವಿ ಪ್ರಯತ್ನೇನ ಮಯಾ ಕೃತಂ ।
ತೇನ ಪಾಪಾನಿ ಸರ್ವಾಣಿ ನಶ್ಯಂತು ಚ ಸದಾ ಮಮ ॥
ನಮಸ್ತೇ ಗಿರಿಜೇ ದೇವಿ ನಮಸ್ತೇ ಲೋಕನಾಯಿಕೇ ।
ನಮಸ್ತೇ ಸರ್ವಪಾಪಘ್ನೀ ಸ್ವರ್ಣಗೌರೀ ನಮೋಽಸ್ತುತೇ ॥
ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।
ತಸ್ಮಾತ್ಕಾರುಣ್ಯಭಾವೇನ ರಕ್ಷರಕ್ಷ ಮಹೇಶ್ವರಿ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಪ್ರದಕ್ಷಿಣನಮಸ್ಕಾರಾನ್ ಸಮರ್ಪಯಾಮಿ ॥

## ಪ್ರಸನ್ನಾರ್ಘ್ಯ

ಹೂ ಮಂತ್ರಾಕ್ಷತೆ ತೆಗೆದುಕೊಂಡು ಒಂದು ಬೊಗಸೆ ನೀರನ್ನು ಕೈಯಲ್ಲಿ ಹಾಕಿಕೊಂಡು ೩ ಬಾರಿ ಅರ್ಘ್ಯಪಾತ್ರೆಯಲ್ಲಿ ಬಿಡಬೇಕು. ಮನೆಮಂದಿ ಎಲ್ಲರೂ ಅರ್ಘ್ಯವನ್ನು ನೀಡಬೇಕು.

ಗಂಗಾದಿಪುಣ್ಯಸಲಿಲೈಃ ಗಂಧಮಾಲ್ಯಾದಿವಾಸಿತೈಃ ।
ಅರ್ಘ್ಯಂ ದಾಸ್ಯಾಮಿ ವರದೇ ಗೃಹಾಣ ವರದಾಯಿನೀ ॥
ಪುನರರ್ಘ್ಯಂ ಪ್ರದಾಸ್ಯಾಮಿ ಮಂಗಳೇ ಶಿವಸುಂದರಿ ।
ಸರ್ವಪಾಪಕ್ಷಯಂ ಕೃತ್ವಾ ರಕ್ಷ ಮಾಂ ಶರಣಾಗತಾಮ್ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಇದಮರ್ಘ್ಯಂ ಇದಮರ್ಘ್ಯಂ ಇದಮರ್ಘ್ಯಂ ॥

## ಪೂರ್ಣಫಲಸಮರ್ಪಣೆ

ಒಂದು ತೆಂಗಿನ ಕಾಯಿಯನ್ನು ತಾಂಬೂಲದಲ್ಲಿಟ್ಟು ಅರಿಶಿನ ಕುಂಕುಮ ಹಚ್ಚಿ ಉದ್ಧರಣೆ ನೀರುಹಾಕಿ ದೇವಿಯ ಮುಂದೆ, ಬಲಭಾಗದಲ್ಲಿ ಇಡುವುದು.

ಇದಂ ಫಲಂ ಮಯಾ ದೇವೀ ಸ್ಥಾಪಿತಂ ಪುರತಸ್ತವ ।
ತೇನ ಮೇ ಸಫಲಾವಾಪ್ತಿರ್ಭವೇಜ್ಜನ್ಮನಿ ಜನ್ಮನಿ ॥

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಪೂರ್ಣಫಲಂ ಸಮರ್ಪಯಾಮಿ ॥

## ದೋರಬಂಧನ

ದಾರಕ್ಕೆ ಅರಿಶಿನ ಕುಂಕುಮ ಹೂ ಅರ್ಪಿಸಿ ಕೈಯಲ್ಲಿ ತಾಂಬೂಲ ಫಲಹಿಡಿದುಕೊಂಡು ಸುವಾಸಿನಿಯು ಗಂಡನಿಂದ ಬಲಕೈಗೆ ದಾರಕಟ್ಟಿಸಿಕೊಂಡು ಅವರಿಗೆ ಫಲತಾಂಬೂಲ ಕೊಟ್ಟು ನಮಸ್ಕರಿಸಿ ಆಶೀರ್ವಾದ ಪಡೆಯುವುದು.

ನಮಃ ಶಿವಕಾಂತಾಯೈ ಹ್ರೀಂ ನಮಶ್ಶಿವಶಕ್ತಯೇ ।
ಶ್ರೀಂ ನಮೋ ಜಗತಾಂ ಮಾತ್ರೇ ಮಮ ಭೂಯಾನ್ಮನೋರಥಃ ॥
ಭಕ್ತಪ್ರಿಯೇ ಮಹಾದೇವಿ ಸರ್ವೈಶ್ವರ್ಯಪ್ರದಾಯಿನೀ ।
ಸೂತ್ರಂ ತೇ ಧಾರಯಿಷ್ಯಾಮಿ ಮಮಾಭೀಷ್ಟಂ ಸದಾ ಕುರು ॥
ಇತಿ ದೋರಬಂಧನಮ್ ।

## ಪ್ರಾರ್ಥನೆ

ಹೂ ಅಕ್ಷತೆ ಕೈಯಲ್ಲಿ ಹಿಡಿದುಕೊಂಡು ಕೆಳಗಿನ ಶ್ಲೋಕವನ್ನು ಹೇಳಿ ದೇವಿಗೆ ಅರ್ಪಿಸುವುದು.

ಪುತ್ರಾನ್ ದೇಹಿ ಧನಂ ದೇಹಿ ಸೌಭಾಗ್ಯಂ ದೇಹಿ ಸುವ್ರತೇ ।

ಅನ್ಯಾಂಶ್ಚ ಸರ್ವಕಾಮಾಂಶ್ಚ ದೇಹಿ ದೇವೀ ನಮೋಽಸ್ತು ತೇ ।

ಮಹಾರುದ್ರದೇವವಾಮಾಂಕಸ್ಥಿತ ಶ್ರೀಸ್ವರ್ಣಗೌರ್ಯಂತರ್ಗತಪ್ರಾಣಸ್ಥ-ಜಯಾಪತಿಸಂಕರ್ಷಣಾಯ ನಮಃ । ಮನೋಽಭೀಷ್ಟಪ್ರಾರ್ಥನಾಂ ಸಮರ್ಪಯಾಮಿ ॥

## ವಾಯನದಾನ

### ಪತಿಯ ಮೂಲಕ ಉಪಾಯನದಾನ ಕೊಡಿಸಬೇಕು.

ತಟ್ಟೆಯಲ್ಲಿ ಅಕ್ಕಿ, ಎರಡು ತೆಂಗಿನಕಾಯಿಗಳು, ಬೆಲ್ಲದ ಅಚ್ಚು, ಹಣ್ಣುಗಳನ್ನಿಟ್ಟು ಎಲೆ ಅಡಕೆಯ ಜೊತೆಗೆ ಯಥಾಶಕ್ತಿ ದಕ್ಷಿಣೆ ಇಟ್ಟು, ಒಂದು ಸಣ್ಣ ತಟ್ಟೆಯನ್ನು ತೆಂಗಿನ ಕಾಯಿಗಳ ಮೇಲೆ ಮುಚ್ಚುವುದು. ಪುರೋಹಿತರ ಎದುರಿಗೆ ಮಂಡಲ ಮಾಡಿ ಅದರ ಮೇಲೆ ಉಪಾಯನದಾನದ ತಟ್ಟೆಯನ್ನಿಟ್ಟು ಕುಳಿತುಕೊಂಡು ಹೀಗೆ ಹೇಳಬೇಕು. (ಸಂಕಲ್ಪ ಮಾಡಬೇಕು)

ಅದ್ಯ ಪೂರ್ವೋಚ್ಚರಿತ ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಮಮ ಶ್ರೀಮಂಗಳಗೌರಿವ್ರತಸಾದ್ಗುಣ್ಯಾರ್ಥಂ ಉಪಾಯನದಾನಮಹಂ ಕರಿಷ್ಯೇ –

ಪುರೋಹಿತರಿಗೆ (ಬ್ರಾಹ್ಮಣರಿಗೆ) ಗಂಧ, ಹೂವು ಕೊಡುವುದು.

ಗಂಧಪುಷ್ಪಧೂಪದೀಪಸಕಲಾರಾಧನೈಃ ಸ್ವರ್ಚಿತಮ್ । ಎಂದು ಹೇಳಿ ನೀರುಮಂತ್ರಾಕ್ಷತೆ ಬಿಡುವುದು. ಆಮೇಲೆ ನೀರನ್ನು ಸಣ್ಣ ತಟ್ಟೆಯ ಮೇಲೆ ಪ್ರೋಕ್ಷಿಸುವುದು.

ವಿಷ್ಣೋ ಉಪಾಯನದಾನಂ ರಕ್ಷಸ್ವ - ಎಂದು ಹೇಳಿ ತಟ್ಟೆಯನ್ನು ಅತ್ತ ಇಟ್ಟು ಎರಡು ತೆಂಗಿನಕಾಯಿಗಳ ಮೇಲೆ ಪತ್ನಿಯಿಂದ ನೀರು ಹಾಕಿಸಿ, ''ಇದಂ ಉಪಾಯನದಾನಮ್''-

ಉಪಾಯನದಾನ ಕೊಡುವಾಗ ಹೇಳುವ ಮಂತ್ರ –

ವಾಯನಂ ತೇ ಪ್ರದಾಸ್ಯಾಮಿ ವ್ರತಸಂಪೂರ್ತಿಹೇತವೇ ।
ಪ್ರೀತಯೇ ದ್ವಿಜವರ್ಯಾಯ ಸಹಿರಣ್ಯಂ ದದಾಮ್ಯಹಮ್ ॥
ಇಂದಿರಾ ಪ್ರತಿಗೃಹ್ಣಾತಿ ಇಂದಿರಾ ವೈ ದದಾತಿ ಚ ।
ಇಂದಿರಾ ತಾರಕಾ ದ್ವಾಭ್ಯಾಂ ಇಂದಿರಾಯೈ ನಮೋ ನಮಃ ॥

## ಪುನಃ ಪೂಜಾ

ಛತ್ರಂ ಸಮರ್ಪಯಾಮಿ । ಚಾಮರೇ ವೀಜಯಾಮಿ । ನೃತ್ಯಂ ದರ್ಶಯಾಮಿ। ಗೀತಂ ಶ್ರಾವಯಾಮಿ । ದರ್ಪಣಂ ದರ್ಶಯಾಮಿ । ಅಶ್ವಾರೋಹಣಂ ಗಜಾರೋಹಣಂ ಸಮರ್ಪಯಾಮಿ । ಸಮಸ್ತರಾಜೋಪಚಾರದೇವೋಪಚಾರ ಋಷ್ಯೋಪಚಾರ ಸರ್ವೋಪಚಾರಪೂಜಾಂ ಸಮರ್ಪಯಾಮಿ ।

## ಪ್ರತ್ಯಾವಾಹನೆ

ವಿಸರ್ಜನೆ ಮಾಡುವ ಮೊದಲು ಪ್ರತ್ಯಾವಾಹನೆ ಮಾಡಬೇಕು. ಅಲ್ಲಿಯ ತನಕ ಕದಲಿಸಬಾರದು.

## ಕೃಷ್ಣಾರ್ಪಣ

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥
ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್।
ಕರೋಮಿ ಯದ್ಯತ್ ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ ॥

'ಅನೇನ ಮಯಾ ಕೃತೇನ ಶ್ರೀಸ್ವರ್ಣಗೌರಿಪೂಜಾಕರಣೇನ ಅಸ್ಮತ್ಸ್ವಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತಶ್ರೀಸ್ವರ್ಣಗೌರ್ಯಾಂತರ್ಗತ ಮಹಾರುದ್ರದೇವಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಶ್ರೀಲಕ್ಷ್ಮೀನಾರಾಯಣಃ ಪ್ರಿಯತಾಂ ಸುಪ್ರೀತೋ ಸುಪ್ರಸನ್ನೋ ವರದೋ ಭವತು' ಎಂದು ಹೇಳಿ ಮಂತ್ರಾಕ್ಷತೆ ನೀರನ್ನು ಬಿಡುವುದು.

॥ ಶ್ರೀಕೃಷ್ಣಾರ್ಪಣಮಸ್ತು ॥

## ಸ್ವರ್ಣಗೌರಿದೇವಿಯ ವಿಸರ್ಜನಾ ಪೂಜೆ

ಗಣಪತಿ ವಿಸರ್ಜನೆ ಮಾಡುವ ಸಂದರ್ಭದಲ್ಲಿ ಗೌರಿಯನ್ನು ವಿಸರ್ಜನೆ ಮಾಡಬೇಕು. ಆಚಮನ ಮಾಡಿ, ದೇಶಕಾಲಗಳನ್ನು ಉಚ್ಚರಿಸಿ ಸಂಕ್ಷೇಪವಾಗಿ ೧೬ ಉಪಚಾರಗಳನ್ನು ಸಮರ್ಪಿಸಬೇಕು. ಪತಿಯ ಮೂಲಕ ನೈವೇದ್ಯ ಮಂಗಳಾರತಿ ಮಾಡಿಸಬೇಕು. ಹಾಗೂ ವಿಸರ್ಜನೆ ಮಾಡುವ ಮೊದಲು ಗೌರಿಗೆ ಬಾಗಿಣ ಕೊಡಬೇಕು.

ಶ್ರೀ ಗಿರಿಜಾಯೈ ನಮಃ । – ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ ।
ಶ್ರೀ ದಾಕ್ಷಾಯಿಣ್ಯೈ ನಮಃ । – ಆವಾಹಯಾಮಿ, ಆವಾಹನಂ ಸಮರ್ಪಯಾಮಿ
ಶ್ರೀ ಉಮಾಯೈ ನಮಃ । – ಅರ್ಘ್ಯಂ ಸಮರ್ಪಯಾಮಿ
ಶ್ರೀ ಗೌರ್ಯೈ ನಮಃ । – ಪಾದ್ಯಂ ಸಮರ್ಪಯಾಮಿ
ಶ್ರೀ ಕಾಳ್ಯೈ ನಮಃ । – ಆಚಮನಂ ಸಮರ್ಪಯಾಮಿ
ಶ್ರೀ ಹೈಮವತ್ಯೈ ನಮಃ । – ಮಧುಪರ್ಕಂ ಸಮರ್ಪಯಾಮಿ
ಶ್ರೀ ಈಶ್ವರವಲ್ಲಭಾಯೈ ನಮಃ । - ಪುನರಾಚಮನಂ ಸಮರ್ಪಯಾಮಿ
ಶ್ರೀ ಶಿವಾಯೈ ನಮಃ । – ಸ್ನಾನಂ ಸಮರ್ಪಯಾಮಿ
ಶ್ರೀ ಭವಾನ್ಯೈ ನಮಃ । – ವಸ್ತ್ರಂ ಸಮರ್ಪಯಾಮಿ
ಶ್ರೀ ಮಂಗಳದೇವತಾಯೈ ನಮಃ । – ಮಾಂಗಲ್ಯಂ ಸಮರ್ಪಯಾಮಿ
ಶ್ರೀ ರುದ್ರಾಣ್ಯೈ ನಮಃ । – ಗಂಧಂ ಸಮರ್ಪಯಾಮಿ
ಶ್ರೀ ಶರ್ವಾಣ್ಯೈ ನಮಃ । – ಅಕ್ಷತಾನ್ ಸಮರ್ಪಯಾಮಿ

ಶ್ರೀ ಮಂಗಳದೇವತಾಯೈ ನಮಃ । – ಮಾಂಗಲ್ಯಂ ಸಮರ್ಪಯಾಮಿ
ಶ್ರೀ ರುದ್ರಾಣ್ಯೈ ನಮಃ । – ಗಂಧಂ ಸಮರ್ಪಯಾಮಿ
ಶ್ರೀ ಶರ್ವಾಣ್ಯೈ ನಮಃ । – ಅಕ್ಷತಾನ್ ಸಮರ್ಪಯಾಮಿ
ಶ್ರೀ ಸರ್ವಮಂಗಳಾಯೈ ನಮಃ । – ಪುಷ್ಪಂ ಸಮರ್ಪಯಾಮಿ
ಶ್ರೀ ಅಪರ್ಣಾಯೈ ನಮಃ । – ಧೂಪಂ ಸಮರ್ಪಯಾಮಿ
ಶ್ರೀ ಲೋಕಮಂಗಳಾಯೈ ನಮಃ । – ದೀಪಂ ಸಮರ್ಪಯಾಮಿ
ಓಂ ಪ್ರಸನ್ನವದನಾಯೈ ನಮಃ । – ನೈವೇದ್ಯಂ ಸಮರ್ಪಯಾಮಿ
ಓಂ ಜಗಜ್ಜನನ್ಯೈ ನಮಃ । – ಮಹಾಮಂಗಳನೀರಾಜನಂ ಸಮರ್ಪಯಾಮಿ
(ಆರತಿಮಾಡಿ)
ಓಂ ಶಿವವಲ್ಲಭಾಯೈ ನಮಃ । – ಮಂತ್ರಪುಷ್ಪಂ ಸಮರ್ಪಯಾಮಿ
ಓಂ ಸ್ವರ್ಣಗೌರ್ಯೈ ನಮಃ । – ಪ್ರದಕ್ಷಿಣನಮಸ್ಕಾರಾನ್ ಸಮರ್ಪಯಾಮಿ

## ಉದ್ವಾಸನೆ

**ಹೂ ಮಂತ್ರಾಕ್ಷತೆ ಏರಿಸಿ ಕಲಶನ್ನು ಕದಲಿಸಬೇಕು.**

ಯಾಂತು ದೇವಗಣಾಃ ಸರ್ವೇ ಪೂಜಾಮಾದಾಯ ಮತ್ಕೃತಾಮ್ ।
ಇಷ್ಟಕಾಮ್ಯಾರ್ಥಸಿದ್ಧ್ಯರ್ಥಂ ಪುನರಾಗಮನಾಯ ಚ ॥

ಅನೇನ ಶ್ರೀಸ್ವರ್ಣಗೌರಿ ವಿಸರ್ಜನಪೂಜನೇನ ಅಸ್ಮತ್ಸ್ವಂತರ್ಗತ ಶ್ರೀ-ಸ್ವರ್ಣಗೌರಿಸಹಿತ ಮಹಾರುದ್ರದೇವಾಂತರ್ಗತ ಶ್ರೀಲಕ್ಷ್ಮೀನಾರಾಯಣಾತ್ಮಕ ಜಯಾಪತಿ ಶ್ರೀ ಸಂಕರ್ಷಣಃ ಪ್ರೀಯತಾಂ ಸುಪ್ರೀತೋ ಸುಪ್ರಸನ್ನೋ ವರದೋ ಭವತು' ಶ್ರೀಮಧ್ವೇಶಾರ್ಪಣಮಸ್ತು.

* * * *

# ಸ್ವರ್ಣಗೌರಿ ವ್ರತದ ಕಥೆ

ಪುರಾ ಕೈಲಾಸಶಿಖರೇ ಸಿದ್ಧಗಂಧರ್ವಸೇವಿತೇ ।
ಉಮಯಾ ಸಹಿತಂ ಸ್ಕಂದಃ ಪಪ್ರಚ್ಛ ಶಿವಮವ್ಯಯಮ್ ॥೧॥

ರುದ್ರದೇವರು ವಾಸಮಾಡುವ ಕೈಲಾಸಪರ್ವತವು ಸಿದ್ಧರಿಂದ ಗಂಧರ್ವರಿಂದ ಸೇವಿಸಲ್ಪಟ್ಟಿದೆ. ಅಲ್ಲಿ ಪಾರ್ವತಿಯ ಜೊತೆ ರುದ್ರದೇವರು ವಾಸ ಮಾಡುತ್ತಿದ್ದಾರೆ. ಒಮ್ಮೆ ಸ್ಕಂದನು ಆ ರುದ್ರದೇವರನ್ನು ಕುರಿತು ಹೀಗೆ ಪ್ರಶ್ನಿಸುತ್ತಾನೆ.

## ಸ್ಕಂದಃ

ಕರುಣಾಸಾಗರ ಈಶಾನ ಲೋಕಾನಾಂ ಹಿತಕಾಮ್ಯಯಾ ।
ವ್ರತಂ ಕಥಯ ದೇವೇಶ ಪುತ್ರಪೌತ್ರಪ್ರವರ್ಧನಮ್ ॥೨॥

ಸ್ಕಂದನು ಪ್ರಶ್ನಿಸುತ್ತಾನೆ – ಕರುಣಾಸಾಗರನಾದ ಎಲ್ಲ ದೇವತೆಗಳಿಗೂ ಒಡೆಯನಾದ ಪ್ರಭುವೇ! ನನಗೆ ಒಂದು ಉತ್ತಮವಾದ ವ್ರತದ ಬಗ್ಗೆ ಉಪದೇಶಿಸು. ಇಂಥ ವ್ರತವನ್ನು ಆಚರಣೆ ಮಾಡುವುದರಿಂದ ಸಮಸ್ತಲೋಕಕ್ಕೆ ಹಿತವಾಗಬೇಕು. ವ್ರತವನ್ನು ಆಚರಿಸಿದವನ ಮಕ್ಕಳು ಮೊಮ್ಮಕ್ಕಳುಗಳಿಗೆ ಅಭಿವೃದ್ಧಿಯಾಗಬೇಕು.

## ಶಂಕರಃ

ಸಾಧು ಪೃಷ್ಟಂ ಮಹಾಭಾಗ ಕಥಯಾಮಿ ಷಡಾನನ ।
ಸ್ವರ್ಣಗೌರೀವ್ರತಂ ನಾಮ ಸರ್ವಸಂಪತ್ಕರಂ ನೃಣಾಮ್ ॥೩॥

ರುದ್ರದೇವರು ಹೇಳಿದರು – ಮಹಾಭಾಗ್ಯವಂತನಾದ ಷಣ್ಮುಖನೇ ! ಬಹಳ ಒಳ್ಳೆಯ ಪ್ರಶ್ನೆಯನ್ನು ಮಾಡಿರುವಿ. ಹೇಳುತ್ತೇನೆ. ಮನುಷ್ಯರಿಗೆ ಎಲ್ಲ ಬಗೆಯ ಸಂಪತ್ತುಗಳನ್ನು ನೀಡುವ ವ್ರತ ಎಂದರೆ ಅದು ''ಸ್ವರ್ಣಗೌರೀ ವ್ರತ''.

ಪುರಾ ಸರಸ್ವತೀತೀರೇ ವಿಮಲಾಖ್ಯಾ ಮಹಾಪುರೀ ।
ತತ್ರ ಚಂದ್ರಪ್ರಭೋ ನಾಮ ರಾಜಾಽಭೂದ್ಧನದೋಪಮಃ ॥೪॥

ಹಿಂದೆ ಸರಸ್ವತೀ ನದಿಯ ತೀರದಲ್ಲಿ ವಿಮಲಾ ಎಂಬ ದೊಡ್ಡ ಪಟ್ಟಣವಿತ್ತು. ಅಲ್ಲಿ ಚಂದ್ರಪ್ರಭ ಎಂಬ ಹೆಸರಿನ ಅರಸನು ಕುಬೇರನಿಗೆ ಸರಿಸಮಾನನಂತೆ ಸರ್ವ ಸಂಪದ್ಭರಿತನಾಗಿದ್ದನು.

ಮಹಾದೇವೀಬಲಾಖ್ಯೇತಿ ಭಾರ್ಯೇ ಬಾಲಮೃಗೇಕ್ಷಣೇ।
ತಯೋಃ ಪ್ರಿಯತರಾ ಜ್ಯೇಷ್ಠಾ ತಸ್ಯಾऽಸೀನ್ನೃಪತೇರ್ಮತಾ ॥೫॥

ಆ ಚಂದ್ರಪ್ರಭನಿಗೆ ಮಹಾದೇವಿ ಮತ್ತು ಬಲಾ ಎಂಬ ಇಬ್ಬರು ಹೆಂಡಂದಿರಿದ್ದರು. ಇಬ್ಬರೂ ಕೂಡ ಸ್ಫುರದ್ರೂಪಿಣಿಯಾಗಿದ್ದರು. ಎರಳೆ (ಜಿಂಕೆಯ ಮರಿಗಳ) ಕಣ್ಣುಗಳಂಥ ಕಣ್ಣುಳ್ಳವರಾಗಿದ್ದರು. ಅವರಿಬ್ಬರಲ್ಲಿ ಮೊದಲನೆಯ ಹೆಂಡತಿಯ ಮೇಲೆ ರಾಜನಿಗೆ ಎಲ್ಲಿಲ್ಲದ ಒಲವಿತ್ತು.

ಸ ಕದಾಚಿದ್ ವನಂ ಭೇಜೇ ಮೃಗಯಾಸಕ್ತಮಾನಸಃ।
ತತ್ರ ಶಾರ್ದೂಲವಾರಾಹವನಮಾಹಿಷಕುಂಜರಾನ್ ॥೬॥

ಹತ್ವಾ ಬಭ್ರಾಮ ತೃಷ್ಣಾರ್ತಃ ತರಸಾ ವಿಪಿನಂ ಮಹತ್।
ಅಪೂರ್ವಂ ಸ ಮಹೀಪಾಲೋ ದದರ್ಶ ಚ ಸರೋವರಮ್ ॥೭॥

ದೊರೆಯು ಒಮ್ಮೆ ಅರಣ್ಯಕ್ಕೆ ಬೇಟೆಗಾಗಿ ಹೋದನು. ಮೃಗಗಳ ಬೇಟೆಯೆಂದರೆ ಅವನಿಗೆ ಬಹಳ ಇಷ್ಟವಾಗಿತ್ತು. ಆ ಅರಣ್ಯದಲ್ಲಿ ಹುಲಿ, ಹಂದಿ, ಕಾಡುಕೋಣ, ಆನೆ ಮೊದಲಾದವುಗಳನ್ನು ಕೊಂದನು. ಬಾಯಾರಿಕೆಗೊಂಡನು. ಕಾಡಿನಲ್ಲೆಲ್ಲೆಡೆ ನೀರಿಗಾಗಿ ತ್ವರಿತವಾಗಿ ತಿರುಗಿದನು. ಅಪರೂಪದ ಕೆರೆಯೊಂದನ್ನು ನೋಡಿದನು.

ಹಂಸಸಾರಸಕಾರಂಡಚಕ್ರವಾಕೋಪಶೋಭಿತಮ್।
ಉತ್ಪಲೇಂದೀವರಾಂಭೋಜಕಹ್ಲಾರಕುಸುಮೋತ್ಕರಮ್ ॥೮॥

ಆ ಸರೋವರದಲ್ಲಿ ಹಂಸಪಕ್ಷಿಗಳಿದ್ದವು. ನೀರುಕೋಳಿಗಳಿದ್ದವು. ಚಕ್ರವಾಕ ಮೊದಲಾದ ಪಕ್ಷಿಗಳಿಂದಲೂ ಅದು ಶೋಭಿಸುತ್ತಿತ್ತು. ಕನ್ನೈದಿಲೆ, ಬಿಳಿ ನೈದಿಲೆ, ತಾವರೆ, ಕಹ್ಲಾರ ಮೊದಲಾದ ಪುಷ್ಪಗಳೂ ಕೂಡ ಹೇರಳವಾಗಿ ಅಲ್ಲಿ ಶೋಭಿಸುತ್ತಿದ್ದವು.

ಸಮಾಸಾದ್ಯ ಸರಸ್ತೀರಂ ಪೀತ್ವಾ ಜಲಮನುತ್ತಮಮ್ ।
ಭಕ್ತ್ಯಾ ಗೌರೀಮರ್ಚಯಂತಂ ದದರ್ಶಾಪ್ಸರಸಾಂ ಗಣಮ್ ।
ದಿವ್ಯಾಂಬರಧರಂ ವತ್ಸ ದಿವ್ಯಾಭರಣಸಂಯುತಮ್ ॥೯॥

ಎಲೈ ಪುತ್ರ ! ಆ ರಾಜನು ಸರೋವರದ ಬಳಿಗೆ ಬಂದನು. ಅತ್ಯುತ್ತಮವಾಗಿ ಇರುವ ನೀರನ್ನು ಕುಡಿದನು. ಅನಂತರ ಅಲ್ಲೊಂದು ಸ್ತ್ರೀಯರ ಸಮೂಹವನ್ನು ಕಂಡನು. ಅವರೆಲ್ಲರೂ ಭಕ್ತಿಯಿಂದ ಗೌರಿಯನ್ನು ಪೂಜೆ ಮಾಡುತ್ತಿದ್ದರು. ದಿವ್ಯವಾದ ವಸ್ತ್ರಗಳನ್ನು ಧರಿಸಿದ್ದರು. ದಿವ್ಯವಾದ ಆಭರಣಗಳಿಂದ ಅಲಂಕೃತರಾಗಿದ್ದರು. ಇಂಥಾ ಅಪ್ಸರಸ್ತ್ರೀಯರ ಗಣವನ್ನು ಕಂಡನು.

ಕಿಮೇತದಿತಿ ಪಪ್ರಚ್ಛ ರಾಜಾ ರಾಜೀವಲೋಚನಃ ।
ತಾ ಊಚುರ್ಯೋಷಿತಃ ಸರ್ವಾ ಹರ್ಷೋತ್ಫುಲ್ಲವಿಲೋಚನಾಃ ॥೧೦॥

ಕಮಲದಂತಹ ಕಣ್ಣುಗಳನ್ನುಳ್ಳ ಆ ರಾಜನು ಅವರ ಬಳಿ ಏನಿದೆಂದು ಪ್ರಶ್ನಿಸಿದನು. ಆಗ ಅಪ್ಸರಾಸ್ತ್ರೀಯರು ಅತ್ಯಂತ ಹರ್ಷದಿಂದ ಕಣ್ಣುಗಳನ್ನರಳಿಸಿ, ಆ ರಾಜನಿಗೆ ತಾವು ಆಚರಿಸುತ್ತಿರುವ ಗೌರೀ ವ್ರತದ ಬಗ್ಗೆ ಉತ್ತರಿಸಲು ಪ್ರಾರಂಭಿಸಿದರು.

## ಅಪ್ಸರಸಃ

ಸ್ವರ್ಣಗೌರೀವ್ರತಂ ನಾಮ ಕ್ರಿಯತೇಽಸ್ಮಾಭಿರುತ್ತಮಮ್ ।
ಸರ್ವಸಂಪತ್ಕರಂ ನೄಣಾಂ ತತ್ಕುರುಷ್ವ ನೃಪೋತ್ತಮ ॥೧೧॥

ನಾವು ಸ್ವರ್ಣಗೌರೀವ್ರತ ಎಂಬ ಶ್ರೇಷ್ಠವ್ರತವನ್ನು ಆಚರಿಸುತ್ತಿದ್ದೇವೆ. ಇದನ್ನು ಆಚರಿಸುವುದರಿಂದ ಮನುಷ್ಯರಿಗೆ ಎಲ್ಲಾ ಬಗೆಯ ಸಂಪತ್ತುಗಳು ಒದಗುತ್ತವೆ. ರಾಜಶ್ರೇಷ್ಠನೇ! ನೀನೂ ಕೂಡ ಈ ವ್ರತವನ್ನು ಆಚರಣೆ ಮಾಡು.

### ರಾಜಾ

ವಿಧಾನಂ ಕೀದೃಶಂ ಬ್ರೂತ ಕದಾ ಕಾರ್ಯಂ ವ್ರತೋತ್ತಮಮ್ ।

ರಾಜನು ಪುನಃ ಪ್ರಶ್ನಿಸುತ್ತಾನೆ. ಈ ಸ್ವರ್ಣಗೌರೀ ವ್ರತವನ್ನು ಹೇಗೆ ಮಾಡಬೇಕು? ಯಾವಾಗ ಮಾಡಬೇಕು.

## ಸ್ತ್ರಿಯಃ

ಶ್ರುಣು ರಾಜನ್ ಪ್ರವಕ್ಷ್ಯಾಮೋ ನಭಃ ಶುಕ್ಲತೃತೀಯಕೇ ॥೧೨॥
ಆರಬ್ಧವ್ಯಂ ವ್ರತಮಿದಂ ಗೌರ್ಯಾಃ ಷೋಡಶವತ್ಸರಾನ್ ।
ಪೂಜಯಿತ್ವಾ ತು ಗಿರಿಜಾಂ ಷೋಡಶೈರುಪಚಾರಕೈಃ ॥೧೩॥

ಆ ಸ್ತ್ರೀಯರು ಉತ್ತರಿಸುತ್ತಾರೆ – ರಾಜನೇ! ಕೇಳು ಹೇಳುತ್ತೇವೆ. ಭಾದ್ರಪದ ಮಾಸದ ಶುಕ್ಲಪಕ್ಷದ ತೃತೀಯಾ ದಿವಸ ಈ ಗೌರೀವ್ರತವನ್ನು ಪ್ರಾರಂಭ ಮಾಡಬೇಕು. ಹದಿನಾರು ವರ್ಷಗಳ ತನಕ ಬಿಡದೇ ಈ ವ್ರತವನ್ನು ಕೈಗೊಳ್ಳಬೇಕು. ಹದಿನಾರು ಉಪಚಾರಗಳಿಂದ ಪಾರ್ವತೀ ದೇವಿಯನ್ನು ಪೂಜಿಸಬೇಕು.

ಷೋಡಶಗ್ರಂಥಿಸಂಯುಕ್ತಂ ದೋರಕಂ ದಕ್ಷಿಣೇ ಕರೇ ।
ನವೋ ನವೇತಿ ಮಂತ್ರೇಣ ಬಧ್ನೀಯಾದ್ ವ್ರತಪೂರ್ತಯೇ ॥೧೪॥

ಹದಿನಾರು ಗಂಟುಗಳುಳ್ಳ ದೋರವನ್ನು ಪೂಜಿಸಬೇಕು. 'ನವೋ ನವೋ' ಎಂಬ ಮಂತ್ರವನ್ನು ಹೇಳುತ್ತಾ ಬಲಗೈಯಲ್ಲಿ ಕಟ್ಟಿಕೊಳ್ಳಬೇಕು. ಆಗಷ್ಟೇ ಈ ವ್ರತವನ್ನು ಪೂರ್ಣವಾಗಿ ಆಚರಿಸಿದಂತೆ ಆಗುತ್ತದೆ.

ದ್ವಿರಷ್ಟಗುಣಿತಂ ರಾಜನ್ ಬ್ರಾಹ್ಮಣಾಯ ಕುಟುಂಬಿನೇ ।
ಸದಕ್ಷಿಣಂ ಸತಾಂಬೂಲಂ ವಸ್ತ್ರಾಲಂಕಾರಪೂಜಿತಮ್ ॥೧೫॥

ರಾಜನೇ! ಗೃಹಸ್ಥಧರ್ಮವನ್ನು ಪರಿಪಾಲನೆ ಮಾಡುವ ಕುಟುಂಬಿಯಾದ ಉತ್ತಮನಾದ ಬ್ರಾಹ್ಮಣನಿಗೆ ಉಪಾಯನದಾನವನ್ನು ನೀಡಬೇಕು. ತಾಂಬೂಲ, ವಸ್ತ್ರ, ಅಲಂಕಾರ ಸಾಮಗ್ರಿಗಳು, ದಕ್ಷಿಣೆ ಮೊದಲಾದ ಹದಿನಾರು ಪದಾರ್ಥಗಳನ್ನು ದಾನ ಮಾಡಬೇಕು.

ಶೂರ್ಪಯುಗ್ಮಂ ಸಕಾರ್ಪಾಸಂ ಸಾಂಜನಂ ತಾಲಪತ್ರಕಮ್ ।
ಸಕಂಚುಕಂ ಸತಾಂಬೂಲಂ ಕಂಠಸೂತ್ರಫಲಾನ್ವಿತಮ್ ॥೧೬॥

ಹದಿನಾರು ವಸ್ತುಗಳು ಹೀಗಿವೆ. ಎರಡು ಮೊರ, ಹತ್ತಿ, ಕಾಡಿಗೆ, ಓಲೆ, ಕಣ(ಕುಪ್ಪುಸದ ಬಟ್ಟೆ), ತಾಂಬೂಲ, ಕಂಠಸೂತ್ರ, ಫಲ, ವಸ್ತ್ರ, ದಕ್ಷಿಣೆ ಮೊದಲಾದವು.

ದದ್ಯಾತ್ ಸುವಾಸಿನೀಭ್ಯಶ್ಚ ವಸ್ತ್ರಾಲಂಕಾರಭೂಷಣೈಃ ।
ಏವಂ ಸಂಪೂಜ್ಯ ವಿಧಿವತ್ ಷೋಡಶೈರುಪಚಾರಕೈಃ ॥೧೭॥

ಸುವಾಸಿನಿಯರಿಗೂ ಮೊರದ ಬಾಗಿನವನ್ನು ನೀಡಬೇಕು. ವಸ್ತ್ರಾಲಂಕಾರಾದಿಗಳನ್ನು ನೀಡಬೇಕು. ಹೀಗೆ ಕಲ್ಪವಿಧಿಯಲ್ಲಿ ಹೇಳಿದಂತೆ ಹದಿನಾರು ಉಪಚಾರಗಳಿಂದ ಗೌರಿಯನ್ನು ಪೂಜಿಸಿ ಸಂತೋಷಪಡಿಸಬೇಕು.

ಶ್ರುತ್ವಾ ಕಥಾಮಿಮಾಂ ಪುಣ್ಯಾಂ ಕೃತಕೃತ್ಯೋ ಭವೇನ್ನರಃ ।
ಆದಾವಂತೇ ವಾ ಮಧ್ಯೇ ವಾ ಕುರ್ಯಾದ್ ಉದ್ಯಾಪನಂ ವ್ರತೀ ॥೧೮॥
ಏವಂ ಕೃತೇ ಮಹಾರಾಜ ಸರ್ವಸಂಪದ್ ಭವಿಷ್ಯತಿ ।

ಅತ್ಯಂತ ಪುಣ್ಯಕರವಾದ ಈ ಗೌರೀವ್ರತದ ಕಥೆಯನ್ನು ಪೂಜೆಯ ಅನಂತರ ಕೇಳಬೇಕು. ಹೀಗೆ ಆಚರಿಸಿದ ಮನುಷ್ಯನು ಕೃತಕೃತ್ಯನಾಗುತ್ತಾನೆ. ಗೌರೀವ್ರತವನ್ನು ಹದಿನಾರುವರ್ಷಗಳು ಮಾಡಲೇ ಬೇಕು. ಮೊದಲು, ಮಧ್ಯದಲ್ಲಿ ಅಥವಾ ಕೊನೆಯಲ್ಲಿ ಉದ್ಯಾಪನೆಯನ್ನು ಮಾಡಬಹುದು. ಮಹಾರಾಜನೇ ಹೀಗೆ ಗೌರೀವ್ರತವನ್ನು ಆಚರಣೆ ಮಾಡುವುದರಿಂದ ಎಲ್ಲಾ ಬಗೆಯ ಸಂಪತ್ತುಗಳು ದೊರಕುತ್ತವೆ.

ಈಶ್ವರಃ

ವನಿತಾನಾಂ ವಚಃ ಶ್ರುತ್ವಾ ಸ ರಾಜಾ ಕೃತವಾನ್ ವ್ರತಮ್ ॥೧೯॥
ತತೋ ಜಗಾಮ ಗೇಹಂ ಸ್ವಂ ರಾಜಾ ಸಬಲವಾಹನಃ ।
ವಿಮಲಾಯಾಂ ತು ಭವನೇ ಹ್ಯುವಾಸ ಪರಯಾ ಮುದಾ ॥೨೦॥

ರುದ್ರದೇವರು ಹೇಳುತ್ತಾರೆ –

ಅಪ್ಸರಾಸ್ತ್ರೀಯರು ಹೇಳಿದ ಪ್ರಕಾರವೇ ರಾಜನು ಗೌರೀವ್ರತವನ್ನು ಭಕ್ತಿಯಿಂದ ಆಚರಿಸಿದನು. ಅನಂತರ ತನ್ನ ಸೈನ್ಯ ಹಾಗೂ ವಾಹನಗಳ ಜೊತೆ ತೆರಳಿದನು. ವಿಮಲಾ ಎಂಬ ತನ್ನ ಪಟ್ಟಣವನ್ನು ಸೇರಿದನು. ತನ್ನ ಅರಮನೆಯಲ್ಲಿ ಸುಖವಾಗಿ ವಾಸ ಮಾಡಿದನು.

ರಮಮಾಣೋ ಮಹಾದೇವ್ಯಾ ದೇವೇಂದ್ರೋ ನಂದನೇ ಯಥಾ ।
ತತೋ ಜ್ಯೇಷ್ಠಾ ಮಹಾದೇವೀ ಬದ್ಧಂ ದೃಷ್ಟ್ವಾ ಸುದೋರಕಮ್ ॥೨೧॥

ಆ ರಾಜನು 'ನಂದನ ಎಂಬ ಉದ್ಯಾನದಲ್ಲಿ ದೇವೇಂದ್ರನು ತನ್ನ ಪತ್ನಿಯ ಜೊತೆ ವಿಹಾರ ಮಾಡುವಂತೆ' ತನ್ನ ಪತ್ನಿಯ ಜೊತೆ ವಿಹಾರ ಮಾಡುತ್ತಿದ್ದನು. ಬಹಳ ಸಂತೋಷದಲ್ಲಿದ್ದನು. ಆಗ ಆ ರಾಜನ ಮೊದಲನೆಯ ಹೆಂಡತಿಯಾದ ಮಹಾದೇವಿ ಎಂಬುವಳು ತನ್ನ ಪತಿಯು ತೋಳಿನಲ್ಲಿ ಕಟ್ಟಿದ್ದ ದೋರವನ್ನು ಕಂಡಳು.

ಕಿಮೇತದಿತಿ ಪಪ್ರಚ್ಛ ರಾಜಾನಂ ಕುಪಿತಾ ತದಾ ।
ಸ್ವರ್ಣಗೌರೀವ್ರತಮಿದಂ ಮಯಾ ಚೀರ್ಣಂ ವರಾನನೇ ॥೨೨॥

ದೋರವನ್ನು ಕಂಡಾಕ್ಷಣದಲ್ಲೇ ಅವಳು ಸಿಟ್ಟು ಮಾಡಿಕೊಂಡಳು. ತನ್ನ ಪತಿಯನ್ನು ಕುರಿತು ಕೋಪದ ಧ್ವನಿಯಿಂದ ಇದು ಏನು? ಎಂದು ಪ್ರಶ್ನಿಸಿದಳು. ಆಗ ರಾಜನು ಸುಂದರಮುಖಿಯೇ! ನಾನು ಬೇಟೆಗೆ ತೆರಳಿದಾಗ ಸ್ವರ್ಣಗೌರೀ ವ್ರತವನ್ನು ಆಚರಿಸಿದ್ದೆನು. ಅದರ ಪ್ರಸಾದವನ್ನಾಗಿ ಈ ದೋರವನ್ನು ಕಟ್ಟಿಕೊಂಡಿರುವೆನು ಎಂದು ಉತ್ತರಿಸಿದನು.

ಕ್ವ ಗೌರೀವ್ರತಮಿತ್ಯೇವ ಸಾಕ್ಷೇಪಂ ತ್ರುಟಿತಂ ರುಷಾ ।
ಹಾಹಾಕೃತೇ ತು ನೃಪತೌ ಬಾಹ್ಯಶುಷ್ಕತರೌ ತದಾ ॥೨೩॥
ಪ್ರಾಕ್ಷಿಪದ್ ವೈ ಮಹಾದೇವೀ ಪತ್ಯೌ ರಾಜ್ಞಿ ವದತ್ಯಪಿ ।
ನ ಕರ್ತವ್ಯಂ ನ ಕರ್ತವ್ಯಂ ನ ಯುಕ್ತಮಿತಿ ಭಾಮಿನಿ ॥೨೪॥

ಆ ರಾಜಪತ್ನಿಗೆ ಕೋಪವು ಉಲ್ಬಣವಾಯಿತು. ಯಾವ ಗೌರೀವ್ರತ!! ಎಂದು ಧಿಕ್ಕಾರ ಮಾಡಿ ಗದರಿಸಿದಳು. ತನ್ನ ಗಂಡನ ಕೈಯ್ಯಲ್ಲಿದ್ದ ಆ ದೋರವನ್ನು ಕಿತ್ತಿದಳು. ಅದನ್ನು ದೂರ ಎಸೆಯಲು ಪ್ರವೃತ್ತಳಾದಳು. ಆ ಸಂದರ್ಭದಲ್ಲಿ ರಾಜನು ಹಾಹಾಕಾರ ಮಾಡಿದನು. ಹೀಗೆ ಮಾಡಬೇಡ ಎಂದು ತಡೆಯುತ್ತಿದ್ದನು. ಆಗ ಆ ಮಹಾದೇವಿಯು ಹೊರಗಡೆ ಇದ್ದ ಒಂದು ಒಣಗಿದ ಮರದ ಕಡೆ ಎಸೆಯಲು ಉದ್ಯುಕ್ತಳಾದಳು. ರಾಜನು ಪುನಃ 'ಮಹಾದೇವಿ! ಅದನ್ನು ಎಸೆಯಬಾರದು' ಎಂದು ಹೇಳಿದನು. ಆದರೂ ಅವನ ಮಾತನ್ನು ಮೀರಿ ಮಹಾದೇವಿಯು ದೋರವನ್ನು ಕಿತ್ತು ಆ ಗಿಡದ ಮೇಲೆ ಎಸೆದಳು.

ತತ್ಸೂತ್ರಸ್ಪರ್ಶನಾದೇವ ಶುಷ್ಕಸ್ತು ಫಲಿತೋಽಭವತ್ ।
ಭಾರ್ಯಾ ದ್ವಿತೀಯಾ ತಂ ದೃಷ್ಟ್ವಾ ವಿಸ್ಮಿತಾಕುಲಮಾನಸಾ ॥೨೫॥

ಒಣಗಿದ ಆ ಮರವು ಎಸೆದ ದೋರದ ಸ್ಪರ್ಶಮಾತ್ರದಿಂದಲೇ ಕೂಡಲೇ ಚಿಗುರಿತು. ಹೂವನ್ನು ಬಿಟ್ಟು, ಹಣ್ಣುಗಳನ್ನೂ ಬಿಟ್ಟಿತು. ಮರವು ಸಂಪೂರ್ಣ ಫಲಪುಷ್ಪಭರಿತವಾಯಿತು. ಇದನ್ನು ನೋಡಿ ಎರಡನೆಯ ಹೆಂಡತಿಯು ಕಡು ಅಚ್ಚರಿಯನ್ನು ಪಟ್ಟಳು.

ತನ್ಮೂಲೇ ದೋರಕಂ ಕ್ಷಿಪ್ತಂ ಗೃಹೀತ್ವಾ ಸಾ ಬಬಂಧ ಹ ।
ತತಃ ತದ್ವ್ರತಮಾಹಾತ್ಮ್ಯಾತ್ ಪತ್ಯುಃ ಪ್ರಿಯತಮಾಽಭವತ್ ॥೨೬॥

ಆ ಮರದ ಬುಡದಲ್ಲಿ ಎಸೆಯಲ್ಪಟ್ಟ ದೋರವನ್ನು ಕೂಡಲೇ ತೆಗೆದುಕೊಂಡಳು. ತಾನೇ ಅದನ್ನು ಕಟ್ಟಿಕೊಂಡಳು. ಆ ದೋರದ ವ್ರತಮಹಿಮೆಯಿಂದ ತನ್ನ ಗಂಡನಿಗೆ ಅತ್ಯಂತ ಪ್ರಿಯತಮಳಾದಳು.

ದೇವೀ ವ್ರತಾಪಚಾರೇಣ ಸಾ ತ್ಯಕ್ತಾ ದುಃಖಿತಾ ವನಮ್ ।
ಪ್ರಾಪ್ಯ ಸಾ ಮನಸಾ ದೇವೀಂ ಧ್ಯಾಯಂತೀ ನಿಯಮಾನ್ವಿತಾ ॥೨೭॥

ಹಿರಿಯ ಹೆಂಡತಿಯಾದ ಮಹಾದೇವಿಗೆ ದುಃಖದ ಕಾಲ ಪ್ರಾರಂಭವಾಯಿತು. ಗೌರೀ ವ್ರತವನ್ನು ತಿರಸ್ಕಾರ ಮಾಡಿದ ದೋಷದಿಂದ ತನ್ನ ಪತಿಯಿಂದ ಪರಿತ್ಯಕ್ತಳಾದಳು. ಅತ್ಯಂತ ಖಿನ್ನಳಾದಳು. ಅರಣ್ಯಕ್ಕೆ ತೆರಳಿದಳು. ಮನಸ್ಸಿನಲ್ಲಿಯೇ ಗೌರಿಯನ್ನು ಧ್ಯಾನ ಮಾಡಲು ಪ್ರಾರಂಭ ಮಾಡಿದಳು. ಅನೇಕ ನಿಯಮಗಳನ್ನು ಆಚರಣೆ ಮಾಡಿದಳು.

ಮುನೀನಾಮಾಶ್ರಮೇ ಪುಣ್ಯೇ ನಿವಸಂತಿ ಕ್ವಚಿತ್ ಕ್ವಚಿತ್ ।
ನಿವಾರಿತಾ ಮುನಿವರ್ಯೈರ್ಗಚ್ಛ ಪಾಪೇ ಯಥಾಸುಖಮ್ ॥೨೮॥

ಕಾಡಿನಲ್ಲಿ ಅನೇಕ ಪವಿತ್ರವಾದ ಋಷಿಗಳ ಆಶ್ರಮಗಳಿದ್ದವು. ಅವುಗಳಲ್ಲಿ ಆಶ್ರಯ ಪಡೆಯಲು ಯತ್ನಿಸಿದಳು. ಅವಳನ್ನು ಕಂಡು ಯಾವ ಮುನಿಗಳೂ ಕೂಡ ಸ್ವಾಗತ ಮಾಡಲಿಲ್ಲ. ನೀನು ಪಾಪಿಷ್ಠಳಿರುವಿ. ಇಚ್ಛಾನುಸಾರವಾಗಿ ಎಲ್ಲಿ ಬೇಕಾದರೂ ತೆರಳು. ನಾವು ನಿನ್ನನ್ನು ಸ್ವಾಗತ ಮಾಡುವುದಿಲ್ಲ ಎಂದು ಹೇಳಿದರು.

ಧಾವಂತೀ ವಿಪಿನೇ ಘೋರೇ ಗಣಾಧ್ಯಕ್ಷಂ ದದರ್ಶ ಹ।
ತಂ ಪೃಷ್ಟ್ವಾ ತು ಸಾ ದೇವೀ ಧ್ಯಾತ್ವಾಮನಸಿ ಪಾರ್ವತೀಮ್ ॥೨೯॥

ಅವಳು ತೆರಳಿದ ಕಾಡು ಅತ್ಯಂತ ಭಯಾನಕವಾಗಿತ್ತು. ಅಲ್ಲಿ ಒಬ್ಬ ಕಿರಾತರ ಅಧಿಪತಿಯನ್ನು ಕಂಡಳು. ಅವನ ಬಳಿ 'ಪಾರ್ವತಿಯನ್ನು ನೀನು ನೋಡಿರುವಿಯಾ? ಅವಳು ಎಲ್ಲಿ ಕಾಣುತ್ತಾಳೆ ?' ಎಂದು ಪ್ರಶ್ನಿಸಿದಳು.

ತತೋ ದದರ್ಶಾಽಮ್ರತರುಂ ಗಚ್ಛಂತೀ ಸರಸೀದ್ವಯಮ್ ।
ತತೋ ನಗ್ನಾಂ ಸ್ತ್ರಿಯಂ ದೃಷ್ಟ್ವಾ ಸರ್ವಾಭರಣಭೂಷಿತಾಮ್ ॥೩೦॥

ಮುಂದೆ ಹಾಗೆಯೇ ತೆರಳುತ್ತಾ ಒಂದು ಮಾವಿನ ಮರವನ್ನು ಕಂಡಳು. ಎರಡು ಕೆರೆಗಳನ್ನು ಕಂಡಳು. ಸರ್ವಾಭರಣಭೂಷಿತಳಾದ ಒಬ್ಬಳು ನಗ್ನ ಸ್ತ್ರೀಯನ್ನು ಕಂಡಳು. ಇವರೆಲ್ಲರ ಬಳಿ ಪಾರ್ವತಿಯನ್ನು ನೀವು ನೋಡಿರುವಿರಾ ಎಂದು ಪ್ರಶ್ನಿಸುತ್ತಿದ್ದಳು.

ತೈಸ್ತೈರ್ನಿರಾಕೃತಾ ಬಾಲಾ ನಿರ್ವಿಣ್ಣಾ ವಿಷಸಾದ ಹ।
ತತಸ್ತು ಕೃಪಯಾ ಗೌರೀ ಪ್ರಾದುರಾಸೀದ್ ದೃಶಃ ಪಥಿ ॥೩೧॥

ಅವರೆಲ್ಲರೂ ಕೂಡ ನಾವು ಗೌರಿಯನ್ನು ಕಂಡಿಲ್ಲವೆಂದು ನಿರಾಕರಿಸಿದರು. ಆಗ ಆ ಮಹಾದೇವಿಯು ಬಹಳ ದುಃಖದಿಂದ ನನಗೆ ಪಾರ್ವತಿಯು ಎಲ್ಲಿ ಕಾಣಸುತ್ತಾಳೆಂದು ಗೋಳಾಡಿದಳು. ಇವಳ ದೈನ್ಯಸ್ಥಿತಿಯನ್ನು ಕಂಡ ಪಾರ್ವತಿಯು ಅವಳ ಮೇಲಿನ ಕಾರುಣ್ಯದಿಂದ ಪ್ರತ್ಯಕ್ಷಳಾದಳು.

ತಾಂ ದೃಷ್ಟ್ವಾ ದಂಡವದ್ ಭೂಮೌ ನತ್ವಾ ತುಷ್ಟಾವ ಭಕ್ತಿತಃ।
ಜಯ ದೇವಿ ನಮಸ್ತುಭ್ಯಂ ಜಯ ಭಕ್ತವರಪ್ರದೆ ॥೩೨॥

ಪಾರ್ವತಿಯನ್ನು ಕಂಡು ಭೂಮಿಯಲ್ಲಿ ನಮಸ್ಕಾರ ಮಾಡಿದಳು. ಭಕ್ತಿಯಿಂದ ಸ್ತುತಿಸಿದಳು. ದೇವಿಯೇ ನಿನಗೆ ಭಕ್ತಿಯ ನಮಸ್ಕಾರಗಳು. ಭಕ್ತರಿಗೆ ವರವನ್ನು ನೀಡುವವಳೇ, ನಿನಗೆ ಜಯವಾಗಲಿ. ದೇವಿ ನೀನು ಶ್ರೇಷ್ಠಳಾಗಿರುವಿ.

ಜಯ ಶಂಕರವಾಮಾಂಗಿ ಮಂಗಲೇ ಸರ್ವಮಂಗಲೇ ।
ಸ್ತುತ್ವಾ ಚ ಪರಯಾ ಭಕ್ತ್ಯಾ ಗೌರೀಮಭ್ಯರ್ಚ್ಯ ಸಾದರಮ್ ॥೩೪॥

ರುದ್ರದೇವರ ವಾಮಾಂಗಿನಿಯಾದ ನಿನಗೆ ಜಯವಾಗಲಿ. ಸಮಸ್ತಜಗತ್ತಿಗೆ ಮಂಗಳಸ್ವರೂಪಳಾದ ನಿನಗೆ ಜಯವಾಗಲಿ. ಹೀಗೆ ಪಾರ್ವತಿಗೆ ಜಯಘೋಷ ಮಾಡಿದಳು. ಶ್ರೇಷ್ಠಭಕ್ತಿಯಿಂದ ಹಾಗೂ ಸ್ತೋತ್ರದಿಂದ ಅವಳನ್ನು ಪೂಜಿಸಿದಳು.

ಚಕಾರ ಚ ವ್ರತಂ ದೇವ್ಯಾಃ ಸರ್ವಸಂಪತ್ಪ್ರದಾಯಕಮ್ ।
ತತಸ್ತುಷ್ಟ್ವಾತು ಸಾ ದೇವೀ ದದೌ ತಸ್ಯೈ ವರಾನ್ ಬಹೂನ್ ॥೩೫॥

ಪ್ರತ್ಯಕ್ಷವಾಗಿ ನಿಂತ ಗೌರಿಗೆ ಷೋಡಶೋಪಚಾರಪೂಜೆಯನ್ನು ಮಾಡಿ, ಗೌರೀ ವ್ರತವನ್ನು ಆಚರಿಸಿದಳು. ಇದರಿಂದ ಪರಮಪ್ರೀತಳಾದ ಗೌರಿಯು ಆ ರಾಜಪತ್ನಿಗೆ ಅನೇಕ ವರಗಳನ್ನು ನೀಡಿದಳು.

ಇತಿ ದತ್ತ್ವಾ ವರಂ ತಸ್ಯೈ ತತ್ರೈವಾಂತರ್ದಧೇ ಶಿವಾ ।
ತತಃ ಸ್ವಭವನಂ ಗತ್ವಾ ವ್ರತಂ ಪತ್ಯಾ ಚಕಾರ ಹ ॥೩೬॥

ಹೀಗೆ ವರಗಳನ್ನು ನೀಡಿ ಪಾರ್ವತಿಯು ಅಲ್ಲಿಯೇ ಅಂತರ್ಧಾನಳಾದಳು. ಅನಂತರ ರಾಜಪತ್ನಿಯು ತನ್ನ ಅರಮನೆಗೆ ಬಂದು ತನ್ನ ಪತಿಯ ಜೊತೆ ವಿಧಿ ಪ್ರಕಾರವಾಗಿ ಗೌರೀವ್ರತವನ್ನು ಆಚರಿಸಿದಳು.

ಪೌರೈಃ ಸಾರ್ಧಂ ನೃಪಃ ಕೃತ್ವಾ ಸಾರ್ವಭೌಮಪದಂ ಯಯೌ ।
ಅಂತೇ ಜಗಾಮ ಚ ಸ್ವರ್ಗಂ ಕಾಂತಾಭ್ಯಾಂ ಸಹಿತೋ ನೃಪಃ ॥೩೭॥

ಆ ರಾಜನು ಎಲ್ಲ ಪ್ರಜೆಗಳ ಜೊತೆ ಈ ಗೌರೀವ್ರತವನ್ನು ವೈಭವದಿಂದ ಆಚರಿಸಿದನು. ಇದರ ಫಲವಾಗಿಯೇ ಸಾರ್ವಭೌಮನಾದನು. ಅಂತಿಮವಾಗಿ ತನ್ನ ಇಬ್ಬರು ಹೆಂಡಂದಿರ ಜೊತೆ ಸ್ವರ್ಗವನ್ನು ಪಡೆದನು.

ಯಃ ಶೋಭನಂ ವ್ರತಮಿದಂ ಕಥಿತಂ ಶಿವಾಯಾಃ
ಕುರ್ಯಾನ್ನರಃ ಪ್ರಿಯಕರಂ ನಿಯಮೇನ ಗೌರ್ಯಾಃ ।
ಪ್ರಾಪ್ಯ ಶ್ರಿಯಂ ಸಮಧಿಕಾಂ ಭುವಿ ಶತ್ರುಸಂಘಾನ್
ನಿರ್ಜಿತ್ಯ ನಿರ್ಮಲಪದಂ ಸಹಸಾ ಚ ಯಾತಿ ॥೩೮॥

ಪಾರ್ವತಿದೇವಿಗೆ ಅತ್ಯಂತ ಪ್ರೀತಿಕರವಾದ ಮಂಗಳವನ್ನುಂಟುಮಾಡುವ ಈ ಗೌರೀವ್ರತವನ್ನು ಭಕ್ತಿಯಿಂದ ಆಚರಿಸಬೇಕು. ಅಂಥವನು ಅಪಾರವಾದ ಸಂಪತ್ತನ್ನು ಪಡೆದುಕೊಳ್ಳುತ್ತಾನೆ. ಎಲ್ಲ ಶತ್ರುಗಳನ್ನು ಗೆಲ್ಲುತ್ತಾನೆ. ನಿರ್ಮಲವಾದ ಸ್ಥಾನವನ್ನು ಪಡೆದು ಸಂತೋಷದಿಂದ ಇರುತ್ತಾನೆ.

ಪುತ್ರಾರ್ಥೀ ಲಭತೇ ಪುತ್ರಾನ್ ಕಾಮಾರ್ಥೀ ಕಾಮಮಾಪ್ನುಯಾತ್ ।
ವಿದ್ಯಾರ್ಥೀ ಲಭತೇ ವಿದ್ಯಾಂ ಮೋಕ್ಷಾರ್ಥೀ ಮೋಕ್ಷಮಾಪ್ನುಯಾತ್ ।
ಪತಿಕಾಮಾ ಚ ಭರ್ತಾರಂ ಸೌಮಂಗಲ್ಯಂ ಸಮಾಪ್ನುಯಾತ್ ॥೩೮॥

ಮಗನನ್ನು ಅಪೇಕ್ಷಿಸುವವನಿಗೆ ಗಂಡುಮಗುವಾಗುತ್ತದೆ. ಇಷ್ಟಾರ್ಥಗಳನ್ನು ಅಪೇಕ್ಷಿಸುವವನಿಗೆ ಎಲ್ಲ ಸಂಪತ್ತುಗಳೂ ದೊರಕುತ್ತವೆ. ವಿದ್ಯಾರ್ಥಿಗಳಿಗೆ ವಿದ್ಯೆಯು ಬರುತ್ತದೆ. ಮೋಕ್ಷಾರ್ಥಿಗೆ ಮೋಕ್ಷವೇ ದೊರಕುತ್ತದೆ. ಪತಿಯನ್ನು ಅಪೇಕ್ಷಿಸುವ ನಾರಿಗೆ ಒಳ್ಳೆಯ ಗಂಡ ಸಿಗುತ್ತಾನೆ. ಸೌಮಾಂಗಲ್ಯವೂ ಕೂಡ ಅವಳಿಗೆ ದೊರಕುತ್ತದೆ.

ಇದಂ ವ್ರತಂ ಮಹಾಪುಣ್ಯಂ ಮಯಾ ಪ್ರೋಕ್ತಂ ಷಡಾನನ ।
ಸಿಧ್ಯಂತಿ ಸರ್ವಕಾರ್ಯಾಣಿ ಸ್ವರ್ಣಗೌರೀಪ್ರಸಾದತಃ ॥೩೯॥

॥ ಇತಿ ಸ್ಕಾಂದಪುರಾಣೇ ಸ್ಕಂದಶಂಕರಸಂವಾದೇ
ಸ್ವರ್ಣಗೌರೀವ್ರತಕಥಾ ಸಮಾಪ್ತಾ ॥

ಷಣ್ಮುಖನೇ ಮಹಾಪುಣ್ಯಕರವಾದ ವ್ರತವನ್ನು ನಾನು ನಿನಗೆ ಉಪದೇಶಿಸಿರುವೆನು. ಸ್ವರ್ಣಗೌರಿಯ ಪ್ರಸಾದದಿಂದ ಎಲ್ಲಾ ಕಾರ್ಯಗಳೂ ಈಡೇರುತ್ತವೆ.

॥ ಇಲ್ಲಿಗೆ ಸ್ಕಾಂದಪುರಾಣದಲ್ಲಿ ಸ್ಕಂದಶಂಕರಸಂವಾದದಲ್ಲಿ
ಸ್ವರ್ಣಗೌರೀ ಕಥೆಯು ಸಮಾಪ್ತವಾಯಿತು ॥

* * * *

# ಸ್ವರ್ಣಗೌರೀವ್ರತದ ಉದ್ಯಾಪನ ವಿಧಿ

ಯುಧಿಷ್ಠಿರಃ

ಉದ್ಯಾಪನವಿಧಿಂ ಬ್ರೂಹಿ ತೃತೀಯಾಯಾಃ ಸುರೇಶ್ವರ ।
ಭಕ್ತಿತಃ ಶ್ರೋತುಮಿಚ್ಛಾಮಿ ವ್ರತಸಂಪೂರ್ತಿಹೇತವೇ ॥೧॥

ಯುಧಿಷ್ಠಿರನು ಪ್ರಶ್ನಿಸುತ್ತಾನೆ – ಸುರೇಶ್ವರನೇ! ಗೌರೀತೃತೀಯಾವ್ರತದ ಉದ್ಯಾಪನ ವಿಧಿಯನ್ನು ನನಗೆ ತಿಳಿಸು. ವ್ರತದ ಪೂರ್ಣಫಲಪ್ರಾಪ್ತಿಗಾಗಿ ಭಕ್ತಿಶ್ರದ್ಧೆಯಿಂದ ಅದನ್ನು ನಾನು ಕೇಳ ಬಯಸುವೆನು.

ಶ್ರೀಕೃಷ್ಣಃ

ಉದ್ಯಾಪನವಿಧಿಂ ವಕ್ಷ್ಯೇ ಸಾವಧಾನಮಿದಂ ಶೃಣು ।
ತ್ರಿಂಶದ್ದಂಡಪ್ರಮಾಣೇನ ಪ್ರಮಿತಂ ದಕ್ಷಿಣೋತ್ತರೇ ॥೨॥

ಶ್ರೀಕೃಷ್ಣನು ಹೇಳುತ್ತಾನೆ – ಯುಧಿಷ್ಠಿರನೇ! ಮನಸ್ಸಿಟ್ಟು ಕೇಳು. ಗೌರೀವ್ರತದ ಉದ್ಯಾಪನದ ಬಗ್ಗೆ ನಿನಗೆ ಹೇಳುತ್ತೇನೆ. ಮೊದಲು ಮೂವತ್ತು ಗಜದ ಚೌಕದ ಅಂಗಣವನ್ನು ದಕ್ಷಿಣೋತ್ತರ ದಿಕ್ಕುಗಳಲ್ಲಿ ರಚಿಸಬೇಕು.

ಪ್ರತ್ಯಕ್ ಪ್ರಾಗಪಿ ರಾಜೇಂದ್ರ ಮಂಟಪಾಂಗಣಮಿಷ್ಯತೇ ।
ಗೋಚರ್ಮಮಾತ್ರಂ ಸಂಲಿಪ್ಯ ಗೋಮಯೇನ ವಿಚಕ್ಷಣಃ ॥೩॥

ಎಲೈ ಧರ್ಮರಾಜನೇ ! ಮನೆಯ ಉತ್ತರಭಾಗದ ಆ ಅಂಗಣದಲ್ಲಿ ಗೋಚರ್ಮದಷ್ಟು ಪ್ರಾಂತವನ್ನು ಗೋಮಯದಿಂದ ಶುದ್ಧಿಗೊಳಿಸಬೇಕು.

ಮಂಟಪಂ ಕಾರಯೇತ್ ತತ್ರ ನಾನಾವರ್ಣಂ ಸುಶೋಭನಮ್ ।
ಗೃಹಸ್ಯೋತ್ತರಪಾರ್ಶ್ವೇ ತು ಪದ್ಮಮಷ್ಟದಲಂ ಲಿಖೇತ್ ॥೪॥

ಆ ಸ್ಥಳದಲ್ಲಿ ಒಂದು ಮಂಟಪವನ್ನಿಡಬೇಕು. ಅನೇಕ ಬಣ್ಣಗಳಿಂದ ಶೋಭಿಸುತ್ತಿರಬೇಕು. ಆ ಮಂಟಪದ ಮಧ್ಯದಲ್ಲಿ ಎಂಟು ದಳದ ಪದ್ಮವನ್ನು ಬರೆಯಬೇಕು.

ತನ್ಮಧ್ಯೇ ಸ್ಥಾಪಯೇತ್ ಕುಂಭಮ್ ಅವ್ರಣಂ ಮೃಣ್ಮಯಂ ಶುಭಮ್ ।
ತಾಮ್ರಪಾತ್ರಂ ಪ್ರಕುರ್ವೀತ ಫಲೈಃ ಷೋಡಶಭಿಸ್ತಥಾ ॥೫॥

ಆ ಪದ್ಮದ ಮೇಲೆ ಯಾವುದೇ ರಂಧ್ರಗಳಿಲ್ಲದ ಮಣ್ಣಿನ ಒಂದು ಕಳಶವನ್ನು ಇಡಬೇಕು. ಸುತ್ತಲೂ ೧೬ ತಾಮ್ರದ ಪಾತ್ರೆಗಳನ್ನಿಡಬೇಕು. ಆ ತಾಮ್ರದ ಪಾತ್ರೆಗಳಲ್ಲಿ ತೆಂಗಿನಕಾಯಿಗಳನ್ನಿಡಬೇಕು.

ತದರ್ಧಾರ್ಧೇನ ವಾ ಕುರ್ಯಾದ್ ವಿತ್ತಶಾಠ್ಯಂ ನ ಕಾರಯೇತ್ ।
ಕರ್ಷಮಾತ್ರಸುವರ್ಣೇನ ಪ್ರತಿಮಾಂ ಕಾರಯೇದ್ ಬುಧಃ ॥೬॥

ಯಜಮಾನನು, ೧೬ ಕಲಶಗಳನ್ನಿಡಲು ಸಾಧ್ಯವಾಗದಿದ್ದರೆ ೮ ಕಲಶಗಳನ್ನಿಡಬೇಕು. ಅದೂ ಸಾಧ್ಯವಾಗದಿದ್ದರೆ ೪ ಕಲಶಗಳನ್ನಿಡಬೇಕು. ಆದರೆ ಯಾವುದೇ ಕಾರಣಕ್ಕೂ ವಿತ್ತಶಾಠ್ಯವನ್ನು ಮಾಡಬಾರದು. ಒಂದು ತೂಕದಷ್ಟು ಚಿನ್ನದ ಪ್ರತಿಮೆಯನ್ನು ಮಾಡಿಸಬೇಕು.

ತದರ್ಧಂ ಮಧ್ಯಮಂ ಪ್ರೋಕ್ತಂ ತದರ್ಧಂ ತು ಕನಿಷ್ಠಕಮ್ ।
ಕೃತ್ವಾ ರೂಪಂ ಪ್ರಯತ್ನೇನ ಪಾರ್ವತ್ಯಾಶ್ಚ ಹರಸ್ಯ ಚ ॥೭॥

ಒಂದು ತೂಕದಷ್ಟು ಚಿನ್ನದ ಪ್ರತಿಮೆಯನ್ನು ಮಾಡಲು ಸಾಧ್ಯವಾಗದಿದ್ದರೆ ಅದರ ಅರ್ಧಭಾಗದ ಚಿನ್ನದಿಂದಲಾದರೂ ಪ್ರತಿಮೆಯನ್ನು ಮಾಡಬೇಕು. ಅದೂ ಸಾಧ್ಯವಾಗದಿದ್ದರೆ ಅದರ ಅರ್ಧದಷ್ಟನ್ನಾದರೂ ಮಾಡಬೇಕು. ಹೀಗೆ ಪ್ರಯತ್ನಪೂರ್ವಕವಾಗಿ ಪಾರ್ವತೀ ಪರಮೇಶ್ವರರ ಪ್ರತಿಮೆಯನ್ನು ನಿರ್ಮಾಣ ಮಾಡಬೇಕು.

ಅಥ ತಾಮ್ರಮಯೇ ಪಾತ್ರೇ ಪ್ರತಿಮಾಂ ತತ್ರ ವಿನ್ಯಸೇತ್ ।
ಶ್ವೇತವಸ್ತ್ರಯುಗಚ್ಛನ್ನಂ ಶ್ವೇತಯಜ್ಞೋಪವೀತಕಮ್ ॥೮॥

ಅನಂತರ ಒಂದು ತಾಮ್ರದ ಪಾತ್ರೆಯಲ್ಲಿ ಪಾರ್ವತೀಪರಮೇಶ್ವರರ ಪ್ರತಿಮೆಗಳನ್ನಿಡಬೇಕು. ಎರಡು ಬಿಳಿವಸ್ತ್ರಗಳನ್ನು ಹೊದ್ದಿಸ ಬೇಕು. ಶುಭ್ರವಾದ ಯಜ್ಞೋಪವೀತವನ್ನು ಹಾಕಬೇಕು.

ಭಾಜನಂ ಚ ತಿಲೈಃ ಪೂರ್ಣಂ ಕಲಶೋಪರಿ ವಿನ್ಯಸೇತ್ ।
ಪಾರ್ವತೀಶ್ವರಯೋರರ್ಚಾಂ ಸ್ಥಾಪಯಿತ್ವಾ ವಿಧಾನತಃ ॥೯॥

ಕಲಶದ ಮೇಲೆ ಎಳ್ಳುಗಳಿಂದ ತುಂಬಿದ ಒಂದು ಪಾತ್ರೆಯನ್ನಿಡಬೇಕು. ಅದರಲ್ಲಿ ಪಾರ್ವತೀಪರಮೇಶ್ವರರ ಚಿನ್ನದ ಪ್ರತಿಮೆಯನ್ನಿಡಬೇಕು. ವಿಧಿಪ್ರಕಾರವಾಗಿ ಪೂಜೆಯನ್ನು ಮಾಡಬೇಕು.

ವೇದೋಕ್ತೇನ ಪ್ರತಿಷ್ಠಾ ಚ ಕರ್ತವ್ಯಾ ತು ಯಥಾವಿಧಿ ।
ಪಂಚಾಮೃತೇನ ಸ್ನಪನಂ ಕೃತ್ವಾ ದೇವಸ್ಯ ಚೋತ್ತಮಮ್ ॥೧೦॥

ಪೂಜೆಯ ಮೊದಲು ಪ್ರಾಣ ಪ್ರತಿಷ್ಠಾಪನೆಯನ್ನು ಮಾಡಬೇಕು. ಪಂಚಾಮೃತದಿಂದ ಅಭಿಷೇಕ ಮಾಡಬೇಕು. ಉತ್ತಮರೀತಿಯಲ್ಲಿ ಹೀಗೆ ಆರಾಧನೆಗೈಯಬೇಕು.

ಸ್ನಾನಂ ಚ ಕಾರಯೇತ್ ಪಶ್ಚಾತ್ ತತಃ ಪೂಜಾಂ ಚ ಕಾರಯೇತ್ ।
ಚಂದನೇನ ಸುಗಂಧೇನ ಸುಪುಷ್ಪೈಶ್ಚ ಪ್ರಪೂಜಯೇತ್ ॥೧೧॥

ಶುದ್ಧೋದಕದಿಂದ ಸ್ನಾನವನ್ನು ಮಾಡಿಸಿ ವಸ್ತ್ರಸಮರ್ಪಣೆ, ಗಂಧಸಮರ್ಪಣೆ, ಪುಷ್ಪಸಮರ್ಪಣೆಯನ್ನು ಅತ್ಯಂತ ಭಕ್ತಿಯಿಂದ ಮಾಡಬೇಕು.

ಧೂಪಂ ಚ ಕಲ್ಪಯೇದ್ ಗಂಧಂ ಚಂದನಾಗರುಸಂಯುತಮ್ ।
ನಾನಾಪ್ರಕಾರೈರ್ನೈವೇದ್ಯಂ ತದಾ ದೀಪಂ ಚ ಕಾರಯೇತ್ ॥೧೨॥

ಚಂದನಾಗರುಗಳಿಂದ ಕೂಡಿದ ಧೂಪಾರತಿಯನ್ನು ಮಾಡಬೇಕು. ಬಗೆ ಬಗೆಯ ಭಕ್ಷ್ಯಭೋಜ್ಯಗಳನ್ನು ಆ ದೇವರ ಮುಂದಿಟ್ಟು ನೈವೇದ್ಯವನ್ನು ಮಾಡಬೇಕು. ಭಕ್ತಿಯಿಂದ ಮಂಗಳಾರತಿಯನ್ನು ಮಾಡಬೇಕು.

ಅರ್ಚಯೇತ್ ಪೂಜಯೇತ್ ಭಕ್ತ್ಯಾ ಗಂಧಪುಷ್ಪೈಃ ಫಲಾಕ್ಷತೈಃ ।
ಆವಾಹನಾದಿ ಕರ್ತವ್ಯಂ ಪುರಾಣಾಂಗಸಮುದ್ಭವೈಃ ॥೧೩॥

ಭಕ್ತಿಯಿಂದ ಅರ್ಚನೆಯನ್ನು ಮಾಡಬೇಕು. ಗಂಧ, ಪುಷ್ಪ, ಫಲ, ಅಕ್ಷತೆ, ಆವಾಹನೆ ಮೊದಲಾದವುಗಳನ್ನು ಪುರಾಣಾದಿಗಳಲ್ಲಿ ಹೇಳಿದಂತೆ ಸಾಂಗೋಪಾಂಗವಾಗಿ ಮಾಡಬೇಕು.

ಕುರ್ಯಾದ್ ವಿಧಾನತಃ ಪೂಜಾಂ ಶ್ರದ್ಧಾಭಕ್ತಿಸಮನ್ವಿತಃ ।
ದೇವದೇವ ಸಮಾಗಚ್ಛ ಪ್ರಾರ್ಥಯೇಽಹಂ ಜಗತ್ಪತೇ ॥೧೪॥
ಇಮಾಂ ಮಯಾ ಕೃತಾಂ ಪೂಜಾಂ ಗೃಹಾಣ ಸುರಸತ್ತಮ ।
ಏವಂ ಪೂಜಾ ಪ್ರಕರ್ತವ್ಯಾ ರಾತ್ರೌ ಜಾಗರಣಂ ತತಃ ॥೧೫॥

ಶ್ರದ್ಧಾಭಕ್ತಿಗಳಿಂದ ಕೂಡಿದವನಾಗಿ ವಿಧಿಪ್ರಕಾರವಾಗಿ ಷೋಡಶೋಪಚಾರ ಪೂಜೆಯನ್ನು ಮಾಡಿ ಆ ಪಾರ್ವತೀಪರಮೇಶ್ವರರ ಬಳಿ ಹೀಗೆ ಪ್ರಾರ್ಥನೆಯನ್ನು ಮಾಡಬೇಕು. ದೇವತೆಗಳಿಗೂ ಒಡೆಯನಾದವನೇ! ನಾನು ಮಾಡುತ್ತಿರುವ ಪೂಜೆಯನ್ನು ಸ್ವೀಕರಿಸು. ನನ್ನನ್ನು ಅನುಗ್ರಹಿಸು. ಹೀಗೆ ಭಕ್ತಿಯಿಂದ ಪ್ರಾರ್ಥನೆಯನ್ನು ಮಾಡಿ ಪೂಜೆಯನ್ನು ಭಗವಂತನಿಗೆ ಸಮರ್ಪಣೆ ಮಾಡಿ, ರಾತ್ರಿಯ ಕಾಲದಲ್ಲಿ ಜಾಗರಣೆಯನ್ನು ಮಾಡಬೇಕು.

ಗೀತನೃತ್ಯಾದಿಸಂಯುಕ್ತಂ ಕಥಾಶ್ರವಣಪೂರ್ವಕಮ್ ।
ಅರ್ಚಯೇತ್ ಪೂರ್ವವದ್ ದೇವೀಂ ಪಶ್ಚಾದ್ಧೋಮಂ ಸಮಾಚರೇತ್॥೧೬॥

ಗಾನ, ನರ್ತನ ಮೊದಲಾದ ಸೇವೆಗಳನ್ನು ಮಾಡುತ್ತಾ, ಪಾರ್ವತಿಯ ಹಾಗೂ ರುದ್ರದೇವರ ಚರಿತ್ರೆಗಳನ್ನು ಕೇಳುತ್ತಾ ರಾತ್ರಿಕಾಲವನ್ನು ಕಳೆಯ ಬೇಕು. ಪ್ರಾತಃಕಾಲದಲ್ಲಿ ಹಿಂದಿನಂತೆ ಗೌರಿಯನ್ನು ಪೂಜಿಸಿ ಆ ಗೌರೀವ್ರತದ ಉದ್ಯಾಪನಾಹೋಮವನ್ನು ಆಚರಿಸಬೇಕು.

ಸ್ವಗೃಹ್ಯೋಕ್ತವಿಧಾನೇನ ಕೃತ್ವಾಗ್ನಿಸ್ಥಾಪನಂ ತತಃ ।
ಪ್ರಾರಭೇತ ತತೋ ಹೋಮಂ ನವಗ್ರಹಪುರಸ್ಸರಮ್ ॥೧೭॥

ತಮ್ಮ ಶಾಖೆಗೆ ಅನುಸಾರಿಯಾಗಿ ಗೃಹ್ಯಸೂತ್ರದಲ್ಲಿ ಹೇಳಲ್ಪಟ್ಟ ವಿಧಿಯಂತೆ ಅಗ್ನಿಪ್ರತಿಷ್ಠೆಯನ್ನು ಮಾಡಿ, ನವಗ್ರಹದೇವತೆಗಳನ್ನು ಪ್ರಾರ್ಥನೆ ಮಾಡಿ ಹೋಮವನ್ನು ಆಚರಿಸಬೇಕು.

ತಿಲಾಂಶ್ಚ ಯವಸಮ್ಮಿಶ್ರಾನಾಜ್ಯೇನ ಚ ಪರಿಪ್ಲುತಾನ್ ।
ಏವಂ ಸಮಾಪ್ಯ ಜುಹುಯಾತ್ ತತ್ರಾಚಾರ್ಯಂ ಪ್ರಪೂಜಯೇತ್ ॥೧೮॥

ತುಪ್ಪದಿಂದ ಮಿಶ್ರಿತವಾದ ಎಳ್ಳು ಹಾಗೂ ಯವವನ್ನು ಆಹುತಿಯನ್ನಾಗಿ ನೀಡಬೇಕು. ವಿಧಿಪ್ರಕಾರವಾಗಿ ಹೋಮವನ್ನು ಮುಗಿಸಿ ವ್ರತವನ್ನು ಮಾಡಿಸುವ ಆಚಾರ್ಯರನ್ನು ಪೂಜಿಸಬೇಕು.

ಅರ್ಘ್ಯಪುಷ್ಪಪ್ರದಾನೈಶ್ಚ ವಸ್ತ್ರಾಲಂಕಾರಭೂಷಣೈಃ ।
ಭಕ್ತ್ಯಾ ಚ ದಕ್ಷಿಣಾಂ ದದ್ಯಾತ್ ಸಹಗೋಧೂಮಲಡ್ಡುಕೈಃ ॥೧೯॥

ಆಚಾರ್ಯಪುರುಷನಿಗೆ ಕಾಲ್ತೊಳೆದು ಹೂವಿನ [illegible]ರವನ್ನು ಹಾಕಿ, ನೂತನ ವಸ್ತ್ರಗಳನ್ನು ನೀಡಿ, ಚಿನ್ನದ ಅಲಂಕಾರವಸ್ತುಗಳನ್ನು ದಾನವಾಗಿ ಕೊಡಬೇಕು. ಅಂದಿನ ದಿನ ಗೋಧಿಹಿಟ್ಟಿನ ಲಡ್ಡುಗೆಗಳನ್ನು ದಾನ ಮಾಡಬೇಕು. ಯಥಾಶಕ್ತಿ ದಕ್ಷಿಣೆಯನ್ನು ಕೂಡ ನೀಡಬೇಕು.

ಧೇನುಂ ಸದಕ್ಷಿಣಾಂ ದದ್ಯಾತ್ ಸುಶೀಲಾಂ ಚ ಪಯಸ್ವಿನೀಮ್ ।
ಸ್ವರ್ಣಶೃಂಗೀಂ ರೂಪ್ಯಖುರಾಂ ಕಾಂಸ್ಯದೋಹದಭಾಜನಾಮ್ ॥೨೦॥

ಗೋದಾನವನ್ನು ಕೂಡ ಮಾಡಬೇಕು. ಆ ಗೋವು ಒಳ್ಳೆಯ ಗುಣವನ್ನು ಹೊಂದಿರಬೇಕು. ಯಥೇಚ್ಛವಾಗಿ ಹಾಲನ್ನು ಕೊಡುತ್ತಿರಬೇಕು. ಅಂಥ ಗೋವಿನ ಕೋಡುಗಳಿಗೆ ಚಿನ್ನದ ಆವರಣವನ್ನು ಮಾಡಿಸಿರಬೇಕು. ಬೆಳ್ಳಿಯ ಗೊರಸನ್ನು ಹಾಕಿರಬೇಕು. ಹಾಲನ್ನು ಕರೆಯಲು ಕಂಚಿನ ಪಾತ್ರೆಯನ್ನು ನೀಡಬೇಕು.

ರತ್ನಪುಚ್ಛಾಂ ವಸ್ತ್ರಯುತಾಂ ತಾಮ್ರಪೃಷ್ಠಾಮಲಂಕೃತಾಮ್ ।
ಸವತ್ಸಾಮವ್ರಣಾಂ ಭದ್ರಾಂ ಗಾಸ್ತಥಾನ್ಯಾಃ ಪ್ರಯತ್ನತಃ ॥೨೧॥

ರತ್ನದ ಆಭರಣದಿಂದ ಬಾಲವನ್ನು ಸಿಂಗರಿಸಬೇಕು. ಅದರ ಬೆನ್ನಿನ ಮೇಲೆ ರೇಷ್ಮೆಯ ವಸ್ತ್ರವನ್ನು ಹೊದಿಸಿರಬೇಕು. ತಾಮ್ರದ ಕವಚದಿಂದ ಅದರ ಪೃಷ್ಠವನ್ನು ಅಲಂಕರಿಸಿರಬೇಕು. ಆ ಹಸುವು ಅಂಗವಿಕಾರವನ್ನು ಹೊಂದಿರಬಾರದು. ಕರುವಿನ ಜೊತೆ ಇರಬೇಕು. ಇಂಥ ಹಸುವನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು.

ಸುವರ್ಣೇನ ಸಮಾಯುಕ್ತಾಃ ಸ್ವಾಚಾರ್ಯಾಯ ಚ ಸಾಧವೇ ।
ಋತ್ವಿಜಃ ಷೋಡಶಾಪ್ಯೇವಂ ಪಕ್ವಾನ್ನೈಃ ಪ್ರೀಣಯೇತ್ ಸದಾ ॥೨೨॥

ಕುರ್ಯಾದ್ ವಿಧಾನತಃ ಪೂಜಾಂ ಶ್ರದ್ಧಾಭಕ್ತಿಸಮನ್ವಿತಃ ।
ದೇವದೇವ ಸಮಾಗಚ್ಛ ಪ್ರಾರ್ಥಯೇಽಹಂ ಜಗತ್ಪತೇ ॥೧೪॥
ಇಮಾಂ ಮಯಾ ಕೃತಾಂ ಪೂಜಾಂ ಗೃಹಾಣ ಸುರಸತ್ತಮ ।
ಏವಂ ಪೂಜಾ ಪ್ರಕರ್ತವ್ಯಾ ರಾತ್ರೌ ಜಾಗರಣಂ ತತಃ ॥೧೫॥

ಶ್ರದ್ಧಾಭಕ್ತಿಗಳಿಂದ ಕೂಡಿದವನಾಗಿ ವಿಧಿಪ್ರಕಾರವಾಗಿ ಷೋಡಶೋಪಚಾರ ಪೂಜೆಯನ್ನು ಮಾಡಿ ಆ ಪಾರ್ವತೀಪರಮೇಶ್ವರರ ಬಳಿ ಹೀಗೆ ಪ್ರಾರ್ಥನೆಯನ್ನು ಮಾಡಬೇಕು. ದೇವತೆಗಳಿಗೂ ಒಡೆಯನಾದವನೇ! ನಾನು ಮಾಡುತ್ತಿರುವ ಪೂಜೆಯನ್ನು ಸ್ವೀಕರಿಸು. ನನ್ನನ್ನು ಅನುಗ್ರಹಿಸು. ಹೀಗೆ ಭಕ್ತಿಯಿಂದ ಪ್ರಾರ್ಥನೆಯನ್ನು ಮಾಡಿ ಪೂಜೆಯನ್ನು ಭಗವಂತನಿಗೆ ಸಮರ್ಪಣೆ ಮಾಡಿ, ರಾತ್ರಿಯ ಕಾಲದಲ್ಲಿ ಜಾಗರಣೆಯನ್ನು ಮಾಡಬೇಕು.

ಗೀತನೃತ್ಯಾದಿಸಂಯುಕ್ತಂ ಕಥಾಶ್ರವಣಪೂರ್ವಕಮ್ ।
ಅರ್ಚಯೇತ್ ಪೂರ್ವವದ್ ದೇವೀಂ ಪಶ್ಚಾದ್ಧೋಮಂ ಸಮಾಚರೇತ್॥೧೬॥

ಗಾನ, ನರ್ತನ ಮೊದಲಾದ ಸೇವೆಗಳನ್ನು ಮಾಡುತ್ತಾ, ಪಾರ್ವತಿಯ ಹಾಗೂ ರುದ್ರದೇವರ ಚರಿತ್ರೆಗಳನ್ನು ಕೇಳುತ್ತಾ ರಾತ್ರಿಕಾಲವನ್ನು ಕಳೆಯ ಬೇಕು. ಪ್ರಾತಃಕಾಲದಲ್ಲಿ ಹಿಂದಿನಂತೆ ಗೌರಿಯನ್ನು ಪೂಜಿಸಿ ಆ ಗೌರೀವ್ರತದ ಉದ್ಯಾಪನಾಹೋಮವನ್ನು ಆಚರಿಸಬೇಕು.

ಸ್ವಗೃಹ್ಯೋಕ್ತವಿಧಾನೇನ ಕೃತ್ವಾಗ್ನಿಸ್ಥಾಪನಂ ತತಃ ।
ಪ್ರಾರಭೇತ ತತೋ ಹೋಮಂ ನವಗ್ರಹಪುರಸ್ಸರಮ್ ॥೧೭॥

ತಮ್ಮ ಶಾಖೆಗೆ ಅನುಸಾರಿಯಾಗಿ ಗೃಹ್ಯಸೂತ್ರದಲ್ಲಿ ಹೇಳಲ್ಪಟ್ಟ ವಿಧಿಯಂತೆ ಅಗ್ನಿಪ್ರತಿಷ್ಠೆಯನ್ನು ಮಾಡಿ, ನವಗ್ರಹದೇವತೆಗಳನ್ನು ಪ್ರಾರ್ಥನೆ ಮಾಡಿ ಹೋಮವನ್ನು ಆಚರಿಸಬೇಕು.

ತಿಲಾಂಶ್ಚ ಯವಸಮ್ಮಿಶ್ರಾನಾಜ್ಯೇನ ಚ ಪರಿಪ್ಲುತಾನ್ ।
ಏವಂ ಸಮಾಪ್ಯ ಜುಹುಯಾತ್ ತತ್ರಾಚಾರ್ಯಂ ಪ್ರಪೂಜಯೇತ್ ॥೧೮॥

ತುಪ್ಪದಿಂದ ಮಿಶ್ರಿತವಾದ ಎಳ್ಳು ಹಾಗೂ ಯವವನ್ನು ಆಹುತಿಯನ್ನಾಗಿ ನೀಡಬೇಕು. ವಿಧಿಪ್ರಕಾರವಾಗಿ ಹೋಮವನ್ನು ಮುಗಿಸಿ ವ್ರತವನ್ನು ಮಾಡಿಸುವ ಆಚಾರ್ಯರನ್ನು ಪೂಜಿಸಬೇಕು.

ಅರ್ಘ್ಯಪುಷ್ಪಪ್ರದಾನೈಶ್ಚ ವಸ್ತ್ರಾಲಂಕಾರಭೂಷಣೈಃ ।
ಭಕ್ತ್ಯಾ ಚ ದಕ್ಷಿಣಾಂ ದದ್ಯಾತ್ ಸಹಗೋಧೂಮಲಡ್ಡುಕೈಃ ॥೧೯॥

ಆಚಾರ್ಯಪುರುಷನಿಗೆ ಕಾಲ್ತೊಳೆದು ಹೂವಿನ [illegible]ರವನ್ನು ಹಾಕಿ, ನೂತನ ವಸ್ತ್ರಗಳನ್ನು ನೀಡಿ, ಚಿನ್ನದ ಅಲಂಕಾರವಸ್ತುಗಳನ್ನು ದಾನವಾಗಿ ಕೊಡಬೇಕು. ಅಂದಿನ ದಿನ ಗೋಧಿಹಿಟ್ಟಿನ ಲಡ್ಡುಗೆಗಳನ್ನು ದಾನ ಮಾಡಬೇಕು. ಯಥಾಶಕ್ತಿ ದಕ್ಷಿಣೆಯನ್ನು ಕೂಡ ನೀಡಬೇಕು.

ಧೇನುಂ ಸದಕ್ಷಿಣಾಂ ದದ್ಯಾತ್ ಸುಶೀಲಾಂ ಚ ಪಯಸ್ವಿನೀಮ್ ।
ಸ್ವರ್ಣಶೃಂಗೀಂ ರೂಪ್ಯಖುರಾಂ ಕಾಂಸ್ಯದೋಹದಭಾಜನಾಮ್ ॥೨೦॥

ಗೋದಾನವನ್ನು ಕೂಡ ಮಾಡಬೇಕು. ಆ ಗೋವು ಒಳ್ಳೆಯ ಗುಣವನ್ನು ಹೊಂದಿರಬೇಕು. ಯಥೇಚ್ಛವಾಗಿ ಹಾಲನ್ನು ಕೊಡುತ್ತಿರಬೇಕು. ಅಂಥ ಗೋವಿನ ಕೋಡುಗಳಿಗೆ ಚಿನ್ನದ ಆವರಣವನ್ನು ಮಾಡಿಸಿರಬೇಕು. ಬೆಳ್ಳಿಯ ಗೊರಸನ್ನು ಹಾಕಿರಬೇಕು. ಹಾಲನ್ನು ಕರೆಯಲು ಕಂಚಿನ ಪಾತ್ರೆಯನ್ನು ನೀಡಬೇಕು.

ರತ್ನಪುಚ್ಛಾಂ ವಸ್ತ್ರಯುತಾಂ ತಾಮ್ರಪೃಷ್ಠಾಮಲಂಕೃತಾಮ್ ।
ಸವತ್ಸಾಮವ್ರಣಾಂ ಭದ್ರಾಂ ಗಾಸ್ತಥಾನ್ಯಾಃ ಪ್ರಯತ್ನತಃ ॥೨೧॥

ರತ್ನದ ಆಭರಣದಿಂದ ಬಾಲವನ್ನು ಸಿಂಗರಿಸಬೇಕು. ಅದರ ಬೆನ್ನಿನ ಮೇಲೆ ರೇಷ್ಮೆಯ ವಸ್ತ್ರವನ್ನು ಹೊದಿಸಿರಬೇಕು. ತಾಮ್ರದ ಕವಚದಿಂದ ಅದರ ಪೃಷ್ಠವನ್ನು ಅಲಂಕರಿಸಿರಬೇಕು. ಆ ಹಸುವು ಅಂಗವಿಕಾರವನ್ನು ಹೊಂದಿರಬಾರದು. ಕರುವಿನ ಜೊತೆ ಇರಬೇಕು. ಇಂಥ ಹಸುವನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು.

ಸುವರ್ಣೇನ ಸಮಾಯುಕ್ತಾಃ ಸ್ವಾಚಾರ್ಯಾಯ ಚ ಸಾಧವೇ ।
ಋತ್ವಿಜಃ ಷೋಡಶಾಪ್ಯೇವಂ ಪಕ್ವಾನ್ನೈಃ ಪ್ರೀಣಯೇತ್ ಸದಾ ॥೨೨॥

ಚಿನ್ನದ ಆಭರಣಗಳಿಂದ ಕಂಗೊಳಿಸುವ ಉತ್ತಮವಾದ ಹಸುವನ್ನು ತಮ್ಮ ಸಾಧುವಾದ ಆಚಾರ್ಯಪುರುಷನಿಗೆ ದಾನ ಮಾಡಬೇಕು. ಹದಿನಾರು ಋತ್ವಿಕ್ ಆಚಾರ್ಯರುಗಳಿಗೂ ಕೂಡ ಅನಂತರ ಅನ್ನದಾನದಿಂದ ತೃಪ್ತಿಪಡಿಸಬೇಕು.

**ಷೋಡಶಪ್ರಮಿತಂ ದದ್ಯಾತ್ ಬ್ರಾಹ್ಮಣೇಭ್ಯ ಉಪಾಯನಮ್ ।**
**ವಂಶಪಾತ್ರಸ್ಥಿತೈಃ ಪಶ್ಚಾತ್ ಪಕ್ವಾನ್ನಂ ಪಾಯಸೈಃ ಶುಭೈಃ ॥೨೩॥**

ಬ್ರಾಹ್ಮಣರಿಗೆ ಹದಿನಾರು ಉಪಾಯನಗಳನ್ನು ದಾನ ಮಾಡಿ, ಬಿದುರಿನ ಪಾತ್ರೆಯಲ್ಲಿ ಪಾಯಸದಾನವನ್ನು ಮಾಡಿ ಅನ್ನಸಂತರ್ಪಣೆಯನ್ನು ನಡೆಸಬೇಕು.

**ಅನ್ಯೇಭ್ಯೋ ಬ್ರಾಹ್ಮಣೇಭ್ಯಶ್ಚ ದಕ್ಷಿಣಾಂ ಚ ಪ್ರಯತ್ನತಃ ।**
**ಷೋಡಶಾಬ್ದೇಷು ಕೃತ್ವೈವಂ ಪೂಜಯೇದ್ ಭಕ್ತಿಪೂರ್ವಕಮ್ ॥೨೪॥**

ಹದಿನಾರು ಮಂದಿ ಬ್ರಾಹ್ಮಣರಷ್ಟೇ ಅಲ್ಲದೇ ಉಳಿದ ಬ್ರಾಹ್ಮಣರಿಗೂ ಕೂಡ ಪ್ರಯತ್ನಪೂರ್ವಕವಾಗಿ ಅನ್ನದಾನಾದಿಗಳನ್ನು ಮಾಡಿ ದಕ್ಷಿಣೆಯನ್ನು ನೀಡಬೇಕು. ಹೀಗೆ ಹದಿನಾರು ವರ್ಷಗಳ ಕಾಲ ಅತ್ಯಂತ ಭಕ್ತಿಯಿಂದ ಗೌರೀವ್ರತವನ್ನು ಆಚರಿಸಬೇಕು.

ಬಂಧುಭಿಃ ಸಹ ಭುಂಜೀತ ನಿಯತಶ್ಚ ಪರೇಽಹನಿ ।
ಏವಂ ಕೃತ್ವಾ ಭವೇದ್ ರಾಜನ್ ಪರಿಪೂರ್ಣವ್ರತೀ ಭುವಿ ॥೨೫॥

॥ ಇತಿ ಶ್ರೀಸ್ಕಾಂದಪುರಾಣೇ ಕೃಷ್ಣಯುಧಿಷ್ಠಿರಸಂವಾದೇ
ಸ್ವರ್ಣಗೌರೀವ್ರತೋದ್ಯಾಪನಂ ಸಮಾಪ್ತಮ್ ॥

ಬ್ರಾಹ್ಮಣರಿಗೆ ಅತಿಥಿ ಅಭ್ಯಾಗತರಿಗೆ ಭೋಜನವನ್ನು ಬಡಿಸಿದ ಮೇಲೆ ತಾನು ತನ್ನ ಬಂಧು ಜನರ ಜೊತೆ ಹರಿಸ್ಮರಣೆಯನ್ನು ಮಾಡುತ್ತಾ ಮರುದಿವಸ ಊಟವನ್ನು ಮಾಡಬೇಕು. ಧರ್ಮರಾಜನೇ ಹೀಗೆ ಭಕ್ತಿಶ್ರದ್ಧೆಗಳಿಂದ ಗೌರೀವ್ರತವನ್ನು ಆಚರಣೆ ಮಾಡಿದರೆ ಆ ವ್ರತವು ಸಂಪೂರ್ಣವಾಗುತ್ತದೆ.

ಇಲ್ಲಿಗೆ ಸ್ಕಂದಪುರಾಣದಲ್ಲಿ ಕೃಷ್ಣಯುಧಿಷ್ಠಿರಸಂವಾದದಲ್ಲಿ ಸ್ವರ್ಣಗೌರೀವ್ರತದ ಉದ್ಯಾಪನೆಯೆಂಬ ಭಾಗವು ಸಮಾಪ್ತವಾಯಿತು.

* * * *

## ಅರ್ಧನಾರೀಶ್ವರರಾದ ಕಥೆ

ಅರ್ಧನಾರೀಶ್ವರ ರೂಪ ರುದ್ರದೇವರಿಗೆ ಮಾತ್ರ ಇರುವುದಿಲ್ಲ. ಮಹಾವಿಷ್ಣು, ಹಾಗೂ ಚತುರ್ಮುಖಬ್ರಹ್ಮದೇವರಿಗೂ ಕೂಡ ಇರುತ್ತದೆ. ಪತ್ನಿಯಾದವಳು ಪತಿಯ ಅರ್ಧದೇಹದಂತಿರಬೇಕೆಂಬುದೇ ಇದರ ಮರ್ಮ. ಶಿವಪುರಾಣದಲ್ಲಿ ಪಾರ್ವತೀ-ಪರಮೇಶ್ವರರು ಅರ್ಧನಾರೀಶ್ವರರಾದ ಬಗ್ಗೆ ಒಂದು ಘಟನೆಯ ಉಲ್ಲೇಖವಿದೆ. ಭೃಂಗಿ ಎಂಬ ಒಬ್ಬ ಸಾಧಕನು ಪರಮಶಿವಭಕ್ತನಾಗಿರುತ್ತಾನೆ. ತನ್ನ ಶಿವಭಕ್ತಿಯ ಪರಾಕಾಷ್ಠೆಯಿಂದ ಪಾರ್ವತಿಯನ್ನೂ ಕೂಡ ನಿರ್ಲಕ್ಷಿಸುತ್ತಿದ್ದನು. ಶಿವನ ಎಡಭಾಗದ ತೊಡೆಯ ಮೇಲೆ ಕುಳಿತಿರುವ ಪಾರ್ವತಿಯನ್ನು ಪೂಜಿಸುತ್ತಿರಲಿಲ್ಲ. ತಾನು ದುಂಬಿಯ ರೂಪವನ್ನು ಸ್ವೀಕರಿಸಿ ಶಿವನ ತಲೆಯ ಸುತ್ತ ಪ್ರದಕ್ಷಿಣೆ ಮಾಡಿ ಹೊರಟುಹೋಗುತ್ತಿದ್ದನು. ಇವನ ಈ ವರ್ತನೆಯನ್ನು ಕಂಡು ಪಾರ್ವತಿಗೆ ಸಿಟ್ಟು ಬರುತ್ತದೆ. ಆದಕ್ಕಾಗಿ ಆ ಭೃಂಗಿಗೆ ಸರ್ವವೂ ನಾಶವಾಗುವಂತೆ ಶಾಪವನ್ನಿತ್ತಳು. ಮತ್ತು ತನ್ನ ಪತಿಯಾದ ರುದ್ರದೇವರ ಅರ್ಧದೇಹವೇ ತಾನಾಗಿ ನಿಂತಳು.

ತಂತ್ರಸಾರ ಎಂಬ ತಂತ್ರಗ್ರಂಥವೊಂದರಲ್ಲಿ ಅರ್ಧನಾರೀಶ್ವರ ರೂಪದ ವರ್ಣನೆ ಹೀಗಿದೆ -

ನೀಲಪ್ರವಾಲರುಚಿರಂ ವಿಲಸತ್ತ್ರಿನೇತ್ರಂ<br>
ಪಾಶಾರುಣೋತ್ಪಲಕಪಾಲಕಶೂಲಹಸ್ತಂ ।<br>
ಅರ್ಧಾಂಬಿಕೇಶಮನಿಶಂ ಪ್ರವಿಭಕ್ತಭೂಷಂ<br>
ಬಾಲೇಂದುಬದ್ಧಮುಕುಟಂ ಪ್ರಣಮಾಮಿ ರೂಪಂ ॥

ನೀಲವರ್ಣ ಹಾಗೂ ಚಿಗುರಿನ ಬಣ್ಣದಿಂದ ಕಂಗೊಳಿಸುತ್ತಿರುವ ಮೂರು ಕಣ್ಣುಗಳಿಂದ ಶೋಭಾಯಮಾನವಾದ ಪಾಶ, ಕಮಲ, ಕಪಾಲ, ಶೂಲ ಇವುಗಳನ್ನು ನಾಕು ಕೈಗಳಲ್ಲಿ ಧಾರಣೆ ಮಾಡಿರುವ, ವಿಶಿಷ್ಟ ಆಭರಣಗಳನ್ನು ಧರಿಸಿರುವ ಅರ್ಧ ಪಾರ್ವತಿಯ ದೇಹವುಳ್ಳ, ಬಾಲಚಂದ್ರನನ್ನು ಮುಕುಟದಲ್ಲಿ ಧರಿಸಿದ ಅರ್ಧನಾರೀಶ್ವರರೂಪವನ್ನು ನಮಸ್ಕಾರ ಮಾಡುತ್ತೇನೆ.

ವಿಷ್ಣುಧರ್ಮೋತ್ತರದಲ್ಲಿ ಹೀಗೆ ಹೇಳಿದ್ದಾರೆ -

ಅಷ್ಟಮೀ ನವಮೀಯುಕ್ತಾ ನವಮೀ ಚಾಷ್ಟಮೀಯುತಾ ।
ಅರ್ಧನಾರೀಶ್ವರಪ್ರಾಯಾ ಉಮಾಮಾಹೇಶ್ವರೀ ತಿಥಿಃ ॥

ಅಷ್ಟಮಿಯು ನವಮಿಯಿಂದ ಕೂಡಿದಾಗ, ನವಮಿಯು ಅಷ್ಟಮಿಯಿಂದ ಕೂಡಿದಾಗ ಅರ್ಧನಾರೀಶ್ವರರಂತಿರುವ ಆ ತಿಥಿಯಲ್ಲಿ ಉಮಾಮಾಹೇಶ್ವರೀ ವ್ರತವನ್ನು ಆಚರಿಸಬೇಕು ಎಂದು.

ಅರ್ಧನಾರೀಶ್ವರ ಮಂತ್ರವನ್ನು ಜಪಿಸುವುದರಿಂದ ಶೀಘ್ರವಾಗಿ ವಿವಾಹವಾಗುತ್ತದೆ. ವಿವಾಹವಾದವರಿಗೆ ದಾಂಪತ್ಯಸುಖವು ಅಭಿವೃದ್ಧವಾಗುತ್ತದೆ ಎಂಬುದಾಗಿ ಅದೇ ತಂತ್ರಸಾರ ಗ್ರಂಥವು ಹೇಳುತ್ತದೆ.

ಅನುವ್ಯಾಖ್ಯಾನದಲ್ಲಿ ಶ್ರೀಮಧ್ವಾಚಾರ್ಯರು ತಿಳಿಸಿದ ಪಾರ್ವತೀಪರಮೇಶ್ವರರ ಚಿಂತನೆಯನ್ನು ನಾವು ದಿನನಿತ್ಯವೂ ಮಾಡಬೇಕು -

ಉಮಾ ವೈ ವಾಕ್ ಸಮುದ್ದಿಷ್ಟಾ ಮನೋ ರುದ್ರ ಉದಾಹೃತಃ ।
ತದೇತನ್ಮಿಥುನಂ ಜ್ಞಾತ್ವಾ ನ ದಾಂಪತ್ಯಾದ್ ವಿಹೀಯತೇ ॥

'ವಾಕ್' ಎಂದರೆ 'ಉಮೆ'. 'ಮನಸ್' ಎಂದರೆ 'ರುದ್ರ'. ಇವರೀರ್ವರ ಜೊತೆಯಾಗುವಿಕೆಯನ್ನು ಚಿಂತನೆ ಮಾಡುವುದರಿಂದ ದಾಂಪತ್ಯದಿಂದ ಎಂದೂ ವಿಯೋಗವಾಗುವುದಿಲ್ಲ. (ಈ ಶ್ಲೋಕವನ್ನು ಪಠಿಸುವುದರಿಂದ ಶೀಘ್ರವಾಗಿ ವಿವಾಹವಾಗ್ತುದೆ).

## ಪಾರ್ವತಿ ಎಂಬ ಹೆಸರು ಅನ್ವರ್ಥಕ

ತಿಥಿಭೇದೇ ಕಲ್ಪಭೇದೇ ಪರ್ವಭೇದಪ್ರಭೇದತಃ ।
ಖ್ಯಾತೌ ತೇಷು ಚ ವಿಖ್ಯಾತಾ ಪಾರ್ವತೀ ತೇನ ಕೀರ್ತಿತಾ ॥
ಮಹೋತ್ಸವವಿಶೇಷಶ್ಚ ಪರ್ವಸ್ತ್ವಿತಿ ಪ್ರಕೀರ್ತಿತಮ್ ।
ತಸ್ಯಾಧಿದೇವೀ ಯಾ ಸಾ ಪಾರ್ವತೀ ಪರಿಕೀರ್ತಿತಾ ॥

ಸವ್ಯದಕ್ಷಿಣಸಂಸ್ಥಾನೌ ಬ್ರಹ್ಮವಿಷ್ಣೂ ತು ಜಗ್ಮತುಃ ।
ಹಂಸಂ ಚ ಗರುಡಂ ಚೈವ ಸಮಾರುಹ್ಯ ಮಹಾಪ್ರಭೌ ॥೨೯॥

ಅಥಾದಿತಿರ್ದಿತಿಃ ಸಾ ಚ ದನುಃ ಕದ್ರೂಃ ಸುಪರ್ಣಜಾ ।
ಪೌಲೋಮೀ ಸುರಸಾ ಚೈವ ಸಿಂಹಿಕಾ ಸುರಭಿರ್ಮುನಿಃ ॥೩೦॥

ಸಿದ್ಧಿರ್ಮಾಯಾ ಕ್ಷಮಾ ದುರ್ಗಾ ದೇವೀ ಸ್ವಾಹಾ ಸ್ವಧಾ ಸುಧಾ ।
ಸಾವಿತ್ರೀ ಚೈವ ಗಾಯತ್ರೀ ಲಕ್ಷ್ಮೀಃ ಸಾ ದಕ್ಷಿಣಾದ್ಯುತಿಃ ॥೩೧॥

ಸ್ಪೃಹಾ ಮತಿರ್ಧೃತಿರ್ಬುದ್ಧಿರ್ಮಂಥೀ ಋದ್ಧಿಃ ಸರಸ್ವತೀ ।
ರಾಕಾ ಕುಹೂಃ ಸಿನೀವಾಲೀ ದೇವೀ ಭಾನುಮತೀ ತಥಾ ॥೩೨॥

ಧರಣೀ ಧಾರಣೀ ವೇಲಾ ರಾಜ್ಞೀ ಚಾಽಪಿ ಚ ರೋಹಿಣೀ ।
ಇತ್ಯೇತಾಶ್ಚಾನ್ಯದೇವಾನಾ ಮಾತರಃ ಪತ್ನಯಸ್ತಥಾ ॥೩೩॥

ಉದ್ವಾಹಂ ದೇವದೇವಸ್ಯ ಜಗ್ಮುಃ ಸರ್ವಾ ಮುದಾನ್ವಿತಾಃ ।
ಉರಗಾ ಗರುಡಾ ಯಕ್ಷಾ ಗಂಧರ್ವಾಃ ಕಿನ್ನರಾ ನರಾಃ ॥೩೪॥

ಸಾಗರಾ ಗಿರಯೋ ಮೇಘಾ ಮಾಸಾಃ ಸಂವತ್ಸರಾಸ್ತಥಾ ।
ವೇದಾ ಮಂತ್ರಾಸ್ತಥಾ ಯಜ್ಞಾಃ ಶ್ರೌತಾ ಧರ್ಮಾಶ್ಚ ಸರ್ವಶಃ ॥೩೫॥

ಹುಂಕಾರಾಃ ಪ್ರಣವಾಶ್ಚೈವ ಇತಿಹಾಸಾಃ ಸಹಸ್ರಶಃ ।
ಕೋಟಿಶಶ್ಚ ತಥಾ ದೇವಾ ಮಹೇಂದ್ರಾದ್ಯಾಃ ಸವಾಹನಾಃ ॥೩೬॥

ಅನುಜಗ್ಮುರ್ಮಹಾದೇವಂ ಕೋಟಿಶೋಽರ್ಬುದಶಶ್ಚ ಹಿ ।
ಗಣಾಶ್ಚ ಪೃಷ್ಠತೋ ಜಗ್ಮುಃ ಶಂಖವರ್ಣಾಶ್ಚ ಕೋಟಿಶಃ ॥೩೭॥

ದಶಭಿಃ ಕೇಕರಾಖ್ಯಾಶ್ಚ ವಿದ್ಯುತೋಽಷ್ಟಾಭಿರೇವ ಚ ।
ಚತುಃಷಷ್ಟ್ಯಾ ವಿಶಾಖಾಶ್ಚ ನವಭಿಃ ಪರಿಯಾತ್ರಿಕಾಃ ॥೩೮॥

ಷಡ್ಭಿಃ ಸರ್ವಾಂತಕಃ ಶ್ರೀಮಾಂಸ್ತಥೈವ ವಿಕೃತಾನನಃ ।
ಜ್ವಾಲಾಕೇಶೋ ದ್ವಾದಶಭಿಃ ಕೋಟಿಭಿಃ ಸಂವೃತೋ ಯಯೌ ॥೩೯॥

ಸಪ್ತಭಿಃ ಸಮದಃ ಶ್ರೀಮಾಂದುಂದುಭೋಽಷ್ಟಾಭಿರೇವ ಚ ।
ಪಂಚಭಿಶ್ಚ ಕಪಾಲೀಶಃ ಷಡ್ಭಿಃ ಸಂಹ್ರಾದಕಃ ಶುಭಃ ॥೪೦॥

ಕೋಟಿಕೋಟಿಭಿರೇವೈಕಃ ಕುಂಡಕಃ ಕುಂಭಕಸ್ತಥಾ ।
ವಿಷ್ಟಂಭೋಽಷ್ಟಾಭಿರೇವೇಹ ಗಣಪಃ ಸರ್ವಸತ್ತಮಃ ॥೪೧॥

ಪಿಪ್ಪಲಶ್ಚ ಸಹಸ್ರೇಣ ಸನ್ನಾದಶ್ಚ ತಥಾ ಬಲೀ ।
ಆವೇಶನಸ್ತಥಾಽಷ್ಟಾಭಿಃ ಸಪ್ತಭಿಶ್ಚಂದ್ರ ತಾಪನಃ ॥೪೨॥

ಮಹಾಕೇಶಃ ಸಹಸ್ರೇಣ ನಂದಿರ್ದ್ವಾದಶಭಿಸ್ತಥಾ ।
ನಗಃ ಕಾಲಃ ಕರಾಳಶ್ಚ ಮಹಾಕಾಲಃ ಶತೇನ ಚ ॥೪೩॥

ಅಗ್ನಿಕಃ ಶತಕೋಟ್ಯಾ ವೈ ಕೋಟ್ಯಾಽಗ್ನಿಮುಖ ಏವ ಚ ।
ಆದಿತ್ಯಮೂರ್ಧಾ ಕೋಟ್ಯಾ ಚ ಕೋಟ್ಯಾ ಚೈವ ಧನಾವಹಃ ॥೪೪॥

ಸನ್ನಾಗಶ್ಚ ಶತೇನೈವ ಕುಮುದಃ ಕೋಟಿಭಿಸ್ತ್ರಿಭಿಃ ।
ಅಮೋಘಃ ಕೋಕಿಲಶ್ಚೈವ ಕೋಟಿಕೋಟ್ಯಾ ಸುಮಂತ್ರಕಃ ॥೪೫॥

ಕಾಕಪಾದಸ್ತಥಾ ಷಷ್ಟ್ಯಾ ಷಷ್ಟ್ಯಾ ಸಂತಾನಕೋ ಗಣಃ ।
ಮಹಾಬಲಶ್ಚ ನವಭಿರ್ಮಧುಪಿಂಗಶ್ಚ ಪಿಂಗಲಃ ॥೪೬॥

ನೀಲೋ ನವತ್ಯಾ ಸಪ್ತತ್ಯಾ ಚತುರ್ವಕ್ತ್ರಶ್ಚ ಪೂರ್ವಪಾತ್ ।
ವೀರಭದ್ರಶ್ಚತುಃಷಷ್ಟ್ಯಾ ಕರಣೋ ಬಾಲಕಸ್ತಥಾ ॥೪೭॥

ಪಂಚಾಕ್ಷಃ ಶತಮನ್ಯುಶ್ಚ ಮೇಘಮನ್ಯುಶ್ಚ ವಿಂಶತಿಃ ।
ಕಾಷ್ಠಕೋಟಿಶ್ಚತುಃಷಷ್ಟ್ಯಾ ಸುಕೇಶೋ ವೃಷಭಸ್ತಥಾ ॥೪೮॥

ವಿಶ್ವರೂಪಸ್ತಾಲಕೇತುಃ ಪಂಚಾಶಚ್ಚ ಸಿತಾನನಃ ।
ಈಶಾನೋ ವೃದ್ಧದೇವಶ್ಚ ದೀಪ್ತಾತ್ಮಾ ಮೃತ್ಯುಹಾ ತಥಾ ॥೪೯॥

ವಿಷಾದೋಯಮಹಾ ಚೈವ ಗಣೋಭೃಂಗರಿಟಿಸ್ತಥಾ ।
ಅಶನೀ ಹಾಸಕಶ್ಚೈವ ಚತುಃಷಷ್ಟ್ಯಾ ಸಹಸ್ರಪಾತ್ ॥೫೦॥

ಏತೇ ಚಾನ್ಯೇ ಚ ಗಣಪಾ ಅಸಂಖ್ಯಾತಾ ಮಹಾಬಲಾಃ ।
ಸರ್ವೇ ಸಹಸ್ರಹಸ್ತಾಶ್ಚ ಜಟಾಮುಕುಟಧಾರಿಣಃ ॥೫೧॥

ಚಂದ್ರಲೇಖಾವತಂಸಾಶ್ಚ ನೀಲಕಂಠಾಸ್ತ್ರಿಲೋಚನಾಃ ।
ಹಾರಕುಂಡಲಕೇಯೂರಮುಕುಟಾದ್ಯೈರಲಂಕೃತಾಃ ॥೫೨॥

ಅಣಿಮಾದಿಗುಣೈರ್ಯುಕ್ತಾಃ ಶಕ್ತಾಃ ಶಾಪಪ್ರಸಾದಯೋಃ ।
ಸೂರ್ಯಕೋಟಿ ಪ್ರತೀಕಾಶಾಸ್ತತ್ರಾಽಽಜಗ್ಮುರ್ಗಣೇಶ್ವರಾಃ ॥೫೩॥

ಪಾತಾಲಾಂಬರಭೂಮಿಸ್ಥಾಃ ಸರ್ವಲೋಕನಿವಾಸಿನಃ ।
ತುಂಬುರುರ್ನಾರದೋ ಹಾಹಾಹೂಹೂಶ್ಚೈವ ತು ಸಾಮಗಾಃ ॥೫೪॥

ತಂತ್ರೀಮಾದಾಯ ವಾದ್ಯಾಂಶ್ಚಾಽವಾದಯನ್ಸ್ಟಂಕರೋತ್ಸವೇ ।
ಋಷಯಃ ಕೃತ್ಸ್ನ ಶಶ್ಚೈವ ವೇದಗೀತಾಂಸ್ತಪೋಧನಾಃ ॥೫೫॥

ಪುಣ್ಯಾನ್ವೈವಾಹಿಕಾನ್ ಮಂತ್ರಾನ್ ಜೇಪುಃ ಸಂಹೃಷ್ಟಮಾನಸಾಃ ।
ಏವಂ ಪ್ರತಸ್ಥೇ ಗಿರಿಶೋ ವೀಜ್ಯಮಾನಶ್ಚ ಗಂಗಯಾ ॥೫೬॥

ತಥಾ ಯಮುನಯಾ ಚಾಪಾಂಪತಿ ನಾ ಛತ್ರಧಾರಿಣಾ
ಸ್ತ್ರೀಭಿರ್ನಾನಾವಿಧಾಲಾಪೈರ್ಲಾಜಾಭಿಶ್ಚಾನುಮೋದಿತಃ ॥೫೭॥

ಮಹೋತ್ಸವೇನ ದೇವೇಶೋ ಗಿರಿಸ್ಥಾನಂ ವಿವೇಶ ಸಃ ।
ಪ್ರಭಾಸತ್ಸ್ವರ್ಣಕಲಶಂ ತೋರಣಾನಾಂ ಶತೈರ್ಯುತಮ್ ॥೫೮॥

ವೈಡೂರ್ಯಬದ್ಧಭೂಮಿಸ್ಥಂ ರತ್ನಜೈಶ್ಚ ಗೃಹೈರ್ಯುತಮ್ ।
ತತ್ಪ್ರವಿಶ್ಯ ಸ್ತೂಯಮಾನೋ ದ್ವಾರಮಭ್ಯಾಸಸಾದ ಹ ॥೫೯॥

ತತೋ ಹಿಮಾಚಲಸ್ತತ್ರ ದೃಶ್ಯತೇ ವ್ಯಾಕುಲಾಕುಲಃ ।
ಆದಿಶದಾತ್ಮ ಭೃತ್ಯಾನಾಂ ಮಹಾದೇವ ಉಪಸ್ಥಿತೇ ॥೬೦॥

ತತೋ ಬ್ರಹ್ಮಾಣಮಚಲೋ ಗುರುತ್ವೇ ಪ್ರಾರ್ಥಯತ್ತದಾ ।
ಕೃತ್ಯಾನಾಂ ಸರ್ವಭಾರೇಷು ವಾಸುದೇವಂ ಚ ಬುದ್ಧಿಮಾನ್ ॥೬೧॥

ಪ್ರತ್ಯಾಹ ಚ ವಿವಾಹೇಽಸ್ಮಿನ್‌ಕುಮಾರೀಭ್ರಾತರಂ ವಿನಾ ।
ಭವಿಷ್ಯತಿ ಕಥಂ ವಿಷ್ಣೋ ! ಲಾಜಹೋಮಾದಿಕರ್ಮಸು ॥೬೨॥

ಸುತೋ ಹಿ ಮಮ ಮೈನಾಕಃ ಸ ಪ್ರವಿಷ್ಟೋಽರ್ಣವೇ ಸ್ಥಿತಃ ।
ಇತಿ ಚಿಂತಾವಿಷಣ್ಣಂ ತಂ ವಿಷ್ಣುರಾಹ ಮಹಾಮತಿಃ ॥೬೩॥

ಅತ್ರ ಚಿಂತಾ ನ ಕರ್ತವ್ಯಾ ಗಿರಿರಾಜ ! ಕಥಂಚನ ।
ಅಹಂ ಭ್ರಾತಾ ಜಗನ್ಮಾತುರೇತದೇವಂ ಚ ನಾನ್ಯಥಾ ॥೬೪॥

ತತಃ ಪ್ರಮುದಿತಃ ಶೈಲಃ ಪಾರ್ವತೀಂ ಚ ಸ್ವಲಂಕೃತಾಮ್ ।
ಸಖೀಭಿಃ ಕೋಟಿಸಂಖ್ಯಾಭಿರ್ವೃತಾಂ ಪ್ರಾವೇಶಯತ್ತದಃ ॥೬೫॥

ತತೋ ನೀಲಮಯಸ್ತಂಭಂ ಜ್ವಲತ್ಕಾಂಚನಕುಟ್ಟಿಮಮ್ ।
ಮುಕ್ತಾಜಾಲ ಪರಿಷ್ಕಾರಂ ಜ್ವಲಿತೌಷಧಿದೀಪಿತಮ್ ॥೬೬॥

ರತ್ನಾಸನಮಹಸ್ರಾಢ್ಯಂ ಶತಯೋಜನವಿಸ್ತೃತಮ್ ।
ವಿವಾಹಮಂಡಪಂ ಶರ್ವೋ ವಿವೇಶಾಽನುಚರಾವೃತಃ ॥೬೭॥

ತತಃ ಶೈಲಃ ಸಪತ್ನೀಕಃ ಪಾದೌ ಪ್ರಕ್ಷಾಲ್ಯ ಹರ್ಷಿತಃ ।
ಭವಸ್ಯ ತೇನ ತೋಯೇನ ಸಿಷಿಚೇ ಸ್ವಂ ಜಗತ್ತಥಾ ॥೬೮॥

ಪಾದ್ಯಮಾಚಮನಂ ದತ್ವಾ ಮಧುಪರ್ಕಂ ಚ ಗಾಂ ತಥಾ ।
ಪ್ರದಾನಾಸ್ಯ ಪ್ರಯೋಗಂ ಚ ಚಿಂತಯಂತಿ ಚ ಬ್ರಾಹ್ಮಣಾಃ ॥೬೯॥

ದೌಹಿತ್ರೀಂ ಕವ್ಯವಾಹಾನಾಂ ದದ್ಮಿ ಪುತ್ರೀಂ ಸ್ವಕಾಮಹಮ್ ।
ಇತ್ಯುಕ್ತ್ವಾ ತಸ್ಥಿವಾನ್ಶೈಲೋ ನಜಾನಾತಿ ಹರಸ್ಯ ಸಃ ॥೭೦॥

ತತಃ ಸರ್ವಾನಪೃಚ್ಛತ್ಸ ಕುಲಂ ಕೋಽಪಿ ನ ವೇದ ತತ್ ।
ತತೋ ವಿಷ್ಣುರಿದಂ ಪ್ರಾಹ ಪೃಚ್ಛ್ಯಂತೇಽನ್ಯೇ ಕಿಮರ್ಥತಃ ॥೭೧॥

ಅಜ್ಞಾತುಕುಲತಾಂ ತಸ್ಯ ಪೃಚ್ಛ್ಯತಾಮಯಮೇವ ಚ ।
ಅಹಿರೇವ ಅಹೇಃ ಪಾದಾನ್ವೇತ್ತಿ ನಾನ್ಯೋ ಹಿಮಾಚಲ ! ॥೭೨॥

ಸ್ವಗೋತ್ರಂ ಯದಿ ನ ಬ್ರೂತೇ ನ ದೇಯಾ ಭಗಿನೀ ಮಮ ।
ತತೋ ಹಾಸಸ್ತದಾ ಜಜ್ಞೇ ಸರ್ವೇಷಾಂ ಸುಮಹಾಸ್ವನಃ ॥೭೩॥

ನಿವೃತ್ತಶ್ಚ ಕ್ಷಣಾದ್ಭೂಯಃ ಕಿಂ ವಕ್ಷ್ಯತಿ ಹರಸ್ತ್ವಿತಿ ।
ತತೋ ವಿಮೃಶ್ಯ ಬಹುಧಾ ಕಿಂಚಿದ್ಧೀತಾನನೋ ಯಥಾ ॥೭೪॥

ಲಜ್ಜಾ ಜಡಃ ಸ್ಮಿತಂ ಚಕ್ರೇ ತತಃ ಪಾರ್ಥ ! ಸ ವೈ ಹರಃ ।
ತತೋ ವಿಶಿಷ್ಟಾ ಬ್ರುವತಿ ಶೀಘ್ರಂ ಕಾಲೋಽತಿವರ್ತತೇ ॥೭೫॥

ಹರಿಃ ಪ್ರಾಹ ಮಹೇಶಾನಂ ಬಿಭ್ಯದಾವೇದ್ಮ್ಯಹಂ ತವ ।
ಮಾತಾಮಹಂ ಚ ಪಿತರಂ ಪ್ರಯೋಗಂ ಶ್ರುಣು ಭೂದರ ! ॥೭೬॥

ಆತ್ಮಪುತ್ರಾಯ ತೇ ಶಂಭೋ ಆತ್ಮಾ ದೌಹಿತ್ರಕಾಯತೇ ।
ಇತ್ಯುಕ್ತೇ ವಿಷ್ಣುನಾ ಸರ್ವೇ ಸಾಧುಸಾಧ್ವಿತಿ ತೇ ಜಗುಃ ॥೭೭॥

ದೇವೋಽಪ್ಯುದಾಹರೇತ್ ಬುದ್ಧಿ ಸರ್ವೇಭ್ಯೋಽಪ್ಯಧಿಕಾಂ ವರಾಮ್ ।
ತತಃ ಶೈಲಸ್ತಥಾ ಚೋಕ್ತ್ವಾ ದತ್ವಾ ದೇವೀಂ ಚ ಸೋದಕಮ್ ॥೭೮॥

ಆತ್ಮಾನಂ ಚಾಪಿ ದೇವಾಯ ಪ್ರದದೌ ಸೋದಕಂ ನಗಃ ।
ತತಃ ಸರ್ವೇ ತುಷ್ಟುವುಸ್ತಂ ವಿವಾಹಂ ವಿಸ್ಮಯಾನ್ವಿತಾಃ ॥೭೯॥

ದಾತಾ ಮಹೀಭೃತಾಂ ನಾಥೋ ಹೋತಾ ದೇವಶ್ಚತುರ್ಮುಖ ।
ವರಃ ಪಶುಪತಿಃ ಸಾಕ್ಷಾತ್ಕನ್ಯಾ ವಿಶ್ವಾರಣಿಸ್ತಥಾ ॥೮೦॥

ತತಃ ಸ್ತುವತ್ಸು ಮುನಿಷು ಪುಷ್ಪವರ್ಷೇ ಮಹತ್ಯಪಿ ।
ನದತ್ಸು ದೇವತೂರ್ಯೇಷು ಕರಂ ಜಗ್ರಾಹ ತ್ರ್ಯಂಬಕಃ ॥೮೧॥

ದೇವೋ ದೇವೀಂ ಸಮಾಲೋಕ್ಯ ಸಲಜ್ಜಾಂ ಹಿಮಶೈಲಜಾಮ್ ।
ನ ತೃಪ್ಯತಿ ನ ಚಾಹ್ಲಾದತ್ಸ ಚ ದೇವಂ ವೃಷಧ್ವಜಮ್ ॥೮೨॥

ತತ್ರ ಬ್ರಹ್ಮಾದಿ ಮುನಯೋ ದೇವೀಮದ್ಭುತರೂಪಿಣೀಮ್ ।
ಪಶ್ಯಂತಃ ಶರಣಂ ಜಗ್ಮುರ್ಮನಸಾ ಪರಮೇಶ್ವರಮ್ ॥೮೩॥

ಮಾ ಮುಹ್ಯಾಮ ಪಾರ್ವತೀಂ ಚ ಯಥಾ ನಾರದಪರ್ವತೌ ।
ತತಸ್ತಥೈವ ತಚ್ಚಕೇ ಸರ್ವೇಷಾಮೀಪ್ಸಿತಂ ವಚಃ ॥೮೪॥

ತತೋ ದೇವೈಶ್ಚ ಮುನಿಭಿಃ ಸಂಸ್ತುತಃ ಪರಮೇಶ್ವರಃ ।
ಪ್ರವಿವೇಶ ಶುಭಾಂ ವೇದೀಂ ಮೂರ್ತಿಮಜ್ಜ್ವಲನಾಶ್ರಿತಾಮ್ ॥೮೫॥

ವೇಧಾಃ ಶ್ರುತೀರಿತೈರ್ಮಂತ್ರೈಮೂರ್ತಿಮದ್ಭಿರುಪಸ್ಥಿತೈಃ ।
ಮೂರ್ತಮಗ್ನಿಂ ಜುಹಾವ ತ್ರಿಃ ಪರಿಕ್ರಮ್ಯ ಚ ತಂ ಹರಃ ॥೮೬॥

ಲಾಜಾಹೋಮ ಉಭ್ರಾತಾ ಪ್ರಾಹ ತಂ ಸಸ್ಮಿತಂ ಹರಿಃ ।
ಬಹವೋ ಮಿಲಿತಾಃ ಸಂತಿ ಲೋಕಾಃ ಸಮ್ಮರ್ದ ಈಶ್ವರ ॥೮೭॥

ಸವಿಧಾನೇನ ರಕ್ಷ್ಯಾಣಿ ಭೂಷಣಾನಿ ತ್ವಯಾ ಹರ ।
ತತೋ ಹರಶ್ಚ ತಂ ಪ್ರಾಹ ಸ್ವಜನೇ ಮಾಽತಿಗೋಪಯ ॥೮೮॥

ಕಿಂಚಿತ್ಪ್ರಾರ್ಥಯ ದಾಸ್ಯಾಮಿ ಪ್ರಾಹ ವಿಷ್ಣುಸ್ತತೋ ವರಮ್ ।
ತ್ವಯಿ ಭಕ್ತಿರ್ದೃಢಾ ಮೇಽಸ್ತು ಸ ಚ ತದ್ದುರ್ಲಭಂ ದದೌ ॥೮೯॥

ದದತುಃ ಸೃಷ್ಟಿಸಂರಕ್ಷಾಂ ಬ್ರಹ್ಮಣೇ ದಕ್ಷಿಣಾಮುಭೌ ।
ಅಗ್ನಯೇ ಯಜ್ಞಭಾಗಾಂಶ್ಚ ಪ್ರೀತೌ ಹರಜನಾರ್ದನೌ ॥೯೦॥

ಭೃಗ್ವಾದೀನಾಂ ತತೋ ದತ್ವಾ ಶ್ರುತಿರಕ್ಷಣದಕ್ಷಿಣಾಮ್ ।
ತತೋ ಗೀತೈಶ್ಚ ನೃತ್ಯೈಶ್ಚ ಭೋಜನೈಶ್ಚ ಯಥೇಪ್ಸಿತೈಃ ॥೯೧॥

ಮಹೋತ್ಸವೈರನೇಕೈಶ್ಚ ವಿಸ್ಮಯಂ ಸಮಪದ್ಯತ ।
ವಿಸೃಜ್ಯ ಲೋಕಂ ತಂ ಸರ್ವ ಕಿಮಿಚ್ಛಾದಾನಕೈರ್ಭವಃ ॥೯೨॥

ಸರಸ್ವತ್ಯಾ ಚ ಪಿತರೌ ದೇವ್ಯಾಶ್ಚಾಽಽಶ್ವಾಸ್ಯ ದುಃಖಿತೌ ।
ಆಮಂತ್ರ್ಯ ಹಿಮಶೈಲೇಂದ್ರಂ ಬ್ರಹ್ಮಾಣಂ ಚ ಸ ಕೇಶವಮ್ ॥೯೩॥

ಜಗಾಮ ಮಂದಿರಗಿರಿಂ ಗಿರಿಶಾ ಸಾನುಗೋಽರ್ಚಿತಃ ॥೯೪॥

ತತೋ ಗತೇ ಭಗವತಿ ನೀಲಲೋಹಿತೇ

ಸಹೋಮಯಾ ಗಿರಿಮಮಲಂ ಹಿ ಭೂಧರಃ ।

ಸಬಾಂಧವೋ ರುದಿತಿ ಹಿ ಕಸ್ಯ ನೋ ಮನೋ

ವಿಸಂಷ್ಠುಲಂ ಜಗತಿ ಹಿ ಕನ್ಯಕಾಪಿತುಃ ।

ಇಮಂ ವಿವಾಹಂ ಗಿರಿರಾಜಪುತ್ರ್ಯಾಃ

ಶ್ರುಣೋತಿ ಚಾಽಧ್ಯೇತಿ ಚ ಯೋ ನರಃ ಶುಚಿಃ ॥

ವಿಶೇಷತಶ್ಚಾಽಪಿ ವಿವಾಹಮಂಗಲೇ

ಸ ಮಂಗಲೇ ವೃದ್ಧಿಮವಾಪ್ನುತೇ ಚಿರಮ್ ॥೯೬॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೌಮಾರಿಕಾಖಂಡೇ ಕುಮಾರೇಶ್ವರ ಮಾಹಾತ್ಮ್ಯೇ ಹರಗೌರೀ ವಿವಾಹ ವರ್ಣನಂ ನಾಮ ಷಡ್ವಿಂಶೋಽಧ್ಯಾಯಃ ॥

* * * * *

॥ ಇಲ್ಲಿಗೆ ಸ್ಕಾಂದ ಮಹಾಪುರಾಣದಲ್ಲಿ ಪಾರ್ವತೀಕಲ್ಯಾಣದ ಮಂಗಳ ಪ್ರಸಂಗವು ಸಮಾಪ್ತವಾಯಿತು ॥

ಅಸ್ಮದ್ಗುರ್ವಂತರ್ಗತ ಉಮಾಮಹೇಶ್ವರಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಃ ಪ್ರಿಯತಾಂ ಶ್ರೀಕೃಷ್ಣಾರ್ಪಣಮಸ್ತು

## ಸ್ವರ್ಣಗೌರಿ ಹಾಡುಗಳು

### ೧. ಗೌರಿಗೆ ಹಸೆಗೆ ಕರೆದದ್ದು

ಬಾರೇ ದ್ರಾಕ್ಷಾಯಣಿ । ತೋರುವ ಹಸೆಗೀಗ ॥ ನೀರಜಮುಖಿಯರ ವಾರಮಧ್ಯದಿ ಬೇಗ ॥ಪ॥ ಹೊಗಳುತಲಿರುವರು । ನಿಗಮ ಪಾಠಕರೆಲ್ಲ॥ ನಗುನಗುತ ಬಾರೇ । ಸೋಗಯಿಪ ಹಸೆಗೀಗ ॥೧॥ ಮಣಿಭೂಷಣ ತೊಟ್ಟು । ಫಣಿಗೆ ಕುಂಕುಮನಿಟ್ಟು॥ ಮಣಿವರ ಸಲಹುವ । ಗುಣನಿಧಿ ಹಸೆಗೀಗ ॥೨॥ ಚರಣಪಲ್ಲವದೊಳು ಮೆರೆವ ನೂಪುರನಿಟ್ಟು॥ ಗಿರಿಪುರಮಂದಿರೆ ಸರಸಿಜಮುಖಿ ಗಗೌರಿ ॥೩॥

### ೨. ಗೌರಿಯ ಶೃಂಗಾರ ಮಾಡಿದ್ದು

ಹರನರಸಿಗೆ ಮಾರ್ಜನಗೈಸಿ ಹರದೆ ತಾ । ಹರುಷದಿ ಪೀತಾಂಬರ ಉಡಿಸಿದಳು॥ ಸರಸಿಜಾಕ್ಷಿ ಹರಳಿನಾಭರಣನಿಟ್ಟು । ಜರತಾರಿ ಕುಪ್ಪಸ ತೊಡಸಿದಳು ॥ಪ॥ ಗಂಧ ಕುಂಕುಮ ಮಕರಂದ ಪುಷ್ಪಗಳಿಂದ । ಚಂದದಿ ಪೂಜೆಯ ಮಾಡಿದಳು ॥ ಇಂದಿರೆಯರಸನ ವೃಂದ ತೋರಿಸು ಎಂದು । ಸುಂದರಿ ವಂದನೆ ಮಾಡಿದಳು॥೧॥ ಮೋದದಿ ಪಂಚಪಕ್ವಾನ್ನಾದಿಗಳಿಂದ। ಆದರದಿ ನೈವೇದ್ಯವನಿಟ್ಟು॥ ಯಾದವಕುಲರನ್ನ ಎದುರಿಗೆ ಬರುವಂತೆ । ಚದುರೆ ಎನಗೆ ವರ ನೀಡೆಂದಳು ॥೨॥ ಹರನ ರಾಣಿಗೆ ಹರುಷದಿ ಆರುತಿ ಎತ್ತಿ । ಹಥುಷದಿ ವರಗಳ ಬೇಡಿದಳು। ದೊರೆ ವೆಂಕಟೇಶನು ತ್ವರದಿಂದ ಬಂದೆನ್ನ । ಕರ ಪಿಡಿಲೆಂದು ವರ ಬೇಡಿದಳು ॥೩॥

### ೩. ಗೌರಿಗೆ ಬಳೆ ಇಟ್ಟದ್ದು

ಬಳಿ ಬಂದೆವು ಬಾರೆ ಪಾರ್ವತಿದೇವಿ । ಬಳೆಗಾರನ ಕರೆಸಿದಳು । ಎಳೆಯ ಟೆಂಗಿನಕಾಯಿ ಗೊನೆಯ ಬಾಳಿಹಣ್ಣು । ಬಳಿಯ ಪೂಜಿಸಿದಳು ಭಕ್ತಿಯಿಂದ ॥೧॥ ಕೃಷ್ಣನೆಂಬ ಸೆಟ್ಟಿ ಬಂದ ಪಾರ್ವತಿ ದೇವಿಗೆ । ಪಟ್ಟಿ ಮಾಡಿಹಿ ತಂದ ॥ ಪಟ್ಟಿ ನೀಲದ ಬಳಿ ಇಡಬೇಕೆನುತಲಿ । ಪುಟ್ಟಿ ಕಠಾಣಿ ತೆಗೆದು ಪಟ್ಟಕ್ಕೆ ಹಾಕಿದಳು ॥೨॥ ಹರನೆಂಬ ಸೆಟ್ಟಿ ಬಂದ ಪಾರ್ವತಿ ದೇವಿಗೆ । ಹರಡಿ ಮಾಡಿಸಿ ತಂದ ॥ ಹಲಿಗೆಯ ನೀಲದ ಬಳಿ ಇಡಬೇಕೆನುತ । ಹವಳದ ಕಂಕಣ ತೆಗೆದು ಪಂಕಕೆ ಹಾಕಿದಳು ॥೩॥ ಶಂಕರನೆಂಬ ಸೆಟ್ಟಿ ಬಂದ ಪಾರ್ವತಿ ದೇವಿಗೆ । ವಂಕಿ ಮಾಡಿಸಿ ತಂದ ॥ ವಂಕಿ ನೀಲದ ಬಳಿ ಇಡಬೇಕೆನುತಲಿ । ವಂಕಿ ಕಂಕಣ ತೆಗೆದು ಪಂಕಕೆ ಹಾಕಿದಳು ॥೪॥

### ೪. ನೈವೇದ್ಯ ಇಟ್ಟದ್ದು

ನೈವೇದ್ಯಕ್ಕಿಟ್ಟರು ನಳಿನಾಕ್ಷಿಯನು ತಾವು । ಆ ವೇಳೆಯಲಿ ಹರುಷದಿ ॥ ಭಾವಜನನಿಯನು ಮಾವು ನಿಂಬು ಫಲ ॥ ತೀವ್ರದಿಂದಲಿ ತನ್ನ ಸೆರಗನು ಮರೆಮಾಡಿ ॥ಪ॥ ಚಕ್ಕುಲಿ ಗಿಲಗಂಜಿ ಸಕ್ಕರೆ ನೊರೆ ಹಾಲು ॥ ಅಕ್ಕರದಿಂದಿಡುತ॥ ಅಕ್ರೂರ ವರದನ ಅರಸಿಯರು ಬೇಗದಿ । ಪಕ್ಕನೆ ತಮ್ಮ ಸೆರಗನು ಮರೆಮಾಡಿ ॥೧॥ ಜಂಬೂ ನೀರಲ ದ್ರಾಕ್ಷ ಅಂಜೂರಿ ಫಲಗಳು । ಸಂಭ್ರಮದಿಂದಲಿ ॥ ಅಂಬುಧಿಶಯನನ ರಂಭೆ ತಾ ನಗುತಲಿ । ತುಂಬಿ ತಬಕದೊಳು ರಂಭಾಫಲಗಳನು ॥೨॥ ಪರಿಪರಿ ಶಾವಿಗೆ ಫೇಣಿ ಲಡ್ಡಿಗಿಗಳ । ಸರಸದಿಂದಿಡುತಲಿ ॥ ತರಿಸಿದ ತಾಂಬೂಲ ಬೆರಸಿ ಕರ್ಪೂರ ದಡಿಕಿ । ದೊರೆವೇಂಕಟೇಶನ ಅರಸಿಯು ನಲಿಯುತ ॥೩॥

## ೫. ಹೂ ಮುಡಿಸಿದ್ದು

ಪಾಲಿಸೆಮ್ಮ ನೀನು ಪಾರಿಜಾತವನ್ನು । ಕೋಮಲೆ ವರವನ್ನು ಬೇಡಿಕೊಂಬೆ ನಾನು ॥ಪ॥ ಹಿಕ್ಕಿದಂಥ ಹೆರಳು ಮಲ್ಲಿಗೆಯ ಅರಳು । ಜಗವ ಮೋಹಿಸುವಳು ಎಮ್ಮ ರಕ್ಷಿಸುವಳು ॥೧॥ ತಾಯಿ ತ್ರಿಪುರ ಸುಂದರಿ ಕಾಯೇ ಗಜಗೌರೀ । ಗಿರಿರಾಜ ಕುಮಾರಿ ಮುರಧರ ಸೋದರಿ ॥೨॥ ವೆಂಕಟೇಶ ನರಸಿ ಬೇಡಿಕೊಂಬೆ ಸ್ಮರಿಸಿ । ಪುಷ್ಪವನ್ನು ಬೆರೆಸಿಕೊಂಡು ನಮ್ಮ ಕರಿಸಿ ॥೩॥

## ೬. ವರವು ಕೊಟ್ಟದ್ದು

ವರವರ ಕೊಡ । ವೈಯಾರದಿ ನೋಡ । ವರಗಳ ನೀಡ ದುರಿತ ದೂಡ । ಪರಮ ಹರುಷದಿ ದಯಮಾಡ ॥ಪ॥ ಪರ್ವತಪುತ್ರಿ ಪರಮ ಪವಿತ್ರಿ । ತಾಯಿ ॥೧॥ ಕರಿಮುಖನನ್ನು ಶಿರದೊಳು ನಿಮ್ಮ । ಒಪ್ಪುವ ಕುಸುಮ । ಬೇಕೆಮ್ಮ ॥೨॥ ಭಾಗ್ಯ ಸಂಪತ್ತು । ಶೀಘ್ರದಲ್ಲಿತ್ತು । ಅನುಗ್ರಹ ಮಾಡಿ । ಇವತ್ತು ॥೩॥

## ೭. ಗೌರಿಯ ಆರತಿಯ ಪದ

ಮಂಗಳಾರತಿಯನೆತ್ತಿದಳು । ಮುದ್ದು ಅಂಗನೆ ರುಕ್ಮಿಣಿ ಮಂಗಳಗೌರಿಗೆ ॥ಪ॥ ಶಿರನ ಸಾಲಿಗೆ ಹಚ್ಚಿಬಟ್ಟು । ಕೊಂಡು । ಕೊರಳ ಮಧ್ಯದಿ ರಾಜಿಪ ಹತ್ಯೆಗಟ್ಟು ॥ ಹರಿಯ ಧ್ಯಾನದಿ ಚಿತ್ತವಿಟ್ಟು । ನರ । ಹರಿಗೆ ವಲ್ಲಭೆ ನಾ ಆದೇನೆಂಬ ಗುಟ್ಟು ॥೧॥ ವಕ್ಷಸ್ಥಳವನು ನೋಡಿದಳು॥ ಬಹಳ । ದಾಕ್ಷಿಣ್ಯವೇಕೋ ಧನ್ಯನಾದೆನೆನಲು ॥ ಮತ್ಸ್ಯಲೋಚನೆ ನಾಚುತಿಹಳು । ಪಾಂಡವ। ಪಕ್ಷಿಯ ಕೈಪಿಡಿದು ರಥದಿ ನಡೆಯುತಿಹಳು ॥೨॥ ಪ್ರತಿದಿನ ರಾಯನಾಗಿರಲು । ಅತಿ । ಹಿತದಿಂ ಪಾಂಡವರಿಗೊಲಿವೆನೆಂಬಳು ರತಿಪತಿ ಪಿತನ ಕೈಹಿಡಿಯಲು । ದಾಕ್ಷಿಣ್ಯವೇಕೋ ಧನ್ಯನಾದೆನೆನಲು ॥೩॥

## ಸ್ವರ್ಣಗೌರಿ ಹಾಡುಗಳು

ಮಾತಾಡೇ ಎನ್ನ ಮೌನದ ಗೌರೀ ಮಾತಾಡೇ ಎನ್ನ ಮೌನದ ಗೌರೀ ಯಾತಕಚಲಮನ ಸೋತವನೊಡನೆ ಮಾತಾಡೇಗೌರಿ ಮಾತಾಡೇ ॥ ನಸುನಗೆ ಮುಖವಿದು ಬಾಡಿ ಕೆಂದುಟಿಯು ಎಸೆದಿರಲು ನಾನೋಡಿ ವಸುಧೆಯೊಳಗೆ ನಾ ಜೀವಿಸಲಾರೆ ಘಸಘುಸವ್ಯಾತಕೆ ತುಂಬಿತು ಅರಗಿಣಿ ॥ ಕ್ಷಣ ಬಿಟ್ಟಿರಲಾರೆ ಅಮ್ಮ ಷಣ್ಮುಖ ಗಣಪರ ತಾಯೆ ನೀ ಬಾರೇ ವಸುಧೆಯೊಳಗೆ ನಾ ಜೀವಿಸಲಾರೆ ಘಸಘುಸವ್ಯಾತಕೆ ತುಂಬಿತು ಅರಗಿಣಿ ॥ ಕ್ರೋಧವ್ಯಾತಕೆ ಎನ್ನೊಳು ಗೌರೀ ಏನಪರಾದವು ಇದ್ದರು ತಾಳೇ ಶ್ರೀದವಿಠಲನ ಪಾದ ಕಿಂಕಿಣಿಯೇ ಆದರಿಸುವೆ ನಾ ಆದರಿಸುವೇನೇ ॥

* * * *

ಪಾಲಿಸೇ ಶ್ರೀಗೌರೀ ಎನ್ನನು ॥ಪ॥ ಪಾಲಿಸೆ ನಿನ್ನಯ ಪಾಲಿಗೆ ಬಂದೆನು । ಬೀಳುವೆ ಸರ್ವದಾ ಕಾಲಿಗೆ ಕರುಣದೀ ॥ಅ.ಪ.॥ ಶರಣೆಂದವರನು ಪೊರೆವಳು ಎಂಬುವ । ಬಿರಿದು ನಿನ್ನದು ಎಂದರಿತೆನು ತ್ವರದಿ ॥ ಸನ್ಮತ್ರ ಪುರುಷನ ಇನ್ನೆಲ್ಲಿ ಕಾಣೆನೋ । ಮನ್ಮಥನೆಂಬುವ

ಬನ್ನಬಡಿಪ ಬಲು ॥ ಮಹಿಮೆಯನು ನಾ ಭಕ್ತಿಯಲ್ಲಿ ಬಣ್ಣಿಸಲಳವೆ ಪ್ರಸನ್ನ ವದನಳೆ ॥ ಕಾಣೆನು ಶಾಂತಿಯ ಏನೆಂದ್ಹೇಳಲಿ । ಪ್ರಾಣೇಶ ವಿಠಲನು ತಾನೇ ಬಲ್ಲನು ॥

* * * *

ಪಾರ್ವತಿ ಪಾಲಿಸೆನ್ನ ಮಾನಿನಿ ರನ್ನೆ ॥ಪ॥ ಪಾರ್ವತಿ ಭಕುತರ ಸಾರಥಿ ವಂದಿಪೆ । ಸುರಪತಿ ಷಣ್ಮುಖ ಗಣಪರ ಮಾತೆ ॥ಅ.ಪ॥ ಮಂಗಳೆ ಮೃಡನಂತ । ರಂಗಳೆ ಹರಿಪದ । ಭೃಂಗಳೆ ಪಿಂಗಳೆ ಪನ್ನಗವೇಣಿ ॥1॥ ಮನದಭಿಮಾನಿಯೆ ನೆನೆವೆನು ನಿನ್ನನು ॥ ಅನುಗ್ರಹಿಸೆನ್ನನು । ಅಂಬುಜಪಾಣಿ ॥2॥ ಗುಣಪೂರ್ಣ ವೇಣು ಗೋಪಾಲವಿಠಲನ । ಕಾಣಿಸಿ ಕೊಡುವಂಥ ಶೂಲಿಯ ರಾಣಿ ॥3॥

* * * *

ಪಾರ್ವತಿಪತಿ ಪಾಹಿ । ಪಾರ್ವತಿಪತಿ ನೀನೊಲಿದು ಮನಸಿನೊಳು । ತೋರ್ವದು ಕೇಶವನಾ। ಹರಹರ ॥ಪ॥ ವಿಜಯ ನಿನ್ನೊಳಗಂದು । ವಿಜಯಿಸಲಸ್ತ್ರವ ತ್ರಿಜಗವರಿಯೆ ಕೊಟ್ಟೆ । ಮಜ ಭಾಪುರೇ ಅಂ । ಬುಜಸುತ ನಂದನ ಗಜಚರ್ಮಾಂಬರನೇ । ಹರಹರನೇ ॥1॥ ಜಾತ ವೇದಸ ಶ । ಶೀ ತರಣಿನಯನ । ಮಾತರಿಶ್ವ ತನಯ । ಭೂತಗಣಪ ಗುಣ । ವ್ರಾಗ ನಿನ್ನವರೊಳು । ಪ್ರೀತಿಯಿಂದಲಿ ಕೂಡಿಸೊ । ಹರಹರ ॥2॥ ಕ್ಷಿತಿಧರಶರ ಮ । ನ್ಮಥಪುರಹರಣ ಪ್ರ । ಮಥಾದಿಪ ಹರಿಣಾಂಕ । ನತಿಸುವೆ ನಿನ್ನನು । ಪ್ರತಿ ದಿನದಲಿ ಸನ್ಮತಿ ಕರುಣಿಸು ತ್ವರಿ ಯಾ । ಹರಹರ ॥3॥ ಸುರಸೇವಿತ ಪದ । ಅರವಿಂದನಘ ಮು । ರ ರಿಪುಸೇ ಕಪರ್ದೀ ॥ ಚರಣವ ನಂಬಿದ । ವರ ಭಯವಾರಿದ । ಮಾರು ಗ ಕುಶಂದನನೇ । ಹರಹರ ॥4॥ ಖಟವ ಪಾಣಖಳ । ಅಟವಿ ವಹ್ನಿ ದೂ । ರ್ಜಟಿ ಹರ ಪ್ರಾಣೇಶ ॥ ವಿಠಲನ ಭಜನೆಯು। ಘಟಿಕೆ ತಪ್ಪದಲಿ । ಘಟನೆ ಮಾಡಿಸುವದೊ ॥5॥

* * * *

ಉಮಾ ಕಾತ್ಯಾಯಿನೀ ಗೌರೀ ದಾಕ್ಷಾಯಿಣೀ ಹಿಮವಂತ ಗಿರಿಯ ಕುಮಾರಿ ರಮೆಯರಸನ ಪದಕಮಲಮಧುಪೆ ನಿತ್ಯ ಅಮರವಂದಿಪೆ ಗಜಗಮನೆ ಭವಾನೀ ॥ ಪನ್ನಗಧರನ ರಾಣಿ ಪರಮಪಾವನೀ ಪುಣ್ಯಫಲಪ್ರದಾಯಿನೀ ಪನ್ನಗವೇಣೀ ಶರ್ವಾಣೀ ಕೋಕಿಲವಾಣಿ ಉನ್ನಂತಗುಣಗಣ ಶ್ರೇಣಿ ಎನ್ನ ಮನದ ಅಭಿಮಾನಿ ದೇವತೆಯೇ ಸ್ವರ್ಣಗಿರಿ ಸಂಪನ್ನೆ ಭಾಗ್ಯನಿಧಿ ನಿನ್ನ ಮಹಿಮೆಯ ನಾ ಬಿನ್ನಾಣದಲ್ಲಿ ಬಣ್ಣಿಸಲಸಳವೇ ಪ್ರಸನ್ನವದನಳೇ॥ ಮುತ್ತಿನಪದಕ ಹಾರ ಮೋಹನ್ನಸರ ಉತ್ತಮಾಂಗದಲಂಕಾರ ಜೊತ್ಯಾಗಿಟ್ಟ ಪಂಜರದೋಲೆ ಒಯ್ಯಾರ ರತ್ನಕಂಕಣದುಂಗುರ ತೆತ್ತೀಸಕೋಟಿ ದೇವತೆಗಳು ಪೊಗಳುತ ಸತ್ತಿಗೆ ಚಾಮರವೆತ್ತಿ ಪಿಡಿಯುತೆರೇ ಸುತ್ತಲೂ ಆಡುವ ನರ್ತನಸಂದಣಿ ಎತ್ತ ನೋಡಿದರತ್ತ ತತ್ಥವಾದ್ಯ ॥ ಪೊಳೆವ ವಸನ ಕಂಚುಕ ಕಸ್ತೂರಿ ತಿಲಕ ಥಳಿಪ ಮೂಗುತಿ ನಾಸಿಕ ತಳಿತ ಮಲ್ಲಿಗೆ ಗಂಧಿತ ಮುಡಿದ ಸೂಸುಕ ಸಲೇ ಭುಜಕೀರ್ತಿಪಾಠಿಕ ಇಳೆಯೊಳು ಮಧುರಪೊಳಲೊಳುವಾಸಳೇ ಅಳಗಿರಿ ವಿಜಯವಿಟ್ಠಲನ ಕೊಂಡಾಡುವ ಸುಲಭ ಜನರಿಗೆ ಒಲಿದು ಮತಿವ ಕೊಡುವ ಗಿಳಿಕರ ಶೋಭಿತೇ ಪರಮಮಂಗಳೇ ಹೇ ॥

# ಸ್ವರ್ಣಗೌರಿವ್ರತದ ಹಾಗೂ ಗಣೇಶಹಬ್ಬದ ಅಡುಗೆಗಳು

## ಸ್ವರ್ಣಗೌರಿ ಹಬ್ಬದ ಅಡುಗೆಗಳು

* ಕೋಸಂಬರಿಗಳು * ಗೊಜ್ಜು * ಚಟ್ನಿ
* ಪಲ್ಯಗಳು * ಅಂಬೋಡೆ

### ಬಿಸಿಬೇಳೆಬಾತ್

**ಬೇಕಾಗುವ ಪದಾರ್ಥಗಳು :**

ತೊಗರಿಬೇಳೆ - 500 ಗ್ರಾಂ. ಕೊಬ್ಬರಿ - 1 ಗಿಟುಕು

ಅಕ್ಕಿ - 500 ಗ್ರಾಂ. ಸಾಸಿವೆ - 1 ಚಮಚ

ತುಪ್ಪ - 150 ಗ್ರಾಂ. ಮೆಂತ್ಯ - 1 ಚಮಚ

ಒಣಮೆಣಸಿನ ಕಾಯಿ - 15 ಇಂಗು - 1 ಚಿಟಿಕೆ

ಹುಣಿಸೆಹಣ್ಣು - 25 ಗ್ರಾಂ. ಕೊತ್ತಂಬರಿಸೊಪ್ಪು - ಸ್ವಲ್ಪ

ನಿಂಬೆಹಣ್ಣು - ಸಣ್ಣದು ರುಚಿಗೆ ತಕ್ಕಷ್ಟು ಉಪ್ಪು, ದಾಲ್ಚಿನ್ನಿ, ಚಕ್ಕೆ, ಜೀರಿಗೆ, ಮೆಣಸು ಎಲ್ಲಾ ಸೇರಿ 5 ಗ್ರಾಂ.

**ಮಾಡುವ ವಿಧಾನ :** ಕಲಾಯಿ ಮಾಡಿದ ಒಂದು ಪಾತ್ರೆಗೆ ನೀರು ಹಾಕಿ ಒಲೆಯ ಮೇಲಿಡಿ. ನೀರು ಕುದಿದ ಬಲಿಕ ತೊಗರಿಬೇಳೆ ಹಾಕಿ ಬೇಯಿಸಿ. ಬೇಯುವಾಗ ಒಂದು ಚಿಟಿಕೆ ಅರಶಿನ ಹಾಕಿ. ಬೇಳೆ ಅರ್ಧಭಾಗ ಬೆಂದಾಗ ಅಕ್ಕಿ ತೊಳೆದು ಹಾಕಿರಿ. ಇವೆರಡೂ ಕೂಡಿ ಬೇಯುತ್ತಿರುವಾಗ ಹುಣಸೆಹಣ್ಣನ್ನು ಬಿಸಿ ನೀರಲ್ಲಿ ನೆನೆಹಾಕಿ ಅದರ ರಸ ತೆಗೆಯಿರಿ.

ಒಣಮೆಣಸಿನಕಾಯಿ ಜೊತೆ ಮಿಕ್ಕ ಸಾಂಬಾರ್ ಪದಾರ್ಥಗಳನ್ನು ಸೇರಿಸಿ ಬಾಣಲಿಗೆ ಹುರಿದುಕೊಂಡು ಪುಡಿ ಮಾಡಿಕೊಳ್ಳಿ. ಇದರ ಜೊತೆ ತುರಿದ

ಕೊಬ್ಬರಿಯನ್ನು ಸೇರಿಸಿ ಮಿಶ್ರಣ ಮಾಡಿ. ಬೇಳೆಯ ಜೊತೆಗೆ ಅಕ್ಕಿ ಕೂಡಿ ಬೆಂದಾಗ ಹುಣಸೆಹಣ್ಣಿನ ರಸ ಸೇರಿಸಿ ಕುಟ್ಟಿ ಪುಡಿ ಹಾಕಿ. ಇದರ ಜೊತೆಗೆ ಉಪ್ಪು ಹಾಕಿ ಚೆನ್ನಾಗಿ ಕೂಡಿಸಿ. ಮಿಶ್ರಣ ಎಲ್ಲಾ ಸೇರಿ ಬೆಂದನಂತರ ಕೆಳಗಿಸಿಕೊಂಡು ಸಾಸಿವೆ ಒಗ್ಗರಣೆ ಕೊಟ್ಟು, ಕರಿಬೇವು-ಕೊತ್ತಂಬರಿ, ಇಂಗು ಒಗ್ಗರಣೆ ಸೇರಿಸಿ ಬಿಸಿಬೇಳೆಬಾತ್‌ಗೆ ಮಿಶ್ರಣ ಮಾಡಿರಿ.

## ಹೂರಣದ ಹೋಳಿಗೆ

**ಬೇಕಾದ ಪದಾರ್ಥಗಳು :**

ಬೆಲ್ಲ - 1 ಕೆ.ಜಿ., ಕಡಲೆಬೇಳೆ ಅಥವಾ ತೊಗರಿಬೇಳೆ - 500 ಗ್ರಾಂ.

ಗೋದಿಹಿಟ್ಟು - 500 ಗ್ರಾಂ. ತೆಂಗಿನಕಾಯಿ - 2,

ಎಣ್ಣೆ - 500 ಗ್ರಾಂ.

ಯಾಲಕ್ಕಿ - 10 ಕಾಯಿ.

**ಮಾಡುವ ವಿಧಾನ :** ಕಡಲೆಬೇಳೆ ಅಥವಾ ತೊಗರಿಬೇಳೆಯನ್ನು ಕಾಯಾಗಿ ಬೇಯಿಸಿಕೊಂಡು ನೀರನ್ನು ಬೇರ್ಪಡಿಸಿ, ಅದಕ್ಕೆ ತೆಂಗಿನಕಾಯಿ, ಬೆಲ್ಲ ಹಾಕಿ ಒಲೆಯ ಮೇಲಿಂದ ತೆಗೆದು, ಆರಿದ ಬಳಿಕ ಒರಳಿನಲ್ಲಿ ರುಬ್ಬುವುದು. ರುಬ್ಬುವಾಗ ಯಾಲಕ್ಕಿ ಪುಡಿ ಹಾಕಿ ಹೂರಣ ಸಿದ್ಧ ಮಾಡುವುದು.

ನಂತರ ಗೋದಿಹಿಟ್ಟನ್ನು ಜರಡಿ ಹಿಡಿದು, ಹಿಟ್ಟಿಗೆ ಸ್ವಲ್ಪ ನೀರು ಹಾಕಿ ಪೂರಿ ಹಿಟ್ಟಿನಂತೆ ಕಲಸಿಕೊಂಡು, ಲಟ್ಟಿಸಿ ಒಲೆಯ ಮೇಲೆ ಕಾವಲಿ ಇಟ್ಟು ಗೋದಿಹಿಟ್ಟನ್ನು ಉಂಡೆಗಳನ್ನಾಗಿ ಮಾಡಿಕೊಂಡು ಉಂಡೆಗಳ ಒಳಗೆ ಹೂರಣ ಇರಿಸಿ, ಒಂದೊಂದಾಗಿ ಬಾಳೆ ಎಲೆಯ ಮೇಲೆ ತಟ್ಟಿ ಕಾವಲಿ ಮೇಲೆ ಹಾಕಿ ಎಣ್ಣೆ ಹಾಕಿಕೊಂಡು ಬೇಯಿಸುವುದು.

## ಗೌಲೀ ಪಾಯಸ

ಶ್ಯಾವಿಗೆ ರವೆಯನ್ನು ನೀರು ಹಾಕಿ ಕಲೆಸಿ ಕುಟ್ಟಿ ತುಪ್ಪ ಹಚ್ಚಿ ಹೊಂದಿಸಬೇಕು. ಆ ಬಳಿಕ ಕೈಗೆ ತುಪ್ಪ ಸವರಿಕೊಂಡು ನಿಂಬೆ ಹಣ್ಣಿನ ದಪ್ಪಕ್ಕೆ ಉಂಡೆಗಳಾಗಿ

ಮಾಡಿಡಬೇಕು. ಅದರ ಮೇಲೆ ಒದ್ದೆ ಬಟ್ಟೆಯನ್ನು ಹೊದ್ದಿಸಬೇಕು. ಅಗಲವಾದ ತಟ್ಟೆಗೆ ಅಕ್ಕಿ ಹಿಟ್ಟನ್ನು ಅರವಿ ಒಂದೊಂದು ಉಂಡೆಯನ್ನು ಕೈ ಬೆರಳುಗಳಿಂದ ಜೀರಿಗೆಯ ಕಾಳಿನಂತೆ ಮಾಡಿ ಆ ತಟ್ಟೆಯನ್ನು ಬಿಸಲಲ್ಲಿಡಬೇಕು. ಆ ಕಾಳುಗಳೆಲ್ಲವೂ ಒಣಗಿದ ಬಳಿಕ ಅದನ್ನು ತಂತಿವಂದ್ರಿಯಿಂದ ಆ ಹಿಟ್ಟನ್ನು ಬೇರೆ ಮಾಡಿ ಕಾಳನ್ನು ಹಿಂದು ಪಾತ್ರೆಗೆ ಹಾಕಿ, ಮುಚ್ಚಿಡಬೇಕು. ಇದನ್ನು ಮುಂದೆ ಹೇಳುವ ಶ್ಯಾವಿಗೆ ಪಾಯಸದಂತೆ ಮಾಡಬೇಕು.

## ಸಿಹಿ ಬೂಂದಿ

**ಬೇಕಾಗುವ ಪದಾರ್ಥಗಳು :**

| | |
|---|---|
| ಶುದ್ಧವಾದ ಕಡಲೆಹಿಟ್ಟು - 250 ಗ್ರಾಂ. | ಹಾಲು - 100 ಗ್ರಾಂ. |
| ಸಕ್ಕರೆ - 250 ಗ್ರಾಂ | ಲವಂಗ - 20 |
| ತುಪ್ಪ - 250 ಗ್ರಾಂ. | ಯಾಲಕ್ಕಿ - 5 ಕಾಯಿ |
| ಕೊಬ್ಬರಿ-ದ್ರಾಕ್ಷಿ - 100 ಗ್ರಾಂ. | ಕೇಸರಿ ಬಣ್ಣ - 1 ಚಿಟಿಕೆ |

**ಮಾಡುವ ವಿಧಾನ :** ಸ್ವಲ್ಪ ಕಡಲೆಹಿಟ್ಟಿಗೆ ಎರಡು ಚಮಚ ತುಪ್ಪ, ನೀರಾಕಿ ದೋಸೆ ಹಿಟ್ಟಿನಂತೆ ಮಾಡಿಕೊಂಡು ಇಟ್ಟುಕೊಳ್ಳಿ. ಆಮೇಲೆ ಒಂದು ಪಾತ್ರೆಗೆ ಹಾಲು, ಸಕ್ಕರೆ, ಯಾಲಕ್ಕಿ ಪುಡಿ ಸೇರಿಸಿ ಒಲೆಯ ಮೇಲಿಟ್ಟು ಪಾಕ ತಯಾರು ಮಾಡಿ, ಅದಕ್ಕೆ ಕೇಸರಿ ಬಣ್ಣ ಹಾಕಿ. ಸಣ್ಣಗೆ ಹೆಚ್ಚಿದ ಕೊಬ್ಬರಿ ಚೂರು, ತುಪ್ಪದಲ್ಲಿ ಕರಿದ ಗೋಡಂಬಿ-ದ್ರಾಕ್ಷಿ, ಲವಂಗ ಒಂದು ಕಡೆಗಿಟ್ಟುಕೊಳ್ಳಿ. ದೊಡ್ಡ ಬಾಣಲಿಗೆ ತುಪ್ಪ ಅಥವಾ ಧಾರಾಪುರ ಹಾಕಿ. ಅದು ಕಾದ ಎಣ್ಣೆ ಆದ ಬಳಿಕ ಕಲಸಿಟ್ಟುಕೊಂಡಿರುವ ಹಿಟ್ಟನ್ನು ಜಾಲರದ ಮೇಲೆ ಹಾಕುತ್ತಾ ಬಾಣಲಿಗೆ ಬಿಟ್ಟು ಬೂಂದಿ ಕಾಳುಗಳನ್ನು ಮಾಡಿಕೊಂಡು ತಯಾರಾಗಿರುವ ಪಾಕದಲ್ಲಿ ಹಾಕಿ ಎಲ್ಲಾ ಬೂಂದಿ ಕಾಳುಗಳಿಗೂ ಪಾಕ ತಾಕುವಂತೆ ಮಾಡಿ ನಂತರ ಒಂದು ತಟ್ಟೆಗೆ ತೆಗೆದುಹಾಕಿರಿ.

ಮೇಲೆ ಹೇಳಿದ ಕೊಬ್ಬರಿ, ಚೂರು, ಲವಂಗ, ಗೋಡಂಬಿ- ದ್ರಾಕ್ಷಿ ಇವೆಲ್ಲವನ್ನು ಬೂಂದಿ ಕಾಳಿಗೆ ಸೇರಿಸಿ ಮಿಶ್ರಣ ಮಾಡಿ. ಪಾಕದಲ್ಲಿ ಬೇಕಾದರೂ ಸೇರಿಸಬಹುದು. ಅನಂತರ ಬೇಕಾದರೂ ಹಾಕಬಹುದು.

## ಬೊಂಬಾಯಿ ಬೋಂಡಾ

**ಬೇಕಾಗುವ ಪದಾರ್ಥಗಳು :**

ಆಲೂಗಡ್ಡೆ - 250 ಗ್ರಾಂ. ಸಾಸಿವೆ - 1 ಚಮಚ

ಬಟಾಣಿ - 100 ಗ್ರಾಂ. ಖಾರದಪುಡಿ - 1 ಚಮಚ

ಹಸಿಮೆಣಸಿನಕಾಯಿ - 6 ಅರಿಶಿನಪುಡಿ - 2 ಚಿಟಿಕೆ

ಅವಶ್ಯಕವಾದಷ್ಟು ಉಪ್ಪು, ಕೊತ್ತಂಬರಿ ಸೊಪ್ಪು, ಎಣ್ಣೆ

**ಮಾಡುವ ವಿಧಾನ :** ಆಲೂಗಡ್ಡೆಯನ್ನು ಬೇಯಿಸಿ ಸಿಪ್ಪೆ ತೆಗೆಯಿರಿ. ಬಟಾಣಿ ಸಹ ಬೇಯಿಸಿರಿ. ಹಸಿಮೆಣಸಿನಕಾಯಿ, ಕೊತ್ತಂಬರಿಸೊಪ್ಪು ಸಣ್ಣಗೆ ಹೆಚ್ಚಿಕೊಳ್ಳಿ. ಬಾಣಲಿಗೆ ಎಣ್ಣೆಹಾಕಿ (2 ಚಮಚ). ಎಣ್ಣೆ ಕಾದ ಬಳಿಕ ಸಾಸಿವೆ ಹಾಕಿ ಸಿಡಿಸಿ. ನಂತರ ಹಸಿಮೆಣಸಿನಕಾಯಿ, ಕೊತ್ತಂಬರಿಸೊಪ್ಪು, ಉಪ್ಪು ಹಾಕಿ ಹುರಿಯಿರಿ. ಆಮೇಲೆ ಬೆಂದ ಆಲೂಗಡ್ಡೆ, ಬಟಾಣಿ ಹಾಕಿ ಪಲ್ಯ ಮಾಡಿ ಕೆಳಗಿಳಿಸಿ. ಸ್ವಲ್ಪ ಹೊತ್ತು ಆರಿದ ಮೇಲೆ ಪಲ್ಯವನ್ನು ಸಣ್ಣ ಸಣ್ಣ ಗೋಲಿ ಗಾತ್ರದ ಉಂಡೆಗಳನ್ನು ಮಾಡಿಕೊಳ್ಳಿ. ಕಡಲೆಹಿಟ್ಟಿಗೆ ಒಂದು ಚಿಟಿಕೆ ಅರಿಶಿನ ಪುಡಿ, ಉಪ್ಪು, ಒಂದು ಚಮಚ ಖಾರದ ಪುಡಿ ಸೇರಿಸಿ ನೀರಾಕಿ ದೋಸೆ ಹಿಟ್ಟಿನಂತೆ ಕಲಿಸಿಕೊಳ್ಳಿ. ಬಾಣಲಿಗೆ ಎಣ್ಣೆ ಹಾಕಿ ಒಲೆಯ ಮೇಲಿಡಿ. ಎಣ್ಣೆ ಕಾದ ಬಳಿಕ ಪಲ್ಯದ ಉಂಡೆಗಳನ್ನು ಒಂದೊಂದಾಗಿ ತೆಗೆದುಕೊಂಡು ಹಿಟ್ಟಿನಲ್ಲಿ ಅದ್ದಿ ಬಾಣಲಿಗೆ ಹಾಕಿ ಹದವಾಗಿ ಬೋಂಡಾ ಕರಿಯಿರಿ.

* * * * *

# ಗಣಪತಿ ಹಬ್ಬದ ಅಡುಗೆಗಳು

**ಕೋಸಂಬರಿಗಳು, ಪಲ್ಯಗಳು,**

## ಮೋದಕ

**ಸಾಮಗ್ರಿಗಳು – ಹೂರಣಕ್ಕೆ** 1. ಬೆಲ್ಲ - 1/2 ಕಪ್

2. ಕಾಯಿತುರಿ - 1 ಕಪ್

**ಕಣಕಕ್ಕೆ** - 1. ನೀರು 1 ಕಪ್ 2. ಉಪ್ಪು 1/4 ಚಮಚ

3. ತುಪ್ಪ - 1/2 ಚಮಚ 4. ಅಕ್ಕಿ ಹಿಟ್ಟು - 1 ಕಪ್

**ವಿಧಾನ –**

1. ದಪ್ಪ ತಳದ ಬಾಣಲೆಯಲ್ಲಿ ಬೆಲ್ಲ ಹಾಗೂ ಕಾಯಿತುರಿಯನ್ನು ಹಾಕಿ ಮಧ್ಯಮ ಉರಿಯಲ್ಲಿ ಹುರಿಯಿರಿ.
2. ಬೆಲ್ಲ ಕರಗಿ ಕಾಯಿಯ ಜೊತೆ ಮಿಶ್ರವಾಗುವ ತನಕ ಹುರಿದರೆ ಹೂರಣವು ಸಿದ್ಧ.

**ಕಣಕ –**

1. ಬಾಣಲೆಗೆ ನೀರು, ಉಪ್ಪು, ತುಪ್ಪ ಹಾಕಿ ಕುದಿಯಲು ಬಿಡಿ.
2. ಒಲೆಯನ್ನು ಆರಿಸಿರಿ; ನೀರಿಗೆ ಅಕ್ಕಿ ಹಿಟ್ಟನ್ನುಹಾಕಿ ಕಲೆಸಿರಿ. ಒಣವಾದರೆ ಚಿಂತಿಸಬೇಡಿ.
3. 3-5 ನಿಮಿಷ ಬಾಣಲೆಯನ್ನು ಮುಚ್ಚಿಡಿ.
4. ನಂತರ ಹಿಟ್ಟನ್ನು ಚೆನ್ನಾಗಿ ನಾದಿ ಕಲೆಸಿರಿ.

* ಹಿಟ್ಟಿನ ಉಂಡೆ ಮಾಡಿ, ಅಗಲಿಸಿ, ಬಟ್ಟಲಾಕಾರ ಮಾಡಿ, ತುದಿಗಳನ್ನು ನೆರಿಗೆ ಹಿಡಿದು, ಹೂರಣ ತುಂಬಿರಿ.

ನೆರಿಗೆಗಳನ್ನು ಒಟ್ಟು ಮಾಡಿ, ಪೊಟ್ಟಲಿಯನ್ನು ಮಾಡಿರಿ.

10 ನಿಮಿಷ ಹಬೆಯಲ್ಲಿ ಬೇಯಿಸಿದರೆ ನೈವೇದ್ಯಕ್ಕೆ ಮೋದಕವು ಸಿದ್ಧ.

# ಶ್ಯಾಮಿಗೆ ಮಾಡುವ ವಿಧಾನ

1 ಪಾವು ಹಸನಾದ, ಶುಭ್ರವಾದ, ಒಳ್ಳೆಯದಾದ ಶಾಮಿಗೆ ರವೆಯನ್ನು ತಂದು ಅದಕ್ಕೆ ನೀರು ಹಾಕಿ ಮುದ್ದೆಯಾಗುವಂತೆ ಕಲೆಸಿಡಬೇಕು. ಈ ಪ್ರಕಾರ 3-4 ಗಂಟೆಯ ಕಾಲ ನೆನೆದ ತರುವಾಯ ಹಸನಾದ ಬೆಣ್ಣೆ ಮತ್ತು ಶೋಧಿಸಿದ ಅಕ್ಕಿ ಹಿಟ್ಟು, ಸಹ ಬೆರೆಸಿ, ಅದಕ್ಕೆ ಸವರಿ ಕುಟ್ಟಬೇಕು ಅಥವಾ ತುಪ್ಪ ಗಟ್ಟಿಯಾಗಿರತಕ್ಕದ್ದನ್ನು ಸೇರಿಸಿ ಕುಟ್ಟಿ ಕೈಗಳಿಂದ ಮರ್ದಿಸಿ, ಒರಳುಕಲ್ಲಿನ ಮೇಲೆ ಇಟ್ಟು ಕಲ್ಲಿಂದ ಕುಟ್ಟಬೇಕು. ಎಲ್ಲವನ್ನು ಸಮನಾಗಿ ಕುಟ್ಟಿದ ಬಳಿಕ ತುಪ್ಪ ಅಥವಾ ಬೆಣ್ಣೆ ಹಿಟ್ಟನ್ನು ಕೈಗೆ ಸವರಿಕೊಂಡು, ಆ ಉಂಡೆಯನ್ನು ರೂಲು ದೊಣ್ಣೆಯಂತೆ ಹೊಸೆಯಬೇಕು. ಆಮೇಲೆ ಇದನ್ನು ಸಣ್ಣ ಬೆತ್ತದಂತೆ ಹೊಸದು, ಅದನ್ನು 4-5 ತುಂಡುಗಳನ್ನಾಗಿ ಮಾಡಿ, ಅಗಲವಾದ ಬಾಳೆಲೆಗೆ ತುಪ್ಪ ಸವರಿ ಆ ತುಂಡುಗಳಲ್ಲಿ ಒಂದನ್ನು ತೆಗೆದುಕೊಂಡು ದಪ್ಪ ಹೆಂಚಿಯ ಕಡ್ಡಿಯಂತೆ ಹೊಸೆದು, ಒಂದು ಕಡೆ ಗುಡ್ಡೆ ಹಾಕಿ, ಮತ್ತೊಂದು ತುಂಡನ್ನು ತೆಗೆದುಕೊಂಡು, ಅದನ್ನು ದಪ್ಪ ಹಂಚಿಕಡ್ಡಿಯಂತೆ ಹೊಸೆದು ಒಂದುಕಡೆ ಹಾಕಬೇಕು. ಬಾಕಿಯಿರುವ ತುಂಡುಗಳನ್ನು ಇದರಂತೆಯೇ ಮಾಡಿ, ಬೇರೆ ಬೇರೆ ಕಡೆ ಹೊಸೆದು ಹಾಕಬೇಕು. ಅದರ ಮೇಲೆ ಬಾಳೆಲೆಯನು ಹೊದ್ದಿಸಬೇಕು. ಒಂದು ಉದ್ದವಾದ ಗಳುವನ್ನು ವರಿಸಿ ಅಡ್ಡಲಾಗಿಟ್ಟು ಅದರ ಮೇಲೆ ಒಂದು ಗುಡ್ಡೆಯಲ್ಲಿರುವ ಶ್ಯಾಮಿಗೆಯ ತುದಿಯನ್ನು ತೆಗೆದುಕೊಂಡು ಸಣ್ಣನಾಗಿ ಹೊಸೆದು ಎರಡು ಕೈಗಳ ಮೇಲೆ ತೆಗೆದುಕೊಂಡು ಆ ಗಳುವಿನ ಮೇಲೆ ಹಾಕಬೇಕು. ಆ ಬಳಿಕ ಎಲ್ಲವನ್ನೂ ಈ ರೀತಿ ಸಣ್ಣನಾಗಿ ಹೊಸೆದು ಆ ಗಳುವಿನ ಮೇಲೆ ಹಾಕಬೇಕು. 2-3 ದಿವಸ ಒಣಗಿದ ಬಳಿಕ ಇದನ್ನು ಒಂದು ಪಾತ್ರೆಯಲ್ಲಿ ಹಾಕಿ ಮುಚ್ಚಿಡಬೇಕು. ಅವಶ್ಯಬಿದ್ದಾಗ ಬೇಕಾದಷ್ಟನ್ನು ತೆಗೆದುಕೊಂಡು ಪಾಯಸ ಮಾಡಬಹುದು. ಇದನ್ನು ಗಾಳಿ ತಾಕದಂತೆ ಮುಚ್ಚಿಡಬೇಕು. 1 ತಿಂಗಳವರೆಗೆ ಇಡಬಹುದು.

# ಶ್ಯಾಮಿಗೇ ಪಾಯಸ

1 ಕಲಾಯಿ ಮಾಡಿದ ಹಿತ್ತಾಳೆ ಪಾತ್ರೆಯಲ್ಲಿ 1 ಪಾವಿನಷ್ಟು ಸಿಹಿನೀರು ಹಾಕಿ ಮರಳಿಸಬೇಕು. ಅದು ಮರಳಿದ ನಂತರ ಬೇಕಾದಷ್ಟು ಶ್ಯಾಮಿಗೆಯನ್ನು ತೆಗೆದುಕೊಂಡು

ಪುಡಿಮಾಡಿ, ಕುದಿನೀರಿನಲ್ಲಿ ಹಾಕಬೇಕು. ಶ್ಯಾಮಿಗೆ ಪಕ್ವವಾದನಂತರ, ಆ ನೀರನ್ನು ಬಸಿದು, ಅದಕ್ಕೆ ಹಸನಾದ ಹಾಲು ಹಾಕಿ ಕಾಯಿಸಿ ಅದಕ್ಕೆ ಸಕ್ಕರೆ ಹಾಕಿ ಹೊಂದಿಸಿ, ಏಲಕ್ಕಿ ಪುಡಿ, ಪಚ್ಚ ಕರ್ಪೂರ, ಕರಿದ ದ್ರಾಕ್ಷಿ, ಬಾದಾಮಿಚೂರು ಇವನ್ನು ಹಾಕಿ ಹೊಂದಿಸಬೇಕು. ಕೆಲವರು ಇದಕ್ಕೆ ಬೆಲ್ಲವನ್ನು ಹಾಕುತ್ತಾರೆ ಇದರಂತೆ ಬಟವೀ ಪಾಯಸ, 2 ಗೌಲೀಪಾಯಸ, 3 ಪರಡೀ ಪಾಯಸ, 4 ಮಾಲತೀಪಾಯಿಸಗಳನ್ನು ಮಾಡಬಹುದು. 1 ನೆಯದು ಶ್ಯಾಮಿಗೆ, 2 ಬಟವೀ, 2 ಗೌಲಿ, 4 ಪರಡಿ, 5 ಮಾಲತಿ ಇವೇ ಪಂಚ ಪಾಯಸಗಳು ದೊಡ್ಡ ಹಬ್ಬಗಳಲ್ಲಿ ಮಾಡತಕ್ಕ ರೂಢಿಯಿದೆ.

## ರವೆ ಕರಿಗಡಬು

1 ಪಾವು ರವೆಯನ್ನು ತುಪ್ಪಹಾಕಿ ಹುರಿದ ಬಳಿಕ ಹಾಲು ಚಿಮುಕಿಸಿ ಪಕ್ವಮಾಡಿ 1 ಶೇರು ಸಕ್ಕರೆ, ಏಲಕ್ಕಿಪುಡಿ ಮುಂತಾದುವನ್ನು ಹಾಕಿ ಹೊಂದಿಸಿ ಹೂರಣವನ್ನು ಮಾಡಿಕೊಂಡು, 1 ಪಾವು ರವೆಯನ್ನಾಗಲಿ ಗೋಧಿಹಿಟ್ಟನ್ನಾಗಲಿ ಚೆನ್ನಾಗಿ ನಾದಿ ಕಲಸಿಟ್ಟು, ಇದರ ಉಂಡೆಗಳನ್ನು ಮಾಡಿ ಒಂದೊಂದನ್ನು ಪೋಳುಪಾಟಿನ ಮೇಲೆ ಅಕ್ಕಿ ಹಿಟ್ಟನ್ನು ಉದುರಿಸಿ ಲಟ್ಟಿಸಿ ಅದರೊಳಗೆ ಮಧ್ಯದಲ್ಲಿ ಉದ್ದಕ್ಕೆ ಸಣ್ಣ ಬಾಳೇಹಣ್ಣಿನ ಆಕಾರದಂತೆ ಇಟ್ಟು, ಮಡಿಸಿ, ಅಂಚುಗಳನ್ನು ಸಮನಾಗಿ ಮಾಡಿ ಬೆರಳುಗಳಿಂದ ವತ್ತಿಸುತ್ತಲೂ ಅಂಚು ಕಟ್ಟಿ ಬಾಣಲೆಯಲ್ಲಿ ಕಾಯ್ದ ತುಪ್ಪದಲ್ಲಿ ಹಾಕಿ ಕರಿದುಕೊಳ್ಳಬೇಕು. ಹೀಗೆಯೇ ಎಲ್ಲವನ್ನು ಮಾಡಿಕೊಳ್ಳುವುದು.

## ಲಾಡು

**ಬೇಕಾಗುವ ಪದಾರ್ಥಗಳು :**

ಕಡಲೆಹಿಟ್ಟು - 500 ಗ್ರಾಂ., ಯಾಲಕ್ಕಿ - 10
ಸಕ್ಕರೆ - 400 ಗ್ರಾಂ ಕೇಸರಿ ಬಣ್ಣ - 1 ಚಮಚ,
ಹಾಲು - 150 ಗ್ರಾಂ. ಕರಿಯಲು ತುಪ್ಪ - ಅಗತ್ಯವಿದ್ದಷ್ಟು,
ಗೋಡಂಬಿ ದ್ರಾಕ್ಷಿ- 50 ಗ್ರಾಂ.

**ಮಾಡುವ ರೀತಿ :** ಕಡಲೆಹಿಟ್ಟನ್ನು ತುಪ್ಪದಲ್ಲಿ ಹುರಿದಿಟ್ಟುಕೊಳ್ಳಿ. ನಂತರ ಸಕ್ಕರೆ ಪುಡಿ ಮಾಡಿ ಹಿಟ್ಟಿನ ಜೊತೆ ಸೇರಿಸಿ. ತುಪ್ಪದಲ್ಲಿ ಹುರಿದ ಗೋಡಂಬಿ-ದ್ರಾಕ್ಷಿಯನ್ನು ಹಿಟ್ಟಿಗೆ ಸೇರಿಸಿದ ಬಳಿಕ ಯಾಲಕ್ಕಿ ಪುಡಿ, ಕೇಸರಿ ಬಣ್ಣ ಹಾಕಿ ಮಿಶ್ರಣ ಮಾಡಿ. ಹಾಲನ್ನು ಹಾಕಿಕೊಂಡು ಮತ್ತೆ ಮಿಶ್ರಣ ಮಾಡಿ. ಎಲ್ಲಾ ಮಿಶ್ರಣ ಆದ ಬಳಿಕ ಉಂಡೆ ಕಟ್ಟಿ. ಇದೇ ರೀತಿ ರವೆ ಲಾಡು ಮಾಡಬಹುದು. ಆದರೆ ಕೇಸರಿ ಬಣ್ಣ ಅದಕ್ಕೆ ಬೇಕಾಗಿಲ್ಲ.

* * * *

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ಸ್ವರ್ಣಗೌರಿ ಪೂಜೆ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ ಶ್ರೀಲಕ್ಷ್ಮೀಹಯಗ್ರೀವದೇವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಹನುಮಜ್ಜಯಂತೀ

ಚೈತ್ರ || ಶುದ್ಧ || ಹುಣ್ಣಿಮೆ



ದ್ವಾನ್ ಬೆಮ್ಮತ್ತಿ ವೆಂಕಟೇಶಾಚಾಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಹನುಮಜ್ಜಯಂತಿ

ಚೈತ್ರ ।। ಶುದ್ಧ ।। ಪೂರ್ಣಿಮಾ ।।

ವಿದ್ವಾನ್ ।। ಬೆಮ್ಮತ್ತಿ ವೇಂಕಟೇಶಾಚಾರ್ಯ,

ಬೆಂಗಳೂರು.

ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),

ಗಿರಿನಗರ, ಬೆಂಗಳೂರು-೮೫

'ಹನುಮಜ್ಜಯಂತಿ' ಶಾಲಿವಾಹನಶಕೆ ೧೯೪೩ ಶಾರ್ವರಿ॥ ಚೈತ್ರ॥ ಶುದ್ಧ ॥ ಹುಣ್ಣಿಮೆ, ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥಶ್ರೀಪಾದಂಗಳವರ ಕರಕಮಲಗಳಿಂದ ಭಾರತೀರಮಣಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀ-ಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು : ೧೧೦



ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಶ್ರೀಮತಿ ನಾಗಲತಾ

ಮುದ್ರಣ : ಮುಕ್ತಿಪಥ ಮುದ್ರಣಾಲಯ,
ಬೆಂಗಳೂರು.



ಶ್ರೀಮದ್ಭಾಗವತ, ಹರಿಕಥಾಮೃತಸಾರ ಮತ್ತು ಇತರ ಮಧ್ವಶಾಸ್ತ್ರಗಳಲ್ಲೇ ತಮ್ಮ ಜೀವನವನ್ನು ಮುಡುಪಾಗಿಟ್ಟು, ಚಳ್ಳಕೆರೆ ನಿವಾಸಿಗಳಾಗಿದ್ದ ದಿವಂಗತರಾದ ಶ್ರೀಯುತರಾದ ಎನ್.ಎ. ವಿಜೇಂದ್ರರಾವ್ ಮತ್ತು ಎನ್.ವಿ. ಮಂದಾಕಿನಿ ಬಾಯಿ ಇವರುಗಳ ಸ್ಮರಣಾರ್ಥ ಬೆಂಗಳೂರು ಸಹಕಾರನಗರದಲ್ಲಿರುವ ಇವರ ಪುತ್ರ ಶ್ರೀ ಎನ್.ವಿ. ಅನಂತಮೂರ್ತಿ ಮತ್ತು ಅವರ ಧರ್ಮಪತ್ನಿ ಶ್ರೀಮತಿ ಬಿ.ಆರ್. ಪ್ರಿಯಂವದ, ಅವರು ಮಾಡಿದ ಸೇವೆ.

---

ಹನುಮಜ್ಜಯಂತಿಯ ಶುಭಪರ್ವಕಾಲ ಸೂರ್ಯೋದಯದ ಸಂದರ್ಭದಲ್ಲಿ ಹನುಮಂತದೇವರನ್ನು ತೊಟ್ಟಿಲಿನಲ್ಲಿ ಇಟ್ಟು ಪೂಜಿಸಿ, ಈ ಮಂತ್ರದಿಂದ ಅರ್ಘ್ಯವನ್ನು ನೀಡಬೇಕು -

ನಮಸ್ತೇ ವಾಯುಪುತ್ರಾಯ ಧ್ವಂಸಿತಾಮರವೈರಿಣೇ ।
ಸುಜನಾಂಬುಧಿಚಂದ್ರಾಯ ಭವಿಷ್ಯದ್ ಬ್ರಹ್ಮಣೇ ನಮಃ ।
ಶ್ರೀಹನುಮತೇ ನಮಃ ಇದಮರ್ಘ್ಯಂ ಇದಮರ್ಘ್ಯಂ ಇದಮರ್ಘ್ಯಂ॥

# ವಿಷಯಾನುಕ್ರಮಣಿಕೆ

# ಮುನ್ನುಡಿ

ಚೈತ್ರಮಾಸದ ಶುಕ್ಲಪಕ್ಷದಲ್ಲಿ ನವಮಿ ತಿಥಿಯ ಶುಭಪರ್ವಕಾಲದಲ್ಲಿ ಶ್ರೀರಾಮಚಂದ್ರದೇವರು ಅಯೋಧ್ಯಾಪಟ್ಟಣದಲ್ಲಿ ಅವತಾರವನ್ನು ಮಾಡಿದರು. ಅವರ ಸೇವೆಗಾಗಿ ಕಿಂಪುರುಷಖಂಡದಲ್ಲಿ ಶ್ರೀಮುಖ್ಯಪ್ರಾಣದೇವರು ಅಂಜನಾದೇವಿಯಲ್ಲಿ ಅದೇ ಚೈತ್ರಮಾಸದ ಶುಕ್ಲಪಕ್ಷದ ಹುಣ್ಣಿಮೆಯ ದಿವಸ ಹನುಮಂತದೇವರಾಗಿ ಅವತಾರವನ್ನು ಮಾಡಿದರು.

ಹನುಮಂತದೇವರ ಬಗ್ಗೆ ಇಂದಿನ ಜಗತ್ತಿನಲ್ಲಿ ಅನೇಕ ತಪ್ಪು ಮಾಹಿತಿಗಳಿವೆ. ಹನುಮಜ್ಜಯಂತಿಯ ಬಗ್ಗೆ ಅನೇಕ ತಪ್ಪು ಮಾಹಿತಿಗಳಿವೆ. ಸಾವಿರಾರು ಹನುಮಂತದೇವರ ಮಂದಿರಗಳಿದ್ದರೂ ಕೂಡ, ಅವರ ತತ್ವವನ್ನು ಅನುಸರಿಸಿ, ಪೂಜೆ ಸಲ್ಲಿಸುವ ಮಂದಿರಗಳು ಕೆಲವು ಮಾತ್ರ . ಹನುಮಂತದೇವರ ಅವತಾರದ ಬಗ್ಗೆಯೂ ಕೂಡ ಅನೇಕ ತಪ್ಪು ಮಾಹಿತಿಗಳಿವೆ. ಇವೆಲ್ಲದರ ವಿಮರ್ಶೆಯನ್ನು ಮಾಡುವ ಮೂಲಕ ನಿಜವಾದ ಹನುಮಜ್ಜಯಂತಿಯನ್ನು ಹೇಗೆ ಆಚರಿಸಬೇಕು ? ಮತ್ತು ಹನುಮಂತದೇವರ ಮಹತ್ವವೇನು? ಹನುಮಂತದೇವರ ಪೂಜೆಯನ್ನು ಹೇಗೆ ಮಾಡಬೇಕು ? ಹನುಮಜ್ಜಯಂತಿಯಂದು ಆಚರಿಸಬೇಕಾದ ಕರ್ತವ್ಯಗಳೇನು? ಹನುಮಜ್ಜಯಂತಿಯನ್ನು ಏಕೆ ಆಚರಿಸಬೇಕು? ಈ ಎಲ್ಲದರ ಬಗ್ಗೆ ನಿಖರವಾದ ಮಾಹಿತಿಯನ್ನು ಈ ಪುಸ್ತಕದಲ್ಲಿ ನೀಡಲಾಗಿದೆ. ಮತ್ತು ಅನೇಕ ಗ್ರಂಥಗಳಿಂದ ವಿಷಯಗಳನ್ನು ಸಂಗ್ರಹ ಮಾಡಿ, ಸತ್‌ಸಂಪ್ರದಾಯಕ್ಕೆ ಅನುಗುಣವಾದ ಆಚರಣೆಗಳ ಕ್ರಮವನ್ನು ಇಲ್ಲಿ ನೀಡಲಾಗಿದೆ. ಸಜ್ಜನರು ಇದರ ಸದುಪಯೋಗವನ್ನು ಪಡೆದುಕೊಂಡು ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.

ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ಸಹಕಾರನಗರದಲ್ಲಿರುವ ಶ್ರೀ ಅನಂತಮೂರ್ತಿ ದಂಪತಿಗಳಿಗೆ ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ-ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಇವರ ಮಾತಾ-ಪಿತೃಗಳಿಗೆ ಈ ಜ್ಞಾನಯಜ್ಞದ ಪುಣ್ಯರಾಶಿಯು ತಲುಪಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ

## ಹನುಮಜ್ಜಯಂತಿಯ ಆಚರಣೆಗೆ ಬೇಕಾಗುವ ಸಾಮಗ್ರಿಗಳು

* ಮನೆಯನ್ನು ತಳಿರುತೋರಣಗಳಿಂದ ಅಲಂಕರಿಸಲು ಸಿದ್ಧತೆ.

* ಅರಿಶಿನ, ಕುಂಕುಮ, ಹೂವು, ತುಳಸಿ, ಗೆಜ್ಜೆವಸ್ತ್ರ, ಪೂಜಾಸಾಮಗ್ರಿಗಳು.

* ಹನುಮಂತದೇವರ ಪೂಜೆಗಾಗಿ ಪಂಚಾಮೃತ ಪದಾರ್ಥಗಳು, ವೀಳ್ಯೆದೆಲೆಯ ಹಾರ, ಎಕ್ಕದ ಗಿಡದ ಹೂವು, ಅಶ್ವತ್ಥವೃಕ್ಷದ ಎಲೆ ಹಾಗೂ ಪನ್ನೀರು ಗುಲಾಬಿ ಮೊದಲಾದ ಹೂವುಗಳು.

* ಗಂಧಾಲಂಕಾರ ಮಾಡುವುದಿದ್ದರೆ ಆಯಾ ಪ್ರತಿಮೆಗಳಿಗೆ ಅನುಗುಣವಾಗಿ ಬೇಕಾಗುವ ಗಂಧ.

* ನೈವೇದ್ಯಕ್ಕಾಗಿ ಮಾವಿನಕಾಯಿಯ ಚಿತ್ರಾನ್ನ, ಹೂರಣದ ಹೋಳಿಗೆ, ಪಾನಕ, ಕೋಸಂಬರಿ ಹಾಗೂ ವಿವಿಧ ಭಕ್ಷ್ಯಭೋಜ್ಯಗಳಿಗೆ ಬೇಕಾಗುವ ಸಾಮಗ್ರಿಗಳು.

* ಬಾಳೇಹಣ್ಣು ಮೊದಲಾದ ಹಣ್ಣುಗಳು.

* ಕಲಶದಲ್ಲಿ ಪೂಜಿಸುವುದಿದ್ದರೆ ಕಲಶಸ್ಥಾಪನೆಗೆ ಉಪಯುಕ್ತವಾದ ಸಕಲ ಪರಿಕರಗಳು.

* ಸೂರ್ಯೋದಯ ಕಾಲದಲ್ಲಿ ಹನುಮಂತದೇವರನ್ನು ತೂಗಲು ಒಂದು ತೊಟ್ಟಿಲು.

* ಪಂಚಾಮೃತಕ್ಕೆ ಬೇಕಾಗುವ ಸಾಮಗ್ರಿಗಳು.

* * * *

# ಹನುಮದ್‌ವ್ರತದ ಬಗ್ಗೆ

* ಕೆಲವರು ಮಾರ್ಗಶಿರ ಮಾಸದ ಶುಕ್ಲಪಕ್ಷದ ತ್ರಯೋದಶಿಯ ದಿವಸ ಹನುಮದ್‌ವ್ರತವನ್ನು ಆಚರಿಸುತ್ತಾರೆ.
* ಇನ್ನು ಕೆಲವರು ಆಶ್ವೀನಮಾಸದ ಕೃಷ್ಣಪಕ್ಷದ ಚತುರ್ದಶಿಯ ದಿವಸ ಹನುಮದ್‌ವ್ರತವನ್ನು ಆಚರಿಸುತ್ತಾರೆ.
* ಇನ್ನೂ ಕೆಲವರು ಚೈತ್ರಮಾಸದ ಶುಕ್ಲಪಕ್ಷದ ಹುಣ್ಣಿಮೆಯ ದಿವಸ ಹನುಮದ್‌ವ್ರತವನ್ನು ಆಚರಿಸುತ್ತಾರೆ.
* ಇನ್ನು ಕೆಲವರು ಚೈತ್ರಮಾಸದ ಶುಕ್ಲಪಕ್ಷದ ಹುಣ್ಣಿಮೆಯ ದಿವಸ ಹನುಮಜ್ಜಯಂತಿಯನ್ನು ಆಚರಿಸಿ, ಮಾರ್ಗಶಿರಮಾಸದ ಶುಕ್ಲಪಕ್ಷದ ತ್ರಯೋದಶಿಯಂದು ಹನುಮದ್ ವ್ರತವನ್ನು ಆಚರಿಸುತ್ತಾರೆ.
* ಹನುಮಜ್ಜಯಂತಿಯೇ ಬೇರೆ, ಹನುಮದ್‌ವ್ರತವೇ ಬೇರೆ ಎಂಬುದು ಜ್ಞಾನಿಗಳ ಅಭಿಪ್ರಾಯ.
* ಹನುಮಜ್ಜಯಂತಿಯಂದೇ ಹನುಮದ್‌ವ್ರತವನ್ನು ಆಚರಿಸಬೇಕೆಂದು ಕೆಲವರು ಹೇಳುತ್ತಾರೆ.
* ಹಂಪೆಯ ಯಂತ್ರೋದ್ಧಾರಕ ದೇವಸ್ಥಾನದಲ್ಲಿ ಮಾರ್ಗಶಿರಮಾಸದ ಶುಕ್ಲಪಕ್ಷದ ತ್ರಯೋದಶಿಯ ದಿವಸ ಹನುಮದ್ ವ್ರತವನ್ನು ಆಚರಿಸುತ್ತಾರೆ. ಚಿತ್ರಾ ಪೂರ್ಣಿಮೆಯಂದು ಹನುಮಜ್ಜಯಂತಿಯನ್ನಷ್ಟೇ ಆಚರಿಸುತ್ತಾರೆ.
* ನರಸಿಂಹವ್ರತ, ರಾಮನವಮಿವ್ರತ, ಈ ಎಲ್ಲ ವ್ರತಗಳನ್ನು ಗಮನಿಸಿದಾಗ ಆಯಾ ದೇವತೆಗಳು ಅವತರಿಸಿದ ದಿನವೇ ಬೇರೆ. ಆಯಾದೇವತೆಗಳಿಗೆ ಸಂಬಂಧಪಟ್ಟ ಜಯಂತಿಯೇ ಬೇರೆ. ಹನುಮಂತದೇವರು ಹುಟ್ಟಿದ ದಿವಸವೇ ಬೇರೆ. ಹನುಮದ್‌ವ್ರತದ ದಿವಸವೇ ಬೇರೆ.
* ಎಲ್ಲ ಪೂಜಾವಿಧಾನ ಪುಸ್ತಕಗಳಲ್ಲಿ ಮತ್ತು ವ್ರತಕಲ್ಪ ಮೊದಲಾದ ಗ್ರಂಥಗಳಲ್ಲಿ ಚತುರ್ವರ್ಗಚಿಂತಾಮಣಿ, ವ್ರತರಾಜ ಇವುಗಳಲ್ಲಿಯೂ ಕೂಡ ಮಾರ್ಗಶಿರ

ಮಾಸದ ಶುಕ್ಲಪಕ್ಷದ ತ್ರಯೋದಶಿಯಂದೇ ಹನುಮದ್‌ವ್ರತ ಎಂದು ಹೇಳಲಾಗಿದೆ.

* ಉಪವಾಸಪೂರ್ವಕವಾಗಿ ಇಷ್ಟು ವರ್ಷಗಳ ಕಾಲ ಆಚರಿಸಬೇಕೆಂಬ ವಿಧಿಗೆ ಅನುಗುಣವಾಗಿ, ಉದ್ಯಾಪನೆ, ಅನ್ನ ಸಂತರ್ಪಣೆ ಮೊದಲಾದವುಗಳನ್ನು ಆಚರಿಸುವುದರ ಜೊತೆ ಪೂಜೆಯನ್ನು ಮಾಡುವುದೇ ವ್ರತ ಎಂದು ಕರೆಸಿಕೊಳ್ಳುತ್ತದೆ. ಇದಲ್ಲದೇ ಪ್ರತೀವರ್ಷವು ಕೇವಲ ಪೂಜೆಯನ್ನಷ್ಟೇ ಮಾಡಿದರೆ, ಅದನ್ನು ವ್ರತ ಎಂದು ಕರೆಯುವುದಿಲ್ಲ. ಕೇವಲ ಹನುಮಜ್ಜಯಂತಿಯ ಆಚರಣೆ ಅಥವಾ ಹನುಮಂತದೇವರ ಪೂಜೆ ಎಂದಷ್ಟೇ ಕರೆಯಲಾಗುತ್ತದೆ.

* ಹನುಮದ್‌ವ್ರತವನ್ನು ಆಚರಿಸುವುದು ಅತ್ಯಂತ ಶ್ರೇಷ್ಠ. ಸಾಧ್ಯವಾಗದಿದ್ದಾಗ ಹನುಮಂತದೇವರ ಪೂಜೆಯನ್ನು ಈ ಪುಸ್ತಕದಲ್ಲಿ ನೀಡಿದಂತೆ ಅವಶ್ಯವಾಗಿ ಮಾಡಲೇಬೇಕು. ಹನುಮಂತದೇವರ ಪೂಜೆಯನ್ನು ಮಾಡದಿದ್ದರೆ, ಅವನಿಗೆ ಇಹದಲ್ಲೂ ಪರದಲ್ಲೂ ಅನರ್ಥಗಳೇ ಉಂಟಾಗುತ್ತವೆ.

* ಹನುಮದ್‌ವ್ರತ ಐಚ್ಛಿಕ, ಹನುಮಂತದೇವರ ಪೂಜೆ ಕಡ್ಡಾಯ. ಯಾರೊಬ್ಬರೂ ಇದನ್ನು ಮಾಡದೇ ಇರುವಂತಿಲ್ಲ.

* ಚೈತ್ರಮಾಸದ ಶುಕ್ಲಪಕ್ಷದ ಹುಣ್ಣಿಮೆಯ ದಿವಸ ಹನುಮಂತದೇವರ ಪೂಜೆಯನ್ನು ವಿಶೇಷವಾಗಿ ಮಾಡಿ, ಹನುಮಂತದೇವರ ಅನುಗ್ರಹಕ್ಕೆ ಪಾತ್ರರಾಗಬೇಕು. ಅದಕ್ಕಾಗಿ ಈ ಪುಸ್ತಕದಲ್ಲಿ ನೀಡಿದ ಸಂಪ್ರದಾಯ ಆಚರಣೆ, ಮೊದಲಾದವುಗಳನ್ನು ಅನುಸರಿಸಬೇಕು. ಹನುಮಂತದೇವರ ಮಹತ್ವವನ್ನು ಅರಿತು ಧನ್ಯರಾಗಬೇಕು.

* * * *

## ಹನುಮಜ್ಜಯಂತಿಯನ್ನು ಹೇಗೆ ಆಚರಿಸಬೇಕು?

* ಕೇಸರಿಬಣ್ಣದ ಹನುಮಂತದೇವರ ಚಿತ್ರ ಬರೆದು ಹಾಗೂ 'ಜಯ ಶ್ರೀರಾಮ' ಎಂದು ಬರೆದು ತ್ರಿಕೋನಾಕಾರದ ಧ್ವಜವನ್ನು ಮನೆಯ ಮೇಲೆ ಸ್ಥಾಪನೆ

ಮಾಡಬೇಕು. ಇದರಿಂದ ಜೀವನದಲ್ಲಿ ಎಂದೂ ಎಲ್ಲಿಯೂ ಅಪಜಯವು ಉಂಟಾಗುವುದಿಲ್ಲ. ಅರ್ಜುನನ ರಥದಲ್ಲಿ ಇದೇ ಹನುಮಂತದೇವರ ಧ್ವಜವು ಇತ್ತು. ಅವನು ಜಯಶೀಲನಾದನು.

* ಹನುಮಂತದೇವರಿಗೆ ವೀಳ್ಯದೆಲೆಯಲ್ಲಿ ಅಲಂಕಾರ ಮಾಡುವ ಅಥವಾ ಮಾಲೆಯನ್ನು ಹಾಕುವ ವಾಡಿಕೆಯು ಇರುತ್ತದೆ. ಇನ್ನೂ ಹೆಚ್ಚಿನ ಫಲಕ್ಕಾಗಿ ವೀಳ್ಯದೆಲೆಯಲ್ಲಿ ಸಿಂಧೂರದಿಂದ ಶ್ರೀರಾಮ ಎಂದು ಬರೆದು, ಅಲಂಕಾರ ಮಾಡಬೇಕು.

* ನಾಕು ವೀಳ್ಯದೆಲೆಗಳ ಒಳಗೆ ಐದುಬಗೆಯ ಪದಾರ್ಥಗಳನ್ನಿಟ್ಟು ಸುತ್ತಿ ಹಾರವನ್ನಾಗಿ ಮಾಡಿ, ಹನುಮಂತದೇವರ ಕೊರಳಿಗೆ ಸಮರ್ಪಣೆ ಮಾಡಬೇಕು. ಮನಸ್ಸಿನಲ್ಲಿರುವ ಅಪೇಕ್ಷೆಗಳನ್ನು ಈಡೇರಿಸುವಂತೆ ಪ್ರಾರ್ಥಿಸುವ ಮೂಲಕ ವೀಳ್ಯದೆಳೆಯ ಹಾರವನ್ನು ಸಮರ್ಪಣೆ ಮಾಡಬೇಕು. ಆಗ ಕೆಲವೇ ದಿವಸಗಳಲ್ಲಿ ಅವರ ಮನೋಭೀಷ್ಟಗಳು ನೆರವೇರುತ್ತವೆ.

* ಹನುಮಂತದೇವರಿಗೆ ಅಶ್ವತ್ಥವೃಕ್ಷವೂ ಕೂಡ ಇಷ್ಟವಾಗಿರುತ್ತದೆ. ಆದ್ದರಿಂದ ಅಶ್ವತ್ಥವೃಕ್ಷದ ಎಲೆಗಳನ್ನು ಸಂಗ್ರಹಿಸಿ, ಅದರಲ್ಲಿಯೂ ಶ್ರೀರಾಮ ಎಂದು ಬರೆದು ಸಮರ್ಪಣೆ ಮಾಡಬೇಕು. ಇದರಿಂದ ವಿಶೇಷ ಅನುಗ್ರಹವು ದೊರೆಯುತ್ತದೆ.

* ಬಿಳಿ ಎಕ್ಕದಲೆಯಲ್ಲಿಯೂ ಕೆಲವರು 'ಶ್ರೀರಾಮ' ಎಂದು ಬರೆದು ಹನುಮಂತದೇವರ ಮುಂದೆ ಇಡುತ್ತಾರೆ. ಬಿಳೀ ಎಕ್ಕದ ಗಿಡದ ಹೂವನ್ನು ಸಮರ್ಪಣೆ ಮಾಡುತ್ತಾರೆ.

* ಜಾತಕದಲ್ಲಿ ಯಾರಿಗೆ ಯಾವ ಗ್ರಹಗಳು ನೀಚಸ್ಥಾನದಲ್ಲಿವೆಯೋ, ಅಥವಾ ಮೂರು, ಆರು, ಎಂಟು, ಹನ್ನೆರಡನೆಯ ಸ್ಥಾನದಲ್ಲಿದೆಯೋ, ಆಯಾ ಗ್ರಹಗಳಿಂದ ಅಭಿಮನ್ಯಮಾನವಾದ ಧಾನ್ಯಗಳನ್ನು ಹನುಮಂತದೇವರಿಗೆ ಸಮರ್ಪಣೆ ಮಾಡುವುದರಿಂದ ಗ್ರಹಪೀಡಾ ದೋಷವು ಪರಿಹಾರವಾಗುತ್ತದೆ.

* ಶನಿದೇವತೆಗೆ ಹನುಮಂತದೇವರೆಂದರೆ ಬಹಳ ಇಷ್ಟ. ಆದ್ದರಿಂದ ಶನಿದೋಷ ಪ್ರಾಯಶ್ಚಿತ್ತಕ್ಕೆ ಹನುಮಂತದೇವರ ಆರಾಧನೆ ಅತ್ಯಂತ ಫಲದಾಯಕವಾಗಿದೆ.

* ಏಳುವರೆ ಶನಿ, ಅಷ್ಟಮಶನಿ, ಚತುರ್ಥಶನಿ, ಮತ್ತು ಮೂರು, ಏಳು, ಒಂಬತ್ತನೆಯ ದೃಷ್ಟಿಯನ್ನು ಹೊಂದಿರುವ ಶನಿದೋಷ ಇವೆಲ್ಲದರ ಪರಿಹಾರಕ್ಕೆ ಹನುಮಂತದೇವರ ಆರಾಧನೆಯನ್ನೇ ಮಾಡಬೇಕು. ಇದರಿಂದ ಶನಿಯ ವಿಶೇಷಾನುಗ್ರಹಕ್ಕೆ ಪಾತ್ರರಾಗುವುದರಲ್ಲಿ ಸಂಶಯವೇ ಇಲ್ಲ.

* ಹನುಮಂತದೇವರ ಆರಾಧನೆಯಿಂದ ಶಾಶ್ವತವಾದ ಸುಖವು ದೊರಕುವುದಷ್ಟೇ ಅಲ್ಲದೇ ಈ ಜೀವನಕ್ಕೆ ಸಂಬಂಧಪಟ್ಟ ಕಷ್ಟ-ಕಾರ್ಪಣ್ಯಗಳೆಲ್ಲವೂ ಪರಿಹಾರವಾಗಿ ದಿನನಿತ್ಯವೂ ಎದುರಾಗುತ್ತಿರುವ ಅನೇಕ ಸಮಸ್ಯೆಗಳೆಲ್ಲವೂ ಸಂಪೂರ್ಣವಾಗಿ ನಾಶವಾಗುತ್ತವೆ. ಈ ಎಲ್ಲ ಕಾರಣಗಳಿಂದ ಹನುಮಂತದೇವರ ಆರಾಧನೆಯನ್ನು ಹೆಚ್ಚು ಹೆಚ್ಚು ಮಾಡಬೇಕು. ಅವರಲ್ಲಿ ನಿರಂತರ ಭಕ್ತಿಯನ್ನು ಹೆಚ್ಚಿಸಿಕೊಳ್ಳಬೇಕು.

* 'ಬುದ್ಧಿರ್ಬಲಂ ಯಶೋ ಧೈರ್ಯಂ ನಿರ್ಭಯತ್ವಂ ಅರೋಗತಾ । ಅಜಾಡ್ಯಂ ವಾಕ್ಪುಟತ್ವಂಚ ಹನೂಮತ್ ಸ್ಮರಣಾದ್ ಭವೇತ್' ಎಂಬ ಶ್ಲೋಕವನ್ನು ಹನುಮಜ್ಜಯಂತಿಯ ದಿವಸ ಕನಿಷ್ಠ ಒಂದುಸಾವಿರ ಬಾರಿ ಹೇಳಿಕೊಳ್ಳಬೇಕು. ಇದರಿಂದ ಬುದ್ಧಿ, ಬಲ, ಯಶಸ್ಸು, ಧೈರ್ಯ, ಭಯಪರಿಹಾರ, ರೋಗಪರಿಹಾರ, ಜಾಡ್ಯಪರಿಹಾರ, ವಾಕ್-ಪಟುತ್ವ ಮೊದಲಾದ ಫಲಗಳು ದೊರೆಯುತ್ತವೆ. ನಮ್ಮ ದೇಶದಲ್ಲಿ ಹನುಮಂತದೇವರ ಗುಡಿಯಿಲ್ಲದ ಕೇರಿಯೇ ಇರುವುದಿಲ್ಲ. ಹನುಮಂತದೇವರ ಲಕ್ಷಾಂತರ ಗುಡಿಗಳಿವೆ. ತನ್ಮೂಲಕ ಕೋಟ್ಯಂತರ ಜನಕ್ಕೆ ಅನುಗ್ರಹವನ್ನು ಮಾಡುತ್ತಿದ್ದಾರೆ. ಇಂಥ ಹನುಮಂತದೇವರ ಅಪಾರ ಮಹಿಮೆಯನ್ನು ಅರ್ಥ ಮಾಡಿಕೊಂಡು ಅವರ ಆರಾಧನೆಯಲ್ಲಿ ತೊಡಗಬೇಕು.

* ಹನುಮಂತದೇವರು ಶ್ರೀರಾಮಚಂದ್ರದೇವರ ಭಕ್ತರು. ರಾಮನವಮಿ ಮುಗಿದ ಮೇಲೆ ಹನುಮಜ್ಜಯಂತಿಯು ಬರುತ್ತದೆ. ಶ್ರೀರಾಮಚಂದ್ರದೇವರು ನವಮಿಯ ದಿವಸ ಅವತಾರವನ್ನು ಮಾಡಿದರೆ, ಅದೇ ಪಕ್ಷದಲ್ಲಿ ಬರುವ ಹುಣ್ಣಿಮೆಯ ದಿವಸ ಹನುಮಂತದೇವರು ಅವತಾರವನ್ನು ಮಾಡಿರುವರು. ಎಂದೆಂದೂ ಶ್ರೀರಾಮಚಂದ್ರನನ್ನು ಬಿಟ್ಟಿರುವರಲ್ಲ. ಶ್ರೀರಾಮಚಂದ್ರನೂ ಕೂಡ ಎಂದೂ ಹನುಮಂತದೇವರನ್ನು ಬಿಟ್ಟಿರುವುದಿಲ್ಲ. ಎಲ್ಲಿ ರಾಮದೇವರಿದ್ದಾರೋ, ಅಲ್ಲಿ

ಹನುಮಂತದೇವರಿದ್ದಾರೆ. ಎಲ್ಲಿ ಹನುಮಂತದೇವರಿದ್ದಾರೋ ಅಲ್ಲಿ ರಾಮದೇವರಿದ್ದಾರೆ. ರಾಮಮಂದಿರವಿದ್ದಲ್ಲಿ ಹನುಮಜ್ಜಯಂತಿಯನ್ನು ಆಚರಿಸಲೇಬೇಕು. ಹನುಮಮಂದಿರವಿದ್ದಲ್ಲಿ ರಾಮದೇವರ ಹಬ್ಬವನ್ನು ಆಚರಿಸಲೇಬೇಕು. ಆಗಷ್ಟೇ ಇಬ್ಬರು ಸಂಪೂರ್ಣ ಮನಸ್ಸಿನಿಂದ ಅನುಗ್ರಹ ಮಾಡುತ್ತಾರೆ.

* ಉಳಿದ ವ್ರತಗಳಂತೆ ಹನುಮಜ್ಜಯಂತಿಯಂದು ಧಾನ್ಯದ ಮೇಲೆ ಕಲಶವನ್ನಿಟ್ಟು, ಅದರಲ್ಲಿ ಹನುಮಂತದೇವರ ಆವಾಹನೆಯನ್ನು ಮಾಡಿ, ಪೂಜಿಸಬೇಕು. ಸಾಧ್ಯವಾಗದಿದ್ದರೆ ಪ್ರತಿನಿತ್ಯ ಪೂಜಿಸುವ ಹನುಮಂತದೇವರ ವಿಗ್ರಹಕ್ಕೆ ವಿಶೇಷವಾದ ಪೂಜೆಯನ್ನು ಸಲ್ಲಿಸಬೇಕು.

* ಹನುಮಂತದೇವರ ಮೂರ್ತಿಗೆ ಗಂಧಾಲಂಕಾರವನ್ನು ಮಾಡಿದರೆ ಅನೇಕ ಸಂಕಷ್ಟಗಳು ಪರಿಹಾರವಾಗುತ್ತವೆ. ಒಂದುವೇಳೆ ಮನೆಯಲ್ಲಿ ತಾಂಬೂಲದ ಹಾರವನ್ನು ಗಂಧಾಲಂಕಾರವನ್ನು ಮಾಡಲು ಅನುಕೂಲವಿಲ್ಲದಿದ್ದರೆ ಹನುಮಂತದೇವರ ದೇವಸ್ಥಾನದಲ್ಲಿ ಈ ಕಾರ್ಯವನ್ನು ಮಾಡಿಸಬಹುದು.

## ಹನುಮಂತದೇವರ ಬಗ್ಗೆ ಇರುವ ತಪ್ಪು ಕಲ್ಪನೆಗಳು

* ಹನುಮಂತದೇವರು ರುದ್ರದೇವರ ಅವತಾರ ಎಂದು ಅನೇಕರು ತಿಳಿದಿದ್ದಾರೆ. ಆದರೆ ಹನುಂತದೇವರಿಗಿಂತ ರುದ್ರದೇವರು ಯೋಗ್ಯತೆಯಲ್ಲಿ ಬಹಳ ಕನಿಷ್ಠರಾಗಿದ್ದಾರೆ. ರುದ್ರದೇವರು ಹನುಮಂತದೇವರ ಭೃತ್ಯರಾಗಿದ್ದಾರೆ.

* ಕೇವಲ ಮಾಟ-ಮಂತ್ರಗಳ ನಿವಾರಣೆಗಾಗಿ ಮಾರುತಿಯನ್ನು ಆರಾಧನೆ ಮಾಡುತ್ತಾರೆ. ಮತ್ತು ಅದರಿಂದ ಫಲವನ್ನೂ ಕೂಡ ಪಡೆದು, ಹನುಮಂತದೇವರಿಂದ ಎಲ್ಲ ಬಗೆಯ ಕಾರ್ಯಗಳನ್ನು ಸಾಧಿಸಿಕೊಳ್ಳುತ್ತೇವೆಂದು ತಿಳಿದಿದ್ದಾರೆ. ಹುನುಮಂತ ದೇವರುಹರಿಭಕ್ತಿ, ಮೋಕ್ಷ ಮೊದಲಾದ ಶಾಶ್ವತವಾದ ಸುಖವನ್ನೇ ನೀಡುತ್ತಾರೆಂಬುದನ್ನೇ ಜನರು ಮರೆತಿದ್ದಾರೆ.

* ಹನುಮಂತದೇವರು ಅವತರಿಸಿದಾಗ ಹಸಿವಾಯಿತು. ಸೂರ್ಯಮಂಡಲವನ್ನೇ ಹಣ್ಣೆಂದು ಭ್ರಮಿಸಿ ನಭೋಮಂಡಲಕ್ಕೆ ಹಾರಿದರು. ಇಂದ್ರಾಯುಧನ

ವಜ್ರಾಘಾತಕ್ಕೆ ಪಾತ್ರರಾಗಿ ಅವರ ದವಡೆಯು ಊದಿತು ಎಂದು ಹೇಳುತ್ತಾರೆ. ಇದೂ ಕೂಡ ಅರ್ಥಹೀನವಾದದ್ದು. ಇದರ ಬಗ್ಗೆ ಮುಂದೆ ಸ್ಪಷ್ಟಪಡಿಸಲಾಗಿದೆ.

## ಹನುಮಜ್ಜಯಂತಿಯಂದು ಮಾಡಬೇಕಾದ ಕರ್ತವ್ಯಗಳು

* ವಾಯುಸ್ತುತಿ ಪುರಶ್ಚರಣೆಯನ್ನು ಮಾಡಬೇಕು. ಇದರ ಕ್ರಮವನ್ನು ಮುಂದೆ ನೀಡಲಾಗಿದೆ.

* ಪಂಚಾಮೃತಾಭಿಷೇಕವು ಸಾಧ್ಯವಾಗದಿದ್ದರೆ ಮಧುವಿನಿಂದ ತರ್ಪಣವನ್ನು ಕೊಡುವ ಮೂಲಕ ವಾಯುಸ್ತುತಿ ಪುರಶ್ಚರಣೆಯನ್ನು ಮಾಡಬೇಕು. ಇದರಿಂದ ಅತ್ಯಂತ ಕಠಿಣವಾದ ಮನೋಭೀಷ್ಟಗಳೂ ಕೂಡ ನೆರವೇರುತ್ತವೆ.

* ರಾಮನಾಮಲೇಖನ ಯಜ್ಞವನ್ನು ಪ್ರಾರಂಭ ಮಾಡಬೇಕು. ಇದರಿಂದ ಹನುಮಂತದೇವರಿಗೆ ಬಹಳ ಸಂತೋಷವಾಗುತ್ತದೆ.

* ಬಳಿತ್ಥಾಸೂಕ್ತ, ಪವಮಾನ, ವಾಲ್ಮೀಕಿ ರಾಮಾಯಣದ ಸುಂದರಕಾಂಡ, ಮಹಾಭಾರತ ತಾತ್ಪರ್ಯನಿರ್ಣಯದ ಸುಂದರಕಾಂಡ, ಯಂತ್ರೋದ್ಧಾರಕ ಸ್ತೋತ್ರ ಇವೇ ಮೊದಲಾದ ಸ್ತೋತ್ರಮಂತ್ರಗಳನ್ನು ಭಕ್ತಿಪೂರ್ವಕವಾಗಿ ಪಾರಾಯಣ ಮಾಡಬೇಕು.

* ಯೋಗ್ಯಗುರುಗಳಿಂದ ಪ್ರಾಣಮಂತ್ರವನ್ನು ಉಪದೇಶಪಡೆದುಕೊಂಡಿದ್ದಲ್ಲಿ ಕನಿಷ್ಠ ಸಾವಿರಬಾರಿ ಜಪವನ್ನು ಮಾಡಬೇಕು.

* ಮುಖ್ಯಪ್ರಾಣದೇವರ ಸ್ಮರಣೆಯನ್ನು ಶ್ರೀರಾಮಚಂದ್ರನ ಸ್ಮರಣೆಯ ಜೊತೆ ನಿರಂತರ ಮಾಡಬೇಕು.

* ಹನುಮಂತದೇವರ ಮಹತ್ವವನ್ನು ಕೇಳಿ ತಿಳಿದುಕೊಳ್ಳಬೇಕು. ಅಥವಾ ಮತ್ತೊಬ್ಬರಿಗೆ ತಿಳಿಸಿ ಹೇಳಬೇಕು.

* ಮನೆಯಲ್ಲಿರುವ ಸಣ್ಣಮಕ್ಕಳಿಗೆ ಹನುಮಂತದೇವರ ಬಗ್ಗೆ ಯಥಾರ್ಥಜ್ಞಾನವನ್ನು ನೀಡಬೇಕು. ಮತ್ತು ಅವರು ತಮ್ಮ ಜೀವನದಲ್ಲಿ ಕೊನೆಯತನಕ ಹನುಮಂತದೇವರ ದಾಸಾನುದಾಸರಾಗುವಂತೆ ಉಪದೇಶಿಸಬೇಕು.

* ಹನುಮಂತದೇವರು ನಮ್ಮ ಹೃದಯದಲ್ಲಿ ಕುಳಿತು ನಿರಂತರವೂ ಹಂಸಮಂತ್ರವನ್ನು ಜಪಿಸುತ್ತಲೇ ಇರುತ್ತಾರೆ. ಕಣ್ಣಿನಲ್ಲಿ ಗೋವತ್ಸರೂಪದಿಂದ ನೆಲೆಸಿ ಪ್ರತಿಯೊಂದು ಕಾರ್ಯಗಳನ್ನು ಜಾಗ್ರತ್‌ಕಾಲದಲ್ಲಿ ಮಾಡಿಸುತ್ತಾರೆ. ಮತ್ತು ಪ್ರಾಣ, ಅಪಾನ ಮೊದಲಾದ ಹತ್ತುರೂಪಗಳಿಂದ ದೇಹದಲ್ಲಿ ಎಲ್ಲೆಡೆ ನೆಲೆಸಿ ಪ್ರತಿಯೊಂದು ಕಾರ್ಯಗಳನ್ನು ಅವರೇ ನಿಂತು ಮಾಡಿ, ಮಾಡಿಸುತ್ತಾರೆ. ಇವರು ಮಾಡುತ್ತಿರುವ ಈ ಎಲ್ಲ ಉಪಕಾರಗಳನ್ನು ಸ್ಮರಿಸಿಕೊಂಡು ಭಕ್ತಿಯಿಂದ ಹನುಮಂತದೇವರ ಪೂಜೆಯನ್ನು ಮಾಡಬೇಕು.

## ಹನುಮಂತ ದೇವರನ್ನು ಪೂಜಿಸುವ ಮೊದಲು ತಿಳಿಯಬೇಕಾದ ವಿಚಾರಗಳು

* ಹನುಮಜ್ಜಯಂತಿಯಂದು ಬ್ರಾಹ್ಮೀಮುಹೂರ್ತದಲ್ಲಿ ಏಳಬೇಕು. ಏಳುತ್ತಿರುವಾಗಲೇ ಶ್ರೀರಾಮಚಂದ್ರದೇವರನ್ನು ಆಪಾದಮೌಳಿಪರ್ಯಂತವಾಗಿ ಸ್ಮರಣೆ ಮಾಡಿ, ಅವರ ಪಾದದಾಸರಾದ ಶ್ರೀಹನುಮಂತದೇವರನ್ನು ಆಪಾದಮೌಳಿಪರ್ಯಂತ ಸ್ಮರಣೆ ಮಾಡಿ, ಅವರ ಪಾದಗಳಲ್ಲಿ ತಲೆಯನ್ನಿಟ್ಟು ನಮಿಸಬೇಕು.

* 'ಹನುಮಂತದೇವರೇ ! ತಾವು ನಿರಂತರ ಭಗವಂತನ ಧ್ಯಾನದಲ್ಲಿಯೇ ತಲ್ಲೀನರಾಗಿರುತ್ತೀರಿ. ನಮ್ಮ ಉದ್ಧಾರಕ್ಕಾಗಿ ಇಂದಿನ ದಿವಸ ಅವತಾರವನ್ನು ಮಾಡಿ, ನಮಗೆ ಪರಮ ಉಪಕಾರವನ್ನು ಮಾಡಿರುವಿರಿ. ತತ್‌ಪ್ರಯುಕ್ತವಾಗಿ ಹನುಜ್ಜಯಂತಿಯ ಆಚರಣೆಯನ್ನು ಯಥಾಶಕ್ತಿ ಮಾಡುತ್ತೇನೆ. ತಾವೇ ನನ್ನಲ್ಲಿ ನಿಂತು ಮಾಡಿಸಬೇಕು. ಹೇಗೆ ಹನುಮಜ್ಜಯಂತಿಯನ್ನು ಆಚರಣೆ ಮಾಡುವುದರಿಂದ ತಮಗೆ ಸಂತೋಷವಾಗುತ್ತದೋ, ಆ ಕ್ರಮದಲ್ಲಿ ನನ್ನಿಂದ ಇಂದಿನ ಪರ್ವಕಾಲದ ಆಚರಣೆಯನ್ನು ಮಾಡಿಸಿರಿ. ತಾವು ತೃಪ್ತರಾದರೆ, ತಮ್ಮ ಅಂತರ್ಯಾಮಿಯಾದ ಭಗವಂತನೂ ಕೂಡ ತೃಪ್ತನಾಗುತ್ತಾನೆ' ಹೀಗೆ ಕಣ್ಮುಚ್ಚಿ ಪ್ರಾರ್ಥನೆ ಮಾಡಿ, ಮೇಲೆದ್ದೇಳಬೇಕು.

* ಬೆಳಿಗ್ಗೆಯಿಂದ ರಾತ್ರಿಯ ತನಕ 'ಶ್ರೀರಾಮಚಂದ್ರಾಯ ನಮಃ' 'ಶ್ರೀ ಮುಖ್ಯಪ್ರಾಣಾಯ ನಮಃ' ಎಂಬ ನಾಮಸ್ಮರಣೆಯನ್ನು ಮಾಡುತ್ತಲೇ ಇರಬೇಕು.
* ಪ್ರಾತಃಕಾಲದಲ್ಲಿ ೫-೩೦ರೊಳಗೆ ಸ್ನಾನವನ್ನು ಮುಗಿಸಿರಬೇಕು.
* ಭಗವಂತನಿಗೆ ನಿರ್ಮಾಲ್ಯಾಭಿಷೇಕವನ್ನು ಮಾಡಿ, ಶ್ರೀಮುಖ್ಯಪ್ರಾಣದೇವರಿಗೆ ನಿರ್ಮಾಲ್ಯಾಭಿಷೇಕವನ್ನು ಮಾಡಬೇಕು.
* ಸರಿಯಾಗಿ ಸೂರ್ಯೋದಯಕ್ಕೆ ಹನುಮಂತದೇವರು ಅವತಾರ ಮಾಡುತ್ತಾರೆ. ಆ ಸಂದರ್ಭದಲ್ಲಿ ಭಗವಂತನಿಗೆ ಹಾಗೂ ಮುಖ್ಯಪ್ರಾಣದೇವರಿಗೆ ಸಂಕ್ಷೇಪವಾದ ಷೋಡಶೋಪಚಾರ ಪೂಜೆಗಳನ್ನು ಮಾಡಬೇಕು.
* ಸೂರ್ಯೋದಯದ ಸಮಯದಲ್ಲಿ ಮುಖ್ಯಪ್ರಾಣದೇವರನ್ನು ತೊಟ್ಟಿಲಿಗೆ ಹಾಕಿ ತೂಗಬೇಕು.
* ಕೇಸರಿಯಿಂದ ಅಂಜನಾದೇವಿಯಲ್ಲಿ ಮುಖ್ಯಪ್ರಾಣದೇವರು ಅವತಾರ ಮಾಡಿದ್ದಾರೆಂದು ಭಾವಿಸುವ ಮೂಲಕ, ಮುಖ್ಯಪ್ರಾಣದೇವರನ್ನು ಶಿಶುರೂಪದಲ್ಲಿ ಧ್ಯಾನ ಮಾಡಿ, ಪೂಜಿಸಬೇಕು.
* ಹಣ್ಣುಗಳನ್ನು ಮತ್ತು ಉಂಡೆಗಳನ್ನು ಮುಖ್ಯಪ್ರಾಣದೇವರಿಗೆ ನೇವೈದ್ಯ ಮಾಡಬೇಕು.
* ತೊಟ್ಟಿಲಲ್ಲಿ ಮಲಗಿದ ಬಾಲರೂಪಿಯಾದ ಮುಖ್ಯಪ್ರಾದೇವರಿಗೆ ಮಂಗಳಾರತಿಯನ್ನು ಎತ್ತುತ್ತಾ ಆನಂದವನ್ನು ಅನುಭವಿಸಬೇಕು.
* ನಮಸ್ತೇ ವಾಯುಪುತ್ರಾಯ ಧ್ವಂಸಿತಾಮರವೈರಿಣೇ ।
  ಸುಜನಾಂಬುಧಿಚಂದ್ರಾಯ ಭವಿಷ್ಯತ್ ಬ್ರಹ್ಮಣೇ ನಮಃ ॥
  
  ಎಂಬ ಶ್ಲೋಕವನ್ನು ಹೇಳುತ್ತಾ ಅರ್ಘ್ಯವನ್ನು ನೀಡಬೇಕು.
* ಮುಖ್ಯಪ್ರಾಣದೇವರಿಗೆ ಯಾವುದೇ ಕಾರಣಕ್ಕೂ ಶಂಖದಲ್ಲಿ ಅಭಿಷೇಕವನ್ನು ಮಾಡಬಾರದು. ಶಂಖದಲ್ಲಿ ಅರ್ಘ್ಯವನ್ನು ನೀಡಬಾರದು. ಬೊಗಸೆಯಿಂದಲೇ ಅರ್ಘ್ಯವನ್ನು ನೀಡಬೇಕು.

ಹನುಮಜ್ಜಯಂತಿ

* ಹನುಮಜ್ಜಯಂತಿಯಂದು ಸೂರ್ಯೋದಯದ ಸಮಯದಲ್ಲಿ ತೊಟ್ಟಿಲಿನಲ್ಲಿ ಮುಖ್ಯಪ್ರಾಣದೇವರನ್ನು ಇಟ್ಟು ಪೂಜಿಸುವುದೇ ಬಹಳ ವಿಶೇಷ. ಇದನ್ನು ಮಾಡದೇ ಉಳಿದೆಲ್ಲಾ ಆಚರಣೆಗಳನ್ನು ಮಾಡಿದರೆ ಫಲವಿಲ್ಲ. ಇದೊಂದನ್ನು ಭಕ್ತಿಪೂರ್ವಕವಾಗಿ ಮಾಡಿದರೆ, ಎಲ್ಲವನ್ನು ಆಚರಿಸಿದ ಫಲವು ದೊರೆಯುತ್ತದೆ. ಆದ್ದರಿಂದ ಪ್ರತಿಯೊಬ್ಬರು ಸೂರ್ಯೋದಯದ ಸಮಯದಲ್ಲಿ ಹನುಮಂತದೇವರಿಗೆ ಪೂಜೆಯನ್ನು ಮಾಡಬೇಕು. ಸ್ತ್ರೀಯರಾದವರು ಲಾಲಿಪದ್ಯವನ್ನು ಹಾಡಬೇಕು.

* ಸಂಧ್ಯಾವಂದನೆ ಮೊದಲಾದ ಆಹ್ನಿಕಗಳನ್ನು ಮುಗಿಸಿ, ಮಧ್ಯಾಹ್ನಕಾಲದಲ್ಲಿ ಪುನಃ ವೈಭವೋಪೇತವಾಗಿ ಪೂಜೆಯನ್ನು ಮಾಡುವುದೇ ಉತ್ತಮ ಪಕ್ಷ. ಅನುಕೂಲವಿಲ್ಲದಿದ್ದಲ್ಲಿ ಆಗಲೇ ಪೂಜೆಯನ್ನು ಮಾಡಬೇಕು.

* ವಾಯುಸ್ತುತಿಯನ್ನು ಪಠಿಸುತ್ತಾ, ವಾಯುಸ್ತುತಿ ಪುರಶ್ಚರಣೆಯನ್ನು ಮಾಡಿದರೆ ಮನೋಭೀಷ್ಟಗಳು ನೆರವೇರುತ್ತವೆ. ಸಾಧ್ಯವಾಗದಿದ್ದರೆ ವಾಯುಸ್ತುತಿಯನ್ನು ಪಠಿಸುತ್ತಾ ಜೇನುತುಪ್ಪದಿಂದ ಅಭಿಷೇಕವನ್ನಾದರೂ ಮಾಡಬೇಕು.

* ಹನುಮಂತದೇವರಿಗೆ ಜೇನುತುಪ್ಪದಿಂದ ಪುರಶ್ಚರಣೆ ಅಥವಾ ಅಭಿಷೇಕ ಮಾಡುವ ಮೊದಲು, ನರಸಿಂಹದೇವರಿಗೆ ಮನ್ಯುಸೂಕ್ತವನ್ನು ಹೇಳುವ ಮೂಲಕ ಆ ಜೇನುತುಪ್ಪದಿಂದ ಅಭಿಷೇಕವನ್ನು ಮಾಡಿರಬೇಕು. ಭಗವಂತನಿಗೆ ಸಮರ್ಪಣೆ ಮಾಡದೇ ನೇರವಾಗಿ ಹನುಮಂತದೇವರಿಗೆ ಯಾವುದನ್ನೂ ಕೂಡ ಸಮರ್ಪಣೆ ಮಾಡಬಾರದು.

* ಪಂಚಾಮೃತ ಅಭಿಷೇಕವನ್ನೂ ಕೂಡ ಇಂದಿನ ದಿವಸ ಮಾಡಬೇಕು. ಮೊದಲು ಶ್ರೀರಾಮಚಂದ್ರದೇವರಿಗೆ ಪಂಚಾಮೃತಗಳಿಂದ ಅಭಿಷೇಕವನ್ನು ಮಾಡಿ, ಒಟ್ಟಿಗೆ ಸೇರಿದ ಪಂಚಾಮೃತದಿಂದ ನೇರವಾಗಿ ಮುಖ್ಯಪ್ರಾಣದೇವರಿಗೆ ಅಭಿಷೇಕವನ್ನು ಮಾಡಬೇಕು. ಭಗವಂತನಿಗೆ ಪಂಚಾಮೃತಾಭಿಷೇಕವನ್ನು ಮಾಡದೇ, ಹನುಮಂತದೇವರಿಗೆ ಮಾಡಬಾರದು.

* ಮತ್ತು ಭಗವಂತನಿಗೆ ಅಭಿಷೇಕ ಮಾಡಿದ ತೀರ್ಥದಿಂದಲೇ ಹನುಮಂತದೇವರಿಗೆ ಅಭಿಷೇಕವನ್ನು ಮಾಡಬೇಕು. ಭಗವಂತನಿಗೆ ಸಮರ್ಪಿತವಾಗದೇ ಇರುವ ನೀರಿನಿಂದ ಅಭಿಷೇಕವನ್ನು ಮಾಡಬಾರದು.

* ಇದರಂತೆ ಗಂಧ, ಅಕ್ಷತೆ, ತುಳಸೀ, ಪುಷ್ಪ, ಧೂಪ, ದೀಪ ಮೊದಲಾದ ಎಲ್ಲವನ್ನೂ ಕೂಡ ಭಗವಂತನಿಗೆ ಸಮರ್ಪಣೆ ಮಾಡಿಯೇ ಹನುಮಂತದೇವರಿಗೆ ಸಮರ್ಪಣೆ ಮಾಡಬೇಕು. ಭಗವಂತನಿಗೆ ನಿವೇದಿತವಾದ ನಿರ್ಮಾಲ್ಯಗಳನ್ನು ಹನುಮಂತದೇವರ ತಲೆಯ ಮೇಲೆ, ಭುಜ, ಉದರ, ಕೈ ಇವುಗಳ ಮೇಲೆ ಸಮರ್ಪಣೆ ಮಾಡಬೇಕು. ಪಾದಗಳ ಮೇಲೆ ಸಮರ್ಪಣೆ ಮಾಡಬಾರದು.

* ಭಗವಂತನಿಗೆ ಮೊದಲು ಷೋಡಶೋಪಚಾರ ಪೂಜೆಗಳನ್ನು ಮಾಡಿ, ಅನಂತರ ಹನುಮಂತದೇವರಿಗೆ ಷೋಡಶೋಪಚಾರ ಪೂಜೆಯನ್ನು ಮಾಡತಕ್ಕದ್ದು.

* ಲಕ್ಷ್ಮೀದೇವಿಯು ಮಾತ್ರ ಭಗವಂತನಿಗೆ ಪೂಜೆಯನ್ನು ಸಲ್ಲಿಸಲು ಅರ್ಹಳಾಗಿದ್ದಾಳೆ. ಅವಳು ಸಲ್ಲಿಸುವ ಪೂಜೆಗೆ ಎಲ್ಲಾ ರೀತಿಯಿಂದ ಸೇವೆಯನ್ನು ಮಾಡಲು ಹನುಮಂತದೇವರು ನಿಂತಿರುತ್ತಾರೆ. ಆದ್ದರಿಂದ ಭಗವಂತನ ಪೂಜೆಯು ಜೊತೆ, ಅಥವಾ ಭಗವಂತನ ಪೂಜೆಯ ಮಧ್ಯದಲ್ಲಿ ಹನುಮಂತದೇವರಿಗೆ ಪೂಜೆಯನ್ನು ಮಾಡುವುದು ಉತ್ತಮ ಪಕ್ಷವಲ್ಲ.

* ಆದರೆ ಆವರಣ ಪೂಜೆಯ ಸಂದರ್ಭದಲ್ಲಿ ಹನುಮಂತದೇವರಿಗೆ ಪೂಜೆಯನ್ನು ಮಾಡುವ ಸಂಪ್ರದಾಯವು ಬಂದಿರುತ್ತದೆ. ಆದ್ದರಿಂದ ಆವರಣಪೂಜೆಯ ಸಂದರ್ಭದಲ್ಲಿ ಹನುಮಂತದೇವರಿಗೆ ಮೊದಲಿನಿಂದ (ಧ್ಯಾನ, ಆವಾಹನೆ) ಇವುಗಳಿಂದ ಪೂಜೆಯನ್ನು ಮಾಡಬೇಕು. ಇದು ಅನುಕೂಲವಿಲ್ಲದ ಪಕ್ಷದಲ್ಲಿ ಮಾತ್ರ.

* ಈ ಕೃತಿಯಲ್ಲಿ ಮುಂದೆ ನೀಡಿರುವ ಪೂಜಾಪದ್ಧತಿಯನ್ನು ಆವರಣ ಪೂಜೆಯ ಸಂದರ್ಭದಲ್ಲಿ ಪಠಿಸಿ, ಆಚರಿಸಬೇಕು.

* ಭಗವಂತನ ಪ್ರತಿಮೆಗಳಲ್ಲಿ ಹೇಗೆ ನ್ಯಾಸಾದಿಗಳನ್ನು ಮಾಡುವ ಮೂಲಕ ಆವಾಹನೆಯನ್ನು ಮಾಡುತ್ತೇವೋ, ಅದರಂತೆ ಮುಖ್ಯಪ್ರಾಣದೇವರ ಪ್ರತಿಮೆಯಲ್ಲಿಯೂ ಕೂಡ ನ್ಯಾಸಾದಿಗಳನ್ನು ಮಾಡುವ ಮೂಲಕ ಆವಾಹನೆಯನ್ನು ಮಾಡಿ ಪೂಜಿಸಬೇಕು.

* ಪೂಜೆಯ ಕೊನೆಯಲ್ಲಿ ಅರ್ಘ್ಯವನ್ನು ನೀಡಬೇಕು. ಬೆಳಿಗ್ಗೆ ಒಮ್ಮೆ ಅರ್ಘ್ಯವನ್ನು ನೀಡಿದ್ದರೂ ಪೂಜಾಂಗತ್ವೇನ ಅರ್ಘ್ಯವನ್ನು ನೀಡುವುದು ತಪ್ಪಾಗುವುದಿಲ್ಲ.

* * * *

## ಹನೂಮತ್ ಪೂಜಾ

ಹನುಮಂತದೇವರೆಂದರೆ ಸಾಕ್ಷಾತ್ ಮುಖ್ಯಪ್ರಾಣದೇವರು. ಭಗವಂತನನ್ನು ಪೂಜಿಸಿದ ಮೇಲೆಯೇ ಹನುಮಂತದೇವರ ಪೂಜೆಯನ್ನು ಮಾಡಬೇಕು. ಆದರೆ ಆವರಣ ಪೂಜೆಯ ಸಂದರ್ಭದಲ್ಲಿ ಹನುಮಂತದೇವರನ್ನು ಪೂಜಿಸುವ ಸಂಪ್ರದಾಯವಿದೆ. ಆದರೆ ಇಂದು ಮಾತ್ರ ಭಗವಂತನಿಗೆ ಷೋಡಶೋಪಚಾರ ಪೂಜೆಯನ್ನು ಮುಗಿಸಿ ಅನಂತರ ಹನುಮಂತದೇವರ ಪೂಜೆಯನ್ನು ಮಾಡಬೇಕು.

ಭಗವನ್-ಮೂರ್ತಿಗಳಲ್ಲಿ ನ್ಯಾಸಾದಿಪೂರ್ವಕವಾಗಿ ಆವಾಹನೆ ಮಾಡಿದ ಮೇಲೆ ಪ್ರಾಣದೇವರ ಪ್ರತೀಕದಲ್ಲಿಯೇ ಅವಶ್ಯವಾಗಿ ನ್ಯಾಸಾದಿಗಳನ್ನು ಮಾಡಿ ಆವಾಹನೆ ಮಾಡಬೇಕು. ಅನಂತರವೇ ಈ ಕೆಳಗಿನ ಕ್ರಮದಂತೆ ಪೂಜೆಯನ್ನು ಮಾಡಬೇಕು. ಹನುಮಂತದೇವರ ಮೂರ್ತಿಯ ಜೊತೆ ಕಲಶ ಸ್ಥಾಪನೆ ಮಾಡಿ ಕಲಶದಲ್ಲಿ ಪೂಜಿಸುವುದೇ ನಿಜವಾದ ಹನುಮಜ್ಜಯಂತಿಯ ಆಚರಣೆ.

॥ ಶ್ರೀ ಗುರುಭ್ಯೋನಮಃ ॥

## ಆಚಮನಮ್

ಕೇಶವಾಯ ಸ್ವಾಹಾ । ನಾರಾಯಣಾಯ ಸ್ವಾಹಾ । ಮಾಧವಾಯ ಸ್ವಾಹಾ । ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ । ತ್ರಿವಿಕ್ರಮಾಯ ನಮಃ । ವಾಮನಾಯ ನಮಃ । ಶ್ರೀಧರಾಯ ನಮಃ । ಹೃಷೀ-ಕೇಶಾಯ ನಮಃ । ಪದ್ಮನಾಭಾಯ ನಮಃ । ದಾಮೋದರಾಯ ನಮಃ । ಸಂಕರ್ಷ-ಣಾಯ ನಮಃ । ವಾಸುದೇವಾಯ ನಮಃ । ಪ್ರದ್ಯುಮ್ನಾಯ ನಮಃ । ಅನಿರು-ದ್ಧಾಯ ನಮಃ । ಪುರುಷೋತ್ತಮಾಯ ನಮಃ । ಅಧೋಕ್ಷಜಾಯ ನಮಃ । ನಾರ-ಸಿಂಹಾಯ ನಮಃ । ಅಚ್ಯುತಾಯ ನಮಃ । ಜನಾರ್ದನಾಯ ನಮಃ । ಉಪೇಂ-ದ್ರಾಯ ನಮಃ । ಹರಯೇ ನಮಃ । ಶ್ರೀ ಕೃಷ್ಣಾಯ ನಮಃ ।

(ಆಚಮನವನ್ನು ಎರಡು ಬಾರಿ ಮಾಡಬೇಕು)

## ಪ್ರಾಣಾಯಾಮ

ಓಂ ಪ್ರಣವಸ್ಯ ಪರಬ್ರಹ್ಮಋಷಿಃ ಪರಮಾತ್ಮಾ ದೇವತಾ ದೈವೀ ಗಾಯತ್ರೀ ಛಂದಃ ಪ್ರಾಣಾಯಾಮೇ ವಿನಿಯೋಗಃ ।

ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಂ ಸತ್ಯಂ । ಓಂ ತತ್ಸವಿತುರ್ವರೇಣ್ಯಮ್ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಓಮಾಪೋಜ್ಯೋತಿ ರಸೋಽಮೃತಂ ಬ್ರಹ್ಮ ಭೂರ್ಭುವಸ್ಸ್ವರೋಮ್ ।

## ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲೀವಾಹನ- ಶಕೇ ಶಾಲೀವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಉತ್ತರಾಯನೇ ವಸಂತಋತೌ ಚೈತ್ರಮಾಸೇ ಶುಕ್ಲಪಕ್ಷೇ ಪೌರ್ಣಿಮಾ ಶುಭತಿಥೌ .... ವಾಸರಯುಕ್ತಾಯಾಂ ಶುಭನಕ್ಷತ್ರ ಶುಭಯೋಗ ಶುಭಕರಣ ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಅಸ್ಮಾಕಂ ಸಹಕುಟುಂಬಾನಾ ಕ್ಷೇಮಸ್ಥೈರ್ಯವಿಜಯವೀರ್ಯಅಭಯ ಆಯುರಾರೋಗ್ಯಐಶ್ವರ್ಯಾಭಿವೃದ್ಧ್ಯರ್ಥಂ, ಸಮಸ್ತದುರಿತೋಪಶಾಂತ್ಯರ್ಥಂ, ಸಮಸ್ತಸನ್ಮಂಗಳಾರ್ಥಂ ಸಮಸ್ತ ಅಭ್ಯುದಯಾರ್ಥಂ ಚ, ಜ್ಞಾನಭಕ್ತಿವೈರಾಗ್ಯ ಸಿದ್ಧ್ಯರ್ಥಂ ಧರ್ಮಾರ್ಥ ಕಾಮಮೋಕ್ಷ-ಚತುರ್ವಿಧಪುಣ್ಯಪುರುಷಾರ್ಥಸಿದ್ಧ್ಯರ್ಥಂ ಅಂತಃಕರಣಾದಿ ಸಿದ್ಧ್ಯರ್ಥಂ ವಿಶೇಷತಃ ಹನುಮತಃ ಅನುಗ್ರಹ ಸಿದ್ಧ್ಯರ್ಥಂ ಅಸ್ಮಿನ್ ಪರ್ವಕಾಲೇ ಹನುಮಜ್ಜಯಂತಿ ಪ್ರಯುಕ್ತ ಹನುಮತ್‌ಪೂಜಾಂ ಕರಿಷ್ಯೇ ।

## ಘಂಟಾನಾದ ಮಾಡಬೇಕು

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।
ಕುರ್ವೇ ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ॥

## ಭೂತೋಚ್ಚಾಟನೆ ಮಾಡಬೇಕು

ಅಪಸರ್ಪಂತು ಯೇ ಭೂತಾಃ ಯೇ ಭೂತಾಃ ಭುವಿ ಸಂಸ್ಥಿತಾಃ ।
ಯೇ ಭೂತಾಃ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ॥

ಅಪಕ್ರಾಮಂತು ಯೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ ।
ತೇಷಾಮಪ್ಯವಿರೋಧೇನ ಪೂಜಾಕರ್ಮ ಸಮಾರಭೇ ॥

## ಗುರುಗಣಪತಿ ಪೂಜೆ ಮಾಡಬೇಕು

ಪ್ರತಿಯೊಂದು ಪೂಜೆಯ ಪ್ರಾರಂಭದಲ್ಲಿ ಗುರುಗಳಿಗೆ ಹಾಗೂ ಗಣಪತಿಗೆ ಮೊಟ್ಟಮೊದಲು ಪೂಜೆ ಮಾಡಬೇಕು.

ಶ್ರೀಗುರುಭ್ಯೋ ನಮಃ । ಆದಿಗುರುಭ್ಯೋ ನಮಃ । ಮೂಲಗುರುಭ್ಯೋ ನಮಃ । ಪರಮಗುರುಭ್ಯೋ ನಮಃ । ಶ್ರೀವೇದವ್ಯಾಸಾಯ ನಮಃ । ಆಶ್ವಲಾಯನಾಚಾರ್ಯೇಭ್ಯೋ ನಮಃ ।

ಬಲಭಾಗದಲ್ಲಿ ಬರೆದ ಶ್ರೀಕಾರದಲ್ಲಿ ಗಂಧಾಕ್ಷತೆ ಪುಷ್ಪಗಳಿಂದ ಗುರುಗಳನ್ನು ಪೂಜಿಸಬೇಕು.

ಅಸ್ಮದ್ ಗುರುಸಮಾರಂಭಾಂ ಟೀಕಾಕೃತ್ಪಾದಮಧ್ಯಗಾಮ್ ।
ಶ್ರೀಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಮ್ ॥

ಆಪಾದಮೌಳಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥

ಓಂ ಶ್ರೀಗುರುಭ್ಯೋ ನಮಃ ಅನುಜ್ಞಾಂ ದೇಹಿ ।

ಶ್ರೀಕಾರದ ಪಕ್ಕದಲ್ಲಿ ಬರೆದ ಷಟ್ಕೋಣಮಂಡಲದಲ್ಲಿ ಬೆಳ್ಳಿಯ ಗಣಪತಿಯನ್ನಿಟ್ಟು ಪೂಜಿಸಬೇಕು. ಬೆಳ್ಳಿಗಣಪತಿ ಇಲ್ಲದಿದ್ದಲ್ಲಿ ಅಡಿಕೆಬೆಟ್ಟು, ಅರಿಶಿನಕೊಂಬುಗಳಲ್ಲಿ ಗಣಪತಿ ಆವಾಹನೆ ಮಾಡಿ ಪೂಜಿಸಬೇಕು.

ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ ।
ಲಂಬೋದರಶ್ಚ ವಿಕಟೋ ವಿಘ್ನರಾಜೋ ಗಣಾಧಿಪಃ ॥೧॥

ಧೂಮಕೇತುರ್ಗಣಾಧ್ಯಕ್ಷೋ ಫಾಲಚಂದ್ರೋ ಗಜಾನನಃ ।
ದ್ವಾದಶೈತಾನಿ ನಾಮಾನಿ ಯಃ ಪಠೇಚ್ಛೃಣುಯಾದಪಿ ॥೨॥

ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ ।
ಸಂಗ್ರಾಮೇ ಸರ್ವಕಾರ್ಯೇಷು ವಿಘ್ನಸ್ತಸ್ಯ ನ ಜಾಯತೇ ॥೩॥

ಅಭೀಪ್ಸಿತಾರ್ಥಸಿದ್ಧ್ಯರ್ಥಂ ಪೂಜಿತೋ ಯಃ ಸುರೈರಪಿ ।
ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥೪॥

ಗಣಾನಾಂ ತ್ವಾ ಗೃತ್ಸಮದ ಋಷಿಃ । ಜಗತೀಛಂದಃ ಗಣಪತಿರ್ದೇವತಾ । ಗಣಪತ್ಯಾವಾಹನೇ ವಿನಿಯೋಗಃ ॥

ಓಂ ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪಮಶ್ರವಸ್ತಮಮ್ । ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆ ನಃ ಶೃಣ್ವನ್ನೂತಿಭಿಃ ಸೀದ ಸಾದನಮ್ ॥

## ಗಣಪತಿಗೆ ಸಂಕ್ಷೇಪವಾಗಿ ಷೋಡಶೋಪಚಾರ ಪೂಜೆ ಮಾಡಬೇಕು.

ಶ್ರೀಮಹಾಗಣಪತಯೇ ನಮಃ ॥ ಓಂ ಭೂಃ ಗಣಪತಿಮ್ ಆವಾಹಯಾಮಿ। ಓಂ ಭುವಃ ಗಣಪತಿಮ್ ಆವಾಹಯಾಮಿ । ಓಂ ಸ್ವಃ ಗಣಪತಿಮ್ ಆವಾಹಯಾಮಿ । ಓಂ ಭೂರ್ಭುವಃ ಸ್ವಃ ಗಣಪತಿಮ್ ಆವಾಹಯಾಮಿ । ಮಹಾಗಣಪತಯೇ ನಮಃ । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ । ಆವಾಹಯಾಮಿ ಆವಾಹನಂ ಸಮರ್ಪಯಾಮಿ । ಸ್ವಾಗತಂ ಸಮರ್ಪಯಾಮಿ । ಆಸನಂ ಸಮರ್ಪಯಾಮಿ । ಪಾದಯೋಃ ಪಾದ್ಯಂ ಸಮರ್ಪಯಾಮಿ । ಅರ್ಘ್ಯಂ ಸಮರ್ಪಯಾಮಿ। ಆಚಮನಂ ಸಮರ್ಪಯಾಮಿ । ಮಧುಪರ್ಕಂ ಸಮರ್ಪಯಾಮಿ । ಪುನರಾಚಮನಂ ಸಮರ್ಪಯಾಮಿ । ಸ್ನಾನಂ ಸಮರ್ಪಯಾಮಿ । ವಸ್ತ್ರಂ ಸಮರ್ಪಯಾಮಿ । ಉಪವೀತಂ ಸಮರ್ಪಯಾಮಿ । ಆಭರಣಂ ಸಮರ್ಪಯಾಮಿ । ಗಂಧಂ ಸಮರ್ಪಯಾಮಿ । ಪುಷ್ಪಾಣಿ ಸಮರ್ಪಯಾಮಿ । ಧೂಪಮಾಘ್ರಾಪಯಾಮಿ । ದೀಪಂ ದರ್ಶಯಾಮಿ ।

ಮಹಾಗಣಪತಯೇ ನಮಃ ॥ ನೈವೇದ್ಯಾರ್ಥೇ ಗುಡೋಪಹಾರಮಹಾನೈವೇದ್ಯಂ ನಿವೇದಯಾಮಿ । ತಾಂಬೂಲಂ ಸಮರ್ಪಯಾಮಿ । ನೀರಾಜನಂ ಸಮರ್ಪಯಾಮಿ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ।

ನಿಷುಸೀದೇತಿ ವೈರೂಪೋ ನಭಃಪ್ರಭೇದನ ಋಷಿಃ । ತ್ರಿಷ್ಟುಪ್ ಛಂದಃ । ಗಣಪತಿರ್ದೇವತಾ ಮಂತ್ರಪುಷ್ಪಾರ್ಚನೇ ವಿನಿಯೋಗಃ ।

ಓಂ ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಮ್।
ನ ಋತೇ ತ್ವತ್ ಕ್ರಿಯತೇ ಕಿಂ ಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ ॥

ಮಂತ್ರಪುಷ್ಪಂ ಸಮರ್ಪಯಾಮಿ । ಧ್ಯಾನಾವಾಹನಾದಿಸರ್ವೋಪಚಾರಪೂಜಾಃ ಸಮರ್ಪಯಾಮಿ ॥

ವಕ್ರತುಂಡ ಮಹಾಕಾಯ ಬಾಲಸೂರ್ಯಸಮಪ್ರಭ ।
ಅವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥

ರಕ್ತಾಂಬರೋ ರಕ್ತತನೂ ರಕ್ತಮಾಲ್ಯಾನುಲೇಪನಃ ।
ಮಹೋದರೋ ಗಜಮುಖಃ ಪಾಶದಂತಾಂಕುಶಾಭಯೇ ।

ಬಿಭ್ರದ್ ಧ್ಯೇಯೋ ವಿಘ್ನಹರಃ ಕಾಮದಸ್ತ್ವರಯಾ ಹ್ಯಯಮ್ ॥
ಶ್ರೀಮಹಾಗಣಪತಯೇ ನಮಃ । ಓಂ ಕ್ಷಿಪ್ರಪ್ರಸಾದಾಯ ನಮಃ ।

ಪ್ರಾರ್ಥನಾಂ ಸಮರ್ಪಯಾಮಿ ॥ ಹೇ ದೇವ! ನಿರ್ವಿಘ್ನಂ ಕುರು ॥

ಎಂದು ಪ್ರಾರ್ಥಿಸಿ ಕೈಮುಗಿದು ನಾನು ಮುಂದೆ ಆಚರಿಸುವ ಪೂಜೆ ಸಾಂಗೋಪಾಂಗವಾಗಿ ನಡೆದು ಫಲಪ್ರದವಾಗಲಿಯೆಂದು ಪ್ರಾರ್ಥಿಸಬೇಕು.

* * * * *

## ಹನುಮಂತದೇವರ ಪೂಜೆ

(ದೇವರ ಪೂಜೆಯಲ್ಲಿಯೇ ಶಂಖಪೂಜೆ ಕಲಶಪೂಜೆಗಳನ್ನು ಮಾಡಿದ್ದರೆ, ಪುನಃ ಪ್ರತ್ಯೇಕವಾಗಿ ಮಾಡಬೇಕಾಗಿಲ್ಲ. ಅನಂತವ್ರತದ ಪುಸ್ತಕದಲ್ಲಿ ಹೇಳಿದ ಕ್ರಮದಲ್ಲಿ ಕಲಶವನ್ನು ಪ್ರತಿಷ್ಠಾಪನೆ ಮಾಡಬೇಕು. ಆ ಕಲಶದಲ್ಲಿ ನ್ಯಾಸಾದಿ ಪೂರ್ವಕವಾಗಿ ಹನುಮಂತದೇವರನ್ನು ಪ್ರತಿಷ್ಠಾಪನೆ ಮಾಡಬೇಕು. ಮುಂದೆ ಈ ಕ್ರಮದಲ್ಲಿ ಹನುಮಂತದೇವರಿಗೆ ಷೋಡಶೋಪಚಾರ ಪೂಜೆಯನ್ನು ಆಚರಿಸಬೇಕು.)

## ಧ್ಯಾನ

ಆಂಜನೇಯಂ ವಾಯುಸೂನಂ ರಾಮಕಾರ್ಯಧುರಂಧರಮ್ ।
ಲಂಘಿತಾಬ್ಧಿಂ ರಾಕ್ಷಸಾರಿಂ ತಂ ಧ್ಯಾಯಾಮ್ಯತ್ರ ಸಾದರಮ್ ॥

ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ ।

## ಆವಾಹನ

ಮಾಣಿಕ್ಯಾದಿ ಸುರತ್ನೌಘಪ್ರಭಂ ಕಾಂಚನಸನ್ನಿಭಮ್ ।
ಮಹಾಬಾಹುಂ ವಾಯುಸೂನಂ ಧೀರಮಾವಾಹಯಾಮ್ಯಹಮ್ ॥

ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ಆವಾಹನಂ ಸಮರ್ಪಯಾಮಿ ।

## ಆಸನ

ಪ್ರೋದ್ಯತ್ ಕಾಂಚನಮಾಣಿಕ್ಯೈರ್ಭಾಸಮಾನಮನೋಹರ ।
ವಾಯುಪುತ್ರ ಮಹಾಬಾಹೋ ಗೃಹಾಣಾಸನಮುತ್ತಮಮ್ ॥

ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ಆಸನಂ ಸಮರ್ಪಯಾಮಿ।

## ಪಾದ್ಯ

ನಿರ್ಮಲಂ ಜಾಹ್ನವೀತೋಯಂ ಗೌತಮಾಘಾಂತಕಾರಕಮ್ ।
ಮನೋಜ್ಞಂ ಗಂಧವದ್ದ್ರವ್ಯಂ ಪಾದ್ಯಮೀರ ಪ್ರಗೃಹ್ಯತಾಮ್ ॥

ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ। ಪಾದ್ಯಂ ಸಮರ್ಪಯಾಮಿ।

## ಅರ್ಘ್ಯ

ಅಮರವ್ರಾತಸಂಸೇವ್ಯ ರಕ್ಷೋಸಂಘವಿನಾಶಕ ।
ಭಕ್ತಾಭೀಷ್ಟಪ್ರದ ಶ್ರೀಮಾನ್ ಅರ್ಘ್ಯಂ ಸ್ವೀಕುರು ಮಾರುತೇ ॥

ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ಅರ್ಘ್ಯಂ ಸಮರ್ಪಯಾಮಿ ।

## ಆಚಮನ

ಮಹಾನದ್ಯಾಃ ಸಮಾನೀತಂ ಪಂಪಾನದ್ಯುದಕೈರ್ಯುತಮ್ ।
ಗೃಹಾಣ ರುಚಿರಂ ದೇವ ದತ್ತಮಾಚಮನೀಯಕಮ್ ॥

ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ಆಚಮನಂ ಸಮರ್ಪಯಾಮಿ ।

## ಮಧುಪರ್ಕ

ಮಧುಪರ್ಕಂ ಮಯಾ ದತ್ತಂ ಭಕ್ತ್ಯಾ ವಾಯುಸಮುದ್ಭವ ।
ಸ್ವೀಕುರು ತ್ವಂ ಕೃಪಾಸಿಂಧೋ ದೀನರಕ್ಷಣತತ್ಪರ ॥

ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ಮಧುಪರ್ಕಂ ಸಮರ್ಪಯಾಮಿ ।

## ಅಭ್ಯಂಗ

ಸೇವ್ಯಮಾನಃ ಕಪಿವರ್ಯೈರ್ನಿತ್ಯಂ ರಾಮಕೃಪಾಸ್ಪದ ।
ಚಾಂಪೇಯತೈಲತೋ ದೇವ ಗೃಹಾಣಾಭ್ಯಂಗಮುತ್ತಮಮ್ ॥

ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ಅಭ್ಯಂಗಸ್ನಾನಂ ಸಮರ್ಪಯಾಮಿ ।

## ಪಂಚಾಮೃತ

ದಧಿಕ್ಷೀರಸಿತಾಜ್ಯೈಸ್ತು ಮಧುನಾ ಚೋಪಸಂಭೃತಮ್ ।
ಪಂಚಾಮೃತಂ ಗೃಹಾಣೇಶ ಸ್ನಾನಾರ್ಥಂ ಪವನಾತ್ಮಜ ॥

ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ಪಂಚಾಮೃತಸ್ನಾನಂ ಸಮರ್ಪಯಾಮಿ ।

## ಸ್ನಾನ

ಗಂಗಾ ಗೋದಾವರೀ ಕೃಷ್ಣಾ ಕಾವೇರ್ಯಾದಿ ಸರಿದ್ಗಣಾತ್ ।
ಶುದ್ಧತೋಯಂ ಸಮಾನೀತಂ ಸ್ನಾನಾರ್ಥಂ ಪ್ರತಿಗೃಹ್ಯತಾಮ್ ॥
ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ಶುದ್ಧೋದಕಸ್ನಾನಂ ಸಮರ್ಪಯಾಮಿ ।

## ವಸ್ತ್ರ

ಉದ್ಯದ್ರವಿಪ್ರತೀಕಾಶಂ ರುಚಿರಂ ಪೀತಮಂಬರಮ್ ।
ಗೃಹಾಣ ಪರಿಧಾನಾರ್ಥಂ ಭಕ್ತಾಭೀಷ್ಟಪ್ರದಾಯಕ ॥
ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ವಸ್ತ್ರಂ ಸಮರ್ಪಯಾಮಿ।

## ಉತ್ತರೀಯ

ವಿಪದಾಂ ಪರಿಹರ್ತ್ರೇ ತೇ ದಾತ್ರೇ ಸಕಲಸಂಪದಾಮ್ ।
ಉತ್ತರೀಯಂ ಗೃಹಾಣ ತ್ವಂ ದೀಯಮಾನಂ ಮಯಾ ವಿಭೋ ॥
ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ಉತ್ತರೀಯವಸ್ತ್ರಂ ಸಮರ್ಪಯಾಮಿ ।

## ಉಪವೀತ

ವಾಯುಸೂನೋ ತಂತುನಾಪಿ ಕೃತಂ ಯಜ್ಞೋಪವೀತಕಮ್ ।
ಗೃಹಾಣಾಕ್ಷಕುಮಾರಾರೇ ದತ್ತಂ ಭಕ್ತ್ಯಾ ಮಯಾ ತವ ॥
ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ಯಜ್ಞೋಪವೀತಂ ಸಮರ್ಪಯಾಮಿ ।

## ಗಂಧ

ಕಸ್ತೂರೀ ಚಂದನೋನ್ಮಿಶ್ರಂ ಕರ್ಪೂರರುಚಿರಂ ಶುಚಿಮ್ ।
ಗಂಧಂ ಗೃಹಾಣ ಪವನಸೂನೋ ತುಭ್ಯಂ ನಮೋ ನಮಃ ॥
ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ। ಗಂಧಂ ಸಮರ್ಪಯಾಮಿ।

## ಅಕ್ಷತಾನ್

ಅಕ್ಷತಾನ್ ರುಚಿರಾನ್ ದಿವ್ಯಾನ್ ವಾಯುಸೂನೋ ಮಹಾಬಲ ।
ಗೃಹಾಣ ಭಕ್ತಿತೋ ದತ್ತಾನ್ ಮಯಾ ತ್ವಂ ಭಕ್ತವತ್ಸಲ ॥
ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ। ಅಕ್ಷತಾನ್ ಸಮರ್ಪಯಾಮಿ।

## ಆಭರಣ

ನೂಪುರಾಂಗದಪೂರ್ವಾಣಿ ಹಾರಕೇಯೂರಕಾನಿ ಚ ।
ಗೃಹಾಣ ಭೂಷಣಾನಿ ತ್ವಮಂಜನಾನಂದವರ್ಧನ ॥
ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ಆಭರಣಾನಿ ಸಮರ್ಪಯಾಮಿ।

## ಪುಷ್ಪ

ಪದ್ಮಕೇತಕೀಚಾಂಪೇಯ ಮಲ್ಲಿಕಾದೀನಿ ಮಾರುತೇ ।
ಗೃಹಾಣ ಪುಷ್ಪಾಣಿ ಮಯಾ ದತ್ತಾನಿ ತ್ವಂ ಮಹಾಬಲ ॥
ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ। ಪುಷ್ಪಾಣಿ ಸಮರ್ಪಯಾಮಿ।

## ಗ್ರಂಥಿಪೂಜಾ

### (ಹದಿಮೂರು ಗಂಟುಗಳುಳ್ಳ ದೋರವನ್ನು ಪೂಜಿಸಬೇಕು)

ವಾನರರಕ್ಷಕಾಯ ನಮಃ । ಪ್ರಥಮಗ್ರಂಥಿಂ ಪೂಜಯಾಮಿ
ರಾಕ್ಷಸಸಂಹಾರಕಾಯ ನಮಃ । ದ್ವಿತೀಯಗ್ರಂಥಿಂ ಪೂಜಯಾಮಿ
ತೀರ್ಣಸಿಂಧವೇ ನಮಃ । ತೃತೀಯಗ್ರಂಥಿಂ ಪೂಜಯಾಮಿ
ಸೀತಾಶೋಕಹಾರಿಣೇ ನಮಃ । ಚತುರ್ಥಗ್ರಂಥಿಂ ಪೂಜಯಾಮಿ
ರಾಮದೂತಾಯ ನಮಃ । ಪಂಚಮಗ್ರಂಥಿಂ ಪೂಜಯಾಮಿ
ಸತತಬ್ರಹ್ಮಚಾರಿಣೇ ನಮಃ । ಷಷ್ಠಗ್ರಂಥಿಂ ಪೂಜಯಾಮಿ
ರಾವಣಗರ್ವಾಪಹರ್ತ್ರೇ ನಮಃ । ಸಪ್ತಮಗ್ರಂಥಿಂ ಪೂಜಯಾಮಿ
ಭವಿಷ್ಯದ್ ಬ್ರಹ್ಮಣೇ ನಮಃ । ಅಷ್ಟಮಗ್ರಂಥಿಂ ಪೂಜಯಾಮಿ

| | |
|---|---|
| ಅವಿದ್ಯಾಸಂಹರ್ತ್ರೇ ನಮಃ । | ನವಮಗ್ರಂಥಿಂ ಪೂಜಯಾಮಿ |
| ಭಕ್ತಾಭೀಷ್ಟಪ್ರದಾಯಕಾಯ ನಮಃ । | ದಶಮಗ್ರಂಥಿಂ ಪೂಜಯಾಮಿ |
| ಸಕಲದೇವತಾಸ್ತುತ್ಯಾಯ ನಮಃ । | ಏಕಾದಶಗ್ರಂಥಿಂ ಪೂಜಯಾಮಿ |
| ಜೀವೋತ್ತಮಾಯ ನಮಃ । | ದ್ವಾದಶಗ್ರಂಥಿಂ ಪೂಜಯಾಮಿ |
| ವಾಯುಪುತ್ರಾಯ ನಮಃ । | ತ್ರಯೋದಶಗ್ರಂಥಿಂ ಪೂಜಯಾಮಿ |

## ಅಂಗಪೂಜಾ

| | |
|---|---|
| ವಾತಾತ್ಮಜಾಯ ನಮಃ । | ಪಾದೌ ಪೂಜಯಾಮಿ । |
| ಅಂಜನಾನಂದನಾಯ ನಮಃ । | ಜಂಘೇ ಪೂಜಯಾಮಿ । |
| ಗಂಧಮಾದನಧಾರಿಣೇ ನಮಃ । | ಕಟಿಂ ಪೂಜಯಾಮಿ । |
| ಸೀತಾಶೋಕವಿನಾಶಕಾಯ ನಮಃ । | ಮಧ್ಯಂ ಪೂಜಯಾಮಿ । |
| ಕಪೀಶ್ವರಾಯ ನಮಃ । | ನಾಭಿಂ ಪೂಜಯಾಮಿ । |
| ಜಗದ್ಧಾತ್ರೇ ನಮಃ । | ಉದರಂ ಪೂಜಯಾಮಿ । |
| ವಿಶಾಲವಕ್ಷಸೇ ನಮಃ । | ಹೃದಯಂ ಪೂಜಯಾಮಿ । |
| ಸುಗ್ರೀವಪ್ರಿಯಾಯ ನಮಃ । | ಕಂಠಂ ಪೂಜಯಾಮಿ । |
| ದಶಾನನಗರ್ವಭಂಜನಾಯ ನಮಃ । | ವಕ್ತ್ರಂ ಪೂಜಯಾಮಿ । |
| ಪಿಂಗಾಕ್ಷಾಯ ನಮಃ । | ನೇತ್ರೇ ಪೂಜಯಾಮಿ । |
| ಸಕಲಾಗಮಸಂಸ್ತುತಾಯ । | ಸರ್ವಾಂಗಂ ಪೂಜಯಾಮಿ । |

## ಪತ್ರಪೂಜಾ

| | |
|---|---|
| ವಾತಾತ್ಮಜಾಯ ನಮಃ । | ಪಲಾಶಪತ್ರಂ ಸಮರ್ಪಯಾಮಿ । |
| ಅಂಜನಾನಂದನಾಯ ನಮಃ । | ಔದುಂಬರಪತ್ರಂ ಸಮರ್ಪಯಾಮಿ। |
| ಸಿಂಧುಲಂಘನರ್ತ್ರೇ ನಮಃ । | ಅಶ್ವತ್ಥಪತ್ರಂ ಸಮರ್ಪಯಾಮಿ । |
| ಉತ್ಕೃಷ್ಟವಿಕ್ರಮಾಯ ನಮಃ । | ಭೃಂಗರಾಜಪತ್ರಂ ಸಮರ್ಪಯಾಮಿ । |
| ಗಂಧಮಾದನಧಾರಿಣೇ ನಮಃ । | ಜಟಾಧರಪತ್ರಂ ಸಮರ್ಪಯಾಮಿ । |

ಹನುಮಜ್ಜಯಂತಿ

| | |
|---|---|
| ಸೀತಾಶೋಕವಿನಾಶಕಾಯ ನಮಃ । | ಅಶೋಕಪತ್ರಂ ಸಮರ್ಪಯಾಮಿ । |
| ಕಪೀಶ್ವರಾಯ ನಮಃ । | ಕಪಿತ್ಥಪತ್ರಂ ಸಮರ್ಪಯಾಮಿ । |
| ಜಗದ್ಧಾತ್ರೇ ನಮಃ । | ವಟಪತ್ರಂ ಸಮರ್ಪಯಾಮಿ । |
| ವಿಶಾಲವಕ್ಷಸೇ ನಮಃ । | ಆಮ್ರಪತ್ರಂ ಸಮರ್ಪಯಾಮಿ । |
| ಸುಗ್ರೀವಪ್ರಿಯಾಯ ನಮಃ । | ನಾಗವಲ್ಲೀಪತ್ರಂ ಸಮರ್ಪಯಾಮಿ । |
| ದಶಾನನಗರ್ವಭಂಜನಾಯ ನಮಃ । | ಅಪಾಮಾರ್ಗಪತ್ರಂ ಸಮರ್ಪಯಾಮಿ। |
| ಪಿಂಗಾಕ್ಷಾಯ ನಮಃ । | ಕರವೀರಪತ್ರಂ ಸಮರ್ಪಯಾಮಿ । |
| ಸಕಲಾಗಮಸಂಸ್ತುತಾಯ ನಮಃ । | ಪುನ್ನಾಗಪತ್ರಂ ಸಮರ್ಪಯಾಮಿ । |

## ಪುಷ್ಪಪೂಜಾ

| | |
|---|---|
| ವಾನರರಕ್ಷಕಾಯ ನಮಃ । | ಪದ್ಮಪುಷ್ಪಂ ಸಮರ್ಪಯಾಮಿ । |
| ರಾಕ್ಷಸಸಂಹಾರಕಾಯ ನಮಃ । | ಜಾತೀಪುಷ್ಪಂ ಸಮರ್ಪಯಾಮಿ । |
| ತೀರ್ಣಸಿಂಧವೇ ನಮಃ । | ಕಲ್ಹಾರಪುಷ್ಪಂ ಸಮರ್ಪಯಾಮಿ । |
| ರಾಮದೂತಾಯ ನಮಃ । | ಬಕುಲಪುಷ್ಪಂ ಸಮರ್ಪಯಾಮಿ । |
| ಸೂರ್ಯಮಂಡಲಸ್ಥಿತಾಯ ನಮಃ। | ಶತಪತ್ರಪುಷ್ಪಂ ಸಮರ್ಪಯಾಮಿ । |
| ಚಿರಕಾಲಜೀವಿತಾಯ ನಮಃ । | ಪುನ್ನಾಗಪುಷ್ಪಂ ಸಮರ್ಪಯಾಮಿ । |
| ಸತತಬ್ರಹ್ಮಚಾರಿಣೇ ನಮಃ । | ಕರವೀರಪುಷ್ಪಂ ಸಮರ್ಪಯಾಮಿ । |
| ರಾವಣಗರ್ವಾಪಹರ್ತ್ರೇ ನಮಃ । | ದತ್ತೂರಪುಷ್ಪಂ ಸಮರ್ಪಯಾಮಿ । |
| ಭಾವಿ ಬ್ರಹ್ಮಣೇ ನಮಃ । | ಕುಂದಪುಷ್ಪಂ ಸಮರ್ಪಯಾಮಿ । |
| ಅವಿದ್ಯಾಸಂಹರ್ತ್ರೇ ನಮಃ । | ಮಲ್ಲಿಕಾಪುಷ್ಪಂ ಸಮರ್ಪಯಾಮಿ । |
| ಭಕ್ತಾಭೀಷ್ಟಪ್ರದಾಯಕಾಯ ನಮಃ । | ಮುನಿಪುಷ್ಪಂ ಸಮರ್ಪಯಾಮಿ । |
| ಸಕಲದೇವತಾಸ್ತುತ್ಯಾಯ ನಮಃ । | ಕರ್ಣಿಕಾರಪುಷ್ಪಂ ಸಮರ್ಪಯಾಮಿ । |

# ಶ್ರೀಆಂಜನೇಯ ಅಷ್ಟೋತ್ತರ ಶತನಾಮಾವಳಿ
## (ಹೂವು ಪೂಜಿಸಿ)

ಓಂ ಆಂಜನೇಯಾಯ ನಮಃ । ಓಂ ಮಹಾವೀರಾಯ ನಮಃ । ಓಂ ಹನುಮತೇ ನಮಃ । ಓಂ ಮಾರುತಾತ್ಮಜಾಯ ನಮಃ । ಓಂ ತತ್ತ್ವಜ್ಞಾನಪ್ರದಾಯ ನಮಃ । ಓಂ ಸೀತಾದೇವೀಮುದ್ರಾಪ್ರದಾಯಕಾಯ ನಮಃ । ಓಂ ಅಶೋಕವನಿಕಾಛೇತ್ರೇ ನಮಃ॥ ಓಂ ಸರ್ವಮಾಯಾವಿಭಂಜನಾಯ ನಮಃ । ಓಂ ಸರ್ವಬಂಧವಿಮೋಕ್ತ್ರೇ ನಮಃ॥ ಓಂ ರಕ್ಷೋವಿಧ್ವಂಸಕಾರಕಾಯ ನಮಃ । ಓಂ ಪರವಿದ್ಯಾಪರಿಹಾರಾಯ ನಮಃ । ಓಂ ಕರಶೌರ್ಯವಿನಾಶನಾಯ ನಮಃ । ಓಂ ಪರಮಂತ್ರನಿಕರ್ತ್ರೇ ನಮಃ । ಓಂ ಪರಯಂತ್ರ ಪ್ರಭೇದಕಾಯ ನಮಃ । ಓಂ ಸರ್ವಗ್ರಹವಿನಾಶಿನೇ ನಮಃ । ಓಂ ಭೀಮಸೇನ ಸಹಾಯಕೃತೇ ನಮಃ । ಓಂ ಸರ್ವದುಃಖಹರಾಯ ನಮಃ । ಓಂ ಸರ್ವಲೋಕಚಾರಿಣೇ ನಮಃ । ಓಂ ಮನೋಜವಾಯ ನಮಃ । ಓಂ ಪಾರಿಜಾತದ್ರುಮಮೂಲಸ್ಥಾಯ ನಮಃ । ಓಂ ಸರ್ವಮಂತ್ರಸ್ವರೂಪವತೇ ನಮಃ । ಓಂ ಸರ್ವತಂತ್ರಸ್ವರೂಪಿಣೇ ನಮಃ । ಓಂ ಸರ್ವಯಂತ್ರಾತ್ಮಕಾಯ ನಮಃ । ಓಂ ಕಪೀಶ್ವರಾಯ ನಮಃ । ಓಂ ಮಹಾಕಾಯಾಯ ನಮಃ । ಓಂ ಸರ್ವರೋಗಹರಾಯ ನಮಃ । ಓಂ ಪ್ರಭವೇ ನಮಃ । ಓಂ ಬಲಸಿದ್ಧಿಕರಾಯ ನಮಃ । ಓಂ ಸರ್ವವಿದ್ಯಾಸಂಪತ್ಪ್ರದಾಯಕಾಯ ನಮಃ । ಓಂ ಕಪಿಸೇನಾನಾಯಕಾಯ ನಮಃ । ಓಂ ಭವಿಷ್ಯಚ್ಚತುರಾನನಾಯ ನಮಃ । ಓಂ ಕುಮಾರಬ್ರಹ್ಮಚಾರಿಣೇ ನಮಃ । ಓಂ ರತ್ನಕುಂಡಲದೀಪ್ತಿಮತೇ ನಮಃ । ಓಂ ಚಂಚಲದ್ವಾಲಸನ್ನದ್ಧಲಂಬಮಾನ- ಶಿಖೋಜ್ವಲಾಯ ನಮಃ । ಓಂ ಗಂಧರ್ವವಿದ್ಯಾತತ್ತ್ವಜ್ಞಾಯ ನಮಃ । ಓಂ ಮಹಾಬಲಪರಾಕ್ರಮಾಯ ನಮಃ । ಓಂ ಕಾರಾಗೃಹವಿಮೋಕ್ತ್ರೇ ನಮಃ । ಓಂ ಶೃಂಖಲಾಬಂಧಮೋಚಕಾಯ ನಮಃ । ಓಂ ಸಾಗರೋತ್ತಾರಕಾಯ ನಮಃ । ಓಂ ಪ್ರಜ್ಞಾಯ ನಮಃ । ಓಂ ರಾಮದೂತಾಯ ನಮಃ । ಓಂ ಪ್ರತಾಪವತೇ ನಮಃ॥ ಓಂ ವಾನರಾಯ ನಮಃ । ಓಂ ಕೇಸರಿಸುತಾಯ ನಮಃ । ಓಂ ಸೀತಾಶೋಕನಿವಾರಣಾಯ ನಮಃ । ಓಂ ಅಂಜನಾಗರ್ಭಸಂಭೂತಾಯ

ನಮಃ । ಓ ಬಾಲಾರ್ಕಸದೃಶಾನನಾಯ ನಮಃ । ಓಂ ವಿಭೀಷಣಪ್ರಿಯಕರಾಯ ನಮಃ । ಓಂ ದಶಗ್ರೀವಕುಲಾಂತಕಾಯ ನಮಃ ॥೫೦॥ ಓಂ ಲಕ್ಷ್ಮಣಪ್ರಾಣದಾತ್ರೇ ನಮಃ । ಓಂ ವಜ್ರಕಾಯಾಯ ನಮಃ । ಓಂ ಮಹಾದ್ಯುತಯೇ ನಮಃ । ಓಂ ಚಿರಂಜೀವಿನೇ ನಮಃ । ಓಂ ರಾಮಭಕ್ತಾಯ ನಮಃ । ಓಂ ದೈತ್ಯಕಾರ್ಯವಿಘಾತಕಾಯ ನಮಃ । ಓಂ ಅಕ್ಷಹಂತ್ರೇ ನಮಃ । ಓಂ ಕಾಂಚನಾಭಾಯ ನಮಃ । ಓಂ ಪಂಚವಕ್ತ್ರಾಯ ನಮಃ । ಓಂ ಮಹಾತಪಸೇ ನಮಃ ॥೬೦॥ ಓಂ ಲಂಕಿಣೀಭಂಜನಾಯ ನಮಃ । ಓಂ ಶ್ರೀಮತೇ ನಮಃ । ಓಂ ಸಿಂಹಿಕಾಪ್ರಾಣಭಂಜಕಾಯ ನಮಃ । ಓಂ ಗಂಧಮಾದನಶೈಲಸ್ಥಾಯ ನಮಃ । ಓಂ ಲಂಕಾಪುರವಿದಾರಕಾಯ ನಮಃ । ಓಂ ಸುಗ್ರೀವಸಚಿವಾಯ ನಮಃ । ಓಂ ಧೀರಾಯ ನಮಃ । ಓಂ ಶೂರಾಯ ನಮಃ । ಓಂ ದೈತ್ಯಕುಲಾಂತಕಾಯ ನಮಃ । ಓಂ ಸುರಾರ್ಚಿತಾಯ ನಮಃ ॥೭೦॥ ಓಂ ಮಹಾತೇಜಸೇ ನಮಃ । ಓಂ ರಾಮಚೂಡಾಮಣಿಪ್ರದಾಯ ನಮಃ । ಓಂ ಕಾಮರೂಪಿಣೇ ನಮಃ । ಓಂ ಪಿಂಗಲಾಕ್ಷಾಯ ನಮಃ । ಓಂ ವಾರಿಧಿ ಮಧ್ಯೇಮೈನಾಕಪೂಜಿತಾಯ ನಮಃ । ಓಂ ಮಾರ್ತಾಂಡಮಂಡಲಾಧಿಪತಯೇ ನಮಃ । ಓಂ ವಿಜಿತೇಂದ್ರಿಯಾಯ ನಮಃ । ಓಂ ರಾಮಸುಗ್ರೀವಸಂಧಾತ್ರೇ ನಮಃ । ಓಂ ರಾವಣಮರ್ದನಾಯ ನಮಃ । ಓಂ ಸ್ಫಟಿಕಾಭಾಯ ನಮಃ ॥೮೦॥ ಓಂ ವಾಗಧೀಶಾಯ ನಮಃ । ಓಂ ನವವ್ಯಾಕೃತಿಪಂಡಿತಾಯ ನಮಃ । ಓಂ ಚತುರ್ಬಾಹವೇ ನಮಃ । ಓಂ ದೀನಬಂಧವೇ ನಮಃ । ಓಂ ಮಹಾತ್ಮನೇ ನಮಃ । ಓಂ ಭಕ್ತವತ್ಸಲಾಯ ನಮಃ । ಓಂ ಸಂಜೀವವನಪರ್ವತಾ ಹರ್ತ್ರೇ ನಮಃ । ಓಂ ಶುಚಯೇ ನಮಃ । ಓಂ ವಾಗ್ಮಿನೇ ನಮಃ । ಓಂ ದೃಢವ್ರತಾಯ ನಮಃ ॥೯೦॥ ಓಂ ಕಾಲನೇಮಿಪ್ರಮಥನಾಯ ನಮಃ । ಓಂ ಹರಿಮರ್ಕಟಮರ್ಕಟಾಯ ನಮಃ । ಓಂ ದಾತಾಯ ನಮಃ । ಓಂ ಶಾಂತಾಯ ನಮಃ । ಓಂ ಪ್ರಸನ್ನಾತ್ಮನೇ ನಮಃ । ಓಂ ದಶಕಂಠಮದಾಪಹರ್ತ್ರೇ ನಮಃ । ಓಂ ಯೋಗಿನೇ ನಮಃ । ಓಂ ರಾಮಕಥಾಲೋಲಾಯ ನಮಃ । ಓಂ ಸೀತಾನ್ವೇಷಣಪಂಡಿತಾಯ ನಮಃ । ಓಂ ವಜ್ರನಖಾಯ ನಮಃ ॥೧೦೦॥ ಓಂ ವಜ್ರದಂಷ್ಟ್ರಾಯ ನಮಃ । ಓಂ ರುದ್ರವೀರ್ಯಸಮುದ್ಭವಾಯ ನಮಃ ॥ ಓಂ

ಇಂದ್ರಜಿತ್ಪ್ರಹಿತಾಮೋಘ ಬ್ರಹ್ಮಾಸ್ತ್ರನಿವಾರಕಾಯ ನಮಃ । ಓಂ ಪಾರ್ಥಧ್ವಜಾಗ್ರಸಂವಾಸಿನೇ ನಮಃ । ಓಂ ಶರಪಂಜರಭೇದಕಾಯ ನಮಃ । ಓಂ ದಶಬಾಹವೇ ನಮಃ । ಓಂ ಲೋಕಪೂಜ್ಯಾಯ ನಮಃ । ಓಂ ಜೀವೋತ್ತಮಾಯ ನಮಃ ॥

॥ ಓಂ ಸೀತಾಸಮೇತಶ್ರೀರಾಮಪಾದಸೇವಾದುರಂಧರಾಯ ನಮಃ ॥

॥ ಆಂಜನೇಯಾಷ್ಟೋತ್ತರ ಶತನಾಮಾವಳಿಃ ಸಂಪೂರ್ಣಂ ॥

## ಧೂಪ

ವನಸ್ಪತ್ಯುದ್ಭವೋ ದಿವ್ಯೋ ಗಂಧಾಢ್ಯೋ ಗಂಧ ಉತ್ತಮಃ ।

ಆಘ್ರೇಯಃ ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಮ್ ।

ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ಧೂಪಮಾಘ್ರಾಪಯಾಮಿ।

## ಏಕಾರತಿ

ಅಜ್ಞಾನತಿಮಿರಚ್ಛೇದಿನ್ ಪ್ರಕಾಶಿತ ದಿಗಂತರ ।

ದೀಪಂ ಗೃಹಾಣ ದೇವೇಶ ವಾಯುಪುತ್ರ ನಮೋಽಸ್ತು ತೇ ।

ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ಏಕಾರ್ತಿಕ್ಯಂ ದರ್ಶಯಾಮಿ।

## ನೈವೇದ್ಯಂ

ನಾನಾಭಕ್ಷ್ಯವಿಚಿತ್ರಾನ್ನಂ ಗೋಘೃತಾಕ್ತಂ ಸುಪಾಯಸಮ್ ।

ನಾನಾಶಾಕಸಮಾಯುಕ್ತಂ ನೈವೇದ್ಯಂ ಪ್ರತಿಗೃಹ್ಯತಾಮ್ ॥

ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ನೈವೇದ್ಯಂ ಸಮರ್ಪಯಾಮಿ। ಹಸ್ತಪ್ರಕ್ಷಾಲನಂ ಸಮರ್ಪಯಾಮಿ । ಮುಖಪ್ರಕ್ಷಾಲನಂ ಸಮರ್ಪಯಾಮಿ । ಕರೋದ್ವರ್ತನಾರ್ಥೇ ಚಂದನಂ ಸಮರ್ಪಯಾಮಿ ।

## ತಾಂಬೂಲ

ಏಲಾಲವಂಗಕರ್ಪೂರಜಾತಿಪೂಗೀಫಲಾದಿಭಿಃ ।

ತ್ರಯೋದಶಗುಣೈರ್ಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥

ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ತಾಂಬೂಲಂ ಸಮರ್ಪಯಾಮಿ ।

## ದಕ್ಷಿಣಾ

ಕೃತಂ ಪೂಜಾದಿಕಂ ಸರ್ವ ಕರ್ಮದಕ್ಷಂ ಕರೋತಿ ಯಾ ।

ಯಸ್ಮಾತ್ ತಸ್ಮಾತ್ ದಕ್ಷಿಣೇತಿ ಪ್ರಾಹುಸ್ತಾಂ ಪ್ರದದಾಮ್ಯಹಮ್ ॥

ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ। ದಕ್ಷಿಣಾಂ ಸಮರ್ಪಯಾಮಿ।

## ನೀರಾಜನ

ಸುಭಕ್ತಿಜ್ಞಾನವೈರಾಗ್ಯ ರತ್ನಭಾಸಾ ಪ್ರಕಾಶಿತ ।

ಪಾಪೌಘತಮಸೋದ್ಭೇಧೇ ಭ್ರದ್ಧೇಭ ಈರಜ ತೇ ನಮಃ ।

ಹನುಮದಂತರ್ಗತ ಶ್ರೀರಾಮಚಂದ್ರಾಯ ನಮಃ । ಮಹಾನೀರಾಜನಂ ಸಮರ್ಪಯಾಮಿ । ಮಂತ್ರಪುಷ್ಪಾಂಜಲೀಂ ಸಮರ್ಪಯಾಮಿ । ಪ್ರದಕ್ಷಿಣನಮಸ್ಕಾರಾನ್ ಸಮರ್ಪಯಾಮಿ । ಗೀತಮ್ । ನೃತ್ಯಂ । ಛತ್ರಮ್ । ವಾದ್ಯಮ್ । ಚಾಮರಮ್ । ಆಂದೋಲನಮ್ । ಸಮಸ್ತ ರಾಜೋಪಚಾರಾನ್ ಸಮರ್ಪಯಾಮಿ ।

ನಮಸ್ತೇ ವಾಯುಪುತ್ರಾಯ ಧ್ವಂಸಿತಾಮರವೈರಿಣೇ ।

ಸುಜನಾಂಬುಧಿಚಂದ್ರಾಯ ಭವಿಷ್ಯದ್ ಬ್ರಹ್ಮಣೇ ನಮಃ ।

ಮನೆಮಂದಿ ಎಲ್ಲರೂ ಅರ್ಘ್ಯ ನೀಡಬೇಕು.

## ಪಂಚಮುಖಿಪ್ರಾಣಸ್ತೋತ್ರಂ

ಕಪಿಮುಖಪೂರ್ವಂ ದಕ್ಷಿಣೇ ನಾರಸಿಂಹಂ

ಗರುಡಮುಖಮಪಿ ಪಶ್ಚಾತ್ ಉತ್ತರೇ ಸೂಕರಾಸ್ಯಮ್ ।

ಹನುಮಜ್ಜಯಂತಿ

ಹಯವದನಮತೋರ್ಧ್ವಂ ಚಿಂತಯೇದ್ ವಾಯುಸೂನುಂ

ಸಕಲದುರಿತಹರಂ ರಾಮದೂತಂ ನಮಾಮಿ ॥

## ಹನುಮನ್ನೂತನದೋರಗ್ರಹಣಂ (ದಾರ ಕಟ್ಟಿಕೊಳ್ಳುವುದು)-

ಹನುಮನ್ ದೋರರೂಪೇಣ ಸಂಸ್ಥಿತೋ ಮಯಿ ಸರ್ವದಾ ।

ಸರ್ವಾದ್ಭ್ಯೋ ರಕ್ಷ ರಕ್ಷ ಪ್ರಸೀದ ಕಪಿಪುಂಗವ ॥

ನೂತನಂ ದೋರಮಾವಾಹ್ಯ ಯಥಾಶಕ್ತ್ಯಾಭಿಪೂಜ್ಯ ಚ ।

ಯತೋಽಹಂ ಧೃತವಾನಸ್ಮಿ ಜೀರ್ಣದೋರಮಮುಂ ತ್ಯಜೇ ॥

ಇತಿ ಜೀರ್ಣದೋರವಿಸರ್ಜನಮ್ । (ಹಳೆಯ ದಾರ ವಿಸರ್ಜಿಸುವುದು)

## ವಾಯನದಾನಂ

ಹನೂಮಾನ್ ಪ್ರತಿಗೃಹ್ಣಾತು ಹನುಮಾನ್ವೈ ದದಾತಿ ಚ ।

ಹನೂಮಾಂಸ್ತಾರಕೋಭಾಭ್ಯಾಂ ನತೋಽಸ್ಮಿ ತ್ವಾಮ್ ಹನೂಮತೇ ॥

ಇತಿ ವಾಯನದಾನಮ್

## ಅಥ ಪ್ರಾರ್ಥನಾ

ಬಳಿತ್ಥಾದಿತ್ರಯೀವೇದ್ಯ ತ್ರೀರೂಪಾಯ ಮಹಾತ್ಮನೇ ।

ಭಕ್ತಾಭೀಷ್ಟಪ್ರದಾಯಾಸ್ತು ನಮಸ್ತೇ ಭಾರತೀಪತೇ ॥

ಯಸ್ಯ ಸ್ಮೃತ್ಯಾಚ ನಾಮೋಕ್ತ್ಯಾ ತಪಃ ಪೂಜಾ ಕ್ರಿಯಾದಿಷು । ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮುಚ್ಯುತಮ್ ॥ ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ । ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥ ಅನೇನ ಹನುಮತ್ಪೂಜನೇನ ಹನುಮದಂತರ್ಗತ ಶ್ರೀರಾಮಚಂದ್ರಃ ಪ್ರೀಯತಾಮ್ ಪ್ರೀತೋ ವರದೋ ಭವತು ॥ ಶ್ರೀಕೃಷ್ಣಾರ್ಪಣಮಸ್ತು ॥

* * * *

## ಎಂದೆಂದೂ ಮುಖ್ಯಪ್ರಾಣದೇವರೇ ಗುರು

ಉಳಿದ ದೇವತೆಗಳು ಅಥವಾ ನಮ್ಮ ಜೊತೆಗಿರುವ ಜ್ಞಾನಿಗಳು ಕೆಲವು ಕಾಲವಷ್ಟೇ ಗುರುಗಳಾಗುತ್ತಾರೆ. ಅನಂತ ಕಾಲದ ತನಕ ಗುರುವಾಗುವವರು ಮುಖ್ಯಪ್ರಾಣದೇವರು ಮಾತ್ರ. ಆದ್ದರಿಂದ ಅವರನ್ನೇ ಅನನ್ಯ ಗುರುಗಳೆಂದು ಶರಣಾಗಬೇಕು.

## ಮುಖ್ಯಪ್ರಾಣದೇವರು ನಿತ್ಯಗುರು

ಭಗವಂತನು ಹೇಗೆ ಅನಾದಿ ಅನಂತ ಕಾಲದ ತನಕ ಜ್ಞಾನಾನಂದಾತ್ಮಕವಾಗಿ ಎಲ್ಲ ರೂಪಗಳಿಂದಲೂ ಇರುತ್ತಾನೋ, ಅದರಂತೆ ಮುಖ್ಯಪ್ರಾಣದೇವರು ಇರುತ್ತಾರೆಂದು ಹೇಳಲು ಸಾಧ್ಯವಿಲ್ಲ. ಆದರೆ ಎಲ್ಲಾ ಜೀವರು ಹೇಗೆ ನಿತ್ಯರೋ, ಅದರಂತೆ ಮುಖ್ಯಪ್ರಾಣದೇವರೂ ಕೂಡ ನಿತ್ಯರಾಗಿದ್ದಾರೆ. ಆದ್ದರಿಂದ ಅನಾದಿ ಅನಂತಕಾಲದ ತನಕ ಇವರು ಗುರುಗಳಾಗಿದ್ದಾರೆ.

## ಸೃಷ್ಟಿಗೆ ಬರಲು ಪ್ರಾಣದೇವರು ಬೇಕು

ಮುಕ್ತಿಸೃಷ್ಟಿ ಆಗುವ ಮೊದಲು ಜೀವನು ಸಂಸಾರಕ್ಕೆ ಬರಲು ಅವನಲ್ಲಿ ಒಂದು ಪಕ್ವತೆಯು ಬರಬೇಕಾಗುತ್ತದೆ. ಆ ಪಕ್ವತೆಯನ್ನು ತಂದು ಕೊಡುವುದಕ್ಕಾಗಿ ಒಬ್ಬ ಗುರುವು ಇರಲೇಬೇಕು. ಅದರಂತೆ ಮೋಕ್ಷಕ್ಕೆ ತೆರಳಿದ ಮೇಲೂ ಕೂಡ ಭಗವಂತನ ಬಗೆಬಗೆಯ ಚರಿತ್ರೆಗಳನ್ನು ಉಪದೇಶಿಸುವ ಒಬ್ಬ ಗುರುವು ಇರಲೇ ಬೇಕು. ಆ ಗುರುವೇ ಮುಖ್ಯಪ್ರಾಣದೇವರು.

## ಮುಕ್ತಿಸೃಷ್ಟಿಯ ಮೊದಲು ಪ್ರಾಣದೇವರು ಇರುತ್ತಾರೆಯೇ?

ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀನರಹರಿತೀರ್ಥರು ಜೀವಸ್ವರೂಪದ ಒಳಗೆ ಮುಖ್ಯಪ್ರಾಣದೇವರ ಪ್ರವೇಶವನ್ನು ಒಪ್ಪಿರುತ್ತಾರೆ. ಜೀವನು ಹೇಗೆ ಅನಾದಿ ಅನಂತನೋ, ಅವನ ಅಂತರ್ಯಾಮಿಗಳಾದ ಮುಖ್ಯಪ್ರಾಣದೇವರೂ ಕೂಡ ಅನಾದಿ ಅನಂತಕಾಲದಲ್ಲಿ ಗುರುರೂಪದಿಂದ ಇರುತ್ತಾರೆ ಎಂದು ಸ್ಪಷ್ಟವಾಗುತ್ತದೆ.

## ಜೀವಸ್ವರೂಪದಲ್ಲಿ ಅನಾದಿ ಅನಂತಕಾಲದಲ್ಲಿ ಇರುತ್ತಾರೆ

ನರಹರಿತೀರ್ಥರೇ ಮೊದಲಾದ ಅನೇಕ ಜ್ಞಾನಿಗಳು ಜೀವಸ್ವರೂಪದಲ್ಲಿ ಮುಖ್ಯಪ್ರಾಣದೇವರಿಗೆ ಪ್ರವೇಶವಿದೆ ಎಂದು ಹೇಳಿರುತ್ತಾರೆ. ಮತ್ತು ಹೀಗೆ ಜೀವಸ್ವರೂಪದಲ್ಲಿ ಮುಖ್ಯಪ್ರಾಣದೇವರಿಗೆ ಪ್ರವೇಶವನ್ನು ಒಪ್ಪುವುದರಿಂದ ಅನಾದಿ ಅನಂತಕಾಲದ ತನಕ ಮುಖ್ಯಪ್ರಾಣದೇವರೇ ಗುರುಗಳೆಂದು ಹೇಳಬಹುದು. ಒಂದು ವೇಳೆ ಜೀವಸ್ವರೂಪದಲ್ಲಿ ಮುಖ್ಯಪ್ರಾಣದೇವರಿಗೆ ಪ್ರವೇಶವನ್ನು ಒಪ್ಪದಿದ್ದರೆ ಉಳಿದ ದೇವತೆಗಳಂತೆ ಮುಖ್ಯಪ್ರಾಣದೇವರೂ ಕೂಡ ಕ್ಷಣಿಕ ಗುರುಗಳಾಗುತ್ತಾರೆ ಹೊರತು, ನಿತ್ಯಗುರುಗಳಾಗಲು ಸಾಧ್ಯವಿಲ್ಲ. ಹೀಗೆ ಅನೇಕ ಮುಖಗಳಲ್ಲಿ ವಿಚಾರ ಮಾಡಿದಾಗ ಮುಖ್ಯಪ್ರಾಣದೇವರಿಗೆ ಜೀವಸ್ವರೂಪದಲ್ಲಿ ಪ್ರವೇಶವನ್ನು ಒಪ್ಪುವುದು ಅನಿವಾರ್ಯ.

## ಜೀವಸ್ವರೂಪದಲ್ಲಿ ಪ್ರವೇಶಕ್ಕೆ ಒಂದು ಆಧಾರ

ವಾಯುರ್ಹಿ ಸರ್ವಜೀವಾನಾಂ ಅಭಿಮಾನೀ ನಿಯಾಮಕಃ ।
ಬಲಮೇಧಾಧೃತೀ ಸ್ಥೈರ್ಯಧ್ಯಾನ ವೈರಾಗ್ಯಮಾನವಾನ್ ।
ಸಜ್ಜ್ಞಾನಾನಂದಭಕ್ತ್ಯಾದಿಗುಣಮಾನೀ ಸ ಏಕಲಃ (ಸ.ರ.ಮಾ.)

ಎಲ್ಲ ಜೀವರಿಗೆ ಅಭಿಮಾನಿದೇವತೆ ಮುಖ್ಯಪ್ರಾಣ ಎಂದು ಇದರಿಂದ ತಿಳಿಯುತ್ತದೆ. ಜೀವನ ಒಳಗಡೆ ಇಲ್ಲದಿದ್ದರೆ ಜೀವಕ್ಕೆ ಅಭಿಮಾನಿಯಾಗಲು ಹೇಗೆ ಸಾಧ್ಯ ? ಅದರ ಒಳಗಡೆ ಪ್ರವೇಶಿಸಲು ಸಾಮರ್ಥ್ಯವಿಲ್ಲದವನು ಅದಕ್ಕೆ ನಿಯಾಮಕನಾಗುವುದು ಹೇಗೆ ಸಾಧ್ಯ? ಆದ್ದರಿಂದ ಈ ಪ್ರಮಾಣದ ಆಧಾರದಲ್ಲಿ ಮುಖ್ಯಪ್ರಾಣದೇವರಿಗೆ ಜೀವಸ್ವರೂಪದಲ್ಲಿ ಪ್ರವೇಶವನ್ನು ಒಪ್ಪುವುದು ಸಮಂಜಸವೆಂದು ತಿಳಿಯುತ್ತದೆ.

## ಕೆಲವರ ಪ್ರಕಾರ ಜೀವಸ್ವರೂಪದಲ್ಲಿ ಪ್ರವೇಶವಿಲ್ಲ

ಸಂಕರ್ಷಣಒಡೆಯರೇ ಮೊದಲಾದ ಕೆಲವು ಜ್ಞಾನಿಗಳು ಜೀವಸ್ವರೂಪದಲ್ಲಿ ಪ್ರವೇಶವನ್ನು ಮುಖ್ಯಪ್ರಾಣದೇವರಿಗೆ ಒಪ್ಪುವುದಿಲ್ಲ. ಪ್ರಕಾಶರೂಪದಿಂದಷ್ಟೇ ಪ್ರವೇಶವನ್ನು ಒಪ್ಪುತ್ತಾರೆ. ಆದರೆ ಭಗವಂತನ ಅಚಿಂತ್ಯಾದ್ಭುತ ಶಕ್ತಿಯಿಂದ ಜೀವಸ್ವರೂಪದ ಒಳಗಿರುವ ಮುಖ್ಯಪ್ರಾಣದೇವರಿಗೂ ಒಂದು ರೂಪದಿಂದ

ಸಂಸಾರಾವಸ್ಥೆಯಲ್ಲಿದ್ದರೂ ಜೀವಸ್ವರೂಪದಲ್ಲಿ ಅಂತರ್ಯಾಮಿ ರೂಪದಿಂದ ಮೋಕ್ಷಕ್ಕೆ ತೆರಳುತ್ತಾರೆಂದು ಕೆಲವರು ವಿದ್ವಾಂಸರು ವಿರೋಧವನ್ನು ಪರಿಹರಿಸಿದ್ದಾರೆ.

## ಜೀವಸ್ವರೂಪದಲ್ಲಿ ಪ್ರವೇಶ ಒಪ್ಪುವುದು ಹೇಗೆ ?

ಮುಖ್ಯಪ್ರಾಣದೇವರಿಗೆ ಲಿಂಗದೇಹವು ಯಾವುದೇ ರೀತಿಯಲ್ಲಿ ಬಂಧಕವಾಗದ ಕಾರಣ ಜೀವಸ್ವರೂಪದಲ್ಲಿರುವ ಮುಖ್ಯಪ್ರಾಣದೇವರಿಗೆ ಲಿಂಗದೇಹವಿರಲಿ, ಇಲ್ಲದಿರಲಿ ನಮಗೆ ಅದು ಬಾಧಕವಾಗುವುದಿಲ್ಲ. ಇದನ್ನೂ ಕೂಡ ಭಗವಂತನ ಅಚಿಂತ್ಯಾದ್ಭುತ ಶಕ್ತಿಯಿಂದ ಲಿಂಗದೇಹವಿಲ್ಲವೆಂದು ಕೆಲವರು ಸಮಾಧಾನ ನೀಡುತ್ತಾರೆ.

## ವಿರೋಧಪರಿಹಾರಕ್ಕೆ ಪ್ರಯತ್ನ

ಲೋಕದಲ್ಲಿ ಎಲ್ಲೆಡೆ ಇರುವ ವಿರೋಧಗಳು ಭಗವಂತನಲ್ಲಿ ಅವಿರುದ್ಧವಾಗುತ್ತವೆ. ಇದನ್ನೇ ಅಚಿಂತ್ಯಾದ್ಭುತ ಶಕ್ತಿಯೆಂದು ಶಾಸ್ತ್ರದಲ್ಲಿ ಕರೆಯುತ್ತಾರೆ. ಅದರಂತೆ ನಮ್ಮ ದೃಷ್ಟಿಯಿಂದ ಇದು ಅತ್ಯಂತ ವಿರುದ್ಧವಾಗಿದ್ದರೂ ಭಗವಂತನ ಅಘಟಿತಘಟನಾ ಸಾಮರ್ಥ್ಯದಿಂದ ಇದನ್ನೂ ಕೂಡ ಏಕೆ ಕೂಡಿಸಬಾರದು.

## ಪ್ರವೇಶವಿದೆಯೆನ್ನಲು ಸ್ಪಷ್ಟ ಆಧಾರ

ಗರುಡ ಶೇಷ ಭವಾದಿ ನಾಮವ
ಧರಿಸಿ ಪವನ ಸ್ವರೂಪದೇಹದಿ
ಕರಣನಿಯಾಮಕನು ತಾನಾಗಿಪ್ಪ ಹರಿಯಂತೆ ॥ (ಹರಿ. 9-12)

ಈ ಪದ್ಯದಲ್ಲಿ ಭಗವಂತನು ಹೇಗೆ ಸ್ವರೂಪದೇಹದಲ್ಲಿರುವನೋ ಅದರಂತೆ ಮುಖ್ಯಪ್ರಾಣದೇವರೂ ಕೂಡ ನೆಲಸಿದ್ದಾರೆಂದು ಹೇಳಿರುತ್ತಾರೆ.

ಈರೆರಡು ದೇಹದೊಳಗಿದ್ದು
ಸಮೀರದೇವ ಶ್ವಾಸಜಪನಾ
ನೂರಧಿಕವಾಗಿಪ್ಪ ಎಂಭತ್ತಾರು ಸಾಹಸ್ರ ॥ (ಹರಿ. 12-44)

ಈ ಪದ್ಯದಲ್ಲಿ ಶ್ರೀ ಜಗನ್ನಾಥದಾಸರು ಸ್ವರೂಪದೇಹದಲ್ಲಿದ್ದೂ ಕೂಡ ಮುಖ್ಯಪ್ರಾಣದೇವರು ಹಂಸಮಂತ್ರ ಜಪವನ್ನು ಅನಾದಿ ಅನಂತಕಾಲದ ತನಕ

ಮಾಡುತ್ತಲೇ ಇರುತ್ತಾರೆಂದು ಸ್ಪಷ್ಟವಾಗಿ ನುಡಿದಿದ್ದಾರೆ. ಇದಕ್ಕಿಂತಲೂ ಸ್ಪಷ್ಟವಾದ ಆಧಾರ ಮತ್ಯಾವುದು!

## ಮೋಕ್ಷದಲ್ಲೂ ಮುಖ್ಯಪ್ರಾಣದೇವರೇ ಗುರುಗಳು

ಮುಖ್ಯಪ್ರಾಣದೇವರು ಬ್ರಹ್ಮದೇವರಾಗಿಯೇ ಮೋಕ್ಷವನ್ನು ಪಡೆಯುತ್ತಾರೆಂಬುದು ಸತ್ಯ. ಆದರೆ ಮುಂದಿನ ಕಲ್ಪದ ಸಾಧಕರಿಗೆ ಇವರು ಬ್ರಹ್ಮರಾಗುತ್ತಾರೆ. ನಮ್ಮ ಈ ಕಲ್ಪಕ್ಕೆ ಸಂಬಂಧಪಟ್ಟ ಇವರು ಮುಖ್ಯಪ್ರಾಣರೂಪದಿಂದ ಸಂಸಾರಾವಸ್ಥೆಯಲ್ಲಿ ನಮಗೆ ಹೇಗೆ ಗುರುಗಳಾಗಿದ್ದಾರೋ, ಮೋಕ್ಷದಲ್ಲಿಯೂ ಕೂಡ ನಮಗೆ ಗುರುಗಳೇ ಆಗಿರುತ್ತಾರೆ.

## ಮೋಕ್ಷದಲ್ಲೂ ಕೂಡ ಇಲ್ಲಿಯಂತೆ

ಮೋಕ್ಷವೂ ಕೂಡ ಸಂಸಾರದಲ್ಲಿ ಹೇಗೋ, ಹಾಗೆಯೇ. ಅಭಿಪ್ರಾಯವೇನೆಂದರೆ ಮೋಕ್ಷವು ಊಹೆಗೂ ನಿಲುಕದಷ್ಟು ವಿಶಾಲವಾಗಿದೆ. ಯಾವ ಯಾವ ಕಲ್ಪದ ಸಾಧಕರು ಮುಕ್ತರಾಗುತ್ತಾರೋ, ಆಯಾ ಕಲ್ಪದ ಸಾಧಕರಿಗೆ ಆಯಾ ಕಲ್ಪದಲ್ಲಿರುವ ಉತ್ತಮರು ಮೋಕ್ಷದಲ್ಲೂ ಕೂಡ ಜೊತೆಯಲ್ಲೇ ಇರುತ್ತಾರೆ. ಹಿಂದಿನ ಮುಂದಿನ ಕಲ್ಪದ ಸಾಧಕರು ಈ ಕಲ್ಪದಲ್ಲಿ ಮುಕ್ತರಾದವರಿಗೆ ಸಂಬಂಧವಿರುವುದಿಲ್ಲ. ಆದ್ದರಿಂದ ಈ ಕಲ್ಪದಲ್ಲಿರುವ ದೇವೇಂದ್ರ, ಗರುಡ, ಶೇಷ ಮೊದಲಾದವರು ಮೋಕ್ಷದಲ್ಲೂ ಕೂಡ ನಮಗೆ ಇದೇ ರೂಪದಿಂದ ದೇವತೆಗಳಾಗಿರುತ್ತಾರೆ. ಹಿಂದಿನ ಮುಂದಿನ ಕಲ್ಪದ ಗರುಡ-ಶೇಷಾದಿಗಳು ನಮಗೆ ಸಂಬಂಧವಿರುವುದಿಲ್ಲ. ಆಸೆ ಪಟ್ಟರೆ, ಇತರ ಕಲ್ಪದವರನ್ನು ನೋಡಲು, ಭೇಟಿಯಾಗಲು ಭಗವಂತ ಅವಕಾಶ ನೀಡುತ್ತಾನಾದರೂ ಅಂತಹ ಆಸೆ ಪಡುವವರು ವಿರಳ. ಅದರಂತೆ ಈಗಿನ ಕಲ್ಪದಲ್ಲಿ ನಮ್ಮಿಂದ ಸಾಧನೆ ಮಾಡಿಸುತ್ತಿರುವ ಮುಖ್ಯಪ್ರಾಣದೇವರು ಮೋಕ್ಷದಲ್ಲೂ ಕೂಡ ಇದೇ ರೀತಿಯಲ್ಲಿ ಗುರುಗಳಾಗಿಯೇ ಇರುತ್ತಾರೆ.

## ಬಿಂಬನ ಪಾದಾಂಗುಷ್ಠದಲ್ಲಿ ಮುಖ್ಯಪ್ರಾಣ

ಹೃದಯಲ್ಲಿರುವ ಅಷ್ಟದಳಕಮಲದಲ್ಲಿ ಮೂಲೇಶ ಎಂಬ ಬಿಂಬನು ನೆಲೆಸಿದ್ದಾನೆ. ಇವನ ಪಾದದ ಹೆಬ್ಬೆಟ್ಟಿನಲ್ಲಿ ಮುಖ್ಯಪ್ರಾಣದೇವರು ಕುಳಿತು ಹಂಸಮಂತ್ರವನ್ನು

ಜಪಿಸುತ್ತಿದ್ದಾರೆ. ಇವರ ಪಾದದ ಅಂಗುಷ್ಠದಲ್ಲಿ ಕುಳಿತ ನಾವು ಮೋಕ್ಷವನ್ನು ದಯಪಾಲಿಸಿರಿ ಎಂಬುದಾಗಿ ಮುಖ್ಯಪ್ರಾಣದೇವರನ್ನು ಉಪಾಸನೆ ಮಾಡಬೇಕು.

## ದೇಹದಲ್ಲಿರುವ ವಿವಿಧ ರೂಪಗಳು

ಪ್ರತಿಯೊಬ್ಬರಿಗೂ ಕೂಡ ನಾಕುದೇಹಗಳಿವೆ, ಸ್ಥೂಲದೇಹ, ಅನಿರುದ್ಧದೇಹ, ಲಿಂಗದೇಹ, ಸ್ವರೂಪ ದೇಹ ಎಂಬುದಾಗಿ. ಈ ನಾಕು ದೇಹಗಳಲ್ಲಿ ಮುಖ್ಯಪ್ರಾಣದೇವರು ಒಂದೊಂದು ರೂಪದಿಂದ ನೆಲೆಸಿದ್ದಾರೆ. ಸ್ವರೂಪ ಶರೀರದಲ್ಲಿಯೂ ಮುಖ್ಯಪ್ರಾಣದೇವರಿಗೆ 'ಮಾತರಿಶ್ವ' ಎಂದು ಹೆಸರು. ಮೂಲೇಶರೂಪಿಯಾದ ಭಗವಂತನ ಪಾದದ ಅಂಗುಷ್ಟದಲ್ಲಿ ನೆಲೆಸಿರುವ ರೂಪಕ್ಕೆ ಪವಮಾನ ಎಂದು ಹೆಸರು ಇತ್ಯಾದಿಯಾಗಿ ಜ್ಞಾನಿಗಳು ತಿಳಿಸಿರುತ್ತಾರೆ. ಇಷ್ಟೇ ಅಲ್ಲದೇ ಷಟ್‌ಚಕ್ರಗಳಲ್ಲಿ ನೆಲೆಸಿರುವ ಭಗವಂತನ ಪ್ರತಿಯೊಂದು ರೂಪಗಳನ್ನು ಉಪಾಸನೆಯನ್ನು ಮಾಡುವುದಕ್ಕಾಗಿ ಮುಖ್ಯಪ್ರಾಣದೇವರ ಪ್ರತ್ಯೇಕ ಪ್ರತ್ಯೇಕ ರೂಪಗಳಿವೆ.

## ಊಟದಲ್ಲಿ ಮುಖ್ಯಪ್ರಾಣ

ಊಟ ಮಾಡುವಾಗ ನಾವು ತಿನ್ನುವ ಪ್ರತಿಯೊಂದು ತುತ್ತುಗಳು ಮುಖ್ಯಪ್ರಾಣದೇವರ ಐದುರೂಪಗಳ ಮೂಲಕ ಭಗವಂತನ ಐದು ರೂಪಗಳಲ್ಲಿ ಸಮರ್ಪಿತವಾಗುತ್ತದೆ ಎಂದು ತಿಳಿಯಬೇಕು. ಮುಖದಲ್ಲಿ ಪ್ರಾಣನು, ಕಂಠದಲ್ಲಿ ಅಪಾನನು, ಹೃದಯದಲ್ಲಿ ವ್ಯಾನನು, ಉದರದಲ್ಲಿ ವ್ಯಾನನು, ಉದರದ ಎಡಭಾಗದಲ್ಲಿ ಉದಾನನು, ಬಲಭಾಗದಲ್ಲಿ ಸಮಾನನು, ವಾಸುದೇವ, ಪ್ರದ್ಯುಮ್ನ, ಸಂಕರ್ಷಣ, ಅನಿರುದ್ಧ ನಾರಾಯಣರೂಪಗಳಲ್ಲಿ ಸಮರ್ಪಣೆ ಮಾಡುತ್ತಾನೆ. ಈ ಐದು ಸ್ಥಳದಲ್ಲಿ ಆಹವನೀಯ, ಗಾರ್ಹಪತ್ಯ, ದಾಕ್ಷಿಣಾತ್ಯ, ಸಭ್ಯ, ಅವಸಭ್ಯ ಎಂಬುದಾಗಿ ಐದು ಅಗ್ನಿಗಳಿವೆ. ಆದ್ದರಿಂದ ನಾವು ತಿನ್ನುವ ಪ್ರತಿಯೊಂದು ತುತ್ತುಗಳು ಐದು ಸ್ಥಳದಲ್ಲಿ ಭಗವಂತನ ಐದು ಸ್ಥಳಗಳಲ್ಲಿ ಹುತವಾಗುತ್ತದೆ. ಇದನ್ನು ಮುಖ್ಯಪ್ರಾಣದೇವರೇ ನಿಂತು ನಡೆಸುತ್ತಾರೆಂದು ಅನುಸಂಧಾನ ಮಾಡಬೇಕು.

## ಮುಖ್ಯಪ್ರಾಣನ ಪ್ರಧಾನ ಹತ್ತುರೂಪಗಳು

ಪ್ರಾಣಾದಿಪಂಚಕಂ ಚೈವ ತಥಾ ನಾಗಾದಿಪಂಚಕಮ್
ಸನಾಗಕೂರ್ಮಕೃಕಲದೇವದತ್ತಧನಂಜಯಾಃ ।
ಏವಂ ತು ದಶಧಾ ಪ್ರಾಣ ಅಧ್ಯಾತ್ಮಾದಿತ್ರಿಧಾऽಖಿಲಾಃ ॥

(ಭಾಗವತ ತಾತ್ಪರ್ಯ)

ವ್ಯೋಮಸಂಹಿತೆಯ ಈ ವಾಕ್ಯವನ್ನು ಶ್ರೀಮದಾಚಾರ್ಯರು ಭಾಗವತ ತಾತ್ಪರ್ಯದಲ್ಲಿ ಉದಾಹರಿಸಿದ್ದಾರೆ. ಈ ವಾಕ್ಯದಿಂದ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು ರೂಪಗಳ ಜೊತೆ, ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯಗಳೆಂಬ ಪುನಃ ಐದುರೂಪಗಳು ನಮ್ಮ ದೇಹದಲ್ಲಿದ್ದು ನಮ್ಮ ರಕ್ಷಣೆಯಲ್ಲಿ ನಿರತವಾಗಿವೆ ಎಂದು ತಿಳಿಯುತ್ತದೆ. ನಮ್ಮ ದೇಹದಲ್ಲಿ ಅಧ್ಯಾತ್ಮ, ಅಧಿಭೂತ, ಅಧಿದೈವಗಳು ಇರುತ್ತವೆ. ಈ ಮೂರರಲ್ಲಿ ಪ್ರಾಣದೇವರು ಪ್ರತ್ಯೇಕವಾಗಿ ಹತ್ತುರೂಪಗಳಿಂದ ನೆಲೆಸಿರುತ್ತಾರೆ. ಆದ್ದರಿಂದ ಒಟ್ಟು ಮೂವತ್ತು ರೂಪಗಳಿಂದ ಪ್ರಧಾನವಾಗಿ ದೇಹದಲ್ಲಿದ್ದಾರೆ ಎಂದು ಹೇಳಿದಂತಾಯಿತು. ಮತ್ತೊಂದು ಬಿಂಬನ ಪಾದಾಂಗುಷ್ಠದಲ್ಲಿರುವ ರೂಪ. ಹೀಗೆ ಒಟ್ಟು ಮೂವತ್ತೊಂದು ಪ್ರಧಾನರೂಪಗಳನ್ನು ಚಿಂತಿಸಬೇಕು. ಇಷ್ಟೇ ಅಲ್ಲದೇ ಭಗವಂತನು ೭೨೦೦೦ ನಾಡಿಗಳಲ್ಲಿ ೭೨೦೦೦ ರೂಪಗಳಿಂದ ನೆಲೆಸಿದ್ದಾನೆ. ಅಲ್ಲಿ ಮುಖ್ಯಪ್ರಾಣದೇವರು ತಾವೂ ಕೂಡ ಎಪ್ಪತ್ತೆರಡು ಸಾವಿರ ರೂಪಗಳನ್ನು ಸ್ವೀಕರಿಸಿ, ಭಗವಂತನಿಗೆ ಪ್ರತಿಮಾಸ್ಥಾನೀಯರಾಗಿದ್ದಾರೆ. ಆದ್ದರಿಂದ ನಮ್ಮ ದೇಹದ ಪ್ರತಿಯೊಂದು ಅಂಗಾಂಗಳಲ್ಲೂ ಕೂಡ ಮುಖ್ಯಪ್ರಾಣದೇವರು ಅನೇಕ ರೂಪಗಳನ್ನು ಹೊಂದಿ, ನಮ್ಮಿಂದ ಸಾಧನೆಯನ್ನು ಮಾಡಿಸುತ್ತಿದ್ದಾರೆಂದು ಅನುಸಂಧಾನ ಮಾಡಬೇಕು.

## ಅವತಾರತ್ರಯಗಳಲ್ಲಿ ಹೆಚ್ಚಿನ ಸಾಧನೆ

ಹನುಮ-ಭೀಮ-ಮಧ್ವ ಎಂಬ ಮೂರು ರೂಪಗಳಲ್ಲಿ ಅವತರಿಸಿ ಭಗವಂತನ ಕೈಂಕರ್ಯವನ್ನು ಹೆಚ್ಚಿನ ಮಟ್ಟದಲ್ಲಿ ಮಾಡಿಕೊಂಡು ತಮ್ಮ ಸಾಧನೆಯನ್ನು ಪರಿಪೂರ್ಣ

ಮಾಡಿಕೊಂಡರು. ಆದರೆ ಅವರ ರೂಪಗಳು ಅನಂತವಾಗಿವೆ. 'ತ್ರಿಕೋಟಿರೂಪಃ ಪವನಶ್ಚ ಮೇ ಸುತಃ' ಎಂಬುದಾಗಿ ತಿಳಿಸಿದಂತೆ ಮೂರು ಕೋಟಿ ರೂಪಗಳನ್ನು ಕೇವಲ ಭಗವಂತನ ಆರಾಧನೆಗಾಗಿ ಮುಖ್ಯಪ್ರಾಣದೇವರು ಸ್ವೀಕರಿಸಿದ್ದಾರೆ. ಆ ಮೂರು ಕೋಟಿ ರೂಪಗಳಲ್ಲಿ ಒಂದೊಂದು ರೂಪಗಳಿಂದಲೂ ಭಗವಂತನನ್ನು ಒಂದೊಂದು ಬಗೆಯಲ್ಲಿ ನಿರಂತರ ಆರಾಧನೆ ಗೈಯುತ್ತಿದ್ದಾರೆ. ಮತ್ತು ಸಪ್ತಕೋಟಿಮಹಾಮಂತ್ರಗಳನ್ನು ಜಪಿಸುವ ಮೂಲಕ ಎಲ್ಲಾ ಮಹಾಮಂತ್ರಗಳ ಸಿದ್ಧಿಯನ್ನು ಪೂರ್ಣವಾಗಿ ಪಡೆದುಕೊಂಡಿದ್ದಾರೆ.

## ಮುಖ್ಯಪ್ರಾಣದೇವರ ಅನಂತರೂಪಗಳು

'ಅನಂತಾನಿ ಅಸ್ಯ ರೂಪಾಣಿ ತ್ರಿಕೋಟೀನಿ ವಿಶೇಷತಃ' ಎಂಬ ವಚನದಂತೆ ವಿಶೇಷವಾಗಿ ಮುಖ್ಯಪ್ರಾಣದೇವರು ಮೂರು ಕೋಟಿರೂಪಗಳನ್ನು ಸ್ವೀಕರಿಸಿದ್ದಾರೆ. ಆದರೆ ಇವರಿಗೆ ಅನಂತರೂಪಗಳಿವೆ ಎಂಬುದಾಗಿ ಶಾಸ್ತ್ರದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಆದ್ದರಿಂದ ಮುಖ್ಯಪ್ರಾಣದೇವರ ಗುಣಗಳನ್ನು ಹಾಗೂ ರೂಪಗಳನ್ನು ಚಿಂತನೆ ಮಾಡಿ ಮುಗಿಸಲು ಯಾರಿಂದಲೂ ಸಾಧ್ಯವೇ ಇಲ್ಲ.

## ಸಹಭೋಗ ಎಂದರೇನು?

ಮುಖ್ಯಪ್ರಾಣದೇವರಷ್ಟೇ ಅಲ್ಲದೇ ಎಲ್ಲಾ ತತ್ವಾಭಿಮಾನಿದೇವತೆಗಳೂ ಕೂಡ ಭಗವಂತನ ದೇಹದಲ್ಲಿ ಪ್ರವೇಶವನ್ನು ಹೊಂದಿರುತ್ತಾರೆ. ಆದರೆ ಸಹಭೋಗದ ಸೌಭಾಗ್ಯವಿರುವುದು ಮುಖ್ಯಪ್ರಾಣದೇವರಿಗೆ ಮಾತ್ರ. ಆಯಾ ಪ್ರಾಣದೇವರ ಅನುಯಾಯಿ ಗುಂಪಿನ ಜೀವಿಗಳ ಅನಾದಿ ಸತ್ಕರ್ಮಗಳ ಫಲವನ್ನು ಭಗವಂತ ಸರ್ವೋತ್ತಮನಾಗಿ ಸ್ವೀಕರಿಸುವನು. ಆಯಾ ಮುಖ್ಯಪ್ರಾಣದೇವರು ಜೀವೋತ್ತಮರಾಗಿ, ಅವನೊಂದಿಗಿದ್ದು ಸ್ವೀಕರಿಸುವರು. ಇದುವೇ ಸಹಭೋಗದ ಅರ್ಥ.

## ಪರಮಾತ್ಮನ ದೇಹದಲ್ಲಿ ಮುಖ್ಯಪ್ರಾಣ

ಪ್ರತಿಯೊಬ್ಬ ಸಾಧಕರು ತಾವು ಮಾಡಿದ ಸತ್ಕರ್ಮಗಳನ್ನು ಭಗವಂತನಿಗೆ ಶ್ರೀಕೃಷ್ಣಾರ್ಪಣಮಸ್ತು ಎಂದು ಸಮರ್ಪಣೆ ಮಾಡುತ್ತಾರೆ. ಇದರ ಫಲವನ್ನು

ಭಗವಂತನು ಸ್ವೀಕರಿಸುವಾಗ ಅದರ ಒಂದಂಶವನ್ನು ಮುಖ್ಯಪ್ರಾಣದೇವರಿಗೂ ನೀಡುತ್ತಾನೆ ಎಂದಭಿಪ್ರಾಯ. ಇದನ್ನೇ ಸಹಭೋಗ ಎಂದು ತಿಳಿಯಬೇಕು.

## ಭಗವಂತನಿಗೆ ಮುಖ್ಯಪ್ರಾಣನಲ್ಲಿ ಮಹಾಪ್ರೀತಿ

ಸ್ವೇಚ್ಛಾರಮಣನಾದ ಭಗವಂತನಿಗೆ ಯಾವ ದೇವತೆಗಳಿಂದಲೂ ಆಗಬೇಕಾದದ್ದು ಏನೂ ಇಲ್ಲ. ಆದರೂ ಅವರವರ ಹೆಚ್ಚಿನ ಸಂತೋಷಕ್ಕಾಗಿ ಭಗವಂತನು ಹೀಗೆ ಲೀಲೆಗಳನ್ನು ತೋರಿಸುತ್ತಾನೆ. ತನ್ನ ದೇಹದ ಒಳಗೆಯೇ ಲಕ್ಷ್ಮೀ, ಮುಖ್ಯಪ್ರಾಣ ಮೊದಲಾದ ಉತ್ತಮ ದೇವತೆಗಳಿಗೆ ಅವಕಾಶವನ್ನಿತ್ತು ಅಲ್ಲಿಯೇ ಸುಖಭೋಗ ದೊರಕುವಂತೆ ಮಾಡುತ್ತಾನೆ.

## ಮುಖ್ಯಪ್ರಾಣನ ಸಹಭೋಗ ಲಕ್ಷ್ಮೀಯ ಸಮಾನವಲ್ಲ

ಈ ಕಲ್ಪದ ಸಾಧಕರು ಏನು ಸಾಧನೆಯನ್ನು ಭಗವಂತನಿಗೆ ಶ್ರೀಕೃಷ್ಣಾರ್ಪಣಮಸ್ತು ಎಂದು ಸಮರ್ಪಣೆ ಮಾಡಿರುತ್ತಾರೋ, ಅದರ ಒಂದಂಶವನ್ನು ಮಾತ್ರ ಮುಖ್ಯಪ್ರಾಣದೇವರಿಗೆ ಭಗವಂತನು ನೀಡುತ್ತಾನೆ. ಆದರೆ ಅನಾದಿ ಅನಂತಕಾಲದ ತನಕ ಎಷ್ಟು ಕಲ್ಪಗಳಿವೆಯೋ, ಆ ಎಲ್ಲಾ ಕಲ್ಪಗಳಲ್ಲಿರುವ ಸಾಧಕರ ಸಾಧನೆಯ ಫಲವನ್ನು ಲಕ್ಷ್ಮೀದೇವಿಗೆ ನೀಡುತ್ತಾನೆ. ಈ ವ್ಯತ್ಯಾಸವನ್ನು ಗಮನಿಸಬೇಕು.

## ಅಂಧತಮಸ್ಸಿನಲ್ಲಿ ದುಃಖವನ್ನೀಯುವವರೂ ಕೂಡ ಇವರೇ

ವಾಯುಸ್ತುತಿಯ 'ಜನ್ಮಾಧಿವ್ಯಾಧ್ಯುಪಾಧಿ' ಇತ್ಯಾದಿ ಶ್ಲೋಕದಲ್ಲಿ. ಸಾಧಕನ ಜನ್ಮ, ಆಧಿ, ವ್ಯಾಧಿ ಇವುಗಳನ್ನು ಪರಿಹರಿಸುವ ಮುಖ್ಯಪ್ರಾಣದೇವರು ಅನೇಕ ಸದ್ಗುಣಗಳನ್ನು ಆ ಸಾಧಕರಿಗೆ ನೀಡುತ್ತಾರೆ. ಅಷ್ಟೇ ಅಲ್ಲದೇ ಮೋಕ್ಷದಲ್ಲೂ ಕೂಡ ಅನಂತಸುಖವನ್ನು ಇದೇ ಮುಖ್ಯಪ್ರಾಣದೇವರು ನೀಡುತ್ತಾರೆ. ಯಾವ ದುಷ್ಟನು ಸಾಧಕನಿಗೆ ಮೋಕ್ಷಸಾಧನೆಗೆ ಅಡ್ಡಿಯನ್ನುಂಟು ಮಾಡಿರುತ್ತಾನೋ, ಆ ದುಷ್ಟನಲ್ಲಿ ಅಂತರ್ಯಾಮಿಯಾಗಿದ್ದು, ಅನಂತ ಕಾಲದ ತನಕ ದುಃಖವನ್ನು ಅವನಿಗೆ ನೀಡುತ್ತಾರೆ. ಅಂಧತಮಸ್ಸಿಗೆ ತಳ್ಳಿ ಸ್ವತಃ ಅಲ್ಲೂ ತಾವೇ ನೆಲೆಸಿ ಅವನಿಗೆ ಶಿಕ್ಷೆಯನ್ನು ನೀಡುತ್ತಾರೆ.

## ಮೋಕ್ಷದಲ್ಲಿ ಆನಂದ ಕೊಡುವವರೂ ಕೂಡ ಇವರೇ

ನಿರಂತರ ಸಾಧನೆಯನ್ನು ಮಾಡಿಸಿದ ಮುಖ್ಯಪ್ರಾಣದೇವರು ಮೋಕ್ಷದಲ್ಲಿ ಸುಖ ಕೊಡಲು ಅಸಮರ್ಥರು ಎಂದು ಹೇಳುವುದು ಹೇಗೆ ಸರಿ ? ಯಾವ ವ್ಯಕ್ತಿಯು ಚೆನ್ನಾಗಿ ಸಾಧನೆ ಮಾಡಿಸಿರುತ್ತಾನೋ, ಅವನೇ ಬಹುಮಾನಾದಿಗಳನ್ನು ನೀಡಿ, ಸುಖವನ್ನು ಕೊಟ್ಟಾಗ ಮಾತ್ರ ಅವನಲ್ಲಿ ಪರಿಪೂರ್ಣತೆ ಬರುತ್ತದೆ. ಆದ್ದರಿಂದಲೇ ತ್ರಿವಿಕ್ರಮಪಂಡಿತರು 'ಚಿರುಮುದಿತಚಿದಾನಂದ-ಸಂದೋಹದಾನಾಮ್' ಎಂದು ಹೇಳಿರುತ್ತಾರೆ. ಇದರಿಂದಲೂ ಕೂಡ ಮೋಕ್ಷದಲ್ಲಿ ಮುಖ್ಯಪ್ರಾಣದೇವರಿದ್ದಾರೆ ಎಂಬುದಷ್ಟೇ ಅಲ್ಲದೇ ನಮ್ಮನ್ನು ಮೋಕ್ಷಕ್ಕೆ ಕರೆದುಕೊಂಡು ಹೋಗಿ, ಅಲ್ಲಿ ಅನಂತ ಕಾಲದ ತನಕ ಜೊತೆಗೆ ಇದ್ದು, ಜ್ಞಾನದ ಜೊತೆ ಸುಖವನ್ನೂ ನೀಡುತ್ತಾರೆ ಎಂಬ ಪ್ರಮೇಯವನ್ನು ತಿಳಿಯಬಹುದು.

## ಅಂಧತಮಸ್ಸಿನಲ್ಲೇಕೆ ಇದ್ದಾರೆನ್ನಬೇಕು

ಸಮಗ್ರ ಬ್ರಹ್ಮಾಂಡದಲ್ಲಿ ಎಲ್ಲಾ ವ್ಯಾಪಾರಗಳನ್ನೂ ಕೂಡ ಭಗವಂತನು ಮುಖ್ಯಪ್ರಾಣದೇವರ ಮೂಲಕವೇ ಮಾಡಿಸುತ್ತಾನೆ. ಆದ್ದರಿಂದ ಅಂಧತಮಸ್ಸಿನಲ್ಲಿ ನಡೆಯುವ ಎಲ್ಲಾ ವ್ಯಾಪಾರಗಳಿಗೂ ಕೂಡ ಮುಖ್ಯ ನಿಯಾಮಕನಾದವನು ಮುಖ್ಯಪ್ರಾಣದೇವರೇ ಆಗಿರುತ್ತಾರೆ. ಆದ್ದರಿಂದಲೇ 'ತಮಸಿ ವಿದಧತಾಂ' ಇತ್ಯಾದಿಯಾಗಿ ತ್ರಿವಿಕ್ರಮರು ಅಂಧತಮಸ್ಸಿನಲ್ಲಿ ಅನಂತ ಕಾಲದ ತನಕ ದುಃಖವನ್ನು ನೀಡುವಿರಿ ಎಂದು ದಾಖಲಿಸಿದ್ದಾರೆ. ಅಂಧತಮಸ್ಸಿನಲ್ಲಿರುವ ಮುಖ್ಯಪ್ರಾಣದೇವರಿಗೆ ತನ್ನಿಮಿತ್ತವಾದ ದುಃಖದ ಲೇಪವೂ ಆಗುವುದಿಲ್ಲ.

## ಮುಖ್ಯಪ್ರಾಣದೇವರು ವೇದಪ್ರತಿಪಾದ್ಯರು

ಪರಮಾತ್ಮ ಹಾಗೂ ಲಕ್ಷ್ಮೀದೇವಿಯನ್ನು ಮಾತ್ರ ಪ್ರತಿಪಾದನೆ ಮಾಡುವ ವೇದಗಳನ್ನು ಬಿಟ್ಟು, ಉಳಿದೆಲ್ಲಾ ವೇದಗಳಿಂದ ಮುಖ್ಯಪ್ರಾಣದೇವರು ಪ್ರತಿಪಾದ್ಯರಾಗಿದ್ದಾರೆ.

ವೇದಾನಾಂ ಚೈವ ಲೋಕಾನಾಂ ವ್ಯೋಮಕಾಲಾದಿಕಸ್ಯ ಚ ।
ಸರ್ವತತ್ವಾಭಿಮಾನೀ ಚ ಸರ್ವಪ್ರಾಣಗಣಾಧಿಪಃ ॥

ವೇದಗಳು, ಲೋಕಗಳು, ಆಕಾಶ, ಕಾಲ, ಸಕಲತತ್ವಗಳು, ಸಕಲ ಜೀವಗಣಗಳು ಇವರೆಲ್ಲರಿಗೂ ಮುಖ್ಯಪ್ರಾಣದೇವರೇ ನಿಯಾಮಕರಾಗಿದ್ದಾರೆ. ಇವರಿಂದ ನಿಯಮ್ಯವಾದ ವೇದಗಳು ಅವರನ್ನು ಪ್ರತಿಪಾದನೆ ಮಾಡಲೇಬೇಕು. ಆದ್ದರಿಂದ ಪರಮಮುಖ್ಯವೃತ್ತಿಯಿಂದ ಭಗವಂತನು ಪ್ರತಿಪಾದ್ಯನಾದರೂ ಕೂಡ ಮುಖ್ಯವೃತ್ತಿಯಿಂದ ಮುಖ್ಯಪ್ರಾಣದೇವರು ಪ್ರತಿಪಾದ್ಯರಾಗಿದ್ದಾರೆಂದು ಒಪ್ಪಬೇಕು.

## ಮುಖ್ಯಪ್ರಾಣದೇವರು ಆಖಣಾಶ್ಮಸಮರು

ಛಾಂದೋಗ್ಯೋಪನಿಷತ್ತು ಮುಖ್ಯಪ್ರಾಣದೇವರನ್ನು ಆಖಣಾಶ್ಮಸಮ ಎಂದು ಹೊಗಳುತ್ತದೆ. ಒಮ್ಮೆ ದೇವಾಸುರರಿಗೆ ಯುದ್ಧವಾದಾಗ ಭಗವಂತನನ್ನು ಒಲಿಸಿಕೊಳ್ಳುವುದಕ್ಕಾಗಿ ದೇವತೆಗಳು ಪ್ರತಿಮೆಯನ್ನು ಹುಡುಕಿದರು. ನಾಸಿಕ್ಯವಾಯು, ಅಗ್ನಿ, ಸೂರ್ಯ, ಚಂದ್ರ, ರುದ್ರ, ಶೇಷ, ಗರುಡ ಈ ಎಲ್ಲ ದೇವತೆಗಳನ್ನು ಪ್ರತಿಮೆಯನ್ನಾಗಿಟ್ಟುಕೊಂಡು ಉದ್ಗೀಥ ಎಂಬ ಭಗವಂತನ ರೂಪವನ್ನು ಉಪಾಸನೆ ಮಾಡಲು ಯತ್ನಿಸಿದರು. ಆದರೆ ಅಸುರರು ಆ ಎಲ್ಲ ಪ್ರತಿಮೆಗಳನ್ನು ಹಾಳು ಮಾಡಿದರು. ಕೊನೆಯಲ್ಲಿ ಮುಖ್ಯಪ್ರಾಣದೇವರನ್ನೇ ಪ್ರತಿಮೆಯನ್ನಾಗಿಟ್ಟುಕೊಂಡು, ಉದ್ಗೀಥನನ್ನು ಉಪಾಸನೆ ಮಾಡಿದರು. ಆಗ ಅಸುರರು ಆ ಪ್ರತಿಮೆಯ ಮೇಲೆ ಅನೇಕ ಶಸ್ತ್ರಾಸ್ತ್ರಗಳನ್ನು ಪ್ರಯೋಗ ಮಾಡಿದರು  ಎಲ್ಲವೂ ವ್ಯರ್ಥವಾದವು. ಹೇಗೆ ವಜ್ರದಂತಿರುವ ಕಲ್ಲುಬಂಡೆಯ ಮೇಲೆ ಮಣ್ಣಿನ ಹೆಂಟೆಯನ್ನು ಬೀಸಿದರೆ ಅದು ಸ್ವತಃ ತಾನೇ ಪುಡಿಪುಡಿಯಾಗುವುದೋ, ಹಾಗೇ ಅಸುರರು ಈ ಪ್ರತಿಮೆಯ ಮೇಲೆ ಮಾಡಿದ ಎಲ್ಲಾ  ಪ್ರಯೋಗಗಳೂ ತಾವೇ ನಷ್ಟವಾದವು. ಅಸುರರೂ ಕೂಡ ನಷ್ಟರಾದರು. ಇದರಿಂದ ವಾಯುದೇವರೇ ಭಗವಂತನ ಶ್ರೇಷ್ಠಪ್ರತಿಮೆಯೆಂದು ದೇವತೆಗಳು ಘೋಷಣೆಗೈದರು.

## ಭಾರತೀರಮಣಮುಖ್ಯಪ್ರಾಣ ಎನ್ನಿರಿ

ಸಕಲ ಕರ್ಮಗಳಲ್ಲಿ ಭಾರತೀರಮಣ ಮುಖ್ಯಪ್ರಾಣಾಂತರ್ಗತನಾಗಿಯೇ ಭಗವಂತನನ್ನು ಉಪಾಸನೆ ಮಾಡಬೇಕು. ಇಲ್ಲದಿದ್ದರೆ ಮಾಡಿದ ಕರ್ಮಗಳೆಲ್ಲವೂ ಸಂಪೂರ್ಣವಾಗಿ ನಾಶವಾಗುತ್ತವೆ. ಏಕೆಂದರೆ ಉಳಿದೆಲ್ಲಾ ದೇವತೆಗಳಲ್ಲಿ ಅಸುರರ

ಪ್ರವೇಶವಿದೆ. ಆದರೆ ಮುಖ್ಯಪ್ರಾಣದೇವರಲ್ಲಿ ಅಸುರ ಪ್ರವೇಶಕ್ಕೆ ಸ್ವಲ್ಪವೂ ಅವಕಾಶವಿಲ್ಲ. ಈಗಾಗಲೇ ಹೇಳಿದಂತೆ ಆಖಣಾಶ್ಮಸಮರಾದ್ದರಿಂದ ಮುಖ್ಯಪ್ರಾಣದೇವರೇ ಭಗವಂತನ ಪ್ರತಿಮೆಯಾಗಲು ಸಾಧ್ಯ. ಆದ್ದರಿಂದ ಭಗವಂತನು ಮುಖ್ಯಪ್ರಾಣದೇವರಲ್ಲಿದ್ದು ನಮ್ಮನ್ನು ಅನುಗ್ರಹಿಸುವನು. ನಾವು ಎಲ್ಲಿಯೇ ಭಗವಂತನನ್ನು ಉಪಾಸನೆ ಮಾಡುವುದಾದರೂ ಮುಖ್ಯಪ್ರಾಣದೇವರಲ್ಲಿಯೇ ಮಾಡಬೇಕು.

## ಮುಖ್ಯಪ್ರಾಣದೇವರೇ ಸತ್ಕರ್ಮಗಳನ್ನು ಸಮರ್ಪಿಸುವರು

ಈಶಾವಾಸ್ಯೋಪನಿಷತ್ತಿನಲ್ಲಿ 'ತಸ್ಮಿನ್ ಅಪೋ ಮಾತರಿಶ್ವಾ ದಧಾತಿ' ಎಂದು ಹೇಳಲಾಗಿದೆ. ಎಲ್ಲ ಸಾಧಕರ ಸತ್ಕರ್ಮಗಳನ್ನು ಸಮರ್ಪಣೆ ಮಾಡುವವರು ಮುಖ್ಯಪ್ರಾಣದೇವರು ಮಾತ್ರ. ಆದ್ದರಿಂದ ನಾವು ಎಲ್ಲಾ ಕರ್ಮಗಳನ್ನು ಭಾರತೀರಮಣನಾದ ಮುಖ್ಯಪ್ರಾಣದೇವರ ಅಂತರ್ಯಾಮಿಲ್ಲಿಯೇ ಸಮರ್ಪಣೆ ಮಾಡಬೇಕು. ರುದ್ರಾದಿ ದೇವತೆಗಳಲ್ಲಿ ಮತ್ತಿತರರಲ್ಲಿ ಯಾವಾಗ ಅಸುರಾವೇಶ ಇರುತ್ತದೆ, ಯಾವಾಗ ಇರುವುದಿಲ್ಲವೆಂಬುದನ್ನು ನಾವು ತಿಳಿಯಲು ಸಾಧ್ಯವಿಲ್ಲ. ಶಾಸ್ತ್ರವಿಧಿಗನುಸಾರವಾಗಿ ರುದ್ರಾದಿಗಳನ್ನು ಅಧಿಷ್ಠಾನ ಮಾಡಿಕೊಂಡು ಚಿಂತನೆ ಮಾಡುವಾಗಲೂ ಅವರೊಳಗೆ ಪ್ರಾಣದೇವರನ್ನು, ಅವರೊಳಗೆ ಭಗವಂತನನ್ನು ಚಿಂತನೆ ಮಾಡಿದಾಗ, ನಮ್ಮ ಕರ್ಮ ಅಸುರಾವೇಶಕ್ಕೆ ತುತ್ತಾಗದೆಯೇ, ಸುರಕ್ಷಿತವಾಗಿ ಭಗವಂತನನ್ನು ತಲುಪುತ್ತದೆ.

## ಮುಖ್ಯಪ್ರಾಣದೇವರು ವ್ಯಾಪ್ತರು

ಮುಖ್ಯಪ್ರಾಣೋ ಮಹಾನೇಷ ಯೇನ ವ್ಯಾಪ್ತಂ ಚರಾಚರಂ
ತಸ್ಮಿನ್ ಓತಮಿದಂ ಸರ್ವಂ ಚೇತನಾಚೇತನಾತ್ಮಕಮ್ ।
ಯಥಾ ಸೂತ್ರೇ ಮಣಿಗಣಾಃ ರಥನಾಭಾವರಾ ಯಥಾ
ಯಥಾ ಕಂಥಾಪಟಾಃ ಸೂತ್ರೇ ಓತಾಃಪ್ರೋತಾಶ್ಚ ಸಂಸ್ಥಿತಾಃ ॥
(ಭಾಗವತ ತಾತ್ಪರ್ಯ)

ಜೀವೋತ್ತಮರಾದ ಮುಖ್ಯಪ್ರಾಣದೇವರು ಸಮಸ್ತ ಈ ಜಗತ್ತಿನಲ್ಲಿ ವ್ಯಾಪ್ತರಾಗಿದ್ದಾರೆ ಎಂಬುದು ಈ ಪ್ರಮಾಣದಿಂದ ಸ್ಪಷ್ಟವಾಗುತ್ತದೆ. ಆದರೆ

ನವಾವರಣಗಳಿಂದ ಕೂಡಿದ ಬ್ರಹ್ಮಾಂಡದ ಒಳಗಡೆ ಮಾತ್ರ ಮುಖ್ಯಪ್ರಾಣದೇವರು ವ್ಯಾಪ್ತರಾಗಿದ್ದಾರೆ ಎಂದು ತಿಳಿಯಬೇಕು. ನವಾವರಣದ ಹೊರಗಡೆ ಮುಖ್ಯಪ್ರಾಣದೇವರು ಸರ್ವಥಾ ಇರುವುದಿಲ್ಲ. ಅಲ್ಲಿ ಲಕ್ಷ್ಮೀ ಹಾಗೂ ಪರಮಾತ್ಮರು ಮಾತ್ರ ಅವ್ಯಾಕೃತಾಕಾಶದಲ್ಲಿ ವ್ಯಾಪ್ತರಾಗಿರುತ್ತಾರೆ. ಆದ್ದರಿಂದ ಮುಖ್ಯಪ್ರಾಣ-ದೇವರಿಗಿಂತಲೂ ಲಕ್ಷ್ಮೀ ಹಾಗೂ ಪರಮಾತ್ಮರು ಉತ್ತಮರಾಗಿದ್ದಾರೆಂದು ತಿಳಿಯುತ್ತದೆ.

## ದೇವತೆಗಳಿಗೂ ಮೋಕ್ಷದಾತಾ ಮುಖ್ಯಪ್ರಾಣ

ಏಕೋ ಹಿ ಕರ್ತಾ ಸರ್ವಸ್ಯ ರಮಾನಾಥಪ್ರಸಾದತಃ ।
ಪದಪ್ರದಶ್ಚ ದೇವಾನಾಂ ತತ್ತಚ್ಛಕ್ತಿಪ್ರದಸ್ತಥಾ ।
ತಥಾ ಮೃತ್ಯುಪ್ರದಶ್ಚಾಯಂ ಮುಕ್ತಾನಾಮಪಿ ಜೀವನಂ ।

(ಸ.ರ.ಮಾ)

ಎಂಬ ಮಾತಿನಂತೆ ಭಗವಂತನ ಪ್ರಸಾದದಿಂದ ದೇವತೆಗಳಿಗೂ ಮೋಕ್ಷವನ್ನು ಕೊಡಿಸುವವರು ಮುಖ್ಯಪ್ರಾಣದೇವರೇ ಆಗಿದ್ದಾರೆ ಸಕಲ ದೇವತೆಗಳೂ ಕೂಡ ಮುಖ್ಯಪ್ರಾಣದೇವರನ್ನೇ ಗುರುಗಳನ್ನಾಗಿ ಉಪಾಸನೆಗೈಯ್ಯುತ್ತಾರೆ.

## ಪ್ರಾಣದೇವರಲ್ಲಿ ನಮ್ಮ ಭಕ್ತಿ

ತಿರುಪತಿಯ ಶ್ರೀನಿವಾಸನನ್ನು ದರ್ಶನ ಮಾಡಲು ಹೇಗೆ ಅತ್ಯಂತ ಕಾತರದಿಂದ ನಾವು ಓಡಿಹೋಗುವೆವೋ, ಅದರಂತೆ ದೇವತೆಗಳು ಮುಖ್ಯಪ್ರಾಣದೇವರ ದರ್ಶನಕ್ಕಾಗಿ ಕಾತರದಿಂದ ಧಾವಿಸುವರು. ಹಾಗೇ ಧಾವಿಸಿ ಮುಖ್ಯಪ್ರಾಣದೇವರನ್ನು ಸತ್ಯಲೋಕದಲ್ಲಿ ಕಂಡಾಗ ಎಲ್ಲರು ನಾ ಮುಂದೆ, ತಾ ಮುಂದೆ ಎಂದು ಅವರಿಗೆ ಸಾಷ್ಟಾಂಗ ನಮಿಸುವರು. ಆಗ ಎಲ್ಲ ದೇವತೆಗಳ ಕಿರೀಟಗಳು ಅವರ ಪಾದಪೀಠಕ್ಕೆ ಘಟ್ಟಿಸಲ್ಪಟ್ಟು, ಆ ಕಿರೀಟಗಳಿಂದ ಬಂಗಾರದ ಧೂಳು ಆಕಾಶದಲ್ಲೆದ್ದು ವಿಚಿತ್ರವರ್ಣದಿಂದ ಆಕಾಶವೇ ಕಂಗೊಳಿಸುತ್ತದೆ. ಹೀಗೆ ತ್ರಿವಿಕ್ರಮಪಂಡಿತರು ವಾಯುಸ್ತುತಿಯಲ್ಲಿದೇವತೆಗಳಿಗೆ ಮುಖ್ಯಪ್ರಾಣದೇವರಲ್ಲಿರುವ ಭಕ್ತಿಯನ್ನು ಹೃದಯಂಗಮವಾಗಿ ವರ್ಣಿಸುತ್ತಾರೆ. ದೇವತೆಗಳೇ ಇಷ್ಟು ಭಾವುಕತನದಿಂದ ಭಕ್ತಿ ಮಾಡುವಾಗ ನಾವೂ ಕೂಡ ಅದೇ ಆದರ್ಶದಲ್ಲಿ ಭಕ್ತಿಯನ್ನು ಮಾಡಬೇಕು. ಅವರ ಪಾದಧೂಳಿಗಳನ್ನು ಶಿರಸಾವಹಿಸುವ ತವಕಿಗಳಾಗಬೇಕು.

''ತ್ರಿಜಗದ್ಗುರುವರೇಣ್ಯ ಋಜುಗಣಾಧಿಪ ಪದಾಂಬುಜಯುಗ್ಮಕೆರಗಿ ಬಿನ್ನೈಪೆ ಇನ್ನೇಕೆ ಮನ್ಮನದಿ ನಿಜರೂಪ ತೋರಿ ಸಂತೈಸು' (ತತ್ವಸುವ್ವಾಲಿ)

ದೇವಶ್ರೇಷ್ಠಶ್ಚ ಮಾರುತಿಃ' ಇತ್ಯಾದಿ ಪ್ರಮಾಣಗಳು ವಾಯುದೇವರೇ ಜೀವೋತ್ತಮರೆಂದು ಸಾರುತ್ತಿವೆ. 'ಇಯದಾಮನನಾತ್', 'ಶ್ರೇಷ್ಠಶ್ಚ' ಇತ್ಯಾದಿ ಬ್ರಹ್ಮಸೂತ್ರಗಳಲ್ಲಿ ಜೀವೋತ್ತಮತ್ವವು ನಿರ್ಣಯಿಸಲ್ಪಟ್ಟಿದೆ. ಮೂರು ಲೋಕಗಳಿಗೆ ಗುರುವರೇಣ್ಯರು. ಇಂಥ ವಾಯುದೇವರ ಜೀವೋತ್ತಮತ್ವ ಉಪಾಸನೆಯನ್ನು ನಿರಂತರ ಪ್ರತಿ ಉಸಿರಿನಲ್ಲೂ ಮಾಡುತ್ತಾ ಜೀವನವನ್ನು ಸಾರ್ಥಕ ಮಾಡಿಕೊಳ್ಳೋಣ.

ಉಳಿದೆಲ್ಲಾ ದೇವತೆಗಳನ್ನು ಗಮನಿಸಿದಾಗ, ಒಂದೊಂದು ಬಾರಿಯಾದರೂ ಕಲಿಪ್ರವೇಶ ಆಗಿರುತ್ತದೆ. ಆದರೆ ಅನಾದಿ ಅನಂತ ಕಾಲದ ತನಕ ಕಲಿಪ್ರವೇಶ ಇಲ್ಲದ ಗುರುಗಳು ಎಂದರೆ ಮುಖ್ಯಪ್ರಾಣದೇವರು ಮಾತ್ರ. ಆದ್ದರಿಂದ ಅವತಾರ ರೂಪದಲ್ಲಿ ಇವರಿಗೆ ಮೂಲರೂಪದಲ್ಲಿರುವ ಜ್ಞಾನ, ಶಕ್ತಿಗಳು ಪರಿಪೂರ್ಣವಾಗಿ ಇರುತ್ತವೆ. ಯಾವಾಗ ಬೇಕಾದರೂ ಮೂಲರೂಪದಲ್ಲಿರುವ ಶಕ್ತಿಯನ್ನು ಅವತಾರರೂಪದಲ್ಲಿ ಇವರು ಪ್ರಕಟ ಮಾಡಿಕೊಳ್ಳಬಹುದು. ಇಂಥ ಶ್ರೇಷ್ಠರಾದ ಮುಖ್ಯಪ್ರಾಣದೇವರೇ ಮಧ್ವರಾಗಿ ನಮ್ಮ ಪಾಲಿಗೆ ಗುರುಗಳಾಗಿ ದೊರಕಿರುವುದು ನಮ್ಮ ಅನೇಕ ಜನ್ಮಗಳ ಸೌಭಾಗ್ಯ. ಇಂಥ ಮುಖ್ಯಪ್ರಾಣದೇವರ ಚರಣಾರವಿಂದಗಳಲ್ಲಿ ನಿರಂತರ ಶರಣೆನ್ನಬೇಕು.

ಒಮ್ಮೆ ಎಲ್ಲಾ ದೇವತೆಗಳು ಒಟ್ಟಾಗಿ ಚರ್ಚಿಸಿದರು. ನಾವು ಭಗವಂತನನ್ನು ಪೂಜಿಸಿ ಒಲಿಸಿಕೊಳ್ಳಬೇಕು. ಅದಕ್ಕಾಗಿ ಒಂದು ಪ್ರತಿಮೆ ಬೇಕು. 'ಯಾರನ್ನು ಪ್ರತಿಮೆ ಮಾಡಿಕೊಳ್ಳೋಣ' ಎಂದು. ಭಗವಂತನ ಪೂಜೆಗಾಗಿ ಪವಿತ್ರವಾದ ಪ್ರತಿಮೆ ಅತ್ಯವಶ್ಯವಾಗಿದೆ. ಅಂಥ ಪ್ರತಿಮೆ ಇಂದ್ರಿಯಾಭಿಮಾನಿ ದೇವತೆಗಳನ್ನೇ ಮಾಡಿಕೊಳ್ಳೋಣ ಎಂದು ವಿಚಾರ ಮಾಡಿ, ಕಣ್ಣು, ಮೂಗು ಮೊದಲಾದ ಇಂದ್ರಿಯಗಳ ಅಭಿಮಾನಿ ದೇವತೆಗಳನ್ನೇ ಪ್ರತಿಮೆಯನ್ನಾಗಿ ಮಾಡಿ ಪೂಜಿಸಲು ಹೊರಟರು. ಆದರೆ ಯಾವ ಕ್ಷಣದಲ್ಲಿ ಪೂಜೆಯನ್ನು ಪ್ರಾರಂಭಿಸುತ್ತಿದ್ದರೋ, ಅದೇ

ಕ್ಷಣದಲ್ಲಿ ಅಸುರರು ಬಂದು ಆಕ್ರಮಣ ಮಾಡಿ, ಆ ಪ್ರತಿಮೆಯನ್ನು ಕಲುಷಿತಗೊಳಿಸುತ್ತಿದ್ದರು. ಹೀಗೆ ಆಯಾ ಪ್ರತಿಮೆಗಳು ಅಶುದ್ಧವಾಗುತ್ತಿರುವುದರಿಂದ, ದೇವತೆಗಳು ಪರಮಾತ್ಮನನ್ನು ಒಲಿಸಿಕೊಳ್ಳಲು ಸಾಧ್ಯವೇ ಆಗಲಿಲ್ಲ.

ಸಕಲ ದೇವತೆಗಳ ಪ್ರತಿಮೆಯಲ್ಲಿ ಉಪಾಸನೆಯು ಪ್ರಯತ್ನವು ವಿಫಲವಾಯಿತು. ಕೊನೆಯಲ್ಲಿ ಮುಖ್ಯಪ್ರಾಣನನ್ನು ಭಗವಂತನ ಪ್ರತಿಮೆಯನ್ನಾಗಿ ಮಾಡಿಕೊಂಡರು. ಅಲ್ಲಿ ಭಗವಂತನನ್ನು ಭಕ್ತಿಯಿಂದ ಉಪಾಸನೆಗೈಯುತ್ತಾ ಅರ್ಚಿಸಿದರು. ಅಸುರರು ಅಲ್ಲಿಯೂ ಕೂಡ ತಮ್ಮ ಆಕ್ರಮಣದ ಕಾರ್ಯವನ್ನು ಬಿಡಲಿಲ್ಲ. ಹಲವು ರೀತಿಯಲ್ಲಿ ಆಕ್ರಮಣ ಮಾಡಲು ಪ್ರಾರಂಭಿಸಿದರು. ಆದರೆ ಭೂಮಿಯ ಒಳಭಾಗದಿಂದಾರಂಭಿಸಿ ಭೂಮಿಯ ಮೇಲೆ ವ್ಯಾಪಿಸಿರುವ ಬಂಡೆಯ ಮೇಲೆ ಹೊಡೆದ ಮಣ್ಣಿನ ಹೆಂಟೆಯೇ ಹೇಗೆ ಪುಡಿಪುಡಿಯಾಗುತ್ತದೋ, ಅದರಂತೆ ಆಕ್ರಮಣ ಮಾಡಿದ ಅಸುರೀ ಶಕ್ತಿಗಳೇ ಮುಖ್ಯಪ್ರಾಣನ ಮುಂದೆ ಸೋತು ನುಚ್ಚುನೂರಾದವು. ಮುಖ್ಯಪ್ರಾಣನನ್ನು ಯಾವುದೇ ರೀತಿಯಲ್ಲಿಯೂ ದೋಷಯುಕ್ತರನ್ನಾಗಿ ಮಾಡಲು ಸಾಧ್ಯವಾಗಲಿಲ್ಲ.

ಇಂಥ ಮುಖ್ಯಪ್ರಾಣನಲ್ಲಿ ದೇವತೆಗಳು ಭಗವದ್ರೂಪದ ಉಪಾಸನೆಯನ್ನು ನಡೆಸಿ, ವಿಜಯಶಾಲಿಗಳಾದರು. ಹೀಗೆ ಯಾವುದೇ ಅಸುರರ ಪ್ರಭಾವಕ್ಕೆ ಒಳಗಾಗದ ಪರಿಶುದ್ಧ ಸ್ವರೂಪರಾದ ಮುಖ್ಯಪ್ರಾಣದೇವರು ಮಾತ್ರ ಭಗವಂತನ ಉಪಾಸನೆಗೆ ಅಧಿಷ್ಠಾನರಾಗಿದ್ದಾರೆ. ಈ ಅಧಿಷ್ಠಾನಬಿಟ್ಟು ಬೇರೆ ಯಾವುದೇ ಅಧಿಷ್ಠಾನದಲ್ಲೂ ನಾವು ಭಗವಂತನನ್ನು ಉಪಾಸನೆ ಮಾಡಬಾರದು. ಶಾಸ್ತ್ರವಿಧಿಯನುಸಾರವಾಗಿ ಇತರ ದೇವತೆಗಳನ್ನು ಅಧಿಷ್ಠಾನ ಮಾಡಿಕೊಂಡಾಗಲೂ ಆತ್ಯಂತಿಕವಾಗಿ ಆಯಾ ದೇವತೆಯಲ್ಲಿ ಮುಖ್ಯಪ್ರಾಣದೇವರನ್ನು, ಅವರಲ್ಲಿ ದೇವರನ್ನೂ ಉಪಾಸಿಸಬೇಕು. ಮುಖ್ಯಪ್ರಾಣನೆಂಬ ಅಧಿಷ್ಠಾನದಲ್ಲಿ ಭಗವದುಪಾಸನೆ ಮಾಡಿದರೆ ಯಾವ ಕೆಡಕೂ ಇಲ್ಲದೇ ನಿರ್ಮಲವಾದ ಮಂಗಳಮಯವಾದ ಮೋಕ್ಷವೇ ದೊರಕುತ್ತದೆ.

ಆದ್ದರಿಂದ ಮುಖ್ಯಪ್ರಾಣನ ಅಂತರ್ಯಾಮಿಯನ್ನಾಗಿ ಭಗವಂತನನ್ನು ಆರಾಧನೆಗೈದು ನಾವು ಧನ್ಯರಾಗೋಣ.

## ಪ್ರಾಣದೇವರ ಸ್ಮರಣೆ ಎಂದೆಂದೂ ಇರಲಿ

ನಿತ್ಯವೂ ಬಿಡದೇ ವಾಯುಸ್ತುತಿ ಪಠನವನ್ನು ಮಾಡುತ್ತಾ ಪ್ರಾಣಮಂತ್ರವನ್ನು ಪ್ರತಿಯೊಬ್ಬ ಬ್ರಾಹ್ಮಣನು ಜಪಿಸಲೇಬೇಕು. ಹಾಗೂ ಉಳಿದ ಸಮಯದಲ್ಲಿ ಭಗವಂತನ ನಾಮಸ್ಮರಣೆಯ ಜೊತೆ 'ಮುಖ್ಯಪ್ರಾಣಾಯ ನಮಃ' ಎಂಬುದಾಗಿ ಮುಖ್ಯಪ್ರಾಣದೇವರ ನಾಮಸ್ಮರಣೆಯನ್ನು ಮಾಡಲೇಬೇಕು. ನಿಂತಾಗ, ಕುಳಿತಾಗ, ಊಟಮಾಡುವಾಗ, ನಿದ್ರಿಸುವಾಗ, ಓಡಾಡುವಾಗ, ಪ್ರಯಾಣಮಾಡುವಾಗ ಹೀಗೆ ಪ್ರತಿಯೊಂದು ಕಾರ್ಯಗಳಲ್ಲಿಯೂ ಕೂಡ ಮುಖ್ಯಪ್ರಾಣದೇವರ ಸ್ಮರಣೆ ಇಲ್ಲದೇ ಇರಲೇಬಾರದು. ಆಗ ಮುಖ್ಯಪ್ರಾಣನ ಅಂತರ್ಯಾಮಿಯಾದ ಭಗವಂತನು ನಮ್ಮ ಜನ್ಮ ಸಾರ್ಥಕವಾಗುವಂತೆ ಅನುಗ್ರಹಿಸುವನು.

ಉದ್ಯದ್ರವಿ-ಪ್ರಕರ-ಸನ್ನಿಭಮಚ್ಯುತಾಂಕೇ<br>
ಸ್ವಾಸೀನಮಸ್ಯ ನುತಿ-ನಿತ್ಯ-ವಚಃ-ಪ್ರವೃತ್ತಿಮ್ ।<br>
ಧ್ಯಾಯೇದ್ ಗದಾಭಯ-ಕರಂ ಸು-ಕೃತಾಂಜಲಿಂ ತಂ<br>
ಪ್ರಾಣಂ ಯಥೇಷ್ಟ-ತನುಮುನ್ನತ-ಕರ್ಮ-ಶಕ್ತಿಮ್ ॥

ಉದಯಿಸುತ್ತಿರುವ ಸೂರ್ಯರ ಸಮೂಹದಂತೆ ಬೆಳಗುವ, ಶ್ರೀಹರಿಯ ತೊಡೆಯ ಮೇಲೆ ಕುಳಿತುಕೊಂಡು ನಿರಂತರವೂ ಅವನ ಸ್ತುತಿಯನ್ನು ಗೈಯುತ್ತಿರುವ, ಎರಡು ಕೈಗಳಲ್ಲಿ ಗದೆಯನ್ನೂ ಅಭಯಮುದ್ರೆಯನ್ನೂ ಧರಿಸಿ ಇನ್ನೆರಡು ಕೈಗಳನ್ನು ಜೋಡಿಸಿಕೊಂಡು ಭಗವಂತನನ್ನು ನಮಿಸುತ್ತಿರುವ, ಅದ್ಭುತಕಾರ್ಯಸಮರ್ಥನಾದ, ಇಚ್ಛಾರೂಪಿಯಾದ ಪ್ರಾಣದೇವನನ್ನು ಧ್ಯಾನಿಸಬೇಕು.

## ಹನುಮದವತಾರ

ತಂದೆ ಕೇಸರಿ, ತಾಯಿ ಅಂಜನಾ. ಕೇಸರಿ ಎಂಬ ಕಪಿಗೆ ಭರದ್ವಾಜ ಮೊದಲಾದ ಮುನಿಗಳು 'ವಾಯುದೇವರೇ ಮಗನಾಗಿ ಹುಟ್ಟಲಿ' ಎಂದು ವರವನ್ನಿತ್ತರು. ಅಂಜನಾದೇವಿಯೂ ಕೂಡ ವಾಯುದೇವರೇ ಮಗನಾಗಿ ಅವತರಿಸಬೇಕೆಂದು ತಪಗೈದಳು. ಇದರ ಫಲವೇ ಹನುಮದವತಾರ.

ಒಮ್ಮೆ ಅಸುರ ಗಜರೂಪವನ್ನು ತಾಳಿ ಭರದ್ವಾಜ ಋಷಿಗಳನ್ನು ಕೊಲ್ಲಲು ಧಾವಿಸಿದನು. ಆಗ ಕೇಸರಿ ಕಪಿಯು ಸಿಂಹದಂತೆ ಅದರ ಕುಂಭಸ್ಥಳ ಸೀಳಿತು. ಇದರಿಂದ ಸಂತೋಷಪಟ್ಟ ಭರದ್ವಾಜಮುನಿಗಳು 'ಮುಖ್ಯಪ್ರಾಣನೇ ನಿನಗೆ ಮಗನಾಗಿ ಅವತರಿಸಲಿ' ಎಂದು ವರ ನೀಡಿದರು.

'ಸೂರ್ಯದತ್ತವರಃ ಸ್ವರ್ಣಃ ಸುಮೇರುರ್ನಾಮ ಪರ್ವತಃ । ತತ್ರ ರಾಜ್ಯಂ ಪ್ರಶಾಸ್ತ್ಯಸ್ಯ ಕೇಸರೀ ನಾಮ ವೈ ಪಿತಾ' ಸೂರ್ಯನಿಂದ ವರವನ್ನು ಪಡೆದು ಸ್ವರ್ಣಮಯವಾದ ಮೇರುಪರ್ವತದಲ್ಲಿ ಹನುಮಂತನ ತಂದೆಯಾದ ಕೇಸರಿಯು ರಾಜ್ಯಭಾರವನ್ನು ಮಾಡುತ್ತಿದ್ದನು. ಇವನ ಹೆಂಡತಿಯೇ ಅಂಜನಾ. ರಾಮಾಯಣದ ಈ ಆಧಾರದಲ್ಲಿ ಮೇರುಪರ್ವತವೇ ಇವರ ವಾಸಸ್ಥಳ ಹಾಗೂ ಹನುಮಂತ ದೇವರು ಅವತರಿಸಿದ್ದೂ ಕೂಡ ಮೇರುಪರ್ವತದಲ್ಲಿ ಎಂದು ತಿಳಿಯುತ್ತದೆ. ಆದರೆ ಭವಿಷ್ಯೋತ್ತರಪುರಾಣದಲ್ಲಿ ವೇಂಕಟಾಚಲದಲ್ಲಿ ಹನುಮಂತದೇವರು ಅವತರಿಸಿದರೆಂದು ಹೇಳಲಾಗಿದೆ. ಕಲ್ಪಭೇದದಿಂದ ವಿರೋಧ ಪರಿಹರಿಸಬಹುದು.

ಒಮ್ಮೆ ಅಂಜನೆಯು ಋತುಸ್ನಾತಳಾಗಿ ಉದ್ಯಾನವನದಲ್ಲಿದ್ದಾಗ ಮನೋಹರನಾದ ಮುಖ್ಯಪ್ರಾಣನನ್ನು ಕಂಡಳು. ಆಗ ಆ ಮುಖ್ಯಪ್ರಾಣನು ಅವಳನ್ನು ಆಲಂಗಿಸಿದಾಗ ಗರ್ಭವತಿಯಾದಳು.

ಪ್ರತಿಯೊಬ್ಬ ಸಾಧಕರು ತಿಳಿಯಲೇ ಬೇಕಾದ ಪ್ರಮೇಯವಿದು - ಪರಮಾತ್ಮ ಹಾಗೂ ಋಜುಗಣಸ್ಥರು ಅನ್ಯಸ್ತ್ರೀ ಸಂಪರ್ಕ ಮಾಡಲು ಸಾಧ್ಯವೇ ಇಲ್ಲ. ಹಾಗೇನಾದರೂ ಪರಸ್ತ್ರೀಸಂಪರ್ಕ ಮಾಡಿದ ಕಥೆಗಳು ಪುರಾಣದಲ್ಲಿ ಕಂಡರೆ ಕ್ರಮವಾಗಿ ಲಕ್ಷ್ಮೀದೇವಿಯ ಸನ್ನಿಧಾನ ಹಾಗೂ ಭಾರತೀದೇವಿಯ ಸನ್ನಿಧಾನವಿದೆಯೆಂದು ವ್ಯಾಖ್ಯಾನ ಮಾಡಬೇಕು. ಪ್ರಕೃತ ಅಂಜನಾದೇವಿಯಲ್ಲಿ ಭಾರತೀದೇವಿಯ ವಿಶೇಷ ಸನ್ನಿಧಾನವಿದೆ. ಆದ್ದರಿಂದಲೇ 'ಸಂಸ್ಪರ್ಶನಂ ನಸ್ತವ ದೇವಿ ಭೂತ್ಯೈ' ಎಂಬ ಶ್ಲೋಕದಲ್ಲಿ 'ದೇವೀ' ಎಂಬುದಾಗಿ ಸಂಬೋಧನೆ ಮಾಡಲಾಗಿದೆ. 'ದೇವೀ' ಎಂಬ ಶಬ್ದಕ್ಕೆ 'ಭಾರತಿದೇವಿ' ಎಂಬುದೇ ನಿಜಾರ್ಥ. ಭವಿಷ್ಯೋತ್ತರ-

ಪುರಾಣದಲ್ಲಿ ಹಣ್ಣಿನ ಮೂಲಕ ಅಂಜನಾದೇವಿಯ ಗರ್ಭವನ್ನು ಪ್ರವೇಶಿಸಿದರೆಂದು ಹೇಳಲಾಗಿದೆ. ಏನೇ ಆದರೂ ಭಾರತಿದೇವಿಯ ಸನ್ನಿಧಾನವಿಲ್ಲದಿದ್ದರೆ ಮುಖ್ಯಪ್ರಾಣದೇವರು ಯಾವುದೇ ರೀತಿಯಲ್ಲಿಯೂ ಅವಳ ಸಂಪರ್ಕವನ್ನು ಬಯಸಲಾರರು.

## ಇವರು ರುದ್ರನಲ್ಲ

'ಯೋ ವೈ ಚೈಕಾದಶೋ ರುದ್ರೋ ಹನುಮಾನ್ ಸಃ ಮಹಾಕಪಿಃ ಅವತೀರ್ಣಃ ಸಹಾಯಾರ್ಥಂ ವಿಷ್ಣೋರಮಿತತೇಜಸಃ' ಎಂಬ ಸ್ಕಾಂದ ಪುರಾಣದಲ್ಲಿ ಹನ್ನೊಂದನೆಯ ರುದ್ರನೇ ಹನುಮಂತನಾಗಿ ಅವತರಿಸಿರುವವನೆಂದು ಹೇಳಲಾಗಿದೆ. ಹೀಗಿರುವಾಗ ವಾಯುದೇವನು ಹನುಮಂತನೆಂದು ಹೇಗೆ ಹೇಳುವುದು ಎಂಬ ಪ್ರಶ್ನೆ ಬರುತ್ತದೆ.?

ಅಸುರಮೋಹಕ್ಕಾಗಿ ಪುರಾಣಗಳಲ್ಲಿ ಈ ರೀತಿಯ ಮಾತುಗಳನ್ನು ಹೇಳಿರುತ್ತಾರೆ. ಆದ್ದರಿಂದ ಹನುಮಂತದೇವರನ್ನು ರುದ್ರನ ಅವತಾರವೆಂದು ತಿಳಿಯಬಾರದು. ಅವರೇ ಹನುಮಂತದೇವರಾಗಿ ಅವತರಿಸಿದ್ದಾರೆಂದು ಈ ಶ್ಲೋಕಕ್ಕೆ ವ್ಯಾಖ್ಯಾನ ಮಾಡಬೇಕು. ಅಥವಾ ನಾಗಾದಿ ರೂಪಗಳನ್ನು ವಿವಕ್ಷಿಸಿದರೆ ಹನ್ನೊಂದು ರೂಪಗಳೂ ಕೂಡ ಮುಖ್ಯಪ್ರಾಣದೇವರದ್ದೇ ಆಗಿವೆ.

## ಆಭರಣಧಾರಿಗಳಿವರು

ಕೃಷ್ಣ ಪರಮಾತ್ಮನು ಹೇಗೆ ಸಕಲಾಭರಣ ಭೂಷಿತನಾಗಿ ವಸುದೇವ-ದೇವಕಿಯರಲ್ಲಿ ಅವತರಿಸಿದನೋ, ಅದರಂತೆ ಹನುಮಂತದೇವರೂ ಕೂಡ ಸಕಲಾಭರಣ ಭೂಷಿತರಾಗಿಯೇ ಅವತರಿಸಿದರು. ಯಜ್ಞೋಪವೀತವನ್ನೂ ಕೂಡ ಧಾರಣೆ ಮಾಡಿದ್ದರು. ಹನುಮದ್ವಿಲಾಸದಲ್ಲಿ ಈ ವಿಷಯವನ್ನು ಸ್ವರಸವಾಗಿ ವರ್ಣಿಸಿದ್ದಾರೆ. ಅವರು ಧರಿಸಿದ್ದ ಆಭರಣಗಳು ಯಾರಿಗೂ ಕಾಣಿಸುತ್ತಿರಲಿಲ್ಲ. ಮೊಟ್ಟಮೊದಲು ಅದನ್ನು ಕಂಡವರು ರಾಮದೇವರು. ಆದ್ದರಿಂದ ಅವರನ್ನೇ ತನ್ನ ಒಡೆಯರನ್ನಾಗಿ ಹನುಮಂತದೇವರು ಸ್ವೀಕರಿಸಿದರಂತೆ.

## ಒಂದು ಕಥೆ

ವಾಲಿ-ಸುಗ್ರೀವರು ಹನುಮಂತದೇವರ ಸೋದರಮಾವ ಎನ್ನಲು ಒಂದು ಚಮತ್ಕಾರದ ಕಥೆ ಇದೆ. ಬ್ರಹ್ಮದೇವರ ಕಣ್ಣೀರಿನಿಂದ ಒಬ್ಬ ವಾನರ ಹುಟ್ಟಿದ. ಅವನೊಮ್ಮೆ ಮೇರುಶಿಖರದಲ್ಲಿ ಪ್ರಸನ್ನವಾದ ಸರೋವರವೊಂದನ್ನು ಕಂಡ. ಅದರಲ್ಲಿ ತನ್ನ ಪ್ರತಿಬಿಂಬವನ್ನು ಕಂಡ. ಚಾಪಲದಿಂದ ಮುಳುಗೆದ್ದ. ಆ ಸರೋವರದ ಮಹಿಮೆಯಿಂದ ಕೂಡಲೇ ಸುರಸುಂದರಿಯಾದ ತರುಣಿಯಾಗಿಬಿಟ್ಟ. ಆ ತರುಣಿಯನ್ನು ಇಂದ್ರನು ಇಷ್ಟಪಟ್ಟ. ಆದಿತ್ಯನೂ ಕೂಡ ಇಚ್ಛಿಸಿದ. ಆಗ ಇಂದ್ರನ ರೇತಸ್ಸು ಅವನ ಕೇಶದಲ್ಲಿ ಬಿದ್ದು ಇದರಿಂದ ವಾಲಿ ಹುಟ್ಟಿದ. (ವಾಲ = ಕೇಶ) ಸೂರ್ಯನ ರೇತಸ್ಸು ಕಂಠದಲ್ಲಿ ಬಿದ್ದು ಸುಗ್ರೀವ ಹುಟ್ಟಿದ. ಪುನಃ ಅದೇ ಸರಸ್ಸಿನಲ್ಲಿ ಮುಳುಗಿದಾಗ ತರುಣಿಯ ರೂಪವನ್ನು ಕಳಚಿ ವಾನರನೇ ಆದ. ಇವನೇ 'ಋಕ್ಷರಜಸ್' ಎಂಬ ರಾಜ. ಇವನಿಂದ ಇವನ ಪತ್ನಿಯಲ್ಲಿ ಹುಟ್ಟಿದವಳೇ ಅಂಜನಾದೇವಿ. ಆದ್ದರಿಂದ ವಾಲಿ-ಸುಗ್ರೀವರು ಅಂಜನಾದೇವಿಯ ಅಣ್ಣಂದಿರು. ಹನುಮಂತದೇವರಿಗೆ ಇವರು ಸೋದರಮಾವ ಎನಿಸುತ್ತಾರೆ. ಈ ಕಥೆ ರಾಮಾಯಣದ ಉತ್ತರಕಾಂಡದಲ್ಲಿ ಪ್ರಸಕ್ತವಾಗುತ್ತದೆ. ತಮಿಳುಭಾಷೆಯಲ್ಲಿ ಪ್ರತೀಶ್ಲೋಕವನ್ನು ಅನುವಾದ ಮಾಡಿದ ಶ್ರೀನಿವಾಸ ಐಯ್ಯಂಗಾರ್ ಎಂಬ ವಿದ್ವಾಂಸರು ಈ ಕಥೆಯನ್ನು ಪ್ರಕ್ಷಿಪ್ತ ಎಂದು ಗುರುತಿಸಿದ್ದಾರೆ. ಮತ್ತು ಅನೇಕ ವಿಮರ್ಶಕರು ಈ ಕಥೆಯನ್ನು ಪ್ರಕ್ಷಿಪ್ತವೆಂದೇ ಪರಿಗಣಿಸುತ್ತಾರೆ.

## ಅವತಾರವೆತ್ತಿದ ದಿನದ ಬಗ್ಗೆ

ಚೈತ್ರಮಾಸದ ಹುಣ್ಣಿಮೆಯೆಂದು ಹನುಮಂತದೇವರು ಅಂಜನಾದೇವಿಯಲ್ಲಿ ಅವತರಿಸಿರುವರು. ಮಾರ್ಗಶಿರ ಪೂರ್ಣಿಮೆಯಂದು ಹನುಮದ್‌ವ್ರತವನ್ನು ಧರ್ಮರಾಜಾದಿಗಳು ಆಚರಿಸಿರುವರು. ಹನುಮದ್‌ವ್ರತವನ್ನೇ ಹನುಮಜ್ಜಯಂತಿ ಎಂದು ಕೆಲವರು ಭ್ರಮಿಸಿ ಅಂದೇ ಹನುಮಜ್ಜಯಂತಿಯನ್ನು ಆಚರಿಸುತ್ತಾರೆ. ಪುರಾಣದ ಆಧಾರಗಳಲ್ಲಿ ಚೈತ್ರಹುಣ್ಣಿಮೆಯೇ ಹನುಮಜ್ಜಯಂತಿಯೆಂದು ನಿಖರವಾಗಿ ತಿಳಿಯುತ್ತದೆ.

ಹನುಮಜ್ಜಯಂತಿ

ಹನುಮಂತದೇವರು ಉದಯಿಸುವ ಸೂರ್ಯನನ್ನು ಹಣ್ಣು ಎಂದು ಭ್ರಮಿಸಿ ತಿನ್ನಲು ಗಗನಕ್ಕೆ ಹಾರಿದರು ಎಂದು ತಪ್ಪಾಗಿ ತಿಳಿಯುವವರೆ ಬಾಲಿಶರು. ಆದರೆ ಹನುಮಂತದೇವರು ಹಾರಿದ್ದು ಸೂರ್ಯದೇವನನ್ನು ರಾಹುಗ್ರಹಣದಿಂದ ಮೋಚನೆ ಮಾಡುವುದಕ್ಕಾಗಿಯೇ ಹೊರತು, ಹಣ್ಣೆಂಬ ಭ್ರಮೆಯಿಂದಲ್ಲ. ಮತ್ತು ಹುಟ್ಟಿದ ಕೂಡಲೇ ಹಾರಲೂ ಇಲ್ಲ. ಏಕೆಂದರೆ ಹುಣ್ಣಿಮೆಯ ದಿವಸ ಸೂರ್ಯಗ್ರಹಣ ನಡೆಯುವುದೇ ಇಲ್ಲ. ಸೂರ್ಯಗ್ರಹಣವಾಗುವುದೇ ಅಮಾವಾಸ್ಯೆಯ ದಿವಸ. ಆದ್ದರಿಂದ ಹುಟ್ಟಿ ಕೆಲವು ದಿವಸಗಳ ಅನಂತರ ಬರುವ ಅಮಾವಾಸ್ಯೆಯಂದು ಸೂರ್ಯನತ್ತ ಹಾರಿದರೆಂದು ವಾಲ್ಮೀಕಿರಾಮಾಯಣದಲ್ಲಿ ಸ್ಪಷ್ಟವಾಗಿ ಹೇಳಿದೆ.

## ಸೂರ್ಯಮಂಡಲಕ್ಕೆ ಹಾರಿದ ಹನುಮಂತದೇವರನ್ನು ಇಂದ್ರದೇವರೇಕೆ ಹನುಮಂತದೇವರ ಮುಖಕ್ಕೆ ಪ್ರಹಾರ ಮಾಡಬೇಕು?

ಕಥೆ ಹೀಗಿದೆ - ಸೂರ್ಯನನ್ನು ನುಂಗಲು ಧಾವಿಸುತ್ತಿದ್ದ ರಾಹುವನ್ನು ನಿಗ್ರಹ ಮಾಡುವುದಕ್ಕಾಗಿ ಹನುಮಂತದೇವರು ಗಗನಕ್ಕೆ ಚಿಮ್ಮಿದರು. ದುಷ್ಕಾರ್ಯವನ್ನು ಇವರು ಎಂದೂ ಸಹಿಸುವವರಲ್ಲ. ಆ ಸಂದರ್ಭದಲ್ಲಿ ರಾಹುವು ಇಂದ್ರನನ್ನು ಶರಣಾದನು. ಆಗ ವಜ್ರಾಯುಧ ಪ್ರಯೋಗವನ್ನು ಇಂದ್ರದೇವರು ಮಾಡಿದರು. ವಜ್ರಾಯುಧಕ್ಕೆ ಗೌರವ ಸಲ್ಲಿಸುವುದಕ್ಕಾಗಿ ಹಾಗೂ 'ಸ್ವೋತ್ತಮದ್ರೋಹ ಮಾಡಿದರೆ ಹೇಗೆ ಪಾಪಫಲವನ್ನು ಅನುಭವಿಸಬೇಕಾಗುತ್ತದೆ' ಎಂಬುದನ್ನು ತೋರಿಸುವುದಕ್ಕಾಗಿಯೂ ಹನುಮಂತದೇವರು ಬಿದ್ದಂತೆ ನಾಟಕ ಮಾಡಿದರು. ತನ್ನ ಮಗನಿಗೆ ವಜ್ರಾಯುಧ ಪ್ರಯೋಗ ಮಾಡಿದ್ದನ್ನು ಕಂಡು ವಾಯುದೇವರು ಸ್ತಬ್ಧರಾದರು. ಸಕಲಲೋಕಗಳೇ ನಿಶ್ಚೇಷ್ಟಿತವಾದವು. ದೇವತೆಗಳೆಲ್ಲರೂ ಬ್ರಹ್ಮನನ್ನೇ ಶರಣಾದರು. ಮಹಾಪರಾಧವನ್ನು ಎಸಗಿದರೆ ಕೂಡಲೇ ಫಲವನ್ನು ಅನುಭವಿಸುತ್ತಾನೆ ಎಂಬ ಮಾತಿಗೆ ಇದೇ ನಿದರ್ಶನವಾಯಿತು. ಇಂದ್ರದೇವರು ಮಾಡಿದ ಅಪರಾಧಕ್ಕೆ ಸಮಸ್ತಲೋಕವೇ ದುಃಖವನ್ನು ಅನುಭವಿಸುವಂತಾಯಿತು. ಉಸಿರಾಟ ನಿಂತುಹೋದ ಪ್ರಸಂಗದಿಂದ ಜಗತ್ತಿನ ನಾಶವೇ ಸಂಭವಿಸುವ ಪರಿಸ್ಥಿತಿ ಎದುರಾಯಿತು. ದೇವೇಂದ್ರನ ಈ ಕಾರ್ಯವನ್ನು ಕಂಡು ಬ್ರಹ್ಮದೇವರೂ ಕೂಡ ಕುಪಿತರಾದರು. ಆಗ ಇಂದ್ರನ

ಬಳಿ ಸಿಟ್ಟಿನಿಂದಲೇ ಹೇಳಿದರು. ಮುಖ್ಯಪ್ರಾಣದೇವರೇ ಜೀವೋತ್ತಮರಾಗಿದ್ದಾರೆ. ಇವರು ಯಾರಿಗೂ ಕೂಡ ವಶರಾದವರಲ್ಲ. ಉಪನಿಷತ್ತುಗಳಿಂದ ಪ್ರತಿಪಾದ್ಯರಾಗಿದ್ದಾರೆ. ಇವರ ಭ್ರೂಭಂಗದಿಂದಲೇ ಸಮಸ್ತ ಜಗತ್ತು ನಾಶವಾಗುತ್ತದೆ ಎಂಬುದಾಗಿ ಪ್ರಾಣದೇವರನ್ನು ಸ್ತುತಿಸುತ್ತಾ ಅವರ ಕೈಹಿಡಿದು ಮೇಲೆಬ್ಬಿಸಿದರು. ಆಗ ಸಮಸ್ತ ಲೋಕವು ಸಹಜ ಸ್ಥಿತಿಗೆ ಮರುಳಿತು. ಪ್ರಾಣಸಂಕುಲವು ಎಚ್ಚೆತ್ತಿತು.

## ಹನೂಮಾನ್ ಎಂಬ ಹೆಸರೇಕೆ ?

ವಾಲ್ಮೀಕೀರಾಮಾಯಣದಲ್ಲಿ 'ತತೋ ಗಿರೌ ಪಪಾತೇಷ ಇಂದ್ರವಜ್ರಾಭಿತಾಡಿತಃ ಪವಮಾನಸ್ಯ ಚೇತಸ್ಯ ವಾಮೋ ಹನುರಭಜ್ಯತ' ಎಂದು ಉತ್ತರಕಾಂಡದಲ್ಲಿ ಹೇಳಲಾಗಿದೆ. ಇಂದ್ರನ ವಜ್ರಾಯುಧ ಪ್ರಯೋಗದಿಂದ ಹನುಮಂತದೇವರ ಎಡಭಾಗದ ಹನು ಒಡೆಯಿತು ಎಂದು. ಆದ್ದರಿಂದಲೇ ಇವರು ಹನೂಮಾನ್ ಎಂದು ಕರೆಸಿಕೊಂಡರು ಅಲ್ಲವೇ? ಎಂದರೆ, ಈ ಶ್ಲೋಕಕ್ಕೆ ನಿರ್ಣಯಭಾವಚಂದ್ರಿಕೆಯಲ್ಲಿ ಗೋವಿಂದಾಚಾರ್ಯರು ಬಹಳ ಸುಂದರವಾಗಿ ವ್ಯಾಖ್ಯಾನ ಮಾಡಿದ್ದಾರೆ. 'ಅಭಜ್ಯತ?' ಎಂಬುದು ಕಾಕುಪ್ರಶ್ನೆ. 'ಹನುವನ್ನು ಭಂಜನೆ ಮಾಡಲಿಲ್ಲ' ಎಂಬುದೇ ಈ ಶ್ಲೋಕದ ಧ್ವನಿತಾರ್ಥ. ಆದ್ದರಿಂದಲೇ ಸಂಗ್ರಹ ರಾಮಾಯಣದಲ್ಲಿ 'ಭಂಗೇ ಪ್ರಸಕ್ತೇಽಪಿ ನ ಭಂಗಮಾಪ ಹನುಃ ಶಿಶೋರ್ಯದ್ಧನುಮಾನತೋಽಯಂ' 'ಭಂಗವಾಗುವ ಪ್ರಸಂಗ ಒದಗಿದರೂ ಈ ಶಿಶುವಿನ ಹನುವು ಭಂಗವಾಗಲಿಲ್ಲ. ಆದ್ದರಿಂದ ಹನೂಮಾನ್ ಎಂದು ಇವರು ಪ್ರಸಿದ್ಧವಾಗಲಿ ಎಂದು ದೇವೇಂದ್ರನೇ ಸ್ವತಃ ಪ್ರಶಂಸೆ ಮಾಡಿ, ಹನುಮಂತದೇವರ ಕೊರಳಿಗೆ ದಿವ್ಯವಾದ ಮಾಲೆಯನ್ನು ಸಮರ್ಪಣೆ ಮಾಡಿದನು.

## ಹನೂಮಾನ್ ಎಂದರೆ ?

'ಹನು' ಶಬ್ದಕ್ಕೆ 'ಹಿಂಸೆ' ಎಂಬರ್ಥವನ್ನು ವಿವಕ್ಷಿಸಿದಾಗ ಶತ್ರುಗಳಿಗೆ ಹಿಂಸೆಯನ್ನು ನೀಡುವವನು ಎಂದರ್ಥ. 'ಹನು' ಶಬ್ದಕ್ಕೆ 'ಗತಿ' ಎಂಬರ್ಥವನ್ನು ವಿವಕ್ಷಿಸಿದಾಗ ಯಾರಿಂದಲೂ ತಡೆಯಲಾಗದ ಗಮನವುಳ್ಳವನು ಹಾಗೂ ಗಾಳಿಯ ಮೂಲಕ ಎಲ್ಲೆಡೆ ಗಮನವುಳ್ಳವನು ಎಂದರ್ಥ. 'ಹನು' ಶಬ್ದಕ್ಕೆ 'ಜ್ಞಾನ' ಎಂಬರ್ಥವನ್ನು ವಿವಕ್ಷಿಸಿದಾಗ

ಎಂದೂ ಕಡಿಮೆಯಾಗದ ಯಥಾರ್ಥ ಜ್ಞಾನವುಳ್ಳವನು ಎಂದರ್ಥ. ದುಷ್ಟರಿಗೆ ಹಿಂಸಕನು, ಸಜ್ಜನರಿಗೆ ಜ್ಞಾನಪ್ರದನು, ಗತಿಪ್ರದನು ಎಂಬುದೂ ಕೂಡ ಈ ಶಬ್ದದ ಅರ್ಥ.

## ಹನುಮಂತದೇವರ ಗುರು

ಲೋಕಪ್ರಸಿದ್ಧಿಯಂತೆ ಸೂರ್ಯನು ಹನುಮಂತನ ಗುರು. ಕೃಷ್ಣನಿಗೆ ಸಾಂದೀಪಿನೀ ಆಚಾರ್ಯರು ಹೇಗೆ ಗುರುಗಳಾಗಿದ್ದರೋ, ಹಾಗೇ. ನಿಜವಾಗಿಯೂ ಸೂರ್ಯಾಂತರ್ಗತನಾದ ನಾರಾಯಣನೇ ಇವರ ಗುರು.

## ಸೂರ್ಯನ ಬಳಿ ಪಾಠ ಕೇಳಿದ ಉಲ್ಲೇಖ

ಶ್ರೀಪಾದರಾಜರು ಈ ಪ್ರಸಂಗವನ್ನು ಮಧ್ವನಾಮದಲ್ಲಿ 'ತರಣಿಗಭಿಮುಖವಾಗಿ ಶಬ್ದಶಾಸ್ತ್ರವ ಪಠಿಸಿ' ಇತ್ಯಾದಿಯಾಗಿ ವಿವರಿಸಿದ್ದಾರೆ. ಸೂರ್ಯನಿಗೆ ಅಭಿಮುಖವಾಗಿ ಹನುಮಂತದೇವರು ವ್ಯಾಕರಣಶಾಸ್ತ್ರವನ್ನು ಅಧ್ಯಯನ ಮಾಡುತ್ತಿರುವವರು ಎಂಬುದೇ ಅತ್ಯಂತ ರೋಚಕ ವಿಚಾರ. ಸೂರ್ಯನು ಮುಂದೆ ಮುಂದೆ ಸಾಗುತ್ತಿದ್ದರೆ ಅವನಿಗಿಂತಲೂ ವೇಗವಾಗಿ ಹಿಮ್ಮುಖವಾಗಿ ಸಾಗುವರು. ಇದರಿಂದಲೇ ವೇಗದಲ್ಲಿ ಮಾತ್ರವಲ್ಲದೇ ಗುಣದಿಂದಲೂ ಸೂರ್ಯನಿಗಿಂತ ಹನುಮಂತದೇವರೇ ಶ್ರೇಷ್ಠರೆಂದು ನಿರ್ಣಯವಾಗುತ್ತದೆ. ಸೂರ್ಯಾಂತರ್ಗತನಾದ ನಾರಾಯಣನನ್ನೇ ಗುರುವನ್ನಾಗಿ ಸ್ವೀಕರಿಸಿ, ಮಹಾವ್ಯಾಕರಣ ಮೊದಲಾದ ಶಾಸ್ತ್ರಪಾಠಗಳನ್ನು ಪ್ರತಿನಿತ್ಯ ಇಂದೂ ಕೂಡ ಕೇಳುತ್ತಲೇ ಇದ್ದಾರೆ. ಸೂರ್ಯನಾರಾಯಣನ ಬಳಿ ಪಾಠ ಕೇಳುತ್ತಿರುವ ಹನುಮಂತ ದೇವರ ಈ ಚಿತ್ರಣವನ್ನು ಗಾಯತ್ರೀಜಪದ ಸಂದರ್ಭದಲ್ಲಿ ಅವಶ್ಯವಾಗಿ ಚಿಂತನೆ ಮಾಡಬೇಕು.

## ಹನುಮದ್ವಿಲಾಸ ಎಂಬ ಕೃತಿಯ ಬಗ್ಗೆ

ತಿಮ್ಮಣ್ಣದಾಸರು ಈ ಕೃತಿಯನ್ನು ರಚನೆ ಮಾಡಿರುವರು. ಯಾವುದೋ ಪ್ರಸಂಗದಲ್ಲಿ ಸೆರೆಮನೆವಾಸವನ್ನು ಅನುಭವಿಸುವ ಸ್ಥಿತಿ ಒದಗಿತು. ಆಗ ಅಲ್ಲಿಯೇ ಕುಳಿತು ವಿಶೇಷ ಹನುಮಂತದೇವರ ಅನುಗ್ರಹದಿಂದ ಈ ಕೃತಿಯನ್ನು ರಚನೆ

ಮಾಡಿದರು. ಇದರಲ್ಲಿ ಅಭೂತಪೂರ್ವವಾದ ಹಲವು ಪ್ರಮೇಯಗಳಿವೆ. ರಾಗ, ತಾಳಗಳೆಲ್ಲವೂ ಅತ್ಯಪೂರ್ವ.

## ದಾಸರಾಯರ ಕೃತಿಗಳಲ್ಲಿ ಹನುಮಂತದೇವರ ಬಗ್ಗೆ ಹೆಚ್ಚಿನ ವಿವರ ತಿಳಿಯಲು ಯಾವುದನ್ನು ಪಠಿಸಬೇಕು?

ಸ್ವತಃ ಶ್ರೀಪಾದರಾಜರೇ ಮಧ್ವನಾಮವನ್ನು ರಚನೆ ಮಾಡಿದ್ದಾರೆ. ಇದನ್ನು ಪ್ರತಿನಿತ್ಯ ಪಠಿಸುವ ಸಂಪ್ರದಾಯವನ್ನು ಸಾಧಕರು ಅಳವಡಿಸಿಕೊಳ್ಳಬೇಕು. ಯಾವ ಸಾಧಕಸ್ತ್ರೀಯು ಮಧ್ವನಾಮವನ್ನು ಪಠಿಸದೇ ಭುಂಜಿಸುವಳೋ, ಅವಳು ಸಂಧ್ಯಾವಂದನೆಯನ್ನು ಮಾಡದೆ ಭುಂಜಿಸುವ ಪುರುಷನಿಗೆ ಸಮಾನಳಾಗುತ್ತಾಳೆಂಬ ವಾಡಿಕೆ ನಮ್ಮಲ್ಲಿದೆ. ಮತ್ತು ಶ್ರೀವಾದಿರಾಜಗುರುಸಾರ್ವಭೌಮರು 'ಸುವ್ವೀ ಹನುಮಂತ' ಇತ್ಯಾದಿಯಾಗಿ ಪ್ರಾರಂಭವಾಗುವ ಮಧ್ವಸುವ್ವಾಲಿಯಲ್ಲಿಯೂ ಅತ್ಯಪೂರ್ವಪ್ರಮೇಯಗಳನ್ನು ತಿಳಿಸಿದ್ದಾರೆ. 'ಕರವಮುಗಿದ ಮುಖ್ಯಪ್ರಾಣ' ಇತ್ಯಾದಿ ಹಾಡುಗಳೂ ಕೂಡ ಹನುಮಂತದೇವರ ಸ್ಮರಣೆಗೆ ಮುಖ್ಯಪದ್ಯಗಳಾಗಿವೆ.

## ಮಧ್ವನಾಮವನ್ನು ಪಠಿಸಿದರೆ ಏನು ಫಲ?

ಶ್ರೀಪಾದರಾಜರು ಮಧ್ವನಾಮವನ್ನು ರಚಿಸಿದರೆ, ಅದಕ್ಕೆ ಶ್ರೀಜಗನ್ನಾಥದಾಸರು ಫಲಸ್ತುತಿಯನ್ನು ರಚನೆ ಮಾಡಿದ್ದಾರೆ. ಸೂರ್ಯಗ್ರಹಣಕಾಲದಲ್ಲಿ ಬಂಗಾರದ ಆಭರಣಗಳಿಂದ ಸಿಂಗರಿಸಿದ ಸಾವಿರ ಗೋವುಗಳನ್ನು ದಾನ ಮಾಡಿದಷ್ಟು ಪುಣ್ಯವು ಪ್ರತಿನಿತ್ಯವು ಲಭಿಸುತ್ತದೆ. ಆದ್ದರಿಂದ ಮಧ್ವನಾಮವನ್ನು ಪಠಿಸಿ ಮಹಾಫಲಭಾಗಿಗಳಾಗಿರಿ.

## ಶಕ್ತಿಹ್ರಾಸವಿದೆಯೇ ?

ಹನುಮದಾದ್ಯವತಾರಗಳಲ್ಲಿ ಮೂಲರೂಪದಲ್ಲಿರುವ ಶಕ್ತಿ ಪೂರ್ಣವಾಗಿ ಇರುವುದಿಲ್ಲವೆಂದು ಕೆಲವರು ಹೇಳುತ್ತಾರೆ. ಕೆಲವರು ಇದೆ ಎನ್ನುತ್ತಾರೆ ಯಾವುದು ಸರಿ ಎಂಬ ಪ್ರಶ್ನೆಗೆ 'ಬಳಿತ್ಥಾ' ಮಂತ್ರವೇ ಉತ್ತರಿಸುತ್ತದೆ. ಮೂಲರೂಪದಲ್ಲಿ ಜ್ಞಾನ ಶಕ್ತಿಗಳು ಎಷ್ಟು ಇದೆಯೋ, ಅಷ್ಟೂ ಅವತಾರರೂಪದಲ್ಲಿ ಇದ್ದೇ ಇರುತ್ತದೆ. ಈ ವಿಷಯದಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

'ಹನುಮದಾದ್ಯವತಾರಗಳ ಭೇದಗಳ ತಿಳಿವವ ತನುಜ ಘೋರಾಂಧತಮಸ್ಸಿಗೆ ಯೋಗ್ಯನು ನ ಸಂಶಯ' ಎಂಬುದಾಗಿ ಹರಿಕಥಾಽಮೃತಸಾರದಲ್ಲಿ ಶ್ರೀ ಜಗನ್ನಾಥದಾಸರು ತಿಳಿಸಿದಂತೆ ಹನುಮ-ಭೀಮ-ಮಧ್ವ ಈ ಅವತಾರಗಳಲ್ಲಿ ಯಾರು ಜ್ಞಾನಶಕ್ತ್ಯಾದಿಗಳಲ್ಲಿ ಭೇದವನ್ನು ತಿಳಿಯುತ್ತಾನೋ, ಅವನು ತಮೋಯೋಗ್ಯನಾಗಿದ್ದಾನೆ.

ಸೌಗಂಧಿಕಾ ಪುಷ್ಪವನ್ನು ತರಲು ಹೊರಟಾಗ ಭೀಮಸೇನದೇವರಿಗೆ ಹನುಮಂತದೇವರ ಪುಚ್ಛವನ್ನು ಎತ್ತಲು ಸಾಧ್ಯವಾಗಲಿಲ್ಲ ಎಂಬ ಕಥೆ ಮಹಾಭಾರತದಲ್ಲಿದೆ. ಆದರೆ ಇದೊಂದು ನಾಟಕವೆಂದೇ ತಿಳಿಯಬೇಕು. ವಾಯುಸ್ತುತಿಯಲ್ಲಿ 'ಕ್ರೀಡಾಮಾತ್ರಂ' ಎಂಬ ಪದದಿಂದ ಇದನ್ನು ತಿಳಿಸಿದ್ದಾರೆ.

## ಭೀಮಸೇನ ದೇವರಲ್ಲಿರುವ ಶಕ್ತಿ ಮಧ್ವಾಚಾರ್ಯರಲ್ಲಿ ಕಾಣಿಸುತ್ತಿಲ್ಲ. ಇದಕ್ಕೇನು ಕಾರಣ?

ವಾಯುದೇವರು ಎಲ್ಲ ಅವತಾರಗಳಲ್ಲಿಯೂ ಮೂಲರೂಪದಲ್ಲಿರುವ ಜ್ಞಾನ, ಶಕ್ತಿಗಳನ್ನು ಪಡೆದುಕೊಳ್ಳಲು ಸಮರ್ಥರು. ಆದರೂ ಅದನ್ನು ಪ್ರಕಟ ಮಾಡುವುದಿಲ್ಲ. ಹನುಮಂತನ ಅವತಾರದಲ್ಲಿ ಎಷ್ಟು ಶಕ್ತಿಯನ್ನು ಪ್ರಕಟ ಮಾಡಿಕೊಂಡಿದ್ದಾರೋ, ಅಷ್ಟನ್ನು ಭೀಮಾವತಾರದಲ್ಲಿ ಮಾಡಿರುವುದಿಲ್ಲ. ಭೀಮಾವತಾರದಲ್ಲಿ ಮಾಡಿದ ಶಕ್ತಿಯನ್ನು ಮಧ್ವಾವತಾರದಲ್ಲಿ ಪ್ರಕಟ ಮಾಡಿರುವುದಿಲ್ಲ. ಹೀಗೆ ಶಕ್ತಿಯ ಅಭಿವ್ಯಕ್ತಿಯಲ್ಲಷ್ಟೇ ತಾರತಮ್ಯ ಹೊರತು, ಶಕ್ತಿಯಲ್ಲಿ ತಾರತಮ್ಯವಿಲ್ಲವೆಂಬುದು ಇದರ ಅಭಿಪ್ರಾಯ.

## ಹಾಗಾದರೆ ಇಂದ್ರಾದಿಗಳ ಅವತಾರಗಳಲ್ಲಿಯೂ ಇದು ಸಮಾನವೇ?

ರುದ್ರ, ಇಂದ್ರ ಮೊದಲಾದ ದೇವತೆಗಳು ಅವತರಿಸಿದಾಗ ಮೂಲರೂಪ-ದಲ್ಲಿರುವ ಶಕ್ತಿಯನ್ನು ಪರಿಪೂರ್ಣವಾಗಿ ಪಡೆದುಕೊಳ್ಳಲು ಅಸಮರ್ಥರಾಗಿರುತ್ತಾರೆ. ಮತ್ತು ಮೂಲರೂಪದ ಸ್ಮರಣೆಯೂ ಕೂಡ ಅವರಿಗೆ ಸರ್ವದಾ ಇರಬೇಕೆಂಬ ನಿಯಮ ಇರುವುದಿಲ್ಲ. ಆದರೆ ಋಜುಜೀವಿಗಳು ಅವತರಿಸಿದಾಗ ತಮ್ಮ

ಮೂಲರೂಪದ ಸ್ಮರಣೆ ನಿರಂತರ ಇರುತ್ತದೆ. ಮತ್ತು ಮೂಲರೂಪದಲ್ಲಿರುವ ಜ್ಞಾನ-ಶಕ್ತಿಗಳ ಅಭಿವ್ಯಕ್ತಿಯನ್ನು ಪರಿಪೂರ್ಣವಾಗಿ ಮಾಡಿಕೊಳ್ಳಲೂ ಕೂಡ ಸಮರ್ಥರಾಗಿರುತ್ತಾರೆ.

## ಭೀಮಸೇನದೇವರು ಜರಾಸಂಧನನ್ನು ವಧಿಸುವಾಗ ತಮ್ಮಲ್ಲಿರುವ ಶಕ್ತಿಯು ಸಾಲದೇ ಮೂಲರೂಪದಲ್ಲಿರುವ ಶಕ್ತಿಯನ್ನು ಸ್ಮರಣೆ ಮಾಡಿ ಅಭಿವ್ಯಕ್ತಿ ಮಾಡಿಕೊಳ್ಳುತ್ತಾರೆಯೆ?

ಕೆಲವರು ಹೀಗೆ ಹೇಳುತ್ತಾರೆ. ಇದಕ್ಕೆ ಏನೂ ಆಧಾರವಿಲ್ಲ. ಲಕ್ಷ್ಮಣನು ಇಂದ್ರಜಿತ್ ಜೊತೆ ಯುದ್ಧ ಮಾಡಿದಾಗ ಮೂಲರೂಪದ ಸ್ಮರಣೆ ಮಾಡಿದನು ಎಂಬುದಕ್ಕೆ ಉಲ್ಲೇಖವಿದ್ದಂತೆ, ಜರಾಸಂಧನನ್ನು ಕೊಲ್ಲಲು ಭೀಮಸೇನನು ಮೂಲರೂಪವನ್ನು ಸ್ಮರಣೆ ಮಾಡಿದನು ಎನ್ನಲು ಯಾವುದೇ ದಾಖಲೆಯಿಲ್ಲ. 'ಇಚ್ಛಾವ್ಯಕ್ತಿಃ ಪ್ರಾಯಶೋ ಮಾರುತಸ್ಯ' ಎಂಬ ವಚನದ ಆಧಾರದಲ್ಲಿ ತಮ್ಮಲ್ಲಿರುವ ಅಧಿಕಶಕ್ತಿಯನ್ನು ಆ ಸಂದರ್ಭದಲ್ಲಿ ಪ್ರಕಟ ಮಾಡಿದರು ಎಂದಷ್ಟೇ ತಿಳಿಯಬೇಕು.

## ಹನುಮಂತದೇವರು ಸನ್ಯಾಸಿಗಳೆ?

'ಸ ಭಿಕ್ಷುವೇಷೋ ಹನುಮಾನ್ ಸ್ವವೇಷಂ ವಿಹಾಯ ವಿಶ್ವೇಶ್ವರಪಾರ್ಶ್ವಮಾಪ್ಯ' ಎಂಬುದಾಗಿ ಸಂಗ್ರಹ ರಾಮಾಯಣದಲ್ಲಿ ಇದರ ಬಗ್ಗೆ ಉಲ್ಲೇಖವಿದೆ. ಹನುಮಂತದೇವರು ತಮ್ಮ ನಿಜವಾದ ವೇಷವನ್ನು ಬಿಟ್ಟು, ಭಿಕ್ಷುವೇಷವನ್ನು ಧರಿಸಿ ಶ್ರೀರಾಮಚಂದ್ರನ ಪಾದಪದ್ಮಗಳಿಗೆ ಸಾಷ್ಟಾಂಗ ನಮಿಸಿದರು ಎಂಬುದಾಗಿ ತಿಳಿಸಿದ್ದಾರೆ. ಭಗವಂತನ ಬಳಿ ನಾವು ಎಲ್ಲವನ್ನೂ ತ್ಯಾಗ ಮಾಡಿ ಶರಣಾಗತರಾಗಬೇಕು. ಹಾಗಾಗಿ ಹನುಮಂತದೇವರೂ ಕೂಡ ಎಲ್ಲವನ್ನೂ ಪರಿತ್ಯಾಗ ಮಾಡಿ ಸನ್ಯಾಸಿವೇಷದಲ್ಲಿ ತಮ್ಮನ್ನು ಪರಮಾತ್ಮನಿಗೆ ಸಮರ್ಪಣೆ ಮಾಡಿಕೊಂಡರು ಎಂಬುದು ಇದರ ಸ್ವರಸವಾದ ವರ್ಮ. ವಾಸ್ತವಿಕವಾಗಿ ''ಸದಾ ಸಮಸ್ತಾಶ್ರಮಭಾಕ್ ಸುರೇಶ್ವರೋ ವಿಶೇಷತೋ ಖಲ್ವಭಜದ್ವರಾಶ್ರಮುವಮ್।'' ಎಂಬಂತೆ ಯಾವಾಗಲೂ ಇವರು ಎಲ್ಲಾ ಆಶ್ರಮಧರ್ಮಗಳನ್ನು ಪರಿಪಾಲಿಸುತ್ತಾರೆ. ಮತ್ತು ತ್ರಿದಂಡೀ ಸನ್ಯಾಸಿಗಳಾದರೆಂದು ತಿಳಿಯುವುದು ಹೆಚ್ಚು ಸೂಕ್ತ. ತ್ರಿದಂಡೀ ಸನ್ಯಾಸಿಗಳಿಗೆ ಶಿಖಾ, ಯಜ್ಞೋಪವೀತಾದಿಗಳು ಇರುತ್ತವೆ.

## ಸನ್ನ್ಯಾಸಿಗಳು ಗೃಹಸ್ಥರಿಗೆ ನಮಿಸಬಹುದೆ?

ಮೇಲೆ ತಿಳಿಸಿದ ಉತ್ತರದಂತೆ ಸನ್ನ್ಯಾಸಾಶ್ರಮವನ್ನು ಸ್ವೀಕರಿಸಿದರು ಎಂದು ಇಲ್ಲಿ ತಿಳಿಯಬಾರದು. ಸನ್ನ್ಯಾಸವೇಷವನ್ನು ಮಾತ್ರ ಧರಿಸಿದರೆಂದು ತಿಳಿಯಬೇಕು. ಮತ್ತು ಅರ್ಜುನನು ತ್ರಿದಂಡೀಸನ್ನ್ಯಾಸಿವೇಷವನ್ನು ಧರಿಸಿದಾಗ ಬಲರಾಮನಿಗೆ ಗುಣಜ್ಯೇಷ್ಠನೆಂಬ ಕಾರಣದಿಂದ ಹೇಗೆ ನಮಸ್ಕಾರವನ್ನು ಮಾಡಿದನೋ, ಅದರಂತೆ ಇಲ್ಲಿಯೂ ಕೂಡ ಶ್ರೀರಾಮಚಂದ್ರನು ತನಗಿಂತ ಎಲ್ಲದರಲ್ಲಿಯೂ ಹಿರಿಯನಾದ್ದರಿಂದ ಹನುಮಂತದೇವರು ನಮಸ್ಕಾರ ಮಾಡಿದರು.

## ಶ್ರೀರಾಮನನ್ನು ಮೊದಲು ಕಂಡಾಗ ಸುಗ್ರೀವಾದಿಗಳು ಏಕೆ ಹೆದರಿದರು?

ಸುಗ್ರೀವನಷ್ಟೇ ಅಲ್ಲದೇ ಯಾರೊಬ್ಬರೂ ಕೂಡ ಪರಮಾತ್ಮನನ್ನು ನೇರವಾಗಿ ಸಂದರ್ಶಿಸಲು ಸಾಧ್ಯವಿಲ್ಲ. ವಾಯುದೇವರ ಮೂಲಕವೇ ಪರಮಾತ್ಮನನ್ನು ಸಂದರ್ಶಿಸಲು ಸಾಧ್ಯ. ಆದ್ದರಿಂದ ಹನುಮಂತದೇವರೇ ಸುಗ್ರೀವನನ್ನು ಕರೆದುಕೊಂಡು ಹೋಗಿ ಶ್ರೀರಾಮಚಂದ್ರನಿಗೆ ಭೇಟಿ ಮಾಡಿಸಿ ಸಖ್ಯ ಬೆಳೆಯುವಂತೆ ಮಾಡುತ್ತಾರೆ.

## ಶ್ರೀರಾಮನು ಹನುಮಂತದೇವರನ್ನು ಮೊಟ್ಟಮೊದಲು ಹೇಗೆ ಪ್ರಶಂಸೆ ಮಾಡಿದನು?

ರಾಮಾಯಣದಲ್ಲಿ ಇದು ಅತ್ಯಂತ ಪ್ರಸಿದ್ಧವಾಗಿದೆ. 'ನಾನೃಗ್ವೇದವಿನೀತಸ್ಯ ನ ಯಜುರ್ವೇದಧಾರಿಣಃ । ನ ಸಾಮವೇದವಿದುಷಃ ಶಕ್ಯಮೇವಂ ಪ್ರಭಾಷಿತುಮ ॥ ನೂನಂ ವ್ಯಾಕರಣಂ ಕೃತ್ಸ್ನಂ ಅನೇನ ಬಹುಧಾಶ್ರುತಮ್' ಋಗ್ವೇದ, ಯರ್ಜುವೇದ, ಸಾಮವೇದ ಇವುಗಳನ್ನು ಅಧ್ಯಯನ ಮಾಡಿದವರಿಗೂ ಹೀಗೆ ಸ್ಪಷ್ಟವಾಗಿ ಮಾತನಾಡಲು ಸಾಧ್ಯವಿಲ್ಲ. ಬಹು ಬಾರಿ ವ್ಯಾಕರಣವನ್ನೂ ಕೂಡ ಇವನು ಅಧ್ಯಯನ ಮಾಡಿದ್ದಾನೆ. ಇವನ ಮಾತಿನಲ್ಲಿ ಒಂದೇ ಒಂದು ಅಪಶಬ್ದವಿಲ್ಲ. ಇವನ ದೇಹಲಕ್ಷಣದಲ್ಲಿ ಒಂದೇ ಒಂದು ದೋಷವೂ ಕೂಡ ಇರುವುದಿಲ್ಲ. ಇವನ ಆಭರಣಗಳೂ ಕೂಡ ಇವನ ಜೊತೆಯಲ್ಲಿಯೇ ಹುಟ್ಟಿಬಂದಿವೆ. ಇತ್ಯಾದಿಯಾಗಿ ಶ್ರೀರಾಮಚಂದ್ರನು ಲಕ್ಷ್ಮಣನ ಬಳಿ ಹನುಮಂತನನ್ನು ಪ್ರಶಂಸಿಸುತ್ತಾನೆ.

## ಹನುಮಂತದೇವರಿಗೂ ಶಾಪವಿದೆಯೇ?

ರಾಮಾಯಣದಲ್ಲಿ ಇಂಥ ಪ್ರಸಂಗವಿದೆ. ಮಹರ್ಷಿಗಳ ಆಶ್ರಮದಲ್ಲಿ ನಿಸ್ಸಂಕೋಚವಾಗಿ ಸಂಚರಿಸಿ, ಯಜ್ಞಪಾತ್ರೆಗಳನ್ನು ವಲ್ಕಲಗಳನ್ನು ಹನುಮಂತನು ಭಗ್ನಗೊಳಿಸಿದನು. ಇದನ್ನು ಸಹಿಸದ ಭೃಗು, ಅಂಗೀರಸ ಮೊದಲಾದ ಋಷಿಮುನಿಗಳು ಶಾಪವನ್ನು ಹೀಗೆ ನೀಡಿದರು -

ಬಾಧಸೇ ಯತ್ಸಮಾಶ್ರಿತ್ಯ ಬಲಮಸ್ಮಾನ್ ಪ್ಲವಂಗಮ ।
ತದ್ದೀರ್ಘಕಾಲ ವೇತ್ತಾಸಿ ನಾಸ್ಮಾಕಂ ಶಾಪಮೋಹಿತಃ ।
ಯದಾ ತೇ ಸ್ಮಾರ್ಯತೇ ಕೀರ್ತಿಃ ತದಾ ತೇ ವರ್ಧತೇ ಬಲಮ್ ॥

'ಎಲೈ ಕಪಿಯೇ, ನೀನು ಶಕ್ತಿಯ ಅಹಂಕಾರದಿಂದ ನಮಗೆ ಉಪದ್ರವವನ್ನು ನೀಡುತ್ತಿರುವಿ. ಇನ್ನು ಮುಂದೆ ನಿನಗೆ ನಿನ್ನ ಶಕ್ತಿಯ ಜ್ಞಾನವೇ ಇಲ್ಲದಂತಾಗಲಿ. ಯಾರಾದರು ಜ್ಞಾಪಿಸಿದರೆ ಮಾತ್ರ ನಿನ್ನ ಶಕ್ತಿಯ ಸ್ಮರಣೆ ನಿನಗೆ ಬರಲಿ' ಇತ್ಯಾದಿಯಾಗಿ ಕಥೆಯು ಪ್ರಸಿದ್ಧಿಯಾಗಿದೆ. ಆದರೆ ಇದೆಲ್ಲವೂ ಕೇವಲ ದರ್ಶನಭಾಷೆ. ಇದನ್ನು ಯಥಾರ್ಥವೆಂದು ಸರ್ವಥಾ ತಿಳಿಯಬಾರದು. ರಾಮಾಯಣದಲ್ಲಿ ಹಲವು ಕಡೆ ಇಂಥ ದರ್ಶನಭಾಷೆಯನ್ನು ಉಪಯೋಗಿಸಿರುತ್ತಾರೆ.

## ಇವೆಲ್ಲವನ್ನೂ ದರ್ಶನಭಾಷೆಯೆಂದು ಪರಿಗಣಿಸಿದರೆ ಮುನಿಗಳು ನೀಡಿದ ಶಾಪವು ವ್ಯರ್ಥವೇ?

ಉಪನಿಷತ್ತು ಮುಖ್ಯಪ್ರಾಣದೇವರನ್ನು 'ಆಖಣಾಶ್ಮಸಮ' ಎಂದು ಕರೆಯುತ್ತದೆ. ಹನುಮಂತದೇವರಿಗೆ ಯಾರ ಶಾಪವೂ ಕೂಡ ತಗಲುವುದಿಲ್ಲ. ವರವೂ ಕೂಡ ತಗಲುವುದಿಲ್ಲ. ಅಂದ ಮಾತ್ರಕ್ಕೆ ಶಾಪವಾಗಲೀ, ವರವಾಗಲೀ ವ್ಯರ್ಥವೆಂದಲ್ಲ. ಶಾಪ ನೀಡಿದ ವ್ಯಕ್ತಿಗೆ ತಪಃಶಕ್ತಿಯು ನಾಶವಾಗುತ್ತದೆ. ಇದನ್ನು ಕಂಡು ಅಪಾರ್ಥಮಾಡಿಕೊಂಡ ಉಳಿದವರಿಗೆ ಅಧೋಗತಿಯಾಗುತ್ತದೆ. ಈ ಉದ್ದೇಶವು ಇರುವುದರಿಂದ ಶಾಪ ಹಾಗೂ ವರಗಳನ್ನು ಪುರಾಣಗಳಲ್ಲಿ ಹೇಳಿರುತ್ತಾರೆ.

ಸೂರ್ಯ, ವರುಣ, ಯಮ, ಕುಬೇರ, ರುದ್ರ ಮೊದಲಾದ ಅನೇಕ ದೇವತೆಗಳು ಹಾಗೂ ಋಷಿಮುನಿಗಳು ಹನುಮಂತದೇವರಿಗೆ ವರಪ್ರದಾನವನ್ನು ಮಾಡಿದ್ದಾರೆ.

ಆದರಿಂದ ಹನುಮಂತದೇವರಿಗೆ ಯಾವುದೇ ಪ್ರಯೋಜನವಿರುವುದಿಲ್ಲ. ಕೋಟ್ಯಾಧಿಪತಿಗೆ ಪುಡಿಗಾಸು ನೀಡಿದಂತೆ ಎಲ್ಲವೂ ಕೂಡ ವ್ಯರ್ಥವೇ ಆಗುತ್ತದೆ. ಭಗವಂತ ಹಾಗೂ ಲಕ್ಷ್ಮೀದೇವಿ ಇಬ್ಬರು ನೀಡಿದ ವರವಷ್ಟೇ ಹನುಮಂತದೇವರ ಉನ್ನತಿಗೆ ಕಾರಣವಾಗುತ್ತದೆ. ಉಳಿದವರ ವರ ಅವರವರ ಕೃತಜ್ಞತೆಯ ದ್ಯೋತಕ.

## ಅಜ್ಞಾನಾದಿಗಳು ಇವೆಯೆ?

ಮುಖ್ಯಪ್ರಾಣದೇವರ ಅವತಾರಸ್ವರೂಪರಾದ ಹನುಮಂತದೇವರು ಲಂಕಾಪಟ್ಟಣವನ್ನು ಪ್ರವೇಶಿಸಿದಾಗ ರಾತ್ರಿಯ ಕಾಲದಲ್ಲಿ ಅನೇಕ ನಗ್ನ ಸ್ತ್ರೀಯರನ್ನು ನೋಡುತ್ತಾರೆ. ಈ ಪ್ರಸಂಗವನ್ನು ಗಮನಿಸಿದಾಗ ಅಜ್ಞಾನ, ವಿಪರೀತಜ್ಞಾನ ಮೊದಲಾದವು ಹನುಮಂತದೇವರಿಗೆ ಇದೆಯೆಂದು ಆಪಾತತಃ ತಿಳಿಯುತ್ತದೆ, ಆದರೆ ಹನುಮಂತದೇವರಿಗೆ ಒಂದೇ ಒಂದು ಕ್ಷಣದಲ್ಲೂ ಕೂಡ ಅಜ್ಞಾನ, ವಿಪರೀತಜ್ಞಾನಗಳು ಬರಲು ಸಾಧ್ಯವಿಲ್ಲ. ಇದೆಲ್ಲವೂ ಕೂಡ ಕೇವಲ ವಿಡಂಬನೆ ಎಂದು ತಿಳಿಯಬೇಕು.

ಮಂಡೋದರಿಯನ್ನೇ ಸೀತೆಯೆಂದು ಭ್ರಮಿಸುತ್ತಾರೆ. ಅನಂತರ ಸೀತೆಯ ಅಂಗಾಲಿನಲ್ಲಿ ಇರುವ ಕಮಲ ಮೊದಲಾದ ಚಿಹ್ನೆಗಳು ಮಂಡೋದರಿಯ ಅಂಗಾಲಿನಲ್ಲಿ ಇಲ್ಲದ ಕಾರಣ ಸೀತೆ ಅಲ್ಲವೆಂದು ನಿಶ್ಚಯಿಸುತ್ತಾರೆ. ಅನಂತರ ಮಂಡೋದರಿಯನ್ನೇ ಸೀತೆಯೆಂದು ತಿಳಿದ ಪ್ರಾಯಶ್ಚಿತ್ತಕ್ಕಾಗಿ ಸಾವಿರ ಗೋದಾನಗಳನ್ನು ಮಾಡುತ್ತಾರೆ ಇತ್ಯಾದಿಯಾಗಿ ಮಧ್ವಸುವ್ವಾಲಿಯಲ್ಲಿ ಶ್ರೀವಾದಿರಾಜರು ತಿಳಿಸಿದ್ದಾರೆ. ಅವರಿಗೆ ಮಿಥ್ಯಾಜ್ಞಾನವಿಲ್ಲವಾದಲ್ಲಿ ಇದೆಲ್ಲವೂ ಹೇಗೆ ಎಂದರೆ? ಇದೂ ಕೂಡ ಕೇವಲ ವಿಡಂಬನೆಯೇ ಆಗಿದೆ ಹೊರತು, ಸತ್ಯವಲ್ಲ. ಸೀತೆಯು ಎಲ್ಲಿದ್ದಾಳೆ? ಅವಳ ಸ್ವರೂಪವೇನು ? ಇವೆಲ್ಲದರ ಪರಿಜ್ಞಾನ ಪರಿಪೂರ್ಣವಾಗಿ ವಾಯುದೇವರಿಗೆ ಇದ್ದೇ ಇರುತ್ತದೆ. ಅವರು ಮಾಡಿದ ವಿಡಂಬನೆಯನ್ನು ದರ್ಶನಭಾಷೆಯಲ್ಲೇ ವಾದಿರಾಜರು ಸುವ್ವಿಪದ್ಯದಲ್ಲಿ ಉಲ್ಲೇಖ ಮಾಡಿದ್ದಾರೆ.

## ಹನುಮಂತದೇವರಲ್ಲಿ ನಾವು ಮಾಡಬೇಕಾದ ಪ್ರಾರ್ಥನೆ

ವಿಜಯ ರಘುಪತಿ ಒಲಿಸಿ ಧರಣಿಸುತೆಯಳಿಗೀಯೆ ।
ಭಜಿಸಿ ಮೌಕ್ತಿಕದ ಹಾರವನೆ ಪಡೆದು ।
ಅಜಪದವಿ ರಾಮ ಕೊಡ ಬರಲು ಹನುಮಂತ ।
ನಿಜಭಕುತಿಯನೆ ಪೇಳಿ ವರವ ಪಡೆದ ॥''

ಶ್ರೀರಾಮಚಂದ್ರನು ಹನ್ನೊಂದು ಸಾವಿರ ವರ್ಷಗಳ ಕಾಲ ರಾಜ್ಯಭಾರವನ್ನು ಮುಗಿಸಿ ಕೊನೆಯಲ್ಲಿ ಪ್ರತಿಯೊಬ್ಬರಿಗೂ ಬಯಸಿದ್ದನ್ನೆಲ್ಲ ನೀಡಿದನು. ಆಗ ಹನುಮಂತನಿಗೆ ವರವನ್ನು ಕೇಳಲು ವಿಶೇಷ ಅವಕಾಶ ನೀಡಿದನು. ಏನು ಬೇಕಾದರೂ ಕೇಳು ನೀಡುತ್ತೇನೆ ಎಂದಾಗ ಹನುಮಂತದೇವರು 'ಪ್ರವರ್ಧತಾಂ ಭಕ್ತಿರಲಂ ಕ್ಷಣೇ ಕ್ಷಣೇ ತ್ವಯೀಶ ಮೇ ಹ್ರಾಸ ವಿವರ್ಜಿತಾ ಸದಾ' ಎಂಬುದಾಗಿ ನಿರಂತರ ನಿನ್ನಲ್ಲಿ ವರ್ಧಿಸುವ ಭಕ್ತಿಯನ್ನೇ ನನಗೆ ನೀಡು. ಇದಕ್ಕಿಂತ ಬೇರೆಯಾದ ಬಯಕೆ ಯಾವುದೂ ಇಲ್ಲ ಎಂದು ಪ್ರಾರ್ಥಿಸಿದರು. ಹನುಮಂತದೇವರ ಈ ಆದರ್ಶದಲ್ಲಿ ನಾವೂ ಕೂಡ ಕ್ಷಣಿಕವಾದ ಸುಖಲೋಲುಪತೆಗಳನ್ನು ಪ್ರಾರ್ಥನೆ ಮಾಡದೇ ಭಕ್ತಿಯನ್ನಷ್ಟೇ ಪ್ರಾರ್ಥನೆ ಮಾಡಬೇಕು.

## ಹನುಮಂತದೇವರನ್ನು ಆರಾಧನೆ ಮಾಡಲು ಪಠಿಸಬೇಕಾದ ಶ್ಲೋಕ

ಮಹಾವ್ಯಾಕರಣಾಂಬೋಧಿಮಂಥಮಾನಸಮಂದರಮ್ ।
ಕವಯಂತಂ ರಾಮಕೀರ್ತ್ಯಾ ಹನೂಮಂತಮುಪಾಸ್ಮಹೇ ॥

ಮಹಾವ್ಯಾಕರಣವೇ ಕ್ಷೀರಸಾಗರ. ಹನುಮಂತದೇವರ ಮನಸ್ಸೇ ಅದನ್ನು ಕಡೆಯುವ ಮಂದರಪರ್ವತ. ಶ್ರೀರಾಮಚಂದ್ರನ ಕೀರ್ತಿಯೇ ಅದರಿಂದ ಉದ್ಭವಿಸಿದ ಅಮೃತ. ಹೀಗೆ ರಾಮಚರಿತಾಮೃತವನ್ನು ದಯಪಾಲಿಸಿದ ಹನುಮಂತದೇವರನ್ನು ನಿರಂತರ ಉಪಾಸನೆ ಮಾಡೋಣ.

# ಶ್ರೀರಾಮನ ಕಾರ್ಯಮರೆತರೆ ಹನುಮಂತದೇವರ ಎಚ್ಚರಿಕೆ

ಹನುಮಂತದೇವರ ಮಾರ್ಗದರ್ಶನದಲ್ಲಿ ಕಪಿಗಳು ಸೀತೆಯನ್ನು ಹುಡುಕುತ್ತಲೇ ಇವೆ. ಹುಡುಕುತ್ತಾ ಹಸಿವು, ಬಾಯಾರಿಕೆಗಳಿಂದ ಕಂಗೆಟ್ಟಿವೆ. ಒಮ್ಮೆ ಆ ಕಪಿಗಳು ಒಂದು ದೊಡ್ಡ ಗುಹೆಯನ್ನು ಕಂಡವು. ಎಲ್ಲಿ ಹುಡುಕಿದರೂ ಹಣ್ಣು-ಹಂಪಲುಗಳು ನದಿ-ಸರೋವರಗಳೇ ಕಾಣಿಸುತ್ತಿಲ್ಲ. ಈ ಗುಹೆಯಲ್ಲಿ ನೀರು ಇರಬಹುದೇ? ಎಂಬ ಕುತೂಹಲದಿಂದ ಗುಹೆಯ ಒಳಗೆ ಪ್ರವೇಶಿಸಿದವು. ಒಳಹೊಕ್ಕಾಗ ಒಂದು ಆಶ್ಚರ್ಯವೇ ಕಾದಿತ್ತು. ಅಲ್ಲೊಂದು ದೊಡ್ಡವನ. ಹಣ್ಣು-ಹಂಪಲುಗಳಿಂದ ತುಂಬಿದ ಉದ್ಯಾನವನ. ಅಲ್ಲೊಬ್ಬ ಸುಂದರಿಯಾದ ನವತರುಣಿ. ಇವೆಲ್ಲವೂ ಕಣ್ಣಿಗೆ ಬಲು ಆಪ್ಯಾಯಮಾನ. ಕಪಿಗಳ ಸಂತೋಷಕ್ಕೆ ಪಾರವೇ ಇಲ್ಲ. ಕುಣಿದಾಡಿದವು. ಜಿಗಿದಾಡಿದವು. ಪ್ರಾಣ ಬಂತೆಂದು ನಿಟ್ಟುಸಿರು ಬಿಟ್ಟವು. ಆ ತರುಣಿ ಬೇರ್‍ಯಾರೂ ಅಲ್ಲ. ಹೇಮಾ ಎಂಬ ಅಪ್ಸರೆಯ ಸಖಿ ಸ್ವಯಂಪ್ರಭೆ. ಪ್ರತಿಯೊಬ್ಬರನ್ನು ಕರೆದು ಯಥೋಚಿತ ಸತ್ಕರಿಸಿದಳು. ಅವಳ ಸತ್ಕಾರದಿಂದ ಎಲ್ಲ ಕಪಿಗಳು ಸುಪ್ರಸನ್ನರಾದರು.

ಎಲ್ಲವೂ ಮುಗಿಯಿತು. ಸೀತಾನ್ವೇಷಣೆಗೆ ಪುನಃ ಹೊರಡಬೇಕಾದ ಕಾಲ ಒದಗಿತು. ಆಗ ತಾರಾ ಎಂಬ ಕಪಿ ಉಳಿದೆಲ್ಲಾ ವಾನರರನ್ನು ಕುರಿತು ಗಟ್ಟಿಯಾಗಿ ಹೀಗೆ ಹೇಳಿದ - ''ನಮ್ಮಿಂದ ಸೀತೆಯನ್ನು ಹುಡುಕಲು ಸಾಧ್ಯವಿಲ್ಲ. ಹುಡುಕದಿದ್ದರೆ ಮರಣದಂಡನೆ ತಪ್ಪಿದ್ದಲ್ಲ. ಆದ್ದರಿಂದ ಇಲ್ಲಿಯೇ ಚಿರಕಾಲ ಸುಖವಾಗಿ ಬದುಕೋಣ. ಈ ಉದ್ಯಾನವನ ಬಿಟ್ಟು ಪುನಃ ಕಿಷ್ಕಿಂಧೆಗೆ ಹೋಗುವುದೇ ಬೇಡ''. ತಾರನ ಮಾತನ್ನು ಕೇಳಿ ಜಾಂಬವಂತ, ಅಂಗದ ಎಲ್ಲರೂ ಸರಿ, ಸರಿ ಎಂದು ನುಡಿದರು. ಹಾಗೆಯೇ ಆಗಲಿ ಎಂದು ಕುಣಿದಾಡಿದರು. ಆದರೆ ಹನುಮಂತ ಮಾತ್ರ ಇದನ್ನು ಸಹಿಸಲಿಲ್ಲ.

ಎಲ್ಲ ಕಪಿಗಳನ್ನು ಕುರಿತು ಹನುಮಂತ ಉಚ್ಚಧ್ವನಿಯಲ್ಲಿ ನುಡಿದ - 'ನಹಿ ವಾಯುಸೂನು ರಾಮಪ್ರತೀಪಂ ವಚನಂ ಸಹೇತ' 'ಶ್ರೀರಾಮಚಂದ್ರನಿಗೆ ವಿರುದ್ಧವಾದ ಈ ವರ್ತನೆಯನ್ನು ಈ ಹನುಮಂತನು ಎಂದೂ ಸಹಿಸುವುದಿಲ್ಲ' ಎಂದು ಘರ್ಜಿಸಿದ. ಹೀಗೆ ಎಂಥ ಸಂದರ್ಭದಲ್ಲೂ ಶ್ರೀರಾಮಚಂದ್ರನ ಕಾರ್ಯವನ್ನು ಹನುಮಂತನು ಮರೆತಿಲ್ಲ. ಉಳಿದವರು ಮರೆತಾಗ ಎಚ್ಚೆತ್ತಿಸುವವನೂ ಕೂಡ ಹನುಮಂತನೇ ಆಗಿದ್ದಾನೆ.

## ಹನುಮಂತದೇವರ ಬಳಿ ಪ್ರಾರ್ಥನೆ

ಪ್ರವರ್ಧತಾಂ ಭಕ್ತಿರಲಂ ಕ್ಷಣೇ ಕ್ಷಣೇ
ತ್ವಯೀಶ ಮೇ ಹ್ರಾಸವಿವರ್ಜಿತಾ ಸದಾ ।
ಅನುಗ್ರಹಸ್ತೇ ಮಯಿ ಚೈವಮೇವ
ನಿರೂಪಧೌ ತೌ ಮಮ ಸರ್ವಕಾಮ ॥

'ಪ್ರತಿಕ್ಷಣವೂ ನಿನ್ನಲ್ಲಿ ಭಕ್ತಿ ಅಭಿವೃದ್ಧಿಯಾಗಲಿ ಎಂದೂ ಕಮ್ಮಿ ಆಗುವುದು ಬೇಡ. ನಿನ್ನ ಅನುಗ್ರಹವೂ ಹೀಗೆಯೇ ಇರಲಿ. ಎರಡೂ ನಿರ್ವ್ಯಾಜವಾಗಿರಲಿ ಸತ್ಯಕಾಮನೇ' ಎಂದು ಹನುಮಂತದೇವರು ಭಗವಂತನಲ್ಲಿ ಪ್ರಾರ್ಥನೆ ಮಾಡುತ್ತಾರೆ. ನಾವೂ ಸಹ ಈ ಪ್ರಾರ್ಥನೆಯನ್ನೇ ಮಾಡೋಣ.

* * * *

## ತಾತ್ಪರ್ಯನಿರ್ಣಯದಲ್ಲಿ
## ಸುಂದರಕಾಂಡ

ರಾಮಾಯ ಶಾಶ್ವತಸುವಿಸೃತಷಡ್ಗುಣಾಯ
ಸರ್ವೇಶ್ವರಾಯ ಬಲವೀರ್ಯಮಹಾರ್ಣವಾಯ ।
ನತ್ವಾ ಲಿಲಂಘಯಿಷುರರ್ಣವಮುತ್ಪಪಾತ
ನಿಷ್ಪೀಡ್ಯ ತಂ ಗಿರಿವರಂ ಪವನಸ್ಯ ಸೂನುಃ ॥ ೧ ॥

ಚುಕ್ಷೋಭ ವಾರಿಧಿರನುಪ್ರಯಯೌ ಚ ಶೀಘ್ರಂ
ಯಾದೋಗಣೈಃ ಸಹ ತದೀಯಬಲಾಭಿಕೃಷ್ಟಃ ।
ವೃಕ್ಷಾಶ್ಚ ಪರ್ವತಗತಾಃ ಪವನೇನ ಪೂರ್ವಂ
ಕ್ಷಿಪ್ತೋಽರ್ಣವೇ ಗಿರಿರುದಾಗಮದಸ್ಯ ಹೇತೋಃ ॥ ೨ ॥

ಶ್ಯಾಲೋ ಹರಸ್ಯ ಗಿರಿಪಕ್ಷವಿನಾಶಕಾಲೇ
ಕ್ಷಿಪ್ತೋಽರ್ಣವೇ ಸ ಮರುತೋರ್ವರಿತಾತ್ಮಪಕ್ಷಃ ।
ಹೈಮೋ ಗಿರಿಃ ಪವನಜಸ್ಯ ತು ವಿಶ್ರಮಾರ್ಥ-
ಮುದ್ಭಿದ್ಯ ವಾರಿಧಿಮವರ್ಧದನೇಕಸಾನುಃ ॥ ೩ ॥

ನೈವಾತ್ರ ವಿಶ್ರಮಣಮೈಚ್ಛದವಿಶ್ರಮೋಽಸೌ
ನಿಃಸೀಮಪೌರುಷಬಲಸ್ಯ ಕುತಃ ಶ್ರಮೋಽಸ್ಯ ।
ಆಶ್ಲಿಷ್ಯ ಪರ್ವತವರಂ ಸ ದದರ್ಶ ಗಚ್ಛನ್
ದೇವೈಸ್ತು ನಾಗಜನನೀಂ ಪ್ರಹಿತಾಂ ವರೇಣ ॥ ೪ ॥

ಜಿಜ್ಞಾಸುಭಿರ್ನಿಜಬಲಂ ತವ ಭಕ್ಷಮೇತು
ಯದ್ಯತ್ ತ್ವಮಿಚ್ಛಸಿ ತದಿತ್ಯಮರೋದಿತಾಯಾಃ ।
ಆಸ್ಯಂ ಪ್ರವಿಶ್ಯ ಸಪದಿ ಪ್ರವಿನಿಃಸೃತೋಽಸ್ಮಾದ್
ದೇವಾನನಂದಯದುತ ಸ್ವಕೃತಮೇಷು ರಕ್ಷನ್ ॥ ೫ ॥

ದೃಷ್ಟ್ವಾಽಸುರಪ್ರಣಯಿತಾಂ ಬಲಮಸ್ಯ ಚೋಗ್ರಂ
ದೇವಾಃ ಪ್ರತುಷ್ಟುವುರಮುಂ ಸುಮನೋಭಿವೃಷ್ಟ್ಯಾ ।
ತೈರಾದೃತಃ ಪುನರಸೌ ವಿಯತೈವ ಗಚ್ಛನ್
ಛಾಯಾಗ್ರಹಂ ಪ್ರತಿದದರ್ಶ ಚ ಸಿಂಹಿಕಾಖ್ಯಮ್ ॥ ೬ ॥

ಲಂಕಾವನಾಯ ಸಕಲಸ್ಯ ಚ ನಿಗ್ರಹೇಽಸ್ಯಾಃ
ಸಾಮರ್ಥ್ಯಮಪ್ರತಿಹತಂ ಪ್ರದದೌ ವಿಧಾತಾ ।
ಛಾಯಾಮವಾಕ್ಷಿಪದಸೌ ಪವನಾತ್ಮಜಸ್ಯ
ಸೋಽಸ್ಯಾಃ ಶರೀರಮನುವಿಶ್ಯ ಬಿಭೇದ ಚಾಶು ॥ ೭ ॥

ನಿಃಸೀಮಮಾತ್ಮಬಲಮಿತ್ಯನುದರ್ಶಯಾನೋ
ಹತ್ವೈವ ತಾಮಪಿ ವಿಧಾತೃವರಾಭಿಗುಪ್ತಾಮ್ ।
ಲಂಬೇ ಸ ಲಂಬಶಿಖರೇ ನಿಪಪಾತ ಲಂಕಾ-
ಪ್ರಾಕಾರರೂಪಕಗಿರಾವಥ ಸಂಚುಕೋಚ ॥ ೮ ॥

ಭೂತ್ವಾ ಬಿಡಾಲಸಮಿತೋ ನಿಶಿ ತಾಂ ಪುರೀಂ ಚ
ಪ್ರಾಪ್ಸ್ಯನ್ ದದರ್ಶ ನಿಜರೂಪವತೀಂ ಸ ಲಂಕಾಮ್
ರುದ್ಧೋಽನಯಾಽಽಶ್ವಥ ವಿಜಿತ್ಯ ಚ ತಾಂ ಸ್ವಮುಷ್ಟಿ-
ಪಿಷ್ಟಾಂ ತಯಾಽನುಮತ ಏವ ವಿವೇಶ ಲಂಕಾಮ್ ॥ ೯ ॥

ಮಾರ್ಗಮಾಣೋ ಬಹಿಶ್ಚಾಂತಃ ಸೋಽಶೋಕವನಿಕಾತಲೇ ।
ದದರ್ಶ ಶಿಂಶುಪಾವೃಕ್ಷಮೂಲಸ್ಥಿತರಮಾಕೃತಿಮ್ ॥ ೧೦ ॥

ನರಲೋಕವಿಡಂಬಸ್ಯ ಜಾನನ್ ರಾಮಸ್ಯ ಹೃದ್ಗತಮ್ ।
ತಸ್ಯ ಚೇಷ್ಟಾನುಸಾರೇಣ ಕೃತ್ವಾ ಚೇಷ್ಟಾಶ್ಚ ಸಂವಿದಮ್ ॥ ೧೧ ॥

ತಾದೃಕ್ಚೇಷ್ಟಾಸಮೇತಾಯಾ ಅಂಗುಲೀಯಮದಾತ್ ತತಃ ।
ಸೀತಾಯಾ ಯಾನಿ ಚೈವಾಸನ್ನಾಕೃತೇಸ್ತಾನಿ ಸರ್ವಶಃ ॥ ೧೨ ॥

ಭೂಷಣಾನಿ ದ್ವಿಧಾ ಭೂತ್ವಾ ತಾನ್ಯೇವಾಸನ್ ತಥೈವ ಚ ।
ಅಥ ಚೂಡಾಮಣಿಂ ದಿವ್ಯಂ ದಾತುಂ ರಾಮಾಯ ಸಾ ದದೌ॥ ೧೩ ॥

ಯದ್ಯಪ್ಯೇತನ್ನ ಪಶ್ಯಂತಿ ನಿಶಾಚರಗಣಾಸ್ತು ತೇ ।
ದ್ಯುಲೋಕಚಾರಿಣಃ ಸರ್ವೇ ಪಶ್ಯಂತ್ಯ್ರುಷಯ ಏವ ಚ ॥ ೧೪ ॥

ತೇಷಾಂ ವಿಡಂಬನಾಯೈವ ದೈತ್ಯಾನಾಂ ವಂಚನಾಯ ಚ ।
ಪಶ್ಯತಾಂ ಕಲಿಮುಖ್ಯಾನಾಂ ವಿಡಂಬೋಽಯಂ ಕೃತೋ ಭವೇತ್॥ ೧೫ ॥

ಕೃತ್ವಾ ಕಾರ್ಯಮಿದಂ ಸರ್ವಂ ವಿಶಂಕಃ ಪವನಾತ್ಮಜಃ ।
ಆತ್ಮಾವಿಷ್ಕರಣೇ ಚಿತ್ತಂ ಚಕ್ರೇ ಮತಿಮತಾಂ ವರಃ ॥ ೧೬ ॥

ಅಥ ವನಮಖಿಲಂ ತದ್ರಾವಣಸ್ಯಾವಲುಂಪ್ಯ
ಕ್ಷಿತಿರುಹಮಿಮಮೇಕಂ ವರ್ಜಯಿತ್ವಾಽಽಶು ವೀರಃ ।
ರಜನಿಚರವಿನಾಶಂ ಕಾಂಕ್ಷಮಾಣೋಽತಿವೇಲಂ
ಮುಹುರತಿರವನಾದೀ ತೋರಣಂ ಚಾರುರೋಹ ॥ ೧೭ ॥

ಅಥಾಶೃಣೋದ್ದಶಾನನಃ ಕಪೀಂದ್ರಚೇಷ್ಟಿತಂ ಪರಮ್ ।
ದಿದೇಶ ಕಿಂಕರಾನ್ ಬಹೂನ್ ಕಪಿರ್ನಿಗೃಹ್ಯತಾಮಿತಿ ॥ ೧೮ ॥

ಸಮಸ್ತಶೋ ವಿಮೃತ್ಯವೋ ವರಾದ್ಧರಸ್ಯ ಕಿಂಕರಾಃ ।
ಸಮಾಸದನ್ ಮಹಾಬಲಂ ಸುರಾಂತರಾತ್ಮನೋಽಂಗಜಮ್ ॥ ೧೯ ॥

ಅಶೀತಿಕೋಟಿಯೂಥಪಂ ಪುರಃಸರಾಷ್ಟಕಾಯುತಮ್ ।
ಅನೇಕಹೇತಿಸಂಕುಲಂ ಕಪೀಂದ್ರಮಾವೃಣೋದ್ಬಲಮ್ ॥ ೨೦ ॥

ಸಮಾವೃತಸ್ತಥಾಽಽಯುಧೈಃ ಸ ತಾಡಿತಶ್ಚ ತೈರ್ಭೃಶಮ್ ।
ಚಕಾರ ತಾನ್ ಸಮಸ್ತಶಸ್ತಲಪ್ರಹಾರಚೂರ್ಣಿತಾನ್ ॥ ೨೧ ॥

ಪುನಶ್ಚ ಮಂತ್ರಿಪುತ್ರಕಾನ್ ಸ ರಾವಣಪ್ರಚೋದಿತಾನ್ ।
ಮಮರ್ದ ಸಪ್ತಪರ್ವತಪ್ರಭಾನ್ ವರಾಭಿರಕ್ಷಿತಾನ್ ॥ ೨೨ ॥

ಬಲಾಗ್ರಗಾಮಿನಸ್ತಥಾ ಸ ಶರ್ವವಾಕ್ಸುಗರ್ವಿತಾನ್ ।
ನಿಹತ್ಯ ಸರ್ವರಕ್ಷಸಾಂ ತೃತೀಯಭಾಗಮಕ್ಷಿಣೋತ್ ॥ ೨೩ ॥

ಅನೌಪಮಂ ಹರೇರ್ಬಲಂ ನಿಶಮ್ಯ ರಾಕ್ಷಸಾಧಿಪಃ ।
ಕುಮಾರಮಕ್ಷಮಾತ್ಮನಃ ಸಮಂ ಸುತಂ ನ್ಯಯೋಜಯತ್ ॥ ೨೪ ॥

ಸ ಸರ್ವಲೋಕಸಾಕ್ಷಿಣಃ ಸುತಂ ಶರೈರ್ವವರ್ಷ ಹ ।
ಶಿತೈರ್ವರಾಸ್ತ್ರಮಂತ್ರಿತೈರ್ನಚೈನಮಭ್ಯಚಾಲಯತ್ ॥ ೨೫ ॥

ಸ ಮಂಡಮಧ್ಯಗಾಸುತಂ ಸಮೀಕ್ಷ್ಯ ರಾವಣೋಪಮಮ್ ।
ತೃತೀಯ ಏಷ ಚಾಂಶಕೋ ಬಲಸ್ಯ ಹೀತ್ಯಚಿಂತಯತ್ ॥ ೨೬ ॥

ನಿಧಾರ್ಯ ಏವ ರಾವಣಃ ಸ ರಾಘವಸ್ಯ ನಾನ್ಯಥಾ ।
ಯದೀಂದ್ರಜಿನ್ಮಯಾ ಹತೋ ನ ಚಾಸ್ಯ ಶಕ್ತಿರೀಕ್ಷ್ಯತೇ ॥ ೨೭ ॥

ಅತಸ್ತಯೋಃ ಸಮೋ ಮಯಾ ತೃತೀಯ ಏಷ ಹನ್ಯತೇ ।
ವಿಚಾರ್ಯ ಚೈವಮಾಶು ತಂ ಪದೋಃ ಪ್ರಗೃಹ್ಯ ಪುಪ್ಲುವೇ ॥ ೨೮ ॥

ಸ ಚಕ್ರವದ್ಭ್ರಮಾತುರಂ ವಿಧಾಯ ರಾವಣಾತ್ಮಜಮ್ ।
ಅಪೋಥಯದ್ಧರಾತಲೇ ಕ್ಷಣೇನ ಮಾರುತೀತನುಃ ॥ ೨೯ ॥

ವಿಚೂರ್ಣಿತೇ ಧರಾತಲೇ ನಿಜೇ ಸುತೇ ಸ ರಾವಣಃ ।
ನಿಶಮ್ಯ ಶೋಕತಾಪಿತಸ್ತದಗ್ರಜಂ ಸಮಾದಿಶತ್ ॥ ೩೦ ॥

ಅಥೇಂದ್ರಜಿನ್ಮಹಾಶರೈರ್ವರಾಸ್ತ್ರಸಂಪ್ರಯೋಜಿತೈಃ ।
ತತಕ್ಷ ವಾನರೋತ್ತಮಂ ನ ಚಾಶಕದ್ವಿಚಾಲನೇ ॥ ೩೧ ॥

ಅಥಾಸ್ತ್ರಮುತ್ತಮಂ ವಿಧೇರ್ಯುಯೋಜ ಸರ್ವದುದಃಸಹಮ್ ।
ಸ ತೇನ ತಾಡಿತೋ ಹರಿರ್ವ್ಯಚಿಂತಯನ್ನಿರಾಕುಲಃ ॥ ೩೨ ॥

ಮಯಾ ವರಾ ವಿಲಂಘಿತಾ ಹ್ಯನೇಕಶಃ ಸ್ವಯಂಭುವಃ ।
ಸ ಮಾನನೀಯ ಏವ ಮೇ ತತೋಽತ್ರ ಮಾನಯಾಮ್ಯಹಮ್॥ ೩೩ ॥

ಇಮೇ ಚ ಕುರ್ಯುರತ್ರ ಕಿಂ ಪ್ರಹೃಷ್ಟರಕ್ಷಸಾಂ ಗಣಾಃ ।
ಇತೀಹ ಲಕ್ಷ್ಯಮೇವ ಮೇ ಸ ರಾವಣಶ್ಚ ದೃಶ್ಯತೇ ॥ ೩೪ ॥

ಇದಂ ಸಮೀಕ್ಷ್ಯ ಬದ್ಧವತ್ ಸ್ಥಿತಂ ಕಪೀಂದ್ರಮಾಶು ತೇ ।
ಬಬಂಧುರನ್ಯಪಾಶಕೈರ್ಜಗಾಮ ಚಾಸ್ತ್ರಮಸ್ಯ ತತ್ ॥ ೩೫ ॥

ಅಥ ಪ್ರಗೃಹ್ಯ ತಂ ಕಪಿಂ ಸಮೀಪಮಾನಯಂಶ್ಚ ತೇ ।
ನಿಶಾಚರೇಶ್ವರಸ್ಯ ತಂ ಸ ಪೃಷ್ಟವಾಂಶ್ಚ ರಾವಣಃ ॥ ೩೬ ॥

ಕಪೇ ಕುತೋಽಸಿ ಕಸ್ಯ ವಾ ಕಿಮರ್ಥಮೀದೃಶಂ ಕೃತಮ್ ।
ಇತೀರಿತಃ ಸ ಚಾವದತ್ ಪ್ರಣಮ್ಯ ರಾಮಮೀಶ್ವರಮ್ ॥ ೩೭ ॥

ಅವೈಹಿ ದೂತಮಾಗತಂ ದುರಂತವಿಕ್ರಮಸ್ಯ ಮಾಮ್ ।
ರಘೂತ್ತಮಸ್ಯ ಮಾರುತಿಂ ಕುಲಕ್ಷಯೇ ತವೇಶ್ವರಮ್ ॥ ೩೮ ॥

ನ ಚೇತ್ ಪ್ರದಾಸ್ಯಸಿ ತ್ವರನ್ ರಘೂತ್ತಮಪ್ರಿಯಾಂ ತದಾ ।
ಸಪುತ್ರಮಿತ್ರಬಾಂಧವೋ ವಿನಾಶಮಾಶು ಯಾಸ್ಯಸಿ ॥ ೩೯ ॥

ನ ರಾಮಬಾಣಧಾರಣೇ ಕ್ಷಮಾಃ ಸುರೇಶ್ವರಾ ಅಪಿ ।
ವಿರಿಂಚಿಶರ್ವಪೂರ್ವಕಾಃ ಕಿಮು ತ್ವಮಲ್ಪಸಾರಕಃ ॥ ೪೦ ॥

ಪ್ರಕೋಪಿತಸ್ಯ ತಸ್ಯ ಕಃ ಪುರಃಸ್ಥಿತೌ ಕ್ಷಮೋ ಭವೇತ್ ।
ಸುರಾಸುರೋರಗಾದಿಕೇ ಜಗತ್ಯಚಿಂತ್ಯಕರ್ಮಣಃ ॥ ೪೧ ॥

ಇತೀರಿತೇ ವಧೋದ್ಯತಂ ನ್ಯವಾರಯದ್ವಿಭೀಷಣಃ ।
ಸ ಪುಚ್ಛದಾಹಕರ್ಮಣಿ ನ್ಯಯೋಜಯನ್ನಿಶಾಚರಾನ್ ॥ ೪೨ ॥

ಅಥಾಸ್ಯ ವಸ್ತ್ರಸಂಚಯೈಃ ಪಿಧಾಯ ಪುಚ್ಛಮಗ್ನಯೇ ।
ದದುರ್ದದಾಹ ನಾಸ್ಯ ತನ್ಮರುತ್ಸಖೋ ಹುತಾಶನಃ ॥ ೪೩ ॥

ಮಮರ್ಷ ಸರ್ವಚೇಷ್ಟಿತಂ ಸ ರಕ್ಷಸಾಂ ನಿರಾಮಯಃ ।
ಬಲೋದ್ಧತಶ್ಚ ಕೌತುಕಾತ್ ಪ್ರದಗ್ಧುಮೇವ ತಾಂ ಪುರೀಮ್ ॥ ೪೪ ॥

ದದಾಹ ಚಾಖಿಲಾಂ ಪುರೀಂ ಸ್ವಪುಚ್ಛಗೇನ ವಹ್ನಿನಾ ।

ಕೃತಿಸ್ತು ವಿಶ್ವಕರ್ಮಣೋऽಪ್ಯದಹ್ಯತಾಸ್ಯ ತೇಜಸಾ ॥ ೪೫ ॥

ಸುವರ್ಣರತ್ನಕಾರಿತಾಂ ಸ ರಾಕ್ಷಸೋತ್ತಮೈಃ ಸಹ ।

ಪ್ರದಹ್ಯ ಸರ್ವಶಃ ಪುರೀಂ ಮುದಾऽನ್ವಿತೋ ಜಗರ್ಜ ಚ ॥ ೪೬ ॥

ಸ ರಾವಣಂ ಸಪುತ್ರಕಂ ತೃಣೋಪಮಂ ವಿಧಾಯ ಚ ।

ತಯೋಃ ಪ್ರಪಶ್ಯತೋಃ ಪುರೀಂ ವಿಧಾಯ ಭಸ್ಮಸಾದ್ಯಯೌ ॥ ೪೭ ॥

ವಿಲಂಘ್ಯ ಚಾರ್ಣವಂ ಪುನಃ ಸ್ವಜಾತಿಭಿಃ ಪ್ರಪೂಜಿತಃ ।

ಪ್ರಭಕ್ಷ್ಯ ವಾನರೇಶಿತುರ್ಮಧು ಪ್ರಭುಂ ಸಮೇಯಿವಾನ್ ॥ ೪೮ ॥

ರಾಮಂ ಸುರೇಶ್ವರಮಗಣ್ಯಗುಣಾಭಿರಾಮಂ

ಸಂಪ್ರಾಪ್ಯ ಸರ್ವಕಪಿವೀರವರೈಃ ಸಮೇತಃ ।

ಚೂಡಾಮಣಿಂ ಪವನಜಃ ಪದಯೋರ್ನಿಧಾಯ

ಸರ್ವಾಂಗಕೈಃ ಪ್ರಣತಿಮಸ್ಯ ಚಕಾರ ಭಕ್ತ್ಯಾ ॥ ೪೯ ॥

ರಾಮೋऽಪಿ ನಾನ್ಯದನುದಾತುಮಮುಷ್ಯ ಯೋಗ್ಯಂ

ಅತ್ಯಂತಭಕ್ತಿಭರಿತಸ್ಯ ವಿಲಕ್ಷ್ಯ ಕಿಂಚಿತ್ ।

ಸ್ವಾತ್ಮಪ್ರದಾನಮಧಿಕಂ ಪವನಾತ್ಮಜಸ್ಯ

ಕುರ್ವನ್ ಸಮಾಶ್ಲಿಷದಮುಂ ಪರಮಾಭಿತುಷ್ಟಃ ॥ ೫೦ ॥

* * * *

ರಾಗ : ಪುನ್ನಾಗವರಾಳಿ ತಾಳ: ಛಾಪು

ಹನುಮಂತನುದಿಸಿದನು ಭೂತಳದೊಳು

ಹನುಮಂತನುದಿಸಿದನು ॥ಪ॥

ಹನುಮಂತನುದಿಸಿದ ವನಜನಾಭನ ಪಾದ

ವನಜಗಳ ಸೇವೆಯನು ಮಾಡಲು

ಅನಿಲದೇವರ ಸುಪ್ರಸಾದಿ ॥ಅ.ಪ.॥

## ಹನುಮಜ್ಜಯಂತಿ

ಎಳೆತಳಿರುದದಿ ಥಳಥಳಿಸುವ ದೇಹ

ಗಳದಲ್ಲಿ ನವರತ್ನಗಳ ಹಾರ ಶಿರದಲ್ಲಿ

ಪೊಳೆವ ಕಿರೀಟ ಕುಂಡಲಕರ್ಣ ಕಟಿಸೂತ್ರ

ವಿಲಸಿತ ಕೌಪೀನ ಜ್ವಲಿಸುವ ಉಪವೀತಾದ್ಯ ಲಘುಸಾಲಂಕಾರ ದೇಹದಲಿ

ಪುಟ್ಟುತಲಿ ಸೂರ್ಯನ ಫಲವೆನುತ ಲಂಘಿಸುತ ವೇಗದಲಿ

ಕಬಳಿಸುತಲಿರಲಾ ಬಲನಿಷೂದನ ನೋಡಿ ಕೋಪದಲಿ

ಘಾತಿಸಲು ವಜ್ರದಿ ಬಳಲುತಲಿ

ಮೂರ್ಛೆಯಲಿ ಬೀಳಲು ತಳಿದು ಪವನನು ಮುನಿದನಾಕ್ಷಣ ॥೧॥

ಪರಮೇಷ್ಠಿ ಮೊದಲಾಗಿ ಇರುವೆಯ ಪರ್ಯಂತ

ಇರುವ ದೇಹಗಳೊಳಗಿರುವ ಪ್ರಾಣಾಶುಗ

ವಿರದಂತೆ ಸೆಳೆಯುತಲಿರೆ ಬ್ರಹ್ಮಾದ್ಯರು ಪೋಗಿ ಹರಿಗೆ ಬಿನ್ನೈಸಲು

ಸುರರೊಡಗೂಡಿ ಶ್ರೀಧರನು

ಮಾರುತನ್ನೆದಿಕುಸ್ತರಿಸಿ ಮಾರುತಿಯನೆಬ್ಬಿಸಿ

ವರಗಳಿತ್ತರು ನಿರ್ಜರರುವೆರಿಸಿ

ಸದ್ವಜ್ರಕಾಯವುವರ ಚಿರಂಜೀವತ್ವ ವಾ

ದರಿಸಿದರ್ಕಾಮರೂಪಾ ದ್ಯುತರದ

ಸರ್ವಾರ್ಥಸಿದ್ಧಿಯೆ ಕರುಣಿಸಿತ್ತು ಬಳಿಕಾ ಮರುತ್ಸುತ ॥೨॥

ಆದಿತ್ಯನಲಿ ಸರ್ವವೇದಾದಿಗಳನು ಜಂಭಬೇಧಿಯಂ

ವ್ಯಾಕರಣಾದಿ ಶಾಸ್ತ್ರಂಗಳನೋದಿ

ಬ್ರಹ್ಮಚರ್ಯಮಾದ ವ್ರತಕೆ ದೀಕ್ಷೈದು

ಪೂರ್ಣಕಾಮನಾದ ಮಹಾತ್ಮ ವಿನೋದಿ

ಸುಗ್ರೀವನಲಿ ಸಖ್ಯವನು ಮಾಡುತ ಪರಮಾಹ್ಲಾದದಿಂದಲಿ

ತಂದೆ ತಾಯಿಗಳನು

ಹನುಮಜ್ಜಯಂತಿ

ಸೇವಿಸುತ ನಿರ್ಮಲವಾದ ಮನದಲಿ ಭಕ್ತಿಯನು

ಖಾದ್ರಿನೃಸಿಂಗನ ಪಾದ ದರುಶನವಾಗಬೇಕೆಂದಾ

ದಯಾನಿಧಿ ಬಯಸುತಿರ್ದನು.

* * * *

ರಾಗ : ದರ್ಬಾರ್ ತಾಳ: ಆಟ

ರಾಮದೂತನ ಪಾದ ತಾಮರಸವ ಕಂಡ

ಆ ಮನುಜನೇ ಧನ್ಯನು ||ಪ||

ಶ್ರೀ ಮನೋಹರನಂಘ್ರಿ ಭಜಕ

ಸ್ತೋಮ ಕುಮುದಕೆ ಸೋಮನೆನಿಸುವ

ಭೂಮಿಯೊಳು ಯದುಗಿರಿಯ ಸೀಮೆಯ

ಕಾಮವರದೊಳು ಪ್ರೇಮದಿಂದಿಹ ||ಅ.ಪ.||

ಕೋತಿರೂಪದಿ ರಘುನಾಥುನಾಜ್ಞೆಯ ತಾಳಿ

ಪಾಥೋದಿಯ ಲಂಘಿಸಿ

ಖ್ಯಾತ ಲಂಕೆಯ ಪೊಕ್ಕು ಶೋಧಿಸಿ

ಮಾತೆಪನು ಕಂಡೆರಗಿ ದಶಮುಖ

ಪೋತ ಖಳಕುಲ ವ್ರಾತ ಘಾತಿಸಿ

ಸೀತೆ ವಾರ್ತೆಯು ನಾಥಗರುಹಿದ ||೧||

ಪಾಂಡುಸುತನೆ ಪ್ರಚಂಡ ಗದೆಯನು ದೋ

ರ್ದಂಡದಿ ಧರಿಸುತಲಿ

ಮಂಡಲದೊಳು ಭಂಡ ಕೌರವ

ಚಂಡರಿಪುಗಳ ಖಂಡಿಸಿ ಶಿರ

ಚಂಡನಾಡಿ-ಸತಿಗೆ ಕರುಳಿನ

ದಂಡೆ ಮುಡಿಸಿದ್ದುದಂಡ ವಿಕ್ರಮ ||೨||

ಹನುಮಜ್ಜಯಂತಿ

ಧಾರುಣಿಯೊಳು ದ್ವಿಜನಾರಿ ಗರ್ಭದಿ ಬಂದು
ಮೂರೊಂದಾಶ್ರಮ ಧರಿಸಿ
ಧೀರ ನೀನೇಳಧಿಕ ತ್ರಿದಶ
ಸಾರ ಗ್ರಂಥಗಳ್ ವಿರಚಿಸುತ ಮಹ
ಶೂರ ಶ್ರೀ ಗೋಪಾಲ ವಿಠಲನ
ಚಾರು ಚರಣಕೆ ಅರ್ಪಿಸಿದ ಗುರು ||೩||

* * * *

ರಾಗ : ಭೀಮಪಲಾಸ್ ತಾಳ: ರೂಪಕ

ಹನುಮ ಭೀಮ ಮಧ್ವಮುನಿಯ ನೆನೆದು ಬದುಕಿರೊ ||ಪ||

ಅನುಮಾನಗಳಿಲ್ಲದಲೆ ಮನೋಭೀಷ್ಟಗಳ ಕೊಡುವ ||ಅ.ಪ.||

ಪ್ರಾಣಿಗಳ ಪ್ರಾಣಾಧಾರ ಪ್ರಾಣಿಗಳಲೆ ಉತ್ತಮನು
ಪ್ರಾಣಪಾನ ವ್ಯಾನೋದಾನ ಸಮಾನರಲ್ಲಿ ಉತ್ತಮನು
ಕಾಣರೇನು ಕಾಯ ಕರ್ಮ ಚಕ್ಷು ಇಂದ್ರಿಯಗಳಿಗೆಲ್ಲ
ತ್ರಾಣಕೊಟ್ಟು ಸಲಹುವ ಜಾಣ ಗುರು ಮುಖ್ಯಪ್ರಾಣ ||೧||

ಕಾಮಧೇನು ಚಿಂತಾಮಣಿ ಕಲ್ಪವೃಕ್ಷನಾದ ಸ್ವಾಮಿ
ಪ್ರೇಮದಿಂದ ನೆನೆಯುವರ ಭಾಗ್ಯಕೆ ಎಣೆಯುಂಟೆ
ಸಾಮಾನ್ಯನಲ್ಲ ಮೋಕ್ಷಾದಿ ಸಂಪದ್ದಾತ
ಆ ಮಹಾಪರೋಕ್ಷ ಜ್ಞಾನ ದಾರಢ್ಯ ಭಕುತಿ ಕೊಡು ||೨||

ಅವತಾರ ತ್ರಯಂಗಳಿಂದ ಶ್ರೀ ಹರಿಯ ಸೇವಿಪನು
ತವಕದಿಂದ ಪೂಜಿಪ ಮಹಾಮಹಿಮೆಯುಳ್ಳವನು
ಕವಿತೆ ವಾಕ್ಯವಲ್ಲವಿದು ಸುವಿವೇಕದಿ ಕೇಳುವುದು
ಭವಬಂಧನ ಕಳೆದು ಕಾವ ಪುರಂದರವಿಠಲನ ದಾಸ ||೩||

* * * *

## ಹನುಮಜ್ಜಯಂತಿ

ರಾಗ : ಯಮುನ ಕಲ್ಯಾಣಿ ತಾಳ: ಆದಿ

ನಂಬಿದೆ ನಿನ್ನ ಪಾದ ಗುರು ಮುಖ್ಯಪ್ರಾಣ

ನಂಬಿದೆ ನಿನ್ನ ಪಾದ ಪಾದ ಡಂಭವ ತೊಲಗಿಸಿ

ಡಿಂಬದೊಳಗೆ ಹರಿಯ ಬಿಂಬ ಪೊಳೆವಂತೆ ಮಾಡೊ ||ಅ.ಪ.||

ಇಪ್ಪತ್ತುವಂದುಸಾವಿರ ಐದೊಂದುನೂರು ಅಪ್ರತಿಮ ಹಂಸ ಮಂತರಾ

ತಪ್ಪದೆ ದಿನ ದಿನ ವಪ್ಪುವಂದದಿ ಜಪಿಸಿ

ತಪ್ಪಿಸೋ ಭವಸ ಸಮೀಪ್ಪದಿ ಜೀವಕೆ

ಅಪ್ಪನಂದದಿ ಪುಣ್ಯ ಬಪ್ಪಂತೆ ಕರುಣಿಸೋ

ಕಪ್ಪುವರ್ಣನ ಕೂಡ ಒಪ್ಪಿಸಿ ಪಾಲಿಸೊ ||೧||

ಹತ್ತೇಳು ಎರಡಾಯುತ ನಾಡಿಯೊಳು ಸುತ್ತಿಸುತ್ತುವ ಮಾರುತ

ಉತ್ತರ ಲಾಲಿಸೋ ಉತ್ಕ್ರಮಣದಲ್ಲಿ

ನೆತ್ತಿಯ ದ್ವಾರದಿಂದ ಎತ್ತ ಪೋಗಲೀಸದೆ

ತತ್ತುವರೊಳು ಜೀವೋತ್ತಮನೆ ಸತ್

ಚಿತ್ತ ಎನಗೆ ಕೊಡುತುತ್ತರ ಲಾಲಿಸೋ ||೨||

ಅಂತರಂಗದ ಉಸುರ ಹೊರಗೆ ಬಿಟ್ಟುಅಂತರಂಗಕ್ಕೆ ಸೇದುವ

ಪಂಥದಾಳು ನೀನೇ ಕಂತುಜನಕನಲ್ಲಿ

ಮಂತ್ರಿಯೆನಿಸಿ ಸರ್ವಾಂತರ್ಯಾಮಿಯಾಗಿ

ನಿಂತು ನಾನಾ ಬಗೆ ತಂತು ನಡೆಸುವ

ಹೊಂತಕಾರಿ ಗುಣವಂತ ಬಲಾಢ್ಯ ||೩||

ಪಂಚಪ್ರಾಣರೂಪನೆ ಸತ್ವಕಾಯಾ ಪಂಚೇಂದ್ರಿಯಗಳಪ್ಪನೆ

ಮುಂಚಿನ ಪರಮೇಷ್ಠಿ ಸಂಚಿತಾಗಾಮಿ ಬಿಡಿಸಿ

ಕೊಂಚ ಮಾಡೊ ಪ್ರಾರಬ್ಧ

ವಂಚನೆ ಗೈಸದೆ ಅಂಚಂಚಿಗೆ ಪರಪಂಚಗಳೋಡಿಸಿ

ಹನುಮಜ್ಜಯಂತಿ

ಪಂಚವಕ್ತ್ರ ಹರಿಮಂಚದ ಗುರುವೇ ||೪||

ಯೋಗಾಸನದೊಳಿಪ್ಪ ಯಂತ್ರೋದ್ಧಾರ ಭಾಗವತರಪ್ಪ
ಯೋಗಿಗಳಿಗೀಶ ವ್ಯಾಸಯೋಗಿಗೊಲಿದನ್ಯಾಸ ಶ್ರೀ
ತುಂಗಭದ್ರನಿವಾಸ ಬಾಗುವೆ ಕೊಡು ಲೇಸ
ಶ್ರೀ ಗುರು ವಿಜಯ ವಿಠ್ಠಲನ ಪಾದಕೆ
ಬಾಗಿದ ಭವದೂರ ಜಾಗರ ಮೂರುತಿ ||೫||

* * * *

ಪ್ರಾಣ ಬಾರೋ ಜಗತ್ ಪ್ರಾಣ ಬಾರೋ
ಪ್ರಾಣ ಸಕಲ ಕರ್ಮ ಮಾಳ್ಪ ಜಾಣ ಬಾರೋ ||ಪ||

ಪಂಚರೂಪದಿ ಪ್ರಪಂಚ ವ್ಯಾಪ್ತ ಬಾರೋ
ಹಂಚ ಕೇಳಿ ದೈತೆಯರ ವಂಚಕನೆ ಬಾರೋ ||ಅ.ಪ||

ವಾಯುಪಸ್ಥ ಕರ್ಮಗೈವ ಅಪಾನ ಬಾರೋ
ವಾಯುವನೀ ನಿರೋಧಿಶೆ ಕಾಯ್ದಾರೋ
ಗೋಣು ಮುರಿವ ಭಾರ ಹೊರುವ ಜಾಣ ಬಾರೋ
ಪ್ರಾಣ ಪಂಚ ವ್ಯೂಹ ಮುಖ್ಯ ವ್ಯಾನ ಬಾರೋ ||೧||

ಉದಕ ಅನ್ನಕ್ಕವಕಾಶುದಾನ ಬಾರೋ
ಮುದದಿ ಶ್ವಾಸ ಮಂತ್ರ ಜಪ ಜಾಣ ಬಾರೋ
ವೈದಿಕ ಲೌಕಿಕ ಶಬ್ದ ನುಡಿಸೆ ಬಾರೋ
ಊರ್ಧ್ವಗತಿ ದಾತನೆ ಉದಾನ ಬಾರೋ ||೨||

ಪಾನ ಅನ್ನಗಳ್ಹಂಚ ಸಮಾನ ಬಾರೋ
ಧ್ಯಾನವಿಂತು ಈವ ಮುಖ್ಯಪ್ರಾಣ ಬಾರೋ
ಕರುಣಾಸಾಗರ ದೇಹವೀಣೆ ಚರಿಸೆ ಬಾರೋ
ಗುರುಗೋವಿಂದವಿಠಲಾ ದೀಕ್ಷಿತ ಗುರುವೇ ಬಾರೋ ||೩||

## ಹನುಮಜ್ಜಯಂತಿ

ರಾಗ : ತೋಡಿ
ತಾಳ: ಆದಿ

ಪವಮಾನ ಪವಮಾನ ಜಗದ ಪ್ರಾಣಾ ಸಂಕರುಷಣಾ ||ಪ||

ಭವಭಯಾರಣ್ಯ ದಹನಾ
ಶ್ರವಣವೆ ಮೊದಲಾದ ನವವಿಧ ಭಕುತಿಯ
ತವಕದಿಂದಲಿ ಕೊಡು ಕವಿಜನಪ್ರಿಯಾ ||ಅ.ಪ.||

ಹೇಮಕಚ್ಚುಟ ಉಪವೀತಧರಿಪ ಮಾರುತಾ
ಕಾಮಾದಿ ವರ್ಗರಹಿತಾ
ವ್ಯೋಮಾದಿ ಸಕಲ ವ್ಯಾಪುತಾ ಸತತ ನಿರ್ಭೀತಾ
ರಾಮಚಂದ್ರನ ನಿಜ ದೂತಾ
ಯಾಮಯಾಮಕೆ ನಿನ್ನಾರಾಧಿಪುದಕೆ
ಕಾಮಿಪೆ ಎನಗಿದು ನೇಮಿಸಿ ಪ್ರತಿದಿನ ಈ
ಮನಸಿಗೆ ಸುಖಸ್ತೋಮವ ತೋರುತ
ಪಾಮರ ಮತಿಯನು ನೀ ಮಾಣಿಪುದು ||೧||

ವಜ್ರಶರೀರ ಗಂಭೀರ ಮುಕುಟಧರ
ದುರ್ಜನವನ ಕುಠಾರ ನಿರ್ಜರ ಮಣಿದಯಾ
ಪಾರಾವಾರಾ ಉದಾರಾ ಸಜ್ಜನರಘ ಪರಿಹಾರಾ
ಅರ್ಜುನಗೊಲಿದಂದು ಧ್ವಜವಾಗಿ ನೀ ನಿಂದು
ಮೂರ್ಜಗ ಬಿರಿವಂತೆ ಗರ್ಜನೆ ಮಾಡಿದಿ
ಹೆಜ್ಜೆ ಹೆಜ್ಜೆಗೆ ನಿನ್ನಬ್ಜ ಪದಧೂಳಿ
ಮೂರ್ಜಗದಲಿ ಭವವರ್ಜಿತನೆನಿಸು ||೨||

ಪ್ರಾಣ, ಅಪಾನ, ವ್ಯಾನೋದಾನ ಸಮಾನ
ಆನಂದ ಭಾರತೀರಮಣ ನೀನೆ ಶರ್ವಾದಿ
ಗಿರ್ವಾಣಾದ್ಯಮರರಿಗೆ ಜ್ಞಾನಧನ
ಪಾಲಿಪೆ ವರೇಣ್ಯನಾನು ನಿರುತದಲಿ

ಹನುಮಜ್ಜಯಂತಿ

ಏನೇನೆಸುಗುವೆ ಮಾನಸಾದಿ ಕರ್ಮ ನಿನಗೊಪ್ಪಿಸಿದೆನೋ

ಪ್ರಾಣನಾಥ ಶ್ರೀವಿಜಯವಿಠ್ಠಲನ

ಕಾಣಿಸಿ ಕೊಡುವುದು ಭಾನುಪ್ರಕಾಶಾ ||೩||

* * * *

ರಾಗ : ನಾದನಾಮಕ್ರಿಯೆ ತಾಳ: ಆದಿ

ಬಿಡುವೆನೇನಯ್ಯಾ ಹನುಮಾ ಬಿಡುವೆನೇನಯ್ಯಾ ||ಪ||

ಬಿಡುವೆನೇನೋ ಹನುಮಾ ನಿನ್ನ ಅಡಿಗಳಿಗೆ ಶಿರವನೊಡ್ಡಿ

ಒಡೆಯನಲ್ಲಿ ಜ್ಞಾನ ಭಕ್ತಿ ಎನಗೆ ಕೊಡುವ ತನಕ ಸುಮ್ಮನೆ ||ಅ.ಪ.||

ಹಸ್ತಮ್ಯಾಲಕೆ ಎತ್ತಿದರೇನು ಹಾರಗಾಲಾ ಹಾಕಿದರೇನು

ಭೃತ್ಯನೋ ನಿನ್ನವನು ನಾನು ಹಸ್ತಿವರದ ತೋರಿಸೋತನಕ ||೧||

ಡೊಂಕುಮೋರೆ ಬಾಲವ ತಿದ್ದಿ ಹೂಂಕರಿಸಿದರೆ ಅಂಜುವನಲ್ಲ

ಕಿಂಕರನೋ ನಿನ್ನವನು ನಾನು ಪಂಕಜನಾಭನತೋರಿಸೋ ತನಕ ||೨||

ಹಲ್ಲು ಮುಡಿಯ ಕಚ್ಚಿದರೇನು ವಾರಿ ಧುಮುಕಿದಗಂಜುವನಲ್ಲ

ಫುಲ್ಲನಾಭ ಶ್ರೀಪುರಂದರ ವಿಠಲನ ಇಲ್ಲಿಗೆ ತಂದು ತೋರಿಸೋ ತನಕ ||೩||

* * * *

ರಾಗ : ಆರಭಿ ತಾಳ: ತ್ರಿಪುಟ

ಇದು ಏನೋ ಚರಿತ ಯಂತ್ರೋದ್ಧಾರ

ಇದು ಏನೋ ಚರಿತ ||ಪ||

ಇದು ಏನೋ ಚರಿತ ಶ್ರೀ ಪದುಮನಾಭನ ದೂತ

ಸದಾಕಾಲ ಸರ್ವರ ಹೃದಯಾಂತರ್ಗತನಾಗಿ ||ಅ.ಪ.||

ವಾರಿಧಿ ಗೋಷ್ಪಾದ ನೀರಂತೆ ದಾಟಿದ

ಧೀರ ಯೋಗಾಸನಧಾರಿಯಾಗಿಪ್ಪುದು ||೧||

ಹನುಮಜ್ಜಯಂತಿ

ದುರುಳ ಕೌರವರನ್ನು ವರ ಗದೆಯಲಿ ಕೊಂದ

ಕರದಲ್ಲಿ ಜಪಮಾಲೆ ಧರಿಸಿ ಎಣಿಸುವುದು ॥೨॥

ಹೀನ ಮತಗಳನ್ನು ವಾಣಿಲಿ ತರಿದಂಥ

ಜ್ಞಾನವಂತನೆ ಹೀಗೆ ಮೌನವಾಗಿರುವುದು ॥೩॥

ಸರ್ವವ್ಯಾಪಕ ನೀನು ಪೂರ್ವಿಕ ದೇವನೆ

ಶರ್ವನ ಪಿತ ಮಂದು ಪರ್ವತ ಸೇರಿದ್ದು ॥೪॥

ಗೋಪಾಲವಿಠಲಗೆ ನೀ ಪ್ರೀತಿಮಂತ್ರಿಯು

ವ್ಯಾಪಾರಮಾಡದೆ ಈಪರಿ ಕುಳಿತಿಹೆ ॥೫॥

* * * *

ರಾಗ: ನಾಟ ತಾಳ: ಆಟ

ಘಟಿಕಾಚಲದಿ ನಿಂತಾ ಶ್ರೀ ಹನುಮಂತ ॥ಪ॥

ಘಟಿಕಾಚಲದಿ ನಿಂತ ಪಟು ಹನುಮಂತನ

ಪಠನೆಯ ಮಾಡಲುತ್ಕಟದಿ ಪೊರೆವೆನೆಂದು ॥ಅ.ಪ.॥

ಚತುರ ಯುಗದಿ ತಾನು ಮುಖ್ಯಪ್ರಾಣನು ಚತುರಮುಖನಯ್ಯನ

ಚತುರ ಮೂರುತಿಗಳನು ಚತುರತನದಿ ಭಜಿಸಿ

ಚತುರ್ಮುಖನಾಗಿ ಜಗಕೆ ಚತುರ್ವಿಧ ಫಲ ಕೊಡುತೆ ॥೧॥

ಸರಸಿಜ ಭವಗೋಸ್ಕರ ಕಲ್ಮಷದೂರ ವರ ಚಕ್ರತೀರ್ಥ ಸರ

ಮೇರೆವಾಚಲದಿ ನಿತ್ಯ ನರಹರಿಗೆದುರಾಗಿ

ಸ್ಥಿರಯೋಗಾಸನದಿ ಕರೆದು ವರಗಳ ಕೊಡುತೆ ॥೨॥

ಶಂಖ ಚಕ್ರವ ಧರಿಸಿ ಭಕ್ತರ ಮನಃಪಂಕವ ಪರಿಹರಿಸಿ

ಪಂಕಜನಾಭ ಶ್ರೀ ಪುರಂದರವಿಠಲನ

ಬಿಂಕದ ಸೇವಕ ಸಂಕಟ ಕಳೆಯುತ ॥೩॥

* * * *

ಹನುಮಜ್ಜಯಂತಿ

ಪ್ರಾಣ ಬಂದಾ ಮುಖ್ಯ ಪ್ರಾಣ ಬಂದಾ

ಶ್ರೀ ರಾಮನಾಮ ಧ್ವನಿಗೆ ನಮ್ಮ ಮನೆಗೆ ||ಪ||

ಕನಕಲಂದುಗೆ ಗೆಜ್ಜೆ ಝಣ ಝಣ ಝಣಕ್ಕೆಂದು

ನಾದವಗೈಯುತ ಪ್ರಾಣಬಂದಾ ||೧||

ತುಂಬುರ ನಾರದರು ವೀಣೆಯ ಬಾರಿಸುತ

ಕುಣಿ ಕುಣಿದಾಡುತ ಪ್ರಾಣ ಬಂದಾ ||೨||

ಪುರಂದರವಿಠಲನ ನೆನೆದು ಪಾಡುತಲಿ

ಆಲಿಂಗನ ಮಾಡುತಲಿ ||೩||

* * * *

ರಾಗ : ಮಧ್ಯಮಾವತಿ ತಾಳ: ಆಟ

ಪ್ರಾಣದೇವ ನೀನಲ್ಲದೆ ಕಾಯ್ವರ

ಕಾಣೆನೊ ಜಗದೊಳಗೆ ||ಪ||

ಪ್ರಾಣಾಪಾನ ವ್ಯಾನೋದಾನ ಸಮಾನನೆನಿಪ ಮುಖ್ಯ

ಪ್ರಾಣ ನೀನಹುದೈ ||ಅ.ಪ||

ವಾಸವ ಕುಲಿಶದಿ ಘಾಸಿಸೆ ಜೀವರ

ಶ್ವಾಸ ನಿರೋಧಿಸಿದೆ

ಆ ಸಮಯದಿ ಕಮಲಾಸನ ಪೇಳಲು

ನೀ ಸಲಹಿದೆ ಜಗವ ||೧||

ಅಂಗದ ಪ್ರಮುಖಪ್ಲವಂಗರು ರಾಮನ

ಅಂಗನೆಯಳ ಪುಡುಕೆ

ತಿಂಗಳು ಮೀರಲು ಕಂಗೆಡೆ ಕಪಿವರ

ಪುಂಗವ ಪಾಲಿಸಿದೆ ||೨||

ಪಾವಿನಪಾಶದಿ ರಾವಣ ಬಲಿ ಸು

ಗ್ರೀವಮುಖ್ಯರ ಬಿಗಿಯೆ

ಸಾವಿರದೈವತ್ತು ಗಾವುದದಲ್ಲಿಹ ಸಂ
ಜೀವನ ತಂದಿತ್ತೆ ॥೩॥

ಪರಿಸರ ನೀನಿರೆ ಹರಿ ತಾನಿಪ್ಪನು
ಇರದಿರೆ ತಾನಿರನು
ಕರಣನಿಯಾಮಕ ಸುರರ ಗುರುವೇ ನೀ
ಕರುಣಿಸೆ ಕರುಣಿಸುವ ॥೪॥

ಭೂತೇಂದ್ರಿಯಗಳಧಿನಾಥ ನಿಯಾಮಕ
ನಾ ತೈಜಸಹರನ
ತಾತನೆನಿಪ ಜಗನ್ನಾಥವಿಠಲನ
ಪ್ರೀತಿಪಾತ್ರನಾದೆ ॥೫॥

* * * *

ರಾಗ : ನಾಟ ತಾಳ: ಝಂಪೆ

ಜಯ ವಾಯು ಹನುಮಂತ ಜಯ ಭೀಮ ಬಲವಂತ ॥ಪ॥

ಜಯ ಪೂರ್ಣ ಮತಿವಂತ ಜಯಸಲಹೊ ಸಂತ ॥ಅ.ಪ.॥

ಅಂಜನೆಯಲಿ ಹುಟ್ಟಿ ಅಂದು ರಾಮನ ಸೇವೆ
ನಂದದಿಂದಲಿ ಮಾಡಿ ಕಪಿ ಬಲವ ಕೂಡಿ
ಸಿಂಧು ಲಂಘಿಸಿ ಖಳ ವನ ಭಂಗಿಸಿ ಸೀತೆ
ಗುಂಗುರವ ಕೊಟ್ಟೆ ಲಂಕಾಪುರದ ಸುಟ್ಟೆ ॥೧॥

ಹರಿಗೆ ಚೂಡಾಮಣಿಯನ್ನಿತ್ತು ಹರಿಗಳ ಕೂಡಿ
ಶರಧಿಯನು ಕಟ್ಟಿ ಅರಿಬಲವ ಕುಟ್ಟಿ
ಉರಗ ಬಂಧನದಿಂದ ಕಪಿವರರು ಮೈಮರೆಯೆ
ಗಿರಿಯ ಸಂಜೀವನ ತಂದು ಬದುಕಿಸಿದೆ ॥೨॥

ದ್ವಾಪರಾಂತ್ಯದಿ ಪಾಂಡು ಭೂಪನಾತ್ಮಜನೆನಿಸಿ
ಶ್ರೀ ಪಾರ್ಥಸಾರಥಿಯ ಭಜಕ ನೀನಾದೆ

ಪಾಪಿ ಮಾಗಧ ಬಕ ಕೀಚಕ ಹಿಡಿಂಬಕರ
ಕೋಪದಿಂದಲಿ ತರಿದೆ ಮೂಜ್ಜಗದಿ ಮೆರೆದೆ ||೩||

ಧುರದಲಿ ದುರ್ಯೋಧನನ ಬಲವನು ತರಿದೆ
ದುಶ್ಶಾಸನನ ಒಡಲನ್ನು ಬಗೆದೆ
ಉರವ ತಪ್ಪಿಸಿ ಕೌರವನ್ನ ತೊಡೆಗಳ ಮುರಿದೆ
ಹರಿಯ ಕಿಂಕರ ದುರಂಧರರಗಾರು ಸರಿಯೆ ||೪||

ಕಲಿಯುಗದಲಿ ಕಳ್ಳರುದಿಸಿ ದುರ್ಮತಗಳನು
ಬಲಿಸಿ ಶ್ರೀ ಹರಿಗುಣಗಳ ಮರೆಸಿ
ಕಲಿಯನನುಸರಿಸಲು-ಗುರುವಾಗಿ ಅವತರಿಸಿ
ಖಳರ ದುರ್ಮತ ಮುರಿದೆ ಶ್ರೀಕೃಷ್ಣ ಪರನೆಂದೆ ||೫||

* * * *

ರಾಗ: ನಾಟ ತಾಳ: ಝಂಪೆ

ಜಯ ಭೀಮಸೇನ ||ಪ||

ಜಯ ಭೀಮಸೇನ ದುರ್ಜನತಿಮಿರ ಮಾರ್ತಾಂಡ
ಜಯ ಶಾಂತ ಉದ್ದಂಡ ಕದನಪ್ರಚಂಡ ||ಅ.ಪ.||

ಕಿಮ್ಮೀರ ಬಕ ಹಿಡಿಂಬ ಕೀಚಕಧ್ವಂಸ
ದುರ್ಮತವನಚ್ಛೇದೋತ್ತಂಸ ||೧||

ಅನುಜ ಸೇನಾಸಹಿತ ಕಲಿಧಾರ್ತರಾಷ್ಟ್ರನ್ನ
ದನುಜಗಜ ಪಂಚಾಸ್ಯನೆಂದೆನಿಸಿದ ಘನ್ನ ||೨||

ದ್ರೌಪದೀಪ್ರಿಯ ಸಕಲವಿದ್ಯಾಪ್ರದೀಪ
ಪಾಪ ಹರ ಹಯವದನಪದಕಂಜ ಮಧುಪ ||೩||

* * * *

## ಹನುಮಜ್ಜಯಂತಿ

ರಾಗ : ಶಹನ ತಾಳ: ಆದಿ

ಎಂಥಾ ಬಲವಂತನೊ ಕುಂತಿಯ ಸುಜಾತನೊ ||ಪ||

ಭಾರತಿಗೆ ಕಾಂತನೊ ನಿತ್ಯ ಶ್ರೀಮಂತನೊ ||ಅ.ಪ||

ರಾಮಚಂದ್ರನ ಪ್ರಾಣನೊ ಅಸುರ ಹೃದಯ ಬಾಣನೊ
ಖಳರ ಗಂಟಲ ಗಾಣನೊ ಜಗದೊಳಗೆ ಪ್ರವೀಣನೊ ||೧||

ಕುಂತಿಯ ಕಂದನೊ ಸೌಗಂಧಿಕವ ತಂದನೊ
ಕುರುಕ್ಷೇತ್ರಕೆ ಬಂದನೊ ಕೌರವರ ಕೊಂದನೊ ||೨||

ಭಂಡಿ ಅನ್ನವನುಂಡನೋ ಬಕನ ಪ್ರಾಣವ ಕೊಂಡನೊ
ಭೀಮ ಪ್ರಚಂಡನೊ ದ್ರೌಪದಿಗೆ ಗಂಡನೊ ||೩||

ವೈಷ್ಣವಾಗ್ರಗಣ್ಯನೊ ಸಂಚಿತಾಗ್ರ ಪುಣ್ಯನೊ
ದೇವವರೇಣ್ಯನೊ ದೇವಶರಣ್ಯನೊ ||೪||

ಮಧ್ವಶಾಸ್ತ್ರವ ರಚಿಸಿದನೊ ಸದ್ವೈಷ್ಣವರ ಸಲಹಿದನೊ
ಉಡುಪಿಲಿ ಕೃಷ್ಣನ ನಿಲಿಸಿದನೊ ಪುರಂದರವಿಠಲನ ಒಲಿಸಿದನೊ ||೫||

* * * *

ರಾಗ : ನಾದನಾಮಕ್ರಿಯ ತಾಳ: ಆದಿ

ಕೂಸನು ಕಂಡೀರಾ ಮುಖ್ಯಪ್ರಾಣನ ಕಂಡೀರಾ ||ಪ||

ಬಾಲನ ಕಂಡೀರಾ ಬಲವಂತನ ಕಂಡೀರಾ ||ಅ.ಪ.||

ಅಂಜನೆ ಉದರದಿ ಜನಿಸಿತು ಕೂಸು
ರಾಮನ ಪಾದಕ್ಕೆರಗಿತು ಕೂಸು
ಸೀತೆಗೆ ಉಂಗುರ ಕೊಟ್ಟಿತು ಕೂಸು
ಲಂಕಾಪುರವನು ಸುಟ್ಟಿತು ಕೂಸು ||೧||

ಭಂಡೀ ಅನ್ನವನುಂಡಿತು ಕೂಸು
ಬಕನ ಪ್ರಾಣವ ಕೊಂಡಿತು ಕೂಸು

ಹನುಮಜ್ಜಯಂತಿ

ವಿಷದ ಲಡ್ಡುಗೆಯ ಮೆದ್ದಿತು ಕೂಸು
ಮಡದಿಗೆ ಪುಷ್ಪವ ಕೊಟ್ಟಿತು ಕೂಸು ॥೨॥

ಮಾಯಮತವೆಲ್ಲ ಗೆದ್ದಿತು ಕೂಸು
ಮಧ್ವಮತವನುದ್ಧರಿಸಿತು ಕೂಸು
ಪುರಂದರವಿಠಲನ ದಯದಿಂದ ಕೂಸು
ಸುಮ್ಮನೆ ಉಡುಪಿಲಿ ನಿಂತಿತು ಕೂಸು ॥೩॥

* * * *

ರಾಗ : ಹಿಂದೂಸ್ಥಾನಿ ಕಾಪಿ ತಾಳ: ಅಟ್ಟ

ಸಾರಿ ಬಂದನೆ ಪ್ರಾಣೇಶ ಬಂದನೆ ॥ಪ.॥

ಸಾರಿ ಬಂದ ಲಂಕಾಪುರವ ಮೀರಿದ ರಾವಣನ ಕಂಡು
ಧೀರನು ವಯ್ಯಾರದಿಂದ ॥ಅ.ಪ.॥

ವಾಯುಪುತ್ರನೆ ಶ್ರೀರಾಮನ ದೂತನೆ
ಪ್ರೀಯದಿಂದ ಸೀತಾಂಗನೆಗೆ ಮುದ್ರಿಕೆಯ ತಂದಿತ್ತವನೆ ॥೧॥

ಭೀಮಸೇನನೆ ಕುಂತಿತನಯನೆ ವಿರಾಟನ ಮನೆಯಲ್ಲಿ
ನಿಂತು ಕೀಚಕನ ಸಂಹರಿಸಿದವನೆ ॥೨॥

ಮಧ್ವರಾಯನೆ ಸರ್ವಜ್ಞಶ್ರೇಷ್ಠನೆ ಅದ್ವೈತವು ಗೆದ್ದು
ಪುರಂದರವಿಠಲನ ಮುಂದೆ ನಿಂತವನೆ ॥೩॥

* * * *

ಭೀಮನು ಸರ್ವ ಜನ ಮೋಹಿಸುವಂಥ ಕಾಮಿನಿ ರೂಪವ ತೊಟ್ಟನು ॥ಪ॥

ಸೋಮಸಮಾನನ ತಾಮರ ಸಾಂಬಕ ಹೇಮಾಂಬರ
ಕಂಠೀಮಣಿಗಣಸುತ್ರಾಮ ಕಾಮಿನಿಯ ಮೋಹಿಪ
ಅಭಿರಾಮರೂಪ ನಿಸ್ಸೀಮ ಬಲಾಢ್ಯ ॥ಅ.ಪ.॥

ಬಟಕುಚಪುಟ ಕರಪುಟದಿಂದ ಹಿಗ್ಗಿಸಿ ತೀಡುತ
ಅಂಗುಟ ತುದಿಲೆಳೆದುಟ ರಕ್ತಿಮೆಯನು ನೋಡುತ

## ಹನುಮಜ್ಜಯಂತಿ

ಕುಟಿಲಾಳಕನ್ಯಾವರಿಸುತ ಪಟುಮಾತಾಡುತ
ವಿಟರಿಗೆ ಸ್ಮರ ಸಂಕಟನು ಹೃದಯದಲೂಡುತ
ಪುಟಚಂಡ ಹಾರಿಸಿ ನಟನೆ ಮಾಡುವ
ಆರ್ಭಟಕಂಜಿಹ ವಿಟಪಟಲ ಹಾಂಗಿರಲದು
ವಟುರಿದ್ಧರು ಯತಿ ಮಠಮಂದಿರ
ಲಂಪಟವ ಬಿಟ್ಟು ಮಿಟಿ ಮಿಟಿ ನೋಡುವರೋ ॥೧॥

ಕರಿಕಲಭಗಮನ ಸೊರಗಿದ ಕಟಿ ಕಂಠೀರವು
ವಿರಲನಯನಜಿತ ಎರಳೆಗಳ್ ಮನೆಯನು ಸೇರವು
ಸರಸ ಸ್ವರದಿಂದ ಪರಿಭ್ರಮಿಸಿತು ಕಲಕೀರವು
ಸುರನರವರ ಸುಂದರಿಯರ ಚೆಲಿವಿಕೆ-ಮಾರವು
ಹೆರಳ್ ಭಂಗಾರವು ಸರಳ್ ಮಲ್ಲಿಗೆಸರ
ಹರಳ್ ಕಂಕಣಬಳೆ ಸರಳಣ ಬೆರಳುಂಗುರ
ಅರಳ್‌ಮಲ್ಲಿಗೆಸರ ಕೊರಳ್ ಗಂಧವಕಂಡು
ಮರುಳ್‌ಗೊಂಡ ಜನ ಹಗಲುಧೇನಿಪರೋ ॥೨॥

ಮೃಗಮದತಿಲಕವು ಮುಗುಳ್ ನಗೆಮೊಗ ಬಿಂಬಾಧರ
ಖಗಯುಗದಂದದಿ ಝುಗ ಝುಗಿಸುತಿಯ ಪಯೋಧರ
ಅಘಹರ ರಾಜ ಗೋಪಕ ಸಖ ಪಾರ್ಥ ಸಹೋದರ
ಬಗೆ ಬಗೆಯಲಿ ಮನದಾಗ ಅಘಹರನ ಕೃತಾದರ
ಮುಗುಳ್ ಮಲ್ಲಿಗೆಸರ ತೆಗೆ ತೆಗೆದ್ಹಾಕುತ
ಸೊಗಸು ಸುಗುಣರೂಪ ತುಗುಬಗುಲೆನುತಿರೆ
ಜಗದ ಜನರ ಮನ ಭುಗಿಭುಗಿಲೆನುತಿರೆ
ಬಗೆ ಬಗೆಯಲಿ ಒಂದ್ಹಗಲು ಯುಗವಾಗೆ ॥೩॥

* * * *

## ಹನುಮಜ್ಜಯಂತಿ

ರಾಗ : ಮೋಹನ　　　　ತಾಳ: ಆಟ

ಹನುಮ ನಮ್ಮ ತಾಯಿತಂದೆ ಭೀಮ ನಮ್ಮ ಬಂಧುಬಳಗ
ಆನಂದತೀರ್ಥರೇ ನಮಗೆ ಗತಿಗೋತ್ರವಯ್ಯ ||ಪ||

ತಾಯಿತಂದೆ ಹುಸುಳೆಗಾಗಿ ಸಹಾಯ ಮಾಡಿ ಸಾಕುವಂತೆ
ಆಯಾಸವಿಲ್ಲದೆ ಸಂಜೀವನವ ತಂದೆ
ಗಾಯಗೊಂಡ ಕಪಿಗಳನ್ನು ಸಾಯದಂತೆ ಪೊರೆದ ರಘು
ರಾಮನಂಘ್ರಿಗಳೇ ಸಾಕ್ಷಿ ತ್ರೇತಾಯುಗದೇ ||೧||

ಬಂಧುಬಳಗದಂತೆ ಆಪದ್ಬಾಂಧವನಾಗಿ ಪಾರ್ಥನಿಗೆ
ಬಂದ ದುರಿತಗಳ ಪರಿಹರಿಸಿ
ಅಂಧಕಜಾತರ ಕೊಂದು ನಂದಕಂದಾರ್ಪಣೆಂದ ಗೋ
ವಿಂದನಂಘ್ರಿಗಳೇ ಸಾಕ್ಷಿ ದ್ವಾಪರಯುಗದೇ ||೨||

ಗತಿಗೋತ್ರರಂತೆ ಸಾಧುತತಿಗಳಿಗೆ ಮತಿಯ ತೋರಿ
ಮತಿಗೆಟ್ಟ ಇಪ್ಪತ್ತೊಂದು ಮತವ ಖಂಡಿಸಿ
ಗತಿಗೆಟ್ಟ ಸದ್ವೈಷ್ಣವರಿಗೆ ಸದ್ಗತಿಯ ತೋರಿದೆ ಪರಮಾತ್ಮ
ಗತಿ ಪುರಂದರವಿಠಲನೆ ಸಾಕ್ಷಿ ಕಲಿಯುಗದೇ ||೩||

* * * *

ಮುದ್ದು ಮುಖದಾತ ನಮ್ಮ ಮುಖ್ಯಪ್ರಾಣನಾಥನೋ
ಸದ್ಗುಣವಂದಿತ ವಾಯುಜಾತನೋ ರಾಮದೂತನೋ ||ಪ||

ಜಾನಕೀಶನ ವೈರಿಶೂಲನೋ ಶೂರನೋ ಬಹು ಧೀರನೋ
ಮಾನಿನಿ ಸೀತೆಯ ಕಂಡು ಬಂದನೋ ಮುಂದೆ ನಿಂದನೋ ||೧||

ವಾನಲಿ ರೂಪಿಲಿ ಮುದ್ರೆಯಿತ್ತನೋ ವನ ಕಿತ್ತನೋ
ಆ ನಗರವನೆಲ್ಲ ಸುಟ್ಟನೋ ಮಹು ಧಿಟ್ಟನೋ ||೨||

ಸಾಗರವನು ದಾಟಿದ ಧೀರನೋ ಕಂಠೀರವನೋ
ರಾಗ ತಾಳ ಮೇಳದಲ್ಲಿ ಜಾಣನೋ ಪ್ರವೀಣನೋ ||೩||

ಹನುಮಜ್ಜಯಂತಿ

ನಂಬಿದ ಭಕ್ತರ ಕಾಯ್ದ ದಾತನೋ ಪ್ರಖ್ಯಾತನೋ

ಅಂಬುಜಾಸನ ಪದಕೆ ಬಂದು ನಿಂತನೋ ಹನುಮಂತನೋ ||೪||

ಹಯವದನ ಭಕ್ತ ಚೆಲ್ವತೇಜನೋ ಯತಿರಾಜನೋ

ದಾನವಕುಲಕೆ ಬಹು ಭೀಮನೋ ಸಾರ್ವಭೌಮನೋ ||೫||

* * * *

ರಾಗ : ಕಲ್ಯಾಣಿ ತಾಳ: ಅಟ್ಟ

ಅಂಜಿಕಿನ್ಯಾತಕಯ್ಯಾ ಸಜ್ಜನರಿಗೆ

ಭಯವು ಇನ್ಯಾತಕಯ್ಯಾ ||ಪ||

ಸಂಜೀವರಾಯರ ಸ್ಮರಣೆ ಮಾಡಿದ ಮೇಲೆ ||ಅ.ಪ.||

ಕನಸಿಲಿ ಮನಸಿಲಿ ಕಳವಳವಾದರೆ

ಹನುಮನ ನೆನೆದರೆ ಹಾರಿಹೋದಗೆ ಭೀತಿ ||೧||

ರೋಮ ರೋಮಕೆ ಕೋಟಿ ಲಿಂಗವುದುರಿಸಿದ

ಭೀಮನ ನೆನೆದರೆ ಬಿಟ್ಟುಹೋಗದೆ ಭೀತಿ ||೨||

ಪುರಂದರವಿಠಲನ ಪೂಜೆಯ ಮಾಡುವ

ಗುರು ಮಧ್ವರಾಯರ ಸ್ಮರಣೆ ಮಾಡಿದ ಮೇಲೆ ||೩||

* * * *

ರಾಗ : ಆನಂದಭೈರವಿ ತಾಳ: ರೂಪಕ

ವೀರಹನುಮ ಬಹುಪರಾಕ್ರಮ ಸುಜ್ಞಾನವಿತ್ತು

ಪಾಲಿಸಯ್ಯ ಜೀವರೋತ್ತಮ ||ಪ||

ರಾಮದೂತನೆನಿಸಿಕೊಂಡೆ ನೀ ರಾಕ್ಷಸರ ವನವನೆಲ್ಲ ಜಯಿಸಿ ಬಂದೆ ನೀ

ಜಾನಕಿಗೆ ಉಂಗುರವಿತ್ತು ಜಗತಿಗೆಲ್ಲ ಹರುಷವಿತ್ತು

ಜಾತಿಮಣಿಯ ರಾಮಗಿತ್ತು ಲೋಕದಿ ಪ್ರಖ್ಯಾತನಾದೆ ||೧||

ಗೋಪಿಸುತನ ಪಾದಪೂಜಿಸಿ ಗದೆಯ ಧರಿಸಿ ಕೌರವರಾ ಬಲವ ಸವರಿಸಿ

ಹನುಮಜ್ಜಯಂತಿ

ದ್ರೌಪದಿಯ ಮೊರೆಯ ಕೇಳಿ ಕರುಣದಿಂದ ತ್ವರದಿ ಬಂದು

ಪಾಪಿ ಕೀಚಕನನು ಕೊಂದು ಭೀಮಸೇನನೆನಿಸಿಕೊಂತೆ ||೨||

ಮಧ್ವಗೇಹನಲ್ಲಿ ಜನಿಸಿ ನೀ-ಬಾಲ್ಯದಲ್ಲಿ ಮಸ್ಕರಿಯ ರೂಪಗೊಂಡೇ ನೀ

ಸತ್ಯವತಿಯ ಸುತನ ಭಜಿಸಿ ಸಮ್ಮುಖದಲ್ಲಿ ಭಾಷ್ಯ ಮಾಡಿ

ಸಜ್ಜನರನು ಪಾಲಿಸಿದ ಪುರಂದರವಿಠ್ಠಲನ ದಾಸ ||೩||

* * * *

ಎಷ್ಟು ಸಾಹಸವಂತ ನೀನೇ ಬಲವಂತ

ದಿಟ್ಟಮೂರುತಿ ಭಳಿಭಳಿರೆ ಹನುಮಂತ ||ಪ||

ಅಟ್ಟುವ ಖಳರೆದೆ ಮೆಟ್ಟಿ ತುಳಿಯುತಲಿ

ಕುಟ್ಟಿ ಚೆಂಡಾಡಿದ ದಿಟ್ಟ ನೀನಹುದೋ ||ಅ.ಪ.||

ರಾಮರಪ್ಪಣೆಯಿಂದ ಶರಧಿಯ ದಾಟಿ

ಆ ಮಹಾ ಅಸುರೆಯ ಸೀಳಿ ಬಿಸಾಟಿ

ಸ್ವಾಮಿ ಕಾರ್ಯವನುಕೂಲದಿ ಯೋಚಿಸಿ

ಪ್ರೇಮದಿ ನಡೆದನು ಆರೆಲೆ ಸಾಟಿ ||೧||

ದೂರದಿಂದ ಅಸುರನ ಪುರವನೆ ನೋಡಿ

ಮನದಿ ಶ್ರೀರಾಮರ ಸ್ಮರಣೆಯ ಮಾಡಿ

ಹಾರುತ ಹರುಷದಿ ಒರಿಸಿ ಲಂಕಿಣಿಯನು

ವಾರಿಜ ಮುಖಿಯಳ ಕಂಡು ಮಾತಾಡಿ ||೨||

ರಾಮರ ಕ್ಷೇಮವ ರಮಣಿಗೆ ಹೇಳಿ

ತಾಮಸ ಮಾಡದೆ ಮುದ್ರಿಕೆಯ ನೀಡಿ

ಭೂಮಿಜೆ ಜಾನಕಿ ಕುರುಹು ನೀಡಲಾಗಿ

ಆ ಮಹಾ ವನದೊಳು ಫಲಗಳ ಬೇಡಿ ||೩||

ಕಣ್ಣಿಗೆ ಬೇಕಾದ ಹಣ್ಣನ್ನು ಸವಿದ್ಯೋ

ಹಣ್ಣಿನ ನೆವದಲಿ ಅಸುರರ ಬಡಿದ್ಯೋ

ಟ್ಟಣನೆಟಣ್ಣನೆ ಹಾರಿ ನೆಗೆ ನೆಗೆದಾಡುತ
ಬಣ್ಣಿಸಿ ಅಸುರರ ಬಲವನು ಮುರಿದ್ಯೋ ॥೪॥
ಶೃಂಗಾರವನದಲಿ ಇದ್ದ ರಾಕ್ಷಸರ
ಅಂಗವನಿಳಿಸಿದ್ಯೋ ಅತಿಶಯ ಶೂರ
ನುಂಗಿ ಅಸ್ತ್ರವನು ಅಕ್ಷಯ ಕುಮಾರನ
ಭಂಗಿಸಿ ಬಿಸುಟಿದ್ಯೋ ಬಂದ ರಾಕ್ಷಸರ ॥೫॥
ದೂರ ಪೇಳುವರೆಲ್ಲ ರಾವಣನೊಡನೆ
ಚೀರುತ ಕರೆಸಿದ ಇಂದ್ರಜಿತುವನ್ನೇ
ಚೋರ ಕಪಿಯನು ಹಿಡಿದು ತಾ ಎನುತ
ಶೂರರ ಕಳಿಸಿದ ನಿಜಸುತನೊಡನೆ ॥೬॥
ಹಿಡಿದನು ಇಂದ್ರಜಿತು ಕಡುಕೋಪದಿಂದ
ಹೆಡಮುರಿಗೆ ಕಟ್ಟಿದ ಬ್ರಹ್ಮಾಸ್ತ್ರದಿಂದ
ಗುಡುಗುಡುಗುಡುತ ಕಿಡಿಕಿಡಿಕಾರುತ
ನಡೆದನು ಲಂಕೆಯ ಅಸುರನಿದ್ದೆಡೆಗೆ ॥೭॥
ಕಂಡ ರಾವಣನು ಉದ್ದಂಡ ಕಪಿಯನ್ನ
ಮಂಡೆಯ ತೂಗುತ ಮಾತನಾಡಿಸಿದ
ಭಂಡ ಮಾಡುವೆನು ಬಿಡು ಬಿಡು ಕಪಿಯನ್ನ
ದಂಡು ದುರದುರನೆ ನಡೆದನಾಗ ॥೮॥
ಛಲವ್ಯಾಕೋ ನಿನಗಿಷ್ಟು ಎಲೆ ಕೋಡಿಗನೇ
ನೆಲೆಯಾವುದ್ಹೇಳೋ ನಿನ್ನೊಡೆಯನ್ಹೆಸರನ್ನೇ
ಬಲವಂತ ರಾಮರ ಭಂಟ ಬಂದಿಹನೋ
ಹಲವು ಮಾತ್ಯಾಕೆ ಹನುಮನು ನಾನೇ ॥೯॥
ಬಡರಾವಣ ನಿನ್ನ ಬಿಡದು ಹಾಕುವೆನು
ಎನ್ನೊಡೆಯನಪ್ಪಣೆ ಇಲ್ಲೆಂದು ತಾಳಿದೆನೆ

ಪುಡಿ ಮಾಡುವೆನು ಫುಲ್ಲ ರಾಕ್ಷಸನೆ
ಕೊಡುವೆನೆ ನಿನ್ನಷ್ಟಣೆ ಅಕ್ಷರವನೆ ॥೧೦॥
ನಿನ್ನಂಥ ದೂತರು ರಾಮನ ಬಳಿಗೆ
ಇನ್ನೆಷ್ಟು ಮಂದಿಗಳುಂಟು ಹೇಳೋ ನೀ ತ್ವರಿಯಾ
ನನ್ನಂಥ ದೂತರು ನಿನ್ನಂಥ ಪ್ರೇತರು
ಇನ್ನೂರು ಮುನ್ನೂರು ಕೋಟಿ ಕೇಳರಿಯಾ ॥೧೧॥
ಕಡು ಕೋಪದಿಂದಲಿ ಖೂಳ ರಾವಣನು
ಸುಡಿ ಸುಡಿ ಬಾಲವ ಸುತ್ತಿ ವಸನವನು
ಒಡೆಯನ ಮಾತಿಗೆ ತಡೆ ಬಡೆಯಿಲ್ಲದೆ
ಒಡನೆ ಮುತ್ತಿದರು ಗಡಿಮನೆಯವರು ॥೧೨॥
ತಂದರು ವಸನವ ತಂಡ ತಂಡದಲೆ
ಒಂದೊಂದು ಮೂಟೆಯು ಎಂಭತ್ತು ಕೋಟಿ
ಚಂದದಿ ಹರಳಿನ ತೈಲದಿ ನಿಲ್ಲಿಸಿ
ನಿಂದ ಹನುಮನು ಬಾಲವ ಬೆಳೆಸುತ ॥೧೩॥
ಶಾಲು ಸಕಲಾತಿಯು ಸಾಲ್ದೆ ಇರಲು
ಸೀತೆಯ ವಸ್ತ್ರವ ಸೆಳೆದು ತಾರೆನಲು
ಬಾಲವ ನಿಲ್ಲಿಸಿ ಬೆಂಕಿಯ ನೋಡುತಲೆ
ಕಾಲ ಮೃತ್ಯುವಿನ ಕೆಣಕಿದರಲ್ಲೇ ॥೧೪॥
ಕುಣಿಕುಣಿದಾಡುತ ಕೂಗಿ ಬೊಬ್ಬಿಡುತ
ಇಣಕಿಣಕಿ ನೋಡುತ ಅಸುರರ ಅಣಕಿಸುತ
ಝುಣಝುಣವೆನ್ನುತ ಬಾಲದ ಗಂಟೆಯು
ಮನದಿ ಶ್ರೀರಾಮರ ಸ್ಮರಣೆಯ ಮಾಡುತ ॥೧೫॥
ಮಂಗಳಂ ಶ್ರೀರಾಮಚಂದ್ರರೆ ನಿಮಗೆ
ಮಂಗಳಂ ಭೂಪತಿ ಚರಣಗಳಿಗೆ

ಮಂಗಳವೆನುತಲಿ ರಾವಣ ನೋಡಲಾಗಿ
ಭಂಗಿಸಿ ಅವನ ಗಡ್ಡಂಗಳಿಗೆ ॥೧೬॥

ಹತ್ತಿತು ಅಸುರನ ಗಡ್ಡಮೀಸೆಗಳು
ಸುತ್ತಿತು ಹೊಗೆಯು ಬ್ರಹ್ಮಾಂಡಕೋಟಿಗಳು
ಚಿತ್ತದಿ ರಾಮರು ಕೋಪಿಸುವರೆಂದು
ಚಿತ್ತದಿ ನಡೆದನು ಅರಸನಿದ್ದೆಡೆಗೆ ॥೧೭॥

ಸೀತೆಯ ಕ್ಷೇಮವ ಶ್ರೀರಾಮರಿಗ್ಹೇಳಿ
ಪ್ರೀತಿಯಿಂದಲಿ ಕೊಟ್ಟ ಕುರುಹು ಶರದಲಿ ಕಳಿ
ಸೇತುವೆ ಕಟ್ಟಿ ಚದುರಂಗ ಮಾರ್ಬಲ
ಮುತ್ತಿತು ಕೋಟೆಯ ಸೂರೆಗೈಯುತಲಿ ॥೧೮॥

ವೆಗ್ಗಳವಾಯಿತು ರಾಮರ ದಂಡು
ಮುತ್ತಿತು ಅಸುರರ ಕೋಟೆಯ ಕಂಡು
ಹೆಗ್ಗದಿ ರಾಯರ ಬಗ್ಗು ಬಡಿವೆ ಎಂದು
ಝುಗ್ಗಳೆ ಪೇಳ್ಯೆಸಿ ರಾವಣಗಂದು ॥೧೯॥

ರಾವಣ ಮೊದಲಾದ ರಾಕ್ಷಸರ ಕೊಂದು
ಭಾವ ಶುದ್ಧದಿ ವಿಭೀಷಣಗೆ ಬಾಳೆಂದು
ದೇವಿ ಸೀತೆಯರನೊಡಗೂಡಿಕೊಂಡು
ದೇವ ಶ್ರೀರಾಮರು ರಾಜ್ಯವಾಳಿದರು ॥೨೦॥

ಶಂಖದ್ಯೆಯ್ತನ ಕಂದ ಶರಣು ಶರಣಯ್ಯ
ಶಂಖಗಿರಿಯಲಿ ನಿಂತ ಹನುಮಂತರಾಯ
ಪಂಕಜಾಕ್ಷ ಶ್ರೀ ಹಯವದನ ಕಟಾಕ್ಷದಿ
ಬಿಂಕದಿ ಪಡೆದನು ಅಜನ ಪದವಿಯನು ॥೨೧॥

* * * *

## ಹನುಮಜ್ಜಯಂತಿ

ಹನೂಮಾನ್ ಕಿ ಜೈ

ಜೈ ಜೈ ಹನೂಮಾನ್ ಕಿ ಜೈ ||ಪ||

ಥೈ ಥೈ ಥೈ ಥೈ ಥೈ ತಕ ಥೈ ತಕ ತಕಿಟ ತಕ ಜೈ ಹನೂಮಾನ್ ||ಅ.ಪ.||

ಹರಿ ಸರ್ವೋತ್ತಮನೆಂಬುವ ತತ್ತ್ವಕ್ಕೆ
ಜಯಭೇರಿಯ ಹೊಡೆದೆಯೊ ಹನುಮಾ
ಢಣ ಢಣ ಢಣ ಢಣ ಢಣ ಢಣ ಢಣ ಢಣ
ಜಯಭೇರಿಯ ನಾದವು ಕೇಳುತಿದೆ ||೧||

ವೈಷ್ಣವ ತತ್ತ್ವಗಳನುಬೋಧಿಸಿ
ಜಯಭೇರಿಯ ಹೊಡೆದೆಯೊ ಬಲಭೀಮಾ
ಢಣ ಢಣ ಢಣ ಢಣ ಢಣ ಢಣ ಢಣ ಢಣ
ಜಯಭೇರಿಯ ನಾದವು ಕೇಳುತಿದೆ ||೨||

ಮೋಕ್ಷಕೆ ಒಳ್ಳೆಯ ಮಾರ್ಗವ ತೋರುತ
ಜಯಭೇರಿಯ ಹೊಡೆದೆಯೋ ಮಧ್ವ
ಢಣ ಢಣ ಢಣ ಢಣ ಢಣ ಢಣ ಢಣ ಢಣ
ಜಯಭೇರಿಯ ನಾದವು ಕೇಳುತಿದೆ ||೩||

ಅಂದಿನ ನಾದವು ಇಂದು ನುಡಿಯುತಿರೆ
ಮಂದಿಗಳೆಲ್ಲರು ಕೇಳುವರು
ತಂದೆ ಪ್ರಸನ್ನನ ಮಂದಿರದಿ ಇದು
ಎಂದೆಂದಿಗೂ ಶಾಶ್ವತವಿರಲಿ ||೪||

* * * *

ರಾಗ : ಲಹರಿ (ಕಾಫಿ) ತಾಳ: ಆದಿ (ತೀನ್‌ತಾಲ್)

ಎಂತು ವರ್ಣಿಪೆನಮ್ಮಮ್ಮಾ
ಯಂತ್ರೋದ್ಧಾರಕನಾಗಿ ಮೆರೆವನಾ ||ಪ||

ಹನುಮಜ್ಜಯಂತಿ

ಕೋತಿರೂಪದಲಿ ಬಂದು ಭೂತಳಕೆ ಬೆಡಗು ತೋರಿ
ಈ ತುಂಗಭದ್ರೆಯಲ್ಲಿ ಖ್ಯಾತಿಯಾಗಿಪ್ಪ ಯತಿಯಾ ||೧||
ಸುತ್ತಲು ವಾನರ ಬದ್ಧ ಮತ್ತೆ ವಲಯಾಕಾರ ಮಧ್ಯ
ಚಿತ್ರಕೋಣ ಅದರೊಳು ನಿತ್ಯದಲಿಯಿಪ್ಪ ಯತಿಯಾ ||೨||
ವ್ಯಾಸ ಮುನಿರಾಯರಿಂದ ಈ ಶಿಲೆಯೊಳಗೆ ನಿಂದು
ಶ್ರೀಶ ವಿಜಯವಿಟ್ಠಲನ್ನ ಏಸು ಬಗೆ ತುತಿಪನ್ನ ||೩||

* * * *

ರಾಗ : ಪಂತುವರಾಳಿ ತಾಳ: ಛಾಪು

ವಾತನ್ನ ಜಯಾಜಾತನ್ನ ಲೋಕ
ಪ್ರೀತನ್ನ ಸ್ತುತಿಸಿ ಖ್ಯಾತನ್ನ ||ಪ||
ವಿಷವನುಂಗದ ಮಹಾಶೌರ್ಯನ್ನ ನಿತ್ಯ
ಅಸಮ ಸುಂದರ ಮತಿಧಾರ್ಯನ್ನ
ನಿಶಾಚರ ಕುಲದೋಷ ಸೂರ್ಯನ್ನ, ಆರಾ
ಧಿಸುವ ಭಕ್ತರ ಸುಕಾರ್ಯನ್ನ ||೧||
ವಾನರ ಕುಲದೊಳು ಧೈರ್ಯನ್ನ ಮುದ್ದು
ಆನನ ಗೀರ್ವಾಣವರ್ಯನ್ನ
ಆನಂದ ವಿಜ್ಞಾನ ಚರ್ಯನ್ನ ದುಷ್ಟ
ದಾನವರಳಿದತಿ ವೀರ್ಯನ್ನ ||೨||
ದ್ವಿಜರಾಜ ಕುಲಾಗ್ರಣಿ ಭೀಮನ್ನ ಮಹ
ದ್ವಿಜಕೇತನಂಘ್ರಿಗೆ ಪ್ರೇಮನ್ನ
ದ್ವಿಜರ ಪಾಲಿಸಿದ ನಿಸ್ಸೀಮನ್ನ ಕುರು
ವ್ರಜವ ಸದೆದ ಸಾರ್ವಭೌಮನ್ನ ||೩||
ಅದ್ವೈತಮತ ಕೋಲಾಹಲನ್ನ ವೇದ
ಸಿದ್ಧಾಂತ ಶುಭಗುಣ ಶೀಲನ್ನ

ಹನುಮಜ್ಜಯಂತಿ

ಸದ್ವೈಷ್ಣವರ ಪಾಲನ್ನ ಗುರು

ಮಧ್ವಮುನಿ ಗುಣಲೋಲನ್ನ ||೪||

ಚಾರುಚರಿತ ನಿರ್ದೋಷನ್ನ ಲೋಕ

ಮೂರರೊಳಗೆ ಪ್ರಕಾಶನ್ನ

ಧೀರ ವಿಜಯ ವಿಠ್ಠಲೇಶನ್ನ ಬಿಡದೆ

ಆರಾಧಿಪ ಭಾರತೀಶನ್ನ ||೫||

* * * *

ರಾಗ : ಆರಭಿ

ಸೂತ್ರನಾಮಕ ಸುಂದರನೇಕ ಸೂತ್ರನಾಮಕ ||ಪ||

ಸೂತ್ರನಾಮಕ ಸತ್ಪಾತ್ರ ಗರುಡ ಶಿಖಿ

ನೇತ್ರ ವಿನುತ ಶುಭಗಾತ್ರಪವಿತ್ರ ||ಅ.ಪ.||

ರಾಮಪದ ಭೃಂಗ

ರಾವಣಮದಭಂಗ ಕಾಮಗಜಸಿಂಗ

ತಾಮಸ ಕುಲಕೆ ನೀ ಧೂಮಕೇತು ಬುಧ

ಸಾಮನ ಸಾಗ್ರಣಿ ಕಾಮಿತಫಲದಾ ||೧||

ಪಾಂಡುನಂದನ ಪಾಲಿಸು ಎನ್ನಾ

ಖಂಡಪಾವನಾ

ಅಂಡಜಾಧಿಪನ ಕಂಡು ಭಜಿಸಿ ದೋ

ರ್ದಂಡ ಖಳಕುಲ ಚಂಡಪ್ರಚಂಡಾ ||೨||

ಜ್ಞಾನದಾಯಕಾ

ಆನಂದತೀರ್ಥ ದೀನಪೋಷಕ

ಭಾನು ಕೋಟಿತೇಜ ವ್ಯಾಸವಿಠಲನ

ಧ್ಯಾನದೊಳಿಹ ಮಾನಸಹಂಸಾ ||೩||

* * * *

## ಹನುಮಜ್ಜಯಂತಿ

ರಾಗ : ಕಾಂಬೋದಿ ತಾಳ: ಝಂಪೆ

ಅಪಮೃತ್ಯು ಪರಿಹರಿಸೋ ಅನಿಲದೇವ
ಕೃಪಣ ವತ್ಸಲನೆ ಕಾವರ ಕಾಣೆ ಜಗದೊಳಗೆ ||ಪ||

ನಿನಗಿನ್ನು ಸಮರಾದ ಅನಿಮಿತ್ತ ಬಾಂಧವರು
ಎನಗಿಲ್ಲ ಆವಾವ ಜನುಮದಲ್ಲಿ
ಅನುದಿನವು ಎಮ್ಮ ನೀನುದಾಸೀನ ಮಾಡುವುದು
ಅನುಚಿತವು ಜಗದಿ ಸಜ್ಜನ ಶಿಖಾಮಣಿಯೆ ||೧||

ಕರಣಾಭಿಮಾನಿಗಳು ಕಿಂಕರರು ಮೂರ್ಲೋಕ
ಧೊರೆ ನಿನ್ನೊಳಗಿಪ್ಪ ಸರ್ವಕಾಲ
ಪರಿಸರನೆ ಈ ಭಾಗ್ಯದೊರೆತನಕೆ ಸರಿಯುಂಟೆ
ಗುರುವರನೆ ನೀ ದಯಾಕರನೆಂದು ಬಿನ್ನೈಪೆ ||೨||

ಭವರೋಗ ಮೋಚಕನೆ ಪವಮಾನ ರಾಯ ನಿ
ನ್ನವರವನು ನಾನು ಮಾಧವ ಪ್ರಿಯನೆ
ಜವನ ಬಾಧೆಯ ಬಿಡಿಸು ಅವನಿಯೊಳು ಸುಜನರಿಗೆ
ದಿವಿಜಗಣ ಮಧ್ಯದೊಳು ಪ್ರವರ ನೀನಹುದೋ ||೩||

ಜ್ಞಾನಾಯು ರೂಪಕನು ನೀನಹುದೊ ವಾಣಿ ಪಂ
ಚಾನವಾದ್ಯಮರರಿಗೆ ಪ್ರಾಣದೇವ
ದೀನವತ್ಸಲನೆಂದು ನಾ ನಿನ್ನ ಮೊರೆಹೊಕ್ಕೆ
ದಾನವಾರಣ್ಯ ಕೃಶಾನು ಸರ್ವದಾ ಎಮ್ಮ ||೪||

ಸಾಧನ ಶರೀರವಿದು ನೀ ದಯದಿ ಕೊಟ್ಟದ್ದು
ಸಾಧರಣವಲ್ಲ ಸಾಧು ಪ್ರಿಯನೆ
ವೇದವಾದೋದಿತ ಜಗನ್ನಾಥವಿಠ್ಠಲನ
ಪಾದಭಜನೆಯನಿತ್ತು ಮೋದ ಕೊಡು ಸತತ ||೫||

* * * *

## ಹನುಮಜ್ಜಯಂತಿ

ರಾಗ : ತಾಳ: ಆದಿ

ಮಾರುತಿ ನಿನ್ನಾ ನಿರುತದಿ ಭಜಿಪೆ
ತ್ವರಿತದಿ ಹರಿ ಸರ್ವೋತ್ತಮನೆಂಬುವ
ಸರಸ ವಿಜ್ಞಾನವ ಸರಿ ಇಲ್ಲದೆ ಇತ್ತು
ಪರಿಪಾಲಿಸು ಎಂದು ಶಿರಸದಿ ನಮಿಪೆ
ಸರಿಯಾರಯ್ಯಾ ನಿನಗೀ ಸರಸಿಜಾಂಡದೊಳು
ಆರಿಸಿ ನೋಡಲು ಆರಾರು ಇಲ್ಲವೊ
ಕಾರುಣ್ಯಸಾಗರ ಕರುಣಿಸೇ ನೀ ಎನ್ನಾ
ಹರಿ ತಾ ಕರುಣಿಪನೆಂದು
ಅರಿತು ನಿನ್ನಯ ದಿವ್ಯ ಚರಣ ಸೇರಿದೆನಯ್ಯಾ
ಸರಿಬಂದದ್ದು ಮಾಡೋ
ಹರಿ ಕುಲಾವರಿಯಾನೆ
ಪರಿಪರಿ ಜನರನ್ನು ಪಾಲಿಸಿ ಎನ್ನನು
ದೂರದಿ ಇಟ್ಟರೆ ದೊರೆತನವೇನಯ್ಯಾ
ಸಾರುವೆ ಸಾರುವೆ ಸರಸಿಜನಾಭನ ಸುತನೆ
ಆರುಮೂರೆರಡೊಂದು ಸಾವಿರಾ
ಮೂರೆರಡುಶತಶ್ವಾಸ ಜಪಗಳನು
ಮೂರು ಜೀವರಲ್ಲಿ ನೀರಜಜಾಕಲ್ಪ
ಪರಿಯಂತರ ಮಾಡಿ ಅವರವರ ಗತಿಯಾ
ಮರಿಯದೆ ನೀಡುವಿ ಗಿರಿಶಾನುತಪಾದ
ಗುರುಜಗನಾಥವಿಠಲನ ಅರಿವಂತೆ ಮಾಡೋ ಧೀರಾ ಕರುಣಿಯೇ ॥

* * * *

## ಹೆಸರುಬೇಳೆ/ಕಡಲೆಬೇಳೆ ಕೋಸಂಬರಿ

**ಬೇಕಾಗುವ ಪದಾರ್ಥಗಳು** : ಒಂದು ಪಾವು ಹೆಸರುಬೇಳೆ / ಕಡಲೆಬೇಳೆ, ಒಂದು ಹೋಳು ತೆಂಗಿನಕಾಯಿ, ಕೊತ್ತಂಬರಿ ಸೊಪ್ಪು ಒಂದು ಕಟ್ಟು, ಆರೇಳು ಹಸಿ ಮೆಣಸಿನಕಾಯಿ, ಚೂರು ಇಂಗು, ಸಾಸಿವೆ, ಕಡಲೇಕಾಯಿ ಎಣ್ಣೆ ಹಾಗೂ ಉಪ್ಪಿನ ಪುಡಿ.

**ತಯಾರಿಸುವ ವಿಧಾನ :**

ಶುದ್ಧಗೊಳಿಸಿದ ಹೆಸರುಬೇಳೆ/ಕಡಲೆಬೇಳೆಯನ್ನು ಚೆನ್ನಾಗಿ ತೊಳೆದು ನೆನೆ ಹಾಕಬೇಕು. ಒಂದೆರಡು ಗಂಟೆಗಳ ಕಾಲ ಚೆನ್ನಾಗಿ ನೆನೆದ ಬಳಿಕ ಬಸಿ ಹಾಕಬೇಕು. ತೆಂಗಿನಕಾಯಿಯನ್ನು ತುರಿದಿಟ್ಟುಕೊಂಡಿರಬೇಕು. ಬಸಿ ಹಾಕಿರುವ ಬೇಳೆಯನ್ನು ಸ್ಟೀಲ್ ಬೇಸನ್‌ಗೆ ಹಾಕಿಕೊಳ್ಳಬೇಕು. ಹಸಿ ಮೆಣಸಿನಕಾಯಿಯನ್ನು ಸಣ್ಣ ಸಣ್ಣಗೆ ಹೆಚ್ಚಿಟ್ಟುಕೊಂಡಿರಬೇಕು. ಬಾಣಲೆಯನ್ನು ಒಲೆಯ ಮೇಲಿರಿಸಿ ಮೂರು ಚಮಚ ಎಣ್ಣೆಯನ್ನು ಹಾಕಬೇಕು. ಎಣ್ಣೆ ಕಾದ ನಂತರ ಸಾಸಿವೆ ಹಾಕಿ, ಸಾಸಿವಿ ಸಿಡಿದ ನಂತರ ಸಣ್ಣಗೆ ಹೆಚ್ಚಿಟ್ಟುಕೊಂಡ ಹಸಿಮೆಣಸಿನಕಾಯಿ, ಕೊತ್ತಂಬರಿ ಸೊಪ್ಪು, ಇಂಗು ಹಾಕಿ ಒಗ್ಗರಣೆ ಮಾಡಿಕೊಳ್ಳಬೇಕು. ಪಾತ್ರೆ ಅಥವಾ ಬೇಸನ್‌ನಲ್ಲಿ ಹಾಕಿಕೊಂಡ ಹೆಸರುಬೇಳೆಗೆ ಒಗ್ಗರಣೆ ಕಾಯಿತುರಿ ಹಾಗೂ ರುಚಿಗೆ ತಕ್ಕಷ್ಟು ಉಪ್ಪು ಸೇರಿಸಿ ಚೆನ್ನಾಗಿ ಕೈಯಾಡಿಸಬೇಕು. (ಇಷ್ಟವಾದಲ್ಲಿ ಒಂದು ನಿಂಬೆಹಣ್ಣಿನ ರಸವನ್ನು ಹಿಂಡಿ ಕೋಸಂಬರಿಗೆ ಬೆರಸಬಹುದು).

## ನಿಂಬೆಹಣ್ಣಿನ ಪಾನಕ

**ಬೇಕಾಗುವ ಪದಾರ್ಥಗಳು :**

ಎರಡು ಅಥವಾ ಮೂರು ದಪ್ಪನೆಯ ನಿಂಬೆಹಣ್ಣುಗಳು, ಒಂದು ಪಾತ್ರೆಯಲ್ಲಿ ನೀರು, ಸಕ್ಕರೆ, ಕೇಸರಿಬಣ್ಣದ ಚಿಟಿಕೆ, ಪಚ್ಚಕರ್ಪೂರ ಮತ್ತು ಏಲಕ್ಕಿ.

ಹನುಮಜ್ಜಯಂತಿ

**ತಯಾರಿಸುವ ವಿಧಾನ** : ನಿಂಬೆಹಣ್ಣುಗಳನ್ನು ಎರಡಾಗಿ ಸೀಳಿ ರಸವನ್ನು ನೀರಿರುವ ಪಾತ್ರೆಗೆ ಹಿಂಡಿ, ಸಕ್ಕರೆ ಬೆರೆಸಿ ಒಂದು ಚಿಟಿಕೆ ಕೇಸರಿ ಬಣ್ಣವನ್ನು ಹಾಕಿ, ಒಂದು ಚೂರು ಪಚ್ಚಕರ್ಪೂರ ಹಾಗೂ ಏಲಕ್ಕಿ ಪುಡಿಯನ್ನು ಹಾಕಿ ಪಾನಕವನ್ನು ತಯಾರಿಸಬಹುದು.

## ಬೇಲದಹಣ್ಣಿನ ಪಾನಕ

**ಬೇಕಾಗುವ ಪದಾರ್ಥಗಳು** :

ಮಾಗಿದ ಬೇಲದ ಹಣ್ಣುಗಳು, ಎರಡು ಬೆಲ್ಲದ ಅಚ್ಚು ಮತ್ತು ಏಲಕ್ಕಿ.

**ತಯಾರಿಸುವ ವಿಧಾನ** : ಬೇಲದ ಹಣ್ಣು ಒಡೆದು ಅದನ್ನು ತೆಂಗಿನಕಾಯಿ ತುರಿಯಂತೆ ಈಳಿಗೆಮಣೆಯಲ್ಲಿ ತುರಿದು ನೀರಿಗೆ ಬೆರೆಸಿಟ್ಟು, ಬೆಲ್ಲದ ಪುಡಿಯನ್ನು ನೀರಿನ ಮಿಶ್ರಣಕ್ಕೆ ಸೇರಿಸಿ ಕಲಸಿ, ಏಲಕ್ಕಿಪುಡಿಯನ್ನು ಹಾಕಿ ಬೇಲದ ಹಣ್ಣಿನ ಪಾನಕವನ್ನು ತಯಾರಿಸಬಹುದು.

## ನಿಂಬೆಹಣ್ಣಿನ ಚಿತ್ರಾನ್ನ

**ಬೇಕಾಗುವ ಪದಾರ್ಥಗಳು** : ಅರ್ಧ ಕೆ.ಜಿ. ಅಕ್ಕಿ, ಎರಡು ನಿಂಬೆಹಣ್ಣು, ಉಪ್ಪು, ಕರಿಬೇವು ಕಡಲೆಕಾಯಿ ಬೀಜ, ಅರಿಶಿನ ಒಂದು ಚಿಟಿಕೆ, ಕಡಲೆಬೇಳೆ, ಕೊತ್ತಂಬರಿ ಸೊಪ್ಪು, ಎಣ್ಣೆ, ಹಸಿಕೊಬ್ಬರಿ ತುರಿ, ಹಸಿಮೆಣಸಿಕಾಯಿ.

**ತಯಾರಿಸುವ ವಿಧಾನ** : ಕಾದ ಎಣ್ಣೆಗೆ ಸಾಸಿವೆ, ಕಡಲೆಬೇಳೆ, ಕಡಲೆಕಾಯಿ ಬೀಜ, ಹಸಿಮೆಣಸಿನಕಾಯಿ, ಅರಿಶಿನ, ಕರಿಬೇವು ಹಾಕಿ ಒಗ್ಗರಣೆ ಮಾಡಿಕೊಂಡು ತಟ್ಟೆ ಅಥವಾ ಬೇಸನ್‌ನಲ್ಲಿ ಹರಡಿಕೊಂಡ ಅನ್ನಕ್ಕೆ ಉಪ್ಪು, ಮತ್ತು ನಿಂಬೆಹಣ್ಣಿನ ರಸವನ್ನು ಹಾಕಿ ಹನುಮಂತದೇವರ ಹಾಡುಗಳನ್ನು ಹೇಳಿಕೊಂಡು ಹೀಗೆ ನಿಂಬೆಹಣ್ಣಿನ ಚಿತ್ರಾನ್ನವನ್ನು ಸಿದ್ಧಗೊಳಿಸಬೇಕು. ಅನಂತರ ನೇವೇದ್ಯಕ್ಕೆ ಮಂಡಲದ ಮೇಲಿಡಬೇಕು.

# ಮಾವಿನಕಾಯಿ ಚಿತ್ರಾನ್ನ

**ಬೇಕಾಗುವ ಪದಾರ್ಥಗಳು** : ಅರ್ಧ ಕೆ.ಜಿ. ಅಕ್ಕಿ, ಎರಡು ದಪ್ಪನೆಯ ಮಾವಿನ ಕಾಯಿ, ತೆಂಗಿನ ಕಾಯಿ ಒಂದು ಹೋಳು, ಐದಾರು ಹಸಿ ಅಥವಾ ಒಣಮೆಣಸಿನಕಾಯಿ, ಕಡಲೆಬೇಳೆ, ಉದ್ದಿನಬೇಳೆ, ಒಂದು ಚಮಚ ಸಾಸಿವೆ, ಅರಿಶಿನ, ಕಡಲೆಕಾಯಿ ಬೀಜ, ಕರಿಬೇವು ಮತ್ತು ಇಂಗು, ಉಪ್ಪು, ಕಡಲೆಕಾಯಿ ಎಣ್ಣೆ.

**ತಯಾರಿಸುವ ವಿಧಾನ** : ಮಾವಿನ ಕಾಯಿ ಸಿಪ್ಪೆ ಹೆರೆದು, ಸಣ್ಣ ಸಣ್ಣ ಹೋಳುಗಳಾಗಿ ಹೆಚ್ಚಿಟ್ಟುಕೊಂಡು ಒರಳಿನಲಿ ಹೋಳುಗಳು, ಒಂದು ಚಿಟಿಕೆ ಅರಿಶಿನ, ಉಪ್ಪನ್ನು ಹಾಕಿ ಚೆನ್ನಾಗಿ ರುಬ್ಬಿ, ಬಾಣಲೆಯನ್ನು ಒಲೆಯ ಮೇಲಿರಿಸಿ ಅರ್ಧ ಬಟ್ಟಲು ಎಣ್ಣೆ ಹಾಕಿ ಸಾಸಿವೆ, ಕಡಲೆಬೇಳೆ, ಕಡಲೆಕಾಯಿ ಬೀಜ, ಉದ್ದಿನಬೇಳೆ, ಕರಿಬೇವು ಹಾಕಿ ಒಗ್ಗರಣೆ ಮಾಡಿಕೊಂಡು ರುಬ್ಬಿಟ್ಟುಕೊಂಡ ಮಾವಿನಕಾಯಿ ಚಟ್ನಿಯನ್ನು ಬಾಣಲೆಗೆ ಹಾಕಿ ಚೆನ್ನಾಗಿ ಕೆದಕಿ ಅನಂತರ ಅದನ್ನು ಅನ್ನಕ್ಕೆ ಹಾಕಿ ಚೆನ್ನಾಗಿ ಕಲಸಿ ಸಿದ್ಧಗೊಳಿಸಿದ ಚಿತ್ರಾನ್ನವನ್ನು ನೇವೇದ್ಯಕ್ಕೆ ಮಂಡಲದ ಮೇಲಿಡಬೇಕು.

# ಹೆಸರುಕಾಳು ಕೋಸಂಬರಿ

**ಬೇಕಾಗುವ ಪದಾರ್ಥಗಳು** : ಕಾಲು ಕೆ.ಜಿ. ಹೆಸರುಕಾಳು, ಒಂದು ಹೋಳು ತೆಂಗಿನಕಾಯಿ, ಕೊತ್ತಂಬರಿ ಸೊಪ್ಪು ಒಂದು ಕಟ್ಟು, ಇಂಗು, ಸಾಸಿವೆ, ಕಡಲೆಕಾಯಿ ಎಣ್ಣೆ ಮತ್ತು ಪುಡಿ ಉಪ್ಪು.

**ತಯಾರಿಸುವ ವಿಧಾನ** : ಶುದ್ಧಗೊಳಿಸಿದ ಹೆಸರುಕಾಳನ್ನು ಚೆನ್ನಾಗಿ ತೊಳೆದು ಒ,ದು ದಿನ ಪೂರಾ ನೆನೆ ಹಾಕಿಡಬೇಕು. ಮರುದಿನ ನೀರನ್ನು ಬಸಿದು ನೆನೆದ ಕಾಳನ್ನು ಒಂದು ಪಾತ್ರೆಯಲ್ಲಿರಿಸಿ ಮುಚ್ಚಿ ಒಂದು ದಿನ ಹಾಗೆಯೇ ಇಡಬೇಕು. ಮೂರನೆಯ ದಿನ ಚೆನ್ನಾಗಿ ಮೊಳಕೆ ಬಂದ ಕಾಳುಗಳಿಗೆ ಕಾಯಿತುರಿ ಮತ್ತು ಒಗ್ಗರಣೆ ಹಾಕಿ ಮೊಳಕೆಗಳು ಒಡೆಯದಂತೆ ಕಲಸಿ (ಚಮಚ ಬಳಸಬಹುದು) ರುಚಿಗೆ ತಕ್ಕಷ್ಟು ಉಪ್ಪು ಸೇರಿಸಿ, ಅನಂತರ ನೇವೇದ್ಯಕ್ಕೆ ಮಂಡಲದ ಮೇಲಿಡಬೇಕು.

# ಪಂಚಭಕ್ಷ್ಯಗಳು

## ಕಡಲೆಬೇಳೆ ಹೋಳಿಗೆ

**ಬೇಕಾಗುವ ಪದಾರ್ಥಗಳು** : ಕಡಲೆಬೇಳೆ 1/4 ಕೆ.ಜಿ., ಮೈದಾಹಿಟ್ಟು 1/4 ಕೆ.ಜಿ., ಬೆಲ್ಲ 1/4 ಕೆ.ಜಿ., ಏಲಕ್ಕಿ ಪುಡಿ ಸ್ವಲ್ಪ, ಎಣ್ಣೆ-250 ಗ್ರಾಂ.

**ಮಾಡುವ ರೀತಿ:** ಒಂದು ಪಾತ್ರೆಯಲ್ಲಿ ನೀರನ್ನು ಹಾಕಿ ಒಲೆಯ ಮೇಲಿಡಿ. ಕುದಿಯಲು ತೊಡಗಿದ ಮೇಲೆ ಕ್ಲೀನ್ ಮಾಡಿದ ಕಡಲೆಬೇಳೆಯನ್ನು ತೊಳೆದು ಆದರಲ್ಲಿ ಹಾಕಿ. (ಅದು ಬೇಯುವಷ್ಟರಲ್ಲಿ ಬೆಲ್ಲವನ್ನು ಕುಟ್ಟಿ ಪುಡಿ ಮಾಡಿಕೊಳ್ಳಿ. ಮೈದಾಹಿಟ್ಟನ್ನು ಜರಡಿ ಹಿಡಿದುಕೊಳ್ಳಿ). ಚೆನ್ನಾಗಿ ಬೆಂದ ಮೇಲೆ ಒಲೆಯ ಉರಿಯನ್ನು ಆರಿಸಿ ಕಡಲೆಬೇಳೆ ಕಟ್ಟನ್ನು ಬಗ್ಗಿಸಿ ಬೇಳೆಯನ್ನು ಏಲಕ್ಕಿ ಪುಡಿ, ಬೆಲ್ಲದ ಪುಡಿಯೊಂದಿಗೆ ಸೇರಿಸಿದ ಅರೆಯುವ ಕಲ್ಲಿನಲ್ಲಿ ಹಾಕಿ ನಯವಾಗಿ ಅರೆಯಿರಿ. ಮೈದಾ ಹಿಟ್ಟಿಗೆ ಎಣ್ಣೆ, ನೀರು ಅರಿಶಿನಪುಡಿ, ಸೇರಿಸಿ ಕಲಸಿಕೊಳ್ಳಿ. ನಂತರ ಇನ್ನಷ್ಟು ಎಣ್ಣೆನ್ನು ಹಾಕಿ ಚೆನ್ನಾಗಿ ನಾದಿ ಲಿಂಬೆಹಣ್ಣಿನ ಗಾತ್ರದ ಉಂಡೆ ತಯಾರಿಸಿಕೊಳ್ಳಿ. ಅದನ್ನು ಕೈಯಲ್ಲಿ ತೆಗೆದುಕೊಂಡು ಬಟ್ಟಲಿನಂತೆ ಮಾಡಿ ಅದರಲ್ಲಿ ಹೂರಣದ ಉಂಡೆಯನ್ನು ಇಟ್ಟು ಹಿಟ್ಟಿನಿಂದ ಅದನ್ನು ಮುಚ್ಚಿ. ನಂತರ ಒಂದು ಬಾಳೆ ಎಲೆಯ ತುಂಡನ್ನು ನೀರಿನಲ್ಲಿ ತೊಳೆದು ಬಟ್ಟೆಯಿಂದ ಒರೆಸೆ ಒಲೆಯ ಮುಂದೆ ಹಿಡಿಯಿರಿ. ಬಿಸಿಗೆ ಎಲೆ ಮೃದುವಾಗುತ್ತದೆ. ನಂತರ ಅದಕ್ಕೆ ಸವರಿ ಹೂರಣ ತುಂಬಿತದ ಕಣತದ ಉಂಡೆಯನ್ನಿಟ್ಟು ಲಟ್ಟಣಿಗೆಯಿಂದ ಚಪಾಗಿ ಆಕಾರಕ್ಕೆ ಲಟ್ಟಿಸಿ. ಆಮೇಲೆ ಅದನ್ನು ಕಾದ ಕಾವಲಿಯ ಮೇಲೆ ಹಾಕಿ ಬೇಯಿಸಿಕೊಳ್ಳಿ. (ಬೇಕಿದ್ದರೆ ಹೋಳಿಗೆ ಬೇಯಿಸುವಾಗ ಸ್ವಲ್ಪ ಎಣ್ಣೆನ್ನು ಹಾಕಬಹುದು) ಎರಡೂ ಬದಿ ಚೆನ್ನಾಗಿ ಬೆಂದಮೇಲೆ ಹೋಳಿಗೆಯನ್ನು ಮೊಗಚೆಕ್ಕೆಯಿಂದ ತೆಗೆದು, ಅನಂತರ ನೇವೇದ್ಯಕ್ಕೆ ಮಂಡಲದ ಮೇಲಿಡಬೇಕು.

## ಬಾದಾಮಿ ಹಲ್ವ

**ಬೇಕಾಗುವ ಪದಾರ್ಥಗಳು** : ಬಾದಾಮಿ ಬೀಜ - 125 ಗ್ರಾಂ, ಸಕ್ಕರೆ - 250 ಗ್ರಾಂ, ತುಪ್ಪ - 1/2 ಬಟ್ಟಲು, ಕೇಸರಿ - 5 ದಳಗಳು, ಏಲಕ್ಕಿ ಪುಡಿ - ಸ್ವಲ್ಪ, ಹಾಲು - 1/2 ಲೋಟ, ಕೇಸರಿ ಬಣ್ಣ - ಸ್ವಲ್ಪ.

**ಮಾಡುವ ರೀತಿ:** ಬಾದಾಮಿ ಬೀಜವನ್ನು ಬೇಯಿಸಿಕೊಳ್ಳಿ. ನಂತರ ಸಿಪ್ಪೆ ಬಿಡಿಸಿ ಅರೆಯುವ ಕಲ್ಲಿನಲ್ಲಿ ಹಾಕಿ (ಸ್ವಲ್ಪ ಸ್ವಲ್ಪ ನೀರು ಚಿಮುಕಿಸುತ್ತಾ) ನಯವಾಗಿ ಅರೆದುಕೊಳ್ಳಿ. (ಪೇಸ್ಟ್ ಸ್ವಲ್ಪ ಗಟ್ಟಿಯಾಗಿರಲಿ) ನಂತರ ಕೇಸರಿನ್ನು ಹಾಲಿನಲ್ಲಿ ನೆನೆಸಿ ಒಂದು ಬಾಣಲಿಯನ್ನು ಒಲೆಯ ಮೇಲಿಟ್ಟು ಅದರಲ್ಲಿ ಅರೆದುಕೊಂಡ ಬಾದಾಮಿ ಪೇಸ್ಟ್ ಮತ್ತು ಸಕ್ಕರೆಯನ್ನು ಹಾಕಿ ಮೊಗಚು ಚೆನ್ನಾಗಿ ಗೊಟಾಯಿಸಿರಿ. ಹಲ್ವ ಚೆನ್ನಾಗಿ ಬೆಂದು ಹೊಂದಿಕೊಂಡ ಮೇಲೆ ಕಾಯಿಸಿಕೊಂಡ ಹಾಲು, ಕೇಸರಿಬಣ್ಣಂ ಕುಂಕುಮ ಕೇಸರಿ, ಏಲಕ್ಕಿ ಪುಡಿ ಹಾಗೂ ತುಪ್ಪವನ್ನು ಹಾಕಿ ಚೆನ್ನಾಗಿ ಕೆದಕಿರಿ. ಎಲ್ಲಾ ವಸ್ತುಗಳೂ ಕೂಡಿಕೊಂಡು ಹಲ್ವ ಘಮಘಮ ಪರಿಮಳ ಬಂದ ಮೇಲೆ ಬಾಣಲಿಯನ್ನು ಇಳಿಸಿ. ಅನಂತರ ನೇವೇದ್ಯಕ್ಕೆ ಮಂಡಲದ ಮೇಲಿಡಬೇಕು.

## ಕಡುಬು

**ಬೇಕಾಗುವ ಪದಾರ್ಥಗಳು** : ಚಿರೋಟಿ ರವೆ - 500 ಗ್ರಾಂ, ಮೈದಾಹಿಟ್ಟು - 500 ಗ್ರಾಂ, ಸಕ್ಕರೆ - 400 ಗ್ರಾಂ, ಕೊಬ್ಬರಿ - 300 ಗ್ರಾಂ, ಗಸಗಸೆ - 50 ಗ್ರಾಂ, ಕರಿಯಲು ಎಣ್ಣೆ ಅಗತ್ಯದಷ್ಟು.

**ಮಾಡುವ ರೀತಿ:** ಕೊಬ್ಬರಿಯನ್ನು ತುರಿದುಕೊಂಡು ಸಕ್ಕರೆಗೆ ಬೆರೆಸಿ, ಸ್ವಲ್ಪ ನೀರು ಹಾಕಿ ಒಲೆಯ ಮೇಲಿಡಿ. ಅದು ತಳ ಹಿಡಿಯದಂತೆ ಕೆದುಕುತ್ತಿರಿ. ಅದು ಹೊಂದಿಕೊಂಡು ಗಟ್ಟಿ ಆದ ಮೇಲೆ ಕೆಳಗಿಳಿಸಿ. ಚಿರೋಟಿ ರವೆ, ಮೈದಾ ಹಿಟ್ಟನ್ನು ಒಂದುಗೂಡಿಸಿ, ಒಂದು ಚಮಚ ಉಪ್ಪಿನ ಪುಡಿ ಹಾಗೂ ಸ್ವಲ್ಪ ತುಪ್ಪ, ಸ್ವಲ್ಪ ನೀರು ಹಾಕಿಕೊಂಡು ಚಪಾತಿ ಹಿಟ್ಟಿನಂತೆ ಕಲಸಿಕೊಳ್ಳಿ. ಅನಂತರ ಹಿಟ್ಟನ್ನು ಉಂಡೆಗಳನ್ನಾಗಿ ಮಾಡಿಕೊಂಡು ಒಂದೊಂದೇ ಉಂಡೆಯನ್ನು ಲಟ್ಟಿಸಿ, ಅದರೊಳಗೆ ಹೂರಣ ಇಟ್ಟು (ಹೂರಣಕ್ಕೆ ಗಸಗಸೆ ಬೆರೆಸಿರಬೇಕು) ಮುಚ್ಚಿ. ಕಡುಬಿನ ಅಚ್ಚಿಗೆ ಹಾಕಿ ತೆಗೆಯಿರಿ. ಎಲ್ಲ ಉಂಡೆಗಳನ್ನು ಇದೇ ರೀತಿ ಮಾಡಿಕೊಂಡ ನಂತರ ಬಾಣಲಿಗೆ ಎಣ್ಣೆ ಹಾಕಿ ಒಲೆಯ ಮೇಲಿಡಿ. ಎಣ್ಣೆ ಕಾದ ನಂತರ ಕಡುಬನ್ನು ಹದವಾಗಿ ಕರೆದು. ಅನಂತರ ನೇವೇದ್ಯಕ್ಕೆ ಮಂಡಲದ ಮೇಲಿಡಬೇಕು.

## ಶಾವಿಗೆ ಪಾಯಸ (ಪರಮಾನ್ನ)

**ತಯಾರಿಸುವ ವಿಧಾನ** : ಶಾವಿಗೆಯನ್ನು ಬಾಣಲೆಯಲ್ಲಿ ತುಪ್ಪ ಹಾಕಿ ಹುರಿದುಕೊಳ್ಳುವುದು. ಒಲೆಯ ಮೇಲೆ ಪಾತ್ರೆಯಲ್ಲಿ ನೀರಿಡಿ. ನೀರು ಕುದಿದ ಮೇಲೆ ಅಳತೆಗೆ ತಕ್ಕಷ್ಟು ಸಕ್ಕರೆಯನ್ನು ಹಾಕಿ, ಸಕ್ಕರೆ ಕರಗಿದ ಮೇಲೆ ಕೆಳಗಿಳಿಸಿ ತುಪ್ಪದಲ್ಲಿ ಹುರಿದ ದ್ರಾಕ್ಷಿ, ಗೋಡಂಬಿಯನ್ನು ಶಾವಿಗೆಗೆ ಹಾಕಿ ಏಲಕ್ಕಿ ಪುಡಿ ಮತ್ತು ಕೇಸರಿದಳವನ್ನು ಹಾಕಿ ಕಾದು ಆರಿದ ಹಾಲನ್ನು ಹಾಕಿ ಸೌಟಿನಿಂದ ಆಡಿಸಿ ಮುಚ್ಚಿಟ್ಟು. ಅನಂತರ ನೇವೇದ್ಯಕ್ಕೆ ಮಂಡಲದ ಮೇಲಿಡಬೇಕು.

## ಅನ್ನದ ಕೇಸರಿಬಾತ್

**ಬೇಕಾಗುವ ಪದಾರ್ಥಗಳು** : ಅಕ್ಕಿ - 1 ಕೆ.ಜಿ., ಸಕ್ಕರೆ - 500 ಗ್ರಾಂ, ತುಪ್ಪ - 150 ಗ್ರಾಂ, ಗೋಡಂಬಿ - ದ್ರಾಕ್ಷಿ - 50 ಗ್ರಾಂ, ಯಾಲಕ್ಕಿ - 10, ಕೇಸರಿ ಬಣ್ಣ - 1 ಚಿಟಿಕೆ.

**ಮಾಡುವ ರೀತಿ:** ಅಕ್ಕಿಯನ್ನು ಚೆನ್ನಾಗಿ ತೊಳೆದು ಒಂದು ಪಾತ್ರೆಗೆ ಹಾಕಿರಿ. ಅಕ್ಕಿ ಬೇಯುವಷ್ಟು ನೀರು ಹಾಕಿ ಒಲೆಯ ಮೇಲಿಡಿ. ಅಕ್ಕಿ ಮುಕ್ಕಾಲು ಭಾಗ ಬೆಂದ ಮೇಲೆ ಸಕ್ಕರೆ ಹಾಕಿರಿ. ನಂತರ ಕೇಸರಿ ಬಣ್ಣ, ಯಾಲಕ್ಕಿ ಪುಡಿ ಹಾಕಿ ಕೆದಕಿರಿ. ಅಕ್ಕಿ ಪೂರ್ತಿ ಬೆಂದ ಮೇಲೆ ತುಪ್ಪದಲ್ಲಿ ಕರಿದ ಗೋಡಂಬಿ-ದ್ರಾಕ್ಷಿ ಹಾಕಿ ಗೊಟಾಯಿಸಿರಿ. ಕೇಸರಿಬಾತ್ ಗಟ್ಟಿಯಾಗಿರಬಾರದು. ಸ್ವಲ್ಪ ನೀರಾಗಿರಬೇಕು. ಹೀಗೆ ಕೇಸರಿ ಬಾತನ್ನು ತಯಾರಿಸಿ. ಅನಂತರ ನೇವೇದ್ಯಕ್ಕೆ ಮಂಡಲದ ಮೇಲಿಡಬೇಕು.

## ರಸಗುಲ್ಲ

**ಬೇಕಾಗುವ ಪದಾರ್ಥಗಳು** : ಹಾಲು - 1 ಲೀಟರ್, ಸಕ್ಕರೆ - 1/2 ಕೆ.ಜಿ., ಚಿರೋಟಿ ರವೆ - 50 ಗ್ರಾಂ, ಏಲಕ್ಕಿ ಪುಡಿ - ಸ್ವಲ್ಪ, ಪಚ್ಚ ಕರ್ಪೂರ - ಸ್ವಲ್ಪ, ಎಸೆನ್ಸ್ - ಸ್ವಲ್ಪ, ಕೇಸರಿ ಬಣ್ಣ - ಸ್ವಲ್ಪ, ಲಿಂಬೆಹಣ್ಣು - 1/2 ಹೋಳು

**ಮಾಡುವ ರೀತಿ:** ಗಟ್ಟಿಯಾದ ಹಾಲನ್ನು ಒಂದು ದಪ್ಪ ತಳದ ಪಾತ್ರೆಯಲ್ಲಿ ಹಾಕಿ, ಒಲೆಯ ಮೇಲಿಡಿ ಕುದಿಯಲು ಶುರವಾದ ಮೇಲೆ ಲಿಂಬೆ ಹಣ್ಣಿನ ರಸವನ್ನು

ಹಿಂಡಿ ಹಾಲು ಒಡೆಯುವಂತೆ ಮಾಡಿ, ಹಾಲನ್ನು ಕೆಳಗಿಳಿಸಿ. ತಣ್ಣಗಾದ ಮೇಲೆ ಒಂದು ಬಟ್ಟೆಯಲ್ಲಿ ಅದನ್ನು ಶೋಧಿಸಿ. ನಿರೀನ ಭಾಗವನ್ನು ಚೆಲ್ಲಿ ಬಟ್ಟೆಯಲ್ಲಿ ಉಳಿದ ಹಾಲಿನ ಜಿಗುಟಿನಂತಹ ಭಾಗವನ್ನು ಜರಡಿ ಹಿಡಿದ ಚಿರೋಟಿ ರವೆಯಲ್ಲಿ ಹಾಕಿ ಕಲಿಸಿ, ಮೂರು ಗಂಟೆಗಳ ಕಾಲ ಬಿಡಿ. ಸಕ್ಕರೆಯನ್ನು ೩ ಭಾಗ ಮಾಡಿ ೧ ಭಾಗವನ್ನು ಒಂದು ಬಾಣಲಿಯಲ್ಲಿ ಹಾಕಿ ಒಲೆಯ ಮೇಲಿಟ್ಟು ನೀರು ಸುರಿದು ಪಾಕ ತಯಾರಿಸಿ (ಆ ಪಾಕ ಮಿಠಾಯಿ ಪಾಕದಂತೆ ಅರೆಪಾಕವಾಗಿರಲಿ) ಅದಕ್ಕೆ ಕೇಸರಿ ಕಲರ್ ಹಾಗೂ ಎಸೆನ್ಸ್ ಹಾಕಿ ಕಲಸಿ, ಆಮೇಲೆ ಕಲಸಿಟಟ್ಟೊಕ್ಕಂಡ ರವೆ ಹಾಗೂ ಹಾಲಿನ ಮಿಶ್ರಣವನ್ನು ಇನ್ನೊಮ್ಮೆ ಕಲಸಿ ಚಿಕ್ಕ ಚಿಕ್ಕ ಉಂಡೆಗಳನ್ನು ತಯಾರಿಸಿ, ಅನಂತರ ಉಳಿದ ಸಕ್ಕರೆಯನ್ನು ಒಂದು ಪಾತ್ರೆಯಲ್ಲಿ ಹಾಕಿ ಅದಕ್ಕೆ ನೀರು ಸೇರಿಸಿ ಒಲೆಯ ಮೇಲಿಡಿ. ಪಾಕ ಸಿದ್ಧವಾದ ಮೇಲೆ ಅದರಲ್ಲಿ ತಯಾರಿಸಿಟ್ಟುಕೊಂಡ ಉಂಡೆಗಳನ್ನು ಹಾಕಿ ಬೇಯಿಸಿ. ಉಂಡೆ ಒಡೆಯದಂತೆ ನೋಡಿಕೊಳ್ಳಬೇಕು. ನಂತರ ಅದನ್ನು ತೆಗೆದು ಮೊದಲೇ ತಯಾರಿಸಿಟ್ಟುಕೊಂಡ ಮಿಠಾಯಿ ಪಾಕದಲ್ಲಿ ಹಾಕಿ. ಸ್ವಲ್ಪ ಸಮಯದಲ್ಲಿ ರಸಗುಲ್ಲಾ ಪಾಕವನ್ನು ಹೀರಿಕೊಂಡು ರಸಭರಿತವಾಗುತ್ತದೆ. ಹೀಗೆ ರಸಗುಲ್ಲಾವನ್ನು ತಯಾರಿಸಿ, ಅನಂತರ ನೇವೇದ್ಯಕ್ಕೆ ಮಂಡಲದ ಮೇಲಿಡಬೇಕು.

## ಅಂಬೋಡೆ

**ಬೇಕಾಗುವ ಪದಾರ್ಥಗಳು :** ಅರ್ಧ ಕೆ.ಜಿ. ಕಡಲೆ ಬೇಳೆ, ಒಣಮೆಣಸಿನಕಾಯಿ ಏಳೆಂಟು, ತೆಂಗಿನಕಾಯಿ ಒಂದು ಹೋಳು, ಕೊತ್ತಂಬರಿ ಸೊಪ್ಪು ಒಂದು ಕಂತೆ, ಕರಿಬೇವು ಸೊಪ್ಪು, ಎಣ್ಣೆ, ಉಪ್ಪು ಮತ್ತು ಹಸಿಶುಂಠಿ.

**ಮಾಡುವ ರೀತಿ:** ಬೇಳೆಯನ್ನು ಚೆನ್ನಾಗಿ ನೆನೆಹಾಕಿ, ನೆಂದ ಬಳಿಕ ಕಡಲೆ ಬೇಳೆ ಒಣಮೆಣಸಿನಕಾಯಿ, ತೆಂಗಿನತುರಿ, ಉಪ್ಪು ಇವುಗಳನ್ನು ಒರಳಿನಲ್ಲಿ ತರಿತರಿಯಾಗುವಂತೆ ರುಬ್ಬಿ, ಕರಿಬೇವು, ಕೊತ್ತಂಬರಿ ಸೊಪ್ಪು, ಹಸಿಶುಂಠಿ ಚೂರುಗಳನ್ನು ಸಣ್ಣಗೆ ಹೆಚ್ಚಿಕೊಂಡು ರುಬ್ಬಿದ ಮಸಾಲೆಗೆ ಬೆರೆಸಿ.

ಎಣ್ಣೆಯನ್ನು ಬಾಣಲೆಗೆ ಹಾಕಿ ಒಲೆಯ ಮೇಲಿಡಿ. ಕಡಲೆಬೇಳೆ ಹಿಟ್ಟನ್ನು ಸಣ್ಣ ಉಂಡೆಗಳನ್ನಾಗಿ ಮಾಡಿಕೊಂಡು ಅಂಗೈ ಮೇಲಿಟ್ಟು ತಟ್ಟಿ, ಕಾದ ಎಣ್ಣೆಲ್ಲಿ ಹಾಕಿ, ಕೆಂಪಾಗುವವರೆಗೂ ಕರಿದು ಜಾಲರಿಯ ಸಹಾಯದಿಂದ ಎಣ್ಣೆ ಬಸಿದು ಆಂಬೋಡೆಯನ್ನು ತಯಾರಿಸಿ, ಅನಂತರ ನೇವೇದ್ಯಕ್ಕೆ ಮಂಡಲದ ಮೇಲಿಡಬೇಕು.

## ಮೊಸರನ್ನ

**ಬೇಕಾಗುವ ಪದಾರ್ಥಗಳು** : ಅರ್ಧ ಕೆ.ಜಿ. ಅಕ್ಕಿ, ಒಂದು ಸೇರು ಗಟ್ಟಿ ಮೊಸರು (ಒಂದು ಲೀಟರ್ ಹಾಲಿನಿಂದ ತಯಾರಿಸಿದ), ಉಪ್ಪು, ಒಂದು ಹೋಳು ತೆಂಗಿನಕಾಯಿ, ಸಾಸಿವೆ. ಅರ್ಧ ಚಮಚ ಮೆಂತ್ಯ, ಹಸಿಮೆಣಸಿನಕಾಯಿ ಏಳೆಂಟು, ಒಂದು ಬಟ್ಟಲು ಹಾಲು, ಕೊತ್ತಂಬರಿ ಸೊಪ್ಪು ಎರಡು ಕಟ್ಟು, ಹಸಿಶುಂಠಿ ಒಂದೆರಡು ಚೂರು ಮತ್ತು ಒಗ್ಗರಣೆಗೆ ತುಪ್ಪ.

**ಮಾಡುವ ರೀತಿ:** ಚೆನ್ನಾಗಿ ತೊಳೆದು ಅಕ್ಕಿಯಿಂದ ಉದುರುದುರಾಗಿ ಅನ್ನ ಮಾಡಿಕೊಂಡು ಆರಲು ಬಿಡಿ. ಬಾಣಲೆಯನ್ನು ಒಲೆಯ ಮೇಲಿಟ್ಟು ಬಾಣಲೆಗೆ ತುಪ್ಪ ಹಾಕಿ ಸಾಸಿವೆ ಸಿಡಿಸಿ, ಮೆಂತ್ಯ, ಹೆಚ್ಚಿಟ್ಟ ಹಸಿ ಮೆಣಸಿನಕಾಯಿ, ಕೊತ್ತಂಬರಿಸೊಪ್ಪು ಹಾಕಿ ಚೆನ್ನಾಗಿ ಕೆದಕಿ ಒಗ್ಗರಣೆ ಮಾಡಿಕೊಳ್ಳಿ. ಅನ್ನವನ್ನು ಒಂದು ತಟ್ಟೆಯಲ್ಲಿ ಹಾಕಿಕೊಂಡು ಉಪ್ಪು, ಕಾಯಿತುರಿ ಹಾಕಿ, ಮೊಸರು ಮತ್ತು ಹಾಲು (ಕಾಯಿಸಿ ಆರಿಸಿದ ಹಾಲು) ಇವೆರಡನ್ನು ಅನ್ನಕ್ಕೆ ಹಾಕಿ ಕಲಸಿ. ಹಸಿಶುಂಠಿ, ಸಣ್ಣಗೆ ಹೆಚ್ಚಿ ಅಥವಾ ಜಜ್ಜಿ ಹಾಕಿ. ಮಾಡಿಟ್ಟುಕೊಂಡ ಒಗ್ಗರಣೆಯನ್ನು ಹಾಕಿ ಇನ್ನೊಮ್ಮೆ ಚೆನ್ನಾಗಿ ಕಲಸಿ. ಅನಂತರ ನೇವೇದ್ಯಕ್ಕೆ ಮಂಡಲದ ಮೇಲಿಡಬೇಕು.

* * * *

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥
ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ಹನುಮಜ್ಜಯಂತಿ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ
ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ
ಶ್ರೀಲಕ್ಷ್ಮೀಹಯಗ್ರೀವದೇವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಭಾದ್ರಪದಮಾಸ

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯ ಸಿದ್ಧಾಂತ ಪ್ರತಿಷ್ಠಾನ (ರಿ),
ಬೆಂಗಳೂರು

"ಭಾದ್ರಪದಮಾಸ" ಶಾರ್ವರಿ ॥ ಶ್ರಾವಣ ॥ ಶುದ್ಧ ಹುಣ್ಣಿಮೆ, (ದಿನಾಂಕ : 3-8- 2020) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಶ್ರೀಶ್ರೀವಿದ್ಯಾಧೀಶತೀರ್ಥಶ್ರೀಪಾದರ ಕರಕಮಲಗಳ ಮೂಲಕ ಭಾರತೀರಮಣಹೃದಯ-ಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : 2020



ಪ್ರಕಾಶಕರು : ಜಗದ್ಗುರು ಶ್ರೀಮಧ್ವಾಚಾರ್ಯ ಸಿದ್ಧಾಂತ ಪ್ರತಿಷ್ಠಾನ (ರಿ)
4171, 2ನೇ ಮೇನ್, ಗಿರಿನಗರ, ಸೀತಾಸರ್ಕಲ್ ಹತ್ತಿರ, ಬೆಂಗಳೂರು-85
ದೂರವಾಣಿ : 9141495120

ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಪ್ರತಿಗಳು : 1000
ಪುಟಗಳು : vi + 136

ಅಕ್ಷರಜೋಡಣೆ : ಸುಬ್ಬಣ್ಣ ಕೆಂಪದಾಳಿಹಳ್ಳಿ ,
9141311280

ಮುಖಪುಟ – ಶ್ರೀವಿಶ್ವಾತ್ಮಾ, ಕಾರ್ತಿಕಜೋಷಿ.

ಮುದ್ರಣ :
ಮುಕ್ತಿಪಥ ಮುದ್ರಣಾಲಯ,
(ಪಿ. ಮಂಜುನಾಥ)
ಬೆಂಗಳೂರು.



ಬಹಳ ಚತುರೆಯೂ ವಿದ್ಯಾಪ್ರವೀಣಳೂ ಆದ ಕುಮಾರಿ ॥ ಶ್ರಾವ್ಯ ಆಕಸ್ಮಿಕವಾಗಿ ಹರಿಪಾದ ಸೇರಿದ್ದಾಳೆ. ಕಲ್ಲಕುರ್ಚಿ ಫ್ಯಾಮಿಲಿಗೆ ಮಾಣಿಕ್ಯಪ್ರಾಯಳಾಗಿದ್ದ ಇವಳ ಸ್ಮರಣೆಗಾಗಿ ಈ ಜ್ಞಾನಸೇವೆಯನ್ನು ಮಾಡಲಾಗಿದೆ. ಇದರಿಂದ ಪ್ರಾಪ್ತವಾಗುವ ಪುಣ್ಯರಾಶಿಯು ಶ್ರಾವ್ಯಳಿಗೆ ತಲುಪಿ ಎಲ್ಲ ರೀತಿಯಲ್ಲಿಯೂ ಅವಳಿಗೆ ಶ್ರೇಯಸ್ಸಾಗಲಿ ಎಂದು ಪ್ರಾರ್ಥಿಸುತ್ತೇವೆ.

ಕಲ್ಲಕುರ್ಚಿ ಫ್ಯಾಮಿಲಿ, ಬೋಸ್ಟನ್,
ಯು. ಎಸ್. ಎ.

---

## ವಿಷಯಾನುಕ್ರಮಣಿಕೆ

### ಭಾದ್ರಪದಮಾಸ ಶುಕ್ಲಪಕ್ಷ

* * * *

# ಮುನ್ನುಡಿ

ಭಾದ್ರಪದಮಾಸದಲ್ಲಿ ಅನೇಕ ಹಬ್ಬಗಳು ಬರುತ್ತವೆ. ಪ್ರೋಷ್ಠಪದೀ ಭಾಗವತ ಶ್ರವಣ ಮಾಡುವ ಮಹಾಪರ್ವಕಾಲವೂ ಆಗಿದೆ. ಮತ್ತು ಸಕಲ ಪಿತೃದೇವತೆಗಳ ಅನುಗ್ರಹವನ್ನು ಪಡೆದುಕೊಳ್ಳುವ ಮಹಾಲಯವೂ ಕೂಡ ಇದೇ ಮಾಸದಲ್ಲಿ ಪ್ರಾಪ್ತವಾಗುತ್ತದೆ. ಈ ಪುಸ್ತಕವು ಅತ್ಯಂತ ಉಪಯುಕ್ತವಾಗಿದೆ. ಮರಣವು ಸಮೀಪಿಸಿದಾಗ ಏನು ಮಾಡಬೇಕು. ಮರಣದ ಅನಂತರ ಏನು ಮಾಡಬೇಕು? ಈ ಎಲ್ಲ ವಿಚಾರಗಳಿಗೂ ಈ ಪುಸ್ತಕವು ಅನಿವಾರ್ಯ-ವಾಗುತ್ತದೆ. ಮರಣಸಮೀಪಿಸಿದಾಗ ಮಾಡಬೇಕಾದ ಅವಸರದ ಕಾರ್ಯಗಳನ್ನು ನೀಡಲಾಗಿದೆ. ಇದೇ ಪುಸ್ತಕದ ಕೊನೆಯಲ್ಲಿ ಕರ್ಣಸೂಕ್ತವನ್ನು ನೀಡಲಾಗಿದೆ. ಇದನ್ನು ಕಿವಿಯಲ್ಲಿ ಪಾರಾಯಣ ಮಾಡಬೇಕು. ಹಾಗೂ ಆಶೌಚದ ವಿಚಾರವೂ ಕೂಡ ವಿವರವಾಗಿ ಇದರಲ್ಲಿ ಉಲ್ಲೇಖ-ಗೊಂಡಿದೆ. ಎಲ್ಲ ಸಾಧಕರೂ ಇದರ ಸದುಪಯೋಗವನ್ನು ಪಡೆದುಕೊಳ್ಳಬೇಕು. ಹಾಗೂ ಈ ಎಲ್ಲ ವಿಚಾರಗಳನ್ನು ಅನುಗ್ರಹಿಸಿದ ಪರಮಪೂಜ್ಯ ಶ್ರೀ ವಿಶ್ವನಂದನತೀರ್ಥ ಶ್ರೀಪಾದಂಗಳವರಿಗೆ ಅನಂತ ನಮಸ್ಕಾರಗಳನ್ನು ಸಲ್ಲಿಸುತ್ತೇನೆ. ವಿದ್ವಾನ್. ಸಿ. ಆರ್. ಪ್ರದೀಪಸಿಂಹಾಚಾರ್ಯರು ಈ ಎಲ್ಲ ವಿಚಾರವನ್ನು ನೀಡಿದ್ದಾರೆ. ಇವರಿಗೂ ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಈ ಪುಸ್ತಕದ ಡಿ.ಟಿ.ಪಿ. ಕಾರ್ಯದಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡು ಉತ್ತಮ-ಸಲಹೆಗಳನ್ನು ನೀಡಿ ಅನೇಕ ವಿಷಯಗಳ ಯಥಾರ್ಥತೆಗೆ ಕಾರಣರಾದ ಸುಬ್ಬಣ್ಣ.ಕೆಂಪ-ದಾಳಿಹಳ್ಳಿ ಇವರಿಗೂ ಅನಂತ ಅಭಿನಂದನೆಗಳು.

ಮೇಧಾವಿಯೂ ಪ್ರವೀಣಳು ಆದ ಕುಮಾರಿ ಶ್ರಾವ್ಯಳು ಆಕಸ್ಮಿಕವಾಗಿ ಹರಿಪಾದವನ್ನು ಸೇರಿದ್ದಾಳೆ. ಇವಳಿಗೆ ಈ ಗ್ರಂಥದಿಂದ ಪ್ರಾಪ್ತವಾಗುವ ಪುಣ್ಯವು ದೊರಕಲಿ. ಈ ಕೃತಿಯ ಸೇವೆಯನ್ನು ಮಾಡಿದ ಕಲ್ಲಕುರ್ಚಿ ಫ್ಯಾಮಿಲಿ, ಬೋಸ್ಟನ್ ಇವರಿಂದ ಇನ್ನೂ ಹೆಚ್ಚಿನ ಸೇವೆಯು ನಡೆಯಲಿ. ಶ್ರೀನಿವಾಸಕಲ್ಲಕುರ್ಚಿಯವರ ಉಪಕಾರವನ್ನು ಎಂದೆಂದೂ ಮರೆಯಲಾರೆ. ಇವರ ಪ್ರೋತ್ಸಾಹಕ್ಕೆ ಅನಂತ ಕೃತಜ್ಞತೆಗಳು.

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ ॥

# ಭಾದ್ರಪದ ಮಾಸ

ಮಾಸನಿಯಾಮಕ ವೃದ್ಧಾಪತಿಹೃಷೀಕೇಶಾಯ ನಮಃ

## ಭಾದ್ರಪದ ಮಾಸ ಮಾಹಾತ್ಮ್ಯ

ಭಾದ್ರಪದ ಮಾಸದ ನಿಯಾಮಕನಾದ ವೃದ್ಧಾಸಮೇತ ಹೃಷೀಕೇಶನ ಪ್ರೀತಿಗಾಗಿ ಈ ಕೆಳಕಂಡ ಧರ್ಮಗಳನ್ನು ಮಾಡಬೇಕು.ಭಾದ್ರಪದಮಾಸದಲ್ಲಿ ಒಪ್ಪತ್ತು ಊಟ ಮಾಡುವುದರಿಂದ ಧನಲಾಭವೂ, ಆರೋಗ್ಯ ಲಾಭವೂ ಆಗುವುದು. ಪಾಯಸ, ಬೆಲ್ಲದ ಅನ್ನ , ಉಪ್ಪುಗಳ ದಾನವು ಈ ಮಾಸದಲ್ಲಿ ವಿಶೇಷ.

ಚೈತ್ರ ಮೊದಲಾದ ಹನ್ನೆರಡು ಚಾಂದ್ರಮಾನ ತಿಂಗಳುಗಳಲ್ಲಿ ಆರನೆಯದು. ಈ ತಿಂಗಳಿನ ಹುಣ್ಣಿಮೆಯಂದು ಪೂರ್ವಾಭಾದ್ರಪದ ಅಥವಾ ಉತ್ತರಾಭಾದ್ರಪದ ನಕ್ಷತ್ರ ಬರುವುದರಿಂದ ಈ ಹೆಸರು. ಸೂರ್ಯ ಸಿಂಹರಾಶಿಯಲ್ಲಿ ಇರುವಾಗ ಶುಕ್ಲ ಪ್ರಥಮಾ ತಿಥಿಯಿಂದ ಈ ತಿಂಗಳು ಪ್ರಾರಂಭವಾಗಿ ಕನ್ಯಾರಾಶಿಯಲ್ಲಿ ಸೂರ್ಯನಿರು- ವಾಗ ಅಮಾವಾಸ್ಯೆಯೊಡನೆ ಮುಗಿಯುತ್ತದೆ. ಹಲವು ವರ್ಷಗಳಿಗೊಮ್ಮೆ ಸೂರ್ಯ ಸಿಂಹರಾಶಿಯಲ್ಲಿ ಇರುವಾಗಲೇ ಮಾಸ ಮಧ್ಯಮದಲ್ಲಿ ಸೂರ್ಯಸಂಕ್ರಮಣ ಬರದೆ ಚಾಂದ್ರಮಾನ ಸಂಭವಿಸುತ್ತದೆ. ಇದಕ್ಕೆ ಅಧಿಕ ಭಾದ್ರಪದಮಾಸ ಎಂದು ಹೆಸರು. ಚೈತ್ರಾದಿ ಮಾಸಗಣನೆಯಲ್ಲಿ ಈ ಅಧಿಕಮಾಸ ಆರನೆಯದು, ಏಳನೆಯದು ನಿಜಭಾದ್ರಪದ. ಭಾದ್ರಪದ ಮಾಸವನ್ನು ನಭಾಸ್ಯ, ಪ್ರೌಷ್ಠಪದ, ಭಾದ್ರ ಎಂಬ ಹೆಸರಿನಿಂದ ಕರೆಯುತ್ತಾರೆ. ವೇದದಲ್ಲಿ ಈ ತಿಂಗಳಿಗೆ ಇಷಃ ಎಂಬ ನಾಮಾಂತರವಿದೆ.

ಅಧಿಕ ಭಾದ್ರಪದ ಮಾಸ ಮಲಮಾಸವಾದುದರಿಂದ ಇದರಲ್ಲಿ ನಿತ್ಯಕರ್ಮ- ಗಳನ್ನು ಬಿಟ್ಟು ಯಾವ ವ್ರತಾಚರಣೆಯೂ ಇರುವುದಿಲ್ಲ. ಭಾದ್ರಪದ ಮಾಸಾಂತ್ಯಕ್ಕೆ ವರ್ಷಋತು ಮುಗಿಯುತ್ತದೆ.

ಗುರೂದಯದಿಂದ ವರ್ಷಗಣನೆ ಮಾಡುವ ಕ್ರಮದಂತೆ ಗುರು ಶತಭಿಷಾ, ಪೂರ್ವಭಾದ್ರಪದ, ಉತ್ತರಾಭಾದ್ರಪದ ನಕ್ಷತ್ರಗಳಲ್ಲಿ ಸಂಚರಿಸುವಾಗ ಉದಿತನಾದರೆ

ಆ ವರ್ಷವನ್ನು ಭಾದ್ರಪದ ಎಂಬ ಹೆಸರಿನಿಂದ ಕರೆಯುತ್ತಾರೆ. ಈ ವರ್ಷದಲ್ಲಿ ಪಾಷಂಡಿಗಳಿಗೆ ತೊಂದರೆ, ಮುಂಗಾರು ಫಸಲಿಗೆ ಅನುಕೂಲ ಭಾದ್ರಪದ ತಿಂಗಳಿನಲ್ಲಿ ಗ್ರಹಣ ಸಂಭವಿಸಿದರೆ ಕಳಿಂಗ, ವಂಗ ಮಾಗಧ, ಸೌರಾಷ್ಟ್ರ ಮತ್ತು ಮ್ಲೇಚ್ಛ ದೇಶಗಳಿಗೆ ತೊಂದರೆ. ಉಳಿದ ದೇಶಗಳಲ್ಲಿ ಸುಭಿಕ್ಷ, ಹೆಂಗಸರ ಗರ್ಭಕ್ಕೆ ತೊಂದರೆ ಎಂಬುದಾಗಿ ವರ್ಷಭವಿಷ್ಯ ಹೇಳುತ್ತದೆ.

ನಾಲ್ಕು ಮುಖ, ಎಂಟು ಭುಜಗಳಿಂದ ಕೂಡಿ ಶ್ರೇಷ್ಠ ಹಂಸಾರೂಢನಾಗಿ ಬಿಳುಪು ವರ್ಣದಿಂದ ಕೂಡಿದ ಸ್ವರೂಪವುಳ್ಳವನಾಗಿರುತ್ತಾನೆಂದು ಭಾದ್ರಪದ ಮಾಸದ ಸ್ವರೂಪವನ್ನು ಶ್ರೀತತ್ತ್ವನಿಧಿಯಲ್ಲಿ ವರ್ಣಿಸಲಾಗಿದೆ. ಈ ತಿಂಗಳಿನಲ್ಲಿ ಅಭಿಮಾನಿ ದೇವತೆಯದ ಹೃಷಿಕೇಶನ ಪ್ರೀತಿಯನ್ನು ಪಡೆಯುವುದಕ್ಕಾಗಿ ಬೆಲ್ಲದ ಅನ್ನ ಪಾಯಸ ಕನ್ನಡಿ ಇವನ್ನು ದಾನಮಾಡುತ್ತಾರೆ ಈ ಮಾಸದಲ್ಲಿ ಹುಟ್ಟಿದವನ ಶರೀರ ತೆಳ್ಳಗಿರುತ್ತದೆ. ದಾನಮಾಡುವ ಉದಾರ ಸ್ವಭಾವಿರುತ್ತದೆ. ಮಡದಿ ಮಕ್ಕಳೊಡನೆ ಸೌಖ್ಯದಿಂದ ಇರುತ್ತಾನೆ.

## ಭಾದ್ರಪದ II ಶುಕ್ಲ II ಪ್ರತಿಪತ್

ಪ್ರೋಷ್ಠಪದಿ – ಅರುಣೋದಯೇಽಸೌ ನಿರ್ವರ್ತ್ಯ ಶೌಚಂ ಸ್ನಾನಂ ಸಮಾ-ಚರೇತ್ । ನಿತ್ಯಂ ಸಂಕ್ಷೇಪತಃ ಕೃತ್ವಾಸಂಧ್ಯಾದ್ಯಂ ಸ್ವಂ ಪ್ರಯತ್ನತಃ ॥ ಸಪ್ತಾಹ ಕಾಲದಲ್ಲಿ ಬೆಳಿಗ್ಗೆ ಅರುಣೋದಯಕಾಲದಲ್ಲಿ ಅಂದರೆ ಸುಮಾರು ನಾಲ್ಕುವರೆ ಗಂಟೆಗೆ (ಸೂರ್ಯೋದಯಕ್ಕಿಂತ ಒಂದೂವರೆ ಗಂಟೆ ಮುಂಚಿತವಾಗಿ) ಶೌಚ, ಸ್ನಾನ, ಸಂಧ್ಯೆಯಗಳನ್ನು ಸಂಕ್ಷೇಪವಾಗಿ ಮಾಡಬೇಕು. ಕಥಾಮಂಟಪದಲ್ಲಿ ಪೂರ್ವಾಭಿ-ಮುಖವಾಗಿ ಕುಳಿತು ಆಚಮನ, ಪ್ರಾಣಾಯಾಮ ಮಾಡಿ ದೇಶ ಕಾಲಗಳನ್ನು ಉಚ್ಚರಿಸಿ ಗೋತ್ರ, ಪ್ರವರಾದಿಗಳನ್ನು ಉಚ್ಚರಿಸಿ ಹೀಗೆ ಸಂಕಲ್ಪ ಮಾಡಬೇಕು – ''ಅಹಮತೀತಾನೇಕಜನ್ಮಸಂಚಿತಾಖಿಲದುಷ್ಕೃತಿನಿವೃತ್ತಿಪುರಃಸರಮಾಧ್ಯಾತ್ಮಿಕಾದಿ ತ್ರಿವಿಧತಾಪನೋದಾರ್ಥಂ, ಅಸ್ಮತ್ಕುಲಪೂರ್ವಜಾತಾನಾಂ ವೈಕುಂಠಪದಪ್ರಾ-ಪ್ತ್ಯರ್ಥಂ ಸಂತತಿಪ್ರತಿಬಂಧಕದೋಷನಿವೃತ್ತಿಪೂರ್ವಕಸತ್ಸಂತಾನಪ್ರಾಪ್ತ್ಯರ್ಥಂ ಆದಿತ್ಯಾದಿನವಗ್ರಹದೋಷಪೀಡಾಪರಿಹಾರಾರ್ಥಂ ಧರ್ಮಾರ್ಥಕಾಮಮೋಕ್ಷ-ಚತುರ್ವಿಧಪುಣ್ಯಪುರುಷಾರ್ಥ-ಹರಿಸರ್ವೋತ್ತಮತ್ವಜ್ಞಾನ-ಭಕ್ತಿವೈರಾಗ್ಯಸಿದ್ಧ್ಯ-

ರ್ಥಂ ಅಂತಕಾಲೇ ವಿಶೇಷತೋ ವಿಷ್ಣುಸ್ಮರಣಸಿದ್ಧ್ಯರ್ಥಂ ಭಾರತೀರಮಣ-ಮುಖ್ಯಪ್ರಾಣಾಂತರ್ಗತ ಶ್ರೀಗೋಪಾಲಕೃಷ್ಣಪ್ರೇರಣಯಾ ಶ್ರೀಗೋಪಾಲ-ಕೃಷ್ಣ-ಪ್ರೀತ್ಯರ್ಥಂ ..... ಗೋತ್ರ ....... ಪ್ರವರಾನ್ವಿತ ....... ಶರ್ಮಣಃ ಶುಕರೂಪಿಣೋ ವದನಾರವಿಂದಾತ್ ಶ್ರೀಕೃಷ್ಣವಾಙ್ಮಯಮೂರ್ತಿರೂಪಂ ಶ್ರೀಮದ್ಭಾಗವತಂ ಅನೇಕ ಶ್ರೋತೃಗಣಶ್ರವಣಪೂರ್ವಕಂ ... ದಿನಾದಾರಭ್ಯ ... ದಿನಪರ್ಯಂತಂ ಸಪ್ತಾಹ-ವಿಧಿನಾ ಯಥಾಶಕ್ತಿ ಶ್ರೋಷ್ಯಾಮಿ ॥ – ತದಂಗತ್ವೇನ ನಿರ್ವಿಘ್ನತಾಸಿದ್ಧ್ಯರ್ಥಂ ಗಣಪತಿಪೂಜನಂ ಪುಣ್ಯಾಹವಾಚನಂ ಮಾತೃಕಾಪೂಜನಂ ನಾಂದೀಶ್ರಾದ್ಧಂ ಶ್ರೀವೇದವ್ಯಾಸಪೂಜಾಂ ಚ ಕರಿಷ್ಯೇ ॥

ನನ್ನ ಹಿಂದಿನ ಅನೇಕ ಜನ್ಮಗಳಲ್ಲಿ ಸಂಚಿತವಾದ ಎಲ್ಲ ಪಾಪಗಳು ಪರಿ-ಹಾರವಾಗಿ ಆಧ್ಯಾತ್ಮಿಕಾದಿ ತ್ರಿವಿಧತಾಪಗಳು ಕಳೆಯುವುದಕ್ಕಾಗಿ, ನಮ್ಮ ಕುಲದ ಪೂರ್ವಜರಿಗೆ ವೈಕುಂಠಲೋಕ ಪ್ರಾಪ್ತಿಯಾಗುವುದಕ್ಕಾಗಿ ಸಂತತಿ ಪ್ರತಿಬಂಧಕಗಳು ಕಳೆದು ಸತ್ಸಂತಾನ ದೊರಕುವುದಕ್ಕಾಗಿ, ಆದಿತ್ಯಾದಿ ನವಗ್ರಹದೋಷಪೀಡೆಗಳ ಪರಿಹಾರಕ್ಕಾಗಿ ಧರ್ಮಅರ್ಥಕಾಮಮೋಕ್ಷಗಳೆಂಬ ಚತುರ್ವಿಧಪುಣ್ಯಪುರು-ಷಾರ್ಥ ಹರಿಸರ್ವೋತ್ತಮತ್ವಜ್ಞಾನಭಕ್ತಿವೈರಾಗ್ಯ ಸಿದ್ಧಿಸುವುದಕ್ಕಾಗಿ ಅಂತ್ಯಕಾಲದಲ್ಲಿ ವಿಶೇಷವಾಗಿ ವಿಷ್ಣುಸ್ಮರಣೆ ಲಭಿಸುವುದಕ್ಕಾಗಿ ಭಾರತೀರಮಣಮುಖ್ಯಪ್ರಾಣಾಂತ-ರ್ಗತಶ್ರೀಗೋಪಾಲಕೃಷ್ಣನ ಪ್ರೇರಣೆಯಿಂದ ಶ್ರೀಗೋಪಾಲಕೃಷ್ಣನ ಪ್ರೀತಿಗಾಗಿ ... ಗೋತ್ರ ... ಪ್ರವರ ... ಶರ್ಮ ಎಂಬ ಹೆಸರಿನವರಾದ ಶುಕಮುನಿ-ಸನ್ನಿಧಾನಯುಕ್ತರಾದ ಬ್ರಾಹ್ಮಣರ ಮುಖ ಕಮಲದಿಂದ ಶ್ರೀಕೃಷ್ಣನ ವಾಙ್ಮಯ-ಪ್ರತಿಮಾರೂಪವಾದ ಶ್ರೀಮದ್ಭಾಗವತವನ್ನು ಅನೇಕ ಶ್ರೋತೃಸಮೂಹಗಳ ಶ್ರವಣಪುರಃಸರವಾಗಿ ... ಈ ದಿನದಿಂದ ... ಈ ದಿನದವರೆಗೆ ಸಪ್ತಾಹವಿಧಿಯಿಂದ ಯಥಾಶಕ್ತಿ ಶ್ರವಣ ಮಾಡುವೆನು. ಅದಕ್ಕೆ ಅಂಗವಾಗಿ ಗಣಪತಿ ಪೂಜೆ, ಪುಣ್ಯಾಹವಾಚನ, ಮಾತೃಕಾಪೂಜೆ, ನಾಂದೀಶ್ರಾದ್ಧ ಮತ್ತು ಶ್ರೀವೇದವ್ಯಾಸ ಪೂಜೆಗಳನ್ನೂ ಮಾಡುವೆನು. – ಹೀಗೆ ಸಂಕಲ್ಪಮಾಡಿ ಗಣಪತಿ ಪೂಜೆ, ಪುಣ್ಯಾಹವಾಚನ, ಮಾತೃಕಾಪೂಜೆ, ನಾಂದೀಶ್ರಾದ್ಧಗಳನ್ನು ಮಾಡಿ, ಆಚಾರ್ಯ-ರಲ್ಲಿ ಶುಕಮುನಿಗಳನ್ನು ಭಾಗವತಪುಸ್ತಕದಲ್ಲಿ ಮಧ್ವಾಂತರ್ಗತ ಶ್ರೀವೇದವ್ಯಾಸ-

ದೇವರನ್ನು ಆವಾಹಿಸಿ ಪೂಜೆ ಮಾಡಬೇಕು. ಬಳಿಕ ಹೀಗೆ ಪ್ರಾರ್ಥಿಸಬೇಕು – ಶುಕರೂಪದ್ವಿಜಶ್ರೇಷ್ಠ ಸರ್ವಶಾಸ್ತ್ರವಿಶಾರದ। ಶ್ರೀಮದ್ಭಾಗವತಾಖ್ಯಾನಾನ್ಮದಜ್ಞಾನಂ ವಿನಾಶಯ। ಸಂಸಾರಸಾಗರೇ ಮಗ್ನಂ ದೀನಂ ಮಾಂ ಕರುಣಾನಿಧೇ। ಕರ್ಮಗ್ರಾಹ-ಗೃಹೀತಾಂಗಂ ಮಾಮುದ್ಧರ ಭವಾರ್ಣವಾತ್ । ಶ್ರೀಮದ್ಭಾಗವತಾಖ್ಯೋಽಯಂ ಪ್ರತ್ಯಕ್ಷಃ ಕೃಷ್ಣ ಏವ ಹಿ । ಸ್ವೀಕೃತೋಽಸಿ ಮಯಾ ನಾಥ ಮುಕ್ತ್ಯರ್ಥಂ ಭವಸಾಗರೇ । ಮನೋರಥೋ ಮದೀಯೋಽಯಂ ಸರ್ವಥಾ ಸಫಲಸ್ತ್ವಯಾ । ನಿರ್ವಿಘ್ನೇನೈವ ಕರ್ತವ್ಯೋ ದಾಸೋಽಹಂ ತವ ಕೇಶವ ॥

ಬಳಿಕ ಪ್ರವಚಕಾರರಾದ ಆಚಾರ್ಯರು ಭಾಗವತಮಾಹಾತ್ಮ್ಯವನ್ನು ಶ್ರೋತೃ-ಗಳಿಗೆ ತಿಳಿಸಿ 108ಬಾರಿ ವಾಸುದೇವ ದ್ವಾದಶಾಕ್ಷರಮಂತ್ರ ಜಪಿಸಿ, ಭಾಗವತ-ಪ್ರವಚನವನ್ನು ಪ್ರಾರಂಭಿಸಬೇಕು. ದಿನದ ಕೊನೆಯಲ್ಲಿ ಯಜಮಾನ ತಿರುಗಿ ಪ್ರವಚನಕಾರನಿಗೂ ಪುಸ್ತಕಕ್ಕೂ ಹಿಂದೆ ಹೇಳಿದಂತೆ ಪೂಜೆಮಾಡಿ ಮಂತ್ರಾಕ್ಷತೆ ಪ್ರಸಾದಗಳನ್ನು ಸ್ವೀಕರಿಸಬೇಕು. ಕಥಾ ಪ್ರಾರಂಭ, ಮಧ್ಯದ ವಿರಾಮ ಮತ್ತು ಕೊನೆಯಲ್ಲಿ ಪ್ರತಿದಿನ ಭಗವನ್ನಾಮಸಂಕೀರ್ತನೆ ನಡೆಸಬೇಕು. ಅನ್ನದಾನಾದಿ-ಗಳನ್ನು ನಡೆಸಬೇಕು.

ಸಪ್ತಾಹದ ಉದ್ಯಾಪನ (ಮಂಗಳ) – ಉದ್ಯಾಪನಹೋಮದಲ್ಲಿ ತುಪ್ಪದಿಂದ ಅಷ್ಟಾಕ್ಷರ, ದ್ವಾದಶಾಕ್ಷರಮಂತ್ರಗಳಿಂದಲೂ, ಕೇಶವಾದಿ ಚತು-ರ್ವಿಂಶತಿ ಮಂತ್ರಗಳಿಂದಲೂ ಹೋಮಿಸಿ, ಅಶ್ವತ್ಥಸಮಿಧೆ, ಪಾಯಸ, ತುಪ್ಪ, ಎಳ್ಳು, ಜೇನುತುಪ್ಪಗಳಿಂದ ನೂರೆಂಟು ಬಾರಿ ಬ್ರಹ್ಮಗಾಯತ್ರಿಯಿಂದಲೂ ಚರು-ದ್ರವ್ಯದಿಂದ ದ್ವಾದಶಸ್ಕಂಧಗಳ ಆದ್ಯಂತಶ್ಲೋಕಗಳಿಂದಲೂ ಹೋಮಿಸಬೇಕು. ಯಜಮಾನ ಅಶಕ್ತನಾಗಿದ್ದರೆ ಹೋಮದ್ರವ್ಯಗಳನ್ನು ಬ್ರಾಹ್ಮಣನಿಗೆ ದಾನ ಮಾಡಿ-ದರೂ ಸಾಕು. ಬಳಿಕ ವಿಷ್ಣುಸಹಸ್ರನಾಮಗಳನ್ನು ಪಠಿಸಬೇಕು. ಭಾಗವತ ಪುಸ್ತಕ-ದಾನ ನೀಡಬೇಕು. ದ್ವಾದಶಮೂರ್ತ್ಯಾವಾಹನ ಪುರಸ್ಸರವಾಗಿ ಹನ್ನೆರಡು ಮಂದಿ ಬ್ರಾಹ್ಮಣರಿಗೆ ಮಧು, ಪಾಯಸ, ಮೃಷ್ಟಾನ್ನ, ಭೋಜನ ಮಾಡಿಸಬೇಕು. ಭೂರಿಭೋಜನ ನಡೆಸಿ ತಾನೂ ಉಂಡು, ಬಳಿಕ ಭಾಗವತಗ್ರಂಥದ ಮೆರವಣಿಗೆ ನಡೆಸಬೇಕು.

ಸಪ್ತಾಹದ ಮೊದಲನೆಯ ದಿನ ಯಜಮಾನ ಅರುಣೋದಯಕಾಲದಲ್ಲಿ ಶೌಚ, ಸ್ನಾನ, ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಪೂರೈಸಿ ಕಥಾಶ್ರವಣ ವಿಘ್ನಪರಿಹಾರಕ್ಕಾಗಿ ಗಣಪತಿ ಪೂಜೆಮಾಡಬೇಕು. ಬಳಿಕ ಪುಣ್ಯಾಹವಾಚನ, ಮಾತೃಕಾಪೂಜನ ಅಥವಾ ಅಷ್ಟದಾನಕಮಲ ಆಭ್ಯುದಯಶ್ರಾದ್ಧಮಾಡಿ, ಸರ್ವ-ತೋಭದ್ರಮಂಡಲ ಮಾಡಿ ಶ್ರೀಹರಿ, ವ್ಯಾಸಪ್ರತಿಮೆಯನ್ನು ಸ್ಥಾಪಿಸಿ ಪೂಜಿಸಬೇಕು. ಪ್ರದಕ್ಷಿಣ ನಮಸ್ಕಾರ ಮಾಡಬೇಕು – ಸಂಸಾರಸಾಗರೇ ಮಗ್ನಂ ದೀನಂ ಮಾಂ ಕರುಣಾನಿಧೇ । ಕರ್ಮಮೋಹಗೃಹೀತಾಂಗಂ ಮಾಮುದ್ಧರ ಭವಾರ್ಣವಾತ್ ॥ ದಯಾನಿಧಿಯೇ ಶ್ರೀವ್ಯಾಸ! ಸಂಸಾರಸಾಗರದಲ್ಲಿ ಮುಳುಗಿರುವ ದೀನ ನಾನು. ಕರ್ಮಮೋಹಗಳಿಂದ ಬದ್ಧನಾಗಿದ್ದೇನೆ. ನನ್ನನ್ನು ಸಂಸಾರಸಾಗರದಿಂದ ಉದ್ಧರಿಸು. ಅನಂತರ ಶ್ರೀಮದ್ಭಾಗವತಾಖ್ಯಗ್ರಂಥಕ್ಕೆ ಮುಖ್ಯಶ್ರೋತೃ ಧೂಪದೀಪ ಮುಂತಾದ ಸಾಮಗ್ರಿಗಳಿಂದ ಭಕ್ತಿಪೂರ್ವಕವಾಗಿ ವಿಧ್ಯುಕ್ತವಾಗಿ ಪೂಜೆ ಮಾಡಬೇಕು. ಪುಸ್ತಕದ ಮುಂದೆ ತೆಂಗಿನಕಾಯಿ ಅಥವಾ ಬಿಲ್ವಫಲವಿರಿಸಿ ನಮಿಸಿ ಸ್ತುತಿಸಬೇಕು – ಶ್ರೀಮದ್ಭಾಗವತಾಖ್ಯಸ್ತ್ವಂ ಪ್ರತ್ಯಕ್ಷಃ ಕೃಷ್ಣ ಏವ ಹಿ । ಸ್ವೀಕೃತೋಽಸಿ ಮಯಾ ನಾಥ ಮುಕ್ತ್ಯರ್ಥಂ ಭವಸಾಗರೇ । ಮನೋರಥೋ ಮದೀಯೋಽಯಂ ಸಫಲಃ ಸರ್ವಥಾ ತ್ವಯಾ । ನಿರ್ವಿಘ್ನೇನೈವ ಕರ್ತವ್ಯೋ ದಾಸೋಽಹಂ ತವ ಕೇಶವ ॥ ಶ್ರೀಮದ್ಭಾಗವತ ಎಂಬ ಹೆಸರಿನ ನೀನು ಪ್ರತ್ಯಕ್ಷ ಶ್ರೀವ್ಯಾಸ ಕೃಷ್ಣರ ಪ್ರತಿಮೆ ಎನಿಸಿರುವಿ. ಈ ಸಂಸಾರಸಾಗರದಲ್ಲಿ ಮುಕ್ತಿಸಾಧನೆಗಾಗಿ ನಿನ್ನ ಆಶ್ರಯವನ್ನು ಅವಲಂಬಿಸಿದ್ದೇನೆ. ಕೇಶವ! ನಾ ನಿನ್ನ ದಾಸ, ನನ್ನ ಈ ಮನೋರಥವನ್ನು ನಿರ್ವಿಘ್ನವಾಗಿ ಸರ್ವಥಾ ಸಫಲವಾಗುವಂತೆ ಮಾಡು. ಹೀಗೆ ಗ್ರಂಥಾಭಿಮಾನಿ ಮುಖ್ಯಪ್ರಾಣನನ್ನು ಪ್ರಾರ್ಥಿಸಿ ಪ್ರವಚನಕಾರನನ್ನು ವರಣ ಮಾಡಿ ಪಂಚೋಪಚಾರ ಪೂಜಿಸಬೇಕು. ಅವನನ್ನು ಸುಂದರ ವಸ್ತ್ರಾಭರಣಗಳಿಂದ ಪೂಜಿಸಿ ಸ್ತುತಿಸಬೇಕು – ಶುಕರೂಪ ದ್ವಿಜಶ್ರೇಷ್ಠ ಸರ್ವಶಾಸ್ತ್ರವಿಶಾರದ । ಶ್ರೀಭಾಗವತವ್ಯಾಖ್ಯಾನಾದಜ್ಞಾನಂ ಮೇ ವಿನಾಶಯ ॥ ಶುಕಮುನಿಯ ಪ್ರತೀಕನಾಗಿರುವನು, ಸರ್ವಶಾಸ್ತ್ರಪಾರಂಗತನಾಗಿರುವನು ಇಂಥ ಬ್ರಾಹ್ಮಣೋತ್ತಮನೇ! ಶ್ರೀಮದ್ಭಾಗವತಪ್ರವಚನದ ಮೂಲಕ ನನ್ನ ಅಜ್ಞಾನವನ್ನು ನಾಶಗೊಳಿಸು.

ಪ್ರವಚನಕಾರನ ಮುಂದೆ ಯಜಮಾನ ವ್ರತನಿಯಮಸ್ವೀಕಾರ ಮಾಡಿ ಏಳು ದಿನಗಳ ಕಾಲ ಅದನ್ನು ನಡೆಸಬೇಕು. ಪ್ರವಚನಕ್ಕೆ ವಿಘ್ನ ಉಂಟಾಗದಿರಲು ಐದು ಮಂದಿ ಬ್ರಾಹ್ಮಣರನ್ನು ವರಣ ಮಾಡಬೇಕು. ಅವರು ಗಾಯತ್ರಿಯನ್ನೂ ವಾಸುದೇವ ದ್ವಾದಶಾಕ್ಷರಮಂತ್ರವನ್ನೂ ಜಪಿಸಬೇಕು. ಗೀತಾ, ವಿಷ್ಣುಸಹಸ್ರನಾಮ ಪಠನ ಮಾಡಬೇಕು. ಬಳಿಕ ಹರಿನಾಮಸಂಕೀರ್ತನ ಮಾಡುವ ವಿಷ್ಣುಭಕ್ತರಾದ ಬೇರೆ ಬ್ರಾಹ್ಮಣರನ್ನೂ ಪೂಜಿಸಿ ನಮಸ್ಕರಿಸಿ ಅವರ ಅನುಮತಿ ಪಡೆದು ಆಸನ ಸ್ವೀಕರಿಸಬೇಕು. ಲೌಕಿಕಸಂಪತ್ತು ಹಣ ಮನೆ ಪುತ್ರಾದಿ ಚಿಂತೆಯನ್ನು ತ್ಯಜಿಸಿ ನಿರ್ಮಲಮನಸ್ಸಿನಿಂದ ಭಾಗವತಕಥೆಯನ್ನೇ ಏಕಾಗ್ರಚಿತ್ತನಾಗಿ ಶ್ರವಣ ಮಾಡಿದರೆ ಉತ್ತಮವಾದ ಫಲವನ್ನು ಹೊಂದುವನು. ಶ್ರವಣ, ಕೀರ್ತನಸಮಯಗಳಲ್ಲಿ ಮಲಮೂತ್ರವಿಸರ್ಜನೆಯನ್ನು ಹತೋಟಿಯಲ್ಲಿಟ್ಟುಕೊಳ್ಳುವ ದೃಷ್ಟಿಯಿಂದ ಮಿತ-ಪ್ರಮಾಣದಲ್ಲಿ ಲಘು ಆಹಾರ ಸೇವಿಸುವುದು ಒಳ್ಳೆಯದು. ಒಪ್ಪೊತ್ತು ಮಾತ್ರ ಭೋಜನ ಮಾಡುವುದು ಮತ್ತು ಆಗಲೂ ಕೇವಲ ಹವಿಷ್ಯಾನ್ನ ಉಣ್ಣುವುದು ಉತ್ತಮ. ಶಕ್ತಿಯಿದ್ದರೆ ಏಳು ದಿನವೂ ಪೂರ್ತಿ ಉಪವಾಸವಿದ್ದು ಕಥಾಶ್ರವಣ ಮಾಡಬೇಕು. ಅಥವಾ ಕೇವಲ ತುಪ್ಪವನ್ನೋ ಹಾಲನ್ನೋ ಹಣ್ಣುಗಳನ್ನೋ ಸೇವಿಸಬೇಕು. ಯಾವುದಾದರೊಂದು ನಿಯಮ ಅನುಸರಿಸಿ ಕಥಾಶ್ರವಣ ಮಾಡ-ಬೇಕು.

## ಭಾದ್ರಪದ ॥ ಶುಕ್ಲ ॥ ತೃತೀಯಾ

ಹರಿತಾಲಿಕಾ ವ್ರತ – ಭಾದ್ರಪದ ಶುಕ್ಲ ತೃತೀಯಾದಂದು ಈ ವ್ರತಾಚರಣೆಯಿಂದ ಸ್ತ್ರೀಯರಿಗೆ ಸೌಮಾಂಗಲ್ಯ , ಪುತ್ರ , ಪೌತ್ರ ಅಭಿವೃದ್ಧಿಯಾಗುವುದು.

ಹರಿತಾಲಿಕಾ ವ್ರತವನ್ನು ಭಾದ್ರಪದ ಶುಕ್ಲ ತದಿಗೆಯಂದು ಮಾಡುತ್ತಾರೆ. ಪಾರ್ವತಿಯು ಈ ವ್ರತವನ್ನು ಮಾಡಿ ಶಿವನನ್ನು ಪಡೆದಳು. ಆದುದರಿಂದ ಯುವತಿಯರು ತಮಗೆ ಅಪೇಕ್ಷಿತ ವರನನ್ನು ಪಡೆಯಲು ಈ ವ್ರತವನ್ನು ಮಾಡುತ್ತಾರೆ ಹಾಗೂ ಅಖಂಡ ಸೌಭಾಗ್ಯ ಸಿಗಲು ವಿವಾಹಿತ ಸ್ತ್ರೀಯರು ಈ ವ್ರತವನ್ನು ಮಾಡುತ್ತಾರೆ.

## ಪೂಜಾ ವಿಧಿ

ಈ ದಿನ ನದಿಯ ಅಥವಾ ಹರಿಯುವ ಶುದ್ಧ ನೀರಿನ ಬಳಿಯ ಮರುಳನ್ನು ಒಟ್ಟುಗೂಡಿಸಿ ಶಿವಲಿಂಗವನ್ನು ತಯಾರಿಸುತ್ತಾರೆ. ಪಟ್ಟಣಗಳಲ್ಲಿ ಪಾರ್ವತಿಯ ಮತ್ತು ಅವಳ ಸಖಿಯರ ಜೊತೆಗೆ ಶಿವಲಿಂಗದ ಮೂರ್ತಿಯನ್ನು ತಂದು ಅದನ್ನು ಪೂಜಿಸಲಾಗುತ್ತದೆ. ಈ ಪೂಜೆಯಲ್ಲಿ ಬಿಲ್ವ, ವನಸ್ಪತಿ, ಪಾರಿಜಾತ, ಕರವೀರ (ಕಣಗಿಲ ಗಿಡ), ಅಶೋಕ ಇತ್ಯಾದಿ ಹದಿನಾರು ಪ್ರಕಾರಗಳ ಎಲೆ ಹಾಗೂ ಬಿಳಿ ಹೂಗಳನ್ನು ಲಿಂಗಕ್ಕೆ ಅರ್ಪಿಸುತ್ತಾರೆ. ಮೊದಲು ಗಣಪತಿ ಪೂಜೆಯನ್ನು ಮಾಡಿ ನಂತರ ಲಿಂಗಕ್ಕೆ ಷೋಡಶೋಪಚಾರ ಪೂಜೆಯನ್ನು ಮಾಡುತ್ತಾರೆ. ಬಾಳೆಹಣ್ಣು, ಬೆಲ್ಲ-ಕೊಬ್ಬರಿ ಮತ್ತು ಹಾಲಿನ ನೈವೇದ್ಯವನ್ನು ತೋರಿಸುತ್ತಾರೆ. ಹರಿತಾಲಿಕೆಯ ಆರತಿಯನ್ನು ಹಾಡುತ್ತಾರೆ ಹಾಗೂ ಈ ಪೂಜೆಯ ದಿನ ಹಚ್ಚಿದ ನಂದಾದೀಪವನ್ನು ವಿಸರ್ಜನೆಯ ವರೆಗೆ ಸತತವಾಗಿಡುತ್ತಾರೆ.

ಸಂಜೆ ಆರತಿಯನ್ನು ಮಾಡಿ ರಾತ್ರಿ ಜಾಗರಣೆಯನ್ನು ಮಾಡಬೇಕು ಮತ್ತು ಹರಿತಾಲಿಕೆಯ ಕಥೆಯನ್ನು ಓದಬೇಕು. ಮರುದಿನ ಮೊಸರನ್ನದ ನೈವೇದ್ಯವನ್ನು ಮಾಡಿ ಶಿವ, ಪಾರ್ವತಿ ಮತ್ತು ಸಖಿಯರ ವಿಸರ್ಜನೆಯನ್ನು ಹರಿಯುವ ನೀರಿನಲ್ಲಿ ಮಾಡಬೇಕು.

ಈ ದಿನ ಪ್ರತಿಯೋರ್ವ ವಿವಾಹಿತ, ಅವಿವಾಹಿತ ಸ್ತ್ರೀಯು ಉಪವಾಸವನ್ನು ಮಾಡಿ ಸಾಂಸಾರಿಕ ಜೀವನದಲ್ಲಿ ಬರುವಂತಹ ತೊಂದರೆಗಳನ್ನು ದೂರ ಮಾಡುವುದಕ್ಕಾಗಿ ಶಿವನಲ್ಲಿ ಪ್ರಾರ್ಥನೆಯನ್ನು ಮಾಡಬೇಕು. ಇದರಿಂದ ನಮ್ಮ ಕಾರ್ಯಕ್ಷಮತೆಯು ಹೆಚ್ಚಾಗುತ್ತದೆ. ಈ ವ್ರತವನ್ನು ಮಾಡಿ ಪಾರ್ವತಿಗೆ ಶಿವನ ಪ್ರಾಪ್ತಿಯಾಯಿತು ಮತ್ತು ಆದಿಶಕ್ತಿಯ ಸ್ಥಾನವು ಪ್ರಾಪ್ತವಾಯಿತು. ಆದುದರಿಂದ ಪ್ರತಿಯೊಬ್ಬ ಸ್ತ್ರೀಯ ಜೀವನದಲ್ಲಿ ಈ ದಿನವು ಮಹತ್ವದ್ದಾಗಿದೆಯೆಂದು ತಿಳಿಯ-ಲಾಗುತ್ತದೆ.

**ಹರಿತಾಲಿಕೆಯ ವ್ರತದ ಲಾಭಗಳು** – ಈ ವ್ರತವನ್ನು ಮಾಡುವುದರಿಂದ ಶೀಘ್ರ ಆಧ್ಯಾತ್ಮಿಕ ಉನ್ನತಿಯಾಗಲು ಸಹಾಯವಾಗುತ್ತದೆ, ಉಪವಾಸದಿಂದ ಶರೀರ

ಪವಿತ್ರವಾಗುತ್ತದೆ, ಅಪೇಕ್ಷಿತ ವರನು ಪ್ರಾಪ್ತನಾಗುತ್ತಾನೆ. ಕಠೋರ ಉಪವಾಸ ಮಾಡಿದರೆ ಮೃತ್ಯುವಿನ ನಂತರ ಶಿವಲೋಕದಲ್ಲಿ ಸ್ಥಾನವು ಸಿಗುತ್ತದೆ.

ಮಂದಾರಮಾಲಾಕುಲಿತಾಲಕಾಯೈ ಕಪಾಲಮಾಲಾಂಕಿತಶೇಖರಾಯ ।
ದಿವ್ಯಾಂಬರಾಯೈ ಚ ದಿಗಂಬರಾಯ ನಮಃ ಶಿವಾಯೈ ಚ ನಮಃ ಶಿವಾಯ ॥

ಇತ್ಯಾದಿಮಂತ್ರಗಳಿಂದ ಪಾರ್ವತೀಶಿವನನ್ನು ಪೂಜಿಸಬೇಕು.

## ಸ್ವರ್ಣಗೌರೀವ್ರತ

ಶುಕ್ಲತೃತೀಯಾದಲ್ಲಿಯೇ ಸ್ವರ್ಣಗೌರೀವ್ರತ. ಇದನ್ನು ಬಿದಿಗೆ ಸಂಬಂಧವಿಲ್ಲದೇ ಚತುರ್ಥೀಸಂಬಂಧವಿರುವ ತೃತೀಯಾದಲ್ಲಿ ಮಾಡತಕ್ಕದ್ದು.

ಭಾದ್ರಪದ ಶುಕ್ಲತದಿಗೆ ಹೆಣ್ಣುಮಕ್ಕಳಿಗೆ ಸಂಭ್ರಮದ ಹಬ್ಬ. ಇದೇ ಗೌರೀ ತದಿಗೆ. ಇದು ಸೌಭಾಗ್ಯಪ್ರದವಾದ ವ್ರತ. ದೊಡ್ಡಗೌರೀ ಮುಂತಾದ ಹೆಸರಿನಿಂದ ಪ್ರಸಿದ್ಧವಿದೆ. ತಳಿರುತೋರಣಗಳಿಂದ ಅಲಂಕೃತವಾದ ಮಂಟಪದ ಮಧ್ಯದಲ್ಲಿ ಗೌರಿಯ ಪ್ರತಿಮೆಯನ್ನು ಅಥವಾ ಪ್ರತಿಕೃತಿಯನ್ನು ಇಟ್ಟು ಷೋಡಶೋಪಚಾರಗಳಿಂದ ಪುಜಿಸಿ ವ್ರತಕಥೆಯನ್ನು ಕೇಳುತ್ತಾರೆ. ಮತ್ತು ಮೊರದ ಬಾಗಿನವನ್ನು ಕೊಡುತ್ತಾರೆ. ಅಂಥ ಬಾಗಿನವನ್ನು ಹೊತ್ತು ಸಂಭ್ರಮದಿಂದ ಓಡಾಡುವ ಸುಮಂಗಲಿಯರನ್ನು ಅಂದಿನಿಂದ ಒಂದುವಾರ ಕಾಲ ನೋಡಬಹುದು.

## ಭಾದ್ರಪದ ॥ ಶುಕ್ಲ ॥ ಚತುರ್ಥೀ

## ಸಿದ್ಧಿವಿನಾಯಕವ್ರತ

ವಿಘ್ನನಿವಾರಕ ವಿನಾಯಕನ ಹಬ್ಬ. ಸಿದ್ಧಿವಿನಾಯಕ ವಿದ್ಯಾಗಣಪತಿ ಮುಂತಾದ ಹೆಸರಿನಿಂದ ಇವನನ್ನು ಪುಜಿಸುತ್ತಾರೆ. ಪ್ರತಿ ಮನೆಯಲ್ಲೂ, ಭಕ್ತಿಯ ಜೊತೆಗೆ ಕಲಾವಂತಿಕೆಯನ್ನು ಈ ಹಬ್ಬದಲ್ಲಿ ತೋರಿಸುತ್ತಾರೆ. ಮಣ್ಣಿನಲ್ಲಿ ರಂಗುರಂಗಿನ ಬಣ್ಣದಿಂದ ತಯಾರಾಗಿರುವ ಗಣಪತಿಯನ್ನು ಅಲಂಕೃತ ಮಂಟಪದಲ್ಲಿ ಪ್ರತಿಷ್ಠಾಪಿಸಿ, ಪುಜಿಸುತ್ತಾರೆ. ಸಾಮೂಹಿಕವಾಗಿಯೂ ಈ ಹಬ್ಬವನ್ನು ಆಚರಿಸುತ್ತಾರೆ. ಕಡಬು ಗಣಪತಿಗೆ ಪ್ರಿಯವಾದ ಭಕ್ಷ್ಯ.

ಏಕದಂತಂ ಶೂರ್ಪಕರ್ಣಂ ನಾಗಯಜ್ಞೋಪವೀತಿನಮ್ ।
ಪಾಶಾಂಕುಶಧರಂ ದೇವಂ ಧ್ಯಾಯೇತ್ ಸಿದ್ಧಿವಿನಾಯಕಮ್ ॥

ಇತ್ಯಾದಿಮಂತ್ರಗಳಿಂದ ಶುಕ್ಲಚತುರ್ಥಿಯಂದು ಗಣೇಶಪೂಜೆಯನ್ನು ಪೂಜಿಸ-ಬೇಕು. ಆ ದಿನ ಭಾನುವಾರ, ಮಂಗಳವಾರ ಇದ್ದರೆ ಬಹಳ ಪ್ರಶಸ್ತ . ದೂರ್ವಾಪೂಜೆ, ಮೋದಕನೈವೇದ್ಯಗಳು ಈ ವ್ರತದ ವಿಶೇಷ. ಏಕವಿಂಶತಿ(ಇಪ್ಪತ್ತೊಂದು) ದೂರ್ವಾ-ಗಳಿಂದ ಪೂಜಿಸಿ, 21 ಕಡುಬುಗಳನ್ನು ನಿವೇದಿಸಿ ಒಂದನ್ನು ಸಿದ್ಧಿವಿನಾಯಕನಿಗೂ, ಹತ್ತನ್ನೂ ಬ್ರಾಹ್ಮಣರಿಗೂ ಕೊಟ್ಟು, ಹತ್ತನ್ನು ತಾನು ಕುಟುಂಬಸಮೇತ ಉಪ-ಯೋಗಿಸಬೇಕು. ಚತುರ್ಥಿಯಂದು ಚಂದ್ರದರ್ಶನವು ನಿಷಿದ್ಧ. ಪ್ರಮಾದವಶಾತ್ ದರ್ಶನ ಮಾಡಿದರೆ ಸ್ಯಮಂತಕೋಪಾಖ್ಯಾನವನ್ನು ಕೇಳಬೇಕು. ಅಥವಾ –

ಸಿಂಹಃ ಪ್ರಸೇನಮವಧೀತ್ ಸಿಂಹೋ ಜಾಂಬವತಾ ಹತಃ ।
ಸುಕುಮಾರಕ ಮಾ ರೋದೀಃ ತವ ಹ್ಯೇಷ ಸ್ಯಮಂತಕಃ ॥

ಎಂಬ ಮಂತ್ರವನ್ನು ಜಪಿಸಬೇಕು. ಕನಿಷ್ಠ ಪಕ್ಷ ಇಪ್ಪತ್ತೊಂದು ಮನೆಗಳಿಗಾದರೂ ಹೋಗಿ ಗಣೇಶನನನ್ನು ನೋಡಿ ನಮಸ್ಕರಿಸಬೇಕೆಂದು ನಿಯಮವಿದೆ .

## ಭಾದ್ರಪದ ॥ ಶುದ್ಧ ॥ ಪಂಚಮೀ

## ಋಷಿಪಂಚಮೀವ್ರತ

ಗಣಪತಿಹಬ್ಬದ ಮಾರನೆಯ ದಿನ ಋಷಿಪಂಚಮಿ ಎನ್ನುವ ಆಚರಣೆಗೆ ಪ್ರಸಿದ್ಧ.

ನಾಲ್ಕುವೇದಗಳನ್ನು ತಮ್ಮ ಜ್ಞಾನದ ಬಲದಿಂದ ದಕ್ಕಿಸಿಕೊಂಡು ಮನುಕುಲಕ್ಕೆ ಧಾರೆಯೆರೆದುಕೊಟ್ಟ ಋಷಿಗಳನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸುವ ದಿನ ಇದು. ಉತ್ತರದಿಕ್ಕಿನ ಧ್ರುವ ನಕ್ಷತ್ರದ ಸುತ್ತಲೂ ಸಂಚರಿಸುವ ಸಪ್ತರ್ಷಿಮಂಡಲವು ಅರುಂ-ಧತೀ ನಕ್ಷತ್ರದ ಜೊತೆ ಇಂದು ಗೋಚರವಾಗುತ್ತದೆ.

ಯೌವನಾವಸ್ಥೆಯಲ್ಲಿದ್ದಾಗ ವಯಸ್ಸಿಗೆ ಸಹಜವಾದ ರೂಪಮದದಿಂದ, ಚಾಪಲ್ಯ ಅಥವಾ ಗರ್ವದಿಂದ, ಮುಟ್ಟಿನಕಾಲದಲ್ಲಿ ಮಾಡಿರಬಹುದಾದ ಆಚಾರೋ-ಲ್ಲಂಘನೆಯಿಂದ ಅಥವಾ ತಿಳಿದೋ ತಿಳಿಯದೆಯೋ ಮಾಡಿರಬಹುದಾದ ಎಲ್ಲ

ಪಾಪಗಳಿಗಾಗಿಯೂ ಮನಃಪೂರ್ವಕವಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳುವುದೇ ಇಲ್ಲಿನ ಉದ್ದೇಶ. ಗುರುಸ್ವರೂಪರಾದ ಋಷಿಗಳನ್ನು ಸ್ಮರಿಸಿ, ಪೂಜಿಸಿ ಕ್ಷಮೆಯನ್ನು ಯಾಚಿಸಲಾಗುತ್ತದೆ. ಆಚರಣೆಯ ಶೈಲಿಯಲ್ಲಿ ಪ್ರಾಂತೀಯ ವ್ಯತ್ಯಾಸಗಳು ಕಾಣುತ್ತವೆಯಾದರೂ, ಭಾವ ಸಮಾನವಾಗಿದೆ.

ಮಧ್ಯಾಹ್ನವ್ಯಾಪಿನಿಯಾದ ಶುಕ್ಲಪಂಚಮಿಯಂದು ಋಷಿಪಂಚಮೀವ್ರತ. ರಜಸ್ವಲಾಸಂಪರ್ಕದಿಂದ ಬರುವ ದೋಷಗಳ ಪರಿಹಾರವು ಈ ವ್ರತದಿಂದ ಆಗುವುದು. ಈ ದಿನ ಅರುಂಧತೀಸಮೇತ ಕಶ್ಯಪಾದಿಸಪ್ತರ್ಷಿಗಳ ಪೂಜೆಯನ್ನು ಮಾಡಿ, ಉತ್ತು ಬಿತ್ತು ಮಾಡದೇ ಸಹಜವಾಗಿಯೇ ಬೆಳೆದ ತರಕಾರಿಗಳನ್ನು ಹಣ್ಣುಗಳನ್ನು ಆಹಾರವಾಗಿ ಸ್ವೀಕರಿಸಬೇಕು. ವ್ರತ ಹಿಡಿದವರು ಏಳು ವರ್ಷ ಉಪವಾಸ ಪೂಜಿಸಿ, ಏಳು ಕಲಶಗಳಲ್ಲಿ ಋಷಿಗಳನ್ನು ಪೂಜಿಸಿ, ಮಾರನೆಯ ದಿವಸ ಆಯಾಯ ಋಷಿಮಂತ್ರಗಳಿಂದ 108 ಅಥವಾ 28 ಆಹುತಿಗಳನ್ನು ತಿಲ, ಆಜ್ಯ-ದ್ರವ್ಯಗಳಿಂದ ಕೊಡಬೇಕು. ಏಳು ದಂಪತಿಗಳ ಭೋಜನ ಮಾಡಿಸಬೇಕು. (ಹೆಚ್ಚಿನ ವಿಚಾರಕ್ಕಾಗಿ ನಮ್ಮ ಸಂಸ್ಥೆಯ ಋಷಿಪಂಚಮೀ ಪುಸ್ತಕ ನೋಡಿರಿ).

## ವರಾಹ ಜಯಂತಿ

ಭಾದ್ರಪದಮಾಸದ ಶುಕ್ಲಪಕ್ಷದ ಪಂಚಮಿಯ ದಿವಸ ಭೂವರಾಹ ಜಯಂತಿ-ಯನ್ನು ಆಚರಿಸಬೇಕು.

## ಆಚರಣೆಯ ಕ್ರಮ

1. ತಳಿರುತೋರಣ ರಂಗವಲ್ಲಿಗಳಿಂದ ಮನೆಯನ್ನು ಸಿಂಗರಿಸಬೇಕು.
2. ಅನೇಕ ಭಕ್ಷ್ಯಭೋಜ್ಯಗಳನ್ನು ಮಾಡಬೇಕು. ಹಾಗೂ ಪಂಚಾಮೃತಾಭಿಷೇಕಕ್ಕೆ ಉಪಯುಕ್ತವಾದ ಎಲ್ಲ ಪದಾರ್ಥಗಳನ್ನು ಸಂಗ್ರಹ ಮಾಡಿಟ್ಟುಕೊಳ್ಳಬೇಕು.
3. ಸಾಧ್ಯವಾದರೆ ವರಾಹಸಹಸ್ರನಾಮಾವಳಿಯಿಂದ ಭಗವಂತನನ್ನು ಅರ್ಚಿಸಬೇಕು. ಅದಕ್ಕಾಗಿ ತುಳಸೀ ಅಥವಾ ಹೂವುಗಳನ್ನು ಸಾವಿರ ಸಂಖ್ಯೆಯಲ್ಲಿ ಸಂಗ್ರಹ ಮಾಡಬೇಕು.

4. ಹಿಂದಿನ ದಿವಸವೇ ಅನ್ನಾರಾಧನೆಗಾಗಿ ದಂಪತಿಗಳನ್ನು ಮನೆಯವರನ್ನು ಸ್ವಾಗತ ಮಾಡಿರಬೇಕು.
5. ವರಾಹಚರಿತ್ರೆಯನ್ನು ವಿದ್ವಾಂಸರಿಂದ ಹೇಳಿಸಿ, ಸಂತೋಷ ಪಡಬೇಕು. ವರಾಹಸ್ತೋತ್ರಗಳನ್ನು ಪಾರಾಯಣ ಮಾಡಬೇಕು.
6. ತಂತ್ರಸಾರಸಂಗ್ರಹದಲ್ಲಿ ಶ್ರೀಮಧ್ವಾಚಾರ್ಯರು ಉಪದೇಶಿಸಿದ, ವರಾಹ ಮಂತ್ರವನ್ನು ಕನಿಷ್ಠ ಸಾವಿರ ಜಪಿಸಬೇಕು.
7. ಪ್ರಯತ್ನಪಟ್ಟು ವರಾಹಮೂರ್ತಿಯನ್ನು ಪೂಜಿಸಬೇಕು. ಇಲ್ಲದಿದ್ದರೆ, ವರಾಹಶಾಲಗ್ರಾಮವನ್ನು ಸಂಪಾದನೆ ಮಾಡಿರಬೇಕು. ಅದೂ ಇಲ್ಲದಿದ್ದರೆ, ಇರುವ ಭಗವಂತನ ಪ್ರತೀಕದಲ್ಲಿಯೇ ಭೂವರಾಹನನ್ನು ಆವಾಹನೆ ಮಾಡಿ, ಪೂಜಿಸಬೇಕು.

## ಕೆಲವು ಮಾಹಿತಿಗಳು

ಎಲ್ಲರಿಗೂ ಕೂಡ ಭೂಮಿಯನ್ನು ಖರೀದಿಸಲು ಮನೆಯನ್ನು ಕಟ್ಟಲು ಬಹಳ ಅಪೇಕ್ಷೆಯಿರುತ್ತದೆ. ಅನಿವಾರ್ಯವೂ ಆಗಿರುತ್ತದೆ. ಇಂಥವರು ವರಾಹದೇವನ ಆರಾಧನೆಯನ್ನೇ ಮಾಡಬೇಕು. ಹಾಗೂ ಭೂವರಾಹಜಯಂತಿಯನ್ನು ಶ್ರದ್ಧಾಭಕ್ತಿ-ಗಳಿಂದ ಆಚರಿಸಬೇಕು. ಭೂವರಾಹದೇವರ ಮೂರ್ತಿ, ಭೂವರಾಹಶಾಲಗ್ರಾಮ ಇವುಗಳು ಇಲ್ಲದಿದ್ದರೆ, ಕಲಶದಲ್ಲಿ ಆವಾಹನೆ ಮಾಡಿ, ಪೂಜಿಸಬೇಕು. ಅಥವಾ ಮೂರ್ತಿ ಶಾಲಗ್ರಾಮಗಳಿದ್ದರೂ ಕೂಡ ಕಲಶದಲ್ಲಿ ಭೂವರಾಹದೇವರನ್ನು ಆವಾಹನೆ ಮಾಡಿ ಪೂಜಿಸುವುದು ಅತ್ಯಂತ ಶ್ರೇಷ್ಠ ಫಲದಾಯಕವಾಗಿರುತ್ತದೆ. ವರಾಹದೇವರ ಸಹಸ್ರನಾಮಾವಳಿಯಿಂದ ಅರ್ಚಿಸಲು ಸಾಧ್ಯವಾಗದಿದ್ದರೆ, ವಿಷ್ಣುಸಹಸ್ರನಾಮದಿಂದಲೇ ಅರ್ಚನೆಯನ್ನು ಮಾಡಲು ಸಾಧ್ಯವಿದೆ. ಮತ್ತು ವರಾಹಮಂತ್ರವನ್ನು ಪಠಿಸುತ್ತಲೂ ಅರ್ಚನೆಯನ್ನು ಮಾಡಬೇಕು. ಬ್ರಹ್ಮಸೂತ್ರ-ನಾಮಾವಳಿಯನ್ನು ಹೇಳಿಯೂ, ಅರ್ಚನೆಯನ್ನು ಮಾಡಬೇಕು. ಯಥಾಶಕ್ತಿ, ಯಥಾವೈಭವಗಳಿಂದ ಭೂವರಾಹ ದೇವರ ಆರಾಧನೆಯನ್ನು ಮಾಡುವುದರಿಂದ ಎಲ್ಲ ಮನೋಭೀಷ್ಟಗಳು ಈಡೇರುವುದರಲ್ಲಿ ಸಂಶಯವೇ ಇಲ್ಲ.

ಭಾಗವತದ ತೃತೀಯಸ್ಕಂಧದಲ್ಲಿ ವರಾಹಚರಿತ್ರೆಯು ವರ್ಣಿತವಾಗಿದೆ. ಇದನ್ನು ಅವಶ್ಯವಾಗಿ ವಿದ್ವಾಂಸರಿಂದ ಹೇಳಿಸಬೇಕು. ಅದನ್ನು ಕೇಳುತ್ತಾ, ಭಾವುಕರಾಗಿ, ಭಗವಂತನ ಮಹಾಮಹಿಮೆಯನ್ನು ತಿಳಿದುಕೊಳ್ಳಬೇಕು.

ಭೂವರಾಹಜಯಂತಿಯನ್ನು ಯಾವುದೇ ಅಧರ್ಮಕಾರ್ಯಗಳಲ್ಲಿ, ಲೌಕಿಕಕಾರ್ಯಗಳಲ್ಲಿ ತೊಡಗಬಾರದು. ಬೇಡದ ಕಾರ್ಯಕ್ರಮಗಳನ್ನು ಸಂಯೋಜನೆ ಮಾಡಿಕೊಳ್ಳಬಾರದು. ಮತ್ತು ಭೂಖರೀದಿ ಮೊದಲಾದವುಗಳನ್ನೂ ಕೂಡ ಆದಷ್ಟೂ ಮಾಡದೇ ಭಗವಂತನ ಆರಾಧನೆಯಲ್ಲಿಯೇ ತೊಡಗಬೇಕು. ಅವನ ಅನುಗ್ರಹವನ್ನು ಪಡೆದುಕೊಳ್ಳುವುದಕ್ಕಿಂತ ಮತ್ತೊಂದು ಪುಣ್ಯಕೆಲಸವು ಇರುವುದಿಲ್ಲ.

ತಂತ್ರಸಾರಸಂಗ್ರಹದಲ್ಲಿ ಉಪದೇಶಿಸಿದ ವರಾಹಮಂತ್ರವನ್ನು ಯಥಾಶಕ್ತಿ ಜಪಿಸಲೇ ಬೇಕು. ಗುರುಗಳಿಂದ ಉಪದೇಶವಾಗದಿದ್ದರೆ, ಅವಶ್ಯವಾಗಿ ಅದರ ಉಪದೇಶವನ್ನು ಪಡೆದು, ಅಕ್ಷರಸಂಖ್ಯೆಯಲ್ಲಿ ಜಪಿಸಿ, ಹೋಮಿಸಬೇಕು.

ಸಾಧ್ಯವಾದರೆ ಭೂವರಾಹಜಯಂತಿಯಂದು ಭೂವರಾಹ ಹೋಮವನ್ನು ಮಾಡಬೇಕು. ಉತ್ತಮ ಪುರೋಹಿತರನ್ನು ಕರೆಯಿಸಿ, ಆಹುತಿಪ್ರಧಾನ ಮಾಡುವ ಮೂಲಕ ಭೂವರಾಹನನ್ನು ಮೆಚ್ಚಿಸಬೇಕು.

ಮನೆಮಂದಿಯೆಲ್ಲರೂ ಭೂವರಾಹದೇವರನ್ನು ಪೂಜಿಸಿದ ಮೇಲೆ ಈ ಕೆಳಗಿನ ಮಂತ್ರವನ್ನು ಹೇಳುತ್ತಾ ಅರ್ಘ್ಯವನ್ನು ನೀಡಬೇಕು -

**ಕ್ರೋಡಾತ್ಮನೇ ನಮಸ್ತುಭ್ಯಂ ಯಜ್ಞರೂಪಾಯ ವೇಧಸೇ ದಂಷ್ಟ್ರಾಗ್ರ-ವಿಧೃತಾ-ಶೇಷಧಾರಿಣೇ ಧರಣೀಧರ ॥ ಶ್ರೀಭೂವರಾಹಾಯ ನಮಃ ಇದಮರ್ಘ್ಯಂ ಇದಮರ್ಘ್ಯಂ ಇದಮರ್ಘ್ಯಂ ॥**

ಪೂಜಾಸಂದರ್ಭದಲ್ಲಿ

| | |
|---|---|
| ಮಾಧವಾಯ ನಮಃ | ಕಟಿಂ ಪೂಜಯಾಮಿ |
| ಕ್ಷೇತ್ರಜ್ಞಾಯ ನಮಃ | ಜಠರಂ ಪೂಜಯಾಮಿ |
| ವಿಶ್ವರೂಪಾಯ ನಮಃ | ಉರಃ ಪೂಜಯಾಮಿ |

ಸರ್ವಜ್ಞಾಯ ನಮಃ ಕಂಠಂ ಪೂಜಯಾಮಿ
ಪ್ರಜಾನಾಂಪತಯೇ ನಮಃ ಶಿರಃ ಪೂಜಯಾಮಿ
ಪ್ರದ್ಯುಮ್ನಾಯ ನಮಃ ಭುಜೌ ಪೂಜಯಾಮಿ
ದಿವ್ಯಾಸ್ತ್ರಾಯ ನಮಃ ಸುದರ್ಶನಂ ಪೂಜಯಾಮಿ
ಅಮೃತೋದ್ಭವಾಯ ನಮಃ ಶಂಖಂ ಪೂಜಯಾಮಿ

ಎನ್ನುತ್ತಾ ಭೂವರಾಹನ ಅಂಗಾಂಗಗಳನ್ನು ಪೂಜಿಸಬೇಕು.

ಅಂತಿಮವಾಗಿ ಹೀಗೆ ಪ್ರಾರ್ಥಿಸಬೇಕು -

ಭೂವರಾಹ ಮಹೋತ್ಸಾಹ ಸರ್ವಶತ್ರುವಿನಾಶನ
ವೈರಿಸಂಹಾರ ಮಾಂ ರಕ್ಷ ದೇಹಿ ದಾಪಯ ಮೇ ಶ್ರಿಯಮ್ ॥

ಎಂಬ ಶ್ಲೋಕದಿಂದ ಪ್ರಾರ್ಥನೆಯನ್ನು ಸಲ್ಲಿಸಬೇಕು.

ಯಾವ ಭಕ್ತನು ಹೀಗೆ ಜಪ, ಪೂಜೆ, ಅರ್ಚನೆ, ದಾನ, ಅನ್ನಸಂತರ್ಪಣೆ, ಬ್ರಾಹ್ಮಣಾರಾಧನೆ, ಯಜ್ಞ, ಪ್ರವಚನ, ಪಾರಾಯಣ ಇವುಗಳ ಮೂಲಕ, ಭೂವರಾಹಜಯಂತಿಯನ್ನು ಆಚರಿಸುತ್ತಾನೋ, ಅವನೇ ಅತ್ಯಂತ ಧನ್ಯ. ಅವನೇ ಉತ್ತಮ ಭಕ್ತ, ಅವನೇ ಭೂಲೋಕದ ದೇವತೆ. ಇಂಥ ವರಾಹಭಕ್ತನನ್ನು ದರ್ಶನ ಮಾಡುವುದರಿಂದಲೇ ಪಾಪಗಳು ಪರಿಹಾರವಾಗುತ್ತವೆ. ಭಾಗ್ಯವಂತರಿಗಷ್ಟೇ ಭೂವರಾಹಜಯಂತಿಯ ಆಚರಣೆಯನ್ನು ಮಾಡಬೇಕೆಂಬ ಪ್ರೇರಣೆಯಾಗುತ್ತದೆ, ಅವಕಾಶ ದೊರಕುತ್ತದೆ. ಆದ್ದರಿಂದ ಪ್ರಯತ್ನಪಟ್ಟು ಹರಿಭಕ್ತನಾದವನು ಭೂವರಾಹಜಯಂತಿಯನ್ನು ಆಚರಿಸಿ ಧನ್ಯರಾಗಬೇಕು.

## ಭಾದ್ರಪದ ॥ ಶುದ್ಧ ॥ ಷಷ್ಠಿ

## ರಘುಪುಂಗವತೀರ್ಥರು (ಪಲಿಮಾರು ಮಠ)

ಪರಂಪರೆಯಲ್ಲಿ ಇಪ್ಪತ್ತೊಂದನೆಯವರು. ತನ್ನ ಭಕ್ತಿ. ವಿರಕ್ತಿಗಳಿಂದ ಭಗವಂತನನ್ನು ಆರಾಧಿಸಿದ ಇವರು ಪಲಿಮಾರಿನ ಜೀರ್ಣವಾದ ಮಠವನ್ನು ನವೀಕರಿಸಿದರು. ಈಗ ಪಲಿಮಾರಿನಲ್ಲಿ ಕಾಣುವ ಸುಂದರವಾದ ಮಠ ಇವರ

ಕಾಲದಲ್ಲಿ ನವೀಕರಿಸಿದ್ದು, ಸುಮಾರು 350 ವರ್ಷಗಳಷ್ಟು ಹಿಂದಿನದು. ಮಠದ ಗರ್ಭಗುಡಿಯ ಮುಂದಿನ ಕಂಭವೊಂದರಲ್ಲಿ ಇವರು ಹೀಗೆ ಕೆತ್ತಿಸಿದ್ದಾರೆ.

**ರಘುಪುಂಗವ ಧಾಮೇದಂ ರಘುಪುಂಗವ ಯೋಗಿನಾ ।**
**ರಘುಪುಂಗವ ಸಂಪ್ರೀತ್ಯೈ ಪಿಂಗಲಾಬ್ದೇ ನವೀಕೃತಮ್ ॥**

ಇವರು ಸುಮಾರು ನಾಲ್ಕುವರೆ ದಶಕಗಳ ಕಾಲ ಈ ಪೀಠದಲ್ಲಿ ವಿರಾಜಿಸುತ್ತಿದ್ದು, ಶಾ.ಶ. 1672 (ಕ್ರಿ.ಶ. 1750) ಪ್ರಮೋದ ಸಂವತ್ಸರದ ಭಾದ್ರಪದ ಶುದ್ಧ ಷಷ್ಠಿಯಂದು ಕಾಂತಾವರಮಠದಲ್ಲಿ ವೃಂದಾವನಸ್ಥರಾದರು.

## ಸೂರ್ಯಷಷ್ಠೀ

**ಶುಕ್ಲೇ ಭಾದ್ರಪದೇ ಷಷ್ಠ್ಯಾಂ ಸ್ನಾನಂ ಭಾಸ್ಕರಪೂಜನಮ್ । ಪ್ರಾಶನಂ ಪಂಚಗವ್ಯಸ್ಯ ಅಶ್ವಮೇಧಫಲಾಧಿಕಮ್ ॥** ಎಂಬ ವಚನದಂತೆ ಭಾದ್ರಪದ ಶುಕ್ಲಷಷ್ಠಿಯಂದು ಪ್ರಾತಃಸ್ನಾನ, ಸೂರ್ಯಪೂಜೆ, ಪಂಚಗವ್ಯಪ್ರಾಶನಗಳನ್ನು ಮಾಡಬೇಕು. ಅಶ್ವಮೇಧಫಲಕ್ಕಿಂತಲೂ ಹೆಚ್ಚಿನ ಫಲವು ಬರುವುದು.

ಈ ದಿನವೇ ಸ್ಕಂದಷಷ್ಠೀ ಎನ್ನುವರು. ಈ ದಿನ ಕುಮಾರಸ್ವಾಮಿಯ ದರ್ಶನದಿಂದ ಬ್ರಹ್ಮಹತ್ಯಾದಿಪಾಪಗಳು ನಾಶವಾಗುತ್ತವೆ.

## ಕಲ್ಕಿ ಅವತಾರ

ಶ್ರಾವಣ ಮಾಸದ ಪಕ್ಷದ ಷಷ್ಠಿಯ ದಿವಸ ಕಲ್ಕಿಯು ಅವತರಿಸಿದನೆಂದು ಹೇಳು-ತ್ತಾರೆ. ಕೆಲವೆಡೆ ಭಾದ್ರಪದ ಮಾಸದ ಶುಕ್ಲಪಕ್ಷದ ಷಷ್ಠಿಯ ದಿವಸ ಕಲ್ಕಿರೂಪಿಯಾದ ಭಗವಂತನು ಅವತಾರ ಮಾಡಿದ್ದಾನೆ. ಇನ್ನೂ ಕೆಲವೆಡೆ ಮಾರ್ಗಶಿರ ಮಾಸದ ಕೃಷ್ಣಪಕ್ಷದ ಅಷ್ಟಮಿಯಲ್ಲಿ ಅವತರಿಸಿದನೆಂದೂ ಇದೆ. ವಿಷ್ಣುಯಶಸ್ ಎಂಬ ಬ್ರಾಹ್ಮಣನ ಮನೆಯಲ್ಲಿ ಭಗವಂತನು ಕಲ್ಕಿರೂಪದಿಂದ ಅವತಾರ ಮಾಡುತ್ತಾನೆ. ಸಾಕ್ಷಾತ್ ಲಕ್ಷ್ಮೀದೇವಿಯು ದೇವದತ್ತ ಎಂಬ ಕುದುರೆಯಾಗಿ ಬರುತ್ತಾಳೆ. ದುರ್ಗಾದೇವಿಯು, ಖಡ್ಗವಾಗಿ ಭಗವಂತನ ಕೈಯನ್ನು ಆಶ್ರಯಿಸುತ್ತಾಳೆ. ಕುದುರೆ ಏರಿ ಕಲ್ಕಿರೂಪಿಯಾದ ಭಗವಂತನು ಜಗತ್ತಿನ ಪರ್ಯಟನೆಗೆ ಹೊರಡುತ್ತಾನೆ.

ಜಗತ್ತಿನಲ್ಲಿ ಎಲ್ಲೆಡೆಯೂ ಮ್ಲೇಂಛರೇ ತುಂಬಿರುತ್ತಾರೆ. ಕಲಿಯುಗದ ಪ್ರಭಾವದಿಂದ ಪ್ರತಿಯೊಬ್ಬರು ಹೆಬ್ಬೆಟ್ಟಿನ ಗಾತ್ರದಲ್ಲಿ ಕಾಣಿಸುತ್ತಾರೆ. ಹಾಗೂ ಮುಖದಲ್ಲಿ ಕಾಂತಿ-ಹೀನರಾಗಿ ಅಧರ್ಮಲೋಲುಪರಾಗಿ ಪ್ರತಿಯೊಬ್ಬರೂ ಧರ್ಮವನ್ನು ಸಂಪೂರ್ಣ-ವಾಗಿ ಪರಿತ್ಯಾಗ ಮಾಡಿರುತ್ತಾರೆ. ಇಂಥ ದುಷ್ಟರಾದ ಎಲ್ಲ ಮ್ಲೇಂಛರನ್ನು ಭಗವಾನ್ ಕಲ್ಕಿಯು ಸಮಗ್ರವಾಗಿ ನಾಶ ಮಾಡುತ್ತಾ ಹೊರಡುತ್ತಾನೆ. ಭೂಲೋಕದಲ್ಲಿರುವ ಎಲ್ಲ ಅಧಾರ್ಮಿಕರನ್ನು ನಾಶ ಮಾಡಿದ ಮೇಲೆ ತಾನು ಯೋಗಾಸಕ್ತನಾಗುತ್ತಾನೆ. ಆಗ ಅವನ ಯೋಗಾಗ್ನಿಯಿಂದ ಕರ್ಮಭೂಮಿಯು ಪಾಪವನ್ನು ಕಳೆದುಕೊಳ್ಳುತ್ತದೆ. ಮತ್ತು ಸಂಪೂರ್ಣ ನಿರ್ಜೀವವಾಗುತ್ತದೆ. ಪ್ರಪಂಚದಲ್ಲಿರುವ ಪಾಪಶಕ್ತಿಗಳೆಲ್ಲವೂ ಸಂಪೂರ್ಣವಾಗಿ ಭಸ್ಮವಾಗುತ್ತವೆ. ಭೂಮಿಯು ಸ್ವಚ್ಛವಾಗುತ್ತದೆ. ಆಗ ಕಲ್ಕಿಯು ಯೋಗದಿಂದ ಎಚ್ಚೆತ್ತುಕೊಳ್ಳುತ್ತಾನೆ. ಅನಂತರ ಮೇಘರೂಪವನ್ನು ತಾಳುತ್ತಾನೆ, ಸಮೃದ್ಧಿಯಾಗಿ ಮಳೆಯನ್ನು ಸುರಿಸುತ್ತಾನೆ. ಪ್ರಳಯಕಾಲದ ಆ ನೀರಿನಿಂದ ಭೂಮಿ-ಯೆಲ್ಲವೂ ಜಲಾವೃತವಾಗುತ್ತದೆ. ಈಗ ಕಲಿಗೆ ಎಲ್ಲೂ ಸ್ಥಾನವೇ ಇರುವುದಿಲ್ಲ. ಅಳುತ್ತಾ ಬಾಡಿದ ಮುಖವುಳ್ಳವನಾಗಿ ತನ್ನ ಸ್ಥಾನವಾದ ಪಾತಾಳಕ್ಕೆ ಓಡಿಹೋಗುತ್ತಾನೆ. ಹೀಗೆ ಕಲಿಗೆ ಎಲ್ಲಿಯೂ ಆಶ್ರಯವೇ ದೊರಕದೆ ಸಂಪೂರ್ಣವಾಗಿ ಕಲಿಯು ತೊಲಗುತ್ತಾನೆ. ಈಗ ಮಹಾವಿಷ್ಣುವು ನೀರಿನ ಮುಖಾಂತರ ಸಮಸ್ತ ಭೂಮಿಯನ್ನು ತೊಳೆದು ಸ್ವಚ್ಛಗೊಳಿಸಿ, ಕರ್ಮಭೂಮಿಯಲ್ಲಿ ಸ್ವತಃ ತಾನೇ ಮೊದಲು ಬರುತ್ತಾನೆ. ಯಜ್ಞಗಳನ್ನು ಆಚರಿಸುತ್ತಾನೆ, ದೇವತೆಗಳನ್ನು ಸಂತೋಷಪಡಿಸುತ್ತಾನೆ.

ದೇವತೆಗಳು ಯಜ್ಞಭಾಗಗಳನ್ನು ಸ್ವೀಕರಿಸದೇ ಅದೆಷ್ಟೋ ಸಾವಿರ ವರ್ಷಗಳೇ ಕಳೆದಿವೆ. ಸಂತೋಷದಿಂದ ವೈವಸ್ವತಮನುವಿನ ಬಳಿ ತೆರಳಿ ನಡೆದ ಎಲ್ಲಾ ವೃತ್ತಾಂತ -ಗಳನ್ನು ದೇವತೆಗಳು ತಿಳಿಸುತ್ತಾರೆ. ವೈವಸ್ವತಮನು ಆಗಮಿಸಿ, ಕಲ್ಕಿರೂಪಿಯಾದ ಭಗವಂತನಿಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತಾನೆ.

ಅನಂತರ ಕಲ್ಕಿರೂಪಿಯಾದ ಭಗವಂತನು ಮುಖದಿಂದ ಬ್ರಾಹ್ಮಣವರ್ಣವನ್ನು, ಬಾಹುವಿನಿಂದ ಕ್ಷತ್ರಿಯವರ್ಣವನ್ನು, ಊರುವಿನಿಂದ ವೈಶ್ಯವರ್ಣವನ್ನು ಕಾಲು-ಗಳಿಂದ ಶೂದ್ರವರ್ಣವನ್ನು ಸೃಷ್ಟಿಸುತ್ತಾನೆ. ಆಗ ಜನಿಸಿದ ಮನುಷ್ಯರು 21 ಕಿಷ್ಕು ಪ್ರಮಾಣವುಳ್ಳವರಾಗಿರುತ್ತಾರೆ. ಸತ್ಯಯುಗವು ಪ್ರಾರಂಭವಾಗುತ್ತದೆ. ಸಕಲ

ಮಾನವರೂ ಧರ್ಮಾಸಕ್ತರಾಗುತ್ತಾರೆ. ಪ್ರತಿಯೊಬ್ಬರೂ ಯಜ್ಞಯಾಗಾದಿಗಳನ್ನು ಆಚರಿಸುತ್ತಾ, ದೇವತೆಗಳನ್ನು ಪೂಜಿಸುತ್ತಾರೆ. ಆಗ ವೈವಸ್ವತಮನುವು ಕಲ್ಕಿ-ರೂಪಿಯಾದ ಭಗವಂತನ ಅಪ್ಪಣೆಯಂತೆ ಅಯೋಧ್ಯಾಪಟ್ಟಣದಲ್ಲಿ ರಾಜ್ಯಭಾರವನ್ನು ಪ್ರಾರಂಭ ಮಾಡುತ್ತಾನೆ.

ಕಲ್ಕಿರೂಪಿಯಾದ ಭಗವಂತನು ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಎಂಬ ಆರು ಅಂಗಗಳಿಂದ ಸಹಿತವಾದ ನಾಲ್ಕು ವೇದಗಳನ್ನು ಹದಿನೆಂಟು ಪುರಾಣಗಳನ್ನು ಪುನಃ ಸಜ್ಜನರಿಗೆ ಉಪದೇಶ ಮಾಡುತ್ತಾನೆ.

ಕಲ್ಕಿರೂಪಿಯಾದ ಭಗವಂತನ ಮಹದುಪಕಾರವನ್ನು ಕಂಡು ಸಮಸ್ತ ದೇವತೆ-ಗಳು ಕಾರ್ತಿಕಮಾಸದ ಶುಕ್ಲಪಕ್ಷದ ನವಮಿಯ ದಿವಸ ಅವನನ್ನು ಯಜ್ಞದ ಮೂಲಕ ವಿಶೇಷವಾಗಿ ಆರಾಧನೆ ಮಾಡುತ್ತಾರೆ. ಆ ಸಂದರ್ಭದಲ್ಲಿ ಯಜ್ಞಕುಂಡದಿಂದ ಸತ್ಯ (ಕೃತ) ಎಂಬ ಪುರುಷನು ಜನಿಸುತ್ತಾನೆ. ಬ್ರಹ್ಮಾದಿ ದೇವತೆಗಳು ಆ ಸುಂದರಪುರುಷ-ನನ್ನು ನೋಡಿ, ಸಂತೋಷ ಪಡುತ್ತಾರೆ. ಹಾಗೂ ಅವನಿಗೆ ಸಂಪೂರ್ಣವಾಗಿ ಆಶೀರ್ವಾದ ಮಾಡುತ್ತಾರೆ. ಕಲ್ಕಿರೂಪಿಯಾದ ಭಗವಂತನು ಯಜ್ಞದ ಮೂಲಕ ಸತ್ಯಯುಗಕ್ಕೆ ಅಭಿಮಾನಿಯಾದ ಪುರುಷನನ್ನು ಜಗತ್ತಿಗೆ ನೀಡುತ್ತಾನೆ. ಕಾರ್ತೀಕ ಮಾಸದ ಶುಕ್ಲಪಕ್ಷದ ನವಮಿಯಂದು ಇವನನ್ನು ವಿಶೇಷವಾಗಿ ದೇವತೆಗಳು ಆರಾಧನೆಗಾಗಿ ನಿಯೋಜನೆ ಮಾಡುತ್ತಾರೆ.

ಹೀಗೆ ಕಲಿಯುಗವು ಮುಗಿದು ಕೃತಯುಗವು ಪ್ರಾರಂಭವಾಗುತ್ತದೆ. ಇದನ್ನು ಸಂಪೂರ್ಣವಾಗಿ ನಿಂತು ನಡೆಸುವವನು ಭಗವಾನ್ ಕಲ್ಕಿಯೇ ಆಗಿದ್ದಾನೆ.

ಇಲ್ಲಿಗೆ ಭವಿಷ್ಯಪುರಾಣದ ನಾಲ್ಕನೆಯ ಖಂಡದಲ್ಲಿ ಇಪ್ಪತ್ತಾರನೆಯ ಅಧ್ಯಾ-ಯದಲ್ಲಿ ಕಲ್ಕಿರೂಪಿಯ ಭಗವಂತನ ಚರಿತ್ರೆಯು ಸಮಾಪ್ತವಾಗುತ್ತದೆ.

ಕಲಿಯುಗದಲ್ಲಿ ಕ್ರೋಧವಶದ ಗಣದವರು ಜನಿಸಿ, ಅದ್ವೈತವನ್ನೇ ಎಲ್ಲೆಡೆಯೂ ಪ್ರಸಾರ ಮಾಡಿದರು. ಅವರನ್ನು ನಿಗ್ರಹ ಮಾಡುವುದಕ್ಕಾಗಿ ಭೀಮಸೇನದೇವರು ಮಧ್ವಾಚಾರ್ಯರಾಗಿ ಅವತಾರ ಮಾಡಿದರು. ಕಲಿಯುಗ ಪ್ರಾರಂಭವಾಗಿ, 4300 ವರ್ಷಗಳು ಆದ ಬಳಿಕ, ಮಧ್ವಾವತಾರವಾಯಿತು. ಮುಂದೆ 36000 ವರ್ಷಗಳು

ಕಳೆದ ಮೇಲೆ ಸಂಪೂರ್ಣವಾಗಿ ಧರ್ಮವು ನಾಶವಾಗುತ್ತದೆ. ಆಗ ದುರ್ಗಾವತಾರ ಆಗುತ್ತದೆ. ಕಲಿಯುಗದ ಕೊನೆಯಲ್ಲಿ ಸಂಪೂರ್ಣ ಧರ್ಮವು ನಾಶವಾದಾಗ, ಭಗವಂತನು ಕಲ್ಕಿಯಾಗಿ ಅವತರಿಸುತ್ತಾನೆ.

ತತಃ ಕಲೇರಂತಮವಾಪ್ಯ ಧರ್ಮಜ್ಞಾನಾದಿಕಲ್ಯಾಣಗುಣಪ್ರಹೀನೇ । ಲೋಕೇ ವಿರಿಂಚತ್ರಿಪುರಘ್ನಶಕ್ರಪೂರ್ವಾಃ ಪಯೋಬ್ಧಿಂ ತ್ರಿದಶಾಃ ಪ್ರಜಗ್ಮುಃ ॥

ಕಲಿಯುಗದ ಕೊನೆಯಲ್ಲಿ ಧರ್ಮ, ಜ್ಞಾನ, ಸದ್ಗುಣಗಳೆಲ್ಲವೂ ಸಂಪೂರ್ಣವಾಗಿ ನಾಶವಾಗಿರುತ್ತವೆ. ಆಗ ಬ್ರಹ್ಮರುದ್ರಾದಿ- ದೇವತೆಗಳು ಕ್ಷೀರ ಸಮುದ್ರಕ್ಕೆ ತೆರಳಿ ಭಗವಂತನನ್ನು ಪ್ರಾರ್ಥಿಸುತ್ತಾರೆ. ಅವರ ಪ್ರಾರ್ಥನೆಗೆ ಪ್ರಸನ್ನನಾದ ಭಗವಂತನು ಕಲ್ಕಿಯಾಗಿ ಅವತರಿಸಲು ಇಚ್ಛಿಸುತ್ತಾನೆ.

ನಾರಾಯಣಸ್ತೈಃ ಸ್ತುತಿಪೂರ್ವಮರ್ಥಿತೋ ಭವಾಯ ಲೋಕಸ್ಯ ಸ ಶಂಭಳಾಖ್ಯೇ । ಗ್ರಾಮೇ ಮುನೇರ್ವಿಷ್ಣುಯಶೋಽಭಿಧಸ್ಯ ಗೃಹೇ ಬಭೂವಾವಿರಚಿಂತ್ಯಶಕ್ತಿಃ ॥

ಬ್ರಹ್ಮಾದಿ ದೇವತೆಗಳಿಂದ ಪ್ರಾರ್ಥಿತನಾದ ಭಗವಂತನು ಸಜ್ಜನರ ಹಿತಕ್ಕಾಗಿ ಶಂಬಳಗ್ರಾಮದಲ್ಲಿ ಅವತರಿಸುತ್ತಾನೆ. ವಿಷ್ಣುಯಶಸ್ ಎಂಬ ಮುನಿಯ ಪತ್ನಿಯಲ್ಲಿ ಪ್ರಾದುರ್ಭಾವವನ್ನು ಹೊಂದುತ್ತಾನೆ. ಕಲಿಯುಗದ ಕೊನೆಯಲ್ಲಿ ಎಲ್ಲೆಡೆಯು ಧರ್ಮವು ನಾಶವಾಗಿರುತ್ತದೆ. ಆಗ ವಿಷ್ಣುಯಶಸ್ ಎಂಬ ಒಬ್ಬ ಬ್ರಾಹ್ಮಣನು ಮಾತ್ರ ಧರ್ಮವನ್ನು ಆಚರಿಸುತ್ತಿರುತ್ತಾನೆ. ಇವನು ಸ್ವಾಯಂಭುವಮನು ಎಂದು ಕೆಲವರು ಹೇಳುತ್ತಾರೆ. ಅವನಿಂದ ಭಗವಂತನು ಅವತಾರವನ್ನು ಮಾಡುತ್ತಾನೆ. ಸ್ವಾಯಂಭುವ-ಮನುವು ಕಲ್ಕಿಯ ತಂದೆಯಾಗಿ ಕಲಿಯುಗದ ಕೊನೆಯಲ್ಲಿ ಹುಟ್ಟುತ್ತಾನೆಂದು ರುದ್ರದೇವರು ಪಾರ್ವತಿಗೆ ಪದ್ಮಪುರಾಣದಲ್ಲಿ ಹೇಳಿದ್ದಾರೆ. ಹೀಗೆ ನಾರಾಯಣ-ಪಂಡಿತರ ಅಂಶಾವತಾರ ಗ್ರಂಥದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಶಂಬಳಗ್ರಾಮಕ್ಕೆ ಯಾರು ಯಾತ್ರೆ ಮಾಡುತ್ತಾರೋ, ಅವರ ಕಲಿದೋಷವೂ ಕೂಡ ಪರಿಹಾರವಾಗುತ್ತದೆ ಎಂದು ತೀರ್ಥಪ್ರಬಂಧದಲ್ಲಿ ಹೀಗೆ ವರ್ಣಿಸಿದ್ದಾರೆ-

ಕಲೇರ್ಭೀರುಜನಾ ಯಾತ ಶಂಬಳಂ ಜಗತಾಂ ಬಲಮ್ । ಕಲಿಶೌರ್ಯಹರಃ ಕಲ್ಕೀ ಯತ್ರ ಪ್ರಾದುರ್ಭವಿಷ್ಯತಿ ॥

ಕಲೆಯಿಂದ ಭಯಪಟ್ಟ ಜನರು ಶಂಬಳಗ್ರಾಮಕ್ಕೆ ತೆರಳುತ್ತಾರೆ ಏಕೆಂದರೆ ಅದೇ ಗ್ರಾಮದಲ್ಲಿ ಮುಂದೆ ಕಲ್ಕಿಯು ಕಲಿಯನ್ನು ನಿಗ್ರಹ ಮಾಡುವುದಕ್ಕಾಗಿ ಅವತರಿ-ಸುತ್ತಾನೆ. ಇದೇ ಗ್ರಾಮವು ಸತ್ಯಯುಗದಲ್ಲಿ 'ಸತ್ಯವ್ರತ' ಎಂದು, ತ್ರೇತಾಯುಗದಲ್ಲಿ 'ಮಹದ್-ಗಿರಿ' ಎಂದು, ದ್ವಾಪರಯುಗದಲ್ಲಿ 'ಪಿಂಗಲ' ಎಂದು ಪ್ರಸಿದ್ಧ ಪಡೆದಿರು-ತ್ತದೆ. ಈ ಕ್ಷೇತ್ರದಲ್ಲಿ 68 ತೀರ್ಥಗಳಿವೆ. 19 ಕೂಪಗಳಿವೆ. ಸೂರ್ಯ-ಚಂದ್ರ-ಗುರು. ಈ ಮೂವರು ಪುಷ್ಯನಕ್ಷತ್ರಕ್ಕೆ ಬಂದಾಗ ಇಲ್ಲಿರುವ ಭವಿಷ್ಯತೀರ್ಥವು ಗಂಗೆ-ಯಾಗುತ್ತದೆ. ಆಗಲೇ ದೇವರು ಕಲ್ಕಿಯಾಗಿ ಅವತರಿಸುತ್ತಾನೆ.

## ಭಾದ್ರಪದ ॥ ಶುಕ್ಲ ॥ ಸಪ್ತಮೀ

## (ಅ)ಮುಕ್ತಾಭರಣಸಪ್ತಮೀ

ಭಾದ್ರಪದ ಶುಕ್ಲ ಸಪ್ತಮಿಯಾದ ಇಂದು ಅಮುಕ್ತಾಭರಣ ವ್ರತವನ್ನು ಆಚರಿಸಲಾಗುತ್ತದೆ. ಈ ದಿನ ಉಮಾಸಹಿತನಾದ ಈಶ್ವರನನ್ನು ಶ್ರದ್ಧಾ ಭಕ್ತಿಯಿಂದ ಪೂಜಿಸಿ, ಧೂಪ, ದೀಪ ನೈವೇದ್ಯಗಳೇ ಮುಂತಾದ ಷೋಡಶೋಪಚಾರಗಳಿಂದ ಅರ್ಚಿಸಲಾಗುತ್ತದೆ. ಈ ವ್ರತವನ್ನು ಹನ್ನೆರಡು ವರ್ಷಗಳ ಪರ್ಯಂತ ಆಚರಿಸಿ, ಆದಿಯಲ್ಲಾಗಲಿ, ಮಧ್ಯದಲ್ಲಾಗಲಿ, ಇಲ್ಲವೇ ಅಂತ್ಯದಲ್ಲಾಗಲಿ ಉದ್ಯಾಪನೆಯನ್ನು ಮಾಡುವುದರಿಂದ ಸಕಲ ಇಷ್ಟಾರ್ಥಗಳೂ ಈಡೇರುವುದೇ ಅಲ್ಲದೆ, ಸಂತಾನ ಭಾಗ್ಯವೂ ಲಭಿಸುವುದು ಎಂಬುದು ಭಕ್ತರ ನಂಬಿಕೆ.

ಅಥ ಪೂಜಾ –

ದೇವದೇವ ಮಹೇಶಾನ ಪರಮ್ಮಾಂ ಜಗದ್ಗುರೋ ।
ಪ್ರತಿಪಾದಿತಯಾ ಸೋಮ ಪೂಜಯಾ ಪೂಜಯಾಮ್ಯಹಮ್ ॥ ಆವಾಹನಮ್।

ಅನೇಕರತ್ನಖಚಿತಂ ಸೌವರ್ಣಂ ಮಣಿಸಂಯುತಮ್ ।
ಮುಕ್ತಾಚಿತಂ ಮಹಾದೇವ ಗೃಹಾಣಾಸನಮುತ್ತಮಮ್ ॥ ಆಸನಮ್ ।

ಪಾದ್ಯಂ ಗೃಹಾಣ ದೇವೇಶ ಸರ್ವವಿದ್ಯಾಪರಾಯಣ ।
ಧ್ಯಾನಗಮ್ಯ ಸತಾಂ ಶಂಭೋ ಸರ್ವೇಶ್ವರ ನಮೋಽಸ್ತು ತೇ ॥ ಪಾದ್ಯಮ್ ।

ಇದಮರ್ಘ್ಯಮನರ್ಘ್ಯೇ ತ್ವಮಮರಾಧೀಶ ಶಂಕರ ।
ಕಿಂಕರೀಭೂತಯಾ ಸೋಮ ಮಯಾ ದತ್ತಂ ಗೃಹಾಣ ಭೋಃ ॥ ಅರ್ಘ್ಯಮ್ ।

ಗಂಗಾದಿಸರ್ವತೀರ್ಥೇಭ್ಯಃ ಸಮಾನೀತಂ ಸುಶೀತಲಮ್ ।
ಜಲಮಾಚಮನೀಯಾರ್ಥಂ ಗೃಹಾಣೇಶೋಮಯಾ ಸಹ ॥ ಆಚಮನೀಯಮ್ ।

ಮಧ್ವಾಜ್ಯದಧಿಸಮ್ಮಿಶ್ರಂ ಮಧುನಾ ಪರಿಕಲ್ಪಿತಮ್ ।
ಶಂಕರಪ್ರೀತಯೇ ತೇಽಹಂ ಮಧುಪರ್ಕಂ ನಿವೇದಯೇ ॥ ಮಧುಪರ್ಕಮ್ ।

ಪಯೋದಧಿಘೃತಂ ಚೈವ ಶರ್ಕರಾಮಧುಸಂಯುತಮ್ ।
ಪಂಚಾಮೃತೇನ ಸ್ನಪನಂ ಕರೋಮಿ ಪರಮೇಶ್ವರ ॥ ಪಂಚಾಮೃತಸ್ನಾನಮ್ ।

ಗಂಗಾ ಚ ಯಮುನಾ ಚೈವ ಗೋದಾವರೀ ಸರಸ್ವತೀ ।
ಏತಾಭ್ಯ ಆಹೃತಂ ತೋಯಂ ಸ್ನಾನಾರ್ಥಂ ಪ್ರತಿಗೃಹ್ಯತಾಮ್ ॥ ವಸ್ತ್ರಮ್ ।

ಉಪವೀತಂ ಸೋತ್ತರೀಯಂ ನಾನಾಭೂಷಣಭೂಷಿತಮ್ ।
ಗೃಹಾಣ ಸೋಮ ವಿಮಲಂ ಮಯಾ ದತ್ತಮಿದಂ ಶುಭಮ್ ॥ ಉಪವೀತಮ್ ।

ಮಲಯಾಚಲಸಂಭೂತಂ ಸುಗಂಧಿ ಘನಸಾರಯುಕ್ ।
ಚಂದನಂ ಪಂಚವದನ ಗೃಹಾಣ ವನಿತಾಯುತ ॥ ಚಂದನಮ್ ।

ಜಾತೀಚಂಪಕಪುನ್ನಾಗಬಕುಲೈಃ ಪಾರಿಜಾತಕೈಃ ।
ಶತಪತ್ರೈಶ್ಚ ಕಲ್ಹಾರೈರರ್ಚಯೇಽಹಮುಮಾಪತಿಮ್ ॥ ಪುಷ್ಪಾಣಿ ।

ತ್ರೈಲೋಕ್ಯಪಾವನಾನಂತ ಪರಮಾತ್ಮಂ ಜಗದ್ಗುರೋ ।
ಚಂದನಾಗರುಕರ್ಪೂರಧೂಪಂ ದಾಸ್ಯಾಮಿ ಶಂಕರಮ್ ॥ ಧೂಪಮ್ ।

ಶುಭವರ್ತಿಯುತಂ ಸರ್ಪಿಃ ಸಹಿತಂ ವಹ್ನಿನಾ ಯುತಮ್ ।
ದೀಪಮೇಕಮನೇಕಾರ್ಕಪ್ರತಿಮಾಕಲಯತ್ವಿಮಮ್ ॥ ದೀಪಮ್ ।

ಪಾಯಸಾಪೂಪಕೃಸರಂ ದುಗ್ಧಾನ್ನಂ ಸಗುಡೌದನಮ್ ।
ದಿವ್ಯಾನ್ನಂ ಷಡ್ರಸೋಪೇತಂ ಸುಧಾರಸಸಮನ್ವಿತಮ್ ॥

ದಧಿಕ್ಷೀರಾಜ್ಯಸಂಯುಕ್ತಂ ನೈವೇದ್ಯಾರ್ಥಂ ಪ್ರಕಲ್ಪಿತಮ್ ।
ಸಮರ್ಪಯಾಮಿ ದೇವಾಹಂ ಕಿಂಕರೀಂ ಶಂಕರಾಯ ತೇ ॥ ನೈವೇದ್ಯಮ್ ।

ಪುನರಾಚಮನಂ ಶುದ್ಧಂ ಕುರು ಸೋಮಾಂಬುನಾಮುನಾ ।
ಮುಖಶುದ್ಧಿಕರಂ ತೋಯಂ ಕೃಪಯಾ ತ್ವಂ ಗೃಹಾಣ ಭೋಃ ॥ ಆಚಮನೀಯಮ್ ।

ಕಸ್ತೂರಿಕಾಸಮಾಯುಕ್ತಂ ಮಲಯಾಚಲಸಂಭವಮ್ ।
ಗೃಹಾಣ ಚಂದನಂ ಸೋಮ ಕರೋದ್ವರ್ತನಹೇತವೇ ॥ ಕರೋದ್ವರ್ತನಮ್ ।

ನಾಲಿಕೇರಫಲಂ ಜಂಬೂಫಲಂ ನಾರಿಂಗಮುತ್ತಮಮ್ ।
ಕೂಷ್ಮಾಂಡಂ ಪುರತೋ ಭಕ್ತ್ಯಾ ಕಲ್ಪಿತಂ ಪ್ರತಿಗೃಹ್ಯತಾಮ್ ॥ ಫಲಮ್ ।

ಪೂಗೀಫಲಮಿತಿ ತಾಂಬೂಲಮ್ । ಹಿರಣ್ಯಗರ್ಭೇತಿ ದಕ್ಷಿಣಾಮ್ ।

ನೀರಾಜನಮ್ । ಪುಷ್ಪಾಂಜಲಿಮ್ । ಪ್ರದಕ್ಷಿಣಾನ್ । ನಮಸ್ಕಾರಾನ್ ।

ಮಹಾದೇವ ಮಹಾರಾಜ ಪ್ರೀತ್ಯಾ ಪಾಪಂ ಪ್ರಣಾಶಯ ।
ಅಸ್ಮಾಕಂ ಕುರ್ವತಾಂ ಪೂಜಾಂ ಸಾಧು ವಾ ಸಾಧುಯೋಜಿತಾಮ್ ॥

ಜ್ಞಾನತೋಽಜ್ಞಾನತೋ ವಾಪಿ ಭವತೋ ವಿಹಿತಾ ಚ ಯಾ ।
ಸಂಪೂರ್ಣಯತು ತಾಂ ಪೂಜಾಂ ವಿಶ್ವೇಶೋ ವಿಮಲೋ ಭವಾನ್ ॥
ಇತಿ ಪ್ರಾರ್ಥನಾ ।

ದೇವದೇವ ಜಗನ್ನಾಥ ಸರ್ವಸೌಭಾಗ್ಯದಾಯಕ ।
ಗೃಹ್ಣೀಯಾಂ ದೋರರೂಪಂ ತ್ವಾಂ ಪುತ್ರಪೌತ್ರಪ್ರವರ್ಧನಮ್ ॥
ಇತಿ ದೋರಕಗ್ರಹಣಮ್ ।

ಸಪ್ತಸಾಮೋಪಗೀತಂ ತ್ವಂ ಧಾರಯಾಮಿ ಜಗದ್ಗುರೋ ।
ಸೂತ್ರಗ್ರಂಥಿಸ್ಥಿತಂ ನಿತ್ಯಂ ಧಾರಯಾಮಿ ಸ್ಥಿರೋ ಭವ ॥ ಇತಿ ದೋರಕಬಂಧನಮ್ ।

ಹರ ಪಾಪಾನಿ ಸರ್ವಾಣಿ ತುಷ್ಟಿಂ ಕುರು ದಯಾನಿಧೇ ।
ಪ್ರಸನ್ನಃ ಸನ್ನುಮಾಕಾಂತ ದೀರ್ಘಾಯುಃ ಪುತ್ರದೋ ಭವ ॥ ಇತಿ ಜೀರ್ಣ-
ದೋರಕೋತ್ತಾರಣಮ್ ॥

ಅಥ ವಾಯನದಾನಮ್ –

ಮಂಡಕಾನ್ ವೇಷ್ಟಕಾನ್ ವಾಥ ಸಘೃತಾನ್ ದಕ್ಷಿಣಾಯುತಾನ್ ।
ಏಕಾದಶಶತಂ ಕೃತ್ವಾ ಬ್ರಾಹ್ಮಣಾಯ ಕುಟುಂಬಿನೇ ॥
ವೇದಶಾಸ್ತ್ರಪ್ರವೀಣಾಯ ದದ್ಯಾತ್ಸೋಮಸ್ಯ ತುಷ್ಟಯೇ ।
ಶಂಕರಃ ಪ್ರತಿಗೃಹ್ಣಾತಿ ಶಂಕರೋ ವೈ ದದಾತಿ ಚ ।
ಶಂಕರಸ್ತಾರಕೋಭಾಭ್ಯಾಂ ಶಂಕರಾಯ ನಮೋ ನಮಃ ॥ ಇತಿ ವಾಯನಮ್ ॥

ಏವಂ ಯಾ ಪೂಜನಂ ಕುರ್ಯಾತ್ಸೋಮಸ್ಯ ಸುಖದಸ್ಯ ಚ ।
ಸರ್ವಾನ್ ಕಾಮಾನವಾಪ್ನೋತಿ ಪುತ್ರಪೌತ್ರೈಶ್ಚ ಮೋದತೇ ॥ ಇತಿ ಪೂಜಾ ॥

ಇಲ್ಲಿಗೆ ಮುಕ್ತಾಭರಣಸಪ್ತಮೀವ್ರತವು ಮುಗಿಯಿತು ॥

## ಭಾದ್ರಪದ ॥ ಶುಕ್ಲ ॥ ಅಷ್ಟಮಿ

ಶ್ರೀ ಶ್ರೀಶಪ್ರಾಣೇಶವಿಟ್ಠಲದಾಸರ ಆರಾಧನೆ – ಇವರು ಶ್ರೀ ಪ್ರಾಣೇಶವಿಟ್ಠಲದಾಸರ ಮೊಮ್ಮಕ್ಕಳು. ಶ್ರೀಜಗನ್ನಾಥದಾಸರ ಸೇವೆಯಿಂದ ಜನಿಸಿದ ಇವರ ಮೊದಲಿನ ಹೆಸರು ರಾಮದಾಸ. ಬಾಲ್ಯದಲ್ಲಿ ಹುಡುಗಾಟದಲ್ಲಿ ಮೈಮರೆತ ಇವರನ್ನು ಶ್ರೀಪ್ರಾಣೇಶವಿಟ್ಠಲದಾಸರು ಬೈದು ಬಡಿದು ದಾಸಪಂಥಕ್ಕೆ ಹಚ್ಚಿದರು. ಶ್ರೀಶಪ್ರಾಣೇಶವಿಟ್ಠಲ ಎಂಬ ಅಂಕಿತವಿತ್ತು ಅನುಗ್ರಹಿಸಿದರು. ಗುರುಗಳ ಕರುಣ ಸುಸ್ಥಿರವಾಗಿದ್ದವರಲ್ಲೇ । ಹರಿ ನಿನ್ನನುಗ್ರಹವಾಗುವುದೋ ॥ ಶ್ರೀನಿವಾಸ ದಯಾನಿಧೇ ॥ ಎಂದು ಮುಂತಾಗಿ ಹಾಡಿದ್ದಾರೆ. ಇವರು ವಿರಕ್ತರೂ, ಜ್ಞಾನಿಗಳೂ ಆಗಿದ್ದರು. ಯಾರಾದರೂ ಧನಧಾನ್ಯಗಳನ್ನು ತಂದು ಕೊಟ್ಟರೆ ಅಂದಿನ ದೇವರ ಸೇವೆಗೆ ಬೇಕಾಗುವಷ್ಟನ್ನು ಮಾತ್ರ ಸ್ವೀಕರಿಸಿ ಉಳಿದದ್ದನ್ನು ತಿರುಗಿ ಕೊಟ್ಟು ಬಿಡುತ್ತಿದ್ದರು. ಮಂತ್ರಾಲಯಸ್ವಾಮಿಗಳ ಭಕ್ತರಾದ ಇವರಿಗೆ ಸುಂದರವಿಟ್ಠಲ, ಸುಖನಿಧಿವಿಟ್ಠಲ ಮುಂತಾದ ಅನೇಕಶಿಷ್ಯರಿದ್ದರು. ಇವರು 1892ನೆಯ ಇಸ್ವಿಯಲ್ಲಿ ಕಾಲವಾದರು.

ದೂರ್ವಾಷ್ಟಮೀ – ಶುಕ್ಲ ಅಷ್ಟಮಿಯಂದು ದೂರ್ವಾಷ್ಟಮೀ ವ್ರತ. ಶುದ್ಧದೇಶದಲ್ಲಿ ಬೆಳೆದಿರುವ ದೂರ್ವಾದಲ್ಲಿ ಲಿಂಗವನ್ನು ಸ್ಥಾಪಿಸಿ ಗಂಧ, ಪುಷ್ಪ, ದೀಪ, ನೈವೇದ್ಯಗಳಿಂದ ಪೂಜಿಸಿ ದಧಿ ಹಾಗೂ ಅಕ್ಷತೆಗಳಿಂದ ಶಿವನಿಗೆ ಅರ್ಘ್ಯವನ್ನು

ಕೊಡಬೇಕು. ದೂರ್ವಾ, ಶಮೀಗಳಿಂದ ಶಿವನನ್ನು ಪೂಜಿಸಬೇಕು – ತ್ವಂ ದೂರ್ವೇಽಮೃತಜನ್ಮಾಸಿ ವಂದಿತಾಸಿ ಸುರಾಸುರೈಃ । ಸೌಭಾಗ್ಯಂ ಸಂತತಿಂ ದೇಹಿ ಸರ್ವಕಾರ್ಯಕರೀ ಭವ ॥ ಯಥಾ ಶಾಖಾಪ್ರಶಾಖಾಭಿರ್ವಿಸ್ತೃತಾಸಿ ಮಹೀತಲೇ । ತಥಾ ಮಮಾಪಿ ಸಂತಾನಂ ದೇಹಿ ತ್ವಮಜರಾಮರಮ್ ॥ ಎಂದು ಪ್ರಾರ್ಥಿಸಿ ಅಗ್ನಿಯಲ್ಲಿ ಬೇಯದೇ ಇದ್ದ ಆಹಾರವನ್ನು ಮಾತ್ರ ಸ್ವೀಕರಿಸಬೇಕು. ಇದು ಸ್ತ್ರೀಯರು ಮಾಡುವ ವ್ರತ. ಕಾಮ್ಯವಾದ್ದರಿಂದ ವೈಷ್ಣವರಲ್ಲಿ ರೂಢಿಯಲ್ಲಿಲ್ಲ. ಸಿಂಹಮಾಸದಲ್ಲಿ ಭಾದ್ರಪದ-ಶುಕ್ಲಾಷ್ಟಮೀ ಬಂದಾಗ ಮಾತ್ರ ಇದು ಆಚರಣೀಯ. ಕನ್ಯಾಮಾಸದಲ್ಲಿ ಆಚರಣೆ ನಿಷಿದ್ಧ. ಪರಿಶುದ್ಧಸ್ಥಲದಲ್ಲಿ ಬೆಳೆದಿರುವ ದೂರ್ವಾಮೂಲದಲ್ಲಿ ರುದ್ರ ನನ್ನು ಸ್ತ್ರೀಯರು ಆರಾಧಿಸುವ ವಿಧಿಯಿದೆ.

## ಜ್ಯೇಷ್ಠಾಲಕ್ಷ್ಮೀ ಪೂಜಾವಿಧಾನ ಎಳೆಯಷ್ಟಮೀ

ಇದೇ ದಿನ ರಾತ್ರಿ ಜ್ಯೇಷ್ಠಾನಕ್ಷತ್ರವಿದ್ದಲ್ಲಿ ಜ್ಯೇಷ್ಠಾಲಕ್ಷ್ಮೀವ್ರತವನ್ನು ಆಚರಿಸುವು ದಿದೆ. ಇದೂ ಸ್ತ್ರೀಯರ ವ್ರತ. ಇಲ್ಲಿ ಜ್ಯೇಷ್ಠಾಲಕ್ಷ್ಮೀ ಎಂದರೆ ಸಾಗರದಲ್ಲಿ ಲಕ್ಷ್ಮಿಗಿಂತ ಮೊದಲು ಆವಿರ್ಭವಿಸಿದ ಅಲಕ್ಷ್ಮಿಯಲ್ಲ. ಜ್ಯೇಷ್ಠಾನಕ್ಷತ್ರದಲ್ಲಿ ಅಷ್ಟಮಿಯಲ್ಲಿ ಆರಾಧಿಸಲ್ಪಡುವ ವಿಷ್ಣುಪತ್ನಿ ಲಕ್ಷ್ಮೀದೇವಿ. ಕೃಷ್ಣಾಚಾರ್ಯರ ಸ್ಮೃತಿಮುಕ್ತಾವಳಿಯಲ್ಲಿ ಅಲಕ್ಷ್ಮಿಯ ನಿವೃತ್ತಿಗಾಗಿ ಆಚರಿಸಬೇಕೆಂದು ವಿಧಿಸಿದ್ದಾರೆ. – ಜ್ಯೇಷ್ಠಾಷ್ಟಮೀ – ಯೋಗೋಪಜೀವನೇನ ಪ್ರವೃತ್ತಸ್ತು ಜ್ಯೇಷ್ಠಾಷ್ಟಮೀ ಜಯಂತ್ಯಾದಿಃ । ಜ್ಯೇಷ್ಠಾಷ್ಟಮೀ ವ್ರತಂ ತು ಪದ್ಮಪುರಾಣೇ ದರ್ಶಿತಮ್ – ಸಂಪ್ರಾಪ್ತೇ ಭಾದ್ರಪದೇ ತು ಅಷ್ಟಮೀ ಯಾ ಸಿತಾ ಭವೇತ್ । ವಿಧಿನಾ ಪೂಜಯೇಜ್ಜ್ಯೇಷ್ಠಲಕ್ಷ್ಮೀವಿನಿವೃತ್ತಯೇ ॥ ತತ್ರ ಜ್ಯೇಷ್ಠಾರ್ಕ್ಷಯೋಗಸ್ಯ ಫಲವಿಶೇಷಪ್ರದತ್ವಮುಕ್ತಂ ನಾಗರಖಂಡೇ – ಜ್ಯೇಷ್ಠರ್ಕ್ಷ-ಯೋಗೇ ಯಾ ಶುಕ್ಲಾ ಮಹಿತಾ ಕೀರ್ತಿತಾಷ್ಟಮೀ । ಭಾದ್ರೇ ಜ್ಯೇಷ್ಠಾಂ ಬಹುವಿಧೈರರ್ಚಯೇದ್ ರಾಜ್ಯಸಿದ್ಧಯೇ ॥ ಇತಿ ॥

## ಪ್ರಾಣಪ್ರತಿಷ್ಠಾಪನ ವಿಧಿ

ಅಧೋಮುಖಂ ಹೃತ್ಕಮಲಂ ತೋರಣೋದ್ಧರಣಂ ಚರೇತ್ ।
ವಿಕಾಸ್ಯ ಜ್ಞಾನರವಿಣಾ ಕರ್ಣಿಕಾಸ್ಥಂ ಪರಂ ವಿಭುಮ್ ॥

ಹೃದಯಸ್ಥಹರೇರ್ಮೂರ್ತಿಃ ಜೀವೋ ಯತ್ಪ್ರತಿಬಿಂಬಕಃ ।
ಯದ್ವಶೇ ವರ್ತತೇ ಜೀವಃ ಸಾ ತು ಜೀವಕಲಾ ಸ್ಮೃತಾ ॥

ಜೀವಾಂತರ್ಯಾಮಿಣೋ ವಿಷ್ಣುಃ ಆತ್ಮಾ ನಾಮ ಪ್ರಕೀರ್ತಿತಃ ।
ತೇಜಸ್ಸಾರಮಯೀಂ ದಿವ್ಯಾಂ ಪ್ರತಿಮಾಂ ಪ್ರತಿಮಾಗತಾಮ್ ॥

ಧ್ಯಾತ್ವಾ ಪ್ರಾಣಾಧಿಪಂ ತತ್ರ ಪ್ರತಿಮಾರೂಪಿಣಂ ಪ್ರಭುಮ್ ।
ತನ್ಮಧ್ಯೇ ರಮಯಾ ಸಾರ್ಧಮಾಸೀನಂ ಕ್ಷೀರನೀರವತ್ ॥
ಪ್ರತಿಮಾರೂಪಿಣಂ ಸಮ್ಯಗ್ ಧ್ಯಾತ್ವೈವಾವಾಹಯೇತ್ಸುಧೀಃ ॥

ಓಂ ಆತ್ಮಾ ದೇವಾನಾಂ ಭುವನಸ್ಯ ಗರ್ಭೋ ಯಥಾವಶಂ ಚರತಿ ದೇವ ಏಷಃ ।
ಘೋಷಾ ಇದಸ್ಯ ಶೃಣ್ವಿರೇ ನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ ॥

ಏಹ್ಯೇಹಿ ಮಮ ಹೃತ್ಪದ್ಮಸ್ಥಿತ ಶ್ರೀಪುರುಷೋತ್ತಮ ।
ಆವಾಹಯಾಮಿ ಪೀಠೇ ತ್ವಾಂ ಪ್ರತಿಮಾಯಾಂ ರಮಾಪತೇ ॥

(ಹೃದಯಕಮಲದಲ್ಲಿರುವ ಶ್ರೀಹರಿಯನ್ನು ಶ್ವಾಸಮಾರ್ಗದಿಂದ ಹಸ್ತಗಳಲ್ಲಿರುವ ಪುಷ್ಪಗಳಲ್ಲಿ ಬಂದಿರುವನೆಂದು ಚಿಂತಿಸಿ, ಕಲಶ/ಪ್ರತಿಮೆಗಳ ಮೇಲೆ ಹಾಕಿ ಆವಾಹಿಸಬೇಕು).

ಆವಾಹಿತೋ ಭವ । ಸ್ಥಾಪಿತೋ ಭವ । ಸನ್ನಿಹಿತೋ ಭವ । ಸನ್ನಿರುದ್ಧೋ ಭವ । ಅವಕುಂಠಿತೋ ಭವ । ಸುಪ್ರಸನ್ನೋ ಭವ । ವರದೋ ಭವ ।

ಸಾನ್ನಿಧ್ಯಂ ಕುರು ದೇವೇಶ ಸರ್ವಸಂಪತ್ಕರೋ ಭವ ।
ವಿಭೋ ಸಕಲಲೋಕೇಶ ವಿಷ್ಣೋ ಜಿಷ್ಣೋ ಹರೇ ಪ್ರಭೋ ।
ತ್ವಾಂ ಭಕ್ತ್ಯಾ ಪೂಜಯಾಮ್ಯದ್ಯ ಭೋಗೈರರ್ಘ್ಯಾದಿಭಿಃ ಕ್ರಮಾತ್ ।
ಪೂಜಾವಸಾನಪರ್ಯಂತಮತ್ರ ಸ್ಥಿತ್ವಾ ಜನಾರ್ದನ ।
ಭಕ್ತಸ್ಯ ಮಮ ಪೂಜಾಂ ತ್ವಂ ಗೃಹೀತ್ವಾ ಪಾಹಿ ಮಾಂ ವಿಭೋ ॥

ಧ್ಯಾನಮ್ – ದೇವಾನಾಂ ದೇವತಾನಾಂ ಚ ಜ್ಯೇಷ್ಠಾದೇವಿ ತ್ವಮಾದಿಮಾ । ಆದಿಶಕ್ತಿ ನಮಸ್ತೇಽಸ್ತು ನಮಸ್ತೇ ವಿಷ್ಣುವಲ್ಲಭೇ ॥ ಜ್ಯೇಷ್ಠಾದೇವ್ಯೈ ನಮಃ । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ ॥ (ಮಂತ್ರಾಕ್ಷತೆಯನ್ನು ಹಾಕಬೇಕು).

ಆವಾಹನಮ್ – ಬ್ರಹ್ಮಪ್ರಸೂರ್ನಮಸ್ತೇಽಸ್ತು ನಮಸ್ತೇ ಭಕ್ತವತ್ಸಲೇ।
ವಿಷ್ಣುಪ್ರಿಯೇ ನಮಸ್ತೇಽಸ್ತು ಜಗದಾನಂದಕಾರಕೇ॥ ಜ್ಯೇಷ್ಠಾದೇವ್ಯೈ ನಮಃ।
ಆವಾಹನಂ ಸಮರ್ಪಯಾಮಿ। (ಮಂತ್ರಾಕ್ಷತೆಯನ್ನು ಹಾಕಬೇಕು)

ಆಸನಮ್ – ಆಸನೇ ಸ್ವರ್ಣರತ್ನಾಢ್ಯೇ ಸರ್ವಶೋಭಾಸಮನ್ವಿತೇ।
ಉಪವಿಶ್ಯ ಜಗನ್ಮಾತಃ ಪ್ರಸಾದಾಭಿಮುಖೀ ಭವ॥ ಜ್ಯೇಷ್ಠಾದೇವ್ಯೈ ನಮಃ। ಆಸನಂ ಸಮರ್ಪಯಾಮಿ। (ಮಂತ್ರಾಕ್ಷತೆಯನ್ನು ಹಾಕಬೇಕು)

ಪಾದ್ಯಮ್ – ಗಂಧಪುಷ್ಪಾಕ್ಷತೈರ್ಯುಕ್ತಂ ಪಾದ್ಯಂ ಸಂಪಾದಿತಂ ಮಯಾ। ಜ್ಯೇಷ್ಠಾ-ದೇವಿ ನಮಸ್ತುಭ್ಯಂ ಸರ್ವಾನ್ ಕಾಮಾಂಶ್ಚ ಪೂರಯ॥ ಜ್ಯೇಷ್ಠಾದೇವ್ಯೈ ನಮಃ। ಪಾದ್ಯಂ ಸಮರ್ಪಯಾಮಿ। (ಮೀಸಲು ನೀರನ್ನು ದೇವಿಗೆ ತೋರಿಸಿ ಅರ್ಘ್ಯಪಾತ್ರೆಗೆ ಬಿಡಬೇಕು).

ಅರ್ಘ್ಯಮ್ – ಗಂಧಪುಷ್ಪಾಕ್ಷತಾರಕ್ತಪುಷ್ಪಸ್ತೋಮೈಃ ಸಮನ್ವಿತಮ್। ಸುವರ್ಣಪಾತ್ರೇ ಚಾರ್ವಂಗೀ ಗೃಹಾಣಾರ್ಘ್ಯಂ ನಮೋಽಸ್ತು ತೇ॥ ಜ್ಯೇಷ್ಠಾದೇವ್ಯೈ ನಮಃ। ಅರ್ಘ್ಯಂ ಸಮರ್ಪಯಾಮಿ। (ಮೀಸಲು ನೀರನ್ನು ದೇವಿಗೆ ತೋರಿಸಿ ಅರ್ಘ್ಯಪಾತ್ರೆಗೆ ಬಿಡ-ಬೇಕು).

ಆಚಮನೀಯಮ್ – ಕರ್ಪೂರೈರೈಲಾಮೃಗಮದೈಃ ಸುವಾಸೈರುಪಶೋಭಿತಮ್। ಗೃಹಾಣಾಚಮನೀಯಂ ಚ ಶಿಶಿರಂ ವಿಮಲಂ ಜಲಮ್॥ ಜ್ಯೇಷ್ಠಾದೇವ್ಯೈ ನಮಃ। ಆಚಮನೀಯಂ ಸಮರ್ಪಯಾಮಿ। (ಮೀಸಲು ನೀರನ್ನು ದೇವಿಗೆ ತೋರಿಸಿ ಅರ್ಘ್ಯ-ಪಾತ್ರೆಗೆ ಬಿಡಬೇಕು).

ಸ್ನಾನಮ್ – ನದೀನದಸಮುದ್ಭೂತಂ ಪವಿತ್ರಂ ನಿರ್ಮಲಂ ಜಲಮ್। ಸ್ನಾನಾರ್ಥಂ ತೇ ಪ್ರಯಚ್ಛಾಮಿ ಪ್ರಸೀದ ಜಗದಂಬಿಕೇ॥ ಜ್ಯೇಷ್ಠಾದೇವ್ಯೈ ನಮಃ। ಸ್ನಾನಂ ಸಮರ್ಪ-ಯಾಮಿ। (ಬಿಡಿ ಹೂವಿನಿಂದ ನೀರನ್ನು ಅದ್ದಿ ದೇವಿಗೆ ಪ್ರೋಕ್ಷಿಸಬೇಕು).

ಪಂಚಾಮೃತಸ್ನಾನಮ್ – ಪಂಚಾಮೃತೇನ ಸ್ನಪನಂ ಕರಿಷ್ಯೇ ಭಕ್ತವತ್ಸಲೇ।
ಪಯೋದಧಿಘೃತಂ ಚೈವ ಮಾಕ್ಷಿಕಂ ಶರ್ಕರಾಯುತಮ್॥ ಜ್ಯೇಷ್ಠಾದೇವ್ಯೈ ನಮಃ।

ಪಂಚಾಮೃತಸ್ನಾನಂ ಸಮರ್ಪಯಾಮಿ ॥ (ದೇವಿಗೆ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ, ಹಣ್ಣುಗಳಿಂದ ಪಂಚಾಮೃತಾಭಿಷೇಕ ಮಾಡಬೇಕು).

ಶುದ್ಧೋದಕಸ್ನಾನಮ್ – ಮಂದಾಕಿನ್ಯಾಃ ಸಮಾನೀತಂ ಹೇಮಾಂಭೋರುಹ-ವಾಸಿತಮ್ । ಸ್ನಾನಾರ್ಥಂ ತೇ ಮಯಾಽಽನೀತಂ ಗೃಹಾಣ ಜಗದಂಬಿಕೇ ॥ ಜ್ಯೇಷ್ಠಾದೇವ್ಯೈ ನಮಃ । ಶುದ್ಧೋದಕಸ್ನಾನಂ ಸಮರ್ಪಯಾಮಿ ॥ (ಬಿಡಿ ಹೂವಿನಿಂದ ನೀರನ್ನು ಅದ್ದಿ ದೇವಿಗೆ ಪ್ರೋಕ್ಷಿಸಬೇಕು).

ವಸ್ತ್ರಮ್ – ಕೌಶೇಯವಸನಂ ದಿವ್ಯಂ ಕಂಚುಕ್ಯಾ ಚ ಸಮನ್ವಿತಮ್ । ಉಪವಸ್ತ್ರೇಣ ಸಂವೀತಂ ಗೃಹಾಣ ಪರಮೇಶ್ವರಿ ॥ ಜ್ಯೇಷ್ಠಾದೇವ್ಯೈ ನಮಃ । ವಸ್ತ್ರಂ ಸಮರ್ಪ-ಯಾಮಿ । (ದೇವಿಗೆ ಗೆಜ್ಜೆವಸ್ತ್ರವನ್ನು ಸಮರ್ಪಿಸಬೇಕು).

ಗಂಧಃ – ಇದಂ ಗಂಧಂ ಮಹದ್ದಿವ್ಯಂ ಕುಂಕುಮೇನ ಸಮನ್ವಿತಮ್ । ವಿಲೇಪನಾರ್ಥೇ ಮೇ ದತ್ತಂ ಗೃಹಾಣ ವರದಾ ಭವ ॥ ಜ್ಯೇಷ್ಠಾದೇವ್ಯೈ ನಮಃ । ಗಂಧಂ ಸಮರ್ಪ-ಯಾಮಿ । (ದೇವಿಗೆ ಹರಿನಿವೇದಿತ ಗಂಧವನ್ನು ಸಮರ್ಪಿಸಬೇಕು).

ಅಕ್ಷತಾಃ – ಅಕ್ಷತಾನ್ ಧವಲಾಕಾರಾನ್ ಶಾಲಿತಂಡುಲಮಿಶ್ರಿತಾನ್ । ಕುಂಕುಮೇನ ಸಮಾಯುಕ್ತಾನ್ ಗೃಹಾಣ ತ್ರಿದಶೇಶ್ವರಿ ॥ ಜ್ಯೇಷ್ಠಾದೇವ್ಯೈ ನಮಃ । ಅಕ್ಷತಾನ್ ಸಮರ್ಪಯಾಮಿ । (ದೇವಿಗೆ ಮಂತ್ರಾಕ್ಷತೆಯನ್ನು ಸಮರ್ಪಿಸಬೇಕು)

ಪುಷ್ಪಾಣಿ – ನಾನಾವಿಧಾನಿ ಮಾಲ್ಯಾನಿ ಸುಗಂಧೀನಿ ಹರಿಪ್ರಿಯೇ । ಗೃಹಾಣ ಜ್ಯೇಷ್ಠಾಗೌರೀ ತ್ವಂ ಪ್ರಸಾದಾಭಿಮುಖೀ ಭವ ॥ ಜ್ಯೇಷ್ಠಾದೇವ್ಯೈ ನಮಃ । ಪುಷ್ಪಾಣಿ ಸಮರ್ಪಯಾಮಿ । (ದೇವಿಗೆ ಪುಷ್ಪಗಳನ್ನು ಸಮರ್ಪಿಸಬೇಕು).

ಧೂಪಃ – ವನಸ್ಪತಿರಸೋದ್ಭೂತಂ ನಾನಾಗಂಧಸಮನ್ವಿತಮ್ । ದಶಾಂಗಸಹಿತಂ ದಿವ್ಯಂ ಧೂಪಂ ದೇವಿ ಗೃಹಾಣ ಭೋ ॥ ಜ್ಯೇಷ್ಠಾದೇವ್ಯೈ ನಮಃ । ಧೂಮಮಾ-ಘ್ರಾಪಯಾಮಿ । (ದೇವಿಗೆ ಧೂಪಾರತಿಯನ್ನು ಮಾಡಬೇಕು).

ದೀಪಮ್ – ದೀಪಂ ತಮೋಹರಂ ಜ್ಯೋತ್ಸ್ನಾ ಜ್ಞಾನಸಂಬೋಧಕಂ ಶುಭಮ್ । ದೀಪಂ ಗೃಹಾಣ ಮಾತಸ್ತ್ವಂ ಅಜ್ಞಾನಂ ಮೇ ವ್ಯಪೋಹಯ ॥ ಜ್ಯೇಷ್ಠಾದೇವ್ಯೈ ನಮಃ

ದೀಪಂ ದರ್ಶಯಾಮಿ। (ದೇವಿಗೆ ಮೂರು ಬತ್ತಿಯಿಂದ ಏಕಾರತಿಯನ್ನು ಮಾಡ-ಬೇಕು).

ನೈವೇದ್ಯಮ್ – ನಾನಾವಿಧಾನಿ ಭಕ್ಷ್ಯಾಣಿ ವ್ಯಂಜನಾನಿ ಹರಿಪ್ರಿಯೇ। ಗೃಹಾಣ ದೇವಿ ನೈವೇದ್ಯಂ ಸುಖದಂ ಸರ್ವದೇಹಿನಾಮ್ ॥ ಜ್ಯೇಷ್ಠಾದೇವ್ಯೈ ನಮಃ। ನೈವೇದ್ಯಂ ದರ್ಶಯಾಮಿ। (ಹರಿಗೆ ನಿವೇದಿತ ನೈವೇದ್ಯವನ್ನು ದೇವಿಗೆ ಸಮರ್ಪಿಸಬೇಕು).

ಪಾನೀಯಮ್ – ಗಂಗೋದಕಂ ಸಮಾನೀತಂ ಪಾನಾರ್ಥಂ ಜಲಮುತ್ತಮಮ್। ಕುರುಷ್ವ ಪ್ರಾಶನಂ ದೇವಿ ವರದಾ ಭವ ಇಂದಿರೇ ॥ ಜ್ಯೇಷ್ಠಾದೇವ್ಯೈ ನಮಃ। ಮಧ್ಯೇ ಮಧ್ಯೇ ಪಾನೀಯಂ ಸಮರ್ಪಯಾಮಿ। ಉತ್ತರಾಪೋಶನಂ ಸಮರ್ಪಯಾಮಿ। ಹಸ್ತಪ್ರಕ್ಷಾಲನಂ ಸಮರ್ಪಯಾಮಿ ॥ ಕರೋದ್ವರ್ತನಂ ಸಮರ್ಪಯಾಮಿ (ಮೀಸಲುನೀರನ್ನು ದೇವಿಗೆ ತೋರಿಸಿ ಅರ್ಘ್ಯಪಾತ್ರೆಗೆ ಬಿಡಬೇಕು).

ಫಲಾನಿ – ರಂಭಾಫಲಂ ದಾಡಿಮಂ ಚ ಖರ್ಜೂರಂ ಮಾತುಲಿಂಗಕಮ್। ಗೃಹ್ಯತಾಂ ನಾರಿಕೇಲಾದಿ ಫಲಾನಿ ಜಗದಂಬಿಕೇ ॥ ಜ್ಯೇಷ್ಠಾದೇವ್ಯೈ ನಮಃ। ನಾನಾವಿಧಫಲಾನಿ ಸಮರ್ಪಯಾಮಿ ॥ (ಪರಮಾತ್ಮನಿಗೆ ಮೊದಲು ಅರ್ಪಿಸಿ, ನಂತರ ದೇವಿಗೆ ಹಣ್ಣುಗ-ಳನ್ನು ಸಮರ್ಪಿಸಬೇಕು).

ತಾಂಬೂಲಮ್ – ಪೂಗೀಫಲಂ ಮಹದ್ದಿವ್ಯಂ ನಾಗವಲ್ಲೀದಲೈರ್ಯುತಮ್। ಕರ್ಪೂರಾದಿ ಸಮಾಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥ ಜ್ಯೇಷ್ಠಾದೇವ್ಯೈ ನಮಃ ಪೂಗೀಫಲತಾಂಬೂಲಂ ಸಮರ್ಪಯಾಮಿ। ಜ್ಯೇಷ್ಠಾದೇವ್ಯೈ ನಮಃ। ಸುವರ್ಣ-ಪುಷ್ಪದಕ್ಷಿಣಾಂ ಸಮರ್ಪಯಾಮಿ। (ದೇವಿಗೆ ಎಲೆ - ಅಡಿಕೆಯೊಂದಿಗೆ ದಕ್ಷಿಣೆಯನ್ನು ಸಮರ್ಪಿಸಬೇಕು).

ಮಂಗಲನೀರಾಜನಮ್ – ನೀರಾಜಯಾಮಿ ದೇವೇಶಿ ಕರ್ಪೂರಾದ್ಯೈಃ ಸುದೀಪಕೈಃ। ಗೃಹಾಣ ಮಂಗಲಾನ್ ದೀಪಾನ್ ವರದಾ ಭವ ಶೋಭನೇ ॥ ಜ್ಯೇಷ್ಠಾದೇವ್ಯೈ ನಮಃ। ಮಹಾನೀರಾಜನಂ ಸಮರ್ಪಯಾಮಿ। ಮಂತ್ರಪುಷ್ಪಂ ಸಮರ್ಪಯಾಮಿ। ಪ್ರದಕ್ಷಿಣನಮಸ್ಕಾರಾನ್ ಸಮರ್ಪಯಾಮಿ। ಪ್ರಾರ್ಥನಾಂ ಸಮರ್ಪಯಾಮಿ। (ದೇವಿಗೆ ಐದುಬತ್ತಿಯಿಂದ ಮಂಗಳಾರತಿಯನ್ನು ಮಾಡಿ, ಮಂತ್ರಪುಷ್ಪಗಳನ್ನು ಸಮರ್ಪಿಸಬೇಕು. ಪ್ರದಕ್ಷಿಣೆ ಹಾಕಿ, ಪ್ರಾರ್ಥಿಸಬೇಕು).

**ಸಮಾಪನಮ್** – ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು। ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥ ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ। ಯತ್ಕೃತಂ ತು ಮಯಾದೇವ ಪರಿಪೂರ್ಣಂ ತದಸ್ತು ಮೇ ॥ ಅನೇನ ಜ್ಯೇಷ್ಠಾಗೌರೀಪೂಜನೇನ ಶ್ರೀಮದ್ರಾಘವೇಂದ್ರತೀರ್ಥ-ಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಜ್ಯೇಷ್ಠಾದೇವೀಪತಿ-ನಾರಾಯಣಃ ಪ್ರೀಯತಾಂ ಸುಪ್ರೀತೋ ವರದೋ ಭವತು ॥ ಶ್ರೀಕೃಷ್ಣಾರ್ಪಣ-ಮಸ್ತು ॥

**ಜ್ಯೇಷ್ಠಾಲಕ್ಷ್ಮೀ ಹಾಡು** – ಅಷ್ಟಮೀ ಗೌರೀ ಪೂಜೆ ಮಾಡಿದಳು॥ ಸುಭದ್ರೆ ಅಚ್ಚಮುತ್ತಿನ ಆರತಿಯನ್ನೆತ್ತಿದಳು॥ಪ॥ ಅಚ್ಯುತಾನ ಆಜ್ಞೆಯಿಂದ ಅತಿ ಭಕ್ತಿಯಿಂದ ಮುತ್ತೈದೆತನ ಕೊಡುವ ಪುತ್ರ-ಪೌತ್ರ ಭಾಗ್ಯ ನೀಡುವ॥ಅ.ಪ॥ ಇಂದ್ರನಂದನನ ಸತಿಯಳು ಸುಭದ್ರೆ ಮಿಂದುಮಡಿಯನ್ನುಟ್ಟು ಬಂದಳು ಗಂಧ ಕುಂಕುಮ ಪರಿಮಳ ವಸ್ತ್ರ ಚಂದವಾದ ಧೂಪ ದೀಪ ದುಂಡು ಮಲ್ಲಿಗೆ ಗೌರಿಗೆ ಮುಡಿಸಿ ಮಂಗಳಾರತಿ ಎತ್ತಿದಳು॥೧॥ ಭಗಿನಿ ಕೇಳೇ ಭಾವಶುದ್ಧದಿ ಭಾದ್ರಪದ ಶುದ್ಧ ಅಷ್ಟಮೀ ಗೌರೀ ಕಥೆಯನು ಹಿರಿಯ ಹೆಂಡತಿ ಪುರದ ಹೊರಗೆ ಇಟ್ಟರಲು ಶಿರಿಯ ದೇವಿಯ ದಾರ ಕಟ್ಟಿ ದೊರೆಗೆ ಒಲಿದು ಶಿರಿಯು ಬಂತು॥೨॥ ಶತ್ರುಗಳನೇ ಜಯಿಸಿ ಬರುವರು ಪಾಂಡವರು ಅಪಮೃತ್ಯು ಬರಲು ಅಂಜಿ ಓಡಲು ಪಾಂಚಾಲಿ ಸಹಿತ ದೊರೆಗಳು ವನದೊಳಗೆ ಅಜ್ಞಾತವಾಸ ಗೆದ್ದು ಬರುವ ಪರಿಯ ಕೇಳ್ಯಾಳು॥೩॥ ಶಂಕರಗಂಡನ ಕಥೆಯ ಕೇಳಿ ಕಂಕಣ ಕೈಗೆ ದಾರ ಕಟ್ಟಿ ಪಂಕಜೋದರನ ರಾಣಿ ಶಂಕೆ ಇಲ್ಲದೆ ವರವ ಕೊಡುವಳು ಪಂಚಭಕ್ಷ್ಯ ಪಾಯಸ ಘೃತಗಳು ಮುಂಚೆ ಲಕ್ಷ್ಮೀದೇವಿಗೆ ಎಡೆಮಾಡಿ ಬಡಿಸುವಳು॥೪॥

**ಜ್ಯೇಷ್ಠಾಲಕ್ಷ್ಮೀವ್ರತಕಥೆ** – ದೇವತೆಗಳು ವೃತ್ರಾಸುರನೇ ಮೊದಲಾದ ಎಲ್ಲ ದೈತ್ಯರನ್ನು ಸದೆ ಬಡೆದರು. ಇಂದ್ರನು ವೃತ್ರಾಸುರನನ್ನು ಸಂಹಾರ ಮಾಡಿದನು. ಆಗ ಉಳಿದೆಲ್ಲ ದೈತ್ಯರು ಪಾತಾಳಲೋಕಕ್ಕೆ ಓಡಿ ಹೋದರು. ಕೋಲ ಎಂಬ ದೈತ್ಯನು ಮಾತ್ರ ಗೋಮಂತಪರ್ವತದ ಗುಹೆಯೊಂದರಲ್ಲಿ ಅಡಗಿ ಕುಳಿತನು. ಒಮ್ಮೆ ಗೌತಮರು ಅಲ್ಲಿಗೆ ಆಗಮಿಸಿದರು. ಗುಹೆಯಲ್ಲಿ ಅವಿತುಕುಳಿತ ಕೋಲ ಎಂಬ ಅಸುರನ ಉಪಟಳವನ್ನು ತಾಳಲಾರದೆ ಅಲ್ಲಿರುವ ಎಲ್ಲ ಸಜ್ಜನರು ಗೌತಮ-

ರನ್ನು ಮೊರೆಹೊಕ್ಕರು. ಆಗ ಗೌತಮ ಋಷಿಗಳು ಅಗಸ್ತ್ಯರ ಬಳಿ ಕರೆದುಕೊಂಡು ಹೋದರು. ಆಗ ಅಗಸ್ತ್ಯರು ಭಗವಂತನ ಪತ್ನಿಯಾದ ಲಕ್ಷ್ಮೀದೇವಿಯ ಸನ್ನಿಧಾನ ಇಲ್ಲಿಯೇ ಇದೆ. ಅವಳನ್ನು ಶರಣು ಹೊಂದೋಣ ಎಂದು ಎಲ್ಲರನ್ನೂ ಕರೆದು -ಕೊಂಡು ಹೋಗಿ ಲಕ್ಷ್ಮೀದೇವಿಯ ಬಳಿ ಶರಣಾಗತರಾದರು. ಆದರೆ ಲಕ್ಷ್ಮೀ-ದೇವಿಯ ಪತಿಯಾದ ಭಗವಂತನನ್ನು ಮೊದಲು ನಾವು ಮೊರೆಹೊಂದಬೇಕೆಂದು ತೀರ್ಮಾನ ಮಾಡಿ ಭಗವಂತನ ಬಳಿ ತೆರಳಿ ಸ್ತೋತ್ರಮಾಡಿ ಪ್ರಾರ್ಥಿಸಿದರು. ಆಗ ಭಗವಂತನು – ''ಹನಿಷ್ಯತಿ ಮಹಾಲಕ್ಷ್ಮೀಃ ಯುದ್ಧೇ ಕೋಲಾಸುರಂ ರಿಪುಮ್'' - ಲಕ್ಷ್ಮೀದೇವಿಯ ಕೋಲಾಸುರನನ್ನು ಸಂಹಾರಮಾಡುತ್ತಾಳೆ ಎಂಬುದಾಗಿ ಅಭಯಪ್ರದಾನವನ್ನು ಮಾಡಿದನು. ಚತುರಂಗಬಲಸಹಿತವಾಗಿ ಯುದ್ಧಕ್ಕೆ ಆಗ-ಮಿಸಿದ ಕೋಲಾಸುರನನ್ನು ಲಕ್ಷ್ಮೀದೇವಿಯು ಸಂಹಾರ ಮಾಡಿದಳು. ಭಾದ್ರಪದ-ಮಾಸದ ಶುಕ್ಲಪಕ್ಷದ ಅಷ್ಟಮಿಯ ದಿವಸ ಕೋಲಾಸುರನು ಸಂಹೃತನಾದನು. ಎಲ್ಲ ಸಜ್ಜನರಿಗೂ ರಾಜಕುಮಾರಿಯರಿಗೂ ಲಕ್ಷ್ಮೀದೇವಿಯು ಅನುಗ್ರಹ ಮಾಡಿದಳು. ಅಂದಿನಿಂದ ಜ್ಯೇಷ್ಠಾನಕ್ಷತ್ರವಿರುವ ಅಷ್ಟಮಿಯಂದು ಪೂಜೆ ಮಾಡುವ ಸಂಪ್ರ-ದಾಯವು ಬೆಳೆದು ಬಂದಿತು. ಅಸ್ವತಂತ್ರತತ್ವದಲ್ಲಿ ಜ್ಯೇಷ್ಠಳಾದ ಲಕ್ಷ್ಮೀದೇವಿಯ ಪೂಜೆಯನ್ನು ಮಾಡುವ ಕಾರಣ ಜ್ಯೇಷ್ಠಾಲಕ್ಷ್ಮೀಪೂಜೆ ಎಂಬ ಹೆಸರು ಬಂದಿದೆ. ಮೊದಲದಿನ ಆವಾಹನೆ ಮಾಡಬೇಕು. ಮರುದಿನ ಪೂಜೆಮಾಡಬೇಕು. ಆದರ ಮರುದಿನ ವಿಸರ್ಜನೆಯನ್ನು ಮಾಡಬೇಕು.

ಭಾದ್ರಪದ ಮಾಸ ಶುಕ್ಲ ಪಕ್ಷದ ಅಷ್ಟಮಿಯನ್ನು ರಾಧಾಷ್ಟಮಿ ಎನ್ನುತ್ತಾರೆ.

## ಭಾದ್ರಪದ ॥ ಶುದ್ಧ ॥ ನವಮೀ

**ನಂದಾನವಮೀ** – ಭಾದ್ರಪದಶುಕ್ಲನವಮೀಯು ನಂದಾನವಮಿ ಎನಿಸಿದೆ. ಇಂದು ದುರ್ಗಾದೇವಿಯ ಪೂಜೆಯನ್ನು ಮಾಡಬೇಕು. ಇದು ಮಹಾಪುಣ್ಯ-ಕರವಾದದ್ದು. ಅಶ್ವಮೇಧಯಾಗದ ಪುಣ್ಯವು ಲಭಿಸುವುದು. ಮಾಸಿ ಭಾದ್ರಪದೇ ಯಾ ಸ್ಯಾನ್ನವಮೀ ಬಹಲೇತರಾ । ಸಾ ತಂ ನಂದ ಮಹಾಪುಣ್ಯಾ ಕೀರ್ತಿತಾ ಪಾಪನಾಶಿನೀ ॥ ತಸ್ಯಾಂ ತು ಪೂಜಯೇದ್ ದುರ್ಗಾಂ ವಿಧಿವತ್ ಕುರುನಂದನ । ಸೋಽಶ್ವಮೇಧಫಲಂ ವಿಂದ್ಯಾತ್ ವಿಷ್ಣುಲೋಕಂ ಚ ಗಚ್ಛತಿ ॥

## ಶ್ರೀ ರಘುನಂದನತೀರ್ಥರು (ಪಲಿಮಾರು ಮಠ)

ಮಠದ ಪರಂಪರೆಯಲ್ಲಿ ಹದಿನಾಲ್ಕನೆಯವರಾದ ಇವರು ಪೀಠವನ್ನು ಅಲಂಕರಿಸಿದ್ದು ಕೇವಲ ಹನ್ನೊಂದು ವರ್ಷಗಳ ಕಾಲ. ಇವರು ತನ್ನ ಪ್ರವಚನ ಪಾಟವದಲ್ಲಿ ಗುರುಗಳನ್ನು ಮೀರಿಸಿ ನಿಂತು - ಒಂಭತ್ತು ಬಾರಿ ಸುಧಾಮಂಗಲ ಮಾಡಿದ ಮಹಾಪಂಡಿತರು. ಶಾ.ಶ. 1476 (ಕ್ರಿ .ಶ. 1554) ಪ್ರಮಾದೀ ಸಂವತ್ಸರದ ಭಾದ್ರಪದ ಶುದ್ಧ ನವಮೀಯಂದು ಪಲಿಮಾರಿನಲ್ಲೇ ವೃಂದಾವನಸ್ಥರಾದರು.

## ಜಗನ್ನಾಥದಾಸರ ಪುಣ್ಯದಿನ

ಶ್ರೀ ಜಗನ್ನಾಥದಾಸರು – 'ಹರಿಕಥಾಮೃತಸಾರ' ವೆಂಬ ಮೇರುಕೃತಿಯನ್ನು ರಚಿಸಿ ಶಾಸ್ತ್ರದ ಪ್ರಮೇಯಗಳನ್ನು ಕನ್ನಡದಲ್ಲಿ ಮನೆಮಂದಿಗೆಲ್ಲಾ ತಲುಪಿಸಿದ ದಾಸರು ಇವರು.

ಮಾನವಿಯಲ್ಲಿ ನೆಲೆಸಿದ ಲಕ್ಷ್ಮೀ-ನರಸಪ್ಪ ದಂಪತಿಗಳಿಗೆ 1728ರಲ್ಲಿ ಜನಿಸಿದ ಶ್ರೀನಿವಾಸರು ಯಥೋಚಿತವಾಗಿ ನಡೆದ ಕರ್ಮಗಳಿಂದ ಸಂಸ್ಕಾರ ಪಡೆದು ತಂದೆಯಿಂದಲೇ ಕಾವ್ಯ, ಅಲಂಕಾರ, ಛಂದಸ್ಸು, ನಾಟಕ, ವ್ಯಾಕರಣ, ನೀತಿ ಮುಂತಾದ ವಿಷಯಗಳನ್ನು ಅಭ್ಯಸಿಸಿದರು. ತರುವಾಯ ಅಂದಿನ ಶ್ರೀ ರಾಘವೇಂದ್ರ ಮಠ ಸಂಸ್ಥಾನಾಧೀಶ್ವರರಾದ ಶ್ರೀ ವರದೇಂದ್ರ ಶ್ರೀಪಾದಂಗಳವರಲ್ಲಿ ತರ್ಕ, ನ್ಯಾಯ, ಬ್ರಹ್ಮಮೀಮಾಂಸಾಂತರ್ಗತ ಉದ್ಗ್ರಂಥಗಳಾದ ತತ್ವಪ್ರಕಾಶಿಕಾ, ಶ್ರೀಮನ್ನ್ಯಾಯ-ಸುಧಾ, ವ್ಯಾಸತ್ರಯಗಳನ್ನು ಓದಿ ಘನಪಂಡಿತರೆನಿಸಿಕೊಂಡು ಗುರುಗಳಿಂದ 'ಆಚಾರ್ಯ' ಪದವಿಯ ಅನುಗ್ರಹವನ್ನು ಪಡೆವರು. ಗುರುವಿನ ಅನುಜ್ಞೆಯ ಮೇರೆಗೆ ಪಾಠ-ಪ್ರವಚನಗಳನ್ನು ನಡೆಸಿಕೊಂಡು ಇರುತ್ತಿದ್ದರು. ಆಶುಕವಿತ್ವ, ಪ್ರವಚನ ಪಟುತ್ವ, ಶಾಸ್ತ್ರಪ್ರಭುತ್ವ, ವೇದ-ವೈದುಷ್ಯ, ವಾದ-ವಾಚಾಳತ್ವ ಇತ್ಯಾದಿ ಸಾಹಿತ್ಯಿಕ ಪ್ರಾಗಲ್ಭ್ಯದಿಂದ ಆಚಾರ್ಯರು ಶಿಷ್ಯರನೇಕರನ್ನು ಸಂಪಾದಿಸಿದ್ದರು. ತಮ್ಮವಾದ ವೈಖರಿಯಿಂದ ವಾಕ್ಯಾರ್ಥದಲ್ಲಿ ಪಂಡಿತರನೇಕರನ್ನು ಸೋಲಿಸಿ ಪ್ರತಿಷ್ಠಿತ ದಿಗ್ದಂತಿಗಳಂತೆ ಖ್ಯಾತರಾದರು. ಕೀರ್ತಿ, ಘನತೆ, ಪಾಂಡಿತ್ಯ ಹೆಚ್ಚಿದಂತೆ ಸಂಸ್ಕೃತ ಜ್ಞಾನದ ದರ್ಪದಲ್ಲಿ ಕನ್ನಡ ಪದಗಳನ್ನೂ, ದಾಸಕೂಟವನ್ನೂ ತಿರಸ್ಕಾರದಿಂದ

ಕಾಣತೊಡಗಿದರು. ಹಿರಿಯ ಅನುಭಾವಿಗಳು, ಆಚಾರ್ಯರ ಸೋದರಮಾವಂದಿರು, ಅಪರೋಕ್ಷಜ್ಞಾನಿಗಳು ಆದ ಶ್ರೀ ವಿಜಯದಾಸರನ್ನು ನಿಂದಿಸಲೂ ಹಿಂಜರಿಯಲಿಲ್ಲ.

ತಂದೆ ವೆಂಕಟವಿಠ್ಠಲರ ಮಾತಿನಲ್ಲಿ ಹೇಳುವುದಾದರೆ–

ದಾಸ ವೇಷವ ಧರಿಸಿ ಕೂಸಿ ಮಗ ನೀನು ಬಹು-
ಮೋಸಪಡಿಸಿದೆ ಜನರ ಭಾಸ್ವದಪರೋಕ್ಷಯಂ
ದೇಸು ಬಗೆಯಾಯ್ತು ಕಲಿದೋಷ ಹಾ ! ಹಾ!

ವಿಜಯದಾಸರು ಮಾನವಿಗೆ ಬಂದಾಗ ಆಚಾರ್ಯರು ಅವರ ದರ್ಶನಕ್ಕೆ ಹೋಗಲಿಲ್ಲ. ತೀರ್ಥಪ್ರಸಾದದಲ್ಲಿ ಭಾಗವಹಿಸಲಿಲ್ಲ. ಉತ್ತಮರಲ್ಲಿ ಎಸಗಿದ ಈ ಅಪಚಾರ ಅಕ್ಷಮ್ಯವೇ ಸರಿ. ದಾಸವರ್ಯರ ತೀರ್ಥಪ್ರಸಾದಕೆ ಅವಮರ್ಯಾದೆ ಮಾಡಿದ ಪ್ರಯುಕ್ತ ಶ್ರೀನಿವಾಸಾಚಾರ್ಯರು ಉಲ್ಬಣವ್ಯಾಧಿಗ್ರಸ್ಥರಾದರು. ಲೌಕಿಕ ವೈದ್ಯರಿಂದ ರೋಗ ನಿವಾರಣೆಯಾಗಲಿಲ್ಲ. ಶ್ರೀಹರಿ-ವಾಯು-ಗುರುಗಳ ಸೇವಾ-ಕೈಂಕರ್ಯ ಕೈಕೊಂಡದ್ದಾಯಿತು. ಅವರ ಕೃಪೆಯಿಂದ ಸ್ವೋತ್ತಮ ದ್ರೋಹದಿಂದಾದ ಭವರೋಗ ಶ್ರೀವಿಜಯದಾಸರಿಂದಲೇ ಪರಿಹಾರವಾಗುವದೆಂದು ತಿಳಿದು ಆಚಾರ್ಯರು ದಾಸರ ಬಳಿಗೆ ಬಂದು ಕ್ಷಮೆ ಕೋರಿದರು. ಶ್ರೀ ವಿಜಯದಾಸರು ಅವರನ್ನು ಶ್ರೀಗೋಪಾಲದಾಸರ ಬಳಿಗೆ ಕಳಿಸಿದರು. ಶ್ರೀ ಗೋಪಾಲದಾಸರು ಪರಮಾತ್ಮನಿಗೆ ನಿವೇದಿತಪ್ರಸಾದವನ್ನು ಆಚಾರ್ಯರಿಗೆ ಕೊಟ್ಟರು. ಅದರ ಸೇವನೆ-ಯಿಂದ ವ್ಯಾಧಿಯು ಉಪಶಮನವಾಯಿತು. ಮುಂದೆ ದಾಸರ ಜೊತೆಗೆ ತಿರುಪತಿ ತಿಮ್ಮಪ್ಪನ ದರ್ಶನಕ್ಕೆ ಹೋದಾಗ, ದೇಹಾಲಸ್ಯವುಂಟಾಗಿ ಆಚಾರ್ಯರು ಮೃತ-ಪ್ರಾಯರಾದರು. ದಾಸರು 40 ವರ್ಷಗಳನ್ನು ತಮ್ಮ ಆಯಸ್ಸಿನಿಂದ ದಾನ ಮಾಡಿ ಅವರನ್ನು ಬದುಕಿಸಿದರು. ಅನಂತರ ಆಚಾರ್ಯರ ಜೀವನದಲ್ಲಿ ಒಂದು ಹೊಸ ಮಾರ್ಪಾಟಾಯಿತು. ಹರಿದಾಸರಾಗಬೇಕೆಂಬ ಬಯಕೆ ಬಲವತ್ತರವಾಯಿತು. ಗುರುಗಳ ಆದೇಶದ ಮೇರೆಗೆ ಪಂಢರಪುರಕ್ಕೆ ಹೋಗಿ ಚಂದ್ರಭಾಗೆಯಲ್ಲಿ ಮೀಯುವಾಗ 'ಜಗನ್ನಾಥವಿಠಲ' ಎಂಬ ಅಂಕಿತದ ಶಿಲೆಯು ದೊರೆಯಿತು. ಶ್ರೀನಿವಾಸಾಚಾರ್ಯರು ಅಂದಿನಿಂದ ಜಗನ್ನಾಥದಾಸರಾದರು. ಈ ಎಲ್ಲ ಘಟನೆಗಳು

ಪವಾಡಪ್ರದವಲ್ಲವೇ? ಹರಿದಾಸರಾದ ಮೇಲೆ ಶ್ರೀ ಜಗನ್ನಾಥದಾಸರು ಪರಮಾತ್ಮನ ಮಹಿಮೋಪೇತಸ್ತೋತ್ರಗಳನ್ನು ಮತ್ತು ಶ್ರೀಗಳಾದ ಟೀಕಾಚಾರ್ಯರು, ವಾದಿ-ರಾಜರು, ಪುರಂದರದಾಸರು, ವಿಜಯದಾಸರು, ರಾಘವೇಂದ್ರಗುರುಗಳು, ಸತ್ಯ-ಬೋಧತೀರ್ಥರು, ಗೋಪಾಲದಾಸರು, ವ್ಯಾಸತತ್ವಜ್ಞರು ಇವರುಗಳನ್ನು ಕುರಿತಾದ ಕೀರ್ತನೆಗಳನ್ನು ರಚಿಸಿ ಹಾಡಿದ್ದಾನೆ. ಏಕಮೇವ ಪುತ್ರಿಯ ಶಾಂತಿ ಸಮಾಧಾನಕ್ಕಾಗಿ ಪಾರಾಯಣ ರೂಪವಾಗಿ 600 ನುಡಿಗಳ 'ತತ್ವಸುವ್ವಾಲಿ'ಯನ್ನು ರಚಿಸಿದ್ದಾರೆ ನೃಸಿಂಹ ಸುಳಾದಿಯನ್ನು ಬಡ ಬ್ರಾಹ್ಮಣನಿಗೆ ಅನುಗ್ರಹಿಸಿ, ಉದ್ಧರಿಸಲಾಗಿ ಅವನಿಗೆ ದಿವಾನಗಿರಿಯು ಪ್ರಾಪ್ತವಾಯಿತು. ಇಪ್ಪತ್ತೇಳು ನುಡಿಗಳಲ್ಲಿ 'ತಂತ್ರಸಾರ'ವನ್ನು ಪದ್ಯ-ರೂಪವಾಗಿ ರಚಿಸಿದ್ದಾರೆ. ಇದಲ್ಲದೆ ಮಧ್ವಸಿದ್ಧಾಂತದ ಪ್ರಮೇಯಗಳನ್ನು ಪಂಡಿತ-ಪಾಮರರಿಗೆ ತಿಳಿಯುವಂತೆ ಭಾಮಿನೀಷಟ್ಪದಿಯಲ್ಲಿ 'ಶ್ರೀಹರಿಕಥಾಮೃತಸಾರ'ಪುಸ್ತಕ ರೂಪದಲ್ಲಿ ವಿವರಿಸಿದ್ದಾರೆ.

ಹೀಗೆ ಪಾಂಡಿತ್ಯ-ಪ್ರಾಗಲ್ಭ್ಯದ ಪಡಿನೆಳಲಲ್ಲಿ ಮುಸುಕಿದ ಅಯಥಾರ್ಥ ಜ್ಞಾನದ ಪರಿಮಾರ್ಜನೆಯಾಗಿ ಪರಾತ್ಪರ, ಪರಮಗುರುವಿನ ಕೃಪಾಪ್ರಸಾದ ಪ್ರೇರಣೆಯಿಂದ ಪ್ರಾಸಾದಿಕ ಪ್ರತಿಭೆಯಲ್ಲಿ ಪರಿವರ್ತನವಾಗಿ, ಶ್ರೀನಿವಾಸಾಚಾರ್ಯರು ಶ್ರೀ ಜಗನ್ನಾಥದಾಸರಾಗಿ ಹರಿದಾಸರ ಪಂಕ್ತಿಯಲ್ಲಿ ಅಪೂರ್ವಸ್ಥಾನವನ್ನು ಗಳಿಸಿದರು.

ಶ್ರೀ ಜಗನ್ನಾಥದಾಸರು 82 ವರುಷದ ಸಫಲ ಜೀವನವನ್ನು ನಡೆಸಿ ದಿನಾಂಕ 17.09.1809ರಲ್ಲಿ (ಭಾದ್ರಪದ ಶುದ್ಧ ನವಮಿ) ಪರಂಧಾಮವನ್ನೈದಿದರು.

ದಾಸವರ್ಯ ದಯಾಸಿಂಧೋ ದೂರೀಕೃತದುರಾಶಿಷಂ। ಹರಿಕಥಾಮೃತವಕ್ತಾರಂ ಜಗನ್ನಾಥಗುರುಂ ಭಜೇ॥ ಜಲಜೇಷ್ಟನಿಭಾಕಾರಂ ಜಗದೀಶಪದಾಶ್ರಯಮ್। ಜಗತೀತಲವಿಖ್ಯಾತಂ ಜಗನ್ನಾಥಗುರುಂ ಭಜೇ॥

## ಭಾದ್ರಪದ॥ ಶುಕ್ಲ॥ ದಶಮೀ

ದಶಾವತಾರವ್ರತ – ದೇವರ ಎಲ್ಲಾ ಅವತಾರಗಳ ಜನ್ಮೋತ್ಸವವನ್ನು ಅಂದಂದೇ ಆಚರಣೆ ಮಾಡಲು ಅಶಕ್ತರಾದಲ್ಲಿ ಭಾದ್ರಪದಶುದ್ಧದಶಮೀಯಂದು ಹತ್ತಾವತಾರದ ಪೂಜೆಯನ್ನು ನಡೆಸಬೇಕೆಂದು ಪುರಾಣಗಳು ಹೇಳಿವೆ. ಇದನ್ನು

ದಶಾವತಾರವ್ರತವೆಂದೇ ಗುರುತಿಸಿವೆ. ಭಾರದ್ವಾಜಸಂಹಿತೆ ಹೇಳುವಂತೆ ದೇವರ ಎಲ್ಲ ಜಯಂತೀವ್ರತಗಳನ್ನು ಆಚರಿಸಬೇಕು. ಅದರಲ್ಲಿಯೂ ಕೃಷ್ಣಜನ್ಮಾಷ್ಟಮಿಯು ಅತ್ಯಂತ ಶ್ರೇಷ್ಠವಾದದ್ದು. ಅಂದು ಉಪವಾಸವಿದ್ದು, ಉಳಿದ ಜಯಂತಿಗಳಲ್ಲಿ ವೈಭವಪೂರ್ಣವಾದ ಪೂಜೆ ನಡೆಸಿದರೆ ಸಾಕು. – ಸರ್ವಾಸಾಂ ತು ಜಯಂತೀನಾಂ ಶ್ರೇಷ್ಠಾ ಕೃಷ್ಣಾಷ್ಟಮೀ ಮತಾ । ಯಸ್ಮಾತ್ ಸನ್ನಿಹಿತಾತ್ಯಂತಂ ತತ್ರೈವೋಪಸೇತ್ ನರಃ ॥ ಸವಾರಸ್ವಪಿ ಜಯಂತೀಷು ಪೂಜಾ ಕಾರ್ಯಾ ವಿಶೇಷತಃ ॥

## ಭಾದ್ರಪದ ॥ ಶುಕ್ಲ ॥ ಏಕಾದಶೀ - ವಿಷ್ಣುಪರಿವರ್ತನೋತ್ಸವ

ಭಾದ್ರಪದಶುಕ್ಲ ಏಕಾದಶೀ ಅಥವಾ ದ್ವಾದಶೀ ಸಾಯಂಕಾಲ ವಿಷ್ಣುವನ್ನು ಪೂಜಿಸಿ – ವಾಸುದೇವ ಜಗನ್ನಾಥ ಪ್ರಾಪ್ತೇಯಂ ದ್ವಾದಶೀ ತವ । ಪಾರ್ಶ್ವೇನ ಪರಿವರ್ತಸ್ವ ಸುಖಂ ಸ್ವಪಿಹಿ ಮಾಧವ ॥ ಎಂದು ಪ್ರಾರ್ಥಿಸಬೇಕು. ಭಗವಂತನು ಆಷಾಢ -ಶುಕ್ಲಏಕಾದಶೀ (ಶಯನೀ ಏಕಾದಶೀ)ಯಂದು ಮಲಗಿ ಭಾದ್ರಪದಶುಕ್ಲಏಕಾದಶಿಯಲ್ಲಿ ಪರಿವರ್ತನೆ ಮಾಡಿ (ಮಗ್ಗುಲಾಗಿ) ಕಾರ್ತಿಕಶುಕ್ಲದ್ವಾದಶೀ (ಉತ್ಥಾನ-ದ್ವಾದಶೀ)ಯಂದು ಏಳುತ್ತಾನೆ. ಎಡಮಗ್ಗುಲಿನಿಂದ ಬಲಮಗ್ಗುಲಿಗೆ ತಿರುಗುವ ಈ ಕ್ಷಣದಲ್ಲಿ ಪರಿವರ್ತನೋತ್ಸವವನ್ನು ಆಚರಿಸಬೇಕು.

## ವಿಷ್ಣುಪಂಚಕವ್ರತ

ವಿಷ್ಣುಪ್ರೀತಿಕರವಾದ ವಿಷ್ಣುಪಂಚಕವ್ರತವು ಒಂದು ವರ್ಷಪರ್ಯಂತ ನಡೆಸುವಂಥದು. ತಿಂಗಳಿಗೆ ಐದು ಉಪವಾಸದ ಈ ವ್ರತವನ್ನು ನಿಷ್ಠೆಯಿಂದ ಅನುಷ್ಠಾನ ಮಾಡಬೇಕು. ಈ ವ್ರತವನ್ನು ಆರಂಭಿಸುವವರು ಭಾದ್ರಪದಶುಕ್ಲಏಕಾದಶಿಯಂದು ಶ್ರವಣನಕ್ಷತ್ರವಿದ್ದಾಗ ಆರಂಭಿಸಬೇಕು. ಎರಡು ಏಕಾದಶೀ, ಅಮಾವಾಸ್ಯೆ, ಹುಣ್ಣಿಮೆ ಮತ್ತು ಶ್ರವಣನಕ್ಷತ್ರವೆಂಬ ಐದು ಉಪವಾಸಗಳನ್ನು ಪ್ರತಿಮಾಸವೂ ಆಚರಿಸಿ ಮುಂದಿನ ಭಾದ್ರಪದದಲ್ಲಿ ಅಥವಾ ಅನುಕೂಲದಿನದಲ್ಲಿ ಉದ್ಯಾಪನೆಯನ್ನು ಮಾಡಿ ಕೃಷ್ಣಾರ್ಪಣವೆನ್ನಬೇಕು. ವಿಷ್ಣುಪಂಚಕ ಉಪವಾಸಕ್ಕೆ ಅಮಾವಾಸ್ಯೆಯು ಉದಯ-ಕಾಲದಲ್ಲಿರಬೇಕು. ಪೂರ್ಣಿಮಾತಿಥಿ ಕನಿಷ್ಠ ಒಂದು ಯಾಮದಷ್ಟಿರಬೇಕು. ಶ್ರವಣ-ನಕ್ಷತ್ರ ಮಧ್ಯಾಹ್ನವ್ಯಾಪಿಯಾಗಿರಬೇಕು.

**ಈ ವ್ರತವನ್ನು ಆರಂಭಿಸಲು ಸೂಕ್ತ ಸಮಯ :** ವಿಷ್ಣು ಪಂಚಕ ಉಪವಾಸ ಆರಂಭಿಸುವ ಹಿಂದಿನ ದಿನ ಪುಣ್ಯಾಹವಾಚನ ಮಾಡಿಕೊಂಡು ಆರಂಭಿಸಬೇಕು.

ಅ. ಭಾದ್ರಪದ ಶುದ್ಧ ಏಕಾದಶಿ ಅಂದು ಶ್ರವಣ ನಕ್ಷತ್ರವಾಗಿದ್ದಲ್ಲಿ ; ಆ. ಮಾರ್ಗ-ಶಿರ ಶುದ್ಧ ಪಂಚಮಿ ಶ್ರವಣ ನಕ್ಷತ್ರವಾಗಿದ್ದಲ್ಲಿ ; ಇ. ಮಾರ್ಗಶಿರ ಶುದ್ಧ ಏಕಾದಶಿ (ಶ್ರವಣ ನಕ್ಷತ್ರವಿರಲಿ ಅಥವಾ ಇಲ್ಲದಿರಲಿ) ವಿಷ್ಣುಪಂಚಕ ಪ್ರಾರಂಭಿಸಬಹುದು.

ಆದರೆ, ನಾವು ಆರಂಭಿಸುವ ವಿಷ್ಣುಪಂಚಕದ ಮಾಸದಲ್ಲಿ ಎರಡು ಏಕಾದಶಿ, ಹುಣ್ಣಿಮೆ, ಅಮಾವಾಸ್ಯೆ ಮತ್ತು ಶ್ರವಣ ನಕ್ಷತ್ರದ ದಿನ ಉಪವಾಸಕ್ಕೆ ಅನುವಾಗಿ-ರಬೇಕು. ಕೆಲವು ತಿಂಗಳಲ್ಲಿ ಕೆಲವು ದಿನ ವಿಷ್ಣುಪಂಚಕದ ಉಪವಾಸವಿರುವುದಿಲ್ಲ. ಆದರೆ ನಾವು ಆರಂಭಿಸುವ ತಿಂಗಳು ಐದು ಉಪವಾಸವಿರಲೇಬೇಕು. ಯಾವುದೇ ಉಪವಾಸ ಲೋಪವಾಗಿರಕೂಡದು.

**ವಿಷ್ಣುಪಂಚಕವ್ರತಫಲ -** ಬ್ರಹ್ಮಹತ್ಯಾದೋಷ ಪರಿಹಾರ, ಸುರಾಪಾನ ಪರಸ್ತ್ರೀ ಗಮನ, ಗೋಹತ್ಯಾ, ಸ್ತ್ರೀ, ಬಾಲಹತ್ಯಾ, ಸುವರ್ಣಚೌರ್ಯಪಾಪಪರಿಹಾರ.

**ವಿಷ್ಣುಪಂಚಕ ನಿಯಮಗಳು :** – ವಿಷ್ಣು ಪಂಚಕ ಉಪವಾಸ ಆರಂಭಿಸುವ ಹಿಂದಿನ ದಿನ ಪುಣ್ಯಾಹವಾಚನ ಮಾಡಿಕೊಂಡು ಆರಂಭಿಸಬೇಕು. ಅಂದು ವಿಷ್ಣು-ಪಂಚಕದ ಸಂಕಲ್ಪ ಮಾಡಬೇಕು ; ವ್ರತ ಮಾಡತಕ್ಕವನು ದೈನಂದಿನ ಪೂಜೆ, ಆಹ್ನೀಕ, ನೈವೇದ್ಯ, ವೈಶ್ವದೇವ, ಹಸ್ತೋದಕ, ಮುಂತಾದವನ್ನು ಮಾಡಿ, ಹಿರಿಯರಿಗೆ ತೀರ್ಥ ಕೊಟ್ಟು, ತಾನೂ ಎಂದಿನಂತೆ ಮೂರು ಬಾರಿ ತೀರ್ಥ ಸ್ವೀಕರಿಸಬೇಕು. ಎಂದಿನಂತೆ ಅಂಗಾರ ಅಕ್ಷತೆಯನ್ನು ಹಚ್ಚಬೇಕು, ಉಪವಾಸದ ಮಾರನೇ ದಿನ ಅಂದರೆ ಪಾರಣೆಯ ದಿನ ಬ್ರಾಹ್ಮಣ-ಮುತ್ತೈದೆಯರಿಗೆ, ಭೋಜನ ಮಾಡಿಸಿ ತಾನೂ ಭುಂಜಿಸುವುದು ಅತಿಶಯ ಫಲದಾಯಕ. ವ್ರತದ ಆರಂಭದಲ್ಲಾಗಲೀ, ಮಧ್ಯ-ದಲ್ಲಾಗಲೀ, ಅಂತ್ಯದಲ್ಲಾಗಲೀ, ಉದ್ಯಾಪನೆಯನ್ನು ಅನುಕೂಲವಿದ್ದ ದಿನ ಮಾಡ-ಬೇಕು. ಉದ್ಯಾಪನೆಯ ಹಿಂದಿನ ದಿನ ಉಪವಾಸದ ದಿನವಾಗಿರಬೇಕು. ಉದ್ಯಾ-ಪನೆಯ ದಿನದಂದು 5,12, ಅಥವಾ 60 ಬ್ರಾಹ್ಮಣ ದಂಪತಿಗಳಿಗೆ ಅನ್ನಸಂತರ್ಪಣೆ-ಯನ್ನು ನಡೆಸಬೇಕು. ಆಕಸ್ಮಾತ್ ಹುಣ್ಣಿಮೆ, ಅಮಾವಾಸ್ಯೆ, ಶ್ರವಣನಕ್ಷತ್ರ ಉಪ-

ವಾಸದ ದಿನ ತಂದೆ ಅಥವಾ ತಾಯಿಯ ಶ್ರಾದ್ಧವು ಬಂದಲ್ಲಿ, ಅಂದು ಶ್ರಾದ್ಧ ಮಾಡಬೇಕು. ಬ್ರಾಹ್ಮಣಭೋಜನ ಮಾಡಿಸಬೇಕು. ತಾನು ಭೋಜನ ಮಾಡಬೇಕು. ದಶಮಿಯಂದು, ಸಾಧನದ್ವಾದಶಿಯಂದು ಮತ್ತು ಶಿವರಾತ್ರಿಯ ದಿನ ಶ್ರವಣ ನಕ್ಷತ್ರವಿದ್ದಲ್ಲಿ ಅಂದು ಉಪವಾಸ ಮಾಡಕೂಡದು.

**ವಿಷ್ಣುಪಂಚಕ ವರ್ಷವೆಂದರೆ :** ಈ ವರ್ಷ ಭಾದ್ರಪದ ಮಾಸದಲ್ಲಿ ಆರಂಭಿಸಿದರೆ ಮುಂದಿನ ವರ್ಷದ ಶ್ರಾವಣ ಅಮಾವಾಸ್ಯೆಯ ತನಕ ಆಚರಿಸಬೇಕು. ಅಥವಾ ಈ ವರ್ಷ ಮಾರ್ಗಶಿರ ಮಾಸದಲ್ಲಿ ಆರಂಭಿಸಿದರೆ ಮುಂದಿನ ಕಾರ್ತೀಕ ಮಾಸದ ತನಕ ಆಚರಿಸಬೇಕು.

**ವಿಷ್ಣುಪಂಚಕದ ಬಗ್ಗೆ ಕೆಲವು ಮಾಹಿತಿಗಳು.**

1. ವ್ರತಾರಂಭಕ್ಕೆ ಯೋಗ್ಯಕಾಲ- ಭಾದ್ರಪದಶುಕ್ಲ ಏಕಾದಶಿಯಂದು ಶ್ರವಣನಕ್ಷತ್ರವಿದ್ದಲ್ಲಿ ವಿಷ್ಣುಪಂಚಕವ್ರತವನ್ನು ಹಿಡಿಯಬಹುದು. ಅಥವಾ ಮಾರ್ಗಶಿರ ಮಾಸದ ಏಕಾದಶಿಯಂದು ವಿಷ್ಣುನಕ್ಷತ್ರ (ಶ್ರವಣ)ವಿಲ್ಲದಿದ್ದರೂ ಆರಂಭಿಸಬಹುದು. ಅಥವಾ ಮಾರ್ಗಶಿರ ಶುಕ್ಲ ಪಂಚಮಿಯಂದು ಶ್ರವಣನಕ್ಷತ್ರವಿದ್ದಲ್ಲಿ ಪ್ರಾರಂಭಿಸಬಹುದು. ಆದರೆ ಆರಂಭಿಸುವ ತಿಂಗಳಲ್ಲಿ (ಆರಂಭದ 30 ದಿನಗಳಲ್ಲಿ) ಉಪವಾಸಾರ್ಹಗಳಾದ ಐದು ದಿನಗಳು ಇರಲೇಬೇಕು. ಯಾವುದೇ ಉಪವಾಸ ಲೋಪವಾಗಿರಕೂಡದು. ಅಲ್ಲದೇ ಅಧಿಕಮಾಸದಲ್ಲಿ ಮತ್ತು ಗುರು-ಶುಕ್ರಾಸ್ತಗಳಿದ್ದಾಗ ಈ ವ್ರತವನ್ನು ಆರಂಭಿಸುವಂತಿಲ್ಲ.

2. ಆರಂಭಿಸಿದ್ದ ವ್ರತವನ್ನು ಗುರು-ಶುಕ್ರಾಸ್ತಗಳಿದ್ದಾಗಲೂ, ಅಧಿಕಮಾಸದಲ್ಲೂ ಮುಂದುವರಿಸಬೇಕು.

3. ಹುಣ್ಣಿಮೆಯಂದೇ ಶ್ರವಣವು ಬರುವುದೇ ಮೊದಲಾದ ಕ್ರಮದಿಂದ ಉಪವಾಸವು ತಪ್ಪಿಹೋದಲ್ಲಿ ಯಾವುದೇ ದೋಷವಿಲ್ಲ. ಆದರೆ ಶ್ರಮದಿಂದಲೋ ರೋಗಾದಿನಿಮಿತ್ತದಿಂದಲೋ ಉಪವಾಸ ತಪ್ಪಿದರೆ ವರ್ಷಮುಗಿದ ಮುಂದಿನ ತಿಂಗಳಿನಲ್ಲಿ ಆಯಾದಿನದಲ್ಲಿ ಉಪವಾಸ ಮಾಡಿ ಪೂರ್ತಿಗೊಳಿಸಿಕೊಳ್ಳಬೇಕು.

4. ಸ್ವತಃ ತನಗೆ ಮಾಡುವುದಕ್ಕೆ ಅಸಾಮರ್ಥ್ಯವಿದ್ದಾಗ ತನ್ನ ಧರ್ಮಪತ್ನಿಯ

ಮೂಲಕ ಅಥವಾ ಸುತನ ಮೂಲಕ ಮಾಡಿಸಿ ಫಲಪಡೆಯಬಹುದೆಂದಿದೆ ವಿಷ್ಣು-ರಹಸ್ಯದಲ್ಲಿ.

5. ತೀರ್ಥಪ್ರಾಶನ- ಏಕಾದಶಿದಿನವನ್ನು ಹೊರತುಪಡಿಸಿ ಉಳಿದ ಯಾವುದೇ ದಿನ ವಿಷ್ಣುಪಂಚಕದ ಉಪವಾಸವಿದ್ದಾಗಲೂ ಗಂಧೋದಕಮಿಶ್ರಿತವಾದ ಶಾಲ-ಗ್ರಾಮತೀರ್ಥವನ್ನು ಮೂರು ಬಾರಿ ಪ್ರಾಶನ ಮಾಡಬೇಕು. ಗಂಧಾಕ್ಷತೆಗಳನ್ನು ಧರಿಸಿ ಕೊಳ್ಳಬೇಕು. ವಿಷ್ಣುವ್ರತಾಭಿಮಾನದಿಂದ ತೀರ್ಥವನ್ನೂ ಮೂರು ಬಾರಿ ಸ್ವೀಕರಿಸದೇ ಕುಳಿತಲ್ಲಿ ಬಲು ದೋಷವಿದೆ.

6. ಉದ್ಯಾಪನೆ- ವ್ರತದ ಉದ್ಯಾಪನೆಯನ್ನು ಆದಿ-ಮಧ್ಯ-ಅಂತ ಎಂದಾದರೂ ಅನುಕೂಲವಿದ್ದ ದಿನ ಮಾಡಬಹುದು. ಸಾಮಾನ್ಯವಾಗಿ ಉಪವಾಸದ ಕೊನೆಯ ತಿಂಗಳಲ್ಲಿ ಉದ್ಯಾಪನೆ ಮಾಡುತ್ತಾರೆ.

7. ಸಂತರ್ಪಣೆ- ಪ್ರತಿಪಾರಣೆಗೂ ಬ್ರಾಹ್ಮಣದಂಪತಿಗಳ ಸಂತರ್ಪಣೆ ಅತಿ-ಶಯಫಲದಾಯಕ. ಅಥವಾ ಉದ್ಯಾಪನೆಯಂದು 5-12-60 ಅರವತ್ತು ಬ್ರಾಹ್ಮಣ ದಂಪತಿಗಳಿಗೆ ಸಂತರ್ಪಣೆಯನ್ನು ನಡೆಸಬಹುದು.

8. ಹುಣ್ಣಿಮೆ, ಅಮಾವಾಸ್ಯೆ, ಶ್ರವಣವುಳ್ಳ ತಿಥಿಗಳಲ್ಲಿ ತಂದೆ ಅಥವಾ ತಾಯಿಯ ಶ್ರಾದ್ಧವು ಬಂದಲ್ಲಿ (ಸ್ವಕರ್ತೃಕಪಾರ್ವಣವು ಬಂದಲ್ಲಿ) ಅಂದು ಶ್ರಾದ್ಧ, ವಿಪ್ರಭೋಜನ ಮುಗಿಸಿ ಭೋಜನ ಮಾಡಲೇಬೇಕು. ಇಂದು ಉಪವಾಸವಿಘ್ನ-ವಾಯಿತೆಂಬ ದೋಷವಿಲ್ಲ.

9. ಪಿತೃದಿನದಂದು ಮಾತ್ರವಲ್ಲದೇ ದಶಮಿಯಂದು, ಸಾಧನದ್ವಾದಶಿಯಂದು ಮತ್ತು ಶಿವರಾತ್ರಿಯ ದಿನದಂದು ಶ್ರವಣನಕ್ಷತ್ರವು ಬಂದರೆ ಅಂದು ಉಪವಾಸ ಮಾಡಕೂಡದು.

10. ಪ್ರತಿ ಉಪವಾಸದಲ್ಲೂ ಹನ್ನೆರಡು ತರ್ಪಣವನ್ನು ಕೊಡಬೇಕು. ಉದ್ಯಾಪನಕಾಲದಲ್ಲಿ ಎಲ್ಲಾದೇವತೆಗಳಿಗೂ ಹನ್ನೆರಡು ಬಾರಿ ತರ್ಪಣಕೊಡುವ ಅನುಕೂಲಪದ್ಧತಿಯೂ ಇದೆ. ಉಪವಾಸದ ಮರುದಿನ ಪಾರಣೆಗೆ ಮೊದಲು ಈ 12 ನಾಮಗಳಿಂದ ಶುದ್ಧೋದಕವನ್ನು ಕೈಯಲ್ಲಿ ಹಾಕಿ ಬೆರಳ ತುದಿಯಿಂದ ಕೆಳಬೀಳು ವಂತೆ ತರ್ಪಣವನ್ನು ಕೊಡಬೇಕು.

**ಪೌರ್ಣಮಿ ದಿನ** - 1) ವಿಧವೇ ನಮ: ವಿಧುಂ ತರ್ಪಯಾಮಿ ; 2) ಶಶಿನೇ ನಮ: ಶಶಿಂ ತರ್ಪಯಾಮಿ., 3) ಶಶಾಂಕಾಯ ನಮ: ಶಶಾಂಕಂ ತರ್ಪಯಾಮಿ. 4) ಚಂದ್ರಾಯ ನಮ:ಚಂದ್ರಂ ತರ್ಪಯಾಮಿ; 5) ಸೋಮಾಯ ನಮ: ಸೋಮಂ ತರ್ಪಯಾಮಿ; 6) ಉಡುಪಾಯ ನಮ: ಉಡುಪಂ ತರ್ಪಯಾಮಿ; 7) ಅಮೃತಾಯ ನಮ: ಅಮೃತಂ ತರ್ಪಯಾಮಿ; 8) ಮನೋಹರಾಯ ನಮ: ಮನೋಹರಂ ತರ್ಪಯಾಮಿ; 9) ಪಾವನಾಯ ನಮ: ಪಾವನಂ ತರ್ಪಯಾಮಿ ; 10) ಹಿಮಕೃತೇ ನಮ: ಹಿಮಕೃತಂ ತರ್ಪಯಾಮಿ; 11) ನಿಶಾಕೃತೇ ನಮ: ನಿಶಾಕೃತಂ ತರ್ಪಯಾಮಿ; 12) ದೀಪ್ಯಮಾನಾಯ ನಮ: ದೀಪ್ಯಮಾನಂ ತರ್ಪಯಾಮಿ

**ಅಮಾವಾಸ್ಯಾ ದಿನ** - 1) ಮಹೀಧರಾಯ ನಮ: ಮಹೀಧರಂ ತರ್ಪಯಾಮಿ; 2) ಜಗನ್ನಾಥಾಯ ನಮ: ಜಗನ್ನಾಥಂ ತರ್ಪಯಾಮಿ; 3) ದೇವೇಂದ್ರಾಯ ನಮ: ದೇವೇಂದ್ರಂ ತರ್ಪಯಾಮಿ; 4) ದೇವಕೀಸುತಾಯ ನಮ: ದೇವಕೀಸುತಂ ತರ್ಪಯಾಮಿ; 5) ಚತುರ್ಭುಜಾಯ ನಮ: ಚತುರ್ಭುಜಂ ತರ್ಪಯಾಮಿ; 6) ಗದಾಪಾಣಯೇ ನಮ: ಗದಾಪಾಣಿಂ ತರ್ಪಯಾಮಿ; 7) ಸುರಮೀಡಾಯ ನಮ: ಸುರಮೀಡಂ ತರ್ಪಯಾಮಿ ; 8) ಸುಲೋಚನಾಯ ನಮ: ಸುಲೋಚನಂ ತರ್ಪಯಾಮಿ; 9) ಚಾರ್ವಾಂಗಾಯ ನಮ: ಚಾರ್ವಾಂಗಂ ತರ್ಪಯಾಮಿ; 10) ಚಕ್ರಪಾಣಯೇ ನಮ: ಚಕ್ರಪಾಣಿಂ ತರ್ಪಯಾಮಿ; 11) ಸುರಮಿತ್ರಾಯ ನಮ: ಸುರಮಿತ್ರಂ ತರ್ಪಯಾಮಿ; 12) ಅಸುರಾಂತಕಾಯ ನಮ: ಅಸುರಾಂತಕಂ ತರ್ಪಯಾಮಿ.

ಶ್ರವಣ ನಕ್ಷತ್ರ ದಿನ - 1. ಪುರುಷೋತ್ತಮಾಯ ನಮ: ಪುರುಷೋತ್ತಮಂ ತರ್ಪಯಾಮಿ; 2 ಶಾರ್ಙ್ಗಧನ್ವಿನೇ ನಮ: ಶಾರ್ಙ್ಗಧನ್ವಿಂ ತರ್ಪಯಾಮಿ ; 3. ಗರುಡಧ್ವಜಾಯ ನಮ: ಗರುಡಧ್ವಜಂ ತರ್ಪಯಾಮಿ 4. ಅನಂತಾಯ ನಮ: ಅನಂತಂ ತರ್ಪಯಾಮಿ; 5. ಗೋವರ್ಧನಾಯ ನಮ: ಗೋವರ್ಧನಂ ತರ್ಪಯಾಮಿ; 6. ಪುಂಡರೀಕಾಕ್ಷಾಯ ನಮ: ಪುಂಡರೀಕಾಕ್ಷಂ ತರ್ಪಯಾಮಿ; 7. ನಿತ್ಯಾಯ ನಮ: ನಿತ್ಯಂ ತರ್ಪಯಾಮಿ; 8. ವೇದಗರ್ಭಾಯ ನಮ: ವೇದಗರ್ಭಂ ತರ್ಪಯಾಮಿ; 9. ಯಜ್ಞಪುರುಷಾಯ ನಮ: ಯಜ್ಞಪುರುಷಂ ತರ್ಪಯಾಮಿ; 10.

ಸುಬ್ರಹ್ಮಣ್ಯಾಯ ನಮ: ಸುಬ್ರಹ್ಮಣ್ಯಂ ತರ್ಪಯಾಮಿ; 11. ಜಯಾಯ ನಮ: ಜಯಂ ತರ್ಪಯಾಮಿ; 12. ಶೌರಯೇ ನಮ: ಶೌರಿಂ ತರ್ಪಯಾಮಿ

| ಶುಕ್ಲೈಕಾದಶೀದೇವತೆಗಳು- (ದ್ವಾದಶಿಯಂದು ತರ್ಪಣ) | ಕೃಷ್ಣೈಕಾದಶೀದೇವತೆಗಳು (ದ್ವಾದಶೀ ತರ್ಪಣ) |
|---|---|
| 1. ಕೇಶವಂ ತರ್ಪಯಾಮಿ | ಸಂಕರ್ಷಣಂ ತರ್ಪಯಾಮಿ |
| 2. ನಾರಾಯಣಂ ತರ್ಪಯಾಮಿ | ವಾಸುದೇವಂ ತರ್ಪಯಾಮಿ |
| 3. ಮಾಧವಂ ತರ್ಪಯಾಮಿ | ಪ್ರದ್ಯುಮ್ನಂ ತರ್ಪಯಾಮಿ |
| 4. ಗೋವಿಂದಂ ತರ್ಪಯಾಮಿ | ಅನಿರುದ್ಧಂ ತರ್ಪಯಾಮಿ |
| 5. ವಿಷ್ಣುಂ ತರ್ಪಯಾಮಿ | ಪುರುಷೋತ್ತಮಂ ತರ್ಪಯಾಮಿ |
| 6. ಮಧುಸೂದನಂ ತರ್ಪಯಾಮಿ | ಅಧೋಕ್ಷಜಂ ತರ್ಪಯಾಮಿ |
| 7. ತ್ರಿವಿಕ್ರಮಂ ತರ್ಪಯಾಮಿ | ನರಸಿಂಹಂ ತರ್ಪಯಾಮಿ |
| 8. ವಾಮನಂ ತರ್ಪಯಾಮಿ | ಅಚ್ಯುತಂ ತರ್ಪಯಾಮಿ |
| 9. ಶ್ರೀಧರಂ ತರ್ಪಯಾಮಿ | ಜನಾರ್ದನಂ ತರ್ಪಯಾಮಿ |
| 10. ಹೃಷೀಕೇಶಂ ತರ್ಪಯಾಮಿ | ಉಪೇಂದ್ರಂ ತರ್ಪಯಾಮಿ |
| 11. ಪದ್ಮನಾಭಂ ತರ್ಪಯಾಮಿ | ಹರಿಂ ತರ್ಪಯಾಮಿ |
| 12. ದಾಮೋದರಂ ತರ್ಪಯಾಮಿ | ಶ್ರೀಕೃಷ್ಣಂ ತರ್ಪಯಾಮಿ |

**ಭಾದ್ರಪದಶುಕ್ಲ ಏಕಾದಶೀ ಶ್ರೀ ಸತ್ಯೇಷ್ಟತೀರ್ಥರು (ಉತ್ತರಾದಿಮಠ)** ಸತ್ಯಕಾಮಾರ್ಣವೋದ್ಭೂತಃ ಶ್ರೀಮತ್ಸತ್ಯೇಷ್ಟಸದ್ಗುರುಃ । ಸತಾಂ ಚಿಂತಾಮಣಿರಿವ ಚಿಂತಿತಾರ್ಥಪ್ರದೋ ಭುವಿ ॥ ಪೂರ್ವಾಶ್ರಮದಲ್ಲಿ ಹತ್ತಿಮತ್ತೂರು ನರಸಿಂಹಾಚಾರ್ಯರಾಗಿದ್ದ ಈ ಗುರುಗಳು ಶ್ರೀ ಸತ್ಯಕಾಮತೀರ್ಥರಿಂದ ಸಂಸ್ಥಾನವನ್ನು ಮತ್ತು ಸಂಸ್ಥಾನದ ಪೀಠಾಧಿಪತ್ಯವನ್ನು ಪಡೆದು ಕೇವಲ 7-8 ತಿಂಗಳುಗಳ ಕಾಲ ಪೀಠವನ್ನಾಳಿದರು. ಪೀಠಾಧೀಶರಾಗಿದ್ದಷ್ಟು ದಿನ ದ್ವೈತಮತದ ಸ್ಥಾಪನೆ, ಪಾಠ-ಪ್ರವಚನದಲ್ಲಿ,

ಶ್ರೀರಾಮದೇವರ ಸಂಸ್ಥಾನಪೂಜೆಯಲ್ಲಿ ಕಾಲವನ್ನು ವೆಚ್ಚ ಮಾಡಿದರು. ತಮ್ಮ ಗುರುಗಳ ಸನ್ನಿಧಾನದಲ್ಲೇ (ರಾಯಚೂರು ಪ್ರಾಂತದ ಆತಕೂರಿನಲ್ಲೇ) ಅಂಗಿರಸ ಸಂವತ್ಸರದ ಭಾದ್ರಪದ ಶುಕ್ಲ ಏಕಾದಶೀಯಂದು ವೃಂದಾವನಸ್ಥರಾದರು.

## ಕಲ್ಕೀದ್ವಾದಶೀವ್ರತ

ಕಲ್ಕಿ ದ್ವಾದಶೀವ್ರತ – ದುರ್ವಾಸಮುನಿ – ಹಿಂದಿನ ವ್ರತದಂತೆಯೇ ಭಾದ್ರ-ಪದಮಾಸದ ಶುಕ್ಲೈಕಾದಶಿಯಲ್ಲಿಯೂ ಸಂಕಲ್ಪ ಮಾಡಿ ಶಾಸ್ತ್ರೋಕ್ತವಾಗಿ ದೇವದೇವ -ನನ್ನು ಚೆನ್ನಾಗಿ ಪೂಜಿಸಬೇಕು.

ಕಲ್ಕಿನೇ ನಮಃ ಎಂದು ದೇವನ ಪಾದಗಳನ್ನೂ, ಹೃಷೀಕೇಶಾಯ ನಮಃ ಎಂದು ನಡುವನ್ನೂ, ಮ್ಲೇಚ್ಛವಿಧ್ವಂಸನಾಯ ನಮಃ ಎಂದು ಆ ಜಗನ್ಮೂರ್ತಿಯ ಉದರವನ್ನೂ, ಶಿತಿಕಂಠಾಯ ನಮಃ ಎಂದು ಕಂಠವನ್ನೂ, ಖಡ್ಗಪಾಣಯೇ ನಮಃ ಎಂದು ತೋಳುಗಳನ್ನೂ, ಚತುರ್ಭುಜಾಯ ನಮಃ ಎಂದು ಕೈಗಳನ್ನೂ, ವಿಶ್ವ-ಮೂರ್ತಯೇ ನಮಃ ಎಂದು ಶಿರಸ್ಸನ್ನೂ ಅರ್ಚಿಸಬೇಕು. ತಿಳಿದವನು ಹೀಗೆ ಅರ್ಚಿಸಿ ಹಿಂದಿನಂತೆ, ಅವನೆದುರಿಗೆ ಕಲಶವನ್ನಿಟ್ಟು, ಅದರ ಮೇಲೆ ಸುವರ್ಣದ ಕಲ್ಕಿದೇವ -ಮೂರ್ತಿಯನ್ನೂ ವಸ್ತ್ರಾಲಂಕೃತವನ್ನಾಗಿ ಬಿಜಮಾಡಿಸಬೇಕು. ಗಂಧಪುಷ್ಪಾದಿಗಳಿಂದ ಆರಾಧಿಸಿ, ದ್ವಾದಶಿಯ ದಿನ ಬೆಳಿಗ್ಗೆ ಶಾಸ್ತ್ರಜ್ಞರಲ್ಲಿ ಉತ್ತಮನಾದ ಬ್ರಾಹ್ಮಣನಿಗೆ ಒಪ್ಪಿಸಬೇಕು. ಮಹಾಮುನಿಯೇ! ಹೀಗೆ ಮಾಡಿದರೆ ಏನಾಗುವುದೆಂಬುದನ್ನು ಕೇಳು.

ಪೂರ್ವದಲ್ಲಿ ಕಾಶೀಪಟ್ಟಣದಲ್ಲಿ ಮಹಾಬಲವುಳ್ಳವನಾದ ವಿಶಾಲನೆಂಬ ರಾಜ-ನಿದ್ದನು. ದಾಯಾದಿಗಳು ಅವನ ರಾಜ್ಯವನ್ನು ಕಿತ್ತುಕೊಳ್ಳಲಾಗಿ ಅವನು ಗಂಧ-ಮಾದನವೆಂಬ ಪರ್ವತಕ್ಕೆ ಹೊರಟು ಹೋದನು. ರಾಜ್ಯವನ್ನೂ ಐಶ್ವರ್ಯವನ್ನೂ ಕಳೆದುಕೊಂಡ ಆ ನರೋತ್ತಮನು ಕಂದಿದವನಾಗಿ, ಆ ಪರ್ವತದ ಕಣಿವೆಯಲ್ಲಿದ್ದ ಮಂಗಳಕರವೂ ಸುಂದರವೂ ಆದ ಬದರಿಕಾಶ್ರಮವನ್ನು ಸೇರಿದನು.

ಹಾಗಿರುವಾಗ ಒಮ್ಮೆ ಸರ್ವದೇವತೆಗಳಿಂದಲೂ ನಮಸ್ಕೃತರೂ ಪ್ರಾಚೀನರೂ ಋಷಿವರ್ಯರೂ ಆದ ನರನಾರಾಯಣರು ಅಲ್ಲಿಗೆ ಬಂದರು. ಶತ್ರುನಾಶಕರಾದ ಅವರು ಅಲ್ಲಿಗೆ ತಮಗಿಂತಲೂ ಮೊದಲು ಬಂದು ಪರಮಪದವುಳ್ಳ ವಿಷ್ಣುವೆಂಬ

ಹೆಸರಿನ ಪರಬ್ರಹ್ಮನನ್ನು ಧ್ಯಾನಿಸುತ್ತಾ ಇದ್ದ ದೊರೆಯನ್ನು ನೋಡಿ ಪ್ರೀತಿಯುಳ್ಳವರಾಗಿ ಪಾಪರಹಿತನಾದ ಅವನಿಗೆ ''ರಾಜೇಂದ್ರನೇ! ನಿನಗೆ ವರವನ್ನು ಕೊಡುವವರು ಬಂದಿದ್ದೇವೆ. ವರವನ್ನು ಬೇಡು'' ಎಂದು ಹೇಳಿದರು.

ದೊರೆ – ನೀವಾರೋ ನಾನರಿಯೆನು. ಯಾರಿಗೆ (ಯಾವ) ವರವನ್ನು ತೆಗೆದು-ಕೊಳ್ಳಲಿ. ನಾನು ಯಾರನ್ನು ಆರಾಧಿಸುತ್ತೇನೋ ಅವನಿಂದಲೇ ಮನೋಹರವೂ ಸಾಧುವೂ ಆದ ವರವನ್ನು ನಾನು ಬಯಸುವೆನು.

ಹೀಗೆ ಹೇಳಿಸಿಕೊಂಡ ಅವರು ''ಪ್ರಭುವೇ! ನೀನು ಯಾರನ್ನು ಆರಾಧಿಸು-ತ್ತೀಯೆ? ಯಾವ ವರವನ್ನು ಬೇಡುತ್ತೀಯೆ? ನಮಗೆ ಕುತೂಹಲವಾಗಿರುವುದರಿಂದ ಹೇಳು'' ಎಂದರು.

ಹೀಗೆ ಹೇಳಿಸಿಕೊಂಡ ರಾಜನು ''ನಾನು ವಿಷ್ಣುವನ್ನು ಆರಾಧಿಸುತ್ತೇನೆ'' ಎಂದು ಹೇಳಿ ಸುಮ್ಮನಾದನು. ಬಳಿಕ ಅವರು ಮತ್ತೆ ''ರಾಜನೇ ಆ ದೇವನ ಅನುಗ್ರಹ-ದಿಂದಲೇ ನಾವು ವರವನ್ನು ಕೊಡುವುದು. ನಿನ್ನ ಮನಸ್ಸಿನಲ್ಲೇನಿದೆಯೋ ಆ ವರವನ್ನು ಹೇಳು'' ಎಂದರು.

ದೊರೆ – ಯಜ್ಞೇಶ್ವರನಾದ ದೇವನನ್ನು ಬಗೆ ಬಗೆಯ ದಕ್ಷಿಣೆಗಳುಳ್ಳ ಯಜ್ಞ-ಗಳಿಂದ ಪೂಜಿಸಲು ನನಗೆ ಸಾಮರ್ಥ್ಯವುಂಟಾಗುವಂತೆ ಲೋಕರಕ್ಷಕನಾದ ನಾರಾಯಣದೇವನು ಲೋಕಕ್ಕೆ ದಾರಿಯನ್ನು ತೋರಿಸುವವನಾಗಿ ನನ್ನೊಡನೆ ಈ ಬದರಿಕಾಶ್ರಮದಲ್ಲಿ ತಪಸ್ಸನ್ನು ಮಾಡುವವನಾಗಿ ತಾನೇ ವರವನ್ನು ಕೊಡಲಿ.

ಈ ನಾರಾಯಣನು ಮೊದಲು ಮತ್ಸ್ಯಾವತಾರವನ್ನು ಮಾಡಿದನು. ಬಳಿಕ ಸುಂದರವಾದ ಕೂರ್ಮರೂಪನಾದನು. ಅನಂತರ ವರಾಹದೇವನಾದನು. ಆಮೇಲೆ ನರಸಿಂಹನಾದನು. ಬಳಿಕ ವಾಮನನಾದನು. ಅನಂತರ ಮಹಾಬಲಶಾಲಿಯಾದ ಪರಶುರಾಮನಾದನು. ತಿರುಗಿ ಶ್ರೀರಾಮನೆಂಬ ರಾಜನಾಗಿ ಎಲ್ಲರನ್ನೂ ಮೋಹ ಗೊಳಿಸಿದನು. ಎಲ್ಲಾ ಕಳ್ಳರನ್ನೂ ಮ್ಲೇಚ್ಛರನ್ನೂ ಸಂಹರಿಸಿ ಈ ಭೂಮಿಯನ್ನು ಸಹಜವಾದ ಸ್ಥಿತಿಯುಳ್ಳದ್ದನ್ನಾಗಿ ಮಾಡಿದ ಆ ಹರಿನಾರಾಯಣನು ಈ ಪೂಜ್ಯನೇ.

ಆದರಂತೆ ಪಾಪದಿಂದ ಭೀತರಾದರೆ ಮನುಷ್ಯರು ಆ ನಾರಾಯಣನ ನರಸಿಂಹರೂಪವನ್ನೂ, ಮೋಹನಾಶಕ್ಕಾಗಿ ವಾಮನಮೂರ್ತಿಯನ್ನೂ, ದ್ರವ್ಯಕ್ಕಾಗಿ

ಪರಶುರಾಮನನ್ನೂ, ಕ್ರೂರಶತ್ರುಗಳ ವಿನಾಶವಾಗಬೇಕಾದರೆ ಶ್ರೀರಾಮನನ್ನೂ ಪೂಜಿಸಬೇಕು. ಪುತ್ರರನ್ನು ಬಯಸುವ ಬುದ್ಧಿವಂತನು ಬಲರಾಮಕೃಷ್ಣರನ್ನು ಪೂಜಿಸ-ಬೇಕೆಂಬುದರಲ್ಲಿ ಸಂದೇಹವಿಲ್ಲ. ರೂಪವನ್ನು ಬಯಸುವವರು ಬುದ್ಧನನ್ನು ಪೂಜಿಸ-ಬೇಕು. ಶತ್ರುಗಳ ಕೊಲೆಗೆ ಕಲ್ಕಿಯನ್ನರ್ಚಿಸಬೇಕು.

ನರಮುನಿಯು ಹೀಗೆ ಆ ವಿಶಾಲರಾಜನಿಗೆ ಹೇಳಿ ಈ ಕಲ್ಕಿದ್ವಾದಶೀವ್ರತವನ್ನೇ ಉಪದೇಶಿಸಿದನು. ಆ ರಾಜನೂ ಈ ವ್ರತವನ್ನು ಮಾಡಿ ಚಕ್ರವರ್ತಿಯಾದನು. ಮುನಿಯೇ! ಅವನ ಹೆಸರಿನಿಂದಲೇ ಬದರಿಕಾಶ್ರಮಕ್ಕೆ ವಿಶಾಲಾ ಎಂಬ ಹೆಸರಾ-ಯಿತು. ಆ ರಾಜನು ಆ ಮನುಷ್ಯಜನ್ಮದಲ್ಲಿ ರಾಜ್ಯಭಾರ ಮಾಡಿ ಧನವನ್ನು ಸಂಪಾ-ದಿಸಿದನು. ಬಗೆ ಬಗೆಯ ಯಜ್ಞಗಳನ್ನು ಮಾಡಿ ಬಳಿಕ ಪರಮನಿರ್ವಾಣವನ್ನು ಪಡೆದನು.

## ಪದ್ಮಪುರಾಣದಲ್ಲಿನ ಭಾದ್ರಪದಶುಕ್ಲ ಏಕಾದಶೀ ಕಥೆ –

ಯುಧಿಷ್ಠಿರಃ – ನಭಸ್ಯಸ್ಯ ಸಿತೇ ಪಕ್ಷೇ ಕಿನ್ನಾಮ್ನೈಕಾದಶೀ ಭವೇತ್ । ಕೋ ದೇವಃ ಕೋ ವಿಧಿಸ್ತಸ್ಯಾ ಏತದಾಖ್ಯಾಹಿ ಕೇಶವ ॥1॥ ಯುಧಿಷ್ಠಿರನು ಕೇಳಿದನು – ಭಾದ್ರ-ಪದಶುಕ್ಲಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ಅದಕ್ಕೆ ದೇವರಾವುದು? ವಿಧಿಯೇನು? ಎಂಬುದನ್ನು ತಿಳಿಸು. ಶ್ರೀಕೃಷ್ಣಃ – ಕಥಯಾಮಿ ಮಹೀಪಾಲ ಕಥಾ-ಮಾಶ್ಚರ್ಯಕಾರಿಣೀಮ್ । ಕಥಯಾಮಾಸ ಯಾಂ ಬ್ರಹ್ಮಾ ನಾರದಾಯ ಮಹಾತ್ಮನೇ ॥2॥ ಎಲೈ ದೊರೆಯೇ! ಬ್ರಹ್ಮನು ನಾರದನಿಗೆ ಹೇಳಿದ ಒಂದು ಆಶ್ಚರ್ಯಕರವಾದ ಕಥೆಯನ್ನು ಹೇಳುತ್ತೇನೆ. ಕೇಳು. ನಾರದಃ – ಕಥಯಸ್ವ ಪ್ರಸಾದೇನ ಚತುರ್ಮುಖ ನಮೋಽಸ್ತು ತೇ । ನಭಸ್ಯ ಶುಕ್ಲಪಕ್ಷೇ ತು ಕಿನ್ನಾಮ್ನೈಕಾದಶೀ ಭವೇತ್ । ಏತದಿ-ಚ್ಛಾಮ್ಯಹಂ ಶ್ರೋತುಂ ವಿಷ್ಣೋರಾರಾಧನಾಯ ವೈ ॥3॥ ನಾರದನು ಹೇಳಿದನು – ಎಲೈ ಚತುರ್ಮುಖನೇ! ನಿನಗೆ ನಮಸ್ಕಾರವು. ಭಾದ್ರಪದಮಾಸದ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ವಿಷ್ಣುವಿನ ಆರಾಧನೆಗೋಸ್ಕರ ಅದನ್ನು ಕೇಳಲು ಇಚ್ಛಿಸುತ್ತೇನೆ. ಬ್ರಹ್ಮಾ – ವೈಷ್ಣವೋಽಸಿ ಮುನಿಶ್ರೇಷ್ಠ ಸಾಧು ಪೃಷ್ಟಂ ತ್ವಯಾ ಕಿಲ । ನಾತಃ ಪರತರಾ ಲೋಕೇ ಪವಿತ್ರಾ ಹರಿವಾಸರಾತ್ ॥4॥ ಬ್ರಹ್ಮನು ಹೇಳಿದನು – ಎಲೈ ಮುನಿಶ್ರೇಷ್ಠನೇ! ನೀನು ವೈಷ್ಣವನಾಗಿದ್ದೀಯೆ. ನೀನು ಕೇಳುವುದು

ಚೆನ್ನಾಗಿದೆ. ಈ ಪವಿತ್ರವಾದ ಹರಿವಾಸರ(ದಿನ)ಕ್ಕಿಂತ ಉತ್ತಮವಾದುದು ಲೋಕದಲ್ಲಿ ಮತ್ತೊಂದಿಲ್ಲ. ಪದ್ಮನಾಭೇತಿ ವಿಖ್ಯಾತಾ ನಭಸ್ಯೈಕಾದಶೀ ಸಿತಾ । ಹೃಷೀಕೇಶಃ ಪೂಜ್ಯತೇಸ್ಯಾಂ ಕರ್ತವ್ಯಂ ವ್ರತಮುತ್ತಮಮ್ ॥5॥ ಭಾದ್ರಪದ ಶುಕ್ಲ ಏಕಾದಶಿಯು ಪದ್ಮನಾಭೈಕಾದಶೀ ಎಂದು ಪ್ರಸಿದ್ಧವಾಗಿರುವುದು. ಈ ಏಕಾದಶಿಯಲ್ಲಿ ವಿಷ್ಣುವನ್ನು ಪೂಜಿಸಬೇಕು. ಇದು ಉತ್ತಮವಾದ ವ್ರತವು. ಕಥಯಾಮಿ ತವಾಗ್ರೇಹಂ ಕಥಾಂ ಪೌರಾಣಿಕೀಂ ಶುಭಾಮ್ । ಯಸ್ಯಾಃ ಶ್ರವಣಮಾತ್ರೇಣ ಮಹಾಪಾಪಂ ಪ್ರಣಶ್ಯತಿ ॥6॥ ನಿನ್ನ ಮುಂದೆ ಒಂದು ಪುರಾಣದ ಕಥೆಯನ್ನು ಹೇಳುತ್ತೇನೆ. ಅದು ಶುಭವಾದುದು. ಅದನ್ನು ಕೇಳುವುದರಿಂದ ಮಹಾಪಾಪಗಳೆಲ್ಲವೂ ನಾಶವಾಗುತ್ತವೆ. ಮಾಂಧಾತಾ ನಾಮ ರಾಜರ್ಷಿರ್ವಿವಸ್ವದ್ವಂಶಸಂಭವಃ ಬಭೂವ ಚಕ್ರವರ್ತೀ ಸಃ ಸತ್ಯಸಂಧಃ ಪ್ರತಾಪವಾನ್ ॥7॥ ಸೂರ್ಯವಂಶೋತ್ಪನ್ನ- ನಾದ ಮಾಂಧಾತನೆಂಬ ರಾಜರ್ಷಿಯೊಬ್ಬನಿದ್ದನು. ಅವನು ಚಕ್ರವರ್ತಿಯು. ಸತ್ಯವಂತನು. ಪ್ರತಾಪಿಯು. ಧರ್ಮತಃ ಪಾಲಯಾಮಾಸ ಪ್ರಜಾಃ ಪುತ್ರಾನಿವೌರಸಾನ್ । ನ ತಸ್ಯ ರಾಜ್ಯೇ ದುರ್ಭಿಕ್ಷಂ ನಾಧಯೋ ವ್ಯಾಧಯಸ್ತಥಾ ॥8॥ ಅವನು ಪ್ರಜೆಗಳನ್ನು ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆ ಕಾಪಾಡುತ್ತಿದ್ದನು. ಅವನ ರಾಜ್ಯದಲ್ಲಿ ದುರ್ಭಿಕ್ಷದ ಭಯವಿಲ್ಲ. ರೋಗವಾಗಲೀ ಮನೋದುಃಖವಾಗಲೀ ಇರುವುದಿಲ್ಲ. ನಿರಾತಂಕಾಃ ಪ್ರಜಾಸ್ತಸ್ಯ ಧನಧಾನ್ಯಸಮೇಧಿತಾ । ನ್ಯಾಯೇನೋಪಾರ್ಜಿತಂ ವಿತ್ತಂ ತಸ್ಯ ಕೋಶೇ ಮಹೀಪತೇಃ ॥9॥ ಇವನ ರಾಜ್ಯದಲ್ಲಿ ಪ್ರಜೆಗಳು ತೊಂದರೆಯಿಲ್ಲದೆ ಇದ್ದರು. ಧನ ಧಾನ್ಯಗಳು ಸಮೃದ್ಧಿಯಾಗಿದ್ದವು. ಅವನು ನ್ಯಾಯದಿಂದ ಹಣವನ್ನು ಸಂಪಾದಿಸಿ ಕೋಶದಲ್ಲಿ ತುಂಬಿದ್ದನು. ಸ್ವಧರ್ಮೇ ಪ್ರವರ್ತಂತೇ ಸರ್ವೇ ವರ್ಣಾಶ್ರಮಾಸ್ತಥಾ । ಕಾಮಧೇನುಸಮಾ ಭೂಮಿಃ ತಸ್ಯ ರಾಜ್ಯೇ ಮಹೀಪತೇಃ ॥10॥ ಎಲ್ಲಾ ವರ್ಣಾಶ್ರಮಿಗಳೂ ಅವರವರ ಧರ್ಮದಲ್ಲಿ ನಡೆಯುತ್ತಿದ್ದರು. ಅವನು ರಾಜ್ಯಭಾರ ಮಾಡುತ್ತಿರಲು ಭೂಮಿಯು ಕಾಮಧೇನುವಿನಂತೆ ಕೇಳಿದುದನ್ನು ಕೊಡುತ್ತಿದ್ದಿತು. ತಸ್ಯೈವಂ ಕುರ್ವತೋ ರಾಜ್ಯಂ ಬಹುಸೌಖ್ಯಂ ಗತಾಃ ಪ್ರಜಾಃ । ಅಥೈಕಸ್ಮಿಂಶ್ಚ ಸಂಪ್ರಾಪ್ತೇ ವಿಪಾಕೇ ಕರ್ಮಣಃ ಖಲು ॥11॥ ವರ್ಷತ್ರಯಂ ತದ್ವಿಷಯೇ ನ ವವೃಷುರ್ಬಲಾಹಕಾಃ । ತೇನ ಭಗ್ನಾಃ ಪ್ರಜಾಸ್ತಸ್ಯ ಬಭೂವು ಕ್ಷುಧಯಾರ್ದಿತಾಃ ॥12॥ ಹೀಗೆ ಮಾಂಧಾತಚಕ್ರವರ್ತಿಯು ರಾಜ್ಯಭಾರ ಮಾಡುತ್ತಿರಲು ಜನಗಳು

ಬಹು ಸೌಖ್ಯದಿಂದಿರುತ್ತಿದ್ದರು. ಹೀಗಿರುತ್ತಿರಲು ಯಾವುದೋ ಒಂದು ಪಾಪ-ಶೇಷದಿಂದ ಅವನ ರಾಜ್ಯದಲ್ಲಿ ಮೂರು ವರ್ಷಗಳ ಕಾಲ ಮಳೆಯು ಹುಯ್ಯಲಿಲ್ಲ. ಅದರಿಂದ ಜನಗಳು ಕಷ್ಟ ಪಡುತ್ತಾ ಹಸಿವು ಬಾಯಾರಿಕೆಗಳಿಂದ ತೊಂದರೆ ಪಡುತ್ತಿದ್ದರು. ಸ್ವಾಹಾಸ್ವಧಾವಷಟ್ಕಾರವೇದಾಧ್ಯಯನವರ್ಜಿತಾಃ । ಬಭೂವ ವಿಷಯಸ್ತಸ್ಯಾಭಾಗ್ಯೇನ ದೈವಪೀಡಿತಃ । ಅಥ ಪ್ರಜಾಃ ಸಮಾಗಮ್ಯ ರಾಜಾನಮಿ-ದಮಬ್ರುವನ್ ॥13॥ ಪ್ರಜೆಗಳೆಲ್ಲರೂ ಸ್ವಾಹಾ, ಸ್ವಧಾ, ವಷಟ್‌ಕಾರಗಳುಳ್ಳ ಹೋಮ, ಯಜ್ಞಗಳನ್ನು ಮಾಡದೇ ಹೋದರು. ವೇದಾಧ್ಯಯನವನ್ನು ಬಿಟ್ಟು-ಬಿಟ್ಟರು. ಈ ರೀತಿಯಲ್ಲಿ ಅವನ ದೇಶವು ದುರದೃಷ್ಟದಿಂದ ತೊಂದರೆ ಪಡುತ್ತಿ-ದ್ದಿತು. ಆಗ ಪ್ರಜೆಗಳು ರಾಜನ ಬಳಿಗೆ ಬಂದು ಇಂತೆಂದರು. ಪ್ರಜಾಃ – ಶ್ರೋತವ್ಯಂ ನೃಪಶಾರ್ದೂಲ ಪ್ರಜಾನಾಂ ವಚನಂ ತ್ವಯಾ । ಆಪೋ ನಾರಾ ಇತಿ ಪ್ರೋಕ್ತಾಃ ಪುರಾಣೇಷು ಮನೀಷಿಭಿಃ ॥14॥ ಅಯನಂ ತಾ ಭಗವತಃ ತಸ್ಮಾನ್ನಾರಾಯಣಃ ಸ್ಮೃತಃ ಪರ್ಜನ್ಯರೂಪೋ ಭಗವಾನ್ ವಿಷ್ಣುಃ ಸರ್ವಗತಃ ಸ್ಥಿತಃ ॥15॥ ಪ್ರಜೆಗಳು ಹೇಳಿದರು – ಎಲೈ ರಾಜನೇ! ಪ್ರಜೆಗಳ ಮಾತನ್ನು ಕೇಳು. ನೀರಿಗೆ 'ನಾರಾ' ಎಂದು ಹೆಸರಿರುವುದೆಂದು ವಿದ್ವಾಂಸರು ಹೇಳುತ್ತಾರೆ. ಅವುಗಳಿಗೆ ಭಗವಂತನು ಮನೆಯು. ಆದುದರಿಂದಲೇ ಅವನಿಗೆ ನಾರಾಯಣನೆಂದು ಹೆಸರು ಬಂದಿರು-ವುದು. ಆ ದೇವರಾದ ವಿಷ್ಣುವು ಪರ್ಜನ್ಯರೂಪನಾದವನು. ಆ ವಿಷ್ಣುವು ಎಲ್ಲ ಕಡೆಯಲ್ಲಿಯೂ ಇದ್ದಾನೆ. ಸ ಏವ ಕುರುತೇ ವೃಷ್ಟಿಂ ವೃಷ್ಟೇರನ್ನಂ ತತಃ ಪ್ರಜಾಃ । ತದಭಾವೇ ನೃಪಶ್ರೇಷ್ಠ ಯೋಗಕ್ಷೇಮಂ ಯಥಾ ಭವೇತ್ ॥16॥ ಆ ವಿಷ್ಣುವೇ ಮಳೆಯನ್ನು ಹುಯ್ಯಿಸುವವನು. ಮಳೆಯಿಂದ ಅನ್ನವು ಬೆಳೆಯುತ್ತದೆ. ಅನ್ನದಿಂದ ಪ್ರಜೆಗಳು ಬದುಕುತ್ತಾರೆ. ಆ ಮಳೆಯಿಲ್ಲದಿದ್ದರೆ ಪ್ರಜೆಗಳು ನಾಶವಾಗುತ್ತಾರೆ. ಜನರಿಗೆ ಯೋಗಕ್ಷೇಮವುಂಟಾಗುವಂತೆ ಮಾಡು. (ಯೋಗ = ಇಲ್ಲದಿದ್ದುದನ್ನು ಹೊಂದುವುದು. ಕ್ಷೇಮ - ಹೊಂದಿದುದನ್ನು ನೋಡಿಕೊಳ್ಳುವುದು). ರಾಜಾ – ಸತ್ಯಮುಕ್ತಂ ಭವದ್ಭಿಶ್ಚ ಮಿಥ್ಯಾಭಿಹಿತಂ ಕ್ವಚಿತ್ । ಅನ್ನಂ ಬ್ರಹ್ಮ ಯತಃ ಪ್ರೋಕ್ತಮನ್ನೇ ಸರ್ವಂ ಪ್ರತಿಷ್ಠಿತಮ್ ॥17॥ ಅನ್ನಾದ್ಭವಂತಿ ಭೂತಾನಿ ಜಗದನ್ನೇನ ವರ್ತತೇ । ಇತ್ಯೇವಂ ಶ್ರೂಯತೇ ಲೋಕೇ ಪುರಾಣೇ ಬಹುವಿಸ್ತರಮ್ ॥18॥ ರಾಜನು ಹೇಳಿದನು – ಎಲೈ ಪ್ರಜೆಗಳಿರಾ! ನೀವು ಹೇಳಿದುದು ನಿಶ್ಚಯವು. ಒಂದು ಸ್ವಲ್ಪವೂ

ಸುಳ್ಳಿಲ್ಲ. ಅನ್ನವೇ ಬ್ರಹ್ಮವು. ಅನ್ನದಿಂದಲೇ ಎಲ್ಲವೂ ಇರುವುದು. ಅನ್ನದಿಂದಲೇ ಪ್ರಾಣಿಗಳಿರುವವು. ಜಗತ್ತೆಲ್ಲವೂ ಕೂಡ ಅನ್ನದಿಂದಲೇ ನಡೆಯುತ್ತಿರುವುದು. ಈ ರೀತಿಯಾಗಿ ಜನಗಳೂ ಹೇಳುತ್ತಿರುವುದಲ್ಲದೇ ಪುರಾಣದಲ್ಲಿಯೂ ವಿಸ್ತಾರವಾಗಿ ಹೇಳಿದೆ. ನೃಪಾಣಾಮಪಚಾರೇಣ ಪ್ರಜಾನಾಂ ಪೀಡನಂ ಭವೇತ್ । ನಾಹಂ ಪಶ್ಯಾಮ್ಯಾತ್ಮಕೃತಮೇವಂ ಬುದ್ಧ್ಯಾ ವಿಚಾರಯನ್ । ತಥಾಪಿ ಪ್ರಯತಿಷ್ಯೇಹಂ ಪ್ರಜಾನಾಂ ಹಿತಕಾಮ್ಯಯಾ ॥19॥ ರಾಜರ ಅನಾಚಾರದಿಂದ ಪ್ರಜೆಗಳಿಗೆ ತೊಂದರೆಯುಂಟಾಗುತ್ತದೆ. ನಾನು ಎಷ್ಟು ಯೋಚಿಸಿದರೂ ಏನು ತಪ್ಪನ್ನು ಮಾಡಿರುವೆನೆಂದೇ ಗೊತ್ತಾಗುವುದಿಲ್ಲ. ಆದರೂ ಪ್ರಜೆಗಳ ಹಿತಕ್ಕೋಸ್ಕರ ಪ್ರಯತ್ನಪಡುತ್ತೇನೆ. ಬ್ರಹ್ಮಾ – ಇತಿ ಕೃತ್ವಾ ಮತಿಂ ರಾಜಾ ಪರಿಮೇಯಪರಿಚ್ಛದಃ । ನಮಸ್ಕೃತ್ಯ ವಿಧಾತಾರಂ ಜಗಾಮ ಗಹನಂ ವನಮ್ ॥20॥ ಬ್ರಹ್ಮನು ಹೇಳಿದನು – ರಾಜನು ಹೀಗೆಂದು ಹೇಳಿ ಅಲ್ಪಪರಿವಾರದ ಸಂಗಡ ಬ್ರಹ್ಮನಿಗೆ ನಮಸ್ಕರಿಸಿ ಒಂದು ದಟ್ಟವಾದ ಕಾಡಿಗೆ ಹೋದನು. ಚಚಾರ ಮುನಿಮುಖ್ಯಾಂಶ್ಚ ಆಶ್ರಮಾಂಸ್ತಾಪಸೈಃ ಶ್ರಿತಾನ್ । ದದರ್ಶಾಥ ಬ್ರಹ್ಮಸುತಮೃಷಿಮಂಗಿರಸಂ ನೃಪಃ ॥21॥ ಆ ಕಾಡಿನಲ್ಲಿ ತಾಪಸರಿರುವ ಜಾಗವನ್ನೂ ಅದರಲ್ಲಿಯೂ ಮುಖ್ಯರಾದ ಮುನಿಗಳಿರುವ ಜಾಗವನ್ನೂ ಸುತ್ತಿದನು. ಕೊನೆಗೆ ಬ್ರಹ್ಮನ ಮಗನಾದ ಅಂಗೀರಸನ ಬಳಿಗೆ ಹೋಗಿ ಅವನನ್ನು ಕಂಡನು. ತೇಜಸಾ ದ್ಯೋತಿತದಿಶಂ ದ್ವಿತೀಯಮಿವ ಪದ್ಮಜಮ್ । ತಂ ದೃಷ್ಟ್ವಾ ಹರ್ಷಿತೋ ರಾಜಾ ಅವತೀರ್ಯ ಸ್ವವಾಹನಾತ್ ॥22॥ ನಮಶ್ಚಕ್ರೇಽಸ್ಯ ಚರಣೌ ಕೃತಾಂಜಲಿಪುಟೋ ವಶೀ । ಮುನಿಸ್ತಮಭಿನಂದ್ಯಾಥ ಸ್ವಸ್ತಿವಾಚನ-ಪೂರ್ವಕಮ್ ॥23॥ ಆ ಅಂಗೀರಸನ ತೇಜಸ್ಸು ದಿಕ್ಕುಗಳನ್ನು ಬೆಳಗುತ್ತಿದ್ದಿತು. ನೋಡಿದರೆ ಎರಡನೆಯ ಬ್ರಹ್ಮನಂತೆ ಇದ್ದನು. ಅವನನ್ನು ನೋಡಿದ ಒಡನೆಯೇ ರಾಜನಿಗೆ ಸಂತೋಷವುಂಟಾಗಿ ಕೂಡಲೇ ರಥದಿಂದ ಇಳಿದನು. ಋಷಿಯ ಬಳಿಗೆ ಬಂದು ಅವನ ಪಾದಗಳನ್ನು ನಮಸ್ಕರಿಸಿ ಕೈಮುಗಿದುಕೊಂಡು ನಿಂತನು. ಋಷಿಯೂ ಕೂಡ ಆ ಮಾಂಧಾತನನ್ನು ಸ್ವಸ್ತಿ ವಚನಗಳಿಂದ ಗೌರವಿಸಿ ಅವನನ್ನು ಅವನ ರಾಜ್ಯದ ಸಪ್ತಾಂಗಗಳ ಕುಶಲವನ್ನೂ ಕೇಳಿದನು. ಪಪ್ರಚ್ಛ ಕುಶಲಂ ರಾಜ್ಯೇ ಸಪ್ತಸ್ವಂಗೇಷು ಭೂಪತೇಃ । ಸ ನಿವೇದ್ಯ ಸ್ವಕುಶಲಂ ಪಪ್ರಚ್ಛಾನಾಮಯಂ ನೃಪಃ ॥24॥ ದತ್ತಾಸನೋ ಗೃಹೀತಾರ್ಘ್ಯ ಉಪವಿಷ್ಟೋಽಸ್ಯ ಸನ್ನಿಧೌ । ಪ್ರತ್ಯುವಾಚ ಮುನಿಂ

**ರಾಜಾ ಪೃಷ್ಟೋ ಹ್ಯಾಗಮ- ಕಾರಣಮ್ ||25||** ರಾಜನು ತನ್ನ ಯೋಗಕ್ಷೇಮವನ್ನು ಋಷಿಗೆ ತಿಳಿಸಿ ಅವನ ಕುಶಲವನ್ನೂ ಕೇಳಿದನು. ಆಮೇಲೆ ಋಷಿಯು ರಾಜನಿಗೆ ಆಸನವನ್ನು ಕೊಟ್ಟು ಅರ್ಘ್ಯಪಾದ್ಯಾದಿಗಳನ್ನೂ ಕೊಟ್ಟನು. ಅದರಲ್ಲಿ ರಾಜನು ಕುಳಿತುಕೊಂಡನು. ಋಷಿಯು ನೀನು ಬಂದ ಕಾರಣವೇನೆನ್ನಲು ಅದಕ್ಕೆ ರಾಜನು ಇಂತೆಂದನು. ರಾಜಾ – **ಭಗವನ್ ಧರ್ಮವಿಧಿನಾ ಮಮ ಪಾಲಯತೋ ಮಹೀಮ್ । ಅನಾವೃಷ್ಟಿಶ್ಚ ಸಂವೃತ್ತಾ ನಾಹಂ ವೇದ್ಮ್ಯತ್ರ ಕಾರಣಮ್ ||26||** ರಾಜನು ಹೇಳಿದನು – ಎಲೈ ಭಗವಂತನೇ! ನಾನು ನ್ಯಾಯದಿಂದ ರಾಜ್ಯಭಾರ ಮಾಡುತ್ತಿದ್ದೇನೆ. (ಅನಾವೃಷ್ಟಿಯು ಬಂದೊದಿದೆ) ಆದರೂ ಇದಕ್ಕೆ ಕಾರಣವು ನನಗೆ ಗೊತ್ತಿಲ್ಲವು. **ಸಂಶಯಚ್ಛೇದನಾಯಾತ್ರ ಆಗತೋಹಂ ತವಾಂತಿಕೇ । ಯೋಗ-ಕ್ಷೇಮವಿಧಾನೇನ ಪ್ರಜಾನಾಂ ಕುರು ನಿರ್ವೃತಿಮ್ ||27||** ಅದರ ಸಂಶಯವನ್ನು ನಾಶಮಾಡಿಕೊಳ್ಳಲು ನಿನ್ನ ಬಳಿಗೆ ಬಂದಿರುವೆನು. ಯೋಗಕ್ಷೇಮವನ್ನುಂಟು-ಮಾಡೋಣದರಿಂದ ಪ್ರಜೆಗಳಿಗೆ ಸುಖವನ್ನುಂಟುಮಾಡು. ಋಷಿಃ – **ಏತತ್ಕೃತ-ಯುಗಂ ರಾಜನ್ ಯುಗಾನಾಮುತ್ತಮಂ ಮತಮ್। ಅತ್ರ ಬ್ರಹ್ಮಪರಾ ಲೋಕಾ ಧರ್ಮಶ್ಚಾತ್ರ ಚತುಷ್ಪದಃ ||28||** ಋಷಿಯು ಹೇಳಿದನು – ಎಲೈ ದೊರೆಯೇ! ಇದು ಕೃತಯುಗವು. ಯುಗಗಳಲ್ಲೆಲ್ಲಾ ಉತ್ತಮವಾದುದು. ಈ ಯುಗದಲ್ಲಿ ಜನರೆಲ್ಲಾ ಧರ್ಮದಲ್ಲಿ ಆಸಕ್ತಿಯುಳ್ಳವರು. ಧರ್ಮವು ಈ ಯುಗದಲ್ಲಿ ನಾಲ್ಕು ಕಾಲಿನಲ್ಲಿ ನಿಂತಿರುವುದು. **ಅಸ್ಮಿನ್ ಯುಗೇ ತಪೋಯುಕ್ತಾ ಬ್ರಾಹ್ಮಣಾ ನೇತರೇ ಜನಾಃ। ವಿಷಯೇ ತವ ರಾಜೇಂದ್ರ ವೃಷಲೋಯಂ ತಪಸ್ಯತಿ ||29||** ಈ ಯುಗದಲ್ಲಿ ತಪಸ್ಸನ್ನು ಬ್ರಾಹ್ಮಣರು ಮಾಡಬೇಕೇ ಹೊರತು ಬೇರೆಯವರು ಮಾಡಕೂಡದು. ಈಗ ನಿನ್ನ ದೇಶದಲ್ಲಿ ಒಬ್ಬ ಶೂದ್ರನು ತಪಸ್ಸು ಮಾಡುತ್ತಿರುವನು. **ಏತಸ್ಮಾತ್ಕಾರಣಾಚ್ಚೈವ ನ ವರ್ಷಂತಿ ಬಲಾಹಕಾಃ। ಕುರು ತಸ್ಯ ವಧೇ ಯತ್ನಂ ಯೇನ ದೋಷಃ ಪ್ರಶಾಮ್ಯತಿ ||30||** ಈ ಕಾರಣದಿಂದಲೇ ಮೋಡಗಳು ಮಳೆಯನ್ನು ಸುರಿಸುವುದಿಲ್ಲ. ಅವನ ವಧೆಯಲ್ಲಿ ಪ್ರಯತ್ನಿಸು. ಆಗ ದೋಷವು ಹೋಗುತ್ತದೆ. ರಾಜಾ – **ನಾಹಮೇತಂ ವಧಿಷ್ಯಾಮಿ ತಪಸ್ಯಂತಮನಾಗಸಮ್ । ಧರ್ಮೋಪದೇಶಂ ಕಥಯ ಉಪಸರ್ಗವಿನಾಶನಮ್ ||31||** ರಾಜನು ಹೇಳಿದನು – ತಪಸ್ಸು ಮಾಡುತ್ತಿರುವ ತಪ್ಪಿಲ್ಲದ ಆತನನ್ನು ನಾನು ಕೊಲ್ಲುವುದಿಲ್ಲ. ಈ ಪ್ರಜೆಗಳ

ತೊಂದರೆಯೂ ಶೂದ್ರನು ತಪಸ್ಸು ಮಾಡುತ್ತಿರುವುದರಿಂದ ಬಂದ ದೋಷವೂ ಹೋಗುವಂತಹ ಒಂದು ಧರ್ಮವನ್ನು ಹೇಳು. ಋಷಿಃ – ಯದ್ಯೇವಂ ತರ್ಹಿ ನೃಪತೇ ಕುರುಷ್ವೈಕಾದಶೀವ್ರತಮ್ । ನಭಸ್ಯಸ್ಯ ಸಿತೇ ಪಕ್ಷೇ ಪದ್ಮನಾಭೇತಿ ವಿಶ್ರುತಾ ॥32॥ ತಸ್ಯಾ ವ್ರತಪ್ರಭಾವೇಣ ಸುವೃಷ್ಟಿರ್ಭವಿತಾ ಧ್ರುವಮ್ । ಸರ್ವಸಿದ್ಧಿಪ್ರದಾ ಹ್ಯೇಷಾ ಸರ್ವೋಪದ್ರವನಾಶಿನೀ । ಅಸ್ಯಾ ವ್ರತಂ ಕುರು ನೃಪ ಸಪ್ರಜಃ ಸಪರಿಚ್ಛದಃ ॥33॥ ಋಷಿಯು ಹೇಳಿದನು – ಎಲೈ ದೊರೆಯೇ! ಹಾಗಾದರೆ ಭಾದ್ರ-ಪದಮಾಸದಲ್ಲಿ 'ಪದ್ಮನಾಭೈಕಾದಶೀ' ಎಂದು ಪ್ರಸಿದ್ಧವಾಗಿರುವ ಏಕಾದಶೀ-ವ್ರತವನ್ನು ಮಾಡು. ಆ ವ್ರತದ ಪ್ರಭಾವದಿಂದ ಖಂಡಿತವಾಗಿಯೂ ಒಳ್ಳೆಯ ಮಳೆ ಬರುತ್ತದೆ. ಈ ವ್ರತವು ಸರ್ವಸಿದ್ಧಿಯನ್ನೂ ಕೊಡುತ್ತದೆ. ಎಲ್ಲಾ ತೊಂದರೆಗಳನ್ನೂ ನಾಶ ಮಾಡುತ್ತದೆ. ಪ್ರಜೆಗಳೊಡನೆಯೂ ಪರಿವಾರಗಳೊಡನೆಯೂ ಈ ವ್ರತವನ್ನು ಮಾಡು. ಬ್ರಹ್ಮಾ – ಇತಿ ವಾಕ್ಯಮೃಷೇಃ ಶ್ರುತ್ವಾ ರಾಜಾ ಸ್ವಗೃಹಮಾಗತಃ। ಭಾದ್ರಪದೇ ಸಿತೇ ಪಕ್ಷೇ ಪದ್ಮಾವ್ರತಮಥಾಕರೋತ್ ॥34॥ ಪ್ರಜಾಭಿಃ ಸಹ ಸರ್ವಾಭಿಶ್ಚಾತುರ್ವರ್ಣ್ಯಸಮನ್ವಿತಃ । ಏವಂ ವ್ರತೇ ಕೃತೇ ರಾಜನ್ ಪ್ರವವರ್ಷ ಬಲಾಹಕಃ ॥35॥ ಜಲೇನ ಪ್ಲಾವಿತಾ ಭೂಮಿರಭವತ್ ಸಸ್ಯಶಾಲಿನೀ । ಋಷೀಶ್ವರಪ್ರಭಾವೇಣ ಲೋಕಾಃ ಸೌಖ್ಯಂ ಪ್ರಪೇದಿರೇ ॥36॥ ಬ್ರಹ್ಮನು ಹೇಳಿದನು – ಋಷಿಯ ಈ ಮಾತನ್ನು ಕೇಳಿ ರಾಜನು ಮನೆಗೆ ಬಂದು ಭಾದ್ರಪದ ಶುದ್ಧದ ಏಕಾದಶೀದಿವಸ ಪದ್ಮನಾಭವ್ರತವನ್ನು ಚತುರ್ವರ್ಣದ ಪ್ರಜೆಗಳ ಸಂಗಡ ಮಾಡಿದನು. ಹೀಗೆ ಮಾಡಲು ಮಳೆಯು ಬೇಕಾದಂತೆ ಬಂದಿತು. ಭೂಮಿಯಲ್ಲಿ ನೀರು ಸಮೃದ್ಧಿಯಾಗಿ ಬಿದ್ದಿತು. ಆಗ ಸಸ್ಯಗಳು ಚೆನ್ನಾಗಿ ಬೆಳೆದವು. ಋಷಿಯ ಪ್ರಭಾವದಿಂದ ಎಲ್ಲರೂ ಸೌಖ್ಯವನ್ನು ಹೊಂದಿದರು. ಶ್ರೀ- ಕೃಷ್ಣಃ – ಏತಸ್ಮಾತ್ಕಾರಣಾದೇವ ಕರ್ತವ್ಯಂ ವ್ರತಮುತ್ತಮಮ್ । ದಧ್ಯೋದನಯುತಂ ತಸ್ಯಾಂ ಜಲಪೂರ್ಣಂ ಘಟಂ ದ್ವಿಜೇ ॥37॥ ವಸ್ತ್ರಂ ಸಂವೇಷ್ಟಿತಂ ದತ್ವಾ ಛತ್ರೋಪಾನ-ಹಮೇವ ಚ । – ಶ್ರೀಕೃಷ್ಣನು ಹೇಳಿದನು – ಈ ಕಾರಣದಿಂದ ಈ ಉತ್ತಮವ್ರತವನ್ನು ಮಾಡಬೇಕು. ಒಂದು ನೀರಿನಿಂದ ಕೂಡಿದ ಕಲಶವನ್ನೂ ಜೊತೆಯಲ್ಲಿ ಮೊಸರನ್ನವನ್ನೂ ಬ್ರಾಹ್ಮಣನಿಗೆ ದಾನ ಮಾಡಬೇಕು. ಆ ಕಲಶಕ್ಕೆ ವಸ್ತ್ರವನ್ನು ಹೊದ್ದಿಸಿರಬೇಕು. ಛತ್ರಿ , ಪಾದರಕ್ಷೆಗಳನ್ನು ದಾನ ಮಾಡಬೇಕು. ನಮೋ ನಮಸ್ತೇ

ಗೋವಿಂದ ಬುಧಶ್ರವಣಸಂಜ್ಞಕ ||38|| ಅಘೌಘಸಂಕ್ಷಯಂ ಕೃತ್ವಾ ಸರ್ವಸೌಖ್ಯ-ಪ್ರದೋ ಭವ | ಭುಕ್ತಿಮುಕ್ತಿಪ್ರದಶ್ಚೈವ ಲೋಕಾನಾಂ ಸುಖದಾಯಕಃ | ಪಠನಾತ್ ಶ್ರವಣಾದ್ ರಾಜನ್ ಸರ್ವಪಾಪೈಃ ಪ್ರಮುಚ್ಯತೇ ||39|| ಎಲೈ ಬುಧಸಂಜ್ಞೆಯುಳ್ಳ ಗೋವಿಂದನೇ | ನಿನಗೆ ನಮಸ್ಕಾರವು. ನನ್ನ ಪಾಪಗಳನ್ನೆಲ್ಲಾ ನಾಶ ಮಾಡಿ ಎಲ್ಲಾ ಸೌಖ್ಯಗಳನ್ನೂ ಕೊಡು. ಈ ವ್ರತವು ಭುಕ್ತಿ ಮುಕ್ತಿಗಳನ್ನು ಕೊಟ್ಟು ಲೋಕಕ್ಕೆ ಸುಖವನ್ನುಂಟು ಮಾಡುವುದು. ಇದನ್ನು ಓದುವುದರಿಂದಲೂ ಕೇಳುವುದ-ರಿಂದಲೂ ಎಲ್ಲಾ ಪಾಪಗಳೂ ಹೋಗುತ್ತವೆ.

ಇತಿ ಶ್ರೀಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿನಾರದಸಂವಾದಾಂತರ್ಗತ ಕೃಷ್ಣಯುಧಿಷ್ಠಿರಸಂವಾದೇ ಭಾದ್ರಪದಶುಕ್ಲಪದ್ಮೈಕಾದಶೀವರ್ಣನಂ ನಾಮ ಏಕೋನ-ಷಷ್ಟಿತಮೋಽಧ್ಯಾಯಃ ಸಮಾಪ್ತಃ || ಇಂತು ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿನಾರದಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಆಷಾಢಶುಕ್ಲಪದ್ಮೈಕಾದಶಿಯ ವರ್ಣನೆ ಎಂಬ ಐವತ್ತೊಂಬತ್ತನೆಯ ಅಧ್ಯಾಯವು ಮುಗಿಯಿತು.

## ಭಾದ್ರಪದ || ಶುಕ್ಲ || ದ್ವಾದಶೀ

ಈ ಭಾದ್ರಪದ ಶುಕ್ಲ ದ್ವಾದಶೀ ದಿವಸ ದ್ವಾದಶಿ ದಿವಸ ಶ್ರವಣ ನಕ್ಷತ್ರ ಸೇರಿದರೆ ಇದನ್ನು ಪರಿವರ್ತನ ದ್ವಾದಶೀ ಎಂದು ಕರೆಯುತ್ತಾರೆ. ಈ ದಿವಸ ಕ್ಷೀರವ್ರತಾರಂಭ.

## ಶ್ರವಣದ್ವಾದಶೀ

ಭಾದ್ರಪದ ಶುಕ್ಲ ದ್ವಾದಶಿಯಂದು ಶ್ರವಣನಕ್ಷತ್ರವಿದ್ದರೆ ಆ ದಿನ ಉಪವಾಸವನ್ನು ಮಾಡಬೇಕು. ಇಂದೇ ವಾಮನಜಯಂತೀಪ್ರಯುಕ್ತ ವಾಮನಪೂಜೆಯನ್ನು ಮಾಡ-ಬೇಕು. ದ್ವಾದಶೀ-ಶ್ರವಣಯೋಗಕ್ಕೆ 'ವಿಷ್ಣುಶೃಂಖಲ' ಎನ್ನುವರು. ಶ್ರವಣದ್ವಾದಶೀ ಉಪವಾಸಮಾಡದೇ ಇದ್ದರೆ ಐದುವರ್ಷಗಳ ಪುಣ್ಯವು ನಾಶವಾಗುವುದು. ಉಪವಾಸದಿಂದ ಹತ್ತುಸಾವಿರ ಏಕಾದಶೀ ಉಪವಾಸದ ಫಲವು ಲಭಿಸುವುದು. ಅರುಣೋದಯಕಾಲಕ್ಕೆ ಉತ್ತರಾಷಾಢವೇಧ ಇಲ್ಲದೇ, ಮಧ್ಯಾಹ್ನ ವ್ಯಾಪಿನಿಯಾದ ದ್ವಾದಶೀ ಹಾಗೂ ಶ್ರವಣನಕ್ಷತ್ರಗಳೆರಡೂ ಇದ್ದು, ದ್ವಾದಶಿಗೆ ತ್ರಯೋದಶೀ

ಸಂಬಂಧ ಹಾಗೂ ಶ್ರವಣಕ್ಕೆ ಧನಿಷ್ಠಾನಕ್ಷತ್ರಗಳ ಸಂಬಂಧವು 59 ಘಳಿಗೆ 33 ವಿಘಳಿಗೆ ಒಳಗೆ ಆಗಿರಬೇಕು. ಹಾಗಿದ್ದರೆ ಶ್ರವಣದ್ವಾದಶಿಯು ಉಪವಾಸಯೋಗ್ಯವಾಗುತ್ತದೆ. ಮಧ್ಯಾಹ್ನವ್ಯಾಪಿಯು ದ್ವಾದಶೀ, ಶ್ರವಣಗಳಿಗೆ ಇಲ್ಲದೇ ಹೋದಲ್ಲಿ ಉಪವಾಸವಿಲ್ಲ. ಆ ಪಕ್ಷದಲ್ಲಿ ಶ್ರವಣವು ಕಡಿಮೆ ಇದ್ದರೆ ಶ್ರವಣ ನಕ್ಷತ್ರವನ್ನು ಕಳೆದುಕೊಂಡು ಪಾರಣೆ ಮಾಡಬೇಕು. ದ್ವಾದಶಿಯು ಕಡಿಮೆ ಇದ್ದರೆ ದ್ವಾದಶಿಯು ಮುಗಿಯುವುದರಲ್ಲೇ ಪಾರಣೆ ಮಾಡಬೇಕು.

## ವಾಮನಜಯಂತಿಯ ಆಚರಣೆ

* ಭಾದ್ರಪದ ಮಾಸದ ಶುಕ್ಲಪಕ್ಷದ ದ್ವಾದಶಿಯ ದಿವಸ ವಾಮನ ಜಯಂತಿಯನ್ನು ಪ್ರತಿಯೊಬ್ಬರೂ ಅವಶ್ಯವಾಗಿ ಆಚರಣೆ ಮಾಡಬೇಕು.

* ಬೆಳಿಗ್ಗೆ ಎಚ್ಚರವಾದ ಕೂಡಲೇ ಹಾಸಿಗೆಯಲ್ಲಿ ಕುಳಿತು ಹೃದಯದಲ್ಲಿ ವಾಮನನನ್ನು ಧ್ಯಾನ ಮಾಡಬೇಕು. ಯಾವ ದೇವೇಂದ್ರನು ಸ್ಥಾನಭ್ರಷ್ಟನಾದನೋ, ಎಲ್ಲ ದೇವತೆಗಳು ಸ್ವರ್ಗವನ್ನು ಬಿಟ್ಟು ತೆರಳಿದಾಗ ಸಮಸ್ತಲೋಕವೇ ಸಂಪತ್ತನ್ನು ಕಳೆದುಕೊಂಡಾಗ ತ್ರಿಲೋಕಗಳು ಅಸುರರ ಅಧೀನವಾದಾಗ ನೀನು ಅವತಾರ ಮಾಡಿದಿ. ಅದಿತಿದೇವಿಯ ಪಯೋವ್ರತಕ್ಕೆ ಒಲಿದು ಅವಳ ಗರ್ಭದಲ್ಲಿ ಕಶ್ಯಪಋಷಿಗಳಿಂದ ಧರೆಗಿಳಿದು ಬಂದಿ. ಕಮಂಡಲು, ಯಜ್ಞಸೂತ್ರ , ಶಿಖೆ, ಛತ್ರಿ ಇವುಗಳನ್ನು ಧರಿಸಿ ಯಜ್ಞೋಪವೀತವನ್ನು ಹಾಕಿಕೊಂಡು, ಕೌಪೀನ ಉಟ್ಟಿಕೊಂಡಿರುವ ಕೃಷ್ಣಾಜಿನವನ್ನು ಹೊದ್ದಿರುವ ನಿನ್ನನ್ನು ಧ್ಯಾನ ಮಾಡುತ್ತೇನೆ. ಬಲಗೈಯಲ್ಲಿ ಮೊಸರನ್ನವನ್ನು ಹಿಡಿದು, ಎಡಗೈಯಲ್ಲಿ ಅಮೃತವನ್ನು ಹಿಡಿದು ನಿಂತಿರುವ, ನಮ್ಮೆಲ್ಲರ ದುಃಖವನ್ನು ಪರಿಹರಿಸುವ ಬಂಗಾರದಂತೆ ಕಂಗೊಳಿಸುತ್ತಿರುವ ಪೂರ್ಣಚಂದ್ರನ ಕಾಂತಿಯಂತೆ ಕಾಂತಿಯುಳ್ಳ , ಚಂದ್ರಮಂಡಲದಲ್ಲಿರುವ ಪದ್ಮಾಸನದಲ್ಲಿ ಕುಳಿತ ನಿನ್ನನ್ನು ಪುನಃ ಪುನಃ ಧ್ಯಾನ ಮಾಡುತ್ತೇನೆ. ನಿನ್ನ ಸ್ಮರಣೆ, ಆರಾಧನೆ ನಿರಂತರ ನಡೆಯುವಂತೆ ಅನುಗ್ರಹಿಸಿ ಉದ್ಧರಿಸು. ಇತ್ಯಾದಿಯಾಗಿ ವಾಮನನನ್ನು ಚಿಂತಿಸಿ, ಎದ್ದೇಳಬೇಕು.

* ಸಂಪ್ರದಾಯದಲ್ಲಿ ದಧಿವಾಮನಜಯಂತಿಯ ಆಚರಣೆಯು ವ್ಯಾಪಕವಾಗಿ ಹರಿದುಬಂದಿದೆ. ದಧ್ಯನ್ನವನ್ನು ಕೈಯಲ್ಲಿ ಹಿಡಿದು ನಿಂತ ವಾಮನನ ಅವತಾರವಾದ

ಕಾರಣ ಈ ದಿವಸಕ್ಕೆ ದಧಿವಾಮನಜಯಂತಿ ಎಂಬ ಹೆಸರು ಬಂದಿದೆ. ದಧಿವಾಮನ-ಜಯಂತಿಯನ್ನು ಭಕ್ತಿಶ್ರದ್ಧೆಗಳಿಂದ ಆಚರಿಸಬೇಕು. ಇದರಿಂದ ಭೂಲಾಭವಾಗುತ್ತದೆ. ಸುಗ್ರಾಸ ಭೋಜನವು ಆಜೀವನ ದೊರಕುತ್ತದೆ.

* ಚಾತುರ್ಮಾಸ್ಯದಲ್ಲಿ ದಧಿವ್ರತವು ಮುಗಿದು, ಕ್ಷೀರವ್ರತವು ಪ್ರಾರಂಭ-ವಾಗುವ ದಿವಸವಿದು. ಆದ್ದರಿಂದ ಮೊಸರನ್ನು ಶ್ರೀಖಂಡವನ್ನು, ದಧ್ಯನ್ನವನ್ನು ವಾಮನರೂಪಿಯಾದ ಭಗವಂತನಿಗೆ ಸಮರ್ಪಣೆ ಮಾಡಲೇಬೇಕು. ಕ್ಷೀರವನ್ನು ಕ್ಷೀರದಿಂದ ಮಾಡಿದ ಪಾಯಸಾದಿಗಳನ್ನು ಸಮರ್ಪಣೆ ಮಾಡಬಾರದು.

* ದ್ವಾದಶಿಯ ಪರ್ವಕಾಲವಾದ್ದರಿಂದ ದಧಿವಾಮನಜಯಂತಿಯ ಆಚರಣೆಗೆ ವಿಶೇಷ ಫಲವಿರುತ್ತದೆ. ಆದ್ದರಿಂದ ಬ್ರಾಹ್ಮಣ, ಮುತ್ತೈದೆಯರನ್ನು ಕರೆಸಿ, ಊಟ ಹಾಕಬೇಕು. ಅವರಿಗೆ ಇಷ್ಟವಾದ ಪದಾರ್ಥಗಳ ದಾನವನ್ನು ಮಾಡಬೇಕು. ಹಾಗೂ ಯಥೇಚ್ಛವಾದ ದಕ್ಷಿಣೆಗಳನ್ನು ನೀಡಬೇಕು.

* ಇಂದಿನ ದಿವಸ ಭೂದಾನ ಮಾಡಿದರೆ ಅತಿಶಯವಾದ ಫಲವು ದೊರಕುತ್ತದೆ. ಮಹಾದಾನಗಳಲ್ಲಿ ಭೂದಾನ, ಕನ್ಯಾದಾನಗಳೇ ಶ್ರೇಷ್ಠವಾಗಿದೆ. ಜೀವನದಲ್ಲಿ ಒಮ್ಮೆ ಭೂದಾನ ಮಾಡುವುದರಿಂದ ಮುಂದಿನ ಎಲ್ಲ ಜನ್ಮಗಳಲ್ಲಿ ಅನಾಯಾಸವಾಗಿ ಭೂಪ್ರಾಪ್ತಿಯಾಗುತ್ತದೆ. ಹಾಗೂ ವರಾಹರೂಪಿಯಾದ ಮತ್ತು ವಾಮನರೂಪಿಯಾದ ಭಗವಂತನ ವಿಶೇಷ ಅನುಗ್ರಹವು ದೊರಕುತ್ತದೆ. ನಿಷ್ಕಾಮದಿಂದ ಭೂದಾನ ಮಾಡಿದಾಗ ಮೋಕ್ಷಮಾರ್ಗವು ಬಹಳ ಸುಲಭವಾ-ಗುತ್ತದೆ.

* 'ಭೂಮಿಂ ತೇ ವಾಮನೋ ದದ್ಯಾತ್' ಎಂಬ ಪ್ರಾರ್ಥನೆಯಂತೆ ವಾಮನ-ರೂಪಿಯಾದ ಭಗವಂತನೇ ಪ್ರತಿಯೊಬ್ಬರಿಗೂ ಭೂಮಿಯನ್ನು ನೀಡುತ್ತಾನೆ. ಈ ಭೂಮಿಯು ಬಲಿಚಕ್ರವರ್ತಿಯಿಂದ ದಾನ ಪಡೆದ ವಾಮನರೂಪಿಯಾದ ಭಗವಂತನ ಅಧೀನವಾಗಿದೆ. ಮತ್ತು ಅವನಿಂದ ಸನ್ನಿಹಿತವಾಗಿದೆ. ಆದ್ದರಿಂದ ಪ್ರತಿಯೊಬ್ಬರಿಗೂ ಸೈಟು, ಜಮೀನು, ಮನೆ, ಬಂಗಲೆ ಇವೆಲ್ಲವೂ ದೊರಕು-ತ್ತಿರುವುದು, ಮುಂದೆ ದೊರಕುವುದು ವಾಮನರೂಪಿಯಾದ ಭಗವಂತನಿಂದಲೇ ಸ್ಪಷ್ಟವಾಗಿ ತಿಳಿದುಕೊಳ್ಳಬೇಕು.

* ಯಾರಿಗೆ ಈಗಾಗಲೇ ಮನೆ, ಸೈಟು ಮೊದಲಾದವುಗಳು ದೊರಕಿದೆಯೋ, ಅವರು ವಾಮನನಿಗೆ ಕೃತಜ್ಞತೆಯನ್ನು ಸಲ್ಲಿಸಿ, ಉಪಕಾರವನ್ನು ಸ್ಮರಿಸಿಕೊಳ್ಳಬೇಕು. ಯಾರಿಗೆ ಮನೆ, ಭೂಮಿಗಳು ದೊರಕಿಲ್ಲವೋ, ಅವರು ಅದಕ್ಕೆ ಪ್ರತಿಬಂಧಕವಾದ ಕರ್ಮಗಳನ್ನು ಪರಿಹರಿಸಿ ಫಲವು ಶೀಘ್ರವಾಗಿ ದೊರಕುವಂತೆ ಪ್ರಾರ್ಥಿಸಬೇಕು.

* ಲೌಕಿಕ ಸಂಪತ್ತುಗಳ ಅನಿವಾರ್ಯತೆ ಇಲ್ಲದವರು ನಿಷ್ಕಾಮವಾದ ಭಾವನೆ -ಯಿಂದ ವಾಮನನ ಆರಾಧನೆಯನ್ನು ಇಂದು ಆಚರಣೆ ಮಾಡಬೇಕು.

* ವಾಮನನಿಗೆ ಅರುಣೋದಯಕಾಲದಲ್ಲಿ ಪಂಚಾಮೃತ ಅಭಿಷೇಕವನ್ನು ಮಾಡಬೇಕು. ಷೋಡಶೋಪಚಾರ ಪೂಜೆಯನ್ನು ವೈಭವದಲ್ಲಿ ಮಾಡಬೇಕು. ತೊಟ್ಟಿಲಿನಲ್ಲಿಟ್ಟು ಈ ಕೆಳಗಿನ ಮಂತ್ರವನ್ನು ಹೇಳಿ, ಮನೆಮಂದಿಯೆಲ್ಲರೂ ಅವಶ್ಯವಾಗಿ ಅರ್ಘ್ಯವನ್ನು ನೀಡಲೇ ಬೇಕು.

ಮಧ್ಯಾಹ್ನ ಕಾಲದಲ್ಲಿ ವಾಮನನು ಅವತಾರ ಮಾಡಿದ್ದಾನೆ. ಅಂದು ವಿಶೇಷವಾಗಿ ವಾಮನ ಜಯಂತಿಯನ್ನು ಆಚರಣೆ ಮಾಡಬೇಕು. ವಾಮನನಿಗೆ ಈ ಕೆಳಗಿನ ಮಂತ್ರದಿಂದ ಅರ್ಘ್ಯವನ್ನು ನೀಡಬೇಕು -

ಶಂಖ-ಚಕ್ರ-ಗದಾ-ಪದ್ಮ-ಶರ-ಶಾರ್ಙ್ಗ-ವಿಭೂಷಿತ ಗೃಹಾಣಾರ್ಘ್ಯಂ
ಮಯಾ ದತ್ತಂ ಶಾರ್ಙ್ಗ-ಪಾಣೇ ನಮೋಽಸ್ತುತೇ
ವಾಮನಾಯ ನಮಸ್ತುಭ್ಯಂ ಕ್ರಾಂತಂ ತ್ರಿಭುವನಂ ಯತಃ ।
ಗೃಹಾಣಾರ್ಘ್ಯಂ ಮಯಾ ದತ್ತಂ ವಾಮನಾಯ ನಮೋನಮಃ ॥
ನಮಸ್ತೇ ಪದ್ಮನಾಭಾಯ ನಮಸ್ತೇ ಜಲಶಾಯಿನೇ ।
ತುಭ್ಯಮರ್ಘ್ಯಂ ಪ್ರಯಚ್ಛಾಮಿ ಬಾಲವಾಮನರೂಪಿಣೇ ॥
ವಾಮನಾಯ ನಮಃ ಇದಮರ್ಘ್ಯಂ ಇದಮರ್ಘ್ಯಂ ಇದಮರ್ಘ್ಯಂ

ಪೂಜಾ ಸಂದರ್ಭದಲ್ಲಿ ಈ ಮಂತ್ರವನ್ನು ಹೇಳಿ ವಾಮನನಿಗೆ ಪೂಜೆಯನ್ನು ಮಾಡಬೇಕು.

ವಾಮನಾಯ ನಮಃ ಪಾದೌ ಪೂಜಯಾಮಿ
ವಿಷ್ಣವೇ ನಮಃ ಕಟಿಂ ಪೂಜಯಾಮಿ

| | |
|---|---|
| ವಾಸುದೇವಾಯ ನಮಃ | ಜಠರಂ ಪೂಜಯಾಮಿ |
| ಸಂಕರ್ಷಣಾಯ ನಮಃ | ಉರಃ ಪೂಜಯಾಮಿ |
| ವಿಶ್ವಭೃತೇ ನಮಃ | ಕಂಠಂ ಪೂಜಯಾಮಿ |
| ಲೋಮರೂಪಿಣೇ ನಮಃ | ಶಿರಃ ಪೂಜಯಾಮಿ |
| ವಿಶ್ವಜಿತೇ ನಮಃ | ಬಾಹೌ ಪೂಜಯಾಮಿ |
| ವಾಮನಾಯ ನಮಃ | ಶಂಖಂ ಪೂಜಯಾಮಿ |
| ದಧಿವಾಮನಾಯ ನಮಃ | ಚಕ್ರಂ ಪೂಜಯಾಮಿ |

* ಮಂಗಳಾರತಿಯನ್ನು ಮಾಡುವಾಗ 'ಹೇಮಾದ್ರಿ ಶಿಖರಾಕಾರಂ' ಎಂಬ ದಧಿವಾಮನಸ್ತೋತ್ರವನ್ನು ಅವಶ್ಯವಾಗಿ ಹೇಳಬೇಕು. ಪೂಜೆಯ ಕೊನೆಯಲ್ಲಿ ಈ ಮಂತ್ರಗಳಿಂದ ಪ್ರಾರ್ಥನೆಯನ್ನು ಸಲ್ಲಿಸಬೇಕು.

ಕಮಂಡಲಂ ಯಜ್ಞಸೂತ್ರಂ ಶಿಖಾಂ ಛತ್ರಂ ಚ ಧಾರಿಣಮ್
ತೇಜಃಪುಂಜಮಯಂ ದೇವಂ ವಾಮನಂ ಪುರುಷಂ ಭಜೇ ।
ಶಂಖಚಕ್ರಧರಂ ದೇವಂ ವಿಭುಂ ತೇಜೋಮಯಂ ಪ್ರಭುಮ್
ತ್ರಿವಿಕ್ರಮಂ ವಾಸುದೇವಂ ಭಜೇ ತಂ ವಿಶ್ವತೋಮುಖಮ್
ಬಲಿದ್ವಿಷೇ ನಮಸ್ತುಭ್ಯಂ ಯಜ್ಞರೂಪಾಯ ವೇಧಸೇ
ವಾಮನಾಯ ಮಹಾಮಾಯಾವಂಚಿತಾಶೇಷಮಾನವ
ದೇವೇಶ್ವರಾಯ ದೇವಾಯ ದೇವಸಂಭೂತಿ-ಕಾರಿಣೇ
ಪ್ರಭವೇ ಸರ್ವದೇವಾನಾಂ ವಾಮನಾಯ ನಮೋನಮಃ ॥

ಮತ್ತು ವಾಮನನ ಸ್ತೋತ್ರಗಳನ್ನು ಪಠಿಸುತ್ತಾ ಯಥಾಶಕ್ತಿ ಪ್ರದಕ್ಷಿಣೆ ನಮಸ್ಕಾರಗಳನ್ನು ಹಾಕಬೇಕು.

* ಭಾದ್ರಪದ ಶುದ್ಧ ದ್ವಾದಶಿಯಂದು ವಾಮನ ರೂಪಿಯಾದ ಭಗವಂತನು ಅವತರಿಸಿದ್ದಾನೆ. ಆದ್ದರಿಂದ ವಾಮನನ ಆರಾಧನೆಯನ್ನು ಇಂದು ಮಾಡಬೇಕು. ಕಾರ್ತಿಕ ಶುದ್ಧ ಪ್ರತಿಪತ್ ದಿವಸ ಬಲಿಚಕ್ರವರ್ತಿಯನ್ನು ಮೆಟ್ಟಿ, ಅನುಗ್ರಹಿಸಿದ್ದಾನೆ. ಸಮಸ್ತ ಚತುರ್ದಶ ಲೋಕಗಳನ್ನು ದಾನವನ್ನಾಗಿ ಪಡೆಯಲು ತ್ರಿವಿಕ್ರಮನಾಗಿ ಬೆಳೆದು ಬಂದಿದ್ದಾನೆ. ಆದ್ದರಿಂದ ಬಲಿಪಾಡ್ಯದ ದಿವಸವೂ ಕೂಡ ಇದೇ ವಾಮನರೂಪಿಯಾದ

ಭಗವಂತನ ಆರಾಧನೆಯನ್ನು ಮಾಡಬೇಕು. ಚೈತ್ರಮಾಸದ ಶುಕ್ಲಪಕ್ಷದ ದ್ವಾದಶಿಯ ದಿವಸ ವಾಮನವ್ರತವನ್ನು ಮಾಡಬೇಕೆಂದು ವರಾಹಪುರಾಣವು ಹೇಳುತ್ತದೆ. ಅಂದು ಕೂಡ ವಾಮನನ ಆರಾಧನೆಯನ್ನು ಮಾಡಬೇಕು. ಹೀಗೆ ವರ್ಷದಲ್ಲಿ ಮೂರು ಬಾರಿ ವಾಮನನ ಆರಾಧನೆಯನ್ನು ವಿಶೇಷವಾಗಿ ಮಾಡಬೇಕು.

* ನಿತ್ಯವೂ ದೇವರ ಪೂಜೆಯನ್ನು ಮಾಡುವಾಗ ವಾಮನನ ಚಿಂತನೆ, ಧ್ಯಾನಾದಿಗಳು ಅತ್ಯವಶ್ಯವಾಗಿವೆ. ಐದನೆಯ ಆವರಣದಲ್ಲಿ ದಕ್ಷಿಣ ದಿಕ್ಕಿನಲ್ಲಿ ವಾಮನರೂಪಿಯಾದ ಭಗವಂತನು ನಿಂತಿದ್ದಾನೆ.

'ಕೌಪೀನಮೇಖಲಾಜಿನದಂಡಶಿಖಾಯಜ್ಞೋಪವೀತಧರಾಯ, ಶ್ಯಾಮಲ-ವರ್ಣಾಯ, ಈಶತ್‌ಕುಂಚಿತಸವ್ಯಾಂಘ್ರಿಭುಜಾಯ, ವಸುಂಧರಾಯಾಚನ ದಕ್ಷಿಣ-ಹಸ್ತಾಯ ಸುಗಂಧಾಸಹಿತಾಯ, ಶ್ರೀವಾಮನಾಯ ನಮಃ' 'ಕೌಪೀನ, ಮೇಖಲ, ಕೃಷ್ಣಾಜಿನ, ದಂಡ, ಕಮಂಡಲು, ಶಿಖಾ, ಯಜ್ಞೋಪವೀತ ಇವುಗಳನ್ನು ಧರಿಸಿರುವ, ನೀಲಮೇಘಶ್ಯಾಮನಾದ, ಎಡಬಗ್ಗಲಿನಲ್ಲಿ ಬಾಗಿದ, ಭೂಮಿಯನ್ನು ಪ್ರಾರ್ಥಿಸಲು ಕೈಯೊಡ್ಡಿರುವ, ಸುಗಂಧ ಎಂಬ ಲಕ್ಷ್ಮಿಯ ಜೊತೆ ನಿಂತಿರುವ ವಾಮನ -ನಿಗೆ ನಮಸ್ಕರಿಸುತ್ತೇನೆ' ನಿತ್ಯವೂ ಇದನ್ನು ಆವರಣ ಪೂಜೆಯಲ್ಲಿ ಪಠಿಸಬೇಕು.

* ಬೆಳಿಗ್ಗೆ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ವಾಮನನ ಆರಾಧನೆಯನ್ನು ವಿಶೇಷವಾಗಿ ಆಚರಿಸಬೇಕು.

* ವಾಸ್ತವಿಕವಾಗಿ ವಾಮನರೂಪಿಯಾದ ಭಗವಂತನು ಮಧ್ಯಾಹ್ನ ಕಾಲದಲ್ಲಿ ಅವತರಿಸುತ್ತಾನೆ. ದ್ವಾದಶಿಯಾದ್ದರಿಂದ ಬೆಳಿಗ್ಗೆಯಲ್ಲಿಯೇ ಅರ್ಘ್ಯಾದಿಗಳನ್ನು ನೀಡಬೇಕು.

* ಹೀಗೆ ದಶಾವತಾರಗಳಲ್ಲಿ ಒಂದಾದ ವಾಮನನ ಆರಾಧನೆಯನ್ನು ನಿತ್ಯವೂ ಮಾಡುತ್ತಾ, ದಧಿವಾಮನ ಜಯಂತಿಯ ದಿವಸ ವಿಶೇಷವಾಗಿ ಆಚರಿಸುತ್ತಾ, ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕು.

## ವಾಮನಜಯಂತೀಪೂಜಾ

ಮಮ ಇಹ ಜನ್ಮನಿ ಜನ್ಮಾಂತರೇ ಚ ಕೃತದೋಷಪ್ರಾಯಶ್ಚಿತ್ತಾರ್ಥಂ ಪುತ್ರ-

ಪೌತ್ರಾದ್ಯಭಿವೃದ್ಧ್ಯರ್ಥಂ ವಾಮನಜಯಂತೀವ್ರತಮಹಂ ಕರಿಷ್ಯೇ, ತದಂಗತಯಾ ವಿಹಿತಂ ಷೋಡಶೋಪಚಾರೈರ್ವಾಮನಪೂಜನಂ ಕರಿಷ್ಯೇ ।

ಧೃತ್ವಾ ಜಲಮಯಂ ರೂಪಂ ದೇವದೇವಸ್ಯ ಚಕ್ರಿಣಃ ।
ಬ್ರಹ್ಮಾಂಡಮುದರೇ ಯಸ್ಯ ಮಹಾಭೂತೈರಧಿಷ್ಠಿತಮ್ ॥
ಮಾಯಾವೀ ವಾಮನಃ ಶ್ರೀಶಃ ಸ ಆಯಾತು ಜಗತ್ಪತಿಃ ॥ ಆವಾಹನಮ್ ।

ಅಜೇಯಾಯ ಮಹೇಶಾಯ ಜಲಜಾಸ್ಯಾಯ ಶಂಸಿನೇ ।
ನಮಸ್ತೇ ಕೇಶವಾನಂತ ವಾಸುದೇವ ನಮೋಽಸ್ತು ತೇ ॥ ಧ್ಯಾನಮ್ ।

ಕಮಂಡಲುಶಿಖಾಧಾರೀ ಕುಬ್ಜರೂಪೋಽಸಿ ವಾಮನ ।
ಛತ್ರದಂಡಧರೋ ದೇವ ಪಾದ್ಯಂ ಗೃಹ್ಣ ನಮೋಽಸ್ತು ತೇ ॥ ಪಾದ್ಯಮ್ ।

ಸಹಸ್ರಶೀರ್ಷಾ ತ್ವಂ ದೇವ ಶ್ರವಣರ್ಕ್ಷಸಮನ್ವಿತಃ ।
ಅರ್ಘ್ಯಂ ಗೃಹಾಣ ದೇವೇಶ ರಮಯಾ ಸಹಿತೋ ಹರೇ ॥ ಅರ್ಘ್ಯಮ್ ।

ಕಮಂಡಲುಸ್ಥಿತಂ ಚಾರು ಶುದ್ಧಂ ಗಂಗೋದಕಂ ಮಯಾ ।
ದೇವೇಶಾಚಮನಾರ್ಥಂ ತದಾಹೃತಂ ಪ್ರತಿಗೃಹ್ಯತಾಮ್ ॥ ಆಚಮನೀಯಮ್ ।

ಓಂ ಜಲಜೋಪಮದೇಹಾಯ ಜಲಜಾಸ್ಯಾಯ ಶಂಖಿನೇ ।
ಜಲರಾಶಿಸ್ವರೂಪಾಯ ನಮಸ್ತೇ ಪುರುಷೋತ್ತಮ ॥ ಸ್ನಾನಮ್ ।

ಮಹಾಹವರಿಪುಸ್ಕಂಧಧೃತಚಕ್ರಾಯ ಚಕ್ರಿಣೇ ।
ನಮಃ ಕಮಲಕಿಂಜಲ್ಕಪೀತನಿರ್ಮಲವಾಸಸೇ ॥ ವಸ್ತ್ರಮ್ ।

ಶ್ರೀಖಂಡಚಂದನಂ ದಿವ್ಯಂ ... ಚಂದನಮ್ ।

ಮಲ್ಲಿಕಾಶತಪತ್ರಂ ಚ ಜಾತೀಪುಷ್ಪಂ ಸುಗಂಧಕಮ್ ।
ಚಂಪಕಂ ಜಲಜಂ ಚೈವ ಪುಷ್ಪಂ ಗೃಹ್ಣ ನಮೋಸ್ತು ತೇ ॥ ಪುಷ್ಪಮ್ ।

ಅಥಾಂಗಪೂಜಾ – ಮತ್ಸ್ಯಾಯ ನಮಃ ಪಾದೌ ಪೂಜಯಾಮಿ । ಕೂರ್ಮಾಯ – ಜಾನುನೀ । ವರಾಹಾಯ - ಗುಹ್ಯಮ್ । ನೃಸಿಂಹಾಯ - ನಾಭಿಮ್ । ವಾಮನಾಯ

- ಉರಃ। ರಾಮಾಯ - ಭುಜೌ। ಪರಶುರಾಮಾಯ - ಕರ್ಣೌ। ಕೃಷ್ಣಾಯ - ಮುಖಮ್। ಬೌದ್ಧಾಯ - ನೇತ್ರೇ। ಕಲ್ಕಿನೇ - ಶಿರಃ।

ಧೂಪೋಽಯಂ ದೇವದೇವೇಶ ಶಂಖಚಕ್ರಗದಾಧರ।
ಅಚ್ಯುತಾನಂತ ಗೋವಿಂದ ವಾಸುದೇವ ನಮೋಽಸ್ತು ತೇ॥ ಧೂಪಮ್।

ತ್ವಮೇವ ಪೃಥಿವೀ ಜ್ಯೋತಿರ್ವಾಯುರಾಕಾಶಮೇವ ಚ।
ತ್ವಮೇವ ಜ್ಯೋತಿಷಾಂ ಜ್ಯೋತಿರ್ದೀಪೋಽಯಂ ಪ್ರತಿಗೃಹ್ಯತಾಮ್॥ ದೀಪಮ್।

ಅನ್ನಂ ಚತುರ್ವಿಧಂ ಸ್ವಾ.. ನೈವೇದ್ಯಮ್। ಆಚಮನಮ್। ಕರೋದ್ವರ್ತನಮ್। ಫಲಮ್। ತಾಂಬೂಲಮ್। ದಕ್ಷಿಣಾಮ್। ನೀರಾಜನಮ್। ಮಂತ್ರಪುಷ್ಪಾಂಜಲಿಂ ಪ್ರದಕ್ಷಿಣಾಃ। ನಮಸ್ಕಾರಾನ್।

ಪ್ರಾರ್ಥನಾ –
ಜಗದಾದಿರ್ಜಗದ್ರೂಪೋ ಹ್ಯನಾದಿರ್ಜಗದಂತಕೃತ್।
ಜಲೇಶಯೋ ಜಗದ್ಯೋನಿಃ ಪ್ರೀಯತಾಂ ಮೇ ಜನಾರ್ದನಃ॥

ಅನೇಕಕರ್ಮನಿರ್ಬಂಧಧ್ವಸಿತಂ ಜಲಶಾಯಿನಮ್।
ನತೋಽಸ್ಮಿ ಮಥುರಾವಾಸಂ ಮಾಧವಂ ಮಧುಸೂದನಮ್॥

ನಮೋ ವಾಮನರೂಪಾಯ ನಮಸ್ತೇಽಸ್ತು ತ್ರಿವಿಕ್ರಮ।
ನಮಸ್ತೇ ಬಲಿಬಂಧಾಯ ವಾಸುದೇವ ನಮೋಸ್ತು ತೇ॥

ಪಾರಣೆಯ ದಿನ ಮೊಸರನ್ನ ಸಮೇತವಾಗಿ ವಸ್ತ್ರವೇಷ್ಟಿತವಾದ ಜಲಕುಂಭವನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು. ಛತ್ರಿಯನ್ನೂ, ಪಾದರಕ್ಷೆಯನ್ನೂ ದಾನ ಮಾಡ-ಬೇಕು. ಹೀಗೆ ಮಾಡಿದರೆ ದುರ್ಗತಿಯಾಗುವುದಿಲ್ಲ. ಜಲಕುಂಭದಲ್ಲಿ ಜನಾರ್ದನ ಪೂಜೆಯನ್ನು ಮಾಡಿ, ಅರ್ಘ್ಯ ಕೊಡಬೇಕು.

ಅರ್ಘ್ಯ ಮಂತ್ರ –
ದೇವೇಶ್ವರಾಯ ದೇವಾಯ ದೇವಸಂಭೂತಿಕಾರಿಣೇ।
ಪ್ರಭವೇ ಸರ್ವದೇವಾನಾಂ ವಾಮನಾಯ ನಮೋ ನಮಃ॥

ನಮಸ್ತೇ ಪದ್ಮನಾಭಾಯ ನಮಸ್ತೇ ಜಲಶಾಯಿನೇ ।
ತುಭ್ಯಮರ್ಘ್ಯಂ ಪ್ರಯಚ್ಛಾಮಿ ಬಾಲವಾಮನರೂಪಿಣೇ ॥

ನಮೋ ನಮಸ್ತೇ ಗೋವಿಂದ ಬುಧಶ್ರವಣಸಂಜ್ಞಕ ।
ಅಘೌಘಸಂಕ್ಷಯಂ ಕೃತ್ವಾ ಸರ್ವಸೌಖ್ಯಪ್ರದೋ ಭವ ॥
ಪ್ರೀಯತಾಂ ದೇವದೇವೇಶೋ ಮಮ ಸಂಶಯನಾಶನಃ ॥ ಎಂದು ಪ್ರಾರ್ಥಿಸಬೇಕು.

ಈ ಶ್ರವಣ ದ್ವಾದಶಿಯಂದು ವಾಮನ ಪ್ರೀತ್ಯರ್ಥವಾಗಿ ದ್ರವ್ಯದಾನ ಕೊಡ-ಬೇಕು.

ಅಥ ಶಿಕ್ಯದಾನಸಂಕಲ್ಪಃ – ಕೃತವಾಮನದ್ವಾದಶೀವ್ರತಾಂಗತ್ವೇನ ವಿಹಿತಂ ಶ್ರೀವಾಮನಪ್ರೀತ್ಯರ್ಥಂ ದಧ್ಯೋದನವಾರಿಧಾನೀಛತ್ರೋಪಾನತ್ಸಹಿತಂ ಶಿಕ್ಯದಾನಂ ಕರಿಷ್ಯೇ ಇತಿ ಸಂಕಲ್ಪ್ಯ, ಬ್ರಾಹ್ಮಣಪೂಜನಂ ಕೃತ್ವಾ – (ಹಗ್ಗದಿಂದ ಕಟ್ಟಿದ ದಧಿಪಾತ್ರೆಯನ್ನು ಶಿಕ್ಯ ಎಂದು ಕರೆಯುತ್ತಾರೆ)

ದಧ್ಯೋದನಯುತಂ ಶಿಕ್ಯಂ ವಾರಿಧಾನೀಯುತಂ ವಿಭೋ ।
ಛತ್ರೋಪಾನಹಸಂಯುಕ್ತಂ ಬ್ರಾಹ್ಮಣಾಯ ದದಾಮ್ಯಹಮ್ ॥

ವಾಮನೋ ಬುದ್ಧಿದಾತಾ ಚ ದ್ರವ್ಯಸ್ಥೋ ವಾಮನಃ ಸ್ವಯಮ್ ।
ವಾಮನಸ್ತಾರಕೋ ನಿತ್ಯಂ ತೇನ ವಿಷ್ಣವೇ ನಮಃ ॥

ಈ ಶ್ರವಣ ದ್ವಾದಶಿಯಂದು ಹೊಸಪಾತ್ರೆಯಲ್ಲಿ ಮೊಸರನ್ನವನ್ನು ತುಂಬಿಟ್ಟು ವಾಮನ ಪ್ರೀತ್ಯರ್ಥವಾಗಿ ಬ್ರಾಹ್ಮಣರಿಗೆ ದಾನ ಕೊಡಬೇಕು.

ದಾನಮಂತ್ರ – ವಾಮನಃ ಪ್ರತಿಗೃಹ್ಣಾತಿ ವಾಮನೋಽಹಂ ದದಾಮಿ ತೇ ।
ವಾಮನಂ ಸರ್ವತೋ ಭದ್ರಂ ದ್ವಿಜಾಯ ಪ್ರತಿಪಾದಯೇ ॥ ಅಥವಾ ವಾಮನಃ ಪ್ರತಿಗೃಹ್ಣಾತಿ ವಾಮನೋ ವೈ ದದಾತಿ ಚ । ವಾಮನಸ್ತಾರಕೋಭಾಭ್ಯಾಂ ವಾಮನಾಯ ನಮೋ ನಮಃ ॥

ಶಿಕ್ಯಮಮುಕಶರ್ಮಣೇ ಬ್ರಾಹ್ಮಣಾಯ ತುಭ್ಯಮಹಂ ಸಂಪ್ರದದೇ ಇತಿ ದದ್ಯಾತ್ । ಇತಿ ವಾಯನಮ್ ॥

## ಶ್ರೀದಧಿವಾಮನಸ್ತೋತ್ರಮ್

ಹೇಮಾದ್ರಿಶಿಖರಾಕಾರಂ ಶುದ್ಧಸ್ಫಟಿಕಸನ್ನಿಭಮ್ ।
ಪೂರ್ಣಚಂದ್ರನಿಭಂ ದೇವಂ ದ್ವಿಭುಜಂ ವಾಮನಂ ಸ್ಮರೇತ್ ॥ 1 ॥
ಪದ್ಮಾಸನಸ್ಥಂ ದೇವೇಶಂ ಚಂದ್ರಮಂಡಲಮಧ್ಯಗಮ್ ।
ಜ್ವಲತ್ಕಾಲಾನಲಪ್ರಖ್ಯಂ ತಟಿತ್ಕೋಟಿಸಮಪ್ರಭಮ್ ॥ 2 ॥
ಸೂರ್ಯಕೋಟಿ ಪ್ರತೀಕಾಂಶಂ ಚಂದ್ರಕೋಟಿಸುಶೀತಲಮ್ ।
ಚಂದ್ರಮಂಡಲಮಧ್ಯಸ್ಥಂ ವಿಷ್ಣುಮಚ್ಯುತಮವ್ಯಯಮ್ ॥ 3 ॥
ಶ್ರೀವತ್ಸಕೌಸ್ತುಭೋರಸ್ಕಂ ದಿವ್ಯರತ್ನವಿಭೂಷಿತಮ್ ।
ಪೀತಾಂಬರಮುದಾರಾಂಗಂ ವನಮಾಲಾವಿಭೂಷಿತಮ್ ॥ 4 ॥
ಸುಂದರಂ ಪುಂಡರೀಕಾಕ್ಷಂ ಕಿರೀಟೇನ ವಿರಾಜಿತಮ್ ।
ಷೋಡಶಸ್ತ್ರೀಯುತಂ ಸಮ್ಯಗಪ್ಸರೋಗಣಸೇವಿತಮ್ ॥ 5 ॥
ಋಗ್ಯಜುಃಸಾಮಾಥರ್ವಾಭಿರ್ಗೀಯಮಾನಂ ಜನಾರ್ದನಮ್ ।
ಚತುರ್ಮುಖಾದ್ಯೈರ್ದೇವೇಶೈಃ ಸ್ತೋತ್ರಾರಾಧನತತ್ಪರೈಃ ॥ 6 ॥
ಸನಕಾದ್ಯೈರ್ಮುನಿಗಣೈಃಸ್ತೂಯಮಾನಮಹರ್ನಿಶಮ್ ।
ತ್ರಿಯಂಬಕೋ ಮಹಾದೇವೋ ನೃತ್ಯತೇ ಯಸ್ಯ ಸನ್ನಿಧೌ ॥7॥
ದಧಿಮಿಶ್ರಾನ್ನಕವಲಂ ರುಕ್ಮಪಾತ್ರಂ ಚ ದಕ್ಷಿಣೇ ।
ಕರೇ ತು ಚಿಂತಯೇದ್ವಾಮೇ ಪೀಯೂಷಮಮಲಂ ಸುಧೀಃ ॥8॥
ಸಾಧಕಾನಾಂ ಪ್ರಯಚ್ಛಂತಮನ್ನಪಾನಮನುತ್ತಮಮ್ ।
ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಧ್ಯಾಯೇದ್ದೇವಮದೋಕ್ಷಜಮ್ ॥9॥
ಅತಿಸುವಿಮಲಗಾತ್ರಂ ರುಕ್ಮಪಾತ್ರಸ್ಥಮನ್ನಂ
ಸುಲಲಿತದಧಿಖಂಡಂ ಪಾಣಿನಾ ದಕ್ಷಿಣೇನ ।
ಕಲಶಮಮೃತಪೂರ್ಣಂ ವಾಮಹಸ್ತೇ ದಧಾನಂ
ತರತಿ ಸಕಲದುಃಖಾದ್ವಾಮನಂ ಭಾವಯೇದ್ಯಃ ॥ 10 ॥
ಕ್ಷೀರಮನ್ನಮನ್ನದಾತಾ ಲಭೇದನ್ನಾದ ಏವ ಚ ।

ಪುರಸ್ತಾದನ್ನಮಾಪ್ನೋತಿ ಪುನರಾವರ್ತಿವರ್ಜಿತಮ್ ।
ಆಯುರಾರೋಗ್ಯಮೈಶ್ವರ್ಯಂ ಲಭತೇ ಚಾನ್ನಸಪಂದಃ ॥ 11 ॥
ಇದಂ ಸ್ತೋತ್ರಂ ಪಠೇದ್ಯಸ್ತು ಪ್ರಾತಃ ಕಾಲೇ ದ್ವಿಜೋತ್ತಮಃ ।
ಅಕ್ಲೇಶಾದನ್ನಸಿದ್ಧ್ಯರ್ಥಂ ಜ್ಞಾನಸಿದ್ಧ್ಯರ್ಥಮೇವ ಚ ॥ 12 ॥
ಅಭ್ರಶ್ಯಾಮಃ ಶುಭ್ರಯಜ್ಞೋಪವೀತೀ ಸತ್ಕೌಪೀನಃ ಪೀತಕೃಷ್ಣಾಜಿನಶ್ರೀಃ ।
ಛತ್ರೀ ದಂಡೀ ಪುಂಡರೀಕಾಯತಾಕ್ಷಃ ಪಾಯಾದ್ದೇವೋ ವಾಮನೋ ಬ್ರಹ್ಮಚಾರೀ ॥
ಅಜಿನದಂಡಕಮಂಡಲುಮೇಖಲಾರುಚಿರಪಾವನವಾಮನಮೂರ್ತಯೇ ।
ಮಿತಜಗತ್ತ್ರಿತಯಾಯ ಜಿತಾರಯೇ ನಿಗಮವಾಕ್ಪಟವೇ ಬಟವೇ ನಮಃ ॥ 14 ॥
ಶ್ರೀಭೂಮಿಸಹಿತಂ ದಿವ್ಯಂ ಮುಕ್ತಾಮಣಿವಿಭೂಷಿತಮ್ ।
ನಮಾಮಿ ವಾಮನಂ ವಿಷ್ಣುಂ ಭುಕ್ತಿಮುಕ್ತಿಫಲಪ್ರದಮ್ ॥ 15 ॥
ವಾಮನೋ ಬುದ್ಧಿದಾತಾ ಚ ದ್ರವ್ಯಸ್ಥೋ ವಾಮನಃ ಸ್ಮೃತಃ ।
ವಾಮನಸ್ತಾರಕೋಭಾಭ್ಯಾಂ ವಾಮನಾಯ ನಮೋ ನಮಃ ॥ 16 ॥

॥ ಇತಿ ಶ್ರೀವಾಮನಪುರಾಣೇ ಶ್ರೀದಧಿವಾಮನಸ್ತೋತ್ರಮ್ ॥

## ಭಾದ್ರಪದ ॥ ಶುಕ್ಲ ॥ ಚತುರ್ದಶೀ

ಅನಂತಚತುರ್ದಶೀ – ಭಾದ್ರಪದಶುಕ್ಲಚತುರ್ದಶಿಯಂದು ಅನಂತವ್ರತ. ಹದಿನಾಲ್ಕು ಗಂಟಿನ ದಾರದಲ್ಲಿ ಅನಂತಪದ್ಮನಾಭನನ್ನು ಪೂಜಿಸಬೇಕು. ಹದಿನಾಲ್ಕು ವರ್ಷ ಪೂಜೆಯನ್ನು ಮಾಡಿ, ಉದ್ಯಾಪನೆಯನ್ನು ಮಾಡಬೇಕು. ಅನಂತದಾರವು ಕಳೆದುಹೋದರೆ ದ್ವಾದಶಾಕ್ಷರಮಂತ್ರದಿಂದ 108 ಆಜ್ಯ ಆಹುತಿಗಳನ್ನೂ , ಕೇಶವಾದಿ ನಾಮಗಳಿಂದ ಒಂದೊಂದು ಆಜ್ಯಾಹುತಿಯನ್ನು ಕೊಟ್ಟು ನೂತನ ದಾರವನ್ನು ಪೂಜಿಸಬೇಕು.

## ಅಗಸ್ತ್ಯಪೂಜಾ

ಸಿಂಹಸಂಕ್ರಮಣವಾದ ಮೇಲೆ ಇಪ್ಪತ್ತೊಂದು ದಿನಗಳಾದ ಮೇಲೆ ಅಥವಾ ಕನ್ಯಾಸಂಕ್ರಮಣಕ್ಕೆ 7 ದಿನಗಳ ಮುಂಚೆ ಅಗಸ್ತ್ಯೋದಯ. ಆಗ ಪೂರ್ಣಕುಂಭದಲ್ಲಿ

ಅಗಸ್ತ್ಯರನ್ನು ಆಹ್ವಾನಿಸಿ, ಪ್ರದೋಷಕಾಲದಲ್ಲಿ ಪೂಜಿಸಿ, ಅರ್ಘ್ಯವನ್ನು ಕೊಡಬೇಕು. ದ್ವಿಜರು ವೇದಮಂತ್ರದಿಂದ ಪೌರಾಣಿಕಮಂತ್ರದಿಂದ ಅರ್ಘ್ಯವನ್ನು ಕೊಡಬೇಕು.

## ಭಾದ್ರಪದ ॥ ಶುಕ್ಲ ॥ ಪೌರ್ಣಿಮಾ

ಪೌರ್ಣಮಾಸೀ ಶ್ರಾದ್ಧ – ಭಾದ್ರಪದಶುಕ್ಲಪೌರ್ಣಿಮಾದಂದು ಪ್ರಪಿತಾಮಹನಿಗಿಂತ ಹಿಂದಿನ ಮೂರು ಪಿತೃಗಳನ್ನೂ ಅವರ ಪತ್ನಿಯರನ್ನೂ ಆದರಂತೆ ಮಾತಾಮಹಾದಿತ್ರಯರು ಅವರ ಪತ್ನಿಯರನ್ನು ಉದ್ದೇಶಿಸಿ ಸದೈವ ಸಪಿಂಡ ಶ್ರಾದ್ಧವನ್ನು ಮಾಡಬೇಕು. ಅಥವಾ ಪ್ರಪಿತಾಮಹನ ಪಿತ್ರಾದಿತ್ರಯವನ್ನು ಉದ್ದೇಶಿಸಿ ಸತ್ಯವಸು-ಸಂಜ್ಞಕವಿಶ್ವೇದೇವಸಹಿತವಾಗಿ ನಾಂದೀಶ್ರಾದ್ಧವನ್ನು ಮಾಡಬೇಕು.

## (ಪ್ರೋಷ್ಠಪದಿ ಭಾಗವತ ಮಂಗಳ)

ಭಾದ್ರಪದ ಶುದ್ಧ ಪ್ರತಿಪದದಿಂದ ಪ್ರಾರಂಭಿಸಿದ ಪ್ರೋಷ್ಠಪದಿ ಭಾಗವತ ಮಂಗಳವನ್ನು ಈ ದಿನ ಮಾಡಬೇಕು. ಮಂಗಳಮಹೋತ್ಸವದ ಪ್ರಾತಃ ವೇದವ್ಯಾಸ-ಪೂಜಾ ಅಂಗವಾಗಿ ಪುರಾಣ ಹೇಳಿದ ಗ್ರಂಥಕ್ಕೆ ಪುಷ್ಪಾರ್ಚನೆ ಮಾಡಿ, ಮಂಗಳಾ-ರತಿಯನ್ನು ನೆರವೇರಿಸಿ, ಪುರಾಣ ಹೇಳಿದವರಿಗೆ ಮೈ-ಕೈಗಳಿಗೆ ಗಂಧವನ್ನು ಲೇಪಿಸಿ, ಹಣೆಗೆ ಅಕ್ಷತೆಯನ್ನು ಹಚ್ಚಿ, ಹೂವಿನ ಹಾರವನ್ನು ಹಾಕಿ, ಪುರಾಣಿಕರಿಗೆ ಒಂದು ಜೊತೆ ಧೋತ್ರ, ಒಂದು ಸೀರೆಯೊಂದಿಗೆ ಫಲತಾಂಬೂಲ, ಸಂಭಾವನೆಗಳನ್ನು ನೀಡುವುದು.

(ಚಾತುರ್ಮಾಸ್ಯ ಸಮಾಪ್ತಿ) - ಆಷಾಢ ಬಹುಳ ತ್ರಯೋದಶೀಯಿಂದ ಆಚರಿಸಿದ ಚಾತುರ್ಮಾಸ್ಯ ವ್ರತವು ಇಂದಿಗೆ ಕೊನೆಗೊಳ್ಳುತ್ತದೆಯಾದ್ದರಿಂದ ಸಂಕಲ್ಪಕ್ಕೆ ಕೂಡಿಸಿದ ರಾಯರನ್ನು ಚಾತುರ್ಮಾಸ್ಯ ಸಂಕಲ್ಪದಿಂದ ಎಬ್ಬಿಸಿ, ಸೀಮೋ-ಲ್ಲಂಘನವನ್ನು (ಸೀಮೋಲ್ಲಂಘನವೆಂದರೆ - ರಾಯರ ಉತ್ಸವ ಬೃಂದಾವನ, ಪ್ರಹ್ಲಾದರಾಜರ ವಿಗ್ರಹವನ್ನು ಪಲ್ಲಕ್ಕಿಯಲ್ಲಿ ಅಥವಾ ಡೋಲೋತ್ಸವದಲ್ಲಿ ಕೂಡಿಸಿ ಸಂಜೆ ಶ್ರೀಮಠದ ಹತ್ತಿರವಿರುವ ಬೇರೊಂದು ದೇವಾಲಯಕ್ಕಾಗಲೀ ಅಥವಾ ಆರಾಧನಾ ಮಹಾರಥೋತ್ಸವದ ರಾಜಬೀದಿಯಲ್ಲೇ ಆಗಲೀ ಪ್ರದಕ್ಷಿಣಾಕಾರವಾಗಿ ಹೋಗಿ ಶ್ರೀಮಠಕ್ಕೆ ವಾಪಸ್ಸು ಬರುವುದು. ದೇವಸ್ಥಾನಕ್ಕೆ ಹೋಗಿದ್ದರೆ ಅಲ್ಲಿಯ

ದೇವರ ಸನ್ನಿಧಾನದಲ್ಲಿ ದೇವರ ಉತ್ಸವವನ್ನು ಕೂಡಿಸಿ, ಫಲಸಮರ್ಪಣೆ - ಮಂಗಳಾರತಿಗಳನ್ನು ಮುಗಿಸಿಕೊಂಡು ಶ್ರೀಮಠಕ್ಕೆ ವಾಪಸ್ಸು ಬರಬೇಕು) ಮಾಡಬೇಕು. ನಿತ್ಯವಿಧಿಯಂತೆ ಬೆಳಿಗ್ಗೆಯಿಂದ ಎಲ್ಲಾ ವಿಧಿಗಳನ್ನು ಪೂರೈಸಿ, ಹಸ್ತೋದಕಕ್ಕೆ ಮುಂಚೆ ಈ ಕೆಳಗಿನ ಮಂತ್ರಗಳನ್ನು ಪಠಿಸಿ, ಚಾತುರ್ಮಾಸ್ಯವನ್ನು ಸಮಾಪ್ತಿಗೊಳಿಸಬೇಕು. ಚಾತುರ್ಮಾಸ್ಯದ ಪ್ರಾರಂಭದ ದಿನದಂದು ತಟ್ಟೆಯಲ್ಲಿ ಸಂಗ್ರಹಿಸಲಾಗಿದ್ದ ಎಲ್ಲ ವಸ್ತುಗಳನ್ನು ನೀರಿನಲ್ಲಿ (ನದಿಯಲ್ಲಿ) ವಿಸರ್ಜಿಸಬೇಕು. ಮಠಗಳಲ್ಲಿ ಹೀಗೆ ಮಾಡಿದರೆ ಸಾಕು.

**ಅನಂತನ ಹುಣ್ಣಿಮೆ** – ಭಾದ್ರಪದ ಶುಕ್ಲ ಪೂರ್ಣಿಮಾ ದಿನಕ್ಕೆ ಈ ಹೆಸರಿದೆ. ಉಮಾಮಹೇಶ್ವರ ವ್ರತವನ್ನು ಆಚರಿಸುವುದು ಇಂದೇ. ಅನೇಕ ಕಡೆಗಳಲ್ಲಿ ಈ ದಿನ ರಥೋತ್ಸವ ನಡೆಯುತ್ತದೆ.

## ಭಾದ್ರಪದ ॥ ಬಹುಳ ॥ ಪಾಡ್ಯ
## ಮಹಾಲಯ - ಪಿತೃಯಜ್ಞ (ಶ್ರೀವಿಶ್ವನಂದನತೀರ್ಥರು)
## ಜನನ - ಮರಣ ಕರ್ತವ್ಯಗಳು

ಯಾವುದೇ ವ್ಯಕ್ತಿಯ ಹುಟ್ಟಿನಿಂದ ಆರಂಭಿಸಿ ಮರಣದವರೆಗೂ ಅನೇಕ ಅವಶ್ಯವಾಗಿ ಮಾಡಬೇಕಾದ ಕರ್ತವ್ಯಗಳಿವೆ. ಅವುಗಳಲ್ಲಿ ಕೆಲವು ಜನಸಾಮಾನ್ಯರಿಗೆ ತಿಳಿದಿರುವುದಿಲ್ಲ. ಸಣ್ಣಸಣ್ಣ ಶಾಂತಿ-ಕರ್ಮಗಳನ್ನು ಮಾಡುವುದರಿಂದ ನಮಗೆ ಬರುವ ಅನೇಕ ದೋಷಗಳನ್ನು ನಿವಾರಿಸಿಕೊಳ್ಳಬಹುದು. ಹಾಗಾಗಿ ವ್ಯಕ್ತಿ ಹುಟ್ಟಿದಾಗ ಅಥವಾ ಮರಣಿಸಿದಾಗ ಮಾಡಬೇಕಾದ ಕರ್ತವ್ಯಗಳ ಬಗ್ಗೆ ಇಲ್ಲಿ ವಿವರಿಸಲಾಗಿದೆ.

**ಆಶೌಚ** – ಅಶುಚಿ ಎಂದು ಸೂಚಿಸುವ ಒಂದು ಬಗೆಯ ಪಾಪ (ಮೈಲಿಗೆ). ಅದೇ ಅರ್ಥದಲ್ಲಿ ಈಗ ಸೂತಕ ಪದ ಬಳಕೆಯಲ್ಲಿದೆ. ಕಾರಣಾನುಗುಣವಾಗಿ ಗೊತ್ತಾದ ಕಾಲದವರೆಗೆ ಮಾತ್ರ ಇರುತ್ತದೆ. ಆಶೌಚ (ಶಾವ) ಇರುವ ಕಾಲದಲ್ಲಿ ಪಿಂಡದಾನ, ಉದಕದಾನ ಮಾಡುತ್ತಾರೆ. ಆದರೆ ವೇದಾಧ್ಯಯನ ಮತ್ತು ಶ್ರೌತಸ್ಮಾರ್ತಕರ್ಮಗಳನ್ನು ಮಾಡಲು ಅರ್ಹತೆ ಇರುವುದಿಲ್ಲ. ಆಶೌಚ ಇರುವವರಿಗೆ ಸಂಬಂಧಪಟ್ಟ ಪದಾರ್ಥಗಳಿಗೂ ಶುದ್ಧಿ ಇರುವುದಿಲ್ಲ. ಆಶೌಚ ಕಣ್ಣಿಗೆ ಕಾಣು-

ವುದಿಲ್ಲ. ಆದರೂ ಕರ್ಮಾನರ್ಹತೆಯನ್ನುಂಟುಮಾಡುವ, ಜನಸಾಮಾನ್ಯರಲ್ಲೂ ಗೊತ್ತಾದ ಕಾಲದವರೆಗಿರುವ, ಶರೀರಗತವಾದ ಒಂದು ವಿಧದ ಮಾಲಿನ್ಯ. ಗೊತ್ತಾದ ಕಾಲ ಕಳೆದ ಮೇಲೆ ಸ್ನಾನಾದಿಗಳಿಂದ ಮಾಲಿನ್ಯ ಕಳೆದು ಕರ್ಮಾರ್ಹತೆ ಉಂಟಾಗುತ್ತದೆ. ಆಶೌಚದ ಕೊನೆಯಲ್ಲಿ ಶುದ್ಧಿಯಾಗಲು ಕೆಲವರಿಗೆ ಕ್ಷೌರವೂ ವಿಹಿತವಾಗಿದೆ. ಆಶೌಚದಲ್ಲಿ ಜನನ, ಮರಣ, ಆರ್ತವ, ಸಾಂಸರ್ಗಿಕ, ಸನ್ನಿಪಾತ-ಎಂದಿವೇ ಮೊದಲಾಗಿ ಅನೇಕ ಭೇದಗಳಿವೆ.

ಮಕ್ಕಳು ಹುಟ್ಟಿದರೆ ಬರುವುದು ಜನನಾಶೌಚ (ಸೂತಿಕಾಶೌಚ). ಇದಕ್ಕೆ ಪುರುಡು, ವೃದ್ಧಿ ಎಂಬ ಪದಗಳೂ ಬಳಕೆಯಲ್ಲಿವೆ. ಸಾವಿನಿಂದ ಬರುವುದು ಮರಣಾಶೌಚ (ಶಾವಾಶೌಚ). ಇದನ್ನೀಗ ಬಳಕೆಯಲ್ಲಿ ಕ್ಷಯ ಎನ್ನುತ್ತಾರೆ. ಈ ಎರಡು ವಿಧಗಳಲ್ಲೂ ಏಳು ತಲೆಮಾರಿನವರೆಗಿನ ದಾಯಾದಿಗಳಲ್ಲಿ ಬ್ರಾಹ್ಮಣರಿಗೆ ಹತ್ತು ದಿನಗಳು, ಕ್ಷತ್ರಿಯರಿಗೆ ಹನ್ನೆರಡು ದಿನಗಳು, ವೈಶ್ಯರಿಗೆ ಹದಿನೈದು ದಿನಗಳು, ಚತುರ್ಥವರ್ಣದವರಿಗೆ ಒಂದು ತಿಂಗಳು ಆಶೌಚಕಾಲವೆಂದು ಶಾಸ್ತ್ರದಲ್ಲಿ ಹೇಳಿದೆ. ಇದು ಆಶೌಚದ ಪರಮಾವಧಿ. ಜನನಾಶೌಚದಲ್ಲಿ ಗರ್ಭಸ್ರಾವನಿಮಿತ್ತ ಗರ್ಭಮಾಸಾನುಗುಣವಾಗಿ 4, 5, 6 ದಿನಗಳು ಆಶೌಚವೂ ಉಂಟು.

ಇದಕ್ಕಿಂತ ಕಡಿಮೆಯಾದುದು ಮೂರು ದಿನಗಳ ಆಶೌಚ. ಇದರಂತೆಯೇ ಪಕ್ಷಿಣೀ (ಒಂದೂವರೆ ದಿನಗಳು) ಮತ್ತು ಒಂದು ದಿನದ ಆಶೌಚವೂ ಇವೆ. ಅವೆರಡೂ ಶಾವಾಶೌಚ ದಲ್ಲಿ ಮಾತ್ರ. ಈ ನಿಯತಕಾಲಿಕವಲ್ಲದೆ ಕೇವಲ ಸ್ನಾನ ನಿಮಿತ್ತಕವಾದ ಆಶೌಚವೂ ಉಂಟು. ಇದರಲ್ಲಿ ಸ್ನಾನಮಾತ್ರದಿಂದ ಶುದ್ಧಿ. ಬಾಂಧವ್ಯ ದೂರವಾದಂತೆಲ್ಲ ಆಶೌಚಕಾಲ ಕಡಿಮೆಯಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಸ್ತ್ರೀ ಪುರುಷ ಭೇದದಿಂದಲೂ ಆಶೌಚಕಾಲ ಭಿನ್ನವಾಗುತ್ತದೆ. ಹಲ್ಲು ಹುಟ್ಟುವುದಕ್ಕಿಂತ ಮೊದಲು ಮಗು ಸತ್ತರೆ ತಂದೆತಾಯಿಗಳಿಗೆ ಪೂರ್ಣಕಾಲದ ಆಶೌಚ. ದಾಯಾದಿಗಳಿಗೆ ಸ್ನಾನದಿಂದ ಕೂಡಲೇ ಶುದ್ಧಿ. ಚೌಲಕಾಲದೊಳಗೆ ಮೃತನಾದರೆ ಒಂದು ದಿನದ ಆಶೌಚ. ಉಪನಯನದವರೆಗೆ ಮೂರು ದಿನಗಳ ಆಶೌಚ. ಅಲ್ಲಿಂದ ಮುಂದೆ ಹತ್ತುದಿನಗಳ ಆಶೌಚ. ಮರಣಾಶೌಚದಲ್ಲಿ ಇದರಂತೆಯೇ ಇನ್ನೂ ಹಲವು ಪ್ರಭೇದಗಳಿವೆ. ಗಂಡನಿಗೆ ಬಂದ ಆಶೌಚ ಹೆಂಡತಿಗೂ ಉಂಟು. ಆದರೆ ಹೆಂಡತಿಗೆ

ಬಂದ ಆಶೌಚ ನಿಯತವಾಗಿ ಗಂಡನಿಗೆ ಬರುವುದಿಲ್ಲ. ಸ್ತ್ರೀಯರಿಗೆ ವಿವಾಹಾನಂತರ ತಂದೆ ಕಡೆಯ ಬಂಧುಗಳ ಆಶೌಚ ಕಡಿಮೆಯಾಗುತ್ತದೆ. ಗಂಡನ ಬಂಧುಗಳ ಆಶೌಚ ಪೂರ್ಣವಾಗಿರುತ್ತದೆ.

ಜನನ ಅಥವಾ ಮರಣದ ಅರಿವು ಉಂಟಾಗುವವರೆಗೂ ಆಶೌಚ ಬರು-ವುದಿಲ್ಲ. ಜನನಾಶೌಚ ವಿಷಯ ಕಾಲ ಕಳೆದ ಮೇಲೆ ತಿಳಿದರೂ ಆಶೌಚ ಇರುವು-ದಿಲ್ಲ. ಮರಣಾಶೌಚದಲ್ಲಿ ಕಾಲ ಕಳೆದ ಮೇಲೂ ಆಶೌಚ ಉಂಟು, ಆದರೆ ಅವಧಿ ಕಡಿಮೆಯಾಗುತ್ತದೆ. ಹತ್ತು ದಿನಗಳ ಆಶೌಚದ ವಿಷಯವನ್ನು ಆ ಕಾಲ ಕಳೆದ ಮೇಲೆ ಮೂರು ತಿಂಗಳೊಳಗೆ ಕೇಳಿದರೆ ಮೂರು ದಿನಗಳೂ ಆರು ತಿಂಗಳೊಳಗೆ ಪಕ್ಷಿಣಿಯೂ, ವರ್ಷದೊಳಗೆ ಒಂದು ದಿನವೂ ಆಶೌಚ ಇರಬೇಕು. ವರ್ಷಾನಂತರ ಮರಣ ವಿಷಯ ತಿಳಿದರೆ ಸ್ನಾನಮಾತ್ರದಿಂದ ಶುದ್ಧಿ. ಮಗನನ್ನು ಬಿಟ್ಟು ಉಳಿದ ಸಪಿಂಡ ಬಂಧುಗಳಿಗೆ ಈ ಕ್ರಮ.

ಮೂರು ದಿನಗಳ ಆಶೌಚದಲ್ಲಿ ಆ ಕಾಲ ಕಳೆದ ಮೇಲೆ ಹತ್ತು ದಿವಸಗಳೊಳಗೆ ವಿಷಯ ತಿಳಿದರೆ ಒಂದು ದಿನವೂ ಪಕ್ಷಿಣಿಯಲ್ಲಿ ಒಂದು ಕಾಲವೂ ಆಶೌಚ. ಹತ್ತು ದಿವಸಗಳು ಕಳೆದ ಬಳಿಕ ಕೇವಲ ಸ್ನಾನ ಮಾತ್ರ. ದಿನಾಶೌಚದಲ್ಲಿಯೂ ನಿಯತ ಕಾಲಾನಂತರ ತಿಳಿದ ಆಶೌಚಕ್ಕೆ ಸ್ನಾನದಿಂದ ಶುದ್ಧಿ.

ಒಂದು ಜನನಾಶೌಚ ಮಧ್ಯದಲ್ಲಿ ಇನ್ನೊಂದು ಜನನಾಶೌಚ ಬಂದರೆ ಎರಡನೆಯ ಜನನನಿಮಿತ್ತ ಪ್ರತ್ಯೇಕವಾಗಿ ಆಶೌಚ ಇರಬೇಕಾಗಿಲ್ಲ. ಮೊದಲನೆಯ ಆಶೌಚದಿಂದ ಅದೂ ಹೋಗುತ್ತದೆ. ಜನನಾಶೌಚ ಮಧ್ಯದಲ್ಲಿ ಶಾವಾಶೌಚ ಬಂದರೂ ಶಾವಾಶೌಚ ಮಧ್ಯದಲ್ಲಿ ಜನನಾಶೌಚ ಬಂದರೂ ಶಾವಾಶೌಚ ಕಾಲದಿಂದಲೇ ಶುದ್ಧಿ. ಶಾವಾಶೌಚ ಮಧ್ಯದಲ್ಲಿ ಸಮಾನ ಕಾಲದ ಮತ್ತೊಂದು ಶಾವಾಶೌಚ ಬಂದರೆ ಆಗ ಮೊದಲಿನ ಶಾವಾಶೌಚ ಕಾಲದಿಂದಲೇ ಶುದ್ಧಿ. ಅಧಿಕ - ಕಾಲದ ಆಶೌಚದ ಮಧ್ಯದಲ್ಲಿ ಅಲ್ಪಕಾಲದ ಆಶೌಚ ಬಂದರೆ ಅಧಿಕ ಕಾಲದ ಆಶೌಚದೊಡನೆಯೇ ಮತ್ತೊಂದು ಆಶೌಚ ಕಳೆದು ಹೋಗುತ್ತದೆ. ತಂದೆ-ತಾಯಿ ನಿಮಿತ್ತಕವಾದ ಆಶೌಚದಲ್ಲಿ ಈ ನಿಯಮ ಕೂಡುವುದಿಲ್ಲ.

ಆಶೌಚಾಂತ್ಯಸ್ನಾನವನ್ನು ಸಂಗಮಕಾಲದಲ್ಲಿ ಎಂದರೆ, ಸೂರ್ಯೋದಯ ಕಾಲಕ್ಕೆ 2 ಗಂ 24 ನಿ. ಮೇಲೆ 4 ಗಂ 48 ನಿ. ಒಳಗೆ ಮಾಡಬೇಕು.

ಆಶೌಚದಲ್ಲಿ ದೇವಾಲಯಕ್ಕೆ ಹೋಗಕೂಡದು; ಆತ ನಮಸ್ಕಾರಕ್ಕೆ ಅನರ್ಹ. ಪೂಜೋಪಯುಕ್ತಪುಷ್ಪ ಮೊದಲಾದುವನ್ನೂ ಮನೆಯಲ್ಲಿ ಉಪಯೋಗಿಸುತ್ತಿರುವ ಮಣ್ಣಿನ ಪಾತ್ರೆಗಳನ್ನೂ ಮುಟ್ಟಕೂಡದು. ಅಭ್ಯಂಗಸ್ನಾನ ಕೂಡದು. ತಾಂಬೂಲ, ಗಂಧ ಮೊದಲಾದುವನ್ನು ಉಪಯೋಗಿಸಬಾರದು.

ವೈಯಕ್ತಿಕ ಆಶೌಚಕಾಲದ ಬಗ್ಗೆ ಧರ್ಮಶಾಸ್ತ್ರದಲ್ಲಿ ವಿವರವಾಗಿ ಉಕ್ತವಾಗಿದೆ.

ರಾತ್ರಿಕಾಲದಲ್ಲಿ ಜನನ ಮರಣಗಳು ಸಂಭವಿಸಿದರೆ ಸಾಮಾನ್ಯವಾಗಿ 12 ಗಂ. ಒಳಪಟ್ಟು ಅದೇ ದಿವಸದಿಂದ, 2 ಗಂ. 30 ನಿ. ಮೇಲ್ಪಟ್ಟು ಮಾರನೆಯ ದಿನದಿಂದ ಆಶೌಚ ದಿನಸಂಖ್ಯೆಯನ್ನು ಗಣಿಸಲು ಪ್ರಾರಂಭಿಸಬೇಕು. ಈ ಎರಡು ಕಾಲಗಳ ಮಧ್ಯದಲ್ಲಿ ಸಂಭವಿಸುವುದರ ದಿನಗಣನೆಯನ್ನು ಲೆಕ್ಕದಿಂದ ಗೊತ್ತುಪಡಿಸಬೇಕು. ಆ ಗೊತ್ತಾದ ದಿನದ ಹಗಲಿನ ಕಾಲ ಪ್ರಮಾಣವನ್ನು 24 ಗಂಟೆಗಳಲ್ಲಿ ಕಳೆದುಳಿದುದು ರಾತ್ರಿ ಪ್ರಮಾಣ. ಈ ಕಾಲದಲ್ಲಿ ಮೂರು ಗಂಟೆ ಕಾಲವನ್ನು ಕಳೆದು ಉಳಿದುದರ ಮೂರನೆಯ ಎರಡು ಭಾಗಕ್ಕೆ 11/2 ಗಂಟೆ ಕಾಲವನ್ನೂ ಹಗಲಿನ ಕಾಲ-ಪ್ರಮಾಣವನ್ನೂ ಕೂಡಿಸಿ ಬರುವ ಕಾಲದಿಂದ ಮುಂದಿನದು ಮಾರನೆಯ ದಿನದ ಗಣನೆಗೆ ಸೇರುತ್ತದೆ. ಈ ಕಾಲಗಣನೆಯಂತೆ ಅರ್ಧ ರಾತ್ರಿಯಲ್ಲಿ ಸಂಭವಿಸುವ ಜನನ ಮರಣಗಳ ದಿನವನ್ನು ನಿಷ್ಕರ್ಷಿಸಬೇಕು. ರಜಸ್ವಲಾಶೌಚ : ಹೆಂಗಸರು ಮುಟ್ಟಾದ ದಿನದಿಂದ ಮೂರು ದಿನಗಳ ಕಾಲ ಇರುವ ಮೈಲಿಗೆ. ಮುಟ್ಟಾದ ದಿನದಿಂದ 18ನೆಯ ದಿನ ಮತ್ತೆ ಮುಟ್ಟಾದರೆ 1 ದಿನವೂ 19ನೆಯ ದಿನ ಆದರೆ 2 ದಿನಗಳೂ ಅಲ್ಲಿಂದ ಮುಂದೆ 3 ದಿನಗಳೂ ಆಶೌಚ ಇರುತ್ತದೆ. ಆ ಕಾಲ ಕಳೆದ ಮೇಲೆ ಸ್ನಾನದಿಂದ ಶುದ್ಧಿ.

ಅನ್ಯ ಸಂಪರ್ಕದಿಂದ ಬರುವ ಆಶೌಚ ಸಾಂಸರ್ಗಿಕ. ಆಶೌಚ ಮಧ್ಯದಲ್ಲಿ ಮತ್ತೊಂದು ಆಶೌಚ ಬರುವುದು ಸನ್ನಿಪಾತ.

ಪುರುಷನಿಗೆ ಸಂಸರ್ಗಾಶೌಚ ಬಂದರೆ ಅದು ಅವನಿಗೆ ಮಾತ್ರ. ಅವನ ಹೆಂಡತಿಗಾಗಲೀ ಸಂಬಂಧಪಟ್ಟ ಪದಾರ್ಥಗಳಿಗಾಗಲೀ ಆಶೌಚ ಇಲ್ಲ. ಹೆಂಡತಿಗೆ ವಿಷಯ ತಿಳಿದು ಆಶೌಚ ಕಳೆದ ಮೇಲೆ ಕಾಲಾನಂತರದಲ್ಲಿ ಗಂಡನಿಗೆ ಅದೇ ವಿಷಯ ತಿಳಿದು ಆಶೌಚವಿರುವ ಸನ್ನಿವೇಶದಲ್ಲಿ ಮತ್ತೆ ಆಕೆಯೂ ಆಶೌಚ ಇರಬೇಕಾಗಿಲ್ಲ.

## ಪಿತೃಯಜ್ಞ

ನಮ್ಮ ತಂದೆ ತಾಯಿಗಳು ನಮಗೆ ಜನ್ಮವನ್ನು ಕೊಟ್ಟಿರುತ್ತಾರೆ. ಆದರಿಂದಾಗಿ ನಮಗೆ ಅವರ ಋಣವು ಗಂಟು ಬಿದ್ದಿದೆ. ನಾವು ಸರಿಯಾದ ಮಕ್ಕಳೆನಿಸಿಕೊಂಡು ಅವರ ಋಣವನ್ನು ಪರಿಹಾರಮಾಡಿಕೊಳ್ಳಬೇಕಾದರೆ,

1. ಅವರು ಬದುಕಿದ್ದಾಗ ಅವರು ಹೇಳಿದಂತೆ ಕೇಳಬೇಕು.

2. ನಾವು ಯೋಗ್ಯವಾದ ಮಕ್ಕಳನ್ನು ಪಡೆದು ವಂಶವನ್ನು ಮುಂದುವರೆಸಬೇಕು.

3. ತಂದೆ, ತಾಯಿಗಳು ಕಾಲವಾದ ನಂತರ ಕಾಲಕಾಲದಲ್ಲಿ ಅವರಿಗೆ ಮಾಡಬೇಕಾದ ಶ್ರಾದ್ಧಾದಿಗಳನ್ನು ಮಾಡಬೇಕು.

## ಮುಮೂರ್ಷುಪಿತೃಕನ ಕರ್ತವ್ಯ

ಈ ಪ್ರಬಂಧದಲ್ಲಿ ತಂದೆ ಅಥವಾ ತಾಯಿಯೆಂದು ಬಿಡಿಸಿ ಹೇಳದೇ ಸಾಮಾನ್ಯವಾಗಿ ಪಿತೃಶಬ್ದವನ್ನು ಹಾಕಿದರೆ ಆದರಿಂದ ತಂದೆ-ತಾಯಿ ಇಬ್ಬರನ್ನೂ ಇಟ್ಟುಕೊಳ್ಳಬೇಕು. ಮುಮೂರ್ಷು ಎಂದರೆ ಮರಣವು ಹತ್ತಿರ ಬಂದಿರುವವನು ಎಂದರ್ಥ. ಮುಮೂರ್ಷುಪಿತೃಕ ಎಂದರೆ ಯಾರ ಪಿತೃಗಳಿಗೆ ಮರಣವು ಹತ್ತಿರ ಬಂದಿದೆಯೋ ಅಂತಹ ಮಗ ಎಂದರ್ಥ. ತಂದೆ-ತಾಯಿಗಳ ಮರಣವು ಹತ್ತಿರ ಬಂದಿದ್ದಾಗ ಮಗನು ಏನು ಮಾಡಬೇಕೆಂಬ ವಿಚಾರ.

ಸಾಮಾನ್ಯವಾಗಿ ತಂದೆ- ತಾಯಿಗಳು ಸಾಯುವ ಕಾಲ ಹತ್ತಿರ ಬಂದಾಗ ಔಷಧ ಪಥ್ಯ ಮಾಡಬೇಕು ಎಂದು ಜನಗಳು ತಿಳಿದಿದ್ದಾರೆ. ಪಿತೃಭಕ್ತಿಯುಳ್ಳ ಮಕ್ಕಳು ತಾವೇ ತಂದೆ-ತಾಯಿಗಳ ಸೇವೆ ಮಾಡಿದರೆ ಭಕ್ತಿ ಇಲ್ಲದೇ ಇದ್ದವರು ತಂದೆ-ತಾಯಿಗಳನ್ನು ವೃದ್ಧಾಶ್ರಮಕ್ಕೆ ಸೇರಿಸುವುದು ಕಂಡು ಬರುತ್ತಿದೆ. ಇದು ಸರಿಯಲ್ಲ. ತಂದೆ-ತಾಯಿಗಳು ನಮ್ಮನ್ನು ಹೆತ್ತು, ಹೊತ್ತು, ಸಾಕಿ, ಸಲಹಿದ್ದಕ್ಕೆ ಪಿತೃಋಣವನ್ನು ತೀರಿಸೋಣ ಎಂಬ ಭಾವನೆಯಿಂದಲಾದರೂ ನಾವೇ ಕೈಯಾರ ಅವರ ಸೇವೆ ಮಾಡಬೇಕು. ಆಳನ್ನು ಇಟ್ಟು ಮಾಡಿಸಬಾರದು. ಔಷಧ, ಪಥ್ಯ ಕೊಡಿಸುವ ಲೌಕಿಕವಾದ ಹೊಣೆ ಒಂದು ಕಡೆಯಾದರೆ ವೈದಿಕ ಹೊಣೆಗಾರಿಕೆ ಬೇರೆ ಇದೆ. ಅದನ್ನು ತಿಳಿಸುವ ಪ್ರಯತ್ನ ಇಲ್ಲಿ ಮಾಡುತ್ತೇವೆ.

ಪಿತೃಗಳು ಸಾಯುವ ಕಾಲ ಹತ್ತಿರ ಬಂದಿದೆ ಎಂದು ಮೊದಲು ಪತ್ತೆ ಮಾಡಿ-ಕೊಳ್ಳಬೇಕು. ಇದ್ದಕ್ಕಿದ್ದಂತೆ ಮರಣ ಬಂದರೆ ಏನೂ ಮಾಡಲು ಸಾಧ್ಯವಿಲ್ಲ. ಆದರೆ ಪ್ರಾಯಃ ಸೂಚನೆ ಇಲ್ಲದೇ ಮರಣವು ಬರುವುದಿಲ್ಲ. ಸಂಚಾರ ಮಾಡುತ್ತಿರುವ ರೈಲುಬಂಡಿ ನಿಲ್ಲಬೇಕಾದರೆ ಅದಕ್ಕೆ ಸೂಚನೆಗಳಿವೆ. ಕೈಮರ ಬೀಳುತ್ತದೆ. ಪೀಪಿ ಕೂಗುತ್ತದೆ. ಕೆಂಪು ಬಾವುಟ ಕಾಣಿಸುತ್ತದೆ. ಅದರಂತೆ ದೇಹದ ಯಾತ್ರೆ ನಿಲ್ಲುವುದು ಹತ್ತಿರ ಬಂದಾಗಲೂ ಇದಕ್ಕೆ ಸದೃಶವಾದ ಸೂಚನೆಗಳಿವೆ. ಅಲ್ಲಿ ಕೈಮರ ಬಿದ್ದಂತೆ ಇಲ್ಲಿ ಹಲ್ಲು ಬೀಳುತ್ತದೆ. ಅಲ್ಲಿ ಪೀಪಿ ಕೂಗಿದಂತೆ ಇಲ್ಲಿ ಉಸಿರು ಸುಯ್ ಸುಯ್ ಶಬ್ದ ಮಾಡುತ್ತದೆ. ಅಲ್ಲಿ ಕೆಂಪು ಬಾವುಟ ಕಂಡಂತೆ ಇಲ್ಲಿ ಬಿಳಿಯ ಬಾವುಟ ಕಾಣುತ್ತದೆ (ಕೂದಲು ನರೆಯುತ್ತದೆ). ರೈಲು ನಿಲ್ಲುತ್ತಿದೆ ಎಂಬ ಸೂಚನೆ ಬಂದಾಗ ಗಂಟುಮೂಟೆ ಸಿದ್ಧ ಮಾಡಿಕೊಂಡು ಇಳಿಯುವ ಪ್ರಯತ್ನ ಮಾಡುವಂತೆ ದೇಹವು ನಿಲ್ಲುವ ಹೊತ್ತು ಬಂದಾಗ ಪುಣ್ಯದ ಗಂಟನ್ನು ಕಟ್ಟಿಕೊಂಡು ದೇಹವನ್ನು ಬಿಡುವ ಪ್ರಯತ್ನ ಮಾಡಬೇಕು. ಈ ಪ್ರಯತ್ನವನ್ನು ಪಿತೃಗಳು ಸ್ವಯಂ ಮಾಡಲು ಅಸಮರ್ಥ-ರಾದಾಗ ಸತ್ಪುತ್ರನು ಅವರಿಂದ ಆ ಕೆಲಸ ಮಾಡಿಸಬೇಕು. ಅಂದರೆ, ವಯಸ್ಸಾದ ತಂದೆತಾಯಿಗಳಿಗೆ ಪುಣ್ಯಕ್ಷೇತ್ರಗಳ ದರ್ಶನ, ಗಂಗಾದಿಪುಣ್ಯತೀರ್ಥಗಳ ಸ್ನಾನ, ಭಾಗವತಾದಿ ಕಥಾಶ್ರವಣ ಇವುಗಳಿಗೆ ಅನುಕೂಲ ಮಾಡಿಕೊಡುವುದು. ಅದು (ಅವರಿಗೆ) ಸ್ವಲ್ಪ ಶಕ್ತಿಯಿದ್ದಾಗ ಮಾಡಬಹುದಾದ ಮತ್ತು ಮಾಡಬೇಕಾದ ಕಾರ್ಯ.

## ಮರಣಸೂಚನೆಗಳು

ಪ್ರಾಯಃ ಮರಣಕ್ಕೆ ಸೂಚನೆಗಳು ಬರುತ್ತವೆ ಎಂದು ಹಿಂದೆ ಹೇಳಿದೆ. ಇಂತಹ ಸೂಚನೆಗಳು ಎಚ್ಚರದಲ್ಲೂ ಬರಬಹುದು. ಅಥವಾ ಸ್ವಪ್ನದಲ್ಲೂ ಬರಬಹುದು. ಎಚ್ಚರದಲ್ಲಿ ಬರುವ ಕೆಲವು ಸೂಚನೆಗಳು ಹೀಗಿವೆ. (ಭಾಗ. 10-42-25ರಿಂದ 29ರವರೆಗೆ)

1. ಕಿವಿಯನ್ನು ಮುಚ್ಚಿಕೊಂಡಾಗ ಸಾಮಾನ್ಯವಾಗಿ ಗಂಟೆ ಬರಿಸುವಂತೆ ಅಥವಾ ಗುಯ್ ಎಂದು ಶಬ್ದ ಕೇಳಿಸುತ್ತದೆ. ಇದಕ್ಕೆ ಪ್ರಾಣಘೋಷ ಎನ್ನುತ್ತಾರೆ. ಈ ಪ್ರಾಣ-ಘೋಷವು ಕೇಳದಿದ್ದರೆ ಅದು ಮರಣವು ಹತ್ತಿರ ಬಂದಿದೆ ಎನ್ನುವುದಕ್ಕೆ ಸೂಚಕ.

2. ತನ್ನ ನೆರಳಿನಲ್ಲಿ ತನ್ನ ತಲೆ ಕಾಣಿಸದೇ ಇರುವುದು.

3. ಮರವು ಚಿನ್ನದಂತೆ ಹೊಳೆಯುವಂತೆ ಕಾಣುವುದು.

4. ಸೂರ್ಯನು ಚಂದ್ರನಂತೆ ತಂಪಾಗಿ ಕಾಣುವುದು.

5. ತನ್ನ ನೆರಳಿನಲ್ಲಿ ತೂತು ಇರುವಂತೆ ಕಾಣುವುದು.

6. ಸೂರ್ಯನನ್ನು ನೋಡಿದಾಗ ಮಧ್ಯೆ ತೂತು ಇರುವಂತೆ ಕಾಣುವುದು.

7. ಪೀಠದಲ್ಲಿಟ್ಟಿರುವ ದೇವರ ಪ್ರತಿಮೆಗಳು ಇದ್ದಕ್ಕಿದ್ದಂತೆ ಬೀಳುವುದು.

8. ಮನೆಯ ಅಂಗಳದಲ್ಲಿರುವ ಕಳಶಪ್ರಾಯವಾದ ಮರಗಳು ಮುರಿದು ಬೀಳುವುದು.

9. ಮನೆಯ ಒಳಗೆ ಅರಣ್ಯಮೃಗಗಳು (ನರಿ ಮೊದಲಾದ್ದು) ಅಥವಾ ಅರಣ್ಯ ಪಕ್ಷಿಗಳು (ಗೂಬೆ ಮೊದಲಾದವು) ಪ್ರವೇಶ ಮಾಡುವುದು.

10. ಕಾಗೆಗಳ ಅಥವಾ ಹಾವುಗಳ ಮೈಥುನವನ್ನು ನೋಡುವುದು.

ಇವೇ ಮೊದಲಾದವುಗಳು. ಇಂಥಾ ಕೆಟ್ಟ ಸೂಚನೆಗಳು ಬಂದಾಗ ಶಾಂತಿ-ಮಾಡುವುದರಿಂದ, ಅಪಮರಣದ ಸೂಚನೆಯಾಗಿದ್ದರೆ ಅದರ ಪರಿಹಾರ ಆಗುತ್ತದೆ. ಕಾಕಮೈಥುನಶಾಂತಿ ಮೊದಲಾದ ಪ್ರತ್ಯೇಕಶಾಂತಿಗಳಲ್ಲದೇ ''ಸರ್ವಕೌತುಕಶಾಂತಿ'' ಎಂಬ ಸಾಮಾನ್ಯಶಾಂತಿಯೂ ಇದೆ. ಇವುಗಳ ವಿವರಣೆಯನ್ನು ಜ್ಯೋತಿಷ್ಕರಿಂದ ಹಾಗೂ ಧರ್ಮಶಾಸ್ತ್ರಜ್ಞರಿಂದ ತಿಳಿಯಬೇಕು.

ಕೆಲವೊಂದು ಸ್ವಪ್ನಸೂಚನೆಗಳು ಹೀಗಿವೆ –

1. ದಿಗಂಬರನಾಗಿ ಮೈಗೆ ಎಣ್ಣೆಯನ್ನು ಹಚ್ಚಿಕೊಂಡು ದಕ್ಷಿಣದಿಕ್ಕಿಗೆ ಹೋದಂತೆ ಕಾಣುವುದು.

2. ಪಾರಿವಾಳವು ಬೆಂಕಿಯಲ್ಲಿ ಕಾಲಿಟ್ಟಂತೆ ಕಾಣುವುದು.

3. ಕೋತಿಯು ತನ್ನನ್ನು ಕಚ್ಚಿದಂತೆ ಕಾಣುವುದು.

4. ಜೇನುತುಪ್ಪದಲ್ಲಿ ಕಡುಬನ್ನು ಅದ್ದಿಕೊಂಡು ತಿನ್ನುವಂತೆ ಕಾಣುವುದು.

5. ಕೆಂಪುಹೂವಿನ ಮಾಲಿಕೆಯನ್ನು ಹಾಕಿಕೊಳ್ಳುವುದು.

6. ಕಾಡುಹಂದಿ ಅಥವಾ ಕಾಡು ಎಮ್ಮೆಯನ್ನು ಕಾಣುವುದು.

7. ಕಪ್ಪುಹಲ್ಲು ಇರುವ ಕಪ್ಪು ಪುರುಷನನ್ನು ಕಾಣುವುದು.

8. ಕಮಲದ ದಂಟನ್ನು ತಿನ್ನುವಂತೆ ಕಾಣುವುದು.

ಇವೇ ಮೊದಲಾದ ಸ್ವಪ್ನಸೂಚನೆಗಳು ಬಂದಾಗ ರಾತ್ರೀಸೂಕ್ತದಿಂದ ಪಾಯಸ ಹೋಮ ಮಾಡಬೇಕು. ಸನ್ಯಾಸಿಗಳಾದರೆ ಮೂರಾವರ್ತಿ ರಾತ್ರೀಸೂಕ್ತವನ್ನು ಪಾರಾಯಣ ಮಾಡಬೇಕು. ಇದರಿಂದ ಅಪಮೃತ್ಯು ಆಗಿದ್ದಲ್ಲಿ ತಪ್ಪುತ್ತದೆ. ಕಾಲಮೃತ್ಯು ಆದರೆ ತಪ್ಪುವುದಿಲ್ಲ. ಆದರೆ ಮುಂದೆ ಒಳ್ಳೆ ಗತಿಯು ದೊರೆಯುತ್ತದೆ. (ಐತರೇಯ ಭಾಷ್ಯ).

## ಪಿತೃಗಳು ಮರಣಶಯ್ಯೆಯಲ್ಲಿರುವಾಗ

ಪಿತೃಗಳ ಮರಣವು ಅತ್ಯಂತ ಹತ್ತಿರ ಬಂದಿರುವಾಗ ಹೆದರಬಾರದು. ದುಃಖ-ದಿಂದ ಅಳಬಾರದು. ಏಕೆಂದರೆ, ಮರಣವನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ. ದೇಹ ಸಾಯುವುದು ನಿಶ್ಚಯ. ಜೀವ ಸಾಯುವುದೇ ಇಲ್ಲ. ಯಾವುದನ್ನು ತಪ್ಪಿಸಲು ಸಾಧ್ಯವಿಲ್ಲವೋ ಆ ವಿಷಯದಲ್ಲಿ ದುಃಖಪಟ್ಟು ಏನೂ ಪ್ರಯೋಜನವಿಲ್ಲ. (ಭ.ಗೀ.2) ಆದ್ದರಿಂದ ಇವರು ಮರಣ ಹೊಂದಿದರೆ ನಮಗೇನು ಗತಿ ಎಂಬ ಚಿಂತೆಯನ್ನು ಬಿಟ್ಟು ಅವರಿಗೆ ಸದ್ಗತಿಯು ಹೇಗೆ ಆದೀತು? ಎಂದು ಚಿಂತಿಸಬೇಕು.

ಒಬ್ಬ ಮನುಷ್ಯನ ಜನ್ಮಸ್ಥಳವು ಇಡೀ ಜನ್ಮದ ಆಗುಹೋಗುಗಳಿಗೆ ತನ್ನ ಪರಿಣಾಮವನ್ನು ಬೀರುತ್ತದೆ. ಅದರಂತೆ ಒಬ್ಬ ವ್ಯಕ್ತಿಯ ಮರಣಸ್ಥಳವು ಆ ವ್ಯಕ್ತಿಯ ಮುಂದಿನ ಗತಿಯ ಮೇಲೆ ಪರಿಣಾಮವನ್ನು ಉಂಟು ಮಾಡುತ್ತದೆ. ಈ ದೃಷ್ಟಿಯಿಂದ ಪಿತೃಗಳು ಶುದ್ಧವಾದ ಸ್ಥಳದಲ್ಲಿ ಮರಣ ಹೊಂದುವ ವ್ಯವಸ್ಥೆ ಮಾಡಬೇಕು. ಆಸ್ಪತ್ರೆಗಳು ಅಶುಚಿ ಎಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಆದ್ದರಿಂದ ಆಸ್ಪತ್ರೆಯಲ್ಲಿ ಮರಣ ಹೊಂದುವುದನ್ನು ಪ್ರಯತ್ನಪೂರ್ವಕವಾಗಿ ತಪ್ಪಿಸಬೇಕು. ಇದು ಹೇಗೆ ಸಾಧ್ಯ ಎಂದರೆ ನಂಬಿಕಸ್ಥರಾದ ವೈದ್ಯರಿಂದ ಆ ರೋಗಿಯ ಉಳಿವಿನ ಬಗ್ಗೆ ವಿಚಾರಣೆ ಮಾಡಬೇಕು. ವಯಸ್ಸೂ ಆಗಿದ್ದು, ಉಳಿಯುವ ಅವಕಾಶವೂ ಕಡಿಮೆ ಇದ್ದಾಗ

ರೋಗಿಯಾದ ತಂದೆಯನ್ನೋ, ತಾಯಿಯನ್ನೋ ಆಸ್ಪತ್ರೆಯಿಂದ ಬಿಡಿಸಿಕೊಂಡು ಮನೆಗೆ ಕರೆದುಕೊಂಡು ಹೋಗಬೇಕು.

## ಎಚ್ಚರಿಕೆ

ಈ ಕಲಿಗಾಲದಲ್ಲಿ ರೋಗವನ್ನು ಪರಿಹರಿಸುವ ವೈದ್ಯರಿಗಿಂತ ಧನವನ್ನು ಅಪ-ಹರಿಸುವ ವೈದ್ಯರು ಹೆಚ್ಚಿಕೊಳ್ಳುತ್ತಿದ್ದಾರೆ. ರೋಗಿಯು ಬದುಕುವುದಿಲ್ಲ ಎಂದು ತಮಗೆ ಖಾತ್ರಿಯಾಗಿದ್ದರೂ ಅದನ್ನು ಮರೆಮಾಚಿ ತಮ್ಮ ಸಂಸ್ಥೆಗೆ ಹಣ ಬರಲಿ ಎಂಬ ದುರುದ್ದೇಶದಿಂದ ಒಂದೆರಡು ದಿನ ಐ.ಸಿ.ಯು.ವಿನಲ್ಲಿರಲಿ ಎಂದು ಸಲಹೆ ಕೊಡುತ್ತಾರೆ. ಮರಣದಲ್ಲಿ ಮಾನಸಿಕ ಮರಣ ಹಾಗೂ ದೈಹಿಕಮರಣ ಎಂದು ಎರಡು ವಿಧ. ಮಾನಸಿಕಮರಣವಾದ ಮೇಲೂ ಕೃತಕವಾದ ಉಸಿರಾಟ ಹಾಗೂ ಆಹಾರದ ಸರಬರಾಜಿನಿಂದ ದೈಹಿಕಮರಣವನ್ನು ಅನಿರ್ದಿಷ್ಟಕಾಲ ಮುಂದೂಡ-ಬಹುದು. ಆದರೆ ಮಾನಸಿಕಮರಣವಾದ ನಂತರ ದೈಹಿಕ ಮರಣವಾಗುವುದು ನಿಶ್ಚಯ. ಆದ್ದರಿಂದ ವೈದ್ಯರ ಸಲಹೆಗೆ ವಿರುದ್ಧವಾಗಿ ಬಿಡುಗಡೆ ಮಾಡಿಕೊಂಡು ಹೋಗುವುದು ಲೇಸು.

ಈ ವಿಷಯದಲ್ಲಿ ಮಕ್ಕಳು ತಮ್ಮ ವಿವೇಕವನ್ನು ಉಪಯೋಗಿಸಬೇಕು. ಪುಸ್ತಕ-ದಲ್ಲಿ ಬರೆದು ತಿಳಿಸಲು ಸಾಧ್ಯವಿಲ್ಲ.

ಹಿಂದೆ ತಿಳಿಸಿದಂತೆ ಪುಣ್ಯಕ್ಷೇತ್ರಕ್ಕೆ ಕರೆದುಕೊಂಡು ಹೋಗುವ ಸಾಧ್ಯತೆ ಇದ್ದರೆ ಸ್ವಲ್ಪ ಕಷ್ಟವಾದರೂ ಸರಿ, ಕರೆದುಕೊಂಡು ಹೋಗಬೇಕು. ಅಷ್ಟಕ್ಕೆ ಅವಕಾಶವಿಲ್ಲ-ದಿದ್ದರೆ ಮನೆಯ ಅಂಗಳದಲ್ಲಿ ತುಳಸೀಬೃಂದಾವನದ ಸನ್ನಿಧಾನದಲ್ಲಿ ಮರಣ ಹೊಂದುವ ವ್ಯವಸ್ಥೆಯನ್ನು ಮಾಡಬೇಕು. ನೆಲವನ್ನು ಗೋಮಯದಿಂದ ಸಾರಿಸಿ, ಅಲ್ಲಿ ದಕ್ಷಿಣಕ್ಕೆ ತುದಿ ಬರುವಂತೆ ದರ್ಭೆಯನ್ನು ಹಾಸಿ, ಪಿತೃಗಳಿಗೆ ಸ್ನಾನ ಮಾಡಿಸಿ, ಶುಭ್ರವಾದ ವಸ್ತ್ರವನ್ನು ಉಡಿಸಿ, ದಕ್ಷಿಣಕ್ಕೆ ತಲೆ ಬರುವಂತೆ ಮಲಗಿಸಬೇಕು. ಬಾಯಲ್ಲಿ ಚಿನ್ನವನ್ನು ಇಡಬೇಕು.(ಗರುಡಪುರಾಣ. 5.ಅ. 7 ಶ್ಲೋ . ನಿರ್ಣಯಸಿಂಧು ಪುಟ. 403, ಧರ್ಮಸಿಂಧು ಪುಟ. 651) ಗೋಪೀಚಂದನ, ಮುದ್ರೆಗಳನ್ನು ಧಾರಣೆ ಮಾಡಿಸಬೇಕು. ಕಿವಿಯಲ್ಲಿ ತುಳಸೀದಳ ಇಡಬೇಕು. ತುಲಸೀ ಮಾಲೆಯನ್ನು

ಹಾಕಬೇಕು. (ಸುಮಂಗಲಿಯರಿಗೆ ತುಳಸೀದಳ ಇಡುವುದು, ತುಳಸೀ ಮಾಲೆ ಹಾಕುವುದು ಬೇಡ). ಹತ್ತಿರದಲ್ಲಿ ಸಾಲಿಗ್ರಾಮವನ್ನು ಇಟ್ಟಿರಬೇಕು. ವಿಷ್ಣುಸಹಸ್ರ-ನಾಮ, ಭಗವದ್ಗೀತೆ, ಗಜೇಂದ್ರಮೋಕ್ಷ ಇವುಗಳನ್ನು ಪಾರಾಯಣ ಮಾಡಬೇಕು. ಸ್ವಯಂ ಪಾರಾಯಣ ಮಾಡಲು ಅಶಕ್ತನಾಗಿದ್ದರೆ ಬ್ರಾಹ್ಮಣರಿಂದ ಪಾರಾಯಣ ಮಾಡಿಸಬೇಕು.

ಮೇಲೆ ಮೇಲೆ ಉಸಿರು ಬಂದು ಸ್ಥಿತಿ ತುಂಬಾ ಚಿಂತಾಜನಕವಾದಾಗ ಕರ್ಣ-ಸೂಕ್ತವನ್ನು ಪಾರಾಯಣ ಮಾಡಬೇಕು. ಇದು ಋಗ್ವೇದದ ಪವಮಾನ ಮಂಡಲ -ದಲ್ಲಿ 19 ಮಂತ್ರಗಳಿರುವ ಕಡೆಯ ಮೂರು ಸೂಕ್ತಗಳು ಪ್ರತಿಮಂತ್ರದ ಕಡೆಯಲ್ಲಿ ಬಂಧುಗಳು ಬಲಗಿವಿಯ ಹತ್ತಿರ "ನಾರಾಯಣ, ನಾರಾಯಣ, ನಾರಾಯಣ" ಎಂದು ಗಟ್ಟಿಯಾಗಿ ಹೇಳಬೇಕು. (ಋಗ್ವೇದ 9ಮಂ.112,113,114) ಮೊದಲು ಸಾಲಿಗ್ರಾಮ ತೀರ್ಥವನ್ನೂ, ಆಮೇಲೆ ಗಂಗೆಯನ್ನೂ ಬಾಯಿಗೆ ಹಾಕಬೇಕು. ಹೀಗೆ ಮರಣ ಹೊಂದಿದರೆ ಅವರಿಗೆ ಸದ್ಗತಿಯಾಗುವುದು ಖಂಡಿತ. (ನೋಡಿ.ಪು.141)

ಸೂಚನೆ – ತಂದೆ ತಾಯಿಗಳು ತಮ್ಮ ಮರಣಕಾಲದಲ್ಲಿ ತಮ್ಮನ್ನು ಹೀಗೆ ನೋಡಿಕೊಳ್ಳಬೇಕೆಂದು ಮೊದಲೇ ಶಿಕ್ಷಣ ಮಾಡಿರಬೇಕು.

## ಆತುರದಾನಗಳು

ಪಿತೃಗಳು ಮರಣಹೊಂದುವ ಕಾಲ ಸಮೀಪಿಸಿದಾಗ ಸತ್ಪುತ್ರನು ಅವರಿಂದ ದಾನಗಳನ್ನು ಕೊಡಿಸಬೇಕು. ಈ ದಾನಗಳನ್ನು ಪಿತೃಗಳು ಚೆನ್ನಾಗಿ ಇದ್ದಾಗಲೇ ಕೊಡಿಸಬಹುದು. ಹಾಗೆ ಸಾಧ್ಯವಾಗದಿದ್ದಾಗ ಅವರು ಮರಣಶಯ್ಯೆಯಲ್ಲಿ ಮಲಗಿದ್ದಾಗ ಅವರ ಕೈಮುಟ್ಟಿಸಿ ತಾನೇ ದಾನ ಮಾಡಬಹುದು. ಹೀಗೆ ಮಾಡಿದರೂ ಅವರಿಂದಲೇ ದಾನ ಕೊಡಿಸಿದಂತಾಗುತ್ತದೆ. ತನ್ನ ಕೈಯಿಂದ ಕೊಟ್ಟ ದಾನವು ಅಕ್ಷಯ ಫಲವನ್ನು ಕೊಡುತ್ತದೆ. ಇಂತಹ ದಾನಗಳಿಗೆ ಆತುರದಾನ ಎನ್ನುತ್ತಾರೆ. ದಾನ ಕೊಡಬೇಕಾದ ಪದಾರ್ಥಗಳು ಇಷ್ಟು.

1. ಗೋದಾನ. 2. ಭೂದಾನ. 3. ತಿಲದಾನ. 4. ಹಿರಣ್ಯದಾನ (ಬಂಗಾರ) 5. ಆಜ್ಯದಾನ(ತುಪ್ಪ). 6. ವಸ್ತ್ರದಾನ. 7. ಧಾನ್ಯದಾನ (ಭತ್ತ ಅಥವಾ ಅಕ್ಕಿ , ಗೋಧಿ,

ನವಣೆ, ಹೆಸರು, ಕಡಲೆ, ಉದ್ದು, ಎಳ್ಳು). 8. ಗುಡದಾನ (ಬೆಲ್ಲ). 9. ರಜತದಾನ (ಬೆಳ್ಳಿ). 10. ಲವಣದಾನ (ಉಪ್ಪು).

ಉಪ್ಪು, ಎಳ್ಳು, ತುಪ್ಪ ಇವುಗಳನ್ನು ಪಾತ್ರ ಸಮೇತ ಕೊಡಬೇಕು.

ಗೋದಾನವನ್ನು ಸಾಲಂಕೃತವಾಗಿ ಮಾಡಬೇಕು. ಎಂದರೆ ವೈಭವವು ಇದ್ದಲ್ಲಿ ಕೊಂಬಿಗೆ ಬಂಗಾರ, ಗೊರಸಿಗೆ ಬೆಳ್ಳಿ, ಬೆನ್ನಿಗೆ ತಾಮ್ರದ ಅಲಂಕಾರ ಮಾಡಬೇಕು. ರೇಷ್ಮೆವಸ್ತ್ರ ಹೊದ್ದಿಸಬೇಕು. ಹಾಲು ಕರೆಯುವ ಪಾತ್ರೆ, ನೀರು ಕುಡಿಸುವ ಪಾತ್ರೆ ಕೊಡಬೇಕು. ಕರು ಸಹಿತವಾಗಿರಬೇಕು. ಶಕ್ತಿಗೆ ತಕ್ಕಂತೆ ಒಂದು ವರ್ಷಕ್ಕಾಗುವಷ್ಟು ಅಥವಾ ತಿಂಗಳಿಗೆ ಆಗುವಷ್ಟು ಮೇವನ್ನು ಕೊಡಬೇಕು.

ಇದಾವುದೂ ಆಗದಿದ್ದರೆ ಗೋದಾನವನ್ನು ಸಂಕಲ್ಪಿಸಿ ಹಿರಣ್ಯದಾನ ಮಾಡ-ಬಹುದು. ಒಂದು ಗೋದಾನಕ್ಕೆ ಬದಲಾಗಿ ಕೊಡಬೇಕಾದ ಚಿನ್ನದ ತೂಕ ಇವತ್ತಿನ ಲೆಕ್ಕದಂತೆ 40 ಗ್ರಾಂ. ಅಥವಾ ಅದರರ್ಧ, ಕಾಲು ಭಾಗ ಅಥವಾ 1/8 ಭಾಗ. ಅದೂ ಆಗದಿದ್ದವರು ಇಷ್ಟೇ ತೂಕದ ಬೆಳ್ಳಿಯನ್ನು ಕೊಡಬಹುದು.

ಭೂದಾನಕ್ಕೆ ಬದಲಾಗಿ ಗೋಪೀಚಂದನವನ್ನು ಕೊಡಬಹುದು. ಇದು ಬಡವರ ವಿಷಯ. ಸಾಧ್ಯವಾದಲ್ಲಿ ಸಾಕ್ಷಾತ್ತಾಗಿ ಭೂದಾನ ಮಾಡಬೇಕು. ನೂರು ಗೋವುಗಳು ಮಲಗುವುದಕ್ಕೆ ಸಾಕಾಗುವಷ್ಟು ಭೂಮಿಗೆ ಗೋಚರ್ಮ ಎನ್ನುತ್ತಾರೆ. ಇಷ್ಟು ಭೂದಾನದಿಂದ ಮಹಾಪುಣ್ಯವುಂಟು.

ಈ ಮೇಲೆ ಹೇಳಿದ ದಾನಗಳಲ್ಲದೇ ಸಾಲಿಗ್ರಾಮ, ಸಚ್ಛಾಸ್ತ್ರಪುಸ್ತಕ, ಉದಕುಂಭ, ಪದದಾನ (ಛತ್ರಿ, ಪಾದರಕ್ಷೆ, ಚಾಪೆ, ದಂಡ), ಶಯ್ಯಾದಾನ ಇವುಗಳನ್ನು ಮಾಡಬಹುದು.

ಷರಾ – ಈ ಮೇಲೆ ಹೇಳಿದ ದಾನಗಳನ್ನು ಈಗ ಕೊಟ್ಟಿದ್ದಲ್ಲಿ 13ನೆಯ ದಿನ ಕೊಡದಿದ್ದರೂ ಪರವಾಗಿಲ್ಲ. ಈಗ ಕೊಡಲು ಆಗದಿದ್ದರೆ 13ನೇ ದಿನ ಕೊಡಲೇ ಬೇಕು. ಅಥವಾ ಒಂದು ಸಲ ವಿಸ್ತಾರವಾಗಿ ಕೊಟ್ಟು ಮತ್ತೊಂದು ಸಲ ಸಂಕ್ಷೇಪವಾಗಿ ಕೊಡಬಹುದು.

## ಗೋದಾನಗಳು

ಪಿತೃಗಳ ಮರಣದ ನಿಮಿತ್ತವಾಗಿ 5 ಗೋದಾನಗಳನ್ನು ಮಾಡಬೇಕು.

1. ಉತ್ಕ್ರಾಂತಿಗೋದಾನ – ಮರಣದ ಮುಂಚೆ ಈ ಗೋದಾನ ಮಾಡುವುದರಿಂದ ಜೀವನು ತಾನು ಸುಖವಾಗಿ ದೇಹವನ್ನು ಬಿಟ್ಟು ಹೋಗುತ್ತಾನೆ.

2. ಋಣಧೇನು ದಾನ – ಈ ದಾನದಿಂದ ಆ ಜೀವಿಗೆ ಈ ಲೋಕದ ಋಣ ಪರಿಹಾರವಾಗುತ್ತದೆ.

3. ಯಮಧೇನು(ಪಾಪಧೇನು) ದಾನ – ಈ ದಾನದಿಂದ ಯಮಭಟರ ಭಯವು ತಪ್ಪುತ್ತದೆ.

4. ಮೋಕ್ಷಧೇನುದಾನ – ಇದರಿಂದ ಉತ್ತಮಗತಿ ದೊರೆಯುತ್ತದೆ.

5. ವೈತರಣೀಗೋದಾನ – ಇದನ್ನು ಮರಣ ಹೊಂದಿದ ನಂತರ 6 ತಿಂಗಳಿಗೆ ಮುಂಚೆ ಮಾಡಬೇಕು. ಇದರಿಂದ ಯಮಮಾರ್ಗದಲ್ಲಿ ಸಿಗುವ ವೈತರಣೀ ಎಂಬ ನದಿಯನ್ನು ದಾಟಲು ಅನುಕೂಲವಾಗುತ್ತದೆ.

ಸೂಚನೆ – ಗೋಪೀಚಂದನ ದಾನವು ಸಣ್ಣದಾನದಂತೆ ಕಂಡರೂ ಮಹಾಪುಣ್ಯಕರ.

ಶ್ರೀಮದಾಚಾರ್ಯರು ಶ್ರೀಕೃಷ್ಣಾಮೃತಮಹಾರ್ಣವದಲ್ಲಿ ಒಂದು ಸಾಸಿವೆ ಕಾಳಿನಷ್ಟು ಗೋಪೀಚಂದನ ದಾನ ಮಾಡಿದರೂ ಮೇರುಪರ್ವತದಷ್ಟು ಬಂಗಾರ ದಾನ ಮಾಡಿದ ಪುಣ್ಯಬರುತ್ತದೆ ಎಂದು ಹೇಳಿರುತ್ತಾರೆ. ಆದ್ದರಿಂದ ಎಷ್ಟು ಬ್ರಾಹ್ಮಣರು ಸಿಗುತ್ತಾರೋ ಅಷ್ಟು ಜನಗಳಿಗೂ ಯಥಾಶಕ್ತಿ ದಕ್ಷಿಣಸಮೇತ ಗೋಪೀಚಂದನದಾನ ಮಾಡಬೇಕು.

## ವಿವಿಧಮರಣಗಳಲ್ಲಿ ಕರ್ತವ್ಯ

ಖಟ್ವಾಮರಣ – ಮಂಚ ಅಥವಾ ಹಾಸಿಗೆಯ ಮೇಲೆ ಮರಣ ಆಗುವುದು ಒಳ್ಳೆಯದಲ್ಲ. ಹಾಗೆ ಆದಲ್ಲಿ ಅದಕ್ಕೆ ಶಾಂತಿಯನ್ನು ಮಾಡಬೇಕು. ಈ ದೋಷ-ಶಾಂತಿಗಳ ಪೈಕಿ ಅಷ್ಟಾಕ್ಷರಮಂತ್ರಜಪವೂ ಒಂದು. ಪುತ್ರನು ಶುದ್ಧಿಯಾದ ನಂತರ ಯಥಾಶಕ್ತಿ 10,000 ಅಥವಾ 1ಲಕ್ಷ ಜಪಮಾಡಿ ಆ ಪುಣ್ಯವನ್ನು ಧಾರೆ

ಎರೆಯುವುದರಿಂದ ಈ ದೋಷವು ಪರಿಹಾರವಾಗುತ್ತದೆ. ಅಥವಾ ವೇದಪಾರಾಯಣ ಮಾಡಬಹುದು. (ನಿರ್ಣಯಸಿಂಧು ಪು. 389)

2. ಕುಷ್ಠರೋಗಿಯ ಮರಣ – ಕುಷ್ಠರೋಗಿಯು ಮೃತನಾದರೆ ದೇಹವನ್ನು ಗೋಷ್ಠ(ಕೊಟ್ಟಿಗೆ)ಯಲ್ಲಿ ಮೂರು ದಿನ ಹೂತಿಟ್ಟು, ನಂತರ ಬೇರೆಯ ಕಡೆ ತೆಗೆದುಕೊಂಡು ಹೋಗಿ ಸುಡಬೇಕು. ಸುಡುವುದಕ್ಕೆ ಮುಂಚೆ ಷಡಬ್ದಪ್ರಾಯಶ್ಚಿತ್ತ-ವನ್ನು ಪ್ರತ್ಯಾಮ್ನಾಯದಿಂದ ಮಾಡಬೇಕು.

3. ಸಕೇಶಾವಿಧವಾಮರಣ – ಸಕೇಶಿಯಾದ ವಿಧವೆಯ ಮರಣವಾದರೆ ಮುಂಡನ ಮಾಡಿಸಿ ಸಂಸ್ಕಾರ ಮಾಡಬೇಕು.

4. ರಜಸ್ವಲಾಮರಣ – ರಜಸ್ವಲೆಯ ಮರಣವಾದರೆ ರಜಸ್ಸನ್ನು ಚೆನ್ನಾಗಿ ತೊಳೆದು ಸ್ನಾನ ಮಾಡಿಸಿ, ವಸ್ತ್ರಾಂತರ ಮಾಡಿ ಕಟ್ಟಿಗೆ ಸುಡುವಂತೆ ಸುಡಬೇಕು. ಮೂರುದಿನವಾದ ಮೇಲೆ ಅಸ್ಥಿಗಳನ್ನು ಮಂತ್ರಪೂರ್ವಕವಾಗಿ ಸಂಸ್ಕಾರಮಾಡಬೇಕು. ಅಥವಾ ಆಗಲೇ ಚಾಂದ್ರಾಯಣವ್ರತಪ್ರಾಯಶ್ಚಿತ್ತವನ್ನು ಪ್ರತ್ಯಾಮ್ನಾಯದಿಂದ ಮಾಡಿ, ಜವೇಗೋಧಿ ಹಿಟ್ಟಿನಿಂದ ಲೇಪಮಾಡಿ, ಮೊರದ ನೀರಿನಿಂದ 108 ಆವರ್ತಿ ಸ್ನಾನ ಮಾಡಿಸಿ ವಸ್ತ್ರಾಂತರಮಾಡಿ ಮಂತ್ರಪೂರ್ವಕವಾಗಿ ಸುಡಬೇಕು. ಬಾಣಂತಿಯು ಸತ್ತರೂ ರಜಸ್ವಲಾಮರಣದಂತೆಯೇ ತಿಳಿಯಬೇಕು.

5. ಗರ್ಭಿಣೀ ಮರಣ – ಗರ್ಭಿಣಿಯು ಮೃತಳಾದರೆ ಮಗುವನ್ನು ಈಚೆ ತೆಗೆದು ದಹನ ಮಾಡಬೇಕು. ಮಗುವು ಸತ್ತಿದ್ದರೆ ಅದನ್ನು ಹೂಳಬೇಕು. ಬದುಕಿದ್ದರೆ ಅದನ್ನು ಸ್ವೀಕಾರಮಾಡುವ ಕ್ರಮ ನಿರ್ಣಯಸಿಂಧುವಿನಲ್ಲಿದೆ.

6. ಬ್ರಹ್ಮಚಾರಿಯ ಮರಣ – ಬ್ರಹ್ಮಚಾರಿಯ ಮರಣವಾದರೆ ಆತನು ವಯಸ್ಸು ಮೀರಿದವನಾದರೆ ಶವವನ್ನು ಅರಿಶಿನದ ಪಂಚೆಯಿಂದ ಸುತ್ತಿ ಅರ್ಕವಿವಾಹ ಮಾಡಿ ಸಂಸ್ಕಾರ ಮಾಡಬೇಕು. ಮುಂದೆ ಹೇಳುವಂತೆ 11ದಿವಸಗಳ ಕಾರ್ಯಗಳನ್ನು ಮಾಡಿ, ನಾರಾಯಣಬಲಿ ಮಾಡಬೇಕು. ಸಪಿಂಡೀಕರಣ ಮಾಡಬಾರದು. 30 ಬ್ರಹ್ಮಚಾರಿಗಳಿಗೆ ಕೌಪೀನ, ಕೃಷ್ಣಾಜಿನ, ಗೋಪೀಚಂದನ, ತುಲಸೀಮಾಲೆ ಇತ್ಯಾದಿ-ಗಳನ್ನು ಕೊಡಬೇಕು.

7. ಅನುಪನೀತಮರಣ – ಉಪನಯನದ ವಯಸ್ಸು ಮೀರಿ ಉಪನಯನ-ವಿಲ್ಲದೇ ಮೃತನಾದರೆ ಶವಕ್ಕೆ ಉಪನಯನ ಮಾಡಿ ಸಂಸ್ಕಾರ ಮಾಡಬೇಕು. 11ನೆಯ ದಿನ ನಾರಾಯಣಬಲಿ ಮಾಡಬೇಕು. ಐದು ವರ್ಷ ದಾಟಿದ್ದರೂ ಹೀಗೆಯೇ ಸಂಸ್ಕಾರ ಮಾಡಬೇಕೆಂದು ಗರುಡಪುರಾಣದಲ್ಲಿದೆ.

ಉಪನಯನದ ವಯಸ್ಸಿಗೆ ಮುಂಚೆ ಮೃತನಾದರೆ ಮಂತ್ರವಿಲ್ಲದೇ ದಹನ. ಬೇರೆ ಸಂಸ್ಕಾರಗಳು ಇಲ್ಲ. ಬಾಲಕಿಯರ ಮರಣದಲ್ಲೂ ಹೀಗೇ ತಿಳಿಯಬೇಕು. ಆ ವಯಸ್ಸಿನ ಮಕ್ಕಳಿಗೆ ವಸ್ತ್ರ, ಹಣ್ಣು, ಪಾಯಸ ಇತ್ಯಾದಿ ಕೊಡಬೇಕು.

8. ಕನ್ಯಾಮರಣ – ಕನ್ಯೆಯೆಂದರೆ ವಿವಾಹವಾಗದೇ ಇದ್ದ ಹೆಣ್ಣುಮಗಳು. ಕನ್ಯೆಯ ಮರಣವಾದಾಗ ಯಾವ ಸಂಸ್ಕಾರವೂ ಇಲ್ಲ. ಕೇವಲ ಕಟ್ಟಿಗೆಯಂತೆ ದಹನ ಮಾಡುವುದು ಎಂದು ಪ್ರಾಯಃ ಲೋಕದಲ್ಲಿ ಹೇಳುತ್ತಿದ್ದಾರೆ. ಆದರೆ ಎಲ್ಲೋಜಿ ಧರ್ಮಶಾಸ್ತ್ರದಲ್ಲಿ ಸಪ್ರಮಾಣಕವಾಗಿ ಕನ್ಯೆಯ ಮರಣದಲ್ಲಿಯೂ ಸಹ ಬ್ರಹ್ಮ-ಚಾರಿಯ ಮರಣದಲ್ಲಿ ಮಾಡಿದಂತೆ ಅರ್ಕವಿವಾಹ ಮಾಡಿ ನಾರಾಯಣ ಬಲಿ ಮಾಡಬೇಕೆಂದು ಸ್ಪಷ್ಟವಾಗಿ ಹೇಳಿದೆ. ಈ ಬಗ್ಗೆ ಧರ್ಮಶಾಸ್ತ್ರಕ್ಕೆ ಕಟ್ಟು ಬೀಳುವವರು ಅವಶ್ಯ ಗಮನ ಕೊಡಬೇಕು.

9. ಶಿಶುಮರಣ – ಹಲ್ಲು ಬರದೇ ಇರುವ ಅಥವಾ 11ತಿಂಗಳು ಮೀರದಿರುವ ಶಿಶು ಮೃತವಾದರೆ ದಹನವಿಲ್ಲ. ಹೂಳಬೇಕು. ಶಿಶುಗಳಿಗೆ ವಸ್ತ್ರ, ಹಾಲು, ಬೆಣ್ಣೆ ಕೊಡಬೇಕು. 27 ತಿಂಗಳವರೆಗೆ ದಹನವಿಲ್ಲ ಎಂದು ಕೆಲವರ ಅಭಿಪ್ರಾಯ.

## ಮರಣದಿನದ ಕರ್ತವ್ಯ

ಮರಣ ಹೊಂದಿದವರಿಗೆ ಮಾಡಬೇಕಾದ ಸಂಸ್ಕಾರಗಳ ವಿವರಣೆಯು ಪ್ರಯೋಗಪಾರಿಜಾತ, ಬ್ರಹ್ಮಕರ್ಮಸಮುಚ್ಚಯ ಮೊದಲಾದ ಗ್ರಂಥಗಳಲ್ಲಿ ದೊರೆ-ಯುತ್ತದೆ. ಪ್ರಯೋಗಸ್ಥರು ಅವುಗಳನ್ನು ತಿಳಿದುಕೊಂಡು ಮಾಡಿಸಬೇಕು. ಆ ವಿವರಣೆಯನ್ನು ಕೊಡುವುದು ಈ ಲೇಖನದ ಉದ್ದೇಶವೂ ಅಲ್ಲ, ಸಾಧ್ಯವೂ ಅಲ್ಲ. ಮತ್ತೇನೆಂದರೆ ಕೆಲವು ಕಡೆ ಧರ್ಮಶಾಸ್ತ್ರ ಹೇಳುವುದು ಬೇರೆ ಲೋಕದ ಆಚರಣೆ ಬೇರೆಯಾಗಿದೆ. ಅದನ್ನು ಸೂಚಿಸಿ ಅವಶ್ಯಮಾಡಬೇಕಾದ ಕೆಲವೊಂದು ಕರ್ತವ್ಯ-ಗಳನ್ನು ಮಾತ್ರ ಇಲ್ಲಿ ಹೇಳುತ್ತೇವೆ.

ಪಿತೃಗಳು ಮರಣ ಹೊಂದಿದಾಗ ಮುಂದಿನ ಕಾರ್ಯಗಳನ್ನು ದೂರದೇಶ-ದಲ್ಲಿರುವ ಯಾರೋ ಬಂಧುಗಳು ಬರಲಿ ಎಂದು ತಡ ಮಾಡಬಾರದು. ಆದಷ್ಟು ಜಾಗ್ರತೆ ಕೆಲಸಗಳನ್ನು ಮುಂದುವರೆಸಬೇಕು. ಏನೇ ಕಾರಣದಿಂದ ಶವವನ್ನು ತಂಗಳು ಮಾಡಬಾರದು. ಹಾಗೆಂದರೆ, ಯಾವ ದಿನ ಮೃತರಾಗಿದ್ದಾರೋ ಅಂದೇ ಸಂಸ್ಕಾರ ಮಾಡಬೇಕು. ಮಾರನೇ ದಿನಕ್ಕೆ ಮುಂದೂಡಬಾರದು. ಹಿರಿಯ ಮಗನೇ ಇರ-ಬೇಕೆಂಬ ನಿಯಮವಿಲ್ಲ. ಹಿರಿಯ ಮಗನು ದೂರದಲ್ಲಿದ್ದು ಸಕಾಲಕ್ಕೆ ಬರಲು ಆಗದೇ ಇದ್ದಲ್ಲಿ ಯಾವ ಮಗನು ಹತ್ತಿರವಿದ್ದಾನೋ ಆ ಮಗನೇ ಕಾರ್ಯ ನಿರ್ವ-ಹಿಸಬಹುದು. ಹಿರಿಯ ಮಗನು ಬಂದ ಮೇಲೆ ಅವನು ಮುಂದುವರೆಸುತ್ತಾನೆ.

ಪಿತೃಗಳ ಮರಣವಾದಾಗ ಮಕ್ಕಳು ಅವಶ್ಯವಾಗಿ ಮುಂಡನ ಮಾಡಿಸಿಕೊಳ್ಳ-ಬೇಕು. ಈಗಿನ ಕಾಲದಲ್ಲಿ ಕಛೇರಿಗೆ ಹೋಗುವ ಕೆಲವರು ಮುಂಡನ ಮಾಡಿಸಿ-ಕೊಳ್ಳುತ್ತಿಲ್ಲ. ಅದು ಸರಿಯಲ್ಲ. ಏಕೆಂದರೆ - 'ಮುಂಡನ ಮಾಡಿಸಿಕೊಳ್ಳದಿದ್ದವನು ಮಗನೇ ಅಲ್ಲ' ಎಂದು ಗರುಡಪುರಾಣದಲ್ಲಿ ಹೇಳಿದೆ. ತಂದೆಗಾಗಲೀ, ತಾಯಿ-ಗಾಗಲೀ ಶವಕ್ಕೆ ಸ್ನಾನ ಮಾಡಿಸಿದ ಮೇಲೆ ಗೋಪೀಚಂದನ ಹಚ್ಚಲು ಮರೆಯ-ಬಾರದು.

ಪಿತೃಗಳು ತಾನು ಸಣ್ಣ ಮಗುವಾಗಿದ್ದಾಗ ತನ್ನನ್ನು ಎತ್ತಿ ಇಳಿಸಿದ್ದರು. ಈ ಋಣವನ್ನು ತೀರಿಸಲು ಮಗನು ಅವಶ್ಯವಾಗಿ ಶವವನ್ನು ಹೊರಬೇಕು. ಹೀಗೆ ಹೊತ್ತುಕೊಂಡು ಹೋದರೆ ಹೆಜ್ಜೆ ಹೆಜ್ಜೆಗೂ ಅಶ್ವಮೇಧಯಾಗದ ಪುಣ್ಯ ಬರುತ್ತದೆ. ಆದ್ದರಿಂದ ಶವವನ್ನು ವಾಹನದಲ್ಲಿ ಸಾಗಿಸಬಾರದು. ಹೆಜ್ಜೆ ಹೆಜ್ಜೆಗೂ ನಾರಾಯಣ ಸ್ಮರಣೆ ಮಾಡುತ್ತಾ ಹೋಗಬೇಕು.

ಆ ಕಾಲದಲ್ಲಿ ಕರ್ತೃಗಳ ಮೈಮೇಲೆ ಬಂಗಾರ ಇರಬಾರದು. ಹೊರುವಾಗ ಹಿಂದಿರುಗಿ ನೋಡಬಾರದು. ಅಗ್ನಿಗೂ ಶವಕ್ಕೂ ಮಧ್ಯೆ ಯಾರೂ ಹೋಗಬಾರದು. ಯಜ್ಞೋಪವೀತವನ್ನು ವನಮಾಲಿಕೆ ಹಾಕಿಕೊಂಡು, ಶಿಖೆಯನ್ನು ಬಿಚ್ಚಿಕೊಂಡು ಹೋಗಬೇಕು. ಹಿರಿಯನು ಮುಂದೆ ಅವನ ಹಿಂದೆ ಅವನಿಗಿಂತ ಕಿರಿಯ ಹೀಗೆ ಕ್ರಮವಾಗಿ ಹೋಗಬೇಕು. ಅಕಸ್ಮಾತ್ತಾಗಿ ಶವವು ಬಿದ್ದರೆ ಶವಪತನಶಾಂತಿಯನ್ನು ಮಾಡಬೇಕು.

ಶವದಹನ ಮಾಡುವಾಗ ತುಳಸೀಕಾಷ್ಠವನ್ನು ಹಾಕಬೇಕು. ಹಾಗೆ ಮಾಡಿದರೆ ಪ್ರಯಾಗದಲ್ಲಿ ದಹನ ಮಾಡಿದ ಪುಣ್ಯಬರುತ್ತದೆ.

ಧನಿಷ್ಠಾಪಂಚಕ, ತ್ರಿಪಾದಿನಕ್ಷತ್ರಗಳು, ತ್ರಿಪುಷ್ಕರಯೋಗ, ದ್ವಿಪುಷ್ಕರಯೋಗ ಹಾಗೂ ಮಂಗಳವಾರ ಮೃತರಾದರೆ ಆ ಶರೀರದ ಜೊತೆಯಲ್ಲಿ ಇನ್ನೊಂದು ದರ್ಭೆಯ ಪ್ರತೀಕವನ್ನು ಹಾಕಿ ದಹನ ಮಾಡಬೇಕು. ಆದರೆ ಬದಲಾಗಿ ಈಗ ಲೋಕದಲ್ಲಿ ಕಬ್ಬಿಣದ ಮೊಳೆ ಹಾಕುವ ಪದ್ಧತಿ ಬಂದಿದೆ.

ಈಗ ಲೋಕದಲ್ಲಿ ಚಾಲ್ತಿ ಇರುವ ಮತ್ತೊಂದು ವಿಕೃತವಾದ ಆಚಾರ ಹೀಗಿದೆ – ಅದೇನೆಂದರೆ, ಶವದ ಮೈಮೇಲೆ ಇರುವ ಬಟ್ಟೆಗಳನ್ನೆಲ್ಲಾ ತೆಗೆದು ಮುತ್ತುಗದ ಎಲೆ ಅಥವಾ ಬೆರಣಿಯಿಂದ (ಗುಹ್ಯಸ್ಥಾನವನ್ನು) ಮುಚ್ಚಿ ಸುಡುತ್ತಿದ್ದಾರೆ. ಇದು ಶುದ್ಧತಪ್ಪು. ಏಕೆಂದರೆ ಧರ್ಮಶಾಸ್ತ್ರಗಳು ಎಂತಹ ಬಡವನೇ ಆದರೂ ಒಂದು ಸಣ್ಣ ಬಟ್ಟೆಯನ್ನಾದರೂ ಹೊದ್ದಿಸಿಯೇ ಸುಡಬೇಕೆಂದು ಹೇಳುತ್ತವೆ. –

ಸ್ನಾನಂ ಪ್ರೇತಸ್ಯ ಪುತ್ರಾದ್ಯೈಃ ವಸ್ತ್ರಾದ್ಯೈಃ ಪೂಜನಂ ತತಃ।
ನಗ್ನದೇಹಂ ದಹೇನ್ನೈವ ಕಿಂಚಿದ್ದೇಯಂ ಪರಿತ್ಯಜೇತ್ ॥ – ಪ್ರಚೇತ ವಚನ

ದರಿದ್ರೋಽಪಿ ನ ದಗ್ಧವ್ಯೋ ನಗ್ನಃ ಕಸ್ಯಾಂಚಿದಾಪದಿ। -ಮಾಧವೀಯ ಬ್ರಾಹ್ಮವಚನ

ಪ್ರೇತಶ್ಚ ನ ನಗ್ನೋ ದಗ್ಧವ್ಯಃ– ಧರ್ಮಸಿಂಧು ಪುಟ. ೬೫೫

ಹಾಗಾದರೆ 'ಹುಟ್ಟುವಾಗ ಹೋಗುವಾಗ ಗೇಣುಬಟ್ಟೆ ಕಾಣಲಿಲ್ಲ' ಎಂಬ ಪುರಂದರ ದಾಸರ ಮಾತಿಗೆ ಏನು ಅರ್ಥ ಎಂದು ಕೆಲವರು ಕೇಳುತ್ತಾರೆ. ಇದಕ್ಕೆ ಅರ್ಥವೇನೆಂದರೆ ಸಾಯುವಾಗ ಮೈಮೇಲೆ ಇದ್ದ ಯಾವ ಬಟ್ಟೆಯೂ ಇರಬಾರದು ಎಂದು. ಶವಕ್ಕೆ ಸ್ನಾನ ಮಾಡಿಸಿದ ಮೇಲೆ ಹೊದ್ದಿಸಿದ ಹೊಸಬಟ್ಟೆಯನ್ನು ತೆಗೆಯಬಾರದು. ಅದರ ಸಮೇತವಾಗಿಯೇ ದಹನ ಮಾಡಬೇಕು.

ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೇನೆಂದರೆ, ಕರ್ಮವನ್ನು ಆರಂಭಿಸಲು 3ನೆಯ ದಿನ 5ನೆಯದಿನ ಎಂದು ಕಾಯುವುದು. ಮೊದಲೆಯ ದಿನವೇ ಆರಂಭ ಮಾಡುವುದು ಉತ್ತಮಪಕ್ಷ. ಕರ್ತೃವಿನ ಪತ್ನಿ ರಜಸ್ವಲೆಯಾಗಿದ್ದರೆ ಐದನೆಯ ನೀರಿನ ದಿನ ಆರಂಭಿಸಬೇಕು.

ದಹನ ಮಾಡಿ ಹಿಂತಿರುಗಿದ ನಂತರ ಕುಲಸ್ತ್ರೀಯರು ಮನೆಗೆ ಅರಳನ್ನು ಎರಚಬೇಕು. ಮತ್ತು ಗರಿಕೆಯನ್ನು ಹಾಕಬೇಕು. ಇದರಿಂದ ಕುಲವು ಅರಳುತ್ತದೆ. ಮತ್ತು ಗರಿಕೆಯಂತೆ ಬೆಳೆಯುತ್ತದೆ.

ಕರ್ತೃಗಳು ದಹನಮಾಡಿ ಹಿಂತಿರುಗುವಾಗ ಅವರ ಪತ್ನಿಯರು ಎದುರಿಗೆ ಇರಬಾರದು. ಕನ್ನಡಿ ಮತ್ತು ಒಂದು ತಟ್ಟೆಯನ್ನು ಕಾಣುವಂತೆ ಇಡಬೇಕು. ಅದರಲ್ಲಿ ಮುಖವನ್ನು ನೋಡಿಕೊಂಡು ಮನೆಗೆ ಪ್ರವೇಶ ಮಾಡಬೇಕು. (ಅವಲಕ್ಕಿ ಮೊಸರು ಬಾಯಿಗೆ ಹಾಕಿಕೊಳ್ಳುವುದೂ ಸಹ ಇದೆ).

ಮನೆಗೆ ಪ್ರವೇಶ ಮಾಡುವಾಗ ಮೊದಲು ಕಿರಿಯ. ಅನಂತರ ಕ್ರಮವಾಗಿ ಹಿರಿಯರು ಪ್ರವೇಶ ಮಾಡಬೇಕು.

ಶವ ಸ್ಪರ್ಶಮಾಡಿದವರು ಶುದ್ಧಿಗಾಗಿ ಅವಗಾಹನ ಸ್ನಾನ ಮಾಡಬೇಕು. ಹಾಗೂ ಕೆಂಡ ಮತ್ತು ಗೋಮಯವನ್ನು ಮುಟ್ಟಬೇಕು. ಯಜ್ಞೋಪವೀತ ಬದಲಾಯಿಸ -ಬೇಕು. ಆ ದಿನ ದೇವರಪೂಜೆ ಮಾಡಬಾರದು.

## ಅಸ್ಥಿಸಂಚಯನ

ಅಸ್ಥಿಸಂಚಯನವನ್ನು 1,2,3,4,7 ಅಥವಾ 9ನೇ ದಿನ ಮಾಡಬಹುದು. ಆ ದಿನ ದ್ವಿಪಾದಿ, ತ್ರಿಪಾದಿ, ಜನ್ಮನಕ್ಷತ್ರ ಇರಬಾರದು. ಮಂಗಳವಾರ, ಶನಿವಾರ ಆಗಿರಬಾರದು. ಸಮೀಪದಲ್ಲಿರುವ ಮಹಾನದಿಯಲ್ಲಾಗಲೀ, ಅಥವಾ ಪ್ರಶಸ್ತವಾದ ಕೆರೆ ಮೊದಲಾದ ಜಲಾಶಯಗಳಲ್ಲಿ ಮಾಡಬಹುದು. ಗಂಗೆಯಲ್ಲಿ ಅಸ್ಥಿಯನ್ನು ಹಾಕಿದರೆ ಎಷ್ಟು ಕಾಲ ಗಂಗೆಯಲ್ಲಿ ಬಿದ್ದಿರುತ್ತದೋ ಅಷ್ಟು ಕಾಲ ಪಿತೃಗಳಿಗೆ ಸ್ವರ್ಗ-ಲೋಕವಾಸ ಆಗುತ್ತದೆ. ಹತ್ತು ದಿನದ ಒಳಗೆ ಗಂಗೆಯಲ್ಲಿ ಅಸ್ಥಿಯನ್ನು ಹಾಕುವುದು ವಿಶೇಷ ಫಲಪ್ರದ. ವಾಹನದ ಅನುಕೂಲ ಇರುವ ಈ ಕಾಲದಲ್ಲಿ ಇದಕ್ಕೆ ಪ್ರಯತ್ನಿಸಬಹುದು. ಕರ್ಮದೀಕ್ಷಿತನಾದ ಮಗನು ತಾನೇ ಹೋಗಲು ಸಾಧ್ಯವಿಲ್ಲ. ಆದ್ದರಿಂದ ನಂಬಿಕಸ್ಥರ ಕೈಯಲ್ಲಿ ಕಳುಹಿಸಬಹುದು. ಎಲ್ಲಾ ಅಸ್ತಿಯನ್ನೂ ಒಂದೇ ಕಡೆ ಹಾಕಬೇಕೆಂಬ ನಿಯಮವಿಲ್ಲ. ಆದ್ದರಿಂದ ಸ್ವಲ್ಪಭಾಗವನ್ನು ಕಾವೇರಿ ಮೊದಲಾದ ಸಮೀಪದ ನದಿಯಲ್ಲಿ ಹಾಕಿ ಸ್ವಲ್ಪಭಾಗವನ್ನು ಗಂಗೆಗೆ ಕಳುಹಿಸಬಹುದು. ಅಥವಾ

ಶುದ್ಧಿಗೊಳಿಸಿದ ಅಸ್ಥಿಗಳನ್ನು ಕೃಷ್ಣಾಜಿನ ಮೊದಲಾದ ಆವರಣ ಮಾಡಿ, ಅದನ್ನು ನೆಲದಲ್ಲಿ ಹೂತಿಟ್ಟುಕೊಳ್ಳಬೇಕು. ಮುಂದೆ ಅನುಕೂಲವಾದಾಗ ತಾನೇ ತೆಗೆದು-ಕೊಂಡು ಹೋಗಿ ಅದನ್ನು ಗಂಗೆಯಲ್ಲಿ ವಿಸರ್ಜನೆ ಮಾಡಬಹುದು.

## ಹತ್ತುದಿನದವರೆಗಿನ ಕೃತ್ಯ

ಒಬ್ಬ ವ್ಯಕ್ತಿಯು ಮೃತನಾದ ಮೇಲೆ ಅವನಿಗೆ ಯಮಲೋಕಕ್ಕೆ ಪ್ರಯಾಣ ಮಾಡಲು ದೇಹವು ಬೇಕಾಗುತ್ತದೆ. ಹತ್ತು ದಿನಗಳ ಕರ್ಮಾಚರಣೆಯಿಂದ ಈ ದೇಹದ ಉತ್ಪತ್ತಿ ಹಾಗೂ ಬಲ ಉಂಟಾಗುತ್ತದೆ. ಇದಕ್ಕೋಸ್ಕರ ದಹನದಿನವನ್ನು ಆರಂಭಿಸಿ ಹತ್ತು ದಿನ ಹತ್ತು ಪಿಂಡಗಳನ್ನು ಕೊಡಬೇಕು. ಹಾಗೂ 1,3,5,7,9 ದಿನಗಳಲ್ಲಿ ಆಪಸ್ತಂಭರು 11ನೆಯ ದಿನದಲ್ಲಿಯೂ ಶ್ರಾದ್ಧಗಳನ್ನು ಮಾಡಬೇಕು. ಇವುಗಳಿಗೆ ನವಶ್ರಾದ್ಧಗಳೆಂದು ಹೆಸರು. ಕರ್ಮವು ಆರಂಭ ಮಾಡಿದ ದಿನದಿಂದ 10 ದಿನದ ಪರ್ಯಂತ ಪ್ರತಿನಿತ್ಯವೂ ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸಬೇಕು.

ಹೀಗೆ ಭೋಜನ ಮಾಡಿದವರಿಗೆ ಸೂತಕಾನ್ನವನ್ನು ತಿಂದ ದೋಷವು ಬರುತ್ತದೆ. ಇದರ ಪರಿಹಾರಕ್ಕೆ ಒಂದು ಉಪಾಯವಿದೆ. ಅದೇನೆಂದರೆ ಮುಂದೆ ಪಿತೃಗಳ ಮರಣವು ಬರುತ್ತದೆ ಎಂದು ಗೊತ್ತಾದಾಗ ಮೊದಲೇ ಹತ್ತು ದಿನ ಬ್ರಾಹ್ಮಣರ ಭೋಜನಕ್ಕಾಗುವ ಖರ್ಚನ್ನು ತೆಗೆದಿಡಬೇಕು. ಹೀಗೆ ತೆಗೆದಿಟ್ಟ ಹಣದಲ್ಲಿಯೇ ಬ್ರಾಹ್ಮಣರ ಭೋಜನಕ್ಕಾಗುವ ಖರ್ಚನ್ನು ವಹಿಸಬೇಕು.

ಈ ಹತ್ತುದಿವಸವೂ ಮೃತಸ್ಥಳದಲ್ಲಿ ದಕ್ಷಿಣಾಭಿಮುಖವಾಗಿ ದೀಪವನ್ನು ಹಚ್ಚಿಟ್ಟಿರಬೇಕು. ಪ್ರತಿನಿತ್ಯವೂ ಒಂದು ದೊನ್ನೆಯಲ್ಲಿ ಹಾಲು, ಮತ್ತೊಂದು ದೊನ್ನೆಯಲ್ಲಿ ನೀರನ್ನು ಇಡಬೇಕು. ಈ ನೀರಿನಲ್ಲಿ ಸ್ನಾನ ಮಾಡು, ಈ ಹಾಲನ್ನು ಕುಡಿ ಎಂದು ಹೇಳಬೇಕು. ಇದನ್ನು ಇಡುವ ಉದ್ದೇಶವೇನೆಂದರೆ, ಆ ಜೀವಿಗೆ ದೇಹದ ಮೇಲಿನ ಅಭಿಮಾನವು ಹೋಗಿರುವುದಿಲ್ಲ. ದಹನದಿಂದಾಗಿ ಮೈಯೆಲ್ಲಾ ಉರಿದಂತೆ ಆಗುತ್ತಿರುತ್ತದೆ. ಈ ನೀರು ಹಾಲು ಇಡುವುದರಿಂದ ಆ ತಾಪದ ಶಾಂತಿಯು ಆಗುತ್ತದೆ.

ಕರ್ತೃವು ತನಗೆ ಬಡಿಸಿರುವ ಅನ್ನದಲ್ಲಿ ಒಂದು ಹಿಡಿ ಅನ್ನವನ್ನು ತೆಗೆದುಕೊಂಡು

ಪಿತೃವಿನ ನಾಮ, ಗೋತ್ರಗಳನ್ನು ಹೇಳಿ ಭೂಮಿಯ ಮೇಲೆ ಹಾಕಬೇಕು (ಬಲಿ-ಹರಣದಲ್ಲಿದ್ದಂತೆ). ಮತ್ತೊಂದು ಮಾಡಬೇಕಾದ ಕೆಲಸವೇನೆಂದರೆ, ಎರಡನೆಯ ದಿನ ಅಥವಾ ಮೂರನೆಯ ದಿನ ಅಂಕುರಾರ್ಪಣ ಮಾಡಬೇಕು. ಹಾಗೆಂದರೆ ಒಂದು ಮಣ್ಣಿನ ತಟ್ಟೆಯಲ್ಲಿ ಮಣ್ಣನ್ನು ಹಾಕಿ ಅದರಲ್ಲಿ ಭತ್ತ, ಗೋಧಿ, ಹೆಸರು, ಎಳ್ಳು ಮೊದಲಾದವನ್ನು ಬಿತ್ತಬೇಕು. ಹತ್ತನೆಯ ದಿನದ ಹೊತ್ತಿಗೆ ಪೈರು ಬಂದಿ-ರುತ್ತದೆ, ಅದನ್ನು ಪ್ರೇತನಿಗೆ ಗಡ್ಡ, ಮೀಸೆಗಳೆಂದು ಸಮರ್ಪಣೆ ಮಾಡಬೇಕು. ಈ ಹತ್ತು ದಿವಸಗಳಲ್ಲಿ ಗರುಡಪುರಾಣ ಪ್ರೇತಕಾಂಡವನ್ನು ಹೇಳಿಸಿ ಅದನ್ನು ಶ್ರದ್ಧೆಯಿಂದ ಕೇಳಬೇಕು. ಅದರಲ್ಲಿ ಹೇಳಿದಂತೆ ನಡೆದುಕೊಳ್ಳಬೇಕು. ಎಚ್ಚರಿಕೆ – ಮುತ್ತೈದೆಯು ಸತ್ತಾಗ ಗರುಡಪುರಾಣವನ್ನು ಹೇಳಿಸಬಾರದು ಎಂದು ಕೆಲವರು ಮೋಸ ಮಾಡು-ತ್ತಾರೆ. ಈ ಮೋಸಕ್ಕೆ ಒಳಗಾಗಬೇಡಿ.

ಪ್ರೇತಕಾರ್ಯವು ಮುಗಿಯುವವರೆಗೆ ಕರ್ತೃವು (ಶುಭಸ್ವೀಕಾರದ ವರೆಗೆ) ಹಾಲು, ಹಣ್ಣು, ಸಿಹಿ, ಪಾಯಸ ಇವುಗಳನ್ನು ಸ್ವೀಕರಿಸಬಾರದು. ಪ್ರತಿನಿತ್ಯ ರಾತ್ರಿ ನೀರು ಮಾತ್ರ ತೆಗೆದುಕೊಳ್ಳಬಹುದು. ಈ ಹತ್ತುದಿನವೂ ಕರ್ತೃಗಳ ಪತ್ನಿಯರು ತಲೆಯ ಮೇಲೆ ಸ್ನಾನವನ್ನು ಮಾಡಬೇಕು.

## ಹತ್ತನೆಯ ದಿನದ ಕೃತ್ಯ

ಹತ್ತನೆಯ ದಿನ ಧರ್ಮೋದಕವನ್ನು ಕೊಡಬೇಕು. ಧರ್ಮೋದಕ ಎಂದರೆ ಪುಣ್ಯವನ್ನು ಧಾರೆ ಎರೆದು ಕೊಡುವುದು ಎಂದು ಕೆಲವರು ತಿಳಿದಿದ್ದಾರೆ. ಹಾಗಲ್ಲ. ಮೃತರ ಋಣವನ್ನು ಪರಿಹಾರ ಮಾಡಿಕೊಳ್ಳುವುದಕ್ಕೋಸ್ಕರ ಕೊಡತಕ್ಕಂಥ ತಿಲೋದಕ. ಹೀಗೆ ಕೊಡುವಾಗ ಪುಣ್ಯವನ್ನೂ ಕೂಡ ಸಂಕಲ್ಪ ಮಾಡುವ ಪದ್ಧತಿ ಇದೆ. ಈ ಧರ್ಮೋದಕವನ್ನು ಬಂಧು, ಮಿತ್ರರುಗಳು ಎಲ್ಲರೂ ಕೊಡಬಹುದು. ತಂದೆ,ತಾಯಿಗಳು ಇದ್ದ ಮಕ್ಕಳು ಹಾಗೂ ಸುಮಂಗಲಿಯರು ಕೊಡಬಾರದು ಎಂಬ ನಿಷೇಧವೇನೂ ಇಲ್ಲ.

ಈ ಹತ್ತನೇ ದಿನವೇ ಹಿಂದೆ ಅಂಕುರಾರ್ಪಣ ಮಾಡಿದ್ದನ್ನು ಕರ್ಮ ಮಾಡುವ ಸ್ಥಳಕ್ಕೆ ತೆಗೆದುಕೊಂಡು ಹೋಗಿ, ಈಗ ಬಂದಿರುವ ದೇಹಕ್ಕೆ ಗಡ್ಡ ಮೀಸೆ ಬೆಳೆಯುವುದಕ್ಕೋಸ್ಕರ ಸಮರ್ಪಣೆ ಮಾಡಬೇಕು.

ಈ ದಿನವೇ ಆರಂಭದ ದಿನ ಮಾಡಿಕೊಂಡಿದ್ದ ಶಿಲೆ, ವಾಸಸ್ ಎಲ್ಲಾ ವಿಸರ್ಜನೆಯಾಗುತ್ತವೆ. ಆದ್ದರಿಂದ ಇದಕ್ಕೆ ಮುಂಚೆಯೇ ಇದುವರೆಗೂ ಹೇಳುತ್ತಿದ್ದ ಗರುಡಪುರಾಣವನ್ನು ಮುಗಿಸಬೇಕು. ಹತ್ತುದಿನದ ಒಳಗೆ ದರ್ಶ (ಅಮಾವಾಸ್ಯೆ) ಬರುವ ಪಕ್ಷಕ್ಕೆ ದರ್ಶಕ್ಕೆ ಮುಂಚೆಯೇ ಹತ್ತುದಿನದ ಕಾರ್ಯಗಳನ್ನು ಮುಗಿಸಬೇಕು ಮೂರುದಿನದ ಒಳಗೆ ದರ್ಶ ಬರುವ ಪಕ್ಷಕ್ಕೆ ದರ್ಶವು ಕಳೆದ ನಂತರವೇ ಕರ್ಮವನ್ನು ಆಚರಿಸಬೇಕು. ಹತ್ತನೆಯ ದಿನ ಏಕಾದಶೀ ಆಗುವ ಪಕ್ಷಕ್ಕೆ ದಶಮಿಯಂದೇ 9 ಮತ್ತು 10ನೆಯ ದಿನಗಳ ಕಾರ್ಯವನ್ನು ಮಾಡಬೇಕು.

ಹತ್ತನೆಯ ದಿನವೂ ಸಹ ಮುಂಡನ ಮಾಡಿಸಿಕೊಳ್ಳಬೇಕು.

## ಹನ್ನೊಂದನೆಯ ದಿನದ ಕೃತ್ಯ

ಕರ್ತೃಗಳನ್ನು ಸೇರಿದಂತೆ ಎಲ್ಲರಿಗೂ ಹನ್ನೊಂದನೆಯ ದಿನ ಪ್ರಾತಃಕಾಲದ ನಂತರ (ಸಾಧಾರಣವಾಗಿ 8-30ರ ನಂತರ) (ಏಕದಶಾಹೇ ಸಂಗವಕಾಲೇ ಸ್ನಾನಾತ್ ಶುದ್ಧಿಃ - ಧರ್ಮಸಿಂಧು) ಸೂತಕವು ಹೋಗುತ್ತದೆ. ಆದ್ದರಿಂದ ಸಂಧ್ಯಾವಂದನೆ ಮೊದಲಾದ ನಿತ್ಯಕರ್ಮಗಳಿಗೆ ಅವಕಾಶ ಇರುತ್ತದೆ. ಈ ನಿತ್ಯಕರ್ಮಗಳನ್ನು ಮುಗಿಸಿ-ಕೊಂಡು 11ನೆಯ ದಿನದ ಕರ್ಮಗಳನ್ನು ಆರಂಭಿಸಬೇಕು. ಶುದ್ಧಿಗೋಸ್ಕರವಾಗಿ ಪುಣ್ಯಾಹವಾಚನೆ, ಪಂಚಗವ್ಯಪ್ರಾಶನವನ್ನು ಮಾಡಬೇಕು. ಮನೆಗೂ ಪುಣ್ಯಾಹ-ಜಲದಿಂದ ಪ್ರೋಕ್ಷಣೆ ಮಾಡಬೇಕು. ಮನೆಯಲ್ಲಿ ಮರಣವಾಗಿದ್ದರೆ ಸಪ್ತಶುದ್ಧಿ ಮಾಡಬೇಕು.

## ವೃಷೋತ್ಸರ್ಗ

ಹನ್ನೊಂದನೆಯ ದಿನ ವೃಷೋತ್ಸರ್ಗವನ್ನು ಮಾಡಬೇಕು. ಹೋಮಪೂರ್ವಕ-ವಾಗಿ ಹೋರಿ ಕರುವನ್ನು ಗೋಸಂತಾನದ ಅಭಿವೃದ್ಧಿಗಾಗಿ ಬಿಡುವುದು ಈ ಕ್ರಿಯೆಯ ಅಭಿಪ್ರಾಯ. ಇದಕ್ಕೆ ಗ್ರಾಮೀಣ ಜನರು ದೇವರ ಗೂಳಿ ಬಿಡುವುದು ಎಂದು ಹೇಳುತ್ತಾರೆ. ಹೀಗೆ ಬಿಟ್ಟಂಥ ಹೋರಿಯನ್ನು (ಗೂಳಿಯನ್ನು) ಗಾಡಿಗೆ ಕಟ್ಟಬಾರದು. ಉಳುಮೆಗೆ ಉಪಯೋಗಿಸಬಾರದು. ಇದು ಬೀದಿಯ ಗೂಳಿಯಾಗಿ ಗೋ-ಸಂತತಿಯ ಅಭಿವೃದ್ಧಿಗೆ ಮಾತ್ರ ಕಾರಣವಾಗಬೇಕು.

ಈ ಕಾಲದಲ್ಲಿ ಗೋಹತ್ಯೆ ಹೆಚ್ಚಾಗಿರುವುದರಿಂದ ಇಂತಹ ಪ್ರತ್ಯಕ್ಷ ವೃಷೋತ್ಸರ್ಗ ಮಾಡುವುದು ಅಪಾಯಕರವಾಗಿರುತ್ತದೆ. ಆದ್ದರಿಂದ ಹಿಟ್ಟಿನಿಂದ ಹೋರಿಯ ಪ್ರತಿಮೆಯನ್ನು ಮಾಡಿಕೊಂಡು ಮಂತ್ರಪೂರ್ವಕವಾಗಿ ಅದನ್ನು ಬಿಡುವ ಪದ್ಧತಿಯಿದೆ. ಅದೂ ಮಾಡಲಾಗದಿದ್ದರೆ ಗೂಳಿಗೆ ಒಂದು ದಿನ ಆಗುವಷ್ಟು ಮೇವನ್ನು ಕೊಡಬಹುದು.

ಸುಮಂಗಲೀ ಮರಣದಲ್ಲಿ ವೃಷೋತ್ಸರ್ಗವನ್ನು ಮಾಡಬಾರದು. ಅದಕ್ಕೆ ಬದಲಾಗಿ ಒಂದು ಗೋದಾನವನ್ನು ಮಾಡಬೇಕು.

11ನೆಯ ದಿನ ಏಕಾದಶಿಯಾದಲ್ಲಿ ಕೆಲವರು ದಶಮೀ ದಿವಸವೇ 11ನೆಯ ದಿನದ ಕರ್ಮಗಳನ್ನು ಮಾಡಬೇಕೆಂದು ಹೇಳುತ್ತಾರೆ. ಆದರೆ ಇದು ಸರಿಯಲ್ಲ. ಏಕೆಂದರೆ, ಹತ್ತನೆಯ ದಿನ ಇನ್ನೂ ಸೂತಕ ಕಳೆದಿರುವುದಿಲ್ಲ. ಹೀಗಾಗಿ ಆ ದಿನ ಏಕಾಹ ಹೋಮ, ವೃಷೋತ್ಸರ್ಗ ಯಾವುದೂ ಮಾಡಲು ಸಾಧ್ಯವಿಲ್ಲ. ಆದ್ದರಿಂದ 11ನೆಯ ದಿನ ಏಕಾದಶಿಯಾದರೆ ದ್ವಾದಶಿಯಂದೇ 11 ಹಾಗೂ 12ನೆಯ ದಿನದ ಕರ್ಮಗಳನ್ನು ಮಾಡಬೇಕು.

## ಮಹೈಕೋದ್ದಿಷ್ಟ

ಈ ದಿನ ಏಕಾಹ ಹೋಮ ಎಂಬ ಹೋಮವನ್ನು ಮಾಡುತ್ತಾರೆ. ಇದನ್ನೇ ಮಹೈಕೋದ್ದಿಷ್ಟ ಎನ್ನುತ್ತಾರೆ. ಮುಂದೆ ಹೇಳುವಂತೆ ಸಪಿಂಡೀಕರಣ ಆಗುವವರೆಗೆ ತ್ರಿಪಿಂಡೀ ಶ್ರಾದ್ಧವಿಲ್ಲ (ಮೂರು ಪಿಂಡದ ಶ್ರಾದ್ಧವಿಲ್ಲ). ಮೃತರನ್ನು ಉದ್ದೇಶಿಸಿ ಒಂದು ಪಿಂಡ ಮಾತ್ರ ಇಟ್ಟು ಶ್ರಾದ್ಧ ಮಾಡಬೇಕು. ಇದಕ್ಕೆ ಏಕೋದ್ದಿಷ್ಟ ಎನ್ನುತ್ತಾರೆ. ಮುಂದೆ ಹೇಳುವ 16 ಮಾಸಿಕಗಳನ್ನು ಏಕೋದ್ದಿಷ್ಟಕ್ರಮದಿಂದ ಮಾಡಬೇಕು. ಅದಕ್ಕೆ ಪೂರ್ವದಲ್ಲಿಮಾಡುವ ಏಕೋದ್ದಿಷ್ಟಶ್ರಾದ್ಧ ಒಂದಿದೆ. ಅದೇ ಮಹೈಕೋದ್ದಿಷ್ಟ. ಇದರ ಅಂಗವಾಗಿ ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸಬೇಕು. ಆದರೆ ಈ ಸಾಕ್ಷಾತ ಏಕಾಹಭೋಜನ ಮಾಡಿದ ಬ್ರಾಹ್ಮಣನು ನಿರ್ಮಾಲ್ಯನಾಗುತ್ತಾನೆ. ಅವನು ಯಾವುದೇ ಹವ್ಯ ಕವ್ಯಗಳಲ್ಲಿ ನಿಷಿದ್ಧ. ಆದ್ದರಿಂದ ಹೀಗೆ ಭೋಜನ ಮಾಡಿಸತಕ್ಕವರು ಆ ಬ್ರಾಹ್ಮಣನಿಗೆ ಇಡೀ ಜೀವನಕ್ಕೆ ಬೇಕಾಗುವಷ್ಟು ಜೀವನಾಂಶವನ್ನು ಕೊಡಬೇಕು. ಇವೆಲ್ಲಾ ಸಾಧ್ಯವಾಗುವುದಿಲ್ಲ. ಆದ್ದರಿಂದ ಆ ಬ್ರಾಹ್ಮಣನಿಗೆ ಕೊಡಬೇಕಾಗಿದ್ದ

ತುತ್ತುಗಳನ್ನೆಲ್ಲಾ ಅಗ್ನಿಯಲ್ಲಿ ಹೋಮ ಮಾಡುತ್ತಾರೆ. ಇದನ್ನೇ ಏಕಾಹಹೋಮ ಎಂದು ಕರೆಯುತ್ತಾರೆ.

ಈ ಹನ್ನೊಂದನೆಯ ದಿನದಲ್ಲಿಯೇ ಮಾರನೆಯ ದಿನ ಎಂದರೆ 12ನೆಯ ದಿನ ಮಾಡಬೇಕಾಗಿರುವ ಸಪಿಂಡೀಕರಣಕ್ಕೆ ಪೂರ್ವಭಾವಿಯಾದ ಮತ್ತೆ ಕೆಲವು ಕ್ರಿಯೆಗಳನ್ನೂ ಮಾಡುತ್ತಾರೆ. ಇವುಗಳಲ್ಲಿ ಒಂದು ಏಕಾದಶರುದ್ರರನ್ನು ಉದ್ದೇಶಿಸಿ ಮಾಡುವ ರುದ್ರಗಣಶ್ರಾದ್ಧ. ಇದರಂತೆ ಅಷ್ಟವಸುಗಳನ್ನು ಉದ್ದೇಶಿಸಿ ಮಾಡುವ ವಸುಗಣ ಶ್ರಾದ್ಧವೂ ಇದೆ. ಈ ವಸುಗಣಶ್ರಾದ್ಧವು ಕೃತಾಕೃತ ಎಂದರೆ ಮಾಡಲೂ ಬಹುದು, ಬಿಡಲೂ ಬಹುದು. ಹೀಗೆ ಇರುವುದರಿಂದ ಇವತ್ತು ಯಾರೂ ಇದನ್ನು ಮಾಡುವುದಿಲ್ಲ. ಮಾಡುವುದು ಒಳ್ಳೆಯದು.

## ಷೋಡಶತ್ರಯ

ಮುಂದೆ ಹೇಳಲಾಗುವ ಸಪಿಂಡೀಕರಣಕ್ಕೆ ಮುಂಚೆ 16, 16 ಪಿಂಡಗಳ ಮೂರನ್ನು ಮಾಡಬೇಕು. ಇದನ್ನು ಷೋಡಶತ್ರಯ ಎನ್ನುತ್ತಾರೆ. ಮಲಿನಷೋಡಶ, ಮಧ್ಯಮಷೋಡಶ ಮತ್ತು ಉತ್ತಮಷೋಡಶ ಎಂದು ಮೂರು ಷೋಡಶಗಳು. ಅದರಲ್ಲಿ ಹತ್ತು ದಿನ ಕಳೆಯುವ ಒಳಗೆ 16ಪಿಂಡಪ್ರದಾನಗಳು ಆಗಿರುತ್ತದೆ. ಇದೇ ಮಲಿನಷೋಡಶ.

ಇದಾದ ಮೇಲೆ ಅಗ್ನಿ ವಿಷ್ಣು ಮೊದಲಾದ 16 ದೇವತೆಗಳನ್ನು ಕುರಿತು 16 ಪಿಂಡಪ್ರದಾನ ಮಾಡಬೇಕು. ಲೋಕದಲ್ಲಿ ಪ್ರಾಯಃ ಇದು ತಪ್ಪಿಹೋಗಿದೆ. ಕರ್ತೃಗಳೂ ಪುರೋಹಿತರೂ ಸಹ ಇದರ ಬಗ್ಗೆ ಗಮನ ಹರಿಸಬೇಕು. ಕರ್ತೃಗಳು ಮಧ್ಯಮಷೋಡಶಿಯನ್ನು ಮಾಡಿಸಿ ಎಂದು ಪುರೋಹಿತರನ್ನು ಕೇಳಬೇಕು. ಪುರೋಹಿತರು ತಮಗೆ ಈ ವಿಧಾನ ತಿಳಿಯದಿದ್ದರೆ ತಿಳಿದವರಲ್ಲಿ ವಿಚಾರಿಸಿ ತಿಳಿದುಕೊಂಡು ಮಾಡಿಸಬೇಕು.

ಇದಾದನಂತರ ಉತ್ತಮಷೋಡಶಿಯನ್ನು ಮಾಡಬೇಕು. ಈ 16 ಪಿಂಡಗಳ ಲೆಕ್ಕವೇನೆಂದರೆ 12 ಮಾಸಿಕಗಳದ್ದು 12, ಊನಮಾಸಿಕ, ತ್ರೈಪಕ್ಷಿಕ, ಊನಷಾಣ್ಮಾಸಿಕ, ಊನಾಬ್ದಿಕ ಈ ನಾಲ್ಕರ 4 ಪಿಂಡಗಳು. ಈ 16 ಪಿಂಡಗಳನ್ನು ಕೊಟ್ಟಮೇಲೆಯೇ

ಸಪಿಂಡೀಕರಣವನ್ನು ಮಾಡಬೇಕು. ಹೀಗೆ ಮಾಡಲು ಹೋದರೆ ಸಪಿಂಡೀಕರಣವನ್ನು ವರ್ಷದ ಕೊನೆಯಲ್ಲಿ ಮಾಡಬೇಕಾಗುತ್ತದೆ. ಆದರೆ, ಮುಂದೆ ಹೇಳುವಂತೆ 12ನೆಯ ದಿನ ಮಾಡುವುದೇ ಸೂಕ್ತವಾದುದು. ಆದ್ದರಿಂದ ಈ 16 ಶ್ರಾದ್ಧಗಳನ್ನು ಅಪಕರ್ಷಣ ಮಾಡಿಕೊಂಡು 11ನೆಯ ದಿನ ಅಥವಾ 12ನೆಯ ದಿನ ಸಪಿಂಡೀಕರಣಕ್ಕೆ ಮುಂಚೆ ಮಾಡಬೇಕು. ಹಾಗೆ ಮಾಡದಿದ್ದರೆ ಸಪಿಂಡೀಕರಣವೇ ಸಿದ್ಧಿಸುವುದಿಲ್ಲ.

ಪ್ರಥಮಮಾಸಿಕವನ್ನು 11ನೆಯ ದಿನವೇ ಮಾಡಬೇಕು. ಇದರ ಉದ್ದೇಶ ಹೀಗಿದೆ. ಮೃತರಾದ ದಿನವೇ ಪ್ರಥಮಮಾಸಿಕವನ್ನು ಮಾಡಬೇಕಿತ್ತು. ಆದರೆ ಆಗ ಸೂತಕವಿದ್ದುದ್ದರಿಂದ ಅಂದು ಮಾಡಲು ಆಗಿರಲಿಲ್ಲ. ಆದ್ದರಿಂದ ಸೂತಕ ಕಳೆದ ದಿನವೇ ಅಂದರೆ ಹನ್ನೊಂದನೆಯ ದಿನವೇ ಈ ಪ್ರಥಮಮಾಸಿಕವನ್ನು ಮಾಡಬೇಕಾಗಿದೆ.

ಇದೇ ಪ್ರಥಮಮಾಸಿಕದಲ್ಲೇ ಪ್ರಥಮವಾರ್ಷಿಕವೂ ಅಂತರ್ಗತ ಎಂದು ಕೆಲವರ ಅಭಿಪ್ರಾಯ. ಒಂದು ವರ್ಷವಾದ ಮೇಲೆ ಮಾಡುವ ಕಾಲಶ್ರಾದ್ಧವೇ ಪ್ರಥಮವಾರ್ಷಿಕ ಎಂದು ಮತ್ತೆ ಕೆಲವರ ಅಭಿಪ್ರಾಯ.

## ಹನ್ನೆರಡನೆಯ ದಿನದ ಕೃತ್ಯ

ಹನ್ನೆರಡನೆಯ ದಿನ ಸಪಿಂಡೀಕರಣವನ್ನು ಮಾಡಬೇಕು. ಸಪಿಂಡೀಕರಣ ಎಂದರೆ, ಮೃತರಾದ ಪಿತೃಗಳನ್ನು ಪಿತೃವರ್ಗಕ್ಕೆ ಸೇರಿಸುವ ಕ್ರಮ. ಇದನ್ನು ಸ್ವಲ್ಪ ವಿವರಿಸುತ್ತೇವೆ.

ನಮ್ಮ ತಂದೆಯು ಅವರ ಪಿತೃ, ಪಿತಾಮಹ, ಪ್ರಪಿತಾಮಹರಿಗೆ ಪಿಂಡಪ್ರದಾನ ಮಾಡುತ್ತಿದ್ದರು. ಇನ್ನು ಮುಂದೆ ನಾವು ನಮ್ಮ ಪಿತೃ, ಪಿತಾಮಹ, ಪ್ರಪಿತಾಮಹರಿಗೆ ಪಿಂಡಪ್ರದಾನ ಮಾಡಬೇಕಾಗಿದೆ. ಇದಕ್ಕಾಗಿ ನಮ್ಮ ತಂದೆಯ ಪ್ರಪಿತಾಮಹರನ್ನು (ನಮ್ಮ ವೃದ್ಧ ಪ್ರಪಿತಾಮಹರನ್ನು) ಆ ವರ್ಗದಿಂದ ಮುಕ್ತಗೊಳಿಸಿ (ಬಿಡಿಸಿ) ಆ ವರ್ಗಕ್ಕೆ ನಮ್ಮ ತಂದೆಯನ್ನು ಸೇರಿಸಬೇಕಾಗಿದೆ. ಇದನ್ನು ಮಾಡುವ ಕ್ರಮಕ್ಕೆ ಸಪಿಂಡೀಕರಣ ಎನ್ನುತ್ತಾರೆ.

ಈ ಸಪಿಂಡೀಕರಣವನ್ನು ಹನ್ನೊಂದನೆಯ ದಿನ ಅಥವಾ ಹನ್ನೆರಡನೆಯ ದಿನ

ಅಥವಾ ಒಂದು ತಿಂಗಳ ನಂತರ ಅಥವಾ ಮೂರು ಪಕ್ಷವಾದ ನಂತರ (ಒಂದೂವರೆ ತಿಂಗಳ ನಂತರ) ಅಥವಾ ಮೂರು ತಿಂಗಳ ನಂತರ ಅಥವಾ ಆರು ತಿಂಗಳ ನಂತರ ಅಥವಾ 11 ತಿಂಗಳ ನಂತರ ಅಥವಾ ಒಂದು ವರ್ಷದ ನಂತರ ಮಾಡಬೇಕು. ಹೀಗೆ ಅನೇಕ ರೀತಿ ಹೇಳಿದ್ದರೂ ಶ್ರೀಕೃಷ್ಣನು ಗರುಡನಿಗೆ ಹೀಗೆ ಹೇಳಿರುತ್ತಾನೆ.

''ಕಲಿಯುಗದಲ್ಲಿ ಆಯಸ್ಸು ನಿಶ್ಚಿತವಿಲ್ಲ. ಸಪಿಂಡೀಕರಣ ಆಗುವವರೆಗೆ ವೈಶ್ವದೇವ ಮಾಡುವಂತಿಲ್ಲ. ಯತಿಗಳು ಆ ಮನೆಯಲ್ಲಿ ಭಿಕ್ಷೆ ಸ್ವೀಕರಿಸುವಂತಿಲ್ಲ. ಮದುವೆ, ಮುಂಜಿ ಮೊದಲಾದ ಕುಲಾಚಾರವನ್ನು ಮಾಡುವ ಹಾಗಿಲ್ಲ. ಆದ್ದರಿಂದ ಹನ್ನೆರಡನೆಯ ದಿನವೇ ಮಾಡಬೇಕು ಎಂದು ನನ್ನ ಮತ''. ಹೀಗೆ ಶ್ರೀಕೃಷ್ಣನು ಹೇಳಿರುವುದರಿಂದ 12ನೆಯ ದಿನವೇ ಮಾಡುವುದು ಸೂಕ್ತ.

12ನೆಯ ದಿನ ಕರ್ತೃವಿನ ಪತ್ನಿ ರಜಸ್ವಲೆಯಾಗಿದ್ದರೆ ಅಂದು ಸಪಿಂಡೀಕರಣ ಮಾಡುವಂತಿಲ್ಲ. ಆಗ 16ನೆಯ ದಿನ ಮಾಡಬಹುದು. 12ದಿನ ಋತುಸ್ನಾನ-ವಾಗಿದ್ದರೂ ಅಂದು ಮಾಡುವ ಹಾಗಿಲ್ಲ. ಅಂದು 5ನೆಯ ದಿನವಾಗಿದ್ದರೆ ಮಾತ್ರ ಮಾಡಬಹುದು.

ಏನಾದರೂ ಕಾರಣದಿಂದ ಕಿರಿಯಮಗನು ಸಪಿಂಡೀಕರಣ ಮಾಡಿದ್ದರೂ ಹಿರಿಯ ಮಗನು ಪುನಃ ಮಾಡಲೇ ಬೇಕು. ಇಂತಹ ಸಂದರ್ಭದಲ್ಲಿಯೂ ಒಂದು ತಿಂಗಳು ಮೊದಲಾದ್ದನ್ನು ಆರಿಸಿಕೊಳ್ಳಬಹುದು.

ಸಪಿಂಡೀಕರಣಕ್ಕೆ ಮುಂಚೆ ಏಕೋದ್ದಿಷ್ಟ ವಿಧಾನದಿಂದ (ಒಂದು ಪಿಂಡಪ್ರದಾನ) ಶ್ರಾದ್ಧ ಮಾಡಬೇಕು. ಸಪಿಂಡೀಕರಣವಾದ ನಂತರ ಪಾರ್ವಣ ವಿಧಿಯಿಂದ (ಮೂರುಪಿಂಡಪ್ರದಾನ) ಶ್ರಾದ್ಧ ಮಾಡಬೇಕು. ಕೆಲವರು ಸಪಿಂಡೀಕರಣ ಮಾಡಿದ್ದರೂ ವರ್ಷದವರೆಗೆ ಏಕೋದ್ದಿಷ್ಟವಿಧಾನದಿಂದಲೇ ಶ್ರಾದ್ಧ ಮಾಡಬೇಕು ಎನ್ನುತ್ತಾರೆ. ಇದು ಸರಿಯಲ್ಲವೆಂದು ಧರ್ಮಶಾಸ್ತ್ರನಿಬಂಧನಕಾರರು ಹೇಳಿರುತ್ತಾರೆ –

ಸಪಿಂಡೀಕರಣಾದೂರ್ಧ್ವಂ ನ ದದ್ಯಾತ್ ಪ್ರತಿಮಾಸಿಕಮ್ ।
ಏಕೋದ್ದಿಷ್ಟವಿಧಾನೇನ ದದ್ಯಾದಿತ್ಯಾಹ ಶೌನಕಃ ॥

ಇತಿ ತತ್ರ ಏಕೋದ್ದಿಷ್ಟವಿಧಾನೇನ ನ ದದ್ಯಾತ್ ಇತ್ಯನ್ವಯಃ – ಕಾತೀಯವಚನ ।

ಸಪಿಂಡೀಕರಣದಲ್ಲಿ ಪ್ರೇತನನ್ನು ಉದ್ದೇಶಿಸಿ (ಮೃತಪುರುಷನನ್ನು ಉದ್ದೇಶಿಸಿ) ಸೌತೇಕಾಯಿ ಆಕಾರದ ಪಿಂಡವನ್ನು ಕೊಟ್ಟು, ಪಿತಾಮಹ, ಪ್ರಪಿತಾಮಹ, ವೃದ್ಧಪಿತಾಮಹರನ್ನು ಉದ್ದೇಶಿಸಿ ಪಿಂಡಗಳನ್ನು ಕೊಟ್ಟು, ಪ್ರೇತಪಿಂಡವನ್ನು ಮೂರು ಭಾಗ ಮಾಡಿ ಆ ಮೂರುಭಾಗಗಳನ್ನು ಮೇಲೆ ಹೇಳಿದ ಪಿತಾಮಹಾದಿಗಳ ಮೂರು ಪಿಂಡಕ್ಕೆ ಸೇರಿಸಿ, ಹೀಗೆ ಸೇರಿಸಿ ಇಟ್ಟ ಮೂರು ಪಿಂಡಗಳನ್ನು ಪಿತೃ, ಪಿತಾಮಹ, ಪ್ರಪಿತಾಮಹರನ್ನು ಉದ್ದೇಶಿಸಿ ಕೊಡಬೇಕು. ಮೇಲೆ ಹೇಳಿದಂತೆ ಪ್ರೇತಪಿಂಡವನ್ನು ಭಾಗ ಮಾಡಲು ಬಂಗಾರದ ತಂತಿಯನ್ನು ಉಪಯೋಗಿಸಬೇಕು. ಇದಕ್ಕಾಗಿ ಮುಂಚಿತವಾಗಿ ಯೋಜನೆ ಮಾಡಿಕೊಂಡು ಸುಮಾರು ಹದಿನೆಂಟು ಅಂಗುಲ ಉದ್ದವಿರುವ ಬಂಗಾರದ ತಂತಿಯನ್ನು ಮಾಡಿಸಿ ಇಟ್ಟುಕೊಳ್ಳಬೇಕು.

ಸಪಿಂಡೀಕರಣ ಶ್ರಾದ್ಧದಲ್ಲಿ ದೇವತಾಸ್ಥಾನಕ್ಕೆ ಇಬ್ಬರು, ಪಿತೃಸ್ಥಾನಕ್ಕೆ ಮೂವರು, ಪ್ರೇತಸ್ಥಾನಕ್ಕೆ ಒಬ್ಬರು ಹೀಗೆ ಆರುಜನಕ್ಕೆ ಭೋಜನ ಮಾಡಿಸಬೇಕು. ಈಗಿನ ಕಾಲದಲ್ಲಿ ಶುದ್ಧವಾದ ಬ್ರಾಹ್ಮಣರು ಸಿಗುವುದು ಕಷ್ಟವಾದ್ದರಿಂದ ದರ್ಭೆಯ ಬ್ರಾಹ್ಮಣರನ್ನು ಕೂಡಿಸಿ ಶ್ರಾದ್ಧಮಾಡಿಸುವುದು ಸೂಕ್ತ ಎನಿಸುತ್ತದೆ. ಹೀಗೆ ಮಾಡಿದಾಗ ಸಪಿಂಡೀಕರಣಶ್ರಾದ್ಧದ ಅಂಗವಾಗಿ ಆ ನಂತರ ಭೂರಿಬ್ರಾಹ್ಮಣರ ಭೋಜನ ಮಾಡಿಸಬೇಕು. ಆರು ಜನ ಬ್ರಾಹ್ಮಣರಿಗೆ ಭೋಜನ ಮಾಡಿಸಿ ದರ್ಭೆ ಬ್ರಾಹ್ಮಣರಿಗೆ ಇಟ್ಟಿದ್ದ ಪದಾರ್ಥಗಳನ್ನು ಇವರಿಗೆ ಕೊಡಬೇಕು.

ಮೇಲೆ ಹೇಳಿದಂತೆ ಆರು ಜನ ಬ್ರಾಹ್ಮಣರಿಗೆ ಭೋಜನ ಮಾಡಿಸಲು ಸಾಧ್ಯವಿಲ್ಲದಿದ್ದರೆ ದೇವತಾಸ್ಥಾನಕ್ಕೆ ಒಬ್ಬರು, ಪಿತೃಸ್ಥಾನಕ್ಕೆ ಒಬ್ಬರು, ಪ್ರೇತಸ್ಥಾನಕ್ಕೆ ಒಬ್ಬರು ಹೀಗೆ ಮೂರು ಜನಕ್ಕೆ ಭೋಜನ ಮಾಡಿಸಬೇಕು. ಸಪಿಂಡೀಕರಣ ಶ್ರಾದ್ಧವಾದ ಮೇಲೆ ಸ್ನಾನಮಾಡಿ ಶುದ್ಧಪುಣ್ಯಾಹವಾಚನವನ್ನು ಮಾಡಿಸಿಕೊಂಡು ಅನಂತರ ಭೂರಿಬ್ರಾಹ್ಮಣರ ಭೋಜನ ಮಾಡಿಸಬೇಕು.

## ೧೩ನೆಯ ದಿನದ ಕೃತ್ಯ

13ನೆಯ ದಿನ ಲೋಕದಲ್ಲಿ ಅನೇಕರು ಮಾಸಿಕ ಎಂದು ಮಾಡುತ್ತಿದ್ದಾರೆ. ಇದು ಏನೆಂದರೆ, ಮುಂದೆ ವರ್ಷ ಪರ್ಯಂತ ಮಾಡಬೇಕಾಗಿದ್ದ ದ್ವಿತೀಯ ಮಾಸಿಕ ಮೊದಲಾದ 11 ಮಾಸಿಕಗಳು, ಊನ ಮಾಸಿಕ ಮೊದಲಾದ ನಾಕು. ಹೀಗೆ 15

ಶ್ರಾದ್ಧಗಳನ್ನು ಇವತ್ತೇ ಒಟ್ಟಿಗೆ ಮಾಡತಕ್ಕದ್ದು. ಇದಕ್ಕೆ ಮಾಸಿಕ ಅಪಕರ್ಷಣ ಎನ್ನುತ್ತಾರೆ. ಮನೆಯಲ್ಲಿ ಕನ್ಯಾದಾನ ಮೊದಲಾದದ್ದನ್ನು ಮಾಡುವ ಸಂದರ್ಭವಿದ್ದರೆ ಈ ಮಾಸಿಕ ಅಪಕರ್ಷಣವನ್ನು ಮಾಡಬೇಕಾಗುತ್ತದೆ. ಹಾಗೆ ಮಾಡದಿದ್ದರೆ ನಾಂದಿ ಇಡಲು ಬರುವುದಿಲ್ಲ. ನಾಂದಿ ಇಡುವ ಸಂದರ್ಭವಿಲ್ಲದೇ ಮಾಸಿಕ ಅಪಕರ್ಷಣ-ವನ್ನು ಮಾಡಿದರೆ ಪಿತೃಗಳಿಗೆ ರೌರವ ನರಕವಾಗುತ್ತದೆ. ಆದ್ದರಿಂದ 13ನೆಯ ದಿನ ಮಾಸಿಕ ಅಪಕರ್ಷಣ ಮಾಡಬಾರದು.

ವೃದ್ಧಿಂ ವಿನಾ ಅಪಕರ್ಷೇ ದೋಷಮಾಹೋಶನಾಃ –

'ವೃದ್ಧಿಶ್ರಾದ್ಧವಿಹೀನಸ್ತು ಪ್ರೇತಶ್ರಾದ್ಧಾನಿ ಯಶ್ಚರೇತ್ ।
ಸ ಶ್ರಾದ್ಧೀ ನರಕೇ ಘೋರೇ ಪಿತೃಭಿಃ ಸಹ ಮಜ್ಜತಿ ॥'

ಹಾಗಾದರೆ 13ನೆಯ ದಿನ ಏನು ಮಾಡಬೇಕು? ಎಂದರೆ

ಶ್ರವಣದೇವತೆಗಳ ಆರಾಧನೆ ಮಾಡಬೇಕು. ಶ್ರವಣ ದೇವತೆಗಳೆಂದರೆ ನಾವು ಮಾಡುವ ಪಾಪ,ಪುಣ್ಯಗಳನ್ನು ವರದಿ ಒಪ್ಪಿಸುವ ಚಿತ್ರಗುಪ್ತರ ಭೃತ್ಯರು. ಅವರ ಪ್ರೀತಿಗಾಗಿ ಬ್ರಾಹ್ಮಣರ ಸಮಾರಾಧನೆ ಮಾಡಿಸಬೇಕು. ಈ ದಿನವೇ ಬಂಧು, ಮಿತ್ರರಿಗೆಲ್ಲಾ ಮಹಾಸಮಾರಾಧನೆ ಮಾಡಿಸಬೇಕು. ಇದನ್ನೇ ವೈಕುಂಠಸಮಾರಾಧನೆ ಎನ್ನುತ್ತಾರೆ. ವೈಕುಂಠಸಮಾರಾಧನೆ ಎಂಬ ಹೆಸರು ಧರ್ಮಶಾಸ್ತ್ರದಲ್ಲಿ ಎಲ್ಲೂ ಕಾಣಿಸುತ್ತಿಲ್ಲ. ಈ ದಿನ 13ಜನ ಬ್ರಾಹ್ಮಣರಿಗೆ ಭೋಜನ ಮಾಡಿಸಿ ದಶದಾನಗಳು, ಶಯ್ಯಾದಾನ, ಪದದಾನ, ಸ್ತ್ರೋತಕುಂಭದಾನ ಇವುಗಳನ್ನು ಮಾಡಬೇಕು.

## ಉದಕುಂಭಶ್ರಾದ್ಧ

ಉದಕುಂಭಶ್ರಾದ್ಧವೆಂದರೆ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧವನ್ನು ಮಾಡಿ ಪಿತೃಗಳ ತೃಪ್ತಿಗಾಗಿ ಉದಕುಂಭದಾನವನ್ನು ದಾನ ಮಾಡಬೇಕು. ಈ ಶ್ರಾದ್ಧದಲ್ಲಿ ಪಿಂಡಪ್ರದಾನವಿಲ್ಲ. ಒಬ್ಬ ಬ್ರಾಹ್ಮಣನಿಗೆ ಪಾದಪ್ರಕ್ಷಾಲನೆ ಮಾಡಿ, ಯಜ್ಞೋಪವೀತ, ಗೋಪೀಚಂದನ ಮೊದಲಾದವನ್ನು ಕೊಟ್ಟು ಉದಕುಂಭ ದಾನಮಾಡಿ ಭೋಜನ ಮಾಡಿಸಬೇಕು. ಇದನ್ನು ಪಿತೃಗಳು ಮೃತರಾದ ವರ್ಷದಲ್ಲಿ ಪ್ರತಿನಿತ್ಯವೂ ಮಾಡಬೇಕು. ಅದು ಸಾಧ್ಯವಾಗದಿದ್ದರೆ, ತಿಂಗಳಿಗೆ ಒಮ್ಮೆಯಾದರೂ ಮಾಡಬೇಕು.

ಅದೂ ಆಗದಿದ್ದರೆ ವರ್ಷದಲ್ಲಿ ಒಮ್ಮೆಯಾದರೂ ಮಾಡಬೇಕು. ತಿಂಗಳು, ತಿಂಗಳು ಮಾಡುವ ಸೌಕರ್ಯವಿಲ್ಲದಿದ್ದರೆ 12 ತಿಂಗಳಿಗೆ 12, ವರ್ಷಾಂತ್ಯಕ್ಕೆ 1 ಎಂದು ಸಂಕಲ್ಪಿಸಿ 13ನ್ನೆಯ ದಿನವೇ 13 ಬ್ರಾಹ್ಮಣರಿಗೆ 13 ಉದಕುಂಭದಾನ ಮಾಡಬಹುದು. ಅದರಂತೆ ಪ್ರತಿನಿತ್ಯವೋ ಅಥವಾ ತಿಂಗಳಿಗೊಂದು ದೀಪದಾನ ಮಾಡುವುದು ಪ್ರಶಸ್ತ.

## ದಾನಗಳ ವಿವರ

13ನೆಯ ದಿನ ಬ್ರಾಹ್ಮಣರಿಗೆ ದಾನ ಮಾಡಬೇಕೆಂದು ಹಿಂದೆ ಹೇಳಿದೆ. ಹಿಂದೆ ಆತುರದಾನ ಹೇಳುವಾಗ ದಶದಾನಗಳ ವಿವರಣೆ ಹಿಂದೆ ಕೊಡಲಾಗಿದೆ. ಇತರ ದಾನಗಳ ಬಗ್ಗೆ ಸ್ವಲ್ಪ ವಿವರಣೆ ಕೊಡುತ್ತೇವೆ.

01. ಸಾಲಿಗ್ರಾಮ ದಾನ – ಸಾಲಿಗ್ರಾಮ ದಾನ ಬಹಳ ಪುಣ್ಯಕರ. ಈ ಸಾಲಿಗ್ರಾಮ ದಾನ ಮಾಡುವಾಗ ಅದರ ಜೊತೆಯಲ್ಲಿ ಪೂಜೆಗೆ ಬೇಕಾದ ಉಪಕರಣ -ಗಳನ್ನು ಕೊಡುವ ಪದ್ಧತಿಯಿದೆ. ಈಗಿನ ಕಾಲದಲ್ಲಿ ನಕಲಿ ಸಾಲಿಗ್ರಾಮಗಳು ಹೆಚ್ಚುತ್ತಿವೆ. ಈ ಬಗ್ಗೆ ಎಚ್ಚರವಿರಬೇಕು.

ಮುಖ್ಯವಾದ ಮತ್ತೊಂದು ವಿಷಯವೇನೆಂದರೆ, ಸಾಲಿಗ್ರಾಮವನ್ನು ಕೊಳ್ಳಲೂ ಬಾರದು, ಮಾರಲೂ ಬಾರದು. 'ಬೆಲೆ ಕಟ್ಟುವವರು, ಕೊಳ್ಳುವವರು, ಮಾರುವವರು ಈ ಮೂರು ಜನರೂ ಸಹ ನರಕಕ್ಕೆ ಬೀಳುತ್ತಾರೆ' ಎಂದು ಶಾಸ್ತ್ರಹೇಳುತ್ತದೆ. ಆದ್ದರಿಂದ ಸಾಲಿಗ್ರಾಮದಾನ ಮಾಡಲು ಕೊಂಡು ತರಬಾರದು. ಆದ್ದರಿಂದ ಸಾಲಿಗ್ರಾಮದಾನ ಮಾಡಲು ಕೊಂಡು ಬರಬಾರದು. ಹೆಚ್ಚಿಗೆ ಇದ್ದಲ್ಲಿ ದಾನ ಮಾಡುವುದು.

ಸಾಲಿಗ್ರಾಮದಾನ ಸಾಧ್ಯವಾಗದಿದ್ದಾಗ ಸಾಲಿಗ್ರಾಮದಂತೆಯೇ ಪವಿತ್ರವಾದ ಚಕ್ರಾಣಿಕೆ ದಾನ ಮಾಡಬಹುದು. ಚಕ್ರಾಣಿಕೆ ಸುಲಭವಾಗಿ ಸಿಗುವುದರಿಂದ ಜನಗಳಿಗೆ ಅದರ ಬೆಲೆ ಗೊತ್ತಾಗುತ್ತಿಲ್ಲ. ಶ್ರೀಮದಾಚಾರ್ಯರ ದೃಷ್ಟಿಕೋನದಲ್ಲಿ ಸಾಲಿಗ್ರಾಮದಷ್ಟೇ ಪವಿತ್ರವಾದದ್ದು ಚಕ್ರಾಣಿಕೆ.

02. ಪದದಾನ – ಪದದಾನ ಎಂದರೆ ಛತ್ರಿ, ಪಾದರಕ್ಷೆ, ಚಾಪೆ ಮತ್ತು ದಂಡಗಳ ದಾನ ಎಂದು ಹಿಂದೆಯೇ ಹೇಳಿದೆ. ಇವಿಷ್ಟನ್ನೂ ಒಬ್ಬರಿಗೇ ಕೊಡಬೇಕು. ಹೊರತಾಗಿ ವಿಭಾಗ ಮಾಡಿ ಒಬ್ಬೊಬ್ಬರಿಗೆ ಒಂದೊಂದನ್ನು ಕೊಡಬಾರದು.

03. ಶಯ್ಯಾದಾನ – ಶಯ್ಯಾದಾನವನ್ನು ಚಿಕ್ಕವಯಸ್ಸಿನ ದಂಪತಿಗಳಿಗೆ ಕೊಡಬೇಕು. ಇಲ್ಲಿಯೂ ಸಹ ಹಾಸಿಗೆ, ದಿಂಬು, ಮಗ್ಗಲು ಹಾಸಿಗೆ (ಬೆಡ್‌ಶೀಟ್), ಹೊದಿಕೆ ಇವೆಲ್ಲವನ್ನೂ ಒಬ್ಬ ದಂಪತಿಗಳಿಗೇ ಕೊಡಬೇಕು. ಬೇರೆ ಬೇರೆ ಮಾಡಬಾರದು.

ಇದರ ಜೊತೆಗೆ ಶಯ್ಯಾಗೃಹಕ್ಕೆ ಯೋಗ್ಯವಾದ ಕನ್ನಡಿ, ತಾಂಬೂಲದ ತಟ್ಟೆ, ಹಾಲು ಕುಡಿಯುವ ಪಾತ್ರೆ, ಶೃಂಗಾರಸಾಮಗ್ರಿಗಳು ಇವುಗಳನ್ನು ಕೊಡಬೇಕು. ಅನುಕೂಲವಿದ್ದರೆ ಮಂಚವನ್ನೂ ಕೊಡಬೇಕು. ಇನ್ನೂ ಅನುಕೂಲವಿದ್ದರೆ ಶಯ್ಯಾಗೃಹವನ್ನು ಕಟ್ಟಿಸಿ ಕೊಡಬೇಕು. ಒಟ್ಟಿನಲ್ಲಿ ಹೇಳುವುದಾದರೆ ಮಗಳನ್ನು ಗಂಡನ ಮನೆಗೆ ಕಳುಹಿಸಿಕೊಡುವಾಗ ಎಷ್ಟು ಆದರದಿಂದ ವೈಭವದಿಂದ ಕಳುಹಿಸಿ ಕೊಡುತ್ತಾರೋ ಆ ರೀತಿ ಶಯ್ಯಾದಾನ ಮಾಡಬೇಕು.

ಈ ಶಯ್ಯಾದಾನವನ್ನು ಹಿಂದೆ ಗರುಡಪುರಾಣ ಹೇಳಿದ ಪುರಾಣಿಕರಿಗೆ ಕೊಡಬೇಕೆಂದು ಶ್ರೀಕೃಷ್ಣನ ವಚನವಿದೆ. ಹೀಗೆ ಶಯ್ಯಾದಾನ ಮಾಡುವಾಗ ಶಯ್ಯೆಯನ್ನು ಸಿದ್ಧಪಡಿಸಿ ಅದರ ಮೇಲೆ ಶ್ರೀಲಕ್ಷ್ಮೀನಾರಾಯಣರ ಪ್ರತಿಮೆ ಇಟ್ಟು ಹಣ್ಣುಹಾಲು ಸಮರ್ಪಣೆ ಮಾಡಿ ಆರತಿ ಮಾಡಬೇಕು. ಅನಂತರ ದಂಪತಿಗಳನ್ನು ಶಯ್ಯೆಯಲ್ಲಿ ಕೂಡಿಸಿ ಅವರಿಗೆ ವಸ್ತ್ರ, ಗಂಧ, ತಾಂಬೂಲಗಳನ್ನು ಕೊಟ್ಟು ಅವರಿಗೂ ಆರತಿ ಮಾಡಬೇಕು.

ಸ್ರೋತಕುಂಭದಾನ – ಪಿತೃಗಳು ಮೃತರಾದ ವರ್ಷದಲ್ಲಿ ಪ್ರತಿನಿತ್ಯವೂ ಅವರನ್ನು ಉದ್ದೇಶಿಸಿ ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸಬೇಕು. ಇದು ಆಗದೇ ಇದ್ದಾಗ ಒಂದು ವರ್ಷ ಒಬ್ಬ ಬ್ರಾಹ್ಮಣನು ಭೋಜನ ಮಾಡಲು ಬೇಕಾದಷ್ಟು ಅಕ್ಕಿ, ಅನ್ನದ ಪಾತ್ರೆ, ದಿನಕ್ಕೆ ಒಂದರಂತೆ 360 ದಕ್ಷಿಣೆ ಇವುಗಳನ್ನು ದಾನ ಮಾಡಬೇಕು. ಇದಕ್ಕೆ ಸ್ರೋತಕುಂಭದಾನ ಎಂದು ಹೆಸರು.

ವರ್ಷಕ್ಕೆ ಆಗುವಷ್ಟು ಪೂರ್ತಿ ಅಕ್ಕಿಯನ್ನು ಒಟ್ಟಿಗೆ ಕೊಡುವ ಬದಲು ತಿಂಗಳಿಗೆ ಆಗುವಷ್ಟು ಅಕ್ಕಿ ಮತ್ತು 30 ದಕ್ಷಿಣೆಗಳನ್ನು ತಿಂಗಳಿಗೊಮ್ಮೆ ಕೊಡಬಹುದು. ಇದಕ್ಕೂ ಅಶಕ್ತರಾದವರು 360 ಹಿಡಿ ಅಕ್ಕಿ ಅಥವಾ ತಿಂಗಳಿಗೊಮ್ಮೆ 30 ಹಿಡಿ ಅಕ್ಕಿಯನ್ನೋ ಕೊಡಬಹುದು. ಇದಕ್ಕೆ ಮುಷ್ಟಿದಾನ ಎನ್ನುತ್ತಾರೆ. ಈ ಮುಷ್ಟಿದಾನ ಸಣ್ಣದಾಗಿ

ಕಂಡರೂ ಅದು ಮಹಾಪುಣ್ಯಕರವೆಂದು ಪದ್ಮಪುರಾಣದಲ್ಲಿ ಹೇಳಿದೆ. ಸೂಚನೆ – ಈ ಮುಷ್ಟಿದಾನವನ್ನು ಪಿತೃಗಳ ಮರಣ ಹೊಂದಿದ ವರ್ಷದಲ್ಲಿ ಮಾತ್ರ ಮಾಡಬೇಕೆಂದಿಲ್ಲ. ಯಾವಾಗಲೂ ಮಾಡಬಹುದು.

05. ಪಕ್ವಾನ್ನದಾನ – ಬೆಳ್ಳಿ ಅಥವಾ ಹಿತ್ತಾಳೆ ಪಾತ್ರೆಗಳಲ್ಲಿ ಚಿತ್ರಾನ್ನ, ಮೊಸರನ್ನ, ಪಾಯಸ ಮೊದಲಾದ ಪದಾರ್ಥಗಳನ್ನು ಹಾಕಿ ದಾನ ಮಾಡಬೇಕು. ಇದರಿಂದ ಮೃತರು ಯಮಮಾರ್ಗದಲ್ಲಿ ಹೋಗುವಾಗ ಅವರಿಗೂ ಅದಕ್ಕೆ ಸದೃಶವಾದ ಪದಾರ್ಥಗಳನ್ನು ಕೊಡುತ್ತಾರೆ. ಇದರಂತೆ ಪಾನಕ, ನೀರು ಮಜ್ಜಿಗೆ, ಕೆನೆ ಮೊಸರು, ಫಲವಸ್ತುಗಳನ್ನೂ ಸಹ ದಾನ ಮಾಡಬೇಕು.

06. ಲೋಹದಾನ – ಕಬ್ಬಿಣದ ಸಲಾಕೆ, ಅಗ್ಗಿಷ್ಟಿಕೆ, ಬಾಂಡಲೆ ಮೊದಲಾದ ಕಬ್ಬಿಣದ ಪದಾರ್ಥಗಳನ್ನು ದಾನದಿಂದ ಚಿತ್ರಗುಪ್ತರು ಹಾಗೂ ಯಮಭಟರಿಗೆ ತೃಪ್ತಿಯಾಗಿ ಅವರ ಭಯವು ತಪ್ಪುತ್ತದೆ.

ಇದರಂತೆ ಆಯುಧದಾನದಿಂದ ಯಮದೇವರ ಆಯುಧದ ಭಯ ತಪ್ಪುತ್ತದೆ.

07. ದೀಪದಾನ – ದೀಪದಾನ ಮಾಡುವುದರಿಂದ ಅಗ್ನಿ, ಸೂರ್ಯ, ಚಂದ್ರರಿಗೆ ಪ್ರೀತಿಯಾಗಿ ಯಮಮಾರ್ಗದಲ್ಲಿ ಬೆಳಕು ತೋರಿಸುತ್ತಾರೆ.

08. ವ್ಯಜನದಾನ (ಬೀಸಣಿಕೆ) – ಇದರಿಂದ ವಾಯುದೇವರಿಗೆ ಪ್ರೀತಿಯಾಗಿ ಯಮಮಾರ್ಗದಲ್ಲಿ ತಣ್ಣನೆ ಗಾಳಿ ಹಾಕುತ್ತಾರೆ.

09. ಊರ್ಣವಸ್ತ್ರದಾನ – ಕಂಬಳಿ, ಧಾವಳಿ ಮೊದಲಾದ ಉಣ್ಣೆಯ ಬಟ್ಟೆಯನ್ನು ದಾನ ಮಾಡುವುದರಿಂದ ಯಮಮಾರ್ಗದಲ್ಲಿ ಹೋಗುವಾಗ ಮಧ್ಯೆ ಸಿಗುವ ಶೀತಲಪುರಿಯಲ್ಲಿ ಬೆಚ್ಚಗಿನ ಬಟ್ಟೆ ಕೊಡುತ್ತಾರೆ.

10. ಪದದಾನ – ಹಿಂದೆ ಹೇಳಿದಂತೆ ಛತ್ರಿ ದಾನ ಮಾಡುವುದರಿಂದ ಯಮಮಾರ್ಗದಲ್ಲಿ ಹೋಗುವವರಿಗೆ ಬಿಸಿಲು ಮಳೆಯನ್ನು ತಡೆಯಲು ಛತ್ರಿ ಕೊಡುತ್ತಾರೆ. ಪಾದರಕ್ಷೆ ದಾನದಿಂದ ಯಮಮಾರ್ಗದಲ್ಲಿ ಕಾಲು ಸುಡದಂತೆ, ಕಲ್ಲು ಮುಳ್ಳು ಚುಚ್ಚದಂತೆ ಪಾದರಕ್ಷೆಯನ್ನು ಕೊಡುತ್ತಾರೆ.

11. ಉದಕುಂಭದಾನ – ಉದಕುಂಭದಾನದಿಂದ ವರುಣದೇವರಿಗೆ ಪ್ರೀತಿಯಾಗಿ ಯಮಮಾರ್ಗದಲ್ಲಿ ತಂಪಾದ ನೀರನ್ನು ಕೊಡುತ್ತಾರೆ.

## ಹದಿನಾಲ್ಕನೆಯ ದಿನದ ಕೃತ್ಯ

ಈ ಹಿಂದೆ ಹೇಳಿದ ಪಿತೃಕರ್ಮಗಳನ್ನು ಮುಗಿಸಿದ ಮೇಲೆ 14ನೆಯ ದಿನ ಶುಭಸ್ವೀಕಾರ ಎಂದು ಮಾಡುತ್ತಾರೆ. ಹೋಳಿಗೆ, ಪಾಯಸದ ಅಡುಗೆ ಮಾಡಿ, ಬ್ರಾಹ್ಮಣರ ಭೋಜನ ಮಾಡಿಸಿ ಕರ್ತೃಗಳು ಊಟದ ಕೊನೆಯಲ್ಲಿ ಎಂದರೆ ಮಜ್ಜಿಗೆ ಅನ್ನವೂ ಆದ ಮೇಲೆ ಹೋಳಿಗೆ, ಪಾಯಸ ಸ್ವೀಕರಿಸುವ ಪದ್ಧತಿ ಇದೆ. ಭೋಜನವಾದ ಮೇಲೆ ಬ್ರಾಹ್ಮಣರಿಗೆ ತಾಂಬೂಲ, ದಕ್ಷಿಣೆ ಕೊಟ್ಟು ಅವರವರ ಸಂಪ್ರದಾಯದಂತೆ ಹಳದಿ ಅಥವಾ ಕೆಂಪು ಮಂತ್ರಾಕ್ಷತೆಯನ್ನು ಸ್ವೀಕಾರ ಮಾಡುತ್ತಾರೆ. ಬಾಯಲ್ಲಿ ಒಂದು ಅಡಿಕೆಯನ್ನು ಹಾಕಿಕೊಂಡು ಕಡಿದು ಉಗುಳುತ್ತಾರೆ.

ಬಂಧುಗಳು ಕರ್ತೃಗಳಿಗೆ ಹಿಂದುಗಡೆಯಿಂದ ಒಂಟಿ ನೂತನ ವಸ್ತ್ರವನ್ನು ಹೊದ್ದಿಸುತ್ತಾರೆ. ಈ ವಸ್ತ್ರಗಳನ್ನು ವರ್ಷದ ಒಳಗೆ ಉಪಯೋಗಿಸಬೇಕೆಂದು ಅನಂತರ ಉಪಯೋಗಿಸಬಾರದೆಂದು ಹೇಳುತ್ತಾರೆ.

ಹಿಂದೆ ಗರುಡಪುರಾಣವನ್ನು ಹೇಳಿದ್ದ ಆಚಾರ್ಯರಿಂದಲೇ ಶ್ರೀನಿವಾಸ ಕಲ್ಯಾಣ ಅಥವಾ ರುಗ್ಮಿಣೀಶವಿಜಯವನ್ನು ಅನುವಾದ ಮಾಡಿಸುತ್ತಾರೆ. ಹಾಗೂ ಆಚಾರ್ಯ ಪೂಜೆ ಮಾಡುತ್ತಾರೆ. ಪಿತೃಕಾರ್ಯಕ್ಕಾಗಿ ಬಂದಿದ್ದ ಹೆಣ್ಣುಮಕ್ಕಳು ಸಾಯಂಕಾಲ ದೀಪ ಹಚ್ಚುವುದರ ಒಳಗೆ ಹಿಂದಕ್ಕೆ(ತಮ್ಮ ತಮ್ಮ ಮನೆಗಳಿಗೆ) ಹೊರಡುತ್ತಾರೆ. ಕರ್ತೃಗಳು ಪತ್ನಿ, ಪುತ್ರರ ಸಮೇತವಾಗಿ ದೇವಸ್ಥಾನಕ್ಕೆ ಹೋಗಿ ಬರುತ್ತಾರೆ. ಇಷ್ಟೆಲ್ಲಾ ಆಚಾರದಲ್ಲಿ ಕಂಡು ಬಂದಿದೆ. ಇದಕ್ಕೆ ಯಾವ ಆಧಾರವೂ ಧರ್ಮಶಾಸ್ತ್ರದಲ್ಲಿ ಕಂಡು ಬಂದಿಲ್ಲ. ಆದರೂ ಆಚಾರಪ್ರಾಪ್ತವಾದದ್ದರಿಂದ ನಡೆಸಬಹುದು.

## ಮೃತವರ್ಷದವರೆಗಿನ ನಿಯಮಗಳು

ಪಿತೃಗಳು ಮರಣ ಹೊಂದಿದ ವರ್ಷದಲ್ಲಿ ಈ ಕೆಳಗಿನ ನಿಯಮಗಳನ್ನು ಪಾಲಿಸಬೇಕು.

ಕಂಡರೂ ಅದು ಮಹಾಪುಣ್ಯಕರವೆಂದು ಪದ್ಮಪುರಾಣದಲ್ಲಿ ಹೇಳಿದೆ. ಸೂಚನೆ – ಈ ಮುಷ್ಟಿದಾನವನ್ನು ಪಿತೃಗಳ ಮರಣ ಹೊಂದಿದ ವರ್ಷದಲ್ಲಿ ಮಾತ್ರ ಮಾಡಬೇಕೆಂದಿಲ್ಲ. ಯಾವಾಗಲೂ ಮಾಡಬಹುದು.

05. ಪಕ್ವಾನ್ನದಾನ – ಬೆಳ್ಳಿ ಅಥವಾ ಹಿತ್ತಾಳೆ ಪಾತ್ರೆಗಳಲ್ಲಿ ಚಿತ್ರಾನ್ನ, ಮೊಸರನ್ನ, ಪಾಯಸ ಮೊದಲಾದ ಪದಾರ್ಥಗಳನ್ನು ಹಾಕಿ ದಾನ ಮಾಡಬೇಕು. ಇದರಿಂದ ಮೃತರು ಯಮಮಾರ್ಗದಲ್ಲಿ ಹೋಗುವಾಗ ಅವರಿಗೂ ಅದಕ್ಕೆ ಸದೃಶವಾದ ಪದಾರ್ಥಗಳನ್ನು ಕೊಡುತ್ತಾರೆ. ಇದರಂತೆ ಪಾನಕ, ನೀರು ಮಜ್ಜಿಗೆ, ಕೆನೆ ಮೊಸರು, ಫಲವಸ್ತುಗಳನ್ನೂ ಸಹ ದಾನ ಮಾಡಬೇಕು.

06. ಲೋಹದಾನ – ಕಬ್ಬಿಣದ ಸಲಾಕೆ, ಅಗ್ಗಿಷ್ಟಿಕೆ, ಬಾಂಡಲೆ ಮೊದಲಾದ ಕಬ್ಬಿಣದ ಪದಾರ್ಥಗಳನ್ನು ದಾನದಿಂದ ಚಿತ್ರಗುಪ್ತರು ಹಾಗೂ ಯಮಭಟರಿಗೆ ತೃಪ್ತಿಯಾಗಿ ಅವರ ಭಯವು ತಪ್ಪುತ್ತದೆ.

ಇದರಂತೆ ಆಯುಧದಾನದಿಂದ ಯಮದೇವರ ಆಯುಧದ ಭಯ ತಪ್ಪುತ್ತದೆ.

07. ದೀಪದಾನ – ದೀಪದಾನ ಮಾಡುವುದರಿಂದ ಅಗ್ನಿ, ಸೂರ್ಯ, ಚಂದ್ರರಿಗೆ ಪ್ರೀತಿಯಾಗಿ ಯಮಮಾರ್ಗದಲ್ಲಿ ಬೆಳಕು ತೋರಿಸುತ್ತಾರೆ.

08. ವ್ಯಜನದಾನ (ಬೀಸಣಿಕೆ) – ಇದರಿಂದ ವಾಯುದೇವರಿಗೆ ಪ್ರೀತಿಯಾಗಿ ಯಮಮಾರ್ಗದಲ್ಲಿ ತಣ್ಣನೆ ಗಾಳಿ ಹಾಕುತ್ತಾರೆ.

09. ಊರ್ಣವಸ್ತ್ರದಾನ – ಕಂಬಳಿ, ಧಾವಳಿ ಮೊದಲಾದ ಉಣ್ಣೆಯ ಬಟ್ಟೆಯನ್ನು ದಾನ ಮಾಡುವುದರಿಂದ ಯಮಮಾರ್ಗದಲ್ಲಿ ಹೋಗುವಾಗ ಮಧ್ಯೆ ಸಿಗುವ ಶೀತಲಪುರಿಯಲ್ಲಿ ಬೆಚ್ಚಗಿನ ಬಟ್ಟೆ ಕೊಡುತ್ತಾರೆ.

10. ಪದದಾನ – ಹಿಂದೆ ಹೇಳಿದಂತೆ ಛತ್ರಿ ದಾನ ಮಾಡುವುದರಿಂದ ಯಮಮಾರ್ಗದಲ್ಲಿ ಹೋಗುವವರಿಗೆ ಬಿಸಿಲು ಮಳೆಯನ್ನು ತಡೆಯಲು ಛತ್ರಿ ಕೊಡುತ್ತಾರೆ. ಪಾದರಕ್ಷೆ ದಾನದಿಂದ ಯಮಮಾರ್ಗದಲ್ಲಿ ಕಾಲು ಸುಡದಂತೆ, ಕಲ್ಲು ಮುಳ್ಳು ಚುಚ್ಚದಂತೆ ಪಾದರಕ್ಷೆಯನ್ನು ಕೊಡುತ್ತಾರೆ.

11. ಉದಕುಂಭದಾನ – ಉದಕುಂಭದಾನದಿಂದ ವರುಣದೇವರಿಗೆ ಪ್ರೀತಿಯಾಗಿ ಯಮಮಾರ್ಗದಲ್ಲಿ ತಂಪಾದ ನೀರನ್ನು ಕೊಡುತ್ತಾರೆ.

## ಹದಿನಾಲ್ಕನೆಯ ದಿನದ ಕೃತ್ಯ

ಈ ಹಿಂದೆ ಹೇಳಿದ ಪಿತೃಕರ್ಮಗಳನ್ನು ಮುಗಿಸಿದ ಮೇಲೆ 14ನೆಯ ದಿನ ಶುಭಸ್ವೀಕಾರ ಎಂದು ಮಾಡುತ್ತಾರೆ. ಹೋಳಿಗೆ, ಪಾಯಸದ ಅಡುಗೆ ಮಾಡಿ, ಬ್ರಾಹ್ಮಣರ ಭೋಜನ ಮಾಡಿಸಿ ಕರ್ತೃಗಳು ಊಟದ ಕೊನೆಯಲ್ಲಿ ಎಂದರೆ ಮಜ್ಜಿಗೆ ಅನ್ನವೂ ಆದ ಮೇಲೆ ಹೋಳಿಗೆ, ಪಾಯಸ ಸ್ವೀಕರಿಸುವ ಪದ್ಧತಿ ಇದೆ. ಭೋಜನವಾದ ಮೇಲೆ ಬ್ರಾಹ್ಮಣರಿಗೆ ತಾಂಬೂಲ, ದಕ್ಷಿಣೆ ಕೊಟ್ಟು ಅವರವರ ಸಂಪ್ರದಾಯದಂತೆ ಹಳದಿ ಅಥವಾ ಕೆಂಪು ಮಂತ್ರಾಕ್ಷತೆಯನ್ನು ಸ್ವೀಕಾರ ಮಾಡುತ್ತಾರೆ. ಬಾಯಲ್ಲಿ ಒಂದು ಅಡಿಕೆಯನ್ನು ಹಾಕಿಕೊಂಡು ಕಡಿದು ಉಗುಳುತ್ತಾರೆ.

ಬಂಧುಗಳು ಕರ್ತೃಗಳಿಗೆ ಹಿಂದುಗಡೆಯಿಂದ ಒಂಟಿ ನೂತನ ವಸ್ತ್ರವನ್ನು ಹೊದ್ದಿಸುತ್ತಾರೆ. ಈ ವಸ್ತ್ರಗಳನ್ನು ವರ್ಷದ ಒಳಗೆ ಉಪಯೋಗಿಸಬೇಕೆಂದು ಅನಂತರ ಉಪಯೋಗಿಸಬಾರದೆಂದು ಹೇಳುತ್ತಾರೆ.

ಹಿಂದೆ ಗರುಡಪುರಾಣವನ್ನು ಹೇಳಿದ್ದ ಆಚಾರ್ಯರಿಂದಲೇ ಶ್ರೀನಿವಾಸ ಕಲ್ಯಾಣ ಅಥವಾ ರುಗ್ಮಿಣೀಶವಿಜಯವನ್ನು ಅನುವಾದ ಮಾಡಿಸುತ್ತಾರೆ. ಹಾಗೂ ಆಚಾರ್ಯ ಪೂಜೆ ಮಾಡುತ್ತಾರೆ. ಪಿತೃಕಾರ್ಯಕ್ಕಾಗಿ ಬಂದಿದ್ದ ಹೆಣ್ಣುಮಕ್ಕಳು ಸಾಯಂಕಾಲ ದೀಪ ಹಚ್ಚುವುದರ ಒಳಗೆ ಹಿಂದಕ್ಕೆ(ತಮ್ಮ ತಮ್ಮ ಮನೆಗಳಿಗೆ) ಹೊರಡುತ್ತಾರೆ. ಕರ್ತೃಗಳು ಪತ್ನಿ, ಪುತ್ರರ ಸಮೇತವಾಗಿ ದೇವಸ್ಥಾನಕ್ಕೆ ಹೋಗಿ ಬರುತ್ತಾರೆ. ಇಷ್ಟೆಲ್ಲಾ ಆಚಾರದಲ್ಲಿ ಕಂಡು ಬಂದಿದೆ. ಇದಕ್ಕೆ ಯಾವ ಆಧಾರವೂ ಧರ್ಮಶಾಸ್ತ್ರದಲ್ಲಿ ಕಂಡು ಬಂದಿಲ್ಲ. ಆದರೂ ಆಚಾರಪ್ರಾಪ್ತವಾದದ್ದರಿಂದ ನಡೆಸಬಹುದು.

## ಮೃತವರ್ಷದವರೆಗಿನ ನಿಯಮಗಳು

ಪಿತೃಗಳು ಮರಣ ಹೊಂದಿದ ವರ್ಷದಲ್ಲಿ ಈ ಕೆಳಗಿನ ನಿಯಮಗಳನ್ನು ಪಾಲಿಸಬೇಕು.

1. ಬ್ರಹ್ಮಚರ್ಯವನ್ನು ಪಾಲಿಸಬೇಕು. ಹಾಗಿದ್ದರೂ ಋತುಕಾಲದಲ್ಲಿ ಪತ್ನೀಗಮನ ಮಾಡಲೇ ಬೇಕು. ಅದರಿಂದ ಬ್ರಹ್ಮಚರ್ಯಲೋಪವು ಆಗುವುದಿಲ್ಲ.

2. ಪರಾನ್ನವನ್ನು ಬಿಡಬೇಕು. ಅಂದರೆ, ಬೇರೆಯವರ ಮನೆಯಲ್ಲಿ ಊಟ ಮಾಡಬಾರದು. ಇದಕ್ಕೆ ಅಪವಾದ ಎಂದರೆ ಗುರುಗಳು, ಸೋದರಮಾವ, ಹೆಣ್ಣುಕೊಟ್ಟ ಮಾವ, ಅನ್ನಹಾಕಿ ಸಾಕಿದವರು, ದೊಡ್ಡಪ್ಪ-ಚಿಕ್ಕಪ್ಪಂದಿರು ಇವರುಗಳ ಮನೆಯಲ್ಲಿ ಊಟಮಾಡಿದರೆ ತಪ್ಪಿಲ್ಲ.

ಸೂಚನೆ – 1. ಹೋಟಲ್, ಮೆಸ್ ಇವುಗಳಲ್ಲಿ ಯಾವಾಗಲೂ ಊಟ ಮಾಡಬಾರದು. ಅನಿವಾರ್ಯವಾಗಿ ಮಾಡುತ್ತಿರುವವರು ಈ ವರ್ಷದಲ್ಲಿಯಾದರೂ ಅದನ್ನು ಬಿಡಬೇಕು. ಹೀಗೆ ಬಿಡುವುದು ಅಭ್ಯಾಸವಾಗಿರುವಾಗ ಮುಂದೆಯೂ ಅದನ್ನು ಬಿಡುವುದು ಸಾಧ್ಯವಾಗುತ್ತದೆ.

ಸೂಚನೆ – 2. ಈ ಪ್ರಸಂಗದಿಂದ ತಿಳಿಸುವ ಮತ್ತೊಂದು ವಿಷಯವೇನೆಂದರೆ ಬ್ರಾಹ್ಮಣರಿಗೆ ಶಿಖಾ ಧಾರಣೆ ಅತ್ಯವಶ್ಯಕ. ಏನೋ ಲೌಕಿಕ ಕಾರಣಗಳಿಂದ ಶಿಖಾಧಾರಣೆ ಮಾಡದೇ ಇದ್ದವರು ಪಿತೃಕಾರ್ಯದಲ್ಲಿಯಾದರೂ ಶಿಖೆಯನ್ನು ಧರಿಸಿ ಮಾಡಬೇಕು. ಹೀಗೆ ಅಭ್ಯಾಸವಾದಾಗ ಮುಂದಾದರೂ ಶಿಖಾಧಾರಿಗಳಾಗುವ ಅವಕಾಶ ಇರುತ್ತದೆ. ಈ ಎರಡು ಸೂಚನೆಗಳನ್ನು ಧರ್ಮಶ್ರದ್ಧೆ ಇದ್ದವರು ಆದರೆ ಚೆನ್ನಾಗಿ ಧರ್ಮವನ್ನು ನಡೆಸಲು ಅಶಕ್ತರು ಇಂಥವರ ದೃಷ್ಟಿಯಿಂದ ಕೊಡಲಾಗಿದೆ.

3. ಶ್ರಾದ್ಧಭೋಜನ, ಆರಾಧನೆಯ ಅಲಂಕಾರಪಂಕ್ತಿಗೆ ಕೂಡಬಾರದು.

4. ಪ್ರತಿಷ್ಠಿತವಾದ ಪ್ರತಿಮೆಗಳನ್ನು ಪೂಜೆ ಮಾಡಬಾರದು. ಅದರಂತೆ ಪ್ರತಿಷ್ಠಿತವಾದ ಬೃಂದಾವನಗಳನ್ನೂ ಮುಟ್ಟಿ ಪೂಜಿಸಬಾರದು. (ಕೆಲವು ಕಡೆ ಬೃಂದಾವನದ ಅರ್ಚಕರು ಸಮೀಪದಲ್ಲಿರುವ ಮಹಾನದಿಯಲ್ಲಿ ಸ್ನಾನಮಾಡಿಕೊಂಡು ಬಂದು ಬೃಂದಾವನ ಮುಟ್ಟಿ ಪೂಜೆ ಮಾಡುವ ಪದ್ಧತಿಯಿದೆ. ಇದಕ್ಕೆ ಮೂಲವೇನೆಂದು ತಿಳಿದಿಲ್ಲ).

5. ನಿತ್ಯವಾದ ಔಪಾಸನ, ವೈಶ್ವದೇವ ಇವುಗಳನ್ನು ಬಿಟ್ಟು ಬೇರೆಯ ನೈಮಿತ್ತಿಕ ಹೋಮಗಳನ್ನು (ಲಕ್ಷಹೋಮ, ಪವಮಾನ ಹೋಮ ಮೊದಲಾದ್ದು)

ಮಾಡಬಾರದು. ಅಥವಾ ಹೋಮಗಳಲ್ಲಿ ಋತ್ವಿಜನಾಗಿ ಭಾಗವಹಿಸಬಾರದು. ಉಪಾಕರ್ಮ, ಧಾತ್ರೀಹವನ, ಅಗ್ರಯಣಗಳು ನಿತ್ಯ. ಇವನ್ನು ಮಾಡಬೇಕು.

6. ತೀರ್ಥಯಾತ್ರೆ ಮಾಡಬಾರದು. ಮಹಾನದಿಗಳನ್ನು ದಾಟಬಾರದು. (ಈ ನಿಯಮ ತನಗೆ ಅತೀಸಮೀಪದಲ್ಲಿರುವ ಮಹಾನದಿಗೆ ಅನ್ವಯಿಸುವುದಿಲ್ಲ. ಉದಾಹರಣೆಗೆ ಶ್ರೀರಂಗಪಟ್ಟಣದಲ್ಲಿ ಇದ್ದವನು ಮೈಸೂರಿಗೆ ಹೋಗಿ ಬಂದರೆ ತಪ್ಪಿಲ್ಲ).

7. ಕ್ಷೌರ ಮಾಡಿಸಿಕೊಳ್ಳಬಾರದು.

8. ತೀರ್ಥಶ್ರಾದ್ಧ, ಗಯಾಶ್ರಾದ್ಧ, ದರ್ಶಶ್ರಾದ್ಧ ಇತ್ಯಾದಿಗಳನ್ನು ಮಾಡಬಾರದು.

(ತಂದೆಯು ಮೊದಲು ಹೋಗಿದ್ದು ತಾಯಿಯು ನಂತರ ಹೋದರೆ ಆಗ ತಂದೆಯನ್ನು ಕುರಿತು ದರ್ಶಾದಿಗಳನ್ನು ಮಾಡಲೇ ಬೇಕು. ತಾಯಿಯ ವರ್ಗವನ್ನು ಇದರ ಜೊತೆ ಸೇರಿಸಬಾರದು. ವರ್ಷವಾದ ಮೇಲೆ ಸೇರಿಸಬೇಕು).

ಇದರಂತೆ ಗ್ರಹಣ ನಿಮಿತ್ತ ತರ್ಪಣವನ್ನು ಕೊಡಬಾರದು. (ತಂದೆ ಮೊದಲು ಹೋಗಿದ್ದರೆ ಮೇಲೆ ಹೇಳಿದಂತೆ ತಿಳಿಯಬೇಕು). ಉಳಿದ ಯಾರನ್ನೂ ಉದ್ದೇಶಿಸಿ ಪಿಂಡಸಹಿತಶ್ರಾದ್ಧವನ್ನು ಮಾಡಬಾರದು.

ಸೂಚನೆ – ಹೀಗೆ ತೀರ್ಥಯಾತ್ರೆ ನಿಷಿದ್ಧವಾದ್ದರಿಂದ ಮಾಸಿಕಗಳನ್ನು ಬೇರೆ ಬೇರೆ ಪುಣ್ಯಕ್ಷೇತ್ರಕ್ಕೆ ಹೋಗಿ ಮಾಡಬಾರದು. ತನ್ನ ಗೃಹದಲ್ಲಿಯೇ ಮಾಡಬೇಕು.

9. ವೇದವೇದಾಂತಾದಿ ಗ್ರಂಥಗಳನ್ನು ಓದುವವರಾಗಲೀ, ಪಾಠ ಹೇಳುವವರಾಗಲೀ, ವರ್ಷಕ್ಕೆ ಮುಂಚೆ ಹೊಸ ಪಾಠವನ್ನು ಆರಂಭಿಸಬಾರದು. ಹಳೆಯದರ ಮಂಗಳವನ್ನೂ ಮಾಡಬಾರದು.

10. ಕರ್ತೃಗಳು ಎರೆದುಕೊಳ್ಳಬಾರದು. ಆದರೆ, ಉಗಾದಿ-ದೀಪಾವಳಿ ಮತ್ತು ನರಕಚತುರ್ದಶೀ ದಿನಗಳಲ್ಲಿ ಎರೆದುಕೊಳ್ಳಲೇ ಬೇಕು.

11. ಅನಂತವ್ರತ, ವರಮಹಾಲಕ್ಷ್ಮೀವ್ರತ ಮೊದಲಾದ ವ್ರತಗಳನ್ನು ಮಾಡಬಾರದು. ವಿಶೇಷವಾದ ಭೀಷ್ಮಪಂಚಕ, ಪಯೋವ್ರತ ಇತ್ಯಾದಿಗಳನ್ನು ಆರಂಭಿಸಬಾರದು. ಆರಂಭಿಸಿರುವ ವಿಷ್ಣುಪಂಚಕವ್ರತವನ್ನು ಮುಂದುವರೆಸಬೇಕು.

ಏಕಾದಶೀ, ಚಾತುರ್ಮಾಸ್ಯ, ಜನ್ಮಾಷ್ಟಮೀ (ಶ್ರೀಕೃಷ್ಣಜಯಂತೀ) ವ್ರತಗಳನ್ನು ಮಾಡಲೇಬೇಕು.

12. ಮನೆ ಬಾಗಿಲಿಗೆ ತೋರಣ ಕಟ್ಟಬಾರದು. ರಂಗೋಲಿ ಹಾಕಬಾರದು. ದೇವರ ಮುಂದೆ ರಂಗೋಲಿ ಹಾಕಲು ಅಡ್ಡಿಯಿಲ್ಲ.

ಸೂಚನೆ – ವರ್ಷದಲ್ಲಿ ಮನೆಗೆ ಸಂಸ್ಥಾನಾಧಿಪತಿಗಳನ್ನು ಕರೆಸಿದರೆ ಆಗ ಸಂಸ್ಥಾನದ ದೇವರು ಬರುತ್ತಾರೆ ಎಂದು ತೋರಣ ಕಟ್ಟಿ ರಂಗೋಲಿ ಹಾಕುವ ಪದ್ಧತಿ ಇದೆ.

13. ಉಗಾದಿ, ದೀಪಾವಳಿ, ವಿಜಯದಶಮೀ ಮೊದಲಾದ ಹಬ್ಬಗಳಲ್ಲಿ ತನ್ನ ಭೋಗಕ್ಕೋಸ್ಕರ ಹಬ್ಬದ ಅಡುಗೆ ಮಾಡಿಕೊಂಡು ಊಟ ಮಾಡಬಾರದು. ಆದರೆ ದೇವರ ನೈವೇದ್ಯಕ್ಕೋಸ್ಕರ ಹಬ್ಬದ ಅಡುಗೆ ಮಾಡಿ ಬ್ರಾಹ್ಮಣರನ್ನು ಕರೆದು ಪಿತ್ರಂತರ್ಯಾಮಿ ಪರಮಾತ್ಮನನ್ನು ಉದ್ದೇಶಿಸಿ ಭೋಜನ ಮಾಡಿಸಬಹುದು.

14. ತನ್ನ ನಿತ್ಯದ ಜಪ-ಪಾರಾಯಣಗಳ ಜೊತೆಗೆ ಸ್ವಲ್ಪ ಹೆಚ್ಚಿಗೆ ಜಪ ಪಾರಾಯಣ ಮಾಡಿ ಪಿತೃಗಳಿಗೆ ಆ ಪುಣ್ಯವನ್ನು ಕೊಡಬಹುದು.

ಇದರಲ್ಲಿ ಅಧಿಕಾರವಿದ್ದವರು ಅಷ್ಟಮಹಾಮಂತ್ರಜಪ, ಸರ್ವಮೂಲ-ಪಾರಾಯಣ, ವೇದಪಾರಾಯಣ, ಶ್ರೀಮದ್ಭಾಗವತಪಾರಾಯಣ, ಭಗವದ್ಗೀತಾ, ವಿಷ್ಣುಸಹಸ್ರನಾಮ ಪಾರಾಯಣಗಳನ್ನು ಮಾಡುವುದು ಶ್ರೇಷ್ಠ. ಅಧಿಕಾರ ಅಥವಾ ಸಾಮರ್ಥ್ಯವಿಲ್ಲದಿರುವವರು ಬ್ರಾಹ್ಮಣರ ಮುಖಾಂತರ ಮಾಡಿಸಬೇಕು.

ಶ್ರೀಮದ್ಭಾಗವತಸಪ್ತಾಹ ಪ್ರವಚನ ಅಥವಾ ಶ್ರವಣವು ವಿಶೇಷಫಲವನ್ನು ಕೊಡುತ್ತದೆ.

15. ಕೆಲವರು ವರ್ಷವಿಡೀ ಒಪ್ಪತ್ತು ಊಟ ಮಾಡಬೇಕು ಎನ್ನುತ್ತಾರೆ. ಇದಕ್ಕೆ ಯಾವುದೇ ಆಧಾರ ಕಾಣುತ್ತಿಲ್ಲ. ಮಾಸಿಕ ದಿನಗಳಲ್ಲಿ ಹಾಗೂ ಅದರ ಹಿಂದಿನ ದಿನಗಳಲ್ಲಿ ಒಪ್ಪತ್ತು ಮಾಡಿದರೆ ಸಾಕು.

16. ತಂದೆ ತಾಯಿಗಳು ಮರಣ ಹೊಂದಿದ ವರ್ಷದಲ್ಲಿ ಅಶೌಚ.

ಮಲತಾಯಿಗಾದರೆ ಆರು ತಿಂಗಳು, ಪತ್ನಿಗಾದರೆ ಮೂರು ತಿಂಗಳು, ಅಣ್ಣ-ತಮ್ಮಂದಿರು ಅಥವಾ ಮಕ್ಕಳ ಮರಣದಲ್ಲಿ ಒಂದೂವರೆ ತಿಂಗಳು ಆಶೌಚ ಎಂದು ಕೆಲವರ ಅಭಿಪ್ರಾಯ. ಆಗ ನಿತ್ಯಕರ್ಮಗಳಲ್ಲದೇ ಬೇರೆಯ ದೈವ, ಪಿತೃಕರ್ಮಕ್ಕೆ ಅಧಿಕಾರವಿಲ್ಲ.

## ಶ್ರಾದ್ಧಕರ್ತೃವಿನ ನಿಯಮಗಳು

1. ಶ್ರಾದ್ಧಕರ್ತೃವು ಶ್ರಾದ್ಧದ ಹಿಂದಿನ ದಿನ, ಶ್ರಾದ್ಧದ ದಿನ, ಶ್ರಾದ್ಧದ ಮಾರನೇ ದಿನ ಹೀಗೆ ಮೂರು ದಿನ ದೀಕ್ಷಿತನಾಗಿರಬೇಕು.

2. ಶ್ರಾದ್ಧದ ಹಿಂದಿನ ದಿನ ಮತ್ತು ಶ್ರಾದ್ಧದ ದಿನ ಒಪ್ಪತ್ತು ಮಾತ್ರ ಊಟ ಮಾಡಬೇಕು. ಆದರಲ್ಲಿಯೂ ಶ್ರಾದ್ಧದ ದಿನ ರಾತ್ರಿ ನೀರನ್ನು ಮಾತ್ರ ಕುಡಿಯಬಹುದು. ಬೇರೆ ಆಹಾರವನ್ನು ತೆಗೆದುಕೊಳ್ಳಬಾರದು. ಶ್ರಾದ್ಧದ ಹಿಂದಿನ ದಿನ ಮುಸುರೆ ಇಲ್ಲದ ಫಲಾಹಾರ ಮಾಡುವುದು ವಾಡಿಕೆಯಲ್ಲಿದೆ.

3. ಮೂರು ದಿನವೂ ಬ್ರಹ್ಮಚರ್ಯದಿಂದ ಇರಬೇಕು. ಆದರಲ್ಲಿಯೂ ಶ್ರಾದ್ಧದ ದಿನ ಹಾಸಿಗೆಯನ್ನು ಸಹ ಮುಟ್ಟದಂತೆ ಚಾಪೆ ಅಥವಾ ಕಂಬಳಿಯನ್ನು ಹಾಸಿಕೊಂಡು ಮಲಗಬೇಕು.

4. ಪ್ರಯಾಣ ಮಾಡಬಾರದು.

5. ರಜಸ್ವಲೆಯನ್ನು ನೋಡಬಾರದು.

6. ಮ್ಲೇಚ್ಛಾದಿಗಳ ಸ್ಪರ್ಶನ, ಸಂಭಾಷಣ ಮಾಡಬಾರದು.

7. ಶ್ರಾದ್ಧಕಾಲದಲ್ಲಿ ಕೋಪ ಮಾಡಿಕೊಳ್ಳಬಾರದು. ಕಣ್ಣೀರು ಹಾಕಬಾರದು. ಹೆಚ್ಚು ಮಾತನಾಡಬಾರದು.

8. ಶ್ರಾದ್ಧಕಾಲದಲ್ಲಿ ಸದಾ ಹರಿಸ್ಮರಣೆ ಇರಬೇಕು.

9. ಶ್ರಾದ್ಧದ ದಿನ ತಟ್ಟೆಯಲ್ಲಿ ಊಟ ಮಾಡಬಾರದು.

10. ಈ ಮೂರು ದಿನ ಪರಾನ್ನ ಭೋಜನ ಮಾಡಬಾರದು.

11. ಅಭ್ಯಂಜನ ನಿಷಿದ್ಧ. (ಈ ಅಭ್ಯಂಜನನಿಷೇಧವು ಉಗಾದಿ ಮತ್ತು ದೀಪಾವಳಿಗೆ ಅನ್ವಯಿಸುವುದಿಲ್ಲ).

12. ಶ್ರಾದ್ಧದ ದಿನ ಸಾಯಂಸಂಧ್ಯಾವಂದನೆ ಮಾಡಬಾರದು ಎಂದಿದೆ. ಶಿಷ್ಟರು ಸಂಧ್ಯಾವಂದನೆ ಪೂರ್ತಿ ಬಿಡುವುದಿಲ್ಲ. ಸಂಧ್ಯಾವಂದನೆ ಮಾಡಿ ಗಾಯತ್ರೀಜಪ 10 ಮಾತ್ರ ಮಾಡುತ್ತಾರೆ.

13. ಶ್ರಾದ್ಧದ ನಂತರ ಸ್ನಾನವನ್ನು ಮಾಡಬಾರದು.

14. ಶ್ರಾದ್ಧಮಾಡಿ ಬೇರೆಯ ಕಡೆ ಊಟಕ್ಕೆ ಹೋಗಬಾರದು.

## ಶ್ರಾದ್ಧಭೋಕ್ತೃವಿನ ನಿಯಮ

1. ಶ್ರಾದ್ಧಭೋಕ್ತೃವು ಶ್ರಾದ್ಧದ ಹಿಂದಿನ ದಿನ ಹಾಗೂ ಶ್ರಾದ್ಧದ ದಿನ ಬ್ರಹ್ಮಚರ್ಯದಿಂದಿರಬೇಕು. ವಸ್ತುತಸ್ತು ಶ್ರಾದ್ಧದ ಆಮಂತ್ರಣವನ್ನು ಒಪ್ಪಿಕೊಂಡ ದಿನದಿಂದ ಶ್ರಾದ್ಧದಿನದ ಪರ್ಯಂತರವೂ ಬ್ರಹ್ಮಚರ್ಯದಿಂದ ಇರಬೇಕು. ಇದು ಸಾಧ್ಯವಾಗದೇ ಇರುವುದರಿಂದ ಆಮಂತ್ರಣ ಕೊಡುವವರು ಶ್ರಾದ್ಧದ ಹಿಂದಿನ ದಿನ ಆಮಂತ್ರಣ ಕೊಡಬೇಕು.

2. ಶ್ರಾದ್ಧಭೋಜನ ಮಾಡಿ ಮತ್ತೊಂದು ಕಡೆ ಊಟ ಮಾಡಬಾರದು.

3. ಶ್ರಾದ್ಧ ಕಾಲದಲ್ಲಿ ಕೋಪ ಮಾಡಿಕೊಳ್ಳಬಾರದು.

4. ಶ್ರಾದ್ಧಕಾಲದಲ್ಲಿ ಹರಿಸ್ಮರಣೆ ಮಾಡಬೇಕು.

5. ಶ್ರಾದ್ಧಭೋಜನ ಮಾಡಿದ ದಿನ ಸಾಯಂಕಾಲ ಸಂಧ್ಯಾವಂದನೆ ಮಾಡುವ ಅಧಿಕಾರ ಹೋಗುತ್ತದೆ. ಆದ್ದರಿಂದ 10ಬಾರಿ ಗಾಯತ್ರಿಯಿಂದ ನೀರನ್ನು ಅಭಿಮಂತ್ರಿಸಿಟ್ಟುಕೊಂಡಿದ್ದು ಭೋಜನ ಆದ ಮೇಲೆ ಅದನ್ನು ಕುಡಿಯಬೇಕು. ಆಗ ಸಾಯಂಕಾಲಸಂಧ್ಯಾವಂದನೆ ಮಾಡಲು ಅಧಿಕಾರ ಬರುತ್ತದೆ.

6. ಶ್ರಾದ್ಧಭೋಜನ ಮಾಡಿದ ದಿನ ಪ್ರಯಾಣ ಮಾಡಬಾರದು.

7. ಮೌನದಿಂದ ಭೋಜನ ಮಾಡಬೇಕು. ಅಡುಗೆಯನ್ನು ಹೊಗಳಬಾರದು. ತಲೆ ಹಾಕಬಾರದು.

## ಶ್ರಾದ್ಧದ ಅಡುಗೆ ನಿಯಮಗಳು

ಶ್ರಾದ್ಧದ ಅಡುಗೆ ಧಾನ್ಯಗಳು. ಅಕ್ಕಿ, ಗೋಧಿ, ಉದ್ದಿನಬೇಳೆ, ಹೆಸರು ಬೇಳೆ ಇವು ವಿಹಿತ. ಗೋಧಿಯಿಂದ ಪಿತೃಗಳಿಗೆ ಒಂದು ವರ್ಷ ತೃಪ್ತಿಯಾಗುತ್ತದೆ. ಉದ್ದಿನಬೇಳೆಯಿಂದ ಆರುತಿಂಗಳು ತೃಪ್ತಿಯಾಗುತ್ತದೆ. ಹೆಸರುಬೇಳೆಯಿಂದ ಮೂರು ತಿಂಗಳು ತೃಪ್ತಿಯಾಗುತ್ತದೆ.

ರಾಗಿ, ಜೋಳ, ತೊಗರೀಬೇಳೆ ಇವು ನಿಷಿದ್ಧ. ಕಡಲೇಬೇಳೆ ಕೃತಾಕೃತ (ಅಂದರೆ ಹಾಗೂ ಹೀಗೂ) ಬಿಡುವುದು ಒಳ್ಳೆಯದು.

ಶ್ರಾದ್ಧದ ಅಡುಗೆಗೆ ಕಾಯಿ, ಪಲ್ಲೆಗಳು.

ಮೆಣಸಿನಕಾಯಿ, ಹುಣಿಸೇ ಹಣ್ಣು, ಮೆಂತ್ಯ, ಕೊತ್ತಂಬರೀಬೀಜ, ಏಲಕ್ಕಿ, ಲವಂಗ ಮೊದಲಾದ ಸುವಾಸನೆ ದ್ರವ್ಯಗಳು, ಅರಿಶಿನ ಇವುಗಳು ಬರುವುದಿಲ್ಲ. ಒಟ್ಟಿನಲ್ಲಿ ಮುಂದೆ ಹೇಳಲಾಗುವ ಕೆಲವೊಂದು ಕಾಯಿಪಲ್ಲೆಗಳನ್ನು ಬಿಟ್ಟು ಶಾಕವ್ರತದಂತೆ ಆಚರಿಸಬೇಕು.

ಗೆಡ್ಡೆ, ಗೆಣಸುಗಳು, ಬಾಳೇ ದಿಂಡು, ಬಾಳೇಕಾಯಿ, ಸೌತೇಕಾಯಿ, ಹಾಗಲ-ಕಾಯಿ, ಮಾವಿನಕಾಯಿ, ನೆಲ್ಲಿಕಾಯಿ, ಹಲಸಿನಕಾಯಿ, ತೆಂಗಿನಕಾಯಿ ಇವುಗಳು ಶ್ರೇಷ್ಠ. ಕೊತ್ತಂಬರೀ ಸೊಪ್ಪು ಬರುತ್ತದೆ. ಆಲೂಗೆಡ್ಡೆ ಬರುವುದಿಲ್ಲ. ಪಡವಲಕಾಯಿ ಕೃತಾಕೃತ. ಬಿಡುವುದು ಒಳ್ಳೆಯದು. ಕರಿಬೇವು ಬರುವುದಿಲ್ಲ. ಹುರಳಿಕಾಯಿ, ಬೂದಗುಂಬಳ, ಸಿಹಿಗುಂಬಳ, ಹಲಸಂದೆ, ದಪ್ಪಮೆಣಸಿನಕಾಯಿ, ಬೆಂಡೆಕಾಯಿ, ಗೋವರ್ಧನಕಾಯಿ, ಬಟಾಣಿ, ಹೀರೇಕಾಯಿ, ಸೊಪ್ಪುಗಳು ಇವು ನಿಷಿದ್ಧ.

ಶ್ರಾದ್ಧದ ಅಡುಗೆಗೆ ಹಣ್ಣುಗಳು – ಬಾಳೇಹಣ್ಣು, ಮಾವಿನಹಣ್ಣು, ಹಲಸಿನ ಹಣ್ಣು, ಕರಬೂಜ, ಅಕ್ರೋಡ(ಅಕ್ರೂಟ್), ನೇರಳೇ ಹಣ್ಣು ಇವುಗಳು ಶ್ರೇಷ್ಠ. ಕಿತ್ತಲೇ ಹಣ್ಣು ಬರುತ್ತದೆ. ಮೂಸಂಬಿ, ಚಕೋತ, ಬೀಜವೇ ಪ್ರಧಾನವಾಗಿರುವ ದಾಳಿಂಬೆ, ಸೀತಾಫಲ, ಸೀಬೆ ಇವುಗಳು ನಿಷಿದ್ಧ.

ಒಣದ್ರಾಕ್ಷಿ, ಖರ್ಜೂರ ಬರುತ್ತದೆ. ಗೋಡಂಬಿ, ಬಾದಾಮಿ, ಅಂಜೂರ ಬರುವುದಿಲ್ಲ. ಗಸಗಸೆ ಇಂಗು ಬರುವುದಿಲ್ಲ.

ಶ್ರಾದ್ಧದ ದಿನ ಎಣ್ಣೆ ಅಥವಾ ತುಪ್ಪದಲ್ಲಿ ಕರಿದ ಭಕ್ಷ್ಯಗಳನ್ನು ಹಾಗೂ ಪಾಯಸವನ್ನು ಮಾಡಲೇಬೇಕು. ಕಡಲೇ ಎಣ್ಣೆ ಪ್ರಶಸ್ತವಲ್ಲ. ಕೊಬ್ಬರಿ ಎಣ್ಣೆ ಶ್ರೇಷ್ಠ.

ಶ್ರಾದ್ಧಕ್ಕೆ ಮಾಡುವ ಭಕ್ಷ್ಯವನ್ನಾಗಲೀ ಅಥವಾ ಅದಕ್ಕೆ ಬೇಕಾಗುವ ಹೂರಣವನ್ನಾಗಲೀ ಹಿಂದಿನ ದಿನ ಮಾಡಿ ಇಡಬಾರದು. ವಡೆಬೇಳೆ ಮೊದಲಾದ್ದವನ್ನು ತಿರುವಿ ಇಡಬಾರದು. ಕಾಯಿಪಲ್ಲೆಗಳನ್ನೂ ಹಿಂದಿನ ದಿನ ಹೆಚ್ಚಿಡಬಾರದು. ಶ್ರಾದ್ಧದ ದಿನವೂ ಸಹ ಸ್ನಾನಕ್ಕೆ ಮುಂಚೆ ಕಾಯಿ-ಪಲ್ಲೆಗಳನ್ನು ಹೆಚ್ಚಿಡಬಾರದು. ಬ್ರಾಹ್ಮಣಭೋಜನಕ್ಕೆ ಮುಂಚೆ ಕಾಯಿ-ಪಲ್ಲೆ ಸಿಪ್ಪೆಗಳನ್ನು ಆಚೆಗೆ ಬಿಸಾಡಬಾರದು.

## ಶ್ರಾದ್ಧದ ಕಾಲ

ಶ್ರಾದ್ಧದಲ್ಲಿ ಮೂರು ಪವಿತ್ರವಾದ ವಸ್ತುಗಳು.

1. ದೌಹಿತ್ರ 2. ಕುತುಪಕಾಲ 3. ಎಳ್ಳು

ಹೀಗಾಗಿ ಶ್ರಾದ್ಧವನ್ನು ಕುತುಪಕಾಲದಲ್ಲಿಯೇ ಮಾಡಬೇಕು. ಕುತಪಕಾಲ ಎಂದರೆ ಎಂಟನೆಯ ಮುಹೂರ್ತ. ಒಂದು ಹಗಲಿಗೆ 15 ಮುಹೂರ್ತ. ಹೀಗಾಗಿ ಎಂಟನೆಯ ಮುಹೂರ್ತ ಎಂದರೆ ನಡು ಹಗಲು ಆಗುತ್ತದೆ. ಎಂದರೆ, ಸೂರ್ಯನು ನೆತ್ತಿಯ ಮೇಲೆ ಬರುವ ಕಾಲಕ್ಕೆ ಹಿಂದು ಮುಂದು ಸುಮಾರು 24 ನಿಮಿಷ ಕಾಲ. ಸೂರ್ೕದಯ 6-00 ಹಾಗೂ ಅಸ್ತುವು 6-00 ಘಂಟೆಗೆ ಆಗುವ ಪಕ್ಷದಲ್ಲಿ 11-36ರಿಂದ 12-24ವರೆಗೆ ಕುತುಪಕಾಲ. ಇಷ್ಟರೊಳಗೆ ಪಿಂಡಪ್ರದಾನ ಮುಗಿದಿರಬೇಕು. ಸೂರ್ಯೋದಯ - ಅಸ್ತಗಳಿಗೆ ತಕ್ಕಂತೆ ಕುತಪಕಾಲವನ್ನು ಲೆಕ್ಕ ಮಾಡಿಕೊಳ್ಳಬೇಕು. ಕುತಪಕಾಲದ ನಂತರ ಸುಮಾರು 48ನಿಮಿಷ ರೌಹಿಣಕಾಲ. ಏನೇ ಆಗಲಿ ರೌಹಿಣ ಕಾಲವನ್ನು ಮೀರಬಾರದು.

## ಅಣ್ಣ-ತಮ್ಮಂದಿರು ಶ್ರಾದ್ಧಮಾಡುವ ಕ್ರಮ

ಅಣ್ಣತಮ್ಮಂದಿರ ಆಸ್ತಿ ವಿಭಾಗ ಆಗಿದ್ದರೆ ಪ್ರತ್ಯೇಕವಾಗಿಯೇ ಶ್ರಾದ್ಧವನ್ನು ಮಾಡಬೇಕು. ಆಸ್ತಿ ವಿಭಾಗ ಆಗಿಲ್ಲದಿದ್ದರೂ ಒಟ್ಟು ಕುಟುಂಬ ಆಗಿಲ್ಲದೇ ಬೇರೆ ಬೇರೆ ಕುಟುಂಬ ಆಗಿದ್ದರೆ ಎಂದರೆ, ಬೇರೆ ಬೇರೆ ಅಡುಗೆ ಮಾಡಿಕೊಂಡು ಊಟ ಮಾಡುತ್ತಿದ್ದರೂ ಪ್ರತ್ಯೇಕಶ್ರಾದ್ಧವನ್ನು ಮಾಡಬೇಕು.

ಲೋಕದಲ್ಲಿ ಆಸ್ತಿವಿಭಾಗ ಆಗಿದ್ದರೂ, ಒಟ್ಟು ಕುಟುಂಬ ಆಗಿಲ್ಲದಿದ್ದರೂ ಅಣ್ಣತಮ್ಮಂದಿರು ಕಲೆತು ಶ್ರಾದ್ಧ ಮಾಡುತ್ತಿದ್ದಾರೆ. ಇದು ಸರಿಯಲ್ಲ.

ಆಸ್ತಿವಿಭಾಗ ಆಗಿಲ್ಲದಿದ್ದರೆ ಅಥವಾ ಒಟ್ಟು ಕುಟುಂಬವಾಗಿದ್ದರೆ ಆಗ ಹಿರಿಯನು ಒಬ್ಬ ಮಾಡಿದರೆ ಸಾಕು. ಆದರೆ ಕಿರಿಯನೂ ಸಹ ಶ್ರಾದ್ಧದ ಖರ್ಚಿನಲ್ಲಿ ತನ್ನ ಭಾಗವನ್ನು ಹಾಕಬೇಕು. ಹಾಗೂ ಸಕ್ರಿಯವಾಗಿ ಭಾಗವಹಿಸಬೇಕು. ಆಸ್ತಿವಿಭಾಗವಾ-ಗಿದ್ದರೂ ಸಹ ಮಹಾಲಯಪಕ್ಷ ಮಾಡುವ ಅಧಿಕಾರ ಹಿರಿಯನದೇ.

## ಶ್ರಾದ್ಧದ ಮಹಿಮೆ

ಭೀಷ್ಮರು ತಮ್ಮ ತಂದೆಯಾದ ಶಂತನು ಚಕ್ರವರ್ತಿಗಳಿಗೆ ಶ್ರಾದ್ಧವನ್ನು ಮಾಡುತ್ತಿದ್ದಾಗ ಪಿಂಡಪ್ರದಾನ ಮಾಡಲು ಸಿದ್ಧರಾದರು. ಆಗ ಭೂಮಿಯನ್ನು ಭೇದಿಸಿಕೊಂಡು ರತ್ನಕಂಕಣದಿಂದ ಅಲಂಕೃತವಾದ ಎರಡು ಕೈಗಳು ಬಂದವು. ಅದು ಅವರ ತಂದೆಯ ಕೈಗಳಾಗಿದ್ದವು. 'ಮಗನೇ! ನನ್ನ ಕೈಗಳಲ್ಲಿ ಪಿಂಡಗಳನ್ನು ಕೊಡು' ಎಂದು ಕೇಳಿದರು. ಆಗ ಭೀಷ್ಮರು ಒಂದು ನಿಮಿಷ ಆಲೋಚಿಸಿದರು. 'ಪಿಂಡಗಳನ್ನು ಭೂಮಿಯಲ್ಲಿ ಕೊಡಬೇಕು' ಎಂದು ಧರ್ಮಶಾಸ್ತ್ರಗಳು ಹೇಳುತ್ತಿವೆಯೇ ಹೊರತು ಕೈಯ್ಯಲ್ಲಿ ಕೊಡು ಎಂದು ಹೇಳಿಲ್ಲ. 'ಏನು ಮಾಡಬೇಕು?' ಎಂಬುದಕ್ಕೆ ಧರ್ಮಶಾಸ್ತ್ರವೇ ಪ್ರಮಾಣ. ಆದ್ದರಿಂದ ಭೀಷ್ಮರು ಕೈಯ್ಯಲ್ಲಿ ಕೊಡದೇ ಭೂಮಿಯ ಮೇಲೆ ಪಿಂಡಪ್ರದಾನ ಮಾಡಿದರು. ಇವರ ಧರ್ಮಶ್ರದ್ಧೆಗೆ ಮೆಚ್ಚಿದ ತಂದೆಯು ಪ್ರತ್ಯಕ್ಷರಾಗಿ 'ಸ್ವೇಚ್ಛಾಮರಣಿಯಾಗು' ಎಂದು ವರವನ್ನು ಕೊಟ್ಟರು. ಆಗ ಭೀಷ್ಮರು ಪಿತೃಗಳ ಬಗ್ಗೆ ಪ್ರಶ್ನೆಗಳನ್ನು ಮಾಡಿದರು. ಶಂತನು ಮಹಾರಾಜರು ಕೆಲವೊಂದು ವಿಷಯಗಳನ್ನು ಭೀಷ್ಮರಿಗೆ ತಿಳಿಸಿ ಹೆಚ್ಚಿಗೆ ವಿಷಯಗಳನ್ನು ಮಾರ್ಕಂಡೇಯರಿಂದ ತಿಳಿಯುವಂತೆ ಆಜ್ಞೆ ಮಾಡಿದರು.

ಮುಂದೆ ಭೀಷ್ಮರಿಗೆ ಮಾರ್ಕಂಡೇಯರ ದರ್ಶನವಾದಾಗ ಅವರನ್ನು ಕುರಿತು 'ಪಿತೃಗಳು ಯಾರು? ಅವರಿಗೆ ಶ್ರಾದ್ಧವು ಹೇಗೆ ಮುಟ್ಟುತ್ತದೆ? ಶ್ರಾದ್ಧದ ಮಹಿಮೆ ಏನು?' ಎಂದು ಪ್ರಶ್ನಿಸಿದರು. ಆಗ ಮಾರ್ಕಂಡೇಯರು ಹೀಗೆ ಹೇಳಿದರು.

ಹಿಂದೆ ನಾನು ಬಹುಕಾಲ ತಪಸ್ಸು ಮಾಡುತ್ತಿದ್ದೆ. ಒಮ್ಮೆ ಒಂದು ವಿಮಾನವು ಬರುತ್ತಿತ್ತು. ಅದರಲ್ಲಿ ಪರ್ಯಂಕದಲ್ಲಿ ಒಂದು ಹೆಬ್ಬಟ್ಟು ಗಾತ್ರ ತೇಜಸ್ವಿಗಳಾದ ಒಬ್ಬ

ಮನಿಗಳು ಮಲಗಿದ್ದರು. ಅವರೇ ಸನತ್ಕುಮಾರರು. ಆ ಮುನಿಗಳು ನನ್ನನ್ನೂ ಸಹ ವಿಮಾನದಲ್ಲಿ ಕೂಡಿಸಿಕೊಂಡರು. ಅನೇಕ ವರ್ಷಕಾಲ ಸಂಚಾರ ಮಾಡಿದರು. ಆ ಕಾಲದಲ್ಲಿ ಅವರಲ್ಲಿ ನಾನು ವಿಚಾರ ಮಾಡಿ ಪಿತೃಗಳ ಮಹಿಮೆಯನ್ನು ತಿಳಿದುಕೊಂಡೆ. ಅದನ್ನು ನಾನು ನಿನಗೆ ಹೇಳುತ್ತೇನೆ.

ಹೀಗೆ ಸನತ್ಕುಮಾರರಿಂದ ಮಾರ್ಕಂಡೇಯರಿಗೆ, ಮಾರ್ಕಂಡೇಯರಿಂದ ಭೀಷ್ಮರಿಗೂ ಬಂದ ಪಿತೃಗಳ ಮತ್ತು ಶ್ರಾದ್ಧದ ಮಹಿಮೆಯ ಸಾರಾಂಶ ಹೀಗಿದೆ –

## ಪಿತೃಗಳ ಉತ್ಪತ್ತಿ

ಹಿಂದೆ ಬ್ರಹ್ಮದೇವರು ದೇವತೆಗಳನ್ನೂ, ಯಜ್ಞಗಳನ್ನೂ ಸೃಷ್ಟಿಸಿ ಮಾಡಿರೆಂದು ಅಪ್ಪಣೆ ಮಾಡಿದರು. ಆಗ ದೇವತೆಗಳು ಭಗವಂತನಿಗೆ ಆಹುತಿಯನ್ನು ಕೊಡುವುದರ ಬದಲಾಗಿ ತಮಗೆ ತಾವೇ ಆಹುತಿಯನ್ನು ಕೊಟ್ಟುಕೊಂಡರು. ಈ ಅಪಚಾರದಿಂದ ಅವರ ಜ್ಞಾನವು ತಿರೋಧಾನವಾಯಿತು. ಬ್ರಹ್ಮದೇವರಲ್ಲಿ ಕೇಳಿಕೊಂಡಾಗ 'ನಿಮ್ಮ ಮಕ್ಕಳಲ್ಲಿ ಹೋಗಿ ಅವರ ಉಪದೇಶದಿಂದ ಜ್ಞಾನವನ್ನು ಪಡೆದುಕೊಳ್ಳಿ' ಎಂದು ಹೇಳಿದರು. ಅದರಂತೆ ದೇವತೆಗಳು ತಮ್ಮ ಮಕ್ಕಳಲ್ಲಿ ಹೋಗಿ ಜ್ಞಾನವನ್ನು ಪಡೆದರು. ಆ ಮಕ್ಕಳು ದೇವತೆಗಳಿಗೆ ಉಪದೇಶಿಸಿ 'ಮಕ್ಕಳೇ! ಹೋಗಿ ಬನ್ನಿ' ಎಂದು ಹೇಳಿದರು. ತಮ್ಮ ಮಕ್ಕಳೇ ತಮ್ಮನ್ನು ಮಕ್ಕಳೆಂದು ಕೂಗಿದ್ದಕ್ಕೆ ದೇವತೆಗಳ ಮನಸ್ಸಿಗೆ ಬೇಜಾರಾಯಿತು. ಬ್ರಹ್ಮದೇವರಿದ್ದಲ್ಲಿಗೆ ಹೋಗಿ ಎಲ್ಲ ವಿಚಾರ ತಿಳಿಸಿದರು. ಆಗ ಬ್ರಹ್ಮದೇವರು 'ನೀವೇನೂ ಚಿಂತೆ ಮಾಡಬೇಡಿರಿ. ನೀವು ಅವರಿಗೆ ಜನ್ಮ ಕೊಟ್ಟ ಪಿತೃಗಳಾಗಿದ್ದೀರಿ. ಅವರು ನಿಮಗೆ ಜ್ಞಾನಕೊಟ್ಟ ಪಿತೃಗಳಾಗಿದ್ದಾರೆ. ಹೀಗೆ ನೀವು ಪರಸ್ಪರ ಪಿತೃದೇವತೆಗಳಾಗಿದ್ದೀರಿ' ಎಂದು ಹೇಳಿದರು. ಹೀಗೆ ದೇವತೆಗಳಿಗೆ ಜ್ಞಾನೋಪದೇಶಮಾಡಿದ ದೇವತಾಪುತ್ರರೇ ಪಿತೃದೇವತೆಗಳೆಂದು ಪ್ರಸಿದ್ಧರಾದರು. ಇವರನ್ನು ದೇವತೆಗಳೂ ಸಹ ಆರಾಧಿಸುತ್ತಾರೆ.

## ಪಿತೃಗಳ ವಿಭಾಗ

ಪಿತೃದೇವತೆಗಳಲ್ಲಿ ಏಳು ಗುಂಪಿವೆ. ಅದರಲ್ಲಿ ಮೂರು ಗುಂಪಿನವರು ಅತಿ ಸೂಕ್ಷ್ಮವಾದ ದೇಹವುಳ್ಳವರು. ಆದ್ದರಿಂದ ಅವರನ್ನು ಅಮೂರ್ತಿಮಂತರು ಎನ್ನು-

ತ್ತಾರೆ. ಉಳಿದ ನಾಲ್ಕು ಗುಂಪಿನವರು ಮೂರ್ತಿಮಂತರು. ಅಮೂರ್ತಿಮಂತರಲ್ಲಿ 1. ವೈರಾಜರು, 2. ಅಗ್ನಿಷ್ವಾತ್ತರು, 3. ಬರ್ಹಿಷದರು ಎಂದು ಮೂರು ಗುಂಪು. ಮೂರ್ತಿಮಂತರಲ್ಲಿ 1. ಸುಕಾಲರು, 2. ಆಂಗೀರಸರು, 3. ಸುಸ್ವಧರು, 4. ಸೋಮಪರು ಎಂದು ನಾಲ್ಕುವಿಧ. ಪಿತೃಗಳು, ಅವರ ಲೋಕ, ಅವರ ತಂದೆ, ಮಕ್ಕಳು ಇವುಗಳನ್ನು ಕೆಳಗಿನ ಪಟ್ಟಿಯಲ್ಲಿ ನೀಡಲಾಗಿದೆ.

## ಅಮೂರ್ತಿಮಂತರು

| ಪಿತೃಗಳು | ತಂದೆ | ಮಾನಸೀಕನ್ಯಾ | ಲೋಕ | ಪೂಜಕರು |
|---|---|---|---|---|
| ವೈರಾಜರು | ವಿರಾಜ | ಮೇನಾ | ಸನಾತನ | ದೇವಗಣ |
| ಅಗ್ನಿಷ್ವಾತ್ತರು | ಮರೀಚಿ | ಅಚ್ಛೋದಾ | ಸೋಮಪದ | ದೇವತೆಗಳು |
| ಬರ್ಹಿಷದರು | ಪುಲಸ್ತ್ಯ | ಪೀವರೀ | ವೈಭ್ರಾಜ | ಯಕ್ಷ,ಗಂಧರ್ವ ರಾಕ್ಷಸ, ನಾಗ, ಸರ್ಪ,ಸುಪರ್ಣ |

## ಮೂರ್ತಿಮಂತರು

| | | | | |
|---|---|---|---|---|
| ಸುಕಾಲರು | ವಸಿಷ್ಠ | ಗೋ(ಏಕಶೃಂಗಾ) | ಜ್ಯೋತಿರ್ಭಾಸಿ | ಬ್ರಾಹ್ಮಣರು |
| ಆಂಗೀರಸರು | ಅಂಗಿರಾ | ಯಶೋದಾ | ಮರೀಚಿಗರ್ಭ | ಕ್ಷತ್ರಿಯರು |
| ಸುಸ್ವಧರು | ಪುಲಹ | ವಿರಜಾ | ಕಾಮಗ | ವೈಶ್ಯರು |
| ಸೋಮಪರು | ಹಿರಣ್ಯಗರ್ಭ | ನರ್ಮದಾ | ಮಾನಸ | ಶೂದ್ರರು |

## ಪಿತೃಯಜ್ಞದ ಮಹಿಮೆ

ಭರದ್ವಾಜರಿಗೆ ಏಳು ಮಕ್ಕಳಿದ್ದರು. ಅವರು ಮುಂದಿನ ಜನ್ಮದಲ್ಲಿ ವಿಶ್ವಾಮಿತ್ರರ ಮಕ್ಕಳಾಗಿ ಹುಟ್ಟಿದರು. ಆಗ ಅವರು ವಸಿಷ್ಠರ ಗೋವನ್ನು ಮೇಯಿಸಿಕೊಂಡು ಕಾಡಿಗೆ ಹೋಗಿದ್ದರು. ಅವರಲ್ಲಿ ಅಣ್ಣಂದಿರಿಗೆ ಗೋಮಾಂಸವನ್ನು ಭಕ್ಷಿಸಬೇಕೆಂಬ ಇಚ್ಛೆಯು ಬಂದಿತು. ತಮ್ಮನು ತಡೆದರೂ ಕೇಳಲಿಲ್ಲ. ಆಗ ತಮ್ಮನ್ನು 'ಹಾಗೆ ಗೋ-

ಮಾಂಸವನ್ನು ತಿನ್ನುವುದೇ ಆದರೆ ಪಿತೃಯಜ್ಞವನ್ನು ಮಾಡಿ ಪಿತೃಪ್ರಸಾದ ಎಂದು ಗೋಮಾಂಸವನ್ನು ಸ್ವೀಕರಿಸೋಣ' ಎಂದು ಹೇಳಿದನು. ಹಾಗೆಯೇ ಮಾಡಿದರು. ಗೋವನ್ನು ಹುಲಿಯು ಕೊಂದಿತೆಂದು ವಸಿಷ್ಠರಿಗೆ ಸುಳ್ಳು ಹೇಳಿದರು. ಈ ದೋಷದಿಂದ ಮುಂದಿನ ಜನ್ಮದಲ್ಲಿ ದಶಾರ್ಣದೇಶದಲ್ಲಿ ಏಳು ಬೇಟೆಗಾರರಾಗಿ ಹುಟ್ಟಿದರು. ಪಾಪದಿಂದ ನೀಚಜನ್ಮಬಂದರೂ ಪಿತೃಯಜ್ಞದ ಮಹಿಮೆಯಿಂದ ಕ್ರಮವಾಗಿ ಉತ್ತಮಜನ್ಮಗಳು ಬರುತ್ತಾ ಹೋದವು.

ನಾಲ್ಕನೆಯ ಜನ್ಮದಲ್ಲಿ ಕಾಲಂಜರಪರ್ವತದಲ್ಲಿ ಜಿಂಕೆಗಳಾಗಿ ಹುಟ್ಟಿದರು. ಐದನೆಯ ಜನ್ಮದಲ್ಲಿ ಶರದ್ವೀಪದಲ್ಲಿ ಚಕ್ರವಾಕಪಕ್ಷಿಗಳಾದರು. ಆರನೆಯ ಜನ್ಮದಲ್ಲಿ ಮಾನಸಸರೋವರದಲ್ಲಿ ಹಂಸಪಕ್ಷಿಗಳಾದರು. ಒಮ್ಮೆ ಮಾನಸಸರೋವರಕ್ಕೆ ನೀಪ ಎಂಬ ರಾಜನು ಬಂದಿದ್ದನು. ಆ ರಾಜನ ವೈಭವವನ್ನು ನೋಡಿದ ಈ ಪಕ್ಷಿಗಳಲ್ಲಿ ಹಿರಯ ಅಣ್ಣನು 'ನಾನೂ ಹಾಗೆ ರಾಜನಾಗಬೇಕು' ಎಂದನು. ಆಗ ಇಬ್ಬರು ತಮ್ಮಂದಿರು 'ಹಾಗಾದರೆ ನಾವು ಮಂತ್ರಿಗಳಾಗುತ್ತೇವೆ' ಎಂದರು. ಉಳಿದ ನಾಲ್ಕು ತಮ್ಮಂದಿರು 'ನೀವು ರಾಜ-ಮಂತ್ರಿಗಳೇ ಆಗಿರಿ' ಎಂದು ಶಪಿಸಿದರು.

ಅದರಂತೆ ಅಣುಹ ಎಂಬ ರಾಜನಿಗೆ ಶ್ರೀಶುಕ್ರಾಚಾರ್ಯರ ಪುತ್ರಿಯಾದ ಕೃತ್ವಿ ಎಂಬ ಪತ್ನಿಯಲ್ಲಿ ಬ್ರಹ್ಮದತ್ತ ಎಂಬ ಮಗನಾಗಿ ಮೊದಲನೆಯ ಹಂಸವು ಹುಟ್ಟಿತು. ಇನ್ನೆರಡು ಹಂಸಗಳು ಆ ಬ್ರಹ್ಮದತ್ತನಿಗೆ ಮಂತ್ರಿಗಳಾಗಿ ಕಂಡರೀಕ ಮತ್ತು ಪಾಂಚಾಲ ಎಂದು ಹುಟ್ಟಿದರು. ಉಳಿದ ನಾಲ್ಕು ಪಕ್ಷಿಗಳು ಕುರುಕ್ಷೇತ್ರದಲ್ಲಿ ವೇದಪಾರಂಗತರಾದ ಬ್ರಾಹ್ಮಣರಿಗಾಗಿ ಹುಟ್ಟಿದರು.

ಬ್ರಹ್ಮದತ್ತನಿಗೆ ಗೋದೇವಿ ಎಂಬ ಪತ್ನಿ ಇದ್ದಳು. ಒಮ್ಮೆ ದಂಪತಿಗಳು ಮಲಗಿದ್ದಾಗ ಎರಡು ಇರುವೆಗಳು ಮಾತನಾಡುತ್ತಿದ್ದವು. ಹೆಣ್ಣು ಇರುವೆಯನ್ನು ಗಂಡು ಇರುವೆ ಸಮಾಧಾನ ಮಾಡುತ್ತಿತ್ತು. ಅದನ್ನು ಕೇಳಿ ರಾಜನು ನಕ್ಕನು. ಹೆಂಡತಿಯು 'ತನ್ನನ್ನು ಹಾಸ್ಯ ಮಾಡುತ್ತಿದ್ದಾನೆ' ಎಂದು ಭಾವಿಸಿ ಕೋಪಿಸಿಕೊಂಡಳು. ನಿಜವಾದ ಸಂಗತಿಯನ್ನು ಹೇಳಿದರೂ ನಂಬಲಿಲ್ಲ. ರಾಜನಿಗೆ ಬಹಳ ಬೇಜಾರಾಗಿ ಈ ಕಲಹ ಶಾಂತಿಗಾಗಿ ಊರಿನಿಂದಾಚೆ ಹೋಗಿ ಲಕ್ಷ್ಮೀದೇವಿಯ ಆರಾಧನೆ ಮಾಡಿದನು. ಲಕ್ಷ್ಮೀದೇವಿಯು ಏಳು ದಿನಗಳ ನಂತರ 'ನೀನು ಊರಿಗೆ ಹೋಗು. ಕಲಹ ಶಾಂತಿಯಾಗುತ್ತದೆ' ಎಂದು ಆಜ್ಞಾಪಿಸಿದಳು.

ಅದೇ ರಾಜ್ಯದಲ್ಲಿ ಒಬ್ಬ ಬಡಬ್ರಾಹ್ಮಣ ಇದ್ದನು. ಅವನಿಗೆ ನಾಲ್ಕು ವೇದ-ಪಾರಂಗತರಾದ ಗಂಡುಮಕ್ಕಳು ಇದ್ದರು. ಅವರೇ ಹಿಂದೆ ಹಂಸಪಕ್ಷಿಗಳಾಗಿದ್ದವರು. ಅವರು ವೈರಾಗ್ಯದಿಂದ ಯೋಗಾಭ್ಯಾಸ ಮಾಡಲು ಹೊರಟಾಗ ಆ ಬ್ರಾಹ್ಮಣನು 'ತನ್ನ ಜೀವನ ಹೇಗೆ' ಎಂದು ಕೇಳಿದನು. ಆಗ ಅವರು ಆತನಿಗೆ ಒಂದು ಪತ್ರವನ್ನು ಬರೆದುಕೊಟ್ಟರು. 'ಇದನ್ನು ರಾಜನಿಗೆ ಕೊಡು. ರಾಜನು ಸಂತೋಷಪಟ್ಟು ನಿನಗೆ ಹಣವನ್ನು ಕೊಡುತ್ತಾನೆ. ಅದನ್ನು ತೆಗೆದುಕೊಂಡು ಜೀವನ ಮಾಡಿಕೋ' ಎಂದು ಹೇಳಿದರು.

ಅದರಂತೆ ಆ ಬ್ರಾಹ್ಮಣನು ಪತ್ರವನ್ನು ತೆಗೆದುಕೊಂಡು ರಾಜನಿಗೆ ಕೊಡಲು ಬಂದನು. ಆ ವೇಳೆಗೆ ರಾಜನು ತನ್ನ ಸೇವೆ(ಸಭೆ?)ಯನ್ನು ಮುಗಿಸಿ ರಥದಲ್ಲಿ ಕುಳಿತು ಹಿಂತಿರುಗಿ ಬರುತ್ತಿದ್ದನು. ಬ್ರಾಹ್ಮಣನು ಬಂದು ಪತ್ರವನ್ನು ಮುಟ್ಟಿಸಿದನು. ಆ ಪತ್ರವನ್ನು ಓದಿ ಮಂತ್ರಿಯು ಕೆಳಗೆ ಬಿದ್ದನು. ನಂತರ ರಾಜನೇ ಪತ್ರವನ್ನು ಓದಿಕೊಂಡು ತಾನೂ ಜ್ಞಾನತಪ್ಪಿ ಬಿದ್ದನು. ಸ್ವಲ್ಪ ವಿಶ್ರಾಂತಿ ಪಡೆದು ಎಚ್ಚರ ಬಂದ ಮೇಲೆ ಬ್ರಾಹ್ಮಣನಿಗೆ ಅವನ ಜೀವನಕ್ಕೆ ಆಗುವಷ್ಟು ಹಣ ಕೊಟ್ಟು ಕಳುಹಿಸಿದರು. ಆ ಪತ್ರದಲ್ಲಿ ಈ ರಾಜ-ಮಂತ್ರಿಗಳ ಮತ್ತು ಆ ನಾಲ್ಕು ಬ್ರಾಹ್ಮಣಪುತ್ರರ ಹಿಂದಿನ ಕಥೆಯೇ ಬರೆದಿತ್ತು.

''ದಶಾರ್ಣದೇಶದಲ್ಲಿ ಏಳು ವ್ಯಾಧರಿದ್ದರು. ಅವರೇ ಕಾಲಂಜರಪರ್ವತದಲ್ಲಿ ಜಿಂಕೆಗಳಾದರು. ಮುಂದೆ ಶರದ್ವೀಪದಲ್ಲಿ ಚಕ್ರವಾಕಪಕ್ಷಿಗಳಾದರು. ಕಡೆಗೆ ಮಾನಸ-ಸರೋವರದಲ್ಲಿ ಹಂಸಪಕ್ಷಿಗಳಾದರು. ಅದರಲ್ಲಿ ನಾವು ನಾಲ್ಕು ಜನ ಕುರುಕ್ಷೇತ್ರದಲ್ಲಿ ವೇದಪಾರಂಗತರಾದ ಬ್ರಾಹ್ಮಣರಾಗಿ ಹುಟ್ಟಿ ಯೋಗಮಾರ್ಗದಲ್ಲಿ ಹೊರಟಿದ್ದೇವೆ. ನೀವು ನಷ್ಟರಾಗುತ್ತಿದ್ದೀರಿ''. ಹೀಗೆ ಪತ್ರದ ಒಕ್ಕಣೆಯನ್ನು ನೋಡಿ ರಾಜ-ಮಂತ್ರಿಗಳಿಗೆ ವೈರಾಗ್ಯ ಬಂದಿತು. ರಾಜನು ಊರಿಗೆ ಬಂದು ತನ್ನ ಮಗ ವಿಷ್ವಕ್ಸೇನನಿಗೆ ರಾಜ್ಯವನ್ನು ಒಪ್ಪಿಸಿ, ತಾನು ವೈರಾಗ್ಯದಿಂದ ಕಾಡಿಗೆ ಹೊರಟನು. ಮಂತ್ರಿಗಳೂ ಸಹ ರಾಜನ ಜೊತೆ ಹೊರಟರು.

ಆಗ ಗೋದೇವಿಯು ನಸುನಗುತ್ತ 'ರಾಜನೇ! ನನಗೆ ನೀನು ಇರುವೆ ಭಾಷೆಯನ್ನು ತಿಳಿದಿದ್ದಿ ಎಂದು ಗೊತ್ತಿತ್ತು. ನಿನಗೆ ವೈರಾಗ್ಯ ಬರಲೆಂದು ಹಠಮಾಡಿದೆ'

ಎಂದು ಹೇಳಿದಳು. ಮುಂದೆ ರಾಜನು ಹಾಗೂ ಮಂತ್ರಿಗಳು ಮತ್ತು ಆ ನಾಲ್ಕುಜನ ಬ್ರಾಹ್ಮಣರೂ ಕೂಡ ತಮ್ಮ ಏಳನೆಯ ಜನ್ಮದಲ್ಲಿ ಯೋಗಸಿದ್ಧಿಯನ್ನು ಪಡೆದರು.

ಇದು ಹಿಂದೆ ಶ್ರಾದ್ಧ ಮಾಡಿದ್ದರ ಫಲ. ಶ್ರಾದ್ಧದ ಮಹಿಮೆ ಇಂತಹದು. ಹೀಗೆ ಮಹಿಮೆಯನ್ನು ತಿಳಿದು ಶ್ರಾದ್ಧವನ್ನು ಮಾಡತಕ್ಕವರಿಗೆ ಇದರಂತೆಯೇ ಉತ್ತಮ ಫಲವಾಗುತ್ತದೆ.

## ಪಿತೃಲಿಂಗಕಸೂಕ್ತಮ್

ಉದೀರತಾಮವರ ಉತ್ಪರಾಸ ಉನ್ಮಧ್ಯಮಾ ಪಿತರಃ ಸೋಮ್ಯಾಸಃ। ಅಸುಂ ಯ

ಈಯುರವೃಕಾ ಋತಜ್ಞಾಸ್ತೇ ನೋಽವಂತು ಪಿತರೋ ಹವೇಷು ॥೧॥

ಇದಂ ಪಿತೃಭ್ಯೋ ನಮೋ ಅಸ್ತ್ವದ್ಯ ಯೇ ಪೂರ್ವಾಸೋ ಯ ಉಪರಾಸ

ಈಯುಃ। ಯೇ ಪಾರ್ಥಿವೇ ರಜಸ್ಯಾ ನಿಷತ್ತಾ ಯೇ ವಾ ನೂನಂ ಸುವೃಜನಾಸು

ವಿಕ್ಷು॥೨॥

ಅಹಂ ಪಿತೄನ್ತ್ಸುವಿದತ್ರಾ ಅವಿತ್ಸಿ ನಪಾತಂ ವಿಕ್ರಮಣಂ ಚ ವಿಷ್ಣೋಃ।

ಬರ್ಹಿಷದೋ ಯೇ ಸ್ವಧಯಾ ಸುತಸ್ಯ ಭಜಂತ ಪಿತ್ವಸ್ತ ಇಹಾಗಮಿಷ್ಠಾಃ॥೩॥

ಬರ್ಹಿಷದಃ ಪಿತರ ಊತ್ಯಗ್ ವಾರ್- ಗಿಮಾ ವೋ ಹವ್ಯಾ ಚಕೃಮಾ ಜುಷಧ್ವಮ್।

ತ ಆ ಗತವಸಾ ಶಂತಮೇನಾಥಾ ನಃ ಶಂ ಯೋರರಪೋ ದಧಾತ॥೪॥

ಉಪಹೂತಾಃ ಪಿತರಃ ಸೋಮ್ಯಾಸೋ ಬರ್ಹಿಷ್ಯೇಷು ನಿಧಿಷು ಪ್ರಿಯೇಷು। ತ ಆ

ಗಮಂತು ತ ಇರ ಶ್ರುವಂತ್ವಧಿ ಬ್ರುವಂತು ತೇಽವಂತ್ವಸ್ಮಾನ್॥

ಆಚ್ಯಾ ಜಾನು ದಕ್ಷಿಣತೋ ನಿಷದ್ಯೇಮಂ ಯಜ್ಞಮಭಿ ಗೃಣೀತ ವಿಶ್ವೇ। ಮಾ

ಹಿಂಸಿಷ್ಠ ಪಿತರಃ ಕೇನ ಚಿನ್ನೋ ಯದ್ವ ಆಗಃ ಪುರುಷತಾ ಕರಾಮ॥೬॥

ಆಸೀನಾಸೋ ಅರುಣೀನಾಮುಪಸ್ಥೇ ರಯಿಂ ಧತ್ತ ದಾಶುಷೇ ಮರ್ತ್ಯಾಯ ।
ಪುತ್ರೇಭ್ಯಃ ಪಿತರಸ್ತಸ್ಯ ವಸ್ವಃ ಪ್ರ ಯಚ್ಛತ ತ ಇಹೋರ್ಜಂ ದಧಾತ ॥೭॥

ಯೇ ನಃ ಪೂರ್ವೇ ಪಿತರಃ ಸೋಮ್ಯಾಸೋ- ಽನೂಹಿರೇ ಸೋಮಪೀಥಂ
ವಸಿಷ್ಠಾಃ । ತೇಭಿರ್ಯಮಃ ಸಂರರಾಣೋ ಹವೀಂಷ್ಯು- ಶನ್ನುಶದ್ಭಿಃ
ಪ್ರತಿಕಾಮಮತ್ತು ॥೮॥

ಯೇ ತಾತೃಷುರ್ದೇವತ್ರಾ ಜೇಹಮಾನಾ ಹೋತ್ರಾವಿದಃ ಸ್ತೋಮತಷ್ಟಾಸೋ
ಅರ್ಕೈಃ । ಅಗ್ನೇ ಯಾಹಿ ಸುವಿದತ್ರೇಭಿರರ್ವಾಙ್ ಸತ್ಯೈಃ ಕವ್ಯೈಃ
ಪಿತೃಭಿರ್ಘರ್ಮಸದ್ಭಿಃ ॥೯॥

ಯೇ ಸತ್ಯಾಸೋ ಹವಿರದೋ ಹವಿಷ್ಪಾ ಇಂದ್ರೇಣ ದೇವೈಃ ಸರಥಂ ದಧಾನಾಃ ।
ಅಗ್ನೇ ಯಾಹಿ ಸಹಸ್ರಂ ದೇವವಂದ್ಯೈಃ ಪರೈಃ ಪೂರ್ವೈಃ ಪಿತೃಭಿರ್ಘರ್ಮಸದ್ಭಿಃ ॥೧೦॥

ಅಗ್ನಿಷ್ವಾತ್ತಾಃ ಪಿತರ ಏಹ ಗಚ್ಛತ ಸದಃಸತಃ ಸದತ ಸುಪ್ರಣೀತಯಃ । ಅತ್ತಾ ಹವೀಂಷಿ
ಪ್ರಯತಾನಿ ಬರ್ಹಿಷ್ಯ- ಥಾ ರಯಿಂ ಸರ್ವವೀರಂ ದಧಾತನ ॥೧೧॥

ತ್ವಮಗ್ನ ಈಳಿತೋ ಜಾತವೇದೋ - ಽವಾಡ್ಢವ್ಯಾನಿ ಸುರಭೀಣಿ ಕೃತ್ವೀಃ । ಪ್ರಾದಾಃ
ಪಿತೃಭ್ಯ ಸ್ವಧಯಾ ತೇ ಅಕ್ಷನ್ನದ್ಧಿ ತ್ವಂ ದೇವ ಪ್ರಯತಾ ಹವೀಂಷಿ ॥

ಯೇ ಚೇಹ ಪಿತರೋ ಯೇ ಚ ನೇಹ ಯಾಂಶ್ಚ ವಿದ್ಮ ಯಾ ಉ ಚ ನ ಪ್ರವಿದ್ಮ ।
ತ್ವಂ ವೇತ್ಥ ಯತಿ ತೇ ಜಾತವೇದಃ ಸ್ವಧಾಭಿರ್ಯಜ್ಞಂ ಸುಕೃತಂ ಜುಷಸ್ವ ॥೧೩॥

ಯೇ ಅಗ್ನಿದಗ್ಧಾ ಯೇ ಅನಗ್ನಿ ದಗ್ಧಾ ಮಧ್ಯೇ ದಿವಃ ಸ್ವಧಯಾ ಮಾದಯಂತೇ ।
ತೇಭಿಃ ಸ್ವರಾಳಸುನೀತಿಮೇತಾಂ ಯಥಾವಶಂ ತನ್ವಂ ಕಲ್ಪಯಸ್ವ ॥೧೪॥

# ಮಹಾಲಯ

ಪರಮ ದುರ್ಲಭವಾದ ಮನುಷ್ಯಜನ್ಮದ ಸಾಫಲ್ಯತೆಯು ಅದನ್ನು ಪಡೆದ ನಮ್ಮ ಆಚರಣೆಗಳ ಮೇಲೆ ಅವಲಂಭಿತವಾಗಿರುತ್ತದೆ. ಪರಮಾತ್ಮ ನಮಗೆ ಈ ಜನ್ಮವನ್ನು ಏತಕ್ಕಾಗಿ ನೀಡಿದ್ದಾನೆ ಎಂದರೆ ಹಿಂದಿನ ಜನ್ಮದ ಪಾಪ ಶೇಷಗಳನ್ನು ಅನುಭವಿಸಿ ಮುಗಿಸಿ ಮತ್ತೆ ಇನ್ನೂ ಹೆಚ್ಚಿನದಾದ ಪುಣ್ಯಸಂಪಾದನೆ ಮಾಡಿ ಮೋಕ್ಷವನ್ನು ಪಡೆಯಲಿ ಎಂದು. ಹೀಗೆ ಎಷ್ಟು ಜನ್ಮ ತಾಳಿದರೂ ಸಹ ಮುಗಿಸಲಾಗದಷ್ಟು ಪಾಪವನ್ನು ಒಂದೇ ಜನ್ಮದಲ್ಲಿ ಸಂಪಾದಿಸಿಬಿಡುತ್ತೇವೆ. ಈ ಕಠಿಣ ಸಮಸ್ಯೆಗೆ ನಮ್ಮ ಶಾಸ್ತ್ರಗಳು ಸುಲಭ ಪರಿಹಾರ ನೀಡುತ್ತವೆ. ಶಾಸ್ತ್ರಗಳ ಪ್ರಕಾರ ಮೃತರ ಆತ್ಮಗ್ರಳಿಗೆ ಶಾಶ್ವತ ಪಿತೃಲೋಕ ಪ್ರಾಪ್ತಿಯಾಗುವಂತೆ ಮಾಡುವುದು ಅವರ ಮಕ್ಕಳ ಕರ್ತವ್ಯ.

ಗರುಡಪುರಾಣದಲ್ಲಿ ಭಗವಂತನು ನುಡಿಯುತ್ತಾನೆ: ಯಾವನು ಪುತ್ ಎಂಬ ನರಕದಿಂದ ಪಿತೃಗಳನ್ನು ಪಾರುಮಾಡುತ್ತಾನೋ ಅವನೇ ಪುತ್ರ'. ಆದುದರಿಂದ ಯಾವುದೇ ಜಾತಿಬೇಧವಿಲ್ಲದೆ ಕರ್ಮಾಕಾರ ಇದ್ದಲ್ಲಿ ಪಿತೃಗಳಿಗೆ ಶ್ರಾದ್ಧ, ತರ್ಪಣ ಹಾಗೂ ದಾನಗಳನ್ನು ಮಾಡಿ ತಮ್ಮ ಋಣ ತೀರಿಸಲೇಬೇಕು.

ಇಂಥ ವಿಶೇಷ ಕರ್ತವ್ಯವನ್ನು ಪಾಲಿಸಬೇಕಾದ ಸಂದರ್ಭದಲ್ಲಿ ಗಮನಿಸಬೇಕಾದ ಅಂಶ ಕಾಲ. ಯಾವ ಕಾಲದಲ್ಲಿ ಪಿತೃಗಳಿಗೆ ಸದ್ಗತಿ ನೀಡುವ ಕಾರ್ಯಗಳನ್ನು ಮಾಡಬೇಕು? ಸಾಮಾನ್ಯವಾಗಿ ವಾರ್ಷಿಕ ಶ್ರಾದ್ಧ ರೂಢಿಯಲ್ಲಿ ಇಟ್ಟುಕೊಂಡವರು ಮೃತರ ಶ್ರಾದ್ಧವನ್ನು ಅವರ ಮೃತಮಾಸದ ಆ ತಿಥಿಯಂದು ಪಿಂಡಗಳನ್ನು ಸಮರ್ಪಿಸಿ ಆಚರಿಸುತ್ತಾರೆ. ಆದರೆ ಅಂಥ ಸಮಯದಲ್ಲಿ ಶ್ರಾದ್ಧ ಮಾಡುವವರು ಪಿತೃ, ಪಿತಾಮಹ, ಪ್ರಪಿತಾಮಹ ಅಂದರೆ ತಂದೆ, ಅಜ್ಜ ಹಾಗೂ ಮುತ್ತಜ್ಜನಿಗೆ ಅಥವಾ ತಾಯಿ, ಅಜ್ಜಿ ಹಾಗೂ ಮುತ್ತಜ್ಜಿಗೆ ಪಿಂಡಾದಿಗಳನ್ನಿಟ್ಟು ಶ್ರಾದ್ಧ ಮಾಡುತ್ತಾರೆ. ಆದರೆ ಭಾದ್ರಪದಮಾಸದ ಕೃಷ್ಣಪಕ್ಷದಲ್ಲಿ ಮಾತ್ರ ಕುಟುಂಬದಲ್ಲಿ ಮೃತರಾದ ಪ್ರತಿ-ಯೊಬ್ಬರಿಗೂ ತರ್ಪಣ ಕೊಡಬೇಕು. ಕಾರಣ ಮಾಸಗಳಲ್ಲಿ ಅತ್ಯಂತ ಭದ್ರಮಾಸ ಎಂದು ಕರೆಯಲ್ಪಡುವುದು ಈ ಭಾದ್ರಪದ.

ಆದರಲ್ಲಿಯೂ ಕೃಷ್ಣಪಕ್ಷ ಪ್ರಾರಂಭಗೊಳ್ಳುವುದು ಉತ್ತರಭಾದ್ರಾ ನಕ್ಷತ್ರದಿಂದ. ಅಂದರೆ ಮನುಷ್ಯಜನ್ಮ ಮುಗಿಸಿದ ಉತ್ತರದಲ್ಲಿ ಆ ಆತ್ಮಕ್ಕೆ ಶಾಶ್ವತ ಭದ್ರಸ್ಥಾನವನ್ನು

ಪಿತೃಲೋಕದಲ್ಲಿ ಸ್ಥಾಪಿಸಲು ಹಾಗೂ ಅವರಿಗೆ ತರ್ಪಣಾದಿಗಳನ್ನು ಕೊಟ್ಟು ಶುಭವನ್ನು ಪಡೆಯಲು ಈ ಪಕ್ಷ ಸೂಕ್ತ ಸಮಯ. ವರ್ಷಕ್ಕೊಮ್ಮೆ ಏಕೆ ಎಂಬುದು ಸಾಮಾನ್ಯರ ಅನುಮಾನ. ಶಾಸಗಳ ಪ್ರಕಾರ ಭೂಲೋಕದಲ್ಲಿ ವಾಸ ಮಾಡುವ ನಮ್ಮ ಒಂದು ವರ್ಷ ಪಿತೃಲೋಕದವರಿಗೆ ಒಂದು ದಿವಸ. ಹೀಗಾಗಿ ವರ್ಷಕ್ಕೊಮ್ಮೆ ಪಿತೃಪಕ್ಷದಲ್ಲಿ ಪೂರ್ವಿಕರನ್ನು ಆರಾಧಿಸಿದರೆ ಪ್ರತಿದಿನ ಪಿತೃಗಳನ್ನು ಆರಾಧಿಸಿದಂತೆ. ಇನ್ನು ಭಾದ್ರಪದ ಮಾಸದ ಕೃಷ್ಣಪಕ್ಷದಲ್ಲಿಯೇ ಏಕೆ? ನಿರ್ಣಯಸಿಂಧು' ಗ್ರಂಥದಲ್ಲಿ ತಿಳಿಸಿದಂತೆ ಆಷಾಢಮಾಸದ ಹುಣ್ಣಿಮೆಯ ನಂತರ ಐದನೆಯ ಪಕ್ಷದಲ್ಲಿ ಪಿತೃಗಳು ಪ್ರತಿದಿನ ಅನ್ನ ಹಾಗೂ ನೀರನ್ನು ಬಯಸುತ್ತಾರೆ.'

ಇಲ್ಲಿ ಪಕ್ಷ ಎಂದರೆ 15 ತಿಥಿಗಳು. ಅಲ್ಲಿಗೆ ಆಷಾಢಮಾಸದ ಹುಣ್ಣಿಮೆಯ ನಂತರ ಐದನೆಯ ಪಕ್ಷ ಈ ಭಾದ್ರಪದ ಕೃಷ್ಣಪಕ್ಷ ಆದುದರಿಂದ ಈ ಪಕ್ಷವನ್ನು ಪಿತೃಪಕ್ಷ ಎಂದು ಕರೆದಿದ್ದಾರೆ. ಆದುದರಿಂದ ಪಿತೃಗಳನ್ನು ತೃಪ್ತಿಪಡಿಸಲು ಅವರು ಬಯಸುವ ಅನ್ನವನ್ನು ಪಿಂಡಗಳ ಸಮರ್ಪಣೆ ಮೂಲಕ ಹಾಗೂ ಅವರು ಬಯಸುವ ನೀರನ್ನು ತರ್ಪಣಗಳ ಮೂಲಕ ನೀಡಿ ಪಿತೃಗಳ ಆಶೀರ್ವಾದಕ್ಕೆ ಪಾತ್ರರಾಗಬೇಕು.

ಈ ಹದಿನೈದು ದಿನಗಳಲ್ಲಿ ಮಾಡುವ ಶ್ರಾದ್ಧಕರ್ಮಕ್ಕೆ ಪಕ್ಷ ಎಂದು ಹೆಸರು. ಮುಖ್ಯವಾಗಿ ಮಹಾಮಭರಣಿ, ಮಧ್ಯಾಷ್ಟಮೀ, ಅವಿಧವಾ ನವಮೀ, ಘಾತ ಚತುರ್ದಶೀ ಮತ್ತು ಮಹಾಲಯ ಅಮಾವಾಸ್ಯೆ-ಈ ದಿನಗಳು ಈ ಪಕ್ಷದಲ್ಲಿ ಮುಖ್ಯವಾದುವೆಂದು ಪ್ರಸಿದ್ಧಿ.

ಸೂರ್ಯನು ಕನ್ಯಾರಾಶಿಯಲ್ಲಿರುವಾಗ ಭಾದ್ರಪದಕೃಷ್ಣಪಕ್ಷದಲ್ಲಿ ಹದಿನೈದು ದಿನಗಳು ಹಾಗು ಆಶ್ವಯುಜಶುಕ್ಲಪಕ್ಷದ ಪಾಡ್ಯ ಹೀಗೆ ಹದಿನಾರು ದಿನಗಳಲ್ಲಿ ಪಾರ್ವಣವಿಧಿಯಿಂದ ಶ್ರಾದ್ಧವನ್ನು ಮಾಡಬೇಕು. ಇಲ್ಲಿ ಧೂರಿ-ಲೋಚನ ಸಂಜ್ಞಕ ವಿಶ್ವೇದೇವತೆಗಳು. ಪ್ರತಿದಿನ ಮಹಾಲಯವನ್ನು ಮಾಡಲು ಅಶಕ್ತರಾದವರು ಒಂದು ದಿವಸವಾಗಲೀ ಮಾಡಬೇಕು. ತಂದೆ ಅಥವಾ ತಾಯಿಯ ಶ್ರಾದ್ಧತಿಥಿಯಲ್ಲಾಗಲೀ, ಮಹಾಭರಣಿ, ಮಹಾವ್ಯತೀಪಾತ, ಮಧ್ಯಾಷ್ಟಮೀ ಈ ಯಾವುದಾದರೊಂದು ದಿನದಲ್ಲಾಗಲೀ ಸಕೃನ್ಮಹಾಲಯಶ್ರಾದ್ಧವನ್ನು ಮಾಡಬೇಕು. ನಿತ್ಯ ಮಹಾಲಯ-ಶ್ರಾದ್ಧವನ್ನು ಮಾಡುವ ಪಕ್ಷದಲ್ಲಿ ಅಂದಂದೇ ಶ್ರಾದ್ಧಾನಂತರ ತರ್ಪಣವನ್ನು

ಕೊಡತಕ್ಕದ್ದು. ಸಕೃನ್ಮಹಾಲಯಶ್ರಾದ್ಧದಲ್ಲಿ ಪರೇSಹನಿ ತರ್ಪಣವನ್ನು ಕೊಡತಕ್ಕದ್ದು. ಸುಮಂಗಲಿಯಾಗಿ ಮೃತರಾದವರಿಗೆ ನವಮಿಯಂದು ಅವಿಧವಾ ನವಮೀ (ಅನ್ವ-ಷ್ಟಕ) ಶ್ರಾದ್ಧವನ್ನೂ, ಅಪಘಾತಾದಿ ದುರ್ಮರಣಕ್ಕೆ ಒಳಗಾದವರಿಗೆ ಚತುರ್ದಶಿ-ಯಂದು ಏಕೋದ್ದಿಷ್ಟಶ್ರಾದ್ಧವನ್ನು, ಯತಿಗಳನ್ನುದ್ದೇಶಿಸಿ ದ್ವಾದಶಿಯಂದು ಬ್ರಾಹ್ಮಣ-ಭೋಜನವನ್ನೂ ಮಾಡತಕ್ಕದ್ದು.

ಆಶ್ವಯುಜ ಶುಕ್ಲಪಾಡ್ಯದಂದು ಮಾತಮಾಹ ಹಾಗೂ ಮಾತಾಮಹಿಯನ್ನು ಉದ್ದೇಶಿಸಿ ದೌಹಿತ್ರನು ಮಹಾಲಯವನ್ನು ಮಾಡಬೇಕು. ಈ ಮಹಾಲಯಶ್ರಾದ್ಧವನ್ನು ಜೀವತ್ಪಿತೃಕರೇ ಮಾಡಬೇಕು. ಸೋದರಮಾವನು ಇದ್ದರೂ ಈ ಮಹಾಲಯವನ್ನು ಮಾಡಲೇಬೇಕು.

ಈ ಯಾವುದಾದರೂ ಮಹಾಲಯಶ್ರಾದ್ಧವನ್ನು ಭಾದ್ರಪದಕೃಷ್ಣಪಕ್ಷದಲ್ಲಿ ಮಾಡಲು ಆಗದೇ ಹೋದರೆ ತುಲಾಮಾಸದಲ್ಲಿ ಮಾಡಬಹುದು. (ಆಶ್ವಯುಜ ಕೃಷ್ಣಪಕ್ಷದಲ್ಲಿ, ಒಮ್ಮೊಮ್ಮೆ ಕಾರ್ತಿಕಕೃಷ್ಣಪಕ್ಷದಲ್ಲಿಯೂ ಈ ಅವಕಾಶವು ಇರುತ್ತದೆ).

ಮಹಾಲಯಕ್ಕೆ ಸಂಬಂಧಿಸಿದ ಹೆಚ್ಚಿನ ವಿಷಯಗಳು ಧರ್ಮಸಿಂಧು ಇತ್ಯಾದಿ ಧರ್ಮಶಾಸ್ತ್ರಗ್ರಂಥಗಳಲ್ಲಿ ಇರುತ್ತವೆ.

*ಮಹಾಲಯದಲ್ಲಿ ಯಾವಾಗ ಶ್ರಾದ್ಧ ಮಾಡಬಾರದು? ಯಾವಾಗ ಮಾಡಬೇಕು*

ಈ ಮಾತನ್ನು ಕಾತ್ಯಾಯನರು ಹೇಳಿದ್ದಾರೆ -

*ನಭಸ್ಯಸ್ಯಾಪರೇ ಪಕ್ಷೇ ಶ್ರಾದ್ಧಂ ಕುರ್ಯಾದ್ ದಿನೇದಿನೇ।*

ಬ್ರಹ್ಮಪುರಾಣದಲ್ಲಿಯೂ ಈ ಮಾತಿದೆ -

ಆಶ್ವಯುಕ್ಕೃಷ್ಣಪಕ್ಷೇ ತು ಶ್ರಾದ್ಧಂ ಕುರ್ಯಾದ್ ದಿನೇದಿನೇ।

ಏಕಾದಶೀವ್ರತ ಸಕಲನಿಯಮಗಳಿಗಿಂತಲೂ ಮಹತ್ತ್ವದ್ದಾದ್ದರಿಂದ ವೈಷ್ಣವರು ಏಕಾದಶೀ ದಿವಸ ಶ್ರಾದ್ಧವನ್ನು ಮಾಡುವಂತಿಲ್ಲ. ಘಾತಚತುರ್ದಶಿಯಂದು ದುರ್ಮರಣ ಹೊಂದಿದವರಿಗೆ ಮಾತ್ರ ಶ್ರಾದ್ಧ. ಈ ಎರಡು ದಿವಸ ಬಿಟ್ಟು ಎಲ್ಲ

ದಿವಸಗಳಲ್ಲಿಯೂ ಶ್ರಾದ್ಧ ಮಾಡಬೇಕು, ಇಡಿಯ ಪಕ್ಷದಲ್ಲಿ ಶ್ರಾದ್ಧ ಮಾಡುವ ಶ್ರದ್ಧಾಳುಗಳು.

ಆದರೆ, ಈಗ ಪ್ರತೀದಿವಸ ಮಾಡುವವರು ಬಹಳ ಕಡಿಮೆ. ಮಹಾಲಯದಲ್ಲಿ ಒಂದು ದಿವಸ ಮಾತ್ರ ಪಕ್ಷವನ್ನು ಮಾಡಿಬಿಡುತ್ತಾರೆ. ಅಂಥವರೂ ಸಹ ಪ್ರತೀದಿವಸ ತರ್ಪಣವನ್ನು ಮಾತ್ರ ನೀಡಲೇ ಬೇಕು, ಏಕಾದಶಿಯನ್ನು ಹೊರತುಪಡಿಸಿ.

ಒಂದೇ ಬಾರಿ ಶ್ರಾದ್ಧ ಮಾಡುವವರು ಯಾವ ದಿವಸಗಳಲ್ಲಿ ಶ್ರಾದ್ಧ ಮಾಡಬಾರದು ಎನ್ನುವದನ್ನು ವಸಿಷ್ಠರು ತಿಳಿಸಿದ್ದಾರೆ -1. ಪ್ರತಿಪದಾ, ಷಷ್ಠೀ ಮತ್ತು ಏಕಾದಶಿಗಳಿಗೆ ನಂದಾತಿಥಿ ಎಂದು ಹೆಸರು. ಈ ತಿಥಿಗಳಂದು ಮಹಾಲಯ ಶ್ರಾದ್ಧ ಮಾಡಬಾರದು.

ನಂದಾಯಾಂ ಭಾರ್ಗವದಿನೇ ಚತುರ್ದಶ್ಯಾಂ ತ್ರಿಜನ್ಮಸು ।

ಏಷು ಶ್ರಾದ್ಧಂ ನ ಕುರ್ವೀತ ಗೃಹೀ ಪುತ್ರಧನಕ್ಷಯಾತ್ ॥

2. ಶುಕ್ರವಾರದಂದು ಮಹಾಲಯ ಶ್ರಾದ್ಧ ಮಾಡಬಾರದು.

3. ಘಾತಚತುರ್ದಶಿಯಂದು ಮಹಾಲಯ ಶ್ರಾದ್ಧ ಮಾಡಬಾರದು. ಅಪಘಾತ - ಕೊಲೆ - ಆತ್ಮಹತ್ಯೆಗಳಿಂದ ಸತ್ತವರಿಗೆ ಮಾತ್ರ ಘಾತಚತುರ್ದಶಿಯಂದು ಶ್ರಾದ್ಧ.

4. ರೋಹಿಣೀ, ರೇವತೀ ಮತ್ತು ಮಘಾ ಈ ನಕ್ಷತ್ರಗಳು ಇರುವ ದಿವಸ ಮಹಾಲಯ ಶ್ರಾದ್ಧವನ್ನು ಮಾಡಬಾರದು.

ಮೇಲೆ ಹೇಳಿದ ದಿವಸಗಳಲ್ಲಿ ಮಹಾಲಯ ಶ್ರಾದ್ಧ ಮಾಡಿದರೆ ಮಕ್ಕಳಿಗೆ ತೊಂದರೆಯುಂಟಾಗುತ್ತದೆ ಮತ್ತು ಸಂಪತ್ತು ನಾಶವಾಗುತ್ತದೆ ಎಂದು ವಸಿಷ್ಠರು ಮತ್ತು ವೃದ್ದಗರ್ಗರು ಇಬ್ಬರೂ ತಿಳಿಸಿದ್ದಾರೆ.

ಪ್ರಾಜಾಪತ್ಯೇ ಚ ಪೌಷ್ಣೇ ಚ ಪಿತ್ರ್ಯರ್ಕ್ಷೇ ಭಾರ್ಗವೇ ತಥಾ ।
ಯಸ್ತು ಶ್ರಾದ್ಧಂ ಪ್ರಕುರ್ವೀತ ತಸ್ಯ ಪುತ್ರೋ ವಿನಶ್ಯತಿ ॥

ತರ್ಪಣಗಳನ್ನು ಕೊಡುವಾಗ ಯಾರ್ಯಾರಿಗೆ ಮತ್ತು ಯಾರಿಗೆ ಮೊದಲು ತರ್ಪಣ ಕೊಡಬೇಕು ಇತ್ಯಾದಿಗಳ ಬಗ್ಗೆ ಶಾಸ್ತ್ರಗಳಲ್ಲಿ ಹೀಗೆ ತಿಳಿಸಲಾಗಿದೆ.

ಆದೌ ಪಿತಾ ತತೋ ಮಾತಾ ಸಪತ್ನೀ ಜನನೀ ತಥಾ । ಮಾತಾಮಹಾಃ ಸಪತ್ನೀಕಾಃ ಹ್ಯಾತ್ಮಪತ್ನೀ ತತಃ ಪರಂ ॥ ಸುತಭ್ರಾತೃಪಿತೃವ್ಯಾಶ್ಚ ಮಾತುಲಾಶ್ಚ ಸಭಾರ್ಯಕಾಃ । ದುಹಿತಾ ಭಗಿನೀ ಚೈವ ದೌಹಿತ್ರೋ ಭಾಗಿನೇಯಕಃ ॥ ಶ್ಯಾಲಕೋ ಭಾವುಕಶ್ಚೈವ ಶ್ವಶುರೋ ಗುರುಋುತ್ವಿಜಾಃ । ಏತೇ ಸ್ಯುಃ ಪಿತರಸ್ತೀರ್ಥೆ ತರ್ಪಣೇ ಚ ಮಹಾಲಯೇ ॥

ಕುಟುಂಬದಲ್ಲಿ ಮೃತಪಟ್ಟವರಲ್ಲಿ ಕ್ರಮವಾಗಿ ಮೊದಲು ತಂದೆ, ತಾಯಿ, ಹೆಂಡತಿ, ಅತ್ತೆ, ಮಾವ, ಮಗ, ಸಹೋದರರು, ದೊಡ್ಡಪ್ಪ, ಚಿಕ್ಕಪ್ಪ ಹಾಗೂ ಅವರ ಹೆಂಡತಿ, ತಾಯಿಯ ತಮ್ಮ ಅಥವಾ ಅಣ್ಣ, ಅವರ ಹೆಂಡತಿಯರು, ಮಗಳು, ಅಕ್ಕ, ತಂಗಿ ಹಾಗೂ ಅವರ ಮಕ್ಕಳಿಗೆ, ಭಾವ, ಮೈದುನ ಮುಂತಾದವರು ಹಾಗೂ ವಿಶೇಷವಾಗಿ ಗುರುಗಳು, ಕುಲಪುರೋಹಿತರು ಸೇರಿದಂತೆ ಯಾರು ನಮಗೆ ತಿಳಿದಂತೆ ಮೃತರಾಗಿದ್ದಾರೋ ಅವರಿಗೆ - ಹೀಗೆ ಸರ್ವರಿಗೂ ಕ್ರಮವಾಗಿ ತರ್ಪಣಗಳನ್ನು ಕೊಡಬೇಕು.

ಇನ್ನು ಅನಾರೋಗ್ಯ, ವೃದ್ಧಾಪ್ಯ ಇತ್ಯಾದಿ ಕಾರಣಗಳಿಂದಾಗಿ ಇಷ್ಟೆಲ್ಲ ವಿಸ್ತಾರವಾಗಿ ತರ್ಪಣಗಳನ್ನು ಮಾಡಲು ಅಶಕ್ತರಾದವರು ಸಂಕ್ಷಿಪ್ತವಾಗಿಯೂ ಆಚರಿಸಬಹುದು. ಹೇಗೆಂದರೆ,

ಆಬ್ರಹ್ಮಸ್ತಂಭಪರ್ಯಂತಂ ದೇವರ್ಷಿ ಪಿತೃಮಾನವಾಃ । ತೃಪ್ಯಂತು ಪಿತರಃ ಸರ್ವೇ ಮಾತೃಮಾತಾಮಹಾದಯಃ ॥ ಆತೀತ ಕುಲಕೋಟೀನಾಂ ಸಪ್ತದ್ವೀಪ ನಿವಾಸಿನಾಂ । ಆಬ್ರಹ್ಮ ಭುವನಾಲ್ಲೋಕಾತ್ ಇದಮಸ್ತು ತಿಲೋದಕಮ್ ॥

ಎಂದು ಹೇಳುತ್ತ ಮೂರು ಸಲ ಎಳ್ಳುನೀರು ಬಿಡಬೇಕು. ಸಾಮಾನ್ಯವಾಗಿ ಇದನ್ನು ಮನೆಯ ಮುಂದೆ, ತುಳಸಿ ಕಟ್ಟೆಯ ಹತ್ತಿರ ಮಾಡಬೇಕು. ಮನಯಸ್ಸಿ ತಿಲತರ್ಪಣ ಕೊಡಬಾರದು. ಎಂಬುದು ಕೆಲವು ಧರ್ಮಶಾಸ್ತ್ರಜ್ಞರ ಅಭಿಪ್ರಾಯ.

ದರ್ಭೆಯಿಂದ ತಯಾರಿಸಿದ ಪವಿತ್ರವನ್ನು ಉಂಗುರದ ಬೆರಳಿಗೆ ಧರಿಸಿಯೇ ತರ್ಪಣಾದಿಗಳನ್ನು ಕೊಡಬೇಕು. ಕರ್ಮ ಮಾಡುವವನು ದರ್ಭಾಸನದಲ್ಲಿ ಕುಳಿತುಕೊಳ್ಳಬೇಕು ಹಾಗೂ ಪಿಂಡ ಹಾಕಿ ಕರ್ಮಾಂಗ ಮಾಡುವವರು ದರ್ಭೆಯ ಮೇಲೆಯೇ ಪಿಂಡ ಪ್ರಧಾನ ಮಾಡಬೇಕು. ತರ್ಪಣಾದಿಗಳನ್ನು ಮಾಡುವವರು

ಶುದ್ಧವಾದ ಸ್ಥಳ, ವಸ್ತ್ರ, ನೀರು, ಎಳ್ಳು ಹಾಗೂ ಅಕ್ಕಿಯನ್ನು ಬಳಸಬೇಕು. ಯಾವುದೇ ಕಾರಣಕ್ಕೂ ತರ್ಪಣದಲ್ಲಿ ಬಳಸುವ ಅಕ್ಕಿ ತುಂಡಾಗಿರಬಾರದು. ತರ್ಪಣ ಮಾಡುವ ಸ್ಥಳದಲ್ಲಿ ಉದುರಿದ ಕೂದಲು ಇತ್ಯಾದಿಗಳು ಇರಬಾರದು. ಮನೆಯಲ್ಲಿ ಹಿರಿಯರ ದಿನದ ಆಚರಣೆಯ ಸಂದರ್ಭದಲ್ಲಿ ಅವಾಚ್ಯ ಶಬ್ದಗಳ ಬಳಕೆ, ಕೂಗುವುದು, ಕಿರುಚುವುದು ಮಾಡಬಾರದು. ಈ ಸಂದರ್ಭದಲ್ಲಿ ಘಂಟಾನಾದಕ್ಕೆ ನಿಷೇಧವಿದೆ.

### * ಆಚರಣೆ ಎಲ್ಲಿ ಮಾಡಬೇಕು *

ಮನೆಯಲ್ಲಿ ತಿಲತರ್ಪಣ ನೀಡುವುದನ್ನು ಶಾಸ್ತ್ರಗಳು ನಿಷೇಧಿಸಿವೆ. ಭಾನುವಾರ, ಶುಕ್ರವಾರ, ಭರಣಿ, ಕೃತಿಕಾ ಹಾಗೂ ಮಘಾ ನಕ್ಷತ್ರಗಳಿರುವ ದಿನಗಳಲ್ಲಿ ಕೂಡ ತಿಲತರ್ಪಣವನ್ನು ನಿಷೇಧಿಸಲಾಗಿದೆ. ಆದರೆ ಪಿತೃಪಕ್ಷದಲ್ಲಿ ಮಾತ್ರ ಯಾವುದೇ ನಿಷಿದ್ಧ ತಿಥಿ ವಾರ ನಕ್ಷತ್ರಗಳಿದ್ದರೂ ತಿಲತರ್ಪಣ ಮಾಡಬಹುದು. ತರ್ಪಣಕ್ಕೆ ಉತ್ತಮ ಸ್ಥಳಗಳೆಂದರೆ ಪವಿತ್ರ ನದೀತೀರಗಳು ಹಾಗೂ ಗೋಕರ್ಣಾದಿ ತೀರ್ಥಕ್ಷೇತ್ರಗಳು. ಪಿತೃಪಕ್ಷದಲ್ಲಿ ಅವಶ್ಯವಾಗಿ ತರ್ಪಣದ ಅಧಿಕಾರವುಳ್ಳವರು ಗೋಕರ್ಣ, ಶ್ರೀರಂಗಪಟ್ಟಣ ಮುಂತಾದ ಕ್ಷೇತ್ರಗಳು ಅಥವಾ ಕಾವೇರಿ, ಗಂಗಾ ಇಂಥ ಪವಿತ್ರ ನದೀತೀರಗಳಲ್ಲಿ ಪಿತೃಗಳಿಗೆ ಪಿಂಡಪ್ರದಾನ, ತರ್ಪಣಾದಿಗಳನ್ನು ಅರ್ಪಿಸುವುದು ಉತ್ತಮ. ವಿವಾಹವಾಗಿ ಇನ್ನೂ ಒಂದು ವರ್ಷ ಮುಗಿಯದವರು ತರ್ಪಣ ಮಾಡಕೂಡದು.

## ಭಾದ್ರಪದ ॥ ಕೃಷ್ಣ ॥ ತದಿಗೆ

ಗಜಗೌರೀವ್ರತವನ್ನು ಆಚರಿಸುವ ಪದ್ಧತಿಯೂ ಇದೆ. ಇದು ರಾಜ್ಯಪ್ರಾಪ್ತಿ ಅಥವಾ ಐಶ್ವರ್ಯಪ್ರಾಪ್ತಿಗಾಗಿ ಆಚರಿಸಲಾಗುವ ವ್ರತ. ಇದನ್ನು ಜನ್ಮವ್ರತವನ್ನಾಗಿ ಜೀವನವಿಡೀ ಮಾಡುವವರೂ ಇದ್ದಾರೆ. ಹದಿನಾರು ಸಂಖ್ಯೆಯಲ್ಲಿ ವೀಳ್ಯದೆಲೆ, ಅಡಿಕೆ, ಬಳೆ ಹಾಗೂ ಅರಸಿನದ ಕೊಮ್ಮುಗ್ರಳನ್ನು ಪೂಜಾಮಂಟಪದಲ್ಲಿ ಎರಡು ಬದಿಯಲ್ಲೂ ಜೋಡಿಸಿಟ್ಟು, ಮಧ್ಯೆ ಕಲಶ-ಕನ್ನಡಿ-ರವಿಕೆಕಣಗಳನ್ನಿಟ್ಟು, ಅದರ ಮಧ್ಯದಲ್ಲಿ ಅರಸಿನದ ಗೌರಿಯನ್ನು ಸ್ಥಾಪಿಸಿ, ಪೂಜಿಸಲಾಗುತ್ತದೆ. ಹದಿನಾರು

ಸಂಖ್ಯೆಯಲ್ಲಿ ನಾಮಜಪ ಮಾಡಿ ಹದಿನಾರು ತಂಬಿಟ್ಟು ದೀಪಗಳ ಆರತಿಯನ್ನು ಬೆಳಗಿ ಆದರಿಂದ ಕಾಡಿಗೆಯನ್ನು ತೆಗೆದು, ಆ ಕಾಡಿಗೆಯನ್ನೂ, ತಂಬಿಟ್ಟು ಪ್ರಸಾದವನ್ನೂ ಸುಮಂಗಲಿಯರಿಗೆ ಹಂಚಲಾಗುತ್ತದೆ. ಪೂಜಾಂತ್ಯದಲ್ಲಿ ಹೆತ್ತತಾಯಿಗೆ ವಸ್ತ್ರ, ಧಾನ್ಯ, ದಕ್ಷಿಣೆಗಳನ್ನಿತ್ತು ನಮಸ್ಕರಿಸಬೇಕು. ಕುಂತಿ ಈ ವ್ರತವನ್ನಾಚರಿಸಿದ ಮೇಲೆ ಪಾಂಡವರಿಗೆ ರಾಜ್ಯದ ಪುನಃ ಪ್ರಾಪ್ತಿಯಾಯಿತೆಂದು ವ್ರತಕಥೆ ಸಾರುತ್ತದೆ.

## ಭಾದ್ರಪದ || ಬಹುಳ || ಚತುರ್ಥೀ

ಶ್ರೀ ವಾಸುದೇವಮಾಧವತೀರ್ಥರು (ಮಾಧವತೀರ್ಥ ಮಠ) ಮುಳಬಾಗಿಲು ವೇದವ್ಯಾಸಪದಾಸಕ್ತಂ ಅಪರೋಕ್ಷೀಕೃತಶ್ರೀಶಕಮ್ । ವಾಸುದೇವಮಾಧವತೀರ್ಥಾಖ್ಯೋ ಗುರುಂ ವಂದೇ ನಿರಂತರಮ್ ॥

ಕಪಿಲಷಷ್ಠೀ, ಚಂದ್ರಷಷ್ಠೀ ಭಾದ್ರಪದ ಕೃಷ್ಣಚತುರ್ಥಿ ಮಹಾಲಯಪರ್ವದಲ್ಲಿ ಬರುವ ದಿನವಾಗಿದೆ. ಈ ತಿಥಿಯು ಮಂಗಳವಾರ ಅಥವಾ ರವಿವಾರದಂದು ಒದಗಿಬಂದು ಅಂದು ವ್ಯತೀ- ಪಾತಯೋಗ ಮತ್ತು ರೋಹಿಣೀನಕ್ಷತ್ರವೂ ಸೇರಿದಲ್ಲಿ ಅದು 'ಕಪಿಲಷಷ್ಠೀ' ಎಂಬ ಪರ್ವಕಾಲ. ಕೋಟಿಸೂರ್ಯಗ್ರಹಣವನ್ನೂ ಮೀರಿ ನಿಲ್ಲುವ ಪರಮಪರ್ವಕಾಲವಿದು. ಸಾಧಕನಿಗೆ ಕಾಮಧೇನುವೆನಿಸುವ ಇಂತಹ ಪರ್ವಕಾಲ ಜೀವನದಲ್ಲಿ ಒಂದು ಬಾರಿಯಾದರೂ ಒದಗುವುದು ಅದೃಷ್ಟವಿಶೇಷದಿಂದ. ಇಲ್ಲಿ ಷಷ್ಠಿಯೆಂದರೆ ಷಷ್ಠೀತಿಥಿಯಲ್ಲ. ಆರರ ಯೋಗ ಎಂದರ್ಥ. ಭಾದ್ರಪದಮಾಸ, ಕೃಷ್ಣಪಕ್ಷ, ಚತುರ್ಥೀತಿಥಿ, ಭಾನು ಅಥವಾ ಕುಜವಾರ, ವ್ಯತೀಪಾತ, ರೋಹಿಣೀ ಎಂಬ ಆರರ ಯೋಗದಿಂದ ಇದನ್ನು 'ಕಪಿಲಷಷ್ಠೀ' ಎನ್ನಲಾಗಿದೆ. ಈ ಕಪಿಲಷಷ್ಠಿಯು ಚಂದ್ರೋದಯಕಾಲಕ್ಕೆ (ಸುಮಾರು ರಾತ್ರಿ9ಗಂಟೆ) ಒದಗಿದರೆ ಈ ಪರ್ವಕಾಲವನ್ನು ಚಂದ್ರಷಷ್ಠೀ ಎನ್ನಲಾಗಿದೆ. ವರ್ಷದಲ್ಲಿ ಬರುವ ಯಾವುದೇ ದ್ವಾದಶಿಯಂದು ಹಸ್ತನಕ್ಷತ್ರ ಮತ್ತು ವ್ಯತೀಪಾತಯೋಗವಿದ್ದರೆ ಇದು ಕಪಿಲಷಷ್ಠಿಗೆ ಸಮನಾದ ಪರ್ವಕಾಲವಾಗಿದೆ.

## ಅವಿಧವಾನವಮೀ

ಪಿತೃಪಕ್ಷದ ಒಂಭತ್ತನೇ ದಿನ ಅಂದರೆ ನವಮಿಯಂದು ಮಾಡುವ ಸಂಸ್ಕಾರವೇ

ಅವಿಧವಾ ನವಮೀ ಶ್ರಾದ್ಧ. ಪತಿಗಿಂತ ಮೊದಲೇ ನಿಧನ ಹೊಂದಿದ ಸ್ತ್ರೀಯರ ಶ್ರಾದ್ಧವನ್ನು ಈ ದಿನ ಮಾಡಲಾಗುತ್ತದೆ. ಕರ್ನಾಟಕ, ಆಂಧ್ರಪ್ರದೇಶ, ಗುಜರಾತ್, ಮಹಾರಾಷ್ಟ್ರಗಳಲ್ಲಿ ಅವಿಧವಾ ನವಮೀ ಶ್ರಾದ್ಧವನ್ನು ಭಾದ್ರಪದ ಕೃಷ್ಣಪಕ್ಷದ ನವಮಿಯಂದು ಮಾಡಿದರೆ, ಉತ್ತರ ಭಾರತದ ಕಡೆ ಆಶ್ವಿನ ಕೃಷ್ಣಪಕ್ಷದಂದು ಮಾಡುತ್ತಾರೆ.

**ಅವಿಧವಾ ನವಮೀ ಶ್ರಾದ್ಧದ ಮಹತ್ವ** ಅವಿಧವಾ ಎಂದರೆ ' ವಿಧವೆಯಲ್ಲ-ದವರು' ಅಂದರೆ 'ಸುಮಂಗಲಿ' ಎಂದರ್ಥ. ಅವಿಧವಾ ನವಮೀ ಶ್ರಾದ್ಧವನ್ನು ಸುಮಂಗಲಿಯಾಗಿ ಮರಣಿಸಿದ ಸ್ತ್ರೀಗೆ ಮಾಡಲಾಗುತ್ತದೆ. ಈ ಆಚರಣೆಯು ಮರಣಾನಂತರ ಸ್ತ್ರೀಯ ಆತ್ಮಕ್ಕೆ ಶಾಂತಿಯನ್ನು ನೀಡುತ್ತದೆ ಹಾಗೂ ಮಡಿದ ಸ್ತ್ರೀಯು ತನ್ನ ವಂಶಕ್ಕೆ ಆಶೀರ್ವಾದ ಮಾಡುತ್ತಾಳೆ ಎಂಬ ನಂಬಿಕೆ ಇದೆ. ಅವಿಧವಾ ನವಮೀ ಆರಾಧನೆ ಕಾಲದಲ್ಲಿ ಮಾತೃಃ, ಪಿತಾಮಹಿಃ, ಪ್ರಪಿತಾಮಹಿಃ ಅಂದರೆ ತಾಯಿ - ಅಜ್ಜಿ(ತಂದೆಯ ಅಜ್ಜಿ) ಮತ್ತು ಮುತ್ತಜ್ಜಿ(ತಂದೆಯ ಅಜ್ಜಿ) ಈ ಮೂರು ಜನ ಮಾತೆಯರಿಗೆ ನವಮಿಯಂದು ಆರಾಧನೆ ಮಾಡಲಾಗುತ್ತದೆ.

ನವಮಿಯ ದಿನ ಬ್ರಹ್ಮಾಂಡದಲ್ಲಿ ಪ್ರಥ್ವಿ ಮತ್ತು ಆಪತತ್ವಗಳಿಗೆ ಸಂಬಂಧಿಸಿದ ರಜೋಗುಣ ಶಿವಲಹರಿಗಳು ಅಧಿಕವಾಗಿರುತ್ತದೆ. ಈ ಲಹರಿಗಳಿಂದಾಗಿ ಶ್ರಾದ್ಧದಿಂದ ಪ್ರಕ್ಷೇಪಿತವಾಗುವ ಮಂತ್ರೋಚ್ಚಾರಯುಕ್ತ ಲಹರಿಗಳನ್ನು ಶಿವರೂಪದಲ್ಲಿ ಗ್ರಹಿಸುವ ಸೂಕ್ಷ್ಮಬಲವು ಆಯಾಯ ಮುತ್ತೈದೆಯರ ದೇಹಗಳಿಗೆ ಪ್ರಾಪ್ತವಾಗುತ್ತದೆ. ಈ ದಿನ ಮುತ್ತೈದೆಯರಲ್ಲಿರುವ ಶಕ್ತಿತತ್ವವು ಸೂಕ್ಷ್ಮಶಿವತತ್ವದೊಂದಿಗೆ ಬೇಗನೆ ಸಂಯೋಗ-ವಾಗುವುದರಿಂದ ಮುತ್ತೈದೆಯರ ದೇಹವು ಕೂಡಲೇ ಮುಂದಿನ ಗತಿಗೆ ಹೋಗು-ತ್ತದೆ. ಈ ಶ್ರಾದ್ಧದ ಕುರಿತು ಎರಡು ವಿವಾದಗಳಿವೆ, ಮೊದಲನೆಯದಾಗಿ ಅವಿಧವಾ-ನವಮಿಯ ಶ್ರಾದ್ಧದಲ್ಲಿ ಘಾತಚತುರ್ದಶಿಯ ಶ್ರಾದ್ಧದಂತೆ ಏಕೋದ್ದಿಷ್ಟ ಶ್ರಾದ್ಧವನ್ನೇ ಮಾಡಬೇಕು, ಪಾರ್ವಣವನ್ನು ಮಾಡಬಾರದು ಎನ್ನುವುದು ಒಂದಾದರೆ, ಎರಡನೆ-ಯದಾಗಿ ಗಂಡ ಬದುಕಿರುವವರೆಗೆ ಅವಿಧವಾನವಮೀ, ಗಂಡ ಸತ್ತ ಬಳಿಕ ಅವಿಧವಾನವಮಿ ಮಾಡಲು ಬರುವುದಿಲ್ಲ ಎನ್ನುವ ವಿವಾದವಿದೆ.

ಏಕೋದ್ದಿಷ್ಟ: ಏಕೋದ್ದಿಷ್ಟ ಎಂದರೆ ಯಾರ ಕುರಿತು ಶ್ರಾದ್ಧವಿರುತ್ತದೆಯೋ

ಅವರಿಗೆ ಮಾತ್ರ ಶ್ರಾದ್ಧ. ಕೇವಲ ಒಂದೇ ಪಿಂಡವನ್ನಿಟ್ಟು ಶ್ರಾದ್ಧ ಮಾಡುವುದು. ಅಂದರೆ ಮುತ್ತೈದೆಯಾಗಿ ಯಾರು ಸತ್ತಿದ್ದಾರೋ ಅವರಿಗೆ ಮಾತ್ರ ಶ್ರಾದ್ಧ. ಸರಳವಾಗಿ ಹೇಳುವುದಾದರೆ ಒಂದು ಪಿಂಡವನ್ನಿಟ್ಟು ಒಬ್ಬರಿಗೆ ಮಾತ್ರ ಶ್ರಾದ್ಧ ಮಾಡುವುದು.

ಪಾರ್ವಣ ಎಂದರೆ ಸತ್ತಿರುವ ಮುತ್ತೈದೆ, ಅವರ ಅತ್ತೆ(ಅಂದರೆ ಮಗ ತಾಯಿಯ ಶ್ರಾದ್ಧ ಮಾಡುತ್ತಿದ್ದರೆ, ತಾಯಿ, ಅಜ್ಜಿ, ಮುತ್ತಜ್ಜಿ) ಈ ಮೂರೂ ಜನರಿಗೂ ಶ್ರಾದ್ಧವನ್ನು ಮಾಡಲಾಗುತ್ತದೆ. ಅಂದರೆ ಸತ್ತ ವ್ಯಕ್ತಿಯ ತಂದೆ(ಅತ್ತೆ) ಅವರ ತಂದೆ(ಅತ್ತೆ) ಈ ಮೂರೂ ಜನರಿಗೆ ಮೂರು ಪಿಂಡಗಳನ್ನು ಸಮರ್ಪಿಸಿ ಶ್ರಾದ್ಧ ಮಾಡುವುದು ಪಾರ್ವಣ. ಹಾಗೆ ನಮ್ಮ ತಾಯಿ ಮಾತ್ರ ಮುತ್ತೈದೆಯಾಗಿ ಸಾವನ್ನು ಪಡೆದಿರಬಹುದು, ಆದರೆ ನಮ್ಮ ಅಜ್ಜಿಗೆ ಆ ರೀತಿಯಲ್ಲಿ ಸಾವು ಬಂದಿಲ್ಲದಿರಬಹುದು. ಪಾರ್ವಣವಾದರೆ ಮೂರೂ ಜನರಿಗೂ ಪಿಂಡವನ್ನಿಡಲೇ ಬೇಕು. ಆಗ ಅಜ್ಜಿ, ಮುತ್ತಜ್ಜಿಯರು ಮುತ್ತೈದೆಯಾಗಿ ಸಾವನ್ನು ಪಡೆಯದೇ ಇದ್ದರೆ ನಾವು ಮಾಡುವ ಶ್ರಾದ್ಧ 'ಅವಿಧವಾ'ನವಮಿ ಹೇಗಾಗುತ್ತದೆ ಎನ್ನುವುದು.

ಹಾಗಾದರೆ ತಾಯಿ, ಅಜ್ಜಿ, ಮುತ್ತಜ್ಜಿ ಮೂರು ಜನ ಮುತ್ತೈದೆ ಸಾವನ್ನು ಪಡೆದಿದ್ದರೆ ಆಗ ಅವಿಧವಾನವಮಿಯನ್ನು ಪಾರ್ವಣದ ರೀತಿಯಲ್ಲಿ ಮಾಡಬಹುದೇ ಎಂದರೆ ಅದನ್ನೂ ಅವರು ಒಪ್ಪುವುದಿಲ್ಲ, ಕಾರಣ ಅವಿಧವಾನವಮಿ ಗಂಡ ಬದುಕಿರುವರೆಗೆ ಮಾತ್ರ , ಗಂಡ ಸತ್ತ ಬಳಿಕ ಅವಿಧವಾನವಮಿ ಮಾಡುವ ಹಾಗಿಲ್ಲ ಎಂದು. ಅಂದರೆ ತಂದೆ ಬದುಕಿದ್ದಾರೆ, ತಾಯಿ ತೀರಿಕೊಂಡಿದ್ದಾರೆ, ತಾಯಿಯ ಅವಿಧವಾ ನವಮೀ ಶ್ರಾದ್ಧವನ್ನು ಮಗ ಮಾಡುತ್ತಾನೆ. ಮುಂದೊಂದು ದಿನ ತಂದೆ ತೀರಿಹೋಗುತ್ತಾರೆ. ಆ ಬಳಿಕ ಮಗ ತಾಯಿಯ ಅವಿಧವಾ ನವಮೀಯ ಶ್ರಾದ್ಧವನ್ನು ಮಾಡುವ ಹಾಗಿಲ್ಲವೆನ್ನುವುದು ವಿವಾದ. ಹೀಗಾಗಿ ತಾಯಿ, ಅಜ್ಜಿ, ಮುತ್ತಜ್ಜಿ ಮೂರೂ ಜನ ಮುತ್ತೈದೆಯರಾಗಿ ಸಾವನ್ನು ಪಡೆದಿದ್ದರೂ, ಅಜ್ಜ ಮುತ್ತಜ್ಜರು ಸತ್ತು ಹೋಗಿರುತ್ತಾರೆಯಾದುದರಿಂದ ಅವರಿಗೆ ಅವಿಧವಾನವಮಿಯ ಶ್ರಾದ್ಧವನ್ನು ಮಾಡಲಾಗುವುದಿಲ್ಲ. ಅದಕ್ಕಾಗಿ ಏಕೋದ್ದಿಷ್ಟ ಅಂದರೆ ಒಂದು ಪಿಂಡವನ್ನು ಒಬ್ಬರಿಗೆ ಮಾತ್ರ ಇಟ್ಟು ಶ್ರಾದ್ಧ ಮಾಡಬೇಕು, ಪಾರ್ವಣವನ್ನಲ್ಲ ಎನ್ನುವುದು ಸಾರಾಂಶ.

ಅವಿಧವಾ ನವಮಿ ಎನ್ನುವುದು ಪೂರ್ಣವಾಗಿ ಮಹಾಲಯದ ಅಂಗವಲ್ಲ.

ಇದನ್ನು ಮೂಲತಃ ಅನ್ವಷ್ಟಕಾ ಶ್ರಾದ್ಧ ಎನ್ನುತ್ತಾರೆ. ಅಷ್ಟಕಾ ಎಂದರೆ ಅಷ್ಟಮಿಯಂದು ಮಾಡುವ ಶ್ರಾದ್ಧ. ಅನ್ವಷ್ಟಕಾ ಶ್ರಾದ್ಧವೆಂದರೆ ನವಮಿಯಂದು ಮಾಡುವ ಶ್ರಾದ್ಧ. ಮಹಾಲಯದಲ್ಲಿ ಬರುವ ನವಮಿಯಂದು ಮಾಡುವ ಅನ್ವಷ್ಟಕಾಶ್ರಾದ್ಧಕ್ಕೆ ಅವಿಧವಾನವಮೀ ಎಂದು ಹೆಸರು.ಅಷ್ಟಕಾಶ್ರಾದ್ಧಗಳಲ್ಲಿ ಪಾರ್ವಣದ ರೀತಿಯಲ್ಲೇ ಶ್ರಾದ್ಧ ಮಾಡುತ್ತಾರೆ. ಅನ್ವಷ್ಟಕಾಶ್ರಾದ್ಧದಲ್ಲಿ ಕೂಡ ಮೂರು ಪಿಂಡಗಳನ್ನಿಟ್ಟೇ ಶ್ರಾದ್ಧ ಮಾಡಬೇಕು. ಮಾರ್ಗಶೀರ್ಷ, ಪುಷ್ಯ, ಮಾಘ ಮತ್ತು ಫಾಲ್ಗುಣಗಳಲ್ಲಿ ತಾಯಿಗೆ ಮುತ್ತೈದೆ ಸಾವು ಬರದಿದ್ದರೂ ಶ್ರಾದ್ಧವನ್ನು ಮಾಡಬೇಕು. ಭಾದ್ರಪದದಲ್ಲಿ ಮಾತ್ರ ತಾಯಿ ಮುತ್ತೈದೆಯಾಗಿ ಸತ್ತಿದ್ದರೆ ಆ ದಿನ ಸುವಾಸಿನಿಯರನ್ನು ಕರೆಯಿಸಿ, ಭೋಜನವನ್ನು ಮಾಡಿಸಿ, ಸೌಭಾಗ್ಯ ಪದಾರ್ಥಗಳನ್ನು ದಾನ ಮಾಡಿ ಶ್ರಾದ್ಧ ಮಾಡಬೇಕು. ಇನ್ನೊಂದು ವಿವಾದವೆಂದರೆ, ಮುತ್ತೈದೆ ಸಾವು ಪಡೆದವರಿಗೆ ಗಂಡ ಸತ್ತ ನಂತರ ಅವಿಧವಾನವಮಿ ಇಲ್ಲ ಎನ್ನುವ ವಿವಾದ. ಜೀವದ ಸಂಬಂಧವನ್ನು ತೆಗೆದುಕೊಂಡರೆ ಜೀವಗಳಿಗೆ ಸಾವೇ ಇಲ್ಲ. ಹೀಗಾಗಿ ದೇಹದ ಮುತ್ತೈದೆಸಾವು ಎನ್ನುವ ಗುಣ ಆ ದೇಹದ ಶಾಶ್ವತ ಗುಣವಾಯಿತು ಎನ್ನಲಾಗುತ್ತದೆ.ಈ ಶ್ರಾದ್ಧದಲ್ಲಿ ಮುತ್ತೈದೆಯರನ್ನು ಭೋಜನಕ್ಕೆ ಆಹ್ವಾನಿಸಬೇಕು. ಆಮಂತ್ರಿತರಾದ ಮುತ್ತೈದೆಯರಿಗೆ ಅರಿಶಿನ, ಕುಂಕುಮ, ಸೀರೆ, ಕುಪ್ಪಸ ಮುಂತಾದ ಸೌಭಾಗ್ಯಪದಾರ್ಥಗಳನ್ನು ಬಾಗಿನ ನೀಡಬೇಕು. ಅವಿಧವಾನವಮೀಯಲ್ಲಿ ಪಿತೃಶ್ರಾದ್ಧಕ್ಕೆ ಸಿದ್ಧಪಡಿಸುವ ರವೆ ಉಂಡೆ ಮತ್ತು ವಡೆಗಳನ್ನು ನಿಷೇಧಿಸಲಾಗಿದೆ. ಸಾಧ್ಯವಾದಲ್ಲಿ ಬೆಳ್ಳಿ, ಬಂಗಾರದ ಆಭರಣಗಳನ್ನು ವಿಷ್ಣುಭಕ್ತರಾದ ಶ್ರೇಷ್ಠಗುಣಗಳ ಮುತ್ತೈದೆಯರಿಗೆ ದಾನ ನೀಡಿ ಜನ್ಮವಿತ್ತ ತಾಯಿಗೆ ಜನ್ಮಜನ್ಮಗಳಲ್ಲಿಯೂ ಸಕಲ ಸೌಭಾಗ್ಯವಿರಲಿ ಎಂದು ಪ್ರಾರ್ಥಿಸಬೇಕು. ಅವಿಧವಾ ನವಮಿಯನ್ನು ಹಬ್ಬವೆಂದೇ ಪರಿಗಣಿಸಲಾಗುವುದರಿಂದ ಹಬ್ಬದ ಅಡುಗೆ ಎಂದರೆ, ಬೇಸನ್ಲಡ್ಡು, ಜಿಲೇಬಿ, ಹೋಳಿಗೆ, ಶ್ಯಾವಿಗೆ ಪಾಯಸ, ಮಂಡಿಗೆ ಹಾಗೂ ಬೂಂದಿ ಲಾಡು ಮಾಡಲಾಗುತ್ತದೆ. ಅವಿಧವಾನವಮಿ ಶ್ರಾದ್ಧದಲ್ಲಿ ತಾಯಿಯ ಪಿಂಡಕ್ಕೆ ಅರಿಶಿನ ಕುಂಕುಮಗಳನ್ನು ಅರ್ಪಿಸುವ ಪದ್ಧತಿಯೂ ಇದೆ.

**ಆಚರಣಾ ಕ್ರಮಗಳು** – ಈ ಪಕ್ಷದಲ್ಲಿ ಪಿತೃಗಳಿಗೆ ಯಾವ ವಿಧಾನವನ್ನು ಆಚರಿಸಬೇಕೆಂಬುದು ವರ್ಣಾಶ್ರಮಗಳನ್ನು ಆಧರಿಸಿ ಸ್ವಲ್ಪ ವಿಭಿನ್ನವಾಗಿದೆ. ಇಲ್ಲಿ ಪದ್ಧತಿ ಭೇದಗಳು ಬಹಳವಾಗಿ ಕಂಡುಬರುವುದು. ಆದರೆ 'ಶಾಸ್ತ್ರಾತ್ ರೂಢಿಃ

ಗರೀಯಸೀ' ಎಂಬ ಶಾಸ್ತ್ರವಾಕ್ಯದಂತೆ ಹಿಂದಿನಿಂದ ಆಚರಣೆ ಮಾಡಿಕೊಂಡು ಬಂದು -ದನ್ನು ಬಿಡಬಾರದು. ವೇದಾಧಿಕಾರ ಇಲ್ಲದವರು (ಶೂದ್ರಾದಿಗಳು) ಪಿತೃಗಳಿಗೆ ಪ್ರಿಯವಾದ ಭಕ್ಷ್ಯಗಳನ್ನು ತಯಾರಿಸಿ ಮನೆಯ ದೇವರ ಮುಂದೆ ಬಾಳೆಎಲೆಗಳನ್ನು ಹರಡಿ ಅದರಲ್ಲಿ ಆ ಭಕ್ಷ್ಯಗಳನ್ನು ಬಡಿಸಬೇಕು. ಮನೆಯ ತುಂಬ ಧೂಪವನ್ನು ಹಾಕಿ ಪಿತೃಗಳನ್ನು ನೆನೆದು, ಅವರು ಈ ಎಲ್ಲ ಭಕ್ಷ್ಯಭೋಜ್ಯಗಳನ್ನು ಸ್ವೀಕರಿಸಿ ತಮ್ಮನ್ನು ಹರಸಬೇಕೆಂದು ಪ್ರಾರ್ಥಿಸಬೇಕು. ಇದನ್ನೇ ಹಿರಿಯರಿಗೆ ಎಡೆ ನೀಡುವುದು ಎನ್ನುತ್ತಾರೆ. ಇದರಿಂದ ಪಿತೃಗಳು ತೃಪ್ತರಾಗುತ್ತಾರೆ.

## ಭಾದ್ರಪದ ॥ ಬಹುಳ ॥ ಏಕಾದಶೀ ॥

ಯುಧಿಷ್ಠಿರಃ – ಭಾದ್ರಸ್ಯ ಕೃಷ್ಣಪಕ್ಷೇ ತು ಕಿನ್ನಾಮ್ನ್ಯೇಕಾದಶೀ ಭವೇತ್ । ಏತದಿಚ್ಛಾಮ್ಯಹಂ ಶ್ರೋತುಂ ಕಥಯಸ್ವ ಜನಾರ್ದನ ॥1॥ ಯುಧಿಷ್ಠಿರನು ಹೇಳಿದನು – ಎಲೈ ಜನಾರ್ದನನೇ! ಭಾದ್ರಪದ ಕೃಷ್ಣಪಕ್ಷದ ಏಕಾದಶಿಗೆ ಹೆಸರೇನು? ಅದನ್ನು ಕೇಳಲು ಇಚ್ಛಿಸುತ್ತೇನೆ. ಶ್ರೀಕೃಷ್ಣಃ – ಶೃಣುಷ್ವೈಕಮನಾ ರಾಜನ್ ಕಥಯಿಷ್ಯಾಮಿ ವಿಸ್ತರಾತ್ । ಅಜೇತಿನಾಮತಃ ಪ್ರೋಕ್ತಾ ಸರ್ವಪಾಪ-ಪ್ರಣಾಶಿನೀ ॥2॥ ಶ್ರೀಕೃಷ್ಣನು ಹೇಳಿದನು – ಎಲೈ ರಾಜನೇ! ಒಂದೇ ಮನಸ್ಸಿನಿಂದ ಕೇಳು. ವಿಸ್ತಾರವಾಗಿ ಹೇಳುತ್ತೇನೆ. ಈ ಏಕಾದಶಿಗೆ ಅಜೆ ಎಂದು ಹೆಸರು. ಪಾಪಗಳೆಲ್ಲವನ್ನೂ ನಾಶಮಾಡುತ್ತದೆ. ಪೂಜಯಿತ್ವಾ ಹೃಷೀಕೇಶಂ ವ್ರತಮಸ್ಯಾಃ ಕರೋತಿ ಯಃ । ಪಾಪಾನಿ ತಸ್ಯ ನಶ್ಯಂತಿ ವ್ರತಸ್ಯ ಶ್ರವಣಾದಪಿ ॥3॥ ಯಾವನು ಹೃಷೀಕೇಶನನ್ನು ಪೂಜಿಸಿ ಈ ವ್ರತವನ್ನು ಮಾಡುತ್ತಾನೆಯೋ ಅವನ ಪಾಪಗಳೂ ಈ ವ್ರತದ ವಿಷಯವನ್ನು ಕೇಳಿದವನ ಪಾಪಗಳೂ ನಾಶವಾಗುತ್ತವೆ. ನಾತಃ ಪರತರಾ ರಾಜನ್ ಲೋಕದ್ವಯಹಿತಾಯ ವೈ । ಸತ್ಯಮುಕ್ತಂ ಮಯಾ ಹ್ಯೇತನ್ನಾಸತ್ಯಂ ಮಮ ಭಾಷಿತಮ್ ॥4॥ ಎಲೈ ರಾಜನೇ! ಇದಕ್ಕಿಂತಲೂ ಉತ್ತಮವಾದುದು ಎರಡೂ ಲೋಕಗಳಿಗೂ ಹಿತವಾದುದು ಮತ್ತೊಂದಿಲ್ಲ. ನಾನು ಸತ್ಯವಾಗಿ ಹೇಳುತ್ತೇನೆ. ನನ್ನ ಮಾತು ಸುಳ್ಳಲ್ಲ. ಹರಿಶ್ಚಂದ್ರ ಇತಿ ಖ್ಯಾತೋ ಬಭೂವ ನೃಪತಿಃ ಪುರಾ । ಚಕ್ರವರ್ತೀ ಸತ್ಯಸಂಧಃ ಸಮಸ್ತಾಯಾ ಭುವಃ ಪತಿಃ ॥5॥ ಹಿಂದೆ ಹರಿಶ್ಚಂದ್ರನೆಂಬವನೊಬ್ಬ ರಾಜನಿದ್ದನು. ಅವನು ಚಕ್ರವರ್ತಿಯು; ಸತ್ಯವಂತನು;

ಭೂಮಿಯೆಲ್ಲದಕ್ಕೂ ಒಡೆಯನಾಗಿದ್ದನು. ಕಸ್ಯಾಪಿ ಕರ್ಮಣಃ ಪ್ರಾಪ್ತೌ ರಾಜ್ಯಭ್ರಷ್ಟೋ ಬಭೂವ ಸಃ । ವಿಕ್ರೀತೌ ವನಿತಾಪುತ್ರೌ ಸ ಚಕಾರಾತ್ಮವಿಕ್ರಯಮ್ ॥6॥ ಹಿಂದಿನ ಜನ್ಮದ ಯಾವುದೋ ಪಾಪಶೇಷದಿಂದ ಅವನು ರಾಜ್ಯವನ್ನು ಕಳೆದುಕೊಂಡನು. ಹೆಂಡತಿ ಮಕ್ಕಳನ್ನು ಮಾರಿಬಿಟ್ಟನು. ಕೊನೆಗೆ ತನ್ನನ್ನೂ ಮಾರಿ-ಕೊಂಡನು. ಪುಲ್ಕಸಸ್ಯ ಚ ದಾಸತ್ವಂ ಗತೋ ರಾಜಾ ಸ ಪುಣ್ಯಕೃತ್ । ಸತ್ಯಮಾಲಂಬ್ಯ ರಾಜೇಂದ್ರ ಮೃತಚೈಲಾಪಹಾರಕಃ ॥7॥ ಆ ಪುಣ್ಯವಂತನಾದ ರಾಜನು ಚಂಡಾಲ-ನಿಗೆ ಆಳಾದನು. ಸತ್ಯವನ್ನು ಆಶ್ರಯಿಸಿದ್ದರೂ ಹೆಣದ ಬಟ್ಟೆಯನ್ನು ತೆಗೆದುಕೊಳ್ಳು-ತ್ತಿದ್ದನು. ಸೋಽಭವನ್ನೃಪತಿಶ್ರೇಷ್ಠೋ ನ ಸತ್ಯಾಚ್ಚಲಿತಸ್ತಥಾ । ಏವಂ ಚ ತಸ್ಯ ನೃಪತೇರ್ಬಹವೋ ವತ್ಸರಾಗತಾಃ ॥8॥ ಆದರೂ ಕೂಡ ಆ ರಾಜನು ಸತ್ಯದಿಂದ ಚಲಿಸಲೇ ಇಲ್ಲವು. ಈ ರೀತಿ ಇರುತ್ತಿರುವಂತೆಯೇ ಬಹುಕಾಲವು ಕಳೆದು ಹೋದವು. ತತಶ್ಚಿಂತಾಪರೋ ರಾಜಾ ಬಭೂವಾತಿ ಸುದುಃಖಿತಃ । ಕಿಂ ಕರೋಮಿ ಕ್ವ ಗಚ್ಛಾಮಿ ನಿಷ್ಕೃತಿರ್ಮೇ ಕಥಂ ಭವೇತ್ ॥9॥ ಹೀಗೆ ರಾಜನು ಯೋಚಿಸುತ್ತ ಏನು ಮಾಡಲಿ? ಎಲ್ಲಿ ಹೋಗಲಿ? ಇದಕ್ಕೆ ಬದಲು ಮಾಡುವುದು ಹೇಗೆ? ಎಂದು ದುಃಖಿಸುತ್ತಿದ್ದನು. ಇತಿ ಚಿಂತಯತಸ್ತಸ್ಯ ಮಗ್ನಸ್ಯ ವೃಜಿನಾರ್ಣವೇ । ಆಜಗಾಮ ಮುನಿಃ ಕಶ್ಚಿತ್ ಜ್ಞಾತ್ವಾ ರಾಜಾನಮಾತುರಮ್ ॥10॥ ರಾಜನು ಪಾಪವೆಂಬ ಸಮುದ್ರದಲ್ಲಿ ಮುಳುಗಿ ಈ ರೀತಿ ಯೋಚಿಸುತ್ತಿರಲು ಒಬ್ಬ ಋಷಿಯು ಈ ರಾಜನು ಈ ರೀತಿ ದುಃಖಿತನಾಗಿರುವುದನ್ನು ಕಂಡು ಅಲ್ಲಿಗೆ ಬಂದನು. ಪರೋಪಕರಣಾರ್ಥಾಯ ನಿರ್ಮಿತೋ ಬ್ರಹ್ಮಣಾ ದ್ವಿಜಃ । ಸ ತಂ ದೃಷ್ಟ್ವಾ ದ್ವಿಜವರಂ ನನಾಮ ನೃಪಸತ್ತಮಃ ॥11॥ ಈ ಬ್ರಾಹ್ಮಣನು ಪರೋಪಕಾರಕ್ಕೇನೇ ಬ್ರಹ್ಮನಿಂದ ನಿರ್ಮಿತನಾದವನಂತೆ ಇದ್ದನು. ರಾಜನು ಈ ಬ್ರಾಹ್ಮಣನನ್ನು ನೋಡಿ ಅವನಿಗೆ ನಮಸ್ಕರಿಸಿದನು. ಕೃತಾಂಜಲಿಪುಟೋ ಭೂತ್ವಾ ಗೌತಮಸ್ಯಾಗ್ರತೋ ಸ್ಥಿತಃ । ಕಥಯಾಮಾಸ ವೃತ್ತಾಂತಮಾತ್ಮನೋ ದುಃಖಸಂಯುತಮ್ ॥12॥ ಆಗ ರಾಜನು ಕೈಮುಗಿದುಕೊಂಡು ಆ ಮುನಿಯಾದ ಗೌತಮನ ಎದುರಿಗೆ ನಿಂತುಕೊಂಡು ತನ್ನ ದುಃಖದ ವೃತ್ತಾಂತವೆಲ್ಲವನ್ನೂ ಹೇಳಿಕೊಂಡನು. ಶ್ರುತ್ವಾ ನೃಪತಿವಾಕ್ಯಾನಿ ಗೌತಮೋ ವಿಸ್ಮಯಾನ್ವಿತಃ । ಉಪದೇಶಂ ನೃಪತಯೇ ವ್ರತಸ್ಯಾಸ್ಯ ದದೌ ಮುನಿಃ ॥13॥ ಈ ರಾಜನ ಮಾತನ್ನು ಕೇಳಿ ಗೌತಮನು ಆಶ್ಚರ್ಯಗೊಂಡು ಈ ವ್ರತದ

ಉಪದೇಶವನ್ನು ಆ ರಾಜನಿಗೆ ಕೊಟ್ಟನು. ಗೌತಮಃ – ಮಾಸಿ ಭಾದ್ರಪದೇ ರಾಜನ್ ಕೃಷ್ಣಪಕ್ಷೇತಿ ಶೋಭನಾ । ಏಕಾದಶೀ ಸಮಾಯಾತಾ ಅಜಾ ನಾಮೇತಿ ಪುಣ್ಯದಾ ॥14॥ ಗೌತಮನು ಹೇಳಿದನು – ಎಲೈ ರಾಜನೇ! ಭಾದ್ರಪದ ಮಾಸದಲ್ಲಿ ಕೃಷ್ಣಪಕ್ಷದಲ್ಲಿ 'ಅಜಾ' ಎಂಬ ಏಕಾದಶಿಯು ಬರುವುದು. ಅದು ಪುಣ್ಯವನ್ನು ಕೊಡುತ್ತದೆ. ಅಸ್ಯಾಃ ಕುರು ವ್ರತಂ ರಾಜನ್ ಪಾಪಸ್ಯಾಂತೋ ಭವಿಷ್ಯತಿ । ತವ ಭಾಗ್ಯವಶಾದೇಷಾ ಸಪ್ತಮೇಹ್ನಿ ಸಮಾಗತಾ ॥15॥ ಎಲೈ ರಾಜನೇ! ಈ ವ್ರತವನ್ನು ಮಾಡು. ನಿನ್ನ ಪಾಪವು ನಾಶವಾಗುತ್ತದೆ. ನಿನ್ನ ಅದೃಷ್ಟವಿಶೇಷದಿಂದಲೇ ಇಂದಿಗೆ ಏಳನೆಯ ದಿನವೇ ಅದು ಬರುತ್ತದೆ. ಉಪವಾಸಪರೋ ಭೂತ್ವಾ ರಾತ್ರೌ ಜಾಗರಣಂ ಕುರು । ಏವಮಸ್ಯಾ ವ್ರತೇ ಚೀರ್ಣೇ ತವ ಪಾಪಕ್ಷಯೋ ಭವೇತ್ । ತವ ಪುಣ್ಯಪ್ರಭಾವೇಣ ಆಗತೋಽಹಂ ನೃಪೋತ್ತಮ ॥16॥ ಆ ದಿನ ಉಪವಾಸವಿದ್ದು ರಾತ್ರಿಯಲ್ಲಿ ಜಾಗರಣೆಯನ್ನು ಮಾಡು. ಈ ರೀತಿ ವ್ರತವನ್ನು ಮಾಡಿದರೆ ನಿನ್ನ ಪಾಪವೆಲ್ಲವೂ ಹೋಗುತ್ತದೆ. ನಿನ್ನ ಪುಣ್ಯದ ಪ್ರಭಾವದಿಂದಲೇ ಇಲ್ಲಿಗೆ ನಾನು ಬಂದಿದ್ದೇನೆ. ಶ್ರೀಕೃಷ್ಣಃ – ಇತ್ಯೇವಂ ಕಥಯಿತ್ವಾ ಚ ಮುನಿರಂತರಧೀಯತ । ಮುನಿವಾಕ್ಯಂ ನೃಪಃ ಶ್ರುತ್ವಾ ಚಚಾರ ವ್ರತಮುತ್ತಮಮ್ ॥17॥ ಶ್ರೀಕೃಷ್ಣನು ಹೇಳಿದನು – ಈ ರೀತಿ ಹೇಳಿ ಮುನಿಯು ಹೊರಟು ಹೋದನು. ರಾಜನು ಈ ಋಷಿಯ ಮಾತಿನಂತೆ ಆ ವ್ರತವನ್ನು ಮಾಡಿದನು. ಕೃತೇ ತಸ್ಮಿನ್ ವ್ರತೇ ರಾಜ್ಞಃ ಪಾಪಶಾಂತೋಽಭವತ್ ಕ್ಷಣಾತ್ । ಶ್ರೂಯತಾಂ ರಾಜಶಾರ್ದೂಲ ಪ್ರಭಾವೋಽಸ್ಯ ವ್ರತಸ್ಯ ಚ ॥18॥ ಆ ದೊರೆಯು ಈ ವ್ರತವನ್ನು ಮಾಡಲು ಒಡನೆಯೇ ಪಾಪವೆಲ್ಲವೂ ಹೋಯಿತು. ಎಲೈ ಯುಧಿಷ್ಠಿರನೇ! ಈ ವ್ರತದ ಪ್ರಭಾವವನ್ನು ಕೇಳು. ಯದ್ದುಃಖಂ ಬಹುಭಿರ್ವರ್ಷೈಃ ಭೋಕ್ತವ್ಯಂ ತತ್ ಕ್ಷಯೋ ಭವೇತ್ । ನಿಸ್ತೀರ್ಣದುಃಖೋ ರಾಜಾಸೀದ್ ವ್ರತಸ್ಯಾಸ್ಯ ಪ್ರಭಾವತಃ ॥19॥ ಬಹಳ ವರ್ಷಗಳಿಂದಲೂ ಇರುವ ಅನುಭವಿಸಿಯೇ ತೀರಬೇಕಾದ ಪಾಪಗಳಾದರೂ ಕೂಡ ನಾಶವಾಗುತ್ತವೆ. ಈ ವ್ರತದ ಪ್ರಭಾವದಿಂದ ರಾಜನ ದುಃಖವೆಲ್ಲವೂ ಹೋಯಿತು. ಪತ್ನ್ಯಾ ಸಹ ಸಮಾಸಂಗಂ ಪುತ್ರಜೀವನಮಾಪ ಸಃ । ದಿವಿ ದುಂದುಭಯೋ ನೇದುಃ ಪುಷ್ಪವರ್ಷಮಭೂದ್ ದಿವಃ ॥20॥ ಆದುದರಿಂದಲೇ ಹೆಂಡತಿಯೊಡನೆಯೂ ಸೇರಿಕೊಂಡನು. ಸತ್ತಿದ್ದ ಮಗನೂ ಬದುಕಿದನು. ಆಗ

ಅಂತರಿಕ್ಷದಲ್ಲಿ ದುಂದುಭಿಗಳು ಮೊಳಗಿದವು. ಪುಷ್ಪವೃಷ್ಟಿಯಾಯಿತು. ಏಕಾದಶ್ಯಾಃ ಪ್ರಭಾವೇಣ ಪ್ರಾಪ್ಯ ರಾಜ್ಯಮಕಂಟಕಮ್ । ಸ್ವರ್ಗಂ ಲೇಭೇ ಹರಿಶ್ಚಂದ್ರಃ ಸಪುರಃ ಸಪರಿಚ್ಛದಃ ॥21॥ ಈ ಏಕಾದಶಿಯ ಮಹಿಮೆಯಿಂದ ಹರಿಶ್ಚಂದ್ರನು ಶತ್ರುಗಳಿಲ್ಲದ ರಾಜ್ಯವನ್ನು ಹೊಂದಿ ಆಳುತ್ತಿದ್ದು ಕೊನೆಯಲ್ಲಿ ಬಂಧುಗಳೊಡನೆಯೂ ಪಟ್ಟಣಿಗರೊಡನೆಯೂ ಸ್ವರ್ಗವನ್ನು ಹೊಂದಿದನು. ಈದೃಗ್ವಿಧಂ ವ್ರತಂ ರಾಜನ್ ಯೇ ಕುರ್ವಂತಿ ಚ ಮಾನವಾಃ । ಸರ್ವಪಾಪವಿನಿರ್ಮುಕ್ತಾಸ್ತ್ರಿದಿವಂ ಯಾಂತಿ ತೇ ನೃಪ । ಪಠನಾಚ್ಛ್ರವಣಾದ್ ವಾಪಿ ಅಶ್ವಮೇಧಫಲಂ ಲಭೇತ್ ॥21॥ ಈ ರೀತಿಯಾದ ವ್ರತವನ್ನು ಮಾಡುವ ಜನರು ಪಾಪದಿಂದ ವಿಮುಕ್ತರಾಗಿ ಸ್ವರ್ಗವನ್ನು ಹೊಂದುತ್ತಾರೆ. ಇದನ್ನು ಕೇಳುವುದರಿಂದ ಅಶ್ವಮೇಧ ಫಲವನ್ನು ಹೊಂದುತ್ತಾರೆ.

ಇತಿ ಶ್ರೀಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿನಾರದಸಂವಾದಾಂತರ್ಗತ ಕೃಷ್ಣಯುಧಿಷ್ಠಿರಸಂವಾದೇ ಭಾದ್ರಪದ ಕೃಷ್ಣ ಅಜೈಕಾದಶೀ ವರ್ಣನಂ ನಾಮ ಅಷ್ಟಪಂಚಾಶತ್ತಮೋಽಧ್ಯಾಯಃ ಸಮಾಪ್ತಃ ॥

ಇಂತು ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿನಾರದಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಭಾದ್ರಪದ ಕೃಷ್ಣ ಅಜೈಕಾದಶಿಯ ವರ್ಣನೆ ಎಂಬ ಐವತ್ತೆಂಟನೆಯ ಅಧ್ಯಾಯವು ಮುಗಿಯಿತು.

## ಭಾದ್ರಪದ ॥ ಬಹುಳ ॥ ದ್ವಾದಶೀ

**(ಯತಿದ್ವಾದಶೀ)** ಸಕಲ ಯತಿಗಳ ಮಹಾಲಯವನ್ನು ಯತಿದ್ವಾದಶೀ ಎಂದು ಕರೆಯುತ್ತಾರೆ. ಈ ದಿನದಂದು ಶ್ರೀಮಧ್ವಾಚಾರ್ಯರಿಂದ ಪ್ರಾರಂಭಿಸಿ ಈಗಿನ ಗುರುಪಪಂಪರೆಯವರೆಗಿನ ಎಲ್ಲ ಯತಿಗಳೂ ಬರುವುದರಿಂದ ಮಠಗಳಲ್ಲಿ ಅಲಂಕಾರ ಬ್ರಾಹ್ಮಣರ ಪೂಜಾದಿಗಳನ್ನು ನೆರವೇರಿಸಬೇಕು. ಐದು ಜನ ಅಲಂಕಾರ ಬ್ರಾಹ್ಮಣರಿಗೆ ಪಂಚೆ ಮುಂತಾದವುಗಳನ್ನು ಕೊಟ್ಟು ಪೂಜಿಸಿ, ಆಯಾ ಶ್ರೀಮಠದ ಸಂಪ್ರದಾಯದಂತೆ ನಡೆಸಬೇಕು. ಆಯಾ ವಂಶೀಕರು ತಮ್ಮ ವಂಶದ ಮೂಲಸಂನ್ಯಾಸಿಗಳ ಪ್ರೀತ್ಯರ್ಥವಾಗಿ ತಮ್ಮ ಮನೆಯಲ್ಲಿಯೂ ಈ ಯತಿಮಹಾಲಯವನ್ನು ನಡೆಸಬೇಕು.

## ಭಾದ್ರಪದ ॥ ಬಹುಳ ॥ ಚತುರ್ದಶೀ ॥

**ಘಾತಚತುರ್ದಶಿ** – ಪಿತೃಪಕ್ಷದಲ್ಲಿ ಮಹಾಲಯ ಅಮಾವಾಸ್ಯೆಯ ಹಿಂದಿನ ತಿಥಿ ಅಂದರೆ ಚತುರ್ದಶಿಯಂದು ಘಾತ ಚತುರ್ದಶಿ. ಶಾಸ್ತ್ರಾದಿಗಳಲ್ಲಿ ತಿಳಿಸಿದಂತೆ ಮರದಿಂದ ಬಿದ್ದು ಸತ್ತವರು; ವಿಷಪ್ರಾಶನ, ಲೋಹ, ವಿದ್ಯುತ್, ನೀರು, ಬೆಂಕಿ, ಶಸ್ತ್ರಾಸ್ತ್ರಗಳ ಘಾತ, ಪ್ರಾಣಿಗಳ ಆಕ್ರಮಣ ಇತ್ಯಾದಿಗಳಿಂದ ಪ್ರಾಣ ಕಳೆದುಕೊಂಡವರಿಗೆ ಮಹಾಲಯ ಅಮಾವಾಸ್ಯೆಯ ಮೊದಲು ಬರುವ ಚತುರ್ದಶಿಯಂದು ಪಿಂಡಾದಿ ಪ್ರದಾನ ಮಾಡಿ ಶ್ರಾದ್ಧ ಆಚರಿಸಬೇಕು. ಅದರಿಂದ ಅವರು ತೃಪ್ತರಾಗುತ್ತಾರೆ. ಕುಟುಂಬದಲ್ಲಿ ಯಾರಾದರೂ ಅಪಮೃತ್ಯುವಿಗೀಡಾಗಿದ್ದಲ್ಲಿ ಈ ತಿಥಿಯಂದು ಅವರಿಗೆ ಕಡ್ಡಾಯವಾಗಿ ತರ್ಪಣಾದಿಗಳನ್ನು ನೀಡಬೇಕು. ಹಾಗೆ ಮಾಡುವುದರಿಂದಾಗಿ ಕುಟುಂಬದಲ್ಲಿನ ಪ್ರೇತಬಾಧೆಗಳು ನಿವಾರಣೆಯಾಗುತ್ತವೆ. ಘಾತಚತುರ್ದಶಿಯಂದು ಒಂದೇ ಪಿಂಡವನ್ನಿಟ್ಟು ಶ್ರಾದ್ಧ ಮಾಡಬೇಕು ಎಂಬ ವಿಧಿ ಇದೆ.

### ದಾನಗಳು

ಈ ಪಕ್ಷದಲ್ಲಿ ಪಿತೃಗಳ ತೃಪ್ತಿಗಾಗಿ ದಾನಗಳಿಗೆ ಮಹತ್ವವಿದೆ. ತಮೋಗುಣಪ್ರಧಾನ ತರಕಾರಿ ಹೊರತುಪಡಿಸಿ ಬೇರೆ ತರಕಾರಿ, ಅಕ್ಕಿ, ಬೇಳೆ, ಬೆಲ್ಲ, ಎಣ್ಣೆ, ತುಪ್ಪ, ಇತ್ಯಾದಿಗಳನ್ನು ಕುಂಬಳಕಾಯಿ ಸಹಿತ ದಾನ ಮಾಡಬೇಕು. ವಸ್ತ್ರ, ಗೋವು, ಹೊಸ ಕೊಡೆ, ಹೊಸ ಪಾದರಕ್ಷೆ ಇತ್ಯಾದಿಗಳ ದಾನವು ಕೂಡ ವಿಶೇಷ ಫಲಗಳನ್ನು ಹಾಗೂ ಪಿತೃಗಳಿಗೆ ತೃಪ್ತಿಯನ್ನು ಕೊಡುತ್ತದೆ .

## ಭಾದ್ರಪದ ॥ ಬಹುಳ ॥ ಅಮಾವಾಸ್ಯೆ

**ಶ್ರೀ ಮಾಧವತೀರ್ಥರು - ಮಣೂರು** ಸಾದಿತಾಖಿಲಸತ್ತತ್ವಂ ಬಾಧಿತಾಖಿಳದುರ್ಮತಂ। ಮೋದಿತಾಖಿಲಸನ್ಮಾರ್ಗಂ ಮಾಧವಾಖ್ಯಯತಿಂ ಭಜೇ ॥

ಇವರು ಶ್ರೀನರಹರಿತೀರ್ಥರ ಶಿಷ್ಯರು. ಹಾಗೂ ಶ್ರೀಮದಾಚಾರ್ಯರಿಂದ ಸಾಕ್ಷಾತ್ತಾಗಿ ಪಾಠ ಕೇಳಿದ್ದವರು. ಇಂದಿಗೂ ಸಂಸ್ಥಾನಪೂಜೆಯ ಹೊತ್ತಿನಲ್ಲಿ ಅರ್ಚಿತನಾಗುವ ಶ್ರೀವಂಶರಾಮದೇವರ ವಿಗ್ರಹ ಶ್ರೀಮಾಧವತೀರ್ಥರ ಕಾಲದ್ದು. ಶ್ರೀ ಮಾಧವತೀರ್ಥರು ನಾಲ್ಕೂ ವೇದಗಳಿಗೆ ಭಾಷ್ಯವನ್ನು ರಚಿಸಿದ್ದಾರೆ ಎಂಬ ಐತಿಹ್ಯವಿದೆ.

ಮಹಾಲಯ ಅಮಾವಾಸ್ಯೆಯ ದಿನ ಇವರು ಪರಲೋಕಕ್ಕೆ ಯಾತ್ರೆ ಹೊರಟರು. ಶ್ರೀಗುರುಗಳ ವೃಂದಾವನವು ಮಣ್ಣೂರಿನಲ್ಲಿದೆ.

**ಶ್ರೀಮಾಧವತೀರ್ಥರಸ್ತೋತ್ರ** – ಮಾಧವ ಸುತೀರ್ಥ ಗುರು । ಭಕ್ತಜನಕಲ್ಪ-ತರು ಆದಿ ಗುರುಗಳ ಕರಜ । ಮಾಡೆನ್ನ ವಿರಜ ॥ಪ॥ ಭೀಮ ಸತ್ತಟವಾಸ । ಕೈಮುಗಿದೆ ಮೌನೀಶ ಸಾಮ ಸನ್ನುತ ಚರಣ । ಮೌನದಿಂ ಭಜನ ನೀ ಮಾಡಿ ಆನಂದವಾರಿಧೀ-ಯಲಿ ಮಿಂದು ಆ ಮಹಿಮೆ ಪೊಗಳಲೂ । ಎನಗಾವ ಅಳಲೂ ॥1॥ ಜ್ಞಾನಾಯು ರೂಪಕನೆ । ಪ್ರಾಣಪತಿ ಎನಿಪನ್ನ ನೀನಾಗಿ ತೋರುವಲಿ । ನಿನ್ನ ದಯವಿರಲಿ । ಮೌನೀಶ ಇದ ಹೊರತು । ಅನ್ಯಬೇಡೆನು ಒಳಿತು ಪ್ರಾಣ ಮುಖ ತತ್ವೇಶ । ರೊಲಿಮೆ ಸಹ ಆಶ ॥2॥ ಆನಂದತೀರ್ಥ ಮತ । ಶಿಷ್ಯರಲಿ ಬೋಧಿಸುತ ದೀನಜನ ಪರಿಪಾಲ । ಹರಿಭಕ್ತ ಲೋಲಾ । ಜಾಣ ಗುರುಗೋವಿಂದ । ವಿಠಲ ಮಹಿಮಾನಂದ ನೀನಾಗಿ ಕೊಟ್ಟೆನ್ನ ಉದ್ಧರಿಸೊ ಘನ್ನ ॥

## ತರ್ಪಣ

ಉಪನೀತನಾದ ಪ್ರತಿಯೊಬ್ಬ ಬ್ರಾಹ್ಮಣನೂ ದೇವ - ಋಷಿ - ಆಚಾರ್ಯ ಮತ್ತು ಪಿತೃತರ್ಪಣಗಳನ್ನು ಕೊಡಬೇಕು. ತರ್ಪಣ ಎರಡು ವಿಧ. 1. ಜಲತರ್ಪಣ 2. ತಿಲತರ್ಪಣ ಜಲತರ್ಪಣವನ್ನು ಪ್ರತಿನಿತ್ಯ ಬ್ರಹ್ಮಯಜ್ಞದಲ್ಲಿ ಕೊಡಬೇಕು. ದರ್ಶ (ಅಮಾವಾಸ್ಯೆ) ಪರ್ವಕಾಲ, ಸೂರ್ಯ - ಚಂದ್ರಗ್ರಹಣ, ಉತ್ತರ - ದಕ್ಷಿಣಾಯನ - ಮಾತಾ ಪಿತೃಗಳ ಶ್ರಾದ್ಧಗಳಲ್ಲಿ - ಮಹಾಲಯ ಇತ್ಯಾದಿ ಷಣ್ಣವತಿ ಅಂದರೆ 96 ಪರ್ವ ಕಾಲಗಳಲ್ಲಿ ಪಿತೃಗಳಿಗೆ ತಿಲತರ್ಪಣಗಳನ್ನು ಕೊಡಬೇಕು. ಹೀಗೆ ತರ್ಪಣ ಕೊಡುವುದರಿಂದ ದೇವ - ಋಷಿ - ಗುರು - ಪಿತೃಗಳು ಸಂತೃಪ್ತರಾಗಿ ಆಶೀರ್ವ-ದಿಸುವರು. ಆದರಿಂದ ಸಮಸ್ತ ಮಂಗಲವಾಗುವುದು!

ಪುಣ್ಯಕ್ಷೇತ್ರ, ಪುಣ್ಯನದಿ, ಸಮುದ್ರ ಅಥವಾ ತೀರ್ಥಗಳಲ್ಲಿ ಸ್ನಾನ ಮಾಡಿದ ನಂತರ ತರ್ಪಣವನ್ನು ಕೊಡಬೇಕು. ತಿಲತರ್ಪಣ (ಎಳ್ಳು-ನೀರು ಸಮೇತ) ಕೊಡದ ಸಾಧ್ಯವಿಲ್ಲದ ಪಕ್ಷದಲ್ಲಿ ಜಲ ತರ್ಪಣವನ್ನಾದರೂ (ಬರೀ ನೀರಿನಿಂದ) ಕೊಡಲೇಬೇಕು.

ಮೂರು ದರ್ಭೆಗಳಿಂದ ಮಾಡಿದ ಪವಿತ್ರವನ್ನು ಬಲಗೈ ಅನಾಮಿಕ ಬೆರಳಿಗೆ

(ಕಿರುಬೆರಳಿನ ಪಕ್ಕದ ಬೆರಳು - ಉಂಗರದ ಬೆರಳು ) ತರ್ಪಣ ಕೊಡುವ ಕಾಲದಲ್ಲಿ ಹಾಕಿಕೊಳ್ಳಬೇಕು. ಅದು ಸಾಧ್ಯವಿಲ್ಲದ ಪಕ್ಷದಲ್ಲಿ ಅಂದರೆ ದರ್ಭೆ ದೊರೆಯದೇ ಇದ್ದಾಗ ಚಿನ್ನದ ಅಥವಾ ಬೆಳ್ಳಿಯ ಪವಿತ್ರದ ಉಂಗುರವನ್ನು ಧರಿಸಿಕೊಂಡು ಅಂಗೈಯಲ್ಲಿ ತುಳಸೀದಳವನ್ನಿಟ್ಟುಕೊಂಡು ತರ್ಪಣವನ್ನು ಕೊಡಬೇಕು. ತರ್ಪಣದಲ್ಲಿ ದರ್ಭೆಯ ಪವಿತ್ರದರ್ಭೆಯಿಂದ ಮಾಡಿದ ಪವಿತ್ರವನ್ನು ಧರಿಸುವುದೇ ಸರಿಯಾದ ಕ್ರಮ. ಉಳಿದಿದ್ದು ಆಪದ್ಧರ್ಮ. ಹಾಗೆಂದು ದರ್ಭೆಯಿಂದ ಮಾಡಿದ ಪವಿತ್ರ ಇರುವಾಗ ಅದನ್ನು ಬಿಟ್ಟು ಬೇರೇ ಪ್ರಯತ್ನ ಮಾಡುವುದು ಸೂಕ್ತವಲ್ಲ. ದರ್ಭೆಯ ಪವಿತ್ರ ಇಲ್ಲದ ಪಕ್ಷದಲ್ಲಿ ಮೂರು ದರ್ಭೆಗಳನ್ನು ಅನಾಮಿಕಾ ಬೆರಳಿಗೆ ಸುತ್ತಿಕೊಂಡು ತರ್ಪಣ ಕೊಡುವ ಸಂಪ್ರದಾಯವೂ ಉಂಟು. ದರ್ಭೆಯು ಸಿಕ್ಕದಿದ್ದರೆ ಬೆರಳುಗಳ ಮಧ್ಯದಲ್ಲಿ ತುಳಸೀದಳವನ್ನು ಸಿಕ್ಕಿಸಿ ಕೊಂಡಾದರೂ ತರ್ಪಣವನ್ನು ಕೊಡಬಹುದು. ತರ್ಪಣಕ್ಕಾಗಿ ಪ್ರತ್ಯೇಕಕಲಶೋದಕವನ್ನು ಉಪಯೋಗಿಸಬೇಕು. ಅಂದರೆ ಆಚಮನಕ್ಕೆ ಪ್ರತ್ಯೇಕ ನೀರು ಇಟ್ಟುಕೊಳ್ಳಬೇಕು. ತರ್ಪಣದ ಕಲಶಕ್ಕೆ ಸಾಲಗ್ರಾಮದ ನಿರ್ಮಾಲ್ಯತೀರ್ಥವನ್ನು ಸೇರಿಸಬೇಕು.

**ಪಿತೃತರ್ಪಣಮ್ :-** (ಉಪವೀತವನ್ನು ಎಡಕ್ಕೆ ಹಾಕಿಕೊಂಡು ದಕ್ಷಿಣಾಭಿ-ಮುಖವಾಗಿ ಪಿತೃತೀರ್ಥವೆಂದೆನಿಸುವ ತರ್ಜನ್ಯಂಗುಷ್ಠಗಳ ಮಧ್ಯದಿಂದ ದರ್ಭೆ-ಗಳನ್ನು ಮಡಚಿಕೊಂಡು, ಅವುಗಳ ತುದಿ ಮತ್ತು ಬುಡಗಳಿಂದ ನಿರ್ಮಾಲ್ಯಸಹಿತ-ವಾಗಿ ನಿರ್ಮಾಲ್ಯವಿಸರ್ಜನಾನಂತರ ಶಾಲಗ್ರಾಮಾಭಿಷಿಕ್ತತೀರ್ಥದಿಂದಲೇ ಮೇಲೆ ಹೇಳಿದ ರೀತಿಯಿಂದ ಪಿತೃತರ್ಪಣವನ್ನು ಕೊಡಬೇಕು. ತರ್ಪಣವನ್ನು ಕೊಡುವಾಗ ಅನಾಮಿಕಾ ಬೆರಳಿಗೆ ಚಿನ್ನದ ಪವಿತ್ರ ಉಂಗುರವನ್ನೂ ತರ್ಜನಿ ಬೆರಳಿಗೆ ಬೆಳ್ಳಿಯ ಉಂಗುರವನ್ನೂ ಇಟ್ಟುಕೊಳ್ಳುವುದು ವಿಶೇಷ. ತಂದೆಯು ಜೀವಂತನಾಗಿರುವಾಗ ಬ್ರಹ್ಮಯಜ್ಞ ಮಾಡಿ ದೇವರ್ಷಿ ಆಚಾರ್ಯ ಯಮತರ್ಪಣಗಳನ್ನು ಮಾತ್ರ ಕೊಡ-ಬೇಕಲ್ಲದೆ ಪಿತೃತರ್ಪಣವನ್ನು ಕೊಡಕೂಡದು. ತರ್ಪಣಗಳನ್ನು ತೀರ್ಥಗಳಲ್ಲಾಗಲೀ ನದಿಗಳಲ್ಲಾಗಲೀ ತಾಮ್ರಪಾತ್ರೆಯಲ್ಲಾಗಲೀ ಕೊಡಬೇಕಲ್ಲದೆ ಬೇರೆ ಯಾವ ಪಾತ್ರೆ-ಯಲ್ಲಾಗಲೀ ಬರೇ ನೆಲದ ಮೇಲಾಗಲೀ ಕೊಡಕೂಡದು. ಸಂಕ್ರಾಂತಿ, ಅಮಾವಾಸ್ಯೆ ಮೊದಲಾದ ವಿಶೇಷ ದಿವಸಗಳಲ್ಲಿ ಪಿತೃತರ್ಪಣವನ್ನು ಎಳ್ಳುಸಹಿತವಾಗಿಯೇ ಕೊಡಬೇಕು.)

ತರ್ಪಣ- ನೈರ್ಮಾಲ್ಯತುಳಸಿ, ಎರಡು ದರ್ಭೆ ಮತ್ತು ಎಳ್ಳು ಹಿಡಿದುಕೊಂಡು ದಕ್ಷಿಣಕ್ಕೆ ಮುಖಮಾಡಿ ತೋರುಬೆರಳು ಮತ್ತು ಅಂಗುಷ್ಠದ ಮಧ್ಯದಿಂದ (ಪಿತೃತೀರ್ಥದಿಂದ) ತರ್ಪಣ ಕೊಡಬೇಕು. ಉಪವೀತ ಎಡಕ್ಕಿರಬೇಕು.

1. ಅಸ್ಮತ್ ಪಿತರಂ ...ಶರ್ಮಾಣಂ..........ಗೋತ್ರಂ ವಸುರೂಪಂ ತದಂತ-ರ್ಯಾಮಿಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

2. ಅಸ್ಮತ್ ಪಿತಾಮಹಂ........ಶರ್ಮಾಣಂ....ಗೋತ್ರಂ ರುದ್ರರೂಪಂ ತದಂತರ್ಯಾಮಿ ಸಂಕರ್ಷಣಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪ- ಯಾಮಿ ।

3. ಅಸ್ಮತ್ ಪ್ರಪಿತಾಮಹಂ..... ಶರ್ಮಾಣಂ...ಗೋತ್ರಂ ಆದಿತ್ಯರೂಪಂ ತದಂತರ್ಯಾಮಿ ವಾಸುದೇವಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

4. ಅಸ್ಮನ್ಮಾತರಂ (ತಾಯಿ) ...ದಾಂ ...ಗೋತ್ರಾಂ ವಸುರೂಪಾಂ ತದಂತ-ರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

5. ಪಿತಾಮಹೀಂ (ತಂದೆಯ ತಾಯಿ)....ದಾಂ ...ಗೋತ್ರಾಂ ರುದ್ರರೂಪಾಂ ತದಂತರ್ಯಾಮಿ ಸಂಕರ್ಷಣಂ ಸ್ವಧಾ ನಮಸ್ತರ್ಪಯಾಮಿ ತರ್ಪಯಾಮಿ ತರ್ಪ-ಯಾಮಿ ।

6. ಪ್ರಪಿತಾಮಹೀಂ (ತಂದೆಯ ತಂದೆಯ ತಾಯಿ) .....ದಾಂ ...ಗೋತ್ರಾಂ ಆದಿತ್ಯರೂಪಾಂ ತದಂತರ್ಯಾಮಿ ವಾಸುದೇವಂ ಸ್ವಧಾ ನಮಸ್ತರ್ಪಯಾಮಿ ತರ್ಪ -ಯಾಮಿ ತರ್ಪಯಾಮಿ ।

7. ಸಾಪತ್ನಜನನೀಂ (ಸವತಿತಾಯಿ) ...ದಾಂ ...ಗೋತ್ರಾಂ ವಸುರೂಪಾಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ ತರ್ಪಯಾಮಿ ತರ್ಪ-ಯಾಮಿ ।

8. ಮಾತಾಮಹಂ (ತಾಯಿಯ ತಂದೆ) ...ಶರ್ಮಾಣಂ...ಗೋತ್ರಂ ವಸು-

ರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

9. ಮಾತುಃ ಪಿತಾಮಹಂ (ತಾಯಿಯ ತಂದೆಯ ತಂದೆ) ...ಶರ್ಮಾಣಂ.... ಗೋತ್ರಂ ರುದ್ರರೂಪಂ ತದಂತರ್ಯಾಮಿ ಸಂಕರ್ಷಣಂ ಸ್ವಧಾ ನಮಃ ತರ್ಪ-ಯಾಮಿ ತರ್ಪಯಾಮಿ ತರ್ಪಯಾಮಿ ।

10. ಮಾತುಃ ಪ್ರಪಿತಾಮಹಂ (ತಾಯಿಯ ತಂದೆಯ ತಂದೆಯ ತಂದೆ) .... ಶರ್ಮಾಣಂ...ಗೋತ್ರಂ ಆದಿತ್ಯರೂಪಂ ತದಂತರ್ಯಾಮಿ ವಾಸುದೇವಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

11. ಮಾತಾಮಹೀಂ (ತಾಯಿಯ ತಾಯಿ ) ...ದಾಂ ...ಗೋತ್ರಾಂ ವಸು-ರೂಪಾಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

12. ಮಾತು ಪಿತಾಮಹೀಂ (ತಾಯಿಯ ತಂದೆಯ ತಾಯಿ) ...ದಾಂ ... ಗೋತ್ರಾಂ ರುದ್ರರೂಪಾಂ ತದಂತರ್ಯಾಮಿ ಸಂಕರ್ಷಣಂ ಸ್ವಧಾ ನಮಸ್ತರ್ಪ-ಯಾಮಿ ತರ್ಪಯಾಮಿ ತರ್ಪಯಾಮಿ ।

13. ಮಾತುಃ ಪ್ರಪಿತಾಮಹೀಂ (ತಾಯಿಯ ತಂದೆಯ ತಂದೆಯ ತಾಯಿ) .....ದಾಂ ...ಗೋತ್ರಾಂ ಆದಿತ್ಯರೂಪಾಂ ತದಂತರ್ಯಾಮಿ ವಾಸುದೇವಂ ಸ್ವಧಾ-ನಮಸ್ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

14. ಆತ್ಮಪತ್ನೀಂ (ಹೆಂಡತಿ)..... ನಾಮ್ನೀಂ ...ಗೋತ್ರಾಂ ವಸುರೂಪಾಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ ತರ್ಪಯಾಮಿ ತರ್ಪ-ಯಾಮಿ ।

15. ಅಸ್ಮತ್ಸುತಂ (ಮಗ) ......ಶರ್ಮಾಣಂ. .....ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

16. ಭ್ರಾತರಂ (ಸಹೋದರ) ...ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

17. ಭ್ರಾತೃಪತ್ನೀಂ (ಸೋದರನ ಹೆಂಡತಿ) ...ದಾಂ ...ಗೋತ್ರಾಂ ವಸುರೂಪಾಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ ತರ್ಪಯಾಮಿ ತರ್ಪ-ಯಾಮಿ ।

18. ಭ್ರಾತೃಪುತ್ರಂ (ಸೋದರನ ಮಗ) ...ಶರ್ಮಾಣಂ...ಗೋತ್ರಂ ವಸು-ರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

19. ಪಿತೃವ್ಯಂ (ತಂದೆಯ ಸಹೋದರರು) ...ಶರ್ಮಾಣಂ...ಗೋತ್ರಂ ವಸು-ರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

20. ಪಿತೃವ್ಯಪತ್ನೀಂ (ಚಿಕ್ಕಪ್ಪ ದೊಡ್ಡಪ್ಪಂದಿರ ಪತ್ನಿ) ...ದಾಂ ...ಗೋತ್ರಾಂ ವಸುರೂಪಾಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ ತರ್ಪ-ಯಾಮಿ ತರ್ಪಯಾಮಿ ।

21. ಪಿತೃವ್ಯಪುತ್ರಂ (ಅವರ ಮಗ) ...ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

22. ಮಾತುಲಂ (ಸೋದರಮಾವ) ...ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪ-ಯಾಮಿ ।

23. ತತ್ಪತ್ನೀಂ (ಸೋದರಮಾವನಹೆಡತಿ) ...ದಾಂ ...ಗೋತ್ರಾಂ ವಸುರೂಪಾಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ ತರ್ಪಯಾಮಿ ತರ್ಪ-ಯಾಮಿ ।

24. ತತ್ ಪುತ್ರಂ (ಸೋದರಮಾವನ ಮಗ) ...ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪ-ಯಾಮಿ ತರ್ಪಯಾಮಿ ।

25. ದುಹಿತರಂ (ಮಗಳು) ...ದಾಂ ...ಗೋತ್ರಾಂ ವಸುರೂಪಾಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ ತರ್ಪಯಾಮಿ ತರ್ಪ-ಯಾಮಿ ।

26. ತದ್ಭರ್ತಾರಂ (ಅಳಿಯ) ...ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

27. ಭಗಿನೀಂ (ಸೋದರಿ) ...ದಾಂ ...ಗೋತ್ರಾಂ ವಸುರೂಪಾಂ ತದಂತ-ರ್ಯಾಮಿ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

28. ದೌಹಿತ್ರಂ (ಮಗಳ ಮಗ) ...ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

29. ದೌಹಿತ್ರೀಂ (ಮಗಳ ಮಗಳು) ...ದಾಂ ...ಗೋತ್ರಾಂ ವಸುರೂಪಾಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ ತರ್ಪಯಾಮಿ ತರ್ಪ-ಯಾಮಿ ।

30. ಭಾಗಿನೇಯಕಂ (ಸೋದರಳಿಯ-ಸಹೋದರಿಯ ಮಗ) ...ಶರ್ಮಾಣಂ. ....ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪ-ಯಾಮಿ ತರ್ಪಯಾಮಿ ತರ್ಪಯಾಮಿ ।

31. ಪಿತೃಷ್ವಸಾರಂ (ಸೋದರತ್ತೆ) ...ದಾಂ ...ಗೋತ್ರಾಂ ವಸುರೂಪಾಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

32. ತದ್ಭರ್ತಾರಂ (ಸೋದರತ್ತೆಯ ಗಂಡ) ...ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

33. ತತ್ಪುತ್ರಂ (ಸೋದರತ್ತೆಯ ಮಗ) ...ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

34. ಮಾತೃಷ್ವಸಾರಂ (ತಾಯಿಯ ಸೋದರಿ) ...ದಾಂ ...ಗೋತ್ರಾಂ ವಸುರೂಪಾಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

35. ತದ್ಭರ್ತಾರಂ (ಆಕೆಯ ಪತಿ) ...ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

36. ತತ್ಪುತ್ರಂ (ಆಕೆಯ ಪುತ್ರ) ...ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

37. ಶ್ವಶುರಂ (ಹೆಣ್ಣುಕೊಟ್ಟ ಮಾವ) ...ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

38. ಶ್ವಶ್ರೂಂ (ಹೆಣ್ಣುಕೊಟ್ಟಅತ್ತೆ) ...ದಾಂ ...ಗೋತ್ರಾಂ ವಸುರೂಪಾಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

39. ಸ್ಯಾಲಕಂ (ಭಾವಮೈದುನ=ಹೆಂಡತಿಯ ಅಣ್ಣತಮ್ಮ) ...ಶರ್ಮಾಣಂ. .. ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

40. ತತ್ಪತ್ನೀಂ (ಭಾವನ ಹೆಂಡತಿ) ...ದಾಂ ...ಗೋತ್ರಾಂ ವಸುರೂಪಾಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ ತರ್ಪಯಾಮಿ ತರ್ಪ-ಯಾಮಿ ।

41. ಭಾವುಕಂ (ಸೋದರಿಯ ಗಂಡ) ...ಶರ್ಮಾಣಂ...ಗೋತ್ರಂ ವಸು-ರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

42. ಗುರುಂ (ಗುರುಕುಲದಲ್ಲಿ ಪೋಷಿಸಿದವ) ...ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪ-ಯಾಮಿ ತರ್ಪಯಾಮಿ ।

43. ಗುರುಪತ್ನೀಂ (ಗುರುಕುಲದಲ್ಲಿ ಅನ್ನ ಹಾಕಿದವಳು) ...ದಾಂ ...ಗೋತ್ರಾಂ ವಸುರೂಪಾಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಸ್ತರ್ಪಯಾಮಿ ತರ್ಪ-ಯಾಮಿ ತರ್ಪಯಾಮಿ ।

44. ಆಚಾರ್ಯಂ (ವೇದಾಂತವನ್ನು ಪಾಠಮಾಡಿದವ).........ಶರ್ಮಾಣಂ ಗೋತ್ರಂ ವಸುರೂಪಂ ತದಂತರ್ಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

45. ಸಖಾಯಂ (ಗೆಳೆಯ) ...ಶರ್ಮಾಣಂ...ಗೋತ್ರಂ ವಸುರೂಪಂ ತದಂತರ್ಯಾಯಾಮಿ ಪ್ರದ್ಯುಮ್ನಂ ಸ್ವಧಾ ನಮಃ ತರ್ಪಯಾಮಿ ತರ್ಪಯಾಮಿ ತರ್ಪಯಾಮಿ ।

**ಯಮತರ್ಪಣ** – ಪ್ರಾಚೀನಾವೀತಿಯಾಗಿ ಅಂಗುಲ್ಯಗ್ರದಿಂದ ಪೂರ್ವಾಭಿ-ಮುಖವಾಗಿ ಯಮತರ್ಪಣ. ಪಿತೃಪತಿಯಾದ್ದರಿಂದ ಪ್ರಾಚೀನಾವೀತಿಯಾಗಿಯೂ ದೇವತೆಯಾದ್ದರಿಂದ ಪೂರ್ವಾಭಿಮುಖವಾಗಿ ಅಂಗುಲ್ಯಗ್ರದೇವತೀರ್ಥದಿಂದಲೂ ಯಮತರ್ಪಣ ಕೊಡಬೇಕು. ಯಮಂ ತರ್ಪಯಾಮಿ । ಧರ್ಮರಾಜಂ ತರ್ಪಯಾಮಿ । ಮೃತ್ಯುಂ ತರ್ಪ- ಯಾಮಿ । ಅಂತಕಂ ತರ್ಪಯಾಮಿ । ವೈವಸ್ವತಂ ತರ್ಪಯಾಮಿ । ಕಾಲಂ ತರ್ಪ- ಯಾಮಿ । ಸರ್ವಭೂತಕ್ಷಯಂ ತರ್ಪಯಾಮಿ ।

ಔದುಂಬರಂ ತರ್ಪಯಾಮಿ । ದಧ್ನಂ ತರ್ಪಯಾಮಿ । ನೀಲಂ ತರ್ಪಯಾಮಿ । ಪರಮೇಷ್ಠಿನಂ ತರ್ಪಯಾಮಿ । ವೃಕೋದರಂ ತರ್ಪಯಾಮಿ । ಚಿತ್ರಂ ತರ್ಪಯಾಮಿ ಚಿತ್ರಗುಪ್ತಂ ತರ್ಪಯಾಮಿ । ಯಮೋ ನಿಹಂತಾ ಪಿತೃಧರ್ಮರಾಜೋ ವೈವಸ್ವತೋ ದಂಡಧರಶ್ಚ ಕಾಲಃ । ಪ್ರೇತಾ- ಧಿಪೋ ದತ್ತಕೃತಾನುಸಾರೀ ಕೃತಾಂತ ಏತದ್ದಶಕೃಜ್ಜಪಂತಿ ಈ ಶ್ಲೋಕವನ್ನು ದಕ್ಷಿಣಾಭಿಮುಖವಾಗಿ ಹತ್ತುಬಾರಿ ಅಥವಾ ಮೂರು ಬಾರಿ ಹೇಳಬೇಕು.

ಸರ್ವಪಿತೃತರ್ಪಣ ಕೈಯಲ್ಲಿ ದರ್ಭೆ ಎಳ್ಳು ನೀರು ಹಿಡಿದುಕೊಂಡು ಪ್ರಾಚೀನ ವೀತೀ ಇರುವಂತೆ ದಕ್ಷಿಣಾಭಿಮುಖವಾಗಿ ಪಿತೃತೀರ್ಥದಿಂದ ಒಂದು ತರ್ಪಣ ಕೊಡ -ಬೇಕು. ಆಬ್ರಹ್ಮಸ್ತಂಬಪರ್ಯಂತಂ ದೇವರ್ಷಿಪಿತೃಮಾನವಾಃ । ತೃಪ್ಯಂತು ಪಿತರಃ ಸರ್ವೇ ಮಾತೃಮಾತಾಮಹಾದಯಃ ॥ ಅತೀತಕುಲಕೋಟೀನಾಂ ಸಪ್ತದ್ವೀಪ- ನಿವಾಸಿನಾಮ್ । ಆಬ್ರಹ್ಮಭುವನಾಲ್ಲೋಕಾದಿದಮಸ್ತು ತಿಲೋ(ಕುಶೋ)ದಕಮ್ ।

ಅನೇನ ಮಹಾಲಯಶ್ರಾದ್ಧಪ್ರತಿನಿಧಿಭೂತತಿಲತರ್ಪಣಕರಣೇನ ಸಮಸ್ತ- ಪಿತ್ರಂತರ್ಗತ ಶ್ರೀಲಕ್ಷ್ಮೀಜನಾರ್ದನವಾಸುದೇವಾತ್ಮಕಮಧ್ವಾಂತರ್ಗತಗೋಪಾಲ- ಕೃಷ್ಣಃ ಪ್ರೀಯತಾಮ್ । ಎರಡು ಆಚಮನ ಮಾಡಿ ನಾಮತ್ರಯಮಂತ್ರ ಜಪಿಸ- ಬೇಕು.

ತರ್ಪಣಕ್ಕೆ ಬರುವ ಸಮಸ್ತ ಪಿತೃಗಳು – ಆದೌ ಪಿತಾ ತಥಾ ಮಾತಾ ಸ ಪತ್ನೀ ಜನನೀ ತಥಾ । ಮಾತಾಮಹಾಸ್ಸಪತ್ನಿಕಾ: ಆತ್ಮಪತ್ನೀತ್ವನಂತರಂ ॥ ಸುತಾಭ್ರಾತೃ -ಪಿತ್ರವ್ಯಾಚ್ಯ ಮಾತುಲಾ ಸಹ ಭಾರ್ಯಕಾ: । ದುಹಿತಾ ಭಗಿನೀ ಚೈವ: ದೌಹಿತ್ರೋ -ಭಾಗಿನೇಯಕಾ: ॥ ಪಿತೃತ್ವಸಾ ಮಾತೃಶ್ವಸಾ ಜಾಮಾತಾ ಭಾವುಕ ಸ್ನುಷಾ । ಶ್ವಶುರ ಸ್ಯಾಲಕಶ್ಚೈವ ಶಿಷ್ಯಾಪ್ತಗುರುಬಾಂಧವಾ: ॥

ಅಂತೂ ಭಗವಂತನು ಪಂಚ ರೂಪಗಳಿಂದ ಪಿತೃಯಜ್ಞ ಮಾಡುವ ಕರ್ತೃ, ಕರ್ಮ, ಕ್ರಿಯೆಗಳಲ್ಲಿ, ಆಕಾಲದಲ್ಲಿ ಭೋಕ್ತೃ - ಭೋಜ್ಯಗಳಲ್ಲಿ ಹೀಗೆ ಎಲ್ಲಾ ಹಂತಗಳಲ್ಲಿ ಆಯಾ ನಾಮಗಳಿಂದ ( ಎಂದರೆ ಕರ್ತೃ, ಕರ್ಮ, ಕ್ರಿಯಾ, ಭೋಕ್ತಾ, ಭೋಜ್ಯ ನಾಮಗಳಿಂದ ) 96 ರೂಪಗಳಿಂದ ಷಣ್ಣವತಿ ಎಂಬ ನಾಮದಿಂದಲೂ ಇದ್ದು ಪಿತೃಯಜ್ಞ ಮಾಡಿಸುತ್ತಾನೆ !

ಚೇತನಾಚೇತನಗಳಲಿ ಗುರು । ಮಾತರಿಶ್ವಾಂತರ್ಗತ. ಜಗ|ನ್ನಾಥವಿಠಲ ನಿರಂತರದಿ ವ್ಯಾಪಿಸಿ ತಿಳಿಸಿಕೊಳ್ಳದಲೆ ॥ ಕಾತುರವ ಪುಟ್ಟಿಸಿ ವಿಷಯದಲಿ । ಯಾತುಧಾನರ ಮೋಹಿಸುವ. ನಿ । ರ್ಭೀತ ನಿತ್ಯಾನಂದಮಯ ನಿರ್ದೋಷ ನಿರವದ್ಯ ॥

## ಶ್ರೀಮದವಧೂತಶಿರೋಮಣಿ ಶ್ರೀವಿಷ್ಣುತೀರ್ಥಯತಿವರ್ಯಕೃತ ಮರಣಕಾಲಪ್ರಾರ್ಥನಾ

ಶ್ರೀವಾಸುದೇವಮಧುಸೂದನಕೈಟಭಾರೇ । ಲಕ್ಷ್ಮೀಶ ಪಕ್ಷಿವರವಾಹನ ವಾಮನೇತಿ । ಶ್ರೀಕೃಷ್ಣ ಮನ್ಮರಣಕಾಲಮುಪಾಗತೇ ತು । ತ್ವನ್ನಾಮ ಮದ್ವಚನ-ಗೋಚರತಾಮುಪೈತು ॥1॥ ಗೋವಿಂದ ಗೋಕುಲಪತೇ ನವನೀತಚೋರ । ಶ್ರೀನಂದನಂದನ ಮುಕುಂದ ದಯಾಪರೇತಿ । ಶ್ರೀಕೃಷ್ಣ ಮನ್ಮರಣಕಾಲಮುಪಾಗತೇ ತು । ತ್ವನ್ನಾಮ ಮದ್ವಚನ- ಗೋಚರತಾಮುಪೈತು ॥2॥ ನಾರಾಯಣಾऽಖಿಲ-ಗುಣಾರ್ಣವ ಸರ್ವವೇದಪಾರಾಯಣಪ್ರಿಯ ಗಜಾಧಿಪಮೋಚಕೇತಿ । ಶ್ರೀಕೃಷ್ಣ ಮನ್ಮರಣಕಾಲಮುಪಾಗತೇ ತು । ತ್ವನ್ನಾಮ ಮದ್ವಚನ- ಗೋಚರತಾಮುಪೈತು ॥3॥ ಶ್ರೀಪ್ರಾಣತೋऽಧಿಕ ಸುಖಾಕ್ಷಯರೂಪನಿತ್ಯ । ಪ್ರೋದ್ಯದ್ದಿವಾಕರ ನಿಭಾಚ್ಯುತ ಸದ್ಗುಣೇತಿ ।ಶ್ರೀಕೃಷ್ಣ ಮನ್ಮರಣಕಾಲಮುಪಾಗತೇ ತು । ತ್ವನ್ನಾಮ ಮದ್ವಚನ-ಗೋಚರತಾಮುಪೈತು ॥4॥ ಆನಂದಸಚ್ಚಿದಖಿಲಾತ್ಮಕಭಕ್ತವರ್ಗಸ್ವಾನಂದಪಾನ-ಚತುರಾಗಮ ಸನ್ನುತೇತಿ । ಶ್ರೀಕೃಷ್ಣ ಮನ್ಮರಣಕಾಲಮುಪಾಗತೇ ತು । ತ್ವನ್ನಾಮ ಮದ್ವಚನ- ಗೋಚರತಾಮುಪೈತು ॥5॥ ವಿಶ್ವಾಧಿಕಾರಿಮುಖದೈವತವಂದ್ಯಕಶ್ಚ ವಿಶ್ವೋದ್ಭವಶ್ರುತಿಮತಿಪ್ರಭೂತಪ್ರದೇತಿ । ಶ್ರೀಕೃಷ್ಣ ಮನ್ಮರಣಕಾಲಮುಪಾಗತೇ ತು । ತ್ವನ್ನಾಮ ಮದ್ವಚನಗೋಚರತಾಮುಪೈತು ॥6॥ ನಿತ್ಯೇಕರೂಪ ದಶರೂಪ ಸಹಸ್ರಲಕ್ಷಾಸಂತೋರುರೂಪ ಶತರೂಪ ವಿಮೋಚಕೇತಿ । ಶ್ರೀಕೃಷ್ಣ ಮನ್ಮರಣ-ಕಾಲಮುಪಾಗತೇ ತು । ತ್ವನ್ನಾಮ ಮದ್ವಚನ- ಗೋಚರತಾಮುಪೈತು ॥7॥ ಸರ್ವೇಶ ಸರ್ವಗತಸರ್ವಸುಖಾನುರೂಪಸರ್ವಾಂತರಾತ್ಮಕಸದೋದಿತಸತ್ಕ್ರಿಯೇತಿ । ಶ್ರೀಕೃಷ್ಣ ಮನ್ಮರಣಕಾಲಮುಪಾಗತೇ ತು । ತ್ವನ್ನಾಮ ಮದ್ವಚನ- ಗೋಚರತಾ-ಮುಪೈತು ॥8॥

॥ ಇತಿ ಶ್ರೀಮದವಧೂತಶಿರೋಮಣಿ ಶ್ರೀವಿಷ್ಣುತೀರ್ಥಾರ್ಯಕೃತಮರಣ-ಕಾಲಿಕ -ಪ್ರಾರ್ಥನಾಷ್ಟಕ- ಯಥಾಮತಿ ಸಂಪೂರ್ಣಂ ॥

॥ಶ್ರೀಗುರುಭ್ಯೋನಮಃ ॥

| | | |
|---|---|---|
| ೧ | ೧,೨,೩ ನೇ ತಿಂಗಳಲ್ಲಿ ಗರ್ಭಸ್ರಾವ<br>-ವಾದರೆ | – ತಾಯಿಗೆ ಮಾತ್ರ ರಜಸ್ವಲಾ ಮೈಲಿಗೆ.<br>– ತಂದೆ ಮೊದಲಾದ ಎಲ್ಲರಿಗೂ ಸ್ನಾನ ಮಾತ್ರ |
| ೨ | ೪ ನೇ ತಿಂಗಳಲ್ಲಿ ಗರ್ಭಸ್ರಾವವಾದರೆ | – ತಾಯಿಗೆ ಮಾತ್ರ ೪ ದಿನ ರಜಸ್ವಲಾ ಮೈಲಿಗೆ<br>– ತಂದೆ ಮೊದಲಾದ ಎಲ್ಲರಿಗೂ ಸ್ನಾನಮಾತ್ರ |
| ೩ | ೫ ನೇ ತಿಂಗಳಲ್ಲಿ ಗರ್ಭಪಾತವಾದರೆ | – ತಾಯಿಗೆ ಮಾತ್ರ ೫ ದಿನ ರಜಸ್ವಲಾ ಮೈಲಿಗೆ<br>– ತಂದೆ ಮೊದಲಾದ ಸಪಿಂಡರಿಗೆ ೩ ದಿನ ಜಾತಾಶೌಚ (ವೃದ್ಧಿ) |
| ೪ | ೬ ನೇ ತಿಂಗಳಲ್ಲಿ ಗರ್ಭಪಾತವಾದರೆ | – ತಾಯಿಗೆ ಮಾತ್ರ ೬ ದಿನ ರಜಸ್ವಲಾ ಮೈಲಿಗೆ<br>– ತಂದೆ ಮೊದಲಾದ ಸಪಿಂಡರಿಗೆ ೩ ದಿನ ಜಾತಾಶೌಚ |
| ೫ | ೭ ನೇ ತಿಂಗಳಲ್ಲಿ ಆರಂಭಿಸಿ ಮಗುವು<br>ಹುಟ್ಟಿದಾಗ | – ತಾಯಿಗೆ ಮಾತ್ರ ೧೦ ದಿನ ರಜಸ್ವಲಾ ಮೈಲಿಗೆ<br>– ತಂದೆ ಮೊದಲಾದ ಸಪಿಂಡರಿಗೆ ೧೦ ದಿನ ಜಾತಾಶೌಚ<br>ಸಪಿಂಡರೆಂದರೆ — ಮೂಲಪುರುಷರಿಂದ 7 ತಲೆವರೆಗಿನವರು<br>– ಸಮಾನೋದಕರಿಗೆ ೩ ದಿನ ಜಾತಾಶೌಚ<br>ಸಮಾನೋದಕರೆಂದರೆ ಮೂಲಪುರುಷನಿಂದ 8 ರಿಂದ 15<br>ತಲೆವರೆಗಿನವರು<br>– ಸಗೋತ್ರರಿಗೆ ೧ ದಿನ ಜಾತಾಶೌಚ<br>ಸಗೋತ್ರರೆಂದರೆ – ಮೂಲಪುರುಷನಿಂದ 15 ರಿಂದ 21 ತಲೆವರೆಗಿನವರು |

**ಸೂಚನೆ — ಗಂಡನು ಆ ಕಾಲದಲ್ಲಿ ಹೆಂಡತಿಯನ್ನು ಮುಟ್ಟಿದರೆ ಹೆಂಡತಿಗೆ ಇರುವಷ್ಟೇ ಮೈಲಿಗೆ ಗಂಡನಿಗೂ ಬರುತ್ತದೆ**

| | | |
|---|---|---|
| | ತಂದೆ ಮನೆಯಲ್ಲಿ ಮಗಳು ಪ್ರಸವಿಸಿದರೆ | – ತಂದೆ-ತಾಯಿಗಳಿಗೆ ಮೂರುದಿನ ಜಾತಾಶೌಚ<br>– ಅದೇ ಮನೆಯಲ್ಲಿ ವಾಸಿಸುವ ಅಣ್ಣತಮ್ಮಂದಿರಿಗೆ ೧ದಿನ ಜಾತಾಶೌಚ<br>– ಚಿಕ್ಕಪ್ಪ ಮೊದಲಾದವರಿಗೆ ಸ್ನಾನ ಮಾತ್ರ<br>– ಚಿಕ್ಕಪ್ಪ ಮೊದಲಾದವರು ತಂದೆಯ ಮನೆಯಲ್ಲೇ ವಾಸಿಸುತ್ತಿದ್ದರೆ ೧ ದಿನ ಜಾತಾಶೌಚ |
| | ಗಂಡನ ಮನೆಯಲ್ಲಿ ಮಗಳು ಪ್ರಸವಿಸಿದರೆ | – ತಂದೆತಾಯಿ ಮೊದಲಾದ ಎಲ್ಲರಿಗೂ ಸ್ನಾನಮಾತ್ರ; ಜಾತಾಶೌಚ ಇಲ್ಲ |
| ೬ | ಮಗು ಹುಟ್ಟಿದ ಮೇಲೆ ನಾಲಚ್ಛೇದಕ್ಕಿಂತ ಮೊದಲು ಮಗುವು ಮರಣ ಹೊಂದಿದರೆ | – ತಾಯಿಗೆ ಮಾತ್ರ ೧೦ ದಿನ ರಜಸ್ವಲಾ ಮೈಲಿಗೆ<br>– ತಂದೆ ಮೊದಲಾದವರಿಗೆ ೩ ದಿನ ಜಾತಾಶೌಚ. ಮೃತಾಶೌಚ ಇಲ್ಲ |
| ೭ | ಮಗುವಿನ ನಾಲಚ್ಛೇದವಾದ ಮೇಲೆ ಹತ್ತುದಿನದ ಒಳಗೆ ಮಗು ಮರಣ ಹೊಂದಿದರೆ | – ತಾಯಿಗೆ ಮಾತ್ರ ೧೦ದಿನ ರಜಸ್ವಲಾ ಮೈಲಿಗೆ<br>– ತಂದೆ ಮೊದಲಾದವರಿಗೆ ೧೦ದಿನದವರೆಗೆ ಜಾತಾಶೌಚ. ಮೃತಾಶೌಚ ಇಲ್ಲ |
| | **ಆ . ಸಣ್ಣಮಕ್ಕಳ ಮೃತಾಶೌಚ**<br>**1. ಗಂಡುಮಕ್ಕಳ ಮರಣ** | |
| ೧ | ಹತ್ತುದಿನದ ನಂತರ ನಾಮಕರಣಕ್ಕೆ ಮುಂಚೆ (೧೨ ದಿನದೊಳಗೆ) | – ತಂದೆ ತಾಯಿಗಳಿಗೆ ಮಾತ್ರ ೩ ದಿನ.<br>– ಸಪಿಂಡರಿಗೆ (೩ ತಲೆಯವರೆಗೆ)ಸ್ನಾನಮಾತ್ರ |

| | | |
|---|---|---|
| ೨ | ನಾಮಕರಣಾನಂತರ ಹಲ್ಲು ಬರುವ-ವರೆಗೆ (೭ತಿಂಗಳ ವರೆಗೆ) | – ತಂದೆತಾಯಿಗಳಿಗೆ ಮಾತ್ರ ೩ ದಿನ<br>– ಸಪಿಂಡರಿಗೆ (೩ ತಲೆಯವರೆಗೆ) ಹೂಳಿದರೆ ಸ್ನಾನಮಾತ್ರ, ದಹನ ಮಾಡಿದರೆ ೧ದಿನ |
| ೩ | ಹಲ್ಲು ಬಂದಮೇಲೆ ಚೌಲದವರೆಗೆ (೩ವರ್ಷದ ಒಳಗೆ) | – ತಂದೆ ತಾಯಿಗಳಿಗೆ ಮಾತ್ರ ೩ ದಿನ<br>– ಉಳಿದ ಸಪಿಂಡರಿಗೆ ೧ ದಿನ |
| ೪ | ಚೌಲವಾದಮೇಲೆ ಉಪನಯನದವರೆಗೆ (೮ ವರ್ಷದ ಒಳಗೆ) | – ತಂದೆತಾಯಿ ಮತ್ತು ಎಲ್ಲಾ ಸಪಿಂಡರಿಗೆ (೩ತಲೆಯವರೆಗೆ) ೩ ದಿನ<br>– ಮದುವೆಯಾದ ಅಕ್ಕತಂಗಿಯರಿಗೆ ಸ್ನಾನಮಾತ್ರ |
| | **2. ಹೆಣ್ಣುಮಕ್ಕಳ ಮರಣ** | |
| ೧ | ಹತ್ತುದಿನದ ಮೇಲೆ ಹಲ್ಲು ಬರುವವರೆಗೆ (೭ ತಿಂಗಳ ಒಳಗೆ) | – ತಂದೆತಾಯಿಗಳಿಗೆ ೧ ದಿನ<br>– ಸಪಿಂಡರಿಗೆ (೩ತಲೆಯವರೆಗೆ) ಸ್ನಾನಮಾತ್ರ |
| ೨ | ಹಲ್ಲು ಬಂದಮೇಲೆ ೩ವರ್ಷದ ಒಳಗೆ | – ತಂದೆತಾಯಿಗಳಿಗೆ ೩ ದಿನ<br>– ಸಪಿಂಡರಿಗೆ (೩ತಲೆಯವರೆಗೆ) ಸ್ನಾನಮಾತ್ರ |
| ೩ | ೩ ವರ್ಷದಮೇಲೆ ವಾಗ್ದಾನ-ಪರ್ಯಂತ | – ತಂದೆತಾಯಿಗಳಿಗೆ ೩ ದಿನ<br>– ಸಪಿಂಡರಿಗೆ (೩ತಲೆಯವರೆಗೆ) ಒಂದುದಿನ |
| ೪ | ವಾಗ್ದಾನವಾದಮೇಲೆ ವಿವಾಹದ ಒಳಗೆ | – ತಂದೆತಾಯಿಗಳಿಗೂ ಸಪಿಂಡರಿಗೂ (೭ತಲೆಯವರೆಗೆ) ೩ದಿನ<br>– ನಿಶ್ಚಯವಾದ ಗಂಡಿಗೂ, ಅವನ ತಂದೆತಾಯಿ ಮೊದಲಾದ ಸಪಿಂಡರಿಗೂ (೭ತಲೆಯ ವರೆಗೆ) ೩ ದಿನ |

ಸೂಚನೆ— 1. ಋತುಮತಿಯಾದ ಹೆಣ್ಣುಮಗಳು ಮದುವೆಗೆ ಪೂರ್ವದಲ್ಲಿ ಮರಣ ಹೊಂದಿದರೆ ತಂದೆತಾಯಿಗಳಿಗೆ ಜನ್ಮವಿಡೀ ಆಶೌಚ. 2. ಉಪನಯನವಾಗದ ಗಂಡುಮಕ್ಕಳಿಗೆ ಹಾಗೂ ಕನ್ಯೆಯರಿಗೆ ತಂದೆತಾಯಿಯ ಹೊರತಾಗಿ ಯಾರು ಮರಣ ಹೊಂದಿದರೂ ಆಶೌಚವಿಲ್ಲ. ಸ್ನಾನಮಾತ್ರ. ಆದರೆ 8 ವರ್ಷಮೀರಿದ್ದ ಗಂಡುಮಕ್ಕಳಿಗೆ, 10ವರ್ಷ ಮೀರಿದ್ದ ಹೆಣ್ಣುಮಕ್ಕಳಿಗೆ ಆಶೌಚ ಉಂಟು.

| | ಮೃತರ ಸಂಬಂಧ | ಗಂಡುಮಕ್ಕಳಿಗೆ | ಹೆಣ್ಣುಮಕ್ಕಳಿಗೆ |
|---|---|---|---|
| 1 | ತಂದೆ,ತಾಯಿ,<br>ಸಪತ್ನೀ (ಮಲ ತಾಯಿ) | – 10 ದಿನ<br>– ಬೇರೆಯ ಗೋತ್ರಕ್ಕೆ ದತ್ತು ಹೋದವರಿಗೆ 3 ದಿನ | – 3 ದಿನ<br>– 10 ದಿನದ ಮೇಲೆ ವಾರ್ತೆ ತಿಳಿದರೆ ಪಕ್ಷಿಣೀ = ಒಂದುವರೆ ದಿನ (* *) |
| (* *)ಪಕ್ಷಿಣೀ ನಿರ್ಣಯ— ರಾತ್ರಿಮರಣವಾದರೆ ಆ ರಾತ್ರಿ, ಮುಂದಿನ ಹಗಲು ಮತ್ತು ರಾತ್ರಿ ಆಶೌಚ. ಸೂರ್ಯನನ್ನು ನೋಡಿ ಸ್ನಾನ. ಹಗಲು ಮರಣವಾದರೆ ಆ ಹಗಲು, ರಾತ್ರಿ, ಮುಂದಿನ ಹಗಲು ಆಶೌಚ. ನಕ್ಷತ್ರವನ್ನು ನೋಡಿ ಸ್ನಾನ. | | | |
| 2 | ಮಗ | ತಂದೆತಾಯಿಗೆ 10 ದಿನ | |
| 3 | ಮಗಳು | | |
| | ತಂದೆಯ ಮನೆಯಲ್ಲಿ ಮರಣವಾದರೆ | – ತಂದೆ,ತಾಯಿ,ಮಲತಾಯಿಗೆ 3 ದಿನ<br>–ಅದೇ ಮನೆಯಲ್ಲಿರುವ ಚಿಕ್ಕಪ್ಪ ಮೊದಲಾದವರಿಗೆ 1 ದಿನ | |

| | | | |
|---|---|---|---|
| | ಗಂಡನ ಮನೆಯಲ್ಲಿ ಮರಣ ವಾದರೆ | – ತಂದೆತಾಯಿಗೆ, ಮಲತಾಯಿಗೆ 3 ದಿನ<br>– ಚಿಕ್ಕಪ್ಪ ಮೊದಲಾದವರಿಗೆ 1 ದಿನ | |
| | ಗ್ರಾಮಾಂತರದಲ್ಲಿ ಮರಣವಾದರೆ | – ತಂದೆ ತಾಯಿಗೆ ಪಕ್ಷಿಣೀ, ಚಿಕ್ಕಪ್ಪ ಮೊದಲಾದವರಿಗೆ ಸ್ನಾನಮಾತ್ರ | |
| 4 | ಪಿತಾಮಹ<br>(ತಂದೆಯ ತಂದೆ)<br>ಪಿತಾಮಹೀ<br>(ತಂದೆಯ ತಾಯಿ) | – ಮೊಮ್ಮಗನಿಗೆ 10 ದಿನ | – ಮೊಮ್ಮಗಳಿಗೆ<br>ಸ್ವಗೃಹದಲ್ಲಿ 3 ದಿನ<br>ಬೇರೆ ಕಡೆ ಪಕ್ಷಿಣೀ |
| 5 | ಮೊಮ್ಮಗ (ಮಗನ ಮಗ) | ಪಿತಾಮಹ ಪಿತಾಮಹೀ ಇವರಿಗೆ 10 ದಿನ | |
| 6 | ಮೊಮ್ಮಗಳು<br>(ಮಗನ ಮಗಳು) | ಪಿತಾಮಹ ಪಿತಾಮಹೀ ಇವರಿಗೆ ಸ್ನಾನಮಾತ್ರ | |
| 7 | ಮಾತಾಮಹ<br>(ತಾಯಿಯ ತಂದೆ) | – ಮೊಮ್ಮಗನಿಗೆ 3 ದಿನ<br>– ಗ್ರಾಮಾಂತರದಲ್ಲಿ ಪಕ್ಷಿಣೀ | – ಮೊಮ್ಮಗಳಿಗೆ 3 ದಿನ<br>– ಗ್ರಾಮಾಂತರದಲ್ಲಿ ಪಕ್ಷಿಣೀ |
| 8 | ಮಾತಾಮಹಿ<br>(ತಾಯಿಯ ತಾಯಿ) | – ಮೊಮ್ಮಗನಿಗೆ ಪಕ್ಷಿಣೀ ಅಥವಾ 3 ದಿನ | – ಮೊಮ್ಮಗಳಿಗೆ ಪಕ್ಷಿಣೀ |
| 9 | ದೌಹಿತ್ರ(ಮಗಳ ಮಗ)<br>ಅನುಪನೀತ ದೌಹಿತ್ರ | – ಮಾತಾಮಹನಿಗೆ 3 ದಿನ<br>– ಮಾತಾಮಹನಿಗೆ ಪಕ್ಷಿಣೀ | – ಮಾತಾಮಹಿಗೆ 3 ದಿನ<br>– ಮಾತಾಮಹಿಗೆ ಪಕ್ಷಿಣೀ |
| 10 | ದೌಹಿತ್ರೀ (ಮಗಳ ಮಗಳು) | – ಮಾತಾಮಹನಿಗೆ ಸ್ನಾನಮಾತ್ರ | – ಮಾತಾಮಹಿಗೆ ಸ್ನಾನಮಾತ್ರ |

| | | | |
|---|---|---|---|
| 11 | ಗಂಡ, ಹೆಂಡತಿ | ಪರಸ್ಪರ 10 ದಿನಗಳು | |
| 12 | ಅ.ಪಿತೃವ್ಯ (ತಂದೆಯ ತಮ್ಮ) | ಗಂಡುಮಕ್ಕಳಿಗೆ 10 ದಿನ | ಹೆಣ್ಣುಮಕ್ಕಳಿಗೆ ಸ್ನಾನಮಾತ್ರ |
| | ಆ. ಪಿತೃವ್ಯಪತ್ನೀ (ಚಿಕ್ಕಪ್ಪನ ಹೆಂಡತಿ) | ಗಂಡುಮಕ್ಕಳಿಗೆ 10 ದಿನ | ಹೆಣ್ಣುಮಕ್ಕಳಿಗೆ ಸ್ನಾನಮಾತ್ರ |
| | ಇ. ಪಿತೃವ್ಯಪುತ್ರ(ಚಿಕ್ಕಪ್ಪನ ಮಗ) | ಗಂಡುಮಕ್ಕಳಿಗೆ 10 ದಿನ | ಹೆಣ್ಣುಮಕ್ಕಳಿಗೆ ಸ್ನಾನಮಾತ್ರ |
| 13 | ಅ.ಮಾತುಲ (ಸೋದರಮಾವ) | ಸೋದರಳಿಯನಿಗೆ ಪಕ್ಷಿಣೀ | ಸೋದರಸೊಸೆಗೆ ಪಕ್ಷಿಣೀ |
| | ಆ. ಉಪಕಾರ ಮಾಡಿದ ಸೋದರಮಾವ | ಸೋದರಳಿಯನಿಗೆ 3 ದಿನ | ಸೋದರಸೊಸೆಗೆ 3 ದಿನ |
| | ಇ. ಸ್ವಗೃಹದಲ್ಲಿ ಮಾತುಲನ ಮರಣ | ಸೊದರಳಿಯನಿಗೆ 3 ದಿನ | ಸೋದರ ಸೊಸೆಗೆ 3 ದಿನ |
| | ಈ. ಅನುಪನೀತ ಮಾತುಲನ ಮರಣ | ಸೋದರಳಿಯನಿಗೆ 1 ದಿನ | ಸೋದರ ಸೊಸೆಗೆ 1 ದಿನ |
| | ಉ. ಗ್ರಾಮಾಂತರದಲ್ಲಿ ಮಾತುಲನ ಮರಣ | ಸೋದರಳಿಯನಿಗೆ 1 ದಿನ | ಸೋದರ ಸೊಸೆಗೆ 1 ದಿನ |
| | ಸಾಪತ್ನ ಮಾತುಲ (ಮಲತಾಯಿಯ ಅಣ್ಣ ತಮ್ಮ) | ಸೋದರಳಿಯನಿಗೆ 1 ದಿನ | ಸೋದರ ಸೊಸೆಗೆ 1 ದಿನ |

| | | | |
|---|---|---|---|
| 14 | ಮಾತುಲಾನೀ (ಸೋದರಮಾವನ ಹೆಂಡತಿ) | ಸೋದರಳಿಯನಿಗೆ ಪಕ್ಷಿಣೀ | ಸೋದರ ಸೊಸೆಗೆ ಪಕ್ಷಿಣೀ |
| | ಅ. ಸಾಪತ್ನ ಮಾತುಲಾನೀ | ಸೋದರಳಿಯನಿಗೆ ಸ್ನಾನಮಾತ್ರ | ಸೋದರ ಸೊಸೆಗೆ ಸ್ನಾನಮಾತ್ರ |
| 15 | ಸೋದರಳಿಯ | ಸೋದರಮಾವನಿಗೆ 3 ದಿನ | ಸೋದರಮಾವನ ಹೆಂಡತಿಗೆ 3 ದಿನ |
| | ಮಲಸೋದರ ಅಳಿಯ | ಸೋದರಮಾವನಿಗೆ 3 ದಿನ | ಸೋದರಮಾವನ ಹೆಂಡತಿಗೆ 3 ದಿನ |
| | ಅನುಪನೀತ ಸೋದರಳಿಯ | ಸೋದರಮಾವನಿಗೆ ಪಕ್ಷಿಣೀ | ಸೋದರಮಾವನ ಹೆಂಡತಿಗೆ ಪಕ್ಷಿಣೀ |
| 16 | ಸೋದರ ಸೊಸೆ | ಸೋದರಮಾವನಿಗೆ ಸ್ನಾನಮಾತ್ರ | ಸೋದರಮಾವನ ಹೆಂಡತಿಗೆ ಸ್ನಾನಮಾತ್ರ |
| 17 | ಅಣ್ಣ ತಮ್ಮಂದಿರು | ಗಂಡಸರಿಗೆ ಪರಸ್ಪರ 10 ದಿನ | ಅಕ್ಕತಂಗಿಯರಿಗೆ—<br>ಸ್ವಗೃಹದಲ್ಲಿ 3 ದಿನ<br>ಗೃಹಾಂತರದಲ್ಲಿ ಪಕ್ಷಿಣೀ<br>ಗ್ರಾಮಾಂತರದಲ್ಲಿ 1 ದಿನ |
| 18 | ಅಕ್ಕತಂಗಿಯರು | ಅಣ್ಣತಮ್ಮಂದಿರಿಗೆ —<br>ಸ್ವಗೃಹದಲ್ಲಿ 3 ದಿನ<br>ಗೃಹಾಂತರದಲ್ಲಿ ಪಕ್ಷಿಣೀ<br>ಗ್ರಾಮಾಂತರದಲ್ಲಿ 1 ದಿನ | ಅಕ್ಕತಂಗಿಯರಿಗೆ —<br>ಸ್ವಗೃಹದಲ್ಲಿ 3 ದಿನ<br>ಗೃಹಾಂತರದಲ್ಲಿ ಪಕ್ಷಿಣೀ<br>ಗ್ರಾಮಾಂತರದಲ್ಲಿ 1 ದಿನ |

| | | | |
|---|---|---|---|
| 19 | ಅತ್ತೆ ಮಾವಂದಿರು | ಅಳಿಯನಿಗೆ — ಸನ್ನಿಧಾನದಲ್ಲಿ 3 ದಿನ<br>ಅಸನ್ನಿಧಾನದಲ್ಲಿ ಪಕ್ಷಿಣೀ | |
| | ಉಪಕಾರಮಾಡಿದ<br>ಅತ್ತೆ ಮಾವಂದಿರು | ಅಳಿಯನಿಗೆ 3 ದಿನ | |
| | ದೇಶಾಂತರದಲ್ಲಿ | ಅಳಿಯನಿಗೆ 1 ದಿನ | |
| | ಹೆಂಡತಿಯ ಮರಣಾನಂತರ | ಅಳಿಯನಿಗೆ ಪಕ್ಷಿಣೀ ಅಥವಾ 1 ದಿನ | |
| 20 | ಅಳಿಯ | ಅತ್ತೆಮಾವಂದಿರಿಗೆ ಸ್ನಾನಮಾತ್ರ ಅಥವಾ 1 ದಿನ<br>– ಸ್ವಗೃಹದಲ್ಲಿ 3 ದಿನ | |
| 21 | ಸ್ಯಾಲಕ<br>(ಹೆಂಡತಿಯ ಅಣ್ಣ, ತಮ್ಮ)<br>ಅನುಪನೀತ ಸ್ಯಾಲಕ<br>ಹೆಂಡತಿಯ ಮರಣಾನಂತರ | ಭಾವನಿಗೆ 1 ದಿನ ಅಥವಾ ಸ್ನಾನಮಾತ್ರ<br><br>ಭಾವನಿಗೆ ಸ್ನಾನಮಾತ್ರ<br>ಭಾವನಿಗೆ ಸ್ನಾನಮಾತ್ರ | |
| 22 | ಸ್ಯಾಲಕನ ಮಗ | ಸ್ನಾನಮಾತ್ರ | |
| 23 | ಶಾಲಿಕಾ(ಹೆಂಡತಿಯ ಅಕ್ಕತಂಗಿ) | ಭಾವನಿಗೆ ಸ್ನಾನಮಾತ್ರ ಅಥವಾ 1 ದಿನ | |
| 24 | ಅಕ್ಕತಂಗಿಯರ ಗಂಡ | ಭಾವಮೈದುನರಿಗೆ ಸ್ನಾನಮಾತ್ರ | ನಾದಿನಿಯರಿಗೆ ಸ್ನಾನಮಾತ್ರ |
| 25 | ಅಕ್ಕತಂಗಿಯರ ಮಗ | - | ಸ್ವಗೃಹದಲ್ಲಿ 3 ದಿನ<br>ಬೇರೆ ಕಡೆ ಪಕ್ಷಿಣೀ |

| | | | |
|---|---|---|---|
| | ಅಕ್ಕ ತಂಗಿಯರ ಮಗಳು | - | ಚಿಕ್ಕಮ್ಮ ದೊಡ್ಡಮ್ಮನಿಗೆ ಸ್ನಾನಮಾತ್ರ |
| 26 | ತಾಯಿಯ ಅಕ್ಕತಂಗಿಯರು | ಗಂಡುಮಕ್ಕಳಿಗೆ ಪಕ್ಷಿಣೀ | ಹೆಣ್ಣುಮಕ್ಕಳಿಗೆ ಪಕ್ಷಿಣೀ |
| | ಮಲತಾಯಿಯ ಅಕ್ಕತಂಗಿ | ಗಂಡುಮಕ್ಕಳಿಗೆ ಪಕ್ಷಿಣೀ | ಹೆಣ್ಣುಮಕ್ಕಳಿಗೆ ಪಕ್ಷಿಣೀ |
| | ಸ್ವಗೃಹದಲ್ಲಿ ತಾಯಿಯ ಅಕ್ಕತಂಗಿಯರು | ಗಂಡುಮಕ್ಕಳಿಗೆ 3 ದಿನ | ಹೆಣ್ಣುಮಕ್ಕಳಿಗೆ 3 ದಿನ |
| 27 | ತಂದೆಯ ಅಕ್ಕತಂಗಿಯರು (ಸೋದರತ್ತೆ) | ಸೋದರಳಿಯನಿಗೆ ಪಕ್ಷಿಣೀ<br>ಸ್ವಗೃಹದಲ್ಲಿ 3 ದಿನ | ಸೋದರಸೊಸೆಗೆ ಪಕ್ಷಿಣೀ<br>ಸ್ವಗೃಹದಲ್ಲಿ 3 ದಿನ |
| | ಮಲ ಸೋದರತ್ತೆ | ಸೋದರಳಿಯನಿಗೆ ಸ್ನಾನ | ಸೋದರಸೊಸೆಗೆ ಸ್ನಾನ |
| 28 | ಸೋದರತ್ತೆಯ ಗಂಡ | ಸೋದರಳಿಯನಿಗೆ ಸ್ನಾನ | ಸೋದರಸೊಸೆಗೆ ಸ್ನಾನ |
| 29 | ಆತ್ಮಬಂಧುತ್ರಯ—<br>ಸೋದರಮಾವನ ಮಗ<br>ಸೋದರತ್ತೆಯ ಮಗ<br>ಚಿಕ್ಕಮ್ಮ ದೊಡ್ಡಮ್ಮನ ಮಗ | ಸ್ವಗೃಹದಲ್ಲಿ 3 ದಿನ<br>ಬೇರೆಯ ಕಡೆ ಪಕ್ಷಿಣೀ | ಸ್ವಗೃಹದಲ್ಲಿ 3 ದಿನ<br>ಬೇರೆಯ ಕಡೆ ಪಕ್ಷಿಣೀ |
| | ಅನುಪನೀತ ಆತ್ಮಬಂಧುತ್ರಯ | ಸ್ನಾನಮಾತ್ರ | ಸ್ನಾನಮಾತ್ರ |

| | | | |
|---|---|---|---|
| 30 | ಪಿತೃಬಂಧುತ್ರಯ—<br>.ತಂದೆಯ ಸೋ.ಮಾವನ ಮಗ<br>.ತಂದೆಯ ಸೋದರತ್ತೆಯ ಮಗ<br>.ತಂದೆಯ ಚಿಕ್ಕಮ್ಮ-ದೊಡ್ಡಮ್ಮನ ಮಗ | ಸ್ವಗೃಹದಲ್ಲಿ 3 ದಿನ<br>ಬೇರೆ ಕಡೆಯಲ್ಲಿ ಪಕ್ಷಿಣೀ | ಸ್ವಗೃಹದಲ್ಲಿ 3 ದಿನ<br>ಬೇರೆ ಕಡೆಯಲ್ಲಿ ಪಕ್ಷಿಣೀ |
| 31 | ಮಾತೃಬಂಧುತ್ರಯ—<br>.ತಾಯಿಯ ಸೋ.ಮಾವನ ಮಗ<br>.ತಾಯಿಯ ಸೋದರತ್ತೆ ಮಗ<br>.ತಾಯಿಯ ಚಿಕ್ಕಮ್ಮದೊಡ್ಡಮ್ಮ ಮಗ | ಸ್ವಗೃಹದಲ್ಲಿ 3 ದಿನ<br>ಬೇರೆ ಕಡೆಯಲ್ಲಿ ಪಕ್ಷಿಣೀ | ಸ್ವಗೃಹದಲ್ಲಿ 3 ದಿನ<br>ಬೇರೆ ಕಡೆಯಲ್ಲಿ ಪಕ್ಷಿಣೀ |
| ಸೂಚನೆ— 29,30,31 ಹೇಳಿದ್ದರಲ್ಲಿ ಹೆಣ್ಣುಮಕ್ಕಳಿಗೆ ಸ್ನಾನಮಾತ್ರ ಎಂದು ಕೆಲವು ಕಡೆ ಇದೆ. ಅವರವರ ಕುಲಾಚಾರದಂತೆ ಮಾಡಬಹುದು. | | | |
| | | ಗಂಡುಮಕ್ಕಳಿಗೆ | ಹೆಣ್ಣುಮಕ್ಕಳಿಗೆ |
| 32 | 29,30,31ರಲ್ಲಿ ಮಗನಿಗೆ ಬದಲಾಗಿ ಮಗಳು<br>ಅ. ವಿವಾಹಿತಳು<br>ಆ. ಅವಿವಾಹಿತಳು | 1 ದಿನ<br>ಸ್ನಾನಮಾತ್ರ | 1 ದಿನ<br>ಸ್ನಾನಮಾತ್ರ |

| | | |
|---|---|---|
| 33 | ತಂದೆಯಸೋ.ಮಾವನ ಹೆಂಡತಿ | ಸ್ನಾನಮಾತ್ರ ಸ್ನಾನಮಾತ್ರ |
| | ತಾಯಿಯಸೋ.ಮಾವನ ಹೆಂಡತಿ | |
| | ತಂದೆಯ ಸೋದರತ್ತೆಯ ಗಂಡ | |
| | ತಾಯಿಯ ಸೋದರತ್ತೆಯ ಗಂಡ | |
| | ತಂದೆಯ ಚಿಕ್ಕಮ್ಮ ದೊಡ್ಡಮ್ಮನ ಗಂಡ | |
| | ತಾಯಿಯ ಚಿಕ್ಕಮ್ಮ ದೊಡ್ಡಮ್ಮನ ಗಂಡ | |
| 34 | ಪಿತೃಬಂಧುತ್ರಯ, ಮಾತೃಬಂಧುತ್ರಯ ಯಾವ ದೇವದತ್ತನದೋ, ಆ ದೇವದತ್ತನು ಮೃತನಾದಾಗ ಪಿತೃಬಂಧುತ್ರಯ, ಮಾತೃಬಂಧುತ್ರಯಕ್ಕೆ ಸ್ನಾನಮಾತ್ರ. | |
| 35 | ಬೇರೆಯಗೋತ್ರದ ದತ್ತು ತಂದೆ ತಾಯಿಗಳು | ದತ್ತು ಮಗನಿಗೆ 3 ದಿನ<br>ಕರ್ಮಾಂಗ ಆಶೌಚ 10 ದಿನ |
| 36 | ಬೇರೆಯ ಗೋತ್ರದ ದತ್ತುಪುತ್ರ | ದತ್ತು ತಂದೆತಾಯಿಗೆ 3 ದಿನ<br>ಹಡೆದ ತಂದೆತಾಯಿಗೆ 3 ದಿನ<br>ಉಳಿದ ಸಪಿಂಡರಿಗೆ 1 ದಿನ |
| 37 | ದತ್ತಕನ ಪುತ್ರ, ಪೌತ್ರಾದಿಗಳು | ದತ್ತು ಕೊಟ್ಟ, ದತ್ತು ತೆಗೆದುಕೊಂಡವರ ಸಪಿಂಡರಿಗೆ 1 ದಿನ |

| | | | |
|---|---|---|---|
| 38 | ದತ್ತುಕೊಟ್ಟ, ದತ್ತು ಸ್ವೀಕರಿಸಿದವರ ಸಪಿಂಡರು | ದತ್ತಕನಿಗೆ ಮತ್ತು ದತ್ತಕನ ಪುತ್ರಪೌತ್ರಾದಿಗಳಿಗೆ 1 ದಿನ | |
| 39. | ಗುರುಗಳು (ಮಂತ್ರೋಪ-ದೇಶಕರು, ಶಾಂತಿಪೂರ್ವಕವಾಗಿ ಸಚ್ಛಾಸ್ತ್ರೋಪದೇಶಕರು) | ಶಿಷ್ಯನಿಗೆ 3 ದಿನ | ಶಿಷ್ಯಪತ್ನಿಗೆ ಸ್ನಾನಮಾತ್ರ |
| 40 | ಶಿಷ್ಯ<br>(ತನ್ನಿಂದ ಉಪನೀತನಾಗಿದ್ದರೆ)<br>ಬೇರೆಯವರಿಂದ ಉಪನೀತ | ಗುರುವಿಗೆ 3 ದಿನ<br>ಗುರುವಿಗೆ ಪಕ್ಷಿಣೀ | ಗುರುಪತ್ನಿಗೆ ಸ್ನಾನಮಾತ್ರ<br>ಗುರುಪತ್ನಿಗೆ ಸ್ನಾನಮಾತ್ರ |
| 41 | ಆಚಾರ್ಯ (ಸಮಗ್ರ ಸ್ವಶಾಖಾ ಅಧ್ಯಯನ ಮಾಡಿಸಿದವರು) | ಶಿಷ್ಯನಿಗೆ 3 ದಿನ | ಶಿಷ್ಯಪತ್ನಿಗೆ ಸ್ನಾನಮಾತ್ರ |
| 42 | ಗುರುಪತ್ನೀ, ಗುರುಪುತ್ರ, ಆಚಾರ್ಯಪತ್ನೀ, ಪುತ್ರ | ಶಿಷ್ಯನಿಗೆ 1 ದಿನ | ಶಿಷ್ಯಪತ್ನಿಗೆ ಸ್ನಾನಮಾತ್ರ |
| 43 | ಉಪಾಧ್ಯಾಯರು (ಏಕದೇಶಅಧ್ಯಯನ ಮಾಡಿಸಿದವರು) | ಶಿಷ್ಯನಿಗೆ ಸ್ನಾನಮಾತ್ರ | |

| 44 | ಶಿಷ್ಯ | ಆಚಾರ್ಯರಿಗೆ ಪಕ್ಷಿಣೀ ಉಪಾಧ್ಯಾಯರಿಗೆ ಸ್ನಾನ | ಆಚಾರ್ಯಪತ್ನಿಗೆ ಸ್ನಾನ |
|---|---|---|---|
| 45 | ಋತ್ವಿಜರು | | |
| | ಅ. ಬಹುಕಾಲ | ಯಜಮಾನನಿಗೆ 3 ದಿನ | |
| | ಆ. ಅಲ್ಪಕಾಲ | ಯಜಮಾನನಿಗೆ 1 ದಿನ | |

## ಇ. ಇತರ ಉಪನೀತಪುರುಷರ ಹಾಗೂ ವಿವಾಹಿತಸ್ತ್ರೀಯರ ಮರಣದಲ್ಲಿ ಆಶೌಚಗಳು

**ಸೂಚನೆ :**

1. ಗಂಡನಿಗೆ ಹೆಂಡತಿಯು ಸಹಧರ್ಮಿಣಿಯಾದ್ದರಿಂದ ಗಂಡನಿಗೆ ಎಷ್ಟುದಿನ ಆಶೌಚವೋ ಅಷ್ಟುದಿನ ಹೆಂಡತಿಯೂ ಮಾಡುವುದು ಘಟ್ಟದ ಕೆಳಗಿನ ಪದ್ಧತಿ. ಗಂಡಹೆಂಡತಿಯರ ಮಧ್ಯೆ ಯಾರಿಗೆ ರಕ್ತಸಂಬಂಧವಿರುವುದರೋ ಅವರು ಮಾತ್ರ ಆಶೌಚ ಮಾಡುವುದು ಘಟ್ಟದ ಮೇಲಿನ ಪದ್ಧತಿ.
2. ಈ ಮೇಲೆ ಹೇಳಿದ್ದು ಅಲ್ಲದೇ ಆಶೌಚಸಂಪಾತ, ದೇಶಾಂತರ ಆಶೌಚ, ಕರ್ಮನಿಮಿತ್ತ ಆಶೌಚ, ಜಾತ್ಯಾಶೌಚ ಮೊದಲಾದ ಅನೇಕ ವಿಷಯಗಳು ಇವೆ. ಇವುಗಳನ್ನು ಧರ್ಮಶಾಸ್ತ್ರಜ್ಞರಿಂದ ತಿಳಿಯಬೇಕು.
3. ಮೇಲೆ ಹೇಳದೇ ಇರುವ ದೂರಸಂಬಂಧಿಕರ, ಮಿತ್ರರ ಮರಣದಲ್ಲಿ ಸ್ನೇಹಕ್ಕಾಗಿ ಸ್ನಾನಮಾಡಬಹುದು.
4. **ಧರ್ಮಸಿಂಧು, ನಿರ್ಣಯಸಿಂಧು, ಸ್ಮೃತಿಕೌಸ್ತುಭ, ಸ್ಮೃತಿಮುಕ್ತಾವಲೀ** ಗ್ರಂಥಗಳ ಆಧಾರದಿಂದ ಈ ಕೋಷ್ಟಕವನ್ನು ರಚಿಸಲಾಗಿದೆ.
5. ಯತಿಗಳಿಗೆ, ಅಗ್ನಿಕಾರ್ಯವನ್ನು ಮಾಡುತ್ತಿರುವ ಬ್ರಹ್ಮಚಾರಿಗಳಿಗೆ, ಅಗ್ನಿಹೋತ್ರಿಗಳಾದ ಶ್ರೋತ್ರಿಯ ಗೃಹಸ್ಥರಿಗೆ, ಪಟ್ಟಾಭಿಷಿಕ್ತ ರಾಜರಿಗೆ, ಯಜ್ಞದೀಕ್ಷಿತರಿಗೆ, ಯುದ್ಧದಲ್ಲಿರುವವರಿಗೆ ಆಶೌಚವಿಲ್ಲ. ಯತಿಗಳು ತಂದೆತಾಯಿಗಳ ಮರಣದಲ್ಲಿ

ಮಾತ್ರ ಸಚೇಲ ಸ್ನಾನಮಾಡಬೇಕು. ಬ್ರಹ್ಮಚಾರಿ ಮೊದಲಾದವರಿಗೆ ತಂದೆತಾಯಿಗಳ ಮರಣದಲ್ಲಿ ಆಶೌಚವಿದೆ. ದೀಕ್ಷಿತರಿಗೆ, ಯುದ್ಧಾಸಕ್ತರಿಗೆ ಅದು ಮುಗಿಯುವವರೆಗೆ ಆಶೌಚವಿಲ್ಲ. ಅನಂತರ ಉಂಟು.

6. ನಾಂದಿ ಇಟ್ಟಿರುವಾಗ ನಾಂದೀವಿಸರ್ಜನೆಯವರೆಗೆ, ಶ್ರಾದ್ಧದಲ್ಲಿ ಪಾಕಪ್ರಕ್ರಿಯೆ ನಂತರ ಮುಗಿಯುವವರೆಗೆ ಆಶೌಚವಿಲ್ಲ.

೭. ಆಶೌಚದಲ್ಲಿ ಸಂಧ್ಯಾವಂದನೆಯ ಕ್ರಮ — ಮಾರ್ಜನೆ ಮೊದಲಾದ್ದನ್ನು ಮಾನಸಿಕವಾಗಿ ಮಾಡಬೇಕು. ಪ್ರಾಣಾಯಾಮವನ್ನು ಅಮಂತ್ರಕವಾಗಿ ಮಾಡಬೇಕು. ಅರ್ಘ್ಯವನ್ನು ಮಂತ್ರವನ್ನು ಹೇಳಿಕೊಂಡೇ ಕೊಡಬೇಕು. ಜಪ ಉಪಸ್ಥಾನ ಯಾವುದೂ ಇಲ್ಲ. ಕೆಲವರು ಮಾನಸಿಕವಾಗಿ ಹತ್ತು ಗಾಯತ್ರೀಜಪ ಮಾಡಬೇಕು ಎನ್ನುತ್ತಾರೆ. ಇದು ಶಿಷ್ಟಾಚಾರ- ವಿರುದ್ಧವೆಂದು ಆಹ್ನೀಕಕೌಸ್ತುಭದಲ್ಲಿ ಇದೆ. ಈ ಕ್ರಮವು ಜಾತಾಶೌಚಕ್ಕೂ ಅನ್ವಯಿಸುತ್ತದೆ.

8. ಆಶೌಚದಲ್ಲಿ ಚಿತ್ರಾಹುತಿಯನ್ನು ಇಡಬಾರದು. ಪರಿಷೇಚನಮಾಡಿ ಪ್ರಾಣಾಹುತಿಯನ್ನು ಮಾತ್ರ ತೆಗೆದುಕೊಳ್ಳಬೇಕು.

9. ಆಶೌಚದಲ್ಲಿ ವಿಷ್ಣುಪಂಚಕ ಮೊದಲಾದ ಉಪವಾಸಗಳನ್ನು ಮಾಡಬಾರದು. ಏಕಾದಶೀ ಉಪವಾಸ ಮಾಡಲೇ ಬೇಕು.

10. ಆಶೌಚದಲ್ಲಿ ನಮಸ್ಕಾರ ಆಶೀರ್ವಾದ ಎರಡೂ ಇಲ್ಲ. ಜಾತಾಶೌಚದಲ್ಲಿ ದೇವರಿಗೆ ಮಾತ್ರ ನಮಸ್ಕಾರ ಮಾಡಬಹುದು. ಮೃತಾಶೌಚದಲ್ಲಿ ದೇವರಿಗೂ ನಮಸ್ಕಾರವಿಲ್ಲ.

11. ಸ್ನಾನಮಾತ್ರ ಇದ್ದಾಗ ಯಜ್ಞೋಪವೀತವನ್ನು ಬದಲಾಯಿಸಬೇಕಾದ್ದಿಲ್ಲ. ಆಶೌಚ ಇದ್ದರೆ ಮಾತ್ರ ಯಜ್ಞೋಪವೀತವನ್ನು ಬದಲಾಯಿಸಬೇಕು. ಯಾವುದೇ ಸಂಬಂಧವಿಲ್ಲದಿದ್ದರೂ ಶವದ ಹಿಂದೆ ಮೂರು ಹೆಜ್ಜೆ ಇಟ್ಟರೆ ಯಜ್ಞೋಪವೀತವನ್ನು ಬದಲಾಯಿಸಬೇಕು.

12. ಶವವನ್ನು ಸ್ಪರ್ಶಮಾಡಿದರೆ ಸ್ನಾನಮಾಡಿ ಅಗ್ನಿಸ್ಪರ್ಶಮಾಡಿದರೆ ಶುದ್ಧಿ. ಶವ ಸ್ಪರ್ಶಮಾಡಿದ ದಿನ ದೇವರ ಪೂಜಾ ಮಾಡಬಾರದು. ಶವ ಸ್ಪರ್ಶಮಾಡಿದವರನ್ನು ಮುಟ್ಟಿದರೂ ಸ್ನಾನಮಾಡಿ ಯಜ್ಞೋಪವೀತ ಬದಲಾಯಿಸಬೇಕು.

13 ಜಾತಾಶೌಚದಲ್ಲಿ ದೇವಸ್ಥಾನದ ಆವರಣಕ್ಕೆ ಮಾತ್ರ ಪ್ರವೇಶ. ಗುಡಿಯ ಒಳಗೆ ಹೋಗಬಾರದು. ಪುರಾಣಶ್ರವಣ ಮಾಡಬಹುದು. ಪಾಠ ಕೇಳುವ ಹಾಗಿಲ್ಲ. ಶಿಷ್ಯರ ಜೊತೆ ಸಹಪಂಕ್ತಿಭೋಜನವಿಲ್ಲ. ಅಡ್ಡಪಂಕ್ತಿಯಲ್ಲಿ ಕೂಡುವ ಸಂಪ್ರದಾಯವಿದೆ.

14. ಜಾತಾಶೌಚವಿರುವವರನ್ನು ಮುಟ್ಟಿದರೆ ಸ್ನಾನವು ಬೇಕಿಲ್ಲ. ಮೃತಾಶೌಚವಿದ್ದವರನ್ನು ಮುಟ್ಟಿದರೆ ಸ್ನಾನಮಾಡಬೇಕು. ಯಜ್ಞೋಪವೀತ ಬದಲಾಯಿಸಬೇಕಾಗಿಲ್ಲ. ಆದರೆ ತಂದೆತಾಯಿಗಳ ಕರ್ಮವನ್ನು ಮಾಡುವ ಕರ್ತೃಗಳನ್ನು ಮುಟ್ಟಿದರೆ ಸ್ನಾನ ಮಾಡಬೇಕು. ಯಜ್ಞೋಪವೀತ ಬದಲಿಸಬೇಕು.

## ಕರ್ಣಸೂಕ್ತ

ಹರಿಃ ಓಂ ॥ ನಾನಾನಂ ವಾ ಉ ನೋ ಧಿಯೋ ವಿ ವ್ರತಾನಿ ಜನಾನಾಮ್ । ತಕ್ಷಾ ರಿಷ್ಟಂ ರುತಂ ಭಿಷಗ್ ಬ್ರಹ್ಮಾ ಸುನ್ವಂತಮಿಚ್ಛತೀಂದ್ರಾಯೇಂದೋ ಪರಿ ಸ್ರವ ॥೧॥ ಜರತೀಭಿರೋಷಧೀಭಿಃ ಪರ್ಣೇಭಿಃ ಶಕುನಾನಾಮ್ । ಕಾರ್ಮಾರೋ ಅಶ್ಮಭಿರ್ದ್ಯುಭಿರ್ಹಿರಣ್ಯವಂತಮಿಚ್ಛತೀಂದ್ರಾಯೇಂದೋ ಪರಿ ಸ್ರವ ॥೨॥ ಕಾರುರಹಂ ತತೋ ಭಿಷಗುಪಲಪ್ರಕ್ಷಿಣೀ ನನಾ । ನಾನಾಧಿಯೋ ವಸೂಯವೋಽನು ಗಾ ಇವ ತಸ್ಥಿಮೇಂದ್ರಾಯೇಂದೋ ಪರಿ ಸ್ರವ ॥೩॥ ಅಶ್ವೋ ವೋಹ್ಳಾ ಸುಖಂ ರಥಂ ಹಸನಾಮುಪಮಂತ್ರಿಣಃ । ಶೇಪೋ ರೋಮಣ್ವಂತೋ ಭೇದೌ ವಾರಿನ್ಮಂಡೂಕ ಇಚ್ಛತೀಂದ್ರಾಯೇಂದೋ ಪರಿ ಸ್ರವ ॥೪॥ ಶರ್ಯಣಾವತಿ ಸೋಮಮಿಂದ್ರಃ ಪಿಬತು ವೃತ್ರಹಾ । ಬಲಂ ದಧಾನ ಆತ್ಮನಿ ಕರಿಷ್ಯನ್ವೀರ್ಯಂ ಮಹದಿಂದ್ರಾಯೇಂದೋ ಪರಿ ಸ್ರವ ॥೫॥ ಆ ಪವಸ್ವ ದಿಶಾಂ ಪತ ಆರ್ಜೀಕಾತ್ಸೋಮ ಮೀಢ್ವಃ । ಋತವಾಕೇನ ಸತ್ಯೇನ ಶ್ರದ್ಧಯಾ ತಪಸಾ ಸುತ ಇಂದ್ರಾಯೇಂದೋ ಪರಿ ಸ್ರವ ॥೬॥ ಪರ್ಜನ್ಯವೃದ್ಧಂ ಮಹಿಷಂ ತಂ ಸೂರ್ಯಸ್ಯ ದುಹಿತಾಭರತ್ । ತಂ ಗಂಧರ್ವಾಃ ಪ್ರತ್ಯಗೃಭ್ಣನ್ ತಂ ಸೋಮೇ ರಸಮಾದಧುರಿಂದ್ರಾಯೇಂದೋ ಪರಿ ಸ್ರವ । ಋತಂ ವದನ್ನೃತಮದ್ಯುಮ್ನ ಸತ್ಯಂ ವದನ್ ಸತ್ಯಕರ್ಮನ್ । ಶ್ರದ್ಧಾಂ ವದನ್ ತ್ಸೋಮ ರಾಜನ್ ಧಾತ್ರಾ ಸೋಮ ಪರಿಷ್ಕೃತ ಇಂದ್ರಾಯೇಂದೋ ಪರಿ ಸ್ರವ ॥೮॥ ಸತ್ಯಮುಗ್ರಸ್ಯ ಬೃಹತಃ ಸಂ ಸ್ರವಂತಿ ಸಂಸ್ರವಾಃ । ಸಂ

ಯಂತಿ ರಸಿನೋ ರಸಾಃ ಪುನಾನೋ ಬ್ರಹ್ಮಣಾ ಹರ ಇಂದ್ರಾಯೇಂದೋ ಪರಿ ಸ್ರವ ॥೯॥ ಯತ್ರ ಬ್ರಹ್ಮಾ ಪವಮಾನ ಛಂದಸ್ಯಾಂ ವಾಚಂ ವದನ್ । ಗ್ರಾವ್ಣಾ ಸೋಮೇ ಮಹೀಯತೇ ಸೋಮೇನಾನಂದಂ ಜನಯನ್ನಿಂದ್ರಾಯೇಂದೋ ಪರಿ ಸ್ರವ ॥೧೦॥ ಯತ್ರ ಜ್ಯೋತಿರಜಸ್ರಂ ಯಸ್ಮಿನ್ ಲೋಕೇ ಸ್ವರ್ಹಿತಮ್ । ತಸ್ಮಿನ್ಮಾಂ ಧೇಹಿ ಪವಮಾನಾಽಮೃತೇ ಲೋಕೇ ಅಕ್ಷಿತ ಇಂದ್ರಾಯೇಂದೋ ಪರಿ ಸ್ರವ ॥೧೧॥ ಯತ್ರ ರಾಜಾ ವೈವಸ್ವತೋ ಯತ್ರಾವರೋಧನಂ ದಿವಃ । ಯತ್ರಾಮೂರ್ಯಹ್ವತೀರಾ- ಪಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥೧೨॥ ಯತ್ರಾನುಕಾಮಂ ಚರಣಂ ತ್ರಿನಾಕೇ ತ್ರಿದಿವೇ ದಿವಃ । ಲೋಕಾ ಯತ್ರ ಜ್ಯೋತಿ- ಷ್ಮಂತಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥೧೩॥ ಯತ್ರ ಕಾಮಾ ನಿಕಾಮಾಶ್ಚ ಯತ್ರ ಬ್ರಧ್ನಸ್ಯ ವಿಷ್ಟಪಮ್ । ಸ್ವಧಾ ಚ ಯತ್ರ ತೃಪ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥೧೪॥ ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ । ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥೧೫॥ ಯ ಇಂದೋಃ ಪವಮಾನಸ್ಯಾಽನು ಧಾಮಾನ್ಯಕ್ರಮೀತ್ । ತಮಾಹುಃ ಸುಪ್ರಜಾ ಇತಿ ಯಸ್ತೇ ಸೋಮಾವಿಧನ್ಮನ ಇಂದ್ರಾಯೇಂದೋ ಪರಿ ಸ್ರವ ॥೧೬॥ ಋಷೇ ಮಂತ್ರಕೃತಾಂ ಸ್ತೋಮೈಃ ಕಶ್ಯಪೋದ್ವರ್ಧಯಂಗಿರಃ । ಸೋಮಂ ನಮಸ್ಯ ರಾಜಾನಂ ಯೋ ಜಜ್ಞೇ ವೀರುಧಾಂ ಪತಿರಿಂದ್ರಾಯೇಂದೋ ಪರಿ ಸ್ರವ ॥೧೭॥ ಸಪ್ತ ದಿಶೋ ನಾನಾಸೂರ್ಯಾಃ ಸಪ್ತ ಹೋತಾರ ಋತ್ವಿಜಃ । ದೇವಾ ಆದಿತ್ಯಾ ಯೇ ಸಪ್ತ ತೇಭಿಃ ಸೋಮಾಭಿ ರಕ್ಷ ನ ಇಂದ್ರಾಯೇಂದೋ ಪರಿ ಸ್ರವ ॥೧೮॥ ಯತ್ತೇ ರಾಜನ್ ಶೃತಂ ಹವಿಸ್ತೇನ ಸೋಮಾಭಿ ರಕ್ಷ ನಃ । ಅರಾತೀವಾ ಮಾ ನಸ್ತಾರೀನ್ಮೋ ಚ ನಃ ಕಿಂಚನಾಮಮದಿಂದ್ರಾಯೇಂದೋ ಪರಿ ಸ್ರವ ॥೧೯॥ (ಪರಿಶಿಷ್ಟಮ್) ಯತ್ರ ತತ್ಪರಮಂ

ಪದಂ ವಿಷ್ಣೋರ್ಲೋಕೇ ಮಹೀಯತೇ । ದೇವೈಃ ಸುಕೃತಕರ್ಮಭಿಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ಯತ್ರ ತತ್ಪರಮಾಪ್ಯಂ ಭೂತಾನಾಮಧಿಪತಿಮ್ । ಭಾವಭಾವೀ ಚ ಯೋಗೀಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ಯತ್ರ ಲೋಕಾಸ್ತನೂತ್ಯಜಃ ಶ್ರದ್ಧಯಾ ತಪಸಾ ಜಿತಾಃ । ತೇಜಶ್ಚ ಯತ್ರ ಬ್ರಹ್ಮ ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ಯತ್ರ ದೇವಾ ಮಹಾತ್ಮಾನಃ ಸೇಂದ್ರಾಶ್ಚ ಸಮರುದ್ಗಣಾಃ । ಬ್ರಹ್ಮಾ ಚ ಯತ್ರ ವಿಷ್ಣುಶ್ಚ ತತ್ರ ಮಾಮಮೃತಂ ಕೃಧೀಂದ್ರಾ-ಯೇಂದೋ ಪರಿ ಸ್ರವ ॥ ಯತ್ರ ಗಂಗಾ ಚ ಯಮುನಾ ಚ ಯತ್ರ ಪ್ರಾಚೀ ಸರಸ್ವತೀ । ಯತ್ರ ಸೋಮೇಶ್ವರೋ ದೇವಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ಯತ್ರ ತದ್ವಿಷ್ಣುರ್ಮಹೀಯತೇ ನರಾಣಾಮಧಿಪತಿಮ್ । ಯತ್ರ ಶಂಖಚಕ್ರ-ಗದಾಧರಸ್ಮರಣಂ ಮುಕ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥ ಇತಿ ಕರ್ಣಸೂಕ್ತಮ್ ॥

ಇಲ್ಲಿಗೆ ಭಾದ್ರಪದಮಾಸದ ವಿಧಾನವು ಸಮಾಪ್ತವಾಯಿತು ॥ ಶ್ರೀಮಧ್ವೇಶಾರ್ಪಣಮಸ್ತು ॥

ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ । ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ ಅಚ್ಯುತಾನಂತಗೋವಿಂದೇಭ್ಯೋ ನಮಃ ॥

ಅಸ್ಮದ್ಗುರ್ವಂತರ್ಗತಶ್ರೀಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕರಾದ-
ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಈ ಕೃತಿಕುಸುಮವು ಸಮರ್ಪಿತವಾಗಿದೆ. ॥ ಶ್ರೀಮಧ್ವೇಶಾರ್ಪಣಮಸ್ತು ॥

* * * * * *

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶನೀ

# ಕೃಷ್ಣಾಷ್ಟಮೀ

ಶ್ರಾವಣ || ಬಹುಳ || ಅಷ್ಟಮೀ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಕೃಷ್ಣಾಷ್ಟಮೀ

## ಕೃಷ್ಣಜಯಂತೀ

ಸಿಂಹಮಾಸ/ಶ್ರಾವಣ ।। ಬಹುಳ ಅಷ್ಟಮೀ

ವಿದ್ವಾನ್ ।। ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :
ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),
ಗಿರಿನಗರ, ಬೆಂಗಳೂರು-೮೫

**ಕೃಷ್ಣಾಷ್ಟಮೀ** ಶಾಲಿವಾಹನ ಶಕೆ ೧೯೪೩ ಶಾರ್ವರಿ।। ಶ್ರಾವಣ ।। ಶುದ್ಧ ।। ಪೂರ್ಣಿಮೆ (ದಿನಾಂಕ:೩-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ।। ಶ್ರೀ ವಿದ್ಯಾಧೀಶತೀರ್ಥಶ್ರೀಪಾದಂಗಳವರ ಕರಕಮಲಗಳಿಂದ ಭಾರತೀರಮಣಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವ-ದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು : ೧೨೦



ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಶ್ರೀ ಬಿ.ಎನ್. ಶ್ರೀನಿವಾಸರಾವ್

ಮುದ್ರಣ : ಮುಕ್ತಿಪಥ ಮುದ್ರಣಾಲಯ,
ಬೆಂಗಳೂರು.



ದಿ|| ಶ್ರೀ ಅಗ್ರಹಾರ ಎನ್. ನರಸಿಂಹಮೂರ್ತಿಗಳು ಹಾಗೂ
ದಿ|| ಶ್ರೀಮತಿ ಆರ್.ಬಿ. ವಿಜಯಲಕ್ಷ್ಮಿ, ಸಂಜಯನಗರ, ಬೆಂಗಳೂರು.

ಇವರುಗಳ ಸ್ಮರಣಾರ್ಥ ಶ್ರೀ ಪ್ರಭುನಂದನ ಮೂರ್ತಿ, ಶ್ರೀಮತಿ ಸುಧಾ ಪ್ರಭುನಂದನ್, ಚಿ || ಸಂಜೀವ್ ಪ್ರಭುನಂದನ್, ಕ್ಯಾಲಿಫೋರ್ನಿಯಾ ಇವರು ಈ ಕೃತಿಯ ಸೇವೆಯನ್ನು ಸಲ್ಲಿಸಿರುತ್ತಾರೆ.

ಯೋಗಾಯ ಯೋಗಪತಯೇ ಯೋಗೇಶ್ವರಾಯ ಯೋಗಸಂಭವಾಯ ಶ್ರೀಗೋವಿಂದಾಯ ನಮೋ ನಮಃ || (ಸ್ನಾನದಲ್ಲಿ 108 ಬಾರಿ ಜಪಿಸಿರಿ)

ಯಜ್ಞಾಯ ಯಜ್ಞಪತಯೇ ಯಜ್ಞೇಶ್ವರಾಯ ಯಜ್ಞಸಂಭವಾಯ ಶ್ರೀಗೋವಿಂದಾಯ ನಮೋ ನಮಃ || (ಪೂಜೆಯಲ್ಲಿ 108 ಬಾರಿ ಜಪಿಸಿರಿ)

ವಿಶ್ವಾಯ ವಿಶ್ವಪತಯೇ ವಿಶ್ವೇಶ್ವರಾಯ ವಿಶ್ವಸಂಭವಾಯ ಶ್ರೀಗೋವಿಂದಾಯ ನಮೋ ನಮಃ || (ಮಲಗುವಾಗ 108 ಬಾರಿ ಜಪಿಸಿರಿ)

ಸರ್ವಾಯ ಸರ್ವಪತಯೇ ಸರ್ವೇಶ್ವರಾಯ ಸರ್ವಸಂಭವಾಯ ಶ್ರೀಗೋವಿಂದಾಯ ನಮೋ ನಮಃ || (ದಾನಮಾಡುವ ಮೊದಲು 108 ಬಾರಿ ಜಪಿಸಿರಿ)

ಧರ್ಮಾಯ ಧರ್ಮಪತಯೇ ಧರ್ಮೇಶ್ವರಾಯ ಧರ್ಮಸಂಭವಾಯ ಶ್ರೀಗೋವಿಂದಾಯ ನಮೋ ನಮಃ || (ಪಾರಣೆಮಾಡುವಾಗ 108 ಬಾರಿ ಜಪಿಸಿರಿ)

# ವಿಷಯಾನುಕ್ರಮಣಿಕೆ

# ಮುನ್ನುಡಿ

ಏಕಾದಶಿಗೆ ಎಷ್ಟು ಮಹತ್ವವನ್ನು ಶ್ರೀಮದಾಚಾರ್ಯರು ನೀಡಿದ್ದಾರೋ ಅಷ್ಟೇ ಮಹತ್ವವನ್ನು ಕೃಷ್ಣಾಷ್ಟಮಿಯ ಆಚರಣೆಗೂ ಕೂಡ ನೀಡಿದ್ದಾರೆ. ಪ್ರಯತ್ನಪೂರ್ವಕವಾಗಿ ಅಂದು ಪ್ರತಿಯೊಬ್ಬರೂ ಉಪವಾಸ ಮಾಡಲೇಬೇಕು. ಯಾರು ಉಪವಾಸ ಮಾಡುವುದಿಲ್ಲವೋ ಅವರು ಪಾಪಿಷ್ಠರೆಂದು ಶ್ರೀಮದಾಚಾರ್ಯರೇ ತಿಳಿಸಿದ್ದಾರೆ. ಆದ್ದರಿಂದ ಪ್ರಯತ್ನಪೂರ್ವಕವಾಗಿ ಮೊದಲು ಉಪವಾಸ ಮಾಡಬೇಕು. ಅನಂತರ ಈ ಪುಸ್ತಕದಲ್ಲಿ ನೀಡಿರುವ ವಿಷ್ಣುಸಹಸ್ರನಾಮಾವಳಿಯನ್ನು ಪಾರಾಯಣ ಮಾಡಬೇಕು. ಶಕ್ತಿಯಿದ್ದರೆ ವಿಷ್ಣುಸಹಸ್ರನಾಮಾವಳಿಯನ್ನು ಹೇಳುತ್ತ ತುಳಸೀದಳದಿಂದ ಭಗವಂತನನ್ನು ಅರ್ಚನೆ ಮಾಡಬೇಕು. ಪುನಃ ಮಧ್ಯರಾತ್ರಿಯಲ್ಲಿ ಶ್ರೀಕೃಷ್ಣನು ಅವತರಿಸುವ ಮೊದಲು ಕೃಷ್ಣಾಷ್ಟೋತ್ತರಶತನಾಮಾವಳಿಯನ್ನು ಪಠಿಸುತ್ತಾ ತುಳಸೀದಳಗಳಿಂದ ಅರ್ಚನೆಯನ್ನು ಮಾಡಬೇಕು. ಯಾರು ಕೃಷ್ಣಾಷ್ಟಮಿಯ ದಿವಸ ಬಹಳ ಕಾಲ ಭಗವಂತನ ಪೂಜೆಯಲ್ಲಿಯೇ ಅನುರಕ್ತನಾಗಿರುತ್ತಾನೋ ಅವನು ಅತ್ಯಂತ ಬಲುಬೇಗ ಮೋಕ್ಷವನ್ನು ತಲುಪುತ್ತಾನೆ. ತಾಪತ್ರಯಗಳಿಂದ ವಿಮುಕ್ತನಾಗುತ್ತಾನೆ. ವಿಶೇಷ ಪೂಜೆ ಮಾಡಲು ನಮ್ಮ ಸಂಸ್ಥೆಯಿಂದ ಪ್ರಕಟಣೆಗೊಂಡ ದೇವರ ಪೂಜೆಯ ಪುಸ್ತಕವನ್ನು ನೋಡಬೇಕು.

ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ಶ್ರೀ ಪ್ರಭುನಂದನಮೂರ್ತಿ ಹಾಗೂ ಶ್ರೀಮತಿ ಸುಧಾ ಪ್ರಭುನಂದನ್ ದಂಪತಿಗಳಿಗೆ ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ-ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಇವರ ಮಾತಾ-ಪಿತೃಗಳಿಗೆ ಈ ಜ್ಞಾನಯಜ್ಞದ ಪುಣ್ಯರಾಶಿಯು ತಲುಪಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ.

## ಕೃಷ್ಣಾಷ್ಟಮಿಯ ದಿನ ಆಚರಣೆಗೆ ಬೇಕಾಗುವ ಸಾಮಗ್ರಿಗಳು

* ಮಣ್ಣಿನಲ್ಲಿ ರಚಿಸಿದ ನಂದಗೋಕುಲ.
* ಗರಿಕೆ.
* ಎಲ್ಲ ಬಗೆಯ ಪರಿಮಳ ಹೂವುಗಳು.
* ತುಳಸಿ.
* ಮಂತ್ರಾಕ್ಷತೆ.
* ತೆಂಗಿನಕಾಯಿ.
* ಈ ಪುಸ್ತಕದ ಕೊನೆಯಲ್ಲಿ ನೀಡಿದ ಬಗೆ ಬಗೆಯ ತಿಂಡಿಗಳಿಗೆ ಉಪಯುಕ್ತವಾದ ಸಾಮಗ್ರಿಗಳು.
* ಶಾಸ್ತ್ರೀಯವಾದ ಎಲ್ಲ ಹಣ್ಣುಗಳು.
* ಅರ್ಘ್ಯಪ್ರದಾನಕ್ಕೆ ಬಿಲ್ವಪತ್ರೆ.
* ಅರ್ಘ್ಯಪ್ರದಾನಕ್ಕೆ ಹಾಲು.
* ಸಕಲ ಪೂಜಾ ಪರಿಕರಗಳು.
* ದಾನ ಮಾಡುವ ಪದಾರ್ಥಗಳು ಹಾಗು ದಕ್ಷಿಣೆ.

* * * *

# ಶ್ರೀಕೃಷ್ಣಪೂಜೆ

ಪ್ರತಿನಿತ್ಯ ಮಾಡುವ ದೇವರ ಪೂಜೆಯಲ್ಲಿ ಕೆಳಗಿನ ಮಂತ್ರಗಳನ್ನು ಸೇರಿಸಿಕೊಳ್ಳಬೇಕು.

ಓಂ ಭೂಃ ಶ್ರೀಬಾಲಗೋಪಾಲಕೃಷ್ಣಂ ಆವಾಹಯಾಮಿ ।
ಓಂ ಭುವಃ ಶ್ರೀಬಾಲಗೋಪಾಲಕೃಷ್ಣಂ ಆವಾಹಯಾಮಿ ।
ಓಂ ಸ್ವಃ ಶ್ರೀಬಾಲಗೋಪಾಲಕೃಷ್ಣಂ ಆವಾಹಯಾಮಿ ।
ಓಂ ಭೂರ್ಭುವಸ್ವಃ - ಶ್ರೀಬಾಲಗೋಪಾಲಕೃಷ್ಣಂ ಆವಾಹಯಾಮಿ ।
ಸ್ಥಾಪಯಾಮಿ । ಪೂಜಯಾಮಿ । ನಮಸ್ಕರೋಮಿ । ಆವಾಹಿತೋ ಭವ । ಸ್ಥಾಪಿತೋ ಭವ । ಸನ್ನಿಹಿತೋ ಭವ । ಸನ್ನಿರುದ್ಧೋ ಭವ । ವರದೋ ಭವ । ಪ್ರಸೀದ । ಪ್ರಸೀದ ।

## ಧ್ಯಾನಮ್

ಧ್ಯಾಯೇತ್ ಚತುರ್ಭುಜಂ ಕೃಷ್ಣಂ ಶಂಖಚಕ್ರಗದಾಧರಮ್ ।
ಪೀತಾಂಬರಧರಂ ದೇವಂ ಮಾಲಾಕೌಸ್ತುಭಭೂಷಿತಮ್ ॥

## ಆವಾಹನಮ್

ಆವಾಹಯಾಮಿ ದೇವ ತ್ವಾಂ ವಸುದೇವಕುಲೋದ್ಭವಮ್ ।
ಪ್ರತಿಮಾಯಾಂ ಸುವರ್ಣಾದಿನಿರ್ಮಿತಾಯಾಂ ಯಥಾವಿಧಿ ॥
ಓಂ ಕ್ಲೀಂ ಕೃಷ್ಣಾಯ ನಮಃ ಶ್ರೀಕೃಷ್ಣಮಾವಾಹಯಾಮಿ ।
ಕೃಷ್ಣಂ ಚ ಬಲಭದ್ರಂ ಚ ವಸುದೇವಂ ಚ ದೇವಕಿಮ್ ।
ನಂದಗೋಪಂ ಯಶೋದಾಂ ಚ ಸುಭದ್ರಾಂ ತತ್ರ ಪೂಜಯೇತ್ ॥
ಸಕಲಪರಿವಾರದೇವತಾಭ್ಯೋ ನಮಃ । ತಾಃ ಆವಾಹಯಾಮಿ ।

## ಆಸನಮ್

ದೇವಾ ಬ್ರಹ್ಮಾದಯೋ ಯೇ ಚ ಸ್ವರೂಪಂ ನ ವಿದುಸ್ತವ ।
ಅತಸ್ತ್ವಾಂ ಪೂಜಯಿಷ್ಯಾಮಿ ಮಾತುರುತ್ಸಂಗವಾಸಿನಮ್ ॥

## ಪಾದ್ಯಮ್

ನಾನಾತೀರ್ಥಾಹೃತಂ ಶುದ್ಧಂ ನಿರ್ಮಲಂ ಪುಷ್ಪಮಿಶ್ರಿತಮ್ ।
ಪಾದ್ಯಂ ಗೃಹಾಣ ದೈತ್ಯಾರೇ ವಿಶ್ವರೂಪ ನಮೋಽಸ್ತು ತೇ ॥

## ಅರ್ಘ್ಯಮ್

ಗಂಧಪುಷ್ಪಾಕ್ಷತೋಪೇತಂ ಫಲೇನ ಚ ಸಮನ್ವಿತಮ್ ।
ಅರ್ಘ್ಯಂ ಗೃಹಾಣ ದೇವೇಶ ಮಯಾ ದತ್ತಂ ಹಿ ಭಕ್ತಿತಃ ॥

## ಆಚಮನಮ್

ಶ್ರೀವತ್ಸಾಂಕ ಜಗದ್ರೂಪ ಶ್ರೀವತ್ಸ ಶ್ರೀನಿಕೇತನ ।
ಉಪೇಂದ್ರ ದೇವಕೀಪುತ್ರ ಗೃಹಾಣಾಚಮನೀಯಕಮ್ ॥

## ಮಧುಪರ್ಕಮ್

ಮಧುಕ್ಷೀರಘೃತಂ ಚೈವ ದಧಿಖಂಡವಿಮಿಶ್ರಿತಮ್ ।
ತೃಪ್ತ್ಯರ್ಥಂ ತವ ದೇವೇಶ ಮಧುಪರ್ಕಂ ದದಾಮ್ಯಹಮ್ ॥

## ಶುದ್ಧೋದಕಸ್ನಾನಮ್

ನಾರಾಯಣ ನಮಸ್ತೇಽಸ್ತು ನರಕಾರ್ಣವತಾರಕ ।
ಶುದ್ಧೋದಕಂ ಸಮಾನೀತಂ ಸ್ನಾನಾರ್ಥಂ ಪ್ರತಿಗೃಹ್ಯತಾಮ್ ॥

ಯೋಗೇಶ್ವರಾಯ ಯೋಗಾಯ ಯೋಗಿನಾಂ ಪತಯೇ ನಮಃ ।
ಯೋಗೋದ್ಭವಾಯ ನಿತ್ಯಾಯ ಗೋವಿಂದಾಯ ನಮೋ ನಮಃ ॥

## ವಸ್ತ್ರಮ್

ಕ್ಷೌಮಂ ಚ ಪಟ್ಟಸೂತ್ರಾಢ್ಯಮಿದಂ ಪೀತಾಂಶುಕಂ ಶುಭಮ್ ।
ಗೃಹ್ಯತಾಂ ದೇವದೇವೇಶ ಮಯಾ ದತ್ತಂ ಸುರೋತ್ತಮ ॥

ಕೆಲ ಪಾಖಂಡಿಗಳೊಂದಿಗೆ ಬಹುದಿನಗಳವರೆಗೆ ವಾಸ ಮಾಡುವ ಪ್ರಸಂಗವು ಒದಗಿತು. ಪಾಖಂಡಿಗಳ ಸಹವಾಸದಿಂದ ರಾಜನು ಅಧರ್ಮ ಕಾರ್ಯಗಳಲ್ಲಿ ರತನಾದನು.

ವೇದಶಾಸ್ತ್ರ ಪುರಾಣಾನಿ ನಿನಿಂದ ಬಹಶೋ ನೃಪಃ ।
ವರ್ಣಾಶ್ರಮಗತೇ ಧರ್ಮೇ ವಿದ್ವೇಷಂ ಪರಮಂ ಗತಃ ॥೧೫॥

ವೇದಶಾಸ್ತ್ರ ಪುರಾಣಾದಿಗಳನ್ನು ಬಹುವಾಗಿ ನಿಂದಿಸತೊಡಗಿದನು. ವರ್ಣಾಶ್ರಮ ಧರ್ಮಗಳನ್ನು ಬಹುದ್ವೇಷಿಸತೊಡಗಿದನು.

ಏವಂ ಬಹುತಿಥೇ ಕಾಲೇ ಪ್ರಯತೇ ಮುನಿಸತ್ತಮ ।
ಕಾಲೇನ ನಿಧನಂ ಪ್ರಾಪ್ತೋ ಯಮದೂತವಶಂ ಗತಃ ॥೧೬॥

ಹೇ ಕುಮಾರಾ, ಈ ರೀತಿ ಬಹುಕಾಲವು ಗತಿಸಲು ರಾಜನು ಕಾಲವಶನಾಗಿ ಮೃತನಾದನು. ಅವನನ್ನು ಯಮದೂತರು;

ಬಧ್ವಾ ಪಾಶೈರ್ನೀಯಮಾನೋ ಯಮದೂತೈರ್ಯಮೋಽಂತಿಕಂ ।
ಪೀಡಿತಸ್ತಾಡ್ಯಮಾನೋಽಸೌ ದುಷ್ಟಸಂಗತಿಯೋಗತಃ ॥೧೭॥

ಪಾಶಗಳಿಂದ ಕಟ್ಟಿ ಯಮಧರ್ಮನಿದ್ದಲ್ಲಿ ಸೆಳೆದೊಯ್ದರು. ದುಷ್ಟರ ಸಹವಾಸ ಮಾಡಿದ್ದರಿಂದ ಯಮದೂತರು ಅವನನ್ನು ಚೆನ್ನಾಗಿ ಥಳಿಸಿ ಪೀಡಿಸಿದರು.

ನರಕೇ ಪಾತಿತಃ ಪ್ರಾಪ ಯಾತನಾಂ ಬಹುವತ್ಸರಂ ।
ಭುಕ್ತ್ವಾ ಪಾದಸ್ಯ ಶೇಷೇಣ ಪೈಶಾಚೀಂ ಯೋನಿಮಾಸ್ಥಿತಃ ॥೧೮॥

ನರಕದಲ್ಲಿ ಒಗೆಯಲ್ಪಟ್ಟ ಅವನು ಬಹುವರ್ಷಗಳವರೆಗೆ ನರಕಯಾತನೆಯನ್ನು ಅನುಭೋಗಿಸಿದನು. ನಂತರ ಪಾಪಶೇಷದಿಂದ ಪಿಶಾಚಿಯೋನಿಯಲ್ಲಿ ಹುಟ್ಟಿದನು.

ಕ್ಷುಧಾತೃಷ್ಣಾ ಸಮಾಕ್ರಾಂತೇ ಭ್ರಮನ್ಸ ಮರುಧನ್ವಸು ।
ಕಸ್ಯಚಿತ್ತಥ ವೈಶ್ಯಸ್ಯ ದೇಹಮಾವಿಶ್ಯ ಸಂಸ್ಥಿತಃ ॥೧೯॥

ಹಸಿವೆ-ನೀರಡಿಕೆಗಳಿಂದ ಬಳಲಿ ಮರುಭೂಮಿಯಲ್ಲಿ ತಿರುಗುತ್ತಿರಲು ಒಬ್ಬ ವೈಶ್ಯನ ದೇಹವನ್ನು ಪ್ರವೇಶಿಸಿದನು.

ಸಹ ತೇನೈವ ಸಂಯಾತೋ ಮಥುರಾಂ ಪುಣ್ಯದಾಂ ಪುರೀಂ ।
ಸಮೀಪೇ ರಕ್ಷಕೈಸ್ತಸ್ಯ ತಸ್ಮಾದ್ದೇಹಾದ್ಬಹಿಷ್ಕೃತಃ ॥೨೦॥

ಆ ವೈಶ್ಯನೊಂದಿಗೆ ಪುಣ್ಯಪ್ರದವಾದ ಮಥುರಾ ಪಟ್ಟಣಕ್ಕೆ ಬಂದನು. ಮಥುರಾ ಪುರಿಯ ಹತ್ತಿರವಿರುವಾಗ ಮಥುರೆಯ ರಕ್ಷಕರಿಂದ ಪಿಶಾಚಿಯಾಗಿದ್ದ ರಾಜನು ಹೊಡೆದೋಡಿಸಲ್ಪಡಲು;

ಬಭ್ರಾಮ ವಿಪಿನೇ ಸೋऽಥ ಋಷೀಣಾಮಾಶ್ರಮೇಷು ಚ ।
ಕದಾಚಿದ್ದೈವಯೋಗೇನ ಹರೇರ್ಜನ್ಮಾಷ್ಟಮೀದಿನೇ ॥೨೧॥

ಅವನು ಅಲ್ಲಿಯೇ ಋಷಿಗಳ ಆಶ್ರಮಗಳಲ್ಲಿ ಅರಣ್ಯದಲ್ಲಿ ಸಂಚರಿಸತೊಡಗಿದನು. ಒಮ್ಮೆ ದೈವಯೋಗದಿಂದ ಶ್ರೀಕೃಷ್ಣಜನ್ಮಾಷ್ಟಮಿಯ ದಿನ;

ಕ್ರಿಯಮಾಣಾಂ ಮಹಾಪೂಜಾಂ ವ್ರತಿಭಿರ್ಮುನಿಭಿರ್ದ್ವಿಜೈಃ ।
ರಾತ್ರೌ ಜಾಗರಣಂ ಚೈವ ನಾಮಸಂಕೀರ್ತನಾದಿಭಿಃ ॥೨೨॥

ವ್ರತಿಗಳು, ಮುನಿಗಳು ದ್ವಿಜರು ಮಾಡುತ್ತಿರುವ ಶ್ರೀಕೃಷ್ಣ ಪೂಜೆಯನ್ನು ರಾತ್ರಿ ನಾಮಸಂಕೀರ್ತನಾದಿಗಳಿಂದ ಮಾಡಿದ ಜಾಗರಣೆಯನ್ನು;

ದದರ್ಶ ಸರ್ವಂ ವಿಧಿವತ್ ಶುಶ್ರಾವಾಥ ಹರೇಃ ಕಥಾಂ ।
ನಿಷ್ಪಾಪಸ್ತತ್ಕ್ಷಣಾದೇವ ಶುದ್ಧೋ ನಿರ್ಮಲಮಾನಸಃ ॥೨೩॥

ಕಂಡನು. ಶ್ರೀಹರಿಯ ಕಥೆಯನ್ನು, ಶ್ರವಣ ಮಾಡಿದನು. ಇದರಿಂದ ತಕ್ಷಣದಲ್ಲೇ ಪಾಪಮುಕ್ತನಾಗಿ ಶುದ್ಧನಾದನು, ಮನಸ್ಸು ನಿರ್ಮಲವಾಯಿತು.

ಪ್ರೇತದೇಹಂ ಸಮುತ್ಸೃಜ್ಯ ವಿಷ್ಣುಲೋಕೇ ವಿಮಾನಗಃ ।
ಯಮದೂತೈಃ ಪರಿತ್ಯಕ್ತೋ ದಿವ್ಯಭೋಗಸಮನ್ವಿತಃ ॥೨೪॥

ಪ್ರೇತ ದೇಹವನ್ನು ತ್ಯಜಿಸಿ ದಿವ್ಯ ವಿಮಾನದಲ್ಲಿ ಕುಳಿತು ವಿಷ್ಣುಲೋಕಕ್ಕೆ ಹೊರಡಲು ಉದ್ಯುಕ್ತನಾದನು. ಯಮದೂತರು ಅವನ ಗೊಡವೆಯನ್ನು ಬಿಟ್ಟುಕೊಟ್ಟರು. ಮುಂದೆ ಅವನು ದಿವ್ಯಭೋಗಗಳಿಂದ ವಿಮುಕ್ತನಾಗಿ;

ವಿಷ್ಣುಸಾನ್ನಿಧ್ಯಮಾಪನ್ನೋ ವ್ರತಸ್ಯಾಸ್ಯ ಪ್ರಭಾವತಃ ।
ನಿತ್ಯಮೇತದ್ವ್ರತಂ ಚೈವ ಪುರಾಣೇ ಸಾರ್ವಲೌಕಿಕಂ ॥೨೫॥

ಈ ಕೃಷ್ಣಜನ್ಮಾಷ್ಟಮೀ ವ್ರತದ ಪ್ರಭಾವದಿಂದ ವಿಷ್ಣುವಿನ ಸನ್ನಿಧಿಯನ್ನು ಹೊಂದಿದನು. ನಿತ್ಯವಾಗಿರುವ ಈ ಸತ್ಯಕಥೆಯು ಪುರಾಣದಲ್ಲಿ ಸರ್ವತ್ರ ಪ್ರಸಿದ್ಧವಾಗಿದೆ.

ಕಥ್ಯತೇ ವಿಧಿವತ್ಸಮ್ಯಕ್ ಮುನಿಭಿಸ್ತತ್ವದರ್ಶಿಭಿಃ ।
ಸಾರ್ವಕಾಮಿಕಮೇವೈತತ್‌ಕೃತ್ವಾ ಕಾಮಾನವಾಪ್ನುಯಾತ್ ॥೨೬॥

ತತ್ವದರ್ಶಿಗಳಾದ ಜ್ಞಾನಿಗಳು ಈ ಕಥೆಯನ್ನು ಸದಾಕಾಲ ಹೇಳುತ್ತಿರುತ್ತಾರೆ. ಸಕಲ ಕಾಮುಗಳನ್ನು ಕೊಡುವಂಥ ಈ ವ್ರತವನ್ನು ಆಚರಿಸಿ ಮನುಷ್ಯನು ತನ್ನ ಮನೋರಥಗಳನ್ನು ಪಡೆಯುವನು.

ಏವಂ ಯಃ ಕುರುತೇ ಕೃಷ್ಣಜನ್ಮಾಷ್ಟಮ್ಯಾಂ ವ್ರತಂ ಶುಭಂ ।
ಭುಕ್ತ್ವೇಹ ವಿವಿಧಾನ್ ಭೋಗಾನ್ಶುಭಾನ್ಕಾಮಾನವಾಪ್ನುಯಾತ್ ॥೨೭॥

ಈ ಪ್ರಕಾರ ಕೃಷ್ಣಾಷ್ಟಮಿಯ ದಿನ ಯಾವನು ಈ ಶುಭ ವ್ರತವನ್ನು ಆಚರಿಸುವನೋ ಅವನು ಇಹದಲ್ಲಿ ವಿವಿಧ ಭೋಗಗಳನ್ನು ಹೊಂದಿ ಶುಭ ಕಾಮಗಳನ್ನು ಹೊಂದುವನು.

ತತ್ರ ದೇವವಿಮಾನೇನ ವರ್ಷಲಕ್ಷ್ಯಂ ವಿಧೇಃ ಸುತಃ ।
ಭೋಗಾನ್ನಾನಾವಿಧಾನ್ ಭುಕ್ತ್ವಾ ಪುಣ್ಯಶೇಷಾದಿಹಾಗತಃ ॥೨೮॥

ಹೇ ಕುಮಾರಾ, ನಂತರ ಅವನು ದೇವ ವಿಮಾನದಲ್ಲಿ ಕುಳಿತು ಸ್ವರ್ಗಲೋಕಕ್ಕೆ ಹೋಗುವನು. ಅಲ್ಲಿ ಒಂದು ಲಕ್ಷ ವರ್ಷಗಳವರೆಗೆ ವಿವಿಧ ದಿವ್ಯಭೋಗಗಳನ್ನುಂಡು ಪುಣ್ಯಶೇಷದಿಂದ ಭೂಲೋಕಕ್ಕೆ ಬರುವನು.

ಸರ್ವಕಾಮಸಮೃದ್ಧಸ್ತು ಸರ್ವಾಶುಭವಿವರ್ಜಿತಃ ।
ಕುಲೇ ನೃಪತಿವರ್ಯಾಣಾಂ ಜಾಯತೇ ಮದನೋಪಮಃ ॥೨೯॥

ಇಲ್ಲಿ ಸರ್ವಕಾಮುಗಳಿಂದ ಸಮೃದ್ಧನಾಗಿ ಯಾವ ಅಶುಭಗಳು ಇಲ್ಲದೇ ಶ್ರೇಷ್ಠರಾಜರ ವಂಶದಲ್ಲಿ ಜನಿಸುವನು. ಕಾಮನಂತೆ ಸುಂದರವಾದ ರೂಪವುಳ್ಳವನಾಗುವನು.

ಯಸ್ಮಿನ್ನದೈವ ವಿಷಯೇ ಲಿಖಿತಂ ಸ್ಯಾತ್ಪರಾರ್ಪಿತಂ ।
ಕೃಷ್ಣಜನ್ಮೋಪಕರಣಂ ಸರ್ವಶೋಭಾಸಮನ್ವಿತಂ ॥೩೦॥

ಯಾವನ ರಾಜ್ಯದಲ್ಲಿ ಸದಾ ಶುಭಕರವಾದ ಕೃಷ್ಣಾಷ್ಟಮೀ ವ್ರತದ ಬಗ್ಗೆ ಲೇಖನವಿರುವುದೋ, ಮತ್ತು ಬರೆದ ಲೇಖನವನ್ನು ಆಸ್ತಿಕರಿಗೆ ತಿಳಿಯಲೆಂದು ಕೊಡಲಾಗುವುದೋ;

ಪೂಜ್ಯತೇ ವಿಶ್ವಸೃಟ್ ತತ್ರ ವ್ರತೈರುತ್ಸವಸಂಯುತೈಃ ।
ಪರಚಕ್ರಭಯಂ ತತ್ರ ನ ಕದಾಚಿದ್ಭವಿಷ್ಯತಿ ॥೩೧॥

ಅಂಥವನ ರಾಜ್ಯದಲ್ಲಿ ವಿಶ್ವಸೃಷ್ಟಿಕರ್ತನು ಸದಾ ವ್ರತಗಳಿಂದಲೂ, ಉತ್ಸವಗಳಿಂದಲೂ ಪೂಜಿಸಲ್ಪಡುವನು. ಅವನಿಗೆ ಎಂದಿಗೂ ಪರರಿಂದ ಭಯವೆಂಬುದೇ ಇರಲಾರದು.

ಪರ್ಜನ್ಯಃ ಕಾಮವರ್ಷೀ ಸ್ಯಾದೀತಿಭ್ಯೋ ನ ಭಯಂ ಕ್ವಚಿತ್ ।
ಗೃಹೇ ವಾ ಪೂಜಯೇದ್ಯಸ್ತು ಚರಿತಂ ದೇವಕೀಜನಃ ॥೩೨॥

ಆ ದೇಶದಲ್ಲಿ ಮಳೆಯು ಸದಾಕಾಲ ಆಗುವುದು ಮತ್ತು ಭಯವಿರಲಾರದು. ಯಾವನ ಮನೆಯಲ್ಲಿ ಶ್ರೀಕೃಷ್ಣನನ್ನು ಪೂಜಿಸಲಾಗುವುದೋ;

ತತ್ರ ಸರ್ವಸಮೃದ್ಧಂ ಸ್ಯಾನ್ನೋಪಸರ್ಗಾದ್ಭಯಂ ಭವೇತ್ ।
ಸಂಸರ್ಗೇಣಾಪಿ ಯೋ ಭಕ್ತ್ಯಾ ವ್ರತಂ ಪಶ್ಯೇದನಾ ಕುಲಃ ।
ಸೋಽಪಿ ಪಾಪವಿನಿರ್ಮುಕ್ತಃ ಪ್ರಯಾತಿ ಹರಿಮಂದಿರಂ ॥೩೩॥

ಅಲ್ಲಿ ಸರ್ವಸಮೃದ್ಧಿಯಾಗಿರುವುದು ಮತ್ತು ಅಲ್ಲಿ ಭೂತ-ಪ್ರೇತಗಳ ಭಯವು ಇರಲಾರದು. ಸತ್ಸಂಗದಿಂದಲಾದರೂ ಯಾವುನಾದರೂ ಈ ವ್ರತವನ್ನು ನೋಡಿದರೆ ಅವನು ಪಾಪಮುಕ್ತನಾಗಿ ಹರಿಮಂದಿರಕ್ಕೆ ಹೋಗುವನು.

॥ ಇತಿ ಶ್ರೀಸ್ಕಾಂದಪುರಾಣೇ ಶ್ರಾವಣಮಾಹಾತ್ಮ್ಯೇ ಈಶ್ವರ-ಸನತ್ಕುಮಾರ ಸಂವಾದೇ ಕೃಷ್ಣಜನ್ಮಾಷ್ಟಮೀವ್ರತಕಥನಮ್' ॥

* * * * *

## ಜಯಂತೀಕಲ್ಪ

ರೋಹಿಣ್ಯಾಮರ್ಧರಾತ್ರೇ ತು ಯದಾ ಕಾಳಾಷ್ಟಮೀ ಭವೇತ್ ।
ಜಯಂತೀ ನಾಮ ಸಾ ಪ್ರೋಕ್ತಾ ಸರ್ವಪಾಪಪ್ರಣಾಶನಮ್ ।
ಯಸ್ಯಾಂ ಜಾತೋ ಹರಿಃ ಸಾಕ್ಷಾನ್ನಿಶೀಥೇ ಭಗವಾನಜಃ ॥1॥

ಕೃಷ್ಣಪಕ್ಷದ ಅಷ್ಟಮಿ ತಿಥಿಯ ಅರ್ಧರಾತ್ರಿಯಲ್ಲಿ ರೋಹಿಣೀ ನಕ್ಷತ್ರವಿದ್ದರೆ ಅದನ್ನು ಜಯಂತಿಯೆಂದು ಕರೆಯುತ್ತಾರೆ. ಇದು ಎಲ್ಲ ಪಾಪಗಳನ್ನು ಪರಿಹರಿಸುತ್ತದೆ. ಯಾವ ಈ ತಿಥಿಯ ಅರ್ಧರಾತ್ರಿಯಲ್ಲಿ ಸಾಕ್ಷಾತ್ ಭಗವಂತನು ಅವತಾರ ಮಾಡಿದನೋ ಆದ್ದರಿಂದ ಇದು ಅತ್ಯಂತ ಶ್ರೇಷ್ಠವಾಗಿದೆ.

ತಸ್ಮಾತ್ ತದ್ದಿನಮತ್ಯರ್ಥಂ ಪುಣ್ಯಂ ಪಾಪಹರಂ ಪರಮ್ ।
ತಸ್ಮಾತ್ ಸರ್ವೈರುಪೋಷ್ಯಾ ಸಾ ಜಯಂತೀ ನಾಮ ವೈ ಸದಾ ।
ದ್ವಿಜಾತಿಭಿರ್ವಿಶೇಷೇಣ ತದ್ಭಕ್ತೈಶ್ಚ ವಿಧಾನತಃ ॥2॥

ಆದ್ದರಿಂದ ಜಯಂತಿ ಇರುವ ದಿನವು ಅತ್ಯಂತ ಪವಿತ್ರವಾಗಿದೆ. ಪಾಪಗಳನ್ನು ಪರಿಹರಿಸುವ ಪುಣ್ಯದಿನವಾಗಿದೆ. ಆದ್ದರಿಂದ ಶ್ರೀಕೃಷ್ಣಜಯಂತಿಯೆಂದು ಹೆಸರು ಪಡೆದ ಈ ದಿವಸದಲ್ಲಿ ಪ್ರತಿಯೊಬ್ಬರೂ ಕೂಡ ತಪ್ಪದೇ ಉಪವಾಸವನ್ನು ಮಾಡಬೇಕು. ಅದರಲ್ಲಿಯೂ ವಿಶೇಷವಾಗಿ ವೇದವನ್ನು ತಿಳಿದವರೂ, ಹರಿಭಕ್ತರೂ ವಿಧಿಪ್ರಕಾರವಾಗಿ ಉಪವಾಸವಿರಬೇಕು.

ಯೋ ಭುಂಕ್ತೇ ತದ್ದಿನೇ ಲೋಭಾತ್ ಪೂಯಶೋಣಿತಮತ್ತಿ ಸಃ ।
ತಸ್ಮಾದುಪವಸೇತ್ ಪುಣ್ಯಂ ತದ್ದಿನಂ ಶ್ರದ್ಧಯಾಽನ್ವಿತಃ ॥3॥

ಯಾರು ಆಸೆಯಿಂದ ಲೋಭದಿಂದ ಶ್ರೀಕೃಷ್ಣಜಯಂತಿಯಂದು ತಿನ್ನುತ್ತಾರೋ ಅವರು ಕೀವು ರಕ್ತಗಳನ್ನು ಪಾನಮಾಡಿದವರಾಗುತ್ತಾರೆ. ಆದ್ದರಿಂದ ಶ್ರದ್ಧೆಯಿಂದ ಕೂಡಿ ಅಂದು ಉಪವಾಸವಿರಬೇಕು.

ಕೃತ್ವಾ ಶೌಚಂ ಯಥಾನ್ಯಾಯಂ ಸ್ನಾನಂ ಕುರ್ಯಾದತಂದ್ರಿತಃ ।
ಪ್ರಭಾತಕಾಲೇ ಮೇಧಾವೀ ಯೋಗಾಯೇತಿ ಯಥಾವಿಧಿ ॥4॥

ಬೆಳಿಗ್ಗೆ ಎದ್ದು ಶೌಚಾಚಾರವನ್ನು ಮುಗಿಸಿ ಆಲಸ್ಯವನ್ನು ಪರಿತ್ಯಾಗ ಮಾಡಿ ಸ್ನಾನ ಮಾಡಬೇಕು. ಆ ಸಂದರ್ಭದಲ್ಲಿ ಈ ಮಂತ್ರವನ್ನು ಹೇಳಬೇಕು. -

ಯೋಗಾಯ ಯೋಗಪತಯೇ ಯೋಗೇಶ್ವರಾಯ ಯೋಗಸಂಭವಾಯ
ಶ್ರೀಗೋವಿಂದಾಯ ನಮೋ ನಮಃ ॥

ನಿತ್ಯಾಹ್ನಿಕಂ ಪ್ರಕುರ್ವೀತ ಭಗವಂತಮನುಸ್ಮರನ್ ।
ಮಧ್ಯಾಹ್ನಕಾಲೇ ಚ ಪುನಃ ಸಾಯಂಕಾಲೇ ತ್ವತಂದ್ರಿತಃ ।
ಸ್ನಾಯೀತ ಪೂರ್ವಮಂತ್ರೇಣ ವಾಸುದೇವಮನುಸ್ಮರನ್ ॥5॥

ಸ್ನಾನ ಮುಗಿಸಿ ನಿತ್ಯಾಹ್ನಿಕವನ್ನು ಪೂರೈಸಬೇಕು. ಭಗವಂತನನ್ನು ಹೃದಯದಲ್ಲಿ ನಿರಂತರ ಸ್ಮರಣೆ ಮಾಡುತ್ತಿರಬೇಕು. ಮಧ್ಯಾಹ್ನದಲ್ಲಿಯೂ ಕೂಡ ಹೀಗೆಯೇ ಮಾಡಬೇಕು. ಸಾಯಂಕಾಲದಲ್ಲಿ ಆಲಸ್ಯ ಬಿಟ್ಟು ಇಂದ್ರಿಯ ನಿಗ್ರಹವನ್ನು ಪಡೆದು ಪುನಃ 'ಯೋಗಾಯ' ಎಂಬ ಮಂತ್ರವನ್ನು ಹೇಳುತ್ತಾ ಶ್ರೀಕೃಷ್ಣನನ್ನು ಹೃದಯದಲ್ಲಿ ಧ್ಯಾನಮಾಡುತ್ತಾ ಸ್ನಾನ ಮಾಡಬೇಕು.

ತತಃ ಪೂಜಾಂ ಪ್ರಕುರ್ವೀತ ವಿಧಿವತ್ ಸುಸಮಾಹಿತಃ ।
ಯಜ್ಞಾಯೇತಿ ಚ ಮಂತ್ರೇಣ ಶ್ರದ್ಧಾಭಕ್ತಿಯುತಃ ಪುಮಾನ್ ॥6॥

ಅನಂತರ ಶ್ರೀಕೃಷ್ಣನ ಪೂಜೆಯನ್ನು ವಿಧಿಪ್ರಕಾರವಾಗಿ ಮಾಡಬೇಕು. ಇಂದ್ರಿಯ ನಿಗ್ರಹವನ್ನು ಹೊಂದಿರಬೇಕು. ಶ್ರದ್ಧಾಭಕ್ತಿಯುತನಾಗಿ ಇರಬೇಕು. ಈ ಮಂತ್ರವನ್ನು ಹೇಳುತ್ತಾ ಪೂಜಿಸಬೇಕು.-

ಯಜ್ಞಾಯ ಯಜ್ಞಪತಯೇ ಯಜ್ಞೇಶ್ವರಾಯ ಯಜ್ಞಸಂಭವಾಯ
ಶ್ರೀಗೋವಿಂದಾಯ ನಮೋ ನಮಃ ॥

ಕೃಷ್ಣಂ ಚ ಬಲಭದ್ರಂ ಚ ವಸುದೇವಂ ಚ ದೇವಕೀಮ್ ।
ನಂದಗೋಪಂ ಯಶೋದಾಂ ಚ ಸುಭದ್ರಾಂ ತತ್ರ ಪೂಜಯೇತ್ ।
ಅರ್ಘ್ಯಂ ದತ್ವಾ ಸಮಭ್ಯರ್ಚ್ಯಾಭ್ಯುದಿತೇ ಶಶಿಮಂಡಲೇ ॥7॥

ಪೂಜಾಸಂದರ್ಭದಲ್ಲಿ ಕೃಷ್ಣನನ್ನು, ಬಲಭದ್ರನನ್ನು, ವಸುದೇವನನ್ನು, ದೇವಕಿಯನ್ನು, ನಂದಗೋಪನನ್ನು, ಯಶೋದೆಯನ್ನು, ಸುಭದ್ರೆಯನ್ನು ಪೂಜಿಸಬೇಕು. ಅರ್ಘ್ಯವನ್ನು ನೀಡಿ ಪುನಃ ಪೂಜಿಸಬೇಕು. ಚಂದ್ರೋದಯವಾದಾಗ ಮುಂದಿನ ಅರ್ಘ್ಯವನ್ನು ನೀಡಬೇಕು.

ಕ್ಷೀರೋದಾರ್ಣವಸಂಭೂತ ಅತ್ರಿನೇತ್ರಸಮುದ್ಭವ ।
ಗೃಹಾಣಾರ್ಘ್ಯಂ ಶಶಾಂಕೇದಂ ರೋಹಿಣ್ಯಾ ಸಹಿತೋ ಮಮ ॥8॥

ಕ್ಷೀರಸಮುದ್ರದಿಂದ ಉದಿಸಿಬಂದ ಅತ್ರಿಋಷಿಗಳ ಕಣ್ಣಿನಿಂದ ಹುಟ್ಟಿಬಂದ ಮೊಲದ ಚಿಹ್ನೆಯನ್ನು ಹೊತ್ತು ನಿಂತ ರೋಹಿಣಿ ಎಂಬ ಹೆಂಡತಿಯಿಂದ ಸಹಿತನಾದ ಓ ಚಂದ್ರನೇ ನನ್ನ ಈ ಅರ್ಘ್ಯವನ್ನು ಸ್ವೀಕರಿಸು.

ದತ್ವಾಽರ್ಘ್ಯಂ ಮನುನಾಽನೇನ ಉಪಸ್ಥಾಯ ವಿಧುಂ ಬುಧಃ ।
ಶಶಿನೇ ಚಂದ್ರದೇವಾಯ ಸೋಮದೇವಾಯ ಚೇಂದವೇ ॥9॥

ಅರ್ಘ್ಯವನ್ನು ಮೇಲಿನ ಮಂತ್ರದಿಂದ ನೀಡಿ ನಿಂತು ಮುಂದೆ ಹೇಳುವ ಮಂತ್ರದಿಂದ ಚಂದ್ರನನ್ನು ಸ್ತುತಿಸಬೇಕು. ಮೊಲದ ಚಿಹ್ನೆಯನ್ನು ಹೊತ್ತ ಸೋಮದೇವನಾದ ಇಂದು ಎನಿಸಿದ ಚಂದ್ರದೇವನಿಗೆ ನಮಿಸುವೆ.

ಮೃಗಿಣೇ ಸಿತಬಿಂಬಾಯ ಲೋಕದೀಪಾಯ ದೀಪಿನೇ ।
ಶೀತದೀಧಿತಿಬಿಂಬಾಯ ತಾರಾಕಾಪತಯೇ ನಮಃ ॥10॥

ಜಿಂಕೆಯ ಕಲೆಯನ್ನು ಹೊಂದಿದ ಶ್ವೇತವರ್ಣದಿಂದ ಕಂಗೊಳಿಸುವ ಜಗತ್ತಿಗೆ ಬೆಳಕನ್ನು ನೀಡುವ ತಂಪು ಕಿರಣಗಳನ್ನು ಸೂಸುವ ಬಿಂಬವನ್ನು ಹೊತ್ತ ನಕ್ಷತ್ರಗಳಿಗೆ ವಲ್ಲಭನಾದ ಚಂದ್ರನಿಗೆ ನಮಿಸುವೆ.

ಉಪಸಂಹೃತ್ಯ ತತ್ ಸರ್ವಂ ಬ್ರಹ್ಮಚಾರೀ ಜಿತೇಂದ್ರಿಯಃ ।
ವಿಶ್ವಾಯೇತಿ ಚ ಮಂತ್ರೇಣ ತತಃ ಸ್ವಾಪಂ ಸಮಾಚರೇತ್ ॥11॥

ಹೀಗೆ ಕೃಷ್ಣನಿಗೆ ಮತ್ತು ಚಂದ್ರನಿಗೆ ಅರ್ಘ್ಯವನ್ನು ನೀಡಿ ಬ್ರಹ್ಮಚಾರಿಯಾಗಿ ಇಂದ್ರಿಯಗಳನ್ನು ಗೆದ್ದು ಮಲಗಬಹುದು ಆಗ ವಿಶ್ವಾಯ ವಿಶ್ವಪತಯೇ ವಿಶ್ವೇಶ್ವರಾಯ ವಿಶ್ವಸಂಭವಾಯ ಶ್ರೀಗೋವಿಂದಾಯ ನಮೋ ನಮಃ ಎಂಬ ಮಂತ್ರವನ್ನು ಯಥಾಶಕ್ತಿ ಪಠಿಸಬೇಕು.

ತತೋ ನಿತ್ಯಾಹ್ನಿಕಂ ಕೃತ್ವಾ ಶಕ್ತಿತೋ ದೀಯತಾಂ ಧನಮ್ ।
ಸರ್ವಾಯೇತಿ ಚ ಮಂತ್ರೇಣ ತತಃ ಪಾರಣಮಾಚರೇತ್ ।
ಧರ್ಮಾಯೇತಿ ತತಃ ಸ್ವಸ್ಥೋ ಮುಚ್ಯತೇ ಸರ್ವಕಿಲ್ಬಿಷೈಃ ॥12॥

ಪುನಃ ಮರುದಿವಸ ನಿತ್ಯಾಹ್ನಿಕವನ್ನು ಮಾಡಿ ಸರ್ವಾಯ ಸರ್ವಪತಯೇ ಸರ್ವೇಶ್ವರಾಯ ಸರ್ವಸಂಭವಾಯ ಶ್ರೀಗೋವಿಂದಾಯ ನಮೋ ನಮಃ ಎಂಬ ಮಂತ್ರವನ್ನು ಹೇಳುತ್ತಾ ಬ್ರಾಹ್ಮಣರಿಗೆ ಯಥಾಶಕ್ತಿ ದಾನವನ್ನು ಮಾಡಬೇಕು. ಅನಂತರ ಧರ್ಮಾಯ ಧರ್ಮಪತಯೇ ಧರ್ಮೇಶ್ವರಾಯ ಧರ್ಮಸಂಭವಾಯ ಶ್ರೀಗೋವಿಂದಾಯ ನಮೋ ನಮಃ ಎಂಬ ಮಂತ್ರವನ್ನು ಹೇಳುತ್ತಾ ಪಾರಣೆಯನ್ನು ಮಾಡಬೇಕು. ಹೀಗೆ ಯಾರು ಭಗವಂತನಲ್ಲೇ ಮನಸ್ಸನ್ನಿಟ್ಟು ಶ್ರೀಕೃಷ್ಣಜಯಂತಿಯ ಆಚರಣೆಯನ್ನು ಮಾಡುತ್ತಾನೋ ಅವನು ಎಲ್ಲ ಪಾಪಗಳಿಂದ ಬಿಡುಗಡೆಗೊಳ್ಳುತ್ತಾನೆ.

ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ರಚಿಸಿದ ಶ್ರೀಜಯಂತೀಕಲ್ಪ ಎಂಬ ಗ್ರಂಥವು ಪರಿಸಮಾಪ್ತವಾಯಿತು

॥ ಶ್ರೀಕೃಷ್ಣಾರ್ಪಣಮಸ್ತು ॥

# ಕೃಷ್ಣ ಚಾರಿತ್ರ್ಯಮಂಜರಿ

ವಿಷ್ಣುರ್ಬ್ರಹ್ಮಾದಿದೇವೈಃ ಕ್ಷಿತಿಭರಹರಣೇ ಪ್ರಾರ್ಥಿತಃ ಪ್ರಾದುರಾಸೀದ್
ದೇವಕ್ಯಾಂ ನಂದನಂದೀ ಶಿಶುವಧವಿಹಿತಾಂ ಪೂತನಾಂ ಯೋ ಜಘಾನ ।
ಉತ್ಥಾನೌತ್ಸುಕ್ಯಕಾಲೇ ರಥಚರಣಗತಂ ಚಾಸುರಂ ಪಾದಘಾತೈ
ಶ್ಚಕ್ರಾವರ್ತಂ ಚ ಮಾತ್ರಾ ಗುರುರಿತಿ ನಿಹಿತೋ ಭೂತಲೇ ಸೋಽವತಾನ್ಮಾಂ ॥೧॥

ಯೋ ಮಾತುರ್ಜೃಂಭಮಾಣೋ ಜಗದಿದಮಖಿಲಂ ದರ್ಶಯನ್ನಂಕರೂಢೋ
ಗರ್ಗೇಣಾಚೀರ್ಣನಾಮಾ ಕೃತರುಚಿರಮಹಾಬಾಲಲೀಲೋ ವಯಸ್ಯೈಃ ।
ಗೋಪೀಗೇಹೇಷು ಭಾಂಡ ಸ್ಥಿತಮುರುದಯಯಾ ಕ್ಷೀರದಧ್ಯಾದಿ ಮುಷ್ಣನ್
ಮೃನ್ನಾಭಕ್ಷೀತಿ ಮಾತುಃ ಸ್ವವದನಗಜಗದ್ ಭಾಸಯನ್ ಭಾಸತಾಂ ಮೇ ॥೨॥

ದಧ್ನೋಽಮತ್ರಸ್ಯ ಭಂಗಾದುಪಗಮಿತರುಷಾ ನಂದಪತ್ನ್ಯಾಽಥಬದ್ಧಃ
ಕೃಚ್ಛ್ರೇಣೋಲೂಖಲೇ ಯೋ ಧನಪತಿತನಯೌ ಮೋಚಯಾಮಾಸ ಶಾಪಾತ್ ।
ನಂದಾದ್ಯೈಃ ಪ್ರಾಪ್ಯ ವೃಂದಾವನಮಿಹ ರಮಯನ್ ವೇಣುನಾದಾದಿಭಿರ್ಯೋ
ವತ್ಸಾನ್ವಾತ್ಸಸ್ಸರೂಪಂ ಕ್ರತುಭುಗರಿಮಥೋ ಪೋಥಯನ್ಸೋಽವತಾನ್ಮಾಮ್ ॥೩॥

ರಕ್ಷನ್ ವತ್ಸಾನ್ವಯಸ್ಯೈರ್ಬಕಮಭಿನದಥೋ ತಿಗ್ಮತುಂಡೇ ಗೃಹೀತ್ವಾ
ಪ್ರೀತಿಂ ಕರ್ತುಂ ಸಖೀನಾಂ ಖರಮಪಿ ಬಲತೋಘಾತಯನ್ ಕಾಲಿಯಾಹಿಮ್।
ಉನ್ಮಥ್ಯೋದ್ವಾಸ್ಯ ಕೃಷ್ಣಾಮತಿವಿಮಲಜಲಾಂ ಯೋ ವ್ಯಧಾದ್ದಾವವಹ್ನಿಂ
ಸುಪ್ತಾನಾವೃತ್ಯ ಗೋಷ್ಠೇ ಸ್ಥಿತಮಪಿಬದಸೌ ದುಷ್ಟವೃಕ್ಷಚ್ಛಿದವ್ಯಾತ್ ॥೪॥

ದುರ್ಗಾರಣ್ಯಪ್ರವೇಶಾಚ್ಚ್ಯುತ ನಿಜಸರಣೀನ್ ಗೋಗಣಾನಾಹ್ವಯದ್ಯೋ
ದಾವಾಗ್ನಿಂ ತತ್ರ ಪ್ರೀತ್ವಾ ಸಮಪುಷದನುಗಾನ್ ಗೋಪಕಾನಾವಿಷಣ್ಣಾನ್ ।
ಗೋಭಿರ್ಗೋಪೈಃ ಪರೀತಸ್ಸರಿದುದಕತಟಸ್ಥೋಪಲೇ ಭೋಜ್ಯಮನ್ನಂ
ಭುಕ್ತ್ವಾ ವೇಣೋರ್ನಿನಾದಾದ್ವ್ರಜಗತವನಿತಾಚಿತ್ತಹಾರೀ ಸ ಮಾಽವ್ಯಾತ್ ॥೫॥

ಕೃಷ್ಣೋಽಸ್ಮಾಕಂ ಪತಿಸ್ಸ್ಯಾದಿತಿ ಕೃತತಪಸಾಂ ಮಜ್ಜನೇ ಗೋಪಿಕಾನಾಂ ನಗ್ನಾನಾಂ
ವಸ್ತ್ರದಾತಾ ದ್ವಿಜವರವನಿತಾಽಽನೀತಮನ್ನಂ ಸಮಶ್ನನ್ ।
ಶ್ರಾಂತೈರ್ಗೋಪೈಸ್ಸಮಂ ಯೋ ಬಲಮಥನಬಲಾವಾಹೃತೇಽಸ್ಮಿನ್ ಸವೃಷ್ಟೌ
ವ್ರೋದ್ಧೃತ್ಯಾಽಽಹಾರ್ಯವರ್ಯಂ ನಿಜಜನಮಖಿಲಂ ಪಾಲಯನ್ ಪಾತಸ್ವೌಮಾಮ್॥೬॥

ಗೋವಿಂದಾಖ್ಯೋಽಥ ತಾತಂ ಜಲಪತಿಹೃತಮಾನೀಯ ಲೋಕಂ ಸ್ವಕೀಯಂ
ನಂದಾದೀನಾಂ ಪ್ರದರ್ಶ್ಯ ವ್ರಜಗತವನಿತಾಃ ಗಾನಕೃಷ್ಟಾರ್ತಚಿತ್ತಾಃ ।
ಯಃ ಕಾಲಿಂದ್ಯಾಂ ನಿಶಾಯಾಮರಮಯದಮಲಜ್ಯೋತ್ಸ್ನಯಾ ದೀಪಿತಾಯಾಂ

ಚಾರ್ವಂಗೀರ್ನರ್ಮವಾಕ್ಯೈಃ ಸ್ತನಭರನಮಿತಾಃ ಪ್ರೀಣಯನ್ ಪ್ರೀಯತಾಂ ನಃ॥೭॥

ಅಂತರ್ಧತ್ತೇ ಸ್ಮ ತಾಸಾಂ ಮದಹರಣಕೃತೇ ತ್ವೇಕಯಾ ಕ್ರೀಡಮಾನಃ
ಸ್ವಸ್ಕಂಧಾರೋಹಣಾದ್ಯೈಃ ಪುನರಪಿ ಪಿಹಿತೋ ಗರ್ವಶಾಂತ್ಯೈ ಮೃಗಾಕ್ಷ್ಯಾಃ।
ಖಿನ್ನಾನಾಂ ಗೋಪಿಕಾನಾಂ ಬಹುವಿಧನುತಿಭಿರ್ಯೋ ವಹನ್ ಪ್ರೀತಿಮಾವಿಃ
ಪ್ರಾಪ್ತೋ ರಾಸೋತ್ಸವೇನ ನ್ಯರಮಯದಬಲಾಃ ಪ್ರೀಯತಾಂ ಮೇ ಹರಿಸ್ಸಃ ॥೮॥

ಹತ್ವಾಯಿಶ್ಶಂಖಚೂಡಂ ಮಣಿಮಥ ಸಮದಾದಗ್ರಜಾಯಾರ್ತಗೋಪೀ
ಗೀತಾನೇಕಸ್ವಲೀಲೋ ಹೃತವೃಷಭಮಹಾಪೂರ್ವದೇವೋಽಮರೇಡ್ಯಃ।
ಕೇಶಿಪ್ರಾಣಾಪಹಾರೀ ಸುರಮುನಿವದನಪ್ರಾರ್ಥಿತಾಶೇಷಕೃತ್ಯೋ
ಹತ್ವಾಪುತ್ರಂ ಮಯಸ್ಯ ಸ್ವಜನಮಪಿಹಿತಂ ಮೋಚಯನ್ ಮೋಕ್ಷದಃ ಸ್ಯಾತ್ ॥೯॥

ಅಕ್ರೂರಾಕಾರಿತೋ ಯಾನ್ ವ್ರಜಯುವತಿಜನಾನ್ ಸಾಂತ್ವಯಿತ್ವಾಭಿತಪ್ತಾನ್
ಸ್ವಂ ರೂಪಂ ಮಜ್ಜತೇಽಸ್ಮೈ ವಿಲಸಿತಮಹಿಗಂ ದರ್ಶಯಂಸ್ತೇನ ವಂದ್ಯಃ।
ಯೋ ಗತ್ವಾ ಕಂಸಧಾನೀಂ ಹೃತರಜಕಶಿರಾಶ್ಚಾರುವೇಷಃ ಸುಧಾಮ್ನಃ
ಪ್ರೀತಿಂ ಕುರ್ವಂಸ್ತ್ರಿವಕ್ರಾಂ ವ್ಯತನುತ ರುಚಿರಾಂ ಪೌರಮಹ್ಯೋಽವತಾತ್ ಸಃ ॥೧೦॥

ಶಾರ್ವಂ ಭಂಕ್ತ್ವಾ ಧನುರ್ಯೋ ಬಲಮಪಿ ಧನುಷೋ ರಕ್ಷಕಂ ಕುಂಜರಂ ತಂ
ಮಲ್ಲಾಂಶ್ಚಾಣೂರಪೂರ್ವಾನಪಿ ಸಹಸಹಜೋ ಮರ್ದಯಂಸ್ತುಂಗಮಂಚಾತ್।
ಭೋಜೇಶಂ ಪಾತಯಿತ್ವಾ ವ್ಯಸುಮಕೃತ ನಿಜಾನ್ ನಂದಯನ್ ಪ್ರಾಪ್ಯಗರ್ಗಾತ್
ದ್ವೈಜಂ ಸಂಸ್ಕಾರಮಾಪ್ತೋ ಗುರುಮಥ ವಿದಿತಾಶೇಷವಿದ್ಯೋಽವತಾನ್ನಃ ॥೧೧॥

ದತ್ವಾ ಪುತ್ರಂ ಪ್ರವಕ್ತ್ರೇ ಪ್ರತಿಗತಮಧುರಃ ಸಾಂತ್ವಯನ್ನುದ್ಧಾವಾಸ್ಯಾತ್
ಗೋಷ್ಠಸ್ಥಾನ್ ನಂದಪೂರ್ವಾನರಮಯದಬಲಾಂ ಪ್ರೀತಿಕೃದ್ಯಃ ಶುಭಸ್ಯ ॥
ಅಕ್ರೂರಸ್ಯಾಥ ತೇನ ಪ್ರತಿವಿದಿತಪೃಥಾತಾಪುತ್ರಕೃತ್ಯೋ ಜರಾಯಾಃ
ಸೂನುಂ ನಿರ್ಭಿನ್ನಸೇನಂ ವ್ಯತನುತ ಬಹುಶೋ ವಿದ್ರುತಂ ನಃ ಸ ಪಾಯಾತ್ ॥೧೨॥

ಪುರ್ಯಾ ನಿರ್ಗತ್ಯ ರಾಮಾದಥ ಸಹಮುಸಲೀ ಪ್ರಾಪ್ಯ ಕೃಷ್ಣೋಽಭ್ಯನುಜ್ಞಾಂ
ಗೋಮಂತಂ ಚಾಪಿ ಮೌಲಿಂ ಖಗಪತಿವಿಹಿತಾಂ ವಾಸುದೇವಂ ಸೃಗಾಲಮ್।
ಹತ್ವಾ ಶತ್ರುಂ ಚ ಪುರ್ಯಾಮಧಿಜಲಧಿಪುರೀಂ ನಿರ್ಮಿತಾಂ ಬಂಧುವರ್ಗಾನ್
ನಿನ್ಯೇ ಯಃ ಸೋಽವತಾನ್ನಃ ಪ್ರಮಥಿತಯವನೋ ಮೌಚುಕುಂದಾಕ್ಷಿವಹ್ನೇಃ ॥೧೩॥

ರಾಜ್ಞಾ ಸಂಸ್ತೂಯಮಾನೋ ಹತಯವನಬಲೋ ಭೀತವನ್ಮಾಗಧೇಶಾತ್
ಗೋಮಂತಂ ಪ್ರಾಪ್ಯ ಭೂಯೋ ಜಿತಮಗಧಪತಿರ್ಜಾತಶಾಂತಾಗ್ನಿಶೈಲಃ।
ಆಗತ್ಯ ದ್ವಾರಕಾಂ ಯೋ ಹೃದಿಕಸುತಗಿರಾ ಜ್ಞಾತಕೌಂತೇಯಕೃತ್ಯಃ
ಪಶ್ಯಸ್ತ್ವಾದ್ದಾಯಭೃಷ್ಮೀಂ ನೃಪು ಯುಧಿ ಜಿತವಾನ್ ಭೂಭೃತಃ ಪ್ರೀಯತಾಂ ನಃ॥೧೪॥

ವೈರೂಪ್ಯಂ ರುಗ್ಮಿಣೋ ಯೋಽಕೃತ ಮಣಿಸಹಿತಂ ಜಾಂಬವದ್ದೇಹಜಾತಾಂ
ಸತ್ಯಾಂ ತೇನೈವ ಯುಕ್ತಾಮಪಿ ಪರಿಜಗೃಹೇ ಹಸ್ತಿನಂ ಕುಲ್ಯಹೇತೋಃ ।
ಯಾತೋ ವ್ಯಸ್ಯಾತ್ರ ಸತ್ಯಾಶುಚಮಥ ಸಮಗಾದ್ದ್ವಾರಕಾಂ ಸತ್ಯಯೇತೋ
ದ್ರುಷ್ಟುಂ ಪಾರ್ಥಾನ್ಸ ಕೃಷ್ಣಾನ್ ದ್ರುಪದಪುರಮಗಾದ್ವಿದ್ಧಲಕ್ಷ್ಮಾನ್ಸ ಪಾಯಾತ್ ॥೧೫॥
ಕೃಷ್ಣಃ ಪ್ರಾಪ್ಯಾಥ ಸತ್ರಾಜಿದಹಿತವಧಕೃದ್ಯಃ ಶ್ವಫಲ್ಕಸ್ಯ ಸೂನೌ
ರತ್ನಂ ಸಂದರ್ಶ್ಯ ರಾಮಂ ವ್ಯಥಿತ ಗತರೂಷಂ ದ್ರಷ್ಟುಕಾಮಃ ಪ್ರತಸ್ಥೇ ।
ಇಂದ್ರಪ್ರಸ್ಥಸ್ಥಪಾರ್ಥಾನಥ ಸಹವಿಜಯೋ ಯಾಮುನಂ ತೀರಮಾಯನ್
ಕಾಲಿಂದೀಂ ತತ್ರ ಲಬ್ಧ್ವಾ ಯಮಸುತಪುರಕೃತ್ ಪಾತುಮಾಂ ದ್ವಾರಕಾಸ್ಥಃ ॥೧೬॥
ಯೋ ಜಹ್ರೇ ಮಿತ್ರವಿಂದಾಮಥ ದೃಢವೃಷಭಾನ್ ಸಪ್ತಬದ್ಧ್ವಾಪಿ ನೀಲಾಂ
ಭದ್ರಾಂ ಮದ್ರೇಶಕನ್ಯಾಮಪಿ ಪರಿಜಗೃಹೇ ಶಕ್ರವಿಜ್ಞಾಪಿತಾರ್ಥಃ ।
ತಾರ್ಕ್ಷ್ಯಾಽರೂಢಃ ಸಭಾರ್ಯೋ ಹಿಮಗಿರಿಶಿಖರೇ ಭೌಮದುರ್ಗಂ ಸಮೇತ್ಯ
ಛಿತ್ವಾ ದುರ್ಗಾಣಿ ಕೃಂತ್ವಾ ಮುರಗಲಮರಿಣಾ ದೇವತೇಡ್ಯಃ ಸ ಮಾಽವ್ಯಾತ್ ॥೧೭॥
ತ್ರಿಂಶತ್ವಂಚಾವಧೀದ್ಯಃ ಸಚಿವವರಸುತಾನ್ ಭೂಮಿಜೇನಾತಿಘೋರಂ
ಯುದ್ಧಂ ಕೃತ್ವಾ ಗಜಾದ್ಯೈರರಿಹೃತಶಿರಸಂ ತಂ ವ್ಯಧಾದ್ಭೂಸ್ತುತೋಽಥ ।
ಕೃತ್ವಾ ರಾಜ್ಯೇಽಸ್ಯ ಸೂನುಂ ವರಯುವತಿಜನಾನ್ ಭೂರಿಶಶ್ಚಾರುವೇಷಾನ್
ಪ್ರಾಪಯ್ಯ ದ್ವಾರಕಾಂ ಸೋಽಕೃತ ಮೃದಮದಿತೇಃ ಕುಂಡಲಾಭ್ಯಾಮವೇತ್ಯಾಮ್ ॥೧೮॥
ಇಂದ್ರಾರಾಧ್ಯೋಽಮರೇಂದ್ರಪ್ರಿಯತಮಮಗಮಾತ್ಯ ದೇವಾನ್ ವಿಜಿತ್ಯ
ಪ್ರಾಪ್ಯಾಥ ದ್ವಾರಕಾಂ ಯಃ ಸುತಮತಿರುಚಿರಂ ರುಗ್ಮಿಣೀಶತಃ ಪ್ರಪೇದೇ ।
ಭ್ರಾತೃವ್ಯಂ ಪೌಂಡ್ರಕಾಖ್ಯಂ ಪುರರುಧಮತನೋತ್ ಕೃತ್ತಶೀರ್ಷಂ ತದೀಯಾ-
ಪತ್ಯೋತ್ಪನ್ನಾಂ ಚ ಕೃತ್ಯಾಂ ರಥಚರಣರುಚಾ ಕಾಲಯನ್ ಕಾಮಧುಕ್ ಸ್ಯಾತ್ ॥೧೯॥
ಕೃಷ್ಣಃ ಸೂರ್ಯೋಽಪರಾಗೇ ನಿಜಯುವತಿಗಣೈರ್ಭಾರ್ಗವಂ ಕ್ಷೇತ್ರಮಾಪ್ತ-
ಸ್ತತ್ರಾಯಾತಾನ್ ಸ್ವಬಂಧೂನ್ ಮುನಿಗಣಮಪಿ ಸಂತೋಷ್ಯ ಯಜ್ಞಂ ಸ್ವಪಿತ್ರಾ।
ಯೋಽನುಷ್ಠಾಪ್ಯಾಥ ನೈಜಂ ಪುರಮಥ ವದಿತಾಽನೇಕತತ್ತ್ವಾನಿ ಪಿತ್ರೇ
ಮಾತುಃ ಪುತ್ರಾನ್ ಪ್ರದರ್ಶ್ಯಾಕೃತ ಹಿತಮಹಿತಂ ಮೇಽಪನುದ್ಯಾತ್ ಸ ಈಶಃ ॥೨೦॥
ರುಗ್ಮಿಣ್ಯಾ ನರ್ಮವಾಕ್ಯೈರರಮತ ಬಹುಭಿಃ ಸ್ತ್ರೀಜನೈರ್ಯೋಽಥ ಪುತ್ರಾ-
ನೇಕೈಕಸ್ಯಾಂ ಪ್ರಪೇದೇ ದಶ ದಶ ರುಚಿರಾನ್ ಪೌತ್ರಕಾನಪ್ಯನೇಕಾನ್ ।
ಪೌತ್ರಸ್ಯೋದ್ವಾಹಕಾಲೇ ಬೃಷಕುಪಿತಬಲಾದ್ರುಗ್ಮಿಣಂ ಘಾತಯಿತ್ವಾ
ನಂದನ್ ಯೋಷಿದ್ಗಣೇನ ಪ್ರತಿಗ್ರಹಮಬಲಾಪ್ರೀತಿಕಾರೀ ಗತೀರ್ಮೇ ॥೨೧॥
ನಾನಾರತ್ನಪ್ರದೀಪ್ತಾಸಮವಿಭವಯುತದ್ವ್ಯಷ್ಟಸಾಹಸ್ರಕಾಂತಾ-
ಗೇಹೇಷ್ವಶ್ನನ್ ಶಯಾನಃ ಕ್ವ ಚ ಜಪಮೃಗಯಾದೀನೀ ಕುರ್ವನ್ ಕ್ವಚಿಚ್ಚ ॥

ಚಾರ್ವಂಗೀರ್ನರ್ಮವಾಕ್ಯೈಃ ಸ್ತನಭರನಮಿತಾಃ ಪ್ರೀಣಯನ್ ಪ್ರೀಯತಾಂ ನಃ॥೭॥

ಅಂತರ್ಧತ್ತೇ ಸ್ಮ ತಾಸಾಂ ಮದಹರಣಕೃತೇ ತ್ವೇಕಯಾ ಕ್ರೀಡಮಾನಃ
ಸ್ವಸ್ಕಂಧಾರೋಹಣಾದ್ಯೈಃ ಪುನರಪಿ ಪಿಹಿತೋ ಗರ್ವಶಾಂತ್ಯೈ ಮೃಗಾಕ್ಷ್ಯಾಃ।
ಖಿನ್ನಾನಾಂ ಗೋಪಿಕಾನಾಂ ಬಹುವಿಧನುತಿಭಿರ್ಯೋ ವಹನ್ ಪ್ರೀತಿಮಾವಿಃ
ಪ್ರಾಪ್ತೋ ರಾಸೋತ್ಸವೇನ ನ್ಯರಮಯದಬಲಾಃ ಪ್ರೀಯತಾಂ ಮೇ ಹರಿಸ್ಸಃ ॥೮॥

ಹತ್ವಾಯಿಶ್ಶಂಖಚೂಡಂ ಮಣಿಮಥ ಸಮದಾದಗ್ರಜಾಯಾರ್ತಗೋಪೀ
ಗೀತಾನೇಕಸ್ವಲೀಲೋ ಹೃತವೃಷಭಮಹಾಪೂರ್ವದೇವೋಽಮರೇಡ್ಯಃ।
ಕೇಶಿಪ್ರಾಣಾಪಹಾರೀ ಸುರಮುನಿವದನಪ್ರಾರ್ಥಿತಾಶೇಷಕೃತ್ಯೋ
ಹತ್ವಾಪುತ್ರಂ ಮಯಸ್ಯ ಸ್ವಜನಮಪಿಹಿತಂ ಮೋಚಯನ್ ಮೋಕ್ಷದಃ ಸ್ಯಾತ್ ॥೯॥

ಅಕ್ರೂರಾಕಾರಿತೋ ಯಾನ್ ವ್ರಜಯುವತಿಜನಾನ್ ಸಾಂತ್ವಯಿತ್ವಾಭಿತಪ್ತಾನ್
ಸ್ವಂ ರೂಪಂ ಮಜ್ಜತೇಽಸ್ಮೈ ವಿಲಸಿತಮಹಿಗಂ ದರ್ಶಯಂಸ್ತೇನ ವಂದ್ಯಃ।
ಯೋ ಗತ್ವಾ ಕಂಸಧಾನೀಂ ಹೃತರಜಕಶಿರಾಶ್ಚಾರುವೇಷಃ ಸುಧಾಮ್ನಃ
ಪ್ರೀತಿಂ ಕುರ್ವಂಸ್ತ್ರಿವಕ್ರಾಂ ವ್ಯತನುತ ರುಚಿರಾಂ ಪೌರಮಹ್ಯೋಽವತಾತ್ ಸಃ ॥೧೦॥

ಶಾರ್ವಂ ಭಂಕ್ತ್ವಾ ಧನುರ್ಯೋ ಬಲಮಪಿ ಧನುಷೋ ರಕ್ಷಕಂ ಕುಂಜರಂ ತಂ
ಮಲ್ಲಾಂಶ್ಚಾಣೂರಪೂರ್ವಾನಪಿ ಸಹಸಹಜೋ ಮರ್ದಯಂಸ್ತುಂಗಮಂಚಾತ್।
ಭೋಜೇಶಂ ಪಾತಯಿತ್ವಾ ವ್ಯಸುಮಕೃತ ನಿಜಾನ್ ನಂದಯನ್ ಪ್ರಾಪ್ಯಗರ್ಗಾತ್
ದ್ವೈಜಂ ಸಂಸ್ಕಾರಮಾಪ್ತೋ ಗುರುಮಥ ವಿದಿತಾಶೇಷವಿದ್ಯೋಽವತಾನ್ನಃ ॥೧೧॥

ದತ್ವಾ ಪುತ್ರಂ ಪ್ರವಕ್ತ್ರೇ ಪ್ರತಿಗತಮಧುರಃ ಸಾಂತ್ವಯನ್ನುದ್ಧವಾಸ್ಯಾತ್
ಗೋಷ್ಠಸ್ಥಾನ್ ನಂದಪೂರ್ವಾನರಮಯದಬಲಾಂ ಪ್ರೀತಿಕೃದ್ಯಃ ಶುಭಸ್ಯ ॥
ಅಕ್ರೂರಸ್ಯಾಥ ತೇನ ಪ್ರತಿವಿದಿತಪೃಥಾತಾಪುತ್ರಕೃತ್ಯೋ ಜರಾಯಾಃ
ಸೂನುಂ ನಿರ್ಭಿನ್ನಸೇನಂ ವ್ಯತನುತ ಬಹುಶೋ ವಿದ್ರುತಂ ನಃ ಸ ಪಾಯಾತ್ ॥೧೨॥

ಪುರ್ಯಾ ನಿರ್ಗತ್ಯ ರಾಮಾದಥ ಸಹಮುಸಲೀ ಪ್ರಾಪ್ಯ ಕೃಷ್ಣೋಽಭ್ಯನುಜ್ಞಾಂ
ಗೋಮಂತಂ ಚಾಪಿ ಮೌಲಿಂ ಖಗಪತಿವಿಹಿತಾಂ ವಾಸುದೇವಂ ಸೃಗಾಲಮ್।
ಹತ್ವಾ ಶತ್ರುಂ ಚ ಪುರ್ಯಾಮಧಿಜಲಧಿಪುರೀಂ ನಿರ್ಮಿತಾಂ ಬಂಧುವರ್ಗಾನ್
ನಿನ್ಯೇ ಯಃ ಸೋಽವತಾನ್ನಃ ಪ್ರಮಥಿತಯವನೋ ಮೌಚುಕುಂದಾಕ್ಷಿವಹ್ನೇಃ ॥೧೩॥

ರಾಜ್ಞಾ ಸಂಸ್ತೂಯಮಾನೋ ಹತಯವನಬಲೋ ಭೀತವನ್ಮಾಗಧೇಶಾತ್
ಗೋಮಂತಂ ಪ್ರಾಪ್ಯ ಭೂಯೋ ಜಿತಮಗಧಪತಿರ್ಜಾತಶಾಂತಾಗ್ನಿಶೈಲಃ।
ಆಗತ್ಯ ದ್ವಾರಕಾಂ ಯೋ ಹೃದಿಕಸುತಗಿರಾ ಜ್ಞಾತಕೌಂತೇಯಕೃತ್ಯಃ
ಪಶ್ಯಸ್ತ್ವಾದ್ದಾಯಭೃಷ್ಮೀಂ ನೃಷು ಯುಧಿ ಜಿತವಾನ್ ಭೂಭೃತಃ ಪ್ರೀಯತಾಂ ನಃ॥೧೪॥

ವೈರೂಪ್ಯಂ ರುಗ್ಮಿಣೋ ಯೋऽಕೃತ ಮಣಿಸಹಿತಂ ಜಾಂಬವದ್ದೇಹಜಾತಾಂ
ಸತ್ಯಾಂ ತೇನೈವ ಯುಕ್ತಾಮಪಿ ಪರಿಜಗೃಹೇ ಹಸ್ತಿನಂ ಕುಲ್ಯಹೇತೋಃ ।
ಯಾತೋ ವ್ಯಸ್ಯಾತ್ರ ಸತ್ಯಾಶುಚಮಥ ಸಮಗಾದ್ದ್ವಾರಕಾಂ ಸತ್ಯಯೇತೋ
ದೃಷ್ಟ್ವಾಂ ಪಾರ್ಥಾನ್ಸಕೃಷ್ಣಾನ್ ದ್ರುಪದಪುರಮಗಾದ್ವಿದ್ಧಲಕ್ಷ್ಮಾನ್ಸಪಾಯಾತ್ ॥೧೫॥
ಕೃಷ್ಣಃ ಪ್ರಾಪ್ಯಾಥ ಸತ್ರಾಜಿದಹಿತವಧಕೃದ್ಯಃ ಶ್ವಫಲ್ಕಸ್ಯ ಸೂನೌ
ರತ್ನಂ ಸಂದರ್ಶ್ಯ ರಾಮಂ ವ್ಯಥಿತ ಗತರೂಷಂ ದ್ರಷ್ಟುಕಾಮಃ ಪ್ರತಸ್ಥೇ ।
ಇಂದ್ರಪ್ರಸ್ಥಸ್ಥಪಾರ್ಥಾನಥ ಸಹವಿಜಯೋ ಯಾಮುನಂ ತೀರಮಾಯನ್
ಕಾಲಿಂದೀಂ ತತ್ರ ಲಬ್ಧ್ವಾ ಯಮಸುತಪುರಕೃತ್ ಪಾತುಮಾಂ ದ್ವಾರಕಾಸ್ಥಃ ॥೧೬॥
ಯೋ ಜಹ್ರೇ ಮಿತ್ರವಿಂದಾಮಥ ದೃಢವೃಷಭಾನ್ ಸಪ್ತಬದ್ಧ್ವಾಪಿ ನೀಲಾಂ
ಭದ್ರಾಂ ಮದ್ರೇಶಕನ್ಯಾಮಪಿ ಪರಿಜಗೃಹೇ ಶಕ್ರವಿಜ್ಞಾಪಿತಾರ್ಥಃ ।
ತಾರ್ಕ್ಷ್ಯಾऽರೂಢಃ ಸಭಾರ್ಯೋ ಹಿಮಗಿರಿಶಿಖರೇ ಭೌಮದುರ್ಗಂ ಸಮೇತ್ಯ
ಛಿತ್ವಾ ದುರ್ಗಾಣಿ ಕೃಂತ್ವಾ ಮುರಗಲಮರಿಣಾ ದೇವತೇಡ್ಯಃ ಸ ಮಾऽವ್ಯಾತ್ ॥೧೭॥
ತ್ರಿಂಶತ್ಪಂಚಾವಧೀದ್ಯಃ ಸಚಿವವರಸುತಾನ್ ಭೂಮಿಜೇನಾತಿಘೋರಂ
ಯುದ್ಧಂ ಕೃತ್ವಾ ಗಜಾದ್ಯೈರರಿಹೃತಶಿರಸಂ ತಂ ವ್ಯಧಾದ್ಭೂಸ್ತುತೋऽಥ ।
ಕೃತ್ವಾ ರಾಜ್ಯೇऽಸ್ಯ ಸೂನುಂ ವರಯುವತಿಜನಾನ್ ಭೂರಿಶಶ್ಚಾರುವೇಷಾನ್
ಪ್ರಾಪಯ್ಯ ದ್ವಾರಕಾಂ ಸೋऽಕೃತ ಮೃದಮದಿತೇಃ ಕುಂಡಲಾಭ್ಯಾಮವೇನ್ಮಾಮ್ ॥೧೮॥
ಇಂದ್ರಾರಾಧ್ಯೋऽಮರೇಂದ್ರಪ್ರಿಯತಮಮಗಮಾತ್ಯ ದೇವಾನ್ ವಿಜಿತ್ಯ
ಪ್ರಾಪ್ಯಾಥ ದ್ವಾರಕಾಂ ಯಃ ಸುತಮತಿರುಚಿರಂ ರುಗ್ಮಿಣೀಶತಃ ಪ್ರಪೇದೇ ।
ಭ್ರಾತೃವ್ಯಂ ಪೌಂಡ್ರಕಾಖ್ಯಂ ಪುರರುಧಮತನೋತ್ ಕೃತ್ತಶೀರ್ಷಂ ತದೀಯಾ-
ಪತ್ಯೋತ್ಪನ್ನಾಂ ಚ ಕೃತ್ಯಾಂ ರಥಚರಣರುಚಾ ಕಾಲಯನ್ ಕಾಮಧುಕ್ ಸ್ಯಾತ್ ॥೧೯॥
ಕೃಷ್ಣಃ ಸೂರ್ಯೋऽಪರಾಗೇ ನಿಜಯುವತಿಗಣೈರ್ಭಾರ್ಗವಂ ಕ್ಷೇತ್ರಮಾಪ್ತ-
ಸ್ತತ್ರಾಯಾತಾನ್ ಸ್ವಬಂಧೂನ್ ಮುನಿಗಣಮಪಿ ಸಂತೋಷ್ಯ ಯಜ್ಞಂ ಸ್ವಪಿತ್ರಾ।
ಯೋऽನುಷ್ಠಾಪ್ಯಾಥ ನೈಜಂ ಪುರಮಥ ವದಿತಾऽನೇಕತತ್ತ್ವಾನಿ ಪಿತ್ರೇ
ಮಾತುಃ ಪುತ್ರಾನ್ ಪ್ರದರ್ಶ್ಯಾಕೃತ ಹಿತಮಹಿತಂ ಮೇऽಪನುದ್ಯಾತ್ ಸ ಈಶಃ ॥೨೦॥
ರುಗ್ಮಿಣ್ಯಾ ನರ್ಮವಾಕ್ಯೈರರಮತ ಬಹುಭಿಃ ಸ್ತ್ರೀಜನೈರ್ಯೋऽಥ ಪುತ್ರಾ-
ನೇಕೈಕಸ್ಯಾಂ ಪ್ರಪೇದೇ ದಶ ದಶ ರುಚಿರಾನ್ ಪೌತ್ರಕಾನಪ್ಯನೇಕಾನ್ ।
ಪೌತ್ರಸ್ಯೋದ್ವಾಹಕಾಲೇ ಬೃಷಕುಪಿತಬಲಾದ್ರುಗ್ಮಿಣಂ ಘಾತಯಿತ್ವಾ
ನಂದನ್ ಯೋಷಿದ್ಗಣೇನ ಪ್ರತಿಗ್ರಹಮಬಲಾಪ್ರೀತಿಕಾರೀ ಗತಿರ್ಮೇ ॥೨೧॥
ನಾನಾರತ್ನಪ್ರದೀಪ್ತಾಸಮವಿಭವಯುತದ್ವ್ಯಷ್ಟಸಾಹಸ್ರಕಾಂತಾ-
ಗೇಹೇಷ್ವಶ್ನನ್ ಶಯಾನಃ ಕ್ವ ಚ ಜಪಮೃಗಯಾದೀನೀ ಕುರ್ವನ್ ಕ್ವಚಿಚ್ಚ ॥

ದೀವ್ಯನ್ನಕ್ಷೈರ್ಬ್ರುವಾಣಃ ಪ್ರವಚನಮಪರೈರ್ಮಂತ್ರಯನ್ನೇವಮಾದಿ-
ವ್ಯಾಪಾರಾನ್ ನಾರದಸ್ಯ ಪ್ರತಿಸದನಮಹೋ ದರ್ಶಯನ್ ನಃ ಸ ಪಾಯಾತ್॥೨೨॥
ಪ್ರಾತರ್ಧ್ಯಾಯನ್ ಪ್ರಸನ್ನಃ ಕೃತಿನಿಜವಿಹಿತಃ ಸತ್ಸಭಾಂ ಪ್ರಾಪ್ಯ ಕೃಷ್ಣೋ
ದೂತಂ ರಾಜ್ಞಾಂ ಪ್ರತೋಷ್ಯಾಮರಮುನಿವಿದಿತಾಶೇಷಕೃತ್ಯಃ ಪ್ರಯಾಸೀತ್ ।
ಶಕ್ರಪ್ರಸ್ಥಂ ಚಮೂಭಿರ್ಬಹುವಿಭವಯುತಂ ಬಂಧುಭಿರ್ಮಾನಿತೋಽಯಂ
ಭೀಮೇನಾಪಾತ್ಯ ಬಾರ್ಹದ್ರಥಮಥ ನೃಪತೀನ್ಮೋಚಯನ್ಮೇ ಪ್ರಸೀದೇತ್ ॥೨೩॥
ಪುತ್ರಂ ರಾಜ್ಯೇಽಸ್ಯ ಕೃತ್ವಾ ಹೃತಶಿರಸಮಥೋ ಚೇದಿರಾಜಂ ವಿಧಾಯ
ಪ್ರೋದ್ಯಂತಂ ರಾಜಸೂಯಂ ಯಮಸುತವಿಹಿತಂ ಸಂಸ್ಥಿತಂ ಯೋ ವಿಧಾಯ।
ಶಕ್ರಪ್ರಸ್ಥಾತ್ ಪ್ರಯಾತೋ ನಿಜನಗರಮಮುಸೌ ಸಾಲ್ವಭಗ್ನಂ ಸಮೀಕ್ಷ್ಯ
ಕದ್ರೋಘ್ನನ್ನಬ್ಧಿಗಂ ತಂ ಶಿವವರಬಲಿನಂ ಯಾನ್ ಪುರಂ ಪಾತುನಿತ್ಯಮ್ ॥೨೪॥
ವಿಪ್ರಾದಾಕರ್ಣ್ಯ ಧರ್ಮಂ ವನಗತಮನುಜೈಃ ಸಾಂತ್ವಯಿತ್ವೈತ್ಯಸರ್ವಾ-
ನಭ್ಯೇತ್ಯ ದ್ವಾರಕಾಂ ಯೋ ನೃಗಮಥ ಕುಜನಿಂ ದಿವ್ಯರೂಪಂ ಚಕಾರ ।
ಗತ್ವಾ ವೈದೇಹಗೇಹಂ ಕತಿಪಯದಿವಸಾಂಸ್ತತ್ರ ನೀತ್ವಾತಿಭಕ್ತ್ಯಾ
ಸಂತೋಷ್ಯ ದ್ವಾರಕಾಂ ಯಾನ್ ಬಹುಬಲಸಮಿತೋ ಯನ್ನುಪಪ್ಲಾವ್ಯಮವ್ಯಾತ್ ॥೨೫॥
ದೌತ್ಯಂ ಕುರ್ವನ್ನನಂತಾಃ ನಿಜರುಚಿರತನುರ್ದರ್ಶಯನ್ ದಿವ್ಯದೃಷ್ಟೇ-
ರ್ಗೀತಾತತ್ತ್ವೋಪದೇಶಾದ್ರಣಮುಖವಿಜಯಸ್ಯಾಚರನ್ ಸಾರಥಿತ್ವಮ್ ।
ನೀತ್ವಾ ಕೈಲಾಸಮೇನಂ ಪಶುಪತಿಮುಖತೋ ದಾಪಯಿತ್ವಾಸ್ತ್ರಮಸ್ಮೈ
ಭೀಮೇನಾಪಾತ್ಯ ದುಷ್ಟಂ ಕ್ಷಿತಿಪತಿಮಕರೋದ್ಧರ್ಮರಾಜಂ ತಮೀಡೇ ॥೨೬॥
ಪ್ರಾಪ್ತಃ ಸ್ಥಾನಂ ಯದೂನಾಂ ಪ್ರಿಯಸಖಿಮಕೃತಾವಾಪ್ತಕಾಮಂ ಕುಚೇಲಂ
ಕುರ್ವನ್ ಕರ್ಮಾಶ್ವಮೇಧಂ ನಿಜಭವನಮಥೋ ದರ್ಶಯಿತ್ವಾರ್ಜುನಾಯ।
ಪುತ್ರಾನ್ ವಿಪ್ರಾಯ ದತ್ವಾಪಹಸಜಮಸೌ ದಂತವಕ್ತ್ರಂ ನಿಪಾತ್ಯ
ಪ್ರಾಪ್ಯಾಥ ದ್ವಾರನಾಂ ಸ್ವಾಂ ಸಮವತು ವಿಹರನ್ನುದ್ಧವಾಯೋಕ್ತತತ್ತ್ವಃ ॥೨೭॥
ರಕ್ಷನ್ ಲೋಕಾನ್ ಸಮಸ್ತಾನ್ ನಿಜಜನನಯನಾನಂದಕಾರೀ ನಿರಸ್ತಾ-
ವದ್ಯಃ ಸೌಖ್ಯೈಕಮೂರ್ತಿಃ ಸುರತರುಕುಸುಮೈಃ ಕೀರ್ಯಮಾಣೋಽಮರೇಂದ್ರೈಃ।
ಸಿದ್ಧೈರ್ಗಂಧರ್ವಪೂರ್ವೈರ್ಜಯಜಯವಚನೈಃ ಸ್ತೂಯಮಾತೋಽತ್ರ ಕೃಷ್ಣಃ
ಸ್ತ್ರೀಭಿಃ ಪುತ್ರೈಶ್ಚ ಪೌತ್ರೈಃ ಸ ಜಯತಿ ಭಗವಾನ್ ಸರ್ವಸಂಪತ್ಸಮೃದ್ಧಃ ॥೨೮॥
ಇತಿ ಶ್ರೀ ಕೃಷ್ಣಾಚಾರಿತ್ರಮಂಜರೀ ಲೇಶತಃ ಕೃತಾ ।
ರಾಘವೇಂದ್ರೇಣ ಯತಿನಾ ಭೂಯಾತ್ ಕೃಷ್ಣಪ್ರಸಾದದಾ ॥೨೯॥

॥ ಇತಿ ಶ್ರೀರಾಘವೇಂದ್ರತೀರ್ಥಕೃತ ಶ್ರೀಕೃಷ್ಣಚಾರಿತ್ರ್ಯಮಂಜರೀ ॥

# ಶ್ರೀಕೃಷ್ಣಾವತಾರದ ಚರಿತ್ರೆ

ಹಿಂದೆ ಮರೀಚಿಋಷಿಗಳಿಗೆ ಆರುಮಂದಿ ಮಕ್ಕಳು ಹುಟ್ಟಿದರು. ಇವರು ಒಮ್ಮೆ ದೇವಲ ಮುನಿಯನ್ನು ಕಂಡು ಅಪಹಾಸ್ಯ ಮಾಡಿದರು. ಈ ದೇವಲ ಋಷಿಗಳು ತಪಸ್ಸಿನಿಂದ ಕೃಶರಾಗಿದ್ದರು. ಆದರೆ ಮರೀಚಿಪುತ್ರರು ಕಾಮಜ್ವರದಿಂದ ಕೃಶರಾಗಿದ್ದಾರೆಂದು ಹಾಸ್ಯ ಮಾಡಿ, ಶಾಪಕ್ಕೆ ಈಡಾದರು. ದೇವಲಋಷಿಗಳು ಆರು ಮಂದಿ ಮರೀಚಿಪುತ್ರರಿಗೆ ದೈತ್ಯರಾಗಿ ಹುಟ್ಟುವಂತೆ ಶಪಿಸಿದರು. ಈ ಆರು ಮಂದಿ ಮರೀಚಿಪುತ್ರರು ಮಹಾದೈತ್ಯರೆನಿಸಿದ ಕಾಲನೇಮಿಯ ಮಕ್ಕಳಾಗಿ ಹುಟ್ಟಿದರು. ಸ್ಮರ, ಉದ್ಗೀಥ, ಪರಿಷ್ವಂಗ, ಪತಂಗ, ಕ್ಷುದ್ರಭೃತ್, ಘೃಣೀ ಎಂಬ ಹೆಸರಿನ ಇವರು ಷಡ್ಗರ್ಭರೆಂದೇ ಪ್ರಸಿದ್ಧಿ ಪಡೆದರು. ಅಸುರರಯೋನಿಯಲ್ಲಿ ಹುಟ್ಟಿದ ಮೇಲೆ ಅಸುರ ಸ್ವಭಾವಕ್ಕೆ ತಕ್ಕಂತೆ ಅವಧ್ಯರಾಗಬೇಕೆಂದು ಬ್ರಹ್ಮನಲ್ಲಿ ತಪಸ್ಸು ಮಾಡಿದರು. ಬ್ರಹ್ಮನು ಈ ಆರುಮಂದಿಗೂ ಅವಧ್ಯತ್ವ ವರವನ್ನು ನೀಡಿದನು. ಇದೇ ಸಂದರ್ಭದಲ್ಲಿ ಹಿರಣ್ಯಕಶಿಪು ಆಡಳಿತವನ್ನು ನಡೆಸಿದ್ದನು. ತನ್ನನ್ನು ಬಿಟ್ಟು ಬ್ರಹ್ಮದೇವರನ್ನು ಕುರಿತು ತಪಸ್ಸು ಮಾಡಿದ್ದಕ್ಕೆ ಕಾಲನೇಮಿಯ ಮಕ್ಕಳ ಮೇಲೆ ಅವನಿಗೆ ಸಿಟ್ಟು ಬಂದಿತು. ತನ್ನನ್ನು ಬಿಟ್ಟು ಬ್ರಹ್ಮದೇವರನ್ನು ಕುರಿತು ಏಕೆ ತಪಸ್ಸು ಮಾಡಿದಿರಿ? ಎಂದು ದೃಪ್ತನಾಗಿ ಶಾಪನೀಡಿದನು. ''ನೀವು ಭೂಮಿಯಲ್ಲಿ ಜನಿಸಿರಿ. ಆಗ ನಿಮ್ಮ ತಂದೆಯೇ ನಿಮ್ಮನ್ನು ಕೊಲ್ಲಲಿ'' ಎಂದು.

ಈ ಆರುಮಂದಿಗೆ ಬ್ರಹ್ಮದೇವರಿಂದ ಅವಧ್ಯತ್ವವರವಿದೆ. ಆದಕ್ಕೆ ವಿರುದ್ಧವಾಗಿ ಹಿರಣ್ಯಕಶಿಪುವಿನಿಂದ ತಂದೆಯಿಂದಲೇ ಸಂಹಾರವಾಗಬೇಕೆಂಬ ಶಾಪವಿದೆ. ಇವೆರಡನ್ನೂ ಸತ್ಯವನ್ನಾಗಿ ಮಾಡುವುದಕ್ಕಾಗಿ ಭಗವಂತನು ದೇವಕಿಯ ಗರ್ಭದಲ್ಲಿ ಅವರನ್ನು ಹುಟ್ಟಿಸುವಂತೆ ದುರ್ಗಾದೇವಿಗೆ ಅಪ್ಪಣೆಯನ್ನು ಮಾಡಿದ್ದಾನೆ -

ದುರ್ಗಾ ತದಾ ತಾನ್ ಭಗವತ್ಪ್ರಚೋದಿತಾ  
ಪ್ರಸ್ಥಾಪಯಿತ್ವಾ ಪ್ರಚಕರ್ಷ ಕಾಯಾತ್ ।  
ಕ್ರಮಾತ್ ಸಮಾವೇಶಯದಾಶು ದೇವಕೀ-  
ಗರ್ಭಾಶಯೇ ತಾನ್ ನ್ಯಹನಚ್ಚ ಕಂಸಃ ॥

ಭಗವಂತನ ಆಜ್ಞೆಯಂತೆ ದುರ್ಗೆಯು ಆ ಕಾಲನೇಮಿಯ ಮಕ್ಕಳನ್ನು ಕ್ರಮವಾಗಿ ನಿದ್ರೆಗೊಳಿಸಿ ಅವರ ಶರೀರದಿಂದ ಪ್ರಾಣವನ್ನು ಸೆಳೆದಿದ್ದಾಳೆ. ದೇವಕಿಯ ಗರ್ಭದಲ್ಲಿ ಪ್ರವೇಶಗೊಳಿಸಿದ್ದಾಳೆ. ಈ ಷಡ್ಗರ್ಭರನ್ನು ಕಂಸನು ಕ್ರಮವಾಗಿ ಕೊಂದಿದ್ದಾನೆ.

ಕಾಲನೇಮಿಯ ಈ ಆರುಮಂದಿ ಮಕ್ಕಳು ಪಾತಾಳಲೋಕದ ಗುಹೆಯಲ್ಲಿ ಮಲಗಿ ನಿದ್ದೆ ಮಾಡುತ್ತಿದ್ದಾರೆ. ಒಬ್ಬೊಬ್ಬ ಜೀವನನ್ನು ತೆಗೆದು ದುರ್ಗಾದೇವಿಯು ದೇವಕಿಯ ಗರ್ಭದಲ್ಲಿ ಪ್ರವೇಶ ಮಾಡುವಂತೆ ಮಾಡಿದ್ದಾಳೆ. ತನ್ನ ಪೂರ್ವಜನ್ಮದ ತಂದೆಯಾದ ಕಾಲನೇಮಿಯೇ ಕಂಸನಾದ ಕಾರಣ, ಈ ಆರುಜನರು ಕಂಸನಿಂದ ಮೃತರಾಗುತ್ತಿದ್ದಾರೆ. ಹಿರಣ್ಯಕಶಿಪುವಿನ ಶಾಪ ಫಲಿಸಿದೆ. ಪುನಃ ಅದೇ ಶರೀರದಲ್ಲಿ ಪ್ರವೇಶವನ್ನು ಮಾಡಿದ್ದರಿಂದ ಬ್ರಹ್ಮದೇವರು ನೀಡಿದ ಅವಧ್ಯತ್ವ ವರವೂ ಕೂಡ ಸಾರ್ಥಕವಾಗಿದೆ.

ಒಬ್ಬನನ್ನು ಒಂದು ವರ್ಷಕಾಲ ಗಾಢನಿದ್ರೆಯಲ್ಲಿ ದುರ್ಗೆಯು ಗುಹೆಯಲ್ಲಿ ಮಲಗಿಸುತ್ತಾಳೆ. ಆಗ ಒಂದು ಅಂಶದಿಂದ ಅವನ ಜೀವವನ್ನು ದೇಹದಿಂದ ಹೊರತೆಗೆದು ದೇವಕಿಯ ಗರ್ಭದಲ್ಲಿ ಇರಿಸುತ್ತಾಳೆ. ನವಮಾಸ ತುಂಬಿ ಶಿಶು ಹುಟ್ಟಿದ ವೇಳೆಗೆ ಕಂಸ ಅದನ್ನು ಕೊಲ್ಲುತ್ತಾನೆ. ಪುನಃ ಆ ಜೀವವನ್ನು ತಂದು ಗುಹೆಯಲ್ಲಿ ನಿದ್ದೆ ಮಾಡುವವನ ಶರೀರದಲ್ಲಿ ಸೇರಿಸುತ್ತಾಳೆ. ಹೀಗೆ ಒಂದು ವರ್ಷ ಕಾಲ ನಿದ್ದೆ ಮಾಡಿದ ಮೇಲೆ ಎಚ್ಚರಗೊಂಡು ಎದ್ದು, ಅವನು ಹೊರಟು ಹೋಗುತ್ತಾನೆ.

ಮತ್ತೊಬ್ಬ ಷಡ್ಗರ್ಭನ ಸರದಿಯೂ ಹೀಗೆ. ಆರುಮಂದಿಯನ್ನು ದೇವಕಿಯಲ್ಲಿ ಹುಟ್ಟಿಸಿ ಕಂಸನ ಕೈಯಿಂದ ದುರ್ಗೆಯು ವಧಿಸುತ್ತಾಳೆ. ಮುಂದೆ ಷಡ್ಗರ್ಭರು ಬಲಿಚಕ್ರವರ್ತಿಯ ಸಮೀಪದಲ್ಲಿ ಪಾತಾಳಕಲೋಕದಲ್ಲಿ ಇರುತ್ತಾರೆ. ಶ್ರೀಕೃಷ್ಣ ದೊಡ್ಡವನಾದಾಗ ಒಮ್ಮೆ ದ್ವಾರಕೆಯಲ್ಲಿ ದೇವಕಿಯು ತನ್ನ ಹಿಂದಿನ ಆರುಮಂದಿ ಮಕ್ಕಳನ್ನು ನೋಡಲು ಬಯಸಿದಾಗ ಶ್ರೀಕೃಷ್ಣನು ಬಲಿಯ ಬಳಿಯಿದ್ದ ಷಡ್ಗರ್ಭರ ಅವಧ್ಯ ಶರೀರವನ್ನು ನಾಶಪಡಿಸಿ ಶಿಶುರೂಪದಿಂದ ಅವರನ್ನು ತೋರಿಸಿದ್ದಾನೆ. ಬ್ರಹ್ಮದೇವರ ಅವಧ್ಯತ್ವ ವರವನ್ನು, ದೇವಲಮಹರ್ಷಿಗಳ ಶಾಪವನ್ನು ಪರಿಹರಿಸಿದ್ದಾನೆ.

ತಾನು ಕುಡಿದು ಉಳಿದ ದೇವಕಿಮಾತೆಯ ಎದೆಯ ಹಾಲನ್ನು ಆ ಮಕ್ಕಳಿಗೆ ನೀಡಿ, ಸದ್ಗತಿಯನ್ನು ಕೊಟ್ಟು ರಕ್ಷಿಸುತ್ತಾನೆ.

ದೇವಕಿಯಿಂದ ಹುಟ್ಟಿದ ಮೊದಲ ಮಗನೇ ಕೀರ್ತಿವಂತ. ಇವನನ್ನು ವಸುದೇವನು ಕಂಸನಿಗೆ ಒಪ್ಪಿಸಿದನು. ಆದರೆ ಕಂಸನು 'ಇದು ಎಂಟನೇ ಮಗುವಲ್ಲ. ಇದನ್ನು ನಾನು ಕೊಲ್ಲುವುದಿಲ್ಲ' ಎಂದನು. ವಸುದೇವನು ಮಗುವನ್ನು ಎತ್ತಿಕೊಂಡು ಮನೆಗೆ ಬಂದನು. ಆ ಸಂದರ್ಭದಲ್ಲಿ ನಾರದರು ಕಂಸನಿದ್ದಲ್ಲಿಗೆ ಬಂದು, ಎಲ್ಲ ಮಕ್ಕಳನ್ನು ಕೊಲ್ಲಲು ಪ್ರೇರಣೆ ಮಾಡಿದರು. ನಂದಗೋಕುಲದಲ್ಲಿ ಇರುವವರೆಲ್ಲರೂ ದೇವತೆಗಳೇ ಆಗಿದ್ದಾರೆ. ನೀನು ಕಾಲನೇಮಿಯ ಸ್ವರೂಪನಾದವನು. ನಿನ್ನನ್ನು ವಿರೋಧ ಮಾಡುವುದೇ ಇವರೆಲ್ಲರ ಮುಖ್ಯ ಉದ್ದೇಶ. ಆದ್ದರಿಂದ ದೇವಕಿಯ ಗರ್ಭದಲ್ಲಿ ಮಹಾವಿಷ್ಣುವೇ ಜನಿಸಿ ನಿನ್ನನ್ನು ಸಂಹಾರ ಮಾಡುತ್ತಾನೆ. ಅವಳ ಗರ್ಭದಲ್ಲಿ ಹುಟ್ಟುವ ಯಾವ ಮಗುವನ್ನು ಕೂಡ ಉಳಿಸುವುದು ಯುಕ್ತವಲ್ಲ ದೇವತೆಗಳ ಲೆಕ್ಕ ನಿನಗೆ ಅರ್ಥವಾಗುವುದಿಲ್ಲವೆಂದು ದೇವತಾಕಾರ್ಯಸಿದ್ಧಿಗಾಗಿ ಹೇಳಿ ಹೊರಟುಹೋದರು. ನಾರದರು ಹೊರಟುಹೋದ ಮೇಲೆ ಕಂಸನು ವಸುದೇವ-ದೇವಕಿಯರನ್ನು ಬಂಧನದಲ್ಲಿಟ್ಟು ಹುಟ್ಟಿದ ಎಲ್ಲ ಮಕ್ಕಳನ್ನು ನಿರ್ದಯದಿಂದ ಕೊಂದು ಹಾಕಿದನು. ಕಾಲನೇಮಿಯ ಸ್ವರೂಪವನ್ನು ತಿಳಿದ ಕಂಸನು ಎಲ್ಲ ಯಾದವರನ್ನು ವಿರೋಧ ಮಾಡಿದನು. ತನ್ನ ತಂದೆಯಾದ ಉಗ್ರಸೇನರಾಜನನ್ನೂ ಕೂಡ ಬಂಧನದಲ್ಲಿಟ್ಟನು. ತಂದೆಯಿಂದಲೇ ರಾಜ್ಯವನ್ನು ಕಸಿದುಕೊಂಡು ರಾಜ್ಯಭಾರ ನಡೆಸಿದನು. ಹೀಗೆ ಷಡ್ಗರ್ಭರು ಕಾಲನೇಮಿಯ ಸ್ವರೂಪನಾದ ಕಂಸನ ಕೈಯಿಂದ ಮೃತರಾದರು.

ದೇವಕಿಯ ಗರ್ಭದಲ್ಲಿ ಹುಟ್ಟಿದ ಮೊದಲನೆಯ ಮಗು ಕೀರ್ತಿಮಾನ್. ಇವನನ್ನು ಕಂಸನು ಸಂಹಾರ ಮಾಡಿದನು. ಒಂದುವರ್ಷದ ಅನಂತರ ಹುಟ್ಟಿದ ಮಗು ಸುಷೇಣ. ಇವನನ್ನೂ ಕೂಡ ಕಂಸನು ಸಂಹಾರ ಮಾಡಿದನು. ಇದರಂತೆ ಭದ್ರಸೇನ, ಋಜು, ಸಮ್ಮರ್ದನ, ಭದ್ರ ಎಂಬ ಉಳಿದ ಮಕ್ಕಳು ಮುಂದಿನ ವರ್ಷಗಳಲ್ಲಿ ಕ್ರಮವಾಗಿ ಜನಿಸಿದರು. ಹುಟ್ಟಿದ ಮಕ್ಕಳ ಬಗ್ಗೆ ಸ್ವಲ್ಪವೂ ಕನಿಕರವಿಲ್ಲದ ಕಂಸನು ತನ್ನ ಬದುಕಿಗಾಗಿ ಬಂಡೆಯ ಮೇಲೆ ಅಪ್ಪಳಿಸಿ ಕೊಂದು ಹಾಕಿದನು. ಇದರಿಂದ ವಸುದೇವ-ದೇವಕಿಯರಿಗೆ ಬಹಳ ಸಂಕಟವಾಯಿತು. ತಮ್ಮ ದುಃಖವನ್ನು ಹೊಟ್ಟೆಯಲ್ಲಿಯೇ ಹಾಕಿಕೊಂಡು ಸಮಾಧಾನ ಮಾಡಿಕೊಂಡರು. ಭಗವಂತನನ್ನೇ ಅನನ್ಯವಾಗಿ ಆರಾಧನೆ ಮಾಡುತ್ತಿದ್ದರು.

ಹೀಗಿರುವಾಗ ಭಗವಂತನು ತನ್ನ ಪತ್ನಿಯಾದ ಮಹಾಲಕ್ಷ್ಮಿಯನ್ನು ಕುರಿತು ಹೀಗೆ ಆಜ್ಞೆ ಮಾಡಿದನು.

ನೀನು ಗೋಕುಲಕ್ಕೆ ಈ ಕೂಡಲೇ ಹೊರಡು. ವಸುದೇವನ ಪತ್ನಿಯಾದ ರೋಹಿಣಿಯು ನಂದಗೋಕುಲದಲ್ಲಿ ಇರುವಳು. ವಸುದೇವನ ಉಳಿದ ಪತ್ನಿಯರು ಕಂಸನ ಭಯದಿಂದ ಯಾರಿಗೂ ಕಾಣದ ಸ್ಥಳಗಳಲ್ಲಿ ಗುಪ್ತವಾಗಿ ವಾಸಮಾಡುತ್ತಿದ್ದಾರೆ. ನೀನು ದೇವಕಿಯ ಉದರದಲ್ಲಿ ಬೆಳೆಯುತ್ತಿರುವ ನನ್ನ ಶುಕ್ಲಕೇಶದ ಆವೇಶವುಳ್ಳ ಆದಿಶೇಷನ ಭ್ರೂಣಶರೀರವನ್ನು ಸೆಳೆಯಬೇಕು. ಅದನ್ನು ತಂದು ರೋಹಿಣಿಯ ಉದರದಲ್ಲಿಡಬೇಕು. ಅನಂತರ ನಾನು ಕೃಷ್ಣಕೇಶವೆಂಬ ಸ್ವರೂಪಾಂಶದಿಂದ ದೇವಕಿಯ ಗರ್ಭದಲ್ಲಿ ಪ್ರಕಟವಾಗುತ್ತೇನೆ. ಆ ಸಂದರ್ಭದಲ್ಲಿ ನೀನು ನಂದಗೋಪನ ಪತ್ನಿಯಾದ ಯಶೋದೆಯ ಗರ್ಭದಿಂದ ಅವತಾರ ಮಾಡಬೇಕು. ನೀನು ಭಕ್ತರ ಅಭೀಷ್ಟಗಳನ್ನು ಈಡೇರಿಸುವಳಾಗಿರುವಿ. ನೀನು ದುರ್ಗೆಯಾಗಿ ಅವತರಿಸಿದ ಮೇಲೆ ಭಕ್ತರು ಭೂಮಿಯಲ್ಲಿ ನಿನ್ನ ಮಂದಿರಗಳನ್ನು ನಿರ್ಮಾಣ ಮಾಡುತ್ತಾರೆ. ಅನೇಕ ಹೆಸರುಗಳಿಂದ ನಿನ್ನನ್ನು ಆರಾಧನೆ ಮಾಡುತ್ತಾರೆ.

ದುರ್ಗೇತಿ ಭದ್ರಕಾಲೀತಿ ವಿಜಯಾ ವೈಷ್ಣವೀತಿ ಚ ।
ಕುಮುದಾ ಚಂಡಿಕಾ ಕೃಷ್ಣಾ ಮಾಧವೀ ಕನ್ಯಕೇತಿ ಚ ॥
ಮಾಯಾ ನಾರಾಯಣೀಶಾನಾ ಶಾರದೇತ್ಯಂಬಿಕೇತಿ ಚ ॥

ನಿನ್ನನ್ನು ಜನರು ದುರ್ಗೆ, ಭದ್ರಕಾಳೀ, ವಿಜಯಾ, ವೈಷ್ಣವೀ, ಕುಮುದಾ, ಚಂಡಿಕೆ, ಕೃಷ್ಣೆ, ಮಾಧವಿ, ಕನ್ಯಾ, ಮಾಯಾ, ನಾರಾಯಣೀ, ಈಶಾನಾ, ಶಾರದಾ, ಅಂಬಿಕಾ ಮೊದಲಾದ ಹೆಸರುಗಳಿಂದ ಅರ್ಚಿಸುತ್ತಾರೆ, ಆರಾಧಿಸುತ್ತಾರೆ. ನೀನು ಬಲದೇವನನ್ನು ದೇವಕಿಯ ಗರ್ಭದಿಂದ ಎಳೆದು ರೋಹಿಣಿಯ ಗರ್ಭದಲ್ಲಿಡುವುದರಿಂದ ಇವನು ಸಂಕರ್ಷಣನೆನಿಸುತ್ತಾನೆ. ಜಗತ್ತಿಗೆ ಆನಂದವನ್ನುಂಟು ಮಾಡುವುದರಿಂದ ರಾಮನೆಂದು, ವಿಶೇಷ ಬಲವಿರುವುದರಿಂದ ಭದ್ರನೆಂದು ಕರೆಸಿಕೊಳ್ಳುತ್ತಾನೆ.

ಭಗವಂತನ ಆಜ್ಞೆಯನ್ನು ಶಿರಸಾವಹಿಸಿದ ಮಹಾಲಕ್ಷ್ಮೀದೇವಿಯು ''ಹಾಗೆಯೇ ಆಗಲಿ!'' ಎಂದು ಅಪ್ಪಣೆಯನ್ನು ಸ್ವೀಕರಿಸಿದಳು. ಪ್ರದಕ್ಷಿಣೆ ಮಾಡಿ ನಮಸ್ಕಾರ

ಮಾಡಿದಳು. ಕೂಡಲೇ ಭೂಮಿಗೆ ಆಗಮಿಸಿದಳು. ಭಗವಂತನ ಆಜ್ಞೆಯಂತೆಯೇ ಮಾಡಿದಳು.

ಮಥುರಾಪಟ್ಟಣದಲ್ಲಿ ದೇವಕಿ ಇರುವ ಸ್ಥಳಕ್ಕೆ ತೆರಳಿದಳು. ಮೂರು ತಿಂಗಳ ದೇವಕಿಯ ಗರ್ಭವನ್ನು ತೆಗೆದು ರೋಹಿಣಿಯ ಉದರದಲ್ಲಿ ಸ್ಥಾಪನೆ ಮಾಡಿದಳು. ಆದರೆ ಅಸುರ ಜನರು ದೇವಕಿಗೆ ಗರ್ಭಪಾತವಾಯಿತೆಂದು ಕೂಗಿಕೊಂಡರು.

ಕಂಸನು ವಸುದೇವ-ದೇವಕಿಯರನ್ನು ಯಾವಾಗ ಬಂಧನದಲ್ಲಿಟ್ಟಿದ್ದನೋ ಆಗ ವಸುದೇವನು ತನ್ನ ಉಳಿದ ಪತ್ನಿಯರನ್ನು ದೂರ ಕಳುಹಿಸಿದ್ದನು. ಅವರಲ್ಲಿ ರೋಹಿಣಿಯೂ ಕೂಡ ಒಬ್ಬಳು. ನಂದಗೋಕುಲದಲ್ಲಿ ಇವಳು ವಾಸ ಮಾಡುತ್ತಿದ್ದಳು. ಈ ರೋಹಿಣಿಯ ಗರ್ಭದಲ್ಲಿ ದುರ್ಗಾದೇವಿಯು ಬಲದೇವನ ಗರ್ಭವನ್ನು ಇಟ್ಟದ್ದು ಕಂಸನಿಗೆ ತಿಳಿಯಲಿಲ್ಲ.

ಹಿಂದೆ ಶೇಷದೇವರು ಲಕ್ಷ್ಮೀ ಹಾಗೂ ರಾಮದೇವರ ಸೇವೆಯನ್ನು ಬಹಳವಾಗಿ ಮಾಡಿದ್ದರು. ಅದರ ಫಲವಾಗಿ ಭಗವಂತನಿಗೆ ಜೇಷ್ಠನಾಗಿ ಜನಿಸಿದರು. ರೋಹಿಣಿಯ ಉದರದಲ್ಲಿ ೭ ತಿಂಗಳು ಇದ್ದು ಅನಂತರ ಬಲಭದ್ರನಾಗಿ ಜನಿಸಿದರು. ವಸುದೇವ ದೇವಕಿಯರು ಶೇಷದೇವರನ್ನು ಮಗನನ್ನಾಗಿ ಪಡೆಯಬೇಕೆಂದು ತಪಸ್ಸು ಮಾಡಿದ್ದರು. ರೋಹಿಣಿಯೂ ಕೂಡ ಪರಮಾತ್ಮನ ಆವೇಶವುಳ್ಳ ಬಲಿಷ್ಠನಾದ ಮಗನನ್ನು ಪಡೆಯಬೇಕೆಂದು ತಪಸ್ಸು ಮಾಡಿದ್ದಳು. ಇದರ ಪ್ರತಿಫಲವಾಗಿ ಭಗವಂತನ ಶುಕ್ಲಕೇಶಾವೇಷವುಳ್ಳ ಶೇಷದೇವರು ದೇವಕಿಗೂ ಹಾಗೂ ರೋಹಿಣಿಗೂ ಮಗನಾಗಿ ಜನಿಸಿದರು.

ಭಗವಂತನು ಶುಕ್ಲಕೇಶದಿಂದ ಆ ಬಲಭದ್ರನಲ್ಲಿ ಆವಿಷ್ಟನಾದನು. ಬಲಭದ್ರನು ರೋಹಿಣಿಯಲ್ಲಿ ಜನಿಸಿ ನಂದಗೋಕುಲದಲ್ಲಿ ಬೆಳಗಿದನು.

ಸ ತತ್ರ ಮಾಸತ್ರಯಮುಷ್ಯ ದುರ್ಗಯಾಽ-

ಪವಾಹಿತೋ ರೋಹಿಣೀಗರ್ಭಮಾಶು ।

ನಿಯುಕ್ತಯಾ ಕೇಶವೇನಾಥ ತತ್ರ

ಸ್ಥಿತ್ವಾ ಮಾಸಾನ್ ಸಪ್ತಜಾತಃ ಪೃಥಿವ್ಯಾಮ್ ॥

ಶೇಷದೇವರು ದೇವಕಿಯ ಗರ್ಭದಲ್ಲಿ ಮೂರು ತಿಂಗಳ ಕಾಲ ವಾಸ ಮಾಡಿದರು. ಭಗವಂತನ ಆಜ್ಞೆಯಂತೆ ದುರ್ಗಾದೇವಿಯು ಅವನನ್ನು ರೋಹಿಣಿಯ ಗರ್ಭಕ್ಕೆ ಸಾಗಿಸಿದಳು. ಅಲ್ಲಿ ಏಳು ತಿಂಗಳ ಕಾಲ ವಾಸಮಾಡಿ, ಭೂಮಿಯಲ್ಲಿ ಜನಿಸಿದರು.

**ಆಜ್ಞಾಪಯಾಸಮಾಸ ಪುರಾ ಸ ಶೇಷಂ**
**ಜಜ್ಞೇ ಸ ರೋಹಿಣ್ಯುದರೋದಯಾದ್ರೇಃ ।**
**ಸಂ-ಪ್ರೇಷಯಂತಿ ಸ್ಮ ನರೈರ್ನರೇಂದ್ರಾಃ**
**ಶಯ್ಯಾಂ ಸ್ವ-ಕೀಯಾಂ ಪುರತಃ ಪ್ರಯಾಣೇ ॥ (ರು.ವಿ.೧-೨೬)**

ಜಗತ್ತಿನಲ್ಲಿ ರಾಜರು ತಾವು ಪ್ರಯಾಣ ಮೊದಲು ಹಾಸಿಗೆಯನ್ನು ಆಳುಗಳ ಮೂಲಕ ಕಳುಹಿಸುತ್ತಾರೆ. ಅದರಂತೆ ಜಗದೊಡೆಯನಾದ ಭಗವಂತನು ತನ್ನ ಹಾಸಿಗೆಯಾದ ಶೇಷದೇವರನ್ನು ಮೊದಲು ಭೂಲೋಕಕ್ಕೆ ಕಳುಹಿಸಿದನು. ಅದರಂತೆ ರೋಹಿಣಿದೇವಿಯ ಹೊಟ್ಟೆಯಲ್ಲಿ ಶೇಷದೇವರು ಬಲರಾಮನಾಗಿ ಹುಟ್ಟಿದರು. ಚಂದ್ರನು ಉದಯಪರ್ವತದಿಂದ ಉದಯಿಸಿದಂತೆ ಕಾಣಿಸಿತು.

## ದೇವಕಿಯ ಗರ್ಭಕ್ಕೆ ಭಗವಂತನ ಪ್ರವೇಶ

ಅಖಿಲಾಂಡಕೋಟಿಬ್ರಹ್ಮಾಂಡನಾಯಕನಾದ ದೇವದೇವೋತ್ತಮನಾದ ಭಗವಂತನು ತನ್ನ ತಲೆಯ ಕಪ್ಪುಕೂದಲಿನ ರೂಪದಿಂದ ವಸುದೇವನಲ್ಲಿ ಪ್ರವೇಶ ಮಾಡಿದನು. ಭಗವಂತನ ಯಾವುದೇ ಅವಯವಗಳಿಗೆ ಭೇದವಿಲ್ಲದ ಕಾರಣ ಪುರುಷಾಕಾರದಲ್ಲಿರುವ ಈ ಕಪ್ಪುಕೂದಲು ಸಾಕ್ಷಾತ್ ಮನ್ಮಥನಿಗೂ ಮನ್ಮಥನಂತೆ ದೇದೀಪ್ಯಮಾನವಾಗಿತ್ತು. ಪರಮಪುರುಷನಾದ ಭಗವಂತನ ತೇಜಸ್ಸು ಯಾವಾಗ ವಸುದೇವನಲ್ಲಿ ತುಂಬಿತೋ, ಆಗ ವಸುದೇವನು ಸೂರ್ಯನಂತೆ ಕಂಗೊಳಿಸಿದನು. ಮಹಾಬಲಿಷ್ಠಶಾಲಿಯಾದನು. ಅನಂತರ ವಸುದೇವನು ಅಚ್ಯುತಾಂಶನಾದ ಭಗವಂತನನ್ನು ದೇವಕಿಯ ಉದರದಲ್ಲಿ ಇರಿಸಿದನು. ದೇವಕಿಯು ಆ ಅಚ್ಯುತನನ್ನು ತನ್ನ ಉದರದಲ್ಲಿ ಧಾರಣೆ ಮಾಡಿದಳು. ಇಲ್ಲಿಯ ತನಕ ಕಾರಾಗೃಹದಲ್ಲಿ ಬಂಧಿತಳಾದ ದೇವಕಿಯು ಕಾಂತಿಹೀನಳಾಗಿದ್ದಳು. ಯಾವ ಕ್ಷಣದಲ್ಲಿ ಜಗದುದರನನ್ನು ತನ್ನ ಉದರದಲ್ಲಿ ಧರಿಸಿದಳೋ, ಆಗಿನಿಂದಲೇ ಅಗ್ನಿಜ್ವಾಲೆಯಂತೆ ಕಂಗೊಳಿಸಿದಳು.

ಕಾಂತಿಯುಕ್ತಳಾದ ತನ್ನ ತಂಗಿಯಾದ ದೇವಕಿಯನ್ನು ಕಂಡು ಕಂಸನಿಗೆ ವಿಸ್ಮಯವಾಯಿತು. ಭಗವಂತನು ಇವಳ ಉದರದಲ್ಲಿ ನೆಲೆಸಿರುವುದು ನಿಶ್ಚಯ. ನನ್ನ ಪರಾಕ್ರಮಕ್ಕೆ ಕಳಂಕವನ್ನು ತಂದುಕೊಳ್ಳಬಾರದೆಂಬ ದೃಷ್ಟಿಯಿಂದ ಗರ್ಭಿಣಿ ಸ್ತ್ರೀಯನ್ನು ವಧೆ ಮಾಡಲಿಲ್ಲ. ತನ್ನ ತಂಗಿಯೂ ಆಗಿರುವ ಕಾರಣ ಅವಳನ್ನು ನಾಶಮಾಡುವುದು ಆಯುಷ್ಯ-ಹಾನಿಕರವಾಗಿದೆಯೆಂದು ನಿಶ್ಚಯ ಮಾಡಿದನು. ದೇವಕಿಯನ್ನು ಕಂಸನು ಆಗಲೇ ಕೊಂದುಬಿಡಬಹುದಿತ್ತು. ಸಮರ್ಥನಾಗಿದ್ದನು. ಆದರೆ ಘೋರವಾದ ಆಲೋಚನೆಯನ್ನು ಬಿಟ್ಟುಬಿಟ್ಟನು. ಇದು ಹರಿಯ ಇಚ್ಛೆ.

ಶ್ರೀಹರಿಯು ಅವತರಿಸುವುದನ್ನೇ ಕಾದು ಕುಳಿತನು. ಕುಳಿತಾಗ, ನಿಂತಾಗ, ಮಲಗಿದಾಗ, ತಿಂದಾಗ, ತಿರುಗಾಡುವಾಗ, ನೀರುಕುಡಿಯುವಾಗ ಶ್ರೀಹರಿಯನ್ನೇ ಯೋಚನೆ ಮಾಡತೊಡಗಿದನು. ಜಗತ್ತಿನಲ್ಲಿ ಎಲ್ಲೆಲ್ಲಿಯೂ ಅವನಿಗೆ ಶ್ರೀಹರಿಯೇ ಕಾಣಿಸುತ್ತಿದ್ದನು. ಇದರಿಂದ ಬಹಳ ಭಯಭೀತನಾದನು. ಕಂಸನ ಹೃದಯದಲ್ಲಿ ಭಯ ಆವರಿಸಿತು.

ದೇವಕಿಯ ಗರ್ಭದಲ್ಲಿ ಕುಳಿತ ಜಗದೊಡೆಯನನ್ನು ಬ್ರಹ್ಮಾದಿದೇವತೆಗಳು ಬಂದು ಬಗೆಬಗೆಯಾಗಿ ಸ್ತುತಿಸಿದರು. ಇದುವೇ ಗರ್ಭಸ್ತುತಿ. (ಈ ಗರ್ಭಸ್ತುತಿಯು ಭಾಗವತದ ದಶಮಸ್ಕಂಧದ ಮೂರನೆಯ ಅಧ್ಯಾಯದಲ್ಲಿ ಬರುತ್ತದೆ. ಇದನ್ನು ಪಾರಾಯಣ ಮಾಡುವುದರಿಂದ ಗರ್ಭದ ರಕ್ಷಣೆಯಾಗುತ್ತದೆ. ಹಾಗೂ ಉತ್ತಮ ಸಂತತಿಯು ಪ್ರಾಪ್ತವಾಗುತ್ತದೆ. ಪ್ರತಿಯೊಬ್ಬರೂ ಈ ಸ್ತೋತ್ರವನ್ನು ಅರ್ಥಸಹಿತವಾಗಿ ಪಾರಾಯಣ ಮಾಡಬೇಕು.)

## ಗರ್ಭಸ್ತುತಿ

ಬ್ರಹ್ಮದೇವರು, ರುದ್ರದೇವರು, ನಾರದಾದಿಗಳು, ಸಕಲದೇವತೆಗಳು, ದೇವತೆಗಳ ಅನುಚರರು ದೇವಕಿಯ ಬಳಿಗೆ ಬಂದರು. ಅರ್ಥಗರ್ಭಿತವಾದ ಮಾತುಗಳಿಂದ ಭಗವಂತನನ್ನು ಭಕ್ತಿಪರವಶರಾಗಿ ಕೊಂಡಾಡಿದರು, ಸ್ತುತಿಸಿದರು, ಆರಾಧನೆಗೈದರು ನಮಿಸಿದರು.

# ಸತ್ಯಸ್ವರೂಪನಿಗೆ ನಮೋನಮಃ

**ಸತ್ಯವ್ರತಂ ಸತ್ಯಪರಂ ತ್ರಿಸತ್ಯಂ ಸತ್ಯಸ್ಯ ಯೋನಿಂ ನಿಹಿತಂ ಚ ಸತ್ಯೇ।**
**ಸತ್ಯಸ್ಯ ಸತ್ಯಮುತ ಸತ್ಯನೇತ್ರಂ ಸತ್ಯಾತ್ಮಕಂ ತ್ವಾಂ ಶರಣಂ ಪ್ರಪನ್ನಾಃ॥**

ಓ ಭಗವಂತನೇ! ನೀನು ಪೂರ್ಣವಾದ ಆನಂದಜ್ಞಾನ- ಸ್ವರೂಪನಾಗಿರುವಿ. ಸತ್ಯವನ್ನೇ ಹೇಳುವ ನಿಯಮವನ್ನು ಹೊಂದಿರುವಿ. ಆದ್ದರಿಂದ ನಿಜವಾದ ಸತ್ಯವತ್ರ ಎಂದರೆ ನೀನೊಬ್ಬನೇ. ಸತ್ ಎಂಬ ಹೆಸರುಳ್ಳ ಪೃಥ್ವಿ, ಅಪ್, ತೇಜಸ್ಸುಗಳಿಂದ ತ್ಯ ಎಂಬ ಹೆಸರುಳ್ಳ ವಾಯು-ಆಕಾಶಗಳಿಂದ ವಿಲಕ್ಷಣನಾಗಿರುವ ಕಾರಣದಿಂದ ನಿನ್ನನ್ನು ಸತ್ಯ ಎನ್ನುತ್ತಾರೆ. ಸತ್ಯ ಎನಿಸುವ ಧರ್ಮವನ್ನು ರಕ್ಷಿಸುವ ಕಾರಣ ನಿನ್ನನ್ನು ಸತ್ಯಪರ ಎನ್ನುತ್ತಾರೆ. ಮೂರು ವೇದಗಳ ಮುಖ್ಯಾರ್ಥನಾದ ಕಾರಣದಿಂದ ಮೂರ ಲೋಕಗಳು ನಾಶವನ್ನು ಹೊಂದಿದರೂ ನೀನು ನಾಶವಾಗದ ಕಾರಣದಿಂದ ನೀನು 'ತ್ರಿಸತ್ಯ' ಎನಿಸುವಿ. ಯಥಾರ್ಥವಾದ ಪ್ರಪಂಚಕ್ಕೆ ಮೂಲಕಾರಣನಾದ ಪ್ರಯುಕ್ತ ನೀನು ಸತ್ಯಸ್ಯ ಯೋನಿ ಎನಿಸಿರುವಿ. ಸತ್ಯಭೂತವಾದ ಪ್ರಪಂಚಕ್ಕೂ ನಿಯಾಮಕನಾಗಿರುವ ಕಾರಣ ಮುಖ್ಯಪ್ರಾಣ- ದೇವರು ಸತ್ಯ ಎನಿಸುವರು. ಆ ಮುಖ್ಯಪ್ರಾಣದೇವರಲ್ಲಿ ನಿತ್ಯಸನ್ನಿಹಿತನಾಗಿರುವ ಕಾರಣ ನೀನು ಸತ್ಯೇ ನಿಹಿತ ಎನಿಸುವಿ. ಸತ್ಯಭೂತವಾದ ಪ್ರಪಂಚಕ್ಕೆ ಸತ್ಯವನ್ನು = ಉತ್ತಮವಾದ ಆನಂದಜ್ಞಾನಗಳನ್ನು ಕೊಡುವುದರಿಂದ 'ಸತ್ಯಸ್ಯ ಸತ್ಯ' ಎನಿಸುವಿ. ಸತ್ಯಭೂತವಾದ ಪ್ರಪಂಚಕ್ಕೆ ನೀನು ನಿಯಾಮಕನಾಗಿರುವ ಕಾರಣ ಸತ್ಯನೇತ್ರ ಎನಿಸುವಿ. ಸತ್ಯಭೂತವಾದ ಪ್ರಪಂಚವನ್ನು ಸಂಹಾರ ಮಾಡುವ ಕಾರಣದಿಂದ ಆತ್ಮನ ಸುಖಕ್ಕೆ ನೀನು ಕಾರಣನಾಗಿರುವುದರಿಂದಲೂ 'ಸತ್ಯಾತ್ಮಕ' ಎಂದು ಕರೆಯಿಸಿಕೊಳ್ಳುವಿ. ಇಂಥ ನಿನ್ನನ್ನು ನಾವೆಲ್ಲರೂ ಭಕ್ತಿಪರವಶರಾಗಿ ಮೊರೆಹೊಕ್ಕಿದ್ದೇವೆ. ನಿನ್ನನ್ನೇ ಅಚಲವಾಗಿ ನಂಬಿದ್ದೇವೆ.

# ಜಗದ್ವೃಕ್ಷಕ್ಕೆ ನೀನೇ ಆಶ್ರಯ

**ಏಕಾಯನೋಽಸೌ ದ್ವಿಫಲಸ್ತ್ರಿಮೂಲಶ್ಚತೂರಸಃ ಪಂಚಶಿಫಃ ಷಡಾತ್ಮಾ।**
**ಸಪ್ತತ್ವಗಷ್ಟವಿಟಪೋ ನವಾಕ್ಷೋ ದಶಚ್ಛದೀ ದ್ವಿಖಗೋ ಹ್ಯಾದಿವೃಕ್ಷಃ ॥**

ಈ ಜಗತ್ತೇ ಒಂದು ವೃಕ್ಷ. ಆದರ ತಾಯಿ ಬೇರು ಮೂಲ ಪ್ರಕೃತಿ. ಪ್ರವೃತ್ತಕರ್ಮ ಹಾಗೂ ನಿವೃತ್ತಕರ್ಮಗಳು ಎರಡು ಹಣ್ಣುಗಳು. ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳು ಹೊಸದಾದ ಮೂರು ಬೇರುಗಳು. ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಇವು ನಾಕು ಹಣ್ಣಿನ ರಸಗಳು. ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಐದು ವಿಷಯಪದಾರ್ಥಗಳೇ ಐದು ರೆಂಬೆಯಿಂದ ಕೆಳಗಿಳಿದ ಬೇರುಗಳು. ಭ್ರೂಣಾವಸ್ಥೆ, ಭ್ರೂಣದಿಂದ ಶರೀರದ ಮಾರ್ಪಾಡು. ಶರೀರದ ಬೆಳವಣಿಗೆ. ಶರೀರದ ರೂಪಾಂತರ, ಶರೀರದ ಕ್ಷಯ, ಶರೀರದ ಮರಣ. ಈ ಆರು ಅವಸ್ಥೆಗಳು, ಆರು ಸ್ವಭಾವಗಳು. ತ್ವಕ್, ಚರ್ಮ, ಮಾಂಸ, ಮಜ್ಜ, ಮೇಧ, ಅಸ್ಥಿ ಇವು ಏಳು ತೊಗಟೆಗಳು. ದೇವ, ಗಂಧರ್ವ, ದಾನವ, ರಾಕ್ಷಸ, ಪಿಶಾಚ, ತಿರ್ಯಕ್, ಮನುಷ್ಯ, ಸ್ಥಾವರ ಇವು ಎಂಟು ಕೊಂಬೆಗಳು. ಎರಡು ಕಣ್ಣು, ಎರಡು ಕಿವಿ, ಎರಡು ಮೂಗಿನ ಹೊಳ್ಳೆ, ಬಾಯಿ, ಮಲ-ಮೂತ್ರ ದ್ವಾರಗಳೆಂಬುದೇ ಒಂಬತ್ತು ಪೊಟರೆಗಳು. ಪಂಚಜ್ಞಾನೇಂದ್ರಿಯ ಹಾಗೂ ಪಂಚಕರ್ಮೇಂದ್ರಿಯಗಳೇ ಹತ್ತು ಎಲೆಗಳು. ಪ್ರವೃತ್ತಕರ್ಮ, ನಿವೃತ್ತಕರ್ಮ ಎಂಬ ಎರಡು ಹಕ್ಕಿಗಳು ಈ ವೃಕ್ಷದಲ್ಲಿ ಕುಳಿತಿವೆ. ಈ ವೃಕ್ಷವೇ ಆದಿವೃಕ್ಷ ಎಂದು ಕರೆಸಿಕೊಳ್ಳುತ್ತದೆ. ಇಂಥ ಆದಿವೃಕ್ಷಕ್ಕೆ ನೀನೇ ಆಶ್ರಯನಾಗಿರುವಿ.

## ಸೃಷ್ಟಿ-ಸ್ಥಿತಿ-ಸಂಹಾರಕ ನೀನೊಬ್ಬನೇ!

ತ್ವಮೇಕ ಏವಾಸ್ಯ ಸತಃ ಪ್ರಸೂತಿಃ
ಸ್ಥಾನಂ ನಿಧಾನಂ ತ್ವಮನುಗ್ರಹಶ್ಚ ।
ತ್ವನ್ಮಾಯಯಾ ಸಂವೃತಚೇತಸಸ್ತ್ವಾಂ
ಪಶ್ಯಂತಿ ನಾನಾ ನ ವಿಪಶ್ಚಿತೋ ಯೇ ॥

ಸತ್ಯಭೂತವಾದ ಈ ಪ್ರಪಂಚಕ್ಕೆ ನೀನು ಒಬ್ಬನೇ ಕಾರಣಕರ್ತನಾಗಿರುವಿ. ಜಗತ್ತಿನ ರಕ್ಷಣೆಯನ್ನು ಮಾಡುವುದು ನಿನಗೆ ಮಾತ್ರ ಸಾಧ್ಯವಿದೆ. ಇದರ ಸಂಹಾರವನ್ನು ಮಾಡುವ ಶಕ್ತಿ ನಿನಗೊಬ್ಬನಿಗೆ ಮಾತ್ರ ಇರುತ್ತದೆ. ಆದ್ದರಿಂದ ಈ ಜಗತ್ತಿಗೆ ನೀನೊಬ್ಬನೇ ಮುಖ್ಯ ಆಧಾರ. ಆದರೆ ಮೋಹಕ್ಕೆ ತುತ್ತಾದ ಅಜ್ಞಾನಿಗಳು ಸೃಷ್ಟಿ-ಸ್ಥಿತಿ-ಸಂಹಾರಕರು ಬೇರೆ ಬೇರೆ ಇದ್ದಾರೆ ಎನ್ನುತ್ತಾರೆ. ನಿಜವಾದ ಜ್ಞಾನಿಗಳು ಹಾಗೇ ಹೇಳುವುದಿಲ್ಲ.

## ಭಕ್ತರ ಉದ್ಧಾರಕ್ಕಾಗಿ ಅನೇಕ ಅವತಾರಗಳನ್ನು ಮಾಡುವಿ

ಬಿಭರ್ಷಿ ರೂಪಾಣ್ಯವಬೋಧ ಆತ್ಮನ್
ಕ್ಷೇಮಾಯ ಲೋಕಸ್ಯ ಚರಾಚರಸ್ಯ ।
ಸತ್ತ್ವೋಪಪನ್ನಾನಿ ಸುಖಾವಹಾನಿ
ಸತಾಮಭದ್ರಾಣಿ ಮುಹುಃ ಖಲಾನಾಮ್ ॥

ಜ್ಞಾನಸ್ವರೂಪನಾದ ನೀನು ಚೇತನಾಚೇತನಾತ್ಮಕವಾದ ಪ್ರಪಂಚದ ಕ್ಷೇಮಕ್ಕಾಗಿ ಅನೇಕ ಅವತಾರಗಳನ್ನು ಧಾರಣೆ ಮಾಡುವಿ. ಆ ಎಲ್ಲ ಅವತಾರಗಳು ದುರ್ಜನರಿಗೆ ದುಃಖಪ್ರದವಾಗಿವೆ. ಸಜ್ಜನರಿಗೆ ಸುಖಪ್ರದವಾಗಿದೆ. ಎಲ್ಲವೂ ಸಕಲ ಸದ್ಗುಣಗಳಿಂದ ಪರಿಪೂರ್ಣವಾಗಿವೆ. ಇಂಥ ಅವತಾರಗಳನ್ನು ಭಕ್ತರ ಉದ್ಧಾರಕ್ಕಾಗಿ ಪುನಃ ಪುನಃ ನೀನು ಧಾರಣೆ ಮಾಡಿರುವಿ.

## ಸಂಸಾರ ದಾಟಲು ನಿನ್ನ ಪಾದಗಳೇ ಎನ್ನ ನೌಕೆ

ತ್ವಯ್ಯಂಬುಜಾಕ್ಷಾಖಿಲಸತ್ತ್ವಧಾಮ್ನಿ
ಸಮಾಧಿನಾಽವೇಶಿತಚೇತಸೋ ಯೇ ।
ತ್ವತ್ಪಾದಪೋತೇನ ಮಹತ್ಕೃತೇನ
ಕುರ್ವಂತಿ ಗೋವತ್ಸಪದಂ ಭವಾಬ್ಧಿಮ್ ॥

ಅರವಿಂದದಳಾಯತಾಕ್ಷನೇ! ಸಮಸ್ತ ಚೇತನಗಳಿಗೆ ನೀನೊಬ್ಬನೇ ಆಧಾರನಾಗಿರುವಿ. ಯಾವ ಭಕ್ತನು ಅಚಲವಾಗಿ ನಿನ್ನಲ್ಲಿ ಮನಸ್ಸನ್ನು ನಿಲ್ಲಿಸುವನೋ, ಅವನು ನಿನ್ನ ಪಾದಗಳೆಂಬ ನೌಕೆಯ ಸಹಾಯದಿಂದ ಸಂಸಾರಸಾಗರವನ್ನು ದಾಟುವನು. ಸಣ್ಣ ತೊರೆಯನ್ನು ಹೆಜ್ಜೆಯಲ್ಲಿ ಅನಾಯಾಸವಾಗಿ ಹೇಗೆ ದಾಟಬಹುದೋ, ಅದರಂತೆ ಅನಂತವಾದ ಈ ಸಂಸಾರವನ್ನು ಅಪಾರವಾದ ಸಂಸಾರಸಾಗರವನ್ನು ಕರುವಿನ ಹೆಜ್ಜೆಯಷ್ಟು ಮಡಿಕೊಂಡು ಸುಲಭವಾಗಿ ದಾಟಬಹುದು.

## ನಿನ್ನ ಪಾದನೌಕೆಯನ್ನು ಎಂದಿಗೂ ಬಿಡಲಾರೆ

ಸ್ವಯಂ ಸಮುತ್ತೀರ್ಯ ಸುದುಸ್ತರಂ ದ್ಯುಮನ್
ಭವಾರ್ಣವಂ ಭೀಮಮದಭ್ರಸೌಹೃದಾಃ ।

ಭವತ್ಪದಾಂಬೋರುಹನಾವಮತ್ರ ತೇ
ನಿಧಾಯ ಯಾತಾಃ ಸದನುಗ್ರಹೋ ಭವಾನ್ ॥

ಓ ವಿಜ್ಞಾನಸ್ವರೂಪನೇ! ಜ್ಞಾನಿಜನರು ನಿನ್ನಲ್ಲಿ ಪರಮಭಕ್ತಿಯನ್ನು ಮಾಡುತ್ತಾರೆ. ಬೇರೆಯವರಿಂದ ದಾಟಲು ಸಾಧ್ಯವಾಗದ ಭಯಾನಕವಾದ ಸಂಸಾರ ಸಾಗರವನ್ನು ಸುಲಭವಾಗಿ ದಾಟುತ್ತಾರೆ. ಶಿಷ್ಯರಿಗೂ, ನಿನ್ನ ಪಾದನೌಕೆಯನ್ನು ಪರಿಚಯಿಸುತ್ತಾರೆ. ತಾನು ಆ ನೌಕೆಯನ್ನು ಏರಿ ಮೋಕ್ಷವನ್ನೇ ಹೊಂದುತ್ತಾರೆ. ಹೀಗೆ ಸಜ್ಜನರಿಗೆ ಪರಮಾನುಗ್ರಹ ಮಾಡುವ ನಿನ್ನನ್ನೇ ನಾವು ಶರಣಾಗತರಾಗಿದ್ದೇವೆ.

## ಅಜ್ಞಾನಿಗಳ ಸ್ಥಿತಿ ಎನಗೆ ಬೇಡ

ಯೇಽನ್ಯೇಽರವಿಂದಾಕ್ಷ ವಿಮುಕ್ತಮಾನಿನ- ಸ್ತ್ವಯ್ಯಸ್ತಭಾವಾದವಿಶುದ್ಧಬುದ್ಧಯಃ ।
ಆರುಹ್ಯ ಕೃಚ್ಛ್ರೇಣ ಪರಂ ಪದಂ ತತಃ
ಪತ್ಯಂತಧೋ ನಾದೃತಯುಷ್ಮದಂಘ್ರಯಃ ॥

ಕಮಲಾಕ್ಷನೇ ! ಅಜ್ಞಾನಿಗಳು ಎಂದಿಗೂ ನಿನ್ನಲ್ಲಿ ಭಕ್ತಿಯನ್ನು ಮಾಡುವುದಿಲ್ಲ. ನಿನ್ನ ಪಾದಗಳನ್ನು ಆಶ್ರಯಿಸುವುದಿಲ್ಲ. ಆದರೂ ತಾವೇ ಮುಕ್ತರಾಗಿದ್ದೇವೆಂದು ಬೀಗುತ್ತಾರೆ. ಶ್ರಮಸಾಧ್ಯವಾದ ಕಾಮ್ಯಕರ್ಮಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಆದರೆ ಎಂದಿಗೂ ಇವರಿಗೆ ಮುಕ್ತಿ ಸಿಗುವುದಿಲ್ಲ. ಸ್ವರ್ಗವನ್ನು ಹೊಂದಿ ಪುನಃ ಇಲ್ಲಿಯೇ ಬಿದ್ದುಬಿಡುತ್ತಾರೆ.

## ನಿನ್ನ ಭಕ್ತರಿಗೆ ಯಾವ ಭಯವೂ ಇಲ್ಲ

ತಥಾ ನ ತೇ ಮಾಧವ ತಾವಕಾಃ ಕ್ವಚಿದ್
ಭ್ರಶ್ಯಂತಿ ಮಾರ್ಗಾತ್ ತ್ವಯಿ ಬದ್ಧಸೌಹೃದಾಃ ।
ತ್ವಯಾಭಿಗುಪ್ತಾ ವಿಚರಂತಿ ನಿರ್ಭಯಾ ವಿನಾಯಕಾನೀಕಪಮೂರ್ಧಸು ಪ್ರಭೋ ॥

ಲಕ್ಷ್ಮೀಪತಿಯೇ ! ಯಾವ ಭಕ್ತನು ಅಚಲವಾಗಿ ನಿನ್ನನ್ನೇ ನಂಬಿ ಆರಾಧನೆ ಮಾಡುತ್ತಾನೋ, ಆ ಭಕ್ತಿಯಿಂದ ನಿನ್ನಲ್ಲಿ ತಲ್ಲೀನನಾಗುತ್ತಾನೋ, ಅವನಿಗೂ ಎಂದೂ ಚ್ಯುತಿ ಇರುವುದಿಲ್ಲ. ನಿರಂತರ ನಿನ್ನ ರಕ್ಷಣೆಯಿಂದ ಬೆಳಗುತ್ತಾನೆ. ಎಂಥ ವಿಘ್ನಗಳು ಬಂದರೂ ಎದುರಿಸುತ್ತಾನೆ. ಆ ವಿಘ್ನಗಳ ಕಡಲನ್ನು ಮೆಟ್ಟಿ ಮುಂದೆ ಸಾಗುತ್ತಾನೆ.

## ಶರೀರವು ಸಾಧನೆಗೆ ಮುಖ್ಯ ತಾಣ

ಸತ್ತ್ವಂ ವಿಶುದ್ಧಂ ಶ್ರಯತೇ ಭವಾನ್ ಸ್ಥಿತೌ
ಶರೀರಿಣಾಂ ಶ್ರೇಯ ಉಪಾಯನಂ ವಪುಃ ।
ವೇದಕ್ರಿಯಾಯೋಗತಪಃಸಮಾಧಿಭಿಃ
ತವಾರ್ಹಣಂ ಯೇನ ಜನಃ ಸಮೀಹತೇ ॥

ಸ್ಥಿತಿಕಾಲದಲ್ಲಿ ಶುದ್ಧಸತ್ವಾತ್ಮಕವಾದ ಬ್ರಹ್ಮದೇವರ ಶರೀರದಲ್ಲಿ ನಿಂತು ನೀನು ಪ್ರತಿಯೊಬ್ಬರನ್ನು ರಕ್ಷಣೆ ಮಾಡುವಿ. ಭಕ್ತರಿಗೆ ಶರೀರವು ತಮ್ಮ ಶ್ರೇಯಸ್ಸಿನ ಸಾಧನವಾಗಿದೆ. ವೇದಾಧ್ಯಯನ, ಯೋಗ, ತಪಸ್ಸು, ಸಮಾಧಿ ಇವುಗಳನ್ನು ಮಾಡಲು ಭಕ್ತರು ತಮ್ಮ ಶರೀರವನ್ನು ನಿನ್ನ ಆರಾಧನೆಗೆ ಉಪಯೋಗಿಸಿಕೊಂಡು ಧನ್ಯರಾಗುವರು.

## ಚತುರ್ಮುಖಬ್ರಹ್ಮದೇವರಲ್ಲಿ ನೆಲೆಸಿರುವವನು ನೀನೇ

ಸತ್ತ್ವಂ ನ ಚೇದ್ಧಾತರಿದಂ ನಿಜಂ ಭವೇತ್ ವಿಜ್ಞಾನಮಜ್ಞಾನಭಿದಾಪ ಮಾರ್ಜನಮ್ ।
ಗುಣಪ್ರಕಾಶೈರನುಮೀಯತೇ ಭವಾನ್
ಪ್ರಕಾಶತೇ ಯಸ್ಯ ಚ ಯೇನ ವಾಽಗುಣಃ ॥

ಓ ಕರುಣಾತ್ಮನೇ ! ಚತುರ್ಮುಖಬ್ರಹ್ಮದೇವರ ಶರೀರವು ನಿನ್ನ ಸನ್ನಿಧಾನಕ್ಕೆ ಪಾತ್ರವಾಗಿದೆ. ಆದ್ದರಿಂದಲೇ ಅಜ್ಞಾನದ ಲೇಪವನ್ನೂ ಕೂಡ ಅದು ಹೊಂದಿರುವುದಿಲ್ಲ. ಶುದ್ಧವಾದ ಸತ್ವಾತ್ಮಕವಾಗಿದೆ. ಪ್ರಕಾಶಮಾನವಾಗಿದೆ. ಅಂಥ ಜ್ಞಾನಪ್ರಕಾಶ ಹೊಂದಿರುವ ಬ್ರಹ್ಮಾದಿಗಳ ಉಪದೇಶದಿಂದ ಜಿಜ್ಞಾಸುವು ಯಥಾರ್ಥವಾದ ತತ್ವಜ್ಞಾನವನ್ನು ಪಡೆದುಕೊಳ್ಳುತ್ತಾನೆ. ಚತುರ್ಮುಖಬ್ರಹ್ಮದೇವರ ಉಪದೇಶವಿಲ್ಲದೇ ಯಾರಿಗೂ ನಿನ್ನನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ಇದಕ್ಕೆ ನಿನ್ನ ಸನ್ನಿಧಾನವೇ ಮುಖ್ಯಕಾರಣ.

## ನಿನ್ನ ಅನುಗ್ರಹವಿಲ್ಲದೇ ಏನೂ ಸಾಧ್ಯವಿಲ್ಲ

ನ ನಾಮ ರೂಪೇ ಗುಣಕರ್ಮಜನ್ಮಭಿರ್ನಿರೂಪಿತವ್ಯೇ ತವ ತಸ್ಯ ಸಾಕ್ಷಿಣಃ ।
ಮನೋವಚೋಭ್ಯಾಮನುಮೇಯವರ್ತ್ಮನೋ
ದೇವಕ್ರಿಯಾಯಾಃ ಪ್ರತಿಯಂತ್ಯಥಾಪಿ ಹಿ ॥

ಓ ದೇವೋತ್ತಮನೇ! ನಿನ್ನ ಗುಣಗಳನ್ನು, ಕರ್ಮಗಳನ್ನು, ಅವತಾರಗಳನ್ನು ತಿಳಿಯಲು ಯಾರಿಂದಲೂ ಸಾಧ್ಯವಿಲ್ಲ. ಪ್ರತಿಯೊಂದೂ ಕೂಡ ಅಲೌಕಿಕವಾಗಿವೆ. ತಿಳಿಯುವುದಾಗುವುದಿಲ್ಲ ಎಂದಷ್ಟೇ ಅಲ್ಲ. ಮಾತಿನಿಂದಲೂ ವರ್ಣಿಸಲು ಸಾಧ್ಯವಿಲ್ಲ. ಅಲ್ಪಸ್ವಲ್ಪ ತಿಳಿದಿದ್ದನ್ನೂ ಹೇಳಲೂ ಕೂಡ ನಿನ್ನ ಅನುಗ್ರಹವೇ ಬೇಕು. ನಾಮಾರೂಪಾತ್ಮಕವಾದ ಈ ಎಲ್ಲ ಪ್ರಪಂಚವನ್ನು ಕಾಣಲು ನೀನೊಬ್ಬನೇ ಕಾಣಲು ಸಾಧ್ಯ. ಜ್ಞಾನಿಗಳಿಂದಷ್ಟೇ ನಿನ್ನ ಸ್ವರೂಪವನ್ನು ಅಲ್ಪಸ್ವಲ್ಪ ನಾವು ತಿಳಿಯಬಹುದು. ಅದಕ್ಕೂ ಕೂಡ ನಿನ್ನ ಅನುಗ್ರಹವೇ ಬೇಕು. ನಿನ್ನ ಅನುಗ್ರಹದಿಂದಷ್ಟೇ ಜಿಜ್ಞಾಸುಗಳು ನಿನ್ನನ್ನು ತಿಳಿಯಲು ಪ್ರವೃತ್ತರಾಗುತ್ತಾರೆ.

## ಯಾರಿಗೆ ಸಂಸಾರವಿಲ್ಲ

ಶೃಣ್ವನ್ ಗೃಣನ್ ಸಂಸ್ಮರಯಂಶ್ಚ ಚಿಂತಯನ್
ನಾಮಾನಿ ರೂಪಾಣಿ ಚ ಮಂಗಲಾನಿ ತೇ ।
ಕ್ರಿಯಾಸು ಯಸ್ತ್ವಚ್ಚರಣಾರವಿಂದಯೋ-
ರಾವಿಷ್ಟಚಿತ್ತೋ ನ ಭವಾಯ ಕಲ್ಪತೇ ॥

ಮಂಗಳಕರವಾದ ನಿನ್ನ ನಾಮಸ್ಮರಣೆ, ರೂಪಸ್ಮರಣೆ, ಕ್ರಿಯಾಸ್ಮರಣೆಗಳನ್ನು ಯಾರು ಮಾಡುತ್ತಾರೋ, ನಿನ್ನ ಚರಿತ್ರೆಯನ್ನು ಯಾರು ಶ್ರವಣ ಮಾಡುತ್ತಾರೋ, ನಿನ್ನ ಗುಣಗಳನ್ನು ಯಾರು ಕೀರ್ತನೆ ಮಾಡುತ್ತಾರೋ, ನಿನ್ನ ಸ್ಮರಣೆ ಧ್ಯಾನಗಳನ್ನು ನಡೆಸುತ್ತಾ ಯಾರು ನಿನ್ನ ಪಾದಕಮಲಗಳಲ್ಲಿ ಆಸಕ್ತರಾಗಿರುತ್ತಾರೋ, ಅವನು ಸಂಸಾರದಲ್ಲಿ ಇರಲು ಸಾಧ್ಯವಿಲ್ಲ. ಆದರೆ ನೀನೇ ನಮ್ಮೊಳಗೆ ನಿಂತು ಹೀಗೆ ಮಾಡಿಸಬೇಕು. ನೀನೇ ಉಪಾಸ್ಯನೂ ಉಪಾಸಕನೂ ಆಗಬೇಕು. ನಾನು ಎಂಬುದು ಕೇವಲ ನಿಮಿತ್ತ. ನೀನು ಮಾತ್ರ ಸರ್ವತಂತ್ರಸ್ವತಂತ್ರನೆಂದು ತಿಳಿದವನಷ್ಟೇ ನಿಜವಾದ ಸಾಧಕನಾಗುತ್ತಾನೆ.

## ಶ್ರೀಹರಿಯೇ ನಿನ್ನ ಅವತಾರಕ್ಕಾಗಿ ನಾವು ಕಾಯುತ್ತಿದ್ದೇವೆ

ದಿಷ್ಟ್ಯಾ ಹರೇಽಸ್ಯಾ ಭವತಂ ಪದೋ ಭುವೋ
ಭಾರೋಽಪನೀತಸ್ತವ ಜನ್ಮನೇಶಿತುಃ ।

ದಿಷ್ಟ್ಯಾಂಕಿತಾಂ ತ್ವತ್ಪದಕೈಃ ಸುಶೋಭನೈ-
ರ್ದ್ರಕ್ಷ್ಯಾಮ ಗಾಂ ದ್ಯಾಂ ಚ ತಾವನುಕಂಪಿತಾಮ್ ॥

ಶ್ರೀಹರಿಯೇ! ನಿನ್ನ ಅವತಾರದಿಂದ ಭೂಭಾರವು ನಾಶವಾಗುವುದರಲ್ಲಿ ಸಂಶಯವಿಲ್ಲ. ನಿನ್ನ ಅವತಾರದ ಕ್ಷಣಗಳು ನಮ್ಮೆಲ್ಲರಿಗೂ ಹರ್ಷವುಂಟುಮಾಡುತ್ತಿವೆ. ಸುಂದರವಾದ ಧ್ವಜವಜ್ರಾಂಕುಶಾದಿಗಳಿಂದ ಕೂಡಿದ ನಿನ್ನ ಕೋಮಲವಾದ ಪಾದಗಳ ಹೆಜ್ಜೆಗಳ ಗುರುತು ಯಾವಾಗ ಈ ಭೂಮಿಯಲ್ಲಿ ಮೂಡುತ್ತದೋ ಅದನ್ನು ನಾವು ಯಾವಾಗ ಕಣ್ತುಂಬ ನೋಡುತ್ತೇವೋ! ಎಂಬ ಕಾತರದಿಂದ ಇದ್ದೇವೆ. ನಾವೆಲ್ಲರೂ ಇದಕ್ಕಾಗಿ ಹರ್ಷ ಪಡುತ್ತಿದ್ದೇವೆ.

## ಜನನ ಮರಣಗಳು ನಿನಗಿಲ್ಲ

ನ ತೇ ಭವಸ್ಯೇಶ ಭವಸ್ಯ ಕಾರಣಂ
ವಿನಾ ವಿನೋದಂ ಬತ ತರ್ಕಯಾಮಹೇ ।
ಭವೋ ನಿರೋಧಃ ಸ್ಥಿತಿರಪ್ಯವಿದ್ಯಯಾ
ಕೃತಾ ಯತಸ್ತ್ವಯ್ಯಭಯಾಶ್ರಯಾತ್ಮನಿ ॥

ನಿನ್ನ ಅವತಾರವೇ ಒಂದು ಲೀಲೆ. ನಿನಗೆ ಜನ್ಮವಿಲ್ಲ, ಮರಣವಿಲ್ಲ. ಮತ್ತೊಬ್ಬರ ರಕ್ಷಣೆಯೂ ನಿನಗಿಲ್ಲ. ಸಂಸಾರಗಳಿಗೆ ಜನನ-ಮರಣಗಳಿಂದ ಮೋಕ್ಷವನ್ನು ನೀಡುವ ಸಕಲ ಮುಕ್ತರಿಗೆ ಆಶ್ರಯವನ್ನು ನೀಡುವ ನಿನಗೆ ಜನನ ಮರಣ ಇರಲು ಹೇಗೆ ಸಾಧ್ಯ ? ನಿನ್ನಿಚ್ಛೆಯಿಂದಷ್ಟೇ ಸಂಸಾರಿಗಳು ಜನನ-ಮರಣಾದಿಗಳಿಂದ ತತ್ತರಿಸುತ್ತಾರೆ.

## ಭೂಭಾರವನ್ನು ಪರಿಹರಿಸು

ಮತ್ಸ್ಯಾಶ್ವಕಚ್ಛಪನೃಸಿಂಹವರಾಹಹಂಸ-
ರಾಜನ್ಯವಿಪ್ರವಿಬುಧೇಷು ಕೃತಾವತಾರಃ ।
ತ್ವಂ ಪಾಸಿ ನಸ್ತ್ರಿಭುವನಂ ಚ ತಥಾಧುನೇಶ
ಭಾರಂ ಭುವೋ ಹರ ಯದೂತ್ತಮ ವಂದನಂ ತೇ ॥

ಯದುಕುಲೋತ್ತಮನೇ ! ನೀನು ಮತ್ಸ್ಯ, ಹಯಗ್ರೀವ, ಕೂರ್ಮ, ನರಸಿಂಹ, ವರಾಹ, ಹಂಸ, ಪರಶುರಾಮ, ಶ್ರೀರಾಮ, ವಾಮನ, ಹೀಗೆ ಅನೇಕ ಅವತಾರಗಳನ್ನು

ಧರಿಸಿರುವಿ. ತನ್ಮೂಲಕವಾಗಿ ಸಜ್ಜನರನ್ನು, ಮೂರು ಲೋಕಗಳನ್ನು ರಕ್ಷಣೆ ಮಾಡಿರುವಿ. ಇದರಂತೆ ಪ್ರಕೃತ ಕೃಷ್ಣನಾಗಿ ಅವತರಿಸಿ ಪೃಥಿವಿಯ ಭಾರವನ್ನು ಪರಿಹರಿಸು. ನಿನಗೆ ನಮ್ಮ ಭಕ್ತಿಪೂರ್ವಕದ ಅನೇಕ ನಮಸ್ಕಾರಗಳು.

## ದೇವಕಿ ! ಹೆದರಬೇಡ

**ದಿಷ್ಟ್ಯಾಽಂಬ ತೇ ಕುಕ್ಷಿಗತಃ ಪರಃ ಪುಮಾನ್**

**ಅಂಶೇನ ಸಾಕ್ಷಾದ್ಭಗವಾನ್ ಭವಾಯ ನಃ ।**

**ಮಾಭೂದ್ಭಯಂ ಭೋಜಪತೇರ್ಮುಮೂರ್ಷೋ-**

**ರ್ಗೋಪ್ತಾ ಯದೂನಾಂ ಭವಿತಾ ತವಾತ್ಮಜಃ ॥**

ತಾಯಿ ದೇವಕಿಯೇ ! ನಮ್ಮೆಲ್ಲರ ಭಾಗ್ಯದಿಂದ ಪರಮಪುರುಷನಾದ ಭಗವಂತನು ಸ್ವರೂಪಾಂಶದಿಂದ ಲೋಕಕಲ್ಯಾಣಕ್ಕಾಗಿ ನಿನ್ನ ಉದರವನ್ನು ಪ್ರವೇಶಿಸಿದ್ದಾನೆ. ದುಷ್ಟನಾದ ಕಂಸನು ಮುಂದೆ ಸಾಯುವವನಿದ್ದಾನೆ. ನೀನು ಯಾವುದಕ್ಕೂ ಭಯ ಪಡಬೇಡ. ನಿಮ್ಮ ಕುಟುಂಬವನ್ನು ಹಾಗೂ ನಿಮ್ಮ ಯದುಕುಲವನ್ನು ಆ ಭಗವಂತನೇ ರಕ್ಷಣೆ ಮಾಡುತ್ತಾನೆ.

**ಇತ್ಯಭಿಷ್ಟೂಯ ಪುರುಷಂ ಯದ್ರೂಪಮನಿದಂ ಯಥಾ। ಬ್ರಹ್ಮೇಶಾನೌ ಪುರೋಧಾಯ ದೇವಾಃ ಪ್ರತಿಯಯುರ್ದಿವಮ್॥**

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದಶಮಸ್ಕಂಧೇ ಪೂರ್ವಾರ್ಧೇ
ತೃತೀಯೋಽಧ್ಯಾಯಃ ॥

ಯಾವ ಭಗವಂತನ ರೂಪವು ಲೋಕವಿಲಕ್ಷಣವಾಗಿದೆಯೋ? ಅಂಥ ಪರಮಪುರುಷನಾದ ಶ್ರೀಹರಿಯನ್ನು ಬ್ರಹ್ಮ-ರುದ್ರಾದಿ ದೇವತೆಗಳು ಸ್ತೋತ್ರ ಮಾಡಿದರು. ಬಂದ ಮಾರ್ಗದಲ್ಲಿಯೇ ಹಿಂತಿರುಗಿದರು.

## ಶ್ರೀಕೃಷ್ಣಾವತಾರದ ರಸಘಳಿಗೆ

ದ್ವಾಪರಯುಗ ಮುಗಿಯಲು ಕೇವಲ ಎಪ್ಪತ್ತು ವರ್ಷ ಉಳಿದಿದೆ. ಆದೊಂದು ಚಾಂದ್ರಮಾನದ ಶ್ರಾವಣಮಾಸ. ಹುಣ್ಣಿಮೆಯಿಂದ ಹುಣ್ಣಿಮೆಗೆ ಮಾಸವನ್ನು ಲೆಕ್ಕ

ಹಾಕಿದಾಗ ಭಾದ್ರಪದವೂ ಹೌದು. ಶ್ರಾವಣವೂ ಹೌದು. ಕೃಷ್ಣಪಕ್ಷ. ಅಷ್ಟಮೀ ತಿಥಿ. ರಾತ್ರಿಯ ನಡುಮಧ್ಯಕಾಲ. ಪಕ್ಷದಲ್ಲಿಯೂ ಮಧ್ಯದ ತಿಥಿ. ಹರ್ಷಣ ಯೋಗ. ವೃಷಭಲಗ್ನ. ಭವಕರಣ. ಬುಧವಾರ. ಚಂದ್ರವಂಶ. ಅದಕ್ಕಾಗಿ ಚಂದ್ರೋದಯದ ಆಗಮನದ ನಿರೀಕ್ಷೆ. ಗೌತಮರ ಶಾಪದ ಪ್ರಭಾವದಿಂದ ಸಾತ್ವಿಕಜನರಲ್ಲಿಯೂ ಜ್ಞಾನವಿಲ್ಲದ ಅಜ್ಞಾನದ ಪರಿಸ್ಥಿತಿ. ಜಗತ್ತಿನಲ್ಲಿಯೂ ನಡುರಾತ್ರಿಯಾದ್ದರಿಂದ ಸುತ್ತಲೂ ಕತ್ತಲು. ಕಂಸನ ಸೆರೆಮನೆ. ಅದರ ಮಧ್ಯದಲ್ಲಿ ಮಹಾಹರಿಭಕ್ತರಾದ ವಸುದೇವ - ದೇವಕಿಯರು. ಇವರು ತದೇಕಾಗ್ರಮನದಿಂದ ಭಗವಂತನನ್ನೇ ಸ್ತೋತ್ರ ಮಾಡುತ್ತಿದ್ದಾರೆ. ಮಧ್ಯರಾತ್ರಿಯ ಮಂಗಲಪ್ರಸಂಗದಲ್ಲಿ ಕಡುಕತ್ತಲಿನ ಸೆರೆಮನೆಯ ಮಧ್ಯದಲ್ಲಿ ದೇವಕಿಯ ಉದರದಿಂದ ಭಗವಂತನು ಶ್ರೀಕೃಷ್ಣನಾಗಿ ಅವತಾರ ಮಾಡಿದ್ದಾನೆ –

ಯಸ್ಮಿನ್ನಬ್ದೇ ಭಾದ್ರಪದೇ ಸ ಮಾಸೇ ಸಿಂಹಸ್ಥಯೋರ್ಗುರುರವ್ಯೋಃ ಪರೇಶಃ ।
ಉದೈತ್ತತಃ ಫಾಲ್ಗುನೇ ಫಲ್ಗುನೋಽಭೂದ್ಗತೇ ತತೋ ಮಾದ್ರವತೀ ಬಭಾಷೇ ॥

ತಾ.ನಿ. ೧೨-೧೨೦

ಗುರು ಮತ್ತು ರವಿ ಇಬ್ಬರೂ ಸಿಂಹರಾಶಿಯಲ್ಲಿದ್ದಾಗ ಭಾದ್ರಪದ ಮಾಸದಲ್ಲಿ ಸರ್ವೋತ್ತಮನಾದ ಶ್ರೀಕೃಷ್ಣನು ಅವತರಿಸಿದನು. ಅದೇ ವರ್ಷದ ಫಾಲ್ಗುನಮಾಸದಲ್ಲಿ ಅರ್ಜುನನು ಜನಿಸಿದನು. ಅದರ ನಂತರ ಮಾದ್ರವತಿಯು ಪಾಂಡುವನ್ನು ಕುರಿತು ಹೀಗೆ ಹೇಳಿದಳು.

ತಮದ್ಭುತಂ ಬಾಲಕಮಂಬುಜೇಕ್ಷಣಂ
ಚತುರ್ಭುಜಂ ಶಂಖಗದಾದ್ಯುಧಾಯುಧಮ್ । ಶ್ರೀವತ್ಸಲಕ್ಷ್ಮಂ ಗಲಶೋಭಿಕೌಸ್ತುಭಂ
ಪೀತಾಂಬರಂ ಸಾಂದ್ರಪಯೋದಸೌಭಗಮ್ ॥

ಅವತರಿಸಿದ ಬಾಲಕನು ಅದ್ಭುತವಾಗಿದ್ದಾನೆ. ಕಮಲದಂತೆ ಕಣ್ಣುಗಳು ಶೋಭಾಯಮಾನವಾಗಿವೆ. ನಾಕು ಭುಜಗಳಿವೆ. ಕ್ರಮವಾಗಿ ಚಕ್ರ, ಶಂಖ, ಗದಾ,

ಪದ್ಮಗಳನ್ನು ಧರಿಸಿದ್ದಾನೆ. ವಕ್ಷಸ್ಥಳದಲ್ಲಿ ಶ್ರೀವತ್ಸದ ಚಿಹ್ನೆಯು ಜಾಜ್ವಲ್ಯಮಾನವಾಗಿದೆ. ಕಂಠದಲ್ಲಿ ಕೌಸ್ತುಭಮಣಿಯು ವಿರಾಜಿಸುತ್ತಿದೆ. ಪುಟಕ್ಕಿಟ್ಟ ಚಿನ್ನದಂತೆ ಪೀತಾಂಬರವು ಶೋಭಿಸುತ್ತಿದೆ. ಸಾಂದ್ರವಾದ ಕ್ಷೀರಸಮುದ್ರದ ಕಾಂತಿಯಂತೆ ಕಂಗೊಳಿಸುತ್ತಿದ್ದಾನೆ.

ಅನೇಕಸೂರ್ಯಾಭಕಿರೀಟಯುಕ್ತೋವಿದ್ಯುತ್ಪ್ರಭೇ ಕುಂಡಲೇ ಧಾರಯಂಶ್ಚ ।
ಪೀತಾಂಬರೋ ವನಮಾಲೀ ಸ್ವನಂತಸೂರ್ಯೋರುದೀಪ್ತಿರ್ದದೃಶೇ ಗುಣಾರ್ಣವಃ ॥
ತಾ.ನಿ. ೧೨-೬೫

ಅವತರಿಸಿದ ಶ್ರೀಕೃಷ್ಣನು ಅನಂತಸೂರ್ಯರ ಕಾಂತಿಯನ್ನು ಮೀರಿಸುವ ಕಾಂತಿಯಿಂದ ಕೂಡಿದ ಕಿರೀಟವನ್ನು ಧರಿಸಿದ್ದಾನೆ. ಅವನ ಕಿವಿಯ ಎರಡು ಕುಂಡಲಗಳು ಮಿಂಚಿನಂತೆ ಕಂಗೊಳಿಸುತ್ತಿವೆ. ಪೀತಾಂಬರವನ್ನುಟ್ಟಿದ್ದಾನೆ. ವನಮಾಲೆಯನ್ನು ಧರಿಸಿದ್ದಾನೆ. ಅನಂತಸೂರ್ಯರ ಕಾಂತಿಯನ್ನು ಮೀರಿಸುತ್ತಿದ್ದಾನೆ. ಕೇವಲ ಗುಣಗಳ ಸಮುದ್ರನಾಗಿದ್ದಾನೆ. ಇಂಥ ಶ್ರೀಕೃಷ್ಣನನ್ನು ವಸುದೇವ ದೇವಕಿಯರು ಕಂಡಿದ್ದಾರೆ.

## ವಾಸುದೇವನಿಗೆ ಮಾರ್ಗ ತೋರಿದ ವಾಸುದೇವ

ಆ ಸೆರೆಮನೆಯಲ್ಲಿ ವಸುದೇವ ದೇವಕಿಯರಷ್ಟೇ ಅಲ್ಲ, ಬ್ರಹ್ಮಾದಿದೇವತೆಗಳೆಲ್ಲರೂ ಆಗಮಿಸಿದ್ದಾರೆ. ಪ್ರತಿಯೊಬ್ಬರೂ ಭಗವಂತನನ್ನು ಸ್ತೋತ್ರ ಮಾಡಿದ್ದಾರೆ. ವಸುದೇವ ದೇವಕಿಯರೂ ಕೂಡ ಸ್ತೋತ್ರಮಾಡಿದ್ದಾರೆ. ಇವರ ಸ್ತೋತ್ರದಿಂದ ಶ್ರೀಕೃಷ್ಣಪರಮಾತ್ಮನು ಸಂಪ್ರೀತನಾಗಿದ್ದಾನೆ. ವಸುದೇವನನ್ನು ಕುರಿತು ಹೀಗೆ ಮಾತನಾಡುತ್ತಾನೆ –

'ನನ್ನನ್ನು ನಂದಕುಮಾರನ ಮನೆಗೆ ಈಗ ಕರೆದುಕೊಂಡು ಹೋಗು. ಹೆಜ್ಜೆಯಿಟ್ಟ ಮೇಲೆ ಮುಂದಿನ ದಾರಿ ನಿನಗೆ ಅರ್ಥವಾಗುತ್ತದೆ'.

ಹೀಗೆ ಹೇಳಿ ಆ ಶ್ರೀಕೃಷ್ಣಪರಮಾತ್ಮನು ಮನುಷ್ಯಮಗುವಂತೆ ಎರಡು ತೋಳಿನವನಾದ. ಪುಟಾಣಿ ಕೃಷ್ಣನಾದ.

# ಕೃಷ್ಣಾವತಾರದ ವರ್ಣನೆ

ಯದಾ ಹರಿಃ ಪ್ರಾದುರಭೂತ್ ಕಲಾಭಿಸ್ತದಾ ಸಮಾಯವ್ಯಯವಾಂಶ್ಚ ಚಂದ್ರಃ ।
ಪ್ರಿಯಾಪ್ರಿಯಾಪ್ತ್ಯೇವ ನಿಜಾನ್ವಯೋತ್ಥಮುಕುಂದವಕ್ತ್ರೇಂದುಕಲಾವಲೋಕಾತ್ ॥

(ರು.ವಿ. ೧-೩೩)

ಶ್ರೀಕೃಷ್ಣನು ಅಷ್ಟಮಿತಿಥಿಯ ಮಧ್ಯರಾತ್ರಿಯಲ್ಲಿ ಅವತಾರ ಮಾಡಿದನು. ಅವತ್ತು ಚಂದ್ರನು ತನ್ನ ಕಲೆಗಳ ಅರ್ಧಭಾಗದಿಂದಷ್ಟೇ ಉದಯಿಸಿದನು. ಇದು ಹೇಗೆ ಕಾಣಿಸಿತು ಎಂದರೆ ತನ್ನ ವಂಶದಲ್ಲಿ ಶ್ರೀಕೃಷ್ಣನು ಜನಿಸಿದ್ದರಿಂದ ವೃದ್ಧಿವುಳ್ಳವ-ನಾಗುತ್ತಿದ್ದೇನೆ ಎಂಬ ಸಂತೋಷವನ್ನು, ಹಾಗೂ ತನಗಿಂತಲೂ ಮೀರಿದ ಕಾಂತಿಯುಳ್ಳ ಮಗು ಜನಿಸಿದ್ದರಿಂದ ದುಃಖದಿಂದ ಕ್ಷೀಣಿಸಿದವನು ಆದಂತೆ ಆಕಾಶದಲ್ಲಿ ಕಂಡನು.

ದಿಶೋ ಯಶೋಭಿಃ ಪರಿಪೂರಯಿಷ್ಯ-
ತ್ಯುದಗ್ರಚೇಷ್ಟಃ ಸ ಇತಿ ಪ್ರಹೃಷ್ಟಾಃ ।
ರಸಾ ಪ್ರಸನ್ನಾ ಕಿಲ ರಂಜಿತಾಂ ಮಾಂ
ಕರಿಷ್ಯತಿ ಸ್ವಾಂಘ್ರಿತಲಶ್ರಿಯೇತಿ ॥ (ರು.ವಿ. ೧-೩೫)

ಶ್ರೀಕೃಷ್ಣನು ಅವತರಿಸಿದಾಗ, ದೇವತೆಯರು, ಗಂಧರ್ವರು, ತಿಲೋತ್ತಮೆಯರು, ಅಪ್ಸರಾಸ್ತ್ರೀಯರು ಗಗನಮಾರ್ಗದಲ್ಲಿ ಸಂತೋಷ ಪಟ್ಟರು, ನಲಿದಾಡಿದರು, ವಾದ್ಯಘೋಷಗಳನ್ನು ಮೊಳಗಿಸಿದರು. ದಿಗ್ದೇವತೆಗಳೂ ಕೂಡ ಹಿರಿಹಿಗ್ಗಿದರು. ಭೂದೇವಿಯು ಶ್ರೀಕೃಷ್ಣನು ತನ್ನ ಮೇಲೆ ತನ್ನ ಪುಟ್ಟ ಕಾಲುಗಳ ಕಾಂತಿಯಿಂದ ತನ್ನನ್ನು ಅಲಂಕರಿಸುತ್ತಾನೆಂದು ಆನಂದ- ಪರಾಕಾಷ್ಠೆಯನ್ನೇ ಅನುಭವಿಸಿದಳು.

ಶರೀರಕಾಂತ್ಯಾ ಜಲದಃ ಸ್ವಜೈತ್ರಂ ನಿರೀಕ್ಷ್ಯ ಕೃಷ್ಣಂ ಜಲರಾಶಿತೀರೇ ॥
ಜಗರ್ಜ ಶಕ್ತ್ಯಾ ರಹಿತಸ್ಯ ಪುಂಸೋ ಜಲಾಂತಿಕೇಷ್ವೇವ ಹಿ ಗರ್ಜಿತಾನಿ ॥

(ರು. ವಿ. ೧-೩೮)

ಶ್ರೀಕೃಷ್ಣನು ನೀಲಮೇಘವನ್ನು ಮೀರಿಸುವಂಥ ಪ್ರಕಾಶವನ್ನು ಹೊಂದಿದ್ದನು. ಇವನನ್ನು ಕಂಡು ಕರಿಮೋಡವು ಹೊಟ್ಟೆಕಿಚ್ಚು ಪಟ್ಟಿತು. ತನಗಿಂತ ಸುಂದರನಾದ

ಭಗವಂತನು ಕೃಷ್ಣನಾಗಿ ಹುಟ್ಟಿ, ತನ್ನನ್ನು ಜಯಿಸಿಬಿಟ್ಟನೆಂದು ದುಃಖ ಹೊಂದಿತು. ಜಡಸಮುದ್ರದ ಬಳಿ ತೆರಳಿ ಜೋರಾಗಿ ಗುಡುಗಿತು. ಪ್ರಪಂಚದಲ್ಲಿ ಬಲವಿಲ್ಲದ ಹೇಡಿಯು, ಶತ್ರುವನ್ನು ಜಯಿಸಲು ಸಾಧ್ಯವಾಗದೇ ದಡ್ಡರ ಹತ್ತಿರ ಹೋಗಿ ಕೂಗಿಕೊಳ್ಳುವುದು ಸ್ವಾಭಾವಿಕವಾಗಿ ಕಾಣಿಸುತ್ತವೆ. ಇದರಂತೆ ಕರಿಮೋಡದ ಸ್ಥಿತಿಯೂ ಆಗಿತ್ತು.

## ದುರ್ಗಾದೇವಿಯ ಅವತಾರ

ಶ್ರೀಕೃಷ್ಣನ ಅವತಾರದ ಕೆಲವೇ ಸಮಯದಲ್ಲಿ ಭಗವಂತನ ಆಜ್ಞೆಯಂತೆ ಲಕ್ಷ್ಮೀದೇವಿಯು ದುರ್ಗೆಯಾಗಿ ನಂದಗೋಪನ ಪತ್ನಿಯಾದ ಯಶೋದೆಯಲ್ಲಿ ಅವತರಿಸಿದ್ದಾಳೆ. ಭಗವಂತನು ಹೇಗೆ ಶುಕ್ಲಶೋಣಿತಗಳ ಸಂಬಂಧದಿಂದ ಜನಿಸಲಿಲ್ಲವೋ ಅದರಂತೆ ದುರ್ಗೆಯೂ ಸಹ ಶುಕ್ಲ-ಶೋಣಿತಗಳ ಸಂಬಂಧದಿಂದ ಜನಿಸಿರುವುದಿಲ್ಲ. ಭಗವಂತನಂತೆ ಪ್ರಾಕೃತದೇಹ ಇವಳಿಗೂ ಇಲ್ಲ.

## ಅವತರಿಸಿದ ಕೂಡಲೆ ಗೋವು ಗೊಲ್ಲರ ಬಳಿ ತೆರಳಿದ ಶ್ರೀಕೃಷ್ಣ

ಲೀಲಾಮಾನುಷವಿಗ್ರಹನಾದ ಕೃಷ್ಣನ ಆದೇಶದಂತೆ ವಸುದೇವನು ಬುಟ್ಟಿಯಲ್ಲಿ ಶ್ರೀಕೃಷ್ಣನನ್ನು ಇಟ್ಟುಕೊಂಡು ತನ್ನ ತಲೆಯ ಮೇಲೆ ಹೊತ್ತುಕೊಂಡು ಗೋಕುಲಕ್ಕೆ ಹೊರಟ. ವಸುದೇವನು ಹೊರಟಂತೆ ಸೆರೆಮನೆಯನ್ನು ಕಾಯುತ್ತಿರುವವ- ರೆಲ್ಲರೂ ನಿದ್ದೆ ಮಾಡಿದರು. ಜಡಿದ ಬಾಗಿಲುಗಳೆಲ್ಲವೂ ತನ್ನಷ್ಟಕ್ಕೇ ತೆರೆದುಕೊಂಡವು. ಸಂಕೋಲೆಗಳೂ ಕೂಡ ತಾವೇ ಕಳಚಿ ಬಿದ್ದವು.

ಕರೇ ನಿಧಾಯದ್ಭುತಬಾಲಮೇನಮಭೂದ್ ಬಹಿರ್ನಿಸ್ಸರತೋಽಸ್ಯ ಶೌರೇಃ ।
ನ ತದ್ಗೃಹದ್ವಾರಗಣೋಽಂತರಾಯಃ ಕರಸ್ಥದೇವಸ್ಯ ಕುತೋಽಂತರಾಯಃ ॥

(ರು.ವಿ. ೧-೫೫)

ವಸುದೇವನು ಶ್ರೀಕೃಷ್ಣನನ್ನು ಕೈಯಲ್ಲಿ ಎತ್ತಿಕೊಂಡು ಹೊರಟಾಗ ಸೆರೆಮನೆಯ ಬಾಗಿಲುಗಳು ತಾವಾಗಿಯೇ ತೆರೆದುಕೊಂಡವು. ಎಲ್ಲ ಭಟರೂ ನಿದ್ರೆಗೆ ಜಾರಿದರು.

ವಸುದೇವನ ಗಮನಕ್ಕೆ ಯಾವುದೂ ಅಡ್ಡಿಯಾಗಲಿಲ್ಲ. ಶ್ರೀಕೃಷ್ಣನನ್ನು ಧ್ಯಾನ ಮಾಡುವವರಿಗೆ ಯಾವುದೇ ಅಡ್ಡಿವುಂಟಾಗುವುದಿಲ್ಲ ಎಂದ ಮೇಲೆ ಶ್ರೀಕೃಷ್ಣನನ್ನೇ ತನ್ನ ಕೈಯಲ್ಲಿ ಇಟ್ಟುಕೊಂಡ ವಸುದೇವನಿಗೆ ಯಾವ ವಿಘ್ನವು ಬರಲು ಸಾಧ್ಯ ?

ಸೆರೆಮನೆ ದಾಟಿ ವಸುದೇವನು ಮುಂದಕ್ಕೆ ಸಾಗಿದ್ದಾನೆ. ಆಗ ಆಕಾಶದಲ್ಲಿ ನಕ್ಷತ್ರಗಳು ಗ್ರಹಗಳು ಶಾಂತವಾಗಿ ಬೆಳಗುತ್ತಿವೆ. ದಿಕ್ಕುಗಳು ಪ್ರಸನ್ನವಾಗಿವೆ. ಸಮಸ್ತ ಆಕಾಶವೇ ನಿರ್ಮಲವಾಗಿ ಕಂಗೊಳಿಸುತ್ತಿದೆ. ಸಮಸ್ತಭೂಲೋಕವು ಮಂಗಲಮಯವಾಗಿದೆ. ವೃಕ್ಷಗಳು ಫಲಪುಷ್ಪಗಳನ್ನು ಬಿಟ್ಟು ಹಸನ್ಮುಖಿಗಳಾಗಿವೆ. ನದಿಗಳು ತಿಳಿನೀರಿನಿಂದ ಹರಿಯುತ್ತಿವೆ. ದೇವತೆಗಳು ಆಕಾಶದಲ್ಲಿ ನಿಂತು ದುಂದುಭಿಯನ್ನು ಬಾರಿಸುತ್ತಿದ್ದಾರೆ. ಗಂಧರ್ವರು ಹಾಡುತ್ತಿದ್ದಾರೆ. ಅಪ್ಸರೆಯರು ನರ್ತನ ಮಾಡುತ್ತಿದ್ದಾರೆ. ಮುನಿಪುಂಗವರೆಲ್ಲರೂ ಜಯಕಾರವನ್ನು ಹಾಕುತ್ತಿದ್ದಾರೆ. ಚಂದ್ರನು ಆಕಾಶದಲ್ಲಿ ಹಸನ್ಮುಖಿಯಾಗಿ ಬೆಳಗುತ್ತಿದ್ದಾನೆ. ದೇವತೆಗಳು ಮಾಡುತ್ತಿರುವ ಪುಷ್ಪವೃಷ್ಟಿಯು ಮಳೆಯ ಹನಿಗಳಾಗಿ ಚೆನ್ನಾಗಿ ಬೀಳುತ್ತಿದೆ. ಈಗ ಹುಟ್ಟಿದ ಕೂಸಿಗೆ ಮಳೆಯ ಹನಿ ತಾಕಬಾರದು ಎಂಬ ದೃಷ್ಟಿಯಿಂದ ಕ್ಷೀರಸಮುದ್ರದಿಂದ ಮಹಾಶೇಷನು ಆಗಮಿಸಿದ್ದಾನೆ. ತನ್ನ ಹೆಡೆಯನ್ನೇ ಛತ್ರಿಯನ್ನಾಗಿ ಮಾಡಿಕೊಂಡು ವಸುದೇವನ ಹಿಂದೆ ಸಾಗುತ್ತಿದ್ದಾನೆ. ಅಡ್ಡವಾಗಿದ್ದ ಯಮುನೆಯು ಶ್ರೀಕೃಷ್ಣನ ಮೇಲಿನ ಭಕ್ತಿಯಿಂದ ತನ್ನ ಅಪಾರವಾದ ಜಲರಾಶಿಯನ್ನು ಮೊಟಕುಗೊಳಿಸಿದ್ದಾಳೆ. ವಸುದೇವನು ನಿರಾತಂಕವಾಗಿ ನಡೆದುಹೋಗುವಂತೆ ತಾನೇ ದಾರಿ ಮಾಡಿಕೊಟ್ಟಿದ್ದಾಳೆ. ಸಮಸ್ತಜನರು ನಿದ್ರಿಸುತ್ತಿದ್ದಾರೆ. ವಸುದೇವನು ತಲೆಯ ಮೇಲೆ ಶ್ರೀಕೃಷ್ಣನನ್ನು ಹೊತ್ತುಕೊಂಡು ನಂದಗೋಪ-ಯಶೋದೆಯರ ಮನೆಗೆ ತೆರಳಿದನು.

## ಹೆಂಡತಿಯ ಶಿಶುರೂಪ ಕಾಣಲು ತೆರಳಿದ ಶ್ರೀಕೃಷ್ಣ

ಆಗಷ್ಟೇ ಯಶೋದೆಯ ಹಾಸಿಗೆಯಲ್ಲಿ ದುರ್ಗೆಯು ಅವತರಿಸಿ ಮಲಗಿದ್ದಳು. ಶ್ರೀಕೃಷ್ಣಪರಮಾತ್ಮನು ತನ್ನ ಹೆಂಡತಿಯ ಮಗುರೂಪವನ್ನು ಕಂಡು ಮಂದಸ್ಮಿತನಾದನು. ದುರ್ಗೆಯು ಕೂಡ ಭಗವಂತನ ಶಿಶುರೂಪವನ್ನು ಕಂಡು ಮಂದಸ್ಮಿತಳಾದಳು.

ನ ಕಂಸಭೀತ್ಯಾಽಭಿಯಯೌ ವ್ರಜಂ ಸ ಸ್ವಸಂಶ್ರಿತಾನಾಮಭಯಸ್ಯ ಕರ್ತಾ ।
ಸ್ವವಲ್ಲಭಾಂ ನಂದಕಲತ್ರಜಾತಾಂ ಮನೋರಮಾಮೀಕ್ಷಿತುಮೇವ ಸೋಽಗಾತ್ ॥

(ರು.ವಿ. ೧-೫೭)

ಶ್ರೀಕೃಷ್ಣನು ಕಂಸನಿಗೆ ಭಯಪಟ್ಟು ನಂದಗೋಪನ ಬಳಿ ತೆರಳಿದ್ದಲ್ಲ. ತನ್ನ ಹೆಂಡತಿಯು ನಂದನ ಮನೆಯಲ್ಲಿ ದುರ್ಗೆಯಾಗಿ ಅವತರಿಸಿದ್ದಾಳೆ. ಅವಳು ಪುಟ್ಟಮಗುವಾಗಿದ್ದಾಗ ಹೇಗೆ ಕಾಣಿಸುತ್ತಾಳೆಂದು ನೋಡಲು ಹೊಟರನು. ರಾತ್ರಿಯ ಕಾಲದಲ್ಲಿ ತನ್ನ ಹೆಂಡತಿಯನ್ನು ನೋಡಲು ಹೋಗುವುದು ಲೋಕನಿಯಮವೇ ಆಗಿದೆ.

ಯಶೋದೆಯ ಹಾಸಿಗೆಯಲ್ಲಿ ಶ್ರೀಕೃಷ್ಣನನ್ನು ಮಲಗಿಸಿ, ಅವಳ ಹಾಸಿಗೆಯಲ್ಲಿದ್ದ ಹೆಣ್ಣು ಮಗುವನ್ನು ಬುಟ್ಟಿಯಲ್ಲಿ ಹಾಕಿಕೊಂಡು ಪುನಃ ಮಥುರೆಗೆ ಹೊರಟನು. ಕಾರಾಗೃಹವನ್ನು ಸೇರಿ ಒಳಹೊಕ್ಕಿ ತನ್ನ ಸ್ಥಾನದಲ್ಲಿ ಕುಳಿತನು. ಆ ಸೆರೆಮನೆಯ ಬಾಗಿಲುಗಳೆಲ್ಲವೂ ಮುಚ್ಚಿಕೊಂಡವು. ಹೆಣ್ಣುಮಗು ಅಳಲು ಪ್ರಾರಂಭಿಸಿತು. ನಿದ್ದೆಗೆ ಜಾರಿದ್ದ ಭಟರೆಲ್ಲರೂ ಎಚ್ಚರಗೊಂಡರು. ಸಂಕೋಲೆಗಳು ವಸುದೇವನನ್ನು ಪುನಃ ಬಂಧಿಸಿದವು. ಇದುವೇ ಮಾನುಷವಿಗ್ರಹನ ಲೀಲೆ.

## ಕಂಸನಿಗೆ ದುರ್ಗೆಯ ಎಚ್ಚರಿಕೆ

ಸೆರೆಮನೆಯಲ್ಲಿ ಹೆಣ್ಣುಕೂಸಿನ ದೊಡ್ಡ ಧ್ವನಿ ಪ್ರತಿಧ್ವನಿಸುತ್ತಿದೆ. ದ್ವಾರಪಾಲಕರು ಕಾತರರಾಗಿದ್ದಾರೆ. ''ಮಗು ಹುಟ್ಟಿತು, ಮಗು ಹುಟ್ಟಿತು'' ಎಂದು ಹೇಳುತ್ತ ಕಂಸನಿರುವಲ್ಲಿಗೆ ಧಾವಿಸಿದ್ದಾರೆ. ಬೆಳಗಿನ ಝಾವ. ಮಂಪರು ನಿದ್ದೆ. ಈಗ ಕಂಸನಿಗೆ ಎಂಟನೆಯ ಮಗು ಹುಟ್ಟಿತೆಂಬ ಭಯ. ಕಂಸ ಕೂಡಲೇ ಎದ್ದು ಹೊರಟೇ ಬಿಟ್ಟ. ಎಡವುತ್ತ ಜಾರುತ್ತ ತನ್ನ ತಲೆಯ ಕೂದಲುಗಳನ್ನು ಚೆಲ್ಲಾಪಿಲ್ಲಿ ಮಾಡಿಕೊಂಡು ಕ್ರೂರನಾದ ಕಂಸನು ಓಡಿಬಂದ. ದೇವಕಿಯು ಅಳುತ್ತಾ ಕೂತಿದ್ದಳು. ''ಅಣ್ಣಾ! ಇದು ಹೆಣ್ಣುಮಗು. ಈ ಹೆಣ್ಣುಮಗು ನಿನ್ನನ್ನು ಕೊಲ್ಲುವುದಿಲ್ಲ. ಸ್ತ್ರೀಹತ್ಯೆಯನ್ನು ಮಾಡಬೇಡ. ಈಗಾಗಲೇ ಆರುಮಕ್ಕಳನ್ನು ಕೊಂದಿರುವಿ. ಈ ಹೆಣ್ಣುಮಗುವನ್ನು ನನಗೆ ಬಿಟ್ಟು

ಕೊಡು'' ಎಂದು ದೀನಳಾಗಿ ಅತ್ತಳು. ಕ್ಷಣಕಾಲ ಕನಿಕರ ಬಂದ ಕಂಸನು ಸ್ತಬ್ಧನಾಗಿ ನಿಂತ. ಮರುಕ್ಷಣ ಆಕಾಶವಾಣಿಯ ನೆನಪಾಗಿ ಹೃದಯವನ್ನು ಕಲ್ಲನ್ನಾಗಿ ಮಾಡಿಕೊಂಡು ಆ ಹೆಣ್ಣುಕೂಸನ್ನು ಕಿತ್ತುಕೊಂಡು ಓಡಿದ. ಇದೇ ಎಂಟನೆಯ ಗರ್ಭವೆಂದು ಭಾವಿಸಿ ಆ ಹೆಣ್ಣುಮಗುವಿನ ಎರಡು ಕಾಲುಗಳನ್ನು ಹಿಡಿದುಕೊಂಡು ಕಲ್ಲು ಬಂಡೆಯ ಮೇಲೆ ಬಲವಾಗಿ ಅಪ್ಪಳಿಸಿದ.

ಸಾ ತದ್ಧಸ್ತಾತ್ ಕ್ಷಿಪ್ರಮುತ್ಪತ್ಯ ದೇವೀ ಖೇऽದೃಶ್ಯತೈವಾಷ್ಟಭುಜಾ ಸಮಗ್ರಾ ।
ಬ್ರಹ್ಮಾದಿಭಿಃ ಪೂಜ್ಯಮಾನಾ ಸಮಗ್ರೈರತ್ಯದ್ಭುತಾಕಾರವತೀ ಹರಿಪ್ರಿಯಾ ॥ ತಾ.ನಿ. ೧೨-೭೦

ಭಗವಂತನ ಪ್ರಿಯಳಾದ ದುರ್ಗಾದೇವಿಯು ಯಾವ ಕ್ಷಣದಲ್ಲಿ ಕಂಸನು ಅಪ್ಪಳಿಸಲು ಹೊರಟನೋ ಅದೇ ಕ್ಷಣದಲ್ಲಿ ಅವನ ಕೈಯಿಂದ ಜಾರಿ ಮೇಲೆ ಹಾರಿದಳು. ಎಂಟು ಭುಜಗಳನ್ನು ಹೊಂದಿದಳು. ಕಂಸನು ಆಶ್ಚರ್ಯದಿಂದ ನೋಡುತ್ತಿದ್ದ. ಅವಳನ್ನು ಬ್ರಹ್ಮಾದಿದೇವತೆಗಳು ಪೂಜಿಸಿದರು.

ದಿವ್ಯರೂಪವನ್ನು ಧರಿಸಿದ ಆ ದುರ್ಗೆಯು ಧನುಸ್ಸು, ಬಾಣ, ಶೂಲ, ಗುರಾಣಿ, ಖಡ್ಗ, ಶಂಖ, ಚಕ್ರ, ಗದೆ ಇವುಗಳನ್ನು ಧಾರಣೆಮಾಡಿ ಕಂಸನ ಭಯವನ್ನು ಹೆಚ್ಚಿಸಿದಳು. ಹಾಗೂ ಕಂಸನನ್ನು ಕುರಿತು ಘರ್ಜಿಸುತ್ತಾ ಹೀಗೆ ಮಾತನಾಡಿದಳು –

''ಪಾಪಿಷ್ಠನೇ! ನಿನ್ನ ಮೃತ್ಯು ಈಗಾಗಲೇ ಹುಟ್ಟಿದೆ. ನಿರ್ದುಷ್ಟಳಾದ ನನ್ನನ್ನು ಯಾವುದೇ ಕಾರಣವಿಲ್ಲದೇ ಕೊಲ್ಲಲು ಪ್ರಯತ್ನಿಸುವಿಯಾ? ನಿನ್ನ ಈ ಪ್ರಯತ್ನ ಸಫಲವಾಗುವುದಿಲ್ಲ''.

ಉಕ್ತ್ವೇತಿ ಕಂಸಂ ಪುನರೇವ ದೇವಕೀತಲ್ಪೇऽಶಯದ್ ಬಾಲರೂಪೈವ ದುರ್ಗಾ ।
ನಾಜ್ಞಾಸಿಷುಸ್ತಾಮಥ ಕೇಚನಾತ್ರ ಋತೇ ಹಿ ಮಾತಾಪಿತರೌ ಗುಣಾಢ್ಯಾಮ್ ॥

ತಾ.ನಿ. ೧೨-೭೨

ಕಂಸನಿಗೆ ಹೀಗೆ ಹೇಳಿ ದುರ್ಗೆಯು ಆಕಾಶದಲ್ಲಿ ಹಾರಿದಂತೆ ಭಾಸಮಾನವಾದಳು. ವಾಸ್ತವಿಕವಾಗಿ ಶಿಶುರೂಪವನ್ನು ತಾಳಿ ಪುನಃ ದೇವಕಿಯ

ಹಾಸಿಗೆಯಲ್ಲಿಯೇ ಮಲಗಿದಳು. ಸ್ತನ್ಯಪಾನವನ್ನು ಮಾಡಿಸಿ ದೇವಕಿಯು ಸುಖವನ್ನು ಅನುಭವಿಸಿದಳು. ಮತ್ತು ಸೆರೆಮನೆಯಲ್ಲಿಯೇ ಆ ಹೆಣ್ಣು- ಮಗುವನ್ನು ಬೆಳೆಸಿದಳು. ಇದನ್ನು ವಸುದೇವ ದೇವಕಿಯರು ಬಿಟ್ಟು ಬೇರಾರೂ ತಿಳಿಯಲಿಲ್ಲ.

ಇದುವೇ ಆಶ್ಚರ್ಯ!! ಹರಿವಂಶದಲ್ಲಿ 'ಸಾ ಕನ್ಯಾ ವವೃಧೇ ತತ್ರ ವೃಷ್ಣಿಸಂಘಸುಪೂಜಿತಾ' ಎಂದು ಇದನ್ನೇ ಸ್ಪಷ್ಟಪಡಿಸಲಾಗಿದೆ.

## ಕಂಸನಿಗೆ ಭಯ

ದುರ್ಗೆಯ ಮಾತನ್ನು ಕೇಳಿ ಕಂಸನು ನಡುಗಿಹೋದನು. ದಿಗ್ಭ್ರಾಂತನಾದನು. ಕೈಕಾಲುಗಳು ನಲುಗಿದವು. ಏನು ಮಾಡಬೇಕೆಂದೇ ತಿಳಿಯಲಿಲ್ಲ. ಕಂಸನಲ್ಲಿ ಭೃಗುಋಷಿಗಳ ಆವೇಶವಿರುವ ಪ್ರಯುಕ್ತ ಆಗಾಗ ಶುದ್ಧ ಸಾತ್ವಿಕನಾಗುತ್ತಿದ್ದ. ಈ ಹಿಂದೆಯೂ ದೇವಕಿಯನ್ನು ಕೊಲ್ಲದಿರಲು, ಮೊದಲನೆಯ ಮಗು ಹುಟ್ಟಿದಾಗ ಅದನ್ನು ಕ್ಷಮಿಸುತ್ತೇನೆಂದು ಹೇಳಲು ಭೃಗುಋಷಿಗಳ ಆವೇಶವೇ ಕಾರಣ. ಈಗಲೂ ಕೂಡ ಭೃಗುಋಷಿಗಳ ಆವೇಶದಿಂದಲೇ ತಾನು ವಸುದೇವ-ದೇವಕಿಯರನ್ನು ಬಂಧನದಲ್ಲಿಡಬಾರದಿತ್ತು ಎಂಬ ಪಶ್ಚಾತ್ತಾಪವಾಗಿದೆ. ಆದ್ದರಿಂದಲೇ ವಸುದೇವ ದೇವಕಿಯರ ಬಳಿ ಬಂದು ಕ್ಷಮೆಯನ್ನು ಯಾಚಿಸಿದ್ದಾನೆ. ಆಗ ಕೋಪಗೊಳ್ಳದ ವಸುದೇವ-ದೇವಕಿಯರು ''ಸುಖ ಹಾಗೂ ದುಃಖಗಳಿಗೆ ಭಗವಂತನೇ ಕಾರಣ ಬೇರೆ ಯಾರೂ ಕಾರಣರಲ್ಲ. ನಿನ್ನದೇನು ತಪ್ಪಿಲ್ಲ. ದುಃಖಪಡಬೇಡ'' ಎಂದು ಸಾಂತ್ವನಗೊಳಿಸಿದರು.

## ಕಂಸನ ದುರಾಲೋಚನೆ

ಕಂಸ ತನ್ನ ಅರಮನೆಗೆ ತೆರಳಿದ. ಎಲ್ಲ ಮಂತ್ರಿಜನರನ್ನೂ ಆಹ್ವಾನ ಮಾಡಿದ. ದುರ್ಗೆ ಹೇಳಿದ ಮಾತುಗಳನ್ನು ಎಲ್ಲರ ಮುಂದಿಟ್ಟ. ಆ ಮಾತುಗಳನ್ನು ಕೇಳಿ ಪಾಪಿಗಳಾದ ಅವನ ಭೃತ್ಯರು ಹೀಗೆ ಹೇಳಿದರು. ''ರಾಜನೇ! ಚಿಂತಿಸಬೇಡ. ಎಲ್ಲ ಮಕ್ಕಳನ್ನೂ ಸಂಹಾರ ಮಾಡುತ್ತಾ ಬರೋಣ''. ಅವರ ಮಾತಿಗೆ ಕಂಸನು ''ತಥಾಸ್ತು'' ಎಂದು ಹೇಳಿದ. ಪಾಪಿಯಾದ ಕಂಸನು ತನ್ನ ಮಂತ್ರಿಜನರನ್ನು ಕುಕೃತ್ಯದಲ್ಲಿ

ತೊಡಗಿಸಿದ. ತನ್ನ ಅಂತಃಪುರಕ್ಕೆ ತೆರಳಿ ನಿಟ್ಟುಸಿರು ಬಿಟ್ಟ. ಹಿಂಸೆಯಿಂದಲೇ ಸಂತೋಷ-ಪಡುವ ಅವನ ಭೃತ್ಯರು ಅಂದಿನಿಂದ ಶಿಶುಹತ್ಯೆಯಲ್ಲಿ ತೊಡಗಿದರು. ಶಿಶುಹತ್ಯೆಗಾಗಿ ಮನೆ ಮನೆಗಳಿಗೆ ಸಂಚರಿಸಿದರು.

## ನಂದಗೋಕುಲದಲ್ಲಿ ಶ್ರೀಕೃಷ್ಣಜಯಂತಿಯ ಮೊದಲ ಉತ್ಸವ

ಬೆಳಗಿನ ಝಾವ. ಯಶೋದೆ ನಂದಗೋಪರಿಗೆ ಶ್ರೀಕೃಷ್ಣನ ದಿವ್ಯದರ್ಶನ. ಕಮಲ ದಳಗಳಂತೆ ವಿಶಾಲನೇತ್ರನಾದ ಆನಂದಪರಿಪೂರ್ಣನಾದ ಅಪ್ರಮೇಯನಾದ ಭಗವಂತನಾದ ಶ್ರೀಕೃಷ್ಣನನ್ನು ಕಂಡು ತಂದೆ ತಾಯಿಗಳ ಆನಂದ ಕಡಲಸಮುದ್ರವನ್ನು ಮೀರಿಸುವಂತಿದೆ. ಆನಂದಸಾಗರದಲ್ಲಿ ಮುಳುಗಿದ್ದಾರೆ.

ಮೇನಾತ ಏತೌ ನಿಜಪುತ್ರಮೇನಂ ಸ್ರಷ್ಟಾರಮಬ್ಜಪ್ರಭವಸ್ಯ ಚೇಶಮ್ ।
ಮಹೋತ್ಸವಾತ್ ಪೂರ್ಣಮನಾಶ್ಚ ನಂದೋವಿಪ್ರೇಭ್ಯೋಽದಾಲ್ಲಕ್ಷಮಿತಾಸ್ತದಾ ಗಾಃ ॥

ತಾ.ನಿ. ೧೨-೭೭

ನಂದಗೋಪ ಯಶೋದೆಯರು ಶ್ರೀಕೃಷ್ಣಪರಮಾತ್ಮನನ್ನು ತಮ್ಮ ಮಗುವೆಂದು ತಿಳಿದರು. ಹರ್ಷೋದ್ರೇಕದಿಂದ ತುಂಬಿದ ಮನದಿಂದ ಬ್ರಾಹ್ಮಣರಿಗೆ ಲಕ್ಷಗಟ್ಟಳೆ ಗೋವುಗಳನ್ನು ದಾನ ಮಾಡಿದರು. ಚಿನ್ನ, ರತ್ನ, ವಸ್ತ್ರ, ಆಭರಣಗಳನ್ನು ಅಪಾರಸಂಖ್ಯೆಯಲ್ಲಿ ದಾನ ಮಾಡಿದನು. ಗೋಪಸ್ತ್ರೀಯರು ಸಹ ಆನಂದದಿಂದ ಯಶೋದೆಯ ಬಳಿ ಆಗಮಿಸಿದರು. ವಿಪ್ರರು ಸ್ವಸ್ತಿವಾಚನವನ್ನು ಪಠಿಸಿದರು.

ಮಂದಗಮನೆಯರು ಪೀತಾಂಬರವನ್ನು ಧರಿಸಿ ಹಣೆಗೆ ಕುಂಕುಮವನ್ನು ಹಚ್ಚಿಕೊಂಡು ಸಿಂಗರಿಸಿಕೊಂಡು ಮುದ್ದುಕೃಷ್ಣನನ್ನು ನೋಡಲು ಲವಲವಿಕೆಯಿಂದ ಮನೆಯಲ್ಲಿ ಇದ್ದ ಕಾಣಿಕೆಗಳನ್ನೇ ಹೊತ್ತುಕೊಂಡು ನಂದನ ಮನೆಗೆ ಸಾಲುಸಾಲಾಗಿ ಬಂದರು. ಎಲ್ಲ ಗೋಕುಲನಿವಾಸಿಗಳು ಮೊದಲ ಕೃಷ್ಣಾಷ್ಟಮಿಯನ್ನು ಆನಂದೋದ್ರೇಕದಿಂದ ಆಚರಿಸಿದರು. ತಳಿರು ತೋರಣಗಳಿಂದ ಸಿಂಗರಿಸಿದರು. ಚಕ್ಕುಲಿ, ಕೋಡುಬಳೆ, ಬಗೆ ಬಗೆಯ ಉಂಡೆಗಳು, ಮಿಠಾಯಿಗಳು, ಭಕ್ಷ್ಯಭೋಜ್ಯಗಳು, ಲೇಹ್ಯ, ಚೋಷ್ಯ, ಪೇಯಗಳು ಇವೆಲ್ಲವನ್ನೂ ಪ್ರತಿಯೊಬ್ಬರೂ

ತಮ್ಮ ತಮ್ಮ ಮನೆಯಲ್ಲಿ ಮಾಡಿ ದೇವರಿಗೆ ನಿವೇದನೆ ಮಾಡಿದರು. ತಮ್ಮ ಮನೆಯಲ್ಲಿದ್ದ ಹಸು,ಕರುಗಳಿಗೆ ಅರಿಶಿನ ಎಣ್ಣೆ ಹಚ್ಚಿ ಬಿಸಿನೀರಿನಿಂದ ಸ್ನಾನ ಮಾಡಿಸಿ ವಸ್ತ್ರಗಳಿಂದ ಭಂಗಾರದ ಆಭರಣಗಳಿಂದ ಅಲಂಕಾರ ಮಾಡಿದರು. ಉತ್ಸವಕಾಲದಲ್ಲಿ ಗೋಪಾಲಕರು ಹಾಲು ಮೊಸರು ಬೆಣ್ಣೆ ತುಪ್ಪಗಳನ್ನು ಯಥೇಚ್ಛವಾಗಿ ಪಾನ ಮಾಡಿದರು. ಕುಣಿದಾಡಿದರು. ನಮ್ಮ ಅಂಗಳದಲ್ಲಿ ಕೃಷ್ಣನು ಹುಟ್ಟಿದ್ದಾನೆಂಬ ಸಡಗರವೋ ಸಡಗರ. ಬೆಣ್ಣೆಯನ್ನೇ ಮುಖಗಳಿಗೆ ಹಚ್ಚಿಕೊಂಡು ಕುಣಿದರು. ಅರಿಶಿನ ಹಾಗೂ ಕುಂಕುಮದ ಓಕುಳಿಗಳನ್ನು ಪರಸ್ಪರ ಎರೆಚಿಕೊಂಡರು. ಹುಡುಗರು ಕುಸ್ತಿಯಾಡಿದರು. ಕುಣಿದಾಡಿದರು. ಹೀಗೆ ಮೊದಲ ಕೃಷ್ಣಜನ್ಮಾಷ್ಟಮಿಯ ಮಹೋತ್ಸವವು ನಿಜವಾಗಿಯೂ ಅಂದು ಉಲ್ಲಾಸ-ಉತ್ಸಾಸಗಳಿಂದ ಪ್ರಾರಂಭವಾಯಿತು.

ತತಸ್ಸ ಕೃಷ್ಣಃ ಕೃತಜಾತಕರ್ಮಾ ಪ್ರಚಕ್ರಮೇಽಂಬಾಸ್ತನಪಾನಕರ್ಮ ।
ಸ್ವವೀಕ್ಷಣೇನ್ನೈವ ಮುಹುಸ್ಸ್ರುತಂ ತತ್ ಪಯೋ ಮುಧಾ ಸ್ಯಾದಿತಿ ಚಿಂತಯೇವ ॥

(ರು.ವಿ. ೨-೨೮)

ಎದೆಹಾಲು ಕುಡಿಸುವ ಮೊದಲು ಶಿಶುವಿಗೆ ಜಾತಕರ್ಮವನ್ನು ಮಾಡಬೇಕು. ಅನಂತರವೇ ಅಶೌಚವು ಬರುತ್ತದೆ. ಬ್ರಾಹ್ಮಣರು ಹುಟ್ಟಿದ ಮಗುವಾದ ಕೃಷ್ಣನಿಗೆ ಜಾತಕರ್ಮವನ್ನು ಶ್ರದ್ಧಾಭಕ್ತಿಗಳಿಂದ ಆಚರಿಸಿದರು. ಅನಂತರ ಶ್ರೀಕೃಷ್ಣನು ತಾಯಿಯ ಎದೆಹಾಲನ್ನು ಕುಡಿಯಲು ಪ್ರಾರಂಭಿಸಿದನು. ಮಗುವನ್ನು ನೋಡಿ ಹಾಲು ಸುರಿಯುತ್ತಿದ್ದ ತಾಯಿಯ ಎದೆಹಾಲು ವ್ಯರ್ಥವಾಗಬಾರದೆಂಬ ದೃಷ್ಟಿಯಿಂದ ಹಾಲುಕುಡಿದನು. ತನಗೆ ಹಸಿವಾಗಿದೆ ಎಂಬ ಕಾರಣದಿಂದಲ್ಲ.

ಹುಟ್ಟಿದ ಮಗುವನ್ನು ಯಶೋದೆಯು ತೊಡೆಯ ಮೇಲೆ ಮಲಗಿಸಿಕೊಂಡು, ಈಗ ಕುಳಿತಿದ್ದಾಳೆ. ಬಾಣಂತಿಯ ವೇಷದಲ್ಲಿದ್ದಾಳೆ. ಅವಳ ಸಖಿಜನರು ಗೋಪಿಯರು ತುಂಬಿದ ಮನದಿಂದ ಉಪಚರಿಸುತ್ತಿದ್ದಾರೆ. ಬಂದವರೆಲ್ಲರೂ ಕಾಣಿಕೆಗಳನ್ನು ಯಶೋದೆಗೆ ನೀಡುತ್ತಿದ್ದಾರೆ.

ಸಮೃದ್ಧಿ, ಸಂತೋಷ, ಸಂಭ್ರಮ, ಸಡಗರಗಳಿಂದ ಮನ ತುಂಬಿದ ಯಶೋದೆಯು ಪುಟಾಣಿ ಕೃಷ್ಣನಿಗೆ ಎದೆಹಾಲು ಕುಡಿಸುತ್ತಿದ್ದಾಳೆ. ಕೃಷ್ಣನಿಗೆ ಹಾಲು ಕುಡಿಸಿ ತಾನು ಅಮಿತಾನಂದವನ್ನು ಪಡುತ್ತಿದ್ದಾಳೆ.

ಬಹೂನಿ ಪುಣ್ಯಾನಿ ಸ ನಂದಾ ಪತ್ನ್ಯಾಃ ಹೃದಿ ಸ್ಥಿರೀಕರ್ತುಮುರೋಜದುಗ್ಧಮ್ ।
ಪಪೌ ಪ್ರದೇಶಾರ್ಥಿತಯೈವ ಶೌರಿರ್ನ ಚೇತ್ ಸುತೃಪ್ತಸ್ಯ ಕುತಸ್ತದಿಚ್ಛಾ॥ (ರು.ವಿ. ೨-೩೦)

ಶ್ರೀಕೃಷ್ಣನಿಗೆ ಯಶೋದೆಯ ವಿಷಯದಲ್ಲಿ ಬಹಳ ಪ್ರೀತಿಯು ಉಂಟಾಯಿತು. ತಾಯಿಗೆ ಸಂತೋಷ ಪಡಿಸುವುದಕ್ಕಾಗಿಯೇ ಎದೆಹಾಲನ್ನು ಯಥೇಚ್ಛವಾಗಿ ಪಾನ ಮಾಡಿದನು. ಯಶೋದೆಗೆ ಅಮಿತವಾದ ಪುಣ್ಯವನ್ನು ನೀಡಬೇಕು. ಆ ರಾಶಿರಾಶಿ ಪುಣ್ಯವನ್ನು ತುಂಬಿಕೊಳ್ಳಲು ಯಶೋದೆಯ ಹೃದಯದಲ್ಲಿ ಸ್ಥಳವನ್ನು ಮಾಡಬೇಕು. ಆದಕ್ಕಾಗಿ ಎದೆಯಲ್ಲಿ ತುಂಬಿದ ಹಾಲನ್ನು ಸಂಪೂರ್ಣವಾಗಿ ಪಾನಮಾಡಿದನು. ನಿತ್ಯತೃಪ್ತನಾದ ಶ್ರೀಕೃಷ್ಣನಿಗೆ ಈ ಕಾರಣ ಬಿಟ್ಟು, ಸ್ತನ್ಯಪಾನದಿಂದ ಸುಖಿಸಿಗುತ್ತದೆಂಬ ಕಾರಣವನ್ನು ಹೇಳಲು ಹೇಗೆ ಸಾಧ್ಯ ?

## ನಂದಗೋಪ ಹಾಗೂ ವಸುದೇವರ ಪರಸ್ಪರ ಭೇಟಿ

ಒಂದು ತಿಂಗಳು ಕಳೆಯಿತು. ಕಂಸನಿಗೆ ಕಪ್ಪಕಾಣಿಕೆ ಸಲ್ಲಿಸಲು ನಂದನು ಮಥುರೆಗೆ ಹೊರಟ. ಅಲ್ಲಿ ವಸುದೇವನನ್ನು ಕಂಡ. ಇಬ್ಬರೂ ಪರಸ್ಪರ ಆಲಿಂಗಿಸಿದರು. ಆನಂದಬಾಷ್ಪ ಸುರಿಸಿದರು. ಆಗ ವಸುದೇವನು ಹೇಳುತ್ತಾನೆ – ''ನಂದನೇ! ನನಗೆ ಮಕ್ಕಳ ಆಸೆಯೇ ಹೊರಟು ಹೋಗಿತ್ತು. ಇಂಥ ದೌರ್ಭಾಗ್ಯಶಾಲಿಯಾದ ನನಗೆ ಶ್ರೀಹರಿಯೇ ಮಗನಾಗಿ ಹುಟ್ಟಿ ಬಂದಿದ್ದಾನೆ. ನನ್ನ ಜೀವನ ಧನ್ಯವಾಗಿದೆ'' ಎಂದು ಆನಂದದ ಕಣ್ಣೀರಿಟ್ಟನು. ಮತ್ತು ನಂದನನ್ನು ಕುರಿತು ಹೇಳುತ್ತಾನೆ – 'ನೀನು ಕಪ್ಪವನ್ನು ಕೊಟ್ಟಿದ್ದಾಗಿದೆಯಲ್ಲವೇ? ಕೂಡಲೇ ಇಲ್ಲಿಂದ ಹೊರಟು ಬಿಡು. ಅನೇಕ ಅಪಶಕುನಗಳು ನನಗೆ ಕಾಣಿಸುತ್ತಿವೆ''.

ವಸುದೇವನ ಸಮಾಗಮವನ್ನು ಮಾಡಿ ನಂದಗೋಪನು ಎತ್ತಿನ ಬಂಡಿಯಲ್ಲಿ ಕೂಡಲೇ ತೆರಳಿದನು. ಆವನು ಬರುವ ಮೊದಲೇ ಕಂಸನಿಂದ ಕಳುಹಿಸಲ್ಪಟ್ಟ ಪೂತನಿ ಎಂಬ ರಾಕ್ಷಸಿಯು ನಂದಗೋಪನ ಮನೆಯನ್ನು ಪ್ರವೇಶ ಮಾಡಿದ್ದಳು.

## ಪೂತನಿಯ ಸಂಹಾರದಲ್ಲಿಯೂ ಚಮತ್ಕಾರ

ಅನೇಕ ಪಟ್ಟಣಗಳಿಗೆ ಗ್ರಾಮಗಳಿಗೆ ತೆರಳಿ ಅಲ್ಲಿರುವ ಅನೇಕ ಶಿಶುಗಳನ್ನು ಸಂಹಾರ ಮಾಡುತ್ತ, ನಂದಗೋಕುಲಕ್ಕೆ ಆಕಾಶಮಾರ್ಗದಿಂದ ಹಾರಿ ಬಂದಿದ್ದಳು. ಮಾಯಾರೂಪದಿಂದ ತನ್ನ ರಾಕ್ಷಸರೂಪವನ್ನು ಅಡಗಿಸಿ, ಸುಂದರ ತರುಣಿಯಾಗಿ ಇಲ್ಲಿಗೆ ಆಗಮಿಸಿದ್ದಳು.

ತುರುಬಿನಲ್ಲಿ ಪರಿಮಳ ಸೂಸುವ ಹೂವುಗಳನ್ನು ಮುಡಿದು, ಸಿಂಹದಂತೆ ಕಟಿಪ್ರವೇಶವನ್ನು ಹೊಂದಿ, ಬಳುಕುವ ನಡುವಿನಲ್ಲಿ ಒಡ್ಯಾಣ ಹೊತ್ತು, ಪೀತಾಂಬರವನ್ನುಟ್ಟು ಸುಂದರ ತರುಣಿಯಾಗಿ ಕಿರುನಗೆಯನ್ನು ಬೀರುತ್ತ, ಕಡೆಗಣ್ಣಿನ ನೋಟದಿಂದ ಎಲ್ಲ ಗೋಪರನ್ನೂ ಮರುಳು ಮಾಡುತ್ತಾ ಯಶೋದೆಯಿದ್ದಲ್ಲಿಗೆ ನೇರವಾಗಿ ಬಂದಳು. ಆಗ ಶಿಶುರೂಪದ ಶ್ರೀಕೃಷ್ಣನು ಮಲಗಿದ್ದನು. ಯಶೋದೆಯು ಕೂಡ ಮಲಗಿದ್ದಳು. ಪೂತನಿಯು ಮಗುವನ್ನು ಎತ್ತಿಕೊಂಡಳು. ನಿದ್ದೆಯ ಮಂಪರಿನಲ್ಲಿ ಯಶೋದೆಗೆ ಪೂತನಿಯು ಸಾತ್ವಿಕಳಂತೆ ಕಂಡಳು. ನಿದ್ದೆಯಿಂದ ಪೀಡಿತಳಾದ ಯಶೋದೆಯು ಆ ಪೂತನಿಯನ್ನು ತಡೆಯಲಿಲ್ಲ.

ಪೂತನಿಯು ಮನೆಯಿಂದ ಹೊರಗೆ ಆ ಶಿಶುವನ್ನು ಕರೆದುಕೊಂಡು ಹೊರಟು ಬಿಟ್ಟಳು. ಪಕ್ಕದಲ್ಲಿಯೇ ಇದ್ದ ವನದಲ್ಲಿ ಮಗುವಿಗೆ ತನ್ನ ಮೊಲೆಯನ್ನು ಉಣಿಸಿದಳು. ತನ್ನ ಸ್ತನಗಳಿಗೆ ಕಾಲಕೂಟವಿಷವನ್ನು ಲೇಪನ ಮಾಡಿಕೊಂಡು ಎಲ್ಲ ಮಕ್ಕಳನ್ನೂ ಕೊಲ್ಲುತ್ತಿದ್ದಳು. ಅದೇ ರೀತಿಯಲ್ಲಿ ಕೃಷ್ಣನನ್ನು ಕೂಡ ಕೊಲ್ಲಲು ಆಗಮಿಸಿದ್ದಳು. ಆದರೆ ಶ್ರೀಕೃಷ್ಣನು ಸ್ತನಗಳ ಮೇಲೆ ಲೇಪಿಸಿಕೊಂಡ ವಿಷವನ್ನು ಬಾಯಿಯಲ್ಲಿ ಹೀರಿ, ಅವಳ ಸ್ತನಗಳ ಒಳಗೆ ತಳ್ಳಿದನು. ವಿಷವು ಅವಳ ಎದೆಯ ಒಳಗೆ ಹೋಗಿ ಪ್ರಾಣಬಿಟ್ಟಳು. ಹಾಲು ಕುಡಿಯುವ ನೆಪದಿಂದ ಶ್ರೀಕೃಷ್ಣನು ಅವಳ ಪ್ರಾಣವನ್ನೇ ಹೀರಿದನು.

ಸ ಪೂತನೋಚ್ಚಸ್ತನಕುಂಭಚುಂಬಿಮುಖಾರವಿಂದೋ ಹರಿರಾಬಭಾಸೇ ।
ವಿಷಂ ಬಹಿಷ್ಠಂ ಪ್ರಮದಾಽಂತರಂಗೇ ಸುಪೂರಯಂಸ್ತನ್ಮುಖವರ್ತ್ಮನೇವ ॥

(ರು.ವಿ. ೨-೩೫)

ಶ್ರೀಕೃಷ್ಣನು ಪೂತನಿಯನ್ನು ಕೊಲ್ಲಬೇಕೆಂಬ ಬಯಕೆಯಿಂದ ಅವಳ ಸ್ತನ್ಯಪಾನವನ್ನು ಮಾಡಲು ಪ್ರಾರಂಭಮಾಡಿದನು. ಅವಳ ಎದೆಯಲ್ಲಿರುವ ಹಾಲನ್ನು ಹೀರಿ, ಒಳಗೆ ಸ್ಥಳಾವಕಾಶ ಮಾಡಿ ಅದೇ ರಂಧ್ರದಿಂದ ಹೊರಗೆ ಲೇಪಿಸಿಕೊಂಡ ವಿಷವನ್ನು ಅದೇ ರಂಧ್ರದಿಂದ ಒಳಗೆ ತಳ್ಳುವಂತೆ ಶ್ರೀಕೃಷ್ಣನು ಕಂಡನು.

ರಮಾಧರೋಷ್ಠಾಮೃತಪಾನಜಾತಮಹಾನುಭಾವೇನ ನ ಪೂತನಾಯಾಃ ।
ಉರೋಜ ಸಂಗ್ಯಾರ್ತಿಕರೋ ಗರೋಽಸೌ ಬಭೂವ ಬಾಲಸ್ಯ ಬಲಾನುಜಸ್ಯ ॥
(ರು.ವಿ. ೨-೩೬)

ಭಗವಂತನಾದ ನಾರಾಯಣನೇ ಶ್ರೀಕೃಷ್ಣನಾದ್ದರಿಂದ ಲಕ್ಷ್ಮೀದೇವಿಯ ಅಧರಾಮೃತವನ್ನು ಪಾನ ಮಾಡಿದ ಶ್ರೀಕೃಷ್ಣನಿಗೆ ಪೂತನಿಯ ಸ್ತನ್ಯದ ವಿಷವು ಯಾವುದೇ ತೊಂದರೆಯನ್ನುಂಟುಮಾಡಲಿಲ್ಲ. ಅಮೃತಪಾನ ಮಾಡಿದವರಿಗೆ ಮರಣದ ಭಯ ಇರಲು ಸಾಧ್ಯವೇ ಇಲ್ಲ.

ಮುಕುಂದವಿದ್ವೇಷವಿಷಾನುಸಂಗಾದ್ ವಿಯೋಜಿತಾಂಗೀ ಕಿಲ ಪೂತನೈಕಾ ।
ಪಪಾತ ಧನ್ಯಾ ಲಲನಾಗ್ರಗಣ್ಯಾ ಜಗಾಮ ಚಾನ್ಯಾಮರಲೋಕಲೋಕಮ್ ॥(ರು.ವಿ.೨-೪೧)

ಪೂತನಿಯ ಶರೀರದಲ್ಲಿ ತಾಟಕಿಯು ನೆಲಸಿದ್ದಳು. ದೇವಲೋಕದ ಊರ್ವಶಿಯೂ ಕೂಡ ಅಲ್ಲಿಯೇ ಇದ್ದಳು. ಶ್ರೀಕೃಷ್ಣನು ಅಧಮಜೀವಳಾದ ತನ್ನನ್ನು ದ್ವೇಷ ಮಾಡುವ ತಾಟಕಿಯನ್ನು ತಮಸ್ಸಿಗೆ ಕಳುಹಿಸಿದನು. ಊರ್ವಶಿಯನ್ನು ದೇವಲೋಕಕ್ಕೆ ಕಳುಹಿಸಿದಳು.

ಸ್ತನ್ಯಪಾನ ಮಾಡಿಸಬೇಕೆಂಬ ವರವನ್ನು ಪಡೆದ ಊರ್ವಶಿಯು ಆ ದೇಹದಲ್ಲಿದ್ದಳು. ರಾಮಾವತಾರದಲ್ಲಿ ಮೊಟ್ಟಮೊದಲು ಶ್ರೀರಾಮನಿಂದ ಹತಳಾದ ತಾಟಕಿಯು ದ್ವೇಷದಿಂದ ಪೂತನಿಯಾಗಿ ಜನಿಸಿದ್ದಳು. ರಾಮಾವತಾರ ಹಾಗೂ ಕೃಷ್ಣಾವತಾರಗಳಲ್ಲಿ ಮೊದಲು ಹತಳಾಗಿ ತಮಸ್ಸಿಗೆ ತೆರಳಿದಳು.

ಮೃತಾ ಸ್ವರೂಪೇಣ ಸುಭೀಷಣೇನ ಪಪಾತ ಸಾ ವ್ಯಾಪ್ಯ ವನಂ ಸಮಸ್ತಮ್ ।
ತದಾಗಮನ್ನಂದಗೋಪೋಽಪಿ ತತ್ರ ದೃಷ್ಟ್ವಾ ಚ ಸರ್ವೇಽಪ್ಯಭವನ್ ಸುವಿಸ್ಮಿತಾಃ ॥
ತಾ.ನಿ. ೧೨-೮೬

ಆ ಪೂತನಿಯು ತನ್ನ ಭಯಂಕರವಾದ ನಿಜರೂಪದಿಂದ ಆ ಕಾಡನ್ನೇ ವ್ಯಾಪಿಸಿದಳು. ಆಗ ನಂದಗೋಪನು ಓಡಿ ಬಂದನು. ಉಳಿದವರೂ ಓಡಿಬಂದರು. ಕೃಷ್ಣನು ಅವಳ ಎದೆಯ ಮೇಲೆ ಆಟವಾಡುತ್ತಿದ್ದನು. ಎಲ್ಲರೂ ಈ ದೃಶ್ಯವನ್ನು ಕಂಡು ಆಶ್ಚರ್ಯಚಕಿತರಾಗಿ ಸ್ತಬ್ಧಚಿತ್ರದಂತೆ ನಿಂತುಬಿಟ್ಟರು. ಪಾರ್ವತಿಯ ವರವನ್ನು ಪಡೆದ ಪೂತನಿಯು ಬೆಟ್ಟದಂತೆ ಬಿದ್ದಿದ್ದಳು. ಪರ್ವತದಂತಹ ಮಹಾಕಾಯ, ಸರೋವರದಂಥ ಹೊಟ್ಟೆ, ಕತ್ತಲು ತುಂಬಿದ ಭಾವಿಯಂತಹ ಕಣ್ಣುಗಳು, ಗುಹೆಯಂತೆ ಎರಡು ಮೂಗಿನ ಹೊಳ್ಳೆಗಳು, ಅಕರಾಳ ವಿಕರಾಳ ಮುಖ. ಇದನ್ನು ಕಂಡು ಎಲ್ಲ ಗೋಪ ಗೋಪಿಯರು ಗಾಬರಿಗೊಂಡಳು.

ಯಶೋದೆಯು ಓಡಿಹೋಗಿ ಮಗುವನ್ನು ಎತ್ತಿಕೊಂಡಳು. ಮಗು ಮಂದಹಾಸದಿಂದ ಶಾಂತವಾಗಿತ್ತು. ಅದನ್ನು ಮುದ್ದಾಡಿದಳು. ಮನೆಗೆ ಕರೆದುಕೊಂಡು ಹೋಗಿ ಗೋಮೂತ್ರದಿಂದ ಸ್ನಾನ ಮಾಡಿಸಿದಳು. ಗೋಧೂಳಿ ಹಚ್ಚಿದರು. ಅಂಗಾಂಗಗಳಿಗೆ ಗೋಮಯವನ್ನು ಲೇಪನ ಮಾಡಿದರು. ಹರಿನಾಮದ ರಕ್ಷೆಯನ್ನಿಟ್ಟರು. ಅಷ್ಟಾಕ್ಷರಮಂತ್ರದಿಂದ ಶಿಶುವಿನ ತಲೆ, ಮುಖ, ಎದೆ, ನಾಭಿ, ತೊಡೆ, ಕಾಲುಗಳಿಗೆ ನ್ಯಾಸವನ್ನು ಮಾಡಿದರು. ಅಕ್ಷರನ್ಯಾಸ, ಬೀಜನ್ಯಾಸ, ಕರನ್ಯಾಸಗಳನ್ನು ಮಾಡಿ ಶಿಶುವಿಗಾಗಿ ರಕ್ಷಾಮಂತ್ರವನ್ನು ಪಠಿಸಿದರು.

ದೇವಲೋಕದ ಊರ್ವಶಿಯ ಆವೇಶವನ್ನು ಹೊಂದಿದ ತಾಟಕಿಯೇ ಈಗ ಪೂತನಿಯಾಗಿ ಹುಟ್ಟಿದ್ದಾಳೆ. ಕೃಷ್ಣನನ್ನು ಕೊಲ್ಲಲು ಪ್ರಯತ್ನಪಟ್ಟಿದ್ದರಿಂದ ತಮಸ್ಸಿಗೆ ತೆರಳಿದಳು. ಭಗವಂತನು ರಾಮಾವತಾರದಲ್ಲಿ ಇದೇ ತಾಟಕಿಯನ್ನು ಮೊದಲು ಕೊಂದನು. ಕೃಷ್ಣಾವತಾರದಲ್ಲಿ ಪೂತನಿಯಾದ ಅವಳನ್ನೇ ಪುನಃ ಮೊದಲು ಕೊಂದನು. ಒಳಗಿದ್ದ ಊರ್ವಶಿಯು ಕೃಷ್ಣ ಮಾಡಿದ ಸ್ತನ್ಯಪಾನದ ಸೌಭಾಗ್ಯದಿಂದ ಉತ್ತಮಲೋಕವನ್ನು ಹೊಂದಿದಳು. ಶಾಪದಿಂದ ವಿಮುಕ್ತಳಾದಳು. ತುಂಬುರು ಎಂಬ ಗಂಧರ್ವನ ಸಂಗವನ್ನು ಮಾಡಿದ ಕಾರಣ ಕುಬೇರನು ಊರ್ವಶಿಗೆ ''ರಾಕ್ಷಸಿಯ ದೇಹದಲ್ಲಿ ಪ್ರವೇಶಿಸು'' ಎಂದು ಶಾಪವನ್ನು ನೀಡಿದ್ದನು. ಈಗ ಶ್ರೀಕೃಷ್ಣನ ಸಂಪರ್ಕದಿಂದ ಊರ್ವಶಿಯು ಮೂಲರೂಪವನ್ನು ಸೇರಿದಳು. –

''ಯಯೌ ತುಷ್ಟೇ ಕಿಮಲಭ್ಯಂ ರಮೇಶೇ'' - ಭಗವಂತನು ದೊರೆತ ಮೇಲೆ ಯಾವುದು ತಾನೇ ಅಲಭ್ಯ ?

ಎಲ್ಲ ಭಕ್ತರೂ ತಾವು ಮಾಡಿದ ಪುಣ್ಯದ ರಾಶಿಯನ್ನೇ ಸಮರ್ಪಿಸುತ್ತಾರೆ. ಭಕ್ತರು ಮಾಡಿದ ಸತ್ಕರ್ಮದ ರುಚಿಯನ್ನು ಅನುಭವಿಸಲು ಬೆರಳನ್ನು ಚೀಪುತ್ತಿದ್ದಾನೋ ಎಂಬಂತೆ ಕಾಣಿಸುತ್ತಿದೆ. ಶ್ರೀಕೃಷ್ಣಪರಮಾತ್ಮನ ಪ್ರತಿಯೊಂದು ಕೃತಿಗಳು, ಚರಿತ್ರೆಗಳು ಅತ್ಯಂತ ಪುಣ್ಯದಾಯಕವಾಗಿದೆ. ಅನೇಕ ಬಾರಿ ಈ ಎಲ್ಲ ವಿಷಯಗಳನ್ನು ಕೇಳಿ ತಿಳಿದಿದ್ದರೂ ಕೂಡ ಪುನಃ ಪುನಃ ಕೇಳಬೇಕು, ಓದಬೇಕು, ಮತ್ತೊಬ್ಬರಿಂದ ತಿಳಿದುಕೊಳ್ಳಬೇಕು. ಇದರಿಂದ ಅಪರಂಪಾರವಾದ ಪುಣ್ಯವನ್ನು ಭಗವಂತನು ನೀಡುತ್ತಾನೆ. ಆತ್ಯಂತಿಕವಾಗಿ ತನ್ನ ಸಾಮೀಪ್ಯವನ್ನು ನೀಡಿ ಅನುಗ್ರಹಿಸುತ್ತಾನೆ. ತನ್ನ ದರ್ಶನವನ್ನು ನೀಡಿ ಉದ್ದರಿಸುತ್ತಾನೆ. ಶ್ರೀಕೃಷ್ಣಪರಮಾತ್ಮನ ಚರಿತ್ರೆಯನ್ನು ಕೇಳಿ ತಿಳಿಯುವುದೇ ನಮ್ಮೆಲ್ಲರ ಸೌಭಾಗ್ಯವಾಗಿದೆ. ಕಲಿಯುಗದಲ್ಲಿ ಭಕ್ತಿಯಿಂದ ಒಮ್ಮೆ ಕೃಷ್ಣ ಎಂದು ಉತ್ತರಿಸಿದರೆ, ಎಲ್ಲ ಪಾಪಪಕ್ಷಿಗಳು ದೇಹದಿಂದ ಹಾರಿಹೋಗುತ್ತವೆ. ಆದ್ದರಿಂದ ಶ್ರೀಕೃಷ್ಣಪರಮಾತ್ಮನ ಚರಿತ್ರೆಯನ್ನು ಓದುತ್ತಾ ಭಕ್ತಿಯಿಂದ 'ಕೃಷ್ಣ!' ಎಂದು ಉಚ್ಚರಿಸೋಣ. ಹೃದಯದಲ್ಲಿ ಶ್ರೀಕೃಷ್ಣಪರಮಾತ್ಮನನ್ನು ಸ್ಮರಿಸೋಣ. ಜೀವನವನ್ನು ಸಾರ್ಥಕ ಮಾಡಿಕೊಳ್ಳೋಣ.

ಇಲ್ಲಿಗೆ ಕೃಷ್ಣಾವತಾರಚರಿತ್ರೆಯು ಸಮಾಪ್ತವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

* * * * *

## ನೆನೆವೆನನುದಿನ ನೀಲನೀರದ - ವಾದಿರಾಜರ ಕೀರ್ತನೆ

ನೆನೆವೆನನುದಿನ ನೀಲನೀರದ ವರ್ಣನ ಗುಣ ರನ್ನನ ॥ಪ॥
ಮುನಿಜನಪ್ರಿಯ ಮುದ್ದು ಉಡುಪಿಯ ರಂಗನ ದಯಾಪಾಂಗನ ॥ಅ.ಪ.॥
ದೇವಕೀಜಠರರೋದಯಾಂಬುಧಿ ಚಂದ್ರನ-ಗುಣಸಾಂದ್ರನ
ಗೋವ್ರಜಕೆ ಘನ ಯಮುನೆ ದಾಟಿ ಬಂದನ - ಅಲ್ಲಿ ನಿಂದನ
ಮಾವ ಕಳುಹಿದ ಮಾಯಾ ಶಟವಿಯ ಕೊಂದನ - ಚಿದಾನಂದನ
ದೇವರಿಪು ದೈತ್ಯೇಂದ್ರ ಶಕಟನ ಒದ್ದನ - ಶ್ರುತಿ ಸಿದ್ಧನ ॥೧॥
ಗೋಕುಲದ ಗೋಪಿಯರ ವಂಚಕ ಚೋರನ - ಬಹು ಧೀರನ
ಅನೇಕ ನಾರಿಯರ್ವಸನವನು ಕದ್ದೊಯ್ದನ - ತುರುಗಾಯ್ದನ
ನಾಕಿಯರಿಗರಿ ಧೇನುಕ ವತ್ಸವಿಘಾತನ - ವಿಖ್ಯಾತನ
ಕಾಕುಮತಿ ಕಾಳಿಂಗನ ಫಣ ತುಳಿದನ - ಅವಗೊಲಿದನ ॥೨॥

ಶೈಲವನು ಅಹಿಶಯನ ಬೆರಳಲಿ ಆಂತನ - ಬಲವಂತನ
ಸೋಳಸಾಸಿರ ಬಾಲೆಯರ ಕರ ಪಿಡಿದನ - ಸುಧೆಗುಡಿದನ
ಬಾಲೆ ಭಾಮೆಯರೊಡನೆ ಜಲಕ್ರೀಡೆ ಗಿಳಿದನ - ಅಲ್ಲಿ ನಲಿದನ
ಲೀಲೆಯಲಿ ಲಲನೆಯರಿಗಿಷ್ಟವ ಕೊಟ್ಟನ - ಸಂತುಷ್ಟನ ||೩||
ಕ್ರೂರ ಬಕ ಕೇಶಿಗಳನ್ನೆಲ್ಲರ ಸೀಳ್ದನ - ಸುರರಾಳ್ವನ
ಅಕ್ರೂರ ಕರೆಯಲು ಹರುಷದಿಂದಲಿ ಬಂದನ - ಸುರವಂದ್ಯನ
ನಾರಿ ಕುಬುಜೆಗೆ ಭೂರಿ ಸಂತಸ ವಿತ್ತನ - ಅತಿಶಕ್ತನ
ವಾರಣವನು ಕೆಡಹಿದ ಪ್ರತಿ ಮಲ್ಲನ - ಅತಿ ಚೆಲ್ವನ ||೪||
ಸುಲಭದಿಂದಲಿ ಶಿವನ ಧನುವನು ಮುರಿದನ - ನೆರೆ ಮೆರೆದನ
ಮಲೆತ ಮಲ್ಲರ ಕೆಡಹಿ ರಂಗದಿ ನಿಂತನ - ಜಯವಂತನ
ಖಳ ಕುಲಾಗ್ರಣಿ ಕಂಸನೆಂಬನ ಹೊಡೆದನ - ಹುಡಿಗೆಡೆದನ
ಬಲದಿ ತಾಯಿ ತಂದೆಯರ ಬಂಧನ ಕಡಿದನ - ಯಶ ಪಡೆದನ ||೫||
ಭುವನ ಪಟ್ಟವನುಗ್ರಸೇನೆಗೆ ಕೊಟ್ಟನ - ಅತಿ ಶ್ರೇಷ್ಠನ
ಯುವತಿರಿಗುದ್ಧವನ ಕಳುಹಿದ ಜಾಣನ - ಸುಪ್ರವೀಣನ
ವಿವಿಧ ವಿದ್ಯಾಕಲೆಗಳೆಲ್ಲವ ನರಿತನ - ಶುಭ ಚರಿತನ
ಜನವ ಶಿಕ್ಷಿಸಿ ದ್ವಿಜನ ಕಂದನ ತಂದನ - ಆನಂದನ ||೬||
ಸುಮತಿ ಖಳಮಾಗಧನ ಯುದ್ಧದಿ ಗೆದ್ದನ - ಅನವದ್ಯನ
ದುಮಣಿ ಸಮ ದ್ವಾರಕಿಯ ರಚಿಸಿದು ದಾರನ - ಗಂಭೀರನ
ಸುಮತಿ ಮುಚುಕುಂದನೊದ್ದ ಯವನನ ಸುಟ್ಟನ - ಅತಿದಿಟ್ಟನ
ವಿಮಲ ಸುಚರಿತ್ರಾಷ್ಟ ಮಹಿಷಿಯರಾಳ್ದನ - ನೆರೆ ಬಾಳ್ದನ ||೭||
ಮುರನರಕ ಮುಖ್ಯರನು ಚಕ್ರದಿ ತರಿದನ - ಕರಿವರದನ
ಸುರತರುವ ಸತಿಗಾಗಿ ತಂದ ಸಮರ್ಥನ - ಜಗತ್ಕರ್ತನ
ದುರುಳ ಶಿಶುಪಾಲಾದಿ ದೈತ್ಯ ಸಂಹಾರನ - ಬಹುಶೂರನ
ಕುರುಕುಲಕೆ ಲಯವಿತ್ತ ಪಾಂಡವ ಪ್ರೀಯನ - ಕವಿಗೇಯನ ||೮||
ಇಂತು ಸಲಹುವ ಇಳೆಯ ಸುಜನರನ ಕಾಂತನ - ಸಿರಿವಂತನ
ಪಂಥವುಳ್ಳ ಪ್ರಸನ್ನ ಶ್ರೀಹಯವದನನ - ಮುನಿಮಾನ್ಯನ
ಸಂತಸದೊಳೀ ಸಾರಕಥೆಯನು ಕೇಳ್ವರ - ನೆರೆಬಾಳ್ವರ
ಕಂತುಪಿತ ಕಾರುಣ್ಯದಿಂದಲಿ ಪೊರೆವನು - ಸುಖಗರೆವನು ||೯||

* * * *

## ಕಡಲೆಕಾಯಿ ಮಿಠಾಯಿ

**ಬೇಕಾಗುವ ಪದಾರ್ಥಗಳು** : ಅರ್ಧ ಕೆ.ಜಿ. ಕಡಲೆಕಾಯಿ ಬೀಜ, ಎರಡು ಅಚ್ಚು ಬೆಲ್ಲ, ಅರ್ಧ ಗಿಟುಕು ಕೊಬ್ಬರಿ ಮತ್ತು ಏಲಕ್ಕಿ ಹತ್ತು ಕಾಯಿ.

**ತಯಾರಿಸುವ ವಿಧಾನ** : ಬಾಣಲೆಯಲ್ಲಿ ಬೀಜ ಹಾಕಿ ಚೆನ್ನಾಗಿ ಹುರಿದು ಮರವೊಂದಕ್ಕೆ ಬಗ್ಗಿಸಿಕೊಂಡು ಬೀಜದ ಹೊಟ್ಟು ಪೂರಾ ತೆಗೆಯಿರಿ, ಬಿಳಿಯ ಕಡಲೆಕಾಯಿ ಬೇಳೆ ಸಿದ್ಧಪಡಿಸಿಕೊಳ್ಳಿ. ಪಾತ್ರೆಯಲ್ಲಿ ಬೆಲ್ಲ ಹಾಕಿ ಅದಕ್ಕೆ ನೀರು ಬೆರೆಸಿ, ಒಲೆಯ ಮೇಲಿಡಿ. ಬೆಲ್ಲದ ಅಂಟು ಪಾಕ ಬರುವವರೆಗೂ ಪಾತ್ರೆಯನ್ನು ಒಲೆಯ ಮೇಲಿರಲಿ. ಚೆನ್ನಾಗಿ ಉಂಡೆ ಪಾಕ ಬಂದ ಮೇಲೆ ಪಾತ್ರೆ ಕೆಳಗಿಳಿಸಿ. ಉಂಡೆ ಪಾಕಕ್ಕೆ ಕಡಲೆಕಾಯಿ ಬೀಜ, ಕೊಬ್ಬರಿ ತುರಿ ಮತ್ತು ಏಲಕ್ಕಿ ಪುಡಿ ಹಾಕಿ ಹದವಾಗಿ ಬೆರೆಲಸ ತಟ್ಟೆಯಲ್ಲಿ ಹರಡಿ ಚೆನ್ನಾಗಿ ಆರಿದ ಮೇಲೆ, ಮಿಠಾಯಿಯನ್ನು ಬಿಲ್ಲೆ ಬಿಲ್ಲೆಯಾಗಿ ಕುಯ್ದು ಇನ್ನೊಂದು ತಟ್ಟೆಯಲ್ಲಿಡಿ.

## ಶಂಕರ ಪೋಳಿ

**ಬೇಕಾಗುವ ಪದಾರ್ಥಗಳು** : ಹಾಲು - 1 ಕಪ್, ಸಕ್ಕರೆ - 11/2 ಕಪ್, ತುಪ್ಪ - 3/4 ಕಪ್, ಸೋಡಾ - 1 ಚಿಟಿಕೆ, ಮೈದಾಹಿಟ್ಟು - ಹಿಡಿಯುವಷ್ಟು.

**ತಯಾರಿಸುವ ವಿಧಾನ** : ಹಾಲಿನಲ್ಲಿ ಸಕ್ಕರೆ ಕರಗಿಸಿ, ಸಕ್ಕರೆ ಕರಗಿದ ನಂತರ ತುಪ್ಪ ಕಾಯಿಸಿ ಹಾಕಿ, ಗೋದಿಹಿಟ್ಟು, 1 ಚಿಟಿಕೆ ಸೋಡಾ ಹಾಕಿ ಕಲಸಿ. ಚಪಾತಿ ಹಿಟ್ಟಿನ ಹದಕ್ಕೆ ಕಲಸಿಕೊಂಡು ಗೊದಿಹಿಟ್ಟಿನ ದಪ್ಪ ಉಂಡೆಗಳನ್ನು ಉರುಳಿಸಿ ದಪ್ಪವಾಗಿ ಲಟ್ಟಿಸಿಕೊಳ್ಳಿ. ಡೈಮಂಡ್ ಆಕಾರಕ್ಕೆ ಚಿಕ್ಕ ಚಿಕ್ಕ ಶಂಕರ ಪೋಳಿಗಳನ್ನು ಚಾಕುವಿನಿಂದ ಕತ್ತರಿಸಿ ಎಣ್ಣೆಯಲ್ಲಿ ಬಂಗಾರದ ಬಣ್ಣ ಬರುವವರೆಗೂ ಸಣ್ಣ ಉರಿಯಲ್ಲಿ ಕರಿಯಬೇಕು.

## ಎಳ್ಳುಂಡೆ

**ಬೇಕಾಗುವ ಪದಾರ್ಥಗಳು** : ಎಳ್ಳು - 4 ಬಟ್ಟಲು, ಕಡಲೆಕಾಯಿ ಬೀಜ - 1 ಬಟ್ಟಲು, ಕೊಬ್ಬರಿ ತುರಿ -1 ಬಟ್ಟಲು, ಬಿಳಿ ಬೆಲ್ಲ - 2 ಅಚ್ಚು, ನೀರು -1 ಬಟ್ಟಲು.

**ತಯಾರಿಸುವ ವಿಧಾನ** : ಕ್ಲೀನ್ ಮಾಡಿದ ಎಳ್ಳನ್ನು ಹುರಿದುಕೊಳ್ಳಿ. ಅದಕ್ಕೆ ಹುರಿದು ಹೊಟ್ಟು ತೆಗೆದ ಕಡಲೆಕಾಯಿ (ಬೇಳೆ) ಬೀಜ, ಹುರಿಗಡಲೆ ಸೇರಿಸಿ, ಒಲೆಯ ಮೇಲೆ ಒಂದು ಬಾಣಲಿಯನ್ನು ಇಟ್ಟು 1 ಬಟ್ಟಲು ನೀರನ್ನು ಅದರಲ್ಲಿ ಹಾಕಿ, ಕುದಿ ಹತ್ತಿದ ಮೇಲೆ ಬೆಲ್ಲವನ್ನು ಕುಟ್ಟಿ ಅದರಲ್ಲಿ ಹಾಕಿ ಮೊಗಚು ಕೈಯಿಂದ ಕಲಸಿ, ಪಾಕ ಗಟ್ಟಿಯಾದ ಮೇಲೆ ಎಳ್ಳು ಕಡಲೆಕಾಯಿ ಬೀಜ, ಹುರಿಗಡಲೆ ಮಿಶ್ರಣವನ್ನು ಅದರಲ್ಲಿ ಹಾಕಿ ಮೊಗಚು ಕೈಯಿಂದ ಚೆನ್ನಾಗಿ ಕಲಸಿ. ನಂತರ ಕೊಬ್ಬರಿ ತುರಿಯನ್ನು ಅದಲ್ಲಿ ಹಾಕಿ ಇನ್ನಷ್ಟು ಕಾಲ ಕಲಸಿ, ಆಮೇಲೆ ಬಾಣಲಿಯನ್ನು ಕೆಳಗಿಳಿಸಿ. ಕೈಗೆ ತುಪ್ಪವನ್ನು ಸವರಿಕೊಂಡು ಉಂಡೆಗಳನ್ನು ಕಟ್ಟಿ ಬಿಸಿ ಆರುವುದರೊಳಗೆ ಎಲ್ಲಾ ಉಂಡೆಗಳನ್ನು ಕಟ್ಟಿ ಮುಗಿಸಬೇಕು.

## ಹುರಿದ ಅವಲಕ್ಕಿ

**ಬೇಕಾಗುವ ಪದಾರ್ಥಗಳು** : ಅವಲಕ್ಕಿ, ಉಪ್ಪು, ಸಕ್ಕರೆ, ಸ್ವಲ್ಪ ತೆಂಗಿನಕಾಯಿ ತುರಿ, ಹೆಚ್ಚಿದ ಹಸಿ ಮೆಣಸಿನಕಾಯಿ.

**ತಯಾರಿಸುವ ವಿಧಾನ** : ಅವಲಕ್ಕಿಯನ್ನು ಬಾಣಲೆಯಲ್ಲಿ ಸ್ವಲ್ಪ ಹಾಕಿ ಹುರಿಯಬೇಕು. ನಂತರ ಉಪ್ಪು, ಸಕ್ಕರೆ, ತೆಂಗಿನಕಾಯಿ, ತುರಿ, ಹೆಚ್ಚಿದ ಹಸಿಮೆಣಸಿನಕಾಯಿ ಹಾಕಿ ಬೆರೆಸುವುದು.

## ಕೋಡುಬಳೆ

**ಬೇಕಾಗುವ ಪದಾರ್ಥಗಳು** : ಸಕ್ಕರೆ - 750 ಗ್ರಾಂ, ಬೆಣ್ಣೆ ಕಾಯಿಸಿದ ತುಪ್ಪ - 750 ಗ್ರಾಂ, ಕಡಲೆಹಿಟ್ಟು - 750 ಗ್ರಾಂ, ಖಾರದ ಪುಡಿ - 1 ಚಮಚ, ಇಂಗು - 1 ಚಿಟಿಕೆ, ಉಪ್ಪು ಮತ್ತು ಕರಿಯಲು ಎಣ್ಣೆ

**ಮಾಡುವ ರೀತಿ** : ತೆಂಗಿನಕಾಯನ್ನು ತುರಿದುಕೊಂಡು ಕಡಲೆಹಿಟ್ಟು, ಅಕ್ಕಿಹಿಟ್ಟಿಗೆ ಸೇರಿಸಿ. ಖಾರದ ಪುಡಿ, ಉಪ್ಪು, ಇಂಗು ಕಲಸಿದ ಬಳಿಕ ನೀರಾಕಿ ಕಲಿಸಿದ ಮೇಲೆ ಹಿಟ್ಟನ್ನು ಕೋಡುಬಳೆ ರೀತಿ ಮಾಡಿಕೊಂಡು ಎಣ್ಣೆಯಲ್ಲಿ ಒಂದೊಂದಾಗಿ ಕೆಂಪಗೆ ಕರಿಯಿರಿ.

## ಚಕ್ಕುಲಿ

**ಬೇಕಾಗುವ ಪದಾರ್ಥಗಳು** : ಅಕ್ಕಿಹಿಟ್ಟು - 500 ಗ್ರಾಂ. ಜೀರಿಗೆ - 1 ಚಮಚ, ಉದ್ದಿನ ಬೇಳೆ - 100 ಗ್ರಾಂ., ಇಂಗು - 1 ಚಿಟಿಕೆ, ಬಿಳಿ ಎಳ್ಳು - 25 ಗ್ರಾಂ. ಉಪ್ಪು ಮತ್ತು ಎಣ್ಣೆ

**ಮಾಡುವ ರೀತಿ** : ಅಕ್ಕಿ ಹಾಗೂ ಉದ್ದಿನಬೇಳೆ ಒಂದು ಚಮಚ ತುಪ್ಪ ಹಾಕಿಕೊಂಡು ಹುರಿದು ಹಿಟ್ಟನ್ನು ಮಾಡಿಕೊಳ್ಳಿ. ಈ ಹಿಟ್ಟಿಗೆ ಇಂಗು, ಉಪ್ಪು, ಹುರಿದ ಎಳ್ಳು, ಜೀರಿಗೆ ಹಾಕಿ ಗಟ್ಟಿಯಾಗಿ ಕಲಸಿಕೊಳ್ಳಿ. ಬಾಣಲಿಗೆ ಎಣ್ಣೆ ಹಾಕಿ ಒಲೆಯ ಮೇಲಿಡಿ. ಅದು ಕಾದ ಬಳಿಕ ಕೈ ಒರಳಿನಲ್ಲಿ ಚಕ್ಕುಲಿಯ ಬಿಲ್ಲೆ ಹಾಕಿ, ಅದರೊಳಗೆ ಹಿಟ್ಟು ಸೇರಿಸಿ, ಚಕ್ಕುಲಿ ಒತ್ತುವುದು. ಒತ್ತಿದ ಹಿಟ್ಟನ್ನು ಬಾಣಲಿಗೆ ಹಾಕಿ ಚಕ್ಕುಲಿ ಕರಿಯಿರಿ.

## ಚೌಚೌ

**ಬೇಕಾಗುವ ಪದಾರ್ಥಗಳು** : ಕಡಲೆಹಿಟ್ಟು - 750 ಗ್ರಾಂ., ಕಡಲೆಕಾಯಿ - 75 ಗ್ರಾಂ., ಅಕ್ಕಿಹಿಟ್ಟು - 100 ಗ್ರಾಂ., ಹುರಿಗಡಲೆ - 50 ಗ್ರಾಂ., ಕೊಬ್ಬರಿ - 1000 ಗ್ರಾಂ., ಕರಿಬೇವು - 4 ಗರಿ, ಉಪ್ಪು, ಎಣ್ಣೆ

**ಮಾಡುವ ರೀತಿ** : ಕಡಲೆಹಿಟ್ಟು , ಅಕ್ಕಿಹಿಟ್ಟು, ಉಪ್ಪು ಮತ್ತು ಒಂದು ಚಿಟಿಕೆ ಖಾರದ ಪುಡಿ ಹಾಕಿ ನೀರು ಸೇರಿಸಿ ಕಲಸಿಕೊಳ್ಳಿ. ಈ ಹಿಟ್ಟಿನಲ್ಲಿ ಸ್ವಲ್ಪ ಚಕ್ಕುಲಿ, ಮಿಕ್ಕ ಹಿಟ್ಟಿಗೆ ಓಂಪುಡಿ ಮಾಡಿಕೊಳ್ಳಿ. ಬಾಣಲಿಗೆ ಸ್ವಲ್ಪ ಎಣ್ಣೆ ಹಾಕಿ ಕಡಲೆಕಾಯಿ ಬೀಜ, ಹುರಿಗಡಲೆ, ಕರಿಬೇವು ಹುರಿದುಕೊಂಡು ಚೌಚೌಗೆ ಸೇರಿಸಿ. ಕೊಬ್ಬರಿಯನ್ನೂ ಸಹ ಸಣ್ಣಗೆ ಹೆಚ್ಚಿ ಸೇರಿಸಿದ ಬಳಿಕ ಚೆನ್ನಾಗಿ ಮಿಶ್ರಣ ಮಾಡಿ.

## ನಿಪ್ಪಟ್ಟು

**ಬೇಕಾಗುವ ಪದಾರ್ಥಗಳು** : ಅಕ್ಕಿಹಿಟ್ಟು - 500 ಗ್ರಾಂ., ಕೊಬ್ಬರಿ - 100 ಗ್ರಾಂ., ಮೈದಾಹಿಟ್ಟು - 250 ಗ್ರಾಂ., ಕಡಲೆಕಾಯಿ ಬೀಜ, ಕಡಲೆಹಿಟ್ಟು - 150 ಗ್ರಾಂ., ಹುರಿಗಡಲೆ - 100 ಗ್ರಾಂ., ರುಚಿಗೆ ತಕ್ಕಷ್ಟು ಉಪ್ಪು ಮತ್ತು ಕರಿಯಲು ಎಣ್ಣೆ

**ಮಾಡುವ ರೀತಿ** : ಮೂರು ಬಗೆಯ ಹಿಟ್ಟನ್ನು ಒಂದುಗೂಡಿಸಿ, ಉಪ್ಪು, ಎಣ್ಣೆ ಹಾಕಿ, ಹುರಿದ ಕಡಲೆಕಾಯಿ ಬೀಜ, ಹುರಿಗಡಲೆ, ಸಣ್ಣಗೆ ಹೆಚ್ಚಿದ ಕೊಬ್ಬರಿ, ನೀರು ಎರಡು ಸೇರಿಸಿ ಗಟ್ಟಿಯಾಗಿ ಕಲಸಿ. ನಂತರ ಎರಡು ಚಮಚ ತುಪ್ಪ ಸೇರಿಸಿ ಸ್ವಲ್ಪ ಸ್ವಲ್ಪವಾಗಿ ಹಿಟ್ಟನ್ನು ತೆಗೆದುಕೊಂಡು ಅದನ್ನು ಕೈಯಿಂದ ತಟ್ಟಿಡಿ. ಬಾಣಲಿಗೆ ಎಣ್ಣೆ ಹಾಕಿ, ಎಣ್ಣೆ ಕಾದ ಬಳಿಕ ಹಿಟ್ಟನ್ನು ಒಂದೊಂದಾಗಿ ಬಾಣಲೆಗೆ ಹಾಕಿ ಹದವಾಗಿ ಕರಿದು ತೆಗೆಯಿರಿ.

## ಖಾರಾ ಬೂಂದಿ

**ಬೇಕಾಗುವ ಪದಾರ್ಥಗಳು** : ಕಡಲೆಹಿಟ್ಟು - 250 ಗ್ರಾಂ. ಖಾರದಪುಡಿ - $^1/_2$ ಚಮಚ, ಕೊಬ್ಬರಿ - 50 ಗ್ರಾಂ. ಉಪ್ಪು, ಕರಿಬೇವು, ಎಣ್ಣೆ ಕಡಲೆಕಾಯಿ, ಹುರಿಗಡಲೆ - 50 ಗ್ರಾಂ.

**ಮಾಡುವ ರೀತಿ** : ಕಡಲೆಹಿಟ್ಟಿಗೆ ಉಪ್ಪು, ಖಾರದಪುಡಿ ಹಾಕಿಕೊಂಡು ನೀರುಹಾಕಿ, ದೋಸೆ ಹಿಟ್ಟಿನಂತೆ ಕಲಸಿಕೊಳ್ಳಿ. ನಂತರ ಒಲೆಯ ಮೇಲೆ

ಬಾಣಲಿಯಲ್ಲಿ ಎಣ್ಣೆಹಾಕಿ. ಎಣ್ಣೆ ಕಾದ ಬಳಿಕ ಬೂಂದಿ ತಟ್ಟೆಯ ಸಹಾಯದಿಂದ ತಟ್ಟೆಯ ಮೇಲೆ ಹಿಟ್ಟನ್ನು ಉದುರಿಸುತ್ತಾ ಬಾಣಲಿಯಲ್ಲಿ ಬಿಟ್ಟು ಬೂಂದಿ ಕಾಳುಗಳನ್ನು ಕರಿಯಿರಿ. ಆಮೇಲೆ ಬಾಣಲಿಗೆ ಸ್ವಲ್ಪ ಎಣ್ಣೆ ಹಾಕಿಕೊಂಡು ಕಡಲೆಕಾಯಿ, ಹುರಿಗಡಲೆ, ಕರಿಬೇವು ಹುರಿದುಕೊಂಡು ಬೂಂದಿಗೆ ಸೇರಿಸಿ.

## ಚಿಪ್ಸ್

**ಬೇಕಾಗುವ ಪದಾರ್ಥಗಳು** : ಆಲೂಗಡ್ಡೆ - 1 ಕೆ.ಜಿ., ಖಾರದಪುಡಿ - 2 ಚಮಚ, ಉಪ್ಪು - ಅವಶ್ಯವಾದಷ್ಟು, ಅರಿಶಿನಪುಡಿ - 1 ಚಮಚ

**ಮಾಡುವ ರೀತಿ** : ಆಲೂಗಡ್ಡೆ ಒಂದೇ ರೀತಿಯ ಸೈಜಿನದಾಗಿರಬೇಕು. ನೀರಿನಲ್ಲಿ ಆಲೂಗಡ್ಡೆಯನ್ನು ತೊಳೆದುಕೊಂಡು ಉಪ್ಪೇರಿ ಮಣೆಯಲ್ಲಿ ಹೆರೆದು ನೆರಳಿನಲ್ಲಿ ಒಣಗಿಸಿ. ಸುಮಾರು 2-3 ಗಂಟೆಗಳು ಒಣಗಿದ ಬಳಿಕ ಬಾಣಲಿಗೆ ಎಣ್ಣೆಹಾಕಿ ಒಲೆಯ ಮೇಲಿಡಿ. ಎಣ್ಣೆ ಕಾದ ಬಳಿಕ ಹೆರೆದ ಆಲೂಗಡ್ಡೆಯನ್ನು ಎಣ್ಣೆಯಲ್ಲಿ ಸ್ವಲ್ಪ ಸ್ವಲ್ಪವಾಗಿ ಹಾಕಿ ಕರೆದು, ಅದಕ್ಕೆ ಖಾರದಪುಡಿ, ಅರಿಶಿನಪುಡಿ, ಉಪ್ಪು ಚಿಮುಕಿಸಿ ಚೆನ್ನಾಗಿ ಮಿಶ್ರಣ ಮಾಡಿ.

* * * *

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

ಕೃಷ್ಣಾಷ್ಟಮೀ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ
ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ
ಶ್ರೀಲಕ್ಷ್ಮೀಹಯಗ್ರೀವದೇವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಪೌಷಮಾಸ – ಮಾಘಮಾಸ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಪೌಷಮಾಸ-ಮಾಘಮಾಸ

ವಿದ್ವಾನ್ ॥ ಬೆಮ್ಮತ್ತಿ ವೇಂಕಟೇಶಾಚಾರ್ಯ,

ಬೆಂಗಳೂರು.

ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),

ಗಿರಿನಗರ, ಬೆಂಗಳೂರು-೮೫

'**ಪೌಷಮಾಸ-ಮಾಘಮಾಸ**' ಶಾಲಿವಾಹನ ಶಕೆ 1943 ಶಾರ್ವರಿ ॥ ಶ್ರಾವಣ ॥ ಶುದ್ಧ॥ ಪೂರ್ಣಿಮೆ (ದಿನಾಂಕ: 3-8-2020) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥಶ್ರೀಪಾದಂಗಳವರಕರಕಮಲಗಳಿಂದ ಭಾರತೀರಮಣ-ಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.


ಪ್ರಥಮ ಮುದ್ರಣ : 2020

ಪುಟಗಳು : 128

ಪ್ರಕಾಶಕರು : ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ)
4271, 2ನೇ ಮೇನ್, ಗಿರಿನಗರ,
ಸೀತಾಸರ್ಕಲ್ ಹತ್ತಿರ, ಬೆಂಗಳೂರು-85
ದೂರವಾಣಿ : 9141495120





ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಶ್ರೀಮತಿ ನಾಗಲತಾ

ಮುಖಪುಟ : ಶ್ರೀವಿಶ್ವಾತ್ಮಾ
ಕಾರ್ತಿಕ ಜೋಷಿ

ಮುದ್ರಣ : ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.



ಕುಮಾರಿ ಶ್ರಾವ್ಯ

ಬಹಳ ಚತುರೆಯೂ ವಿದ್ಯಾಪ್ರವೀಣಳೂ ಆದ ಕುಮಾರಿ ಶ್ರಾವ್ಯ ಆಕಸ್ಮಿಕವಾಗಿ ಹರಿಪಾದ ಸೇರಿದ್ದಾಳೆ. ಕಲ್ಲಕುರ್ಚಿ ಫ್ಯಾಮಿಲಿಗೆ ಮಾಣಿಕ್ಯಪ್ರಾಯಳಾಗಿದ್ದ ಇವಳ ಸ್ಮರಣೆಗಾಗಿ ಈ ಜ್ಞಾನಸೇವೆಯನ್ನು ಮಾಡಲಾಗಿದೆ. ಇದರಿಂದ ಪ್ರಾಪ್ತವಾಗುವ ಪುಣ್ಯರಾಶಿಯು ಶ್ರಾವ್ಯಳಿಗೆ ತಲುಪಿ ಎಲ್ಲ ರೀತಿಯಲ್ಲಿಯೂ ಅವಳಿಗೆ ಶ್ರೇಯಸ್ಸಾಗಲಿ ಎಂದು ಪ್ರಾರ್ಥಿಸುತ್ತೇನೆ.

ಕಲ್ಲಕುರ್ಚಿ ಫ್ಯಾಮಿಲಿ, ಬೋಸ್ಟನ್,
ಯುಎಸ್ಎ.

# ವಿಷಯಾನುಕ್ರಮಣಿಕೆ

# ಮುನ್ನುಡಿ

ಪುಷ್ಯಮಾಸದಲ್ಲಿ ಹಾಗೂ ಮಾಘಮಾಸದಲ್ಲಿ ಅನೇಕ ಶುಭಪರ್ವಕಾಲಗಳು ಬರುತ್ತವೆ. ಪುಷ್ಯಮಾಸದಲ್ಲಿ ಗೋಪಾಲದಾಸರ ಹಾಗೂ ಪುರಂದರದಾಸರ ಆರಾಧನೆಯೂ ಇದೆ. ಮಾಘಮಾಸದ ಸ್ನಾನವೂ ಕೂಡ ಪುಷ್ಯಮಾಸದಲ್ಲಿ ರಥಸಪ್ತಮಿ, ಭೀಷ್ಮಾಷ್ಟಮೀ, ಮಧ್ವನವಮಿ ಮೊದಲಾದ ಪರ್ವಕಾಲಗಳಿವೆ. ಶಿವರಾತ್ರಿಯೂ ಕೂಡ ಪ್ರಾಪ್ತವಾಗುತ್ತಿದೆ. ಇವೆಲ್ಲದರ ಬಗ್ಗೆ ವಿಷಯ ಸಂಗ್ರಹವನ್ನು ಇಲ್ಲಿ ಮಾಡಲಾಗಿದೆ. ವಿಷಯಸಂಗ್ರಹಕ್ಕಾಗಿ ಗುರುಚರಿತ್ರೆ ಮೊದಲಾದ ಪುಸ್ತಕಗಳ ಸಹಕಾರವನ್ನು ಪಡೆಯಲಾಗಿದೆ. ಸಾಧಕರು ಪ್ರತಿಯೊಂದು ದಿವಸಗಳ ವೈಶಿಷ್ಟ್ಯವನ್ನು ಅರಿತು, ಇದರಲ್ಲಿರುವ ಅಪೂರ್ವವಿಷಯಗಳನ್ನು ತಿಳಿದು ಸಂತೋಷ ಪಡಬೇಕೆಂದು ಅಪೇಕ್ಷಿಸುತ್ತೇನೆ. ಈ ಕೃತಿಯ ಸಂಗ್ರಹಕ್ಕಾಗಿ ಉಪಕರಿಸಿದ ವಿದ್ವಾನ್ ಸಿ.ಆರ್. ಪ್ರದೀಪಸಿಂಹಾಚಾರ್ಯರಿಗೆ ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಹಾಗೂ ಡಿ.ಟಿ.ಪಿ. ಕಾರ್ಯವನ್ನು ಮಾಡಿಕೊಟ್ಟ ಶ್ರೀಮತಿ ನಾಗಲತಾ ಇವರಿಗೆ ಮತ್ತು ಅಂದವಾಗಿ ಮುದ್ರಣ ಮಾಡಿಕೊಟ್ಟ ಮಂಜುನಾಥ್‌ವರಿಗೂ ಕೂಡ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಅತ್ಯಂತ ಚತುರೆಯೂ, ಮೇಧಾವಿಯೂ, ಪ್ರವೀಣಳೂ ಆದ ಬಹಳ ಚತುರೆಯೂ ವಿದ್ಯಾಪ್ರವೀಣಳೂ ಆದ ಕುಮಾರಿ ಶ್ರಾವ್ಯ ಆಕಸ್ಮಿಕವಾಗಿ ಹರಿಪಾದವನ್ನು ಸೇರಿದ್ದಾಳೆ. ಇವಳಿಗೆ ಈ ಗ್ರಂಥದಿಂದ ಪ್ರಾಪ್ತವಾಗುವ ಪುಣ್ಯವು ದೊರಕಲಿ ಹಾಗೂ ಈ ಕೃತಿಯ ಸೇವೆಯನ್ನು ಮಾಡಿದ ಕಲ್ಲಕುರ್ಚಿ ಫ್ಯಾಮಿಲಿ, ಬೋಸ್ಟನ್, ಯುಎಸ್‌ಎ. ಇವರಿಂದ ಎಲ್ಲ ರೀತಿಯಲ್ಲಿಯೂ ಕೂಡ ಉತ್ತಮ ಸಾಧನೆಯು ನಡೆಯಲಿ. ಶ್ರೀನಿವಾಸ್ ಕಲ್ಲಕುರ್ಚಿ ಇವರ ಉಪಕಾರವನ್ನು ಎಂದೆಂದೂ ನಾನು ಮರೆಯಲು ಸಾಧ್ಯವಿಲ್ಲ. ಇವರ ಈ ಪ್ರೋತ್ಸಾಹಕ್ಕೆ ಅನಂತ ಕೃತಜ್ಞತೆಗಳನ್ನಷ್ಟೇ ಸಲ್ಲಿಸುತ್ತೇನೆ.

- ಸಂಪಾದಕ.

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ, ಬೆಂಗಳೂರು.

॥ ಶ್ರೀಮದನುಮಧ್ಧೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ ॥

# ಪೌಷ ಮಾಸದ ಧರ್ಮ

(ಮಾಸನಿಯಾಮಕ ಲಕ್ಷ್ಮೀಪತಿ ನಾರಾಣಾಯ ನಮಃ)

ಗೋದಾನದಿಂದ ಅಕ್ಷಯ ಲೋಕಪ್ರಾಪ್ತಿ. ಭೂದಾನದಿಂದ ರಾಜತ್ವಪ್ರಾಪ್ತಿ. ತಿಲದಾನದಿಂದ ಧಾರ್ಮಿಕತೆಯು ಪ್ರಾಪ್ತಿಯಾಗುವುದು. ಸುವರ್ಣದಾನದಿಂದ ರೂಪವಂತನಾಗುವನು. ತುಪ್ಪದಾನದಿಂದ ಬುದ್ಧಿವಂತನಾಗುವನು. ವಸ್ತ್ರದಾನದಿಂದ ಬಟ್ಟೆಯ ಕೊರತೆ ನೀಗುವುದು. ಧಾನ್ಯದಾನದಿಂದ ಹಸಿವೆ ಬಾಯಾರಿಕೆಗಳ ಬಾಧೆಯಿಂದ ಬಿಡುಗಡೆಯಾಗುವುದು. ಬೆಲ್ಲದ ದಾನದಿಂದ ರೋಗಗಳು ಬಾರದು. ರಜತ (ಬೆಳ್ಳಿ) ದಾನದಿಂದ ನೇತ್ರದೋಷಗಳು ಬಾರದು. ಲವಣದಾನದಿಂದ ಬಲಿಷ್ಠನಾಗುವನು. ರತ್ನದಾನದಿಂದ ಕಾಂತಿಯುಕ್ತನಾಗುವನು. ತೆಂಗಿನಕಾಯಿಯ ದಾನದಿಂದ ಅಕ್ಷಯ ಸಂತಾನವಾಗುವುದು. ಮಾದಾಳದ ಹಣ್ಣಿನ ದಾನದಿಂದ ಬಂಜೆಯೂ ಪುತ್ರವತಿಯಾಗುವಳು. ಹವಳ, ಮುತ್ತು, ಮಾಣಿಕ್ಯ, ಬೆಣ್ಣೆ, ಕೂಷ್ಮಾಂಡಗಳನ್ನು ವಸ್ತ್ರಗಳೊಂದಿಗೆ ದಾನ ಕೊಡುವುದರಿಂದ ಸಕಲ ಇಷ್ಟಾರ್ಥ ಪ್ರಾಪ್ತಿಯಾಗುವುದು. ತಾಂಬೂಲದಾನದಿಂದ ಸಕಲಕಾಮ ಪ್ರಾಪ್ತಿ. ಶಯ್ಯಾದಾನದಿಂದ ಶಯ್ಯಾದುಃಖವು ಲಭಿಸದು. ಗಟ್ಟಿಯಾದ, ಮೆದುವಾದ, ಹೊಸದಾದ ವಸ್ತ್ರವನ್ನು ವಿಶೇಷವಾಗಿ ದಾನ ಮಾಡಬೇಕು. ಉಣ್ಣೆ ವಸ್ತ್ರದಾನವೂ ಶ್ರೇಷ್ಠ. ಛಳಿಯ ನಿವಾರಣೆಗಾಗಿ ಕಟ್ಟಿಗೆಗಳನ್ನು ದಾನ ಕೊಡಬೇಕು. ಅಶ್ವ, ಪಲ್ಲಕ್ಕಿ, ಎತ್ತುಗಳನ್ನು ದಾನ ಕೊಡಬೇಕು. ಕಬ್ಬಿನ ದಾನದಿಂದ ಯಮದಂಡದಿಂದ ದಂಡನೆ ತಪ್ಪುತ್ತದೆ. ಕಂಚಿನ ಪಾತ್ರೆ ದಾನದಿಂದ ವಿಷ್ಣುಲೋಕ ಪ್ರಾಪ್ತಿ. ಕ್ರಮವಾಗಿ ಮಂಗಲಸೂತ್ರದಾನದಿಂದ, ಕುಂಕುಮದಾನದಿಂದ ಸೌಭಾಗ್ಯ ಹಾನಿ ತಪ್ಪುವುದು. ಪುಷ್ಪದಾನ, ಸುಗಂಧದ್ರವ್ಯ ದಾನಗಳೂ ಪ್ರಶಸ್ತ.

**ಪೌಷ ಮಾಸದ ವಿಶೇಷ ಧರ್ಮಗಳು** – ಪುಷ್ಯ ಶುದ್ಧ ಪೂರ್ಣಿಮೆಯಿಂದ ಒಂದು ತಿಂಗಳು ಅಂದರೆ ಮಾಘ ಶುದ್ಧ ಪೌರ್ಣಮೆಯವರೆಗೆ ಮಾಸನಿಯಾಮಕನಾದ ಮಾಧವನ ಪ್ರೀತ್ಯರ್ಥವಾಗಿ ಅರುಣೋದಯಕ್ಕೆ ನದೀ ಮುಂತಾದ ತೀರ್ಥಗಳಲ್ಲಿ

ಪ್ರಾತಃಸ್ನಾನವನ್ನು ಮಾಡಬೇಕು. ಸ್ನಾನಕ್ಕೆ ನಕ್ಷತ್ರಗಳಿರುವ ಕಾಲವು ಉತ್ತಮ. ನಕ್ಷತ್ರಗಳೆಲ್ಲ ಮರೆಯಾದ ಮೇಲೆ ಮಧ್ಯಮ. ಸೂರ್ಯೋದಯ ಕಾಲವು ಅಧಮವೆನಿಸುತ್ತದೆ. ಈ ಸ್ನಾನವನ್ನು ಸರ್ವರೂ ಮಾಡಬೇಕು. ಮನೆಯಲ್ಲಿ ಬಿಸಿನೀರಿನಲ್ಲಿ ಮಾಡಿದ ಸ್ನಾನಕ್ಕೆ 6 ವರ್ಷಗಳಲ್ಲಿ ಮಾಡಿದ ಸ್ನಾನದ ಫಲ, ಭಾವಿನೀರಿನಲ್ಲಿ 12 ವರ್ಷಗಳ ಫಲ, ಕೆರೆಯಲ್ಲಿ 24 ವರ್ಷಗಳ ಫಲ, ನದಿಯಲ್ಲಿ 96 ವರ್ಷಗಳ ಫಲ, ಮಹಾನದಿಯಲ್ಲಿ 9600 ವರ್ಷಗಳ ಫಲ, ಮಹಾನದಿಗಳ ಸಂಗಮದಲ್ಲಿ 28400 ವರ್ಷಗಳ ಫಲ, ಗಂಗಾ ಸ್ನಾನದಿಂದ 248000 ವರ್ಷಗಳ ಸ್ನಾನದ ಫಲ ಬರುತ್ತದೆ. 'ಮಾಘಸ್ನಾನಮಿದಂ ಪುಣ್ಯಂ ಸ್ನಾಸ್ಯೇಹಂ ದೇವ ಮಾಧವ । ತೀರ್ಥಸ್ನಾಸ್ಯ ಜಲೇ ನಿತ್ಯಮಿತಿ ಸಂಕಲ್ಪ್ಯ ಚೇತಸಿ ॥' ಎಂದು ಯಾವುದಾದರೊಂದು ತೀರ್ಥದಲ್ಲಿ ಒಂದು ತಿಂಗಳವರೆಗೆ ಸ್ನಾನ ಮಾಡುವುದಾಗಿ ಸಂಕಲ್ಪಿಸಬೇಕು. 'ದುಃಖದಾರಿದ್ರ ನಾಶಾಯ ಶ್ರೀ ವಿಷ್ಣೋಸ್ತೋಷಣಾಯ ಚ । ಮಕರಸ್ಥೇ ರವೌ ಮಾಘೇ ಗೋವಿಂದಾಚ್ಯುತ ಮಾಧವ ಸ್ನಾನೇನಾನೇನ ಮೇ ದೇವ ಯಥೋಕ್ತಫಲದೋ ಭವ ॥' ಎಂಬ ಮಂತ್ರಗಳಿಂದ ಮೌನದಿಂದ ಸ್ನಾನ ಮಾಡಬೇಕು. ಸ್ನಾನಾನಂತರದಲ್ಲಿ 'ಸವಿತ್ರೇ ಪ್ರಸವಿತ್ರೇಚ ಪರಂಧಾಮ ಜಲೇ ಮಮ । ತ್ವತ್ತೇಜಸಾ ಪರಿಭ್ರಷ್ಟಂ ಪಾಪಂ ಯಾತು ಸಹಸ್ರಧಾ ॥' ಎಂಬ ಮಂತ್ರದಿಂದ ಸೂರ್ಯಾರ್ಘ್ಯವನ್ನು ಕೊಟ್ಟು ಪಿತೃತರ್ಪಣಾದಿ ನಿತ್ಯಕಾರ್ಯವನ್ನು ಮುಗಿಸಿ ಮಾಧವನನ್ನು ಪೂಜಿಸಬೇಕು. ಈ ಮಾಸದಲ್ಲಿ ಹವಿಷ್ಯಾನ್ನ ಭಕ್ಷಣ, ಭೂಮಿಯಲ್ಲಿ ಶಯನ, ತಿಲಘೃತ ಹೋಮ ಮತ್ತು ಬ್ರಹ್ಮಚರ್ಯವು ಮಹಾಫಲದಾಯಕವಾಗುತ್ತದೆ. ಮುಕ್ಕಾಲು ಭಾಗ ಎಳ್ಳು, ಕಾಲುಭಾಗ ಸಕ್ಕರೆಯನ್ನು ಮಿಶ್ರಮಾಡಿ ಪ್ರತಿದಿನದಲ್ಲಿಯೂ ದಾನ ಮಾಡಬೇಕು.

ಅರ್ಧೋದಯಯೋಗ : ಈ ಮಾಸದಲ್ಲಿ (1) ರವಿವಾರ, (2) ಅಮಾವಾಸ್ಯೆ, (3) ವ್ಯತೀಪಾತಯೋಗ, (4) ಶ್ರವಣ ನಕ್ಷತ್ರ, ಈ ನಾಲ್ಕು ಒಟ್ಟುಗೂಡಿದಾಗ ಈ ಯೋಗವಿರುತ್ತದೆ. ಆಗ ಸ್ನಾನ ದಾನ ಪಿತೃತರ್ಪಣ ಮುಂತಾದ ಪುಣ್ಯಕಾರ್ಯಗಳನ್ನು ಅವಶ್ಯ ಮಾಡಬೇಕು. ಗ್ರಹಣಾದಿ ಕಾಲಗಳಿಗಿಂತಲೂ ಈ ಅರ್ಧೋದಯ ಕಾಲವು ಅಧಿಕಪುಣ್ಯಪ್ರದವಾಗಿದೆ.

ಪುಷ್ಯಮಾಸನಿಯಾಮಕನಾದ ನಾರಾಯಣನ ಪ್ರೀತಿಗಾಗಿ ಈ ಕೆಳಕಂಡ ಧರ್ಮಗಳನ್ನು ನಡೆಸಬೇಕು.

## ಪೌಷ ॥ ಶುದ್ಧ ॥ ಪ್ರತಿಪತ್

**ಶ್ರೀ ಶ್ರೀವಲ್ಲಭತೀರ್ಥರು (ಪಲಿಮಾರು ಮಠ)**- ಪರಂಪರೆಯಲ್ಲಿ ಎಂಟನೆಯವರು. ಇವರು ಉಪವಾಸಾದಿ ವ್ರತಗಳಿಂದ ದೇಹದಂಡನ ಮಾಡಿಕೊಂಡು ನೈಷ್ಠಿಕವಾದ ತಪಸ್ವೀ ಜೀವನವನ್ನು ನಡೆಸಿದವರು. 'ಬ್ರಾಹ್ಮಣಸ್ಯ ಚ ದೇಹೋಽಯಂ ಕ್ಷುದ್ರ ಕಾಮಾಯ ನೇಷ್ಯತೇ । ಕೃಚ್ಛ್ರಾಯ ತಪಸೇ ಚೈವ ಪ್ರೇತ್ಯಾನಂತಸುಖಾಯ ಚ' ಎಂಬ ಮಾತು ಇವರನ್ನೇ ಕುರಿತು ಬರೆದಂತಿತ್ತು. ಅಂಥ ನಿಷ್ಠೆಯ ಜೀವನ ಅವರದು. ಸುಮಾರು ನಲ್ವತ್ತು ವರ್ಷಗಳ ಕಾಲ ಇವರು ಈ ಪೀಠದ ಅಧಿಕಾರಿಯಾಗಿದ್ದು, ಶಾ.ಶ. 1397 (ಕ್ರಿ.ಶ. 1475) ಜಯ ಸಂವತ್ಸರದ ಪುಷ್ಯಮಾಸ ಶುದ್ಧ ಪ್ರತಿಪದೆಯಂದು ಪಲಿಮಾರಿನ ಹಳ್ಳಿಯ ಮಠದಲ್ಲಿ ವೃಂದಾವನಸ್ಥರಾದರು.

## ಪೌಷ ॥ ಶುದ್ಧ ॥ ದ್ವಿತೀಯಾ

**ಶ್ರೀ ಜಗನ್ನಾಥತೀರ್ಥರು (ವ್ಯಾಸರಾಜ ಮಠ)** - (ಕ್ರಿ.ಶ. 1755-1770) ವಿದ್ವತ್ಪಂಕಜ ಮಾರ್ತಾಂಡಃ ವಾದಿಮತ್ತೇಜ ಕೇಸರಿ । ಜಗನ್ನಾಥ ಗುರುರ್ಭೂಯಾತ್ ಧ್ಯಾಯಸೇ ಶ್ರೇಯಸೇ ಮಮ ॥ ಇವರು ಶ್ರೀ ಶೇಷಚಂದ್ರಿಕಾಚಾರ್ಯರಲ್ಲಿ ಸುಮಾರು 1725ರಲ್ಲೇ ಸನ್ಯಾಸಾಶ್ರಮವನ್ನು ಸ್ವೀಕರಿಸಿದ್ದರೂ ಪೀಠವನ್ನು ಅಲಂಕರಿಸಿದ್ದು ಮಾತ್ರ 1755ರಲ್ಲಿ. ಆಶ್ರಮ ಸ್ವೀಕಾರ ಮಾಡಿದ ಮೇಲೆ ಸುಮಾರು ಮೂರು ದಶಕಗಳ ಕಾಲ ತಮ್ಮ ಗುರುಗಳಿಂದ ನೇರ ಅಧ್ಯಯನ ಮಾಡಿದ ಪರಮ ಭಾಗ್ಯವಂತರು. ಇವರು ಶ್ರೀಮದಾಚಾರ್ಯರ ಭಾಷ್ಯಕ್ಕೆ ನೇರವಾಗಿ ವ್ಯಾಖ್ಯಾನ ಮಾಡಿ 'ಭಾಷ್ಯದೀಪಿಕಾ' ಎಂಬ ಅದ್ಭುತ ಗ್ರಂಥವನ್ನು ರಚಿಸಿದ್ದಾರೆ. ಈ ಕಾರಣದಿಂದ ಅವರು ಭಾಷ್ಯ ದೀಪಿಕಾಚಾರ್ಯ ಎಂದೇ ಪ್ರಸಿದ್ಧರಾಗಿದ್ದಾರೆ. ಅಲ್ಲದೆ ಬ್ರಹ್ಮಸೂತ್ರಗಳ ಅರ್ಥವಿವರಣಾ ರೂಪವಾದ 'ಸೂತ್ರದೀಪಿಕಾ' ಎಂಬ ಗ್ರಂಥವನ್ನು ರಚಿಸಿದ್ದಾರೆ. ಇವರ ಈ ಕೃತಿಗಳನ್ನು ಆಕಸ್ಮಿಕವಾಗಿ ಕಂಡ ಶೇಷಚಂದ್ರಿಕಾಚಾರ್ಯರು ಇವರನ್ನು ಕರೆದು ಮಾರನೆಯ ದಿವಸವೇ ಗೋಪಾಲ ಕೃಷ್ಣದೇವರ ಪೂಜಾ ಮಾಡಿಸಿದರೆಂಬ ಐತಿಹ್ಯವಿದೆ. ಒಮ್ಮೆ ಇವರ ಸಂಚಾರ ಕಾಲದಲ್ಲಿ ಕೆಲವು ತುರುಷ್ಕ ಯೋಧರು ದೇವರ ಪೆಟ್ಟಿಗೆಯನ್ನು ಅಪಹರಿಸಲು ಪ್ರಯತ್ನಿಸಿದಾಗ ಇವರು ಸಾಹಸದಿಂದ ದೇವರ ಪೆಟ್ಟಿಗೆಯೊಂದಿಗೆ ಕಾವೇರಿ ನದಿಗೆ ಧುಮುಕಿ ಸುಮಾರು 20 ಮೈಲಿ ದೂರ ಈಜುತ್ತಾ ಪಾರಾದರೆಂದು ಅವರ ಚರಿತ್ರೆಯು ತಿಳಿಸುತ್ತದೆ. ಇದೇ ರೀತಿಯಲ್ಲಿ ಒಮ್ಮೆ ಕೆಲವು

ಪರದೇಶಿ ಯೋಧರ ಕೈಯಲ್ಲಿ ಸಿಕ್ಕಿ ಹಾಕಿಕೊಂಡಾಗ ಇವರ ಪ್ರಾರ್ಥನೆ ಮೇರೆಗೆ ನರಸಿಂಹದೇವರು ಹತ್ತಿರದ ಮಾವಿನ ಮರವೊಂದರಿಂದ ಹೊರಗೆ ಬಂದು ಆ ದುಷ್ಕರ್ಮಿಗಳನ್ನು ಹೊಡೆದೋಡಿಸಿ ಇವರನ್ನು ಸಂರಕ್ಷಿಸಿದರೆಂದು ತಾವೇ 'ಭಾಷ್ಯದೀಪಿಕಾ' ಗ್ರಂಥದ ಮಂಗಳಾಚರಣ ಶ್ಲೋಕದಲ್ಲಿ ತಿಳಿಸಿದ್ದಾರೆ. ಆ ಶ್ಲೋಕವು ಹೀಗಿದೆ : ಆಮ್ರಸ್ಥಂಬಾತ್ ಸಮಗತ್ಸ ತಾಮ್ರ ತುಂಡಾನ್ ನಿಹತ್ಯಯಃ । ನಮ್ರಂ ನೌಮಿ ಜಗನ್ನಾಥಂ ಕರ್ಮ್ರೋಪಾತ್ತಮ್ ನ್ರುಕೇಸರಿ ॥ ಇವರ ಕುಂಭಕೋಣದಲ್ಲಿ ಹರಿಧ್ಯಾನ ಪರಾಯಣರಾಗಿ 1770ನೇ ಇಸವಿಯ ಪುಷ್ಯ ಶುದ್ಧ ದ್ವಿತೀಯದಂದು ವೃಂದಾವನಸ್ಥರಾದರು.

ಶ್ರೀ ಜಗನ್ನಾಥತೀರ್ಥರ ದಿವ್ಯ ಮಹಿಮೆಯನು ರಾಜಿಸುವ ಹೈಮಲಿಪಿಯಲ್ಲಿ ಬರೆಯಲಿ ಬೇಕು ॥ಪ॥ ಈ ಜಗತಿ ಸುಜನ ಸುರಭೂಜರಾಗಿಹ ಮಹಾ ರಾಜ ಶ್ರೀ ರಘುನಾಥತೀರ್ಥ ಕರ ಸಂಜಾತ ॥ಅ.ಪ॥ ಉದ್ಭವಿಸಿದರು ಗಾಲವರು ಜಗದೊಳೆಂಬಂಶ ವೇದ್ಯವಾಯಿತು ಆಪ್ತಜನವೃಂದಕೆ ಮಧ್ವಮತ ತತ್ವಗಳನುದ್ಧಾರವನೆಗೈದ ದಿಗ್ದಂತಿಗಳತಿ ಪ್ರಸಿದ್ಧ ಸ್ಥಾನದ ಪಡೆದ ॥೧॥ ಸಕಲ ಶಾಸ್ತ್ರಾರ್ಥ ನಿರ್ಣಯಗೈವ ಪರಸೂತ್ರನಿಕರಗಳಿಗಲವಬೋಧರ ಭಾಷ್ಯವ ಸುಖದಿಂದಲರಿಯಲುಪಕೃತಿಗೈದ ಯತಿಕುಲ ತಿಲಕ ಭಾಷ್ಯಾದೀಪಕಾ-ಚಾರ್ಯರೆಂದತಿ ಖ್ಯಾತ ॥೨॥ ಸರ್ವಗುಣ ಗುಣಪೂರ್ಣ ಸರ್ವತ್ರ ವ್ಯಾಪ್ತ ಹರಿ ಸರ್ವಭಕ್ತ ಪ್ರಸನ್ನನೆಂದರುಹಲು ಓರ್ವ ಆಮ್ರವೃಕ್ಷದಲಿ ಶ್ರೀ ನರಹರಿಯ ಉರ್ವನುಗ್ರಹ ಪಡೆದ ಸರ್ವತಂತ್ರ ಸ್ವತಂತ್ರ ॥೩॥

ಶ್ರೀ ಸುಯಮೀಂದ್ರತೀರ್ಥರು (ರಾಯರ ಮಠ) ಮಂತ್ರಾಲಯ – ಸುಖತೀರ್ಥಮತಾಬ್ಧೀಂದುಂ ಸುಧೀಂದ್ರಸುತಸೇವಕಂ । ಸುಧಾಪರಿಮಳಾಸಕ್ತಂ ಸುಯಮೀಂದ್ರ ಗುರುಂ ಭಜೇ ॥

## ಪೌಷ ॥ ಶುದ್ಧ ॥ ಚತುರ್ಥೀ ॥

ವಿನಾಯಕ ಚತುರ್ಥೀ ಎಂದು ಕರೆಯುತ್ತಾರೆ. ಗಣೇಶನನ್ನು ಇಂದು ವಿಶೇಷವಾಗಿ ಪೂಜೆ ಮಾಡುವುದರಿಂದ ಎಲ್ಲ ಅಭೀಷ್ಟಗಳು ಈಡೇರುತ್ತವೆ.

ಶ್ರೀ ಶ್ರೀನಾಥತೀರ್ಥರು (ವ್ಯಾಸರಾಜ ಮಠ)– (ಕ್ರಿ.ಶ. 1770-1780) ಪ್ರಾರ್ಥಿತಾಭೀಷ್ಟ ಸಂತಾನಃ ಪ್ರತ್ಯರ್ಥಿ ಮತ ಭಂಜನಃ । ಶ್ರೀನಾಥತೀರ್ಥ

ಗುರುರಾಟ್ ಈಪ್ಸಿತಾರ್ಥ ಪ್ರದೋಸ್ತುನಃ ॥ ಇವರು ಪೂರ್ವಾಶ್ರಮದಲ್ಲಿಯೇ ಘನವಿದ್ವಾಂಸರು ಮತ್ತು ಶತಾವಧಾನಿಗಳು. ಇವರು ಭಾಷ್ಯದೀಪಿಕಾಚಾರ್ಯರ ಕರಕಮಲ ಸಂಜಾತರಾಗಿ ಕೇವಲ 10 ವರ್ಷಗಳ ಕಾಲ ಪೀಠವನ್ನಲಂಕರಿಸಿದ್ದರೂ ಅಪಾರ ಗೌರವವನ್ನು ಸಂಪಾದಿಸಿದರು. ಶ್ರೀನಾಥತೀರ್ಥರು ವಾದದಲ್ಲಿ ಬಹು ನಿಪುಣರು. ವಿಶೇಷವಾಗಿ ತೀರ್ಥಕ್ಷೇತ್ರ ಯಾತ್ರೆಯನ್ನು ಮಾಡಿ ದೇಶ ದೇಶದಲ್ಲಿ ವಾದಿನಿಗ್ರಹ ಮಾಡಿ ಕೀರ್ತಿ ಸಂಪಾದಿಸಿದರು. ಕಾಶೀ ಕ್ಷೇತ್ರದಲ್ಲಿ ಕಾಶೀರಾಜರ ಅಧ್ಯಕ್ಷತೆಯಲ್ಲಿ ವಾದದಲ್ಲಿ ಜಯಗಳಿಸಿ ತಮ್ಮ ಶತಾವಧಾನ ಸಾಮರ್ಥ್ಯವನ್ನು ಪ್ರಕಟಿಸಿದಾಗ ಅಲ್ಲಿಯ ವಿದ್ವಾಂಸರು ಇವರ ಸಾಮರ್ಥ್ಯವನ್ನು ಘಂಟಾಘೋಷವಾಗಿ ಹೊಗಳಿ, ಇವರು ಸಂಚಾರ ಮಾಡುತ್ತಿದ್ದ ಪಲ್ಲಕ್ಕಿಯ ಮುಂಭಾಗದ ಸಿಂಹ ಲಲಾಟಕ್ಕೆ ಘಂಟೆಯನ್ನು ಕಟ್ಟಿ ಗೌರವಿಸಿದರಂತೆ. ಇವರು ಅಂತ್ಯಕಾಲದಲ್ಲಿ ತಿರುಮಕೂಡಲಿಗೆ ಬಂದು ತಮ್ಮ ಪರಮ ಗುರುಗಳಾದ ಶೇಷಚಂದ್ರಿಕಾಚಾರ್ಯರ ದಿವ್ಯ ಸನ್ನಿಧಿಯಲ್ಲಿ 1780ರ ಪುಷ್ಯ ಶುದ್ಧ ಚತುರ್ಥಿಯಂದು ವೃಂದಾವನಸ್ಥರಾದರು.

## ಪೌಷ ॥ ಶುದ್ಧ ॥ ಪಂಚಮೀ ॥

ಶ್ರೀ ಲಕ್ಷ್ಮೀವಲ್ಲಭತೀರ್ಥರು (ವ್ಯಾಸರಾಜ ಮಠ)- (ಕ್ರಿ.ಶ. ೧೬೩೨-೧೬೪೨) ಅರ್ಥಿಭೀಪ್ಸಿತ ಕಲ್ಪದ್ರುಃ ವಾದಿಮತ್ತೇಭ ಕೇಸರಿ। ಲಕ್ಷ್ಮೀವಲ್ಲಭ ಯೋಗೀಂದ್ರೋ ಭೂಯಾತ್ ಅಸ್ಮದಭೀಷ್ಟದಃ ॥ ಇವರು ಶ್ರೀ ರಾಮಚಂದ್ರತೀರ್ಥರಿಂದ ಮಹಾಸಂಸ್ಥಾನದಲ್ಲಿ ನೇಮಿಸಲ್ಪಟ್ಟರು. ವಾದಿಗಳೆಂಬ ಮತ್ತಗಜಗಳಿಗೆ ಇವರು ಸಿಂಹದಂತಿದ್ದರು. ಕರ್ನಾಟಕದ ಬೇಲೂರು ಪ್ರಾಂತ್ಯದಲ್ಲಿ ಸಂಚಾರ ಮಾಡಿ ಬಹಳವಾದ ಭೂಮಿ ಕಾಣಿಕೆಗಳನ್ನು ಸಂಪಾದಿಸಿದ್ದಾರೆ. ಇವರನ್ನು ಆಶ್ರಯಿಸಿದವರಿಗೆ ಕಲ್ಪವೃಕ್ಷದಂತೆ ಸರ್ವ ಇಷ್ಟಪ್ರದಾಯಕರಾಗಿದ್ದರು. ಬೇಲೂರಿನ ವಿಷ್ಣುಸಮುದ್ರವೆಂಬ ಕೆರೆಯ ಸಮೀಪದಲ್ಲಿ 1642ರ ಪುಷ್ಯ ಶುದ್ಧ ಪಂಚಮಿಯಂದು ವೃಂದಾವನಸ್ಥರಾದರು.

ಶ್ರೀ ಲಕ್ಷ್ಮೀವಲ್ಲಭತೀರ್ಥರ ಆರಾಧನೆ, ಬೇಲೂರು - ಅರ್ಥಿಭೀಪ್ಸಿತಕಲ್ಪದ್ರುಃ ವಾದಿಮತ್ತೇಭಕೇಸರೀ। ಲಕ್ಷ್ಮೀವಲ್ಲಭಯೋಗೀಂದ್ರೋ ಭೂಯಾದಸ್ಮದಭೀಷ್ಟದ॥

## ಪೌಷ ॥ ಶುದ್ಧ ॥ ಸಪ್ತಮೀ ॥

ಇಂದು ಸೂರ್ಯನನ್ನು ವಿಶೇಷವಾಗಿ ಆರಾಧನೆ ಮಾಡಬೇಕು. ಸೂರ್ಯನಾರಾಯಣನ ಪ್ರೀತಿಗಾಗಿ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು.

## ಪೌಷ ॥ ಶುದ್ಧ ॥ ಅಷ್ಟಮೀ ॥

ಈ ದಿನ ಬುಧವಾರ ಇದ್ದರೆ ಸ್ನಾನ, ಜಪ, ಹೋಮ, ತರ್ಪಣ, ಬ್ರಾಹ್ಮಣ ಭೋಜನ ಇವುಗಳಿಂದ ವಿಶೇಷ ಫಲವು ದೊರಕುತ್ತದೆ. ಭರಣೀ ನಕತ್ರದ ಯೋಗವಿದ್ದರೆ ಮತ್ತಷ್ಟು ಶ್ರೇಷ್ಠವಾದ ಪರ್ವಕಾಲವಾಗುತ್ತದೆ. ರೋಹಿಣೀ ನಕ್ಷತ್ರ, ಆರ್ದ್ರಾನಕ್ಷತ್ರವಿದ್ದರೂ ಕೂಡ ವಿಶೇಷ ಪರ್ವಕಾಲ ಎನಿಸುತ್ತದೆ.

## ಪೌಷ ॥ ಶುದ್ಧ ॥ ದಶಮೀ ॥

ವಿಶ್ವೇದೇವತೆಗಳನ್ನು ಇಂದು ಪೂಜಿಸಬೇಕು. ಕ್ರತು, ದಕ್ಷ, ವಸು, ಸತ್ಯ , ಕಾಲ, ಕಾಮ, ಮುನಿ, ಗುರು, ವಿಪ್ರ , ರಾಮ ಎಂಬ ಹತ್ತು ವಿಶ್ವೇದೇವತೆಗಳನ್ನು ಒಟ್ಟಿಗೆ ಪೂಜಿಸಬೇಕಾದ ವರ್ಷದ ಪರ್ವಕಾಲವೆಂದರೆ ಪೌಷ ಮಾಸದ ಶುಕ್ಲ ಪಕ್ಷದ ದಶಮಿಯೇ ಆಗಿದೆ. ದರ್ಭೆಗಳಲ್ಲಿ ಆವಾಹನೆ ಮಾಡಿ ಪೂಜಿಸಿ ಬ್ರಾಹ್ಮಣರಿಗೆ ದಕ್ಷಿಣೆ ಮೊದಲಾದವುಗಳನ್ನು ನೀಡಿ ಸತ್ಕರಿಸಬೇಕು.

**ಶ್ರೀ ಗುಣಸಾರನಿಧಿತೀರ್ಥರು (ಶ್ರೀಪಾದರಾಜ ಮಠ) ಮುಳಬಾಗಿಲು -**

ಗುಣರತ್ನಾಕರಂ ಪೂರ್ಣಗುಣನಿರ್ಧ್ಯರ್ಣವೋದಿತಂ ।
ಗುಣಸಾರಾಖ್ಯಯೋಗೀಂದ್ರ ಸೇವೇಹಂ ಜ್ಞಾನಸಿದ್ಧಯೇ ॥

## ಪೌಷ ॥ ಶುದ್ಧ ॥ ಏಕಾದಶೀ ॥

ಯುಧಿಷ್ಠಿರ ಉವಾಚ - ಕಥಿತಾ ವೈ ತ್ವಯಾ ಕೃಷ್ಣ ಸಫಲೈಕಾದಶೀ ಶುಭಾ । ಕಥಯಸ್ವ ಪ್ರಸಾದೇನ ಶುಕ್ಲಪಕ್ಷಸ್ಯ ಯಾ ಭವೇತ್ ॥೧॥ ಯುಧಿಷ್ಠಿರನು ಹೇಳಿದನು - ಎಲೈ ಕೃಷ್ಣನೇ ! ನೀನು ಪುಷ್ಯ ಕೃಷ್ಣ ಪಕ್ಷದ ಸಫಲಾ ಏಕಾದಶಿಯ ವಿಷಯವನ್ನು ಹೇಳಿದೆ. ಶುಕ್ಲಪಕ್ಷದ ಏಕಾದಶಿಯ ವಿಷಯವೇನು ? ಅದನ್ನು ತಿಳಿಸು. ಕಿನ್ನಾಮಕೋ ವಿಧಿಸ್ತಸ್ಯಾಃ ಕೋ ದೇವಸ್ತತ್ರ ಪೂಜ್ಯತೇ । ಕಸ್ಮೈ ತುಷ್ಟೋ ಹೃಷೀಕೇಶಃ

ತ್ವಮೇವ ಪುರುಷೋತ್ತಮ ॥೨॥ ಆ ಪುಷ್ಯಶುದ್ಧ ಏಕಾದಶಿಯ ಹೆಸರೇನು? ಅದರ ನಿಯಮವೇನು? ಆ ದಿನ ಯಾವ ದೇವರನ್ನು ಪೂಜಿಸಬೇಕು? ವಿಷ್ಣುವು ಆಗ ಯಾರಿಗೆ ಪ್ರಸನ್ನವಾಗಿ ವರವನ್ನು ಕೊಟ್ಟಿರುವನು? ಇದೆಲ್ಲನ್ನೂ ನೀನು ಹೇಳು. ಶ್ರೀಕೃಷ್ಣ ಉವಾಚ - ಶ್ರುಣು ರಾಜನ್ ಪ್ರವಕ್ಷ್ಯಾಮಿ ಶುಕ್ಲಾ ಪೌಷಸ್ಯ ಯಾ ಭವೇತ್ । ಕಥಯಾಮಿ ಮಹಾರಾಜ ಲೋಕಾನಾಂ ಹಿತಕಾಮ್ಯಯಾ ॥೩॥ ಶ್ರೀಕೃಷ್ಣನು ಹೇಳಿದನು - ಎಲೈ ರಾಜನೇ! ಪುಷ್ಯ ಶುದ್ಧ ಏಕಾದಶಿಯ ವಿಷಯನ್ನು ಜನಗಳಿಗೆ ಒಳ್ಳೆಯದಾಗಬೇಕೆಂಬ ಇಚ್ಛೆಯಿಂದ ಹೇಳುತ್ತೇನೆ. ಕೇಳು. ಪೂರ್ವೇಣ ವಿಧಿನಾ ರಾಜನ್ ಕರ್ತವ್ಯೈಷಾ ಪ್ರಯತ್ನತಃ । ಪುತ್ರದಾ ನಾಮ ನಾಮ್ನಾಸೌ ಸರ್ವಪಾಪಹರಾ ಪರಾ ॥೪॥ ಈ ಏಕಾದಶಿಯನ್ನು, ಹಿಂದಿನ ವಿಧಿಯಂತೆಯೇ ಮಾಡಬೇಕು. ಇದರ ಹೆಸರು ''ಪುತ್ರದಾ'' ಏಕಾದಶಿಯೆಂದು. ಸರ್ವಪಾಪಗಳನ್ನೂ ನಾಶ ಮಾಡುತ್ತದೆ. ನಾರಾಯಣೋಽಧಿದೇವೋಽಸ್ಯಾಃ ಕಾಮದಸ್ಸಿದ್ಧಿ-ದಾಯಕಃ । ನಾತಃ ಪರತರಾ ಕಿಂಚಿತ್ತ್ರೈಲೋಕ್ಯೇ ಸಚರಾಚರೇ ॥೫॥ ಇದಕ್ಕೆ ನಾರಾಯಣನೇ ಅಧಿದೇವತೆಯು ಇಷ್ಟಾರ್ಥಗಳನ್ನೂ ಸಿದ್ಧಿಯನ್ನೂ ಕೊಡುತ್ತಾನೆ. ಈ ಚರಾಚರಾತ್ಮಕವಾದ ಮೂರು ಲೋಕದಲ್ಲಿಯೂ ಇದರಂತಿರುವ ವ್ರತವು ಮತ್ತೊಂದಿಲ್ಲ. ವಿದ್ಯಾವಂತಂ ಯಶಸ್ವಂತಂ ಕರೋತಿ ಚ ನರಂ ಹರಿಃ । ಶ್ರುಣು ರಾಜನ್ಪ್ರವಕ್ಷ್ಯಾಮಿ ಕಥಾಂ ಪಾಪಹರಾಂ ಪರಾಂ ॥೬॥ ಈ ಏಕಾದಶಿಯನ್ನು ಮಾಡಿದರೆ ಹರಿಯು ಅವನನ್ನು ವಿದ್ಯಾವಂತನನ್ನಾಗಿಯೂ ಯಶೋವಂತ-ನನ್ನಾಗಿಯೂ ಮಾಡುತ್ತಾನೆ. ಇದರ ವಿಷಯದಲ್ಲಿ ಪಾಪಹಾರಕವಾದ ಕಥೆಯನ್ನು ಹೇಳುತ್ತೇನೆ. ಕೇಳು. ಭದ್ರಾವತ್ಯಾಂ ಪುರಾ ಹ್ಯಾಸೀತ್ಪುರ್ಯಾಂ ರಾಜಾ ಸುಕೇತುಮಾನ್। ತಸ್ಯ ರಾಜ್ಞಸ್ತಥೋ ರಾಜ್ಞಿ ಚಂಪಕಾ ನಾಮ ವರ್ತತೇ ॥೭॥ ಪೂರ್ವದಲ್ಲಿ ಭದ್ರಾವತಿಯೆಂಬ ಊರಿನಲ್ಲಿ ಸುಕೇತುಮಂತನೆಂಬ ಒಬ್ಬ ರಾಜನಿದ್ದನು. ಅವನಿಗೆ ಚಂಪಕಾ ಎಂಬುವಳೊಬ್ಬಳು ಹೆಂಡತಿಯಿದ್ದಳು. ಪುತ್ರಹೀನೇನ ರಾಜ್ಞಾ ಚ ಕಾಲೋ ನೀತೋ ಮನೋರಥೈಃ । ನೈವಾತ್ಮಜಂ ನೃಪೋ ಲೇಭೇ ವಂಶಕರ್ತಾರಮೇವ ಚ ॥೮॥ ಆ ರಾಜನಿಗೆ ಮಕ್ಕಳಿರಲಿಲ್ಲ. ಮಕ್ಕಳು ಆಗುತ್ತದೆಂಬ ಆಸೆಯಿಂದಲೇ ಕಾಲವನ್ನು ಕಳೆಯುತ್ತಿದ್ದನು. ಈ ರೀತಿಯಿರಲು ವಂಶಕರ್ತನಾದ ಮಗನು ಆಗಲೇ ಇಲ್ಲ. ತೇನೈವ ರಾಜ್ಞಾ ಧರ್ಮೇಣ ಚಿಂತಿತಂ ಬಹುಕಾಲತಃ ।

ಕಿಂ ಕರೋಮಿ ಕ್ವ ಗಚ್ಛಾಮಿ ಸುತಪ್ರಾಪ್ತಿಃ ಕಥಂ ಭವೇತ್ ॥೯॥ ಆ ರಾಜನು ಬಹುಕಾಲದ ಮೇಲೆ ಏನು ಮಾಡಲಿ? ಎಲ್ಲಿ ಹೋಗಲಿ? ಮಗನು ಹೇಗೆ ಲಭಿಸುವನು? ಎಂದು ಚಿಂತೆಗೊಳಗಾದನು. ನ ರಾಷ್ಟ್ರೇನ ಪುರೇ ಸೌಖ್ಯಂ ಲೇಭೇ ರಾಜಾ ಸುಕೇತುಮಾನ್ । ಸಾಧ್ವ್ಯಾ ಸ್ವಕಾಂತಯಾ ಸಾರ್ಧಂ ಪ್ರತ್ಯಹಂ ದುಃಖಿತೋಽಭವತ್ ॥೧೦॥ ಪಟ್ಟಣದಲ್ಲಿಯಾಗಲಿ, ರಾಜ್ಯದಲ್ಲಿಯಾಗಲೀ ಅವನಿಗೆ ಸುಖವು ತೋರಲಿಲ್ಲ. ಈ ರೀತಿಯಾಗಿ ತನ್ನ ಹೆಂಡತಿಯೊಡನೆ ನಿತ್ಯವೂ ದುಃಖಿಸುತ್ತಿದ್ದನು. ತಾವುಭೌ ದಂಪತೀ ನಿತ್ಯಂ ಚಿಂತಾಶೋಕಪರಾಯಣೌ । ಪಿತರೋಸ್ಯ ಜಲಂ ದತ್ತಂ ಕವೋಷ್ಣಮುಪಭುಂಜತೇ ॥೧೧॥ ಈ ರೀತಿಯಾಗಿ ಆ ದಂಪತಿಗಳು ಚಿಂತೆಯಿಂದ ದುಃಖಿಸುತ್ತಿರಲು ಅವನ ಪಿತೃಗಳು ಕಣ್ಣೀರಿನಿಂದ ಕೂಡಿದ ಉಗುರು ಬೆಚ್ಚಗಿರುವ ತರ್ಪಣವನ್ನು ಕುಡಿಯುತ್ತಿದ್ದರು. ರಾಜ್ಞಃ ಪಶ್ಚಾನ್ನ ಪಶ್ಯಾಮೋ ಯೋಽಸ್ಮಾಕಂ ತರ್ಪಯಿಷ್ಯತಿ । ಇತ್ಯೇವಂ ಸ್ಮರತಸ್ತಸ್ಯ ದುಃಖಿತಾಃ ಪಿತರೋಽಭವನ್ ॥೧೨॥ ಆ ರಾಜನ ಅನಂತರದಲ್ಲಿ ನಮಗೆ ತರ್ಪಣವನ್ನು ಕೊಡತಕ್ಕವರನ್ನು ಕಾಣೆವಲ್ಲಾ! ಎಂದು ಅವನ ಪಿತೃಗಳು ಯೋಚಿಸುತ್ತಾ ದುಃಖಿತರಾಗಿದ್ದರು. ನ ಬಾಂಧವಾ ನ ಮಿತ್ರಾಣಿ ನಾಮಾತ್ಯಸುಹೃದಸ್ತಥಾ । ರೋಚಯಂತ್ಯಸ್ಯ ಭೂಪಸ್ಯ ನ ಗಜಾಶ್ವಪದಾತಯಃ ॥೧೩॥ ಬಂಧುಗಳು, ಮಿತ್ರರು, ಮಂತ್ರಿಗಳು, ಸ್ನೇಹಿತರು, ಆನೆಗಳು, ಕುದುರೆಗಳು, ಒಂದೂ ಕೂಡ ಆ ರಾಜನಿಗೆ ಬೇಕಾಗಲೇ ಇಲ್ಲ. ನೈರಾಶ್ಯಂ ಭೂಪತೇಸ್ತಸ್ಯ ನಿತ್ಯಂ ಮನಸಿ ವರ್ತತೇ । ನರಸ್ಯ ಪುತ್ರಹೀನಸ್ಯ ನಾಸ್ತಿ ವೈ ಜನ್ಮನಃ ಫಲಂ ॥೧೪॥ ಮಗನಿಲ್ಲದಿರುವ ಆ ರಾಜನಿಗೆ ದಿನವೂ ಮನಸ್ಸಿನಲ್ಲಿ ನಿರಾಶೆಯು, ಉಂಟಾಗುತ್ತಿದ್ದಿತು. ಮಗನಿಲ್ಲದಿರುವ ಮನುಷ್ಯನ ಜನ್ಮವು ಸಾರ್ಥಕವಿಲ್ಲವಷ್ಟೆ ! ಅಪುತ್ರಸ್ಯ ಗೃಹಂ ಶೂನ್ಯಂ ಹೃದಯಂ ದುಃಖಿತಂ ಸದಾ । ಪಿತೃದೇವಮನುಷ್ಯಾಣಾಂ ನಾನೃಣತ್ವಂ ಸುತಂ ವಿನಾ ॥೧೫॥ ಮಕ್ಕಳಿಲ್ಲದಿರುವವನ ಮನೆಯು ಹಾಳು. ಹೃದಯವು ಯಾವಾಗಲೂ ದುಃಖಗೊಂಡಿರುತ್ತದೆ. ಪಿತೃಗಳು, ದೇವತೆಗಳು, ಮನುಷ್ಯರು ಇವರ ಋಣವು ಮಗನಿಲ್ಲದಿದ್ದರೆ ತೀರುವುದಿಲ್ಲ. ತಸ್ಮಾತ್ಸರ್ವಪ್ರಯತ್ನೇನ ಸುತಮುತ್ಪಾದಯೇನ್ನರಃ । ಇಹಲೋಕೇ ಯಶಸ್ತೇಷಾಂ ಪರಲೋಕೇ ಶುಭಾ ಗತಿಃ ॥೧೬॥ ಆದುದರಿಂದ ಸಮಸ್ತವಾದ ಪ್ರಯತ್ನಗಳಿಂದಲೂ ಮಗನನ್ನು ಹೊಂದಬೇಕು. ಹಾಗೆ ಹುಟ್ಟಿದರೆ ತಂದೆಗೆ ಇಹಲೋಕದಲ್ಲಿ ಯಶಸ್ಸೂ, ಪರಲೋಕದಲ್ಲಿ ಒಳ್ಳೆಯ

ಗತಿಯೂ ಬರುತ್ತವೆ. ಯೇಷಾಂ ತು ಪುಣ್ಯಕರ್ತೃಣಾಂ ಪುತ್ರಜನ್ಮ ಗೃಹೇ ಭವೇತ್। ಆಯುರಾರೋಗ್ಯಸಂಪತ್ತಿಸ್ತೇಷಾಂ ಗೃಹೇ ಪ್ರವರ್ತತೇ ॥೧೭॥ ಯಾವ ಪುಣ್ಯವಂತರು ಪುತ್ರರನ್ನು ಪಡೆಯುತ್ತಾರೆಯೋ ಆಯಸ್ಸು, ಆರೋಗ್ಯ, ಸಂಪತ್ತುಗಳು ಅವರ ಮನೆಯಲ್ಲಿ ಉಂಟಾಗುತ್ತವೆ. ಪುತ್ರಜನ್ಮ ಗೃಹೇ ಯೇಷಾಂ ಲೋಕಾನಾಂ ಪುಣ್ಯಕರ್ಮಣಾಂ। ಪುಣ್ಯಂ ವಿನಾ ನ ಚ ಪ್ರಾಪ್ತಿರ್ವಿಷ್ಣುಭಕ್ತಿಂ ವಿನಾ ನೃಪ ॥೧೮॥ ಯಾರ ಮನೆಯಲ್ಲಿ ಪುತ್ರರಿರುವರೋ ಅವರಿಗೆ ಪುಣ್ಯಲೋಕಗಳುಂಟು. ಪುಣ್ಯವಿಲ್ಲದಿದ್ದರೆ ಮಕ್ಕಳಾಗುವುದಿಲ್ಲ. ವಿಷ್ಣು ಭಕ್ತಿಯಿಲ್ಲದಿದ್ದರೆ ಆ ಪುಣ್ಯವುಂಟಾಗುವುದಿಲ್ಲ. ಪುತ್ರಾಶ್ಚ ಸಂಪದೋ ವಾಪಿ ನಿಶ್ಚಯಾ ಇತಿ ಮೇ ಮತಿಃ। ಏವಂ ಚಿಂತಯಮಾನೋಽಸೌ ನ ಶರ್ಮ ಲಭತೇ ನೃಪಃ ॥೧೯॥ ಪುತ್ರರೂ, ಸಂಪತ್ತೂ ಆ ವಿಷ್ಣುಭಕ್ತಿಯಿಂದಲೇ ಉಂಟಾಗಬೇಕು. ಈ ರೀತಿಯಾಗಿ ಯೋಚಿಸುತ್ತಾ ಅವನು ಸುಖವನ್ನೇ ಹೊಂದಲಿಲ್ಲ. ಪ್ರತ್ಯೂಷೇ ಚಿಂತಯೇದ್ರಾಜಾ ನಿಶೀಥೇ ಚಿಂತಯೇತ್ತಥಾ । ಸ್ವಯಮಾತ್ಮವಿನಾಂಶಂ ಚ ಚಿಂತಯಾಮಾಸ ಕೇತುಮಾನ್ ॥೨೦॥ ಅದೇ ರೀತಿಯಾಗಿ ಬೆಳಗ್ಗೆ ರಾತ್ರಿಯೆಲ್ಲವೂ ಆ ರಾಜನು ಚಿಂತಿಸುತ್ತ ಇದ್ದನು. ಆತ್ಮಘಾತೇ ದುರ್ಗತಿಂ ಚ ಚಿಂತಯಿತ್ವಾ ತದಾ ನೃಪಃ। ದೃಷ್ಟ್ವಾತ್ಮದೇಹಂ ಪತಿತಮಪುತ್ರತ್ವಂ ತಥೈವ ಚ ॥೨೧॥ ಕೊನೆಗೆ ತಾನು ಪ್ರಾಣಬಿಡುವುದೆಂದು ಯೋಚಿಸಿ ಆದರಿಂದ ನರಕ ಪ್ರಾಪ್ತಿಯೆಂಬುದನ್ನು ತಿಳಿದು ತಾನು ಮುದುಕನಾಗುತ್ತಿರುವುದೂ ತನಗೆ ಮಕ್ಕಳಿಲ್ಲದಿರುವುದೂ ಮನಸ್ಸಿನಲ್ಲಿ ಚಿಂತೆಯನ್ನು ತಂದೊಡ್ಡುತ್ತಿದ್ದುವು. ಪುನರ್ವಿಚಾರ್ಯಾತ್ಮಾಬುದ್ಧ್ಯಾ ಆತ್ಮನೋ ಹಿತಕಾರಣಂ। ಅಶ್ವಾರೂಢಸ್ತತೋ ರಾಜಾ ಜಗಾಮ ಗಹನಂ ವನಂ ॥೨೨॥ ಅನಂತರ ತನ್ನ ಬುದ್ಧಿವಂತಿಕೆಯಿಂದ ತನಗೆ ಒಳ್ಳೆಯದಾಗುವಿಕೆಯನ್ನು ಯೋಚಿಸಿಕೊಂಡು ಕುದುರೆಯನ್ನು ಹತ್ತಿ ಒಂದು ದಟ್ಟವಾದ ಕಾಡಿಗೆ ಹೋದನು. ಪುರೋಹಿತಾದಯಸ್ಸರ್ವೇ ನ ಜಾನಂತಿ ಗತಂ ನೃಪಂ। ಗಂಭೀರೇ ವಿಪಿನೇ ರಾಜಾ ಮೃಗಪಕ್ಷಿನಿಷೇವಿತೇ ॥೨೩॥ ವಿಚಚಾರ ತದಾ ರಾಜಾ ವನವೃಕ್ಷಾನ್ ವಿಲೋಕಯನ್ । ಮಹಾನಶ್ವತ್ಥ ಬಿಲ್ವಾಂಶ್ಚ ಖರ್ಜೂರಾನ್ ಪನಸಾನ್ ತಥಾ ॥೨೪॥ ಬಕುಳಾನ್ಸಪ್ತ ಪರ್ಣಾಂಶ್ಚ ತಿಂದುಕಾಂಸ್ತಿಲಕಾನಪಿ । ಶಾಲಾಂ ಸ್ತಾಲಾಂ ಸ್ತಮಾಲಾಂಶ್ಚ ದದರ್ಶ ಸರಲಾನ್ನೃಪಃ ॥೨೫॥ ಪುರೋಹಿತರೇ ಮುಂತಾಗಿ

ಮಂತ್ರಿಗಳಿಗೂ ಕೂಡ ಆ ರಾಜನು ಹೋದುದು ತಿಳಿಯಲಿಲ್ಲ. ಹೀಗೆ ಕಾಡಿಗೆ ಹೋಗಿ ರಾಜನು ಗಾಢವಾದ ಅರಣ್ಯದಲ್ಲಿ ಮೃಗಪಕ್ಷಿಗಳನ್ನೂ ಕಾಡಿನ ಮರಗಳನ್ನೂ ನೋಡುತ್ತಾ ಸಂಚರಿಸುತ್ತಾ ಇದ್ದನು. ಆಲ, ಅರಳಿ, ಬಿಲ್ವಪತ್ರೇ ಮರ, ಖರ್ಜೂರ, ಹಲಸು, ಪಗಡೆ, ಏಳೆಲೇ ಬಾಳೆ, ತೂಪದ ಮರ, ತಿಲಕ, ಮತ್ತಿ, ತಾಳೆ, ಹೊಂಗೆ, ಸರಳುಕಗಳನ್ನೂ ನೋಡಿದನು. ಇಂಗುದೀಕಕುಂಭಾಶ್ಚೈವ ಶ್ಲೇಷ್ಮಾತಬದರಾಂಸ್ತಥಾ । ತಲ್ಲಕಾನ್ಕರಮರ್ದಾಂಶ್ಚ ಪಾಟಲಾನ್ಬದರಾನಪಿ ॥೨೬॥ ಅಶೋಕಾಂಶ್ಚ ಪಲಾಶಾಂಶ್ಚ ಶೃಗಾಲಾನ್ ಶಶಕಾನಪಿ । ವನಮಾರ್ಜಾರ ಮಹಿಷಾನ್ ಶಲ್ಲಕಾಂಶ್ಚಮರಾನಪಿ ॥೨೭॥ ದದರ್ಶ ಭುಜಗಾನ್ ರಾಜಾ ವಲ್ಮೀಕಾದರ್ಧನಿಸ್ಸೃತಾನ್ । ತಥಾ ವನಗಜಾನ್ಮತ್ತಾನ್ ಕಲಭೈಸ್ಸಃ ಸಂಗತಾನ್ ॥೨೮॥ ಯೂಥಪಾಂಶ್ಚ ಚತುರ್ದಂತಾನ್ ಕರಿಣೀಯೂಥಮಧ್ಯಗಾನ್ । ತಾನ್ದೃಷ್ಟ್ವಾ ಚಿಂತಯಾಮಾಸ ಆತ್ಮನಸ್ಸ ಗಜಾನ್ನೃಪಃ ॥೨೯॥ ಇಂಗಳ, ಕೆಂಪುಮತ್ತಿ, ಚೊಳ್ಳೆ, ಯುಗಚೀ, ಶಲ್ಲಕ, ಕರಮರ್ದ, ಪಾದರಿ, ಹಿಪ್ಪೆ, ಎಗುಚಿ, ಅಶೋಕ, ಮುತ್ತುಗ ಮುಂತಾದ ಮರಗಳನ್ನೂ, ನರಿ, ಮೊಲ, ಕಾಡುಬೆಕ್ಕು, ಕಾಡೆಮ್ಮೆ, ಮುಳ್ಳುಹಂದಿ, ಚಮರಿಮೃಗ, ಹುತ್ತದಿಂದ ಅರ್ಧಹೊರಗೆ ಬಂದಿರುವ ಹಾವುಗಳು ಮುಂತಾದ ಪ್ರಾಣಿಗಳು ಇವೆಲ್ಲವನ್ನೂ ನೋಡುತ್ತ ಹೊರಟನು. ಅದೇ ರೀತಿಯಲ್ಲಿ ಮದಿಸಿದ ಕಾಡಾನೆಗಳನ್ನೂ ಕಲಭ (ಹೆಣ್ಣಾನೆ)ಗಳೊಡನೆ ಸೇರಿರುವ ಗಂಡಾನೆಗಳನ್ನೂ, ಗುಂಪನ್ನು ಕಾಪಾಡುತ್ತಿರುವ ದೊಡ್ಡ ಸಲಗಗಳನ್ನೂ, ಅವು ಹೆಣ್ಣಾನೆಗಳ ಮಧ್ಯದಲ್ಲಿ ಸಂಚರಿಸುತ್ತಿರುವುದನ್ನೂ, ಒಂಟಿಯಾಗಿರುವ ಆನೆಗಳನ್ನೂ ನೋಡಿ ದುಃಖಪಡುತ್ತಿದ್ದನು. ತೇಷಾಂ ಸ ವಿಚರನ್ಮಧ್ಯೇ ರಾಜಾ ಶೋಭಾಮವಾಪ ಹ । ಮಹದಾಶ್ಚರ್ಯಸಂಯುಕ್ತಂ ದದರ್ಶ ವಿಪಿನಂ ನೃಪಃ ॥೩೦॥ ಅವುಗಳ ನಡುವೆ ಈ ರಾಜನೂ ಓಡಾಡುತ್ತ ಶೋಭಿಸುತ್ತಿದ್ದನು. ಈ ರೀತಿಯಾಗಿ ಬಹು ಆಶ್ಚರ್ಯವಾದ ಆ ಕಾಡನ್ನು ನೋಡಿದನು. ಪಥಿ ಶೃಣ್ವನ್ಶಿವರುತಾಮುಲೂಕವಿರುತಂ ತಥಾ । ತಾಂಸ್ತಾನ್ವೃಕ್ಷಮೃಗಾನ್ಪಶ್ಯನ್ ಬಭ್ರಾಮ ವನಮಧ್ಯತಃ ॥೩೧॥ ದಾರಿಯಲ್ಲಿ ನರಿಗಳ ಕೂಗನ್ನೂ, ಗೂಬೆಗಳ ಶಬ್ದವನ್ನೂ ಕೇಳುತ್ತ ಆಯಾ ವೃಕ್ಷಗಳನ್ನೂ, ಕರಡಿಗಳನ್ನೂ, ನೋಡುತ್ತ ವನದ ಮಧ್ಯದಲ್ಲಿ ಸುತ್ತುತ್ತಿದ್ದನು. ಏವಂ ದದರ್ಶ ಗಹನಂ ನೃಪೋ ಮಧ್ಯಗತೇ ರವೌ । ಕ್ಷುತ್ತೃಡ್ಭ್ಯಾಂ ಪೀಡಿತೋ ರಾಜಾ ಇತಶ್ಚೇತಶ್ಚ ಧಾವತಿ ॥೩೨॥

ರಾಜನು ಈ ರೀತಿಯಾಗಿ ಕಾಡನ್ನು ನೋಡುತ್ತ ಮಧ್ಯಾಹ್ನ ಸಮಯವಾಗಲು ಹಸಿವು ಬಾಯಾರಿಕೆಗಳಿಂದ ಕೂಡಿ ಇಲ್ಲಿಂದಲ್ಲಿಗೆ ಅಲ್ಲಿಂದಿಲ್ಲಿಗೆ ಓಡಾಡುತ್ತಿದ್ದನು. ನೃಪತಿಶ್ಚಿಂತಯಾಮಾಸ ಸಂಶುಷ್ಕಗಳಕಂದರಃ । ಮಯಾ ತು ಕಿಂ ಕೃತಂ ಕರ್ಮ ಪ್ರಾಪ್ತಂ ದುಃಖಂ ಯದೀದೃಶಂ ॥೩೩॥ ಆ ರಾಜನ ಗಂಟಲು ಬಾಯಿ ಒಣಗಿಹೋಗಲು ಈ ರೀತಿಯಾಗಿ ಕಷ್ಟವನ್ನು ಹೊಂದಲು, ನಾನು ಯಾವ ಪಾಪವನ್ನು ಮಾಡಿದ್ದೆನು? ಮಯಾ ವೈ ತೋಷಿತಾ ದೇವಾ ಯಜ್ಞೈಃ ಪೂಜಾಭಿರೇವ ಚ । ತಥೈವ ಬ್ರಾಹ್ಮಣಾ ದಾನೈಸ್ತೋಷಿತಾ ಮಿಷ್ಟಭೋಜನೈಃ ॥೩೪॥ ನಾನು ದೇವತೆಗಳನ್ನು ಯಜ್ಞಗಳಿಂದಲೂ, ಪೂಜೆಗಳಿಂದಲೂ, ತೃಪ್ತಿಪಡಿಸಿದ್ದೇನೆ. ಅದೇ ರೀತಿಯಾಗಿ ಬ್ರಾಹ್ಮಣರನ್ನು ಭೋಜನದಾನಗಳಿಂದ ತೃಪ್ತಿಪಡಿಸಿದ್ದೇನೆ. ಪ್ರಜಾಶ್ಚೈವ ಸದಾ ಕಾಲಂ ಪುತ್ರವತ್ಪಾಲಿತಾ ಭೃಶಂ । ಕಸ್ಮಾದ್ದುಃಖಂ ಮಯಾ ಪ್ರಾಪ್ತಮೀದೃಶಂ ದಾರುಣಂ ಮಹತ್ ॥೩೫॥ ಪ್ರಜೆಗಳನ್ನು ಯಾವಾಗಲೂ ಮಕ್ಕಳಂತೆ ಕಾಪಾಡಿದ್ದೇನೆ. ಹೀಗಿದ್ದರೂ ಇಂತಹ ಮಹಾ ಕಷ್ಟವು ಬರಲು ಕಾರಣವೇನು ? ಇತಿ ಚಿಂತಾಪರೋ ರಾಜಾ ಜಗಾಮೈವಾಗ್ರತೋ ವನಂ । ಸುಕೃತಸ್ಯ ಪ್ರಭಾವೇನ ಸರೋ ದೃಷ್ಟಮನುತ್ತಮಂ ॥೩೬॥ ರಾಜನು ಹೀಗೆ ಯೋಚಿಸುತ್ತ ಮುಂದೆ ಹೋಗುತ್ತಿರಲು ಅವನ ಪುಣ್ಯ ಪ್ರಭಾವದಿಂದಲೇ ಒಂದು ಉತ್ತಮವಾದ ಸರೋವರವನ್ನು ಕಂಡನು. ಮೀನಸಂಸ್ಪೃಶ್ಯಮಾನಂ ಚ ಪದ್ಮೈಶ್ಚ ಪರಿಶೋಭಿತಂ । ಕಾರಂಡೈಶ್ಚಕ್ರವಾಕೈಶ್ಚ ರಾಜಹಂಸೈಶ್ಚ ಶೋಭಿತಂ ॥೩೭॥ ಮಕರೈರ್ಬದುಭಿರ್ಮತ್ಸ್ಯೈರನ್ಯೈರ್ಜಲ-ಚರೈರ್ಯುತಂ । ಸಮೀಪೇ ಸರಸಸ್ತಸ್ಯ ಮುನೀನಾಮಾಶ್ರಮಾನ್ಬಹೂನ್ ॥೩೮॥ ದದರ್ಶ ರಾಜಾ ಲಕ್ಷ್ಮೀವಾನ್ ಶಕುನೈಶ್ಶುಭಶಂಸಿಭಿಃ । ಸವ್ಯಾತ್ಪರತರಂ ನೇತ್ರಮಥ ಸವ್ಯಃ ತಥಾ ಕರಃ ॥೩೯॥ ಪ್ರಾಸ್ಫುರನ್ನೃಪತೇಸ್ತಸ್ಯ ಕಥಯನ್ ಶೋಭನಂ ಫಲಂ। ತಸ್ಯ ತೀರೇ ಮುನೀನ್ದೃಷ್ಟ್ವಾ ಕುರ್ವಾಣಾನ್ನೈಗಮಂ ಜಪಂ ॥೪೦॥ ಹರ್ಷೇಣ ಮಹತಾ ವಿಷ್ಟೋ ಬಭೂವ ನೃಪಸತ್ತಮಃ । ಅವತೀರ್ಯ ಹಯಾತ್ತಸ್ಮಾನ್ಮುನೀನಾಮಗ್ರತಃ ಸ್ಥಿತಃ ॥೪೧॥ ಅದರಲ್ಲಿ ಬಹುವಾಗಿ ಮೀನುಗಳಿದ್ದವು. ಪದ್ಮಗಳಿಂದ ಪ್ರಕಾಶಿಸುತ್ತಿದ್ದಿತು. ಚಕ್ರವಾಕಗಳಿಂದಲೂ, ಹಂಸಗಳಿಂದಲೂ ಬಣ್ಣಬಣ್ಣವಾದ ನೀರು ಹಕ್ಕಿಗಳಿಂದಲೂ ಕೂಡಿದ್ದಿತು. ಬಹುವಾಗಿ ಮೊಸಳೆಗಳು ಸಣ್ಣಸಣ್ಣ ಮೀನುಗಳೂ ಇನ್ನು ಅನೇಕವಾದ ನೀರು ಪ್ರಾಣಿಗಳೂ ಇದ್ದುವು. ಆ ಸರೋವರದ ಬಳಿಯಲ್ಲಿ ಋಷಿಗಳ ಆಶ್ರಮಗಳು

ಬಹುವಾಗಿದ್ದವು. ಮತ್ತು ಅಲ್ಲಿಗೆ ಹೋಗುತ್ತಿರಲು ಶುಭ ಶಕುನಗಳು ಬಹುವಾಗಿ ಆದುವು. ಬಲಗಣ್ಣೂ, ಬಲಭುಜವೂ ಬಹು ಸಾರಿ ಹಾರಿದುವು. ಅವು ಇವನಿಗೆ ಒಳ್ಳೆಯ ಫಲಗಳನ್ನೇ ಸೂಚಿಸುತ್ತಿದ್ದುವು. ಆ ಸರೋವರದ ದಡದಲ್ಲಿ ವೇದೋಕ್ತವಾದ ಜಪಗಳನ್ನು ಮಾಡುತ್ತಿರುವ ಋಷಿಗಳನ್ನು ಕಂಡನು. ಒಡನೆಯೇ ಕುದುರೆಯಿಂದ ಇಳಿದು ಆ ಋಷಿಗಳಿದ್ದಲ್ಲಿಗೆ ಹೋದನು. ಪೃಥಕ್ ಪೃಥಕ್ ವವಂದೇಸೌ ಮುನೀಂಸ್ತಾನ್ ಶಂಸಿತವ್ರತಾನ್ । ಕೃತಾಂಜಲಿಪುಟೋ ಭೂತ್ವಾದಂಡವಚ್ಚ ಪುನಃ ಪುನಃ ॥ ಪ್ರತ್ಯೂಚುಸ್ತೇಪಿ ಮುನಯಃ ಪ್ರಸನ್ನಾ ನೃಪತೇ ವಯಂ ॥೪೨॥ ಆ ವ್ರತಿಗಳಾದ ಋಷಿಗಳೊಬ್ಬೊಬ್ಬರಿಗೂ ಬೇರೆಬೇರೆಯಾಗಿ ನಮಸ್ಕರಿಸಿದನು. ಕೈ ಮುಗಿದುಕೊಂಡು ಮತ್ತೆ ಮತ್ತೆ ನಮಸ್ಕರಿಸಿದನು. ಆಗ ಅವರೆಲ್ಲರೂ ನಮಗೆಲ್ಲರಿಗೂ ಸಂತೋಷವಾಯಿತು. ನಾವೆಲ್ಲರೂ ಪ್ರಸನ್ನರಾಗಿದ್ದೇವೆ ಎಂದರು. ರಾಜೋವಾಚ- ಕೇ ಭವಂತೋಽತ್ರ ಕಥ್ಯಂತಾಂ ಕಾ ಚಾಖ್ಯಾ ಭವತಾಮಪಿ । ಕಿಮರ್ಥಂ ಸಂಗತಾ ಯೂಯಂ ಸತ್ಯಂ ವದತ ಮೇಽಗ್ರತಃ ॥೪೩॥ ರಾಜನು ಹೇಳಿದನು - ಎಲೈ ಋಷಿಗಳಿರಾ! ನೀವು ಯಾರು? ನಿಮ್ಮ ಹೆಸರೇನು? ನೀವೆಲ್ಲರೂ ಇಲ್ಲಿ ಏಕೆ ಸೇರಿದ್ದೀರಿ? ನನಗೆ ನಿಜವಾದ ವಿಷಯವನ್ನು ಹೇಳಿರಿ. ಮುನಯ ಊಚುಃ - ವಿಶ್ವೇದೇವಾ ವಯಂ ರಾಜನ್ ಸ್ನಾನಾರ್ಥಮಿಹ ಚಾಗತಾಃ । ಮಾಘೋ ನಿಕಟಮಾಯಾತಃ ಏತಸ್ಮಾತ್ಪಂಚಮೇಽಹನಿ ॥೪೪॥ ಮುನಿಗಳು ಹೇಳಿದರು - ಎಲೈ ರಾಜನೆ! ನಾವು ವಿಶ್ವೇ ದೇವರುಗಳು. ಇಲ್ಲಿಗೆ ಸ್ನಾನಕ್ಕೋಸ್ಕರ ಬಂದಿದ್ದೇವೆ. ಮಾಘ ಮಾಸವು ಸಮೀಪಿಸುತ್ತಿದೆ. ಅದಕ್ಕೆ ಇನ್ನೂ ನಾಲ್ಕುದಿನ ಬಿಡುವಿದೆ. ಐದನೆಯ ದಿನವೇ ಮಾಘವು ಬರುತ್ತದೆ. ಅದ್ಯೈವೈಕಾದಶೀ ರಾಜನ್ ಪುತ್ರದಾ ನಾಮ ನಾಮತಃ । ಪುತ್ರಂ ದದಾತ್ಯಸೌ ತಸ್ಮಾತ್ಪುತ್ರದಾಕಾರಿಣಾಂ ನೃಣಾಂ ॥೪೫॥ ಎಲೈ ರಾಜನೆ! ಇಂದು ಏಕಾದಶಿಯು. ಈ ಏಕಾದಶಿಗೆ ''ಪುತ್ರದೆ'' ಎಂದು ಹೆಸರು. ಯಾರು ಮಕ್ಕಳನ್ನು ಅಪೇಕ್ಷಿಸುವರೋ ಅವರಿಗೆ ಮಕ್ಕಳನ್ನು ಕೊಡುವುದರಿಂದ ಇದಕ್ಕೆ ಪುತ್ರದಾ ಎಂದು ಹೆಸರಾಗಿದೆ. ರಾಜೋವಾಚ - ಏಷ ವೈ ಸಂಶಯೋ ಮಹ್ಯಂ ಪುತ್ರಸ್ಯೋತ್ಪಾದನೇ ಮಹಾನ್ । ಯದಿ ತುಷ್ಟಾ ಭವಂತೋ ವೈ ಪುತ್ರೋ ಮೇ ದೀಯತಾಂ ತದಾ ॥೪೬॥ ರಾಜನು ಹೇಳಿದನು - ಎಲೈ ಋಷಿಗಳಿರಾ ! ಇದೇ ನನಗಿರುವ ಸಂಶಯವು. ಮಕ್ಕಳಾಗುವುದಲ್ಲಂತೂ ಬಹು ಸಂದೇಹವಿದೆ. ನೀವು

ನನಗೆ ಪ್ರಸನ್ನರಾಗಿದ್ದರೆ ಮಕ್ಕಳಾಗುವಂತೆ ವರವನ್ನು ಕೊಡಿರಿ. ಮುನಯ ಊಚುಃ- ಅದ್ಯೈವ ದಿವಸೇ ರಾಜನ್ ಪುತ್ರದಾ ನಾಮ ವರ್ತತೇ । ಏಕಾದಶೀತಿ ವಿಖ್ಯಾತಂ ಕ್ರಿಯತಾಂ ವ್ರತಮುತ್ತಮಂ ॥೪೭॥ ಮುನಿಗಳು ಹೇಳಿದರು - ಎಲೈ ದೊರೆಯೆ! ಇಂದಿನ ಏಕಾದಶಿಯೇ ''ಪುತ್ರದೆ'' ಎಂದು ಪ್ರಸಿದ್ಧವಾಗಿದೆ. ಈ ದಿನ ಉತ್ತಮವಾದ ಆ ವ್ರತವನ್ನು ಮಾಡು. ಅಭಿಷೇಕಾತ್ತತೋಸ್ಮಾಕಂ ಕೇಶವಸ್ಯ ಪ್ರಸಾದತಃ। ಅವಶ್ಯಂ ತವ ರಾಜೇಂದ್ರ ಪುತ್ರಪ್ರಾಪ್ತಿರ್ಭವಿಷ್ಯತಿ ॥೪೮॥ ಎಲೈ ದೊರೆಯೆ! ನಾವು ನಿನಗೆ ಮಂತ್ರೋಕ್ತವಾಗಿ ಪ್ರೋಕ್ಷಿಸುವುದರಿಂದಲೂ, ಕೇಶವನ ಅನುಗ್ರಹದಿಂದಲೂ ಖಂಡಿತವಾಗಿಯೂ ಮಕ್ಕಳು ಆಗುತ್ತವೆ. ಶ್ರೀಕೃಷ್ಣ ಉವಾಚ - ಇತ್ಯೇವಂ ವಚನಾತ್ತೇಷಾಂ ಕೃತಂ ರಾಜ್ಞಾ ವ್ರತೋತ್ತಮಂ । ಮುನೀನಾಮುಪದೇಶೇನ ಪುತ್ರದಾಯಾ ವಿಧಾನತಃ ॥೪೯॥ ಕೃಷ್ಣನು ಹೇಳಿದನು - ಅವರು ಹೀಗೆ ಹೇಳಿದುದರಿಂದ ಅವರ ಮಾತಿನಂತೆ ರಾಜನು ಆ ಋಷಿಗಳ ಉಪದೇಶವನ್ನು ಹೊಂದಿ ಶಾಸ್ತ್ರೋಕ್ತವಾಗಿ ಆ ಏಕಾದಶಿಯ ವ್ರತವನ್ನು ಮಾಡಿದನು. ದ್ವಾದಶ್ಯಾಂ ಪಾರಣಂ ಕೃತ್ವಾ ಮುನೀನ್ನತ್ವಾ ಪುನಃ ಪುನಃ । ಆಜಗಾಮ ಗೃಹಂ ರಾಜಾ ರಾಜ್ಞೀ ಗರ್ಭಮಥಾದಧೌ ॥೫೦॥ ಏಕಾದಶೀ ವ್ರತವನ್ನು ಮಾಡಿ ದ್ವಾದಶಿಯದಿನ ಪಾರಣೆ ಮಾಡಿಕೊಂಡು ಋಷಿಗಳಿಗೆ ನಮಸ್ಕರಿಸಿ ರಾಜನು ಮನೆಗೆ ಬಂದನು. ಕೆಲವು ದಿನಗಳಲ್ಲಿಯೇ ಅವನ ಹೆಂಡತಿಯು ಗರ್ಭಿಣಿಯಾದಳು. ಪುತ್ರೋ ಜಾತಸ್ಸೂತಿಕಾಲೇ ತೇಜಸ್ವೀ ಪುಣ್ಯಕರ್ಮಣಃ। ಪಿತರಂ ತೋಷಯಾಮಾಸ ಪ್ರಜಾಪಾಲೋ ಬಭೂವ ಸಃ ॥೫೧॥ ಗರ್ಭಕ್ಕೆ ದಿನ ತುಂಬಲು ಮಗನು ಹುಟ್ಟಿದನು. ಅವನು ಒಳ್ಳೆಯ ತೇಜಸ್ಸಿನಿಂದ ಕೂಡಿದ್ದನು. ತಂದೆಗೆ ವಿಧೇಯನಾಗಿದ್ದುಕೊಂಡು ಅವನನ್ನು ಸಂತೋಷಪಡಿಸುತ್ತಾ ಬೆಳೆಯುತ್ತಿದ್ದು ರಾಜನೂ ಆದನು. ತಸ್ಮಾದ್ರಾಜನ್ ಪ್ರಕರ್ತವ್ಯಂ ಪುತ್ರದಾವಿತಿಮುತ್ತಮಂ । ಲೋಕಾನಾಂ ಚ ಹಿತಾರ್ಥಾಯ ತವಾಗ್ರೇ ಕಥಿತಂ ಮಯಾ ॥೫೨॥ ಎಲೈ ಯುಧಿಷ್ಠಿರನೇ! ಆದುದರಿಂದ ಈ ಪುತ್ರದಾ ಏಕಾದಶಿಯ ವ್ರತವನ್ನು ಮಾಡಬೇಕು. ಲೋಕಹಿತಕ್ಕೋಸ್ಕರ ನಿನ್ನೆದುರಿಗೆ ನಾನು ಹೇಳಿದೆನು. ಏಕಚಿತ್ತಾಸ್ತು ಯೇ ಮರ್ತ್ಯಾಃ ಕುರ್ವಂತಿ ಪುತ್ರದಾ ವ್ರತಂ। ಪುತ್ರಾನ್ ಪ್ರಾಪ್ಯೇಹ ಲೋಕೇ ತು ಮೃತಾಂತೇ ಸ್ವರ್ಗಗಾಮಿನಃ ॥ ಪಠನಾಚ್ಛ್ರವಣಾದ್ರಾಜನ್ ಅಗ್ನಿಷ್ಟೋಮಫಲಂ ಲಭೇತ್ ॥೫೩॥ ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

ಉಮಾಪತಿ ನಾರದ ಸಂವಾದಾಂತರ್ಗತ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಪೌಷ ಶುಕ್ಲ ಪುತ್ರದೈಕಾದಶೀ ವ್ರತಂ ನಾಮ ತ್ರಿಚತ್ವಾರಿಂಶೋಽಧ್ಯಾಯಸ್ಸಮಾಪ್ತಃ॥ ಯಾವ ಮನುಷ್ಯರು ಒಂದೇ ಮನಸ್ಸಿನಿಂದ ಈ ಪುತ್ರದಾವ್ರತವನ್ನು ಮಾಡುತ್ತಾರೆಯೋ ಅವರು ಈ ಲೋಕದಲ್ಲಿ ಮಕ್ಕಳನ್ನು ಹೊಂದಿ ಸುಖದಿಂದ ಬಾಳಿ ಸತ್ತನಂತರ ಸ್ವರ್ಗವನ್ನು ಹೊಂದುತ್ತಾರೆ. ಈ ಕಥೆಯನ್ನು ಓದುವುದರಿಂದಲೂ, ಕೇಳುವುದರಿಂದಲೂ ಅಗ್ನಿಷ್ಟೋಮಯಾಗದ ಫಲವನ್ನು ಹೊಂದುತ್ತಾರೆ. ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದೊಳಗಿನ ಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಪುಷ್ಯ ಶುದ್ಧದ ಪುತ್ರದೈಕಾದಶಿಯೆಂಬ ವ್ರತಕಥನದಲ್ಲಿ ನಲವತ್ತಮೂರನೆಯ ಅಧ್ಯಾಯವು ಮುಗಿದುದು,

**ವೈಕುಂಠ ಏಕಾದಶಿಯ ಕಥೆ** – ಭಾಗವತೋತ್ತಮನಾದ ನಂದಗೋಪನು ಶ್ರೀಕೃಷ್ಣನ ಸಾನಿಧ್ಯದಲ್ಲಿ, ಏಕಾದಶಿಯ ಉಪವಾಸ ಹಾಗೂ ದ್ವಾದಶಿಯ ಪಾರಣೆಗಳನ್ನು ತಪ್ಪದೆ ಆಚರಿಸುತ್ತಿದ್ದನು.ಒಮ್ಮೆ ಏಕಾದಶಿವ್ರತ ಆಚರಿಸಿ, ಮರುದಿನ ದ್ವಾದಶಿ ಬಹು ಸ್ವಲ್ಪಕಾಲ ಮಾತ್ರ ಇದ್ದುದ್ದರಿಂದ ಬೆಳಗಿನ ಝಾವಕ್ಕೆ ಮೊದಲು ಯಮುನಾನದಿಯಲ್ಲಿ ಸ್ನಾನಕ್ಕಿಳಿದ. ಅದು ರಾಕ್ಷಸರ ಸಂಚಾರದ ಕಾಲವಾದ್ದರಿಂದ ವರುಣದೇವನ ಸೇವಕನಾದ ರಾಕ್ಷಸ, ನಂದಗೋಪನನ್ನು ವರುಣನ ಬಳಿಗೆ ಎಳೆದೊಯ್ದನು. ಇತ್ತ ನಂದನು ಎಷ್ಟು ಹೊತ್ತಾದರೂ ಸ್ನಾನಕ್ಕೆ ಹೋದವನು ಬಾರದಿರಲು, ಗೋಪಾಲಕುಲದವರೆಲ್ಲಾ ಬಲರಾಮಕೃಷ್ಣರಿಗೆ ಈ ಸುದ್ದಿ ಮುಟ್ಟಿಸಿದರು.

ಸರ್ವಜ್ಞನಾದ ಶ್ರೀಕೃಷ್ಣ ಅವರಿಗೆಲ್ಲಾ ಅಭಯವಿತ್ತು ತಂದೆಯವರನ್ನು ಕರೆತರುವುದಾಗಿ ಹೇಳಿ, ವರುಣಲೋಕಕ್ಕೆ ಬಂದನು. ದೇವದೇವನಾದ ಶ್ರೀಕೃಷ್ಣನಿಗೆ ನಮಿಸಿದ ವರುಣ ತನ್ನ ಸೇವಕನಿಂದಾದ ಅಪರಾಧ ಮನ್ನಿಸಬೇಕೆಂದು ಪ್ರಾರ್ಥಿಸಿದ. ಶ್ರೀಕೃಷ್ಣ ವರುಣನನ್ನು ಆಶೀರ್ವದಿಸಿ ತಂದೆಯೊಡನೆ ಗೋಕುಲಕ್ಕೆ ಹಿಂದಿರುಗಿದನು. ನಂದಗೋಪನಿಗೆ ಪರಮಾನಂದವಾಯಿತು. ವರುಣನ ಲೋಕದ ವೈಭವ ಹಾಗೂ ತನ್ನ ಮಗನಾದ ಶ್ರೀಕೃಷ್ಣನಿಗೆ ಸಿಕ್ಕ ಭವ್ಯಸ್ವಾಗತ ಮುಂತಾದವುಗಳನ್ನು ಎಳೆಎಳೆಯಾಗಿ ಬಣ್ಣಿಸಲಾಗಿ ಗೋಪಾಲರಿಗೆಲ್ಲಾ ಹೆಮ್ಮೆ ಎನಿಸಿತು ಆದರೆ ಶ್ರೀಕೃಷ್ಣ ಸಾಕ್ಷಾತ್ ಪರಮೇಶ್ವರನೇ ನಿಜ ಆದರೆ ಅವನ ನಿಜ ರೂಪ ಅರಿಯಲಾರೆವು ಎಂದು ಪರಿತಪಿಸಿದರು. ಇದನ್ನರಿತ ಕೃಷ್ಣ, ಎಲ್ಲರಿಗೂ ಯಮುನಾ ನದಿಯಲ್ಲಿದ್ದ ಬ್ರಹ್ಮಕುಂಡವೆಂಬ ಮಡುವಿನಲ್ಲಿ ಮುಳುಗಿಬರುವಂತೆ ತಿಳಿಸಿದ, ಅದರಂತೆ ಅವರೆಲ್ಲಾ

ಮಾಡಲಾಗಿ ಅವರ ಕಣ್ಣಿಗೆ ವೈಕುಂಠ ಕಾಣಿಸಿತು, ಅವರ ಮನಸ್ಸು ತೃಪ್ತಿಯನ್ನು ಹೊಂದಿತು, ಶ್ರೀಕೃಷ್ಣನು ಪರದೈವವೆಂಬ ಅವರ ನಂಬಿಕೆ ಸ್ಥಿರವಾಯಿತು ಎಲ್ಲರೂ ಧನ್ಯರಾದರು.ಈ ಕಾರಣಕ್ಕೆ ಏಕಾದಶಿಯನ್ನು ವೈಕುಂಠಏಕಾದಶಿ ಎಂದು ಕರೆದಿರಬಹುದೆಂದು ಊಹಿಸಬಹುದು. ವೈಕುಂಠ ಏಕಾದಶಿ... ಸೂರ್ಯನು ಉತ್ತರಾಯಣಕ್ಕೆ ಬದಲಾಗುವ ಮೊದಲು ಬರುವ ಧನುರ್ಮಾಸದ ಶುದ್ಧ ಏಕಾದಶಿಯನ್ನೇ ವೈಕುಂಠ ಏಕಾದಶಿ ಅಥವಾ ಮುಕ್ಕೋಟಿ ಏಕಾದಶಿ ಎನ್ನುತ್ತಾರೆ. ಸೂರ್ಯನು ಧನುಸ್ಸುವಿನಲ್ಲಿ ಪ್ರವೇಶಿಸಿದ ಅನಂತರ ಮಕರ ಸಂಕ್ರಮಣದವರೆಗೆ ನಡೆಯುವ ಮಾರ್ಗ ಮಧ್ಯೆ ಮುಕ್ಕೋಟಿ ಏಕಾದಶಿ ಬರುತ್ತದೆ. ಈ ದಿನ ವೈಕುಂಠದ ಬಾಗಿಲು ತೆರೆದಿರುತ್ತದೆ ಎಂದು ವೈಷ್ಣವ ಆಲಯಗಳಲ್ಲಿ ಉತ್ತರ ದ್ವಾರದ ಬಳಿ ಮುಂಜಾನೆ ಭಗವಂತನ ದರ್ಶನಕ್ಕಾಗಿ ಕಾದಿರುತ್ತಾರೆ.ಈ ದಿನ ಮಹಾವಿಷ್ಣು ಗರುಡ ವಾಹನದ ಮೇಲೆ ಮೂರು ಕೋಟಿ ದೇವತೆಗಳೊಂದಿಗೆ ಭೂಲೋಕಕ್ಕೆ ಇಳಿದುಬಂದು ಭಕ್ತರಿಗೆ ದರ್ಶನ ನೀಡುತ್ತಾನೆ. ಆದಕಾರಣ ಇದಕ್ಕೆ ಮುಕ್ಕೋಟಿ ಏಕಾದಶಿ ಎಂಬ ಹೆಸರು ಬಂದಿದೆ. ಈ ಒಂದು ಏಕಾದಶಿ ಮೂರು ಕೋಟಿ ಏಕಾದಶಿಗಳಿಗೆ ಸಮವಾದ ಪವಿತ್ರತೆಯನ್ನು ಹೊಂದಿರುವ ಕಾರಣ ಇದನ್ನು ಮುಕ್ಕೋಟಿ ಏಕಾದಶಿ ಎನ್ನುತ್ತಾರೆ. ಮುಕ್ಕೋಟಿ ಏಕಾದಶಿ ದಿನ ಹಾಲಾಹಲ, ಅಮೃತ ಎರಡೂ ಹುಟ್ಟಿದವು. ಈ ದಿನವೇ ಶಿವನು ಹಾಲಾಹಲ ನುಂಗಿದ. ಮಹಾಭಾರತ ಯುದ್ಧದಲ್ಲಿ ಭಗವದ್ಗೀತೆಯನ್ನು ಕೃಷ್ಣನು ಅರ್ಜುನನಿಗೆ ಇದೇ ದಿನ ಉಪದೇಶಿಸಿದ ಎಂಬ ನಂಬಿಕೆ ಇದೆ. ಈ ದಿನ ವಿಷ್ಣು ದೇವಾಲಯಗಳಲ್ಲಿ ವಿಶೇಷ ಪೂಜೆಗಳು, ಹೋಮ, ಹವನ, ಜಪ, ತಪಗಳು ನಡೆಯುತ್ತವೆ. ವಿಷ್ಣು ಪುರಾಣದ ಪ್ರಕಾರ ಇಬ್ಬರು ರಾಕ್ಷಸರು ತನಗೆ ವಿರೋಧ-ವಾಗಿದ್ದರೂ, ವೈಕುಂಠ ಏಕಾದಶಿ ದಿನ ತನ್ನ ಬಾಗಿಲನ್ನು ತೆರೆದಿರುತ್ತಾನಂತೆ. ಈ ಕತೆಯನ್ನು ಕೇಳಿದವರಿಗೆ ಮೋಕ್ಷಪ್ರಾಪ್ತಿಯಾಗುವಂತೆ ವೈಕುಂಠದ ಬಾಗಿಲನ್ನು ತೆರೆದಿಡುವಂತೆ ಬೇಡಿಕೊಳ್ಳುತ್ತಾರೆ. ಆದುದರಿಂದ ಎಲ್ಲಾ ವಿಷ್ಣುದೇವಾಲಯದ ಬಾಗಿಲುಗಳನ್ನು ಆ ದಿನ ತೆಗೆದಿರುತ್ತಾರೆ. ಸಾಮಾನ್ಯ ದಿನಗಳಲ್ಲಿ ಉತ್ತರ ದ್ವಾರಗಳನ್ನು ಮುಚ್ಚಿರುತ್ತಾರೆ . ಆದರೆ, ವೈಕುಂಠ ಏಕಾದಶಿದಿನ ಬಾಗಿಲನ್ನು ತೆರೆದಿರುತ್ತಾರೆ. ವೈಕುಂಠ ಏಕಾದಶಿಯ ದಿನ ತಿರುಮಲೆಯ ದೇವಾಲಯದಲ್ಲಿರುವ ಉತ್ತರ ದ್ವಾರವನ್ನು ತೆರೆದಿರುತ್ತಾರೆ. ಪದ್ಮ ಪುರಾಣದ ಪ್ರಕಾರ ವಿಷ್ಣುವಿನಿಂದ ಬಂದ ಶಕ್ತಿಯಿಂದ ಮೊರಾ ಎಂಬ ರಾಕ್ಷಸನನ್ನು ಸಂಹರಿಸಿದ ದಿನವಂತೆ. ಮುಕ್ಕೋಟಿ ಏಕಾದಶಿ ದಿನದಂದು ಅಂದರೆ ಧನುರ್ಮಾಸ ಶುಕ್ಲ ಏಕಾದಶಿ ದಿನದಂದು ಉಪಾಸವಿರಬೇಕಂತೆ ಇದಕ್ಕೆ ಕಾರಣವೇನೆಂದರೆ -

ಉಮಾಪತಿ ನಾರದ ಸಂವಾದಾಂತರ್ಗತ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಪೌಷ ಶುಕ್ಲ ಪುತ್ರದೈಕಾದಶೀ ವ್ರತಂ ನಾಮ ತ್ರಿಚತ್ವಾರಿಂಶೋಽಧ್ಯಾಯಸ್ಸಮಾಪ್ತಃ॥ ಯಾವ ಮನುಷ್ಯರು ಒಂದೇ ಮನಸ್ಸಿನಿಂದ ಈ ಪುತ್ರದಾವ್ರತವನ್ನು ಮಾಡುತ್ತಾರೆಯೋ ಅವರು ಈ ಲೋಕದಲ್ಲಿ ಮಕ್ಕಳನ್ನು ಹೊಂದಿ ಸುಖದಿಂದ ಬಾಳಿ ಸತ್ತನಂತರ ಸ್ವರ್ಗವನ್ನು ಹೊಂದುತ್ತಾರೆ. ಈ ಕಥೆಯನ್ನು ಓದುವುದರಿಂದಲೂ, ಕೇಳುವುದರಿಂದಲೂ ಅಗ್ನಿಷ್ಟೋಮಯಾಗದ ಫಲವನ್ನು ಹೊಂದುತ್ತಾರೆ. ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದೊಳಗಿನ ಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಪುಷ್ಯ ಶುದ್ಧದ ಪುತ್ರದೈಕಾದಶಿಯೆಂಬ ವ್ರತಕಥನದಲ್ಲಿ ನಲವತ್ತಮೂರನೆಯ ಅಧ್ಯಾಯವು ಮುಗಿದುದು,

**ವೈಕುಂಠ ಏಕಾದಶಿಯ ಕಥೆ** – ಭಾಗವತೋತ್ತಮನಾದ ನಂದಗೋಪನು ಶ್ರೀಕೃಷ್ಣನ ಸಾನಿಧ್ಯದಲ್ಲಿ, ಏಕಾದಶಿಯ ಉಪವಾಸ ಹಾಗೂ ದ್ವಾದಶಿಯ ಪಾರಣೆಗಳನ್ನು ತಪ್ಪದೆ ಆಚರಿಸುತ್ತಿದ್ದನು.ಒಮ್ಮೆ ಏಕಾದಶಿವ್ರತ ಆಚರಿಸಿ, ಮರುದಿನ ದ್ವಾದಶಿ ಬಹು ಸ್ವಲ್ಪಕಾಲ ಮಾತ್ರ ಇದ್ದುದ್ದರಿಂದ ಬೆಳಗಿನ ಝಾವಕ್ಕೆ ಮೊದಲು ಯಮುನಾನದಿಯಲ್ಲಿ ಸ್ನಾನಕ್ಕಿಳಿದ. ಅದು ರಾಕ್ಷಸರ ಸಂಚಾರದ ಕಾಲವಾದ್ದರಿಂದ ವರುಣದೇವನ ಸೇವಕನಾದ ರಾಕ್ಷಸ, ನಂದಗೋಪನನ್ನು ವರುಣನ ಬಳಿಗೆ ಎಳೆದೊಯ್ದನು. ಇತ್ತ ನಂದನು ಎಷ್ಟು ಹೊತ್ತಾದರೂ ಸ್ನಾನಕ್ಕೆ ಹೋದವನು ಬಾರದಿರಲು, ಗೋಪಾಲಕುಲದವರೆಲ್ಲಾ ಬಲರಾಮಕೃಷ್ಣರಿಗೆ ಈ ಸುದ್ಧಿ ಮುಟ್ಟಿಸಿದರು.

ಸರ್ವಜ್ಞನಾದ ಶ್ರೀಕೃಷ್ಣ ಅವರಿಗೆಲ್ಲಾ ಅಭಯವಿತ್ತು ತಂದೆಯವರನ್ನು ಕರೆತರುವುದಾಗಿ ಹೇಳಿ, ವರುಣಲೋಕಕ್ಕೆ ಬಂದನು. ದೇವದೇವನಾದ ಶ್ರೀಕೃಷ್ಣನಿಗೆ ನಮಿಸಿದ ವರುಣ ತನ್ನ ಸೇವಕನಿಂದಾದ ಅಪರಾಧ ಮನ್ನಿಸಬೇಕೆಂದು ಪ್ರಾರ್ಥಿಸಿದ. ಶ್ರೀಕೃಷ್ಣ ವರುಣನನ್ನು ಆಶೀರ್ವದಿಸಿ ತಂದೆಯೊಡನೆ ಗೋಕುಲಕ್ಕೆ ಹಿಂದಿರುಗಿದನು. ನಂದಗೋಪನಿಗೆ ಪರಮಾನಂದವಾಯಿತು. ವರುಣನ ಲೋಕದ ವೈಭವ ಹಾಗೂ ತನ್ನ ಮಗನಾದ ಶ್ರೀಕೃಷ್ಣನಿಗೆ ಸಿಕ್ಕ ಭವ್ಯಸ್ವಾಗತ ಮುಂತಾದವುಗಳನ್ನು ಎಳೆಎಳೆಯಾಗಿ ಬಣ್ಣಿಸಲಾಗಿ ಗೋಪಾಲರಿಗೆಲ್ಲಾ ಹೆಮ್ಮೆ ಎನಿಸಿತು ಆದರೆ ಶ್ರೀಕೃಷ್ಣ ಸಾಕ್ಷಾತ್ ಪರಮೇಶ್ವರನೇ ನಿಜ ಆದರೆ ಅವನ ನಿಜ ರೂಪ ಅರಿಯಲಾರೆವು ಎಂದು ಪರಿತಪಿಸಿದರು. ಇದನ್ನರಿತ ಕೃಷ್ಣ, ಎಲ್ಲರಿಗೂ ಯಮುನಾ ನದಿಯಲ್ಲಿದ್ದ ಬ್ರಹ್ಮಕುಂಡವೆಂಬ ಮಡುವಿನಲ್ಲಿ ಮುಳುಗಿಬರುವಂತೆ ತಿಳಿಸಿದ, ಆದರಂತೆ ಅವರೆಲ್ಲಾ

ಮಾಡಲಾಗಿ ಅವರ ಕಣ್ಣಿಗೆ ವೈಕುಂಠ ಕಾಣಿಸಿತು, ಅವರ ಮನಸ್ಸು ತೃಪ್ತಿಯನ್ನು ಹೊಂದಿತು, ಶ್ರೀಕೃಷ್ಣನು ಪರದೈವವೆಂಬ ಅವರ ನಂಬಿಕೆ ಸ್ಥಿರವಾಯಿತು ಎಲ್ಲರೂ ಧನ್ಯರಾದರು.ಈ ಕಾರಣಕ್ಕೆ ಏಕಾದಶಿಯನ್ನು ವೈಕುಂಠಏಕಾದಶಿ ಎಂದು ಕರೆದಿರಬಹುದೆಂದು ಊಹಿಸಬಹುದು. ವೈಕುಂಠ ಏಕಾದಶಿ... ಸೂರ್ಯನು ಉತ್ತರಾಯಣಕ್ಕೆ ಬದಲಾಗುವ ಮೊದಲು ಬರುವ ಧನುರ್ಮಾಸದ ಶುದ್ಧ ಏಕಾದಶಿಯನ್ನೇ ವೈಕುಂಠ ಏಕಾದಶಿ ಅಥವಾ ಮುಕ್ಕೋಟಿ ಏಕಾದಶಿ ಎನ್ನುತ್ತಾರೆ. ಸೂರ್ಯನು ಧನುಸ್ಸುವಿನಲ್ಲಿ ಪ್ರವೇಶಿಸಿದ ಅನಂತರ ಮಕರ ಸಂಕ್ರಮಣದವರೆಗೆ ನಡೆಯುವ ಮಾರ್ಗ ಮಧ್ಯೆ ಮುಕ್ಕೋಟಿ ಏಕಾದಶಿ ಬರುತ್ತದೆ. ಈ ದಿನ ವೈಕುಂಠದ ಬಾಗಿಲು ತೆರೆದಿರುತ್ತದೆ ಎಂದು ವೈಷ್ಣವ ಆಲಯಗಳಲ್ಲಿ ಉತ್ತರ ದ್ವಾರದ ಬಳಿ ಮುಂಜಾನೆ ಭಗವಂತನ ದರ್ಶನಕ್ಕಾಗಿ ಕಾದಿರುತ್ತಾರೆ.ಈ ದಿನ ಮಹಾವಿಷ್ಣು ಗರುಡ ವಾಹನದ ಮೇಲೆ ಮೂರು ಕೋಟಿ ದೇವತೆಗಳೊಂದಿಗೆ ಭೂಲೋಕಕ್ಕೆ ಇಳಿದುಬಂದು ಭಕ್ತರಿಗೆ ದರ್ಶನ ನೀಡುತ್ತಾನೆ. ಆದಕಾರಣ ಇದಕ್ಕೆ ಮುಕ್ಕೋಟಿ ಏಕಾದಶಿ ಎಂಬ ಹೆಸರು ಬಂದಿದೆ. ಈ ಒಂದು ಏಕಾದಶಿ ಮೂರು ಕೋಟಿ ಏಕಾದಶಿಗಳಿಗೆ ಸಮವಾದ ಪವಿತ್ರತೆಯನ್ನು ಹೊಂದಿರುವ ಕಾರಣ ಇದನ್ನು ಮುಕ್ಕೋಟಿ ಏಕಾದಶಿ ಎನ್ನುತ್ತಾರೆ. ಮುಕ್ಕೋಟಿ ಏಕಾದಶಿ ದಿನ ಹಾಲಾಹಲ, ಅಮೃತ ಎರಡೂ ಹುಟ್ಟಿದವು. ಈ ದಿನವೇ ಶಿವನು ಹಾಲಾಹಲ ನುಂಗಿದ. ಮಹಾಭಾರತ ಯುದ್ಧದಲ್ಲಿ ಭಗವದ್ಗೀತೆಯನ್ನು ಕೃಷ್ಣನು ಅರ್ಜುನನಿಗೆ ಇದೇ ದಿನ ಉಪದೇಶಿಸಿದ ಎಂಬ ನಂಬಿಕೆ ಇದೆ. ಈ ದಿನ ವಿಷ್ಣು ದೇವಾಲಯಗಳಲ್ಲಿ ವಿಶೇಷ ಪೂಜೆಗಳು, ಹೋಮ, ಹವನ, ಜಪ, ತಪಗಳು ನಡೆಯುತ್ತವೆ. ವಿಷ್ಣು ಪುರಾಣದ ಪ್ರಕಾರ ಇಬ್ಬರು ರಾಕ್ಷಸರು ತನಗೆ ವಿರೋಧ-ವಾಗಿದ್ದರೂ, ವೈಕುಂಠ ಏಕಾದಶಿ ದಿನ ತನ್ನ ಬಾಗಿಲನ್ನು ತೆರೆದಿರುತ್ತಾನಂತೆ. ಈ ಕತೆಯನ್ನು ಕೇಳಿದವರಿಗೆ ಮೋಕ್ಷಪ್ರಾಪ್ತಿಯಾಗುವಂತೆ ವೈಕುಂಠದ ಬಾಗಿಲನ್ನು ತೆರೆದಿಡುವಂತೆ ಬೇಡಿಕೊಳ್ಳುತ್ತಾರೆ. ಆದುದರಿಂದ ಎಲ್ಲಾ ವಿಷ್ಣುದೇವಾಲಯದ ಬಾಗಿಲುಗಳನ್ನು ಆ ದಿನ ತೆಗೆದಿರುತ್ತಾರೆ. ಸಾಮಾನ್ಯ ದಿನಗಳಲ್ಲಿ ಉತ್ತರ ದ್ವಾರಗಳನ್ನು ಮುಚ್ಚಿರುತ್ತಾರೆ . ಆದರೆ, ವೈಕುಂಠ ಏಕಾದಶಿದಿನ ಬಾಗಿಲನ್ನು ತೆರೆದಿರುತ್ತಾರೆ. ವೈಕುಂಠ ಏಕಾದಶಿಯ ದಿನ ತಿರುಮಲೆಯ ದೇವಾಲಯದಲ್ಲಿರುವ ಉತ್ತರ ದ್ವಾರವನ್ನು ತೆರೆದಿರುತ್ತಾರೆ. ಪದ್ಮ ಪುರಾಣದ ಪ್ರಕಾರ ವಿಷ್ಣುವಿನಿಂದ ಬಂದ ಶಕ್ತಿಯಿಂದ ಮೊರಾ ಎಂಬ ರಾಕ್ಷಸನನ್ನು ಸಂಹರಿಸಿದ ದಿನವಂತೆ. ಮುಕ್ಕೋಟಿ ಏಕಾದಶಿ ದಿನದಂದು ಅಂದರೆ ಧನುರ್ಮಾಸ ಶುಕ್ಲ ಏಕಾದಶಿ ದಿನದಂದು ಉಪಾಸವಿರಬೇಕಂತೆ ಇದಕ್ಕೆ ಕಾರಣವೇನೆಂದರೆ -

ಮೊರಾ ಎಂಬ ರಾಕ್ಷಸನು ಅಂದು ಅಕ್ಕಿಯಲ್ಲಿ ಅಡಗಿ ಕುಳಿತಿರುತ್ತಾನಂತೆ ಆದುದರಿಂದ ಅಂದು ಅಕ್ಕಿಯಿಂದ ಮಾಡಿದ ಯಾವುದೇ ಪದಾರ್ಥವನ್ನು ತಿನ್ನಬಾರದು. ಮುಕ್ಕೋಟಿ ಏಕಾದಶಿ ಒಂದು ದಿನ ಉಪವಾಸವಿದ್ದರೆ ಮಿಕ್ಕ 23 ಏಕಾದಶಿಗಳಲ್ಲಿ ಉಪವಾಸ ವಿದ್ದಂತೆಯೇ ಎಂದು ವಿಷ್ಣು ಪುರಾಣದಲ್ಲಿ ಹೇಳಲಾಗಿದೆ. ಮೊರಾ ಎಂದರೆ ರಾಜಸಿಕ ಹಾಗೂ ತಾಮಸಿಕ ಗುಣಗಳಿಗೆ ಪ್ರತೀಕ. ಅವುಗಳನ್ನು ತಿನ್ನದೆ ಉಪವಾಸವಿರುವುದರ ಮೂಲಕ ಜಯಿಸುವುದರ ಮೂಲಕ ಮುಕ್ತಿಗೆ ಮಾರ್ಗ ದೊರೆಯುತ್ತದೆಯಂತೆ.

## ಶ್ರೀ ರಘೂತ್ತಮತೀರ್ಥರ ಸಂಕ್ಷಿಪ್ತ ಚರಿತ್ರೆ

ಶ್ರೀ ರಾಮಚಂದ್ರ ಭಟ್ಟ ತಂದೆ : ಶ್ರೀ ಸುಬ್ಬಾ ಭಟ್ಟ ತಾಯಿ : ಸಾಧ್ವಿ ಗಂಗಾಬಾಯಿ ಕಾಲ : ಕ್ರಿ ಶ 1557 - 1596 ಆಶ್ರಮ ಗುರುಗಳು : ಶ್ರೀ ರಘುವರ್ಯತೀರ್ಥರು. ಬಾಲ ಬ್ರಹ್ಮಚಾರಿಗಳಾದ ಶ್ರೀ ರಘೂತ್ತಮತೀರ್ಥರು ಆಶ್ರಮವನ್ನು ಸ್ವೀಕರಿಸಿದ ಬಳಿಕ ಗುರುಗಳಲ್ಲಿಯೇ ಅಧ್ಯಯನವನ್ನು ಕೆಲದಿನ ಮಾಡಿದರು. ಬಾಲ್ಯದಲ್ಲಿ ಶ್ರೀ ರಘೂತ್ತಮತೀರ್ಥರ ಮೇಧಾಶಕ್ತಿಯೂ, ಕಾವ್ಯ ಪಾಂಡಿತ್ಯವೂ, ಸತ್ಯಸಂಧತೆಯೂ ಲೋಕೋತ್ತರವಾಗಿದ್ದಿತು. ಆಶ್ರಮವಾದ ಹೊಸತರಲ್ಲಿ ಪ್ರಾತಃ ಸ್ನಾನ ಮಾಡಿ ತಮ್ಮ ಆನ್ಹೀಕ, ಜಪ, ತಪಗಳನ್ನು ಮುಗಿಸಿ ಶ್ರೀ ರಘುವರ್ಯತೀರ್ಥರು ಬಾಲ ಯತಿ ಶ್ರೀ ರಘೂತ್ತಮತೀರ್ಥರನ್ನು ಕರೆದು ನಿರ್ಮಾಲ್ಯ ತೀರ್ಥ, ನೈವೇದ್ಯಕ್ಕಿಟ್ಟ ಕೊಬ್ಬರಿ, ಕಲ್ಲುಸಕ್ಕರೆ ಮಂತ್ರಾಕ್ಷತೆ ಕೊಟ್ಟರು. ಆಗ ಶ್ರೀ ರಘೂತ್ತಮತೀರ್ಥರು ನಿರ್ಮಾಲ್ಯ ತೀರ್ಥ ತೆಗೆದುಕೊಂಡು ಗುರು ಪ್ರಸಾದವೆಂದು ಕೊಬ್ಬರಿ ಕಲ್ಲುಸಕ್ಕರೆಯನ್ನು ಬಾಯಲ್ಲಿ ಹಾಕಿಕೊಂಡು ತಮ್ಮ ಅಧ್ಯಯನವನ್ನು ಮುಂದುವರೆಸಿದರು. ಅಂದು ಮಧ್ಯಾಹ್ನ ಗುರುಗಳು ಶ್ರೀ ರಘೂತ್ತಮತೀರ್ಥರಿಗೆ ದೇವರ ಪೂಜಾ ಪದ್ಧತಿ ಪ್ರಕಾರಗಳನ್ನು ಚೆನ್ನಾಗಿ ತಿಳಿಸಿಕೊಡಬೇಕೆಂದು ಸಂಕಲ್ಪಿಸಿ ಇಂದು ನೀವೇ ದೇವರ ಪೂಜೆ ಮಾಡಬೇಕೆಂದು ಹೇಳಿದರು. ಆಗ ಸತ್ಯ ನಿಷ್ಠರಾದ ಶ್ರೀ ರಘೂತ್ತಮ ತೀರ್ಥರು ತಮ್ಮ ಕಾವ್ಯಮಯವಾದ ವಾಣಿಯಲ್ಲಿ ನಾನು ದೇವ ಪೂಜಾ ಮಾಡೋದಿಲ್ಲ ಕೊಬ್ಬರಿ ತಿಂದ ಪ್ರಯುಕ್ತ ಸರಸ ಸುಂದರವಾಗಿಯೇ ಹೇಳಿದರಂತೆ. ಶ್ರೀ ರಘೂತ್ತಮತೀರ್ಥರ ಸತ್ಯವಾದಿತ್ವ, ವೈರಾಗ್ಯಗಳಿಗೆ ಮೆಚ್ಚಿದ ಶ್ರೀ ರಘುವರ್ಯತೀರ್ಥರು ಹೃದಯ ತುಂಬಿ ಅನುಗ್ರಹ ಮಾಡಿದರು.

ಶ್ರೀ ರಘುವರ್ಯತೀರ್ಥರ ಪರಮಾನುಗ್ರಹ - ಶ್ರೀ ವರದಾಚಾರ್ಯರು ಸಾಧನ ದ್ವಾದಶಿಯಂದು ಶ್ರೀ ರಘೂತ್ತಮತೀರ್ಥರನ್ನು ಬಿಟ್ಟು ಪಾರಣೆಯನ್ನು ಮಾಡಲು ಉದ್ಯುಕ್ತರಾದುದನ್ನು ನೋಡಿ, ಪರಗೃಹವಾಸದಿಂದ ತಮ್ಮ ಗುರುಪೀಠಕ್ಕೆ ಅವಮಾನವಾದಂತಾಯಿತು ಎಂಬ ಈ ವಿಚಾರದಿಂದ ಚಿಂತಿಸುತ್ತಾ ಅವರು ಗುಡಿಯಲ್ಲಿ ವಿಶ್ರಮಿಸಿದರು. (ನಿರಶನ ವ್ರತದೊಂದಿಗೆ) ಆಗ ಶ್ರೀ ರಘೂತ್ತಮತೀರ್ಥರ ಸ್ವಪ್ನದಲ್ಲಿ ಬಂದು ಇನ್ನು ನೀವು ಆದ್ಯ ಆಚಾರ್ಯರಲ್ಲಿ ಓದುವುದನ್ನು ನಿಲ್ಲಿಸಿ ಪಾಠ ಹೇಳಲು ಪ್ರಾರಂಭಿಸಿ ಮತ್ತು ಸಂಚಾರ ಮಾಡುತ್ತಾ ಶಿಷ್ಯಸಂಪತ್ತು ಹೆಚ್ಚಿಸಿ ಎಂದು ಗುರುಗಳು ಆಜ್ಞೆ ಮಾಡಿದರು. ಮುಂದೆ ಶ್ರೀ ರಘುವರ್ಯರ ಪರಮಾನುಗ್ರಹದಿಂದ ಶ್ರೀ ರಘೂತ್ತಮತೀರ್ಥರು ಸುಧಾದಿ ಗ್ರಂಥಗಳನ್ನು ನಿರರ್ಗಳವಾಗಿ ಪಾಠ ಹೇಳಲಾರಂಭಿಸಿದರು. ಇದನ್ನು ಕೇಳಿ ತಿಳಿದ ಶ್ರೀ ವರದಾಚಾರ್ಯರು ನನ್ನ ಸಹಾಯವಿಲ್ಲದೆ ಶ್ರೀ ರಘೂತ್ತಮತೀರ್ಥರು ಹೇಗೆ ಪಾಠ ಹೇಳುವರು ಎಂದು ತಿಳಿಯಲು ಕೆಲವು ಜನ ತಮ್ಮ ಪ್ರೌಢ ಶಿಷ್ಯರನ್ನು ಶ್ರೀ ರಘೂತ್ತಮತೀರ್ಥರ ಬಳಿ ಕಳುಹಿಸಿದರು. ಆಗ ಶ್ರೀ ರಘೂತ್ತಮತೀರ್ಥರ ಋಗ್ಭಾಷ್ಯ, ಅನುವ್ಯಾಖ್ಯಾನ, ನ್ಯಾಯವಿವರಣ ಪಾಠಗಳು ನಡೆದಿದ್ದವು. ಅಂದಿನ ಪಾಠಗಳು ಆಗುವವರೆಗೂ ಕುಳಿತು ಕೇಳಿದ ಶ್ರೀ ವರದಾಚಾರ್ಯರ ಶಿಷ್ಯರು ಈ ಬಾಲ ಸಂನ್ಯಾಸಿಗಳ ಅದ್ಭುತ ಪಾಂಡಿತ್ಯವನ್ನು ನೋಡಿ ತಮ್ಮ ಗುರುಗಳು ಹೇಳದ ಎಷ್ಟೋ ವಿಷಯಗಳನ್ನು ಶ್ರೀ ರಘೂತ್ತಮತೀರ್ಥರು ಸುಲಲಿತವಾಗಿ ಹೇಳಿದ್ದನ್ನು ಕೇಳಿ ಈ ಎಲ್ಲಾ ವಿಷಯವನ್ನು ಶ್ರೀ ವರದಾಚಾರ್ಯರಲ್ಲಿ ತಿಳಿಸಿದಾಗ ಇದು ಶ್ರೀ ಸರ್ವಜ್ಞಾಚಾರ್ಯರ ಪೀಠ ಪ್ರಭಾವವೆಂದು ತಿಳಿದು ಸಾಷ್ಟಾಂಗ ನಮಸ್ಕಾರ ಹಾಕಿ ಕ್ಷಮಿಸಬೇಕೆಂದು ಪ್ರಾರ್ಥಿಸಿದರು. ಆಗ ಶ್ರೀ ರಘೂತ್ತಮತೀರ್ಥರು ಶ್ರೀ ವರದಾಚಾರ್ಯರ ತಪ್ಪನ್ನು ಕ್ಷಮಿಸಿ ಮರ್ಯಾದೆ ಮಾಡಿ ಕಳುಹಿಸಿದರು. ಮಾತ್ರವಲ್ಲ ಮುಂದೆ ತಮ್ಮ ಪೀಠದಲ್ಲಿ ಆದ್ಯ ಮನೆತನದವರಿಗೆ ಪ್ರಥಮ ತೀರ್ಥಪ್ರಧಾನದ ಅನುಗ್ರಹವನ್ನೂ ಮಾಡಿದರು. ಗುರುಗಳು ನೀಡಿದ ಸ್ವಪ್ನ ಸೂಚನೆಯಂತೆ ಶ್ರೀ ರಘೂತ್ತಮತೀರ್ಥರು । ಛತ್ರ, ಚಾಮರ, ಆನೆ, ಕುದುರೆ, ಮೊದಲಾದ ರಾಜ ಮರ್ಯಾದೆಯೊಂದಿಗೆ ಪರಿವಾರದೊಂದಿಗೆ ಸಂಸ್ಥಾನದ ರೀತಿಯಂತೆ ಮಠವನ್ನು ಬೆಳೆಯಿಸಿ ದೇಶ ದೇಶ ಸಂಚಾರ ಮಾಡಿ ಅನೇಕ ಪರವಾದಿ ನಿಗ್ರಹ ಮಾಡಿ, ವಿದ್ವಾಂಸರ ಪೋಷಣೆ, ದಾನ ಧರ್ಮಗಳನ್ನು ಮಾಡುತ್ತಾ ಸಮಾಜವನ್ನು ಪೋಷಿಸಿದರು.

**ಭಾವಬೋಧಕಾರರ- ಗ್ರಂಥಗಳು** - 1. ತತ್ತ್ವಪ್ರಕಾಶಿಕಾ ಭಾವಬೋಧ 2. ಬೃಹದಾರಣ್ಯಕೋಪನಿಷದ್ಭಾಷ್ಯ ಭಾವಬೋಧ, 3. ವಿಷ್ಣುತತ್ತ್ವನಿರ್ಣಯ ಟೀಕಾ ಭಾವಬೋಧ, 4. ಗೀತಾಭಾಷ್ಯಪ್ರಮೇಯದೀಪಿಕಾ ಭಾವಬೋಧ, 5. ಸನ್ನ್ಯಾಯವಿವೃತ್ತಿ ಭಾವಬೋಧ, 6. ಅನುವ್ಯಾಖ್ಯಾನ ನ್ಯಾಯಮಾಲಾ ಬ್ರಹ್ಮಸೂತ್ರ ಸಂಬಂಧ ಪ್ರದೀಪ, 7. ವಿವರಣೋದ್ಧಾರ, 8. ತಿಥಿತ್ರಯನಿರ್ಣಯ, 9. ಶ್ರವಣದ್ವಾದಶೀ ನಿರ್ಣಯ. ಶ್ರೀ ಜಯತೀರ್ಥರ ತತ್ತ್ವಪ್ರಕಾಶಿಕಾ, ತತ್ತ್ವನಿರ್ಣಯ, ಪ್ರಮೇಯದೀಪಿಕಾ ಮೊದಲಾದ ಟೀಕಾ ಗ್ರಂಥಗಳಿಗೆ ಶ್ರೀ ರಘೂತ್ತಮತೀರ್ಥರು ಬರೆದ ಭಾವಬೋಧ ಎಂಬ ಹೆಸರಿನ ಪ್ರೌಢ ಟಿಪ್ಪಣಿಗಳು ಶ್ರೀ ರಘೂತ್ತಮತೀರ್ಥರ ಅದ್ಭುತ ಶಾಸ್ತ್ರ ಪಾಂಡಿತ್ಯಕ್ಕೆ ಸಾಕ್ಷಿಯಾಗಿವೆ. ಸರ್ವೋತ್ಕೃಷ್ಟವಾದ ಈ ಭಾವಬೋಧ ಟಿಪ್ಪಣಿಗಳಿಂದಾಗಿ ಶ್ರೀ ರಘೂತ್ತಮತೀರ್ಥರು ಭಾವಬೋಧಕಾರರೆಂದೇ ಪ್ರಸಿದ್ಧರಾಗಿದ್ದಾರೆ. ಇವಲ್ಲದೇ, ಶ್ರೀ ರಘೂತ್ತಮತೀರ್ಥರು ಬೃಹತೀ ಸಹಸ್ರಕ್ಕೆ ಒಂದು ಭಾವಬೋಧ ಟೀಕೆ ಬರೆದು ವೇದೋಕ್ತಿಗಳ ನಿಜವಾದ ಭಾವ ಜನರಿಗೆ ಬೋಧವಾಗುವಂತೆ ಮಾಡಿದರು. ಶ್ರೀ ರಘೂತ್ತಮತೀರ್ಥರು ನ್ಯಾಯವಿವರಣಕ್ಕೆ ಬರೆದ ಬ್ರಹ್ಮಪ್ರಕಾಶಿಕಾ ಟಿಪ್ಪಣಿ ಶ್ರೀಮದಾಚಾರ್ಯರ ಅಮೋಘ ಸೇವೆಯಾಗಿದೆ. ಇದರಂತೆ ಅನುವ್ಯಾಖ್ಯಾನ ನ್ಯಾಯಮಾಲಾ ಎಂಬ ಪ್ರಬಂಧವು ಅನುವ್ಯಾಖ್ಯಾನ - ನ್ಯಾಯವಿವರಣಗಳಲ್ಲಿ ಶ್ರೀಮದಾಚಾರ್ಯರು ಹೇಳಿದ ಪೂರ್ವಪಕ್ಷಸಿದ್ಧಾಂತ ನ್ಯಾಯಗಳಿಗೆಲ್ಲಾ ಸೂತ್ರರೂಢತ್ವವು ಹೇಗೆ ಬರುವುದೆಂಬುದನ್ನು ಸಮಂಜಸವಾಗಿ ಪ್ರತಿಪಾದಿಸಿದ್ದಾರೆ ಅಂತೂ ದ್ವೈತ ಸಿದ್ಧಾಂತದ ವೇದಾಂತ ವೀಥಿಯಲ್ಲಿ ಭಾವಬೋಧ ಗ್ರಂಥಗಳು ಒಂದು ವಿಶಿಷ್ಟವ್ಯಾಖ್ಯಾ ಪ್ರಕ್ರಿಯೆಗೆ ಮೈಲುಗಲ್ಲುಗಳಾಗಿವೆ. ಈ ಭಾವಬೋಧ ಪದ್ಧತಿಗೆ ಶ್ರೀ ರಘೂತ್ತಮತೀರ್ಥರೇ ಸೀಮಾ ಪುರುಷರು. ಶಕ ಪುರುಷರು ಮತ್ತೂ ಮಹಾಪುರುಷರು. ಇಂಥಾ ಶ್ರೇಷ್ಠ ಕೃತಿಗಳನ್ನು ರಚಿಸಿ ಶ್ರೀಹರಿ ವಾಯುಗಳ ಪರಮಾನುಗ್ರಹಕ್ಕೆ ಪಾತ್ರರಾಗಿ ಪುಷ್ಯ ಶುದ್ಧ ಏಕಾದಶೀ (1596) ಶ್ರೀ ಹರಿಯ ಪುರವಾದ ವೈಕುಂಠಕ್ಕೆ ಪ್ರಯಾಣ ಮಾಡಿದರು.

ಶ್ರೀ ರಘೂತ್ತಮತೀರ್ಥರ ಸ್ತೋತ್ರ -ಗಂಭೀರಾಶಯಕುಂಭಸಂಭೃತವಚಹ ಸಂದರ್ಭಗರ್ಭೋಲ್ಲಸಟ್ಟೀಕಾಭಾವವಿಬೋಧನಾಯ ಜಗತಾಂ ಯಸ್ಯಾವತಾರೋಽಜನಿ। ತತ್ತಾದೃಕ್ಷದುರಂತಸಂತತತಪಃ ಸಂತಾನಸಂತೋಷಿತ-ಶ್ರೀಕಾಂತಂ ಸುಗುಣಂ ರಘೂತ್ತಮಗುರುಂ ವಂದೇ ಪರಂ ದೇಶಿಕಮ್ ॥೧॥

ಸಚ್ಛಾಸ್ತ್ರಾಮಲಭಾವಬೋಧಕಿರಣೈಃ ಸಂವರ್ಧಯನ್ ಮಧ್ವಸತ್ಸಿದ್ಧಾಂತಾಬ್ಧಿಮನಂತಶಿಷ್ಯಕುಮುದವ್ರಾತಂ ವಿಕಾಸಂ ನಯನ್ । ಉದ್ಭೂತೋ ರಘುವರ್ಯತೀರ್ಥಜಲಧೇಸ್ತಾಪತ್ರಯಂ ತ್ರಾಸಯನ್ ಯಸ್ತಂ ನೌಮಿ ರಘೂತ್ತಮಾಖ್ಯಶಶಿನಂ ಶ್ರೀವಿಷ್ಣುಪಾದಾಶ್ರಯಮ್ ॥೨॥ ಉದ್ಯನ್ಮಾರ್ತಾಂಡಸಂಕಾಶದಂಡಮಾಲಾಕಮಂಡಲೂನ್ । ಧರಂ ಕೌಪೀನಸೂತ್ರಂ ಚ ಸೀತಾರಾಘವಮಾನಸಮ್ ॥೩॥ ಶ್ರೀನಿವಾಸೇನ ವಂದ್ಯಾಂಘ್ರಿಂ ತುಲಸೀದಾಮಭೂಷಣಮ್ । ಧ್ಯಾಯೇದ್ರಘೂತ್ತಮಗುರುಂ ಸರ್ವಸೌಖ್ಯಪ್ರದಂ ನೃಣಾಮ್ ॥೪॥ ರಘೂತ್ತಮಗುರುಂ ನೌಮಿ ಶಾಂತ್ಯಾದಿಗುಣಮಂಡಿತಮ್ । ರಘೂತ್ತಮಪದ- ದ್ವಂದ್ವಕಂಜಭೃಂಗಾಯಿತಾಂತರಮ್ ॥೫॥ ರಘೂತ್ತಮಗುರುಂ ವಂದೇ ರಘೂತ್ತಮಪದಾರ್ಚಕಮ್ । ಗಾಂಭೀರ್ಯೇಣಾರ್ಥಬಾಹಲ್ಯಟೀಕಾತಾತ್ಪರ್ಯಬೋಧಕಮ್ ॥೬॥ ಭಾವಬೋಧಕೃತಂ ನೌಮಿ ಭಾವಭಾವಿತ ಭಾವುಕಮ್ । ಭಾವಭಾಜಂ ಭಾವಜಾದಿಪರೀಭಾವಪರಾಯಣಮ್ ॥೭॥ ಸನ್ನ್ಯಾಯವಿವೃತೇಷ್ಟೀಕಾಶೇಷಸಂಪೂರ್ಣಕಾರಿಣಮ್ । ಟೀಕಾಂ ದೃಷ್ಟ್ವಾ ಪೇಟಿಕಾನಾಂ ನಿಚಯಂ ಚ ಚಕಾರ ಯಃ । ಪ್ರಮೇಯಮಣಿಮಾಲಾನಾಂ ಸ್ಥಾಪನಾಯ ಮಹಾಮತಿಃ ॥೮॥ ಯಚ್ಛಿಷ್ಯಶಿಷ್ಯಶಿಷ್ಯಾದ್ಯಾಷ್ಟಿಪ್ಪಣ್ಯಾಚಾರ್ಯಸಂಜ್ಞಿತಾಃ । ತಮಲಂ ಭಾವಬೋಧಾರ್ಯಂ ಭೂಯೋ ಭೂಯೋ ನಮಾಮ್ಯಹಮ್ ॥೯॥ ಶುಕೇನ ಶಾಂತ್ಯಾದಿಷು ವಾಙ್ಮಯೇಷು ವ್ಯಾಸೇನ ಧೈರ್ಯೇಽಂಬುಧಿನೋಪಮೇಯಮ್। ಮನೋಜಜಿತ್ಯಾಂ ಮನಸಾಂ ಹಿ ಪತ್ಯಾ ರಘೂತ್ತಮಾಖ್ಯಂ ಸ್ವಗುರುಂ ನಮಾಮಿ ॥೧೦॥ ರಾಮ ರಾಮ ತವ ಪಾದಪಂಕಜಂ ಚಿಂತಯಾಮಿ ಭವಬಂಧಮುಕ್ತಯೇ । ವಂದಿತಂ ಸುರನರೇಂದ್ರಮೌಲಿಭಿರ್ಧ್ಯಾಯತೇ ಮನಸಿ ಯೋಗಿಭಿಃ ಸದಾ ॥೧೧॥ ಪಿನಾಕಿನೀರಸಂಜುಷ್ಟದೇಶೇ ವಾಸಮನೋರಮಮ್ । ಪಿನಾಕಿಪೂಜ್ಯ- ಶ್ರೀಮಧ್ವಶಾಸ್ತ್ರವಾರ್ಧಿನಿಶಾಕರಾನ್ ॥೧೨॥ ಪಂಚಕೈರ್ಭಾವ-ಬೋಧಾಖ್ಯೈರ್ಗ್ರಂಥೈಃ ಪಂಚಲಸನ್ಮುಖೈಃ । ತತ್ತ್ವವಿಜ್ಞಾಪಕೈಃ ಸ್ವಾನಾಮುಪಮೇಯಂ ಪಿನಾಕಿನಾ ॥೧೩॥ ಗಾಂಭೀರ್ಯೇ ಸವರದುರ್ವಾದಿಗಿರಿಪಕ್ಷವಿದಾರಣೇ । ವಿಷಯೇಷು ವಿರಾಗಿತ್ವೇ ಚೋಪಮೇಯಂ ಪಿನಾಕಿನಾ ॥೧೪॥ ಧರಣೇ ಭಗವನ್ಮೂರ್ತೇರ್ಭರಣೇ

ಭಕ್ತಸಂತತೇಃ। ವಿನಾ ವಿನಾ ಚೋಪಮೇಯಂ ಮೇಯಂ ತತ್ತ್ವಪ್ರಕಾಶನೇ ಪರಮಂ ಗುರುಮ್ ॥೧೫॥ ಗುರುತ್ವೇಽಖಿಲಲೋಕಾನಾಂ ಪ್ರದಾನೇಽಭೀಷ್ಟಸಂತತೇಃ। ಶಿಷ್ಯೇಭ್ಯಸ್ತತ್ತ್ವವಿಜ್ಞಾನಪ್ರದಾನೇ ಪರಮಂ ಗುರುಮ್ ॥೧೬॥ ಸದಾರರಾಮ-ಪಾದಾಬ್ಜಸದಾರತಿಸುಧಾಕರಮ್ । ಸದಾಽರಿಭೇದನೇ ವಿಷ್ಣುಗದಾರಿಸದೃಶಂ ಸದಾ ॥೧೭॥ ರಘುನಾಥಾಂಘ್ರಿಸದ್ಭಕ್ತ್ಯಾ ರಘುನಾಥಾನುಜಾಯಿತಮ್ । ರಘುನಾಥಾರ್ಯಪಾಣ್ಯುತ್ಥ-ರಘುವರ್ಯಕರೋದಿತಮ್ ॥೧೮॥ ವೇದೇಶಾರ್ಚಿತಪಾದಾಬ್ಜಂ ವೇದೇಶಾಂಘ್ರ್ಯಬ್ಜಪೂಜಕಮ್। ರಘೂತ್ತಮಗುರುಂ ವಂದೇ ರಘೂತ್ತಮಪದಾರ್ಚಕಮ್ ॥೧೯॥ ರಘೂತ್ತಮಗುರುಸ್ತೋತ್ರಸ್ಯಾಷ್ಟಕಂ ಯಃ ಪಠೇನ್ನರಃ । ರಘೂತ್ತಮಪ್ರಸಾದಾಚ್ಚ ಸ ಸರ್ವಾಭೀಷ್ಟಭಾಗ್ಭವೇತ್ ॥೨೦॥ ಯದ್ವೃಂದಾವನಪೂರ್ವತಃ ಫಲವತೀ ಧಾತ್ರೀ ಜಗತ್ಪಾವನೀ ಯಾಮ್ಯಾಯಾಂ ತು ಪಿನಾಕಿನೀ ಚಲದಲೋ ಮೂರ್ತಿತ್ರಯಾಧಿಷ್ಠಿತಃ। ವಾರುಣ್ಯಾಂ ದಿಶಿ ವಾಮತಃ ಪ್ರತಿಕೃತೌ। ಛಾಯಾ ಕೃತಾ ತಿಂತ್ರಿಣೀ ತದ್ವೃಂದಾವನಮಧ್ಯಗೋ ಗುರುವರೋ ಭೂಯಾತ್ ಸ ನಃ ಶ್ರೇಯಸೇ ॥೨೧॥ ಪ್ರಣವತ್ಕಾಮಧೇನುಂ ಚ ಭಜತ್ಸುರತರೂಪಮಮ್ । ಶ್ರೀಭಾವಬೋಧಕೃತ್ಪಾದಚಿಂತಾಮಣಿಮುಪಾಸ್ಮಹೇ ॥೨೨॥ ॥ ಇತಿ ಶ್ರೀರಘೂತ್ತಮಗುರುಸ್ತೋತ್ರಮ್ ॥

ಶ್ರೀರಘೂತ್ತಮತೀರ್ಥರ ಹಾಡು - ರಾಗ : ಪೂರ್ವಿ ತಾಳ : ಅಟ್ಟ - ನೋಡಿದೆ ಗುರುಗಳ ನೋಡಿದೆ ನೋಡಿದೆನು ಗುಗಳ ಪದಾಬ್ಜವ - ಪಾಡಿದೆನು ತನ್ಮಹಿಮೆಗಳ ನಾ ಬೇಡಿದೆನು ಮನದನಿಯೆ ವರಗಳ - ಈಡು ಇಲ್ಲದೆ ಕೊಡುವ ಪ್ರಭುಗಳ ಪಂಚಕೃಷ್ಣಾರಣ್ಯಕ್ಷೇತ್ರ ಪಿನಾಕಿನಿಯ ತೀರದಲಿ ನಿಂತು ಮಿಂಚುತಿಹ ಕಾಷಾಯದಂಡ ಕಮಂಡಲವ ಧರಿಸುತ್ತ ಧರೆಯೊಳು ಪಂಚಬಾಣನ ಪಿತನ ಗುಣಗಳ ಅಂಚೆಯದಿ ಪೊಗಳುತ್ತ ಹರುಷದಿ ಸಂಚಿತಾಗಾಮಿಗಳ ಕಳೆದು ಪ್ರಪಂಚದಲಿ ಮೆರೆವಂಥ ಗುರುಗಳ ಅಲವಬೋಧರ ಭಾಷ್ಯಟೀಕಾಭಾವವನು ಸುಜನರಿಗೆ ಬೋಧಿಸಿ ಕಲುಷಮತಗಿರಿಸಮುದಯಂಗಳ ಕುಲಿಶದಿಂದದಿ ಖಂಡಿಸುತಲಿ ಮೂಲರಾಮದಿಗ್ವಿಜಯರಾಮರ ಪಾದಕಮಲಕೆ ಭೃಂಗನೆನಿಸುತ ಶೀಲಭಕ್ತಿವಿರಕ್ತಿಮತಿಗಳ ಪಾಲಿಸುವ ಯತಿಮೌಳಿರತುನವ ಕಾಮಧೇನುಸುಕಲ್ಪತರು-ಚಿಂತಾಮಣಿಯವೋಲ್ ಕಾಮಿತಾರ್ಥವ ಪ್ರೇಮದಲಿ ಬೀರುತ್ತ

ಆಧ್ಯಾತ್ಮಾದಿತಾಪತ್ರಯುವ ಕಳೆಯುವ ಸ್ವಾಮಿಶ್ರೀಹರಿ ಶ್ರೀದವಿಠಲನ ದಾಸರಗ್ರಣಿಯೆನಿಸಿ ಮೆರೆಯುವ ನೇಮದಿಂದಲಿ ಶ್ರೀರಘೂತ್ತಮಮೌನಿವರ್ಯರ ಕರುಣ ಬಯಸುತ

**ಶ್ರೀ ರಘೂತ್ತಮತೀರ್ಥ ಶ್ರೀಪಾದಂಗಳವರ ವೃಂದಾವನ ಮಹಿಮೆ -** ಭಾವಬೋಧಕೃತಂ ಸೇವೇ ರಘೂತ್ತಮಮಹಾಗುರುಮ್ । ಯಚ್ಛಿಷ್ಯಶಿಷ್ಯಶಿಷ್ಯಾದ್ಯಾಃ ಟಿಪ್ಪಣ್ಯಾಚಾರ್ಯಸಂಜ್ಞಿತಾಃ ॥೧೮॥ ಶಕ ಪುರುಷರೆನಿಸಿದ ಇವರ ವೃಂದಾವನವು ದಕ್ಷಿಣ ಪಿನಾಕಿನೀ ನದಿಯ ದಂಡೆಯ ಮೇಲೆ ತಿರುಕೊಯಿಲೂರು ಎಂಬ ಪ್ರಸಿದ್ಧ ಕ್ಷೇತ್ರದಲ್ಲಿದೆ. ಕಲಿಯುಗದ ಕಲ್ಪವೃಕ್ಷದಂತಿರುವ ಶ್ರೀ ರಘೂತ್ತಮತೀರ್ಥರ ವೃಂದಾವನದ ಸೇವೆಯಿಂದ ಪ್ರತಿವರ್ಷವೂ ಸಾವಿರಾರು ಜನರು ತಮ್ಮ ಇಷ್ಟಾರ್ಥಗಳನ್ನು ಪಡೆದು ಧನ್ಯರಾಗುತ್ತಿದ್ದಾರೆ. ಅನೇಕ ಪ್ರಸಿದ್ಧ ವೈದ್ಯರು ಅಸಾಧ್ಯವೆಂದು ಕೈಬಿಟ್ಟ ಎಷ್ಟೋ ರೋಗಿಗಳು ಶ್ರೀ ರಘೂತ್ತಮತೀರ್ಥರ ಸೇವೆ, ವೃಂದಾವನ ಪ್ರದಕ್ಷಿಣೆ, ನಮಸ್ಕಾರ, ಮೃತ್ತಿಕಾ, ಪಾದೋದಕ ಸ್ವೀಕಾರಗಳಿಂದ ತಮ್ಮ ರೋಗ ಪರಿಹರಿಸಿಕೊಂಡದ್ದು ಅಸಂಖ್ಯ ಜನರ ಅನುಭವಕ್ಕೆ ಬಂದ ವಿಷಯವಾಗಿದೆ. ದನ ಕರುಗಳಿಗೆ ಬೇನೆ ಕಂಡು ಬಂದಾಗ ಶ್ರೀ ಶ್ರೀಗಳವರ ವೃಂದಾವನ ಪ್ರದಕ್ಷಿಣೆ, ತೀರ್ಥಪ್ರೋಕ್ಷಣೆ ಮಾಡಿಸುವುದರಿಂದ ಅವುಗಳಿಗೆ ಗುಣವಾಗುವ ಪ್ರಸಂಗಗಳು ಪ್ರಸಿದ್ಧವಾಗಿವೆ.

## ಪೌಷ ॥ ಶುದ್ಧ ॥ ದ್ವಾದಶೀ ॥

**ಕೂರ್ಮದ್ವಾದಶೀವ್ರತ -ದುರ್ವಾಸಮುನಿ –** ಪುಷ್ಯಮಾಸದಲ್ಲಿ ದೇವತೆಗಳು ಅಮೃತಕ್ಕಾಗಿ ಸಮುದ್ರವನ್ನು ಕಡೆದರು. ಆ ಸಂದರ್ಭದಲ್ಲಿ ದೇವನಾದ ಜನಾರ್ದನನು ತಾನೇ ಕೂರ್ಮರೂಪವನ್ನು ಧರಿಸಿದನು. ಕೂರ್ಮರೂಪಿಯಾದ ಅವನಿಗೆ ಪುಷ್ಯಮಾಸದ ಶುಕ್ಲಪಕ್ಷದ ದಶಮೀ ತಿಥಿಯು (ಆ ಅವತಾರಕ್ಕೆ) ಉತ್ತಮವಾದುದೆಂದು ಉದ್ದಿಷ್ಟವಾಗಿದ್ದಿತೆಂದು ಹೇಳಿದೆ. ಆ ದಶಮಿಯ ದಿನ ಹಿಂದಿನಂತೆ (ಮತ್ಸ್ಯದ್ವಾದಶೀ ವ್ರತದಂತೆಯೇ) ಸಂಕಲ್ಪಮಾಡಿ, ಏಕಾದಶಿಯ ದಿನ ಸ್ನಾನವೇ ಮೊದಲಾದ ನಿತ್ಯಕರ್ಮಗಳನ್ನು ಮಾಡಿ ಭಕ್ತಿಯಿಂದ ವಿಷ್ಣುವನ್ನು ಆರಾಧಿಸಬೇಕು. ಆರಾಧನೆಯಲ್ಲಿ ಕೂರ್ಮಾಯ ನಮಃ ಎಂದು ಮೊದಲು ದೇವನ ಪಾದಗಳನ್ನು ಪೂಜಿಸಿ, ನಾರಾಯಣಾಯ ನಮಃ ಎಂದು ಹರಿಯ ನಡುವನ್ನೂ, ಸಂಕರ್ಷಣಾಯ ನಮಃ

ಎಂದು ಉದರವನ್ನೂ, ವಿಶೋಕಾಯ ನಮಃ ಎಂದು ಹೃದಯವನ್ನೂ, ಭವಾಯ ನಮಃ ಎಂದು ಕಂಠವನ್ನೂ, ಸುಬಾಹವೇ ನಮಃ ಎಂದು ಭುಜಗಳನ್ನೂ, ವಿಶಾಲಾಯ ನಮಃ ಎಂದು ಶಿರಸ್ಸನ್ನೂ ಅರ್ಚಿಸಬೇಕು. ದೇವನಿಗೆ ನಮಸ್ಕಾರ ಎಂದು ಅವನ ನಾಮದಿಂದ ಸುಗಂಧಪುಷ್ಪಗಳಿಂದಲೂ, ಧೂಪಾದಿಗಳಿಂದಲೂ, ಭಕ್ಷ್ಯ ಭೋಜ್ಯಫಲಾದಿಯಾದ ಬಗೆ ಬಗೆಯ ನೈವೇದ್ಯಗಳಿಂದಲೂ ದೇವನನ್ನು ಚೆನ್ನಾಗಿ ಪೂಜಿಸಿ, ದೇವನೆದುರಿಗೆ ಪೂರ್ಣಕಲಶವನ್ನಿಟ್ಟು ಅದರೊಳಗೆ ರತ್ನವನ್ನು ಹಾಕಿ, ಬಿಳಿಯವಸ್ತ್ರಗಳಿಂದಲೂ, ಮಾಲೆಗಳಿಂದಲೂ ಹಿಂದಿನಂತೆ ಅಲಂಕರಿಸಿ, ತನ್ನ ಶಕ್ತಿಗನುಸಾರವಾಗಿ, ಚಿನ್ನದಿಂದ ದೇವನ ಕೂರ್ಮಮೂರ್ತಿಯನ್ನು ಮಂದರಪರ್ವತಸಹಿತನಾಗಿರುವಂತೆ ಮಾಡಿಸಿ, ತುಪ್ಪದಿಂದ ತುಂಬಿದ ತಾಮ್ರಪಾತ್ರೆಯಲ್ಲಿ ಆ ಮೂರ್ತಿಯನ್ನು ಸ್ಥಾಪಿಸಿ, ಪೂರ್ಣಕಲಶದ ಮೇಲೆ ಕೂರ್ಮಮೂರ್ತಿಸಹಿತವಾದ ಆ ತಾಮ್ರದ ಪಾತ್ರೆಯನ್ನು ಇಟ್ಟು, ಪೂಜಿಸಿ, ಹಿಂದಿನಂತೆಯೇ ಕುಟುಂಬಿಯಾದ ಬ್ರಾಹ್ಮಣನನ್ನು ಪೂಜಿಸಿ, ಅವನಿಗೆ ದಾನ ಮಾಡಬೇಕು. ಮಾರನೆಯ ದಿನ (ದ್ವಾದಶಿಯಲ್ಲಿ) ಯಥಾಶಕ್ತಿಯಾಗಿ ಬ್ರಾಹ್ಮಣರನ್ನು ದಕ್ಷಿಣೆಯೇ ಮೊದಲಾದವುಗಳಿಂದ ಪೂಜಿಸಿ, ದೇವದೇವನೂ, ಕೂರ್ಮರೂಪಿಯೂ ಆದ ನಾರಾಯಣನನ್ನು ಸಂತೋಷಪಡಿಸಬೇಕು. ಬಳಿಕ ಸೇವಕಸಮೂಹದೊಡನೆ ವ್ರತಿಯಾದವನು ಊಟಮಾಡಬೇಕು. ವಿಪ್ರ(ಸತ್ಯತಪ)ನೇ, ಭಕ್ತಿಯಿಂದ ಹೀಗೆ ಮಾಡಿದರೆ ಸಮಸ್ತಪಾಪವೂ ಪರಿಹಾರವಾಗುವುದು. ಇದರಲ್ಲಿ ವಿಚಾರ ಮಾಡಲೇಬಾರದು. ಈ ವ್ರತವನ್ನು ಮಾಡುವವನು ಸಂಸಾರಚಕ್ರವನ್ನು ಬಿಟ್ಟು ಶುದ್ಧವೂ ಪುರಾತನವೂ ಆದ ವಿಷ್ಣುಲೋಕವನ್ನು ಪಡೆಯುವನು. ಅನೇಕ ಜನ್ಮಾಂತರಗಳಲ್ಲಿ ಮಾಡಿದ ಪಾಪರಾಶಿಯು ಒಡನೆಯೇ ನಾಶವಾಗುವುದು. ಈ ಲೋಕದಲ್ಲಿ ಅವನು ಶ್ರೀಮಂತನೂ, ಸತ್ಯಧರ್ಮವುಳ್ಳವನೂ ಆಗುವನು. ಅಲ್ಲದೇ ಹಿಂದೆ ಹೇಳಿದ ಫಲವೆಲ್ಲವನ್ನೂ ಪಡೆಯುವನು.

ಕೂರ್ಮಪುರಾಣದಲ್ಲಿ ಕೂರ್ಮದ್ವಾದಶೀವ್ರತದ ವಿವರಣೆ ನೀಡುವ ೪೦ನೆಯ ಅಧ್ಯಾಯವು ಸಮಾಪ್ತವಾಯಿತು.

**ಶ್ರೀಸುರೇಂದ್ರತೀರ್ಥರ ಆರಾಧನೆ** - ಪೂರ್ವಾಶ್ರಮನಾಮ ಶ್ರೀವೇಂಕಟಕೃಷ್ಣಾಚಾರ್ಯರು. ಸನ್ಯಾಸ ಸ್ವೀಕಾರ 1504. ವೃಂದಾವನ ಪ್ರವೇಶ 1575 ಪುಷ್ಯಶುದ್ಧ ದ್ವಾದಶೀ. ಗುರುಗಳು ಶ್ರೀರಘುನಂದನತೀರ್ಥರು, ಪೀಠ ಆಳಿದ ಅವಧಿ 70 ವರ್ಷಗಳು, ವೃಂದಾವನ ಸ್ಥಳ ಮಧುರೈ.

ಯಶ್ಚಕಾರೋಪವಾಸೇನ ತ್ರಿವಾರಂ ಭೂಪ್ರದಕ್ಷಿಣಮ್ ।
ತಸ್ಮೈ ನಮೋ ಯತೀಂದ್ರಾಯ ಶ್ರೀ ಸುರೇಂದ್ರ ತಪಸ್ವಿನೇ ॥

ಮೂರು ಬಾರಿ ನಿರಶನ ವ್ರತದಿಂದ ಭಾರತದ ಸಕಲ ತೀರ್ಥಕ್ಷೇತ್ರ ಯಾತ್ರೆ ಮಾಡಿದ ಮಹಾ ತಪಸ್ವಿಗಳಾದ ಶ್ರೀ ಸುರೇಂದ್ರತೀರ್ಥರಿಗೆ ನಮಸ್ಕಾರವು ಎಂಬ ಶ್ರೀ ವಿಜಯೀಂದ್ರತೀರ್ಥವಿರಚಿತ ಚರಮ ಶ್ಲೋಕದಿಂದ ಪ್ರತಿಪಾದ್ಯರಾದ ಈ ಮಹಾನುಭಾವರು ಸಾಕ್ಷಾತ್ ಹಂಸನಾಮಕ ಪರಮಾತ್ಮನಿಂದ ಅವಿಚ್ಛಿನ್ನವಾಗಿ ನಡೆದು ಬಂದ ಸತ್ಪರಂಪರೆಯಾದ ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲ ಮಹಾ ಸಂಸ್ಥಾನಾಧಿಪತಿಗಳೂ; ಜ್ಞಾನಿನಾಯಕರೂ; ಮಾನಸಪೂಜಾ ಧುರಂಧರರೂ ಆಗಿದ್ದಾರೆ. ಶ್ರೀಮದಾಚಾರ್ಯರ ಮೂಲ ಪೀಠದಲ್ಲಿ 98 ವರ್ಷಗಳ ಸಾರ್ಥಕ ಜೀವನ ನಡೆಸಿ ಲೋಕ ಕಲ್ಯಾಣ ಮಾಡಿದ ಯತಿಸಾರ್ವಭೌಮರು ಶ್ರೀ ಸುರೇಂದ್ರತೀರ್ಥರು.

## ಪೌಷ ॥ ಶುದ್ಧ ॥ ತ್ರಯೋದಶೀ ॥

ಪೌಷ ಮಾಸದ ಶುಕ್ಲಪಕ್ಷದ ತ್ರಯೋದಶಿಯ ದಿವಸ ತುಪ್ಪವನ್ನು ಪಾತ್ರೆಯಲ್ಲಿ ತುಂಬಿ ದಾನವನ್ನು ಮಾಡಬೇಕು. ಇದರಿಂದ ಆಯುಷ್ಯವು ಅಭಿವೃದ್ಧಿಯಾಗುತ್ತದೆ. ಇಷ್ಟಾರ್ಥವು ಸಿದ್ಧವಾಗುತ್ತದೆ.

## ಪೌಷ ॥ ಶುದ್ಧ ॥ ಚತುರ್ದಶೀ ॥

ಶಾಕಂಬರಿಗೆ ಸರ್ವಶಾಕವನ್ನು ನಿವೇದನೆ ಮಾಡಬೇಕು. ಇದರಿಂದ ಸೌಭಾಗ್ಯವು ಅಭಿವೃದ್ಧಿಯಾಗುತ್ತದೆ. ಇದೇ ಮಾಸದ ಶುಕ್ಲಪಕ್ಷದ ಅಷ್ಟಮಿಯ ದಿವಸ ದುರ್ಗೆಗೆ ಉತ್ಸವವನ್ನು ಪ್ರಾರಂಭ ಮಾಡಬೇಕು. ಚತುರ್ದಶಿಯ ದಿವಸ ದುರ್ಗೆಗೆ ಸರ್ವಸಮರ್ಪಣೆಯನ್ನು ಮಾಡಬೇಕು.

## ಪೌಷ ॥ ಶುದ್ಧ ॥ ಹುಣ್ಣಿಮೆ ॥

**ಮಾಘಸ್ನಾನ –** ಪುಷ್ಯ ಶುಕ್ಲ ಏಕಾದಶಿಯಾಗಲಿ, ಪೂರ್ಣಿಮಾ ಆಗಲಿ, ಮಕರ ಸಂಕ್ರಾಂತಿಯನ್ನು ಆರಂಭಿಸಿಯಾಗಲೀ ಒಂದು ತಿಂಗಳ ಕಾಲ ಪ್ರಾತಃಸ್ನಾನವನ್ನು ಮಾಡಬೇಕು. ಅರುಣೋದಯವನ್ನು ಆರಂಭಿಸಿ ಪ್ರಾತಃಕಾಲದವರೆಗೂ ಸ್ನಾನಕಾಲ. ನಕ್ಷತ್ರವಿದ್ದಾಗ ಉತ್ತಮ, ನಕ್ಷತ್ರವು ಕಾಲವಾಗಿ ಸೂರ್ಯ ಉದಯದ ಮುಂಚೆ ಮಧ್ಯಮ, ಸೂರ್ಯೋದಯಾನಂತರ ಎರಡು ಘಳಿಗೆವರೆಗೆ ಅಧಮ. ಮನೆಯಲ್ಲಿಯೇ ಬಿಸಿನೀರಿನಿಂದ ಸ್ನಾನ ಮಾಡಿದರು ಆರು ವರ್ಷ ಉಪವಾಸವಿದ್ದ ಫಲವು ಬರುತ್ತದೆ. ಬಾವಿಯಲ್ಲಿ ಸ್ನಾನ ಮಾಡಿದರೆ ಹನ್ನೆರದು ವರ್ಷದ ಫಲ, ಕೆರೆಯಲ್ಲಿ ಇದರ ಎರಡು ಪಟ್ಟು ಫಲ, ನದಿಯಲ್ಲಿ ನಾಲ್ಕು ಪಟ್ಟು, ಮಹಾನದಿಯಲ್ಲಿ ಎಂಟು ಪಟ್ಟು, ಸಂಗಮದಲ್ಲಿ ಅದರ ನಾಲ್ಕು ಪಟ್ಟು ಫಲ, ಗಂಗೆಯಲ್ಲಿ ಸಾವಿರಪಾಲು ಹೆಚ್ಚು ಫಲ; ಪ್ರಯಾಗದಲ್ಲಿ, ಅದರ ಸಮತಟ್ಟು ಫಲ. ಎಲ್ಲೇ ಸ್ನಾನ ಮಾಡಿದರೂ ಪ್ರಯಾಗ ಸ್ಮರಣೆಯನ್ನು ಮಾಡಬೇಕು. ಕಡೆಗೆ 'ಪ್ರಯಾಗ ಮಾಧವ, ಪ್ರಯಾಗ ಮಾಧವ' ಎಂದು ಕೂಗಿದರೂ ಸಾಕು; ಯಾಗ ಮಾಡಿದ ಫಲವು ಬರುತ್ತದೆ. ಒಂದು ತಿಂಗಳೂ ಸ್ನಾನ ಮಾಡಲು ಶಕ್ತಿ ಇಲ್ಲದಿದ್ದರೆ, ಮಕರಸಂಕ್ರಾಂತಿ, ರಥಸಪ್ತಮೀ, ಮಾಘ ಹುಣ್ಣಿಮೆ ಈ ಮೂರು ದಿವಸವಾದರೂ ಸ್ನಾನ ಮಾಡಬೇಕು. ಅಥವಾ ಕಡೆಯ ಮೂರು ದಿನವಾದರೂ ಸ್ನಾನ ಮಾಡಬೇಕು. ಹೀಗೆ ಮಾಡಿದರೆ ಬ್ರಹ್ಮಹತ್ಯಾದಿ ಪಾಪಗಳು ಪರಿಹಾರವಾಗುತ್ತದೆ. ಇಲ್ಲದಿದ್ದರೆ ಬ್ರಹ್ಮಹತ್ಯಾದಿ ಪಾಪಗಳು ಬರುತ್ತವೆ.

**ಸ್ನಾನಮಂತ್ರ –** 'ದುಃಖದಾರಿದ್ರ್ಯನಾಶಾಯ ಶ್ರೀವಿಷ್ಣೋಸ್ತೋಷಣಾಯ ಚ । ಪ್ರಾತಃಸ್ನಾನಂ ಕರೋಮ್ಯದ್ಯ ಮಾಘೇ ಪಾಪ ವಿನಾಶನಮ್ ॥ ಮಕರಸ್ಥೇ ಕರೌ ಮಾಘೇ ಗೋವಿಂದಾಚ್ಯುತ ಮಾಧವ । ಸ್ನಾನೇನಾನೇನ ಮೇದೇವ ಯಥೋಕ್ತಫಲದೋ ಭವ ॥'

**ಅರ್ಘ್ಯಮಂತ್ರ –** 'ಸವಿತ್ರೇ ಪ್ರಸವಿತ್ರೇ ಚ ಪರಂಧಾಮ ಜಲೇ ಮಮ ।
ತ್ವತ್ತೇಜಿಸಾ ಪರಿಭ್ರಷ್ಟಂ ಪಾತಂ ಯಾತು ಸಹಸ್ರಧಾ ॥'

**ಮಾಘ ಸ್ನಾನ ಸಂಕಲ್ಪ -** ಪುಷ್ಯ ಮಾಸದ ದಶಮಿ ಅಥವಾ ಪೂರ್ಣಿಮೆಯಂದು ಮಾಘಸ್ನಾನವು ಪ್ರಾರಂಭವಾಗುತ್ತದೆ. ಮಾಘ ಮಾಸದ ದಶಮಿ ಅಥವಾ ಪೂರ್ಣಿಮಾದವರೆಗೆ (೧)ಒಂದುತಿಂಗಳ ಪರ್ಯಂತವಾಗಿ ಅರುಣೋದಯ-

ಕಾಲದಲ್ಲಿ ಅಥವಾ ಪ್ರಾತಕ್ಕಾಲದಲ್ಲಿ, ನದ್ಯಾದಿಗಳಲ್ಲಿ ಸ್ನಾನ ಮಾಡಬೇಕು. ಜಲಾಭಿಮಾನಿ ದೇವತೆಗಳು ನಾವು ಸೂರ್ಯನು ಸ್ವಲ್ಪ ಉದಯಿಸಿದಾಗ ಸ್ನಾನ ಮಾಡುವ ಯಾವ ಬ್ರಹ್ಮಘ್ನನನ್ನು, ಸುರಾಪಾನೀಯನನ್ನು ಪವಿತ್ರ ಮಾಡೋಣವೆಂದು ಕೂಗುತ್ತಿರುತ್ತಾರೆ.

**ಸ್ನಾನ ಕಾಲ** – ನಕ್ಷತ್ರ ಇರುವಾಗಲೇ ಮಾಡುವ ಸ್ನಾನ ಉತ್ತಮ, ನಕ್ಷತ್ರ ಕಾಣದಿರುವಾಗ ಮಾಡುವ ಸ್ನಾನ ಮಧ್ಯಮ, ಸೂರ್ಯೋದಯದ ನಂತರ ಮಾಡುವ ಸ್ನಾನ ಕನಿಷ್ಟವಾದುದು.

**ಸ್ನಾನಾಧಿಕಾರಿಗಳು** – ಬ್ರಹ್ಮಚಾರಿಗಳು, ಗೃಹಸ್ತರು, ವಾನಪ್ರಸ್ಥರು, ಭಿಕ್ಷುಕರು, ಬಾಲ ವೃದ್ಧ ಯುವಕರು, ನಾರಿ-ನಪುಂಸಕರೂ ಮಾಘ ಸ್ನಾನವನ್ನು ಮಾಡಬೇಕು.

**ಫಲ** – ಮಾಘ ಮಾಸದಲ್ಲಿ ಮನೆಯ ಹೊರಗೆ ಎಲ್ಲಿನಿರಿದೆಯೋ ಅದೆಲ್ಲವೂ ಗಂಗಾಜಲಕ್ಕೆ ಸಮಾನವಾಗಿರುತ್ತದೆ. ಪ್ರಯಾಗ, ನೈಮಿಷಾರಣ್ಯ ಮುಂತಾದ ಕ್ಷೇತ್ರಗಳಲ್ಲಿಮಾಡಿದ ಸ್ನಾನ ಹೆಚ್ಚಿನ ವಿಶೇಷ ಫಲವನ್ನು ಕೊಡುತ್ತದೆ. ಮಾಘಸ್ನಾನವೇ ಅತ್ಯಂತ ಪುಣ್ಯಸಂಪಾದಕವಾಗಿದೆ. ಅದರಲ್ಲೂ ಮಕರದಲ್ಲಿ ರವಿಯು ಪ್ರವೇಶಮಾಡಿದ್ದರೆ ಸಾವಿರಪಟ್ಟು ಫಲವು ಗಂಗಾಸ್ನಾನ ಮಾತ್ರದಿಂದ ಪ್ರಾಪ್ತವಾಗುವುದು. ಮಾಘ ಮಾಸದಲ್ಲಿ ಮಹಾನದಿ ಸಂಗಮದಲ್ಲಿ ಸ್ನಾನ ಮಾಡಿದರೆ ಅನಂತ ಫಲ. ಕೇವಲ ಗಂಗಾದಿ ಮಹಾನದಿಗಳಲ್ಲಿ ಸ್ನಾನ ಮಾಡಿದರೆ ಪುಣ್ಯ ಫಲವು ಕಡಿಮೆಯಾಗುತ್ತಾ ಬರುತ್ತದೆ. ನದಿ, ಸರೋವರಗಳಲ್ಲಿ ಸ್ನಾನ ಮಾಡಬಹುದು. ಇವು ಇಲ್ಲಿದಿದ್ದಾಗ ಬಾವಿಯಲ್ಲಾದರೂ ಸ್ನಾನ ಮಾಡಿದರೆ ೧೨ ವರ್ಷದ ಸ್ನಾನದ ಫಲವು ದೊರೆಯುತ್ತದೆ. ಬಾವಿಯೂ ಇಲ್ಲದಿದ್ದರೆ ಮಾಘ ಮಾಸದಂದು ಸಾಯಂಕಾಲ ಹೊಸದಾದ ಕುಂಭದಲ್ಲಿ ನೀರು ತುಂಬಿಸಿ ಹೊರಗೆ ಗಾಳಿಗೆ ಸಂಪರ್ಕ ಬರುವಂತೆ ಇಡಬೇಕು. ನಂತರ ಬೆಳಿಗ್ಗೆ ಆ ನೀರಿನಿಂದ ಸ್ನಾನ ಮಾಡಿದರೆ ಗಂಗಾ ಸ್ನಾನಕ್ಕೆ ಸಮವೆಂದು ಶಾಸ್ತ್ರವು ಹೇಳುತ್ತದೆ. ಯಾವುದನ್ನು ಸ್ವರ್ಗಲೋಕದಲ್ಲಿ ಅಮೃತವೆಂದು ಕರೆಯುತ್ತಾರೋ, ಆ ಅಮೃತವು ಭೂಮಿಯಲ್ಲಿ ಗಂಗಾದಿ ನದಿಗಳಾಗಿ ಹುಟ್ಟಿವೆ. ಆದ್ದರಿಂದ ಬ್ರಹ್ಮರುದ್ರಾದಿಗಳೂ ಕೂಡ ಮಾಘ ಮಾಸದಲ್ಲಿ ಪ್ರಯಾಗಾದಿ ಪುಣ್ಯ ಕ್ಷೇತ್ರಗಳಲ್ಲಿ ನದಿ ಸ್ನಾನ ಮಾಡಲು ಬರುತ್ತಾರೆ. ಮಾಘ ಮಾಸದಲ್ಲಿ ತಣ್ಣೀರಿನಲ್ಲಿ

ಸ್ನಾನ ಮಾಡಿದರೆ ಬಿಸಿ ನೀರಿನಲ್ಲಿ ಸ್ನಾನ ಮಾಡಿದಕ್ಕಿಂತಲೂ ಎರಡು ಪಟ್ಟು ಅಧಿಕ ಫಲ ದೊರೆಯುತ್ತದೆ. ಬಾವಿ ಮುಂತಾದವುಗಳಲ್ಲಿ ಹೊರಗೆ ಸ್ನಾನ ಮಾಡಿದರೆ ೧೨ ವರ್ಷದ ಫಲವು ಬರುತ್ತದೆ. ಕೆರೆಯಲ್ಲಿ ಸ್ನಾನ ಮಾಡಿದರೆ ಅದರ ಎರಡರಷ್ಟು ಅಧಿಕ ಫಲ ಬರುತ್ತದೆ. ನದಿಯಲ್ಲಿ ಮಾಡಿದರೆ ನಾಲ್ಕರಷ್ಟು, ಸರೋವರದಲ್ಲಿ ೧೦ ರಷ್ಟು, ಮಹಾನದಿಗಳಲ್ಲಿ ೨೦೦ ರಷ್ಟು ಪುಣ್ಯವು ಬರುತ್ತದೆ. ಗಂಗಾ ಸ್ನಾನ ಮಾಡಿದರೆ ಸಾವಿರದಷ್ಟು ಫಲವು ಬರುತ್ತದೆ. ಒಂದು ತಿಂಗಳು ಪೂರ್ತಿ ಮಾಘಸ್ನಾನವನ್ನು ಗಂಗೆಯಲ್ಲಿ ಮಾಡಿದರೆ ಅವರು ನಾಲ್ಕು ಯುಗಗಳ ಪರ್ಯಂತ ಸ್ವರ್ಗದಿಂದ ಭೂಮಿಗೆ ಬರುವುದಿಲ್ಲ. ಮಾಘ ಮಾಸದಲ್ಲಿ ಗಂಗಾ ಯಮುನಾ ಸಂಗಮವಾದ ಪ್ರಯಾಗದಲ್ಲಿ ಸ್ನಾನ ಮಾಡಿದರೆ ಅವನಿಗೆ ಮತ್ತೆ ಗರ್ಭವಾಸದ ದುಃಖವು ಪ್ರಾಪ್ತಿಯಾಗುವುದಿಲ್ಲ. ಗಂಗಾ ಯಮುನೆಯ ನೀರನ್ನು ಬ್ರಹ್ಮದೇವರು ಪಾಪ ರಾಶಿಗಳೆಂಬ ಪಶುಗಳಿಗೆ ವಧಾ ಸ್ನಾನಕ್ಕಾಗಿ ಸೃಷ್ಟಿ ಮಾಡಿದನು.

**ಮಾಘ ಸ್ನಾನ ಸಂಕಲ್ಪ** - ಮಾಘಮಾಸಮಿಮಂ ಪೂರ್ಣಂ ಸ್ನಾಸ್ಯೇಹಂ ದೇವ ಮಾಧವ। ತೀರ್ಥಸ್ಯಾಸ್ಯ ಜಲೇ ನಿತ್ಯಮ್ .. ಈ ರೀತಿಯಾಗಿ ಆರಂಭದಲ್ಲಿ ದಶಮಿ ದಿನದಂದು ವಿಧಿಪೂರ್ವಕವಾಗಿ, ಮಾನಸಿಕವಾಗಿ, ಮಾಧವನೇ, ಮಾಘಮಾಸಪೂರ್ತಿ ಈ ತೀರ್ಥಜಲದಲ್ಲಿ ಸ್ನಾನ ಮಾಡುವೆನು ಎಂದು ಸಂಕಲ್ಪಿಸಬೇಕು.

ಆಚಮ್ಯ......, ಪ್ರಾಣಾಯಾಮ್ಯ....., ಏವಂಗುಣ ವಿಶಿಷ್ಠಾಯಾಂ, ಶುಭತಿಥೌ ಶ್ರೀಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಮಾಸ ನಿಯಾಮಕ ಮಾಧವಪ್ರೇರಣಯಾ ಶ್ರೀ ಮಾಧವ ಪ್ರಿತ್ಯರ್ಥಂ, ಮಾಘಸ್ನಾನಮಹಂ ಕರಿಷ್ಯೇ.

**ಪ್ರಾರ್ಥನಾ** - ಮಕರಸ್ಥೇ ರವೌ ಮಾಘೇ ಗೋವಿಂದಾಚ್ಯುತಮಾಧವ। ಸ್ನಾನೇನಾನೇನ ಮೇ ದೇವ ಯಥೋಕ್ತಫಲದೋ ಭವ॥ ಕೃಷ್ಣಾಚ್ಯುತ ನಿಮಜ್ಜಾಮಿ ಪ್ರಭಾತೇಸ್ಮಿನ್ ಶುಭೋದಕೇ। ಅನೇನ ಮಾಘಸ್ನಾನೇನ ಸುಪ್ರೀತೋ ಮಾಂ ಸಮುದ್ಧರ॥ ಜಲದಲ್ಲಿ ಮುಳುಗಿ ಸ್ನಾನ ಮಾಡಿ ಮೃತ್ತಿಕೆಯನ್ನು ಧರಿಸಿ ಪುನ ಮುಳುಗಿ ನಂತರ ಅರ್ಘ್ಯವನ್ನು ಕೊಡಬೇಕು.

**ಮಾಧವನಿಗೆ ಅರ್ಘ್ಯ** - ತಪಸ್ಯರ್ಕೋದಯೇ ನದ್ಯಾಂ ಸ್ನಾತೋಹಂ ವಿಧಿ

ಪೂರ್ವಕಂ । ಮಾಧವಾಯ ದದಾಮೀದಮರ್ಘ್ಯಂ ಸಮ್ಯಕ್ ಪ್ರಸೀದತು ॥ ಮಾಧವಾಯ ನಮಃ ಇದಮರ್ಘ್ಯಂ।

**ಸೂರ್ಯನಿಗೆ ಅರ್ಘ್ಯ** – ಸವಿತ್ರೇ ಪ್ರಸವಿತ್ರೇ ಚ ಪರಂ ಧಾಮ್ನೇ ನಮೋಸ್ತುತೇ। ತ್ವತ್ತೇಜಸಾ ಪರಿಭ್ರಷ್ಟಂ ಪಾಪಂ ಯಾತು ಸಹಸ್ರಧಾ ॥ ಸವಿತ್ರೇ ನಮಃ ಇದಮರ್ಘ್ಯಂ ದಿವಾಕರ ಜಗನ್ನಾಥ ಪ್ರಭಾಕರ ನಮೋಸ್ತುತೇ । ಪರಿಪೂರ್ಣಂ ಕುರುಷ್ವೇದಂ ಮಾಘಸ್ನಾನಂ ಮಯಾ ಕೃತಂ ॥

ಇಂದು ಮಾಘಮಾಸ ಸ್ನಾನವನ್ನು ಪ್ರಾರಂಭ ಮಾಡಬೇಕು. ಮನ್ವಾದಿಯೂ ಕೂಡ ಇಂದೇ ಆಗಿರುತ್ತದೆ. ಒಂದು ತಿಂಗಳು ಅರುಣೋದಯ ಕಾಲದಲ್ಲಿ ನದ್ಯಾದಿಗಳಲ್ಲಿ ಸ್ನಾನವನ್ನು ಆಚರಿಸಬೇಕು. ಅಥವಾ ಮನೆಯಲ್ಲಿಯೇ ಅರುಣೋದಯ ಕಾಲದಲ್ಲಿ ನದ್ಯಾಭಿಮಾನಿದೇವತೆಗಳನ್ನು ಸ್ಮರಣೆ ಮಾಡುತ್ತಾ ಸ್ನಾನವನ್ನು ಮಾಡಬೇಕು. ಆಗ ಮಾಘಸ್ನಾನದಲ್ಲಿ ಪಠಿಸಬೇಕಾದ ಮಂತ್ರ ಹೀಗಿದೆ - ದುಃಖದಾರಿದ್ರ್ಯನಾಶಾಯ ಶ್ರೀ ವಿಷ್ಣೋಸ್ತೋಷಣಾಯ ಚ ॥ ಪ್ರಾತಃಸ್ನಾನ ಕರೋವ್ಯ್ಯದ್ಯಮಾಘೇ ಪಾಪ ವಿನಾಶನಂ ॥ ಮಕರಸ್ಥೇ ರವೌ ಮಾಘೇ ಗೋವಿಂದಾಚ್ಯುತ ಮಾಧವ । ಸ್ನಾನೇನಾನೇನ ಮೇದೇವ ಯಥೋಕ್ತ ಫಲದೋಭವ॥ ಮಾಘಮಾಸದಲ್ಲಿ ಸೂರ್ಯನಿಗೆ ಈ ಮಂತ್ರದಿಂದ ಅರ್ಘ್ಯವನ್ನು ನೀಡಬೇಕು - ಸವಿತ್ರೇಪ್ರಸವಿತ್ರೇ ಚ ಪರಂಧಾಮ ಜಲೇ ಮಮ । ತ್ವತ್ತೇಜಸಾ ಪರಿಭ್ರಷ್ಟಂ ಪಾಪಂ ಯಾತು ಸಹಸ್ರಧಾ ॥ ಸ್ನಾನದ ವಿಧಾನವನ್ನು ಚೈತ್ರಮಾಸ, ವೈಶಾಖಮಾಸ ಪುಸ್ತಕದಿಂದ ನೋಡಿ ತಿಳಿದುಕೊಳ್ಳಬೇಕು.

**ಹರಪನಹಳ್ಳಿ ಭೀಮವ್ವನವರು** – ಅಂಕಿತ ಭೀಮೇಶಕೃಷ್ಣ(ಸ್ವಪ್ನಲಬ್ಧ.) ಉಪದೇಶ ಗುರು ನಾರದರು (ಸ್ವಪ್ನ) ನಾರದಾದಾಪ್ತಸದ್ಬೋಧಾಂ ಸಾಧ್ವೀ ಸಾಹಿತ್ಯಕಾರಿಣೀಂ। ಭೀಮೇಶ ಕೃಷ್ಣನಿರತಾಂ ವಂದೇ ಭೀಮವ್ವಮಾತರಂ ॥

**ಶ್ರೀ ಲಕ್ಷ್ಮೀಮನೋಹರತೀರ್ಥರು (ಶ್ರೀಪಾದರಾಜ ಮಠ)**- ಪುದುಪಾಳ್ಯ- ಶ್ರೀರಂಗ ವಿಠ್ಠಲಾಸಕ್ತಂ ರಘುನಾಥಾಬ್ಧಿಚಂದಿರಂ। ಲಕ್ಷ್ಮೀಕಟಾಕ್ಷಪಾತ್ರಂ ತಂ ಭಜೇ ಲಕ್ಷ್ಮೀಮನೋಹರಂ ॥

**ಶಿಂಶುಮಾರನ ಆರಾಧನೆ** – ಪುಷ್ಯಮಾಸದಲ್ಲಿ ಪೌರ್ಣಮಿಯಂದು ತುಪ್ಪತುಂಬಿದ ಕಂಚಿನ ಪಾತ್ರೆಯಲ್ಲಿ ಶಿಂಶುಮಾರನ ಪ್ರತಿಮೆಯನ್ನಿಟ್ಟು ಪೂಜೆ ಮಾಡಿ ಬ್ರಾಹ್ಮಣನಿಗೆ

ದಾನ ಕೊಡಬೇಕು. ಇದು ಶಿಂಶುಮಾರ ವ್ರತ ದೊರೆಯುವವಲ್ಲದೆ ಮರಣಾನಂತರ ತನ್ನ ಹಿಂದಿನ ಮತ್ತು ಮುಂದಿನ ಹತ್ತು ತಲೆಯವರು ಉದ್ಧಾರವಾಗಿ ಕ್ರಮವಾಗಿ ಸಾಧನೆ ಪೂರೈಸಿ ಸದ್ಗತಿ ಸೇರುವರು.

**ಪೂಜಾಮಂತ್ರ–** ಶಿಂಶುಮಾರ ನಮಸ್ತೇಽಸ್ತು ಸರ್ವಶಕ್ತಿಯುತ ಪ್ರಭೋ । ಉತ್ಪತ್ತಿ ಸ್ಥಿತಿನಾಶಾನಾಂ ಹೇತುಭೂತ ಸನಾತನ ॥

**ಪ್ರಾರ್ಥನಾ ಮಂತ್ರ–** ನಮಸ್ತೇ ದೇವದೇವೇಶ ನಮಸ್ತೇ ಗರುಡ ಧ್ವಜ । ನಮಸ್ತೇ ಪುಂಡರೀಕಾಕ್ಷ ತ್ರಾಹಿ ಮಾಂ ಶರಣಾಗತಮ್ ॥

**ದಾನ ಮಂತ್ರ–** ಅಗ್ನಿನೇತ್ರ ನಮಸ್ತುಭ್ಯಂ ನಮಸ್ತೇ ಹ್ಯಮರಪ್ರಿಯ । ತವ ದಾನೇನ ಮೇ ಸಂತು ಪೂರ್ಣಾಃ ಸರ್ವೇಮನೋ ರಥಾಃ ॥

## ಪೌಷ ॥ ಬಹುಳ ॥ ಚತುರ್ಥೀ ॥

**ಶ್ರೀ ರಘುಪತಿತೀರ್ಥರು (ಮಾಧವತೀರ್ಥ ಮಠ) -** ಜ್ಞಾನವೈರಾಗ್ಯ ಸಂಜಾತಾನ್ ರಾಮಪಾದರತಾನ್ ಸದಾ। ಶ್ರೀಮದ್ ರಘುಪತಿಗುರೂನ್ ವಂದೇ ನ್ಯಾಯಶಾಸ್ತ್ರಾರ್ಥ ಕೋವಿದಾನ್ ॥

## ಪೌಷ ॥ ಬಹುಳ ॥ ಪಂಚಮೀ ॥

**ಶ್ರೀ ಸುಧರ್ಮೇಂದ್ರತೀರ್ಥರು (ರಾಯರ ಮಠ) -** ಮಂತ್ರಾಲಯ-ಸುಧಾಂಶುಮಿವ ಸಂಭೂತಂ ಸುಜ್ಞಾನೇಂದ್ರ ಸುಧಾಂಬುಧೌ । ಸುಧೀ ಸಂದೋಹ ಸಂಸೇವ್ಯಂ ಸುಧರ್ಮೇಂದ್ರ ಗುರುಂ ಭಜೇ ॥ ಪ್ರಸಿದ್ಧ ವೈಯಾಕರಣರಾಗಿದ್ದ, ಭಾರದ್ವಾಜ ಗೊತ್ರೋತ್ಪನ್ನರಾಗಿದ್ದ ಶ್ರೀಗಣೇಶಾಚಾರ್ಯರು ಶ್ರೀಸುಜ್ಞಾನೇಂದ್ರ-ತೀರ್ಥರಿಗೆ ಅತ್ಯಂತ ಪ್ರೀತಿ ಪಾತ್ರಾಗಿದ್ದ ಪಂಡಿತರು. ಆದ್ದರಿಂದಲೇ ಇವರನ್ನು ಸ್ವಾಮಿಗಳು ಮಹಾಸಂಸ್ಥಾನಕ್ಕೆ ಆರಿಸಿ, ' ಸುಧರ್ಮೇಂದ್ರತೀರ್ಥ'ರೆಂದು ಹೆಸರಿಟ್ಟರು. ಸುಧರ್ಮೇಂದ್ರ ಸ್ವಾಮಿಗಳು ಹೆಚ್ಚಾಗಿ ಮಂತ್ರಾಲಯದಲ್ಲೇ ಇರುತ್ತಿದ್ದರು. ಆದ್ದರಿಂದ ಕೃಷ್ಣ ಪ್ರಭುಗಳು ಶ್ರೀಗಳವರನ್ನು ಅನೇಕ ಸಲ ರಾಜಧಾನಿಗೆ ಬರಬೇಕೆಂದು ವಿಜ್ಞಾಪಿಸಿದರು. ಶ್ರೀಗಳವರು ಮಹಾಜ್ಞಾನಿಗಳೆಂದೂ, ದುರ್ವಾಸಾಂಶರೆಂದೂ ಭಕ್ತರುಗಳಿಗೆ ಸೂಚನೆಯಾಯಿತೆನ್ನುತ್ತಾರೆ. ಓರ್ವ ಭಕ್ತನಿಗೆ ಶ್ರೀಗಳವರು

ಅನುಗ್ರಹಿಸಿದ್ದರಿಂದ ಕುಷ್ಠ ರೋಗ ಪರಿಹಾರವಾಯಿತು. ಇವರು ಮಂತ್ರಾಲಯದಲ್ಲಿ ಗುರುರಾಜರ ಸನ್ನಿಧಿಯಲ್ಲೇ ವೃಂದಾವನಸ್ಥರಾದರು.

ಶ್ರೀಸುಧರ್ಮೇಂದ್ರಮಹೋದಯಃ - ಈ ಮಹಾನುಭಾವರ ಪರಮಾನುಗ್ರಹಭಾಜನರಾದ ಶ್ರೀರಾಘವೇಂದ್ರಗುರುಗಳ ಅಂತರಂಗಭಕ್ತರಾದ, ಅರವತ್ತಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದ ಶ್ರೀಕೃಷ್ಣಾವಧೂತಪಂಡಿತರು ಈ ಕೃತಿಯ ಕರ್ತೃಗಳು. ಶ್ರೀಸುಧರ್ಮೇಂದ್ರತೀರ್ಥರು ಶ್ರೀಸುಜ್ಞಾನೇಂದ್ರ ಸುಧಾಂಬುಧಿ ಉದಯಿಸಿದ ಚಂದ್ರಮರ ವಾಣಿಯನ್ನು, ಅವರ ಗುಣಲವವನ್ನು ವರ್ಣಿಸಲು ಎಂತೆಂಥಾ ಕವಿಗಳೂ ಸಮರ್ಥರಲ್ಲ. ಇನ್ನು ನಾನೇನು ಅವರನ್ನು ವರ್ಣಿಸಬಲ್ಲೆನೆಂದು ಹೇಳಿ ಶ್ರೀಸುಧರ್ಮೇಂದ್ರರ ಅಗಮ್ಯ ವ್ಯಕ್ತಿತ್ವವನ್ನು ತೋರಿಸಿಕೊಟ್ಟಿರುವರು.

## ಪೌಷ ॥ ಬಹುಳ ॥ ಷಷ್ಠೀ ॥

ಶ್ರೀ ಸತ್ಯಕಾಮತೀರ್ಥರು - ಸತ್ಯರಾಯಣದುಗ್ಧಾಬ್ಧೇಃ ಸಂಜಾತಾ ಕೀರ್ತಿಕಾಮದಾ । ಕಾಮಧೇನುಃ ಸತ್ಯಕಾಮನಾಮ್ನೀ ಭೂಯಾತ್ ಸತಾಂ ಮುದೇ ॥ ಶ್ರೀ ಸತ್ಯಕಾಮತೀರ್ಥರು ತಮ್ಮ ಪೂರ್ವಾಶ್ರಮದಲ್ಲಿ ಪಾಚ್ಛಾಪುರ ಶ್ರೀನಿವಾಸಾಚಾರ್ಯರು ಎಂಬುವವರಾಗಿದ್ದರು. ದ್ವೈತಮತ- ದೀಕ್ಷಾಬದ್ಧರಾಗಿ ಮಂತ್ರಸಿದ್ಧಿಯನ್ನು ಹೊಂದಿದ್ದರು. ಶ್ರೀಸತ್ಯೇಷ್ಟತೀರ್ಥರಿಗೆ ಸಂಸ್ಥಾನವನ್ನು ದಯಪಾಲಿಸಿ ಪ್ರಜೋತ್ಪತ್ತಿ ಸಂವತ್ಸರದ ಪುಷ್ಯ ಕೃಷ್ಣ ಷಷ್ಠೀಯಂದು ರಾಯಚೂರಿನ ಕೃಷ್ಣಾತೀರದ ಆತಕೂರಿನಲ್ಲಿ ವೃಂದಾವನಸ್ಥರಾದರು.

## ಪೌಷ ॥ ಬಹುಳ ॥ ಸಪ್ತಮೀ ॥

ಶ್ರೀ ಸತ್ಯಾಭಿಜ್ಞತೀರ್ಥರು (ಉತ್ತರಾದಿ ಮಠ) - ವೆಂಕಟೇಶಾದ್ರಿಮಾರಭ್ಯ ಸೇತುಂ ತೋತಾದ್ರಿಪೂರ್ವಕಾನ್ । ಗತ್ವಾ ದಿಗ್ವಿಜಯೀ ಪಾತು ಸತ್ಯಾಭಿಜ್ಞಗುರೂತ್ತಮಃ ॥ ಅಪೂರ್ವ ಪಾಂಡಿತ್ಯ, ತಪಸ್ಸುಗಳಿಗೆ ಹೆಸರಾದವರು ಶ್ರೀ ಸತ್ಯಾಭಿಜ್ಞತೀರ್ಥರು. ಅವರ ರಾಮೇಶ್ವರ ಯಾತ್ರೆ ಪ್ರಸಿದ್ಧವಾಗಿದೆ. ಸಾಗರ ಮಧ್ಯದಲ್ಲಿ ಪ್ರಯಾಣಿಸುತ್ತಿದ್ದಾಗ ಬಿರುಗಾಳಿಗೆ ಸಿಕ್ಕು ಸಂಸ್ಥಾನಕ್ಕೆ ಧಕ್ಕೆಯಾಗುವ ಸಂದರ್ಭದಲ್ಲಿ ಶ್ರೀ ಮೂಲರಾಮನನ್ನು ಸ್ಮರಿಸಿ ಸಂಸ್ಥಾನವನ್ನು ಆಚಂದ್ರಾರ್ಕವಾಗಿ ಉಳಿಸಿದ ಮಹಾ ತಪಸ್ವಿಗಳು.ಅವರು ಮೂರು ವರುಷ ಸರ್ವಜ್ಞಪೀಠದಲ್ಲಿದ್ದರು.

ಶ್ರೀ ವಿದ್ಯಾಧೀಶತೀರ್ಥರು ತಮ್ಮ ಶಿಷ್ಯರಿಗೆ ದಯಪಾಲಿಸಿದ್ದ ಅವರ ಮೂರ್ತಿಯನ್ನು ರಾಣೇಬೆನ್ನೂರಿನಲ್ಲಿ ಶ್ರೀ ಸತ್ಯಾಭಿಜ್ಞತೀರ್ಥರು ಪ್ರತಿಷ್ಠಾಪಿಸಿದರು. ಗುತ್ತಲ ಗುರುರಾಜಾಚಾರ್ಯರಿಗೆ ಆಶ್ರಮವನ್ನು ಕೊಟ್ಟು ಪುಷ್ಯ ಕೃಷ್ಣಸಪ್ತಮಿಯಂದು ಅವರು ರಾಣೇಬೆನ್ನೂರಿನಲ್ಲಿ ವೃಂದಾವನಸ್ಥರಾದರು.

**ಶ್ರೀನರಹರಿತೀರ್ಥರ ಆರಾಧನೆ** - ಪೌಷ ಬಹುಳ ಸಪ್ತಮಿಯಂದು ಇವರ ಆರಾಧನೆ. ಆಚಾರ್ಯರ ಸಾಕ್ಷಾತ್ ಶಿಷ್ಯರು. ಯಕ್ಷಗಾನ, ಕೀರ್ತನೆಗಳ ಮೂಲಕ ಮಾಧ್ವತತ್ವವನ್ನು ಸಾಮಾನ್ಯಜನತೆಗೂ ಮುಟ್ಟಿಸುವ ಪ್ರಯತ್ನ ನಡೆಸಿದ ಇವರ ವೃಂದಾವನ ಹಂಪೆಯಲ್ಲಿದೆ. ಸಸೀತಾ ಮೂಲರಾಮಾರ್ಚಾ ಕೋಶೇ ಗಜಪತೇಃ ಸ್ಥಿತಾ। ಯೇನಾನೀತಾ ನಮಸ್ತಸ್ಮೈ ಶ್ರೀಮನ್ನೃಹರಿಭಿಕ್ಷವೇ॥

॥ ಶ್ರೀನರಹರಿತೀರ್ಥಸ್ತೋತ್ರಂ ॥ ಜಯಂತಿ ಜಾನಕೀಜಾನೇರ್ಜಗದಾನಂದ-ಹೇತವಃ । ಮಹಾನಿಲಿಂಪಮಕುಟೋಲ್ಲಸಂತಃ ಪಾದಪಾಂಸವಃ ॥ ಪ್ರಣಮ್ಯ ಶ್ರೀಮದಾಚಾರ್ಯಚರಣಾಂಬುರುಹದ್ವಯಮ್ । ಶ್ರೀಮನ್ನರಹರಿಸ್ತೋತ್ರಂ ಕರಿಷ್ಯೇ ವಾಗ್ವಿಶುದ್ಧಯೇ ॥೧॥ ವಿಖ್ಯಾತಶ್ಯಾಮಶಾಸ್ತ್ರೀ ಸಕಲಮುನಿನುತಂ ಶ್ರೀಮದಾನಂದತೀರ್ಥಂ ನತ್ವಾ ಪ್ರೋವಾಚ ನಮ್ರಃ ದಿಶತು ಮಮ ಭವಾನ್ ಪ್ರೀತಿಪೂರ್ವಂ ಯತಿತ್ವಂ। ಶ್ರೀಪೂರ್ಣಪ್ರಜ್ಞನಾಮ್ನಾ ಸ ಚ ವಿಬುಧವರಃ ಪ್ರೋಕ್ತ ಆಸೀತ್ತದಾನೀಂ ಸಾಧುತ್ವಂ ಗಚ್ಛ ಶೀಘ್ರಂ ಗಜಪತಿನಗರಂ ತತ್ರ ರಾಜಾ ಭವೇತಿ ॥೨॥ ಪೂರ್ಣಪ್ರಜ್ಞಾತ್ತದಾನೀಂ ಸಕಲಬುಧಗಣೈರಾದೃತಂ ಭಾಷ್ಯಮೇತತ್ ಟೀಕಾಯುಕ್ತಾಂ ಪ್ರಕುರ್ಯಾಂ ವಿಪುಲರಮತೇ ರಾಜ್ಯಭಾರೇಣ ಕಿಂ ಮೇ । ತತ್ರಾಸ್ತೇ ಮೂಲರಾಮಃ ಸಕಲಸುರಪತಿಃ ಬ್ರಹ್ಮಪೂಜ್ಯಾಂಘ್ರಿಕಂಜಃ ಸೀತಾಯುಕ್ತಸ್ತಮೇನಂ ಚತುರತರ ಯೇಹಾನಯೇತ್ಯುಕ್ತ ಆಸೀತ್ ॥೩॥ ಆಗಚ್ಛಂತಂ ಮಹಾಂತಂ ನರಹರಿಮುನಿಪಂ ವೀಕ್ಷ್ಯ ವಿಸ್ಮೇರವಕ್ತ್ರಾಃ ಸರ್ವೇ ಗ್ರಾಮೀಣವರ್ಯಾಃ ಅಯಮಿಹ ನೃಪತಾ ಯೋಗ್ಯ ಇತ್ಯೇವಮೂಚುಃ । ಯಾವದ್ರಾಜಾತ್ಮಜೋಽಸ್ತ್ರೌ ಶಿಶುರಯಮಿದಮಾಕರ್ಣ್ಯ ನತ್ವಾ ಗುರುಂ ತಂ ಚಕ್ರೇ ತದ್ರಾಜಕಾರ್ಯಂ ಸಕಲಜನನುತೋ ದ್ವಾದಶಾಬ್ದಾನ್ ಸುಸಕ್ತಃ ॥೪॥ ಬಭೂವ ಧರಣೀ ತದಾ ಸಕಲಸಸ್ಯಸಂಶಾಲಿನೀ ಬಭೂವ ಧರಣೀಸುರಪ್ರವರಸಂತತಿಃ ಸಂತತಂ । ಮಹಾನರಹರಿಪ್ರಭೌ ಧರಣಿಮಂಡಲಂ ಶಾಸತಿ ಬಭೂವ ವಿಮನಾಃ ಪರಂ ಸದನ್ಯಜನಸಂತತಿಃ ॥೫॥ ಯದಾ ಸ ಪುತ್ರೋ ಯುವಾಭೂತ್ತದಾನೀಂ ತದೀಯಂ

ಸಮಸ್ತಂ ಸಮರ್ಪ್ಯಾಸ್ಯ ಕೋಶೇ। ಸ್ಥಿತಂ ರಾಮದೇವಂ ಸಸೀತಂ ಮಮೇಹ ದೇಹೇತಿ ಚೋಕ್ತ್ವಾ ವ್ಯಗೃಹೀತ್ವಾಗಮದ್ ದ್ರಾಕ್ ॥೬॥ ಆನೀಯ ನರಹರಿಭಿಕ್ಷುಣಾ ಸಸೀತಂ ಖಗಜದಿನಾನಿ ಪೂಜಯಿತ್ವಾ ಹೃಷ್ಟಸ್ಸನ್ ವಿಪುಲ ಹೃದಬ್ಜನಾಭತೀರ್ಥ ತ್ವಂ ಪೂಜಾಂ ಕುರು ಮಹತೀಮಿತಿ ಹ್ಯವಾದೀತ್ ॥೭॥ ಶ್ರೀಮಾನಂಬುಜನಾಭತೀರ್ಥ-ಯತಿರಾಟ್ ಸಂಪೂಜ್ಯ ಷಡ್ವತ್ಸರಾನ್ ಶ್ರೀರಾಮಂ ನೃಹರಿವ್ರತೀಶ್ವರಾಯ ವೈ ದತ್ವಾ ಯಯೌ ಸ್ವಂ ಪದಂ। ರಕ್ತಾಕ್ಷೀ ಶರದಶ್ಚತುರ್ದಶತಿಥಾವೂರ್ಜಾಖ್ಯಮಾಸೇಸಿತೇ ಪ್ರಾಪ್ತೇ ಶ್ರೀನೃಹರಿವ್ರತೀ ಸಮಭಜದ್ಭೂಮಂಡಲಾಚಾರ್ಯತಾಂ॥೮॥ ಮಾಯಾವಾದಿಜನಾಃ ಪಲಾಯನವಿಧಾವಾಸಕ್ತಚಿತ್ತಾಪರೇ ಸರ್ವೇ ವಾದಿಜಯಾ ಜಯಾನ್ಯಸಹಿತಾ ಭೀತಾ ಬಭೂವುರ್ದ್ರುತಂ। ಶ್ರೀಮನ್ಮಧ್ವಮತಾನುಗಾಸ್ತು ವಿಬುಧಾಃ ಸರ್ವೇ ಪ್ರಮೋದಾನ್ವಿತಾಃ ಭೂಮಿಂ ಶ್ರೀ ನೃಹರೌ ಪ್ರಶಾಸತಿ ಗುರೌ ದುಷ್ಟಾವಿನಷ್ಟಾಶಯಾಃ॥೯॥ ಸಂಚಾರಕಾರ್ಯಾತ್ತ್ವರಮಾಪ್ಯ ಕಿಂಚಿತ್ ಸ್ವಪ್ನೇ ತಟಾಕಸ್ಥಹರಿಂ ಸಮೀಕ್ಷ್ಯ। ಸಂಸ್ಥಾಪ್ಯ ನಾರಾಯಣದೇವಪದ್ಮಾಕರಾಭಿಧಾನಂ ನಗರಂ ಚಕಾರ ॥೧೦॥ ಏವಂ ಶ್ರೀಯತಿರಾಣ್ಮಹಾಮಹಿಮಯುಕ್ ಶ್ರೀರಾಮದೇವಂ ತತೋ ದತ್ವಾ ಮಾಧವತೀರ್ಥಹಸ್ತಕಮಲೇ ಸಂಪ್ರಾಪ್ಯ ತುಂಗಾತಟಂ ಅಬ್ಧೇ ಶ್ರೀಮುಖನಾಮ್ನಿ ಮಾಸಿ ದಶಮೇ ಪಕ್ಷೇಽಸಿತೇ ಸಪ್ತಮೇ ಘಸ್ರೇ ದೇಹಮಿಮಂ ತ್ಯಜನ್ ಪದಮಯಾತ್ ಶ್ರೀವಿಷ್ಣುನಾಮ್ನಃ ಶುಭಂ॥೧೧॥ ನರಹರಿನುತಿಮೇತಾಂ ಯೇ ಪಠಂತಿ ತ್ರಿಸಂಧ್ಯಂ ಸಕಲದುರಿತಸಂಘಾ ದೂರತೋ ಯಾಂತಿ ತೇಷಾಮ್। ಸಕಲಶುಭಫಲಾನಿ ಪ್ರಾಪ್ಯ ವಿಷ್ಣುಪ್ರಸಾದಾತ್ ನಿಜನಿಜಸುಖಭೋಗಂ ಪ್ರಾಪ್ನುವಂತಿ ದ್ವಿಜಾಸ್ತೇ ॥೧೨॥ ಏವಂ ವ್ಯಾಘ್ರಪುರೀ-ಸಂಸ್ಥೈರಣ್ಣಯ್ಯಾಚಾರ್ಯಸೂರಿಭಿಃ। ತಚ್ಛಿಷ್ಯಃ ಪ್ರೇರಿತಃ ಕೃಷ್ಣಃ ಕೃತವಾನ್ ಸನ್ನಿಧೌ ಕೃತಂ ॥೧೩॥ ॥ಇತಿ ಶ್ರೀನಾರಾಯಣದೇವರತಟಾಕ ದೇವೇಂದ್ರ ಕೃಷ್ಣಾಚಾರ್ಯವಿರಚಿತಾ ನರಹರಿತೀರ್ಥಸ್ತುತಿಃ ಸಮಾಪ್ತಾ ॥

## ಪೌಷ ॥ ಬಹುಳ ॥ ಅಷ್ಟಮೀ ॥

### ಶ್ರೀಗೋಪಾಲದಾಸರು - ಗೋಪಾಲದಾಸರ ಆರಾಧನೆ -

ಪೌಷಕೃಷ್ಣಅಷ್ಟಮಿಯಂದು ಉತ್ತನೂರಿನಲ್ಲಿ ಗೋಪಾಲದಾಸರ ಆರಾಧನೆ ನಡೆಯುವುದು. ದಾಸಸಾಹಿತ್ಯದಲ್ಲಿ ಪ್ರಾಸಬದ್ಧಪದಗಳ ಮೂಲಕ ಹೊಸ। ಛಾಪು

ಕೊಟ್ಟವರು ಗೋಪಾಲದಾಸರು. ಭೂತಕಾಲವನ್ನೆಂಬಂತೆಯೇ ಆಗತಕಾಲವೆನಿದ ಭವಿಷ್ಯದ್ವರ್ತಮಾನಗಳ ಸಿದ್ಧಿ ಇವರಿಗಿತ್ತು. ಆಗತಾದಿತ್ರಿಕಾಲಜ್ಞಂ ಆಗಮಾರ್ಥವಿಶಾರದಮ್ । ತ್ಯಾಗಭೋಗಸಮಾಸಕ್ತಂ ಭಾಗಣ್ಣಾರ್ಯಗುರುಂ ಭಜೇ ॥ ಗೋಪಾಲದಾಸರಾಯ - ನಿನ್ನ ಪಾದ ನಾ ಪೊಂದಿದೆನೊ ನಿಶ್ಚಯಾ ತಾಪತ್ರಯಗಳು ನಾನಾಪರಿಯಿಂದೆನ್ನ ತಾ ಪೀಡಿಸುತಲಿವೆ ಕಾಪಾಡು ಗುರುರಾಯ ಅಪಮೃತ್ಯುವನು ತರಿದೆ - ಎನ್ನೊಳಗಿಪ್ಪ ಆಪರಾಧಗಳ ಮರೆದೇ ಪಲಚಿತ್ತನಿಗೆ ನೀ ವಿಮಲಮತಿಯನಿತ್ತು - ನಿಪುಣನೆಂದೆನಿಸಿದೆ ಸುಪಿರಿಯರಿಂದಲಿ ಕೃಪಣವತ್ಸಲ ನಿನ್ನ ಕರುಣೆ - ಗುಪಮೆಗಾಣೆನೋ ಸತತ ಈ ಕಾ-ಶ್ಯಪಿಯೊಳಗೆ ಬುಧರಿಂದ ಜಗದಾ-ಧಿಪನ ಕಿಂಕರನೆನಿಸಿ ಮೆರೆದೇ ಘೋರವ್ಯಾಧಿಗಳ ನೋಡೀ-ವಿಜಯರಾಯಾ ಭೂರಿಕರುಣವ ಮಾಡೀ ತೋರಿದರೆನಗೆ ಉದ್ಧಾರಕರೆ ಇವರೆಂದಂದಿ - ನಾರಭ್ಯ ತವ ಪಾದ ಸಾರಿದೆ ಸಲಹೆಂದು ಸೂರಿಜನಸಂಪ್ರಿಯ ಸುಗುಣೋ - ದಾರ ಮರುಳನ ದೋಷನಿಚಯವ ದೂರಗೈಸು ದಯಾಂಬುನಿಧೆಯೆ ನಿ-ವಾರಿಸದೆ ಕರುಣದೀ ಕೈವಿಡಿದು ಎನ್ನ ಪಾಲಿಸಿದಂದದೀ-ಸಂತತವು ಪ್ರ-ಪನ್ನರ ಸಲಹೋ ಮೋದಿ ಅನ್ಯರಿಗೀಪರಿಬಿನ್ನಪಗೈಯೆ ಜ-ಗನ್ನಾಥವಿಠಲನ ಸನ್ನುತಿಸುವ ಧೀರ ನಿನ್ನ ನಂಬಿದ ಶರಣಗೀ ಪರಿ-ಬನ್ನವೇ ಭಕ್ತಾನುಕಂಪಿ ಶ- ರಣ್ಯ ಬಂದೊದಗೀಸಮಯದಿ ಅ-ಹರ್ನಿಶಿ ಧೇನಿಸುವೆ ನಿಮ್ಮನು

## ಪೌಷ ॥ ಬಹುಳ ॥ ಏಕಾದಶೀ ॥

ಯುಧಿಷ್ಠಿರ ಉವಾಚ - ಪೌಷಸ್ಯ ಕೃಷ್ಣಪಕ್ಷೇ ತು ಕಿನ್ನಾಮ್ನೈಕಾದಶೀ ಭವೇತ್ । ಕಿನ್ನಾಮಕೋ ವಿಧಿಸ್ತಸ್ಯಾ ಏತದ್ವಿಸ್ತರತೋ ವದ॥ ಏತದಾಖ್ಯಾಯಿ ಭೋ ಸ್ವಾಮಿನ್ ಕೋ ದೇವಸ್ತತ್ರ ಪೂಜ್ಯತೇ ॥೧॥ ಯುಧಿಷ್ಠಿರನು ಹೇಳಿದನು - ಎಲೈ ಕೃಷ್ಣನೇ ! ಪುಷ್ಯ ಕೃಷ್ಣದ ಏಕಾದಶಿಯು ಯಾವ ರೀತಿಯಾದುದು? ಅದರ ಹೆಸರೇನು? ಅದರ ವಿಧಿಯೇನು? ಅದನ್ನು ವಿಸ್ತಾರವಾಗಿ ಹೇಳು. ಅದರಲ್ಲಿ ಯಾವ ದೇವರನ್ನು ಪೂಜಿಸಬೇಕು? ಇದೆಲ್ಲವನ್ನೂ ವಿಸ್ತಾರವಾಗಿ ಹೇಳು. ಶ್ರೀಕೃಷ್ಣ ಉವಾಚ - ಕಥಯಿಷ್ಯಾಮಿ ದೇವೇಂದ್ರ ಭವತಃ ಸ್ನೇಹಬಂಧನಾತ್ । ತುಷ್ಟಿರ್ಮೇ ನ ತಥಾ ರಾಜನ್ ಯಜ್ಞೈರ್ಬಹುಲದಕ್ಷಿಣೈಃ॥೨॥ ಯಥಾ ಮೇ ತುಷ್ಟಿರಾಯಾತಿ ಹ್ಯೇಕಾದಶೀ ವ್ರತೇನ ವೈ । ತಸ್ಮಾತ್ಸರ್ವ ಪ್ರಯತ್ನೇನ ಕರ್ತವ್ಯೋ ಹರಿವಾಸರಃ ॥೩॥ ಶ್ರೀಕೃಷ್ಣನು

ಹೇಳಿದನು - ಎಲೈ ಧರ್ಮಜನೇ ! ನಿನ್ನಲ್ಲಿರುವ ಸ್ನೇಹದಿಂದ ಅವೆಲ್ಲವನ್ನೂ ಹೇಳುತ್ತೇನೆ. ಏಕಾದಶಿಯ ವ್ರತದಿಂದ ನನಗೆ ತೃಪ್ತಿಯಾಗುವಂತೆ ಬಹುವಾದ ದಕ್ಷಿಣೆಗಳನ್ನು ಕೊಟ್ಟು ಯಾಗವನ್ನು ಮಾಡಿದರೂ ಅದರಿಂದ ನನಗೆ ಅಷ್ಟು ಸಂತೋಷವಾಗುವುದಿಲ್ಲ. ಆದುದರಿಂದ ಸರ್ವಪ್ರಯತ್ನದಿಂದಲೂ ಹರಿವಾಸರವಾದ ಏಕಾದಶಿಯನ್ನು ಆಚರಿಸಬೇಕು. ಸತ್ಯಮೇತನ್ನ ವೈ ಮಿಥ್ಯಾ ಧರ್ಮಿಷ್ಠಾನಾಂ ವಿಶಾರದ। ಪೌಷಸ್ಯ ಕೃಷ್ಣಪಕ್ಷೇ ತು ಸಫಲಾ ನಾಮ ನಾಮತಃ ॥೪॥ ಧರ್ಮಿಷ್ಠರಲ್ಲಿ ಮೊದಲನೆಯವನಾದ ಧರ್ಮರಾಜನೇ ! ನಾನು ಹೇಳುವುದು ಸತ್ಯವು. ಪುಷ್ಯ ಕೃಷ್ಣದಲ್ಲಿ ಬರುವ ಏಕಾದಶಿಯು ''ಸಫಲ''ವೆಂಬ ಹೆಸರುಳ್ಳದ್ದು. ತಸ್ಯಾಂ ನಾರಾಯಣಂ ದೇವಂ ಪೂಜಯೇಚ್ಚ ಯಥಾವಿಧಿ । ಪೂರ್ವೇಣೈವ ವಿಧಾನೇನ ಕರ್ತವ್ಯೈಕಾದಶೀ ಶುಭಾ ॥೫॥ ಆ ದಿನ ನಾರಾಯಣಸ್ವಾಮಿಯನ್ನು ವಿಧಿವತ್ತಾಗಿ ಪೂಜಿಸಬೇಕು. ಹಿಂದೆ ಹೇಳಿದಂತೆ ಕ್ರಮದಿಂದ ಏಕಾದಶಿಯನ್ನು ಆಚರಿಸಬೇಕು. ನಾಗಾನಾಂ ಚ ಯಥಾ ಶೇಷಃ ಪಕ್ಷಿಣಾಂ ಪನ್ನಗಾಶನಃ। ದೇವಾನಾಂ ಚ ಯಥಾ ವಿಷ್ಣುಃ ದ್ವಿಪದಾನಾಂ ಯಥಾ ದ್ವಿಜಃ ॥೬॥ ವ್ರತಾನಾಂ ತು ತಥಾ ರಾಜನ್ ಶ್ರೇಷ್ಠಾ ಚೈಕಾದಶೀ ತಿಥಿಃ। ತೇ ಜನಾಶ್ಚೈವ ಭೋ ರಾಜನ್ ಪೂಜ್ಯಾ ವೈ ಸರ್ವದಾ ಮಮ ॥೭॥ ಸರ್ಪಗಳಲ್ಲಿ ಆದಿಶೇಷನು ಹೇಗೆ ಶ್ರೇಷ್ಠನೋ ! ಪಕ್ಷಿಗಳಲ್ಲಿ ಗರುಡನು ಹೇಗೆ ಶ್ರೇಷ್ಠನೋ! ದೇವತೆಗಳಲ್ಲಿ ವಿಷ್ಣುವು ಹೇಗೆ ಶ್ರೇಷ್ಠನೋ! ಹಾಗೆ ವ್ರತಗಳಲ್ಲಿ ಏಕಾದಶಿ ತಿಥಿಯು ಶ್ರೇಷ್ಠವಾದುದು. ಯಾರು ಆ ಏಕಾದಶಿಯನ್ನು ಮಾಡುವರೋ ! ಆ ಜನಗಳೂ ಕೂಡ ಲೋಕದಲ್ಲಿ ಪೂಜ್ಯರು. ಹರಿವಾಸರಸಂಲೀನಂ ಕುರ್ವಂತ್ಯೇಕಾದಶೀ ವ್ರತಂ । ಇಹೈವ ಧನಸಂಯುಕ್ತಾ ಮೃತಾ ಮೋಕ್ಷಂ ಲಭಂತಿ ತೇ ॥೮॥ ಹರಿವಾಸರವನ್ನೂ ಏಕಾದಶೀ ವ್ರತವನ್ನು ಯಾರು ಮಾಡುವರೋ ಅವರು ಈ ಲೋಕದಲ್ಲಿ ಧನವಂತರಾಗಿದ್ದು ಬದುಕು ಸತ್ತನಂತರ ಮೋಕ್ಷವನ್ನು ಹೊಂದುತ್ತಾರೆ. ಸಫಲಾಯಾಂ ಫಲೈಃ ರಾಜನ್ ಪೂಜಯೇನ್ನಾಮಭಿರ್ಹರಿಂ। ನಾರಿಕೇಲಫಲೈಶ್ಚೈವ ಕ್ರಮುಕೈರ್ಬೀಜಪೂರಕೈಃ॥೯॥ ಜಂಬೀರೈರ್ದಾಡಿಮೈಶ್ಚೈವ ತಥಾ ಧಾತ್ರೀಫಲೈಶ್ಶುಭೈಃ ಲವಂಗೈರ್ಬದರೈಶ್ಚೈವ ತಥಾಮ್ರೈಶ್ಚ ವಿಶೇಷತಃ ॥೧೦॥ ಪೂಜಯೇದ್ದೇವದೇವೇಶಂ ಧೂಪದೀಪೈಸ್ತಥೈವ ಚ। ಸಫಲಾಯಾಂ ವಿಶೇಷೇಣ ದೀಪದಾನಂ ತು ಕಾರಯೇತ್ ॥೧೧॥ ಸಫಲಾ ಏಕಾದಶಿಯಲ್ಲಿ ಹರಿಯನ್ನು ಅವನ ನಾಮಗಳಿಂದ ಪೂಜಿಸಬೇಕು.

ತೆಂಗಿನಕಾಯಿ, ಅಡಕೆ, ಮಾದಳ, ನಿಂಬೆ, ದಾಳಿಂಬೆ, ನೆಲ್ಲಿ, ಲವಂಗ, ಎಗಚಿ, ಮಾವು ಇವುಗಳಿಂದ ದೇವರನ್ನು ಪೂಜಿಸಬೇಕು. ಅನಂತರ ಧೂಪ, ದೀಪಗಳಿಂದ ಪೂಜಿಸಬೇಕು. ಈ ಸಫಲ ಏಕಾದಶಿಯಲ್ಲಿ ದೀಪದಾನವು ಬಹು ಶ್ರೇಷ್ಠವಾದುದು. ರಾತ್ರೌ ಜಾಗರಣಂ ಚೈವ ಕರ್ತವ್ಯಂ ಸಹ ವೈಷ್ಣವೈಃ। ಯಾವನ್ನಿಮೇಷೋ ನೇತ್ರಸ್ಯ ತಾವಜ್ಜಾಗರ್ತಿ ಯೋ ನಿಶಿ ॥೧೨॥ ಏಕಾಗ್ರಮಾನಸೋ ರಾಜನ್ ತಸ್ಯ ಪುಣ್ಯಂ ಶೃಣುಷ್ವ ಹಿ। ತತ್ಸಮೋ ನಾಸ್ತಿ ಯಜ್ಞೋ ವೈ ತೀರ್ಥಂ ವಾ ತತ್ಸಮಂ ನ ಹಿ ॥೧೩॥ ಸರ್ವವ್ರತಾನಿ ರಾಜೇಂದ್ರ ಕಲಾಂ ನಾರ್ಹಂತಿ ಷೋಡಶೀಂ । ಏವಂ ವರ್ಷಸಹಸ್ರಾಣಿ ತಪಸಾ ನೈವ ತತ್ಫಲಂ ॥೧೪॥ ರಾತ್ರಿಯಲ್ಲಿ ವೈಷ್ಣವರೊಡನೆ ಜಾಗರಣೆಯನ್ನು ಮಾಡಬೇಕು. ಕಣ್ಣು ಮುಚ್ಚದಂತೆ ರಾತ್ರಿಯೆಲ್ಲವೂ ಒಂದೇ ಮನಸ್ಸಿನಿಂದ ಜಾಗರಣೆ ಮಾಡಿದರೆ ಅವನಿಗೆ ಬರುವ ಪುಣ್ಯವನ್ನು ಹೇಳುತ್ತೇನೆ. ಕೇಳು. ಅದಕ್ಕೆ ಸಮಾನವುಳ್ಳ ಯಜ್ಞವಾಗಲೀ ತೀರ್ಥವಾಗಲೀ ಭೂಮಿಯಲ್ಲಿ ಇಲ್ಲ. ಎಲ್ಲಾ ವ್ರತಗಳ ಪುಣ್ಯಗಳನ್ನು ಸೇರಿಸಿದರೂ ಅವು ಈ ವ್ರತದ ಹದಿನಾರನೆಯ ಒಂದು ಭಾಗವನ್ನು ಹೋಲಲಾರವು. ಸಾವಿರ ವರ್ಷಗಳು ತಪಸ್ಸು ಮಾಡಿದರೂ ಇದರ ಫಲವು ಬರುವುದಿಲ್ಲ. ಯತ್ಫಲಂ ಸಮವಾಪ್ನೋತಿ ಯಃ ಕರೋತಿ ಹಿ ಜಾಗರಂ। ಶ್ರೂಯತಾಂ ರಾಜಶಾರ್ದೂಲ ಸಫಲಾಯಾಃ ಕಥಾ ಶುಭಾ ॥೧೫॥ ಈ ಏಕಾದಶಿಯಲ್ಲಿ ಉಪೋಷ್ಯ ಮಾಡಿ ಜಾಗರಣೆ ಮಾಡಿದವನು ಮೇಲೆ ಹೇಳಿದ ಫಲವನ್ನು ಹೊಂದುತ್ತಾನೆ. ಎಲೈ ಧರ್ಮಜನೇ ! ಸಫಲೈಕಾದಶಿಯ ಕಥೆಯನ್ನು ಹೇಳುತ್ತೇನೆ. ಕೇಳು. ಅದು ಮಂಗಳಕರವಾದುದು. ಚಂಪಾವತೀತಿ ವಿಖ್ಯಾತಾ ಪುರೀ ಮಾಹಿಷ್ಮತಸ್ಯ ಚ। ಮಾಹಿಷ್ಮತಸ್ಯ ರಾಜರ್ಷೇಃ ಪುತ್ರಾಃ ಪಂಚ ಕುಮಾರಕಾ। ॥೧೬॥ ಮಾಹಿಷ್ಮತನೆಂಬ ಒಬ್ಬ ರಾಜನಿದ್ದನು. ಅವನ ರಾಜಧಾನಿಯು ಚಂಪಾವತಿಯು. ಆ ಮಾಹಿಷ್ಮತನು ತಪಸ್ಸು ಮಾಡಿ ರಾಜರ್ಷಿಯಾಗಿದ್ದನು. ಅವನಿಗೆ ಐದುಜನ ಮಕ್ಕಳಿದ್ದರು. ತೇಷಾಂ ಮಧ್ಯೇ ತು ಜ್ಯೇಷ್ಠೋ ವೈ ಮಹಾಪಾಪರತಸ್ಸದಾ। ಪರದಾರಾಭಿಚಾರೀ ಚ ವೇಶ್ಯಾಸಕ್ತಶ್ಚ ಮದ್ಯಪಃ ॥ ಪಿತುರ್ದ್ರವ್ಯಂ ತು ತೇನೈವ ಗಮಿತಂ ಪಾಪಕರ್ಮಣಾ ॥೧೭॥ ಆ ಐದುಜನರಲ್ಲಿ ದೊಡ್ಡವನು ಮಹಾಪಾಪ ಕೆಲಸಗಳನ್ನು ಮಾಡುತ್ತಿದ್ದನು. ಯಾವಾಗಲೂ ಪರರ ಹೆಂಡಿರಲ್ಲಿ ಆಸಕ್ತನಾಗಿರುತ್ತಿದ್ದನು. ಸೂಳೆಯರ ಸಹವಾಸ ಮಾಡುತ್ತಿದ್ದನು. ಮದ್ಯಪಾನ ಮಾಡುತ್ತಿದ್ದನು. ಈ ರೀತಿಯಾದ

ಪಾಪ ಕೆಲಸಗಳಿಂದಲೇ ಆ ಪಾಪಿಯು ತಂದೆಯ ಹಣವನ್ನೆಲ್ಲಾ ಹಾಳುಮಾಡಿದನು. ಅಸದ್ವೃತ್ತಿರತೋ ನಿತ್ಯಂ ಭೂಸುರಾಣಾಂ ತು ನಿಂದಕಃ । ವೈಷ್ಣವಾನಾಂ ತು ದೇವಾನಾಂ ನಿತ್ಯಂ ನಿಂದಾಂ ಕರೋತಿ ಸಃ ॥೧೮॥ ಯಾವಾಗಲೂ ಕೆಟ್ಟ ಕೆಲಸವನ್ನು ಮಾಡುತ್ತಿದ್ದನು. ಬ್ರಾಹ್ಮಣರನ್ನು ನಿಂದಿಸುತ್ತಿದ್ದನು. ವಿಷ್ಣುಭಕ್ತರನ್ನೂ ದೇವರನ್ನೂ ತಿರಸ್ಕರಿಸುತ್ತಿದ್ದನು. ಈದೃಶಂ ತು ತತೋ ದೃಷ್ಟ್ವಾ ಪುತ್ರಂ ಮಾಹಿಷ್ಮತೋ ನೃಪಃ। ನಾಮ್ನಾ ತು ಲುಂಭಕ ಇತಿ ರಾಜಪುತ್ರೇಷು ಚ ವ್ಯಧಾತ್ ॥೧೯॥ ಮಗನು ಈರೀತಿಯಾಗಿ ದುರಾಚಾರವುಳ್ಳವನಾಗಿರುವುದನ್ನು ಮಾಹಿಷ್ಮತನು ನೋಡಿ ತನ್ನ ಮಕ್ಕಳಲ್ಲಿ ಈತನು ಪಾಪಿಯೂ ಕಳ್ಳನೂ ಆದುದರಿಂದ ಲುಂಭಕನೆಂದು ಹೆಸರಿಟ್ಟನು. (ಲುಂಭಕನೆಂದರೆ ಕಳ್ಳನು). ರಾಜ್ಯಾನಿಷ್ಕಾಸಿತಸ್ತೇನ ಪಿತ್ರಾ ಚೈವ ತು ಬಂಧುಭಿಃ। ತಸ್ಯೈವ ಪರಿವಾರೈಸ್ತು ತ್ಯಕ್ತಸ್ಯ ಪರಿಪಂಥಿನಃ ॥೨೦॥ ರಾಜನು ರಾಜ್ಯದಿಂದ ಓಡಿಸಿಬಿಟ್ಟನು. ಬಂಧುಗಳು ಕೈಬಿಟ್ಟರು. ಅವನ ಪರಿವಾರದವರೂ ಇವನು ನಮಗೆ ಶತ್ರುವೆಂದು ಬಿಟ್ಟುಬಿಟ್ಟರು. ಲುಂಭಕೋಪಿ ತಥಾ ತ್ಯಕ್ತಃ ಚಿಂತಯಾಮಾಸ ವೈ ಸದಾ । ತ್ಯಕ್ತೋಽಯಂ ಬಾಂಧವೈಃ ಪಿತ್ರಾ ರಾಜ್ಯಾನ್ನಿಷ್ಕಾಸಿತಃ ಕಿಲ ॥೨೧॥ ಹೀಗೆ ಬಿಡಲ್ಪಟ್ಟ ಆ ಲುಂಭಕನು ಬಂಧುಗಳು ನನ್ನನ್ನು ಬಿಟ್ಟುಬಿಟ್ಟರು. ರಾಜನಾದ ತಂದೆಯೂ ನನ್ನನ್ನು ಬಿಟ್ಟು ರಾಜ್ಯದಿಂದಲೂ ಓಡಿಸಿದನು ಎಂದು ಯಾವಾಗಲೂ ಯೋಚಿಸುತ್ತಿದ್ದನು. ಇತಿ ಸಂಚಿಂತ್ಯ ಮನಸಾ ಮತಿಂ ಪಾಪೇ ತದಾಕರೋತ್ । ಮಯಾ ಗಂತವ್ಯಮೇವಾಸ್ತು ದಾರುಣೇ ಗಹನೇ ವನೇ ॥೨೨॥ ಈ ರೀತಿ ಯೋಚಿಸುತ್ತ ಕೆಟ್ಟಕೆಲಸವನ್ನು ಮಾಡಲು ಮನಗೊಟ್ಟನು. ನಾನು ಭೀಕರವಾದ ಕಾಡಿಗೆ ಹೋಗಬೇಕು. ಅಲ್ಲಿದ್ದುಕೊಂಡು ಈ ತಂದೆಯ ಊರೆಲ್ಲವನ್ನೂ ನಾಶಮಾಡಬೇಕು ಎಂದುಕೊಂಡನು. ತಸ್ಮಾಚ್ಚೈವ ಪುರಂ ಸರ್ವಂ ಘಾತಯಿಷ್ಯಾಮಿ ವೈ ಪಿತುಃ। ಇತ್ಯೇವಂ ಸ ಮತಿಂ ಕೃತ್ವಾ ಲುಂಭಕೋ ದೈವಯೋಗಃ ॥೨೩॥ ನಿರ್ಜಗಾಮ ಪುರಾತ್ತಸ್ಮಾದ್ರ ತೋಽಸೌ ಗಹನೇ ವನೇ । ಜೀವಘಾತರತೋ ನಿತ್ಯಂ ಸ್ತೇಯದ್ಯೂತಕಳಾನಿಧಿಃ॥೨೪॥ ಈ ರೀತಿಯಾಗಿ ಲುಂಭಕನು ಯೋಚಿಸಿ ದೈವಯೋಗದಿಂದ ಮನೆಬಿಟ್ಟು ಹೊರಟುಹೋದನು. ಕೊನೆಗೆ ಒಂದಾನೊಂದು ಗೊಂಡಾರಣ್ಯದಲ್ಲಿ ಸೇರಿಕೊಂಡು ಪ್ರಾಣಿಗಳನ್ನು ಕೊಲ್ಲುತ್ತ ಕಳ್ಳತನ ಮಾಡುತ್ತ ಜೂಜನ್ನಾಡುತ್ತಿದ್ದನು. ಕೊನೆಗೆ ಆ ಊರೆಲ್ಲವನ್ನೂ ಆ ಪಾಪಿಯು ಕಳ್ಳತನದಿಂದ ನಾಶಮಾಡುತ್ತ ಬಂದನು. ಸರ್ವಂ

ಚ ನಗರಂ ತೇನ ಮುಷಿತಂ ಪಾಪಕರ್ಮಣಾ। ಸ್ತೇಯಾಭಿಗಾಮೀ ನಗರೇ ಗೃಹೀತಸ್ಸ ನಿಶಾಚರೈಃ ॥೨೫॥ ಉವಾಚ ತಾನ್ಸುತೋ ಹಂ ವೈ ರಾಜ್ಞೋ ಮಾಹಿಷ್ಮತಸ್ಯ ಚ। ಸ ತೈರ್ಮುಕ್ತಃ ಪಾಪಕರ್ಮಾ ಚಾಗತೋ ವಿಪಿನೇ ಪುನಃ ॥೨೬॥ ಆ ರಾಜಧಾನಿಗೆ ಕಳ್ಳತನಕ್ಕೆ ಹೋಗಿರಲು ರಾತ್ರಿಯಲ್ಲಿ ಕಾವಲುಗಾರರು ಅವನನ್ನು ಹಿಡಿದರು. ಆಗ ಅವನು ನಾನು ಮಾಹಿಷ್ಮತಿರಾಜನ ಮಗನೆಂದು ಹೇಳಿದನು. ಇದರಿಂದ ಅವರು ಇವನನ್ನು ಬಿಟ್ಟುಬಿಡಲು ಮತ್ತೆ ಆ ಗೊಂಡಾರಣ್ಯಕ್ಕೆ ಬಂದನು. ಅಮಿಷಾಭಿರತೋ ನಿತ್ಯಂ ತರೋರ್ವೈ ಫಲಭಕ್ಷಣೇ। ಆಶ್ರಮಸ್ತಸ್ಯ ದುಷ್ಟಸ್ಯ ವಾಸುದೇವಸ್ಯ ಸನ್ನಿಧೌ ॥೨೭॥ ಅಶ್ವತ್ಥೋ ವರ್ತತೇ ತತ್ರ ಜೀರ್ಣಶ್ವ ಬಹುವಾರ್ಷಿಕಃ । ದೇವತ್ವಂ ತಸ್ಯ ವೃಕ್ಷಸ್ಯ ವಿಪಿನೇ ವರ್ತತೇ ಮಹತ್ ॥೨೮॥ ಅವನು ನಿತ್ಯವೂ ಮಾಂಸದಲ್ಲಿ ಆಸಕ್ತನಾಗಿ ಅದನ್ನೂ ತಿನ್ನುತ್ತ ಮರಗಳ ಹಣ್ಣುಗಳನ್ನೂ ತಿನ್ನುತ್ತಾ ಬಂದನು. ಅವನ ಆಶ್ರಮವು ವಾಸುದೇವ ದೇವರ ದೇವಸ್ಥಾನದ ಹತ್ತಿರವಿದ್ದಿತು. ಅಲ್ಲಿ ಒಂದು ಬಹುವರ್ಷದ ಮುದಿಯಾದ ಅರಳಿಯ ಮರವಿದ್ದಿತು. ಆ ಕಾಡಿನಲ್ಲೆಲ್ಲಾ ಆ ಮರದಲ್ಲಿ ಒಂದು ದೈವಿಕವಾದ ಶಕ್ತಿಯಿದ್ದಿತು. ತತ್ರೈವ ನಿವಸೇಚ್ಚೈವ ಲುಂಭಕಃ ಪಾಪಬುದ್ಧಿಮಾನ್ । ಗತೇ ಬಹುತಿಥೇ ಕಾಲೇ ಕಸ್ಯಚಿತ್ಪುಣ್ಯಸಂಚಯಾತ್ ॥೨೯॥ ಪೌಷಸ್ಯ ಕೃಷ್ಣಪಕ್ಷೇ ತು ದಶಮ್ಯಾಂ ದಿವಸೇ ತಥಾ । ಫಲಾನಿ ಭುಕ್ತ್ವಾ ವೃಕ್ಷಾಣಾಂ ರಾತ್ರೌ ಶೀತೇನ ಪೀಡಿತಃ ॥೩೦॥ ಲುಂಭಕೋ ನಾಮ ಪಾಪಿಷ್ಠೋ ವಸ್ತ್ರಹೀನೋ ಗತೇಕ್ಷಣಃ । ಪೀಡ್ಯಮಾನಸ್ಸ ಶೀತೇನ ಹರಿವೃಕ್ಷ ಸಮೀಪತಃ ॥೩೧॥ ನ ನಿದ್ರಾ ನ ಸುಖಂ ತಸ್ಯ ಗತಪ್ರಾಣ ಇವಾಭವತ್ । ಆಚ್ಛಾದ್ಯ ದಶನೈರಾಸ್ಯಮೇವಂ ನೀತಾ ನಿಶಾಖಿಲಾ ॥೩೨॥ ಆ ಪಾಪಬುದ್ಧಿಯುಳ್ಳ ಲುಂಭಕನು ಅಲ್ಲೇ ವಾಸಮಾಡುತ್ತಿದ್ದನು. ಹೀಗೆ ಬಹುಕಾಲ ಕಳೆಯಲು ಯಾವುದೋ ಒಂದು ಪುಣ್ಯಯೋಗವು ಫಲಿಸುವ ಕಾಲ ಬಂದಿತು. ಪುಷ್ಯಮಾಸದ ಕೃಷ್ಣಪಕ್ಷದ ದಶಮಿಯದಿನ ಹಣ್ಣುಗಳನ್ನು ತಿಂದು ರಾತ್ರಿಯಲ್ಲಿ ಛಳಿಯಿಂದ ತೊಂದರೆಪಡುತ್ತಾ ಆ ಪಾಪಿಯಾದ ಲುಂಭಕನು ಬಟ್ಟೆಯಿಲ್ಲದೆ ರಾತ್ರಿಯೆಲ್ಲಾ ಶೀತದಿಂದ ತೊಂದರೆಪಡುತ್ತಾ ಆ ಅರಳಿಯ ಮರದ ಬುಡದಲ್ಲಿ ಕಣ್ಣುಕಾಣದೆ ಕುಳಿತು ಸುಖವನ್ನಾಗಲೀ ನಿದ್ರೆಯನ್ನಾಗಲೀ ಹೊಂದಲೇ ಇಲ್ಲ. ಮತ್ತು ಪ್ರಾಣಬಿಟ್ಟವನಂತೆ ಆಗಿ ಹಲ್ಲುಮುಡಿ ಕಚ್ಚಿಕೊಂಡು ಆ ರಾತ್ರಿಯೆಲ್ಲವನ್ನೂ ಕಳೆದನು. ಭಾನೂದಯೇಪಿ ಪಾಪಿಷ್ಠೋ ನ ಲೇಭೇ ಚೇತನಂ ತದಾ। ಲುಂಭಕೋ ಗತಸಂಜ್ಞಸ್ತು

ಸಫಲಾಯಾ ದಿನೇ ತಥಾ ॥೩೩॥ ರವೌ ಮಧ್ಯಗತೇ ಚೈವ ಸಂಜ್ಞಾಂ ಲೇಭೇ ಸ ಲುಂಭಕಃ । ಇತಸ್ತತೋ ವಿಲೋಕ್ಯಾಥ ವ್ಯುತ್ಥಿತಶ್ಚ ತದಾಸನಾತ್ ॥೩೪॥ ಸ್ವಲ್ಪನ್ಯದ್ಭ್ಯಾಂ ಪ್ರಚಲಿತಃ ಖಂಜನ್ನಿವ ಮುಹುರ್ಮುಹುಃ । ವನಮಧ್ಯೇ ಗತಸ್ತತ್ರ ಕ್ಷುತ್‌ಕ್ಷಾಮಃ ಪೀಡಿತೋ ಭವತ್ ॥೩೫॥ ಸೂರ್ಯನು ಹುಟ್ಟಿದರೂ ಕೂಡ ಆ ಪಾಪಿಗೆ ಪ್ರಜ್ಞೆಯನು ಬರಲೇ ಇಲ್ಲ. ಈ ರೀತಿಯಾಗಿ ಆ ಸಫಲಾ ಏಕಾದಶಿಯ ದಿನ ಜ್ಞಾನವಿಲ್ಲದೆ ಬಿದ್ದಿದ್ದು ಆ ದಿನ ಮಧ್ಯಾಹ್ನದಲ್ಲಿ ಸೂರ್ಯನು ನೆತ್ತಿಯ ಮೇಲೆ ಬಂದಾಗ ಜ್ಞಾನವನು ಹೊಂದಿದನು. ಆಗ ಇತ್ತ ಅತ್ತ ನೋಡಿ ಕೂತಿದ್ದ ಜಾಗವನ್ನು ಬಿಟ್ಟು ಎದ್ದು ಕುಂಟನಂತೆ ಪದೇ ಪದೇ ಕುಂಟುತ್ತ ಹೊರಟನು. ಇಂತು ಹೊರಟು ಕಾಡಿನೊಳಗೆ ಹೋಗಿ ಹಸಿವಿನಿಂದ ಬಳಲಿದನು. ನ ಶಕ್ತಿ ರ್ಜೀವಘಾತೇ ತು ಲುಂಭಕಸ್ಯ ದುರಾತ್ಮನಃ। ಫಲಾನಿ ಚ ತದಾ ರಾಜನ್ನಾಜಹಾರ ಸ ಲುಂಭಕಃ ॥೩೬॥ ಆಗ ದುಷ್ಟನಾದ ಲುಂಭಕನಿಗೆ ಪ್ರಾಣಿಗಳನ್ನು ಕೊಲ್ಲಲು ಶಕ್ತಿಯೇ ಇರಲಿಲ್ಲ. ಆದರಿಂದ ಹಸಿವನ್ನು ತೀರಿಸಿಕೊಳ್ಳಲು ಹಣ್ಣುಗಳನು ತಂದನು. ಯಾವತ್ಸಮಾಗತಸ್ತತ್ರ ತಾವದಸ್ತಂ ಗತೋ ರವಿಃ । ಕಿಂ ಭವಿಷ್ಯತಿ ತಾತೇತಿ ಸ ವಿಲಾಸಂ ಚಕಾರ ಹ ॥೩೭॥ ಫಲಾನಿ ತತ್ರ ಭೂರೀಣಿ ವೃಕ್ಷಮೂಲೇ ನಿವೇದಯನ್ । ಇತ್ಯುವಾಚ ಫಲೈರೇಭಿಃ ಶ್ರೀಪತಿಸ್ತುಷ್ಯತಾಂ ಹರಿಃ ॥೩೮॥ ಅವನು ಹಣ್ಣುಗಳನ್ನು ತರುವಷ್ಟರಲ್ಲಿ ಸೂರ್ಯನು ಮುಳುಗಿದನು. ಆಗ ಅಯ್ಯೋ ನನ್ನ ಗತಿ ಹೀಗಾಯಿತೆ ? ಇನ್ನೂ ಏನೇನಾಗುವುದೊ? ಎಂದು ಅವನು ಅತ್ತನು. ಬಹುವಾಗಿ ಹಣ್ಣುಗಳನ್ನು ತಂದು ಆ ಮರದ ಬುಡದಲ್ಲಿ ಇಟ್ಟು ಈ ಹಣ್ಣುಗಳಿಂದ ಶ್ರೀಪತಿಯು ತೃಪ್ತನಾಗಲಿ. ಎಂದನು. ಇತ್ಯುಕ್ತ್ವಾ ಲುಂಭಕಶ್ಚೈವ ನಿದ್ರಾಂ ಲೇಭೇ ನ ವೈ ನಿಶಿ । ರಾತ್ರೌ ಜಾಗರಣಂ ಮೇನೇ ವಿಷ್ಣುಸ್ತಸ್ಯ ದುರಾತ್ಮನಃ ॥೩೯॥ ಫಲೈಸ್ತು ಪೂಜನಂ ಮೇನೇ ಸಫಲಾಯಾಸ್ತಥಾನಘ । ಅಕಸ್ಮಾದ್ವ್ರತಮೇವ್ಯೆ ತತ್ಕೃತವಾನ್ಸ್ವೈ ಸ ಲುಂಭಕಃ ॥೪೦॥ ಆ ಲುಂಭಕನು ಹೀಗೆಂದು ಹೇಳಿ ರಾತ್ರೆಯಲ್ಲೆಲ್ಲಾ ನಿದ್ದೆ ಮಾಡಲಿಲ್ಲ. ಆ ದುರಾತ್ಮನು ನಿದ್ದೆಮಾಡದಿದ್ದುದನ್ನು ವಿಷ್ಣುವು ಜಾಗರಣೆಯೆಂದು ತಿಳಿದನು. ಆ ಹಣ್ಣುಗಳನ್ನು ಸಫಲೈಕಾದಶಿಯ ಪೂಜೆಯೆಂದು ಭಾವಿಸಿದನು. ಈ ರೀತಿಯಾಗಿ ಏನೋ ಅದೃಷ್ಟಪರಿಪಾಕದಿಂದ ಈ ಸಫಲಾವ್ರತವನ್ನು ಈ ಲುಂಭಕನು ಮಾಡಿದನು. ತೇನ ಪುಣ್ಯಪ್ರಭಾವೇಣ ಪ್ರಾಪ್ತಂ ರಾಜ್ಯಮಕಂಟಕಂ । ಸೂರ್ಯಸ್ಯೋದಯನಂ

ಯಾವತ್ತಾವದ್ವಿಷ್ಣುರ್ಜಗಾಮ ಹ.॥೪೧॥ ಈ ಸಫಲೈಕಾದಶಿಯ ಪ್ರಭಾವದಿಂದ ಉತ್ತಮವಾದ ರಾಜ್ಯವು ಸಿಕ್ಕಿತು. ಸೂರ್ಯೋದಯದವರೆಗೂ ಅಲ್ಲಿ ವಿಷ್ಣುವು ಇದ್ದು ಅನಂತರ ಹೊರಟು ಹೋದನು. ದಿವಿ ತತ್ಕಾಲಮುತ್ಪನ್ನಾ ವಾಗರೂಪಾಽಶರೀರಿಣೀ॥ ರಾಜ್ಯಂ ಪ್ರಾಪ್ಸ್ಯಸಿ ಪುತ್ರ ತ್ವಂ ಸಫಲಾಯಾಃ ಪ್ರಸಾದತಃ॥೪೨॥ ಆಗ ಅಂತರಿಕ್ಷದಲ್ಲಿ ಒಂದು ಅಶರೀರವಾಣಿಯು ಎಲೈ ಲುಂಭಕನೇ ! ನೀನು ರಾಜ್ಯವನ್ನೂ ಮಕ್ಕಳನ್ನೂ ಕೂಡ ಈ ಸಫಲೈಕಾದಶಿಯ ದೆಸೆಯಿಂದ ಹೊಂದುತ್ತೀಯೆ ಎಂದು ನುಡಿಯಿತು. ತಥೇತ್ಯುಕ್ತೋ ವಚಸ್ತಸ್ಯಾ ದಿವ್ಯರೂಪಧರೋಽಭವತ್ । ಮತಿರಾಸೀತ್ತ ತಸ್ತಸ್ಯ ಪರಯಾ ವೈಷ್ಣವೀ ನೃಪ ॥೪೩॥ ಹಾಗೆಯೇ ಆಗಲೆಂದು ಹೇಳಿದನು. ಒಡನೆಯೇ ಇವನಿಗೂ ಉತ್ತಮನಾದ ರೂಪು ಬಂದಿತು. ಅನಂತರ ವಿಷ್ಣುವಿನಲ್ಲಿ ಬಹಳವಾದ ಭಕ್ತಿಯು ಹುಟ್ಟಿತು. ದಿವ್ಯಾಭರಣಶೋಭಾಢ್ಯೋ ಲೇಭೇ ರಾಜ್ಯಮಕಂಟಕಂ । ಕೃತಂ ರಾಜ್ಯಂ ತು ತೇನೈವ ವರ್ಷಾಣಿ ದಶಪಂಚ ಚ॥೪೪॥ ಅನಂತರ ಉತ್ತಮವಾದ ಆಭರಣ ಕಾಂತಿಗಳನ್ನು ಹೊಂದಿದನು. ರಾಜ್ಯವನ್ನು ಹೊಂದಿ ಆ ರಾಜ್ಯವನ್ನು ಹದಿನೈದುವರ್ಷಗಳವರೆಗೂ ಆಳಿದನು. ಮನೋಜಸ್ತಸ್ಯ ಪುತ್ರಸ್ತು ತದಾ ಕೃಷ್ಣಪ್ರಸಾದತಃ । ಆಶು ರಾಜ್ಯಂ ಪರಿತ್ಯಜ್ಯ ಪುತ್ರೇ ಚೈವ ಸಮರ್ಪ್ಯ ಚ ॥೪೫॥ ಗತಃ ಕೃಷ್ಣಸ್ಯ ಸಾನ್ನಿಧ್ಯಂ ಯತ್ರ ಗತ್ವಾ ನ ಶೋಚತಿ । ಏವಂ ಯಃ ಕುರುತೇ ರಾಜನ್ ಸಫಲಾ ವ್ರತಮುತ್ತಮಂ ॥೪೬॥ ಇಹಲೋಕೇ ಸುಖಂ ಪ್ರಾಪ್ಯ ಮೃತೋ ಮೋಕ್ಷಮವಾಪ್ನುಯಾತ್ । ಧನ್ಯಾಸ್ತೇ ಮಾನವಾ ಲೋಕೇ ಸಫಲಾಯಾಂ ಚ ಯೇ ರತಾಃ॥೪೭॥ ಅನಂತರ ಆ ಕೃಷ್ಣನ ಅನುಗ್ರಹದಿಂದ ಸುಂದರರೂ ಯೋಗ್ಯನೂ ಆದ ಮನೋಜನೆಂಬ ಮಗನು ಹುಟ್ಟಿದನು. ಆಮೇಲೆ ರಾಜ್ಯವನ್ನು ಮಗನಿಗೆ ಕೊಟ್ಟುಬಿಟ್ಟು ಮತ್ತೆ ಜನ್ಮವಿಲ್ಲದ ವೈಕುಂಠವನ್ನು ಹೊಂದಿದನು. ಎಲೈ ರಾಜನೆ ! ಈ ರೀತಿಯಾಗಿ ಯಾವನು ಈ ಉತ್ತಮವಾದ ಸಫಲಾವ್ರತವನ್ನು ಮಾಡುತ್ತಾನೆಯೇ ಅವನು ಈ ಲೋಕದಲ್ಲಿ ಸುಖವನ್ನು ಹೊಂದಿ ಸತ್ತನಂತರ ಮೋಕ್ಷವನ್ನು ಹೊಂದುತ್ತಾನೆ. ಈ ಸಫಲೈಕಾದಶಿಯ ವ್ರತವನ್ನು ಮಾಡುವವರೇ ಧನ್ಯರು. ಅವರ ಜನ್ಮವೇ ಸಾರ್ಥಕವಾದುದು. ಈ ವಿಷಯದಲ್ಲಿ ಸಂದೇಹ ಪಡಬೇಡ. ಪಠನಾಚ್ಚ್ರವಣಾಚ್ಚೈವ ಕರಣಾಚ್ಚ ವಿಶಾಂ ಪತೇ । ರಾಜಸೂಯಸ್ಯ ಯಜ್ಞಸ್ಯ ಫಲಮಾಪ್ನೋತಿ ಮಾನವಃ ॥೪೮॥ ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ

ಸಂವಾದಾಂಶ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಪೌಷ ಕೃಷ್ಣ ಸಫಲೈಕಾದಶೀ ವರ್ಣನಂ ನಾಮ ದ್ವಿಚತ್ವಾರಿಂಶೋಽಧ್ಯಾಯಸ್ಸಮಾಪ್ತಃ ॥ ಈ ವ್ರತದ ವಿಷಯವನ್ನು ಓದಿದರೂ ಕೇಳಿದರೂ ವ್ರತವನ್ನು ಮಾಡಿದರೂ ಕೂಡ ಮನುಷ್ಯನು ರಾಜಸೂಯ ಯಜ್ಞದ ಫಲವನ್ನು ಹೊಂದುತ್ತಾನೆ. ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದೊಳಗಿನ ಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಪುಷ್ಯಕೃಷ್ಣ ಸಫಲೈಕಾದಶಿಯ ವರ್ಣನೆ ಎಂಬ ನಲವತ್ತೆರಡನೆಯ ಅಧ್ಯಾಯವು ಮುಗಿದುದು. (ಏಕಾದಶಿಯ ಈ ಕಥೆಯನ್ನು ಮೈಸೂರು ಜಯಚಾಮರಾಜೇಂದ್ರ ಒಡೆಯರ ಪುಸ್ತಕದಿಂದ ಸಂಗ್ರಹಿಸಲಾಗಿದೆ)

## ಪೌಷ ॥ ಬಹುಳ ॥ ಚತುರ್ದಶೀ ॥

**ಶ್ರೀ ವಿದ್ಯಾಧೀಶತೀರ್ಥರು (ಉತ್ತರಾದಿ ಮಠ)-** ಶ್ರೀ ವಿದ್ಯಾಧೀಶತೀರ್ಥರ ಪೂರ್ವಾಶ್ರಮದ ನಾಮ ನರಸಿಂಹಾಚಾರ್ಯ, ಪಾಂಡುರಂಗಿ ದಂಪತಿಗಳ ಸುಪುತ್ರರಾಗಿ ಈಗಿನ ಮಹಾರಾಷ್ಟ್ರದ ಗೋದಾವರಿ ತೀರದಲ್ಲಿರುವ ಪುಟ್ಟಹಳ್ಳಿ ಪುಣ್ಯಸ್ಥಂಭಪುರ ಎಂಬಲ್ಲಿ ಜನನ. ಶಾಸ್ತ್ರವಿದ್ಯಾಭಾಸವು ತಮ್ಮ ತಂದೆಯಲ್ಲಿಯೇ ಮುಂದುವರಿಸಿ ಕೇವಲ 16 ವರ್ಷಗಳಲ್ಲಿ ಕಾವ್ಯ, ಮೀಮಾಂಸ, ವ್ಯಾಕರಣ, ವೇದಾಂತದಲ್ಲಿ ಅದ್ಭುತ ಪ್ಯಾಂಡಿತ್ಯ ಪಡೆದು, ಅತ್ಯಂತ ಮೇಧಾವಿ ಯುವಕನೆಂದು ಗುರುತಿಸಿಕೊಂಡು ಪುಣ್ಯಸ್ಥಂಭಪುರ ಶಿಷ್ಯರಿಗೆ ಪಾಠ ಹೇಳಲು ಪ್ರಾರಂಭಿಸಿದರು. ಶ್ರೀ ನರಸಿಂಹಾಚಾರ್ಯರ ಪಾಂಡಿತ್ಯ ಮನಗೊಂಡು ಶ್ರೀ ವೇದವ್ಯಾಸತೀರ್ಥರು ಪರಮಹಂಸಾಶ್ರಮ ನೀಡಿ ಶ್ರೀ ವಿದ್ಯಾಧೀಶ ತೀರ್ಥ ಎಂದು ನಾಮಕರಣ ಮಾಡಿ, ಉತ್ತರಾದಿಮಠದ ಸದ್ವೈಷ್ಣವ ಪೀಠಕ್ಕೆ ಉತ್ತರಾಧಿಕಾರಿಯಾಗಿ ನಿಯಮಿಸಿದರು. ಶ್ರೀ ವಿದ್ಯಾಧೀಶತೀರ್ಥರು ತಮ್ಮ ಮೊಟ್ಟ ಮೊದಲ ಚಾತುರ್ಮಾಸ್ಯ ಸಾಂಗಲಿಯಲ್ಲಿ ನೆರವೇರಿಸಿದರು. ಐತಿಹಾಸಿಕ ಉಡುಪಿ ಚಾತುರ್ಮಾಸ್ಯದಲ್ಲಿ ಉಡುಪಿಯ ಉತ್ತರಾಧಿಮಠ ಜೀರ್ಣೋದ್ಧಾರ ಮಾಡಿದರು. ಇದೇ ಸಂದರ್ಭದಲ್ಲಿ ಶ್ರೀ ಕೃಷ್ಣ ಪ್ರೀತ್ಯರ್ಥವಾಗಿ ಇನ್ನು ಮುಂದೆ ಪಾದಚಾರಿಯಾಗೆ ಇರುವೆಂದು ಸಂಕಲ್ಪಿಸಿ, ಪಲ್ಲಕ್ಕಿ, ಚಾಮರಾದಿಗಳನ್ನು ವರ್ಜಿಸಿದರು. ಪ್ರತಿದಿನ ಶ್ರೀ ಕೃಷ್ಣನಿಗೆ 108 ನಮಸ್ಕಾರಗಳು ತಪ್ಪದೆ ಹಾಕುತಿದ್ದರು. ಶ್ರೀ ರಂಗ ಕ್ಷೇತ್ರದಲ್ಲಿ ತಮ್ಮ ಗುರುಗಳ ಮಹಾ ಸಮಾರಾಧನೆ ಮಾಡಿ ಎಂಟು ಸಹಸ್ರ ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನ, ದಾನ, ದಕ್ಷಣೆಗಳಿಂದ ತೃಪ್ತಿ ಪಡಿಸಿದರು. ಆಶ್ರಮದ ನಂತರ ಶ್ರೀ ವಿದ್ಯಾಧೀಶತೀರ್ಥರು ಉತ್ತರ ದೇಶದ

ಕಡೆ ಸಂಚಾರಕ್ಕೆ ಹೋದಾಗ ಅನೇಕ ವಾದಿಗಳನ್ನು ಜಯಸಿದ್ದು. ಗಯಾ ಕ್ಷೇತ್ರಕ್ಕೆ ಹೋದಾಗ ತಮ್ಮ ತಪೋಬಲದಿಂದ ಗಯಾವಾಡರ ಅಪೇಕ್ಷೆಯಂತೆ ತೀರ್ಥ ಪ್ರೋಕ್ಷಣೆಯಿಂದ ಒಣಗಿದ ವಟ ವೃಕ್ಷ ಚಿಗುರಿಸಿ ಗಯಾವಾಡರಿಗೆ ದೀಕ್ಷೆ ನೀಡಿ ಅನುಗ್ರಹಿಸಿದ ಹೆಗ್ಗಳಿಕೆ ಇವರದು. ಅತ್ಯಂತ ಶೀತಲ ಪ್ರದೇಶವಾದ ಬದರಿ ಕ್ಷೇತ್ರಕ್ಕೆ ಹೋದಾಗ ಬರೀ ಕೌಪೀನದಲ್ಲಿಯೇ ಸಂಚರಿಸಿದ್ದು ಇವರ ವೈರಾಗ್ಯಕ್ಕೆ ಸಾಕ್ಷಿ. ಕಾಶಿಯ ಭ್ರಮೇಂದ್ರ ದಂಡಿ, ಧರ್ಮಪುರಿಯ ಕಾಮದೇವನನ್ನು ವಾದದಲ್ಲಿ ಗೆದ್ದು ಸನ್ಮಾನಿತರಾದರು. ಪಂಡಿತ ಸಮೂಹ, ಶಿಷ್ಯರನ್ನು ಕೂಡಿಕೊಂಡು ಗೋದಾವರಿ ನದಿ ಪ್ರದಕ್ಷಿಣೆ ಮಾಡಿ, ಆಯಾ ಪ್ರದೇಶ ಜನರಿಗೆ ಅನುಗ್ರಹಿಸಿದ ಮಹಾನುಭಾವರು ಶ್ರೀ ವಿದ್ಯಾಧೀಶತೀರ್ಥರು. ಶೂರ್ಪಾಲಿಯಲ್ಲಿ ಸಾಧನ ದ್ವಾದಶಿಯದಿನ ತಮ್ಮ ಪೂರ್ವಾಶ್ರಮದ ತಾಯಿಯ ಹರಕೆಯಾದ ಲಕ್ಷ ಬ್ರಾಹ್ಮಣರ ಭೋಜನವು ಶ್ರೀ ಯದುಪತ್ಯಾಚಾರ್ಯರ ಮೂಲಕ ಹರಕೆ ಇಡೇರಿಸಿದ್ದು ಇತಿಹಾಸದಲ್ಲಿಯೇ ಅಪರೂಪದ ಘಟನೆ. ಶ್ರೀರಂಗ ಪಟ್ಟಣದ ಅಧಿಪತಿಗೆ ವ್ಯಾಧಿ ನಿವಾರಣೆ ಮಾಡಿದ ದೇವ ಧನ್ವಂತ್ರಿಯ ಉಪಾಸಕರು. ನ್ಯಾಯಸುಧಾ ಗ್ರಂಥಕ್ಕೆ ವಾಕ್ಯಾರ್ಥ ಚಂದ್ರಿಕಾ, ವಿಷ್ಣುತತ್ವ ನಿರ್ಣಯಕ್ಕೆ ವ್ಯಾಖ್ಯಾನ, ಏಕಾದಶಿ ತಿಥಿ ನಿರ್ಣಯದಂತಹ ಮೊದಲಾದ ಅಮೂಲ್ಯ ಗ್ರಂಥಗಳು ರಚಿಸಿದ ಜ್ಞಾನವರೇಣ್ಯರು. ತಮ್ಮ ವೈಷ್ಣವ ದೀಕ್ಷೆಯಿಂದ ಧರ್ಮದ ಚೌಕಟ್ಟಿನಲ್ಲಿ ಹೀಗೆ ಅನೇಕ ಸಮಾಜ ಪರವಾದ ಕಾರ್ಯಗಳು ಮಾಡುತ್ತಾ ಪುಷ್ಯ ಕೃಷ್ಣ ಚತುರ್ದಶಿಯಂದು ಪಾವನ ಗಂಗಾ - ಯಮುನೆಯ ಸಂಗಮದ ಏಕಚಕ್ರ ನಗರದಲ್ಲಿ ಸನ್ನಿಹಿತರಾದರು. ಶ್ರೀ ವಿದ್ಯಾಧೀಶ ತೀರ್ಥರ ಸಂನ್ಯಾಸ ಶಿಷ್ಯರಿಂದ ನಿರ್ಮಾಣವಾದ ಶ್ರೀ ವಿದ್ಯಾಧೀಶತೀರ್ಥರ ಶಿಲಾವಿಗ್ರಹವು ನಂತರದ ದಿನಗಳಲ್ಲಿ ಹಾವೇರಿ ಬಳಿಯ ರಾಣೇಬೆನ್ನೂರಿನಲ್ಲಿ ಪ್ರತಿಷ್ಠಾಪಿಸಲಾಯಿತು. ರಾಣೇಬೆನ್ನೂರಿನಲ್ಲಿ ಪ್ರತಿವರ್ಷ ಪುಷ್ಯ ಮಾಸದ ಕೃಷ್ಣಪಕ್ಷದ ಚತುರ್ದಶಿಯಂದು ವೈಭವದ ಆರಾಧನೆ ಜರಗುತ್ತದೆ.

## ಪೌಷ ॥ ಬಹುಳ ॥ ಅಮಾವಾಸ್ಯೆ

ಅಮಾವಾಸ್ಯೆಯಂದು ಭಾನುವಾರ, ವ್ಯತೀಹಾರ, ಶ್ರವಣ ನಕ್ಷತ್ರಗಳ ಯೋಗವಿದ್ದರೆ ಅರ್ಧೋದಯ ಪುಣ್ಯಕಾಲವೆನ್ನುತ್ತಾರೆ. ಇದು ಕೋಟಿ ಸೂರ್ಯಗ್ರಹಣಗಳಿಗೆ ಸಮಾನವಾದ ಪುಣ್ಯಕಾಲ. ಇದೇ ಯೋಗ ಮಾಘ ಕೃಷ್ಣ ಅಮಾವಾಸ್ಯೆಯೂ ಬರಬಹುದು. ಅರ್ಧೋದಯ ಕಾಲದಲ್ಲಿ ಎಲ್ಲಾ ನೀರು ಗಂಗೆಗೆ

ಸಮಾನವು; ಎಲ್ಲಾ ಶುದ್ಧ ಬ್ರಾಹ್ಮಣರೂ ಬ್ರಹ್ಮನಷ್ಟು ಪಾತ್ರರಾಗುತ್ತಾರೆ. ಏನು ದಾನ ಕೊಟ್ಟರೂ ಮೇರು ಪರ್ವತಕ್ಕೆ ಸಮಾನವು.

**ಪುರಂದರದಾಸರ ಆರಾಧನೆ** – ಭಕ್ತಿಪ್ರವಾಹದ ರೂವಾರಿ-ಕರ್ನಾಟಕಸಂಗೀತ ಪಿತಾಮಹ- ಮಾಧ್ವತತ್ವಪ್ರಸಾರದಕ್ಷ ಪುರಂದರದಾಸರ ಪುಣ್ಯದಿನ ಪೌಷಮಾಸದ ಅಮಾವಾಸ್ಯೆಯಂದು. ಉತ್ತರ ಕರ್ನಾಟಕ (ಕೆಲವು ಕಾಲ ದಕ್ಷಿಣ ಮಹಾರಾಷ್ಟ್ರ) ದಲ್ಲಿದ್ದ ಪುರಂದರಗಡದಲ್ಲಿ ವರದಪ್ಪ ನಾಯಕರೆಂಬ ಭಾಗವತ ಸಂಪ್ರದಾಯದ ಬ್ರಾಹ್ಮಣರಿದ್ದರು. ವೃತ್ತಿಯಲ್ಲಿ ಅವರು ಚಿನಿವಾರರು, ಬೆಳ್ಳಿ-ಬಂಗಾರದ ಒಡವೆಗಳನ್ನು ಒತ್ತೆಯಿಟ್ಟುಕೊಂಡು ಸಾಲ ಕೊಡುತ್ತಿದ್ದರು. ಮುತ್ತು-ರತ್ನಗಳ ವ್ಯಾಪಾರದಿಂದಲೂ ಅವರಿಗೆ ಅಪಾರ ಲಾಭ ಬರುತ್ತಿದ್ದಿತು. ಅವರ ಮಗ ಶ್ರೀನಿವಾಸನಾಯಕನಿಗೆ ಹುಟ್ಟಿದಿಂದಿನಿಂದ ವ್ಯವಹಾರ ದೃಷ್ಟಿಯೇ ಬೆಳೆಯಿತು. ಯಾವ ವ್ಯವಹಾರದಲ್ಲಿ ಯಾದರೂ ಅವನು ಲಾಭ ಪಡೆಯಬೇಕಾಗಿದ್ದಿತು. ಸ್ವೀಕರಿಸುವದೊಂದನ್ನೇ ತಿಳಿದಿದ್ದ ಅವನಿಗೆ ಏನನ್ನೂ ಕೊಡುವ ಅಭ್ಯಾಸವಿರಲಿಲ್ಲ. ಧನವೇ ಅವನ ದೇವರು! ಪ್ರಾಪ್ತವಯಸ್ಕನಾದ ಶ್ರೀನಪ್ಪನಿಗೆ ಸರಸ್ವತಿ ಎಂಬ ಸರ್ವ ಸದ್ಗುಣಸಂಪನ್ನೆಯಾದ ಹೆಂಡತಿ ದೊರೆತಳು. ಜಿಪುಣನಾಗಿದ್ದ ಶ್ರೀನಪ್ಪನಿಗೂ ಧಾರಾಳಿಯಾಗಿದ್ದ ಸರಸ್ವತಿಗೂ ದೃಷ್ಟಿಕೋಣಗಳು ಹೊಂದುತ್ತಲೇ ಇರಲಿಲ್ಲ. ಆದರೆ ಪತಿವ್ರತೆಯಾಗಿದ್ದ ಆಕೆ ಎಂದೂ ಗಂಡನಿಗೆ ಎದುರಾಡಿ ತನ್ನ ಅಭಿಪ್ರಾಯವನ್ನು ಸಮರ್ಥಿಸಲು ಪ್ರಯತ್ನಪಡಲಿಲ್ಲ. ಹಣ ಹೆಚ್ಚುತ್ತ ಹೆಚ್ಚುತ್ತ ಶ್ರೀನಪ್ಪನು ನವಕೋಟಿ ನಾರಾಯಣನೇ ಆದರೂ ಅವನಲ್ಲಿಗೆ ಬಂದ ಯಾಚಕರು ಅವನಿಂದ ಸ್ವಲ್ಪ ಪ್ರಯೋಜನವನ್ನೂ ಹೊಂದಲಾರದೆ ಹೋದರು. ಒಂದು ದಿನ ಒಬ್ಬ ಬ್ರಾಹ್ಮಣನು ಚಿನಿವಾರ ಕಟ್ಟೆಗೆ ಬಂದು ಶ್ರೀನಪ್ಪನನ್ನು ಕಂಡು ತನ್ನ ಮಗನ ಉಪನಯನಕ್ಕೆಂದು ಧನಸಹಾಯವನ್ನು ಕೋರಿದನು. ಕಿಲುಬು ಹಿಡಿದ ಕಾಸನ್ನೂ ಕೊಡದೆ ಶ್ರೀನಪ್ಪನು ಅವನನ್ನು ಮರುದಿನ ಬರುವಂತೆ ಹೇಳಿ ಕಳುಹಿಸಿ ಬಿಟ್ಟನು. ಆ ಬ್ರಾಹ್ಮಣನು ಮರುದಿನವೂ ಬಂದು ಅದೇ ಉತ್ತರವನ್ನು ಪುನಃ ಪಡೆದನು. ವ್ಯಾಪಾರಿಗೆ ಬೇಸರವಾಗುವಷ್ಟು ಬಾರಿ ಬಂದು ಹೋದ ಮೇಲೆ ಬ್ರಾಹ್ಮಣನು ಶ್ರೀನಪ್ಪನ ಮನೆಗೇ ಹೋಗಿ ಅವನ ಪತ್ನಿಯನ್ನು ಬೇಡಿದನು. ಆದರೆ ಕೊಡುವ ಯಾವ ಸ್ವಾತಂತ್ರ್ಯವೂ ಆಕೆಗೆ ಇರಲಿಲ್ಲ. ತನ್ನದೆಂಬ ಯಾವುದೂ ಇಲ್ಲವಲ್ಲ, ಎಂದು ಆಕೆ ಮರುಗಿದಳು. ಆಕೆಯ ಮೂಗಿನಲ್ಲಿದ್ದ ಮೂಗುತಿಯನ್ನು ನೋಡಿ ವಿಪ್ರನು, 'ಅಮ್ಮಾ,

ಅದು ನಿಮ್ಮ ತವರಿನವರು ಕೊಟ್ಟುದ್ದಲ್ಲವೇ? ಅದನ್ನು ನನಗೆ ಕೊಡುವ ಹಕ್ಕು ನಿಮಗೆ ಇದೆಯಲ್ಲ!' ಎಂದನು. ಬೇರೆ ಉಪಾಯವನ್ನು ಕಾಣದೆ ಆಕೆ ಭಯಭಕ್ತಿಗಳಿಂದ ಆ ಒಡವೆಯನ್ನು ವಿಪ್ರನ ಕೈಯಲ್ಲಿಟ್ಟಳು. ಆದರೆ ಹಣವನ್ನು ಪಡೆಯಲು ಬ್ರಾಹ್ಮಣನು ಶ್ರೀನಪ್ಪನ ಬಳಿಗೇ ಹೋಗ ಬೇಕಾಗಿದ್ದಿತು. 'ಸಾಹುಕಾರರೇ ಈ ಒಡವೆಯನ್ನು ಇಟ್ಟುಕೊಂಡಾದರೂ ನನಗೆ ಹಣ ಕೊಡಿ' ಎಂದು ಅವನು ಕೇಳಿಕೊಂಡನು. ಒಡವೆ ತನ್ನ ಮನೆಯದೇ ಎಂದು ನಾಯಕನಿಗೆ ತೋರಿತು. ಅದನ್ನು ಪೆಟ್ಟಿಗೆಯಲ್ಲಿ ಭದ್ರಪಡಿಸಿ, ಸ್ವಲ್ಪಕಾಲದ ಮೇಲೆ ತನ್ನನ್ನು ಕಾಣುವಂತೆ ಬ್ರಾಹ್ಮಣನಿಗೆ ಹೇಳಿ, ಶೀನಪ್ಪನು ಮನೆಗೆ ಹೋದನು. ಮನೆಯೊಳಗೆ ಪ್ರವೇಶ ಮಾಡಿದ ಕೂಡಲೆ ಅವನಿಗೆ ಪತ್ನಿಯ ನಿರಾಭರಣವಾಗಿದ್ದ ಮೂಗು ಕಾಣಿಸಿತು. ಕುಣ್ಣಗಳಿಂದ ಕೆಂಡಗಳನ್ನು ಕಾರುತ್ತ, 'ನಿನ್ನ ಮೂಗುತಿ ಎಲ್ಲಿ?' ಎಂದು ಅವನು ಕೇಳಿದನು. ನಿಜಾಽಕ್ಷಳಾದ ಆ ಸಾಧ್ವಿ ಸಮಯ ಸ್ಫೂರ್ತಿಯಿಂದ ದೇವರ ಮನೆಯಲ್ಲಿದೆ, ತರುತ್ತೇನೆ' ಎನ್ನುತ್ತಲೇ. ಒಳಗೆ ಹೋದಳು. ಅವಮಾನವನ್ನು ಸಹಿಸಲಾರದೆ ಆಕೆ ಪ್ರಾಣಗಳನ್ನು ಪರಿತ್ಯಜಿಸಲು ನಿಶ್ಚಯಿಸಿ ಒಂದು ಬಟ್ಟಲಲ್ಲಿ ವಜ್ರವನ್ನರೆದು ತುಂಬಿ ಕುಡಿದು ಬಿಡಬೇಕೆಂದು ಯೋಚಿಸಿದಳು. ಆಕೆ ಬಟ್ಟಲನ್ನು ಎತ್ತಿಕೊಳ್ಳುತ್ತಲೇ ಅದರಲ್ಲಿ ಶಬ್ದವಾಗಿ ಮೂಗುತಿ ಕಾಣಬಂದಿತು. ಭಗವಂತನ ಅಪಾರ ಕರುಣೆಗಾಗಿ ಹಿಗ್ಗಿ, ಮೂಗುತಿಯನ್ನು ಆಕೆ ಗಂಡನ ಕೈಯಲ್ಲಿಟ್ಟಳು. ಆಶ್ಚರ್ಯಚಕಿತನಾದ ನಾಯಕನು ಅದನ್ನು ತೆಗೆದುಕೊಂಡು ಅಂಗಡಿಗೆ ಹೋಗಿ ತಾನಿಟ್ಟಿದ ಮೂಗುತಿಯನ್ನು ಹುಡುಕಿದಾಗ, ಅಲ್ಲಿ ಅದು ಕಾಣಬರಲಿಲ್ಲ! ಪುನಃ ಮನೆಗೆ ಬಂದು ಪತ್ನಿಯಿಂದ ವೃತ್ತಾಂತವನ್ನೆಲ್ಲ ತಿಳಿದ ಶ್ರೀನಪ್ಪನು ತನಗಿಂತ ಆಕೆಯೇ ಪುಣ್ಯವಂತಳೆಂದು ಭಾವಿಸಿದನು. ಭಗವಂತನೇ ಬಂದು ತನ್ನನ್ನು ಪರೀಕ್ಷಿಸಿದ; ತಾನು ಜಿಪುಣನೆಂದು ತೋರಿಸಿಕೊಂಡರೆ, ತನ್ನ ಪತ್ನಿ ಭಗವದ್ಭಕ್ತಳಾಗಿದ್ದು ಅವನ ಸಾಕ್ಷಾತ್ಕಾರವನ್ನು ಪಡೆದಳು! ಆ ಘಟನೆ ಶ್ರೀನಪ್ಪನಾಯಕನ ಮನಸ್ಸನ್ನು ಕಲಕಿತು. ಅಶಾಶ್ವತವಾದ ಧನಕನಕಾದಿಗಳಿಗೆ ಮನಸೋತು, ಮಾನವತೆಯನ್ನೇ ಮರೆತು, ಭಗವಂತನಿಂದ ತಾನು ದೂರವಿದ್ದುದಕ್ಕಾಗಿ ಅವನಿಗೆ ಪಶ್ಚಾತ್ತಾಪ ಬಂದಿತು. ಆ ಕೂಡಲೆ ನಾಯಕನು ತನ್ನ ಎಲ್ಲ ಸಂಪತ್ತನ್ನೂ ಪಾತ್ರವರಿತು ಜನರಿಗೆ ಹಂಚಿಕೊಟ್ಟು ಹೆಂಡತಿ ಮಕ್ಕಳೊಡನೆ ಮನೆಬಿಟ್ಟು ಹೊರಟುಬಿಟ್ಟನು! ನಾಯಕನ ವೈರಾಗ್ಯಕ್ಕೆ ಒಂದು ಗುರಿಬೇಕಾಗಿದ್ದಿತು. ಮುಂದೇನು ಮಾಡಬಹುದು, ಎಂಬುದೇ ಅವನ ಪ್ರಶ್ನೆಯಾಗಿದ್ದಿತು.

ಪಂಢರಪುರದ ಪಾಂಡುರಂಗ ವಿಠ್ಠಲನ ಸಂದರ್ಶನ ಪಡೆದು ಹಂಪೆಯಲ್ಲಿರುತ್ತಿದ್ದ ವಯೋವೃದ್ಧರಾಗಿದ್ದ ವ್ಯಾಸರಾಯರ ಬಳಿಗೆ ಅವನು ಬಂದನು. ಶ್ರೀನಪ್ಪನಿಗೆ ವ್ಯಾಸರಾಯರಂತಹ ಗುರುಗಳೇ ಬೇಕಾದ್ದರೂ, ಅವರಿಗೂ ಅಂತಹ ಶಿಷ್ಯನೊಬ್ಬನ ಅವಶ್ಯಕತೆ ಇದ್ದಿತು. ಗುರುಗಳು ಅವನಲ್ಲಿ ಪರಮಾದರ ಮಾಡಿ ಮಾಧ್ವ ತತ್ತ್ವಗಳನ್ನೆಲ್ಲ ತಿಳಿಯ ಹೇಳಿ, ಜನರಿಗೆ ಸುಲಭವಾಗಿ ಅರ್ಥವಾಗುವಂತೆ ಕನ್ನಡದಲ್ಲಿ ಪದಗಳನ್ನು ರಚಿಸಬೇಕೆಂದು ಅಪ್ಪಣೆ ಮಾಡಿದರು. ಆದಕ್ಕಾಗಿ 'ಪುರಂದರ ವಿಠ್ಠಲ' ಎಂಬ ಅಂಕಿತವನ್ನೂ ಅವನಿಗೆ ದಯಪಾಲಿಸಿದರು. ವ್ಯಾಸರಾಯರ ಪರಮಾದರಕ್ಕೆ ಪಾತ್ರನಾದ ಶ್ರೀನಪ್ಪನಾಯಕನು ಅಂದಿನಿಂದ ಪುರಂದರದಾಸರು ಎನ್ನಿಸಿಕೊಂಡನು. ಕಾಲಿಗೆ ಗೆಜ್ಜೆಕಟ್ಟಿ, ತಂಬೂರಿ ಮೀಟುತ್ತಾ ತಾವೇ ರಚಿಸಿದ (ಅನೇಕ ವೇಳೆ ಸಮಯ ಸ್ಫೂರ್ತಿಯಿಂದ ಅಲ್ಲೇ ರಚಿಸಿದ) ದೇವರನಾಮಗಳನ್ನು ಹಾಡುತ್ತಾ ಜನರಲ್ಲಿ ವಿಷ್ಣುಭಕ್ತಿಯನ್ನು ಮೂಡಿಸಿ ಪುರಂದರದಾಸರು ಕೃತಾರ್ಥರಾದರು. ತಾಳಲಯ ಬದ್ಧವಾದ ಅವರ ಲಲಿತವಾದ ಹಾಡುಗಳು ಆಬಾಲವೃದ್ಧರನ್ನೂ ಆಕರ್ಷಿಸಿದವು. ವ್ಯಾಸರಾಯರೂ ಅವರ ಸಂಕೀರ್ತನೆಗಳನ್ನು ಮೆಚ್ಚಿ, ದಾಸರೆಂದರೆ ಪುರಂದರದಾಸರಯ್ಯ! ಪಾತಕನ ತೆರದಿ ಪದಗಳಿನೆ ತಾ ಬೊಗಳಿ - ಎನ್ನುತ್ತಾ ಮುಕ್ತ ಕಂಠದಿಂದ ಹೊಗಳಿದರು.

ಶ್ರೀಪುರಂದರದಾಸರ ಹಾಡು - ದಾಸರೆಂದರೆ ಪುರಂದರದಾಸರಯ್ಯ - ವಾಸುದೇವ ಕೃಷ್ಣನ್ನ ಸೂಸಿ ಪೂಜಿಸುವ ಗ್ರಾಸಕಿಲ್ಲದೆ ಪೋಗಿ ಪರರ ಮನೆಗಳ ಪೊಕ್ಕು ದಾಸನೆಂದು ತುಲಸಿಮಾಲೆ ಧರಿಸಿ ಬ್ಯಾಸರಿಲ್ಲದೆ ಆವರ ಕಾಡಿಬೇಡಿ ಬಳಲಿಸುವ - ಕಾಸುಗಳಿಸುವ ಪುರುಷ ಹರಿದಾಸನೇ ಡಂಭಕದಿ ಹರಿಸ್ಮರನೆ ಮಾಡಿ ಜನರ ಮುಂದೆ - ಸಂಭ್ರಮದಿ ತಾನುಂಬ ಊಟ ಬಯಸಿ ಅಂಬುಜೋದ್ಭವ ಪಿತನ ಆಗಮುಗಳರಿಯದೆ - ತಂಬೂರಿ ಮೀಟಲವ ಹರಿದಾಸನೇ ಯಾಯಿವಾರವ ಮಾಡಿ ವಿಪ್ರರಿಗೆ ಮೃಷ್ಟಾನ್ನ - ಪ್ರೀಯದಲಿ ತಾನೊಂದು ಕೊಡದ ಲೋಭಿ ಮಾಯಿ ಸಂಸಾರದಲಿ ಮಮತೆ ಹೆಚ್ಚಾಗಿಟ್ಟು - ಗಾಯನವ ಮಾಡಲವ ಹರಿದಾಸನೇ ಪಾತಕಾರನಂತೆ ಪದಗಳೆ ಪೇಳುತ್ತ - ಕೂಟಜನ ಮನ ಸೋತೋಷಬಡಿಸಿ ಗೂಟನಾಮವನಿಟ್ಟು ಕೋವಿದನು ತಾನೆನುತ - ಬೂಟಿಕೆಯ ಮಾಡಿದವ ಹರಿದಾಸನೇ

ನೀತಿಯೆಲ್ಲವನರಿತು ನಿಗಮವೇದ್ಯನ ನಿತ್ಯ - ಮಾತುಮಾತಿಗೆ ಬಿಡದೆ ವರ್ಣಿಸುತಲಿ ಗೀತ ನರ್ತನದಿ ಶ್ರೀಕೃಷ್ಣನ್ನ ಪೂಜಿಸುವ - ಪೂತಾತ್ಮ ಪುರಂದರದಾಸರಿವರಯ್ಯ. ಮನ್ಮನೋಭೀಷ್ಟವರದಂ ಸರ್ವಾಭೀಷ್ಟಫಲಪ್ರದಮ್ । ಪುರಂದರಗುರುಂ ವಂದೇ ದಾಸಶ್ರೇಷ್ಠಂ ದಯಾನಿಧಿಮ್ ॥

## ಪೌಷಮಾಸದಲ್ಲಿ ಹೇಳಬೇಕಾದ ಹಾಡು

**ಪೌಷಮಾಸದ ಧಾನ್ಯಲಕ್ಷ್ಮಿ ಹಾಡು** – ದಯಮಾಡಿ ಬಾರಮ್ಮ ಧಾನ್ಯಲಕ್ಷ್ಮಿ ಶಿವ ಪಾರ್ವತಿಯೊಡನೆ ॥ಪ॥ ಪುಷ್ಯಮಾಸದಿ ಸಂಕ್ರಾತಿಯೊಳು ಶುದ್ಧಾ ಸಂಕ್ರಮಣದಿ । ಉತ್ತರಾಯಣ ಪುಣ್ಯಕಾಲವು ಇರಲು । ಬ್ರಾಹ್ಮಣ ಸುವಾಸಿನಿಯರು ಕೂಡಿ । ಬಂಧುಮಿತ್ರರಿಗೆಳ್ಳು ಸಕ್ಕರೆ ಕೊಡುವರು ॥1॥ ಧಾನ್ಯಲಕ್ಷ್ಮಿಯಾ ಪೂಜೆಯ ಮಾಡಿ ಹೊಸ ಧಾನ್ಯವನು ದಾನವ ಮಾಡಿ । ಹೊಸ ವಸ್ತ್ರಗಳ ಧರಿಸಿಕೊಂಡು ಹರುಷದಿ ಹಬ್ಬವ ಆಚರಿಸುವರು ॥2॥ ಕಪಿಲನಾಮಕ ಪರಮಾತ್ಮನ ದಯದಿ ಗಂಗೆ ಗೌರಿಯಾ ಪೂಜಿಸಿ । ಸಜ್ಜನರು ದಾನ ಧರ್ಮನ ಮಾಡುತ ವೈಭವದಿ ನಿನ್ನ ಕೃಪೆಗೆ ಪಾತ್ರರಾಗುವರಮ್ಮಾ ॥3॥

# ಮಾಘ ಮಾಸದ ಧರ್ಮಗಳು

ಮಾಸನಿಯಾಮಕ ಕಮಲಾಪತಿಮಾಧವಾಯ ನಮಃ

ಕಮಲಾ ಸಮೇತ ಮಾಧವನ ಪ್ರೀತಿಗಾಗಿ ಈ ಕೆಳಕಂಡ ಧರ್ಮಗಳನ್ನು ನಡೆಸಬೇಕು.

ಮಾಘಮಾಸದಲ್ಲಿ ಬಂಗಾರದ ಮಾಧವಪ್ರತಿಮೆಯ ದಾನದಿಂದ ನೂರು ಕುಲ ಉದ್ಧಾರವಾಗುವುದರೊಂದಿಗೆ ಕಾಲಕ್ರಮದಲ್ಲಿ ಸಾಧನಾನುಷ್ಠಾನಗಳನ್ನು ನಡೆಸಿ ಮೋಕ್ಷ ಸೇರುವನು. ಶಿಂಶುಮಾರ ಪ್ರತಿಮೆದಾನದಿಂದ ಶಿಶುಹತ್ಯೆಯ ಪಾಪದಿಂದ ಬಿಡುಗಡೆಯಾಗುವುದು. ಕೋಟಿ ಭಾರ ಸುವರ್ಣದಾನದಿಂದ ಬರುವ ಪುಣ್ಯ ಮಾಘದಲ್ಲಿ ಗೋಪಿಚಂದ ದಾನದಿಂದ ಬರುತ್ತದೆ. ವೈಶ್ವದೇವಕ್ಕಾಗಿ ಅಕ್ಕಿಯನ್ನು ದಾನ ಕೊಡುವುದರಿಂದ ಪೂರ್ಣಾಯುಷ್ಯ ಪ್ರಾಪ್ತಿಯಾಗುವುದು. ಪ್ರಸ್ಥ ಪ್ರಮಾಣದ ತುಪ್ಪದಾನದಿಂದ ಅಲಕ್ಷ್ಮೀಪರಿಹಾರ ಅಪಮೃತ್ಯು ಪರಿಹಾರವಾಗುವುದು. ಮಾಘ ಪೌರ್ಣಮಿಯಂದು ವಿಷ್ಣುಮಂದಿರದಲ್ಲಿ ತೈಲದೀಪದಾನದಿಂದ ಕಾಲಮೃತ್ಯು ಜಯವಾಗುತ್ತದೆ. ಶೀತಾರ್ತನಾದ ದ್ವಿಜನಿಗೆ ಬೆಚ್ಚನೆಯ ವಸ್ತ್ರದಾನ ಮಾಡಿದರೆ ಪೂರ್ಣಾಯುಷ್ಯ ಪ್ರಾಪ್ತಿ. ಕಾಲಕ್ರಮೇಣ ವಿಷ್ಣುಲೋಕಪ್ರಾಪ್ತಿ. ಮಾಘಮಾಸದಲ್ಲಿ ಪ್ರತಿನಿತ್ಯವೂ ಬ್ರಾಹ್ಮಣನಿಗೆ ತಾಂಬೂಲದಾನ ಕೊಡುವುದರಿಂದ ಪೂರ್ಣಾಯುಷ್ಯಪ್ರಾಪ್ತಿ. ಎಳ್ಳು ತುಂಬಿದ ಪಾತ್ರೆಯ ದಾನದಿಂದ ದಾರಿದ್ರ್ಯ ದೋಷ ಪರಿಹಾರವಾಗಿ ಐಶ್ವರ್ಯಪ್ರಾಪ್ತಿಯಾಗುವುದು. ಹೆಂಗಸರು ಸುಮಂಗಲಿಯರಿಗೆ ಮೊರದ ಬಾಗಿನ ದಾನವನ್ನು ಕೊಡುವುದರಿಂದ ಮುತ್ತೈದೆತನ ಸ್ಥಿರವಾಗುವುದು. ಚಂದನ ರೂಪಗಳ ದಾನದಿಂದ ಇಷ್ಟಾರ್ಥಪ್ರಾಪ್ತಿಯಾಗುವುದು. ಕಂಚಿನ ಪಾತ್ರೆ ದಾನದಿಂದ ನೂರಾರು ಕನ್ಯಾದಾನದ ಫಲವನ್ನು ಪಡೆಯುವರು. ತುಪ್ಪತುಂಬಿದ ಕಂಚಿನ ಪಾತ್ರೆಯನ್ನು ಬತ್ತಿ ಸಹಿತವಾಗಿ ದಾನ ಕೊಡುವುದರಿಂದ ವೈಧವ್ಯ ಬರುವುದಿಲ್ಲ. ಮಾಂಗಲ್ಯವುಂಟಾಗುತ್ತದೆ. ಮಾಘ ಪೌರ್ಣಮಿಯಂದು ಅಶ್ವದಾನದಿಂದ ಗುರುಪತ್ನೀ ಗಮನದ ಪಾಪ ಪರಿಹಾರವಾಗುವುದು.

**ಮಾಘಮಾಸ ನಿಯಮಗಳು –** ಪ್ರಾತಃಸ್ನಾನ, ಭೂಮಿಯಲ್ಲಿ ಮಲಗುವುದು, ಬ್ರಹ್ಮಚರ್ಯ, ಒಪ್ಪತ್ತು ಭೋಜನ, ಹವಿಷ್ಯಾನ್ನ ಭೋಜನ ಇವೆಲ್ಲಾ ಮಾಘಮಾಸದ ನಿಯಮಗಳು, ಅಭ್ಯಂಜನವನ್ನು ಮಾಡಿಕೊಳ್ಳಬಾರದು.

**ತುಲಸೀದಾನ –** ಸುವರ್ಣ ತುಲಸೀದಾನಾತ್ ಬ್ರಹ್ಮಃ ಕಾರ್ಯಸಂಭವಾತ್ । ಪಾಪಂ ಪ್ರಶಮನಂ ರೂಪ ಸರ್ವೇ ಸಂತು ಮನೋರಥಾಃ ॥' ಎಂಬ ಮಂತ್ರದಿಂದ ಬಂಗಾರದ ತುಲಸೀದಳವನ್ನು ದಾನ ಮಾಡಬೇಕು.

**ಶಾಲಗ್ರಾಮ ದಾನ –** ಶಾಲಿಗ್ರಾಮ ಶಿಲಾಪುಣ್ಯ ಭಕ್ತಿಮುಕ್ತಿ ಪ್ರದಾಯಿನೀ । ಶಾಲಗ್ರಾಮಶಿಲಾ ನಿತ್ಯಂ ಮಮ ಸಂತು ಮನೋರಥಾಃ ॥ ಚಕ್ರಾಂಕಿತ ಸಮಾಯುಕ್ತಾ ಶಾಲಿಗ್ರಾಮ ಶಿಲಾಶುಭಾ । ಸಾನೇವೈದ ಉಭಯೋವಾನಂಭಿತಂ ಫಲಮ್ ॥' ಎಂಬ ಮಂತ್ರದಿಂದ ಶಾಲಗ್ರಾಮವನ್ನು ದಾನ ಮಾಡಬೇಕು.

**ವೇಣೀದಾನ –** ಪ್ರಯಾಗದಲ್ಲಿ ಸುಮಂಗಲಿಯರು ಹರಳಿನ ಕಡೆಯ ಎರಡು ಅಂಗುಲಗಳನ್ನು ಸ್ನಾನ ಮಾಡಿ, ತ್ರಿವೇಣೀ ಪೂಜೆಯನ್ನು ಮಾಡಿ, ಕತ್ತರಿಸಿದ ಹೆರಳಿನ ಸಮೇತ ಮೊರದ ಬಾಗಿನವನ್ನು ಕೈಯಲ್ಲಿ ಧರಿಸಿ, ಅದರಲ್ಲಿ ಬಂಗಾರದ ವೇಣೀ ಮುತ್ತು ರತ್ನಗಳನು ಇಟ್ಟು, 'ವೇಣ್ಯಂ ವೇಣೀ ಪ್ರದಾನೇನ ಮಮ ಪಾಪಂ ವ್ಯಪೋಹತು । ಜನ್ಮಾಂತರೇಷ್ವಪಿ ಸದಾ ಸೌಭಾಗ್ಯಂ ಮಮ ವರ್ಧತಾಮ್ ॥' ಎಂಬ ಮಂತ್ರದಿಂದ ತ್ರಿವೇಣೀ ಸಂಗಮದಲ್ಲಿ ಹಾಕಬೇಕು. ಆಗ ಬ್ರಾಹ್ಮಣರು 'ಸುಮಂಗಲೀರಿಯಂ ವಧುಃ' ಎಂಬ ಮಂತ್ರವನ್ನು ಪಠಿಸಬೇಕು.

**ಮಾಘ ಮಾಸದ ಜ್ಞಾನಕಾರ್ಯಗಳು –** ಶ್ರೀಮದ್ಭಾಗವತ ಪಾರಾಯಣ, ಭಗವದ್ಗೀತಾ ಪಾರಾಯಣ, ವಿಷ್ಣುಸಹಸ್ರನಾಮ ಹಾಗೂ ಮಾಧ್ವಸ್ತವರಾಜಗಳ ಪಾರಾಯಣವು ವಿಶೇಷ ಪುಣ್ಯಪ್ರದ. ಮಾಘಸ್ನಾನವನ್ನು ಮಾಡಿ ಮಾಧವ ಸ್ತವರಾಜ ಪಾರಾಯಣ ಮಾಡಿದರೆ ವಿಷ್ಣುಸಹಸ್ರನಾಮದ ಎರಡುಪಟ್ಟು ಪುಣ್ಯವು ಲಭಿಸುತ್ತದೆ.

## ಮಾಘ ॥ ಶುದ್ಧ ॥ ಪ್ರತಿಪತ್

ಪುಷ್ಯಮಾಸದ ಹುಣ್ಣಿಮೆಯಿಂದ ನಿತ್ಯವೂ ಮಾಘಸ್ನಾನವನ್ನು ಆಚರಿಸಬೇಕು ಎಂದು ಮಧ್ವರಾತ್ರೋತ್ಸವವು ಪ್ರಾರಂಭವಾಗುತ್ತದೆ. ಪ್ರತಿಯೊಬ್ಬರೂ ಸರ್ವಮೂಲ ಪಾರಾಯಣವನ್ನು ಪ್ರಾರಂಭಮಾಡಬೇಕು. ಹಾಗೂ ಮಧ್ವವಿಜಯದ ಪಾರಾಯಣವನ್ನು ಪ್ರಾರಂಭಮಾಡಬೇಕು. ನಿತ್ಯವೂ ಎರಡು ಸರ್ಗ ಮಧ್ವವಿಜಯ ಪಾರಾಯಣನ್ನು ಮಾಡಬೇಕು.

## ಮಾಘ ॥ ಶುದ್ಧ ॥ ದ್ವಿತೀಯಾ

ಇಂದು ಪ್ರತಿಯೊಬ್ಬರೂ ಚಂದ್ರದರ್ಶನವನ್ನು ಮಾಡಬೇಕು. ಹಾಗೂ ಚಂದ್ರನಲ್ಲಿರುವ ಧನ್ವಂತ್ರಿರೂಪಿಯಾದ ಅನುಗ್ರಹವನ್ನು ಪಡೆದುಕೊಳ್ಳಬೇಕು. ಅದಕ್ಕಾಗಿ ಧನ್ವಂತ್ರಿಯ ಸ್ತೋತ್ರವನ್ನು, ವಾಯುದೇವರ ಸ್ತೋತ್ರವನ್ನು, ಚಂದ್ರದೇವರ ಸ್ತೋತ್ರವನ್ನು ಮಾಡಬೇಕು.

ಶ್ರೀ ಸಂಕರ್ಷಣತೀರ್ಥರು (ಶ್ರೀಪಾದರಾಜ ಮಠ) ಶ್ರೀನಗರ ಕಾಶ್ಮೀರ (ಕ್ರಿ.ಶ.೧೩೩೪-೧೩೫೪) - ಶ್ರೀಲಕ್ಷ್ಮೀಧರ ಸಂಜಾತಾನ್ ಸಂಕರ್ಷಣ ಮುನೀಶ್ವರಾನ್ । ಭಾಷ್ಯ ಪ್ರವಚನಾ ಸಕ್ತಾನ್ ಗುರೂನ್ವಂದೇ ನಿರಂತರಾಮ್ ॥

## ಮಾಘ ॥ ಶುದ್ಧ ॥ ತೃತೀಯಾ

ಇಂದು ಕುಮಾರಿಯರು ಮೌನಗೌರೀವ್ರತವನ್ನು ಆಚರಿಸುತ್ತಾರೆ. ಐದುವರ್ಷಗಳ ಈ ವ್ರತವನ್ನು ಆಚರಿಸಬೇಕು. ಸ್ನಾನ ಮಾಡಿ ಪೂಜೆ ಮುಗಿಯುವ ತನಕ ಮಾತನಾಡಬಾರದು. ಹಾಗೂ ಊಟ ಮಾಡುವ ಸಂದರ್ಭದಲ್ಲಿ ಮಾತನಾಡಬಾರದು. ಇದು ಅಧಮಪಕ್ಷ. ದಿನಪೂರ್ತಿ ಮಾತನಾಡದೇ ಇರುವುದೇ ಉತ್ತಮಪಕ್ಷ. ಪಾರ್ವತಿಯ ಕುರಿತಾದ ಹಾಡುಗಳನ್ನು ಹೇಳುತ್ತಾ, ಮೌನಗೌರೀವ್ರತವನ್ನು ಆಚರಿಸಬೇಕು.

(ನಮ್ಮ ಸಂಸ್ಥೆಯಿಂದ ಪ್ರಕಟಣೆಗೊಂಡ ಸ್ವರ್ಣಗೌರಿಪೂಜಾವಿಧಾನ ಎಂಬ ಪುಸ್ತಕವನ್ನು ತೆಗೆದುಕೊಂಡು ಕುಮಾರಿಯ ತಂದೆಯು ತನ್ನ ಮಗಳ ಮೂಲಕ ಮೌನಗೌರೀಪೂಜೆಯನ್ನು ಮಾಡಿಸಬೇಕು. ಆ ಪುಸ್ತಕದಲ್ಲಿ ಸ್ವರ್ಣಗೌರಿ ಎಂಬ ಪದವು ಉಲ್ಲೇಖಗೊಂಡಿರುತ್ತದೋ, ಆ ಸ್ಥಳದಲ್ಲಿ ಮೌನಗೌರಿ ಎಂಬ ಪದವನ್ನು ಬಳಸಿಕೊಂಡು ಪೂಜೆ ಮಾಡಿಸಬೇಕು. ತಾಯಿಯು ಮೌನಗೌರಿಯ ಪೂಜೆಯನ್ನು ಮಾಡಿಸುವುದಾದರೆ, ಅದೇ ಪುಸ್ತಕದ ಕೊನೆಯಲ್ಲಿ ನೀಡಲ್ಪಟ್ಟ ಪಾರ್ವತಿಯ ಕುರಿತಾದ ಹಾಡುಗಳನ್ನು ಹೇಳುತ್ತಾ ಪೂಜೆಯನ್ನು ಮಾಡಿಸಬೇಕು. ಪೂಜಾವಿಧಾನ ಹಾಗೂ ಪೂಜೆಗೆ ಬೇಕಾದ ಸಾಮಗ್ರಿಗಳು ಎಲ್ಲವನ್ನೂ ಅದೇ ಪುಸ್ತಕದಿಂದ ತಿಳಿದುಕೊಳ್ಳಬೇಕು. ಕೊನೆಯಲ್ಲಿ ಪದ್ಯದ ರೂಪದಲ್ಲಿರುವ ಈ ಕಥೆಯನ್ನು ಪಠಿಸಿ, ಮಕ್ಕಳಿಗೆ ಕಥೆಯನ್ನು ಹೇಳಿ, ಗೌರಿಯ ಬಗ್ಗೆ ಭಕ್ತಿಯನ್ನು ಹೆಚ್ಚಿಸಬೇಕು.

# ಮಾಘಮಾಸದ ಗೌರೀ ಹಾಡು

ಕರಿಮುಖನ ಬಲಗೊಂಡು ಕರುಣಿಶಾರದೆರಗಿ ಗುರುವಿನಂಘ್ರಿಯ ಸ್ಮರಿಸಿ ಮುದದಿ ಕೈಲಾಸವಾಸನ ಕರುಣಕಟಾಕ್ಷದಲಿ ಮಾಘದ ಗೌರಿಯ ಕಥೆಯ ಪೇಳ್ವೆ ॥೧॥ ಧರೆಯೊಳುತ್ತಮವಾದ ಬಹುಪುಣ್ಯ ದೇಶದಲಿ ಪುಣ್ಯಶೀಲನೆಂಬೋ ವಿಪ್ರನಿರಲು ಪುತ್ರರೇಽಳು ಮಂದಿ ಸತ್ಯವತಿ ಸಹಿತಲೆ ಕಷ್ಟದಾರಿದ್ರ್ಯ ದುಃಖದಲ್ಲಿದ್ದರು ॥೨॥ ಒಂದು ದಿವಸ ಸತ್ಯವತಿ ಪತಿಯ ಪಾದಕ್ಕೆರಗಿ ತಾಳಲಾರೆನು ನಾನು ದಾರಿದ್ರ್ಯವ ಪುತ್ರರನು ಒಡಗೊಂಡು ಮತ್ತೊಂದು ಊರಿಗೆ ಪೋಗಿ ಬರುವೆಽನೆಂದು ಹೊರಟಳಾಗ ॥೩॥ ದಾರಿಯಲಿ ಬರುತಿರಲು ಅಸ್ತಮವಾಗಲು ಪುತ್ರರು ಹಸಿವೆಂದು ಅಳುತಿರಲು ಒಬ್ಬ ಗೌಡನ ಮನೆಯ ಬಾಗಿಲಲಿ ಮಲಗಿರಲು ಬೆಳಗಾಗಲಿ ಜಲವ ಕೊಡುವೆನೆನಲು ॥೪॥ ಸೂರ್ಯ ಉದಯಕೆ ಮುನ್ನ ಬಾಲಕರನೊಡಗೊಂಡು ಬೇಗದಿಂಗಂಗಾನದಿಯು ಬರಲು ಮಾನಿನಿಯರೆಲ್ಲರು ಪರಮ ಸಂತೋಷದಿ ಮಾಘದ ಗೌರಿಯ ಪೂಜಿಸುತ್ತಿದ್ದರು ॥೫॥ ಈ ವ್ರತವ ಹೇಗೆ ಮಾಡೋದು ಎನಗೆ ಹೇಳಿರೆಂದು ಸತ್ಯವತಿಯ ತಾ ಬೆಸಗೊಳ್ಳಲು ಮಿತ್ರೆಯಽರೆಲ್ಲರು ಅತ್ಯಂತ ಹರುಷದಲಿ ಪೂಜಾವಿಧಾನವನು ಹೇಳುತಿರಲು ॥೬॥ ಮಾಘಶುದ್ಧ ಮೊದಲಾದ ಮೂವತ್ತು ದಿನದವರೆಗೂ ಸೂರ್ಯ ಉದಯಕೆ ಮುನ್ನ ಮೈಯ ತೊಳೆದು ಮರಳ ಗೌರೀ ತೆಗೆದು ಬೇಗ ಪೂಜೆ ಮಾಡೆ ದಾರಿದ್ರ್ಯ ಪತನವಾಗಿ ಬಹು ಭಾಗ್ಯವಹುದು ॥೭॥ ಸತ್ಯವತಿ ಶೀಘ್ರದಲ್ಲಿ ಮತ್ತೆ ಮೈಯನು ತೊಳೆದು ಮಂಗಳಗೌರಿ ತೆಗೆದು ಪೂಜೆ ಮಾಡಿ ಮಂಗಳಾರತಿ ಮಾಡಿ ಅಕ್ಷತೆಯುಳಿಸಿ ಸುತ್ತಲೂ ನವವಿಧವಾದ್ಯಗಳೆಸೆದವು॥೮॥ ಸತ್ಯವತಿ ಮಾಡುವೂ ಭಕ್ತಿ ಪೂಜೆಗೆ ಮೆಚ್ಚಿ ಇಚ್ಚೆಯಾದ ವರಗಳನು ಬೇಡು ಎನಲು ದಾರಿದ್ರ್ಯ ಹತವಾಗಿ ಬಲುಭಾಗ್ಯ ಬರಬೇಕು ನೀನೆಮ್ಮ ಹೃದಯದಲಿ ಇರಲು ಬೇಕು ॥೯॥ ಇಷ್ಟವರಗಳ ಕೊಟ್ಟೆ ನಾನೆಂದಳು ಸುತ್ತಲೂ ಸತಿಯರು ನಿಂತಿರಲು ಮಿತ್ರೆಯೊಬ್ಬಳು ಬಂದು ಅಂಜದಿಯೆ ನೀನಾರು ಸತ್ಯವತಿಗುಪಚಾರ ಮಾಡುತಿಹಳು ॥೧೦॥ ಮುತ್ತು ಮಾಣಿಕ್ಯವು ಪಟ್ಟೆನೀಲವು ಬಿಗಿದಿಹ ಪಲ್ಲಕ್ಕಿಯ ತಂದಿಹರು ಪುತ್ರರನು ಒಡಗೊಂಡು ಸತ್ಯವತಿ ಶೀಘ್ರದಲಿ ತನ್ನ ಪಟ್ಟಣಕಾಗಿ ಸಾಗಿ ಬರಲು ॥೧೧॥ ಪರ್ಣಶಾಲೆಗಳೆಲ್ಲ ಹೊಳೆವೊ ಅರಮನೆಯಾಯ್ತು ಚಿನ್ನದುಪ್ಪರಿಗೆ ಶಾಲೆ ಪೊಳೆಯೆ ಧನಧಾನ್ಯರಾಶಿಗಳು ಪೂರ್ಣವಾಯಿತು ಪರಮ ಉತ್ತಮವಾಯಿತು ಬ್ರಾಹ್ಮಣನ ಸಿರಿಯು ॥೧೨॥ ಬಾಲಕರಿಗೆಲ್ಲರಿಗೂ ಬೇಗ ಮದುವೆಯ ಮಾಡಿ । ಮಾನುನಿಯರೆಲ್ಲರು ಮನೆಗೆ ಬರಲು । ಅಷ್ಟು ಶುಭ ಶೋಭನವು ನಿತ್ಯ ಉತ್ಸವದಿಂದ ಪತಿಗಳೆಲ್ಲರು ಸುಖದಲ್ಲಿದ್ದರು ॥೧೩॥ ಆ ದೇಶದ ಧರ್ಮರಾಜನ ಸತಿಯು ಈ

ವಾರ್ತೆ ಕೇಳಿ ಕಡುಕ್ಲೇಶದಿಂದ ಏಳುಮಂದಿs ತಲೆಯ ಒಡೆದು ತನ್ನಿರೆಂದು ತಾನು ಕಟುಕರಿಗೆ ನೇಮಿಸಿದಳು ॥೧೪॥ ಏಳು ಮಂದಿಯ ತಲೆಯ ಕಡಿದು ತಂದರು ಕಟುಕರು ಧರ್ಮರಾಜನ ಸತಿಯು ಕೈಲಿ ಪಡೆದು ಮೊರದ ಬಾಗಿನವಿರಿಸಿ ಸತ್ಯವತಿ ಸೊಸೆಯರನು ಅರ್ತಿಯಿಂದಲಿ ತಾನು ಕರೆದಳು ॥೧೫॥ ಬಂದವರ ನೋಡಿ ರಾಜನ ಸತಿಯು ನಸುನಕ್ಕು ಮೊರದ ಬಾಗಿನವನ್ನು ತಂದುಕೊಡಲು ಮೊರದ ಬಾಗಿನ ತಂದು ದೇವರ ಮನೆಯಲಿರಿಸಿ ಸತ್ಯವತಿ ಪುತ್ರರನು ಕರೆದಳಾಗ ॥೧೬॥ ಅಮ್ಮ ಬಂದೇವೆಂದು ನಡೆತಂದು ಬಾಲಕರು ಬ್ರಾಹ್ಮಣರ ಪಂಕ್ತೇಲಿ ಭೋಜನ ಮಾಡಿ ಮಿತ್ರರೆಲ್ಲರು ಮೊರದ ಬಾಗಿನ ತೆಗೆಯೇ ಚಿನ್ನದಾ ಗಟ್ಟಿಗಳ ಕಂಡರಾಗ ॥೧೭॥ ಚಿನ್ನದಾ ಗಟ್ಟಿಗಳ ತಗೆತಂದು ಬಾಲೇರು ಸತ್ಯವತಿಯ ಮುಂದೆ ಇರಿಸಿದsರುs ಮಾಘದ ಗೌರಿಯ ದಯ ನಮಗಿದೆ ಎನಲು ಆ ವಾರ್ತೆ ರಾಜನ ಸತಿಗೆ ತಿಳಿಯಿತು ॥೧೮॥ ರಾಜನ ಸತಿ ಆಶ್ಚರ್ಯವನೆಗೊಂಡು ಸತ್ಯವತಿಯs ಮನೆಗೆ ಕರೆಸಿದಳು ನಿಮ್ಮ ಬಾಗಿನದಲ್ಲಿ ಏನೇನು ಇರಿಸಿತ್ತು ಬೇಗದಿಂದ್ಹೇಳೆಂದು ಬೆಸಗೊಂಡಳು. ನೀವು ಕೊಟ್ಟ ಬಾಗಿನವ ದೇವರ ಮುಂದಿರಿಸಿ ಮತ್ತೆ ನಾವಿಲ್ಲಿ ಭೋಜನವ ಮಾಡಿ ಮಿತ್ರೆಯsರೆಲ್ಲರು ಮೊರದ ಬಾಗಿಯ ತೆರೆಯೆ ಚಿನ್ನದ ಗಟ್ಟಿ ಮತ್ತೇನು ಕಾಣಲಿಲ್ಲ ॥೨೦॥ ಮಿತ್ರೆ ಸೋತಳು ಈ ಭಾಗ್ಯವು ಮತ್ತೆ ಎಲ್ಲಿಂದ ಬಂತು ಪೇಳಮ್ಮ ಯಾವ ವ್ರತ ಯಾವ ಫಲ ಹೇಗೆ ಮಾಡುವುದು ಬೇಗದಿಂ ಪೇಳೆಂದು ಬೆಸಗೊಂಡಳು ॥೨೧॥ ರಾಜನ ಸತಿ ಕೇಳು ಗಂಗಾ ನದಿಯಲ್ಲಿ ಮಾಘದ ಗೌರಿ ಪೂಜಿಸುತ್ತಿದ್ದರು. ಆ ವ್ರತವ ನಾ ಮಾಡಲು ಶೀಘ್ರದಲಿ ಆಗಲೇ ಧನಧಾನ್ಯ ಕೂಡಿಬಂತು ॥೨೨॥ ಇಂತೆಂಬೊ ವ್ರತಗಳನು ರಾಜನs ಸತಿಗ್ಹೇಳಿ ಸತ್ಯವತಿಯು ಸಾಗಿ ಮನೆಗೆ ಬರಲು ರಾಜನ ಸತಿ ಮಾಘದ ಗೌರಿ ಪೂಜಿಸಲು ಬಂಜೆತನ ಪೋಗಿ ಬಾಲಕರ ಪಡೆದಳು ॥೨೩॥ ಸತ್ಯವತಿ ಮನೆಯಲ್ಲಿ ಉತ್ತಮದ ಹಿರಿಯ ಸೊಸೆ ಮತ್ತೆ ಕಲಹದಲಿ ಪ್ರತ್ಯೇಕವಿರಲು ಮೂರು ದಿನದ ಮೇಲೆ ಕಡುದಾರಿದ್ರ್ಯ ಹೆಚ್ಚಿ ಪತಿಯ ನಿಷ್ಠುರ ವಾಕ್ಯವ ನುಡಿದಳು ॥೨೪॥ ತುಚ್ಛವ ನುಡಿಬೇಡ ಕಟ್ಟಿಕೊಡು ಬುತ್ತಿಯನು ಮತ್ತೆ ಸೌದೆಗೆ ನಾನು ಪೋಗಿ ಬರುವೆ ತಂದು ತುಡಿಲ ಕೊಡಲು ಬಿಂದಿಯೊಳಗೆ ಸುತ್ತಿ ಬೃಂದ್ಯದಲಿ ಕಾಡಿಗಾಗಿ ತಾ ಹೊರಟನು ॥೨೫॥ ಮರದ ಮೇಲೇರಿ ಕೊಂಬೆಯನು ಕಡಿಯಲು ಕಾಳಿಂಗ ಸರ್ಪವು ಬಂದು ಸೋಕೆ ಮರದಿಂದ ಜಾರಿ ಮೈಮರೆತು ಭೂಮಿಗೆ ಬಿದ್ದು ದೀರ್ಘ ನಿದ್ರೆಯಲ್ಲಿ ಮಲಗಿದ್ದನಾಗ ॥೨೬॥ ಮಾನುನಿಯ ಕನಸಿನಲಿ ಮಾಘದ ಗೌರಿ ಬಂದು ನಾರಿ ನಿನ್ನಯ ಮಗನು ಮೃತನಾದನು ಆ ವಾರ್ತೆ ಕೇಳಿ ಮನದಲ್ಲಿ ನೊಂದು ಎಚ್ಚೆತ್ತು ಬಾಲನಿದ್ದೆಡೆಗೆ ಬಂದಳು ॥೨೭॥ ಕಾಡೊಳಗೆ ಮೈತೊಳೆದು ಮರಳ ಗೌರಿಯ ತೆಗೆದು

ಬಲು ಭಕ್ತಿಯಿಂದ ಪೂಜೆ ಮಾಡಲು ಮಂಗಳಾರತಿ ಎತ್ತಿ ಅಕ್ಷತೆ ತಳಿದರೆ ಬಾಲಕನು ಮೈ ಮುರಿದು ಎದ್ದು ಕುಳಿತ ॥೨೮॥ ಕಂದ ನೀನೀರೀತಿ ಇಲ್ಲೇಕೆ ಬಂದೆನಲು ಆ ದಿನದ ವಾರ್ತೆಯನು ಪೇಳಿದನು ಸಂಭ್ರಮವಾಯಿತು ಇನ್ನು ಒಂದಿಗೆ ನಡೆ ಅಂದು ಮಗ ಸೊಸೆಯು ನಡೆತಂದರು ॥೨೯॥ ಕಾಶಿಗತ್ಯಧಿಕವೆಂಬ ಬಹುಕರ್ಣೂರಿನಲ್ಲಿ ಪ್ರೀತಿಯಿಂದಲಿ ಬಂದು ನೆಲಸಿಹರು ತನ್ನ ಸೇವೆಯ ಮಾಳ್ಪ ಮಾನುನಿ ಸ್ತ್ರೀಯರಿಗೆ ತನ್ನ ಸಾಮ್ರಾಜ್ಯ ಪದವಿಯ ನೀವಳು ॥೩೦॥ ಈ ರೀತಿಯಲ್ಲಿ ಹದಿನಾಲ್ಕು ವರುಷ ವ್ರತವನು ಶಕ್ತಿಯಿದ್ದಷ್ಟು ಉದ್ಯಾಪನೆಯ ಮಾಡಿ ಮುತ್ತೈದೆಯರಿಗೆ ಮೊರದ ಬಾಗಿನ ಕೊಟ್ಟು ಮುತ್ತೈದೆತನ ಸುಖವ ಪಡೆವೋರು ॥೩೧॥ ಮಾಘ ಶುದ್ಧ ಮೊದಲಾದ ಮೂವತ್ತು ದಿನಗಳಲಿ ನಾರೀರು ಈ ವ್ರತದ ನಡೆಸಲು ಅಷ್ಟ ಐಶ್ವರ್ಯವು ಪುತ್ರ ಸಂತಾನವು ಮುತ್ತೈದೆ ಸುಖವ ಪಡೆಯುವರು ಜಯ ಮಂಗಳಾ ನಿತ್ಯ ಶುಭಮಂಗಳಾ॥

## ಮಾಘ ॥ ಶುದ್ಧ ॥ ಚತುರ್ಥೀ

**ಗಣಪತಿ ಜಯಂತಿ** - ಇದು ಬಹಳ ದೊಡ್ಡ ದಿವಸ. ಯಾವ ಗಣಪತಿಯನ್ನು ನಾವು ವರಸಿದ್ಧಿ ವಿನಾಯಕನೆಂದೇ ಉಪಾಸನೆ ಮಾಡುತ್ತೇವೋ, ಕ್ಷಿಪ್ರಪ್ರಸಾದನೆಂದು ಭಜಿಸುತ್ತೇವೋ, ಅಂಥ ನಮ್ಮೆಲ್ಲರ ಅಭೀಷ್ಟದೇವನಾದ ಗಣಪತಿಯು ಅವತರಿಸಿದ ದಿನವಾಗಿದೆ. ಇಂದು ಪ್ರತಿಯೊಬ್ಬರೂ ಗಣಪತಿ ಮಂತ್ರವನ್ನು ಕನಿಷ್ಠ ಸಾವಿರ ಬಾರಿ ಜಪಿಸಬೇಕು. ಹಾಗೂ ಗಣಪತಿ ಕುರಿತಾದ ಸ್ತೋತ್ರವನ್ನು ಪಠಿಸಬೇಕು. ಇದಕ್ಕಾಗಿ ನಮ್ಮ ಸಂಸ್ಥೆಯಿಂದ ಪ್ರಕಟಣೆಗೊಂಡ ಗಣೇಶಚತುರ್ಥೀ ಪುಸ್ತಕವನ್ನು ಉಪಯೋಗಿಸಿಕೊಳ್ಳಬೇಕು. ಅದರಲ್ಲಿ ಅನೇಕ ಗಣೇಶಸ್ತೋತ್ರಗಳಿವೆ, ಹಾಗೂ ವೇದಮಂತ್ರಗಳಿವೆ. ಅವುಗಳನ್ನು ಪಠಿಸಿ, ಗಣಪತಿಯ ಅನುಗ್ರಹವನ್ನು ಪಡೆದುಕೊಳ್ಳಬೇಕು. ಗಣೇಶಜಯಂತಿಯನ್ನು ಆಚರಿಸುವ ಪದ್ಧತಿ ನಮ್ಮಲ್ಲಿ ಬಿಟ್ಟುಹೋಗುತ್ತಿದೆ. ಸಾಧಕರು ಇದರ ಮಹತ್ವವನ್ನು ಅರಿತು, ಗಣಪತಿಗೆ ಪೂಜೆ ಸಲ್ಲಿಸಿ, ಗಣಪತಿ ಮಂತ್ರವನ್ನು ಜಪಿಸಿ, ಗಣಪತಿಸ್ತೋತ್ರದ ಪಾರಾಯಣ ಕ್ರಮವನ್ನು ಅಳವಡಿಸಿಕೊಳ್ಳಬೇಕು.

**ತಿಲಚತುರ್ಥೀ ಹಾಗೂ ಕುಂದಚತುರ್ಥೀ** - ಕುಂದಪುಷ್ಪಗಳಿಂದ ರುದ್ರದೇವರನ್ನು ಇಂದು ಗಣಪತಿದೇವರು ಆರಾಧನೆ ಮಾಡುತ್ತಾರೆ. ತಾವು ಯಾರಿಂದ ಅವತರಿಸಿದರೋ, ಅಂಥ ತನ್ನ ತಂದೆಯಾದ ರುದ್ರದೇವರನ್ನು ವಿಶೇಷವಾಗಿ ಅರ್ಚಿಸಿ, ಮೆಚ್ಚಿಸುತ್ತಾರೆ. ಆದ್ದರಿಂದ ನಾವೂ ಕೂಡ ಕುಂದಪುಷ್ಪಗಳಿಂದ ರುದ್ರದೇವರನ್ನು ಅರ್ಚನೆ ಮಾಡಿ, ಅವರ ಅನುಗ್ರಹವನ್ನು ಪಡೆದುಕೊಳ್ಳಬೇಕು. 'ಮಾಘಮಾಸೇತು ಸಂಪ್ರಾಪ್ತೇ ಚತುರ್ಥೀ ಕುಂದ ಸಂಹಿತಾ' ಇಂದು ಶಿವನನ್ನು ವಿಶೇಷವಾಗಿ ಪೂಜಿಸುತ್ತಾರೆ.

**ಶ್ರೀ ಸುಜಯೀಂದ್ರತೀರ್ಥರ ಆರಾಧನೆ** (ರಾಯರ ಮಠ) - ನವಮಂತ್ರಾಲಯವನ್ನು ಸ್ಥಾಪನೆ ಮಾಡಿದ ಮಹಾನುಭಾವರೇ ಶ್ರೀಸುಜಯೀಂದ್ರತೀರ್ಥ ಶ್ರೀಪಾದಂಗಳವರು. ಹಾಗೂ ಗುರುಸಾರ್ವಭೌಮ ವಿದ್ಯಾಪೀಠವನ್ನು ಪ್ರಾರಂಭ ಮಾಡಿ, ವಿದ್ವತ್ ಪೋಷಣೆಯನ್ನು ಮಾಡಿದವರೂ ಕೂಡ ಇವರೇ ಆಗಿದ್ದಾರೆ. ವಿದ್ವದಗ್ರೇಸರರು, ವಾಕ್ಯಾರ್ಥಚತುರರೂ, ಮಹಾ ಉದಾರಿಗಳೂ, ದೊಡ್ಡ ತಪಸ್ವಿಗಳೂ ಆದ ಶ್ರೀಸುಜಯೀಂದ್ರತೀರ್ಥಶ್ರೀಪಾದಂಗಳವರ ವೃಂದಾವನವು ಮಂತ್ರಾಲಯ ಕ್ಷೇತ್ರದಲ್ಲಿದೆ. ಸುಯಮೀಂದ್ರ ಕರಾಬ್ಜೋತ್ಥಂ ಸುವಿದ್ಯಾಬೋಧಕಂ ಸದಾ । ಸುಮೂಲರಾಮ ಪೂಜಾಢ್ಯಂ ಸುಜಯೀಂದ್ರ ಗುರುಂ ಭಜೇ ॥

## ಮಾಘ ॥ ಶುದ್ಧ ॥ ಪಂಚಮೀ

ಶ್ರೀಪಂಚಮೀ ಅಥವಾ ವಸಂತ ಪಂಚಮೀ – ಪಂಚಮಿಯಂದು ಲಕ್ಷ್ಮೀದೇವಿಗೆ ಕುಂದಪುಷ್ಪದಿಂದ ಪೂಜಿಸಿದರೆ ಸಂಪತ್ತು ಬರುತ್ತದೆ. ಎನ್ನುತ್ತಾರೆ. ಮಾಘಮಾಸೇ ನೃಪಶ್ರೇಷ್ಠ ಶುಕ್ಲಾಯಾಂ ಪಂಚಮೀ ತಿಥೌ । ರತಿಕಾಮೌ ತು ಸಂಪೂಜ್ಯ ಕರ್ತವ್ಯಃ ಸುಮಹೋತ್ಸವಃ ॥ ಎಂಬ ಆಧಾರದಂತೆ ವಸಂತಪೂಜೆಯನ್ನು ಇಂದು ಮಾಡಬೇಕು. ಅಂದರೆ ರತಿಕಾಮರನ್ನು ಸ್ಮರಿಸಿ ಪೂಜಿಸಬೇಕು. ಇದರಿಂದ ಸಂತಾನಪ್ರಾಪ್ತಿಯು ಉಂಟಾಗುತ್ತದೆ. ಇಂದಿನಿಂದ ಐದು ದಿವಸಗಳ ಕಾಲ ವಸಂತಪೂಜೆಯನ್ನು ಮಾಡಬೇಕು.

ಮಾಘಮಾಸದ ಶುಕ್ಲ ಪಂಚಮಿಯು ವಸಂತಪಂಚಮೀ ಅಥವಾ ಶ್ರೀಪಂಚಮೀ ಎಂದು ಪ್ರಸಿದ್ಧ. ಉತ್ತರಭಾರತದಲ್ಲಿ ಇದು ಸರಸ್ವತೀ ಪೂಜೆಯ ದಿನ. (ದಕ್ಷಿಣಭಾರತದಲ್ಲಿ ಶರನ್ನವರಾತ್ರದಲ್ಲಿ ಸರಸ್ವತಿಯನ್ನು ಪೂಜಿಸುವಂತೆ) ಈ ದಿನ ಪೂರ್ವೋತ್ತರ ಭಾರತದಲ್ಲಿ ಪುಸ್ತಕ ಲೇಖನಿಗಳನ್ನು ಒರೆಸಿ, ತೊಳೆದಿಟ್ಟು ಪೂಜಿಸಲಾಗುತ್ತದೆ. ಈ ದಿನ ಯಾವ ಅಧ್ಯಯನ ಅಥವಾ ಅಥವಾ ಬರವಣಿಗೆ ಮಾಡಲಾಗುವುದಿಲ್ಲ, ಸರಸ್ವತಿಯ ಹೋಮ, ಪೂಜೆ, ಭಜನೆ, ಗೀತವಾದ್ಯನೃತ್ಯಸೇವೆ, ದಾನ, ಧ್ಯಾನ, ಪಾರಾಯಣ, ಭೋಜನಕೂಟಗಳನ್ನು ಸಂಭ್ರಮದಿಂದ ಆಚರಿಸಲಾಗುತ್ತದೆ. ಸರಸ್ವತೀ ದೇವಿಗೂ ಹಳದಿಯ ಉಡುಪನ್ನು ತೊಡಿಸಿ, ಕೇಸರಿಯ ಗಂಧ ಹಾಗೂ ಬಣ್ಣಗಳುಳ್ಳ ಅನ್ನವನ್ನೇ ನಿವೇದಿಸಿ, ಹಳದಿಯ ಹೂವುಗಳನ್ನು ತೊಡಿಸಿ ಪೂಜಿಸಿ ಭಕ್ತರೂ ತಾವೂ ಹಳದಿ ಉಡುಪನ್ನೂ, ಹೂವುಗಳನ್ನೂ, ಹಳದಿ ಬಣ್ಣದ ತಿನಿಸು, ಸಿಹಿಗಳನ್ನೇ ತಿನ್ನುತ್ತಾರೆ. ಸ್ತ್ರೀಯರು 'ಯವ' ಪರಾಗ ಮತ್ತು ಕಾಷ್ಠಗಳನ್ನು(ಹಳದಿ ಹೂವುಗಳ ಕಡ್ಡಿಗಳು) ನೆಲದ ಮೇಲೆ ಹರಡಿ ಅದರ ಮೇಲೆ ಹೊರಲಾಡಿ,

ಸಂತಾನಭಾಗಕ್ಕಾಗಿ ಮನ್ಮಥನನ್ನು ಪ್ರಾರ್ಥಿಸುತ್ತಿದ್ದರಂತೆ. ಈ ದಿನದಂದು ಸಾಸಿವೆ ಎಣ್ಣೆಯನ್ನು ಅಥವಾ ಸಾಸಿವೆಯನ್ನು ಅರಿದು ಅದನ್ನು ಮೈಗೆ ಲೇಪಿಸಿ ಸೂರ್ಯನ ಬಿಸಿಲಲ್ಲಿ ನದೀಸ್ನಾನ ಮಾಡುವುದು ಸರ್ವರೋಗನಿವಾರಕವಾಗಿದೆ ಎನ್ನುತ್ತಾರೆ.

**ಶ್ರೀ ರಾಮಭದ್ರತೀರ್ಥರು (ಪಲಿಮಾರು)** - ಪರಂಪರೆಯ ಹತ್ತೊಂಬತ್ತನೆಯ ಯತಿಗಳು, ಗುರುಗಳಂತೆಯೇ ಅದ್ವಿತೀಯ ಶಾಸ್ತ್ರಪಡಿಸಿದರು. ದೇಶ ಸಂಚಾರ ಕಾಲದಲ್ಲಿ ತನ್ನ ಶಾಸ್ತ್ರ ಪಾಂಡಿತ್ಯಕ್ಕಾಗಿ ರಾಜ ಮಹಾರಾಜರುಗಳಿಂದ ಸನ್ಮಾನಿತರಾದವರು. ಹದಿನಾರು ಬಾರಿ ಸುಧಾ ಮಂಗಳ ಮಾಡಿದ್ದು, ಇವರ ವೈಶಿಷ್ಟ್ಯ, ಇವರ ಶಿಷ್ಯರಾದ ರಘುವರ್ಯತೀರ್ಥರು ಇವರ ಬಗ್ಗೆ ಬರೆಯುತ್ತ 'ಇವರು ಪಾದಕ್ಕೆ ನಿಂತರೆ ಪ್ರತಿವಾದಿಗಳು ಸಿಡಿಲೆರಗಿದಂತೆ ಕುಸಿದು ಹೇಳುತ್ತಿದ್ದರು' ಎಂಬುದಾಗಿ ವರ್ಣಿಸಿರುತ್ತಾರೆ. ಶ್ರೀರಾಮಭದ್ರಗುರುವೇ ಶತ್ರುಪಕ್ಷಾದ ಭೀರವೇ । ದುರ್ವಾದಿ ಭೂಭೃತ್‌ಸ್ವರವೇ ಸತ್‌ಕಲ್ಪತರವೇ ನಮಃ ॥ ಇವರು ಹದಿನೆಂಟು ವರ್ಷಗಳ ಕಾಲ ಈ ಪೀಠವನ್ನಲಂಕರಿಸಿದ್ದು ಶಾ.ಶ. ೧೫೭೮ (ಕ್ರಿ.ಶ. ೧೬೫೭) ದುರ್ಮುಖಿ ಸಂವತ್ಸರದ ಮಾಘ ಶುಕ್ಲ ಪಂಚಮಿಯಂದು ಪಲಿಮಾರಿನಲ್ಲಿ ವೃಂದಾವನಸ್ಥರಾದರು.

## ಮಾಘ ॥ ಶುದ್ಧ ॥ ಷಷ್ಠೀ

**ಕುಮಾರಷಷ್ಠೀ** - ಸುಬ್ರಹ್ಮಣ್ಯದೇವರ ಆರಾಧನೆಯನ್ನು ಇಂದು ಆಚರಿಸಬೇಕು.

## ಮಾಘ ॥ ಶುದ್ಧ ॥ ಸಪ್ತಮೀ

**ರಥಸಪ್ತಮೀ** - ಮಾಘಮಾಸ ಶುಕ್ಲ ಪಕ್ಷದ ಸಪ್ತಮಿ ತಿಥಿಯಂದು ಸೂರ್ಯನ ಜನ್ಮದಿನ. ಅಲ್ಲದೆ ಸಪ್ತಮಿ ತಿಥಿಯ ಅಧಿದೇವತೆಯು ಸೂರ್ಯ ಆಗಿರುವುದರಿಂದ, ಇಂದು ಸೂರ್ಯ ಆರಾಧನೆಯ 'ರಥ ಸಪ್ತಮಿ' ದಿನವೆಂದು ಆಚರಿಸಲಾಗುತ್ತದೆ. ರೋಗ ನಿವಾರಣೆಗಾಗಿ ಸೂರ್ಯೋಪಾಸನೆ ಮಾಡಬೇಕೆಂದು ಸ್ಕಂದ, ವರಾಹ ಪುರಾಣಗಳಲ್ಲಿ ಹೇಳಿವೆ. ವೈವಸ್ವತ ಮನ್ವಂತರದ ಆರಂಭದ ದಿನ (ವೈವಸ್ವತಮನ್ವಾದಿ). ಸೂರ್ಯನು ಉತ್ತರಾಯಣನಾಗಿ ಸಪ್ತಾಶ್ವಗಳ ರಥವನ್ನೇರಿ, ಉತ್ತರದಿಕ್ಕಿನ ಮಾರ್ಗದಲ್ಲಿ ಹೊರಟ ದಿನ. ರಥಸಪ್ತಮಿ ದಿವಸ ರೋಗ ನಿವಾರಣೆ, ದೇಹದಾರ್ಢ್ಯ ಹಾಗೂ ಉತ್ತಮ ಆರೋಗ್ಯವನ್ನು ಬಯಸುವವರು ಸೂರ್ಯನ ಆರಾಧನೆ ಮಾಡಬೇಕೆಂಬ ನಿಯಮವಿದೆ. ಭಾರತೀಯ ಸಂಸ್ಕೃತಿಯ ಪರಂಪರೆಯಲ್ಲಿ ಒಬ್ಬೊಬ್ಬ ದೇವರಿಗೆ ಒಂದೊಂದು ಮಹತ್ವವಿದೆ. ನಮ್ಮ ನಿತ್ಯ ಜೀವನದಲ್ಲಿ ಸಹ ಒಂದೊಂದು

ಕಾರ್ಯಕ್ಕೆ ಒಬ್ಬ ಮುಖ್ಯಸ್ಥನಿರುವಂತೆ ದೇವತೆಗಳಲ್ಲಿ ಸಹ ಮುಖ್ಯಸ್ಥರಿದ್ದಾರೆ. ಉದಾಹರಣೆಗೆ ವಿಘ್ನನಿವಾರಣೆಗೆ ಗಣೇಶ, ವಿದ್ಯಾರ್ಜನೆಗೆ ಸರಸ್ವತಿ, ಲಕ್ಷ್ಮೀ ಪ್ರಾಪ್ತಿಗಾಗಿ (ಧನ ಸಂಪಾದನೆಗೆ) ಮಹಾಲಕ್ಷ್ಮೀ, ಮಳೆ ಪಡೆಯಲು ವರುಣ ದೇವ ಇತ್ಯಾದಿ. ಅದರಂತೆ 'ಆರೋಗ್ಯ ಭಾಗ್ಯ'ಕ್ಕಾಗಿ ಮುಖ್ಯ ದೇವರೆಂದರೆ ಸೂರ್ಯ. ಸೂರ್ಯಾಂತರ್ಯಾಮಿಯಾದ ನಾರಾಯಣನ ಪ್ರೀತಿಗಾಗಿ ರಥಸಪ್ತಮಿ ಆಚರಣೆ. 'ರಥಸಪ್ತಮಿ' ಎಂದರೆ ಸೂರ್ಯ ದೇವನು ಚಾಂದ್ರಮಾನ ಸಂವತ್ಸರದ ಹನ್ನೊಂದನೇ ಮಾಸದ ಅಂದರೆ ಮಾಘ ಶುಕ್ಲ ಪಕ್ಷದ ಸಪ್ತಮಿ ತಿಥಿ ದಿವಸ ಸಪ್ತಾಶ್ವಗಳಿಂದ ಕೂಡಿದ ರಥವನ್ನೇರುವ ದಿವಸ. ಅಂದಿನಿಂದ ಅಶ್ವಾರೂಢನಾಗಿ ಪ್ರಖರವಾಗಲು ಆರಂಭಿಸುವ ದಿನ. ಇದಕ್ಕೆ 'ಮಾಘ ಸಪ್ತಮಿ' ಎಂತಲೂ ಕರೆಯುತ್ತಾರೆ. ಮಕರ ರಾಶಿ ಪ್ರವೇಶಿಸಿದ ಸೂರ್ಯನು, ಅಂದು ಸಪ್ತಾಶ್ವರಥಾರೋಹಣ ಮಾಡಿದ ಸಂಕೇತವಾಗಿ 'ರಥಸಪ್ತಮಿ ವ್ರತಾಚರಣೆ' ಸಂಪ್ರದಾಯ ಬೆಳೆದು ಬಂದಿದೆ. ಅಂದಿನಿಂದ ಸೂರ್ಯನ ಪ್ರಖರವಾದ ಕಿರಣಗಳು ಇಡೀ ಜಗತ್ತಿನಲ್ಲಿ ಪಸರಿಸಲು ಆರಂಭಿಸುತ್ತವೆ. ಸೂರ್ಯನ ಆರಾಧನೆಗೆ ಸಪ್ತಮಿ ತಿಥಿ ಮತ್ತು ಆದಿತ್ಯವಾರ ಶ್ರೇಷ್ಠ. 'ಸಪ್ತ ಜನ್ಮನಿ ಕೃತೇ ಪಾಪಂ ಮುಕ್ತಿರ್ಭವತಿ ತತ್ಕ್ಷಣಾತ್' ಎಂಬಂತೆ ಗಂಗಾನದಿಯಲ್ಲಿ ಸ್ನಾನ ಮಾಡಿ ಶುದ್ಧವಾದಂತೆ ಸಪ್ತಮಿ ತಿಥಿಯಂದು ಸೂರ್ಯನನ್ನು ಪೂಜಿಸಿದರೆ ಏಳು ಜನ್ಮದಲ್ಲಿ ಮಾಡಿದ ಪಾಪಗಳು ಕ್ಷಯವಾಗಿ ಆಯುಷ್ಯ, ಆರೋಗ್ಯ, ಸಂಪತ್ತು ಲಭಿಸುತ್ತದೆ ಎಂದು ಪೌರಾಣಿಕದ ಒಂದು ಕಥೆ ತಿಳಿಸುತ್ತದೆ. ಭೌಗೋಳಿಕವಾಗಿಯೂ ಸುಮಾರು ೧೫ ದಿವಸಗಳ ಹಿಂದೆಯೇ ಸೂರ್ಯನು ಮಕರ ರಾಶಿಗೆ ಪ್ರವೇಶಿಸುವುದರಿಂದ 'ಮಕರ ಸಂಕ್ರಮಣ'ವೆಂದು ಕರೆದು, ಎಳ್ಳು-ಬೆಲ್ಲದೊಂದಿಗೆ ಹಬ್ಬ ಆಚರಿಸುತ್ತೇವೆ. ಅಂದರೆ, ಸೂರ್ಯನು ದಕ್ಷಿಣ ಧ್ರುವದ ಪ್ರವಾಸ ಮುಗಿಸಿ ಉತ್ತರ ಧ್ರುವದ ಕಡೆಗೆ ಕೆಳಗಿನಿಂದ ಮೇಲೇರುತ್ತಾನೆ. ಆದ್ದರಿಂದ ಬಿಸಿಲಿನ ಪ್ರಖರತೆ ಸಹ ಕ್ರಮೇಣ ವೃದ್ಧಿಸಿ, ಉತ್ತರಾಯಣ ಆರಂಭದ ಮುನ್ಸೂಚನೆ ಕೊಡುತ್ತಾನೆ. 'ಸೂರ್ಯ ಪ್ರತ್ಯಕ್ಷ ದೇವತಾ' ನಮ್ಮ ಕಣ್ಣಿಗೆ ಕಾಣಿಸುವ ದೇವರೆಂದರೆ ಸೂರ್ಯ ಚಂದ್ರರಿಬ್ಬರೇ. ಪ್ರತ್ಯಕ್ಷ ಕಾಣುವ ದೇವರನ್ನು ಪೂಜಿಸಬೇಕು. ಸೂರ್ಯೋಪಾಸನೆಯಿಂದಲೇ ಶ್ರೀ ಯೋಗೀಶ್ವರ ಯಾಜ್ಞವಲ್ಕ್ಯ ಮಹರ್ಷಿಗಳು ಶುಕ್ಲ ಯಜುರ್ವೇದವನ್ನು ಸಂಪಾದಿಸಿದರು. ಸೂರ್ಯನಿಲ್ಲದೆ ಜೀವನ ಅಸ್ತಿತ್ವ ಇರಲು ಸಾಧ್ಯವಿಲ್ಲ. ಹೀಗಾಗಿ ರಥಸಪ್ತಮಿಯಂದು ೧೦೮ ಸೂರ್ಯ ನಮಸ್ಕಾರಗಳು ಹಾಗೂ ಸಪ್ತಾಶ್ವಗಳ ಪ್ರತೀಕವಾಗಿ ಸಪ್ತ ನಮಸ್ಕಾರಗಳನ್ನು ಮಾಡುವ ಅಭ್ಯಾಸವಿದೆ.

**ಪೌರಾಣಿಕ ಹಿನ್ನೆಲೆ** - ದ್ವಾಪರ 'ಯುಗದಲ್ಲಿ ಶ್ರೀ ಕೃಷ್ಣನು ಧರ್ಮರಾಜನಿಗೆ ರಥಸಪ್ತಮಿ ಬಗ್ಗೆ ಹೇಳಿದ ಕಥೆಯಿದೆ. ಯಶೋವರ್ಮನೆಂಬ ರಾಜನಿಗೆ ಹುಟ್ಟಿದ ಮಗನಿಗೆ ಹುಟ್ಟಿನಿಂದಲೇ ರೋಗಿಷ್ಠನಾಗಿದ್ದ. ಈ ಬಗ್ಗೆ ಜ್ಯೋತಿಷಿಗಳಿಂದ ಮಾಹಿತಿ ಪಡೆದು ಸಂಚಿತಕರ್ಮದಿಂದ ಬಂದಿರುವ ಕಾಯಿಲೆಗೆ ರಥಸಪ್ತಮಿ ವ್ರತ ಚರಿಸಲು ಹೇಳಿದ್ದರು. ಅದರಂತೆ ಅಂದು ಸೂರ್ಯಾರಾಧನೆ ಮಾಡಲಾಗಿ ರಾಜಪುತ್ರನು ಆರೋಗ್ಯವಂತನೂ, ಪ್ರಭಾವಶಾಲಿಯೂ ಆದನು. ಅಲ್ಲದೆ ಪಾಂಡವರು ವನವಾಸದ ಅವಧಿಯಲ್ಲಿ ಶ್ರೀಕೃಷ್ಣನ ಆದೇಶದಂತೆ ಸೂರ್ಯಾರಾಧನೆ ಮಾಡಿ ಆತನಿಂದ ಅಕ್ಷಯ ಪಾತ್ರೆ ಪಡೆದಿದ್ದರು. ಮಾಘಶುಕ್ಲ ಸಪ್ತಮೀ ದಿನದಂದು ಸೂರ್ಯನ ರಥಕ್ಕೆ ಪೂಜೆ. ಅಂಗಳದಲ್ಲಿ ರಂಗವಲ್ಲಿಯಿಂದ ರಥವನ್ನು ಬರೆದು ಪುಜಿಸುತ್ತಾರೆ. ಹಾಲನ್ನು ಉಕ್ಕು ಬರುವಂತೆ ಕಾಯಿಸಿ ಪಾಯಸ ಮಾಡಿ ಸೂರ್ಯನಾರಾಯಣನಿಗೆ ನೈವೇದ್ಯ ಮಾಡುತ್ತಾರೆ. ಅಲ್ಲದೆ ರಾವಣನ್ನು ಗೆಲ್ಲಬೇಕಾದರೆ ಶ್ರೀರಾಮನೂ ಕೂಡ ಅಗಸ್ತ್ಯ ಉಪದೇಶದಂತೆ ಆದಿತ್ಯಹೃದಯದ ಮೂಲಕ ಸೂರ್ಯನ ಆರಾಧನೆ ಮಾಡಿದನೆಂದು ರಾಮಾಯಣದಲ್ಲಿ ಹೇಳಿದೆ. ಆದ್ದರಿಂದ ಆರೋಗ್ಯ, ಸಂಪತ್ತುಗಳಿಗಾಗಿ ಆದಿತ್ಯಹೃದಯಪಾರಾಯಣವು ಸಂಪ್ರದಾಯದಲ್ಲಿ ರೂಢಿಯಲ್ಲಿದೆ. ಸೂರ್ಯಾರಾಧನೆ ಮಾಡಿ, ಚಿನ್ನ ನೀಡುವ ಶಮಂತಕಮಣಿ ಪಡೆದ ಸತ್ರಾಜಿತನ ಕಥೆ ಹರಿವಂಶದಲ್ಲಿ ಬಂದಿದೆ. ಮಯೂರನೆಂಬ ಕವಿ ಸೂರ್ಯಶತಕವೆಂಬ ಗ್ರಂಥ ಬರೆದು ಕಳೆದುಕೊಂಡ ಕಣ್ಣನ್ನು ಮತ್ತೆ ಪಡೆದಿದ್ದಾನೆ.

**ಆದಿತ್ಯಹೃದಯಮ್** - ಧ್ಯಾನಮ್- ನಮಸ್ಸವಿತ್ರೇ ಜಗದೇಕ ಚಕ್ಷುಸೇ ಜಗತ್ಪ್ರಸೂತಿ ಸ್ಥಿತಿ ನಾಶಹೇತವೇ ತ್ರಯೀಮಯಾಯ ತ್ರಿಗುಣಾತ್ಮ ಧಾರಿಣೇ ವಿರಿಂಚಿ ನಾರಾಯಣ ಶಂಕರಾತ್ಮನೇ ತತೋ ಯುದ್ಧ ಪರಿಶ್ರಾಂತಂ ಸಮರೇ ಚಿಂತಯಾ ಸ್ಥಿತಮ್ । ರಾವಣಂ ಚಾಗ್ರತೋ ದೃಷ್ಟ್ವಾ ಯುದ್ಧಾಯ ಸಮುಪಸ್ಥಿತಮ್ ॥೧॥ ದೈವತೈಶ್ಚ ಸಮಾಗಮ್ಯ ದ್ರಷ್ಟುಮಭ್ಯಾಗತೋ ರಣಮ್ । ಉಪಗಮ್ಯಾ ಬ್ರವೀದ್ರಾಮಮ್ ಅಗಸ್ತ್ಯ ಭಗವಾನ್ ಋಷಿಃ ॥೨॥ ರಾಮ ರಾಮ ಮಹಾಬಾಹೋ ಶೃಣು ಗುಹ್ಯಂ ಸನಾತನಮ್ । ಯೇನ ಸರ್ವಾನರೀನ್ ವತ್ಸ ಸಮರೇ ವಿಜಯಿಷ್ಯಸಿ ॥೩॥ ಆದಿತ್ಯ ಹೃದಯಂ ಪುಣ್ಯಂ ಸರ್ವಶತ್ರು ವಿನಾಶನಮ್ । ಜಯಾವಹಂ ಜಪೇನ್ನಿತ್ಯಂ ಅಕ್ಷಯ್ಯಂ ಪರಮಂ ಶಿವಮ್ ॥೪॥ ಸರ್ವಮಂಗಳ ಮಾಂಗಳ್ಯಂ ಸರ್ವ ಪಾಪ ಪ್ರಣಾಶನಮ್। ಚಿಂತಾಶೋಕ ಪ್ರಶಮನಂ ಆಯುರ್ವರ್ಧನ ಮುತ್ತಮಮ್ ॥೫॥ ರಶ್ಮಿಮಂತಂ ಸಮುದ್ಯಂತಂ ದೇವಾಸುರ ನಮಸ್ಕೃತಮ್ । ಪೂಜಯಸ್ವ ವಿವಸ್ವಂತಂ ಭಾಸ್ಕರಂ

ಭುವನೇಶ್ವರಮ್ ॥೭॥ ಸರ್ವದೇವಾತ್ಮಕೋ ಹ್ಯೇಷ ತೇಜಸ್ವೀ ರಶ್ಮಿಭಾವನಃ। ಏಷ ದೇವಾಸುರ ಗಣಾನ್ ಲೋಕಾನ್ ಪಾತಿ ಗಭಸ್ತಿಭಿಃ॥೮॥ ಏಷ ಬ್ರಹ್ಮಾ ಚ ವಿಷ್ಣುಶ್ಚ ಶಿವಃ ಸ್ಕಂದಃ ಪ್ರಜಾಪತಿಃ। ಮಹೇಂದ್ರೋ ಧನದಃ ಕಾಲೋ ಯಮಃ ಸೋಮೋ ಹ್ಯಪಾಂ ಪತಿಃ ॥೮॥ ಪಿತರೋ ವಸವಃ ಸಾಧ್ಯಾ ಹ್ಯಶ್ವಿನೌ ಮರುತೋ ಮನುಃ। ವಾಯುರ್ವಹ್ನಿಃ ಪ್ರಜಾಪ್ರಾಣಃ ಋತುಕರ್ತಾ ಪ್ರಭಾಕರಃ ॥೯॥ ಆದಿತ್ಯಃ ಸವಿತಾ ಸೂರ್ಯಃ ಖಗಃ ಪೂಷಾ ಗಭಸ್ತಿಮಾನ್ । ಸುವರ್ಣಸದೃಶೋ ಭಾನುಃ ಹಿರಣ್ಯರೇತಾ ದಿವಾಕರಃ॥೧೦॥ ಹರಿದಶ್ವಃ ಸಹಸ್ರಾರ್ಚಿಃ ಸಪ್ತಸಪ್ತಿರ್ಮರೀಚಿಮಾನ್। ತಿಮಿರೋನ್ಮಥನಃ ಶಂಭುಃ ತ್ವಷ್ಟಾ ಮಾರ್ತಾಂಡಕೋಂಶುಮಾನ್॥೧೧॥ ಹಿರಣ್ಯಗರ್ಭಃ ಶಿಶಿರಃ ತಪನೋ ಭಾಸ್ಕರೋ ರವಿಃ। ಅಗ್ನಿಗರ್ಭೋದಿತೇಃ ಪುತ್ರಃ ಶಂಖಃ ಶಿಶಿರನಾಶನಃ ॥೧೨॥ ವ್ಯೋಮನಾಥ ಸ್ತಮೋಭೇದೀ ಋಗ್ಯಜುಃಸಾಮ-ಪಾರಗಃ । ಘನಾವೃಷ್ಟಿ ರಪಾಂ ಮಿತ್ರೋ ವಿಂಧ್ಯವೀಥೀ ಪ್ಲವಂಗಮಃ॥೧೩॥ ಆತಪೀ ಮಂಡಲೀ ಮೃತ್ಯುಃ ಪಿಂಗಳಃ ಸರ್ವತಾಪನಃ। ಕವಿರ್ವಿಶ್ವೋ ಮಹಾತೇಜಾ ರಕ್ತಃ ಸರ್ವಭವೋದ್ಭವಃ ॥೧೪॥ ನಕ್ಷತ್ರ ಗ್ರಹ ತಾರಾಣಾಮ್ ಅಧಿಪೋ ವಿಶ್ವಭಾವನಃ। ತೇಜಸಾಮಪಿ ತೇಜಸ್ವೀ ದ್ವಾದಶಾತ್ಮನ್-ನಮೋಸ್ತು ತೇ ॥೧೫॥ ನಮಃ ಪೂರ್ವಾಯ ಗಿರಯೇ ಪಶ್ಚಿಮಾಯಾದ್ರಯೇ ನಮಃ। ಜ್ಯೋತಿರ್ಗಣಾನಾಂ ಪತಯೇ ದಿನಾಧಿಪತಯೇ ನಮಃ॥೧೬॥ ಜಯಾಯ ಜಯಭದ್ರಾಯ ಹರ್ಯಶ್ವಾಯ ನಮೋ ನಮಃ। ನಮೋ ನಮಃ ಸಹಸ್ರಾಂಶೋ ಆದಿತ್ಯಾಯ ನಮೋ ನಮಃ ॥೧೭॥ ನಮ ಉಗ್ರಾಯ ವೀರಾಯ ಸಾರಂಗಾಯ ನಮೋ ನಮಃ। ನಮಃ ಪದ್ಮಪ್ರಬೋಧಾಯ ಮಾರ್ತಾಂಡಾಯ ನಮೋ ನಮಃ ॥೧೮॥ ಬ್ರಹ್ಮೇಶಾನಾಚ್ಯುತೇಶಾಯ ಸೂರ್ಯಾಯಾದಿತ್ಯ-ವರ್ಚಸೇ। ಭಾಸ್ವತೇ ಸರ್ವಭಕ್ಷಾಯ ರೌದ್ರಾಯ ವಪುಷೇ ನಮಃ ॥೧೯॥ ತಮೋಘ್ನಾಯ ಹಿಮಘ್ನಾಯ ಶತ್ರುಘ್ನಾಯಾ ಮಿತಾತ್ಮನೇ। ಕೃತಘ್ನಘ್ನಾಯ ದೇವಾಯ ಜ್ಯೋತಿಷಾಂ ಪತಯೇ ನಮಃ ॥೨೦॥ ತಪ್ತ ಚಾಮೀಕರಾಭಾಯ ವಹ್ನಯೇ ವಿಶ್ವಕರ್ಮಣೇ। ನಮಸ್ತಮೋಭಿ ನಿಘ್ನಾಯ ರುಚಯೇ ಲೋಕಸಾಕ್ಷಿಣೇ ॥೨೧॥ ನಾಶಯತ್ಯೇಷ ವೈ ಭೂತಂ ತದೇವ ಸೃಜತಿ ಪ್ರಭುಃ। ಪಾಯತ್ಯೇಷ ತಪತ್ಯೇಷ ವರ್ಷತ್ಯೇಷ ಗಭಸ್ತಿಭಿಃ ॥೨೨॥ ಏಷ ಸುಪ್ತೇಷು ಜಾಗರ್ತಿ ಭೂತೇಷು ಪರಿನಿಷ್ಠಿತಃ ಏಷ ಏವಾಗ್ನಿಹೋತ್ರಂ ಚ ಫಲಂ ಚೈವಾಗ್ನಿ ಹೋತ್ರಿಣಾಮ್ ॥೨೩॥ ವೇದಾಶ್ಚ ಕ್ರತವಶ್ಚೈವ ಕ್ರತೂನಾಂ ಫಲಮೇವ ಚ। ಯಾನಿ ಕೃತ್ಯಾನಿ ಲೋಕೇಷು ಸರ್ವ ಏಷ ರವಿಃ ಪ್ರಭುಃ ॥೨೪॥

**ಫಲಶ್ರುತಿಃ** - ಏನ ಮಾಪತ್ಸು ಕೃಚ್ಛ್ರೇಷು ಕಾಂತಾರೇಷು ಭಯೇಷು ಚ। ಕೀರ್ತಯನ್ ಪುರುಷಃ ಕಶ್ಚಿನ್-ನಾವಶೀದತಿ ರಾಘವ ॥೨೫॥ ಪೂಜಯಸ್ವೈನ ಮೇಕಾಗ್ರೋ ದೇವದೇವಂ ಜಗತ್ಪತಿಮ್ । ಏತತ್ ತ್ರಿಗುಣಿತಂ ಜಪ್ತ್ವಾ ಯುದ್ಧೇಷು ವಿಜಯಿಷ್ಯಸಿ ॥೨೬॥ ಅಸ್ಮಿನ್ ಕ್ಷಣೇ ಮಹಾಬಾಹೋ ರಾವಣಂ ತ್ವಂ ವಧಿಷ್ಯಸಿ। ಏವಮುಕ್ತ್ವಾ ತದಾಗಸ್ತ್ಯ ಜಗಾಮ ಚ ಯಥಾಗತಮ್ ॥೨೭॥ ಏತಚ್ಛ್ರುತ್ವಾ ಮಹಾತೇಜಾಃ ನಷ್ಟಶೋಕೋಭವತ್-ತದಾ । ಧಾರಯಾಮಾಸ ಸುಪ್ರೀತೋ ರಾಘವಃ ಪ್ರಯತಾತ್ಮವಾನ್ ॥೨೮॥ ಆದಿತ್ಯಂ ಪ್ರೇಕ್ಷ್ಯ ಜಪ್ತ್ವಾ ತು ಪರಂ ಹರ್ಷಮವಾಪ್ತವಾನ್ । ತ್ರಿರಾಚಮ್ಯ ಶುಚಿರ್ಭೂತ್ವಾ ಧನುರಾದಾಯ ವೀರ್ಯವಾನ್ ॥೨೯॥ ರಾವಣಂ ಪ್ರೇಕ್ಷ್ಯ ಹೃಷ್ಟಾತ್ಮಾ ಯುದ್ಧಾಯ ಸಮುಪಾಗಮತ್ । ಸರ್ವಯತ್ನೇನ ಮಹತಾ ವಧೇ ತಸ್ಯ ಧೃತೋಭವತ್ ॥೩೦॥ ಅಥ ರವಿರವದನ್-ನಿರೀಕ್ಷ್ಯ ರಾಮಂ ಮುದಿತಮನಾಃ ಪರಮಂ ಪ್ರಹೃಷ್ಯಮಾಣಃ। ನಿಶಿಚರಪತಿ ಸಂಕ್ಷಯಂ ವಿದಿತ್ವಾ ಸುರಗಣ ಮಧ್ಯಗತೋ ವಚಸ್ತ್ವರೇತಿ ॥೩೧ ॥ ಈ ಆದಿತ್ಯಹೃದಯವನ್ನು ಪ್ರತಿಭಾನುವಾರದಂದೂ ಮಾಡಬೇಕು.

**ಎಕ್ಕದೆಲೆಯ ಸ್ನಾನ** - ರಥಸಪ್ತಮಿಯಂದು ಸೂರ್ಯೋದಯಕ್ಕೆ ಸರಿಯಾಗಿ ನದಿ, ಸಮುದ್ರ, ಸರೋವರ, ಸಂಗಮ ಮುಂತಾದೆಡೆ ಸ್ನಾನ ಮಾಡಿ ಸೂರ್ಯನಿಗೆ ಅರ್ಘ್ಯ ನೀಡಿದರೆ ಪೂರ್ವ ಜನ್ಮದ ಪಾಪಗಳು ಹಾಗೂ ಈ ಜನ್ಮದ ಸಕಲ ದುಃಖಗಳು ಪರಿಹಾರವಾಗುತ್ತವೆ. ಸೂರ್ಯೋದಯಕ್ಕೆ ಮಾಡುವ ಮಾಘಸ್ನಾನ ತುಂಬಾ ಪುಣ್ಯಪ್ರದವಾದುದು. ಆಯುಷ್ಯ, ಆರೋಗ್ಯಸಂಪತ್ತು ಲಭಿಸುವುದಲ್ಲದೇ, ಸೂರ್ಯನ ಅನುಗ್ರಹ ಪ್ರಾಪ್ತಿಯಾಗುತ್ತದೆಂದು ಪುರಾಣಗಳು ಸಾರಿ ಸಾರಿ ಹೇಳುತ್ತಿವೆ. ಸೂರ್ಯನ ಕಿರಣಗಳಲ್ಲಿನ ಸತ್ವಗಳನ್ನು ಹೀರಿಕೊಂಡಿರುವ ಅರ್ಕದೆಲೆ ಅಥವಾ ಎಕ್ಕದೆಲೆಗಳನ್ನು ತಲೆ, ಭುಜ, ಕತ್ತು, ಕಂಕುಳು, ತೊಡೆ, ಪಾದಗಳ ಮೇಲಿರಿಸಿ ಸ್ನಾನ ಮಾಡುವುದು ರಥಸಪ್ತಮಿಯ ವಿಶೇಷತೆಗಳಲ್ಲೊಂದು. ಎಕ್ಕದ ಎಲೆಗಳಿಗೆ ಚರ್ಮಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು, ರೋಗಗಳನ್ನು ನಿವಾರಿಸುವ ಸಾಮರ್ಥ್ಯವಿದೆ, ಅಷ್ಟೇ ಅಲ್ಲದೇ, ದೇಹದಲ್ಲಿನ ಕೀಲು ನೋವು, ಹಲ್ಲು ನೋವು, ಹೊಟ್ಟೆ ನೋವುಗಳಿಗೂ ಸಹ ಎಕ್ಕದ ಗಿಡ, ಅದರ ಎಲೆಗಳಲ್ಲಿರುವ ಔಷಧೀಯ ಅಂಶಗಳಿಂದ ಪರಿಹಾರ ಕಂಡುಕೊಳ್ಳಬಹುದಾಗಿದೆ. ಹೀಗಾಗಿಯೇ ಈ ದಿನ ಎಕ್ಕದೆಲೆಯ ಸ್ನಾನಕ್ಕೆ ಮಹತ್ವ ನೀಡಲಾಗಿದೆ. ಷಷ್ಠಿ ತಿಥಿಯ ರಾತ್ರಿ ಉಪವಾಸವಿದ್ದು, ಸಪ್ತಮಿಯ ಅರುಣೋದಯದಲ್ಲಿ ಸ್ನಾನ ಮಾಡಬೇಕು. ರಥಸಪ್ತಮಿಯು ಯಾವಾಗಲೂ

ಅರುಣುದೋಯವ್ಯಾಪಿನಿಯಾಗಿರುವುದರಿಂದ ಸರಿಯಾಗಿ ಸೂರ್ಯೋದಯಕ್ಕೆ ಆಚರಣೆ ಮಾಡಬೇಕು. ರಥ ಸಪ್ತಮಿಯಂದು ಸೂರ್ಯೋದಯ ಕಾಲಕ್ಕೆ ಸ್ನಾನ ಮಾಡಬೇಕು. ಕಬ್ಬಿನಿಂದ ನೀರು ತಿರುಗಿಸಿ, ಸೂರ್ಯನ ವೃಕ್ಷವೆಂದೇ ಪ್ರಸಿದ್ಧವಾದ ಎಕ್ಕೆ ಎಲೆಯನ್ನು ತಲೆ ಮತ್ತು ಹೆಗಲ ಮೇಲೆ ಇಟ್ಟುಕೊಂಡು ಸ್ನಾನಮಾಡುವುದು ವಿಶೇಷ. ಸ್ನಾನಕಾಲಕ್ಕೆ ಪಠಿಸಬೇಕಾದ ಮಂತ್ರಗಳು - ಯದ್ಯಜ್ಜನ್ಮಕೃತಂ ಪಾಪಂ ಮಯಾ ಸಪ್ತಸು ಜನ್ಮಸು । ತನ್ಮೇ ರೋಗಂ ಚ ಶೋಕಂ ಚ ಮಾಕರೀ ಹಂತು ಸಪ್ತಮೀ ॥೧॥ ಏತಜ್ಜನ್ಮಕೃತಂ ಪಾಪಂ ಯಚ್ಚ ಜನ್ಮಾಂತರಾರ್ಜಿತಮ್ । ಮನೋವಾಕ್ಕಾಯಜಂ ಯಚ್ಚ ಜ್ಞಾತಾಜ್ಞಾತೇ ಚ ಯೇ ಪುನಃ ॥೨॥ ಇತಿ ಸಪ್ತವಿಧಂ ಪಾಪಂ ಸ್ನಾನಾನ್ಮೇ ಸಪ್ತಸಪ್ತಿಕೇ । ಸಪ್ತವ್ಯಾಧಿಸಮಾಯುಕ್ತಂ ಹರ ಮಾಕರಿ ಸಪ್ತಮೀ ॥೩॥ ಹೀಗೆ ಯಾರು ಈ ಮೂರು ಮಂತ್ರೋಚ್ಚಾರಣ ಪೂರಕ ಸ್ನಾನ ಮಾಡಿ ಸೂರ್ಯ ಮತ್ತು ಕೇಶವನ ದರ್ಶನವನ್ನು ಮಾಡುತ್ತಾರೋ, ಅವರು ಕ್ಷಣಮಾತ್ರದಲ್ಲಿ ಪಾಪಗಳಿಂದ ಮುಕ್ತರಾಗುವರು. (ನಿರ್ಣಯಸಿಂಧು) ಹಿಂದಿನ ಜನ್ಮಗಳಲ್ಲಿನ ಪಾಪ, ಸಪ್ತವ್ಯಾಧಿಗಳು, ಮಾತು, ಮನಸ್ಸು, ದೇಹದಿಂದ ಮಾಡಿದ ಅಪರಾಧಗಳು ನಾಶ ಹೊಂದಿ, ಮುಕ್ತಿಲಭಿಸುತ್ತದೆ ಇದರಂತೆ ಎಳ್ಳು ನೆಲ್ಲಿಕಾಯಿ ಪುಡಿಯನ್ನು ಹಚ್ಚಿಕೊಂಡು ಸ್ನಾನ ಮಾಡಬೇಕು.

**ಸ್ನಾನಾನಂತರ ಸೂರ್ಯ ಮತ್ತು ಸಪ್ತಮಿತಿಥಿಗೆ ಅರ್ಘ್ಯ** - ಒಂದು ತಾಮ್ರದ ಕಲಶದಲ್ಲಿ (ತಂಬಿಗೆ) ಶುದ್ಧವಾದ ಜಲ, ಅಕ್ಷತೆ, ಚಂದನ, ಬಿಳಿಬಣ್ಣದ ಹೂವುಗಳು, ಗರಿಕೆ, ಎಕ್ಕೆಯ ಎಲೆಗಳನ್ನು ತುಂಬಿಸಿ, ಮುಂದಿನ ಮಂತ್ರಗಳಿಂದ ಸೂರ್ಯ ಮತ್ತು ಸೂರ್ಯಜನನೀಯಾದ ಸಪ್ತಮೀ ತಿಥಿಗೂ ಸಹ ಅರ್ಘ್ಯವನ್ನು ಕೊಡಬೇಕು.

**ಸೂರ್ಯಾರ್ಘ್ಯ ಮಂತ್ರ** - ಸಪ್ತಸಪ್ತಿವಹ ಪ್ರೀತ ಸಪ್ತಲೋಕಪ್ರದೀಪನ । ಸಪ್ತಮೀ ಸಹಿತೋ ದೇವ ಗೃಹಾಣಾರ್ಘ್ಯಂ ದಿವಾಕರ ॥ ಎಂದು ಸೂರ್ಯನಿಗೆ ಅರ್ಘ್ಯವನ್ನು ಕೊಡಬೇಕು.

**ಸಪ್ತಮೀ ಅರ್ಘ್ಯಮಂತ್ರ** - ಜನನೀ ಸರ್ವಲೋಕಾನಾಂ ಸಪ್ತಮೀ ಸಪ್ತಸಪ್ತಿಕೇ । ಸಪ್ತವ್ಯಾಹೃತಿಕೇ ದೇವಿ ನಮಸ್ತೇ ಸೂರ್ಯಮಂಡಲೇ ॥ ಎಂದು ಸಪ್ತಮೀ ತಿಥಿಯ ಕುರಿತು ಅರ್ಘ್ಯ ಕೊಡಬೇಕು. ರಥಸಪ್ತಮಿಯ ಪರ್ವಕಾಲ ಎಲ್ಲ ರಾಶಿಯವರಿಗೂ ವಿಶೇಷ ಫಲಪ್ರದವಾಗಿದೆ. ಸರ್ವ ಪಾಪ ಪರಿಹಾರಾರ್ಥವಾಗಿ ಬೂದುಗುಂಬಳಕಾಯಿ, ಎಳ್ಳು ಮತ್ತು ತುಪ್ಪ ದಾನ ಮಾಡಬೇಕು. ನಿತ್ಯ ಸೂರ್ಯೋಪಾಸನೆ, ಸೂರ್ಯ

ನಮಸ್ಕಾರದೊಂದಿಗೆ ಸೂರ್ಯನ ದ್ವಾದಶ ನಾಮಸ್ಮರಣ ಮಾಡಿದರೆ ಸರ್ವರೋಗ ಪರಿಹಾರವಾಗುವುವು. ದ್ವಾದಶ ನಾಮಗಳು ಹೀಗಿವೆ. (ಆರಂಭದಲ್ಲಿ ಓಂಕಾರವನ್ನು ಸೇರಿಸಿಕೊಳ್ಳಬೇಕು) ॥ ಸೂರ್ಯಾಯ ನಮಃ, ಭಾನವೇ ನಮಃ, ಖಗಾಯ ನಮಃ, ಪೂಷ್ಣೆನಮಃ, ಹಿರಣ್ಯ ಗರ್ಭಾಯ ನಮಃ, ಮರಿಚಯೇ ನಮಃ, ಆದಿತ್ಯಾಯ ನಮಃ, ಸವಿತ್ರೆ ನಮಃ, ಅರ್ಕಾಯ ನಮಃ, ಭಾಸ್ಕರಾಯ ನಮಃ, ಮಿತ್ರಾಯ ನಮಃ, ರವಯೇ ನಮಃ.

**ಸೂರ್ಯನ ವಿಶೇಷಚಿಂತನೆ –**

೧. ಭಗವಂತ ಸೂರ್ಯನಲ್ಲಿ ರವಿನಾಮಕ ವಿಭೂತಿ ರೂಪದಿಂದ ಇದ್ದು ಶ್ರೇಷ್ಠ ಎನಿಸಿದ್ದಾನೆ - ಗೀತೆ ೧೦ .೨೧

೨. ಸುಡುವ ಪದಾರ್ಥಗಳಲ್ಲಿ, ಬೆಳಗುವ ಪದಾರ್ಥಗಳಲ್ಲಿ ಮತ್ತು ಇಡಿ ಬ್ರಹ್ಮಾಂಡದಲ್ಲಿ ಸೂರ್ಯನು ಶ್ರೇಷ್ಠ ಎನಿಸಿದ್ದಾನೆ. - ಭಾಗವತ ೧೧-೧೬ -೧೭

೩. ಓಂ ಘೃಣಿ: ಸೂರ್ಯ ಆದಿತ್ಯ: - ಸೂರ್ಯ ಅಂತರ್ಯಾಮಿ ಓಂಕಾರ ವಾಚ್ಯದಿಂದ ನಾರಾಯಣ ಇದ್ದಾನೆ. ಅವನೇ ಚಕ್ರಾಬ್ಜಮಂಡಲದ ಮಧ್ಯದಲ್ಲಿ ಇದ್ದಾನೆ.

೪. ಜೀವಸ್ವರೂಪದಲ್ಲಿ ಇರುವ ಪರಮಾತ್ಮನ ಪೂರ್ವದ್ವಾರಪಾಲಕ ಸೂರ್ಯ.

೫. ಸೂರ್ಯನು ಪೂರ್ವದಿಕ್ಕಿನಲ್ಲಿ ಬ್ರಹ್ಮವಾದಿ ಮುನಿಗಳಿಗೆ ಗಾಯತ್ರಿಯ ಉಪದೇಶ ಮಾಡುತ್ತಾನೆ. - ಮ.ಭಾ.ಉದ್ಯೋಗ

೬. ಯಾಜ್ಞವಲ್ಕ್ಯರು ಸೂರ್ಯನಿಂದ ಯಜುರ್ವೇದದ ಉಪದೇಶ ಪಡೆದಿದ್ದಾರೆ.

೭. ಶ್ರೀಕೃಷ್ಣ, ಸೂರ್ಯನಿಗೆ ಕರ್ಮ ಯೋಗವನ್ನು ಹಿಂದೆ ಉಪದೇಶ ಮಾಡಿದ್ದಾರೆ -ಗೀತೆ ೪.೧

೮. ಶ್ರೀವಿಷ್ಣು ಸೂರ್ಯನಿಗೆ ಪಂಚರಾತ್ರಾತ್ಮಕ ಜ್ಞಾನವನ್ನು ನೀಡಿದ್ದಾರೆ.

೯. ಭಗವಂತನ ಭಯಕ್ಕೆ ಒಳಪಟ್ಟು ಸೂರ್ಯ ನಿಯತವಾಗಿ ಕರ್ತವ್ಯ ಲೋಪ ಇಲ್ಲದೆ ಬೆಳುಗುತ್ತಿದ್ದಾನೆ - ಗೀತೆ

೧೦. ಸೂರ್ಯನ ಪೂರ್ವ ದಿಕ್ಕಿನ ಕಿರಣಗಳಲ್ಲಿ ವಾಸುದೇವ ರೂಪಿ ಪರಮಾತ್ಮನಿದ್ದಾನೆ. ಅವು ಕೆಂಪು ಬಣ್ಣದಲ್ಲಿ ಇರುತ್ತವೆ. ಸೂರ್ಯನ ದಕ್ಷಿಣದಿಕ್ಕಿನ ಕಿರಣಗಳಲ್ಲಿ ಸಂಕರ್ಷಣ ಇದ್ದಾನೆ. ಆ ಕಿರಣಗಳು ಬಿಳಿಬಣ್ಣದಲ್ಲಿ ಇರುತ್ತವೆ. ಛಾ.ಉ. ೩ -೧ -೨

೧೧. ಸೂರ್ಯನ ಪಶ್ಚಿಮ ದಿಕ್ಕಿನ ಕಿರಣಗಳಲ್ಲಿ ಪ್ರದ್ಯುಮ್ನ ಇದ್ದಾನೆ. ಆ ಕಿರಣಗಳು ಕಪ್ಪು ಬಣ್ಣದಲ್ಲಿ ಇರುತ್ತವೆ. ಛಾ.ಉ ೩ -೧ -೩

೧೨. ಸೂರ್ಯನ ಉತ್ತರ ದಿಕ್ಕಿನ ಕಿರಣಗಳಲ್ಲಿ ಅನಿರುದ್ಧ ಇದ್ದಾನೆ. ಆ ಕಿರಣಗಳು ಗಾಢವಾದ ಕಪ್ಪು. ಛಾ.ಉ ೩ -೧ -೪

೧೩. ಸೂರ್ಯನ ಊರ್ಧ್ವದಿಕ್ಕಿನ ಕಿರಣಗಳಲ್ಲಿ ನಾರಾಯಣ ರೂಪಿ ಭಗವಂತ ಇದ್ದಾನೆ. ಉದಯಿಸುವ ಸೂರ್ಯ ಪ್ರಭೆ ಇರುತ್ತದೆ. ಛಾ.ಉ ೩ -೧ -೫

೧೪. ಸೂರ್ಯನು ಮೋಕ್ಷಗೋಸ್ಕರ (ಪರಮಾತ್ಮನ ಪ್ರೀತಿಗೋಸ್ಕರ) ಹತ್ತು ಸಾವಿರ ವರ್ಷ ಕಾಲ ತಲೆಕೆಳಗೆ ಮಾಡಿ ತಪಸ್ಸು ಮಾಡುತ್ತಾನೆ. - ಅ.ವ್ಯಾ ೩ -೪ -೩೮

೧೫. ಸೂರ್ಯ ಮರಣ ಸೂಚಕ ಕೊಡುತ್ತಾನೆ. ಯಾರು ಸಾವಿನ ಹತ್ತಿರದಲ್ಲಿ ಇರುತ್ತಾರೆ. ಅವರಿಗೆ ಸೂರ್ಯ ಛಿದ್ರವಾಗಿ ಕಾಣುತ್ತಾನೆ. ಇದನ್ನು ಆಚಾರ್ಯರು ಐ.ಉ ಉಲ್ಲೇಖ ಮಾಡುತ್ತಾರೆ.

೧೬. ಸೂರ್ಯಮಂಡಲದಲ್ಲಿ ವಾಯುದೇವರು ವಿಶೇಷವಾಗಿ ಇದ್ದು ಸೂರ್ಯನಿಗೆ ಮಾಡಲು ಅಶಕ್ಯವಾದ ಕಾರ್ಯಗಳನ್ನು ತಾನು ನಿಂತು ಮಾಡುತ್ತಾನೆ.

೧೭. ಧೌಮ್ಯರು ಯುಧಿಷ್ಠಿರಿಗೆ ಸೂರ್ಯನ (ಅಂತರ್ಯಾಮಿ ನಾರಾಯಣ) ನೂರ ಎಂಟು ನಾಮಗಳನ್ನು ಉಪದೇಶ ಮಾಡುತ್ತಾರೆ.

೧೮. ಪ್ರತಿ ಕ್ಷಣ ಮಂದೇಹ ರಾಕ್ಷಸರು ಸೂರ್ಯ ವಿರುದ್ಧ ಕಾದಾಡುತ್ತಾರೆ. ವಾಲಖಿಲ್ಯರು ಕೊಟ್ಟ ಅರ್ಘ್ಯದಿಂದ ಸೂರ್ಯ ಜಯಿಸುತ್ತಾನೆ .

೧೯. ಸೂರ್ಯನು ಎಲ್ಲಾ ಜೀವಿಗಳ ಆಯುಷ್ಯ ಮತ್ತು ಕರ್ಮಗಳನ್ನು ರಾತ್ರಿ ಹಗಲು ಮುಂತಾದ ಕಾಲದಿಂದ ಸೆಳೆಯುತ್ತಾನೆ.

೨೦. ಪರಮಾತ್ಮನ ಕಣ್ಣುಗಳಿಂದ ಸೂರ್ಯನ ಸೃಷ್ಟಿ, ಮತ್ತು ಸೂರ್ಯ ಪರಮಾತ್ಮನ ಕಣ್ಣುಗಳಲ್ಲೇ ಆಶ್ರಯಿಸಿರುತ್ತಾನೆ.

೨೧. ಸೂರ್ಯನ ಚಲನೆಗಾಗಿ ಗಗನದಲ್ಲಿ ಶ್ರೇಷ್ಠವಾದ ಮಾರ್ಗವನ್ನು ಪರಮಾತ್ಮ ನಿರ್ಮಾಣ ಮಾಡುತ್ತಾನೆ. ಅದೇ ಮಾರ್ಗದಲ್ಲಿ ಇಂದು ಕೂಡ ಸೂರ್ಯ ಚಲಿಸುತ್ತಾನೆ.

೨೨. ರಾಮಾವತರದಲ್ಲಿ ಸುಗ್ರೀವನಾಗಿ (ಚತುರ್ಮುಖ ಆವೇಶ) ಅವತಾರ.

೨೩. ಕೃಷ್ಣಾವತಾರದಲ್ಲಿ ಕರ್ಣನಾಗಿ (ನರಕಾಸುರ ಆವೇಶ) ಅವತಾರ.

೨೪. ಎಲ್ಲಾ ವರ್ಣದವರು ಸೂರ್ಯನಿಗೆ ತ್ರಿಕಾಲ ಅರ್ಘ್ಯ ಪ್ರದಾನ ಮಾಡಬೇಕು ಎಂದು ಪರಮಾತ್ಮನ ಆಜ್ಞೆ.

೨೫. ಸತ್ರಾಜಿತ್ ಸೂರ್ಯನನ್ನು ಆರಾಧನೆ ಮಾಡಿ ಸ್ಯಮಂತಕ ಮಣಿಯನ್ನು ಪಡೆದ.

೨೬. ಸೂರ್ಯನ ರಥ ೧೫ ಘಳಿಗೆಗಳಲ್ಲಿ ೨ ಕೋಟಿ ೩೭ ಲಕ್ಷ ೫೦ ಸಾವಿರ ಯೋಜನ ಸಾಗುವಷ್ಟು ವೇಗ ಪರಮಾತ್ಮ ಅನುಗ್ರಹ ಮಾಡಿದಾನೆ - ಭಾಗವತ

೨೭. ಆದಿತ್ಯಹೃದಯವನ್ನು ಅಗಸ್ತ್ಯ ಮುನಿಗಳು ರಾಮನಿಗೆ ಯುದ್ಧದಲ್ಲಿ ಉಪದೇಶ ಮಾಡಿದರು. ಅದು ಸೂರ್ಯನಿಗೆ ಕೀರ್ತಿ ಕೊಡುವದಕೋಸ್ಕರ.

೨೮. ಸೂರ್ಯ ನಮ್ಮ ಕಣ್ಣುಗಳಿಗೆ ಅಭಿಮಾನಿ ದೇವತೆ. ಕಣ್ಣು ತೊಂದರೆ ಇದ್ದಲ್ಲಿ ಆದಿತ್ಯಹೃದಯ ಪಠನದಿಂದ ಗುಣವಾಗುತ್ತದೆ.

೨೯. ಪರಮಾತ್ಮ ಆದಿತ್ಯ ರೂಪದಿಂದ ಸೂರ್ಯನಲ್ಲಿ ಇದ್ದು ವಿಶೇಷವಾಗಿ ಧ್ಯೇಯನಾಗಿದ್ದಾನೆ.

೩೦. ಪುರುಷರ ರೇತಸ್ಸಿನಲ್ಲಿ ಆದಿತ್ಯಾಂತರ್ಗತ ವಿಷ್ಣು ಇರುವನು.

೩೧. ಜೀವರಿಗೆ, ಒಳ್ಳೆಯ ಜ್ಞಾನ ಮತ್ತು ಕೆಟ್ಟ ಜ್ಞಾನ, ಕಣ್ಣಿನ ಒಳಗಿರುವ ಸೂರ್ಯನಿಂದ ಆಗುತ್ತದೆ.

೩೨. ದ್ರೌಪದಿ ಸೂರ್ಯ ಆರಾಧನೆ ಇಂದ ಅಕ್ಷಯ ಪಾತ್ರ್ಯನ್ನು ಪಡೆದುಕೊಳ್ಳುತ್ತಾಳೆ.

೩೩. ಸೂರ್ಯ ನಾರಾಯಣ ಗಾಯತ್ರಿ ಮಂತ್ರದ ಪ್ರತಿಪಾದ್ಯ ದೇವತೆ. ಅವನಿಂದಲೇ ಎಲ್ಲಾ (ಮಳೆ ಬೆಳೆ) ಸೃಷ್ಟಿ. ಅದಕ್ಕೆ ಅವನನ್ನ ಸವಿತೃ ಎಂದು ಕರೆದಿದ್ದಾರೆ.

೩೪. ಅದಿತಿ ಕಶ್ಯಪರಲ್ಲಿ ದ್ವಾದಶಾದಿತ್ಯರಲ್ಲಿ ಸೂರ್ಯ ಒಬ್ಬ.

೩೫. ಸೂರ್ಯನಿಗೆ ಎಂಟು ಜನ ಮಕ್ಕಳು. ವೈವಸ್ವತ ಮನು, ಯಮ, ಯಮುನೆ, ಅಶ್ವಿನಿಕುಮಾರರು, ಶನೈಶ್ಚರ, ಸಾವರ್ಣಿಮನು ಮತ್ತು ತಪತಿ.

೩೬. ಗ್ರಹಣ ಕಾಲದಲ್ಲಿ ಸೂರ್ಯಚಂದ್ರರನ್ನು ಅವರ ಪ್ರಾರಬ್ಧಕರ್ಮದಿಂದ ರಾಹು ಕಬಳಿಸುತ್ತಾನೆ. ಆ ಸಾಮರ್ಥ್ಯ ರಾಹುವಿಗೆ ದೊರಕಿದ್ದು ಚತುರ್ಮುಖ ವರ ಮತ್ತು ಭಗವಂತ ರಾಹುವಿಗೆ ಅಂತರ್ಯಾಮಿಯಾಗಿ ಬಲಕೊಡುತ್ತಾನೆ.

೩೭. ರಾಹುವಿಗೆ ಸೂರ್ಯನ ಮೇಲೆ ದ್ವೇಷ. ಯಾಕೆ ಎಂದರೆ, ಅಮೃತ ಪಾನಕಾಲದಲ್ಲಿ ಸೂರ್ಯ, ಮೋಹಿನಿಗೆ ರಾಹು ಅಸುರ ಎಂದು ಕಣ್ಣು ಸೊನ್ನೆ ಮಾಡುತ್ತಾನೆ. ಅದರಿಂದ ದೇವರು ಅವನನ್ನ ಛೇದನೆ ಮಾಡುತ್ತಾನೆ.

೩೮. ನಾವು ಧರಿಸುವ ಯಜ್ಞೋಪವೀತ ಸೂರ್ಯನಿಗೆ ದರ್ಶನ ಮಾಡಿಸಿ ಹಾಕಿಕೊಳ್ಳಬೇಕು.

೩೯ ಜೀವರು ಮಾಡುವ ಕರ್ಮಗಳಿಗೆ ಸೂರ್ಯ ಕರ್ಮ ಸಾಕ್ಷಿ. ಅಗತ್ಯ ಇದ್ದರೆ ಯಮಲೋಕದಲ್ಲಿ ಕರೆದ ತಕ್ಷಣ ಬಂದು ಸಾಕ್ಷಿ ಹೇಳುತ್ತಾನೆ.

೪೦. ಸೂರ್ಯನ ರಥಕ್ಕೆ ಒಂದೇ ಚಕ್ರ.

ಇಲ್ಲಿಗೆ ರಥಸಪ್ತಮಿಯ ವಿಚಾರವು ಮುಗಿಯಿತು

**ಶ್ರೀ ಹೃಷೀಕೇಶ ತೀರ್ಥರು (ಪಲಿಮಾರು ಮಠ)** - ಆಚಾರ್ಯರ ಶಿಷ್ಯವರ್ಗದಲ್ಲಿ 'ಅಷ್ಟೋತ್ಕೃಷ್ಟ' ಎಂದು ಪ್ರಸಿದ್ಧರಾದ ಪಲಿಮಾರು ಮಠದ ಮೂಲಯತಿಗಳಾದ ಶ್ರೀ ಹೃಷೀಕೇಶತೀರ್ಥರು ಆಚಾರ್ಯರಿಂದ ಸನ್ಯಾಸ ದೀಕ್ಷೆ ಪಡೆದ ಮೊದಲಿಗರು. ಆದುದರಿಂದಲೇ ಮಧ್ವವಿಜಯಕಾರರು ಇವರನ್ನು ಆಚಾರ್ಯರ 'ಶಿಷ್ಯಪ್ರವರ' ಎಂದು ಕರೆದಿರುವರು. ಶ್ರೀ ಹೃಷೀಕೇಶತೀರ್ಥರು ಶ್ರೀಮಧ್ವಾಚಾರ್ಯರ ಸರ್ವಮೂಲ ಗ್ರಂಥಗಳನ್ನೆಲ್ಲ ತಮ್ಮ ಸ್ವಹಸ್ತಾಕ್ಷರದಲ್ಲಿ ಬರೆದಿಟ್ಟಿರುವರು. ಉಳಿದ ಶಿಷ್ಯರು ಬರೆದಿಟ್ಟಿರುವರೋ ಇಲ್ಲವೋ ಎಂಬುದಕ್ಕೆ ಯಾವ ಪುರಾವೆಯೂ ಸಿಕ್ಕಿಲ್ಲ. ಇಂದಿಗೂ ನಮ್ಮ ಕಣ್ಣಮುಂದೆ ಕಂಗೊಳಿಸುವ ಮೊಟ್ಟ ಮೊದಲು ಪ್ರತಿಯನ್ನು ಬರೆದಿಟ್ಟವರು ಆಚಾರ್ಯ ಶಿಷ್ಯರಲ್ಲಿ ಶ್ರೀಹೃಷೀಕೇಶತೀರ್ಥರೊಬ್ಬರೇ (ಈಗ ಸುಮಾರು ನಾಲ್ವತ್ತು ವರ್ಷಗಳ ಹಿಂದೆ ಶ್ರೀ ವಿದ್ಯಾಮಾನ್ಯತೀರ್ಥರು ಹಾಗೂ ಶ್ರೀ ವಿಶ್ವೇಶತೀರ್ಥರು ಶ್ರೀ ಬನ್ನಂಜೆ ಗೋವಿಂದಾಚಾರ್ಯರಿಂದ ಈ ಕೃತಿಗಳನ್ನು ಸಂಶೋಧಿಸಿ ಸುಲಭ ಬೆಲೆಯಲ್ಲಿ ದೊರಕುವಂತೆ ಪ್ರಕಟಣೆ ಮಾಡಿದ್ದರು). ಶ್ರೀ ಮಧ್ವಾಚಾರ್ಯರ ಶಿಷ್ಯರುಗಳಲ್ಲಿ ಇವರ ಪ್ರವಚನ ಕ್ರಮ ಮತ್ತು ಸ್ವರ ಗಾಂಭೀರ್ಯ ಆಚಾರ್ಯರ ಸ್ವರ ಗಾಂಭೀರ್ಯಗಳಿಗೆ ಹೋಲುತ್ತಿತ್ತು. ಆದುದರಿಂದ ಪ್ರವಚನ ಕಾಲದಲ್ಲಿ ಮೂಲಗ್ರಂಥಗಳ ಪ್ರವಚನಕ್ಕಾಗಿ ಆಚಾರ್ಯರು ಶ್ರೀ ಹೃಷೀಕೇಶ ತೀರ್ಥರನ್ನೇ ಆಯ್ದುಕೊಳ್ಳುತ್ತಿದ್ದರು ಎಂಬ ಮಾತು ಶ್ರೀ ಸುಮಧ್ವ ವಿಜಯದಲ್ಲಿ ಉಲ್ಲೇಖಿತವಾಗಿದೆ. ಅವದತ್ ಸ ಕಥಾಂ ರಥಾಂಗಪಾಣೇರ್ಭಗವಾನ್ ಭಾಗವತೇ ಭವಾಪಹಂತ್ರೀಮ್। ಅನುಕೂಲ ಗುಣಸ್ವರಾಧಿಭಾಜಾ ನಿಜಶಿಷ್ಯ ಪ್ರವರೇಣ ವಾಚ್ಯಮಾನೇ ॥ ಇವರನ್ನು 'ವಶೀಕೃತ ಹೃಷೀಕ್' ಎಂದು ಕರೆದ ನಾರಾಯಣ ಪಂಡಿತರು ಇವರಿಗೆ ಆಚಾರ್ಯರು ನೀಡಿದ ನಾಮ ಸಾರ್ಥಕವಾಗಿತ್ತು ಎಂದು ಹೇಳಿದ್ದಾರೆ. ಅಂಥ ಮಹಾನುಭಾವರ ಬಗೆಗೆ ಹೆಚ್ಚು ಹೇಳುವ ಶಕ್ತಿಯಾದರೂ ನಮಗೆ ಎಲ್ಲಿದೆ? ಆಚಾರ್ಯರ ಗ್ರಂಥಗಳ ಮನನದಲ್ಲಿ ಮಗ್ನರಾದ ಅವರು ಎರಡು ಪುಟ್ಟ ಕೃತಿಗಳನ್ನು ರಚನೆ ಮಾಡಿದ್ದಾರೆ. ಒಂದು 'ಸಂಪ್ರದಾಯ ಪದ್ಧತಿ', ಇನ್ನೊಂದು 'ಅಣುಮಧ್ವಚರಿತೆ'. ಈ ಎರಡು ಗ್ರಂಥಗಳಲ್ಲಿ ಆಚಾರ್ಯರ ಕಾಲದ ಅನೇಕ ಮಹತ್ವದ ಘಟನೆಗಳ ಬಗ್ಗೆ ಉಲ್ಲೇಖವಿದೆ. ಸುಮಧ್ವವಿಜಯದಲ್ಲಿ ಕೂಡ ಕಾಣಸಿಗದಂಥ ಅನೇಕ ಚಾರಿತ್ರಿಕ ಸಂಗತಿಗಳನ್ನು ನಾವು ಇದರಲ್ಲಿ ಕಾಣಬಹುದು. ಈ ಗ್ರಂಥಗಳು ಹೆಚ್ಚು ಪ್ರಚಾರದಲ್ಲಿರದಿದ್ದರೂ ವಿಮರ್ಶಕರಿಗೆ, ಸಂಶೋಧಕರಿಗೆ ತುಂಬ ಉಪಯುಕ್ತವಾದವುಗಳು ಎನ್ನುವುದರಲ್ಲಿ ಸಂಶಯವಿಲ್ಲ. ಜಾತಕ ಮಾಡಬರುವಷ್ಟು

೨೭. ಆದಿತ್ಯಹೃದಯವನ್ನು ಅಗಸ್ತ್ಯ ಮುನಿಗಳು ರಾಮನಿಗೆ ಯುದ್ಧದಲ್ಲಿ ಉಪದೇಶ ಮಾಡಿದರು. ಅದು ಸೂರ್ಯನಿಗೆ ಕೀರ್ತಿ ಕೊಡುವದಕೋಸ್ಕರ.

೨೮. ಸೂರ್ಯ ನಮ್ಮ ಕಣ್ಣುಗಳಿಗೆ ಅಭಿಮಾನಿ ದೇವತೆ. ಕಣ್ಣು ತೊಂದರೆ ಇದ್ದಲ್ಲಿ ಆದಿತ್ಯಹೃದಯ ಪಠನದಿಂದ ಗುಣವಾಗುತ್ತದೆ.

೨೯. ಪರಮಾತ್ಮ ಆದಿತ್ಯ ರೂಪದಿಂದ ಸೂರ್ಯನಲ್ಲಿ ಇದ್ದು ವಿಶೇಷವಾಗಿ ಧ್ಯೇಯನಾಗಿದ್ದಾನೆ.

೩೦. ಪುರುಷರ ರೇತಸ್ಸಿನಲ್ಲಿ ಆದಿತ್ಯಾಂತರ್ಗತ ವಿಷ್ಣು ಇರುವನು.

೩೧. ಜೀವರಿಗೆ, ಒಳ್ಳೆಯ ಜ್ಞಾನ ಮತ್ತು ಕೆಟ್ಟ ಜ್ಞಾನ, ಕಣ್ಣಿನ ಒಳಗಿರುವ ಸೂರ್ಯನಿಂದ ಆಗುತ್ತದೆ.

೩೨. ದ್ರೌಪದಿ ಸೂರ್ಯ ಆರಾಧನೆ ಇಂದ ಅಕ್ಷಯ ಪಾತ್ರ್ಯನ್ನು ಪಡೆದುಕೊಳ್ಳುತ್ತಾಳೆ.

೩೩. ಸೂರ್ಯ ನಾರಾಯಣ ಗಾಯತ್ರಿ ಮಂತ್ರದ ಪ್ರತಿಪಾದ್ಯ ದೇವತೆ. ಅವನಿಂದಲೇ ಎಲ್ಲಾ (ಮಳೆ ಬೆಳೆ) ಸೃಷ್ಟಿ. ಆದಕ್ಕೆ ಅವನನ್ನ ಸವಿತೃ ಎಂದು ಕರೆದಿದ್ದಾರೆ.

೩೪. ಅದಿತಿ ಕಶ್ಯಪರಲ್ಲಿ ದ್ವಾದಶಾದಿತ್ಯರಲ್ಲಿ ಸೂರ್ಯ ಒಬ್ಬ.

೩೫. ಸೂರ್ಯನಿಗೆ ಎಂಟು ಜನ ಮಕ್ಕಳು. ವೈವಸ್ವತ ಮನು, ಯಮ, ಯಮುನೆ, ಅಶ್ವಿನಿಕುಮಾರರು, ಶನೈಶ್ಚರ, ಸಾವರ್ಣಿಮನು ಮತ್ತು ತಪತಿ.

೩೬. ಗ್ರಹಣ ಕಾಲದಲ್ಲಿ ಸೂರ್ಯಚಂದ್ರರನ್ನು ಅವರ ಪ್ರಾರಬ್ಧಕರ್ಮದಿಂದ ರಾಹು ಕಬಳಿಸುತ್ತಾನೆ. ಆ ಸಾಮರ್ಥ್ಯ ರಾಹುವಿಗೆ ದೊರಕಿದ್ದು ಚತುರ್ಮುಖ ವರ ಮತ್ತು ಭಗವಂತ ರಾಹುವಿಗೆ ಅಂತರ್ಯಾಮಿಯಾಗಿ ಬಲಕೊಡುತ್ತಾನೆ.

೩೭. ರಾಹುವಿಗೆ ಸೂರ್ಯನ ಮೇಲೆ ದ್ವೇಷ. ಯಾಕೆ ಎಂದರೆ, ಅಮೃತ ಪಾನಕಾಲದಲ್ಲಿ ಸೂರ್ಯ, ಮೋಹಿನಿಗೆ ರಾಹು ಅಸುರ ಎಂದು ಕಣ್ಣು ಸೊನ್ನೆ ಮಾಡುತ್ತಾನೆ. ಆದರಿಂದ ದೇವರು ಅವನನ್ನ ಛೇದನೆ ಮಾಡುತ್ತಾನೆ.

೩೮. ನಾವು ಧರಿಸುವ ಯಜ್ಞೋಪವೀತ ಸೂರ್ಯನಿಗೆ ದರ್ಶನ ಮಾಡಿಸಿ ಹಾಕಿಕೊಳ್ಳಬೇಕು.

೩೯ ಜೀವರು ಮಾಡುವ ಕರ್ಮಗಳಿಗೆ ಸೂರ್ಯ ಕರ್ಮ ಸಾಕ್ಷಿ. ಅಗತ್ಯ ಇದ್ದರೆ ಯಮಲೋಕದಲ್ಲಿ ಕರೆದ ತಕ್ಷಣ ಬಂದು ಸಾಕ್ಷಿ ಹೇಳುತ್ತಾನೆ.

೪೦. ಸೂರ್ಯನ ರಥಕ್ಕೆ ಒಂದೇ ಚಕ್ರ.

ಇಲ್ಲಿಗೆ ರಥಸಪ್ತಮಿಯ ವಿಚಾರವು ಮುಗಿಯಿತು

**ಶ್ರೀ ಹೃಷೀಕೇಶ ತೀರ್ಥರು (ಪಲಿಮಾರು ಮಠ)** - ಆಚಾರ್ಯರ ಶಿಷ್ಯವರ್ಗದಲ್ಲಿ 'ಅಷ್ಟೋತ್ಕೃಷ್ಟ' ಎಂದು ಪ್ರಸಿದ್ಧರಾದ ಪಲಿಮಾರು ಮಠದ ಮೂಲಯತಿಗಳಾದ ಶ್ರೀ ಹೃಷೀಕೇಶತೀರ್ಥರು ಆಚಾರ್ಯರಿಂದ ಸನ್ಯಾಸ ದೀಕ್ಷೆ ಪಡೆದ ಮೊದಲಿಗರು. ಆದುದರಿಂದಲೇ ಮಧ್ವವಿಜಯಕಾರರು ಇವರನ್ನು ಆಚಾರ್ಯರ 'ಶಿಷ್ಯಪ್ರವರ' ಎಂದು ಕರೆದಿರುವರು. ಶ್ರೀ ಹೃಷೀಕೇಶತೀರ್ಥರು ಶ್ರೀಮಧ್ವಾಚಾರ್ಯರ ಸರ್ವಮೂಲ ಗ್ರಂಥಗಳನ್ನೆಲ್ಲ ತಮ್ಮ ಸ್ವಹಸ್ತಾಕ್ಷರದಲ್ಲಿ ಬರೆದಿಟ್ಟಿರುವರು. ಉಳಿದ ಶಿಷ್ಯರು ಬರೆದಿಟ್ಟಿರುವರೋ ಇಲ್ಲವೋ ಎಂಬುದಕ್ಕೆ ಯಾವ ಪುರಾವೆಯೂ ಸಿಕ್ಕಿಲ್ಲ. ಇಂದಿಗೂ ನಮ್ಮ ಕಣ್ಣಮುಂದೆ ಕಂಗೊಳಿಸುವ ಮೊಟ್ಟ ಮೊದಲು ಪ್ರತಿಯನ್ನು ಬರೆದಿಟ್ಟವರು ಆಚಾರ್ಯ ಶಿಷ್ಯರಲ್ಲಿ ಶ್ರೀಹೃಷೀಕೇಶತೀರ್ಥರೊಬ್ಬರೇ (ಈಗ ಸುಮಾರು ನಾಲ್ವತ್ತು ವರ್ಷಗಳ ಹಿಂದೆ ಶ್ರೀ ವಿದ್ಯಾಮಾನ್ಯತೀರ್ಥರು ಹಾಗೂ ಶ್ರೀ ವಿಶ್ವೇಶತೀರ್ಥರು ಶ್ರೀ ಬನ್ನಂಜೆ ಗೋವಿಂದಾಚಾರ್ಯರಿಂದ ಈ ಕೃತಿಗಳನ್ನು ಸಂಶೋಧಿಸಿ ಸುಲಭ ಬೆಲೆಯಲ್ಲಿ ದೊರಕುವಂತೆ ಪ್ರಕಟಣೆ ಮಾಡಿದ್ದರು). ಶ್ರೀ ಮಧ್ವಾಚಾರ್ಯರ ಶಿಷ್ಯರುಗಳಲ್ಲಿ ಇವರ ಪ್ರವಚನ ಕ್ರಮ ಮತ್ತು ಸ್ವರ ಗಾಂಭೀರ್ಯ ಆಚಾರ್ಯರ ಸ್ವರ ಗಾಂಭೀರ್ಯಗಳಿಗೆ ಹೋಲುತ್ತಿತ್ತು. ಆದುದರಿಂದ ಪ್ರವಚನ ಕಾಲದಲ್ಲಿ ಮೂಲಗ್ರಂಥಗಳ ಪ್ರವಚನಕ್ಕಾಗಿ ಆಚಾರ್ಯರು ಶ್ರೀ ಹೃಷೀಕೇಶ ತೀರ್ಥರನ್ನೇ ಆಯ್ದುಕೊಳ್ಳುತ್ತಿದ್ದರು ಎಂಬ ಮಾತು ಶ್ರೀ ಸುಮಧ್ವ ವಿಜಯದಲ್ಲಿ ಉಲ್ಲೇಖಿತವಾಗಿದೆ. ಅವದತ್ ಸ ಕಥಾಂ ರಥಾಂಗಪಾಣೇರ್ಭಗವಾನ್ ಭಾಗವತೇ ಭವಾಪಹಂತ್ರೀಮ್। ಅನುಕೂಲ ಗುಣಸ್ವರಾಧಿಭಾಜಾ ನಿಜಶಿಷ್ಯ ಪ್ರವರೇಣ ವಾಚ್ಯಮಾನೇ ॥ ಇವರನ್ನು 'ವಶೀಕೃತ ಹೃಷೀಕ್' ಎಂದು ಕರೆದ ನಾರಾಯಣ ಪಂಡಿತರು ಇವರಿಗೆ ಆಚಾರ್ಯರು ನೀಡಿದ ನಾಮ ಸಾರ್ಥಕವಾಗಿತ್ತು ಎಂದು ಹೇಳಿದ್ದಾರೆ. ಅಂಥ ಮಹಾನುಭಾವರ ಬಗೆಗೆ ಹೆಚ್ಚು ಹೇಳುವ ಶಕ್ತಿಯಾದರೂ ನಮಗೆ ಎಲ್ಲಿದೆ? ಆಚಾರ್ಯರ ಗ್ರಂಥಗಳ ಮನನದಲ್ಲಿ ಮಗ್ನರಾದ ಅವರು ಎರಡು ಪುಟ್ಟ ಕೃತಿಗಳನ್ನು ರಚನೆ ಮಾಡಿದ್ದಾರೆ. ಒಂದು 'ಸಂಪ್ರದಾಯ ಪದ್ಧತಿ', ಇನ್ನೊಂದು 'ಅಣುಮಧ್ವಚರಿತೆ'. ಈ ಎರಡು ಗ್ರಂಥಗಳಲ್ಲಿ ಆಚಾರ್ಯರ ಕಾಲದ ಅನೇಕ ಮಹತ್ವದ ಘಟನೆಗಳ ಬಗ್ಗೆ ಉಲ್ಲೇಖವಿದೆ. ಸುಮಧ್ವವಿಜಯದಲ್ಲಿ ಕೂಡ ಕಾಣಸಿಗದಂಥ ಅನೇಕ ಚಾರಿತ್ರಿಕ ಸಂಗತಿಗಳನ್ನು ನಾವು ಇದರಲ್ಲಿ ಕಾಣಬಹುದು. ಈ ಗ್ರಂಥಗಳು ಹೆಚ್ಚು ಪ್ರಚಾರದಲ್ಲಿರದಿದ್ದರೂ ವಿಮರ್ಶಕರಿಗೆ, ಸಂಶೋಧಕರಿಗೆ ತುಂಬ ಉಪಯುಕ್ತವಾದವುಗಳು ಎನ್ನುವುದರಲ್ಲಿ ಸಂಶಯವಿಲ್ಲ. ಜಾತಕ ಮಾಡಬರುವಷ್ಟು

ಕರಾರುವಾಕ್ಕಾಗಿ ಆಚಾರ್ಯರ ಅವತಾರ ದಿನಮಾನಗಳನ್ನು ಈ ಗ್ರಂಥದಲ್ಲಿ ಉಲ್ಲೇಖಿಸಲಾಗಿದೆ.

**ಅವತಾರ ಸಮಾಪ್ತಿ ಗಂಗೆಯ ತಡಿಯಲ್ಲಿ–** ಶ್ರೀ ಹೃಷೀಕೇಶತೀರ್ಥರು ತಮ್ಮ ಜೀವನದ ಉತ್ತರಾರ್ಧವನ್ನೆಲ್ಲ ತೀರ್ಥ ಕ್ಷೇತ್ರಗಳಲ್ಲೇ ಕಳೆದರು. ಹೆಚ್ಚಾಗಿ ಗಂಗೆಯ ಸಾನ್ನಿಧ್ಯದಲ್ಲಿ, ಗುಡಿಸಲಿನಲ್ಲಿ ವಾಸ, ಗಂಗಾಸ್ನಾನ, ಗಂಗಾಪಾನ, ಭಗವಂತನಧ್ಯಾನ, ಇದಿಷ್ಟೇ ಅವರ ದಿನಚರಿಯಾಯಿತು. ಒಂದು ರಥ ಸಪ್ತಮಿಯ ಪ್ರಾತಃಕಾಲ, ಆಚಾರ್ಯರ ಶಿಷ್ಯನಾಗಿ ತಾನು ಈ ಜನ್ಮದಲ್ಲಿ ಸಾಧಿಸಬೇಕಾದದ್ದನ್ನು ಸಾಧಿಸಿಯಾಯಿತು ಎಂದು ಅವರಿಗೆ ಅನ್ನಿಸಿರಬೇಕು. ಆಗ ಅವರು ಪ್ರಯಾಗದಲ್ಲಿದ್ದರು. ಗಂಗೆಯ ತಟದಲ್ಲಿ ಪ್ರಯಾಗ ಮಾಧವನನ್ನು ಸ್ಮರಿಸುತ್ತಾ ಧ್ಯಾನಮಗ್ನರಾಗಿ ಕುಳಿತರು. ಇವರ ಇಂಗಿತ ಅರಿತ ಗಂಗೆ ಭಗವದ್ ಭಕ್ತನನ್ನು ಆದರದಿಂದ ಸ್ವಾಗತಿಸಿದಳು. ಈ ತೀರ್ಥ ಆ ತೀರ್ಥದೊಡನೆ ಬೆರೆತು ಹೋಯಿತು. ಪಲಿಮಾರು ಮಠದಲ್ಲಿರುವ ಹಳೆಯ ದಾಖಲೆಯ ಪ್ರಕಾರ ಶ್ರೀ ಹೃಷೀಕೇಶತೀರ್ಥರು ಗಂಗಾ ಪ್ರವೇಶ ಮಾಡಿದ್ದು ಶಾಲಿವಾಹನ ಶಕೆ ೧೨೧೨ (ಕ್ರಿ.ಶ. ೧೨೯೯) ವಿರೋಧಿ ಸಂವತ್ಸರದ ಮಾಘ ಶುದ್ಧ ಸಪ್ತಮಿಯಂದು. ಆಗ ಅವರ ವಯಸ್ಸು ಎಷ್ಟು ಸಂನ್ಯಾಸ ದೀಕ್ಷೆ ಪಡೆದ ಎಷ್ಟು ವರ್ಷಕಾಲ ಅವರು ಭೂಮಿಯಲ್ಲಿದ್ದರು ಮುಂತಾದ ವಿಷಯಗಳ ಬಗೆಗೆ ನಮಗೆ ಯಾವ ವಿವರವೂ ದೊರಕುವುದಿಲ್ಲ. ಆಚಾರ್ಯರು ಬದರಿಗೆ ತೆರಳಿ ಅದೃಶ್ಯರಾದ ಮೇಲೆ ಹನ್ನೆರಡು ವರ್ಷಗಳಷ್ಟು ಕಾಲ ಅವರು ಭೂಮಿಯಲ್ಲಿದ್ದರು ಎಂಬ ವಿಷಯ ತಿಳಿದುಬರುತ್ತದೆ. ಆಚಾರ್ಯರ ಕಣ್ಣೆದುರಿನಲ್ಲಿಯೇ ಇವರು ಶಿಷ್ಯ ಸ್ವೀಕಾರ ಮಾಡಿದ್ದರು. ಅವರಿಗೆ ಪೀಠಾಧಿಪತ್ಯವನ್ನು ವಹಿಸಿ ತೀರ್ಥಯಾತ್ರೆಗೆ ಹೊರಟ ವಿಷಯ ಮಠದ ಹಳೆಯ ತಾಡಓಲೆ ಪ್ರತಿಯೊಂದರಲ್ಲಿ ಹೀಗೆ ಉಲ್ಲೇಖಿತವಾಗಿರುತ್ತದೆ. ಶ್ರೀ ಹೃಷೀಕೇಶರ ಬಗ್ಗೆ ಮಠದಲ್ಲಿ ದೊರಕುವ ದಾಖಲೆ ಇದೊಂದು ಮಾತ್ರ. ವಿರೋಧಿಮಾಘಾರ್ಜುನ ಸಪ್ತಮೀ ತಿಥೌ ವರೋಹೃಷೀಕೇಶಮುನಿಸ್ತಪಸ್ವಿನಾಮ್ । ಪುರುಪ್ರಬೋಧಾರ್ಯ ಕರಾಬ್ಜ ಸಂಭವೋಧರಾಸುತೇಶಾಂಘ್ರಿ ಸರೋಜ ಮೇಯಿವಾನ್॥

**ಶ್ರೀ ರಾಮ ಮಾಧವತೀರ್ಥರು (ಮಾಧವತೀರ್ಥ ಮಠ)** ಶೇದಿನಂಗನಲ್ಲೂರು - ದುರ್ವಾದಿಮತವಿಚ್ಛೇದ ವಿದ್ವತ್ಯಮುದ ಕೇಸರಿನ್ । ರಾಮಮಾಧವಗುರೂನ್ ನೌಮಿ ಸಂಪ್ರದಾಯಾರ್ಥ ಕೋವಿದಾನ್ ॥

ಶ್ರೀ ಅಪರಾಜಿತತೀರ್ಥರು (ಪಲಿಮಾರು ಮಠ) - ಪರಂಪರೆಯಲ್ಲಿ ಮೂರನೆಯವರು. 'ಅಪರಾಜಿತ' ಎನ್ನುವುದೂ ಭಗವಂತನ ಸಾವಿರ ರೂಪಗಳಲ್ಲಿ ಒಂದು. ಇವರು ಸುಮಾರು ಇಪ್ಪತ್ತು ವರ್ಷಗಳ ಕಾಲ ಈ ಪೀಠವನ್ನು ಅಲಂಕರಿಸಿದ್ದರು. ಪೂಜಾ ಪಾಠ ಪ್ರವಚನಗಳಲ್ಲಿ ಮತ್ತು ತೀರ್ಥಕ್ಷೇತ್ರ ಸಂಚಾರದಲ್ಲಿಯೇ ಇವರು ತಮ್ಮ ಕಾಲವನ್ನು ಕಳೆದರು. ಕೊನೆಗೆ ಶಾಶಕ ೧೨೬೨ (ಕ್ರಿ.ಶ. ೧೩೪೦) ವಿರೋಧಿ ಸಂವತ್ಸರದ ಮಾಘ ಶುದ್ಧ ಸಪ್ತಮಿಯಂದು ಗೋದಾವರಿ ತಡಿಯಲ್ಲಿ ವೃಂದಾವನಸ್ಥರಾದರು. ಹೃಷೀಕೇಶತೀರ್ಥರ ಪುಣ್ಯದಿನದಂದೇ ಇವರೂ ಬೃಂದಾವನಸ್ಥರಾದದ್ದು ಒಂದು ವಿಶೇಷ ಘಟನೆ.

## ಮಾಘ ॥ ಶುದ್ಧ ॥ ಅಷ್ಟಮೀ

ಭೀಷ್ಮಾಷ್ಟಮೀ - ಮಾಘಶುಕ್ಲಪಕ್ಷದ ಅಷ್ಟಮೀ ಭೀಷ್ಮಾಚಾರ್ಯರು ದೇಹತ್ಯಾಗಮಾಡಿದ ದಿವಸ. ಆದ್ದರಿಂದ ಭೀಷ್ಮಾಷ್ಟಮೀ ಎಂದೇ ಈ ಅಷ್ಟಮಿಗೆ ಹೆಸರು. ಭೀಷ್ಮಾಚಾರ್ಯರು ಆಜನ್ಮಬ್ರಹ್ಮಚಾರಿಗಳು. ಯುಧಿಷ್ಠಿರನಿಗೆ ಉಪದೇಶ ಮಾಡುವ ಮುಖಾಂತರ ಸಮಗ್ರಜಗತ್ತಿಗೆ ತತ್ತ್ವೋಪದೇಶವನ್ನು ಮಾಡಿದ ಮಹಾಗುರುಗಳು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರು ಈ ನಾಲ್ಕೂ ವರ್ಣದವರಿಗೆ ಅವರು ಗುರುಗಳಾದ್ದರಿಂದ ಎಲ್ಲ ವರ್ಣದವರೂ ಭೀಷ್ಮಾಚಾರ್ಯರಿಗೆ ಭೀಷ್ಮಾಷ್ಟಮಿಯಂದು ತರ್ಪಣವನ್ನು ನೀಡಬೇಕು. ಭೀಷ್ಮಾಷ್ಟಮಿಯಂದು ಮಾಡಬೇಕಾದ ಸತ್ಕರ್ಮ ಭೀಷ್ಮರಿಗೆ ತರ್ಪಣ ನೀಡುವುದು. ಅಂದರೆ ಅದು ಪಿತೃಕಾರ್ಯ. ಹೀಗಾಗಿ ಮಧ್ಯಾಹ್ನಕಾಲದಲ್ಲಿ ಅಷ್ಟಮಿ ಎಂದು ಇರುತ್ತದೆಯೋ ಅಂದೇ ಭೀಷ್ಮಾಷ್ಟಮಿಯನ್ನು ಆಚರಿಸಬೇಕು. ಎರಡು ದಿವಸಗಳಲ್ಲಿ ಅಷ್ಟಮಿ ಬಂದಿದ್ದರೆ, ಯಾವ ದಿವಸ ಮಧ್ಯಾಹ್ನಕಾಲದಲ್ಲಿ (ಕುತುಪಕಾಲವನ್ನಾರಂಭಿಸಿ) ಇರುವುದೋ ಆ ದಿವಸ ಆಚರಿಸಬೇಕು. ಎರಡೂ ದಿವಸ ಕುತುಪಕಾಲದಲ್ಲಿ ಅಷ್ಟಮಿ ಇದ್ದರೆ ಯಾವ ದಿವಸ ಸಾಯಂಕಾಲದವರೆಗೂ ಅಷ್ಟಮಿ ಇರುತ್ತದೆಯೋ ಅಂದೇ ಭೀಷ್ಮಾಷ್ಟಮಿ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣದ ಪುರುಷರೂ ಭೀಷ್ಮಾಚಾರ್ಯರಿಗೆ ತಿಲತರ್ಪಣ ನೀಡಲೇಬೇಕು ಎಂದು ಮಹಾಭಾರತ ತಿಳಿಸುತ್ತದೆ. – ಅಷ್ಟಮ್ಯಾಂ ತು ಸಿತೇ ಪಕ್ಷೇ ಭೀಷ್ಮಾಯ ತು ತಿಲೋದಕಮ್ । ಅನ್ನಂ ಚ ವಿಧಿವದ್ ದದ್ಯುಃ ಸರ್ವೇ ವರ್ಣಾ ದ್ವಿಜಾತಯಃ ॥ ಇಲ್ಲಿ ಸರ್ವೇ ವರ್ಣಾಃ ಎಂದು ಸ್ಪಷ್ಟವಾಗಿ ನಾಲ್ಕೂ ವರ್ಣದವರು ತಿಲೋದಕವನ್ನು ನೀಡಬೇಕು ಎಂದಿದೆ. ತರ್ಪಣ ನೀಡಿದ ಬಳಿಕ ಭೀಷ್ಮಾಚಾರ್ಯರಿಗೆ ಸವ್ಯದಿಂದ ಅರ್ಘ್ಯವನ್ನೂ ನೀಡಬೇಕು. ತಂದೆ ಬದುಕಿಲ್ಲದವರು ಅಪಸವ್ಯದಿಂದ

ತಿಲತರ್ಪಣವನ್ನು ನೀಡಬೇಕು. ಪಿತೃಗಳಿಗೆ ನೀಡುವಂತೆ. ತಂದೆ ಬದುಕಿರುವವರು ಸವ್ಯದಿಂದ ಕೇವಲ ಜಲತರ್ಪಣವನ್ನು (ಕೆಲವರು ಅಕ್ಕಿಯಲ್ಲಿ ತರ್ಪಣ ನೀಡಬೇಕು ಎಂದು ಹೇಳುತ್ತಾರೆ) ನೀಡಬೇಕು. ಸವ್ಯದಿಂದಲೇ ತರ್ಪಣ, ಸವ್ಯದಿಂದಲೇ ಅರ್ಘ್ಯ. ತರ್ಪಣ ನೀಡಬೇಕಾದರೆ ತಂದೆ ಇರುವವರೂ ದಕ್ಷಿಣಕ್ಕೆ ಮುಖಮಾಡಿಯೇ ನೀಡಬೇಕು. ''ಆಭಿರದ್ಭಿರವಾಪ್ನೋತು ಪುತ್ರಪೌತ್ರೋಚಿತಾಂ ಕ್ರಿಯಾಂ'' ಎಂದು ಮಂತ್ರವಿರುವುದರಿಂದ ಇದು ಸ್ಪಷ್ಟವಾಗಿ ಪಿತೃಕಾರ್ಯ. ಹೀಗಾಗಿ ದಕ್ಷಿಣಕ್ಕೆ ಅಭಿಮುಖವಾಗಿ ತಿಲಗಳಿಂದ ತರ್ಪಣ ಮತ್ತು ಕುತಪಕಾಲದಲ್ಲಿ ಆಚರಣೆ. ತಂದೆ ಬದುಕಿರುವವರು ಹೀಗೆ ತರ್ಪಣ ನೀಡಬಹುದೇ? ತರ್ಪಣ ನೀಡುವುದು ತಂದೆ ಬದುಕಿಲ್ಲದವರಿಗೆ ಮಾತ್ರ ಇರುವ ಅಧಿಕಾರವಲ್ಲವೇ ಎಂಬ ಪ್ರಶ್ನೆಗೆ ಪದ್ಮಪುರಾಣ ಉತ್ತರ ನೀಡುತ್ತದೆ – ಜೀವತ್ಪಿತಾಪಿ ಕುರ್ವೀತ ತರ್ಪಣಂ ಯಮಭೀಷ್ಮಯೋಃ। ನಿಜ. ತರ್ಪಣ ನೀಡುವುದು ತಂದೆ ಬದುಕಿಲ್ಲದವರ ಅಧಿಕಾರ. ಆದರೆ, ದೀಪಾವಳಿಯಲ್ಲಿ ಯಮಧರ್ಮದೇವರಿಗೆ ಮತ್ತು ಭೀಷ್ಮಾಷ್ಟಮಿಯಲ್ಲಿ ಭೀಷ್ಮಾಚಾರ್ಯರಿಗೆ ತಂದೆ ಬದುಕಿರುವವರೂ ತರ್ಪಣ ನೀಡಲೇಬೇಕು ಎಂದು ವಿಶೇಷನಿಯಮವಿರುವುದರಿಂದ ತಂದೆ ಬದುಕಿರುವವರೂ ತರ್ಪಣ ನೀಡಲೇ ಬೇಕು. ಶೂದ್ರರು ಯಾವುದೇ ಮಂತ್ರವನ್ನುಚ್ಚರಿಸದೇ ತರ್ಪಣವನ್ನು ನೀಡಬೇಕು. ಭೀಷ್ಮಾಷ್ಟಮಿಯಂದು ಭೀಷ್ಮಾಚಾರ್ಯರಿಗೆ ಮಾತ್ರ ತಿಲತರ್ಪಣ. ಈ ದಿವಸ ಪಿತೃಗಳಿಗೆ ನೀಡಲೇ ಬೇಕೆಂಬ ನಿಯಮವಿಲ್ಲ. ಗಂಗಾದಿ ತೀರ್ಥಗಳಲ್ಲಿ ಸ್ನಾನ ಮಾಡುತ್ತಿದ್ದರೆ ಪಿತೃಗಳಿಗೂ ನೀಡುವುದು ಉತ್ತಮಪಕ್ಷ. ಆ ರೀತಿಯಾಗಿ ತೀರ್ಥಗಳಿಗೆ ಹೋದಾಗ ತರ್ಪಣವನ್ನು ನೀಡಬಹುದು ಎಂದು ಶಾಸ್ತ್ರವಿಧಿಸುತ್ತದೆ – ''ಶೀತಲಾಸು ಚ ತೋಯಾಸು'' ಎಂದು. ನೀಡುವವರು ಭೀಷ್ಮರಿಗೆ ನೀಡಿದ ನಂತರ ಪಿತೃಗಳಿಗೆ ನೀಡಬೇಕು. ಪಿತೃಗಳಿಗೆ ತಿಲತರ್ಪಣ ನೀಡದಿದ್ದ ಪಕ್ಷದಲ್ಲಿ ಪಿತೃಗಳಿಗೆ ಎಂದಿನಂತೆ ನಿರ್ಮಾಲ್ಯತೀರ್ಥ ಮತ್ತು ನಿರ್ಮಾಲ್ಯ ತುಳಸೀಪುಷ್ಪಗಳಿಂದ ತರ್ಪಣವನ್ನು ನೀಡಲೇ ಬೇಕು. ಬ್ರಹ್ಮಯಜ್ಞದ ಅಂಗವಾಗಿ. ಈ ದಿವಸ ತಿಲತರ್ಪಣವನ್ನು ನೀಡದಿದ್ದರೆ ಗಳಿಸಿದ ಪುಣ್ಯವನ್ನು ಕಳೆದುಕೊಳ್ಳುತ್ತೇವೆ. ಭೀಷ್ಮಾಷ್ಟಮಿಯಂದು ಭೀಷ್ಮಾಚಾರ್ಯರನ್ನು ಉದ್ದೇಶಿಸಿ ಶ್ರಾದ್ಧ ಮಾಡಿದರೆ ಸತ್ಸಂತಾನವಾಗುತ್ತದೆ. ಆದರೆ ಶ್ರಾದ್ಧ ಮಾಡದಿದ್ದರೆ ದೋಷವಿಲ್ಲ. ಆದರೆ ತರ್ಪಣವನ್ನು ನೀಡಲೇ ಬೇಕು. ತರ್ಪಣ ನೀಡದಿದ್ದರೆ ದೋಷ. ಸತ್ಸಂತಾನದ ಉದ್ದೇಶವಿರುವವರೂ, ಮಕ್ಕಳಿಲ್ಲದವರೂ ಕೂಡ ಭೀಷ್ಮಾಚಾರ್ಯರನ್ನು ಉದ್ದೇಶಿಸಿ ಶ್ರಾದ್ಧ ಮಾಡಿದರೆ ಸತ್ಸಂತಾನವಾಗುತ್ತದೆ. ''ಅನ್ನಂ ಚ ವಿಧಿವದ್ ದದ್ಯುಃ'' ಎಂಬ ಪ್ರಮಾಣವಚನದಲ್ಲಿ ಶ್ರಾದ್ಧವನ್ನೂ ಮಾಡಬೇಕೆಂದಿದೆ.

ಪದ್ಮಪುರಾಣದಲ್ಲಿ ಇನ್ನೂ ಸ್ಪಷ್ಟವಾದ ವಚನವೇ ಇದೆ – ಮಾಘೇ ಮಾಸಿ ಸಿತಾಷ್ಟಮ್ಯಾಂ ಸತಿಲಂ ಭೀಷ್ಮತರ್ಪಣಮ್ । ಶ್ರಾದ್ಧಂ ಚ ಯೇ ನರಾಃ ಕುರ್ಯುಃ ತೇ ಸ್ಯುಃ ಸಂತತಿಭಾಗಿನಃ ॥ ಶ್ರಾದ್ಧ ಮಾಡುವವರ ವಂಶ ಸದಾ ಬೆಳಗುತ್ತಿರುತ್ತದೆ. ನಿಲ್ಲುವುದಿಲ್ಲ.

**ತರ್ಪಣದ ಸಂಕಲ್ಪ –** ಸವ್ಯದಿಂಧ ಆಚಮನ, ಪ್ರಾಣಾಯಾಮಗಳನ್ನು ಮಾಡಿ, ದೇಶಕಾಲಗಳ ಸ್ಮರಣೆಯನ್ನು ಮಾಡಿ ಗಂಗಾಶಂತನುಪುತ್ರ-ಭೀಷ್ಮಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಭೀಷ್ಮಾಷ್ಟಮ್ಯಾಂ ವ್ಯಾಘ್ರಪಾದಗೋತ್ರಂ ಭೀಷ್ಮಮುದ್ದಿಶ್ಯ ಅಪಸವ್ಯೇನ ತಿಲತರ್ಪಣಂ, ಸವ್ಯೇನ ಅರ್ಘ್ಯದಾನಂ ಚ ಕರಿಷ್ಯೇ ॥ (ತಂದೆ ಇರುವವರು ಸವ್ಯೇನ ತರ್ಪಣಂ ಅರ್ಘ್ಯಂ ಚ ಕರಿಷ್ಯೇ ಎಂದು ಸಂಕಲ್ಪಿಸಬೇಕು) ಎಂದು ಸಂಕಲ್ಪಿಸಬೇಕು.

**ತರ್ಪಣದ ಮಂತ್ರಗಳು –** (ದಕ್ಷಿಣಾಭಿಮುಖವಾಗಿ ಕುಳಿತು, ಅಪಸವ್ಯವಾಗಿ ಬಲಗೈಯ್ಯಲ್ಲಿ ಎಳ್ಳು ಮತ್ತು ವಿಷ್ಣುನಿರ್ಮಾಲ್ಯತುಳಸೀ ಪುಷ್ಪಗಳನ್ನು ಹಿಡಿದುಕೊಂಡು ಕೆಳಗಿನ ಮಂತ್ರವನ್ನು ಹೇಳುತ್ತಾ ತರ್ಪಣವನ್ನು ನೀಡಬೇಕು.) ವೈಯಾಘ್ರಪಾದಗೋತ್ರಾಯ ಸಾಂಕೃತಿಪ್ರವರಾಯ ಚ । ಅಪುತ್ರಾಯ ದದಾಮ್ಯೇತತ್ ಜಲಂ ಭೀಷ್ಮಾಯ ವರ್ಮಣೇ ॥ ಸಂಕೃತಿ ಎಂಬ ಋಷಿಯನ್ನು ಪ್ರವರ ಋಷಿಯನ್ನಾಗಿ ಉಳ್ಳ ವ್ಯಾಘ್ರಪದಗೋತ್ರದಲ್ಲಿ ಜನಿಸಿದ, ಮಕ್ಕಳಿಲ್ಲದ ಭೀಷ್ಮವರ್ಮರಿಗೆ ಈ ತರ್ಪಣವನ್ನು ನೀಡುತ್ತೇನೆ - ಎಂದಿದರ ಅರ್ಥ. 'ಭೀಷ್ಮವರ್ಮಾಣಂ ವ್ಯಾಘ್ರಪದಗೋತ್ರಂ ವಸ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ತರ್ಪಯಾಮಿ' ಎಂದು ಮೂರು ಬಾರಿ ಹೇಳಿ ಮೂರು ಬಾರಿ ತರ್ಪಣವನ್ನು ನೀಡಬೇಕು. ಅನಂತರ ಪೂರ್ವಾಭಿಮುಖವಾಗಿ ಜನಿವಾರವನ್ನು ಸರಿಯಾಗಿ ಹಾಕಿಕೊಂಡು ಸೂರ್ಯನಿಗೆ ಅರ್ಘ್ಯನೀಡುವಂತೆ ಭೀಷ್ಮಾಚಾರ್ಯರಿಗೆ ಅರ್ಘ್ಯವನ್ನು ನೀಡಬೇಕು. ವಸೂನಾಮವತಾರಾಯ ಶಂತನೋರಾತ್ಮಜಾಯ ಚ। ಅರ್ಘ್ಯಂ ದದಾಮಿ ಭೀಷ್ಮಾಯ ಆಬಾಲಬ್ರಹ್ಮಚಾರಿಣೇ ॥ ವಸುಗಳಲ್ಲಿ ಎಂಟನೆಯ ವಸುವಾದ ದ್ಯು ಎಂಬ ದೇವತೆಯ ಅವತಾರರಾದ, ಶಂತನುವಿನ ಮಗನಾದ, ಬಾಲ್ಯದಿಂದಲೂ ಬ್ರಹ್ಮಚಾರಿಯಾಗಿಯೇ ಉಳಿದ, ಭೀಷ್ಮಾಚಾರ್ಯರಿಗೆ ಅರ್ಘ್ಯವನ್ನು ಸಮರ್ಪಿಸುತ್ತೇನೆ. ಎಂದು ಬಲಗೈಯ್ಯಲ್ಲಿ ನೀರು ಹಾಕಿಕೊಂಡು ಬಿಡಬೇಕು. ಬಳಿಕ ಕೈಗಳನ್ನು ಮುಗಿದುಕೊಂಡು ಭಗವಂತನಲ್ಲಿ ನಾವು ಕೊಟ್ಟ ತರ್ಪಣ ಹಾಗೂ ಅರ್ಘ್ಯಗಳು ಭೀಷ್ಮಾಚಾರ್ಯರಿಗೆ ತಲುಪಲಿ ಎಂದು ಪ್ರಾರ್ಥಿಸಬೇಕು. ಭೀಷ್ಮಃ

ಶಾಂತನವೋ ವೀರಃ ಸತ್ಯವಾದೀ ಜಿತೇಂದ್ರಿಯಃ ।ಆಭಿರದ್ಭಿರವಾಪ್ನೋತು ಪುತ್ರಪೌತ್ರೋಚಿತಾಂ ಕ್ರಿಯಾಮ್ ॥ ಶಂತನುವಿನ ಪುತ್ರರಾದ, ಪರಾಕ್ರಮಿಯಾದ, ಸದಾ ಸತ್ಯವನ್ನೇ ಮಾತನಾಡಿದ, ಜಿತೇಂದ್ರಿಯರಾದ, ಭೀಷ್ಮಾಚಾರ್ಯರು ನಾನು ನೀಡಿದ ನೀರಿನಿಂದ ಸಕಲ ಪುತ್ರ- ಪೌತ್ರರು ಮಾಡಬೇಕಾದ ಕ್ರಿಯೆಗಳ ಫಲವನ್ನು ಪಡೆಯಲಿ. ಆನಂತರ ಯಸ್ಯ ಸ್ಮೃತ್ಯಾ ... ಎಂಬ ಮಂತ್ರದಿಂದ ಅನೇನ ಭೀಷ್ಮತರ್ಪಣ ಅರ್ಘ್ಯಪ್ರದಾನೇನ ಭೀಷ್ಮಾಂತರ್ಗತ ಭಾರತೀರಮಣ-ಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಃ ಪ್ರೀಯತಾಂ ಪ್ರೀತೋ ವರದೋ ಭವತು ಎಂದು ಹೇಳಿ ಸಕಲಕರ್ಮವನ್ನೂ ಗುರ್ವಂತರ್ಯಾಮಿಯಾದ ಶ್ರೀಹರಿಗೆ ಸಮರ್ಪಿಸಬೇಕು.

ಶ್ರೀ ರಾಘವೇಂದ್ರತೀರ್ಥರು (ಪಲಿಮಾರು ಮಠ) - ಪರಂಪರೆಯಲ್ಲಿ ಹದಿಮೂರನೆಯವರು. ಇವರು ತಮ್ಮ ಗುರುಗಳಂತೆ ಮಹಾಕರ್ಮಠರಿದ್ದರು. ಚಾಂದ್ರಾಯಣಾದಿ ಕಠಿಣ ವ್ರತಗಳನ್ನು ಆಚರಿಸಿದವರು ಸ್ವಯಂ ಮಹಾವಿದ್ವಾಂಸರಾದ ಇವರ ದೈನಿಕ ಜೀವನದಲ್ಲಿ ನಿರಂತರ ಪಾಠಪ್ರವಚನವನ್ನು ಅನೂಚಾನವಾಗಿ ನಡೆಸಿಕೊಂಡು ಬಂದವರು. ಅವರು ಎಂಟು ಬಾರಿ ಸುಧಾಮಂಗಲ ಮಾಡಿದರು. ಪಾಠಪ್ರವಚನದೊಂದಿಗೆ ತೀರ್ಥಸಂಚಾರವೂ ನಡೆದಿತ್ತು. ಹೀಗೆ ಹದಿಮೂರು ವರ್ಷಗಳ ಕಾಲ ಪೀಠವನ್ನಾಳಿ ಶಾ.ಶಕ ೧೪೬೫ (ಕ್ರಿ.ಶ. ೧೫೪೩) ಶುಭಕೃತ್ ಸಂವತ್ಸರದ ಮಾಘ ಶುದ್ಧ ಅಷ್ಟಮಿ-(ಭೀಷ್ಮಾಷ್ಟಮಿ)ಯಂದು ಶ್ರೀರಂಗದಲ್ಲಿ ಹರಿಪದವನ್ನು ಹೊಂದಿದರು.

## ಮಾಘ ॥ ಶುದ್ಧ ॥ ನವಮೀ

ಮಧ್ವ ನವಮೀ – ಮಾಘ ಶುಕ್ಲ ನವಮಿಯಂದು ಶ್ರೀಮಧ್ವಾಚಾರ್ಯರು ಬದರಿಕಾಶ್ರಮಕ್ಕೆ ಪ್ರಯಾಣ ಮಾಡಿದರು. ಅದೃಶ್ಯರೂಪದಿಂದ ಉಡುಪಿಯಲ್ಲಿ ನೆಲೆಸಿದರು. ನಮ್ಮೆಲ್ಲರ ಗುರುಗಳಾದ ಶ್ರೀಮದಾಚಾರ್ಯರ ಬಗ್ಗೆ ಹಾಗೂ ಸರ್ವಮೂಲಗ್ರಂಥಗಳ ಬಗ್ಗೆ ಪ್ರಶ್ನೋತ್ತರ ರೂಪದಲ್ಲಿ ಸಂಕ್ಷೇಪವಾಗಿ ತಿಳಿದುಕೊಳ್ಳೋಣ.

ಶ್ರೀಮದಾನಂದತೀರ್ಥರು : ಮಾಘಶುದ್ಧ ನವಮೀ ಬದರಿಕಾಶ್ರಮ ಪ್ರವೇಶ (ಕ್ರಿ.ಶ. ೧೨೩೮-೧೩೧೭) - ಬ್ರಹ್ಮಾಂತಾಗುರುವಃ ಸಾಕ್ಷಾತ್ ಇಷ್ಟಂ ದೈವಂ ಶ್ರಿಯಃ ಪತಿಃ । ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನೀ ॥ ಹನುಮಂತದೇವರು ಇಂದಿಗೂ ಕೂಡ ಕಿಂಪುರುಷಖಂಡದಲ್ಲಿ ಚಿರಂಜೀವಿಗಳಾಗಿ

ನೆಲೆಸಿದ್ದಾರೆ. ಮಧ್ವಾಚಾರ್ಯರು ಬದರೀಕಾಶ್ರಮದಲ್ಲಿ ನಾರಾಯಣನ ಜೊತೆ ಪಾಠ ಕೇಳುತ್ತಾ ಚಿರಂಜೀವಿಗಳಾಗಿದ್ದಾರೆ. ಆದರೆ ಭೀಮಸೇನದೇವರು ಮಹಾಪ್ರಸ್ಥಾನದ ಸಂದರ್ಭದಲ್ಲಿ ನಿರ್ಯಾಣ ಹೊಂದುತ್ತಾರೆಂದು ಮಹಾಭಾರತದಲ್ಲಿದೆ. ಆದ್ದರಿಂದ ಭೀಮಸೇನದೇವರ ರೂಪ ಚಿರಂಜೀವಿಯಾಗಲಿಲ್ಲ ಅಲ್ಲವೆ ? ಶ್ರೀಮದಾಚಾರ್ಯರ ಭಾಷ್ಯಕ್ಕೆ ಟೀಕೆಯನ್ನು ಬರೆದ ಶ್ರೀತ್ರಿವಿಕ್ರಮಪಂಡಿತರ ತತ್ವಪ್ರದೀಪದ ಮಂಗಳಾಚರಣೆಯನ್ನು ನೋಡಿದಾಗ, ಇದಕ್ಕೆ ಉತ್ತರವನ್ನು ತಿಳಿಯಬಹುದು. ಮಂಗಳಾಚರಣೆಯ ೬ ಮತ್ತು ೭ನೇ ಶ್ಲೋಕದಲ್ಲಿ ಭೀಮಸೇನದೇವರೇ ಮಧ್ವರಾಗಿ ಅವತರಿಸಿದರು ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಹಿಂದೆ ಮೂರು ಮಹಾಪದ್ಮಸಂಖ್ಯೆಯಲ್ಲಿ ಮಣಿಮಂತನೇ ಮೊದಲಾದ ಕ್ರೋಧವಶರಾದ ಯಾವ ದೈತ್ಯರು ಭೀಮಸೇನದೇವರ ಗದೆಯಿಂದ ಹತರಾದರೋ ಅವರು ಭಗವಂತನ ಗುಣಗಳನ್ನು ಅಲ್ಲಗಳೆಯುವುದಕ್ಕಾಗಿ ಪುನಃ ಭೂಮಿಯಲ್ಲಿ ಮಾಯಾವಾದಿಗಳಾಗಿ ಹುಟ್ಟಿದರು, ಅವರನ್ನು ನಿಗ್ರಹಿಸುವುದಕ್ಕಾಗಿ. ಅದೇ ಭೀಮಸೇನದೇವರು, ಮಧ್ವರಾಗಿ ಅವತರಿಸಿದರು ಎಂದು ಹೇಳಿದ್ದಾರೆ. ಭೀಮಸೇನದೇವರ ಪ್ರಾಕೃತ ದೇಹ ನಾಶಹೊಂದಿತು. ಆದರೆ ವಾಯುದೇವರು ಯಾವ ಅಂಶದಿಂದ ಭೀಮರಾದರೋ ಅದೇ ಅಂಶ ಮಧ್ವಚಾರ್ಯ ಎನಿಸಿತು. ಮಧ್ವಾಚಾರ್ಯರು ಅವತರಿಸಿದ್ದು ಮಾಘ ॥ ಶುದ್ಧ॥ ಸಪ್ತಮಿ ಎಂದು ಕೆಲವರು ಹೇಳುತ್ತಾರೆ. ಕೆಲವರು ವಿಜಯದಶಮಿ ಎನ್ನುತ್ತಾರೆ. ಯಾವುದು ಸರಿ? ಮತ್ತು ಸೋಮವಾರ ಅವತರಿಸಿದರು ಎನ್ನುತ್ತಾರೆ? ವಾಯುಪುರಾಣದಲ್ಲಿರುವ ಅಣುಮಧ್ವಚರಿತೆಯಲ್ಲಿ 'ಆಶ್ವೀನ ಶುಕ್ಲ ದಶಮೀದಿವಸೇ ಭುವಿ ಪಾವನೇ' ಎಂಬುದಾಗಿ ವಿಜಯದಶಮಿಯಂದೇ ಅವತರಿಸಿದರೆಂದು ಸ್ಪಷ್ಟವಾಗಿ ಹೇಳಲಾಗಿದೆ. 'ಜಾತೋ ಮಧ್ಯಾಹ್ನವೇಲಾಯಾಂ ಬುಧವಾರೇ ಮರುತ್ತನುಃ' ಎಂಬುದರಿಂದ ಬುಧವಾರದ ಮಧ್ಯಾಹ್ನದ ದಿವಸ ಅವತರಿಸಿದರು ಎಂದೂ ಕೂಡ ಅಲ್ಲೇ ಹೇಳಿದ್ದಾರೆ. ಶ್ರೀಮದಾಚಾರ್ಯರು ಭೂಮಿಯಲ್ಲಿ ಎಷ್ಟು ವರ್ಷಗಳ ತನಕ ಕಾಣಿಸಿಕೊಂಡರು? 'ಏಕೋನಾಶೀತಿವರ್ಷಾಣಿ ನೀತ್ವಾ ಮಾನುಷದೃಷ್ಟಿಗಃ' ಪಿಂಗಲಾಬ್ಧೇ ಮಾಘಶುದ್ಧನವಮ್ಯಾಂ ಬದರೀಂ ಯಯೌ॥ ಒಟ್ಟು ೭೯ ವರ್ಷಗಳ ತನಕ ಭೂಮಿಯಲ್ಲಿ ಕಾಣಿಸಿಕೊಂಡರು. ಪಿಂಗಳ ಸಂವತ್ಸರ ಮಾಘ ॥ಶುದ್ಧ॥ ನವಮಿಯಂದು ಬದರೀಕಾಶ್ರಮಕ್ಕೆ ತೆರಳಿದರು. **ಮಧ್ವಾಚಾರ್ಯರು ಅವತರಿಸಿ ಎಷ್ಟು ವರ್ಷ ಸಂದವು?** 'ತ್ರಿಶತಾಬ್ದೋತ್ತರಚತುಃಸಹಸ್ರಾಬ್ದೇಭ್ಯ ಉತ್ತರೇ । ಏಕೋನಚತ್ವಾರಿಂಶಾಬ್ದೇ ವಿಲಂಬಿಪರಿವತ್ಸರೇ । ಎಂದು ಅಣುಮಧ್ವವಿಜಯ ಇದಕ್ಕೆ ಸ್ಪಷ್ಟವಾಗಿ ಉತ್ತರಿಸುತ್ತಿದೆ. ಕಲಿಯುಗ ಪ್ರಾರಂಭವಾಗಿ

ಶಾಂತನವೋ ವೀರಃ ಸತ್ಯವಾದೀ ಜಿತೇಂದ್ರಿಯಃ ।ಆಭಿರದ್ಭಿರವಾಪ್ನೋತು ಪುತ್ರಪೌತ್ರೋಚಿತಾಂ ಕ್ರಿಯಾಮ್ ॥ ಶಂತನುವಿನ ಪುತ್ರರಾದ, ಪರಾಕ್ರಮಿಯಾದ, ಸದಾ ಸತ್ಯವನ್ನೇ ಮಾತನಾಡಿದ, ಜಿತೇಂದ್ರಿಯರಾದ, ಭೀಷ್ಮಾಚಾರ್ಯರು ನಾನು ನೀಡಿದ ನೀರಿನಿಂದ ಸಕಲ ಪುತ್ರ- ಪೌತ್ರರು ಮಾಡಬೇಕಾದ ಕ್ರಿಯೆಗಳ ಫಲವನ್ನು ಪಡೆಯಲಿ. ಆನಂತರ ಯಸ್ಯ ಸ್ಮೃತ್ಯಾ ... ಎಂಬ ಮಂತ್ರದಿಂದ ಅನೇನ ಭೀಷ್ಮತರ್ಪಣ ಅರ್ಘ್ಯಪ್ರದಾನೇನ ಭೀಷ್ಮಾಂತರ್ಗತ ಭಾರತೀರಮಣ-ಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಃ ಪ್ರೀಯತಾಂ ಪ್ರೀತೋ ವರದೋ ಭವತು ಎಂದು ಹೇಳಿ ಸಕಲಕರ್ಮವನ್ನೂ ಗುರ್ವಂತರ್ಯಾಮಿಯಾದ ಶ್ರೀಹರಿಗೆ ಸಮರ್ಪಿಸಬೇಕು.

ಶ್ರೀ ರಾಘವೇಂದ್ರತೀರ್ಥರು (ಪಲಿಮಾರು ಮಠ) - ಪರಂಪರೆಯಲ್ಲಿ ಹದಿಮೂರನೆಯವರು. ಇವರು ತಮ್ಮ ಗುರುಗಳಂತೆ ಮಹಾಕರ್ಮಠರಿದ್ದರು. ಚಾಂದ್ರಾಯಣಾದಿ ಕಠಿಣ ವ್ರತಗಳನ್ನು ಆಚರಿಸಿದವರು ಸ್ವಯಂ ಮಹಾವಿದ್ವಾಂಸರಾದ ಇವರ ದೈನಿಕ ಜೀವನದಲ್ಲಿ ನಿರಂತರ ಪಾಠಪ್ರವಚನವನ್ನು ಅನೂಚಾನವಾಗಿ ನಡೆಸಿಕೊಂಡು ಬಂದವರು. ಅವರು ಎಂಟು ಬಾರಿ ಸುಧಾಮಂಗಲ ಮಾಡಿದರು. ಪಾಠಪ್ರವಚನದೊಂದಿಗೆ ತೀರ್ಥಸಂಚಾರವೂ ನಡೆದಿತ್ತು. ಹೀಗೆ ಹದಿಮೂರು ವರ್ಷಗಳ ಕಾಲ ಪೀಠವನ್ನಾಳಿ ಶಾ.ಶಕ ೧೪೬೫ (ಕ್ರಿ.ಶ. ೧೫೪೩) ಶುಭಕೃತ್ ಸಂವತ್ಸರದ ಮಾಘ ಶುದ್ಧ ಅಷ್ಟಮಿ-(ಭೀಷ್ಮಾಷ್ಟಮಿ)ಯಂದು ಶ್ರೀರಂಗದಲ್ಲಿ ಹರಿಪದವನ್ನು ಹೊಂದಿದರು.

## ಮಾಘ ॥ ಶುದ್ಧ ॥ ನವಮೀ

ಮಧ್ವ ನವಮೀ – ಮಾಘ ಶುಕ್ಲ ನವಮಿಯಂದು ಶ್ರೀಮಧ್ವಾಚಾರ್ಯರು ಬದರಿಕಾಶ್ರಮಕ್ಕೆ ಪ್ರಯಾಣ ಮಾಡಿದರು. ಅದೃಶ್ಯರೂಪದಿಂದ ಉಡುಪಿಯಲ್ಲಿ ನೆಲೆಸಿದರು. ನಮ್ಮೆಲ್ಲರ ಗುರುಗಳಾದ ಶ್ರೀಮದಾಚಾರ್ಯರ ಬಗ್ಗೆ ಹಾಗೂ ಸರ್ವಮೂಲಗ್ರಂಥಗಳ ಬಗ್ಗೆ ಪ್ರಶ್ನೋತ್ತರ ರೂಪದಲ್ಲಿ ಸಂಕ್ಷೇಪವಾಗಿ ತಿಳಿದುಕೊಳ್ಳೋಣ.

ಶ್ರೀಮದಾನಂದತೀರ್ಥರು : ಮಾಘಶುದ್ಧ ನವಮೀ ಬದರಿಕಾಶ್ರಮ ಪ್ರವೇಶ (ಕ್ರಿ.ಶ. ೧೨೩೮-೧೩೧೭) - ಬ್ರಹ್ಮಾಂತಾಗುರುವಃ ಸಾಕ್ಷಾತ್ ಇಷ್ಟಂ ದೈವಂ ಶ್ರಿಯಃ ಪತಿಃ । ಆಚಾರ್ಯಃ ಶ್ರೀಮದಾಚಾರ್ಯಃ ಸಂತು ಮೇ ಜನ್ಮಜನ್ಮನೀ ॥ ಹನುಮಂತದೇವರು ಇಂದಿಗೂ ಕೂಡ ಕಿಂಪುರುಷಖಂಡದಲ್ಲಿ ಚಿರಂಜೀವಿಗಳಾಗಿ

ನೆಲೆಸಿದ್ದಾರೆ. ಮಧ್ವಾಚಾರ್ಯರು ಬದರೀಕಾಶ್ರಮದಲ್ಲಿ ನಾರಾಯಣನ ಜೊತೆ ಪಾಠ ಕೇಳುತ್ತಾ ಚಿರಂಜೀವಿಗಳಾಗಿದ್ದಾರೆ. ಆದರೆ ಭೀಮಸೇನದೇವರು ಮಹಾಪ್ರಸ್ಥಾನದ ಸಂದರ್ಭದಲ್ಲಿ ನಿರ್ಯಾಣ ಹೊಂದುತ್ತಾರೆಂದು ಮಹಾಭಾರತದಲ್ಲಿದೆ. ಆದ್ದರಿಂದ ಭೀಮಸೇನದೇವರ ರೂಪ ಚಿರಂಜೀವಿಯಾಗಲಿಲ್ಲ ಅಲ್ಲವೆ ? ಶ್ರೀಮದಾಚಾರ್ಯರ ಭಾಷ್ಯಕ್ಕೆ ಟೀಕೆಯನ್ನು ಬರೆದ ಶ್ರೀತ್ರಿವಿಕ್ರಮಪಂಡಿತರ ತತ್ವಪ್ರದೀಪದ ಮಂಗಳಾಚರಣೆಯನ್ನು ನೋಡಿದಾಗ, ಇದಕ್ಕೆ ಉತ್ತರವನ್ನು ತಿಳಿಯಬಹುದು. ಮಂಗಳಾಚರಣೆಯ ೬ ಮತ್ತು ೭ನೇ ಶ್ಲೋಕದಲ್ಲಿ ಭೀಮಸೇನದೇವರೇ ಮಧ್ವರಾಗಿ ಅವತರಿಸಿದರು ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಹಿಂದೆ ಮೂರು ಮಹಾಪದ್ಮಸಂಖ್ಯೆಯಲ್ಲಿ ಮಣಿಮಂತನೇ ಮೊದಲಾದ ಕ್ರೋಧವಶರಾದ ಯಾವ ದೈತ್ಯರು ಭೀಮಸೇನದೇವರ ಗದೆಯಿಂದ ಹತರಾದರೋ ಅವರು ಭಗವಂತನ ಗುಣಗಳನ್ನು ಅಲ್ಲಗಳೆಯುವುದಕ್ಕಾಗಿ ಪುನಃ ಭೂಮಿಯಲ್ಲಿ ಮಾಯಾವಾದಿಗಳಾಗಿ ಹುಟ್ಟಿದರು, ಅವರನ್ನು ನಿಗ್ರಹಿಸುವುದಕ್ಕಾಗಿ. ಆದೇ ಭೀಮಸೇನದೇವರು, ಮಧ್ವರಾಗಿ ಅವತರಿಸಿದರು ಎಂದು ಹೇಳಿದ್ದಾರೆ. ಭೀಮಸೇನದೇವರ ಪ್ರಾಕೃತ ದೇಹ ನಾಶಹೊಂದಿತು. ಆದರೆ ವಾಯುದೇವರು ಯಾವ ಅಂಶದಿಂದ ಭೀಮರಾದರೋ ಅದೇ ಅಂಶ ಮಧ್ವಚಾರ್ಯ ಎನಿಸಿತು. ಮಧ್ವಾಚಾರ್ಯರು ಅವತರಿಸಿದ್ದು ಮಾಘ ॥ ಶುದ್ಧ॥ ಸಪ್ತಮಿ ಎಂದು ಕೆಲವರು ಹೇಳುತ್ತಾರೆ. ಕೆಲವರು ವಿಜಯದಶಮಿ ಎನ್ನುತ್ತಾರೆ. ಯಾವುದು ಸರಿ? ಮತ್ತು ಸೋಮವಾರ ಅವತರಿಸಿದರು ಎನ್ನುತ್ತಾರೆ? ವಾಯುಪುರಾಣದಲ್ಲಿರುವ ಅಣುಮಧ್ವಚರಿತೆಯಲ್ಲಿ 'ಆಶ್ವೀನ ಶುಕ್ಲ ದಶಮೀದಿವಸೇ ಭುವಿ ಪಾವನೇ' ಎಂಬುದಾಗಿ ವಿಜಯದಶಮಿಯಂದೇ ಅವತರಿಸಿದರೆಂದು ಸ್ಪಷ್ಟವಾಗಿ ಹೇಳಲಾಗಿದೆ. 'ಜಾತೋ ಮಧ್ಯಾಹ್ನವೇಲಾಯಾಂ ಬುಧವಾರೇ ಮರುತ್ತನುಃ' ಎಂಬುದರಿಂದ ಬುಧವಾರದ ಮಧ್ಯಾಹ್ನದ ದಿವಸ ಅವತರಿಸಿದರು ಎಂದೂ ಕೂಡ ಅಲ್ಲೇ ಹೇಳಿದ್ದಾರೆ. ಶ್ರೀಮದಾಚಾರ್ಯರು ಭೂಮಿಯಲ್ಲಿ ಎಷ್ಟು ವರ್ಷಗಳ ತನಕ ಕಾಣಿಸಿಕೊಂಡರು? 'ಏಕೋನಾಶೀತಿವರ್ಷಾಣಿ ನೀತ್ವಾ ಮಾನುಷದೃಷ್ಟಿಗಃ' ಪಿಂಗಲಾಬ್ಧೇ ಮಾಘಶುದ್ಧನವಮ್ಯಾಂ ಬದರೀಂ ಯಯೌ॥ ಒಟ್ಟು ೭೯ ವರ್ಷಗಳ ತನಕ ಭೂಮಿಯಲ್ಲಿ ಕಾಣಿಸಿಕೊಂಡರು. ಪಿಂಗಳ ಸಂವತ್ಸರ ಮಾಘ ॥ಶುದ್ಧ॥ ನವಮಿಯಂದು ಬದರೀಕಾಶ್ರಮಕ್ಕೆ ತೆರಳಿದರು. **ಮಧ್ವಾಚಾರ್ಯರು ಅವತರಿಸಿ ಎಷ್ಟು ವರ್ಷ ಸಂದವು?** 'ತ್ರಿಶತಾಬ್ಧೋತ್ತರಚತುಃಸಹಸ್ರಾಬ್ಧೇಭ್ಯ ಉತ್ತರೇ । ಏಕೋನಚತ್ವಾರಿಂಶಾಬ್ಧೇ ವಿಲಂಬಿಪರಿವತ್ಸರೇ । ಎಂದು ಅಣುಮಧ್ವವಿಜಯ ಇದಕ್ಕೆ ಸ್ಪಷ್ಟವಾಗಿ ಉತ್ತರಿಸುತ್ತಿದೆ. ಕಲಿಯುಗ ಪ್ರಾರಂಭವಾಗಿ

೪೩೩೯ ನೇ ವರ್ಷದಲ್ಲಿ ಆಚಾರ್ಯರು ಅವತರಿಸಿದರು. ಈಗ ೫೧೧೭ ವರ್ಷಗಳು ಕಳೆದಿವೆ. ಅರ್ಥಾತ್ ಇಂದಿಗೆ ಆಚಾರ್ಯರು ಅವತರಿಸಿ ೭೭೮ ವರ್ಷಗಳಾದವು, ಇದು ೭೭೯ನೇ ವರ್ಷ. ಅಥವಾ ಆಚಾರ್ಯರು ಅವತರಿಸಿದ್ದು ಕ್ರಿ.ಶ. ೧೨೩೮ ರಲ್ಲಿ ಈಗ ೨೦೧೬. ಅಂದರೆ ೭೭೮ ವರ್ಷಗಳು ಎಂಬ ಲೆಕ್ಕ ಈಗ ಖಚಿತ. **ಆಚಾರ್ಯರು ಅವತರಿಸಿದ ಸ್ಥಳ?** ಉಡುಪಿಯಿಂದ ಸುಮಾರು ೮, ೧೦ ಕಿಲೋಮೀಟರ್ ದೂರದಲ್ಲಿರುವ ಪಾಜಕಕ್ಷೇತ್ರ. **ಆಚಾರ್ಯರು ನಮ್ಮ ಕರ್ನಾಟಕದಲ್ಲಿ ಅವತರಿಸಿದ್ದು ನಮ್ಮ ಹೆಮ್ಮೆಯಲ್ಲವೇ?** ಸಮಸ್ತ ಜಗತ್ತಿಗೆ ತತ್ವಜ್ಞಾನದ ಬೆಳಕನ್ನು ಹರಿಸಿದ ಜ್ಞಾನಸೂರ್ಯರು ಉದಿಸಿದ್ದು ಪವಿತ್ರ ಪಾಜಕದಲ್ಲಿ. ರಾಮನ ದೂತರಾಗಿ ಹನುಮಂತದೇವರೂ ನೆಲೆಸಿರುವುದೂ ಕೂಡ ಇದೇ ಕರ್ನಾಟಕದ ಹಂಪೆಯಲ್ಲಿ. ಕರ್ನಾಟಕದ ಇಂಥ ಮಹಿಮೆಯನ್ನು ಅರಿತು ಕನ್ನಡದ ಜನ ಹೆಮ್ಮೆ ಪಡಬೇಕು. **ಆಚಾರ್ಯರ ತಂದೆಯ ಹೆಸರು ಮಧ್ಯಗೇಹಭಟ್ಟರು ಅಲ್ಲವೇ?** ಮಧ್ಯಗೇಹ ಎಂದರೆ 'ಮಧ್ಯದಲ್ಲಿ ಮನೆ ಇರುವವರು' ಎಂದಷ್ಟೇ ಅರ್ಥ. ಇದು ನೇರವಾದ ಹೆಸರಲ್ಲ. ಬಂಧುಗಳ, ಪರಿಚಿತರ ಬಳಕೆಯ ಹೆಸರು. **ಕೆಲವರು ತಂದೆ ನಾರಾಯಣಭಟ್ಟ ತಾಯಿ ವೇದವತೀ ಎನ್ನುತ್ತಾರೆ. ಆದರೆ ಮಧ್ವವಿಜಯದಲ್ಲಿ ಸ್ಪಷ್ಟವಾದ ಉಲ್ಲೇಖವಿಲ್ಲ ಅಲ್ಲವೆ?** ಹೌದು; ಆದರೆ ಅನೇಕ ದಾಸರ ಪದ್ಯಗಳಲ್ಲಿ ವೇದವತಿಯೇ ತಾಯಿಯೆಂದು ನಾರಾಯಣಭಟ್ಟರೇ ತಂದೆಯೆಂದು ಹೇಳಲಾಗಿದೆ. ಮತ್ತು ಪ್ರಬಲ ಸಂಪ್ರದಾಯವೂ ಇದೆ. ಆಶ್ರಮ ಸ್ವೀಕರಿಸಿದ್ದು ೯ನೇವರ್ಷದಲ್ಲಿ ಅಲ್ಲವೆ? ಸುಮಾರು ೮, ೯ ವರ್ಷದಲ್ಲಿ. ವಿರಕ್ತರಾಗಿ ಸಂನ್ಯಾಸಾಶ್ರಮಕ್ಕೆ ಹೊರಟರು. ಆದರೆ ಮತ್ತೊಬ್ಬ ಮಗ ಹುಟ್ಟುವ ತನಕ ನಿರೀಕ್ಷಿಸಿ ಅನಂತರ ೧೧ನೇ ವರ್ಷಕ್ಕೆ ಆಶ್ರಮವನ್ನು ಸ್ವೀಕರಿಸಿದರು. ಭೂಸುರೇಂದ್ರೋಪನೀತೋ ಯಸ್ತತ ಏಕಾದಶಾಬ್ದಕೇ। ಸೌಮ್ಯೇ ಜಗ್ರಾಹ ಭಗವಾಂಸ್ತುರೀಯಾಶ್ರಮಮುತ್ತಮಮ್ । **ಸಂನ್ಯಾಸಾಶ್ರಮದ ಬಳಿಕ ವಾಸುದೇವನಿಗೆ ಇಟ್ಟ ಹೆಸರು ಮಧ್ವಾಚಾರ್ಯ ಎಂದಲ್ಲವೆ?** ಸಂನ್ಯಾಸದಲ್ಲಿ ಅಚ್ಯುತಪ್ರಜ್ಞರು ಇಟ್ಟ ಹೆಸರು ಪೂರ್ಣಪ್ರಜ್ಞ, ಪಟ್ಟಾಭಿಷೇಕ ಮಾಡಿದ ನಂತರ 'ಆನಂದತೀರ್ಥ' ಎಂದು ಹೆಸರಿಸಿದರು. ಸ್ವತಃ ಆಚಾರ್ಯರೇ ತಮಗೆ ಪ್ರಿಯವಾದ ವೇದದಲ್ಲಿ ಉಲ್ಲೇಖಿತವಾದ 'ಮಧ್ವಾಚಾರ್ಯ' ಎಂಬ ಹೆಸರನ್ನು ಪ್ರಚುರಗೊಳಿಸಿದರು. **ಇವರ ಗುರುಗಳ ಹೆಸರು ಅಚ್ಯುತಪ್ರೇಕ್ಷರು ಅಲ್ಲವೆ ?** ಇವರು ಪೂರ್ಣಪ್ರಜ್ಞರಾದ್ದರಿಂದ ಇವರ ಗುರುಗಳ ಹೆಸರು ಅಚ್ಯುತಪ್ರಜ್ಞ. ಅವರ ಪರಂಪರೆಯಲ್ಲಿ ಬಂದ ಸತ್ಯಪ್ರಜ್ಞರ ಹೆಸರೂ ಸಹ ಇದಕ್ಕೆ ಆಧಾರ. ಅಚ್ಯುತಪ್ರೇಕ್ಷ ಎಂಬ ಶಬ್ದಕ್ಕೆ ಅಚ್ಯುತಪ್ರಜ್ಞರು ಎಂದು ನಾರಾಯಣಪಂಡಿತರೇ ತಮ್ಮ

ವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ. ವೇದಾಂಗತೀರ್ಥರೂ ಕೂಡ ಅಚ್ಯುತಪ್ರಜ್ಞ ಎಂದೇ ವ್ಯಾಖ್ಯಾನ ಮಾಡಿದ್ದಾರೆ. **ನಾರಾಯಣ ಪಂಡಿತರ ಕೃತಿಗೆ 'ಸುಮಧ್ವವಿಜಯ' ಎನ್ನಬೇಕೋ 'ಶ್ರೀಮಧ್ವವಿಜಯ' ಎನ್ನಬೇಕೋ?** ಮಧ್ವವಿಜಯ ಎನ್ನಿರಿ. ಈ ಹೆಸರಿನ ಬಗ್ಗೆ ಯಾರಲ್ಲೂ ವಿವಾದವಿಲ್ಲ. **ಕೇವಲ ಅದ್ವೈತಮತದ ನಿರಾಕರಣೆಗಾಗಿ ವಾಯುದೇವರೇ ಏಕೆ ಅವತರಿಸಬೇಕಿತ್ತು? ಉಳಿದ ದೇವತೆಗಳಿಗೂ ಅಂಥ ಸಾಮರ್ಥ್ಯ ಇದೆ ಅಲ್ಲವೆ?** ಅದ್ವೈತಾದಿಸಕಲದುರ್ಮತಖಂಡನಪುರಸ್ಸರವಾಗಿ ವೈಷ್ಣವಮತಸಂಸ್ಥಾಪಕರಾಗಿ ಜಗದ್ಗುರು ಪದವಿಗೆ ಅರ್ಹರಾದವರು ವಾಯುದೇವರು ಮಾತ್ರ. ಉಳಿದ ದೇವತೆಗಳಿಗೆ ಕಲಿಪ್ರವೇಶಕ್ಕೆ ಅವಕಾಶವಿರುವುದರಿಂದ ಅವರಲ್ಲಿ ವಿಪ್ರಲಿಪ್ಸಾ ಇರುವ ಸಾಧ್ಯತೆ ಇದೆ. ಕಲಿಬಾಧೆಗೆ ಒಳಗಾಗದ ಜೀವೋತ್ತಮರೆಂದರೆ ವಾಯುದೇವರು ಮಾತ್ರ, ಆದ್ದರಿಂದ ಅವರೇ ಅವತರಿಸಬೇಕಾಯಿತು. **ಜಗದ್ಗುರುವಾಗಲು ಕಲಿಬಾಧೆ ಏಕೆ ಇರಬಾರದು?** ಕಲಿಬಾಧೆ ಇದ್ದರೆ ವಿಪ್ರಲಿಪ್ಸಾ ಬರುತ್ತದೆ. ರುದ್ರಾದಿದೇವತೆಗಳು ಕೆಲವೊಮ್ಮೆ ವಿಷ್ಣುಸರ್ವೋತ್ತಮತ್ವಕ್ಕೆ ವಿರುದ್ಧವಾಗಿ ನುಡಿದಿದ್ದಾರೆ; ನಡೆದಿದ್ದಾರೆ. ಆ ರುದ್ರಾದಿ ದೇವತೆಗಳು ಅವತರಿಸಿ ಸರ್ವಮೂಲ ಗ್ರಂಥಗಳನ್ನು ರಚನೆ ಮಾಡಿದ್ದಲ್ಲಿ ಪಾಶುಪತಾದಿಶಾಸ್ತ್ರಗಳಂತೆ ನಮಗೆ ಆದರಲ್ಲೂ ಕೂಡ ಅಪ್ರಾಮಾಣ್ಯಶಂಕೆ ಬರುವ ಸಂಭವವಿತ್ತು, ಆದಕ್ಕಾಗಿ ಸರ್ವಮೂಲಗ್ರಂಥವನ್ನು ರಚನೆ ಮಾಡಬೇಕೆಂದರೆ ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ಒಂದೇ ಒಂದು ಕ್ಷಣದಲ್ಲೂ ಕೂಡ ಕಲಿಬಾಧೆ ಹೊಂದಿರಬಾರದು. ಅಂಥವರು ಮಾತ್ರ ಜಗದ್ಗುರುಪದವಿಯನ್ನು ಹೊಂದಲು ಸಾಧ್ಯ. **ಹಾಗಾದರೆ ಇಂದು ನೂರಾರು ಸಂತರು ಜಗದ್ಗುರು ಎಂದು ಕರೆದುಕೊಳ್ಳುತ್ತಿದ್ದಾರೆ ಅವರನ್ನು ನಾವು ಜಗದ್ಗುರು ಎಂದು ಗುರುತಿಸಬಾರದೆ?** ಅವರ ಜಗತ್ತಿಗೆ ಮಾತ್ರ ಅವರು ಗುರು. ಚತುರ್ದಶಲೋಕಗಳಿಗೆ ಅವರು ಗುರುಗಳಾಗಲು ಸಾಧ್ಯವಿಲ್ಲ. ಯಾರು ಸಂಶಯ ವಿಪರೀತಜ್ಞಾನಗಳನ್ನು ಒಂದು ಕ್ಷಣವೂ ಹೊಂದದೆ ಇನ್ನೊಬ್ಬರ ಸಂಶಯ ಹಾಗೂ ವಿಪರೀತಜ್ಞಾನಗಳನ್ನು ಸಂಪೂರ್ಣವಾಗಿ ನಾಶ ಮಾಡಲು ಸಮರ್ಥರಾಗಿರುತ್ತಾರೋ ಅವರು ಮಾತ್ರ ಜಗದ್ಗುರುಗಳಾಗಲು ಸಾಧ್ಯ. ಇಂಥ ಜಗದ್ಗುರುತ್ವ ಪದವಿಗೆ ಅರ್ಹರಾದವರು ವಾಯುದೇವರು ಮಾತ್ರ. ರುದ್ರಾದಿದೇವತೆಗಳೂ ಅಲ್ಲ. ಕಿಮುತ ಹುಲು ಮಾನವರು!! **ಈ ಜನ್ಮದಲ್ಲಿ ಶ್ರೀಮದಾಚಾರ್ಯರು ಗುರುಗಳಾಗಿ ಇನ್ನೊಂದು ಜನ್ಮದಲ್ಲಿ ಮತ್ತೊಬ್ಬರು ಗುರುಗಳಾಗಿರಬಹುದಲ್ಲವೆ ?** ಸಾಧ್ಯವೇ ಇಲ್ಲ. ಪ್ರತಿಯೊಂದು ಜನ್ಮಗಳಲ್ಲಿಯೂ ಶ್ರೀಮದಾಚಾರ್ಯರೇ ಗುರುಗಳು. ಅಷ್ಟೇ ಅಲ್ಲದೆ ಮೋಕ್ಷದಲ್ಲೂ ಕೂಡ ಶ್ರೀಮದಾಚಾರ್ಯರೇ ಗುರುಗಳಾಗಿರುತ್ತಾರೆ. ಇದರ

ಬಗ್ಗೆ ಹಿಂದಿನ ಭಾಗಗಳಲ್ಲಿ ನಾವು ವಿಚಾರ ಮಾಡಿದ್ದಾಗಿದೆ. **ಶ್ರೀಮದಾಚಾರ್ಯರ ಸರ್ವಮೂಲಗ್ರಂಥಗಳನ್ನು ಓದುವವರು ಮನುಷ್ಯರು ಮಾತ್ರ ಅಲ್ಲವೆ?** ಸರ್ವಥಾ ಅಲ್ಲ. ಸನಕಾದಿ ಮುನಿಗಳು ಶೇಷಾದಿದೇವತೆಗಳು ಕೂಡ ಶ್ರೀಮದಾಚಾರ್ಯರ ಸರ್ವಮೂಲಗ್ರಂಥದ ಪಾಠವನ್ನು ಕೇಳಲು ಅತ್ಯಂತ ತವಕವುಳ್ಳವರಾಗುವರು. ಶ್ರೀಮದಾಚಾರ್ಯರು ತಮ್ಮ ಶಿಷ್ಯಂದಿರಿಗೆ ಪಾಠ ಮಾಡುತ್ತಿರುವಾಗ ಗಗನಮಾರ್ಗದಲ್ಲಿ ಎಲ್ಲ ದೇವತೆಗಳು ಬಂದು ಭಕ್ತಿಯಿಂದ ಪಾಠ ಕೇಳುತ್ತಿದ್ದರೆಂದು ಮಧ್ವವಿಜಯ ಬಣ್ಣಿಸಿದೆ. **ಸಂನ್ಯಾಸಿಗಳನ್ನು ಆಚಾರ್ಯ ಎಂದು ಕರೆಯುವುದಿಲ್ಲ ಗೃಹಸ್ಥರನ್ನು ಮಾತ್ರ ಆಚಾರ್ಯ ಎಂದು ಕರೆಯುವ ವಾಡಿಕೆ ಇದೆ. ಹೀಗಿರುವಾಗ ಶ್ರೀಮದಾಚಾರ್ಯರನ್ನು ಏಕೆ ಆಚಾರ್ಯರು ಎಂದು ಕರೆಯಬೇಕು?** ಆಚಿನೋತಿ ಹಿ ಶಾಸ್ತ್ರಾರ್ಥಾನ್ ಆಚಾರಾನ್ ಗ್ರಾಹಯತ್ಯುತ । ಸ್ವಯಮಾಚರತೇ ಯಸ್ತು ತಮಾಚಾರ್ಯಂ ಪ್ರಚಕ್ಷತೇ ॥ ಸಮಗ್ರ ಶಾಸ್ತ್ರಗಳನ್ನು ಅರಿತು ಅದರ ಅನುಷ್ಠಾನದಲ್ಲಿ ಇದ್ದು ಮತ್ತೊಬ್ಬರಿಗೂ ಉಪದೇಶಿಸುವ ವ್ಯಕ್ತಿಯೇ ಆಚಾರ್ಯ ಎಂದು ಕರೆಸಿಕೊಳ್ಳಲು ಅರ್ಹನಾಗುತ್ತಾನೆ. ಈ ಗುಣ ಇರುವ ಯಾರನ್ನು ಬೇಕಾದರೂ 'ಆಚಾರ್ಯ' ಎನ್ನಬಹುದು. ಇಂಥ ಆಚಾರ್ಯತ್ವ ಎಂಬ ಗುಣವು ಪರಿಪೂರ್ಣವಾಗಿ ಇರುವುದು ಶ್ರೀಮದಾಚಾರ್ಯರಲ್ಲಿ ಮಾತ್ರ. **ಶ್ರೀಮದಾಚಾರ್ಯರು ಪರಮಹಂಸರಾಗಿಯೇ ಏಕೆ ಜಗದ್ಗುರುಗಳಾದರು? ಗೃಹಸ್ಥರೂ ಆಗಬಹುದಿತ್ತಲ್ಲವೆ?** ಸಮಸ್ತಲೋಕವು ಪರಮಹಂಸಪದವಿಗೆ ತಲೆಬಾಗಿತ್ತು. ಆದ್ದರಿಂದ ಅನೇಕ ಅಯೋಗ್ಯರು ಪರಮಹಂಸಪದವಿಯನ್ನು ಆಕ್ರಮಿಸಿದ್ದರು, ತಮ್ಮ ಶೀಲವೆಂಬ ಗುಣದಿಂದ ಆ ಪಾರಮಹಂಸ್ಯ ಆಶ್ರಮವನ್ನು ಶುದ್ಧವನ್ನಾಗಿ ಮಾಡುವುದಕ್ಕಾಗಿ ವಾಯುದೇವರು ಪರಮಹಂಸರಾದರು. ಇದರಿಂದ ಆ ಪಾರಮಹಂಸ್ಯ ಎಂಬ ಪದವಿಗೆ ದುಷ್ಟರ ಸಂಪರ್ಕದಿಂದ ಉಂಟಾದ ದೋಷವು ಪರಿಹಾರವಾಗಿ ಪರಿಶುದ್ಧವಾಯಿತು. ಲೋಕದ ಜನತೆಗೆ ನಿಜವಾದ ಪರಮಹಂಸರು ಹೇಗಿರಬೇಕು ಎಂದು ಎಚ್ಚರಿಸಿದರು. **ಈಗಿನ ಪರಮಹಂಸರು ಮಂತ್ರಾಕ್ಷತೆಯನ್ನು ನೀಡಿದಾಗ ಎಷ್ಟೊಂದು ಫಲಗಳು ದೊರೆಯುತ್ತಿವೆ ! ಹಾಗೆಯೇ ಶ್ರೀಮದಾಚಾರ್ಯರು ನೀಡಿದ ಫಲಮಂತ್ರಾಕ್ಷತೆಯ ಬಗ್ಗೆ ಎಲ್ಲಿಯೂ ಉಲ್ಲೇಖವೇ ಇಲ್ಲವಲ್ಲ?** ಮಂತ್ರಾಕ್ಷತೆಯ ಬಗ್ಗೆ ಉಲ್ಲೇಖವಿಲ್ಲದಿದ್ದರೂ ಅವರು ಕೈಯಿಂದ ಏನೇ ನೀಡಿದರೂ ಅದು ಭಕ್ತರಿಗೆ ಪರಮಾನುಗ್ರಹವಾಗುತ್ತಿತ್ತು ಎಂದು ಕಣ್ಣಾರೆ ಕಂಡ ತ್ರಿವಿಕ್ರಮಪಂಡಿತರು ಹೀಗೆ ವರ್ಣಿಸುತ್ತಾರೆ - ಸ್ಪೃಷ್ಟಂ ಕರೇಣ ವಿಷಮಪ್ಯಮೃತಾಯ ದೃಷ್ಟಂ ಯಸ್ಯೋದಯಃ ಸ ಭಗವಾನ್ ಯದು ರಾತಿ ಕಿಂಚಿತ್।

ತದ್ ಭೇಷಜಂ ಗದವತಾಂ ಪ್ರತಿಕ್ಲೃಪ್ತಮಾಯುರ್ವೇದೇ ಸುಸಿದ್ಧಮಮುನೇತ್ಯ-ವಿಚಾರ್ಯಮೇತತ್ ॥ ಮುಖ್ಯಪ್ರಾಣದೇವರು ಕೈಯಲ್ಲಿ ಮುಟ್ಟುವುದರಿಂದಲೇ ಹಾಲಾಹಲವಿಷವೂ ಸಹ ಅಮೃತವಾಗುತ್ತದೆಂದು ಶ್ರುತಿ ಹೇಳುತ್ತಿದೆ. ಅದೇ ಮುಖ್ಯಪ್ರಾಣದೇವರು ಈಗ ಮಧ್ವರೂಪದಿಂದ ಉತ್ಕೃಷ್ಟರಾಗಿ ಬೆಳಗುತ್ತಿದ್ದಾರೆ, ಷಡ್ಗುಣಗಳಿಂದ ತುಂಬಿದ ಇವರು ರೋಗಿಗಳಿಗೆ ನೀಡುವ ಫಲ-ಮಂತ್ರಾಕ್ಷತೆಗಳೂ ಸಹ ಅಮೃತದಂತೆ ಓಷಧಿ ಆಗುವುದನ್ನು ನಾವು ಪ್ರತ್ಯಕ್ಷದಿಂದ ನೋಡಿದ್ದೇವೆ. ಆಯುರ್ವೇದದಲ್ಲಿ ರೋಗಿಗಳಿಗೆ ಯಾವ ಯಾವ ಓಷಧಿಗಳು ಹೇಳಲ್ಪಟ್ಟಿವೆಯೋ ಅವೆಲ್ಲವನ್ನೂ ಈ ವಾಯುದೇವರೇ ಚರಕ-ಸುಶ್ರುತಾದಿಗಳಲ್ಲಿ ನಿಯಾಮಕರಾಗಿ ತಿಳಿಸಿದ್ದಾರೆ. ಈ ವಿಷಯದಲ್ಲಿ ಸಂಶಯವಿಲ್ಲ. **ಶ್ರೀಮದಾಚಾರ್ಯರು ದ್ವೈತಶಾಸ್ತ್ರವನ್ನು ಸ್ಥಾಪನೆ ಮಾಡಿದ್ದಾರೆ. ಆದರೆ ಜ್ಯೌತಿಷಶಾಸ್ತ್ರ ಮುಂತಾದ ಷಡಂಗಳ ಬಗ್ಗೆ, ಕರ್ಮಸೂತ್ರ, ಗೃಹ್ಯಸೂತ್ರ, ಕಲ್ಪಸೂತ್ರಗಳ ಬಗ್ಗೆ ಹೆಚ್ಚಿನ ಅರಿವಿತ್ತು ಎನ್ನಲು ಎಲ್ಲೂ ಆಧಾರವಿಲ್ಲವಲ್ಲ?** ಈ ಪ್ರಶ್ನೆಗೂ ಕೂಡ ತ್ರಿವಿಕ್ರಮಪಂಡಿತರೇ 'ಜ್ಯೌತಿಷಶಾಸ್ತ್ರಂ ಯದೇತಂ ಭವತಿ ಭುವಿ ಭವಿಷ್ಯತ್ಯತೀತೇ ಚ ಸಾಕ್ಷಾತ್'ಎಂಬುದಾಗಿ ಜ್ಯೌತಿಷಶಾಸ್ತ್ರದ ಬಗ್ಗೆ ಪರಿಪೂರ್ಣ ಮಾಹಿತಿ ಇರುವವರು ಎಂದರೆ ಶ್ರೀಮದಾಚಾರ್ಯರು ಮಾತ್ರ ಎಂದು ಮುಕ್ತಕಂಠದಿಂದ ಹೊಗಳಿದ್ದಾರೆ. ಅಷ್ಟೇ ಅಲ್ಲದೆ ಕರ್ಮಸೂತ್ರ, ಗೃಹ್ಯಸೂತ್ರ, ಕಲ್ಪಸೂತ್ರಗಳನ್ನು, ಶಿಷ್ಯಂದಿರು ಪ್ರಾರ್ಥನೆ ಮಾಡಿದರೆ ಸ್ವತಃ ತಾವೇ ರಚನೆ ಮಾಡುವ ಸಾಮರ್ಥ್ಯವನ್ನು ಹೊಂದಿದ್ದಾರೆ ಎಂಬುದನ್ನು ಕೂಡ 'ಕರ್ಮಣಾಂ ಸತ್ಪ್ರಯೋಗಂ ನ್ಯಾಯಾನಾಂ ಸೂತ್ರಜಾತಂ ಯದಿ ಚ ಬುಧಜನೈರರ್ಥ್ಯತೇ ಕಿಂ ನ ಕುರ್ಯಾತ್' ಎಂದು ತಿಳಿಸಿದ್ದಾರೆ. 'ಸರ್ವಜ್ಞಮನ್ಯಮನವೇಕ್ಷ್ಯ ಸಕಾರ್ಯವೀರ್ಯಂ ಸ್ಮೇರಾನನೋ ಭುವನಜೀವನಮಾಬಭಾಷೇ' 'ಸರ್ವದಾ ಸದಸಿ ಸರ್ವಬುಧಾನಾಂ ಸರ್ವವಿದ್ಯತಿರಿತಿ ಪ್ರಥಿತೋಽಭೂತ್' ಮೊದಲಾದ ಮಾತುಗಳಿಂದ ಶ್ರೀಮದಾಚಾರ್ಯರು ಸರ್ವಜ್ಞರೆಂಬ ಉಲ್ಲೇಖಗಳಿವೆ. ಇದರಿಂದ ಅವರಿಗೆ ಎಲ್ಲಾ ತಿಳುವಳಿಕೆಯೂ ಇದೆಯೆಂಬುದು ದೃಢಪಡುತ್ತದೆ. **ವಾಯುದೇವರು ಶ್ರೀಮದಾಚಾರ್ಯರಾಗಿ ಅವತರಿಸಿದ್ದು ಯಾವ ಸ್ಥಳದಲ್ಲಿ?** ಮಧ್ವವಿಜಯ ಹೇಳುವಂತೆ 'ಸರೂಪ್ಯಪೀಠೇ ವಿಷ್ಣುಂ ಪ್ರಣಮ್ಯ' ಎಂಬುದಾಗಿ ಹೇಳಿದಂತೆ ಉಡುಪಿಯ ಅನಂತಾಸನದಲ್ಲಿ ಧರೆಗಿಳಿದರು. ಅನಂತರ ಪಾಜಕಕ್ಷೇತ್ರಕ್ಕೆ ತೆರಳಿ ಆಗತಾನೆ ಹುಟ್ಟಿದ ಶಿಶುವಿನ ದೇಹದಲ್ಲಿರುವ ಜೀವವನ್ನು ಸೆಳೆದು ತಾನು ಅಲ್ಲಿ ಪ್ರವೇಶಿಸಿದರು. **ವಾಸುದೇವನು ಗುರುಕುಲವಾಸವನ್ನು ಪೂರ್ಣ ಮಾಡಿದನೋ ಅಥವಾ ಅರ್ಧದಲ್ಲೇ**

**ಸಂನ್ಯಾಸಿಯಾದನೋ?** ೧೦ನೇ ವರ್ಷಕ್ಕೆ ಪೂರ್ಣವಾಗಿ ಗುರುಕುಲವಾಸ ಮುಗಿದಿತ್ತು, ೧೧ನೇ ವರ್ಷಕ್ಕೆ ಸಂನ್ಯಾಸಕ್ಕಾಗಿ ತೆರಳಿದ. **ಬಾಲಯತಿಯಾದ ಪೂರ್ಣಪ್ರಜ್ಞರು ಪಾಠಪ್ರವಚನವನ್ನು ಹೇಗೆ ಪ್ರಾರಂಭ ಮಾಡಿದರು?** ಪ್ರಾರಂಭದಲ್ಲಿ ಅದ್ವೈತಮತವನ್ನೇ ಉಪನ್ಯಾಸ ಮಾಡುತ್ತಿದ್ದರು. ಅನಂತರ ಇದ್ದಕ್ಕಿದ್ದಂತೆ ಒಂದು ಸಭೆಯಲ್ಲಿ ಶಾಂಕರ ಭಾಷ್ಯದ ವಾಕ್ಯಗಳಲ್ಲಿ ಪರಸ್ಪರ ಅನ್ವಯವೇ ಕಾಣಸುತ್ತಿಲ್ಲವೆಂದು ಅನೇಕ ಪ್ರಬಲದೋಷಗಳನ್ನು ತೋರಿಸಿ ಸಮಸ್ತ ಸಭೆಯನ್ನೇ ದಿಗ್ಭ್ರಮೆಗೊಳಿಸಿದರು. **ವಾಕ್ಯಾರ್ಥಪಟುಗಳಾಗಿದ್ದು ಯಾವಾಗ?** ಸಂನ್ಯಾಸಾಶ್ರಮ ಸ್ವೀಕರಿಸಿದ ೧೧ನೇ ವರ್ಷದಲ್ಲೇ, ವಾಸುದೇವಪಂಡಿತನೆಂಬ ತಾರ್ಕಿಕ-ಶಿರೋಮಣಿಯನ್ನು ಬಗ್ಗುಬಡೆದು ತಮ್ಮ ವಾಕ್ಯಾರ್ಥ ಪಟುತ್ವವನ್ನು ತೋರಿಸಿದರು. ಅನಂತರ ವಾದಿಸಿಂಹ, ಬುದ್ಧಿಸಾಗರರು ವಾಕ್ಯಾರ್ಥದಲ್ಲಿ ಸೋತು ಅಂದು ಯಾರಿಗೂ ಕಾಣದಂತೆ ರಾತ್ರಿಯೇ ಪಲಾಯನ ಮಾಡಿದರು. **ಅಚ್ಯುತಪ್ರಜ್ಞರಿಗೆ ವಾಯುದೇವರೆಂಬ ವಿಷಯ ತಿಳಿದಿತ್ತೋ ಇಲ್ಲವೋ?** ಸ್ವತಃ ಶ್ರೀಮದಾಚಾರ್ಯರೇ ಒಮ್ಮೆ ಇನ್ನೂರಕ್ಕೂ ಹೆಚ್ಚು ಬಾಳೆಹಣ್ಣುಗಳನ್ನು ತಿಂದು ಜೀರ್ಣಿಸಿಕೊಂಡಾಗ ಅಚ್ಯುತಪ್ರಜ್ಞರು ಅಚ್ಚರಿಪಟ್ಟರು. ಆಗ ಸ್ವತಃ ಶ್ರೀಮದಾಚಾರ್ಯರೇ, ದೇವರ ಅನುಗ್ರಹದಿಂದ ಸಮಸ್ತ ಜಗತ್ತನ್ನೇ ಪ್ರಜ್ವಲಿಸುವ ಶಕ್ತಿ ತಮಗಿದೆ ಎಂದು ತಮ್ಮನ್ನು ಜೀವೋತ್ತಮರೆಂದು ಹೇಳಿಕೊಂಡರು, ಆಗ ಆವರಿಗೆ ತಿಳಿಯಿತು ಇವರು ವಾಯುದೇವರೆಂದು. **ಶ್ರೀಮದಾಚಾರ್ಯರು ಸಂಚಾರದಲ್ಲಿ ಹೇಗೆ ಉಳಿದ ವಾದಿಗಳನ್ನು ನಿಗ್ರಹಿಸುತ್ತಿದ್ದರು?** ಒಮ್ಮೆ ಸಂಚಾರದಲ್ಲಿರುವಾಗ ವಿಷ್ಣುಸಹಸ್ರನಾಮಕ್ಕೆ ನೂರು ಅರ್ಥಗಳೆಂದು ಹೇಳಿದರು, ಆ ನೂರು ಅರ್ಥಗಳನ್ನು ತಿಳಿಸಿರೆಂದು ಸಭಾಸದರು ಕೇಳಿದಾಗ ಅರ್ಥಗಳನ್ನು ಆಚಾರ್ಯರು ಹೇಳುತ್ತಾ ಹೋದರು. ನೂರು ಅರ್ಥ ಹೇಳಿ ಮುಗಿಸುವ ಮೊದಲೇ ಪುನಃ ಹೇಳಲುಬಾರದ ಸಮಸ್ತ ಪಂಡಿತರು ಸೋತರು. ಹೀಗೆ ವಿಷ್ಣುಸಹಸ್ರನಾಮಕ್ಕೆ ೧೦೦ ಅರ್ಥಗಳು, ಭಾರತ ಶ್ಲೋಕಕ್ಕೆ ೧೦ ಅರ್ಥಗಳು, ವೇದಗಳಿಗೆ ೩ ಅರ್ಥಗಳು ಎಂಬ ತತ್ವವನ್ನು ಪ್ರಚಾರ ಮಾಡಿದರು. **ಶ್ರೀಮದಾಚಾರ್ಯರು ಮೊದಲು ಬರೆದ ಗ್ರಂಥ?** ಭಗವದ್ಗೀತೆಗೆ ಭಾಷ್ಯವನ್ನು ರಚನೆ ಮಾಡಿದ್ದೆ ಶ್ರೀಮದಾಚಾರ್ಯರ ಪ್ರಥಮಗ್ರಂಥ. ಇದರ ಸಮರ್ಪಣೆಗಾಗಿ ಬದರಿಯಾತ್ರೆಗೆ ಮೊದಲ ಬಾರಿ ಹೊರಟರು. ನಾರಾಯಣದೇವರು ಇದರಿಂದ ಸಂತೃಪ್ತರಾಗಿ ಮಂಗಳ ಶ್ಲೋಕದಲ್ಲಿ 'ಶಕ್ತಿತಃ' ಪದದ ಬದಲು 'ಲೇಶತಃ' ಎಂದು ಸೂಚಿಸಿ, ಶ್ಲಾಘಿಸಿದರು. **ಬ್ರಹ್ಮಸೂತ್ರಭಾಷ್ಯವನ್ನು ಯಾವಾಗ ರಚನೆ ಮಾಡಿದರು?** ಬದರಿಕಾಶ್ರಮಕ್ಕೆ ತೆರಳಿದಾಗ ಅಲ್ಲಿ

ವೇದವ್ಯಾಸದೇವರು ನರನಾರಾಯಣದೇವರ ಬಳಿ ಮಧ್ವಾಚಾರ್ಯರನ್ನು ಕರೆದುಕೊಂಡು ಹೋದರು. ಅಲ್ಲಿ ನರನಾರಾಯಣರು ಮಧ್ವಾಚಾರ್ಯರಿಗೆ ಬ್ರಹ್ಮಸೂತ್ರಭಾಷ್ಯರಚನೆ ಮಾಡಲು ಆಜ್ಞೆ ಮಾಡಿದರು. ಅವರ ಆಜ್ಞೆಯಂತೆ ತಿರುಗಿಬಂದು ಬ್ರಹ್ಮಸೂತ್ರಭಾಷ್ಯದ ರಚನೆಯನ್ನು ಮಾಡಿದರು. **ಶ್ರೀಮದಾಚಾರ್ಯರು ಮೊದಲು ಸಂಚಾರಕ್ಕೆ ತೆರಳಿದ್ದು ಬದರಿಗೆ ಅಲ್ಲವೆ?** ಇಲ್ಲ. ಮೊದಲು ರಾಮೇಶ್ವರದ ತನಕ ದಕ್ಷಿಣಭಾರತದ ಯಾತ್ರೆಯನ್ನು ಮುಗಿಸಿ, ಅನಂತರ ಉಡುಪಿಗೆ ಬಂದು ಗೀತಾಭಾಷ್ಯವನ್ನು ರಚನೆಮಾಡಿ, ತರುವಾಯ ಉತ್ತರಭಾರತಯಾತ್ರೆ ಮಾಡುತ್ತಾ ಬದರಿಗೆ ಸಾಗಿದರು. **ಹಾಗಿದ್ದರೆ ಆಸೇತುಹಿಮಾಚಲದ ತನಕ ವಿಷ್ಣುಸರ್ವೋತ್ತಮತ್ವವನ್ನು ಸ್ಥಾಪನೆ ಮಾಡಿದರು ಅಲ್ಲವೆ?** ಹೌದು, ಇದೇ ಸಂದರ್ಭದಲ್ಲಿ ಒಮ್ಮೆ ಗೋದಾವರಿತೀರದಲ್ಲಿ ಅದ್ವೈತಮತದ ಪ್ರಕಾಂಡ ಪಂಡಿತರಾದ ಶೋಭನಭಟ್ಟರು ಕೂಡ ಆಚಾರ್ಯರ ಶಿಷ್ಯರಾದರು. **ಸಂಚಾರದಲ್ಲಿ ಆಚಾರ್ಯರು ಪಡೆದ ಸಂಪತ್ತೇನು?** ನಾನಾದೇಶದ ಶಿಷ್ಯರನ್ನು ಪಡೆದದ್ದೇ ಇವರ ಸಂಪತ್ತು. ಉತ್ತಮ ಜೀವರಿಗೆ ಸಾಧನೆ ಮಾಡಿಸುತ್ತಾ ಮರಳಿ ಉಡುಪಿಗೆ ಬಂದರು. ಇಂಥ ಮಧ್ವಾಚಾರ್ಯರನ್ನು ಕಂಡು ಅಚ್ಯುತಪ್ರಜ್ಞರಿಗೆ ಬಹಳ ಸಂತೋಷವಾಯಿತು. ಅವರು ಕೂಡ ಸಂಪೂರ್ಣ ಮನಸ್ಸಿನಿಂದ ಶ್ರೀಮದಾಚಾರ್ಯರ ತತ್ವವನ್ನು ಅನುಸರಿಸಿದರು. **ಯಾವ ಕಾರಣಕ್ಕಾಗಿ ಉಡುಪಿಕೃಷ್ಣನನ್ನು ಪ್ರತಿಷ್ಠೆ ಮಾಡಿದರು?** ಮುಕ್ತಿಯೋಗ್ಯರಿಗೆ ಸಚ್ಛಾಸ್ತ್ರಶ್ರವಣಾದಿ ವಿಷಯದಲ್ಲಿ ಯಾವ ವಿಘ್ನಗಳು ಪ್ರತಿನಿತ್ಯ ಹೆಚ್ಚಾಗುತ್ತಿವೆಯೋ ಅದರ ಪರಿಹಾರಕ್ಕಾಗಿ ಮೋಕ್ಷಸಾಧನೆಸಿದ್ಧಿಗಾಗಿ ಉಡುಪಿಕೃಷ್ಣನ ಪ್ರತಿಷ್ಠಾಪನೆ ಮಾಡಿದರು. **ಒಮ್ಮೆ ಪಶ್ಚಿಮಸಮುದ್ರದ ತೀರದಲ್ಲಿ, ಶ್ರೀಮದಾಚಾರ್ಯರು ಆಹ್ನಿಕಕ್ಕೆ ಕುಳಿತ್ತಿದ್ದರು. ಹಡಗು ಬಿರುಗಾಳಿಗೆ ಸಿಲುಕಿ ದಿಕ್ಕು ಕಾಣದಂತಾಯಿತು. ಆಗ ಶಾಟಿಯ ಆಡಿಸುವಿಕೆಯಿಂದ ದಡಕ್ಕೆ ಶ್ರೀಮದಾಚಾರ್ಯರು ಬರಮಾಡಿಕೊಂಡರು. ಸರ್ವಸ್ವ ಕೊಡಲು ಆ ಅಂಬಿಗ ಮುಂದಾದ, ಆದರೆ ಗೋಪಿಚಂದನದ ಹೆಂಟೆಯನ್ನು ಮಾತ್ರ ಸ್ವೀಕರಿಸಿದರು. ಅದರೊಳಗೆ ಶ್ರೀಕೃಷ್ಣನು ಇದ್ದನು ಎನ್ನುತ್ತಾರೆ. ಇದು ಸರಿಯಾದ ಕಥೆಯೇ ?** ಈ ಕಥೆಯು ಸಂಪ್ರದಾಯದಲ್ಲಿ ಬಂದಿದೆ. ಸಂಪ್ರದಾಯದಲ್ಲಿ ಬಂದದ್ದು ಪ್ರಮಾಣವೇ. ಅನೇಕ ದಾಸವರೇಣ್ಯರು ಈ ಕಥೆಯನ್ನು ಹಾಡಿನ ರೂಪದಲ್ಲಿ ದಾಖಲಿಸಿದ್ದಾರೆ. ಆದ್ದರಿಂದ ಇದನ್ನು ಕಟ್ಟುಕಥೆ ಎನ್ನಲಾಗದು. ಆದರೆ ಫಲಿಮಾರುಮಠದ ಪರಂಪರೆಯಲ್ಲಿ ಬಂದ ೧೮ನೇ ಶತಮಾನದ

ರಘುವರ್ಯತೀರ್ಥರು, ಅಣುಮಧ್ವ-ವಿಜಯದಲ್ಲಿ ಹೀಗೆ ಬರೆದಿದ್ದಾರೆ - 'ದ್ವಾರಕಾಯಾಂ ರುಗ್ಮಿಣೀವನಾಖ್ಯಪ್ರದೇಶೇ ಗೋಪಿಚಂದನಮಧ್ಯೇ ಲಗ್ನಾಂ ಗೋಪಿಚಂದನಬುದ್ಧ್ಯಾ ಸಾಂಯಾತ್ರಿಕೈರಾನೀತಾಂ ರೂಪ್ಯಪೀಠಸಮಿಪೇ ಪ್ಲವೇ ಭಿನ್ನೇ ಜಲಧೌ ಮಗ್ನಾಂ ಶ್ರೀಕೃಷ್ಣಪ್ರತಿಮಾಮಾನೀಯ.....ಮಠೇ ಪ್ರತಿಷ್ಠಾಪಯಾಮಾಸ' ದ್ವಾರಕೆಯಲ್ಲಿ ರುಗ್ಮಿಣಿ ವನವೆಂಬ ಪ್ರದೇಶದಲ್ಲಿ ಗೋಪಿಚಂದನದ ಮಧ್ಯದಲ್ಲಿ ಶ್ರೀಕೃಷ್ಣನ ಪ್ರತಿಮೆಯು ಸೇರಿತ್ತು. ಅದನ್ನು ಗೋಪಿಚಂದನ ಎಂಬ ಬುದ್ಧಿಯಿಂದ ಹಡಗಿನಲ್ಲಿ ಹೊತ್ತು ತಂದರು, ರೌಪ್ಯಪೀಠದ ಹತ್ತಿರ ಇರುವ ಸಮುದ್ರದಲ್ಲಿ ಆ ಹಡಗು ಮುಳುಗಿತು. ಕೃಷ್ಣಪ್ರತಿಮೆಯು ಕೂಡ ಮುಳುಗಿತು. ಇದನ್ನು ತಿಳಿದ ಶ್ರೀಮದಾಚಾರ್ಯರು ಕಡಲ ತಳ ಸೇರಿದ ಕೃಷ್ಣನ ಪ್ರತಿಮೆಯನ್ನು ಎತ್ತಿ ತಂದು ಉಡುಪಿಯಲ್ಲಿ ಪ್ರತಿಷ್ಠೆ ಮಾಡಿದರು ಎಂದು ಹೇಳುವರು. ಇವರ ಮಾತಿಗೆ ಇವರಿಗಿಂತ ಹಿಂದಿನ ಜ್ಞಾನಿಗಳು ಹೇಳಿದಂತೆ ಅರ್ಥವನ್ನು ನಾವು ತಿಳಿಯಬೇಕು.**ಆಚಾರ್ಯರ ಕಾಲದಲ್ಲಿ ಮುಸ್ಲೀಮ್‌ಮತ, ಕ್ರೈಸ್ತಮತಗಳು ಈ ಕಾಲದಲ್ಲಿ ಇದ್ದಂತೆ ಇದ್ದವೆ?** ಉತ್ತರಭಾರತದಲ್ಲಿ ಹಲವೆಡೆ ಮುಸ್ಲೀಮ್‌ಮತ ವ್ಯಾಪಕವಾಗಿ ಬೆಳೆದಿತ್ತು ಎನ್ನಲು ಸ್ಪಷ್ಟ ಉಲ್ಲೇಖವಿದೆ. ಮತ್ತು ಜಲಾಲ್ ಉದ್ದೀನ್ ಖಿಲ್ಜಿ ಹಾಗೂ ಅಲ್ಲಾವುದ್ದೀನ್ ಖಿಲ್ಜಿ ಅದೇ ಕಾಲದ ಮುಸ್ಲೀಮ್ ದೊರೆಗಳಾದ್ದರಿಂದ ಅವರಿಗೆ ಶ್ರೀಮದಾಚಾರ್ಯರ ಭೇಟಿಯಾಗಿರಬಹುದೆಂದು ಬಲ್ಲವರು ಪರಿಗಣಿಸುತ್ತಾರೆ. **ಅಲ್ಲಾವುದ್ದೀನ್ ಖಿಲ್ಜಿ ಶ್ರೀಮದಾಚಾರ್ಯರ ಜೊತೆ ಮಾತನಾಡಿದ ಎನ್ನುವುದಕ್ಕೆ ಏನು ಆಧಾರ?** ಮಧ್ವವಿಜಯದ ಹತ್ತನೇ ಸರ್ಗದಲ್ಲಿ 'ಸತ್ವರಕರಾಜ- ಪುರುಷಾನುಚಿತವಾಚಾ' ಎಂಬುದಾಗಿ ತುರುಷ್ಕರಾಜನ ಭಟರ ಜೊತೆ ಮಾತನಾಡಿ ಮುಂದೆ ತುರುಷ್ಕರಾಜನ ಬಳಿಯು ಮಾತನಾಡಿದರು ಎಂದು ಉಲ್ಲೇಖ ಮಾಡಲಾಗಿದೆ. ತ್ವರಕರಾಜ ಎಂದರೆ ಮುಸ್ಲೀಮ್ ರಾಜ ಎಂದರ್ಥ. **ಯಾವ ಭಾಷೆಯಲ್ಲಿ ಮಾತನಾಡಿದರು?** ಭಗವಂತನ ಅರಿವು ಮೂಡಿಸಲು ಭಾಷೆ ಯಾವುದಾದರೇನು ! ಎಂಬ ನೀತಿಯನ್ನು ತಿಳಿಸುವದಕ್ಕಾಗಿ ಪರ್ಷಿಯನ್ ಭಾಷೆಯಲ್ಲೇ ಉತ್ತರಿಸಿದರು - ಜಗತ್ತನ್ನು ಬೆಳಗುವ ಆ ಏಕೈಕ ದೇವರ ಅನುಗ್ರಹದಿಂದ ನಾವು ಎಲ್ಲವನ್ನೂ ಮಾಡುತ್ತೇವೆ ಎಂದರು. **ಬೇರೆ ಯಾವ ಮತಗಳು ಆಗಿನ ಕಾಲದಲ್ಲಿ ಹೆಚ್ಚು ಪ್ರಚಾರದಲ್ಲಿದ್ದವು?** ಇಸ್ಲಾಮ್‌ಮತ ವ್ಯಾಪಕವಾಗಿ ಬೆಳೆಯುತ್ತಿತ್ತು. ಕ್ರೈಸ್ತಮತವು ಕೂಡ ಸ್ವಲ್ಪಸ್ವಲ್ಪ ಆವರಿಸುತ್ತಿತ್ತು. ಕರ್ನಾಟಕದಲ್ಲಿ ಜೈನಮತ, ವೀರಶೈವಮತಗಳು, ಆಗ ಬೇರೂರುತ್ತಿದ್ದವು. ಸಮಗ್ರ ಭಾರತದೇಶದಲ್ಲಿ

ಅದ್ವೈತಮತವೇ ಉಸಿರಾಡುತ್ತಿತ್ತು. **ಶ್ರೀಮದಾಚಾರ್ಯರು ಕೇವಲ ಅದ್ವೈತಮತವನ್ನೇ ನಿರಾಕರಣೆ ಮಾಡಿದರು. ಉಳಿದ ಮತಗಳನ್ನೇಕೆ ನಿರಾಕರಿಸಲಿಲ್ಲ?** ತತ್ವವಾದಕ್ಕೆ ವಿರುದ್ಧಮತಗಳನ್ನೆಲ್ಲವನ್ನೂ ಶ್ರೀಮದಾಚಾರ್ಯರು ನಿರಾಕರಿಸಿದ್ದಾರೆ. ವಿಷ್ಣುಸರ್ವೋತ್ತಮತ್ವ, ವಾಯುಜೀವೋತ್ತಮತ್ವ, ಪಂಚಭೇದ, ತಾರತಮ್ಯ ಈ ತತ್ವಗಳನ್ನು ಸಮರ್ಥಿಸಿದರು. ಇದಕ್ಕೆ ವಿರುದ್ಧವಾದ ಉಳಿದವರೆಲ್ಲರ ಅಭಿಪ್ರಾಯವನ್ನೂ ಕೂಡ ಸಂಪೂರ್ಣವಾಗಿ ನಿರಾಕರಣೆ ಮಾಡಿದರು. **ಹಾಗಾದರೆ ಅದ್ವೈತಮತ ನಿರಾಕರಣೆಗಾಗಿ ಶ್ರೀಮದಾಚಾರ್ಯರು ಅವತರಿಸಿದರೆಂದು ಏಕೆ ಹೇಳುತ್ತಾರೆ?** ವೇದಪ್ರಾಮಾಣ್ಯ ಒಪ್ಪುವ ನಾಟಕವಾಡಿ, ಬ್ರಹ್ಮನನ್ನು ಒಪ್ಪುವೆವೆಂದು ಹೊರಗೆ ಹೇಳಿ, ಒಳಗೇ ನಿರ್ಗುಣನೆಂದು ಬೋಧಿಸಿ ಬಹಳ ಕುತಂತ್ರದಿಂದ ಒಳ್ಳೆಯವರಂತೆ ಸೋಗು ಹಾಕಿ ಮೋಸ ಮಾಡುವುದು ಅದ್ವೈತಮತ. ಬಹಳ ಅಪಾಯಕಾರಿ. ಅದನ್ನು ನಿರಾಕರಿಸುವುದು ಮೊದಲ ಕರ್ತವ್ಯ. ಮತ್ತು ದ್ವೈತಮತ ಬಿಟ್ಟು ಉಳಿದೆಲ್ಲವೂ ಅದ್ವೈತಮತದಲ್ಲೇ ಸೇರುತ್ತವೆ ಒಂದಲ್ಲಾ ಒಂದು ರೀತಿಯಿಂದ ಪ್ರತಿಯೊಬ್ಬರೂ ಕೂಡ ಅದ್ವೈತಕ್ಕೆ ಅಂತಿಮವಾಗಿ ಶರಣಾಗುತ್ತಾರೆ. ಅದ್ವೈತಮತ ಒಂದನ್ನು ನಿರಾಕರಣೆ ಮಾಡಿದರೆ ಸಾಕು ಉಳಿದೆಲ್ಲಾ ಮತಗಳು ಧೂಳೀಪಟವಾಗುತ್ತವೆ. **ಆಮೂಲಾಗ್ರವಾಗಿ ಶಂಕರಾಚಾರ್ಯರೊಬ್ಬರನ್ನು ಮಾತ್ರ ತಮ್ಮ ಗ್ರಂಥಗಳಲ್ಲಿ ಶ್ರೀಮದಾಚಾರ್ಯರು ನಿರಾಕರಣೆ ಮಾಡುತ್ತಾರೆ. ಇದು ಏಕೆ?** ಈ ಭಾವನೆ ಪೂರ್ಣ ತಪ್ಪು. ಶ್ರೀಮದಾಚಾರ್ಯರ ಎಲ್ಲ ಗ್ರಂಥಗಳನ್ನು ಆಮೂಲಾಗ್ರವಾಗಿ ಪರಿಶೀಲನೆ ಮಾಡಿದಾಗ ಒಮ್ಮೆಯೂ ಶಂಕರಾಚಾರ್ಯರ ಹೆಸರನ್ನು ಉಲ್ಲೇಖಿಸಿ ನಿರಾಕರಣೆ ಮಾಡಿದ್ದು ಕಂಡಿಲ್ಲ. ಅವರು ಯಾವ ಮತಾಚಾರ್ಯರ ಬಗ್ಗೆಯೂ ಮಾತನಾಡುವುದಿಲ್ಲ ಪಂಚಭೇದ ತಾರತಮ್ಯ ಮೊದಲಾದ ಪ್ರಮೇಯಕ್ಕೆ ವಿರುದ್ಧವಾದ ವಿಷಯವನ್ನಷ್ಟೇ ನಿರಾಕರಣೆ ಮಾಡುವುದು ಶ್ರೀಮದಾಚಾರ್ಯರ ಮುಖ್ಯಗುರಿ. ಗಾಂಭೀರ್ಯದ ಪರಾಕಾಷ್ಠೆ. **ಆಚಾರ್ಯರು ಅತ್ಯಂತ ಕಠಿಣಶೈಲಿಯಲ್ಲಿ ಗ್ರಂಥಗಳನ್ನು ಬರೆದಿದ್ದಾರೆ. ಹಾಗಾದರೆ ಜನಸಾಮಾನ್ಯರಿಗೆ ಸಿದ್ಧಾಂತ ತಲುಪುವುದು ಹೇಗೆ ?** ಇದಕ್ಕೂ ಕೂಡ ಶ್ರೀಮದಾಚಾರ್ಯರೇ ಉತ್ತರಿಸಿದ್ದಾರೆ. ಉದ್‌ಗ್ರಂಥಗಳನ್ನು ಜನಸಾಮಾನ್ಯರಿಗೆ ಮುಟ್ಟಿಸುವುದಕ್ಕಾಗಿ ಶ್ರೀಮದಾಚಾರ್ಯರು ಸಂಸ್ಕೃತದಲ್ಲಿ ಅನೇಕ ಹಾಡುಗಳನ್ನು ಕೂಡ ಬರೆದರು. ಇದರಿಂದ ದಾಸಪಂಥವನ್ನೇ ಸೃಷ್ಟಿ ಮಾಡಿದರು. ಹೃಷಿಕೇಶತೀರ್ಥರು ಹಾಗೂ ನರಹರಿತೀರ್ಥರು ಆ ಕೀರ್ತನಸಾಹಿತ್ಯದಲ್ಲಿ ಅಗ್ರೇಸರರಾಗಿದ್ದರು.

ತರುವಾಯ ಶ್ರೀಪಾದರಾಜರು, ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಬಹಳ ವ್ಯಾಪಕವಾಗಿ ಆ ಕೀರ್ತನೆಗಳನ್ನು ಬೆಳೆಸಿದರು. ಹೀಗೆ ವ್ಯಾಸಪಂಥ ದಾಸಪಂಥಗಳೆರಡು ವಿಷ್ಣುಸರ್ವೋತ್ತಮತ್ವ- ಸ್ಥಾಪನೆಗಾಗಿ ಎಲ್ಲೆಡೆಯು ಬೆಳೆದವು, ಪುರಂದರದಾಸರು, ಕನಕದಾಸರು, ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು, ಶ್ರೀಮದಾಚಾರ್ಯರು ಹಾಕಿಕೊಟ್ಟ ಮಾರ್ಗದಲ್ಲೇ ಮುಂದುವರೆದು ವೇದಸಂದೇಶಗಳನ್ನು ಜನಸಾಮಾನ್ಯರಿಗೆ ತಿಳಿ ಕನ್ನಡದಲ್ಲಿ ಬಿತ್ತರಿಸಿದರು, ಇದೆಲ್ಲವೂ ಶ್ರೀಮದಾಚಾರ್ಯರ ಕೊಡುಗೆ ಹೊರತು ಬೇರೆ ಯಾರದ್ದೂ ಅಲ್ಲ. **ಮಧ್ವವಿಜಯದ ಸಾರಸಂಗ್ರಹವೇನು ?** ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ। ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ಮಧ್ವಃ ಸಮಃ ಪುಮಾನ್ ॥ ನಾರಾಯಣನಿಗೆ ಸಮಾನನಾದ ಮತ್ತೊಬ್ಬ ದೇವನಿಲ್ಲ. ಮಧ್ವರಿಗೆ ಸಮರಾದ ಮತ್ತೊಬ್ಬ ಗುರುವಿಲ್ಲ. ಅವರ ವಾಕ್ಯಕ್ಕೆ ಸಮಾನವಾದ ಮತ್ತೊಂದು ಶಾಸ್ತ್ರವಿಲ್ಲ. ಇದನ್ನು ತಿಳಿದ ಪುರುಷನಿಗೆ ಸಮಾನನಾದ ಮತ್ತೊಬ್ಬ ಪುರುಷನಿಲ್ಲ. ಇದೇ ವಿಷಯವನ್ನು ಸ್ವತಃ ಮಧ್ವಾಚಾರ್ಯರೇ ತಮ್ಮ ಶಿಷ್ಯಂದಿರಿಗೆ ಕಾಷ್ಠಮೌನದ ಸಂದರ್ಭದಲ್ಲಿ ತಿಳಿಸಿದ್ದಾರೆ - 'ನೇದೃಶಂ ಸ್ಥಲಮಲಂ ಶಮಲಘ್ನಂ ನಾಸ್ಯ ತೀರ್ಥಸಲಿಲಸ್ಯ ಸಮಂ ವಾಃ। ನಾಸ್ತಿ ವಿಷ್ಣುಸದೃಶಂ ನನು ದೈವಂ ನಾಸ್ಮದುಕ್ತಿಸದೃಶಂ ಹಿತರೂಪಮ್॥' ಬದರಿಕಾಶ್ರಮಕ್ಕೆ ಸಮವಾದ ಮತ್ತೊಂದು ಸ್ಥಳವಿಲ್ಲ. ಗಂಗಾಜಲಕ್ಕೆ ಸಮಾನವಾದ ಮತ್ತೊಂದು ತೀರ್ಥವಿಲ್ಲ. ವಿಷ್ಣುವಿಗೆ ಸಮಾನನಾದ ಮತ್ತೊಬ್ಬ ದೇವನಿಲ್ಲ. ನಮ್ಮ ಮಾತಿಗೆ ಸಮಾನವಾದ ಮತ್ತೊಂದು ಹಿತನುಡಿಯಿಲ್ಲ. ಈ ಶ್ಲೋಕದಲ್ಲಿ ಆಚಾರ್ಯ ಮಧ್ವರು ತಿಳಿಸಿಕೊಟ್ಟಿರುವ ತತ್ವವೇ ಪರಮಮುಖ್ಯವಾದದ್ದು. ಇದುವೇ ನಾರಾಯಣ ಪಂಡಿತರು ರಚಿಸಿದ ಮಧ್ವವಿಜಯದ ಸಾರಸಂಗ್ರಹ. ಇದನರಿತು ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕು. **ಮಧ್ವರೇ ಗುರುಗಳಾದ ಭಾಗ್ಯವೇನು?** ಸತಿಯ ಜಠರದೊಳವತರಿಸಿ ಭಾರತೀರಮಣ ಮಧ್ವಾಭಿಧಾನದಿ ಚತುರದಶಲೋಕದೊಳು ಮೆರೆದ ಅಪ್ರತಿಮಗಭಿವಂದಿಸುವೆ. ಭೂಮಿಯಲ್ಲಿ ಮಣಿಮಂತನೇ ಮೊದಲಾದ ಅನೇಕ ದುಷ್ಟರು ಹುಟ್ಟಿ ಇಪ್ಪತ್ತೊಂದು ಕುಭಾಷ್ಯಗಳನ್ನು ರಚಿಸಿದರು. ಆಗ ತ್ರೈಲೋಕ್ಯಾಚಾರ್ಯರಾದ ಮುಖ್ಯಪ್ರಾಣದೇವರು ಮಧ್ಯಗೇಹಭಟ್ಟರ ಮನೆಯಲ್ಲಿ ಅವತರಿಸಿದರು. 'ಮಧ್ವ' ಎಂಬ ಹೆಸರಿನಿಂದ ಹದಿನಾಕು ಲೋಕದಲ್ಲೇ ಮೆರೆದರು. ಹೀಗೆ ಜಗನ್ನಾಥದಾಸರು ಮಧ್ವಾಚಾರ್ಯರನ್ನು ಕೇವಲ ನಮ್ಮ ದೇಶದ ಏಕೈಕ ಗುರುವಲ್ಲ. ಹದಿನಾಕು ಲೋಕಗಳ

ಗುರುಗಳಾಗಿದ್ದಾರೆಂದು ನಿರ್ಣಯಿಸಿದ್ದಾರೆ. ಇಂಥ ಚತುರ್ದಶಲೋಕ ಗುರುಗಳು ನಮ್ಮ ಈ ಜೀವನದಲ್ಲಿ ಗುರುಗಳಾಗಿ ದೊರೆತದ್ದು ಸಾವಿರಾರು ಜನ್ಮಗಳ ಸುಕೃತದ ಫಲವೆಂಬುದನ್ನು ಮನಗಂಡು ಧನ್ಯರಾಗೋಣ. **ಮಧ್ವಾಚಾರ್ಯರ ಸಂಕ್ಷಿಪ್ತ ಕಥೆಯೇನು?** ಮಧ್ಯಗೇಹಭಟ್ಟರು ಸತ್ಪುತ್ರ ಪ್ರಾಪ್ತಿಗಾಗಿ ಉಡುಪಿಯ ಅನಂತೇಶ್ವರನನ್ನು ಹನ್ನೆರಡು ವರ್ಷಗಳ ಕಾಲ ಅಖಂಡವಾಗಿ ಸೇವೆಗೈದರು. ಅದರ ಫಲವಾಗಿ ಜಗದ್ಗುರುಗಳಾದ ವಾಯುದೇವರೇ ಅವರಲ್ಲಿ ಅವತರಿಸಿದರು. ಮಧ್ಯಗೇಹದಂಪತಿಗಳು ಆ ಶಿಶುವಿಗೆ 'ವಾಸುದೇವ' ಎಂದು ನಾಮಕರಣ ಮಾಡಿದರು. ವಾಸುದೇವನು ಮಗುವಾಗಿದ್ದಾಗಲೇ ಹುರುಳಿ ತಿಂದು ಜೀರ್ಣಿಸಿಕೊಂಡನು. ಮೂರು ವರ್ಷದಲ್ಲಿ ತಂದೆ, ತಾಯಿಗಳಿಂದ ಕಣ್ತಪ್ಪಿಸಿಕೊಂಡು ಏಕಾಂಗಿಯಾಗಿ ಅರಣ್ಯಪ್ರದೇಶವನ್ನು ದಾಟಿ, ಉಡುಪಿಯ ಅನಂತೇಶ್ವರನ ಬಳಿ ತೆರಳಿದನು. ತಂದೆ ಮಾಡಿದ ಸಾಲವನ್ನು ಹುಣಸೆ ಬೀಜಗಳನ್ನು ಕೊಡುವ ಮೂಲಕ ತೀರಿಸಿದನು. ಆ ಮಗುವನ್ನು ಒಮ್ಮೆ ಕಚ್ಚಲು ಮಣಿಮಂತನು ಹಾವಾಗಿ ಬಂದಾಗ ಹೆಬ್ಬೆಟ್ಟಿನಿಂದ ತುಳಿದು ಕೊಂದನು. ಐದನೆಯ ವರ್ಷದಲ್ಲಿ ಅಕ್ಷರಾಭ್ಯಾಸವಾಯಿತು. ಯೋಗ್ಯಕಾಲದಲ್ಲಿ ಉಪನಯನವೂ ಆಯಿತು. ಹತ್ತು ವರ್ಷಗಳಲ್ಲಿ ಗುರುಕುಲವಾಸವೇ ಮುಗಿಯಿತು. ಹನ್ನೊಂದನೆಯ ವರ್ಷಕ್ಕೆ ಸನ್ನ್ಯಾಸಾಶ್ರಮವನ್ನು ಸ್ವೀಕರಿಸಿ, ವಾಸುದೇವನೇ ಪೂರ್ಣಪ್ರಜ್ಞನಾದನು. ಹನ್ನೊಂದನೆಯ ವರ್ಷದ ಪೂರ್ಣಪ್ರಜ್ಞರಿಗೆ ಗಂಗಾಸ್ನಾನ ಮಾಡಲು ತವಕ ಉಂಟಾದಾಗ ಗಂಗಾದೇವಿಯೇ ಮಧ್ವಸರೋವರಕ್ಕೆ ಆಗಮಿಸಿದಳು. ವಾದಿಸಿಂಹ ಹಾಗೂ ಬುದ್ಧಿಸಾಗರರೆಂಬ ಅದ್ವೈತ ಪಂಡಿತರನ್ನು ವಾದದಲ್ಲಿ ಸೋಲಿಸಿದರು. ದಕ್ಷಿಣ ಭಾರತದಲ್ಲಿ ದಿಗ್ವಿಜಯಕ್ಕಾಗಿ ಹೊರಟರು. ಅನಂತರ ಗೀತಾಭಾಷ್ಯವನ್ನು ರಚಿಸಿ, ಉತ್ತರಭಾರತದ ದಿಗ್ವಿಜಯಕ್ಕಾಗಿ ಹೊರಟರು. ಸರ್ವಮೂಲಗ್ರಂಥಗಳಲ್ಲಿ ಮೊದಲನೆಯದಾದ ಗೀತಾಭಾಷ್ಯವನು ಬದರಿಕಾಶ್ರಮದಲ್ಲಿ ನಾರಾಯಣನಿಗೆ ಸಮರ್ಪಣೆ ಮಾಡಿದರು. ಅನಂತರ ದೊಡ್ಡ ಬದರಿಕಾಶ್ರಮಕ್ಕೆ ತೆರಳಿ ಬ್ರಹ್ಮಸೂತ್ರಗಳ ಅಪೂರ್ವ ಪ್ರಮೇಯಗಳನ್ನು ವೇದವ್ಯಾಸದೇವರ ಬಳಿ ಉಪದೇಶ ಪಡೆದುಕೊಂಡರು. ಪುನಃ ಆಗಮಿಸಿ ಬ್ರಹ್ಮಸೂತ್ರಭಾಷ್ಯ ಮೊದಲಾದ ಅನೇಕ ಗ್ರಂಥಗಳನ್ನು ರಚನೆ ಮಾಡಿದರು. ಅದ್ವೈತ ಮತ ಮೊದಲಾದ ಎಲ್ಲ ದುರ್ಮತಗಳನ್ನು ನಿರಾಕರಿಸಿ, ವೈಷ್ಣವಸಿದ್ಧಾಂತವನ್ನು ಪ್ರತಿಷ್ಠಾಪನೆ ಮಾಡಿದರು. ವಿಷ್ಣುವೇ ಸರ್ವೋತ್ತಮನಾಗಿದ್ದಾನೆ. ವಾಯುದೇವರು ಜೀವೋತ್ತಮರಾಗಿದ್ದಾರೆ. ಪಂಚಭೇದಗಳು ಸತ್ಯವಾಗಿವೆ. ಪ್ರತಿಯೊಬ್ಬರಲ್ಲಿಯೂ

ತಾರತಮ್ಯವಿದೆ. ಮೋಕ್ಷದಲ್ಲೂ ಕೂಡ ತಾರತಮ್ಯವಿದೆ. ಸಮಗ್ರ ವೇದದಿಂದ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾದವನು ಮಹಾವಿಷ್ಣು ಮಾತ್ರ. ಇವೇ ಮೊದಲಾದ ತತ್ವಗಳನ್ನು ಜಗತ್ತಿನಲ್ಲಿ ಸ್ಥಾಪನೆ ಮಾಡಿದರು. ಈ ತತ್ವವಾದವನ್ನು ನಾನು ಹುಟ್ಟುಹಾಕಿದ್ದಲ್ಲ. ಎಲ್ಲವೂ ಕೂಡ ಶ್ರುತಿ-ಸ್ಮೃತಿ, ಬ್ರಹ್ಮಮೀಮಾಂಸಾಶಾಸ್ತ್ರ ಹಾಗೂ ಪುರಾಣಗಳಲ್ಲಿ ಪ್ರತಿಪಾದನೆ ಮಾಡಿದ್ದೇ ಆಗಿದೆ ಎಂದು ಸಾಬೀತು ಮಾಡಿದರು. ಇಂಥ ಶ್ರೇಷ್ಠರಾದ ಮಧ್ವಾಚಾರ್ಯರೇ ನಮ್ಮ ಗುರುಗಳು. ಎಂದೆಂದೂ ಇವರೇ ನಮ್ಮ ಉದ್ಧಾರಕರು.

**ಸರ್ವಮೂಲಗ್ರಂಥಗಳೆಂದರೆ?** ಜಗದ್ಗುರು ಶ್ರೀಮಧ್ವಾಚಾರ್ಯರು ರಚನೆ ಮಾಡಿದ ಗ್ರಂಥಗಳಿಗೆ ಸರ್ವಮೂಲಗ್ರಂಥ ಎನ್ನುತ್ತಾರೆ. **ಇವು ಎಷ್ಟು ? ಕರಾರುವಾಕ್ಕಾಗಿ ಉತ್ತರ ಕಷ್ಟ. ಹಾಗಾದರೆ ೩೭ ಸರ್ವಮೂಲಗ್ರಂಥಗಳು ಎಂಬುದನ್ನು ನೀವು ಒಪ್ಪುವುದಿಲ್ಲವೆ?** ಯಾರು ೩೭ ಸರ್ವಮೂಲಗ್ರಂಥಗಳೆಂದು ಹೇಳುತ್ತಿದ್ದಾರೋ ಅವರೂ ಕೂಡ ಇನ್ನೂ ಹೆಚ್ಚಿನ ಸರ್ವಮೂಲಗ್ರಂಥಗಳಿವೆ ಎಂದೇ ನಂಬಿಕೊಂಡು ಬಂದಿದ್ದಾರೆ. ಆದ್ದರಿಂದ ಶ್ರೀಮದಾಚಾರ್ಯರು ತುಂಬಾ ಗ್ರಂಥಗಳನ್ನು ಬರೆದಿದ್ದಾರೆ. ಆದರೆ ನಮಗೆ ದೊರೆತದ್ದು ೩೭ ಎಂದು ತಿಳಿಯಬೇಕು. **ನಿಮ್ಮ ಈ ಮಾತಿಗೆ ಏನು ಆಧಾರ?** ನಾನಾಸುಭಾಷಿತಸ್ತೋತ್ರಗಾಥಾದಿಕೃತಿಸತ್ಕೃತೀಃ। ತ್ವಯಿ ರತ್ನಾಕರೇ ರತ್ನಶ್ರೇಣೀರ್ವಾ ಗಣಯಂತಿ ಕೇ ॥(ಮ-ವಿ-15-84) ನಾರಾಯಣಪಂಡಿತಾಚಾರ್ಯರು ಈ ಶ್ಲೋಕದಲ್ಲಿ ಆಚಾರ್ಯರಗ್ರಂಥಗಳನ್ನು ಎಣಿಸಲು ಯಾರಿಗೂ ಸಾಧ್ಯವಿಲ್ಲ ಎಂದು ತಿಳಿಸಿದ್ದಾರೆ. ಅನೇಕ ಕೃತಿಗಳನ್ನು ಆಚಾರ್ಯರ ಶಿಷ್ಯಂದಿರು ಲಿಪಿಬದ್ಧ ಮಾಡಿದ್ದಾರೆ, ಇನ್ನು ಅನೇಕ ಕೃತಿಗಳನ್ನು ಲಿಪಿಬದ್ಧ ಮಾಡಲು ಸಾಧ್ಯವಾಗಿರುವುದಿಲ್ಲ. **ನಮಗೆ ದೊರೆತ ಕೃತಿಗಳನ್ನು ವಿವಕ್ಷಿಸಿ 37 ಸರ್ವಮೂಲಗ್ರಂಥಗಳೆಂದು ಹೇಳಬಹುದಲ್ಲವೆ ?** ಹೇಳಬಹುದು. ಆದರೆ ಇನ್ನೂ ಹೆಚ್ಚಿನ ಗ್ರಂಥಗಳು ದೊರೆತಾಗ ಒಪ್ಪುವ ವಿಶಾಲ ಭಾವನೆ ಬೇಕು. **ಹೃಷೀಕೇಶತೀರ್ಥರ ಹಸ್ತಪ್ರತಿಯಲ್ಲಿ 51 ಗ್ರಂಥಗಳು ದೊರೆತಿವೆ ಎನ್ನುತ್ತಾರೆ. ಆ ಉಳಿದ 14 ಗ್ರಂಥಗಳು ಯಾವುದು ?** ಕಂದುಕಸ್ತುತಿಯನ್ನು ಸೇರಿ 38 ಗ್ರಂಥಗಳು ಎಂಬುದು ಲೋಕದಲ್ಲಿರುವ ವಾಡಿಕೆ. ಇದರ ಜೊತೆ ನ್ಯಾಸಪದ್ಧತಿ ಹಾಗೂ ತಿಥಿನಿರ್ಣಯಗ್ರಂಥಗಳು ಹೊಸದಾಗಿ ದೊರೆತಿವೆ, ಆಗ 40 ಗ್ರಂಥಗಳಾದವು, ದ್ವಾದಶಸ್ತೋತ್ರಗಳನ್ನು ಪ್ರತ್ಯೇಕವಾಗಿ ಬೇರೆ ಬೇರೆ ಗ್ರಂಥಗಳನ್ನಾಗಿ ಪರಿಗಣಿಸಿದಾಗ 51 ಎಂದು ತಿಳಿಯಬೇಕು. ಆದರೆ ನಾರಾಯಣಪಂಡಿತರು ಶ್ರೀಮದಾಚಾರ್ಯರನ್ನು

'ಶತಗ್ರಂಥಕರ್ತ್ರೃ' ಎಂದಿದ್ದಾರೆ. ಅಥವಾ ಹಿಂದೆ ಉದಾಹರಿಸಿದ ಶ್ಲೋಕದಲ್ಲಿ 'ಅಸಂಖ್ಯಗ್ರಂಥಕರ್ತ್ರೃ' ಎಂದಿದ್ದಾರೆ. **ಸರ್ವಮೂಲಗ್ರಂಥಗಳಲ್ಲಿ ಯಾವ ಗ್ರಂಥವನ್ನು ನಾರಾಯಣಪಂಡಿತರು ಹೆಚ್ಚು ಪ್ರಶಂಸೆ ಮಾಡಿದ್ದಾರೆ?** ಎಲ್ಲವನ್ನೂ ವಸ್ತುನಿಷ್ಠವಾಗಿ ಪ್ರಶಂಸೆ ಮಾಡಿದ್ದಾರೆ. ಒಂಬತ್ತನೇ ಸರ್ಗದಲ್ಲಿ ಬ್ರಹ್ಮಸೂತ್ರಭಾಷ್ಯವನ್ನು ಅನೇಕ ಶ್ಲೋಕಗಳಿಂದ ವರ್ಣಿಸಿದ್ದಾರೆ. **ಏನದು ಬ್ರಹ್ಮಸೂತ್ರಭಾಷ್ಯದ ವೈಶಿಷ್ಟ್ಯ?** ಮೋಕ್ಷಶಾಸ್ತ್ರವೆಂದೇ ಇದರ ಹೆಸರು. 'ಮಹಾನಂದತೀರ್ಥಸ್ಯ ಯೇ ಭಾಷ್ಯಭಾವಂ' ಎಂಬ ಮಧ್ವವಿಜಯಶ್ಲೋಕವು ಮೋಕ್ಷ ದೊರಕಬೇಕೆಂದರೆ ಈ ಗ್ರಂಥವನ್ನು ಆಮೂಲಾಗ್ರ ತಿಳಿಯುವುದು ಅನಿವಾರ್ಯ ಎಂದಿದೆ. ಈ ಶ್ರೇಷ್ಠಗ್ರಂಥವನ್ನು, ಬದರೀನಾರಾಯಣನ ಸನ್ನಿಧಾನದಲ್ಲಿ ಶ್ರೀಮದಾಚಾರ್ಯರು ರಚನೆ ಮಾಡಿದರು. 21 ಕುಭಾಷ್ಯಗಳಲ್ಲಿರುವ ದೋಷಗಳನ್ನು ಗಮನಿಸಿ ಬ್ರಹ್ಮಸೂತ್ರಗಳ ಸರಿಯಾದ ಅರ್ಥವನ್ನು ತಿಳಿಸುವುದಕ್ಕಾಗಿ ಈ ಗ್ರಂಥವನ್ನು ರಚಿಸಿದರು. ಸಮಸ್ತ ವೈದಿಕವಾಙ್ಮಯವನ್ನು ಭಗವಂತನಲ್ಲಿ ಸಮನ್ವಯಗೊಳಿಸುವ ಮೂಲಕ ಗುಣಪರಿಪೂರ್ಣತ್ವವನ್ನು ಸ್ಥಾಪನೆ ಮಾಡಿದರು, ಅಂಥ ಭಗವಂತನಲ್ಲಿ ದೋಷಲೇಶಕ್ಕೂ ಅವಕಾಶವಿಲ್ಲ ಎಂದು ಪ್ರತಿಪಾದನೆ ಮಾಡಿ ಜೀವನದ ಮುಖ್ಯಸಾಧನೆಯ ಬಗ್ಗೆ ತಿಳಿಸಿ ಮೋಕ್ಷಸ್ವರೂಪವನ್ನು ಅತ್ಯುತ್ತಮವಾಗಿ ಈ ಗ್ರಂಥದಲ್ಲಿ ನಿರ್ಣಯಿಸಿದರು. ಇದೇ ಬ್ರಹ್ಮಸೂತ್ರಭಾಷ್ಯವನ್ನು ಪಾಠ ಮಾಡುತ್ತಿರುವಾಗ ಸನಕಾದಿ ಋಷಿಗಳು, ಶೇಷಾದಿದೇವತೆಗಳು ಬಂದು ಶ್ರವಣ ಮಾಡುತ್ತಿದ್ದರು ಎಂಬ ಉಲ್ಲೇಖವನ್ನು ಪಂಡಿತಾಚಾರ್ಯರು ಮಾಡಿರುತ್ತಾರೆ. **ಉಪನಿಷತ್ತುಗಳಲ್ಲಿ ಆಚಾರ್ಯರಿಗೆ ಅತ್ಯಂತ ಪ್ರಿಯವಾದ ಉಪನಿಷತ್ತು ಯಾವುದು?** ಐತರೇಯೋಪನಿಷತ್ತು ಆಚಾರ್ಯರಿಗೆ ತುಂಬ ಇಷ್ಟವಾಗಿತ್ತು. ಅವರು ತಮ್ಮ ಅವತಾರಕಾರ್ಯ ಮುಗಿಸುವ ಕೊನೆಯ ಕ್ಷಣದಲ್ಲೂ ಅನಂತೇಶ್ವರದಲ್ಲಿ ಇದೇ ಉಪನಿಷತ್ತನ್ನು ಪಾಠ ಹೇಳುತ್ತಿದ್ದರು. ಇದು ಋಗ್ವೇದಶಾಖೆಗೆ ಸಂಬಂಧಪಟ್ಟ ಉಪನಿಷತ್ತು. ನಾರಾಯಣತತ್ವದ ರಹಸ್ಯ ಇದರಲ್ಲಿದೆ. ಈ ಉಪನಿಷತ್ತನ್ನು ಬ್ರಹ್ಮದೇವರು ಸಾಕ್ಷಾತ್ಕಾರ ಮಾಡಿಕೊಂಡು ಋಷಿಪರಂಪರೆಗೆ ಉಪದೇಶಿಸಿರುವರು. **ಹತ್ತು ಉಪನಿಷತ್ತುಗಳ ವಿವರ ತಿಳಿಸಿರಿ?** 1. ಐತರೇಯೋಪನಿಷತ್ತು, 2. ಬೃಹದಾರಣ್ಯಕೋಪನಿಷತ್ತು - ಇದು ಶುಕ್ಲಯಜುರ್ವೇದಕ್ಕೆ ಸೇರಿದ್ದು, ಸೂರ್ಯದೇವನು ಇದನ್ನು ಕಂಡುಕೊಂಡು ಯಾಜ್ಞವಲ್ಕ್ಯರಿಗೆ ಉಪದೇಶಿಸಿದನು, ಇದನ್ನು ಕಾಣ್ವೋಪನಿಷತ್ತು ಎಂದೂ ಕರೆಯುತ್ತಾರೆ. 3. ಛಂದೋಗೋಪನಿಷತ್ತು- ಹಯಗ್ರೀವದೇವರ ಮುಖದಿಂದ ಹೊರಹೊಮ್ಮಿದ ಈ ಉಪನಿಷತ್ತನ್ನು ರಮೆಯು

ಶೇಷಶಾಯಿಯಾದಾಗ ಶ್ರೀಹರಿಯನ್ನು ಸ್ತುತಿಸುವಳು. 4. ತಲವಕಾರೋಪನಿಷತ್ತು - ಬ್ರಹ್ಮರುದ್ರರ ಸಂವಾದರೂಪದಲ್ಲಿರುವ ಇದು ಸಾಮಶಾಖೆಗೆ ಸೇರಿದ್ದು. 5. ಕಾಠಕೋಪನಿಷತ್ತು - ಪ್ರಸಿದ್ಧ ನಚಿಕೇತನ ಕಥೆ ಇದರಲ್ಲಿದೆ. ಯಜುರ್ವೇದದ ಕಠಶಾಖೆಗೆ ಸೇರಿದೆ, 6. ತೈತ್ತಿರೀಯೋಪನಿಷತ್ತು - ಕೃಷ್ಣಯಜುರ್ವೇದಕ್ಕೆ ಸಂಬಂಧಪಟ್ಟ ಇದರಲ್ಲಿ ಭಗವಂತನ ಪಂಚರೂಪಗಳ ಉಪಾಸನೆಯ ವೈಶಿಷ್ಟ್ಯವಿದೆ. ಆನಂದಮಯಾಧಿಕರಣವೇ ಮೊದಲಾದವು ಇದರ ಸಮನ್ವಯವನ್ನು ಮಾಡುತ್ತಿವೆ. 7. ಆಥರ್ವಣೋಪನಿಷತ್ತು - ಅಥರ್ವವೇದಕ್ಕೆ ಸಂಬಂಧಪಟ್ಟದ್ದು. ಪರಾಪರವಿದ್ಯೆಗಳ ಚರ್ಚೆಗಾಗಿ ಇದು ಹೊರಟಿದೆ. 8. ಷಟ್‌ಪ್ರಶ್ನೋಪನಿಷತ್ತು - ಅಥರ್ವಶಾಖೆಗೆ ಸಂಬಂಧಪಟ್ಟಿದೆ, ಮುಕ್ತಿಯಲ್ಲೂ ಕೂಡ ಜೀವನು ದಾಸ್ಯಭಾವದಿಂದ ಇರುತ್ತಾನೆ ಎಂದು ವರ್ಣಿಸುತ್ತದೆ. 9. ಈಶಾವಾಸ್ಯೋಪನಿಷತ್ತು - ಶುಕ್ಲಯಜುರ್ವೇದಕ್ಕೆ ಇದು ಸಂಬಂಧಪಟ್ಟಿದೆ ಅತ್ಯಂತ ಚಿಕ್ಕ ಉಪನಿಷತ್ತಾದರೂ ಕೂಡ ತತ್ವಗಳ ಬಗ್ಗೆ ಮಹತ್ವದ ವಿಚಾರಗಳನ್ನು ತಿಳಿಸಿದೆ. 10. ಮಾಂಡೂಕೋಪನಿಷತ್ತು - ಆಥರ್ವವೇದಶಾಖೆಗೆ ಸಂಬಂಧಪಟ್ಟಿದೆ, ಭಗವಂತನ ರೂಪತ್ರಯಗಳ ಬಗ್ಗೆ ಇದರಲ್ಲಿ ವಿಶೇಷ ಮಾಹಿತಿ ಇದೆ. ಈ 10 ಉಪನಿಷತ್ತುಗಳಿಗೆ ಆಚಾರ್ಯರು ಭಾಷ್ಯ ಬರೆದಿದ್ದಾರೆ. ಇದಕ್ಕೆ 'ಉಪನಿಷತ್‌ಪ್ರಸ್ಥಾನ' ಎಂದೇ ಕರೆಯುತ್ತಾರೆ. ಈ 10 ಉಪನಿಷತ್ತುಗಳಿಗೆ ಶ್ರೀಮದಾಚಾರ್ಯರು ಭಾಷ್ಯವನ್ನು ಬರೆಯುವ ಮೂಲಕ, ಸಕಲ ಉಪನಿಷತ್ತುಗಳ ಅಧ್ಯಯನಕ್ಕೆ ಮಾರ್ಗದರ್ಶನ ನೀಡಿದ್ದಾರೆ. **ವೇದಪ್ರವಚನಾಚಾರ್ಯರೆಂದೇ ಪ್ರಸಿದ್ಧರಾದ ಶ್ರೀಮದಾಚಾರ್ಯರು ವೇದವ್ಯಾಖ್ಯಾನ ಮಾಡಿದ್ದಾರೆಯೇ?** ವೇದಾರ್ಥನಿರ್ಣಯಕ್ಕೆ ಶ್ರೀಮದಾಚಾರ್ಯರು ಋಗ್‌ಭಾಷ್ಯವನ್ನು ರಚಿಸಿದ್ದಾರೆ. 40 ಸೂಕ್ತಗಳಿಗೆ ಅರ್ಥವನ್ನು ವಿವರಣೆ ಮಾಡಿ ಸಮಗ್ರ ವೈದಿಕ ವಾಙ್ಮಯಕ್ಕೆ ಆಧ್ಯಾತ್ಮಿಕ ಅರ್ಥವನ್ನು ತಿಳಿಸಿದ್ದಾರೆ. ಪ್ರತಿಯೊಂದು ಗ್ರಂಥಗಳಿಗೂ ಉಪಸಂಹಾರ ವಾಕ್ಯವಿದ್ದರೆ ಋಗ್‌ಭಾಷ್ಯಕ್ಕೆ ಉಪಸಂಹಾರವಾಕ್ಯವಿಲ್ಲ. ಆದ್ದರಿಂದ ಇನ್ನೂ ಕೆಲವು ವೇದಭಾಗಗಳಿಗೆ ಶ್ರೀಮದಾಚಾರ್ಯರು ಭಾಷ್ಯವನ್ನು ಬರೆದಿರಬಹುದು ಅದು ನಮಗೆ ದೊರೆಯದೆ ಇರಬಹುದೆಂದು ಬಲ್ಲವರು ಹೇಳುತ್ತಾರೆ. **ಗೀತಾಪ್ರಸ್ಥಾನ ಎಂದರೆ ಯಾವ ಗ್ರಂಥಗಳು? ಹಾಗೂ ಅವುಗಳ ವೈಶಿಷ್ಟ್ಯವೇನು?** ಶ್ರೀಮದಾಚಾರ್ಯರು ಮೊಟ್ಟಮೊದಲು ಮಾಡಿದ ಕೃತಿಯೇ ಗೀತಾಭಾಷ್ಯ. ಬದರಿಕಾಶ್ರಮಕ್ಕೆ ಪ್ರಥಮ ಬಾರಿಗೆ ತೆರಳುವಾಗ ಭಗವಂತನಿಗೆ ಸಮರ್ಪಿಸಲು ಕೊಂಡು ಹೋದ ಕಾಣಿಕೆಯೇ ಈ ಗೀತಾಭಾಷ್ಯ. ಮತ್ತೊಂದು ಗೀತಾತಾತ್ಪರ್ಯನಿರ್ಣಯ. ಗೀತೆಯ ತಾತ್ಪರ್ಯವನ್ನು ಕೇಂದ್ರೀಕರಿಸಿ ತತ್ವಗಳನ್ನು ಅರಿಯುವಂತೆ ವಿಭಿನ್ನರೀತಿಯಲ್ಲಿ ಈ ಗ್ರಂಥವನ್ನು ರಚನೆ

ಮಾಡಿದರು. ಗೀತಾತಾತ್ಪರ್ಯ ಹಾಗೂ ಗೀತಾಭಾಷ್ಯ ಗ್ರಂಥಗಳು ಸೂರ್ಯಚಂದ್ರರಂತೆ ಸಮಸ್ತ ಜಗತ್ತನ್ನೇ ಬೆಳಗುತ್ತಿವೆ ಎಂದು ವರ್ಣಿಸುತ್ತಾರೆ ನಾರಾಯಣಪಂಡಿತರು. **ಶ್ರೀಮದಾಚಾರ್ಯರು ಪುರಾಣ ಹಾಗೂ ಇತಿಹಾಸಗ್ರಂಥಗಳನ್ನು ನಾವು ಹೇಗೆ ಓದಬೇಕೆಂದು ಮಾರ್ಗದರ್ಶನ ಮಾಡಿದ್ದಾರೆ?** ಈ ಪ್ರಶ್ನೆಗೆ ಉತ್ತರವನ್ನು ನೀಡುವುದಕ್ಕಾಗಿಯೇ ಮಹಾಭಾರತತಾತ್ಪರ್ಯನಿರ್ಣಯ ಗ್ರಂಥವನ್ನು ರಚನೆ ಮಾಡಿದ್ದಾರೆ. ಇದು ಕೇವಲ ಮಹಾಭಾರತದ ಅರ್ಥನಿರ್ಣಯಕ್ಕಾಗಿ ಹೊರಟಿದ್ದಲ್ಲ ಸಮಸ್ತ ಶಾಸ್ತ್ರಗಳ ಅರ್ಥನಿರ್ಣಯ ಮಾಡುವುದಕ್ಕಾಗಿ ಹೊರಟಿದೆ ಎಂದು ಸ್ವತಃ ಶ್ರೀಮದಾಚಾರ್ಯರೇ 'ಸಮಸ್ತಶಾಸ್ತ್ರಾರ್ಥವಿನಿರ್ಣಯೋಽಯಂ' ಎನ್ನುತ್ತಾರೆ, ಶ್ರೀಮದಾಚಾರ್ಯರು ಎರಡನೇ ಬಾರಿ ಬದರಿಯಾತ್ರೆಯನ್ನು ಕೈಗೊಂಡಾಗ ಅಲ್ಲಿ ನಾರಾಯಣದೇವರ ಸನ್ನಿಧಾನದಲ್ಲಿ ಶ್ರೀವೇದವ್ಯಾಸದೇವರ ಆದೇಶದಂತೆ ಈ ಗ್ರಂಥವನ್ನು ರಚನೆ ಮಾಡಿದರು. ಆದ್ದರಿಂದಲೇ ಈ ಗ್ರಂಥಕ್ಕೆ ಎಲ್ಲಿಲ್ಲದ ವೈಶಿಷ್ಟ್ಯವಿದೆ. ಇದನ್ನು ಓದದವನು ಮಾಧ್ವನೆಂದು ಕರೆಸಿಕೊಳ್ಳಲು ಸಾಧ್ಯವಿಲ್ಲ ಎಂಬ ವಾಡಿಕೆಯು ಪ್ರಸಿದ್ಧವಾಗಿದೆ. **ಭಾಗವತಗ್ರಂಥದ ಅಧ್ಯಯನಕ್ಕೆ ಆಚಾರ್ಯರು ಹೇಗೆ ಮಾರ್ಗದರ್ಶನ ಮಾಡಿದ್ದಾರೆ ?** 18 ಪುರಾಣಗಳಲ್ಲಿ ಭಾಗವತಪುರಾಣಕ್ಕೆ ಶ್ರೀಮದಾಚಾರ್ಯರು ತಾತ್ಪರ್ಯ ಬರೆದಿದ್ದಾರೆ. ಇದರಿಂದ ಎಲ್ಲಾ ಪುರಾಣಗಳನ್ನು ಹೇಗೆ ಅರ್ಥ ಮಾಡಿಕೊಳ್ಳಬೇಕೆಂಬ ಮಾರ್ಗದರ್ಶನ ನೀಡಿದ್ದಾರೆ. ಗುಹ್ಯಭಾಷೆ, ದರ್ಶನಭಾಷೆ ಹಾಗೂ ಸಮಾಧಿಭಾಷೆಗಳನ್ನು ಅರಿತು ಪುರಾಣಗಳನ್ನು ಹೇಗೆ ಓದಬೇಕೆಂಬುದನ್ನು ಈ ಗ್ರಂಥದ ಮೂಲಕ ತಿಳಿಸಿದ್ದಾರೆ. ಅತ್ಯಂತ ಸಂಕ್ಷಿಪ್ತವ್ಯಾಖ್ಯಾನವಾದರೂ ಗ್ರಂಥವು ಬೃಹತ್ತಾಗಿದೆ. **ವಾಸ್ತುಶಾಸ್ತ್ರ, ಶಿಲ್ಪಶಾಸ್ತ್ರ, ಜಪತಪಾದಿ ಸಮಗ್ರ ಆಚಾರ-ವಿಚಾರಕ್ಕೆ ಸಂಬಂಧಪಟ್ಟಂತೆ ಯಾವ ಗ್ರಂಥವನ್ನು ನೀಡಿದ್ದಾರೆ?** ಮೇಲಿನ ಪ್ರಶ್ನೆಯ ಉತ್ತರಕ್ಕಾಗಿಯೇ ತಂತ್ರಸಾರಸಂಗ್ರಹ ಎಂಬ ಕೃತಿಯನ್ನು ರಚನೆ ಮಾಡಿದ್ದಾರೆ. ದೇವತೆಗಳು ಹೇಗೆ ಕಲ್ಪವೃಕ್ಷದ ನೆರಳನ್ನು ಆಶ್ರಯಿಸಿ ಬಯಸಿದ್ದನ್ನೆಲ್ಲಾ ಪಡೆಯುತ್ತಾರೋ ಹಾಗೆಯೇ ತಂತ್ರಸಾರ ಎಂಬ ಕಲ್ಪವೃಕ್ಷವನ್ನು ಆಶ್ರಯಿಸಿದ ಸಾಧಕನು ತನ್ನೆಲ್ಲಾ ಅಭೀಷ್ಟಸಿದ್ಧಿಯನ್ನು ಪಡೆಯದೆ ಇರಲಾರ, ಎನ್ನುತ್ತಾರೆ ನಾರಾಯಣಪಂಡಿತರು. ಈ ಗ್ರಂಥದಲ್ಲಿ ಒಟ್ಟು 400 ಶ್ಲೋಕಗಳಿವೆ. ಅಷ್ಟಮಹಾಮಂತ್ರಗಳು, ದೇವರಪೂಜೆ, ದೇವಾಲಯನಿರ್ಮಾಣ, ಬ್ರಹ್ಮಕಲಶ, ಉತ್ಸವ, ಪ್ರತಿಮಾಶಿಲ್ಪ, 70 ಮಹಾಮಂತ್ರಗಳು, ಜಪ, ಧ್ಯಾನ, ಯಂತ್ರ, ಹೋಮವಿಧಿ, ಇವುಗಳ ಬಗ್ಗೆ ಈ ಕೃತಿಯಲ್ಲಿ ಪೂರ್ಣ ಮಾಹಿತಿ ದೊರಕುತ್ತದೆ. **ಪ್ರಕರಣಗ್ರಂಥಗಳು ಎಂದರೆ ಯಾವುದು ಎಂದು**

**ಪರಿಚಯಿಸುವಿರಾ?** ಒಟ್ಟು 10 ಪ್ರಕರಣಗ್ರಂಥಗಳು - 1. ಪ್ರಮಾಣಲಕ್ಷಣ - ಪ್ರಮಾಣವು ಎರಡು ವಿಧ, ಕೇವಲ ಪ್ರಮಾಣ, ಅನುಪ್ರಮಾಣ. ಈ ವಿಚಾರವನ್ನು ಗ್ರಂಥದಲ್ಲಿ ತಿಳಿಸಿದ್ದಾರೆ. ಯಾವುದೇ ವಿಷಯವನ್ನು ಉಪಪಾದನೆ ಮಾಡಲು ಆಧಾರವನ್ನಾಗಿ ನೀಡುವ ಪ್ರಮಾಣಗಳ ಬಗ್ಗೆ ತಿಳಿಯಬೇಕೆಂದರೆ ಇರುವುದು ಇದೊಂದೇ ಗ್ರಂಥ. 2. ಕಥಾಲಕ್ಷಣ - 24 ಶ್ಲೋಕಗಳಿಂದ ಕೂಡಿರುವ ಅಥವಾ ಹೃಷೀಕೇಶತೀರ್ಥರ ಪಾಠದಂತೆ 32 ಶ್ಲೋಕಗಳಿಂದ ಕೂಡಿರುವ ಗ್ರಂಥವಿದು. ವಾದವಿವಾದಗಳ ವ್ಯವಸ್ಥೆ ಹೇಗಿರಬೇಕು ಶಿಷ್ಯನ ಬಳಿ ಹೇಗೆ ಮಾತನಾಡಬೇಕು. ಸಭೆಯಲ್ಲಿ ಹೇಗೆ ಮಾತನಾಡಬೇಕು ವಿದ್ವದ್‌ಗೋಷ್ಠಿಯು ಹೇಗೆ ನಡೆಯಬೇಕು ಪರವಾದಿಯನ್ನು ಹೇಗೆ ನಿಗ್ರಹಿಸಬೇಕು ಇವುಗಳನ್ನೆಲ್ಲಾ ತಿಳಿಯಬೇಕೆಂದರೆ ಕಥಾಲಕ್ಷಣವನ್ನೇ ಓದಬೇಕು, 3. ವಿಷ್ಣುತತ್ತ್ವವಿನಿರ್ಣಯ - ಈ ಗ್ರಂಥ ವಿಷಯದಿಂದ ಹಾಗೂ ಪರಿಮಾಣದಿಂದ ಬೃಹತ್ತಾಗಿದೆ. ಮೂರು ಪರಿಚ್ಛೇದಗಳಿವೆ ವೇದಗಳ ಅಪೌರುಷೇಯತ್ವ, ವರ್ಣನಿತ್ಯತ್ವ, ಪ್ರಪಂಚಸತ್ಯತ್ವ, ಇತ್ಯಾದಿ ವಿಚಾರಗಳನ್ನು ಚರ್ಚಿಸಿದೆ. 4. ತತ್ತ್ವೋದ್ಯೋತ - ವಾದ ಎಂದೇ ಇದಕ್ಕೆ ಹೆಸರು. ಕಾಸರಗೋಡಿನ ವಿಷ್ಣುಮಂಗಲ ದೇವಾಲಯದಲ್ಲಿ ಪದ್ಮತೀರ್ಥನ ಬಳಿ ಮಾಡಿದ ವಾದವಿವಾದವೇ ಇದಾಗಿದೆ. ಮಾಯಾವಾದಿಗಳು ಪ್ರಚ್ಛನ್ನಬೌದ್ಧರು ಎಂಬುದನ್ನು ಇದರಲ್ಲಿ ಸಾಬೀತು ಮಾಡಿದ್ದಾರೆ. 5. ಮಾಯಾವಾದಖಂಡನ - ಯಾವ ಅಜ್ಞಾನದಿಂದ ಅದ್ವೈತಮತ ನಿಂತಿದೆಯೋ ಆ ಅಜ್ಞಾನವನ್ನು ನಿರಾಕರಣೆ ಮಾಡುವ ಮೂಲಕ ಸಮಸ್ತ ಅದ್ವೈತಮತವನ್ನು ಧೂಳಿಪಟ ಮಾಡಿದ ಅತ್ಯಂತ ಕಿರಿದಾದ ಕೃತಿ ಇದು, 6. ಉಪಾಧಿ ಖಂಡನ- ಉಪಾಧಿಯ ಆಧಾರದಿಂದ ಅಜ್ಞಾನವನ್ನು ಸಮರ್ಥಿಸಲು ಅದ್ವೈತಿಗಳಿಗೆ ಸಾಧ್ಯವಿಲ್ಲ ವ್ಯಾವಹಾರಿಕಭೇದ ಇದರಿಂದ ನಿರ್ಣಯವಾಗುವುದಿಲ್ಲ. ಅದ್ವೈತಿಗಳು ಹೇಳುವ ಉಪಾಧಿಯನ್ನು ಖಂಡನೆ ಮಾಡಲು ಹೊರಟ ಗ್ರಂಥವೇ ಇದಾಗಿದೆ. 7. ಮಿಥ್ಯಾತ್ವಾನುಮಾನಖಂಡನ - ಅದ್ವೈತಿಗಳು ಜಗತ್ತನ್ನು ಮಿಥ್ಯಾಭೂತ ಎನ್ನುತ್ತಾರೆ. ಮಿಥ್ಯಾತ್ವವನ್ನು ಖಂಡನೆ ಮಾಡುವ ಮೂಲಕ ಜಗತ್‌ಸತ್ಯತ್ವವನ್ನು ಸಮರ್ಥನೆ ಮಾಡಲು ಈ ಗ್ರಂಥವು ಹೊರಟಿದೆ. ಈ ಮೂರು ಗ್ರಂಥಗಳಿಗೆ ಖಂಡನತ್ರಯ ಎಂದು ಕರೆಯುತ್ತಾರೆ. ಹೃಷೀಕೇಶತೀರ್ಥರ ಪಾಠದಲ್ಲಿ ಮಾಯಾವಾದದೂಷಣ, ಉಪಾಧಿದೂಷಣ, ಮಿಥ್ಯಾತ್ವಾನುಮಾನ-ದೂಷಣ ಎಂದು ಇವುಗಳ ಹೆಸರಿದೆ. 8. ತತ್ವಸಂಖ್ಯಾನ - ಕೇವಲ 12 ಶ್ಲೋಕಗಳಲ್ಲಿರುವ ಅತ್ಯಂತ ಪುಟ್ಟಕೃತಿ. ಆದರೆ ಸಮಸ್ತ ಜಗತ್ತಿನಲ್ಲಿರುವ ಎಲ್ಲ ಪದಾರ್ಥಗಳನ್ನು ವಿಭಾಗಮಾಡಿ 'ಇದಮಿತ್ಥಂ' ಎಂದು ಗಣನೆ ಮಾಡಿದ್ದಾರೆ. 9. ತತ್ವವಿವೇಕ - 11 ಶ್ಲೋಕಗಳ ಪುಟ್ಟಕೃತಿ, ತತ್ವಸಂಖ್ಯಾನ

ಎಂಬ ಮೂಲಗ್ರಂಥದ ಸಂಗ್ರಾಹಕವಾಗಿ ಈ ಗ್ರಂಥ ಹೊರಟಿದೆ. ತತ್ವಸಂಖ್ಯಾನದಲ್ಲಿ ಹೇಳಿದ ವಿಷಯಗಳಿಗೆ ಆಧಾರಗಳು ಈ ಗ್ರಂಥದಲ್ಲಿದೆ. 10. ಕರ್ಮನಿರ್ಣಯ - ಈ ಗ್ರಂಥ ದಶಪ್ರಕರಣದಲ್ಲಿ ಸೇರುವುದಿಲ್ಲ. ಶ್ರುತಿಪ್ರಸ್ಥಾನದಲ್ಲಿ ಸೇರುತ್ತದೆಂದು ಕೆಲವು ಹಿರಿಯರು ಹೇಳುತ್ತಾರೆ. ಇವರ ಪ್ರಕಾರ 9 ಮಾತ್ರ ಪ್ರಕರಣ ಗ್ರಂಥಗಳು. (ಕರ್ಮನಿರ್ಣಯದ ಬಗ್ಗೆ ಮುಂದೆ ವಿವರಿಸಿದೆ.) **ಗೀತಾಪ್ರಸ್ಥಾನ ಉಪನಿಷತ್‌ಪ್ರಸ್ಥಾನಗಳ ಬಗ್ಗೆ ತಿಳಿಸಿದಿರಿ ಸೂತ್ರಪ್ರಸ್ಥಾನದ ಬಗ್ಗೆ ತಿಳಿಸುವಿರಾ?** ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನ, ಅಣುಭಾಷ್ಯ, ನ್ಯಾಯವಿವರಣ ಈ ನಾಕು ಗ್ರಂಥಗಳನ್ನು ಸೂತ್ರಪ್ರಸ್ಥಾನ ಎನ್ನುತ್ತಾರೆ. ಇವುಗಳಲ್ಲಿ ಬ್ರಹ್ಮಸೂತ್ರಭಾಷ್ಯದ ಬಗ್ಗೆ ಈಗಾಗಲೇ ತಿಳಿದಿದ್ದೇವೆ. ಮತ್ತೊಂದು ಅನುವ್ಯಾಖ್ಯಾನ. ತ್ರಿವಿಕ್ರಮ-ಪಂಡಿತಾಚಾರ್ಯರ ಪ್ರಾರ್ಥನೆಯಂತೆ ಶ್ರೀಮದಾಚಾರ್ಯರು ಈ ಗ್ರಂಥವನ್ನು ರಚನೆ ಮಾಡಿದ್ದಾರೆ. ನಾಕು ಮಂದಿ ಶಿಷ್ಯರಿಂದ ನಾಕು ಅಧ್ಯಾಯಗಳನ್ನು ಏಕಕಾಲದಲ್ಲಿ ಬರೆಸಿದ ಗ್ರಂಥವೇ ಇದು. ಈ ಗ್ರಂಥದಲ್ಲಿ ಇಲ್ಲದ ವಿಚಾರವಿಲ್ಲ. ಈ ಗ್ರಂಥವನ್ನು ನಾರಾಯಣಪಂಡಿತರು ಭೂಲೋಕದ ಅಮೃತವೆಂದೇ ಕರೆಯುತ್ತಾರೆ. ಆದ್ದರಿಂದಲೇ ಶ್ರೀಮತ್‌ಟೀಕಾಕೃತ್ಪಾದರು ನ್ಯಾಯಸುಧಾ ಎಂಬ ಟೀಕೆಯನ್ನು ಇದಕ್ಕೆ ಬರೆದಿದ್ದಾರೆ. ಬ್ರಹ್ಮಸೂತ್ರಗಳ ತತ್ವಗಳನ್ನು ತಿಳಿಸುವುದಷ್ಟೇ ಅಲ್ಲದೆ ದುರ್ವಾದಿಗಳ ಗರ್ವದ ಬೆಟ್ಟಕ್ಕೆ ವಜ್ರಾಯುಧವಾಗಿದೆ. 3. ಅಣುಭಾಷ್ಯ- ಸರ್ವಶಾಸ್ತ್ರಾರ್ಥಸಂಗ್ರಹ ಎಂಬುದು ಇದರ ಮತ್ತೊಂದು ಹೆಸರು. ತನ್ನ ಪುಟ್ಟ ಬಾಯಿಯಲ್ಲಿ ಶ್ರೀಕೃಷ್ಣ ಬ್ರಹ್ಮಾಂಡವನ್ನೇ ತೋರಿದಂತೆ ಈ ಪುಟ್ಟಕೃತಿಯಲ್ಲಿ ಅನಂತ ಅರ್ಥವನ್ನು ಶ್ರೀಮದಾಚಾರ್ಯರು ತೋರಿಸಿದ್ದಾರೆ. ಬ್ರಹ್ಮಸೂತ್ರದ ಪ್ರತಿಯೊಂದು ಅಧಿಕರಣಗಳ ಸಾರವನ್ನು ಸೆರೆಹಿಡಿದು ಅದರ ಅನುಸಂಧಾನ ಮೂಲಕ ಭಗವಂತನನ್ನು ಉಪಾಸಿಸಲು ಮಾಡಿಕೊಟ್ಟ ಕೃತಿ ಇದು. 4. ನ್ಯಾಯವಿವರಣ - ಅನುವ್ಯಾಖ್ಯಾನದ ಪರಿಶಿಷ್ಟವೆಂದು ಇದನ್ನು ಬಲ್ಲವರು ಹೇಳುತ್ತಾರೆ. ಪ್ರತಿಯೊಂದು ಅಧಿಕರಣದಲ್ಲಿ ತಿಳಿಯಬೇಕಾದ ಪೂರ್ವಪಕ್ಷಯುಕ್ತಿ ಹಾಗೂ ಸಿದ್ಧಾಂತ ಯುಕ್ತಿಗಳನ್ನು ಇದರಲ್ಲಿ ಸಂಗ್ರಹಿಸಲಾಗಿದೆ. 'ಅನುವ್ಯಾಖ್ಯಾನ-ನ್ಯಾಯವಿವರಣಮಾಲಿಕಾ' ಎಂಬುದು ಇದರ ಮತ್ತೊಂದು ಹೆಸರು. **ಶ್ರೀಮದಾಚಾರ್ಯರು ಕರ್ಮಕಾಂಡವನ್ನು ಅರಿತಿರುವರೆ? ಮತ್ತು ಜ್ಞಾನಕಾಂಡವನ್ನು ಮಾತ್ರ ಪ್ರಮಾಣವೆಂದು ಒಪ್ಪಿ ಕರ್ಮಕಾಂಡವನ್ನು ಅಪ್ರಮಾಣವೆಂದು ಹೇಳಿರುವರೆ?** ಒಮ್ಮೆ ಎಲ್ಲ ಯಾಜ್ಞಿಕರು ಕರ್ಮಕಾಂಡದ ಮೂಲಕ ಶ್ರೀಮದಾಚಾರ್ಯರನ್ನು ಸೋಲಿಸಲು ಮುಂದಾದರು. ಆಗ ಕರ್ಮಕಾಂಡವನ್ನು ಜ್ಞಾನಕಾಂಡದೊಡನೆ ಅರ್ಥಪೂರ್ಣ ಹೊಂದಾಣಿಕೆ ಮಾಡಿ ವೈದಿಕ

ಸಾಹಿತ್ಯಕ್ಕೆ ಅನನ್ಯ ಸ್ಥಾನವಿದೆ ಎಂದು ಸಾಬೀತು ಪಡಿಸಲು ಕರ್ಮನಿರ್ಣಯ ಎಂಬ ಗ್ರಂಥವನ್ನು ರಚನೆ ಮಾಡಿದರು. ಇದನ್ನು 'ಖಂಡಾರ್ಥನಿರ್ಣಯ' ಎಂದು ಕೂಡ ಕರೆಯುತ್ತಾರೆ. ಇದು ಹಾಗೂ ಋಗ್‌ಭಾಷ್ಯಗ್ರಂಥ, ಶ್ರುತಿಪ್ರಸ್ಥಾನ ಎನಿಸುತ್ತವೆ. ಕೆಲವರು ಪ್ರಸ್ಥಾನಗಳು ಮೂರು ಎಂದರೆ ಕೆಲವರು ನಾಕು ಎನ್ನುತ್ತಾರೆ. **ಅನೇಕ ವಿದ್ವಾಂಸರು ಮಧ್ವಾಚಾರ್ಯರಿಗೆ ಕವಿತಾಶಕ್ತಿ ಇದೆಯೋ ಇಲ್ಲವೋ? ಎಂಬ ಸಂದೇಹ ಹೊಂದಿದರು. ಆಗ ಸಭೆಯೊಂದರಲ್ಲಿ ಚಿತ್ರಕಾವ್ಯವನ್ನು ರಚಿಸಲು ಹೇಳಿದರು. ಆಗಲೇ ಯಮಕಭಾರತವನ್ನು ರಚಿಸಿದರು ಎಂದು ಹೇಳುತ್ತಾರೆ ಇದರ ವೈಶಿಷ್ಟ್ಯವೇನು?** ಹದಿನೆಂಟು ಪರ್ವಗಳ ಸಮಗ್ರ ಮಹಾಭಾರತದ ತಾತ್ಪರ್ಯವನ್ನು ಕೇವಲ 81 ಶ್ಲೋಕದಲ್ಲಿ ಸಂಗ್ರಹಿಸಿರುವರು. ಪ್ರತಿಯೊಂದು ಶ್ಲೋಕಗಳನ್ನು ಅತ್ಯಂತ ಪ್ರಾಸಬದ್ಧವಾಗಿ ರಚಿಸಿರುವರು. ಯಮಕಪ್ರಾಸಬದ್ಧವಾಗಿರುವುದರಿಂದಲೇ ಇದಕ್ಕೆ 'ಯಮಕಭಾರತ' ಎಂದು ಕರೆಯುತ್ತಾರೆ ಎಂಥ ಪಂಡಿತರೂ ಕೂಡ ಆಶ್ಚರ್ಯಪಡುವಂಥ ಅತ್ಯದ್ಭುತವಾದ ಚಿತ್ರಕಾವ್ಯವಿದು. **ಮಕ್ಕಳಿಗೆ ವೈಷ್ಣವದೀಕ್ಷೆ ಹುಟ್ಟಿಸಲು ಆಚಾರ್ಯರ ಯಾವ ಗ್ರಂಥವನ್ನು ಪಾಠ ಮಾಡಬೇಕು?** ಇದಕ್ಕಾಗಿಯೇ 'ಕೃಷ್ಣಾಮೃತಮಹಾರ್ಣವ' ಎಂಬ 229 ಶ್ಲೋಕಗಳ ಕೃತಿಯನ್ನು ಶ್ರೀಮದಾಚಾರ್ಯರು ರಚನೆ ಮಾಡಿದ್ದಾರೆ. ಸಕಲಪುರಾಣಗಳ ಸಾರಸಂಗ್ರಹ-ವಾಗಿದ್ದರೂ ಕಾವ್ಯಮಯವಾಗಿದೆ. ಇರೇಪಡಿತ್ತಾಯ ಎಂಬ ವಂಶದವರಿಗೆ ಯಜ್ಞನಾರಾಯಣನ ಮೂರ್ತಿಯನ್ನು ದಯಪಾಲಿಸುವಾಗ ಈ ಕೃತಿಯನ್ನು ರಚನೆ ಮಾಡಿ ನೀಡಿದರು, ಏತನ್‌ಮೂಲಕವಾಗಿ ವೈಷ್ಣವದೀಕ್ಷೆಯನ್ನು ಹೇಗೆ ಪಡೆಯಬೇಕು ಎಂದು ತಿಳಿಸಿರುವರು. **ಬೆಳಗಿನಿಂದ ರಾತ್ರಿಯವರೆಗೆ ನಮ್ಮ ನಿತ್ಯಾನುಷ್ಠಾನ ಹೇಗಿರಬೇಕು ಎನ್ನಲು ಆಚಾರ್ಯರ ಗ್ರಂಥ ಯಾವುದು?** ಸದಾಚಾರಸ್ಮೃತಿ ಇದಕ್ಕಾಗಿಯೇ ಹೊರಟಿದೆ. ಧರ್ಮಾಧರ್ಮದ ನಿರ್ಣಯದ ಜೊತೆ ನಿತ್ಯಾನುಷ್ಠಾನವನ್ನು ಉಪದೇಶಿಸುವ ಅಪೂರ್ವಕೃತಿ ಇದು. ನಿರಂತರ ಭಗವಂತನ ಸ್ಮರಣೆಯೇ ಧರ್ಮ, ವಿಸ್ಮರಣೆಯೇ ಅಧರ್ಮ ಎಂಬ ಮುಖ್ಯತತ್ವವನ್ನು ಎಚ್ಚರಿಸಿದ ಧರ್ಮಶಾಸ್ತ್ರವಿದು. **ದ್ವಾದಶಸ್ತೋತ್ರವನ್ನು ನೈವೇದ್ಯಕಾಲದಲ್ಲಿಯೇ ಏಕೆ ಪಠಿಸಬೇಕು?** ಆಹಾರಪದಾರ್ಥಗಳಿಲ್ಲಿರುವ ವಿಷವನ್ನು ಹಾಗೂ ಕಾಲುಷ್ಯವನ್ನು ಪರಿಹರಿಸುವ ಶಕ್ತಿ ಈ ದ್ವಾದಶಸ್ತೋತ್ರಕ್ಕೆ ಇದೆ ಎಂಬುದು ನಮ್ಮ ಸಂಪ್ರದಾಯದ ಸ್ಪಷ್ಟವಾದ ಘೋಷಣೆ. ಆದ್ದರಿಂದ ಅವಶ್ಯವಾಗಿ ದ್ವಾದಶಸ್ತೋತ್ರವನ್ನು ನೈವೇದ್ಯಕಾಲದಲ್ಲಿ ಪಠಿಸಲೇಬೇಕು. ಅಷ್ಟೇ ಅಲ್ಲದೆ, ಇದೊಂದು ಸಂಗೀತಕಾವ್ಯವೆನಿಸಿದೆ. ಇದೇ ದ್ವಾದಶಸ್ತೋತ್ರವು ಮುಂದಿನ ದಾಸಪರಂಪರೆಗೆ

ಮೂಲ ಬೀಜವಾಯಿತು. ಈ ದ್ವಾದಶಸ್ತೋತ್ರಗಳನ್ನು ಪ್ರತ್ಯೇಕ ಗ್ರಂಥಗಳೆಂದು ಜ್ಞಾನಿಗಳು ಹೇಳುತ್ತಾರೆ. **ಶ್ರೀಮದಾಚಾರ್ಯರ ಉಳಿದ ಗ್ರಂಥ ಯಾವುದು?** 1. ಜಯಂತೀಕಲ್ಪ - 12 ಶ್ಲೋಕಗಳ ಪುಟ್ಟಕೃತಿಯಾದರೂ ಕೃಷ್ಣಾಷ್ಟಮಿಯ ಮತ್ತು ಕೃಷ್ಣಜಯಂತಿಯ ಆಚರಣೆಗೋಸ್ಕರವೇ ಹೊರಟಿರುವ ಕೃತಿ. ಆದ್ದರಿಂದಲೇ ನಮ್ಮಲ್ಲಿ ಕೃಷ್ಣಾಷ್ಟಮಿ ಆಚರಣೆ ಇಷ್ಟೊಂದು ಮಹತ್ವವನ್ನು ಪಡೆದಿದೆ. 2. ಯತಿಪ್ರಣವಕಲ್ಪ - ಯತಿಗಳ ಆಚರಣೆ ಹೇಗಿರಬೇಕು ಎಂಬುದನ್ನು, ತಿಳಿಸುವ 25 ಶ್ಲೋಕಗಳ ಸಣ್ಣಗ್ರಂಥ 'ವಿಷ್ಣೋಃ ಸರ್ವೋತ್ತಮತ್ವಂ ಚ ಸರ್ವದಾ ಪ್ರತಿಪಾದಯ' ಎಂಬ ಪ್ರಸಿದ್ಧನುಡಿ ಇರುವುದು ಇದೇ ಗ್ರಂಥದಲ್ಲಿ. 3. ನ್ಯಾಸಪದ್ಧತಿ - 12 ಶ್ಲೋಕಗಳಿಂದ ಕೂಡಿದ ಈ ಗ್ರಂಥವು ಸಂನ್ಯಾಸಿಗಳ ನಿತ್ಯಾನುಷ್ಠಾನವನ್ನು ಸಂಕ್ಷೇಪವಾಗಿ ತಿಳಿಸುತ್ತದೆ. 4. ತಿಥಿನಿರ್ಣಯ - 28 ಶ್ಲೋಕಗಳಿಂದ ಕೂಡಿದೆ. ಗಣಿತದ ಲೆಕ್ಕಚಾರಕ್ಕಾಗಿ ಇರುವ ಕೃತಿ. ಸೂರ್ಯಸ್ಫುಟ, ಚಂದ್ರಸ್ಫುಟಗಳಿಂದ ಸಂಸ್ಕಾರಗೊಳಿಸಿದ ತಿಥಿಯನ್ನು ತಿಳಿಯುವ ಸೂಕ್ಷ್ಮವಿಚಾರಗಳು ಈ ಗ್ರಂಥಗಳಲ್ಲಿವೆ. 5. ನಖಸ್ತುತಿ-ತ್ರಿವಿಕ್ರಮಪಂಡಿತರು ವಾಯುಸ್ತುತಿಯನ್ನು ರಚನೆ ಮಾಡಿದಾಗ ಅದರ ಆದ್ಯಂತಗಳಲ್ಲಿ ಹೇಳಿಕೊಳ್ಳಬೇಕೆಂದು ಅನುಗ್ರಹಿಸಿದ ಸ್ತೋತ್ರವೇ ಈ ನಖಸ್ತುತಿ, 6. ಕಂದುಕಸ್ತುತಿ - ಆಚಾರ್ಯರು ಬಾಲ್ಯದಲ್ಲಿ ಚಂಡಾಟವಾಡುವಾಗ ರಚನೆ ಮಾಡಿದ ಸ್ತುತಿ ಇದು - ಕಂದುಕಛಂದಸ್ಸಿನಲ್ಲೇ ಇರುವ ಈ ಸ್ತೋತ್ರ ಅತ್ಯಂತ ಮನೋಹರವಾಗಿದೆ. (ಸಾಕ್ಷಾತ್ ಹೃಷೀಕೇಶತೀರ್ಥರೇ ಬರೆದಿಟ್ಟ ಹಸ್ತಪ್ರತಿಯನ್ನು ಆಮೂಲಾಗ್ರ ಅಧ್ಯಯನ ಮಾಡಿ. ಸರ್ವಮೂಲಗ್ರಂಥಗಳ ಶುದ್ಧಪಾಠದ ಬಗ್ಗೆ ಜೀವನ ಸವೆಸಿದ ವಿದ್ವಾನ್ ಬನ್ನಂಜೆ ಗೋವಿಂದಾಚಾರ್ಯರ ಉಪಕಾರ ಈ ಸಂದರ್ಭದಲ್ಲಿ ಸ್ಮರಿಸಲೇ ಬೇಕು.) **ಸರ್ವಮೂಲ ಗ್ರಂಥಗಳ ಬಗ್ಗೆ ತಿಳಿಸಿದಿರಿ ಈಗ ಅವರ ಪರಂಪರೆಯ ಬಗ್ಗೆ ತಿಳಿಸುವಿರಾ?** ಶ್ರೀಮದಾಚಾರ್ಯರ ಪರಂಪರೆಯನ್ನು ನಾರಾಯಣ-ಪಂಡಿತಾಚಾರ್ಯರು ಮುಕ್ತಕಂಠದಿಂದ ಹೊಗಳಿದ್ದಾರೆ. ಅವಶ್ಯವಾಗಿ ಇದನ್ನು ತಿಳಿಯಲೇಬೇಕು. **ಕೇವಲ ತತ್ವಪ್ರಸಾರದಲ್ಲೇ ನಿಷ್ಠರಾದ ಶ್ರೀಮದಾಚಾರ್ಯರು ಇಷ್ಟೊಂದು ಮಠಗಳನ್ನು ಏಕೆ ಸ್ಥಾಪನೆ ಮಾಡಿದರು?** ಶ್ರೀಮದಾಚಾರ್ಯರ ಆಮೂಲಾಗ್ರಜೀವನ ಚರಿತ್ರೆಯನ್ನು ಗಮನಿಸಿದಾಗ ಪುಡಿಗಾಸು ಸಂಪಾದನೆ ಮಾಡಿದ ಉಲ್ಲೇಖ ಎಲ್ಲೂ ಇಲ್ಲ, ಅದರಂತೆ ಮಠ ಕಟ್ಟಿದ ಬಗ್ಗೆ, ಆಸ್ತಿ ಮಾಡಿದ ದಾಖಲೆಯೂ ಇಲ್ಲ. ನಿಜವಾದ ವಿರಕ್ತಸಂನ್ಯಾಸಿ ಹೇಗಿರಬೇಕೆಂದು ಪರಿಪೂರ್ಣವಾಗಿ ತೋರಿಸಿದ ಅತ್ಯಂತ ಪರಮಶ್ರೇಷ್ಠ ಪರಮಹಂಸರು ಶ್ರೀಮದಾಚಾರ್ಯರು. **ಹಾಗಾದರೆ ಇಷ್ಟೊಂದು ಮಠಗಳನ್ನು ಯಾರು ಹುಟ್ಟುಹಾಕಿದರು?** ಯಾವ ಮಠಗಳನ್ನೂ

ಶ್ರೀಮದಾಚಾರ್ಯರು ಹುಟ್ಟುಹಾಕಿದ್ದಲ್ಲ. ಕೃಷ್ಣನ ಪೂಜೆಗಾಗಿ ಎಂಟು ಮಂದಿ ಬಾಲಕರಿಗೆ ಸಂನ್ಯಾಸಾಶ್ರಮ ನೀಡಿ ಪೂಜಾಕೈಂಕರ್ಯದೀಕ್ಷೆಯನ್ನು ನೀಡಿದರು. ಹಾಗೆಯೇ ಅನೇಕ ಶಿಷ್ಯರು ಶ್ರೀಮದಾಚಾರ್ಯರ ಬಳಿ ತಾವಾಗಿಯೇ ಸಂನ್ಯಾಸಾಶ್ರಮವನ್ನು ಇಚ್ಛೆಪಟ್ಟು ಸ್ವೀಕರಿಸಿದರು. **ಶ್ರೀಮದಾಚಾರ್ಯರ ಬಳಿ ಸಂನ್ಯಾಸಾಶ್ರಮ ಸ್ವೀಕರಿಸಿದ ಶಿಷ್ಯಂದಿರು ಯಾರು ?** ಗೋದಾವರಿತೀರದಲ್ಲಿ ಪ್ರಸಿದ್ಧ ಅದ್ವೈತಪಂಡಿತರಾದ ಶೋಭನಭಟ್ಟರು ಶ್ರೀಮದಾಚಾರ್ಯರ ಶಿಷ್ಯತ್ವವನ್ನು ವಹಿಸಿ ಸಂನ್ಯಾಸಾಶ್ರಮವನ್ನು ಸ್ವೀಕರಿಸಿದರು. ಇವರೇ ಶ್ರೀಪದ್ಮನಾಭತೀರ್ಥರೆಂದು ಎಲ್ಲ ಮಠಗಳಿಗೆ ಮೂಲಪುರುಷರಾಗಿದ್ದಾರೆ. ಶ್ಯಾಮಶಾಸ್ತ್ರಿ ಎಂಬ ಮತ್ತೊಬ್ಬ ಅದ್ವೈತಪಂಡಿತರು ವಾದ ಮಾಡಿ ಸೋತು ಶಿಷ್ಯರಾದರು, ಇವರು ಸಂನ್ಯಾಸಾಶ್ರಮ ಸ್ವೀಕರಿಸಿ ಶ್ರೀನರಹರಿತೀರ್ಥರಾದರು. ವಿಷ್ಣುಶಾಸ್ತ್ರಿ ಎಂಬ ಮತ್ತೊಬ್ಬ ಅದ್ವೈತಪಂಡಿತರು ವಾದದಲ್ಲಿ ಸೋತು ಶ್ರೀಮದಾಚಾರ್ಯರ ಶಿಷ್ಯರಾಗಿ ಮಾಧವತೀರ್ಥರೆನಿಸಿಕೊಂಡರು. ಗೋವಿಂದ ಶಾಸ್ತ್ರಿಗಳೆಂಬ ಅದ್ವೈತಪಂಡಿತರು ಸೊತು ಶಿಷ್ಯರಾಗಿ ಅಕ್ಷೋಭ್ಯತೀರ್ಥರೆನಿಸಿಕೊಂಡರು. **ಹಾಗಾದರೆ ಇವರೆಲ್ಲರೂ ಕೇವಲ ಬಿಡಿಸಂನ್ಯಾಸಿಗಳೇ ಹೊರತು ಪೀಠಾಧಿಪತಿಗಳು ಅಲ್ಲ ಅಲ್ಲವೆ?** ಶ್ರೀಮದಾಚಾರ್ಯರು ಈ ಎಲ್ಲರಿಗೂ ಸಂನ್ಯಾಸಾಶ್ರಮ ನೀಡಿದ್ದು ಮಾತ್ರವಲ್ಲ. ವೇದಾಂತಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿ ತೀರ್ಥಪದವಿಯನ್ನು ನೀಡಿದರು. ಆದ್ದರಿಂದ ವೇದಾಂತ-ಸಾಮ್ರಾಜ್ಯಾಧೀಶ್ವರರಾದ ಇವರಿಗೆ ಮುಂದೆ ನಮ್ಮ ಸಂಪ್ರದಾಯದಲ್ಲಿ ಪೀಠಾಧಿಪತಿಗಳೆಂಬ ವಾಡಿಕೆ ಬಂದಿತು. ಶ್ರೀವಾದಿರಾಜತೀರ್ಥರ ಕಾಲದಲ್ಲಿ ಎಲ್ಲ ಮಠಗಳ ವಿಭಾಗ ಹಾಗೂ ಪೀಠಾಧಿಪತ್ಯದ ಪರಿಪೂರ್ಣಕಲ್ಪನೆ ಹೆಚ್ಚಾಯಿತು. **ಶಂಕರಾಚಾರ್ಯರ ಮಠ, ರಾಮಾನುಜಾಚಾರ್ಯರ ಮಠ ಎಂದು ಇದ್ದಂತೆ ಮಧ್ವಾಚಾರ್ಯರ ಮಠ ಎಂದಷ್ಟೇ ಇರಬೇಕಿತ್ತು ಇಷ್ಟೊಂದು ಮಠಗಳು ಅನಾವಶ್ಯಕ ಎಂದೇ ನಮ್ಮೆಲ್ಲರ ಅಭಿಪ್ರಾಯ.** ಇಂದಿನ ದಿವಸ ಇಷ್ಟೊಂದು ಮಠಗಳಿರುವುದು ಅನುಕೂಲವೇ ಆಗಿದೆ. ಒಂದೇ ಮಠ ಇದ್ದರೆ ಅನೇಕ ಸಮಸ್ಯೆಗಳೇ ಇರುತ್ತಿದ್ದವು. ಅನೇಕ ಮಠಗಳು ಇರುವುದರಿಂದ ಎಲ್ಲಾ ರೀತಿಯಿಂದ ಮಾಧ್ವಸಮಾಜವನ್ನು ಎಲ್ಲರೂ ಬಲಿಷ್ಠವನ್ನಾಗಿ ಮಾಡುತ್ತಿದ್ದಾರೆ. ಅಂದಿನ ಕಾಲದಲ್ಲಿ ಮಾಧ್ವಸಮಾಜದ ಸಂಖ್ಯೆ ಕಡಿಮೆಯೇ ಇತ್ತು. ಇಂದು ಹೆಚ್ಚಾಗುತ್ತಿರುವುದರಿಂದ 20 ಕ್ಕೂ ಹೆಚ್ಚು ಮಠಮಾನ್ಯಗಳು ಮಾಡುತ್ತಿರುವ ಕೆಲಸ ಶ್ಲಾಘನೀಯವಾಗಿದೆ. ಆದರೂ ಮಾಡಬೇಕಾದ ಕರ್ತವ್ಯ ಬಹಳಷ್ಟಿದೆ. **ಇಂದಿನ ಪೀಠಾಧಿಪತಿಗಳು ಮಹಾಸಮಾರಾಧನೆಯನ್ನು ವೈಭವೋಪೇತವಾಗಿ ಮಾಡುತ್ತಾರೆ. ಅಥವಾ**

**ರಾಯರ ಆರಾಧನೆಯನ್ನು ವೈಭವೋಪೇತವಾಗಿ ಮಾಡುತ್ತಾರೆ. ಮಧ್ವನವಮಿಯ ಉತ್ಸವವನ್ನು ಎಲ್ಲರೂ ಸೇರಿ ಅತ್ಯಂತ ವೈಭವದಲ್ಲಿ ಮಾಡುವುದೇ ಇಲ್ಲ. ಇದು ತಪ್ಪಲ್ಲವೆ?** ಒಂದು ವೇಳೆ ಮಧ್ವಾಚಾರ್ಯರನ್ನು ಮರೆತು ಅಥವಾ ಮಧ್ವಾಚಾರ್ಯರಿಗೆ ಸಮರ್ಪಣೆ ಮಾಡದೆ ಮಹಾಸಮಾರಾಧನೆ-ಯನ್ನಾಗಲಿ ರಾಯರ ಆರಾಧನೆಯನ್ನಾಗಲೀ ಮಾಡಿದ್ದರೆ ತಪ್ಪಾಗುತ್ತಿತ್ತು. ತಾವು ಮಾಡುವ ಎಲ್ಲಾ ಆರಾಧನೆಯು ಮಧ್ವಾಚಾರ್ಯರಿಗೆ ತಲುಪಬೇಕು ಎಂಬ ಅನುಸಂಧಾನದಿಂದ ಆರಾಧನೆಗಳು ನಡೆಯುತ್ತಿರುವುದರಿಂದ ಏನೂ ತಪ್ಪಿಲ್ಲ. ಮಧ್ವನವಮಿಯನ್ನು ಇನ್ನೂ ಹೆಚ್ಚು ವೈಭವದಲ್ಲಿ ಮಾಡಬೇಕು ಎಂಬುದಂತು ಸತ್ಯ. ಆದರೆ ಮಧ್ವನವಮಿಗಿಂತ ರಾಯರ ಆರಾಧನೆ ಎಲ್ಲೆಡೆಯು ವ್ಯಾಪಕವಾಗಿ ನಡೆಯುತ್ತಿರುವುದು ತಪ್ಪು ಎಂದು ಭಾವಿಸಬಾರದು ಯಾವ ದೇವತೆಗಳಿಗೂ ನೀಡದ ಮನ್ನಣೆಯನ್ನು ಭಕ್ತ ಪ್ರಹ್ಲಾದನಿಗೆ ನೀಡಿದಂತೆ ಭಗವಂತ ಒಂದೊಂದು ಕಾಲದಲ್ಲಿ ಒಬ್ಬೊಬ್ಬ ಭಕ್ತರಿಗೆ ಇಂಥ ಮನ್ನಣೆಗಳನ್ನು ನೀಡುತ್ತಾನೆ ಇದೆಲ್ಲವೂ ಹರಿಸಂಕಲ್ಪಕ್ಕೆ ಬಿಟ್ಟದ್ದು. **ಆಚಾರ್ಯರ ಅನುಜರಾದ ವಿಷ್ಣುತೀರ್ಥರ ಬಗ್ಗೆ ತಿಳಿಸುವಿರಾ?** 'ನಮ್ಮನ್ನು ನೋಡಿಕೊಳ್ಳಲು ಯಾರೂ ಇಲ್ಲ, ಇದ್ದ ಒಬ್ಬ ಮಗನು ಸಂನ್ಯಾಸಿ ಆಗುತ್ತಾನೆ' ಎಂದು ಮಧ್ಯಗೇಹ ದಂಪತಿಗಳು ಪರಿತಪಿಸುತ್ತಾರೆ. ಆಗ ವಾಸುದೇವನು 'ನಿಮ್ಮನ್ನು ನೋಡಿಕೊಳ್ಳಲು ಇನ್ನೊಬ್ಬ ಮಗ ಹುಟ್ಟುವತನಕ ಸಂನ್ಯಾಸಿ ಆಗುವುದಿಲ್ಲ' ಎಂದು ಭರವಸೆ ನೀಡಿದನು. ಆದರ ಫಲವಾಗಿ ಮಧ್ಯಗೇಹದಂಪತಿಗಳಿಗೆ ಒಂದೇ ವರ್ಷದಲ್ಲಿ ಮತ್ತೊಬ್ಬ ಮಗ ಹುಟ್ಟಿದನು. ಅವರು ಕೊನೆಯತನಕ ತಂದೆ ತಾಯಿಗಳ ಸೇವೆಯಲ್ಲಿಯೇ ನಿರತನಾದನು. ಅನಂತರ ಶ್ರೀಮದಾಚಾರ್ಯರ ಬಳಿ ಸಂನ್ಯಾಸವನ್ನು ಸ್ವೀಕರಿಸಿ ಮಹಾವಿರಕ್ತಶಿಖಾಮಣಿಗಳಾಗಿ ವಿಷ್ಣುತೀರ್ಥರೆಂದು ಪ್ರಸಿದ್ಧರಾದರು. ಎಲೆ ಹಣ್ಣುಗಳನ್ನು ತಿಂದು ಕಾಲಾನುಕ್ರಮದಲ್ಲಿ 5 ದಿನಕ್ಕೊಮ್ಮೆ ಪಂಚಗವ್ಯ, ಕೊನೆಗೆ ಅದನ್ನೂ ತೊರೆದು ಘೋರ ತಪಸ್ಸನ್ನು ಆಚರಿಸಿದ ಕಲಿಯುಗದಲ್ಲೇ ಅತ್ಯಂತ ದೊಡ್ಡ ತಪಸ್ವಿ. ಅಣ್ಣನಿಗೆ ತಕ್ಕ ತಮ್ಮನೆಂದರೆ ಇವರೊಬ್ಬರೇ. ಇವರೇ ಮುಂದೆ ಸೋದೆಮಠದ ಹಾಗೂ ಸುಬ್ರಹ್ಮಣ್ಯಮಠದ ಮೂಲಪುರುಷರಾದರು.**ದಕ್ಷಿಣಕನ್ನಡ ಜಿಲ್ಲೆಯಲ್ಲಿ ಅಷ್ಟಮಠಗಳಷ್ಟೇ ಅಲ್ಲದೆ ಇನ್ನು ಕೆಲವು ಮಠಗಳಿವೆ. ಅವು ಹೇಗೆ ಬೆಳೆದು ಬಂದವು?** ದಕ್ಷಿಣಕನ್ನಡಜಿಲ್ಲೆಯಲ್ಲಿ ಅಷ್ಟಮಠಗಳು ಬಿಟ್ಟು ಇನ್ನೂ 4 ಮಠಗಳಿವೆ, 1. ಸುಬ್ರಹ್ಮಣ್ಯಮಠ, 2. ಭಂಡಾರಕೇರಿಮಠ, 3. ಭೀಮನಕಟ್ಟೆಮಠ, 4. ಚಿತ್ರಾಪುರಮಠ. ಸುಬ್ರಹ್ಮಣ್ಯಮಠ ವಿಷ್ಣುತೀರ್ಥರಿಂದ ಬೆಳೆದು ಬಂದಿತು. ಆಚಾರ್ಯರ ಗುರುಗಳಾದ ಅಚ್ಯುತಪ್ರಜ್ಞರ ಪರಂಪರೆಯಲ್ಲಿ ಭಂಡಾರಕೇರಿಮಠ,

ಹಾಗೂ ಭೀಮನಕಟ್ಟೆಮಠ ಕವಲಾಗಿ ಬೆಳೆದು ಬಂದವು. ಆದರೆ ಚಿತ್ರಾಪುರಮಠ ಪೇಜಾವರಮಠದಿಂದ ಕವಲಾಗಿ ಬಂದಿತು ಎಂದು ಬಲ್ಲವರು ಹೇಳುತ್ತಾರೆ. **ಗೌಡಸಾರಸ್ವತರು ಮಾಧ್ವರೆನ್ನುತ್ತಾರೆ. ಇವರ ಮಠ ಯಾವುದು?** ಗೋಕರ್ಣಪರ್ತಗಾಳಿಜೀವೋತ್ತಮಮಠ, ಹಾಗೂ ಕಾಶಿಮಠ ಇವೆರಡು ಮಠಗಳನ್ನು ಗೌಡಸಾರಸ್ವತರು ಅನುಸರಿಸುತ್ತಾರೆ. ಮಧ್ವಾಚಾರ್ಯರನ್ನೇ ಗುರುಗಳೆಂದು ಸಂಪೂರ್ಣವಾಗಿ ಇವರು ಆಶ್ರಯಿಸಿದ್ದಾರೆ. ಫಲಿಮಾರು ಮಠದ ಹತ್ತನೇ ಯತಿಗಳಾದ ರಾಮಚಂದ್ರತೀರ್ಥರಿಂದ ಸಂನ್ಯಾಸವನ್ನು ಪಡೆದ ನಾರಾಯಣತೀರ್ಥರು ಈ ಮಠದ ಮೂಲ ಯತಿಗಳು. **ಇಸ್ಕಾನ್ ಮತದವರು ಮಾಧ್ವೀಯರೆನ್ನುತ್ತಾರೆ ಇದು ಹೇಗೆ?** ಮಧ್ವಗೌಡಿಯ ಎಂಬುದಾಗಿ ಬಂಗಳಾದಲ್ಲಿ ಒಂದು ಮಾಧ್ವಪೀಠವಿತ್ತು. ಈ ಮಠಕ್ಕೆ ಅಚ್ಯುತಚರಣ ಎಂಬ ಒಬ್ಬ ಯತಿಗಳು ಬಂದರು. ಇವರೇ ಭಕ್ತಿವೇದಾಂತಪ್ರಭುವೆಂದು ಕರೆಸಿಕೊಂಡು ಹರೇಕೃಷ್ಣಮಠದ ಇಸ್ಕಾನ್‌ಸಂಸ್ಥೆಯ ಸ್ಥಾಪಕರಾದರು, ಇವರು ಮಧ್ವಾಚಾರ್ಯರನ್ನೇ ಮೂಲಗುರುಗಳೆಂದು ಪರಿಗಣಿಸುತ್ತಾರೆನ್ನುತ್ತಾರೆ. **ಘಟ್ಟದ ಮೇಲಿನ ಮಠಗಳು ಎಷ್ಟು? ಹಾಗೂ ಹೇಗೆ ಬೆಳೆದುಬಂದವು?** ಶ್ರೀಪದ್ಮನಾಭತೀರ್ಥರು, ಶ್ರೀನರಹರಿತೀರ್ಥರು, ಶ್ರೀಮಾಧವತೀರ್ಥರು, ಶ್ರೀಅಕ್ಷೋಭ್ಯತೀರ್ಥರಿಂದ ಘಟ್ಟದ ಮೇಲಿನ ಮಠಗಳು ಬೆಳೆದು ಬಂದವು. ಒಟ್ಟು ಎಂಟು ಮಠಗಳಾದವು. 1. ಶ್ರೀಪಾದರಾಜಮಠ, 2. ರಾಯರಮಠ, 3. ಉತ್ತರಾದಿಮಠ, 4. ಸೋಸಲೆವ್ಯಾಸರಾಜಮಠ, 5. ಕುಂದಾಪುರವ್ಯಾಸರಾಜಮಠ, 6. ಮಜ್ಜಿಗೆಹಳ್ಳಿಮಠ, 7. ಕೂಡ್ಲಿಮಠ. 8. ಬಾಳಗಾರುಮಠ. ಶ್ರೀವ್ಯಾಸರಾಜರ ವಿದ್ಯಾಗುರುಗಳಾದ ಶ್ರೀಪಾದರಾಜರು ಈ ಮಠದ ಪರಂಪರೆಯಲ್ಲಿ ಬೆಳಗಿದ ಅತ್ಯಂತ ಶ್ರೇಷ್ಠ ಯತಿಗಳು. ವ್ಯಾಸರಾಜಮಠದಲ್ಲಿ ಒಂದು ಪರಂಪರೆ ಕುಂದಾಪುರದಲ್ಲಿ ಮಠವನ್ನು ಸ್ಥಾಪಿಸಿ ಕುಂದಾಪುರ-ವ್ಯಾಸರಾಜಮಠವಾಯಿತು. ಮಾಧವತೀರ್ಥರ ಪರಂಪರೆಯಿಂದ ಮಜ್ಜಿಗೆಹಳ್ಳಿ ಮಠವು ಸ್ಥಾಪನೆಯಾಯಿತು. ಅಕ್ಷೋಭ್ಯತೀರ್ಥರಿಂದ ಮತ್ತೊಂದಾಗಿ ಕವಲು ಒಡೆದ ಪರಂಪರೆ ಬಾಳಗಾರುಮಠ ಎಂದು ಕರೆಸಿಕೊಂಡಿತು. **ಮಧ್ವವಿಜಯದಲ್ಲಿ ಇದರ ಬಗ್ಗೆ ಏನಾದರು ಆಧಾರವಿದೆಯೆ?** 'ಮಧ್ವಪ್ರಶಿಷ್ಯಾ ಬಹವೋ ಶಿಷ್ಯಾ ಏಷಾಂ ಮುಹುಸ್ತದಾ ಅಲಂಚಕ್ರುರಲಂ ಪೃಥ್ವೀಂ ಸರ್ವೇ ಸದ್ಗುಣಭೂಷಣಾಃ ' ಅನೇಕ ರೀತಿಯಲ್ಲಿ ಮಧ್ವರ ಶಿಷ್ಯರು ಭೂಮಿಯನ್ನು ಅಲಂಕಾರ ಮಾಡಿದರು, ಅವರೆಲ್ಲರೂ ಸದ್ಗುಣಭೂಷಣರಾದರು, ಪ್ರತಿಯೊಬ್ಬರೂ ದುರ್ವಾದಿಗಳ ದುರ್ವಾದವನ್ನು ಖಂಡನೆ ಮಾಡುವುದರಲ್ಲಿ ಸಮರ್ಥರಾಗಿದ್ದಾರೆ ಎಂಬುದಾಗಿ ಮಧ್ವವಿಜಯದಲ್ಲಿ

ವರ್ಣಿಸಿದ್ದಾರೆ. ಅಷ್ಟೇ ಅಲ್ಲದೆ ಅನೇಕ ಗೃಹಸ್ಥ ಶಿಷ್ಯರೂ ಕೂಡ ಮಧ್ವಾಚಾರ್ಯರ ಶಿಷ್ಯರಾಗಿ ತತ್ವಜ್ಞಾನವನ್ನು ಪ್ರಚಾರ ಮಾಡುತ್ತಿದ್ದಾರೆ. **ಸರ್ವಮೂಲಗ್ರಂಥಗಳನ್ನು ಏಕೆ ಅಧ್ಯಯನ ಮಾಡಬೇಕು?** ಭಗವಂತನನ್ನು ತಿಳಿದರೆ ಮಾತ್ರ ಸಂಸಾರಬಂಧನದಿಂದ ಮುಕ್ತಿ ಪಡೆಯಲು ಸಾಧ್ಯ. ಭೌತಿಕವಾದ ಜಗತ್ತಿನ ಬಗ್ಗೆ ಎಷ್ಟೇ ಪರಿಶೋಧನೆ ನಡೆದರೂ ಅದು ಅಪರಿಪೂರ್ಣ. ಜೀವನವನ್ನು ಭಗವಂತನೆಡೆಗೆ ಕರೆದೊಯ್ಯುವ ತತ್ವವೇ ಪ್ರಾಣತತ್ವ. ಇದರ ಅರಿವೇ ಜೀವೋತ್ತಮತ್ವ. ಈ ಪ್ರಾಣತತ್ವವೇ ಮಧ್ವ ಎಂಬ ರೂಪದಿಂದ ಅವತರಿಸಿತು. ಮಧ್ವರ ಒಂದೊಂದು ವಾಣಿಯು ಅತ್ಯದ್ಭುತ. ಆತ್ಮಸಾಕ್ಷಿಗೆ ವಿರುದ್ಧವಾಗಿ ಯಾರೇ ಹೇಳಿದರೂ ಯಾವುದೇ ಶಾಸ್ತ್ರ ಹೇಳಿದರೂ ಒಪ್ಪಬಾರದು, ವೇದದಲ್ಲಿ ಹೇಳಿದ ತತ್ವವನ್ನೇ ಆತ್ಮಸಾಕ್ಷಿಗೆ ಅನುಗುಣವಾಗಿ ಅರಿಯಬೇಕು, ಹೀಗೆ ಭಗವಂತನನ್ನು ಸಾಕ್ಷಿಯಿಂದ ದೃಢೀಕರಿಸಿಕೊಂಡು ಅವನಲ್ಲಿ ನಿರಂತರ ಶರಣೆನ್ನಬೇಕು. ಶರಣಾಗತಿಯಿಂದ ಜ್ಞಾನವನ್ನು ಪಡೆದು ಪುನಃ ಶರಣಾಗತರಾಗಬೇಕು. ಇದಕ್ಕಾಗಿ ಸರ್ವಮೂಲಗ್ರಂಥಗಳ ಅಧ್ಯಯನ ಮಾಡಬೇಕು. **ಜೀವನದಲ್ಲಿ ನಿಜವಾದ ಮಾರ್ಗ ಯಾವುದು?** ಸರ್ವಮೂಲಗ್ರಂಥಗಳು ಸಮಸ್ತಜನತೆಗೆ ಯಥಾರ್ಥಜ್ಞಾನವನ್ನು ಉಪದೇಶಿಸುತ್ತಿವೆ. ಜಗತ್ತಿನಲ್ಲಿ ತಾಂಡವವಾಡುತ್ತಿರುವ ಅಜ್ಞಾನ ಭ್ರಾಂತಿಗಳನ್ನು ಸಂಪೂರ್ಣವಾಗಿ ನಿರ್ಮೂಲಗೊಳಿಸಲು ಸಮರ್ಥವಾಗಿವೆ. ಆದರೂ ಇಷ್ಟೊಂದು ಮತಗಳು ಏಕೆ ಬೆಳೆದು ಬಂದಿವೆ? ಎಂದರೆ ಇದಕ್ಕೆ ಕಾರಣವನ್ನು ಶ್ರೀಮದಾಚಾರ್ಯರೇ ತಮ್ಮ ಗ್ರಂಥದಲ್ಲಿ ನಿರೂಪಣೆ ಮಾಡಿದ್ದಾರೆ. 'ದೌರ್ಲಭ್ಯಾತ್ ಶುದ್ಧಬುದ್ಧೀನಾಂ ಬಾಹುಲ್ಯಾತ್ ಅಲ್ಪವೇದಿನಾಂ । ದುರಾಗ್ರಹಗೃಹೀತತ್ವಾತ್ ವರ್ತಂತೇ ಸಮಯಾಃ ಸದಾ' 'ಮಾತ್ಸರ್ಯವಿಲ್ಲದೆ ವಿಚಾರ ಮಾಡುವ ಸ್ವಚ್ಛಬುದ್ಧಿಯ ಜನರು ಎಲ್ಲಾ ಕಾಲದಲ್ಲೂ ವಿರಳ. ಅಲ್ಪಸ್ವಲ್ಪ ತಿಳಿದು ಹಾರಾಡುವವರೇ ಹೆಚ್ಚು. ತಮ್ಮ ಮತವೇ ಶ್ರೇಷ್ಠವೆಂದು ಸಾರುವ ದುರಾಗ್ರಹದಿಂದ ತುಂಬಿದ್ದಾರೆ. ಎಲ್ಲ ಕಾಲದಲ್ಲೂ ಎಲ್ಲ ಮತಗಳು ವ್ಯಾಪಕವಾಗಿಯೇ ಇರುತ್ತವೆ. ಯಥಾರ್ಥವಾದ ಮಾರ್ಗವನ್ನು ಅರಿತು ಅದರಲ್ಲಿ ಸಾಗುವುದೇ ನಿಜವಾದ ವಿವೇಕ.

ಇಲ್ಲಿಗೆ ಶ್ರೀಮದಾಚಾರ್ಯರ ಮಹಿಮೆ ಹಾಗೂ ಗ್ರಂಥಗಳ ಪರಿಚಯವು ಸಮಾಪ್ತವಾಯಿತು.

## ಮಾಘ ॥ ಶುದ್ಧ ॥ ದಶಮೀ

ಶ್ರೀ ಯೋಗೀಂದ್ರತೀರ್ಥರು (ರಾಯರ ಮಠ) ಶ್ರೀರಂಗ - ಸಾಂದ್ರಬೋಧಾಯ ಶಾಸ್ತ್ರೇಷು ನಿಸ್ತಂದ್ರಮನಸೇಹರೌ । ರಾಘವೇಂದ್ರ

ಕುಮಾರಾಯ ನಮೋ ಯೋಗೀಂದ್ರ ಯೋಗಿನೇ॥ ಗುರುರಾಜರ ಶಿಷ್ಯರಲ್ಲಿ ಅವರ ಪುರ್ವಾಶ್ರಮದ ಅಣ್ಣನ ಮೊಮ್ಮಕ್ಕಳು ಮೂರು ಜನ ಮುಖ್ಯರು. ಅವರಲ್ಲಿ ವೆಂಕಣ್ಣಾಚಾರ್ಯರು ಹೆಚ್ಚು ಅರ್ಹರೆಂದು ತಿಳಿದು ಗುರುರಾಜರು ಅವರಿಗೆ ಮೊದಲು ಆಶ್ರಮ ಕೊಟ್ಟು 'ಯೋಗೀಂದ್ರ'ರೆಂದು ನಾಮಕರಣ ಮಾಡಿದರು. ಉಳಿದ ಇಬ್ಬರು ಶಿಷ್ಯರಾದ ವಾಸುದೇವಾಚಾರ್ಯರೂ, ಮುದ್ದು ಕೃಷ್ಣಾಚಾರ್ಯರೂ ಆಮೇಲೆ ಪಟ್ಟಕ್ಕೆ ಬಂದರು. ಯೋಗೀಂದ್ರರು ಮಹಾಪಂಡಿತೋತ್ತಮರು, ಜ್ಞಾನಿಗಳು, ಇವರಿಗೆ ವೆಂಕಣ್ಣಪಂತ ಮಂತ್ರಾಲಯಗ್ರಾಮ ಜಹಗಿರಿ ಹಾಕಿಕೊಟ್ಟನೆಂದು ಹಿಂದೆಯೇ ಉದಹರಿಸಿದೆ. ಗುರುಗಳ ಬೃಂದಾವನ ಪ್ರವೇಶವಾದ ಮೇಲೆ, ವೃಂದಾವನದ ಪೂಜೆಯನ್ನೆಲ್ಲ ಸರಿಪಡಿಸಿ ತಾವು ಅಲ್ಲಿ ಕೆಲವು ದಿನಗಳಿದ್ದು ಸಂಚಾರ ಹೊರಟರು. ಭಾಗ್ಯನಗರದಲ್ಲಿ ಕಾಕಾ ಶಾಸ್ತ್ರಿ ಮೊದಲಾದ ವಾದಿಗಳನ್ನು ಗೆದ್ದರು. ಗುರುರಾಜರು ದಕ್ಷಿಣ ದೇಶವನ್ನು ಬಿಟ್ಟು ಬಂದದ್ದರಿಂದ ಶ್ರೀಗಳವರು ಆ ಕಡೆ ಹೊರಟರು. ಕುಂಭಕೋನೆಗೆ ಹೋಗಿ ಅಲ್ಲಿ ಶ್ರೀ ವಿಜಯೀಂದ್ರಸ್ವಾಮಿಗಳ ದರ್ಶನ ಮಾಡಿಕೊಂಡು ಶ್ರೀರಂಗಕ್ಕೆ ಬಂದರು. ಶ್ರೀರಂಗಕ್ಷೇತ್ರ ಆಗ ಮಧುರೆಯ ನಾಯಕರ ಆಳ್ವಿಕೆಗೆ ಸೇರಿತ್ತು. ಆಗ ಮಧುರೆಯಲ್ಲಿ ತಿರುಮಲನಾಯಕನ ಮೊಮ್ಮಗ, ವಿಶ್ವನಾಥನಾಯಕನ ಮಗ ಮುದ್ದಲಗಾದ್ರಿನಾಯಕ ಆಳುತ್ತಿದ್ದ. ಅವನು ತನ್ನ ಪೂರ್ವಿಕರೆಲ್ಲರೂ ಮಹಾಸಂಸ್ಥಾನಕ್ಕೆ ಸಲ್ಲಿಸುತ್ತಿದ್ದ ಗೌರವವನ್ನು ನೆನೆದು ತಾನು ಸಿದ್ಧಾರ್ಥಿ ಸಂವತ್ಸರದ ಅಕ್ಷಯ ತೃತೀಯದ ಮಹಾಪರ್ವದಿನದಲ್ಲಿ (೧೬೭೯) ಶ್ರೀಗಳವರಿಗೆ ಕೃಷ್ಣಾರ್ಪಣ ಪುರಸ್ಸರವಾಗಿ ತಾರ್ಮಪರ್ಣೀ ತೀರದಲ್ಲಿನ 'ಆರಂಭಣ್ಣ' ಎಂಬ ಗ್ರಾಮವನ್ನೂ ಶ್ರೀರಂಗದ ಚಿತ್ರವೀಥಿಯ ಪಶ್ಚಿಮಕ್ಕಿರುವ ಕಲ್ಲಮಠವನ್ನೂ ದಾನವಾಗಿ ಕೊಟ್ಟು, ಶ್ರೀರಂಗದಂತಹ ಮಹಾಕ್ಷೇತ್ರದಲ್ಲಿ ವಾಸಕ್ಕೆ ಯೋಗ್ಯವಾದ ಸ್ಥಳ ಸಿಕ್ಕಿದ್ದರಿಂದ ಶ್ರೀಗಳವರು ಅಲ್ಲಿಯೇ ನಿಂತುಬಿಟ್ಟು, ವಿಭವ ಸಂವತ್ಸರದ ಮಾಘ ಶುದ್ಧ ದಶಮಿಯ ದಿನ ವೃಂದಾವನಸ್ಥರಾದರು.

## ಮಾಘ ॥ ಶುದ್ಧ ॥ ಏಕಾದಶೀ

ಯುಧಿಷ್ಠಿರ ಉವಾಚ - ಸಾಧು ಕೃಷ್ಣ ತ್ವಯಾ ಪ್ರೋಕ್ತಮಾದಿದೇವೋ ಭವಾನ್ ಪ್ರಭೋ। ಸ್ವೇದಜಾ ಅಂಡಜಾಶ್ಚೈವ ಉದ್ಭಿಜಾಶ್ಚ ಜರಾಯುಜಾಃ॥೧॥ ತೇಷಾಂ ಕರ್ತಾ ವಿಕರ್ತಾ ತ್ವಂ ಪಾಲಕಃ ಕ್ಷಯಕಾರಕಃ। ಮಾಘಸ್ಯ ಕೃಷ್ಣಪಕ್ಷೇ ತು ಷಟ್ತಿಲಾ ಕಥಿತಾ ತ್ವಯಾ ॥೨॥ ಶುಕ್ಲೇ ಚ ಕಾ ಭವೇದ್ದೇವ ಕಥಯಸ್ಯ ಪ್ರಸಾದತಃ । ಕಿಂ ನಾಮಕೋ ವಿಧಿಸ್ತಸ್ಯಾಃ ಕೋ ದೇವಸ್ತತ್ರ ಪೂಜ್ಯತೇ ॥೩॥ ಯುಧಿಷ್ಠಿರನು ಹೇಳಿದನು- ಎಲೈ ಕೃಷ್ಣನೇ! ನೀನು ಹೇಳಿದುದು ಚೆನ್ನಾಗಿದೆ. ನೀನು ಆದಿದೇವನು.

ಪ್ರಭುವು. ಬೆವರಿನಿಂದ ಹುಟ್ಟುವ ಮೊಟ್ಟೆಯಿಂದ ಹುಟ್ಟುವ, ಕಾಳಿನಿಂದ ಹುಟ್ಟುವ ಜರಾಯುವೆಂಬ ನರಗಳನ್ನು ಸುತ್ತಿಕೊಂಡು ಹುಟ್ಟುವ ಪ್ರಾಣಿಗಳನ್ನು ನೀನೇ ಸೃಷ್ಟಿಸತಕ್ಕವನು. ನಾಶಮಾಡುವವನೂ ನೀನೇ. ಕಾಪಾಡುವವನೂ ನೀನೇ. ಅವೆಲ್ಲವನ್ನೂ ವ್ಯತ್ಯಾಸ ಮಾಡುವವನೂ ನೀನೇ. ಮಾಘ ಕೃಷ್ಣಪಕ್ಷದ ಷಟ್ತಿಲೈಕಾದಶಿಯನ್ನು ನೀನು ವಿಸ್ತಾರವಾಗಿ ಹೇಳಿದೆ. ಆ ಮಾಘ ಶುದ್ಧ ಏಕಾದಶಿಯದಿನ ಯಾವ ಹೆಸರಿನ ಏಕಾದಶಿಯು ಬರುವುದು? ಅದರ ವಿಧಿಯೇನು? ಆಗ ಪೂಜೆ ಮಾಡುವ ದೇವರಾವುದು? ಎಲ್ಲವನ್ನೂ ವಿವರಿಸು. ಕೃಷ್ಣಉವಾಚ - ಕಥಯಿಷ್ಯಾಮಿ ರಾಜೇಂದ್ರ ಶುಕ್ಲೇ ಮಾಘಸ್ಯ ಯಾ ಭವೇತ್ । ಜಯಾ ನಾಮೇತಿ ವಿಖ್ಯಾತಾ ಸರ್ವಪಾಪಹರಾ ಪರಾ ॥೪॥ ಕೃಷ್ಣನು ಹೇಳಿದನು - ಎಲೈ ರಾಜನೇ! ಹೇಳುವೆನು ಕೇಳು. ಮಾಘ ಶುಕ್ಲ ಏಕಾದಶಿಗೆ ''ಜಯಾ'' ಎಂದು ಹೆಸರು. ಅದು ಸಮಸ್ತವಾದ ಪಾಪಗಳನ್ನೂ ನಾಶಮಾಡುತ್ತದೆ. ಪವಿತ್ರಾ ಪಾಪಹಂತ್ರೀ ಚ ಕಾಮದಾ ಮೋಕ್ಷದಾ ನೃಣಾಂ । ಬ್ರಹ್ಮಹತ್ಯಾಪಹಂತ್ರೀ ಚ ಪಿಶಾಚತ್ವವಿನಾಶಿನೀ ॥೫॥ ಅದು ಪವಿತ್ರವಾದುದು. ಪಾಪವನ್ನು ಹಾಳುಮಾಡುತ್ತದೆ. ಇಷ್ಟಾರ್ಥವನ್ನು ಕೊಡುತ್ತದೆ. ಮೋಕ್ಷವನ್ನು ಕೊಡುತ್ತದೆ. ಬ್ರಹ್ಮಹತ್ಯೆಯನ್ನು ನಾಶ ಮಾಡುತ್ತದೆ. ಪಿಶಾಚತ್ವವನ್ನು ಅಪಹರಿಸುತ್ತದೆ. ನೈವ ತಸ್ಯಾಂ ವ್ರತೇ ಚೀರ್ಣೇ ಪ್ರೇತತ್ವಮುಪಜಾಯತೇ । ನಾತಃ ಪರತರಾ ಕಾಚಿತ್ ಪಾಪಘ್ನೀ ಮೋಕ್ಷದಾಯಿನೀ ॥೬॥ ಈ ಏಕಾದಶಿಯ ವ್ರತವನ್ನು ಮಾಡಿದರೆ ಮನುಷ್ಯರಿಗೆ ಪ್ರೇತಭಾವವು ಉಂಟಾಗುವುದಿಲ್ಲ. ಪಾಪನಾಶಕವಾದುದೂ, ಮೋಕ್ಷವನ್ನು ಕೊಡತಕ್ಕುದೂ ಇದಕ್ಕಿಂತಲೂ ಮತ್ತೊಂದಿಲ್ಲ. ಏತಸ್ಮಾತ್ಕಾರಣಾದ್ರಾಜನ್ ಕರ್ತವ್ಯಾ ಸಾ ಪ್ರಯತ್ನತಃ । ಶ್ರೂಯತಾಂ ರಾಜಶಾರ್ದೂಲಂ ಕಥಾ ಪೌರಾಣಿಕೀ ಶುಭಾ ॥೭॥ ಈ ಕಾರಣದಿಂದಲೇ ಆ ಏಕಾದಶಿಯನ್ನು ಮಾಡಬೇಕು. ಈ ವಿಷಯದಲ್ಲಿ ಒಂದು ಹಿಂದಿನ ಕಥೆಯನ್ನು ಹೇಳುತ್ತೇನೆ. ಕೇಳು. ಪಂಕಜೇ ಚ ಪುರಾಣೇಽಸ್ಯಾ ಮಹಿಮಾ ಕಥಿತೋ ಮಯಾ । ಏಕದಾ ನಾಕಲೋಕೇ ವೈ ಇಂದ್ರೋ ರಾಜ್ಯಂ ಚಕಾರ ಹ ॥೮॥ ಈ ಪದ್ಮಪುರಾಣದಲ್ಲಿ ಈ ಏಕಾದಶಿಯ ಮಹಿಮೆಯನ್ನು ಹೇಳಿರುವನು. ಒಂದುಸಾರಿ ಇಂದ್ರನು ಸ್ವರ್ಗಲೋಕದಲ್ಲಿ ರಾಜ್ಯವಾಳುತ್ತಿದ್ದನು. ದೇವಾಸ್ತತ್ರ ಸುಖೇನೈವ ನಿವಸಂತಿ ಮನೋರಮೇ । ಪೀಯೂಷಪಾನನಿರತಾ ಅಪ್ಸರೋಗಣಸೇವಿತಾಃ ॥೯॥ ಆಗ ಅಲ್ಲಿ ದೇವತೆಗಳು ಸುಖದಿಂದ ವಾಸಮಾಡಿಕೊಂಡಿದ್ದರು. ಅಮೃತವನ್ನು ಪಾನ ಮಾಡುತ್ತಾ ಅಪ್ಸರಸ್ಸುಗಳಿಂದ ಸೇವಿಸಲ್ಪಡುತ್ತಾ ಇದ್ದರು. ನಂದನೇ ಚ ವನೇ ತತ್ರ ಪಾರಿಜಾತೋಪಸೇವಿತೇ । ರಮಯಂತಿ ರಮ್ಯಂತ್ಯತ್ರ ಅಪ್ಸರೋಭಿರ್ದಿವೌಕಸಃ ॥೧೦॥ ಪಾರಿಜಾತದ

ಮರವಿರುವ ನಂದನವನದಲ್ಲಿ ದೇವತೆಗಳು ಅಪ್ಸರರೊಂದಿಗೆ ಸುಖಪಡುತ್ತಲೂ, ರಮಿಸುತ್ತಲೂ ಇರುವರು. ಏಕದಾ ರಮಮಾಣೋಸೌ ದೇವೇಂದ್ರಸ್ಸ್ವೇಚ್ಛಯಾ ನೃಪ। ನರ್ತಯಾಮಾಸ ಹರ್ಷಾತ್ಸ ಪಂಚಾಶತ್ಕೋಟಿನಾಯಕಃ ॥೧೧॥ ಒಂದುಸಾರಿ ಮನಸ್ಸು ಬಂದಂತೆ ರಮಿಸುತ್ತಾ ಸಂತೋಷಪಟ್ಟುಕೊಂಡು ಐವತ್ತು ಕೋಟಿ ಪ್ರಾಣಿಗಳಿಗೆ ನಾಯಕನಾದ ಆ ಇಂದ್ರನು ಸಂತೋಷದಿಂದಿದ್ದನು. ಗಂಧರ್ವಾಸ್ತತ್ರ ಗಾಯಂತಿ ಗಂಧರ್ವಃ ಪುಷ್ಪದಂತಕಃ । ಚಿತ್ರಸೇನಸ್ತು ತತ್ರೈವ ಚಿತ್ರಸೇನಸುತಸ್ತಥಾ ॥೧೨॥ ಪುಷ್ಪದಂತ, ಚಿತ್ರಸೇನ, ಚಿತ್ರಸೇನನ ಮಗ ಮುಂತಾದ ಗಂಧರ್ವರು ಅಲ್ಲಿ ಗಾನ ಮಾಡುತ್ತಿದ್ದರು. ಮಾಲಿನೀತಿ ಚ ನಾಮ್ನಾ ತು ಚಿತ್ರಸೇನಸ್ಯ ಯೋಷಿತಾ । ಮಾಲಿನ್ಯಾಸ್ತು ಸಮುತ್ಪನ್ನಾ ಪುಷ್ಪವಂತೀತಿ ನಾಮತಃ ॥೧೩॥ ಚಿತ್ರಸೇನನ ಹೆಂಡತಿ ಮಾಲಿನೀ ಎಂಬುವಳೂ, ಆ ಮಾಲಿನಿಯ ಮಗಳಾದ ಪುಷ್ಪವಂತಿಯೂ ಅಲ್ಲಿದ್ದರು. ಪುಷ್ಪದಂತಸ್ಯ ಪುತ್ರೋಽಸೌ ಮಾಲ್ಯವಾನ್ ನಾಮ ನಾಮತಃ । ಪುಷ್ಪವಂತ್ಯಾಶ್ಚ ರೂಪೇಣ ಮಾಲ್ಯವಾನತಿಮೋಹಿತಃ ॥೧೪॥ ಪುಷ್ಪದಂತ್ನ ಮಗನಾದ ಮಾಲ್ಯವಂತನೆಂಬುವನು ಮಾಲಿನಿಯ ಮಗಳಾದ ಪುಷ್ಪವಂತಿಯನ್ನು ನೋಡಿದನು. ಅವಳ ರೂಪಕ್ಕೆ ಆ ಮಾಲ್ಯವಂತನು ಮೋಹಗೊಂಡನು. ತಯಾ ದೇವ್ಯಾ ಕಟಾಕ್ಷೈಶ್ಚ ಮಾಲ್ಯವಾಂಶ್ಚ ವಶೇ ಕೃತಃ । ಲಾವಣ್ಯರೂಪಸಂಯುಕ್ತಂ ತಸ್ಯಾ ರೂಪಂ ನೃಪ ಶ್ರುಣು ॥೧೫॥ ಆ ಪುಷ್ಪವಂತಿಯು ಕಿರುಗಣ್ಣನೋಟವನ್ನು ಬೀರಿ ಮಾಲ್ಯವಂತನನ್ನು ವಶಮಾಡಿಕೊಂಡಳು. ಆಕೆಯ ರೂಪಲಾವಣ್ಯವನ್ನು ಹೇಳುತ್ತೇನೆ. ಕೇಳು. ಬಾಹೂ ತಸ್ಯಾಸ್ತು ಕಾಮೇನ ಲಂಬಮೌನ ಕೃತಾವಿಹ। ಕರ್ಣಾಯತೇ ತು ನಯನೇ ರಕ್ತಾಂತೇ ಘೂರ್ಣಿತೇ ತಥಾ ॥೧೬॥ ಆಕೆಯ ತೋಳುಗಳನ್ನು ನೇತಾಡುವಂತೆ ಕಾಮನೇ ಮಾಡಿದನು. ಕಣ್ಣುಗಳು ಕಿವಿಯವರೆಗೂ ವಿಶಾಲವಾಗಿದ್ದು ಕೆಂಪಗೆ ಮದಿಸಿದಂತಿದ್ದುವು. ಕರ್ಣೌ ತು ಶೋಭನೌ ತಸ್ಯಾಃ ಕುಂಡಲಾಭ್ಯಾಂ ನೃಪೋತ್ತಮ। ಕಂಬುಗ್ರಿವಾಯತಾ ಸೈವ ದಿವ್ಯಾಭರಣಭೂಷಿತಾ ॥೧೭॥ ಕಿವಿಗಳು ಮನೋಹರವಾಗಿದ್ದುವು. ಅಲ್ಲದೆ ಕುಂಡಲಗಳಿಂದ ಅಲಂಕೃತವಾಗಿದ್ದವು. ಕತ್ತು ಶಂಖದಂತಿದ್ದಿತು. ಒಳ್ಳೆಯ ಆಭರಣಗಳನ್ನು ಹಾಕಿಕೊಂಡಿದ್ದಳು. ಪೀನೋನ್ನತೌ ಕುಚೌ ತಸ್ಯಾಸ್ತೌ ಹೇಮಕಲಶಾವಿವ । ಮಧ್ಯಂ ಕ್ಷಾಮಂ ಚ ಚಾರ್ವಂಗ್ಯಾ ಮುಷ್ಟಿಗ್ರಾಹಮನುತ್ತಮಂ ॥೧೮॥ ಸ್ತನಗಳು ದಪ್ಪವಾಗಿ ಎತ್ತರವಾಗಿದ್ದುವು. ಅವು ಚಿನ್ನದ ಕಲಶದಂತಿದ್ದುವು. ನಡುವು ಸಣ್ಣಗಿದ್ದಿತು. ಕೈಯಲ್ಲಿ ಸುತ್ತಿ ಹಿಡಿಯುವಂತಿದ್ದಿತು. ನಿತಂಬೌ ವಿಸ್ತೃತೌ ಚಾಸ್ಯಾ ವಿಸ್ತೀರ್ಣಾ ಜಘನಸ್ಥಳೀ । ಚರಣೌ ಶೋಭಮಾನೌ ಚ ರಕ್ತೋತ್ಪಲಸಮದ್ಯುತೀ ॥೧೯॥ ಕುಂಡೆಗಳು ದಪ್ಪವಾಗಿದ್ದವು. ಕುಂಡೆಗಳ

ಮುಂಭಾಗವು ಅಗಲವಾಗಿದ್ದಿತು. ಪಾದಗಳು ಪ್ರಕಾಶಿಸುತ್ತ ಕೆಂದಾವರೆಯಂತಿದ್ದುವು. ಈದೃಶ್ಯಾ ಪುಷ್ಪವಂತ್ಯಾಸೌ ಮಾಲ್ಯವಾನತಿಮೋಹಿತಃ । ಶಕ್ರಸ್ಯ ಪರಿತೋಷಾಯ ನೃತ್ಯಾರ್ಥಂ ತೌ ಸಮಾಗತೌ ॥೨೦॥ ಈ ರೀತಿಯಾಗಿದ್ದ ಪುಷ್ಪವತಿಯನ್ನು ನೋಡಿ ಮಾಲ್ಯವಂತನು ಬಹು ಮೋಹಗೊಂಡನು. ಇವರಿಬ್ಬರೂ ಇಂದ್ರನನ್ನು ಸಂತೋಷಪಡಿಸಲು ಕುಣಿಯುವುದಕ್ಕೆ ಬಂದರು. ಗಾಯಮಾನೌ ತು ತೌ ತತ್ರ ಹ್ಯಪ್ಸರೋಗಣಸೇವಿತೌ । ಮದನಾಭಿಪರೀತಾಂತೌ ಪುಷ್ಪವಂತೀ ಚ ಮಾಲ್ಯವಾನ್ ॥೨೧॥ ಅವರಿಬ್ಬರೂ ಅಲ್ಲಿ ಅಪ್ಸರರೊಡನೆ ಗಾನ ಮಾಡುತ್ತಲಿದ್ದು ಪರಸ್ಪರ ಮನ್ಮಥನ ಬಾಧೆಯಿಂದ ಕೂಡಿಕೊಂಡರು. ಪರಸ್ಪರಾನುರಾಗೇಣ ವ್ಯಾಮೋಹವಶಮಾಗತೌ। ನ ಶುದ್ಧಗಾನಂ ಗಾಯೇತಾಂ ಚಿತ್ತಭ್ರಮಸಮನ್ವಿತೌ ॥೨೨॥ ಒಬ್ಬರಿಗೊಬ್ಬರು ಅನುರಾಗದಿಂದ ಮೋಹವಶರಾದರು. ಆದುದರಿಂದ ಮನಸ್ಸು ಸರಿಯಾಗಿರದೆ ಸರಿಯಾದ ಗಾನನವನ್ನು ಹಾಡದೇ ಅಪಸ್ವರವಾಗಿ ಹಾಡಿದರು. ಬದ್ಧದೃಷ್ಟೀ ತಥಾನ್ಯೋನ್ಯಂ ಕಾಮಬಾಣವಶಂಗತೌ । ಜ್ಞಾತ್ವಾ ಲೇಖರ್ಷಭಸ್ತತ್ರ ಸಂಗತಂ ಮಾನಸಂ ತಯೋಃ ॥೨೩॥ ಆಗ ಆ ದೇವಾಧಿಪತಿಯಾದ ಇಂದ್ರನು ಅವರಿಬ್ಬರೂ ಒಬ್ಬರನ್ನೊಬ್ಬರು ನೋಡುತ್ತಿದ್ದುದನ್ನು ನೋಡಿ ಕಾಮಬಾಣಕ್ಕೆ ವಶರಾಗಿ ಪರಸ್ಪರ ಸೇರಿಕೊಂಡಿರುವ ಮನಸ್ಸುಳ್ಳವರಾಗಿರುವುದನ್ನು ತಿಳಿದನು. ತಾಳಕ್ರಿಯಾಮಾನಲೋಪಾತ್ತಥಾ ಗೀತವಿವರ್ಜನಾತ್ । ಚಿಂತಯಿತ್ವಾತು ಮಘವಾ ಹ್ಯವಜ್ಞಾನಂ ತಥಾತ್ಮನಃ । ಕುಪಿತಶ್ಚ ತಯೋರರ್ಥೇ ಶಾಪಂ ದಾಸ್ಯನ್ನಿದಂ ಜಗೌ ॥೨೪॥ ತಾಳ ಹಾಕುವುದರಲ್ಲಿ ಕಾಲ ಹೆಚ್ಚು ಕಡಿಮೆಯಾದುದನ್ನೂ, ಗಾನ ಹಾಡುವುದರಲ್ಲಿ ಬಿಟ್ಟುಬಿಟ್ಟುದನ್ನೂ ನೋಡಿ, ಇಂದ್ರನು ಇದು ತನಗೆ ಅವಮಾನವೆಂದು ತಿಳಿದು, ಅವರ ಮೇಲೆ ಕೋಪಗೊಂಡು ಶಾಪವನ್ನು ಕೊಡುತ್ತಾ ಇಂತೆಂದನು. ಇಂದ್ರ ಉವಾಚ – ಧಿಗ್ಯುವಾಂ ಪತಿತೌ ಮೂಢಾವಾಜ್ಞಾಭಂಗಕೃತೌ ಮಮ । ಯುವಾಂ ಪಿಶಾಚೌ ಭವತಾಂ ದಂಪತೀರೂಪಧಾರಿಣೌ ॥ ಮರ್ತ್ಯಲೋಕಮನುಪ್ರಾಪ್ತೌ ಭುಂಜಾನೌ ಕರ್ಮಣಃ ಫಲಂ ॥೨೫॥ ಇಂದ್ರನು ಹೇಳಿದನು - ನನ್ನ ಆಜ್ಞೆಗೆ ಭಂಗವನ್ನುಂಟುಮಾಡುತ್ತಿರುವ ಮೂಢರಾದ ನಿಮಗೆ ಧಿಕ್ಕಾರವಿರಲಿ. ನೀವಿಬ್ಬರೂ ದಂಪತಿ ರೂಪವಾದ ಪಿಶಾಚಿಗಳಾಗಿರಿ. ಮತ್ತು ಮನುಷ್ಯಲೋಕದಲ್ಲಿ ನಿಮ್ಮ ಕರ್ಮದ ಫಲವನ್ನು ಅನುಭವಿಸಿರಿ. ಶ್ರೀಕೃಷ್ಣ ಉವಾಚ– ಏವಂ ಮಘವತಾ ತಪ್ತಾವುಭೌ ದುಃಖಿತಮಾನಸೌ । ಹಿಮವಂತಂ ಗಿರಿಂ ಪ್ರಾಪ್ತಾವಿಂದ್ರಶಾಪಾದ್ವಿಮೋಹಿತೌ ॥೨೬॥ ಶ್ರೀಕೃಷ್ಣನು ಹೇಳಿದನು - ಈ ರೀತಿಯಾಗಿ ಇಂದ್ರನಿಂದ ಶಾಪಪಡೆದ ಅವರಿಬ್ಬರೂ ದುಃಖಗೊಂಡು ಆ

ಶಾಪದಿಂದಲೇ ಮೋಹಗೊಂಡು ಹಿಮವತ್ಪರ್ವತವನ್ನು ಹೊಂದಿದರು. ಉಭೌ ಪಿಶಾಚತಾಂ ಪ್ರಾಪ್ತೌ ದಾರುಣಂ ದುಃಖಮೇವ ಚ । ಸಂತಪ್ಯಮಾನಸೌ ತತ್ರ ಹಿಮಕೃಚ್ಛ್ರಗತಾವುಭೌ ॥೨೭॥ ಈ ರೀತಿಯಾಗಿ ಇಬ್ಬರೂ ಶಾಪದಿಂದ ಪಿಶಾಚತನವನ್ನು ಹೊಂದಿ ದುಃಖಗೊಂಡು ಹಿಮದಿಂದ ತೊಂದರೆಪಡುತ್ತಿದ್ದರು. ಗಂಧರ್ವತ್ವಮಪ್ಸರಸ್ತ್ವಂ ನ ಜಾನಿತೋ ವಿಮೋಹಿತೌ । ಪೀಡ್ಯಮಾನೌ ನಿದಾಘೇನ ದೇಹಪಾತಕಜೇನ ಚ ॥೨೮॥ ಈ ಶಾಪದಿಂದ ಬುದ್ಧಿಯು ಬದಲಾಯಿಸಿ ಅವರು ತಮ್ಮ ಗಂಧರ್ವತನವನ್ನಾಗಲೀ, ಅಪ್ಸರತ್ವವನ್ನಾಗಲಿ ಜ್ಞಾಪಿಸಿಕೊಳ್ಳದವರಾದರು. ಮತ್ತು ಬಿಸಿಲು ಛಳಿಗಳಿಂದ ತೊಂದರೆಪಡುತ್ತಿದ್ದರು. ನ ನಿಶಾಯಾಂ ಸುಖಂ ಶಾಂತಿಂ ಲೇಭಾತೇ ಕರ್ಮಪೀಡಿತೌ । ಪರಸ್ಪರಂ ವದಮಾನೌ ಚೇರತುರ್ಗಿರಿಗಹ್ವರೇ ॥೨೯॥ ಕರ್ಮದಿಂದ ಆವೃತರಾಗಿ ರಾತ್ರಿಯಲ್ಲಿಯೂ ಕೂಡ ಸುಖ ಶಾಂತಿಗಳನ್ನು ಹೊಂದಲಿಲ್ಲ. ಆ ಬೆಟ್ಟದ ತಪ್ಪಲಿನಲ್ಲಿ ಕಷ್ಟದಿಂದ ಸಂಚರಿಸುತ್ತಿದ್ದರು. ಪೀಡ್ಯಮಾನೌ ತು ಶಾಪೇನ ತುಷಾರಪ್ರಭವೇಣ ತೌ । ದಂತಘರ್ಷಂ ಪ್ರಕುರ್ವಾಣೌ ರೋಮಾಂಚಿತವಪುರ್ಧರೌ ॥ ಊಚೇ ಪಿಶಾಚಸ್ಸ ತದಾ ಸ್ವಾಂ ಪತ್ನೀಂ ಚ ಪಿಶಾಚಿಕಾಂ ॥೩೦॥ ಆ ಶಾಪದಿಂದ ಪರ್ವತದಲ್ಲಿ ಸಂಚರಿಸುತ್ತಾ ಛಳಿಯಿಂದ ಹಲ್ಲುಗಳನ್ನು ಕಟಕಟಾ ಎಂದೆನ್ನಿಸುತ್ತಾ ರೋಮಾಂಚನವನ್ನು ಹೊಂದುತ್ತಲಿದ್ದರು. ಆಗ ಗಂಡು ಪಿಶಾಚಿಯು ಹೆಂಡತಿಯಾದ ಹೆಣ್ಣು ಪಿಶಾಚಿಯನ್ನು ಕುರಿತು ಇಂತೆಂದಿತು. ಪಿಶಾಚ ಉವಾಚ – ಕಿಂ ಮೇ ನಾಲ್ಪಕೃತಂ ಪಾಪಂ ದಾರುಣಂ ರೋಮಹರ್ಷಣಂ। ಯೇನ ಪ್ರಾಪ್ತಂ ಪಿಶಾಚತ್ವಂ ಸ್ವೇನ ದುಷ್ಕರಕರ್ಮಣಾ ॥೩೧॥ ಪಿಶಾಚಿಯು ಹೇಳಿತು - ನಾನು ಎಂಥ ಕೆಟ್ಟದಾದ ಪಾಪವನ್ನು ಮಾಡಿರುವೆನು! ನನ್ನ ಪಾಪಕೆಲಸದಿಂದ ಈ ಕ್ರೂರವಾದ ಪಿಶಾಚತನವು ಬಂದಿರುವುದಲ್ಲ! ನರಕಂ ದಾರುಣಂ ಮತ್ವಾ ಪಿಶಾಚತ್ವಂ ಚ ದುಃಖದಂ। ತಸ್ಮಾತ್ಸರ್ವಪ್ರಯತ್ನೇನ ಪಾತಕಂ ಸಮಾಚರೇತ್ ॥೩೨॥ ಕಷ್ಟತರವಾದ ನರಕವನ್ನೂ ಈ ಕ್ರೂರವಾದ ಪಿಶಾಚತನವನ್ನೂ ನೋಡಿದರೆ ಪ್ರಯತ್ನಪಟ್ಟಾದರೂ ಪಾಪವನ್ನು ಮಾಡದಿರಬೇಕು. ಶ್ರೀಕೃಷ್ಣ ಉವಾಚ - ಇತಿ ಚಿಂತಾಪರೌ ತತ್ರ ತಾವಾಸ್ತಾಂ ದುಃಖಕರ್ಶಿತೌ । ದೈವಯೋಗಾತ್ತಯೋಃ ಪ್ರಾಪ್ತಾ ಮಾಘಸ್ಯೈಕಾದಶೀ ತಿಥಿಃ ॥೩೩॥ ಜಯಾ ನಾಮೇತಿ ವಿಖ್ಯಾತಾ ತಿಥೀನಾಮುತ್ತಮಾ ತಿಥಿಃ । ತಸ್ಮಿನ್ ದಿನೇ ತು ಸಂಪ್ರಾಪ್ತೇ ಸರ್ವಾಹಾರವಿವರ್ಜಿತೌ ॥೩೪॥ ಆಸಾತಾಂ ತತ್ರ ನೃಪತೇ ಜಲಯಾನವಿವರ್ಜಿತೌ । ನ ಕೃತೋ ಜೀವಘಾತಶ್ಚ ನ ಯತ್ರ ಫಲಭಕ್ಷಣಂ ॥೩೫॥ ಅಶ್ವತ್ಥಸ್ಯ ಸಮೀಪೇ ತೌ ಸರ್ವದಾ ದುಃಖಸಂಯುತೌ । ರವಿರಸ್ತಂಗತೋ ರಾಜಂಸ್ತಥೈವ ಸ್ಥಿತಯೋಸ್ತಯೋಃ ॥೩೬॥ ಪ್ರಾಪ್ತಾ ಚೈವ ನಿಶಾ

ಘೋರಾ ದಾರುಣಾ ಪ್ರಾಣಹಾರಿಣೀ। ವೇಪಮಾನಾವುಭೌ ತತ್ರ ತತಃ ಸುಷುಪತುಃ ಕ್ಷಿತೌ ॥೩೭॥ ಶ್ರೀ ಕೃಷ್ಣನು ಹೇಳಿದನು - ಈ ರೀತಿಯಾಗಿ ಅವೆರಡು ಪಿಶಾಚಗಳೂ ದುಃಖದಿಂದ ಕೂಡಿ ಅಲ್ಲಿದ್ದುವು. ಆಗ ಅದೃಷ್ಟವಶದಿಂದ ಮಾಘ ಶುದ್ಧದ ''ಜಯಾ'' ಎಂಬ ಏಕಾದಶಿಯು ಬಂದಿತು. ಆ ತಿಥಿಯು ತಿಥಿಗಳೆಲ್ಲಾ ಉತ್ತಮವಷ್ಟೆ. ಆ ದಿನ ಬರಲು ಆ ದಿನದಲ್ಲಿ ಆ ಪಿಶಾಚಿಗಳೆರಡೂ ಆಹಾರವನ್ನು ಬಿಟ್ಟು, ನೀರನ್ನೂ ಕುಡಿಯದೆ ಇದ್ದುವು. ಯಾವ ಪ್ರಾಣಿಗಳಿಗೂ ತೊಂದರೆ ಕೊಡಲಿಲ್ಲ. ಹಣ್ಣು ಹಂಪಲುಗಳನ್ನೂ ತಿನ್ನಲಿಲ್ಲ. ಅಲ್ಲಿದ್ದ ಒಂದು ಅರಳಿಯ ಮರದ ಕೆಳಗೆ ದುಃಖಪಡುತ್ತಾ ಕುಳಿತಿದ್ದುವು. ಆ ಪಿಶಾಚಿಗಳು ಹಾಗೆಯೇ ಕುಳಿತಿರಲು ಸೂರ್ಯನು ಅಸ್ತವಾದನು. ಕ್ರೂರವಾದ ಪ್ರಾಣಕ್ಕೆ ಅಪಾಯವನ್ನುಂಟು ಮಾಡುವ ರಾತ್ರಿಯು ಬಂದಿತು. ಅವು ನಡುಗುತ್ತ ಅಲ್ಲಿಯೇ ಹಾಗೆಯೇ ನೆಲದ ಮೇಲೆ ಮಲಗಿಕೊಂಡವು. ಪರಸ್ಪರೇಣ ಸಂಲಗ್ನೌ ಗಾತ್ರಯೋರುಭಯೋರಪಿ । ನ ನಿದ್ರಾ ನ ರತಿಸ್ತತ್ರ ನ ತೌ ಸೌಖ್ಯಮವಿಂದತಾಂ ॥೩೮॥ ಒಂದಕ್ಕೊಂದು ಛಳಿಯನ್ನು ತಡೆಯಲಾರದೆ ತಬ್ಬಿಕೊಂಡು ಮಲಗಿಕೊಂಡವು. ಆ ಛಳಿಯಿಂದ ನಿದ್ದೆಯನ್ನಾಗಲಿ, ಸುಖವನ್ನಾಗಲೀ ಅವು ಹೊಂದಲಿಲ್ಲ. ಏವಂ ತೌ ರಾಜಶಾರ್ದೂಲ ಶಾಪೇನೇಂದ್ರಸ್ಯ ಪೀಡಿತೌ । ಇತ್ಥಂ ತಯೋರ್ದುಃಖಿತಯೋರ್ನಿರ್ಜಗಾಮ ನಿಶೀಥಿನೀ ॥೩೯॥ ಎಲೈ ಧರ್ಮಜನೇ! ಈ ರೀತಿ ಇಂದ್ರಶಾಪದಿಂದ ಪೀಡಿತವಾದ ಅವು ದುಃಖಪಡುತ್ತ ಆ ದಿನದ ರಾತ್ರಿಯನ್ನು ಕಳೆದುವು. ಮಾರ್ತಾಂಡ ಉದಯಂ ಪ್ರಾಪ್ತೇ ದ್ವಾದಶೀದಿವಸಾಗಮೇ। ಮಯಾ ತು ರಾಜಶಾರ್ದೂಲ ತಯೋರ್ಭಕ್ತಿರ್ಧೃತಾ ಹೃದಿ ॥೪೦॥ ಸೂರ್ಯನು ಹುಟ್ಟಿದನು. ದ್ವಾದಶಿಯು ಬಂದಿತು. ಆಗ ನಾನು ಅವುಗಳ ಮನಸ್ಸಿನಲ್ಲಿ ಭಕ್ತಿಯು ಬರುವಂತೆ ಮಾಡಿದೆನು. ಜಯಾಯಾಸ್ತುವ್ರತಂ ಚೀರ್ಣಂ ರಾತ್ರೌ ಜಾಗರಣಂ ಕೃತಂ । ತಸ್ಮಾದ್ವ್ರತಪ್ರಭಾವಾಚ್ಚ ಯಥಾ ಜಾತಂ ತಥಾ ಶ್ರುಣು ॥೪೧॥ ಜಯಾ ಏಕಾದಶಿಯ ದಿನ ಉಪವಾಸ ವ್ರತವನ್ನು ಮಾಡಿದವು. ರಾತ್ರಿಯಲ್ಲಿ ಜಾಗರಣವೂ ಆಯಿತು. ಆ ವ್ರತದ ಪ್ರಭಾವದಿಂದ ಉಂಟಾದುದನ್ನು ಕೇಳು. ದ್ವಾದಶೀದಿವಸೇ ಪ್ರಾಪ್ತೇ ತಥಾ ಚೀರ್ಣೇ ಜಯಾ ವ್ರತೇ । ವಿಷ್ಣೋಃ ಪ್ರಭಾವಾನ್ನೃಪತೇ ಪಿಶಾಚತ್ವಂ ತಯೋರ್ಗತಂ ॥೪೨॥ ಜಯಾ ವ್ರತವನ್ನು ಮಾಡಿ ಜಾಗರಣೆಯನ್ನು ಮುಗಿಸಿ ದ್ವಾದಶಿಯು ಪ್ರಾಪ್ತವಾಗಲು ಆ ದಿನ ವಿಷ್ಣುವಿನ ಮಹಿಮೆಯಿಂದ ಅವಕ್ಕೆ ಪಿಶಾಚತನವು ಹೊರಟು ಹೋಯಿತು. ಪುಷ್ಪವಂತೀಮಾಲ್ಯವಂತೌ ಪೂರ್ವರೂಪೌ ಬಭೂವತುಃ। ಪುರಾತನಸ್ನೇಹಿಯುತೌ ಪೂರ್ವಾಲಂಕಾರಧಾರಿಣೌ ॥೪೩॥ ವಿಮಾನಮಧಿರೂಢೌ ತೌ ಗತೌ ನಾಕಂ

ಮನೋರಮೌ । ದೇವೇಂದ್ರಸ್ಯಾಗ್ರತೋ ಗತ್ವಾ ಪ್ರಣಾಮಂ ಚಕ್ರತುರ್ಮದಾ ॥೪೪॥ ಆ ಪಿಶಾಚಿತನವನ್ನು ಕಳೆದುಕೊಂಡು ಪೂರ್ವದಂತೆ ಪುಷ್ಪವಂತೀ ಮಾಲ್ಯವಂತರಾದರು. ಹಿಂದಿನಂತೆಯೇ ಸ್ನೇಹವು ಬೆಳೆಯಿತು. ಹಿಂದಿನಂತೆಯೇ ಅಲಂಕಾರಗಳೆಲ್ಲವೂ ಬಂದುವು. ಒಳ್ಳೆಯ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋದರು. ದೇವೇಂದ್ರನ ಎದುರಿಗೆ ಹೋಗಿ ಸಂತೋಷದಿಂದ ನಮಸ್ಕರಿಸಿದರು. ಆ ರೀತಿಯಾಗಿ ಸ್ವರೂಪವನ್ನು ತಾಳಿ ಅವರು ಬಂದುದನ್ನು ನೋಡಿ ಇಂದ್ರನು ಆಶ್ಚರ್ಯಗೊಂಡು ಇಂತೆಂದನು. ಇಂದ್ರ ಉವಾಚ - ವದತಂ ಕೇನ ಪುಣ್ಯೇನ ಪಿಶಾಚತ್ವಂ ಹಿ ವಾಂ ಗತಂ । ಮಮ ಶಾಪಂ ಚ ಸಂಪ್ರಾಪ್ತೌ ಕೇನ ದೇವೇನ ಮೋಚಿತೌ ॥೪೫॥ ಇಂದ್ರನು ಹೇಳಿದನು - ನಿಮ್ಮ ಪಿಶಾಚತನವು ಯಾವ ಪುಣ್ಯದಿಂದ ನಾಶಮಾಡಲ್ಪಟ್ಟಿತು? ಹೇಳಿರಿ. ನಾನು ಶಾಪಕೊಟ್ಟಿರುವಲ್ಲಿ ಅದನ್ನು ಯಾರು ಹೋಗಲಾಡಿಸಿದವರು? ಮಾಲ್ಯವಾನುವಾಚ - ವಾಸುದೇವಪ್ರಸಾದೇನ ಜಯಾಯಾಸ್ತು ವ್ರತೇನ ಚ । ಪಿಶಾಚತ್ವಂ ಗತಂ ಸ್ವಾಮಿಂಸ್ತವ ಭಕ್ತಿಪ್ರಭಾವತಃ ॥೪೬॥ ಮಾಲ್ಯವಂತನು ಹೇಳಿದನು - ವಾಸುದೇವನ ಅನುಗ್ರಹದಿಂದಲೂ ಜಯಾ ಏಕಾದಶಿಯ ವ್ರತದಿಂದಲೂ ನಿನ್ನಲ್ಲಿಟ್ಟಿರುವ ಭಕ್ತಿಯಿಂದಲೂ ನಮ್ಮ ಪಿಶಾಚತನವು ಹೋಯಿತು. ಶ್ರೀಕೃಷ್ಣ ಉವಾಚ - ಇತಿ ಶ್ರುತ್ವಾತು ಮಘವಾ ಪ್ರತ್ಯುವಾಚ ಪುನಸ್ತಥಾ ॥೪೭॥ ಶ್ರೀ ಕೃಷ್ಣನು ಹೇಳಿದನು - ಇಂದ್ರನು ಇದನ್ನು ಕೇಳಿ ಅವರನ್ನು ಕುರಿತು ಮತ್ತೆ ಇಂತೆಂದನು. ಇಂದ್ರ ಉವಾಚ - ಪಿಬತಂ ತು ಯುವಾಂ ಚೈವ ಅಸ್ಮಾಕಂ ವಚನಾತ್ಸುಧಾಂ । ಹರಿವಾಸರಲೀನಾ ಯೇ ಯೇ ಚ ಕೃಷ್ಣಪರಾಯಣಾಃ ॥೪೮॥ ಅಸ್ಮಾಕಂ ಚೈವ ಮರ್ತ್ಯಾಸ್ತೇ ಪೂಜ್ಯಾಶ್ಚೈವ ನ ಸಂಶಯಃ । ರಮಸ್ವ ಪುಷ್ಪವಂತ್ಯಾ ತ್ವಂ ಯಥಾಸೌಖ್ಯಂ ಸುರಾಲಯೇ ॥೪೯॥ ನೀವಿಬ್ಬರೂ ನನ್ನ ಅಪ್ಪಣೆಯಂತೆ ಅಮೃತವನ್ನು ಕುಡಿಯಿರಿ. ಹರಿಯ ದಿವಸಗಳಲ್ಲಿ ಆಸಕ್ತರೂ ಕೃಷ್ಣನಲ್ಲಿ ಭಕ್ತಿಯುಳ್ಳವರೂ ಆದರೆ ಅವರು ಮನುಷ್ಯರಾದರು ನಮಗೆ ಪೂಜ್ಯರೇ. ಸಂಶಯವಿಲ್ಲ. ನೀನು ನಿನಗೆ ಇಷ್ಟ ಬಂದಂತೆ ಈ ದೇವಲೋಕದಲ್ಲಿ ಪುಷ್ಪವಂತಿಯೊಡನೆ ಸುಖಿಸು. ಶ್ರೀಕೃಷ್ಣ ಉವಾಚ - ಏತಸ್ಮಾತ್ಕಾರಣಾದ್ರಾಜನ್ ಕರ್ತವ್ಯಂ ಹರಿವಾಸರಂ । ಜಯಾ ತು ರಾಜಶಾರ್ದೂಲ ಬ್ರಹ್ಮಹತ್ಯಾಪಹಾರಿಣೀ ॥೫೦॥ ಶ್ರೀ ಕೃಷ್ಣನು ಹೇಳಿದನು - ಈ ಕಾರಣದಿಂದಲೇ ಹರಿವಾಸರವನ್ನು ಆಚರಿಸಬೇಕು. ಜಯಾ ಏಕಾದಶಿಯು ಬ್ರಹ್ಮಹತ್ಯೆಯನ್ನೂ ಹಾಳುಮಾಡುತ್ತದೆ. ಸರ್ವದಾನಾನಿ ತೇನೈವ ಸರ್ವಯಜ್ಞಾನ್ಯಶೇಷತಃ। ದತ್ತಾನಿ ಕಾರಿತಾನ್ಯೇವ ಜಯಾಯಾಸ್ತು ವ್ರತಂ ಕೃತಂ ॥೫೧॥ ಈ ಜಯಾ ಏಕಾದಶಿಯಲ್ಲಿ ಉಪವಾಸ ಮಾಡಿ ಜಾಗರಣೆ ಮಾಡಿದರೆ ಎಲ್ಲಾ ದಾನಗಳನ್ನೂ

ಮಾಡಿದಂತಾಗುತ್ತದೆ. ಎಲ್ಲಾ ಯಜ್ಞಗಳನ್ನೂ ಆಚರಿಸಿದಂತಾಗುತ್ತದೆ. ಕಲ್ಪಕೋಟಿಂ ವಸೇತ್ತಾವದ್ವೈಕುಂಠೇ ಮೋದತೇ ಧ್ರುವಂ । ಪತನಾಚ್ಛ್ರವಣಾದ್ರಾಜನ್ನಗ್ನಿಷ್ಟೋಮಫಲಂ ಭವೇತ್ ॥೫೨॥ ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾಂಶ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಮಾಘ ಶುಕ್ಲ ಜಯೈಕಾದಶೀ ವರ್ಣನಂ ನಾಮ ಪಂಚಚತ್ವಾರಿಂಶೋಽಧ್ಯಾಯಸ್ಸಮಾಪ್ತಃ॥ ಒಂದು ಕೋಟಿಕಲ್ಪಗಳವರೆಗೂ ಆ ವ್ರತಮಾಡಿದವನು ವೈಕುಂಠದಲ್ಲಿ ಸುಖಿಸುತ್ತಾನೆ. ಇದನ್ನು ಕೇಳುವುದರಿಂದಲೂ ಹೇಳುವುದರಿಂದಲೂ ಅಗ್ನಿಷ್ಟೋಮ ಯಾಗದ ಫಲವು ಬರುತ್ತದೆ. ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದೊಳಗಿನ ಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಮಾಘ ಶುದ್ಧ ಜಯೈಕಾದಶೀ ಮಹಿಮೆ ಎಂಬ ನಲವತ್ತೈದನೆಯ ಅಧ್ಯಾಯವು ಮುಗಿದುದು.

## ಮಾಘ ॥ ಶುದ್ಧ ॥ ದ್ವಾದಶೀ

ವರಾಹದ್ವಾದಶೀವ್ರತಮ್ - ದುರ್ವಾಸಮುನಿ - ಪರಮಧಾರ್ಮಿಕನಾದ ಮುನಿಯೇ! ಹೀಗೆಯೇ ಮಾಘ ಮಾಸದ ಶುಕ್ಲಪಕ್ಷದ ದ್ವಾದಶೀದಿನ ಮಾಡಬೇಕಾದ, ಭೂದೇವಿಯನ್ನುದ್ಧರಿಸಿದ ಆದಿವರಾಹದೇವನ ವ್ರತವಿಚಾರವನ್ನೂ ಕೇಳು. ಹಿಂದೆ ಹೇಳಿದ ವಿಧಾನದಿಂದ ಸಂಕಲ್ಪಮಾಡಿ, ಸ್ಥಳವನ್ನೂ ಸಿದ್ಧಪಡಿಸಿ, ವಿದ್ವಾಂಸನಾದವನು ಏಕಾದಶಿಯ ದಿನ ಅಚ್ಯುತನನ್ನು ಗಂಧಧೂಪನೈವೇದ್ಯಾದಿಗಳಿಂದ ಚೆನ್ನಾಗಿ ಪೂಜಿಸಿ, ಬಳಿಕ ಅವನೆದುರಿಗೆ ನೀರು ತುಂಬಿದ್ದ ಕಲಶವನ್ನು ಇಡಬೇಕು. ವರಾಹಾಯ ನಮಃ ಎಂದು ಹರಿಯ ಪಾದಗಳನ್ನೂ, ಮಾಧವಾಯ ನಮಃ ಎಂದು ನಡುವನ್ನೂ, ಕ್ಷೇತ್ರಜ್ಞಾಯ ನಮಃ ಎಂದು ಉದರವನ್ನೂ, ವಿಶ್ವರೂಪಾಯ ನಮಃ ಎಂದು ಎದೆಯನ್ನೂ, ಸರ್ವಜ್ಞಾಯ ನಮಃ ಎಂದು ಕಂಠವನ್ನೂ, ಪ್ರಜಾನಾಂ ಪತಯೇ ನಮಃ ಎಂದು ಶಿರಸ್ಸನ್ನೂ, ಪ್ರದ್ಯುಮ್ನಾಯ ನಮಃ ಎಂದು ಭುಜಗಳನ್ನೂ, ದಿವ್ಯಾಸ್ತ್ರಾಯ ನಮಃ ಎಂದು ಚಕ್ರವನ್ನೂ, ಅಮೃತೋದ್ಭವಾಯ ನಮಃ ಎಂದು ಶಂಖವನ್ನೂ ಅರ್ಚಿಸಬೇಕು. ಇದೇ ಅರ್ಚನೆಯ ಕ್ರಮ. ಬುದ್ಧಿವಂತನಾದವನು ಹೀಗೆ ಪೂಜಿಸಿ, ದ್ರವ್ಯಾನುಕೂಲವಿದ್ದಂತೆ ಚಿನ್ನದ, ಬೆಳ್ಳಿಯ ಅಥವಾ ತಾಮ್ರದ ಬೇಕಾದ ಸರ್ವವಸ್ತುಗಳಿಂದ ಕೂಡಿದ ಪೂರ್ಣಕಲಶವನ್ನಿಟ್ಟು, ಪರ್ವತನದಿಗಳಿಂದ ಕೂಡಿದ ಭೂದೇವಿಯನ್ನು ಕೋರೆಯ ಹಲ್ಲಿನ ಅಗ್ರದಲ್ಲಿ ಧರಿಸಿರುವಂತೆ, ಲಕ್ಷ್ಮೀಪತಿಯೂ, ಮಧುನಾಶಕನೂ ಆದ ದೇವನ ವರಾಹಮೂರ್ತಿಯನ್ನು ಚಿನ್ನದಿಂದ ಅನುಕೂಲವಿದ್ದಷ್ಟು ಪರಿಮಾಣದಲ್ಲಿ ಮಾಡಿಸಿ ಸರ್ವವಿಧವಾದ ಧಾನ್ಯ(ಬೀಜ)ದಿಂದ ತುಂಬಿದ ರತ್ನಸಹಿತವಾದ ತಾಮ್ರದ ಪಾತ್ರೆಯಲ್ಲಿ ಸ್ಥಾಪಿಸಿ, ಮೂರ್ತಿಸಹಿತವಾದ ಆ

ತಾಮ್ರದ ಪಾತ್ರೆಯನ್ನು ಕಲಶದ ಮೇಲಿಡಬೇಕು. ವರಾಹಮೂರ್ತಿಗೆ ಬಿಳಿಯ ವಸ್ತ್ರಗಳೆರಡನ್ನು ಧರಿಸಿ, ಗಂಧಪುಷ್ಪಗಳಿಂದಲೂ, ಬಗೆ ಬಗೆಯ ಶುಭಕರವಾದ ನೈವೇದ್ಯಗಳಿಂದಲೂ ಪೂಜಿಸಬೇಕು. ಅಲ್ಲಿಯೇ ಹೂವಿನಿಂದ ಮಂಡಲವನ್ನು ಮಾಡಿ, ಅದರಲ್ಲಿ ಜಾಗರಣೆಯನ್ನು ಮಾಡುತ್ತಾ, ಹರಿಯು ಅಲ್ಲಿ ಅವತರಿಸಿರುವುದರಿಂದ ಅವನನ್ನು ಧ್ಯಾನಿಸುತ್ತಲೂ, ಸ್ತುತಿಸುತ್ತಲೂ ಇರಬೇಕು. ಹೀಗೆ ಪೂಜೆಮಾಡಿ, ರಾತ್ರಿ ಕಳೆದು, ಸೂರ್ಯೋದಯವಾಗುತ್ತಲೇ ಸ್ನಾನ ಮಾಡಿ, ಶುಚಿರ್ಭೂತನಾಗಿ, ಹರಿಯನ್ನು ಪೂಜಿಸಿ, ವೇದವೇದಾಂಗಳನ್ನು ಚೆನ್ನಾಗಿ ಅರಿತವನೂ, ಸಾಧುವೃತ್ತಿಯುಳ್ಳವನೂ, ವಿದ್ಯಾವಂತನೂ, ವಿಷ್ಣುಭಕ್ತನೂ, ಶಾಂತನೂ, ಶ್ರೋತ್ರಿಯನೂ, ಕುಟುಂಬಿಯೂ ಆದ ಬ್ರಾಹ್ಮಣನಿಗೆ ಕಲಶದೊಡನೆ ವರಾಹರೂಪಿಯಾದ ಆ ಹರಿಯನ್ನೂ (ಮೂರ್ತಿಯನ್ನು) ಸಮರ್ಪಿಸಬೇಕು. ಹಾಗೆ ಅರ್ಪಿಸಿದವನು ಬಳಿಕ ಯಾವ ಫಲವನ್ನು ಪಡೆಯುವನೆಂಬುದನ್ನು ನಾನು ಹೇಳುತ್ತೇನೆ. ಕೇಳು. ಈ ಜನ್ಮದಲ್ಲಿ ಸೌಭಾಗ್ಯವನ್ನೂ, ಕಾಂತಿಯನ್ನೂ, ತೃಪ್ತಿಯನ್ನೂ, ಶ್ರೀಯನ್ನೂ (ಸಂಪತ್ತನ್ನೂ) ಪಡೆಯುವನು. ದರಿದ್ರನು ಕೂಡಲೇ ಧನಿಕನಾಗುವನು. ಪುತ್ರನಿಲ್ಲದವನು ಪುತ್ರವಂತನಾಗುವನು. ಅಲಕ್ಷ್ಮಿಯು ಕೂಡಲೇ ತೊಲಗಿ, ಲಕ್ಷ್ಮಿಯು ತಾನಾಗಿ ಬಲಾತ್ಕಾರದಿಂದ ಅವನ ಮನೆಯನ್ನು ಪ್ರವೇಶಿಸುವಳು. ಈ ಜನ್ಮದಲ್ಲಿ ಈ ಸೌಭಾಗ್ಯಗಳೆಲ್ಲವೂ ಲಭಿಸುವವು. ಪರಲೋಕದಲ್ಲಿ ಲಭಿಸುವ ಫಲವಿಚಾರದಲ್ಲಿ, ಹಿಂದೆ ನಡೆದ ಪುರಾತನೇತಿಹಾಸವನ್ನು ಕೇಳು. ಪ್ರತಿಷ್ಠಾನ(ಪೈಠಣ)ದಲ್ಲಿ ವೀರಧನ್ವನೆಂಬ ಪ್ರಸಿದ್ಧನಾದ ದೊರೆಯಿದ್ದನು. ಶತ್ರುಸಂತಾಪಕನಾದ ಆತನು ಒಂದಾನೊಂದು ಸಾರಿ ಬೇಟೆಗಾಗಿ ಕಾಡಿಗೆ ಹೋದನು. ಅಲ್ಲಿ ಋಷಿಗಳು ವಾಸಿಸುತ್ತಿದ್ದ ಪ್ರದೇಶದ ಮಧ್ಯಕ್ಕೆ ಹೋಗಿ ಮೃಗಗಣವನ್ನು ಕೊಲ್ಲುತ್ತಿದ್ದನು. ಅಲ್ಲಿ ಸಂವರ್ತನೆಂಬ ಋಷಿಯ ಪುತ್ರರೂ, ವೇದಾಧ್ಯಯನಾಸಕ್ತರೂ ಆದ ಐವತ್ತು ಜನ ಸಹೋದರರು ಜಿಂಕೆಗಳ ರೂಪದಿಂದ ವಾಸಿಸುತ್ತಿದ್ದರು. ವೀರಧನ್ವರಾಜನು ಅರಿಯದೆ, ಮೃಗವೇಷದಿಂದಿದ್ದ ಆ ಬ್ರಾಹ್ಮಣರನ್ನು ಕೊಂದನು. **ಸತ್ಯತಪ** – ಬ್ರಹ್ಮನೇ! ಅವರು ಯಾವ ಕಾರಣದಿಂದ ಮೃಗರೂಪವನ್ನು ಧರಿಸಿದ್ದರು? ಇದನ್ನು ತಿಳಿಯಲು ನನಗೆ ಬಹಳ ಕುತೂಹಲವಾಗಿದೆ. ನಮಸ್ಕರಿಸುತ್ತೇನೆ. ದಯವಿಟ್ಟು ಹೇಳು. **ದುರ್ವಾಸಮುನಿ** – ಮುನಿಯೇ! ಒಂದಾನೊಂದು ವೇಳೆ ಅವರು ಕಾಡಿಗೆ ಹೋಗಿ, ಅಲ್ಲಿ ಆಗ ತಾನೇ ಹುಟ್ಟಿದ್ದ ತಬ್ಬಲಿಗಳಾದ ಜಿಂಕೆಯ ಮರಿಗಳನ್ನು ನೋಡಿ, ಒಬ್ಬೊಬ್ಬರು ಒಂದೊಂದನ್ನು ಎತ್ತಿಕೊಂಡರು. ಗುಹೆಯಲ್ಲಿಟ್ಟಿದ್ದ ಅವು ಸತ್ತು ಹೋದವು. ಅದರಿಂದ ದುಃಖಿತರಾದ ಅವರೆಲ್ಲರೂ ಸಮೀಪದಲ್ಲಿಯೇ ಇದ್ದ ತಂದೆಯ ಬಳಿಗೆ ಹೋಗಿ ತಾವು ಮಾಡಿದ ಮೃಗಹಿಂಸೆಯನ್ನು ನಿಜವಾಗಿ ಹೇಳಿದರು.

**ಋಷಿಪುತ್ರರು** – ಮುನಿಯೇ! ನಮಗೆ ಕೊಲ್ಲಬೇಕೆಂದು ಮನಸ್ಸಿರಲಿಲ್ಲವಾದರೂ ಅಕಸ್ಮಾತ್ತಾಗಿ ಆಗ ತಾನೇ ಹುಟ್ಟಿದ ಐದು ಜಿಂಕೆಯ ಮರಿಗಳನ್ನು ನಾವು ಕೊಂದಿದ್ದೇವೆ. ನಮಗೆ ತಕ್ಕ ಪ್ರಾಯಶ್ಚಿತ್ತವನ್ನು ವಿಧಿಸು. **ಸಂವರ್ತ** – ನಮ್ಮ ತಂದೆಯು ಹಿಂಸಕನಾಗಿದ್ದನು. ನಾನು ಅವನಿಗಿಂತ ಹೆಚ್ಚಾಗಿ ಆದೆನು. ನನ್ನ ಮಕ್ಕಳಾದ ನೀವೂ ಪಾಪಕರ್ಮಿಗಳಾದಿರಿ. ಈಗ ನೀವು ಜಿಂಕೆಯ ಚರ್ಮವನ್ನು ಧರಿಸಿ ವ್ರತಿಗಳಾಗಿ ಐದು ವರ್ಷಕಾಲ ನಡೆಯಿರಿ. ಬಳಿಕ ಶುದ್ಧರಾಗುವಿರಿ. ಹೀಗೆ ಕೇಳಿಸಿಕೊಂಡ ಆ ಮಕ್ಕಳು ಜಿಂಕೆಯ ಚರ್ಮವನ್ನು ಹೊದೆದುಕೊಂಡು ವ್ಯಾಕುಲವಿಲ್ಲದೇ ಶಾಶ್ವತಬ್ರಹ್ಮಜಪಮಾಡುತ್ತಾ ಕಾಡಿನಲ್ಲಿದ್ದರು. ಹಾಗೆ ವರ್ಷ ಕಳೆಯಲು, ವೀರಧನ್ವರಾಜನು, ಅವರು ಮೃಗರೂಪಿಗಳಾಗಿ ಚರಿಸುತ್ತಿದ್ದಲ್ಲಿಗೆ ಬಂದನು. ಅವರೆಲ್ಲರೂ ಕೃಷ್ಣಾಜಿನವನ್ನು ಧರಿಸಿದವರಾಗಿ ಒಂದು ಮರದ ಕೆಳಗೆ ಜಪ ಮಾಡುತ್ತಿದ್ದರು. ರಾಜನು ಅವರನ್ನು ಜಿಂಕೆಗಳೆಂದೇ ತಿಳಿದುಕೊಂಡನು. ಜಿಂಕೆಗಳೆಂದುಕೊಂಡೇ, ರಾಜನು ಹೊಡೆಯಲಾಗಿ ಆ ಬ್ರಹ್ಮವಾದಿಗಳೆಲ್ಲರೂ ಒಟ್ಟಿಗೆ ಮೃತರಾದರು. ಶ್ಲಾಘ್ಯವಾದ ವ್ರತಗಳನ್ನು ಮಾಡುವ ಬ್ರಾಹ್ಮಣರಾದ ಅವರು ಸತ್ತುದನ್ನು ನೋಡಿ ರಾಜನು ಭಯದಿಂದ ನಡುಗುತ್ತಾ ದೇವರಾತಾಶ್ರಮಕ್ಕೆ ಹೋದನು. ಅಲ್ಲಿ ರಾಜನು, ಬ್ರಾಹ್ಮಣರ ಕೊಲೆಯ ವೃತ್ತಾಂತವನ್ನು ಮೊದಲಿನಿಂದಲೂ ಹೇಳಿ, ಅತಿ ದುಃಖಿತನಾಗಿ, ಮಹಾಮುನಿಯೇ! ನನಗೆ ಬ್ರಹ್ಮಹತ್ಯಾದೋಷವು ಬಂದಿತು. ಏನು ಮಾಡಲಿ! ಎಂದು ಬಹಳ ಅತ್ತನು. ಋಷಿಯಾದ ದೇವರಾತನು ಅಳುತ್ತಿದ್ದ ರಾಜೋತ್ತಮನಿಗೆ – ದೊರೆಯೇ! ಹೆದರಬೇಡ. ನಿನ್ನ ಪಾಪವನ್ನು ಹೋಗಲಾಡಿಸುವೆನು. ರಾಜೇಂದ್ರನೇ! ವರಾಹ- ರೂಪಿಯೂ, ದೇವದೇವನೂ, ವಿಷ್ಣುವೂ ಆದ ಆ ಜನಾರ್ದನನು ಸುತಲವೆಂಬ ಹೆಸರಿನ ಪಾತಾಳದಲ್ಲಿ ಮುಳುಗಿದ್ದ ಭೂದೇವಿಯನ್ನು, ಉದ್ಧರಿಸಿದ ಹಾಗೆಯೇ ಬ್ರಹ್ಮಹತ್ಯಾ ಪಾಪದಿಂದ ಕಳವಳ ಪಡುತ್ತಿರುವ ನಿನ್ನನ್ನೂ ತಾನಾಗಿಯೇ ಉದ್ಧರಿಸುವನು- ಎಂದನು. ಹೀಗೆ ಹೇಳಿಸಿಕೊಂಡ ರಾಜನು ಸಂತೋಷವುಳ್ಳವನಾಗಿ ಸಜ್ಜನೋತ್ತಮನೇ! ಆ ದೇವನು ನನಗೆ ಯಾವ ವಿಧದಿಂದ ಪ್ರಸನ್ನನಾಗುವನು? ಪ್ರಸನ್ನನಾದರೆ ಏತರಿಂದ ಸರ್ವಾಶುಭವೂ (ಪಾಪವೂ) ನಾಶವಾಗುವುದು? ಎಂದು ಕೇಳಿದನು.
**ದುರ್ವಾಸಮುನಿ** – ಮುನಿಶ್ರೇಷ್ಠನೇ! ಆ ವೀರಧನ್ವರಾಜನು ಹೀಗೇ ಕೇಳಲು ಈ ವರಾಹದ್ವಾದಶೀವ್ರತವನ್ನು ದೇವರಾತ ಋಷಿಯು ಹೇಳಿದನು. ಆ ರಾಜನೂ ಅದನ್ನು ಮಾಡಿ, ಈ ಲೋಕದಲ್ಲಿ ಪುಷ್ಕಳವಾದ ಭೋಗಗಳನ್ನನುಭವಿಸಿ, ಮರಣಕಾಲದಲ್ಲಿ ಹೊಳೆಯುವ ಹೊನ್ನಿನ ವಿಮಾನದಲ್ಲಿ ಕುಳಿತು, ಇಂದ್ರಲೋಕವಾದ ಸ್ವರ್ಗದ ಹತ್ತಿರ

ಹೋದನು. ಇಂದ್ರನು ಪೂಜಾದ್ರವ್ಯಗಳನ್ನು ತೆಗೆದುಕೊಂಡು ಅವನನ್ನು ಎದುರುಗೊಳ್ಳನು ಹೋದನು. ಇಂದ್ರನು ಬರುತ್ತಿರುವುದನ್ನು ನೋಡಿ, ವಿಮಾನವನ್ನು ತಂದಿದ್ದ ವಿಷ್ಣುದೂತರು 'ದೇವರಾಜನೇ! ತಪಸ್ಸಿಲ್ಲದವನಾದ ನೀನು ಈ ವೀರಧನ್ವನನ್ನು ನೋಡಕೂಡದು' ಎಂದರು. ಹೀಗೆ ಲೋಕಪಾಲರೆಲ್ಲರೂ ಅವನ ತೇಜಸ್ಸಿನಿಂದ ವಿಸ್ಮಿತರಾಗಿ ಎದುರುಗೊಂಡು ಹೊರಟರು. ಹೀನಕರ್ಮರಾದುದರಿಂದ ಅವರೆಲ್ಲರನ್ನೂ ವಿಷ್ಣುದೂತರು ನಿರಾಕರಿಸಿಬಿಟ್ಟರು.

ಮಹಾಮುನಿಯೇ! ವೀರಧನ್ವಮಹಾರಾಜನು ಹೀಗೆ ಸತ್ಯಲೋಕದವರೆಗೂ ಹೋಗಿ, ಪುನರ್ಮರಣವಿಲ್ಲದುದೂ, ಸುಡುವ ಪ್ರಳಯವಿಲ್ಲದುದೂ ಆದ ಆ ಲೋಕದಲ್ಲಿ ದೇವತೆಗಳಿಂದ ಸ್ತೋತ್ರಮಾಡಿಸಿಕೊಳ್ಳುತ್ತಾ ಈಗಲೂ ಇದ್ದಾನೆ. ಯಜ್ಞಪುರುಷನಾದ ಆ ನಾರಾಯಣನು ಪ್ರಸನ್ನನಾದರೆ ಯಾವುದಾಗುವುದರಲ್ಲಿ ತಾನೇ ಆಶ್ಚರ್ಯವೇನು! ಒಂದೊಂದು ದ್ವಾದಶೀವ್ರತವನ್ನು ವಿಧಿಪೂರ್ವಕವಾಗಿ ಮಾಡಿದರೆ ಈ ಲೋಕದಲ್ಲಿ ಸೌಭಾಗ್ಯವನ್ನೂ, ಆಯುರಾರೋಗ್ಯಸಂಪತ್ತುಗಳನ್ನೂ, ಬಳಿಕ ಉತ್ತಮವಾದ ಮುಕ್ತಿಯನ್ನೂ ಕೊಡುತ್ತಾನೆ. ಎಲ್ಲಾ ದ್ವಾದಶೀವ್ರತಗಳಿಂದಲೂ ಸಂಪೂರ್ಣತೃಪ್ತನಾದ ಅವನು ತನ್ನ ಪದ(ಸ್ಥಾನ)ವನ್ನೇ ಅನುಗ್ರಹಿಸುವನೆಂಬುದರಲ್ಲಿ ಏನಾಶ್ಚರ್ಯ! ವೇದಗಳೆಂಬ ನಾಕು ಮೂರ್ತಿಗಳುಳ್ಳ ನಾರಾಯಣನು ಶ್ರೇಷ್ಠನು. ಸಂಶಯವಿಲ್ಲ. ಆ ಕೇಶವನು ಮತ್ಸ್ಯರೂಪದಿಂದ ವೇದಗಳನ್ನು ಹೇಗೆ ಉದ್ಧರಿಸಿದನೋ ಹಾಗೆಯೇ ಕ್ಷೀರಸಾಗರವನ್ನು ಕಡೆಯುವಾಗ ಕೂರ್ಮರೂಪಿಯಾಗಿ ಮಂದರಪರ್ವತವನ್ನು ಧರಿಸಿದನು. ಎರಡನೆಯವನಾದ ಈ ವೈಷ್ಣವಮೂರ್ತಿಯನ್ನು ನೋಡು. ಅದರಂತೆಯೇ ವರಾಹರೂಪಿಯಾದ ಆ ಪುರುಷೋತ್ತಮನು ರಸಾತಲದಿಂದ ಭೂದೇವಿಯನ್ನೂ ಉದ್ಧರಿಸಿದನಲ್ಲವೇ! ಮೂರನೆಯದಾದ ಇದೂ ವೈಷ್ಣವಮೂರ್ತಿಯೇ ನೋಡು. ವರಾಹಪುರಾಣದಲ್ಲಿ ನಲವತ್ತೊಂದನೆಯ ಅಧ್ಯಾಯ ಮುಗಿಯಿತು

**ಭೀಷ್ಮ ದ್ವಾದಶೀ –** ಮಾಘ ಶುಕ್ಲ ದ್ವಾದಶೀಯನ್ನು ಭೀಷ್ಮ ದ್ವಾದಶೀ ಎಂದೂ ಕೂಡ ಕರೆಯುತ್ತಾರೆ. ಈ ದಿನ ಸರ್ವಪಾಪಹರವು. ಏಕಾದಶೀ ಉಪವಾಸ ಮಾಡಿ ದ್ವಾದಶೀ ತಿಲಸ್ನಾನ, ತಿಲದಿಂದ ವಿಷ್ಣುಪೂಜೆ, ತಿಲದೀಪ, ತಿಲನೈವೇದ್ಯ , ತಿಲಹೋಮ, ತಿಲದಾನ, ತಿಲಭಕ್ಷಣವನ್ನು ಮಾಡಬೇಕು.

## ಮಾಘ ॥ ಶುದ್ಧ ॥ ತ್ರಯೋದಶೀ

**ಅಂತ್ಯಪುಷ್ಕರಣೀ –** ಪುಷ್ಯಮಾಸದ ಹುಣ್ಣಿಮೆಯಿಂದ ಮಾಘಮಾಸದ ಹುಣ್ಣಿಮೆಯ ತನಕ ನಿತ್ಯವೂ ತಪ್ಪದೇ ಮಾಘಸ್ನಾನವನ್ನು ಆಚರಿಸಬೇಕು. ಯಾರಿಗೆ

ಅನಾನುಕೂಲವಿರುತ್ತದೋ ಅಂಥವರು ಅಂತ್ಯಪುಷ್ಕರಣಿಯ ಆಚರಣೆಯನ್ನು ಮಾಡಬೇಕು. ಈ ಮೂರುದಿವಸದ ಪರ್ವಕಾಲದಲ್ಲಿ ಮಾಘಸ್ನಾನವನ್ನು ಆಚರಿಸುವುದರಿಂದ ಒಂದು ತಿಂಗಳ ಕಾಲ ಸ್ನಾನ ಮಾಡದೇ ಇರುವುದಕ್ಕೆ ಪ್ರಾಪ್ತವಾದ ದೋಷವು ಪರಿಹಾರವಾಗುತ್ತದೆ. ಅಂತ್ಯಪುಷ್ಕರಣಿಗೆ ಎಲ್ಲಿಲ್ಲದ ಮಹತ್ವವಿದೆ. ಇದರ ಅನುಷ್ಠಾನವನ್ನಾದರೂ ಕೂಡ ಸಾಧಕರು ಮಾಡಬೇಕು.

## ಮಾಘ ॥ ಶುದ್ಧ ॥ ಚತುರ್ದಶೀ

ತ್ರಯೋದಶೀಯಂತೆ ಇಂದೂ ಕೂಡ ಮಾಘಸ್ನಾನವನ್ನು ಮಾಡಬೇಕು. ಸ್ತ್ರೀಯರು ಸ್ನಾನ ಪ್ರಯುಕ್ತ ಬಾಗಿಣದಾನವನ್ನು ಗಂಗೆಗೆ ನೀಡಬೇಕು. ಹಾಗೂ ಪತಿವ್ರತೆಯರಿಗೂ ಕೂಡ ಬಾಗಿಣದಾನವನ್ನು ಮಾಡಬೇಕು. ಹತ್ತಿಯ ಬಟ್ಟೆ, ಕಂಬಳಿ, ರತ್ನ, ವಸ್ತ್ರ ಮೊದಲಾದ ದಾನಗಳು ಇಂದು ವಿಹಿತವಾಗಿದೆ.

## ಮಾಘ ॥ ಶುದ್ಧ ॥ ಹುಣ್ಣಿಮೆ

**ವ್ಯಾಸ ಪೂರ್ಣಿಮೆ** – ವರ್ಷದ ಮೂರು ವ್ಯಾಸಪೂರ್ಣಿಮೆಗಳಲ್ಲಿ ಇದೂ ಕೂಡ ಒಂದಾಗಿದೆ. ವೇದವ್ಯಾಸದೇವರನ್ನು ಇಂದು ವಿಶೇಷವಾಗಿ ಪೂಜೆ ಮಾಡಬೇಕು. ವ್ಯಾಸಪೂರ್ಣಿಮೆಯ ಬಗ್ಗೆ ಹೆಚ್ಚಿನ ವಿಚಾರವನ್ನು ಆಷಾಢಮಾಸದ ಹುಣ್ಣಿಮೆಯ ದಿವಸದಲ್ಲಿ ನೀಡಲಾಗಿದೆ.

**ಮಾಘ ಪೂರ್ಣಿಮೆ** – ವೈಶಾಖೇ ಕಾರ್ತಿಕೇ ಮಾಘೇ ಪೂರ್ಣಿಮಾ ತು ಮಹಾಫಲ। ದತ್ತಾನಾಂ ಇಹ ದಾನಾನಾಂ ಫಲಂ ಶತಗುಣಂ ಭವೇತ್ ॥ ಎಂಬುದಾಗಿ ಹೇಳಿದಂತೆ ಇಂದು ಯಾವುದೇ ದಾನವನ್ನು ಮಾಡುವುದರಿಂದ ಮಹತ್‌ಫಲವು ಪ್ರಾಪ್ತವಾಗುತ್ತದೆ. ಆದ್ದರಿಂದ ಸಾಧಕರು ತಮ್ಮ ಶಕ್ತಿಗೆ ಅನುಗುಣವಾಗಿ ಇಂದು ದಾನವನ್ನು ಮಾಡಬೇಕು. ಈ ದಿನ ಕೆಲವರು ಕುಲಧರ್ಮವನ್ನು ಆಚರಿಸುತ್ತಾರೆ. ವ್ಯಾಸಪೂಜೆ ನಡೆಯುತ್ತದೆ. ಮಾಘಸ್ನಾನದ ಕೊನೆಯ ದಿನವಿದು. ಅನೇಕ ಕಡೆಗಳಲ್ಲಿ ರಥೋತ್ಸವಗಳು ಜಾತ್ರೆಗಳು ನಡೆಯುತ್ತವೆ. ಮಾಘಮಾಸದ ಹುಣ್ಣಿಮೆಯು ಭಾರತಹುಣ್ಣಿಮೆ ಎಂದೂ ಪ್ರಸಿದ್ಧ. ಮಾಘಹುಣ್ಣಿಮೆಯಂದು ಕೃಷ್ಣರಾಧೆಯರ ರಾಸನೃತ್ಯಕೇಳಿಗಳನ್ನು ಅಭಿನಯಿಸುತ್ತ ರಾತ್ರಿಗಳನ್ನು ಉತ್ಸವದಲ್ಲಿ ಕಳೆಯುವ ಪದ್ಧತಿ ಸಾಕಷ್ಟು ಪುರಾತನವಾದದ್ದು. ಇಂದಿಗೂ ಬೃಂದಾವನ, ಮಥುರಾ, ದ್ವಾರಕಾ ಮುಂತಾದ ಕ್ಷೇತ್ರಗಳಲ್ಲಿ ರಾತ್ರಿ ಇಡೀ ಉತ್ಸವಗಳು ಜರುಗುತ್ತವೆ.

**ಶ್ರೀ ಜ್ಞಾನನಿಧಿತೀರ್ಥರು (ಶ್ರೀಪಾದರಾಜ ಮಠ) ಶ್ರೀರಂಗಪಟ್ಟಣ** – ಪಶ್ಚಿಮೇ ಶ್ರೀರಂಗನಾಥ ಕ್ಷೇತ್ರೇ ಬೃಂದಾವನೇಸ್ಥಿತಂ । ವಿದ್ಯಾನಿಧಿ ಕರಾಬ್ಜೋತ್ಥಂ ನೌಮಿ ಜ್ಞಾನನಿಧಿಂ ಯತಿಂ ॥

## ಮಾಘ ॥ ಕೃಷ್ಣ ॥ ಪಂಚಮೀ

ಶ್ರೀ ಜಗನ್ನಾಥತೀರ್ಥರು (ಮಾಧವತೀರ್ಥ ಮಠ) – ವಂಶರಾಮ ಪದಾಸಕ್ತಂ ಶ್ರೀಮಧ್ವಮತ ಸ್ಥಾಪಕಮ್ । ಶ್ರೀಜಗನ್ನಾಥಗುರುಂ ವಂದೇ ಮೌನಿವರ್ಯ ಕರೋದ್ಭವಮ್ ॥

## ಮಾಘ ॥ ಕೃಷ್ಣ ॥ ಷಷ್ಠೀ

ಶ್ರೀ ಸುಪ್ರಜ್ಞೇಂದ್ರತೀರ್ಥರು (ರಾಯರ ಮಠ) ನಂಜನಗೂಡು – ಸುಧಾ ಜಿಜ್ಞಾಸಯಾ ಸರ್ವಸುಬುಧಾನಂದದಾಯಕಾನ್ । ಸುಪ್ರಜ್ಞೇಂದ್ರ ಮುನೀನ್ವಂದೇ ಸದಾ ವಿದ್ಯಾಗುರೂನ್ನಮ ॥ ರಾಜಗೋಪಾಲಾಚಾರ್ಯರ ಮಕ್ಕಳು ವೆಂಕಟ ರಾಘವೇಂದ್ರಾಚಾರ್ಯರು, ಗುರುರಾಜಾಚಾರ್ಯರು, ಸುಗುಣೇಂದ್ರತೀರ್ಥ-ಸ್ವಾಮಿಗಳಿಂದ ಆಶ್ರಮ ಹೊಂದಿ ಸುಪ್ರಜ್ಞೇಂದ್ರತೀರ್ಥರೆಂದು ಹೆಸರು ಪಡೆದರು. ಸುಪ್ರಜ್ಞೇಂದ್ರತೀರ್ಥಸ್ವಾಮಿಗಳು ಅತ್ಯಂತ ದೈವಭಕ್ತರು, ಪಂಡಿತರು, ಮೈಸೂರು ಅರಸರಾದ ಚಾಮರಾಜ ಒಡೆಯರ ಆಸ್ಥಾನ ಪಂಡಿತರುಗಳಾದ ಕೌಲಗಿ ಶೇಷಾಚಾರ್ಯರೇ ಮೊದಲಾದ ವಿದ್ವಾಂಸರು ಶ್ರೀಗಳವರ ವಿದ್ಯಾಪಕ್ಷಪಾತಕ್ಕೆ ಮನಸೋತು ಬಂದು ಶ್ರೀಗಳವರ ಅನುಗ್ರಹ ಸಂಪಾದಿಸಿ ಹೋದರು. ರಾಜರು ಶ್ರೀಗಳವರನ್ನು ಅರಮನೆಗೆ ಆಹ್ವಾನಿಸಿ ಪೂಜೆ ಮಾಡಿಸಿ ವಿಶೇಷ ಗೌರವ ಮಾಡಿ ಕಳುಹಿಸಿಕೊಟ್ಟರು. ಇವರು ವಿಶೇಷವಾಗಿ ನಂಜನಗೂಡಿನಲ್ಲೇ ಇದ್ದು ಶೋಭಕೃತ್ ಸಂವತ್ಸರದ ಮಾಘ ಬಹುಳ ಷಷ್ಠಿಯದಿನ ನಂಜನಗೂಡಿನಲ್ಲಿ ವೃಂದಾವನಸ್ಥರಾದರು.

## ಮಾಘ ॥ ಕೃಷ್ಣ ॥ ಸಪ್ತಮೀ

ಶ್ರೀ ಗುಣನಿಧಿತೀರ್ಥರು (ಶ್ರೀಪಾದರಾಜ ಮಠ) ತಾಯೂರು – ಜ್ಞಾನನಿಧಿ ಕರಾಬ್ಜೋತ್ಥಂ ಸವಿದ್ವನ್ಮಣಿ ವಿರಾಜಿತಂ । ಸಮ್ಯಷ್ಟಾನ್ನ ಪ್ರದಾತಾರಂ ವಂದೇ ಗುಣನಿಧಿಂ ಮುನಿಂ ॥

ಶ್ರೀ ಶ್ರೀನಿವಾಸ ಮಾಧವತೀರ್ಥರು (ಮಾಧವತೀರ್ಥ ಮಠ) ಮಾಧವಪುರ-ಚತುಷ್ಟಿ ಕಲಾವಿದ್ಯಾ ಧೈರ್ಯಾದಿಗುಣ ಬೃಂಹಿತಮ್ । ಶ್ರೀನಿವಾಸ ಮಾಧವ ತೀರ್ಥಾಖ್ಯೋ ಗುರುಂವಂದೇ ನಿರಂತರಮ್ ॥

## ಮಾಘ ॥ ಕೃಷ್ಣ ॥ ಅಷ್ಟಮೀ

ಸೀತಾ ಜಯಂತೀ – ಮಾಘ ಕೃಷ್ಣ ಅಷ್ಟಮಿಯಂದು ಸೀತಾವತಾರವಾದ ದಿವಸ. ಅಂದು ರಾಮಪತ್ನೀ ಸೀತಾದೇವಿಯನ್ನು ಪೂಜಿಸಬೇಕು.

**ತಿಸ್ರೋ ಅಷ್ಟಕಾ** – ಮಾಘಮಾಸದ ಕೃಷ್ಣಪಕ್ಷದ ಸಪ್ತಮಿಯಂದು ಪೂರ್ವೇದ್ಯುಃ ಅಷ್ಟಕ, ಅಷ್ಟಮಿಯಂದು ಅಷ್ಟಕ, ನವಮಿಯಂದು ಅನ್ವಷ್ಟಕ. ಮಾರ್ಗಶೀರ್ಷ, ಪುಷ್ಯ, ಮಾಘ, ಫಾಲ್ಗುಣ, ನಾಲ್ಕು ತಿಂಗಳಲ್ಲಿಯೂ ಈ ಅಷ್ಟಕಶ್ರಾದ್ಧಗಳನ್ನು ಮಾಡಬೇಕು. ಈ ನಾಲ್ಕು ಮಾಸದಲ್ಲಿ ಆಗದಿದ್ದರೆ, ಮಾಘದಲ್ಲಿಯಾದರೂ ಅಷ್ಟಕ ಶ್ರಾದ್ಧಗಳನ್ನು ಮಾಡಬೇಕು. ಅನ್ವಷ್ಟಕ ಶ್ರಾದ್ಧವನ್ನು ತಾಯಿಯನ್ನು ಉದ್ದೇಶಿಸಿ ಜೀವಪಿತೃಕರೂ ಮಾಡಬೇಕು.

## ಮಾಘ ॥ ಕೃಷ್ಣ ॥ ಏಕಾದಶೀ

ಯುಧಿಷ್ಠಿರ ಉವಾಚ - ಸಾಧು ಕೃಷ್ಣ ಜಗನ್ನಾಥ ಆದಿದೇವ ನಮೋಽಸ್ತು ತೇ । ಕಥಯಸ್ವ ಪ್ರಸಾದೇನ ಕೃಪಾಂ ಕೃತ್ವಾ ಮಮೋಪರಿ ॥೧॥ ಯುಧಿಷ್ಠಿರನು ಹೇಳಿದನು - ಜಗನ್ನಾಥನೂ ಜಗತ್ಪತಿಯೂ ಆದ ಎಲೈ ಕೃಷ್ಣನೇ ! ಚೆನ್ನಾಗಿ ಹೇಳಿದೆ. ಸಂತೋಷವಾಯಿತು. ನನ್ನ ಮೇಲೆ ಕೃಪೆಯಿಟ್ಟು ಮಾಘಮಾಸದ ಕೃಷ್ಣ ಪಕ್ಷದ ಏಕಾದಶಿಯು ಯಾವುದು ಎಂಬುದನ್ನು ಹೇಳು. ಮಾಘಸ್ಯ ಕೃಷ್ಣಪಕ್ಷೇ ತು ಕಾ ವಾ ಚೈಕಾದಶೀ ಭವೇತ್ । ಕಥಯಸ್ವ ಪ್ರಸಾದೇನ ಕ್ರಿಯಾಂ ಕಿನ್ನಾಮಕೋ ವಿಧಿಃ ॥ ಫಲಮಸ್ಯ ಮಹಾಪ್ರಾಜ್ಞ ಏತದ್ವಿಸ್ತರತೋ ವದ ॥೨॥ ಅದರ ಹೆಸರೇನು? ಅದರ ವಿಧಿ ಯಾವುದು? ಅದಕ್ಕೆ ಫಲವೇನು? ಎಂಬುದನ್ನೆಲ್ಲಾ ವಿಸ್ತಾರವಾಗಿ ಹೇಳು. ಶ್ರೀ ಭಗವಾನುವಾಚ - ಶೃಣು ತ್ವಂ ನೃಪಶಾರ್ದೂಲ ಕೃಷ್ಣಾ ಮಾಘಸ್ಯ ಯಾ ಭವೇತ್ । ಷಟ್ತಿಲಾ ನಾಮ ವಿಖ್ಯಾತಾ ಸರ್ವಪಾಪ ಪ್ರಣಾಶಿನೀ ॥೩॥ ಶ್ರೀ ಭಗವಂತನು ಹೇಳಿದನು - ಎಲೈ ಯುಧಿಷ್ಠಿರನೇ! ಮಾಘ ಕೃಷ್ಣ ಏಕಾದಶಿಗೆ ಷಟ್ತಿಲೈಕಾದಶಿಯೆಂದು ಹೆಸರು. ಅದು ಎಲ್ಲಾ ಪಾಪಗಳನ್ನೂ ನಾಶಮಾಡುತ್ತದೆ. ಷಟ್ತಿಲಾಯಾಶ್ಶೃಣುಷ್ವ ತ್ವಂ ಕಥಾಂ ಪಾಪಹರಾಂ ಶುಭಾಂ । ಯಾಂ ಪುಲಸ್ತ್ಯೋ ಮುನಿಶ್ರೇಷ್ಠೋ ದಾಲ್ಭ್ಯಂ ಪ್ರತಿ ಸಮುಕ್ತವಾನ್ ॥೪॥ ಈ ಷಟ್ತಿಲೈಕಾದಶಿಯ ವಿಷಯವನ್ನು ಕೇಳು. ಆ ಕಥೆಯು ಪಾಪ ಹರಣ ಮಾಡುತ್ತದೆ. ಇದನ್ನು ಮಹರ್ಷಿಯಾದ ಪುಲಸ್ತ್ಯನು ದಾಲ್ಭ್ಯಋಷಿಗೆ ಹೇಳಿದನು. ದಾಲ್ಭ್ಯ ಉವಾಚ - ಮರ್ತ್ಯಲೋಕಮನುಪ್ರಾಪ್ತಾಃ ಪಾಪಂ ಕುರ್ವಂತಿ ಜಂತವಃ । ಬ್ರಹ್ಮಹತ್ಯಾದಿಪಾಪೈಶ್ಚ ಯುಕ್ತಾ ಯೇ ಗೋವಧಾದಿಭಿಃ ॥೫॥ ಪರದ್ರವ್ಯಾಪಹಾರಶ್ಚ ಪರವ್ಯಸನಮೋಹಿತಃ। ಕಥಂ ಗಚ್ಛೇನ್ನ ನರಕಾನ್ ಬ್ರಹ್ಮನ್ ತದ್ಬ್ರೂಹಿ ತತ್ವತಃ ॥೬॥ ದಾಲ್ಭ್ಯನು ಹೇಳಿದನು- ಎಲೈ ಪುಲಸ್ತ್ಯನೆ! ಮನುಷ್ಯ ಲೋಕದಲ್ಲಿ ಹುಟ್ಟಿದವರು ಅನೇಕವಾಗಿ ಪಾಪಗಳನ್ನು

ಮಾಡುತ್ತಾರೆ. ಅವರು ಬ್ರಹ್ಮಹತ್ಯೆಯನ್ನು ಮಾಡುತ್ತಾರೆ. ಗೋವಧೆಯನ್ನು ಮಾಡುತ್ತಾರೆ. ಪರರ ದ್ರವ್ಯವನ್ನು ಅಪಹರಿಸುತ್ತಾರೆ. ಪರರಿಗೆ ದುಃಖ ಕೊಡುತ್ತಾರೆ. ಇಂತಹ ಪಾಪಿಗಳು ನರಕದಿಂದ ಉದ್ಧಾರವಾಗುವ ಬಗೆಯನ್ನು ನನಗೆ ಸರಿಯಾಗಿ ಹೇಳು. ಅನಾಯಾಸೇನ ಭಗವನ್ ದಾನೇನಾಲ್ಪೇನ ಕೇನಚಿತ್ । ಪಾಪಂ ಪ್ರಶಮನಂ ಯಾತಿ ಏತದ್ಧೇ ವಕ್ತುಮರ್ಹಸಿ ॥೭॥ ಎಲ್ಲೆ ಭಗವಂತನೇ ! ಕಷ್ಟವಿಲ್ಲದಂತೆ ಯಾವುದಾದರೂ ಸ್ವಲ್ಪ ದಾನದಿಂದಲೇ ಪಾಪವನ್ನು ಕಳೆದುಕೊಳ್ಳಬೇಕು. ಅಂತಹದೊಂದು ವಿಧಿಯನ್ನು ಹೇಳು. ಪುಲಸ್ತ್ಯ ಉವಾಚ - ಸಾಧು ಸಾಧು ಮಹಾಭಾಗ ಗುಪ್ತಮೇತದುದಾಹೃತಂ। ಯಸು ಕಸ್ಯ ಚಿದಾಖ್ಯಾತಂ ಬ್ರಹದಮವಿಷ್ಣ್ವಿಂದ್ರದೈವಶ್ಯೆಃ ॥೮॥ ತದಹಂ ಕಥಯಿಷ್ಯಾಮಿ ತ್ವಯಾ ಪೃಷ್ಟೋ ದ್ವಿಜೋತ್ತಮ । ಮಾಘಮಾಸೇ ತು ಸಂಪ್ರಾಪ್ತೇ ಶುಚಿಸ್ನಾತೋ ಜಿತೇಂದ್ರಿಯಃ ॥೯॥ ಕಾಮಕ್ರೋಧಾದ್ಯಹಂಕಾರ-ಲೋಭಪೈಶುನ್ಯವರ್ಜಿತಃ । ದೇವದೇವಂ ಚ ಸಂಸ್ಮೃತ್ಯ ಪಾದೌ ಪ್ರಕ್ಷಾಳ್ಯ ವಾರಿಭಿಃ ॥೧೦॥ ಪುಲಸ್ತ್ಯನು ಹೇಳಿದನು - ಎಲ್ಲೆ ಪುಣ್ಯಾತ್ಮನೇ! ನೀನು ಕೇಳಿದುದು ಚೆನ್ನಾಗಿದೆ. ಗುಟ್ಟಾದುದು ಇದೊಂದಿರುವುದು. ಇದನ್ನು ಬ್ರಹ್ಮ, ವಿಷ್ಣು, ಇಂದ್ರ ಮತ್ತೆ ಯಾವ ದೇವತೆಗಳಾಗಲಿ ಒಬ್ಬರೂ ಯಾರಿಗೂ ಹೇಳಿಲ್ಲ. ನೀನು ಕೇಳಿದುದರಿಂದ ನಿನಗೆ ಇದನ್ನು ಹೇಳುತ್ತೇನೆ. ಮಾಘಮಾಸ ಬಂದೊಡನೆಯೇ ವ್ರತ ಮಾಡುವವನು ಸ್ನಾನ ಮಾಡಿ ಜಿತೇಂದ್ರಿಯನಾಗಿರಬೇಕು. ಕಾಮ, ಕ್ರೋಧ, ಲೋಭ, ಮೋಹಗಳನ್ನೂ, ಸುಳ್ಳು, ಚಾಡಿಗಳನ್ನೂ ಬಿಟ್ಟುಬಿಡಬೇಕು. ಸ್ವಾಮಿಯಜನ್ನ ಸ್ಮರಿಸುತ್ತ ಕೈಕಾಲುಗಳನ್ನು ತೊಳೆದುಕೊಳ್ಳಬೇಕು. ಭೂಮಾವಪತಿತಂ ಗೃಹ್ಯ ಗೋಮಯಂ ತತ್ರ ಮಾನವಃ । ತಿಲಾನ್ ಪ್ರಕ್ಷಿಪ್ಯ ಕಾರ್ಪಾಸಪಿಂಡಕಾಂಶ್ಚೈವ ಕಾರಯೇತ್ ॥೧೧॥ ವ್ರತಮಾಡುವವನು ಹಸುವಿನ ಬಳಿಗೆ ಹೋಗಿ ಅದು ಸಗಣಿಯನ್ನು ಹಾಕುವಾಗ ನೆಲದ ಮೇಲೆ ಬೀಳುವುದಕ್ಕೆ ಮೊದಲೇ ಅದನ್ನು ಹಿಡಿದುಕೊಳ್ಳಬೇಕು. ಅದಕ್ಕೆ ಕರಿಯ ಎಳ್ಳನ್ನು ಬೆರೆಸಿ ಕಲಸಿ ಅದರಲ್ಲಿರುವ ನೀರನ್ನು ಬಟ್ಟೆಯಲ್ಲಿ ಕಟ್ಟಿ ಹಿಂಡಿ ಸಣ್ಣ ಸಣ್ಣಗೆ ಉಂಡೆಗಳನ್ನು ಮಾಡಬೇಕು. ಅಷ್ಟೋತ್ತರ ತತಂ ಚೈವ ನಾತ್ರ ಕಾರ್ಯಾ ವಿಚಾರಣಾ । ತತೋ ಮಾಘೇ ಚ ಸಂಪ್ರಾಪ್ತೇ ಆರ್ದ್ರಾ ಚೈವ ಭವೇದ್ಯದಿ ॥೧೨॥ ಮೂಲಂ ವಾ ಕೃಷ್ಣಪಕ್ಷಸ್ಯೈಕಾದಶೀ ನಿಯಮಾಂಸ್ತತಃ। ಗೃಹ್ಣೀಯಾತ್ಪುಣ್ಯ ಫಲದಂ ವಿಧಾನಂ ತತ್ರ ಮೇ ಶ್ರುಣು ॥೧೩॥ ಆ ಉಂಡೆಗಳನ್ನು ನೂರೆಂಟನ್ನು ಮಾಡಿಟ್ಟುಕೊಂಡಿರಬೇಕು. ಅನಂತರ ಮಾಘಮಾಸ ಬಂದನಂತರ ಆ ಮಾಘದ ಕೃಷ್ಣ ಪಕ್ಷದಲ್ಲಿ ಏಕಾದಶಿಯು ಅರಿದ್ರಾ ನಕ್ಷತ್ರದಿಂದಾಗಲೀ,

ಮೂಲ ನಕ್ಷತ್ರದಿಂದಲಾಗಲೀ, ಮೂಲ ನಕ್ಷತ್ರದಿಂದಾಗಲಿ ಕೂಡಿರಬೇಕು. ಅದೇ ಪುಣ್ಯವನ್ನು ಕೊಡತಕ್ಕದ್ದು. ಅದರ ವಿಧಿಯನ್ನು ಹೇಳುತ್ತೇನೆ. ಕೇಳು. ದೇವದೇವಂ ಸಮಭ್ಯರ್ಚ್ಯ ಸುಸ್ನಾತಃ ಪ್ರಯತಶ್ಶುಚಿಃ । ಕೃಷ್ಣನಾಮಾಥ ಸಂಕೀರ್ತ್ಯ ಪುನಃ ಪ್ರಸ್ಖಲಿತಾದಿಷು ॥೧೪॥ ಆದಿನ ದೇವದೇವನನ್ನು ಅರ್ಚಿಸಬೇಕು. ಸ್ನಾನ ಮಾಡಿ ಶುಚಿಯಾಗಿರಬೇಕು. ಕೃಷ್ಣನಾಮ ಸ್ಮರಣೆಯನ್ನು ಮಾಡುತ್ತಿರಬೇಕು. ತಪ್ಪು ಮಾಡಿದಾಗಲೆಲ್ಲಾ ಕೃಷ್ಣ ಕೃಷ್ಣ ಎನ್ನುತ್ತಿರಬೇಕು. ರಾತ್ರೌ ಜಾಗರಣಂ ಕುರ್ಯಾದಾದೌ ಹೋಮಂ ಚ ಕಾರಯೇತ್ । ಅರ್ಚಯೇದ್ದೇವದೇವೇಶಂ ಶಂಖಚಕ್ರಗದಾಧರಂ ॥೧೫॥ ಚಂದನಾಗರು- ಕರ್ಪೂರೈರ್ನೈವೇದ್ಯೈಶ್ಶರ್ಕರಾದಿಭಿಃ। ಸಂಸ್ಮೃತ್ಯ ನಾಮ್ನಾ ಚ ತತಃ ಕೃಷ್ಣಾಖ್ಯೇನ ಪುನಃ ಪುನಃ ॥೧೬॥ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಬೇಕು. ಬೆಳಗ್ಗೆ ಹೋಮವನ್ನು ಮಾಡಬೇಕು. ಶಂಖ, ಚಕ್ರ , ಗದಾಧರನಾದ ದೇವದೇವನಾದ ಶ್ರೀ ವಿಷ್ಣುವನ್ನು, ಚಂದನ, ಅಗರು, ಪಚ್ಚಕರ್ಪೂರ ಮುಂತಾದವುಗಳಿಂದ ಪೂಜಿಸಿ, ಸಕ್ಕರೆಯೇ ಮುಂತಾದುವನ್ನು ನೈವೇದ್ಯ ಮಾಡಬೇಕು. ವಿಷ್ಣುವಿನ ಇಪ್ಪತ್ತು ನಾಲ್ಕು ನಾಮಗಳನ್ನೂ, ಅಷ್ಟೋತ್ತರ ಸಹಸ್ರನಾಮಗಳನ್ನೂ ಹೇಳಿ ಪೂಜಿಸಬೇಕು. ಬಾರಿ ಬಾರಿಗೂ ಕೃಷ್ಣನ ಹೆಸರನ್ನು ಹೇಳುತ್ತಿರಬೇಕು. ಕೂಶ್ಮಾಂಡೈರ್ನಾರಿಕೇಳೈಶ್ಚ ಅಥವಾ ಬೀಜಪೂರಕೈಃ । ಸರ್ವಾಭಾವೇಪಿ ವಿಪ್ರೇಂದ್ರ ಶತೈಃ ಪೂಗೀಫಲೈಸ್ತಥಾ ॥೧೭॥ ಕುಂಬಳ, ತೆಂಗು, ಮಾದಳಗಳ ಹಣ್ಣುಗಳಿಂದ ಪೂಜಿಸಬೇಕು. ಇವು ಒಂದೂ ಸಿಕ್ಕದಿದ್ದಲ್ಲಿ (ಸಾಧ್ಯವಾಗದಿದ್ದಲ್ಲಿ) ನೂರು ಅಡಕೆಕಾಯಿಗಳಿಂದಲಾದರೂ ಪೂಜಿಸಬೇಕು. ಅರ್ಘ್ಯಂ ದದ್ಯಾದ್ವಿಧಾನೇನ ಪೂಜಯಿತ್ವಾ ಜನಾರ್ದನಂ । ಕೃಷ್ಣ ಕೃಷ್ಣ ಕೃಪಾಳುಸ್ತ್ವಮಗತೀನಾಂ ಗತಿರ್ಭವ ॥೧೮॥ ಸಂಸಾರಾರ್ಣವಮಗ್ನಾನಾಂ ಪ್ರಸೀದ ಪುರುಷೋತ್ತಮ। ನಮಸ್ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ ॥೧೯॥ ಸುಬ್ರಹ್ಮಣ್ಯ ನಮಸ್ತೇಸ್ತು ಮಹಾಪುರುಷ ಪೂರ್ವಜ । ಗೃಹಾಣಾರ್ಘ್ಯಂ ಮಯಾ ದತ್ತಂ ಲಕ್ಷ್ಮ್ಯಾ ಸಹ ಜಗತ್ಪತೇ ॥೨೦॥ ವಿಧಿಪೂರ್ವಕವಾಗಿ ಜನಾರ್ದನನನ್ನು ಪೂಜಿಸಿ ಅರ್ಘ್ಯವನ್ನು ಕೊಡಬೇಕು. ಎಲೈ ಕೃಷ್ಣನೇ! ನೀನು ಕೃಪಾಳುವು. ಗತಿಯಿಲ್ಲದವರಿಗೆ ನೀನೇ ಗತಿಯು. ಸಂಸಾರವೆಂಬ ಸಮುದ್ರದಲ್ಲಿ ಮುಳುಗಿರುವವರಿಗೆ ನೀನೇ ತಾರಕನು. ಎಲೈ ಪುಂಡರೀಕಾಕ್ಷನೇ! ನಿನಗೆ ನಮಸ್ಕಾರವು. ಪುರಾತನ ಪುರುಷನೇ! ನಿನಗೆ ನಮಸ್ಕಾರವು. ಎಲೈ ಜಗತ್ಪತಿಯೇ! ನಾನು ಕೊಟ್ಟ ಈ ಅರ್ಘ್ಯವನ್ನು ಸ್ವೀಕರಿಸು ಎಂದು ಹೇಳಿ ಅರ್ಘ್ಯವನ್ನು ಕೊಡಬೇಕು. ತತಸ್ತು ಪೂಜಯೇದ್ವಿಪ್ರಮುದಕುಂಭಂ ಪ್ರದಾಪಯೇತ್ । ಛತ್ರೋಪಾನಹವಸ್ತ್ರೈಶ್ಚ ಕೃಷ್ಣೋ ಮೇ ಪ್ರಿಯತಾಮಿತಿ ॥೨೧॥

ಆಮೇಲೆ ಬ್ರಾಹ್ಮಣನನ್ನು ಪೂಜಿಸಬೇಕು. ಅವನಿಗೆ ಕಲಶವನ್ನು ಕೊಡಬೇಕು. ಛತ್ರಿ, ಕೆರ, ವಸ್ತ್ರಗಳನ್ನು ದಾನ ಮಾಡಬೇಕು. ಕೃಷ್ಣನು ಪ್ರೀತನಾಗಲಿ ಎಂದೆನ್ನಬೇಕು. ಕೃಷ್ಣಾ ಧೇನುಃ ಪ್ರದಾತವ್ಯಾ ಯಥಾಶಕ್ತಿ ದ್ವಿಜೋತ್ತಮೇ । ತಿಲಪಾತ್ರಂ ದ್ವಿಜಶ್ರೇಷ್ಠ ದದ್ಯಾತ್ಪಾತ್ರವಿಚಕ್ಷಣಃ ॥೨೨॥ ಶಕ್ತಿಗನುಸಾರವಾಗಿ ಒಂದು ಕಪ್ಪು ಹಸುವನ್ನು ತಂದು ಗೋದಾನ ಮಾಡಬೇಕು. ಯೋಗ್ಯನಾದವನನ್ನು ನೋಡಿ ಎಳ್ಳಿನ ಪಾತ್ರೆಯನ್ನು ದಾನ ಮಾಡಬೇಕು. ಸ್ನಾನೇ ಪ್ರಸ್ಥಾನಕೇ ಶಸ್ತಾಸ್ತಥಾ ಕೃಷ್ಣತಿಲಾ ಮುನೇ । ತಿಲಪ್ರರೋಹಾಜ್ಜಾಯಂತೇ ಯಾವಚ್ಛಾಖಾ ದ್ವಿಜೋತ್ತಮ ॥೨೩॥ ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ। ತಿಲಸ್ನಾಯೀ ತಿಲೋದ್ವರ್ತೀ ತಿಲಹೋಮೀ ತಿಲೋದಕೀ ॥ ತಿಲದಾತಾ ಚ ಭೋಕ್ತಾ ಚ ಷಟ್ತಿಲಾ ಪಾಪನಾಶಿನೀ॥೨೪॥ ಅನಂತರ ಕೊನೆಯಲ್ಲಿ ಸ್ನಾನ ಮಾಡಬೇಕು. ಆಗ ನೀರಿನಲ್ಲಿ ಕರಿಯ ಎಳ್ಳನ್ನು ಹಾಕಿ ಅದರಿಂದ ಸ್ನಾನ ಮಾಡಬೇಕು. ಆ ಎಳ್ಳಿನಲ್ಲಿ ಎಷ್ಟು ಹುಟ್ಟಿ ಶಾಖೋಪಶಾಖೆಗಳಾಗುತ್ತವೆಯೋ ಅಷ್ಟು ಸಾವಿರ ವರ್ಷಗಳು ಸ್ವರ್ಗದಲ್ಲಿ ಸುಖಿಸುವನು. ಕರಿಯ ಎಳ್ಳಿನ ನೀರಿನ ಸ್ನಾನ, ಮೈಗೆಲ್ಲವೂ ಎಳ್ಳನ್ನು ಉಜ್ಜಿ ಕೊಳ್ಳುವುದು, ಎಳ್ಳನ್ನು ಹೋಮ ಮಾಡುವುದು, ಎಳ್ಳಿನಲ್ಲಿ ತರ್ಪಣ ಕೊಡುವುದು, ಎಳ್ಳನ್ನು ದಾನ ಮಾಡುವುದು, ಎಳ್ಳನ್ನು ತಿನ್ನುವುದು ಇವೇ ಆರು ತಿಲಗಳು. ಈ ಷಟ್ (ಆರು) ತಿಲಗಳೂ ಪಾಪನಾಶಕವಾದುವು. ಯುಧಿಷ್ಠಿರ ಉವಾಚ- ಷಟ್ತಿಲೈಕಾದಶೀ ದೇವ ಕೀದೃಶಂ ಫಲಮಶ್ನುತೇ । ಸೋಪಾಖ್ಯಾನಂ ಮಮ ಬ್ರೂಹಿ ಯದಿ ತುಷ್ಟೋಸಿ ಮಾಧವ ॥೨೫॥ ಯುಧಿಷ್ಠಿರನು ಹೇಳಿದನು - ಎಲೈ ಸ್ವಾಮಿಯೆ ! ಷಟ್ತಿಲೈಕಾದಶಿಯನ್ನು ಮಾಡಿದವನು ಎಂತಹ ಫಲವನ್ನು ಹೊಂದುತ್ತಾನೆ? ಅದರ ಕಥೆಯೊಡನೆ ನನಗೆ ತಿಳಿಸು. ಶ್ರೀಕೃಷ್ಣ ಉವಾಚ - ಶೃಣು ರಾಜನ್ಯಥಾವೃತ್ತಂ ದೃಷ್ಟಾಂತಂ ಕಥಯಾಮಿ ತೇ । ಮರ್ತ್ಯಲೋಕೇ ಪುರಾ ಹ್ಯಾಸೀದ್ಬ್ರಾಹ್ಮಣೀ ತತ್ರ ಪಾಂಡವ ॥೨೬॥ ಶ್ರೀಕೃಷ್ಣನು ಹೇಳಿದನು - ಎಲೈ ಯುಧಿಷ್ಠಿರನೇ! ನಡೆದ ಒಂದು ವಿಷಯವನ್ನು ಉದಾಹರಣೆಯಾಗಿ ಹೇಳುತ್ತೇನೆ. ಕೇಳು. ಪೂರ್ವದಲ್ಲಿ ಈ ಮನುಷ್ಯಲೋಕದಲ್ಲಿ ಒಬ್ಬಳು ಬ್ರಾಹ್ಮಣ ಹೆಂಗಸಿದ್ದಳು. ಬ್ರಹ್ಮಚರ್ಯರತಾ ನಿತ್ಯಂ ದೇವಪೂಜಾಪರಾಯಣಾ । ಶರೀರಂ ಕ್ಲೇಶಿತಂ ಚೈವ ಉಪವಾಸ್ಯೈರ್ನೃಪೋತ್ತಮ ॥೨೭॥ ಆಕೆಯು ಬ್ರಹ್ಮಚರ್ಯದಿಂದಿದ್ದುಕೊಂಡು ದೇವರಪೂಜೆಯನ್ನು ಸದಾ ಮಾಡುತ್ತಲಿದ್ದಳು. ಈ ರೀತಿಯಾದ ವ್ರತದಿಂದ ಆಕೆಯು ಶರೀರವನ್ನು ಕೃಶ ಮಾಡಿಕೊಂಡಿದ್ದಳು. ದೇವಾನಾಂ ಬ್ರಾಹ್ಮಣಾನಾಂ ಚ ಕುಮಾರೀಣಾಂ ಚ

ಭಕ್ತಿತಃ। ಗೃಹಾಣಿ ಸಾ ಪ್ರಯಚ್ಛಂತೀ ಸರ್ವಕಾಲಂ ಮಹಾಸತೀ ॥೨೮॥ ಅತಿತೃಷ್ಣಾರತಾ ಸಾ ತು ಸರ್ವಕಾಲಂ ತು ವೈ ದ್ವಿಜ। ನ ದತ್ತಾ ಭಿಕ್ಷುಕೇ ಭಿಕ್ಷಾ ಬ್ರಾಹ್ಮಣಾ ನ ಚ ತರ್ಪಿತಾಃ ॥೨೯॥ ದೇವತೆಗಳಿಗೂ, ಬ್ರಾಹ್ಮಣರಿಗೂ, ಕನ್ನಿಕೆಯರಿಗೂ, ಭಕ್ತಿಯಿಂದ ಯಾವಾಗಲೂ ಮನೆಗಳನ್ನು ದಾನ ಮಾಡುತ್ತಿದ್ದಳು. ಆದರೆ ಆಕೆಯು ಬಹಳ ಆಸೆಯುಳ್ಳವಳಾಗಿದ್ದಳು. ಆದುದರಿಂದಲೇ ಒಂದು ಬಾರಿಯೂ ಕೂಡ ಆಕೆಯು ಭಿಕ್ಷುಕರಿಗೆ ಭಿಕ್ಷೆ ಹಾಕುತ್ತಿರಲಿಲ್ಲ. ಬ್ರಾಹ್ಮಣರಿಗೆ ಅನ್ನ ಹಾಕುತ್ತಿರಲಿಲ್ಲ. ತತಃ ಕಾಲೇನ ಮಹತಾ ಮಯಾ ವೈ ಚಿಂತಿತಂ ನೃಪ। ಶುದ್ಧಮಸ್ಯಾಶ್ಶರೀರಂ ಹಿ ವ್ರತೈಃ ಕೃಚ್ಛ್ರೈರ್ನ ಸಂಶಯಃ ॥೩೦॥ ಅನಂತರ ಕೆಲವು ಕಾಲವಾದ ಮೇಲೆ ಈಕೆಯ ಶರೀರವು ವ್ರತಗಳಿಂದಲೂ ಕೃಚ್ಛ್ರಾಚರಣೆಯಿಂದಲೂ ಶುದ್ಧವಾಗಿದೆ. ಸಂಶಯವಿಲ್ಲ. ಅರ್ಚಿತೋ ವೈಷ್ಣವೋ ಲೋಕಃ ಕಾಯಕ್ಲೇಶೇನ ತತ್ವತಃ। ನ ದತ್ತಮನ್ನದಾನಂ ಹಿ ಯೇನ ತೃಪ್ತಿಃ ಪರಾ ಭವೇತ್ ॥೩೧॥ ಈಕೆಯು ವೈಷ್ಣವರನ್ನು ಪೂಜಿಸಿದ್ದಾಳೆ. ದೇಹವನ್ನು ಬಹುವಾಗಿ ದಂಡಿಸಿದ್ದಾಳೆ. ಆದರೆ ಪ್ರಾಣಿಗೆ ತೃಪ್ತಿಯನ್ನು ಉಂಟುಮಾಡುವ ಅನ್ನದಾನವನ್ನು ಮಾತ್ರ ಮಾಡಿರುವುದಿಲ್ಲ. ಏವಂ ಜ್ಞಾತ್ವಾ ಹ್ಯಹಂ ಪಾರ್ಥ ಮರ್ತ್ಯಲೋಕಮುಪಾಗತಃ। ಕಪಿಲಂ ರೂಪಮಾಸ್ಥಾಯ ಭಿಕ್ಷಾಂ ಪಾತ್ರೇ ಚ ಯಾಚಿತಾ ॥೩೨॥ ಎಂಬುದನ್ನು ನಾನು ತಿಳಿದು ಮನುಷ್ಯಲೋಕದಲ್ಲಿ, ಕಪಿಲನ ರೂಪವನ್ನು ಹೊಂದಿ, ಪಾತ್ರೆಯನ್ನು ತೆಗೆದುಕೊಂಡು ಹೋಗಿ, ಭಿಕ್ಷೆಯನ್ನು ಆಕೆಯ ಬಳಿಯಲ್ಲಿ ಬೇಡಿದನು. ಬ್ರಾಹ್ಮಣ್ಯುವಾಚ - ಕಸ್ಮಾತ್ತ್ವಮಾಗತೋ ಬ್ರಹ್ಮನ್ ಕ್ವಯಾಸಿ ವದಮೇಽಗ್ರತಃ ॥೩೩॥ ಬ್ರಾಹ್ಮಣಿಯು ಹೇಳಿದಳು - ಎಲೈ ಬ್ರಾಹ್ಮಣನೇ! ನೀನು ಎಲ್ಲಿಂದ ಬಂದೆ? ಎಲ್ಲಿಗೆ ಹೋಗುತ್ತೀಯೆ? ಅದನ್ನು ನನಗೆ ಹೇಳು. ಶ್ರೀಕೃಷ್ಣ ಉವಾಚ - ಪುನರೇವ ಮಯಾ ಪ್ರೋಕ್ತಾ ದೇಹಿ ಭಿಕ್ಷಾಂ ಚ ಸುಂದರಿ। ತಯಾ ಕೋಪೇನ ಮಹತಾ ಮೃತ್ಪಿಂಡಸ್ತಾಮ್ರಭಾಜನೇ ॥೩೪॥ ಕ್ಷಿಪ್ತೋ ಯಾವತ್ತಯಾ ಪಾರ್ಥಖ ಪುನಸ್ಸ್ವರ್ಗಂಗತಸ್ತತಃ। ತತಃ ಕಾಲೇನ ಮಹತಾ ತಾಪಸೀ ಸುಮಹಾವ್ರತಾ ॥೩೫॥ ಸದೇಹಾ ಸ್ವರ್ಗಮಾಯಾತಾ ಬ್ರಹ್ಮಚರ್ಯಪ್ರಭಾವತಃ। ಮೃತ್ಪಿಂಡಿಕಾ-ಪ್ರದಾನೇನ ಗೃಹಂ ಪ್ರಾಪ್ತಂ ಮನೋರಮಂ ॥೩೬॥ ಶ್ರೀಕೃಷ್ಣನು ಹೇಳಿದನು - ಆದರೂ ನಾನು ಮತ್ತೆ ಅಮ್ಮಾ! ಭಿಕ್ಷೆಯನ್ನು ಕೊಡೆಂದೆನು. ಆಗ ಆಕೆಯು ಕೋಪದಿಂದ ನನ್ನ ಆ ತಾಮ್ರದ ಭಿಕ್ಷಾಪಾತ್ರೆಯೊಳಕ್ಕೆ ಮಣ್ಣಿನ ಹೆಂಟೆಗಳನ್ನು ಹಾಕಿದಳು. ಅನಂತರ ನಾನು ಸ್ವರ್ಗಕ್ಕೆ ಹೊರಟುಹೋದೆನು. ಅನಂತರ ಕಾಲದ ಮೇಲೆ ಆ ಮಹಾವ್ರತಗಳನ್ನು ಮಾಡಿದ ತಾಪಸಿಯು ತನ್ನ ಬ್ರಹ್ಮಚರ್ಯದ ಮಹಿಮೆಯಿಂದ ದೇಹ

ಸಹಿತವಾಗಿ ಸ್ವರ್ಗಕ್ಕೆ ಹೋದಳು. ಅವಳು ಮಾಡಿದ್ದ ಮಣ್ಣಿನ ಹೆಂಟೆಯ ದಾನದಿಂದ ಚೆನ್ನಾಗಿರುವ ಮನೆಯು ಸಿಕ್ಕಿತು. ಸಂಜಾತಂ ಚೈವ ರಾಜರ್ಷೇ ಧಾನ್ಯರಾಶಿ ವಿವರ್ಜಿತಂ। ಗೃಹಂ ಯಾವನ್ನಿರೀಕ್ಷೇತ ನ ಕಿಂಚಿತ್ತತ್ರ ಪಶ್ಯತಿ ॥೩೭॥ ಆ ಮನೆಯಲ್ಲಿ ಧಾನ್ಯಗಳೊಂದು ಇರಲಿಲ್ಲ. ಈಕೆಯು ಹೋಗಿ ಮನೆಯಲ್ಲಿ ನೋಡಲು ಅಲ್ಲಿ ಏನೂ ಇರಲಿಲ್ಲ. ತಾವದ್ಗೃಹಾದ್ವಿನಿಷ್ಕ್ರಾಂತಾ ಮಮಾಂತೇ ಚಾಗತಾ ನೃಪ। ಕ್ರೋಧೇನ ಮಹತಾವಿಷ್ಟಮಿದಂ ವಚನಮಬ್ರವೀತ್ ॥೩೮॥ ಒಡನೆಯೇ ಮನೆಯಿಂದ ಹೊರಟು ನನ್ನ ಬಳಿಗೆ ಬಂದಳು. ಆಗ ಬಹು ಕೋಪದಿಂದ ಇಂತೆಂದಳು. ಬ್ರಾಹ್ಮಣ್ಯುವಾಚ - ಮಯಾ ವ್ರತೈಶ್ಚ ಕೃಚ್ಛ್ರೈಶ್ಚ ಉಪವಾಸೈರನೇಕಶಃ। ಪೂಜಯಾರಾಧಿತೋ ದೇವಃ ಸರ್ವಲೋಕಸ್ಯ ಮಾನದ ॥ ನ ತತ್ರ ದೃಶ್ಯತೇ ಕಿಂಚಿದ್ಗೃಹೇ ಮಮ ಜನಾರ್ದನ ॥೩೯॥ ಬ್ರಾಹ್ಮಣಿಯು ಹೇಳಿದಳು - ನಾನು ವ್ರತಗಳನ್ನೂ, ಕೃಚ್ಛ್ರಗಳನ್ನೂ, ಉಪವಾಸಗಳನ್ನೂ ಮಾಡಿ ಭಕ್ತಿಯಿಂದ ದೇವರನ್ನು ಆರಾಧಿಸಿದೆನು. ಎಲೈ ಪ್ರಪಂಚಕ್ಕೆಲ್ಲಾ ಗೌರವಸ್ಥನೇ? ಈಗ ನನ್ನ ಮನೆಯಲ್ಲಿ ಏನೂ ಕಾಣುತ್ತಿಲ್ಲವಲ್ಲ? ಏನನ್ನು ತಿನ್ನುವುದು? ಶ್ರೀಕೃಷ್ಣ ಉವಾಚ - ತತಶ್ಚೋಕ್ತಂ ಮಯಾ ತಸ್ಯೈ ಗೃಹಂ ಗಚ್ಛ ಮಹಾವ್ರತೇ। ಆಗಮಿಷ್ಯಂತಿ ಸುತರಾಂ ಕೌತೂಹಲಸಮನ್ವಿತಾಃ ॥೪೦॥ ಶ್ರೀಕೃಷ್ಣನು ಹೇಳೀದನು - ಆಗ ನಾನು ಅವಳನ್ನು ಕುರಿತು ಎಲೈ ಮಹಾವ್ರತೆಯೇ! ನಿನ್ನನ್ನು ನೋಡಲು ಸಂತೋಷದಿಂದಲೂ, ಆಶ್ಚರ್ಯದಿಂದಲೂ ದೇವತೆಗಳ ಹೆಂಡಿರು ಬರುವರು. ಅವರು ಬಂದಾಗ ಬಾಗಿಲನ್ನು ಹಾಕಿಕೊಂಡಿರು ತೆಗೆಯ ಬೇಡ. ಆದರೆ ಷಟ್ತಿಲಾ ಪುಣ್ಯವನ್ನು ಕೊಡುತ್ತೇವೆಂಬ ಮಾತನ್ನು ತೆಗೆದುಕೊಂಡು ಬಾಗಿಲನ್ನು ತೆಗೆಯಬೇಕು. ಆಗ ನಿನಗೆ ಅನುಕೂಲವಾಗುತ್ತದೆ. ದೇವಪತ್ನ್ಯೋ ಹಿ ತ್ವಾಂ ದ್ರಷ್ಟುಂ ವಿಸ್ಮಯಾಭಿಸಮನ್ವಿತಾಃ। ದ್ವಾರಂ ನೋದ್ಘಾಟನೀಯಂ ಹಿ ಷಟ್ತಿಲಾಪುಣ್ಯವಾಕ್ಯತಃ ॥೪೧॥ ಏವಮುಕ್ತ್ವಾ ಮಯಾ ಸಾ ತು ಗತಾ ವೈ ಮಾನುಷೀ ತದಾ। ಅತ್ರಾಂತರೇ ಸಮಾಯಾತಾ ದೇವಪತ್ನ್ಯಶ್ಚ ಪಾಂಡವ ॥೪೨॥ ನಾನು ಹೀಗೆಂದು ಹೇಳಲು ಆ ಮಾನುಷಿಯು ಹೊರಟು ಹೋದಳು. ಅನಂತರ ಅವಲ ಮನೆಗೆ ದೇವತಾ ಸ್ತ್ರೀಯರು ಅವಳನ್ನು ನೋಡಲು ಬಂದರು. ತಾಭಿಶ್ಚ ಕಥಿತಂ ತತ್ರ ತ್ವಾಂ ದ್ರಷ್ಟುಂ ಹಿ ಸಮಾಗತಾಃ। ದ್ವಾರಮುದ್ಘಾಟಯ ತ್ವಂ ಚ ತ್ವಾಂ ಪ್ರಪಶ್ಯಾಮ ಶೋಭನೇ ॥೪೩॥ ಆಗ ದೇವತಾ ಸ್ತ್ರೀಯರು ಅಮ್ಮಾ! ಮಹಾವ್ರತಿನಿಯೇ! ನಿನ್ನನ್ನು ನೋಡಲು ಬಂದಿದ್ದೇವೆ. ಬಾಗಿಲನ್ನು ತೆಗೆ. ಮಂಗಳಕರವಾದ ನಿನ್ನನ್ನು ನೋಡಬೇಕು. ಮಾನುಷ್ಯುವಾಚ - ಯದಿ ದ್ರಷ್ಟುಂ

ಮಯಾ ಕಾರ್ಯಂ ಸತ್ಯಂ ವಚ್ಮಿ ವಿಶೇಷತಃ । ಷಟ್ತಿಲಾಪುಣ್ಯಂ ದದತ ದ್ವಾರೋದ್ಘಾಟನಕಾರಣಾತ್ ॥೪೪॥ ಮಾನುಷಿಯು ಹೇಳಿದಳು - ಎಲೈ ಸುಂದರಿಯರಿರಾ! ನನ್ನನ್ನು ನೀವು ಅವಶ್ಯಕವಾಗಿ ನೋಡಬೇಕಾದರೆ ನನಗೊಂದು ಕೆಲಸವನ್ನು ಮಾಡಿಕೊಡಬೇಕು. ಇದು ನಿಶ್ಚಯ. ಹಾಗೆ ಮಾಡುತ್ತೇನೆಂದರೆ ಬಾಗಿಲು ತೆಗೆಯುತ್ತೇನೆ. ಅದೇನೆಂದರೆ ಷಟ್ತಿಲಾ ಪುಣ್ಯವನ್ನು ನನಗೆ ಕೊಡಿರಿ. ಶ್ರೀಕೃಷ್ಣ ಉವಾಚ- ಏಕಾಪಿ ಚೈವ ತತ್ರಾಂಗ ದದಾತಿ ಮಹಾವ್ರತಂ । ಅನ್ಯಯಾ ಕಥಿತಂ ತತ್ರ ದ್ರಷ್ಟವ್ಯಾ ಮಾನುಷೀ ಮಯಾ ॥೪೫॥ ಶ್ರೀಕೃಷ್ಣನು ಹೇಳಿದನು - ಎಲೈ ಧರ್ಮಜನೇ! ಒಬ್ಬಳೂ ಕೂಡ ಆ ಮಹಾವ್ರತದ ಪುಣ್ಯವನ್ನು ಕೊಡಲು ಒಪ್ಪಲಿಲ್ಲ. ಅವಳಲ್ಲಿ ಒಬ್ಬಳು ಮಾತ್ರ ನಾನು ಆ ಮಾನುಷಿಯನ್ನು ನೋಡಬೇಕು. ನಾನು ಆ ಷಟ್ತಿಲಾ ಪುಣ್ಯವನ್ನು ಕೊಡುತ್ತೇನೆ. ಎಂದು ಕೊಟ್ಟಳು. ತತೋ ದ್ವಾರಂ ಸಮುದ್ಘಾಟ್ಯ ದೃಷ್ಟ್ವಾ ತಾಭಿಶ್ಚ ಮಾನುಷೀ । ನ ದೇವೀ ನ ಚ ಗಂಧರ್ವೀ ನಾಸುರೀ ನ ಚ ಪನ್ನಗೀ ॥೪೬॥ ದೃಷ್ಟಪೂರ್ವಾ ಮಯಾ ನಾರೀ ಯಾದೃಶೀ ಸಾ ನೃಪರ್ಷಭ । ರೂಪಕಾಂತಿಸಮಾಯುಕ್ತಾ ಕ್ಷಣೇನ ಸಮಪದ್ಯತ ॥೪೭॥ ಆ ಮೇಲೆ ಬಾಗಿಲನ್ನು ತೆಗೆಯಲು ಆ ದೇವತೆಗಳು ಆಕೆಯನ್ನು ನೋಡಿದರು. ದೇವತೆಗಳನ್ನಾಗಲೀ, ಗಂಧರ್ವರಲ್ಲಾಗಲೀ, ಅಸುರರಲ್ಲಾಗಲೀ, ಪನ್ನಗರಲ್ಲಾಗಲೀ ಇಂತಹ ಹೆಂಗಸನ್ನು ನಾನು ನೋಡಿಯೇ ಇಲ್ಲ. ಇಂತಹ ರೂಪು ಕಾಂತಿಗಳನ್ನು ಹೊಂದಿ ಕ್ಷಣಕಾಲದಲ್ಲಿ ಹಾಗಾದಳು. ಧನಧಾನ್ಯಂ ಚ ವಸ್ತ್ರಾದಿ ಸುವರ್ಣಂ ರೂಪ್ಯಮೇವ ಚ । ಭವನಂ ಸರ್ವಸಂಪನ್ನಂ ಷಟ್ತಿಲಾಯಾಃ ಪ್ರಸಾದತಃ ॥೪೮॥ ಆ ಷಟ್ತಿಲೆಯ ಪುಣ್ಯದ ಮಹಿಮೆಯಿಂದ ಧನ, ಧಾನ್ಯ, ವಸ್ತ್ರ, ಚಿನ್ನ, ಬೆಳ್ಳಿ ಮತ್ತೆಲ್ಲವೂ ಕೂಡ ತುಂಬಿ ತುಳುಕಾಡುತ್ತಿದ್ದಿತು. ಅತಿತೃಷ್ಣಾ ನ ಕರ್ತವ್ಯಾ ವಿತ್ತಶಾಠ್ಯಂ ವಿವರ್ಜಯೇತ್ । ಆತ್ಮವಿತ್ತಾನುಸಾರೇಣ ತಿಲಾನ್ವಸ್ತ್ರಾಣಿ ದಾಪಯೇತ್ ॥೪೯॥ ಆದುದರಿಂದ ಹೆಚ್ಚಾದ ಆಸೆ ಪಡಬಾರದು. ಹಣದಲ್ಲಿ ಲೋಭಿತನವನ್ನು ಮಾಡಬಾರದು. ತನ್ನ ಹಣದ ರೀತಿಗನುಸಾರವಾಗಿ ಎಳ್ಳನ್ನೂ ಬಟ್ಟೆಗಳನ್ನೂ ಕೊಡಬೇಕು. ಲಭತೇ ಚೈವಮಾರೋಗ್ಯಂ ನರೋ ಜನ್ಮನಿ ಜನ್ಮನಿ । ನ ದರಿದ್ರಂ ನ ಕಷ್ಟತ್ವಂ ನ ಚ ದೌರ್ಭಾಗ್ಯಮೇವ ಚ ॥೫೦॥ ನ ಭವೇದ್ವೈ ನೃಪಶ್ರೇಷ್ಠ ಷಟ್ತಿಲಾಯಾಮುಪೋಷಣಾತ್ । ಅನೇನ ವಿಧಿನಾ ರಾಜಂ ಸ್ತಿಲದಾನಾನ್ನ ಸಂಶಯಃ ॥೫೧॥ ಮುಚ್ಯಂತೇ ಪಾತಕೈಸ್ಸರ್ವೈರನಾಯಾಸೇನ ಮಾನವಾಃ । ದಾನಂ ಚ ವಿಧಿವದ್ದತ್ತಂ ಸವಖಪಾತಕನಾಶನಂ । ನಾನರ್ಥಭೂತೋ ನಾಽಽಯಾಸಃ ಶರೀರೇ ಮುನಿಸತ್ತಮ ॥೫೨॥ ಇತಿ ಶ್ರೀ ಮಹಾಪುರಾಣೇ ಪಾದ್ಮೇ

ಉತ್ತರಖಂಡೇ ಉಮಾಪತಿ ನಾರದ ಸಂವಾದಾಂಶ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಮಾಘ ಕೃಷ್ಣ ಷಟ್ತಿಲೈಕಾದಶೀ ವರ್ಣನಂ ನಾಮ ಚತುಶ್ಚತ್ವಾರಿಂಶೋಽಧ್ಯಾಯಸ್ಸಮಾಪ್ತಃ॥ ಹೀಗೆ ಷಟ್ತಿಲೈಕಾದಶಿಯ ಉಪವಾಸವನ್ನು ಮಾಡಿದರೆ ಆರೋಗ್ಯವು ಲಭಿಸುತ್ತದೆ. ಜನ್ಮಜನ್ಮದಲ್ಲಿಯೂ ದರಿದ್ರನಾಗುವುದಿಲ್ಲ. ಕಷ್ಟಗಳು ಬರುವುದಿಲ್ಲ. ಕೆಟ್ಟಸ್ಥಿತಿಯುಂಟಾಗುವುದಿಲ್ಲ. ಈ ರೀತಿಯಲ್ಲಿ ಅದು ಉತ್ತಮವಾದುದು. ಈ ರೀತಿಯಾದ ವಿಧಿಯಿಂದ ತಿಲದಾನವನ್ನು ಮಾಡಿದರೆ ಆಯಾಸವಿಲ್ಲದೇನೆ ಮನುಷ್ಯರು ಎಲ್ಲಾ ಪಾಪಗಳನ್ನೂ ಕಳೆದುಕೊಳ್ಳುತ್ತಾರೆ. ವಿಧಿಯಂತೆ ದಾನಮಾಡಿದರೆ ಮಹಾಪಾಪಗಳೂ ಕೂಡ ನಾಶವಾಗುತ್ತವೆ. ದೇಹದಲ್ಲಿ ಕೆಡುಕಿನಿಂದ ಉಂಟಾದ ಆಯಾಸಗಳೆಲ್ಲವೂ ಬರುವುದಿಲ್ಲ. ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದೊಳಗಿನ ಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಮಾಘ ಕೃಷ್ಣ ಷಟ್ತಿಲೈಕಾದಶಿಯ ವರ್ಣನೆ ಎಂಬ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು,

## ಮಾಘ ॥ ಕೃಷ್ಣ ॥ ದ್ವಾದಶೀ

ಶ್ರೀ ವೀರಮಾಧವತೀರ್ಥರು (ಮಾಧವತೀರ್ಥ ಮಠ) ಮಾಧವಪುರ - ಶ್ರೀನಿವಾಸ ಮಾಧವಾಖ್ಯಸಂಜಾತಾನ್ ವೀರರಾಮ ಪದಾರ್ಚಕಾನ್ । ವೀರ ಮಾಧವಗುರುಂ ವಂದೇ ಸದಾ ನ್ಯಾಯಸುಧಾರತಾನ್ ॥

## ಮಾಘ ॥ ಕೃಷ್ಣ ॥ ತ್ರಯೋದಶೀ

ಶ್ರೀ ವಿಷ್ಣುತೀರ್ಥರ ಸ್ಮರಣೆ- ಶ್ರೀ ಮನ್ಮಧ್ವಾಚಾರ್ಯರ ಸಹೋದರರಾದ ವಿಷ್ಣುತೀರ್ಥರ ಅನಂತರ ಪ್ರಸಿದ್ಧರಾದ ಮತ್ತೊಬ್ಬ ವಿಷ್ಣುತೀರ್ಥರೆಂದರೆ ಆರಣ್ಯಕಾಚಾರ್ಯರು, ಅಡವಿಸ್ವಾಮಿಗಳೆಂದು ಪ್ರಸಿದ್ಧರಾಗಿರುವ ಮಾದನೂರಿನ ಶ್ರೀವಿಷ್ಣುತೀರ್ಥರು. ಪೀಠವನ್ನು ಬಯಸದೇ ವಿಶೇಷ ಜ್ಞಾನಕಾರ್ಯಕ್ಕೆಂದು ಮಾತ್ರವೇ ಪರಮ ಹಂಸಾಶ್ರಮವನ್ನು ಸ್ವೀಕರಿಸಿ ಪಾಠಪ್ರವಚನ, ಗ್ರಂಥರಚನೆಗಳಿಂದ ಜಗಜಾಗೃತಿಯನ್ನು ಮಾಡಿ ಭಗವಂತನ ಅನುಗ್ರಹಕ್ಕೆ ಪಾತ್ರರಾದವರು. ಮಾಧ್ವ ಪರಂಪರೆಯಲ್ಲಿ ಈ ವರ್ಗದಲ್ಲಿ ಬಂದಂಥ ಮಹನೀಯರಲ್ಲಿ (ಶ್ರೀ ವೇದೇಶತೀರ್ಥರು, ಶ್ರೀ ಕೃಷ್ಣದ್ವೈಪಾಯನರು, ಶ್ರೀ ಯಾದವಾರ್ಯರು, ಶ್ರೀ ಮಧುಸೂದನತೀರ್ಥರು, ಶ್ರೀ ವ್ಯಾಸತತ್ವಜ್ಞರು ಮೊದಲಾದವರು) ಶ್ರೀ ವಿಷ್ಣುತೀರ್ಥರೂ ಒಬ್ಬರಾಗಿರುತ್ತಾರೆ.

ಜನನ - ಶಿರಹಟ್ಟಿ ಗ್ರಾಮದ ನಿವಾಸಿಗಳಾಗಿದ್ದ ಶ್ರೋತ್ರಿಯರಾದ ತಿರುಮಲಾಚಾರ್ಯರ ಪುತ್ರರಾದ ನರಹರಿ ಆಚಾರ್ಯರು (ಬಾಳಾಚಾರ್ಯ) ಭಾಗೀರಥೀಬಾಯಿ ದಂಪತಿಗಳೇ ಇವರ ಮಾತಾಪಿತೃಗಳು. ಶ್ರೀಮಟ್ಟೀಕಾಕೃತ್ಪಾದರ ಅನುಗ್ರಹಕ್ಕೆ ಪಾತ್ರರಾದವರು. ಇವರು ಸವಣೂರು ಪ್ರಾಂತ್ಯದ ಸಿದ್ಧಾಪುರ ಗ್ರಾಮದಲ್ಲಿ ವಾಸವಾಗಿದ್ದಾಗ ಶಾ.ಶ. ೧೬೭೮ ಈಶ್ವರನಾಮ ಸಂವತ್ಸರದ ಶ್ರಾವಣ ಕೃಷ್ಣ ಅಷ್ಟಮಿ ದಿನ (ಶ್ರೀಕೃಷ್ಣಜಯಂತಿ)ದಂದು ಪುತ್ರಸಂತಾನವಾಯಿತು. ತಮ್ಮ ತಂದೆ ತಿರುಮಲಾಚಾರ್ಯರು ಮೊದಲೇ ತಿಳಿಸಿದ್ದಂತೆ ಟೀಕಾಕೃತ್ಪಾದರ ವಿಶೇಷ ಅನುಗ್ರಹದಿಂದ ಜನಿಸಿರುವ ಮಗನಿಗೆ ಬಾಳಾಚಾರ್ಯರು, 'ಜಯತೀರ್ಥ' ಎಂದು ನಾಮಕರಣ ಮಾಡಿದರು.

ಬಾಲ್ಯ, ವಿದ್ಯಾಭ್ಯಾಸ, ಉಪನಯನ, ವಿವಾಹ, ವೈರಾಗ್ಯ: ಬಾಲಕ ಜಯತೀರ್ಥ ತಂದೆಯಲ್ಲಿಯೇ ಕಾವ್ಯ, ಕೋಶ, ವೇದಾಧ್ಯಯನಗಳನ್ನು ಮಾಡಿದನು. ಪ್ರತಿಭಾಸಂಪನ್ನನಾದ ಮಗನನ್ನು ನೋಡಿ ಬಾಳಾಚಾರ್ಯರು ಸಂತೋಷಪಟ್ಟರು. ಸೂಕ್ತ ವಯಸ್ಸಿನಲ್ಲಿ ಉಪನಯನ ಸಂಸ್ಕಾರವನ್ನು ಮಾಡಿದರು. ನಂತರ ಪ್ರಸಿದ್ಧರಾಗಿದ್ದ ಶ್ರೀ ವ್ಯಾಸತತ್ವಜ್ಞರಲ್ಲಿ ತೆರಳಿ ಅವರಲ್ಲಿ ಸಕಲ ಶಾಸ್ತ್ರಗಳನ್ನೂ ಅತ್ಯಲ್ಪ ಕಾಲದಲ್ಲಿಯೇ ಅಧ್ಯಯನ ಮಾಡಿರುತ್ತಾರೆ. (ಶ್ರೀ ರಾಘವೇಂದ್ರಸ್ವಾಮಿಗಳ ಪರಂಪರೆಯ ಶ್ರೀ ಭುವನೇಂದ್ರತೀರ್ಥರಿಂದ ಆಶ್ರಮ ಸ್ವೀಕಾರ ಮಾಡಿದ ಐ.ಜಿ. ವೆಂಕಟ ರಾಮಾಚಾರ್ಯರೇ, ಶ್ರೀ ವ್ಯಾಸತತ್ವಜ್ಞತೀರ್ಥರು). ವಿದ್ಯಾಭ್ಯಾಸದ ನಂತರ ಕಿನ್ನಾಳು ಗ್ರಾಮಕ್ಕೆ ಬಂದು ಗೃಹಸ್ಥಾಶ್ರಮಿಗಳಾದರು. ಅಲ್ಲಿ ಅನೇಕ ಸಜ್ಜನರಿಗೆ ಜ್ಞಾನೋಪದೇಶ ಮಾಡಿದರು. ಇದೇ ಸಮಯದಲ್ಲಿ ಉತ್ತಮವಾದಂಥ ಸಂತಾನವನ್ನು ಹೊಂದಿದರು. ಮಗನಿಗೆ ಕೃಷ್ಣಾಚಾರ್ಯ ಎಂದು ನಾಮಕರಣ ಮಾಡಿದರು. ಗೃಹಸ್ಥಾಶ್ರಮಿ-ಗಳಾಗಿದ್ದರೂ ಸಹಾ ಸನ್ಯಾಸಿಶ್ರೇಷ್ಠರಂತೆ ಪರಮ ವಿರಕ್ತಿಯಿಂದ ಜೀವನ ನಡೆಸಿ ಪಾಠಪ್ರವಚನ, ಕಾಷ್ಠಮೌನ ವ್ರತಗಳಲ್ಲಿ ನಿರತರಾಗಿರುತ್ತಿದ್ದರು. ಗೃಹಸ್ಥ ಜೀವನದಲ್ಲಿ ಭಗವಂತನನ್ನು ಆರಾಧಿಸಿ ತೃಪ್ತರಾಗದ ಆಚಾರ್ಯರು ಇನ್ನೂ ವಿಶೇಷವಾಗಿ ಆರಾಧಿಸಲು ಗೃಹವನ್ನೂ ತ್ಯಜಿಸಿ ಅವಧೂತ ವೃತ್ತಿಯನ್ನು ಸ್ವೀಕರಿಸಿದರು. ಒಮ್ಮೆ ಮನೆಯ ಬಾಗಿಲಿನಲ್ಲಿ ದಾಸಯ್ಯನೊಬ್ಬನು ಹಾಡಿದ ಶ್ರೀ ಪುರಂದರದಾಸರ ಕೃತಿ ''ಮಂಚ ಬಾರದು, ಮಡದಿ ಬಾರಳು, ಕಂಚು ಕನ್ನಡಿ ಬಾರವು। ಸಂಚಿತಾರ್ಥವು ಕಿಂಚಬಾರದು ಮುಂಚೆ ಮಾಡಿರೋ ಧರ್ಮವ॥ ಗೋವಿಂದ ನಮೋ ಗೋವಿಂದ

ನಮೋ ಗೋವಿಂದ ನಾರಾಯಣ ॥ ಗೋವರ್ಧನ ಗಿರಿಯ ನೆತ್ತಿದ ಗೋವಿಂದ ನಮ್ಮ ರಕ್ಷಿಸೋ'' ಈ ಕೃತಿಯನ್ನು ಕೇಳಿದ ಜಯತೀರ್ಥಾಚಾರ್ಯರು ಅದುವರೆವಿಗೂ ಕಳೆದ ಬಾಳಿಗಾಗಿ ಪಶ್ಚಾತ್ತಾಪಪಟ್ಟು ಮನೆ, ಮಡದಿ, ಧನಕನಕಾದಿ ಸಕಲವನ್ನೂ ತೊರೆದು ಅವಧೂತಚರ್ಯೆಯನ್ನು ಕೈಗೊಂಡರು.

**ಸಂಚಾರ, ಸಂನ್ಯಾಸ ಸ್ವೀಕಾರ –** ಅವಧೂತಚರ್ಯೆಯಲ್ಲಿದ್ದಾಗಲೂ ನಿತ್ಯದಲ್ಲಿ ಸಂಚಾರ ಮಾಡುತ್ತಾ ಹಗಳಿರುಳೂ ಶ್ರೀಮದಾಚಾರ್ಯರ ಸಂದೇಶರೂಪವಾಸ ಸಚ್ಛಾಸ್ತ್ರ ಪಾಠ ಪ್ರವಚನವನ್ನು ಮಾಡುತ್ತಿದ್ದರು. ಸಂಚಾರತ್ವೇನ ಬದರೀನಾರಾಯಣನ ದರ್ಶನಾಕಾಂಕ್ಷಿಗಳಾಗಿ ಕೃಷ್ಣಾತೀರದವರೆವಿಗೂ ಪ್ರಯಾಣ ಮಾಡಿದಾಗ ಅಲ್ಲಿ ಅವರಿಗೆ ಶ್ರೀಮಟ್ಟೀಕಾಕೃತ್ಪಾದರು ''ಬದರೀಯಾತ್ರೆಗಿಂತಲೂ ಸುಧಾದಿಮಧ್ವಶಾಸ್ತ್ರಗಳ ಪಠನ ಪಾಠಗಳನ್ನೇ ಶ್ರೇಷ್ಠ ಧರ್ಮ ಅದನ್ನೇ ಪರಿಪಾಲಿಸು'' ಎಂದು ನಿರ್ದೇಶಿಸಿದರು. ಗುರುಗಳ ಆಜ್ಞೆಯಂತೆ ಹಿಂತಿರುಗಿ ಮಲಾಪಹರೀ ನದೀತೀರದಲ್ಲಿರುವ ಗೌತಮಕ್ಷೇತ್ರ ಎಂದು ಪ್ರಸಿದ್ಧವಾದ ಮುನವಳ್ಳಿ ಎಂಬ ಸ್ಥಳದಲ್ಲಿ ೧೨ ವರ್ಷಗಳ ಕಾಲ ನೆಲಸಿದ್ದರು. ಈ ಸಂದರ್ಭದಲ್ಲಿ ತಮ್ಮ ಜ್ಞಾನಯಜ್ಞವನ್ನು ಅಖಂಡವಾಗಿ ಮುಂದುವರೆಸಿ ಭಗವಂತನ ಅನುಗ್ರಹಕ್ಕೆ ಪಾತ್ರರಾದರು. ಈ ರೀತಿಯ ವಾನಪ್ರಸ್ಥಾಶ್ರಮವನ್ನು ಆಚರಿಸಿದ ಇವರು ಜನಗಳಿಂದ ಅರಣ್ಯಕಾಚಾರ್ಯರು (ಅಡವಿ ಆಚಾರ್ಯರು) ಎಂದೇ ಪ್ರಸಿದ್ಧಿ ಹೊಂದಿದರು. ಕೆಲವು ಕಾಲಾನಂತರ ಶ್ರೀಮದುತ್ತರಾದಿಮಠದ ಶ್ರೀ ಸತ್ಯವರತೀರ್ಥರಿಂದ ಪರಮಹಂಸಾಶ್ರಮವನ್ನು ಸ್ವೀಕರಿಸಿ 'ಶ್ರೀ ವಿಷ್ಣುತೀರ್ಥರು' ಎಂದು ಪ್ರಸಿದ್ಧರಾದರು. ಸ್ವಪ್ನದಲ್ಲಿ ಇವರಿಗೆ ಬದರಿನಾರಾಯಣನ ದರ್ಶನವಾಯಿತಲ್ಲದೇ ಮಾದನೂರಿನ ಒಂದು ಸ್ಥಳದಲ್ಲಿ ಸ್ವಪ್ನ ಸೂಚನೆಯಂತೆ ದೊರಕಿದ ಬದರೀನಾರಾಯಣನ ಶಿಲಾವಿಗ್ರಹವು ಇಂದೂ ಮಾದನೂರಿನಲ್ಲಿ ಪೂಜಿತವಾಗುತ್ತಿದೆ. ಅವರ ಮನಸ್ಸಿನಲ್ಲಿದ್ದ ಬದರೀಯಾತ್ರೆಯ ಆಕಾಂಕ್ಷೆಯನ್ನು ಭಗವಂತ ಈ ರೀತಿ ಪೂರೈಸಿರುತ್ತಾನೆ.

**ವಿಷ್ಣುತೀರ್ಥರ ಮಹಿಮೆ –** ಶ್ರೀವಿಷ್ಣುತೀರ್ಥರು ಅಪಾರವಾದ ಮಂತ್ರಸಿದ್ಧಿ ಮತ್ತು ತಪಃಸಿದ್ಧಿಯನ್ನು ಹೊಂದಿದ್ದರು. ಎಲ್ಲವೂ ಸಹಾ ಸಜ್ಜನರ ಮಹಿಮೆಗಳಂತೆ ಲೋಕೋಪಕಾರಗಳಾಗಿವೆ. ಗುರುಗಳಾದ ಐ.ಜಿ. ವೆಂಕಟರಾಮಾಚಾರ್ಯರ ಪುತ್ರರ ಅಪಮೃತ್ಯು ಪರಿಹಾರ, ಅನ್ನವನ್ನು ಕ್ರಿಮಿಯಂತೆ ಕಾಣುತ್ತಿದ್ದ ಕಿನ್ನಾಳದೇಸಾಯರ ವಿಚಿತ್ರ ರೋಗ ಪರಿಹಾರ, ರಮಾಸ್ತೋತ್ರ ಪಠನದಿಂದ ಕ್ಷಾಮದಲ್ಲಿ ಆಶ್ರಿತ ರಕ್ಷಣೆ,

ಕುತೂಹಲಿಗಳಾದ ಶಿಷ್ಯರಿಗೆ ಕಲಿಯನ್ನು ತೋರಿಸಿದ್ದು, ಶಿಷ್ಯರಿಗೆ ರುದ್ರದೇವರ ದರ್ಶನ ಮಾಡಿಸಿದ್ದು ತಮ್ಮ ಸೊಸೆಯಿಂದ ೪೦ ದಿನ ಪ್ರವಚನ ಮಂದಿರದಲ್ಲಿ ದೀಪ ಹಚ್ಚಿಸಿ ತತ್ಫಲವಾಗಿ ಸಂತಾನಭಾಗ್ಯ ಕೊಡಿಸಿದ್ದು ಇವೇ ಮೊದಲಾದ ಅನೇಕ ಮಹಿಮೆಗಳನ್ನು ತೋರಿಸಿರುತ್ತಾರೆ. ಒಮ್ಮೆ ಪ್ರವಚನ ಕಾಲದಲ್ಲಿ ಅಂದು ತವುಗೆ ಅಡಿಗೆ ತಯಾರಿಸಬೇಡವೆಂದು ಶಿಷ್ಯರಿಗೆ ತಿಳಿಸಿ, ಸಂಜೆ ವೇಳೆಗೆ ಎಲ್ಲರಿಗೂ ಭೋಜನಕ್ಕೆ ಅನುಜ್ಞೆಯಿತ್ತು. ನಿಮ್ಮ ಐದಾರು ಜನಗಳಲ್ಲಿ ಒಬ್ಬರಿಗೆ ಅಪಮೃತ್ಯು ಯೋಗವಿದೆ. ಅದಕ್ಕಾಗಿ ನಾವು ದಿನತ್ರಯ ಉಪವಾಸ ಮಾಡಿ ಆ ಪುಣ್ಯವನ್ನು ಅವನಿಗೆ ಧಾರೆಯೆರೆದಲ್ಲಿ ಅದು ಪರಿಹಾರವಾಗುತ್ತದೆ. ಇಲ್ಲವಾದಲ್ಲಿ ಅವನು ಬದುಕಲಾರ. ಆತ ಯಾರು ಎಂಬುದು ೩ನೇ ದಿನದ ಕೊನೆಯಲ್ಲಿ ಅವನಿಗೆ ತಿಳಿಯುತ್ತದೆ ಎಂದು ನುಡಿದು ತಾವು ಉಪವಾಸ ಮಾಡಿ ತಮ್ಮ ಮಗ ಕೃಷ್ಣಾಚಾರ್ಯನಿಗೆ ಬಂದಿದ್ದ ಅಪಮೃತ್ಯುವನ್ನು ಪರಿಹಾರ ಮಾಡಿದರು. ವಿಷ್ಣುತೀರ್ಥರ ಪ್ರವಚನ ಕಾಲದಲ್ಲಿ ಶ್ರೀ ಟೀಕಾಕೃತ್ಪಾದರು ಬರುತ್ತಿದ್ದಂತೆ ಅದರ ಸೂಚಕವಾಗಿ ಆ ಸಂದರ್ಭದಲ್ಲಿ ಎಲ್ಲಾ ಕಡೆ ದಿವ್ಯ ಪರಿಮಳ ಬರುತ್ತಲಿತ್ತು. ಹೀಗೆ ಅನೇಕ ಮಹಿಮೆಗಳ ಮೂಲಕ ಸಜ್ಜನರನ್ನು ಅನುಗ್ರಹ ಮಾಡಿರುತ್ತಾರೆ.

**ಅವರ ಗ್ರಂಥಗಳು -** ವಿಷ್ಣುತೀರ್ಥರು ರಚಿಸಿರುವ ಗ್ರಂಥಗಳು ಇಂತಿಷ್ಟೇ ಎಂದು ನಿಖರವಾಗಿ ತಿಳಿದಿಲ್ಲ. ಉಪಲಬ್ಧವಿರುವ ಗ್ರಂಥಗಳ ವಿವರ ಈ ರೀತಿ ಇದೆ- ೧. ಆಧ್ಯಾತ್ಮರಸರಂಜಿನೀ, ೨. ಬಿಂಬಸ್ತುತಿ, ೩. ಮುಕ್ತಾಮಾಲ (ಗೀತಾ ಸಾರೋದ್ಧಾರ), ೪. ಕೃಷ್ಣಾಷ್ಟಕ, ೫. ಬಿಂಬಾರ್ಪಣ ವಿಧಿ, ೬. ಶ್ರೀರಮಾ ಸ್ತೋತ್ರ, ೭. ಸುಮಧ್ವವಿಜಯ ಪ್ರಮೇಯ ಫಲಮಾಲಿಕಾ, ೮. ನ್ಯಾಯಸುಧಾ ಸ್ತೋತ್ರ, ೯. ಭಾಗವತ ಧರ್ಮಸ್ತೋತ್ರ, ೧೦. ಆತ್ಮಸುಖಬೋಧಿನೀ ಪತ್ರಿಕಾ, ೧೧. ಅಚ್ಯುತಾನಂದ ಸ್ತೋತ್ರ, ೧೨. ಶ್ರೀ ಜಯತೀರ್ಥಾಷ್ಟಕ, ೧೩. ಶ್ರೀ ಜಯತೀರ್ಥ ಸ್ತೋತ್ರ, ೧೪. ಉಪದೇಶ ಪತ್ರ, ೧೫. ಆಜ್ಞಾಪತ್ರ, ೧೬. ಷೋಡಶಿ, ೧೭. ಚತುರ್ದಶಿ, ೧೮. ಭಾಗವತ ಸಾರೋದ್ಧಾರ, ೧೯.ನ್ಯಾಯಸುಧಾ ಟಿಪ್ಪಣಿ, ೨೦. ಶ್ರೀಮದ್ಭಾಗವತಸಾರ, ೨೧. ಸ್ನಾನವಿಧಿ ಇತ್ಯಾದಿ ಗ್ರಂಥಗಳು.

೧. ಸುಧಾಟಿಪ್ಪಣಿ - ಶ್ರೀಮದಾಚಾರ್ಯರ ಅನುವ್ಯಾಖ್ಯಾನ ಗ್ರಂಥಕ್ಕೆ ಟೀಕಾ ರೂಪವಾಗಿ ಹೊರಟ ಶ್ರೀಟೀಕಾಚಾರ್ಯರ 'ಶ್ರೀಮನ್ನ್ಯಾಯಸುಧಾ' ಗ್ರಂಥಕ್ಕೆ ಟಿಪ್ಪಣಿಯನ್ನು ಬರೆದಿದ್ದಾರೆ. ತಮ್ಮ ವಿದ್ಯಾಗುರುಗಳಾದ ಶ್ರೀ ಐಜೀ

ವೆಂಕಟರಾಮಾರ್ಯರನ್ನು ಬಹುಸ್ತೋತ್ರ ಮಾಡಿದ್ದಾರೆ. ಶ್ರೀ ಐಜೀ ಆಚಾರ್ಯರು 'ಶ್ರೀಮನ್ನ್ಯಾಯಸುಧಾರಸರಂಜನೀ' ಗ್ರಂಥ ಮಾಡಿರುವ ವಿಷಯವನ್ನು ಹೇಳಿ ಅದಕ್ಕಾಗಿ ತಾವು 'ರಘುರಸರಂಜನೀ' ಎಂಬ ಹೆಸರಿನಿಂದ ಟಿಪ್ಪಣಿಯನ್ನು ಬರೆದಿದ್ದೇನೆ ಎಂದು ಹೇಳಿದ್ದಾರೆ.

೨. **ಸುಮನೋರಂಜನೀ** – ಇದು ಟೀಕಾರ್ಯರ 'ತತ್ವಪ್ರಕಾಶಿಕಾ'ಕ್ಕೆ ಟಿಪ್ಪಣಿ ರೂಪವಾಗಿದೆ.

೩. **ಸುಧಾಸ್ತೋತ್ರ** – ಶ್ರೀಮನ್ನ್ಯಾಯಸುಧಾ ಗ್ರಂಥದ ಸ್ತೋತ್ರರೂಪವಾದ ಎಂಟು ಶ್ಲೋಕಗಳು ಇವೆ. ಪ್ರತಿಯೊಂದರ ಕೊನೆಯಲ್ಲಿಯೂ 'ಜಯತೀರ್ಥಕೃತೌ ಪ್ರವಣೋನಪುನರ್ಭವಭಾಕ್ ಭವತೀತಿ ಮತಿರ್ಹಿಮಮ' ಎಂದು ಹೇಳಿದ್ದಾರೆ - ಅಂದರೆ 'ಟೀಕಾರಾಯರ ಗ್ರಂಥಗಳಲ್ಲಿ ಭಕ್ತಿವುಳ್ಳವ ಪುನಃ ಸಂಸಾರದಲ್ಲಿ ಬರುವುದೇ ಇಲ್ಲ ಎಂಬುದೇ ನನ್ನ ಅಭಿಪ್ರಾಯ' ಎಂದಿದ್ದಾರೆ.

೪. **ಆತ್ಮ ಸುಖಬೋಧಿನೀ** : ಇದು ಗದ್ಯಗ್ರಂಥ. ಈ ಗ್ರಂಥದಲ್ಲಿ ಜೀವನು ಸ್ವರೂಪಸುಖ ಹೊಂದುವುದಕ್ಕೆ ಸಾಧನಕ್ರಮವನ್ನು ಬೋಧಿಸಿದ್ದಾರೆ.

೫. **ಉಪದೇಶಪತ್ರ** – 'ಆಜ್ಞಾಪತ್ರ' ಎಂತಲೂ ಕರೆಸಲ್ಪಡುವ ಇದು ತಮ್ಮ ವಿದ್ಯಾಶಿಷ್ಯರುಗಳಿಗೆ ದಿನದಲ್ಲಿ ಸಮಯವಿಭಾಗ ಮಾಡಿಕೊಂಡು ಯಾವ ರೀತಿ ಉಪಯೋಗಿಸಿಕೊಳ್ಳಬೇಕೆಂಬುದನ್ನು ತಿಳಿಸಲೂ, ಕಲಿಯ ಪ್ರತಿಬಂಧಕ ಯಾವ ಯಾವ ರೀತಿ ಉಂಟಾಗಬಹುದೆಂಬುದನ್ನು ತಿಳಿಸಲು ಹೊರಟಿರುವ ಗದ್ಯಗ್ರಂಥ.

೬. **ಅಂತ್ಯಕಾಲದ ಸ್ಮರಣೆ** – ಇದು ಎಂಟು ಶ್ಲೋಕಗಳಿರುವ ಒಂದು ಕೃತಿ. ಪ್ರತಿ ಶ್ಲೋಕದ ಕಡೆಗೆ 'ಶ್ರೀಕೃಷ್ಣಮನ್ಮರಣಕಾಲಮುಪಾಗತೇತು ತ್ವನ್ನಾಮ ಮದ್ವಚಿನ ಗೋಚಿರತಾಮುಪೈತು' ಎಂದಿದ್ದಾರೆ. ಅನೇಕ ಭಗವನ್ನಾಮಗಳಿಂದ ಸ್ತುತಿಸಿ ಕೊನೆಗೆ ಅವರ ಉಪಾಸ್ಯಮೂರ್ತಿಯಾದ ಶ್ರೀಕೃಷ್ಣನನ್ನು ಕುರಿತು 'ಹೇ ಕೃಷ್ಣ! ನನ್ನ ಮರಣ ಕಾಲದಲ್ಲಿ ನನ್ನ ನಾಲಿಗೆಯಲ್ಲಿ ನಿನ್ನ ನಾಮವಿರಲಿ' ಎಂದು ಪ್ರಾರ್ಥಿಸುತ್ತಾರೆ.

೭. **ಶ್ರೀಮದ್ಭಾಗತ ಸಾರೋದ್ಧಾರ** – ಇದು ಶ್ರೀವಿಷ್ಣುತೀರ್ಥರ ಅತ್ಯಪೂರ್ವ ಕೃತಿ. ಜೀವನಸಾಧನಕ್ರಮವನ್ನು ವರ್ಣಿಸುವ ವಿಷಯಗಳನ್ನು ಮೂವತ್ತು ಪ್ರಕರಣಗಳನ್ನಾಗಿ ವಿಂಗಡಿಸಿ ಇದಕ್ಕೆ ಮೂಲ ಆಕರವಾದ 'ಶ್ರೀಮದ್ಭಾಗವತ'ದ ಶ್ಲೋಕಗಳನ್ನು

ಉದಾಹರಿಸಿ ಅದಕ್ಕೆ ವ್ಯಾಖ್ಯನವ್ಯಾಜ್ಯದಿಂದ ಅದೇ ಭಾಗವತದ ಸಂಹಿತಾ ಪಾರಾಯಣ ಫಲಪ್ರಾಪ್ತಿಯಾಗುವಂತೆ ಮಾಡಿದ್ದಾರೆ. ಮೂವತ್ತು ಪ್ರಕರಣಗಳಲ್ಲಿ ಮುಖ್ಯ ಉದ್ದಿಶ್ಯ 'ಭಾಗವತ ಧರ್ಮ ಪ್ರಚಾರ'. ಎಂತಹ ನಾಸ್ತಿಕನಾದಾಗ್ಯೂ ಹೃದಯ ದ್ರವಿಸುವಂತೆ ಮನೋಜ್ಞವಾಗಿ ವರ್ಣಿಸಿದ್ದಾರೆ.

**೮. ಷೋಡಶೀ-ಚತುರ್ದಶೀ** - ಇವು ಜೀವಿಗಳು ಅಸ್ಯಜ್ಯ ರಾಶಿಯಿಂದ ಸ್ಪಷ್ಟರಾಗಿ ಹೇಗೆ ಬಂಧನಕ್ಕೆ ಒಳಗಾಗುತ್ತಾರೆ? ಎಂಬುದರಿಂದ ಪ್ರಾರಂಭಿಸಲ್ಪಟ್ಟು ಬಂಧಕ ನಿವೃತ್ತಿಯಾಗಿ ಸಾಧನಮಾರ್ಗದಲ್ಲಿ ಬಿದ್ದು ಮುಕ್ತನಾಗಿ ಮೌಕ್ತಿಕಾನಂದವನ್ನು ಹೊಂದುವ ಪರ್ಯಂತ ಆಚರಿಸಬೇಕಾಗುವ ಕೃತ್ಯಗಳು ಅಪರಿಚಿತವಾಗುವ ರೀತಿ ಇವುಗಳನ್ನು ವರ್ಣಿಸಿದ್ದಾರೆ. ಈ ಎಲ್ಲಾ ವರ್ಣನೆಯೂ ಬಿಂಬ-ಪ್ರತಿಬಿಂಬವನ್ನನುಸರಿಸಿ ಮಾಡಲ್ಪಟ್ಟಿದ್ದು. 'ಬಿಂಬ ಚಲಿಸೆ ಪ್ರತಿಬಿಂಬ ಚಲಿಸುವನು' ಎಂಬುದೇ ಸಿದ್ಧಾಂತಿಸಲ್ಪಡುತ್ತದೆ. 'ತೇನವಿನಾ ತೃಣಮಪಿ ನ ಚಲತಿ' ತಿಯಾದಿ ಮಹಾಜ್ಞಾನ ಪ್ರತಿಪಾದಕ ಗ್ರಂಥ. ಪ್ರತಿಯೊಂದು ಪ್ರಕರಣದಲ್ಲಿ ಹೇಳಿರುವ ವಿಷಯವನ್ನು ಯಾವುದಾದರೊಂದು ಬಗೆಯಿಂದ ಉಪಾಸಿಸಿದರೂ 'ಅಪರೋಕ್ಷವೇ ಮುಖ್ಯ ಫಲ' ಎಂದು ಸಾರಿದ್ದಾರೆ. ೧೪ ಮತ್ತು ೧೬ ಪ್ರಕರಣಗಳ ಈ ಎರಡು ಗ್ರಂಥಗಳೂ ಸಕಲ ಉಪನಿಷತ್ತುಗಳ ಸಾರವೆನ್ನಬಹುದು.

**೯. ಅಧ್ಯಾತ್ಮ ರಸರಂಜಿನೀ** - ಪ್ರತಿಬಿಂಬನಾದ ಜೀವನು ಯಾವ ರೀತಿ ಬಿಂಬಾಧೀನ, ಯಾವ ರೀತಿ ಪಾಪಕರ್ಮವೇ ಆಗಲಿ. ಪುಣ್ಯಕರ್ಮವೇ ಆಗಲಿ ಮಾಡಿ ಮಾಡಿಸಲ್ಪಡುತ್ತದೆ. ಅವುಗಳನ್ನು ಹೇಗೆ ಹರಿಸಮರ್ಪಣೆ ಮಾಡಬೇಕು ಎಂಬುದನ್ನು ತಿಳಿಸಿದ್ದಾರೆ. ತಮ್ಮ ಅನುಭವಗಳನ್ನು ಹಾಗೆಯೇ ಸಮರ್ಪಿಸಿದ್ದಾರೆ. ೪೯ ಶ್ಲೋಕಗಳಿವೆ.

**೧೦. ಶ್ರೀಮತ್ಸುಮಧ್ವವಿಜಯ ಮೇಯ ಸಂಗ್ರಹ ಮಾಲಿಕಾ** - ಶ್ರೀ ನಾರಾಯಣ ಪಂಡಿತಾಚಾರ್ಯಕೃತ 'ಶ್ರೀಮತ್ಸುಮಧ್ವವಿಜಯ' ಮಹಾಕಾವ್ಯದ ಸ್ವರೂಪವನ್ನು ಸಂಕ್ಷೇಪವಾಗಿ ಚಿತ್ರಿಸಿ, ಪ್ರತಿಸರ್ಗದಲ್ಲಿಯೂ ಒಂದೊಂದು ಶ್ಲೋಕವನ್ನು ಆರಿಸಿ ರಚಿಸಿರುವ ಒಟ್ಟು ೨೨ ಶ್ಲೋಕಗಳುಳ್ಳ ಚಿಕ್ಕ ಗ್ರಂಥ. ಇದನ್ನು ಪಾರಾಯಣ ಮಾಡತಕ್ಕವರಿಗೆ ಮೂಲ ಗ್ರಂಥದ ಮುಖ್ಯ ವಿಷಯಗಳೆಲ್ಲ ಕ್ರಮವಾಗಿ ಸ್ಮೃತಿಪಥಕ್ಕೆ ಬರುತ್ತದೆ. ೧೯ ರಿಂದ ೨೨ ರವರೆಗೆ ೪ ಶ್ಲೋಕಗಳಲ್ಲಿ ೧೬ ಫಲಗಳನ್ನು ಹೇಳಿದ್ದಾರೆ.

ವೆಂಕಟರಾಮಾರ್ಯರನ್ನು ಬಹುಸ್ತೋತ್ರ ಮಾಡಿದ್ದಾರೆ. ಶ್ರೀ ಐಜೀ ಆಚಾರ್ಯರು 'ಶ್ರೀಮನ್ನ್ಯಾಯಸುಧಾರಸರಂಜನೀ' ಗ್ರಂಥ ಮಾಡಿರುವ ವಿಷಯವನ್ನು ಹೇಳಿ ಅದಕ್ಕಾಗಿ ತಾವು 'ರಘುರಸರಂಜನೀ' ಎಂಬ ಹೆಸರಿನಿಂದ ಟಿಪ್ಪಣಿಯನ್ನು ಬರೆದಿದ್ದೇನೆ ಎಂದು ಹೇಳಿದ್ದಾರೆ.

೨. **ಸುಮನೋರಂಜನೀ** - ಇದು ಟೀಕಾರ್ಯರ 'ತತ್ವಪ್ರಕಾಶಿಕಾ'ಕ್ಕೆ ಟಿಪ್ಪಣಿ ರೂಪವಾಗಿದೆ.

೩. **ಸುಧಾಸ್ತೋತ್ರ** - ಶ್ರೀಮನ್ನ್ಯಾಯಸುಧಾ ಗ್ರಂಥದ ಸ್ತೋತ್ರರೂಪವಾದ ಎಂಟು ಶ್ಲೋಕಗಳು ಇವೆ. ಪ್ರತಿಯೊಂದರ ಕೊನೆಯಲ್ಲಿಯೂ 'ಜಯತೀರ್ಥಕೃತೌ ಪ್ರವಣೋನಪುನರ್ಭವಭಾಕ್ ಭವತೀತಿ ಮತಿರ್ಹಿಮಮ' ಎಂದು ಹೇಳಿದ್ದಾರೆ - ಅಂದರೆ 'ಟೀಕಾರಾಯರ ಗ್ರಂಥಗಳಲ್ಲಿ ಭಕ್ತಿವುಳ್ಳವ ಪುನಃ ಸಂಸಾರದಲ್ಲಿ ಬರುವುದೇ ಇಲ್ಲ ಎಂಬುದೇ ನನ್ನ ಅಭಿಪ್ರಾಯ' ಎಂದಿದ್ದಾರೆ.

೪. **ಆತ್ಮ ಸುಖಬೋಧಿನೀ :** ಇದು ಗದ್ಯಗ್ರಂಥ. ಈ ಗ್ರಂಥದಲ್ಲಿ ಜೀವನು ಸ್ವರೂಪಸುಖ ಹೊಂದುವುದಕ್ಕೆ ಸಾಧನಕ್ರಮವನ್ನು ಬೋಧಿಸಿದ್ದಾರೆ.

೫. **ಉಪದೇಶಪತ್ರ** - 'ಆಜ್ಞಾಪತ್ರ' ಎಂತಲೂ ಕರೆಸಲ್ಪಡುವ ಇದು ತಮ್ಮ ವಿದ್ಯಾಶಿಷ್ಯರುಗಳಿಗೆ ದಿನದಲ್ಲಿ ಸಮಯವಿಭಾಗ ಮಾಡಿಕೊಂಡು ಯಾವ ರೀತಿ ಉಪಯೋಗಿಸಿಕೊಳ್ಳಬೇಕೆಂಬುದನ್ನು ತಿಳಿಸಲೂ, ಕಲಿಯ ಪ್ರತಿಬಂಧಕ ಯಾವ ಯಾವ ರೀತಿ ಉಂಟಾಗಬಹುದೆಂಬುದನ್ನು ತಿಳಿಸಲು ಹೊರಟಿರುವ ಗದ್ಯಗ್ರಂಥ.

೬. **ಅಂತ್ಯಕಾಲದ ಸ್ಮರಣೆ** - ಇದು ಎಂಟು ಶ್ಲೋಕಗಳಿರುವ ಒಂದು ಕೃತಿ. ಪ್ರತಿ ಶ್ಲೋಕದ ಕಡೆಗೆ 'ಶ್ರೀಕೃಷ್ಣಮನ್ಮರಣಕಾಲಮುಪಾಗತೇತು ತ್ವನ್ನಾಮ ಮದ್ವಚಿನ ಗೋಚಿರತಾಮುಪೈತು' ಎಂದಿದ್ದಾರೆ. ಅನೇಕ ಭಗವನ್ನಾಮಗಳಿಂದ ಸ್ತುತಿಸಿ ಕೊನೆಗೆ ಅವರ ಉಪಾಸ್ಯಮೂರ್ತಿಯಾದ ಶ್ರೀಕೃಷ್ಣನನ್ನು ಕುರಿತು 'ಹೇ ಕೃಷ್ಣ! ನನ್ನ ಮರಣ ಕಾಲದಲ್ಲಿ ನನ್ನ ನಾಲಿಗೆಯಲ್ಲಿ ನಿನ್ನ ನಾಮವಿರಲಿ' ಎಂದು ಪ್ರಾರ್ಥಿಸುತ್ತಾರೆ.

೭. **ಶ್ರೀಮದ್ಭಾಗತ ಸಾರೋದ್ಧಾರ** - ಇದು ಶ್ರೀವಿಷ್ಣುತೀರ್ಥರ ಅತ್ಯಪೂರ್ವ ಕೃತಿ. ಜೀವನಸಾಧನಕ್ರಮವನ್ನು ವರ್ಣಿಸುವ ವಿಷಯಗಳನ್ನು ಮೂವತ್ತು ಪ್ರಕರಣಗಳನ್ನಾಗಿ ವಿಂಗಡಿಸಿ ಇದಕ್ಕೆ ಮೂಲ ಆಕರವಾದ 'ಶ್ರೀಮದ್ಭಾಗವತ'ದ ಶ್ಲೋಕಗಳನ್ನು

ಉದಾಹರಿಸಿ ಅದಕ್ಕೆ ವ್ಯಾಖ್ಯನವ್ಯಾಜ್ಯದಿಂದ ಅದೇ ಭಾಗವತದ ಸಂಹಿತಾ ಪಾರಾಯಣ ಫಲಪ್ರಾಪ್ತಿಯಾಗುವಂತೆ ಮಾಡಿದ್ದಾರೆ. ಮೂವತ್ತು ಪ್ರಕರಣಗಳಲ್ಲಿ ಮುಖ್ಯ ಉದ್ದಿಶ್ಯ 'ಭಾಗವತ ಧರ್ಮ ಪ್ರಚಾರ'. ಎಂತಹ ನಾಸ್ತಿಕನಾದಾಗ್ಯೂ ಹೃದಯ ದ್ರವಿಸುವಂತೆ ಮನೋಜ್ಞವಾಗಿ ವರ್ಣಿಸಿದ್ದಾರೆ.

೮. **ಷೋಡಶೀ-ಚತುರ್ದಶೀ** - ಇವು ಜೀವಿಗಳು ಅಸ್ಯಜ್ಯ ರಾಶಿಯಿಂದ ಸ್ಪಷ್ಟರಾಗಿ ಹೇಗೆ ಬಂಧನಕ್ಕೆ ಒಳಗಾಗುತ್ತಾರೆ? ಎಂಬುದರಿಂದ ಪ್ರಾರಂಭಿಸಲ್ಪಟ್ಟು ಬಂಧಕ ನಿವೃತ್ತಿಯಾಗಿ ಸಾಧನಮಾರ್ಗದಲ್ಲಿ ಬಿದ್ದು ಮುಕ್ತನಾಗಿ ಮೌಕ್ತಿಕಾನಂದವನ್ನು ಹೊಂದುವ ಪರ್ಯಂತ ಆಚರಿಸಬೇಕಾಗುವ ಕೃತ್ಯಗಳು ಅಪರಿಚಿತವಾಗುವ ರೀತಿ ಇವುಗಳನ್ನು ವರ್ಣಿಸಿದ್ದಾರೆ. ಈ ಎಲ್ಲಾ ವರ್ಣನೆಯೂ ಬಿಂಬ-ಪ್ರತಿಬಿಂಬವನ್ನನುಸರಿಸಿ ಮಾಡಲ್ಪಟ್ಟಿದ್ದು. 'ಬಿಂಬ ಚಲಿಸೆ ಪ್ರತಿಬಿಂಬ ಚಲಿಸುವನು' ಎಂಬುದೇ ಸಿದ್ಧಾಂತಿಸಲ್ಪಡುತ್ತದೆ. 'ತೇನವಿನಾ ತೃಣಮಪಿ ನ ಚಲತಿ' ತಿಯಾದಿ ಮಹಾಜ್ಞಾನ ಪ್ರತಿಪಾದಕ ಗ್ರಂಥ. ಪ್ರತಿಯೊಂದು ಪ್ರಕರಣದಲ್ಲಿ ಹೇಳಿರುವ ವಿಷಯವನ್ನು ಯಾವುದಾದರೊಂದು ಬಗೆಯಿಂದ ಉಪಾಸಿಸಿದರೂ 'ಅಪರೋಕ್ಷವೇ ಮುಖ್ಯ ಫಲ' ಎಂದು ಸಾರಿದ್ದಾರೆ. ೧೪ ಮತ್ತು ೧೬ ಪ್ರಕರಣಗಳ ಈ ಎರಡು ಗ್ರಂಥಗಳೂ ಸಕಲ ಉಪನಿಷತ್ತುಗಳ ಸಾರವೆನ್ನಬಹುದು.

೯. **ಅಧ್ಯಾತ್ಮ ರಸರಂಜನೀ** - ಪ್ರತಿಬಿಂಬನಾದ ಜೀವನು ಯಾವ ರೀತಿ ಬಿಂಬಾಧೀನ, ಯಾವ ರೀತಿ ಪಾಪಕರ್ಮವೇ ಆಗಲಿ. ಪುಣ್ಯಕರ್ಮವೇ ಆಗಲಿ ಮಾಡಿ ಮಾಡಿಸಲ್ಪಡುತ್ತದೆ. ಅವುಗಳನ್ನು ಹೇಗೆ ಹರಿಸಮರ್ಪಣೆ ಮಾಡಬೇಕು ಎಂಬುದನ್ನು ತಿಳಿಸಿದ್ದಾರೆ. ತಮ್ಮ ಅನುಭವಗಳನ್ನು ಹಾಗೆಯೇ ಸಮರ್ಪಿಸಿದ್ದಾರೆ. ೪೯ ಶ್ಲೋಕಗಳಿವೆ.

೧೦. **ಶ್ರೀಮತ್ಸುಮಧ್ವವಿಜಯ ಮೇಯ ಸಂಗ್ರಹ ಮಾಲಿಕಾ** - ಶ್ರೀ ನಾರಾಯಣ ಪಂಡಿತಾಚಾರ್ಯಕೃತ 'ಶ್ರೀಮತ್ಸುಮಧ್ವವಿಜಯ' ಮಹಾಕಾವ್ಯದ ಸ್ವರೂಪವನ್ನು ಸಂಕ್ಷೇಪವಾಗಿ ಚಿತ್ರಿಸಿ, ಪ್ರತಿಸರ್ಗದಲ್ಲಿಯೂ ಒಂದೊಂದು ಶ್ಲೋಕವನ್ನು ಆರಿಸಿ ರಚಿಸಿರುವ ಒಟ್ಟು ೨೨ ಶ್ಲೋಕಗಳುಳ್ಳ ಚಿಕ್ಕ ಗ್ರಂಥ. ಇದನ್ನು ಪಾರಾಯಣ ಮಾಡತಕ್ಕವರಿಗೆ ಮೂಲ ಗ್ರಂಥದ ಮುಖ್ಯ ವಿಷಯಗಳೆಲ್ಲ ಕ್ರಮವಾಗಿ ಸ್ಮೃತಿಪಥಕ್ಕೆ ಬರುತ್ತದೆ. ೧೯ ರಿಂದ ೨೨ ರವರೆಗೆ ೪ ಶ್ಲೋಕಗಳಲ್ಲಿ ೧೬ ಫಲಗಳನ್ನು ಹೇಳಿದ್ದಾರೆ.

೧೧. ಶ್ರೀರಮಾಸ್ತೋತ್ರ - ೧೫ ಶ್ಲೋಕಗಳಿಂದ ಕೂಡಿರುವ ಗ್ರಂಥ. ಪ್ರತಿಯೊಂದು ಶ್ಲೋಕವೂ ಪರಮಾತ್ಮನ ಮಹಿಮಾ ವರ್ಣನೆಯಲ್ಲಿ ಪ್ರಸಕ್ತವಾಗಿ 'ಅಂತಹ ಪರಮಾತ್ಮನ ಪತ್ನಿಯಾದ ಶ್ರೀಲಕ್ಷ್ಮಿಯು ತಮ್ಮ ಹೃದಯದಲ್ಲಿ ಸದಾ ಪ್ರಸನ್ನವಾಗಲಿ' ಎಂದು ಪ್ರಾರ್ಥಿಸಿದ್ದಾರೆ. ಕೆಲವು ಶ್ಲೋಕಗಳಲ್ಲಿ ಪರಮಾತ್ಮನ ನಂತರ ಲಕ್ಷ್ಮಿಯನ್ನೂ ಕೊಂಡಾಡಿ ಮೇಲಿನಂತೆ ಸಮಾಪ್ತಿ ಮಾಡಿದ್ದಾರೆ. ಇದರ ಪಠಣೆಯಿಂದ ಮೋಕ್ಷವೇ ಮುಖ್ಯಫಲ ಎಂದು ತಿಳಿಸಿದ್ದಾರೆ.

೧೨. ಗೀತಾ ಸಾರೋದ್ಧಾರ (ಮುಕ್ತಮಾಲಾ)- ಇದರಲ್ಲಿ ಒಟ್ಟು ೨೦ ಶ್ಲೋಕಗಳಿವೆ. ಮೊದಲನೆಯದು ಪೀಠಿಕೆ, ೨ನೇ ಶ್ಲೋಕದಿಂದ ೧೯ರ ತನಕ ಪ್ರತಿ ಅಧ್ಯಾಯದ ಮುಖ್ಯ ಶ್ಲೋಕ ಜೋಡಿಸಿ ೨೦ನೇ ಶ್ಲೋಕದಲ್ಲಿ 'ಮುಕ್ತಾಮಾಲಾನುಸಂಧೇಯಾ ಪರತತ್ವ ಪರೀಕ್ಷಕೈಃ' ಎಂದು ಈ ಮುಕ್ತಾಮಾಲೆಯು ಪರತತ್ವ ಪರೀಕ್ಷಕರಿಂದ ಅನುಸಂಧಾನ ಮಾಡಲ್ಪಡಬೇಕು ಎಂದು ನುಡಿದಿದ್ದಾರೆ.

೧೩. ಬೃಂದಾವನ ಪ್ರವೇಶ - ಶ್ರೀ ವಿಷ್ಣುತೀರ್ಥರು ಐವತ್ತು ವರ್ಷಗಳ ತಮ್ಮ ಜೀವಿತಾವಧಿಯಲ್ಲಿ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಈ ನಾಲ್ಕು ಆಶ್ರಮಗಳನ್ನು ನಿರ್ವಹಿಸಿದ ಮಹನೀಯರು. ಬ್ರಹ್ಮಚರ್ಯದಲ್ಲಿ ಐ.ಜಿ. ಶ್ರೀಗಳವರಲ್ಲಿ ಅಧ್ಯಯನ, ಗೃಹಸ್ಥದಲ್ಲಿ ಕೃಷ್ಣಾಚಾರ್ಯರಂಥ ಸತ್ಪುತ್ರರನ್ನು ಪಡೆದ ಭಾಗ್ಯ. ವಾನಪ್ರಸ್ಥದಲ್ಲಿ 'ಆರಣ್ಯಕಾಚಾರ್ಯ'ರೆಂದು ಪ್ರಸಿದ್ಧಿ ಪಡೆದುದು ಹಾಗೂ ಪೀಠವನ್ನು ಅಪೇಕ್ಷಿಸದೇ ಭಗವತ್ ಚಿಂತನೆಗೆಂದೇ ಸನ್ಯಾಸ ಸ್ವೀಕಾರ. ಹೀಗೆ ನಾಲ್ಕೂ ಆಶ್ರಮಗಳಲ್ಲಿ ಪ್ರಸಿದ್ಧರಾದವರು. ಹೀಗೆ ಅಖಂಡವಾಗಿ ಭಗವಂತನ ಆರಾಧನೆ ಮಾಡಿದ ಶ್ರೀ ವಿಷ್ಣುತೀರ್ಥರು ತಮ್ಮ ೫೧ನೇ ವಯಸ್ಸಿನಲ್ಲಿ ಕಿನ್ನಾಳು ಗ್ರಾಮದ ಕುಶಾವತಿ ನದೀತೀರದ ಮಾದನೂರಿನಲ್ಲಿ ಶಾ.ಶ. ೧೭೨೮ನೇ ಮಾಘ ಬಹುಳ ತ್ರಯೋದಶೀ ಬೃಂದಾವನಸ್ಥರಾದರು. ಶ್ರೀಕೃಷ್ಣಜಯಂತಿಯಂದು ಜನಿಸಿದ ಅವರು ಶಿವರಾತ್ರಿಯಂದು ವೃಂದಾವನಸ್ಥರಾದುದು ಒಂದು ವಿಶೇಷ. ಇಂತಹ ಗುರುಗಳ ಅನುಗ್ರಹವನ್ನು ಅವರ ಗ್ರಂಥಗಳ ಶ್ರವಣ ಮನನಗಳ ಮೂಲಕ ಮಾಡಿ ಕೃತಾರ್ಥರಾಗೋಣ.

ಯಸಪ್ರಚಂಡತಪಸಾ ಶ್ರುತಿಗೀತವೃತ್ತ ಸ್ತುಷ್ಟೋ ಹರಿಃ ಕಿಲವಶಂ ವದತಾಮವಾಪ।
ಶ್ರೀಮಧ್ವಸನ್ಮತ ಪಯೋನಿಧಿ ಪೂರ್ಣಚಂದ್ರ ಶ್ರೀವಿಷ್ಣುತೀರ್ಥ ಮುನಿರಾಣ್ಮುದಮಾತನೋತು ॥

ಶ್ರೀವಿಷ್ಣುತೀರ್ಥರು - ಅಡಿಗಳ ಭಜಿಸುವ ಮನುಜರ ಬಿಡನೈ ತನ್ನ ॥ಪ॥ ಕಡು ಕರುಣೀ ಬಿಡು ಸ್ಮರಣೀ ನುಡಿ ಮನದೀ ಅಡವಿಗಳೊಡೆಯನ ಪದ ದೃಢದಿ ಪಿಡಿ ಮೂಢ ಮಾನವಾ ॥ಅ.ಪ॥ ಕಂಕಣ ಕಟ್ಟೀ ಬಿಂಕವ ಮುರಿಯುತ ಕಿಂಕರ ಸಲಹುವ ಪಂಕಜನಯ್ಯನ ಪಂಕಜದೊಳು ತಾ ಮಿಂಚಿನಂದದಿ ಕಂಗಳಿಗೊಪ್ಪುವ ಮಂಗಳಾ ಮಂಟಪದಲಿ ಮೀನಾಂಕನ ಸಹತೋರುವ ಮದಗಜಸಿಂಹನು ಮಾದನೂರಿನಲಿ ನಿಂತಿಹ ಪವನತನಯನು ಕಮಲನಯನನು ಕರಾಳವದನ ಪರಕಪಾಲನಯನನು ॥೧॥ ಧೀರನಾಗಿ ಪರದಾರರಿಗೋಸುಗ ಬಲು ಕ್ರೂರನಾಗಿ ಇರುವೋನು ಸೂರಿಪುರೇಶನ ಸಲಹುವ ಸತಿ ಪಾರ್ವತಿವರನು ಮಾರಹರಿಸಿ ಸುರಾಸರ ಮತೋದ್ಧರ ಸ್ವಾಮಿನಿಲಯ ಶ್ರೀ ಗುರುರಾಜರ ಪದ ಸ್ಮರಿಸುವನು ಶಿರದಲಿ ಜಾಹ್ನವಿ ಧರಿಸಿದ ಕೊರಳೊಳು ಶಿರಮಾಲೆ ಕರಮಾಲೆ ಜಟಬಾಲೆ ಸಹಕುಶನದಿ ನಿಲಯನಪದ ಹೃದಯದಿ ಸ್ಮರಿಸುತ ॥೨॥ ಮೊಮ್ಮಗನೆನಿಸಿ ತಾತನ ಮೋಹಿಸಿ ದಾತನ ತಲೆ ತರಿದವನು ಮಹಾಮುನಿಪುರದೊಳು ತೆರಳಿದ ಸಮಯದಿ ತನ್ನ ಸತಿಯೊಳು ಸರಸವನಾಡಿದನು ಕಾಳಕೂಟವಾ ತಾ ಪಾನಮಾಡಿ ಗರಗೊರಳೆಂದೆನಿಸಿದನೂ ಶಿರಿಸುತ ತಂದೆವರದಗೋಪಾಲವಿಠಲನ ಪದ ಧೇನಿಪನೋ ಸೇವಿಪನೋ ಪಾವಿನ ಪದನೋ ವನದೊಳು ನಿಂದು ಶ್ರೀರಾಮನ ಜಪಿಸುವ॥೩॥

* * * *

## ಮಾಘ ॥ ಕೃಷ್ಣ ॥ ಚತುರ್ದಶೀ

ಮಹಾಶಿವರಾತ್ರಿ - ಮಾಘ ಬಹುಳದಲ್ಲಿ ಪ್ರದೋಷ ವ್ಯಾಪಿನಿಯಾದ ಚತುರ್ದಶೀ ದಿವಸ ಶಿವರಾತ್ರಿಯನ್ನು ಆಚರಿಸಬೇಕೆಂದು ಸ್ಮೃತಿಯಲ್ಲಿ ಹೇಳಿದೆ. ಇಂದು ಶೈವರು ಉಪವಾಸವನ್ನಾಚರಿಸಿ ವಿಶೇಷ ಪೂಜಾದಿಗಳನ್ನು ಮಾಡುತ್ತಾರೆ. ನ ಸ್ನಾನೇನ ನ ವಸ್ತ್ರೇಣ ನ ಧೂಪೇನ ನ ಚಾರ್ಚಯಾ । ತುಷ್ಯಾಮಿ ನ ತಥಾ ಪುಷ್ಪೈಃ ಯಥಾ ತತ್ರೋಪವಾಸತಃ ॥ ಎಂಬ ಆರ್ಷ ವಾಕ್ಯಾನುಸಾರ ಈ ದಿನ ಉಪವಾಸಕ್ಕೆ ಹೆಚ್ಚಿನ ಪ್ರಾಶಸ್ತ್ಯ ರಾತ್ರಿಯಲ್ಲಿ ಪ್ರತಿ ಯಾಮದಲ್ಲೂ ಬಿಲ್ವಾದಿಗಳಿಂದ ಶಿವನನ್ನು ಪುಜಿಸಬೇಕು. ವೈಷ್ಣವರು ಈ ದಿನ ಹಬ್ಬವನ್ನು ಆಚರಿಸುತ್ತಾರೆ. ಶಿವಮಂದಿರಕ್ಕೆ ಹೋಗಿ ದರ್ಶನ ಮಾಡಲೇಬೇಕೆಂಬ ವಿಧಿ ಇದೆ. ಜಾಗರಣೆಯನ್ನು ವಿಧಿಸಲಾಗಿದೆ. ಶಿವರಾತ್ರಿಯ

ವ್ರತಕಥೆ ಮತ್ತು ಮಹಾತ್ಮ್ಯೆ ಸಾಮಾನ್ಯವಾಗಿ ಎಲ್ಲ ಪುರಾಣಗಳಲ್ಲೂ ಬಂದಿದೆ. ಅನೇಕ ಪುಣ್ಯಸ್ಥಳಗಳಲ್ಲಿ ರಥೋತ್ಸವಗಳೂ ಜಾತ್ರೆಗಳೂ ಜರುಗುತ್ತವೆ.

**ಮಹಾಶಿವರಾತ್ರಿ** – ಮಾಘ ಕೃಷ್ಣ ಚತುರ್ದಶಿಯಂದು ಮಹಾಶಿವರಾತ್ರಿ . ಪ್ರದೋಷ ಕಾಲದಲ್ಲಿ ಚತುರ್ದಶಿ ಇದ್ದ ದಿನ ಮಹಾಶಿವರಾತ್ರಿಯನ್ನು ಆಚರಿಸಬೇಕು. ವೈಷ್ಣವರು ಅಂದು ಹಬ್ಬವನ್ನಾಗಿ ಆಚರಿಸಬೇಕು. ವಿಷ್ಣುಪಂಚಕವ್ರತವನ್ನು ಮಾಡುವವರೂ ಸಹ ಅಂದು ಶ್ರವಣ ನಕ್ಷತ್ರವಿದ್ದರೆ ಉಪವಾಸವನ್ನು ಮಾಡಬಾರದು. ಶೈವರಿಗೆ ಉಪವಾಸ, ಜಾಗರ, ಪಾರಾಯಣರೂಪ ವ್ರತವು ವಿಹಿತವಾಗಿದೆ. ಭಾನುವಾರ, ಮಂಗಳವಾರ, ಶಿವಯೋಗ ಸಂಬಂಧವಿದ್ದರೆ ಅತಿಪ್ರಶಸ್ತವಾಗುತ್ತದೆ.

**ಪೂಜಾವಿಧಿ** - ಏಹ್ಯೇಹಿ ತ್ವಮುಮಾಕಾಂತ ಸ್ಥಾನೇ ಚಾತ್ರ ಸ್ಥಿರೋ ಭವ । ಯಾವದ್ವ್ರತಂ ಸಮಾಪ್ಯೇತ ಕೃಪಯಾ ದೀನವತ್ಸಲ ॥ **ಆವಾಹನಮ್** । ಆಸನೇಽಸ್ಮಿನ್ ಉಮಾಕಾಂತ ಸುಖಸ್ಪರ್ಶೇ ಸುನಿರ್ಮಲೇ । ಉಪವಿಶ್ಯ ಮೃಡೇದಾನೀಂ ಸರ್ವಶಾಂತಿಪ್ರದೋ ಭವ ॥ **ಆಸನಮ್** । ಪಾದ್ಯಂ ಚ ತೇ ಮಯಾ ದತ್ತಂ ಪುಷ್ಪಗಂಧಸಮನ್ವಿತಮ್ । ಗೃಹಾಣ ದೇವದೇವೇಶ ಪ್ರಸನ್ನೋ ವರದೋ ಭವ ॥ **ಪಾದ್ಯಮ್** । ತಾಮ್ರಪಾತ್ರಸ್ಥಿತಂ ತೋಯಂ ಫಲಗಂಧಾದಿಸಂಯುತಮ್ । ಅರ್ಘ್ಯಂ ಗೃಹಾಣ ದೇವೇಶ ಮಯಾ ದತ್ತಂ ಹಿ ಭಕ್ತಿತಃ ॥ **ಅರ್ಘ್ಯಮ್** । ಶೀತಲಂ ನಿರ್ಮಲಂ ತೋಯಂ ಕರ್ಪೂರೇಣ ಸುವಾಸಿತಮ್ । ಆಚಮ್ಯತಾಂ ಸುರಶ್ರೇಷ್ಠ ಮಯಾ ದತ್ತಂ ಹಿ ಭಕ್ತಿತಃ ॥ **ಆಚಮನೀಯಮ್** । ಪಂಚಾಮೃತೇನ ಸ್ನಪನಂ ತತ್ತನ್ಮಂತ್ರೈಶ್ಚ ಕಾರಯೇತ್ । ಗೋಕ್ಷೀರಧಾಮನ್ ದೇವೇಶ ಗೋಕ್ಷೀರೇಣ ಮಯಾ ಕೃತಮ್ । ಸ್ನಪನಂ ದೇವದೇವೇಶ ಗೃಹಾಣ ಪರಮೇಶ್ವರ ॥ **ದುಗ್ಧಸ್ನಾನಮ್** । ದಧ್ನಾ ಚೈವ ಮಯಾ ದೇವ ಸ್ನಪನಂ ಕ್ರಿಯತೇ ತವ । ಗೃಹಾಣ ಭಕ್ತ್ಯಾ ದತ್ತಂ ಮೇ ಸುಪ್ರಸನ್ನೋ ಭವಾವ್ಯಯ॥ **ದಧಿಸ್ನಾನಮ್** । ಸರ್ಪಿಷಾ ದೇವದೇವೇಶ ಸ್ನಪನಂ ಕ್ರಿಯತೇ ಮಯಾ । ಉಮಾಕಾಂತ ಗೃಹಾಣೇದಂ ಶ್ರದ್ಧಯಾ ಸುರಸತ್ತಮ ॥ **ಘೃತಸ್ನಾನಮ್**। ಇದಂ ಮಧು ಮಯಾ ದತ್ತಂ ತವ ತುಷ್ಟ್ಯರ್ಥಮೇವ ಚ । ಗೃಹಾಣ ಶಂಭೋ ತ್ವಂ ಭಕ್ತ್ಯಾ ಮಮ ಶಾಂತಿಪ್ರದೋ ಭವ ॥ **ಮಧುಸ್ನಾನಮ್** । ಸಿತಯಾ ದೇವದೇವೇಶ ಸ್ನಪನಂ ಕ್ರಿಯತೇ ಮಯಾ । ಗೃಹಾಣ ಶಂಭೋ ಮೇ ಭಕ್ತ್ಯಾ ಸುಪ್ರಸನ್ನೋ ಭವ ಪ್ರಭೋ ॥ **ಶರ್ಕರಾಸ್ನಾನಮ್** । ಕಾವೇರೀ ನರ್ಮದಾ ವೇಣೀ ತುಂಗಭದ್ರಾ

ಸರಸ್ವತೀ। ಗಂಗಾ ಚ ಯಮುನಾ ಚೈವ ತಾಭ್ಯಃ ಸ್ನಾನಾರ್ಥಮಾಹೃತಮ್ । ಗೃಹಾಣ ತ್ವಮುಮಾಕಾಂತ ಸ್ನಾನಾಯ ಶ್ರದ್ಧಯಾ ಜಲಮ್ ॥ **ಸ್ನಾನಮ್** । ಏತದ್ವಾಸೋ ಮಯಾ ದತ್ತಂ ಸೋತ್ತರೀಯಂ ಸುಶೋಭನಮ್ । ಗೃಹಾಣ ತ್ವಂ ಸುರಶ್ರೇಷ್ಠ ಮಮ ವಾಸಃಪ್ರದೋ ಭವ ॥ **ವಸ್ತ್ರಮ್** । ಯಜ್ಞೋಪವೀತಂ ಸೌವರ್ಣಂ ಮಯಾ ದತ್ತಂ ಚ ಶಂಕರ । ಗೃಹಾಣ ಪರಯಾ ತುಷ್ಟ್ಯಾ ತುಷ್ಟಿದೋ ಭವ ಸರ್ವದಾ ॥ **ಉಪವೀತಮ್** । ಸುಗಂಧಂ ಚಂದನಂ ದಿವ್ಯಂ ಮಯಾ ದತ್ತಂ ತವ ಪ್ರಭೋ । ಭಕ್ತ್ಯಾ ಪರಮಯಾ ಶಂಭೋ ಸುಭಗಂ ಕುರು ಮಾಂ ಭವ ॥ **ಚಂದನಮ್** । ಮಾಲತೀ ಚಂಪಕಾದೀನಿ ಕುಮುದಾನ್ಯುತ್ಪಲಾನಿ ಚ। ಬಿಲ್ವಪತ್ರಾಣಿ ಪೂಜಾರ್ಥಂ ಸ್ವೀಕುರು ತ್ವಮುಮಾಪತೇ ॥ **ಪುಷ್ಪಮ್** । ಧೂಪಂ ವಿಶಿಷ್ಟಂ ಪರಮಂ ಸರ್ವೌಷಧಿ ವಿಜೃಂಭಿತಮ್ । ದತ್ತಂ ಗೃಹಾಣ ದೇವೇಶ ಮಮ ಜ್ಞಾನಪ್ರದೋ ಭವ ॥ **ದೀಪಮ್** । ಶಾಲ್ಯೋದನಘೃತಾಪೂಪಪಾಯಸಾದಿಸಮನ್ವಿತಮ್ । ನೈವೇದ್ಯಂ ವಿವಿಧಂ ದತ್ತಂ ಭಕ್ತ್ಯಾ ಮೇ ಪ್ರತಿಗೃಹ್ಯತಾಮ್ ॥ **ನೈವೇದ್ಯಮ್** । ನೈವೇದ್ಯಮಧ್ಯೇ ಪಾನೀಯಂ ಮಯಾ ದತ್ತಂ ಹಿ ಭಕ್ತಿತಃ। ಸ್ವೀಕುರುಷ್ವ ಮಹಾದೇವ ಪ್ರಸನ್ನೋ ಭವ ಸರ್ವದಾ ॥ **ಮಧ್ಯೇ ಪಾನೀಯಮ್** । ಉತ್ತರಾಪೋಶನಾರ್ಥಂ ವಾ ಆನೀತಂ ಜಲಮುತ್ತಮಮ್ । ಗೃಹಾಣ ತ್ವಮುಮಾಕಾಂತ ಸರ್ವದುಃಖನಿವಾರಕ ॥ **ಉತ್ತರಾಪೋಶನಮ್** । ಕರ್ಪೂರೈಲಾಲವಂಗಾದಿಪೂಗೀಫಲಸಮನ್ವಿತಮ್ । ತಾಂಬೂಲಂ ಕಲ್ಪಿತಂ ಭಕ್ತ್ಯಾ ಗೃಹಾಣ ಗಿರಿಜಾಪ್ರಿಯ ॥ **ತಾಂಬೂಲಮ್** । ಇದಂ ಫಲಂ ಮಯಾ ದೇವ ಸ್ಥಾಪಿತಂ ಪುರತಸ್ತವ । ತೇನ .... ॥ **ಫಲಮ್** । ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ। ದಕ್ಷಿಣಾ ಕಾಂಚನೀ ದೇವ ಸ್ಥಾಪಿತಾ ಮೇ ತವಾಗ್ರತಃ ॥ **ದಕ್ಷಿಣಾಮ್** । ದೀಪಾವಲೀ ಮಯಾ ದತ್ತಾ ಸುವರ್ತಿಘೃತಸಂಯುತಾ। ಆರಾರ್ತಿಕಪ್ರದಾನೇನ ಮಮ ತೇಜಃಪ್ರದೋ ಭವ॥ **ಆರಾರ್ತಿಕಮ್** । ಯಾನಿ ಕಾನಿ ಚ ಪಾಪಾನಿ ..... ॥ **ಪ್ರದಕ್ಷಿಣಾಮ್** । ಮೃತ್ಯುಂಜಯಾಯ ರುದ್ರಾಯ ನೀಲಕಂಠಾಯ ಶಂಭವೇ । ಅಮೃತೇಶಾಯ ಶರ್ವಾಯ ಮಹಾದೇವಾಯ ತೇ ನಮಃ ॥ **ನಮಸ್ಕಾರಾನ್** । ಸೇವಂತಿಕಾಬಕುಲಾಪಾಟಲಾಬ್ಜೈಃ ಪುನ್ನಾಗಜಾತಿಕರವೀರರಸಾಲಪುಷ್ಪೈಃ । ಬಿಲ್ವಪ್ರವಾಲತುಲಸೀದಲ- ಮಾಲತೀಭಿಸ್ತ್ವಾಂ ಪೂಜಯಾಮಿ ಜಗದೀಶ್ವರ ಮೇ ಪ್ರಸೀದ । – **ಮಂತ್ರಪುಷ್ಪಮ್** ॥ ಪೂಜೆಯ ನಂತರ ರುದ್ರಾಷ್ಟೋತ್ತರ-ಶತನಾಮದಿಂದ ಬಿಲ್ವಪತ್ರೆಯಿಂದ ಅರ್ಚನೆ ಮಾಡಬೇಕು.

ನಮೋ ರುದ್ರಾಯ ಭೀಮಾಯ ನೀಲಕಂಠಾಯ ವೇಧಸೇ । ಕಪರ್ದಿನೇ ಸುರೇಶಾಯ ವ್ಯೋಮಕೇಶಾಯ ವೈ ನಮಃ ॥ ವೃಷಧ್ವಜಾಯ ಸೋಮಾಯ ಸೋಮನಾಥಾಯ ವೈ ನಮಃ । ದಿಗಂಬರಾಯ ಭರ್ಗಾಯ ಉಮಾಕಾಂತ ಕಪರ್ದಿನೇ ॥ ತಪೋಮಯಾಯ ವ್ಯಾಸಾಯ ಶಿಪಿವಿಷ್ಟಾಯ ವೈ ನಮಃ । ವ್ಯಾಲಪ್ರಿಯಾಯ ವ್ಯಾಲಾಯ ವ್ಯಾಲಾನಾಂಪತಯೇ ನಮಃ ॥ ಮಹೀಧರಾಯ ವ್ಯಾಘ್ರಾಯ ಪಶೂನಾಂಪತಯೇ ನಮಃ । ತ್ರಿಪುರಾಂತಕಾಯ ಸಿಂಹಾಯ ಶಾರ್ದೂಲಾಯ ಋಷಾಯ ಚ ॥ ಮಿತಾಯಾಽಮಿತನಾಥಾಯ ಸಿದ್ಧಾಯ ಪರಮೇಷ್ಠಿನೇ । ಕಾಮಾಂತಕಾಯ ಬುದ್ಧಾಯ ಬುದ್ಧೀನಾಂ ಪತಯೇ ನಮಃ ॥ ಕಪೋತಾಯ ವಿಶಿಷ್ಟಾಯ ಶಿಷ್ಟಾಯ ಪರಮಾತ್ಮನೇ । ವೇದಗೀತಾಯ ಗುಪ್ತಾಯ ವೇದಗುಹ್ಯಾಯ ವೈ ನಮಃ ॥ ದೀರ್ಘಾಯ ದೀರ್ಘರೂಪಾಯ ದೀರ್ಘಾರ್ಥಾಯ ಮೃಡಾಯ ಚ । ನಮೋ ಜಗತ್ಪ್ರತಿಷ್ಠಾಯ ವ್ಯೋಮರೂಪಾಯ ವೈ ನಮಃ ॥ ಗರ್ವಕೃತುಮಹಾದಿತ್ಯೈ ಅಂಧಕಾರಂ ಸುಭೇದಿನೇ । ನೀಲಲೋಹಿತ ಶುಕ್ಲಾಯ ಚಂಡಮುಂಡಪ್ರಿಯಾಯ ಚ ॥ ಭಕ್ತಿಪ್ರಿಯಾಯ ದೇವಾಯ ಜ್ಞಾತ್ಞಾಽಜ್ಞಾತ್ಞಾವ್ಯಯಾಯ ಚ । ಮಹೇಶಾಯ ನಮಸ್ತುಭ್ಯಂ ಮಹಾದೇವ ಹರಾಯ ಚ ॥ ತ್ರಿನೇತ್ರಾಯ ತ್ರಿದೇವಾಯ ವೇದಾಂಗಾಯ ನಮೋ ನಮಃ । ಅರ್ಥಾಯ ಅರ್ಥರೂಪಾಯ ಪರಮಾರ್ಥಾಯ ವೈ ನಮಃ ॥ ವಿಶ್ವರೂಪಾಯ ವಿಶ್ವಾಯ ವಿಶ್ವನಾಥಾಯ ವೈ ನಮಃ । ಶಂಕರಾಯ ಚ ಕಾಲಾಯ ಕಾಲಾವಯವರೂಪಿಣೇ ॥ ಅರೂಪಾಯ ವಿರೂಪಾಯ ಸೂಕ್ಷ್ಮಾಸೂಕ್ಷ್ಮಾಯ ವೈ ನಮಃ । ಶ್ಮಶಾನವಾಸಿನೇ ತುಭ್ಯಂ ನಮಸ್ತೇ ಕೃತ್ತಿವಾಸಸೇ ॥ ಶಶಾಂಕಶೇಖರಾಯೈವ ರುದ್ರಭೂಮಿಶ್ರಯಾಯ ಚ । ದುರ್ಗಾಯ ದುರ್ಗಪಾರಾಯ ದುರ್ಗಾವಯವಸಾಕ್ಷಿಣೇ ॥ ಲಿಂಗರೂಪಾಯ ಲಿಂಗಾಯ ಲಿಂಗಾನಾಂ ಪತಯೇ ನಮಃ । ನಮಃ ಪ್ರಭಾವರೂಪಾಯ ಪ್ರಣವಾರ್ಥಾಯ ವೈ ನಮಃ ॥ ನಮೋ ನಮಃ ಕಾರಣಕಾರಣಾಯ ಮೃತ್ಯುಂಜಯಾಯಾತ್ಮ-ಭವಸ್ವರೂಪಿಣೇ । ತ್ರಿಯಂಬಕಾಯಾಸಿತಕಂಠಭರ್ಗಗೌರೀಪತೇ ಮಂಗಲಹೇತವೇ ನಮಃ ॥ ನಾಮ್ನಾಂ ಶತಂ ಮಹೇಶಸ್ಯ ಉಚ್ಚಾರ್ಯ ವ್ರತಿನಾ ಸದಾ । ಪ್ರದಕ್ಷಿಣಾ ನಮಸ್ಕಾರಾ ಏತತ್ಸಂಖ್ಯಾಃ ಪ್ರಯತ್ನತಃ ॥ ಈ ಮಂತ್ರಗಳಿಂದ ಪೂಜೆ ಮಾಡಿ ಶಿವಲಿಂಗಕ್ಕೆ ೧೧ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಬೇಕು.

ಭಗವಂತನನ್ನು ಹಾಗೂ ವಾಯುದೇವರನ್ನು ಪೂಜಿಸಿದ ಮೇಲೆ ರುದ್ರದೇವರನ್ನು ಸ್ಮರಣೆ ಮಾಡುತ್ತಾ ಮಾನಸಿಕವಾಗಿ ಈ ಪೂಜೆಯನ್ನು ಸಲ್ಲಿಸಿದರೆ ಸಾಕು. ಇಂದು ಉಪವಾಸಾದಿಗಳನ್ನು ಆಚರಿಸಬಾರದು. ವಿಷ್ಣುಪಂಚಕ ಉಪವಾಸವಿದ್ದರೆ ತತ್ಪ್ರಯುಕ್ತವಾದ ಉಪವಾಸವನ್ನೂ ಕೂಡ ಮಾಡಬಾರದು. ರುದ್ರದೇವರ ಕುರಿತಾದ ಆ ಜಪ ಪರಾಯಣಗಳನ್ನಷ್ಟೇ ಆಚರಿಸಬೇಕು. ರಾತ್ರಿಯ ಕಾಲದಲ್ಲಿ ಜಾಗರಣೆ ಮಾಡಬಾರದು. ಸಂಧ್ಯಾಕಾಲದಲ್ಲಿ ವೈಷ್ಣವರಿಂದ ಪೂಜೆಗೊಳ್ಳಲ್ಪಟ್ಟ ಈಶ್ವರನ ದೇವಸ್ಥಾನಕ್ಕೆ ತೆರಳಿ ದರ್ಶನ ಮಾಡಿ ರುದ್ರದೇವರ ಅನುಗ್ರಹವನ್ನು ಪಡೆದುಕೊಳ್ಳಬೇಕು. ಇಷ್ಟು ಶಿವರಾತ್ರಿ ಆಚರಣೆ ಮಾಡಿದರೆ ಸಾಕು.

## ಮಾಘ ॥ ಕೃಷ್ಣ ॥ ಅಮಾವಾಸ್ಯೇ

**ಅಮಾವಾಸ್ಯೆ-** ಇಂದು ಶಿವರಾತ್ರಿಯ ಪಾರಣೆ, ರಥೋತ್ಸವ, ದೀಪೋತ್ಸವಾದಿಗಳು ಹಲವು ಶೈವಕ್ಷೇತ್ರಗಳಲ್ಲಿ ನಡೆಯುತ್ತವೆ.

**ಮಾಘೀ ಅಮಾವಾಸ್ಯೆ –** ಈ ದಿನ ದ್ವಾಪರ ಯುಗಾದಿ ಶತಭಿಷಾ ನಕ್ಷತ್ರದ ಯೋಗವಿದ್ದರೆ ವಿಶೇಷ ಪುಣ್ಯಪ್ರದ. ಆ ದಿನ ಶ್ರಾದ್ಧದಿಂದ ಪಿತೃಗಳಿಗೆ ಅತಿ ತೃಪ್ತಿಯಾಗುತ್ತದೆ.

ಧನಿಷ್ಠಾ ಶ್ರಾದ್ಧ – ಮಾಘ ಮಾಸದ ಅಮಾವಾಸ್ಯೆಯಂದು ಧನಿಷ್ಠಾನಕ್ಷತ್ರವಿದ್ದಲ್ಲಿ ಆ ದಿವಸ ಶ್ರಾದ್ಧ ಮಾಡಿದಾಗ ಪಿತೃಗಳಿಗೆ ಹತ್ತುಸಾವಿರ ವರ್ಷದ ತೃಪ್ತಿಯುಂಟಾಗುತ್ತದೆ. ಮಾಘೇಸಿತೇ ಪಂಚದಶೀ ಕದಾಚಿದುಪೈತಿ ಯೋಗಂ ಯದಿ ವಾರುಣೇನ ಋಕ್ಷೇಣ ಕಾಲಸ್ಸ ಪರಃ ಪಿತಣಾಂ ನ ಹ್ಯಲ್ಪಪುಣ್ಯೈರ್ನೃಪ ಲಭ್ಯತೇಸೌ। ಕಾಲೇ ಧನಿಷ್ಠಾ ಯದಿ ನಾಮ ತಸ್ಮಿನ್ಭವೇತ್ತು ಭೂಪಾಲ ತದಾ ಪಿತೃಭ್ಯಃ ದತ್ತಂ ಜಲಾನ್ನಂ ಪ್ರದದಾತಿ ತೃಪ್ತಿಂ ವರ್ಷಾಯುತಂ ತತ್ಕುಲಜೈರ್ಮನುಷ್ಯೈಃ ॥ ಮಾಘ ಅಮಾವಾಸ್ಯೆ ಭಾನುವಾರ ಉಂಟಾಗಿ ಧನಿಷ್ಠಾ ನಕ್ಷತ್ರವಿದ್ದರೆ ವ್ಯತೀಪಾತ ಎಂಬ ವಿಶೇಷ ಪರ್ವಕಾಲವುಂಟಾಗುತ್ತದೆ. (ವ್ಯತೀಪಾತ ಎಂದು ಒಂದು ಯೋಗವಿದೆ, ಅದು ಬೇರೆ, ಇದು ಬೇರೆ) ಶ್ರವಣಾಶ್ವಿಧನಿಷ್ಠಾರ್ದ್ರಾನಾಗದೈವತಹಸ್ತಕೈಃ। ಯದ್ಯಮಾ ರವಿವಾರೇಣ ವ್ಯತೀಪಾತಃ ಸ ಉಚ್ಯತೇ ॥ ಎಂಬ ಪ್ರಮಾಣದಂತೆ ಇದು ವಿಶೇಷಯೋಗ.

**ಶಿಶಿರ ಋತುವಿನ ಹಬ್ಬಗಳು** – ಮಾಘ ಮಾಸವೆಂದರೆ ಮಾ = ಇಲ್ಲದ್ದು, ಅಘ = ಪಾಪಗಳು ಅಂದರೆ ಪಾಪಗಳನ್ನು ಇಲ್ಲದನ್ನಾಗಿಸುವ ಮಾಸ. ಈ ಮಾಸದಲ್ಲಿ ನದ್ಯಾದಿಗಳಲ್ಲಿ ಸೂರ್ಯೋದಯವಾಗುವ ಮುನ್ನ ಸ್ನಾನ ಮಾಡುವ ವ್ಯಕ್ತಿಯ ಬ್ರಹ್ಮಹತ್ಯಾದಿ ಪಾಪಗಳನ್ನು ಪರಿಹರಿಸೋಣ ಎಂದು ಜಲಾಭಿಮಾನಿ ದೇವತೆಗಳು ಕೂಗುತ್ತಿರುತ್ತಾರೆ. ಹೀಗೆ ಭಗವಂತ ನಮಗೆ ಸಾಧನ ಮಾಡಲು ನೀಡಿದ ವಿಶೇಷ ಮಾಸವೇ ಮಾಘಮಾಸ.

ಇಲ್ಲಿಗೆ ಮಾಘಮಾಸದ ವಿಧಾನವು ಸಮಾಪ್ತವಾಯಿತು ॥
॥ ಶ್ರೀಮಧ್ವೇಶಾರ್ಪಣಮಸ್ತು ॥

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥
॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ಪೌಷಮಾಸ-ಮಾಘಮಾಸ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ ಶ್ರೀಲಕ್ಷ್ಮೀಹಯಗ್ರೀವದೇವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ದೀಪಾವಳಿ

ಆಶ್ವೀನ || ಬಹುಳ || ಅಮಾವಾಸ್ಯೆ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ದೀಪಾವಳಿ- ಅಮಾವಾಸ್ಯೆ

ಆಶ್ವೀನ ॥ ಬಹುಳ ಅಮಾವಾಸ್ಯೆ

# ಬಲಿಪಾಡ್ಯ-ಯಮದ್ವಿತೀಯಾ

ಕಾರ್ತಿಕ ॥ ಶುದ್ಧ ॥ ಪ್ರತಿಪತ್

ದೀಪಾವಳಿ - 2

ವಿದ್ವಾನ್॥ ಚೆಮ್ಮತ್ತಿ ವೇಂಕಟೇಶಾಚಾರ್ಯ,

ಬೆಂಗಳೂರು.

ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),

ಗಿರಿನಗರ, ಬೆಂಗಳೂರು-೮೫

'ದೀಪಾವಳಿ-೨ ಅಮಾವಾಸ್ಯೆ-ಯಮದ್ವಿತೀಯಾ' ಶಾಲಿವಾಹನ ಶಕೆ ೧೯೪೩ ಶಾರ್ವರಿ ॥ ಶ್ರಾವಣ ॥ ಶುದ್ಧ ॥ ಪೂರ್ಣಿಮೆ (ದಿನಾಂಕ: ೩-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವ-ಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥಶ್ರೀಪಾದಂಗಳವರ ಕರಕಮಲಗಳಿಂದ ಭಾರತೀ-ರಮಣಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು : ೧೧೨


4271, 2ನೇ ಮೇನ್, ಗಿರಿನಗರ,
ಸೀತಾಸರ್ಕಲ್ ಹತ್ತಿರ, ಬೆಂಗಳೂರು-85
ದೂರವಾಣಿ : 9141495120

ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಶ್ರೀಮತಿ ನಾಗಲತಾ

ಮುಖಪುಟ : ಶ್ರೀವಿಶ್ವಾತ್ಮಾ
ಕಾರ್ತಿಕ ಜೋಷಿ

ಮುದ್ರಣ : ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.



ದಿ|| ಶ್ರೀ ಹೆಚ್.ಎನ್. ರಾಮಚಂದ್ರ ಮತ್ತು ದಿ || ಶ್ರೀಮತಿ ಶಾಂತಾಬಾಯಿ

ಹರಿಭಕ್ತರಾದ ಉತ್ತಮ ಸಾಧಕರಾದ ಆರ್. ಗುರುರಾಜ್ ಮತ್ತು ರುಕ್ಮಿಣಿ ಗುರುರಾಜ್, ಹಾಗೂ ಆರ್. ರಾಜೇಶ್ ಮತ್ತು ವಿಭಾ ರಾಜೇಶ್ ಅವರು ತಮ್ಮ ತಂದೆ-ತಾಯಿಯಗಳ ಆಶೀರ್ವಾದಕ್ಕಾಗಿ ಈ ಕೃತಿಯ ಸೇವೆಯನ್ನು ಸಲ್ಲಿಸಿದ್ದಾರೆ. ಈ ಜ್ಞಾನದಾನದಿಂದ ಪ್ರಾಪ್ತವಾಗುವ ಪುಣ್ಯರಾಶಿಯು ದಿ|| ಶ್ರೀ ಹೆಚ್.ಎನ್. ರಾಮಚಂದ್ರ ಮತ್ತು ದಿ || ಶ್ರೀಮತಿ ಶಾಂತಾಬಾಯಿ ಇವರಿಗೆ ತಲುಪಿ ಹರಿವಾಯುಗುರುಗಳು ಇವರ ವಿಷಯದಲ್ಲಿ ಸುಪ್ರಸನ್ನರಾಗಲಿ ಎಂದು ಭಕ್ತಿಯಿಂದ ಪ್ರಾರ್ಥಿಸಲಾಗಿದೆ.

- ಸಂಪಾದಕ

**ದೀಪಾವಳಿಯ ಪರ್ವಕಾಲದಲ್ಲಿ**
**ಈ ಲಕ್ಷ್ಮೀದೇವಿಸ್ತೋತ್ರ ಪಠಿಸಿರಿ**

ವಿಶ್ವಸ್ಥಿತಿಪ್ರಲಯಸರ್ಗಮಹಾವಿಭೂತಿ
ವೃತ್ತಿಪ್ರಕಾಶನಿಯಮಾವೃತಿಬಂಧಮೋಕ್ಷಾಃ ।
ಯಸ್ಯಾ ಅಪಾಂಗಲವಮಾತ್ರತ ಊರ್ಜಿತಾ ಸಾ
ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥

# ವಿಷಯಾನುಕ್ರಮಣಿಕೆ

# ಮುನ್ನುಡಿ

ಆಶ್ವೀನಮಾಸದ ಅಮಾವಾಸ್ಯಾ ದಿವಸ ಉಷಃಕಾಲದಲ್ಲೆದ್ದು, ೪-೩೦ ಕ್ಕೆ ಎಲ್ಲೆಡೆ ದೀಪಗಳನ್ನು ಹತ್ತಿಸಬೇಕು. ಸ್ನಾನವನ್ನು ಮಾಡಿ, ಸೂರ್ಯೋದಯಕ್ಕಿಂತ ಮೊದಲೇ ಲಕ್ಷ್ಮೀದೇವಿಗೆ ಮಂಗಳಾರತಿಯನ್ನು ವೈಭವದಿಂದ ಮಾಡಬೇಕು. ಮತ್ತು ಸಾಯಂಕಾಲ ಸೂರ್ಯಾಸ್ತ ಸಮಯದಲ್ಲಿಯೂ ಕೂಡ ಮಹಾಲಕ್ಷ್ಮೀದೇವಿಗೆ ವಿಶೇಷವಾಗಿ ಮಹಾಮಂಗಳಾರತಿ ನೀರಾಜನವನ್ನು ಮಾಡಬೇಕು. ಭಾಗವತದಲ್ಲಿ ಬರುವ ಅಷ್ಟಮ ಸ್ಕಂಧದ ಅಷ್ಟಮಾಧ್ಯಾಯದಲ್ಲಿ ಲಕ್ಷ್ಮೀದೇವಿಯ ಪ್ರಾದುರ್ಭಾವದ ಕಥಾಭಾಗವನ್ನು ಪಾರಾಯಣ ಮಾಡಬೇಕು. ಸ್ತ್ರೀಯರು ಲಕ್ಷ್ಮೀಶೋಭಾನಪದವನ್ನು ಪಠಿಸಬೇಕು. ಸಮಗ್ರವರ್ಷದಲ್ಲಿ ದೀಪಾವಳಿ ಅಮಾವಾಸ್ಯಾ ದಿವಸ ಲಕ್ಷ್ಮೀದೇವಿಯು ವಿಶೇಷವಾಗಿ ಅನುಗ್ರಹವನ್ನು ಮಾಡುತ್ತಾಳೆ. ಲಕ್ಷ್ಮೀದೇವಿಯ ಅನುಗ್ರಹದ ಅಪೇಕ್ಷೆಯುಳ್ಳರು ಶ್ರದ್ಧಾಭಕ್ತಿಗಳಿಂದ ದೀಪಾವಳಿ ಆಚರಣೆಯನ್ನು ಮಾಡಬೇಕು. ಈ ದೃಷ್ಟಿಯಿಂದ ಈ ಪುಸ್ತಕದಲ್ಲಿ ಅಮಾವಾಸ್ಯಾ ದಿವಸ ಆಚರಿಸಬೇಕಾದ ಅನುಷ್ಠಾನಗಳ ಬಗ್ಗೆ ಅನೇಕ ವಿಚಾರಗಳನ್ನು ಈ ಪುಸ್ತಕದಲ್ಲಿ ತಿಳಿಸಲಾಗಿದೆ. ಮತ್ತು ಲಕ್ಷ್ಮೀಪೂಜಾವಿಧಾನವನ್ನು ಸಂಗ್ರಹಿಸಿ ನೀಡಲಾಗಿದೆ. ವಿಶೇಷವಾಗಿ ಅಷ್ಟಲಕ್ಷ್ಮಿಯ ಆರಾಧನೆಯನ್ನು ಹೇಗೆ ಆರಾಧನೆ ಮಾಡಬೇಕೆಂದು ವಿಚಾರ ಮಾಡಿ, ಆತ್ಯಂತಿಕ ಫಲ ದೊರೆಯುವಂತೆ ತಿಳಿಸಲಾಗಿದೆ.

ಬಲಿಪಾಡ್ಯ ಹಾಗೂ ಯಮದ್ವಿತೀಯಾ ದಿವಸಗಳ ಬಗ್ಗೆ ಈ ಕೃತಿಯಲ್ಲಿ ತಿಳಿಸಲಾಗಿದೆ. ಬಲಿಪಾಡ್ಯವು ಮೂರುವರೆ ಪರ್ವಕಾಲಗಳಲ್ಲಿ ಅರ್ಧಪರ್ವಕಾಲ ಎನಿಸಿದೆ. ವರ್ಷದ ಬಹುದೊಡ್ಡ ಹಬ್ಬವಾದ್ದರಿಂದ ಪ್ರಯತ್ನ ಪಟ್ಟು ಭಗವಂತನಿಗೆ ಪಂಚಾಮೃತಾಭಿಷೇಕ, ಅನ್ನಸಂತರ್ಪಣೆ, ಜ್ಞಾನಯಜ್ಞಗಳನ್ನು ಇಂದು ಆಚರಿಸಬೇಕು. ವಿಶೇಷವಾಗಿ ಗೋಪೂಜೆಯನ್ನು, ಗೋವರ್ಧನೋದ್ಧಾರಿಯಾದ ಶ್ರೀಕೃಷ್ಣನ ಪೂಜೆಯನ್ನು ಇಂದು ಆಚರಿಸಬೇಕು. ಸಾಯಂಕಾಲದಂದು ತುಳಸೀಸಂಕೀರ್ತನೆಯನ್ನು

ಪ್ರಾರಂಭ ಮಾಡಬೇಕು. ರಾತ್ರಿ ಕಾಲದಲ್ಲಿ ಬಲೀಂದ್ರನ ಪೂಜೆಯನ್ನು ಮಾಡಬೇಕು. ಹೀಗೆ ಪೂಜೆ, ವಿವಿಧ ಬಗೆಯ ಆರಾಧನೆ, ನರ್ತನ, ಪ್ರವಚನ ಮೊದಲಾದ ಅನೇಕ ಬಗೆಯ ಆರಾಧನೆಗಳಿಂದ ಭಗವಂತನನ್ನು ಸಂತೋಷಪಡಿಸುವ ಪರ್ವಕಾಲವಿದು.

ವಾಮನದೇವರ ಹಾಗೂ ತ್ರಿವಿಕ್ರಮದೇವರ ವಿಶೇಷ ಅನುಗ್ರಹಕ್ಕಾಗಿ ಬಲಿಪಾಡ್ಯಪರ್ವಕಾಲವನ್ನು ಎಲ್ಲ ಹರಿಭಕ್ತರು ಶ್ರದ್ಧಾಭಕ್ತಿಗಳಿಂದ ಆಚರಿಸಲು ಈ ಕೃತಿಯು ಉಪಯೋಗವಾಗುತ್ತದೆ. ಹಾಗೂ ಬಲಿಪಾಡ್ಯದ ಮರುದಿವಸ ಯಮದ್ವಿತೀಯಾವೂ ಕೂಡ ಹಬ್ಬವೇ ಆಗಿದೆ. ಅಂದು ಸಹೋದರಿಯರ ಮನೆಯಲ್ಲಿ ಸಂತೋಷದಿಂದ ಹಬ್ಬವನ್ನು ಆಚರಿಸಬೇಕು. ಇದರ ಬಗ್ಗೆ ಪದ್ಮಪುರಾಣದಲ್ಲಿ ಬರುವ ವಿಚಾರವನ್ನೂ ಕೂಡ ಇಲ್ಲಿ ನೀಡಲಾಗಿದೆ. ಇದರ ಸದುಪಯೋಗವನ್ನೂ ಕೂಡ ಎಲ್ಲ ಹರಿಭಕ್ತರು ಪಡೆದುಕೊಳ್ಳಬೇಕು.

ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ಉತ್ತಮ ಸಾಧಕರಾದ ಆರ್. ಗುರುರಾಜ್ ಮತ್ತು ರುಕ್ಮಿಣಿ ಗುರುರಾಜ್, ಹಾಗೂ ಆರ್. ರಾಜೇಶ್ ಮತ್ತು ವಿಭಾ ರಾಜೇಶ್‌ಅವರಿಗೆ ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ-ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಇವರ ಮಾತಾ-ಪಿತೃಗಳಿಗೆ ಈ ಜ್ಞಾನಯಜ್ಞದ ಪುಣ್ಯರಾಶಿಯು ತಲುಪಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ.

## ಅಮಾವಾಸ್ಯೆಲಕ್ಷ್ಮೀಪೂಜೆಯ ಹಿನ್ನೆಲೆ

ದೇವಮಾನದ ಪ್ರಕಾರ ಮನುಷ್ಯರ ಒಂದು ವರ್ಷವು ದೇವತೆಗಳಿಗೆ ಒಂದು ದಿವಸವೆಂದು ಪರಿಗಣಿತವಾಗಿದೆ. ಆದ್ದರಿಂದ ಚಾತುರ್ಮಾಸ್ಯಕಾಲವು ದೇವತೆಗಳಿಗೆ ರಾತ್ರಿಯ ಕಾಲವಾಗಿದೆ. ಆ ಎಲ್ಲಾ ದೇವತೆಗಳು ಪರಮಾತ್ಮನನ್ನು ಚಾತುರ್ಮಾಸ್ಯಕಾಲದಲ್ಲಿ ಮಲಗಿಸುತ್ತಾರೆ.

ಸ್ವರಮಣನಾದ ಪರಮಾತ್ಮನಿಗೆ ನಿದ್ರಾದಿದೋಷಗಳು ಇಲ್ಲದಿದ್ದರೂ ನಮಗೆ ನಿದ್ರಾದಿಗಳನ್ನು ಕೊಡುವುದಕ್ಕಾಗಿ ಮಲಗುವಂತೆ ನಟನೆ ಮಾಡುತ್ತಾನೆ. ಚಾತುರ್ಮಾಸ್ಯಕಾಲದಲ್ಲಿ ಎಲ್ಲ ದೇವತೆಗಳ ರಾತ್ರಿಯ ಕಾಲವಾದ್ದರಿಂದ ತಾನೂ ಸಹ ಮಲಗಿರುತ್ತಾನೆ. ಆಷಾಢಮಾಸದ ಶುಕ್ಲಪಕ್ಷದ ಏಕಾದಶಿಯಂದು ಆ ಪರಮಾತ್ಮನು ಮಲಗುತ್ತಾನೆ. ಕಾರ್ತೀಕಮಾಸದ ಶುಕ್ಲ ಪಕ್ಷದ ಏಕಾದಶಿಯಂದು ಪರಮಾತ್ಮನು ಎದ್ದೇಳುತ್ತಾನೆ. ಒಟ್ಟು ನಾಕು ತಿಂಗಳು ಪರಮಾತ್ಮನು ಕ್ಷೀರಸಮುದ್ರದಲ್ಲಿ ಶೇಷಶಾಯಿಯಾಗಿ ಲಕ್ಷ್ಮೀದೇವಿಯ ಜೊತೆ ಮಲಗಿರುತ್ತಾನೆ.

ಪತಿಯು ಮಲಗಿದ ಮೇಲೆ ಪತ್ನಿಯು ಮಲಗಿಕೊಳ್ಳಬೇಕು. ಪತಿಯು ಏಳುವ ಮೊದಲೇ ಪತ್ನಿಯು ಎದ್ದೇಳಬೇಕು ಎಂಬುದು ನಿಜವಾದ ಧರ್ಮ. ಅದರ ಪ್ರಕಾರ ಪರಮಾತ್ಮನು ಆಷಾಢ ದ್ವಾದಶಿಯಂದು ಮಲಗಿದರೆ, ಲಕ್ಷ್ಮೀದೇವಿಯು ಆಷಾಢ ಹುಣ್ಣಿಮೆಯ ದಿವಸ ಮಲಗುತ್ತಾಳೆ. ಪರಮಾತ್ಮನು ಉತ್ಥಾನ ದ್ವಾದಶಿಯಂದು ಎದ್ದೇಳುವುದಾದರೆ, ಮಹಾಲಕ್ಷ್ಮೀದೇವಿಯು ಅದಕ್ಕಿಂತಲೂ ಮೊದಲು ಆಶ್ವೀನ ಬಹುಳ ಅಮಾವಾಸ್ಯೆಯಂದು ಎದ್ದೇಳುತ್ತಾಳೆ.

ಉತ್ಥಾನದ್ವಾದಶಿಯ ಸಾಯಂಕಾಲದಲ್ಲಿ ಹೇಗೆ ಪರಮಾತ್ಮನನ್ನು ವೈಭವೋಪೇತವಾಗಿ ಎಬ್ಬಿಸುತ್ತೇವೋ, ಅದೇ ಕ್ರಮದಲ್ಲಿ ಅಮಾವಾಸ್ಯೆಯ ದಿವಸ ಕ್ಷೀರಸಮುದ್ರದಲ್ಲಿ ಪರಮಾತ್ಮನ ಜೊತೆ ಪವಡಿಸಿದ ಮಹಾಲಕ್ಷ್ಮೀದೇವಿಯನ್ನು ಎಬ್ಬಿಸಬೇಕು. ಕ್ಷೀರಾಭಿಷೇಕವನ್ನು ಮಾಡಬೇಕು. ಎಲ್ಲ ಮುತ್ತೈದೆಯರು ಮಂಗಳವನ್ನು ಹಾಡಬೇಕು. ಶ್ರೀಸೂಕ್ತವನ್ನು ಉಚ್ಚಕಂಠದಿಂದ ಪಠಿಸುತ್ತಾ ಪರಮಾತ್ಮನು ಏಳುವ

ಮೊದಲು ಮಹಾಲಕ್ಷ್ಮೀದೇವಿಯು ಕ್ಷೀರಸಮುದ್ರದಿಂದ ಎದ್ದೇಳುತ್ತಿದ್ದಾಳೆಂದು ಭಾವಿಸಬೇಕು.

ಈ ಪುಸ್ತಕದಲ್ಲಿ ನೀಡಿದ ಕ್ರಮದಲ್ಲಿ ಲಕ್ಷ್ಮೀಪೂಜೆಯನ್ನು ವೈಭವೋಪೇತವಾಗಿ ಆಚರಿಸಬೇಕು. ಮಾಂಡವ್ಯಋಷಿಗಳು ಲಕ್ಷ್ಮೀಯು ಎದ್ದೇಳುವ ಬಗ್ಗೆ ಹೀಗೆ ಹೇಳುತ್ತಾರೆ-

ಅಮಾವಾಸ್ಯಾಂ ಜ್ವಲಾದಿತ್ಯೇ ಲಕ್ಷ್ಮೀರ್ನಿದ್ರಾಂ ವಿಮುಂಚತಿ।
ತಸ್ಮಿನ್ ಶುಕ್ಲೇ ಸದಾವಿಷ್ಣುಃ ತುಲಾಯಾಮಥವೃಶ್ಚಿಕಃ ॥

ಸೂರ್ಯನು ತುಲಾರಾಶಿಯಲ್ಲಿದ್ದಾಗ ಅಮಾವಾಸ್ಯೆಯ ದಿವಸ ಕ್ಷೀರಸಮುದ್ರದಿಂದ ಮಹಾಲಕ್ಷ್ಮೀದೇವಿಯು ಎದ್ದೇಳುತ್ತಾಳೆ.

ಜ್ಯೋತಿಷ್ಯಶಾಸ್ತ್ರದಲ್ಲಿ ಇದನ್ನು ಸುಖರಾತ್ರಿ ಎಂಬುದಾಗಿಯೇ ಕರೆಯುತ್ತಾರೆ. ಲಕ್ಷ್ಮಿಯು ಎದ್ದ ಸಮಯವಾದ್ದರಿಂದ ಇದನ್ನೇ ಸುಖರಾತ್ರಿ ಎಂಬುದಾಗಿ ಕರೆಯಬೇಕು-

ಸುಖರಾತ್ರೇರುಷಃಕಾಲೇ ಪ್ರದೀಪೋಜ್ಜ್ವಲಿತಾಲಯೇ ।
ಸುಶುಭ್ರೈಃ ಕುಸುಮೈರ್ಗಂಧದಧಿಗೋರೋಚನಾಫಲೈಃ ।
ಬಂಧುರ್ಬಂಧೂನಬಂಧೂಂಶ್ಚ ವಾಚಾ ಕುಶಲಯಾರ್ಚಯೇತ್ ।
ಪೂಜಯೇಚ್ಚ ತಥಾ ಲಕ್ಷ್ಮೀಮಲಕ್ಷ್ಮೀಮಲನಾಶಿನೀಮ್ । (ಜ್ಯೌತಿಷಶಾಸ್ತ್ರ)

ಸುಖರಾತ್ರಿಯ ಉಷಃಕಾಲದಲ್ಲಿ ದೀಪಗಳು ಎಲ್ಲೆಲ್ಲೂ ಬೆಳಗುತ್ತಿರುವಾಗ ಬಂಧುಗಳ ಯೋಗಕ್ಷೇಮವನ್ನು ವಿಚಾರಿಸಿ ಅಲಕ್ಷ್ಮೀನಿವಾರಣೆಗೋಸ್ಕರ ಲಕ್ಷ್ಮೀಪೂಜೆಯನ್ನು ಮಾಡಬೇಕು. ಶುಭವಾದ ಪುಷ್ಪಗಳು ಗಂಧ, ಮೊಸರು, ಗೋರೋಚನ, ಹಣ್ಣುಗಳು ಇತ್ಯಾದಿಗಳನ್ನು ಮಹಾಲಕ್ಷ್ಮೀದೇವಿಗೆ ಸಮರ್ಪಣೆ ಮಾಡಬೇಕು.

ಯಾರ ಮನೆಯಲ್ಲಿ ದೀಪವನ್ನು ಬೆಳಗಿ ಪಟಾಕಿಗಳನ್ನು ಹಚ್ಚಿ ಸಂಭ್ರಮದಿಂದ ಲಕ್ಷ್ಮೀನಾರಾಯಣರ ಆರಾಧನೆಯನ್ನು ಮಾಡುತ್ತಾರೋ, ಅವರ ಮನೆಗೆ ಲಕ್ಷ್ಮೀ ನಾರಾಯಣರು ಆಗಮಿಸಿ, ಸಂಪೂರ್ಣ ಅನುಗ್ರಹವನ್ನು ಮಾಡುತ್ತಾರೆ. ಸಂಪೂರ್ಣ

ಆ ವರ್ಷವನ್ನು ಸಂತೋಷದಲ್ಲಿ ಕಳೆಯುವಂತೆ ಅನುಗ್ರಹ ಮಾಡುತ್ತಾರೆ. ಯಥೇಚ್ಛ ಸಂಪತ್ತು ಅವರ ಪಾಲಿಗೆ ಪ್ರಾಪ್ತವಾಗುತ್ತದೆ.

ವ್ಯಾಪಾರಸ್ಥರು ಹಾಗೂ ವೈಶ್ಯರು ಇಂದಿನ ದಿವಸಕ್ಕೆ ಬಹಳ ಮಹತ್ವವನ್ನು ನೀಡುತ್ತಾರೆ. ವರ್ಷದ ಹಳೆಯ ಲೆಕ್ಕಗಳನ್ನೆಲ್ಲಾ ಮುಗಿಸಿ, ಲಕ್ಷ್ಮೀದೇವಿಗೆ ಪೂಜೆಯನ್ನು ಮಾಡುತ್ತಾರೆ. ತಮ್ಮ ಅಂಗಡಿಗಳನ್ನು ಸಿಂಗಾರಗೊಳಿಸಿ. ಬಂಧು-ಮಿತ್ರರನ್ನು ಕರೆಸಿ, ತಾಂಬೂಲ ಸಿಹಿಗಳನ್ನು ನೀಡಿ ಉಪಚರಿಸುತ್ತಾರೆ. ಇದೊಂದು ಲೋಕೋಕ್ತಿಯು ಪ್ರಸಿದ್ಧಿಯಾಗಿದೆ - ''ಬ್ರಾಹ್ಮಣರಿಗೆ ಚತುರ್ಮುಖಬ್ರಹ್ಮನು ಶ್ರಾವಣಶುದ್ಧ ಪೂರ್ಣಿಮೆಯನ್ನು ಮುಖ್ಯ ಹಬ್ಬವನ್ನಾಗಿ ನೀಡಿದನು. ಕ್ಷತ್ರಿಯರಿಗೆ ನವರಾತ್ರಿಯನ್ನು, ವ್ಯಾಪಾರ ಮಾಡುವವರಿಗೆ ದೀಪಾವಳಿಯನ್ನು, ಶೂದ್ರರಿಗೆ ಹೋಳಿಹುಣ್ಣಿಮೆಯನ್ನು ವಿಶೇಷ ಹಬ್ಬವನ್ನಾಗಿ ಆಚರಿಸಲು ಕೊಟ್ಟನು'' ಎಂದು. ಇದು ಕೇವಲ ಲೋಕೋಕ್ತಿ. ವ್ಯಾಪಾರಿಗಳು ವಿಶೇಷವಾಗಿ ಲಕ್ಷ್ಮೀಪೂಜೆಯನ್ನು ಮಾಡುತ್ತಾರೆನ್ನುವುದಕ್ಕೆ ಮಾತ್ರ ಇದು ಆಧಾರ. ಆದರೆ ಎಲ್ಲಾ ಹಬ್ಬವನ್ನು ಪ್ರತಿಯೊಬ್ಬರೂ ಕೂಡ ಆಚರಣೆ ಮಾಡಲೇ ಬೇಕು.

ಇಲ್ಲಿಗೆ ದೀಪಾವಳಿಯ ಹಿನ್ನೆಲೆ ಮುಗಿಯಿತು.

* * * * *

## ದೀಪಾವಳಿ ಆಚರಣೆಯ ಬಗ್ಗೆ ತಿಳಿಯಬೇಕಾದ ಅಪೂರ್ವ ವಿಚಾರಗಳು

ಪ್ರತ್ಯೂಷ ಆಶ್ವಯುಕ್‌ದರ್ಶೇ ಕೃತಾಭ್ಯಂಗಾದಿಮಂಗಳಃ ।
ಭಕ್ತ್ಯಾ ಸಂಪೂಜಯೇತ್ ಲಕ್ಷ್ಮೀಂ ಅಲಕ್ಷ್ಮೀ ವಿನಿವೃತ್ತಯೇ ॥

* ಅರುಣೋದಯ ಕಾಲದಲ್ಲೆದ್ದು ಶೌಚಾಚಾರಗಳನ್ನು ಮುಗಿಸಿ, ದೇವರ ಮುಂದೆ, ತುಳಸಿಯ ಮುಂದೆ, ಮನೆಯ ಮುಂದೆ ದೀಪದ ಹಣತೆಗಳನ್ನು ಹಚ್ಚಿಡಬೇಕು. ಹಾಗೂ ನರಕಚತುರ್ದಶಿಯಂತೆ ಇಂದೂ ಸಹ ಅಭ್ಯಂಗವನ್ನು ಮಾಡಬೇಕು. ಲಕ್ಷ್ಮೀಪೂಜೆ ಮಾಡುವವರು ಅವಶ್ಯವಾಗಿ ಅಭ್ಯಂಗವನ್ನು ಮಾಡಲೇಬೇಕೆಂದು

ಶಾಸ್ತ್ರ ಹೇಳುತ್ತದೆ. ಅನಂತರ ಅಲಕ್ಷ್ಮಿಯನ್ನು ಓಡಿಸುವುದಕ್ಕಾಗಿ ಲಕ್ಷ್ಮೀದೇವಿಯನ್ನು ಭಕ್ತಿಯಿಂದ ಪೂಜಿಸಬೇಕು.

* ಉಷಃ ಕಾಲವೆನಿಸಿದ ೪.೩೦ ಕ್ಕೆ ಮಡಿಯಲ್ಲಿ ಸ್ನಾನವನ್ನು ಮಾಡಿ, ವಿಶೇಷವಾಗಿ ಮಹಾಲಕ್ಷ್ಮೀದೇವಿಯ ಪೂಜೆಯನ್ನು ಶುದ್ಧ ಮನಸ್ಸಿನಿಂದ ಆಚರಣೆ ಮಾಡಬೇಕು.

* ನಿರ್ಮಾಲ್ಯಾಭಿಷೇಕವನ್ನು ಮಾಡಿ ಲಕ್ಷ್ಮೀನಾರಾಯಣರಿಗೆ ಎರಡು ಪ್ರಣತಿಯ ದೀಪಾರತಿ ಮಾಡಿ ಪಡಸಾಲೆಯಲ್ಲಿ ಆ ದೀಪಗಳನ್ನು ಇಡಬೇಕು. ವರಮಹಾಲಕ್ಷ್ಮಿ ಹಬ್ಬ, ಅನಂತವ್ರತ ಮೊದಲಾದವುಗಳಲ್ಲಿ ಕಲಶದಲ್ಲಿ ಲಕ್ಷ್ಮಿಯನ್ನು ಮತ್ತು ಲಕ್ಷ್ಮೀನಾರಾಯಣರನ್ನು ಆವಾಹನೆ ಮಾಡಿ, ಪೂಜಿಸುವಂತೆ ಇಂದೂ ಕಲಶದಲ್ಲಿ ಲಕ್ಷ್ಮಿಯನ್ನು ಆವಾಹನೆ ಮಾಡಿ ಪೂಜಿಸುವುದು ಶ್ರೇಷ್ಠ.

* ಕೇವಲ ಲಕ್ಷ್ಮೀಯುನ್ನು ಪೂಜೆ ಮಾಡಿದರೆ, ಅತ್ಯಂತ ಕ್ಲೇಶವನ್ನೇ ಅನುಭವಿಸಬೇಕಾಗುತ್ತದೆ. ಆದ್ದರಿಂದ ನಾರಾಯಣನ ಜೊತೆಯೇ ಲಕ್ಷ್ಮೀದೇವಿಯನ್ನು ಪೂಜೆ ಮಾಡಬೇಕು.

* ಶ್ರೀಸೂಕ್ತ, ಅಂಭೃಣೀಸೂಕ್ತ, ಲಕ್ಷ್ಮೀದೇವಿಯ ಸ್ತೋತ್ರ, ಶ್ರೀಶಗುಣದರ್ಪಣ ಮೊದಲಾದವುಗಳನ್ನು ಹಾಗೂ 'ವಿಶ್ವಸ್ಥಿತಿಪ್ರಳಯಸರ್ಗ' ಎಂಬ ಶ್ರೀಮಧ್ವಾಚಾರ್ಯರು ರಚಿಸಿದ ಲಕ್ಷ್ಮೀಸ್ತೋತ್ರವನ್ನು ಪಠಿಸುತ್ತಾ ಪೂಜೆಯನ್ನು ಮಾಡಬೇಕು.

* ಲಕ್ಷ್ಮೀದೇವಿಗೆ ಗೆಜ್ಜೆವಸ್ತ್ರ, ಹೂಮಾಲೆ, ಬಂಗಾರದ ಆಭರಣಗಳು ಮೊದಲಾದವುಗಳನ್ನು ಯಥಾಶಕ್ತಿ ಸಮರ್ಪಣೆ ಮಾಡಬೇಕು.

* ಮಂಗಳಾರತಿಯನ್ನು ಮಾಡುವಾಗ ಅರಿಶಿನ ಕುಂಕುಮದ ನೀರನ್ನು ಹಾಕಿ ಎರಡು ದೀಪಗಳನ್ನು ಇಟ್ಟು ನೀರಾಜನವನ್ನು ಮಾಡಬೇಕು.

* ಭಕ್ಷ್ಯ, ಭೋಜ್ಯ, ಪಾಯಸಗಳನ್ನು ಮಾಡಿ ನೈವೇದ್ಯ ಮಾಡಬೇಕು.

* ಪ್ರತಿನಿತ್ಯ ಮಾಡುವ ಲಕ್ಷ್ಮೀನಾರಾಯಣರ ಪೂಜೆಗಿಂತ ಹೆಚ್ಚು ವೈಭವದಿಂದ ಇಂದು ಲಕ್ಷ್ಮೀನಾರಾಯಣರ ಪೂಜೆಯನ್ನು ಮಾಡಬೇಕು. ಕೊನೆಯಲ್ಲಿ ಭಕ್ತಿಯಿಂದ ನಮಸ್ಕಾರವನ್ನು ಮಾಡಿ, ಜ್ಞಾನ-ಭಕ್ತಿ-ವೈರಾಗ್ಯಗಳನ್ನು ನಿರಂತರ ಮನಸ್ಸಿನಲ್ಲಿ ಲಕ್ಷ್ಮೀನಾರಾಯಣರ ಸನ್ನಿಧಾನವನ್ನು ಮನೆಯಲ್ಲಿಯೂ ಲಕ್ಷ್ಮೀನಾರಾಯಣರ ಸನ್ನಿಧಾನವನ್ನು ಪ್ರಾರ್ಥನೆ ಮಾಡಬೇಕು.

* ಕೆಲವರು ಹಗಲಿನಲ್ಲಿ ವೈಭವದಿಂದ ಲಕ್ಷ್ಮೀಪೂಜೆಯನ್ನು ಮಾಡಿ, ಸಾಯಂಕಾಲದಲ್ಲಿ ಸಂಕ್ಷೇಪವಾಗಿ ಲಕ್ಷ್ಮೀಪೂಜೆಯನ್ನು ಮಾಡುತ್ತಾರೆ. ಇನ್ನೂ ಕೆಲವರು ಹಗಲಿನಲ್ಲಿ ಸಂಕ್ಷೇಪವಾಗಿ ಲಕ್ಷ್ಮೀಪೂಜೆಯನ್ನು ಮಾಡಿ, ಸಾಯಂಕಾಲದಲ್ಲಿ ವಿಸ್ತಾರವಾಗಿ ಲಕ್ಷ್ಮೀಪೂಜೆಯನ್ನು ಮಾಡುತ್ತಾರೆ. ಅವರವರು ತಮ್ಮ ಸಂಪ್ರದಾಯಕ್ಕೆ ಅನುಗುಣವಾಗಿ ಮಾಡಬೇಕು.

* ಉತ್ಥಾನದ್ವಾದಶಿಯಂದು ಪರಮಾತ್ಮನು ಸಾಯಂಕಾಲದ ಸಮಯದಲ್ಲಿ ಕ್ಷೀರಸಮುದ್ರದಿಂದ ಹೇಗೆ ಮೇಲೆದ್ದು ಬರುತ್ತಾನೋ, ಅದರಂತೆ ಅಮಾವಾಸ್ಯೆಯ ದಿವಸ ಪ್ರದೋಷಕಾಲದಲ್ಲಿ ಲಕ್ಷ್ಮೀದೇವಿಯು ಕ್ಷೀರಸಮುದ್ರದಿಂದ ಮೇಲೆದ್ದು ಬರುತ್ತಾಳೆ. ಆದ್ದರಿಂದ ಪ್ರದೋಷಕಾಲದಲ್ಲಿ ಲಕ್ಷ್ಮೀಪೂಜೆಯನ್ನು ಮಾಡಲೇಬೇಕು.

* ಸಾಯಂಕಾಲದಲ್ಲಿ ಕ್ಷೀರಾಭಿಷೇಕವನ್ನು ಮಾಡಿ, ಲಕ್ಷ್ಮೀನಾರಾಯಣರಿಗೆ ಷೋಡಶೋಪಚಾರಪೂಜೆಯನ್ನು ಮಾಡಿ, ವೈಭವೋಪೇತವಾಗಿ ಆರತಿಯನ್ನು ಮಾಡುವುದೇ ಹೆಚ್ಚು ಫಲದಾಯಕವಾಗುತ್ತದೆ.

* ಈ ವಿಷಯದಲ್ಲಿ ಭವಿಷ್ಯಪುರಾಣವು ಲಕ್ಷ್ಮೀಪೂಜೆಯ ಕ್ರಮವನ್ನು ಹೀಗೆ ತಿಳಿಸಿದೆ -

ದಿವಾ ತತ್ರ ನ ಭೋಕ್ತವ್ಯಂ ಋತೇ ಬಾಲಾತುರಾಜ್ಜನಾತ್
ಪ್ರದೋಷಸಮಯೇ ಲಕ್ಷ್ಮೀಂ ಪೂಜಯಿತ್ವಾ ತತಃ ಕ್ರಮಾತ್ ॥

ಅಮಾವಾಸ್ಯೆಯಂದು ಪ್ರದೋಷಕಾಲದ ತನಕ ಏನನ್ನೂ ತಿನ್ನಬಾರದು. ಕೈಲಾಗದ ಮಕ್ಕಳು, ವಯಸ್ಸಾದವರು ಮಾತ್ರ ಉಣ್ಣಬಹುದು. ಪೂಜೆ

ಮಾಡುವವರು ಉಪವಾಸವಿದ್ದು ಪ್ರದೋಷಕಾಲದಲ್ಲಿ ಲಕ್ಷ್ಮೀಪೂಜೆಯನ್ನು ಕ್ರಮಪ್ರಕಾರವಾಗಿ ಆಚರಣೆ ಮಾಡಬೇಕು.

* ಭವಿಷ್ಯಪುರಾಣದ ಈ ಮಾತಿನಂತೆ ಯಾರು ಉಪವಾಸವಿದ್ದು ಲಕ್ಷ್ಮೀಪೂಜೆಯನ್ನು ಮಾಡುತ್ತಾರೋ, ಅವರು ಶಾಲಗ್ರಾಮಾದಿಗಳಿಗೆ ಕ್ಷೀರಾಭಿಷೇಕವನ್ನು ಮಾಡಿ, ಪ್ರತಿಮೆಗಳಿಗೂ ಕ್ಷೀರಾಭಿಷೇಕವನ್ನು ಮಾಡಿ, ವೈಭವೋಪೇತವಾಗಿ ಷೋಡಶೋಪಚಾರಪೂಜೆಯನ್ನು ಮಾಡಬೇಕು.

* ಒಂದುವೇಳೆ ಸಾಯಂಕಾಲದ ತನಕ ಉಪವಾಸವಿರಲು ಸಾಧ್ಯವಾಗದಿದ್ದರೆ, ಶಾಲಗ್ರಾಮ, ಪ್ರತಿಮೆ ಮೊದಲಾದವುಗಳನ್ನು ಸ್ಪರ್ಶ ಮಾಡುವಂತಿಲ್ಲ. ಮತ್ತು ಮಡಿಯಲ್ಲಿರುವ ಪ್ರತಿಮೆ ಶಾಲಗ್ರಾಮಗಳಿಗೆ ತುಳಸೀ, ಹೂವು ಮೊದಲಾದವುಗಳನ್ನೂ ಕೂಡ ಏರಿಸುವಂತಿಲ್ಲ. ಆದ್ದರಿಂದ ಸುದರ್ಶನಚಕ್ರವನ್ನು ಹಾಗೂ ಒಂದು ಸಣ್ಣ ಲಕ್ಷ್ಮಿಯ ಪ್ರತಿಮೆಯನ್ನು ಪ್ರತ್ಯೇಕವಾಗಿ ಇಟ್ಟುಕೊಂಡು, ಅದಕ್ಕೆ ಮಾತ್ರ ಪೂಜೆಯನ್ನು ಮಾಡಬೇಕು.

* ಸಾಯಂಕಾಲದ ತನಕ ಉಪವಾಸ ಮಾಡದವರೂ ಸಹ ಸ್ನಾನವನ್ನು ಮಾಡಿಯೇ, ಲಕ್ಷ್ಮೀಪೂಜೆಯನ್ನು ಮಾಡಬೇಕು. ಯಾರಿಗೆ ಸ್ನಾನವನ್ನೂ ಮಾಡಲೂ ಸಹ ಅವಕಾಶವಿರುವುದಿಲ್ಲವೋ, ಅಂಥವರು ಸುದರ್ಶನಚಕ್ರ ಮೊದಲಾದವುಗಳಿಗೂ ಕೂಡ ಕ್ಷೀರಾಭಿಷೇಕವನ್ನು ಮಾಡುವ ಅವಶ್ಯಕತೆ ಇರುವುದಿಲ್ಲ. ಪುಷ್ಪಾಲಂಕಾರ ಮಂಗಳಾರತಿ, ಮೊದಲಾದವುಗಳಿಂದಷ್ಟೇ ಲಕ್ಷ್ಮೀಪೂಜೆಯನ್ನು ಮಾಡಬೇಕು.

* ಪ್ರದೋಷಕಾಲದ ತನಕ ಯಾರು ಉಪವಾಸವಿದ್ದು, ಲಕ್ಷ್ಮೀಪೂಜೆಯನ್ನು ಮಾಡುತ್ತಾರೋ, ಅವರು ಬೆಳಿಗ್ಗೆಯೇ ಪಾರ್ವಣ ಶ್ರಾದ್ಧವನ್ನು ಆಚರಣೆ ಮಾಡಬೇಕು. ಇಂಥವರಿಗೆ ವಿಶೇಷಫಲವನ್ನು ಶಾಸ್ತ್ರವು ಹೇಳುತ್ತದೆ.

* ಉತ್ಥಾನದ್ವಾದಶಿಯ ಪ್ರದೋಷಕಾಲದಲ್ಲಿ ನಾರಾಯಣನು ಕ್ಷೀರಸಮುದ್ರದಿಂದ ಹೇಗೆ ಮೇಲೆದ್ದು ಬರುತ್ತಾನೆಂಬ ಭಾವನೆಯಿಂದ ಕ್ಷೀರಾಬ್ಧಿಯನ್ನು ಮಾಡುತ್ತೇವೋ, ಅದರಂತೆ ಅಮಾವಾಸ್ಯೆಯ ಸಾಯಂಕಾಲದಂದು

ಲಕ್ಷ್ಮೀದೇವಿಯು ಕ್ಷೀರಸಮುದ್ರದಿಂದ ಮೇಲೆದ್ದು ಬರುತ್ತಾಳೆ. ಆದ್ದರಿಂದ ಸಾಯಂಕಾಲದಂದು ಲಕ್ಷ್ಮೀದೇವಿಗೆ ಕ್ಷೀರಾಬ್ಧಿಯನ್ನು ಅವಶ್ಯವಾಗಿ ಮಾಡಲೇಬೇಕು. ಸಾಯಂಕಾಲದಲ್ಲಿ ಕ್ಷೀರಾಭಿಷೇಕವನ್ನು ಮಾಡಲು ಸಾಧ್ಯವಾಗದಿದ್ದರೆ, ಬೆಳಗಿನ ಪೂಜೆಯಲ್ಲಿಯೇ ಕ್ಷೀರಾಭಿಷೇಕವನ್ನು ಮಾಡಬೇಕು.

* ಪ್ರದೋಷಕಾಲದಲ್ಲಿ ಲಕ್ಷ್ಮೀಪೂಜೆಯನ್ನು ಮಾಡದೇ ಇರಬಾರದು. ಯಾರು ಪ್ರದೋಷಕಾಲದಲ್ಲಿ ಲಕ್ಷ್ಮೀಪೂಜೆಯನ್ನು ಮಾಡುತ್ತಾರೋ, ಅವರು ಲಕ್ಷ್ಮೀನಾರಾಯಣರ ಅನುಗ್ರಹಕ್ಕೆ ಭಾಜನರಾಗುತ್ತಾರೆ.
* ದೀಪಾವಳಿಯ ನಾಕುದಿವಸಗಳ ಉತ್ಸವದಲ್ಲಿ ಅಮಾವಾಸ್ಯೆಯು ಸಾಯಂಕಾಲದ ಲಕ್ಷ್ಮೀಪೂಜೆಗೆ ಎಲ್ಲಿಲ್ಲದ ಮಹತ್ವವಿದೆ. ಇಂಥ ಮಹತ್ವಪೂರ್ಣವಾದ ಲಕ್ಷ್ಮೀಪೂಜೆಯನ್ನು ಪ್ರಯತ್ನಪೂರ್ವಕವಾಗಿ ಮಾಡಿ, ಲಕ್ಷ್ಮೀದೇವಿಯ ಅನುಗ್ರಹಕ್ಕೆ ಪಾತ್ರರಾಗಿ ಭಗವಂತನ ಕೃಪೆಗೆ ಪಾತ್ರರಾಗಲು ಪ್ರಯತ್ನವನ್ನು ಮಾಡಬೇಕು.
* ಇಂದು ಕುಬೇರನನ್ನು ಪೂಜಿಸಿ ಹೀಗೆ ಪ್ರಾರ್ಥಿಸಬೇಕು -

ಧನದಾಯ ನಮಸ್ತುಭ್ಯಂ ನಿಧಿಪದ್ಮಾಧಿಪಾಯಚ ।
ಭವಂತು ತ್ವತ್ಪ್ರಸಾದಾನ್ಮೇ ಧನಧಾನ್ಯಾದಿಸಂಪದಃ ॥

## ಪದ್ಮಪುರಾಣದಲ್ಲಿ ದೀಪಾವಳಿ ಅಮಾವಾಸ್ಯೆಯ ಆಚರಣೆಗಳು

ಏವಂ ಪ್ರಭಾತಸಮಯೇ ಹ್ಯಮಾವಾಸ್ಯಾಂ ತು ಭಾಮಿನಿ ।
ಸ್ನಾತ್ವಾ ದೇವಾನ್ ಪಿತ್ರೃನ್ ಭಕ್ತ್ಯಾ ಸಂಪೂಜ್ಯಾಥ ಪ್ರಣಮ್ಯ ಚ ॥
ಕೃತ್ವಾತು ಪಾರ್ವಣಂ ಶ್ರಾದ್ಧಂ ದಧಿಕ್ಷೀರಘೃತಾದಿಭಿಃ ।
ಭೋಜ್ಯೈರ್ನಾನಾವಿಧೈರ್ವಿಪ್ರಾನ್ ಭೋಜಯಿತ್ವಾಕ್ಷಮಾಪಯೇತ್ ॥

ಹೀಗೆ ಮಾಡಿ ಬೆಳಗಾದ ಮೇಲೆ ಅಮಾವಾಸ್ಯೆಯ ದಿನ ಸ್ನಾನ ಮಾಡಿ ದೇವತೆಗಳನ್ನೂ ಪಿತೃಗಳನ್ನೂ ಭಕ್ತಿಯಿಂದ ಪೂಜಿಸಿ ನಮಸ್ಕರಿಸಿ ಆದಿನ ಬ್ರಾಹ್ಮಣರಿಗೆ ಆಹ್ವಾನ ಹೇಳಿ ಪಾರ್ವಣ ಶ್ರಾದ್ಧವನ್ನು ಮಾಡಿ ಹಾಲು ಮೊಸರು ತುಪ್ಪಗಳಿಂದಲೂ

ಬಗೆಬಗೆಯಾದ ಆಹಾರಗಳಿಂದಲೂ ಅವರನ್ನು ತೃಪ್ತಿಪಡಿಸಿ ಕ್ಷಮಾಪಣೆಯನ್ನು ಕೇಳಿಕೊಳ್ಳಬೇಕು.

ತತೋಽಪರಾಹ್ಣಸಮಯೇ ತೋಷಯೇನ್ನಾಗರಾನ್ಪ್ರಿಯೇ ।
ತೇಷಾಂ ಗೋಷ್ಠೀಶ್ಚ ಮಾನಂ ಹಿ ಕೃತ್ವಾ ಸಂಭಾಷಣಂ ಪ್ರಿಯೇ ॥

ಅನಂತರ ಮಧ್ಯಾಹ್ನದ ಮೇಲೆ ಊರಿನ ಜನರನ್ನು ಶಕ್ತಿಯಿದ್ದರೆ ತಿಂಡಿ ತೀರ್ಥಗಳಿಂದಲೂ ಇಲ್ಲದಿದ್ದರೆ ಮಾತುಗಳಿಂದಲೂ ಸಂತೋಷಪಡಿಸಬೇಕು. ಅವರನ್ನು ಸಭೆ ಸೇರಿಸಿ ಗೌರವಿಸಿ ಮಾತನಾಡಿಸಬೇಕು.

ಪಿತೄಣಾಂ ವತ್ಸರಂ ಯಾವತ್ಪ್ರೀತಿಮುತ್ಪಾದ್ಯತೇ ದಿವಿ ।
ಅಪ್ರಬುದ್ಧೇ ಹರೌ ಪೂರ್ವಂ ಸ್ತ್ರೀಭಿರ್ಲಕ್ಷ್ಮೀಂ ಪ್ರಬೋಧಯೇತ್ ॥

ಹೀಗೆ ಮಾಡಿದರೆ ಪಿತೃಗಳಿಗೆ ವರ್ಷಪರ್ಯಂತವೂ ಸಂತೋಷವಾಗುತ್ತದೆ. ಇನ್ನೂ ಹರಿಯು ಮಲಗಿರುವಾಗಲೇ ಹೆಂಗಸರು ಲಕ್ಷ್ಮಿಯನ್ನು ಎಬ್ಬಿಸಬೇಕು.

## ಲಕ್ಷ್ಮೀಯು ಎದ್ದೇಳುವ ದಿವಸವಿದು

ಪ್ರಬೋಧಸಮಯೇ ಲಕ್ಷ್ಮೀಂ ಬೋಧಯಿತ್ವಾರ್ಚಯೇತ್ತು ಯಃ ।
ಪುಮಾನ್ವೈ ವತ್ಸರಂ ಯಾವಲ್ಲಕ್ಷ್ಮೀಸ್ತಂ ನೈವ ಮುಂಚತಿ ॥

ಲಕ್ಷ್ಮಿಯು ಏಳುವ ಸಮಯದಲ್ಲಿ ಆಕೆಯನ್ನು ಎಬ್ಬಿಸಿ ಪೂಜಿಸಬೇಕು. ಹಾಗೆ ಮಾಡಿದ ಮನುಷ್ಯನನ್ನು ಎಲ್ಲಾ ಬಗೆಯ ಸಂಪತ್ತು ಆ ವರ್ಷ ಪೂರ್ತಿಯಾಗುವವರೆಗೂ ಬಿಡುವುದಿಲ್ಲ.

## ದೀಪಾರಾಧನೆ ಮಾಡದಿದ್ದರೆ ಅಲಕ್ಷ್ಮೀ ಬರುವಳು

ಅಭಯಂ ಪ್ರಾಪ್ಯ ವಿಪ್ರೇಭ್ಯೋ ವಿಷ್ಣುಭೀತಾಃ ಸುರದ್ವಿಷಃ ।
ಸುಪ್ತಂ ಕ್ಷೀರೋದಧೌ ಜ್ಞಾತ್ವಾ ಲಕ್ಷ್ಮೀಸದ್ಮಾಶ್ರಿತಾಸ್ತಥಾ ॥

ವಿಷ್ಣುವಿನಿಂದ ಹೆದರಿದ ರಾಕ್ಷಸರು ಬ್ರಾಹ್ಮಣರಿಂದ ಅಭಯವನ್ನು ಹೊಂದಿ ವಿಷ್ಣುವು ಕ್ಷೀರಸಮುದ್ರದಲ್ಲಿ ಮಲಗಿರುವುದನ್ನು ತಿಳಿದು ಲಕ್ಷ್ಮಿಯ ಮನೆಯನ್ನು ಹೊಂದಿರುತ್ತಾರೆ.

ತ್ವಂ ಜ್ಯೋತಿಃ ಶ್ರೀ ರವಿಶ್ಚಂದ್ರೋ ವಿದ್ಯುತ್ಸೌವರ್ಣತಾರಕಾ ।
ಸರ್ವೇಷಾಂ ಜ್ಯೋತಿಷಾಂ ಜ್ಯೋತಿರ್ದೀಪಜ್ಯೋತಿಸ್ಸ್ಥಿತಾ ತಥಾ ॥

ಎಲೈ ಲಕ್ಷ್ಮಿಯೇ ! ನೀನೇ ಜ್ಯೋತಿಸ್ಸು. ನೀನೇ ಶ್ರೀಯು. ನೀನೇ ಸೂರ್ಯನು. ನೀನೇ ಚಂದ್ರನು. ನೀನೇ ಮಿಂಚು. ನೀನೇ ಬೆಳಗುವ ನಕ್ಷತ್ರವು. ನೀನು ಜ್ಯೋತಿಸ್ಸಿಗೆಲ್ಲಾ ಜ್ಯೋತಿಸ್ಸಿನ ರೂಪಳು. ಉತ್ತಮವಾದ ದೀಪದ ಜ್ಯೋತಿಯಲ್ಲಿ ನೀನಿದ್ದೀಯೆ.

ಯಾ ಲಕ್ಷ್ಮೀರ್ದಿವಸೇ ಪುಣ್ಯೇ ದೀಪಾವಳ್ಯಾಂ ಚ ಭೂತಳೇ ।
ಗವಾಂ ಗೋಷ್ಠೇ ತು ಕಾರ್ತಿಕ್ಯಾಂ ಸಾ ಲಕ್ಷ್ಮೀರ್ವರದಾ ಮಮ ॥

ಪುಣ್ಯತಮವಾದ ಹಗಲಿನಲ್ಲಿ ಯಾವ ಲಕ್ಷ್ಮಿಯು ಇರುವಳೋ ದೀಪಗಳ ಸಾಲಿನಲ್ಲಿ ಯಾವ ಲಕ್ಷ್ಮಿಯು ಇರುವಳೋ ಗೋವಿನ ದೊಡ್ಡಿಗಳಲ್ಲಿಯೂ ಕಾರ್ತಿಕಮಾಸದಲ್ಲಿಯೂ ಯಾವ ಲಕ್ಷ್ಮಿಯು ಇರುವಳೋ ಆ ಲಕ್ಷ್ಮಿಯು ನನಗೆ ವರವನ್ನು ಕೊಡಲಿ.

## ವಿನೋದಕ್ಕಾಗಿ ದ್ಯೂತಕ್ರೀಡೆ

ಶಂಕರಶ್ಚ ಭವಾನೀ ಚ ಕ್ರೀಡಯಾ ದ್ಯೂತಮಾಸ್ಥಿತೇ ।
ಭವನ್ಯಾಭ್ಯರ್ಚಿತಾ ಲಕ್ಷ್ಮೀರ್ಧೇನುರೂಪೇಣ ಸಂಸ್ಥಿತಾ ॥
ಗೌರ್ಯಾ ಜಿತ್ವಾ ಪುರಾ ಶಂಭುಃ ನಗ್ನೋ ದ್ಯೂತೇ ವಿಸರ್ಜಿತಃ ।
ಅತೋಽರ್ಥಂ ಶಂಕರೋ ದುಃಖೀ ಗೌರೀ ನಿತ್ಯಂ ಸುಖಾನ್ವಿತಾ ॥

ಪೂರ್ವದಲ್ಲಿ ಶಂಕರನೂ ಗೌರಿಯೂ ಜೂಜಾಡುತ್ತಿದ್ದರು. ಆಗ ಗೌರಿಯು ಲಕ್ಷ್ಮಿಯನ್ನು ಪೂಜಿಸಲು ಆ ಲಕ್ಷ್ಮಿಯು ಹಸುವಾಗಿ ಅಲ್ಲಿದ್ದಳು. ಇದರಿಂದ ಗೌರಿಯು ಶಂಕರನನ್ನು ಸೋಲಿಸಿದಳು. ಸೋತ ಶಂಕರನು ಇದ್ದುದೆಲ್ಲವನ್ನೂ ಗೌರಿಗೆ ಕೊಟ್ಟುಬಿಟ್ಟನು. ಗೌರಿಯು ಶಂಕರನನ್ನು ಬೆತ್ತಲೆಯಾಗಿ ಓಡಿಸಿದಳು. ಆದುದರಿಂದಲೇ ಗೌರಿಯು ಸುಖವುಳ್ಳವಳಾಗಿಯೂ ಶಂಕರನು ದುಃಖವುಳ್ಳವನಾಗಿಯೂ ಇರುವುದು. (ಇದು ಅಸುರಮೋಹಕ ಸ್ತೋತ್ರ)

# ವಿನೋದಕ್ಕಾಗಿ ದ್ಯೂತಕ್ರೀಡೆ ಆಡಬಹುದೇ ಒಂದು ವಿಮರ್ಶೆ

ಅಕ್ಷದ್ಯೂತಂ ನಿಕೃತಿಃ ಪಾಪಮೇವ

ಕೃತಂ ತ್ವಯಾ ಗರ್ಹಿತಂ ಸೌಬಲೇನ।

ನ ಕುತ್ರಚಿದ್ ವಿಧಿರಸ್ಯಾಸ್ತಿ ತೇನ

ನ ತದ್ ದತ್ತಂ ದ್ಯೂತಹೃತಂ ವದಂತಿ।

ಎಂಬುದಾಗಿ ಶ್ರೀಮಧ್ವಾಚಾರ್ಯರು ತಾತ್ಪರ್ಯನಿರ್ಣಯದಲ್ಲಿ ಪಗಡೆಯಾಟವು ಸರ್ವಥಾ ನಿಷಿದ್ಧವಾಗಿದೆ. ಇದನ್ನು ಆಡಬಾರದೆಂದು ಹೇಳಿದ್ದಾರೆ. ಮತ್ತು ಎಲ್ಲಿಯೂ ಕೂಡ ಇದಕ್ಕೆ ವಿಧಿಯು ಇರುವುದಿಲ್ಲ. ದ್ಯೂತಕ್ರೀಡೆಯಲ್ಲಿ ಯಾವುದನ್ನು ಕೊಡಲಾಗುತ್ತದೋ, ಅದು ದಾನವಲ್ಲ. ಕಳೆದುಕೊಂಡದ್ದನ್ನು ಮತ್ತೆ ಪಡೆಯುವುದೇ ದ್ಯೂತಕ್ರೀಡೆ. ಆದ್ದರಿಂದ ದ್ಯೂತಕ್ರೀಡೆಯನ್ನು ಆಡಬಾರದೆಂಬುದಾಗಿ ಸ್ಪಷ್ಟವಾಗಿ ಮಧ್ವಾಚಾರ್ಯರು ಆಜ್ಞೆಯನ್ನು ಮಾಡಿದ್ದಾರೆ. ಮತ್ತು ಮನುಸ್ಮೃತಿಯಲ್ಲಿ -

ದ್ಯೂತಮೇತತ್ ಪುರಾಕಲ್ಪೇ

ಸೃಷ್ಟಂ ವೈರಕರಂ ಮಹತ್

ತಸ್ಮಾದ್ ದ್ಯೂತಂ ನ ಸೇವೇತ

ಹಾಸ್ಯಾರ್ಥಮಪಿ ಬುದ್ಧಿಮಾನ್

ಹಾಸ್ಯಕ್ಕೋಸ್ಕರವೂ ಕೂಡ ದ್ಯೂತಕ್ರೀಡೆಯನ್ನು ಆಡಬಾರದು. ಹಣವನ್ನಿಟ್ಟು ದ್ಯೂತಕ್ರೀಡೆಯನ್ನು (ಇಸ್ಪೀಟನ್ನು) ಹಾಗೂ ಪಗಡೆಯಾಟವನ್ನು ಸರ್ವಥಾ ಆಡಬಾರದು. ಅದರಲ್ಲಿಯೂ ಇಂಥ ಹಬ್ಬ-ಹರಿದಿನಗಳಲ್ಲಿ ದ್ಯೂತಕ್ರೀಡೆಯನ್ನು ಆಡಿದರೆ ಅವರು ಸರ್ವನಾಶವಾಗುವುದರಲ್ಲಿ ಸಂಶಯವಿಲ್ಲ. ಪದ್ಮಪುರಾಣದಲ್ಲಿ ದ್ಯೂತವಾಡಬೇಕೆಂಬ ಮಾತು ಕೇವಲ ದುರ್ಜನರಿಗೆ ಮೋಹವುಂಟಾಗುವುದಕ್ಕಾಗಿ ಇರುತ್ತದೆ. ಸಜ್ಜನರಿಗೆ ಮಾರ್ಗದರ್ಶನ ಮಾಡುವುದಕ್ಕಾಗಿ ಅಲ್ಲವೆಂದು ನಿಖರವಾಗಿ

ತಿಳಿಯಬೇಕು. ಯಾರಾದರೂ ಬಲಿಪಾಡ್ಯದಂದು, ಅಥವಾ ಅಮಾವಾಸ್ಯೆಯಂದು ಜೂಜಾಟವನ್ನು ಆಡಿದರೆ ಅದನ್ನು ವಿರೋಧ ಮಾಡಬೇಕು. ಇದು ಶಾಸ್ತ್ರಕ್ಕೆ ಅಸಮ್ಮತವೆಂದು ಪ್ರತಿಭಟನೆ ಮಾಡಬೇಕು.

## ರಾತ್ರಿಯಲ್ಲಿ ಅಲಕ್ಷ್ಮೀಯನ್ನು ಓಡಿಸುವ ಪದ್ಧತಿ

ಪ್ರಥಮಂ ವಿಜಯೋ ಯಸ್ಯ ತಸ್ಯ ಸಂವತ್ಸರಂ ಶುಭಂ ।

ಏವಂ ಗತೇ ನಿಶೀಥೇ ತು ಜನೇ ನಿದ್ರಾಂಧಲೋಚನೇ ॥

ತಾವನ್ನಗರನಾರೀಭಿಃ ಶೂರ್ಪಡಿಂಡಿಮವಾದನೈಃ ।

ನಿಷ್ಕಾಸ್ಯತೇ ಪ್ರಹೃಷ್ಟಾಭಿರಲಕ್ಷ್ಮೀಸ್ಸ್ವಗೃಹಾಂಗಣಾತ್ ॥

ಮೊದಲು ಗೆಲ್ಲುವವನಿಗೆ ವರ್ಷ ಪೂರ್ತಿಯಾಗಿ ಹೋದೆಡೆ ಎಲ್ಲಾ ಶುಭವಾಗಿ ವಿಜಯಗಳಾವುವು. ಹೀಗೆ ರಾತ್ರಿಯೆಲ್ಲವನ್ನೂ ಜೂಜಿನಿಂದ ಕಾಲಕಳೆಯುತ್ತಾ ಜನಗಳು ನಿದ್ದೆಯಿಂದ ಬಿಗಿಯುತ್ತಿರುವ ಕಣ್ಣುಗಳುಳ್ಳವರಾಗುತ್ತಿರಲು ಆಗ ಊರಿನ ಹೆಂಗಸರೆಲ್ಲರೂ ತಮ್ಮ ತಮ್ಮ ಮನೆಗಳಲ್ಲಿ ಮೊರವನ್ನೂ ಡಿಂಡಿಮವೆಂಬ ಬುಡುಬುಡುಕೆಯಂತಿರುವ ವಾದ್ಯವನ್ನೂ ಬಡಿಯುತ್ತಾ ಸಂತೋಷದಿಂದ ತಮ್ಮ ತಮ್ಮ ಮನೆಯ ಅಂಗಳದಿಂದ ಅಲಕ್ಷ್ಮಿಯನ್ನು ಓಡಿಸುತ್ತಾರೆ.

## ಲಕ್ಷ್ಮಿಯ ಅನುಗ್ರಹಕ್ಕಾಗಿ ಹೀಗೆ ಮಾಡಬೇಕು

* ಯಾರು ದೀಪಾವಳಿಯ ಅಮಾವಾಸ್ಯೆಯ ಸಾಯಂಕಾಲದಲ್ಲಿ ಲಕ್ಷ್ಮೀನಾರಾಯಣರ ಪೂಜೆಯನ್ನು ಮಾಡುತ್ತಾರೋ, ಯಾವ ಮನೆಯು ಅತ್ಯಂತ ಶುದ್ಧವಾಗಿದ್ದು, ತಳಿರುತೋರಣಗಳಿಂದ ಅಲಂಕೃತವಾಗಿ ಮನೆಯ ಪರಿಸರವು ದೀಪಗಳಿಂದ ಬೆಳಗುತ್ತಾ ಕಂಗೊಳಿಸುತ್ತಾ ಇರುತ್ತದೋ, ಅಂಥ ಮನೆಯನ್ನು, ಮನೆಮಂದಿಯನ್ನು ಸಂಪೂರ್ಣವಾಗಿ ಲಕ್ಷ್ಮೀನಾರಾಯಣರು ಅನುಗ್ರಹಿಸುತ್ತಾರೆ. ಅವರ ಮನೆಯೊಳಗೆ ಆಗಮಿಸುತ್ತಾರೆ. ಆದ್ದರಿಂದ ಅಂದಿನ ಸಾಯಂಕಾಲದಲ್ಲಿ ಮುತ್ತೈದೆಯರು ಅವಶ್ಯವಾಗಿ ಲಕ್ಷ್ಮೀಶೋಭಾನಪದವನ್ನು ಪಠಿಸಬೇಕು. ಪುರುಷರು ಭಾಗವತದ ಅಷ್ಟಮಸ್ಕಂಧದ ಅಷ್ಟಮಾಧ್ಯಾಯದಲ್ಲಿ

ಬರುವ ಕ್ಷೀರಸಮುದ್ರಮಥನದ ಕಥೆಯನ್ನು ಪಠನ ಮಾಡಬೇಕು. ಮತ್ತು ದಶಮಸ್ಕಂಧದಲ್ಲಿ ಬರುವ ರುಕ್ಮಿಣೀಕಲ್ಯಾಣ- ಚರಿತ್ರೆಯನ್ನು ಪಠನ ಮಾಡಬೇಕು. ಮತ್ತು ಮಹಾಭಾರತತಾತ್ಪರ್ಯನಿರ್ಣಯದ ಆರನೆಯ ಅಧ್ಯಾಯದಲ್ಲಿ ಉಲ್ಲೇಖಿಸಲ್ಪಟ್ಟ ಸೀತಾರಾಮಕಲ್ಯಾಣವನ್ನು ಪಠನ ಮಾಡಬೇಕು. ವೇಂಕಟೇಶಕಲ್ಯಾಣದ ಸ್ತೋತ್ರಗಳನ್ನು, ಪದ್ಯಗಳನ್ನು ಪಠಿಸಬೇಕು. ಅಂಥವರಿಗೆ ಲಕ್ಷ್ಮೀನಾರಾಯಣರ ಸಂಪೂರ್ಣ ಅನುಗ್ರಹವಾಗುತ್ತದೆ.

* ಅಮಾವಾಸ್ಯೆಯಲ್ಲಿ ಲಕ್ಷ್ಮೀಪೂಜೆಯನ್ನು ಆಚರಣೆ ಮಾಡುವುದರಿಂದ ವಿವಾಹವಾಗದ ಹೆಣ್ಣುಮಕ್ಕಳಿಗೆ ವಿವಾಹವಾಗುತ್ತದೆ. ವಿವಾಹಿತರಾಗಿ ಮನಸ್ಸು ಹೊಂದಾಣಿಕೆಯಾಗದ ದಂಪತಿಗಳ ಮನಸ್ಸು ಹೊಂದಾಣಿಕೆಯಾಗುತ್ತದೆ. ಮಕ್ಕಳಾಗದವರಿಗೆ ಮಕ್ಕಳಾಗುತ್ತದೆ. ಬಡವರು ಶ್ರೀಮಂತರಾಗುತ್ತಾರೆ. ಸಾಲಗಾರರ ಸಾಲವು ತೀರುತ್ತದೆ. ಮತ್ತು ಪ್ರತಿಯೊಬ್ಬರಿಗೂ ಉತ್ತಮಜ್ಞಾನವು ಪ್ರಾಪ್ತವಾಗಿ, ಹರಿಭಕ್ತಿಯು ಅಭಿವೃದ್ಧವಾಗುತ್ತದೆ.

* ಪದ್ಮಪುರಾಣವು ಹೇಳುವಂತೆ ವಿಷ್ಣುವಿನಿಂದ ಹೆದರಿದ ರಾಕ್ಷಸರು ಲಕ್ಷ್ಮಿಯ ಮನೆಯಲ್ಲಿಯೇ ವಾಸಮಾಡುತ್ತಿರುತ್ತಾರೆ. ಇಂದು ಲಕ್ಷ್ಮೀಪೂಜೆಯನ್ನು ಆಚರಿಸಿದಾಗ ಅಂಥ ರಾಕ್ಷಸರು ಪಲಾಯನ ಮಾಡುತ್ತಾರೆ. ಅಲಕ್ಷ್ಮಿಯು ನಾಶವಾಗುತ್ತಾಳೆ.

* ಇಂದು ಅರ್ಧರಾತ್ರಿಯ ಕಾಲದಲ್ಲಿ ಅಲಕ್ಷ್ಮಿಯನ್ನು ಓಡಿಸುವ ಪದ್ಧತಿಯನ್ನು ಇಂದೂ ಸಹ ಅನೇಕ ಕಡೆ ಆಚರಿಸುತ್ತಾರೆ - ಬ್ರಹ್ಮಪುರಾಣದಲ್ಲಿ ಲಕ್ಷ್ಮಿಯ ಆಗಮನಕ್ಕಾಗಿ ಮಾಡಬೇಕಾದ ಸಿದ್ಧತೆಯನ್ನು ಹೀಗೆ ಹೇಳಲಾಗಿದೆ -

ಅರ್ಧರಾತ್ರೇ ಭ್ರಮತ್ಯೇವ ಲಕ್ಷ್ಮೀರಾಶ್ರಯಿತುಂ ಗೃಹಾನ್ ।
ಅತಃ ಸ್ವಲಂಕೃತಾ ಲಿಪ್ತಾಃ ದೀಪೈರ್ಜಾಗ್ರಜ್ಜನೋತ್ಸವಾಃ ।
ಸುಧಧವಲಿತಾಃ ಕಾರ್ಯಾಃ ಪುಷ್ಪಮಾಲೋಪಶೋಭಿತಾಃ ।

ಅರ್ಧರಾತ್ರಿಯ ತನಕ ಎದ್ದಿರಬೇಕು. ಲಕ್ಷ್ಮೀದೇವಿಯ ಮಹಾತ್ಮ್ಯೆಯನ್ನು ಚಿಂತನೆ ಮಾಡುತ್ತಿರಬೇಕು. ಎಲ್ಲೆಡೆಯೂ ದೀಪಗಳು ಬೆಳಗುತ್ತಿರಬೇಕು. ಮನೆಯ ಪರಿಸರವು ತಳಿರುತೋರಣಗಳಿಂದ ಕಂಗೊಳಿಸುತ್ತಿರಬೇಕು. ಲಕ್ಷ್ಮಿಗೆ ಪುಷ್ಪಮಾಲೆಗಳಿಂದ ಅಲಂಕಾರವನ್ನು ಮಾಡಿರಬೇಕು.

* ಹೀಗೆ ಲಕ್ಷ್ಮೀದೇವಿಯನ್ನು ಪೂಜೆ ಮಾಡುವುದರಿಂದಲೇ ಅಲಕ್ಷ್ಮಿಯು ಓಡಿಹೋಗುತ್ತಾಳೆ -

ಏವಂ ಗತೇ ನಿಶೀಥೇ ತು ಜನೇ ನಿದ್ರಾರ್ಧಲೋಚನೇ।
ತಾವನ್ನಗರನಾರೀಭಿಃ ಶೂರ್ಪಡಿಂಡಿಮವಾದನೈಃ।
ನಿಷ್ಕಾಸ್ಯತೇ ಪ್ರಹೃಷ್ಟಾಭಿಃ ಅಲಕ್ಷ್ಮೀಃ ಸ್ವಗೃಹಾಂಗಣಾತ್।

ಅರ್ಧರಾತ್ರಿಯಲ್ಲಿ ಅಲಕ್ಷ್ಮಿಯನ್ನು ಆ ರಾಜ್ಯದಿಂದ ಓಡಿಸುವ ಪದ್ಧತಿ ಇತ್ತು. ಸ್ತ್ರೀಯರು ಮೊರಗಳನ್ನು, ತಮಟೆಗಳನ್ನು ಬಾರಿಸುತ್ತಾ, ಊರಿಂದ ಹೊರಗೆ ಅಲಕ್ಷ್ಮಿಯನ್ನು ಓಡಿಸುತ್ತಿದ್ದರು.

## ಅಲಕ್ಷ್ಮಿಯನ್ನು ಓಡಿಸುವ ಕ್ರಮ

* ಈ ಅಮಾವಾಸ್ಯೆಯ ಮಧ್ಯರಾತ್ರಿಯಲ್ಲಿ ಒಂದು ಕಸಬರಿಗೆಯನ್ನು ಹೊರಗಡೆ ಎಸೆಯಬೇಕು. ಆ ಕಸಬರಿಕೆಯಲ್ಲಿ ಅಲಕ್ಷ್ಮಿಯು ವಾಸಮಾಡಿದ್ದಾಳೆಂದು ಅನುಸಂಧಾನ ಮಾಡಿಕೊಳ್ಳಬೇಕು.

ಅಲಕ್ಷ್ಮೀಂ ಕೃಷ್ಣವರ್ಣಾಂ ತ್ರಿಭುಜಾಂ ಕೃಷ್ಣವಸ್ತ್ರಪರಿಧಾನಾಂ ಲೋಹಾಭರಣ-
ಭೂಷಿತಾಂ ಶರ್ಕರಾಚಂದನಚರ್ಚಿತಾಂ ಗೃಹಸಮ್ಮಾರ್ಜನೀಹಸ್ತಾಂ
ಗರ್ಧಭಾರೂಢಾಂ ಕಲಹಪ್ರಿಯಾಂ.

ಅಲಕ್ಷ್ಮಿಯು ಕಪ್ಪುಬಣ್ಣದಿಂದ ಕೂಡಿದ್ದಾಳೆ. ಕರಿಬಟ್ಟೆಯನ್ನು ಉಟ್ಟಿದ್ದಾಳೆ. ಕಬ್ಬಿಣದ ಆಭರಣಗಳನ್ನು ಧರಿಸಿದ್ದಾಳೆ. ಉರುಟಾದ ಕುಂಕುಮವನ್ನು ಹಚ್ಚಿದ್ದಾಳೆ. ಕೈಯಲ್ಲಿ ಪೊರಕೆಯನ್ನು ಆಯುಧವನ್ನಾಗಿ ಧರಿಸಿದ್ದಾಳೆ. ಕತ್ತೆಯನ್ನೇರಿದ್ದಾಳೆ.

ತಾನಿದ್ದೆಡೆಯಲ್ಲಿ ಜಗಳವನ್ನು, ದಾರಿದ್ರ್ಯವನ್ನು ಬಯಸುತ್ತಿದ್ದಾಳೆ. ಇಂಥ ಅಲಕ್ಷ್ಮಿಯನ್ನು ಚಿಂತನೆ ಮಾಡಿ ಅವಳ ಆಯುಧವಾದ ಪೊರಕೆಯಲ್ಲಿ ಅವಳನ್ನು ಆವಾಹನೆ ಮಾಡಿ ಮನೆಯಿಂದ ಹೊರಗೆ ಎಸೆಯಬೇಕು.

* ಮಧ್ಯರಾತ್ರಿಯಲ್ಲಿ ಮಲಗುವ ಮುಂಚೆ ಹೀಗೆ ಪೊರಕೆಯನ್ನು ಎಸೆದು, ಬಂದು ಕೈಕಾಲುಗಳನ್ನು ತೊಳೆದು ಲಕ್ಷ್ಮೀನಾರಾಯಣರಿಗೆ ದೀಪವನ್ನು ಬೆಳಗಿ, ನಮಸ್ಕಾರ ಮಾಡಿ ಲಕ್ಷ್ಮೀನಾರಾಯಣ ಸನ್ನಿಧಾನವಷ್ಟೇ ಮನೆಯಲ್ಲಿರುವಂತೆ ಪ್ರಾರ್ಥನೆಯನ್ನು ಮಾಡಬೇಕು.

* ಅಂದು ಆಚರಿಸಿದ ಲಕ್ಷ್ಮೀನಾರಾಯಣರ ಆರಾಧನೆಯನ್ನು ಮುಖ್ಯಪ್ರಾಣರ ಹೃದಯಗುಹಾನಿವಾಸಿಗಳಾದ ಲಕ್ಷ್ಮೀನಾರಾಯಣರ ಪಾದಕಮಲಗಳಲ್ಲಿ ಸಮರ್ಪಣೆ ಮಾಡಿ ನಿದ್ರೆಯನ್ನು ಮಾಡಬೇಕು.

* ನಿದ್ರೆ ಮಾಡುವ ಮೊದಲು ಹಾಸಿಗೆಯಲ್ಲಿ ಕುಳಿತು ಹೀಗೆ ಪ್ರಾರ್ಥನೆಯನ್ನು ಮಾಡಬೇಕು - ನನ್ನ ಮನೆಯಲ್ಲಿ ಎಂದೂ ಸಹ ಅಲಕ್ಷ್ಮಿಯು ಬಾರದಿರಲಿ. ಅದರಂತೆ ನನ್ನ ಮನಸ್ಸಿನಲ್ಲೂ ಕೂಡ ಅಜ್ಞಾನ, ದಾರಿದ್ರ್ಯ, ಕೆಟ್ಟ ವಿಚಾರಗಳು, ಭಗವಂತನ ವಿಸ್ಮೃತಿ, ಅನಾದರ ಮೊದಲಾದ ದೋಷಗಳು ಬಾರದಿರಲಿ. ಇಂಥ ದೋಷಗಳಿಗೆ ಅವಕಾಶ ಮಾಡಿಕೊಡುತ್ತಿರುವ ಅಲಕ್ಷ್ಮಿಯು ಹೃದಯದಿಂದ ದೂರ ತೆರಳಲಿ. ಲಕ್ಷ್ಮೀನಾರಾಯಣರ ಕಟಾಕ್ಷದ ಬೆಳಕು ಹೃದಯದಲ್ಲಿ ಜ್ವಾಜ್ವಲ್ಯಮಾನವಾಗಲಿ. ಅಜ್ಞಾನವೆಂಬ ಕತ್ತಲು ಪರಿಹಾರವಾಗಲಿ. ಎಂದೆಂದೂ ಜ್ಞಾನ ಪರೋಪಕಾರ ಹರಿಭಕ್ತಿ ಮೊದಲಾದ ಸದ್ಗುಣಗಳು ಅಭಿವೃದ್ಧವಾಗಲಿ. ಹೀಗೆ ಪ್ರಾರ್ಥನೆಯನ್ನು ಮಾಡಿ, ಲಕ್ಷ್ಮೀನಾರಾಯಣರ ಸ್ವರೂಪವನ್ನು ಆಪಾದಮೌಳಿಪರ್ಯಂತ ಚಿಂತನೆಯನ್ನು ಮಾಡಬೇಕು. ಭಗವಂತನ ಪಾದಕಮಲಗಳಲ್ಲಿ ತಲೆಯನ್ನಿಟ್ಟು ಪ್ರಾಜ್ಞನಾಮಕ ಪರಮಾತ್ಮನ ಆಲಿಂಗನವನ್ನು ಮಾಡಿದ್ದೇನೆಂದು ಚಿಂತಿಸುತ್ತಾ ಮಲಗಿ ನಿದ್ರಿಸಬೇಕು.

* ಯಾರು ಹೀಗೆ ಅಲಕ್ಷ್ಮೀಯನ್ನು ಪರಿಹಾರ ಮಾಡಿ, ಲಕ್ಷ್ಮೀಯನ್ನು ಆವಾಹನೆ ಮಾಡಿ, ಲಕ್ಷ್ಮೀನಾರಾಯಣರ ಆರಾಧನೆಯನ್ನು ಮಾಡುತ್ತಾರೋ, ಅವರಿಗೆ ಸಂಪೂರ್ಣವಾಗಿ ಲಕ್ಷ್ಮೀನಾರಾಯಣರ ಅನುಗ್ರಹವಾಗುತ್ತದೆ. ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

## ದೀಪದಲ್ಲಿ ಅಷ್ಟಲಕ್ಷ್ಮೀಯ ಪೂಜೆ

* ದೀಪದಲ್ಲಿ ಲಕ್ಷ್ಮೀಯ ಪೂಜೆಯನ್ನು ಮಾಡುವ ಸಂಪ್ರದಾಯ ವ್ಯಾಪಕವಾಗಿದೆ. ಆದ್ದರಿಂದಲೇ ಇದಕ್ಕೆ ದೀಪಾವಳಿ ಎಂಬ ಹೆಸರೂ ಕೂಡ ಅನ್ವರ್ಥಕವಾಗಿದೆ. ಸಾಲುಸಾಲು ದೀಪಗಳನ್ನು ಹಚ್ಚಿ, ಒಂದು ದೊಡ್ಡ ದೀಪವನ್ನು ಹಚ್ಚಿ ಅದರಲ್ಲಿಯೇ ಲಕ್ಷ್ಮೀಯ ಪೂಜೆಯನ್ನು ಮಾಡಬೇಕು.

* ಸ್ಪಷ್ಟವಾಗಿ ದೀಪಪೂಜಾ ಕ್ರಮವನ್ನು ಹೀಗೆ ತಿಳಿದುಕೊಳ್ಳಬೇಕು - ಲಕ್ಷ್ಮೀಯ ಅಷ್ಟರೂಪಗಳು ಅತ್ಯಂತ ಪ್ರಸಿದ್ಧವಾಗಿವೆ. ಧಾನ್ಯದ ಮೇಲೆ ಅರಿಶಿನಕೊಂಬು ವಿಳ್ಯೆದೆಲೆ ಅಡಿಕೆ ಇವುಗಳನ್ನು ಇಡಬೇಕು. ಮಧ್ಯದಲ್ಲಿ ಒಂದು ದೀಪವನ್ನಿಟ್ಟು ಸುತ್ತಲು ಏಳು ದೀಪಗಳನ್ನು ಜೋಡಿಸಬೇಕು. ೧. ಧನಲಕ್ಷ್ಮೀ ೨. ಗಜಲಕ್ಷ್ಮೀ ೩. ಸಂತಾನಲಕ್ಷ್ಮೀ ೪. ಧಾನ್ಯಲಕ್ಷ್ಮೀ ೫. ವಿದ್ಯಾಲಕ್ಷ್ಮೀ ೬. ಆದಿಲಕ್ಷ್ಮೀ ೭. ವಿಜಯಲಕ್ಷ್ಮೀ ೮. ವೀರಲಕ್ಷ್ಮೀ ಎಂಬ ಲಕ್ಷ್ಮೀಯ ೮ ರೂಪಗಳನ್ನು ಕ್ರಮವಾಗಿ ಧ್ಯಾನ ಮಾಡಬೇಕು. ಮಧ್ಯದಲ್ಲಿ ಧನಲಕ್ಷ್ಮೀಯನ್ನು ಮೇಲ್ಭಾಗದಲ್ಲಿ ಗಜಲಕ್ಷ್ಮೀಯನ್ನು, ಸಂತಾನಲಕ್ಷ್ಮೀ, ಧಾನ್ಯಲಕ್ಷ್ಮೀ, ವಿದ್ಯಾಲಕ್ಷ್ಮೀಯನ್ನು ಎಡಭಾಗದಲ್ಲಿ, ಆದಿಲಕ್ಷ್ಮೀ, ವಿಜಯಲಕ್ಷ್ಮೀ, ವೀರಲಕ್ಷ್ಮೀಯನ್ನು ಬಲಭಾಗದಲ್ಲಿ ಆವಾಹನೆ ಮಾಡಬೇಕು. ಹಾಗೂ ಅಷ್ಟಾಕ್ಷರಪ್ರತಿಪಾದ್ಯವಾದ ಭಗವಂತನ ಅಷ್ಟರೂಪಗಳನ್ನು ಆವಾಹನೆ ಮಾಡಬೇಕು. ೧. ವಿಶ್ವ, ೨. ತೈಜಸ, ೩. ಪ್ರಾಜ್ಞ, ೪. ತುರ್ಯ, ೫. ಆತ್ಮ, ೬. ಅಂತರಾತ್ಮ, ೭. ಪರಮಾತ್ಮ, ೮. ಜ್ಞಾನಾತ್ಮ. ಹೀಗೆ ಪರಮಾತ್ಮನ ಎಂಟು ರೂಪಗಳ ಜೊತೆ, ಎಂಟು ಲಕ್ಷ್ಮೀರೂಪಗಳನ್ನು ಆವಾಹನೆ ಮಾಡಿ ಪೂಜೆ ಮಾಡಬೇಕು. ಅಥವಾ

ಪೂಜಾಕ್ರಮದಲ್ಲಿ ತಿಳಿಸಿದಂತೆ ಶ್ರೀಕರಾದಿರೂಪಗಳನ್ನೂ ಜೊತೆಯಲ್ಲಿ ಚಿಂತಿಸಿ ಪೂಜಿಸಬೇಕು.

ಎಂಟು ಹಣತೆಗಳಲ್ಲಿ ಶುದ್ಧವಾದ ಎಳ್ಳೆಣ್ಣೆಯನ್ನೇ ಹಾಕಿ ದೀಪವನ್ನು ಹಚ್ಚಬೇಕು. ಅಥವಾ ಶುದ್ಧವಾದ ತುಪ್ಪದಿಂದ ದೀಪವನ್ನು ಹಚ್ಚಿದರೆ, ಹೆಚ್ಚು ಫಲವು ದೊರಕುತ್ತದೆ. ಮತ್ತು ಮನೆಯಲ್ಲಿ ಎಲ್ಲೆಡೆಯೂ ದೀಪವನ್ನು ತೆಗೆದುಕೊಂಡು ಹೋಗುವಾಗ ಗಂಟೆ, ಜಾಗಂಟೆ ಮೊದಲಾದ ವಾದ್ಯಘೋಷಗಳನ್ನು ಮಾಡಬೇಕು. ಶಂಖನಾದವನ್ನು ಮಾಡಬೇಕು. ಆಗ ಆಸುರೀಶಕ್ತಿಗಳು ನಿರಸನವಾಗುತ್ತವೆ.

* ದೀಪದಲ್ಲಿ ಲಕ್ಷ್ಮಿಯನ್ನು ಪೂಜೆ ಮಾಡಿದ ಅನಂತರ ಆ ದೀಪವನ್ನು ಮನೆಯಲ್ಲಿರುವ ಪ್ರತಿಯೊಂದು ಕೋಣೆಗಳಿಗೆ ತೆಗೆದುಕೊಂಡು ಹೋಗಿ ತೋರಿಸಬೇಕು. ಆಗ ಆ ಮನೆಯ ಮೂಲೆ ಮೂಲೆಯಲ್ಲಿರುವ ಅಲಕ್ಷ್ಮಿಯು ನಾಶವಾಗುತ್ತಾಳೆ. ಓಡಿಹೋಗುತ್ತಾಳೆ. ಲಕ್ಷ್ಮಿಯ ಕಟಾಕ್ಷವು ಎಲ್ಲೆಡೆಯೂ ಬಿದ್ದು ಮನೆಯು ಸಂಪದ್ಭರಿತವಾಗುತ್ತದೆ. ಅಭಯ, ಧನ, ಧಾನ್ಯ , ಶ್ರೇಯಸ್ಸು, ಸಂತಾನ, ಧೈರ್ಯ, ವಿದ್ಯೆ , ವಿಜಯ ಈ ಎಂಟು ಸಂಪತ್ತುಗಳು ನಮ್ಮ ಮನೆಯಲ್ಲಿ ಯಾವಾಗಲೂ ಇರುವಂತೆ ಲಕ್ಷ್ಮೀದೇವಿಯು ಅನುಗ್ರಹ ಮಾಡುತ್ತಾಳೆ. ಈ ಕ್ರಮವನ್ನು ಅನುಸರಿಸುವುದು ಅತ್ಯಂತ ಶ್ರೇಯಸ್ಕರವಾಗಿದೆ. ಮನೆಯಲ್ಲಷ್ಟೇ ಅಲ್ಲದೇ ಕೊಟ್ಟಿಗೆ, ಉಗ್ರಾಣ ಮೊದಲಾದ ಕಡೆಯೂ ದೀಪವನ್ನು ತೋರಿಸಬೇಕು. ಮನೆಯ ಸಮಗ್ರ ಪರಿಸರದಲ್ಲಿ ಈ ದೀಪವನ್ನು ತೋರಿಸಬೇಕು. ಸಭಾಮಂದಿರಗಳು, ವಿದ್ಯಾರ್ಥಿನಿಲಯಗಳು ಪ್ರತಿಯೊಂದು ಕಡೆಯೂ ಈ ದೀಪವನ್ನು ತೋರಿಸುವ ವಾಡಿಕೆ ಬಹಳ ವ್ಯಾಪಕವಾಗಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಇರುತ್ತದೆ.

* ಈ ದೀಪಸ್ತಂಭವನ್ನು ಎಲ್ಲೆಡೆಯೂ ತೋರಿಸಿದ ಬಳಿಕ ಧಾನ್ಯದ ಮೇಲೆ ಈ ದೀಪವನ್ನು ಪುನಃ ಪ್ರತಿಷ್ಠೆ ಮಾಡುತ್ತಾರೆ. ಸಂಪೂರ್ಣ ವರ್ಷಕ್ಕೆ ಬೇಕಾಗುವ

ಸಮಗ್ರ ಧಾನ್ಯವನ್ನು ನೀಡು ತಾಯಿ ಎಂಬುದಾಗಿ ಲಕ್ಷ್ಮಿಯನ್ನು ಪ್ರಾರ್ಥಿಸುತ್ತಾರೆ. ಹೀಗೆ ಧಾನ್ಯಲಕ್ಷ್ಮಿಯ ಪೂಜೆಯನ್ನು ಆಚರಿಸುತ್ತಾರೆ. ಆದ್ದರಿಂದ ಈ ಸಂಪ್ರದಾಯವನ್ನು ಅನುಸರಿಸಿ ದೀಪಲಕ್ಷ್ಮಿಯನ್ನು ಪೂಜಿಸುವುದು ಬಹಳ ಅರ್ಥಪೂರ್ಣವಾಗುತ್ತದೆ.

## ಅಷ್ಟಲಕ್ಷ್ಮಿಯ ಸ್ವರೂಪ

**ಧನಲಕ್ಷ್ಮೀ** ಮೇಲಿನ ಎರಡು ಕೈಗಳಲ್ಲಿ ತಾವರೆ ಹೂಗಳನ್ನು ಹಿಡಿದಿದ್ದಾಳೆ. ಒಂದು ಕೈಯಲ್ಲಿ ಸುವರ್ಣ ಕಲಶ ಹಿಡಿದಿರುತ್ತಾಳೆ. ಮತ್ತೊಂದು ಕೈಯಿಂದ ನಾಣ್ಯಗಳು ಬೀಳುತ್ತಿವೆ. ಹಾಗೂ ಅಭಯ ಧರಿಸಿದ್ದಾಳೆ. ಐಶ್ವರ್ಯಕ್ಕೆ ಅಧಿಷ್ಠಾನ ದೇವತೆಯೆನಿಸಿರುವಳು.

**ಗಜಲಕ್ಷ್ಮೀ** ತಾವೆರ ಹೂಗಳನ್ನು ಎರಡು ಕೈಗಳಲ್ಲಿ ಹಿಡಿದಿರುವಳು. ಮತ್ತೆರಡು ಕೈಗಳು ಅಭಯ ಹಸ್ತಗಳು. ಹೂಮಾಲೆಯನ್ನು ಧರಿಸಿರುತ್ತಾಳೆ. ಸುತ್ತಲೂ ಪ್ರಭಾಮಂಡಲವಿದೆ. ಕಮಲ ಪುಷ್ಪದ ಮೇಲೆ ಆಸೀನಳಾಗಿದ್ದಾಳೆ.

**ಸಂತಾನಲಕ್ಷ್ಮೀ** ತೊಡೆಯ ಮೇಲೆ ಮಗುವನ್ನು ಎತ್ತಿದ್ದಾಳೆ. ಎರಡು ಕೈಗಳಲ್ಲಿ ಕಲಶಗಳನ್ನು ಹಿಡಿದಿದ್ದಾಳೆ. ಒಂದು ಕೈಯಲ್ಲಿ ಅಭಯ ತೋರುತ್ತಿದ್ದಾಳೆ. ಇನ್ನೆರಡು ಕೈಗಳಲ್ಲಿ ಕತ್ತಿ ಹಾಗೂ ಗುರಾಣಿಯನ್ನು ಹಿಡಿದಿದ್ದಾಳೆ. ಈಕೆಯ ಕರುಣೆ ಇಲ್ಲದಿದ್ದರೆ ಸೃಷ್ಟಿಯೇ ಇಲ್ಲ. ಪುತ್ರಸುಖಗಳನ್ನು ಕೊಡುವ ಮಹಾತಾಯಿ ಇವಳು.

**ಧಾನ್ಯಲಕ್ಷ್ಮೀ** ಎಂಟು ಕೈಗಳನ್ನು ಹೊಂದಿರುತ್ತಾಳೆ. ಮೇಲಿನ ಎಡಗೈಯಲ್ಲಿ ಕಮಲಪುಷ್ಪವನ್ನು ಹಿಡಿದಿದ್ದಾಳೆ. ಬಲಗೈಯಲಿ ಭತ್ತದ ತೆನೆಯನ್ನು ಹಿಡಿದಿದ್ದಾಳೆ. ಒಂದು ಕೈಯಲ್ಲಿ ಬಾಳೆಗೊನೆಯನ್ನು ಒಂದು ಕೈಯಲ್ಲಿ ಕಬ್ಬಿನ ಜಲ್ಲೆಯನ್ನು ಹಿಡಿದು, ಮತ್ತೆರಡು ಕೈಗಳಲ್ಲಿ ಗದೆ ಹಾಗೂ ಕಮಲದ ಮೊಗ್ಗನ್ನು ಹಿಡಿದು, ಅಭಯ ಮತ್ತು ವರದ ಹಸ್ತಗಳಿಂದ ಶೋಭಿಸುತ್ತಿರುವಳು.

**ವಿದ್ಯಾಲಕ್ಷ್ಮೀ** ಎರಡು ಕೈಗಳಲ್ಲಿ ಕಮಲವನ್ನು ಹಿಡಿದು ಅಭಯ ಮತ್ತು ವರದಹಸ್ತಗಳುಳ್ಳವಳಾಗಿದ್ದಾಳೆ. ಕಮಲದ ಮೇಲೆ ಕುಳಿತು ವಿದ್ಯೆಯನ್ನು ನೀಡುತ್ತಿದ್ದಾಳೆ.

**ಆದಿಲಕ್ಷ್ಮೀ** ಮೇಲಿನ ಎರಡು ಕೈಗಳಲ್ಲಿ ಕಲಶಗಳನ್ನು ಹಿಡಿದಿದ್ದಾಳೆ. ಅಭಯ ಹಸ್ತವನ್ನು, ವರದ ಹಸ್ತವನ್ನು ತೋರುತ್ತಿದ್ದಾಳೆ. ಸರೋವರದಲ್ಲಿ ಪದ್ಮಾಸನರೂಢಳಾಗಿದ್ದಾಳೆ. ಎಡಬಲಗಳಲ್ಲಿ ದಿವ್ಯಗಜಗಳು ಆಕೆಗೆ ಕುಂಭಾಭಿಷೇಕ ಮಾಡುತ್ತಿವೆ.

**ವಿಜಲಯಕ್ಷ್ಮೀ** ಮೇಲಿನ ಎರಡು ಕೈಗಳಲ್ಲಿ ಶಂಖಚಕ್ರ ಧರಿಸಿದ್ದಾಳೆ. ಮತ್ತೆರಡು ಕೈಗಳಲ್ಲಿ ಕತ್ತಿ ಹಾಗೂ ಗುರಾಣಿಯೂ, ಇನ್ನೆರಡು ಕೈಗಳಲ್ಲಿ ತಾವರೆ ಹೂಗಳನ್ನು ಹಿಡಿದು ಅಭಯ ಹಾಗೂ ವರದ ಹಸ್ತಗಳಿಂದ ವಿಜಯವನ್ನು ನೀಡುತ್ತಿದ್ದಾಳೆ.

**ವೀರಲಕ್ಷ್ಮೀ** ರಕ್ತವರ್ಣ ವಸ್ತ್ರದಿಂದ ಶೋಭಿಸುತ್ತಿರುವಳು. ಅಷ್ಟಭುಜಗಳಲ್ಲಿ ಶಂಖ, ಚಕ್ರ, ಬಿಲ್ಲು, ಬಾಣ, ತ್ರಿಶೂಲ, ರುಂಡವನ್ನು ಹಿಡಿದವಳಾಗಿದ್ದಾಳೆ. ವರದಹಸ್ತ, ಅಭಯಹಸ್ತಗಳುಳ್ಳ ಆಕೆಯು ಆಯುಧಗಳಿಂದ ವೀರತನವನ್ನು ತೋರುತ್ತಿರುವಳು

(ಅಷ್ಟಲಕ್ಷ್ಮಿಯ ಬಗ್ಗೆ ಇನ್ನೂ ಹೆಚ್ಚಿನ ವಿಚಾರ ಹಾಗೂ ವಿಮರ್ಶೆಯನ್ನು ವರಮಹಾಲಕ್ಷ್ಮೀ ಪುಸ್ತಕದಿಂದ ತಿಳಿದುಕೊಳ್ಳಬೇಕು.)

# ಲಕ್ಷ್ಮೀಪೂಜಾವಿಧಾನ

(ನಾವು ದೇವರನ್ನು ಲಕ್ಷ್ಮಿಯ ಜೊತೆಯೇ ಪೂಜೆ ಮಾಡುವುದರಿಂದ ಮಹಾಲಕ್ಷ್ಮಿಯ ಪೂಜೆಯನ್ನು ದೇವರ ಪೂಜೆಯ ಜೊತೆಯೇ ಮಾಡಬೇಕು. ಅಥವಾ ನಿತ್ಯದ ದೇವರಪೂಜೆ ಮುಗಿಸಿ, ಹೆಂಡತಿಯ ಜೊತೆ ಕುಳಿತು ಲಕ್ಷ್ಮೀನಾರಾಯಣರನ್ನು ೮ ದೀಪಗಳಲ್ಲಿ ಪೂಜಿಸುವುದು ವಿಶೇಷಫಲದಾಯಕವಾಗಿದೆ.)

ಶ್ರೀಗುರುಭ್ಯೋ ನಮಃ । ಶ್ರೀ ಪರಮ ಗುರುಭ್ಯೋನಮಃ ॥

ನಾರಾಯಣಾಯ ಪರಿಪೂರ್ಣಗುಣಾರ್ಣವಾಯ ।
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥

ಸರ್ವದಾ ಸರ್ವಕಾರ್ಯೇಷು ನಾಸ್ತಿ ತೇಷಾಮಮಂಗಲಮ್ ।
ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನೋ ಹರಿಃ ॥

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ ।
ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ ॥

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ ॥

ನಮಸ್ತೇ ಪ್ರಾಣೇಶ ಪ್ರಣತವಿಭವಾಯಾವನಿಮಗಾಃ
ನಮಃ ಸ್ವಾಮಿನ್ ರಾಮಪ್ರಿಯತಮ ಹನೂಮನ್ ಗುರುಗುಣ ।
ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟಭಗವನ್
ನಮಃ ಶ್ರೀಮನ್ಮಧ್ವ ಪ್ರದಿಶ ಸುದೃಶಂ ನೋ ಜಯ ಜಯ ॥

ಮೃತ್ಯುಂಜಯ ನಮಸ್ತುಭ್ಯಂ ಮೃತ್ಯುಂ ಹರ ನಮಾಮ್ಯಹಮ್ ।
ಸರ್ವಮೃತ್ಯುವಿನಾಶಾಯ ಮೃತ್ಯುಂಜಯ ನಮೋನಮಃ ॥
ದುಷ್ಟಾನಾಂ ವಿಘ್ನಕರ್ತಾ ಸುಚರಿತ ಸುಜನಸ್ತೋಮ ವಿಘ್ನಾಪಹರ್ತಾ
ತಸ್ಮಾದ್ ವಿಘ್ನಾಧಿಪೋಽಹಂ ಮತ ಇತಿ ಸುಧಿಯಾಂ ಸ್ಪಷ್ಟಮಾಜ್ಞಾಪನಾಯ ।
ಪೌಲಸ್ತ್ಯೇಚ್ಛಾಂತರಾಯಃ ಸುರಮುನಿಕಾಭೀಷ್ಟಸಂಪ್ರಾಪ್ತ್ಯುಪಾಯಃ
ಶ್ರೇಯೋ ವಿಘ್ನಾಧಿರಾಜಃ ಪ್ರದಿಶತು ಸತತಂ ಭೂರಿಗೌರೀತನೂಜಃ ॥
ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ।
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ ॥

## ಆಚಮನ

ಕೇಶವಾಯ ಸ್ವಾಹಾ । ನಾರಾಯಣಾಯ ಸ್ವಾಹಾ । ಮಾಧವಾಯ ಸ್ವಾಹಾ । ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ । ತ್ರಿವಿಕ್ರಮಾಯ ನಮಃ। ವಾಮನಾಯ ನಮಃ। ಶ್ರೀಧರಾಯ ನಮಃ। ಹೃಷೀಕೇಶಾಯ ನಮಃ । ಪದ್ಮನಾಭಾಯ ನಮಃ । ದಾಮೋದರಾಯ ನಮಃ । ಸಂಕರ್ಷಣಾಯ ನಮಃ। ವಾಸುದೇವಾಯ ನಮಃ। ಪ್ರದ್ಯುಮ್ನಾಯ ನಮಃ। ಅನಿರುದ್ಧಾಯ ನಮಃ। ಪುರುಷೋತ್ತಮಾಯ ನಮಃ। ಅಧೋಕ್ಷಜಾಯ ನಮಃ। ನಾರಸಿಂಹಾಯ ನಮಃ। ಅಚ್ಯುತಾಯ ನಮಃ। ಜನಾರ್ದನಾಯ ನಮಃ। ಉಪೇಂದ್ರಾಯ ನಮಃ। ಹರಯೇ ನಮಃ। ಶ್ರೀಕೃಷ್ಣಾಯ ನಮಃ।

(ಆಚಮನವನ್ನು ಎರಡುಬಾರಿ ಮಾಡಬೇಕು)

## ಪ್ರಾಣಾಯಾಮ

ಓಂ ಪ್ರಣವಸ್ಯ ಪರಬ್ರಹ್ಮಋಷಿಃ ಪರಮಾತ್ಮಾದೇವತಾ ದೈವೀ ಗಾಯತ್ರೀ-ಛಂದಃ । ಪ್ರಾಣಾಯಾಮೇ ವಿನಿಯೋಗಃ ।

ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ। ಓಂ ಸತ್ಯಂ । ಓಂ ತತ್ಸವಿತುರ್ವರೇಣ್ಯಂ। ಭರ್ಗೋ ದೇವಸ್ಯ ಧೀಮಹಿ । ಧಿಯೋ

ಯೋ ನಃ ಪ್ರಚೋದಯಾತ್॥ ಓಮಾಪೋಜ್ಯೋಽತಿರಸೋಽಮೃತಂ ಬ್ರಹ್ಮ ಭೂರ್ಭುವಸ್ಸ್ವರೋಮ್ ॥

## ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯ ಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ .................. [೧] ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ ಪ್ರಭವಾದಿ ಷಷ್ಠಿಸಂವತ್ಸರಾಣಾಂ ಮಧ್ಯೇ ........... ನಾಮಸಂವತ್ಸರೇ ದಕ್ಷಿಣಾಯನೇ ಶರದ್ ಋತೌ, ಆಶ್ವೀನಮಾಸೇ ಕೃಷ್ಣಪಕ್ಷೇ ಅಮಾವಾಸ್ಯಾಂ ಶುಭತಿಥೌ ............. ವಾಸರಯುಕ್ತಾಯಾಂ ......... ನಕ್ಷತ್ರೇ ...... ಯೋಗೇ..... ಕರಣೇ ಏವಂಗುಣವಿಶೇಷೇಣವಿಶಿಷ್ಟಾಯಾಂ ಶುಭತಿಥೌ, ಅಸ್ಮಾಕಂ ಸಹ ಕುಟುಂಬಾನಾಂ ಕ್ಷೇಮಸ್ಥೈರ್ಯವಿಜಯವೀರ್ಯ ಆಯುರಾರೋಗ್ಯಭಿವೃದ್ಧ್ಯರ್ಥ ಧರ್ಮಾರ್ಥಕಾಮ ಮೋಕ್ಷಾಖ್ಯಚತುರ್ವಿಧ-ಪುರುಷಾರ್ಥಸಿದ್ಧ್ಯರ್ಥಂ, ಪುತ್ರ-ಪೌತ್ರಾದ್ಯಭಿವೃದ್ಧ್ಯರ್ಥಂ, ಇಷ್ಟಾರ್ಥಸಿದ್ಧ್ಯರ್ಥಂ, ಸೌಮಾಂಗಲ್ಯಾಭಿ-ವೃದ್ಧ್ಯರ್ಥಂ, ಸಮಸದುರಿತೋಪಕ್ಷಯಾರ್ಥಂ ಜ್ಞಾನಭಕ್ತಿವೈರಾಗ್ಯಸಿದ್ಧ್ಯರ್ಥಂ ಚ ವಿಶೇಷತಃ ಶ್ರೀಲಕ್ಷ್ಮೀನಾರಾಯಣಾನುಗ್ರಹಸಿದ್ಧ್ಯರ್ಥಂ, ಶ್ರೀಭಾರತೀರಮಣ-ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣ ಪ್ರೇರಣಯಾ ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ದೀಪಾವಳಿಪ್ರಯುಕ್ತ ಧ್ಯಾನಾವಾಹನಾದಿಷೋಡಶೋಪಚಾರಪೂಜಾಂ ಕರಿಷ್ಯೇ ॥

---

[೧] ಶಾರ್ವರಿ ಸಂವತ್ಸರದಲ್ಲಿ 'ತ್ರಿಚತ್ವಾರಿಂಶದಧಿಕೇ ಏಕೋನವಿಶಂತಿಶತತಮೇ' (೧೯೪೩) ಎಂದು ಹೇಳಬೇಕು. ಕಾಲಪ್ರವಾಹದಲ್ಲಿ ಇದನ್ನು ಹೇಳುವ ಸಂಪ್ರದಾಯ ಬಿಟ್ಟುಹೋಗಿದೆ. ಇದನ್ನು ಹೇಳದಿದ್ದರೆ ೧೮೦೦೦ದ ಶಾಲೀವಾಹನಶಕೆಯಲ್ಲಿ ಅನೇಕಬಾರಿ ಪ್ರಭವಾದಿ ಸಂವತ್ಸರಗಳು ಆವೃತ್ತಿಯಾಗುವುದರಿಂದ ಕಾಲಗಣನೆ ನಿಖರವಾಗುವುದಿಲ್ಲ.

## ದೀಪ ಹಚ್ಚಬೇಕು

ಯಾವ ಎಂಟು ದೀಪಸ್ತಂಭಗಳಲ್ಲಿ ಅಷ್ಟಲಕ್ಷ್ಮಿಯನ್ನು ಆವಾಹನೆ ಮಾಡುತ್ತೇವೋ ಆ ದೀಪಗಳನ್ನು ಹಚ್ಚಬೇಕು.

ದೀಪಃ ಪಾಪಹರೋ ನೃಣಾಂ ದೀಪ ಆಪನ್ನಿವಾರಕಃ ।
ದೀಪೋ ವಿಧತ್ತೇ ಸುಕೃತಂ ದೀಪಃ ಸಂಪತ್ಪ್ರದಾಯಕಃ ॥

ದೀಪಜ್ಯೋತಿ ಪರಬ್ರಹ್ಮ ದೀಪಜ್ಯೋತಿಃ ಜನಾರ್ದನಃ ।
ದೀಪೋ ಹರತು ಮೇ ಪಾಪಂ ಸಂಧ್ಯಾದೀಪ ನಮೋಽಸ್ತು ತೇ ॥

ಶುಭಂ ಕುರುಷ್ವ ಕಲ್ಯಾಣಂ ಆರೋಗ್ಯಂ ಸುಖಸಂಪದಮ್ ।
ಮಮ ಬುದ್ಧಿ ಪ್ರಕಾಶಂ ಚ ದೀಪಜ್ಯೋತಿರ್ನಮೋಽಸ್ತು ತೇ ॥

ಭೋ ದೀಪ ಬ್ರಹ್ಮರೂಪಸ್ತ್ವಂ ಕರ್ಮಸಾಕ್ಷಿ ಇಹಾರ್ಹಸಿ ।
ಯಾವತ್ ಕರ್ಮಸಮಾಪ್ತಿಃ ಸ್ಯಾತ್ ತಾವತ್ ತ್ವಂ ಸುಸ್ಥಿರೋ ಭವ ॥

## ಘಂಟಾನಾದ ಮಾಡಬೇಕು

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।
ಕುರ್ವೇ ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ॥

## ಭೂತೋಚ್ಚಾಟನೆ ಮಾಡಬೇಕು

ಅಪಸರ್ಪಂತು ತೇ ಭೂತಾಃ ಯೇ ಭೂತಾಃ ಭುವಿ ಸಂಸ್ಥಿತಾಃ ।
ಯೇ ಭೂತಾಃ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ॥
ಅಪಕ್ರಾಮಂತು ಯೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ ।
ತೇಷಾಮಪ್ಯವಿರೋಧೇನ ಪೂಜಾಕರ್ಮ ಸಮಾರಭೇ ॥

## ಪೀಠಪೂಜಾ

ವಿಷ್ಣೋರಾಸನಭೂತಾಯ ದಿವ್ಯರತ್ನಮಯಾಯ ಚ ।
ಪ್ರಧಾನಪುರುಷೇಶಾಯ ಮಹಾಪೀಠಾಯತೇ ನಮಃ ॥

ಓಂ ಪರದೇವತಾಯೈ ನಮಃ। ಶ್ರೀಗುರುಭ್ಯೋನಮಃ। ಸರ್ವದೇವತಾಭ್ಯೋ ನಮಃ । ಸರ್ವಗುರುಭ್ಯೋ ನಮಃ । ಗರುಡಾಯ ನಮಃ । ವೇದವ್ಯಾಸಾಯ ನಮಃ। ದುರ್ಗಾಯೈ ನಮಃ। ಸರಸ್ವತ್ಯೈ ನಮಃ। ಧರ್ಮಾಯ ನಮಃ। ಜ್ಞಾನಾಯ ನಮಃ। ವೈರಾಗ್ಯಾಯ ನಮಃ। ಐಶ್ವರ್ಯಾಯ ನಮಃ। ಅಧರ್ಮಾಯ ನಮಃ। ಅಜ್ಞಾನಾಯ ನಮಃ। ಅವೈರಾಗ್ಯಾಯ ನಮಃ। ಅನೈಶ್ವರ್ಯಾಯ ನಮಃ ॥

ಪರಮಪುರುಷಾಯ ನಮಃ । ಆಧಾರರೂಪಿಣ್ಯೈ ನಮಃ । ಕೂರ್ಮಾಯ ನಮಃ । ಅನಂತಾಯ ನಮಃ । ಪೃಥಿವ್ಯೈ ನಮಃ । ಕ್ಷೀರಸಾಗರಾಯ ನಮಃ । ಶ್ವೇತದ್ವೀಪಾಯ ನಮಃ। ಮಹತೇ ದಿವ್ಯರತ್ನಮಂಟಪಾಯ ನಮಃ। ಪಂ ಪದ್ಮಾಯ ನಮಃ। ಅಂ ಅರ್ಕಮಂಡಲಾಯ ನಮಃ। ಉಂ ಸೋಮಮಂಡಲಾಯ ನಮಃ। ಮಂ ವಹ್ನಿಮಂಡಲಾಯ ನಮಃ । ಸಂ ಸತ್ವಾಭಿಮಾನಿನ್ಯೈಶ್ರಿಯೈ ನಮಃ । ರಂ ರಜೋಽಭಿಮಾನಿನ್ಯೈ ಭೂಮ್ಯೈ ನಮಃ । ತಂ ತಮೋಽಭಿಮಾನಿನ್ಯೈ ದುರ್ಗಾಯೈ ನಮಃ। ಆತ್ಮನೇ ನಮಃ। ಅಂತರಾತ್ಮನೇ ನಮಃ। ಪರಮಾತ್ಮನೇ ನಮಃ। ಜ್ಞಾನಾತ್ಮನೇ ನಮಃ। ವಿಮಲಾಯೈ ನಮಃ। ಉತ್ಕರ್ಷಿಣ್ಯೈ ನಮಃ। ಜ್ಞಾನಾಯೈ ನಮಃ। ಕ್ರಿಯಾಯೈ ನಮಃ। ಯೋಗಾಯೈ ನಮಃ। ಪ್ರಹ್ವ್ಯೈ ನಮಃ। ಸತ್ಯಾಯೈ ನಮಃ। ಈಶಾನಾಯೈ ನಮಃ । ಅನುಗ್ರಹಾಯೈ ನಮಃ । ಭಗವತಃ ಶ್ರೀಲಕ್ಷ್ಮೀನಾರಾಯಣಸ್ಯ ಯೋಗಪೀಠಾತ್ಮನೇ ಶ್ರೀಮದನಂತಾಯ ನಮಃ ॥ ಸರ್ವಾಭ್ಯಃ ಪೀಠದೇವತಾಭ್ಯೋ ನಮಃ ॥

## ೮ ದೀಪಸ್ತಂಭಗಳಲ್ಲಿ ಲಕ್ಷ್ಮೀದೇವಿಯ ಆವಾಹನೆ

ದೀಪದಲ್ಲಿ ಲಕ್ಷ್ಮೀನಾರಾಯಣರನ್ನು ಆವಾಹನೆ ಮಾಡಬೇಕು. ಒಂದು ತುಳಸೀದಳವನ್ನು ಹಿಡಿದುಕೊಂಡು ಹೃತ್ಕಮಲದಲ್ಲಿರುವ ಲಕ್ಷ್ಮೀಸಹಿತನಾದ ನಾರಾಯಣನಿಗೆ ಮಾನಸಿಕವಾಗಿ ಷೋಡಶೋಪಚಾರಪೂಜೆಯನ್ನು ಮಾಡಬೇಕು. ಅನಂತರ ಸುಷುಮ್ನಾನಾಡಿಯಿಂದ ಬಲನಾಸಿಕಾಪುಟದ ಮೂಲಕ ತುಳಸಿಮೂಲಕ ದೀಪದಲ್ಲಿ ದೇವರು ಆಗಮಿಸುತ್ತಾನೆಂದು ತಿಳಿಯಬೇಕು. ಅನಂತರ ಆ ಲಕ್ಷ್ಮೀಸಹಿತ ನಾರಾಯಣದೇವನು ಕಣ್ಣುಗಳನ್ನು ತೆರೆದಿದ್ದಾನೆಂದು ಭಾವಿಸಬೇಕು.

ಏಹ್ಯೇಹಿ ಶ್ರೀರಾಮಕೃಷ್ಣವೇದವ್ಯಾಸಾದ್ಯನಂತಾವತಾರರೂಪಾವಯವಗುಣ-ಕ್ರಿಯಾತ್ಮಕಂ ಭಗವಂತಂ ಶ್ರೀಮಹಾಲಕ್ಷ್ಮೀನಾರಾಯಣಂ ಪೀಠಸ್ಥಿತ ಏತದ್ಧಾತು-ಮಯದೀಪಾಂತಃಸ್ಥಿತತೇಜಸ್ಸಾರಮಯಭೂತಪ್ರತಿಮಾಂತಃಸ್ಥಿತ ಶ್ರೀಮುಖ್ಯಪ್ರಾಣ-ಪ್ರತಿಮಾಮಧ್ಯೇ ರಮಯಾ ಸಹ ಕ್ಷೀರನೀರವದಾಸೀನದೀಪಜ್ಯೋತಿ ಮಧ್ಯೇ ಆವಾಹಯಾಮಿ ॥ ಓಂ ಓಂ ನಮೋ ನಾರಾಯಣಾಯ ಓಂ ।

ಆತ್ಮಾ ದೇವಾನಾಂ ಭುವನಸ್ಯ ಗರ್ಭೋ ಯಥಾವಶಂ ಚರತಿ ದೇವ ಏಷಃ ।
ಘೋಷಾ ಇದಸ್ಯ ಶೃಣ್ವಿರೇ ನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ॥

ಭೋ ಸ್ವಾಮಿನ್ ಜಗತಾಂ ನಾಥ ಯಾವತ್ಪೂಜಾವಸಾನಕಮ್ ।
ತಾವತ್ ಸಂಪ್ರೀತಿಭಾವೇನ ಕಲಶೇಽಸ್ಮಿನ್ ಸನ್ನಿಧಿಂ ಕುರು ॥
ಯಾಗಾವಸಾನಪರ್ಯಂತಮತ್ರ ಸ್ಥಿತ್ವಾ ಜನಾರ್ದನ ।
ಭಕ್ತಸ್ಯ ಮಮ ಪೂಜಾಂ ಚ ಗೃಹೀತ್ವಾ ಪಾಹಿ ಮಾಂ ಪ್ರಭೋ ॥

ಕೌಶೇಯಪೀತವಸನಾಮ್ ಅರವಿಂದನೇತ್ರಾಮ್
ಪದ್ಮದ್ವಯಾಭಯವರೋದ್ಯತಪದ್ಮಹಸ್ತಾಮ್ ।
ಉದ್ಯಚ್ಛತಾರ್ಕಸದೃಶೀಂ ಪರಮಾಂಕಸಂಸ್ಥಾಂ
ಧ್ಯಾಯೇದ್ ವಿಧೀಶನತಪಾದಯುಗಾಂ ಜನಿತ್ರೀಮ್ ॥

ಓಂ ಶ್ರೀಂ ಶ್ರಿಯೈ ನಮಃ । ಶ್ರಿಯಮಾವಾಹಯಾಮಿ ।
ಕೌಶೇಯನೀಲವಸನಾಮ್ ಅರವಿಂದನೇತ್ರಾಂ
ತಾಂಬೂಲನೀಲಕುಸುಮಾಭಯಸದ್ವರೇತಾಮ್ ।
ಶ್ಯಾಮಾಂಗಕಾಂತಿಸಹಿತಾಂ ಪರಮಾಂಕಸಂಸ್ಥಾ
ಧ್ಯಾಯೇದ್ ವಿಧೀಶನತಪಾದಯುಗಾಂ ಜನಿತ್ರೀಮ್ ॥

ಓಂ ಭೂಂ ಭುವೇ ನಮಃ । ಭೂಮಾವಾಹಯಾಮಿ ।

ಕೌಶೇಯರಕ್ತವಸನಾಂ ಕಮಲತ್ರಿನೇತ್ರಾಂ
ಚಕ್ರಾಬ್ಜತರ್ಜನಸುಶೂಲಯುತಾಬ್ಜಹಸ್ತಾಮ್ ।
ಉದ್ಯಚ್ಛತಾರ್ಕಸದೃಶೀಂ ಪರಮಾಂಕಸಂಸ್ಥಾಂ
ಧ್ಯಾಯೇದ್ ವಿಧೀಶನತಪಾದಯುಗಾಂ ಜನಿತ್ರೀಮ್ ॥

ಓಂ ದುಂ ದುರ್ಗಾಯೈ ನಮಃ । ದುರ್ಗಾಮಾವಾಹಯಾಮಿ ।

ಶ್ರೀ-ಭೂ-ದುರ್ಗಾ-ಅಂಭ್ರಣೀ- ಹ್ರೀ- ಮಾಯಾ-ಜಯಾ- ಕೃತಿ-ಶಾಂತಿ-ಲಕ್ಷ್ಮೀ- ಜಯಂತೀ-ಜಾನಕೀ-ಸತ್ಯಾ-ರುಗ್ಮಿಣೀ- ಸ್ವಯಂಪ್ರೀತಾಖ್ಯ ಮಹಾಲಕ್ಷ್ಮೀರೂಪಾನ್ ಶ್ರೀಮನ್ನಾರಾಯಣರೂಪೈಃ ಸಾಕಮ್ ಆವಾಹಯಾಮಿ।

ಓಂ ಅಸುನೀತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣಮಿಹ ನೋ ಧೇಹಿ ಭೋಗಮ್ । ಜ್ಯೋಕ್ ಪಶ್ಯೇಮ ಸೂರ್ಯಮುಚ್ಚರಂತಮನುಮತೇ ಮೃಳಯಾ ನಃ ಸ್ವಸ್ತಿ ಓಂ॥ ಓಂ ಪುನರ್ನೋ ಅಸುಂ ಪೃಥಿವೀ ದದಾತು ಪುನರ್ದ್ಯೌರ್ದೇವೀ ಪುನರಂತರಿಕ್ಷಮ್ ॥ ಪುನರ್ನಃ ಸೋಮಸ್ತನ್ವಂ ದದಾತು ಪುನಃ ಪೂಷಾ ಪಥ್ಯಾಂ-3 ಯಾ ಸ್ವಸ್ತಿ॥ ಓಂ ॥

ತತ್ವನ್ಯಾಸ ಮಾತೃಕಾನ್ಯಾಸ ಹಾಗೂ ಅಷ್ಟಾಕ್ಷರಮಂತ್ರಗಳನ್ನು ಜಪಿಸಬೇಕು.

'ಓಂ ಓಂ ನಮೋ ನಾರಾಯಣಾಯ ಓಂ' (ಎಂದು ಎಂಟುಬಾರಿ ಜಪಿಸಬೇಕು).

ಗೃಹಾ ವೈ ಪ್ರತಿಷ್ಠಾಸೂಕ್ತಮ್ । ತತ್ಪ್ರತಿಷ್ಠಿತಮಯಾ ವಾಚಾ ಶಂಸ್ತವ್ಯಂ, ತಸ್ಮಾದ್ ಯದ್ಯಪಿ ದೂರ ಇವ ಪಶೂನ್ ಲಭತೇ, ಗೃಹಾನೇವೈ ನಾನಾ ಜಿಗಮಿಷತಿ, ಗೃಹಾ ಹಿ ಪಶೂನಾಂ ಪ್ರತಿಷ್ಠಾ ಪ್ರತಿಷ್ಠಾ ಉತ್ತಮಾ ಪ್ರತಿಷ್ಠಾ ।

ಆವಾಹಿತೋ ಭವ । ಸ್ಥಾಪಿತೋ ಭವ । ಸನ್ನಿಹಿತೋ ಭವ । ಸನ್ನಿರುದ್ಧೋ ಭವ । ಅವಕುಂಠಿತೋ ಭವ । ಸುಪ್ರಸನ್ನೋ ಭವ । ವರದೋ ಭವ । ಪ್ರಸೀದ । ಪ್ರಸೀದ । (ಆವಾಹನಾದಿ ಸಪ್ತಮುದ್ರೆಗಳನ್ನು ತೋರಿಸಬೇಕು)

ಓಂ ತದಸ್ತು ಮಿತ್ರಾ ವರುಣಾ ತದಗ್ನೇ ಶಂ ಯೋರಸ್ಮಭ್ಯಮಿದಮಸ್ತು ಶಸ್ತಮ್ । ಅಶೀಮಹಿ ಗಾಧಮುತ ಪ್ರತಿಷ್ಠಾಂ ನಮೋ ದಿವೇ ಬೃಹತೇ ಸಾದನಾಯ ॥ ಓಂ

## ಅಷ್ಟಲಕ್ಷ್ಮಿಯ ಆವಾಹನೆ

### ೧) ಮಧ್ಯದ ದೀಪದಲ್ಲಿ

ಓಂ ಭೂಃ ಧನಲಕ್ಷ್ಮೀಸಹಿತ ಶ್ರೀಕರಾಯ ನಮಃ ಓಂ ಭುವಃ ಧನಲಕ್ಷ್ಮೀಸಹಿತ ಶ್ರೀಕರಾಯ ನಮಃ ಓಂ ಸ್ವಃ ಧನಲಕ್ಷ್ಮೀಸಹಿತ ಶ್ರೀಕರಾಯ ನಮಃ ಓಂ ಭೂರ್ಭುವಸ್ವಃ ಧನಲಕ್ಷ್ಮೀಸಹಿತ ಶ್ರೀಕರನಾರಾಯಣಾಯ ನಮಃ ಆವಾಹಯಾಮಿ ಸ್ಥಾಪಯಾಮಿ ಪೂಜಯಾಮಿ.

### ೨) ಮೇಲಿನ ದೀಪದಲ್ಲಿ

ಓಂ ಭೂಃ ಗಜಲಕ್ಷ್ಮೀಸಹಿತ ವಿಶ್ವಂಭರಾಯ ನಮಃ ಓಂ ಭುವಃ ಗಜಲಕ್ಷ್ಮೀಸಹಿತ ವಿಶ್ವಂಭರಾಯ ನಮಃ ಓಂ ಸ್ವಃ ಗಜಲಕ್ಷ್ಮೀಸಹಿತ ವಿಶ್ವಂಭರಾಯ ನಮಃ ಓಂ ಭೂರ್ಭುವಸ್ವಃ ಗಜಲಕ್ಷ್ಮೀಸಹಿತ ವಿಶ್ವಂಭರಾಯ ನಮಃ ಆವಾಹಯಾಮಿ ಸ್ಥಾಪಯಾಮಿ ಪೂಜಯಾಮಿ.

### ೩) ಎಡಭಾಗದ ಮೇಲಿನ ದೀಪದಲ್ಲಿ

ಓಂ ಭೂಃ ಸಂತಾನಲಕ್ಷ್ಮೀಸಹಿತಗೋಪಾಲಕೃಷ್ಣಾಯ ನಮಃ ಓಂ ಭುವಃ ಸಂತಾನಲಕ್ಷ್ಮೀಸಹಿತಗೋಪಾಲಕೃಷ್ಣಾಯ ನಮಃ ಓಂ ಸ್ವಃ ಸಂತಾನಲಕ್ಷ್ಮೀಸಹಿತ

ಗೋಪಾಲಕೃಷ್ಣಾಯ ನಮಃ ಓಂ ಭೂರ್ಭುವಃಸ್ವಃ ಸಂತಾನಲಕ್ಷ್ಮೀಸಹಿತ ಗೋಪಾಲಕೃಷ್ಣಾಯ ನಮಃ ಆವಾಹಯಾಮಿ ಸ್ಥಾಪಯಾಮಿ ಪೂಜಯಾಮಿ.

### ೪) ಎಡಭಾಗದ ಮಧ್ಯದ ದೀಪದಲ್ಲಿ

ಓಂ ಭೂಃ ಧಾನ್ಯಲಕ್ಷ್ಮೀಸಹಿತ ಧನ್ವಂತರಯೇ ನಮಃ ಓಂ ಭುವಃ ಧಾನ್ಯಲಕ್ಷ್ಮೀಸಹಿತ ಧನ್ವಂತರಯೇ ನಮಃ ಓಂ ಸ್ವಃ ಧಾನ್ಯಲಕ್ಷ್ಮೀಸಹಿತ ಧನ್ವಂತರಯೇ ನಮಃ ಓಂ ಭೂರ್ಭುವಃಸ್ವಃ ಧಾನ್ಯಲಕ್ಷ್ಮೀಸಹಿತ ಧನ್ವಂತರಯೇ ನಮಃ ಆವಾಹಯಾಮಿ ಸ್ಥಾಪಯಾಮಿ ಪೂಜಯಾಮಿ.

### ೫) ಎಡಭಾಗದ ಕೆಳಗಿನ ದೀಪದಲ್ಲಿ

ಓಂ ಭೂಃ ವಿದ್ಯಾಲಕ್ಷ್ಮೀಸಹಿತ ಹಯಗ್ರೀವಾಯ ನಮಃ ಓಂ ಭುವಃ ವಿದ್ಯಾಲಕ್ಷ್ಮೀಸಹಿತ ಹಯಗ್ರೀವಾಯ ನಮಃ ಓಂ ಸ್ವಃ ವಿದ್ಯಾಲಕ್ಷ್ಮೀಸಹಿತ ಹಯಗ್ರೀವಾಯ ನಮಃ ಓಂ ಭೂರ್ಭುವಃಸ್ವಃ ವಿದ್ಯಾಲಕ್ಷ್ಮೀಸಹಿತ ಹಯಗ್ರೀವಾಯ ನಮಃ ಆವಾಹಯಾಮಿ ಸ್ಥಾಪಯಾಮಿ ಪೂಜಯಾಮಿ.

### ೬) ಬಲಭಾಗದ ಕೆಳಗಿನ ದೀಪದಲ್ಲಿ

ಓಂ ಭೂಃ ಆದಿಲಕ್ಷ್ಮೀಸಹಿತ ಪದ್ಮನಾಭಾಯ ನಮಃ ಓಂ ಭುವಃ ಆದಿಲಕ್ಷ್ಮೀಸಹಿತ ಪದ್ಮನಾಭಾಯ ನಮಃ ಓಂ ಸ್ವಃ ಆದಿಲಕ್ಷ್ಮೀಸಹಿತ ಪದ್ಮನಾಭಾಯ ನಮಃ ಓಂ ಭೂರ್ಭುವಃಸ್ವಃ ಆದಿಲಕ್ಷ್ಮೀಸಹಿತಪದ್ಮನಾಭಾಯ ನಮಃ ಆವಾಹಯಾಮಿ ಸ್ಥಾಪಯಾಮಿ ಪೂಜಯಾಮಿ.

### ೭) ಬಲಭಾಗದ ಮಧ್ಯದ ದೀಪದಲ್ಲಿ

ಓಂ ಭೂಃ ವಿಜಯಲಕ್ಷ್ಮೀಸಹಿತ ರಾಘವಾಯ ನಮಃ ಓಂ ಭುವಃ ವಿಜಯಲಕ್ಷ್ಮೀಸಹಿತ ರಾಘವಾಯ ನಮಃ ಓಂ ಸ್ವಃ ವಿಜಯಲಕ್ಷ್ಮೀಸಹಿತ ರಾಘವಾಯ ನಮಃ ಓಂ ಭೂರ್ಭುವಃಸ್ವಃ ವಿಜಯಲಕ್ಷ್ಮೀಸಹಿತರಾಘವಾಯ ನಮಃ ಆವಾಹಯಾಮಿ ಸ್ಥಾಪಯಾಮಿ ಪೂಜಯಾಮಿ.

## ೮) ಬಲಭಾಗದ ಮೇಲಿನ ದೀಪದಲ್ಲಿ

ಓಂ ಭೂಃ ವೀರಲಕ್ಷ್ಮೀಸಹಿತ ನಾರಸಿಂಹಾಯ ನಮಃ ಓಂ ಭುವಃ ವೀರಲಕ್ಷ್ಮೀಸಹಿತ ನಾರಸಿಂಹಾಯ ನಮಃ ಓಂ ಸ್ವಃ ವೀರಲಕ್ಷ್ಮೀಸಹಿತ ನಾರಸಿಂಹಾಯ ನಮಃ ಓಂ ಭೂರ್ಭುವಃಸ್ವಃ ವೀರಲಕ್ಷ್ಮೀಸಹಿತನಾರಸಿಂಹಾಯ ನಮಃ ಆವಾಹಯಾಮಿ ಸ್ಥಾಪಯಾಮಿ ಪೂಜಯಾಮಿ.

## ಧ್ಯಾನ

ಪರಮಾತ್ಮನ ಎಂಟು ವಿವಿಧ ರೂಪಗಳ ತೊಡೆಯ ಮೇಲೆ ಲಕ್ಷ್ಮೀದೇವಿಯು ಎಂಟು ರೂಪಗಳಿಂದ ಕುಳಿತಿದ್ದಾಳೆಂದು ಪ್ರತಿಕ್ಷಣವೂ ಭಾವಿಸುತ್ತಾ ಎಂಟು ರೂಪಗಳಿಗೆ ಒಟ್ಟಿಗೆ ಷೋಡಶೋಪಚಾರಗಳನ್ನು ಸಮರ್ಪಿಸಬೇಕು.

ಪದ್ಮಾಸನೇ ಪದ್ಮಕರೇ ಸರ್ವಲೋಕೈಕಪೂಜಿತೇ ।
ನಾರಾಯಣಪ್ರಿಯೇ ದೇವಿ ಸುಪ್ರೀತಾ ಭವ ಸರ್ವದಾ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ.

## ಆವಾಹನೆ

ಉದ್ಯದ್ಭಾಸ್ವತ್ ಸಮಾಭಾಸಃ ಚಿದಾನಂದೈಕದೇಹವಾನ್
ಶಂಖಚಕ್ರಗದಾಪದ್ಮಧರೋ ಧ್ಯೇಯೋಽಹಮೀಶ್ವರಃ ।
ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ
ಬ್ರಹ್ಮವಾಯುಶಿವಾಹೀಶವಿಪೈಃ ಶಕ್ರಾದಿಕೈರಪಿ
ಸೇವ್ಯಮಾನೋಽಧಿಕಂ ಭಕ್ತ್ಯಾ ನಿತ್ಯನಿಃಶೇಷಶಕ್ತಿಮಾನ್ ॥
ಉದ್ಯದ್ಭಾನುಸಹಸ್ರಕೋಟಿವಿಲಸತ್ಪದ್ಮಸ್ಫುರತ್ಕರ್ಣಿಕಾ
ಮಾಣಿಕ್ಯಾದಿ ಮಣಿಪ್ರವಾಲಖಚಿತೇ ಸಿಂಹಾಸನೇ ಸಂಸ್ಥಿತಮ್ ।
ಕೇಯೂರಾಂಗದಹಾರನೂಪುರಯುತಂ ಸ್ವರ್ಣಾಭಪೀತಾಂಬರಂ
ಮಂದಸ್ಮೇರಮುಪಾಸ್ಮಹೇ ಸಮುಕುಟಂ ನಿತ್ಯಂ ರಮೇಶಂ ಹರಿಮ್ ॥

## ದೀಪಾವಳಿ -೨ ಅಮಾವಾಸ್ಯೆ

ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।

ಸಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಮ್ ॥೧॥

ಹಿರಣ್ಯರೂಪಃ ಸ ಹಿರಣ್ಯ ಸಂದೃಗಪಾಂ ನಪಾತ್ಸೇದು ಹಿರಣ್ಯವರ್ಣಃ ।

ಹಿರಣ್ಯಯಾತ್ ಪರಿ ಯೋನೇರ್ನಿಷದ್ಯಾ ಹಿರಣ್ಯದಾ ದದತ್ಯನ್ನಮಸ್ಮೈ ॥

ಏಹ್ಯೇಹಿ ಶ್ರೀರಾಮಕೃಷ್ಣವೇದವ್ಯಾಸಾದ್ಯನಂತಾವತಾರ ರೂಪಾವಯವ-ಗುಣಕ್ರಿಯಾತ್ಮಕಂ ಭಗವಂತಂ ಶ್ರೀಲಕ್ಷ್ಮೀನಾರಾಯಣಂ ಪೀಠಸ್ಥಿತ ಏತದ್ಧಾತುಮಯ ಪ್ರತಿಮಾಂತಃಸ್ಥಿತ (ಕಲಶೇ) ತೇಜಸ್ಸಾರಮಯಭೂತಪ್ರತಿಮಾಂತಃಸ್ಥಿತ ಶ್ರೀಮುಖ್ಯಪ್ರಾಣಪ್ರತಿಮಾಮಧ್ಯೇ ರಮಾಯಾ ಸಹ ಕ್ಷೀರನೀರವದಾಸೀನಸ್ವ ಪ್ರತಿಮಾಯಾಂ (ದೀಪೇ) ಆವಾಹಯಾಮಿ । ಓಂ ಓಂ ನಮೋ ನಾರಾಯಣಾಯ ಓಂ।

ಸ್ವಾಮಿನ್ ಸರ್ವಜಗನ್ನಾಥ ಯಾವತ್ಪೂಜಾವಸಾನಕಮ್ ।

ತಾವತ್ ಸಂಪ್ರೀತಿಭಾವೇನ ಅಸ್ಮಿನ್ ದೀಪೇ ಸನ್ನಿಧಿಂ ಕುರು ॥

ಕೌಶೇಯಪೀತವಸನಾಮ್ ಅರವಿಂದನೇತ್ರಾಂ

ಪದ್ಮದ್ವಯಾಭಯವರೋದ್ಯತಪದ್ಮಹಸ್ತಾಮ್ ।

ಉದ್ಯಚ್ಛತಾರ್ಕಸದೃಶಾಂ (ಶ್ರೀಂ) ಪರಮಾಂಕಸಂಸ್ಥಾಂ

ಧ್ಯಾಯೇದ್ ವಿಧೀಶನುತಪಾದಯುಗಾಂ ಜನಿತ್ರೀಮ್ ॥

ಓಂ ಶ್ರೀಂ ಶ್ರಿಯೈ ನಮಃ । ಶ್ರಿಯಮಾವಾಹಯಾಮಿ ॥

ಕೌಶೇಯರಕ್ತವಸನಾಮ್ ಅರವಿಂದನೇತ್ರಾಂ

ತಾಂಬೂಲನೀಲಸುಮಾಭಯಸದ್ವರೇತಾಮ್ ।

ಶ್ಯಾಮಾಂಗಕಾಂತಸಹಿತಾಂ ಪರಮಾಂಕಸಂಸ್ಥಾಂ

ಧ್ಯಾಯೇದ್ ವಿಧೀಶನುತಪಾದಯುಗಾಂ ಜನಿತ್ರೀಮ್ ॥

ಓಂ ಭೂಂ ಭುವಃ ನಮಃ । ಭೂಮಾವಾಹಯಾಮಿ ॥

ಕೌಶೇಯರಕ್ತವಸನಾಮ್ ಕಮಲತ್ರಿನೇತ್ರಾಂ

ಚಕ್ರಾಬ್ಜತರ್ಜನಸುಶೂಲಯುತಾಬ್ಜಹಸ್ತಾಮ್ ।

ಉದ್ಯಚ್ಛತಾರ್ಕಸದೃಶೀಂ ಪರಮಾಂಕಸಂಸ್ಥಾಂ

ಧ್ಯಾಯೇದ್ವಿಧೀಶನುತಪಾದಯುಗಾಂ ಜನಿತ್ರೀಮ್ ॥

ಓಂ ದುಂ ದುರ್ಗಾಯೈ ನಮಃ ಓಂ ॥

ಶ್ರೀ-ಭೂ-ದುರ್ಗಾಂಭೃಣೀ-ಹ್ರೀ-ಮಾಯಾ-ಜಯಾ-ಕೃತಿ-ಶಾಂತಿ-ಲಕ್ಷ್ಮೀಜಯಂತೀ-ಜಾನಕೀ-ಸತ್ಯಾ-ರುಕ್ಮಿಣೀ-ಸ್ವಯಂಪ್ರೀತಾಖ್ಯ ಮಹಾಲಕ್ಷ್ಮೀ-ರೂಪಾನ್ ಆವಾಹಯಾಮಿ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಆವಾಹಯಾಮಿ ಆವಾಹನಂ ಸಮರ್ಪಯಾಮಿ ।

## ಆಸನ

ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್ ।

ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥

ಏತಾವಾನಸ್ಯ ಮಹಿಮಾಽತೋ ಜ್ಯಾಯಾಂಶ್ಚ ಪೂರುಷಃ ।

ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥

ಹಿರಣ್ಯವರ್ಣಾಂ ಹರಿಣೀಂ ಸುವರ್ಣರಜತಸ್ರಜಾಮ್ ।

ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ ॥

ತಾಂ ಮ ಆವಹ ಜಾತವೇದೋ ಲಕ್ಷ್ಮೀಮನಪಗಾಮಿನೀಮ್ ।

ಯಸ್ಯಾಂ ಹಿರಣ್ಯಂ ವಿಂದೇಯಂ ಗಾಮಶ್ವಂ ಪುರುಷಾನಹಮ್ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಆಸನಂ ಸಮರ್ಪಯಾಮಿ ।

ತ್ರಿಪಾದೂರ್ಧ್ವ ಉದೈತ್ ಪುರುಷಃ ಪಾದೋಽಸ್ಯೇಹಾ ಭವತ್ ಪುನಃ ।
ತತೋ ವಿಷ್ವಙ್ವ್ಯಕ್ರಾಮತ್ಸಾಶನಾನಶನೇ ಅಭಿ ॥
ಅಶ್ವಪೂರ್ವಾಂ ರಥಮಧ್ಯಾಂ ಹಸ್ತಿನಾದ ಪ್ರಬೋಧಿನೀಮ್ ।
ಶ್ರಿಯಂ ದೇವೀಮುಪಹ್ವಯೇ ಶ್ರೀರ್ಮಾ ದೇವೀ ಜುಷತಾಮ್ ॥

ಸುವಾಸಿತಂ ಜಲಂ ರಮ್ಯಂ ಸರ್ವತೀರ್ಥಸಮುದ್ಭವಮ್ ।
ಪಾದ್ಯಂ ಗೃಹಾಣ ದೇವಿ ತ್ವಂ ಸರ್ವದೇವನಮಸ್ಕೃತೇ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಪಾದಯೋಃ ಪಾದ್ಯಂ ಸಮರ್ಪಯಾಮಿ ।

## ಅರ್ಘ್ಯ

ಸರಸ್ವತೀ ಭಾರತೀ ಮೊದಲಾದ ಶ್ರೇಷ್ಠ ದೇವಸ್ತ್ರೀಯರಷ್ಟೇ ಮಹಾಲಕ್ಷ್ಮಿಯನ್ನು ಪೂಜಿಸುತ್ತಾರೆ. ಆದರ ಅನುಸಂಧಾನವನ್ನಷ್ಟೇ ನಾವು ಮಾಡಬೇಕು. ನಮಗೆ ಪೂಜಿಸುವ ಯೋಗ್ಯತೆ ಸರ್ವಥಾ ಇರುವುದಿಲ್ಲ.

ಶುದ್ಧೋದಕಂ ಚ ಪಾತ್ರಸ್ಥಂ ಗಂಧಪುಷ್ಪಾದಿಮಿಶ್ರಿತಮ್ ।
ಅರ್ಘ್ಯಂ ದಾಸ್ಯಾಮಿ ತೇ ದೇವಿ ಗೃಹಾಣ ಸುರಪೂಜಿತೇ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ ಹಸ್ತಯೋಃ ಅರ್ಘ್ಯಂ ಸಮರ್ಪಯಾಮಿ ।

## ಆಚಮನ

ತಸ್ಮಾದ್ ವಿರಾಳಜಾಯತ ವಿರಾಜೋ ಅಧಿ ಪೂರುಷಃ ।
ಸ ಜಾತೋ ಅತ್ಯರಿಚ್ಯತ ಪಶ್ಚಾದ್ ಭೂಮಿಮಥೋ ಪುರಃ ॥
ಕಾಂಸ್ಯಸ್ಮಿತಾಂ ಹಿರಣ್ಯಪ್ರಾಕಾರಾಮಾರ್ದ್ರಾಂ
ಜ್ವಲಂತೀಂ ತೃಪ್ತಾಂ ತರ್ಪಯಂತೀಮ್ ।

ಪದ್ಮೇ ಸ್ಥಿತಾಂ ಪದ್ಮವರ್ಣಾಂ ತಾಮಿಹೋಪಹ್ವಯೇ ಶ್ರಿಯಮ್ ॥

ಸುವರ್ಣಕಲಶಾನೀತಂ ಚಂದನಾಗರುಸಂಯುತಮ್ ।

ಗೃಹಾಣಾಚಮನಂ ದೇವಿ ಮಯಾ ದತ್ತಂ ಶುಭಪ್ರದೇ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಆಚಮನೀಯಾರ್ಥೇ ಜಲಂ ಸಮರ್ಪಯಾಮಿ ।

## ಮಧುಪರ್ಕ

ದಧ್ಯಾಜ್ಯಮಧುಸಂಯುಕ್ತಂ ಮಧುಪರ್ಕಂ ಮಯಾ ಹೃತಮ್ ।

ಗೃಹಾಣ ವರದೇ ದೇವಿ ನಮಸ್ತೇ ಹರಿವಲ್ಲಭೇ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಮಧುಪರ್ಕಂ ಸಮರ್ಪಯಾಮಿ ।

## ಪಂಚಾಮೃತಸ್ನಾನ

## ಕ್ಷೀರಸ್ನಾನ

ಓಂ ಆಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಮ್ ।

ಭವಾ ವಾಜಸ್ಯ ಸಂಗಥೇ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಕ್ಷೀರಸ್ನಾನಂ ಸಮರ್ಪಯಾಮಿ ।

## ದಧಿಸ್ನಾನ

ಓಂ ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ ।

ಸುರಭಿನೋ ಮುಖಾ ಕರತ್ಪ್ರಣ ಆಯೂಂಷಿ ತಾರಿಷತ್ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ದಧಿಸ್ನಾನಂ ಸಮರ್ಪಯಾಮಿ ।

## ಘೃತಸ್ನಾನ

ಓಂ ಘೃತಂ ಮಿಮಿಕ್ಷೇ ಘೃತಮಸ್ಯ ಯೋನಿರ್ಘೃತೇ ಶ್ರಿತೋ ಘೃತಮಸ್ಯ ಧಾಮ ।
ಅನುಷ್ವಧಮಾ ವಹ ಮಾದಯಸ್ವ ಸ್ವಾಹಾಕೃತಂ ವೃಷಭ ವಕ್ಷಿ ಹವ್ಯಮ್ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಘೃತಸ್ನಾನಂ ಸಮರ್ಪಯಾಮಿ ।

## ಮಧುಸ್ನಾನ

ಓಂ ಮಧು ವಾತಾ ಋತಾಯತೇ ಮಧು ಕ್ಷರಂತಿ ಸಿಂಧವಃ ।
ಮಾಧ್ವೀರ್ನಃ ಸಂತ್ವೋಷಧೀಃ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಮಧುಸ್ನಾನಂ ಸಮರ್ಪಯಾಮಿ.

## ಶರ್ಕರಾಸ್ನಾನ

ಸ್ವಾದುಃ ಪವಸ್ವ ದಿವ್ಯಾಯ ಜನ್ಮನೇ ಸ್ವಾದುರಿಂದ್ರಾಯ ಸುಹವೀತು ನಾಮ್ನೇ ।
ಸ್ವಾದುರ್ಮಿತ್ರಾಯ ವರುಣಾಯ ವಾಯವೇ ಬೃಹಸ್ಪತಯೇ ಮಧುಮಾಁ
ಅದಾಭ್ಯಃ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಶರ್ಕರಾಸ್ನಾನಂ ಸಮರ್ಪಯಾಮಿ.

## ಫಲಸ್ನಾನ

ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾ ಯಾಶ್ಚ ಪುಷ್ಪಿಣೀಃ ।
ಬೃಹಸ್ಪತಿ ಪ್ರಸೂತಾಸ್ತಾ ನೋ ಮುಂಚಂತ್ವಂ ಹಸಃ ॥ ಓಂ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ನಾರಿಕೇಲಫಲೋದಕಸ್ನಾನಂ ಸಮರ್ಪಯಾಮಿ ಃ

## ಶುದ್ಧೋದಕಸ್ನಾನ

ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ ।
ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ ॥

ಚಂದ್ರಾಂ ಪ್ರಭಾಸಾಂ ಯಶಸಾ ಜ್ವಲಂತೀಂ
ಶ್ರಿಯಂ ಲೋಕೇ ದೇವಜುಷ್ಟಾಮುದಾರಾಮ್ ।
ತಾಂ ಪದ್ಮಿನೀಮೀಂ ಶರಣಮಹಂ ಪ್ರಪದ್ಯೇಽ-
ಲಕ್ಷ್ಮೀರ್ಮೇ ನಶ್ಯತಾಂ ತ್ವಾಂ ವೃಣೇ ॥

ಗಂಗಾ ಗೋದಾವರೀ ಕೃಷ್ಣಾ ಗೌತಮೀ ನರ್ಮದಾಜಲೈಃ ।
ಸ್ನಾನಾರ್ಥಮಾಹೃತಂ ಮಾತಃ ಸ್ವೀಕರುಷ್ವ ಹರಿಪ್ರಿಯೇ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಗಂಗೋದಕೇನ ಸ್ನಪಯಾಮಿ ।

## ವಸ್ತ್ರಸಮರ್ಪಣೆ

ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ ಪುರುಷಂ ಜಾತಮಗ್ರತಃ ।
ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ ॥

ಆದಿತ್ಯವರ್ಣೇ ತಪಸೋಽಧಿಜಾತೋ ವನಸ್ಪತಿಸ್ತವ ವೃಕ್ಷೋಽಥಬಿಲ್ವಃ ।
ತಸ್ಯ ಫಲಾನಿ ತಪಸಾನುದಂತು ಮಾಯಾಂತರಾಯಾಶ್ಚ ಬಾಹ್ಯಾ ಅಲಕ್ಷ್ಮೀಃ ॥

ರಜತಾದ್ರಿಸಮಂ ದಿವ್ಯಂ ಕ್ಷೀರಸಾಗರಸನ್ನಿಭಮ್ ।
ಚಂದ್ರಪ್ರಭಾಸಮಂ ದೇವಿ ವಸ್ತ್ರಯುಗ್ಮಂ ದದಾಮ್ಯಹಮ್ ॥

ಓಂ ಅಭಿವಸ್ತ್ರಾ ಸುವಸನಾನ್ಯರ್ಷಾಭಿಧೇನೂಃ ಸುದುಘಾಃ ಪೂಯಮಾನಃ ।
ಅಭಿ ಚಂದ್ರಾ ಭರ್ತವೇ ನೋ ಹಿರಣ್ಯಾಭ್ಯಶ್ವಾನ್ ರಥಿನೋ ದೇವ ಸೋಮ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ವಸ್ತ್ರಯುಗ್ಮಂ ಸಮರ್ಪಯಾಮಿ ।

## ಉಪವೀತ

ತಸ್ಮಾದ್ ಯಜ್ಞಾತ್ ಸರ್ವಹುತಃ ಸಂಭೃತಂ ಪೃಷದಾಜ್ಯಮ್ ।
ಪಶೂನ್ ತಾಂಶ್ಚಕ್ರೇ ವಾಯವ್ಯಾನಾರಣ್ಯಾನ್ ಗ್ರಾಮ್ಯಾಶ್ಚ ಯೇ ॥

ಉಪೈತು ಮಾಂ ದೇವಸಖಃ ಕೀರ್ತಿಶ್ಚ ಮಣಿನಾ ಸಹ ।
ಪ್ರಾದುರ್ಭೂತೋಽಸ್ಮಿ ರಾಷ್ಟ್ರೇಽಸ್ಮಿನ್ ಕೀರ್ತಿಮೃದ್ಧಿಂ ದದಾತು ಮೇ ॥

ತಪ್ತಹೇಮಕೃತಂ ಸೂತ್ರಂ ಮುಕ್ತಾದಾಮವಿಭೂಷಿತಮ್ ।
ಉಪವೀತಮಿದಂ ದೇವಿ ಗೃಹಾಣ ತ್ವಂ ಶುಭಪ್ರದೇ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಉಪವೀತಂ ಸಮರ್ಪಯಾಮಿ ।

## ಗಂಧ

ತಸ್ಮಾದ್ಯಜ್ಞಾತ್ ಸರ್ವಹುತ ಋಚಃ ಸಾಮಾನಿ ಜಜ್ಞಿರೇ ।
ಛಂದಾಂಸಿ ಜಜ್ಞಿರೇ ತಸ್ಮಾದ್ ಯಜುಸ್ತಸ್ಮಾದಜಾಯತ ॥

ಕ್ಷುತ್ಪಿಪಾಸಾಮಲಾಂ ಜ್ಯೇಷ್ಠಾಮಲಕ್ಷ್ಮೀಂ ನಾಶಯಾಮ್ಯಹಮ್ ।
ಅಭೂತಿಮಸಮೃದ್ಧಿಂ ಚ ಸರ್ವಾಂ ನಿರ್ಣುದ ಮೇ ಗೃಹಾತ್ ॥

ಕರ್ಪೂರಾಗರುಕಸ್ತೂರಿ ರೋಚನಾದಿಭಿರನ್ವಿತಮ್ ।
ಗಂಧಂ ದಾಸ್ಯಾಮ್ಯಹಂ ದೇವಿ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಗಂಧಾನ್ ಸಮರ್ಪಯಾಮಿ ।

## ಮಂತ್ರಾಕ್ಷತೆ

ಅಕ್ಷತಾನ್ ದವಲಾನ್ ದೇವಿ ಶಾಲೀಯಾನ್ ತಂಡುಲಾನ್ ಶುಭಾನ್ ।

ಹರಿದ್ರಾಕುಂಕುಮೋಪೇತಾನ್ ಗೃಹಾಣಾಂಬುಧಿಪುತ್ರಿಕೇ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಅಕ್ಷತಾನ್ ಸಮರ್ಪಯಾಮಿ ।

## ಆಭರಣ

ತಸ್ಮಾದಶ್ವಾ ಅಜಾಯಂತ ಯೇ ಕೇ ಚೋಭಯಾದತಃ ।

ಗಾವೋ ಹ ಜಜ್ಞಿರೇ ತಸ್ಮಾತ್ ತಸ್ಮಾಜ್ಜಾತಾ ಅಜಾವಯಃ ॥

ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್ ।

ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಮ್ ॥

ಹಾರಗ್ರೈವೇಯ ತಾಟಂಕ ಕಂಕಣಾಂಗುಲಿಭೂಷಣಮ್ ।

ತ್ರೈಲೋಕ್ಯೇ ಭೂಷಿತೇ ದೇವಿ ಗೃಹಾಣಾಭರಣಂ ಶುಭಮ್ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಆಭರಣಾನಿ ಸಮರ್ಪಯಾಮಿ ।

## ಪುಷ್ಪಗಳು

ಯತ್ ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್ ।

ಮುಖಂ ಕಿಮಸ್ಯ ಕೌ ಬಾಹೂ ಕಾ ಊರೂ ಪಾದಾ ಉಚ್ಯೇತೇ ॥

ಮನಸಃ ಕಾಮಮಾಕೂತಿಂ ವಾಚಸ್ಸತ್ಯಮಶೀಮಹಿ ।

ಪಶೂನಾಂ ರೂಪಮನ್ನಸ್ಯ ಮಯಿ ಶ್ರೀಶ್ಶ್ರಯತಾಂ ಯಶಃ ॥

ಕೇತಕೀ ಜಾಜಿ ಪುನ್ನಾಗೈಃ ಚಂಪಕೈಃ ವಕುಲೈಃ ಶುಭೈಃ ।

ಶತಪತ್ರೈಶ್ಚ ಕಲ್ಹಾರೈಃ ಅರ್ಚಯಾಮಿ ಹರಿಪ್ರಿಯಾಮ್ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ನಾನಾವಿಧ ಪರಿಮಳ ಪುಷ್ಪಾಣಿ ಸಮರ್ಪಯಾಮಿ ।

## ಕುಂಕುಮ/ಸಿಂಧೂರ/ಕಾಡಿಗೆ

ಹರಿದ್ರಾ ಕುಂಕುಮಂ ಚೈವ ಸಿಂಧೂರಂ ಕಜ್ಜಲಾನ್ವಿತಮ್ ।
ಸೌಭಾಗ್ರದ್ರವ್ಯ ಸಂಯುಕ್ತಂ ಗೃಹಾಣ ಹರಿವಲ್ಲಭೇ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಹರಿದ್ರಾಕುಂಕುಮಂ ಸಮರ್ಪಯಾಮಿ ।

## ಅಂಗಪೂಜೆ

ಶ್ರೀ ರಮಾಯೈ ನಮಃ । ಪಾದೌ ಪೂಜಯಾಮಿ ।
ಶ್ರೀ ಚಂಚಲಾಯೈ ನಮಃ । ಗುಲ್ಫೌ ಪೂಜಯಾಮಿ ।
ಶ್ರೀ ಕ್ಷೀರಾಬ್ಧಿತನಯಾಯೈ ನಮಃ । ಜಾನುನೀ ಪೂಜಯಾಮಿ ।
ಶ್ರೀ ಕಮಲಾಯೈ ನಮಃ । ಜಂಘೇ ಪೂಜಯಾಮಿ ।
ಶ್ರೀ ಹರಿಪಾದರತಾಯೈ ನಮಃ । ಊರೂ ಪೂಜಯಾಮಿ ।
ಶ್ರೀ ಮದನಮಾತ್ರೇ ನಮಃ । ನಾಭಿಂ ಪೂಜಯಾಮಿ ।
ಶ್ರೀ ಪೀತಾಂಬರಧಾರಿಣ್ಯೈ ನಮಃ । ಕಟಿಂ ಪೂಜಯಾಮಿ ।
ಶ್ರೀ ವಿಶ್ವೋದರಾಯೈ ನಮಃ । ಉದರಂ ಪೂಜಯಾಮಿ ।
ಶ್ರೀ ವಿಷ್ಣುವಲ್ಲಭಾಯೈ ನಮಃ । ಹೃದಯಂ ಪೂಜಯಾಮಿ ।
ಶ್ರೀ ಜಗದಂಬಾಯೈ ನಮಃ । ಸ್ತನೌ ಪೂಜಯಾಮಿ ।
ಶ್ರೀ ಶಂಖಚಕ್ರಧಾರಿಣ್ಯೈ ನಮಃ । ಬಾಹೂನ್ ಪೂಜಯಾಮಿ ।
ಶ್ರೀ ಕಮಲಹಸ್ತಾಯೈ ನಮಃ । ಹಸ್ತಾನ್ ಪೂಜಯಾಮಿ ।
ಶ್ರೀ ವರಪ್ರದಾಯೈ ನಮಃ । ಭುಜೌ ಪೂಜಯಾಮಿ ।
ಶ್ರೀ ಮಾಂಗಲ್ಯಸೂತ್ರಕಂಠಾಯೈ ನಮಃ । ಕಂಠಂ ಪೂಜಯಾಮಿ ।
ಶ್ರೀ ಶ್ರುತಿಸ್ತುತಾಯೈ ನಮಃ । ಶ್ರೋತ್ರಂ ಪೂಜಯಾಮಿ ।
ಶ್ರೀ ಕೃಪಾಕಟಾಕ್ಷಾಯೈ ನಮಃ । ನೇತ್ರೇ ಪೂಜಯಾಮಿ ।

| | |
|---|---|
| ಶ್ರೀ ಸುಮುಖಾಯ್ಯೈ ನಮಃ। | ಮುಖಂ ಪೂಜಯಾಮಿ । |
| ಶ್ರೀ ಕುಂಕುಮಾಂಕಿತಾಯ್ಯೈ ನಮಃ। | ಲಲಾಟಂ ಪೂಜಯಾಮಿ । |
| ಶ್ರೀ ಕ್ಷೀರಸಾಗರಜಾಯ್ಯೈ ನಮಃ। | ಶಿರಃ ಪೂಜಯಾಮಿ । |

## ಪತ್ರಪೂಜೆ

| | |
|---|---|
| ಇಂದಿರಾಯ್ಯೈ ನಮಃ। | ಪದ್ಮ ಪತ್ರಂ ಸಮರ್ಪಯಾಮಿ । |
| ಪದ್ಮಕರಾಯ್ಯೈ ನಮಃ। | ಜಾಜೀ ಪತ್ರಂ ಸಮರ್ಪಯಾಮಿ । |
| ಭಾಗ್ಯದಾಯ್ಯೈ ನಮಃ। | ಮಾಲತೀ ಪತ್ರಂ ಸಮರ್ಪಯಾಮಿ । |
| ಶ್ರದ್ಧಾಯ್ಯೈ ನಮಃ। | ಮರುಗ ಪತ್ರಂ ಸಮರ್ಪಯಾಮಿ । |
| ಪ್ರಕೃತ್ಯೈ ನಮಃ। | ದಮನಕ ಪತ್ರಂ ಸಮರ್ಪಯಾಮಿ । |
| ಕಾಂತಾಯ್ಯೈ ನಮಃ। | ಮಾಚೀ ಪತ್ರಂ ಸಮರ್ಪಯಾಮಿ । |
| ಹರಿಪ್ರಿಯಾಯ್ಯೈ ನಮಃ। | ಮಲ್ಲಿಕಾ ಪತ್ರಂ ಸಮರ್ಪಯಾಮಿ । |
| ಕಮಲವಾಸಿನ್ಯೈ ನಮಃ। | ಪೂಗಪತ್ರಂ ಸಮರ್ಪಯಾಮಿ । |
| ಲೋಕಮಾತ್ರೇ ನಮಃ। | ಬಕುಳ ಪತ್ರಂ ಸಮರ್ಪಯಾಮಿ । |
| ಪದ್ಮನಿಲಯಾಯ್ಯೈ ನಮಃ। | ಸೇವಂತಿಕಾ ಪತ್ರಂ ಸಮರ್ಪಯಾಮಿ । |
| ಸರ್ವೈಶ್ವರ್ಯಕಾರಿಣ್ಯೈ ನಮಃ। | ಕರವೀರ ಪತ್ರಂ ಸಮರ್ಪಯಾಮಿ । |
| ಶ್ರೀವರಲಕ್ಷ್ಮ್ಯೈ ನಮಃ। | ನೀಲೋತ್ಪಲ ಪತ್ರಂ ಸಮರ್ಪಯಾಮಿ। |
| ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ। | ನಾನಾವಿಧಪತ್ರಾಣಿ ಸಮರ್ಪಯಾಮಿ । |

## ಪುಷ್ಪಪೂಜೆ

| | |
|---|---|
| ಪ್ರಸನ್ನವದನಾಯ್ಯೈ ನಮಃ। | ಕಮಲ ಪುಷ್ಪಂ ಸಮರ್ಪಯಾಮಿ । |
| ಹರಸೇವಿತಪದಾಯ್ಯೈ ನಮಃ। | ಜಾಜೀ ಪುಷ್ಪಂ ಸಮರ್ಪಯಾಮಿ । |
| ಸರೋಜಹಸ್ತಾಯ್ಯೈ ನಮಃ। | ಪದ್ಮ ಪುಷ್ಪಂ ಸಮರ್ಪಯಾಮಿ । |
| ಮನೋಜ್ಞ್ಯೈ ನಮಃ। | ಬಕುಳ ಪುಷ್ಪಂ ಸಮರ್ಪಯಾಮಿ । |
| ಪುಣ್ಯಗಂಧಾಯ್ಯೈ ನಮಃ। | ಸೇವಂತಿಕಾ ಪುಷ್ಪಂ ಸಮರ್ಪಯಾಮಿ । |
| ಚಂದ್ರರೂಪಾಯ್ಯೈ ನಮಃ। | ನೀಲೋತ್ಪಲ ಪುಷ್ಪಂ ಸಮರ್ಪಯಾಮಿ । |

ವಿಮಲಾಯ್ಯೆ ನಮಃ । ಮಲ್ಲಿಕಾ ಪುಷ್ಪಂ ಸಮರ್ಪಯಾಮಿ ।
ಶಾಂತಾಯ್ಯೆ ನಮಃ । ಪುನ್ನಾಗ ಪುಷ್ಪಂ ಸಮರ್ಪಯಾಮಿ ।
ಧನಧಾನ್ಯಕರ್ತ್ರ್ಯೇ ನಮಃ । ಕರವೀರ ಪುಷ್ಪಂ ಸಮರ್ಪಯಾಮಿ ।
ಶ್ರೀವರಲಕ್ಷ್ಮ್ಯೈ ನಮಃ । ಕೇತಕೀ ಪುಷ್ಪಂ ಸಮರ್ಪಯಾಮಿ ।
ಶ್ರೀ ಹರಿಣ್ಯೈ ನಮಃ । ಪಾರಿಜಾತ ಪುಷ್ಪಂ ಸಮರ್ಪಯಾಮಿ ।
ಶ್ರೀ ಮಹಾಲಕ್ಷ್ಮ್ಯೈ ನಮಃ । ನಾನಾವಿಧ ಪರಿಮಳ ಪುಷ್ಪಾಣಿ ಸಮರ್ಪಯಾಮಿ

## ಅಷ್ಟೋತ್ತರನಾಮ ಪೂಜೆ

ಶ್ರೀ ಮಹಾಲಕ್ಷ್ಮ್ಯೈ ನಮಃ ।
ಶ್ರೀ ಗುಣತ್ರಯಾಭಿಮಾನಿನ್ಯೈ ನಮಃ ।
ಶ್ರೀ ದುರ್ಗಾಯ್ಯೆ ನಮಃ ।
ಶ್ರೀ ಸತ್ಯಾಯ್ಯೆ ನಮಃ ।
ಶ್ರೀ ಕೃತ್ಯೈ ನಮಃ ।
ಶ್ರೀ ಮಾಯಾಯ್ಯೆ ನಮಃ ।
ಶ್ರೀ ಕಮಲಾಯ್ಯೆ ನಮಃ ।
ಶ್ರೀ ತ್ರಿಲೋಕಜನನ್ಯೈ ನಮಃ
ಶ್ರೀ ಅಂಭ್ರಿಣ್ಯೈ ನಮಃ ।
ಶ್ರೀ ಪ್ರಕೃತ್ಯೈ ನಮಃ ।
ಶ್ರೀ ವರುಣಜಾಯ್ಯೆ ನಮಃ ।
ಶ್ರೀ ಹ್ರೀನಾಮಕಾಯ್ಯೆ ನಮಃ ।
ಶ್ರೀ ವೇದವತ್ಯೈ ನಮಃ ।
ಶ್ರೀ ಧಾತ್ರ್ಯೈ ನಮಃ ।
ಶ್ರೀ ಭಾರ್ಗವ್ಯೈ ನಮಃ ।
ಶ್ರೀ ಪ್ರಭಾಯ್ಯೆ ನಮಃ ।
ಶ್ರೀ ಲಕ್ಷ್ಮ್ಯೈ ನಮಃ ।
ಶ್ರೀ ಪದ್ಮಾಯ್ಯೆ ನಮಃ ।
ಶ್ರೀ ಕಮಲಾಲಯಾಯ್ಯೆ ನಮಃ ।
ಶ್ರೀ ರಮಾಯ್ಯೆ ನಮಃ ।
ಶ್ರೀ ಕುಂಭಿಣ್ಯೈ ನಮಃ ।
ಶ್ರೀ ರುಗ್ಮಿಣ್ಯೈ ನಮಃ ।
ಶ್ರೀ ಶಾಂತ್ಯೈ ನಮಃ ।
ಶ್ರೀ ಜಯಾಯ್ಯೆ ನಮಃ ॥೧೦॥
ಶ್ರೀ ಸೀತಾಯ್ಯೆ ನಮಃ ।
ಶ್ರೀ ದಕ್ಷಿಣಾಯ್ಯೆ ನಮಃ ।
ಶ್ರೀ ಅನುಪಮಾಯ್ಯೆ ನಮಃ ।
ಶ್ರೀ ಜಯಂತ್ಯೈ ನಮಃ ।
ಶ್ರೀ ವಿಷ್ಣುಪತ್ನ್ಯೈ ನಮಃ ॥೨೦॥
ಶ್ರೀ ಪದ್ಮಾಯ್ಯೆ ನಮಃ ।
ಶ್ರೀ ವೇದಾಯ್ಯೆ ನಮಃ ।
ಶ್ರೀ ದೇವತಾಯ್ಯೆ ನಮಃ ।
ಶ್ರೀ ಸುಖಾಲಯಾಯ್ಯೆ ನಮಃ ।
ಶ್ರೀ ರೇವತ್ಯೈ ನಮಃ ॥೩೦॥
ಶ್ರೀ ಶ್ರಿಯ್ಯೆ ನಮಃ ।
ಶ್ರೀ ಕಮಲಾಯ್ಯೆ ನಮಃ ।
ಶ್ರೀ ಪದ್ಮಿನ್ಯೈ ನಮಃ ।
ಶ್ರೀ ರಮಾಯ್ಯೆ ನಮಃ ।

ದೀಪಾವಳಿ -೨ ಅಮಾವಾಸ್ಯೆ

ಶ್ರೀ ವೃಷಾಕಪ್ಯೈ ನಮಃ ।
ಶ್ರೀ ಬುದ್ಧ್ಯೈ ನಮಃ ।
ಶ್ರೀ ಇಂದಿರಾಯೈ ನಮಃ ।
ಶ್ರೀ ಹರಿಣ್ಯೈ ನಮಃ ।
ಶ್ರೀ ನಿತ್ಯಾಯೈ ನಮಃ ।
ಶ್ರೀ ಆಪ್ರಜ್ಞಾಯೈ ನಮಃ ।
ಶ್ರೀ ಸುಗಂಧಾಯೈ ನಮಃ ।
ಶ್ರೀ ವಿದ್ಯಾಯೈ ನಮಃ ।
ಶ್ರೀ ಸುಲಕ್ಷಣಾಯೈ ನಮಃ ।
ಶ್ರೀ ಭೂತ್ಯೈ ನಮಃ ।
ಶ್ರೀ ಸರಸ್ವತ್ಯೈ ನಮಃ ।
ಶ್ರೀ ಮುಕ್ತಿಫಲದಾಯಿನ್ಯೈ ನಮಃ ।
ಶ್ರೀ ವ್ಯಾಪ್ತರೂಪಾಯೈ ನಮಃ ।
ಶ್ರೀ ನಿತ್ಯಾವಿಯೋಗಿನ್ಯೈ ನಮಃ ।
ಶ್ರೀ ಮಾಲತ್ಯೈ ನಮಃ ।
ಶ್ರೀ ಮನ್ಮಥಜನನ್ಯೈ ನಮಃ ।
ಶ್ರೀ ಜಗದಾನಂದದಾಯಿನ್ಯೈ ನಮಃ ।
ಶ್ರೀ ಕಲ್ಯಾಣ್ಯೈ ನಮಃ ।
ಶ್ರೀ ವಿಷ್ಣುಪ್ರಿಯಾಯೈ ನಮಃ ।
ಶ್ರೀ ವೈಷ್ಣವ್ಯೈ ನಮಃ ।
ಶ್ರೀ ಸ್ವರ್ಣವರ್ಣಾಯೈ ನಮಃ ।
ಶ್ರೀ ಮುಕುಂದ ಕಿಂಕರ್ಯೈ ನಮಃ ।
ಶ್ರೀ ಶುಂಭ ನಿಶುಂಭ ಸಂಹರ್ತ್ರೇ ನಮಃ ।
ಶ್ರೀ ಕೊಲ್ಲಾಪುರವಾಸಿನ್ಯೈ ನಮಃ ।
ಶ್ರೀ ಅಘಟಿತಘಟನಾಯೈ ನಮಃ ।
ಶ್ರೀ ಅಮೃತೋದ್ಭವಾಯೈ ನಮಃ ।
ಶ್ರೀ ಧನ್ಯಾಯೈ ನಮಃ ॥೪೦॥
ಶ್ರೀ ಯಜ್ಞಾಯೈ ನಮಃ ।
ಶ್ರೀ ಹಿರಣ್ಯಾಯೈ ನಮಃ ।
ಶ್ರೀ ಸತ್ಯಾಯೈ ನಮಃ ।
ಶ್ರೀ ಆನಂದಾಯೈ ನಮಃ ।
ಶ್ರೀ ಸುಖಾಯೈ ನಮಃ ॥೫೦॥
ಶ್ರೀ ಸುಂದರ್ಯೈ ನಮಃ ।
ಶ್ರೀ ಸುಶೀಲಾಯೈ ನಮಃ ।
ಶ್ರೀ ಪದ್ಮನಾಭಪ್ರಿಯಾಯೈ ನಮಃ ।
ಶ್ರೀ ಶ್ರದ್ಧಾಯೈ ನಮಃ ।
ಶ್ರೀ ಲೋಕಪಾವನ್ಯೈ ನಮಃ ॥೬೦॥
ಶ್ರೀ ಸರ್ವಲೋಕಮಾತ್ರೇ ನಮಃ ।
ಶ್ರೀ ಪದ್ಮಾಕ್ಷ್ಯೈ ನಮಃ ।
ಶ್ರೀ ಕೋಪಾದಿವರ್ಜಿತಾಯೈ ನಮಃ।
ಶ್ರೀ ವಿರಜಾಯೈ ನಮಃ ।
ಶ್ರೀ ಬ್ರಹ್ಮಮಾತ್ರೇ ನಮಃ ॥೭೦॥
ಶ್ರೀ ಜಗದ್ಧಾತ್ರೇ ನಮಃ ।
ಶ್ರೀ ಸಂಪತ್ಪ್ರದಾಯಕಾಯೈ ನಮಃ ।
ಶ್ರೀ ಆಪದುದ್ಧರಣಾಯೈ ನಮಃ ।
ಶ್ರೀ ನಾರಾಯಣ್ಯೈ ನಮಃ ।
ಶ್ರೀ ತನುಮಧ್ಯಾಯೈ ನಮಃ ॥೮೦॥
ಶ್ರೀ ಮಹಿಷಾಸುರಮರ್ದಿನ್ಯೈ ನಮಃ।
ಶ್ರೀ ಸ್ವರ್ಗಾಪವರ್ಗದಾಯೈ ನಮಃ ।
ಶ್ರೀ ಜಗದಂಬಾಯೈ ನಮಃ ।
ಶ್ರೀ ದೇವ್ಯೈ ನಮಃ ।
ಶ್ರೀ ಚಂದ್ರಲೋಚನಾಯೈ ನಮಃ॥೯೦॥

ಶ್ರೀ ವರಾರೋಹಾಯ್ಯೈ ನಮಃ । ಶ್ರೀ ಹರಿವಲ್ಲಭಾಯ್ಯೈ ನಮಃ ।
ಶ್ರೀ ಲೋಕಸುಂದರ್ಯ್ಯೈ ನಮಃ । ಶ್ರೀ ಮುಕುಂದಮಹಿಷ್ಯೈಯ್ಯೈ ನಮಃ ।
ಶ್ರೀ ಸರೋಜಾನನಾಯ್ಯೈ ನಮಃ । ಶ್ರೀ ದುರಾಧರ್ಷಾಯ್ಯೈ ನಮಃ ।
ಶ್ರೀ ಈಶ್ವರ್ಯ್ಯೈ ನಮಃ । ಶ್ರೀ ಸಮಾನಾಯ್ಯೈ ನಮಃ ।
ಶ್ರೀ ವೇದಮಾನಿನ್ಯೈ ನಮಃ । ಶ್ರೀ ಮೂಲಪ್ರಕೃತ್ಯೈ ನಮಃ ॥೧೦೦॥
ಶ್ರೀ ವರವರ್ಣಿನ್ಯೈ ನಮಃ । ಶ್ರೀ ಅಂಬಾಯ್ಯೈ ನಮಃ ।
ಶ್ರೀ ಮಾಂಗಲ್ಯಸೂತ್ರಧರಾಯ್ಯೈ ನಮಃ । ಶ್ರೀ ಹರಿಣಾಕೃತಮಂದಿರಾಯ್ಯೈ ನಮಃ।
ಶ್ರೀ ಸರ್ವಸರ್ವಸ್ವದಾಯ್ಯೈ ನಮಃ । ಶ್ರೀ ಚತುಷ್ಕಪರ್ದಾಯ್ಯೈ ನಮಃ ।
ಶ್ರೀ ಚತುರ್ಮೂರ್ತಿಹರಿಪ್ರಿಯಾಯ್ಯೈ ನಮಃ ।
ಶ್ರೀ ಚತುರ್ವೇದೋದಿತಾಯ್ಯೈ ನಮಃ । ಶ್ರೀ ಅಭಯದಾಯ್ಯೈ ನಮಃ ।
ಶ್ರೀ ಮಹಾಲಕ್ಷ್ಮ್ಯೈ ನಮಃ ।

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಅಷ್ಟೋತ್ತರ ಶತನಾಮಪೂಜಾಂ ಸಮರ್ಪಯಾಮಿ ।

## ಧೂಪ

ಬ್ರಾಹ್ಮಣೋಽಸ್ಯ ಮುಖಮಾಸೀದ್ ಬಾಹೂ ರಾಜನ್ಯಃ ಕೃತಃ ।
ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ॥
ಕರ್ದಮೇನ ಪ್ರಜಾಭೂತಾ ಮಯಿ ಸಂಭವ ಕರ್ದಮ ।
ಶ್ರಿಯಂ ವಾಸಯ ಮೇ ಕುಲೇ ಮಾತರಂ ಪದ್ಮಮಾಲಿನೀಮ್ ॥

ಚಂದನಾಗರುಕರ್ಪೂರಶ್ವೇತಗುಗ್ಗುಳಸಂಯುತಃ ।
ಕಪಿಲಾಘೃತಸಂಯುಕ್ತಧೂಪೋಽಯಂ ಪ್ರತಿಗೃಹ್ಯತಾಮ್ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಧೂಪಮಾಘ್ರಾಪಯಾಮಿ ।

## ದೀಪ

ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ।
ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ ವಾಯುರಜಾಯತ ॥

ಆಪಸ್ಸ್ರಜಂತು ಸ್ನಿಗ್ಧಾನಿ ಚಿಕ್ಲೀತ ವಸ ಮೇ ಗೃಹೇ।
ನಿ ಚ ದೇವೀಂ ಮಾತರಂ ಶ್ರಿಯಂ ವಾಸಯ ಮೇ ಕುಲೇ ॥

ಸಾಜ್ಯಂ ತ್ರಿವರ್ತಿಸಂಯುಕ್ತಂ ವಹ್ನಿನಾ ಯೋಜಿತಂ ಮಯಾ।
ಗೃಹಾಣ ಮಂಗಲಂ ದೀಪಂ ತ್ರೈಲೋಕ್ಯತಿಮಿರಾಪಹಮ್ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ದೀಪಂ ದರ್ಶಯಾಮಿ ।

## ಮಹಾನೈವೇದ್ಯ

ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ।
ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ ತಥಾ ಲೋಕಾಂ ಅಕಲ್ಪಯನ್ ॥

ಆರ್ದ್ರಾಂ ಪುಷ್ಕರಿಣೀಂ ಪುಷ್ಟಿಂ ಪಿಂಗಲಾಂ ಪದ್ಮಮಾಲಿನೀಮ್।
ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ ॥

ಓಂ ಭೂರ್ಭುವಸ್ಸ್ವಃ । ಸತ್ಯಂತ್ವರ್ತೇನ ಪರಿಷಿಂಚಾಮಿ । ಅಮೃತೋಪಸ್ತರಣಮಸಿ ಸ್ವಾಹಾ ।

ಓಂ ಪ್ರಾಣಾತ್ಮನೇ ನಾರಾಯಣಾಯ ಸ್ವಾಹಾ । ನಾರಾಯಣಾಯೇದಂ ನಮಮ।
ಓಂ ಅಪಾನಾತ್ಮನೇ ವಾಸುದೇವಾಯ ಸ್ವಾಹಾ - ವಾಸುದೇವಾಯ ಇದಂ ನಮಮ ।
ಓಂ ವ್ಯಾನಾತ್ಮನೇ ಸಂಕರ್ಷಣಾಯ ಸ್ವಾಹಾ - ಸಂಕರ್ಷಣಾಯ ಇದಂ ನಮಮ ।
ಓಂ ಉದಾನಾತ್ಮನೇ ಪ್ರದ್ಯುಮ್ನಾಯ ಸ್ವಾಹಾ - ಪ್ರದ್ಯುಮ್ನಾಯ ಇದಂ ನಮಮ ।
ಓಂ ಸಮಾನಾತ್ಮನೇ ಅನಿರುದ್ಧಾಯ ಸ್ವಾಹಾ - ಅನಿರುದ್ಧಾಯ ಇದಂ ನಮಮ ।
(ಓಂ ನಮೋ ನಾರಾಯಣಾಯ ಓಂ (ಎಂಟು ಬಾರಿ ಹೇಳುವುದು)

ನೈವೇದ್ಯಂ ಗೃಹ್ಯತಾಂ ದೇವ ಭಕ್ತಿಂ ಮೇ ಹ್ಯಚಲಾಂ ಕುರು ।
ಈಪ್ಸಿತಂ ಮೇ ವರಂ ದೇಹಿ ಪರತ್ರ ಚ ಪರಾಂ ಗತಿಮ್ ॥
ಅನ್ನಂ ಚತುರ್ವಿಧಂ ಸ್ವಾದುಪಯೋದಧಿಘೃತಂ ತಥಾ ।
ನಾನಾವ್ಯಂಜನಶೋಭಾಢ್ಯಂ ನೈವೇದ್ಯಂ ಪ್ರತಿಗೃಹ್ಯತಾಮ್ ॥

ಉತ್ತರಾಪೋಶನಂ ಸಮರ್ಪಯಾಮಿ । ಹಸ್ತಪ್ರಕ್ಷಾಲನಂ ಸಮರ್ಪಯಾಮಿ । ಗಂಡೂಷಂ ಸಮರ್ಪಯಾಮಿ । ತಾಂಬೂಲಂ ಸಮರ್ಪಯಾಮಿ ।

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಹರಿನಿವೇದಿತ ನೈವೇದ್ಯಂ ಸಮರ್ಪಯಾಮಿ ।

ಪ್ರಾಣಾಯಸ್ವಾಹಾ । ಅಪಾನಾಯಸ್ವಾಹಾ । ವ್ಯಾನಾಯಸ್ವಾಹಾ । ಉದಾನಾಯಸ್ವಾಹಾ । ಸಮಾನಾಯಸ್ವಾಹಾ ।

ಮೋದಕಾಪೂಪಸಂಯುಕ್ತಂ ದಧ್ಯಾಜ್ಯಂ ಮಧುಪಾಯಸಮ್ ।
ರಸಾಯನೋಪದಂಶಾದಿ ನೈವೇದ್ಯಂ ಪ್ರತಿಗೃಹ್ಯತಾಮ್ ॥

ಉತ್ತರಾಪೋಶನಂ ಸಮರ್ಪಯಾಮಿ । ಹಸ್ತಪ್ರಕ್ಷಾಲನಂ ಸಮರ್ಪಯಾಮಿ । ಮುಖಪ್ರಕ್ಷಾಲನಂ ಸಮರ್ಪಯಾಮಿ.

## ತಾಂಬೂಲ

ಸಪ್ತಸ್ಯಾ ಸನ್ ಪರಿಧಯಸ್ತ್ರಿಃ ಸಪ್ತ ಸಮಿಧಃ ಕೃತಾಃ ।
ದೇವಾ ಯದ್ಯಜ್ಞಂ ತನ್ವಾನಾ ಅಬಧ್ನನ್ ಪುರುಷಂ ಪಶುಮ್ ॥
ಆರ್ದ್ರಾಂ ಯಃ ಕರಿಣೀಂ ಯಷ್ಟಿಂ ಸುವರ್ಣಾಂ ಹೇಮಮಾಲಿನೀಮ್ ।
ಸೂರ್ಯಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ ॥

ಪೂಗೀಫಲಸಮಾಯುಕ್ತಂ ನಾಗವಲ್ಲೀದಲೈರ್ಯುತಮ್ ।
ಕರ್ಪೂರ-ಚೂರ್ಣ ಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ತಾಂಬೂಲಂ ಸಮರ್ಪಯಾಮಿ ।

## ದಕ್ಷಿಣೆ

ಸುವರ್ಣಂ ಸರ್ವಧಾತೂನಾಂ ಶ್ರೇಷ್ಠಂ ದೇವಿ ಚ ತತ್ಸದಾ ।
ಭಕ್ತ್ಯಾ ದದಾಮಿ ವರದೇ ಸ್ವರ್ಣವೃಷ್ಟಿಂ ಚ ದೇಹಿ ಮೇ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ।

## ಮಹಾಮಂಗಳಾರತಿ

ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।
ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ॥
ತಾಂ ಮ ಆವಹ ಜಾತವೇದೋ ಲಕ್ಷ್ಮೀಮನಪಗಾಮಿನೀಮ್ ।
ಯಸ್ಯಾಂ ಹಿರಣ್ಯಂ ಪ್ರಭೂತಂ ಗಾವೋ ದಾಸ್ಯೋಽಶ್ವಾನ್ ವಿಂದೇಯಂ
ಪುರುಷಾನಹಮ್ ॥

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತುತೇ ॥
ನೀರಾಜನಂ ಸುಮಾಂಗಲ್ಯಂ ಕರ್ಪೂರೇಣ ಸಮನ್ವಿತಮ್ ।
ಚಂದ್ರಾರ್ಕವಹ್ನಿಸದೃಶಂ ಗೃಹಾಣ ಕಮಲಾಲಯೇ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಮಹಾನೀರಾಜನಂ ಸಮರ್ಪಯಾಮಿ ।

## ಮಂತ್ರಪುಷ್ಪ

ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ।
ತನ್ನೋ ವಿಷ್ಣುಃ ಪ್ರಚೋದಯಾತ್ ॥

ಮಹಾದೇವ್ಯೈ ಚ ವಿದ್ಮಹೇ ವಿಷ್ಣುಪತ್ನ್ಯೈ ಧೀಮಹಿ ।
ತನ್ನೋ ಲಕ್ಷ್ಮೀಃ ಪ್ರಚೋದಯಾತ್ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಮಂತ್ರಪುಷ್ಪಂ ಸಮರ್ಪಯಾಮಿ ।

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಛತ್ರ, ಚಾಮರ, ದರ್ಪಣ, ನೃತ್ಯ , ಗೀತ, ಸಮಸ್ತರಾಜೋಪಚಾರಾನ್ ಸಮರ್ಪಯಾಮಿ॥

## ಪ್ರದಕ್ಷಿಣನಮಸ್ಕಾರ

ಪದ್ಮಪ್ರಿಯೇ ಪದ್ಮಿನೀ ಪದ್ಮಹಸ್ತೇ ಪದ್ಮಾಲಯೇ ಪದ್ಮದಲಾಯತಾಕ್ಷಿ ।
ವಿಶ್ವಪ್ರಿಯೇ ವಿಶ್ವಮನೋನುಕೂಲೇ ತ್ವತ್ಪಾದಪದ್ಮಂ ಮಹಿ ಸನ್ನಿಧತ್ಸ್ವ ॥

ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ ।
ತಾನಿ ತಾನಿ ಪ್ರಣಶ್ಯಂತಿ ಪ್ರದಕ್ಷಿಣ ಪದೇ ಪದೇ ॥
ನಮಸ್ತೇ ಲೋಕಜನನಿ ನಮಸ್ತೇ ವಿಷ್ಣುವಲ್ಲಭೇ ।
ಹರಿಕಾಂತೇ ನಮಸ್ತೇಽಸ್ತು ತ್ರಾಹಿ ಮಾಂ ದುಃಖಸಾಗರಾತ್ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಪ್ರದಕ್ಷಿಣನಮಸ್ಕಾರಾನ್ ಸಮರ್ಪಯಾಮಿ ।

## ಅರ್ಘ್ಯ

ಕ್ಷೀರೋದಾರ್ಣವಸಂಭೂತೇ ವಿಷ್ಣುಪತ್ನೀ ಸುಶೋಭನೇ ।
ವಿಷ್ಣುನಾ ಸಹಿತಾ ದೇವಿ ಗೃಹಾಣಾರ್ಘ್ಯಂ ನಮೋಽಸ್ತು ತೇ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಇದಮರ್ಘ್ಯಮಿದಮರ್ಘ್ಯಮಿದಮರ್ಘ್ಯಂ ॥

## ಪ್ರಾರ್ಥನೆ

ದೀರ್ಘಮಾಯುರ್ಧನಂ ಧಾನ್ಯಂ ಸೌಮಾಂಗಲ್ಯಂ ಚ ಪುತ್ರತಾಮ್ ।
ದೇಹಿ ಮೇ ದೇಹಿ ಸುಪ್ರೀತೇ ಪಶುರತ್ನಾದಿಸಂಪದಃ ॥
ಕರಿಷ್ಯಾಮಿ ವ್ರತಂ ದೇವಿ ತ್ವದ್ಭಕ್ತ್ಯಾ ತ್ವತ್ಪರಾಯಣಾ ।
ವಾಂಛಿತಂ ದೇಹಿ ಮೇ ನಿತ್ಯಂ ಹರೌ ಭಕ್ತಿಮಚಂಚಲಾಮ್ ॥

ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಪ್ರಾರ್ಥನಾಂ ಸಮರ್ಪಯಾಮಿ ॥

ಹೀಗೆ ಪೂಜೆ ಮುಗಿದ ಮೇಲೆ ಶ್ರೀಸೂಕ್ತ ಹಾಗೂ ಭಾಗ್ಯಸೂಕ್ತಗಳನ್ನು ಪಠಿಸುತ್ತಾ ಮನೆಯ ಮೂಲೆ ಮೂಲೆಗಳಿಗೂ ಈ ದೀಪಗಳನ್ನು ತೆಗೆದುಕೊಂಡು ಹೋಗಿ ತೋರಿಸಬೇಕು. ಎಲ್ಲೆಡೆಯೂ ಅಲಕ್ಷ್ಮಿಯು ನಾಶವಾಗಿ ಲಕ್ಷ್ಮಿಯು ಸನ್ನಿಹಿತಳಾಗಿ ಅಷ್ಟಐಶ್ವರ್ಯಗಳನ್ನು ನಮಗೆ ಕರುಣಿಸುತ್ತಾಳೆಂದು ಭಕ್ತಿಭರಾಭಿನುನ್ನರಾಗಬೇಕು.

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

ಅನೇನ ಮಯಾಚರಿತ ಶ್ರೀ ಮಹಾಲಕ್ಷ್ಮೀಪೂಜನೇನ ಶ್ರೀಭಾರತೀರಮಣ-ಮುಖ್ಯಪ್ರಾಣಾಂತರ್ಗತಃ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಮ್ । ಪ್ರೀತೋ ವರದೋ ಭವತು ॥ ಶ್ರೀಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ॥

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಅನುಸೃತಃ ಸ್ವಭಾವಃ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

॥ ಶ್ರೀಕೃಷ್ಣಾರ್ಪಣಮಸ್ತು ॥

# ಬಲಿಪಾಡ್ಯ ಹಬ್ಬದ ಹಿನ್ನೆಲೆ

ಬಲಿಪಾಡ್ಯ ಎಂದರೇನು ? ಈ ಹೆಸರು ಕಾರ್ತಿಕ ಶುದ್ಧ ಪ್ರತಿಪತ್ ದಿವಸಕ್ಕೆ ಬರಲು ಏನು ಕಾರಣ ? ಎಂಬುದರ ಬಗ್ಗೆ ಈಗ ತಿಳಿದುಕೊಳ್ಳೋಣ. ಭಗವಂತನು ನೂರಾರು ಅವತಾರಗಳನ್ನು ಮಾಡಿರುವನು. ಅವುಗಳಲ್ಲಿ ದಶಾವತಾರವು ಅತ್ಯಂತ ಪ್ರಸಿದ್ಧ. ದಶಾವತಾರದಲ್ಲೂ ವಾಮನಾವತಾರ ಸುಪ್ರಸಿದ್ಧ.

'ಅಜಿನದಂಡಕಮಂಡಲುಮೇಖಲರುಚಿರಪಾವನವಾಮನಮೂರ್ತಯೇ।
ಮಿತಜಗತ್ತ್ರಿತಯಾಯ ಜಿತಾರಯೇ ನಿಗಮವಾಕ್ಪಟವೇ ವಟವೇ ನಮಃ'

ಮುಂಜಹುಲ್ಲಿನ ಕಟಿಸೂತ್ರವನ್ನು, ಉಪವೀತವನ್ನು, ಕೃಷ್ಣಾಜಿನದ ಉತ್ತರೀಯವನ್ನು ಧರಿಸಿ, ಕಣ್ಕುಕ್ಕುವ ಸೌಂದರ್ಯದ ರಾಶಿಯಂತಿರುವ ವಟುರೂಪಧಾರಿಯಾದ ವಾಮನನು ಎಲ್ಲರ ಮನಸ್ಸಿಗೆ ಮುದವನ್ನುಂಟು ಮಾಡುತ್ತಾ ಹಸನ್ಮುಖಿಯಾಗಿ ಬಲಿಯನ್ನು ಉದ್ಧರಿಸಲು ಅಶ್ವಮೇಧಯಾಗ ಮಾಡುತ್ತಿರುವ ಬಲಿಯ ಮನೆಗೆ ನಡೆದು ಬಂದನು. ಭಾದ್ರಪದ ಮಾಸದಲ್ಲಿ ವಾಮನಾವತಾರ ನಡೆದರೂ ಕೂಡ ಅವತಾರದ ಉದ್ದೇಶವು ಸಫಲವಾದದ್ದು ಕಾರ್ತಿಕ ಶುದ್ಧ ಪ್ರತಿಪತ್ ದಿವಸ.

ದೇವತೆಗಳು ಹಾಗೂ ಅಸುರರು ಸೇರಿ ಕ್ಷೀರಸಮುದ್ರಮಥನವನ್ನು ಮಾಡಿದರು. ಆದರ ಪ್ರತಿಫಲವಾಗಿ ಅಮೃತವು ದೊರೆಯಿತು. ದೊರೆತ ಅಮೃತವನ್ನು ದೇವತೆಗಳಷ್ಟೇ ಪಡೆದರು. ದೈತ್ಯರಿಗೆ ಅಮೃತವು ಸಿಗಲೇ ಇಲ್ಲ. ದೇವತೆಗಳು ಮೋಸ ಮಾಡಿದರೆಂಬ ಸಿಟ್ಟು ಅಸುರರಿಗೆ ಹೆಚ್ಚಾಯಿತು. ದೇವತೆಗಳಿಂದ ಮೋಸವಾಯಿತೆಂಬ ಸಿಟ್ಟಿನಿಂದ ದೇವತೆಗಳ ಲೋಕವನ್ನೇ ಅಪಹಾರ ಮಾಡಬೇಕೆಂದು ನಿರ್ಣಯ ಮಾಡಿದರು. ಎಲ್ಲ ಅಸುರರ ಗುರುಗಳಾದ ಶುಕ್ರಾಚಾರ್ಯರು ಬಲಿಯ ಮೂಲಕ ನೂರು

ಅಶ್ವಮೇಧಯಾಗಗಳನ್ನು ಮಾಡಿಸಿದರು. ಅದರ ಪ್ರತಿಫಲವಾಗಿ ಇಂದ್ರಪದವಿಯು ಬಲಿಚಕ್ರವರ್ತಿಗೆ ದೊರೆಯಿತು. ಇದಕ್ಕೂ ಮೊದಲು ಎಲ್ಲ ಅಸುರರ ಒಡೆಯನಾದ ಬಲಿಯು ತನ್ನ ಅಜ್ಜನಾದ ಪ್ರಹ್ಲಾದನ ಬಳಿ ತೆರಳಿ ದೇವತೆಗಳ ಸಾಮ್ರಾಜ್ಯಕ್ಕೆ ಲಗ್ಗೆಯಿಡುತ್ತೇನೆಂದು ತಿಳಿಸಿದ್ದನು. ಹರಿಸಂಕಲ್ಪವನ್ನು ಅರಿತ ಪ್ರಹ್ಲಾದನು, ಬಲಿಚಕ್ರವರ್ತಿಗೆ ತಥಾಸ್ತು ಎಂಬ ವರವನ್ನು ನೀಡಿದ್ದನು.

ಬಲಿಯು ತನ್ನ ಶಕ್ತಿಸಾಮರ್ಥ್ಯದಿಂದ ದೇವತೆಗಳನ್ನೆಲ್ಲಾ ಗೆದ್ದ. ಇಂದ್ರಪದವಿಯಲ್ಲಿ ಸುಖವಾಗಿ ಕಾಲ ಕಳೆಯುತ್ತಿದ್ದ. ಕೆಲವು ದಿನಗಳು ಉರುಳಿದ ಮೇಲೆ, ತನ್ನ ಮನಸ್ಸಿನಲ್ಲಿ ಏನೋ ಕಳವಳ, ಅದೇನೋ ಗೊಂದಲ. ತಾನೇನೋ ತಪ್ಪು ಮಾಡಿದ್ದೇನೆಂಬ ಅಂತರಂಗದ ಅರಿವು. ಅದೇ ಸಮಯದಲ್ಲಿ ಅವನ ಸುತ್ತ-ಮುತ್ತಲಿನವರಿಗೂ ಇದೇ ತರಹ ಗೊಂದಲ. ಎಲ್ಲೆಡೆಯೂ ಅಪಶಕುನಗಳು. ಬಲಿಯ ಸಾಮ್ರಾಜ್ಯಕ್ಕೆ ಕುತ್ತು ಬರುವುದೋ ಏನೋ ಎಂಬ ಸಂಶಯ ಎಲ್ಲರಲ್ಲೂ ಅಂಕುರಿಸಿತು. ಇದರಿಂದ ಬಲಿ ಕಕ್ಕಾವಿಕ್ಕಿಯಾದ. ತನ್ನ ಮನಸ್ಸಿನ ಸಮಾಧಾನಕ್ಕಾಗಿ ಅಜ್ಜನಾದ ಪ್ರಹ್ಲಾದನನ್ನು ಸಂಪರ್ಕಿಸಿದ.

''ಅಜ್ಜ ! ನನ್ನ ಸಾಮ್ರಾಜ್ಯದಲ್ಲಿ ಅನೇಕ ಅಪಶಕುನಗಳು. ಅದೇನೋ ಕಳವಳ. ಇದರ ಕಾರಣವನ್ನು ತಿಳಿಸುವಿರಾ ?''

ಮೊಮ್ಮಗನ ಉದ್ವಿಗ್ನಸ್ಥಿತಿಗೆ ಪ್ರಹ್ಲಾದನ ಹೃದಯ ಮಿಡಿಯಿತು. ಮರುಕ್ಷಣದಲ್ಲಿ ಸಮಾಧಿಸ್ಥಿತಿಗೆ ತೆರಳಿದ. ಮುಂದೆ ಬಲಿಗೆ ಯಾವ ಗತಿ ಬರಬಹುದೆಂದು ಕಂಡುಕೊಂಡ. ಸಮಾಧಿಸ್ಥಿತಿಯಲ್ಲಿ ಪ್ರಹ್ಲಾದ ಭಗವಂತನ ವಿಶ್ವರೂಪವನ್ನೇ ಕಂಡ. ಅದಿತಿಯ ಗರ್ಭದಲ್ಲಿ ವಾಮನ, ಅವನಲ್ಲಿ ಸಮಸ್ತ ಲೋಕವನ್ನೂ, ತನ್ನನ್ನೂ, ಬಲಿಯನ್ನೂ ಕೂಡ ಕಂಡ. ಬಲಿಯ ಅಧೀನದಲ್ಲಿರುವ ಸಮಸ್ತ ಸಾಮ್ರಾಜ್ಯವನ್ನು ಕಸಿದುಕೊಂಡಿರುವುದನ್ನೂ ಕೂಡ ಕಂಡ. ಕಂಡದ್ದನ್ನು ಬಲಿಗೆ ತಿಳಿಸಿದ.

ವಿಷಯ ತಿಳಿದ ಬಲಿ ಭಯ ಪಡಲಿಲ್ಲ. ಅಹಂಕಾರ ಪಟ್ಟ. ''ನನ್ನ ಪೌರುಷದ ಮುಂದೆ ಮತ್ತು ನನ್ನ ಅಪಾರ ಸೈನ್ಯದ ಮುಂದೆ ಅವನೊಬ್ಬ ಪರಮಾತ್ಮ ಏನು ತಾನೇ ಮಾಡಿಯಾನು ?'' ಎಂದು ಬೀಗಿದ. ವಿಷ್ಣುದ್ರೋಹದ ಬಲಿಯ ಮಾತನ್ನು ಕೇಳಿ ತತ್‌ಕ್ಷಣದಲ್ಲಿಯೇ ಪ್ರಹ್ಲಾದ ಶಪಿಸಿಬಿಟ್ಟ. 'ನಿನ್ನ ಸಮಸ್ತ ಸಾಮ್ರಾಜ್ಯ ನಶಿಸಿಹೋಗಲಿ' ಎಂದು. ಆತನ ಶಾಪಕ್ಕೆ ಹೆದರಿದ ಬಲಿ ಕ್ಷಮೆ ಯಾಚಿಸಿದ. ವಿಷ್ಣುದ್ರೋಹ ಮಾಡಲಾರೆ ಎಂದು ಮಾತುಕೊಟ್ಟ. ಪ್ರಹ್ಲಾದನ ಈ ಶಾಪ ಮುಂದಿನ ಬಲಿಯ ಅವನತಿಗೆ ಕಾರಣವಾಯಿತು. (ವಾಮನ ಪುರಾಣ)

ಬಲಿ ದೈತ್ಯನಾಗಿದ್ದರೂ ಶುದ್ಧಸಾತ್ವಿಕ ಸ್ವಭಾವದವನು. ಒಮ್ಮೊಮ್ಮೆ ಮಾತ್ರ ಇವನಿಗೆ ಅಸುರಾವೇಶ ಆಗುತ್ತಿತ್ತೆಂದು 'ಅಸುರಾವೇಶತಃ' ಎಂಬ ಮಾತಿನಿಂದ ಶ್ರೀಮದಾಚಾರ್ಯರು ಭಾಗವತ ತಾತ್ಪರ್ಯದಲ್ಲಿ ತಿಳಿಸಿದ್ದಾರೆ. ಒಟ್ಟು ಎರಡು ಜೀವ ಬಲಿಯಲ್ಲಿ ಕುಳಿತು ಕೆಲಸ ಮಾಡುತ್ತಿದ್ದವು. ಮೇಲೆ ಉಲ್ಲೇಖಿಸಿದ ಕಥೆಯಂತೆ ಬಲಿ ಪ್ರಹ್ಲಾದನ ಬಳಿ ಪರಮಾತ್ಮನನ್ನು ಅವಹೇಳನ ಮಾಡಿದ್ದ. ಪರಮಾತ್ಮ ವಾಮನ ರೂಪದಿಂದ ಪ್ರಕಟನಾದಾಗಲೂ ಅಹಂಕಾರ ಮಮಕಾರಗಳನ್ನು ತೋರ್ಪಡಿಸಿದ್ದ. ಮತ್ತೊಂದೆಡೆ ದೇವರಿಗೆ ಸರ್ವಸ್ವವನ್ನೂ ಸಮರ್ಪಿಸಿದ.

ಇಂದ್ರ ತನ್ನ ಪದವಿಯನ್ನು ಕಳೆದುಕೊಂಡ ಮೇಲೆ ದೇವತೆಗಳೆಲ್ಲರೂ ಶ್ರೀಹರಿಯನ್ನು ಮೊರೆ ಹೋದರು. ತಾನು ಅವತರಿಸಿ ನಿಮ್ಮನ್ನು ರಕ್ಷಿಸುತ್ತೇನೆಂಬ ಭರವಸೆಯನ್ನು ಪರಮಾತ್ಮ ದೇವತೆಗಳಿಗಿತ್ತನು. ಅದೇ ಸಂದರ್ಭದಲ್ಲಿ ಅದಿತಿಯು ತನ್ನನ್ನು ಮಗನನ್ನಾಗಿ ಪಡೆಯಲು ತಪಸ್ಸನ್ನು ಆಚರಿಸುವಂತೆ ತಿಳಿಸಲು ದೇವತೆಗಳಿಗೆ ಆದೇಶಿಸಿದನು. ಹೀಗೆ ವಾಮನಪುರಾಣ ಹೇಳುತ್ತದೆ.

ಅದಿತಿಗೂ ತಪಸ್ಸನ್ನಾಚರಿಸಬೇಕೆಂಬ ಬಯಕೆಯಿತ್ತು. ಅದೇ ಸಂದರ್ಭದಲ್ಲಿ ಹರಿಪ್ರೇರಣೆಯೂ ಆಯಿತು. ಮಕ್ಕಳಾಗದವರಿಗೆ ಹೇಳಿಟ್ಟ ವ್ರತ ಎಂದರೆ ಪಯೋವ್ರತ.

ಇದನ್ನು ಅದಿತಿ ಆಚರಿಸಿದಳು. ಪಯೋವ್ರತವನ್ನು ಆಚರಣೆ ಮಾಡುವುದರಿಂದ ಮಕ್ಕಳಾಗದೇ ಇರಲು ಸಾಧ್ಯವೇ ಇಲ್ಲ. ಮಕ್ಕಳಾಸೆ ಇರದವರೂ ವಿಷ್ಣುಪ್ರೀತ್ಯರ್ಥವಾಗಿ ಆಚರಿಸಬಹುದು.

ಭಾದ್ರಪದ ಶುದ್ಧ ವಿಜಯದ್ವಾದಶಿ, ಶ್ರವಣ ನಕ್ಷತ್ರ, ಅಭಿಜಿನ್ ಮುಹೂರ್ತದಲ್ಲಿ, ಶಂಖ-ದುಂದುಭಿ ಮೊದಲಾದ ವಾದ್ಯಘೋಷಗಳೊಂದಿಗೆ, ಗಂಧರ್ವ, ಅಪ್ಸರೆಯರ ಗಾನ-ನೃತ್ಯಗಳೊಂದಿಗೆ, ದೇವ, ಋಷಿ, ಪಿತೃ, ಅಗ್ನಿಗಳ ಸ್ತೋತ್ರದೊಂದಿಗೆ, ಪುಷ್ಪವೃಷ್ಟಿಯಾಗುತ್ತಿರುವಾಗ ವಾಮನನು ಅವತಾರ ಮಾಡಿದನು.

ವಾಮನರೂಪಿಯಾದ ಭಗವಂತನು ಬಲಿಯ ಬಳಿ ತೆರಳಿದಾಗ ಬಲಿಯು ಏನನ್ನು ಬೇಕಾದರೂ ದಾನಮಾಡುತ್ತೇನೆಂಬ ಭರವಸೆಯನ್ನು ನೀಡಿದನು. ಆದರೆ ಶುಕ್ರಾಚಾರ್ಯರು ತಡೆದರು. ಆದರೂ ಬಲಿಯು ಅವರ ಮಾತನ್ನು ಕೇಳಲಿಲ್ಲ. ಪರಮಾತ್ಮನು ಮೂರು ಪಾದದಷ್ಟು ಭೂದಾನವನ್ನು ಕೇಳಿದನು. ಅದಕ್ಕೆ ಬಲಿಯು ಒಪ್ಪಿದನು. ಮೊದಲನೆಯ ಪಾದದಿಂದ ಸಮಸ್ತ ಭೂಲೋಕವನ್ನು ವ್ಯಾಪಿಸಿದನು. ಎರಡನೆಯ ಪಾಧದಿಂದ ಅಂತರಿಕ್ಷಲೋಕವನ್ನು ವ್ಯಾಪಿಸಿದನು. ಮೂರನೆಯ ಹೆಜ್ಜೆಗೆ ಸ್ಥಳವೇ ಇಲ್ಲದಂತಾಯಿತು.

ಭಗವಂತನ ಈ ವಿಶ್ವರೂಪವನ್ನು ಬಲಿ ಹಾಗೂ ಶುಕ್ರಾಚಾರ್ಯರು ನೋಡಿದರು. ಬೇರೆ ಅಸುರರಿಗೆ ವಾಮನರೂಪದಿಂದಲೇ ಭಗವಂತನು ಕಾಣಿಸಿಕೊಂಡನು.

ಮೂರನೆಯ ಪಾದಕ್ಕೆ ಎಲ್ಲಿ ಸ್ಥಳ ? ಎಂಬುದಾಗಿ ಪರಮಾತ್ಮನು ಪ್ರಶ್ನೆಯನ್ನು ಮಾಡಿದಾಗ, ತನ್ನ ಶಿರಸ್ಸೇ ಅದಕ್ಕೆ ತಕ್ಕ ಸ್ಥಳವೆಂದು ಬಲಿಯು ತನ್ನನ್ನೇ ಸಮರ್ಪಣೆ ಮಾಡಿಕೊಂಡನು. ಹೀಗೆ ಬಲಿಚಕ್ರವರ್ತಿಯು ತನ್ನ ಸಮಸ್ತ ಐಶ್ವರ್ಯವನ್ನು,

ಇಂದ್ರಪದವಿಯನ್ನು, ಭೂಲೋಕ, ಸ್ವರ್ಗಲೋಕಾಧಿಪತ್ಯವನ್ನು ಸ್ವತಃ ತನ್ನನ್ನೇ ಭಗವಂತನಿಗೆ ಸಮರ್ಪಣೆ ಮಾಡಿಕೊಂಡ ಪರ್ವಕಾಲವೇ ಬಲಿಪಾಡ್ಯ .

'ಹೇಮಾದ್ರಿಶಿಖರಾಕಾರಂ' ಇತ್ಯಾದಿಯಾಗಿರುವ ದಧಿವಾಮನಸ್ತೋತ್ರವನ್ನು ಇಂದು ಅವಶ್ಯವಾಗಿ ಪಠಿಸಬೇಕು. ಮತ್ತು ಬಲಿಯಂತೆ ನಾವೂ ಕೂಡ ಭಗವಂತನಿಗೆ ಶರಣೆನ್ನಬೇಕು.

ಎಂಟು ಬಗೆಯ ಮದಗಳು ನಮ್ಮ ಹೃದಯದಲ್ಲಿ ಮನೆ ಮಾಡಿವೆ. ಈ ದುಷ್ಟಶಕ್ತಿಗಳನ್ನು ಮಟ್ಟಹಾಕಬೇಕು. ಒಳ್ಳೆಯ ಗುಣಗಳನ್ನು ಶ್ರೀಹರಿಗೆ ಸಮರ್ಪಿಸಬೇಕು. ಅದಕ್ಕಾಗಿ ನಮ್ಮ ಹೃದಯದಲ್ಲಿ ವಾಮನನ ಅವತಾರವಾಗಬೇಕು. ಬಲಿಯಲ್ಲಿರುವ ಅಹಂಕಾರ ಮಮಕಾರಗಳನ್ನು ಮಟ್ಟಹಾಕಿ, ಅವನ ತಲೆಯ ಮೇಲೆ ಪಾದವನ್ನು ಇಟ್ಟು ಅನುಗ್ರಹಿಸಿದ. ಬಲಿಯಂತೆ ನಾವೂ ಸಹ ನಮ್ಮ ತಲೆಯನ್ನು ಶ್ರೀಹರಿಗೆ ಸಮರ್ಪಿಸಿ, ಶರಣಾಗತರಾಗಬೇಕು.

ಮೂರು ಹೆಜ್ಜೆಗಳಿಂದ ಬಲಿಯನ್ನು ಉದ್ಧರಿಸಿದ. ಇದರಂತೆ ನಮ್ಮ ಜೀವನದಲ್ಲಿಯೂ ಪರಮಾತ್ಮನು ತನ್ನ ಮೂರು ರೂಪಗಳಿಂದ ನಮ್ಮನ್ನು ಅನುಗ್ರಹಿಸಬೇಕು. ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳಲ್ಲಿ ವಿಶ್ವ, ತೈಜಸ, ಪ್ರಾಜ್ಞ ಎಂಬ ರೂಪದಿಂದ, ಬಾಲ್ಯ , ಯೌವನ, ವಾರ್ಧಕ್ಯ ಎಂಬ ಮೂರು ಅವಸ್ಥೆಗಳಲ್ಲಿ ಅನಿರುದ್ಧ, ಪ್ರದ್ಯುಮ್ನ, ನಾರಾಯಣ ಎಂಬ ಮೂರು ರೂಪಗಳಿಂದ, ಮುಂದೆ, ಹಿಂದೆ, ಮಧ್ಯದಲ್ಲಿ, ನರಸಿಂಹ, ಶ್ರೀಕೃಷ್ಣ, ಶ್ರೀರಾಮ ರೂಪಗಳಿಂದ ನಮ್ಮನ್ನು ಉದ್ಧರಿಸಬೇಕು. ಬಲಿಗೆ ವಿಶ್ವರೂಪದರ್ಶನವಿತ್ತಂತೆ ನಿರಂತರ ಎಲ್ಲೆಡೆಯೂ ಭಗವಂತನನ್ನು ಕಾಣುವ ಬುದ್ಧಿಯನ್ನಿಟ್ಟು ನಮ್ಮನ್ನು ಸಲಹಬೇಕು.

ಧ್ಯಾಯೇತ್ ಸು-ಶುಕ್ಲಮರವಿಂದ-ದಲಾಯತಾಕ್ಷಂ

ಸೌವರ್ಣ-ಪಾತ್ರ-ದಧಿ-ಭೋಜ್ಯಮಥಾಮೃತಂ ಚ ।

ದೋರ್ಭ್ಯಾಂ ದಧಾನಮಖಿಲೈಶ್ಚ ಸುರೈಃ ಪರೀತಂ
ಶೀತಾಂಶು-ಮಂಡಲ-ಗತಂ ರಮಯಾ ಸಮೇತಮ್ ॥೩೦॥

ಚಿನ್ನದ ಬಟ್ಟಲಲ್ಲಿರುವ ಮೊಸರನ್ನವನ್ನೂ ಅಮೃತವನ್ನೂ ತನ್ನೆರಡು ಕೈಗಳಿಂದ ಹಿಡಿದುಕೊಂಡು, ತನ್ನ ಪರಿವಾರಭೂತರಾದ ಎಲ್ಲ ದೇವತೆಗಳೊಡನೆ ಮತ್ತು ರಮಾದೇವಿಯೊಡನೆ ಚಂದ್ರಮಂಡಲದಲ್ಲಿ ಕುಳಿತಿರುವ, ತಾವರೆಯಂತೆ ಅರಳ್ಗಣ್ಣಿನ ಗೌರಾಂಗನಾದ ಶ್ರೀಹರಿಯನ್ನು ಧ್ಯಾನಿಸಬೇಕು.

## ಕೃಷ್ಣಾಚಾರ್ಯಸ್ಮೃತಿಮುಕ್ತಾವಳಿಯಲ್ಲಿ ಬಲಿಪಾಡ್ಯದ ನಿರ್ಣಯ

ಶ್ರಾವಣೀ ದುರ್ಗನವಮೀ ತಥಾ ದುರ್ಗಾಷ್ಟಮೀ ಚ ಯಾ ।
ಪೂರ್ವವಿದ್ಧಾ ತು ಕರ್ತವ್ಯಾ ಶಿವರಾತ್ರಿರ್ಬಲೇರ್ದಿನಮ್ ॥

ಪೂರ್ವತಿಥಿಯ ವೇಧದಿಂದ ಕೂಡಿದ ಪಾಡ್ಯದಲ್ಲಿಯೇ ಬಲಿಪಾಡ್ಯದ ಉತ್ಸವವನ್ನು ಮಾಡಬೇಕು. ಶ್ರಾವಣೀ (ಉಪಾಕರ್ಮ) ದುರ್ಗನವಮೀ, ದುರ್ಗಾಷ್ಟಮೀ, ಶಿವರಾತ್ರಿ, ಬಲಿಪ್ರತಿಪದಾ, ಇವೆಲ್ಲವನ್ನು ಪೂರ್ವ ವೇಧದಿಂದ ಕೂಡಿದಾಗಲೇ ಮಾಡಬೇಕು.

## ವರಾಹಪುರಾಣದಲ್ಲಿ ಬಲಿಪಾಡ್ಯದ ಬಗ್ಗೆ

ಪ್ರತಿಪದ್ಯಪಿ ತೈಲೇನ ತತಃ ಸ್ನಾಯಾದ್ಬಲೇರ್ದಿನೇ ।
ಪೂರ್ವಂ ಬಲೀಃ ಸ್ವರ್ಗರಾಜ್ಯಂ ಆಪ್ತವಾನ್ ಕೃಪಯಾ ಮಮ ॥

ಹಾಗೆಯೇ ವರಾಹಪುರಾಣದಲ್ಲಿ ಬಲಿಪ್ರತಿಪದೆಯ ದಿನ ಮಾಡಬೇಕಾದ ಕರ್ತವ್ಯ ವಿಶೇಷವನ್ನು ಹೇಳಿದ್ದಾರೆ.

ಅನಂತರ ಬಲಿಪ್ರತಿಪದೆಯ ದಿನದಲ್ಲಿ ತೈಲ ಸ್ನಾನವನ್ನು ಮಾಡಬೇಕು. ಹಿಂದೆ ಬಲಿಚಕ್ರವರ್ತಿಯು ನನ್ನ ದಯೆಯಿಂದ ಸ್ವರ್ಗದ ರಾಜ್ಯವನ್ನು ಹೊಂದಿದನು. ನಾನು

ಅವನಿಗೆ ಹೀಗೆ ವರವನ್ನು ಕೊಟ್ಟೆನು. ಬಲಿಪ್ರತಿಪದೆಯ ದಿನ ಯಾವ ಯಾವ ಮನುಷ್ಯನು ಸಂತೋಷ ಅಥವಾ ಕೋಪ, ದುಃಖ ಅಥವಾ ಸುಖ ಇವುಗಳಲ್ಲಿ ಯಾವುದರಿಂದ ಕೂಡಿರುತ್ತಾನೋ ಆ ವರ್ಷ ಪೂರ್ತಿಯಾಗಿ ಪ್ರಾಯಃ ಅದೇ ಸ್ಥಿತಿಯಲ್ಲಿ ಒಂದು ವರ್ಷ ಪೂರ್ತಿ ಕಳೆಯುತ್ತಾನೆ. (ಆದ್ದರಿಂದ ಬಲಿಪಾಡ್ಯದ ದಿನ ಸಂತೋಷದಿಂದ ಇರಬೇಕು).

ಬಲಿಪಾಡ್ಯದ ದಿವಸ ವಿಶೇಷವಾಗಿ ಮಂಗಲೋತ್ಸವವನ್ನು ಮಾಡಬೇಕು. ಆ ದಿವಸ ಬ್ರಾಹ್ಮಣರಿಗೆ ದಾನ ಕೊಡುವುದು ಮಹಾಪುಣ್ಯಕರವಾದುದು. ಬಟ್ಟೆಗಳು, ಕುದುರೆಗಳು, ಆನೆಗಳು, ಗೋವುಗಳು, ರಥಗಳು, ದಿವ್ಯವಾದ ಉಪಕರಣಗಳು, ಹಾಸಿಗೆ-ಹೊದಿಕೆ ಮುಂತಾದವುಗಳನ್ನು ನಾನಾವಿಧವಾದ ಧನಗಳನ್ನೂ ಬ್ರಾಹ್ಮಣರಿಗೆ ಕೊಡಬೇಕು. ಭಕ್ತರು ಎಷ್ಟೆಷ್ಟು ಉತ್ಸವವನ್ನು ಮಾಡುತ್ತಾರೋ, ಅಷ್ಟಷ್ಟೂ, ಸಂತೋಷವು ಅವರಿಗೆ ಆ ದಾನವನ್ನು ಅನುಸರಿಸಿ ಉಂಟಾಗುತ್ತದೆ. ಆದ್ದರಿಂದ ಬಲಿಪಾಡ್ಯದಿನ ವಿಶೇಷೋತ್ಸವವನ್ನು ಮಾಡಿ ದಾನಗಳನ್ನು ಕೊಡಬೇಕು.

## ಬಲಿಪಾಡ್ಯದಂದು ಆಚರಿಸಬೇಕಾದ ಕರ್ತವ್ಯಗಳು

* ಬಲಿಪಾಡ್ಯದಂದು ಹಸುಗಳಿಗೆ, ಎತ್ತುಗಳಿಗೆ ವಿಶ್ರಾಂತಿಯನ್ನು ನೀಡಬೇಕು. ಹಸುಗಳ ಕೆಚ್ಚಲಿನಿಂದ ಹಾಲನ್ನು ಕರೆಯಬಾರದು. ಕರುಗಳಿಗೆ ಯಥೇಚ್ಛವಾಗಿ ಹಾಲನ್ನು ಕುಡಿಯಲು ಬಿಡಬೇಕು. ಎತ್ತುಗಳಿಂದ ಯಾವುದೇ ಕೆಲಸವನ್ನು ಮಾಡಿಸಬಾರದು.

* ಹಸುಗಳನ್ನು ಹಾಗೂ ಎತ್ತುಗಳನ್ನು ಚೆನ್ನಾಗಿ ತೊಳೆದು ಸ್ನಾನ ಮಾಡಿಸಬೇಕು. ಅಲಂಕಾರವನ್ನು ಮಾಡಿ ತಿನ್ನಲು ಯಥೇಚ್ಚವಾಗಿ ನೀಡಿ, ನೀರನ್ನು ಕುಡಿಸಿ ಬಾಲಕ್ಕೆ ಪೂಜೆಯನ್ನು ಮಾಡಬೇಕು. ಗೋಗ್ರಾಸವನ್ನು ದಿನನಿತ್ಯಕ್ಕಿಂತ ಹೆಚ್ಚು ನೀಡಬೇಕು.

* ಬಲಿಪಾಡ್ಯದಂದು ಪಾರ್ವತೀದೇವಿಗೆ ಲಕ್ಷ್ಮೀದೇವಿಯು ಗೋರೂಪದಿಂದ ಬಂದು ಅನುಗ್ರಹ ಮಾಡಿದಳು ಎಂದು ಪುರಾಣವು ಹೇಳುತ್ತದೆ. ಆದ್ದರಿಂದ ಗೋವಿನಲ್ಲಿರುವ ಲಕ್ಷ್ಮಿಗೆ ಪೂಜೆಯನ್ನು ಮಾಡಬೇಕು.

* ಗೋಪೂಜೆಯ ಜೊತೆ ಗೋವರ್ಧನಪೂಜೆಯನ್ನೂ ಕೂಡ ಅವಶ್ಯವಾಗಿ ಮಾಡಲೇಬೇಕು. ಗೋವರ್ಧನಗಿರಿಗೆ ತೆರಳಿ ಪೂಜೆಯನ್ನು ಮಾಡಿದರೆ, ವಿಶೇಷಫಲವು ದೊರಕುತ್ತದೆ. ಸಾಧ್ಯವಾಗದಿದ್ದರೆ, ರಂಗೋಲಿಯಲ್ಲಿಯೇ ಗೋವರ್ಧನಗಿರಿಯನ್ನು ಬರೆದು ಅದಕ್ಕೆ ಪೂಜೆಯನ್ನು ಮಾಡಬೇಕು.

* ವರ್ಷದ ಮೂರುವರೆ ಮಹಾಪರ್ವಕಾಲಗಳಲ್ಲಿ ಬಲಿಪಾಡ್ಯವು ಅರ್ಧಪರ್ವಕಾಲ ಎಂಬುದಾಗಿ ಕರೆಸಿಕೊಳ್ಳುತ್ತದೆ. ಇಂದಿನ ದಿವಸ ಬೆಳಿಗ್ಗೆ ಮಾಡಿದ ಎಲ್ಲ ಸತ್ಕಾರ್ಯಗಳಿಗೂ ಅನಂತಪಟ್ಟು ಫಲವು ಬರುತ್ತದೆ.

* ಬಲಿಚಕ್ರವರ್ತಿಗೆ ದಾನವೆಂದರೆ ಬಹಳ ಇಷ್ಟ. ಆದ್ದರಿಂದ ಇಂದು ಯಾರು ಯಥೇಚ್ಛವಾಗಿ ದಾನವನ್ನು ಮಾಡುತ್ತಾರೋ, ಅವರಿಗೆ ಬಲೀಂದ್ರನ ತದಂತರ್ಯಾಮಿಯಾದ ವಾಮನರೂಪಿಯಾದ ಪರಮಾತ್ಮನ ಅನುಗ್ರಹದಿಂದ ಭೂಪ್ರಾಪ್ತಿಯು ಆಗುತ್ತದೆ.

* ಇದು ಪರ್ವಕಾಲವಾದ್ದರಿಂದ ಮನೆಯಲ್ಲಿ ಭಗವಂತನಿಗೆ ಪಂಚಾಮೃತ ಅಭಿಷೇಕವನ್ನು ಮಾಡಬೇಕು. ಶುದ್ಧವಾದ ಕ್ರಮದಲ್ಲಿ ಪಂಚಾಮೃತ ಅಭಿಷೇಕವನ್ನು ಮಾಡುವುದರಿಂದ ಮಹಾಪುಣ್ಯವು ಪ್ರಾಪ್ತವಾಗುತ್ತದೆ. ಭಗವಂತನ ಎಲ್ಲಾ ಮೂರ್ತಿಗಳನ್ನು ಶಾಲಗ್ರಾಮಗಳನ್ನು ಉದ್ವರ್ತನೆ ಮಾಡಿ ಪೂಜಿಸಬೇಕು.

* ಯಥಾಶಕ್ತಿ ವೈಭವೋಪೇತವಾಗಿ ಭಗವಂತನ ಪೂಜೆಯನ್ನು ಮಾಡಬೇಕು. ಹಾಗೂ ಪೂಜಾ ಕಾಲದಲ್ಲಿ ವಾಮನರೂಪಿಯಾದ ಭಗವಂತನನ್ನು ಹಾಗೂ

ತ್ರಿವಿಕ್ರಮರೂಪಿ ಭಗವಂತನನ್ನು ವಿಶೇಷವಾಗಿ ಚಿಂತನೆ ಮಾಡಬೇಕು. ಹಾಗೂ ಷೋಡಶೋಪಚಾರ ಪೂಜೆಗಳನ್ನು ಮಾಡಬೇಕು.

* ಪ್ರಾತಃಕಾಲದಲ್ಲಿ ಮುತ್ತೈದೆಯರಿಂದ ಆರತಿಯನ್ನು ಮಾಡಿಸಿಕೊಂಡು ಅಭ್ಯಂಗಸ್ನಾನವನ್ನು ಮಾಡಬೇಕು.

* ಹೊಸ ಬಟ್ಟೆಯನ್ನು ಧಾರಣೆ ಮಾಡಬೇಕು.

* ಬಲಿಪಾಡ್ಯದಂದು ಮಧ್ಯಾಹ್ನಕಾಲದಲ್ಲಿ ಸರ್ವಥಾ ಮಲಗಬಾರದು. ಯಾರು ಬಲಿಪಾಡ್ಯದ ಮಧ್ಯಾಹ್ನದ ದಿವಸ ಮಲಗುತ್ತಾರೋ, ಅವರು ಮಾಡಿದ ಅರ್ಧಭಾಗದ ಪುಣ್ಯವನ್ನು ವಾಮನರೂಪಿಯಾದ ಭಗವಂತನು ಬಲಿಚಕ್ರವರ್ತಿಗೆ ನೀಡುತ್ತಾನೆಂದು ಶಾಸ್ತ್ರವು ಹೇಳುತ್ತದೆ.

* ಆದ್ದರಿಂದ ಹಗಲು ನಿದ್ರೆ ಮಾಡುವುದು ಶಾಸ್ತ್ರ ದೃಷ್ಟಿಯಲ್ಲಿ ಮಹಾಪರಾಧವಾಗುತ್ತದೆ. ಬಲಿಪಾಡ್ಯದಂದು ಹಗಲು ನಿದ್ರೆ ಬಿಡುವ ಮೂಲಕ ವರ್ಷವೆಲ್ಲ ಹಗಲು ನಿದ್ರೆ ಮಾಡುವುದನ್ನು ಬಿಡಬೇಕು. ಹೀಗೆ ಹಗಲು ನಿದ್ರೆ ಬಿಡುವುದರಿಂದ ಧರ್ಮ ಪರಿಪಾಲನೆ ಆಗುತ್ತದೆ. ಮತ್ತು ಆರೋಗ್ಯವು ಅಭಿವೃದ್ಧವಾಗುತ್ತದೆ.

* ಬಲಿಪಾಡ್ಯದಂದು ಬೆಳಿಗ್ಗೆಯಿಂದ ರಾತ್ರಿಯತನಕ ಸತ್ಕರ್ಮಗಳನ್ನೇ ಮಾಡಬೇಕು. ಒಂದೇ ಒಂದು ಅಸತ್ಕಾರ್ಯಗಳನ್ನು ಮೋಹದಿಂದಲೂ ಕೂಡ ಮಾಡಬಾರದು. ಆಗ ವರ್ಷಪೂರ್ತಿ ಸತ್ಕಾರ್ಯಗಳನ್ನೇ ಮಾಡುತ್ತಾನೆ. ಅಥವಾ ಸತ್ಕಾರ್ಯಗಳನ್ನು ಮಾಡಿದ ಫಲವನ್ನು ಹೊಂದುತ್ತಾನೆಂದು ಪದ್ಮಪುರಾಣವು ಹೇಳುತ್ತದೆ.

* ಬಲಿಪಾಡ್ಯದಂದು ಶ್ರೀಕೃಷ್ಣಪರಮಾತ್ಮನು ಗೋವರ್ಧನಗಿರಿಯನ್ನು ಎತ್ತಿರುವನು. ಆದ್ದರಿಂದ ಇಂದು ಗೋವರ್ಧನ ಪರ್ವತದ ಪೂಜೆಯನ್ನು ಗೋವರ್ಧನ ಉದ್ಧಾರಕನಾದ ಗೋವಿಂದನ ಪೂಜೆಯನ್ನು ಹಾಗೂ ಗೋವುಗಳ ಪೂಜೆಯನ್ನು ಮಾಡಬೇಕೆಂದು ಶಾಸ್ತ್ರವು ತಿಳಿಸುತ್ತದೆ.

* ಗೋವರ್ಧನ ಪರ್ವತವು ದೊರೆಯದ ಕಾರಣ ಸೆಗಣಿಯನ್ನೇ ಪರ್ವತ ಸದೃಶವಾಗಿ ಮಾಡಿ, ಅದರ ಮೇಲೆ ಗರಿಕೆ, ಹೂವುಗಳನ್ನು ಅಲ್ಲಲ್ಲಿ ಸಿಕ್ಕಿಸಿ, ಅದರ ಸುತ್ತಲೂ ಇಂದ್ರ ಹಸುಗಳ, ಹಾಗೂ ಕರುಗಳ ಚಿತ್ರಗಳ ಅಥವಾ ಸೆಗಣಿಯ ಮೂರ್ತಿಗಳನ್ನು ಜೋಡಿಸಿರುತ್ತಾರೆ. ಅದಕ್ಕೆ ಮೆರವಣಿಗೆಯನ್ನೂ ಕೂಡ ಮಾಡುತ್ತಾರೆ.

* ಪ್ರತಿಯೊಬ್ಬರೂ ಸಹ ಹೀಗೆ ಸೆಗಣಿಯಿಂದ ಗೋವರ್ಧನನ ಹಾಗೂ ಗೋವುಗಳ ಪೂಜೆಯನ್ನು ಮಾಡುವ ವಾಡಿಕೆ ಎಲ್ಲೆಡೆಯೂ ವ್ಯಾಪಕವಾಗಿ ಬಂದಿದೆ.

* ಕೃಷಿಕರು ತಮ್ಮ ಮನೆಗಳ ಮುಂದೆ ಬೆಳಿಗ್ಗೆಯ ಕಾಲದಲ್ಲಿ ತಳಿರುತೋರಣಗಳನ್ನು ಕಟ್ಟಿ, ಬಾಗಿಲುಗಳ ಪಕ್ಕದಲ್ಲಿ ಗೋವಿನ ಸೆಗಣಿಯಿಂದ ಪಂಚಪಾಂಡವರನ್ನು ನಿರ್ಮಿಸುತ್ತಾರೆ. ಹೊನ್ನೇ ಹೂವು, ಕೆಂಪು ಉತ್ತರಣೆ ಮೊದಲಾದವುಗಳಿಂದ ಅದನ್ನು ಸಿಂಗರಿಸುತ್ತಾರೆ. ಮೊಸರನ್ನವನ್ನು ನೈವೇದ್ಯ ಮಾಡಿ, ಪಾಂಡವರ ಪೂಜೆಯನ್ನು ಮಾಡುತ್ತಾರೆ.

* ಕೆಲವರು ಅನ್ನದಲ್ಲಿಯೇ ಗೋವರ್ಧನಗಿರಿಯನ್ನು ಅನುಸಂಧಾನ ಮಾಡಿ ಪೂಜೆ ಮಾಡುತ್ತಾರೆ. ಪದ್ಮಪುರಾಣದಲ್ಲಿ ಗೋವರ್ಧನಪೂಜೆಯ ಬಗ್ಗೆ ವಿಶೇಷವಾಗಿ ಹೇಳಿದ್ದಾರೆ.

* ಈ ಪುಸ್ತಕದಲ್ಲಿ ನೀಡಿದ ಕ್ರಮದಲ್ಲಿ ಗೋಪೂಜೆಯನ್ನು ಮಾಡತಕ್ಕದ್ದು.

## ತುಳಸೀ ಸಂಕೀರ್ತನೆ

* ಬಲಿಪಾಡ್ಯದಿಂದ ಉತ್ಥಾನದ್ವಾದಶಿಯ ತನಕ ತುಳಸೀ ಸಂಕೀರ್ತನೆಯನ್ನು ಮಾಡಬೇಕು. ಶ್ರೀವಾದಿರಾಜ ಪೂಜ್ಯಚರಣರು ವಾರದ ಆಯಾ ದಿವಸಗಳಲ್ಲಿ ಒಂದೊಂದು ಪದ್ಯವನ್ನು ಹೇಳುತ್ತಾ ಸಂಕೀರ್ತನೆ ಮಾಡಬೇಕೆಂಬುದನ್ನು ತಿಳಿಸಿಕೊಟ್ಟಿದ್ದಾರೆ. ಇದರ ಬಗ್ಗೆ ಬಲ್ಲವರ ಬಳಿ ತಿಳಿದು ಅವಶ್ಯವಾಗಿ ಮನೆಯ ಮಂದಿಯರೆಲ್ಲ ಸೇರಿ ತುಳಸೀ ಸಂಕೀರ್ತನೆಯನ್ನು ಮಾಡಬೇಕು.
* ಉಡುಪಿಯ ಕೃಷ್ಣಮಠದಲ್ಲಿ ಹಾಗೂ ಅಷ್ಟಮಠಗಳಲ್ಲಿ ಈ ಸಂಪ್ರದಾಯ ಇಂದೂ ಸಹ ನಡೆದುಕೊಂಡು ಬಂದಿದೆ.
* ತಾಳವನ್ನು ತಟ್ಟುತ್ತಾ ನರ್ತನ ಮಾಡುತ್ತಾ, ಶ್ರೀವಾದಿರಾಜರು ರಚಿಸಿದ ಪದ್ಯಗಳನ್ನು ಹಾಡುತ್ತಾ, ಶ್ರೀಕೃಷ್ಣನ ಮಹಿಮೆಯನ್ನು ಚಿಂತನೆ ಮಾಡುವುದನ್ನೇ ತುಳಸೀ ಸಂಕೀರ್ತನೆ ಎಂದು ಕರೆಯುತ್ತಾರೆ. ಇದು ಮನಸ್ಸಿಗೆ ಬಹಳ ಸಂತೋಷವನ್ನು ನೀಡುತ್ತದೆ. ಇದನ್ನು ಹನ್ನೆರಡು ದಿವಸಗಳ ಕಾಲ ಅವಶ್ಯವಾಗಿ ಆಚರಣೆ ಮಾಡಬೇಕು.

* * * *

ಸುಖರಾತ್ರ್ಯಾಂ ಪ್ರದೂಷೇ ಹಿ ಕುಬೇರಂ ಪೂಜಯಂತಿಹಿ । (ಭವಿಷ್ಯಪುರಾಣ)

ರುದ್ರದೇವರ ಈ ಮಾತಿನಂತೆ ಲಕ್ಷ್ಮೀಪೂಜೆಯ ಅನಂತರ ಕುಬೇರನನ್ನೂ ಕೂಡ ಸುಖರಾತ್ರಿಯ ಪ್ರದೋಷಕಾಲದಲ್ಲಿ ಪೂಜೆ ಮಾಡಬೇಕು.

ಬಲಿರಾಜ ನಮಸ್ತುಭ್ಯಂ ದೈತ್ಯದಾನವಂದಿತ ।
ಇಂದ್ರಶತ್ರೋಽಮರರಾತೇ ವಿಷ್ಣುಸಾನ್ನಿಧ್ಯದೋ ಭವ ॥

ಎಂಬ ಶ್ಲೋಕವನ್ನು ಹೇಳಿ ಬಲಿಯಲ್ಲಿ ವಿಷ್ಣುಸಾನ್ನಿಧ್ಯವನ್ನು ಚಿಂತನೆ ಮಾಡಬೇಕು.

ಬಲಿಮುದ್ದಿಶ್ಯ ದೀಯಂತೇ ದಾನಾನಿ ಕುರುನಂದನ ।
ಯಾನಿ ತಾನ್ಯಕ್ಷಯಾಣ್ಯಾಹುರ್ಮುನಯ್ಯೈವಂ ಸಂಪ್ರದರ್ಶಿತಮ್ ॥
ಮಹಾಪುಣ್ಯಾ ತಿಥಿರಿಯಂ ಬಲಿರಾಜ್ಯಪ್ರವರ್ಧಿನೀ ।
ಸ್ನಾನಂ ದಾನಂ ಶತಗುಣಂ ಕಾರ್ತಿಕೇಽಸ್ಯಾಂ ತಿಥೌ ಭವೇತ್ ॥

(ಭವಿಷ್ಯೋತ್ತರ ೧೪೦.೫೭)

ಬಲಿರಾಜನನ್ನು ಉದ್ದೇಶಿಸಿ ಯಾವ ದಾನಗಳನ್ನು ನೀಡುತ್ತಾರೋ, ಆ ಎಲ್ಲಾ ದಾನಗಳು ಅಕ್ಷಯಫಲವನ್ನು ನೀಡುತ್ತವೆ. ಆದ್ದರಿಂದ ಈ ತಿಥಿಯು ಮಹಾಪುಣ್ಯಪ್ರದಾಯಕವಾಗಿದೆ. ಕಾರ್ತಿಕಮಾಸದಲ್ಲಿಯೂ ಈ ಬಲಿಪಾಡ್ಯದ ದಿವಸ ಮಾಡುವ ಸ್ನಾನ, ದಾನ ಎಲ್ಲವೂ ಸಹ ನೂರುಪಟ್ಟು ಅಧಿಕ ಪುಣ್ಯದಾಯಕಗಳಾಗಿವೆ.

ವೀರಪ್ರತಿಪತ್ ನಾಮ ತವ ಭಾವೀ ಮಹೋತ್ಸವಃ ।
ತತ್ರ ತ್ವಾಂ ನರಶಾರ್ದೂಲ ತತೋ ಹೃಷ್ಟಾಃ ಸ್ವಲಂಕೃತಾಃ ॥
ಪುಷ್ಪಧೂಪಪ್ರದಾನೇನ ಅರ್ಚಯಿಷ್ಯಂತಿ ತತ್ತ್ವತಃ ॥ (ವಾಮನಪುರಾಣ)

ತ್ರಿವಿಕ್ರಮದೇವರು ಬಲಿಚಕ್ರವರ್ತಿಗೆ ಹೀಗೆ ಹೇಳುತ್ತಾರೆ - ಇದಕ್ಕೆ ವೀರಪ್ರತಿಪತ್ ಎಂದು ಹೆಸರು. ಇಂದು ನಿನ್ನ ಮಹೋತ್ಸವವನ್ನು ಜಗತ್ತಿನಲ್ಲಿ ಎಲ್ಲೆಡೆಯೂ ಕೂಡ ಮಾಡುತ್ತಾರೆ. ಪುಷ್ಪ, ಧೂಪ, ದೀಪ, ನೈವೇದ್ಯ ಇವುಗಳನ್ನು ನೀಡುವ ಮೂಲಕ ನಿನ್ನನ್ನು ಭಕ್ತಿಯಿಂದ ಅರ್ಚಿಸುತ್ತಾರೆ. ನಿನಗಾಗಿ ಈ ದಿವಸವನ್ನು ನಾನು ವರರೂಪದಲ್ಲಿ ನೀಡುತ್ತಿದ್ದೇನೆ.

ಬಲಿರಾಜ್ಯೇ ದೀಪದಾನಾತ್ಸದಾ ಲಕ್ಷ್ಮೀಃ ಸ್ಥಿರಾ ಭವೇತ್
ದೀಪೈರ್ನೀರಾಜನಾದತ್ರ ಸೈಷಾ ದೀಪಾವಲೀ ಸ್ಮೃತಾ ॥

ಬಲಿರಾಜ್ಯವೆನಿಸಿದ ಬಲಿಪಾಡ್ಯದಂದು ದೀಪದಾನವನ್ನು ಮಾಡಬೇಕು. ಆಗ ಅವನ ಮನೆಯಲ್ಲಿ ಲಕ್ಷ್ಮೀದೇವಿಯು ಸ್ಥಿರವಾಗಿ ನೆಲೆಸುತ್ತಾಳೆ. ಹಾಗೂ ದೀಪಗಳನ್ನು

ಹಚ್ಚಬೇಕು. ನೀರಾಜನಗಳನ್ನು ಮಾಡಬೇಕು. ಆ ಕಾರಣದಿಂದಲೇ ಇದಕ್ಕೆ ದೀಪಾವಳಿ ಎಂಬ ಹೆಸರು ಸಾರ್ಥಕವಾಗಿದೆ. ಯಾರು ದೀಪಾವಳಿಯನ್ನು ಮಾಡುವುದಿಲ್ಲವೋ, ಅವರ ಮನೆಯಲ್ಲಿ ಸಂಪತ್ತು ಬೆಳಗಲು ಹೇಗೆ ಸಾಧ್ಯ ?

ಲಕ್ಷ್ಮೀರ್ಯಾ ಲೋಕಪಾಲಾನಾಂ ಧೇನುರೂಪೇಣ ಸಂಸ್ಥಿತಾ ।
ಘೃತಂ ವಹತಿ ಯಜ್ಞಾರ್ಥೇ ಮಮ ಪಾಪಂ ವ್ಯಪೋಹತು ।
ಅಗ್ರತಃ ಸಂತು ಮೇ ಗಾವೋ ಗಾವೋ ಮೇ ಸಂತು ಪೃಷ್ಠತಃ ।
ಗಾವೋ ಮೇ ಹೃದಯೇ ಸಂತು ಗವಾಂ ಮಧ್ಯೇ ವಸಾಮ್ಯಹಮ್ ॥

ಗೋಪೂಜೆಯನ್ನು ಮಾಡುವಾಗ ಹೀಗೆ ಪ್ರಾರ್ಥನೆಯನ್ನು ಮಾಡಬೇಕು - ಲಕ್ಷ್ಮೀದೇವಿಯು ಹಸುವಿನ ರೂಪದಲ್ಲಿ ನೆಲೆಸಿದ್ದಾಳೆ. ಯಜ್ಞಕ್ಕಾಗಿ ಘೃತವನ್ನು ಧಾರಣೆ ಮಾಡಿದ್ದಾಳೆ. ಇಂಥ ಗೋಲಕ್ಷ್ಮೀಯು ನನ್ನ ಪಾಪಗಳನ್ನು ಪರಿಹರಿಸಲಿ. ನನ್ನ ಮುಂದೆ, ನನ್ನ ಹಿಂದೆ, ನನ್ನ ಎಡಬಲಭಾಗಗಳಲ್ಲಿ ಗೋವುಗಳು ನಿರಂತರ ಇರಲಿ. ನನ್ನ ಹೃದಯದಲ್ಲೂ ಗೋವುಗಳಿರಲಿ. ನಾನು ಎಂದೆಂದೂ ಗೋವುಗಳ ಮಧ್ಯದಲ್ಲಿಯೇ ವಾಸವನ್ನು ಮಾಡುತ್ತೇನೆ. (ಪದ್ಮಪುರಾಣ)

ಪ್ರತಿಪದ್ದರ್ಶಸಂಯೋಗೇ ಕ್ರೀಡನಂ ತು ಗವಾಂ ಮತಮ್ ।
ಪರವಿದ್ಧೇಷು ಯಃ ಕುರ್ಯಾತ್ಪುತ್ರದಾರಧನಕ್ಷಯಃ ।
ಯಾ ಕುಹೂಃ ಪ್ರತಿಪನ್ಮಿಶ್ರಾ ತತ್ರ ಗಾಃ ಪೂಜಯೇನ್ನೃಪ ।
ಪೂಜನೇ ತ್ರೀಣಿ ವರ್ಧಂತೇ ಪ್ರಜಾ ಗಾವೋ ಮಹೀಪತಿಃ ॥

ದರ್ಶದಿಂದ ಸಂಯುಕ್ತವಾದಾಗ ಪಾಡ್ಯದಂದು ಹಸುಗಳನ್ನು ಆಟವಾಡಿಸಬೇಕು. ಮತ್ತು ಹಸುಗಳನ್ನು ಪೂಜೆ ಮಾಡಿ ತೃಪ್ತಿ ಪಡಿಸಬೇಕು. ಇದರಿಂದ ಗೋ ಸಂಪತ್ತು, ಪ್ರಜಾಸಂಪತ್ತು , ರಾಜ್ಯಸಂಪತ್ತು ಅಭಿವೃದ್ಧವಾಗುತ್ತದೆ.

* * * *

## ಬಲಿಪಾಡ್ಯದಂದು ಗೋಪೂಜೆ ಹಾಗೂ ಗೋವರ್ಧನನ ಪೂಜೆ

ಭೂಷಣೀಯಾಸ್ತಥಾ ಗಾವೋ ವರ್ಜ್ಯಾ ವಾಹನದೋಹನಾತ್ ।

ಗೋವರ್ಧನಧರಾಧಾರಗೋಕುಲತ್ರಾಣಕಾರಕ ॥

ವಿಷ್ಣುಬಾಹುಕೃತೋಚ್ಛ್ರಾಯ ಗವಾಂಕೋಟಿಪ್ರದೋ ಭವ ।

ಯಾಲಕ್ಷ್ಮೀರ್ಲೋಕಪಾಲಾನಾಂ ಧೇನುರೂಪೇಣ ಸಂಸ್ಥಿತಾ ॥

ಆದಿನ ಗೋವುಗಳನ್ನು ಅಲಂಕರಿಸಬೇಕು. ಅವುಗಳನ್ನು ಉಳುವುದಕ್ಕಾಗಲೀ ಗಾಡಿ ಮುಂತಾದುವುಕ್ಕಾಗಲೀ ಕಟ್ಟಬಾರದು. ಕೆಲಸವನ್ನು ಅವುಗಳಿಂದ ಮಾಡಿಸಬಾರದು. ಹಸುಗಳಿಂದ ಹಾಲನ್ನು ಕರೆಯಬಾರದು. ಕರುಗಳಿಗೆ ಬಿಡಬೇಕು. ಎಲೈ ಗೋವರ್ಧನನೇ! ಧರೆಗೆ ಆಧಾರನೆ ! ಗೋವುಗಳನ್ನು ಕಾಪಾಡುವವನೇ ! ಎಲ್ಲ ಕಡೆಯಲ್ಲಿಯೂ ನೀಡಲು ಕೈಯನ್ನು ಎತ್ತಿಕೊಂಡಿರುವವನೆ ! ಕೋಟಿ ಗೋವುಗಳನ್ನು ನನಗೆ ಕೊಡು.

ಘೃತಂ ವಹತಿ ಯಜ್ಞಾರ್ಥೇ ಮಮ ಪಾಪಂ ವ್ಯಪೋಹತು ।

ಅಗ್ರತಸ್ಸಂತು ಮೇ ಗಾವೋ ಗಾವೋ ಮೇ ಸಂತು ಪೃಷ್ಠತಃ ।

ಗಾವೋ ಮೇ ಹೃದಯೇ ಸಂತು ಗವಾಂ ಮಧ್ಯೇ ವಸಾಮ್ಯಹಂ ॥

ಲೋಕಪಾಲಕನ ಯಾವ ಲಕ್ಷ್ಮಿಯು ಧೇನುವಿನ ರೂಪದಿಂದ ಇರುವುದೋ ಯಾವ ಗೋವು ಯಜ್ಞಕ್ಕೋಸ್ಕರ ತುಪ್ಪವನ್ನು ಹೊಂದಿದೆಯೋ, ಅಂಥ ಹಸುವು ನನ್ನ ಪಾಪವನ್ನು ನಾಶಮಾಡಲಿ. ನನ್ನ ಮಂದೆಯೂ ಹಸುಗಳಿರಲಿ, ನನ್ನ ಹಿಂದೆಯೂ ಹಸುಗಳಿರಲಿ. ನನ್ನ ಹೃದಯಲ್ಲಿಯೂ ಹಸುಗಳಿರಲಿ. ಗೋವುಗಳ ಮಧ್ಯದಲ್ಲಿ ನಾನು ವಾಸಮಾಡುತ್ತೇನೆ.

## ಬಲಿಪಾಡ್ಯದಂದು ಅನ್ನಸಂತರ್ಪಣೆ

ಸದ್ಭಾವೇನೈವ ಸಂತೋಷ್ಯ ದೇವಾನ್ ಸತ್ಪುರುಷಾನ್ ನರಾನ್ ।

ಇತರಾಂಶ್ಚಾನ್ನಪಾನೇನ ವಾಕ್ಯದಾನೇನ ಪಂಡಿತಾನ್ ॥

ವಸ್ತ್ರೈಸ್ತಾಂಬೂಲದಾನೈಶ್ಚ ಪುಷ್ಪಕರ್ಪೂರಕುಂಕುಮೈಃ ।
ಭಕ್ಷ್ಯೈರುಚ್ಚಾವಚೈರ್ಭೋಜ್ಯೈರಂತಃಪುರನಿವಾಸಿನಃ ॥

ರಾಜನಾದವನು ದೇವತೆಗಳನ್ನೂ ಸುತ್ಪುರುಷರನ್ನೂ ಒಳ್ಳೆಯತನದಿಂದ ಸಂತೋಷಪಡಿಸಬೇಕು. ಇತರರನ್ನು ಅನ್ನ ಹಾಕುವುದರಿಂದಲೂ ಪಾನಕ ಮುಂತಾದವುಗಳಿಂದಲೂ ಸಂತೋಷ ಪಡಿಸಬೇಕು. ಪಂಡಿತರನ್ನು ಒಳ್ಳೆಯ ಜಾಣತನದ ಮಾತಿನಿಂದಲೂ ಸಂತೋಷಪಡಿಸಬೇಕು. ಅಂತಃಪುರದಲ್ಲಿರುವ ಹೆಂಗಸರಿಗೂ ಆಳುಗಳಿಗೂ ಬಟ್ಟೆ ತಾಂಬೂಲ ಹೂವು ಪಚ್ಚಕರ್ಪೂರ ಕುಂಕುಮಕೇಸರಿಗಳನ್ನು ಕೊಟ್ಟು ಉತ್ತಮವಾದ ಭಕ್ಷ್ಯಗಳಿಂದ ಊಟಗಳಿಂದಲೂ ಸಂತೋಷ ಪಡಿಸಬೇಕು.

ಗ್ರಾಮೈಃ ವೃಷಭದಾನೈಶ್ಚ ಸಾಮಂತಾನ್ ನೃಪತಿರ್ಧನೈಃ ।
ಪದಾತಿಜನಸಂಘಾಂಶ್ಚ ಗ್ರೈವೇಯೈಃ ಕಟಕೈಶ್ಶುಭೈಃ ॥
ಸ್ವನಾಮಾಂಕೈಶ್ಚ ತಾನ್ರಾಜಾ ತೋಷಯೇತ್ ಸ್ವಜನಾನ್ ಪೃಥಕ್ ।
ಯಥಾರ್ಥಂ ತೋಷಯಿತ್ವಾತು ತತೋ ಮಲ್ಲಾನ್ ಭಟಾಂಸ್ತಥಾ ॥
ವೃಷಭಾನ್ಮಹಿಷಾಂಶ್ಚೈವ ಯುದ್ಧ್ಯಮಾನಾನ್ಪರೈಸ್ಸಹ ।
ರಾಜ್ಞಶ್ಚಾಪಿ ಹಿ ಯೋಧಾಂಶ್ಚ ಪದಾತೀನ್ಸಮಲಂಕೃತಾನ್ ॥
ಮಂಚಾರೂಢಸ್ಸ್ವಯಂ ಪಶ್ಯೇನ್ನಟನರ್ತಕಚಾರಣಾನ್ ।
ಯುದ್ಧಾಪಯೇದ್ವಾಸಯೇಚ್ಚ ಗೋಮಹಿಷ್ಯಾದಿಕಂ ಭಯಾತ್ ॥

ಸಾಮಂತರಾಜರಿಗೆ ಗ್ರಾಮಗಳನ್ನೂ ಹೋರಿಗಳನ್ನೂ ಕೊಟ್ಟು ಗೌರವಿಸಬೇಕು. ಯುದ್ಧದ ಕಾಲಾಳುಗಳಿಗೆ ಕತ್ತಿಗೆ ಹಾಕಿಕೊಳ್ಳುವ ಹಾರಗಳನ್ನೂ ಕೈಬಳೆ (ಥೋಡ)ಗಳನ್ನೂ ಕೊಟ್ಟು ಗೌರವಿಸಬೇಕು. ತನ್ನ ಕಡೆಯ ಜನರಿಗೆ ರಾಜನಾದವನು ತನ್ನ ಹೆಸರಿರುವ ಯಾವುದಾದರೂ ಪದಾರ್ಥಗಳನ್ನು ಕೊಟ್ಟು ಗೌರವಿಸಬೇಕು. ತನ್ನ ಭಟರನ್ನೂ ಜಟ್ಟಿಗಳನ್ನೂ ಅವರವರ ಯೋಗ್ಯತೆಗೆ ತಕ್ಕಂತೆ ಸಂಭಾವನೆಗಳನ್ನು ಕೊಟ್ಟು ಗೌರವಿಸಬೇಕು. ಹೋರಿಗಳನ್ನೂ, ಕೋಣಗಳನ್ನೂ ಗುದ್ದಾಟಕ್ಕೆ ಬಿಡಬೇಕು. ತನ್ನ

ಪದಾತಿಗಳನ್ನು ಅಲಂಕರಿಸಿ ಜೂಜಿಗೆ ಬಿಡಬೇಕು. ರಾಜನಾದವನು ತಾನು ಮಂಚದ ಮೇಲೆ ಕುಳಿತುಕೊಂಡು ನೋಡುತ್ತಿರಬೇಕು. ಮತ್ತು ಕುಣಿಯುವವರರನ್ನೂ ಗಾನ ಮಾಡುವವರನ್ನೂ ಒಂದು ಕಡೆ ಅವರವರ ಕೆಲಸದಲ್ಲಿ ನಿಯಮಿಸಿ ಅದನ್ನು ನೋಡುತ್ತಿರಬೇಕು. ಹೋರಿಗಳು, ಕೋಣಗಳು, ಟಗರುಗಳು ಇವೆಲ್ಲವನ್ನೂ ಹಿಂದಕ್ಕೆ ಎಳೆದೆಳೆದು ಕುಸ್ತಿ ಮಾಡಿಸಬೇಕು.

## ಬಲಿಪಾಡ್ಯದಂದು ಮಾರ್ಗಪಾಲಿಯನ್ನು ಪೂಜಿಸಬೇಕು

ಮಾರ್ಗಪಾಲೀಂ ಪ್ರಬಧ್ನೀಯಾದ್ದುರ್ಗೇ ಸ್ತಂಭೇಥ ಪಾದಪೇ।
ಕುಶಕಾಶಮಯೀಂ ದಿವ್ಯಾಂ ಲಂಬಕೈರ್ಬಹುಭಿಃ ಪ್ರಿಯೇ ॥
ದೀಕ್ಷಯಿತ್ವಾ ಗಜಾನಶ್ವಾನ್ ಸಾಯಮಸ್ಯಾಸ್ತಲೇ ನಯೇತ್ ।
ಗಾ ವೈ ವೃಷಾಂಶ್ಚ ಮಹಿಷಾನ್ ಮಹಿಷೀರ್ಘಂಟಿಕೋತ್ಕಟಾಃ ॥
ಕೃತಹೋಮೈರ್ದ್ವಿಜೇಂದ್ರೈಸ್ತು ಬಧ್ನೀಯಾನ್ಮಾರ್ಗಪಾಲಿಕಾಂ।
ನಮಸ್ಕಾರಂ ತತಃ ಕುರ್ಯಾನ್ಮಂತ್ರೇಣಾನೇನ ಸುವ್ರತ ।

ಹಸುಗಳನ್ನೂ ಕರುಗಳನ್ನೂ ಎಳೆದಾಡುತ್ತ ಪೈಪೋಟಿಯ ಮಾತುಗಳನ್ನಾಡುತ್ತಿರಬೇಕು. ಆಮೇಲೆ ಅಪರಾಹ್ನದಲ್ಲಿ ಪೂರ್ವದಿಕ್ಕಿನಲ್ಲಿ ಮಾರ್ಗಪಾಲಿಯನ್ನು ದುರ್ಗದಲ್ಲಿಯಾಗಲೀ ಎತ್ತರವಾದ ಜಾಗದಲ್ಲಿಯಾಗಲಿ ಕಂಬ ಅಥವಾ ಮರದಲ್ಲಿಯಾಗಲೀ ಮೇಲಕ್ಕೆ ಕಟ್ಟಬೇಕು. ಆ ಮಾರ್ಗಪಾಲಿಯ ಬೊಂಬೆಯನ್ನು ದರ್ಭೆಯಿಂದಾಗಲೀ ಲಾಲೆಯ ಹುಲ್ಲಿನಿಂದಾಗಲೀ ಮಾಡಿರಬೇಕು. ಇಂತಹ ಮಾರ್ಗಪಾಲಿ ಬೊಂಬೆಗಳು ಅನೇಕವಾಗಿರಬೇಕು. ಅವನ್ನು ನೇತಾಡುವಂತೆ ಉದ್ದಕ್ಕೂ ಕಟ್ಟಿರಬೇಕು. ಕುದುರೆ ಆನೆಗಳನ್ನು ತೊಳೆದು ಪೂಜಿಸಿ ನಿಯಮದಿಂದ ಆ ಮಾರ್ಗಪಾಲಿಯ ಕೆಳಭಾಗದಲ್ಲಿ ತೆಗೆದುಕೊಂಡು ಹೋಗಬೇಕು.ಆ ಆನೆ ಕುದುರೆಗಳಿಗೆ ಹಾರಾದಿಗಳನ್ನು ಹಾಕಿ ಅಲಂಕರಿಸಿರಬೇಕು. ಹಸುಗಳು ಎತ್ತುಗಳು ಎಮ್ಮೆಗಳು ಇವುಗಳಿಗೆಲ್ಲಾ ಗಂಟೆಗಳನ್ನು ಕಟ್ಟಿರಬೇಕು. ಆ ಮಾರ್ಗಪಾಲಿಯನ್ನು ಕಟ್ಟುವ

ಸ್ಥಳದಲ್ಲಿ ಪುರೋಹಿತನಿಂದ ಹೋಮ ಮುಂತಾದವುಗಳಲ್ಲಿ ಮಾಡಿಸಿ ಅಲ್ಲಿ ಆ ಮಾರ್ಗಪಾಲಿಕೆಯನ್ನು ಕಟ್ಟಬೇಕು. ಅನಂತರ ಅದಕ್ಕೆ ಮುಂದಿನ ಮಂತ್ರವನ್ನು ಹೇಳುತ್ತ ನಮಸ್ಕರಿಸಬೇಕು.

**ಟಿಪ್ಪಣಿ** - ಮಾರ್ಗಪಾಲಿಯೆಂದರೆ ಮಾರ್ಗವನ್ನು ರಕ್ಷಣೆ ಮಾಡುವ ದೇವತೆಯೆಂದರ್ಥ. ವರ್ಷಪೂರ್ತಿ ಯಾವ ಮಾರ್ಗವನ್ನು ನಮ್ಮ ಸಂಚಾರಕ್ಕೆ ಉಪಯೋಗಿಸುತ್ತೇವೋ, ಅದರ ಅಭಿಮಾನಿದೇವತೆಗೆ ಬಲಿಪಾಡ್ಯದಂದು ಪೂಜೆಯನ್ನು ಆಚರಿಸಬೇಕು. ಆ ಮಾರ್ಗದಲ್ಲಿ ಯಾರೂ ಓಡಾಡದಂತೆ ಅಂದು ವಿಶ್ರಾಂತಿಯನ್ನು ಮಾರ್ಗಪಾಲಿಗೆ ನೀಡಬೇಕು. ಮಾರ್ಗಪಾಲಿಯನ್ನು ಅಂದು ವೈಭವೋಪೇತವಾಗಿ ಪೂಜಿಸಬೇಕು.

## ರಾತ್ರಿಯಲ್ಲಿ ಬಲೀಂದ್ರನ ಪೂಜೆ

ಕೃತ್ವೈತತ್ಸರ್ವಮೇವೇಹ ರಾತ್ರೌ ದೈತ್ಯಪತೇರ್ಬಲೇಃ ।
ಪೂಜಾಂ ಕುರ್ಯಾತ್ ಪ್ರಿಯೇ ಸಾಕ್ಷಾದ್ಭೂಮೌ ಮಂಡಲಕೇ ಕೃತೇ ॥
ಬಲಿಮಾಲಿಖ್ಯ ದೈತ್ಯೇಂದ್ರಂ ವರ್ಣಕೈಃ ಪಂಚರಂಗಕೈಃ ।
ಸರ್ವಾಭರಣಸಂಪೂರ್ಣಂ ವಿಂಧ್ಯಾವಳ್ಯಾ ಸಮನ್ವಿತಾಮ್ ॥
ಕೂಶ್ಮಾಂಡಮಯಜಂಭೋರುಮಧುದಾನವಸಂವೃತಮ್ ।
ಸಂಪೂರ್ಣಂ ಹೃಷ್ಟವದನಂ ಕಿರೀಟೋತ್ಕಟಕುಂಡಲಮ್ ॥
ದ್ವಿಭುಜಂ ದೈತ್ಯರಾಜಾನಂ ಕಾರಯಿತ್ವಾ ಸ್ವಕೇ ಪುನಃ ।
ಗೃಹಸ್ಯ ಮಧ್ಯೇ ಶಾಲಾಯಾಂ ವಿಶಾಲಾಯಾಂ ತತೋಽರ್ಚಯೇತ್ ॥

ಈ ರೀತಿಯಾಗಿ ಮಾರ್ಗಪಾಲೀ ಪೂಜೆಯನ್ನು ಮಾಡಿ ರಾತ್ರಿಯಲ್ಲಿ ದೈತ್ಯರಾಜನಾದ ಬಲೀಂದ್ರನ ಪೂಜೆಯನ್ನು ಮಾಡಬೇಕು. ಮನೆಯ ಮಧ್ಯದಲ್ಲಿ ನೆಲದ ಮೇಲೆ ಮಂಡಲವನ್ನು ಮಾಡಬೇಕು. ಅಲ್ಲಿ ಐದು ಬಗೆಯ ಬಣ್ಣಗಳಿಂದ ದೈತ್ಯೇಂದ್ರನಾದ ಬಲಿಯನ್ನು ಬರೆಯಬೇಕು. ಅವನಿಗೆ ಎರಡು ಕೈಗಳಿರಬೇಕು.

ಸಮಸ್ತವಾದ ಆಭರಣಗಳಿಂದ ಅಲಂಕರಿಸಬೇಕು. ಅವನ ಹೆಂಡತಿಯಾದ ವಿಂಧ್ಯಾವಳಿಯನ್ನು ಬರೆಯಬೇಕು. ಕೂಷ್ಮಾಂಡ ಮಯ ಜಂಭೋರು ಮಧು ಮುಂತಾದ ಮುಖ್ಯರಾದ ದಾನವರನ್ನು ಬರೆಯಬೇಕು. ಮುಖದಲ್ಲಿ ಸಂತೋಷವು ಕಾಣುವಂತಿರಬೇಕು. ಕಿರೀಟವೂ ಕುಂಡಲಗಳೂ ಇರಬೇಕು. ಈ ರೀತಿಯಾದ ದೈತ್ಯರಾಜನಾದ ಬಲಿಯನ್ನು ತನ್ನ ಮನೆಯ ಮಧ್ಯದ ಅಂಗಳದಲ್ಲಿ ಬರೆದು ಪೂಜಿಸಬೇಕು.

**ಟಿಪ್ಪಣಿ** - ಬಲೀಂದ್ರನ ಚಿತ್ರದ ಮೇಲೆ ವಾಮನನ ಚಿತ್ರವನ್ನು ಬರೆಯಬೇಕು. ಐದು ಬಣ್ಣಗಳಿಂದ ಹನ್ನೆರಡು ದಳಗಳ ರಂಗೋಲಿಯನ್ನು ಬಿಡಿಸಬೇಕು. ಮಧ್ಯದಲ್ಲಿ ಬಿಳಿಯ ರಂಗೋಲಿಯನ್ನು ಹಾಕಬೇಕು. ವಾಮನನ ಕಾಲಿನ ಕೆಳಗೆ ನಿಂತಿರುವ ಬಲಿಯ ಚಿತ್ರವನ್ನು ಬಿಡಿಸಬೇಕು. ಭಗವಂತನ ನಿರ್ಮಾಲ್ಯಗಳಿಂದಲೇ ಬಲಿಯನ್ನು ಪೂಜೆ ಮಾಡಬೇಕು.

ಮಾತೃಭ್ರಾತೃಜನೈಸ್ಸಾರ್ಧಂ ಸಂತುಷ್ಟೋ ಬಂಧುಭಿಸ್ಸಹ ।
ಕಮಲೈಃ ಕುಮುದೈಃ ಪುಷ್ಪೈಃ ಕಹ್ಲಾರೈರಕ್ತಕೋತ್ಪಲೈಃ ॥
ಗಂಧಪುಷ್ಪಾನ್ನ ನೈವೇದ್ಯೈಃ ಸಕ್ಷೀರೈರ್ಗುಡಪಾಯಸೈಃ ।

ತಾಯಿ, ತಂದೆ, ಸಹೋದರರು ಬಂಧುಗಳು ಇವರೊಡನೆ ಕುಳಿತುಕೊಂಡು ಸಂತೋಷದಿಂದ ಪೂಜೆ ಮಾಡಬೇಕು. ಕಮಲ ಕುಮುದ, ಕಹ್ಲಾರ ರಕ್ತೋತ್ಪಲಗಳಿಂದಲೂ ಹೂವುಗಳಿಂದಲೂ ಪೂಜಿಸಿ ಹಾಲು, ಬೆಲ್ಲ, ಪಾಯಸ, ಚಟ್ನಿ, ಭಕ್ಷ್ಯ ಅನ್ನ ಮುಂತಾದವುಗಳನ್ನು ನಿವೇದಿಸಿ ಪೂಜಿಸಬೇಕು.

ಮಂತ್ರೇಣಾನೇನ ರಾಜೇಂದ್ರಃ ಸಮಂತ್ರಿಃ ಸಪುರೋಹಿತಃ ।
ಪೂಜಾಂ ಕರಿಷ್ಯತೇ ಯೋ ವೈ ಸೌಖ್ಯಂ ಸ್ಯಾತ್ತಸ್ಯ ವತ್ಸರಮ್ ॥

ಮಂತ್ರಗಳನ್ನು ಹೇಳುತ್ತಾ ರಾಜನು ಮಂತ್ರಿಗಳಿಂದ ಪುರೋಹಿತರಿಂದ ಪೂಜೆ ಮಾಡಿದರೆ ಅವರಿಗೆ ಒಂದು ವರ್ಷ ಪರ್ಯಂತ ಸುಖವಾಗಿರುವುದು.

# ಬಲೀಂದ್ರನ ಬಳಿ ಪ್ರಾರ್ಥನೆ

ಬಲಿರಾಜ ನಮಸ್ತುಭ್ಯಂ ವಿರೋಚನಸುತ ಪ್ರಭೋ ।
ಭವಿಷ್ಯೇಂದ್ರ ಸುರಾರಾತೇ ಪೂಜೇಯಂ ಪ್ರತಿಗೃಹ್ಯತಾಂ ॥

ಎಲೈ ಪ್ರಭುವೂ ವಿರೋಚನನ ಮಗನೂ ಆದ ಬಲಿರಾಜನೇ ! ನಿನಗೆ ನಮಸ್ಕಾರವು. ಎಲೈ ಮುಂದೆ ಇಂದ್ರನಾಗುವವನೆ ! ಈ ನನ್ನ ಪೂಜೆಯನ್ನು ಸ್ವೀಕರಿಸು.

ಏವಂ ಪೂಜಾಂ ಪ್ರಿಯೇ ಕೃತ್ವಾ ರಾತ್ರೌ ಜಾಗರಣಂ ತತಃ ।
ಕಾರಯೇತ್ಪ್ರೇಕ್ಷಣೀಯಾದಿ ನಟನೃತ್ಯ ಕಥಾನಕೈಃ ॥

ರಾಜನು ಈ ರೀತಿಯಾಗಿ ಪೂಜಿಸಿ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಬೇಕು. ಆ ಜಾಗರಣೆಯಲ್ಲಿ ರಾತ್ರಿಯೆಲ್ಲಾ ನೋಡಲು ಚೆನ್ನಾಗಿರುವ ಆಟ, ನಾಟಕ, ಕಥೆ, ನರ್ತನಗಳನ್ನು ಆಚರಿಸುತ್ತಿರಬೇಕು.

ಲೋಕಶ್ಚಾಪಿ ಗೃಹಸ್ಯಾಂತೇ ಪರ್ಯಂಕೇ ಶುಕ್ಲ ತಂಡುಲೈಃ ।
ಸಂಸ್ಥಾಪ್ಯ ಬಲಿರಾಜಾನಂ ಫಲೈಃ ಪುಷ್ಪೈಶ್ಚ ಪೂಜಯೇತ್ ॥

ಇತರ ಜನಗಳೂ ಕೂಡ ಮನೆಯಲ್ಲಿ ಮಂಚದ ಮೇಲೆ ಬಲಿರಾಜನ ಪ್ರತಿಮೆಯನ್ನಿಟ್ಟು ಹೂವುಗಳಿಂದಲೂ ಹಣ್ಣುಗಳಿಂದಲೂ ಬಿಳಿಯ ಅಕ್ಕಿಯಿಂದಲೂ ಪೂಜಿಸಬೇಕು.

ಬಲಿಮುದ್ದಿಶ್ಯ ದೀಯೇತ ತತ್ರ ಸರ್ವಂ ಚ ಭಾಮಿನೀ ।
ದತ್ತಾನಿ ಚಾಕ್ಷಯಾಣ್ಯಾಹುರ್ಮುನಯಸ್ತತ್ವದರ್ಶಿನಃ ॥

ಎಲೈ ಸತ್ಯಭಾಮೆಯೆ ! ಬಲಿಚಕ್ರವರ್ತಿಯನ್ನುದ್ದೇಶಿಸಿಕೊಂಡು ಎಲ್ಲವನ್ನೂ ಕೊಡಬೇಕು. ಹಾಗೆ ಕೊಟ್ಟುದುದೆಲ್ಲವೂ ಅಕ್ಷಯವಾಗುವುದೆಂದು ತಿಳಿದ ಋಷಿಗಳು ಹೇಳುತ್ತಾರೆ.

ಯದಸ್ಯ ದೀಯತೇ ದಾನಂ ಸ್ವಲ್ಪಂ ವಾ ಯದಿ ವಾ ಬಹು ।
ತದಕ್ಷಯಂ ಭವೇತ್ಸರ್ವಂ ವಿಷ್ಣೋಃ ಪ್ರೀತಿಕರಂ ಶುಭಂ ॥

ರಾತ್ರೌ ಯೇ ನ ಕರಿಷ್ಯಂತಿ ತವ ಪೂಜಾಂ ಬಲೇ ನರಾಃ ।

ತೇಷಾಂ ಚ ಶ್ರೋತ್ರಿಯೋ ಧರ್ಮೋಽಕರ್ಮತ್ವಮುಪತಿಷ್ಠತೇ ॥

ಬಲಿಯನ್ನುದ್ದೇಶಿಸಿ ಕೊಡತಕ್ಕ ದಾನವು ಹೆಚ್ಚಾಗಿರಲಿ ಕಡಿಮೆಯಾಗಿರಲಿ ಅದು ಅಕ್ಷಯವಾಗುವುದಲ್ಲದೆ ವಿಷ್ಣುವಿಗೆ ಪ್ರೀತಿಯನ್ನು ಉಂಟುಮಾಡುತ್ತದೆ. ಎಲೈ ಬಲಿಯೆ! ರಾತ್ರಿಯಲ್ಲಿ ಯಾವ ಮನುಷ್ಯನು ನಿನ್ನ ಪೂಜೆಯನ್ನು ಮಾಡುವುದಿಲ್ಲವೋ ಅವರು ಮಾಡತಕ್ಕ ಕರ್ಮಗಳು ಶ್ರುತ್ಯುಕ್ತವಾದ ಕರ್ಮಗಳಾಗುವುದಿಲ್ಲ.

ವಿಷ್ಣುನಾ ವಸುಧಾಂ ಲಬ್ಧ್ವಾ ತುಷ್ಟೇನ ಬಲಯೇ ಪುನಃ ।

ಉಪಕಾರಕರಂ ದತ್ತಮಸುರಾಣಾಂ ಮಹೋತ್ಸವಂ ॥

ವಿಷ್ಣುವು ಬಲಿಯಿಂದ ರಾಜ್ಯವನ್ನು ತೆಗೆದುಕೊಂಡು ಸಂತೋಷದಿಂದ ಅವನಿಗೆ ಉಪಕಾರಕವಾದ ದೈತ್ಯರಿಗೆ ಸಂತೋಷ ರೂಪವಾದ ಈ ಉತ್ಸವವನ್ನು ಕೊಟ್ಟಿರುವನು.

## ಇದುವೇ ಕೌಮುದ್ಯುತ್ಸವ

ತತಃ ಪ್ರಭೃತಿ ರಂಭೋರು ಪ್ರವೃತ್ತಾ ಕೌಮುದೀ ಶುಭಾ ।

ಸರ್ವೋಪದ್ರವಸಂಹರ್ತ್ರೀ ಸರ್ವವಿಘ್ನವಿನಾಶಿನೀ ॥

ಎಲೈ ಸತ್ಯಭಾಮೆಯೆ ! ಆಗಿನಿಂದ ಮೊದಲು ಮಾಡಿಕೊಂಡು ಎಲ್ಲಾ ರೋಗಗಳನ್ನೂ ನಾಶಮಾಡುವ ಎಲ್ಲಾ ವಿಘ್ನಗಳನ್ನೂ ಪರಿಹರಿಸುವ ಈ ಕೌಮುದ್ಯುತ್ಸವವು ಲೋಕದಲ್ಲಿ ಪ್ರಚಾರಕ್ಕೆ ಬಂದಿತು.

ಲೋಕಶೋಕಹರಾ ಕಾಮ್ಯಾ ಧನಪುಷ್ಟಿ ಸುಖಾವಹಾ ।

ಕುಶಬ್ದೇನ ಮಹೀಜ್ಞೇಯಾ ಮುದ ಹರ್ಷೇ ತತೋ ದ್ವಯಾ ॥

ಈ ಕೌಮುದ್ಯುತ್ಸವವು ಲೋಕದ ದುಃಖವನ್ನು ನಾಶಮಾಡುತ್ತದೆ. ಧನಸಂಪತ್ತು ಸೌಖ್ಯ ಇನ್ನೂ ಬೇಕಾದುದೆಲ್ಲವನ್ನೂ ಕೊಡುತ್ತದೆ. ''ಕು'' ಎಂಬ ಪದಕ್ಕೆ ಭೂಮಿಯೆಂದು ''ಮುದ' ಶಬ್ದಕ್ಕೆ ಸಂತೋಷವೆಂದೂ ಅರ್ಥವಿರುತ್ತದೆ. ಅವೆರಡೂ ಸೇರಿ ಕೌಮುದೀಪದವಾಗಿ ಪ್ರಪಂಚಕ್ಕೆ ಸಂತೋಷಕರವೆಂಬ ಅರ್ಥವನ್ನು ಕೊಡುತ್ತದೆ.

ಧಾತುಜ್ಞೈರ್ನಿಗಮಜ್ಞೈಶ್ಚ ತೇನೈಷಾ ಕೌಮುದೀ ಸ್ಮೃತಾ ।
ಕೌಮುದೀತಿ ಜನಾ ಯಸ್ಮಾನ್ನಾನಾಭಾಭವೈಃ ಪರಸ್ಪರಂ ॥

ಹೃಷ್ಟಾತುಷ್ಟಾಸ್ಸುಖಾಪನ್ನಾಸ್ತೇನೈಷಾ ಕೌಮುದೀ ಸ್ಮೃತಾ ।
ಕುಮುದಾನಿ ಬಲೇರ್ಯಸ್ಮಾದ್ದೀಯಂತೇ ತತ್ರ ಭಾಮಿನೀ ॥

ಧಾತುವಿನ ಅರ್ಥವನ್ನು ಬಲ್ಲವರು ಕೋಶವನ್ನೂ ಬಲ್ಲವರು ಈ ರೀತಿಯಾಗಿ ಕೌಮುದೀ ಪದದ ನಿಷ್ಪತ್ತಿಯನ್ನು ತಿಳಿದಿದ್ದಾರೆ. ಜನಗಳೂ ಕೌಮುದಿ ಎಂಬುದಾಗಿ ಅನೇಕ ಬಗೆಯ ಅಭಿಪ್ರಾಯಗಳಿಂದ ಸಂತೋಷದಿಂದಲೂ ತೃಪ್ತಿಯಿಂದಲೂ ಇರುವುದರಿಂದ ಆ ಸುಖವನ್ನು ನೋಡಿ ಅದಕ್ಕೆ ಕೌಮುದಿ ಎಂದು ಹೆಸರು ಬಂದಿದೆ. ಎಲೈ ಸತ್ಯಭಾಮೆಯೇ ! ಧನವಂತರಾದವರು ಆದಿನ ಬಲಿಯ ತೃಪ್ತಿಗೋಸ್ಕರ ಎಲ್ಲರಿಗೂ ಸಂತೋಷಕರವಾಗುವಂತೆ ದಾನ ಮಾನಗಳನ್ನು ಮಾಡುವುದರಿಂದ ಕೌಮುದೀ ಎಂಬ ಹೆಸರು ಬಂದಿದೆ.

ಅರ್ಥಾಢ್ಯಪಾರ್ಥಿವೈರ್ಭಾಮೇ ತೇನೈಷಾ ಕೌಮುದೀ ಸ್ಮೃತಾ ।
ಏಕಮೇವಮಹೋರಾತ್ರಂ ವರ್ಷೇ ವರ್ಷೇ ಚ ಭಾಮಿನೀ ।
ದತ್ತಂ ದಾನವರಾಜಸ್ಯ ಆದರ್ಶಮಿವ ಭೂತಳೇ ।
ಯಃ ಕರೋತಿ ನೃಪೋ ರಾಜ್ಯೇ ತಸ್ಯ ವ್ಯಾಧಿಭಯಂ ಕುತಃ ॥

ಎಲೈ ಸತ್ಯಭಾಮೆಯೆ ! ಪ್ರತಿವರ್ಷವೂ ಇದು ಒಂದು ಉತ್ಸವವುಳ್ಳ ರಾತ್ರಿಯನ್ನು ಆ ದಾನವ ರಾಜನಾದ ಬಲಿಗೆ ವಿಷ್ಣುವು ಕೊಟ್ಟಿರುವನು. ಇದು ಭೂಮಿಯಲ್ಲಿರುವ ಜನರಿಗೆ ದೃಷ್ಟಾಂತವಾಗಿರುವುದು. ಈ ಉತ್ಸವವನ್ನು ಯಾವನು ತನ್ನ ರಾಜ್ಯದಲ್ಲಿ ಮಾಡುತ್ತಾನೆಯೋ ಆ ರಾಜನಿಗೆ ರೋಗದ ಭಯವು ಇರುವುದಿಲ್ಲ.

ಅಂತಹವನ ರಾಜ್ಯದಲ್ಲಿ ಸುಭಿಕ್ಷವೂ ಕ್ಷೇಮವೂ ಆರೋಗ್ಯವೂ ಉಂಟಾಗಿ ಹೆಚ್ಚಾದ ಸಂಪತ್ತು ಇರುತ್ತದೆ. ಜನಗಳು ರೋಗಗಳಿಲ್ಲದೆ, ತೊಂದರೆಯನ್ನು ಹೊಂದದೆ ಸುಖಿಸುತ್ತಾರೆ.

## ಬಲಿಪಾಡ್ಯ ಇದ್ದಂತೆ ವರ್ಷವಿಡೀ ಇರುತ್ತಾನೆ

ಕೌಮುದೀ ಕ್ರಿಯತೇ ಯಸ್ಮಾದ್ಭವಂತೀಹ ಮಹೀತಳೇ ।
ಯೋ ಯಾದೃಶೇನ ಭಾವೇನ ತಿಷ್ಠತ್ಯಸ್ಯಾಂ ತು ಭಾಮಿನೀ ॥

ಈ ಕೌಮುದ್ಯುತ್ಸವವನ್ನು ಆಚರಿಸುವುದರಿಂದ ಲೋಕದಲ್ಲಿ ಒಳ್ಳೆಯದು ಕೆಟ್ಟದ್ದುಗಳು ಆಗುತ್ತವೆ. ಎಲೈ ಸತ್ಯಭಾಮೆಯೆ ! ಯಾವನು ಯಾವ ಬಗೆಯ ಭಾವದಿಂದ ಈದಿನವಿರುತ್ತಾನೆಯೋ ಅವನು ಆ ವರ್ಷವೆಲ್ಲವನ್ನೂ ಅದೇ ರೀತಿಯಾದ ಭಾವದಿಂದಲೇ ಕಳೆಯುತ್ತಾನೆ.

ಹರ್ಷದುಃಖಾದಿಭಾವೇನ ತಸ್ಯ ವರ್ಷಂ ಪ್ರಯಾತಿ ಹಿ ।
ರುದಿತೋ ರೋದಿತೋ ವರ್ಷಂ ಹೃಷ್ಟೋ ವರ್ಷಂ ಪ್ರಹೃಷ್ಯತಿ ॥

ಆ ದಿನ ಅಳುತ್ತಿದ್ದವನು ಆ ವರ್ಷವೆಲ್ಲವೂ ಅಳುತ್ತಲೇ ಇರುವನು. ಆದಿನ ಸಂತೋಷದಿಂದ ಇದ್ದವನು. ಆ ವರ್ಷವೆಲ್ಲವನ್ನೂ ಸಂತೋಷದಿಂದಲೇ ಕಳೆಯುತ್ತಾನೆ. ಆ ದಿನ ಊಟಮಾಡಿದವನು ವರ್ಷವೆಲ್ಲವೂ ಸುಖದಿಂದ ಊಟ ಮಾಡುತ್ತಾನೆ. ಆದಿನ ಸ್ವಸ್ಥವಾಗಿದ್ದವನು ಆ ವರ್ಷವೆಲ್ಲವೂ ಸ್ವಸ್ಥವಾಗಿರುವನು.

ಭುಕ್ತೋ ಭೋಕ್ತಾ ಭವೇದ್ವರ್ಷಂ ಸ್ವಸ್ಥಃ ಸ್ವಸ್ಥೋ ಭವಿಷ್ಯತಿ
ತಸ್ಮಾತ್ಪ್ರಹೃಷ್ಟೈಸ್ತುಷ್ಟೈಶ್ಚ ಕರ್ತವ್ಯಾ ಕೌಮುದೀ ನರೈಃ ।
ವೈಷ್ಣವೀ ದಾನವೀ ಚೇಯಂ ತಿಥಿಃ ಪ್ರೋಕ್ತಾ ಚ ಭಾಮಿನೀ ॥

ಆದುದರಿಂದ ಸಂತೋಷದಿಂದಲೂ, ತೃಪ್ತಿಯಿಂದಲೂ ಈ ಕೌಮುದ್ಯುತ್ಸವವನ್ನು ಆಚರಿಸಬೇಕು. ಈ ತಿಥಿಯು ವೈಷ್ಣವ ಸಂಬಂಧವಾಗಿಯೂ ದಾನವ ಸಂಬಂಧವಾಗಿಯೂ ಇರುವುದು.

ದೀಪೋತ್ಸವಂ ಜನಿತಸರ್ವಜನಪ್ರಮೋದಂ
ಕುರ್ವಂತಿ ಯೇ ಸುಮತಯೋ ಬಲಿರಾಜಪೂಜಾಂ ।
ದಾನೋಪಭೋಗಸುಖಬುದ್ಧಿಮತಾಂ ಕುಲಾನಾಂ
ಹರ್ಷಂ ಪ್ರಯಾಂತಿ ಸಕಲಂ ಕುಮುದಂ ಚ ವರ್ಷಂ ॥

ದೀಪಾವಳಿ -೨ ಬಲಿಪಾಡ್ಯ-ಯಮದ್ವಿತೀಯಾ

ಎಲ್ಲ ಜನರಿಗೂ ಸಂತೋಷವನ್ನುಂಟುಮಾಡುವ ಈ ದೀಪೋತ್ಸವವನ್ನೂ ಬಲಿಚಕ್ರವರ್ತಿಯ ಪೂಜೆಯನ್ನೂ ಯಾರು ಮಾಡುತ್ತಾರೆಯೋ ಅವರು ಆ ವರ್ಷವೆಲ್ಲವೂ ದಾನ ಮಾಡುತ್ತಾ ಸುಖಗಳನ್ನು ಅನುಭವಿಸುತ್ತಾ ಬುದ್ಧಿವಂತರಾಗಿ ತಮ್ಮ ಕುಲವನ್ನೇ ಹರ್ಷಗೊಳಿಸುತ್ತಾರೆ.

## ವಾಮನಾವತಾರದ ಹಾಡು

ಅದಿತಿದೇವಿ ಪಯೋವ್ರತ ಮಾಡಿದಳಾಕೆ। ಪತಿಯ ಆಜ್ಞೆಯ ಕೇಳಿಕೊಂಡು। ಪೃಥಿವಿಯನ್ನೆಲ್ಲಾ ಕ್ರಮಿಸಿ ಕ್ರಮಿಸಿದ ಸ್ವಾಮಿ ತಾ ಸುತನಾಗಿ ಅಲ್ಲೆ ಜನಿಸಿದ। ಜಾತಕರ್ಮವ ಮಾಡಿ ಮಧುವಿಟ್ಟು ಮುದದಿಂದ ಪುಣ್ಯಾಹವಾಚನ ಮಾಡಿಕೊಂಡ। ಕೋಟಿ ಗೋದಾನವನು ಕೊಟ್ಟು ಕಶ್ಯಪ ತಾನು ಶ್ರೀಕೃಷ್ಣಾರ್ಪಿತವೆಂದು। ದಶರಾತ್ರಿ ಕಳೆಯಲು ಅಸುರ ಸಂಹಾರಗೆ ಶಶಿಮುಖಿಯರೆಲ್ಲ ನೆರೆದು। ಯಶವೋ ಚಿನ್ನದ ತೊಟ್ಟಿಲೊಳ್ ವಿಟ್ಟು ತೂಗುತ ಹೆಸರು ಇಟ್ಟರು ವಾಮನನಂತ। ಅನ್ನಪ್ರಾಶನ ಮಾಡಿ ಚೌಲಕರ್ಮ ಮಾಡಿ ತನ್ನ ಬಂಧುಗಳನ್ನೆಲ್ಲಾ ಕರೆಸಿ ಹನ್ನೆರಡು ವರ್ಷ ತಪವಿದ್ದು ಪಡೆದಾ। ಮೋಹನ್ನಗ ಮುಂಜಿ ಕಟ್ಟಿದರು। ಉಪನಯನವನು ವಾಮನನಿಗೆ ಕಶ್ಯಪ ಮಾಡಿದ। ಸತಿ, ಸರಸ್ವತಿ, ಭಾರತೀಯರು ಅತಿ ಭಕ್ತಿಯಿಂದ ಉಂಗುರವ ಭಿಕ್ಷವನಿಟ್ಟರು। ಮುತ್ತಿನಾರತಿಯನೆತ್ತಿದರ್ಧರುಷದಲ್ಲಿ। ದಂಡ ಕಮಂಡಲ ಯಜ್ಞೋಪವೀತವು। ಮುಂಜೆ ಕೃಷ್ಣಾಜಿನ ಧರಿಸಿ। ಅಂದಿಗೆ, ಕಿರುಗೆಜ್ಜೆ, ಸರಪಳಿಯು ಘಿಲ್ಲು ಘಿಲ್ಲೆನುತಲಿ ಬಂದ ವಾಮನ ಬಲಿರಾಜನ ಸಭೆಯಲ್ಲಿ। ಕೋಟಿಸೂರ್ಯ ಚಂದ್ರಕಾಂತೆ ಶೋಭಿಸುವಂತಾ ನೋಟದಿ ಮುದ್ದಿನ ಮುಖವು। ನೋಟದಿ ಕರುಣಾರಸಸೂಸಿ ಹೊಳೆವಂತಾ ಪ್ರಖ್ಯಾತ ಬಂದಾ ರಾಜಸಭೆಗೆ। ತಾಳಮದ್ದಲಿ, ಭೇರಿ, ಡಮರೆಂಬೋ ನಾಟ್ಯಆಡಿದರು. ಊರ್ವಶಿ, ರಂಭೆ। ಚತುರ್ಮುಖ ಬ್ರಹ್ಮ ಸ್ತೋತ್ರವ ಮಾಡಿ ಬರುತಿರೆ। ಪರಮ ಪುರುಷನು ಈತನೆಂದು ಧರೆಯೊಳಗುತ್ತಮ ಸುಂದರ ಪುರುಷ ಬೆರಗಾತು ನಿಂತು ನೋಡಿದರೆ। ಮುತ್ತಿನ ಮಣಿಯು ತಂದಿಟ್ಟನು ಬಲಿರಾಯ ಇತ್ತ ಬನ್ನಿರಿ ಕುಳ್ಳಿರೆಂದಾ। ಎತ್ತ ಕಡೆಲಿಂದಾ ಬಂದಿರಿ ಏನು ಕಾರಣ ಕೈ ಎತ್ತಿ ಹಸ್ತವ

ಮುಗಿದಾ । ಬಹಳ ದೂರದಿಂದ ಬಂದೆನು ಬಲಿರಾಯ ನಿನ್ನ ಮೂರುತಿ, ಕೀರುತಿ ಕೇಳಿ ಮೂರು ಪಾದವ ಭೂಮಿ ದಾನವ ಕೊಡು ಎಂದು ಬೇಡಿಕೊಂಡನು ಬ್ರಹ್ಮಚಾರಿ । ಏನು ಬೇಡಿದೆಯೋ ಬಡ ಬ್ರಾಹ್ಮಣ ಕನಕವ ಬೇಡು ನಾ ದಾನವ ಕೊಡುವೆ ಏನು ಬೇಡಾ ಯೆನಗೆ ಮೂರು ಪಾದದ ಭೂಮಿ ಸಾಕೆನುತ ಇದ್ದ । ಯಾಚಕ ಇವನಲ್ಲಾ ಯದುಕುಲ ತಿಲಕನು ಮಾತಿನಲಿ ಮನವ ಕೊಂಬುವಾನು । ಸೂಚನೆ ಮಾಡಿದರು ಶುಕ್ರಾಚಾರ್ಯರು ಬಲು ಜೋಕೆಂದು ಹೇಳಿದರು । ಎಷ್ಟು ಹೇಳಿದರು ಇವ ಬಿಟ್ಟು ಹೋಗುವನಲ್ಲಾ ಸಿಟ್ಟಲೆ ಶಾಪಿಸುವಾ । ಕೊಟ್ಟೆನು ಯದುಕುಲ ತಿಲಕಗೆ ದಾನವ ಕೊಟ್ಟ ಮಾತಿಗೆ ತಪ್ಪದ್ಹಂಗ । ಮುತ್ತಿನ ಗಿಂಡಿಲಿ ಉದಕವ ತಾರೆಂದು ತನ್ನ ವಲ್ಲಭೆಗೆ ಹೇಳಿದನು । ಅಂದ ಮಾತನು ಕೇಳಿ ತಂದಳು ಉದಕವಾ ವಿಂಧ್ಯಾವಳಿ ಸಭೆಯಲ್ಲಿ । ಪನ್ನಂಗಶಯನನ ಪಾದಪದ್ಮ ತೊಳೆದು ಧನ್ಯರಾದೆವೆನಲು । ಉತ್ತಮ ಪುರುಷನ ಪಾದಪದ್ಮ ತೊಳೆಯಲು ಸುರನದಿ ಸುತ್ತಿಹರಿದಿತು ನಾಲ್ಕು ಬ್ರಹ್ಮಾಂಡ । ಇನ್ನೊಂದು ಪಾದವ ಇಡಲಿಕ್ಕೆ ಸ್ಥಳವಿಲ್ಲಾ ಇನ್ನೆಲ್ಲಿ ಇಡಲಿ ಹೇಳೆಂದ । ನೆತ್ತಿಯ ಮೇಲಿಟ್ಟು ನಿಜವುಳ್ಳ ಪಾದವ ವತ್ತಿದ ಪಾತಾಳದಲ್ಲಿ । ಚೆನ್ನಿಗ ಹರಿಯ ಪಾದವ ಕಂಡು ಅನ್ಯಾಯವೆಂಬರು ಜನರು ನಾಭಿಕಮಲದಿಂದ ಬ್ರಹ್ಮದೇವರ ಪಡೆದಾ ಪಾದದಿಂದ ಭಾಗೀರಥಿ ಪಡೆದ। ಕೋರೆದಾಡಿಲಿಂದಾ ತುಂಗಭದ್ರೆಯ ಪಡೆದ ನಾರಾಯಣಗೆದುಇಲ್ಲಾ । ತಾ ಕ್ರಮಿಸಿದ ಮೂರು ಸುತಳ ಲೋಕವನು ತ್ರಿವಿಕ್ರಮ ರೂಪಾಗಿ ನಿಂತಾ । ಅಷ್ಟಐಶ್ವರ್ಯ, ಸೌಭಾಗ್ಯ , ಸಂಪತ್ತು ಎಂಬೊ ಪಟ್ಟಣವ ನಿರ್ಮಿಸಿದಾ । ಪಟ್ಟ ಶಾಸನ ಘನ ಮಾಡಿದಾ ಬಲಿರಾಯಗ ಕೊಟ್ಟಾನು ಸುತಳ ಲೋಕವನು । ಬಲಿಯ ಬಾಗಿಲ ಕಾಯ್ದು ಭಕ್ತವತ್ಸಲ ಸ್ವಾಮಿ ಧರೆಯನುದ್ಧರಿಸಿದ ದೇವಾ ಬಲವಂತ ಸ್ವಾಮಿ ರಂಗವಿಠ್ಠಲನಾ ಅನುದಿನ ನೆನಕಂಡ್ಯಾ ಮನವೆ ॥

* * * *

# ಪೂಜಾವಿಭಾಗ

## ಗೋವರ್ಧನನ ಪೂಜೆ

## ಗೋಪೂಜೆ

## ಬಲೀಂದ್ರಪೂಜೆ

## ತುಳಸೀ ಸಂಕೀರ್ತನೆ

|| ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ ||

# ಗೋವರ್ಧನನ ಪೂಜೆ

## ಗೋವರ್ಧನನ್ನು ಹೀಗೆ ಪ್ರಾರ್ಥಿಸಬೇಕು

ಗೋವರ್ಧನಧರಾಧಾರ ಗೋಕುಲತ್ರಾಣಕಾರಕ

ವಿಷ್ಣುಬಾಹುಕೃತೋದ್ಧಾರ ಪೂಜಯಾಮಿ ನಗೋತ್ತಮ ||

## ಗೋವರ್ಧನನಾದ ಶ್ರೀಕೃಷ್ಣನಿಗೆ ಅರ್ಘ್ಯವನ್ನು ನೀಡಬೇಕು

ಗವಾಮಾಧಾರ ಗೋವಿಂದ ರುಗ್ಮಿಣೀವಲ್ಲಭ ಪ್ರಭೋ |

ಗೋಪಗೋಪೀಸಮಾಯುಕ್ತ ಗೃಹಾಣಾರ್ಘ್ಯಂ ನಮೋಽಸ್ತುತೇ ||

## ಕೃಷ್ಣನನ್ನು ನಮಿಸಬೇಕು

ಕೃಷ್ಣಾಯ ವಾಸುದೇವಾಯ ಹರಯೇ ಪರಮಾತ್ಮನೇ |

ಪ್ರಣತಃ ಕ್ಲೇಶನಾಶಾಯ ಗೋವಿಂದಾಯ ನಮೋನಮಃ ||

## ಗೋಪೂಜೆ

ಶ್ರೀಗುರುಭ್ಯೋ ನಮಃ | ಶ್ರೀ ಪರಮಗುರುಭ್ಯೋ ನಮಃ ||

ನಾರಾಯಣಾಯ ಪರಿಪೂರ್ಣಗುಣಾರ್ಣವಾಯ

ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ |

ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ

ಸತ್ಕಾರಣಾಯ ವಿತತಾಯ ನಮೋ ನಮಸ್ತೇ ||

ಸರ್ವದಾ ಸರ್ವಕಾರ್ಯೇಷು ನಾಸ್ತಿ ತೇಷಾಮಮಂಗಲಮ್ |

ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನೋ ಹರಿಃ ||

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ ।
ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ ॥

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ ॥

ನಮಸ್ತೇ ಪ್ರಾಣೇಶ ಪ್ರಣತವಿಭವಾಯಾವನಿಮಗಾಃ
ನಮಃ ಸ್ವಾಮಿನ್ ರಾಮಪ್ರಿಯತಮ ಹನೂಮನ್ ಗುರುಗುಣ ।

ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟಭಗವನ್
ನಮಃ ಶ್ರೀಮನ್ಮಧ್ವ ಪ್ರದಿಶ ಸುದೃಶಂ ನೋ ಜಯ ಜಯ ॥

ಮೃತ್ಯುಂಜಯ ನಮಸ್ತುಭ್ಯಂ ಮೃತ್ಯುಂ ಹರ ನಮಾಮ್ಯಹಮ್ ।
ಸರ್ವಮೃತ್ಯುವಿನಾಶಾಯ ಮೃತ್ಯುಂಜಯ ನಮೋ ನಮಃ ॥

ದುಷ್ಟಾನಾಂ ವಿಘ್ನಕರ್ತಾ ಸುಚರಿತ ಸುಜನಸ್ತೋಮವಿಘ್ನಾಪಹರ್ತಾ
ತಸ್ಮಾದ್ ವಿಘ್ನಾಧಿಪೋಽಹಂ ಮತ ಇತಿ ಸುಧಿಯಾಂ ಸ್ಪಷ್ಟಮಾಜ್ಞಾಪನಾಯ ।
ಪೌಲಸ್ತ್ಯೇಚ್ಛಾಂತರಾಯಃ ಸುರಮುನಿನಿಕರಾಭೀಷ್ಟಸಂಪ್ರಾಪ್ತ್ಯುಪಾಯಃ
ಶ್ರೇಯೋ ವಿಘ್ನಾಧಿರಾಜಃ ಪ್ರದಿಶತು ಸತತಂ ಭೂರಿಗೌರೀತನೂಜಃ ॥

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ।
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ ॥

## ಆಚಮನಮ್

ಕೇಶವಾಯ ಸ್ವಾಹಾ । ನಾರಾಯಣಾಯ ಸ್ವಾಹಾ । ಮಾಧವಾಯ ಸ್ವಾಹಾ । ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ । ತ್ರಿವಿಕ್ರಮಾಯ ನಮಃ । ವಾಮನಾಯ ನಮಃ । ಶ್ರೀಧರಾಯ ನಮಃ । ಹೃಷೀ-

ಕೇಶಾಯ ನಮಃ। ಪದ್ಮನಾಭಾಯ ನಮಃ। ದಾಮೋದರಾಯ ನಮಃ। ಸಂಕರ್ಷ-ಣಾಯ ನಮಃ । ವಾಸುದೇವಾಯ ನಮಃ । ಪ್ರದ್ಯುಮ್ನಾಯ ನಮಃ । ಅನಿರು-ದ್ಧಾಯ ನಮಃ। ಪುರುಷೋತ್ತಮಾಯ ನಮಃ। ಅಧೋಕ್ಷಜಾಯ ನಮಃ। ನಾರ-ಸಿಂಹಾಯ ನಮಃ । ಅಚ್ಯುತಾಯ ನಮಃ । ಜನಾರ್ದನಾಯ ನಮಃ । ಉಪೇಂ-ದ್ರಾಯ ನಮಃ। ಹರಯೇ ನಮಃ। ಶ್ರೀ ಕೃಷ್ಣಾಯ ನಮಃ।

(ಆಚಮನವನ್ನು ಎರಡು ಬಾರಿ ಮಾಡಬೇಕು)

## ಪ್ರಾಣಾಯಾಮ

ಓಂ ಪ್ರಣವಸ್ಯ ಪರಬ್ರಹ್ಮಋಷಿಃ ಪರಮಾತ್ಮಾ ದೇವತಾ ದೈವೀ ಗಾಯತ್ರೀ ಛಂದಃ ಪ್ರಾಣಾಯಾಮೇ ವಿನಿಯೋಗಃ ।

ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ। ಓಂ ಸತ್ಯಂ। ಓಂ ತತ್ಸವಿತುರ್ವರೇಣ್ಯಮ್। ಭರ್ಗೋ ದೇವಸ್ಯ ಧೀಮಹಿ। ಧಿಯೋ ಯೋ ನಃ ಪ್ರಚೋದಯಾತ್ । ಓಮಾಪೋಜ್ಯೋಽತಿ ರಸೋಽಮೃತಂ ಬ್ರಹ್ಮ ಭೂರ್ಭುವರ್ಸ್ಸ್ವರೋಮ್ ।

## ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲೀವಾಹನ-ಶಕೇ ಶಾಲೀವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ದಕ್ಷಿಣಾಯನೇ .......ಋತೌ ಕಾರ್ತೀಕಮಾಸೇ ಶುಕ್ಲಪಕ್ಷೇ ಪ್ರತಿಪದೀ ಪುಣ್ಯತಿಥೌ .... ವಾಸರಯುಕ್ತಾಯಾಂ ಶುಭನಕ್ಷತ್ರ ಶುಭಯೋಗ ಶುಭಕರಣ ಏವಂಗುಣವಿಶೇಷಣವಿಶಿಷ್ಟಾಯಾಂ ಅಸ್ಮದ್ಗುರುಣಾನಾಂ ಶ್ರೀಮಧ್ವಾಚಾರ್ಯಾಣಾಂ

ಹೃತ್ಕಮಲಮಧ್ಯನಿವಾಸಿ ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧಾದಿ ಚತುರ್ಮೂರ್ತ್ಯಾದಿ ಅನಂತಗುಣಾತ್ಮಕ ಶ್ರೀಮಾಂಗಲ್ಯಮೂರ್ತಿ ಶ್ರೀ ಲಕ್ಷ್ಮೀನರಾಯಣಪ್ರೇರಣಯಾ ಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಬಲಿಪ್ರತಿಪತ್ ಪರ್ವಕಾಲೇ ಗೋಪೂಜಾಂ ಕರಿಷ್ಯೇ ॥

ಗೋವುಗಳನ್ನು ಚೆನ್ನಾಗಿ ತೊಳೆದು ಸ್ನಾನ ಮಾಡಿಸಿ ಅಲಂಕಾರವನ್ನು ಮಾಡಿ, ಕೆಳಗಿನ ಮಂತ್ರವನ್ನು ಹೇಳಿ ನಮಿಸಬೇಕು.

ಲಕ್ಷ್ಮೀರ್ಯಾ ಲೋಕಪಾಲಾನಾಂ ಧೇನುರೂಪೇಣ ಸಂಸ್ಥಿತಾ ।
ಘೃತಂ ವಹತಿ ಯಜ್ಞಾರ್ಥೇ ಮಮ ಪಾಪಂ ವ್ಯಪೋಹತು ।
ನಮೋ ಗೋಭ್ಯಃ ಶ್ರೀಮತೀಭ್ಯಃ ಸೌರಭೇಯೀಭ್ಯ ಏವ ಚ
ನಮೋ ಬ್ರಹ್ಮಸುತಾಭ್ಯಶ್ಚ ಪವಿತ್ರಾಭ್ಯೋ ನಮೋನಮಃ ॥
ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋನಮಃ ॥

ಬೊಗಸೆಯಿಂದ ನೀರನ್ನು ತೆಗೆದುಕೊಂಡು ಹಸುವಿನ ಕಾಲಿಗೆ ಅರ್ಘ್ಯವನ್ನು ನೀಡಬೇಕು.

ಕ್ಷೀರೋದಾರ್ಣವಸಂಭೂತೇ ಸುರಾಸುರನಮಸ್ಕೃತೇ
ಸರ್ವದೇವಮಯೇ ಮಾತಃ ಗೃಹಾಣಾರ್ಘ್ಯಂ ನಮೋ ನಮಃ ॥

ಹಸುವಿಗೆ ತಿನ್ನಲು ಹಣ್ಣು, ಬೆಲ್ಲ ಅಕ್ಕಿಗಳನ್ನು ನೀಡಬೇಕು -

ಸುರಭಿ ತ್ವಂ ಜಗನ್ಮಾತಃ ದೇವಿ ವಿಷ್ಣುಪದೇ ಸ್ಥಿತಾ
ಸರ್ವದೇವಮಯೇ ಗ್ರಾಸಂ ಮಯಾ ದತ್ತಂ ಇಮಂ ಗ್ರಸ
ಸರ್ವದೇಮಮಯೇ ದೇವಿ ಸರ್ವದೇವೈರಲಂಕೃತೇ
ಮಾತಃ ಮಮಾಭಿಲಷಿತಂ ಸಫಲಂ ಕುರು ನಂದಿನಿ ॥

ಹಸುವಿನ ಅಂಗಾಂಗಳಿಗೆ ಪೂಜಿಸಬೇಕು -

ಕೃಷ್ಣಾಯ ನಮಃ ಪಾದೌ ಪೂಜಯಾಮಿ

ಹರಯೇ ನಮಃ ಜಾನುನೀ ಪೂಜಯಾಮಿ ।

ಬಲದೇವಾಯ ನಮಃ ಉದರಂ ಪೂಜಯಾಮಿ ।

ಮುಕುಂದಾಯ ನಮಃ ಕಟಿಂ ಪೂಜಾಯಾಮಿ ।

ಚಕ್ರಿಣೇ ನಮಃ ಭುಜೌ ಪೂಜಯಾಮಿ ।

ಶ್ರೀಕಂಠಧಾರಿಣೇ ನಮಃ ಕಂಠಂ ಪೂಜಯಾಮಿ ।

ಪದ್ಮಮುಖಾಯ ನಮಃ ಮುಖಂ ಪೂಜಯಾಮಿ ।

ಗೋವಿಂದಾಯ ನಮಃ ಶಿರಃ ಪೂಜಯಾಮಿ ॥

ಕೆಳಗಿನ ಮಂತ್ರವನ್ನು ಹೇಳುತ್ತಾ ಮಂಗಳಾರತಿಯನ್ನು ಮಾಡಿ ಪ್ರಾರ್ಥನೆ ಮಾಡಬೇಕು -

ಶೃಂಗಮೂಲೇ ಗವಾಂ ನಿತ್ಯಂ ಬ್ರಹ್ಮವಿಷ್ಣೂ ಸಮಾಶ್ರಿತೌ

ಶೃಂಗಾಗ್ರೇ ಸರ್ವತೀರ್ಥಾನಿ ಸ್ಥಾವರಾಣಿ ಚರಾಣಿ ಚ

ಶಿರೋಮಧ್ಯೇ ಮಹಾದೇವಃ ಸರ್ವಭೂತಮಯೇಸ್ಥಿತಃ

ಲಲಾಟಾಗ್ರೇ ಸ್ಥಿತಾ ಗೌರೀ ನಾಸಾವಂಶೇ ಚ ಷಣ್ಮುಖಃ

ಕಂಬಳಾಶ್ವತರೌ ನಾಗೌ ನಾಸಾಯುಗ್ಮಮುಪಾಶ್ರಿತೌ

ಕರ್ಣಯೋರಶ್ವಿನೌ ದೇವೌ ಚಕ್ಷುಷೋಃ ಶಶಿಭಾಸ್ಕರೌ

ದಂತೇಷು ವಾಯವಃ ಸರ್ವೇ ಜಿಹ್ವಾಯಾಂ ವರುಣಃ ಸ್ಥಿತಃ

ಸರಸ್ವತೀ ಚ ಹುಂಕಾರೇ ಮಾಸಪಕ್ಷೌ ಚ ಗಂಡಯೋಃ

ಸಂಧ್ಯಾದ್ವಯಂ ತಥೋಷ್ಠಾಭ್ಯಾಂ ಗ್ರೀವಾಮಿಂದ್ರಃ ಸಮಾಶ್ರಿತಃ

ರಕ್ಷಾಂಸಿ ವಕ್ಷೋದೇಶೇ ತು ಸಾಧ್ಯಾಶ್ಚೋರಸಿ ಸಂಸ್ಥಿತಾಃ

ಚತುಷ್ಪಾತ್ಸಕಲೋ ಧರ್ಮಃ ಸ್ವಯಂ ಜಂಘಾಸು ಸಂಸ್ಥಿತಃ

ಖುರಮಧ್ಯೇ ತು ಗಂಧರ್ವಾಃ ಖುರಾಗ್ರೇಷು ಚ ಪನ್ನಗಾಃ

ಖುರಾಣಾಂ ಪಶ್ಚಿಮಾಗ್ರೇಷು ಗಣಾ ಅಪ್ಸರಸಾಂ ತಥಾ

ರುದ್ರಾಶ್ಚ ಸಕಲಾಃ ಪೃಷ್ಠೇ ವಸವಃ ಸರ್ವಸಂಧಿಷು

ಶ್ರೋಣೀತಟಸ್ಥಾಃ ಪಿತರಃ ಸೋಮೋಲಾಂಗೂಲಮಾಶ್ರಿತಃ
ಆದಿತ್ಯರಶ್ಮಯೋ ಬಾಲಾಃ ಪಿಂಡೀಭೂತಾಶ್ಚ ಸಂಸ್ಥಿತಾಃ
ಸಾಕ್ಷಾತ್ ಗಂಗಾ ಚ ಗೋಮೂತ್ರೇ ಗೋಮಯೇ ಯಮುನಾ ಸ್ಥಿತಾ
ಕ್ಷೀರೇ ಸರಸ್ವತೀ ದೇವೀ ನರ್ಮದಾ ದಧ್ನಿ ಸಂಸ್ಥಿತಾ ।
ಅಷ್ಟಾವಿಂಶತಿ ದೇವಾನಾಂ ಕೊಟಯೋ ರೋಮಸುಸ್ಥಿತಾಃ
ಉದರೇ ಪೃಥಿವೀ ಜ್ಞೇಯಾ ಸಾಗರಾಶ್ಚ ಪಯೋಧರಾಃ ॥

ಅನೇನ ಗೋಪೂಜಾಕರಣೇನ ಅಸ್ಮದ್ಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತಶ್ರೀಗೋಪಾಲಕೃಷ್ಣಃ ಪ್ರೀಯತಾಂ ಶ್ರೀಕೃಷ್ಣಾರ್ಪಣಮಸ್ತು ।

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾಽನುಸೃತಸ್ವಭಾವಃ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

ಇಲ್ಲಿಗೆ ಗೋಪೂಜೆಯು ಮುಗಿಯಿತು.

* * * *

# ಬಲೀಂದ್ರನ ಪೂಜೆ

ರಾತ್ರಿಯ ಕಾಲದಲ್ಲಿ ೧೦ ಘಂಟೆಯ ಒಳಗೆ ಬಲೀಂದ್ರನನ್ನು ಹೀಗೆ ಪೂಜಿಸಬೇಕು -

ಬಲಿರಾಜ ನಮಸ್ತುಭ್ಯಂ ದೈತ್ಯದಾನವಂದಿತ
ಇಂದ್ರಸೇನಾಮರಾರಾತೇ ವಿಷ್ಣುಸಾನ್ನಿಧ್ಯದೋ ಭವ ।
ಬಲಿರಾಜ ನಮಸ್ತುಭ್ಯಂ ದೀಪೋಽಯಂ ಪ್ರತಿಗೃಹ್ಯತಾಯಮ್ ।।

* * * *

ನಮಃ ಪಿತೃಭ್ಯಃ ಪ್ರೇತೇಭ್ಯೋ ನಮೋ ಧರ್ಮಾಯ ವಿಷ್ಣವೇ
ನಮೋ ಯಮಾಯ ರುದ್ರಾಯ ಕಾಂತಾರಪತಯೇ ನಮಃ ॥
ಎಂಬ ಶ್ಲೋಕದಿಂದ ನಮಸ್ಕಾರ ಮಾಡಬೇಕು.

# ಯಮದ್ವಿತೀಯಾದ ವೈಶಿಷ್ಟ್ಯ

ಸತ್ಯೇ ತಾ ಸ್ಥಿತಯೋ ನೂನಂ ದ್ವಿತೀಯಾದ್ಯಾಶ್ಚ ವಿಶ್ರುತಾಃ ।
ಮಾಸೈಶ್ಚತುರ್ಭಿಶ್ಚ ತತಃ ಪ್ರಾವೃಟ್ಕಾಲೇ ಶುಭಾವಹಾಃ ॥

ಶ್ರೀ ಕೃಷ್ಣನು ಹೇಳಿದನು - ಎಲೈ ಸತ್ಯಭಾಮೆಯೇ ! ದ್ವಿತೀಯಾ ತಿಥಿಯು ಮಳೆಗಾಲದ ನಾಲ್ಕು ತಿಂಗಳಲ್ಲಿಯೂ ಪ್ರಸಿದ್ದವಾಗಿ ಶುಭಕರಗಳಾಗಿದೆ.

ಪ್ರಥಮಾ ಶ್ರಾವಣೇ ಮಾಸಿ ತಥಾ ಭಾದ್ರಪದೇ ಪರಾ ।
ತೃತೀಯಾಶ್ವಯುಜೇ ಮಾಸಿ ಚತುರ್ಥೀ ಕಾರ್ತಿಕೇ ಭವೇತ್ ॥

ಮೊದಲನೆಯ ದ್ವಿತೀಯೆಯು ಶ್ರಾವಣದಲ್ಲಿಯೂ ಎರಡನೆಯ ದ್ವಿತೀಯೆಯು ಭಾದ್ರಪದ ಮಾಸದಲ್ಲಿಯೂ ಮೂರನೆಯ ದ್ವಿತೀಯೆಯು ಆಶ್ವಯುಜ ಮಾಸದಲ್ಲಿಯೂ ನಾಲ್ಕನೆಯದು ಕಾರ್ತಿಕ ಮಾಸದಲ್ಲಿಯೂ ಪ್ರಸಿದ್ಧವಾಗಿದೆ. ಈ ದ್ವಿತೀಯಗಳೆಲ್ಲವನ್ನೂ ಶುದ್ಧದ ದ್ವಿತೀಯೆಗಳೆಂದು ತಿಳಿಯಬೇಕು.

ಕಲುಷಾ ಶ್ರಾವಣೇ ಮಾಸಿ ತಥಾಭಾದ್ರಪದೇ ಮಲಾ ।
ಆಶ್ವಿನೇ ಪ್ರೇತಸಂಚಾರಾ ಕಾರ್ತಿಕೇ ಯಾಮ್ಯಕಾ ಮತಾ ॥

ಶ್ರಾವಣ ಮಾಸದ ದ್ವಿತೀಯೆಗೆ ಕಲುಷ ಎಂದೂ ಭಾದ್ರಪದದ ದ್ವಿತೀಯೆಗೆ ಅಮಲಾ ಎಂದೂ ಆಶ್ವಯುಜದ ದ್ವಿತೀಯೆಗೆ ಪ್ರೇತಸಂಚಾರಾ ಎಂದೂ ಕಾರ್ತಿಕ ಮಾಸದ ದ್ವಿತೀಯೆಗೆ ಯಾಮ್ಯಕಾ ಎಂದೂ ಹೆಸರು ಬಂದಿವೆ.

ಕಸ್ಮಾತ್ಸಾ ಕಲುಷಾ ಪ್ರೋಕ್ತಾ ಕಸ್ಮಾತ್ಸಾ ನಿರ್ಮಲಾ ಮತಾ ।
ಕಸ್ಮಾತ್ಸಾ ಪ್ರೇತಸಂಚಾರಾ ಕಸ್ಮಾದ್ಯಾಮ್ಯಾ ಪ್ರಕೀರ್ತಿತಾ ॥

ಸತ್ಯೆಯು ಹೇಳಿದಳು - ಕಲುಷಾ ನಿರ್ಮಲಾ ಪ್ರೇತಸಂಚಾರಾ ಯಾಮ್ಯಾ ಎಂಬುದಾಗಿ ಆಯಾಯ ದ್ವಿತೀಯೆಗಳಿಗೆ ಹೆಸರು ಬರಲು ಕಾರಣವೇನು ?

ಇತಿ ಸತ್ಯಾವಚಶ್ಶ್ರುತ್ವಾ ಭಗವಾನ್ಭೂತಭಾವನಃ ।
ಉವಾಚ ವಚನಂ ಶ್ಲಕ್ಷ್ಣಂ ಪ್ರಹಸನ್ ಗರುಡಧ್ವಜಃ ॥

ಸೂತನು ಹೇಳಿದನು - ಸತ್ಯಭಾಮೆಯು ಹೇಳಿದ ಈ ರೀತಿಯಾದ ಮಾತನ್ನು ಕೇಳಿ ಭೂತ ಭವಿಷ್ಯದ್ವರ್ತಮಾನಗಳನ್ನು ಬಲ್ಲ ಕೃಷ್ಣನು ನಗುತ್ತ ನಿಧಾನವಾಗಿ ಆಕೆಗೆ ಇಂತೆಂದನು.

## ಶ್ರಾವಣ ॥ ಶುದ್ಧ ॥ ದ್ವಿತೀಯಾ ಬಗ್ಗೆ

ಪುರಾ ವೃತ್ರವಧೇ ವೃತ್ತೇ ಪ್ರಾಪ್ತರಾಜ್ಯೇ ಪುರಂದರೇ ।
ಬ್ರಹ್ಮಹತ್ಯಾಪನೋದಾರ್ಥಮಶ್ವಮೇಧಃ ಪ್ರಕೀರ್ತಿತಃ ॥

ಶ್ರೀ ಕೃಷ್ಣನು ಹೇಳಿದನು - ಪೂರ್ವದಲ್ಲಿ ಇಂದ್ರನು ವೃತ್ರಾಸುರನನ್ನು ಕೊಂದನು. ರಾಜ್ಯವನ್ನು ವಶಪಡಿಸಿಕೊಳ್ಳಲು ಉದ್ಯುಕ್ತನಾದನು. ಆ ವೃತ್ರನನ್ನು ಕೊಂದ ಕಾರಣ ಬ್ರಹ್ಮಹತ್ಯೆಯು ಬಂದಿತು. ಅದು ಹೋಗುವುದಕ್ಕೋಸ್ಕರ ಆತನಿಗೆ ಅಶ್ವಮೇಧವನ್ನು ಮಾಡೆಂದು ಹೇಳಿದರು.

ಕ್ರೋಧಾದಿಂದ್ರೇಣ ವಜ್ರೇಣ ಬ್ರಹ್ಮಹತ್ಯಾ ನಿಷೂದಿತಾ ।
ಷಡ್ವಿಧಾ ಸಾ ಕ್ಷಿತೌ ಕ್ಷಿಪ್ತಾ ವೃಕ್ಷೇ ತೋಯೇ ಮಹೀತಳೇ ॥

ನಾರ್ಯಾಂ ಭ್ರೂಣಹನಿ ವಹ್ನೌ ಸಂವಿಭಜ್ಯ ಯಥಾಕ್ರಮಂ ।
ತತ್ಪಾಪಶ್ರವಣಾತ್ಪೂರ್ವಂ ದ್ವಿತೀಯಾಯಾ ವಿನೋದಯೇ ॥

ನಾರೀವೃಕ್ಷನದೀಭೂಮಿವಹ್ನಿಭ್ರೂಣಹನಸ್ತಥಾ ।
ಕಲುಷೀಭವನಂ ಜಾತಾ ಹ್ಯತಸ್ಸಾ ಕಲುಷಾ ಮತಾ ॥

ಆಗ ಕೋಪಗೊಂಡ ಇಂದ್ರನು ಆ ಬ್ರಹ್ಮಹತ್ಯೆಯನ್ನು ವಜ್ರಾಯುಧದಿಂದ ಆರು ಭಾಗವನ್ನಾಗಿ ಕತ್ತರಿಸಿ ನೆಲದ ಮೇಲೆ ಎಸೆದನು. ಹೀಗೆ ಎಸೆಯಲ್ಪಟ್ಟ ಆರು ಭಾಗಗಳಲ್ಲಿ ಒಂದು ಮರದಲ್ಲಿಯೂ ಒಂದು ನೀರಿನಲ್ಲಿಯೂ ಒಂದು ಭೂಮಿಯಲ್ಲಿಯೂ ಒಂದು ಹೆಂಗಸಿನಲ್ಲಿಯೂ ಒಂದು ಗರ್ಭಘಾತಕನಲ್ಲಿಯೂ ಒಂದು ಬೆಂಕಿಯಲ್ಲಿಯೂ ಈ ರೀತಿಯಾಗಿ ಭಾಗವಾದುವು. ಆಗ ಆ ಪಾಪವು

ತಮಗೆ ಬರುತ್ತದೆಂದು ಕೇಳುವುದಕ್ಕೆ ಮೊದಲೇ ಬಂದಿದ್ದ ದ್ವಿತೀಯೆಯ ದಿವಸ ಹೆಂಗಸು ಮರ, ನದಿ, ಭೂಮಿ, ವಹ್ನಿ, ಮಕ್ಕಳಗಡುಕರು ಕಾಂತಿಹೀನರಾದರು. ಆದುದರಿಂದ ಆ ದ್ವಿತೀಯೆಯು ಕಲುಷ ಎಂದೆನಿಸಿಕೊಂಡಿತು.

## ಭಾದ್ರಪದ ॥ ಶುದ್ಧ ದ್ವಿತೀಯಾ ಬಗ್ಗೆ

ಮಧುಕೈಟಭಯೋಃ ರಕ್ತೇ ಪುರಾ ಮಗ್ನಾ ತು ಮೇದಿನೀ ।
ಅಷ್ಟಾಂಗುಳಾಽಪವಿತ್ರಾ, ಸಾ ನಾರೀಣಾಂ ತು ರಜೋಮಲಂ ॥

ಪೂರ್ವದಲ್ಲಿ ಮಧುಕೈಟಭರನ್ನು ಕೊಂದಾಗ ಭೂಮಿಯು ಎಂಟು ಅಂಗುಲದಷ್ಟು ಉದ್ದಕ್ಕೆ ಅವರ ರಕ್ತದಲ್ಲಿ ಮುಳುಗಿತು. ಆದುದರಿಂದ ಅದಕ್ಕೆ ಅಪವಿತ್ರ ಎಂದರೆ ಮಲವುಳ್ಳದ್ದೆಂದು ಹೆಸರು ಬಂದಿತು. ನಾರಿಯರ ರಜಸ್ಸು ಮಲರೂಪವಾದುದರಿಂದ ಅದಕ್ಕೆ ಮಲವೆಂದು ಹೆಸರು ಬಂದಿತು.

ನದ್ಯಃ ಪ್ರಾವೃಣ್ಣಲಾಸ್ಸರ್ವಾಃ ವಹ್ನೇರೂರ್ಧ್ವಂ ಮಷೀ ಮಲಂ ।
ನಿರ್ಯಾಸಮಲಿನೋ ವೃಕ್ಷಾಃ ಸಂಗಾದ್ಭ್ರೂಣಹನೋ ಮಲಾಃ ॥

ಮಳೆಗಾಲದಲ್ಲಿ ನದಿಗಳೆಲ್ಲವೂ ಮಲವಾಗಿರುವುದರಿಂದ ಬೆಂಕಿಯ ಮೇಲುಭಾಗದಲ್ಲಿರುವ ಮಸಿಯು ಮಲವಾಗಿರುವುದರಿಂದ ಮರಗಳ ಹಾಲು ಅಥವಾ ಗೋಂದು ಮಲವಾಗಿರುವುದರಿಂದ ಕಾಲವಲ್ಲದ ಕಾಲದಲ್ಲಿ ರಮಿಸುವುದರಿಂದಲೂ ರಮಿಸಬೇಕಾದ ಕಾಲದಲ್ಲಿ ರಮಿಸದಿರುವುದರಿಂದಲೂ ಭ್ರೂಣಹನನು ಮಲನು.

ಕಲುಷಾಣಿ ಚರಂತ್ಯಸ್ಯಾಂ ತೇನೈಷಾ ಕಲುಷಾ ಮತಾ ।
ದೇವರ್ಷಿ ಪಿತೃ ಧರ್ಮಾಣಾಂ ನಿಂದಕಾ ನಾಸ್ತಿಕಾಶಠಾಃ ॥

ತೇಷಾಂ ಸಾ ವಾಙ್ಮಲಾ ಪೂಜಾ ದ್ವಿತೀಯಾ ತೇನ ನಿರ್ಮಲಾ ।
ಅನಧ್ಯಾಯೇಷು ಶಾಸ್ತ್ರಾಣಿ ಪಾಠಯಂತಿ ಪಠಂತಿ ಚ ॥

ಸಾಂಖ್ಯಕಾಸಾರ್ಕಿಕಾಶ್ರೌತ್ರಾಸ್ತೇಷಾಂ ಶಬ್ದಾಪಶಬ್ದಜಾತ್ ।
ಮಲಾತ್ಪೂತಾ ದ್ವಿತೀಯಾಯಾಂ ತತೋಽರ್ಥಂ ನಿರ್ಮಲಾ ಮತಾ ॥

ಈ ರೀತಿಯಾಗಿ ಕಲುಷವಾದ ಪದಾರ್ಥಗಳು ಈ ದ್ವಿತೀಯೆಯಲ್ಲಿ ಸಂಚರಿಸುವುದರಿಂದ ಅದಕ್ಕೆ ಕಲುಷಾ ಎಂದು ಹೆಸರು ಬಂದಿರುವುದು. ದೇವತೆಗಳು ಋಷಿಗಳು ಧರ್ಮಗಳು ಇವುಗಳನ್ನು ನಿಂದಿಸುವ ನಾಸ್ತಿಕರು ಶಠರು. ಅಯೋಗ್ಯರು ಅಂಥವರ ಮಾತು ಮಲವುಳ್ಳದ್ದರಿಂದ ಆ ದ್ವಿತೀಯೆಗೆ ನಿರ್ಮಲೆಯೆಂದು ಹೆಸರು ಬಂದಿದೆ. ಅನಧ್ಯಾಯಗಳಲ್ಲಿ ಶಾಸ್ತ್ರಗಳನ್ನು ಓದುತ್ತಾರೆ. ಓದಿಸುತ್ತಾರೆ. ಅಲ್ಲದೆ ಸಾಂಖ್ಯದವರು ತರ್ಕದವರು ಹೇಳುವ ಶಬ್ದದಲ್ಲಿ ಅಪಶಬ್ದಗಳು ಅನೇಕವಾಗಿವೆ. ಆ ಮಲದಿಂದ ಈ ದ್ವಿತೀಯೆಯು, ಪವಿತ್ರ ಮಾಡುವುದರಿಂದ ಅದು ನಿರ್ಮಲವೆಂದು ಹೆಸರು ಹೊಂದಿದೆ.

ಅಗ್ನಿಷ್ವಾತ್ತಾ ಬರ್ಹಿಷದ ಆಜ್ಯಪಾಸ್ಸೋಮಪಾಸ್ತಥಾ ।
ಪಿತೃಪಿತಾಮಹಪ್ರೇತಸಂಚಾರಾತ್ಪ್ರೇತಸಂಚರಾ ॥

ಅಗ್ನಿಷ್ವಾತ್ತಾದಿ ಬರ್ಹಿಷದವರು ಆಜ್ಯಪರು ಸೋಮಪರು ಪಿತೃಪಿತಾಮಹರು ಆ ದ್ವಿತೀಯೆಯಲ್ಲಿ ಸಂಚಾರ ಮಾಡುವುದರಿಂದ ಅದು ಪ್ರೇತಸಂಚಾರವೆಂದು ಹೆಸರು ಹೊಂದಿದೆ.

ಪ್ರೇತಾಸ್ತು ಪಿತರಃ ಪ್ರೋಕ್ತಾಸ್ತೇಷಾಂ ತಸ್ಯಾಂ ತು ಸಂಚರಃ ।
ಪುತ್ರಪೌತ್ರೈಸ್ತು ದೌಹಿತ್ರೈಃ ಸ್ವಧಾಮಂತ್ರೈಸ್ತು ಪೂಜಿತಾಃ ॥

ಪಿತೃಗಳೇ ಪ್ರೇತರೆಂದೆನಿಸಿಕೊಳ್ಳುತ್ತಾರೆ. ಅವರು ಆ ದ್ವಿತೀಯೆಯಲ್ಲಿ ಸಂಚಾರ ಮಾಡುತ್ತಾರೆ. ಅವರು ಆ ದಿನ ಮಕ್ಕಳು, ಮೊಮ್ಮಕ್ಕಳು ದೌಹಿತ್ರರುಗಳಿಂದ ಸ್ವಧಾ ಮಂತ್ರವನ್ನು ಹೇಳುತ್ತಾ ಪೂಜಿಸಲ್ಪಡುತ್ತಾರೆ. ಆ ದಿನ ಅವರು ಶ್ರಾದ್ಧಮುಖಗಳಿಂದ ತೃಪ್ತರಾಗಿ ಹೋಗುತ್ತಾರೆ. ಆದುದರಿಂದ ಆ ದ್ವಿತೀಯೆಯು ಪ್ರೇತಸಂಚಾರವೆಂದು ಹೆಸರು ಹೊಂದಿದೆ.

## ಕಾರ್ತಿಕ ॥ ಶುದ್ಧ ॥ ದ್ವಿತೀಯಾವೇ ಯಮದ್ವಿತೀಯಾ

ಶ್ರಾದ್ಧದಾನಮಖೈಸ್ತೃಪ್ತಾ ಯಾಂತ್ಯತಃ ಪ್ರೇತಸಂಚರಾ ।
ಕಾರ್ತಿಕೇ ತು ದ್ವಿತೀಯಾಯಾಂ ಪೂರ್ವಾಹ್ಣೇ ಯಮಮರ್ಚಯೇತ್ ॥

ಯಮುನೆಯಲ್ಲಿ ಸ್ನಾನಮಾಡಿ ಕಾರ್ತಿಕಮಾಸದ ದ್ವಿತೀಯೆಯ ದಿನ ಪೂರ್ವಾಹ್ಣದಲ್ಲಿ ಯಮನನ್ನು ಪೂಜಿಸಬೇಕು. ಅವನು ಯಮಲೋಕವನ್ನು ನೋಡುವುದಿಲ್ಲ ಎಂದರೆ ನರಕಭಾಗಿಯಾಗುವುದಿಲ್ಲ.

ಭಾನುಜಾಯಾಂ ನರಸ್ನಾತ್ವಾ ಯಮಲೋಕಂ ನ ಪಶ್ಯತಿ ।
ಕಾರ್ತಿಕೇ ಶುಕ್ಲಪಕ್ಷೇ ತು ದ್ವಿತೀಯಾಯಾಂ ತು ಭಾಮಿನಿ ॥

ಕಾರ್ತಿಕ ಶುದ್ಧ ದ್ವಿತೀಯೆಯ ದಿವಸ ಯಮನು ಯಮುನೆಯ ಕೈಯ್ಯಲ್ಲಿ ಆಕೆಯ ಮನೆಯಲ್ಲಿ ಮೊದಲು ಊಟಮಾಡಿದನು. ಮತ್ತು ಗೌರವವನ್ನು ಹೊಂದಿನು.

ಯಮೋ ಯಮುನಯಾ ಪೂರ್ವಂ ಭೋಜಿತಸ್ಸ್ವಗೃಹೇऽರ್ಚಿತಃ ।
ದ್ವಿತೀಯಾಯಾಂ ಮಹೋತ್ಸರ್ಗೋ ನಾರಕೀಯಾಶ್ಚ ತರ್ಪಿತಾಃ ॥

ಕಾರ್ತಿಕ ಶುದ್ಧ ದ್ವಿತೀಯೆಯ ದಿವಸ ನರಕದವರೆಲ್ಲರಿಗೂ ತೃಪ್ತಿಪಡಿಸಿ ಅವರನ್ನು ಪಾಪಗಳಿಂದ ಮುಕ್ತಿ ಹೊಂದಿಸಿದನು. ಮತ್ತು ತೊಂದರೆಗಳೆಲ್ಲವನ್ನೂ ತಪ್ಪಿಸಿದನು.

ಪಾಪೇಭ್ಯೋ ವಿಪ್ರಯುಕ್ತಾಸ್ತೇ ಮುಕ್ತಾಸ್ಸರ್ವನಿಬಂಧನಾತ್ ।
ಅತ್ರಾಸಿತಾಶ್ಚ ಸಂತುಷ್ಟಾಃ ಸ್ಥಿತಾಸ್ಸರ್ವೇ ಯದೃಚ್ಛಯಾ ॥
ತೇಷಾಂ ಮಹೋತ್ಸವೋ ವೃತ್ತೋ ಯಮರಾಷ್ಟ್ರಸುಖಾವಹಃ ।
ಅತೋ ಯಮದ್ವಿತೀಯೇಯಂ ತ್ರಿಷು ಲೋಕೇಷು ವಿಶ್ರುತಾ ॥

ಆ ದಿನ ಪಾಪಿಗಳೆಲ್ಲರನ್ನೂ ಯಮನು ಹೆದರಿಸದಿದ್ದುದರಿಂದಲೂ ಅವರು ಸಂತೋಷವಾಗಿದ್ದುದರಿಂದಲೂ ಅವರೆಲ್ಲರೂ ಸ್ವತಂತ್ರರಾಗಿ ಮನಸ್ಸು ಬಂದಂತೆ ಇದ್ದುದರಿಂದಲೂ ಅವರಿಗೆ ಬಹು ಸಂತೋಷವಾಗಿದ್ದಿತು. ಆದಿನ ಯಮನ ದೇಶವೇ ಸುಖವಾಗಿದ್ದಿತು. ಆದುದರಿಂದ ಈ ಯಮದ್ವಿತೀಯೆಯು ಮೂರು ಲೋಕದಲ್ಲಿಯೂ ಪ್ರಸಿದ್ಧವಾಗಿರುವುದು.

## ಅಕ್ಕ-ತಂಗಿಯರ ಮನೆಯಲ್ಲಿ ಊಟ ಮಾಡಬೇಕು

ತಸ್ಮಾನ್ನಿಜಗೃಹೇ ವಿಪ್ರ ನ ಭೋಕ್ತವ್ಯಂ ತತೋ ಬುಧೈಃ ।
ಸ್ನೇಹೇನ ಭಗಿನೀಹಸ್ತಾದ್ಭೋಕ್ತವ್ಯಂ ಪುಷ್ಟಿವರ್ಧನಂ ॥

ಆದುದರಿಂದ ಆ ದಿನ ತನ್ನ ಮನೆಯಲ್ಲಿ ಬುದ್ಧಿವಂತನು ಊಟ ಮಾಡಬಾರದು. ಸ್ನೇಹದಿಂದ ಸೋದರಿಯರ ಕೈಯಿಂದ ಊಟ ಮಾಡಿದರೆ ಪುಷ್ಟಿಯು ಉಂಟಾಗುತ್ತದೆ.

ದಾನಾನಿ ಚ ಪ್ರದೇಯಾನಿ ಭಗಿನೀಭ್ಯೋ ವಿಧಾನತಃ।
ಸ್ವರ್ಣಾಲಂಕಾರವಸ್ತ್ರಾಣಿ ಪೂಜಾಸತ್ಕಾರಪೂರ್ವಕಂ ॥

ಆಗ ಅಕ್ಕ ತಂಗಿಯರಿಗೆ ಶಾಸ್ತ್ರವಿಧಾನದಿಂದ ಅನೇಕ ದಾನಗಳನ್ನು ಕೊಡಬೇಕು. ಚಿನ್ನದ ಒಡವೆ ಸೀರೆ ಕುಪ್ಪಸಗಳು ಪೂಜೆಯ ಪದಾರ್ಥಗಳು ಮುಂತಾದವುಗಳಿಂದ ಅವರನ್ನು ಗೌರವಿಸಬೇಕು.

ಭೋಕ್ತವ್ಯಂ ಸಹಜಾಯಾಶ್ಚ ಭಗಿನ್ಯಾ ಹಸ್ತತಃ ಪರಂ।
ಸರ್ವೈಸ್ತು ಭಗಿನೀಹಸ್ತಾತ್-ಭೋಕ್ತವ್ಯಂ ಬಲವರ್ಧನಂ ॥

ಎಲ್ಲರೂ ತನ್ನ ಜೊತೆಯಲ್ಲಿ ಹುಟ್ಟಿದ ಅಕ್ಕತಂಗಿಯರ ಕೈಯಿಂದಲೇ ಊಟಮಾಡಬೇಕು. ಹಾಗೆ ಮಾಡಿದರೆ ಬಲವು ಹೆಚ್ಚುತ್ತದೆ.

ಊರ್ಜೇ ಶುಕ್ಲದ್ವಿತೀಯಾಯಾಂ ಪೂಜಿತಸ್ತರ್ಪಿತೋ ಯಮಃ।
ಮಹಿಷಾಸನಮಾರೂಢೋ ದಂಡಮುದ್ಗರಭೃತ್ಪ್ರಭುಃ ॥

ಕಾರ್ತಿಕ ಶುಕ್ಲ ದ್ವಿತೀಯೆಯ ದಿವಸ ಯಮನು ಪೂಜಿತನಾಗಿ ತೃಪ್ತಿಗೊಂಡನು. ಕೋಣನ ಮೇಲೆ ಕುಳಿತುಕೊಂಡು ದಂಡ ಮುದ್ಗರಗಳನ್ನು ಧರಿಸಿ ಸಂತೋಷದಿಂದ ಇದ್ದನು.

## ಯಮದೇವರೂ ಸಹ ಯಮುನೆಯ ಮನೆಯಲ್ಲಿ ಊಟ ಮಾಡುವರು

ವೇಷ್ಟಿತಃ ಕಿಂಕರರ್ಯೈರ್ಜುಷ್ಟೈಸ್ತಸ್ಮೈ ಯಮ್ಯಾತ್ಮನೇ ನಮಃ।
ಯೈರ್ಭಗಿನ್ಯಸ್ಸುಖಾಸಿನ್ಯೋ ವಸ್ತ್ರದಾನಾದಿತೋಷಿತಾಃ ॥

ಮತ್ತು ಆ ದಿನ ಯಮನು ತಂಗಿಯರ ಕೈಯಲ್ಲಿ ಊಟಮಾಡಿ ಅವರಿಗೆ ಬಟ್ಟೆ ಬರೆಗಳನ್ನು ಕೊಟ್ಟು ಸಂತೋಷಪಡಿಸಿದನು. ತನ್ನ ಆಳುಗಳಿಂದಲೂ ಸುತ್ತುವರಿಯಲ್ಪಟ್ಟನು.

ನ ತೇಷಾಂ ವತ್ಸರಂ ಯಾವತ್ಕಲಹೋ ನ ರಿಪೋರ್ಭಯಂ ।
ಧನ್ಯಂ ಯಶಸ್ಯಮಾಯುಷ್ಯಂ ಧರ್ಮಕಾಮಾರ್ಥಸಾಧನಂ ।
ವ್ಯಾಖ್ಯಾತಂ ಸಕಲಂ ಸತ್ಯೇ ಸರಹಸ್ಯಂ ಮಯಾನಘೇ ॥

ಹೀಗೆ ಅಕ್ಕತಂಗಿಯರ ಕೈಯಲ್ಲಿ ಊಟ ಮಾಡಿ ಅವರಿಗೆ ಬಹುಮಾನವನ್ನು ಕೊಟ್ಟವರಿಗೆ ವರ್ಷದವರೆಗೂ ಜಗಳವಿರುವುದಿಲ್ಲ. ಇದು ಧನ್ಯವಾದುದು, ಯಶಸ್ಸನ್ನು ಕೊಡತಕ್ಕದ್ದು. ಧರ್ಮ ಅರ್ಥಕಾಮಗಳಿಗೆ ಸಾಧನವಾದುದು. ಇಂತಹ ರಹಸ್ಯವನ್ನು ನಿನಗೆ ಹೇಳಿದ್ದೇನೆ.

ಯಸ್ಯಾಂ ತಿಥೌ ಯಮುನಯಾ ಯಮರಾಜದೇವಃ
ಸಂಭೋಜಿತಃ ಪಿತೃಪತಿಃ ಸ್ವಸೃಸೌಹೃದೇನ ।
ತಸ್ಯಾಂ ಸ್ವಸುಃ ಕರತಳಾದಿಹ ಯೋ ಭುನಕ್ತಿ
ಪ್ರಾಪ್ನೋತಿ ವಿತ್ತಶುಭಸಂಪದಮುತ್ತಮಾಂ ಸಃ ॥

ಯಮರಾಜನು ಸಹೋದರರಿಯಲ್ಲಿರುವ ಪ್ರೀತಿಯಿಂದ ಯಾವ ತಿಥಿಯಲ್ಲಿ ಭೋಜನ ಮಾಡಿದನೋ ಆ ತಿಥಿಯ ದಿವಸ ಸೋದರಿಯರ ಕೈಯ್ಯಿಂದ ಯಾವನು ಮಾಡುತ್ತಾನೆಯೋ ಅವನು ಸರ್ವ ಸಂಪತ್ತನ್ನೂ ಹೊಂದುತ್ತಾನೆ.

ಇಲ್ಲಿಗೆ ಯಮದ್ವಿತೀಯಾ ವಿಚಾರವು ಮುಗಿಯಿತು.

* * * *

## ತುಳಸೀಸಂಕೀರ್ತನೆ

ಯಾ ದೃಷ್ಟಾನಿಖಿಲಾಘಸಂಘಶಮನೀ ಸ್ಪೃಷ್ಟಾವಪುಃ ಪಾವನೀ
ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಂತಕತ್ರಾಸಿನೀ ।
ಪ್ರತ್ಯಾಸಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ
ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ॥

## ೧. ಸಂಕೀರ್ತನೆ

ಹರಿ ಹರಿಯೇ ಲಕ್ಷುಮಿನಾರಾಯಣ (ಜಯ) ಲಕ್ಷುಮಿನಾರಾಯಣ
ಲಕ್ಷುಮಿನಾರಾಯಣ (ಮಹ) ಲಕ್ಷುಮಿನಾರಾಯ ॥ಪ॥

ಶ್ರೀಲಕ್ಷುಮೀಶ ಹರಿ ಲಕ್ಷುಮಿನಾರಾಯಣ ।
ಶ್ರೀಧರಣೀಶ ಹರಿ ಲಕ್ಷುಮಿನಾರಾಯಣ ॥1॥
ಶ್ರೀವೇಂಕಟೇಶ ............ । ಕಾರ್ಯೋ ಸರ್ವೇಶ ............ ॥2॥
ಶ್ರೀರಾಮಚಂದ್ರ ............ । ಶುಭಗುಣಸಾಂದ್ರ ............ ॥3॥
ಎನ್ನ ಮನದೊಡೆಯ ............ । ಚೆನ್ನ ಗೋಪಿನಾಥ ............ ॥4॥
ಆದಿಮೂರುತಿಯೇ ............ । ವೇದಪಾಲಕನೇ ............ ॥5॥
ಅಕಲಂಕಮಹಿಮನೇ ............ । ಮಕರಕುಂಡಲನೇ ............ ॥6॥
ಕಸ್ತೂರಿತಿಲಕನೇ ............ । ಕೌಸ್ತುಭಧರನೇ ............ ॥7॥
ಕ್ಷೀರಸಾಗರನೇ ............ । ವಾರಿಜೋದ್ಭವನೇ ............ ॥8॥
ವಸುದೇವಸುತನೇ ............ ।ಅಸುರಮರ್ದನನೇ ............ ॥9॥
ನಂಬಿದೆ ನಿನ್ನ ............ । ಕಂಬುಕಂಧರನೇ ............ ॥10॥

## ೨. ಸಂಕೀರ್ತನೆ

ಕಂಡೆ ಕಂಡೆನು ಕೃಷ್ಣ ನಿನ್ನಯ ದಿವ್ಯಮಂಗಳಮೂರ್ತಿಯ । ಕಂಡು ಬದುಕಿದೆ ಇಂದು ನಾನು ಕರುಣಿಸೋ ಎನ್ನೊಡೆಯನೆ ॥ಪ॥ ಉಟ್ಟ ದಟ್ಟಿಯು ಪಿಡಿದ ವಂಕಿಯು

ತೊಟ್ಟ ಕೌಸ್ತುಭ ಭೂಷಣ । ಮೆಟ್ಟಿದ ನವರತ್ನದ್ಹಾವಿಗೆ ಇಟ್ಟ ಕಸ್ತೂರಿತಿಲಕವು ॥೧॥ ಮಂದಹಾಸವು ದಂತಪಂಕ್ತಿಯು ಚೆಲುವ ಕಡೆಗಣ್ಣ ನೋಟವು । ಅಂದವಾದ ಕುರುಳುಗೂದಲು ಮುದ್ದು ಸುರಿವುತ ಮುಖವನೆ ॥೨॥ ಮುಲ್ಲೆ ಮಲ್ಲಿಗೆ ದಂಡ ಕೊರಳಲಿ ಚೆಲ್ವ ಕಂಕಣ ಕೈಯಲಿ । ಗೊಲ್ಲಸತಿಯರ ಕುಚಗಳಲ್ಲಿ ಜಲ್ಲುಜಲ್ಲುತ ನಲಿವನು ॥೩॥ ಸುರರು ಪುಷ್ಪದ ವೃಷ್ಟಿ ಕರೆಯಲು ಅಸುರರೆಲ್ಲರು ಓಡಲು । ಕ್ರೂರ ಕಾಳಿಯ ಫಣಗಳಲ್ಲಿ ಧೀರ ನಲಿನಲಿದಾಡಲು ॥೪॥ ಇಂದು ಎನ್ನ ಬಂಧ ತೀರಿತು ಇಂದು ಎನ್ನ ಕ್ಲೇಶ ಹೋಯಿತು । ಇನ್ನು ಅನ್ಯರ ಭಜಿಸಲೇಕೋ ಮನ್ನಿಸೋ ಗೋಪಿನಾಥನೇ ॥೫॥

## ೩. ಸಂಕೀರ್ತನೆ

ರುಗ್ಮಭೂಷಣ ಪಾಲಿಸೆನ್ನನು ತಿಗ್ಮಕಿರಣಶತಪ್ರಭ । ರುಗ್ಮಿಣೀಪರ್ವನಾರ್ಚ್ಯ ಸತ್ಪದಯುಗ್ಮ ಉಡುಪಿನ ಕೃಷ್ಣನೆ ॥೧॥ ದ್ವಾರಕಾಪುರದಲ್ಲಿ ದೇವಕಿ ಸರಸ ಬಾಲಕಲೀಲೆಯ । ತೋರು ಎನುತಲೆ ದಧಿಯ ಮಥಿಸಲು ಕರುಣಿ ಬಾಲ್ಯವ ತೋರಿದೆ ॥೨॥ ತೊಡೆಯನೇರಿ ಸ್ತನ್ಯಪಾನವ ಮಾಡಿ ಮೋದವು ತಾಯಿಗೆ । ಕೊಡುತ ಕಡೆಗೋಲು ನೇಣು ಸಹಿತಲೆ ಪ್ರೌಢ ನೀನಪಹರಿಸಿದೆ ॥೩॥ ಮೊಸರ ಭಾಂಡವನೊಡೆದು ಬೆಣ್ಣೆಯ ನಸುನಗುತಲೇ ಭಕ್ಷಿಸಿ । ಶೇಷಶಯನ ನೀನು ಕುಣಿಯೆ ಸಂತೋಷಪಟ್ಟಳು ದೇವಕಿ ॥೪॥ ದೂರದಿಂದಲೆ ಕಂಡು ರುಗ್ಮಿಣಿ ಹರುಷದಿ ಶಿಶುರೂಪವ । ತರುಣರೂಪವ ನೀನು ಪುನರಪಿ ತೋರೆಲೋ ಸತಿ ನುಡಿದಳು ॥೫॥ ವಿತತ ವೈಭವ ಈ ಪರಿಯಲಿ ಪ್ರತಿಮೆಯನ್ನು ಮಾಡಿಸಿ । ಸತತ ಪೂಜೆಯ ಮಾಳ್ಪರೆ ಅತಿ ಪ್ರೀತಿಯಿಂದ ಕೊಡೆನಗೆ ॥೬॥ ರಮಣಿ ಈ ಪರಿ ಪೇಳೆ ವಿಶ್ವಕರ್ಮನಿಂದ ಮಾಡಿಸಿ । ಕಮಲನಾಭನು ಇತ್ತು ಅದರಲಿ ವಿಮಲಪೂಜೆಯ ಕೊಂಡನು ॥೭॥ ವೀರ ನಿನ್ನವತಾರಕಾರ್ಯವು ಪರಿಸಮಾಪ್ತವು ಆಗಲು । ಸುರಪನಂದನ ತತ್ಪ್ರತಿಮೆಯ ಶರಧಿತೀರದಲಿಟ್ಟನು ॥೮॥ ನಾವೆಯಲ್ಲಿ ಗೋಪಿಚಂದನ ಸಂವೃತಾರ್ಚೆಯು ಬರುತಿರೆ । ನಾವೆಯೊಡೆಯಲು ಮಧ್ವಮುನಿಪನು ಭಾವದಿಂದಲೆ ತಂದನು ॥೯॥

ಅಮರರೊಡೆಯ ಶ್ರೀಮರುತ್ಪತಿ ತತ್ಪ್ರತಿಷ್ಠೆಯ ವಿರಚಿಸಿ । ಕುಮುದಬಂಧುಕ್ಷೇತ್ರದಲ್ಲಿ ಅಮಿತ ಪೂಜೆಯ ಮಾಡುತ ॥೧೦॥ ನನ್ನ ಹಿರಿಯರ ಪುಣ್ಯ ಫಲಿಸಲು ನಿನ್ನ ಪೂಜೆಯ ಮಾಡುತ । ಧನ್ಯನಾದೆನು ಮುಕ್ತಿ ಕರಗತ ಎನ್ನಗಾಯಿತು ಕೃಷ್ಣನೇ ॥೧೧॥ ಮಧ್ವಪೂಜಿತ ರಕ್ಷಿಸೆನ್ನನು ಸಾಧ್ವಸೋಜ್ಝಿತ ಸದ್ಗುಣ । ಸಾಧ್ವಲಂಕೃತವೇಷ ಮುಕ್ತಿ ಪದಾಬ್ಜನೇ ರಘುತಿಲಕನೇ ॥೧೨॥

## ೪. ಸಂಕೀರ್ತನೆ

ದೇವರ ದೇವನೆ ಕಾಯೋ ದೇವಕೀನಂದನೆ ಕಾಯೋ । ಜೀವರಾಶಿಗಳಿಗೆ ಸಂಜೀವನ ದೇವನೆ ಕಾಯೋ ॥ಪ॥ ಮಕರಿಗೆ ಕೈ ಸಿಕ್ಕಿ ಮಾನಭಂಗಗೊಂಡ ದೀನ । ಪ್ರಕೃತಿಬಂಧನದಿಂದ ಪಾಡುಬಡುತ್ತಿದ್ದೆನಯ್ಯ ॥೧॥ ಕಾಮನೆಂಬ ಕಡುವೈರಿ ಕಂಡಕಂಡ ಕಡೆಗೆನ್ನ । ಸೀಮೆಯೊಳು ಸುಳಿವಂತೆ ಶ್ರೀಧರ ಮಾಡಿದ ನೋಡು ॥೨॥ ಶ್ರೀಹಯವದನ ನೀನು ಶ್ರಿತಜನ ಕಾಮಧೇನು । ಮಹಂತನೆಂಬುದ ಕೇಳಿ ಮೆಚ್ಚಿ ಬಂದೆನಯ್ಯ ನಿನ್ನ ॥೩॥

## ೫. ಸಂಕೀರ್ತನೆ

ಕೇಳು ಕೇಳಲೆ ಗೋಪಿ ನಿನ್ನಯ ಬಾಲಕೃಷ್ಣನ ಚೇಷ್ಟೆಯ । ತಾಳಲಾರೆನು ನೀನು ಕರೆದು ಪೇಳದಿದ್ದರೆ ಬುದ್ಧಿಯ ॥೧॥ ಮನೆ ಮನೆಗಳ ಪೊಕ್ಕು ಪೊಕ್ಕು ಪಾನ ಮಾಡುವ ಬಾಲನು । ಮಾನಿನೀಯರು ಕಂಡು ತಡೆದರೆ ಸ್ತನವ ಪಿಡಿದು ಮುದ್ದಿಪ ॥೨॥ ಬೆಳಕು ಇಲ್ಲದ ಎಡೆಯಲ್ಲಿದ್ದರು ಹೊಳೆವನೇ ಸುರಧಿಪತಿ । ಉಳಿಯದಂತೆ ಕದ್ದು ಮೆದ್ದವು ಬಾಲನೆಂಬುದು ಉಚಿತವೇ ॥೩॥ ಪರರ ನಷ್ಟವು ಲಾಭವೀತಗೆ ಪರರ ಪೀಡೆಯು ಲೀಲೆಯು ಪರರು ಈ ಪರಿ ತನ್ನನೆಂದರೆ ಪರಮ ಹರುಷವ ಮಾಡುವ ॥೪॥ ಎಲ್ಲರಂತವನಲ್ಲ ದೇವನು ಒಲ್ಲದೇ ಮನ ಚಿತ್ತವು । ನಲ್ಲ ಈ ಮಣಿ ಏನು ಮಹಿಮೆಯ ಬಲ್ಲನೇ ರಘುತಿಲಕನೇ ॥೫॥

## ೬. ಸಂಕೀರ್ತನೆ

ದೇವರ ದೇವನೇ ಬಾರೋ ದೇವಕಿನಂದನ ಬಾರೊ । ದೇವೇಂದ್ರನ ಸಲಹಿದ ದೇವ ಬಾರೋ ಹರಿಯೆ ॥ಪ॥ ಮತ್ಸ್ಯನಾಗಿ ಶ್ರುತಿಯ ತಂದಿತ್ತ ಭಕ್ತವತ್ಸಲ । ಭೃತ್ಯ ಸತ್ಯವ್ರತನೆಂದು ಪೊತ್ತೆ ಬಾರೋ ಹರಿಯೆ ॥೧॥ ಸಾರಿದ ಸುರರಿಗಾಗಿ ನೀರೊಳಗೆ ಮುಳುಗಿದ ಗಿರಿಯನ್ನುದ್ಧರಿಸಿದ ಕೂರ್ಮ ಬಾರೋ ಹರಿಯೇ ॥೨॥ ಧರೆಯನ್ನುದ್ಧರಿಸಲು ವರಹನಾದವನೇ । ಹಿರಣ್ಯಾಕ್ಷನ ಗೆಲಿದ ಧೀರ ಬಾರೋ ಹರಿಯೇ ॥೩॥ ನಂಬಿದ ಭಕ್ತರ ಕಾವೆನೆಂಬ ಕರುಣದಿ ಕಲ್ಲ । ಕಂಭದಿಂದಲುದಿಸಿದ ಡಂಭ ಬಾರೋ ಹರಿಯೇ ॥೪॥ ಮಾಣವಕ ವೇಷನಾಗಿ ಕ್ಷೋಣಿಯನಳೆದವನೆ । ದಾನವನ ಸೋಲಿಸಿದ ಜಾಣ ಬಾರೋ ಹರಿಯೆ ॥೫॥ ಝುಡಿದು ದುಷ್ಟನೃಪರ ಗಡಣವ ಬಿಡದೆ । ಕಡಿದುಗ್ರ ಕೊಡಲಿಯ ಪ್ರೌಢ ಬಾರೋ ಹರಿಯೆ ॥೬॥ ವೃಂದಾರಕವಂದ್ಯ ಸೇತುಬಂಧನ ವಿಹಾರ ದಶ । ಕಂಧರನ್ನ ಕೊಂದ ರಾಮಚಂದ್ರ ಬಾರೋ ಹರಿಯೇ ॥೭॥ ಮಲ್ಲರನೆಲ್ಲರ ಸೀಳಿ ಬಲ್ಲಿದ ಮಾವನ ಕೊಂದ । ಗೊಲ್ಲರ ವಲ್ಲಭ ನಮ್ಮ ನಲ್ಲ ಬಾರೋ ಹರಿಯೆ ॥೮॥ ಬುದ್ಧನಾಗಿ ದೈತ್ಯರಿಗಬದ್ಧ ಪದ್ಧತಿಯ ತೋರಿ । ರುದ್ರನ ಗೆಲಿಸಿದ ಸುಭದ್ರ ಬಾರೋ ಹರಿಯೆ ॥೯॥ ಕರ್ಕಶದ ಖಳರನ್ನು ಕಲ್ಕಿರೂಪನಾಗಿ ಮೇಲೆ । ಶಿಕ್ಷಿಸುವ ಸುಜನರ ಪಕ್ಷ ಬಾರೋ ಹರಿಯೆ ॥೧೦॥ ವಿಜಯ ಶ್ರೀಹಯವದನ ಭಜಕರ ಭಾಗ್ಯನೆ । ಸುಜನಾಬ್ಧಿರಾಜ ಶಶಿತೇಜ ಬಾರೋ ಹರಿಯೆ ॥೧॥

## ೭. ಸಂಕೀರ್ತನೆ

(ಸೋಮವಾರಕ್ಕೆ) ದಾವ ಕುಲವೆಂದರಿಯಬಾರದು ಗೋವ ಕಾವ ಗೊಲ್ಲನಂತೆ ॥ಪ॥ ತಾನು ಪೋಗಿ ಪಾರಿಜಾತದ ಹೂವ ಸತಿಗೆ ತಂದನಂತೆ ॥ಅ॥ ಗೋಕುಲದಲ್ಲಿ ಪುಟ್ಟಿದನಂತೆ ಗೋವುಗಳನೆ ಕಾಯ್ದನಂತೆ । ಕೊಳಲನೂದಿ ಮೃಗಪಕ್ಷಿಗಳ ಮರುಳುಮಾಡಿದ ದೇವನಂತೆ ॥೧॥ ತರಳತನದಲ್ಲಿ ಒರಳನೆಳೆದು ಮರನ ಮುರಿದು ಮತ್ತಿಯ ತ । ನ್ನೊಡಲ ಒಳಗೆ ಈರೇಳು ಜಗಂಗಳ ಪಡೆದ ತಾತಿಗೆ ತೋರಿದನಂತೆ ॥೨॥ ಗೊಲ್ಲ ಸತಿಯರ ಮನೆಯ ಪೊಕ್ಕು ಕಳ್ಳತನವ ಮಾಡಿದನಂತೆ । ಬಲಿದ ಪೂತನಿ

ವಿಷವನುಂಡು ಮೆಲ್ಲನೆ ತೃಣನ ಕೊಂದನಂತೆ ॥೩॥ ಕಾಲಲಿ ಶಕಟನ ಒದ್ದನಂತೆ ಗಾಳಿಕಂಭವ ಕಿತ್ತನಂತೆ । ಕಾಳಿಂಗ ನಾಗನ ಫಣವ ತುಳಿದು ಬಾಲರಿಗೆಲ್ಲ ಒಲಿದನಂತೆ ॥೪॥ ಸರ್ಪ ತನ್ನ ಹಾಸಿಗೆಯಂತೆ ಪಕ್ಷಿ ತನ್ನ ವಾಹನವಂತೆ । ಮುಕ್ಕಣ್ಣ ತನ್ನ ಮೊಮ್ಮಗನಂತೆ ಮುದ್ದು ಮುಖದ ಚೆಲುವನಂತೆ ॥೫॥ ಕಡಲ ಮಗಳ ತಂದನಂತೆ ಕರಡಿ ಮಗಳು ಮಡದಿಯಂತೆ। ಕೊಡೆಯ ಪಿಡಿದು ಬೇಡಿದನಂತೆ ಈರೇಳು ಲೋಕಕೆ ಒಡೆಯನಂತೆ ॥೬॥ ಹಡಗಿನೊಳಗಿಂದ ಬಂದನಂತೆ ಕಡಲತಡಿಯಲಿ ನಿಂದನಂತೆ । ಗುರುಮಧ್ವ ಮುನಿಗೆ ಒಲಿದನಂತೆ ಹಯವದನ ಚೆಲುವನಂತೆ ॥೭॥

## ೮. ಸಂಕೀರ್ತನೆ

(ಮಂಗಳವಾರಕ್ಕೆ) ದಿತಿಜರ ಬನಕೆ ದುರಂತ ಕೃತಾಂತ । ಗತಿ ನೀನೆ ನಮಗೆ ಗುಣವಂತ ಹನುಮಂತ ॥ಪ॥ ಅಂಬುಧಿಯ ದಾಟಿ ಸೀತೆಯ ರೂಪ ಕಂಡೆ। ಕುಬುದ್ಧಿ ರಾವಣನ ಪುರವ ಸೂರೆಗೊಂಡೆ ॥ ವಿಬುಧರುತ್ಸಹದಿ ಮಾಡಿದ ಬಲುಗಂಡೆ । ಪ್ರಬುದ್ಧವೃಂದದ ಪುಣ್ಯ ಫಲರಸ ಉಂಡೆ ॥೧॥ ಕೇಸರಿಯ ತನಯ ದಕ್ಷಿಣಕಾಗಿ ಬಂದೆ। ವಾರಿಧಿಬಂಧನಕೆ ಬಲು ಗಿರಿಗಳ ತಂದೆ ॥ ಈಶ ರಘುಪತಿಸೇವೆಗೆ ಘನವಾಗಿ ನಿಂದೆ। ಅಸುರ ರಾವಣನ ಸರ್ವಸೈನ್ಯವ ಕೊಂದೆ ॥೨॥ ಹಯವದನ ಕೃಪಾ ಪ್ರವಾಹವ ಪೊತ್ತ ಆ। ಪ್ರಿಯವಾದ ಭವತರುವಿನ ಬೇರೆ ಕಿತ್ತೆ ॥ ಭಯವ ಖಂಡಿಸಿ ಸಂತೋಷವ ನಮಗಿತ್ತೆ। ಜಯ ಜಯ ಪ್ರಾಣಸುತ ನಮೋ ನಮಸ್ತೆ ॥೩॥

## ೯. ಸಂಕೀರ್ತನೆ

(ಬುಧವಾರಕ್ಕೆ) ನೀರೆ ತೋರೆಲೆ ನೀರೆ ತೋರೆಲೆ ನೀಲವರ್ಣದ ದೇವನ । ಭಾಮೆ ತೋರೆಲೆ ಭಾಮೆ ತೋರೆಲೆ ಬಾಲ ಉಡುಪಿನ ಕೃಷ್ಣನ ॥೧॥ ಕಾಲಲಂದುಗೆ ಕಡಗ ಕಂಕಣ ಲೋಲ ಉಡುಪಿಗೆ ಬಂದನ । ಬಾಲಲೀಲೆಯ ಜಗಕೆ ತೋರಿದ ಗೋಪಾಲ ಉಡುಪಿನ ಕೃಷ್ಣನ ॥೨॥ ಕಡೆವ ಕಡೆಗೋಲ ನೇಣು ಸಹಿತಲಿ ಹಡಗಿನೊಳಗಿಂದ ಬಂದನ । ಬಿಡದೆ ಭಕ್ತರ ಒಡನೆ ಪಾಲಿಪ ರಂಗ ಉಡುಪಿನ ಕೃಷ್ಣನ ॥೩॥ ಮುದ್ದು ಮುಖದವ ಮೂರು ಜಡೆಯಲಿ ಇದ್ದ ಉಡುಪಿನ ಸ್ಥಳದಲಿ।

ಒದ್ದು ಶಕಟನ ಆದಿಗುರುಗಳ ಮುದ್ದು ಉಡುಪಿನ ಕೃಷ್ಣನ ॥೪॥ ಮಲ್ಲರೊಡಗೂಡಿ ಮಥದುರಪುರದಲಿ ಬಿಲ್ಲಹಬ್ಬವ ನಡೆಸಿದ । ಬಲ್ಲಿದ ಕಂಸಾಸುರನ ಸೀಳಿದ ಮುದ್ದು ಉಡುಪಿನ ಕೃಷ್ಣನ ॥೫॥ ಬಾಲಸನ್ಯಾಸಿಗಳು ನಿನ್ನನು ಪ್ರೇಮದಿಂದಲಿ ಭಜಿಸಲು । ಆಲದೆಲೆಯ ಮೇಲೆ ಮಲಗಿದ ಗೋಪಾಲ ಉಡುಪಿನ ಕೃಷ್ಣನ ॥೬॥ ಅದ್ವಯ ಹರಿ ಬ್ರಹ್ಮ ವಲ್ಲಭ ವಿದ್ಯಸಾರಥಿ ಮಾಡಿದೆ । ಸದ್ಗುರು ಮುನಿ ವಾದಿರಾಜನ ಮುದ್ದು ಉಡುಪಿನ ಕೃಷ್ಣನ ॥೭॥

## ೧೦. ಸಂಕೀರ್ತನೆ

(ಗುರುವಾರಕ್ಕೆ) ಎನ್ನೊಡೆಯ ಹಯಗ್ರೀವ ಅನುದಿನ ನೆನೆದರೆ। ಪುಣ್ಯಹೀನರಿಗೆ ದೊರಕೊಂಬುದೆಲೆ ಮನುಜ ॥ಪ॥ ಭಕ್ತಿ ಬೇಕು ಪರಮ ವಿರಕ್ತಿ ಬೇಕು ಸರಿ ತನ್ನಿಂ। ದುತ್ತಮ ಮತ್ತೊಬ್ಬನೆಂಬ ನೆನಹಿರಬೇಕು ॥ ಮೊತ್ತದಿಂದ್ರಿಯಂಗಳ ನಿಗ್ರಹ ಬೇಕು ಬೊಮ್ಮಾದಿಗಳು । ಉತ್ತಮರೆನ್ನಿಂದ ಭೃತ್ಯ ಅಚ್ಯುತಂಗೆ ಇರಬೇಕು ॥೧॥ ಅರಿಷಡ್ವರ್ಗದ ವಿಜಯ ಬೇಕು ಗುರು ಕುಲನಿಯ । ಗುರು ಮಧ್ವಮತ ಬೇಕು ಗುರುಭಕ್ತಿ ಬೇಕು। ಹರಿಯ ಡಿಂಗರಿಗರ ಸಂಗ ಬೇಕು ಶಂಖ ಚಕ್ರ। ಧರನಾಗಿರಬೇಕು ಸ್ವರೂಪಯೋಗ್ಯತಾ ಬೇಕು ॥೨॥ ವೇದಾಭ್ಯಾಸವು ಬೇಕು ಆದರರ್ಥ ಹರಿಯೆಂಬ। ಬೋಧವಿರಬೇಕು ಖಳರಳಿಯಲು ಬೇಕು ॥ ವಾದಿರಾಜನೊಡೆಯ ಶ್ರೀಹಯವದನ ದಿವ್ಯ । ಪಾದವ ನಂಬಿರಬೇಕಿಹ-ಪರಾದಿಗಳ ಬಯಸುವರೆ ॥೩॥

## ೧೧. ಸಂಕೀರ್ತನೆ

(ಶುಕ್ರವಾರಕ್ಕೆ) ಬುದ್ಧಿಯ ಹೇಳಮ್ಮ ನೀನು ಮುದ್ದು ಬಾಲಕೃಷ್ಣನಿಗೆ । ಕದ್ದು ಬೆಣ್ಣೆ ಮೇಲುವಾಗ ಕರೆಯೆ ಗೋಪಮ್ಮ॥೧॥ ಕಾಲು ಕಾಲು ನಲಿವಾಗ ಧ್ವನಿಪಾಲನಮ್ಮ। ಕೆರೆನೀರೊಳಗೆ ಬಿದ್ದು ತೇಲಿಹೋದನಮ್ಮ॥೨॥ ಬಾಲರ ಮಂಡೆಗೆ ಹೆಟ್ಟೋದುಚಿತ ವೇನಮ್ಮ ! ಕೋಲು ಕೊಂಡು ಕೊಲ್ಲಹೋದರೆ ಓಡಿ ಹೋದನಮ್ಮ ॥೩॥ ಬಟ್ಟಲೊಳಗಿನ ಹಾಲು ಕುಡಿದಾತನಮ್ಮ॥ ಕಟ್ಟಿದ ಕರುಗಳ ಬಿಚ್ಚಿ ಬಿಟ್ಟು ಹೋದನಮ್ಮ ॥೪॥ ಉಟ್ಟ ಸೀರೆ ಸೆಳೆವುದು ಉಚಿತವೇನಮ್ಮಾ । ದಿಟ್ಟತನ ಬೇಡೆಂದು ಹೇಳೆ ಗೋಪ್ಯಮ್ಮ ॥೫॥ ಹಾವಿನ ಹೆಗಲ ಮೇಲೇರಿ ಬಂದನಮ್ಮ । ಹಾವಿನಲ್ಲಿ

ನಿದ್ದೆಗೈವುದುಚಿತವೇನಮ್ಮ ॥೬॥ ಸಾವಿರ ಪೆಸರುಳ್ಳ ದೇವ ಕಾಣಮ್ಮ। ಭಾವಜ್ಞ ಕಾವೇರಿರಂಗ ಕಾಣಮ್ಮ ॥೭॥

## ೧೨. ಸಂಕೀರ್ತನೆ

(ಶನಿವಾರಕ್ಕೆ) ನಿನ್ನ ಪಾದವ ನಂಬಿದೆ ನಾ ನಿನ್ನನೆ ಮೊರೆಹೊಕ್ಕೆನು। ನಿನ್ನ ದಾಸರ ದಾಸ ನಾನು ಪ್ರಸನ್ನ ವೇಂಕಟ ಪಾಹಿ ಮಾಮ್ ॥ಪ॥ ಲೋಕಲೋಕಂಗಳನೆಲ್ಲಾನೇಕ ರೂಪದಿ ಸಲಹಿದೆ। ಸಾಕು ಸಾಸಿರನಾಮದೊಡೆಯ ಲೋಕ ವೇಂಕಟ ಪಾಹಿ ಮಾಮ್ ॥೧॥ ಮಂದರಾದ್ರಿಯನೊಂದು ಬೆರಳಲಿ ಬಂದು ನೀ ನಲಿದೆತ್ತಿದೆ । ಸಿಂಧುಶಯನಾನಂದ ಮೂರುತಿ ತಂದೆ ವೇಂಕಟ ಪಾಹಿಮಾಮ್ ॥೨॥ ರಾಮ ಭಾರ್ಗವರಾಮ ದಶರಥರಾಮ ರಘುಕುಲರಾಮನೆ । ಕಾಮಿತಾರ್ಥವನೀವ ದಯಾಳು ಕರುಣಿ ವೇಂಕಟ ಪಾಹಿ ಮಾಮ್ ॥೩॥ ಕರಿಯು ಮೊರೆಯಿಡೆ ಕೇಳಿ ಬೇಗದಿ ಭರದಿ ಮಕರಿಯ ಸೀಳಿದೆ। ಪರಮ ಭಕ್ತರ ಧುರದಿ ಪಾಲಿಪ ವರದ ವೇಂಕಟ ಪಾಹಿ ಮಾಮ್ ॥೪॥ ನರಗೆ ಸಾರಥಿಯಾಗಿ ತುರಗವ ಭರದಿ ನೀನೇ ನಡೆಸಿದೆ । ಹರಿ ಮುಕುಂದ ಮುರಾರಿ ರಕ್ಷಿಸು ವರದ ವೇಂಕಟ ಪಾಹಿ ಮಾಮ್ ॥೫॥ ನಾರದಾದಿ ಮುನೀಂದ್ರರೆಲ್ಲರ ಭರದಿ ನೀನೇ ಪಾಲಿಪೆ। ಗುರುವ ಮೂಡಲಗಿರಿಯ ವಾಸ ಹರಿಯೆ ವೇಂಕಟ ಪಾಹಿ ಮಾಮ್ ॥೬॥ ಶರಣು ಶ್ರೀವೈಕುಂಠನಾಮಕ ಶರಣು ಶ್ರೀಪುರುಷೋತ್ತಮ । ಶರಣು ಶ್ರೀಧರ ಗರುಡವಾಹನ ಶರಣು ವೇಂಕಟ ಪಾಹಿ ಮಾಮ್ ॥೭॥

## ೧೩. ಸಂಕೀರ್ತನೆ

ಗೋವಿಂದ ಗೋವಿಂದ ರಾಮ । ಗೋವಿಂದ ನಾರಾಯಣ ॥
ಗೋವಿಂದ ಗೋಪಾಲಕೃಷ್ಣ। ಗೋವಿಂದ ನಾರಾಯಣ ॥ಪ॥

ಸೋಮಾಸುರನೆಂಬ ದೈತ್ಯ । ಸಾಮಕವೇದವನೊಯ್ಯಲುವು ॥ ಸೋಮಾಸುರನನ್ನು ಕೊಂದು। ಸಾಮಕ ವೇದವ ತಂದನುಮ ॥೧॥ ಗುಡ್ಡವು ಮುಳುಗಿ ಪೋಗಲು ನಮ್ಮ ದೇವ। ಗುಡ್ಡವ ಬೆನ್ನಲಿ ಪೊತ್ತನುಮ ॥ ಗುಡ್ಡದಂತೆ ಅಸುರರನೆಲ್ಲ।

ಅಡ್ಡಗೆಡಹಿ ಬಿಸುಟನುಮ ॥೨॥ ಚಿನ್ನ ಗಣ್ಣಿನವನು ಬಂದು । ಕನ್ನೆ ಹೆಣ್ಣನೊಯ್ಯಲುಮ॥ ವರ್ಣರೂಪವ ತಾಳಿ ಅಸುರನ । ಭಿನ್ನ ಭಿನ್ನವ ಬಗಿದನುಮ ॥೩॥ ಕಂಭದಿಂದಲಿ ಉದಿಸಿ ನಮ್ಮ ದೇವ । ಜಂಬಾದಸುರನ ಬಗಿದನುಮ ॥ ನಂಬಿದ ಪ್ರಹ್ಲಾದನ್ನ ಕಾಯಿದ । ಅಂಬುಜನಾಭ ನೃಸಿಂಹನುವು ॥೪॥ ಬಲು ವುರುಡನ್ನಾಗಿ ಭೂಮಿಯ । ಬಲಿಯ ದಾನವ ಬೇಡಿದನುಮ ॥ ಇಳೆಯ ಈರಡಿಯ ಮಾಡಿ । ಬಲಿಯ ಪಾತಾಳಕ್ಕೊತ್ತಿದನುಮ ॥೫॥ ಕೊಡಲಿಯನ್ನು ಪಿಡಿದು ನಮ್ಮ ದೇವ । ಕಡಿದ ಕ್ಷತ್ರಿಯಲಕುಲವನುಮ ॥ ಹಡೆದ ತಾಯ ಶಿರವ ತರಿದು । ಪಡೆದನಾಕೆಯ ಪ್ರಾಣನುಮ ॥೬॥ ಎಂಟೆರಡು ತಲೆಯಾದಸುರನ । ಕಂಟವ ಛೇದಿಸಿ ಬಿಸುಟನುಮ ॥ ಒಂಟಿರೂಪವ ತಾಳಿ ಲಂಕೆಯ । ಬಂಟ ವಿಭೀಷಣಗಿತ್ತನುಮ ॥೭॥ ಸೋಳ ಸಾಸಿರ ಗೋಪಿಯರೊಡನೆ । ಕೇಳಮೇಳದೊಳಿಪ್ಪನುಮ ॥ ಬಾಲಕನಾಗಿ ತನ್ನ ರೂಪದಲಿ ಶ್ರೀ । ಲೋಲ ಲಕ್ಷುಮಿಯರಸನುಮ ॥೮॥ ಒಪ್ಪದಿಂದಲಿ ಬಂದು ನಮ್ಮ ದೇವ । ಇಪ್ಪವನದೊಳಗಿಪ್ಪನುಮ ॥ ಸರ್ಪಶರನ್ನಾಗಿ ಪೋಗಿ । ತ್ರಿಪುರಸಂಹಾರ ಮಾಡಿದನುಮ ॥೯॥ ಯಲಮ ಯಲಮ ಯಲಮ ನಮ್ಮ ದೇವ । ಬಲ್ಲಿದ ಕಲ್ಕ್ಯವತಾರನುವು ॥ ಇಳೆಯ ಸ್ವರ್ಗ ಪಾತಾಳ ಕೊಡೆಯ । ಚೆಲುವ ಶ್ರೀಹಯವದನನುಮ ॥೧೦॥

## ೧೪. ಸಂಕೀರ್ತನೆ

ಕೊಲ್ಲು ಬೇಗ ಕಳ್ಳರಾ ಶ್ರೀನಲ್ಲಮಧ್ವವಲ್ಲಭ । ಕೊಲ್ಲದಿದ್ದರೆ ನಿಲ್ಲರವರು ಕಲಿಯುಗದ ಕಳ್ಳರು ॥ಪ॥ ಎಲ್ಲ ಕೂಡಿ ನಿನ್ನ ಪೂಜೆಗೆ ಕಲ್ಲು ಹಾಕುತ್ತಿದ್ದರು । ಗಡ । ಬಲ್ಲೆನವರ ಕೊಲೆ (ಗುಲ್ಲು)ಗಾರರ ಹಲ್ಲ ಕೀಳದೆ ನಿಲ್ಲರು ॥೧॥ ಒಳ್ಳೆ ಮಾತನಾಡಲವರು ಕೋಲಾಹಲವ ಮಾಡಿ ಬೈವರು । ಗೆಲ್ಲು ಶಕ್ತಿ ಇಲ್ಲ ನಮಗೆ ಬಲ್ಲೆ ನೀ ಮಧ್ವಗೊಲಿದವನೆ ॥೨॥ ಕಳ್ಳತನವನೊಲ್ಲೆನೆಂಬರು ಮುಳ್ಳು ಮೊನೆಯಂತಿಹರು। ಚೆಲ್ವ ಹಯವದನವರ ಕೊಲ್ಲು ಕೊಲ್ಲು ನಮ್ಮ ಗೆಲಿಸು ॥೩॥

## ೧೫. ಸಂಕೀರ್ತನೆ

ಮತ್ಸ್ಯಾಕೃತಿಧರ ಜಯ ದೇವೇಶ । ವೇದವಿಬೋಧಕ ಕೂರ್ಮಸ್ವರೂಪ ॥ ಮಂದರಗಿರಿಧರ ಸೂಕರರೂಪ । ಭೂಮಿವಿದಾರಕ ಜಯ ದೇವೇಶ ॥೧॥

ಕಾಂಚನಲೋಚನ ನರಹರಿರೂಪ । ದುಷ್ಟಹಿರಣ್ಯಕಭಂಜನ ಜಯ ಭೋ ॥ ಜಯ ಜಯ ವಾಮನ ಬಲಿವಿಧ್ವಂಸಿನ್ । ದುಷ್ಟಕುಲಾಂತಕ ಭಾರ್ಗವರೂಪ ॥೨॥ ಜಯ ವಿಶ್ರವಸಃ ಸುತವಿಧ್ವಂಸಿನ್ । ಜಯ ಕಂಸಾರೇ ಯದುಕುಲತಿಲಕ ॥ ಜಯ ವೃಂದಾವನಚರ ದೇವೇಶ । ದೇವಕಿನಂದನ ನಂದಕುಮಾರ ॥೩॥ ಜಯ ಗೋವರ್ಧನಧರ ವತ್ಸಾರೇ । ಧೇನುಕಭಂಜನ ಜಯ ಕಂಸಾರೇ ॥ ರುಗ್ಮಿಣಿನಾಯಕ ಜಯ ಗೋವಿಂದ । ಸತ್ಯಾವಲ್ಲಭ ಪಾಂಡವಬಂಧೋ ॥೪॥ ಖಗವರವಾಹನ ಜಯ ಪೀತಾರೇ । ಜಯ ಮುರಭಂಜನ ಪಾರ್ಥಸಖೇ ತ್ವಮ್ ॥ ಭೌಮವಿನಾಶಕ ದುರ್ಜನಹಾರಿನ್ । ಸಜ್ಜನ ಪಾಲಕ ಜಯ ದೇವೇಶ ॥೫॥ ಶುಭಗುಣಗಣ ಪೂರಿತ ವಿಶ್ವೇಶ । ಜಯ ಪುರುಷೋತ್ತಮ ನಿತ್ಯವಿಬೋಧ ॥ ಭೂಮಿಭರಾಂತಕ ಕಾರಣರೂಪ । ಜಯ ಖರಭಂಜನ ದೇವವರೇಣ್ಯ ॥೬॥ ವಿಧಿಭವಮುಖಸುರಸತತ ಸುವಂದಿತ । ಸಚ್ಚರಣಾಂಬುಜಕಂಜಸುನೇತ್ರ ॥ ಸಕಲಸುರಾಸುರನಿಗ್ರಹಕಾರಿನ್ । ಪೂತನಿಮಾರಣ ಜಯ ದೇವೇಶ ॥೭॥ ಯದ್ಭ್ರೂವಿಭ್ರಮಮಾತ್ರಾತ್ತದಿದ- । ಮಾಕಮಲಾ ಸನಶಂಭುವಿಪಾದ್ಯಂ । ಸೃಷ್ಟಿಸ್ಥಿತಿಲಯಮೃಚ್ಛತಿ ಸರ್ವಮ್ । ಸ್ಥಿರಚರವಲ್ಲಭ ಸತ್ವಂ ಜಯ ಭೋ ॥೮॥ ಜಯ ಯಮಳಾರ್ಜುನಭಂಜನ ಮೂರ್ತೇ । ಜಯ ಗೋಪೀಕುಚ ಕುಂಕುಮಾಂಕಿತಾಂಗ ॥ ಪಾಂಚಾಲೀಪರಿಪಾಲನ ಜಯ ಭೋ । ಜಯ ಗೋಪೀ ಜನರಂಜನ ಜಯ ಭೋ ॥೯॥ ಜಯ ರಾಸೋತ್ಸವರತ ಲಕ್ಷ್ಮೀಶ । ಸತತಸುಖಾರ್ಣವ ಜಯ ಕಂಜಾಕ್ಷ ॥ ಜಯ ಜನನೀಕರಪಾಶಸುಬದ್ಧ । ಹರಣಾನ್ನವನೀತಸ್ಯ ಸುರೇಶ ॥೧೦॥ ಬಾಲಕ್ರೀಡನಪರ ಜಯ ಭೋ ತ್ವಮ್ । ಮುನಿವರವಂದಿತಪದಪದ್ಮೇಶ ॥ ಕಾಲಿಯ ಫಣಿಫಣಮರ್ದನ ಜಯ ಭೋ ॥ ದ್ವಿಜಪತ್ನ್ಯರ್ಪಿತಮತ್ಸಿ ವಿಭೋಽನ್ನಮ್ ॥೧೧॥ ಕ್ಷೀರಾಂಬುಧಿ ಕೃತನಿಲಯನ ದೇವ । ವರದ ಮಹಾಬಲ ಜಯ ಜಯಕಾಂತ ॥ ದುರ್ಜನ ಮೋಹಕ ಬುದ್ಧಸ್ವರೂಪ । ಸಜ್ಜನ ಬೋಧಕ ಕಲ್ಕಿಸ್ವರೂಪ ॥೧೨॥ ಜಯ ಯುಗಕೃತದುರ್ಜನ ವಿಧ್ವಂಸಿನ್ । ಜಯ ಜಯ ಜಯ ಭೋ ಜಯ ವಿಶ್ವಾತ್ಮನ್ ॥೧೩॥ ಇತಿ ಮಂತ್ರಂ ಪಠನ್ನೇವ ಕುರ್ಯಾನ್ನೀರಾಜನಂ ಬುಧಃ ॥

* * * * *

# ದೀಪಾವಳಿ ಅಮಾವಾಸ್ಯೆ ಹಾಗೂ ಬಲಿಪಾಡ್ಯ ಹಬ್ಬದ ಅಡುಗೆಗಳು

## ಖರ್ಜೂರದ ಪಾಯಸ

ಖರ್ಜೂರಗಳನ್ನು ತಂದು ಬೀಜಗಳನ್ನು ತೆಗೆದು ಒರಳಲ್ಲಿ ಹಾಕಿ ಸಣ್ಣನಾಗಿ ಕುಟ್ಟಬೇಕು. ಆಮೇಲೆ ಒಂದು ಕಲಾಯದ ಪಾತ್ರೆಗೆ ನೀರು ಹಾಲು ಸಹ ಹಾಕಿ ಚೆನ್ನಾಗಿ ಕಾಯಿಸಿ ಈ ಖರ್ಜೂರದ ಪುಡಿಯನ್ನು ಹಾಕಿ ಚೆನ್ನಾಗಿ ಪಕ್ವ ಮಾಡಬೇಕು. ಚೆನ್ನಾಗಿ ಪಕ್ವವಾದ ಮೇಲೆ ಪುಡಿ ಸಕ್ಕರೆ ಹಾಕಿದರೆ ಖರ್ಜೂರದ ಪಾಯಸ ಸಿದ್ಧವಾಗುವುದು.

## ಕೊಬ್ಬರಿ ಹೋಳಿಗೆ

1 ಪಾವಿನಷ್ಟು ಒಣಕೊಬ್ಬರಿ ತುರಿಯನ್ನು ಅರ್ಧಪಾವು ನೆನೆದ ಅಕ್ಕಿಯನ್ನಾಗಲೀ, ರವೆಯನ್ನಾಗಲಿ ಹೊಂದಿಸಿ, ಒರಳಲ್ಲಿ ಹಾಕಿ ಕುಟ್ಟಿದ ಬಳಿಕ ಹದವಾಗಿ ತಿರುವಿ ಸಕ್ಕರೆಯನ್ನಾಗಲಿ ಬಿಳೀ ಬೆಲ್ಲವನ್ನಾಗಲಿ ಬೆರಸಿ, ಬಾಣಲೆಗೆ ತುಪ್ಪಹಾಕಿ ಸಣ್ಣ ಉರಿಯಲ್ಲಿ ಇದನ್ನು ಹುರಿದು, ಹೂರಣವನ್ನು ಮಾಡಿಕೊಂಡು, ಬಾಣಲೆಯನ್ನು ಕೆಳಗೆ ತೆಗೆದುಕೊಂಡು, ನಿಂಬೇಹಣ್ಣಿನ ಗಾತ್ರಕ್ಕೆ ಉಂಡೆಗಳನ್ನಾಗಿ ಮಾಡಿ ಬಟ್ಟೆಯನ್ನು ಹೊದ್ದಿಸಿಡಬೇಕು. ಒಂದು ಪಾವು ಹಸನಾದ ರವೆಯನ್ನಾಗಲಿ, ಗೋಧಿಯ ಹಿಟ್ಟನ್ನಾಗಲಿ ನೀರು ಹಾಕಿ ಕಲೆಸಿ ನಾದಿ ಕುಟ್ಟಿಡಬೇಕು. ಇದನ್ನು ಹಿತ್ತಾಳೆಯ ತಟ್ಟೆಯಲ್ಲಿ ಹಾಕಿ, ಎಳ್ಳೆಣ್ಣೆಯನ್ನು ಹಾಕಿ ಸವರಬೇಕು. ಇದರಲ್ಲಿ ಒಂದು ನಿಂಬೆಹಣ್ಣಿನ ಪ್ರಮಾಣದಷ್ಟನ್ನು ತೆಗೆದುಕೊಂಡು ಬಟ್ಟಲು ಮಾಡಿ, ಆದರೊಳಗೆ ಆ ಹೂರಣವನ್ನಿಟ್ಟು, ಮೇಲೆ ಮುಚ್ಚಿ ಚಂಡಿನಂತೆ ಮಾಡಿಡಬೇಕು - ಬಳಿಕ ಪೋಳುಪಾಟಿನಲ್ಲಿ, ಶೋಧಿಸಿದ ಅಕ್ಕಿಯ ಹಿಟ್ಟನ್ನು ಉದುರಿಸಿ, ಲಟ್ಟಣಿಗೆಯಿಂದ ತೆಳ್ಳಗೆ ದಪ್ಪ ಬಾಳೆಲೆಯಮಂದಕ್ಕೆ ಮೆಲ್ಲನೆ ಹರಿಯದಂತೆ ಲಟ್ಟಿಸಿ, ಕಾವಲಿಗೆ ಎಣ್ಣೆಯನ್ನು ಸವರಿ, ಪಕ್ವ ಮಾಡಿ ಮೊಗಚಿ ಹಾಕಿ,

ಹದವಾಗಿ ಬೇಯಿಸಿ, ಮೊಗಚುವ ಕೈಯಿಂದ ತೆಗೆದು, ಪರಾತದಲ್ಲಿ ಹಾಕಿ ಮುಚ್ಚಿಡುವುದು. ಹೀಗೆಯೇ ಎಲ್ಲವನ್ನೂ ಮಾಡುವುದು. ಬಾಳೆ ಎಲೆಗೆ ಎಣ್ಣೆ ಸವರಿ, ತೆಳ್ಳಗೆ ತಟ್ಟಿ, ಹದನಾಗಿ, ಮೃದುವಾಗಿ, ಪಕ್ವ ಮಾಡಿದರೆ ನೈವೇದ್ಯಕ್ಕೆ ಸಿದ್ಧವಾಗುವುದು.

## ಜಾಮೂನು

3-4 ಸೇರು ಹಾಲನ್ನು ಬಾಂಡ್ಲೆಗೆ ಹಾಕಿ ಕಾಯಿಸಬೇಕು. ಹೀಗೆ ಕಾಯಿಸುತ್ತಿದ್ದರೆ ಹಾಲು ಗಟ್ಟಿಯಾಗಿ ಕೆಂಪಗೆ ಆಗುವುದು ಸಣ್ಣ ಉರಿಮಾಡಿ ಪುನಃ ಕಾಯಿಸಿ ಸೌಟಿನಿಂದ ತೊಳಿಸುತ್ತಿದ್ದರೆ, ಕೆನೆ ಕಟ್ಟುವುದು. ಹೀಗೆ 1-2 ಘಂಟೆ ಹೊತ್ತು ಮಾಡಿದರೆ ಕೆನೆ ಚೆನ್ನಾಗಿ ಕಟ್ಟುವುದು. ಅದನ್ನು ತೆಗೆದು ಕೆಂಡದ ಮೇಲೆ ಇಡಬೇಕು. ಸ್ವಲ್ಪ ಹೊತ್ತಾದ ಮೇಲೆ ಹಾಲು ಗಟ್ಟಿಯಾಗುವುದು. ಈ ಕೆನೆಯನ್ನು ಬೇರೇ ಪಾತ್ರೆಗೆ ತೋಡಿಕೊಳ್ಳಬೇಕು. ಅದಕ್ಕೆ ಅರ್ಧಪಾವು ತುಪ್ಪದಲ್ಲಿ ಹುರಿದ ಗೋಧಿ ಹಿಟ್ಟನ್ನು ಹಾಕಿ ಚೆನ್ನಾಗಿ ಹೊಂದಿಸಿ ಗಟ್ಟಿಯಾಗುವಂತೆ ಮಾಡಬೇಕು.

ಆ ಬಳಿಕ ಇದನ್ನು ನೇರಳೆ ಹಣ್ಣಿನಂತೆ ಉದ್ದನಾಗಿ ಮಾಡಿ ಇಡಬೇಕು. ಎಲ್ಲವನ್ನು ಹೀಗೆ ಮಾಡಿಕೊಂಡು ಬಳಿಕ ಬಾಂಡ್ಲೆಗೆ 1 ಸೇರು ತುಪ್ಪ ಹಾಕಿ ಈ ಹಿಟ್ಟುಗಳ ಉಂಡೆಯನ್ನು ಹದನಾಗಿ ಕರಿದು ಜಾರೀ ಸೌಟಿನಿಂದ ತಟ್ಟೆಗೆ ತೋಡಿಕೊಳ್ಳಬೇಕು. ಎಲ್ಲವನ್ನು ಕರಿದ ಬಳಿಕ ಸಕ್ಕರೆ ಹಾಲು ಬೆರೆಸಿ ಪಾಕ ಮಾಡಿ ಆ ಪಾಕಕ್ಕೆ ಕರಿದ ಉಂಡೆಗಳನ್ನು ಹಾಕಿ ಹೊರಳಿಸಬೇಕು. ಅನಂತರ ಅವುಗಳನ್ನು ತೆಗೆದು 1 ತಟ್ಟೆಯಲ್ಲಿ ಸಮನಾಗಿ ಇಡುವುದು.

## ಗುಲಾಬ್ ಜಾಮೂನು

ಹಿಂದೆ ಹೇಳಿದ ಪ್ರಕಾರ ಹಾಲನ್ನು ಕಾಯಿಸಿ ಕೆನೆಯನ್ನು ಮಾಡಿಕೊಂಡು ತುಪ್ಪದಲ್ಲಿ ಹುರಿದ ಗೋಧಿಯ ಹಿಟ್ಟನ್ನು ಸ್ವಲ್ಪ ಹಾಕಿ ಕೈಗೆ ತುಪ್ಪ ಸವರಿ ಹಾಲ ಕೆನೆಯನ್ನು

ಮರ್ದಿಸಿ ಹೊಂದಿಸಿ ಹಿಂದೆ ಹೇಳಿದ ಪ್ರಕಾರ ಸಣ್ಣ ಸಣ್ಣ ಉಂಡೆಗಳನ್ನು ಮಾಡಿ ತುಪ್ಪದಲ್ಲಿ ಕರಿದ ನಂತರ ಹಾಲು ಸಕ್ಕರೆ ಪಾಕಕ್ಕೆ ಹಾಕಿ ಹೊಂದಿಸಿ ಪಾಕದಲ್ಲಿ ಹೊರಳಿಸಿ 1 ಪಾತ್ರೆಯಲ್ಲಿ ಸಮನಾಗಿ ತೆಗೆದಿಡುವುದು. ಗೋಧಿಯ ಹಿಟ್ಟನ್ನು ಹೆಚ್ಚಾಗಿ ಹಾಲ ಕೆನೆಯಿಂದಲೇ ಮಾಡುವುದು.

## ಖೋವಾ (ಹಾಲುಕೆನೆ) ಹೋಳಿಗೆ

4-5 ಸೇರು ಹಾಲನ್ನು ಅರ್ಧಕ್ಕೆ ಆಗುವಂತೆ ಚೆನ್ನಾಗಿ ಕಾಯಿಸಿ ಸೌಟಿನಿಂದ ಆಡಿಸುತ್ತಾ ಬರುವುದು. ಹೀಗೆ ಮಾಡುತ್ತಾ ಇದ್ದರೆ, ಹಾಲು ಕೆಂಪಗೆ ಆಗಿ ಅಟ್ಟುವುದು. ನೊರೆ ಬಾರದಂತೆ ಸೌಟಿನಿಂದ ಆಡಿಸಿ, ಹಾಲನ್ನು ತುಂಬಿ, ಆ ಪಾತ್ರೆಯಲ್ಲಿ ಮೇಲಕ್ಕೆ ಸುರಿಯುತ್ತಿರಬೇಕು. ಬಳಿಕ ಕೆಂಡದ ಮೇಲೆ ತುಂಬಿದ ಹಾಲಿನ ಪಾತ್ರೆಯನ್ನು ಇಟ್ಟು ಸೌಟಿನಿಂದ ಆಡಿಸುತ್ತಿದ್ದರೆ 1-2 ಘಂಟೆಯೊಳಗಾಗಿ ಹಾಲು ಗಟ್ಟಿಯಾಗಿ ಕೆನೆ ಮೇಲೆ ನಿಲ್ಲುವುದು. ಈ ಹಾಲಿನ ಕೆನೆಯಲ್ಲಿ ಸುಮಾರು 24 ಗ್ರಾಂ. ಅಥವಾ ಹೆಚ್ಚಾಗಿ ಬೇಕಾದರೂ ತೆಗೆದುಕೊಂಡು ಸರಿಯಾಗಿ ಸಕ್ಕರೆ ಹಾಕಿ ಕಲೆಸಿ ಹೂರಣವನ್ನು ಮಾಡುವುದು. ಅಳ್ಳಕನಾದರೆ ಸ್ವಲ್ಪ ಪಿಟ್ಟೆದ ಹಿಟ್ಟನ್ನು ಹುರಿದು ಹಾಕಿ ಕಲಸಿ, ಉಂಡೆಗಳನ್ನಾಗಿ ಮಾಡಿ ಹಿಂದೆ ಹೇಳಿರುವ ಕಣಕದಲ್ಲಿ ತುಂಬಿ ಹೋಳಿಗೆ ಮಾಡುವುದು. ನೈವೇದ್ಯಕ್ಕೆ ಸಿದ್ಧವಾಗುವುದು.

## ಬಾಸುಂದೆ

4 ಸೇರು ಹಾಲನ್ನು ಒಲೆಯ ಮೇಲಿಟ್ಟು ಕಾಯುಸುತ್ತಾ ಸೌಟಿನಿಂದ ಆಡಿಸುತ್ತಾ ಸುಮಾರು 1 ಸೇರಿಗೆ ತಿಳಿಸಿಕೊಂಡು 1 ಸೇರು ಹಸನಾದ ಸಕ್ಕರೆಯನ್ನು ಹಾಕಿ ಚೆನ್ನಾಗಿ ಹೊಂದಿಸಿದ ಬಳಿಕ ಪಾತ್ರೆಯನ್ನು ಕೆಳಗೆ ತೆಗೆದುಕೊಂಡು 3 ಗ್ರಾಂ. ಕಲ್ಲು ಸಕ್ಕರೆ ಹುಡಿ, ಇವನ್ನು ಹಾಕಿ ಹೊಂದಿಸಿ ಇದನ್ನು ಬೇರೊಂದು ಪಾತ್ರೆಯಲ್ಲಿ ಸುರಿದುಕೊಂಡು ಉಪಯೋಗಿಸುವುದು.

# ಮಂಡಿಗೆ

ಒಂದು ಸೇರು ಹಸನಾದ ರವೆಯನ್ನು ಕಲೆಸಿಡಬೇಕು. ಬಳಿಕ ಸ್ವಲ್ಪ ಅಕ್ಕಿಯ ಹಿಟ್ಟಿಗೆ ತುಪ್ಪ ಅಥವಾ ಬೆಣ್ಣೆಯನ್ನು ಹಾಕಿ ಕಲೆಸಿ ಇದನ್ನು ಆ ಕಣಕಕ್ಕೆ ಸವರಿ ಚೆನ್ನಾಗಿ ಕುಟ್ಟಿ ಹೀಗೆ 2-3 ವೇಳೆ ಕುಟ್ಟಿ ಹದವಾಗಿ ಕಣಕವು ನಾರಾಗಿ ಬರುವಂತೆ ಮಾಡಿಕೊಂಡು ಬೇಲದ ಹಣ್ಣಿನ ಗಾತ್ರಕ್ಕೆ ಉಂಡೆಗಳನ್ನು ಮಾಡಿಕೊಂಡು ತುಪ್ಪ ಸವರಿ ಬಾಳೆ ಎಲೆಯಲ್ಲಿ ಮುಚ್ಚಿಡಬೇಕು. ಶೋಧಿಸಿದ ಪುಡಿಸಕ್ಕರೆ, ಸುಮಾರು 3 ಸೇರನ್ನು ಹಾಕಿ ಇದಕ್ಕೆ ಸಮನಾಗಿ ತುಪ್ಪ ಅಥವಾ ಹಸನಾದ ಬೆಣ್ಣೆ ಇವನ್ನು ಸೇರಿಸಿ ಮರ್ದಿಸಿ ಹೂರಣವನ್ನು ಮಾಡಿಕೊಂಡು 1 ಬೇಲದ ಕಾಯಿಯ ಪ್ರಮಾಣಕ್ಕೆ ಉಂಡೆಗಳನ್ನು ಮಾಡಿಕೊಂಡು ಮುಚ್ಚಿಡಬೇಕು. ದೊಡ್ಡ ಗುಡಾಣವನ್ನು ತಂದು ಅದರ ಬಾಯಿಯನ್ನು ಸುತ್ತಲೂ ಮೆಲ್ಲಗೆ ಒಡೆದು ಒಲೆದು ಮೇಲಿಟ್ಟು ಸುತ್ತಲೂ ಮಣ್ಣನ್ನು ಮೆತ್ತಿ ಅದರೊಳಗೆ ಉರಿಮಾಡಿ ಈ ಗುಡಾಣದ ಮೇಲೆ ನುಣುಪಾದ ಕೆಂಮಣ್ಣು ಕಲಸಿ ತೆಳ್ಳಗೆ ಮೆತ್ತಿ ಕೆಳಗೆ ಉರಿಮಾಡಿ, ಈ ಗುಡಾಣವನ್ನು ಕಾಯಿಸುವುದು ಬಳಿಕ 1 ಪಾವು ಶೋಧಿಸಿದ ಅಕ್ಕಿಯ ಹಿಟ್ಟನ್ನು ಸಿದ್ಧಪಡಿಸಿ ದೊಡ್ಡ ಪೋಳಪಾಟಿನ ಮೇಲೆ ಅಥವಾ ಚೌಕವಾಗಿರುವ ಮಣೆಯ ಮೇಲೆ ಕಣಕದ ಉಂಡೆಗಳನ್ನು ಬಟ್ಟಲು ಮಾಡಿ ಆ ಹೂರಣವನ್ನಿಟ್ಟು ಸುತ್ತಲೂ ಮುಚ್ಚಿ ಈ ಉಂಡೆಯನ್ನು ಅಕ್ಕಿಯ ಹಿಟ್ಟಿನಲ್ಲಿ ಹೊರಳಿಸಿ ತೆಳ್ಳಗೆ ಹೋಳಿಗೆಯಂತೆ ಲಟ್ಟಿಸಿದ ಬಳಿಕ ಎರಡು ಬಿದಿರು ದಬ್ಬೆಗಳ ಮೂಲಕ ಎರಡು ಕೈಗಳ ಮೇಲೆ ತೆಗೆದುಕೊಂಡು, ಮೆಲ್ಲಗೆ ಸುತ್ತಲೂ ಅಗಲವಾಗುವಂತೆ ಅಗಲಿಸಿ ಅಗಲಿಸಿ ಓಡಿಗೆ ಪೊರಕೆಯಿಂದ ತುಪ್ಪವನ್ನು ಸವರಿ ಇದನ್ನು ಅದರ ಮೇಲೆ ಮೆಲ್ಲಗೆ ಹರಿಯದಂತೆ ಹಾಕಿ ಪಕ್ವ ಮಾಡಿ ಪುನಃ ಮೊಗಚಿ ಪಕ್ವ ಮಾಡಿ ಮುರಿಯದಂತೆ ತೆಗೆದಿಟ್ಟರೆ ನೈವೇದ್ಯಕ್ಕೆ ಸಿದ್ಧವಾಗುತ್ತದೆ.

* * * * *

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ಅಮಾವಾಸ್ಯೆ ಹಾಗೂ ಬಲಿಪಾಡ್ಯ ಪೂಜೆ ಎಂಬ ಈ ಕೃತಿಯು
ಅಸ್ಮದ್ಗುರ್ವಂತರ್ಗತರಾದ ಹನುಮದ್ಭೀಮಮಧ್ವಾಂತರ್ಗತರಾದ
ರಾಮಕೃಷ್ಣವೇದವ್ಯಾಸರೂಪಿಯಾದ ಶ್ರೀಲಕ್ಷ್ಮೀಹಯಗ್ರೀವದೇವರ
ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ



ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ).

ಗಿರಿನಗರ, ಬೆಂಗಳೂರು - 560 085

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಆಶ್ವೀನಮಾಸ–ಕಾರ್ತೀಕಮಾಸ ಮಾರ್ಗಶಿರಮಾಸ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಆಶ್ವೀನಮಾಸ-ಕಾರ್ತೀಕಮಾಸ ಮಾರ್ಗಶಿರಮಾಸ

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯ ಸಿದ್ಧಾಂತ ಪ್ರತಿಷ್ಠಾನ (ರಿ),
ಬೆಂಗಳೂರು

''ಆಶ್ವೀನಮಾಸ-ಕಾರ್ತೀಕಮಾಸ ಮಾರ್ಗಶಿರಮಾಸ'' ಶಾರ್ವರಿ ॥ ಶ್ರಾವಣ ॥ ಶುದ್ಧ ಹುಣ್ಣಿಮೆ, (ದಿನಾಂಕ : 3-8- 2020) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಶ್ರೀಶ್ರೀವಿದ್ಯಾಧೀಶತೀರ್ಥಶ್ರೀಪಾದರ ಕರಕಮಲಗಳ ಮೂಲಕ ಭಾರತೀರಮಣಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : 2020



ಪ್ರಕಾಶಕರು : ಜಗದ್ಗುರು ಶ್ರೀಮಧ್ವಾಚಾರ್ಯ ಸಿದ್ಧಾಂತ ಪ್ರತಿಷ್ಠಾನ (ರಿ)
4171, 2ನೇ ಮೇನ್, ಗಿರಿನಗರ, ಸೀತಾಸರ್ಕಲ್ ಹತ್ತಿರ, ಬೆಂಗಳೂರು-85
ದೂರವಾಣಿ : 9141495120

ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಪ್ರತಿಗಳು : 1000
ಪುಟಗಳು : vi + 128

ಅಕ್ಷರಜೋಡಣೆ : ಸುಬ್ಬಣ್ಣ ಕೆಂಪದಾಳಿಹಳ್ಳಿ ,
9141311280

ಮುಖಪುಟ – ಶ್ರೀವಿಶ್ವಾತ್ಮಾ, ಕಾರ್ತಿಕಜೋಷಿ.

ಮುದ್ರಣ :
ಮುಕ್ತಿಪಥ ಮುದ್ರಣಾಲಯ,
(ಪಿ. ಮಂಜುನಾಥ)
ಬೆಂಗಳೂರು.



ಕಠಿಣ ಪರಿಶ್ರಮದಲ್ಲಿ ಜೀವನ ಸಾಗಿಸಿ ನಮ್ಮನ್ನೆಲ್ಲ ಸಂಸ್ಕಾರವಂತರನ್ನಾಗಿ ಮಾಡಿ ಉತ್ತಮ ವಿದ್ಯೆ ನೀಡಿ ಜೀವನದ ದಾರಿದೀಪರಾದ ದಿವಂಗತ ಶ್ರೀ ಅರವಿಂದಾಚಾರ್ಯ ರಾಘವೇಂದ್ರಾ-ಚಾರ್ಯ ಕಟ್ಟಿ, ಅಥಣಿ (1935 - 2017) ಇವರ ಆಶೀರ್ವಾದ ನಮ್ಮ ಮೇಲೆ ನಿರಂತರ ಇರಬೇಕೆಂಬ ಉದ್ದೇಶದಿಂದ ಈ ಜ್ಞಾನಸೇವೆಯನ್ನು ಆಚರಿಸಲಾಗಿದೆ. ಇದರಿಂದ ಪ್ರಾಪ್ತವಾ-ಗುವ ಪುಣ್ಯರಾಶಿಯು ಇವರಿಗೆ ತಲುಪಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀಶ್ರೀಧರ ಕಟ್ಟಿ, ಕುಂ॥ ಸೌ॥ ಸಪ್ನಾ

---

## ವಿಷಯಾನುಕ್ರಮಣಿಕೆ

### ಆಶ್ವೀನಮಾಸ



### ಕಾರ್ತಿಕಮಾಸ

ಮಾರ್ಗಶಿರಮಾಸ



★ ★ ★ ★

# ಮುನ್ನುಡಿ

ಆಶ್ವೀನಮಾಸ, ಕಾರ್ತೀಕಮಾಸ ಹಾಗೂ ಮಾರ್ಗಶಿರ ಮಾಸದ ಎಲ್ಲ ವಿಷಯಗಳನ್ನು ಈ ಕೃತಿಯಲ್ಲಿ ಸಂಗ್ರಹಮಾಡಲಾಗಿದೆ. ಏಕಾದಶಿಯ ಬಗ್ಗೆ ಸಾಕಷ್ಟು ವಿಚಾರಗಳನ್ನು ಈ ಕೃತಿಯಿಂದ ತಿಳಿದುಕೊಳ್ಳಬಹುದು. ಸುಬ್ರಹ್ಮಣ್ಯ ಷಷ್ಠಿಯ ಬಗ್ಗೆ ಹಾಗೂ ಸುಬ್ರಹ್ಮಣ್ಯನ ಆರಾಧನೆಯ ಬಗ್ಗೆ ಇಲ್ಲಿ ಪರಿಪೂರ್ಣವಾಗಿ ತಿಳಿದುಕೊಳ್ಳಬಹುದು. ದತ್ತಾತ್ರೇಯ, ಧನ್ವಂತರಿ ಮೊದಲಾದ ಭಗವದವತಾರಗಳ ಬಗ್ಗೆಯೂ ಪ್ರಶ್ನೋತ್ತರರೂಪದಲ್ಲಿ ಅನೇಕ ವಿಚಾರಗಳನ್ನು ನೀಡಲಾಗಿದೆ. ನವರಾತ್ರಿ , ದೀಪಾವಳಿ, ಉತ್ಥಾನದ್ವಾದಶೀ, ಕಾರ್ತೀಕದೀಪೋತ್ಸವ ಹಾಗೂ ಧಾತ್ರೀಹವನ ಈ ಎಲ್ಲ ವಿಚಾರಗಳ ಬಗ್ಗೆ ಪ್ರತ್ಯೇಕ ಪುಸ್ತಕಗಳನ್ನು ಮಾಡಿರುವುದರಿಂದ ಈ ಕೃತಿಯಲ್ಲಿ ಅವುಗಳ ಬಗ್ಗೆ ಹೆಚ್ಚಿನ ವಿಚಾರವು ದೊರಕುವುದಿಲ್ಲ. ಈ ಎಲ್ಲ ವಿಚಾರಗಳಿಗಾಗಿ ಪ್ರತ್ಯೇಕ ಪುಸ್ತಕಗಳಲ್ಲಿ ನೀವು ನೋಡಬೇಕು. ಈ ಕೃತಿಯಲ್ಲಿರುವ ಅನೇಕ ವಿಚಾರಗಳನ್ನು ಸಂಗ್ರಹ ಮಾಡಿಕೊಟ್ಟ ವಿದ್ವಾನ್ ಸಿ.ಆರ್.ಪ್ರದೀಪಸಿಂಹಾಚಾರ್ಯರಿಗೆ ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಹಾಗೂ ಗುರುಚರಿತ್ರೆ ಪುಸ್ತಕಕ್ಕೂ ಕೂಡ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಈ ಪುಸ್ತಕದ ಡಿ.ಟಿ.ಪಿ. ಕಾರ್ಯದಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡು ಉತ್ತಮಸಲಹೆಗಳನ್ನು ನೀಡಿ ಅನೇಕ ವಿಷಯಗಳ ಯಥಾರ್ಥತೆಗೆ ಕಾರಣರಾದ ಸುಬ್ಬಣ್ಣ.ಕೆಂಪದಾಳಿಹಳ್ಳಿ ಇವರಿಗೂ ಅನಂತ ಅಭಿನಂದನೆಗಳು.

ಹರಿಭಕ್ತರಾದ ಉತ್ತಮದಾನಿಗಳಾದ ಶ್ರೀಶ್ರೀಧರ ಕಟ್ಟಿ ಹಾಗೂ ಕುಂ॥ ಸೌ॥ ಸಪ್ನಾ ಇವರು ಈ ಕೃತಿಯ ಸೇವೆಯನ್ನು ತಮ್ಮ ತಂದೆಯ ಸ್ಮರಣಾರ್ಥವಾಗಿ ಮಾಡಿರುತ್ತಾರೆ. ಇವರ ಈ ಸೇವೆಯನ್ನು ಶ್ರೀಹರಿವಾಯುಗುರುಗಳು ಮೆಚ್ಚುತ್ತಾರೆ. ಸಂಪೂರ್ಣವಾಗಿ ಅನುಗ್ರಹವನ್ನು ಕೂಡ ಮಾಡುತ್ತಾರೆ ಎಂಬ ವಿಷಯದಲ್ಲಿ ಸಂಶಯವೇ ಇಲ್ಲ. ಇವರಿಂದ ಇನ್ನೂ ಅನೇಕ ಸಾಧನೆಗಳು ಹೆಚ್ಚಿನ ಮಟ್ಟದಲ್ಲಿ ನಡೆಯಲಿ ಎಂದು ಪ್ರಾರ್ಥಿಸುತ್ತಾ, ಜ್ಞಾನಭಕ್ತಿವೈರಾಗ್ಯಗಳು ಪ್ರಾಪ್ತವಾಗಲಿ. ಭಗವದನುಗ್ರಹವು ಉಂಟಾಗಲಿ ಎಂದು ಪ್ರಾರ್ಥಿಸುವುದರ ಜೊತೆಯಲ್ಲಿ ಈ ಸೇವೆಯಿಂದ ಪ್ರಾಪ್ತವಾಗುವ ಪುಣ್ಯರಾಶಿಯು ದಿ॥ ಶ್ರೀ ಅರವಿಂದಾಚಾರ್ಯ ರಾಘವೇಂದ್ರಾ-ಚಾರ್ಯ ಕಟ್ಟಿ ಇವರಿಗೆ ತಲುಪಲಿ ಎಂದು ಶ್ರೀಹರಿವಾಯುಗುರುಗಳಲ್ಲಿ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ ॥

# ಆಶ್ವೀನಮಾಸ

ಮಾಸನಿಯಾಮಕ ಯಜ್ಞಾಪತಿಪದ್ಮನಾಭಾಯ ನಮಃ

## ಆಶ್ವೀನ ॥ ಶುದ್ಧ ॥ ಪ್ರತಿಪತ್

ಇಂದು ವೇಂಕಟೇಶ ಕಲ್ಯಾಣ ಪಾರಾಯಣದ ಪ್ರಾರಂಭವನ್ನು ಮಾಡಬೇಕು. ದುರ್ಗಾದೇವಿಯ ಪೂಜೆಯನ್ನು ಪ್ರಾರಂಭ ಮಾಡಬೇಕು. ಅಂಕುರಘಟಸ್ಥಾಪನೆಯನ್ನು ಮಾಡಬೇಕು. ಕುಮಾರಿ ಪೂಜೆ ಮಾಡಬೇಕು. ಅಖಂಡದೀಪೋತ್ಸವವನ್ನು ಪ್ರಾರಂಭ ಮಾಡಬೇಕು. ಅಶೋಕವೃಕ್ಷದ ಪೂಜೆಯನ್ನು ಮಾಡಬೇಕು. ಚತುರ್ವೇದಪಾರಾ-ಯಣವನ್ನು ಆಚರಿಸಬೇಕು. ಭಾಗವತಗ್ರಂಥವನ್ನು ಪಾರಾಯಣ ಮಾಡಬೇಕು. ಪುತ್ಥಲಿಕಾಪೂಜೆಯನ್ನು ಆರಂಭಿಸಬೇಕು. (ಬೊಂಬೆಯಿಟ್ಟು ಪೂಜಿಸಬೇಕು). ಬಾಗಿಣ ದಾನವನ್ನು ಕೊಡಲು ಪ್ರಾರಂಭಿಸಬೇಕು. ಅಧಿಕಾರಿಗಳು ಮಾತಾಮಹಶ್ರಾದ್ಧವನ್ನು ಮಾಡಬೇಕು.

ಶ್ರೀ ವಿಜಯಮಾಧವತೀರ್ಥರು (ಮಾಧವತೀರ್ಥ ಮಠ) ಆಶ್ವೀನ ಶುದ್ಧ ಪ್ರತಿಪತ್- ಮಾಧವಪುರ. ಸದಾ ವಿಜಯಶೀಲಂ ತಂ ಪ್ರಸನ್ನೀಕೃತರಾಘವಮ್ । ವಿಜಯಾಖ್ಯಮಾಧವಂ ವಂದೇ ವಿಜಯಧ್ವಜಕಾರಿಣಮ್ ॥

## ಆಶ್ವೀನ ॥ ಶುದ್ಧ ॥ ದ್ವಿತೀಯಾ

ಚಂದ್ರದರ್ಶನವನ್ನು ಮಾಡುವುದರಿಂದ ವಿಶೇಷಫಲವು ಉಂಟಾಗುತ್ತದೆ. ಹಾಗೂ ಅನೇಕ ಅಪವಾದದೋಷಗಳು ಕಳಂಕದೋಷಗಳು ಪರಿಹಾರವಾಗುತ್ತವೆ. ಚಂದ್ರದರ್ಶನ ಮಾಡುವಾಗ ಈ ಶ್ಲೋಕಗಳನ್ನು ಪಠನೆ ಮಾಡಬೇಕು – ಶ್ವೇತಾಂಬರಃ ಶ್ವೇತವಪುಃ ಶಶಾಂಕಃ ಶ್ವೇತದ್ಯುತಿಃ ದಂಡಧರೋ ದ್ವಿಬಾಹುಃ । ಚಂದ್ರೋಽಮೃತಾತ್ಮಾ ವರದಃ ಕಿರೀಟೀ ಶ್ರೇಯಾಂಸಿ ಮಹ್ಯಂ ವಿದಧಾತು ದೇವಃ ॥ ಪರಸ್ಯ ಯೋಗ್ಯತಾ-ಪೇಕ್ಷಾರಹಿತೋ ನಿತ್ಯಮಂಗಲಮ್ । ದದಾತ್ಯೇವ ನಿಜೌದಾರ್ಯಾತ್ ಯಸ್ತಂ ಭದ್ರಂ ನಮಾಮ್ಯಹಮ್ ॥ ರೋಹಿಣೀಶ ಸುಧಾಮೂರ್ತೇ ಸುಧಾರೂಪ

ಸುಧಾಶನ । ಸೋಮ ಸೌಮ್ಯೋ ಭವಾಸ್ಮಾಕಂ ಸರ್ವಾರಿಷ್ಟಂ ವಿನಾಶಯ ॥ ರೋಹಿಣೀಶ ಸುಧಾಮೂರ್ತಿಃ ಸುಧಾಗಾತ್ರ ಸುಧಾಶನ । ವಿಷಮಸ್ಥಾನಸಂಭೂತಾಂ ಪೀಡಾಂ ಹರತು ಮೇ ವಿಧುಃ ॥

## ಆಶ್ವೀನ ॥ ಶುದ್ಧ ॥ ತೃತೀಯಾ

ಪ್ರತಿಪತ್ ದಿವಸ ನವರಾತ್ರಿ ಉತ್ಸವವು ಪ್ರಾರಂಭವಾದರೆ ಇಂದು ಸಪ್ತ-ರಾತ್ರೋತ್ಸವವು ಪ್ರಾರಂಭವಾಗುತ್ತದೆ. ನವರಾತ್ರಿಯ ಆಚರಣೆಯು ಯಾರಿಗೆ ಸಾಧ್ಯವಾಗುವುದಿಲ್ಲವೋ ಅವರು ಇಂದು ಸಪ್ತರಾತ್ರೋತ್ಸವವನ್ನು ಪ್ರಾರಂಭ ಮಾಡಬೇಕು. ಮತ್ತು ಇಂದು ವಾಯುಸ್ತುತಿ ಪುರಶ್ಚರಣೆಯನ್ನು ಪ್ರಾರಂಭ ಮಾಡಿ ನವಮಿಯಂದು ಮುಕ್ತಾಯಗೊಳಿಸಿ ವಿಜಯದಶಮೀಯಂದು ವಾಯುಸ್ತುತಿ ಪುರಶ್ಚರಣೆಯ ಹೋಮವನ್ನು ಮಾಡಬೇಕು. ಇದರಿಂದ ಶ್ರೀಮದಾಚಾರ್ಯರ ಪೂರ್ಣಾನುಗ್ರಹವು ಉಂಟಾಗುತ್ತದೆ.

ಬೃಹದ್‌ಗೌರೀವ್ರತ – ಇಂದು ಬೃಹತೀವೃಕ್ಷದಲ್ಲಿ ನೆಲೆಸಿರುವ ಗೌರಿಯನ್ನು ಪೂಜೆ ಮಾಡಬೇಕು. ಆದ್ದರಿಂದ ಇದನ್ನು ಬೃಹದ್ಗೌರೀವ್ರತ ಎಂದೇ ಕರೆಯುತ್ತಾರೆ. ಆದರೆ ಭಾದ್ರಪದ ಮಾಸದ ಕೃಷ್ಣಪಕ್ಷದ ತೃತೀಯಾ ದಿವಸ ಇದನ್ನು ಆಚರಿಸ-ಬೇಕೆಂದು ವ್ರತರಾಜವು ಹೇಳುತ್ತದೆ.

## ಆಶ್ವೀನ ॥ ಶುದ್ಧ ॥ ಚತುರ್ಥೀ

**(ಕಪರ್ದಿವಿನಾಯಕ ಪೂಜೆ)** – ಗಣಪತಿಯನ್ನು ಕಪರ್ದಿವಿನಾಯಕ ಎಂಬ ಹೆಸರಿನಿಂದ ಪೂಜಿಸಿ ಅರ್ಚಿಸಬೇಕು. ಹುಲಿಯ ಚರ್ಮವನ್ನು ಧರಿಸಿದ ಗಣಪತಿ-ಯನ್ನು ಪೂಜಿಸಬೇಕು. ರುದ್ರದೇವರು ಇಂದು ಗಣಪತಿಗೆ ವಿಶೇಷಾನುಗ್ರಹವನ್ನು ಉಂಟು ಮಾಡಿದ್ದಾರೆ.

## ಆಶ್ವೀನ ॥ ಶುದ್ಧ ॥ ಪಂಚಮೀ

ಲಲಿತಾಪಂಚಮೀ – ಶರದಾಶ್ವಯುಜೇ ಬ್ರಹ್ಮನ್ ಪಂಚಮ್ಯಾಂ ಚ ವಿಶೇಷತಃ । ಉಪಾಂಗಲಲಿತಾದೇವ್ಯಾ ವ್ರತಂ ತ್ರೈಲೋಕ್ಯದುರ್ಲಭಮ್ ॥ ಎಂಬ ಮಾತಿನಂತೆ

ಮೂರುಲೋಕದಲ್ಲಿಯೇ ದುರ್ಲಭವಾದ ಲಲಿತಾದೇವಿಯನ್ನು ಇಂದು ಪೂಜಿಸ-ಬೇಕು. ಲಲಿತಾಪಂಚಮೀಪೂಜಾಕ್ರಮವನ್ನು ವ್ರತರಾಜವು ಉಲ್ಲೇಖ ಮಾಡುತ್ತದೆ.

ಇಂದು ಪಂಚರಾತ್ರೋತ್ಸವವು ಪ್ರಾರಂಭವಾಗುತ್ತದೆ. ನವರಾತ್ರೋತ್ಸವ, ಸಪ್ತ-ರಾತ್ರೋತ್ಸವವನ್ನು ಪ್ರಾರಂಭ ಮಾಡಲು ಆಗದಿರುವವರು ಇಂದು ಪಂಚ-ರಾತ್ರೋತ್ಸವವನ್ನು ಪ್ರಾರಂಭ ಮಾಡಬೇಕು.

## ಆಶ್ವೀನ ॥ ಶುದ್ಧ ॥ ಷಷ್ಠೀ

**ಕಾತ್ಯಾಯನೀವ್ರತ** – ಗೋಪಿಕಾಸ್ತ್ರೀಯರು ಶ್ರೀಕೃಷ್ಣನನ್ನೇ ಪತಿಯನ್ನಾಗಿ ಪಡೆಯುವುದಕ್ಕಾಗಿ ಇಂದು ಕಾತ್ಯಾಯಿನೀವ್ರತವನ್ನು ಆಚರಣೆ ಮಾಡಿದರು. ಮಣ್ಣಿನಲ್ಲಿ ಗೌರೀದೇವಿಯನ್ನು ತಯಾರಿಸಿ ವಿವಾಹಿತಸ್ತ್ರೀಯರು ಕಾತ್ಯಾಯಿನೀ ಗೌರಿಯನ್ನು ಪೂಜಿಸಬೇಕು. ಇದರಿಂದ ಸತ್ಪುತ್ರರು ಜನಿಸುತ್ತಾರೆ. ವಿವಾಹವಾಗದೇ ಇರುವವರು ಈ ವ್ರತವನ್ನು ಆಚರಣೆ ಮಾಡುವುದರಿಂದ ಉತ್ತಮಪತಿಯು ದೊರಕುತ್ತಾನೆ.

## ಆಶ್ವೀನ ॥ ಶುದ್ಧ ॥ ಸಪ್ತಮೀ

ಮೂಲಾನಕ್ಷತ್ರವಿದ್ದರೆ ಇಂದು ಸರಸ್ವತೀಪೂಜೆಯನ್ನು ಪ್ರಾರಂಭ ಮಾಡಬೇಕು. ಕೆಲವೊಮ್ಮೆ ಮೂಲಾನಕ್ಷತ್ರವು ಷಷ್ಠೀ ದಿವಸವು ಕೂಡ ಬರುತ್ತದೆ. ಇಂದು ಸರಸ್ವತೀ ದೇವಿಯನ್ನು ಆವಾಹನೆ ಮಾಡಬೇಕು. ಮರುದಿವಸ ಪೂಜೆಮಾಡಬೇಕು. ಅದರ ಮರುದಿವಸ ವಿಸರ್ಜನೆ ಮಾಡಬೇಕು. ಹಾಗೂ ಸರಸ್ವತೀದೇವಿಯನ್ನು ಆವಾಹನೆ ಮಾಡಿದ ಮೇಲೆ ಅಧ್ಯಯನವನ್ನು ನಿಲ್ಲಿಸಬೇಕು. ಸರಸ್ವತೀಪೂಜೆಯ ಹೆಚ್ಚಿನ ವಿಚಾರಕ್ಕಾಗಿ ನಮ್ಮ ಸಂಸ್ಥೆಯಿಂದ ಪ್ರಕಟನೆಗೊಂಡ ಸರಸ್ವತೀಪೂಜೆ ಎಂಬ ಪುಸ್ತಕ-ವನ್ನು ನೋಡಿರಿ.

**ಪಂಚಗವ್ಯಪ್ರಾಶನ** – ಇಂದು ಪಂಚಗವ್ಯವನ್ನು ಮಾಡಿ ಅವಶ್ಯವಾಗಿ ಪ್ರಾಶನ ಮಾಡಬೇಕು. ಸೂರ್ಯವ್ರತ ಇರುವ ದಿವಸ ಪಂಚಗವ್ಯಪ್ರಾಶನಕ್ಕೆ ವಿಶೇಷವಿಧಾನವಿದೆ. ಹಾಗೂ ಸಕಲ ರೋಗಗಳು ಇದರಿಂದ ಪರಿಹಾರವಾಗುತ್ತದೆ.

**ಶುಭಸಪ್ತಮೀ** – ಈ ದಿನವನ್ನು ಶುಭಸಪ್ತಮೀ ಎಂದು ಕರೆಯುತ್ತಾರೆ. ಸೂರ್ಯನಾರಾಯಣನನ್ನು ಕುರಿತು ಪೂಜೆಯನ್ನು ಮಾಡಬೇಕು. ಗಾಯತ್ರೀ ಮಂತ್ರವನ್ನು ವಿಶೇಷವಾಗಿ ಜಪಿಸಬೇಕು. ಹಾಗೂ ಗಾಯತ್ರೀಹೋಮವನ್ನು ಮಾಡಬೇಕು. ಸೂರ್ಯನ ಮೂಲಕ ಆರೋಗ್ಯವನ್ನು ಪಡೆದುಕೊಳ್ಳಬೇಕು. ಸೂರ್ಯಪ್ರೀತಿಗಾಗಿ ಗೋದಾನವನ್ನು ಮಾಡಬೇಕು ಗೋಪೂಜೆ ಮಾಡಬೇಕು.

**ಬಿಲ್ವಶಾಖಾ ಪೂಜೆ** – ವ್ರತರಾಜವು ಬಿಲ್ವಶಾಖಾ ಪೂಜೆಯನ್ನು ಇಂದು ವಿಧಾನ ಮಾಡುತ್ತದೆ. ಬಿಲ್ವಮರದ ಬಳಿ ತೆರಳಿ ಇಂದು ಪೂಜೆಯನ್ನು ಮಾಡ-ಬೇಕು.

**ಶ್ರೀ ವೈರಾಗ್ಯನಿಧಿತೀರ್ಥರು (ಶ್ರೀಪಾದರಾಜ ಮಠ) ಮುಳಬಾಗಿಲು** – ವೈರಾಗ್ಯಾದಿಗುಣೋಪೇತಂ ಭಕ್ತವೈರಾಗ್ಯದಂ ಮುನಿಮ್ । ನರಸಿಂಹತಟಾವಾಸಂ ವೈರಾಗ್ಯನಿಧಿಮಾಭಜೇ ॥

**ಶ್ರೀ ಸತ್ಯಪರಾಯಣತೀರ್ಥರು (ಉತ್ತರಾದಿ ಮಠ)ಆಶ್ವಯುಜ ಶುಕ್ಲ ಸಪ್ತಮೀ** – ಸತ್ಯಸಂತುಷ್ಟದುಗ್ಧಾಬ್ಧೇಃ ಜಾತಃ ಸತ್ಯಪರಾಯಣಃ । ಚಿಂತಾಮಣಿಃ ಸದಾ ಭೂಯಾತ್ ಸತಾಂ ಚಿಂತಿತಸಿದ್ಧಯೇ ॥ ಕರ್ನಾಟಕದ ಹಾವೇರಿಯಲ್ಲಿ ಜನಿಸಿ, ಗುರುರಾಜಾಚಾರ್ಯರೆಂದು ಗುರುತಿಸಿಕೊಂಡು, ಶ್ರೀ ಸತ್ಯಸಂತುಷ್ಟ-ತೀರ್ಥರಿಂದ ತುರ್ಯಾಶ್ರಮವನ್ನು ಸ್ವೀಕರಿಸಿ ಶ್ರೀ ಸತ್ಯಪರಾಯಣತೀರ್ಥರು ಎಂದು ಪೀಠವನ್ನಾಳಿದರು. ಉತ್ತರ ಭಾರತದ ಅನೇಕ ಕಡೆಗಳಲ್ಲಿ ಸಂಚರಿಸಿ ವಾದಿನಿಗ್ರಹ ಮಾಡಿದರು. ತೀರ್ಥಕ್ಷೇತ್ರಗಳ ಸಂದರ್ಶನವನ್ನು ಮಾಡಿದರು. ಶಿಷ್ಯಸಂಪತ್ತನ್ನೂ, ದ್ರವ್ಯಸಂಪತ್ತನ್ನೂ ವೃದ್ಧಿಗೊಳಿಸಿದರು. ಪೇಶ್ವೆ ಬಾಜಿರಾವ ಮತ್ತು ಮೈಸೂರಿನ ಒಡೆಯರು ಇವರನ್ನು ಗೌರವಿಸಿದರು. ಶ್ರೀಮಠಕ್ಕೆ ಕಾಣಿಕೆಯನ್ನೂ ಸಮರ್ಪಿಸಿದರು. ಬ್ರಿಟಿಷರ ಕಾಲದಲ್ಲಿ ಅನಿರ್ಬಂಧಿತವಾಗಿ ಸಂಚಾರ ಮಾಡಲು ಅನುಮತಿಯನ್ನು ಗುರುಗಳ, ಶ್ರೀರಾಮದೇವರ ಅನುಗ್ರಹದಿಂದ ಪಡೆದಿದ್ದರು. ನಿರಂತರ ಪಾಠ-ಪ್ರವಚನ, ಮುದ್ರಾಧಾರಣಗಳಲ್ಲೇ ರತರಾಗಿದ್ದರು. ಹೈದ್ರಾಬಾದ್ನಲ್ಲಿ ಶ್ರೀ ಹನುಮಂತ-ದೇವರ ವಿಗ್ರಹವನ್ನು ಪ್ರತಿಷ್ಠಾಪಿಸಿದರು. ಶಿಷ್ಯಸ್ವೀಕಾರದ ನಂತರ ಸಂತೇಬಿದನೂರಿನಲ್ಲಿ ಆಶ್ವಿನ ಶುದ್ಧ ಸಪ್ತಮೀಯಂದು ವೃಂದಾವನಸ್ಥರಾದರು.

# ಆಶ್ವೀನ || ಶುದ್ಧ || ಅಷ್ಟಮೀ

## ದುರ್ಗಾಷ್ಟಮೀ

ಇಂದು ದುರ್ಗೆಯನ್ನು ವಿಶೇಷವಾಗಿ ಪ್ರತಿಯೊಬ್ಬರೂ ಆರಾಧನೆ ಮಾಡಲೇಬೇಕು. ಬ್ರಹ್ಮಚಾರಿಣೀ ಎನಿಸಿದ ಲಕ್ಷ್ಮಿಯ ದುರ್ಗಾರೂಪವನ್ನು ಆರಾಧನೆ ಮಾಡುವುದಕ್ಕಾಗಿ ನಮ್ಮ ಸಂಸ್ಥೆಯಿಂದ ಪ್ರಕಟನೆಗೊಂಡ ದುರ್ಗಾ-ಷ್ಟಮೀ ಎಂಬ ಪುಸ್ತಕವನ್ನು ನೋಡಿರಿ.

ಶ್ರೀರಘುವರತೀರ್ಥರು (ಪಲಿಮಾರು ಮಠ) ಆಶ್ವಯುಜ ಶುದ್ಧ ಅಷ್ಟಮಿ ಪರಂಪರೆಯಲ್ಲಿ ಇಪ್ಪತ್ತೆರಡನೆಯವರು ಶಾಸ್ತ್ರವಚನ, ವ್ರತಾನುಷ್ಠಾನಗಳಲ್ಲಿ ಕಾಲ ಕಳೆದವರು. ಒಂದೂವರೆ ದಶಕಗಳ ಕಾಲ ಈ ಪೀಠದಲ್ಲಿದ್ದು ಶಾ.ಕ. 1688 (ಕ್ರಿ .ಶ. 1765) ಪಾರ್ಥಿವ ಸಂವತ್ಸರದ ಆಶ್ವಯುಜ ಶುದ್ಧ ಅಷ್ಟಮಿಯಂದು ಪಲಿಮಾರಿನಲ್ಲಿ ವೃಂದಾವನಸ್ಥರಾದರು.

ಶ್ರೀಸತ್ಯಪರಾಕ್ರಮತೀರ್ಥರು (ಉತ್ತರಾದಿ ಮಠ)ಆಶ್ವಯುಜ ಶುಕ್ಲ ಅಷ್ಟಮೀ ಸತ್ಯೇಷ್ಟಾರ್ಯಸರಿನ್ನಾಥಾದುದ್ಭೂತೋದ್ಭುತದರ್ಶನಃ । ನಾಶಯೇತ್ ಹೃದಯ-ಧ್ವಾಂತಂ ಸತ್ಪರಾಕ್ರಮಕೌಸ್ತುಭಃ ॥ ಪೂರ್ವಾಶ್ರಮದ ಹೆಸರು ವಾಯೀಕರ ಶ್ರೀನಿವಾಸಾಚಾರ್ಯರು. ಪೂರ್ವಾಶ್ರಮದಲ್ಲೇ ತಮ್ಮ ಅದ್ಭುತ ಪಾಂಡಿತ್ಯಕ್ಕೆ ಹೆಸರಾಗಿದ್ದ ಇವರು ಶ್ರೀಮಠದ ಸಂಸ್ಥಾನಾಧೀಶ್ವರರಾಗಿ ಮಹಾತಪಸ್ವಿಗಳಾಗಿ ಮೆರೆ-ದರು. ದ್ವೈತಮತದೀಕ್ಷೆ, ಶ್ರೀಮದಾಚಾರ್ಯರ ಮತ್ತು ಅನೇಕ ಗುರುಗಳ ಗ್ರಂಥಾ-ಸ್ವಾದದಲ್ಲೇ ತಲ್ಲೀನರಾಗಿದ್ದರು. ಪ್ರಾದೇಶಿಕ ರಾಜರುಗಳಿಂದ ಮಾನ್ಯರಾಗಿ ವಿಜೃಂಭಿ-ಸಿದರು. ಕ್ರಿ.ಶ. 1878ರಲ್ಲಿ ತಿರುಪತಿ ಕ್ಷೇತ್ರದಲ್ಲಿ ಶ್ರೀಮಧ್ವಸಿದ್ಧಾಂತ ಉನ್ನಾಹಿನಿ ಸಭಾವನ್ನು ಪ್ರಾರಂಭಿಸಿದರು. ಈ ಸಭೆಯು ಇಂದಿಗೂ ನಡೆದು ಬಂದಿರುವುದು ಅವರ, ಅವರ ಅಂತರ್ಯಾಮಿಯ ಪರಾಕ್ರಮದ ಪ್ರದರ್ಶನವೇ! ಶ್ರೀ ಸತ್ಯ-ವೀರತೀರ್ಥರಿಗೆ ಸಂಸ್ಥಾನವನ್ನು ಪ್ರದಾನ ಮಾಡಿ ಆಶ್ವಿನ ಶುಕ್ಲ ಅಷ್ಟಮೀಯಂದು ಹಳೆಯ ಕೊಪ್ಪಳ ಜಿಲ್ಲೆಯ ಲಿಂಗಸೂರಿನ ಚಿತ್ತಾಪುರ (ನವಲಿ) ತಾಲೂಕಿನಲ್ಲಿ ವೃಂದಾವನಸ್ಥರಾದರು.

## ಆಶ್ವೀನ ॥ ಶುದ್ಧ ॥ ನವಮೀ

ಮಹಾನವಮೀ – ಪ್ರತಿಯೊಬ್ಬರೂ ಇಂದು ವಾಹನ ಪೂಜೆ, ಆಯುಧ ಪೂಜೆಯನ್ನು ಮಾಡಬೇಕು. ಇದಕ್ಕಾಗಿ ನಮ್ಮ ಸಂಸ್ಥೆಯಿಂದ ಪ್ರಕಟನೆಗೊಂಡ ನವರಾತ್ರಿ ಎಂಬ ಪುಸ್ತಕವನ್ನು ನೋಡಿರಿ.

## ಆಶ್ವೀನ ॥ ಶುದ್ಧ ॥ ದಶಮೀ

ವಿಜಯದಶಮೀ – ಇಂದು ಶಮೀಪೂಜೆಯನ್ನು ಮಾಡಬೇಕು. ಮಧ್ವ-ಜಯಂತಿಯನ್ನು ಆಚರಿಸಬೇಕು. ವೇಂಕಟೇಶಕಲ್ಯಾಣದ ಮಂಗಳವನ್ನು ಮಾಡ-ಬೇಕು. ವಾಯುಸ್ತುತಿ ಪುರಶ್ಚರಣೆಯ ಹೋಮವನ್ನು ಮಾಡಬೇಕು. ದುರ್ಗಾ-ಪೂಜೆಯ ಸಮಾಪ್ತಿಯನ್ನು ಮಾಡಬೇಕು. ಬುದ್ಧಜಯಂತೀಯಾದ್ದರಿಂದ ಭಗ-ವಂತನ ಬುದ್ಧರೂಪವನ್ನು ಆರಾಧನೆ ಮಾಡಬೇಕು. ಹೆಚ್ಚಿನ ವಿಚಾರಕ್ಕಾಗಿ ನಮ್ಮ ಸಂಸ್ಥೆಯಿಂದ ಪ್ರಕಟನೆಗೊಂಡ ನವರಾತ್ರಿ ಎಂಬ ಪುಸ್ತಕವನ್ನು ನೋಡಿರಿ.

ಶ್ರೀಸುಕೃತೀಂದ್ರತೀರ್ಥರು(ರಾಯರ ಮಠ) - ನಂಜನಗೂಡು ಸುವಿದ್ವ-ತ್ಕುಮುದೋಲ್ಲಾಸಮಾರ್ತಾಂಡಂ ಸುಗುಣಾಕರಂ । ಸಚ್ಛಾಸ್ತ್ರಾಸಕ್ತಹೃದಯಂ ಸುಕೃತೀಂದ್ರಗುರುಂ ಭಜೇ ॥ ಆಶ್ವೀನ ॥ ಶುದ್ಧ ॥ ದಶಮೀ ಸ್ವಾಮಿಗಳ ಅವಸಾನ ಸಮಯ ಅತಿ ವಿಚಿತ್ರವಾಗಿತ್ತು. ಸ್ವಲ್ಪ ದೇಹಾಲಸ್ಯವಾದ ಕೂಡಲೇ ಶ್ರೀಗಳವರು ಸ್ಥಳೀಯ ಅಧಿಕಾರಿಗಳನ್ನು ಕರೆಸಿ ನೀವು ರಾಜಪ್ರತಿನಿಧಿಗಳು, ನಮ್ಮ ಅಂತ್ಯವಿನ್ನು ಸಮೀಪಿಸಿತು. ಇನ್ನು ನಮಗೆ ಲೌಕಿಕ ಸಂಪರ್ಕ ಸಾಕು ಎಂದು ಹೇಳುತ್ತಾ ಭಗವ-ದ್ಧ್ಯಾನರತರಾಗಿ, ಹತ್ತಿರವಿದ್ದ ಭಕ್ತರಿಗೆ 'ಇಗೋ ನೋಡಿ ಪ್ರಾಣದೇವರು ನಾಭಿಯನ್ನು ಬಿಟ್ಟು ಊರ್ಧ್ವಭಾಗಕ್ಕೆ ಬಂದರು' ಎಂದು ಶ್ವಾಸಗತಿಯನ್ನು ಕ್ರಮವಾಗಿ ಹೇಳಿ ನಾರಾಯಣ ನಾಮಸಂಕೀರ್ತನ ಮಾಡುತ್ತಾ ಇಹಲೋಕದ ವ್ಯಾಪಾರವನ್ನು ಮುಗಿಸಿ -ದರು. ಇದರಿಂದ ಶ್ರೀಗಳವರ ಅಗಾಧ ಜ್ಞಾನ ತಪಶ್ಶಕ್ತಿ ತಿಳಿಯುತ್ತದೆ.

## ಆಶ್ವೀನ ॥ ಶುದ್ಧ ॥ ಏಕಾದಶೀ

ಯುಧಿಷ್ಠಿರಃ – ಕಥಯಸ್ವ ಪ್ರಸಾದೇನ ಮಮಾಗ್ರೇ ಮಧುಸೂದನ । ಇಷಸ್ಯ ಶುಕ್ಲಪಕ್ಷೇ ತು ಕಿನ್ನಾಮ್ನೈಕಾದಶೀ ಭವೇತ್ ॥1॥ ಯುಧಿಷ್ಠಿರನು ಹೇಳಿದನು – ಎಲೈ

ಮಧುಸೂದನನೇ! ಆಶ್ವಯುಜಶುಕ್ಲಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ಎಂಬುದನ್ನು ದಯಮಾಡಿ ಹೇಳು. ಶ್ರೀಕೃಷ್ಣಃ – ಶೃಣು ರಾಜೇಂದ್ರ ವಕ್ಷ್ಯಾಮಿ ಮಾಹಾತ್ಮ್ಯಂ ಪಾಪನಾಶನಮ್ । ಶುಕ್ಲಪಕ್ಷೇ ಚಾಶ್ವಿನಸ್ಯ ಭವೇದೇಕಾದಶೀ ತು ಯಾ ॥2॥ ಶ್ರೀಕೃಷ್ಣನು ಹೇಳಿದನು – ಎಲೈ ಯುಧಿಷ್ಠಿರನೇ! ಆಶ್ವಯುಜಶುಕ್ಲಪಕ್ಷದ ಏಕಾದಶಿಯ ವಿಷಯವನ್ನು ಹೇಳುತ್ತೇನೆ. ಕೇಳು. ಅದು ಪಾಪನಾಶಕವು. ಪಾಪಾಂಕುಶೇತಿ ವಿಖ್ಯಾತಾ ಸರ್ವಪಾಪಹರಾ ಪರಾ । ಪದ್ಮನಾಭಾಭಿಧಾನಂ ಮಾಂ ಪೂಜಯೇತ್ ತತ್ರ ಮಾನವಃ ॥3॥ ಆ ಏಕಾದಶಿಗೆ 'ಪಾಪಾಂಕುಶ ಏಕಾದಶೀ' ಎಂದು ಹೆಸರು. ಅದು ಪಾಪಗಳನ್ನು ನಾಶಮಾಡತಕ್ಕದ್ದು. ಆ ದಿನ ಪದ್ಮನಾಭನೆಂಬ ಹೆಸರುಳ್ಳ ನನ್ನನ್ನು ಪೂಜಿಸಬೇಕು. ಸರ್ವಾಭೀಷ್ಟಫಲಪ್ರಾಪ್ತ್ಯೈ ಸ್ವರ್ಗಮೋಕ್ಷಪ್ರದಂ ನೃಣಾಮ್ । ತಪಸ್ತಪ್ತ್ವಾ ಪುನಸ್ತೀವ್ರಂ ಚಿರಂ ಮುನಿರ್ಯತೇಂದ್ರಿಯಃ ॥4॥ ಯತ್ಫಲಂ ಸಮವಾಪ್ನೋತಿ ತನ್ನತ್ವಾ ಗರುಡಧ್ವಜಮ್ । ಕೃತ್ವಾಪಿ ಬಹುಶಃ ಪಾಪಂ ನರೋ ಮೋಹಸಮನ್ವಿತಃ ॥5॥ ನ ಯಾತಿ ನರಕಂ ನತ್ವಾ ಸರ್ವಪಾಪಹರಂ ಹರಿಮ್ । ಪೃಥಿವ್ಯಾಂ ಯಾನಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ॥6॥ ತಾನಿ ಸರ್ವಾಣಿ ಚಾಪ್ನೋತಿ ವಿಷ್ಣೋರ್ನಾಮಾನುಕೀರ್ತನಾತ್ । ದೇವಂ ಶಾರ್ಙ್ಗಧರಂ ವಿಷ್ಣುಂ ಯೇ ಪ್ರಪನ್ನಾ ಜನಾರ್ದನಮ್ ॥7॥ ನ ತೇಷಾಂ ಯಮಲೋಕಸ್ಯ ಯಾತನಾ ಜಾಯತೇ ಕ್ವಚಿತ್ । ಉಪೋಷ್ಯೈಕಾದಶೀಮೇಕಾಂ ಪ್ರಸಂಗೇನಾಪಿ ಮಾನವಃ ॥8॥ ನ ಯಾತಿ ಯಾತನಾಂ ಯಾಮೀಂ ಪಾಪಂ ಕೃತ್ವಾಪಿ ದಾರುಣಮ್ । ವೈಷ್ಣವಃ ಪುರುಷೋ ಭೂತ್ವಾ ಶಿವನಿಂದಾಂ ಕರೋತಿ ಯಃ ॥9॥ ಆ ಏಕಾದಶಿಯು ಇಷ್ಟಾರ್ಥಗಳನ್ನು ಕೊಡುತ್ತದೆ. ಸ್ವರ್ಗ ಮೋಕ್ಷಗಳನ್ನೂ ಕೊಡುತ್ತದೆ. ಮುನಿಯಾದವನು ಇಂದ್ರಿಯ ನಿಗ್ರಹ ಮಾಡಿಕೊಂಡು ತೀವ್ರವಾದ ತಪಸ್ಸನ್ನು ಮಾಡಿದರೆ ಹೊಂದುವ ಫಲವನ್ನು ಗರುಡಧ್ವಜನಾದ ವಿಷ್ಣುವನ್ನು ನಮಸ್ಕರಿಸಿದರೆ ಹೊಂದುತ್ತಾನೆ. ಮನುಷ್ಯನು ಅಜ್ಞಾನಿಯಾಗಿ ಅನೇಕ ಬಗೆಯ ಪಾಪಗಳನ್ನು ಮಾಡಿದ್ದರೂ ಕೂಡ ಸಮಸ್ತ ಪಾಪಹಾರಕನಾದ ಹರಿಯನ್ನು ಈ ದಿನ ನಮಸ್ಕರಿಸಿದರೆ ನರಕವನ್ನು ಹೊಂದು-ವುದಿಲ್ಲ. ಆ ದಿವಸ ವಿಷ್ಣುವಿನ ನಾಮಸ್ಮರಣೆಯನ್ನು ಮಾಡಿದರೆ ಭೂಮಿಯಲ್ಲಿ ಎಷ್ಟು ತೀರ್ಥಗಳಿವೆಯೋ ಅಷ್ಟನ್ನೂ ಸೇವಿಸಿದರೆ ಯಾವ ಪುಣ್ಯವು ಬರುವುದೋ ಅಷ್ಟು ಪುಣ್ಯವನ್ನೂ ಹೊಂದುತ್ತಾನೆ. ಆ ದಿನ ಸ್ವಾಮಿಯಾದ ವಿಷ್ಣು ಯಾರು

ಸ್ತುತಿಸಿ ಮೊರೆ ಹೋಗುತ್ತಾರೋ ಅವರಿಗೆ ಯಮನಿಂದ ತೊಂದರೆಯೇ ಇರುವುದಿಲ್ಲ. ಅಕಸ್ಮಾತ್ತಾಗಿ ಈ ಏಕಾದಶಿಯಲ್ಲಿ ಉಪವಾಸವಿದ್ದರೆ ಬಹುಪಾಪ ಮಾಡಿದರೂ ಕೂಡ ಯಮಲೋಕವನ್ನು ಹೊಂದುವುದಿಲ್ಲ. ವೈಷ್ಣವನಾದವನು ಶಿವನಿಂದೆಯನ್ನು ಮಾಡಬಾರದು. ನ ವಿಂದೇದ್ ವೈಷ್ಣವಂ ಲೋಕಂ ಸ ಯಾತಿ ನರಕಂ ಧ್ರುವಮ್ । ಶೈವಃ ಪಾಶುಪತೋ ಭೂತ್ವಾ ವಿಷ್ಣೋರ್ನಿಂದಾಂ ಕರೋತಿ ಚೇತ್ ॥10॥ ರೌರವೇ ಪಚ್ಯತೇ ಘೋರೇ ಯಾವದಿಂದ್ರಾಶ್ಚತುರ್ದಶ । ನೇದೃಶಂ ಪಾವನಂ ಕಿಂಚಿತ್ತ್ರಿಷು ಲೋಕೇಷು ವಿದ್ಯತೇ ॥11॥ ಯಾದೃಶಂ ಪದ್ಮನಾಭಸ್ಯ ವ್ರತಂ ಪಾತಕನಾಶನಮ್ । ತಾವತ್ಪಾಪಾನಿ ದೇಹೇಸ್ಮಿಂಸ್ತಿಷ್ಠಂತಿ ಮನುಜಾಧಿಪ ॥12॥ ಯಾವನ್ನೋಪವಸೇತ್ ಜಂತುಃ ಪದ್ಮನಾಭದಿನಂ ಶುಭಮ್ । ಅಶ್ವಮೇಧಸಹಸ್ರಾಣಿ ರಾಜಸೂಯಶತಾನಿ ಚ ॥13॥ ಏಕಾದಶ್ಯುಪವಾಸಸ್ಯ ಕಲಾಂ ನಾರ್ಹಂತಿ ಷೋಡಶೀಮ್ । ಏಕಾದಶೀಸಮಂ ಕಿಂಚಿದ್ವ್ರತಂ ಲೋಕೇ ನ ವಿದ್ಯತೇ ॥14॥ ವ್ಯಾಜೇನಾಪಿ ಕೃತಾ ಯೈಶ್ಚ ನ ತೇ ಯಾಂತಿ ಹಿ ಭಾಸ್ಕರೀಮ್ । ಸ್ವರ್ಗಮೋಕ್ಷಪ್ರದಾ ಹ್ಯೇಷಾ ಶರೀರಾರೋಗ್ಯದಾಯಿನೀ ॥15॥ ಶಿವನಿಂದೆ ಮಾಡುವವನು ವೈಷ್ಣವ-ಲೋಕವನ್ನು ಖಂಡಿತವಾಗಿಯೂ ಹೊಂದುವುದೇ ಇಲ್ಲ. ಶಿವಭಕ್ತಿಯುಳ್ಳವನು ವಿಷ್ಣುವನ್ನು ನಿಂದಿಸಿದರೆ ಅವನು ಹದಿನಾಲ್ಕು ಇಂದ್ರರು ಇರುವವರೆಗೂ ರೌರವ ನರಕದಲ್ಲಿ ಬಿದ್ದಿರುತ್ತಾನೆ. ಈ ಪದ್ಮನಾಭನ ವ್ರತವು ಪಾಪವನ್ನು ನಾಶ ಮಾಡುವಂತೆ ಪಾಪನಾಶಕವಾದ ವ್ರತವು ಮೂರು ಲೋಕಗಳಲ್ಲಿಯೂ ಮತ್ತೊಂದಿಲ್ಲವು. ಪದ್ಮನಾಭನ ದಿನವಾದ ಈ ಏಕಾದಶಿಯ ದಿವಸ ಉಪವಾಸ ಮಾಡುವವರೆಗೂ ಮನುಷ್ಯನ ದೇಹದಲ್ಲಿ ಪಾಪಗಳು ವಾಸವಾಗಿರುತ್ತವೆ. ಸಾವಿರ ಅಶ್ವಮೇಧ-ಯಾಗಗಳೂ ನೂರು ರಾಜಸೂಯಯಾಗಗಳೂ ಕೂಡ ಈ ಏಕಾದಶಿಯ ಹದಿನಾರನೆಯ ಒಂದು ಭಾಗವನ್ನು ಸರಿದೂಗಲಾರವು. ಏಕಾದಶೀವ್ರತಕ್ಕೆ ಸಮಾನ -ವಾದ ವ್ರತವು ಲೋಕದಲ್ಲಿ ಮತ್ತೊಂದಿಲ್ಲ. ಯಾವುದಾದರೊಂದು ನೆವದಿಂದ ಆ ದಿನ ಉಪವಾಸವಿದ್ದರೆ ಅವರು ಯಮನ ಸಮೀಪವನ್ನು ಹೊಂದುವುದಿಲ್ಲ. ಈ ಏಕಾದಶೀಯು ಸ್ವರ್ಗ ಮೋಕ್ಷಗಳನ್ನೂ ಶರೀರಕ್ಕೆ ಆರೋಗ್ಯವನ್ನೂ ಕೊಡು-ತ್ತದೆ. ಸುಕಲತ್ರಪ್ರದಾ ಹ್ಯೇಷಾ ಧನಮಿತ್ರಪ್ರದಾಯಿನೀ । ನ ಗಂಗಾ ನ ಗಯಾ ರಾಜನ್ನ ಕಾಶೀ ನ ಚ ಪುಷ್ಕರಮ್ ॥16॥ ನ ಚಾಪಿ ಕೌರವಂ ಕ್ಷೇತ್ರಂ ಪುಣ್ಯಂ ಭೂಪ

ಹರೇರ್ದಿನಾತ್ । ರಾತ್ರೌ ಜಾಗರಣಂ ಕೃತ್ವಾ ಸಮುಪೋಷ್ಯ ಹರೇರ್ದಿನೇ ॥17॥ ಅನಾಯಾಸೇನ ಭೂಪಾಲ ಪ್ರಾಪ್ಯತೇ ವೈಷ್ಣವಂ ಪದಮ್ । ದಶೈವ ಮಾತೃಕೇ ಪಕ್ಷೇ ರಾಜೇಂದ್ರ ದಶ ಪೈತೃಕೇ ॥18॥ ಪ್ರಿಯಾಯಾ ದಶ ಪಕ್ಷೇ ತು ಪುರುಷಾನುದ್ಧರೇನ್ನರಃ । ಚತುರ್ಭುಜಾ ದಿವ್ಯರೂಪಾ ನಾಗಾರಿಕೃತಕೇತನಾಃ ॥19॥ ಸ್ರಗ್ವಿಣಃ ಪೀತವಸ್ತ್ರಾಶ್ಚ ಪ್ರಯಾಂತಿ ಹರಿಮಂದಿರಮ್ । ಬಾಲತ್ವೇ ಯೌವನತ್ವೇ ಚ ವೃದ್ಧತ್ವೇ ಚ ನೃಪೋತ್ತಮ ॥20॥ ಉಪೋಷ್ಯೈಕಾದಶೀಂ ನೂನಂ ನೈತಿ ಪಾಪೋಽಪಿ ದುರ್ಗತಿಮ್ । ಪಾಪಂ-ಕುಶಾಮುಪೋಷ್ಯೈವ ಆಶ್ವಿನಸ್ಯ ಸಿತೇ ನರಃ ॥21॥ ಈ ಏಕಾದಶೀಯು ಒಳ್ಳೆಯ ಹೆಂಡತಿಯನ್ನೂ ಧನಮಿತ್ರರನ್ನೂ ಕೊಡುತ್ತದೆ. ಗಂಗೆ, ಗಯೆ, ಕಾಶಿ, ಪುಷ್ಕರ, ಕುರುಕ್ಷೇತ್ರಗಳೊಂದೂ ಹರಿಯ ದಿನಕ್ಕಿಂತ ಪುಣ್ಯತಮವಾದುವಲ್ಲ. ಆ ಏಕಾದಶೀಯಲ್ಲಿ ಉಪವಾಸ ಮಾಡಿ ರಾತ್ರಿಯಲ್ಲಿ ಜಾಗರಣೆ ಮಾಡಿದರೆ ಅವನು ಅನಾಯಾಸದಿಂದ ವೈಕುಂಠವನ್ನು ಹೊಂದುತ್ತಾನೆ. ಆ ಏಕಾದಶಿಯ ಉಪವಾಸವು ತಾಯಿಯ ಕಡೆಯ ಹತ್ತುತಲೆ ತಂದೆಯ ಕಡೆಯ ಹತ್ತು ತಲೆ ಹೆಂಡತಿಯ ಕಡೆ ಹತ್ತು ತಲೆಗಳನ್ನೂ ನರಕದಿಂದ ಉದ್ಧಾರ ಮಾಡುತ್ತದೆ. ಏಕಾದಶ್ಯುಪವಾಸ ಮಾಡಿದವರು ನಾಲ್ಕು ತೋಳುಗಳನ್ನು ಹೊಂದಿ ಉತ್ತಮವಾದ ದೇಹವನ್ನು ಧರಿಸಿ ಗರುಡನ ಧ್ವಜವುಳ್ಳವರಾಗಿ ಮಾಲೆಯನ್ನು ಧರಿಸಿ ಹೊಂಬಣ್ಣದ ಬಟ್ಟೆಯನ್ನು ಹೊದೆದು ಹರಿಯ ಪದವನ್ನು ಹೊಂದುತ್ತಾರೆ. ಬಾಲ್ಯದಲ್ಲಾಗಲೀ, ಯೌವನದ-ಲ್ಲಾಗಲೀ, ಮುಪ್ಪಿನಲ್ಲಾಗಲೀ ಈ ಏಕಾದಶಿಯಲ್ಲಿ ಉಪವಾಸ ಮಾಡಿದರೆ ಪಾಪಿ-ಯಾದರೂ ನರಕಭಾಗಿಯಾಗುವುದಿಲ್ಲ. ಈ ಆಶ್ವಯುಜ ಶುಕ್ಲದ ಪಾಪಾಂಕುಶ ಏಕಾದಶೀಯ ದಿನ ಉಪವಾಸ ಮಾಡಬೇಕು. ಸರ್ವಪಾಪವಿನಿರ್ಮುಕ್ತೋ ಹರಿಲೋಕಂ ಸ ಗಚ್ಛತಿ । ದತ್ವಾ ಹೇಮತಿಲಾನ್ ಭೂಮಿಂ ಗಾಮನ್ನಮುದಕಂ ತಥಾ ॥22॥ ಉಪಾನಚ್ಛತ್ರವಸ್ತ್ರಾಣಿ ನ ಪಶ್ಯತಿ ಯಮಂ ನರಃ । ಯಸ್ಯ ಪುಣ್ಯವಿಹೀನಾನಿ ದಿನಾನ್ಯಾಯಾಂತಿ ಯಾಂತಿ ಚ ॥23॥ ಸ ಲೋಹಕಾರಭಸ್ತ್ರೇವ ಶ್ವಸನ್ನಪಿ ನ ಜೀವತಿ । ಅವಂಧ್ಯಂ ದಿವಸಂ ಕುರ್ಯಾದ್ ದರಿದ್ರೋಽಪಿ ನೃಪೋತ್ತಮ ॥24॥ ಸಮಾಚರನ್ ಯಥಾಶಕ್ತಿ ಸ್ನಾನದಾನಾದಿಕಾಃ ಕ್ರಿಯಾಃ । ಹೋಮಸ್ನಾನಜಪಧ್ಯಾನಸತ್ರಾದಿಪುಣ್ಯ-ಕರ್ಮಣಾಮ್ ॥25॥ ಕರ್ತಾರೋ ನೈವ ಪಶ್ಯಂತಿ ಘೋರಾಂ ತಾಂ ಯಮ-ಯಾತನಾಮ್ । ದೀರ್ಘಾಯುಷೋ ಧನಾಢ್ಯಾಶ್ಚ ಕುಲೀನಾ ರೋಗವರ್ಜಿತಾಃ

॥26॥ ದೃಶ್ಯಂತೇ ಮಾನವಾ ಲೋಕೇ ಪುಣ್ಯಕರ್ತಾರ ಈದೃಶಾಃ । ಕಿಮತ್ರ ಬಹುನೋಕ್ತೇನ ಯಾಂತ್ಯಧರ್ಮೇಣ ದುರ್ಗತಿಮ್ ॥27॥ ಹೀಗೆ ಮಾಡಿದರೆ ಎಲ್ಲಾ ಪಾಪಗಳನ್ನೂ ಕಳೆದುಕೊಂಡು ಹರಿಯ ಲೋಕವನ್ನು ಹೊಂದುತ್ತಾನೆ. ಚಿನ್ನ, ಎಳ್ಳು, ಭೂಮಿ, ಗೋವು, ಅನ್ನ, ಉದಕ, ಕೆರೆ, ಛತ್ರಿ, ವಸ್ತ್ರಗಳನ್ನು ಆ ದಿನ ದಾನಕೊಟ್ಟರೆ ಆತನು ಯಮನ ದರ್ಶನ ಮಾಡುವುದಿಲ್ಲ. ಯಾವನು ಈ ಪುಣ್ಯದಿನಗಳನ್ನು ಮಾಡದೆ ಕಾಲವನ್ನು ಕಳೆಯುತ್ತಾನೆಯೋ ಅವನು ತಿದಿಯಂತೆ ಉಸಿರು ತೆಗೆದುಕೊಳ್ಳುತ್ತ ಬಿಡುತ್ತಾ ಇರುವನೇ ಹೊರತು ಜೀವದಿಂದಿರುವವನಲ್ಲ. ದರಿದ್ರನಾದರೂ ಕೂಡ ದಿವಸವನ್ನು ವ್ಯರ್ಥಮಾಡಿಕೊಳ್ಳಬಾರದು. ಕೈಯ್ಯಲ್ಲಿ ಆದ ಮಟ್ಟಿಗೆ ಸ್ನಾನ ದಾನಾದಿಗಳನ್ನು ಮಾಡಬೇಕು. ಹೋಮ, ಸ್ನಾನ, ಜಪ, ಧ್ಯಾನ, ಯಜ್ಞ ಮುಂತಾದ ಕೆಲಸಗಳನ್ನು ಮಾಡುವವರು ಘೋರವಾದ ಯಮನ ಬಾಧೆಯನ್ನು ನೋಡುವುದಿಲ್ಲ. ಪುಣ್ಯಗಳನ್ನು ಮಾಡಿದವರು ಈ ಲೋಕದಲ್ಲಿ ದೀರ್ಘಾಯುಸ್ಸನ್ನು ಹೊಂದಿದವರಾಗುವರು. ಆರೋಹಂತಿ ದಿವಂ ಧರ್ಮೈರ್ನಾತ್ರ ಕಾರ್ಯಾ ವಿಚಾರಣಾ । ಇತಿ ತೇ ಕಥಿತಂ ರಾಜನ್ ಯತ್ಪೃಷ್ಟೋಽಹಂ ತ್ವಯಾನಘ । ಪಾಪಾಂಕುಶಯಾ ಮಾಹಾತ್ಮ್ಯಂ ಕಿಮನ್ಯತ್ ಶ್ರೋತುಮಿಚ್ಛಸಿ ॥28॥ ಈ ಏಕಾದಶಿಯನ್ನು ಆಚರಿಸುವವರು ಧನವಂತರಾಗಿಯೂ ಕುಲೀನರಾಗಿಯೂ ರೋಗವಿಲ್ಲದವರಾಗಿಯೂ ಇರುತ್ತಾರೆ. ಬಹಳ ಮಾತಿನಿಂದೇನು? ಜನರು ಅಧರ್ಮದಿಂದ ನರಕವನ್ನೂ ಧರ್ಮದಿಂದ ಸ್ವರ್ಗವನ್ನೂ ಹೊಂದುತ್ತಾರೆ. ಇದರಲ್ಲಿ ವಿಚಾರಮಾಡಬೇಕಾದುದೇ ಇಲ್ಲ. ಎಲೈ ಯುಧಿಷ್ಠಿರನೇ! ನೀನು ಕೇಳಿದುದನ್ನು ಹೇಳಿದೆನು. ಈ ಪಾಪಾಂಕುಶ ಏಕಾದಶಿಯ ಮಹಿಮೆಯು ಈ ರೀತಿಯಾಗಿರುವುದು. ಮತ್ತೇನು ಬೇಕು? ಕೇಳು. ಹೇಳುವೆನು.

ಇತಿ ಶ್ರೀಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿನಾರದಸಂವಾದಾಂತರ್ಗತ ಕೃಷ್ಣಯುಧಿಷ್ಠಿರಸಂವಾದೇ ಆಶ್ವಯುಜಶುಕ್ಲಪಾಪಾಂಕುಶೈಕಾದಶೀಮಾಹಾತ್ಮ್ಯಂ ನಾಮ ಏಕಷಷ್ಟಿತಮೋಽಧ್ಯಾಯಃ ಸಮಾಪ್ತಃ ॥ ಇಂತು ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿನಾರದಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಆಶ್ವಯುಜಶುಕ್ಲಪಾಪಾಂಕುಶೈಕಾದಶಿಯ ಮಹಿಮೆ ಎಂಬ ಅರವತ್ತೊಂದನೆಯ ಅಧ್ಯಾಯವು ಮುಗಿಯಿತು.

## ಆಶ್ವೀನ॥ ಶುದ್ಧ॥ ದ್ವಾದಶೀ

# ಪದ್ಮನಾಭದ್ವಾದಶೀವ್ರತ

ದುರ್ವಾಸಮುನಿ – ಹಿಂದಿನಂತೆಯೇ ಆಶ್ವಯುಜಮಾಸದ ಶುಕ್ಲಪಕ್ಷದ ದ್ವಾದಶಿಯಲ್ಲಿ ಸನಾತನನಾದ ಪದ್ಮನಾಭದೇವನನ್ನು ಆರಾಧಿಸಬೇಕು.

ದೇವನ ಪಾದಗಳಿಗೆ ಪದ್ಮನಾಭಾಯ ನಮಃ ಎಂದೂ, ಉದರಕ್ಕೆ ಸರ್ವದೇವಾಯ ನಮಃ ಎಂದೂ, ಹೃದಯಕ್ಕೆ ಪುಷ್ಕರಾಕ್ಷಾಯ ನಮಃ ಎಂದೂ, ಕೈಗೆ ಅವ್ಯಯಾಯ ನಮಃ ಎಂದೂ, ಅಸ್ತ್ರಗಳಿಗೆ ಹಿಂದಿನಂತೆಯೂ, ಶಿರಸ್ಸಿಗೆ ಪ್ರಭವಾಯ ನಮಃ ಎಂದೂ, ಅರ್ಚನೆಯನ್ನು ಮಾಡಿ, ಮೊದಲಿನಂತೆಯೇ ಎದುರಿಗೆ ಕಲಶವನ್ನಿಡಬೇಕು. ಅದರ ಮೇಲೆ ಹೊನ್ನಿನ ಪದ್ಮನಾಭದೇವನ ಮೂರ್ತಿಯನ್ನು ಬಿಜ ಮಾಡಿಸಬೇಕು. ಆ ದೇವನನ್ನೇ ಗಂಧಪುಷ್ಪಾದಿಗಳಿಂದ ಕ್ರಮವಾಗಿ ಚೆನ್ನಾಗಿ ಪೂಜಿಸಿ, ರಾತ್ರಿಯು ಕಳೆದು ಬೆಳಗಾಗಲು, ಬ್ರಾಹ್ಮಣನಿಗೆ ಅರ್ಪಿಸಬೇಕು.

ಚತುರನೇ! ಹೀಗೆ ಮಾಡಿದರೆ ಯಾವ ಪುಣ್ಯವೋ ಅದನ್ನು ಕೇಳು. ಕೃತಯುಗದಲ್ಲಿ ವೀರ್ಯವಂತನಾದ ಭದ್ರಾಶ್ವನೆಂಬ ರಾಜನಿದ್ದನು. ಅವನ ಹೆಸರಿನಿಂದಲೇ ಒಂದು ಭೂಖಂಡವು ಭದ್ರಾಶ್ವವರ್ಷವೆಂಬ ಹೆಸರುಳ್ಳದ್ದಾಯಿತು.

ಒಂದಾನೊಂದು ದಿನ ಸತ್ಪುರುಷೋತ್ತಮನಾದ ಅಗಸ್ತ್ಯಮುನಿಯು ಅವನ ಮನೆಗೆ ಬಂದು ''ನಿನ್ನ ಮನೆಯಲ್ಲಿ ಏಳು ದಿನ ವಾಸ ಮಾಡುತ್ತೇನೆ'' ಎಂದು ಭದ್ರಾಶ್ವನಿಗೆ ಹೇಳಿದನು. ದೊರೆಯು ಋಷಿಯನ್ನು ತಲೆಬಾಗಿ ವಂದಿಸಿ, 'ಇರೋಣವಾಗಲಿ' ಎಂದು ಹೇಳಿದನು. ಆ ದೊರೆಗೆ ಅತಿಸುಂದರಿಯಾದ ಕಾಂತಿಮತಿಯೆಂಬ ಹೆಂಡತಿಯಿದ್ದಳು. ಅವಳು ದ್ವಾದಶಾದಿತ್ಯರಿಗೆ ಸಮಾನವಾದ ತೇಜಸ್ಸುಳ್ಳವಳಾಗಿದ್ದಳು. ಆ ರಾಜನಿಗೆ ಅವಳೊಬ್ಬಳೇ ಪತ್ನಿಯಾಗಿರಲಿಲ್ಲ. ವ್ರತಶೀಲೆ-ಯರಾದ ಐನೂರು ಜನ ರಾಣಿಯರಿದ್ದರು. ಮಂಗಳಾಂಗಿಯರಾದ ಅವರು ದಿನದಿನವೂ ದಾಸಿಯರಂತೆ ಕೆಲಸ ಮಾಡುತ್ತಿದ್ದರು. ಮಹಾಭಾಗ್ಯಶಾಲಿನಿಯಾದ ಕಾಂತಿಮತಿಯೇ ದೊರೆಗೆ ಅತ್ಯಂತ ಪ್ರೀತಿಪಾತ್ರಳಾದ ರಾಣಿಯಾಗಿದ್ದಳು. ಅಗಸ್ತ್ಯನು ಕಾಂತಿಮತಿಯ ಭಯದಿಂದ ಕೆಲಸ ಮಾಡುತ್ತಾ ಕಷ್ಟಪಡುತ್ತಿರುವ ಆ

ಮಂಗಳಾಂಗಿಯರನ್ನೂ (ಸಪತ್ನಿಯರನ್ನೂ), ದೊರೆಯು ಕಾಂತಿಮತಿಯ ಸಂತೋಷಯುತವಾದ ನಗುಮುಖವನ್ನೇ ನೋಡುತ್ತಿರುವುದನ್ನೂ, ರೂಪ-ದಿಂದಲೂ ತೇಜಸ್ಸಿನಿಂದಲೂ ಒಪ್ಪುತ್ತ ಪರಮಶೋಭನಾಂಗಿಯಾಗಿರುವ ಕಾಂತಿಮತಿ-ಯನ್ನೂ ನೋಡಿ, ಬಹಳ ಸಂತೋಷವುಳ್ಳವನಾಗಿ ''ಜಗನ್ನಾಥನೇ! ಚೆನ್ನಾಗಿದೆ. ಚೆನ್ನಾಗಿದೆ!'' ಎಂದನು.

ಎರಡನೆಯ ದಿವಸವೂ ಹಾಗೆಯೇ ಮಹಾಕಾಂತಿವಂತಳಾದ ರಾಣಿಯನ್ನು ನೋಡಿ ಅಗಸ್ತ್ಯನು ''ಆಶ್ಚರ್ಯ! ಆಶ್ಚರ್ಯ! ಚರಾಚರಾತ್ಮಕವಾದ ಈ ಜಗತ್ತು ಕಳವಾಯಿತು. ಹೋ! ಕಳವಾಯಿತು!'' ಎಂದು ಹೇಳಿದನು.

ಮೂರನೆಯ ದಿನ ಆ ಕಾಂತಿಮತಿಯನ್ನು ನೋಡಿ ಅಗಸ್ತ್ಯನು ತಿರುಗಿ ''ಆಶ್ಚರ್ಯ! ಯಾರು ಒಂದೇ ದಿನದಲ್ಲಿ ತೃಪ್ತನಾಗಿ ರಾಜನಿಗೆ ಎಲ್ಲವನ್ನೂ ಕೊಟ್ಟಿರುವನೋ, ಗೋವಿಂದನಾದ ಆ ಪರಮೇಶ್ವರನನ್ನು ಮೂಢರು ಅರಿಯು-ವುದಿಲ್ಲ'' ಎಂದು ಹೇಳಿದನು.

ನಾಲ್ಕನೆಯ ದಿವಸ ತಿರುಗಿ ಕೈಯ್ಯನ್ನು ಮೇಲೆತ್ತಿ ಹೀಗೆ ಹೇಳಿದನು. ''ಜಗನ್ನಾಥನೇ! ಚೆನ್ನಾಗಿದೆ, ಚೆನ್ನಾಗಿದೆ! ಸ್ತ್ರೀಯರೇ ಶೂದ್ರರೇ, ಚೆನ್ನಾಗಿದೆ ಚೆನ್ನಾಗಿದೆ! ಬ್ರಾಹ್ಮಣರೇ ಚೆನ್ನಾಯಿತು! ದೊರೆಗಳೇ ಒಳ್ಳೆಯದಾಯಿತು! ವೈಶ್ಯರೇ ಚೆನ್ನಾ-ಯಿತು!''ಎಂದು ಮತ್ತೆ ಮತ್ತೆ ''ಭದ್ರಾಶ್ವನೇ ಚೆನ್ನಾಯಿತು! ನೀನು ಒಳ್ಳೆಯವನು, ಎಲೈ ಅಗಸ್ತ್ಯ ನಿನಗೂ ಚೆನ್ನಾಯಿತು, ಚೆನ್ನಾಯಿತು! ಪ್ರಹ್ಲಾದ! ಧ್ರುವನೇ! ನಿನಗೆ ಸೊಗಸು! ಮಹಾವ್ರತನೇ ಸೊಗಸಾಗಿದೆ'' ಎಂದು ಹೇಳುತ್ತಾ ಅಗಸ್ತ್ಯನು ದೊರೆಯ ಸಮೀಪದಲ್ಲಿ ಮೇಲಕ್ಕೆ ಹಾರಿ ಹಾರಿ, ಕುಣಿದಾಡಿದನು.

ರಾಣಿಯೊಡಗೂಡಿದ ರಾಜೋತ್ತಮನು ಆ ರೀತಿಯ ಅಗಸ್ತ್ಯಮುನಿಯನ್ನು ನೋಡಿ ''ಬ್ರಾಹ್ಮಣನೇ! ಈ ಸಂತೋಷಕ್ಕೆ ಕಾರಣವೇನು? ನೀನು ಹೀಗೆ ಕುಣಿಯುತ್ತಿರುವಿಯಲ್ಲಾ'' ಎಂದನು.

ಅಗಸ್ತ್ಯ – ''ಆಶ್ಚರ್ಯ! ನೀನು ಮೂರ್ಖ, ಕೆಟ್ಟ ದೊರೆ. ಅಯ್ಯೋ! ನಿನ್ನ ಹಿಂಬಾಲಕರೂ ಮೂರ್ಖರು. ಅಯ್ಯೋ! ಪುರೋಹಿತರೂ ಮೂರ್ಖರು. ಯಾರೂ ನನ್ನ ಅಭಿಪ್ರಾಯವನ್ನು ತಿಳಿಯುವುದಿಲ್ಲ'' ಎಂದನು.

ಆತನು ಹಾಗೆ ಹೇಳಲು ದೊರೆಯು ಕೈಮುಗಿದುಕೊಂಡು ''ಮಹಾಭಾಗನೇ! ಬ್ರಹ್ಮನೇ! ನೀನು ಹೇಳಿದ ಈ ಪ್ರಶ್ನೆಯೇ ನಮಗೆ ತಿಳಿಯಲಿಲ್ಲ. ನಿನಗೆ ದಯೆ ಬಂದರೆ ತಿಳಿಯುವಂತೆ ಹೇಳು'' ಎಂದನು.

ಅಗಸ್ತ್ಯ ಋಷಿ – ಈ ರಾಣಿಯು ಹಿಂದೆ ನಗರದಲ್ಲಿ ಹರಿದತ್ತನೆಂಬ ವೈಶ್ಯನ ಮನೆಯಲ್ಲಿ ಸೇವಕಳಾಗಿದ್ದಳು. ನೀನು ಅವಳ ಪತಿಯಾಗಿದ್ದೆ. ಶೂದ್ರನಾದ ನೀನು ಸೇವೆಯಲ್ಲಿ ಆಸಕ್ತನಾಗಿ ಅದೇ ವೈಶ್ಯನ ಮನೆಯಲ್ಲಿ ಕೆಲಸ ಮಾಡುತ್ತಿದ್ದೆ. ಆ ವೈಶ್ಯನು ಆಶ್ವಯುಜಮಾಸದಲ್ಲಿ ದ್ವಾದಶೀವ್ರತದಲ್ಲಿದ್ದನು. ಅವನು ತಾನೇ ವಿಷ್ಣುದೇವಾಲಯಕ್ಕೆ ಹೋಗಿ, ಪುಷ್ಪದೀಪಾದಿಗಳಿಂದ ಆ ಹರಿಯನ್ನು ಪೂಜಿಸಿ, ಮಹಾಮತಿಯೇ! ದಂಪತಿಗಳಾದ ನಿಮ್ಮನ್ನು ಇಬ್ಬರನ್ನೂ ಅಲ್ಲಿ ದೀಪಗಳನ್ನು ಸರಿಯಾಗಿ ಉರಿಸುವುದಕ್ಕಾಗಿ ಕಾವಲಿಟ್ಟು ತನ್ನ ಮನೆಗೆ ಹೋದನು. ವೈಶ್ಯನು ಹೊರಟು ಹೋದ ಮೇಲೆ, ನರೋತ್ತಮನೇ! ನೀವಿಬ್ಬರೂ ದೀಪಗಳು ಚೆನ್ನಾಗಿ ಉರಿಯುವಂತೆ ಮಾಡಿ, ಬೆಳಗಾಗುವವರೆಗೂ ಒಂದು ರಾತ್ರಿಯೆಲ್ಲಾ ಅಲ್ಲಿಯೇ ಇದ್ದಿರಿ. ಬಳಿಕ ಕಾಲಾಂತರದಲ್ಲಿ ನೀವು ದಂಪತಿಗಳಿಬ್ಬರೂ ಮೃತರಾಗಲು ಆ ದೀಪವನ್ನು ದೊಡ್ಡದು ಮಾಡಿದ ಪುಣ್ಯದಿಂದ ಪ್ರಿಯವ್ರತನ ಮನೆಯಲ್ಲಿ ಜನ್ಮವೆತ್ತಿದೆ. ಹಿಂದೆ ವೈಶ್ಯನ ಸೇವಕಳಾಗಿದ್ದ ಇವಳು ನಿನಗೆ ಪತ್ನಿಯಾದಳು. ಹರಿಯ ಸನ್ನಿಧಿಯಲ್ಲಿ ಪರರು ಹತ್ತಿಸಿದ ದೀಪವನ್ನು ದೊಡ್ಡದನ್ನಾಗಿ ಮಾಡಿ ಉರಿಸಿದುದಕ್ಕೇ ಇಷ್ಟಾದರೆ, ತನ್ನ ದುಡ್ಡನ್ನು (ಹಣವನ್ನು) ವೆಚ್ಚಮಾಡಿ, ಹರಿಗೃಹದಲ್ಲಿ ದೀಪವನ್ನು ಹತ್ತಿಸುವವರ ಪುಣ್ಯವನ್ನು ಗಣಿಸಲು (ಎಣಿಸಲು) ಸಾಧ್ಯವೇ! ಇಲ್ಲ! ಆದುದರಿಂದ ಚೆನ್ನಾಗಿದೆ! ಹರಿಯೇ ಚೆನ್ನಾಗಿದೆ ಎಂದು ನಾನು ಹೇಳಿದೆನು.

ತಿಳಿದವನು ಕೃತಯುಗದಲ್ಲಿ ಒಂದು ವರ್ಷಕಾಲ ಪೂರ್ತಿಯಾಗಿ ಹರಿಯಲ್ಲಿ ಭಕ್ತಿಯನ್ನು ಮಾಡುವುದು ತ್ರೇತಾಯುಗದಲ್ಲಿ ಅರ್ಧವರ್ಷ ಕಾಲ ಮಾಡುವ ಭಕ್ತಿಗೆ ಸಮನಾಗುವುದು. ದ್ವಾಪರಯುಗದಲ್ಲಿ ಮೂರು ತಿಂಗಳು ಭಕ್ತಿಯಿಂದ ಪೂಜಿಸಿ, ಯಾವ ಫಲವನ್ನು ಪಡೆಯುವನೋ ಅದೇ ಫಲವನ್ನು ಕಲಿಯುಗದಲ್ಲಿ 'ನಮೋ ನಾರಾಯಣಾಯ' (ನಾರಾಯಣನಿಗೆ ನಮಸ್ಕಾರ) ಎಂದು ಹೇಳಿ ಪಡೆಯುವುದರಲ್ಲಿ ಸಂದೇಹವಿಲ್ಲ. ಆದುದರಿಂದಲೇ ಜಗತ್ತೆಲ್ಲದರಲ್ಲೂ ಭಕ್ತಿಯು ಮಾತ್ರ ಕಳವಾಯಿತು

ಎಂದು ನಾನು ಹೇಳಿದೆನು. ದೊರೆಯೇ! ಮತ್ತೊಬ್ಬರು ದೇವರೆದುರಿಗೆ ಹತ್ತಿಸಿದ್ದ ದೀಪವನ್ನು ದೊಡ್ಡದನ್ನಾಗಿ ಮಾಡಿದುದರಿಂದ, ನೀನು ಇಂತಹ ಫಲವನ್ನು ಪಡೆದೆ. ಆದರೂ ನೀವರಿಯದುದರಿಂದ 'ಅಯ್ಯೋ! ಮೂಢರು. ಹರಿಗೆ ದೀಪ ಹತ್ತಿಸುವ ಕಾರ್ಯದ ಫಲವನ್ನು ತಿಳಿಯುವುದಿಲ್ಲ' ಎಂದು ನಾನು ಹೇಳಿದೆನು.

ಇಂತಹ ರಾಜರು ಯಾರು ಬ್ರಾಹ್ಮಣರನ್ನು ಮುಂದಿಟ್ಟುಕೊಂಡು, ಭಕ್ತಿಯಿಂದ ಬಗೆ ಬಗೆಯ ಯಜ್ಞಗಳನ್ನು ಮಾಡುವರೋ ಅವರು ಸಾಧುಗಳೆನಿಸಿಕೊಳ್ಳುವರು. ನಾನು ಭೂತಲದಲ್ಲಿ ನಾರಾಯಣನನ್ನು ಹೊರತು ಬೇರಾವುದನ್ನೂ ಕಾಣೆನು. ಆದುದರಿಂದ 'ಸಾಧುವೇ! ಅಗಸ್ತ್ಯ' ಎಂದು ನನ್ನನ್ನು ನಾನೇ ಹೊಗಳಿಕೊಂಡೆನು.

ಒಡೆಯನ ಸೇವೆಯನ್ನೂ, ಅವನೆದುರಿಗಿಲ್ಲದಾಗ ಹರಿಸೇವೆಯನ್ನು ಮಾಡಿದ ಆ ಸ್ತ್ರೀಯು ಧನ್ಯಳು, ನಿಜವಾಗಿ ಧನ್ಯಳು. ಅಲ್ಲದೇ ದ್ವಿಜಶುಶ್ರೂಷೆಯಲ್ಲಿ ಆಸಕ್ತನಾದ ಆ ಶೂದ್ರನೂ ಧನ್ಯನು. ಬಹುಧನ್ಯನೆನಿಸಿ ಕೊಳ್ಳುವನು. ದ್ವಿಜನ ಅಪ್ಪಣೆಯಿಂದ ಅವರಿಗೆ ಹರಿಭಕ್ತಿ. ಆದುದರಿಂದ 'ಸ್ತ್ರೀಶೂದ್ರರೇ! ಚೆನ್ನಾಗಿದೆ, ಒಳ್ಳೆಯದು' ಎಂದೆನು.

ರಾಕ್ಷಸನಾಗಿ ಉದಿಸಿದ್ದೂ ಪ್ರಹ್ಲಾದನು ಪುರುಷೋತ್ತಮನಾದ ನಾರಾಯಣನನ್ನು ಹೊರತು ಬೇರಾವುದನ್ನೂ ತಿಳಿಯನು. ಆದುದರಿಂದ ಅವನು ಸಾಧುವೆನಿಸಿಕೊಳ್ಳುವನು. ಬ್ರಹ್ಮನ ವಂಶದಲ್ಲಿ ಹುಟ್ಟಿ, ಧ್ರುವನು ಬಾಲ್ಯದಲ್ಲಿಯೇ ವನಕ್ಕೆ ಹೋಗಿ ವಿಷ್ಣುವನ್ನಾರಾಧಿಸಿ, ಪರಮೋತ್ಕೃಷ್ಟವಾದ ಸ್ಥಾನವನ್ನು ಪಡೆದನು. ರಾಜೋತ್ತಮನೇ! ಆದುದರಿಂದ 'ಸಾಧುವೇ ಧ್ರುವ' ಎಂದು ನಾನು ಹೇಳಿದೆನು.

ಭದ್ರಾಶ್ವರಾಜನು, ಮಹಾತ್ಮನಾದ ಅಗಸ್ತ್ಯನ ಈ ಮಾತನ್ನು ಕೇಳಿ, ಆ ಮುನಿಯನ್ನೇ ಸ್ವಲ್ಪವಾಗಿ ಉಪದೇಶಮಾಡಬೇಕೆಂದು ಕೇಳಿದನು.

ಮಹಾಭಾಗನಾದ ಅಗಸ್ತ್ಯನು ಕಾರ್ತಿಕಮಾಸದ ಹುಣ್ಣಿಮೆಯಲ್ಲಿ ಪುಷ್ಕರಕ್ಕೆ ಹೋಗಬೇಕೆಂದು ಭದ್ರಾಶ್ವನ ಮನೆಯಿಂದ ಹೊರಟುಹೋಗುತ್ತಿರುವಾಗ ರಾಜನು ಮತ್ತೆ ಕೇಳಲು ಋಷಿವರ್ಯನು ಪದ್ಮನಾಭದ್ವಾದಶೀವ್ರತವನ್ನೇ ಉಪದೇಶಿಸಿದನು.

ದುರ್ವಾಸಮುನಿ – ತಪೋಧನನಾದ ಸತ್ಯತಪನೇ! ಅದನ್ನೇ ನಾನು ನಿನಗೆ

ಹೇಳಿದೆನು. ಅಗಸ್ತ್ಯನು ರಾಜೋತ್ತಮನಿಗೆ ವ್ರತವನ್ನು ಉಪದೇಶಿಸಿ 'ನಾನು ಪುಷ್ಕರಕ್ಕೆ ಹೋಗುತ್ತೇನೆ. ನಿನ್ನ ಮನೆಯು ಸಪುತ್ರವಾಗಲಿ' ಎಂದು ಹೇಳಿ ಒಡನೆಯೇ ಬೇಗನೆ ಕಣ್ಮರೆಯಾದನು. ಭದ್ರಾಶ್ವರಾಜನು ಬಳಿಕ ಪದ್ಮನಾಭದ್ವಾದಶೀವ್ರತವನ್ನು ಶಾಸ್ತ್ರೋಕ್ತ-ವಿಧಾನದಿಂದ ಮಾಡಿ, ಈ ಜನ್ಮದಲ್ಲಿ ಬೇಕಾದ ಉತ್ತಮವಾದ ಪ್ರಯೋಜನವನ್ನೆಲ್ಲಾ ಪಡೆದನು. ಆತನು ಮಕ್ಕಳುಗಳೊಡಗೂಡಿ, ಉತ್ತಮಭೋಗಗಳನ್ನನುಭವಿಸಿ, ಕೊನೆಗೆ ಪದ್ಮನಾಭನ ಅನುಗ್ರಹದಿಂದ ವಿಷ್ಣುಲೋಕವನ್ನು ಪಡೆದನು.

## ಆಶ್ವೀನ ॥ ಶುದ್ಧ ॥ ಚತುರ್ದಶೀ

ಶ್ರೀ ಶ್ರೀಧರತೀರ್ಥರು (ಶ್ರೀಪಾದರಾಜ ಮಠ) - ಮುಳಬಾಗಿಲು (ಕ್ರಿ .ಶ. 1571-1598) ಶ್ರೀಪತೇಃ ಯತಿರಾಜಸ್ಯ ಕರಕಂಜಸಮುದ್ಭವಮ್ । ಶ್ರೀಧರಾಖ್ಯ-ಮುನಿಂ ವಂದೇ ಸಚ್ಛಾಸ್ತ್ರಾಧ್ಯಯನೇ ರತಂ ॥

ಶ್ರೀ ರಾಮತೀರ್ಥರು (ವ್ಯಾಸರಾಜ ಮಠ) ಆಶ್ವೀನ ಶುದ್ಧ ಚತುರ್ದಶಿ (ಕ್ರಿ .ಶ. 1564-1584) ರಾಮತೀರ್ಥಗುರುಂ ವಂದೇ ರಾಮಪಾದಾಬ್ಜಭಾಜಕಂ । ಸಂಯಗ್ ಜ್ಞಾತಧರೇಶಾನಾಂ ರಾಮಪಾರಮ್ಯಸಾಧಕಂ ॥

ಇವರು ಶ್ರೀನಿವಾಸತೀರ್ಥರಲ್ಲಿ ವ್ಯಾಸಂಗ ಮಾಡಿ ಅವರಿಂದ ಸನ್ಯಾಸ ಸ್ವೀಕರಿಸಿ ಸಂಸ್ಥಾನಾಧಿಪತಿಗಳಾದರು. ಇವರಿಗೆ ಶ್ರೀ ವ್ಯಾಸರಾಜ ಕೃತ ಗ್ರಂಥಗಳನ್ನು ಪಾಠ-ಪ್ರವಚನಗಳ ಮುಖಾಂತರ ಪ್ರಚಾರ ಮಾಡುವುದು ಮುಖ್ಯ ಕೆಲಸವಾಗಿತ್ತು. ವಿಜಯನಗರ ಅರಸನೇ ಮೊದಲಾಗಿ ಅನೇಕ ಭೂಪಾಲಕರಿಂದ ಸನ್ಮಾನಿತರಾಗಿ ಅವರಿಗೆ ಧಾರ್ಮಿಕ ಸಲಹೆಗಳನ್ನು ಕೊಡುತ್ತಿದ್ದರೆಂದು ಬಲ್ಲ ಮೂಲಗಳು ವಿವರಿಸುತ್ತವೆ. ತಮ್ಮ ಗುರುಗಳಾದ ಶ್ರೀ ಶ್ರೀನಿವಾಸತೀರ್ಥರ ಬಳಿಯಲ್ಲಿಯೇ 1584ರ ಆಶ್ವೀನ ಶುದ್ಧ ಚತುರ್ದಶಿಯಂದು ಬೃಂದಾವನಸ್ಥರಾದರು.

## ಕೋಜಾಗರ ಮಹಾಲಕ್ಷ್ಮಿವ್ರತ

ಆಶ್ವೀನ ಮಾಸದ ಹುಣ್ಣಿಮೆಯ ತುಂಬು ಬೆಳದಿಂಗಳಿನಲ್ಲಿ ರಾತ್ರಿ ಮಹಾಲಕ್ಷ್ಮಿಯ ಪೂಜೆ ಮಾಡುವ ಈ ವ್ರತದಲ್ಲಿ ಮಹಾಲಕ್ಷ್ಮಿ ಹಾಗೂ ಇಂದ್ರರ ಪೂಜೆ ನಡೆಯುತ್ತದೆ. ದೇವಿಯು ಈ ರಾತ್ರಿ ಯಾರು ಎಚ್ಚರವಿದ್ದು (ಕೋ ಜಾಗರ್ತಿ) ನನ್ನ ಪೂಜೆ ಮಾಡು-

ತ್ತಾರೆ ಎಂದು ಭೂಮಿಯಲ್ಲಿ ಸಂಚರಿಸುತ್ತಾಳೆ. ಈ ದಿನ ದೇವಿಗೆ ಎಳನೀರು ಹಾಗೂ ಹಾಲು ನಿವೇದಿಸಬೇಕು. ಹಾಲಿಗೆ ಬಾದಾಮಿ ಕಲ್ಲುಸಕ್ಕರೆ ಎಳೆಕೇಸರಿ ಏಲಕ್ಕಿ ಇತ್ಯಾದಿ ಬೆರಸಿ ಕುದಿಸಿ ನಂತರ ಬೆಳದಿಂಗಳಲ್ಲಿ ಇಡುತ್ತಾರೆ. ಶರಚ್ಚಂದ್ರನ ಕಿರಣಗಳು ಅಮೃತದ ಅಂಶದಿಂದ ಕೂಡಿರುತ್ತವೆಂದು ನಂಬಿ ಹಾಲಿನಲ್ಲಿ ಚಂದ್ರ ಬಿಂಬದ ದರ್ಶನ ಮಾಡಿ ನಂತರ ಪ್ರಸಾದದ ರೂಪದಲ್ಲಿ ಹಾಲು ಸ್ವೀಕರಿಸಿ ರಾತ್ರಿ ಪೂರ್ತಿ ಜಾಗರಣೆ ಮಾಡ-ಬೇಕು. ಹಿಂದಿನ ಕಾಲದಲ್ಲಿ ಇದೇ ರಾತ್ರಿ ಕೌಮುದೀಮಹೋತ್ಸವ ಏರ್ಪಡಿಸುತ್ತಿದ್ದರು. ಈ ಕುರಿತು ಎರಡು ಕಥೆಗಳಿವೆ.

1. ಧರ್ಮಭೀರುವಾದ ರಾಜನೊಬ್ಬ ತನ್ನ ರಾಜ್ಯದ ಕಲಾವಿದನೊಬ್ಬ ಮಾಡಿದ ಅಲಕ್ಷ್ಮಿಯ ಕಬ್ಬಿಣದ ಪ್ರತಿಮೆಯನ್ನು ಮನೆಯಲ್ಲಿ ತಂದಿಟ್ಟುಕೊಳ್ಳುತ್ತಾನೆ. ಇದರಿಂದ ನೊಂದ ಅವನ ಮನೆಯಲ್ಲಿ ನೆಲೆಸಿದ ಮಹಾಲಕ್ಷ್ಮೀ ನಾನು ಹಾಗೂ ಅಲಕ್ಷ್ಮೀ ಒಂದು ಕಡೆ ಇರಬಾರದು ಎಂದು ಎಚ್ಚರಿಸುತ್ತಾಳೆ. ಆದರೆ ಹಾಗೆ ಆ ಪ್ರತಿಮೆ ವಿಸರ್ಜನೆ ಮಾಡುವುದು ಆ ಕಲಾವಿದನ ನೈಪುಣ್ಯಕ್ಕೆ ಮಾಡುವ ಅಪಮಾನ ಎಂದು ಮನೆಯಲ್ಲಿ ಅಲಕ್ಷ್ಮೀ ಪ್ರತಿಮೆ ಇಟ್ಟುಕೊಳ್ಳುತ್ತಾನೆ. ಆಗ ಮಹಾಲಕ್ಷ್ಮಿಯು ಮನೆಯಿಂದ ಹೊರ ನಡೆಯುತ್ತಾಳೆ. ಆಕೆಯ ಹಿಂದೆ ಆಕೆಯ ಅನುಯಾಯಿಗಳಾದ ಸಂಪತ್ತು ಸಂತುಷ್ಟಿ ಮುಂತಾದವರೂ ಹೋಗುತ್ತಾರೆ. ಕೊನೆಗೆ ಧರ್ಮದೇವನು ಮನೆಬಿಟ್ಟು ಹೋಗುವಾಗ ರಾಜ ಅವನನ್ನು ತಡೆದು ತಾನೂ ಆ ಕಲಾವಿದನ ಕಲೆಗೆ ಗೌರವ ಸೂಚಿಸಿ ಧರ್ಮಪಾಲನೆ ಮಾಡಿರುವುದಾಗಿ ಹೇಳಿದಾಗ ಸಂತೋಷಗೊಂಡ ಧರ್ಮ ನಿನ್ನ ಪತ್ನಿ ಕೋಜಾಗರ ವ್ರತ ಮಾಡಿದರೆ ಮಹಾಲಕ್ಷ್ಮಿಯು ಪ್ರಸನ್ನಳಾಗಿ ಪುನಃ ಮನೆಗೆ ಹಿಂದಿರುಗಿತ್ತಾಳೆಂದು ಹೇಳುತ್ತಾನೆ. ಅದರಂತೆ ರಾಜಪತ್ನಿ ಸಕಾಲದಲ್ಲಿ ಕೋಜಾಗರ ವ್ರತ ಮಾಡುತ್ತಾಳೆ. ಅವಳ ವ್ರತ ಪ್ರಭಾವದಿಂದ ಆ ಅಲಕ್ಷ್ಮಿಯ ಕಬ್ಬಿಣದ ವಿಗ್ರಹ ತುಂಬು ಬೆಳದಿಂಗಳ ತಂಪಿನಲ್ಲೂ ಕರಗಿ ನೀರಾಗಿ ಹೊರಗೆ ಹರಿದು ಹೋಗಿ ಅವರ ಮನೆಯಲ್ಲಿ ಪುನಃ ಲಕ್ಷ್ಮೀದೇವಿ ಸನ್ನಿಧಾನ ಏರ್ಪಡುತ್ತದೆ.

2. ಲಲಿತನೆಂಬ ಬಡ ಬ್ರಾಹ್ಮಣನು ಅವನ ಇಚ್ಛೆಗೆ ಸದಾ ವ್ಯತಿರಿಕ್ತವಾಗಿ ನಡೆಯುವ ಅವನ ಹೆಂಡತಿ ಚಂಡಿಯ ಊಟಕ್ಕೆ ಬೇಸತ್ತು ಅರಣ್ಯಗಳಲ್ಲಿ ಸಂಚರಿಸುವಾಗ ಕೆಲವು ಅಪ್ಸರೆಯರು ಈ ವ್ರತವನ್ನು ಆಚರಿಸುವುದು ನೋಡಿ

ತಾನೂ ಅವರೊಂದಿಗೆ ಸೇರಿ ಪೂಜೆ ಮಾಡಿ ಜಾಗರಣೆ ಮಾಡಿ ಮಹಾಲಕ್ಷ್ಮಿಯ ಕೃಪೆಯನ್ನು ಪಡೆಯುತ್ತಾನೆ.

## ಆಶ್ವಯುಜ || ಶುದ್ಧ || ಹುಣ್ಣಿಮೆ

ಈ ದಿನವೇ ಶ್ರೀಕೃಷ್ಣನು ವ್ರಜಮಂಡಲದಲ್ಲಿ ರಾಸಕ್ರೀಡೆಯನ್ನಾಡಿದನೆಂದು ಶ್ರೀಮದ್ಭಾಗವತದಲ್ಲಿ ಹೇಳಲಾಗಿದೆ.

## ಆಶ್ವೀನ || ಬಹುಳ || ಚೌತಿ

ಶ್ರೀ ಸುಬೋಧನಿಧಿ ತೀರ್ಥರು (ಶ್ರೀಪಾದರಾಜ ಮಠ) - ಮುಳಬಾಗಿಲು ಪ್ರಾಜ್ಞನಿಧಿಸಂಜಾತಂ ಪಾಷ್ಠಿಕಕುಲಭೂಷಣಂ । ಭಕ್ತ್ಯಾದಿಭೂಷಣಂ ನೌಮಿ ಸುಬೋ -ಧನಿಧಿನಾಮಕಮ್ ||

## ಆಶ್ವೀನ || ಬಹುಳ || ಷಷ್ಠೀ

ಶ್ರೀ ಸತ್ಯಮಾಧವತೀರ್ಥರು (ಮಾಧವತೀರ್ಥ ಮಠ) ಆಶ್ವೀನ ಬಹುಳ ಷಷ್ಠೀ - ಮಾಧವಪುರ. ಮುಖ್ಯಪ್ರಾಣಪದಾಸಕ್ತಂ ಸುಶಾಂತ್ಯಾದಿಗುಣಾಕರಮ್ । ಭಕ್ತಾಭೀಷ್ಟಪ್ರದಾತಾರಂ ಸತ್ಯಮಾಧವ ಗುರುಂ ಭಜೇ ||

## ಆಶ್ವಿಜ || ಬಹುಳ || ಸಪ್ತಮೀ

ಶ್ರೀಶ್ರೀನಿಧಿತೀರ್ಥರು (ಶ್ರೀಪಾದರಾಜಮಠ) - ಪುರುಪಾಳ್ಯ. ಸು-ಸಂಸ್ತುತಿಪ್ರಣಯನಪ್ರಸನ್ನಗುರುರಾಜಕಮ್ । ಗುರುಂ ಶ್ರೀನಿಧಿತೀರ್ಥಾಖ್ಯಂ ಸತ್ ಶ್ರೀಕಾಂತಮಾಭಜೇ ||

ಶ್ರೀವಸುಧೇಂದ್ರತೀರ್ಥರು (ರಾಯರ ಮಠ) – ಕೆಂಚನಗುಡ್ಡೆ – ವಸುಧಾ - ತಲವಿಖ್ಯಾತಂ ವೈರಾಗ್ಯಾದಿಗುಣಾರ್ಣವಂ । ವೇದವೇದಾಂಗಚತುರಂ ವಸುಧೇಂದ್ರ -ಗುರುಂ ಭಜೇ || ವಾದೀಂದ್ರ ಸ್ವಾಮಿಗಳ ಪೂರ್ವಾಶ್ರಮದ ತಮ್ಮಂದಿರಾದ ವೇಣು ಗೋಪಾಲಾಚಾರ್ಯರಿಗೆ, ಮೂರುಜನ ಮಕ್ಕಳು. ಅವರಲ್ಲಿ ಪುರುಷೋ-ತ್ತಮಾಚಾರ್ಯರು ಚಿಕ್ಕವರು. ಇವರು ಮೂರು ಜನರೂ ಅನುಕ್ರಮವಾಗಿ

ವಸುಧೇಂದ್ರತೀರ್ಥರು, ವರದೇಂದ್ರತೀರ್ಥರು, ಭುವನೇಂದ್ರತೀರ್ಥರೆಂದು ಪ್ರಖ್ಯಾತರಾದ ಸಂಸ್ಥಾನಾಧಿಪತಿಗಳಾದರು. ವಸುಧೇಂದ್ರತೀರ್ಥರು ಮಹಾತಪಸ್ವಿ-ಗಳು. ಇವರು ವಿಶೇಷ ಸಂಚಾರ ಮಾಡದೆ ಬಹುದಿನ ಮಂತ್ರಾಲಯದಲ್ಲೇ ಪಾಠಪ್ರವಚನ ಮಾಡಿಕೊಂಡಿದ್ದರು. ಇವರ ಕಾಲದಲ್ಲೂ ಆದವಾನಿಯ ಅಧಿಕಾರಿ ನವಾಬ್‌ಸಬ್ದಲ್ ಜಂಗ್‌ಬಹದೂರ್ ಎಂಬುವರು ಮಂತ್ರಾಲಯ ಜಹಗಿರಿಯ ಬಗ್ಗೆ ಕಾಗದಪತ್ರಗಳನ್ನು ಮಾಡಿಕೊಟ್ಟ. ಕಿರೀಟಗಿರಿ ಗ್ರಾಮ 1756 ರಿಂದ 1760 ರವರೆಗೆ ಸರ್ಕಾರದ ವಶವಾಗಿದ್ದು ಈಗ ಅದು ಮತ್ತೆ ಶ್ರೀಗಳವರ ಹೆಸರಿನಲ್ಲಿ ಕಾಗದ-ಪತ್ರವಾಯಿತು. ಇದಲ್ಲದೆ ರಾಮಭೂಪಾಲನೆಂಬೊಬ್ಬ ಪಾಳೆಯಗಾರ ಸೋಮನ-ಹಳ್ಳಿಯೆಂಬ ಗ್ರಾಮವನ್ನು ಶ್ರೀಗಳವರಿಗೆ ದಾನ ಕೊಟ್ಟ. ಇದಲ್ಲದೆ ಶ್ರೀಗಳವರು ಒಮ್ಮೆ ದಕ್ಷಿಣ ದೇಶದ ಸಂಚಾರ ಕೈಕೊಂಡರು. ಅಲ್ಲಿ ತಿರುಚನಾಪಲ್ಲಿ ಪ್ರಾಂತ್ಯದಲ್ಲಿ ಅರಿಯುಲೂರಿನನಾಯಕ ವಿಜಯವೊಪ್ಪುಲಾಮಾಳವ ರಾಯನೆಂಬುವನು ಶ್ರೀಗಳ-ವರಿಗೆ ಮರ್ಯಾದೆ ಮಾಡಿದ. ಅವರು ಯಾವಾಗಲೂ ಜಪತಪಾನುಷ್ಠಾನಮಗ್ನ-ರಾಗಿರುತ್ತಿದ್ದರು. ಇವರು ಕೊನೆಗೆ ಶಿರಗುಪ್ಪಿಯ ಹತ್ತಿರ ಕೆಂಚನಗುಡ್ಡವೆಂಬ ತುಂಗಭದ್ರಾತೀರದ ಗ್ರಾಮದಲ್ಲಿ ಬೃಂದಾವನಸ್ಥರಾದರು. ಇವರಿಂದ ರಚಿತವಾದ ಗ್ರಂಥಗಳ ಪೈಕಿ ಗುರುಗುಣಸ್ತವನಕ್ಕೆ ವ್ಯಾಖ್ಯಾನ ಒಂದೇ ಈಗ ಉಪಲಬ್ಧವಿದೆ. ಇವರ ಬೃಂದಾವನಸ್ಥಳವೇ ಬಹಳ ಜಾಗರೂಕವೆಂದು ಪ್ರಸಿದ್ಧವಿದೆ. ಅಲ್ಲಿ ದೇಹಶುದ್ಧಿ ಇಲ್ಲದೆ ಹೋಗುವವರಿಗೆ ತಕ್ಷಣದಲ್ಲೇ ಶಿಕ್ಷೆಯಾಗುತ್ತದೆ. ಸ್ವಾಮಿಗಳು ಮಹಾತಪಸ್ವಿಗಳೆಂದು ಈಗಲೂ ಪ್ರಸಿದ್ಧಿ ಇದೆ.

## ಆಶ್ವೀನ ॥ ಬಹುಳ ॥ ಏಕಾದಶೀ

ಯುಧಿಷ್ಠಿರಃ – ಕಥಯಸ್ವ ಪ್ರಸಾದೇನ ಮಮಾಗ್ರೇ ಮಧುಸೂದನ । ಇಷಸ್ಯ ಕೃಷ್ಣಪಕ್ಷೇ ತು ಕಿನ್ನಾಮ್ನೈಕಾದಶೀ ಭವೇತ್ ॥1॥ ಯುಧಿಷ್ಠಿರನು ಹೇಳಿದನು – ಎಲೈ ಮಧುಸೂದನನೇ! ಆಶ್ವಯುಜಕೃಷ್ಣಪಕ್ಷದಲ್ಲಿ ಬರುವ ಏಕಾದಶಿಗೆ ಹೆಸರೇನು? ದಯವಿಟ್ಟು ಹೇಳು. ಶ್ರೀಕೃಷ್ಣಃ – ಆಶ್ವಿನೇ ಕೃಷ್ಣಪಕ್ಷೇ ತು ಇಂದಿರಾ ನಾಮ ನಾಮತಃ । ತಸ್ಯಾ ವ್ರತಪ್ರಭಾವೇಣ ಮಹಾಪಾಪಂ ಪ್ರಣಶ್ಯತಿ ॥2॥ ಶ್ರೀಕೃಷ್ಣನು ಹೇಳಿದನು – ಆಶ್ವಯುಜಕೃಷ್ಣಪಕ್ಷದಲ್ಲಿ ಬರುವ ಏಕಾದಶೀಗೆ ಇಂದಿರಾ ಏಕಾದಶಿಯೆಂದು

ಹೆಸರು. ಅದನ್ನು ಆಚರಿಸಿದರೆ ಮಹಾಪಾಪಗಳು ನಾಶವಾಗುತ್ತವೆ. ಅಧೋಯೋನಿಗತಾನಾಂ ಚ ಪಿತೄಣಾಂ ಗತಿದಾಯಿನೀ । ಶೃಣುಷ್ವಾವಹಿತೋ ರಾಜನ್ ಕಥಾಂ ಪಾಪಹರಾಂ ಪರಾಮ್ ॥3॥ ಪಿತೃಗಳು ನರಕದಲ್ಲಿರಲಿ ಕೀಳು ಜನ್ಮದಲ್ಲಿ ಹುಟ್ಟಿರಲಿ ಅವರಿಗೆ ಈ ವ್ರತವನ್ನು ಆಚರಿಸುವುದರಿಂದ ಉತ್ತಮಗತಿಯು ಬರುತ್ತದೆ. ಪಾಪಹಾರಕವಾದ ಇದರ ವಿಷಯವನ್ನು ಹೇಳುತ್ತೇನೆ. ಮನಸ್ಸಿಟ್ಟು ಕೇಳು. ಯಸ್ಯಾ ಶ್ರವಣಮಾತ್ರೇಣ ವಾಜಪೇಯಫಲಂ ಲಭೇತ್ । ಪುರಾ ಕೃತಯುಗೇ ರಾಜನ್ ಬಭೂವ ನೃಪನಂದನಃ ॥4॥ ಇಂದ್ರಸೇನ ಇತಿ ಖ್ಯಾತಃ ಪುರಾ ಮಾಹಿಷ್ಮತೀಪತಿಃ । ಸ ರಾಜಾ ಪಾಲಯಾಮಾಸ ಧರ್ಮೇಣ ಯಶಸಾನ್ವಿತಃ ॥5॥ ಪುತ್ರಪೌತ್ರಸಮಾಯುಕ್ತೋ ಧನಧಾನ್ಯಸಮನ್ವಿತಃ । ಮಾಹಿಷ್ಮತ್ಯಧಿಪೋ ರಾಜಾ ವಿಷ್ಣುಭಕ್ತಿಪರಾಯಣಃ ॥6॥ ಈ ವ್ರತದ ಮಹಿಮೆಯನ್ನು ಕೇಳುವುದರಿಂದಲೇ ವಾಜಪೇಯಯಾಗದ ಫಲವು ಬರುತ್ತದೆ. ಎಲೈ ರಾಜನೇ! ಪೂರ್ವದಲ್ಲಿ ಕೃತ-ಯುಗದಲ್ಲಿ ಮಾಹಿಷ್ಮತಿಯಲ್ಲಿ ಇಂದ್ರಸೇನನೆಂಬ ರಾಜನೊಬ್ಬನಿದ್ದನು. ಆ ರಾಜನು ಮಕ್ಕಳು ಮೊಮ್ಮಕ್ಕಳೊಡನೆ ಕೂಡಿಕೊಂಡು ಧನ, ಧಾನ್ಯ ಸಮೃದ್ಧಿಮಂತನಾಗಿ ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದನು. ಮತ್ತು ವಿಷ್ಣುಭಕ್ತರಲ್ಲಿ ಮೊದಲ-ನೆಯವನಾಗಿದ್ದನು. ಜಪನ್ ಗೋವಿಂದನಾಮಾನಿ ಮುಕ್ತಿದಾನಿ ನರಾಧಿಪ । ಕಾಲಂ ನಯತಿ ವಿಧಿವದಧ್ಯಾತ್ಮಧ್ಯಾನಚಿಂತಕಃ ॥7॥ ಏಕಸ್ಮಿನ್ ದಿವಸೇ ರಾಜ್ಞಿ ಸುಖಾಸೀನೇ ಸದೋಗತೇ । ಅವತೀರ್ಯಾಗಮತ್ ತತ್ರ ಹ್ಯಂಬರಾನ್ನಾರದೋ ಮುನಿಃ ॥8॥ ಅವನು ಯಾವಾಗಲೂ ಗೋವಿಂದನಾಮಗಳನ್ನೇ ಜಪಿಸುತ್ತಾ ಕಾಲವನ್ನು ಕಳೆಯುತ್ತಿದ್ದನು. ಒಂದು ದಿನ ಸಭೆಯಲ್ಲಿ ಆ ರಾಜನು ಕುಳಿತಿರಲು ನಾರದನು ಅಂತರಿಕ್ಷದಿಂದ ಇಳಿದು ಅಲ್ಲಿಗೆ ಬಂದನು. ತಮಾಗತಮಭಿಪ್ರೇಕ್ಷ್ಯ ಪ್ರತ್ಯುತ್ಥಾಯ ಕೃತಾಂಜಲಿಃ । ಪೂಜಯಿತ್ವಾಥ ವಿಧಿನಾ ಚಾಸನೇ ಸನ್ನ್ಯವೇಶಯತ್ ॥ ಸುಖೋ-ಪವಿಷ್ಟಂ ಸ ಮುನಿಂ ಪ್ರತ್ಯುವಾಚ ನೃಪೋತ್ತಮಃ ॥9॥ ನಾರದನು ಬಂದುದನ್ನು ನೋಡಿ ಅವನನ್ನು ಎದುರುಗೊಂಡು ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಆಸನದಲ್ಲಿ ಕೂರಿಸಿ ಕೈಮುಗಿದುಕೊಂಡು ಇಂತೆಂದನು. ರಾಜಾ – ತ್ವತ್ಪ್ರಸಾದಾತ್ ಮುನಿಶ್ರೇಷ್ಠ ಸರ್ವಂ ಚ ಕುಶಲಂ ಮಮ । ಮಮ ಕ್ರತುಕ್ರಿಯಾಃ ಸರ್ವಾಃ ಸಫಲಾಸ್ತವ ದರ್ಶನಾತ್ ॥10॥ ಪ್ರಸಾದಂ ಕುರು ದೇವರ್ಷೇ ಬ್ರಹ್ಮನ್ನಾಗಮಕಾರಣಾತ್ ॥11॥ ಎಲೈ

ವಸುಧೇಂದ್ರತೀರ್ಥರು, ವರದೇಂದ್ರತೀರ್ಥರು, ಭುವನೇಂದ್ರತೀರ್ಥರೆಂದು ಪ್ರಖ್ಯಾತರಾದ ಸಂಸ್ಥಾನಾಧಿಪತಿಗಳಾದರು. ವಸುಧೇಂದ್ರತೀರ್ಥರು ಮಹಾತಪಸ್ವಿಗಳು. ಇವರು ವಿಶೇಷ ಸಂಚಾರ ಮಾಡದೆ ಬಹುದಿನ ಮಂತ್ರಾಲಯದಲ್ಲೇ ಪಾಠಪ್ರವಚನ ಮಾಡಿಕೊಂಡಿದ್ದರು. ಇವರ ಕಾಲದಲ್ಲೂ ಆದವಾನಿಯ ಅಧಿಕಾರಿ ನವಾಬ್‌ಸಬ್ದಲ್ ಜಂಗ್‌ಬಹದೂರ್ ಎಂಬುವರು ಮಂತ್ರಾಲಯ ಜಹಗಿರಿಯ ಬಗ್ಗೆ ಕಾಗದಪತ್ರಗಳನ್ನು ಮಾಡಿಕೊಟ್ಟ. ಕಿರೀಟಗಿರಿ ಗ್ರಾಮ 1756 ರಿಂದ 1760 ರವರೆಗೆ ಸರ್ಕಾರದ ವಶವಾಗಿದ್ದು ಈಗ ಅದು ಮತ್ತೆ ಶ್ರೀಗಳವರ ಹೆಸರಿನಲ್ಲಿ ಕಾಗದಪತ್ರವಾಯಿತು. ಇದಲ್ಲದೆ ರಾಮಭೂಪಾಲನೆಂಬೊಬ್ಬ ಪಾಳೆಯಗಾರ ಸೋಮನಹಳ್ಳಿಯೆಂಬ ಗ್ರಾಮವನ್ನು ಶ್ರೀಗಳವರಿಗೆ ದಾನ ಕೊಟ್ಟ. ಇದಲ್ಲದೆ ಶ್ರೀಗಳವರು ಒಮ್ಮೆ ದಕ್ಷಿಣ ದೇಶದ ಸಂಚಾರ ಕೈಕೊಂಡರು. ಅಲ್ಲಿ ತಿರುಚನಾಪಲ್ಲಿ ಪ್ರಾಂತ್ಯದಲ್ಲಿ ಅರಿಯುಲೂರಿನನಾಯಕ ವಿಜಯವೊಪ್ಪುಲಾಮಾಳವ ರಾಯನೆಂಬುವನು ಶ್ರೀಗಳವರಿಗೆ ಮರ್ಯಾದೆ ಮಾಡಿದ. ಅವರು ಯಾವಾಗಲೂ ಜಪತಪಾನುಷ್ಠಾನಮಗ್ನರಾಗಿರುತ್ತಿದ್ದರು. ಇವರು ಕೊನೆಗೆ ಶಿರಗುಪ್ಪಿಯ ಹತ್ತಿರ ಕೆಂಚನಗುಡ್ಡವೆಂಬ ತುಂಗಭದ್ರಾತೀರದ ಗ್ರಾಮದಲ್ಲಿ ಬೃಂದಾವನಸ್ಥರಾದರು. ಇವರಿಂದ ರಚಿತವಾದ ಗ್ರಂಥಗಳ ಪೈಕಿ ಗುರುಗುಣಸ್ತವನಕ್ಕೆ ವ್ಯಾಖ್ಯಾನ ಒಂದೇ ಈಗ ಉಪಲಬ್ಧವಿದೆ. ಇವರ ಬೃಂದಾವನಸ್ಥಳವೇ ಬಹಳ ಜಾಗರೂಕವೆಂದು ಪ್ರಸಿದ್ಧವಿದೆ. ಅಲ್ಲಿ ದೇಹಶುದ್ಧಿ ಇಲ್ಲದೆ ಹೋಗುವವರಿಗೆ ತಕ್ಷಣದಲ್ಲೇ ಶಿಕ್ಷೆಯಾಗುತ್ತದೆ. ಸ್ವಾಮಿಗಳು ಮಹಾತಪಸ್ವಿಗಳೆಂದು ಈಗಲೂ ಪ್ರಸಿದ್ಧಿ ಇದೆ.

## ಆಶ್ವೀನ ॥ ಬಹುಳ ॥ ಏಕಾದಶೀ

ಯುಧಿಷ್ಠಿರಃ – ಕಥಯಸ್ವ ಪ್ರಸಾದೇನ ಮಮಾಗ್ರೇ ಮಧುಸೂದನ । ಇಷಸ್ಯ ಕೃಷ್ಣಪಕ್ಷೇ ತು ಕಿನ್ನಾಮ್ನೈಕಾದಶೀ ಭವೇತ್ ॥1॥ ಯುಧಿಷ್ಠಿರನು ಹೇಳಿದನು – ಎಲೈ ಮಧುಸೂದನನೇ! ಆಶ್ವಯುಜಕೃಷ್ಣಪಕ್ಷದಲ್ಲಿ ಬರುವ ಏಕಾದಶಿಗೆ ಹೆಸರೇನು? ದಯವಿಟ್ಟು ಹೇಳು. ಶ್ರೀಕೃಷ್ಣಃ – ಆಶ್ವಿನೇ ಕೃಷ್ಣಪಕ್ಷೇ ತು ಇಂದಿರಾ ನಾಮ ನಾಮತಃ । ತಸ್ಯಾ ವ್ರತಪ್ರಭಾವೇಣ ಮಹಾಪಾಪಂ ಪ್ರಣಶ್ಯತಿ ॥2॥ ಶ್ರೀಕೃಷ್ಣನು ಹೇಳಿದನು – ಆಶ್ವಯುಜಕೃಷ್ಣಪಕ್ಷದಲ್ಲಿ ಬರುವ ಏಕಾದಶೀಗೆ ಇಂದಿರಾ ಏಕಾದಶಿಯೆಂದು

ಹೆಸರು. ಅದನ್ನು ಆಚರಿಸಿದರೆ ಮಹಾಪಾಪಗಳು ನಾಶವಾಗುತ್ತವೆ. ಅಧೋ ಯೋನಿಗತಾನಾಂ ಚ ಪಿತೄಣಾಂ ಗತಿದಾಯಿನೀ । ಶೃಣುಷ್ವಾವಹಿತೋ ರಾಜನ್ ಕಥಾಂ ಪಾಪಹರಾಂ ಪರಾಮ್ ॥3॥ ಪಿತೃಗಳು ನರಕದಲ್ಲಿರಲಿ ಕೀಳು ಜನ್ಮದಲ್ಲಿ ಹುಟ್ಟಿರಲಿ ಅವರಿಗೆ ಈ ವ್ರತವನ್ನು ಆಚರಿಸುವುದರಿಂದ ಉತ್ತಮಗತಿಯು ಬರುತ್ತದೆ. ಪಾಪಹಾರಕವಾದ ಇದರ ವಿಷಯವನ್ನು ಹೇಳುತ್ತೇನೆ. ಮನಸ್ಸಿಟ್ಟು ಕೇಳು. ಯಸ್ಯಾ ಶ್ರವಣಮಾತ್ರೇಣ ವಾಜಪೇಯಫಲಂ ಲಭೇತ್ । ಪುರಾ ಕೃತಯುಗೇ ರಾಜನ್ ಬಭೂವ ನೃಪನಂದನಃ ॥4॥ ಇಂದ್ರಸೇನ ಇತಿ ಖ್ಯಾತಃ ಪುರಾ ಮಾಹಿಷ್ಮತೀಪತಿಃ । ಸ ರಾಜಾ ಪಾಲಯಾಮಾಸ ಧರ್ಮೇಣ ಯಶಸಾನ್ವಿತಃ ॥5॥ ಪುತ್ರಪೌತ್ರಸಮಾಯುಕ್ತೋ ಧನಧಾನ್ಯಸಮನ್ವಿತಃ । ಮಾಹಿಷ್ಮತ್ಯಧಿಪೋ ರಾಜಾ ವಿಷ್ಣುಭಕ್ತಿಪರಾಯಣಃ ॥6॥ ಈ ವ್ರತದ ಮಹಿಮೆಯನ್ನು ಕೇಳುವುದರಿಂದಲೇ ವಾಜಪೇಯಯಾಗದ ಫಲವು ಬರುತ್ತದೆ. ಎಲೈ ರಾಜನೇ! ಪೂರ್ವದಲ್ಲಿ ಕೃತ-ಯುಗದಲ್ಲಿ ಮಾಹಿಷ್ಮತಿಯಲ್ಲಿ ಇಂದ್ರಸೇನನೆಂಬ ರಾಜನೊಬ್ಬನಿದ್ದನು. ಆ ರಾಜನು ಮಕ್ಕಳು ಮೊಮ್ಮಕ್ಕಳೊಡನೆ ಕೂಡಿಕೊಂಡು ಧನ, ಧಾನ್ಯ ಸಮೃದ್ಧಿಮಂತನಾಗಿ ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದನು. ಮತ್ತು ವಿಷ್ಣುಭಕ್ತರಲ್ಲಿ ಮೊದಲ-ನೆಯವನಾಗಿದ್ದನು. ಜಪನ್ ಗೋವಿಂದನಾಮಾನಿ ಮುಕ್ತಿದಾನಿ ನರಾಧಿಪ । ಕಾಲಂ ನಯತಿ ವಿಧಿವದಧ್ಯಾತ್ಮಧ್ಯಾನಚಿಂತಕಃ ॥7॥ ಏಕಸ್ಮಿನ್ ದಿವಸೇ ರಾಜ್ಞಿ ಸುಖಾಸೀನೇ ಸದೋಗತೇ । ಅವತೀರ್ಯಾಗಮತ್ ತತ್ರ ಹ್ಯಂಬರಾನ್ನಾರದೋ ಮುನಿಃ ॥8॥ ಅವನು ಯಾವಾಗಲೂ ಗೋವಿಂದನಾಮಗಳನ್ನೇ ಜಪಿಸುತ್ತಾ ಕಾಲವನ್ನು ಕಳೆಯುತ್ತಿದ್ದನು. ಒಂದು ದಿನ ಸಭೆಯಲ್ಲಿ ಆ ರಾಜನು ಕುಳಿತಿರಲು ನಾರದನು ಅಂತರಿಕ್ಷದಿಂದ ಇಳಿದು ಅಲ್ಲಿಗೆ ಬಂದನು. ತಮಾಗತಮಭಿಪ್ರೇಕ್ಷ್ಯ ಪ್ರತ್ಯುತ್ಥಾಯ ಕೃತಾಂಜಲಿಃ । ಪೂಜಯಿತ್ವಾಥ ವಿಧಿನಾ ಚಾಸನೇ ಸನ್ನ್ಯವೇಶಯತ್ ॥ ಸುಖೋ-ಪವಿಷ್ಟಂ ಸ ಮುನಿಂ ಪ್ರತ್ಯುವಾಚ ನೃಪೋತ್ತಮಃ ॥9॥ ನಾರದನು ಬಂದುದನ್ನು ನೋಡಿ ಅವನನ್ನು ಎದುರುಗೊಂಡು ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಆಸನದಲ್ಲಿ ಕೂರಿಸಿ ಕೈಮುಗಿದುಕೊಂಡು ಇಂತೆಂದನು. ರಾಜಾ – ತ್ವತ್ಪ್ರಸಾದಾತ್ ಮುನಿಶ್ರೇಷ್ಠ ಸರ್ವಂ ಚ ಕುಶಲಂ ಮಮ । ಮಮ ಕ್ರತುಕ್ರಿಯಾಃ ಸರ್ವಾಃ ಸಫಲಾಸ್ತವ ದರ್ಶನಾತ್ ॥10॥ ಪ್ರಸಾದಂ ಕುರು ದೇವರ್ಷೇ ಬ್ರಹ್ಮನ್ನಾಗಮಕಾರಣಾತ್ ॥11॥ ಎಲೈ

ಮುನಿಯೇ! ನಿನ್ನ ಅನುಗ್ರಹದಿಂದ ನನಗೆ ಎಲ್ಲದಲ್ಲಿಯೂ ಕ್ಷೇಮವಿದೆ. ನಿನ್ನ ದರ್ಶನದಿಂದ ನನ್ನ ಯಾಗ ಮುಂತಾದವುಗಳೆಲ್ಲಾ ಸಫಲವಾದವು. ದಯವಿಟ್ಟು ನೀನು ಬಂದ ಕಾರಣವನ್ನು ಹೇಳು. ನಾರದಃ – ಶ್ರೂಯತಾಂ ನೃಪಶಾರ್ದೂಲ ಮದ್ವಚೋ ವಿಸ್ಮಯಪ್ರದಮ್ । ಬ್ರಹ್ಮಲೋಕಾದಹಂ ಪ್ರಾಪ್ತೋ ಯಮಲೋಕಂ ನೃಪೋತ್ತಮ ॥12॥ ನಾರದನು ಹೇಳಿದನು – ಎಲೈ ದೊರೆಯೇ! ಕೇಳು. ನಾನು ಹೇಳುವ ಮಾತು ಆಶ್ಚರ್ಯಕರವಾಗಿರುವುದು. ಬ್ರಹ್ಮಲೋಕದಿಂದ ಯಮ-ಲೋಕಕ್ಕೆ ಹೋಗಿದ್ದೆನು. ಶಮನೇನಾರ್ಚಿತೋ ಭಕ್ತ್ಯಾ ಉಪವಿಷ್ಟೋ ವರಾಸನೇ । ಧರ್ಮಶೀಲಾಃ ಸತ್ಯವಂತೋ ಭಾಸ್ಕರಿಂ ಸಮುಪಾಸತೇ ॥13॥ ಅಲ್ಲಿ ಯಮನು ಭಕ್ತಿಯಿಂದ ನನ್ನನ್ನು ಪೂಜಿಸಿದನು. ಅನಂತರ ಆಸನದಲ್ಲಿ ಕುಳಿತುಕೊಂಡನು. ಅನೇಕ ಜನ ಧರ್ಮಿಷ್ಠರು ಸತ್ಯವಂತರು ಆ ಯಮನನ್ನು ಸೇವಿಸುತ್ತಿದ್ದರು. ಬಹುಪುಣ್ಯಪ್ರಕರ್ತಾರೋ ವ್ರತವೈಕಲ್ಯದೋಷತಃ । ಸಭಾಯಾಂ ಶ್ರಾದ್ಧದೇವಸ್ಯ ಮಯಾ ದೃಷ್ಟಃ ಪಿತಾ ತವ ॥14॥ ಇನ್ನೂ ಅನೇಕಜನ ಪುಣ್ಯವಂತರೂ ಆ ಯಮನ ಸಭೆಯಲ್ಲಿದ್ದರು. ವ್ರತವನ್ನು ವ್ಯತ್ಯಾಸವಾಗಿ ಮಾಡಿ ದೋಷವನ್ನು ಹೊಂದಿದ ನಿನ್ನ ತಂದೆಯನ್ನು ನಾನು ಅಲ್ಲಿ ನೋಡಿದೆನು. ಕಥಿತಸ್ತೇನ ಸಂದೇಶಸ್ತಂ ನಿಬೋಧ ಜನೇಶ್ವರ । ಇಂದ್ರಸೇನ ಇತಿ ಖ್ಯಾತೋ ರಾಜಾ ಮಾಹಿಷ್ಮತೀಪತಿಃ ॥15॥ ತಸ್ಯಾಗ್ರೇ ಕಥಯ ಬ್ರಹ್ಮನ್ ಸ್ಥಿತಂ ಮಾಂ ಯಮಸನ್ನಿಧೌ । ಕೇನಾಪಿ ಚಾಂತರಾಯೇಣ ಪೂರ್ವಜನ್ಮೋದ್ಭವೇನ ಚ ॥16॥ ಅವನು ನಿನಗೆ ಒಂದು ಮಾತನ್ನು ಹೇಳಿ ಕಳಿಸಿರುವನು. ಕೇಳು. ಎಲೈ ನಾರದನೇ! ಮಾಹಿಷ್ಮತೀ ನಗರದಲ್ಲಿ ಇಂದ್ರಸೇನನೆಂಬ ರಾಜನಿದ್ದಾನೆ. ಅವನ ಬಳಿಗೆ ಹೋಗಿ 'ನಿನ್ನ ತಂದೆಯು ಹಿಂದಿನ ಜನ್ಮದ ಯಾವುದೋ ಪಾಪದಿಂದ ಯಮನ ಸಭೆಯಲ್ಲಿದ್ದಾನೆ' ಎಂದು ಹೇಳು. ಸ್ವರ್ಗಂ ಪ್ರಣಯ ಮಾಂ ಪುತ್ರ ಇಂದಿರಾಪುಣ್ಯದಾನತಃ । ಇತ್ಯುಕ್ತೋಽಹಂ ಸಮಾಯಾತಃ ಸಮೀಪಂ ತವ ಪಾರ್ಥಿವ ॥ ಪಿತುಃ ಸ್ವರ್ಗಕೃತೇ ರಾಜನ್ನಿಂದಿರಾವ್ರತಮಾಚರ ॥17॥ ಎಲೈ ಮಗನೇ! ಇಂದಿರಾ ದಾನದಿಂದ ನನ್ನನ್ನು ಸ್ವರ್ಗಕ್ಕೆ ಹೋಗುವಂತೆ ಮಾಡು ಎಂದು ಹೇಳಿದನು. ಆದುದರಿಂದ ನಾನು ನಿನ್ನ ಬಳಿಗೆ ಬಂದೆನು. ಇಂದಿರಾ ವ್ರತದ ದಾನದಿಂದ ತಂದೆಯು ಸ್ವರ್ಗಕ್ಕೆ ಹೋಗುವಂತೆ ಮಾಡು. ರಾಜಾ – ಕಥಯಸ್ವ ಪ್ರಸಾದೇನ ಭವನ್ನಿಂದಿರಾವ್ರತಮ್ । ವಿಧಿನಾ ಕೇನ ಕರ್ತವ್ಯಂ ತಸ್ಮಿನ್ ಪಕ್ಷೇ ತಿಥೌ

ತಥಾ ||18|| ರಾಜನು ಹೇಳಿದನು – ಎಲೈ ನಾರದನೇ! ಆ ಇಂದಿರಾವ್ರತವನ್ನು ಯಾವಾಗ ಮಾಡಬೇಕು? ಅದಕ್ಕೆ ನಿಯಮವೇನು? ಅದು ಬರತಕ್ಕದ್ದು ಯಾವ ತಿಂಗಳು? ಯಾವ ಪಕ್ಷ? ಎಲ್ಲವನ್ನೂ ದಯವಿಟ್ಟು ಹೇಳು. ನಾರದಃ – ಶೃಣು ರಾಜೇಂದ್ರ ತೇ ವಚ್ಮಿ ವ್ರತಸ್ಯಾಸ್ಯ ವಿಧಿಂ ಶುಭಮ್ । ಅಶ್ವಿನಸ್ಯಾಸಿತೇ ಪಕ್ಷೇ ದಶಮೀದಿವಸೇ ಶುಭೇ ||19|| ಪ್ರಾತಃಸ್ನಾನಂ ಪ್ರಕುರ್ವೀತ ಶ್ರದ್ಧಾಯುಕ್ತೇನ ಚೇತಸಾ । ತತೋ ಮಧ್ಯಾಹ್ನಸಮಯೇ ಸ್ನಾನಂ ಕೃತ್ವಾ ಸಮಾಹಿತಃ ||20|| ಏಕಭುಕ್ತಂ ತತಃ ಕೃತ್ವಾ ರಾತ್ರೌ ಭೂಮೌ ಶಯೀತ ಚ । ಪ್ರಭಾತೇ ವಿಮಲೇ ಜಾತೇ ಪ್ರಾಪ್ತೇ ಚೈಕಾದಶೀ ದಿನೇ||21|| ಮುಖಪ್ರಕ್ಷಾಳನಂ ಕುರ್ಯಾದ್ ದಂತಧಾವನಪೂರ್ವಕಮ್ । ಉಪವಾಸಸ್ಯ ನಿಯಮಂ ಗೃಹ್ಣೀಯಾದ್ ಭಕ್ತಿಭಾವತಃ ||22|| ನಾರದನು ಹೇಳಿದನು – ಎಲೈ ರಾಜನೇ! ಈ ವ್ರತದ ವಿಧಿಯನ್ನು ಹೇಳುತ್ತೇನೆ ಕೇಳು. ಆಶ್ವಯುಜಮಾಸದ ಕೃಷ್ಣಪಕ್ಷದ ದಶಮಿಯ ದಿನ ಬೆಳಿಗ್ಗೆ ಎದ್ದು ಶ್ರದ್ಧೆಯಿಂದ ಸ್ನಾನಾಹ್ನಿಕಗಳನ್ನು ಮಾಡಬೇಕು. ಅನಂತರ ಮಧ್ಯಾಹ್ನಕಾಲದಲ್ಲಿ ಸ್ನಾನ ಮಾಡಿ ಊಟಮಾಡಬೇಕು. ಆ ದಿನ ಒಂದೇ ಹೊತ್ತು ಊಟ ಮಾಡಬೇಕು. ಅನಂತರ ಊಟ ಮಾಡಬಾರದು. ರಾತ್ರೆಯಲ್ಲಿ ನೆಲದ ಮೇಲೆ ಮಲಗಬೇಕು. ಬೆಳಗ್ಗೆ ಎದ್ದು ಏಕಾದಶಿಯ ದಿನದಲ್ಲಿ ಮುಖವನ್ನು ತೊಳೆದುಕೊಳ್ಳಬೇಕು. ಹಲ್ಲನ್ನುಜ್ಜಿಕೊಳ್ಳ-ಬೇಕು. ಭಕ್ತಿಯಿಂದ ಉಪವಾಸದ ನಿಯಮವನ್ನು ಹಿಡಿಯಬೇಕು. ಅದ್ಯ ಸ್ಥಿತ್ವಾ ನಿರಾಹಾರಃ ಸರ್ವಭೋಗವಿವರ್ಜಿತಃ । ಶ್ವೋ ಭೋಕ್ಷ್ಯೇ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ||23|| ಈ ದಿನ ಆಹಾರವನ್ನು ತೆಗೆದುಕೊಳ್ಳದೇ ಯಾವ ಸುಖವನ್ನೂ ಹೊಂದದೆ ಇದ್ದು ನಾಳೆಯ ದಿನ ಊಟ ಮಾಡುತ್ತೇನೆ. ಎಲೈ ಅಚ್ಯುತನೇ! ನನ್ನನ್ನು ಕಾಪಾಡು. ಇತ್ಯೇವಂ ನಿಯಮಂ ಕೃತ್ವಾ ಮಧ್ಯಾಹ್ನಸಮಯೇ ತಥಾ । ಶಾಲಗ್ರಾಮಶಿಲಾಗ್ರೇ ತು ಶ್ರಾದ್ಧಂ ಕುರ್ಯಾದ್ ಯಥಾವಿಧಿ ||24|| ಈ ರೀತಿಯಾಗಿ ನಿಯಮವನ್ನು ಮಾಡಿಕೊಂಡು ಮಧ್ಯಾಹ್ನದಲ್ಲಿ ಸಾಲಿಗ್ರಾಮಶಿಲೆಯನ್ನು ಹತ್ತಿರವಿಟ್ಟುಕೊಂಡು ಶಾಸ್ತ್ರದಂತೆ ಶ್ರಾದ್ಧವನ್ನು ಮಾಡಬೇಕು. ಪಿತೃಣಾಂ ಪ್ರೀತಯೇ ಶ್ರಾದ್ಧಂ ಕುರ್ಯಾಚ್ಛ್ರದ್ಧಾಸಮನ್ವಿತಃ । ಗೋಧೂಮಚೂರ್ಣೈರ್ಯಚ್ಛ್ರಾದ್ಧಂ ಕೃತಂ ಮಧ್ಯಕೃತಂ ಭವೇತ್ ||25|| ಯವೈರ್ವ್ರೀಹಿತಿಲೈರ್ಮಾಷೈರ್ಗೋಧೂಮೈಶ್ಚಣಕೈಸ್ತಥಾ । ಶ್ರಾದ್ಧಂ ಕೃತ್ವಾ ತು ಯೋ ವಿಪ್ರೋ ನ ಭುಂಕ್ತೇ ಪಿತೃಸೇವಿತಮ್ ||26|| ಆ ದಿನ

ಮಧ್ಯಾಹ್ನದಲ್ಲಿ ಪಿತೃಗಳ ಪ್ರೀತಿಗೋಸ್ಕರ ಗೋಧಿಹಿಟ್ಟುಗಳನ್ನು ಬಾಕಿ ಶ್ರಾದ್ಧ ಮಾಡಬೇಕು. (ಆಮಶ್ರಾದ್ಧ ಮಾಡಬೇಕು). ಇದು ಮಧ್ಯಮವು. ಯವ, ಅಕ್ಕಿ, ಎಳ್ಳು, ಉದ್ದು, ಗೋಧಿ, ಕಡಲೆಗಳಿಂದ ಶ್ರಾದ್ಧವನ್ನು ಮಾಡಿದ ಮೇಲೆ ಪಿತೃಗಳು ಬಿಟ್ಟಿದ್ದನ್ನು ತಿನ್ನಬೇಕು. ಹಾಗೆ ತಿನ್ನದಿರಬಾರದು. ಅನ್ನಾಶ್ರಿತಾನಿ ಪಾಪಾನಿ ಕ್ಷಯಾಯೇತರವಾಸರೇ । ಬ್ರಾಹ್ಮಣಾನ್ ಭೋಜಯೇದ್ ರಾಜನ್ ದಕ್ಷಿಣಾಭಿಶ್ಚ ಪೂಜಿತಾನ್ ॥27॥ ಏಕಾದಶಿಯ ಹೊರತು ಮಿಕ್ಕ ದಿನಗಳಲ್ಲಿ ಪಾಪಗಳು ಅನ್ನವನ್ನು ಆಶ್ರಯಿಸಿರುತ್ತವೆ. ಆದುದರಿಂದ ಇತರ ದಿನಗಳಲ್ಲಿ ಅನ್ನದಿಂದ ತೃಪ್ತಿ ಪಡಿಸಿದ ಮೇಲೆ ದಕ್ಷಿಣೆ ಮುಂತಾದುವುಗಳಿಂದ ತೃಪ್ತಿ ಪಡಿಸಬೇಕು. ಪಿತ್ರ್ಯಮನ್ನಂ ಸಮಾಘ್ರಾಯ ಗವೇ ದದ್ಯಾದ್ವಿಚಕ್ಷಣಃ । ಪೂಜಯಿತ್ವಾ ಹೃಷೀಕೇಶಂ ಧೂಪ-ಗಂಧಾದಿಭಿಸ್ತಥಾ ॥28॥ ರಾತ್ರೌ ಜಾಗರಣಂ ಕುರ್ಯಾತ್ ಕೇಶವಸ್ಯ ಸಮೀಪತಃ । ತತಃ ಪ್ರಭಾತಸಮಯೇ ಪ್ರಾಪ್ತೇ ವೈ ದ್ವಾದಶೀದಿನೇ ॥29॥ ಅರ್ಚಯಿತ್ವಾ ಹರಿಂ ಭಕ್ತ್ಯಾ ಭೋಜಯಿತ್ವಾ ದ್ವಿಜಾಂಸ್ತಥಾ । ಬಂಧುದೌಹಿತ್ರಪುತ್ರಾದ್ಯೈಃ ಸ್ವಯಂ ಭುಂಜೀತ ವಾಗ್ಯತಃ ॥30॥ ಏಕಾದಶಿಯ ದಿವಸ ಪಿತೃಗಳಿಗೆ ನಿವೇದಿಸಿದುದನ್ನು ಮೂಸಿ ನೋಡಬೇಕು. ಅದನ್ನು ಅನಂತರ ಗೋವಿಗೆ ಕೊಟ್ಟು ಬಿಡಬೇಕು. ಹೃಷೀಕೇಶನನ್ನು ಧೂಪದೀಪಗಳಿಂದ ಪೂಜಿಸಿ ಆ ಕೇಶವನ ಸಮೀಪದಲ್ಲಿಯೇ ರಾತ್ರಿಯೆಲ್ಲವೂ ಜಾಗರಣ ಮಾಡಬೇಕು. ಬೆಳಗ್ಗೆ ದ್ವಾದಶಿಯು ಬರಲು ಭಕ್ತಿ-ಯಿಂದ ಹರಿಯನ್ನು ಪೂಜಿಸಿ ಆ ಮೇಲೆ ಬಂಧುಗಳು, ಮಕ್ಕಳು, ಮೊಮ್ಮಕ್ಕಳು ಇವರೊಡನೆ ನಿಯಮವಂತನಾಗಿ ಊಟ ಮಾಡಬೇಕು. ಅನೇನ ವಿಧಿನಾ ರಾಜನ್ ಕುರು ವ್ರತಮತಂದ್ರಿತಃ । ವಿಷ್ಣುಲೋಕಂ ಪ್ರಯಾಸ್ಯಂತಿ ಪಿತರಸ್ತವ ಭೂಪತೇ ॥31॥ ಎಲೈ ರಾಜನೇ! ನಿಯಮದಿಂದ ಈ ವ್ರತವನ್ನು ಮಾಡು. ಹಾಗೆ ಮಾಡಿದರೆ ನಿನ್ನ ಪಿತೃಗಳು ವಿಷ್ಣುಲೋಕವನ್ನು ಹೊಂದುತ್ತಾರೆ. ಶ್ರೀಕೃಷ್ಣಃ – ಇತ್ಯುಕ್ತ್ವಾ ನೃಪತಿಂ ರಾಜನ್ ಮುನಿರಂತರಧೀಯತ । ಯಥೋಕ್ತವಿಧಿನಾ ರಾಜಾ ಚಕಾರ ವ್ರತ-ಮುತ್ತಮಮ್ ॥32॥ ಶ್ರೀಕೃಷ್ಣನು ಹೇಳಿದನು – ನಾರದನು ಆ ರಾಜನಿಗೆ ಹೀಗೆಂದು ಹೇಳಿ ಹೊರಟು ಹೋದನು. ರಾಜನು ಆ ವ್ರತವನ್ನು ವಿಧಿವತ್ತಾಗಿ ಮಾಡಿದನು. ಅಂತಃಪುರೇಣ ಸಹಿತಃ ಪುತ್ರಭೃತ್ಯಸಮನ್ವಿತಃ । ವ್ರತೇ ಕೃತೇ ತು ಕೌಂತೇಯ ಪುಷ್ಪವೃಷ್ಟಿರಭೂದ್ ದಿವಃ ॥33॥ ತತ್ಪಿತಾ ಗರುಡಾರೂಢೋ ಜಗಾಮ ಹರಿ-

ಮಂದಿರಮ್ । ಇಂದ್ರಸೇನೋಽಪಿ ರಾಜರ್ಷಿಃ ಕೃತ್ವಾ ರಾಜ್ಯಮಕಂಟಕಮ್ ॥34॥ ರಾಜ್ಯೇ ನಿವೇಶ್ಯ ತನಯಂ ಜಗಾಮ ತ್ರಿದಿವಂ ಸ್ವಯಮ್ । ಇಂದಿರಾವ್ರತಮಾಹಾತ್ಮ್ಯಂ ತವಾಗ್ರೇ ಕಥಿತಂ ಮಯಾ ॥35॥ ಪಠನಾಚ್ಛ್ರವಣಾದ್ ರಾಜನ್ ಸರ್ವಪಾಪಾತ್ ಪ್ರಮುಚ್ಯತೇ ॥36॥ ಅಂತಃಪುರದವರೊಡನೆಯೂ ಮಕ್ಕಳು ಮರಿ, ಆಳು-ಗಳೊಡನೆಯೂ ಈ ವ್ರತವನ್ನು ರಾಜನು ಆಚರಿಸಲು ಅಂತರಿಕ್ಷದಿಂದ ಹೂಮಳೆ-ಗರೆಯಿತು. ಅವನ ತಂದೆಯೂ ಕೂಡ ಗರುಡನ ಮೇಲೆ ಹತ್ತಿಕೊಂಡು ವೈಕುಂಠವನ್ನು ಹೊಂದಿದನು. ಇಂದ್ರಸೇನನೂ ರಾಜರ್ಷಿಯಾಗಿದ್ದು ರಾಜ್ಯಭಾರ-ವನ್ನು ಚೆನ್ನಾಗಿ ಮಾಡಿ ಕೊನೆಗೆ ಮಗನನ್ನು ರಾಜ್ಯದಲ್ಲಿ ನಿಲ್ಲಿಸಿ ತಾನು ಸ್ವರ್ಗವನ್ನು ಹೊಂದಿದನು. ಎಲೈ ದೊರೆಯೇ! ಇಂದಿರಾವ್ರತದ ಮಹಿಮೆಯನ್ನು ನಿನಗೆ ಹೇಳಿದೆನು. ಇದನ್ನು ಕೇಳಿದವರೂ ಓದಿದವರೂ ಎಲ್ಲಾ ಪಾಪಗಳೂ ಹೋಗುತ್ತವೆ.

ಇತಿ ಶ್ರೀಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿನಾರದಸಂವಾದಾಂತರ್ಗತ ಕೃಷ್ಣಯುಧಿಷ್ಠಿರಸಂವಾದೇ ಆಶ್ವಯುಜಕೃಷ್ಣ ಇಂದಿರೈಕಾದಶೀಮಾಹಾತ್ಮ್ಯಂ ನಾಮ ಷಷ್ಟಿತಮೋಽಧ್ಯಾಯಃ ಸಮಾಪ್ತಃ ॥ ಇಂತು ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿನಾರದಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಆಶ್ವಯುಜಕೃಷ್ಣ ಇಂದಿರೈಕಾದಶಿಯ ಮಹಿಮೆ ಎಂಬ ಅರವತ್ತನೆಯ ಅಧ್ಯಾಯವು ಮುಗಿಯಿತು.

ಏಕಾದಶೀ ವಿಷಯ ಬಂದಾಗ ನಾವು ತಿಳಿಯಲೇ ಬೇಕಾದ ಕೆಲವು ಮಹತ್ವದ ವಿಚಾರಗಳಿವೆ. ಪಂಚಾಂಗದಲ್ಲಿ ಕೆಲವೊಮ್ಮೆ ವಿದ್ಧೈಕಾದಶೀ, ಉಪೋಷ್ಯದ್ವಾದಶೀ, ಪಾರಣತ್ರಯೋದಶೀ ಎಂಬುದಾಗಿಯೂ ಹರಿವಾಸರ, ಅತಿರಿಕ್ತೋಪವಾಸ ಎಂದೂ ಬರೆದಿರುತ್ತದೆ. ಏನಿದು?

ವಿದ್ಧೈಕಾದಶೀ : ವಿದ್ಧ ಎಂದರೆ ವೇಧವುಳ್ಳದ್ದು.ವೇಧವೆಂದರೆ ಸಂಬಂಧ. ವಿದ್ಧೈಕಾದಶೀ ಎಂದರೆ ಸಂಬಂಧವುಳ್ಳ ಏಕಾದಶೀ ಎಂದರ್ಥವಾಯಿತು. ಏಕಾದಶಿಗೆ ಯಾವುದರ ಸಂಬಂಧ? ಯಾವಾಗ? ಅರುಣೋದಯಕಾಲದಲ್ಲಿ ದಶಮಿಯ ಸಂಬಂಧವಿರುವ ಏಕಾದಶಿಯೇ ವಿದ್ಧೈಕಾದಶೀ.

ಸೂರ್ಯೋದಯಕ್ಕಿಂತ ಮುಂಚೆ 4 ಘಳಿಗೆ (ಒಂದು ಘಂಟೆ 36 ನಿಮಿಷ)

ಕಾಲಕ್ಕೆ ಅರುಣೋದಯಕಾಲವೆಂದು ಹೆಸರು. ಈ ಕಾಲದಲ್ಲಿ ಸ್ವಲ್ಪವಾದರೂ ದಶಮಿಯಿದ್ದು ಸೂರ್ಯೋದಯಕ್ಕೆ ಏಕಾದಶಿಯೇ ಇದ್ದರೂ ಅಂದು ವಿದ್ಧೈಕಾ-ದಶೀಯಾಗಿರುತ್ತದೆ. ಉದಾಹರಣೆಗೆ ಇಂದು 6 ಗಂಟೆಗೆ ಸೂರ್ಯೋದಯವೆಂದು ಭಾವಿಸೋಣ. ಸುಮಾರು ನಾಲ್ಕೂವರೆಯಿಂದ ಅರುಣೋದಯಕಾಲವೆಂದು ತಿಳಿಯಬಹುದು. ನಿನ್ನೆ ದಶಮಿಯು 58 ಘಳಿಗೆಯಿದ್ದುದಾದರೆ ಬೆಳಗ್ಗೆ ಸುಮಾರು 5 ಘಂಟೆಯವರೆಗೆ ದಶಮಿಯೇ ಇರುವುದರಿಂದ ಇಂದಿನ ಏಕಾದಶಿಗೆ ದಶಮೀ ವೇಧ ಬರುತ್ತದೆ.

ಈ ವಿದ್ಧೈಕಾದಶಿಯಂದು ಉಪವಾಸ ಮಾಡಬಾರದು. ಅಂದು ಉಪವಾಸ-ಮಾಡುವುದು ಅಪರಾಧ. ಈ ಅಪರಾಧದ ಫಲವಾಗಿಯೇ ಗಾಂಧಾರಿಗೆ ಪುತ್ರ-ವಿಯೋಗದ ದುಃಖವೊದಗಿದೆ. ಆದ್ದರಿಂದ ವಿದ್ಧೈಕಾದಶೀಯನ್ನು ದಶಮಿಯಂತೆ ಆಚರಿಸಿ ದ್ವಾದಶಿಯಂದು ಉಪವಾಸ ಮಾಡಬೇಕು. ಉಪವಾಸ ಮಾಡಬೇಕಾದ ಈ ದ್ವಾದಶಿಯು ಉಪೋಷ್ಯದ್ವಾದಶೀ ಅಥವಾ ಉಪೋಷಿತ ದ್ವಾದಶೀ ಎಂದು ಕರೆಯಲ್ಪಡುತ್ತದೆ. ದ್ವಾದಶಿಯಂದು ಉಪವಾಸಮಾಡಿದಾಗ ತ್ರಯೋದಶಿಯಂದು ಪಾರಣೆಯಿರುವುದರಿಂದ ಅದು ಪಾರಣತ್ರಯೋದಶೀ ಎನಿಸುತ್ತದೆ.

ಇಂತಹ ಸಂದರ್ಭದಲ್ಲಿ ಸಂಕಲ್ಪಮಾಡುವಾಗ ತಿಥಿಯನ್ನು ಹೇಗೆ ಉಲ್ಲೇಖಿಸ-ಬೇಕೆಂಬುದು ಅನೇಕರನ್ನು ಕಾಡುವ ಪ್ರಶ್ನೆ. ಏಕಾದಶ್ಯಾಂ ತಿಥೌ ಅನ್ನೋಣವೇ ? ಅಂದು ಉಪವಾಸ ಮಾಡುತ್ತಿಲ್ಲ. ದಶಮ್ಯಾಂ ಅನ್ನೋಣವೆಂದರೆ ಸೂರ್ಯೋ-ದಯಕಾಲದಲ್ಲಿ ದಶಮೀ ತಿಥಿಯಿಲ್ಲ. ಉತ್ತರವಿಷ್ಟೇ. ವಿದ್ಧೈಕಾದಶ್ಯಾಂ ತಿಥೌ (ಅಥವಾ ದಶಮೀ ವಿದ್ಧೈಕಾದಶ್ಯಾಂ) ಎನ್ನಬೇಕು. ಮರುದಿನ ಉಪೋಷ್ಯದ್ವಾದಶ್ಯಾಂ ಎಂದೂ ತ್ರಯೋದಶಿಯಂದು ಪಾರಣತ್ರಯೋದಶ್ಯಾಮ್ ಎಂದೂ ಹೇಳಬೇಕು.

ಹರಿವಾಸರ : ಕೆಲವು ಸಲ ದ್ವಾದಶಿಯಂದು ಹರಿವಾಸರವಿರುತ್ತದೆ. ಅಂದು ಹರಿವಾಸರ ಮುಗಿಯುವಲ್ಲಿಯ ತನಕ ಪಾರಣೆ ಮಾಡುವ ಹಾಗಿಲ್ಲ. ಈ ಹರಿವಾಸರವೆಂದರೇನು? ಎಂಬ ಪ್ರಶ್ನೆಗೆ ನಾರದೀಯ ಸ್ಮೃತಿಗ್ರಂಥವು ಹೀಗೆ ಉತ್ತರಿ-ಸಿದೆ. ದ್ವಾದಶ್ಯಾಮಾದ್ಯಪಾದಸ್ತು ಕೀರ್ತಿತೋ ಹರಿವಾಸರಃ । ನ ತತ್ರ ಪಾರಣಂ ಕುರ್ಯಾತ್ ಸಾಪಿ ಏಕಾದಶೀ ಸಮಾ ॥

ದ್ವಾದಶಿಯ ಒಟ್ಟು ಪೂರ್ಣಘಟಿಯ ನಾಲ್ಕನೇ ಒಂದು ಭಾಗವು ಪಾದವೆನಿಸಿದೆ. ದ್ವಾದಶಿಯ ಮೊದಲ ಪಾದವನ್ನು ಹರಿವಾಸರ ಎಂದು ಕರೆಯುತ್ತೇವೆ. ಇದು ಏಕಾದಶೀ ಸದೃಶವಾಗಿದ್ದು ಈ ಹರಿವಾಸರ ಕಾಲದಲ್ಲಿ ಏಕಾದಶಿಯಂತೆ ಉಪ-ವಾಸವಿರಬೇಕು. ಅಂದರೆ ದ್ವಾದಶಿಯ ಮೊದಲಪಾದ ಮುಗಿದ ಮೇಲೆ ಪಾರಣೆ-ಯನ್ನು ಮಾಡಬೇಕು. ಸಾಧಾರಣವಾಗಿ ಏಕಾದಶಿಯು 46 ಘಳಿಗೆಗಿಂತಲೂ ಜಾಸ್ತಿಯಿದ್ದಾಗ ಮರುದಿನ ಹರಿವಾಸರಯಿದೆಯೆಂದು ಭಾವಿಸಬಹುದಾಗಿದೆ.

ಮತ್ತೆ ಕೆಲವೊಮ್ಮೆ ದಶಮಿಯಂದು ರಾತ್ರಿ ಹರಿವಾಸರವೆಂದು ಬರೆದಿರುತ್ತದೆ. ಇದೇನು? ದಶಮಿಯಂದು ದ್ವಾದಶಿ ಬರುವುದು ಸಾಧ್ಯವೇ ? ಕೃಷ್ಣಾರ್ಯ-ಸ್ಮೃತಿಮುಕ್ತಾವಲೀ ಈ ಪ್ರಶ್ನೆಗೆ ಉತ್ತರಿಸುತ್ತದೆ. ದ್ವಾದಶಿಯ ಮೊದಲ ಪಾದವು ಮಾತ್ರವಲ್ಲದೆ ಏಕಾದಶಿಯ ಪ್ರಾಂತಭಾಗವೂ ಹರಿವಾಸರವಾಗಿದೆ. ದಶಮಿಯಂದು ರಾತ್ರಿ ಏಕಾದಶಿಯ ಕೊನೆಯ ಪಾದ ಪ್ರಾರಂಭವಾಗುವುದಕ್ಕೆ ಮುಂಚೆಯೇ ಆಹಾರ ಸೇವನೆ ಮುಗಿಸಬೇಕು. ಹರಿವಾಸರತಃ ಪೂರ್ವಂ ದಶಮ್ಯಾಂ ಭೋಜನಂ ಸ್ಮೃತಮ್ ಎಂಬ ವರಾಹವಚನವು ಈ ವಿಷಯವನ್ನು ಹೇಳುತ್ತಿದೆ. ಅದಕ್ಕಾಗಿ ದಶಮಿಯ ರಾತ್ರಿ ಹರಿವಾಸರವನ್ನು ಪಂಚಾಂಗಗಳು ಉಲ್ಲೇಖಿಸುತ್ತವೆ.

**ಅತಿರಿಕ್ತೋಪವಾಸ :** ದ್ವಾದಶೀ ತಿಥಿಯ ಆದ್ಯಪಾದವು ಹರಿವಸರವೆಂದು ಹೇಳಿದ್ದೇವೆ. ಈ ಹರಿವಾಸರವು ಕೆಲವೊಮ್ಮೆ ದ್ವಾದಶಿಯ ಬೆಳಿಗ್ಗೆ 10 ಘಂಟೆಯ ವರೆಗೂ ಇರುತ್ತದೆ. ಒಂದುವೇಳೆ ಮಧ್ಯಾಹ್ನದವರೆಗೂ ಈ ಹರಿವಾಸರ ಮುಂದುವರಿದರೆ ಆಗ ಅಂತಹಾ ದ್ವಾದಶಿಯನ್ನು ಪೂರ್ತಿ ಉಪವಾಸ ಮಾಡಬೇಕು. ದ್ವಾದಶ್ಯಾಮಾದ್ಯ ಪಾದಸ್ತು ಸಂಗವಾತ್ಪರತೋ ಯದಿ । ಉಪವಾಸದ್ವಯಂ ಕಾರ್ಯಮನ್ಯಥಾ ನರಕಂ ವ್ರಜೇತ್ ॥

ದ್ವಾದಶಿಯಂದು ಆದ್ಯಪಾದವು (ಹರಿವಾಸರವು) ಸಂಗವದ ನಂತರವೂ ಇದ್ದರೆ ಆಗ ಏಕಾದಶಿ ಹಾಗೂ ದ್ವಾದಶಿಯನ್ನು ಸೇರಿಸಿ 2 ದಿನ ಉಪವಾಸ ಮಾಡಬೇಕು. ಇಲ್ಲದಿದ್ದರೆ ನರಕವಿದೆ. ಸಂಗವವೆಂದರೆ ಹಗಲನ್ನು 5 ಭಾಗ ಮಾಡಿದರೆ ಎರಡನೇ ಭಾಗ. ಅಂದರೆ ದ್ವಾದಶಿಯಂದು ಬೆಳಗ್ಗೆ ಸುಮಾರು 11 ಗಂಟೆಗಿಂತಲೂ ಹೆಚ್ಚು ಕಾಲ ಹರಿವಾಸರವಿರುವುದಾದರೆ ದ್ವಾದಶಿಯು ಪೂರ್ತಿ ಉಪವಾಸವಿರಬೇಕು.

ಅಂತಹಾ ಉಪವಾಸವನ್ನು ಅತಿರಿಕ್ತೋಪವಾಸ ಎನ್ನುತ್ತಾರೆ. ಪಂಚಾಂಗದಲ್ಲಿ ಈ ಬಗ್ಗೆ ಉಲ್ಲೇಖವಿರುತ್ತದೆ.

**ಪ್ರದೋಷ :** ಪ್ರದೋಷವೆಂದರೆ ಮುಸ್ಸಂಜೆಯೆಂಬುದು ಪ್ರಸಿದ್ಧವಾದ ಅರ್ಥ. ಆದರೆ ಪಂಚಾಂಗದಲ್ಲಿ ಇದನ್ನು ಪಾರಿಭಾಷಿಕವಾಗಿ ಬಳಸಿದೆ. ಷಷ್ಠೀ ಚತುರ್ಥೀ ದ್ವಾದಶಿಗಳಂದು ಪ್ರದೋಷವಿರುವುದಾದರೂ ಪ್ರಸಿದ್ಧವಾದ ದ್ವಾದಶಿಯ ಪ್ರದೋಷವನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ. – **ರಾತ್ರೌ ಯಾಮದ್ವಯಾದರ್ವಾಕ್ ಸಪ್ತಮೀಸ್ಯಾತ್ ತ್ರಯೋದಶೀ । ಪ್ರದೋಷ ಸತು ವಿಜ್ಞೇಯಃ ಸರ್ವವಿದ್ಯಾ ವಿಗರ್ಹಿತಃ ॥** ಎಂಬ ವೃದ್ಧ ಗರ್ಗರ ಪ್ರಮಾಣ ವಾಕ್ಯದಂತೆ ರಾತ್ರಿ 2 ಯಾಮಗಳು ಮುಗಿಯುವುದಕ್ಕೆ ಮೊದಲೇ ತ್ರಯೋದಶಿಯು ಪ್ರಾರಂಭವಾದರೆ ಪ್ರದೋಷವೆಂದು ತಿಳಿಯಬೇಕು. ಪ್ರದೋಷಕಾಲದಲ್ಲಿ ವೇದಾದಿಗಳ ಅಧ್ಯಯನವನ್ನು ಮಾಡಬಾರದು. ದ್ವಾದಶಿಯಂದು ರಾತ್ರಿಯೇ ತ್ರಯೋದಶಿಯು ಒದಗುವುದರಿಂದ ದ್ವಾದಶಿಯಂದೇ ಪ್ರದೋಷವಿರುತ್ತದೆ. ಈ ಪ್ರದೋಷಕಾಲವು ಸೂರ್ಯಾಸ್ತಕ್ಕಿಂತ ಪೂರ್ವಾಪರಗಳಲ್ಲಿ ಸಾಮಾನ್ಯವಾಗಿ 3 ಗಂಟೆಗಳಿರುತ್ತದೆ. ದ್ವಾದಶಿಯಂದು ಸಾಯಂಕಾಲ 6 ಗಂಟೆಗೆ ಸೂರ್ಯಾಸ್ತವಾಗುವುದೆಂದು ಭಾವಿಸಿದರೆ ಮಧ್ಯಾಹ್ನ 3 ಗಂಟೆಯಿಂದ ರಾತ್ರಿ 9 ಗಂಟೆಯವರೆಗೆ ಪ್ರದೋಷವಿದೆಯೆಂದು ತಿಳಿಯಬಹುದು.

ದ್ವಾದಶಿಯಂದು ಹರಿವಾಸರವಿದ್ದರೆ ಅಂದು ಪ್ರದೋಷವಿರುವುದಿಲ್ಲ. ಏಕೆಂದರೆ ಅಂದು ಪ್ರಾತಃಕಾಲದಲ್ಲಿ ತಾನೇ ಪ್ರಾರಂಭವಾಗಿರುವ ದ್ವಾದಶಿಯು ರಾತ್ರಿ ಕಾಲದಲ್ಲಿ ಮುಂದುವರಿಯುವುದರಿಂದ ಯಾಮದ್ವಯದಲ್ಲಿ ತ್ರಯೋದಶಿ ಪ್ರವೇಶದ ಸಾಧ್ಯತೆ ಇರುವುದಿಲ್ಲ. ಅಂತಹಾ ಸಂದರ್ಭದಲ್ಲಿ ತ್ರಯೋದಶಿಯಂದೇ ರಾತ್ರಿಯಲ್ಲಿ ತ್ರಯೋ -ದಶಿಯು ಸಿಗುವುದರಿಂದ ಅಂದೇ ಪ್ರದೋಷವಿರುವುದನ್ನು ಪಂಚಾಂಗದಲ್ಲಿ ಕಾಣಬಹುದಾಗಿದೆ. ಹೀಗೆಯೇ ಷಷ್ಠೀ ಅಥವಾ ಸಪ್ತಮಿಯಂದೂ ಪ್ರದೋಷ-ವಿರುತ್ತದೆ.

ದ್ವಾದಶೀ – ಚಾಂದ್ರಮಾನದಲ್ಲಿ ಬರುವ ಮೂವತ್ತು ತಿಥಿಗಳಲ್ಲಿ ಹನ್ನೆರಡನೆಯ ಮತ್ತು ಇಪ್ಪತ್ತೇಳನೆಯ ತಿಥಿಗಳು. ಹನ್ನೆರಡು ತಿಂಗಳಿರುವ ಒಂದು ಸಂವತ್ಸರದಲ್ಲಿ ಇಪ್ಪತ್ತನಾಲ್ಕು ದ್ವಾದಶಿಗಳು ಬರುತ್ತವೆ. ಅಧಿಕಮಾಸ ಬರುವ ವರ್ಷದಲ್ಲಿ ಎರಡು

ದ್ವಾದಶಿಗಳು ಅಧಿಕವಾಗಿ ಬಂದು ಒಟ್ಟು ಇಪ್ಪತ್ತಾರು ದ್ವಾದಶಿಗಳಾಗುತ್ತವೆ. ಈ ತಿಂಗಳ ಮೊದಲ ತಿಥಿ ಸೂರ್ಯಚಂದ್ರರ ಅಂತರ 132 ಅಂಶವಾದಾಗ ಪ್ರಾರಂಭ -ವಾಗಿ 144 ಅಂಶಗಳಾದಾಗ ಮುಗಿಯುತ್ತದೆ. ಎರಡನೆಯ ತಿಥಿ ಅಂತರ 312 ಅಂಶಗಳಾದಾಗ ಪ್ರಾರಂಭವಾಗಿ 324 ಅಂಶಗಳಾದಾಗ ಮುಗಿಯುತ್ತದೆ.

ಸ್ಕಾಂದಪುರಾಣದಲ್ಲಿ ತಿಳಿಸಿರುವಂತೆ ದ್ವಾದಶಿಯ ದಿನ ತುಲಸೀ ಮಿಶ್ರವಾದ ನೈವೇದ್ಯವನ್ನು ಊಟ ಮಾಡುವುದರಿಂದ ಬ್ರಹ್ಮಹತ್ಯಾದೋಷವೂ ನಾಶವಾಗುತ್ತದೆ. ಪಾರಣೆಯಲ್ಲಿ ಅಗಸೆಯ ಸೊಪ್ಪು ನೆಲ್ಲಿಕಾಯಿಯನ್ನು ಉಪಯೋಗಿಸಬೇಕೆಂದು ವಿಷ್ಣುಧರ್ಮೋತ್ತರ ಪುರಾಣದಲ್ಲಿದೆ. ಆ ದಿನ ಹಗಲು ನಿದ್ರೆ, ಪರಾನ್ನ ಭೋಜನ, ಪುನರ್ಭೋಜನ, ಮೈಥುನ ಇವನ್ನು ಮಾಡಬಾರದು. ಕಾರಣಾಂತರದಿಂದ ಬೆಳಗ್ಗೆ ಪಾರಣೆ ಮಾಡಲು ಆಗದಿದ್ದಾಗ, ಪಾರಣೆಗೆ ಪ್ರತಿಯಾಗಿ ನೀರನ್ನಾದರೂ ಕುಡಿದು ಬಳಿಕ ನಿಧಾನವಾಗಿ ಊಟ ಮಾಡಬಹುದು. ಅಂದು ಮಾಧ್ಯಾಹ್ನಿಕವನ್ನು ಬೆಳಗ್ಗೆಯೇ ಮಾಡುವುದರಿಂದ ಕಾಲಾತೀತ ದೋಷಬರುವುದಿಲ್ಲ. .

ದ್ವಾದಶೀ ತಿಥಿ ಪ್ರಮಾಣದಲ್ಲಿ ಪ್ರಾರಂಭದ ನಾಲ್ಕನೆಯ ಒಂದು ಭಾಗಕ್ಕೆ ಹರಿವಾಸರ ಎಂದು ಸಂಜ್ಞೆ. ಈ ಕಾಲದಲ್ಲಿ ಪಾರಣೆ ಮಾಡಕೂಡದು. ದ್ವಾದಶಿ-ಯಂದು ಶ್ರವಣ ನಕ್ಷತ್ರ ಸೇರಿದರೂ ಪಾರಣೆ ಕೂಡದು ; ಉಪವಾಸವಿದ್ದು ತ್ರಯೋ-ದಶೀ ದಿವಸ ಪಾರಣೆ ಮಾಡಬೇಕು. ಸಾಮಾನ್ಯವಾಗಿ ಶುಕ್ಲ ದ್ವಾದಶೀ ಶ್ರವಣ ಯೋಗ ಭಾದ್ರಪದ ತಿಂಗಳಿನಲ್ಲೂ ಕೃಷ್ಣ ದ್ವಾದಶೀ ಶ್ರವಣಯೋಗ ಮಾಘ-ಮಾಸದಲ್ಲೂ ಸಂಭವಿಸುತ್ತವೆ.

ಉನ್ಮೀಲನೀ ವಂಜುಲೀ ತ್ರಿಸ್ಪರ್ಶಾ ಪಕ್ಷವರ್ಧಿನೀ ಜಯ ವಿಜಯಾ ಜಯಂತೀ ಪಾಪನಾಶಿನೀ ಎಂದು ಮಹಾ ದ್ವಾದಶಿಗಳು ಎಂಟು. ಶುದ್ಧೈಕಾದಶೀಯುಕ್ತವಾದ ದ್ವಾದಶಿ ಉನ್ಮೀಲನೀ, ಶುದ್ಧಾಧಿಕ ದ್ವಾದಶೀ ವಂಜುಲೀ, ಉದಯ ಕಾಲದಲ್ಲಿ ಏಕಾದಶೀ ಅನಂತರ ದ್ವಾದಶೀ, ರಾತ್ರಿ ಶೇಷದಲ್ಲಿ ತ್ರಯೋದಶೀ - ಹೀಗೆ ಮೂರು ತಿಥಿಗಳಿಂದಲೂ ಕೂಡಿರುವುದು ತ್ರಿಸ್ಪರ್ಶಾ. 16 ದಿನಗಳು ಬರುವ ಪಕ್ಷದಲ್ಲಿರುವ ದ್ವಾದಶೀ ಪಕ್ಷವರ್ಧಿನೀ, ಪುಷ್ಯನಕ್ಷತ್ರ ಸಹಿತವಾದ ದ್ವಾದಶೀ ಜಯಾ. ಶ್ರವಣ ನಕ್ಷತ್ರ ಸಹಿತವಾದ ದ್ವಾದಶೀ ವಿಜಯಾ. ಪುನರ್ವಸು ನಕ್ಷತ್ರಯುಕ್ತ ದ್ವಾದಶೀ ಜಯಂತೀ.

ರೋಹಿಣೀ ನಕ್ಷತ್ರಯುಕ್ತ ದ್ವಾದಶೀ ಪಾಪನಾಶಿನೀ ಎಂದು ಇವುಗಳಿಗೆ ವಿಶೇಷ ನಾಮಗಳು.

ಶ್ರೀ ಸುಮತೀಂದ್ರತೀರ್ಥರು - ಶ್ರೀ ರಾಘವೇಂದ್ರತೀರ್ಥ ಮಠ (1725 ಬೃಂದಾವನ ಪ್ರವೇಶದ ವರ್ಷ) ಆರಾಧನೆ - ಆಶ್ವಯುಜ ಬಹುಳ ದ್ವಾದಶಿ ವೃಂದಾವನ - ಶ್ರೀರಂಗಂ ಶ್ರೀಗಳು ಅದ್ವಿತೀಯ ಗ್ರಂಥಕಾರರು,

ಶ್ರೀಗಳು ಚಕ್ರವಾಲಪ್ರಬಂಧ, ಜಯಘೋಷಣ, ಬಿರುದಾವಲಿ, ದೇವರಾಜಸ್ತುತಿ ಎನ್ನುವ ಅನೇಕ ಚಾಟುಪ್ರಬಂಧಗಳನ್ನು ರಚಿಸಿದ್ದಾರೆ. ಅದಲ್ಲದೆ ರಾಮದಂಡಕ, ರಾಮತಾರವಳಿ, ಯೋಗೀಂದ್ರ ವಿಜಯ, ಯೋಗೀಂದ್ರ ತಾರಾವಳಿ, ಅಭಿನವ ಕಾದಂಬರಿ ಮೊದಲಾದ ಗ್ರಂಥಗಳನ್ನು ಸಾಹಿತ್ಯದಲ್ಲಿ ರಚಿಸಿದ್ದಾರೆ. ಶ್ರೀಸುಧೀಂದ್ರ ತೀರ್ಥರ ಸುಭದ್ರಾಪರಿಣಯ, ಅಲಂಕಾರಮಂಜರಿ ಹಾಗು ಪಂಡಿತಾಚಾರ್ಯರ ಉಷಾಹರಣ ಕಾವ್ಯಕ್ಕೂ, ಶ್ರೀವಿಜಯೀಂದ್ರ, ಶ್ರೀವ್ಯಾಸರಾಜ ವಿಜಯಕ್ಕೂ ವ್ಯಾಖ್ಯಾನ ರಚಿಸಿದ್ದಾರೆ.

ಇನ್ನು ವೇದಾಂತ ವಿಚಾರದಲ್ಲಿ ಗೀತಾಭಾಷ್ಯಪ್ರಮೇಯದೀಪಿಕಾ, ತತ್ವಪ್ರಕಾಶಿಕಾ, ಋಗ್ಭಾಷ್ಯಟೀಕಾ ಮೊದಲಾದ ಗ್ರಂಥಗಳಿಗೆ ಭಾವರತ್ನ ಕೋಶವೆಂಬ ವ್ಯಾಖ್ಯಾನವನ್ನು ರಚಿಸಿದ್ದಾರೆ. ಅಧಿಕರಣ ರತ್ನಮಾಲೆ ಎನ್ನುವ ಬ್ರಹ್ಮ ಮೀಮಾಂಸಾರ್ಥಕ ಬೋಧಕ ಗ್ರಂಥವನ್ನು ರಚಿಸಿದ್ದಾರೆ.

ಶ್ರೀಗಳು ಸಂಸ್ಥಾನಪೂಜಾ ನೆರವೇರಿಸುವ ಸಮಯದಲ್ಲಿ ಶ್ರೀ ಹೆಳವನಕಟ್ಟೆ ಗಿರಿಯಮ್ಮನವರು ಶ್ರೀ ಮೂಲರಾಮದೇವರಲ್ಲಿ ರಂಗನನ್ನು ಪ್ರತ್ಯಕ್ಷೀಕರಿಸಿಕೊಂಡು ಮೂಲರಾಮದೇವರ ಮೇಲೆ ಕೀರ್ತನೆಯನ್ನು ರಚಿಸಿರುವುದು ಸರ್ವ ಮಾಧ್ವ ಮನ ಮನೆಗಳಲ್ಲಿ ಪ್ರಚಲಿತವಾದ ವಿಷಯ.

ಇಲ್ಲಿಗೆ ಆಶ್ವೀನಮಾಸದ ವಿಧಾನವು ಸಮಾಪ್ತವಾಯಿತು ॥
ಶ್ರೀಮಧ್ವೇಶಾರ್ಪಣಮಸ್ತು ॥

* * * *

॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ ॥

# ಕಾರ್ತಿಕಮಾಸ

ಮಾಸನಿಯಾಮಕ - ಇಂದಿರಾದಾಮೋದರಾಯ ನಮಃ

## ಕಾರ್ತಿಕಮಾಸದ ಧರ್ಮಗಳು

ಈ ಮಾಸದಲ್ಲಿ ಮಾಡುವ ಎಲ್ಲ ಧರ್ಮಗಳನ್ನು ಇಂದಿರಾಪತಿ ದಾಮೋದರನ ಪ್ರೀತಿಗಾಗಿ ಮಾಡತಕ್ಕದ್ದು.

ಬಲಿಪಾಡ್ಯ – (ಬಲಿಪ್ರತಿಪತ್) ಬಲಿಪಾಡ್ಯದಂದು ರಾತ್ರಿ ಬಲೀಂದ್ರನ ಪೂಜೆಯನ್ನು ಮಾಡಬೇಕು. ಭೂಮಿಯಲ್ಲಿ ಮಂಡಲ ಮಾಡಿ ಅದರಲ್ಲಿ ಐದು ಬಣ್ಣದ ರಂಗೋಲಿಯಿಂದ ಬಲೀಂದ್ರನನ್ನು ಬರೆದು ಪೂಜಿಸಬೇಕು. ಜನಸಾಮಾನ್ಯರು ಮನೆಯೊಳಗೆ ಗೋಮಯದಿಂದ ಮೂರ್ತಿಯನ್ನು ಮಾಡಿ, ಗೋಮಯದಿಂದ ಮಾಡಿದ ಕೋಟೆಯೊಳಗೆ ಆ ಮೂರ್ತಿಯನ್ನಿಟ್ಟು –

ಬಲಿರಾಜ ನಮಸ್ತುಭ್ಯಂ ವಿರೋಚನಸುತ ಪ್ರಭೋ । ಭವಿಷ್ಯೇಂದ್ರ ಸುರಾರಾತೇ
ಪೂಜೇಯಂ ಪ್ರತಿಗೃಹ್ಯತಾಮ್ ॥ ಬಲಿರಾಜ ನಮಸ್ತುಭ್ಯಂ ದೈತ್ಯದಾನವವಂದಿತ ।
ಇಂದ್ರಶತ್ರೋಽಮರಾರಾತೇ ವಿಷ್ಣುಸಾನ್ನಿಧ್ಯದೋ ಭವ ॥

ಎಂಬ ಮಂತ್ರವನ್ನು ಹೇಳಿ ಆ ಮೂರ್ತಿಯ ಎದುರಿನಲ್ಲಿ ಮೊಸರನ್ನು ಹಾಕಬೇಕು. ಮನೆಯ ಅಂಗಳದಲ್ಲಿಯೂ ಸಹ ಗೋಮಯದ ಮೂರ್ತಿಯನ್ನು ಇಡಬೇಕು.

## ಕಾರ್ತಿಕಮಾಸದಲ್ಲಿ ಮಾಡುವ ದಾನಗಳು

ಕಾರ್ತಿಕಮಾಸದಲ್ಲಿ ದೀಪದಾನವು ಸರ್ವಪಾಪ ಪರಿಹಾರಕ. ಪ್ರಾತಃ ಕಾಲದಲ್ಲಿ ದೇವರ ಮುಂದೆ ದೀಪ ಹಚ್ಚುವುದನ್ನು ಇಲ್ಲಿ ದೀಪದಾನ ಎಂದು ಕರೆಯಲಾಗಿದೆ. ನಮಗೆ ದೀಪ ಹಚ್ಚಿಡಲು ಶಕ್ತಿ ಇಲ್ಲದಿದ್ದರೂ ಮತ್ತೊಬ್ಬರು ಹಚ್ಚಿದ ದೀಪವನ್ನು ಬತ್ತಿ ಸರಿಮಾಡಿ ಪ್ರಜ್ವಲಿಸುವಂತೆ ಮಾಡಿದರೂ ದೀಪದಾನದ ಫಲವನ್ನು ಪಡೆಯುವರು.

ದೀಪಕ್ಕಾಗಿ ಹತ್ತಿಯನ್ನು ಬತ್ತಿಯನ್ನು ಎಳ್ಳೆಣ್ಣೆಯನ್ನೂ, ಹಣತೆಯನ್ನು ಕೊಡುವುದೂ ಪುಣ್ಯಕರ. ದೀಪದಾನ ಕೊಡುವವರಿಗೆ ಸಹಾಯ ಮಾಡುವುದೂ ಪುಣ್ಯಕರವಾಗಿದೆ.

**ಶ್ರೋತ್ರಿಯರಿಗೆ ಗೋಪೀಚಂದನದಾನ** ಕೊಡುವುದರಿಂದ ಪಾಪಮುಕ್ತರಾಗಿ ವೈಷ್ಣವತ್ವವನ್ನು ಪಡೆಯುವರು. ಸರ್ವಪಾಪಪರಿಹಾರ, ಜನ್ಮಾಂತರದಲ್ಲಿ ವೈಷ್ಣವತ್ವ ಪ್ರಾಪ್ತಿ.

**ಗೋದಾನ** ಕೊಡುವವನು, ಕ್ರಮೇಣ ನಿಶ್ಚಯವಾಗಿ ಮೋಕ್ಷ ಸೇರುವನು. ಬಾಳೆಹಣ್ಣು, ನೆಲ್ಲಿಕಾಯಿಯ ದಾನಗಳು ಶ್ರೇಷ್ಠ. ಶೀತಾರ್ತವಿಪ್ರನಿಗೆ ವಸ್ತ್ರದಾನವೂ ಪುಣ್ಯಪ್ರದ. ಕೇಶವಪ್ರಿಯವಾದ ಕಾರ್ತಿಕ ಮಾಸದಲ್ಲಿ ಅನ್ನದಾನವೂ ಶ್ರೇಷ್ಠ. ಸಂಪತ್ತಿಗೆ ಅನುಸಾರವಾಗಿ ಕಾಯಿಪಲ್ಯೆಗಳ ದಾನವನ್ನು ಮಾಡಬೇಕು. ಶಾಲಗ್ರಾಮ ದಾನವು ತುಂಬ ಶ್ರೇಯಸ್ಕರ. ಪುರಾಣಪ್ರವಚನ ಮಾಡುವ ವಿಪ್ರನಿಗೆ ಘೃತ ಪಾಯಸ ದಾನವನ್ನು ಕೊಡುವವನು ನೂರು ಬ್ರಾಹ್ಮಣರ ಭೋಜನದ ಫಲವನ್ನು ಪಡೆಯುವನು.

ಶಂಖದಾನವು ಚಕ್ರಾಂತಿಕ ದಾನವೂ ಪಾಪಪರಿಹಾರಕ ಹಾಗೂ ಸುಪುಣ್ಯಪ್ರದವಾಗಿದೆ.

ಕಾರ್ತಿಕಮಾಸದಲ್ಲಿ ಪರಮಾತ್ಮನ ಪ್ರೀತ್ಯರ್ಥವಾಗಿ ಕಾಯಿಪಲ್ಯೆಗಳ ದಾನವನ್ನಾಗಲಿ, ಉಪ್ಪನ್ನೇ ಆಗಲಿ ಯಾವುದೇ ಯೋಗ್ಯ ಪದಾರ್ಥವನ್ನಾದರೂ ದಾನ ಕೊಡಬೇಕು. ದಾನಕೊಡದೆ ಕಾರ್ತಿಕಮಾಸವನ್ನುವ ಯರ್ಥವಾಗಿ ಕಳೆಯಬಾರದು.

**ಗೋದಾನ ಮಂತ್ರ–** ಅಪಮೃತ್ಯುವಿನಾಶಾರ್ಥಂ ಸಂಸಾರಾರ್ಣವತಾರಕ ।
ವಿಪ್ರ ತುಭ್ಯಮಿಮಾಂ ಸೌಮ್ಯಂ ಧೇನುಂ ಸಂಪ್ರದದಾಮ್ಯಹಮ್ ॥

ಮೋಕ್ಷಪ್ರಾಪ್ತಿ(ಸಾಕ್ಷಾತ್ ಗೋವು ಅಥವಾ ಎಳ್ಳಿನಿಂದ ಮಾಡಿದ ಗೋವು).

ಗೋವು ದೊರೆಯದಿದ್ದರೆ ಬ್ರಾಹ್ಮಣನಿಗೆ ಚಪ್ಪಲಿಗಳನ್ನು ದಾನ ಕೊಡಬೇಕು.

ಪಾದರಕ್ಷೆ ದಾನ– ಪ್ರವಾಸ ಮಾಡುವಂತಹ ವಿಪ್ರನಿಗೆ ಪಾದರಕ್ಷೆಗಳನ್ನು ದಾನ ಕೊಟ್ಟರೆ ದಾನಿಯು ನೆಲದ ಮೇಲೆ ನಡೆಯುವ ಸಂದರ್ಭವೇ ಬಾರದು.

ವಸ್ತ್ರದಾನ– ವೇದಾಧ್ಯಯನ ಸಂಪನ್ನ ಬಡ ಬ್ರಾಹ್ಮಣರಿಗೆ ವಸ್ತ್ರದಾನವನ್ನು ಅವಶ್ಯ ಕೊಡಬೇಕು. ವಸ್ತ್ರದಾನದಿಂದ ನಮಗೆ ನಗ್ನತೆಯು ಬಾರದು.

ಅನ್ನದಾನ– ಷಡ್ರಸದಿಂದ ತುಂಬಿದ ಉತ್ತಮ ಅನ್ನವನ್ನು ದಾನ ಮಾಡುವುದ-ರಿಂದ ಅಮರತ್ವವನ್ನು ಯೋಗ್ಯತೆಯಿದ್ದರೆ ಪಡೆಯಬಲ್ಲನು.

ಜಲದಾನ– ಸರ್ವರಿಗೂ ಸರ್ವಕಾಲದಲ್ಲಿ ಜೀವನ ಪ್ರದವಾದ ನೀರು ಪ್ರಧಾನ. ಅನ್ನದಾನಕ್ಕಿಂತ ಉತ್ತಮವಿದು. ಈ ದಾನವನ್ನು ಎಲ್ಲರಿಗೂ ಕೊಡಬೇಕು. ಈ ಯಾವ ನಿಷೇಧವೂ ಇಲ್ಲ. ಜಲದಾನಿಯು ವರುಣಲೋಕ ಸೇರುವನು.

ಕ್ಷೀರದಾನ– ವಿಪ್ರರಿಗೆ ಅದರಲ್ಲೂ ಬಾಲಕರಿಗೆ ಕ್ಷೀರದಾನ ನೀಡುವುದು ಈ ಮಾಸದಲ್ಲಿ ತುಂಬ ಪುಣ್ಯಕರ. ಇದರಿಂದ ಪುತ್ರ ಪೌತ್ರಾದಿ ಪ್ರಾಪ್ತಿ.

ಧಾನ್ಯದಾನ– ಎಲ್ಲ ಪ್ರಾಣಿಗಳಿಗೆ ಧಾನ್ಯವನ್ನು ಕೊಡುವುದರಿಂದ ಕುಬೇರಪುರ-ದಲ್ಲಿ ಫಲವನ್ನು ಅನುಭವಿಸುತ್ತಾನೆ.

ಹೀಗೆ ವಿವಿಧ ದಾನಗಳನ್ನು ಈ ಮಾಸದಲ್ಲಿ ಕೊಡಬಹುದು. ಶಕ್ತಿಯಿರದಿದ್ದರೆ ಶಕ್ತಿಯಿದ್ದಷ್ಟು ವಿಪ್ರನ ಕೈಗೆ ದಾನ ಕೊಡಲೇಬೇಕು.

ದೀಪದಾನ – ಇದರಿಂದ ಸ್ತ್ರೀ ಅಥವಾ ಪುರುಷರು ಹುಟ್ಟಿದಾರಭ್ಯ ಮಾಡಿರುವ ಪಾಪನಾಶ. ಸ್ವರ್ಗಪ್ರಾಪ್ತಿ. ಸ್ವತಃ ದೀಪದಾನ ಮಾಡಲು ಸಾಧ್ಯವಿಲ್ಲದವರು ಬೇರೆಯವರು ಹಚ್ಚಿರುವ ದೀಪವನ್ನು ಪ್ರಜ್ವಲಿಸುವಂತೆ ಮಾಡಿದರೂ ಅವರಿಗೆ ಸ್ವರ್ಗಾದಿ ಫಲ.

ಆಕಾಶದೀಪ – ಪ್ರತಿದಿನ ರಾತ್ರಿ ದೇವಾಲಯದ, ಮನೆಯ ಮೇಲ್ಭಾಗದಲ್ಲಿ ದೀಪವನ್ನು ಹಚ್ಚಿ ದೇವರಿಗೆ ಸಮರ್ಪಣೆ ಮಾಡಬೇಕು. ಇದರಿಂದ ಒಂದು ಕೋಟಿ ಕಲ್ಪಗಳ ಕಾಲ ಪುನರ್ಜನ್ಮವಿಲ್ಲ. ಆಕಾಶದೀಪದಾನದ ಮಂತ್ರ –

ದಾಮೋದರಾಯ ವಿಶ್ವರೂಪಧರಾಯ ಚ ।
ನಮಸ್ಕೃತ್ವಾ ಪ್ರದಾಸ್ಯಾಮಿ ವ್ಯೋಮ್ನಿ ದೀಪಂ ಹರಿಪ್ರಿಯಮ್ ॥
ಗೋವಿಂದದಾಮೋದರವಾಸುದೇವ ಬ್ರಹ್ಮಾದಿಜೀವಸ್ಯ ನಿದಾನಮೂರ್ತೇ ।
ಆಕಾಶವತ್ಸರ್ವಗತಾವ್ಯಯಾತ್ಮನ್ ಪ್ರೀತೋ ಭವಸ್ವಾಶು ಸಮಸ್ತದೋಷಾನ್ ॥

ನಿರ್ವಿಘ್ನಂ ಕುರು ದೇವೇಶ ಯಾವನ್ಮಾಸಂ ಸಮಾಪ್ಯತೇ।
ವ್ರತೇನಾನೇನ ದೇವೇಶ ತ್ವಯಿ ಭಕ್ತಿಃ ಪ್ರವರ್ಧತು ॥

**ಘೃತ-ಪಾಯಸದಾನ** – ೧೦೦ ಬ್ರಾಹ್ಮಣಭೋಜನದ ಫಲ.

**ಶಂಖ-ಚಕ್ರಾಂಕಿತದಾನ** – ಸಕಲ ಪಾಪನಾಶ.

ವಸ್ತ್ರದಾನ, ಅನ್ನದಾನ, ಕದಲೀಫಲದಾನ, ಧಾತ್ರೀಫಲದಾನ, ಶಾಲಿಗ್ರಾಮದಾನ, ರಜತ-ಹೇಮದಾನ.

**ಗೀತಾಪಾರಾಯಣ** – ವೈಕುಂಠಪ್ರಾಪ್ತಿ, ಕಾರ್ತಿಕಮಾಸದಲ್ಲಿ ವಿಶೇಷ ಭಗವಂತನ ಪ್ರೀತಿಗೆ ಕಾರಣ. ಕೇವಲ ಅಧ್ಯಾಯವೊಂದನ್ನು ಪಾರಾಯಣ ಮಾಡುವುದರಿಂದಲೂ ಬಹುಪುಣ್ಯವಿದೆ. ಕಾರ್ತಿಕಮಾಸದಲ್ಲಿ ಗೀತಾಪಾರಾಯಣ ಮಾಡುವವರ ಪುಣ್ಯಫಲವನ್ನು 100ವರ್ಷಗಳು ಹೇಳಿದರೂ ಇಷ್ಟೇ ಎಂದು ಹೇಳಲಾಗುವುದಿಲ್ಲ.

ಕೇದಿಗೆ ಹೂವಿನಿಂದ ಭಗವಂತನ ಪೂಜೆ ಮಾಡಿದರೆ 1000 ವರ್ಷಗಳ ಕಾಲ ಸರ್ವಮಾನ್ಯರಾಗಿರುತ್ತಾರೆ. ಕಮಲಪುಷ್ಪದಿಂದ ಪೂಜಿಸಿದರೆ ಬಹು ಐಶ್ವರ್ಯಪ್ರಾಪ್ತಿ.

**ಪ್ರದಕ್ಷಿಣೆ ನಮಸ್ಕಾರ** – ಪ್ರದಕ್ಷಿಣೆಯ ಒಂದೊಂದು ಹೆಜ್ಜೆಗೂ ಅಶ್ವಮೇಧ ಯಾಗದ ಫಲ. ಒಂದೊಂದು ನಮಸ್ಕಾರ (ದೀರ್ಘದಂಡನಮಸ್ಕಾರಕ್ಕೆ) ರಾಜಸೂಯ ಹಾಗೂ ಅಶ್ವಮೇಧಯಾಗಗಳ ಫಲ ಪ್ರಾಪ್ತವಾಗುತ್ತದೆ.

**ಲಕ್ಷ್ಮೀಪೂಜಾ – (ಗೋಪೂಜಾ)** – ಲಕ್ಷ್ಮೀರ್ಯಾ ಲೋಕಪಾಲಾನಾಂ ಧೇನುರೂಪೇಣ ಸಂಸ್ಥಿತಾ । ಘೃತಂ ವಹತಿ ಯಜ್ಞಾರ್ಥೇ ಮಮ ಪಾಪಂ ವ್ಯಪೋಹತು ॥ ಅಗ್ರತಃ ಸಂತು ಮೇ ಗಾವೋ ಗಾವೋ ಮೇ ಸಂತು ಪೃಷ್ಠತಃ । ಗಾವೋ ಮೇ ಹೃದಯೇ ಸಂತು ಗವಾಂ ಮಧ್ಯೇ ವಸಾಮ್ಯಹಮ್ ॥

ಈ ಎರಡೂ ಮಂತ್ರಗಳಿಂದ ಹಸು -ಕರು ಎರಡನ್ನೂ ಪೂಜಿಸಬೇಕು.

**ಗೋವರ್ಧನ ಪೂಜಾ** – ಅಪರಾಹ್ಣಕಾಲದಲ್ಲಿ ಗೋಮಯದಿಂದ ಅಥವಾ ಅನ್ನದಿಂದ ಗೋವರ್ಧನಪರ್ವತವನ್ನು ಮಾಡಿ ಸಂಕಲ್ಪಮಾಡಬೇಕು

ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಕೃಷ್ಣಪ್ರೀತ್ಯರ್ಥಂ ಗೋವರ್ಧನ ಪೂಜನ - ಗೋಪಾಲಕೃಷ್ಣಪೂಜನಾತ್ಮಕಂ ಮಹೋತ್ಸವಂ ಕರಿಷ್ಯೇ - ಎಂಬುದಾಗಿ. ನಂತರ ಈ ಮಂತ್ರದಿಂದ ಆವಾಹನೆ ಮಾಡಬೇಕು

ಬಲಿರಾಜ್ಞೋ ದ್ವಾರಪಾಲೋ ಭವಾನದ್ಯ ಭವ ಪ್ರಭೋ ।
ನಿವಾಕ್ಯಾರ್ಥನಾರ್ಥಾಯ ಸಗೋವರ್ಧನಗೋಪತೇ ॥ - ಎಂಬುದಾಗಿ.
ಗೋಪಾಲಮೂರ್ತೇ ವಿಶ್ವೇಶ ಶಕ್ರೋತ್ಸವವಿಭೇದಕ ।
ಗೋವರ್ಧನಕೃತಚ್ಛತ್ರ ಪೂಜಾಂ ಮೇ ಹರ ಗೋಪತೇ ॥
ಗೋವರ್ಧನ ಧರಾಧಾರ ಗೋಕುಲತ್ರಾಣರಕ್ಷಕ ।
ವಿಷ್ಣುಬಾಹುಕೃತಚ್ಛಾಯ ಗವಾಂ ಕೋಟಿಪ್ರದೋ ಭವ ॥

ಈ ಎರಡು ಮಂತ್ರಗಳಿಂದ ಗೋವರ್ಧನ ಹಾಗೂ ಕೃಷ್ಣರನ್ನು ಷೋಡಶೋ-ಪಚಾರಗಳಿಂದ ಪೂಜಿಸಬೇಕು. ನಂತರ ಈ ಪೂಜಾಂತವಾಗಿ 'ಆಗಾವೋ ಅಗ್ಮನ್' 'ಪ್ರೇತೇ ವದಂತು' ಈ ಮಂತ್ರಗಳಿಂದ ಗೃಹಸಿದ್ಧ ಚರುಹೋಮವನ್ನು ಮಾಡಬೇಕು. ವಿಕ್ರಮಶಕೆ ಆರಂಭವಾದ ದಿವಸವಿದು.

## ಕಾರ್ತಿಕ ॥ ಶುದ್ಧ ॥ ದ್ವಿತೀಯಾ

**ಯಮದ್ವಿತೀಯಾ** – ಈ ದಿನದಂದು ಅತ್ತಿಮರದ ಕೆಳಗೆ ಎಂಟು ದಳದ ಕಮಲವನ್ನು ಬರೆದು ಅದರಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ, ಸರಸ್ವತಿ ಇವರನ್ನು ಆವಾಹಿಸಿ ಪೂಜಿಸಬೇಕು. ನಂತರ ಹಾಲು ಕರೆಯುವ ಹಸುವನ್ನು ಕರುವಿನ ಸಹಿತವಾಗಿ ಮೃತ್ಯುನಾಶಕ್ಕೋಸ್ಕರ ಬ್ರಾಹ್ಮಣನಿಗೆ ಈ ಮಂತ್ರವನ್ನು ಹೇಳಿ ದಾನ ಮಾಡಬೇಕು – ಅಪಮೃತ್ಯುವಿನಾಶಾರ್ಥಂ ಸಂಸಾರಾರ್ಣವತಾರಕ । ವಿಪ್ರ ತುಭ್ಯ-ಮಿಮಾಂ ಸೌಮ್ಯಾಂ ಧೇನುಂ ಸಂಪ್ರದದಾಮ್ಯಹಮ್ ॥

ಅನಂತರ ಯಮ - ಚಿತ್ರಗುಪ್ತ ಹಾಗೂ ಯಮದೂತರನ್ನು ಪೂಜಿಸಿ, ಯಮ-ದೇವರಿಗೆ –

ಏಹ್ಯೇಹಿ ಮಾರ್ತಾಂಡಜ ಪಾಶಹಸ್ತ ಯಮಾಂತಕಾಲೋ ಧರಾಮರೇಶ ।
ಭ್ರಾತೃದ್ವಿತೀಯಾ ಕೃತದೇವಪೂಜಾಂ ಗೃಹಾಣ ಚಾರ್ಘ್ಯಂ ಭಗವನ್ನಮಸ್ತೇ ॥

ಎಂಬ ಮಂತ್ರದಿಂದ ಅರ್ಘ್ಯವನ್ನು ಕೊಡಬೇಕು. ಅನಂತರ ತನ್ನ ಅಕ್ಕ ತಂಗಿಯರ ಮನೆಗೆ ಹೋಗಿ ಅವರಿಗೆ ಉಡುಗೊರೆ ಕೊಟ್ಟು ಅವರ ಮನೆಯಲ್ಲಿಯೇ ಊಟ ಮಾಡಬೇಕು. ಅಕ್ಕ ತಂಗಿಯರಿಲ್ಲದಿದ್ದಲ್ಲಿ ತನ್ನ ಸೋದರತ್ತೆಯ ಮನೆಯಲ್ಲಿಯಾದರೂ ಮಾಡಬೇಕು. ಇದರಿಂದ ಅಕ್ಕ ತಂಗಿಯರ ವೈಧವ್ಯವು ಪರಿಹಾರವಾಗುತ್ತದೆ. ಇದು ನಿತ್ಯವ್ರತ; ಇದನ್ನು ಮಾಡದಿದ್ದರೆ ಬ್ರಹ್ಮಹತ್ಯಾದಿದೋಷಗಳು ಬರುತ್ತವೆ.

ಕಾರ್ತಿಕ ಶುದ್ಧ ದ್ವಿತೀಯಾದಂದು ಅತ್ತಿಮರದ ಬುಡದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ವೀಣಾಪುಸ್ತಕಧಾರಿಣಿಯಾದ ಸರಸ್ವತಿಯನ್ನೂ ಪೂಜೆ ಮಾಡಬೇಕು. ಅನಂತರ ಅಪಮೃತ್ಯು ಪರಿಹಾರಕ್ಕಾಗಿ ಗೋದಾನ ಕೊಡಬೇಕು.

ಶ್ರೀ ವಿದ್ಯಾಸಮುದ್ರತೀರ್ಥರು (ವ್ಯಾಸರಾಜ ಮಠ) ಕಾರ್ತಿಕ ಶುದ್ಧ ದ್ವಿತೀಯ (ಕ್ರಿ .ಶ. 1890-1903) ಶ್ರೀಮದ್ವಿದ್ಯಾಶ್ರೀನಿವಾಸತೀರ್ಥಪಾಣಿಸರೋಜ-ಭೂಃ । ಕೃಪಾಂ ವಿದ್ಯಾಂ ಶ್ರೀಸಮುದ್ರ ಗುರುಃ ಕುರ್ಯಾತ್ಸದಾ ಮಯಿ ॥ ಇವರ ಪೂರ್ವಾಶ್ರಮನಾಮ ರಂಗಸ್ವಾಮಿ ಆಚಾರ್ಯರೆಂದು. ಇವರು ಶ್ರೀ ವಿದ್ಯಾಪೂರ್ಣ-ತೀರ್ಥರ ಪೂರ್ವಾಶ್ರಮದ ಮೊಮ್ಮಕ್ಕಳು ಮತ್ತು ಶ್ರೀವಿದ್ಯಾಶ್ರೀಸಿಂಧು ತೀರ್ಥರ ಪೂರ್ವಾಶ್ರಮದ ತಮ್ಮಂದಿರು ಆಗಿರುತ್ತಾರೆ. ಶ್ರೀವಿದ್ಯಾಶ್ರೀನಿವಾಸ ತೀರ್ಥರ ಕರ-ಕಮಲಸಂಜಾತರಾಗಿ ಶ್ರೀವಿದ್ಯಾಸಮುದ್ರತೀರ್ಥರೆಂಬ ನಾಮಕರಣದಿಂದ 13 ವರ್ಷಗಳ ಕಾಲ ಪೀಠವನ್ನಲಂಕರಿಸಿದ್ದರು. ಇವರ ಕಾಲದಲ್ಲಿ ಮಠಕ್ಕೆ ಒದಗಿದ ಆರ್ಥಿಕ ಮುಗ್ಗಟ್ಟನ್ನು ಧೈರ್ಯವಾಗಿ ಎದುರಿಸಿ ಆರ್ಥಿಕ ಮುಗ್ಗಟ್ಟಿನಿಂದ ಪಾರಾಗಿ ಪುನರುಜ್ಜೀವಿತರಾಗಬೇಕೆಂಬ ಧ್ಯೇಯದಿಂದ ಮಠದ ಆಸ್ತಿಪಾಸಿಗಳನ್ನು ಒತ್ತೆಯಿಟ್ಟು ನಿರಂತರ್ಕ ದೇಶಸಂಚಾರ ಮಾಡಿ ಶಿಷ್ಯರನ್ನು ಸಂಪಾದಿಸಿ ಕ್ಷಿಪ್ರಕಾಲದಲ್ಲಿ ಎಲ್ಲ ಕುಂದು ಕೊರತೆಗಳನ್ನು ನಿವಾರಿಸಿಕೊಂಡ ಹೆಗ್ಗಳಿಕೆ ಇವರದು. ರಾಷ್ಟ್ರದ ನಾನಾ ಭಾಗಗಳಲ್ಲಿ ಪಾಠ-ಪ್ರವಚನಗಳಿಂದ ಶಿಷ್ಯ ಸಂಪಾದನೆ ಮಾಡಿ ವ್ಯಾಸರಾಜ ಮಠವು ವಿದ್ಯಾಮಠ-ವೆಂಬ ಕೀರ್ತಿಯನ್ನು ಸಂಪಾದಿಸಿತು. ಇವರೂ ಸಹ ಸೋಸಲೆಯಲ್ಲಿಯೇ 1903ರ ಕಾರ್ತಿಕ ಶುದ್ಧ ದ್ವಿತೀಯಾದಂದು ವೃಂದಾವನಸ್ಥರಾದರು.

* * * * *

## ಕಾರ್ತಿಕ ॥ ಶುಕ್ಲ ॥ ತೃತೀಯಾ

ಕಾರ್ತೀಕ ಮಾಸದ ಸೀಗೀಗೌರಿ ಹಾಡು – ದಯಮಾಡಿ ಬಾರಮ್ಮ ಸೀಗಿಗೌರಿ ಶಿವನಾ ಪಟ್ಟದ ರಾಣಿ ॥ಪ॥ ಕಾತ್ಯಾಯಿನಿ ಮಹಾಮಾಯೆ ಮಹಾಯೋಗ-ನಿಧೇಶ್ವರಿ ನಂದಗೋಪಸುತಂ ಕೃಷ್ಣಂ ಪತಿಮೆ ಕುರುತೇ ನಮಃ । ಕಾರ್ತೀಕಮಾಸದ ಕಾತ್ಯಾಯನಿಯೆ ನಿನ್ನ ಪೂಜಿಪ ಕನ್ಯಾಮಣಿಗಳಿಗೆಲ್ಲ । ನಿನ್ನಂತಪತಿಯನು ಅನಂತ-ವರಗಳ ಕೊಟ್ಟು ಕಾಪಾಡಮ್ಮ ಶಿವಕಾಮಸುಂದರಿ । ಕಾರ್ತೀಕ ಶುದ್ಧ ದ್ವಾದಶಿಯಲ್ಲಿ ಶ್ರೀರಂಗತುಳಸಿಯ ವಿವಾಹವೆಂದು ವೈಭವದಿಂದಾಚರಿಸಿದರೆ । ಮುಕ್ತಿಕೊಡುವನು ಕಪಿಲನಾಮಕನು ॥2॥ ಸಾವಿರ ಜ್ಯೋತಿಗಳ್ಹಚ್ಚುವರು ಬಾಣ ಬಿರುಸುಗಳು ಬಿಡುತಲಿ ಹರುಷದಿ । ಭಕ್ತಿಲಿ ಶಿವ ಪಾರ್ವತಿಯರು ಷಣ್ಮುಖಗಣನೊಡನೆ ನಂದಿವಾಹನ ಮೇಲೇರಿ ॥

ಶ್ರೀ ಸತ್ಯಪ್ರಮೋದತೀರ್ಥರು (ಉತ್ತರಾದಿಮಠ)- ಸತ್ಯಾಭಿಜ್ಞಕರಾಬ್ಜೋ-ತ್ಥಾನ್ ಪಂಚಾಶದ್ವರ್ಷಪೂಜಕಾನ್ । ಸತ್ಯಪ್ರಮೋದತೀರ್ಥಾರ್ಯಾನ್ ನೌಮಿ ನ್ಯಾಯಸುಧಾರತಾನ್ ॥ ಶ್ರೀಮದುತ್ತರಾದಿಮಠದ ಭವ್ಯಪರಂಪರೆಯಲ್ಲಿ ಸಂಸ್ಥಾನದ ಶ್ರೀರಾಮದೇವರನ್ನು ಐವತ್ತು (50) ವರ್ಷಗಳ ಕಾಲ ಪೂಜಿಸಿ ಇತಿಹಾಸವನ್ನು ರಚಿಸಿದವರು ಶ್ರೀ ಸತ್ಯಪ್ರಮೋದತೀರ್ಥರು. ಪೂರ್ವಾಶ್ರಮದಲ್ಲಿಯೇ ವಿಶೇಷ ಅಧ್ಯಯನವನ್ನು ರೂಢಿಸಿಕೊಂಡಿದ್ದ ಇವರು ಪೀಠಾಧೀಶರಾದ ಮೇಲೆ ಶ್ರೀ ಟೀಕಾ-ಕೃತ್ಪಾದರ ಭವ್ಯ ಕೃತಿ ಶ್ರೀಮನ್ನ್ಯಾಯಸುಧಾಕ್ಕೆ ಶ್ರೀಸುಧಾಮಂಡನ ಎಂಬ ಗ್ರಂಥವನ್ನು ರಚಿಸಿದ ಯತಿಪುಂಗವರು. ಇದೇ ಅವರ ವ್ಯಕ್ತಿತ್ವಕ್ಕೆ ಒಂದು ಕನ್ನಡಿ. ಕಠಿಣ ವ್ರತಗಳ ಆಚರಣೆ, ನಿತ್ಯ ಶ್ರೀರಾಮದೇವರ ಪೂಜೆ, ಎಂದೂ ನಿಲ್ಲದ ಶ್ರೀಮನ್ನ್ಯಾಯಸುದಾ ಪಾಠ ಇವುಗಳೇ ಅವರ ದೈನಂದಿನ ಕಾರ್ಯಗಳು. ಸ್ವಮತ ಸ್ಥಾಪನೆ, ಪರಮತ ಖಂಡನೆ - ಇವೇ ಅವರ ಧ್ಯೇಯೋದ್ದೇಶಗಳು. ಸರ್ವತ್ರ ಶ್ರೀಹರಿಯ ಸರ್ವೋ-ತ್ತಮತ್ವದ ಪ್ರಚಾರ ಮಾಡಿದರು. ಎಲ್ಲ ಮಾಧ್ವಮಠಗಳ ಜೊತೆಗೆ ಬಾಂಧವ್ಯವನ್ನು ಭದ್ರಗೊಳಿಸಿದರು. ಇವರಲ್ಲಿ ಗೃಹಸ್ಥರು, ಸಂನ್ಯಾಸಿಗಳು, ಪೀಠಾಧೀಶರು ಪಾಠ ಕೇಳಿದರು. ಶ್ರೀ ವಾದಿರಾಜತೀರ್ಥಪೂಜ್ಯಚರಣರ ಯುಕ್ತಿಮಲ್ಲಿಕಾ ಎಂಬ ಗ್ರಂಥಕ್ಕೆ ಟಿಪ್ಪಣಿಯನ್ನು ವಿರಚಿಸಿದರು. ಶ್ರೀವಿಜಯೀಂದ್ರತೀರ್ಥ ಪೂಜ್ಯಪಾದರ ಉಪ-

ಸಂಹಾರವಿಜಯ ಎಂಬ ಗ್ರಂಥಕ್ಕೆ ಖಂಡನೆ ಬಂದಾಗ ಶ್ರೀ ವಿಜಯೀಂದ್ರವಿಜಯವೈಭವ ಎಂಬ ಮಂಡನವನ್ನು ಇವರು ರಚಿಸಿದ್ದು ಅವರ ದ್ವೈತಮತದ ನಿಷ್ಠೆ, ಹೃದಯ-ವೈಶಾಲ್ಯತೆ ಎರಡನ್ನೂ ಎತ್ತಿಹಿಡಿಯುವಂತಾಯಿತು. ಅನೇಕ ಮಾಧ್ವರ ಮನೆಗಳಲ್ಲಿ ಧೂಳು ತಿನ್ನುತ್ತಿದ್ದ, ಹುಳುಗಳಿಗೆ ಆಹಾರವಾಗಬಹುದಾಗಿದ್ದ ಪ್ರಾಚೀನ ಹಸ್ತಪ್ರತಿ-ಗಳನ್ನು, ತಾಳೆಗರಿಗಳನ್ನು ತಾವು ಸ್ವೀಕರಿಸಿ, ಸಂರಕ್ಷಣೆಗಾಗಿ ಗ್ರಂಥಾಲಯವನ್ನು ನಿರ್ಮಾಣ ಮಾಡಿದರು.

## ಕಾರ್ತೀಕ ॥ ಶುದ್ಧ ॥ ಷಷ್ಠೀ

ಷಷ್ಠೀ – ಈ ದಿನ ಮಂಗಳವಾರ ಬಂದಿದ್ದರೆ ಅಗ್ನಿಯನ್ನು ಪೂಜಿಸಿ ಅಗ್ನಿಯ ಪ್ರೀತಿಗಾಗಿ ಬ್ರಾಹ್ಮಣಭೋಜನ ಮಾಡಿಸಬೇಕು.

## ಕಾರ್ತೀಕ ॥ ಶುದ್ಧ ॥ ಅಷ್ಟಮೀ

ಗೋಪಾಷ್ಟಮಿ – ಈ ದಿನ ಗೋಪೂಜೆ, ಗೋಪ್ರದಕ್ಷಿಣೆ (ಗೋವನ್ನು ಅನು-ಸರಿಸಿ ಅದರ ಹಿಂದೆ ಹೋಗುವುದು), ಗವಾನುಗಮನ ಇವುಗಳಿಂದ ಅಭೀಷ್ಟಫಲ ಸಿಗುತ್ತದೆ.

## ಕಾರ್ತೀಕ ॥ ಶುದ್ಧ ॥ ನವಮೀ

ನವಮೀ – ಈ ದಿನ ಮಥುರಾ ಪ್ರದಕ್ಷಿಣೆಯನ್ನು ಮಾಡಬೇಕು.

## ಕಾರ್ತಿಕ ॥ ಶುಕ್ಲ ॥ ದಶಮೀ

ಶ್ರೀಸತ್ಯವೀರತೀರ್ಥರು(ಉತ್ತರಾದಿಮಠ) ಸತ್ವರಾಕ್ರಮದುಗ್ಧಾಬ್ಧೇಃ ಸಂಜಾತಃ ಕೀರ್ತಿಚಂದ್ರಿಕಃ । ಸಂತಾಪಂ ಹರತು ಶ್ರೀಮಾನ್ ಸತ್ಯವೀರೇಂದುರಂಜಸಾ ॥ ಈ ಗುರುಗಳು ಶ್ರೀ ಸತ್ಯಬೋಧತೀರ್ಥರ ಆಶೀರ್ವಾದದ ಬಲದಿಂದ ಜನಿಸಿದವರು. ಆದಕ್ಕಾಗ್ಗಿಯೇ ಇವರಿಗೆ ಬೋಧರಾಯಾಚಾರ್ಯ ಎಂದೇ ನಾಮಕರಣ ಮಾಡ-ಲಾಗಿತ್ತು. ಇವರು ಕೊರ್ಲಹಳ್ಳಿ ಮನೆತನದವರು. ತಮ್ಮ ಗುರುಗಳ ವೃಂದಾವನವನ್ನು ನಿರ್ಮಿಸಿ ಮಹಾಸಮಾರಾಧನೆಯನ್ನು ಮಾಡಿದರು. ಏಳು (7) ವರ್ಷಗಳ ಕಾಲ ಪೀಠವನ್ನಾಳುತ್ತ, ನಿರಂತರ ಪಾಠ-ಪ್ರವಚನ, ಶ್ರೀರಾಮನ ಪೂಜೆ, ದೇಶ ಸಂಚಾರ -

ಗಳನ್ನು ಮಾಡಿದರು. ಆರಣಿಯ ಮಹಾರಾಜನಿಗೆ ಪುತ್ರಸಂತಾನವಾಗುವಂತೆ ಅನು-ಗ್ರಹ ಮಾಡಿದರು. ರಾಜನು ತನ್ನ ಮಗನಿಗೆ ಸತ್ಯವೀರ ಎಂದೇ ನಾಮಕರಣ ಮಾಡಿದನು. ಮಹಾರಾಜನು ಇವರ ನಿರ್ಯಾಣದ ನಂತರ ಇವರ ಮೃತ್ತಿಕಾ ವೃಂದಾ -ವನವನ್ನು ಶ್ರೀಸತ್ಯವಿಜಯತೀರ್ಥರ ಹೆಸರಿನಿಂದ ಕರೆಸಿಕೊಂಡ ಸತ್ಯವಿಜಯನಗರ (ತಮಿಳುನಾಡು) ಎಂಬಲ್ಲಿ ಪ್ರತಿಷ್ಠಾಪಿಸಿದನು. ಶ್ರೀ ಸತ್ಯಧೀರತೀರ್ಥರಿಗೆ ಪೀಠವನ್ನು ಒಪ್ಪಿಸಿ ತುಂಗಭದ್ರಾ ನದಿಯ ದಡದಲ್ಲಿ ಕೊರ್ಲಹಳ್ಳಿ ಗ್ರಾಮದಲ್ಲಿ, ವ್ಯಯ ಸಂವತ್ಸರದ ಕಾರ್ತಿಕ ಶುಕ್ಲ ದಶಮೀಯಂದು ವೃಂದಾವನ ಪ್ರವೇಶ ಮಾಡಿದರು.

## ವಿಜಯದಾಸರ ಆರಾಧನೆ

ದಾಸಸಾಹಿತ್ಯದ ಧ್ರುವತಾರೆ ವಿಜಯಾರ್ಯರು. ನೂರಾರು ದೇವರ ನಾಮ-ಗಳನ್ನು, ಸುಳಾದಿಗಳನ್ನೂ ರಚಿಸಿ ವಿಜಯವಿಟ್ಠಲನ ಸೇವೆಗೈದ ಇವರ ಆರಾಧನೆ ಕಾರ್ತಿಕಶುದ್ಧ ದಶಮಿಯಂದು ಚಿಪ್ಪಗಿರಿಯಲ್ಲಿ ನಡೆಯುತ್ತದೆ. ಅಜ್ಞಾನತಿಮಿರಚ್ಛೇದಂ ಬುದ್ಧಿಸಂಪತ್ಪ್ರದಾಯಕಮ್ । ವಿಜ್ಞಾನವಿಮಲಂ ಶಾಂತಂ ವಿಜಯಾಖ್ಯಗುರುಂ ಭಜೇ ॥

ಶ್ರೀವಿಜಯಕವಚ – ರಾಗ : ಗೋಪೀಗೀತೆಯ ಮಟ್ಟು ಸಂಗಸುಖವ ಬಯಸಿ ಬದುಕಿರೋ ದಿವ್ಯ ಚರಣಕೆರಗಿರೋ । ದುರಿತ ತರಿದು ಪೊರೆವ ವಿಜಯ-ಗುರುಗಳೆಂಬರ ॥ ದಾಸರಾಯನಾ ದಯವ ಸೂಸಿಪಡೆದನಾ । ದೋಷರಹಿತನ ಸಂತೋಷಭರಿತನಾ ॥ ಜ್ಞಾನವಂತನಾ ಬಲುನಿದಾನಿ ಶಾಂತನಾ । ಮಾನ್ಯವಂತನಾ ಮಹವದಾನ್ಯದಾತನಾ ॥ ಹರಿಯ ಭಜಿಸುವ ನರಹರಿಯ ಯಜಿಸುವ । ದುರಿತ ತ್ಯಜಿಸುವ ಮನಕೆ ಹರುಷ ಸುರಿಸುವ ॥ ಮೋದಭರಿತನಾ ಪಂಚಭೇದವರಿತನಾ । ಸಾಧುಚರಿತನಾ ಮನವಿಷಾದ ಮರೆತನಾ ॥ ಇವರ ನಂಬಿದಾ ಜನಕೆ ಭವ-ವಿದೆಂಬುದೂ । ಹವನವಾಗದೋ ನಮ್ಮವರ ಮತವಿದೂ ॥ ಪಾಪಕೋಟಿಯ ರಾಶಿ ಲೇಪವಾಗದೋ । ತಾಪ ಕಳೆವನೋ ಬಲು ದಯಾಪಯೋನಿಧಿ ॥ ಕವನ ರೂಪದಿ ಸ್ತವನ ಮಾಡಿದ । ಭುವನ ಬೇಡಿದ ಮಾಧವನ ನೋಡಿದಾ ॥ ರಂಗನೆಂದನಾ ಭವವು ಹಿಂಗಿತೆಂದನಾ । ಮಂಗಳಾಂಗನ ಅಂತರಂಗವರಿದನಾ ॥ ಕಾಶಿನಗರದಲ್ಲಿದ್ದ ವ್ಯಾಸದೇವನಾ ದಯವ ಸೂಸಿ ಪಡೆದನಾ ಉಲ್ಲಾಸತನದಲ್ಲೀ ॥ ಚಿಂತೆ ಬ್ಯಾಡಿರೋ

ನಿಶ್ಚಿಂತರಾಗಿರೋ । ಶಾಂತಗುರುಗಳಾ ಪಾದವಾಂತು ನಂಬಿರೋ ಖೇದವಾಗದೋ ನಿಮಗೆ ಮೋದವಾಹುದೋ । ಆದಿದೇವನ ಸುಪ್ರಸಾದವಾಹುದೋ ॥ ತಾಪ ತಡೆವನೂ ಬಂದ ಪಾಪ ಕಡಿವನೋ । ಶ್ರೀಪತಿಯ ಪಾದಸಮೀಪವಿಡುವನನೋ ॥ ಗಂಗೆ ಮಿಂದರೇ ಮಲವು ಹಿಂಗಿತಲ್ಲದೆ । ರಂಗನೊಲಿಯನೋ ಭಕ್ತರ ಸಂಗ ದೊರೆಯದೇ ॥ ವೇದ ಓದಲೂ ಬರಿದೆ ವಾದ ಮಾಡಲು । ಹಾದಿಯಾಗದೋ ಬುಧರ ಪಾದ ನಂಬದೇ ॥ ಲೆಕ್ಕವಿಲ್ಲದೇ ದೇಶ ಸುತ್ತಿ ಬಂದರೂ । ದುಃಖವಲ್ಲದೇ ಲೇಶ ಭಕ್ತಿ ದೊರಕದೂ ॥ ದಾನ ಮಾಡಲೂ ದಿವ್ಯ ಗಾನ ಪಾಡಲು। ಜ್ಞಾನ ದೊರೆಯದೋ ಇವರಧೀನನಾಗದೇ ॥ ನಿಷ್ಟೆ ಯಾತಕೇ ಕಂಡ ಕಷ್ಟ್ಯಾತಕೇ । ದಿಟ್ಟ ಗುರುಗಳು ಪಾದ ಮುಟ್ಟಿ ಭಜಿಸಿರೋ ॥ ಪೂಜೆ ಮಾಡಲು ಕಂಡ ಗೋಜು ಬೀಳಲೂ । ಬೀಜಮಾತಿನ ಫಲ ಸಹಾಯ ದೊರೆಯದೋ ॥ ಸುರರು ಎಲ್ಲರೂ ಇವರ ಕರವ ಪಿಡಿವರೂ । ತರಳರಂದದೀ ಹಿಂದೆ ತಿರುಗುತಿಪ್ಪರೂ ॥ ಗ್ರಹಗಳೆಲ್ಲವೂ ಇವರ್ಗೆ ಸಹಯಮಾಡುತಾ । ಅಹೋರಾತ್ರಿಲೀ ಸುಖದ ನಿವಹ ಕೊಡುವವೋ॥ ವ್ಯಾಧಿಬಾರದೋ ದೇಹಬಾಧೆ ತಟ್ಟದೋ। ಆದಿದೇವನಾ ಸುಪ್ರಸಾದವಾಹುದೋ ॥ ಪತಿತ ಪಾಮರ ಮಂದಮತಿಯು ನಾ ಬಲೂ । ಸ್ತುತಿಸಲಾಪೆನೇ ಇವರಅತಿಶಯಂಗಳಾ ॥ ಕರುಣದಿಂದಲೀ ಎಮ್ಮ ಪೊರೆವನಲ್ಲದೇ । ದುರಿಕೋಟಿಯ ಬ್ಯಾಗ ತರಿದು ದಯದಲೀ ॥ ಮಂದಮತಿಗಳೂ ಇವರ ಛಂದವರಿಯದೇ । ನಿಂದೆ ಮಾಡಲೂ ಭವದ ಬಂಧ ತಪ್ಪದೋ ॥ ಇಂದಿರಾಪತಿ ಇವರ ಮುಂದೆ ಕುಣಿವನೋ। ಅಂದ ವಚನಾ ನಿಜಕೆ ತಂದುಕೊಡುವನೋ ॥ ಉದಯಕಾಲದೀ ಈ ಪದವ ಪಠಿಸಲೂ । ಮದಡನಾದರೂ ಜ್ಞಾನುದಯವಾಹುದೋ ॥ ಸಟೆ ಇದಲ್ಲವೋ ವ್ಯಾಸವಿಠಲ ಬಲ್ಲನೋ । ಪಠಿಸಬಹುದಿದೂ ಕೇಳಿ ಕುಟಿಲರಹಿತರೂ ॥

## ಕಾರ್ತೀಕ ॥ ಶುದ್ಧ ॥ ಏಕಾದಶೀ

ಯುಧಿಷ್ಠಿರಃ – ಶ್ರುತಂ ರಮಾಯಾ ಮಾಹಾತ್ಮ್ಯಂ ತ್ವತ್ತಃ ಕೃಷ್ಣ ಯಥಾತಥಮ್ । ಕಾರ್ತಿಕೇ ಶುಕ್ಲಪಕ್ಷೇ ಯಾ ತಾಂ ಮೇ ಕಥಯ ಮಾನದ ॥1॥ ಯುಧಿಷ್ಠಿರನು ಹೇಳಿದನು – ಎಲೈ ಕೃಷ್ಣನೇ! ನೀನು ಹೇಳಿದ ಈ ರಮಾ ಏಕಾದಶಿಯ ಮಹಿಮೆ-ಯನ್ನು ಕೇಳಿದೆನು. ಕಾರ್ತಿಕಶುಕ್ಲಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು?

ಅದನ್ನು ಹೇಳು. ಶ್ರೀಕೃಷ್ಣಃ – ಶೃಣು ರಾಜನ್ ಪ್ರವಕ್ಷ್ಯಾಮಿ ಶುಕ್ಲೇ ಚೋರ್ಜದಳೇ ತು ಯಾ । ಸಾ ಯಥಾ ನಾರದಾಯೋಕ್ತಾ ಬ್ರಹ್ಮಣಾ ಲೋಕಕಾರಿಣಾ ॥2॥ ಕೃಷ್ಣನು ಹೇಳಿದನು – ಎಲೈ ದೊರೆಯೇ! ಕಾರ್ತಿಕಶುಕ್ಲಪಕ್ಷದಲ್ಲಿ ಬರುವ ಏಕಾದಶಿಯನ್ನು ಹೇಳುತ್ತೇನೆ. ಕೇಳು. ಅದನ್ನು ಬ್ರಹ್ಮನು ನಾರದನಿಗೆ ಹೇಳಿರುವನು. ನಾರದಃ – ಪ್ರಬೋಧಿನ್ಯಾಶ್ಚ ಮಾಹಾತ್ಮ್ಯಂ ವದ ವಿಸ್ತರತೋ ಮಮ । ಯಸ್ಯಾಂ ಜಾಗರ್ತಿ ಗೋವಿಂದೋ ಧರ್ಮಕರ್ಮಪ್ರವರ್ತಕಃ ॥3॥ ನಾರದನು ಹೇಳಿದನು. – ಪ್ರಬೋಧಿನೀ ಏಕಾದಶಿಯ ಮಹಿಮೆಯನ್ನು ನನಗೆ ವಿಸ್ತಾರವಾಗಿ ಹೇಳು. ಧರ್ಮ -ಕರ್ಮಪ್ರವರ್ತಕನಾದ ಗೋವಿಂದನು ಈ ಏಕಾದಶಿಯಲ್ಲಿ ಎಚ್ಚೆತ್ತಿರುವನಷ್ಟೇ! ಬ್ರಹ್ಮಾ – ಪ್ರಬೋಧಿನ್ಯಾಶ್ಚ ಮಾಹಾತ್ಮ್ಯಂ ಪಾಪಘ್ನಂ ಪುಣ್ಯವರ್ಧನಮ್ । ಮುಕ್ತಿ-ಪ್ರದಂ ಸುಬುದ್ಧೀನಾಂ ಶೃಣುಷ್ವ ಮುನಿಸತ್ತಮ ॥4॥ ಬ್ರಹ್ಮನು ಹೇಳಿದನು – ಎಲೈ ನಾರದನೇ! ಪ್ರಬೋಧಿನಿಯ ಮಹಿಮೆಯನ್ನು ಹೇಳುತ್ತೇನೆ. ಅದು ಪಾಪ-ನಾಶಕವು. ಪುಣ್ಯವರ್ಧನವು. ಮುಕ್ತಿಯನ್ನು ಕೊಡುತ್ತದೆ. ತಾವದ್ಗರ್ಜಂತಿ ತೀರ್ಥಾನಿ ಆಸಮುದ್ರಸರಾಂಸಿ ಚ । ಯಾವತ್ಪ್ರಬೋಧಿನೀ ವಿಷ್ಣೋಸ್ತಿಥಿರ್ನಾಯಾತಿ ಕಾರ್ತಿಕೇ ॥5॥ ಕಾರ್ತಿಕ ಮಾಸದ ಪ್ರಬೋಧಿನೀ ಏಕಾದಶಿಯು ಬರುವವರೆಗೂ ಸಮುದ್ರವೇ ಮುಂತಾದ ತೀರ್ಥಗಳು 'ನಾನು ಹೆಚ್ಚು, ನಾನು ಹೆಚ್ಚು' ಎಂದು ಗರ್ಜಿಸುತ್ತವೆ. ತಾವದ್ಗರ್ಜಂತಿ ವಿಪ್ರೇಂದ್ರ ಗಂಗಾಭಾಗೀರಥೀ ಕ್ಷಿತೌ । ಯಾವ-ನ್ನಾಯಾತಿ ಪಾಪಘ್ನೀ ಕಾರ್ತಿಕೇ ಹರಿಬೋಧಿನೀ ॥6॥ ಪಾಪನಾಶಕವಾದ ಹರಿ-ಬೋಧಿನ್ಯೇಕಾದಶಿಯು ಕಾರ್ತಿಕದಲ್ಲಿರುವವರೆಗೂ ಗಂಗಾ ನರ್ಮದೆಗಳು ತಾವೇ ಹೆಚ್ಚೆಂದು ಕೂಗುತ್ತವೆ. ಅಶ್ವಮೇಧಸಹಸ್ರಾಣಿ ರಾಜಸೂಯಶತಾನಿ ಚ । ಏಕೇನೈ-ವೋಪವಾಸೇನ ಪ್ರಬೋಧಿನ್ಯಾಂ ಲಭೇನ್ನರಃ ॥7॥ ಸಾವಿರ ಅಶ್ವಮೇಧಗಳ, ನೂರು ರಾಜಸೂಯಗಳ ಫಲವನ್ನು ಪ್ರಬೋಧಿನ್ಯೇಕಾದಶಿಯೊಂದರ ಉಪವಾಸದಿಂದಲೇ ಹೊಂದುತ್ತಾನೆ. ಯದ್ ದುರ್ಲಭಂ ಯದಪ್ರಾಪ್ಯಂ ತ್ರೈಲೋಕ್ಯಸ್ಯ ನ ಗೋಚರಮ್ । ತದಪಿ ಪ್ರಾರ್ಥಿತಂ ಪುತ್ರ ದದಾತಿ ಹರಿಬೋಧಿನೀ ॥8॥ ಪ್ರಪಂಚದಲ್ಲಿ ಹೊಂದಲಸಾಧ್ಯವಾದ, ಸಿಕ್ಕುವುದೇ ಇಲ್ಲವೆಂಬ, ಕೊನೆಗೆ ಮೂರು ಲೋಕದಲ್ಲಿ ಯಾವುದು ಬೇಕೆನ್ನುತ್ತಾನೆಯೋ ಅದು ಸಿಕ್ಕದಿದ್ದುದಾದರೂ ಅಂತಹುದನ್ನೂ ಈ ಪ್ರಬೋಧಿನಿ ಏಕಾದಶಿವ್ರತದಿಂದ ಹೊಂದುತ್ತಾನೆ. ಐಶ್ವರ್ಯಂ ಸಂಪದಂ ಪ್ರಜ್ಞಾಂ

ರಾಜ್ಯಂ ಚ ಸುಖಮೇವ ಹಿ । ದದಾತ್ಯುಪೋಷಿತಾ ಭಕ್ತ್ಯಾ ಜನೇಭ್ಯೋ ಹರಿಬೋಧಿನೀ ॥9॥ ಈ ಹರಿಬೋಧಿನಿಯು ತನ್ನ ದಿನ ಉಪವಾಸ ಮಾಡಿದವರಿಗೆ ಐಶ್ವರ್ಯ, ಬುದ್ಧಿ, ರಾಜ್ಯ , ಸುಖಗಳನ್ನು ಕೊಡುತ್ತದೆ. ಮೇರುಮಂದರಗಾತ್ರಾಣಿ ಪಾಪಾನ್ಯು-ಚ್ಚಾನಿ ಯಾನಿ ಚ । ಏಕೇನೈವೋಪವಾಸೇನ ದಹತೇ ಪಾಪನಾಶಿನೀ ॥10॥ ಪಾಪಗಳು ಮೇರುಮಂದರಪರ್ವತಗಳಷ್ಟು ದೊಡ್ಡದಾಗಿದ್ದರೂ ಅವು ಹರಿ-ಬೋಧಿನೀ ಏಕಾದಶಿಯ ಒಂದು ಉಪವಾಸದಿಂದಲೇ ನಾಶವಾಗುತ್ತವೆ.

ಪೂರ್ವಜನ್ಮಸಹಸ್ರೇಷು ಯತ್ಪಾಪಂ ಸಮುಪಾರ್ಜಿತಮ್ । ನಿಶಿ ಜಾಗರಣಂ ಚಾಸ್ಯಾ ದಹತೇ ತೂಲರಾಶಿವತ್ ॥11॥ ಈ ಪ್ರಬೋಧಿನಿಯ ರಾತ್ರೆ ಜಾಗರಣ ಮಾಡುವುದರಿಂದ ಹಿಂದಿನ ಸಾವಿರ ಜನ್ಮಗಳ ಪಾಪಗಳನ್ನು ಹತ್ತಿಯ ರಾಶಿಯನ್ನು ಬೆಂಕಿಯು ಸುಡುವಂತೆ ಸುಡುತ್ತದೆ. ಉಪವಾಸಂ ಪ್ರಬೋಧಿನ್ಯಾಂ ಯಃ ಕರೋತಿ ಸ್ವಭಾವತಃ । ವಿಧಿವನ್ಮುನಿಶಾರ್ದೂಲ ಯಥೋಕ್ತಂ ಲಭತೇ ಫಲಮ್ ॥12॥ ಪ್ರಬೋಧಿನಿಯ ದಿನ ಉಪವಾಸ ಮಾಡಿದವನು ಶಾಸ್ತ್ರೋಕ್ತವಾದ ಫಲವನ್ನು ಹೊಂದುತ್ತಾನೆ. ಯಥೋಕ್ತಂ ಕುರುತೇ ಯಸ್ತು ವಿಧಿವತ್ಸುಕೃತಂ ನರಃ । ಸ್ವಲ್ಪಂ ಮುನಿವರಶ್ರೇಷ್ಠ ಮೇರುತುಲ್ಯಂ ಭವೇತ್ ಫಲಮ್ ॥13॥ ಆ ಪ್ರಬೋಧಿನಿಯ ದಿನ ಯಾವನು ವಿಧಿವತ್ತಾಗಿ ಸ್ವಲ್ಪವಾದರೂ ಪುಣ್ಯ ಬರುವ ಕೆಲಸವನ್ನು ಮಾಡುತ್ತಾನೆಯೋ ಅದು ಅವನಿಗೆ ಮೇರುಪರ್ವತದಷ್ಟು ದೊಡ್ಡದಾಗುತ್ತದೆ. ವಿಧಿಹೀನಂ ತು ಯಃ ಕುರ್ಯಾತ್ ಸುಕೃತಂ ಮೇರುಮಾತ್ರಕಮ್ । ಅಣುಮಾತ್ರಂ ತದಾಪ್ನೋತಿ ಫಲಂ ಧರ್ಮಸ್ಯ ನಾರದ ॥14॥ ಯಾರು ಆ ದಿನ ನಿಯಮವನ್ನು ಅನುಸರಿಸದೇ ಮೇರುವಿನಷ್ಟು ಪುಣ್ಯವನ್ನು ಮಾಡಿದರೂ ಕೂಡ ಅದು ಸ್ವಲ್ಪವೇ ಫಲವನ್ನು ಕೊಡುತ್ತದೆ. ಯೇ ಧ್ಯಾಯಂತಿ ಮನೋವೃತ್ತ್ಯಾ ಯೇ ಕರಿಷ್ಯಂತಿ ಬೋಧಿನೀಮ್ । ವಸಂತಿ ಪಿತರೋ ಹೃಷ್ಟಾ ವಿಷ್ಣುಲೋಕೇ ಚ ತಸ್ಯ ವೈ ॥15॥ ಯಾರು ಈ ಪ್ರಬೋಧಿನಿಯನ್ನು ಧ್ಯಾನಮಾಡಿ ಆಚರಿಸುತ್ತಾರೆಯೋ ಅವರ ಪಿತೃಗಳು ಸಂತೋಷದಿಂದ ವೈಕುಂಠಲೋಕದಲ್ಲಿ ವಾಸಮಾಡುತ್ತಾರೆ. ವಿಮುಕ್ತಾ ನಾರಕೈ-ರ್ದುಃಖೈರ್ಯಾಂತಿ ವಿಷ್ಣೋಃ ಪರಂ ಪದಮ್ । ಕೃತ್ವಾ ತು ಪಾತಕಂ ಘೋರಂ ಬ್ರಹ್ಮಹತ್ಯಾದಿಕಂ ನರಃ ॥16॥ ಬ್ರಹ್ಮಹತ್ಯಾದಿ ಪಾಪಗಳನ್ನು ಮಾಡಿದ್ದರೂ ಕೂಡ

ಯಾವನು ಈ ಪ್ರಬೋಧಿನಿಯನ್ನು ಆಚರಿಸುವನೋ ಅವನು ವಿಷ್ಣುಲೋಕವನ್ನು ಹೊಂದುತ್ತಾನೆ. ಕೃತ್ವಾ ತು ಜಾಗರಂ ವಿಷ್ಣೋರ್ಧೌತಪಾಪೋ ಭವೇನ್ನರಃ । ದುಷ್ಪ್ರಾಪ್ಯಂ ಯತ್ಫಲಂ ವಿಪ್ರ ಹ್ಯಶ್ವಮೇಧಾದಿಕೈರ್ಮಖೈಃ ॥17॥ ಪ್ರಾಪ್ಯತೇ ತತ್ಸು-ಖೇನೈವ ಪ್ರಬೋಧಿನ್ಯಾಸ್ತು ಜಾಗರೇ । ಆಪ್ಲುತ್ಯ ಸರ್ವತೀರ್ಥೇಷು ಪ್ರದತ್ವಾಂ ಕಾಂಚನಂ ಮಹೀಮ್ ॥18॥ ತತ್ಫಲಂ ಸಮವಾಪ್ನೋತಿ ಯತ್ಕೃತ್ವಾ ಜಾಗರಂ ಹರೇಃ । ಜಾತಃ ಸ ಏವ ಸುಕೃತೀ ಕುಲಂ ತೇನೈವ ಪಾವಿತಮ್ ॥19॥ ಕಾರ್ತಿಕೇ ಮುನಿ-ಶಾರ್ದೂಲ ಕೃತಾ ಯೇನ ಪ್ರಬೋಧಿನೀ । ಯಥಾ ಧ್ರುವಂ ನೃಣಾಂ ಮೃತ್ಯುಃ ಧನಮಾತ್ರಂ ತಥಾ ಧ್ರುವಮ್ ॥20॥ ಪ್ರಬೋಧಿನಿಯ ದಿನ ಜಾಗರಣ ಮಾಡಿದರೆ ಮನುಷ್ಯನು ತನ್ನ ಪಾಪಗಳನ್ನೆಲ್ಲಾ ಕಳೆದುಕೊಳ್ಳುತ್ತಾನೆ. ಬಹುಕಷ್ಟದಿಂದ ಸಾಧಿಸುವ ಅಶ್ವಮೇಧಾದಿಯಾಗಗಳನ್ನು ಮಾಡಿದರೆ ಯಾವ ಫಲವು ಬರುತ್ತದೋ ಆ ಫಲವನ್ನು ಈ ಪ್ರಬೋಧಿನಿಯ ಏಕಾದಶಿಯ ಉಪವಾಸವೊಂದರಿಂದಲೇ ಸುಖವಾಗಿ ಹೊಂದುತ್ತಾನೆ. ಆ ಪ್ರಬೋಧಿನಿಯ ದಿನ ಜಾಗರಣವನ್ನು ಮಾಡಿದರೆ ಸರ್ವತೀರ್ಥದಲ್ಲಿಯೂ ಸ್ನಾನ ಮಾಡಿದ ಫಲವನ್ನೂ ಅನೇಕ ಚಿನ್ನವನ್ನು ದಾನ ಮಾಡಿದ ಫಲವನ್ನೂ ಹೊಂದುತ್ತಾನೆ. ಕಾರ್ತಿಕಮಾಸದಲ್ಲಿ ಪ್ರಬೋಧಿನೀ ಏಕಾದಶಿಯನ್ನು ಮಾಡಿದವನೇ ಪ್ರಪಂಚದಲ್ಲಿ ಜನ್ಮಸಾರ್ಥಕವನ್ನುಂಟು ಮಾಡಿ-ಕೊಂಡು ಹುಟ್ಟಿದ ಮನುಷ್ಯನು. ಅವನೇ ಪುಣ್ಯಶಾಲಿಯು. ಅವನಿಂದಲೇ ಕುಲವು ಪವಿತ್ರವಾಗುವುದು. ಮನುಷ್ಯನಿಗೆ ಸಾವು ಹೇಗೆ ಶಾಶ್ವತವೋ ಹಾಗೆ ಹಣ ಮುಂತಾದವುಗಳು ಶಾಶ್ವತವಲ್ಲ.

ಇತಿ ಜ್ಞಾತ್ವಾ ಮುನಿಶ್ರೇಷ್ಠ ಕರ್ತವ್ಯಂ ವೈಷ್ಣವಂ ದಿವಮ್ । ಯಾನಿ ಕಾನಿ ಚ ತೀರ್ಥಾನಿ ತ್ರೈಲೋಕ್ಯೇ ಸಂಭವಂತಿ ಚ ॥21॥ ತಾನಿ ತಸ್ಯ ಗೃಹೇ ಸಮ್ಯಗ್ ಯಃ ಕರೋತಿ ಪ್ರಬೋಧಿನೀಮ್ । ಕಿಂ ತಸ್ಯ ಬಹುಭಿಃ ಪುಣ್ಯೈಃ ಕೃತಾ ಯೇನ ಪ್ರಬೋಧಿನೀ ॥22॥ ಇದನ್ನು ತಿಳಿದುಕೊಂಡು ಪ್ರಬೋಧಿನೀ ಏಕಾದಶಿಯನ್ನು ಮಾಡಬೇಕು. ಪ್ರಬೋಧಿನೀ ಏಕಾದಶಿಯನ್ನು ಆಚರಿಸಿದವನ ಮನೆಯಲ್ಲಿ ತೀರ್ಥಗಳೂ ವ್ರತಗಳೂ ಇರುತ್ತವೆ. ಪ್ರಬೋಧಿನಿಯನ್ನು ಆಚರಿಸಿದವನು ಮತ್ತಾವ ಪುಣ್ಯವನ್ನೂ ಆಚರಿಸಬೇಕಾದ ಅವಶ್ಯಕತೆಯೇ ಇಲ್ಲವು. ಪುತ್ರಪೌತ್ರಪ್ರದಾಹ್ಯೇಷಾ ಕಾರ್ತಿಕೇ

ಹರಿಬೋಧಿನೀ । ಸ ಜ್ಞಾನೀ ಸ ಚ ಯೋಗೀ ಚ ಸ ತಪಸ್ವೀ ಜಿತೇಂದ್ರಿಯಃ ॥23॥ ಭೋಗೋ ಮೋಕ್ಷಶ್ಚ ತಸ್ಯಾಸ್ತಿ ಯ ಉಪಾಸ್ತೇ ಪ್ರಬೋಧಿನೀಮ್ । ವಿಷ್ಣೋಃ ಪ್ರಿಯತರಾ ಹ್ಯೇಷಾ ಧರ್ಮಸಾರಸಹಾಯಿನೀ ॥24॥ ಪ್ರಬೋಧಿನೀ ವ್ರತವು ಮಕ್ಕಳು ಮೊಮ್ಮಕ್ಕಳನ್ನೂ ಕೊಡುತ್ತದೆ. ಯಾವನು ಪ್ರಬೋಧಿನಿಯನ್ನು ಆಚರಿಸುತ್ತಾನೆಯೋ ಅವನೇ ಜ್ಞಾನಿಯು. ಅವನೇ ಯೋಗಿಯು. ಅವನೇ ತಪಸ್ವಿಯು. ಅವನೇ ಜಿತೇಂದ್ರಿಯನು. ಭೋಗಗಳೂ ಮೋಕ್ಷಗಳೂ ಅವನಿಗೇ ಸಿಕ್ಕುತ್ತವೆ. ಈ ಪ್ರಬೋಧಿನಿಯು ವಿಷ್ಣುವಿಗೆ ಪ್ರಿಯವಾದುದು. ಧರ್ಮಕ್ಕೆ ಸಹಾಯಕವಾದುದು. ಯಃ ಕರೋತಿ ನರೋ ಭಕ್ತ್ಯಾ ಮುಕ್ತಿಭಾಕ್ ಸ ಭವೇನ್ನರಃ । ಪ್ರಬೋಧಿನೀಮುಪೋಷಿತ್ವಾ ಗರ್ಭೇ ನ ವಿಶತೇ ನರಃ ॥25॥ ಈ ಪ್ರಬೋಧಿನೀವ್ರತವನ್ನು ಮಾಡಿದವನು ಮುಕ್ತಿಯನ್ನು ಹೊಂದುತ್ತಾನೆ. ಪ್ರಬೋಧಿನಿಯನ್ನಾಚರಿಸಿದರೆ ಅವನು ಮತ್ತೆ ಜನ್ಮವನ್ನು ತಾಳುವುದಿಲ್ಲ. ಸರ್ವಧರ್ಮಾನ್ ಪರಿತ್ಯಜ್ಯ ತಸ್ಮಾತ್ಕುರ್ವೀತ ನಾರದ । ಕರ್ಮಣಾ ಮನಸಾ ವಾಚಾ ಪಾಪಂ ಯತ್ಸಮುಪಾರ್ಜಿತಮ್ ॥26॥ ತತ್ ಕ್ಷಾಳಯತಿ ಗೋವಿಂದಃ ಪ್ರಬೋಧಿನ್ಯಾಂ ತು ಜಾಗರೇ । ಸ್ನಾನಂ ದಾನಂ ಜಪೋ ಹೋಮಃ ಸಮುದ್ದಿಶ್ಯ ಜನಾರ್ದನಮ್ ॥27॥ ನರೋ ಯತ್ಕುರುತೇ ವತ್ಸ ಪ್ರಬೋಧಿನ್ಯಾಂ ತದಕ್ಷಯಂ । ಯೇಽರ್ಚಯಂತಿ ನರಾಸ್ತಸ್ಯಾಂ ಭಕ್ತ್ಯಾ ದೇವಂ ತು ಮಾಧವಮ್ ॥28॥ ಸಮುಪೋಷ್ಯ ಪ್ರಮುಚ್ಯಂತೇ ಪಾಪೈಸ್ತೇ ಶತಜನ್ಮಜೈಃ । ಮಹಾವ್ರತಮಿದಂ ಪುತ್ರ ಮಹಾಪಾಪೌಘನಾಶನಮ್ ॥29॥ ಮನುಷ್ಯನು ಮಿಕ್ಕ ಧರ್ಮಗಳೆಲ್ಲವನ್ನೂ ಬಿಟ್ಟು ಈ ಪ್ರಬೋಧಿನಿಯನ್ನಾಚರಿಸಬೇಕು. ಮನೋವಾಕ್ಕಾಯಗಳಿಂದ ಮಾಡಿದ ಪಾಪವನ್ನು ಈ ಪ್ರಬೋಧಿನಿಯ ಆಚರಣೆಯಿಂದ ಗೋವಿಂದನು ನಾಶ ಮಾಡುತ್ತಾನೆ. ಮನುಷ್ಯನು ಪ್ರಬೋಧಿನಿಯ ದಿನ ಮಾಡಿದ ಸ್ನಾನ, ದಾನ, ಜಪ, ಹೋಮಗಳು ಅಕ್ಷಯವಾಗುತ್ತವೆ. ಆ ಪ್ರಬೋಧಿನಿಯ ದಿನ ಭಕ್ತಿಯಿಂದ ಯಾರು ಮಾಧವನನ್ನು ಪೂಜಿಸುತ್ತಾರೆಯೋ ಮತ್ತು ಉಪವಾಸವಿರುತ್ತಾರೆಯೋ ಅವರ ಪಾಪಗಳೆಲ್ಲವೂ ಹೋಗುತ್ತವೆ. ಎಲೈ ನಾರದನೇ! ಇದು ಮಹಾವ್ರತವು. ಪಾಪನಾಶಕವಾದುದು. ಪ್ರಬೋಧವಾಸರೇ ವಿಷ್ಣೋರ್ವಿಧಿವತ್ ಸಮುಪೋಷಯೇತ್ । ವ್ರತೇನಾನೇನ ದೇವೇಶಂ ಪರಿತೋಷ್ಯ ಜನಾರ್ದನಮ್ ॥30॥ ವಿರಾಜಯನ್ ದಿಶಃ ಸರ್ವಾಃ ಪ್ರಯಾತಿ ಹರಿಮಂದಿರಮ್ । ಕರ್ತವ್ಯೈಷಾ

ಪ್ರಯತ್ನೇನ ನರೈಃ ಕಾಂತಿಧನಾರ್ಥಿಭಿಃ ||31|| ಬಾಲ್ಯೇ ಯತ್ಸಂಚಿತಂ ಪಾಪಂ ಯೌವನೇ ವಾರ್ಧಕೇ ತಥಾ । ಶತಜನ್ಮಕೃತಂ ಪಾಪಂ ಸ್ವಲ್ಪಂ ವಾ ಯದಿ ವಾ ಬಹು ||32|| ತತ್ ಕ್ಷಾಳಯತಿ ಗೋವಿಂದಃ ಚಾಸ್ಯಾಮಭ್ಯರ್ಚಿತೋ ನೃಣಾಮ್ । ಧನ-ಧಾನ್ಯವಹಾಪುಣ್ಯಾ ಸರ್ವಪಾಪಹರಾಪರಾ ||33|| ಈ ಪ್ರಬೋಧಿನಿಯ ವ್ರತವನ್ನು ವಿಧಿವತ್ತಾಗಿ ಮಾಡಬೇಕು. ಈ ವ್ರತದಿಂದ ಜನಾರ್ದನನನ್ನು ಸಂತೋಷ ಪಡಿಸಿ-ದರೆ ಎಲ್ಲಾ ದಿಕ್ಕುಗಳನ್ನೂ ಪ್ರಕಾಶ ಪಡಿಸುತ್ತಾ ವೈಕುಂಠಕ್ಕೆ ಹೋಗುವನು. ಆದುದರಿಂದ ಕಾಂತಿ ಧನಗಳನ್ನು ಅಪೇಕ್ಷಿಸುವವರು ಪ್ರಯತ್ನದಿಂದ ಇದನ್ನು ಮಾಡಬೇಕು. ಬಾಲ್ಯ , ಯೌವನ, ಕೌಮಾರಗಳಲ್ಲಿ ನೂರು ಜನ್ಮಗಳಲ್ಲಿ ಮಾಡಿದ್ದ ಪಾಪಗಳು ಕೂಡ ಎಷ್ಟಿದ್ದರೂ ಅವನ್ನು ಈ ಪ್ರಬೋಧಿನಿಯಲ್ಲಿ ಪೂಜಿತನಾದ ಗೋವಿಂದನು ನಾಶ ಮಾಡುತ್ತಾನೆ. ಇದು ಧನಧಾನ್ಯಗಳನ್ನು ಕೊಡುತ್ತದೆ. ಸರ್ವ-ಪಾಪಗಳನ್ನೂ ನಾಶ ಮಾಡುತ್ತದೆ. ಆ ದಿನ ಉಪವಾಸವಿದ್ದರೆ ದುರ್ಲಭವಾದು-ವುಗಳೆಲ್ಲವೂ ಸಿಕ್ಕುತ್ತವೆ.

ತಾಮುಪೋಷ್ಯ ಹರೇರ್ಭಕ್ತ್ಯಾ ದುರ್ಲಭಂ ನ ಭವೇತ್ ಕ್ವಚಿತ್ । ಚಂದ್ರ-ಸೂರ್ಯೋಪರಾಗೇ ಚ ಯತ್ಫಲಂ ಪರಿಕೀರ್ತಿತಮ್ ||34|| ತತ್ಸಹಸ್ರಗುಣಂ ಪ್ರೋಕ್ತಂ ಪ್ರಬೋಧಿನ್ಯಾಂ ಚ ಜಾಗರೇ । ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯೋಭ್ಯರ್ಚನಂ ಹರೇಃ ||35|| ತತ್ಸರ್ವಂ ಕೋಟಿಗುಣಿತಂ ಪ್ರಬೋಧಿನ್ಯಾಂ ತು ಯತ್ಕೃತಮ್ । ಜನ್ಮಪ್ರಭೃತಿ ಯತ್ಪುಣ್ಯಂ ನರೇಣೋಪಾರ್ಜಿತಂ ಭವೇತ್ ||36|| ವೃಥಾ ಭವತಿ ತತ್ಸರ್ವಮಕೃತ್ವಾ ಕಾರ್ತಿಕೇ ವ್ರತಮ್ । ಅಕೃತ್ವಾ ನಿಯಮಂ ವಿಷ್ಣೋಃ ಕಾರ್ತಿಕೇ ಯಃ ಕ್ಷಿಪೇನ್ನರಃ ||37|| ಜನ್ಮಾರ್ಜಿತಸ್ಯ ಪುಣ್ಯಸ್ಯ ಫಲಂ ನಾಪ್ನೋತಿ ನಾರದ । ತಸ್ಮಾತ್ ಸರ್ವಪ್ರಯತ್ನೇನ ದೇವದೇವಂ ಜನಾರ್ದನಮ್ ||38|| ಪ್ರಬೋಧಿನಿಯ ದಿನ ಜಾಗರಣ ಮಾಡಿದರೆ ಚಂದ್ರಸೂರ್ಯರ ಗ್ರಹಣದಲ್ಲಿ ಬರುವ ಫಲಕ್ಕಿಂತಲೂ ಸಾವಿರದಷ್ಟು ಹೆಚ್ಚು ಬರುವುದೆಂದು ಹೇಳಲ್ಪಟ್ಟಿದೆ. ಪ್ರಬೋಧಿನಿಯ ದಿನ ಮಾಡಿದ ಸ್ನಾನ, ದಾನ, ಜಪ, ಹೋಮ, ಅಧ್ಯಯನ, ಪೂಜೆಗಳೆಲ್ಲವೂ ಕೋಟಿ-ಯಷ್ಟು ಹೆಚ್ಚಿರುತ್ತವೆ. ಈ ಪ್ರಬೋಧಿನಿಯನ್ನಾಚರಿಸದೆ ಯಾವನು ತಿರಸ್ಕರಿಸು-ವನೋ ಅವನು ಜನ್ಮಾಂತರದಿಂದ ಮಾಡಿದ ಪುಣ್ಯಗಳನ್ನು ಹೊಂದುವುದಿಲ್ಲ.

ಆದುದರಿಂದ ಸರ್ವಪ್ರಯತ್ನದಿಂದಲೂ ಆ ದಿವಸ ಉಪವಾಸ ಮಾಡಿ ದೇವ-ದೇವನಾದ ಜನಾರ್ದನನನ್ನು ಪೂಜಿಸಬೇಕು. ಉಪವಾಸೇನ ವಿಪ್ರೇಂದ್ರ ಸರ್ವ-ಕಾಮಫಲಪ್ರದಮ್ । ಪರಾನ್ನಂ ವರ್ಜಯೇದ್ ಯಸ್ತು ಕಾರ್ತಿಕೇ ವಿಷ್ಣುತತ್ಪರಃ ॥39॥ ಪರಾನ್ನವರ್ಜನಾದ್ ವತ್ಸ ಚಾಂದ್ರಾಯಣಫಲಂ ಲಭೇತ್ । ನಿತ್ಯಂ ಶಾಸ್ತ್ರವಿನೋದೇನ ಕಾರ್ತಿಕಂ ಯಃ ಕ್ಷಿಪೇನ್ನರಃ ॥40॥ ಸ ದಹೇತ್ ಸರ್ವಪಾಪಾನಿ ಯಜ್ಞಾಯುತಫಲಂ ಲಭೇತ್ । ನ ತಥಾ ತುಷ್ಯತೇ ಯಜ್ಞೈರ್ನ ದಾನೈರ್ವಾ ಜಪಾದಿಭಿಃ । ಯಥಾ ಶಾಸ್ತ್ರಕಥಾಲಾಪೈಃ ಕಾರ್ತಿಕೇ ಮಧುಸೂದನಃ ॥41॥ ಕಾರ್ತಿಕದಲ್ಲಿ ವಿಷ್ಣುವಿನಲ್ಲಿ ಭಕ್ತಿಯಿಂದ ಪರರ ಮನೆಯ ಅನ್ನವನ್ನು ಊಟ ಮಾಡದಿರಬೇಕು. ಹಾಗೆ ಊಟ ಮಾಡದಿದ್ದರೆ ಚಾಂದ್ರಾಯಣವನ್ನು ಮಾಡಿದ ಫಲವು ಬರುತ್ತದೆ. ಆ ಕಾರ್ತಿಕದಲ್ಲಿ ಯಾವನು ಶಾಸ್ತ್ರಾರ್ಥಗಳಿಂದಲೇ ಕಾಲವನ್ನು ಕಳೆಯುತ್ತಾನೆಯೋ ಅವನು ಪಾಪಗಳನ್ನು ಕಳೆದುಕೊಂಡು ಸಾವಿರಯಜ್ಞಗಳ ಫಲವನ್ನು ಹೊಂದುತ್ತಾನೆ. ಕಾರ್ತಿಕದಲ್ಲಿ ಜನಾರ್ದನನು ಶಾಸ್ತ್ರಾಲಾಪಗಳಿಂದ ಸಂತೋಷಗೊಳ್ಳುವಂತೆ ಯಜ್ಞಗಳಿಂದಲಾಗಲೀ, ದಾನಗಳಿಂದಾಗಲೀ, ಜಪ-ಗಳಿಂದಾಗಲೀ ಸಂತೋಷಗೊಳ್ಳುವುದಿಲ್ಲ.

ಯೇ ಕುರ್ವಂತಿ ಕಥಾಂ ವಿಷ್ಣೋಃ ಯೇ ಶೃಣ್ವಂತಿ ಶುಭಾನ್ವಿತಾಃ । ಶ್ಲೋಕಾರ್ಧಂ ಶ್ಲೋಕಪಾದಂ ವಾ ಕಾರ್ತಿಕೇ ಗೋಶತಂ ಫಲಮ್ ॥42॥ ಕಾರ್ತಿಕಮಾಸದಲ್ಲಿ ಪುರಾಣದ ಕಥೆಯನ್ನು ಯಾರು ಕೇಳುತ್ತಾರೆಯೋ ಅವರು, (ಅಥವಾ) ಕೊನೆಗೆ ಒಂದು ಶ್ಲೋಕ ಕೇಳಿದವರು ಅವರು, (ಅಥವಾ) ಒಂದು ಪಾದವನ್ನಾಗಲೀ ಕೇಳಿದವರು ಅವರು ಕೂಡ ನೂರು ಗೋವುಗಳನ್ನು ದಾನ ಮಾಡಿದ ಫಲವನ್ನು ಹೊಂದುತ್ತಾರೆ. ಸರ್ವಾನ್ ಧರ್ಮಾನ್ ಪರಿತ್ಯಜ್ಯ ಕಾರ್ತಿಕೇ ಕೇಶವಾಗ್ರತಃ । ಶಾಸ್ತ್ರಾವಧಾರಣಂ ಕಾರ್ಯಂ ಶ್ರೋತವ್ಯಂ ಚ ಮಹಾಮುನೇ ॥43॥ ಆದುದರಿಂದ ಕಾರ್ತಿಕಮಾಸದಲ್ಲಿ ಎಲ್ಲವನ್ನೂ ಬಿಟ್ಟು ಕೇಶವನ ಮುಂದೆ ಶಾಸ್ತ್ರವನ್ನು ಓದಬೇಕು. ಇಲ್ಲವೇ ಕೇಳಬೇಕು. ಶ್ರೇಯಸಾಂ ಲೋಭಬುದ್ಧ್ಯಾ ಚ ಯಃ ಕರೋತಿ ಹರೇಃ ಕಥಾ । ಕಾರ್ತಿಕೇ ಮುನಿಶಾರ್ದೂಲ ಕುಲಾನಾಂ ತಾರಯೇತ್ ಶತಮ್ ॥44॥ ಯಾವನು ಶ್ರೇಯಸ್ಸಾಗಬೇಕೆಂದು ಹರಿಯ ಕಥೆಯನ್ನು ಹೇಳುತ್ತಾನೆಯೋ ಅಥವಾ

ಕೇಳುತ್ತಾನೆಯೋ ಅವನು ನೂರು ಕುಲಗಳನ್ನು ಉದ್ಧಾರ ಮಾಡಿಕೊಳ್ಳುತ್ತಾನೆ. ನಿಯಮೇನ ನರೋ ಯಸ್ತು ಶೃಣುತೇ ವೈಷ್ಣವೀ ಕಥಾಮ್ । ಕಾರ್ತಿಕೇ ತು ವಿಶೇಷೇಣ ಗೋಸಹಸ್ರಫಲಂ ಲಭೇತ್ ॥45॥ ಕಾರ್ತಿಕಮಾಸದಲ್ಲಿ ನಿಯಮದಿಂದ ಯಾವನು ವಿಷ್ಣು ಕಥೆಗಳನ್ನು ಕೇಳುತ್ತಾನೆಯೋ ಅವನು ಸಾವಿರ ಗೋದಾನಗಳ ಫಲವನ್ನು ಹೊಂದುತ್ತಾನೆ. ಪ್ರಬೋಧವಾಸರೇ ವಿಷ್ಣೋಃ ಶೃಣುತೇ ಯೇ ಹರೇಃ ಕಥಾಮ್ । ಸಪ್ತದ್ವೀಪವತೀದಾನೇ ಯತ್ಫಲಂ ತಲ್ಲಭೇನ್ಮುನೇ ॥46॥ ಪ್ರಬೋಧಿನೀ ಏಕಾದಶಿಯ ದಿವಸ ಹರಿಕಥೆಯನ್ನು ಕೇಳಿದರೆ ಸಪ್ತದ್ವೀಪಗಳಿಂದ ಕೂಡಿದ ಭೂಮಿಯನ್ನು ದಾನ ಮಾಡಿದ ಫಲವು ಬರುತ್ತದೆ. ಶ್ರುತ್ವಾ ವಿಷ್ಣುಕಥಾಂ ವಿಷ್ಣೋರ್ಯೇಽರ್ಚಯಂತಿ ಕಥಾವಿದಮ್ । ಸ್ವಶಕ್ತ್ಯಾ ಮುನಿಶಾರ್ದೂಲ ತೇಷಾಂ ಲೋಕೋಽಕ್ಷಯಃ ಸ್ಮೃತಃ ॥47॥ ವಿಷ್ಣುವಿನ ಕಥೆಯನ್ನು ಕೇಳಿ ಯಾರು ಆ ಕಥೆ ಹೇಳಿದವನನ್ನು ಶಕ್ತ್ಯಾನು-ಗುಣವಾಗಿ ಪೂಜಿಸುವನೋ ಅವರು ಅಕ್ಷಯವಾದ ಲೋಕವನ್ನು ಹೊಂದುತ್ತಾರೆ. ಗೀತಶಾಸ್ತ್ರವಿನೋದೇನ ಕಾರ್ತಿಕೇ ಯೋ ಭವೇನ್ನರಃ । ನ ತಸ್ಯ ಪುನರಾವೃತ್ತಿರ್ಮಯಾ ದೃಷ್ಟಾ ಕಲಿಪ್ರಿಯ ॥48॥ ಎಲೈ ನಾರದನೇ! ಗೀತಶಾಸ್ತ್ರಗಳ ವಿನೋದದಿಂದ ಯಾವನು ಕಾರ್ತಿಕಮಾಸದಲ್ಲಿ ವಿಷ್ಣುವನ್ನು ತೃಪ್ತಿ ಪಡಿಸುವನೋ ಅವನಿಗೆ ಪುನರಾವೃತ್ತಿಯಾದ ಜನ್ಮವೆಂಬುದೇ ಇಲ್ಲ. ಗೀತಂ ನೃತ್ಯಂ ಚ ವಾದ್ಯಂ ಚ ತಥಾ ವಿಷ್ಣುಕಥಾಂ ಮುನೇ । ಯಃ ಕರೋತಿ ಸ ಪುಣ್ಯಾತ್ಮಾ ತ್ರೈಲೋಕ್ಯೋಪರಿಸಂಸ್ಥಿತಃ ॥49॥ ಯಾವನು ಆ ಪ್ರಬೋಧಿನಿಯ ದಿನ ಗೀತ, ನೃತ್ಯ , ವಾದ್ಯಘೋಷಗಳನ್ನು ಮಾಡುತ್ತಾನೆಯೋ ಅವನು ಮೂರು ಲೋಕಕ್ಕಿಂತಲೂ ಮೇಲಿರುವವನು. ಬಹುಪುಷ್ಪೈರ್ಬಹುಫಲೈಃ ಕರ್ಪೂರಾಗರುಕುಂಕುಮೈಃ । ಹರೇಃ ಪೂಜಾ ವಿಧಾತವ್ಯಾ ಕಾರ್ತಿಕೇ ಬೋಧವಾಸರೇ ॥50॥ ಈ ಕಾರ್ತಿಕಮಾಸದಲ್ಲಿ ಬಹು ಪುಷ್ಪಗಳಿಂದಲೂ ಬಹು ಫಲಗಳಿಂದಲೂ ಕರ್ಪೂರ, ಅಗರು, ಕುಂಕುಮಗಳಿಂದಲೂ ಹರಿಯ ಪೂಜೆಯನ್ನು ಮಾಡಬೇಕು. ವಿತ್ತಶಾಠ್ಯಂ ನ ಕರ್ತವ್ಯಂ ಸಂಪ್ರಾಪ್ತೇ ಹರಿವಾಸರೇ । ಯಸ್ಮಾತ್ಪುಣ್ಯಮಸಂಖ್ಯಾತಂ ಪ್ರಾಪ್ಯತೇ ಮುನಿಸತ್ತಮ ॥51॥ ಈ ಹರಿವಾಸರದಲ್ಲಿ ಲೋಭವನ್ನು ಮಾಡಕೂಡದು. ಅದರಿಂದ ಬಹು ಪುಣ್ಯವು ಬರುವುದು.

ಫಲೈರ್ನಾನಾವಿಧೈಃ ದ್ರವ್ಯೈಃ ಪ್ರಬೋಧಿನ್ಯಾಂ ತು ಜಾಗರೇ । ಶಂಖತೋಯಂ ಸಮಾದಾಯ ಅರ್ಘ್ಯೋ ದೇಯೋ ಜನಾರ್ದನೇ ॥52॥ ಶಂಖದಲ್ಲಿ ನೀರನ್ನು

ಇಟ್ಟುಕೊಂಡು ಅದರ ಮೇಲೆ ಬಗೆ ಬಗೆಯಾದ ದ್ರವ್ಯವನ್ನಿಟ್ಟುಕೊಂಡು ಜನಾ-ರ್ದನನಿಗೆ ಅರ್ಘ್ಯವನ್ನು ಕೊಡಬೇಕು. ಯತ್ಫಲಂ ಸರ್ವತೀರ್ಥೇಷು ಸರ್ವದಾನೇಷು ಯತ್ಫಲಮ್ । ತತ್ಫಲಂ ಕೋಟಿಗುಣಂ ದತ್ವಾರ್ಘ್ಯಂ ಬೋಧವಾಸರೇ ||53|| ಆ ಬೋಧಿನಿಯ ದಿವಸ ಅರ್ಘ್ಯವನ್ನು ಕೊಟ್ಟರೆ ಸರ್ವತೀರ್ಥಗಳಲ್ಲಿಯೂ ಎಲ್ಲಾ ದಾನಗಳನ್ನೂ ಮಾಡಿದರೆ ಬರುವ ಫಲವು ಬರುತ್ತದೆ. ಗುರುಪೂಜಾ ತತಃ ಕಾರ್ಯಾ ಭೋಜನಾಚ್ಛಾದನಾದಿಭಿಃ । ದಕ್ಷಿಣಾಭಿಶ್ಚ ದೇವರ್ಷೇ ತುಷ್ಟ್ಯರ್ಥಂ ಚಕ್ರಪಾಣಿನಃ ||54|| ಜನಾರ್ದನನ ಪ್ರೀತಿಗೋಸ್ಕರ ಊಟ ಬಟ್ಟೆ ದಕ್ಷಿಣೆಗಳಿಂದ ಗುರುಪೂಜೆಯನ್ನು ಮಾಡಬೇಕು. ಭಾಗವತಂ ಶೃಣುತೇ ಯಸ್ತು ಪುರಾಣಂ ಚ ಪಠೇನ್ನರಃ । ಪ್ರತ್ಯಕ್ಷರಂ ಭವೇತ್ತಸ್ಯ ಕಪಿಲಾದಾನಜಂ ಫಲಮ್ ||55|| ಆ ಪ್ರಬೋಧಿನಿಯ ದಿನ ಭಾಗವತ ಪುರಾಣವನ್ನು ಓದಿದರೆ ಅಥವಾ ಕೇಳಿದರೆ ಆ ಪುರಾಣದ ಒಂದೊಂದು ಅಕ್ಷರಕ್ಕೂ ಕಪಿಲಾ ಗೋದಾನ ಮಾಡಿದ ಫಲವು ಬರುತ್ತದೆ. ಕಾರ್ತಿಕೇ ಮುನಿಶಾರ್ದೂಲ ಸ್ವಶಕ್ತ್ಯಾ ವೈಷ್ಣವಂ ವ್ರತಮ್ । ಯಃ ಕರೋತಿ ಯಥೋಕ್ತಂ ತು ಮುಕ್ತಿಸ್ತಸ್ಯ ಸುನಿಶ್ಚಲಾ ||56|| ಕಾರ್ತಿಕ ಮಾಸದಲ್ಲಿ ಶಕ್ತ್ಯನುಣವಾಗಿ ಪ್ರಬೋಧಿನೀ ಅಥವಾ ವೈಷ್ಣವವ್ರತವನ್ನು ಮಾಡಿದರೆ ಅವನಿಗೆ ಮುಕ್ತಿಯೆಂಬುದು ಖಂಡಿತ. ಕೇತಕ್ಯಾ ಏಕಪತ್ರೇಣ ಪೂಜಿತೋ ಗರುಡಧ್ವಜಃ । ಸಮಾಃ ಸಹಸ್ರಂ ಸುಪ್ರೀತೋ ಭವತಿ ಮಧುಸೂದನಃ ||57|| ಆ ದಿನ ಜನಾರ್ದನನನ್ನು ತಾಳೆಯ ಒಂದು ಹೂ ಎಸಳಿನಿಂದ ಪೂಜಿಸಿದರೂ ಸಾವಿರ ವರ್ಷಗಳವರೆಗೂ ಅವನು ಭಕ್ತನಲ್ಲಿ ಪ್ರೀತಿಯುಳ್ಳವನಾಗುತ್ತಾನೆ. ಅಗಸ್ತಿಕುಸುಮೈರ್ದೇವಂ ಪೂಜಯೇದ್ ಯೋ ಜನಾರ್ದನಮ್ । ದರ್ಶನಾತ್ ತಸ್ಯ ದೇವರ್ಷೇ ನರಕಾಗ್ನಿಃ ಪ್ರಣಶ್ಯತಿ ||58|| ಆ ದಿನ ಅಗಸೆಯ ಹೂಗಳಿಂದ ಆ ಸ್ವಾಮಿಯನ್ನು ಪೂಜಿಸಿದರೆ ನರಕದ ಅಗ್ನಿಯು ನಾಶವಾಗುತ್ತದೆ. ಮುನಿಪುಷ್ಪಾರ್ಚಿತೋ ವಿಷ್ಣುಃ ಕಾರ್ತಿಕೇ ಪುರುಷೋತ್ತಮಃ । ದದಾತ್ಯಭಿಮತಾನ್ ಕಾಮಾನ್ ಶಶಿಸೂರ್ಯಗ್ರಹೌ ಯಥಾ ||59|| ಆ ಅಗಸೆಯ ಹೂವಿನಿಂದ ವಿಷ್ಣುವನ್ನು ಕಾರ್ತಿಕಮಾಸದಲ್ಲಿ ಪೂಜಿಸಿದರೆ ಸೂರ್ಯಚಂದ್ರರು ಫಲಕೊಡುವಂತೆ ಬೇಕಾದ ಫಲಗಳನ್ನು ಕೊಡುವನು.

ವಿಹಾಯ ಸರ್ವಪುಷ್ಪಾಣಿ ಮುನಿಪುಷ್ಪೇಣ ಕೇಶವಮ್ । ಕಾರ್ತಿಕೇ ಯೋಽರ್ಚಯೇದ್ ಭಕ್ತ್ಯಾ ವಾಜಿಮೇಧಫಲಂ ಲಭೇತ್ ||60|| ಮಿಕ್ಕ ಎಲ್ಲಾ

ಪುಷ್ಪಗಳನ್ನೂ ಬಿಟ್ಟು ಈ ಅಗಸೆಯ ಹೂವಿನಿಂದಲೇ ಕಾರ್ತಿಕದಲ್ಲಿ ಕೇಶವನನ್ನು ಪೂಜಿಸಿದರೆ ಅಶ್ವಮೇಧಫಲವು ಬರುತ್ತದೆ. ತುಳಸೀದಳಪುಷ್ಪಾಣಿ ಯೇ ಯಚ್ಛಂತಿ ಜನಾರ್ದನೇ । ಕಾರ್ತಿಕೇ ಸಕಲಂ ವತ್ಸ ಪಾಪಂ ಜನ್ಮಾರ್ಜಿತಂ ದಹೇತ್ ॥61॥ ಆ ಪ್ರಬೋಧಿನಿಯಲ್ಲಿ ತುಳಸಿಯ ದಳದಿಂದ ಜನಾರ್ದನನನ್ನು ಪೂಜಿಸಿದರೆ ಜನ್ಮಾಂತರಗಳ ಪಾಪಗಳೂ ಹೋಗುತ್ತವೆ. ದೃಷ್ಟ್ವಾ ಸ್ಪೃಷ್ಟ್ವಾಥವಾ ಧ್ಯಾತಾ ಕೀರ್ತಿತಾ ನಾಮತಸ್ತುತಾ । ರೋಪಿತಾ ಸೇಚಿತಾ ನಿತ್ಯಂ ಪೂಜಿತಾ ತುಲಸೀ ನತಾ ॥62॥ ನವಧಾ ತುಲಸೀಭಕ್ತಿಂ ಯೇ ಕುರ್ವಂತಿ ದಿನೇ ದಿನೇ । ಯುಗಕೋಟಿಸಹಸ್ರಾಣಿ ತನ್ವಂತಿ ಸುಕೃತಂ ಮುನೇ ॥63॥ ನಿತ್ಯವೂ ತುಳಸಿಯನ್ನು ನೋಡಬೇಕು. ಮುಟ್ಟಬೇಕು. ಧ್ಯಾನಿಸಬೇಕು. ಹೊಗಳಬೇಕು. ಬೆಳೆಸಬೇಕು. ನೀರು ಹಾಕಬೇಕು. ಪೂಜಿಸಬೇಕು. ನಮಸ್ಕರಿಸಬೇಕು. ಸ್ತೋತ್ರ ಮಾಡಬೇಕು. ಈ ರೀತಿಯಾಗಿ ದಿನವೂ ಒಂಭತ್ತು ಬಗೆಯಲ್ಲಿ ಯಾರು ತುಳಸಿಯ ಭಕ್ತಿಯನ್ನು ಮಾಡುತ್ತಾರೋ ಅವರು ಕೋಟಿ ಸಾವಿರ ಯುಗಗಳವರೆಗೂ ಪುಣ್ಯವಂತರಾಗಿರುತ್ತಾರೆ. ಯಾವ-ಚ್ಛಾಖಾಪ್ರಶಾಖಾಭಿಃ ಬೀಜಪುಷ್ಪದಳೈರ್ಮುನೇ । ರೋಪಿತಾ ತುಲಸೀ ಪುಂಭಿಃ ವರ್ಧತೇ ವಸುಧಾತಳೇ ॥64॥ ತುಳಸಿಯನ್ನು ಶಾಖೋಪಶಾಖೆಗಳಾಗಿಯೂ ಬೀಜ ಹೂವು ದಳಗಳುಳ್ಳದ್ದಾಗಿಯೂ ಆಗುವಂತೆ ಯಾವ ಮನುಷ್ಯನು ಬೆಳೆಸುತ್ತಾನೆಯೋ ಅವನು ಧನ್ಯನು. ತೇಷಾಂ ವಂಶೇ ತು ಯೇ ಜಾತಾ ಯೇ ಭವಿಷ್ಯಂತಿ ಯೇ ಗತಾಃ । ತೇಷಾಮಾಕಲ್ಪಸಾಹಸ್ರಂ ಭವೇದ್ ವಾಸೋ ಹರೇರ್ಗೃಹೇ ॥65॥ ಅವರ ವಂಶದಲ್ಲಿ ಹುಟ್ಟಿದ, ಹುಟ್ಟಿರುವ, ಹುಟ್ಟುವವರಿಗೆ ಸಾವಿರ ಕಲ್ಪಗಳವರೆಗೂ ಹರಿಯ ಮನೆಯಲ್ಲಿಯೇ (ವೈಕುಂಠದಲ್ಲಿ) ವಾಸವು ಲಭಿಸುತ್ತದೆ. ಯತ್ಫಲಂ ಸರ್ವಪುಷ್ಪೇಷು ಸರ್ವಪತ್ರೇಷು ನಾರದ । ತುಲಸೀದಳೇನ ಚೈಕೇನ ಕಾರ್ತಿಕೇ ಪ್ರಾಪ್ಯತೇ ತು ತತ್ ॥66॥ ಎಲ್ಲಾ ಹೂವುಗಳನ್ನೂ, ಪತ್ರೆಗಳನ್ನೂ ಪೂಜೆಮಾಡಿದ ಫಲವು ಒಂದು ತುಳಸಿಯ ದಳವನ್ನು ಕಾರ್ತಿಕದಲ್ಲಿ ಪೂಜೆ ಮಾಡುವುದರಿಂದ ಬರುತ್ತದೆ. ಸಂಪ್ರಾಪ್ತಂ ಕಾರ್ತಿಕಂ ದೃಷ್ಟ್ವಾ ನಿಯಮೇನ ಜನಾರ್ದನಃ । ಪೂಜನೀಯೋ ಮಹಾವಿಷ್ಣುಃ ತುಲಸೀದಳಕೋಮಲೈಃ ॥67॥ ಕಾರ್ತಿಕಮಾಸವು ಬಂದುದನ್ನು ತಿಳಿದು ಜನಾರ್ದನನನ್ನು ನಿಯಮದಿಂದ ತುಳಸಿಯ ದಳಗಳಿಂದ ಪೂಜಿಸಬೇಕು. ಇಷ್ಟ್ವಾ ಕ್ರತುಶತೈರ್ದೇವಾನ್ ದತ್ವಾ

ದಾನಾನ್ಯನೇಕಶಃ । ತುಲಸೀದಳೈಸ್ತು ತತ್ಪುಣ್ಯಂ ಕಾರ್ತಿಕೇ ಕೇಶವಾರ್ಚನೇ ॥68॥ ಅನೇಕ ಯಾಗಗಳನ್ನು ಅನೇಕಬಾರಿ ಮಾಡಿದರೆ ಬರುವ ಪುಣ್ಯವು ಕಾರ್ತಿಕದಲ್ಲಿ ತುಳಸಿಯ ದಳಗಳಿಂದ ಕೇಶವನನ್ನು ಪೂಜಿಸಿದರೆ ಬರುತ್ತದೆ.

ಇತಿ ಶ್ರೀಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿನಾರದಸಂವಾದಾಂತರ್ಗತ ಕೃಷ್ಣಯುಧಿಷ್ಠಿರಸಂವಾದೇ ಕಾರ್ತಿಕಶುಕ್ಲಪ್ರಬೋಧಿನ್ಯೇಕಾದಶೀಮಾಹಾತ್ಮ್ಯಂ ನಾಮ ತ್ರಿಷಷ್ಟಿ-ತಮೋಽಧ್ಯಾಯಃ ಸಮಾಪ್ತಃ ॥ ಇಂತು ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿನಾರದಸಂವಾದಾಂತರ್ಗತವಾದ ಕೃಷ್ಣಯುಧಿಷ್ಠಿರಸಂವಾದದಲ್ಲಿ ಕಾರ್ತಿಕಶುಕ್ಲಪ್ರಬೋಧಿನ್ಯೇಕಾದಶಿಯ ಮಹಿಮೆ ಎಂಬ ಅರವತ್ತಮೂರನೆಯ ಅಧ್ಯಾಯವು ಮುಗಿಯಿತು.

**ಶ್ರೀ ಲಕ್ಷ್ಮೀಪತಿತೀರ್ಥರು (ವ್ಯಾಸರಾಜ ಮಠ)** (ಕ್ರಿ .ಶ. 1660-1670)

ಲಕ್ಷ್ಮೀನಾಥಾಬ್ಧಿಸಂಭೂತೋ ಲಕ್ಷ್ಮೀಪತ್ಯಾಖ್ಯಚಂದ್ರಮಾಃ। ಸಾಧುಸಂದೋಹ 'ಕುಮುದಾಮೋದಸ್ಸಂಪಾತುನಃ ಸದಾಃ ॥ ಶ್ರೀಲಕ್ಷ್ಮೀನಾಥತೀರ್ಥರ ಕರಕಮಲ ಸಂಜಾತರಾಗಿ ಬಂದ ಈ ಮಹಾನುಭಾವರು ಅಲ್ಪಕಾಲದಲ್ಲಿಯೇ ರಾಜಾಧಿರಾಜರ ವಿಶೇಷ ಮಾನ್ಯತೆಗೆ ಪಾತ್ರರಾದರು. ಶ್ರೀರಂಗ, ಮಧುರೈ ಮುಂತಾದ ಪ್ರಸಿದ್ಧ ಸ್ಥಳಗಳಲ್ಲಿ ಸಂಚರಿಸುತ್ತಾ ರಾಜರುಗಳಿಂದ ಯಥೇಷ್ಟವಾಗಿ ಭೂಸ್ವತ್ತುಗಳನ್ನು ಸಂಪಾದಿಸಿ ಶ್ರೀಮಠದ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಿದರು. ಸಾತ್ವಿಕ ಜನರೆಂಬ ಕುಮುದ ಪುಷ್ಪಗಳಿಗೆ ಚಂದ್ರನಂತೆ ಆಹ್ಲಾದಕರರಾಗಿದ್ದರು. ಇವರೂ ಸಹ ಶ್ರೀರಂಗ ಕ್ಷೇತ್ರದಲ್ಲಿಯೇ ತಮ್ಮ ಗುರುಗಳ ಸಮೀಪದಲ್ಲಿಯೇ 1670ನೇ ಇಸವಿ ಕಾರ್ತಿಕ ಶುದ್ಧ ಏಕಾದಶಿಯಂದು ಶ್ರೀರಂಗನಾಥನ ಪಾದವನ್ನು ಸೇರಿ ಬೃಂದಾವನಸ್ಥರಾದರು. ಇವರ ಬೃಂದಾವನವೂ ಶ್ರೀರಂಗದಲ್ಲಿ ಭವ್ಯವಾಗಿ ಕಂಗೊಳಿಸುತ್ತಿದೆ.

**ಶ್ರೀ ವೇದನಿಧಿತೀರ್ಥರು (ಉತ್ತರಾದಿ ಮಠ)** – ವಿದ್ಯಾಧೀಶಾಬ್ಧಿಸಂಭೂ-ತೋ ವಿದ್ವತ್ಕುಮುದಬಾಂಧವಃ। ವೇದನಿಧ್ಯಾಖ್ಯಚಂದ್ರೋऽಯಂ ಕಾಮಿತಾರ್ಥಾನ್ ಪ್ರಯಚ್ಛತು ॥ ಶ್ರೀವಿದ್ಯಾಧೀಶತೀರ್ಥರಿಂದ ಸಂನ್ಯಾಸ ಪಡೆದ ಶ್ರೀವೇದನಿಧಿತೀರ್ಥರು ಶ್ರೀಮಠಕ್ಕೆ ಶಿಷ್ಯಸಂಪತ್ತನ್ನು ಮಾತ್ರವಲ್ಲದೆ ಭೂಸಂಪತ್ತನ್ನೂ ದೊರಕಿಸಿದರು. ತಿರುಚಿನಾಪಲ್ಲಿಯ ನವಾಬನಿಂದ ಸತ್ಕರಿಸಲ್ಪಟ್ಟು ಕೆಲವು ಗ್ರಾಮಗಳನ್ನು ದಾನವಾಗಿ

ಪಡೆದರು. ಶ್ರೀಸತ್ಯವ್ರತತೀರ್ಥರಿಗೆ ಪೀಠವನ್ನಿತ್ತು ಪಂಢರಾಪುರದ ಪ್ರಾಚೀನ ಮಠ-ವೊಂದರಲ್ಲಿ ಶ್ರೀ ಪಂಢರಿನಾಥನ ಪಾದವನ್ನು ಸೇರಿದರು.

## ಭೀಷ್ಮ ಪಂಚಕ ವ್ರತ

ಈ ದಿನದಿಂದ ಭೀಷ್ಮಪಂಚಕವ್ರತವನ್ನು ಗ್ರಹಣ ಮಾಡಬೇಕು.

ಭೀಷ್ಮ ಪಂಚಕ ವ್ರತವು ಪರಮ ಪವಿತ್ರವೂ,ಸಮಸ್ತ ಪಾಪ ನಾಶಕವೂ ಆದ ವ್ರತವಾಗಿದೆ. ಯಾವ ಮಾನವನು ಭಕ್ತಿ ಪೂರ್ವಕವಾಗಿ ಈ ವ್ರತವನ್ನು ಅನುಷ್ಠಾನ ಮಾಡುವನೋ ಅವನಿಗೆ ಅಚ್ಯುತನು ಮುಕ್ತಿ ಪ್ರಧಾನ ಮಾಡುತ್ತಾನೆ. ಬ್ರಹ್ಮಚಾರಿ, ಗ್ರಹಸ್ಥ, ವಾನಪ್ರಸ್ಥ ಅಥವಾ ಸನ್ಯಾಸಿ ಯಾವನಾದರೂ ಈ ವ್ರತವನ್ನು ಮಾಡಿದರೆ ಅವನಿಗೆ ಪರಮ ದುರ್ಲಭವಾದ ವೈಷ್ಣವ ಸ್ಥಾನವು ಪ್ರಾಪ್ತವಾಗುತ್ತದೆ. ಈ ವ್ರತವನ್ನು ಕಾರ್ತಿಕ ಶುಕ್ಲ ಏಕಾದಶಿಯಿಂದ ಪ್ರಾರಂಭಿಸಿ ಹುಣ್ಣಿಮೆಯ ದಿನ ಪೂರ್ತಿಗೊಳಿಸಬೇಕು. ಯಾವನು ಈ ವ್ರತವನ್ನು ಮಾಡುವನೋ ಅವನು ಬ್ರಹ್ಮಹತ್ಯಾ, ಗೋಹತ್ಯಾ, ಪಾಪಗಳಿಂದ ಮುಕ್ತನಾಗಿ ಶುದ್ಧವಾದ ಸದ್ಗತಿಯನ್ನು ಹೊಂದುತ್ತಾನೆ ಎಂದು ಭೀಷ್ಮಾಚಾರ್ಯರ ವಚನವಿದೆ. ಮೊದಲು ಕೃತಯುಗದಲ್ಲಿ ವಶಿಷ್ಠ, ಭೃಗು, ಶುಕ್ರ, ಗರ್ಗ, ಪ್ರಹ್ಲಾದ, ಮೊದಲಾದ ಮುನಿಗಳೂ, ಆನಂತರ ತ್ರೇತಾಯುಗದಲ್ಲಿ ನಾಭಾಗ, ಅಂಬರಿಷ ಇನ್ನುಳಿದವರು, ದ್ವಾಪರದಲ್ಲಿ ಶಿರಭದ್ರ ಮೊದಲಾದ ವೈಶ್ಯರು ಮತ್ತು ಕಲಿಯುಗದಲ್ಲಿ ಉತ್ತಮ ಆಚಾರವುಳ್ಳ ಶೂದ್ರರು ಕೂಡಾ ಈ ವ್ರತವನ್ನು ಅನುಷ್ಠಾನ ಮಾಡಿದ್ದಾರೆ.

ವ್ರತಾಚರಣೆ -

ಭೀಷ್ಮ ಪಂಚಕವೆಂಬ ಹೆಸರಿನ ಈ ವ್ರತವು ವಿಷ್ಣುವಿಗೆ ಹೆಚ್ಚು ಸಂತೋಷವನ್ನುಂಟು ಮಾಡುವಂಥಾದ್ದು ಮತ್ತು ರಹಸ್ಯಮಯವೂ, ಆಗಿದೆ. ಕಾರ್ತಿಕ ಮಾಸದ ಶುಕ್ಲ ಪಕ್ಷದ ಏಕಾದಶಿಯಿಂದ ಮನೋಹರವಾದ ಪೌರ್ಣಿಮೆಯವರೆಗಿನ (5)ಐದು ತಿಥಿಗಳು ಭೀಷ್ಮಪಂಚಕವೆಂದು ಪ್ರಸಿದ್ಧವಾಗಿದೆ. ಈ ತಿಥಿಗಳು ಬಹು ಪುಣ್ಯ-ದಾಯಕವಾಗಿವೆ. ಈ ದಿನಗಳಂದು ಪ್ರಾತಃಕಾಲದಲ್ಲೆದ್ದು ವಿಧಿಪೂರ್ವಕ ಶೌಚಾದಿ-ಗಳನ್ನು ಮುಗಿಸಿ ವ್ರತವನ್ನು ಮಾಡುವವರು ಶುದ್ದವಾದ ಜಲವುಳ್ಳ ನದಿ, ದೇವಖಾತ,

ಅಥವಾ ಪವಿತ್ರ ಜಲಾಶಯಗಳಲ್ಲಿ ಶರೀರಕ್ಕೆ ಗೋಮಯವನ್ನು ಹಚ್ಚಿಕೊಂಡು ತಮ್ಮ ಧರ್ಮಪತ್ನಿಯೊಂದಿಗೆ (ಹೆಂಡತಿಯೂ ವ್ರತ ಮಾಡುತ್ತಿದ್ದಲ್ಲಿ) ಸ್ನಾನ ಮಾಡಬೇಕು. ನಂತರ ಮಡಿ ಬಟ್ಟೆಯನ್ನುಟ್ಟುಕೊಂಡು ದೇವತಾನಿರ್ಮಾಲ್ಯವಿಸರ್ಜನ, ಸಂಧ್ಯಾ-ವಂದನ, ಬ್ರಹ್ಮಯಜ್ಞಾದಿಗಳನ್ನು ಮುಗಿಸಿ ಕುರುವಂಶ ಪಿತಾಮಹನಾದ ಭೀಷ್ಮಾ-ಚಾರ್ಯರನ್ನು ಕುರಿತು ಈ ಮಂತ್ರಗಳಿಂದ ಐದು ದಿನಗಳಲ್ಲಿಯೂ ಅರ್ಘ್ಯವನ್ನು ಕೊಡಬೇಕು.

ಸತ್ಯವ್ರತಾಯ ಶುಚಯೇ ಗಾಂಗೇಯಾಯ ಮಹಾತ್ಮನೇ । ಭೀಷ್ಮಾಯೈತದ್ದದಾ-ಮ್ಯರ್ಘ್ಯಂ ಆಜನ್ಮಬ್ರಹ್ಮಚಾರಿಣೇ ॥1॥ ವೈಯಾಘ್ರಪಾದಗೋತ್ರಾಯ ಸಾಂಕೃತ್ಯ-ಪ್ರವರಾಯ ಚ । ಗಂಗಾಪುತ್ರಾಯ ಭೀಷ್ಮಾಯ ಪ್ರದಾಸ್ಯೇಹಂ ತಿಲೋದಕಮ್ ॥2॥ ಅಪುತ್ರಾಯ ದದಾಮ್ಯೇತತ್ಸಲಿಲಂ ಭೀಷ್ಮವರ್ಮಣೇ । ವಸೂನಾಮವತಾರಾಯ ಶಂತನೋರಾತ್ಮಜಾಯ ಚ । ಅರ್ಘ್ಯಂ ದದಾಮಿ ಭೀಷ್ಮಾಯ ಸೋಮವಂಶೋ-ದ್ಭವಾಯ ಚ ॥3॥ ಎಂದು ಭೀಷ್ಮರಿಗೆ ತರ್ಪಣವನ್ನು ಕೊಟ್ಟು. ಆಚಮನವನ್ನು ಮಾಡಬೇಕು. ನಂತರ ಗಂಧ,ಅಕ್ಷತೆ, ಪುಷ್ಪ, ಧೂಪ, ದೀಪ, ನೈವೇದ್ಯಾದಿಗಳಿಂದ ದೇವತಾರ್ಚನೆಯನ್ನು ಮಾಡಬೇಕು.

ಹೀಗೆ ದ್ವಾದಶಿಯಿಂದಾರಂಭಿಸಿ ಪೂರ್ಣಿಮಾದವರೆಗೆ ಅರ್ಘ್ಯವನ್ನು ಕೊಟ್ಟ ನಂತರ ಪೂರ್ಣಿಮಾ ದಿನದಂದು ಹೋಮದ ನಂತರ ಕೃಷ್ಣನ ಪ್ರತಿಮೆಯನ್ನು ದಾನ ಕೊಡಬೇಕು. ಈ ಐದು ದಿನಗಳಲ್ಲಿ ಸಂಪೂರ್ಣ ಉಪವಾಸವನ್ನು ಮಾಡಬೇಕು. ಅದಾಗದಿದ್ದರೆ ಪಂಚಗವ್ಯವನ್ನು ತೆಗೆದುಕೊಂಡು ವ್ರತವನ್ನು ಮಾಡಬೇಕು. (ಅಧಮ -ಪಕ್ಷದಲ್ಲಿ ಫಲವನ್ನು ತೆಗೆದುಕೊಳ್ಳಬಹುದು.)

ನಂತರ ಯತಾತ್ಮನಾದ ವ್ರತಧಾರಿಯು – ಸತ್ಯವ್ರತಾಯ ಶುಚಯೇ ಗಾಂಗೇ-ಯಾಯ ಮಹಾತ್ಮನೇ। ಭೀಷ್ಮಾಯ ತದ್ದದಾಮ್ಯರ್ಘ್ಯಂ ಆಜನ್ಮ ಬ್ರಹ್ಮಚಾರಿಣೇ॥2॥

ಎಂದು ಭೀಷ್ಮರಿಗೆ ಪುನಃ ಅರ್ಘ್ಯವನ್ನು ಕೊಡಬೇಕು. ಮತ್ತು ಪ್ರತಿದಿನ ಬ್ರಾಹ್ಮಣನಿಗೆ ಮೃಷ್ಟಾನ್ನ ಭೋಜನ ಮಾಡಿಸಿ ತಾನು ತೀರ್ಥವನ್ನು ನಿತ್ಯದಂತೆ ತುಲಸಿಸಹಿತವಾಗಿ (3) ಮೂರುಸಲ ತೆಗೆದುಕೊಳ್ಳಬೇಕು. ಗಂಧ, ಅಕ್ಷತೆ, ಅಂಗಾರ-ಗಳನ್ನು ಧಾರಣೆ ಮಾಡಿಕೊಳ್ಳಬೇಕು. ಈ ರೀತಿಯಾಗಿ ಐದು ದಿನಗಳ ಪರ್ಯಂತ

ಉಪವಾಸ ಮಾಡಬೇಕು. ಅನಿವಾರ್ಯವಾದಲ್ಲಿ ದ್ವಾದಶಿಯಂದು ಗೋಮಯ ಅಥವಾ ಗೋಮೂತ್ರ, ತ್ರಯೋದಶಿಯಂದು ಕ್ಷೀರ, ಚತುರ್ದಶಿಯಂದು ದಧಿ (ಮೊಸರು), ಪೌರ್ಣಿಮೆಯಂದು ಘೃತ(ತುಪ್ಪ)ವನ್ನು ಸ್ವೀಕರಿಸಬಹುದು. ಪೌರ್ಣಿ-ಮೆಯ ದಿನ ಸಾಯಂಕಾಲದಲ್ಲಿ ಪಂಚಗವ್ಯ ಪ್ರಾಶನ ಮಾಡಿ, ಭೀಷ್ಮರಿಗೆ ಅರ್ಘ್ಯ-ವನ್ನು ಕೊಟ್ಟು, ನಕ್ಷತ್ರ ಕಂಡ ನಂತರದಲ್ಲಿ ಪಾರಣೆಯನ್ನು ಮಾಡಬೇಕು.

ವ್ರತದ ಪೂರ್ಣಫಲಪ್ರಾಪ್ತಿಗಾಗಿ ಕರುಸಹಿತವಾದ ಆಕಳನ್ನು ಶ್ರೋತ್ರಿಯನಾದ, ಕುಟುಂಬಿಯಾದ ಬ್ರಾಹ್ಮಣನಿಗೆ ದಾನವಾಗಿ ಕೊಡಬೇಕು. ಮತ್ತು ಯಾವನು ಪತ್ನಿ-ಸಮೇತನಾಗಿ ಪುತ್ರಕಾಮನೆಯಿಂದ ಭೀಷ್ಮಪಂಚಕವ್ರತವನ್ನು ಮಾಡುವರೋ ಅವರು ವರುಷದಲ್ಲಿ ಪುತ್ರನನ್ನು ಪಡೆಯುವರು. ಈ ಐದೂ ದಿನಗಳಲ್ಲಿ ಭಾಗವತಾದಿಪುರಾಣ-ಶ್ರವಣ ಮಾಡಬೇಕು ಹಾಗೂ ಕೊನೆಯ ದಿನದಂದು ಆಚಾರ್ಯರಿಗೆ ಯಥಾಶಕ್ತಿ ವಸ್ತ್ರಾಲಂಕಾರ ಸಹಿತವಾಗಿ ದಕ್ಷಿಣೆಗಳನ್ನು ಕೊಡಬೇಕು.

## ಕಾರ್ತಿಕ ॥ ಶುಕ್ಲ ॥ ದ್ವಾದಶೀ

## ಅಥ ಧರಣೀವ್ರತ

ದುರ್ವಾಸಮುನಿ – ಮುನಿವರ್ಯನಾದ ಅಗಸ್ತ್ಯನು ಪುಷ್ಕರತೀರ್ಥಕ್ಕೆ ಕಾರ್ತಿಕ-ಮಾಸದ ಹುಣ್ಣಿಮೆಯಲ್ಲಿ ಹೋಗಿದ್ದು, ಮತ್ತೆ ಬೇಗನೆ ಭದ್ರಾಶ್ವನ ಅರಮನೆಗೆ ಬಂದನು. ಅವನು ಬಂದುದನ್ನು ಪರಮಧಾರ್ಮಿಕನಾದ ಆ ದೊರೆಯು ಕಂಡು, ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ, ಪೀಠದಲ್ಲಿ ಕುಳಿತುಕೊಂಡಿರುವ ಶ್ಲಾಘ್ಯವ್ರತ-ನಿಷ್ಠನಾದ ಆ ಋಷಿಯನ್ನು ಕುರಿತು (ಮುಂದಿನ) ಮಾತನ್ನಾಡಿದನು.

ದೊರೆ – ಋಷಿವರೋತ್ತಮನೇ! ಮೊದಲು ನೀನು ಹೇಳಿದ ಆಶ್ವಯುಜಮಾಸದ ದ್ವಾದಶೀವ್ರತವನ್ನು ನಾನು ಮಾಡಿದೆನು. ಈಗ ಕಾರ್ತಿಕಮಾಸದಲ್ಲಿ ಯಾವುದು ಪುಣ್ಯಪ್ರದವಾದುದೋ ಅದನ್ನು ಹೇಳು.

ಅಗಸ್ತ್ಯಮುನಿ – ದೊರೆಯೇ, ಕಾರ್ತಿಕಮಾಸದ ದ್ವಾದಶಿಯು ಪರಮಪಾವನ-ವಾದುದು. ಅದರಲ್ಲಿ ಉಪವಾಸಮಾಡಿ ವ್ರತಮಾಡುವುದರಿಂದ ಯಾವ ಫಲವು ದೊರೆಯುವುದೋ ಅದನ್ನು ವಿವರವಾಗಿ ಹೇಳುವೆನು. ನೀನು ಗಮನವಿಟ್ಟು ಕೇಳು.

ಈ ವ್ರತವನ್ನು ಮಾಡುವವನು ಹಿಂದೆ ಹೇಳಿರುವ ನಿಯಮದಂತೆ ಸರಿಯಾಗಿ ಸಂಕಲ್ಪ ಮಾಡಿ, ಸ್ನಾನ ಮಾಡಬೇಕು. ದೋಷರಹಿತನಾದ ಆ ನಾರಾಯಣದೇವನನ್ನೇ ಪೂಜಿಸಬೇಕು. ಸಹಸ್ರಶಿರಸೇ ನಮಃ ಎಂದು ಹರಿಯ ಶಿರಸ್ಸನ್ನು ಪೂಜಿಸಬೇಕು. ಪುರುಷಾಯ ನಮಃ ಎಂದು ತೋಳುಗಳನ್ನೂ, ವಿಶ್ವರೂಪಿಣೇ ನಮಃ ಎಂದು ಕಂಠವನ್ನೂ, ಜ್ಞಾನಾಸ್ತ್ರಾಯ ನಮಃ ಎಂದು ಶಂಖಚಕ್ರಾದ್ಯಗಳನ್ನೂ, ಶ್ರೀವತ್ಸಾಯ ನಮಃ ಎಂದು ಹೃದಯವನ್ನೂ, ಜಗದ್ಗ್ರಸಿಷ್ಣವೇ ತುಭ್ಯಂ ನಮಃ ಎಂದು (ಲೋಕವನ್ನು ನುಂಗುವ ನಿನಗೆ ನಮಸ್ಕಾರ ಎಂದು) ಉದರವನ್ನೂ, ದಿವ್ಯಮೂರ್ತಯೇ ನಮಃ ಎಂದು ನಡುವನ್ನೂ, ಸಹಸ್ರಪಾದಾಯ ನಮಃ ಎಂದು ದೇವನ ಪಾದಗಳನ್ನೂ ಪೂಜಿಸಬೇಕು.

ತಿಳಿವಳಿಕೆಯುಳ್ಳವನು ಹೀಗೆ ದೇವೇಶನನ್ನು, ತಲೆಯಿಂದ ಆರಂಭಿಸಿ, ಪಾದದವರೆಗೆ (ಅನುಲೋಮವಾಗಿ) ಪೂಜಿಸಿ, ದಾಮೋದರಾಯ ನಮಃ ಎಂದು ಹರಿಯ ಸರ್ವಾಂಗವನ್ನೂ ಪೂಜಿಸಬೇಕು. ಹೀಗೆ ಪೂಜಿಸಿ, ದೇವನೆದುರಿಗೆ ರತ್ನಗರ್ಭಗಳಾದ ನಾಲ್ಕು ಕಲಶಗಳನ್ನು, ಗಂಧವನ್ನು ಲೇಪಿಸಿ, ಹೂಮಾಲೆಗಳನ್ನು ಕಂಠಕ್ಕೆ ಸುತ್ತಿ, ಬಿಳಿಯ ವಸ್ತ್ರದಿಂದ ಅಲಂಕರಿಸಿ ಸ್ಥಾಪಿಸಬೇಕು. ರಾಜೋತ್ತಮನೇ! ಎಳ್ಳಿನಿಂದ ತುಂಬಿದ ಸುವರ್ಣನಾಣ್ಯಗಳುಳ್ಳ, ತಾಮ್ರದ ಪಾತ್ರೆಗಳನ್ನು ಕಲಶಗಳ ಮೇಲೆ ಇಟ್ಟು, ಆ ನಾಲ್ಕು ಕಲಶಗಳನ್ನೇ ಆ ನಾಲ್ಕು ಸಮುದ್ರಗಳೆಂದು ಭಾವಿಸಬೇಕು. ಆ ನಾಲ್ಕು ಕಲಶಗಳ ನಡುವೆ ಹಿಂದಿನ ಕ್ರಮದಲ್ಲಿಯೇ ಸುವರ್ಣದ ಹರಿಮೂರ್ತಿ-ಯನ್ನು ಸ್ಥಾಪಿಸಬೇಕು.

ಯೋಗೀಶ್ವರನೂ, ಯೋಗಿಗಳಿಗೆ ಗೋಚರನೂ, ಪೀತಾಂಬರಧಾರಿಯೂ ಆದ ಆ ಪ್ರಭುವನ್ನು ಹೀಗೆ ವಿಧ್ಯುಕ್ತವಾಗಿ ಪೂಜಿಸಿ, (ಏಕಾದಶಿಯಾದ ಆ ರಾತ್ರಿ) ಅಲ್ಲಿಯೇ ಜಾಗರಣೆಯನ್ನು ಮಾಡಬೇಕು.

ಹಲವರು ಯೋಗಿಗಳು ಮಾಡಿರುವಂತೆ ಹದಿನಾರು ಅರಗಳುಳ್ಳ ಚಕ್ರವನ್ನು ರಚಿಸಿ, ಅದರಲ್ಲಿ ವಿಷ್ಣುಸಂಬಂಧವಾದ ಯಜ್ಞವನ್ನು ಮಾಡಬೇಕು. ಯೋಗೀಶ್ವರ-ನಾದ ಆ ಹರಿಯನ್ನು ಪೂಜಿಸಬೇಕು. ನಿಯಮದಂತೆ ಪೂಜಿಸಿ, ಆ ರಾತ್ರಿಯು ಕಳೆದು ಬೆಳಗಾಗುತ್ತಲೇ ಬ್ರಾಹ್ಮಣನಿಗೆ ಅರ್ಪಿಸಬೇಕು. ನಾಲ್ಕು ಸಾಗರಗಳೆಂದು ಭಾವಿಸಿದ

ಕಲಶಗಳನ್ನು ನಾಲ್ಕು ಜನ ಬ್ರಾಹ್ಮಣರಿಗೆ ಕೊಟ್ಟು, ಯೋಗೀಶ್ವರನಾದ ದೇವನನ್ನು ಐದನೆಯ ಬ್ರಾಹ್ಮಣನಿಗೆ ಪರಿಶುದ್ಧವಾದ ಮನಸ್ಸುಳ್ಳವನಾಗಿ ಅರ್ಪಿಸಬೇಕು.

ವೇದಕ್ಕೆಂದು ಕೊಡುವುದರ ಎರಡರಷ್ಟು ಗುಣವು ವೇದವನ್ನು ತಿಳಿದವನಿಗೆ ಕೊಟ್ಟರೆ ಆಗುವುದು. ಯಾರು ಈ ವ್ರತದ ರಹಸ್ಯವನ್ನೂ, ವಿಧಾನವನ್ನೂ ಸಮಂತ್ರಕವಾಗಿ ಹೇಳುವನೋ ಅವನಿಗೆ ಕೊಟ್ಟರೆ ಕೋಟಿಯಷ್ಟು ಫಲವಾಗುವುದು.

ಗುರುವಿದ್ದರೂ ಕೆಟ್ಟಬುದ್ಧಿಯುಳ್ಳ ಯಾರು ಬೇರೆಯವನನ್ನು ಆಶ್ರಯಿಸುವನೋ, ಪೂಜಿಸುವನೋ, ಅವನು ದುರ್ಗತಿಯನ್ನು ಪಡೆಯುವನು. ಅವನು ಕೊಟ್ಟದ್ದೂ ನಿಷ್ಫಲವಾಗುವುದು. ಆದುದರಿಂದ ಮೊದಲು ಗುರುವಿಗೆ ಕೊಟ್ಟು, ಆಮೇಲೆ ಬೇರೆಯವನಿಗೆ ಕೊಡಬೇಕು. ಅವಿದ್ಯಾವಂತನಾಗಲೀ, ವಿದ್ಯಾವಂತನಾಗಲೀ, ಗುರುವೇ ಜನಾರ್ದನನು (ಎಂದರೆ ದೇವರು). ಸನ್ಮಾರ್ಗದಲ್ಲಿರುವನಾಗಲಿ, ಅಮಾರ್ಗದಲ್ಲಿರುವನಾಗಲಿ ಗುರುವೇ ಉತ್ತಮವಾದ ಗತಿ. ಯಾರು ಗುರುವನ್ನು ಪಡೆದೂ ಅಜ್ಞಾನದಿಂದ ಅವನನ್ನು ಗೌರವಿಸದಿರುವನೋ ಆ ಪುರುಷಾಧಮನು ಕೋಟಿಯುಗಗಳ ಕಾಲ ನರಕದಲ್ಲಿ ಬೇಯುವನು.

ಹೀಗೆ ದ್ವಾದಶಿಯಲ್ಲಿ ವಿಷ್ಣುವನ್ನು ಪೂಜಿಸಿ, ಮೇಲೆ ಹೇಳಿದಂತೆ ಕಲಶಾದಿಗಳನ್ನು ಬ್ರಾಹ್ಮಣರಿಗೆ ಅರ್ಪಿಸಿ, ತನ್ನ ಶಕ್ತಿಗನುಸಾರವಾಗಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ, ದಕ್ಷಿಣೆಯನ್ನೂ ಕೊಡಬೇಕು.

ಪೂರ್ವದಲ್ಲಿ ಬ್ರಹ್ಮನು, ಭೂದೇವಿಯು ಮಾಡಿದ ಈ ವ್ರತವನ್ನು ತಾನೂ ಮಾಡಿ, ಪ್ರಜಾಧಿಪತ್ಯವನ್ನು ಪಡೆದನು. ಮುಕ್ತಿಯೆಂಬ ಶಾಶ್ವತಬ್ರಹ್ಮನನ್ನೂ ಪಡೆದನು.

ಹಾಗೆಯೇ ಹೈಹಯರಾಜನಾದ ಕೃತವೀರ್ಯನು ಈ ವ್ರತದಿಂದ ಕಾರ್ತ-ವೀರ್ಯಾರ್ಜುನನೆಂಬ ಮಗನನ್ನು ಶಾಶ್ವತ ಪರಬ್ರಹ್ಮನನ್ನೂ ಪಡೆದನು. ಶಕುಂತಲೆ-ಯು ಹೀಗೆಯೇ ವ್ರತವನ್ನು ಮಾಡಿ, ಚಕ್ರವರ್ತಿಯಾದ ಭರತನನ್ನು ದುಷ್ಯಂತನಿಂದ ಮಗನನ್ನಾಗಿ ಪಡೆದಳು. ಅಲ್ಲದೆ, ಗತಿಸಿದ ಹಲವರು ರಾಜರೂ, ವೇದದಲ್ಲಿ ಹೇಳಿರುವ ಚಕ್ರವರ್ತಿಗಳೂ ಈ ವ್ರತದಿಂದ ಉತ್ತಮವಾದ ಚಕ್ರವರ್ತಿತ್ವವನ್ನೂ ಪಡೆದರು. ಪಾತಾಳದಲ್ಲಿ ಮುಳುಗಿದ್ದ ಧರಣೀದೇವಿ(ಭೂದೇವಿ)ಯು ಪೂರ್ವದಲ್ಲಿ

ಉತ್ತಮವಾದ ಈ ವ್ರತವನ್ನು ಮಾಡಿದಳು. ಆದುದರಿಂದಲೇ ಇದಕ್ಕೆ ಧರಣೀ -ವ್ರತವೆಂದು ಹೆಸರಾಯಿತು. ಈ ವ್ರತವು ನೆರವೇರಲು (ಮುಗಿಯಲು) ವರಾಹ-ರೂಪಿಯಾದ ಹರಿಯು ತೃಪ್ತನಾಗಿ ಭೂದೇವಿಯನ್ನು ಉದ್ಧರಿಸಿ, ಸಮುದ್ರದಲ್ಲಿ ಹಡಗಿನಂತೆ ನಿಲ್ಲಿಸಿದನು. ಮಹಾಮುನಿಯೇ! ಈ ಧರಣೀವ್ರತವನ್ನು ನಾನು ನಿನಗೆ ಹೇಳಿದ್ದೇನೆ. ಇದನ್ನು ಕೇಳುವ ಮತ್ತು ಮಾಡುವ ಉತ್ತಮ ಮನುಷ್ಯನು ಪಾಪವೆಲ್ಲ-ವನ್ನೂ ಕಳೆದುಕೊಂಡು ವಿಷ್ಣುಸಾಯುಜ್ಯವನ್ನು ಪಡೆಯುವನು.

ಆಗ್ರಾಯಣ ಶುಕ್ಲ ದ್ವಾದಶಿಗೆ ಅಖಂಡ ದ್ವಾದಶಿ ಎಂಬ ಹೆಸರೂ ಉಂಟು. ವಿಷ್ಣುಪದ ಪ್ರಾಪ್ತಿ ಕಾಮನೆಯುಳ್ಳವರು ಈ ದ್ವಾದಶಿಯಲ್ಲಿ ವಿಷ್ಣುಪೂಜೆಯನ್ನು ಮಾಡುತ್ತೇನೆಂದು ಸಂಕಲ್ಪ ಮಾಡಿ ವಿಷ್ಣುವನ್ನು ಪಂಚಗವ್ಯದಿಂದ ಸ್ನಾನ ಮಾಡಿಸಿ ಪೂಜಿಸಬೇಕು.

## ಉತ್ಥಾನ ದ್ವಾದಶೀ

ಆಷಾಢದಲ್ಲಿ ಶಯನಿಸಿರುವ ವಿಷ್ಣು ಈ ದಿವಸ ಏಳುವುದರಿಂದ ಇದನ್ನು ಉತ್ಥಾನ ದ್ವಾದಶೀ ಎಂದು ಕರೆಯುತ್ತಾರೆ. ವಿಷ್ಣು ದೇವಾಲಯಗಳಲ್ಲಿ ಪುಷ್ಪ ಬೃಂದಾ -ವನೋತ್ಸವವನ್ನು ಮಾಡುತ್ತಾರೆ. ರೇವತೀ ನಕ್ಷತ್ರದೊಡನೆ ಕೂಡಿದ ಈ ದ್ವಾದಶಿಯಲ್ಲಿ ವಿಶೇಷಬ್ರಾಹ್ಮಣಸಂತರ್ಪಣೆಯಿಂದ ಬ್ರಹ್ಮಲೋಕಪ್ರಾಪ್ತಿಯಾಗುತ್ತದೆ. ಈ ದಿವಸದಲ್ಲಿ ಉಡುಪಿ ಕ್ಷೇತ್ರದಲ್ಲಿ ಲಕ್ಷ ದೀಪೋತ್ಸವ ನಡೆಯುತ್ತದೆ.

ತುಳಸೀ ಮಹಿಮಾ – ತುಳಸೀಗಿಡವನ್ನು ಬೆಳೆಸುವುದರಿಂದ 1000 ಯಾಗ ಮಾಡಿದ ಫಲ ಪ್ರಾಪ್ತಿ, ಸ್ವರ್ಗಲೋಕಪ್ರಾಪ್ತಿ, ಶನಿಪೀಡಾನಿವೃತ್ತಿ. ಮುಖ, ಕಿವಿ, ತಲೆಗಳಲ್ಲಿ ತುಳಸೀಧಾರಣೆಯಿಂದ ಯಮಭಯಪರಿಹಾರ, ತುಳಸೀಮಾಹಾತ್ಮ್ಯ - ಶ್ರವಣದಿಂದ ಬ್ರಹ್ಮಲೋಕಪ್ರಾಪ್ತಿ.

ತುಳಸೀ ವಿವಾಹ ಮಾಡಿದ ನಂತರ ಯಜಮಾನನು – ತ್ವಂ ದೇವಿ ಮೇಽಗ್ರತೋ ಭೂಯಾಃ ತುಲಸೀ ದೇವಿ ಪಾರ್ಶ್ವತಃ । ದೇವಿ ತ್ವಂ ಪೃಷ್ಠತೋ ಭೂಯಾಸ್ತ್ವದ್ದಾನಾ-ಮ್ಮೋಕ್ಷಮಾಪ್ನುಯಾಮ್ ॥ ಎಂದು ಹೇಳಿ ದೇವರ ಮುಂದೆ ದಕ್ಷಿಣೆಯನ್ನು ಇಟ್ಟು ಶಾಂತಿಸೂಕ್ತಗಳನ್ನು ವಿಷ್ಣುಸೂಕ್ತಗಳನ್ನು ಪಠಿಸಬೇಕು. ಅನಂತರ ದೇವರ ಮುಂದೆ –

ಇದಂ ವ್ರತಂ ಮಯಾ ದೇವ ಕೃತಂ ಪ್ರೀತ್ಯೈ ತವ ಪ್ರಭೋ। ನ್ಯೂನಂ ಸಂಪೂರ್ಣತಾಂ ಯಾತು ತ್ವತ್ಪ್ರಸಾದಾಜ್ಜನಾರ್ದನ ॥ ಎಂದು ಹೇಳಿ ಚಾತುರ್ಮಾಸ್ಯವ್ರತವನ್ನು ಕೃಷ್ಣಾರ್ಪಣ ಮಾಡಬೇಕು. 'ಉತ್ಥಾನದ್ವಾದಶೀ' ಎಂಬ ಪುಸ್ತಕದಿಂದ ಹೆಚ್ಚಿನ ವಿಚಾರವನ್ನು ತಿಳಿದುಕೊಳ್ಳಿರಿ.

## ಧನ್ವಂತರಿ ಜಯಂತಿ

ಕಾರ್ತಿಕಶುದ್ಧದ್ವಾದಶಿಯಂದು ಧನ್ವಂತರಿಜಯಂತೀ. ತೌಳವರಲ್ಲಿ ತುಲಾಮಾಸದ ಕೃಷ್ಣದ್ವಾದಶಿಯಂದು ಆಚರಿಸಲಾಗುತ್ತದೆ. ಕ್ಷೀರಸಾಗರಮಥನಕಾಲದಲ್ಲಿ ಜ್ಞಾನಮುದ್ರೆಯೊಂದಿಗೆ ಅಮೃತಕಲಶವನ್ನು ಹಿಡಿದು ಧನ್ವಂತರಿಯು ಆವಿರ್ಭವಿಸಿ, ಆಯುರ್ವೇದವನ್ನು ಪ್ರಸಾರಗೊಳಿಸಿದ್ದಾನೆ .

ಆಚಾರ್ಯಮಧ್ವರು ತಂತ್ರಸಾರಸಂಗ್ರಹದಲ್ಲಿ ಹೇಳಿದ ಧನ್ವಂತರಿಮಂತ್ರದ ಜಪ, ತರ್ಪಣ, ಹೋಮಗಳು ಪ್ರಶಸ್ತ. ಧನ್ವಂತರಿಯಾಗಿ ಅವತರಿಸಿದ ಭಗವಂತನನ್ನು ಚಂದ್ರಮಂಡಲದಲ್ಲಿ ಧ್ಯಾನಿಸಬೇಕು

ಚಂದ್ರೌಘಕಾಂತಿಮಮೃತೋರುಕರೈರ್ಜಗಂತಿ ಸಂಜೀವಯಂತಮಮಿತಾತ್ಮಸುಖಂ ಪರೇಶಮ್ । ಜ್ಞಾನಂ ಸುಧಾಕಲಶಮೇವ ಚ ಸಂದಧಾನಂ ಶೀತಾಂಶುಮಂಡಲಗತಂ ಸ್ಮರತಾತ್ಮಸಂಸ್ಥಮ್ ॥

ಹೀಗೆ ಧ್ಯಾನಿಸಿ ಪ್ರಾರ್ಥನೆ ಸಲ್ಲಿಸಿ ನಮಸ್ಕರಿಸಿ.

ಧನ್ವಂತರೇಽಂಗರುಚಿ ಧನ್ವಂತರೇರಿತರು ಧನ್ವನ್‌ಸ್ತರೀಭವ ಸುಧಾಭಾನ್ವಂತರಾವಸಥ ಮನ್ವಂತರಾಧಿ ಕೃತ ತನ್ವಂತರೌಷಧನಿಧೇ । ದನ್ವಂತರಂಗಶುಗುದನ್ವಂತಮಾಜಿಷು ವಿತನ್ವನ್ ಮಮಾಬ್ಧಿತನಯಾ ಸೂನ್ವಂತಕಾತ್ಮಹೃದ ತನ್ವಂತರಾವಯವ ತನ್ವಂತರಾರ್ತಿಜಲಧೌ ॥ ನಮೋ ಧನ್ವಂತರೇ ತುಭ್ಯಂ ಸಂಸೃತಿವ್ಯಾಧಿನಾಶನ । ಪದ್ಮಪತ್ರವಿಶಾಲಾಕ್ಷ ದೇವವೈದ್ಯ ನಮೋಽಸ್ತು ತೇ ॥ ನಮಾಮಿ ಧನ್ವಂತರಿಮಾದಿದೇವಂ ಸುರಾಸುರೈರ್ವಂದಿತ ಪಾದಪದ್ಮಮ್। ಲೋಕೇ ಜರಾರುಗ್ಭಯಮೃತ್ಯು ನಾಶಂ ದಾತಾರಮೀಶಂ ವಿವಿಧೌಷಧೀನಾಂ ॥ ಅರಿಜಲಜಜಲೂಕಾರತ್ನಪೀಯೂಷ ಕುಂಭಪ್ರಕಟಿತ ಕರಕಾಂತಃ ಕಾಂತ ಪೀತಾಂಬರಾಢ್ಯಃ । ಸಿತವಸನ ವಿರಾಜನ್ಮೌಲಿ-

ಉತ್ತಮವಾದ ಈ ವ್ರತವನ್ನು ಮಾಡಿದಳು. ಆದುದರಿಂದಲೇ ಇದಕ್ಕೆ ಧರಣೀ -ವ್ರತವೆಂದು ಹೆಸರಾಯಿತು. ಈ ವ್ರತವು ನೆರವೇರಲು (ಮುಗಿಯಲು) ವರಾಹ-ರೂಪಿಯಾದ ಹರಿಯು ತೃಪ್ತನಾಗಿ ಭೂದೇವಿಯನ್ನು ಉದ್ಧರಿಸಿ, ಸಮುದ್ರದಲ್ಲಿ ಹಡಗಿನಂತೆ ನಿಲ್ಲಿಸಿದನು. ಮಹಾಮುನಿಯೇ! ಈ ಧರಣೀವ್ರತವನ್ನು ನಾನು ನಿನಗೆ ಹೇಳಿದ್ದೇನೆ. ಇದನ್ನು ಕೇಳುವ ಮತ್ತು ಮಾಡುವ ಉತ್ತಮ ಮನುಷ್ಯನು ಪಾಪವೆಲ್ಲ-ವನ್ನೂ ಕಳೆದುಕೊಂಡು ವಿಷ್ಣುಸಾಯುಜ್ಯವನ್ನು ಪಡೆಯುವನು.

ಆಗ್ರಾಯಣ ಶುಕ್ಲ ದ್ವಾದಶಿಗೆ ಅಖಂಡ ದ್ವಾದಶಿ ಎಂಬ ಹೆಸರೂ ಉಂಟು. ವಿಷ್ಣುಪದ ಪ್ರಾಪ್ತಿ ಕಾಮನೆಯುಳ್ಳವರು ಈ ದ್ವಾದಶಿಯಲ್ಲಿ ವಿಷ್ಣುಪೂಜೆಯನ್ನು ಮಾಡುತ್ತೇನೆಂದು ಸಂಕಲ್ಪ ಮಾಡಿ ವಿಷ್ಣುವನ್ನು ಪಂಚಗವ್ಯದಿಂದ ಸ್ನಾನ ಮಾಡಿಸಿ ಪೂಜಿಸಬೇಕು.

## ಉತ್ಥಾನ ದ್ವಾದಶೀ

ಆಷಾಢದಲ್ಲಿ ಶಯನಿಸಿರುವ ವಿಷ್ಣು ಈ ದಿವಸ ಏಳುವುದರಿಂದ ಇದನ್ನು ಉತ್ಥಾನ ದ್ವಾದಶೀ ಎಂದು ಕರೆಯುತ್ತಾರೆ. ವಿಷ್ಣು ದೇವಾಲಯಗಳಲ್ಲಿ ಪುಷ್ಪ ಬೃಂದಾ -ವನೋತ್ಸವವನ್ನು ಮಾಡುತ್ತಾರೆ. ರೇವತೀ ನಕ್ಷತ್ರದೊಡನೆ ಕೂಡಿದ ಈ ದ್ವಾದಶಿಯಲ್ಲಿ ವಿಶೇಷಬ್ರಾಹ್ಮಣಸಂತರ್ಪಣೆಯಿಂದ ಬ್ರಹ್ಮಲೋಕಪ್ರಾಪ್ತಿಯಾಗುತ್ತದೆ. ಈ ದಿವಸದಲ್ಲಿ ಉಡುಪಿ ಕ್ಷೇತ್ರದಲ್ಲಿ ಲಕ್ಷ ದೀಪೋತ್ಸವ ನಡೆಯುತ್ತದೆ.

ತುಳಸೀ ಮಹಿಮಾ – ತುಳಸೀಗಿಡವನ್ನು ಬೆಳೆಸುವುದರಿಂದ 1000 ಯಾಗ ಮಾಡಿದ ಫಲ ಪ್ರಾಪ್ತಿ, ಸ್ವರ್ಗಲೋಕಪ್ರಾಪ್ತಿ, ಶನಿಪೀಡಾನಿವೃತ್ತಿ. ಮುಖ, ಕಿವಿ, ತಲೆಗಳಲ್ಲಿ ತುಳಸೀಧಾರಣೆಯಿಂದ ಯಮಭಯಪರಿಹಾರ, ತುಳಸೀಮಾಹಾತ್ಮ್ಯ - ಶ್ರವಣದಿಂದ ಬ್ರಹ್ಮಲೋಕಪ್ರಾಪ್ತಿ.

ತುಳಸೀ ವಿವಾಹ ಮಾಡಿದ ನಂತರ ಯಜಮಾನನು – ತ್ವಂ ದೇವಿ ಮೇಽಗ್ರತೋ ಭೂಯಾಃ ತುಲಸೀ ದೇವಿ ಪಾರ್ಶ್ವತಃ । ದೇವಿ ತ್ವಂ ಪೃಷ್ಠತೋ ಭೂಯಾಸ್ತ್ವದ್ದಾನಾ-ನ್ಮೋಕ್ಷಮಾಪ್ನುಯಾಮ್ ॥ ಎಂದು ಹೇಳಿ ದೇವರ ಮುಂದೆ ದಕ್ಷಿಣೆಯನ್ನು ಇಟ್ಟು ಶಾಂತಿಸೂಕ್ತಗಳನ್ನು ವಿಷ್ಣುಸೂಕ್ತಗಳನ್ನು ಪಠಿಸಬೇಕು. ಅನಂತರ ದೇವರ ಮುಂದೆ –

ಇದಂ ವ್ರತಂ ಮಯಾ ದೇವ ಕೃತಂ ಪ್ರೀತ್ಯೈ ತವ ಪ್ರಭೋ। ನ್ಯೂನಂ ಸಂಪೂರ್ಣತಾಂ ಯಾತು ತ್ವತ್ಪ್ರಸಾದಾಜ್ಜನಾರ್ದನ ॥ ಎಂದು ಹೇಳಿ ಚಾತುರ್ಮಾಸ್ಯವ್ರತವನ್ನು ಕೃಷ್ಣಾರ್ಪಣ ಮಾಡಬೇಕು. 'ಉತ್ಥಾನದ್ವಾದಶೀ' ಎಂಬ ಪುಸ್ತಕದಿಂದ ಹೆಚ್ಚಿನ ವಿಚಾರವನ್ನು ತಿಳಿದುಕೊಳ್ಳಿರಿ.

## ಧನ್ವಂತರಿ ಜಯಂತಿ

ಕಾರ್ತಿಕಶುದ್ಧದ್ವಾದಶಿಯಂದು ಧನ್ವಂತರಿಜಯಂತೀ. ತೌಳವರಲ್ಲಿ ತುಲಾಮಾಸದ ಕೃಷ್ಣದ್ವಾದಶಿಯಂದು ಆಚರಿಸಲಾಗುತ್ತದೆ. ಕ್ಷೀರಸಾಗರಮಥನಕಾಲದಲ್ಲಿ ಜ್ಞಾನಮುದ್ರೆಯೊಂದಿಗೆ ಅಮೃತಕಲಶವನ್ನು ಹಿಡಿದು ಧನ್ವಂತರಿಯು ಆವಿರ್ಭವಿಸಿ, ಆಯುರ್ವೇದವನ್ನು ಪ್ರಸಾರಗೊಳಿಸಿದ್ದಾನೆ .

ಆಚಾರ್ಯಮಧ್ವರು ತಂತ್ರಸಾರಸಂಗ್ರಹದಲ್ಲಿ ಹೇಳಿದ ಧನ್ವಂತರಿಮಂತ್ರದ ಜಪ, ತರ್ಪಣ, ಹೋಮಗಳು ಪ್ರಶಸ್ತ. ಧನ್ವಂತರಿಯಾಗಿ ಅವತರಿಸಿದ ಭಗವಂತನನ್ನು ಚಂದ್ರಮಂಡಲದಲ್ಲಿ ಧ್ಯಾನಿಸಬೇಕು

ಚಂದ್ರೌಘಕಾಂತಿಮಮೃತೋರುಕರೈರ್ಜಗಂತಿ ಸಂಜೀವಯಂತಮಮಿತಾತ್ಮಸುಖಂ ಪರೇಶಮ್ । ಜ್ಞಾನಂ ಸುಧಾಕಲಶಮೇವ ಚ ಸಂದಧಾನಂ ಶೀತಾಂಶುಮಂಡಲಗತಂ ಸ್ಮರತಾತ್ಮಸಂಸ್ಥಮ್ ॥

ಹೀಗೆ ಧ್ಯಾನಿಸಿ ಪ್ರಾರ್ಥನೆ ಸಲ್ಲಿಸಿ ನಮಸ್ಕರಿಸಿ.

ಧನ್ವಂತರೇಽಂಗರುಚಿ ಧನ್ವಂತರೇರಿತರು ಧನ್ವನ್‌ಸ್ತರೀಭವ ಸುಧಾಭಾನ್ವಂತರಾವಸಥ ಮನ್ವಂತರಾಧಿ ಕೃತ ತನ್ವಂತರೌಷಧನಿಧೇ । ದನ್ವಂತರಂಗಶುಗುದನ್ವಂತಮಾಜಿಷು ವಿತನ್ವನ್ ಮಮಾಬ್ಧಿತನಯಾ ಸೂನ್ವಂತಕಾತ್ಮಹೃದ ತನ್ವಂತರಾವಯವ ತನ್ವಂತರಾರ್ತಿಜಲಧೌ ॥ ನಮೋ ಧನ್ವಂತರೇ ತುಭ್ಯಂ ಸಂಸೃತಿವ್ಯಾಧಿನಾಶನ । ಪದ್ಮಪತ್ರವಿಶಾಲಾಕ್ಷ ದೇವವೈದ್ಯ ನಮೋಽಸ್ತು ತೇ ॥ ನಮಾಮಿ ಧನ್ವಂತರಿಮಾದಿದೇವಂ ಸುರಾಸುರೈರ್ವಂದಿತ ಪಾದಪದ್ಮಮ್ । ಲೋಕೇ ಜರಾರುಗ್ಭಯಮೃತ್ಯು ನಾಶಂ ದಾತಾರಮೀಶಂ ವಿವಿಧೌಷಧೀನಾಂ ॥ ಅರಿಜಲಜಜಲೂಕಾರತ್ನಪೀಯೂಷ ಕುಂಭಪ್ರಕಟಿತ ಕರಕಾಂತಃ ಕಾಂತ ಪೀತಾಂಬರಾಢ್ಯಃ । ಸಿತವಸನ ವಿರಾಜನ್ಮೌಲಿ-

ರಾರೋಗ್ಯದಾಯೀ ಶತಮುಖ ಮಣಿವರ್ಣಃ ಪಾತು ಧನ್ವಂತರಿರ್ನಃ ॥ ಶಂಖಂ ಚಕ್ರಂ ಜಲೂಕಾಂ ದಧದಮೃತಘಟಂ ಚಾಪಿ ದೋರ್ಭಿಶ್ಚತುರ್ಭಿಃ ಸೂಕ್ಷ್ಮಸ್ವಚ್ಛಂ ಚ ಹೃದ್ಯಾಂಶುಕಪರಿವಿಲಸನ್ಮೌಲಿಂ ಅಂಭೋಜ ನೇತ್ರಮ್ । ಕಾಲಾಂಭೋದೋ-ಜ್ವಲಾಂಗಂ ಕಟಿತಟ ವಿಲಸಚ್ಚಾರು ಪೀತಾಂಬರಾಢ್ಯಂ ವಂದೇ ಧನ್ವಂತರೀಂ ತಂ ನಿಖಿಲ ಗದವನ ಪ್ರೌಢದಾವಾಗ್ನಿಲೀಲಮ್ ॥ ಶಂಖಂ ಚಕ್ರಮುಪರ್ಯಧಶ್ಚ-ಕರಯೋರ್ದಿವ್ಯೌಷಧಂ ದಕ್ಷಿಣೇ ವಾಮೇನಾನ್ಯ ಕರೇಣ ನಿರ್ಮಲ ಸುಧಾಕುಂಭಂ ಜಲೂಕಾವಲಿಮ್ । ಬಿಭ್ರಾಣಃ ಕರುಣಾಕರಃ ಶುಭಕರಃ ಸರ್ವಾಮಯ ಧ್ವಂಸಕಃ ಸರ್ವಂ ಮೇ ದುರಿತಂ ಛಿನತ್ತು ಭಗವಾನ್ ಧನ್ವಂತರಿಃ ಸಂತತಮ್ ॥

## ಧನ್ವಂತರಿ ಸುಳಾದಿ ರಚನೆ - ವಿಜಯದಾಸರು

### ಧ್ರುವತಾಳ

ಆಯು ವೃದ್ಧಿಯಾಗೋದು ಶ್ರೇಯಸ್ಸು ಬರುವುದು । ಕಾಯಾ ನಿರ್ಮಲಿನಾ ಕಾರಣವಾಹುದೋ । ಮಾಯಾ ಹಿಂದಾಗುವುದು ನಾನಾರೋಗದ ಬೀಜ । ಬೇಯಿಸಿ ಕಳೆವುದು ವೇಗಾದಿಂದ । ನಾಯಿಮೊದಲಾದ ಕುತ್ಸಿತದೇಹ ನಿ- । ಕಾಯವ ತೆತ್ತು ದುಷ್ಕರ್ಮದಿಂದ । ಕ್ರೀಯಮಾಣ ಸಂಚಿತ ಭರಿತವಾಗಿದ್ದ ದುಃಖ । ಹೇಯ ಸಾಗರದೊಳು ಬಿದ್ದು ಬಳಲೀ । ನೋಯಿಸಿಕೊಂಡು ನೆಲೆಗಾಣದೆ ಒಮ್ಮೆ ತನ್ನ । ಬಾಯಿಲಿ ವೈದ್ಯಮೂರ್ತಿ ಶ್ರೀಧನ್ವಂತ್ರಿ । ರಾಯಾ ರಾಜೌಷಧಿ ನಿಯಾಮಕ ಕರ್ತ । ಕ್ರೀಯರಸನೆಂದು ತುತಿಸಲಾಗಿ । ತಾಯಿವೊದಗಿ ಬಂದು ಬಾಲನ್ನ ಸಾಕಿದಂತೆ । ನೋಯಗೊಡದೆ ನಮ್ಮನ್ನು ಪಾಲಿಪಾ । ಧೇಯಾ ದೇವಾದಿಗಳಿಗೆ ಧರ್ಮಜ್ಞ ಗುಣಸಾಂದ್ರ । ಶ್ರೇಯಸ್ಸು ಕೊಡುವನು ಭಜಕರಿಗೆ । ಮಾಯಾಮಾತ್ರದಿಂದ ಜಗವೆಲ್ಲ ವ್ಯಾಪಿಸಿ ಸ- । ನ್ಯಾಯವಂತನಾಗಿ ಚೇಷ್ಟೆ ಮಾಳ್ಪಾ । ವಾಯುವಂದಿತ ನಿತ್ಯ ವಿಜಯವಿಟ್ಠಲರೇಯಾ । ಪ್ರಿಯನು ಕಾಣೊ ನಮಗೆ ಅನಾದಿರೋಗ ಕಳೆವಾ ॥1

### ಮಟ್ಟತಾಳ

ಧನ್ವಂತ್ರಿ ಶ್ರೀ ಧನ್ವಂತ್ರಿ ಎಂದು । ಸನ್ನುತಿಸಿ ಸತತ ಭಿನ್ನ ಜ್ಞಾನದಿಂದ । ನಿನ್ನವ ನಿನ್ನವನೊ ಘನ್ನತಿಯಲಿ ನೆನೆದ । ಮನ್ನುಜ ಭುವನದೊಳು ಧನ್ಯನು ಧನ್ಯನೆನಿಸಿ । ಚನ್ನ

ಮೂರುತಿ ಸುಪ್ರಸನ್ನ ವಿಜಯವಿಟ್ಠ- । ಲನ್ನ ಸತ್ಯವೆಂದು ಬಣ್ಣಿಸು ಬಹುವಿಧದಿ ॥2॥

ತ್ರಿವಿಡಿತಾಳ

ಶಶಿಕುಲೋದ್ಭವ ದೀರ್ಘತಮನಂದನ ದೇವಾ । ಶಶಿವರ್ನ ಪ್ರಕಾಶ ಪ್ರಭುವೆ ವಿಭುವೆ । ಶಶಿಮಂಡಲಸಂಸ್ಥಿತ ಕಲಶ ಕಲಶಪಾಣಿ । ಬಿಸಜಲೋಚನ ಆಶ್ವಿನೇಯ ವಂದ್ಯಾ । ಶಶಿಗರ್ಭ ಭೂರುಹ ಲತೆಪೊದೆತಾಪ ಓ- । ಡಿಸುವಿ ಔಷಧಿ ತುಲಸಿ ಜನಕ । ಅಸುರ ನಿರ್ಜರತತಿ ನೆರೆದು ಗಿರಿಯ ತಂದು । ಮಿಸುಕದಲೆ ಮಹೋದಧಿ ಮರ್ದಿಸಲಾಗಿ । ನಸುನಗುತ ಪುಟ್ಟಿದೆ ಪೀಯೂಷಘಟಧರಿಸಿ । ಅಸಮದೈವನೆ ನಿನ್ನ ಮಹಿಮೆಗೆ ನಮೋ । ಬಿಸಜ ಸಂಭವ ರುದ್ರ ಮೊದಲಾದ ದೇವತಾ- । ಋಷಿನಿಕರ ನಿನ್ನ ಕೊಂಡಾಡುವರೊ । ದಶದಿಶದೊಳು ಮೆರೆವ ವಿಜಯವಿಟ್ಠಲ ಭಿಷ್ಕಾ । ಅಸು ಇಂದ್ರಿಯಂಗಳ ರೋಗ ನಿವಾರಣ ॥3॥

ಅಟ್ಟತಾಳ

ಶರಣು ಶರಣು ಧನ್ವಂತರಿ ತಮೋಗುಣ ನಾಶ । ಶರಣು ಆರ್ತಜನ ಪರಿಪಾಲಕ ದೇವ- । ತರುವೆ ಭವತಾಪ ತರುಣ ದಿತಿಸುತ । ಹರಣ ಮೋಹಕ ಲೀಲಾ ಪರಮ । ಪೂರ್ಣ ಬ್ರಹ್ಮಬ್ರಹ್ಮ ಉದ್ಧಾರಕ । ಉರು ಪರಾಕ್ರಮ ಉರಗಶಾಯಿ । ವರಕಿರೀಟ ಮಹಾಮಣಿ ಕುಂಡಲ ಕರ್ನ । ಮಿರುಗುವ ಹಸ್ತಕಂಕಣ ಹಾರಪದಕ ತಾಂ- । ಬರ ಕಾಂಚೀ ಪೀತಾಂಬರ ಚರಣ ಭೂಷಾ । ಸಿರಿವತ್ಸಲಾಂಛನ ವಿಜಯವಿಟ್ಠಲ- ರೇಯಾ । ತರುಣಗಾತುರ ಜ್ಞಾನಮುದ್ರಾಂಕಿತ ಹಸ್ತಾ ॥4॥

ಆದಿತಾಳ

ಏಳುವಾಗಲಿ ಮತ್ತೆ ತಿರುಗಿ ತಿರುಗುತಲಿ । ಬೀಳುವಾಗಲಿ ನಿಂತು ಕುಳ್ಳಿರುವಾ- ಗಲಿ । ಹೇಳುವಾಗಲಿ ಮಾತು ಕೇಳುವಾಗಲಿ ಕರೆದು । ಪೇಳುವಾಗಲಿ ಪೋಗಿ ಸತ್ಕರ್ಮಮಾಡುವಾಗ । ಬಾಳುವಾಗಲಿ ಭೋಜನ ನಾನಾ ಷಡ್ರಸ ಸಂ-। ಮ್ಮೇಳವಾಗಲಿ ಮೇಲು ಪುತ್ರಾದಿ ಒಡನೊಡನೆ । ಖೇಳವಾಗಿ ಮನುಜ ಮಾರ್ಯಾದೆ ನಿನ್ನಯ । ನಾಲಿಗೆ ಕೊನೆಯಲ್ಲಿ ಧನ್ವಂತರಿ ಎಂದು ಒಮ್ಮೆ । ಕಾಲಅಕಾಲದಲ್ಲಿ ಸ್ಮರಿಸಿದರೆ ಅವಗೆ । ವ್ಯಾಳಿ ವ್ಯಾಳಿಗೆ ಬಾಹ ಭವಬೀಜ ಪರಿ-

ಹಾರ । ನೀಲಮೇಘಶ್ಯಾಮ ವಿಜಯವಿಟ್ಠಲರೇಯಾ । ವಾಲಗ ಕೊಡುವನು ಮುಕ್ತರ ಸಂಗದಲಿ॥5॥

ಜತೆ

ಧಂ ಧನ್ವಂತರಿ ಎಂದು ಪ್ರಣವ ಪೂರ್ವಕದಿಂದ
ವಂದಿಸಿ ನೆನೆಯಲು ವಿಜಯವಿಟ್ಠಲ ಒಲಿವಾ ॥6॥

## ಧನ್ವಂತರಿ

ಧನ್ವಂತರಿಯ ಬಗ್ಗೆ ಪ್ರಶ್ನೋತ್ತರರೂಪದಲ್ಲಿ ಸಂಕ್ಷೇಪವಾಗಿ ತಿಳಿದುಕೊಳ್ಳೋಣ.

ಒಬ್ಬರ ಪ್ರಶ್ನೆ : ಮಾಟ ಮಂತ್ರಗಳಿಂದ ತತ್ತರಿಸಿ ಹೋಗಿರುವೆ. ನಮ್ಮ ಮನೆಯ ಕಷ್ಟ ಯಾರ ಬಳಿ ತಾನೆ ಹೇಳಿಕೊಳ್ಳಲಿ ! ದುಡ್ಡು ದುಗ್ಗಾಣಿಗೆ ಕೊರತೆ ಇಲ್ಲವಾದರೂ ಕೃತ್ರಿಮ ಪ್ರಯೋಗಗಳಿಂದ ನೂರಾರು ಅನಾರೋಗ್ಯಗಳು, ಹತ್ತಾರು ಮಾನಸಿಕ-ರೋಗಗಳು ಜೀವನವೇ ಬೇಡವೆನ್ನುವಷ್ಟು ಜಿಗುಪ್ಸೆ ಬಂದಿದೆ. ಏನಾದರೂ ಉಪಾಯ ಹೇಳಿ?

ಪರಿಹಾರ : ಇಷ್ಟು ಕಂಗಾಲಾಗಬೇಕಾಗಿಲ್ಲ. ಸುಲಭ-ದಾರಿಯಿದೆ. ಜೀವನ ಸಾರ್ಥಕಕ್ಕಾಗಿಯೇ ಇಂಥ ಕಷ್ಟಗಳು ಎದುರಾಗುತ್ತವೆ. ಪೂರ್ಣ ವಿಶ್ವಾಸವಿಟ್ಟು ಧನ್ವಂತರಿ ಮಹಾಮಂತ್ರವನ್ನು ಒಂದುಲಕ್ಷಬಾರಿ ಜಪ ಮಾಡಿರಿ. ಹತ್ತುಸಾವಿರ ಬಾರಿ ಉತ್ತರಣೆಗಿಡದ ಸಮಿತ್ತಿನಿಂದ ಎರಡು ಸಾವಿರ ಬಾರಿ ಅಮೃತಬಳ್ಳಿಯಿಂದ ಆಹುತಿ ನೀಡಿ ಧನ್ವಂತರಿ ಹೋಮ ಮಾಡಿರಿ. ಯಾವ ಕೃತ್ರಿಮಗಳೂ ನಿಮ್ಮ ಹತ್ತಿರ ಬರು-ವುದಿಲ್ಲ. ಎಲ್ಲಾ ಮಾಟ-ಮಂತ್ರಗಳಿಗೆ ಉರಿಯುವ ಪ್ರಜ್ವಲ ಬೆಂಕಿಯಂತೆ ನೀವು ಕಾಣಿಸಿಕೊಳ್ಳುವಿರಿ. 'ಭೂತಾಭಿಚಾರಶಾಂತ್ಯರ್ಥಮಪಾಮಾರ್ಗಾಹುತಿಕ್ರಿಯಾ । ದ್ವಿಗುಣಾಽಮೃತಯಾ ಪಶ್ಚಾತ್ ಕೇವಲೇನ ಘೃತೇನ ವಾ ॥'

ಇನ್ನೊಬ್ಬರ ಪ್ರಶ್ನೆ : ನನಗೆ ಹಲವಾರು ವರ್ಷಗಳಿಂದ ತಲೆನೋವು ಮತ್ತು ವಿಪರೀತ ಪಿತ್ತದ ಬಾಧೆ. ಎಲ್ಲಾ ಚಿಕಿತ್ಸೆ ಆದರೂ ಪರಿಹಾರ ದೊರೆತಿಲ್ಲ. ಮತ್ತು ನಮ್ಮ ಹಿರಿಯರೊಬ್ಬರಿಗೆ ವಾರಕ್ಕೆ ಎರಡು ಬಾರಿ ಜ್ವರ ಕಾಡುತ್ತಿದೆ. ಇದಕ್ಕೆ ಏನಾದರೂ ಪರಿಹಾರ ತಿಳಿಸಿರಿ.

ಪರಿಹಾರ : 'ಜ್ವರ-ದಾಹಾದಿ-ಶಾಂತ್ಯರ್ಥಂ ತರ್ಪಯೇನ್ಮನುನಾಽಮುನಾ । ಧ್ಯಾತ್ವಾ ಹರಿಂ ಜಲೇ ಸಪ್ತ-ರಾತ್ರಾಜ್ಜೂರ್ತಿರ್ವಿನಶ್ಯತಿ ॥' ಪ್ರತಿನಿತ್ಯ (ದಿನಕ್ಕೆ ಎಂಟು ಸಾವಿರದಂತೆ ಅಥವಾ ಮೂರು ಸಾವಿರದಂತೆ) ಧನ್ವಂತರಿ ಮಂತ್ರವನ್ನು ಏಳು ದಿವಸಗಳ ಕಾಲ ಜಪ ಮಾಡಿ ತರ್ಪಣ ಕೊಡಿರಿ. ರೋಗಗಳು ಹೆಸರೇ ಇಲ್ಲದಂತೆ ಮಾಯಾವಾಗುತ್ತವೆ.

ಮತ್ತೊಬ್ಬರ ಪ್ರಶ್ನೆ : ನನ್ನ ಜಾತಕದಲ್ಲಿ ಇನ್ನು ಕೇವಲ ಒಂದೇ ವರ್ಷ ಆಯುಷ್ಯ -ವಿದೆ ಎಂದು ಜೌತಿಷ್ಕರು ಹೇಳಿದ್ದಾರೆ. ಹೆದರಿಕೆಯಾಗುತ್ತಿದೆ. ಏನಾದರೂ ದಾರಿ ತೋರಿಸಿ ?

ಪರಿಹಾರ : ಹಸುವಿನ ಹಾಲು ಮತ್ತು ತುಪ್ಪಗಳಿಂದ ಗರಿಕೆಯಲ್ಲಿ ಧನ್ವಂತರಿ-ಮಂತ್ರದಿಂದ ಜನ್ಮನಕ್ಷತ್ರದ ದಿವಸ ಹೋಮ ಮಾಡಬೇಕು. ಇದರಿಂದ ಆಯುಷ್ಯವು ಅಭಿವೃದ್ಧಿಯಾಗಿ ನಿಮ್ಮ ಜಾತಕವನ್ನು ನೀವೇ ತಿದ್ದುವಿರಿ. 'ಆಯುರ್ವಿವೃದ್ಧಯೇ ನಿತ್ಯಂ ಜನ್ಮ-ನಕ್ಷತ್ರ ಏವ ವಾ । ಚತುಶ್ಚತುರ್ಭಿರ್ದೂರ್ವಾಭಿಃ ಕ್ಷೀರಾಜ್ಯಾಕ್ತಾಭಿರಿಷ್ಯತೇ'॥

ಅನೇಕರ ಪ್ರಶ್ನೆ : 'ನನಗೆ ವಿದ್ಯೆಯಿಲ್ಲ' 'ನನಗೆ ದುಃಖ ತಪ್ಪಿದ್ದಲ್ಲ' 'ನನಗೆ ಯಾವಾಗಲೂ ಭಯ' 'ನನಗೆ ರೋಗವಿಲ್ಲದ ದಿವಸವಿಲ್ಲ' 'ನನಗೆ ಊಟದಲ್ಲಿ ಮದ್ದು ಹಾಕಿದ್ದಾರೆ' ಈ ಸಮಸ್ಯೆಗಳಿಗೆ ಉತ್ತರವೇ ಸಿಗುತ್ತಿಲ್ಲ ?

ಪರಿಹಾರ : ಧನ್ವಂತರಿ ಮಂತ್ರವನ್ನು ಪ್ರತಿನಿತ್ಯ ಯಥಾಶಕ್ತಿ ಶ್ರದ್ಧೆಯಿಂದ ಜಪ ಮಾಡಬೇಕು. ಇದರಿಂದ ಅಜ್ಞಾನ, ದುಃಖ, ಭಯ,ರೋಗ, ಊಟದಲ್ಲಿ ಹಾಕುವ ಮದ್ದು, ಇವೆಲ್ಲವೂ ಕೂಡ ಪರಿಹಾರವಾಗಿ ಜೀವನದಲ್ಲಿ ಸುಖ ದೊರೆಯುತ್ತದೆ. ಅಷ್ಟೇ ಅಲ್ಲದೆ ಮಾನಸಿಕವಾದ ಹುಚ್ಚು. ಮನಸ್ಸಿನಲ್ಲಿ ಬರುವ ಗೊಂದಲಗಳು ಇವುಗಳೂ ಕೂಡ ಧನ್ವಂತರಿ ಮಂತ್ರದಿಂದ ಪರಿಹಾರವಾಗುತ್ತವೆ. 'ಅಜ್ಞಾನ-ದುಃಖ-ಭಯ-ರೋಗ ಮಹಾ-ವಿಷಾಣಿ ಯೋಗೋಽಯಾಮಾಶು ವಿನಿಹತ್ಯ ಸುಖಂ ಚ ದದ್ಯಾತ್'

ಒಬ್ಬ ರೋಗಿಯ ಪ್ರಶ್ನೆ : ನನಗೆ ಜಪ ಮಾಡಲು ಸಾಧ್ಯವಾಗುವುದಿಲ್ಲ. ರೋಗವು ಉಲ್ಬಣಾವಸ್ಥೆಯಲ್ಲಿದೆ. ನಾನೇನು ಮಾಡಲಿ?

ಪರಿಹಾರ : ನೀವೇ ಜಪ ಮಾಡಬೇಕಾಗಿಲ್ಲ. ಒಬ್ಬ ಮಂತ್ರೋಪಾಸಕನು ಅಮೃತವನ್ನು ಸುರಿಸುತ್ತಿರುವ ಧನ್ವಂತರಿಯನ್ನು ಮನದಲ್ಲಿ ನೆನೆದು ರೋಗಿಯ ತಲೆಯ ಮೇಲೆ ಕೈಯನ್ನಿಟ್ಟು ಧನ್ವಂತರಿಯ ಮಹಾಮಂತ್ರವನ್ನು ಉಚ್ಚಾರ ಮಾಡಿದರೆ ಸಾಕು. ಸಂಶಯವಿಲ್ಲದೆ ರೋಗವು ಪರಿಹಾರವಾಗುತ್ತದೆ. ರೋಗಕ್ಕೆ ಕಾರಣವಾಗಿರುವ ಪಾಪವೂ ದೂರ ಓಡುತ್ತದೆ. ಆ ಮಂತ್ರೋಪಾಸಕನಲ್ಲಿ ಹರಿಭಕ್ತಿ ಹಾಗೂ ಶ್ರದ್ಧೆಗಳು ಇರುವುದು ಬಹಳ ಮುಖ್ಯ. 'ಧ್ಯಾತ್ವೈವ ಹಸ್ತ-ತಳ-ಗಂ ಸ್ವಮೃತಂ ಸ್ರವಂತಂ ದೇವಂ ಸ ಯಸ್ಯ ಶಿರಸಿ ಸ್ವ-ಕರಂ ನಿಧಾಯ ಆವರ್ತಯೇನ್ - ಮನುಮಿಮಂ ಸ ಚ ವೀತರೋಗಃ ಪಾಪಾದಪೈತಿ ಮನಸಾ ಯದಿ ಭಕ್ತಿ ನಮ್ರಃ ॥'

ಒಬ್ಬ ವೈದ್ಯನ ಪ್ರಶ್ನೆ : ವೈದ್ಯಕೀಯ ಶಿಕ್ಷಣವನ್ನು ಅಧ್ಯಯನ ಮಾಡಿದ್ದೇನೆ. ಯಾವ ರೋಗಕ್ಕೆ ಯಾವ ಔಷಧಿ ಎಂಬ ಪರಿಜ್ಞಾನವು ನನಗಿದೆ. ಆದರೂ ಕೂಡ ರೋಗಿಗಳಿಗೆ ನಾನು ನೀಡುವ ಚಿಕಿತ್ಸೆ ಗುಣವಾಗುತ್ತಿಲ್ಲ. ಆದ್ದರಿಂದ ಹೆಚ್ಚು ರೋಗಿಗಳು ನನ್ನ ಬಳಿ ಬರುವುದನ್ನು ನಿಲ್ಲಿಸಿದ್ದಾರೆ. ಇದಕ್ಕೇನು ಮಾಡಬೇಕು?

ಪರಿಹಾರ : ಪ್ರತಿನಿತ್ಯ ಸಾವಿರ ಬಾರಿ ಧನ್ವಂತರಿ ಮಂತ್ರವನ್ನು ಜಪ ಮಾಡಿ. ಅಂಗೈಯಲ್ಲಿ ಔಷಧಿಯನ್ನು ಹಿಡಿದು ಧನ್ವಂತರಿಮಂತ್ರವನ್ನು ಒಮ್ಮೆ ಉಚ್ಚರಿಸಿ ರೋಗಿಗೆ ನೀಡಿರಿ. ನೀವು ನೀಡುವ ಸಾಮಾನ್ಯ ಔಷಧಿಯಿಂದಲೂ ಕೂಡ ಮಹಾರೋಗಗಳು ದೂರ ಓಡುತ್ತವೆ. ಹೆಚ್ಚಿನ ರೋಗಿಗಳಿಗೆ ಸೇವೆಯನ್ನು ಒದಗಿಸುವ ಸೌಭಾಗ್ಯವು ನಿಮ್ಮ ಪಾಲಿನದ್ದಾಗುತ್ತದೆ.

ಸ್ತ್ರೀಯರ ಪ್ರಶ್ನೆ : ನೀವು ನೀಡುತ್ತಿರುವ ಪರಿಹಾರಗಳೆಲ್ಲವೂ ಮನಸ್ಸಿಗೆ ಬಹಳ ಹಿತವನ್ನುಂಟು ಮಾಡುತ್ತಿವೆ. ಆದರೆ ನಾವು ಸ್ತ್ರೀಯರಾದ್ದರಿಂದ ಧನ್ವಂತರಿಮಂತ್ರವನ್ನು ಜಪ ಮಾಡಲು ಅರ್ಹತೆಯಿಲ್ಲ. ನಾವೇನು ಮಾಡಬೇಕು. ತಿಳಿಸಿರಿ?

ಪರಿಹಾರ : ನೀವೇ ಜಪ ಮಾಡಬೇಕೆಂದೇನಿಲ್ಲ. ಧನ್ವಂತರಿ ಸುಳಾದಿಯನ್ನು ಹೇಳಿಕೊಂಡು ಸಿದ್ಧಿಯನ್ನು ಪಡೆದುಕೊಳ್ಳಬಹುದು. ಅಥವಾ ನಿಮ್ಮ ಪತಿಯ ಮೂಲಕ ಜಪವನ್ನು ಮಾಡಿಸಿ ಅವರ ಮೂಲಕವೂ ರೋಗವನ್ನು ಪರಿಹಾರ ಮಾಡಿಕೊಳ್ಳಬಹುದು. ಅಥವಾ ನಿಮ್ಮ ಪತಿಯ ಬಳಿಯೇ ಪ್ರಣವವಿಲ್ಲದ

ಧನ್ವಂತರಿಯ ಜಪವನ್ನು ಉಪದೇಶ ಪಡೆದು ಜಪಿಸಬಹುದು. ಉದ್ದೇಶವು ಸ್ವಚ್ಛವಾಗಿದ್ದರೆ ಮಾರ್ಗಗಳು ನೂರು.

**ಪ್ರಶ್ನೆ : ಯಾವ ಮಂತ್ರಕ್ಕೂ ಇಲ್ಲದ ಮಹಿಮೆಯನ್ನು ಧನ್ವಂತರಿಮಂತ್ರಕ್ಕೆ ಹೇಳುತ್ತಿರುವಿರಿ ! ಇದಕ್ಕೇನು ಕಾರಣ?**

ಉತ್ತರ: ತಂತ್ರಸಾರಸಂಗ್ರಹದಲ್ಲಿ ಶ್ರೀಮದಾಚಾರ್ಯರು ಧನ್ವಂತರಿ- ಮಂತ್ರದ ಬಗ್ಗೆ ಎಲ್ಲಿಲ್ಲದ ಮಹಿಮೆಯನ್ನು ಹೇಳಿದ್ದಾರೆ. ಸಕಲ ಮಂತ್ರಗಳ ಶಿರೋಮಣಿ ಎಂದು ಕೊಂಡಾಡಿದ್ದಾರೆ. 'ಧನ್ವಂತರೋ ಮಹಾಮಂತ್ರಃ ಸಂಸೃತಿವ್ಯಾಧಿನಾಶನಃ' ಎನ್ನುವ ಮೂಲಕ ಧನ್ವಂತರಿಮಂತ್ರವು ಕ್ಷಣಿಕ ರೋಗಗಳನ್ನಷ್ಟೇ ಅಲ್ಲದೆ ಸಂಸಾರರೋಗವನ್ನೇ ಪರಿಹಾರ ಮಾಡುವ ಸಾಮರ್ಥ್ಯವುಳ್ಳದ್ದೆಂದು ಮುಕ್ತಕಂಠದಿಂದ ಪ್ರಶಂಸೆ ಮಾಡಿ-ದ್ದಾರೆ. ಅಷ್ಟಮಹಾಮಂತ್ರಗಳ ನಂತರದ ಸ್ಥಾನ ಧನ್ವಂತರಿ ಮಂತ್ರದ್ದು.

**ಪ್ರಶ್ನೆ : ಧನ್ವಂತರಿಯ ಮಂತ್ರವನ್ನು ಜಪ ಮಾಡುವಾಗ ಹೇಗೆ ಧ್ಯಾನ ಮಾಡಬೇಕು?**

ಉತ್ತರ : ಅನಂತ ಚಂದ್ರರ ಕಾಂತಿಯಿಂದ ಕಂಗೊಳಿಸುತ್ತಿರುವ ಅಮೃತಕಿರಣ-ಗಳನ್ನು ಹೊರಸೂಸುವ ಮೂಲಕ ಜಗತ್ತಿಗೆ ಜೀವಕಳೆಯನ್ನು ತುಂಬುತ್ತಿರುವನು. ಅಪಾರ ಸುಖಸ್ವರೂಪನಾಗಿರುವನು. ಎಲ್ಲರಿಗೂ ಅಧಿಪತಿಯಾಗಿರುವನು. ಅಪ್ರತಿಮಸುಖಸ್ವರೂಪನಾಗಿ ಎಲ್ಲರಿಗೂ ನಿಯಾಮಕನಾಗಿರುವನು ಬಲಗೈಯಲ್ಲಿ ಜ್ಞಾನ ಮುದ್ರೆಯನ್ನು ಎಡಗೈಯಲ್ಲಿ ಅಮೃತಕಲಶವನ್ನು ಪಿಡಿದು ಚಂದ್ರಮಂಡಲದಲ್ಲಿ ನೆಲೆಸಿರುವನು.

**ಪ್ರಶ್ನೆ : ಧ್ಯಾನದ ಅಧಿಷ್ಠಾನ ಯಾವುದು ಮತ್ತು ಧ್ಯಾನದ ಕ್ರಮ ಹೇಗೆ?**

ಉತ್ತರ : 'ಆತ್ಮಸಂಸ್ಥಮ್' ಎಂಬ ಮಾತಿನಿಂದ ಶ್ರೀಮದಾಚಾರ್ಯರು ಧ್ಯಾನದ ಅಧಿಷ್ಠಾನವನ್ನು ತಿಳಿಸಿದ್ದಾರೆ. ನಮ್ಮ ಹೃದಯದಲ್ಲಿ ಅಗ್ನಿಮಂಡಲ ಚಂದ್ರಮಂಡಲ ಸೂರ್ಯಮಂಡಲಗಳಿವೆ. ಹೃದಯದಲ್ಲಿರುವ ಸೂರ್ಯಮಂಡಲದಲ್ಲಿ ಸೂರ್ಯ-ನಾರಾಯಣನನ್ನು ಚಿಂತಿಸಿ ಗಾಯಿತ್ರಿಜಪವನ್ನು ಮಾಡುವಂತೆ ಹೃದಯದಲ್ಲಿರುವ ಚಂದ್ರಮಂಡಲದಲ್ಲಿ ಧನ್ವಂತರಿಯನ್ನು ಚಿಂತನೆ ಮಾಡಿ ಜಪವನ್ನು ಆಚರಿಸಬೇಕು.

ಹೃದಯದ ಚಂದ್ರಮಂಡಲದಲ್ಲಿ ನೆಲೆಸಿರುವ ಧನ್ವಂತರಿಯು 72 ಸಾವಿರ ನಾಡಿಗಳಲ್ಲಿ ತನ್ನ ಬೆಳಕನ್ನು ಸೂಸುತ್ತಾ ನಮ್ಮ ಸಮಸ್ತ ದೇಹವನ್ನು ಅಮೃತಮಯವನ್ನಾಗಿ ಮಾಡುವನು. ಅಷ್ಟೇ ಅಲ್ಲದೆ ಕೇವಲ ಹೃದಯದಲ್ಲಿ ಮಾತ್ರವಲ್ಲದೆ ಶಿರಸ್ಸಿನಲ್ಲಿ ಹುಬ್ಬುಗಳ ನಡುವೆ ಕಿರುನಾಲಿಗೆಯಲ್ಲಿ ಹೊಕ್ಕಳಿನಲ್ಲಿ ಮತ್ತು ಕೆಳಭಾಗದಲ್ಲಿ ಇರುವ ಷಟ್‌ಚಕ್ರಗಳಲ್ಲಿಯೂ ಇದೇ ಧನ್ವಂತರಿಯು ನೆಲೆಸಿ ಅಮೃತಧಾರೆಯನ್ನು ಸುರಿಸುತ್ತಿ-ರುವನು.

**ಪ್ರಶ್ನೆ : ಅಬ್ಬ!! ಏನಾಶ್ಚರ್ಯ ! ಧನ್ವಂತರಿಯು ಹೃದಯದಲ್ಲಿ ಮಾತ್ರವಲ್ಲದೆ ಆರು ಸ್ಥಳಗಳಲ್ಲಿ ನೆಲೆಸಿರುವನೇ?**

ಉತ್ತರ : ಹೌದು ! ಇದಕ್ಕಿಂತ ಅದ್ಭುತ ಮತ್ತೊಂದಿಲ್ಲ. ಷಟ್‌ಚಕ್ರಗಳಲ್ಲಿಯೇ ನೆಲೆಸಿರುವ ಧನ್ವಂತರಿಯ ಮಹಿಮೆಯನ್ನು ಅರಿತು ಆಧಿ-ವ್ಯಾಧಿಗಳನ್ನು ಪರಿಹರಿಸಿ-ಕೊಳ್ಳಬೇಕು.

**ಪ್ರಶ್ನೆ: ಧನ್ವಂತರಿಯ ರೂಪ ಹೇಗಿದೆ? ಎರಡು ಕೈಗಳಲ್ಲಿ ಚಕ್ರಗಳನ್ನು ಮತ್ತೆರೆಡು ಕೈಯಲ್ಲಿ ಅಮೃತದ ಸವಟು ಹಾಗೂ ಅಮೃತಕಲಶ ಹುಲ್ಲುಗಳನ್ನು ಧರಿಸಿರುವನಲ್ಲವೆ?**

ಉತ್ತರ : ಇದಕ್ಕೂ ಕೂಡ 'ಏವ ಚ' ಎಂಬ ಪದದಿಂದ ಶ್ರೀಮದಾಚಾರ್ಯರೇ ಉತ್ತರಿಸಿದ್ದಾರೆ. ಧನ್ವಂತರಿ ಎಡಗೈಯಲ್ಲಿ ಅಮೃತಕಲಶವನ್ನು ಬಲಗೈಯಲ್ಲಿ ಜ್ಞಾನ-ಮುದ್ರೆಯನ್ನು ಧರಿಸಿದ್ದಾನೆ. ಎರಡು ಕೈಗಳನ್ನು ಮಾತ್ರ ಧ್ಯಾನ ಮಾಡಲು ಶ್ರೀಮದಾ-ಚಾರ್ಯರು ಹೇಳಿದ್ದಾರೆ. ನಾಕು ಕೈಗಳುಳ್ಳ ಧನ್ವಂತರಿಯನ್ನು ಧ್ಯಾನ ಮಾಡಲು ಯಾವುದೇ ಆಧಾರವಿರುವುದಿಲ್ಲ.

**ಪ್ರಶ್ನೆ : ಧನ್ವಂತರಿಯ ಅವತಾರ ನಡೆದದ್ದು ಎಲ್ಲಿ ಮತ್ತು ಯಾವಾಗ?**

ಉತ್ತರ : ದೇವತೆಗಳು ಮತ್ತು ಅಸರರು ಸೇರಿ ಕ್ಷೀರಸಮುದ್ರ ಮಥನ ಮಾಡಿ-ದಾಗ ಅಮೃತವನ್ನು ಧರಿಸಿ ಬಂದವನೇ ಧನ್ವಂತರಿ. ಅವನು ಅವತರಿಸಿದ ದಿವಸ ಆಶ್ವೀನಮಾಸದ ಜಲಪೂರಣ-ತ್ರಯೋದಶಿಯಂದು ಧನ್ವಂತರಿಜಯಂತಿಯನ್ನು ಧನ್ವಂತರಿಯ ಆರಾಧಕರು ವಿಶೇಷವಾಗಿ ಆಚರಣೆ ಮಾಡುತ್ತಾರೆ.

## ಪ್ರಶ್ನೆ : ಧನ್ವಂತರಿಯ ಕಥೆಯನ್ನು ತಿಳಿಸುವಿರಾ ?

ಉತ್ತರ : ಕ್ಷೀರಸಮುದ್ರದ ಮಥನದಲ್ಲಿ ಅಮೃತವನ್ನು ಹಿಡಿದು ಉದಯಿಸಿದವನೇ 'ಧನ್ವಂತರಿ'. ಅಮೃತವನ್ನು ತಂದಮೇಲೆ ತಂದೆಯಾದ ಮಹಾವಿಷ್ಣುವಿನ ಬಳಿ ಧನ್ವಂತರಿಯು ಕೇಳುತ್ತಾನೆ - 'ನನಗೆ ಯಜ್ಞಭಾಗದಲ್ಲಿ ಅವಕಾಶ ಕೊಡು' 'ನನಗೆ ಲೋಕದಲ್ಲಿ ಸ್ಥಾನ-ಮಾನಗಳನ್ನು ನೀಡು'. (ಅಸುರಮೋಹಕ್ಕಾಗಿ ಮಾಡಿದ ನಾಟಕವಿದು)

ಧನ್ವಂತರಿಯು ಕೇಳಿದಂತೆ ತಂದೆಯಾದ ಮಹಾವಿಷ್ಣುವು ವರ ನೀಡುತ್ತಾನೆ - 'ಮುಂದೆ ನೀನು ಕಾಶಿರಾಜನ ವಂಶದಲ್ಲಿ ಅವತರಿಸುವಿ. ಆಗ ನಿನಗೆ ಯಜ್ಞದಲ್ಲಿ ಭಾಗವು ದೊರೆಯುತ್ತದೆ. ಮತ್ತು ಲೋಕದಲ್ಲಿ ಆಯುರ್ವೇದಶಾಸ್ತ್ರದ ಮೂಲ-ಪ್ರವರ್ತಕ - ಗುರುವೆಂದೇ ಪ್ರಸಿದ್ಧಿ ಪಡೆಯುವಿ. ಈಗ ನಿನಗಿಂತ ಮೊದಲು ಹುಟ್ಟಿದ ದೇವತೆಗಳು ಯಜ್ಞದಲ್ಲಿ ತಮ್ಮ ತಮ್ಮ ಭಾಗವನ್ನು ಹಂಚಿಕೊಂಡಿರುವುದರಿಂದ ನಿನಗೆ ಯಜ್ಞದಲ್ಲಿ ಭಾಗವನ್ನು ನೀಡಲು ಅವಕಾಶವಿಲ್ಲ'.

ತಂದೆಯಾದ ವಿಷ್ಣುವಿನ ಅಣತಿಯಂತೆ ಇದೇ ಧನ್ವಂತರಿಯು ಪುನಃ ಕಾಶಿ-ರಾಜನಲ್ಲಿ ಅವತರಿಸಿದನು. ಯಯಾತಿಯ ವಂಶದಲ್ಲಿ ದೀರ್ಘತಮ ಎಂಬ ಕಾಶಿರಾಜನ ಮಗನಾಗಿ 'ಧನ್ವ' ಎಂಬುವನು ಹುಟ್ಟಿದನು. ಇವನು ಭಗವಂತನ ಧನ್ವಂತರಿರೂಪವನ್ನು ಕುರಿತು ತಪಸ್ಸನ್ನು ಆಚರಿಸಿದನು. ವಿಷ್ಣು ಪ್ರತ್ಯಕ್ಷನಾದಾಗ ನೀನೇ ಮಗನಾಗಿ ಹುಟ್ಟಬೇಕೆಂದು ಪ್ರಾರ್ಥಿಸಿದನು. ಪರಮಾತ್ಮನು 'ತಥಾಸ್ತು' ಎಂದು ವರವನ್ನು ಇತ್ತು ಧನ್ವ ಎಂಬ ರಾಜನಲ್ಲಿ ಮಗನಾಗಿ ಅವತರಿಸಿ ಧನ್ವಂತರಿ ಎಂದು ಖ್ಯಾತನಾದನು.

ಧನ್ವಂತರಿಯು ಭರದ್ವಾಜಮುನಿಗಳಿಂದ ಆಯುರ್ವೇದ ಅಧ್ಯಯನ ಮಾಡಿದನು. ಮತ್ತು ಆಯುರ್ವೇದವನ್ನು 1. ಕಾಯಚಿಕಿತ್ಸೆ, 2. ಬಾಲಚಿಕಿತ್ಸೆ, 3. ಗ್ರಹಚಿಕಿತ್ಸೆ, 4. ಊರ್ಧ್ವಾಂಗಚಿಕಿತ್ಸೆ, 5. ಶಲ್ಯಚಿಕಿತ್ಸೆ, 6. ದಂಷ್ಟ್ರಚಿಕಿತ್ಸೆ, 7. ಜರಾಚಿಕಿತ್ಸೆ, 8. ವಾಜೀಕರಣಚಿಕಿತ್ಸೆ ಎಂದು 8 ವಿಭಾಗಗಳನ್ನು ಮಾಡಿ ಆಯುರ್ವೇದಪ್ರವರ್ತಕನೆಂದು ಖ್ಯಾತಿ ಪಡೆದನು. ಈ ಧನ್ವಂತರಿಗೆ ಕೇತುಮಂತ ಎಂಬ ಮಗನು, ಅವನಿಗೆ ಭೀಮರಥ ಎಂಬ ಮಗನು ಹುಟ್ಟಿದನು. ಹೀಗೆ ಇವನ

ವಂಶವು ಅಭಿವೃದ್ಧಿಯನ್ನು ಪಡೆಯಿತು. ಈ ಧನ್ವಂತರಿಯು ಪರಮಾತ್ಮನ ಆವೇಶಾ-ವತಾರ ಹೊರತು ಸ್ವರೂಪಾವತಾರವಲ್ಲ ಎಂದು ಭಾಗವತ ಹೇಳಿದೆ.

ಪ್ರಶ್ನೆ : ಧನ್ವಂತರಿ ಎಂದರೇನು?

ಉತ್ತರ : ಧನ್ವ = ರೋಗ-ರುಜಿನ ಕಷ್ಟ-ಕಾರ್ಪಣ್ಯಗಳನ್ನು, ತರಿ = ನಾಶ ಮಾಡುವವನು ಎಂದರ್ಥ. 'ಅಜ್ಞಾನರೋಗ' ಎಂಬ ಶ್ಲೋಕದಲ್ಲಿ ಹೇಳಿದ ಎಲ್ಲಾ ಆಪತ್ತುಗಳನ್ನು ನಾಶಮಾಡುವವನು. ಶ್ರೀಮದಾಚಾರ್ಯರು ಧ್ಯಾನಶ್ಲೋಕದಲ್ಲಿ ಧನ್ವಂತರಿ ಎಂಬ ಹೆಸರಿನ ವ್ಯಾಖ್ಯಾನವನ್ನೇ ಮಾಡಿರುತ್ತಾರೆ.

ಪ್ರಶ್ನೆ : ಧನ್ವಂತರಿಯ ಮೂರ್ತಿಯನ್ನು ಪೂಜಿಸಬಹುದೇ? ಧನ್ವಂತರಿಯ ದೇವಾಲಯ ಎಲ್ಲಾದರೂ ಇದೆಯೇ?

ಉತ್ತರ : ಚಂದ್ರಮಂಡಲದಲ್ಲಿ ಕುಳಿತ ಅಮೃತಕಲಶವನ್ನು ಹಿಡಿದ ಧನ್ವಂತರಿಯ ಮೂರ್ತಿಯನ್ನು ಪೂಜಿಸುವುದರಿಂದ ಉತ್ತಮ ಆರೋಗ್ಯ ದೊರೆಯುತ್ತದೆ. ಧನ್ವಂ-ತರಿಯ ದೇವಾಲಯ ದಕ್ಷಿಣಕನ್ನಡದ ಕೊಕ್ಕಡ ಎಂಬ ಊರಿನಲ್ಲಿದೆ. ಶ್ರೀಮದಾ-ಚಾರ್ಯರು ಈ ದೇವಾಲಯಕ್ಕೆ ಭೇಟಿ ನೀಡಿದ್ದರೆಂದು ಮಧ್ವವಿಜಯದಲ್ಲಿ ಉಲ್ಲೇಖಿಸಿದ್ದಾರೆ.

ನಾನಾವಿಧವಾದ ಕಷ್ಟಗಳ ಸಂಕೋಲೆಗಳಲ್ಲಿ ಸಿಲುಕಿರುವ ನಾವೆಲ್ಲರೂ ಸಂಸಾರ -ಸಮುದ್ರವನ್ನು ದಾಟಿ, ವಿಷ್ಣುವನ್ನು ಹೊಂದಲು ಅನನ್ಯವಾಗಿ ಧನ್ವಂತರಿಯನ್ನೇ ಶರಣೆನ್ನೋಣ.

ಪ್ರಶ್ನೆ : ಧನ್ವಂತರಿಯ ಬಳಿ ಏನೆಂದು ಪ್ರಾರ್ಥಿಸಬೇಕು ?

ಉತ್ತರ : ಕಂಡದ್ದನ್ನೆಲ್ಲಾ ನೋಡುತ್ತಿರುವೆ; ಆದರೂ ನಾ ಕುರುಡ. ಎಲ್ಲವನ್ನು ಕೇಳುತ್ತಿರುವೆ; ಆದರೂ ಕಿವುಡು. ಹಗಲೆಲ್ಲಾ ಹರಟುವೆ; ಆದರೂ ಮೂಕ. ಹೊಟ್ಟೆ ಬಿರಿ ತಿನ್ನುತ್ತಿರುವೆ; ಆದರೂ ನಾಲಿಗೆಯೇ ಇಲ್ಲ. ಕ್ಷಣಕಾಲವು ಬಿಡದೆ ಕೆಲಸ ಮಾಡು ತ್ತಿರುವೆ; ಆದರೆ ಕೈಗಳೆ ಇಲ್ಲ. ಮುಖಕೆ ಸುಂದರ ಅಲಂಕಾರ ಮಾಡುತ್ತಿರುವೆ; ಆದರೆ ಶಿರವೆ ಇಲ್ಲ. ಉಸಿರೆಳೆದು ಬಿಡುತಿರುವೆ; ಆದರೆ ಮೂಗೇ ಇಲ್ಲ. ಎಲ್ಲಡೆ ಸಂಚರಿಸು

-ತ್ತಿರುವೆ; ಆದರೆ ಕಾಲುಗಳೇ ಇಲ್ಲ. ಓ! ಧನ್ವಂತರಿಯೇ ನನ್ನ ಇಂದ್ರಿಯಗಳಿಗೆ ಯಾವ ರೋಗವೂ ನಾ ಕಾಣೆ. ನಿನ್ನನ್ನೇ ಹುಡುಕಿ ನಡೆಯುವ ಒಂದೇ ಒಂದಾದರೂ ಇಂದ್ರಿಯವನ್ನು ನೀಡಿ ಉದ್ಧರಿಸು ಸ್ವಾಮಿ. ಅರಿವಿನ ಸತ್ಯದ ಬೆಳಕಿನ ದಾರಿಯಲ್ಲಿ ಮುನ್ನುಗ್ಗುವಂತೆ ಪ್ರೇರೆಪಿಸು ಎನ್ನುತ್ತಾರೆ - ''ಆವ ರೋಗವೋ ಎನಗೆ ದೇವ ಧನ್ವಂ-ತರಿ । ಸಾವಧಾನದಿ ಎನ್ನ ಕೈಪಿಡಿದು ನೋಡಯ್ಯ ॥ ಎಂಬ ಪದ್ಯದಲ್ಲಿ ಗೋಪಾಲ-ದಾಸರು.

**ಪ್ರಶ್ನೆ: ಧನ್ವಂತರಿಃ ಭಗವಾನ್ ಪಾತು ಅಪಥ್ಯಾತ್ ಎಂಬ ನಾರಾಯಣವರ್ಮದ ಮಾತಿನ ಅಭಿಪ್ರಾಯವೇನು ?**

ಉತ್ತರ : ಧನ್ವಂತರಿರೂಪಿಯಾದ ಶ್ರೀಹರಿಯು ಅಪಥ್ಯದಿಂದ ರಕ್ಷಣೆ ಮಾಡಲಿ. ದೇವತೆಗಳ ಸಕಲವಿಧವಾದ ಕಷ್ಟಗಳನ್ನು ಪರಿಹರಿಸಿದ ಅಭೀಷ್ಟಗಳನ್ನು ವೃಷ್ಟಿಗೆರೆದ ಮಹಾಕಾರುಣಿಕನೇ ಧನ್ವಂತರಿ. ಅಮೃತತ್ವದ ಪ್ರಾಪ್ತಿಗೆ ಹೊರಟಿರುವ ಸಕಲ ಸಾಧಕ-ರಿಗೆ ಕಾಮಾದಿಗಳ, ಅಹಂ-ಮಮಕಾರಾದಿಗಳ ಆರ್ಭಟದಿಂದ ನೂರಾರು ವಿಘ್ನಗಳು ಎದುರಾದಾಗ ಉದ್ಧರಿಸಿ ಗುರಿ ಮುಟ್ಟುವಂತೆ ಅನುಗ್ರಹಿಸುವವನೇ ಧನ್ವಂತರಿ. ಐಹಿಕವಾದ ರೋಗಗಳನ್ನಷ್ಟೇ ಅಲ್ಲದೆ ಆಧ್ಯಾತ್ಮಿಕವಾದ ರೋಗಗಳನ್ನು ಕೂಡ ಸದೆಬಡಿದು ಪ್ರತಿಯೊಬ್ಬ ಸಜ್ಜನರಿಗೂ ಶಾಶ್ವತವಾದ ಅಮೃತತ್ವವನ್ನು ನೀಡುವ ಧನ್ವಂತರಿಯನ್ನು ಪ್ರತಿನಿತ್ಯ ಪ್ರತಿಕ್ಷಣ ಸ್ಮರಿಸಿ ಧನ್ಯರಾಗಬೇಕು.

**ಪ್ರಶ್ನೆ : ತಂತ್ರಸಾರಸಂಗ್ರಹದ ಪ್ರಕಾರ ಧನ್ವಂತರಿಯನ್ನು ಹೇಗೆ ಧ್ಯಾನ ಮಾಡಬೇಕು ?**

ಉತ್ತರ : ಚಂದ್ರೌಘ-ಕಾಂತಿಮಮೃತಾತ್ಮತ್ರೋರು-ಕರೈರ್ಜಗಂತಿ ಸಂ-ಜೀವ-ಯಂತಮಮಿತಾತ್ಮ-ಸುಖಂ ಪರೇಶಮ್ । ಜ್ಞಾನಂ ಸುಧಾ-ಕಲಶಮೇವ ಚ ಸಂ-ದಧಾನಂ ಶೀತಾಂಶು-ಮಂಡಲ-ಗತಂ ಸ್ಮರತಾಽತ್ಮ-ಸಂಸ್ಥಮ್ ॥65॥

ಅನಂತಚಂದ್ರರ ಕಾಂತಿಯಿಂದ ಬೆಳಗುತ್ತಿರುವ, ಅಮೃತಸ್ರಾವಿಗಳಾದ ತನ್ನ ದಿವ್ಯಕಿರಣಗಳಿಂದ ಜಗತ್ತಿಗೆ ಜೀವಕಳೆಯನ್ನು ತುಂಬುತ್ತಿರುವ, ಅಸೀಮಸುಖ ಸ್ವರೂಪನಾದ, ಹಿರಿಯ ಒಡೆಯನಾದ, ಬಲದ ಕೈಯಲ್ಲಿ ಜ್ಞಾನಮುದ್ರೆಯನ್ನೂ

ಇನ್ನೊಂದರಲ್ಲಿ ಅಮೃತ ತುಂಬಿದ ಕೊಡವನ್ನೂ ಹಿಡಿದು ಚಂದ್ರಮಂಡಲದಲ್ಲಿರುವ ಧನ್ವಂತರಿ ತನ್ನೊಳಗೆ ನೆಲೆಸಿರುವನೆಂದು ನೆನೆಯಿರಿ.

ಮೂರ್ಧ್ನಿ ಸ್ಥಿತಾದಮುತ ಏವ ಸುಧಾಂ ಸ್ರವಂತೀಂ ಭ್ರೂ-ಮಧ್ಯ-ಗಾಚ್ಚ ತತ ಏವ ಚ ತಾಲು-ಸಂಸ್ಥಾತ್ । ಹಾರ್ದಾಚ್ಚ ನಾಭಿ-ಸದನಾದಧರ-ಸ್ಥಿತಾಚ್ಚ ಧ್ಯಾತ್ವಾಽಭಿ-ಪೂರಿತ-ತನುರ್ದುರಿತಂ ನಿ-ಹನ್ಯಾತ್ ॥66॥

ತನ್ನ ಶಿರಸ್ಸಿನಲ್ಲಿ, ಹುಬ್ಬುಗಳ ನಡುವಿನಲ್ಲಿ, ಕಿರುನಾಲಿಗೆಯಲ್ಲಿ, ಹೃದಯದಲ್ಲಿ, ಹೊಕ್ಕುಳಿನಲ್ಲಿ ಮತ್ತು ಕೆಳಭಾಗದಲ್ಲಿ ಹೀಗೆ ಷಟ್-ಚಕ್ರಗಳಲ್ಲು ಸನ್ನಿಹಿತನಾದ ಧನ್ವಂತರಿಯಿಂದ ಸುರಿಯುತ್ತಿರುವ ಅಮೃತಧಾರೆಯನ್ನು ನೆನೆದು ಆ ಅಮೃತಧಾರೆಯಲ್ಲಿ ತನ್ನ ಶರೀರವೆಲ್ಲ ತೊಯ್ದು ಪವಿತ್ರವಾದಂತೆ ಅನುಸಂಧಾನ ಮಾಡಿ ಜಪಿಸುವವನು ಎಲ್ಲ ದುರಿತವನ್ನು ದೂರೀಕರಿಸಬಲ್ಲನು.

ಅಜ್ಞಾನ-ದುಃಖ-ಭಯ-ರೋಗ-ಮಹಾ-ವಿಷಾಣಿ ಯೋಗೋಽಯಮಾಶು ವಿನಿ-ಹಂತಿ ಸುಖಂ ಚ ದದ್ಯಾತ್ । ಉನ್ಮಾದ-ವಿಭ್ರಮ-ಹರಃ ಪರತಶ್ಚ ಸಾಂದ್ರ-ಮಾನಂದಮೇವ ಪದಮಾಪಯತಿ ಸ್ಮ ನಿತ್ಯಮ್॥67॥

ಈ ಮಂತ್ರವು ಅಜ್ಞಾನ, ದುಃಖ, ಹೆದರಿಕೆ, ರೋಗಗಳು, ಮಾರಕಗಳಾದ ವಿಷಗಳು - ಇವನ್ನೆಲ್ಲ ಪರಿಹರಿಸಿ ಸುಖವನ್ನೀಯುವುದು; ಹುಚ್ಚು ಮಾನಸಿಕ ಗೊಂದಲಗಳನ್ನೂ ಪರಿಹರಿಸಿ ಪರದಲ್ಲಿ ಅಳಿವಿರದ ಸುಖದ ತಾಣವನ್ನು ಸಾಧಕರಿಗೆ ಕರುಣಿಸುವುದು.

ಧ್ಯಾತ್ವೈವ ಹಸ್ತ-ತಳ-ಗಂ ಸ್ವಮೃತಂ ಸ್ರವಂತಂ ದೇವಂ ಸ ಯಸ್ಯ ಶಿರಸಿ ಸ್ವ-ಕರಂ ನಿಧಾಯ । ಆವರ್ತಯೇನ್ಮನುಮಿಮಂ ಸ ಚ ವೀತ-ರೋಗಃ ಪಾಪಾದಪೈತಿ ಮನಸಾ ಯದಿ ಭಕ್ತಿ-ನಮ್ರಃ ॥68॥

ಮಂತ್ರೋಪಾಸಕನು ಅಂಗೈಯಲ್ಲಿದ್ದು ಅಮೃತವನ್ನು ಸುರಿಸುತ್ತಿರುವ ಧನ್ವಂತರಿ -ಯನ್ನು ಮನದಲ್ಲಿ ನೆನೆದು ರೋಗಿಯ ತಲೆಯ ಮೇಲೆ ತನ್ನ ಕೈಯನಿಟ್ಟು ಭಗವ-ದ್ಭಕ್ತನಾಗಿದ್ದು ಶ್ರದ್ಧೆಯಿಂದ ಕೂಡಿದ್ದರೆ ಈ ಮಹಾಮಂತ್ರವನ್ನು ಆವೃತ್ತಿ ಮಾಡಿದರೆ ರೋಗಿಯು ಪಾಪದಿಂದ ವಿಮುಕ್ತನಾಗಿ ನಿರೋಗಿಯಾಗುವನು,

## ಕಾರ್ತಿಕ ॥ ಶುದ್ಧ ॥ ತ್ರಯೋದಶೀ

**ಧಾತ್ರೀಮಹಿಮಾ –** ಧಾತ್ರೀವೃಕ್ಷದ ನೆರಳಿನಲ್ಲಿ ವನಭೋಜನವನ್ನು ಮಾಡಬೇಕು. ಇದರಿಂದ ಅನಿವೇದಿತಾನ್ನಾದಿ ಭಕ್ಷಣದಿಂದ ಬರುವ ಪಾಪ, ಭೋಜನಸಮಯದಲ್ಲಿ ಶೂದ್ರದರ್ಶನ, ರಜಸ್ವಲಾವಾಕ್ಯಶ್ರವಣ, ಅನ್ನಸ್ಪರ್ಶ ಇವುಗಳಿಂದ ಬರುವ ಪಾಪ, ನಿಷಿದ್ಧಪದಾರ್ಥಭಕ್ಷಣ, ಅನ್ನನಿಂದಾ, ಪರ್ವಕಾಲದಲ್ಲಿನ ವಿಹಿತಕರ್ಮಾನನುಷ್ಠಾನದಿಂದುಂಟಾದ ಪಾಪ ಇವೆಲ್ಲದರ ನಾಶ, ಧಾತ್ರಿಮಾಲಾಧಾರಣೆಯಿಂದ ಅನಂತಫಲ. ಧಾತ್ರೀಸ್ಪರ್ಶದಿಂದ ದುಷ್ಟಯೋನಿಯಿಂದ ಮುಕ್ತಿ.

**ಶ್ರೀಲಕ್ಷ್ಮೀನಾರಾಯಣತೀರ್ಥರು (ವ್ಯಾಸರಾಜ ಮಠ)** (ಕ್ರಿ.ಶ. 1670–1700) ಭವಸಂಕಟಸಂಘಾತಪ್ರಧ್ವಂಸಘಟನಾಂಚನಂ । ಲಕ್ಷ್ಮೀನಾರಾಯಣ – ಮುನಿಂ ಲಕ್ಷ್ಮಣಾರ್ಯ ಮಹಂ ಭಜೇ ॥ ಲಕ್ಷ್ಮೀಪತಿತೀರ್ಥರ ಕರಕಮಲಸಂಜಾತರಾದ ಈ ಮಹಾನುಭಾವರು ವ್ಯಾಸರಾಜ ಗುರು ಪರಂಪರೆಯಲ್ಲಿ ಒಂದು ಹೊಸ ಚರಿತ್ರೆ -ಯನ್ನೇ ನಿರ್ಮಾಣ ಮಾಡಿದ ಮಹಾನ್ ವ್ಯಕ್ತಿಗಳು. 30 ವರ್ಷಗಳ ಕಾಲ ಪಾಠಪ್ರವಚನ, ಭಗವಂತನ ಸೇವಾದಿಗಳಿಂದ ಗೋಪಾಲಕೃಷ್ಣನನ್ನು ಮೆಚ್ಚಿಸಿದ ಧೀಮಂತರು. ಇವರು ಶೇಷಚಂದ್ರಿಕಾರಾಯರಂತಹ ಸನ್ಯಾಸರತ್ನವನ್ನು ಜಗತ್ತಿಗೆ ನೀಡಿದ ಯುಗಪುರುಷರು. ತಮ್ಮ ಭೌತಿಕ ಶರೀರವನ್ನು ತ್ಯಜಿಸದೆ ಕೂತಲ್ಲಿಯೇ ಅಂತರ್ಧಾನರಾದ ಅಪಾರ ಕೀರ್ತಿಗೆ ಪಾತ್ರರಾಗಿದ್ದಾರೆ. 1700ರ ಕಾರ್ತಿಕ ಶುದ್ಧ ತ್ರಯೋದಶಿಯಂದು ಅನೇಕ ಭಕ್ತವೃಂದ ಸಮೂಹದಲ್ಲಿ ಕುಳಿತು, ಶಿಷ್ಯರನ್ನು ಕುರಿತು 'ಇದುವರೆಗೂ ಭಗವದಾಜ್ಞಾನುಸಾರ ಶ್ರೀಮೂಲ ಗೋಪಾಲಕೃಷ್ಣ, ಪಟ್ಟಾಭಿರಾಮ ಮತ್ತು ಶ್ರೀಮದಾನಂದತೀರ್ಥರ ಸೇವೆಯನ್ನು ಇಹಲೋಕದಲ್ಲಿ ಮಾಡಿದ್ದೇವೆ. ಇನ್ನು ಮುಂದೆ ಬದರಿಕಾಶ್ರಮಕ್ಕೆ ಹೋಗಿ ತಪಸ್ಸಿನಲ್ಲಿ ನಿರತರಾಗುತ್ತೇವೆ' ಎಂದು ಹೇಳಿ ತತ್ಕ್ಷಣದಲ್ಲಿಯೇ ಆ ಭಕ್ತ ಸಂದಣಿಯಿಂದ ಅಂತರ್ಧಾನರಾದರು. ಇದೊಂದು ಅತ್ಯಂತ ಅಪೂರ್ವಘಟನೆಯೇ ಸರಿ. ಆದ್ದರಿಂದ ಅವರ ಬೃಂದಾವನ ಎಲ್ಲಿಯೂ ಇಲ್ಲ. ಅವರ ಅಂತರ್ಧಾನ ದಿನವನ್ನೇ ಬದರಿಕಾಶ್ರಮ ಪ್ರವೇಶ ದಿನವೆಂದು ಆರಾಧನೆಯ ರೂಪದಲ್ಲಿ ಶ್ರೀಮಠದಲ್ಲಿ ಆಚರಿಸಲಾಗುತ್ತಿದೆ.

* * * * *

## ಕಾರ್ತೀಕ ॥ ಶುದ್ಧ ॥ ಚತುರ್ದಶೀ
## ವೈಕುಂಠಚತುರ್ದಶೀ

ಈ ದಿನ ಉಪವಾಸವಿದ್ದು ಕಾರ್ತಿಕಮಾಸವ್ರತೋದ್ಯಾಪನೆಯ ಅಂಗವಾಗಿ ರಾತ್ರಿಯಲ್ಲಿ ಜಾಗರಣೆ ಮಾಡಬೇಕು. ಈ ದಿನ ಗೀತ- ನೃತ್ಯ ಮುಂತಾದವುಗಳಿಂದ ಜಾಗರಣೆಮಾಡಿದವರಿಗೆ ಸಹಸ್ರಗೋದಾನದ ಫಲ ಬರುತ್ತದೆ.

## ಕಾರ್ತಿಕ ॥ ಹುಣ್ಣಿಮೆ ॥

ಶ್ರೀ ಜಯಧ್ವಜತೀರ್ಥರು (ವ್ಯಾಸರಾಜ ಮಠ) (ಕ್ರಿ .ಶ. 1380-1400) ರಮಾರಮಣಪಾದಾಬ್ಜಯುಗಳಾಸಕ್ತಮಾನಸಃ । ಜಯಧ್ವಜಮುನೀಂದ್ರೋsಸೌ ಗುರು-ರ್ಭೂಯಾದಭೀಷ್ಟದಃ ॥ ಇವರು ಪೂಜ್ಯ ಶ್ರೀ ರಾಜೇಂದ್ರತೀರ್ಥರ ವಿದ್ಯಾಶಿಷ್ಯರಷ್ಟೇ ಅಲ್ಲದೆ, ಅವರ ಸ್ವಂತ ಅನುಜರು ಸಹ ಆದವರು. ಪುರ್ವಾಶ್ರಮದಿಂದಲೂ ಅಣ್ಣಂದಿರು ಹಾಕಿಕೊಟ್ಟ ಮಾರ್ಗದಲ್ಲಿ ಹೆಜ್ಜೆ ಹಾಕುತ್ತಾ ದೃಢತರವಾದ ಮಾಧ್ವ ದೀಕ್ಷೆಯನ್ನು ಬೆಳೆಸಿಕೊಂಡು ಬಂದರು. ಮುಂದೆ ಅಣ್ಣಂದಿರಾದ ರಾಜೇಂದ್ರತೀರ್ಥ-ರಲ್ಲಿಯೇ ಸನ್ಯಾಸವನ್ನು ಪಡೆದು ಶ್ರೀ ಜಯಧ್ವಜತೀರ್ಥರೆಂದು ಪ್ರಖ್ಯಾತರಾದರು. ತಮ್ಮ ಗುರುಗಳಂತೆ ಉತ್ತರ ಭಾರತದಲ್ಲಿ ದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡುವ ಇಚ್ಛೆಯಿಂದ ಬಹುಕಾಲ ಉತ್ತರ ಭಾರತದಲ್ಲಿ ದ್ವೈತ ಸಿದ್ಧಾಂತ ದುಂದುಬಿಯನ್ನು ಮೊಳಗಿಸಿದರು. ರಮಾರಮಣನ ಪಾದಗಳಲ್ಲಿಯೇ ಆಸಕ್ತರಾಗಿ ಶ್ರೀ ಪುರುಷೋ-ತ್ತಮತೀರ್ಥರೆಂಬ ಜ್ಞಾನಿವರೇಣ್ಯರನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಆರಿಸಿ 1440ರಲ್ಲಿ ಕಾರ್ತಿಕ ಪೂರ್ಣಿಮಾದಂದು ಯರಗೋಳದಲ್ಲಿ ಬೃಂದಾವನಸ್ಥರಾದರು.

ಶ್ರೀ ಹಯಗ್ರೀವತೀರ್ಥರು (ಶ್ರೀಪಾದರಾಜ ಮಠ) ಮುಳಬಾಗಿಲು (ಕ್ರಿ .ಶ. 1504-1536) ವಾಗ್ವಜ್ರಗ್ರಂಥಸಾರಾರ್ಥಕೋವಿದಂ ಜ್ಞಾನಭಾಗ್ಯದಂ । ಸರ್ವಾಭೀಷ್ಟ -ಪ್ರದಾತಾರಂ ಹಯಗ್ರೀವ ಗುರುಂ ಭಜೇ ॥

ಶ್ರೀ ಮೌನಿವರ್ಯತೀರ್ಥರು (ಮಾಧವತೀರ್ಥ ಮಠ) ರಮಾಧವಪದಾ-ಸಕ್ತಾನ್ ಸದಾ ಭಾಗವತಪ್ರಿಯಾನ್ । ಮೌನಿವರ್ಯಗುರೂನ್ ನೌಮಿ ವ್ಯಾಸಕೃಷ್ಣ ಪದಾರ್ಚಕಾನ್ ॥

**ಪೂರ್ಣಿಮಾ ದಿನದಂದು ದಾನಗಳು** – 'ಅತೋ ದೇವಾ ಅವಂತು ನಃ' ಈ ಮಂತ್ರಗಳಿಂದ ಎಳ್ಳು, ಪಾಯಸ ಇವುಗಳಿಂದ ಹೋಮಮಾಡಿ ಪಾರಣೆ ಮಾಡ-ಬೇಕು. ಗೋದಾನವನ್ನೂ ಮಾಡಿ ಕೃಷ್ಣಾರ್ಪಣ ಮಾಡಬೇಕು.

## ಲಕ್ಷದೀಪೋತ್ಸವ

ಕಾರ್ತಿಕಮಾಸಪೂರ್ತಿ ದೀಪೋತ್ಸವಕ್ಕೆ ಮಹತ್ಫಲವಿದೆ. ಅದರಲ್ಲೂ ಕಾರ್ತಿಕ-ಹುಣ್ಣಿಮೆ ಮತ್ತು ಅಮಾವಾಸ್ಯೆಯ ದಿನ ದೀಪೋತ್ಸವವು ಸರ್ವಾಭೀಷ್ಟದಾಯಕ. ಜ್ಞಾನಾರೋಗ್ಯವರ್ಧಕ. ದೀಪೋತ್ಸವವನ್ನು ಮಾಡುವವನನ್ನು ಯಮನೂ ಒಯ್ಯಲು ಬರುವುದಿಲ್ಲ . ಅವನನ್ನು ಆಧಿವ್ಯಾಧಿಗಳು ಮುಟ್ಟಲಾರವು. ದೀಪೋತ್ಸವಂ ಯಃ ಕುರುತೇ ತಂ ಯಮೋಽಪಿ ನ ಪಶ್ಯತಿ । ಆಧಯೋ ವ್ಯಾಧಯೋ ಬ್ರಹ್ಮನ್ ನ ಸ್ಪೃಶಂತಿ ಕದಾಚನ ॥ ಈ ಸಮಯದಲ್ಲಿ ಸರ್ವದೇವಾಲಯಗಳಲ್ಲೂ ದೀಪಾರಾಧನೆಯು ವಿಶೇಷವಾಗಿ ನಡೆಯುತ್ತದೆ. ದೀಪೋತ್ಸವವನ್ನು ಮನೆಯಲ್ಲೂ ನಡೆಸಬಹುದು.

ಸಂಕಲ್ಪ- ಕಾರ್ತಿಕಪೂರ್ಣಿಮಾಯಾಂ ಕಾರ್ತಿಕದಾಮೋದರಪ್ರೇರಣಯಾ ಕಾರ್ತಿಕದಾಮೋದರಪ್ರೀತ್ಯರ್ಥಂ ದೀಪೋತ್ಸವಂ ಕರಿಷ್ಯೇ । ಅದ್ಯ ದೀಪೋತ್ಸವಂ ದೇವ ಕರಿಷ್ಯೇ ತ್ವತ್ಪ್ರಸಾದತಃ । ನಿರ್ವಿಘ್ನಂ ಸಿದ್ಧಿಮಾಯಾತು ಯಥೋಕ್ತಫಲದೋ ಭವ ॥

ಚಿನ್ನ, ಬೆಳ್ಳಿ, ಕಂಚು, ತಾಮ್ರ ಮಣ್ಣಿನ ಹಣತೆಗಳನ್ನು ದೀಪಕ್ಕಾಗಿ ಬಳಸಬಹುದು. ಕಬ್ಬಿಣವೂ ದೀಪದ ವಿಷಯದಲ್ಲಿ ನಿಷಿದ್ಧವಲ್ಲ. ಹಸುವಿನ ತುಪ್ಪ, ಎಳ್ಳೆಣ್ಣೆ, ತೆಂಗಿನೆಣ್ಣೆಗಳು ಶುಭಪ್ರದಗಳು. ಎಮ್ಮೆಯ ತುಪ್ಪ, ಹರಳೆಣ್ಣೆಗಳು ನಿಷಿದ್ಧ. ಬತ್ತಿ ಇಷ್ಟೇ ಇರಬೇಕೆಂಬ ನಿಯಮವಿಲ್ಲ. ಒಂದು, ಎರಡು, ಮೂರು ಎಷ್ಟಾದರೂ ಸರಿ. ದೀಪವು ದೇವರಿಗಭಿಮುಖವಾಗಿರಬೇಕು. ದಕ್ಷಿಣಾಭಿಮುಖದೀಪ ಕೂಡದು. ನಾಲ್ಕೂದಿಕ್ಕುಗಳಲ್ಲೂ ದೀಪ ಹಚ್ಚುವುದಾದರೆ ದಕ್ಷಿಣಮುಖವಾಗಿರಬಹುದು. ಸ್ನೇಹೋ ದೀಪಂ ಯಥಾ ಧೃತ್ವಾ ಸರ್ವಲೋಕೋಪಕಾರಕಃ । ತಥಾ ಭವಾನ್ ಮಮ ಜ್ಞಾನಂ ಹೃದಿ ಧಾರಯ ಸಂತತಮ್ ॥ ತ್ವದ್ಧೂಮಗಂಧಮಾಘ್ರಾಯ ಯಥಾ ಪೂತಾಶ್ಚ ಖೇಚರಾಃ । ತಥಾ ಪ್ರಜ್ವಲ ದೀಪ ತ್ವಂ ಸಪ್ತಲೋಕಸಮಾಶ್ರಯಾಃ ॥

ದೇವರ ಗರ್ಭಗುಡಿಯ (ಸ್ವಗೃಹದ) ಭದ್ರದೀಪದಿಂದ ಏಕಾರತಿಯನ್ನು ಹಚ್ಚಿ ಆ ದೀಪದಿಂದ ದೇವಳದ ಪ್ರಾಕಾರಾದಿ ಸ್ಥಲದಲ್ಲೆಲ್ಲಾ (ಸ್ವಗೃಹದ ಪ್ರದೇಶಗಳಲ್ಲೆಲ್ಲಾ) ದೀಪ ಹಚ್ಚಿ ಪ್ರಾರ್ಥಿಸಬೇಕು.

ಪ್ರಾರ್ಥನಾಮಂತ್ರ- ಕೌಸ್ತುಭೋರಸ್ಕ ಲಕ್ಷ್ಮೀಶ ವಸ್ತ್ರಮಾಲಾದ್ಯಲಂಕೃತ । ತ್ವತ್ಪ್ರೀತಯೇ ಮಯಾ ದತ್ತಾಂ ದೀಪಮಾಲಾಂ ಗೃಹಾಣ ತಾಮ್ ॥ ನ ಜಾನೇ ಕರ್ಮ ಯತ್ಕಿಂಚಿತನ್ನಾಪಿ ಲೌಕಿಕವೈದಿಕೇ । ತಥಾಽಪಿ ಮತ್ಕೃತಾಂ ಪೂಜಾಂ ಸ್ವೀ-ಕುರುಷ್ವ ಜನಾರ್ದನ ॥ ಕಾಮತೋಽಕಾಮತೋ ವಾಪಿ ನ ಕೃತಂ ನಿಯಮಾ-ರ್ಚನಮ್ । ಕೇನಚಿದ್ವಿಘ್ನದೋಷೇಣ ಪರಿಪೂರ್ಣಂ ತದಸ್ತು ಮೇ ॥

ಅನೇನ ದೀಪೋತ್ಸವಕರಣೇನ ಕಾರ್ತಿಕದಾಮೋದರಾತ್ಮಕಃ ಪರಂಜ್ಯೋತಿಃ ಪರಮಾತ್ಮಾ ಪ್ರೀಯತಾಮ್.।

ಧರ್ಮಶಾಸ್ತ್ರಗಳಲ್ಲಿ ಈ ದೀಪೋತ್ಸವದ ಬಗ್ಗೆ ಒಂದು ಮಾತಿದೆ- ಊರ್ಜೇ ಶ್ರೇಷ್ಠೇ ನರೋ ಯಸ್ತು ನ ಕುರ್ಯಾದ್ದೀಪಕೋತ್ಸವಮ್ । ತಸ್ಯ ಸಾಂವತ್ಸರೀ ಪೂಜಾ ನಿಷ್ಫಲಾ ಭವತಿ ಧ್ರುವಮ್ ॥ ಕಾರ್ತಿಕದ ಹುಣ್ಣಿಮೆಯಂದು ದೀಪೋತ್ಸವವನ್ನು ಆಚರಿಸದಿದ್ದರೆ ಒಂದು ವರ್ಷಪೂರ್ತಿ ಮಾಡಿದ ಪೂಜೆ ವ್ಯರ್ಥವಾಗುವುದೆಂದೂ ದೀಪೋತ್ಸವವನ್ನು ಆಚರಿಸಿದರೆ ಸರ್ವಾಭೀಷ್ಟಸಿದ್ಧಿಯೆಂದೂ ಹೇಳುವ ಈ ಸ್ಮೃತಿಗಳ ಆಂತರ್ಯ ದೀಪೋತ್ಸವವು ಅವಶ್ಯಕರ್ತವ್ಯವೆಂಬುದು. ಕನಿಷ್ಠ ನಾಲ್ಕು ದೀಪವ-ನ್ನಾದರೂ ಇಂದು ಹಚ್ಚಿಟ್ಟು ಕೀರ್ತನೆ ಸಂಕೀರ್ತನೆಗಳನ್ನು ನಡೆಸಬೇಕು. ದೀಪೋತ್ಸವದ ಬಗ್ಗೆ ಉತ್ಥಾನದ್ವಾದಶೀ ಪುಸ್ತಕ ನೋಡಿರಿ.

ವೃಷೋತ್ಸರ್ಗ – ಈ ದಿನ 'ಕಾಮ್ಯವೃಷೋತ್ಸರ್ಗ'ವನ್ನು, ಆನೆ, ಕುದುರೆ, ರಥ, ತುಪ್ಪ, ಹಸು ಮುಂತಾದ ಮಹಾದಾನಗಳನ್ನು ಮಾಡಲು ಪ್ರಶಸ್ತವಾಗಿದೆ.

ಈ ದಿನ ರಾತ್ರಿ ತ್ರಿಪುರೋತ್ಸವವನ್ನು ಮಾಡಬೇಕು. ದೇವಾಲಯದಲ್ಲಿ –

ಕೀಟಾಃ ಪತಂಗಾ ಮಶಕಾಶ್ಚ ವೃಕ್ಷೇ ಜಲೇ ಸ್ಥಲೇ ಯೇ ವಿಚರಂತಿ ಜೀವಾಃ।
ದೃಷ್ಟ್ವಾ ಪ್ರದೀಪಂ ನ ಚ ಜನ್ಮ ಭಾಗಿನೋ ಭವಂತಿ ನಿತ್ಯಂ ಶ್ವಪಚಾ ಹಿ ವಿಪ್ರಾಃ॥

ಎಂಬ ಮಂತ್ರದಿಂದ ದೀಪ ದಾನ ಮಾಡಬೇಕು. ಈ ದಿನ ಕೃತ್ತಿಕಾನಕ್ಷತ್ರವಿದ್ದಲ್ಲಿ

ಸ್ಕಂದ (ಷಣ್ಮುಖ)ದರ್ಶನ ಮಾಡಬೇಕು. ಇದರಿಂದ ಏಳು ಜನ್ಮಗಳಲ್ಲಿ ಶ್ರೀಮಂತ-ನಾದ ಬ್ರಾಹ್ಮಣನಾಗಿ ಹುಟ್ಟುತ್ತಾನೆ.

## ಕಾರ್ತಿಕ ॥ ಕೃಷ್ಣ ॥ ಚತುರ್ಥೀ

**ಕರಕಚತುರ್ಥೀ ಪೂಜಾ– ಪೂಜಾಮಂತ್ರಃ–** ನಮಃ ಶಿವಾಯೈ ಶರ್ವಾಣ್ಯೈ ಸೌಭಾಗ್ಯಂ ಸಂತತಿಂ ಶುಭಾಮ್ । ಪ್ರಯಚ್ಛ ಭಕ್ತಿಯುಕ್ತಾನಾಂ ನಾರೀಣಾಂ ಹರ-ವಲ್ಲಭೇ ॥

**ಶ್ರೀ ವಿದ್ಯಾನಿಧಿತೀರ್ಥರು (ಉತ್ತರಾದಿಮಠ)** ಕಾರ್ತಿಕ ಕೃಷ್ಣ ಚತುರ್ಥೀ ಯದ್ಭಕ್ತ್ಯಾ ಮೂಲರಾಮಸ್ಯ ಪೇಟಿಕಾ ತ್ಯಕ್ತಭೂಮಿಕಾ । ವಿದ್ಯಾನಿಧಿರ್ಧಿಯಂ ದದ್ಯಾತ್ ಅಷ್ಟಷಷ್ಟ್ಯಬ್ದಪೂಜಕಃ ॥ ಶ್ರೀ ಉತ್ತರಾದಿಮಠದ ದಿವ್ಯ ಪರಂಪರೆಯ ಸಿಂಹಾಸನವನ್ನು ಅಲಂಕರಿಸಿದ ಶ್ರೀವಿದ್ಯಾನಿಧಿತೀರ್ಥರು ಸತತವಾಗಿ ಎಂಟು ವರ್ಷಗಳ ಕಾಲ ಸಿದ್ಧಾಂತದ ಪ್ರಚಾರ ಕಾರ್ಯದಲ್ಲಿ ನಿರತರಾಗಿದ್ದರು. ಭಾರತದ-ಲ್ಲೆಲ್ಲಾ ಸಂಚರಿಸಿದರು. ತಮ್ಮ ಹೆಸರಿಗೆ ಸರಿಯಾದ ಪಾಂಡಿತ್ಯ, ಪಂಡಿತರನ್ನು ಮೂಕರನ್ನಾಗಿಸುವ ಶಾಸ್ತ್ರದ ಗಾಂಭೀರ್ಯ ಮುಂತಾದ ಗುಣಗಳಿಗೆ ಮನೆಯಾದ ಈ ಮಹಿಮರು ಭೂವರಾಹ ರೂಪದ ಶ್ರೀಹರಿಯನ್ನು ಅನನ್ಯವಾಗಿ ಪೂಜಿಸಿದರು. ಅವರಿಂದ ಅರ್ಚಿತವಾದ ಶ್ರೀಭೂವರಾಹಸ್ವಾಮಿಯ ಮೂರ್ತಿ ಶ್ರೀ ಕೂಡ್ಲಿ ಆರ್ಯ ಅಕ್ಷೋಭ್ಯತೀರ್ಥ ಸಂಸ್ಥಾನದಲ್ಲಿ ನಿತ್ಯ ಪೂಜೆಗೊಳ್ಳುತ್ತಿದೆ. ತಮ್ಮ ಕಾಲ ಸಮೀಪಿ-ಸುತ್ತಿರಲು ಶ್ರೀ ರಘುನಾಥತೀರ್ಥರಿಗೆ ಪೀಠವನ್ನೂ, ಸಂಸ್ಥಾನವನ್ನೂ ಪ್ರದಾನ ಮಾಡಿ ತಮ್ಮ ಗುರುಗಳ ಬಳಿಯಲ್ಲೇ ಯರಗೋಳದಲ್ಲಿ ವೃಂದಾವನಸ್ಥರಾದರು.

## ಕಾರ್ತಿಕ ॥ ಕೃಷ್ಣ॥ ಅಷ್ಟಮೀ

ಈ ದಿನ ಕಾಲಭೈರವನ ಪೂಜೆಯನ್ನು ಮಾಡಿ ಮೂರು ಅರ್ಘ್ಯ ನೀಡಬೇಕು.

ಕಾಲಭೈರವ ಸ್ವಾಮಿಯೆ ಭಕ್ತಜನ-। ರಾಳಿಗೆ ಸುಪ್ರೇಮಿಯೆ ಪ.। ಮೂರ್ಲೋಕದೊಳು ಹರಿಲೀಲೆ ಕೊಂಡಾಡುವ। ಶೀಲರ ಕಾವ ಕೃಪಾಳುವೆ ಜಯ ಜಯಅ.ಪ.। ರುದ್ರನಾಮಕ ಹರಿಯ ಪಾದಭಕ್ತಿ-। ಮುದ್ರಾಂಕಿತ ನೀನಯ್ಯ। ಬುದ್ಧಿಜ್ಞಾನ ಸಂಸಿದ್ಧಿಸುತೆಮ್ಮನು। ಉದ್ಧರಿಸುವ ಸುಪ್ರಸಿದ್ಧ ಮಹಿಮ ನಿನ್ನ। ಹೊಂದಿದೆನು ಶಾಂತೀರಮಣನನಿ-।

ರುದ್ಧನಂಘ್ರಿಸರೋಜ ಸ್ಮರಣೆ ಸ-। ಮೃದ್ಧಿಯನು ನೀನಿತ್ತು ಒಳಹೊರ-। ಗಿದ್ದು ಕಾಯೊ ಸುಭದ್ರದಾಯಕ 1। ಕಾಮಕ್ರೋಧ ಮುಂತಾದ ವೈರಿಜನ-। ಸ್ತೋಮದಿಂದ ಬಹಳ ಬಾಧಾ। ಶ್ರೀಮನೋರಮನ ಸುನಾಮಸ್ಮರಣೆಯನ್ನು। ಪ್ರೇಮದಿಂದಿತ್ತು ಸುಕ್ಷೇಮದಿಂ ಪೊರೆಯೆಂದು। ವ್ಯೋಮಕೇಶನೆ ಧೀಮತಾಂವರ। ಸೋಮಧರ ಸುತ್ರಾಮವಂದಿತ। ತಾಮರಸಸಖ ತೇಜ ಸುಜನರ। ಕಾಮಧೇನು ಮನೋಮಯನೆ ಜಯ 2। ಲಕ್ಷ್ಮೀ-ನಾರಾಯಣನ ದಾಸಾರ್ಯ ಘಾ-। ಲಾಕ್ಷ ಮಹೇಶಾನ। ಸೂಕ್ಷ್ಮ ಸ್ಥೂಲದೊಳ್ಪರೀಕ್ಷಕನಾಗಿ ವಿ-। ಪಕ್ಷದವರನು ಶಿಕ್ಷಿಸಿ ಶಿಷ್ಟರ। ರಕ್ಷಿಸುವ ಸದಯಾದ್ರ ಹೃದಯ ಮು-। ಮುಕ್ಷುಪ್ರಿಯ ಗುರುವರ್ಯ ಲೋಕಾ-। ಧ್ಯಕ್ಷ ದಕ್ಷಮುಖಾಂತರ ಕರು-। ಣೇಕ್ಷಣದಲಿ ನಿರೀಕ್ಷಿಸೆ-ಮ್ಮನು 3 (ಪಾವಂಜೇ ಲಕ್ಷ್ಮೀನಾರಾಯಣಪ್ಪ)

**ಶ್ರೀ ರಘುನಂದನತೀರ್ಥರು (ರಾಯರ ಮಠ) ಕಾರ್ತೀಕ ಕೃಷ್ಣ ಅಷ್ಟಮೀ - ಹಂಪಿ ಕಾಲ : ಕ್ರಿ ಶ 1492 - 1504 ಪರ್ರೈರಪಹೃತಾ ಮೂಲರಾಮಾರ್ಚಾಗುರ್ವ-ನುಗ್ರಹಾತ್ । ಯೇನಾನೀತಾ ನಮಸ್ತಸ್ಮೈ ರಘುನಂದನಭಿಕ್ಷವೇ ॥** ಹೆಸರು : ಶ್ರೀವಿದ್ವಾನ್ ಶ್ರೀ ರಾಮಚಂದ್ರಾಚಾರ್ಯರು ಆಶ್ರಮ ಗುರುಗಳು : ಶ್ರೀ ಜಿತಾ-ಮಿತ್ರತೀರ್ಥರು - ಸಾಕ್ಷಾತ್ ಹಂಸನಾಮಕ ಪರಮಾತ್ಮನಿಂದ ಅವಿಚ್ಛಿನ್ನವಾಗಿ ನಡೆದು ಬಂದ ಸತ್ಪರಂಪರೆತಾದ ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲ ಮಹಾ ಸಂಸ್ಥಾನಾಧೀಶ್ವರರಾದ ಪ್ರಾತಃ ಸ್ಮರಣೀಯ ಶ್ರೀ ರಾಮಚಂದ್ರತೀರ್ಥರ ಕರಕಮಲ ಸಂಜಾತರಾದ ಪ್ರಾತಃ ಸ್ಮರಣೀಯ ಶ್ರೀ ವಿಬುಧೇಂದ್ರತೀರ್ಥರ ವರಪುತ್ರಕರಾದ ಶ್ರೀ ಜಿತಾಮಿತ್ರತೀರ್ಥರು ತಮ್ಮ ಉತ್ತರಾಧಿಕಾರಿಯನ್ನಾಗಿ ಷಾಷ್ಟೀಕ ವಂಶ ಸಂಜಾತರಾದ ಶ್ರೀ ರಾಮಚಂದ್ರಾಚಾರ್ಯರಿಗೆ ತುರ್ಯಾಶ್ರಮವನ್ನು ನೀಡಿ ಶ್ರೀ ರಘುನಂದನ-ತೀರ್ಥರೆಂಬ ಅಭಿದಾನದೊಂದಿಗೆ ದ್ವೈತ ವೇದಾಂತ ದಿಗ್ವಿಜಯ ವಿದ್ಯಾ ಸಿಂಹಾಸನ-ದಲ್ಲಿ ತಮ್ಮ ಅಮೃತ ಹಸ್ತಗಳಿಂದ ಪಟ್ಟಾಭಿಷೇಕವನ್ನು ಮಾಡಿದರು.

**ಶ್ರೀ ಸುಜನೇಂದ್ರತೀರ್ಥರು (ರಾಯರ ಮಠ)** ಕಾರ್ತೀಕ ಬಹುಳ ಅಷ್ಟಮಿ - ನಂಜನಗೂಡು - **ಸುಯುಕ್ತಿಜಾಲಸಹಿತಂ ಸುಜನಾಮೋದಕಾರಿಣಂ । ಸುರೋ-ತ್ತಮಗುರುಪ್ರಖ್ಯಂ ಸುಜನೇಂದ್ರಗುರುಂ ಭಜೇ ॥**

* * * * *

## ಕಾರ್ತಿಕ ॥ ಬಹುಳ ॥ ಏಕಾದಶೀ ॥

ಯುಧಿಷ್ಠಿರಃ – ಕಥಯಸ್ವ ಪ್ರಸಾದೇನ ಮಯಿ ಸ್ನೇಹಾಜ್ಜನಾರ್ದನ । ಕಾರ್ತಿಕಸ್ಯಾಸಿತೇ ಪಕ್ಷೇ ಕಿನ್ನಾಮ್ನೈಕಾದಶೀ ಭವೇತ್ ॥1॥ ಯುಧಿಷ್ಠಿರನು ಹೇಳಿದನು – ಎಲೈ ಜನಾರ್ದನನೇ! ಕಾರ್ತಿಕಮಾಸದ ಕೃಷ್ಣ ಏಕಾದಶಿಯ ಹೆಸರೇನು? ಎಂಬುದನ್ನು ನನ್ನಲ್ಲಿರುವ ಸ್ನೇಹದಿಂದ ಹೇಳು. ಶ್ರೀಕೃಷ್ಣಃ – ಶ್ರೂಯತಾಂ ನೃಪ-ಶಾರ್ದೂಲ ಕಥಯಾಮಿ ತವಾಗ್ರತಃ । ಕಾರ್ತಿಕೇ ಕೃಷ್ಣಪಕ್ಷೇ ತು ರಮಾ ನಾಮ ಸುಶೋಭನಾ ॥2॥ ಶ್ರೀಕೃಷ್ಣನು ಹೇಳಿದನು – ಎಲೈ ಯುಧಿಷ್ಠಿರನೇ! ಕೇಳು ಕಾರ್ತಿಕಕೃಷ್ಣಪಕ್ಷದ ಏಕಾದಶಿಗೆ ''ರಮಾ'' ಎಂದು ಹೆಸರು. ಏಕಾದಶೀ ಸಮಾ-ಖ್ಯಾತಾ ಮಹಾಪಾಪಹರಾ ಪರಾ । ಅಸ್ಯಾಃ ಪ್ರಸಂಗತೋ ರಾಜನ್ ಮಾಹಾತ್ಮ್ಯಂ ಪ್ರವದಾಮಿ ತೇ ॥3॥ ಈ ರಮಾ ಎಂಬ ಏಕಾದಶಿಯು ಮಹಾಪಾಪಗಳನ್ನೆಲ್ಲಾ ನಾಶ ಮಾಡುತ್ತದೆ. ಇದರ ಪ್ರಸಂಗದಿಂದ ಇದರ ಮಹಿಮೆಯನ್ನೂ ಹೇಳುತ್ತೇನೆ ಕೇಳು. ಮುಚುಕುಂದ ಇತಿ ಖ್ಯಾತೋ ಬಭೂವ ಭೂಪತಿಃ ಪುರಾ । ದೇವೇಂದ್ರೇಣ ಸಮಂ ತಸ್ಯ ಮಿತ್ರತ್ವಮಭವನ್ನೃಪ ॥4॥ ಹಿಂದೆ ಮುಚುಕುಂದನೆಂಬ ರಾಜನಿದ್ದನು. ಅವನು ದೇವೇಂದ್ರನಿಗೆ ಸ್ನೇಹಿತನಾಗಿದ್ದನು. ಯಮೇನ ವರುಣೇನೈವಂ ಕುಬೇರೇಣ ಸಮಂ ತಥಾ । ವಿಭೀಷಣೇನ ಯಸ್ಯೈವಂ ಸಖಿತ್ವಮಭವತ್ ಪುರಾ ॥5॥ ಆ ಮುಚುಕುಂದನು ಯಮ, ವರುಣ, ಕುಬೇರ, ವಿಭೀಷಣರೊಡನೆಯೂ ಸ್ನೇಹ ಮಾಡಿಕೊಂಡಿದ್ದನು. ವಿಷ್ಣುಭಕ್ತಃ ಸತ್ಯಸಂಧೋ ಬಭೂವ ಸ ನೃಪತಿಃ ಪುರಾ । ತಸ್ಯೈವಂ ಶಾಸತೋ ರಾಜನ್ ರಾಜ್ಯಂ ನಿಹತಕಂಟಕಮ್ ॥6॥ ಆ ಮುಚುಕುಂದನು ವಿಷ್ಣುಭಕ್ತನು. ಸತ್ಯವಾದಿಯು. ಅವನು ರಾಜ್ಯವಾಳುತ್ತಿರಲಾಗಿ ರಾಜ್ಯವೆಲ್ಲವೂ ಈತಿಬಾಧೆಯಿಲ್ಲದೇ ಇದ್ದಿತು. ಬಭೂವ ದುಹಿತಾ ಗೇಹೇ ಚಂದ್ರಭಾಗಾ ಸರಿದ್ವರಾ । ಶೋಭನಾಯ ಚ ಸಾ ದತ್ತಾ ಚಂದ್ರಸೇನಸುತಾಯ ವೈ ॥7॥ ಆ ಮುಚುಕುಂದನಿಗೆ ನದಿಗಳಲ್ಲಿ ಪ್ರಸಿದ್ಧವಾದ ಚಂದ್ರಭಾಗಾ ಎಂಬ ಮಗಳಿದ್ದಳು. ಆಕೆಯನ್ನು ಚಂದ್ರ-ಸೇನನ ಮಗನಾದ ಶೋಭನನಿಗೆ ಮದುವೆ ಮಾಡಿಕೊಟ್ಟಿದ್ದನು. ಸ ಕದಾಚಿತ್ಸಮಾಯಾತಃ ಶ್ವಶುರಸ್ಯ ಗೃಹೇ ನೃಪ । ಏಕಾದಶೀವ್ರತದಿನಂ ಸಮಾಯಾತಂ ಸುಪುಣ್ಯದಮ್ ॥8॥ ಆ ಶೋಭನನು ಒಂದು ಸಾರಿ ಮಾವನ ಮನೆಗೆ ಬಂದನು.

ಆಗ ಈ ಹರಿಯ ಪುಣ್ಯದಿನವಾದ ಏಕಾದಶಿಯು ಬಂದಿತು. ಸಮಾಗತೇ ವ್ರತದಿನೇ ಚಂದ್ರಭಾಗಾ ತ್ವಚಿಂತಯತ್ । ಕಿಂ ಭವಿಷ್ಯತಿ ದೇವೇಶ ಮಮ ಭರ್ತಾತಿದುರ್ಬಲಃ ॥9॥ ಕ್ಷುಧಾಂ ನ ಕ್ಷಮತೇ ಸೋಢುಂ ಪಿತಾ ಚೈವೋಗ್ರಶಾಸನಃ । ಪಟಹಸ್ತಾಡ್ಯತೇ ಯಸ್ಯ ಸಂಪ್ರಾಪ್ತೇ ದಶಮೀದಿನೇ ॥10॥ ನ ಭೋಕ್ತವ್ಯಂ ನ ಭೋಕ್ತವ್ಯಂ ಸಂಪ್ರಾಪ್ತೇ ತು ಹರೇರ್ದಿನೇ । ಶ್ರುತ್ವಾ ಪಟಹನಿರ್ಘೋಷಂ ಶೋಭನಸ್ತ್ವಬ್ರವೀತ್ ಪ್ರಿಯಾಮ್ ॥11॥ ಈ ಏಕಾದಶಿವ್ರತದಿನವು ಬರಲು ಚಂದ್ರಭಾಗೆಯು ಯೋಚಿಸಿದಳು. ಎಲೈ ಸ್ವಾಮಿಯೇ! ಏನಾಗುವುದೋ ಕಾಣೆನಲ್ಲ. ನನ್ನ ಗಂಡನು ಬಹು ದುರ್ಬಲನು. ಅವನು ಹಸಿವನ್ನು ತಡೆಯಲಾರನು. ನನ್ನ ತಂದೆಯಾದರೋ ಕಠಿಣ ಅಪ್ಪಣೆ-ಯುಳ್ಳವನು ಎಂದು ಕೊಳ್ಳುತ್ತಿದ್ದಳು. ಆ ಮುಚುಕುಂದನು ದಶಮಿಯ ದಿನವೇ 'ನಾಳೆ ಏಕಾದಶಿಯು ಬರುತ್ತದೆ. ಈ ಏಕಾದಶಿಯಾದ ಹರಿದಿನದಲ್ಲಿ ಯಾರೂ ಊಟ ಮಾಡಕೂಡದು. ಊಟಮಾಡಕೂಡದು' ಎಂದು ತಮಟೆಯನ್ನು ಬಡಿ-ಸುತ್ತಾ ಸಾರಿಸಿದನು. ಈ ಶೋಭನನು ಆ ಡಂಗೂರವನ್ನು ಕೇಳಿ ಹೆಂಡತಿಯನ್ನು ಕುರಿತು ಇಂತೆಂದನು.

ಶೋಭನಃ – ಕಿಂ ಕರ್ತವ್ಯಂ ಮಯಾ ಕಾಂತೇ ದೇಹಿ ಶಿಕ್ಷಾಂ ವರಾನನೇ ॥12॥ ಶೋಭನನು ಹೇಳಿದನು – ಎಲೈ ಕಾಂತೆಯೇ! ಈಗ ಏನು ಮಾಡಬೇಕು? ನನಗೆ ಹೇಳು. ಚಂದ್ರಭಾಗಾ – ಮತ್ಪಿತುರ್ವೇಶ್ಮನಿ ಪ್ರಭೋ ಭೋಕ್ತವ್ಯಂ ನಾದ್ಯ ಕೇನಚಿತ್ । ಗಜೈರಶ್ವೈಶ್ಚ ಕಲಭೈರನ್ಯೈಃ ಪಶುಭಿರೇವ ಚ ॥13॥ ತೃಣಮನ್ನಂ ತಥಾ ವಾರಿ ನ ಭೋಕ್ತವ್ಯಂ ಹರೇರ್ದಿನೇ । ಮಾನವೈಶ್ಚ ಕುತಃ ಕಾಂತ ಭುಜ್ಯತೇ ಹರಿವಾಸರೇ ॥14॥ ಚಂದ್ರಭಾಗೆಯು ಹೇಳಿದಳು – ಎಲೈ ಸ್ವಾಮಿಯೇ! ನಮ್ಮ ತಂದೆಯ ಮನೆಯಲ್ಲಿ ಒಬ್ಬರೂ ಊಟಮಾಡಕೂಡದು. ಆನೆ, ಕುದುರೆ, ಆನೆಯ ಮರಿ, ಬೇರೆ ಪಶುಗಳು ಇವುಗಳೊಂದೂ ಕೂಡ ಹರಿಯ ದಿನದಲ್ಲಿ ಆಹಾರವನ್ನು ತಿನ್ನ-ಕೂಡದು. ನೀರನ್ನೂ ಕುಡಿಯಕೂಡದು. ಹೀಗಿರುವಲ್ಲಿ ಮನುಷ್ಯರು ಏಕಾದಶಿ-ಯ ದಿನದಲ್ಲಿ ಊಟಮಾಡುವುದೆಲ್ಲಿ ಬಂದಿತು? ಯದಿ ತ್ವಂ ಭೋಕ್ಷ್ಯಸೇ ಕಾಂತ ತತೋ ಗರ್ಹಾಂ ಪ್ರಯಾಸ್ಯಸಿ । ಏವಂ ವಿಚಾರ್ಯ ಮನಸಾ ಸುದೃಢಂ ಮಾನಸಂ ಕುರು ॥15॥ ಎಲೈ ಕಾಂತನೇ! ನೀನು ಈ ದಿನ ಊಟ ಮಾಡಿದರೆ ಅನಂತರ ನಿಂದೆಯನ್ನು ಹೊಂದುತ್ತೀಯೆ. ಇದನ್ನು ಚೆನ್ನಾಗಿ ಯೋಚಿಸಿ ಮನಸ್ಸನ್ನು

ದೃಢಮಾಡಿಕೋ. ಶೋಭನಃ – ಸತ್ಯಮೇತತ್ ಪ್ರಿಯೇ ವಾಕ್ಯಂ ಕರಿಷ್ಯೇಹಮುಪೋಷಣಮ್ । ದೈವೇನ ವಿಹಿತಂ ಯದ್ಧಿ ತತ್ತಥೈವ ಭವಿಷ್ಯತಿ ॥16॥ ಶೋಭನನು ಹೇಳಿದನು. ಎಲೈ ಕಾಂತೆಯೇ! ನೀನು ಹೇಳಿದುದು ಸರಿ. ನಾನೂ ಕೂಡ ಉಪವಾಸವನ್ನು ಮಾಡುತ್ತೇನೆ. ದೇವರು ಹಣೆಯಲ್ಲಿ ಹೇಗೆ ಬರೆದಿದ್ದಾನೋ ಹಾಗೆಯೇ ಆಗಲಿ. ಕೃಷ್ಣಃ – ಇತಿ ದೃಢಾಂ ಮತಿಂ ಕೃತ್ವಾ ಚಕಾರ ನಿಯಮಂ ವ್ರತೇ । ಕ್ಷುಧಯಾ ಪೀಡಿತತನುಃ ಸ ಬಭೂವಾತಿದುಃಖಿತಃ ॥17॥ ಕೃಷ್ಣನು ಹೇಳಿದನು – ಅವನು ಈ ರೀತಿಯಾಗಿ ದೃಢವಾದ ಬುದ್ಧಿಯನ್ನು ಮಾಡಿಕೊಂಡನು. ಹಸಿವಿನಿಂದ ಪೀಡಿತನಾಗಿ ದುಃಖಿಗೊಂಡನು. ಇತಿ ಚಿಂತಯತಸ್ತಸ್ಯ ಆದಿತ್ಯೋಽಸ್ತಮಗಾದ್ ಗಿರಿಮ್ । ವೈಷ್ಣವಾನಾಂ ನರಾಣಾಂ ಸಾ ನಿಶಾ ಹರ್ಷವಿವರ್ಧಿನೀ ॥18॥ ಹರಿಪೂಜಾರತಾನಾಂ ಚ ಜಾಗರಾಸಕ್ತಚೇತಸಾಂ । ಬಭೂವ ನೃಪಶಾರ್ದೂಲ ಶೋಭನಸ್ಯಾತಿದುಃಖದಾ ॥19॥ ಆ ಶೋಭನನು ಹೀಗೆ ಯೋಚಿಸುತ್ತಿರುವಲ್ಲಿ ಸೂರ್ಯನು ಅಸ್ತಂಗತನಾದನು. ಆ ರಾತ್ರಿಯು ವಿಷ್ಣುಭಕ್ತಿಯುಳ್ಳ ಮನುಷ್ಯರಿಗೂ ಹರಿಪೂಜೆಯಲ್ಲಿ ಮನಸ್ಸುಳ್ಳವರಿಗೂ ಜಾಗರಣೆಯನ್ನು ಮಾಡಬೇಕೆಂದಿರುವವರಿಗೂ ಹರ್ಷವನ್ನು ಹೆಚ್ಚಿಸುತ್ತಿದ್ದಿತು. ಆದರೆ ಶೋಭನನಿಗೆ ಮಾತ್ರ ಬಹು ದುಃಖವನ್ನು ಕೊಟ್ಟಿದ್ದಿತು. ರವೇರುದಯವೇಲಾಯಾಂ ಶೋಭನಃ ಪಂಚತಾಂ ಗತಃ । ದಾಹಯಾಮಾಸ ರಾಜಾ ತಂ ರಾಜಯೋಗ್ಯೈಶ್ಚ ದಾರುಭಿಃ ॥20॥ ಸೂರ್ಯನು ಹುಟ್ಟುವ ಹೊತ್ತಿಗೆ ಈ ಶೋಭನನು ಸತ್ತುಹೋಗಿದ್ದನು. ಇದನ್ನು ತಿಳಿದು ರಾಜನು ರಾಜಯೋಗ್ಯವಾದ ಸೌದೆಗಳಿಂದ (ಗಂಧದ ಸೌದೆ) ಅವನನ್ನು ಸುಡಿಸಿದನು.

ಚಂದ್ರಭಾಗಾ ನಾಽಽತ್ಮದೇಹಂ ದದಾಹ ಪತಿನಾ ಸಹ । ಕೃತ್ವೋರ್ಧ್ವದೈಹಿಕಂ ತಸ್ಯ ತಸ್ಥೌ ಜನಕವೇಶ್ಮನಿ ॥21॥ ಚಂದ್ರಭಾಗೆಯು ಗಂಡನೊಡನೆ ಸಹಗಮನ ಮಾಡಲಿಲ್ಲ. ಅವನಿಗೆ ಅಪರಕರ್ಮಗಳನ್ನು ಮಾಡಿ ತಂದೆಯ ಮನೆಯಲ್ಲಿಯೇ ಇದ್ದಳು. ಶೋಭನಶ್ಚ ನೃಪಶ್ರೇಷ್ಠ ರಮಾವ್ರತಪ್ರಭಾವತಃ । ಪ್ರಾಪ್ತೋ ದೇವಪುರಂ ರಮ್ಯಂ ಮಂದರಾಚಲಸಾನುನಿ ॥22॥ ಶೋಭನನು ರಮಾವ್ರತದ ಪ್ರಭಾವದಿಂದ ಮಂದರಪರ್ವತದ ತಪ್ಪಲಿನಲ್ಲಿದ್ದ ದೇವಪುರದಲ್ಲಿ ಹುಟ್ಟಿ ದೊಡ್ಡವನಾದನು. ಅನುಪಮಮನಾಧೃಷ್ಯಮಸಂಖ್ಯೇಯಗುಣಾನ್ವಿತಮ್ । ಹೇಮಸ್ತಂಭಮಯೈಃ

ಸೌಧೈಃ ರತ್ನವೈಡೂರ್ಯಮಂಡಿತೈಃ ।।23।। ಸ್ಫಾಟಿಕೈರ್ವಿವಿಧಾಕಾರ್ಯೈರ್ವಿಚಿತ್ರೈರು-ಪಶೋಭಿತೈಃ । ಸಿಂಹಾಸನಸಮಾರೂಢಃ ಸುಶ್ವೇತಚ್ಛತ್ರಚಾಮರೈಃ ।।24।। ಕಿರೀಟ-ಕುಂಡಲಯುತೋ ಹಾರಕೇಯೂರಭೂಷಿತಃ । ಸ್ತೂಯಮಾನೈಶ್ಚ ಗಂಧರ್ವೈಃ ಅಪ್ಸರೋಗಣಸೇವಿತಃ ।।25।। ಆ ದೇವಪುರವು ಉತ್ಕೃಷ್ಟವಾಗಿದ್ದಿತು. ಶತ್ರುಗಳು ತೊಂದರೆ ಪಡಿಸಲಾಗದುದಾಗಿತ್ತು. ಅಧಿಕವಾದ ಗುಣಗಳಿಂದ ಕೂಡಿದ್ದಿತು. ಆ ಊರಿನಲ್ಲಿ ಒಂದು ಅರಮನೆಯಿದ್ದಿತು. ಅದು ರತ್ನ ವೈಡೂರ್ಯಗಳಿಂದ ಕೂಡಿದ ಚಿನ್ನದ ಕಂಬಗಳಿಂದ ಕೂಡಿದ್ದಿತು. ಅನೇಕವಾದ ಸ್ಫಟಿಕಶಿಲೆಗಳಲ್ಲಿ ಚಿತ್ರವನ್ನು ಕೆತ್ತಿಸಿ ಶೋಭಾಯಮಾನವಾಗಿ ಮಾಡಲ್ಪಟ್ಟದ್ದಿತು. ಅಲ್ಲಿ ಶೋಭನನು ರಾಜನಾಗಿ ಹುಟ್ಟಿ ಸಿಂಹಾಸನವನ್ನು ಹೊಂದಿದ್ದನು. ಅಕ್ಕಪಕ್ಕಗಳಲ್ಲಿ ಚಾಮರಗಳನ್ನು ಬೀಸುತ್ತಿದ್ದರು. ಅವನು ಉತ್ತಮವಾದ ಕಿರೀಟವನ್ನು ಹಾಕಿಕೊಂಡಿದ್ದನು. ಭುಜಕೀರ್ತಿಗಳಿಂದ ಭೂಷಿತನಾಗಿದ್ದನು. ಅವನನ್ನು ಗಂಧರ್ವರು ಹೊಗಳುತ್ತಿದ್ದರು. ಅಪ್ಸರರು ಸೇವಿಸುತ್ತಿದ್ದರು. ಶೋಭನಃ ಶೋಭತೇ ಯತ್ರ ರಾಜರಾಜೋಽಪರೋ ಯಥಾ । ಸೋಮಶರ್ಮೇತಿ ವಿಖ್ಯಾತೋ ಮುಚುಕುಂದಪುರೇಽಭವತ್ ।।26।। ಈ ರೀತಿ-ಯಾಗಿ ದೇವಪುರದಲ್ಲಿ ಶೋಭನನು ಬೆಳಗುತ್ತಿದ್ದನು. ಮುಚುಕುಂದನ ಪುರದಲ್ಲಿ ಸೋಮಶರ್ಮನೆಂಬವನೊಬ್ಬನಿದ್ದನು. ತೀರ್ಥಯಾತ್ರಾಪ್ರಸಂಗೇನ ಭ್ರಮನ್ ವಿಪ್ರೋ ದದರ್ಶ ತಮ್ । ನೃಪಜಾಮಾತರಂ ಜ್ಞಾತ್ವಾ ತತ್ಸಮೀಪಂ ಜಗಾಮ ಸಃ ।।27।। ಆ ಸೋಮಶರ್ಮನು ತೀರ್ಥಯಾತ್ರೆಗೆ ಹೋಗಿದ್ದವನು ಆ ಶೋಭನನ್ನು ನೋಡಿ ಇವನು ನಮ್ಮ ದೊರೆಯ ಅಳಿಯನು ಎಂದು ತಿಳಿದು ಅಲ್ಲಿಗೆ ಹೋದನು. ಶೋಭನೋಽಪಿ ತದಾ ಜ್ಞಾತ್ವಾ ಸೋಮಶರ್ಮಾಣಮಾಗತಮ್ । ಆಸನಾದುತ್ಥಿತಃ ಶೀಘ್ರಂ ನಮಶ್ಚಕ್ರೇ ದ್ವಿಜೋತ್ತಮಮ್ ।।28।। ಶೋಭನನು ಸೋಮಶರ್ಮನನ್ನು ಗುರುತಿಸಿದನು. ಅವನು ಬರಲು ಆಸನದಿಂದೆದ್ದು ಅವನನ್ನು ನಮಸ್ಕರಿಸಿ ಸತ್ಕರಿಸಿದನು. ಚಕಾರ ಕುಶಲಂ ಪ್ರಶ್ನಂ ಶ್ವಶುರಸ್ಯ ನೃಪಸ್ಯ ಚ । ಕಾಂತಾಯಾಶ್ಚಂದ್ರ-ಭಾಗಾಯಾಃ ತಥೈವ ನಗರಸ್ಯ ಚ ।।29।। ಆ ಸೋಮಶರ್ಮನನ್ನು ಕುರಿತು ತನ್ನ ಮಾವನ ಹಾಗೂ ಹೆಂಡತಿಯಾದ ಚಂದ್ರಭಾಗೆಯ ಅಂತೆಯೇ ಪಟ್ಟಣಿಗರೆಲ್ಲರ ಕುಶಲವನ್ನು ಕೇಳಿದನು.

ಸೋಮಶರ್ಮಃ – ಕುಶಲಂ ವರ್ತತೇ ರಾಜನ್ನಾಶ್ಚರ್ಯಂ ವಿದ್ಯತೇಽದ್ಭುತಮ್ । ಪರಂ ವಿಚಿತ್ರಂ ಸುಚಿರಂ ನ ದೃಷ್ಟಂ ಕೇನಚಿತ್ ಕ್ವಚಿತ್ ॥30॥ ಸೋಮಶರ್ಮನು ಹೇಳಿದನು – ಎಲೈ ರಾಜನೇ! ಕುಶಲಿಯಾಗಿದ್ದೀಯಾ? ಇದು ಬಹು ಆಶ್ಚರ್ಯಕರವಾಗಿದೆ. ಈ ಪಟ್ಟಣವು ಬಹು ಆಶ್ಚರ್ಯದಿಂದ ಕೂಡಿದೆ. ಇಂತಹ ಆಶ್ಚರ್ಯವನ್ನು ಯಾರು ಎಲ್ಲೂ ಕಾಣರು. ಏತದಾಚಕ್ಷ್ವ ನೃಪತೇ ಕುತಃ ಪ್ರಾಪ್ತ-ಮಿದಂ ತ್ವಯಾ । ತತ್ತ್ವಂ ಕಥಯ ರಾಜೇಂದ್ರ ತತ್ಕರಿಷ್ಯಾಮಿ ನಾನ್ಯಥಾ ॥31॥ ಎಲೈ ದೊರೆಯೇ! ಈ ಸೌಭಾಗ್ಯವೆಲ್ಲವೂ ನಿನಗೆ ಹೇಗೆ ಬಂದಿತು? ಅದೆಲ್ಲವನ್ನೂ ಸರಿಯಾಗಿ ಹೇಳು. ನಾನೂ ಹಾಗೇ ಮಾಡುತ್ತೇನೆ. ಶೋಭನಃ – ಕಾರ್ತಿಕಸ್ಯಾಸಿತೇ ಪಕ್ಷೇ ಯಾ ನಾಮ್ನೈಕಾದಶೀ ರಮಾ । ತಾಮುಪೋಷ್ಯ ಮಯಾ ಪ್ರಾಪ್ತಂ ದ್ವಿಜೇಂದ್ರ ಪುರಮೀದೃಶಮ್ ॥32॥ ಶೋಭನನು ಹೇಳಿದನು – ಎಲೈ ಬ್ರಾಹ್ಮಣನೇ! ಕಾರ್ತಿಕ -ಮಾಸದ ಬಹುಳದಲ್ಲಿ ರಮಾ ಏಕಾದಶಿಯು ಬರುತ್ತದೆ. ಅದರಲ್ಲಿ ಉಪವಾಸ ಮಾಡಿದುದರಿಂದ ಇಂತಹ ಸಂಪತ್ತನ್ನು ಹೊಂದಿದೆನು. ಮಯ್ಯೈತದ್ವಿಹಿತಂ ವಿಪ್ರ ಶ್ರದ್ಧಾಹೀನಂ ವ್ರತೋತ್ತಮಮ್ । ತೇನಾಹಮಧ್ರುವಂ ಮನ್ಯೇ ಧ್ರುವಂ ಭವತಿ ತಚ್ಛೃಣು ॥33॥ ಎಲೈ ವಿಪ್ರನೇ! ನಾನು ಭಕ್ತಿಯಿಲ್ಲದವನಾಗಿಯೇ ಆ ಏಕಾ-ದಶಿಯನ್ನು ಆಚರಿಸಿದೆನು. ಅದರಿಂದ ಇದು ಬಂದಿತು. ಇದನ್ನು ಶಾಶ್ವತವಲ್ಲವೆಂದು ತಿಳಿದಿದ್ದೇನೆ. ಮುಚುಕುಂದಸ್ಯ ದುಹಿತಾ ಚಂದ್ರಭಾಗಾ ಸುಶೋಭನಾ । ತಸ್ಯೈ ಕಥಯ ವೃತ್ತಾಂತಂ ರಾಜಕನ್ಯಾಗ್ರತೋ ದ್ವಿಜ ॥34॥ ಮುಚುಕುಂದನ ಮಗಳಾದ ಚಂದ್ರಭಾಗೆಯು ಇರುವಳಲ್ಲ! ಆಕೆಯ ಮುಂದೆ ಈ ಕಥೆಯನ್ನು ತಿಳಿಸು. ಶ್ರೀಕೃಷ್ಣಃ – ಸ ಶ್ರುತ್ವಾ ವಚನಂ ತಸ್ಯ ಮುಚುಕುಂದಪುರಂ ಗತಃ । ಉವಾಚ ಸರ್ವಂ ವೃತ್ತಾಂತಂ ಚಂದ್ರಭಾಗಾಗ್ರತೋ ದ್ವಿಜಃ ॥35॥ ಶ್ರೀಕೃಷ್ಣನು ಹೇಳಿದನು – ಸೋಮಶರ್ಮನು ಮುಚುಕುಂದನ ಪಟ್ಟಣಕ್ಕೆ ಹೋಗಿ ಆ ಚಂದ್ರಭಾಗೆಗೆ ಈ ಸಮಾಚಾರಗಳೆಲ್ಲವನ್ನೂ ಹೇಳಿದನು. ಸೋಮಶರ್ಮಃ – ಪ್ರತ್ಯಕ್ಷಂ ದಯಿತೋ ಕಾಂತಃ ತವ ದೃಷ್ಟೋ ಮಯಾ ಶುಭೇ । ಇಂದ್ರತುಲ್ಯಮಹಾಧೃಷ್ಯಂ ದೃಷ್ಟಂ ತಸ್ಯ ಪುರಂ ಮಯಾ । ಅಧ್ರುವಂ ತೇನ ತತ್ಪ್ರೋಕ್ತಂ ಧ್ರುವಂ ಭವತಿ ತತ್ಕುರು ॥26॥ ಸೋಮಶರ್ಮನು ಹೇಳಿದನು – ಎಲೈ ರಾಜಪುತ್ರಿಯೇ! ನಿನ್ನ ಗಂಡನನ್ನು ನಾನು ಪ್ರತ್ಯಕ್ಷವಾಗಿ ನೋಡಿದೆನು. ಅವನು ಇಂದ್ರನಿಗೆ ಸಮನಾಗಿದ್ದನು. ಅವನು ಪರಾಕ್ರಮಿಯಾಗಿದ್ದಾನೆ. ಅವನ ಪಟ್ಟಣವನ್ನು

ನೋಡಿದೆನು. ಅವನು ಅದೆಲ್ಲವೂ ಶಾಶ್ವತವಲ್ಲವೆಂದು ಹೇಳಿದನು. ಅದು ಶಾಶ್ವತವಾಗುವಂತೆ ಮಾಡು. ಚಂದ್ರಭಾಗಾ – ತತ್ರ ಮಾಂ ನಯ ವಿಪ್ರರ್ಷೇ ಪತಿದರ್ಶನಲಾಲಸಾಮ್ । ಆತ್ಮನೋ ವ್ರತಪುಣ್ಯೇನ ಕರಿಷ್ಯಾಮಿ ಪುರಂ ಧ್ರುವಮ್ ॥37॥ ಚಂದ್ರಭಾಗೆಯು ಹೇಳಿದಳು – ಎಲೈ ವಿಪ್ರನೇ! ಅಲ್ಲಿಗೆ ನನ್ನನ್ನು ಕರೆದುಕೊಂಡು ಹೋಗು. ಗಂಡನನ್ನು ನೋಡಬೇಕೆಂಬ ಆಸೆ ಬಲವಾಗಿದೆ. ನನ್ನ ವ್ರತದ ಪುಣ್ಯಗಳಿಂದ ಆ ಪಟ್ಟಣವನ್ನು ಶಾಶ್ವತವಾಗುವಂತೆ ಮಾಡುತ್ತೇನೆ. ಆವಯೋರ್ದ್ವಿಜ ಸಂಯೋಗೋ ಯಥಾ ಭವತಿ ತತ್ಕುರು । ಪ್ರಾಪ್ಯತೇ ಹಿ ಮಹ-ತ್ಪುಣ್ಯಂ ಕೃತ್ವಾ ಯೋಗಂ ವಿಯುಕ್ತಯೋಃ ॥38॥ ಎಲೈ ಬ್ರಾಹ್ಮಣನೇ! ನಮ್ಮಿಬ್ಬರಿಗೂ ಸೇರುವಿಕೆಯನ್ನು ಮಾಡು. ಅಗಲಿರುವ ನಮ್ಮನ್ನು ಸೇರಿಸಿದರೆ ನಿನಗೆ ಬಹು ಪುಣ್ಯವು ಬರುತ್ತದೆ. ಶ್ರೀಕೃಷ್ಣಃ – ಇತಿ ಶ್ರುತ್ವಾ ಸಹ ತಯಾ ಸೋಮಶರ್ಮಾ ಜಗಾಮ ಹ । ಆಶ್ರಮಂ ವಾಮದೇವಸ್ಯ ಮಂದರಾಚಲಸನ್ನಿಧೌ ॥39॥ ಶ್ರೀಕೃಷ್ಣನು ಹೇಳಿದನು – ಇದನ್ನು ಕೇಳಿ ಆ ಸೋಮಶರ್ಮನು ಆಕೆಯನ್ನು ಕರೆದುಕೊಂಡು ಮಂದರಪರ್ವತದ ಬಳಿಯಲ್ಲಿರುವ ವಾಮದೇವನ ಆಶ್ರಮಕ್ಕೆ ಹೋದನು. ಋಷಿಮಂತ್ರಪ್ರಭಾವೇಣ ವಿಷ್ಣುವಾಸರಸೇವನಾತ್ । ದಿವ್ಯದೇಹಾ ಬಭೂವಾಸೌ ದಿವ್ಯಾಂ ಗತಿಮವಾಪ ಹ ॥40॥ ಅಲ್ಲಿ ಆ ಋಷಿಯ ಮಂತ್ರದ ಪ್ರಭಾವದಿಂದಲೂ ಹರಿವಾಸರವನ್ನು ಸೇವಿಸಿದ್ದರಿಂದಲೂ ಆಕೆಯು ದಿವ್ಯ ದೇಹವನ್ನು ಹೊಂದಿ ಉತ್ತಮಗತಿಯನ್ನು ಹೊಂದಿದಳು. ಪತ್ಯುಃ ಸಮೀಪಮಗಮತ್ ಪ್ರಹರ್ಷೋತ್ಫು ಲ್ಲಲೋಚನಾ । ಜಹರ್ಷ ಶೋಭನೋತೀವ ದೃಷ್ಟ್ವಾ ಕಾಂತಾಂ ಸಮಾಗತಾಮ್ ॥41॥ ಸಂತೋಷಪಟ್ಟುಕೊಂಡು ಗಂಡನ ಸಮೀಪಕ್ಕೆ ಹೋದಳು. ಆಗ ಆಕೆಯನ್ನು ನೋಡಿ ಶೋಭನನು ಬಹು ಸಂತೋಷಪಟ್ಟನು. ಸಮಾಹೂಯ ಸ್ವಕೇ ವಾಮೇ ಪಾರ್ಶ್ವೇ ತಾಂ ಸನ್ನ್ಯವೇಶಯತ್ । ಅಥೋವಾಚ ಪ್ರಿಯಂ ಹರ್ಷಾಚ್ಚಂದ್ರಭಾಗಾ ಪ್ರಿಯಂ ವಚಃ ॥42॥ ಶೋಭನನು ಆಕೆಯನ್ನು ಕರೆದು ತನ್ನ ಎಡಭಾಗದಲ್ಲಿ ಕೂಡಿಸಿಕೊಂಡನು. ಅನಂತರ ಸಂತೋಷದಿಂದ ಆಕೆಯು ಪ್ರಿಯನನ್ನು ಕುರಿತು ಇಂತೆಂದಳು.

ಚಂದ್ರಭಾಗಾ – ಶೃಣು ಕಾಂತ ಹಿತಂ ವಾಕ್ಯಂ ಯತ್ಪುಣ್ಯಂ ವಿದ್ಯತೇ ಮಯಿ । ಅಷ್ಟವರ್ಷಾಧಿಕಾ ಜಾತಾ ಯದಾಹಂ ಪಿತೃವೇಶ್ಮನಿ ॥43॥ ಚಂದ್ರಭಾಗೆಯು

ಹೇಳಿದಳು – ಎಲೈ ಗಂಡನೇ ಕೇಳು! ನನ್ನಲ್ಲಿರುವ ಪುಣ್ಯವನ್ನು ಹೇಳುತ್ತೇನೆ. ನಾನು ನನ್ನ ತಂದೆಯ ಮನೆಯಲ್ಲಿ ಎಂಟುವರ್ಷಗಳಾದ ಮೇಲೆ ಇದುವರೆಗೂ ಮಾಡಿರುವ ಪುಣ್ಯವು ನನ್ನಲ್ಲಿದೆ. ತತಃ ಪ್ರಭೃತಿ ಯಚ್ಚೀರ್ಣಂ ಮಯಾ ಚೈಕಾ-ದಶೀವ್ರತಮ್ । ತೇನ ಪುಣ್ಯಪ್ರಭಾವೇಣ ಭವಿಷ್ಯತಿ ಪುರಂ ಧ್ರುವಮ್ । ಸರ್ವ-ಕಾಮಸಮೃದ್ಧಂ ಚ ಯಾವದಾಭೂತಸಂಪ್ಲವಮ್ ॥44॥ ಆ ಎಂಟುವರ್ಷಗಳಾದ ಮೇಲಿನಿಂದ ಇದುವರೆಗೂ ಏಕಾದಶಿಯ ವ್ರತವನ್ನು ಆಚರಿಸಿದ ಪುಣ್ಯವು ನನ್ನಲ್ಲಿರುವುದರಿಂದ ಆ ಪುಣ್ಯದ ಪ್ರಭಾವದಿಂದ ಈ ಪಟ್ಟಣವನ್ನು ಶಾಶ್ವತವನ್ನಾಗಿ ಮಾಡುತ್ತೇನೆ. ಅದರಲ್ಲಿಯೂ ಸರ್ವಕಾಮಗಳಿಂದ ಕೂಡಿದುದನ್ನಾಗಿ ಪ್ರಳಯ-ಕಾಲದವರೆಗೂ ಇರುವಂತೆ ಮಾಡುತ್ತೇನೆ. ಶ್ರೀಕೃಷ್ಣಃ – ಏವಂ ಸಾ ನೃಪಶಾರ್ದೂಲ ರಮತೇ ಪತಿನಾ ಸಹ । ದಿವ್ಯಭೋಗಾ ದಿವ್ಯರೂಪಾ ದಿವ್ಯಾಭರಣಭೂಷಿತಾ ॥45॥ ಶ್ರೀಕೃಷ್ಣನು ಹೇಳಿದನು – ಈ ರೀತಿಯಾಗಿ ಹೇಳಿ ಅದರಂತೆ ಮಾಡಿ ದಿವ್ಯಭೋಗವುಳ್ಳವಳಾಗಿ ದಿವ್ಯವಾದ ಆಭರಣದಿಂದ ಶೋಭಿತಳಾಗಿ ಗಂಡನ ಜೊತೆಯಲ್ಲಿ ರಮಿಸುತ್ತಿದ್ದಳು. ಶೋಭನೋಽಪಿ ತಯಾ ಸಾರ್ಧಂ ರಮ್ಯತೇ ದಿವ್ಯವಿಗ್ರಹಃ । ರಮಾವ್ರತಪ್ರಭಾವೇಣ ಮಂದರಾಚಲಸಾನುನಿ ॥46॥ ಶೋಭನನು ಕೂಡ ದಿವ್ಯವಾದ ದೇಹವನ್ನು ಹೊಂದಿ ಆ ರಮಾವ್ರತ ಪ್ರಭಾವದಿಂದ ಚಂದ್ರಭಾಗೆಯೊಡನೆ ಮಂದರಾಚಲದ ತಪ್ಪಲಿನಲ್ಲಿ ರಮಿಸುತ್ತಿದ್ದನು. ಚಿಂತಾಮಣಿಸಮಾ ಹ್ಯೇಷಾ ಕಾಮಧೇನುಸಮಾಥವಾ । ರಮಾಭಿಧಾನಾ ನೃಪತೇ ತವಾಗ್ರೇ ಕಥಿತಾ ಮಯಾ ॥47॥ ಈ ರಮಾ ಏಕಾದಶಿಯು ಚಿಂತಾಮಣಿ-ಯಂತೆಯೂ ಕಾಮಧೇನುವಿನಂತೆಯೂ ಕೇಳಿದುದನ್ನು ಕೊಡುತ್ತದೆ. ಈ ವ್ರತವನ್ನು ನಿನಗೆ ಹೇಳಿದ್ದೇನೆ. ತಸ್ಯಾ ಮಾಹಾತ್ಮ್ಯಮನಘಂ ಶ್ರುತಂ ಸರ್ವಂ ತವ ನೃಪ । ಮಯಾ ತವಾಗ್ರೇ ಕಥಿತಂ ಮಾಹಾತ್ಮ್ಯಂ ಪಾಪನಾಶನಮ್ ॥48॥ ಎಲೈ ಯುಧಿಷ್ಠಿರನೇ! ಆ ರಮಾ ಏಕಾದಶಿಯ ಉತ್ತಮವಾದ ಮಹಿಮೆಯೆಲ್ಲವನ್ನೂ ನಿನಗೆ ಹೇಳಿದ್ದೇನೆ. ಅದು ಪಾಪನಾಶಕವೂ ಪುಣ್ಯಪ್ರದವೂ ಆಗಿದೆ. ಏಕಾದಶೀ-ವ್ರತಾನಾಂ ಚ ಪಕ್ಷಯೋರುಭಯೋರಪಿ । ಯಥಾ ಕೃಷ್ಣಾ ತಥಾ ಶುಕ್ಲಾ ವಿಭೇದಂ ನೈವ ಕಾರಯೇತ್ ॥49॥ ಎರಡು ಪಕ್ಷಗಳಲ್ಲಿನ ಏಕಾದಶಿಯಲ್ಲಿಯೂ ಯಾವ ಭೇದವನ್ನೂ ತೋರಿಸಕೂಡದು. ಕೃಷ್ಣೈಕಾದಶಿಯಂತೆ ಶುಕ್ಲೈಕಾದಶಿಯೂ

ಇರುವುದು. ವ್ಯತ್ಯಾಸವನ್ನು ಮಾಡಲೇ ಬಾರದು. ಸವಿತ್ರೈಕಾದಶೀ ನೃಣಾಂ ಭುಕ್ತಿ-ಮುಕ್ತಿಪ್ರದಾಯಿನೀ । ಧೇನುಃ ಶ್ವೇತಾ ಯಥಾ ಕೃಷ್ಣಾ ಉಭಯೋಃ ಸದೃಶಂ ಪಯಃ ॥50॥ ಈ ಏಕಾದಶಿಗಳನ್ನು ಸೇವಿಸಿದರೆ ಭುಕ್ತಿ ಮುಕ್ತಿಗಳನ್ನು ಕೊಡುತ್ತವೆ. ಕರಿಯ ಹಸು ಬಿಳಿಯ ಹಸುಗಳು ಬಣ್ಣಗಳಲ್ಲಿ ವ್ಯತ್ಯಾಸವಿದ್ದರೂ ಅವುಗಳು ಕೊಡುವ ಹಾಲು ಒಂದೇ ಬಗೆಯಾದುದು. ತಥೈವ ತುಲ್ಯಫಲದಂ ಸ್ಮೃತಮೇಕಾದಶೀ-ದ್ವಯಮ್ । ಏಕಾದಶೀವ್ರತಾನಾಂ ಯೋ ಮಾಹಾತ್ಮ್ಯಂ ಶೃಣುತೇ ನರಃ । ಸರ್ವ-ಪಾಪವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ ॥51॥ ಆ ಹಸುಗಳ ಹಾಲಿನಂತೆಯೇ ಎರಡೂ ಏಕಾದಶಿಗಳೂ ಸಮವಾದ ಫಲವನ್ನು ಕೊಡುತ್ತವೆ. ಏಕಾದಶೀ ವ್ರತಗಳ ಮಹಿಮೆಯನ್ನು ಕೇಳಿದವನು ಎಲ್ಲಾ ಪಾಪಗಳನ್ನೂ ಕಳೆದುಕೊಂಡು ವೈಕುಂಠವನ್ನು ಹೊಂದುವನು.

ಇತಿ ಶ್ರೀಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿನಾರದಸಂವಾದಾಂತರ್ಗತ ಕೃಷ್ಣಯುಧಿಷ್ಠಿರಸಂವಾದೇ ಕಾರ್ತಿಕಕೃಷ್ಣರಮೈಕಾದಶೀ ವರ್ಣನಂ ನಾಮ ದ್ವಿಷಷ್ಟಿತಮೋಽಧ್ಯಾಯಃ ಸಮಾಪ್ತಃ ॥ ಇಂತು ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿನಾರದಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಕಾರ್ತಿಕಕೃಷ್ಣರಮೈಕಾದಶಿಯ ವರ್ಣನೆ ಎಂಬ ಅರವತ್ತೆರಡನೆಯ ಅಧ್ಯಾಯವು ಮುಗಿಯಿತು.

## ಕಾರ್ತೀಕ ॥ ಬಹುಳ ॥ ಚತುರ್ದಶೀ

ಶ್ರೀ ಪದ್ಮನಾಭತೀರ್ಥರು ನವಬೃಂದಾವನ (ಕ್ರಿ.ಶ. 1317-1324) ಇವರು ಪೂರ್ವಾಶ್ರಮದಲ್ಲಿ ಹಸಿ ಸ್ಮಾರ್ತರು. ಶೋಭನಭಟ್ಟ ಎಂದು ಹೆಸರು. ಅದ್ವೈತಮತದ ಎದುರಿಲ್ಲದ ಪ್ರಕಾಂಡಪಂಡಿತರು. ವಾದವೇದಿಕೆಯಲ್ಲಿಯಂತೂ ಪರಶುರಾಮನ ಅಪರಾವತಾರ. ಎಂಥ ಪಂಡಿತನಿಗೂ ಬಗ್ಗದ ಎಂಥ ವಾದ-ಕ್ಷೋದ ಗಳಿಗೂ ಕುಗ್ಗದ ಪ್ರಕಾಂಡಪಾಂಡಿತ್ಯ ಅವರ ವಾಣಿಯನ್ನು ಸಾಣೆ ಹಿಡಿದು ಬಾಣಕೃಪಾಣವನ್ನಾಗಿಸಿತ್ತು. ಇಂಥ ಪ್ರಗಲ್ಭಪಾಂಡಿತ್ಯವಲ್ಲದೇ ಲೌಕಿಕದಲ್ಲಿಯೂ ಶೋಭನಭಟ್ಟರು ಅಸಾಮಾನ್ಯ-ರಾಗಿದ್ದರು. ಮಾನ್ಯರೂ ಆಗಿದ್ದರು. ಗೋದಾವರೀ ತೀರದ ರಾಜಮಹೇಂದ್ರಿ ಮಂಡಲಾಧೀಶ ಕಾಕತೀಯ ಗಣಪತಿದೇವನ ಆಸ್ಥಾನಪಂಡಿತ, ಆಪ್ತಕಾರ್ಯದರ್ಶಿ,

ಇಷ್ಟ ಮಂತ್ರಿ , ಶ್ರೇಷ್ಠಮಾರ್ಗದರ್ಶಿಗಳೂ ಆಗಿದ್ದರು ಶೋಭನ ಭಟ್ಟರು. ಭಟ್ಟರದು ಎಂದಿನಿಂದಲೂ ಜಿಜ್ಞಾಸು ವೃತ್ತಿ. ರಾಜಾಶ್ರಯದ ಬಲದಿಂದ ಅವರು ಮೇಲಿಂದ ಮೇಲೆ ಪಂಡಿತಗೋಷ್ಠಿಗಳನ್ನು ಏರ್ಪಡಿಸಿ ವಾಕ್ಯಾರ್ಥವಿಚಾರಗಳ ಮುಖಾಂತರ ತತ್ತ್ವನಿರ್ಣಯ ಮಾಡುವ ಪ್ರಯತ್ನಗೈಯುತ್ತಿದ್ದರು. ಅತಿಸೂಕ್ಷ್ಮವಾದ ಅವರ ನಿರತಪ್ರಜ್ಞೆಗೆ ಆ ಕಾಲದಲ್ಲಿ ಪ್ರಚಲಿತವಿದ್ದ ಅದ್ವೈತ ವಿಶಿಷ್ಟಾದ್ವೈತಸಿದ್ಧಾಂತಗಳಲ್ಲಿ ಅನೇಕ ಸಂದೇಹಗಳು ಮೂಡಿದ್ದವು. ಪ್ರತಿಯೊಂದು ಸಿದ್ಧಾಂತಗಳಲ್ಲಿ ಕೂಲಂಕಷ ವಿವೇಚನೆಯಿಂದ ಸೂಕ್ಷ್ಮಪ್ರಜ್ಞೆಗೆ ತೋರಬಹುದಾದ ವಿಸಂಗತಿ, ವೇದವಿರೋಧ, ತತ್ತ್ವವೈಸಾದೃಶ್ಯಗಳಿಗೆ ಸರಿಯಾದ ಸಮಾಧಾನವೇ ದೊರಕದಂತಾಗಿತ್ತು.

ಕೊನೆಗೊಮ್ಮೆ ಅಖಂಡಭರತಖಂಡದಲ್ಲಿ ಇರುವ ಎಲ್ಲ ಪ್ರಕಾಂಡಪಂಡಿತರನ್ನೂ ರಾಜ್ಯಾಧಿಕಾರದ ಬೆಂಬಲದಿಂದ ಆಹ್ವಾನಿಸಿದರು. 1281ನೆಯ ಇಸ್ವಿಯಲ್ಲಿ ಶೋಭನಭಟ್ಟರ ಮುಂದಾಳುತನದಲ್ಲಿ ಪ್ರಪಂಚದಲ್ಲಿದ್ದ ಎಲ್ಲ ಪಂಡಿತರ ಒಂದು ಬೃಹತ್ ಪರಿಷತ್ತು ಸೇರಿತು. ಆಚಾರ್ಯಮಧ್ವರೂ ಆಹ್ವಾನದಂತೆ ಅಲ್ಲಿಗೆ ಆಗಮಿಸಿದ್ದರು. ಅದ್ವೈತಿಮತದ ದಿಗ್ದಂತಿ ವಿದ್ವಾಂಸರೂ ವಿಶಿಷ್ಟಾದ್ವೈತಮತದ ಶಿಷ್ಟವಿಶಿಷ್ಟಪಂಡಿತಮಣಿಗಳೂ ಇತರ ಮತೀಯ ಮಹಾಮೇಧಾವಿಮೂರ್ಧನ್ಯರೂ ಆ ಪಂಡಿತಗೋಷ್ಠಿಗೆ ಬಂದು ವಾಕ್ಯಾರ್ಥದಲ್ಲಿ ಆಹಮಹಮಿಕೆಯಿಂದ ಭಾಗವಹಿಸಿದ್ದರು.

ಸ್ವಯಂ ಪ್ರಗಲ್ಭಪಂಡಿತರಾದ ಶೋಭನಭಟ್ಟರು ವೇದಾಂತವಿಶ್ವದ ತಾತ್ವಿಕತೊಡಕುಗಳನ್ನೆಲ್ಲ ಪಂಡಿತಮಂಡಲಿಯೆದುರು ಮಂಡಿಸಿದರು. ಉತ್ತರ ಹೇಳ ಹೊರಟ ಪಂಡಿತ ವೇತಂಡರೆಲ್ಲರೂ ಶೋಭನಭಟ್ಟರ ತರ್ಕಕರ್ಕಶವಾದ ವಾದಕ್ರಮದ ವಿಕ್ರಮದಿಂದ ಮೂಕೀಭೂತರಾಗತೊಡಗಿದರು. ಭಟ್ಟರು ಮಂಡಿಸಿದ ತಾತ್ವಿಕಸಮಸ್ಯೆಗಳಿಗೆಲ್ಲ ಸರಿಯಾದ ಉತ್ತರವೇ ಇಲ್ಲದಂತಾಯಿತು.

ಕೊನೆಗೆ ಶ್ರೀಮದಾನಂದತೀರ್ಥರು ತಮ್ಮ ಪ್ರಸನ್ನ,ಗಂಭೀರವಾದ ವಾಣಿಯಿಂದ ಶೋಭನಭಟ್ಟರ ಆಕ್ಷೇಪಗಳನ್ನೆಲ್ಲ ಒಂದೊಂದಾಗಿ ಪರಿಹರಿಸಿದರು. ಶ್ರುತಿಸ್ಮೃತಿಸಮ್ಮತವಾದ ಯುಕ್ತಿ- ಉಕ್ತಿಗಳಿಂದ ಪಂಚಭೇದ, ಪ್ರಪಂಚಸತ್ಯತ್ವ, ಹರಿಸರ್ವೋತ್ತಮತ್ವ, ತಾರತಮ್ಯಗಳೇ ವೇದವೇದಾಂತಗಳ ತಿರುಳೆಂದು ಸರಳ ಸುಂದರ

ಸಂಸ್ಕೃತಶೈಲಿಯಲ್ಲಿ ನಿರೂಪಿಸಿದರು. ಅವರು ತಾವು ಪ್ರತಿವಾದಿಸುವ ಪ್ರತಿಯೊಂದು ತತ್ವ ಹಾಗೂ ಸಿದ್ಧಾಂತಕ್ಕೆ ಪೋಷಕವಾಗಿ ನೂರಾರು ನಿಗಮಾಗಮ ಪ್ರಮಾಣ-ವಚನಗಳನ್ನು ಪುಂಖಾನು-ಪುಂಖವಾಗಿ ಉದಾಹರಿಸುತ್ತಿದ್ದರು. ಅವರ ಒಂದೊಂದು ಉಕ್ತಿಯ ಸುತ್ತಮುತ್ತ ಅಸಂಖ್ಯಯುಕ್ತಿಗಳ ಮೌಕ್ತಿಕಮಾಲೆಯೇ ವಲಯ ಕಟ್ಟುತ್ತಿತ್ತು.

ಸರ್ವಶಾಸ್ತ್ರನದೀಷ್ಣರೂ ಅಪ್ರತಿಮಪ್ರತಿಭಾಶಾಲಿಗಳೂ ಆದ ಶೋಭನಭಟ್ಟರು ಹಾಗೂ ಇತರ ಮತೀಯ ಮಹಾಪಂಡಿತಮಲ್ಲರೂ ಆಚಾರ್ಯರ ಮೇಲೆ ಒಮ್ಮೆಲೆ ನೂರಾರು ಆಕ್ಷೇಪ ಪ್ರಕ್ಷೇಪಗೈದು ಅಬ್ಬರದಿಂದ ಎರಗಿದರೂ ಆಚಾರ್ಯರು ಶಾಂತಚಿತ್ತರಾಗಿಯೇ ವೇದಶಾಸ್ತ್ರವಚನ ನಿಶಿತವಾದ ಯುಕ್ತಿ ರಚನೆಗಳಿಂದ ಒಬ್ಬೊಬ್ಬ-ರನ್ನಾಗಿ ಎಲ್ಲ ಪಂಡಿತರನ್ನೂ ಜೈಸಿದರು. ಮತ್ತು ಎಲ್ಲರಿಗೂ ಸಮಾಧಾನವಾಗುವಂತೆ ಪ್ರತಿವಾದಿಗಳ ಮನಸ್ಸು ಒಪ್ಪುವಂತೆ ಪರಪಕ್ಷಗಳನ್ನೆಲ್ಲ ಅಕ್ಷರಶಃ ಖಂಡಿಸಿ ದ್ವೈತವಾದ-ವನ್ನು ಬಹು ಸಮಂಜಸವಾಗಿ ಮಂಡಿಸಿದರು.

ಆನಂದತೀರ್ಥರ ವಾದಸರಣಿ ಶೋಭನಭಟ್ಟರ ಅಜ್ಞಾನದ ಪರಿ(ಪೊರೆ)ಯನ್ನೇ ಹರಿಯಿತು. ಸಂಶಯದ ಮಂಜಿನ ಪುಂಜವನ್ನೆಲ್ಲ ಕರಗಿಸಿತು. ನಿಜವಾದ ವೇದ-ವಿಜ್ಞಾನದ ತತ್ವಸೂರ್ಯನ ಸಮ್ಯಗ್ದರ್ಶನವನ್ನು ಮಾ(ಮೂ)ಡಿಸಿತು. ಆಚಾರ್ಯರ ಪಾಂಡಿತ್ಯದಲ್ಲಿ ನಿಜವಾದ ಪ್ರಾಮಾಣಿಕತೆಯ ನೆಲೆ ಅವರಿಗೆ ಗೋಚರಿಸಿತು. ಸಾವಿ-ರಾರು ಮಹಾಪಂಡಿತರ ವಾದಕ್ಷೋದಗಳಿಗೆ ಸೊಪ್ಪು ಹಾಕದೆ ಅಚಲವಿಶ್ವಾಸದಿಂದ ವೇದಮತವನ್ನು ಯುಕ್ತಿಯುಕ್ತವಾಗಿ ಸಮಂಜಸವಾಗಿ ಮಂಡಿಸಿದ ಈ ಮೇರು ಪುರುಷ ಸಾಕ್ಷಾತ್ ಸರ್ವಜ್ಞಮೂರ್ತಿಯೇ ಎಂದು ಅವರಿಗೂ ಹಾಗೂ ಅಲ್ಲಿ ನೆರೆದ ಅನೇಕಪಂಡಿತರಿಗೂ ದೃಢವಿಶ್ವಾಸವಾಯಿತು. ಕೂಡಲೇ ಅವರು ಅಹಂಕಾರ ಸ್ವಮತಾಂಧ್ಯಗಳನ್ನು ಮರೆತು ಮಧ್ವಮುನಿಗಳ ಚರಣಗಳಿಗೆ ಶರಣು ಹೊಕ್ಕರು, ವೈಷ್ಣವದೀಕ್ಷೆ ಪಡೆದರು. ಶಾಂತಿಪಾಠ ಹಾಕಿದರು. ಶಿಷ್ಯತ್ವ ವಹಿಸಿದರು. ಮಾಧ್ವ-ಗ್ರಂಥಗಳನ್ನೆಲ್ಲ ಅಧ್ಯಯನ ಮಾಡಿದರು. ಅವರಿಂದಲೇ ಸನ್ಯಾಸದೀಕ್ಷೆ ಪಡೆದು ''ಪದ್ಮನಾಭತೀರ್ಥ''ರೆಂದು ಹೆಸರು ಪಡೆದರು. ಕೊನೆಗೆ ಆಚಾರ್ಯರ ಉತ್ತರಾಧಿ ಕಾರಿಗಳಾಗಿ ಸರ್ವಜ್ಞಪೀಠದಲ್ಲಿ ರಾಯರ ಮಠ, ಉತ್ತರಾದಿ ಮಠ, ವ್ಯಾಸರಾಜ ಮಠ ಹಾಗೂ ಘಟ್ಟದ ಮೇಲಿನ ಎಲ್ಲ ಮಠಗಳ ಮೂಲಪುರುಷರಾಗಿ ಪರಮಹಂಸ

ಪರಿವೃಢರೆಂದು ಪ್ರಸಿದ್ಧರಾದರು. ಶ್ರುತ್ವಾ ಮತ್ವಾ ಸದಾ ಭಕ್ತ್ಯಾ ವಿರಕ್ತ್ಯಾ ನಿತ್ಯ ಸೇವಯಾ ಅಸ್ಮೈ ಪ್ರಸನ್ನಃ ಪ್ರಾಜ್ಯೈಕ್ಷಃ ಸದ್ಯೋ ವಿದ್ಯಾಂ ದದೌ ಶುಭಾಮ್ ॥ ಆಚಾರ್ಯರ ಆದೇಶದಂತೆ ದೇಶದೇಶ ತಿರುಗಾಡಿ ದ್ವೈತಮತವನ್ನು ಪ್ರಚಾರಗೈದರು. ಅನೇಕ ಅದ್ವೈತಿ ದಿಗ್ದಂತಿ ಪಂಡಿತರನ್ನು ಸೇರಿಸಿ ಮುದ್ರೆಯಿತ್ತು ಮಾಧ್ವರನ್ನಾಗಿ ಮಾಡಿದರು. ಆಚಾರ್ಯರು ಬದುಕಿದ್ದಾಗಲೇ ವೇದವೇದಾಂತ- ಪ್ರವಚನಪಾಂಡಿತ್ಯ, ಪ್ರಾವೀಣ್ಯ-ಗಳಿಂದ ಇವರು ''ವೇದಪ್ರವಚನಾಚಾರ್ಯಶಿಷ್ಯ'' ಎಂದು ಪೂಜಿತರಾದರು.

ಆಚಾರ್ಯರ ಗ್ರಂಥಗಳಿಗೆ ಮೊಟ್ಟ ಮೊದಲು ಸನ್ನ್ಯಾಯರತ್ನಾವಲಿ, ಸತ್ತರ್ಕ-ದೀಪಾವಳಿ ಮುಂತಾದ ಅನೇಕ ಉತ್ತಮವ್ಯಾಖ್ಯಾನ ಬರೆದು ಆದ್ಯಟೀಕಾಚಾರ್ಯ-ರೆಂದು ವಿಶ್ವಮಾನ್ಯರಾದರು. ಜಯತೀರ್ಥರಂಥ ವೇದಾಂತವಾಚಸ್ಪತಿಗಳೂ ''ನ ತತ್ವಮಾರ್ಗೇ ಗಮನಂ ವಿನಾ ಯದುಪಜೀವನಂ'' ಎಂದು ಮುಂತಾಗಿ ಹೊಗಳಿ ''ಕೃಪಾಲವಃ ಪಂಕಜನಾಭತೀರ್ಥಾಃ ಕೃಪಾಲವಃ ಸ್ಯಾನ್ಮಯಿ ನಿತ್ಯಮೇಷಾಂ'' ಎಂದು ಮುಂತಾಗಿ ಅವರ ಕರುಣೆಯನ್ನು ಯಾಚಿಸಿದ್ದಾರೆ. ಸುಮಧ್ವವಿಜಯಕಾರರಾದ ನಾರಾಯಣಪಂಡಿತರಂತೂ ''ಮತ್ತದುರ್ವಾದಿಮಾತಂಗತರ್ಕಮಸ್ತಕದಾರಣಪಂಚಾಸ್ಯಃ'' ''ವ್ಯಾಖ್ಯಾಪ್ರಣಾದಮಾತ್ರನಿರಾಕೃತಮಾಯಿಗ್ರಾಮಸಿಂಹೋ ವಾದಿಸಿಂಹಃ'' ''ವೇದಾಂತಾಬ್ಧಿವಿಹರನಿಪುಣವಿದ್ವತ್ತಿಮಿಂಗಲಃ'' ಎಂದು ಮೊದಲಾದ ಅನೇಕ-ವಿಶೇಷಣಗಳಿಂದ ಬಣ್ಣಿಸಿದ್ದಾರೆ.

ಶ್ರೀಮಧ್ವಾಚಾರ್ಯರ ನಂತರ ಪದ್ಮನಾಭತೀರ್ಥರು ಸರ್ವಜ್ಞಸಿಂಹಾಸನವನ್ನು ಆರೋಹಣಮಾಡುವಾಗ ತಾವು ಪೂಜಿಸುತ್ತಿದ್ದ ಆಚಾರ್ಯಕರಾರ್ಚಿತ ಗೋಪೀನಾಥಪ್ರತಿಮೆಯನ್ನು ಶ್ರೀಲಕ್ಷ್ಮೀಧರ ತೀರ್ಥರಿಗೆ ಕೊಟ್ಟು ಆ ಪರಂಪರೆಯೂ ಮುಂದುವರೆಯುವಂತೆ ಮಾಡಿದರು. ಅದೇ ಈಗ ಶ್ರೀಶ್ರೀಪಾದರಾಜಮಠವೆಂದು ಪ್ರಸಿದ್ಧವಾಗಿದೆ.

ಪೂರ್ಣಪ್ರಜ್ಞಕೃತಂ ಭಾಷ್ಯಂ ಆದೌ ತದ್ಭಾವ ಪೂರ್ವಕಂ ।
ಯೋವ್ಯಾಕರೋನ್ನಮಸ್ತಸ್ಮೈ ಪದ್ಮನಾಭಾಖ್ಯಯೋಗಿನೇ ॥
ಶ್ರೀಮಧ್ವಸಂಸೇವನಲಬ್ಧಗೋಪಾಕೃತಿರ್ಭಕ್ತಿನಿಷೇವಣೇನ ।
ಲೋಕೇಷು ವಿಖ್ಯಾತ ಸುಕೀರ್ತಿಮಂತಂ ಶ್ರೀಪದ್ಮನಾಭಾರ್ಯಮುನಿಂ ಪ್ರಣಾಮಿ ॥

ಶ್ರೀರಾಮಚಂದ್ರತೀರ್ಥರು (ಪಲಿಮಾರು ಮಠ) ಕಾರ್ತಿಕ ಬಹುಳ ಚತುರ್ದಶಿ ಗುರುಪರಂಪರೆಯಲ್ಲಿ ಹತ್ತನೆಯವರು. ಪ್ರತಿವಾದಿಗಳನ್ನು ನಿರುತ್ತರಗೊಳಿಸಿ ಮಧ್ವಸಿದ್ಧಾಂತದ ವಿಜಯ ಪತಾಕೆಯನ್ನು ಬಾನೆತ್ತರಕ್ಕೆ ಹಾರಿಸಿದ ಮಹಾವಿದ್ವಾಂಸರು ಎಂದು ಮಠದ ದಾಖಲೆಯಲ್ಲಿ ಬರೆಯಲಾಗಿದೆ. ಇವರು ಶ್ರೀವ್ಯಾಸರಾಯರು, ಶ್ರೀ ವಾದಿರಾಜರು ಹಾಗೂ ಶ್ರೀ ವಿಜಯೀಂದ್ರರ ಸಮಕಾಲೀನರು. ದೇಶದ ದಕ್ಷಿಣೋತ್ತರಗಳಲ್ಲಿ ಸಾಧುಸಂತರು ಉದಿಸಿ ಬಂದು ಭಕ್ತಿಪಂಥ ಚಿಗುರೊಡೆಯುತ್ತಿದ್ದ ಕಾಲ. ಸುಮಾರು ಎರಡು ದಶಕ ಕಾಲ ಈ ಪೀಠದಲ್ಲಿ ವಿರಾಜಮಾನರಾಗಿದ್ದರು. ಶ್ರೀನಾರಾಯಣತೀರ್ಥರೆಂಬುವವರಿಗೆ ಆಶ್ರಯ ನೀಡಿ ಗೌಡಸಾರ-ಸ್ವತದ ಪೀಠ ಗೋಕರ್ಣ ಮಠದ ಪ್ರವರ್ತನೆಗೆ ಕಾರಣರಾದದು ಎಂದು ತಿಳಿದು ಬರುತ್ತದೆ. ಈ ಯತಿವರ್ಯರು ಶಾ.ಶ. 1424 (ಕ್ರಿ.ಶ. 1502) ದುರ್ಮುಖಿ ಸಂವತ್ಸರದ ಕಾರ್ತಿಕ ಬಹುಳ ಚತುರ್ದಶಿಯಂದು ಭೀಮರಥಿ ತೀರದ ಪಂಢರಾಪುರದಲ್ಲಿ ವೃಂದಾವನಸ್ಥರಾದರು.

## ಕಾರ್ತೀಕ II ಬಹುಳ II ಅಮಾವಾಸ್ಯೆ

ಶ್ರೀಮೇಧಾನಿಧಿತೀರ್ಥರು (ಶ್ರೀಪಾದರಾಜ ಮಠ) ಕಾರ್ತೀಕ ಅಮಾವಾಸ್ಯೆ - ಪುದುಪಾಳ್ಯ ಗೋಪೀನಾಥಸಪರ್ಯಾದಿವೈರಾಗ್ಯಗುಣಶಾಲಿನಃ । ಮೇಧಾನಿಧಿ-ಗುರೂನ್ವಂದೇ ಸಚ್ಛಿಷ್ಯಾಪನ್ನಿವಾರಕಾನ್ II

ಇಲ್ಲಿಗೆ ಕಾರ್ತಿಕಮಾಸದ ವಿಧಾನವು ಸಮಾಪ್ತವಾಯಿತು II

ಶ್ರೀಮಧ್ವೇಶಾರ್ಪಣಮಸ್ತು II

* * * *

# ಮಾರ್ಗಶಿರಮಾಸ

ಮಾಸನಿಯಾಮಕ ಶ್ರೀಪತಿಕೇಶವಾಯ ನಮಃ

ಮಾಸಾನಾಂ ಮಾರ್ಗಶೀರ್ಷೋऽಹಮ್' ಎಂಬ ಗೀತೆಯ ಮಾತಿನಂತೆ ಈ ಮಾಸವು ಶ್ರೀಕೃಷ್ಣನಿಗೆ ಅತ್ಯಂತ ಪ್ರಿಯಕರವಾಗಿದೆ. ಈ ಮಾಸದಲ್ಲಿ ಗೋದಾನ, ಭೂಮಿದಾನ, ವಿಶೇಷವಾಗಿ ಅನ್ನದಾನ, ವಸ್ತ್ರದಾನ, ಶಯ್ಯಾದಾನ, ಆಭರಣದಾನ, ಗೃಹದಾನವು ಭಗವಂತನಿಗೆ ವಿಶೇಷ ಪ್ರೀತಿಕರ. ಸತ್ಪಾತ್ರರಾದ ವಿಪ್ರರನ್ನು ಯಥಾಶಕ್ತಿ ಆಹ್ವಾನಿಸಿ ಭಕ್ಷ್ಯ ಭೋಜ್ಯಾದಿ ಪಕ್ವಾನ್ನಭೋಜನ ಮಾಡಿಸುವುದು ಈ ಮಾಸದ ವಿಶೇಷ ಅನ್ನದಾನ ಸೇವೆ. ಎಲ್ಲ ದಾನಗಳಲ್ಲಿ ಮೂರು ಶ್ರೇಷ್ಠದಾನ- (1) ಭೂದಾನ, (2) ಧೇನುದಾನ, (3) ವಿದ್ಯಾದಾನ. ದಂಪತಿಪೂಜೆ ಈ ಮಾಸದ ವಿಶೇಷ ಕರ್ತವ್ಯ . ದಂಪತಿಗಳನ್ನು ಆಹ್ವಾನಿಸಿ ಅವರಲ್ಲಿ ಲಕ್ಷ್ಮೀನಾರಾಯಣರನ್ನು ಆವಾಹಿಸಿ ಯಥಾಶಕ್ತಿ ವಸ್ತ್ರಾಭರಣಾದಿ ದಾನಗಳಿಂದ ಸತ್ಕರಿಸಬೇಕು. ಎಲ್ಲ ದಾನಕ್ಕೂ ಹೇಳಬಹುದಾದ ಮಂತ್ರ– ತ್ರಿಲೋಕೀನಾಥ ದೇವೇಶ ಸರ್ವಭೂತದಯಾನಿಧೇ । ದಾನೇನಾನೇನ ತುಷ್ಯಸ್ವ ಪ್ರಯಚ್ಛ ಮಮ ವಾಂಛಿತಮ್ ॥

**ಗಂಧ-ಪುಷ್ಪ ಪೂಜಾ–** ಮಾರ್ಗಶೀರ್ಷ ಮಾಸದಲ್ಲಿ ಶ್ರೀಗಂಧ, ಚಂದನ, ಕಚೋರ ಮೊದಲಾದ ಗಂಧಗಳು ಸಮರ್ಪಣೆಯಿಂದಲೂ, ಜಾಜಿ, ಕಮಲ, ಸೇವಂತಿಕಾ ಮೊದಲಾದ ಪುಷ್ಪಗಳ ಸಮರ್ಪಣೆಯಿಂದಲೂ ಮಹಾಪುಣ್ಯವು ಪ್ರಾಪ್ತ-ವಾಗುತ್ತದೆ. ಇವುಗಳ ವಿಸ್ತಾರವನ್ನು ಮಾರ್ಗಶೀರ್ಷ ಮಾಸ ಮಹಾತ್ಮೆಯಲ್ಲಿ ಕಾಣ-ಬಹುದು. ಮಾರ್ಗಶೀರ್ಷ ಮಾಸಕ್ಕೆ ನಿಯಾಮಕನಾದ ಶ್ರೀಕೇಶವನ ಪ್ರೀತಿಗಾಗಿ ಈ ಕೆಳಕಂಡ ಧರ್ಮಗಳನ್ನು ಆಚರಿಸಬೇಕು.

ವಿಷ್ಣುಪಂಚಕವ್ರತ– ಮಾರ್ಗಶೀರ್ಷ ಶುಕ್ಲದಲ್ಲಿ ಶ್ರವಣಯುಕ್ತವಾದ ಪಂಚಮಿ -ಯಲ್ಲಾಗಲೀ, ಏಕಾದಶಿಯಲ್ಲಾಗಲೀ ವಿಷ್ಣುಪಂಚಕವನ್ನು ಆರಂಭಿಸಬಹುದು. ಆರಂಭ ಮಾಡಿದಾಗಿನಿಂದ ಐದು ತಿಂಗಳೊಳಗೆ ಐದು ಉಪವಾಸಗಳು ಬಂದಿರಬೇಕು (ಎರಡು ಏಕಾದಶೀ, ಪೂರ್ಣಿಮಾ, ಅಮಾವಾಸ್ಯೆ, ಶ್ರವಣಾ, ಗುರು ಶುಕ್ರಾಸ್ತ-ಕಾಲಗಳು, ಗುರು ಶುಕ್ರರ ಬಾಲ್ಯ- ಮೌಢ್ಯಕಾಲಗಳು ಆರಂಭಕ್ಕೆ ಯೋಗ್ಯವಲ್ಲ.

## ಮಾರ್ಗಶಿರ ॥ ಶುಕ್ಲ ॥ ಪ್ರತಿಪತ್

ಶ್ರೀ ರಘುಮಾನ್ಯತೀರ್ಥರು (ಪಲಿಮಾರು ಮಠ) – ಪರಂಪರೆಯಲ್ಲಿ ಇಪ್ಪತ್ತೇಳನೆಯ ಯತಿಗಳು ಅದಮಾರು ಮಠದ ಶ್ರೀ ವಿಬುಧ ಪ್ರಿಯರಿಂದ ಸನ್ಯಾಸ-ದೀಕ್ಷೆ ಪಡೆದು ಅವರಲ್ಲಿಯೇ ಅಧ್ಯಯನ ಮಾಡಿದರು. ಹತ್ತೊಂಭತ್ತನೆಯ ವಯಸ್ಸಿ-ನಲ್ಲಿ ಪ್ರಥಮ ಪರ್ಯಾಯ ಉಡುಪಿಯ ಮಠದ ನವೀಕರಣ ಹಾಗೂ ಪಲಿಮಾರಿನ ನಿರ್ಮಾಪಕರು. ಎರಡನೆಯ ಪರ್ಯಾಯ ಕಾಲದಲ್ಲಿ ಮೈಸೂರು ಮಹಾರಾಜರಾದ ಜಯಚಾಮರಾಜರು ಹಾಗೂ ದಿವಾನರು ಉಡುಪಿಯನ್ನು ಸಂದರ್ಶಿದರು. ಸಂಸ್ಕೃತ ಮಹಾಪಾಠಶಾಲೆಯ ನೂತನ ಕಟ್ಟಡವು ಸಹ ಇವರ ಪರಿಶ್ರಮದ ಫಲ. ಮೂರು ದಶಕಗಳಿಗೂ ಹೆಚ್ಚುಕಾಲ ಪೀಠವಾಳಿದ ಇವರು ತಮ್ಮ ಶಿಷ್ಯರಾದ ಶ್ರೀರಘುವಲ್ಲಭರಿಗೆ ಪೀಠ ಒಪ್ಪಿಸಿ ಘಟಿಕಾಚಲದಲ್ಲಿ ಶಾ.ಶ. (ಕ್ರಿ .ಶ. 1947) ಸರ್ವಜಿತ್ ಸಂವತ್ಸರದ ಮಾರ್ಗಶೀರ್ಷ ಶುದ್ಧ ಪ್ರತಿಪದೆಯಂದು ಹರಿಪದ ಹೊಂದಿದರು. ಇವರ ಆಶ್ರಮ ಗುರುಗಳಾದ ಶ್ರೀ ವಿಬುಧಪ್ರಿಯತೀರ್ಥರ ವೃಂದಾವನದ ಪಕ್ಕದಲ್ಲಿ ಇವರ ವೃಂದಾ-ವನವಿದೆ.

## ಮಾರ್ಗಶಿರ ॥ ಶುದ್ಧ ॥ ತೃತೀಯಾ

ಶ್ರೀಕಂಬಾಲೂರು ರಾಮಚಂದ್ರತೀರ್ಥರು – ವಂದಾರುಕಲ್ಪತರವೇ ವಾದಿಕೈರವಭಾನವೇ । ಶ್ರೀರಾಮಚಂದ್ರಗುರವೇ ನಮಃ ಕಾರುಣ್ಯಸಿಂಧವೇ ॥ ವೃಂದಾವನವಿರುವ ಸ್ಥಳ ರಾಯವೇಲೂರು. ಆರಾಧನೆಯ ಕಾಲ ಮಾರ್ಗಶೀರ್ಷ-ಶುದ್ಧತೃತೀಯಾ.

ಜಗದ್ಗುರು ಶ್ರೀಮಧ್ವಾಚಾರ್ಯರ ಮಹಾಸಂಸ್ಥಾನ ಎನಿಸಿದ ಶ್ರೀವ್ಯಾಸರಾಜ-ಮಠದ ಪೀಠಾಧಿಪತಿಗಳೆಲ್ಲರೂ ಪರಿವ್ರಾಟ ಪರಿವೃಢರೇ. ಪ್ರಗಲ್ಭಪಾಂಡಿತ್ಯದ ಈ ಅವಿಚ್ಛಿನ್ನಪರಂಪರೆಯು ವಿದ್ಯಾಸಿಂಹಾಸನ ಎಂಬ ಆ ಶ್ರೀಮಠದ ಬಿರುದಿಗೆ ಯಾಥಾರ್ಥ್ಯದ ಬಾವಲಿ ಕಟ್ಟಿದೆ. ವಿಶಿಷ್ಟವೈದುಷ್ಯದ ವರಿಷ್ಠವೇದಿಕೆಯ ಅಧಿಷ್ಠಾತೃ-ಗಳಾದ ಈ ಗುರುಗರಿಷ್ಠರು ಸುಧಾದಿಗ್ರಂಥಗಳಿಗೆ ರಚಿಸಿದ ಅತ್ಯಪೂರ್ವವಾದ ಟಿಪ್ಪಣಿಗಳು ಅವರ ಸಾರಸ್ವತನಿಧಿಯ ಅಗಾಧತೆಗೆ ಸಾಕ್ಷಿಯಾಗಿವೆ.

ಹೀಗೆ ಶ್ರೀಜಯತೀರ್ಥರ ಶ್ರೀಮನ್ನ್ಯಾಯಸುಧಾ ಗ್ರಂಥಕ್ಕೆ ಸರ್ವಂಕಷ ಟಿಪ್ಪಣಿ ಬರೆದು ವೇದಾಂತವಿಶ್ವಂಭರೆಯ ವಿದ್ಯುದ್ವಿಭಾಸಕ ವಿದ್ವದ್ಯತಿವರೇಣ್ಯರಲ್ಲಿ ಶ್ರೀ-ಕಂಬಾಲೂರು ರಾಮಚಂದ್ರತೀರ್ಥರು ಅನ್ಯತಮರೂ ಧನ್ಯತಮರೂ ಆಗಿದ್ದಾರೆ. ಪೂರ್ವಾಶ್ರಮದಲ್ಲಿ ಒಮ್ಮೆ ನವರಾತ್ರಿಯ ಕಾಲದಲ್ಲಿ ತಿರುಪತಿ ಕ್ಷೇತ್ರದಲ್ಲಿ ವಿಪರೀತ ಜನದಟ್ಟಣೆ ಸೇರಿತ್ತು. ದೇವರ ದರ್ಶನವೇ ಆಗಲಿಲ್ಲ ಆಚಾರ್ಯರಿಗೆ. ಆಗ ಅವರ ಮನಸ್ಸು ನೊಂದು ಜನಸ್ತೋಮದಿಂದ ಹೊರಗೆ ಬಂದು ದೇವಸ್ಥಾನದೆಡೆಗೆ ಮುಖ-ಮಾಡಿ ಭಕ್ತಿಪಾರವಶ್ಯದಿಂದ ಆಪಾತತಃ ಆಕ್ಷೇಪರೂಪವಾದರೂ ಅಂತತಃ ಭಕ್ತ್ಯು-ದ್ರೇಕದ್ಯೋತಕವಾದ ಒಂದು ಪದ್ಯವನ್ನು ಸದ್ಯಃ ರಚಿಸಿ ನುಡಿದರು.

ಐಶ್ವರ್ಯಮತ್ತಚಿತ್ತೋಽದ್ಯ ಯದಿ ಮಾಂ ಸಮುಪೇಕ್ಷಸೇ ।
ವಾದಿಭಿಃ ಕಲಹೇ ಪ್ರಾಪ್ತೇ ತ್ವಹಮೇವ ಗತಿಸ್ತವ ॥

'ವೇಂಕಟೇಶ! ನಿನಗೀಗ ಹಣ ಹೆಚ್ಚಾಗಿ ಮದ ಬಂದಿದೆ. ನನ್ನನ್ನು ನೀನೀಗ ಉಪೇಕ್ಷೆ ಮಾಡಿಬಿಟ್ಟರೆ ಬೌದ್ಧನಾಸ್ತಿಕಾದಿಗಳು ದೇವರೇ ಇಲ್ಲ ಎಂದು ವಾದಿಸ ತೊಡಗಿದಾಗ ನಿನ್ನ ಅಸ್ತಿತ್ವವನ್ನು ಸ್ಥಾಪನೆ ಮಾಡಲಿಕ್ಕೆ ನಾನೇ ನಿನಗೆ ಗತಿ' ಎಂದು ಶ್ರೀನಿವಾಸದೇವರಿಗೆ ಸವಾಲು ಹಾಕಿದರಂತೆ. ಆಗ ವೇಂಕಟೇಶಪ್ರಭು ಅರ್ಚಕರಿಗೆ ಸೂಚಿಸಿ ಆಚಾರ್ಯರನ್ನು ಗೌರವದಿಂದ ಗರ್ಭಗುಡಿ ಒಳಕ್ಕೆ ಕರೆತಂದು ಮನ-ದಣಿಯೆ ತನ್ನ ದರ್ಶನಮಾಡಿಸಿದನಂತೆ.

'ಪೆನ್ನತ್ತೂರು' ಗ್ರಾಮದ ಒಂದು ದೊಡ್ಡ ಬ್ರಾಹ್ಮಣರ ಗುಂಪು ಇವರ ಮಹಿಮೆಗೆ ಮಾರು ಹೋಗಿ ಮುದ್ರಾಧಾರಣ ಮಾಡಿಸಿಕೊಂಡು ಮಾಧ್ವರಾದರು.

ಒಮ್ಮೆ ಕೆಲ ಕುಹಕಿಗಳು ಇವರ ತಲೆಯ ಮೇಲೆ ದೊಡ್ಡ ಕಲ್ಲು ಹಾಕಬೇಕೆಂದು ಬಂದಾಗ ಶ್ರೀರಾಮಚಂದ್ರತೀರ್ಥರು 'ಅಂತರಾಳೇ ತಿಷ್ಠ' ಎಂದರು. ಆ ಕಲ್ಲು ಹಾಗೇ ನಿಂತಿತು. ಮುಂದೆ ಆ ಕಲ್ಲನ್ನು ತಮ್ಮ ವೃಂದಾವನದ ಮೇಲೆ ಹಾಕಬೇಕೆಂದು ಅಪ್ಪಣೆಗೈದರು. ಇವರ ವೃಂದಾವನವು ಅರ್ಕಾಟ ಜಿಲ್ಲೆಯ ಪಯಸ್ವಿನೀ ನದೀ ತೀರ-ದಲ್ಲಿ ರಾಯವೇಲೂರು ಗ್ರಾಮದಲ್ಲಿ ಅವರ ಗುರುಗಳಾದ ಶ್ರೀಪತಿತೀರ್ಥರ ಸನ್ನಿಧಿ-ಯಲ್ಲಿಯೇ ಇರುತ್ತದೆ. ಶ್ರೀವ್ಯಾಸರಾಜಮಠದಲ್ಲಿ ಈಗ ಪ್ರಚಾರದಲ್ಲಿರುವ ಎಲ್ಲ ಸಂಪ್ರದಾಯಗಳಿಗೆ ಇವರೇ ಮೂಲ ಪ್ರವರ್ತಕರು. ಹಗಲಿರುಳು ಪಾಠಪ್ರವಚನ-

ಗಳಲ್ಲಿಯೇ ಸಮಯ ಕಳೆಯುವ ಇರುವ 'ವಾಗ್ಬೊಮ್ಮಲೇ ಬೊಮ್ಮಲು' ಪ್ರತಿಮೆಗಳಿಗಿಂತ ಶಬ್ದಬ್ರಹ್ಮದ ಉಪಾಸನೆಯೇ ಶ್ರೇಷ್ಠವೆಂದು ತೆಲುಗಿನಲ್ಲಿ ಹೇಳಿ ನಿರಂತರ ಸ್ವಾಧ್ಯಾಯಗೈಯುತ್ತಿದ್ದರು.

## ಮಾರ್ಗಶಿರ ॥ ಶುಕ್ಲ ॥ ಷಷ್ಠೀ
## ಚಂಪಾಷಷ್ಠೀ

ನಾಗಪೂಜಾ– ಮಾರ್ಗಶೀರ್ಷ ಶುಕ್ಲ ಪಂಚಮಿಯಂದು ನಾಗಪೂಜೆಯು ವಿಹಿತವಾಗಿದೆ. ಷಷ್ಠೀಯುಕ್ತವಾದ ಪಂಚಮಿಯಲ್ಲಿ ನಾಗಪೂಜೆಯಿಂದ ನಾಗರು ಸಂತುಷ್ಟರಾಗುತ್ತಾರೆ. ಇದನ್ನೇ ಸ್ಕಂದಷಷ್ಠೀ ಎನ್ನುವರು.

ನಮ್ಮ ದೇಶದಲ್ಲಿ ಮಾರ್ಗಶೀರ್ಷ, ಪುಷ್ಯ ಅಥವಾ ಮಾಘಮಾಸದ ಶುಕ್ಲ ಷಷ್ಠಿಯಂದು ಸ್ಕಂದನ ಪ್ರೀತಿಗಾಗಿ ವಟು ಸಮಾರಾಧನೆ ಮಾಡುವ ಪದ್ಧತಿಯಿದೆ. ಷಷ್ಠಿಯಂದು ಆಗದಿದ್ದರೆ ಭಾನುವಾರದಂದು ಮಾಡುವ ಪದ್ಧತಿಯೂ ಇದೆ.

ಮಾರ್ಗಶಿರ ಶುಕ್ಲಪಕ್ಷದ ಷಷ್ಠಿಯನ್ನು ಸುಬ್ರಹ್ಮಣ್ಯ ಷಷ್ಠಿಯೆಂದು, ಸುಬ್ರಾಯನ ಷಷ್ಠಿಯೆಂದೂ, ಚಂಪಾಷಷ್ಠೀ ಎಂದೂ ಕರೆಯುತ್ತಾರೆ. ಯಾಕೆ ಅಂದು ಈ ಉತ್ಸವ-ವನ್ನು ಆಚರಿಸಬೇಕು? ಎಂದು ವಿಚಾರ ಮಾಡೋಣ. ಶಿವ ಹಾಗೂ ಪಾರ್ವತಿಯರು ಏಕಾಂತದಲ್ಲಿ ಇರಬೇಕಾದರೆ ಅಗ್ನಿಯು ಪಾರಿವಾಳರೂಪದಿಂದ ಬಂದು ಅದನ್ನು ನೋಡುತ್ತಾನೆ. ಆಗ ಪಾರ್ವತಿಯು ಲಜ್ಜಿತಳಾಗಲು ಶಿವನು ಸಿಟ್ಟಿನಿಂದ ತನ್ನ ವೀರ್ಯವನ್ನು ಆಕಾಶಕ್ಕೆ ಎಸೆಯುತ್ತಾನೆ. ಅದನ್ನು ಅಗ್ನಿಯು ಸ್ವೀಕರಿಸಿದರೂ ಅವನಿಗೆ ಅದನ್ನು ಇಟ್ಟುಕೊಳ್ಳಲಾಗದೆ ಗಂಗೆಯಲ್ಲಿ ವಿಸರ್ಜಿಸುತ್ತಾನೆ. ಗಂಗೆಗೂ ಅದನ್ನು ಸಹಿಸಿಕೊಳ್ಳಲಾಗದೇ ಅವಳು ಅದನ್ನು ಜೊಂಡಿನ ಮೇಲೆ ವಿಸರ್ಜಿಸುತ್ತಾಳೆ. ಆಗ ಉತ್ಪತ್ತಿಯಾದವನೇ ಸುಬ್ರಹ್ಮಣ್ಯ. ಅವನು ಅತ್ತಾಗ ಅವನಿಗೆ ಹಾಲುಣಿಸುವ ಸಲು-ವಾಗಿ ಆರುಜನ ಕೃತ್ತಿಕಾ ದೇವತೆಗಳು ಬರುತ್ತಾರೆ. ಆಗ ಸುಬ್ರಹ್ಮಣ್ಯನು ಆರುಮುಖ ದಿಂದ ಅವರು ಉಣಿಸಿದ ಹಾಲನ್ನು ಕುಡಿಯುತ್ತಾನೆ.ನಂತರ ಅವನು ದೇವಸೇನಾನಿ ಯಾಗಿ ತಾರಕಾಸುರನನ್ನು ಸಂಹರಿಸುತ್ತಾನೆ. ಹೀಗೆ ಸ್ಕಂದನು ತಾರಕಾಸುರನನ್ನು ಸಂಹರಿಸಿದ ದಿನ ಮಾರ್ಗಶಿರ ಶುಕ್ಲಪಕ್ಷದ ಷಷ್ಠಿ. ಅಂದು ವಿಶೇಷ ಯೋಗವಾದ ಚಂಪಾ ಎಂಬ ಯೋಗವೂ ಇತ್ತು. ಹಾಗಾಗಿ ಅಂದು ಚಂಪಾಷಷ್ಠೀ. ನಿಹತ್ಯ ತಾರಕಂ

ಷಷ್ಠ್ಯಾಂ ಗುಹಸ್ತಾರಕರಾಜವತ್। ರರಾಜ ದಯಿತಾ ತೇನ ತಾರಕೇ ಯಸ್ಯ ಸಾ ತಿಥಿಃ। ಎಂದು ಸುಬ್ರಹ್ಮಣ್ಯನ ತಿಥಿಯು ಷಷ್ಠಿಯೆಂದು ತಿಳಿಸಿದ್ದಾರೆ.

ಅಂದರೆ ಅಂದು ತಾರಕಾಸುರನನ್ನು ಸಂಹರಿಸಿದ ಸುಬ್ರಹ್ಮಣ್ಯನನ್ನು ದೇವತೆಗಳು ಸಂತೋಷದಿಂದ ಪೂಜಿಸಿ ಅಂದಿನಿಂದ ಸುಬ್ರಹ್ಮಣ್ಯನನ್ನು ಸರ್ವಕಾಲದಲ್ಲೂ ದೇವ-ಸೇನಾನಿಯಾಗಿ ಅಭಿಷೇಕಿಸಿದರು. ಆದ್ದರಿಂದ ಈ ಷಷ್ಠಿಯಂದು ಸ್ಕಂದನು ಪ್ರಸನ್ನನಾಗಿ ಸಕಲರಿಗೂ ವಿಶೇಷಾನುಗ್ರಹವನ್ನು ಮಾಡುತ್ತಾನೆ. ಚಂಪಾ ಎಂಬುದು ಒಂದು ಯೋಗವಿಶೇಷದ ಹೆಸರು. ಅಂದರೆ ಒಂದೊಂದು ತಿಥಿಗೆ ಕೆಲವೊಂದು ಯೋಗ-ವಿಶೇಷಗಳಿರುತ್ತವೆ. ಅವುಗಳು ಆ ಸಂದರ್ಭದಲ್ಲಿ ವಿಶೇಷ ಫಲಗಳನ್ನು ಕೊಡುತ್ತವೆ. ಅದರಂತೆ ಷಷ್ಠಿ ತಿಥಿಗೆ ಚಂಪಾ, ಮಂದಾರ, ವರ ಎಂಬಂತಹ ಯೋಗವಿಶೇಷಗಳಿವೆ. ಅದರಲ್ಲಿ ಚಂಪಾಯೋಗವಿದ್ದರೆ ಸಕಲಕಾರ್ಯಗಳಲ್ಲಿಯೂ ಜಯ ಪ್ರಾಪ್ತಿಯಾ-ಗುತ್ತದೆ. ಈ ಚಂಪಾ ಯೋಗವು ಹೇಗೆ ಬರುತ್ತದೆ ಎಂದು ನೋಡೋಣ. ಮಾರ್ಗೇ ಭಾದ್ರಪದೇ ಶುಕ್ಲಾ ಷಷ್ಠೀ ವೈಧೃತಿಸಂಯುತಾ । ರವಿವಾರೇಣ ಸಂಯುಕ್ತಾ ಸಾ ಚಂಪೇತಿ ಕೀರ್ತಿತಾ । ವಿಶಾಖಾ ಭೌಮಯೋಗೇನ ಸಾ ಚಂಪೇತೀಹ ಕೀರ್ತಿತಾ । ಎಂದು ಎರಡು ವಿಧವಾಗಿ ಚಂಪಾ ಯೋಗವು ಪ್ರಾಪ್ತಿಯಾಗುತ್ತದೆ ಎಂದು ಹೇಳುತ್ತಾರೆ. 1. ಮಾರ್ಗಶಿರ ಮಾಸದ ಶುಕ್ಲ ಪಕ್ಷದ ಷಷ್ಠಿಯಂದು ಭಾನು-ವಾರ ಹಾಗೂ ಅಂದೇ ವೈಧೃತಿಯೆಂಬ ಯೋಗವೂ ಸೇರಿದರೆ ಚಂಪಾಷಷ್ಠೀ ಎಂದೆನಿಸುತ್ತದೆ. ಅಥವಾ ಮಂಗಳವಾರದಂದು ವಿಶಾಖಾ ನಕ್ಷತ್ರವಿದ್ದರೂ ಮಾರ್ಗಶಿರ ಮಾಸದ ಶುಕ್ಲ ಪಕ್ಷದ ಷಷ್ಠಿಯು ಚಂಪಾಷಷ್ಠೀ ಎಂದೆನಿಸಿಕೊಳ್ಳುತ್ತದೆ.

ಈ ಎರಡು ವಿಧವಾದ ದಿನಗಳಲ್ಲಿ ಒಂದು ದಿನ ಸ್ಕಂದನು ತಾರಕಾಸುರನನ್ನು ಸಂಹರಿಸಿದನು. ಆದ್ದರಿಂದ ಆ ಷಷ್ಠಿಗೆ ಚಂಪಾಷಷ್ಠೀ ಎಂದು ಹೆಸರು.ಈ ದಿನದಂದು ದೇವತೆಗಳು ವಿಶೇಷವಾಗಿ ಸುಬ್ರಹ್ಮಣ್ಯನ ಪೂಜೆಯನ್ನು ಮಾಡುತ್ತಾರೆ. ಆದ್ದರಿಂದ ನಾವೆಲ್ಲ ಅಂದು ಚಂಪಾ ಯೋಗವಿಲ್ಲದಿದ್ದರೂ ಅಂದು ಮಾಡುವ ಪೂಜೆಯು ಚಂಪಾಷಷ್ಠೀಯ ಪೂಜಾಫಲ. ಅದರಂತೆ ಇಂದು ಇನ್ನೂ ಒಂದು ವಿಶೇಷವಿದೆ. ಹಿಂದೆ ಪಾತಾಳದಲ್ಲಿ ವಾಸಿಸುವ ನಾಗದೇವತೆಗಳ ಮೇಲೆ ಸುತಲಲೋಕದ ದೈತ್ಯರ ಆಕ್ರಮಣವಾದಾಗ ನಾಗದೇವತೆಗಳ ಪ್ರಾರ್ಥನೆಯಂತೆ ಸುಬ್ರಹ್ಮಣ್ಯನು ಅಲ್ಲಿಗೆ ಬಂದು ದೈತ್ಯರೊಂದಿಗೆ ಹೋರಾಡಿ ನಾಗದೇವತೆಗಳಿಗೆ ಜಯ ತಂದಿತ್ತನು. ಆಗ

ನಾಗರು ತಮ್ಮ ಪ್ರತೀಕದಲ್ಲಿ ಸದಾ ಕಾಲ ಸುಬ್ರಹ್ಮಣ್ಯನು ನಮ್ಮಲ್ಲಿ ಇದ್ದು ದೈತ್ಯರ ಭಯ ಇಲ್ಲದಂತೆ ಮಾಡಬೇಕೆಂದು ಕೇಳಿಕೊಳ್ಳುತ್ತಾರೆ. ಅದರಂತೆ ಸುಬ್ರಹ್ಮಣ್ಯನು ಸರ್ಪಗಳಿಗೆ ಅಭಯವನ್ನು ನೀಡುತ್ತಾನೆ. ಆಗ ಸಂತುಷ್ಟರಾದ ನಾಗಗಳು ತಮ್ಮ ಪ್ರತೀಕದಲ್ಲಿ ಸುಬ್ರಹ್ಮಣ್ಯನ ಆರಾಧನೆಯೂ ನಡೆಯುವಂತೆ ಅನುಗ್ರಹಿಸುತ್ತಾರೆ. ಅಂದಿನಿಂದ ಸುಬ್ರಹ್ಮಣ್ಯ ಷಷ್ಠಿಯಂದು ನಾಗನ ಪ್ರತೀಕದಲ್ಲಿ ಸುಬ್ರಹ್ಮಣ್ಯನ ಆರಾಧನೆಯು ನಡೆಯುವ ಸಂಪ್ರದಾಯ ಬಂದಿತು.

ಸುಬ್ರಹ್ಮಣ್ಯ ಕ್ಷೇತ್ರ ಸುಬ್ರಹ್ಮಣ್ಯಸ್ಯ ಮಹಿಮಾ ವರ್ಣಿತುಂ ಕೇನ ಶಕ್ಯತೇ। ಯತ್ರೋಚ್ಛಿಷ್ಟಮಪಿ ಸ್ಪಷ್ಟಂ ಶ್ವಿತ್ರಿಣಃ ಶೋಧಯತ್ಯಹೋ ॥ 37 ॥ ಬ್ರಹ್ಮಹತ್ಯಾದೋಷಶೇಷಂ ಬ್ರಾಹ್ಮಣಾನಾಂ ಹರನ್ನಯಮ್। ವಿರೋಧೇ ತು ಪರಂ ಕಾರ್ಯಂ ಇತಿ ನ್ಯಾಯಮಮಾನಯತ್ ॥38॥ ಸುಬ್ರಹ್ಮಣ್ಯ ಸುರಾಗ್ರಗಣ್ಯ ಕುಜನಾರಣ್ಯಜ್ವಲತ್ಪಾವಕ ಪ್ರಬ್ರೂಯಾತ್ತವ ವಿಕ್ರಮಂ ಭುವಿ ಕವಿಃ ಕೋಽವಾಽಮರೋ ವಾ ದಿವಿ। ಯಃ ಪ್ರಾಗಪ್ರತಿಮಲ್ಲತಾರಕಮಹಾದೈತ್ಯಂ ಸುದೃಪ್ತಂ ಭವಾನ್ ವಿಪ್ರೌಘಪ್ರಿಯ ಸುಪ್ರಭಾವ ಸಮರೇ ಕ್ರೀಡನ್ನಜೈಷೀದ್ದ್ವಿಷಮ್॥39॥ ಅನ್ನಂ ದದಾಸಿ ವಿದಧಾಸ್ಯಖಿಲಸ್ಯ ರಕ್ಷಾಂ ಕ್ಲಿನ್ನಂ ಪುನಾಸಿ ವಿಲುನಾಸಿ ಸಮಸ್ತದೋಷಾನ್। ಹೇ ಸ್ಕಂದ ವಂದ್ಯ ಭವತೋ ಭುವನೇ ಭವಾನೀಸೂನೋ ಕೃಪಾಜಲನಿಧೇ ಕತಮಃ ಸಮಃ ಸ್ಯಾತ್॥40॥

## ನಾಗಾರಾಧನೆ

ಸುಬ್ರಹ್ಮಣ್ಯ ಹಾಗೂ ಗಣೇಶ ಇವರೀರ್ವರೂ ಶಿವಸುತರು. ತಮ್ಮನಾದ ವಿನಾಯಕ ವಿಘ್ನಗಣಗಳಿಗೆ ಅಧಿಪತಿಯಾಗಿ ಗಣೇಶನೆನಿಸಿದ. ಸುಬ್ರಹ್ಮಣ್ಯನು ದೇವಸೇನೆಯಲ್ಲಿ ಸೇರಿದ ನಾಗಗಳಿಗೂ ಅಧಿಪತಿಯಾಗಿ ನಾಗೇಶನೆನಿಸಿದ. ನಾಗಗಳ ಜೀವಕ್ಕೆ ಸಂಚಕಾರ ಬಂದಾಗ ರಕ್ಷಣೆಯಿತ್ತ. ನಾಗಗಳನ್ನು ಕೊಲ್ಲದೇ ಪೂಜಿಸಬೇಕೆಂದು ಆದೇಶಿಸಿದ. ನಾಗಗಳ ಪೂಜೆಯಿಂದ ನನಗೆ ತೃಪ್ತಿಯೆಂದು ವರವಿತ್ತ. ಹಾಗಾಗಿ ಸುಬ್ರಹ್ಮಣ್ಯಷಷ್ಠಿಯಂದು ನಾಗಾರಾಧನೆ ನಡೆಯುತ್ತದೆ. ನಾಗರಕಲ್ಲು ಪ್ರತಿಷ್ಠೆಯಾಗಿದ್ದ ಸ್ಥಲಕ್ಕೆ ಹೋಗಿ ಹಾಲೆರೆದು ಅರಶಿನ ಹಚ್ಚಿ ಸುತ್ತುಹಾಕಿ ನಮಸ್ಕರಿಸುವುದು ಇಂದು ಎಲ್ಲೆಡೆ ಆಚರಣೆಯಲ್ಲಿದೆ. ಸಾಮರ್ಥ್ಯವುಳ್ಳವರು ಒಂಭತ್ತು ಬ್ರಹ್ಮಚಾರಿಗಳನ್ನು ಸ್ಕಂದ-ಸರ್ಪಗಳ ಪ್ರೀತಿಗಾಗಿ ಆರಾಧಿಸುತ್ತಾರೆ. ಮಾರ್ಗಶೀರ್ಷಶುಕ್ಲಷಷ್ಠೀ, ರವಿ-

ವಾರ, ವಿಶಾಖಾನಕ್ಷತ್ರ, ವೈಧೃತಿಯೋಗಗಳು ಒಟ್ಟು ಕೂಡಿದರೆ ಆ ಯೋಗ 'ಚಂಪಾ-ಷಷ್ಠೀ' ಎಂದು ನಿರ್ಣಯಸಿಂಧು ಹೇಳಿದೆ. ಪಂಚಮಿಯಿದ್ದು ಮಧ್ಯಾಹ್ನವ್ಯಾಪಿನಿಯಾಗಿ ಷಷ್ಠಿಯಿದ್ದರೆ ಅದನ್ನೇ 'ಸುಬ್ರಹ್ಮಣ್ಯಷಷ್ಠೀ' ಎಂದು ಪರಿಗ್ರಹಸಬೇಕು.

ವಟ್ವಾರಾಧನೆ– ಸುಬ್ರಹ್ಮಣ್ಯನಿಗೆ ಕುಮಾರನೆಂದೂ ಹೆಸರು. ಕೌಮಾರಾವಸ್ಥೆಯ ಗಾಯತ್ರೀ ಮಂತ್ರಜಾಪಕವಟುಗಳೆಂದರೆ ಕುಮಾರನಿಗೂ, ನಾಗಗಳಿಗೂ ಅತ್ಯಂತ ಪ್ರೀತಿ. ವಟುಗಳ ಆರಾಧನೆ-ಸಂತರ್ಪಣೆಗಳಿಂದ ಸುಬ್ರಹ್ಮಣ್ಯ-ನಾಗಗಳ ಅನುಗ್ರಹ-ವನ್ನು ಸಂಪಾದಿಸಬಹುದು. ಕನಿಷ್ಠ ಎಂಟು ಬ್ರಹ್ಮಚಾರಿಗಳನ್ನು ಆರಾಧಿಸಬೇಕು. ಅವರಲ್ಲಿ ಎಂಟು ಪ್ರಮುಖ ನಾಗಗಳನ್ನು ಆವಾಹಿಸಿ ಪೂಜಿಸಬೇಕು. ಆ ಎಂಟು ನಾಗ -ಗಳನ್ನು ಆಗ್ನೇಯಪುರಾಣ ಹೀಗೆ ಹೆಸರಿಸಿದೆ– ಶೇಷವಾಸುಕಿತಕ್ಷಾಖ್ಯಾಃ ಕರ್ಕೋಟೋ -ಽಬ್ಜೋ ಮಹಾಂಬುಜಃ । ಶಂಖಪಾಲಶ್ಚ ಕುಲಿಶಃ ಇತ್ಯಷ್ಟೌ ನಾಗವರ್ಯಕಾಃ ॥ ಶೇಷ, ವಾಸುಕಿ, ತಕ್ಷಕ, ಕರ್ಕೋಟಕ, ಪದ್ಮ, ಮಹಾಪದ್ಮ, ಶಂಖಪಾಲ, ಕುಲಿಶ ಎಂಬ ಎಂಟು ನಾಗಗಳು. ಒಂಭತ್ತನೆ ವಟುವಿನಲ್ಲಿ ಸಂಕರ್ಷಣನನ್ನು ಆವಾಹಿಸಿ ಪೂಜಿಸಬೇಕು. ಸಾಂಪ್ರದಾಯಿಕವಾಗಿ ಸರ್ಪ, ಅನಂತ, ಶೇಷ, ಕಪಿಲ, ನಾಗ, ಕಾಲಿಯ, ಶಂಖಪಾಲ, ಭೂಧರ ವಾಸುಕಿಯೆಂಬ ಒಂಭತ್ತು ನಾಗಗಳ ಆರಾಧನೆ-ಯಿದೆ. ಆರಾಧನೆಯ ಕ್ರಮ ಹೀಗೆ– ಶೇಷಾದಿಸಕಲಸರ್ಪಾಂತರ್ಗತ ಪ್ರಾಣಸ್ಥ-ಸಂಕರ್ಷಣಪ್ರೀತ್ಯರ್ಥಂ ಬ್ರಹ್ಮಚಾರ್ಯಾರಾಧನಂ ಕರಿಷ್ಯೇ । ಶೇಷಾಯ ನಮಃ । ಶೇಷ ಸ್ವಾಗತಮ್ । (ಸುಸ್ವಾಗತಮ್) ಶೇಷಸ್ಯ ಇದಮಾಸನಮ್ । (ಅಸ್ತು ಸುಖಾಸನಮ್) ಶೇಷ ಇದಂ ತೇ ಪಾದ್ಯಮ್ । (ಅಸ್ತು ಪಾದ್ಯಮ್) ಶೇಷಂ ಭವತ್ಸು ಆವಾಹಯಿಷ್ಯೇ । (ಅಸ್ತು ಆವಾಹಯ)ಶೇಷ ಇದಂ ತೇ ಅರ್ಘ್ಯಮ್ । (ಅಸ್ತ್ವರ್ಘ್ಯಮ್) ಶೇಷಾಯ ನಮಃ । ಗಂಧಾದಿಸಕಲಾರಾಧನೈಃ ಸ್ವರ್ಚಿತಮ್ । (ಅಸ್ತು) (ಕಂಸದಲ್ಲಿರುವುದನ್ನು ವಟುಗಳು ಹೇಳಬೇಕು.) ಹೀಗೆ ವಟುವಿನಲ್ಲಿ ಶೇಷನನ್ನು ಆವಾಹಿಸಿ, ಉಪಚರಿಸಿ, ಪಾದ ತೊಳೆದು, ಗೋಪೀಚಂದನ, ಯಜ್ಞೋಪವೀತ, ಪಂಚಪಾತ್ರೆ , ಫಲ, ಮಡಿಪಂಚೆ ಇವುಗಳನ್ನು ದಕ್ಷಿಣೆಯೊಂದಿಗೆ ಕೊಟ್ಟು ನಮಿಸಬೇಕು. ಅನೇನ ಸೋಪಸ್ಕರಶೇಷಾರಾಧನೇನ ಶೇಷಾಂತರ್ಗತ ಸಂಕರ್ಷಣಪರಮಾತ್ಮಾ ಪ್ರೀಯತಾಮ್ । ಹೀಗೆಯೇ ವಾಸುಕಯೇ ನಮಃ । ವಾಸುಕೇ ಸ್ವಾಗತಮ್ । ವಾಸುಕೇಃ ಇದಮಾಸನಮ್ । ಇತ್ಯಾದಿಯಾಗಿ ಹೇಳಬೇಕು.

## ಸ್ಕಂದಚರಿತ್ರೆ ಪಾರಾಯಣಮಾಡಿರಿ –

## ಅಥ ಕಾರ್ತಿಕೇಯೋತ್ಪತ್ತಿಃ (ಸ್ಕಂದಚರಿತ್ರೆ)

ಪ್ರಜಾಪಾಲ ಉವಾಚ – ಅಹಂಕಾರಾತ್ ಕಥಂ ಯಜ್ಞೇ ಕಾರ್ತಿಕೇಯೋ ದ್ವಿಜೋತ್ತಮ । ಏತನ್ಮೇ ಸಂಶಯಂ ಛಿಂದಿ ಪೃಚ್ಛತೋ ವೈ ಮಹಾಮುನೇ ॥1॥ ಪ್ರಜಾ-ಪಾಲ – ದ್ವಿಜೋತ್ತಮ! ಮಹಾಮುನಿಯೇ! ಅಹಂಕಾರ(ತತ್ವ)ದಿಂದ ಷಣ್ಮುಖನು ಹೇಗೆ ಜನಿಸಿದನು? ನನ್ನ ಈ ಸಂದೇಹವನ್ನು ಹೋಗಲಾಡಿಸು. ಮಹಾತಪಾ ಉವಾಚ – ಸರ್ವೇಷಾಮೇವ ತತ್ವಾನಾಂ ಯಃ ಪರಃ ಪುರುಷಃ ಸ್ಮೃತಃ । ತಸ್ಮಾದ-ವ್ಯಕ್ತಮುತ್ಪನ್ನಂ ತತ್ವಾದಿ ತ್ರಿವಿಧಂ ತು ತತ್ ॥2॥ ಪುರುಷಾವ್ಯಕ್ತಯೋರ್ಮಧ್ಯೇ ಮಹತ್ವಂ ಸಮಪದ್ಯತ । ಸ ಚಾಹಂಕಾರ ಇತ್ಯುಕ್ತೋ ಯೋ ಮಹಾನ್ ಸಮುದಾ-ಹೃತಃ ॥3॥ ಮಹಾತಪಮುನಿ – ತತ್ತ್ವಗಳಲ್ಲೆಲ್ಲಾ ಶ್ರೇಷ್ಠನು (ಜ್ಯೇಷ್ಠನು) ಪುರು-ಷನೆನಿಸಿಕೊಳ್ಳುವನು. ಆ ಪುರುಷನಿಂದ ಅವ್ಯಕ್ತ(ತತ್ವ)ವು ಉದಿಸಿತು. ಪುರುಷಾ-ವ್ಯಕ್ತಗಳ ಸಾಮರಸ್ಯವುಂಟಾಗಲು ಮೂರು ಬಗೆಯಾದ ಮಹತತ್ತ್ವವು ಉದಿಸಿತು. ಆ ಮಹತ್ತತ್ವವೆಂಬುದೇ (ಮೂರು ಬಗೆಯ) ಅಹಂಕಾರವೆನಿಸಿಕೊಂಡಿತು. ಪುರು-ಷೋ ವಿಷ್ಣುರಿತ್ಯುಕ್ತಃ ಶಿವೋ ವಾ ನಾಮತಃ ಸ್ಮೃತಃ । ಅವ್ಯಕ್ತಂ ತು ಉಮಾ ದೇವೀ ಶ್ರೀರ್ವಾ ಪದ್ಮನಿಭೇಕ್ಷಣಾ ॥4॥ ಪುರುಷನಿಗೆ ವಿಷ್ಣು ಅಥವಾ ಶಿವನೆಂದು ಹೆಸರು. ಅವ್ಯಕ್ತವಾದರೋ ಕಮಲನೇತ್ರೆಯಾದ ಶ್ರೀದೇವಿ, ಅಥವಾ ಉಮಾದೇವಿ. ತತ್ಸಂಯೋಗಾದಹಂಕಾರಃ ಸ ಚ ಸೇನಾಪತಿರ್ಗುಹಃ । ತಸ್ಯೋತ್ಪತ್ತಿಂ ಪ್ರವಕ್ಷ್ಯಾಮಿ ಶೃಣು ರಾಜನ್ ಮಹಾಮತೇ ॥5॥ ಪುರುಷಾವ್ಯಕ್ತಸಂಯೋಗದಿಂದ ಅಹಂಕಾ-ರೋತ್ಪತ್ತಿ . ಆ ಅಹಂಕಾರವೇ ದೇವಸೇನಾಪತಿಯಾದ ಗುಹ ಅಥವಾ ಷಣ್ಮುಖನೆನಿಸಿ-ಕೊಳ್ಳುವನು. ಮಹಾಮತಿಯಾದ ಪ್ರಜಾಪಾಲನೇ! ಆ ಷಣ್ಮುಖನ ಉತ್ಪತ್ತಿಯನ್ನು ಹೇಳುತ್ತೇನೆ. ಕೇಳು. ಆದ್ಯೋ ನಾರಾಯಣೋ ದೇವಾಸ್ತಸ್ಮಾದ್ ಬ್ರಹ್ಮಾ ತತೋಽ-ಭವತ್ । ಅತಃ ಸ್ವಯಂಭುಶ್ಚಾನ್ಯೇ ಮರೀಚ್ಯಾದ್ಯಾರ್ಕಸಂಭವಾಃ ॥6॥ ಸರ್ವಕ್ಕೂ ಆದಿಯಾದವನು ನಾರಾಯಣದೇವನು. ಬಳಿಕ ಅವನಿಂದ ಬ್ರಹ್ಮನು ಉದಿಸಿದನು. ಆ ಬ್ರಹ್ಮನಿಂದ ಮರೀಚ್ಯಾದಿಗಳೂ, ಸೂರ್ಯನೂ ಸಂಭವಿಸಿದರು. ತದಾರಭ್ಯ ಸುರಾ ದೈತ್ಯಾ ಗಂಧರ್ವಾ ಮಾನುಷಾಃ ಖಗಾಃ । ಪಶವಃ ಸರ್ವಭೂತಾನಿ ಸೃಷ್ಟಿರೇಷಾ ಪ್ರಕೀರ್ತಿತಾ ॥7॥ ಅಲ್ಲಿಂದ ಮೊದಲುಗೊಂಡು ಸುರರೂ, ಅಸುರರೂ,

ಗಂಧರ್ವರೂ, ಮನುಷ್ಯರೂ, ಪಶುಪಕ್ಷಿಗಳೂ, ಇತರ ಸರ್ವ(ಭೂತ) ಪ್ರಾಣಿಗಳೂ ಉದಿಸಿದವು. ಇದಕ್ಕೇ ಸೃಷ್ಟಿಯೆಂದು ಹೆಸರು. ಸೃಷ್ಟ್ಯಾಂ ವಿಸ್ತಾರಿತಾಯಾಂ ತು ದೇವದೈತ್ಯಾ ಮಹಾಬಲಾಃ। ಸತ್ವಾನಾಂ(ಸಾತ್ವತಂ) ಭಾವಮಾಸ್ಥಾಯ ಯುಯುಧು-ರ್ವಿಜಿಗೀಷವಃ ॥8॥ ಸೃಷ್ಟಿಯು ವಿಸ್ತಾರವಾಗಲು ಮಹಾಬಲಶಾಲಿಗಳಾದ ದೇವಾಸುರರು ಸಾಮಾನ್ಯಜಂತುಗಳ ಸ್ವಭಾವವನ್ನು ಪಡೆದು ಪರಸ್ಪರವಾಗಿ ಜಯಿಸ-ಲಿಷ್ಟವುಳ್ಳವರಾಗಿ ಯುದ್ಧ ಮಾಡಿದರು. ದೈತ್ಯಾನಾಂ ಬಲಿನಃ ಸಂತಿ ನಾಯಕಾ ಯುದ್ಧದುರ್ಮದಾಃ॥9॥ ರಾಕ್ಷಸರಿಗೆ ಯುದ್ಧದಲ್ಲಿ ಹೆಚ್ಚು ಸೊಕ್ಕುಳ್ಳ ಬಲಶಾಲಿಗಳಾದ (ಸೇನಾ) ನಾಯಕರಿದ್ದರು. ಹಿರಣ್ಯಕಶಿಪುಃ ಪೂರ್ವಂ ಹಿರಣ್ಯಾಕ್ಷೋ ಮಹಾಸುರಃ। ವಿಪ್ರಚಿತ್ತಿರ್ವಿಚಿತ್ರಸ್ತು ಭೀಮಾಕ್ಷಃ ಕ್ರೌಂಚ ಏವ ಚ ॥10॥ ಏತೇತಿಬಲಿನಃ ಶೂರಾ ದೇವಸೈನ್ಯಂ ಮಹಾಮೃಧೇ । ಅಮರಾಂಶ್ಚ ಶಿತೈರ್ಬಾಣೈರ್ಜಯಂತ್ಯನುದಿನಂ ಮೃಧೇ ॥11॥ ಮೊದಲು ಹಿರಣ್ಯಾಕ್ಷನೆಂಬ ಮಹಾರಾಕ್ಷಸನೂ, ಹಿರಣ್ಯಕಶಿಪು, ವಿಪ್ರಚಿತ್ತಿ, ವಿಚಿತ್ರ, ಭೀಮಾಕ್ಷ, ಕ್ರೌಂಚ ಎಂಬ ಬಲಿಷ್ಠರಾದ ಶೂರರೂ ಮಹಾ-ಯುದ್ಧದಲ್ಲಿ ದೇವತೆಗಳನ್ನು ಹರಿತವಾದ ಬಾಣಗಳಿಂದ ದಿನದಿನವೂ ಜಯಿಸು-ತ್ತಿದ್ದರು. ತೇಷಾಂ ಪರಾಜಯಂ ದೃಷ್ಟ್ವಾ ದೇವಾನಾಂ ಚ ಬೃಹಸ್ಪತಿಃ । ಉವಾಚ ಹೀನಂ ವೈ ಸೈನ್ಯಂ ನಾಯಕೇನ ವಿನಾ ಸುರಾಃ। ಏಕೇನೇಂದ್ರೇಣ ದಿವ್ಯಂ ತು ಸೈನ್ಯಂ ಪಾತುಂ ನ ಶಕ್ಯತೇ ॥12॥ ಅತಃ ಸೇನಾಪತಿಂ ಕಂಚಿದನ್ವೇಷಯತ ಮಾಚಿರಮ್ । ಏವಮುಕ್ತಾಸ್ತತೋ ದೇವಾಃ ಜಗ್ಮುರ್ಲೋಕಪಿತಾಮಹಮ್ ॥13॥ ದೇವತೆಗಳ ಸೋಲನ್ನು ಕಂಡು, ದೇವಗುರುವಾದ ಬೃಹಸ್ಪತಿಯು 'ದೇವತೆಗಳೇ! ನಾಯಕನಿಲ್ಲದ ಸೈನ್ಯವು ಹೀನವಾದುದು. ಇಂದ್ರನೊಬ್ಬನಿಗೆ ದೇವಸೈನ್ಯವನ್ನು ರಕ್ಷಿಸಲು ಸಾಧ್ಯವಾ-ಗುವುದಿಲ್ಲ. ಆದುದರಿಂದ ತಡಮಾಡದೇ ಸೇನಾಪತಿಯೊಬ್ಬನನ್ನು ಹುಡುಕಿರಿ' ಎಂದನು. ಹೀಗೆ ಹೇಳಿಸಿಕೊಂಡ ದೇವತೆಗಳು ಬ್ರಹ್ಮನ ಹತ್ತಿರಕ್ಕೆ ಹೋದರು. ಸೇನಾಪತಿಂ ಚ ನೋ ದೇಹಿ ವಾಕ್ಯಮೂಚುಃ ಸಸಂಭ್ರಮಮ್ । ತತೋ ದಧ್ಯೌ ಚತುರ್ವಕ್ತ್ರಃ ಕಿಮೇಷಾಂ ಕ್ರಿಯತೇ ಮಯಾ ॥14॥ ಅವರು ಬ್ರಹ್ಮನನ್ನು 'ನಮಗೆ ಸೇನಾಪತಿಯನ್ನುಕೊಡು' ಎಂದು ತ್ವರೆಯಿಂದ ಬೇಡಿದರು. ಬಳಿಕ ಚತುರ್ಮುಖ-ಬ್ರಹ್ಮನು ಅವರಿಗೆ ನಾನೇನು ಮಾಡಲಿ ಎಂದು ಆಲೋಚಿಸಿದನು. ಬ್ರಹ್ಮಣ-ಶ್ಚಿಂತ್ಯಮಾನಸ್ಯ ರುದ್ರಂ ಪ್ರತಿ ಮನೋ ಗತಮ್ । ತತೋ ದೇವಾಃ ಸಗಂಧರ್ವಾಃ

ಋಷಯಃ ಸಿದ್ಧಚಾರಣಾಃ ॥ ಬ್ರಹ್ಮಾಣಂ ಪುರತಃ ಕೃತ್ವಾ ಜಗ್ಮುಃ ಕೈಲಾಸಪರ್ವತಮ್ ॥15॥ ಆಲೋಚಿಸುತ್ತಿದ್ದ ಬ್ರಹ್ಮನ ಮನಸ್ಸು ರುದ್ರನ ಕಡೆಗೋಡಿತು. ಬಳಿಕ ಗಂಧರ್ವಸಹಿತರಾದ ದೇವತೆಗಳೂ, ಋಷಿಗಳೂ, ಸಿದ್ಧಚಾರಣರೂ ಬ್ರಹ್ಮನನ್ನು ಮುಂದಿಟ್ಟುಕೊಂಡು ಕೈಲಾಸಪರ್ವತಕ್ಕೆ ಹೋದರು. ತತ್ರ ದೃಷ್ಟ್ವಾ ಮಹಾದೇವಂ ಶಿವಂ ಪಶುಪತಿಂ ವಿಭುಮ್ । ತುಷ್ಟುವುರ್ವಿವಿಧೈಃ ಸ್ತೋತ್ರೈಃ ಶಕ್ರಾದ್ಯಾಸ್ತ್ರಿದಿವೌಕಸಃ ॥16॥ ಅಲ್ಲಿ ಮಹಾದೇವನೂ, ಪಶುಪತಿಯೂ, ವಿಭುವೂ ಆದ ಶಿವನನ್ನು ಕಂಡು, ಇಂದ್ರನೇ ಮೊದಲಾದ ದೇವತೆಗಳೆಲ್ಲರೂ, ಬಗೆ ಬಗೆಯ ಸ್ತೋತ್ರಗಳಿಂದ ಅವನನ್ನು ಸ್ತುತಿಸಿದರು. ದೇವಾ ಊಚುಃ – ನಮಾಮ ಸರ್ವೇ ಶರಣಾರ್ಥಿನೋ ವಯಂ ಮಹೇಶ್ವರಂ ತ್ರ್ಯಂಬಕಭೂತಭಾವನಮ್ । ಉಮಾಪತೇ ವಿಶ್ವಪತೇ ಮರುತ್ಪತೇ ಜಗತ್ಪತೇ ಶಂಕರ ಪಾಹಿ ನಃ ಸ್ವಯಮ್ ॥17॥ ದೇವತೆಗಳು – ಮಹೇಶ್ವರ! ತ್ರಿನಯನ! ಪ್ರಾಣಿಗಳಿಗೆ ಬೇಕಾದುದೆಲ್ಲವನ್ನೂ ಕೊಟ್ಟು ಬೆಳೆಸುವ ನಿನ್ನನ್ನು, ನಿನ್ನ ಶರಣಾರ್ಥಿಗಳಾದ ನಾವೆಲ್ಲರೂ ನಮಸ್ಕರಿಸುತ್ತೇವೆ. ಉಮಾಪತಿ! ವಿಶ್ವಪತಿ! ಮರುತ್ಪತಿ! ಜಗತ್ಪತಿ! ಶಂಕರ! ನಮ್ಮನ್ನು ನೀನೇ ರಕ್ಷಿಸು. ಜಟಾಕಲಾಪಾಗ್ರ-ಶಶಾಂಕದೀಧಿತಿ ಪ್ರಕಾಶಿತಾಶೇಷಜಗತ್ರಯಾಮಲ । ತ್ರಿಶೂಲಪಾಣೇ ಪುರುಷೋ-ತ್ತಮಾಚ್ಯುತ ತ್ವಂ ಪಾಹಿ ನೋ ದೈತ್ಯಭಯಾದುಪಸ್ಥಿತಾತ್ ॥18॥ ಜಡೆಮುಡಿಯ ಮೇಲೊಪ್ಪುವ ಚಂದ್ರನ ಕಿರಣಗಳಿಂದ ಮೂರು ಲೋಕಗಳೆಲ್ಲವನ್ನೂ ಬೆಳಗುವವನೇ! ನಿರ್ಮಲನೇ! ತ್ರಿಶೂಲಪಾಣೀ! ಪುರುಷೋತ್ತಮ! ನಾಶರಹಿತ! ರಕ್ಕಸರ ಭಯದಿಂದ ಬಂದಿರುವ ನಮ್ಮನ್ನು ರಕ್ಷಿಸು. ತ್ವಮಾದಿದೇವಃ ಪುರುಷೋತ್ತಮೋ ಹರಿಃ ಭವೋ ಮಹೇಶಸ್ತ್ರಿಪುರಾಂತಕೋ ವಿಭುಃ । ಭಗಾಕ್ಷಹಾ ದೈತ್ಯರಿಪುಃ ಪುರಾತನೋ ವೃಷಧ್ವಜಃ ಪಾಹಿ ಸುರೋತ್ತಮೋತ್ತಮ ॥19॥ ಸುರೋತ್ತಮನೇ! ಆದಿದೇವನೂ ಪುರುಷೋತ್ತಮನೂ, ಹರಿಯೂ, ಭವನೂ, ಮಹೇಶನೂ, ತ್ರಿಪುರಾಂತಕನೂ, ವಿಭುವೂ, ಭಗನೇತ್ರನಾಶಕನೂ, ರಾಕ್ಷಸಾಂತಕನೂ, ಪುರಾತನನೂ, ವೃಷಭಧ್ವಜನೂ ಆದ ನೀನು ನಮ್ಮನ್ನು ಪಾಲಿಸು. ಗಿರೀಶಜಾನಾಥ ಗಿರಿಪ್ರಿಯಾಪ್ರಿಯ ಪ್ರಭೋ ಸಮಸ್ತಾಮರಲೋಕಪೂಜಿತ । ಗಣೇಶ ಭೂತೇಶ ಶಿವಾಕ್ಷಯಾಯನ ತ್ವಂ ಪಾಹಿ ನೋ ದೈತ್ಯವರಾಂತಕಾಚ್ಯುತ ॥20॥ ಗೌರೀಶನೇ, ದೇವ, ಗಂಗೆಯ ಪ್ರಿಯ! ಪ್ರಭು! ಸಮಸ್ತಾಮರಲೋಕಪೂಜಿತ! ಗಣೇಶ! ಭೂತೇಶ! ಶಿವ! ಅಕ್ಷಯಾಯನ!

ದೈತ್ಯವರನಾಶಕ! ಅಚ್ಯುತ! ನೀನು ನಮ್ಮನ್ನು ರಕ್ಷಿಸು. ಪೃಥ್ವ್ಯಾದಿತತ್ವೇಷು ಭವಾನ್ ಪ್ರತಿಷ್ಠಿತೋ ಧ್ವನಿಸ್ವರೂಪೋ ಗಗನೇ ವಿಶೇಷತಃ । ಲಿನೋದ್ವಿಧಾ ತೇಜಸಿ ಸ ತ್ರಿಧಾ ಜಲೇ ಚತುಃ ಕ್ಷಿತೌ ಪಂಚ ಗುಣಪ್ರಧಾನಃ ॥21॥ ಪೃಥಿವ್ಯಾದಿ ತತ್ವಗಳಲ್ಲಿ ನೀನು ನೆಲೆಸಿದ್ದೀಯೆ. ಆಕಾಶದಲ್ಲಿ ಧ್ವನಿಯ ಒಂದು ರೂಪದಿಂದಲೂ ವಾಯುವಿನಲ್ಲಿ ಶಬ್ದಸ್ಪರ್ಶವೆಂಬ ಎರಡು ಗುಣಗಳಿಂದಲೂ, ತೇಜಸ್ಸಿನಲ್ಲಿ ಶಬ್ದಸ್ಪರ್ಶರೂಪಗಳೆಂಬ ಮೂರು ಬಗೆಯಿಂದಲೂ, ನೀರಿನಲ್ಲಿ (ಶಬ್ದ ಸ್ಪರ್ಶರೂಪರಸಗಳೆಂಬ) ನಾಲ್ಕು ಗುಣಗಳಿಂದಲೂ, ಭೂಮಿಯಲ್ಲಿ (ಶಬ್ದಸ್ಪರ್ಶರೂಪರಸಗಂಧಗಳೆಂಬ) ಐದುಗುಣ-ಗಳಿಂದಲೂ, ಪ್ರಧಾನನಾಗಿದ್ದೀಯೆ. ಅಗ್ನಿಸ್ವರೂಪೋಽಸಿ ತರೌ ತಥೋಪಲೇ ಸತ್ಯಸ್ವರೂಪೋಽಸಿ ತಥಾ ತಿಲೇಷ್ವಪಿ । ತೈಲಸ್ವರೂಪೋ ಭಗವಾನ್ ಮಹೇಶ್ವರಃ ತ್ವಂ ಪಾಹಿ ನೋ ದೈತ್ಯಗಣಾರ್ದಿತಾನ್ ಹರ ॥22॥ ಮರದಲ್ಲಿ ಅಗ್ನಿಸ್ವರೂಪನಾಗಿಯೂ, ಕಲ್ಲಿನಲ್ಲಿ ಸತ್ಯಸ್ವರೂಪನಾಗಿಯೂ, ಎಳ್ಳಿನಲ್ಲಿ ಎಣ್ಣೆಯ ರೂಪವಾಗಿಯೂ, ಮಹೇಶ್ವರನಾದ ನೀನು ಇದ್ದೀಯೆ. ಹರನೇ! ರಾಕ್ಷಸರ ಗುಂಪಿನಿಂದ ಪೀಡಿತರಾದ ನಮ್ಮನ್ನು ನೀನು ಕಾಪಾಡು. ಆಸೀದ್ಯದಾಕಾಂಡಮಿದಂ ತ್ರಿಲೋಚನ ಪ್ರಭಾ-ಕರೇಂದ್ರೇಂದುಮುಖ್ಯೈರ್ವಿನಾ ಕೃತಮ್ । ತದಾ ಭವಾನೇವ ವಿರುದ್ಧಲೋಚನ ಪ್ರಮಾಣಬಾಧಾದಿವಿವರ್ಜಿತಃ ಸ್ಥಿತಃ ॥23॥ ತ್ರಿಲೋಚನನೇ! ಈ ಜಗತ್ತು ಜಲಬಲರಹಿತವಾದುದೂ, ಸೂರ್ಯೇಂದ್ರ ಚಂದ್ರನೇ ಮೊದಲಾದವರಿಲ್ಲದುದೂ ಆಗಿದ್ದಾಗಲೂ, ಮೂರು ಕಣ್ಣಿನವನಾದ ನೀನೇ ಪ್ರಮಾಣಗಳಿಗೆ ಬಾಧೆಯಿಲ್ಲದಂತೆ ಎಂದರೆ ಸಂದೇಹವಿಲ್ಲದೇ ಇದ್ದೆ. ಕಪಾಲಮಾಲಿನ್ ಶಶಿಖಂಡಶೇಖರ ಶ್ಮಶಾನ-ವಾಸಿನ್ ಸಿತಭಸ್ಮಗುಂಠಿತ । ಫಣೀಂದ್ರಸಂವೀತತನೋಂತಕಾಂತಕ ತ್ವಂ ಪಾಹಿ ನೋ ದಕ್ಷಧಿಯಾ ಸುರೇಶ್ವರ ॥24॥ ರುಂಡಮಾಲೆಯುಳ್ಳವನೇ! ಚಂದ್ರಕಲಾಧರನೇ! ಶ್ಮಶಾನವಾಸಿಯೇ! ಬೆಳ್ಳಗಿರುವ ವಿಭೂತಿಯನ್ನು ಧರಿಸಿರುವವನೇ! ಮೃತ್ಯುಂಜಯ! ಸುರೇಶ್ವರ! ದಕ್ಷಬುದ್ಧಿಯಿಂದ ನಮ್ಮನ್ನು ರಕ್ಷಿಸು. ಭವಾನ್ ಪುಮಾನ್ ಶಕ್ತಿರಿಯಂ ಗಿರೇಃಸುತಾ ಸರ್ವಾಂಗರೂಪಾ ಭಗವಂಸ್ತಥಾ ತ್ವಯಿ । ತ್ರಿಶೂಲರೂಪೇಣ ಜಗದ್ಭಯಂಕರೇ ಸ್ಥಿತಂ ತ್ರಿನೇತ್ರೇಷು ಮಖಾಗ್ನಯಸ್ತ್ರಯಃ ॥25॥ ಭಗವಂತನೇ! ನೀನು ಪುರುಷನು. ಸರ್ವಾಂಗಸುಂದರಿಯಾದ ಈ ಪಾರ್ವತಿಯೇ ಶಕ್ತಿ. ಜಗದ್ಭಯಂಕರನಾದ ನಿನ್ನಲ್ಲಿ ಯಜ್ಞಾಗ್ನಿಗಳು ಮೂರೂ ತ್ರಿಶೂಲರೂಪದಿಂದಲೂ,

ತ್ರಿನೇತ್ರಗಳಲ್ಲೂ ಇವೆ. ಜಟಾಸ್ವರೂಪೇಣ ಸಮಸ್ತಸಾಗರಾಃ ಕುಲಾಚಲಾಃ ಸಿಂಧುವಹಾಶ್ಚ ಸರ್ವಶಃ। ಶರೀರಜಂ ಜ್ಞಾನಮಿದಂ ತ್ವವಸ್ಥಿತಂ ತದೇವ ಪಶ್ಯಂತಿ ಕುದೃಷ್ಟಯೋ ಜನಾಃ ||26|| ಸಮಸ್ತಸಾಗರಗಳೂ, ಕುಲಪರ್ವತಗಳೂ, ನಿನ್ನ ಜಟಾಸ್ವರೂಪಗಳು. ಎಲ್ಲಾ ಕಡೆಯೂ ಹರಿಯುವ ನದಿಗಳು ನಿನ್ನ ದೇಹದಲ್ಲಿ ಉದಿಸಿದ ಜ್ಞಾನವಾಗಿದೆ. ಆದರೆ ಅಲ್ಪದೃಷ್ಟಿಯುಳ್ಳವರು ಅವನ್ನು ಸಾಗರ ಪರ್ವತನದಿಗಳನ್ನಾಗಿಯೇ ತಿಳಿದು ಕೊಳ್ಳುವರು. ನಾರಾಯಣಸ್ತ್ವಂ ಜಗತಾಂ ಸಮುದ್ಭವಃ ತಥಾ ಭವಾನೇವ ಚತುರ್ಮುಖೋ ಮಹಾನ್ । ಸತ್ವಾಗ್ನಿಭೇದೇನ ತಥಾಗ್ನಿಭೇದತೋ ಯುಗಾದಿಭೇದೇನ ಚ ಸಂಸ್ಥಿತಸ್ತ್ರಿಧಾ ||27|| ಜಗತ್ತುಗಳ ಉತ್ಪತ್ತಿಕಾರಣನಾದ ನಾರಾಯಣನೂ ನೀನೇ. ಮಹಾತ್ಮನಾದ ಚತುರ್ಮುಖನೂ ನೀನೇ. ಸತ್ವಾದಿಗುಣಭೇದದಿಂದಲೂ, ಯುಗಾದಿ -ಭೇದದಿಂದಲೂ ಮೂರು ರೂಪದಿಂದಿರುತ್ತೀಯೆ. ಭವಂತಮೇತೇ ಸುರನಾಯಕಾಃ ಪ್ರಭೋ ಭವಾರ್ಥಿನೋಽನ್ಯಸ್ಯ ವದಂತಿ ತೋಷಕಮ್ । ಯತಸ್ತತೋ ನೋ ಭವ ಭೂತಿಭೂಷಣ ತ್ವಂ ಪಾಹಿ ವಿಶ್ವೇಶ್ವರ ರುದ್ರ ತೇ ನಮಃ ||28|| ಪ್ರಭುವೇ! ಸ್ಥಿತಿ(ಇರುವಿಕೆ)ಯನ್ನು ಅಪೇಕ್ಷಿಸುವ ಈ ಸುರನಾಯಕರು ನಿನನ್ನು, ಅನ್ಯರನ್ನು ಸಂತೋಷಪಡಿಸುವವನೆಂದು ಹೇಳುವರು. ಆದುದರಿಂದ ನೀನು ನಮ್ಮನ್ನು ಪಾಲಿಸು. ಭವನೇ! ವಿಭೂತಿಭೂಷಣ! ವಿಶ್ವೇಶ್ವರ! ರುದ್ರ ! ನಿನಗೆ ನಮಸ್ಕಾರ. ಮಹಾತಪಾ ಉವಾಚ – ಏವಂ ಸ್ತುತಸ್ತದಾ ದೇವೋ ರುದ್ರಃ ಪಶುಪತಿಃ ಸುರೈಃ । ಉವಾಚ ದೇವಾನವ್ಯಗ್ರಃ ಕಿಂ ಕಾರ್ಯಂ ಬ್ರೂತ ಮಾಚಿರಮ್ ||29|| ಮಹಾತಪಮುನಿ – ದೇವತೆಗಳಿಂದ ಹೀಗೆ ಸ್ತುತನಾದ ಪಶುಪತಿಯಾದ ರುದ್ರದೇವನು ಸಂತೋಷದಿಂದ ದೇವತೆಗಳಿಗೆ 'ನಾನು ಮಾಡಬೇಕಾದುದೇನು ಹೇಳಿ. ತಡಮಾಡಬೇಡಿ' ಎಂದು ಹೇಳಿದನು. ದೇವಾ ಊಚುಃ – ಸೇನಾಪತಿಂ ಚ ದೇವೇಶ ದೇಹಿ ದೈತ್ಯವಧಾಯ ವೈ। ದೇವಾನಾಂ ಬ್ರಹ್ಮಮುಖ್ಯಾನಾಂ ಏತದೇವ ಹಿತಂ ಭವೇತ್ ||30|| ದೇವತೆಗಳು – ದೇವೇಶನೇ! ರಾಕ್ಷಸರ ವಧೆಗಾಗಿ ನಮಗೆ ಸೇನಾಪತಿಯನ್ನು ಕೊಡು. ಬ್ರಹ್ಮನೇ ಮೊದಲಾದ ದೇವತೆಗಳಿಗೆ ಇದೇ ಹಿತವಾಗುವುದು. ರುದ್ರ ಉವಾಚ – ದದಾಮಿ ಸೇನಾನಾಥಂ ವೋ ದೇವಾ ಭವತ ವಿಜ್ವರಾಃ। ಭವಿಷ್ಯಮಸ್ತಿ ಪೌರಾಣಾಂ ಯೋಗಾ -ದೀನಾಮಚಿಂತಿತಮ್ ||31|| ರುದ್ರನು – ದೇವತೆಗಳೇ! ನಿಮಗೆ ಸೇನಾಪತಿಯನ್ನು ಕೊಡುತ್ತೇನೆ. ಸಂತಾಪರಹಿತರಾಗಿ. ದೇವತೆಗಳಿಗೂ, ಯೋಗಾದಿಗಳಿಗೂ

ಅಚಿಂತಿತವಾದ ಶುಭವಾಗುವುದು. ಏವಮುಕ್ತ್ವೋ ಹರೋ ದೇವಾನ್ ವಿಸೃಜ್ಯ ಸ್ವಾಂಗಸಂಸ್ಥಿತಾಮ್ । ಶಕ್ತಿಂ ಸಂಕ್ಷೋಭಯಾಮಾಸ ಪುತ್ರಹೇತೋಃ ಪರಂತಪ ॥32॥ ಎಲೈ ಶತ್ರುಸಂತಾಪಕನೇ! ದೇವನಾದ ಹರನು ದೇವತೆಗಳಿಗೆ ಹೀಗೆ ಹೇಳಿ, ಪುತ್ರನನ್ನು ಪಡೆಯುವುದಕ್ಕಾಗಿ ತನ್ನ ದೇಹದಲ್ಲಿದ್ದ ಶಕ್ತಿಯನ್ನು ಸಂಚಲನ ಮಾಡಿದನು. ತಸ್ಯ ಕ್ಷೋಭಯತಃ ಶಕ್ತಿಂ ಜ್ವಲನಾರ್ಕಸಮಪ್ರಭಃ । ಕುಮಾರಃ ಸಹಜಾಂ ಶಕ್ತಿಂ ಬಿಭ್ರ-ಜ್ಜ್ಞಾನೈಕಶಾಲಿನೀಮ್ ॥33॥ ಶಕ್ತಿಯನ್ನು ಮಥಿಸಿದ ಆ ರುದ್ರನಿಗೆ, ಅಗ್ನಿಸೂರ್ಯ-ರಿಗೆ ಸಮವಾದ ತೇಜಸ್ಸುಳ್ಳವನೂ, ಮುಖ್ಯವಾಗಿ ಜ್ಞಾನದಿಂದೊಡಗೂಡಿದ ಸಹಜಶಕ್ತಿಯುಳ್ಳವನೂ ಆದ ಕುಮಾರನುದಿಸಿದನು. ಉತ್ಪತ್ತಿಸ್ತಸ್ಯ ರಾಜೇಂದ್ರ ಬಹುರೂಪಾ ವ್ಯವಸ್ಥಿತಾ । ಮನ್ವಂತರೇಷ್ವನೇಕೇಷು ದೇವಸೇನಾಪತಿಃ ಕಿಲ ॥34॥ ರಾಜೇಂದ್ರನೇ! ಆ ಕುಮಾರನ ಅಥವಾ ಷಣ್ಮುಖನ ಉತ್ಪತ್ತಿಯು ಹಲವು ಬಗೆಯಾಗಿದೆ. ಅವನು ಅನೇಕ ಮನ್ವಂತರಗಳಲ್ಲಿ ದೇವತೆಗಳಿಗೆ ಸೇನಾಪತಿಯಲ್ಲವೇ! ಯೋಽಸೌ ಶರೀರಗೋ ದೇವಸ್ತ್ವಹಂಕಾರೇತಿ ಕೀರ್ತಿತಃ । ಪ್ರಯೋಜನವಶಾದ್ದೇವಃ ದೇವಸೇನಾಪತಿರ್ಬಭೌ ॥35॥ ರುದ್ರದೇಹದಲ್ಲಿದ್ದ ಅಹಂಕಾರವೆಂಬ ದೇವನಾದ ಈ ಕುಮಾರನು ಪ್ರಯೋಜನವಶದಿಂದ ದೇವತೆಗಳ ಸೇನಾಪತಿಯಾಗಿ ಪ್ರಕಾಶಕ್ಕೆ ಬಂದನು. ತಸ್ಮಿನ್ ಜಾತೇ ಸ್ವಯಂ ಬ್ರಹ್ಮಾ ಸರ್ವದೇವೈಃ ಸಮನ್ವಿತಃ । ಪೂಜಯಾಮಾಸ ದೇವೇಶಂ ಶಿವಂ ಪಶುಪತಿಂ ತದಾ ॥36॥ ಆ ಕುಮಾರನುದಯಿಸಲು, ಆಗ ಸರ್ವದೇವತೆಗಳಿಂದ ಕೂಡಿದ ಬ್ರಹ್ಮನು ತಾನೇ ದೇವೇಶನೂ, ಪಶುಪತಿಯೂ ಆದ ಶಿವನನ್ನು ಪೂಜಿಸಿದನು. ಸರ್ವೈಶ್ಚ ದೇವೈರ್ಋಷಿಭಿಶ್ಚ ಸಿದ್ಧೈಃ ಸೇನಾಪತಿ-ರ್ದಾನವರೇಣ ತೇನ । ಆಪ್ಯಾಯಿತಃ ಸೋಽಪಿ ಸುರಾನುವಾಚ ಸಹಾಯೌ ಮೇ ಕ್ರೀಡನಕಂ ಚ ದದ್ಧ್ವಮ್ ॥37॥ ಎಲ್ಲಾ ದೇವತೆಗಳೂ, ಋಷಿಗಳೂ, ಸಿದ್ಧರೂ, ರುದ್ರನೂ ವರದಾನದಿಂದ ಕುಮಾರನನ್ನು ಸಂತೋಷಗೊಳಿಸಲಾಗಿ, ಅವನು ದೇವತೆಗಳನ್ನು ''ನನಗೆ ಇಬ್ಬರು ಜೊತೆಗಾರರನ್ನೂ, ಆಟದ ವಸ್ತುವನ್ನೂ ಕೊಡಿ'' ಎಂದು ಹೇಳಿದನು. ಶ್ರುತ್ವಾ ವಚಸ್ತಸ್ಯ ಮಹಾನುಭಾವೋ ವಾಕ್ಯಂ ಮಹಾದೇವ ಇದಂ ಜಗಾದ । ದದಾಮಿ ತೇ ಕ್ರೀಡನಕಂ ತು ಕುಕ್ಕುಟಂ ತಥಾನುಗೌ ಶಾಖ-ವಿಶಾಖಸಂಜ್ಞೌ॥38॥ ಕುಮಾರ ಭೂತಗ್ರಹನಾಯಕೋ ಭವಾನ್ । ಸೇನಾಪತಿಸ್ತ್ವಂ ಭವ ದೇವಸಂಘೇ ॥39॥ ಮಹಾನುಭಾವನಾದ ಶಿವನು ಅವನ ಮಾತುಗಳನ್ನು ಕೇಳಿ

'ನಿನಗೆ ಆಟಕ್ಕೆ ಕೋಳಿಯನ್ನೂ ಶಾಖವಿಶಾಖರೆಂಬ ಜತೆಗಾರರನ್ನೂ ಕೊಡುತ್ತೇನೆ. ಕುಮಾರ! ನೀನು ಭೂತಗ್ರಹಗಳ ನಾಯಕನು. ದೇವತೆಗಳ ಸಮೂಹಕ್ಕೆ ನೀನು ಸೇನಾಪತಿಯಾಗು'' ಎಂದು ಹೇಳಿದನು. ಏವಮುಕ್ತ್ವಾ ತತೋ ದೇವಃ ಸರ್ವ-ದೇವಾಶ್ಚ ಪಾರ್ಥಿವ । ತುಷ್ಟುವುರ್ವಾಗ್ಭಿರಿಷ್ಟಾಭಿಃ ಸ್ಕಂದಂ ಸೇನಾಪತಿಂ ತದಾ ॥40॥ ದೊರೆಯೇ! ಹೀಗೆ ಹೇಳಿ ರುದ್ರದೇವನೂ ಎಲ್ಲಾ ದೇವತೆಗಳೂ ಸೇನಾಪತಿ- ಯಾದ ಸ್ಕಂದ(ಷಣ್ಮುಖ)ನನ್ನು ಆಗ ಹಿತಕರವಾದ ವಾಕ್ಯಗಳಿಂದ ಸ್ತುತಿಸಿದರು. ದೇವಾ ಊಚುಃ – ಭವ ತ್ವಂ ದೇವಸೇನಾನೀರ್ಮಹೇಶ್ವರಸುತ ಪ್ರಭೋ । ಷಣ್ಮುಖ ಸ್ಕಂದ ವಿಶ್ವೇಶ ಕುಕ್ಕುಟಧ್ವಜ ಪಾವಕೇ ॥ ಕಂಪಿತಾರೇ ಕುಮಾರೇಶ ಸ್ಕಂದ ಬಾಲಗ್ರಹಾನುಗ ॥41॥ ದೇವತೆಗಳು – ಸೇನಾಧಿಪತಿ ನೀನಾಗು ಮಹೇಶ್ವರಸುತ! ಪ್ರಭು! ಷಣ್ಮುಖ! ಸ್ಕಂದ! ವಿಶ್ವೇಶ! ಕುಕ್ಕುಟಧ್ವಜ! ಪಾವಕೀ! ಕಂಪಿತಾರಿ! ಕುಮಾರೇಶ! ಸ್ಕಂದ! ಬಾಲಗ್ರಹಾನುಗ! ಜಿತಾರೇ ಕ್ರೌಂಚವಿಧ್ವಂಸ ಕೃತ್ತಿಕಾಜ ಶಿವಾತ್ಮಜ । ಭೂತಗ್ರಹ-ಪತಿಶ್ರೇಷ್ಠ ಪಾವಕಪ್ರಿಯದರ್ಶನ ॥42॥ ಮಹಾಭೂತಪತೇಃ ಪುತ್ರ ತ್ರಿಲೋಚನ ನಮೋಸ್ತು ತೇ ॥43॥ ಜಿತಾರೀ! ಕ್ರೌಂಚವಿಧ್ವಂಸ! ಕೃತ್ತಿಕಾಜ! ಶಿವಾತ್ಮಜ! ಭೂತಗ್ರಹಪತಿಶ್ರೇಷ್ಠ! ಪಾವಕಪ್ರಿಯದರ್ಶನ! ಮಹಾಭೂತೇಶಸುತನೇ! ತ್ರಿಲೋ-ಚನನೇ! ವಂದನಂ. ಏವಂ ಸ್ತುತಸ್ತದಾ ದೇವೈರ್ವಿವರ್ಧನ್ ಭವನಂದನಃ । ದ್ವಾದಶಾದಿತ್ಯಸಂಕಾಶೋ ಬಭೂವಾತುಲವಿಕ್ರಮಃ ॥ ತ್ರೈಲೋಕ್ಯಂ ತೇಜಸಾ ಸ್ವೇನ ತಾಪಯಾಮಾಸ ಪಾರ್ಥಿವ ॥44॥ ದೊರೆಯೇ! ಹೀಗೆ ದೇವತೆಗಳಿಂದ ಸ್ತುತನಾದ ಶಿವಕುಮಾರನು ಆಗ ಅಭಿವೃದ್ಧನಾಗಿ ಅಸಮಾನವಾದ ಪರಾಕ್ರಮವುಳ್ಳವನೂ, ದ್ವಾದಶಾದಿತ್ಯ ಸಮಾನನೂ ಆಗಿ ತನ್ನ ತೇಜದಿಂದ ಮೂರು ಲೋಕವನ್ನು ತಾಪ-ಗೊಳಿಸಿದನು. ಪ್ರಜಾಪಾಲ ಉವಾಚ – ಕಥಂ ತ್ವಂ ಕೃತ್ತಿಕಾಪುತ್ರಮುಕ್ತವಾನ್ ಶಂಸ ಮೇ ಗುರೋ । ಕಥಂ ವಾ ಪಾವಕಿರಸೌ ಕಥಂ ಷಣ್ಮಾತೃನಂದನಃ ॥45॥ ಪ್ರಜಾಪಾಲ – ಗುರುವೇ! ನೀನು ಕುಮಾರನನ್ನು ಕೃತ್ತಿಕಾಪುತ್ರನೆಂದು ಹೇಗೆ ಹೇಳಿದೆಯೆಂಬುದನ್ನು ನನಗೆ ತಿಳಿಸು. ಆ ಕುಮಾರನಿಗೆ ಪಾವಕಿಯೆಂದೂ, ಷಣ್ಮಾತೃನಂದನನೆಂದೂ ಹೆಸರು ಹೇಗೆ ಬಂದಿತು? ಮಹಾತಪಾ ಉವಾಚ – ಆದಿಮನ್ವಂತರೇ ದೇವಸ್ಯೋತ್ಪತ್ತಿರ್ಯಾ ಮಯೋದಿತಾ । ಪರೋಕ್ಷದರ್ಶಿಭಿರ್ದೇವೈರೇವಮೇವ ಸ್ತುತಃ ಪ್ರಭೋ ॥46॥ ಮಹಾತಪಮುನಿ – ಆ ಕುಮಾರದೇವನು ಆದಿಮನ್ವಂತರದಲ್ಲಿ ಉದಿಸಿದುದನ್ನು

ನಾನು ಹೇಳಿದೆನು. ಎದುರಿಗಿಲ್ಲದುದನ್ನೂ ಅರಿಯಬಲ್ಲ ದೇವತೆಗಳು ಎಲ್ಲವನ್ನೂ ಅರಿತು ಹೀಗೆಯೇ ಸ್ತುತಿಸಿದರು. ಕೃತ್ತಿಕಾ ಪಾವಕಸ್ತಸ್ಯ ಮಾತರೋ ಗಿರಿಜಾ ತಥಾ । ದ್ವಿತೀಯಜನ್ಮನಿ ಗುಹಸ್ಯೈತೇ ಉತ್ಪತ್ತಿಹೇತವಃ ॥47॥ ಆ ಷಣ್ಮುಖನಿಗೆ ಕೃತ್ತಿಕಾನಕ್ಷತ್ರಾಭಿಮಾನಿದೇವತೆಯರು ಆರು ಮಂದಿಯೂ, ಅಗ್ನಿಯೂ, ಪಾರ್ವತಿಯೂ ಎರಡನೆಯ ಜನ್ಮದಲ್ಲಿ ಉತ್ಪತ್ತಿಕಾರಣರಾದ ತಾಯಿಯರು. ಏವಮೇತತ್ ತವಾ-ಖ್ಯಾತಂ ಪೃಚ್ಛತಃ ಪಾರ್ಥಿವೋತ್ತಮ । ಆತ್ಮವಿದ್ಯಾಮೃತಂ ಗುಹ್ಯಮಹಂಕಾರಸ್ಯ ಸಂಭವಃ ॥48॥ ರಾಜೋತ್ತಮನೇ! ನೀನು ಕೇಳಿದುದರಿಂದ ಆತ್ಮವಿದ್ಯಾಮೃತವೂ, ರಹಸ್ಯವೂ ಆದ ಅಹಂಕಾರ(ತತ್ವ)ದ ಉತ್ಪತ್ತಿಯನ್ನು ಹೀಗೆ ಹೇಳಿದನು. ಸ್ವಯಂ ಸ್ಕಂದೋ ಮಹಾದೇವಃ ಸರ್ವಪಾಪಪ್ರಣಾಶನಃ । ತಸ್ಯ ಷಷ್ಠೀಂ ತಿಥಿಂ ಪ್ರಾದಾದ-ಭಿಷೇಕೇ ಪಿತಾಮಹಃ ॥49॥ ಮಹಾದೇವನಾದ ಷಣ್ಮುಖನು ತಾನೇ ಸರ್ವ-ಪಾಪಗಳನ್ನು ಪರಿಹರಿಸುವನು. ಬ್ರಹ್ಮನು ಅವನ ಅಭಿಷೇಕಕ್ಕೆ ಷಷ್ಠೀ ತಿಥಿಯನ್ನು ನಿರ್ಣಯಿಸಿಕೊಟ್ಟನು. ಅಸ್ಯಾಂ ಫಲಾಶನೋ ಯಸ್ತು ಪೂಜಯೇದ್ ಯತಮಾನಸಃ । ಅಪುತ್ರೋ ಲಭತೇ ಪುತ್ರಮಧನೋಽಪಿ ಧನಂ ಭವೇತ್ ॥50॥ ಯಂ ಯಮಿ-ಚ್ಛೇತ್ತು ಮನಸಾ ಲಭತೇ ತಂ ತು ಮಾನವಃ ॥51॥ ಯಶ್ಚೈತತ್ಪಠತಿ ಸ್ತೋತ್ರಂ ಕಾರ್ತಿಕೇಯಸ್ಯ ಮಾನವಃ । ತಸ್ಯ ಗೇಹೇ ಕುಮಾರಾಣಾಂ ಕ್ಷೇಮಾರೋಗ್ಯಂ ಭವಿಷ್ಯತಿ ॥52॥ ಇತಿ ಶ್ರೀವರಾಹಪುರಾಣೇ ಆದಿಕೃತವೃತ್ತಾಂತೇ ಮಹಾತಪ ಉಪಾಖ್ಯಾನೇ ಸ್ಕಂದೋತ್ಪತ್ತಿರ್ನಾಮ ಪಂಚವಿಂಶೋಧ್ಯಾಯಃ ॥25॥ ಈ ಷಷ್ಠಿಯಲ್ಲಿ ಶುದ್ಧ-ಮನಸ್ಕನಾಗಿ ಷಣ್ಮುಖನನ್ನು ಪೂಜಿಸಿ, ಫಲಾಹಾರದಿಂದಿರುವವನು ಪುತ್ರನಿಲ್ಲದಿದ್ದರೆ ಪುತ್ರನನ್ನೂ ದರಿದ್ರನಾಗಿದ್ದರೆ ಧನವನ್ನೂ ಮನಸ್ಸಿನಲ್ಲಿ ಏನೇನನ್ನು ಬಯಸುವನೋ ಅದೆಲ್ಲವನ್ನೂ ಪಡೆಯುವನು. ಷಣ್ಮುಖನ ಈ ಸ್ತೋತ್ರವನ್ನು ಹೇಳುವವರ ಮನೆ-ಯಲ್ಲಿ ಮಕ್ಕಳಿಗೆ ಆರೋಗ್ಯವೂ, ಕ್ಷೇಮವೂ ಆಗುವುದು. ವರಾಹಪುರಾಣದಲ್ಲಿ ಸ್ಕಂದೋತ್ಪತ್ತಿಯೆಂಬ ಇಪ್ಪತ್ತೈದನೆಯ ಅಧ್ಯಾಯದ ಕನ್ನಡಾನುವಾದವು ಮುಗಿಯಿತು.

## ಮಾರ್ಗಶೀರ್ಷ ॥ ಶುಕ್ಲ ॥ ಸಪ್ತಮೀ

ಸೂರ್ಯವ್ರತ– ಮಾರ್ಗಶೀರ್ಷ ಶುಕ್ಲ ಸಪ್ತಮಿಯಂದು ಸೂರ್ಯವ್ರತವನ್ನು ಮಾಡುವುದು. ಇದರ ವಿಧಿಯನ್ನು ಕೌಸ್ತುಭ ಎಂಬ ಗ್ರಂಥದಲ್ಲಿ ಹೇಳಿದೆ.

## ಮಾರ್ಗಶಿರ ॥ ಶುದ್ಧ ॥ ನವಮೀ

ಶ್ರೀ ವಿದ್ಯಾವಲ್ಲಭತೀರ್ಥರು (ವ್ಯಾಸರಾಜ ಮಠ) - ಮಾರ್ಗಶಿರ ಶುದ್ಧ ನವಮಿ (ಕ್ರಿ .ಶ. 1798-1812) ವಿದ್ಯಾಚಂದ್ರಿಕಾಯಾಯುಕ್ತೋ ವಿದ್ಯಾಪತಿಕರಾಬ್ಜಜಃ । ವಿದ್ಯಾವಲ್ಲಭತೀರ್ಥೇಂದುಃ ವಿದ್ಯಾಂ ಇಚ್ಛತು ಮೇऽನಘಾಂ ॥

## ಮಾರ್ಗಶಿರ ॥ ಶುದ್ಧ ॥ ದಶಮೀ

**ಶ್ರೀ ವಿಬುಧೇಂದ್ರತೀರ್ಥರು (ರಾಯರ ಮಠ)** ಮಾರ್ಗಶೀರ್ಷ ಶುದ್ಧ ದಶಮಿ - ತಿರುನವ್ವೆಲಿ ಆಕೇರಲಂ ತಥಾಸೇತುಮಾಗಂತಂ ಚಾಹಿಮಾಲಯಂ । ವಿರಾಕೃತ ದ್ವೈತಶ್ಯೆವಂ ವಿಬುಧೇಂದ್ರ ಗುರುಂ ಭಜೇ ॥

ಶ್ರೀ ಸತ್ಯನಿಧಿತೀರ್ಥರು ಮಾರ್ಗಶೀರ್ಷ ಶುಕ್ಲ ದಶಮೀ ಅನಧೀತ್ಯ ಮಹಾಭಾಷ್ಯಂ ವ್ಯಾಖ್ಯಾತಂ ಯದನುಗ್ರಹಾತ್ । ವಂದೇ ತಂ ವಿಧಿನಾ ಸತ್ಯನಿಧಿಂ ಸಜ್ಜ್ಞಾನಸಿದ್ಧಯೇ ॥

## ಮಾರ್ಗಶಿರ ॥ ಶುದ್ಧ ॥ ಏಕಾದಶೀ

ಯುಧಿಷ್ಠಿರಃ – ವಂದೇ ವಿಷ್ಣುಂ ವಿಭುಂ ಸಾಕ್ಷಾಲ್ಲೋಕತ್ರಯಸುಖಾವಹಮ್ । ವಿಶ್ವೇಶಂ ವಿಶ್ವಕರ್ತಾರಂ ಪುರಾಣಂ ಪುರುಷೋತ್ತಮಮ್ ॥1॥ ಯುಧಿಷ್ಠಿರನು ಹೇಳಿದನು – ಮೂರು ಲೋಕಗಳಿಗೂ ಸುಖವನ್ನುಂಟುಮಾಡುತ್ತಿರುವ ಪ್ರಪಂಚಕ್ಕೆ ಒಡೆಯನಾದ, ಪ್ರಪಂಚವನ್ನು ಸೃಷ್ಟಿಮಾಡುವ, ಪುರುಷೋತ್ತಮನಾದ ವಿಷ್ಣುವನ್ನು ನಮಸ್ಕರಿಸುತ್ತೇನೆ. ಪೃಚ್ಛಾಮಿ ದೇವದೇವೇಶ ಸಂಶಯೋऽಸ್ತಿ ಮಹಾನ್ ಮಮ । ಲೋಕಾನಾಂ ಚ ಹಿತಾರ್ಥಾಯ ಪಾಪಾನಾಂ ಕ್ಷಯಹೇತವೇ ॥2॥ ಎಲೈ ದೇವದೇವನೇ! ನನಗೆ ಒಂದು ದೊಡ್ಡ ಸಂಶಯವಿದೆ. ಲೋಕಹಿತಕ್ಕೂ ಪಾಪನಾಶವಾಗುವುದಕ್ಕೂ ಅದನ್ನು ಕೇಳುತ್ತೇನೆ. ಮಾರ್ಗಶೀರ್ಷೇ ಸಿತೇ ಪಕ್ಷೇ ಭವೇದೇಕಾದಶೀ ತಥಾ । ಕಿನ್ನಾಮಕೋ ವಿಧಿಸ್ತಸ್ಯಾಃ ಕೋ ದೇವಸ್ತತ್ರ ಪೂಜ್ಯತೇ । ಏತದಾಚಕ್ಷ್ವ ಮೇ ಸ್ವಾಮಿನ್ ವಿಸ್ತರೇಣ ಯಥಾತಥಮ್ ॥3॥ ಮಾರ್ಗಶೀರ್ಷ ಮಾಸದ ಶುಕ್ಲಪಕ್ಷದಲ್ಲಿ ಏಕಾದಶಿಯು ಬರುತ್ತದೆಯಷ್ಟೇ. ಅದರ ಹೆಸರೇನು? ಅದರ ವಿಧಾನವೇನು? ಅದರಲ್ಲಿ ಯಾವ ದೇವರನ್ನು ಪೂಜಿಸಬೇಕು? ಎಲೈ

ಸ್ವಾಮಿಯೇ! ಇದನ್ನು ನನಗೆ ವಿಸ್ತಾರವಾಗಿ ಹೇಳು. ಶ್ರೀಕೃಷ್ಣಃ – ಸಾಧು ಪೃಷ್ಟಂ ತ್ವಯಾ ರಾಜನ್ ಸಾಧು ತೇ ವಿಮಲಂ ಯಶಃ । ಕಥಯಿಷ್ಯಾಮಿ ರಾಜೇಂದ್ರ ಹರಿ-ವಾಸರಮುತ್ತಮಮ್ ॥4॥ ಶ್ರೀಕೃಷ್ಣನು ಹೇಳಿದಳು – ಎಲೈ ಧರ್ಮರಾಜನೇ! ನೀನು ಚೆನ್ನಾಗಿ ಹೇಳಿದೆ. ನಿನ್ನ ಯಶಸ್ಸು ಇದರಿಂದಲೇ ನಿರ್ಮಲವಾಗಿರುವುದು. ಈ ಹರಿವಾಸರದ ವಿಷಯವನ್ನು ವಿಸ್ತಾರವಾಗಿ ಹೇಳುತ್ತೇನೆ. ಉತ್ಪನ್ನಾ ಚಾಸಿತೇ ಪಕ್ಷೇ ದ್ವಾದಶೀ ಮಮ ವಲ್ಲಭಾ । ಮಾರ್ಗಶೀರ್ಷೋತ್ಪತ್ತಿರಿತಿ ಮಮ ದೇಹ-ಸಮುದ್ಭವಾ ॥5॥ ಮಾರ್ಗಶಿರ ಮಾಸದ ಕೃಷ್ಣಪಕ್ಷದಲ್ಲಿ ನನಗೆ ಪ್ರೀತಿಪಾತ್ರವಾದ ದ್ವಾದಶಿಯು ಹುಟ್ಟಿದೆ. ಅದು ನನ್ನ ದೇಹದಿಂದಲೇ ಹುಟ್ಟಿದುದು. ಅದರ ಹೆಸರು ಉತ್ಪತ್ತಿ ಎಂದು ಪ್ರಖ್ಯಾತವಾಗಿದೆ. ಸುರಾಸುರವಧಾರ್ಥಾಯ ಹ್ಯುತ್ಪನ್ನಾ ಭರತರ್ಷಭ । ಕಥಿತಾ ಚ ಮಯಾ ಸಾ ವೈ ತವಾಗ್ರೇ ರಾಜಸತ್ತಮ ॥6॥ ಪೂರ್ವಾ ಚೈಕಾದಶೀ ರಾಜನ್ ತ್ರೈಲೋಕ್ಯೇ ಸಚರಾಚರೇ । ಮಾರ್ಗಶೀರ್ಷೇऽಸಿತೇ ಪಕ್ಷೇ ಉತ್ಪತ್ತಿರಿತಿ ನಾಮತಃ ॥7॥ ಸುರಾಸುರರನ್ನು ನಾಶಮಾಡುವ ಏಕಾದಶಿಯು ಹುಟ್ಟಿತೆಂದು ನಿನ್ನೆದುರಿಗೆ ಮೊದಲೇ ಹೇಳಿದ್ದೇನೆ. ಆ ಏಕಾದಶಿಯು ಈ ಚರಾಚರವಾದ ಮೂರು ಲೋಕದಲ್ಲಿಯೂ ಪ್ರಸಿದ್ಧವಾಗಿದೆ. ಮಾರ್ಗಶೀರ್ಷ ಬಹುಳದಲ್ಲಿ 'ಉತ್ಪತ್ತಿ' ಎಂಬ ಹೆಸರುಳ್ಳ ಒಂದು ಏಕಾದಶಿಯು ಹುಟ್ಟಿರುವುದು. ಅತಃ ಪರಂ ಪ್ರವಕ್ಷ್ಯಾಮಿ ಮಾರ್ಗಶೀರ್ಷೇ ಸಿತಾ ತು ಯಾ । ಯಸ್ಯಾಃ ಶ್ರವಣ-ಮಾತ್ರೇಣ ವಾಜಪೇಯಫಲಂ ಲಭೇತ್ ॥8॥ ಇನ್ನು ಮುಂದೆ ಮಾರ್ಗಶೀರ್ಷ ಮಾಸದ ಶುದ್ಧದ ಏಕಾದಶೀಯನ್ನು ಹೇಳುತ್ತೇನೆ. ಅದರ ವಿಷಯವನ್ನು ಕೇಳುವುದರಿಂದಲೇ ವಾಜಪೇಯಫಲವು ಬರುತ್ತದೆ. ಮೋಕ್ಷಾ ನಾಮೇತಿ ಸಾ ಪ್ರೋಕ್ತಾ ಸರ್ವಪಾಪಹರಾ ಪರಾ । ದೇವಂ ದಾಮೋದರಂ ರಾಜನ್ ಪೂಜಯೇಚ್ಚ ಪ್ರಯತ್ನತಃ ॥9॥ ಆ ಏಕಾದಶಿಗೆ ಮೋಕ್ಷಾ ಎಂದು ಹೆಸರು. ಅದು ಸರ್ವಪಾಪಗಳನ್ನು ನಾಶ ಮಾಡುತ್ತದೆ. ಆ ದಿನ ದಾಮೋದರ ದೇವರನ್ನು ಪ್ರಯತ್ನಪಟ್ಟು ಪೂಜಿಸ-ಬೇಕು. ತುಲಸ್ಯಾ ಮಂಜರೀಭಿಶ್ಚ ಧೂಪೈರ್ದೀಪೈಃ ಪ್ರಯತ್ನತಃ । ಪೂರ್ವೇಣ ವಿಧಿನಾ ಚೈವ ದಶಮ್ಯೇಕಾದಶೀ ತಥಾ ॥10॥ ತುಲಸಿಯ ಗೊಂಚಲುಗಳಿಂದಲೂ ಧೂಪ ದೀಪಗಳಿಂದಲೂ ಆ ದೇವರನ್ನು ಪೂಜಿಸಬೇಕು. ದಶಮಿ ಮತ್ತು ಏಕಾದಶಿಯ ದಿನಗಳಲ್ಲಿ ಮಾಡಬೇಕಾದ ಕೆಲಸಗಳನ್ನು ಹಿಂದಿನ ದಶಮೀ ಏಕಾದಶೀ

ತಿಥಿಗಳಂತೆಯೇ ಮಾಡಬೇಕು. ಮೋಕ್ಷಾ ಚೈಕಾದಶೀ ನಾಮ್ನಾ ಮಹಾಪಾತಕ-ನಾಶಿನೀ । ರಾತ್ರೌ ಜಾಗರಣಂ ಕಾರ್ಯಂ ನೃತ್ಯಗೀತಸ್ತವೈರ್ಮಮ ॥11॥ ಆ ಏಕಾ-ದಶೀಗೆ 'ಮೋಕ್ಷೈಕಾದಶೀ' ಎಂದು ಹೆಸರು. ಮಹಾಪಾಪಗಳನ್ನು ನಾಶಮಾಡು-ತ್ತದೆ. ರಾತ್ರಿಯಲ್ಲಿ ನೃತ್ಯದಿಂದಲೂ ವಿಷ್ಣುವಿನ ಸ್ತೋತ್ರಗಳಿಂದಲೂ ಜಾಗರಣೆಯನ್ನು ಮಾಡಬೇಕು.

ಶೃಣು ರಾಜನ್ ಪ್ರವಕ್ಷ್ಯಾಮಿ ದಿವ್ಯಾಂ ಪೌರಾಣಿಕೀಂ ಕಥಾಮ್ । ಯಸ್ಯಾಃ ಶ್ರವಣಮಾತ್ರೇಣ ಸರ್ವಪಾಪಕ್ಷಯೋ ಭವೇತ್ ॥12॥ ಎಲೈ ಧರ್ಮಜನೇ! ಒಂದು ಹಿಂದಿನ ಕಥೆಯನ್ನು ಹೇಳುತ್ತೇನೆ. ಕೇಳು. ಅದನ್ನು ಕೇಳುವುದರಿಂದ ಪಾಪವೆಲ್ಲವೂ ಹೋಗುತ್ತದೆ. ಅಧೋಯೋನಿಗತಾಶ್ಚೈವ ಪಿತರೋ ಯಸ್ಯ ಪಾಪತಃ । ಅಸ್ಯಾಶ್ಚ ಪುಣ್ಯದಾನೇನ ಮೋಕ್ಷಂ ಯಾಂತಿ ನ ಸಂಶಯಃ ॥13॥ ಪಾಪದಿಂದ ಕೀಳುಜನ್ಮದಲ್ಲಿ ಹುಟ್ಟಿರುವ ಪಿತೃಗಳೂ ಕೂಡ ಈ ಏಕಾದಶಿಯ ಪುಣ್ಯದಾನದಿಂದ ಮೋಕ್ಷವನ್ನು ಹೊಂದುತ್ತಾರೆ. ಸಂಶಯವಿಲ್ಲ. ಚಂಪಕೇ ನಗರೇ ರಮ್ಯೇ ವೈಷ್ಣವೈಶ್ಚ ವಿಭೂಷಿತೇ । ವೈಖಾನಸೋ ನಾಮ ನೃಪಃ ಪುತ್ರವತ್ ಪಾಲಯೇತ್ ಪ್ರಜಾಃ ॥14॥ ಚಂಪಕವೆಂಬ ಒಂದು ನಗರವಿರುವುದು. ಅಲ್ಲಿ ಅನೇಕ ಜನ ವೈಷ್ಣವರು ವಾಸವಾಗಿ-ದ್ದರು. ಅಲ್ಲಿ ವೈಖಾನಸನೆಂಬ ರಾಜನು ಪ್ರಜೆಗಳನ್ನು ಮಕ್ಕಳಂತೆ ಕಾಪಾಡುತ್ತಿದ್ದನು. ವಸಂತಿ ಬಹವೋ ವಿಪ್ರಾ ವೇದವೇದಾಂಗಪಾರಗಾಃ । ಋದ್ಧಿಮತ್ಯಃ ಪ್ರಜಾಸ್ತಸ್ಯ ರಾಜ್ಞೋ ವೈಖಾನಸಸ್ಯ ಹಿ ॥15॥ ಅವನ ಊರಿನಲ್ಲಿ ವೇದ ವೇದಾಂಗಗಳಲ್ಲಿ ನಿಷ್ಣಾತರಾದ ವಿಪ್ರರು ವಾಸವಾಗಿದ್ದರು. ಏವಂ ರಾಜ್ಯಂ ಪ್ರಕುರ್ವಾಣೋ ರಾತ್ರೌ ಸ್ವಪ್ನಸ್ಯ ಮಧ್ಯತಃ । ಸ್ವಕೀಯಾನ್ ಪಿತರೋ ದೃಷ್ಟ್ವಾ ಅಧೋಯೋನಿಗತಾನ್ ನೃಪ ॥16॥ ಈ ರೀತಿಯಾಗಿ ರಾಜ್ಯಭಾರ ಮಾಡುತ್ತಿರಲು ಒಂದು ದಿನ ರಾತ್ರಿಯಲ್ಲಿ ಆತನು ಸ್ವಪ್ನದಲ್ಲಿ ತನ್ನ ಪಿತೃಗಳು ನೀಚ ಯೋನಿಯಲ್ಲಿ ಹುಟ್ಟಿರುವುದನ್ನು ಕಂಡನು. ಏವಂ ದೃಷ್ಟ್ವಾ ಚ ತಾನ್ ಸರ್ವಾನ್ ವಿಸ್ಮಯಾವಿಷ್ಟಮಾನಸಃ । ಕಥಯಾಮಾಸ ವೃತ್ತಾಂತಂ ಸ್ವಪ್ನಜಾತಂ ದ್ವಿಜಾನ್ ಪ್ರತಿ ॥17॥ ಈ ರೀತಿಯಾಗಿ ಕನಸ್ಸಿನಲ್ಲಿ ಪಿತೃಗಳನ್ನು ನೋಡಿ ಆಶ್ಚರ್ಯಪಟ್ಟು ಈ ವೃತ್ತಾಂತವನ್ನು ಬ್ರಾಹ್ಮಣರಿಗೆ ಹೇಳಿದನು. ರಾಜಾ – ಮಯಾ ಸ್ವಪಿತರೋ ದೃಷ್ಟ್ವಾ ನರಕೇऽಪಿ ಗತಾ ದ್ವಿಜಾಃ । ತಾರಯೇತಿ ತನೂಜ ತ್ವಮಸ್ಮಾನ್ ನಿರಯಸಾಗರಾತ್ ॥18॥ ರಾಜನು ಹೇಳಿದನು – ಎಲೈ

ಬ್ರಾಹ್ಮಣರಿರಾ! ನರಕದಲ್ಲಿ ಬಿದ್ದಿರುವ ಹಾಗೆ ನಮ್ಮ ಪಿತೃಗಳನ್ನು ಸ್ವಪ್ನದಲ್ಲಿ ಕಂಡೆನು. ಅವರು ''ಎಲೈ ಮಗನೇ ನಮ್ಮನ್ನು ಈ ನರಕಸಾಗರದಿಂದ ಮೇಲಕ್ಕೆತ್ತು'' ಎಂದು ಹೇಳಿದರು. ಏವಂ ಬ್ರುವಾಣಾಸ್ತೇ ನೂನಂ ರೋದಮಾನಾ ಮುಹುರ್ಮುಹುಃ । ಮಯಾ ದೃಷ್ಟಾ ದ್ವಿಜಶ್ರೇಷ್ಠಾ ಏತಸ್ಮಾಚ್ಚ ನ ಮೇ ಸುಖಮ್ ॥19॥ ಅವರು ಹೀಗೆ ನನಗೆ ಹೇಳುತ್ತಾ ಅಳುತ್ತಿದ್ದರು. ಈ ರೀತಿಯಾಗಿ ಕಂಡೆನು. ಇದರಿಂದ ನನಗೆ ಮನಸ್ಸಿಗೆ ಶಾಂತಿಯಿಲ್ಲ. ಏತದ್ರಾಜ್ಯಂ ಮಮ ಮಹತ್ ಸುಖದಾಯಿ ನ ವಿದ್ಯತೇ । ಅಶ್ವಾ ಗಜಾಸ್ತಥಾ ಸರ್ವೇ ರೋಚಂತೇ ಮೇ ನ ಭೋ ದ್ವಿಜಾಃ ॥20॥ ಈ ರಾಜ್ಯವು ಬಹುವಿಸ್ತಾರವಾಗಿದ್ದರೂ ನನಗೆ ಸಂತೋಷವಿಲ್ಲ. ಆನೆ, ಕುದುರೆ ಇವಾವುವೂ ನನಗೆ ಬೇಕಿಲ್ಲ. ನ ದಾರಾ ನ ಸುತಾ ಮಹ್ಯಂ ರೋಚಂತೇ ದ್ವಿಜಸತ್ತಮಾಃ । ಕಿಂ ಕರೋಮಿ ಕ್ವ ಗಚ್ಛಾಮಿ ಹೃದಯಂ ಮೇಽವರುಧ್ಯತೇ ॥21॥ ಹೆಂಡತಿ ಮಕ್ಕಳು ಇದೊಂದೂ ನನಗೆ ರುಚಿಸುವುದಿಲ್ಲವು. ಎಲೈ ಬ್ರಾಹ್ಮಣರಿರಾ! ಏನು ಮಾಡಲಿ? ಎಲ್ಲಿ ಹೋಗಲಿ? ನನ್ನ ಮನಸ್ಸು ತಲ್ಲಣಿಸುತ್ತಿದೆ. ತದ್ ವ್ರತಂ ತತ್ತಪೋ ಯೋಗೋ ಯೇನೈವ ಮಮ ಪೂರ್ವಜಾಃ । ಮೋಕ್ಷಂ ಪ್ರಯಾಂತಿ ಸದ್ಯೋ ವೈ ಕಥ್ಯತಾಂ ಚ ದ್ವಿಜೋತ್ತಮಾಃ ॥22॥ ಯಾವುದನ್ನು ಮಾಡಿದರೆ ನನ್ನ ಪೂರ್ವಿಕರಾದ ಪಿತೃಗಳು ಒಡನೆಯೇ ಮೋಕ್ಷ ಹೊಂದುವರೋ ಅಂತಹ ವ್ರತವನ್ನಾಗಲೀ ತಪಸ್ಸನ್ನಾಗಲೀ ಯೋಗವನ್ನಾಗಲೀ ನನಗೆ ಹೇಳಿರಿ? ಪುತ್ರೇ ತು ಜೀವತಿ ಮಯಿ ಬಲೀಯಸಿ ಮಹಾತ್ಮನಿ । ಪಿತರೌ ನರಕೇ ಘೋರೇ ತಸ್ಯ ಪುತ್ರಸ್ಯ ಕಿಂ ಫಲಮ್ ॥23॥ ಬಲಿಷ್ಠನೂ ಮಹಾತ್ಮನೂ ಆದ ನಾನು ಮಗನಾಗಿ ಬದುಕಿರುವಾಗ ನನ್ನ ಪಿತೃಗಳು ಘೋರನರಕದಲ್ಲಿರಲು ನಾನು ಮಗನಾಗಿ ಇದ್ದು ಫಲವೇನು.

ಬ್ರಾಹ್ಮಣಾಃ – ಪರ್ವತಸ್ಯ ಮುನೇ ರಾಜನ್ ನಿಕಟೇ ಚಾಶ್ರಮೋ ಮಹಾನ್ । ಗಮ್ಯತಾಂ ರಾಜಶಾರ್ದೂಲ ಭೂತಂ ಭವ್ಯಂ ವಿಜಾನತಃ ॥24॥ ಬ್ರಾಹ್ಮಣರು ಹೇಳಿದರು. ಎಲೈ ದೊರೆಯೇ! ಈ ಪಟ್ಟಣದ ಆಚೆ ಋಷಿಯ ಒಂದು ದೊಡ್ಡ ಆಶ್ರಮವಿರುವುದು. ಅಲ್ಲಿ ಪರ್ವತನೆಂಬ ಋಷಿಯಿರುವನು. ಅವನ ಬಳಿಗೆ ಹೋದರೆ ಹಿಂದಿನದೂ ತಿಳಿಯುವುದು. ಮುಂದಿನದೂ ತಿಳಿಯುವುದು. ಅಲ್ಲಿಗೆ ಹೋಗು. ಶ್ರೀಕೃಷ್ಣಃ – ತೇಷಾಂ ಶ್ರುತ್ವಾ ತತೋ ವಾಕ್ಯಂ ರಾಜಾ ವೈಖಾನಸೋ

ಮಹಾನ್ । ಜಗಾಮ ಚಾಶು ತತ್ರೈವ ಚಾಶ್ರಮಂ ಪರ್ವತಸ್ಯ ಚ ||25|| ಬ್ರಾಹ್ಮಣೈ-ರ್ವೇಷ್ಟಿತೋ ರಾಜಾ ಪ್ರಜಾಭಿಶ್ಚ ಸಮನ್ವಿತಃ । ಆಶ್ರಮಂ ವಿಪುಲಂ ತಸ್ಯ ಸಂಪ್ರಾಪ್ತೋ ರಾಜಸತ್ತಮಃ ||26|| ಕೃಷ್ಣನು ಹೇಳಿದನು – ರಾಜನಾದ ವೈಖಾನಸನು ಆ ಬ್ರಾಹ್ಮಣರ ಮಾತನ್ನು ಕೇಳಿ ಅವರಿಂದ ಕೂಡಿಕೊಂಡವನಾಗಿ ಆ ಪರ್ವತನ ಆಶ್ರಮಕ್ಕೆ ಹೋದನು. ಜೊತೆಯಲ್ಲಿ ಪ್ರಜೆಗಳೂ ಬಂದರು. ಈ ರೀತಿಯಾಗಿ ದೊಡ್ಡದಾದ ಆಶ್ರಮಕ್ಕೆ ಎಲ್ಲರೊಡನೆ ಹೋದನು. ಋಗ್ವೇದಶ್ಚ ಯಜುರ್ವೇದ-ಸಾಮಾಥ್ಯಯನಕೋವಿದೈಃ । ವೇಷ್ಟಿತಂ ಮುನಿಭಿಶ್ಚೈವ ದ್ವಿತೀಯಂ ಬ್ರಹ್ಮಣೋ ಯಥಾ ||27|| ಋಗ್ವೇದ, ಯಜುರ್ವೇದ, ಸಾಮವೇದ ಮುಂತಾದವುಗಳಲ್ಲಿ ಪಂಡಿತ-ರಾಗಿರುವ ಮುನಿಗಳಿಂದ ಕೂಡಿರುವ ಎರಡನೆಯ ಬ್ರಹ್ಮನಂತಿರುವ ಆ ಪರ್ವತ ಋಷಿಯನ್ನು ನೋಡಿದನು. ದೃಷ್ಟ್ವಾ ತಂ ಮುನಿಶಾರ್ದೂಲಂ ರಾಜಾ ವೈಖಾನಸ-ಸ್ತಥಾ । ದಂಡವತ್ ಪ್ರಣತಿಂ ಕೃತ್ವಾ ಪಸ್ಪರ್ಶ ಚರಣೌ ಮುನೇಃ ||28|| ರಾಜನಾದ ವೈಖಾನಸನು ಆ ಮುನಿಯನ್ನು ನೋಡಿ ದೀರ್ಘದಂಡ ನಮಸ್ಕಾರಮಾಡಿ ಅವನ ಪಾದಗಳನ್ನು ಮುಟ್ಟಿದನು. ಪಪ್ರಚ್ಛ ಕುಶಲಂ ತಸ್ಯ ಸಪ್ತಸ್ವಂಗೇಷ್ವಸೌ ಮುನಿಃ । ರಾಜ್ಯನಿಷ್ಕಂಟಕತ್ವಂ ಚ ರಾಜಸೌಖ್ಯಸಮನ್ವಿತಮ್ ||29|| ಆ ರಾಜನನ್ನು ಕುರಿತು ರಾಜ್ಯದ ಸಪ್ತಾಂಗಗಳಲ್ಲಿಯೂ (ಪ್ರಮುಖ, ಅಮಾತ್ಯ, ಜನಪದ, ದುರ್ಗ, ಕೋಶ, ದಂಡ, ಮಿತ್ರ - ಎಂಬುದು ರಾಜ್ಯದ ಸಪ್ತಾಂಗಗಳು) ಕುಶಲಪ್ರಶ್ನೆಯನ್ನು ಮಾಡಿದನು. ರಾಜ್ಯವು ಶತ್ರುಬಾಧೆ ಈತಿಬಾಧೆಗಳಿಲ್ಲದಿರುವುದಾಗಿದೆಯೇ? ಎಂದು ಕೇಳಿದನು. ಮತ್ತು ರಾಜನನ್ನೂ ಅವನ ಸಂಸಾರವನ್ನೂ ಕುರಿತು ಕುಶಲ ಪ್ರಶ್ನೆಯನ್ನು ಮಾಡಿದನು.

ರಾಜಾ – ತವ ಪ್ರಸಾದಾತ್ ಭೋ ಸ್ವಾಮಿನ್ ಕುಶಲಂ ಮೇಂಗ ಸಪ್ತಸು । ಭಕ್ತಾ ಯೇ ವಿಷ್ಣುರಕ್ತೇಷು ಕಥಂ ತೇಷಾಂ ಚ ವಿಘ್ನತಾ ||30|| ರಾಜನು ಹೇಳಿದನು – ಎಲೈ ಮುನಿವರ್ಯನೇ! ನಿನ್ನ ಪ್ರಸಾದದಿಂದ ಏಳು ಅಂಗಗಳಲ್ಲಿಯೂ ರಾಜ್ಯವು ಕುಶಲವಾಗಿದೆ. ವಿಷ್ಣುಭಕ್ತರಲ್ಲಿ ಭಕ್ತರಾಗಿರುವವರಿಗೆ ತೊಂದರೆಯೆಲ್ಲಿಂದ ಬಂದೀತು? ಮಯಾ ಸ್ವಪಿತರೋ ದೃಷ್ಟಾಃ ಸ್ವಪ್ನೇ ಚ ನರಕೇ ಸ್ಥಿತಾಃ । ಕಸ್ಯ ಪುಣ್ಯಸ್ಯ ಸಾಮರ್ಥ್ಯಾನ್ಮೋಕ್ಷಂ ಯಾಂತಿ ದ್ವಿಜೋತ್ತಮ ||31|| ಎಲೈ ಮುನಿಯೇ ಸ್ವಪ್ನದಲ್ಲಿ ನನ್ನ ಪಿತೃಗಳು ನರಕದಲ್ಲಿ ಬಿದ್ದಿರುವಂತೆ ಕಂಡೆನು. ಯಾವ ರೀತಿಯಾದ

ಪುಣ್ಯಕೆಲಸಗಳನ್ನು ಮಾಡಿದರೆ ಆದರ ಪ್ರಭಾವದಿಂದ ಅವರೆಲ್ಲರೂ ಮೋಕ್ಷವನ್ನು ಹೊಂದಿಯಾರು? ಅಯಂ ಮೇ ಸಂಶಯಃ ಸ್ವಾಮಿನ್ ಪೃಷ್ಟವಾಂಸ್ತ್ವಾಮುಪಾಗತಃ। ಉಪಾಯಃ ಕಶ್ಚಿದೇವಾತ್ರ ಕರ್ತವ್ಯೋ ಮುನಿಸತ್ತಮ ||32|| ಎಲೈ ಸ್ವಾಮಿಯೇ! ನನಗೆ ಈ ವಿಷಯದಲ್ಲಿ ಸಂಶಯ ಬಂದು ನಿನ್ನನ್ನು ಕೇಳುವುದಕ್ಕೆ ಬಂದಿದ್ದೇನೆ. ಈ ವಿಷಯದಲ್ಲಿ ಯಾವುದಾದರೂ ಒಂದು ಉಪಾಯವನ್ನು ಹೇಳು. ಯಾವುದನ್ನು ಮಾಡಬೇಕು.

ಶ್ರೀಕೃಷ್ಣಃ – ಏತದ್ ವಾಕ್ಯಂ ತತಃ ಶ್ರುತ್ವಾ ಪರ್ವತೋ ಮುನಿಸತ್ತಮಃ। ಧ್ಯಾನಸ್ತಿಮಿತನೇತ್ರೋಽಭೂತ್ ತಪಸ್ವೀ ಬ್ರಹ್ಮಸನ್ನಿಭಃ। ಮುಹೂರ್ತಮೇಕಂ ಧ್ಯಾನಸ್ಥೋ ಭೂಪತಿಂ ಪ್ರತ್ಯುವಾಚ ಹ ||33|| ಕೃಷ್ಣನು ಹೇಳಿದನು. ರಾಜನ ಮಾತುಗಳನ್ನು ಕೇಳಿ ಬ್ರಹ್ಮನಂತಿರುವ ಆ ಪರ್ವತಮುನಿಯು ಧ್ಯಾನಮಾಡುತ್ತಾ ಕ್ಷಣಕಾಲವಿದ್ದು ಎಚ್ಚೆತ್ತು ರಾಜನನ್ನು ಕುರಿತು ಇಂತೆಂದನು. ಪರ್ವತಃ – ಜಾನೇಹಂ ತವ ರಾಜೇಂದ್ರ ಪಿತೄಣಾಂ ಪೂರ್ವಚೇಷ್ಟಿತಮ್। ಪೂರ್ವಜನ್ಮನಿ ತಾತಸ್ತೇ ಕ್ಷತ್ರಿಯೋ ರಾಜ್ಯಗರ್ವಿತಃ ||34|| ಸ ಪತ್ನ್ಯಾ ಋತುಕಾಲೇ ತು ರಾಜಧರ್ಮಪ್ರವರ್ತಿತಃ। ತತೋ ಗ್ರಾಮೇ ತು ತಾಂ ತ್ಯಕ್ತ್ವಾ ಕಾರ್ಯಾರ್ಥೀ ನಿಜಯೋಷಿತಮ್ ||35|| ಪರ್ವತನು ಹೇಳಿದನು – ಎಲೈ ದೊರೆಯೇ! ನಾನು ನಿನ್ನ ಪಿತೃಗಳ ಹಿಂದಿನ ವಿಷಯವನ್ನು ಹೇಳಿದೆನು. ನಿನ್ನ ತಂದೆಯು ಪೂರ್ವಜನ್ಮದಲ್ಲಿ ರಾಜ್ಯವಾಳುತ್ತಾ ಆದರ ಮದದಿಂದ ಕೂಡಿದ್ದನು. ಒಂದು ಸಾರಿ ಆತನು ತನ್ನ ಹೆಂಡತಿಯು ಋತುವಾಗಿರುವಾಗ ರಾಜಕಾರ್ಯದ ದೆಸೆಯಿಂದ ಆಕೆಯನ್ನು ಊರಿನಲ್ಲಿಯೇ ಬಿಟ್ಟು ಆ ಕೆಲಸಕ್ಕೋಸ್ಕರ ಬೇರೆಯ ಜಾಗಕ್ಕೆ ಹೊರಟು ಹೋದನು. ತವ ಪಿತ್ರಾ ತು ತಸ್ಯಾಶ್ಚ ನ ದತ್ತಂ ಋತುದಾನಕಮ್। ತೇನ ಪಾಪಪ್ರಭಾವೇಣ ನರಕೇ ಪಿತೃಭಿಃ ಸಹ। ಪತಿತೋ ರಾಜಶಾರ್ದೂಲ ತವ ತಾತಃ ಸುದಾರುಣೇ ||36|| ಈ ಕಾರಣದಿಂದ ಆತನು ತನ್ನ ಹೆಂಡತಿಗೆ ಋತುವಾದಾಗ ಮಾಡಬೇಕಾದ ವೀರ್ಯ-ದಾನವನ್ನು ಮಾಡಲಿಲ್ಲ. ಆ ಪಾಪದಿಂದ ಕ್ರೂರವಾದ ನರಕದಲ್ಲಿ ಬಿದ್ದಿರುವನು. ಶ್ರೀಕೃಷ್ಣಃ – ತತಃ ಪುನರುವಾಚೇದಂ ರಾಜಾ ವೈಖಾನಸೋ ಮುನಿಮ್ ||37|| ಕೃಷ್ಣನು ಹೇಳಿದನು – ಆಮೇಲೆ ರಾಜನಾದ ವೈಖಾನಸನು ಆ ಮುನಿಯನ್ನು ಕುರಿತು ಇಂತೆಂದನು. ರಾಜಾ – ಕೇನ ವ್ರತಪ್ರಭಾವೇಣ ಮೋಕ್ಷಸ್ತೇಷಾಂ

ಭವೇನ್ಮುನೇ ॥38॥ ರಾಜನು ಹೇಳಿದನು – ಎಲೈ ಮುನಿಯೇ ಯಾವ ವ್ರತವನ್ನು ಮಾಡಿದರೆ ಅದರ ಪುಣ್ಯಪ್ರಭಾವದಿಂದ ಅವರು ಮೋಕ್ಷವನ್ನು ಹೊಂದುವರು? ಮುನಿಃ – ಮಾರ್ಗಶೀರ್ಷೇ ಸಿತೇ ಪಕ್ಷೇ ಮೋಕ್ಷಾ ನಾಮೇತಿ ನಾಮತಃ । ಸರ್ವೈಶ್ಚೈತದ್ ವ್ರತಂ ಕಾರ್ಯಂ ಪಿತ್ರೇ ಪುಣ್ಯಂ ಪ್ರದೀಯತಾಮ್ ॥39॥ ಮುನಿಯು ಹೇಳಿದನು – ಮಾರ್ಗಶೀರ್ಷಮಾಸದ ಶುಕ್ಲಪಕ್ಷದಲ್ಲಿ ಏಕಾದಶಿಯು ಬರುವುದಷ್ಟೇ . ಅದಕ್ಕೆ 'ಮೋಕ್ಷೈಕಾದಶೀ' ಎಂದು ಹೆಸರು. ಈ ಮೋಕ್ಷೈಕಾದಶೀ-ವ್ರತವನ್ನು ಎಲ್ಲರೂ ಮಾಡಬೇಕು. ಅದನ್ನು ನೀವೆಲ್ಲರೂ ಮಾಡಿ ಆ ಪುಣ್ಯವನ್ನು ಅವರಿಗೆ ಧಾರೆಯೆರೆದು ಕೊಡಿ. ತೇನ ಪುಣ್ಯಪ್ರಭಾವೇಣ ಮೋಕ್ಷಸ್ತೇಷಾಂ ಭವಿಷ್ಯತಿ । ಸತ್ಯಮೇತನ್ಮಹಾಭಾಗ ಬ್ರಹ್ಮಣೋ ವಚನಂ ತಥಾ ॥40॥ ಈ ಪುಣ್ಯದ ಪ್ರಭಾವದಿಂದ ಅವರಿಗೆ ಮೋಕ್ಷವು ಸಿಕ್ಕುತ್ತದೆ. ಇದು ಸತ್ಯವಾದ ಮಾತು. ಬ್ರಹ್ಮನು ಹಾಗೆ ಹೇಳಿರುವನು. ಶ್ರೀಕೃಷ್ಣಃ – ಮುನೇರ್ವಾಕ್ಯಂ ತತಃ ಶ್ರುತ್ವಾ ಸ್ವಗೃಹಂ ಪುನರಾಗತಃ । ಮಾರ್ಗಶೀರ್ಷೋತ್ತಮೋ ಮಾಸಃ ಪ್ರಾಪ್ತಃ ಕಷ್ಟೇನ ತೇನ ವೈ ॥41॥ ಕೃಷ್ಣನು ಹೇಳಿದನು – ಮುನಿಯು ಇಂತು ಹೇಳಲು ರಾಜನು ಮನೆಗೆ ಬಂದನು. ಮಾರ್ಗಶೀರ್ಷಮಾಸವು ಬಂದೀತೇ? ಎಂಬುದಾಗಿ ಕಷ್ಟದಿಂದ ಎದುರು ನೋಡುತ್ತಿದ್ದನು. ಮಾರ್ಗಶೀರ್ಷಮಾಸವು ಬಂದಿತು. ಮುನೇರ್ವಾಕ್ಯಾತ್ ಸ ತತ್ಕೃತ್ವಾ ವ್ರತಂ ವೈಖಾನಸೋ ನೃಪಃ । ಅದದಾತ್ ಪುಣ್ಯಮಖಿಲೈಃ ಸಾರ್ಧಂ ಪಿತ್ರೇ ಸ ಭೂಮಿಪಃ ॥42॥ ರಾಜನಾದ ವೈಖಾನಸನು ಋಷಿಯ ಮಾತಿನಂತೆ ಆ ವ್ರತವನ್ನು ಮಾಡಿ, ಇತರರಿಂದಲೂ ಮಾಡಿಸಿ ತಾನೂ ಅವರೂ ಎಲ್ಲರೂ ಕೂಡ ಪಿತೃಗಳಿಗೆ ಆ ಫಲವನ್ನು ಧಾರೆಯೆರೆದು ಕೊಟ್ಟರು. ದತ್ತೇ ಪುಣ್ಯೇ ಕ್ಷಣೇನೈವ ಪುಷ್ಪವೃಷ್ಟಿರಭೂದ್ದಿವಿ । ವೈಖಾನಸಸ್ಯ ತಾತೋ ವೈ ಪಿತೃಭಿರ್ಮೋಕ್ಷಮಾವಿಶತ್ ॥43॥ ಆ ವೈಖಾನಸನು ಪುಣ್ಯದಾನ ಮಾಡಿದ ಕೂಡಲೇ ಅಂತರಿಕ್ಷದಿಂದ ಪುಷ್ಪವೃಷ್ಟಿಯಾಯಿತು. ಆತನ ಪಿತೃಗಳೆಲ್ಲರೂ ಮೋಕ್ಷವನ್ನು ಹೊಂದಿದರು.

ರಾಜಾನಂ ಚಾಂತರಿಕ್ಷೇ ಚ ಗಿರಂ ಪುಣ್ಯಮುವಾಚ ಹ । ಸ್ವಸ್ತಿ ಸ್ವಸ್ತೀತಿ ತೇ ಪುತ್ರ ಪ್ರೋಕ್ತಂ ತೇನ ದಿವಂ ಗತಃ ॥44॥ ಆಗ ಅವನ ಪಿತೃಗಳು ಅಂತರಿಕ್ಷದಲ್ಲಿ ಮಗನನ್ನು ಕುರಿತು ಎಲೈ ಪುತ್ರನೇ ನಿನಗೆ ಒಳ್ಳೆಯದಾಗಲಿ ಒಳ್ಳೆಯದಾಗಲಿ ಎಂದು ಹೇಳುತ್ತಾ ಮೋಕ್ಷಕ್ಕೆ ಹೋದರು. ಏವಂ ಯಃ ಕುರುತೇ ರಾಜನ್ ಮೋಕ್ಷಾಮೇಕಾದಶೀಂ

ಶುಭಾಮ್ । ತಸ್ಯ ಪಾಪಾನಿ ನಶ್ಯಂತಿ ಮೃತೋ ಮೋಕ್ಷಮವಾಪ್ನುಯಾತ್ ॥45॥ ಈರೀತಿಯಾಗಿ ಯಾವನು ಮೋಕ್ಷೈಕಾದಶೀಯನ್ನು ಮಾಡುತ್ತಾನೆಯೋ ಅವನ ಪಾಪಗಳೆಲ್ಲವೂ ನಾಶವಾಗಿ ಕೊನೆಯಲ್ಲಿ ಮೋಕ್ಷವನ್ನು ಹೊಂದುತ್ತಾನೆ. ನಾತಃ ಪರಂ ಕಿಂಚಿನ್ಮೋಕ್ಷದಾಯ್ಯಭವತ್ಪುರಾ । ಪುಣ್ಯಸಂಖ್ಯಾಂ ನ ಜಾನಾಮಿ ರಾಜನ್ಮೇ ತದ್ವ್ರತಂ ಪ್ರಿಯಮ್ ॥46॥ ಈ ಮೋಕ್ಷೈಕಾದಶಿಗಿಂತಲೂ ಉತ್ತಮವಾದುದು ಹಿಂದೆ ಮತ್ತೊಂದಿರಲಿಲ್ಲ. ಇದರ ಪುಣ್ಯದ ಸಂಖ್ಯೆಯನ್ನು ನಾನು ಹೇಳಲಾರೆ. ಈ ವ್ರತವು ನನಗೆ ಬಹು ಪ್ರಿಯವಾದುದು. ಚಿಂತಾಮಣಿ ಸಮಾ ಹ್ಯೇಷಾ ನೃಣಾಂ ಮೋಕ್ಷಪ್ರದಾಯಿನೀ । ಪಠನಾಚ್ಛ್ರವಣಾದಸ್ಯ ವಾಜಪೇಯಫಲಂ ಭವೇತ್ ॥ ಈ ವ್ರತವು ಚಿಂತಾಮಣಿ ರತ್ನಕ್ಕೆ ಸಮಾನವಾದುದು. ಜನರಿಗೆ ಮೋಕ್ಷವನ್ನು ಕೊಡು-ತ್ತದೆ. ಇದನ್ನು ಓದುವುದರಿಂದಲೂ ಕೇಳುವುದರಿಂದಲೂ ವಾಜಪೇಯದ ಫಲವು ಬರುತ್ತದೆ.

ಇತಿ ಶ್ರೀಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿನಾರದಸಂವಾದಾಂತರ್ಗತ ಕೃಷ್ಣಯುಧಿಷ್ಠಿರಸಂವಾದೇ ಮಾರ್ಗಶೀರ್ಷಮೋಕ್ಷದೈಕಾದಶೀವ್ರತಕಥನಂ ನಾಮ ಏಕ-ಚತ್ವಾರಿಂಶೋಽಧ್ಯಾಯಃ ಸಮಾಪ್ತಃ ॥ ಇಂತು ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿನಾರದಸಂವಾದಾಂತರ್ಗತವಾದ ಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಮಾರ್ಗಶೀರ್ಷದ ಮೋಕ್ಷೈಕಾದಶೀ ವ್ರತಕಥನವೆಂಬ ನಾಲ್ವತ್ತೊಂದನೆಯ ಅಧ್ಯಾಯವು ಮುಗಿಯಿತು.

ಗೀತಾಜಯಂತೀ– ಮಾರ್ಗಶಿರ ಶುಕ್ಲ ಏಕಾದಶೀಯಂದು ಗೀತಾಜಯಂತೀ ಪ್ರಯುಕ್ತ ಭಗವದ್ಗೀತಾಪಾರಾಯಣವನ್ನು ಮಾಡುತ್ತಾರೆ. ಮಹಾಭಾರತ ಯುದ್ಧ ಪ್ರಾರಂಭವಾದ ದಿವಸವಿದು. ಇದೇ ಮಾಸದ ಅಮಾವಾಸ್ಯೆಯ ದಿನ ದುರ್ಯೋಧನ ತೊಡೆ ಮುರಿದುಕೊಂಡು ಬಿದ್ದನು.

ಶ್ರೀ ಸತ್ಯನಾಥತೀರ್ಥರ ಆರಾಧನೆ: ಮಾರ್ಗಶೀರ್ಷ ಶುಕ್ಲ ಏಕಾದಶೀ ಸತ್ಯನಾಥಗುರುಃ ಪಾತು ಯೋ ಧೀರೋ ನವಚಂದ್ರಿಕಾಮ್ । ನವಾಮೃತಗದಾ-ತೀರ್ಥತಾಂಡವಾನಿ ವ್ಯಚೀಕ್ಲೃಪತ್ ॥ ಅವಧಾನಿ ವಂಶದ ಮೌನಭಾರ್ಗವ ಗೋತ್ರದ ಶ್ರೀ ಕೃಷ್ಣಾಚಾರ್ಯರಿಗೆ ಶ್ರೀ ನರಸಿಂಹ ದೇವರ ವರಪ್ರಸಾದದಿಂದ ಜನಿಸಿ

ನರಸಿಂಹ ಎಂಬ ನಾಮ ಪಡೆದರು. ಅವಧಾನಿ ನರಸಿಂಹಾಚಾರ್ಯರು ತಮ್ಮ ಎಳೇ 21ನೇ ವಯಸ್ಸಿನಲ್ಲಿ ಸನ್ಯಾಸ ಕೇಳಿದ್ದಕ್ಕೆ ಗುರುಗಳಾದ ಶ್ರೀ ವೇದನಿಧಿತೀರ್ಥರು ಕೊಡಲಿಲ್ಲ. ಆಗ ಅವರು ಶ್ರೀ ವೇದವ್ಯಾಸ ತೀರ್ಥರ ಶಿಷ್ಯರಾದ, ಶ್ರೀ ವೇದೇಶ ತೀರ್ಥರಿಂದ ದಿವ್ಯಜ್ಞಾನ ಪಡೆದ ಶ್ರೀ ಕೃಷ್ಣದ್ವೈಪಾಯನರಿಂದ ಸನ್ಯಾಸ ಪಡೆದು ಶ್ರೀ ವಿದ್ಯಾನಾಥ ತೀರ್ಥರಾದರು. ಆಮೇಲೆ ಶ್ರೀ ವೇದನಿಧಿತೀರ್ಥರು ದಂಡವ್ಯತ್ಯಾಸ ಮಾಡಿ ಅವರಿಗೆ ಶ್ರೀರಂಗನಾಥರು ಎಂದು ನಾಮಕರಣ ಮಾಡಿದರು. ನಂತರ ಇವರೇ ಶ್ರೀಸತ್ಯನಿಧಿಗಳಿಂದ ಮತ್ತೆ ದಂಡವ್ಯತ್ಯಾಸ ಮಾಡಿಸಿಕೊಂಡು ಶ್ರೀ ಸತ್ಯ-ನಾಥರಾದರು. ಅವರ ದಿನಚರಿಯಲ್ಲಿ ಪಾಠ ಪಾದಪೂಜೆ ಮುದ್ರಾಧರಣೆ ಮೂಲರಾಮನ ಪೂಜೆ ಮತ್ತೆ ಪಾಠ ನಂತರ ಅಲ್ಪ ಭೋಜನ ಮತ್ತೆ ಪಾಠ ಪ್ರವಚನಗಳು ಅಮೇಲೆ ಅಭಿನವ ಗ್ರಂಥಗಳ ರಚನೆ. ಶೇಷಶಾಯಿಯ ಸ್ಮರಣೆ ಮಾಡುತ್ತಾ 7 ಘಳಿಗೆ (2 ತಾಸು 48 ನಿಮಿಷ) ಮಾತ್ರ ನಿದ್ದೆ. ಇಂಥಾ ದಿನಚರಿ ಅನೂಚಾನವಾಗಿ ಇಂದಿಗೂ ನಮ್ಮ ಗುರುಗಳು ನಡೆಸಿಕೊಂಡು ಬಂದದ್ದು ಮೂಲ-ರಾಮನ ಸಾನ್ನಿಧ್ಯ ವಿಶೇಷದಿಂದಲೇ. ಇವರ ಕೃತಿಗಳು ಹೀಗಿವೆ. ಅಭಿನವ ಗದಾ - ವ್ಯಾಸರಾಜರ/ವಿಜಯೀಂದ್ರರ ಸಮಕಾಲೀನನಾದ ಅದ್ವೈತಿ ಅಪ್ಪಯ್ಯದೀಕ್ಷಿತನ 'ಮಧ್ವತಂತ್ರ ಮುಖಮರ್ದನ' ಕೃತಿಗೆ ಖಂಡನ ಅಭಿನವ ತಾಂಡವ - ನ್ಯಾಯವೈಶೇಷಿಕ ಮತಗಳನ್ನು ನಿರಾಕರಿಸುವ ಕೃತಿ ಅಭಿನವ ಚಂದ್ರಿಕಾ - ಶ್ರೀಮತ್ ಟೀಕಾಕೃತ್ಪಾದರ 'ತತ್ವ ಪ್ರಕಾಶಿಕಾ'ಗೆ ಟಿಪ್ಪಣೀ ಅಭಿನವ ಅಮೃತ - ಶ್ರೀಮತ್ ಟೀಕಾಕೃತ್ಪಾದರ 'ಪ್ರಮಾಣ ಪದ್ಧತಿ'ಗೆ ಟಿಪ್ಪಣೀ

ಭಕ್ತಿಯಿಂದ ಪರಮ ತಪಸ್ವಿಗಳಾದ ಶ್ರೀ ಸತ್ಯಾಭಿನವ ತೀರ್ಥರನ್ನು ಸರ್ವಜ್ಞ ಪೀಠದಮೇಲೆ ಕೂಡಿಸಿ ಮಾರ್ಗಶೀರ್ಷ ಶುಕ್ಲ ಏಕಾದಶೀ ದಿನ ಹರಿಪಾದನಿರತರಾಗಿ ಹರಿಯನ್ನೇ ಸೇರಿದರು. ಇಂದಿಗೂ 'ಮಿಳನಾಡಿನ ತಿರುಕೊಯಿಲೀರಿನ ಹತ್ತಿರ ವೀರಚೋಳಪುರಂ ನಲ್ಲಿ ಭಕ್ತರಿಗೆ ಅನುಗ್ರಹಮಾಡುತ್ತಾ ವಿರಾಜಿಸಿದ್ದಾರೆ.

## ಮಾರ್ಗಶಿರ ॥ ಶುಕ್ಲ॥ ದ್ವಾದಶೀ (ಮತ್ಸ್ಯದ್ವಾದಶೀ ವ್ರತಾಚರಣೆ)

ಸತ್ಯತಪ – ಮಹಾಮುನಿಯೇ! ಭೂದೇವಿಯು ಮಾಡಿದ ಉಪವಾಸವಾವುದು? ವ್ರತಗಳಾಗುವುವು? ಇದನ್ನು ನನಗೆ ಹೇಳಬೇಕು.

ದುರ್ವಾಸಮುನಿ – ತಿಳಿವಳಿಕೆಯುಳ್ಳವನು ಮಾರ್ಗಶಿರಮಾಸದ ದಶಮಿಯ ದಿನ ಜಿತೇಂದ್ರಿಯನೂ, ಶುಚಿಯಾದ ಬಟ್ಟೆಗಳುಳ್ಳವನೂ, ನಿರ್ಮಲ ಮನಸ್ಸುಳ್ಳವನೂ ಆಗಿ ವಿಧಿಗನುಸಾರವಾಗಿ ಅಗ್ನಿಕಾರ್ಯವನ್ನೂ, ದೇವಾರ್ಚನೆಯನ್ನೂ ಮಾಡಿ, ಪರಿಶುದ್ಧವೂ, ದೇವಾರ್ಪಿತವೂ ಆದ ಅನ್ನವನ್ನು ಊಟಮಾಡಿ, ಐದು ಅಡಿ ದೂರ ನಡೆದು, ಮತ್ತೆ ಕಾಲು ತೊಳೆದುಕೊಂಡು, ಎಂಟಂಗುಲ ಉದ್ದವಾದ ಕ್ಷೀರವೃಕ್ಷದ (ಹಾಲೆಗಿಡದ) ಹಲ್ಲುಜ್ಜುವ ಕಡ್ಡಿಯನ್ನು ಅಗಿದು, ಅದರಿಂದ ಹಲ್ಲನ್ನುಜ್ಜಿ ಬಳಿಕ ಆಚಮನ ಮಾಡಬೇಕು. ಬಳಿಕ ದೇಹದ ಸರ್ವದ್ವಾರಗಳನ್ನೂ ಯತ್ನಪೂರ್ವಕವಾಗಿ ಮುಟ್ಟಿ, ಶಂಖಚಕ್ರಗದಾಹಸ್ತನೂ, ಪೀತಾಂಬರಧಾರಿಯೂ, ವಿಭುವೂ, ಪ್ರಸನ್ನ-ಮುಖನೂ ಆದ ವಿಷ್ಣುವನ್ನು ಹೆಚ್ಚು ಹೊತ್ತು ಧ್ಯಾನಿಸಿ, ಮತ್ತೆ ಕೈಯ್ಯಲ್ಲಿ ನೀರನ್ನು ತೆಗೆದುಕೊಂಡು ಮನಸ್ಸಿನಲ್ಲಿ ಅವನನ್ನು ಸ್ಮರಿಸಿ, ಕೈನೀರಿನಿಂದ ಆ ದೇವನಿಗೆ ಅರ್ಘ್ಯವನ್ನು ಕೊಡಬೇಕು. ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾ ಚೈವಾಪರೇಹನಿ । ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥

ಮಹಾಮುನಿಯೇ! ಅರ್ಘ್ಯಕೊಡುವಾಗ ''ಪುಂಡರೀಕಾಕ್ಷ! ಅಚ್ಯುತ, ಏಕಾದಶಿಯ ದಿನ ಉಪವಾಸ ಮಾಡಿ, ದ್ವಾದಶಿಯಲ್ಲಿ ಊಟ ಮಾಡುವೆನು. ನನಗೆ ರಕ್ಷಕನಾಗು'' ಎಂದು ಹೇಳಬೇಕು. ಬಳಿಕ ರಾತ್ರಿಯಲ್ಲಿ ದೇವಸನ್ನಿಧಿಯಲ್ಲಿ ವಿಧಿಪೂರ್ವಕವಾಗಿ 'ನಾರಾಯಣಾಯ' ಎಂದು ಜಪಿಸುತ್ತಾ ಮಲಗಬೇಕು.

ಮಾರನೆಯ ದಿನ ಬೆಳಗಾಗುತ್ತಲೇ ಸಮುದ್ರವನ್ನು ಸೇರುವ ನದಿಗೆ ಅಥವಾ ಉಪನದಿಗೆ, ಇಲ್ಲವಾದರೆ ಕೆರೆಗೆ ಹೋಗಿಯಾಗಲೀ, ಮನೆಯಲ್ಲಿಯೇ ಆಗಲಿ ಶುದ್ಧಾತ್ಮನಾಗಿ ''ಭೂದೇವಿ! ಯಾವಾಗಲೂ ಪ್ರಾಣಿಗಳ ಧಾರಣವೂ ಪೋಷಣವೂ ನಿನ್ನಿಂದಲೇ ಆದುದರಿಂದ ನಿಜವಾಗಿಯೂ ನನ್ನ ಪಾಪವನ್ನು ಹೋಗಲಾಡಿಸು. ಸುವ್ರತಳೇ! ಮೇದಿನಿ! (ಭೂಮಿಯೇ!) ಬ್ರಹ್ಮಾಂಡದೊಳಗಿನ ತೀರ್ಥಗಳನ್ನೆಲ್ಲಾ ನೀನು ಮುಟ್ಟಿರುವೆ. ಆದುದರಿಂದ ಈ ಮಣ್ಣನ್ನು ತೆಗೆದುಕೊಂಡು ಇರುವೆನು. ವರುಣನೇ! ನಿನ್ನಲ್ಲಿ ಯಾವಾಗಲೂ ಸರ್ವರಸಗಳೂ ಶಾಶ್ವತವಾಗಿವೆ. ಅವುಗಳಿಂದ ಈ ಮಣ್ಣನ್ನು ಕೂಡಿಸಿ ಪವಿತ್ರವನ್ನಾಗಿ ಮಾಡು ತಡಮಾಡಬೇಡ'' ಎಂಬ ಈ ಮಂತ್ರದಿಂದ ಶುದ್ಧವಾದ ಮಣ್ಣನ್ನು ತೆಗೆದುಕೊಂಡು ತನಗೆ ಲೇಪಿಸಿಕೊಳ್ಳಬೇಕು.

ತೆಗೆದುಕೊಂಡ ಮಣ್ಣನ್ನು ಮೂರು ಭಾಗ ಮಾಡಿ, ಮೂರು ಸಾರಿ ಸರ್ವಾವಯವಗಳಿಗೂ ಬಳಿದುಕೊಳ್ಳಬೇಕು. ಬಳಿಕ ವರುಣಮಂತ್ರಗಳಿಂದ ನಿಯಮಾನುಸಾರವಾಗಿ ಸ್ನಾನ ಮಾಡಬೇಕು. ಸ್ನಾನ ಮಾಡಿ, ಸಂಧ್ಯಾವಂದನಾದಿ ಅವಶ್ಯಕರ್ಮಗಳನ್ನು ಮಾಡಿ, ಮತ್ತೆ ದೇವರ ಸನ್ನಿಧಿಗೆ ಹೋಗಬೇಕು. ಅಲ್ಲಿ ಲಕ್ಷ್ಮೀಸಮೇತನಾದ ಪ್ರಭುವಾದ ನಾರಾಯಣನನ್ನು ಪೂಜಿಸಬೇಕು.

''ಕೇಶವಾಯ ನಮಃ (ಕೇಶವನಿಗೆ ನಮಸ್ಕಾರ) ಎಂದು ಪರಮಾತ್ಮನ ಪಾದ-ಗಳನ್ನೂ, ದಾಮೋದರಾಯ ನಮಃ ಎಂದು ನಡುವನ್ನೂ, ನೃಸಿಂಹಾಯ ನಮಃ ಎಂದು ತೊಡೆಗಳನ್ನೂ, ಶ್ರೀವತ್ಸಧಾರಿಣೇ ನಮಃ ಎಂದು ಎದೆಯನ್ನೂ, ಕೌಸ್ತುಭ-ಧಾರಿಣೇ ನಮಃ ಎಂದು ಜಠರವನ್ನೂ, ಶ್ರೀಪತಯೇ ನಮಃ ಎಂದು ಎದೆಯನ್ನೂ, ತ್ರೈಲೋಕ್ಯವಿಜಯಾಯ ನಮಃ ಎಂದು ತೋಳುಗಳನ್ನೂ, ಸರ್ವಾತ್ಮನೇ ನಮಃ ಎಂದು ತಲೆಯನ್ನೂ, ಚಕ್ರಧಾರಿಣೇ ನಮಃ ಎಂದು ಅವನ ಚಕ್ರವನ್ನೂ, ಶಂಕರಾಯ ನಮಃ ಎಂದು ಶಂಖವನ್ನೂ, ಗಂಭೀರಾಯ ನಮಃ ಎಂದು ಗದೆಯನ್ನೂ, ಶಾಂತಮೂರ್ತಯೇ ನಮಃ ಎಂದು ಪದ್ಮವನ್ನೂ ಅರ್ಚಿಸಬೇಕು.

ಹೀಗೆ ದೇವೇಶನೂ, ಪ್ರಭುವೂ ಆದ ಆ ನಾರಾಯಣನನ್ನು ಆರಾಧಿಸಿ, ಬಳಿಕ ಆ ದೇವನೆದುರಿಗೆ ಜಲಪೂರ್ಣಗಳೂ, ಹೂಮಾಲೆಗಳಿಂದಲಂಕೃತಗಳೂ ಆದ ನಾಲ್ಕು ಕಲಶಗಳನ್ನು ಅವುಗಳ ಮೇಲೆ ಎಳ್ಳುತುಂಬಿದ (ಸುವರ್ಣ) ನಾಣ್ಯ-ಸಹಿತಗಳಾದ ತಾಮ್ರದ ಚಿಕ್ಕಪಾತ್ರೆಗಳಿರುವಂತೆ ಇಡಬೇಕು.

ಆ ನಾಲ್ಕು ಕಲಶಗಳೇ ನಾಲ್ಕು ಸಮುದ್ರಗಳೆನ್ನಿಸಿಕೊಳ್ಳುವವು. ಆ ನಾಲ್ಕು ಕಲಶಗಳ ನಡುವೆ ವಸ್ತ್ರದಿಂದ ಮುಚ್ಚಿದ ಶುಭಪೀಠವನ್ನಿಡಬೇಕು. ಚಿನ್ನದ, ಬೆಳ್ಳಿಯ, ತಾಮ್ರದ ಅಥವಾ ಮರದ ಪಾತ್ರೆಯನ್ನೋ ಈ ಪಾತ್ರೆಗಳಾವುವೂ ಇಲ್ಲದಿದ್ದರೆ ಮುತ್ತುಗದೆಲೆಯ ದೊನ್ನೆಯನ್ನೋ, ನೀರಿನಿಂದ ತುಂಬಿ, ಕಲಶಗಳ ಮಧ್ಯದ ಪೀಠದಲ್ಲಿಡಬೇಕು. ದೇವನಾದ ಜನಾರ್ದನಮೂರ್ತಿಯನ್ನು ಚಿನ್ನದಿಂದ ಸರ್ವಾ-ವಯವಗಳುಳ್ಳ ಮತ್ಸ್ಯಾಕಾರವಾಗಿ ಮಾಡಿ, ನೀರಿನಿಂದ ತುಂಬಿದ ಮಧ್ಯದ ಪಾತ್ರೆ-ಯಲ್ಲಿ ಸ್ಥಾಪಿಸಬೇಕು. ಸರ್ವಾಭರಣಭೂಷಿತನೂ, (ಪುಷ್ಪ)ಗಳಿಂದೊಪ್ಪುವವನೂ, ಆದ ಆ ಮತ್ಸ್ಯಮೂರ್ತಿಯನ್ನು ಗಂಧವಸ್ತ್ರಧೂಪದೀಪಗಳಿಂದಲೂ ಬಗೆ ಬಗೆಯ

ಫಲಗಳಿಂದಲೂ ಶಾಸ್ತ್ರೋಕ್ತವಾಗಿ ಪೂಜಿಸಿ ''ಕೇಶವನೇ! ರಸಾತಳಕ್ಕೆ ಹೋಗಿದ್ದ ವೇದಗಳನ್ನು ಮತ್ಸ್ಯರೂಪದಿಂದ ನೀನು ಉದ್ಧರಿಸಿದ ಹಾಗೆ ನನ್ನನ್ನೂ ಉದ್ಧರಿಸು, ದೇವ'' ಎಂದು ಹೇಳಿ ಅಲ್ಲಿಯೇ ದೇವನೆದುರಿಗೆ ಜಾಗರಣೆಯನ್ನು ಮಾಡಬೇಕು. (ನಿದ್ದೆಯನ್ನು ಮಾಡಬಾರದು). ಆ ರಾತ್ರಿಕಳೆದು ಬೆಳಗಾಗಲು, ತನ್ನ ಅನುಕೂಲಕ್ಕೆ ತಕ್ಕಂತೆ ಇಟ್ಟಿರುವ ನಾಲ್ಕುಕಲಶಗಳನ್ನು ನಾಲ್ಕು ಜನ ಬ್ರಾಹ್ಮಣರಿಗೆ ಕೊಡಿಸಬೇಕು. ಪೂರ್ವದಿಕ್ಕಿನ ಕಲಶವನ್ನು ಋಗ್ವೇದವನ್ನು ಚೆನ್ನಾಗಿ ತಿಳಿದವನಿಗೂ, ದಕ್ಷಿಣದ್ದನ್ನು ಸಾಮವೇದಜ್ಞನಿಗೂ ಕೊಡಬೇಕು. ಯಜುರ್ವೇದಿಗೆ ಪಶ್ಚಿಮದ ಕಲಶವನ್ನು ಕೊಡಬೇಕು. ಉತ್ತರದ ಕಲಶವನ್ನು ಬೇಕಾದವಿಗೆ ಕೊಡಬಹುದು. ಇದೇ ಹೇಳಿರುವ ವಿಧಿ.

''ಪೂರ್ವದಿಕ್ಕಿನಲ್ಲಿ ಋಗ್ವೇದವು ಸಂತುಷ್ಟವಾಗಲಿ, ದಕ್ಷಿಣದಲ್ಲಿ ಸಾಮವೇದವೂ, ಪಶ್ಚಿಮದಲ್ಲಿ ಯಜುರ್ವೇದವೂ, ಉತ್ತರದಲ್ಲಿ ಅಥರ್ವಣವೇದವೂ ತೃಪ್ತವಾಗಲಿ'' ಎಂದು ದಾತೃವು ಹೇಳಿ, ತೆಗೆದುಕೊಳ್ಳುವವರಿಂದಲೂ ಹೇಳಿಸಬೇಕು.

ಈ ವ್ರತದ ರಹಸ್ಯವಾದ ಮಂತ್ರವನ್ನೂ, ವಿಧಾನವನ್ನೂ ತಿಳಿಸಿದ ಆಚಾರ್ಯನನ್ನು ನಿಯಮದಂತೆ, ಬಗೆ ಬಗೆಯಲ್ಲಿ ಗಂಧಪುಷ್ಪಧೂಪವಸ್ತ್ರಾದಿಗಳಿಂದ ಪೂಜಿಸಿ, ಸುವರ್ಣದ ಆ ಮತ್ಸ್ಯಮೂರ್ತಿಯನ್ನು ಆತನಿಗೆ ಅರ್ಪಿಸಬೇಕು. ಆದರಿಂದ ವ್ರತದ ಫಲವು ಕೋಟಿಗುಣವಾಗಿ ಹೆಚ್ಚುವುದು. ಗುರುವನ್ನು ಪಡೆದೂ ಅಜ್ಞಾನದಿಂದ ಉದಾಸೀನಮಾಡುವ ಹೀನಮನುಷ್ಯನು ಕೋಟಿಜನ್ಮಗಳಲ್ಲಿ ನರಕದಲ್ಲಿ ಸಂತಾಪಗೊಳ್ಳುವನು. ವ್ರತದ ವಿಧಿಯನ್ನೂ, ವ್ರತದ ಕ್ರಮವನ್ನೂ ತಿಳಿಸುವವನೇ ಗುರುವೆಂದು ಪಂಡಿತರು ಹೇಳುವರು.

ಹೀಗೆ ವಿಧಿಗನುಸಾರವಾಗಿ ಕೊಟ್ಟು, ಆ ದ್ವಾದಶಿಯಲ್ಲಿ ವಿಷ್ಣುವನ್ನು ಪೂಜಿಸಿ, ಶಕ್ತಿಗನುಸಾರವಾಗಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ದಕ್ಷಿಣೆಯನ್ನು ಕೊಡಬೇಕು.

ಕಲಶದ ಮೇಲೆ ಇರಿಸಿದ್ದ ಎಳ್ಳು ತುಂಬಿದ ತಾಮ್ರದ ಪಾತ್ರೆಯನ್ನೂ, ನೀರಿನ ಪಾತ್ರೆಯಲ್ಲಿರುವ ದೇವನನ್ನೂ, ಉಳಿದುದೆಲ್ಲವನ್ನೂ ಕುಟುಂಬಿಯಾದ ಬ್ರಾಹ್ಮಣನಿಗೆ ಕೊಡಬೇಕು. ಆಮೇಲೆ ಹೆಚ್ಚಾದ ಪರಮಾನ್ನದಿಂದ ಬ್ರಾಹ್ಮಣರಿಗೆ ಭೋಜನ

ಮಾಡಿಸಬೇಕು. ಬಳಿಕ ವ್ರತಿಯಾದವನು ತಾನು ಮಕ್ಕಳೊಡನೆ, ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡು, ಮೌನದಿಂದ ಊಟಮಾಡಬೇಕು.

ಅರಿವುಳ್ಳವರಲ್ಲಿ ಮೇಲಾದವನೇ! ಈ ವಿಧಾನದಿಂದ ಭೂದೇವಿಯು ಮಾಡಿದ ವ್ರತವನ್ನು ಮಾಡುವವನಿಗೆ ದೊರೆಯುವ ಉತ್ತಮವಾದ ಪುಣ್ಯಫಲವನ್ನು ಕೇಳು. ಸುವ್ರತನೇ! ಮಹಾವ್ರತನೇ! ನನಗೆ ಸಾವಿರಬಾಯಿಗಳೂ ಬ್ರಹ್ಮನಷ್ಟು ಆಯುಸ್ಸೂ ಆದರೆ ಆಗ ಈ ಧರ್ಮದ ಫಲವನ್ನು ಹೇಳುವುದಕ್ಕಾದೀತು!!

ಬ್ರಹ್ಮನೇ! ಆದರೂ ಉದ್ದೇಶಪೂರ್ವಕವಾಗಿ ಸಂಗ್ರಹವಾಗಿ ಹೇಳುವೆನು ಅದನ್ನು ಕೇಳು. ಮುನಿಯೇ! ಒಂದು ಚತುರ್ಯುಗಕ್ಕೆ ನಲವತ್ತಮೂರು ಲಕ್ಷದ ಇಪ್ಪತ್ತು-ಸಾವಿರ ವರ್ಷಗಳಾಗುವವು. ಎಪ್ಪತ್ತೊಂದು ಚತುರ್ಯುಗವು ಒಂದು ಮನ್ವಂತರ-ವೆನ್ನಿಸಿಕೊಳ್ಳುವುದು. ಹದಿನಾಲ್ಕು ಮನ್ವಂತರಗಳು ಬ್ರಹ್ಮನ ಒಂದು ಹಗಲು. ಮತ್ತೂ ಅಷ್ಟು ಕಾಲವಾದರೆ ಬ್ರಹ್ಮನ ರಾತ್ರಿ. ಹಗಲು ರಾತ್ರಿಗಳು ಸೇರಿದ ಇಂತಹ ಮೂವತ್ತುದಿನಗಳು ಅವನ ಒಂದು ತಿಂಗಳು. ಅಂತಹ ಹನ್ನೆರಡು ತಿಂಗಳು ಆದರೆ ಒಂದು ವರ್ಷವಾಗುವುದು. ಅಂತಹ ನೂರುವರ್ಷಗಳು ಬ್ರಹ್ಮನ ಆಯುಸ್ಸೆಂಬು-ದರಲ್ಲಿ ಸಂಶಯವಿಲ್ಲ. ಈ ಮತ್ಸ್ಯದ್ವಾದಶೀವ್ರತವನ್ನು ಮಾಡುವವನು ಬ್ರಹ್ಮಲೋಕ-ವನ್ನು ಪಡೆದು ಅಲ್ಲಿ ಬ್ರಹ್ಮನ ಆಯುಸ್ಸಿನಷ್ಟು ಕಾಲ ನಿಲ್ಲುವನು. ಬಳಿಕ ಬ್ರಹ್ಮನ ಉಪಸಂಹಾರವಾಗುವುದು. ಆಗ ಒಡನೆಯೇ ಆ ವ್ರತಿಗೂ ಲಯವುಂಟಾಗುವುದು.

ಬ್ರಹ್ಮದೇವನೂ, ಮಹಾತಪಮುನಿಯೂ, ಆ ರಾಜನೂ ತಿರುಗಿ ಉದಿಸುವರು. ಈ ಲೋಕದಲ್ಲಿ ಅರಿತಾಗಲೀ, ಅರಿಯದೆಯಾಗಲೀ ಬ್ರಹ್ಮಹತ್ಯಾದಿಪಾಪಗಳನ್ನು ಮಾಡಿದರೂ ಈ ವ್ರತೋಪವಾಸವನ್ನು ಮಾಡಿದರೆ, ಒಡನೆಯೇ ಆ ಪಾಪಗಳು ನಾಶವಾಗುವವು. ಈ ಲೋಕದಲ್ಲಿ ದರಿದ್ರನೂ, ರಾಜ್ಯವನ್ನು ಕಳೆದುಕೊಂಡ-(ದೊರೆಯೂ)ವನೂ, ವಿಧಿಪೂರ್ವಕವಾಗಿ ಮತ್ಸ್ಯೈಕಾದಶಿಯ ಉಪವಾಸವನ್ನು ಮಾಡಿದರೆ ಅವನು ನಿಜವಾಗಿಯೂ ರಾಜನಾಗುವನು. ಬಂಜೆಯಾದ ಸುಮಂಗಲಿ-ಯಾದ ಹೆಂಗಸು ಈ ನಿಯಮದಿಂದ ಉಪವಾಸ ಮಾಡಿದರೆ ಅವಳಿಗೆ ಪರಮ-ಧಾರ್ಮಿಕನಾದ ಮಗನು ಜನಿಸುವನು.

ಅಗಮ್ಯಾಗಮನವನ್ನು ಮಾಡಿದವನೂ, ಅದನ್ನರಿತು ಪಾಪಕ್ಕೊಳಗಾದ ಸಾಧು-ವೂ ಈ ವ್ರತವನ್ನು ಮಾಡಿ, ಆ ಪಾಪವನ್ನು ಕಳೆದುಕೊಳ್ಳುವರು. ಬಹುವರ್ಷಗಳ

ಕಾಲ ಬ್ರಾಹ್ಮಣಕರ್ಮಗಳನ್ನು ಮಾಡದೇ ಇರುವವನು ಭಕ್ತಿಯಿಂದ ಒಂದಾವರ್ತಿ ಈ ಮತ್ಸ್ಯೈಕಾದಶಿಯಲ್ಲಿ ಉಪವಾಸ ಮಾಡಿದರೆ ವೇದಸಂಸ್ಕಾರವನ್ನು ಪಡೆ-ಯುವನು.

ಮಹಾಮುನಿಯೇ! ಹೆಚ್ಚಾಗಿ ಹೇಳುವುದರಿಂದೇನು! ಈ ವ್ರತದಿಂದ ಎಲ್ಲವನ್ನೂ ಪಡೆಯಬಹುದು. ಪಡೆಯಲಾಗದುದು ಯಾವುದೂ ಇಲ್ಲ. ಆದುದರಿಂದ ಮನುಷ್ಯರು ಇದನ್ನು ಯಾವಾಗಲೂ ಮಾಡಬೇಕು.

ಬ್ರಹ್ಮನೇ! ಈ ಕ್ರಮದಿಂದ ರಸಾತಲದಲ್ಲಿ ಮುಳುಗಿದ್ದ ಭೂದೇವಿಯೇ ಉಪ-ವಾಸ ಮಾಡಿದಳು. ಈ ವಿಷಯದಲ್ಲಿ ವಿಮರ್ಶೆ ಮಾಡಬೇಕಾದುದಿಲ್ಲ.

ಈ ವ್ರತದ ವಿಧಾನವನ್ನು ನಿಯಮವಿಲ್ಲದವನಿಗೂ, ನಾಸ್ತಿಕನಿಗೂ, ದೇವ-ಬ್ರಾಹ್ಮಣದ್ವೇಷಿಗೂ ಎಂದಿಗೂ ತಿಳಿಸಬಾರದು. ಒಡನೆಯೇ ಪಾಪವನ್ನು ನಾಶ ಮಾಡುವ ಇದನ್ನು ಗುರುಭಕ್ತನಾದವನಿಗೆ ಹೇಳಬೇಕು. ಈ ವ್ರತೋಪವಾಸವನ್ನು ಮಾಡುವ ಮನುಷ್ಯನು ಈ ಜನ್ಮದಲ್ಲಿ ಧನಧಾನ್ಯಸೌಭಾಗ್ಯಗಳನ್ನೂ, ಉತ್ತಮ ಸ್ತ್ರೀಯರನ್ನೂ ಪಡೆಯುವನು. ಉತ್ತಮವಾದ ಈ ದ್ವಾದಶೀವಿಧಾನವನ್ನು ಭಕ್ತಿಯಿಂಧ ಹೇಳುವವರೂ, ಕೇಳುವವರೂ ಎಲ್ಲಾ ಪಾಪಗಳನ್ನೂ ಕಳೆದುಕೊಳ್ಳುವರು.

ಮತ್ಸ್ಯದ್ವಾದಶೀವಿಧಾನವು ಮುಗಿಯಿತು. ವರಾಹಪುರಾಣದಲ್ಲಿ 39ನೆಯ ಅಧ್ಯಾಯವು ಮುಗಿಯಿತು.

## ಮಾರ್ಗಶಿರ ॥ ಶುದ್ಧ ॥ ತ್ರಯೋದಶೀ

ಹನುಮದ್ವ್ರತ– ಶುಕ್ಲ ತ್ರಯೋದಶಿಯಂದು ಹನುಮದ್ವ್ರತ. ಇದರ ವಿಧಿಯು ವ್ರತಕೌಸ್ತುಭಾದಿಗಳಲ್ಲಿ ದೊರೆಯುತ್ತದೆ. ಈ ದಿನ ಹನುಮತ್ಪ್ರೀತಿಗಾಗಿ ಚಿತ್ರಾನ್ನ ಮೊಸರನ್ನಗಳನ್ನು ಸಮರ್ಪಿಸುತ್ತಾರೆ.

## ಮಾರ್ಗಶಿರ ॥ ಶುಕ್ಲ ॥ ಚತುರ್ದಶೀ

ಪಿಶಾಚವಿಮೋಚನೀ– ಶುಕ್ಲ ಚತುರ್ದಶಿಯಂದು ತೀರ್ಥಶ್ರಾದ್ಧವನ್ನು ಮಾಡುವುದರಿಂದ ಪಿತ್ರಾದಿಗಳಿಗೆ ಶಾಪಾದಿಗಳಿಂದ ಪ್ರಾಪ್ತವಾದ ಪಿಶಾಚಜನ್ಮವು

ನಿವೃತ್ತವಾಗುತ್ತದೆ. ಪಿತ್ರಾದಿಗಳ ಉದ್ದೇಶವಿದ್ದರೆ ತ್ರಿಪಿಂಡೀ ಶ್ರಾದ್ಧವನ್ನು, ಇತರರ ಉದ್ದೇಶವಿದ್ದರೆ ಏಕೋದ್ದಿಷ್ಟಶ್ರಾದ್ಧವನ್ನೂ ಮಾಡಬೇಕು.

## ಮಾರ್ಗಶಿರ ॥ ಶುದ್ಧ ॥ ಪೂರ್ಣಿಮಾ

ದತ್ತಾತ್ರೇಯ ಜಯಂತಿ– ಪೂರ್ಣಿಮಾದಂದು ದತ್ತಾತ್ರೇಯ ಜಯಂತೀ. ಇಂದು ಕ್ಷೀರಾಭಿಷೇಕದಿಂದ ಮಹಾಫಲ. ಸಹಸ್ರಕಂಬ ಆಗದಿದ್ದಲ್ಲಿ ನೂರೆಂಟು ಶಂಖ ಕ್ಷೀರಾಭಿಷೇಕವನ್ನು ಮಾಡಬೇಕು. ಅದೂ ಆಗದಿದ್ದಲ್ಲಿ ಇಪ್ಪತ್ತನಾಲ್ಕು, ಹನ್ನೆರಡು ಅಥವಾ ಐದು ಶಂಖಗಳನ್ನಾದರೂ ಅಭಿಷೇಕ ಮಾಡಬೇಕು.

## ಭಗವಂತನ ದತ್ತಾತ್ರೇಯರೂಪದ ಬಗ್ಗೆ ಜಿಜ್ಞಾಸುಗಳ ಪ್ರಶ್ನೆ ಉತ್ತರಗಳು

ಯೋಗ ಜಿಜ್ಞಾಸುಗಳ ಪ್ರಶ್ನೆ : ಯೋಗಮಾರ್ಗದಲ್ಲಿ ಮುನ್ನುಗ್ಗಲು ಯಾವ ಯೋಗಾಚಾರ್ಯನ ಮಾರ್ಗದರ್ಶನ ಪಡೆಯಬೇಕು?

ಉತ್ತರ : ನಿಮಗಾಗಿಯೇ ದೇವರು 'ದತ್ತ' ಎಂಬ ರೂಪದಿಂದ ಅವತರಿಸಿ-ರುವನು. ಇವನೇ ಯೋಗಶಾಸ್ತ್ರಪ್ರವರ್ತಕನು. ಮತ್ತು ಸಕಲ ಯೋಗಿಗಳಿಗೆ ಮಾರ್ಗದರ್ಶಕನೂ ಗುರುವೂ ಆಗಿ 'ಯೋಗೀಜನಪ್ರಿಯ' ಎಂದು ಖ್ಯಾತನಾಗಿ-ರುವನು.

ಧ್ಯಾನಾಭ್ಯಾಸಿಗಳ ಪ್ರಶ್ನೆ : ನಮಗೆ ಧ್ಯಾನ ಮಾಡಲು ಬಲು ಇಷ್ಟ. ಒಮ್ಮೆ ಒಬ್ಬ ಅವಧೂತರ ಬಳಿ ಅಭ್ಯಾಸ ಮಾಡಲು ಹೋದಾಗ ಅವರು ದತ್ತಾತ್ರೇಯ ರೂಪವನ್ನು ಪರಿಚಯಿಸಿ ಧ್ಯಾನ ಮಾಡಲು ಮಾರ್ಗದರ್ಶನ ಮಾಡಿದರು. ಇದು ಸರಿಯೋ ತಪ್ಪೋ ?

ಉತ್ತರ : ಖಂಡಿತಾ ತಪ್ಪಲ್ಲ. ಆದರೆ ಪ್ರಥಮಹಂತದಲ್ಲಿ ಅವರು ನಿಮಗೆ ಏನೇನು ಉಪದೇಶಿಸಿದರು?

ಧ್ಯಾನಾಭ್ಯಾಸಿಗಳು : 'ಎಲ್ಲರನ್ನು ಸಮಾನವಾಗಿ ಕಾಣಬೇಕು. ದ್ವೈತ, ಅದ್ವೈತ, ವಿಶಿಷ್ಟಾದ್ವೈತವನ್ನು ಮೀರಿ ನಿಲ್ಲಬೇಕು'. ಮತ್ತು ತಮ್ಮನ್ನು ದತ್ತಾತ್ರೇಯ ಸ್ವರೂಪ-ರೆಂದು ಹೇಳಿಕೊಂಡರು. ಅವರು ಹೇಳಿದ್ದರಲ್ಲಿ ತಪ್ಪೇನಿದೆ?

ಉತ್ತರ : ಹ್ಣ...ಹ್ಣಾ..... ಹತ್ತುವರ್ಷ ಧ್ಯಾನದ ಬಗ್ಗೆ ಪಾಠ ಮಾಡಿ ಕೆಲವು ಸಿದ್ಧಿಗಳನ್ನು ಪಡೆದುಕೊಂಡ ಮಾತ್ರಕ್ಕೆ ದತ್ತಾತ್ರೇಯರಾಗುವುದಾದರೆ, ಪ್ರಾಚೀನ-ಋಷಿಮುನಿಗಳೇಕೆ ತಮ್ಮನ್ನು ಅತ್ಯಲ್ಪರು ಎಂದು ಹೇಳಿಕೊಂಡಿರುವರು.

ಮೆಡಿಟೇಟರ್‌ನ ಪ್ರಶ್ನೆ : ಮತ್ತೊಬ್ಬರನ್ನು ನಿಂದಿಸುವುದರಲ್ಲೇ ನಿಮಗೆ ಸಂತೋಷ. ನಾವು ಎಲ್ಲವನ್ನು ಮೀರಿ ಮೆಡಿಟೇಶನ್ ಮೂಲಕ ಶಾಂತಿಯನ್ನು ಸಂಪಾದಿಸುವವರು. ನಮಗೆ ಮೆಡಿಟೇಶನ್ ಹೇಳಿಕೊಟ್ಟ ಗುರುಗಳು ದತ್ತಸ್ವರೂಪ-ರೆಂಬುದರಲ್ಲಿ ಸಂಶಯವೇ ಇಲ್ಲ.

ಉತ್ತರ : ಸಂತೋಷ. ನಿಮ್ಮ ಭಾವನೆಗೆ ಧಕ್ಕೆ ಉಂಟುಮಾಡುವ ಉದ್ದೇಶ ನಮಗೇನಿಲ್ಲ. ಆದರೆ 'ನಾನು ತಿಳಿದಿದ್ದೇ ಸತ್ಯ' 'ನನಗೆ ಗೋಚರಿಸಿದ್ದೇ ತತ್ವ' ಎಂದು ಭಾವುಕರಿಗೆ ಹಾದಿ ತಪ್ಪಿಸಬೇಡಿ.

ಮೆಡಿಟೇಟರ್‌ನ ಪ್ರಶ್ನೆ : ಹಾಗಿದ್ದರೆ ಧ್ಯಾನಯೋಗಿಗಳೆಲ್ಲರೂ ವಂಚಕರೆ? ಅವರ ಗುರುಪರಂಪರೆ ವಂಚಕರ ಜಾಲವೇ?

ಉತ್ತರ : ಸತ್ಯದ ದಾರಿ ಬೇರೆ; ಅಸತ್ಯದ ದಾರಿ ಬೇರೆ. ಸತ್ಯವನ್ನು ಸೇರಬೇಕಾದರೆ ಸತ್ಯದ ದಾರಿಯಲ್ಲಿಯೇ ಸಾಗಬೇಕು.

ಭಾವುಕಜನರ ಪ್ರಶ್ನೆ : ಎಷ್ಟೋ ಮಂದಿ ಪ್ರಸಿದ್ಧರಾದ ಗುರೂಜಿಗಳು ಹಾಗೂ ಮಂತ್ರಸಿದ್ಧಿ ಪಡೆದವರು ತಮ್ಮನ್ನು ದತ್ತಾತ್ರೇಯ ಸ್ವರೂಪವೆಂದು ಹೇಳಿಕೊಳ್ಳುತ್ತಾರೆ. 'ಹೌದು' ಎಂದು ಒಪ್ಪಿಕೊಳ್ಳಲು ನಮಗೆ ಮನಸೊಪ್ಪುತ್ತಿಲ್ಲ. 'ಅಲ್ಲ' ಎನ್ನಲು ಸಾಧ್ಯ-ವಾಗುತ್ತಿಲ್ಲ. ನಮ್ಮ ಗೊಂದಲಕ್ಕೆ ದಯವಿಟ್ಟು ಉತ್ತರಿಸಿ.

ಉತ್ತರ : ಅಂಥ ಗುರೂಜಿಗಳು ದೇವರೆನ್ನಲು ಶಾಸ್ತ್ರವನ್ನು ಪ್ರಮಾಣವೆನ್ನು-ತ್ತಾರೋ, ಇಲ್ಲವೋ? ಇಲ್ಲವೆಂದರೆ ಬೊಗಳೆಯ ಮಾತಾಯಿತು. ಹೌದೆಂದರೆ ಅದೇ ಶಾಸ್ತ್ರದಿಂದ ಅವರು ದೇವರ ಸ್ವರೂಪವಲ್ಲವೆಂದು ನಿರ್ಣಯವಾಯಿತು.

ಒಬ್ಬ ವಿದ್ಯಾರ್ಥಿಯ ಪ್ರಶ್ನೆ : ನನಗೆ ಧ್ಯಾನದ ಹುಚ್ಚು ಹಿಡಿಯಿತು. ಈಗ ತುಂಬ ಅಪರೂಪದ ಒಬ್ಬ ಯೋಗಿಗಳ ಸನಿಹ ಇರುವೆನು. ಇವರು ನನಗೆ ಹತ್ತು ವರ್ಷಗಳಲ್ಲಿ ಕುಂಡಲಿನೀ ಶಕ್ತಿಯನ್ನು ಜಾಗೃತ ಮಾಡಿಸಿರುವರು. ಇವರಿಗೆ ಹಣ,

ಕೀರ್ತಿ ಮೊದಲಾದ ಯಾವುದೇ ಆಸೆಗಳಿಲ್ಲ. ಏಕಾಂತದಲ್ಲಿ ಇವರು ನನಗೆ ಉಪದೇಶಿಸಿದಂತೆ ಇವರನ್ನು ನಾನು ದತ್ತಾತ್ರೇಯಸ್ವರೂಪರೆಂದೆ ಉಪಾಸನೆಗೈ-ಯುತ್ತಿರುವೆನು. ಇದರ ಬಗ್ಗೆ ತಮ್ಮ ಅಭಿಪ್ರಾಯವೇನು?

ಉತ್ತರ : ನಿಮ್ಮ ಪ್ರಶ್ನೆಗೆ ಹೆಚ್ಚು ಉತ್ತರಿಸಲು ಇಷ್ಟಪಡುವುದಿಲ್ಲ. ಆದರೆ ಸಿದ್ಧಿ ಪಡೆದಮಾತ್ರಕ್ಕೆ ಅದು ಸತ್ಯಮಾರ್ಗವೇ ಆಗಿರಬೇಕಿಲ್ಲ. ಮತ್ತು ಭಗವಂತನು ಕಲಿ-ಯುಗದಲ್ಲಿ ಖಡಾಖಂಡಿತವಾಗಿ ಅವತಾರ ಮಾಡುವುದಿಲ್ಲ. ಆದ್ದರಿಂದಲೇ ಅವನಿಗೆ 'ತ್ರಿಯುಗ' ಎಂದು ಹೆಸರು.

ಪ್ರಶ್ನೆ : ಹಾಗಿದ್ದರೆ ದತ್ತಾತ್ರೇಯಪಂಥದ ಧ್ಯಾನಯೋಗಿಗಳೆಲ್ಲರೂ ಅಸತ್ಯ-ಮಾರ್ಗದಲ್ಲಿ ಹೋಗುತ್ತಿರುವರೇ?

ಉತ್ತರ : ಖಂಡಿತ ಇದು ನನ್ನ ಅಭಿಪ್ರಾಯವಲ್ಲ. 'ಧ್ಯಾನಯೋಗದಲ್ಲಿ ಸಿದ್ಧಿ ಪಡೆದವರೆಲ್ಲರೂ ಸತ್ಯಮಾರ್ಗದ ಪಥಿಕರಲ್ಲ. ಎಷ್ಟೋ ಮಂದಿ ಶೂನ್ಯದ ಉಪಾಸನೆಯಿಂದ ಹಠಯೋಗಾದಿಗಳಲ್ಲಿ ಸಿದ್ಧಿ ಪಡೆದು ತಾವು ಕುಳಿತ ಸ್ಥಳದಿಂದ ಹತ್ತು ಅಡಿ ಅಥವಾ ಐವತ್ತು ಅಡಿ ಮೇಲೆ ಹೋಗುವವರಿದ್ದಾರೆ. ಇವರನ್ನೆಲ್ಲಾ ನೀವು ಏನೆಂದು ಗುರುತಿಸುವಿರಿ'? ಎಂಬುದಷ್ಟೇ ನನ್ನ ತಾಕಲಾಟ.

ಮಾಡ್ರನ್ ಜನರೇಶನ್‌ಪ್ರಶ್ನೆ : ಹೌದು ! ಹೌದು !! ನೀವು ಹೇಳಿದ್ದೆಲ್ಲಾ ಕಟುಸತ್ಯ . ಇತ್ತೀಚೆಗೆ ದತ್ತಾತ್ರೇಯನ ಆರಾಧಕರು ಎಲ್ಲೆಡೆ ಧ್ಯಾನಶಿಬಿರ, ಯೋಗ-ಶಿಬಿರ ಮೊದಲಾದವುಗಳನ್ನು ಏರ್ಪಾಡು ಮಾಡಿ, ಜನಸಾಮಾನ್ಯರಿಗೆ ಹಾದಿ-ತಪ್ಪಿಸುತ್ತಿದ್ದಾರೆ. ಇಂಥ ಕಾರ್ಯಗಳನ್ನು ನಾವು ಪ್ರತಿಭಟನೆ ಮಾಡಬೇಕು ಅಲ್ಲವೇ?

ಉತ್ತರ : ನಿಮ್ಮ ಧೋರಣೆ ತಪ್ಪು. ಒಬ್ಬ ವ್ಯಕ್ತಿ ತಪ್ಪು ಮಾಡಿದನೆಂಬ ಮಾತ್ರಕ್ಕೆ ಅವನ ಹಿಂದಿರುವ ಧರ್ಮವನ್ನೇ ನಿಂದನೆ ಮಾಡುವುದು ಮೂರ್ಖತನ. ಉಪಜೀವ್ಯ ವಿರೋಧವನ್ನು ತೋರಿಸಿ, ನಿಜವಾದ ಧರ್ಮ ಹಾಗೂ ಸತ್ಯಮಾರ್ಗವನ್ನು ತೋರಿಸಬೇಕು. ಇದಕ್ಕಾಗಿ ಕಟಿಬದ್ಧರಾಗಬೇಕು.

ಪ್ರಶ್ನೆ : ದತ್ತಾತ್ರೇಯ ಎಂದರೇನು?

ಉತ್ತರ : ಭಕ್ತರಿಗೋಸ್ಕರ ತನ್ನನ್ನೇ ಕೊಟ್ಟಿರುವನಾದ್ದರಿಂದ 'ದತ್ತ' ಎಂದು

ಪ್ರಸಿದ್ಧನಾಗಿರುವನು. ಅತ್ರಿಋಷಿಗಳ ಪ್ರಾರ್ಥನೆಯಂತೆ ಅವರ ಮಗನಾಗಿ ಅವತರಿಸಿರುವನಾದ್ದರಿಂದ 'ಆತ್ರೇಯ'ನಾಗಿರುವನು. ಎರಡನ್ನು ಸೇರಿಸಿ ಲೋಕದಲ್ಲಿ ಹಾಗೂ ಶಾಸ್ತ್ರದಲ್ಲಿ ಭಕ್ತಜನರು 'ದತ್ತಾತ್ರೇಯ' ಎಂದು ಕರೆದರು.

ಪ್ರಶ್ನೆ : ದತ್ತಾತ್ರೇಯ ಅವತಾರದ ಹಿನ್ನೆಲೆ ?

ಉತ್ತರ : 'ತೇನ ನಷ್ಟೇಷು ವೇದೇಷು ಪ್ರಕ್ರಿಯಾಸು ಮಖೇಷು ಚ' ಇತ್ಯಾದಿಯಾಗಿ ಹರಿವಂಶದಲ್ಲಿ ಹೇಳಿದಂತೆ ಆ ಕಾಲದಲ್ಲಿ ವೇದಗಳೆಲ್ಲವೂ ನಾಶವಾಗುವ ಸ್ಥಿತಿಗೆ ಬಂದಿದ್ದವು. ಸತ್ಯಕ್ಕೆ ಬೆಲೆಯಿಲ್ಲದೇ, ಸುಳ್ಳಿನ ರಾಜ್ಯಭಾರವೇ ನಡೆಯುತ್ತಿತ್ತು. ಇಂಥ ಸಂದರ್ಭದಲ್ಲಿ ಭಗವಂತನು ದತ್ತಾತ್ರೇಯನಾಗಿ ಅವತರಿಸಿದನು.

ಪ್ರಶ್ನೆ : ಅವತಾರ ನಡೆದ ಕಾಲ ?

ಉತ್ತರ : ಸ್ವಾಯಂಭುವ ಮನ್ವಂತರದ ಪ್ರಾರಂಭ. ಸುಮಾರು 200 ಕೋಟಿ ವರ್ಷಗಳ ಹಿಂದೆ. ಭಾಗವತದ ಪ್ರಕಾರ ಇದು ಭಗವಂತನ ಆರನೆಯ ಅವತಾರ.

ಪ್ರಶ್ನೆ : ಅತ್ರಿ-ಅನಸೂಯರಲ್ಲೇ ಏಕೆ ಅವತರಿಸಿದ ? ಹೇಗೆ ಅವತರಿಸಿದ ?

ಉತ್ತರ : ಸೃಷ್ಟಿ-ಸ್ಥಿತಿ-ಸಂಹಾರ ಕಾರಣಕರ್ತೃವನ್ನಾಗಿ ಅತ್ರಿಋಷಿ ಪರಮಾತ್ಮನನ್ನು ತಪಗೈಯುತ್ತಿದ್ದರು. ಇವರ ಹೆಂಡತಿಯಾದ ಅನಸೂಯೆಯೂ ಕೂಡ ವಿಷ್ಣುವಿನ ಜೊತೆ ಬ್ರಹ್ಮದೇವರನ್ನು ಹಾಗೂ ರುದ್ರದೇವರನ್ನೂ ಕೂಡ ಆರಾಧನೆ ಮಾಡುತ್ತಿದ್ದಳು. ಇವರೀರ್ವರ ತಪಸ್ಸಿಗೆ ಮೆಚ್ಚಿ, ತ್ರಿಮೂರ್ತಿಗಳು ಪ್ರತ್ಯಕ್ಷರಾದರು.

ಪ್ರಶ್ನೆ : ದತ್ತಾತ್ರೇಯನ ಕಥೆಯನ್ನು ತಿಳಿಸುವಿರಾ ?

ಉತ್ತರ : ಕರ್ದಮ ಋಷಿಗೆ ದೇವಹೂತಿಯಲ್ಲಿ ಒಂಬತ್ತು ಮಂದಿ ಹೆಣ್ಣುಮಕ್ಕಳು ಹುಟ್ಟಿದರು. ಅವರಲ್ಲಿ ಅನಸೂಯೆಯೂ ಒಬ್ಬಳು. ಅತ್ರಿ ಮುನಿಯು ಇವಳನ್ನು ಮದುವೆಯಾದನು.

ಉತ್ತಮ ಸಂತತಿಗಾಗಿ ಅತ್ರಿ ಋಷಿಯು ಅನಸೂಯೆಯ ಜೊತೆ ಭಗವಂತನನ್ನು ಕುರಿತು ತಪಸ್ಸು ಮಾಡಿದರು. ತನ್ನ ಹೃದಯಕಮಲದಲ್ಲಿ ಮಹಾವಿಷ್ಣುವನ್ನು ಸೃಷ್ಟಿ, ಸ್ಥಿತಿ ಸಂಹಾರಗಳ ಕಾರಣಕರ್ತೃವೆಂದು ಧ್ಯಾನಗೈದನು. ಇವನ ತಪಸ್ಸಿಗೆ ಶ್ರೀಹರಿಯು

ಪ್ರತ್ಯಕ್ಷನಾದನು. ಶ್ರೀಹರಿಯ ಜೊತೆ ಬ್ರಹ್ಮ,ರುದ್ರರೂ ಕೂಡ ಧಾವಿಸಿ ಬಂದರು. ತ್ರಿಮೂರ್ತಿಗಳನ್ನು ಕಂಡ ದಂಪತಿಗಳು ದಂಡಪ್ರಮಾಣವನ್ನು ಮಾಡಿದರು. ಋಷಭವಾಹನ, ಹಂಸವಾಹನ ಗರುಡವಾಹನರಾದ ತ್ರಿಮೂರ್ತಿಗಳು ಶೂಲ. ಕಮಂಡಲು, ಚಕ್ರ ಮೊದಲಾದ ಚಿಹ್ನೆಗಳನ್ನು ಧರಿಸಿ ಹೊಳಪಿನ ಕರುಣೆಯ ನೋಟ-ದಿಂದ ಅತ್ರಿ ಅನಸೂಯೆಯರನ್ನು ಅನುಗ್ರಹಿಸಿರು. 'ಸಂತಾನಪ್ರಾಪ್ತಿಯಾಗಲಿ' ಎಂಬ ವರ ನೀಡಿ ತಾವೇ ಅವತರಿಸಿದರು.

ಅತ್ರಿ-ಅನಸೂಯೆಯರಲ್ಲಿ ಅವತರಿಸಿದ ಮಹಾವಿಷ್ಣುವು 'ದತ್ತ' ಎಂಬ ರೂಪದಿಂದ, ಚತುರ್ಮುಖನು 'ಸೋಮ' ಎಂಬ ಆವೇಶ ರೂಪದಿಂದ, ರುದ್ರನು 'ದೂರ್ವಾಸ' ಎಂಬ ರೂಪದಿಂದ ಅವತರಿಸಿದನು. ಬ್ರಹ್ಮನಿಗೆ ಭೂಮಿಯಲ್ಲಿ ಸ್ವರೂಪ ಅವತಾರವಿಲ್ಲದ ಕಾರಣ ಆವೇಶ ಅವತಾರ.

ಈ ದತ್ತನು ಲೋಕದಲ್ಲಿ ದತ್ತಾತ್ರೇಯನೆಂದು ಖ್ಯಾತನಾಗಿರುವನು. ರಾಮ ಕೃಷ್ಣ ಮೊದಲಾದರೂಪಗಳಂತೆ ಇದು ಭಗವಂತನ ಶುದ್ಧವಾದ ರೂಪ. ಇವನು ಯೋಗಶಾಸ್ತ್ರಕ್ಕೆ ಪ್ರವರ್ತಕನಾಗಿ ಲೋಕದೆಲ್ಲೆಡೆ ಯೋಗಶಾಸ್ತ್ರವನ್ನು ಪ್ರಚಾರವಾಗು-ವಂತೆ ಮಾಡಿದನು. ಇಂದಿಗೂ ಕೂಡ ಎಷ್ಟೋಮಂದಿ ಧ್ಯಾನ ಮಾಡುವಾಗ ಭಗವಂತನ ದತ್ತಾತ್ರೇಯರೂಪವನ್ನೇ ತಮ್ಮ ಗುರುವೆಂದು ತಿಳಿದಿದ್ದಾರೆ.

ಇದೇ ದತ್ತಾತ್ರೇಯನು ಕಾರ್ತವೀರ್ಯಾರ್ಜುನನಿಗೆ ಯೋಗಶಾಸ್ತ್ರವನ್ನು ಉಪದೇಶ ಮಾಡಿ ತತ್ವಜ್ಞಾನಿಯನ್ನಾಗಿ ಮಾಡಿದನು.

ದತ್ತಪಂಥದವರ ಪ್ರಶ್ನೆ : ತ್ರಿಮೂರ್ತಿಗಳ ಸಂಗಮವೇ ದತ್ತಾತ್ರೇಯ. ಆದ್ದ-ರಿಂದಲೇ ಮೂರು ಮುಖಗಳು. ಆರು ತೋಳುಗಳು. ಬಲಗಡೆಯ ಮೂರು ತೋಳುಗಳಲ್ಲಿ ತ್ರಿಶೂಲ, ಜಪಸರ, ಪದ್ಮವನ್ನು ಪಿಡಿದು ಎಡಗಡೆಯ ಮೂರು ತೋಳುಗಳಲ್ಲಿ ಚಕ್ರ , ಶಂಖ, ಕಮಂಡಲುಗಳನ್ನು ಪಿಡಿದಿರುವನು. ಇದು ದತ್ತಾ-ತ್ರೇಯನ ಸ್ವರೂಪ ಅಲ್ಲವೇ?

ಉತ್ತರ : ಇದಕ್ಕೆ ಯಾವುದೇ ಆಧಾರವಿಲ್ಲ. ಯಾವ ಶಾಸ್ತ್ರದಲ್ಲಿಯೂ ದತ್ತಾ-ತ್ರೇಯನನ್ನು ಹೀಗೆ ವರ್ಣನೆ ಮಾಡಿಲ್ಲ.

ಪ್ರಶ್ನೆ : ವಿಷ್ಣುವನ್ನು ಮಾತ್ರ ತಪಗೈದಾಗ ತ್ರಿಮೂರ್ತಿಗಳು ಪ್ರತ್ಯಕ್ಷರಾದರು. ಆದ್ದರಿಂದ ಮೂವರಿಗೂ ಐಕ್ಯವು ಸಿದ್ಧವಾಗುತ್ತದಲ್ಲವೆ?

ಉತ್ತರ : ಭಾಗವತದ ಚತುರ್ಥಸ್ಕಂಧ ನೋಡಿದಾಗ ಮೇಲ್ನೋಟಕ್ಕೆ ಐಕ್ಯವೇ ಕಾಣುತ್ತದೆ. ಆದರೆ ಬ್ರಹ್ಮರುದ್ರರೊಳಗಿನ ವಿಷ್ಣುರೂಪಗಳು ಮತ್ತು ಪ್ರತ್ಯೇಕವಾಗಿರುವ ವಿಷ್ಣುರೂಪ ಹೀಗೆ ಮೂರು ರೂಪಗಳನ್ನು ಮುನಿಯು ಆರಾಧನೆ ಮಾಡಿದ್ದರಿಂದ, ಈ ಮೂರು ರೂಪಗಳಲ್ಲಿ ಭೇದವಿಲ್ಲವೆಂದು ಅಭಿಪ್ರಾಯ.

ಪ್ರಶ್ನೆ : ಅನಸೂಯೆಯ ಬಳಿ ಬ್ರಹ್ಮ, ವಿಷ್ಣು ಮಹೇಶ್ವರರು ಬಂದು ನೀನು ನಗ್ನಳಾಗಿ ನಮಗೆ ಆಹಾರ ತಿನಿಸಬೇಕೆಂದು ಹೇಳುತ್ತಾರೆ. ಆಗ ಅನಸೂಯೆಯು ಕಮಂಡಲುವಿನಲ್ಲಿರುವ ನೀರನ್ನು ಮೂವರಿಗೂ ಪ್ರೋಕ್ಷಣೆ ಮಾಡಿದಳು. ಮೂವರೂ ಕೂಡ ಶಿಶುರೂಪವನ್ನು ತಾಳಿದಾಗ ಆಹಾರವನ್ನು ತಿನ್ನಿಸಿದಳು. ಈ ಕಥೆ ಲೋಕದಲ್ಲಿ ಬಹಳ ಪ್ರಸಿದ್ಧವಾಗಿದೆ, ಇದೇ ದತ್ತಾತ್ರೇಯ ಅವತಾರ ಅಲ್ಲವೆ?

ಉತ್ತರ : ಇದು ಕೇವಲ ಕಪೋಲಕಲ್ಪಿತ ಅಸಭ್ಯ ಕಥೆ.

ಪ್ರಶ್ನೆ : ದತ್ತಪಂಥದವರಲ್ಲಿ ಅನೇಕರು ವಾಮಾಚಾರ ಮೊದಲಾದವುಗಳನ್ನು ಮಾಡುತ್ತಾರೆ. ಇದಕ್ಕೇನು ಕಾರಣ?

ಉತ್ತರ : ಇದಕ್ಕೊಂದು ಸ್ವಾರಸ್ಯ ಹಿನ್ನೆಲೆಯಿದೆ - ದತ್ತಾತ್ರೇಯನಾಗಿ ಅವತಾರ ಮಾಡಿ, ಎಲ್ಲೆಡೆ ತತ್ವಜ್ಞಾನವನ್ನು ಪ್ರಚಾರ ಮಾಡಿದಾಗ, ಲಕ್ಷಗಟ್ಟಳೆ ಜನರು ಇವನ ಅನುಯಾಯಿಗಳಾದರು. ಇವನ ಶಿಷ್ಯರಾದರು. ಆಗ ಭಗವಂತನಿಗೆ ಯಾರ ಸಂಪರ್ಕ-ವೂ ಬೇಡ ಎನಿಸಿತು. ಅದಕ್ಕಾಗಿ ಸುರಾಪಾನ ಮಾಡಿದನು. ಹುಚ್ಚರಂತೆ ಬೀದಿ-ಬೀದಿಗಳಲ್ಲಿ ತಿರುಗಿದನು. ಇಷ್ಟಾದರೂ ಜನರು ದೂರ ಹೋಗದಿದ್ದಾಗ, ಸ್ತ್ರೀಸಂಗ ಮಾಡಿದನು. ಆಗ ಜನರೆಲ್ಲರೂ ದೂರ ಸರಿದರು. ಕೆಲವು ಅಜ್ಞಾನಿಗಳು ಮಾತ್ರ ಇದೇ ಧರ್ಮವೆಂದರಿತು ಸುರಾಪಾನಾದಿಗಳನ್ನು ಮುಂದುವರೆಸಿದರು. ಅದರಿಂದಲೇ ವಾಮಾಚಾರವೂ ಕೂಡ ಬೆಳೆದು ಬಂದಿತು. ಆದರೆ ಭಗವಂತ ವಾಮಚಾರ ಪ್ರಾರಂಭಿಸಿದ ಎನ್ನಲು ಯಾವುದೇ ಆಧಾರ ಇಲ್ಲ.

ಪ್ರಶ್ನೆ : ಕಾರ್ತವೀರ್ಯಾರ್ಜುನ, ಪ್ರಹ್ಲಾದ, ಯದು, ಅಲರ್ಕ ಮೊದಲಾದ

ಚಕ್ರವರ್ತಿಗಳು ಇವನ ಶಿಷ್ಯರೆಂದು ಕೇಳಿರುವೆವು. ಸುರಾಪಾನಾದಿಗಳಲ್ಲಿ ರತನಾದ ದತ್ತಾತ್ರೇಯನ ಬಳಿ ಇವರೆಲ್ಲರೂ ಹೇಗೆ ಶಿಷ್ಯತ್ವವನ್ನು ವಹಿಸಿದರು ?

ಉತ್ತರ : ಹೌದು! ದತ್ತಾತ್ರೇಯನು ಸಾಕ್ಷಾತ್ ಭಗವಂತನೆಂಬ ಅರಿವು ಇವರಿಗಿತ್ತು. ಕಾರ್ತವೀರ್ಯಾರ್ಜುನ ಹತ್ತುಸಾವಿರ ವರ್ಷಗಳ ಕಾಲ ದತ್ತಾತ್ರೇಯ-ನನ್ನು ಆರಾಧನೆ ಮಾಡಿ, ಯೋಗಶಾಸ್ತ್ರವನ್ನು ಉಪದೇಶ ಪಡೆದುಕೊಂಡು ದೊಡ್ಡ ಯೋಗಿಯಾದನು.

ಪ್ರಶ್ನೆ : 'ಅಲರ್ಕ' ಎಂಬ ಪದಕ್ಕೆ 'ಹುಚ್ಚುನಾಯಿ' ಎಂದರ್ಥವಲ್ಲವೇ? ಈ ರಾಜನಿಗೇಕೆ ಈ ಹೆಸರು ಬಂದಿತ್ತು ? ಇವನೇಕೆ ದತ್ತಾತ್ರೇಯನ ಶಿಷ್ಯನಾದನು?

ಉತ್ತರ : ಸಂಸಾರದಲ್ಲಿ ಪ್ರತಿಯೊಬ್ಬರೂ ಹುಚ್ಚುನಾಯಿಯಂತೆ ಅಲೆಯು-ತ್ತಿದ್ದಾರೆ. ಇದನ್ನು ತಿಳಿಸಲೋಸುಗ ಅಲರ್ಕನ ತಾಯಿ ಹಾಗೇ ಹೆಸರಿಟ್ಟಿದ್ದಳು. ಇವನೂ ಸಹ ದತ್ತಾತ್ರೇಯನಿಂದ ಉಪದೇಶ ಪಡೆದು ದೊಡ್ಡ ಯೋಗಿಯಾದನು.

ಪ್ರಶ್ನೆ : ಮಧ್ವಾಚಾರ್ಯರು ದತ್ತಾತ್ರೇಯನ ಬಗ್ಗೆ ಹಾಗೂ ದತ್ತಾತ್ರೇಯಯೋಗದ ಬಗ್ಗೆ ಹೇಳಿದ್ದು ಉಲ್ಲೇಖವಿದೆಯೇ?

ಉತ್ತರ : ಭಾಗವತ ತಾತ್ಪರ್ಯದಲ್ಲಿ ದತ್ತಾತ್ರೇಯ ಅವತಾರದ ಬಗ್ಗೆ ಹಿಂದೆ ತಿಳಿಸಿದಂತೆ ನಿಖರವಾಗಿ ಹೇಳಿದ್ದಾರೆ. ಮತ್ತು ಗೀತಾತಾತ್ಪರ್ಯ, ಭಾಗವತ ತಾತ್ಪರ್ಯ ಮೊದಲಾದ ಕಡೆ ದತ್ತಾತ್ರೇಯಯೋಗವನ್ನು ಹಾಗೂ ದತ್ತಾತ್ರೇಯವಚನವನ್ನು ಉಲ್ಲೇಖಿಸುತ್ತಾರೆ. ತಾತ್ಪರ್ಯನಿರ್ಣಯದಲ್ಲಿಯೂ ಸ್ಪಷ್ಟ ಮಾಹಿತಿ ಇದೆ. ತಂತ್ರಸಾರ ಸಂಗ್ರಹದಲ್ಲಿ ದತ್ತಾತ್ರೇಯ ಮಂತ್ರ ಉಪದೇಶಿಸಿರುವರು.

ಪ್ರಶ್ನೆ : ದತ್ತಾತ್ರೇಯ ಅವತಾರದ ಬಗ್ಗೆ ನಾವು ತಿಳಿದಿರುವುದಕ್ಕಿಂತ ಬಹಳ ವಿಭಿನ್ನವಾದ ಮತ್ತು ಅಪೂರ್ವವಾದ ವಿಷಯಗಳನ್ನು ತಿಳಿಸಿದಿರಿ. ಇನ್ನೂ ಹೆಚ್ಚು ತಿಳಿಯಬೇಕೆಂಬ ಕುತೂಹಲವಿದೆ. ಏನು ಮಾಡಬೇಕು ?

ಉತ್ತರ : ಭಾಗವತ, ಹರಿವಂಶ, ಮಾರ್ಕಂಡೇಯ ಪುರಾಣಗಳನ್ನೊಮ್ಮೆ ಅಧ್ಯಯನ ಮಾಡಿರಿ.

ದತ್ತಾತ್ರೇಯ ಅವತಾರದ ಬಗ್ಗೆ ಇರುವಷ್ಟು ಗೊಂದಲ ಬೇರೆ ಯಾವ ಅವತಾರದಲ್ಲಿಯೂ ಇಲ್ಲ. ಸತ್ಯಕ್ಕೆ ಒಂದೇ ಮುಖ. ಎರಡು ಮುಖವಿಲ್ಲ. ಮೂರು

ಮುಖವಂತೂ ದೂರತೋಪಾಸ್ತ. ಇದನ್ನು ಅರಿಯದವರು ಒಂದೇ ಕೊರಳಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರ ಮೂರು ಮುಖಗಳನ್ನು ಜೋಡಿಸಿದರು. ಇಷ್ಟಕ್ಕೆ ನಿಲ್ಲಿಸದೇ ಇನ್ನೂ ಏನೇನೋ ಕಲ್ಪಿಸಿದರು. ಪ್ರಮಾಣವಿಲ್ಲದ ವಿಚಾರಗಳೇ ಎಲ್ಲೆಡೆ ತುಂಬಿರುವಾಗ ಪ್ರಮಾಣಬದ್ಧ ವಿಚಾರಗಳಿಗೆ ಬೆಲೆ ಸಿಗುವುದು ಬಹಳ ಕಠಿಣ. ಇದನ್ನು ಅರ್ಥಮಾಡಿಕೊಳ್ಳಲು ಭಗವಂತನ ದತ್ತಾತ್ರೇಯ ಅವತಾರವನ್ನು ತಿಳಿಯಬೇಕು. ಆಮೂಲಾಗ್ರವಾಗಿ ವಿಶ್ಲೇಷಣೆ ಮಾಡಬೇಕು. ದಾರಿ ತೋರಿಸುವ ನೂರು ಮಂದಿಯಲ್ಲಿ ತೊಂಬತೊಂಬತ್ತು ಮಂದಿ ತಪ್ಪು ದಾರಿಯನ್ನೇ ಹೇಳುವವರು. ಸತ್ಯವಾದ ಋಜುವಾದ ದಾರಿ ತೋರಿಸುವ ವ್ಯಕ್ತಿ ಒಬ್ಬನೇ ಆಗಿರುತ್ತಾನೆ. ಇವನ ಪರಿಚಯ ಮಾಡಿಸಿ ಜೀವನ ಸಾರ್ಥಕವಾಗುವಂತೆ ಆ ದತ್ತಾತ್ರೇಯನೇ ನಮ್ಮನ್ನು ಹರಸಲಿ. ಮೋಕ್ಷಕ್ಕೆ ತೆರಳಲು ಧ್ಯಾನಯೋಗವೇ ಮಾರ್ಗ. ಈ ಮಾರ್ಗದಲ್ಲಿ ಕೈಹಿಡಿದು ನಮ್ಮನ್ನು ಕರೆದೊಯ್ಯಲಿ ಎಂದು ಆ ದತ್ತಾತ್ರೇಯನನ್ನೇ ಭಕ್ತಿಯಿಂದ ಒಮ್ಮೆ ಪ್ರಾರ್ಥಿಸೋಣ.

ಪ್ರಶ್ನೆ : ದತ್ತಾತ್ರೇಯ ಅವತಾರದ ಸಂದೇಶವೇನು ?

ಉತ್ತರ : ನಾವು ಅತ್ರಿಯಾಗಿ ಅನಸೂಯೆಯ ಕೈ ಹಿಡಿದಾಗ ದೇವರು ನಮ್ಮ ಮಗನಾಗುವನು. ಕಾಮ, ಕ್ರೋಧ, ಲೋಭ ಇವುಗಳು 'ತ್ರಿ' ಎನಿಸುತ್ತವೆ. ಈ ಮೂರನ್ನು ಬಿಟ್ಟವನೇ ಅತ್ರಿ. ಕೇವಲ ಅತ್ರಿಯಾದರೂ ಸಾಲದು ಅಸೂಯೆಯನ್ನು ಬಿಡಬೇಕು. ಆಗ ಅತ್ರಿಯಾದ ನಾವು ಅನಸೂಯೆಯ ಕೈ ಹಿಡಿದಂತಾಗುತ್ತದೆ. ಕಾಮ, ಕ್ರೋಧ, ಲೋಭ ಮೂರನ್ನು ಬಿಟ್ಟು ಅಸೂಯೆಯಿಂದ ರಹಿತರಾದ ಮಾತ್ರಕ್ಕೆ ದೇವರು ಒಲಿಯುವುದಿಲ್ಲ. ಸಮಗ್ರ ಜಗತ್ತನ್ನೇ ತೊರೆದು ಭಗವಂತನನ್ನೇ ಅನನ್ಯವಾಗಿ ತಪಗೈಯಬೇಕು. ಆಗ ದೇವರು ಭಕ್ತಿಪಾಶಕ್ಕೆ ಕಟ್ಟುಬಿದ್ದು ತನ್ನನ್ನೇ ಕೊಟ್ಟುಬಿಡುವನು. ಹೀಗೆ ಅತ್ರಿ ಅನಸೂಯೆಯರಲ್ಲಿ ಮಾಡಿದ ಭಗವಂತನ 'ದತ್ತ' ಎಂಬ ಅವತಾರದ ಸಂದೇಶವನ್ನು ಅರಿಯಬೇಕು.

ಪ್ರಶ್ನೆ : ದತ್ತನನ್ನು ಹೇಗೆ ಧ್ಯಾನ ಮಾಡಬೇಕು ?

ಉತ್ತರ : ಪ್ರೋದ್ಯದ್ದಿವಾಕರ-ಸಮಾನ-ತನುಂ ಸಹಸ್ರ- ಸೂರ್ಯೋರು-ದೀಧಿತಿಭಿರಾಪ್ತ-ಸಮಸ್ತ-ಲೋಕಮ್ । ಜ್ಞಾನಾಭಯಾಂಕಿತ-ಕರಂ ಕಪಿಲಂ ಚ ದತ್ತಂ

ಧ್ಯಾಯೇದಜಾದಿಸಮಿತಿಂ ಪ್ರತಿ ಬೋಧಯಂತಮ್ ॥53॥ ಉದಿಸುವ ಸೂರ್ಯ-ನಂತೆ ಹೊಂಬಣ್ಣದ ಮೈಯುಳ್ಳ, ಸಾವಿರಾರು ಸೂರ್ಯರಿಗಿಂತಲೂ ಮಿಗಿಲಾದ ಕಿರಣಗಳ ಕಾಂತಿಯಿಂದ ಎಲ್ಲ ಲೋಕಗಳಲ್ಲಿ ತುಂಬಿರುವ, ಬಲಗೈಯಲ್ಲಿ ಜ್ಞಾನಮುದ್ರೆಯನ್ನು ಎಡಗೈಯಲ್ಲಿ ಅಭಯಮುದ್ರೆಯನ್ನು ಧರಿಸಿರುವ, ಬ್ರಹ್ಮಾದಿದೇವತೆಗಳ ಸಮೂಹಕ್ಕೆ ತತ್ವವನ್ನು ಬೋಧಿಸುತ್ತಿರುವ ದತ್ತಾತ್ರೇಯನನ್ನು ಧ್ಯಾನಿಸಬೇಕು.

**ಶ್ರೀಲಕ್ಷ್ಮೀಧರತೀರ್ಥರು** ಮಾರ್ಗಶಿರ ಶುಕ್ಲ ಪೂರ್ಣಿಮಾ (ಕ್ರಿ.ಶ. 1324-1334) **ಗೋವರ್ಧನಧರಂ ದೇವಂ ಗೋಪೀನಾಥಂ ಮನೋಹರಂ। ಧ್ಯಾಯಂತಂ ಸತತಂ ನೌಮಿ ಲಕ್ಷ್ಮೀಧರ ಯತೀಶ್ವರಂ॥**

**ಶ್ರೀ ಸುಗುಣೇಂದ್ರತೀರ್ಥರು (ರಾಯರ ಮಠ) – ಮಾರ್ಗಶೀರ್ಷ ಶುದ್ಧ-ಪೂರ್ಣಿಮಾ - ಚಿತ್ತೂರು ಸುಧರ್ಮೇಂದ್ರಕರಾಬ್ಜೋತ್ಥಂ ಸುವಿದ್ವನ್ಮಣಿರಾಜಿತಂ। ಸುಮೃಷ್ಟಾನ್ನಪ್ರದಾತಾರಂ ಸುಗುಣೇಂದ್ರಗುರುಂ ಭಜೇ॥**

## ಮಾರ್ಗಶಿರ॥ ಬಹುಳ॥ ಪಂಚಮೀ

**ಶ್ರೀ ಅಕ್ಷೋಭ್ಯತೀರ್ಥರು** – ಮಾರ್ಗಶೀರ್ಷ ಕೃಷ್ಣ ಪಂಚಮೀ – ಮಲಖೇಡ

**ಶ್ರೀ ಅಕ್ಷೋಭ್ಯತೀರ್ಥರ ಚರಿತ್ರೆ**

ಅಕ್ಷೋಭ್ಯ ತೀರ್ಥಗುರು ಸಾರ್ವಭೌಮರು ಎಮ್ಮ। ರಕ್ಷಿಪ ಕೃಪಾನಿಧಿಗೆ ಶರಣು ಶರಣೆಂಬೆ । ಪಕ್ಷೀಶ ವಾಹನ್ನ ಲಕ್ಷ್ಮೀಶ ಕಮಲಾಕ್ಷ । ವಿಷ್ಣು ಆತ್ಮಗೆ ಪ್ರಿಯ ಸತ್ತತ್ವವಾದಿ ॥ಪ॥ ಅಖಿಳಗುಣ ಆಧಾರ ನಿರ್ದೋಷ ಶ್ರೀರಮಣ । ಜಗದಾದಿ ಮೂಲಗುರು ಅಗುರು ಶ್ರೀ ಹಂಸ । ವಾಗೀಶ ಸನಕಾದಿ ದೂರ್ವಾಸಾದಿಗಳ । ಪೀಳಿಗೆ ಗುರುಗಳಿಗೆ ಶರಣು ಶರಣೆಂಬೆ ॥1॥ ಅಚ್ಯುತ ಪ್ರೇಕ್ಷಾಖ್ಯ ಪುರುಷೋ-ತ್ತಮತೀರ್ಥ । ಅಚ್ಯುತ ಪ್ರೇಕ್ಷರ ಶಿಷ್ಯರೆಂದೆನಿಪ । ಅಚ್ಯುತನ ಮುಖ್ಯಾಧಿಷ್ಠಾನ ಶ್ರೀಮಧ್ವ । ಖಚರೇಂದ್ರ ಫಣಿಪಮೃಡ ಅಮರೇಂದ್ರವಂದ್ಯ ॥2॥ ಶ್ರೀ ಮಧ್ವ ಆನಂದತೀರ್ಥ ಕರ ಅಬ್ಜಜರು । ಪದ್ಮನಾಭನೃಹರಿ ಮಾಧವಾಕ್ಷೋಭ್ಯ । ಈ ಮಹಾಗುರುಗಳು ಸರ್ವರಿಗು ಆನಮಿಪೆ । ಸುಮನಸ ಶ್ರೇಷ್ಠರು ಮಹಿಯಲಿ

ಪುಟ್ಟಿಹರು ||3.| ಸಾಧು ವೈದಿಕ ವೇದಾಂತ ಸತ್ತತ್ವ ಮತ | ಮಧ್ವ ಮತವೇ ಅನ್ಯ ಯಾವುವೂ ಅಲ್ಲ | ಎಂದು ನಿಶ್ಚೈಸಿ ಶೋಭನಭಟ್ಟಸ್ವಾಮಿ | ಶಾಸ್ತ್ರಿ ಮೊದಲಾ-ದವರು ಮಧ್ವಗೆರಗಿದರು ||4|| ಸೂರಿವರ ಶೋಭನ ಭಟ್ಟಾದಿಗಳಂತೆ | ಸಾರಾಸಾರ ವಿವೇಕಿ ಗೋವಿಂದ | ಶಾಸ್ತ್ರಿಯು ಮಹಾ ದೊಡ್ಡ ಪಂಡಿತರು ತಾನೂ | ಎರಗಿ ಶರಣಾದರು ಮಧ್ವರಾಯರಲಿ ||5|| ಇಂಥಾ ಮಹಾತ್ಮರ ಇನ್ನೂ ಬಹು ಸಜ್ಜರನ | ಉದ್ಧರಿಸಲಿಕ್ಕೇವೆ ಹರಿ ಆಜ್ಞೆಯಿಂದ | ಈ ಧರೆಯಲ್ಲಿ ತೋರಿಹ ಮಧ್ವರಾಯರ | ಶಾಸ್ತ್ರಿ ಬೇಡಿದರು ಸಂನ್ಯಾಸ ಕೊಡು ಎಂದು ||6|| ಸಚ್ಛಾಸ್ತ್ರ ಪ್ರವಚನ ಪಟು ವಿದ್ವನ್ಮಣಿಯು | ನಿಶ್ಚಲ ಭಕ್ತಿಮಾನ್ ಸವೈರಾಗ್ಯ ವಿಪ್ರ | ಅಚಲ ಸತ್ತತ್ವನಿಶ್ಚಯ ಜ್ಞಾನಿ ಶಾಸ್ತ್ರಿಗೆ | ಅಕ್ಷೋಭ್ಯ ನಾಮವ ಇತ್ತರಾಚಾರ್ಯ ||7|| ಪ್ರಣವ ಮೂಲಾದಿ ಸುಮಂತ್ರ ಉಪದೇಶಿಸಿ | ತನ್ನ ಮಠದಲ್ಲಿ ಅಕ್ಷೋಭ್ಯ-ತೀರ್ಥರಿಗೆ | ವನರುಹನಾಭದಿಂದ ನಾಲ್ಕನೇ ಸ್ಥಾನವ | ಘನದಯದಿ ಇತ್ತರು ಆನಂದಮುನಿಯು ||8|| ಬದರಿಗೆ ಮೂರನೇ ಬಾರಿ ತೆರಳುವ ಪೂರ್ವ | ಮಧ್ವ ಮುನಿ ನೇಮಿಸಿದ ಕ್ರಮದಿಂದಲೇವೆ | ಪದ್ಮನಾಭ ನರಹರಿ ಮಾಧವ ತೀರ್ಥರು | ವೇದಾಂತ ಪೀಠದಲಿ ಕುಳಿತುಜ್ವಲಿಸಿದರು ||9|| ಪದ್ಮನಾಭತೀರ್ಥರ ಪಾದಪದ್ಮ-ಗಳಿಗೆ | ಸದಾ ನಮೋ ನಮೋ ಎಂಬೆ ಇವರ ಪೀಳಿಗೆಯ | ವಿದ್ಯಾಕುಶಲರು ಸೂರಿಗಳ ಚರಣಕ್ಕೆ | ಸಂತೈಪರೆಮ್ಮ ಸದಾ ನಮೋ ಸರ್ವದಾ ||10|| ನರಹರಿ-ತೀರ್ಥರು ಚರಣ ಸರಸೀರುಹದಿ | ಶರಣಾದೆ ಕಾಯ್ವರು ಈ ಮಹಾನ್ ಇಹರು | ವರಾಹತನಯಾ ಸರಿದ್ವರಾಕ್ಷೇತ್ರದಲಿ | ಶ್ರೀ ವೃಂದಾನವದೊಳು ಹರಿಯ ಧ್ಯಾನಿಸುತ ||11|| ಮಾಧವತೀರ್ಥರ ಪಾದಪದ್ಮಗಳಿಗೆ | ಸದಾನಮೋ ನಮೋ ಎಂಬೆ ಇವರ ಪೀಳಿಗೆಯ | ಯತಿಗಳೂ ಭಕ್ತಿಮಾನ್ ಜ್ಞಾನಿಗಳ ಚರಣಕ್ಕೆ | ಆದರದಿ ನಮಿಸುವೆ ಸದಾ ಪೊರೆವರೆಮ್ಮ ||12|| ಸುಲಭರು ಸುಜನರಿಗೆ ಶರಣರ ಸಲಹುವರು | ಮಾಲೋಲನೊಲಿದಿಹ ಅಕ್ಷೋಭ್ಯತೀರ್ಥ | ಬಲು ಖಿನ್ನ ಬ್ರಾಹ್ಮಣನು ಬ್ರಹ್ಮ ಹತ್ಯ ಮಾಡಿದವ | ಕಾಲಲ್ಲಿ ಬಿದ್ದು ಶರಣಾದ ಗುರುಗಳಲಿ ||13|| ಗುರು ದಯಾನಿಧಿ ಅಕ್ಷೋಭ್ಯತೀರ್ಥರು ಆಗ | ಶರನಾದ ಪುರುಷನ ಪಶ್ಚಾತ್ತಾಪ | ಖರೆಯೇ ಎಂಬುವುದನ್ನು ಜನರಿಗೆ ತಿಳಿಸಲು | ಏರಿ ಮರ ನದಿಯಲಿ ಬೀಳೆ ಹೇಳಿದರು ||14|| ಎನ್ನಯ ಮಹಾಪಾಪ ಕಳೆಯುವ ಗುರು-

ಗಳು । ಏನು ಹೇಳಿದರೂ ಮಾಡುವೆ ತಾನೆಂದು । ಸನ್ನಮಿಸಿ ಗುರುಗಳಿಗೆ ನದಿ ಬದಿ ಮರಹತ್ತೆ। ದೀನ ರಕ್ಷಕ ಗುರು ಇಳಿಯೆ ಹೇಳಿದರು ॥15॥ ವೃಕ್ಷದಿಂದಿಳಿದ ಆ ವಿಪ್ರಘಾತುಕನ ಮೇಲೆ । ಅಕ್ಷೋಭ್ಯತೀರ್ಥರು ಶಂಖತೀರ್ಥವನ್ನ । ಪ್ರೋಕ್ಷಿಸಿ ಆತನ ಮಹಾ ಬ್ರಹ್ಮಹತ್ಯಾ । ದೋಷ ಕಳೆದರು ಪಂಕ್ತಿಯಲಿ ಸೇರಿಸಿದರು ॥16॥ ಶಂಖತೀರ್ಥದ ಮಹಿಮೆ ಅಲ್ಲಿದ್ದ ಜನರಿಗೆ। ಶಂಕೆಯಲ್ಲದೆ ತಿಳಿಸಿ ಬಂದು ಬೇಡು -ವವರ । ಡೊಂಕು ಕೊರತೆಗಳೆಲ್ಲ ನೀಗಿಸಿ ಯೋಗ್ಯದಿ । ಶ್ರೀಕಾಂತನಲಿ ಭಕ್ತಿ ಪುಟ್ಟಿಸಿಹರು ॥17॥ ತಮ್ಮಲ್ಲಿ ಬೇಡುವ ಅಧಿಕಾರಿಯೋಗ್ಯರಿಗೆ। ಶ್ರೀಮಧ್ವಶಾಸ್ತ್ರದ ದಾರ್ಢ್ಯ ಜ್ಞಾನ । ಶ್ರೀ ಮನೋಹರನನ್ನ ಅಪರೋಕ್ಷೀಕರಿಸುವ । ಸುಮಹಾ ಉಪಾಯವ ಅರುಹಿಹರು ದಯದಿ ॥18॥ ಮಧ್ವಸಿದ್ಧಾಂತ ಸ್ಥಾಪನ ಮಾತ್ರ-ವಲ್ಲದೇ । ವೇದ ವಂಚಕ ದುರ್ಮತಗಳ ಖಂಡನವ । ಪೋದಕಡೆ ಮಾಡುತ್ತಾ ದಿಗ್ವಿಜಯ ಜಯಶೀಲ- । ರೆಂದು ಮರ್ಯಾದೆಗಳ ಕೊಂಡಿಹರು ಜಗದಿ ॥19॥ ಅದ್ವೈತವಾದಿಯು ಶಾಂಕರ ಮಠಾಧೀಶ । ವಿದ್ಯಾರಣ್ಯರು ಪ್ರಸಿದ್ಧ ಪಂಡಿತರು । ಎದುರು ನಿಂತರು ಅಕ್ಷೋಭ್ಯ ತೀರ್ಥರ ಮುಂದೆ। ವಾದಿಸಿದರು ಮುಳುಬಾಗಿಲು ಸಮೀಪ ॥20॥ ಶ್ವೇತಕೇತು ಉದ್ದಾಲಕರ ಸಂವಾದ । ತತ್ವಮಸಿ ವಾಕ್ಯವೇ ವಾದದ ವಿಷಯ । ವೇದಾಂತ ದೇಶಿಕರು ರಾಮಾನುಜೀಯ ಯತಿಯ । ಅಧ್ಯಕ್ಷತೆಯಲ್ಲಿ ಸಭೆಯು ಕೂಡಿತ್ತು ॥21॥ ಛಾಂದೋಗ್ಯ ಉಪನಿಷತ್ತಲ್ಲಿರುವ ವಾಕ್ಯವು। ಸ ಆತ್ಮಾ ತತ್ವಮಸಿ ಎಂಬುವಂಥಾದ್ದು। ಭೇದ ಬೋಧಕವೋ ಅಭೇದ ಬೋಧಕವೋ । ಎಂದು ವಾದವು ಆ ಈರ್ವರಲ್ಲಿ ॥22॥ ಅತ್ಮ ಶಬ್ದಿತ ನಿಯಾ-ಮಕಗು ನಿಯಮ್ಯ ಜೀವನಿಗೂ । ಭೇದವೇ ಬೋಧಿಸುವುದು ಆ ವಾಕ್ಯವೆಂದು । ಸಿದ್ಧಾಂತ ಬಹುರೀತಿ ಸ್ಥಾಪಿಸಿದರು ಅಕ್ಷೋಭ್ಯರು । ಸೋತಿತು ವಿದ್ಯಾರಣ್ಯರ ಐಕ್ಯವಾದ ॥23॥ ಅಸಿನಾತತ್ವ ಮಸಿನಾ ಪರಜೀವಪ್ರಭೇದಿನಾ । ವಿದ್ಯಾರಣ್ಯ ಮಹಾರಣ್ಯಂ ಅಕ್ಷೋಭ್ಯಮುನಿರಚ್ಛಿನತ್। ಎಂದು ಬರೆದರು ತಮ್ಮ ಗ್ರಂಥದಲ್ಲಿ। ಮಧ್ಯಸ್ಥ ವೇದಾಂತದೇಶಿಕ ಸ್ವಾಮಿಗಳು ॥24॥ ಇಳೆಯ ಸಜ್ಜನರಿಗೆ ಜಯತೀರ್ಥ-ರನಿತ್ತ। ಮಾಲೋಲಪ್ರಿಯ ಅಕ್ಷೋಭ್ಯರ ಮಹಿಮೆ। ಅಲ್ಪಮತಿ ನಾನರಿಯೆ ಇಲ್ಲಿ ಒಂದೋ ಎರಡೋ । ಸ್ಥಾಲೀ ಪುಲಾಕ ನ್ಯಾಯದಲಿ ಪೇಳಿಹುದು ॥25॥ ನದಿ ದಡದಿ ಕುಳಿತಿದ್ದ ಅಕ್ಷೋಭ್ಯತೀರ್ಥರು । ಎದುರಾಗಿ ನದಿಯಲ್ಲಿ ಆಚೆ ದಡ-

ದಿಂದ । ಕುದುರೆ ಸವಾರನು ವರ್ಚಸ್ವಿ ಯುವಕನು । ಬೆದರದೆ ಪ್ರವಾಹದಲಿ ಬರುವುದು ಕಂಡರು ॥26.। ಕುದುರೆ ಮೇಲ್ ಆಸೀನನಾಗಿದ್ದ ಯುವಕನು । ಕ್ಷುತ್‌ತೃಷಿ ಶಮನಕ್ಕೆ ಯತ್ನ ಮಾಡುತ್ತಾ । ಉದಕವ ಕೈಯಿಂದ ತುಂಬಿಕೊಳ್ಳ-ದಲೇ । ಎತ್ತುಗಳು ಕುಡಿವಂತೆ ಬಾಯಿ ಹಚ್ಚಿದನು ॥27॥ ಮಾಧವ ಮಧ್ವರು ಮೊದಲೇ ಸೂಚಿಸಿದಂತೆ । ಇಂದು ಆ ಕುರುಹರಿತು ಅಕ್ಷೋಭ್ಯರು । ಇದು ಏನು ಪಶುವಂತೆ ಎಂದು ಧ್ವನಿಗೂಡಲು । ಹಿಂದಿನ ಜನ್ಮ ಯುವಕಗೆ ನೆನಪು ಬಂತು ॥28॥ ಪಶು ಶಬ್ದ ಗುರುಮುಖದಿಂಬಂದಲಾಕ್ಷಣ ಪೂರ್ವ । ಸಂಸ್ಕಾರಪ್ರತಿಭೆಯು ಉದಯವಾಯ್ತು । ದಶಪ್ರಮತಿಗಳ ತಾನು ಎತ್ತಾಗಿ ಸೇವಿಸಿದ್ದು । ಹಸನಾಗಿ ಟೀಕೆ ಬರೆಯಲಾಜ್ಞೆ ಕೊಂಡದ್ದು ॥29॥ ನಗಾರಿಸಮ ಬಲಿಯುವಕನು ಪ್ರವಾಹದ । ವೇಗ ಲೆಕ್ಕಿಸದಲೇ ದಡಕೆ ತಾ ಬಂದು । ಮುಗಿದುಕರ ಬಾಗಿಶಿರ ನಮಿಸಿ ಅಕ್ಷೋಭ್ಯರ । ಆಗಲೇ ಸಂನ್ಯಾಸ ಕೊಡಲು ಬೇಡಿದನು ॥30.। ಗಾಧಿ ಅರ್ಜುನ ಸಮ ಬಲರೂಪದಲಿ ತೋರ್ಪ । ಈತ ರಾಯರ ಸುತನಾದರೂ ವೈರಾಗ್ಯ । ಯುತ ಭಕ್ತಿಮಾನ್ ಸುಶುಭಲಕ್ಷಣನು ಎಂದು ಹರಿ । ಮಧ್ವನಿಯಮಿತ ಅವಗೆ ಕೊಟ್ಟರು ಸಂನ್ಯಾಸ ॥31॥ ಶ್ರೀಯಃಪತಿಗೆ ಪ್ರಿಯತರ ಜಯತೀರ್ಥನಾಮವ । ದಯಾಶೀಲ ಹೊಸಯತಿಗೆ ಇತ್ತು ಅಭಿಷೇಕ । ಅಕ್ಷೋಭ್ಯ ಗುರುಮಾಡೆ ಗಗನದಿಂ ಪೂವರ್ಷ । ಜಯ ಘೋಷ ಹರಡಿತು ಪರಿಮಳ ಸುಗಂಧ ॥32॥ ಶ್ರೀಮಧ್ವಾ-ಚಾರ್ಯರು ಬೋಧಿಸಿ ತೋರಿಸಿದ । ರಮಾಪತಿ ಪೂಜಾಸತ್ತತ್ವವಾದ । ದುರ್ಮತ ಖಂಡನದ ರೀತಿಯ ಜಯಾರ್ಯರಿಗೆ । ಸುಮ್ಮುದದಿ ಅರುಹಿದರು ಗುರುಸಾರ್ವಭೌಮ ॥33॥ ಶೀಲತಮ ಗುರುವರ್ಯ ಅಕ್ಷೋಭ್ಯತೀರ್ಥರು । ಇಳೆಯಲ್ಲಿ ಮಧ್ವಮತ ಹರಿಭಕ್ತಿಯನ್ನ । ಬೆಳೆಸಲು ಪ್ರತ್ಯೇಕ ಮಠವ ಸ್ಥಾಪಿಸಿ-ದರು । ತ್ರೈಲೋಕಭೂಷಣತೀರ್ಥರ ಮೊದಲ್ಮಾಡಿ ॥34॥ ಆದಿ ಮಠ ಹರಿನೈದು ಸಮೀಪ ಪಟ್ಟವ ಆಳಿ । ಹನ್ನೊಂದು ನೂರು ಅರವತ್ತೇಳ ಶಕವರುಷ । ವದ್ಯ ಪಂಚಮಿ ಮಾರ್ಗಶಿರ ವಿಶ್ವಾವಸುವಲ್ಲಿ । ಮಧ್ವ ಹೃದಯಾಬ್ಜಗನ ಪುರವ ಐದಿ-ದರು ॥35॥ ಮತ್ತೊಂದು ಅಂಶದಲಿ ಮಳಖೇಡ ಗ್ರಾಮದಲಿ । ನದಿ ತೀರದಲಿ ಹರಿಯ ಧ್ಯಾನ ಮಾಡುತ್ತಾ । ಬಂದು ಬೇಡುವವರಿಷ್ಟಾರ್ಥ ಪೂರೈಸುತ । ವೃಂದಾ-ವನದಲ್ಲಿ ಕುಳಿತಿಹರು ಕರುಣಿ ॥36॥

# ಧನುರ್ಮಾಸ

ಮಾರ್ಗಶೀರ್ಷ ಮಾಸದಲ್ಲಿ ಅಥವಾ ಪುಷ್ಯಮಾಸದಲ್ಲಿ ಧನುರ್ಮಾಸ ಆರಂಭ-ವಾಗುತ್ತದೆ. ದೇವತೆಗಳಿಗೆ ರಾತ್ರಿಯ ಕೊನೆಯ ಭಾಗವಾದ ಅರುಣೋದಯ ಕಾಲದ ಆರಂಭವಾಗುವುದು. ಆಗ ದೇವತೆಗಳು ಶ್ರೀಹರಿಯನ್ನು ಪೂಜಿಸಿ ಹುಗ್ಗಿ-ಯನ್ನು ಅರ್ಪಿಸುವರು. ದೇವತೆಗಳು ತಮ್ಮ ಅರುಣೋದಯ ಕಾಲದಲ್ಲಿ ದೇವರನ್ನು ಪೂಜಿಸುವುದರಿಂದ ಮನುಷ್ಯರು ದೇವತೆಗಳ ಅರುಣೋದಯ ಕಾಲವಾದ ಧನುರ್ಮಾಸದಲ್ಲಿ ತಮ್ಮ ಅರುಣೋದಯ ಕಾಲದಲ್ಲಿ ಪೂಜಿಸಬೇಕು. ಅರುಣೋ-ದಯ ಕಾಲದಲ್ಲಿ ಪೂಜೆಯನ್ನು ಮಾಡದವನು ಏಳು ಜನ್ಮಗಳಲ್ಲಿ ದರಿದ್ರನೂ, ಕುಷ್ಠರೋಗಿಯೂ ಆಗುತ್ತಾನೆ. ಪೂಜಿಸುವವನು ನಿರೋಗಿಯೂ ಪ್ರತಿಜನ್ಮದಲ್ಲಿ ವೈಷ್ಣವನೂ ಆಗುತ್ತಾನೆ. ಈ ಪೂಜೆ ನಿತ್ಯವೆನಿಸುತ್ತದೆ.

ಧನುರ್ಮಾಸ ಪೂಜೆಯನ್ನು ಮೊದಲು ಮಾಡಿ ಆಮೇಲೆ ಅರ್ಘ್ಯ, ಗಾಯತ್ರೀ-ಜಪ ಮತ್ತು ಸೂರ್ಯೋಪಸ್ಥಾನವನ್ನು ಮಾಡಬೇಕು. ಈ ಪೂಜೆಗೆ ಅರುಣೋದಯ ಕಾಲ ಮುಖ್ಯ . ನಕ್ಷತ್ರಗಳು ಮರೆಯಾದ ಸಮಯ ಮಧ್ಯಮ. ಸೂರ್ಯೋದಯಾ ನಂತರದ ಕಾಲ ಅಧಮ. ಮಧ್ಯಾಹ್ನಕಾಲ ನಿಷ್ಫಲವಾಗುತ್ತದೆ. ಮುದ್ಗಾನ್ನಕ್ಕೆ (ಹುಗ್ಗಿಗೆ) ಅಕ್ಕಿಗೆ ಹೆಸರುಬೇಳೆ ದ್ವಿಗುಣವಾಗಿದ್ದರೆ ಉತ್ತಮೋತ್ತಮ, ಸಮವಾಗಿದ್ದರೆ ಉತ್ತಮ, ಅರ್ಧವಾಗಿದ್ದರೆ ಮಧ್ಯಮ, ಕಾಲುಭಾಗವಾಗಿದ್ದರೆ ಅಧಮವೆನಿಸುತ್ತದೆ. ಅಕ್ಕಿಯ ಪ್ರಮಾಣಕ್ಕೆ ಅರ್ಧಕ್ಕೆ ಕಡಿಮೆಯಿಲ್ಲದೆ ಅವರವರು ತಮ್ಮ ಶಕ್ತಿಯನ್ನು ಅನುಸರಿಸಿ ಹೆಸರುಬೇಳೆಯನ್ನು ಸೇರಿಸಬೇಕು. ಶುಂಠಿಮಿಶ್ರಿತ ಹುಗ್ಗಿಯನ್ನು ಧನುರ್ಮಾಸದಲ್ಲಿ ನಾರಾಯಣನಿಗೆ ಅರ್ಪಿಸಿ ಶಚೀದೇವಿಯು ದುಃಖದಿಂದ ಮುಕ್ತಳಾದಳು. ಮೊಸರು, ಬೆಲ್ಲ ಮತ್ತು ಶುಂಠಿ ಮಿಶ್ರಿತವಾದ ತ್ರಿವಿಧ ಮುದ್ಗಾನ್ನವನ್ನು ದೇವರಿಗೆ ಅರ್ಪಿಸಿ ಪ್ರಾತಃ ಕಾಲದಲ್ಲಿ ಬ್ರಾಹ್ಮಣಭೋಜನ ಮಾಡಿಸಬೇಕು.

'ಶ್ರೀದೇವಿ ಪ್ರಥಮಂ ನಾಮ ದ್ವಿತೀಯಮಮೃತೋದ್ಭವಾ । ತೃತೀಯಂ ಕಮಲಾ ಪ್ರೋಕ್ತಾ ಚತುರ್ಥಂ ಲೋಕಸುಂದರೀ ॥ ಪಂಚಮಂ ವಿಷ್ಣುಪತ್ನೀತಿ ಷಷ್ಠಂ ಶ್ರೀ-ವೈಷ್ಣವೀತಿ ಚ । ಸಪ್ತಮಂ ತು ವರಾರೋಹಾ ಅಷ್ಟಮಂ ಹರಿವಲ್ಲಭಾ ॥ ನವಮಂ ಶಾರ್ಙ್ಗಣೀ ಪ್ರೋಕ್ತಾ ದಶಮಂ ದೇವದೇವಿಕಾ । ಏಕಾದಶಂ ಮಹಾಲಕ್ಷ್ಮೀರ್ದ್ವಾದಶಂ

ಲೋಕಸುಂದರೀ ॥ ಶ್ರೀ ಪದ್ಮಾ ಕಪಿಲಾ ಮುಕುಂದಮಹಿತೋ ಲಕ್ಷ್ಮೀ ಸ್ತ್ರೀ ಲೋಕೇ-ಶ್ವರಿ । ಮಾಕ್ಷೀರಾಬ್ಧಿ ಸುತಾರವಿಂದ ಜನನೀ ವಿದ್ಯಾಸರೋಜಾತ್ಮಿಕಾ ॥ ಸರ್ವಾ-ಭೀಷ್ಟಪ್ರದೇತಿ ಸತತಂ ನಾಮಾನಿ ಯೇ ದ್ವಾದಶ । ಪ್ರಾತಃ ಶುದ್ಧತರಾ ಪಠಂತಿ ಸತತಂ ಸರ್ವಾಲ್ಲಭತೇ ಶುಭಾನ್ ॥ ಭದ್ರಲಕ್ಷ್ಮೀ ಸ್ತವಂ ನಿತ್ಯಂ ಪುಣ್ಯಮೇತಚ್ಛುಭಾವಹಂ । ಕಾಲೇ ಸ್ಮೃತ್ವಾಪಿ ಕಾವೇರ್ಯಾಂ ಜಪ ಶ್ರೀವೃಕ್ಷಸನ್ನಿಧೌ ॥ ಎಂಬ ಭದ್ರಲಕ್ಷ್ಮೀಸ್ತುತಿ-ಯನ್ನು ಪೂಜಾನಂತರದಲ್ಲಿ ಪಠಿಸಬೇಕು.

ಸಾಧನಾ ದ್ವಾದಶೀ ದಿನದಲ್ಲಿ ಕರ್ಮ ಸಂಕೋಚವನ್ನು ಮಾಡಿಕೊಂಡು ಶ್ರೀಹರಿ-ಯನ್ನು ಪೂಜಿಸಿ ಪಾರಣೆಯನ್ನು ಮಾಡಿದಂತೆ ಧನುರ್ಮಾಸದಲ್ಲಿಯೂ ಮಾಡ-ಬೇಕು. ಈ ವಿಷಯವು 'ಯಥಾ ಸಂಕೋಚ್ಯ ಸತ್ಕರ್ಮ ಭುಂಕ್ತೇಲ್ಪದ್ವಾದಶೀ ದಿನೇ । ತಥಾ ಪ್ರಾತರ್ಧನುರ್ಮಾಸೇ ಕೃತ್ವಾ ಕರ್ಮಾರ್ಚಯೇಚ್ಚ ಮಾಂ ॥ ಇತ್ಯಾದಿ ಸ್ಮೃತಿ ಮುಕ್ತಾವಳಿಯಲ್ಲಿ ಉದಾಹೃತವಾದ ಪ್ರಮಾಣವಚನದಿಂದ ಸಿದ್ಧವಾಗಿದೆ. ಈ ಮಾಸ-ದಲ್ಲಿ ಪೂಜೆಯು ಮುಖ್ಯವೇ ಹೊರತು ಭೋಜನವಲ್ಲ. ಆದ್ದರಿಂದ ಪೂಜೆಯನ್ನು ಮಾಡಿ ದೇವ, ಋಷಿ, ಪಿತೃತರ್ಪಣ, ವೈಶ್ವದೇವಾದಿಕರ್ಮಗಳನ್ನು ಮುಗಿಸಿ ಬ್ರಾಹ್ಮಣ ಭೋಜನಾನಂತರದಲ್ಲಿ ತಾನೂ ಭೋಜನವನ್ನು ಪ್ರಾತಃಕಾಲದಲ್ಲಿಯೇ ಮಾಡಿದರೂ ಮಾಡಬಹುದು. ಅಥವಾ ಮಧ್ಯಾಹ್ನದಲ್ಲಿ ಪುನಃ ಪೂಜೆಯನ್ನು ಮಾಡಿ ಭೋಜನ-ವನ್ನು ಮಾಡಿದರೂ ಮಾಡಬಹುದು. ಎರಡು ವಿಧವಾದ ಸಂಪ್ರದಾಯಗಳೂ ಲೋಕ ವ್ಯವಹಾರದಲ್ಲಿವೆ.

ಧನುರ್ವ್ಯತೀಪಾತಯೋಗ : ಧನುರ್ಮಾಸದಲ್ಲಿ ವ್ಯತೀಪಾತಯೋಗದಲ್ಲಿ ಅರುಣೋದಯಕಾಲದಲ್ಲಿ ವಿಷ್ಣುವನ್ನು ಪೂಜಿಸಿ 'ವ್ಯತೀಪಾತ ಮಹಾಸತ್ವ ಸರ್ವಪಾಪಪ್ರಣಾಶನ । ಸಹಸ್ರಬಾಹೋ ವಿಶ್ವಾತ್ಮನ್ ಗೃಹಾಣಾರ್ಘ್ಯಂ ನಮೋಸ್ತು ತೇ ॥ ವ್ಯತೀಪಾತ ನಮಸ್ತೇಸ್ತು ನಮಸ್ತೇ ವಿಶ್ವಮಂಗಲ । ವಿಷ್ಣುಚಕ್ರಸ್ವರೂಪಾಯ ನಮಸ್ತೇ ದಿವ್ಯ ತೇಜಸೇ॥' ಎಂಬ ಮಂತ್ರದಿಂದ ವಿಷ್ಣು ಚಕ್ರರೂಪಿಯಾದ ವ್ಯತೀ-ಪಾತದೇವತೆಗೆ ಅರ್ಘ್ಯವನ್ನು ಕೊಡಬೇಕು. ಆಮೇಲೆ ದಕ್ಷಿಣಾಮುಖವಾಗಿ ವಂಶದ್ವಯಪಿತೃಗಳ ತೃಪ್ತಿಗಾಗಿ ಅವರನ್ನು ಸ್ಮರಿಸುತ್ತಾ 'ವಿಷ್ಣುಪ್ರಿಯ ವ್ಯತೀಪಾತ ಪಿತೃಣಾನುನೃಣಪ್ರದ । ಪಿತೃಣಾಂ ಮಮ ವೈಕುಂಠಂ ಪ್ರಯಚ್ಛ ಭಗವನ್ ಹರೇ ॥

ತ್ವತ್ಪ್ರಸಾದೇನ ಮೇ ಭಕ್ತಿ ರಸ್ತ್ವೈವಮನಪಾಯಿನೀ । ಜ್ಞಾನವಿಜ್ಞಾನವೈರಾಗ್ಯಂ ಪ್ರಯಚ್ಛ-ಭಗವನ್ಮಮ ॥' ಎಂಬ ಮಂತ್ರದಿಂದ ತರ್ಪಣವನ್ನು ಕೊಡಬೇಕು. ಈ ವ್ಯತೀಪಾತ ದಿನದ ಪೂಜೆಯು ಅರ್ಧೋದಯಾದಿ ಮಹಾಪುಣ್ಯಕಾಲಕ್ಕಿಂತ ಸಹಸ್ರಪಾಲು ಅಧಿಕ ಪುಣ್ಯಪ್ರದವಾಗಿದೆ.

ಇಲ್ಲಿಗೆ ಮಾರ್ಗಶಿರಮಾಸದ ವಿಧಾನವು ಸಮಾಪ್ತವಾಯಿತು ॥ ಶ್ರೀಮಧ್ವೇಶಾರ್ಪಣಮಸ್ತು ॥

ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

ಅಸ್ಮದ್ಗುರ್ವಂತರ್ಗತಶ್ರೀಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕರಾದ-ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಈ ಕೃತಿಕುಸುಮವು ಸಮರ್ಪಿತವಾಗಿದೆ.

ಶ್ರೀಕೃಷ್ಣಾರ್ಪಣಮಸ್ತು .

* * * * * * *

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಸರಸ್ವತೀಪೂಜೆ

ಆಶ್ವೀನ || ಶುದ್ಧ || ಮೂಲಾನಕ್ಷತ್ರ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ವ್ಯಾಸಪೂಜೆ
# ಸರಸ್ವತೀಪೂಜೆ

ಆಶ್ವೀನ || ಶುಕ್ಲ ಪಕ್ಷ || ಮೂಲಾನಕ್ಷತ್ರ -ಶ್ರವಣ ನಕ್ಷತ್ರ

ವಿದ್ವಾನ್ || ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :
ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),
ಗಿರಿನಗರ, ಬೆಂಗಳೂರು-೮೫

**'ವ್ಯಾಸಪೂಜೆ-ಸರಸ್ವತೀ ಪೂಜೆ'** ಶಾಲಿವಾಹನ ಶಕೆ ೧೯೪೩ ಶಾರ್ವರಿ ॥ ಶ್ರಾವಣ ॥ ಶುದ್ಧ ॥ ಪೂರ್ಣಿಮೆ (ದಿನಾಂಕ: ೩-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥ-ಶ್ರೀಪಾದಂಗಳವರಕರಕಮಲಗಳಿಂದ ಭಾರತೀರಮಣಹೃದಯ-ಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು : ೧೧೨



ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಶ್ರೀಮತಿ ನಾಗಲತಾ

ಮುದ್ರಣ : ಮುಕ್ತಿಪಥ ಮುದ್ರಣಾಲಯ,
ಬೆಂಗಳೂರು.



ದಿ|| ಶ್ರೀಮತಿ ಲಕ್ಷ್ಮೀದೇವಿ ಮತ್ತು ದಿ || ನಾರಾಯಣಾಚಾರ್ಯ ಜೋಶಿ

ನನ್ನ ತಂದೆ ತಾಯಿಯವರಾದ ದಿ|| ಶ್ರೀನಾರಾಯಣಾಚಾರ್ಯ ಜೋಶಿ ಮತ್ತು ದಿ || ಶ್ರೀಮತಿ ಲಕ್ಷ್ಮೀದೇವಿ ಜೋಶಿ ಇವರ ಸ್ಮರಣೆಗಾಗಿ ತನ್ಮೂಲಕ ಪಿತೃದೇವತೆಗಳ ಅಂತರ್ಯಾಮಿ ಶ್ರೀಮಧ್ವಪತಿ ಶ್ರೀಲಕ್ಷ್ಮೀನಾರಾಯಣನು ಪ್ರೀತನಾಗಿ ಅವರಿಗೆ ಸದ್ಗತಿ ಅನುಗ್ರಹಿಸಲಿ ಎಂದು ಭಗವಂತನಲ್ಲಿ ಬೇಡುತ್ತಾ ನಮ್ಮ ಮಾತಾಪಿತೃಗಳಿಗೆ ಸದ್ಗತಿ ನೀಡಲೆಂದು ಶ್ರೀಹರಿವಾಯುಗುರುಗಳನ್ನು ಪ್ರಾರ್ಥಿಸುತ್ತೇನೆ.

ಶ್ರೀನಿವಾಸ ಜೋಶಿ ಮತ್ತು ಶ್ರೀಮತಿ ಅಂಬುಜಾಕ್ಷಿ ಜೋಶಿ,
ಕೊಪ್ಪಳ.

**ಪುರುಷರು ಹೇಳಿಕೊಳ್ಳಬೇಕಾದ ಸರಸ್ವತಿಸ್ತೋತ್ರ**

ಉದ್ಯದ್ದಿವಾ-ಕರ-ಸಮೂಹ-ನಿಭಾಂ ಸ್ವಭರ್ತು-
ರಂಕ-ಸ್ಥಿತಾಮಭಯ-ಸದ್ವರ-ಬಾಹು-ಯುಗ್ಮಾಮ್ ।
ಮುದ್ರಾಂ ಚ ತತ್ವ-ದೃಶಯೇ ವರ-ಪುಸ್ತಕಂ ಚ ।
ದೋರ್ಯುಗ್ಮಕೇನ ದಧತೀಂ ಸ್ಮರತಾಽತ್ಮ-ವಿದ್ಯಾಮ್ ॥ (ತಂತ್ರಸಾರಸಂಗ್ರಹ)

**ಸ್ತ್ರೀಯರು ಹೇಳಿಕೊಳ್ಳಬೇಕಾದ ಸರಸ್ವತಿಸ್ತೋತ್ರ**

ಚತುರವದನನ ರಾಣಿಯತಿರೋಹಿತವಿಮಲವಿಜ್ಞಾನಿ
ನಿಗಮಪ್ರತತಿಗಳಿಗಭಿಮಾನಿ ವೀಣಾಪಾಣಿ ಬ್ರಹ್ಮಾಣಿ ।
ನುತಿಸಿ ಬೇಡುವೆ ಜನನಿ ಲಕ್ಷ್ಮೀಪತಿಯ ಗುಣಗಳ ತುತಿಪುದಕೆ
ಸನ್ಮತಿಯ ಪಾಲಿಸಿ ನೆಲೆಸು ನೀ ಮದ್ವದನಸದನದಲಿ ॥

# ವಿಷಯಾನುಕ್ರಮಣಿಕೆ

# ಮುನ್ನುಡಿ

ಭಗವಂತನ ಪ್ರದ್ಯುಮ್ನ ಎಂಬ ರೂಪದಿಂದ ಕೃತಿಯೆಂಬ ಲಕ್ಷ್ಮೀದೇವಿಯ ಮೂಲಕ ಅವತರಿಸಿದ ಎಲ್ಲ ವಿದ್ಯೆಗಳಿಗೆ ಅಭಿಮಾನಿಯಾದ ದೇವತೆಯೇ ಸರಸ್ವತೀದೇವಿ. ಗಾಯತ್ರೀ, ಸಾವಿತ್ರೀ, ಸರಸ್ವತೀ ಎಂಬ ಮೂರು ರೂಪಗಳನ್ನು ಧರಿಸಿ, ಬೆಳಿಗ್ಗೆ, ಮಧ್ಯಾಹ್ನ, ಸಾಯಂಕಾಲದಲ್ಲಿ ಎಲ್ಲ ತನ್ನ ಭಕ್ತರಿಗೆ ಉತ್ತಮಜ್ಞಾನವನ್ನು ಕರುಣಿಸುವ ಮಹಾಮಾತೆ. ಯಾವ ವಿದ್ಯೆಯನ್ನು ಸಂಪಾದನೆ ಮಾಡಿದರೆ ಮಾತ್ರ ಪರಮಾತ್ಮನು ಸಂತುಷ್ಟನಾಗಿ ಮೋಕ್ಷವನ್ನೇ ದಯಪಾಲಿಸುವನೋ, ಅಂಥ ವಿದ್ಯೆಯನ್ನು ನೀಡುವ ಸರಸ್ವತೀದೇವಿಯುನ್ನು ನಿತ್ಯವೂ ಆರಾಧನೆ ಮಾಡಬೇಕು. ಕೃತಿರಮಣಪ್ರದ್ಯುಮ್ನನಂದನೆಯಾದ ಚತುರವಿಶಂತಿ ತತ್ವಪತಿದೇವತೆಗಳಿಗೆ ಗುರುವೆನಿಸಿದ ಚತುರ್ಮುಖನ ಪತ್ನಿಯಾದ ಸರಸ್ವತಿಯಲ್ಲಿ ನಾವು ಪ್ರಾರ್ಥಿಸಬೇಕಾದದ್ದು ಇಷ್ಟು ಮಾತ್ರ - ''ಸತತ ಹರಿಯಲಿ ಗುರುಗಳಲಿ ಸದ್ರತಿಯ ಪಾಲಿಸಿ ಭಾಗವತ ಭಾರತ ಪುರಾಣ ರಹಸ್ಯತತ್ವಗಳರುಪು ಕರುಣದಲಿ'' ಎಂದು. ಮೊದಲು ಹರಿವಾಯುಗಳಲಿ ಭಕ್ತಿ ಮೂಡಬೇಕು. ಅನಂತರ ಜ್ಞಾನಾರ್ಜನೆಯಲ್ಲಿ ತೊಡಗಬೇಕು. ಭಕ್ತಿಯಿಲ್ಲದ ಜ್ಞಾನಾರ್ಜನೆಯಿಂದ ಯಾವುದೇ ಪ್ರಯೋಜನವಿಲ್ಲ.

ಸರಸ್ವತೀದೇವಿಯನ್ನು ಆರಾಧನೆ ಮಾಡುವುದರಿಂದ ಉತ್ತಮವಾದ ವಿದ್ಯೆ, ಹರಿವಾಯುಗುರುಗಳಲ್ಲಿ ಭಕ್ತಿ, ಉತ್ತಮ ಕೀರ್ತಿ ಇವುಗಳು ದೊರೆಯುವುದಲ್ಲದೇ ಮೋಕ್ಷವೇ ದೊರೆಯುತ್ತದೆ. ಆದ್ದರಿಂದ ನವರಾತ್ರಿಯಲ್ಲಿ ಬರುವ ಸರಸ್ವತೀಪೂಜೆಯನ್ನು ಅತ್ಯಂತ ಶ್ರದ್ಧಾಭಕ್ತಿಗಳಿಂದ ಆಚರಣೆ ಮಾಡಬೇಕು. ಸರಸ್ವತೀದೇವಿಯ ಆರಾಧನೆ ಮಾಡಿದರೆ ಮಾತ್ರ ವಿದ್ಯಾವಂತನಾಗುತ್ತಾನೆ. ಸರಸ್ವತೀದೇವಿಯ ಆರಾಧನೆಯನ್ನು ಮಾಡದೇ ಇದ್ದರೆ ವಿದ್ಯಾವಂತನಾಗಲಾರ. ಈ ಕಾರಣದಿಂದ ಮನೆಯಲ್ಲಿ ಇರುವ

ಪ್ರತಿಯೊಬ್ಬರೂ ಕೂಡ ಅವರವರ ಅನುಕೂಲಕ್ಕೆ ತಕ್ಕಂತೆ ಸರಸ್ವತೀಪೂಜೆಯನ್ನು ಮಾಡಬೇಕು.

ಈ ಪುಸ್ತಕದಲ್ಲಿ ಸರಸ್ವತೀಪೂಜೆಯ ಜೊತೆ ಸರಸ್ವತೀದೇವಿಗೆ ಸಂಬಂಧಪಟ್ಟ ಅನೇಕ ಅಪೂರ್ವ ವಿಷಯಗಳನ್ನು ಸಂಗ್ರಹಿಸಿ ನೀಡಲಾಗಿದೆ. ಗ್ರಂಥಗೌರವದ ಭಯದಿಂದ ಪ್ರತಿಯೊಂದಕ್ಕೂ ಶ್ಲೋಕಗಳನ್ನು ಉಲ್ಲೇಖ ಮಾಡಿರುವುದಿಲ್ಲ. ಎಲ್ಲಿ ಉಲ್ಲೇಖ ಮಾಡಬೇಕಾದ ಅವಶ್ಯಕತೆ ಇರುತ್ತದೋ, ಅಲ್ಲಿ ಮಾತ್ರ ಪ್ರಮಾಣಗಳನ್ನು ಉಲ್ಲೇಖಿಸಲಾಗಿದೆ. ಜ್ಞಾನಿಗಳ ಬಳಿ ಚರ್ಚಿಸಿ, ನಿರ್ದುಷ್ಟವಾದ ವಿಚಾರಗಳನ್ನಷ್ಟೇ ತಿಳಿಸಲಾಗಿದೆ. ಗೊಂದಲಮಯವಾದ ಅನುಸಂಧಾನಕ್ಕೆ ತೀರಾ ಕಠಿಣವಾದ ಯಾವುದೇ ವಿಚಾರಗಳನ್ನು ಇಲ್ಲಿ ಸೇರಿಸಿರುವುದಿಲ್ಲ. ಪುರಾಣಗಳಲ್ಲಿ ಸರಸ್ವತೀದೇವಿಯ ಬಗ್ಗೆ ಬಹಳ ವಿಚಾರಗಳಿವೆ. ಅನೇಕ ಮೋಹಕ ಕಥೆಗಳೂ ಕೂಡ ಇರುತ್ತವೆ. ಆದರೆ ಮೋಹಕ ಕಥೆಗಳ ಹಾಗೂ ಮೋಹಕ ಆಚಾರಗಳ ಬಗ್ಗೆ ತಿಳಿಯುವುದು ಅನಿವಾರ್ಯವಲ್ಲದ ಕಾರಣ ಇಲ್ಲಿ ಅವುಗಳನ್ನು ಉಲ್ಲೇಖಿಸಿರುವುದಿಲ್ಲ.

ಸಜ್ಜನರು ಈ ಕೃತಿಯನ್ನು ಆಮೂಲಾಗ್ರವಾಗಿ ಪರಿಶೀಲನೆ ಮಾಡಿ, ವಿಚಾರಗಳನ್ನು ತಿಳಿದುಕೊಳ್ಳಬೇಕೆಂದು ಪ್ರಾರ್ಥನೆ. ಹಾಗೂ ಮನೆಮಂದಿಯೆಲ್ಲರೂ ಸರಸ್ವತೀಪೂಜೆಯ ದಿವಸ ಈ ಪುಸ್ತಕವನ್ನು ಓದಿ, ಸರಸ್ವತಿಯ ಮಹಿಮೆಯನ್ನು ತಿಳಿದುಕೊಂಡು ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕಾಗಿ ಪ್ರಾರ್ಥನೆ.

ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ಶ್ರೀ ಶ್ರೀನಿವಾಸ ಜೋಶಿ ಮತ್ತು ಶ್ರೀಮತಿ ಅಂಬುಜಾಕ್ಷಿ ಜೋಶಿ ದಂಪತಿಗಳಿಗೆ ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ- ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಇವರ ಮಾತಾ-ಪಿತೃಗಳಿಗೆ ಈ ಜ್ಞಾನಯಜ್ಞದ ಪುಣ್ಯರಾಶಿಯು ತಲುಪಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ.

ದಿವಸ ಶ್ರವಣಾನಕ್ಷತ್ರವು ಬರುವುದರಿಂದ ಮಹಾನವಮಿಯ ಈ ಪುಸ್ತಕದಲ್ಲಿ ಸರಸ್ವತಿಯ ವಿಸರ್ಜನೆಯ ಕ್ರಮವನ್ನು ನೀಡಲಾಗಿದೆ. ಪಂಚಾಂಗವನ್ನು ನೋಡಿ ಎಂದು ವಿಸರ್ಜನೆ ಮಾಡಬೇಕು ಎಂದು ತಿಳಿದುಕೊಂಡೇ ವಿಸರ್ಜನೆಯನ್ನು ಮಾಡಬೇಕು.

ಆಚಮನ, ಪ್ರಾಣಾಯಾಮ ಮಾಡಿ ದೇಶಕಾಲಗಳನ್ನುಚ್ಚರಿಸಿ ಹೀಗೆ ಸಂಕಲ್ಪ ಮಾಡಬೇಕು.

ಅಸ್ಮದ್ಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀವೇದವ್ಯಾಸ-ಪ್ರೇರಣಯಾ ವೇದವ್ಯಾಸಪ್ರೀತ್ಯರ್ಥಂ ಆವಾಹಿತವೇದವ್ಯಾಸಸರಸ್ವತ್ಯಾದಿ ಸಕಲಗುರುಣಾಂ ವಿಸರ್ಜನಾಖ್ಯಂ ಕರ್ಮ ಕರಿಷ್ಯೆ. ತದಂಗತ್ವೇನ ಉತ್ತರಪೂಜಾಂ ಚ ಕರಿಷ್ಯೇ ॥

(ಘಂಟಾನಾದ ಮಾಡಬೇಕು)

ಮಂಗಳಂ ಭಗವಾನ್ ವಿಷ್ಣುಃ ಮಂಗಳಂ ಮಧುಸೂದನಃ ।
ಮಂಗಳಂ ದೇವಕೀಪುತ್ರೋ ಮಂಗಳಂ ಗರುಡಧ್ವಜಃ ॥

ಪುಸ್ತಕಗಳನ್ನು ಮುಟ್ಟಿ ಓಂ ಓಂ ನಮೋ ನಾರಾಯಣಾಯ ಓಂ ಎಂದು 12 ಬಾರಿ ಜಪಿಸಬೇಕು.

ಜಟಾಕಲಾಪ ಸಂಯುಕ್ತಾಂ ಪೂರ್ಣಚಂದ್ರನಿಭಾನನಾಮ್ ।
ತ್ರಿಲೋಚನಾಂ ಮಹಾದೇವಿಂ ಸ್ವರ್ಣನೂಪುರಧಾರಿಣೀಮ್ ॥
ಕಟಕೈಸ್ಸ್ವರ್ಣರತ್ನಾಢ್ಯೈರ್ಮುಕ್ತಾವಲಯಭೂಷಿತಾಮ್ ।
ಕೇಯೂರೈರ್ಮೇಖಲಾದ್ಯೈಶ್ಚ ದ್ಯೋತಯಂತೀಂ ಜಗತ್ತ್ರಯಮ್ ।
ಶಬ್ದಬ್ರಹ್ಮಾತ್ಮಿಕಾಂ ದೇವೀಂ ಧ್ಯಾನಕರ್ಮ ಸಮಾಹಿತಃ ॥

ಶ್ರೀ ಮಹಾಸರಸ್ವತ್ಯಂತರ್ಗತ ಶ್ರೀಲಕ್ಷ್ಮೀಹಯಗ್ರೀವಾಯ ನಮಃ । ಧ್ಯಾನಂ ಸಮರ್ಪಯಾಮಿ ॥

ಗಂಧಪುಷ್ಪಾಕ್ಷತೈಸ್ಸಾರ್ಥಂ ಶುದ್ಧತೋಯೇನ ಸಂಯುತಮ್ ।
ಶುದ್ಧಸ್ಫಟಿಕತುಲ್ಯಾಂಗಿ ಪಾದ್ಯಂ ತೇ ಪ್ರತಿಗೃಹ್ಯತಾಮ್ ॥

ಶ್ರೀ ಮಹಾಸರಸ್ವತ್ಯಂತರ್ಗತ ಶ್ರೀಲಕ್ಷ್ಮೀಹಯಗ್ರೀವಾಯ ನಮಃ । ಪಾದ್ಯಂ ಸಮರ್ಪಯಾಮಿ ॥

ಭಕ್ತಾಭೀಷ್ಟಪ್ರದೇ ದೇವಿ ದೇವದೇವಾದಿವಂದಿತೇ ।
ಧಾತೃಪ್ರಿಯೇ ಜಗದ್ಧಾತ್ರಿ ದದಾಮ್ಯರ್ಘ್ಯಂ ಗೃಹಾಣ ಭೋ ॥

ಶ್ರೀ ಮಹಾಸರಸ್ವತ್ಯಂತರ್ಗತ ಶ್ರೀಲಕ್ಷ್ಮೀಹಯಗ್ರೀವಾಯ ನಮಃ । ಅರ್ಘ್ಯಂ ಸಮರ್ಪಯಾಮಿ ॥

ಪೂರ್ಣಚಂದ್ರ ಸಮಾನಾಭೇ ಕೋಟಿಸೂರ್ಯಸಮಪ್ರಭೇ ।
ಭಕ್ತ್ಯಾ ಸಮರ್ಪಿತಂ ವಾಣಿ ಗೃಹಾಣಾಚಮನೀಯಕಂ ॥

ಶ್ರೀ ಮಹಾಸರಸ್ವತ್ಯಂತರ್ಗತ ಶ್ರೀಲಕ್ಷ್ಮೀಹಯಗ್ರೀವಾಯ ನಮಃ । ಆಚಮನೀಯಂ ಸಮರ್ಪಯಾಮಿ ॥

ಚಂದನಾಗರುಕಸ್ತೂರಿ ಕರ್ಪೂರಾದ್ಯೈಶ್ಚ ಸಂಯುತಮ್ ।
ಗಂಧಂ ಗೃಹಾಣ ವರದೇ ವಿಧಿಪತ್ನೀ ನಮೋಽಸ್ತುತೇ ॥

ಶ್ರೀ ಮಹಾಸರಸ್ವತ್ಯಂತರ್ಗತ ಶ್ರೀಲಕ್ಷ್ಮೀಹಯಗ್ರೀವಾಯ ನಮಃ । ಗಂಧಂ ಸಮರ್ಪಯಾಮಿ ॥

## ದ್ವಾದಶನಾಮ ಪೂಜೆ

ಓಂ ಸರಸ್ವತ್ಯೈ ನಮಃ ।
ಓಂ ಬ್ರಹ್ಮಪತ್ನ್ಯೈ ನಮಃ ।
ಓಂ ಪುಸ್ತಕಹಸ್ತಾಯೈ ನಮಃ ।
ಓಂ ಸರ್ವರಕ್ಷಿಣ್ಯೈ ನಮಃ ।
ಓಂ ಜಗನ್ಮಾತ್ರೇ ನಮಃ ।
ಓಂ ಜ್ಞಾನಮುದ್ರಾಯೈ ನಮಃ ।
ಓಂ ಲೋಕಮಾತ್ರೇ ನಮಃ ।
ಓಂ ಸುರವಂದಿತಾಯೈ ನಮಃ ।
ಓಂ ಶುಕ್ಲಾಂಬರಧರಾಯೈ ನಮಃ ।
ಓಂ ಅಕ್ಷಮಾಲಾಧರಾಯೈ ನಮಃ ।
ಓಂ ಮಾಯಾಯೈ ನಮಃ ।
ಓಂ ವರಪ್ರದಾಯೈ ನಮಃ ।

## ನೈವೇದ್ಯ

ಯಸ್ತೇ ಸ್ತನಃ ಶಶಯೋ ಯೋ ಮಯೋಭೂರ್ಯೇನ ವಿಶ್ವಾ ಪುಷ್ಯಸಿ ವಾರ್ಯಾಣಿ।
ಯೋ ರತ್ನಧಾ ವಸುವಿದ್ಯಃ ಸುದತ್ರಃ ಸರಸ್ವತೀ ತಮಿಹ ಧಾತವೇ ಕಃ ॥

ಶ್ರೀ ಮಹಾಸರಸ್ವತ್ಯಂತರ್ಗತ ಶ್ರೀಲಕ್ಷ್ಮೀಹಯಗ್ರೀವಾಯ ನಮಃ । ನೈವೇದ್ಯಂ ಸಮರ್ಪಯಾಮಿ ।

## ಮಂಗಳಾರತಿ

ವಿಜ್ಞಾನರೋಚಿಃ ಪರಿಪೂರಿತಾಂತಃ ಬಾಹ್ಯಾಂಡಕೋಶಂ ಹರಿತೋಪಲಾಭಮ್।
ತರ್ಕಾಭಯೇ ತಂ ವಿಧಿಶರ್ವಪೂರ್ವಗೀರ್ವಾಣವಿಜ್ಞಾನದಮಾನತೋಸ್ಮಿ ॥
ತಾಟಂಕದ್ವಯಶೋಭಿಕರ್ಣಯುಗಲಂ ಭ್ರಾಜದ್ದಯಾವೀಕ್ಷಣರಿಂ
ಪೂರ್ಣೇಂದುದ್ಯುತಿವಿದ್ರುಮಾಧರರುಚಾ ವ್ಯಾಮಿಶ್ರಮಂದಸ್ಮಿತಮ್ ।
ಈಶತ್ಕುಂಚಿಕುಂತಲಂ ಸತಿಲಕಂ ನಾಸೋಲ್ಲಸನ್-ಮೌಕ್ತಿಕಮ್
ಭೂಯಾತ್ ಕೂರ್ಮಾಸದೃಕ್ಷಗಂಡಯುಗಲಂ ವಾಣೀಮುಖಂ ಶ್ರೇಯಸೇ ॥

## ಮಂತ್ರಪುಷ್ಪ

ನಮಾಮಿ ವಾಣೀಂ ಬ್ರಹ್ಮಾಣೀಂ ಕಲ್ಯಾಣೀಂ ಶುದ್ಧಧರ್ಮಿಣೀಮ್ ।
ಅಘೌಘಹರಿಣೀಂ ನಿತ್ಯತರುಣೀಂ ಮುಕ್ತಿಕಾರಿಣೀಮ್ ।
ಹರೌ ಭಕ್ತಿಮತೀಂ ಭಾಗ್ಯವತೀಂ ಶತಧೃತೇಃ ಸತೀಮ್ ।
ಸರಸ್ವತೀಂ ಪುಣ್ಯವತೀಂ ಸ್ಮರಾಮೀಂದುಸಮದ್ಯುತಿಮ್ ॥

ಶ್ರೀ ಮಹಾಸರಸ್ವತ್ಯಂತರ್ಗತ ಶ್ರೀಲಕ್ಷ್ಮೀಹಯಗ್ರೀವಾಯ ನಮಃ। ಮಂತ್ರಪುಷ್ಪಂ ಸಮರ್ಪಯಾಮಿ ।

## ಪ್ರಾರ್ಥನೆ

ಸರಸ್ವತೀ ಸೂಕ್ತವನ್ನು ಉಚ್ಚಕಂಠದಿಂದ ಪಠಿಸಿ ಭಗವಂತನ ದರ್ಶನಮಾಡಿಸುವಂತೆ ಪ್ರಾರ್ಥಿಸಬೇಕು.

## ಸರಸ್ವತೀಸೂಕ್ತ

ಇಯಮಿತಿ ಚತುರ್ದಶರ್ಚಸ್ಯ ಸೂಕ್ತಸ್ಯ। ಬಾರ್ಹಸ್ಪತ್ಯೋ ಭರದ್ವಾಜಃ। ಸರಸ್ವತೀ ಗಾಯತ್ರೀ,

ಆದ್ಯಾಸ್ತಿಸ್ರಃ, ತ್ರಯೋದಶೀ ಚ ಜಗತ್ಯಃ, ಅಂತ್ಯಾತ್ರಿಷ್ಟುಪ್ ॥

ಇಯಮದದಾದ್ ರಭಸಮೃಣಚ್ಯುತಂ ದಿವೋದಾಸಂ ವಧ್ರ್ಯಶ್ವಾಯ ದಾಶುಷೇ। ಯಾ

ಶಶ್ವಂತಮಾಚಖಾದಾವಸಂ ಪಣಿಂ ತಾ ತೇ ದಾತ್ರಾಣಿ ತವಿಷಾ ಸರಸ್ವತಿ ॥ ಇಯಂ

ಶುಷ್ಮೇಭಿರ್ಬಿಸಖಾ ಇವಾರುಜತ್ ಸಾನು ಗಿರೀಣಾಂ ತವಿಷೇಭಿರೂರ್ಮಿಭಿಃ ।

ಪಾರಾವತಘ್ನೀಮವಸೇ ಸುವೃಕ್ತಿಭಿ । ಸರಸ್ವತೀಮಾ ವಿವಾಸೇಮ ಧೀತಿಭಿಃ । ಸರಸ್ವತಿ ದೇವನಿದೋ ನಿ ಬರ್ಹಯ । ಪ್ರಜಾಂ ವಿಶ್ವಸ್ಯ ಬೃಸಯಸ್ಯ ಮಾಯಿನಃ । ಉತ ಕ್ಷಿತಿಭ್ಯೋಽವನೀರವಿಂದೋ ವಿಷಮೇಭ್ಯೋ ಅಸ್ರವೋ ವಾಜಿನೀವತಿ ॥ ಪ್ರ ಣೋ ದೇವೀ ಸರಸ್ವತೀ । ವಾಜೇಭಿರ್ವಾಜಿನೀವತೀ । ಧೀನಾಮವಿತ್ರ್ಯವತು ॥ ಯಸ್ತ್ವಾ ದೇವಿ ಸರಸ್ವತ್ಯುಪಬ್ರೂತೇ ಧನೇ ಹಿತೇ । ಇಂದ್ರಂ ನ ವೃತ್ರತೂರ್ಯೇ ॥ ೩೦ ॥ ತ್ವಂ ದೇವಿ ಸರಸ್ವತ್ಯವಾ ವಾಜೇಷು ವಾಜಿನಿ । ರದಾ ಪೂಷೇವ ನ ಸನಿಮ್ ॥ ಉತ ಸ್ಯಾ ನಃ ಸರಸ್ವತೀ ಘೋರಾ ಹಿರಣ್ಯವರ್ತನಿಃ । ವೃತ್ರಘ್ನೀವಷ್ಟಿ ಸುಷ್ಟುತಿಮ್ ॥ ಯಸ್ಯಾ ಅನಂತೋ ಅಹ್ರುತ ಸ್ತ್ವೇಷಶ್ಚರಿಷ್ಣುರರ್ಣವಃ ॥ ಅಮಶ್ಚರತಿ ರೋರುವತ್ ॥ ಸಾ ನೋ ವಿಶ್ವಾ ಅತಿ ದ್ವಿಷಃ ಸ್ವಸೄರನ್ಯಾ ಋತಾವರೀ । ಅತನ್ನಹೇವ ಸೂರ್ಯಃ ॥ ಉತ ನಃ ಪ್ರಿಯಾ ಪ್ರಿಯಾಸು ಸಪ್ತಸ್ವಸಾ ಸುಜುಷ್ಟಾ । ಸರಸ್ವತೀ ಸ್ತೋಮ್ಯಾ ಭೂತ್ ॥ ೩೧ ॥ ಅಪಪ್ರುಷೀ ಪಾರ್ಥಿವಾನ್ಯುರು ರಜೋ ಅಂತರಿಕ್ಷಮ್ । ಸರಸ್ವತೀ ನಿದಸ್ಪಾತು ॥ ತ್ರಿಷಧಸ್ಥಾ ಸಪ್ತಧಾತುಃ ಪಂಚ ಜಾತಾ ವರ್ಧಯಂತೀ । ವಾಜೇವಾಜೇ ಹವ್ಯಾಭೂತ್ ॥ ಪ್ರ ಯಾ ಮಹಿಮ್ನಾ ಮಹಿನಾಸು ಚೇಕಿತೇ ದ್ಯುಮ್ನೇಭಿರನ್ಯಾ ಅಪಸಾಮಪಸ್ತಮಾ । ರಥಇವ ಬೃಹತೀ ವಿಭ್ವನೇ ಕೃತೋ ಪಸ್ತುತ್ಯಾ ಚಿಕಿತುಷಾ ಸರಸ್ವತೀ ॥ ಸರಸ್ವತ್ಯಭಿ ನೋ ನೇಷಿ ವಸ್ಯೋ ಮಾಪ ಸ್ಫರೀಃ ಪಯಸಾ ಮಾ ನ ಆ ಧಕ್ । ಜುಷಸ್ವ ನಃ ಸಖ್ಯಾ ವೇಶ್ಯಾ ಚ ಮಾ ತ್ವತ್ ಕ್ಷೇತ್ರಾಣ್ಯರಣಾನಿ ಗನ್ಮ ॥೩೨॥

## ಮೇಧಾಸೂಕ್ತಮ್

ಮೇಧಾದೇವೀ ಜುಷಮಾಣಾ ನ ಆಗಾದ್ವಿಶ್ವಾಚೀ ಭದ್ರಾ ಸುಮನಸ್ಯಮಾನಾ । ತ್ವಯಾ ಜುಷ್ಟಾ ನುದಮಾನಾ ದುರುಕ್ತಾನ್ ಬೃಹದ್ವದೇಮ ವಿದಥೇ ಸುವೀರಾಃ । ತ್ವಯಾ ಜುಷ್ಟ ಋಷಿರ್ಭವತಿ ದೇವಿ ತ್ವಯಾ ಬ್ರಹ್ಮಾಗತಶ್ರೀರುತ ತ್ವಯಾ । ತ್ವಯಾ ಜುಷ್ಟಶ್ಚಿತ್ರಂ ವಿಂದತೇ ವಸು ಸಾ ನೋ ಜುಷಸ್ವ ದ್ರವಿಣೋ ನ ಮೇಧೇ ॥ ಮೇಧಾಂ ಮ ಇಂದ್ರೋ ದದಾತು ಮೇಧಾಂ ದೇವೀ ಸರಸ್ವತೀ । ಮೇಧಾಂ ಮೇ ಅಶ್ವಿನಾವುಭಾವಾಧತ್ತಾಂ ಪುಷ್ಕರಸ್ರಜಾ।

ಅಪ್ಸರಾಸು ಚ ಯಾ ಮೇಧಾ ಗಂಧರ್ವೇಷು ಚ ಯನ್ಮನಃ । ದೈವೀಂ ಮೇಧಾ ಸರಸ್ವತೀ ಸಾ ಮಾಂ ಮೇಧಾ ಸುರಭಿರ್ಜುಷತಾಗ್ ಸ್ವಾಹಾ । ಆ ಮಾಂ ಮೇಧಾ ಸುರಭಿರ್ವಿಶ್ವರೂಪಾ ಹಿರಣ್ಯವರ್ಣಾ ಜಗತೀ ಜಗಮ್ಯಾ । ಊರ್ಜಸ್ವತೀ ಪಯಸಾ ಪಿನ್ವಮಾನಾ ಸಾ ಮಾಂ ಮೇಧಾ ಸುಪ್ರತೀಕಾ ಜುಷಂತಾಮ್ ॥ ಮಯಿ ಮೇಧಾಂ ಮಯಿ ಪ್ರಜಾಂ ಮಯ್ಯಗ್ನಿಸ್ತೇಜೋ ದಧಾತು ಮಯಿ ಮೇಧಾಂ ಮಯಿ ಪ್ರಜಾಂ ಮಯೀಂದ್ರ ಇಂದ್ರಿಯಂ ದಧಾತು ಮಯಿ ಮೇಧಾಂ ಮಯಿ ಪ್ರಜಾಂ ಮಯಿ ಸೂರ್ಯೋ ಭ್ರಾಜೋ ದಧಾತು ॥

ಅವಕುಂಠನಾದಿ ಆರು ಮುದ್ರೆಗಳನ್ನು ತೋರಿಸಿ ಹೂವು, ತುಳಸಿ ಹಿಡಿದುಕೊಂಡು ಏಹ್ಯೇಹಿ ಪುಸ್ತಕ ಸ್ಥಿತ ಶ್ರೀವೇದವ್ಯಾಸ ಪ್ರಸೀದ ಪ್ರಸೀದ ಎಂದು ಸಂಭೋಧಿಸಿ ಈ ಮಂತ್ರ ಹೇಳಬೇಕು.

ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತ ಸ್ತ್ವೇಮಹೇ ।
ಉಪ ಪ್ರಯಂತು ಮರುತಃ ಸುದಾನವ ಇಂದ್ರ ಪ್ರಾಶೂರ್ಭವಾ ಸಚಾ ॥

ಘಂಟಾನಾದವನ್ನು ಮಾಡಿ ನಿರ್ಮಾಲ್ಯಗಳನ್ನು ಧರಿಸಿ ಕೃಷ್ಣಾರ್ಪಣ ಬಿಡಬೇಕು. ಅನೇನ ಮೂಲಾನಕ್ಷತ್ರೇ ಸರಸ್ವತ್ಯಾವನೇನ ಪೂಜಾಕರಣೇನಂ ಚ ಶ್ರವಣನಕ್ಷತ್ರೇ ವಿಸರ್ಜನಕರಣೇನ ಅಸ್ಮದ್ಗುರ್ವಂತರ್ಗತ ಶ್ರೀವೇದವ್ಯಾಸಃ ಪ್ರೀಯತಾಂ ಶ್ರೀಕೃಷ್ಣಾರ್ಪಣಮಸ್ತು.

ವೇದವ್ಯಾಸದೇವರನ್ನು ಹಾಗೂ ಸರಸ್ವತೀದೇವಿಯನ್ನು ಭಕ್ತಿಯಿಂದ ಪೂಜಿಸಿ, ವಿಸರ್ಜನೆಯನ್ನು ಮಾಡುವ ಸಂದರ್ಭದಲ್ಲಿ ಭಗವದ್‌ಜ್ಞಾನವನ್ನೇ ಪ್ರಾರ್ಥನೆ ಮಾಡಬೇಕು. ಲೌಕಿಕವಿದ್ಯೆಗಳು ತತ್ವಜ್ಞಾನವೆಂದು ಕರೆಸಿಕೊಳ್ಳುವುದಿಲ್ಲ. ಶಾಸ್ತ್ರದ ದೃಷ್ಟಿಯಿಂದ ಅವುಗಳು ಅಜ್ಞಾನ ಅಥವಾ ವಿಪರೀತಜ್ಞಾನವೆಂದೇ ಕರೆಯಿಸಿಕೊಳ್ಳುತ್ತವೆ. ಭಗವಂತನಿಗೆ ಸಂಬಂಧಪಟ್ಟ ಜ್ಞಾನವನ್ನಷ್ಟೇ ಸರಸ್ವತೀ ದೇವಿಯ ಬಳಿ ಪ್ರಾರ್ಥನೆಯನ್ನು ಮಾಡಬೇಕು. ಅದರಲ್ಲೂ ಭಗವಂತನನ್ನು ನೋಡುವುದೇ ನಿಜವಾದ ಜ್ಞಾನ. ಅಂಥ

ಶ್ರೇಷ್ಠವಾದ ಭಗವದ್ದರ್ಶನವನ್ನು ಪ್ರಾರ್ಥನೆ ಮಾಡಿದಾಗ ಸರಸ್ವತೀದೇವಿಯು ಸಂತುಷ್ಟಳಾಗಿ ಅನುಗ್ರಹವನ್ನು ಮಾಡುತ್ತಾಳೆ. ಅವಳ ಅನುಗ್ರಹವನ್ನು ಹೊಂದಿ ಭಗವಂತನನ್ನು ಕಾಣುವ ಬಯಕೆಯನ್ನು ಹೆಚ್ಚು ಮಾಡಿಕೊಳ್ಳಬೇಕು.

## ಸರಸ್ವತೀಪೂಜಾಕಥಾಪದ್ಧತಿ

ಏವಂ ಆಶ್ವಯುಜೇ ಮಾಸಿ ಸಪ್ತಮ್ಯಾಂ ಸಿತಪಕ್ಷಕೇ ।
ಗ್ರಂಥಾನ್ ಏಕತ್ರ ಸಂಸ್ಥಾಪ್ಯ ವಸ್ತ್ರೇಣಾಚ್ಛಾದಯೇತ್ ತತಃ ॥
ವ್ಯಾಸಂ-ಪರಶುರಾಮಂ ಚ ಪೂಜಯೇತ್ತತ್ರ ಭಕ್ತಿತಃ ।
ವಿಂಶಬ್ದೇನ ಮುಕ್ತಾ ಚೇದುಪವಾಸೋ ವಿಧೀಯತೇ ।
ಬಾದರಿಂ ಜೈಮಿನೀಂ ಚೈವ ಸುಮಂತುಂ ವೈಶಂಪಾಯನಮ್ ।
ಆಶ್ಮರಥ್ಯಂ ಚ ಪೈಲಂ ಚ ಕಾಶಕೃಸ್ನಂ ಚ ಲೋಮಶಮ್ ।
ಪುರಸ್ತಾಲ್ಲೋಕಪಾಲೇಭ್ಯೋ ಯಜೇ ವ್ಯಾಸಸ್ಯ ಶಿಷ್ಯಕಾನ್ ।
ಮೂಲೇನಾವಾಹಯೇದ್ದೇವಿಂ ಶ್ರವಣೇನ ವಿಸರ್ಜಯೇತ್ ।
ಏವಂ ಮಹಾವಾದ್ಯಾದಿಭಿಃ ಸಂಪೂಜ್ಯ । ಶ್ರವಣಾಂತೇ ವಿಸರ್ಜಯೇತ್ ।
ಉತ್ತಿಷ್ಟ ಬ್ರಹ್ಮಣಸ್ಪತೇ ಇತಿ ಮಂತ್ರೇಣ ವಿಸರ್ಜಯೇತ್ ॥

ಪೀಠೇ ಸಚ್ಛಾಸ್ತ್ರ ಪುಸ್ತಕಂ ಪ್ರತಿಷ್ಠಾಪ್ಯ । ವಸ್ತ್ರೇಣ ಆಚ್ಛಾದ್ಯ । ಸಚ್ಛಾಸ್ತ್ರ ಪುಸ್ತಕೇಷು ಸರಸ್ವತೀಭಾರತ್ಯೌ ಅಭಿಮಾನಿತ್ವೇನ ಧ್ಯಾತ್ವಾ। ಪುಸ್ತಕೇಷು ತೇಜೋಮಯೀಂ ಪ್ರತಿಮಾಂ ಧ್ಯಾತ್ವಾ । ತತ್ರ ಮುಖ್ಯಪ್ರಾಣಂ ಧ್ಯಾತ್ವಾ । ತತ್ರ ವೇದವ್ಯಾಸಂ ಧ್ಯಾತ್ವಾ ಹಯಗ್ರೀವದತ್ತಾತ್ರೇಯಪರಶುರಾಮಮಹಿದಾಸಐತರೇಯಾನ್ ತತ್ತನ್ಮಂತ್ರೈಃ ಆವಾಹ್ಯ । ಗೃಹಾವೈ ಪ್ರತಿಷ್ಠಾಸೂಕ್ತಂ ಇತಿ ಮಂತ್ರೇಣ ಪ್ರತಿಷ್ಠಾಪಯೇತ್॥

* * * *

# ಸರಸ್ವತಿ ಕಥೆ

ಭೀಷ್ಮ ಉವಾಚ -

ಇಮಾಂ ವಿದ್ಯಾಂ ಶೃಣುಷ್ವಾದ್ಯ ಲೋಕವಂದ್ಯೋऽಸಿ ಮೇऽನಘ ।
ತದರ್ಥಮದ್ಯ ತೇ ವಚ್ಮಿ ಸರ್ವಸಿದ್ಧಿಪ್ರದಂ ವ್ರತಮ್ ॥೧॥

ಭೀಷ್ಮರು ಧರ್ಮರಾಜನನ್ನು ಕುರಿತು ಹೇಳುತ್ತಿದ್ದಾರೆ - ಓ ಪಾಪರಹಿತನಾದ ಯುಧಿಷ್ಠಿರನೇ ! ನಿನಗಾಗಿ ಇಂದು ಸರ್ವಸಿದ್ಧಿಗಳನ್ನು ನೀಡುವಂಥ ಸರಸ್ವತೀವ್ರತದ ಕಥೆಯನ್ನು ಹೇಳುತ್ತೇನೆ. ಈ ವಿದ್ಯಾಭಿಮಾನಿ ದೇವತೆಯ ಮಹಿಮೆಯನ್ನು ಕೇಳಿ ಅದರಂತೆ ಅನುಷ್ಠಾನ ಮಾಡುವುದರಿಂದ ನೀನು ಸಮಸ್ತ ಲೋಕಗಳಿಂದ ವಂದ್ಯನಾಗುವಿ.

ರಾಜ್ಯಲಾಭಕರಂ ತಾತ ಸರ್ವತ್ರ ಸುಖದಂ ಶುಭಮ್ ।
ಕೃಷ್ಣಪ್ರಿಯಕರಂ ವಿದ್ಧಿ ಲೋಕಮಾತುಶ್ಚ ತತ್ಪ್ರಿಯಮ್ ॥೨॥

ಲೋಕಕ್ಕೆ ತಾಯಿಯಾದ ಈ ಸರಸ್ವತೀದೇವಿಯ ವ್ರತವನ್ನು ಆಚರಣೆ ಮಾಡುವುದರಿಂದ ನಿನ್ನ ರಾಜ್ಯವು ಸಂಪದ್ಭರಿತವಾಗುತ್ತದೆ. ಸುಖಮಯವಾಗುತ್ತದೆ. ಮಂಗಳಮಯವಾಗುತ್ತದೆ. ಶ್ರೀಕೃಷ್ಣಪರಮಾತ್ಮನಿಗೆ ಈ ವ್ರತದ ಆಚರಣೆಯು ಅತ್ಯಂತ ಪ್ರಿಯಕರವಾಗಿದೆ. ಲೋಕಮಾತೆಯಾದ ಸರಸ್ವತೀದೇವಿಗೆ ಪ್ರೀತಿಪಾತ್ರನೂ ಕೂಡ ಆಗುವಿ.

ತತ್ಪ್ರಿಯಂ ಸರ್ವದೇವಾನಾಂ ನವರಾತ್ರವ್ರತಂ ಶುಭಮ್ ।
ಗಜಾಶ್ವರಥವಸ್ತ್ರಾದಿನಾಲಂಕೃತ್ಯ ಶುಭೇ ದಿನೇ ॥೩॥

ನವರಾತ್ರಿಯ ಕಾಲದಲ್ಲಿ ಈ ವ್ರತವನ್ನು ಆಚರಣೆ ಮಾಡುವುದರಿಂದ ಸಮಸ್ತ ದೇವತೆಗಳಿಗೆ ಸಂತೋಷವಾಗುತ್ತದೆ. ನವರಾತ್ರಿಯ ಶುಭದಿವಸದಲ್ಲಿ ಆನೆ, ಕುದುರೆ, ರಥ, ವಸ್ತ್ರ ಮೊದಲಾದವುಗಳಿಂದ ಅಲಂಕಾರ ಮಾಡುವ ಮೂಲಕ ಪೂಜೆಯನ್ನು ಪ್ರಾರಂಭ ಮಾಡಬೇಕು.

ಕಲ್ಪೋಕ್ತಹೋಮಕರ್ಮಾದಿ ಕೃತ್ವಾ ಚಾಂತೇ ಪಠೇದಿದಮ್ ।
ಶೃಣ್ವತಾಮಾಯುರಾರೋಗ್ಯಂ ಸರ್ವಸಂಪತ್ಕರಂ ಶುಭಮ್ ॥೪॥

ಸರಸ್ವತಿ ಪೂಜಾಕಲ್ಪದಲ್ಲಿ ಹೇಳಿದ ಪ್ರಕಾರ ಸರಸ್ವತೀದೇವಿಯ ಪೂಜೆಯನ್ನು ಹಾಗೂ ಹೋಮಗಳನ್ನು ಆಚರಿಸಿ, ಕೊನೆಯಲ್ಲಿ ಈ ಸರಸ್ವತೀಪೂಜಾಕಥೆಯನ್ನು ಪಠಿಸಬೇಕು. ಯಾರು ಈ ಕಥೆಯನ್ನು ಕೇಳುತ್ತಾನೋ, ಅವನಿಗೆ ಆಯುಷ್ಯ , ಆರೋಗ್ಯ, ಸಕಲವಿಧವಾದ ಸಂಪತ್ತುಗಳು ಅಭಿವೃದ್ಧವಾಗುತ್ತವೆ.

ಕೋಶವೃದ್ಧಿರ್ಭವೇತ್ತೇಷಾಂ ರಾಜ್ಯವೃದ್ಧಿಶ್ಚ ಭೂಭೃತಾಮ್ ।
ವಾಕ್ಸಿದ್ಧಿರ್ಬಹುಪುತ್ರಾಶ್ಚ ಭಾರತ್ಯಾಸ್ತು ಪ್ರಸಾದತಃ ॥೫॥

ರಾಜರುಗಳ ಸಂಪತ್ತಿನ ಭಾಂಡಾಗಾರವು ಅಭಿವೃದ್ಧವಾಗುತ್ತದೆ. ರಾಜ್ಯವು ಮತ್ತಷ್ಟು ಸಂಪದ್ಭರಿತವಾಗುತ್ತದೆ. ಸಮಸ್ತ ಜನರಿಗೂ ವಾಕ್ಸಿದ್ಧಿ ಉಂಟಾಗುತ್ತದೆ. ಅನೇಕ ಪುತ್ರರನ್ನು ಹೊಂದುತ್ತಾರೆ. ಇದೆಲ್ಲವೂ ಭಾರತೀದೇವಿಯ ಅನುಗ್ರಹದಿಂದ ದೊರೆಯುತ್ತದೆ. (ಸರಸ್ವತಿಗೂ ಕೂಡ ಭಾರತೀ ಎಂಬ ಹೆಸರಿದೆ. ಮತ್ತು ಸರಸ್ವತೀಪೂಜೆಯಂದು ಮುಖ್ಯಪ್ರಾಣದೇವರ ಪತ್ನಿಯಾದ ಭಾರತಿಯ ಪೂಜೆಯನ್ನೂ ಕೂಡ ಮಾಡಬೇಕಾದ್ದರಿಂದ ಇದು ಭಾರತೀ ಪೂಜೆಯೂ ಆಗುತ್ತದೆ.)

ತಸ್ಮಾತ್ತವಾಪಿ ರಾಜೇಂದ್ರ ರಾಜ್ಯಪ್ರಾಪ್ತಿರ್ಭವೇದ್ಧ್ರುವಮ್ ।

ಓ ರಾಜೇಂದ್ರನೇ ! ಈ ಸರಸ್ವತೀವ್ರತವನ್ನು ನೀನು ಶ್ರದ್ಧೆಯಿಂದ ಆಚರಣೆ ಮಾಡು. ನಿನಗೆ ಪುನಃ ರಾಜ್ಯಪ್ರಾಪ್ತಿಯಾಗುತ್ತದೆ. ಈ ವಿಷಯದಲ್ಲಿ ಸಂಶಯವನ್ನು ಪಡಬೇಡ.

ಯುಧಿಷ್ಠಿರ ಉವಾಚ

ಕಸ್ಮಿನ್ ಕಾಲೇ ಮಹಾದೇವೀ ಪೂಜ್ಯಾ ಪುಸ್ತಕಧಾರಣೀ ॥೬॥
ವಿದ್ಯಾಮೂರ್ತಿರ್ವದಾಸ್ಮಾಕಮಾಖ್ಯಾಹಿ ತ್ವಂ ಶುಭಂ ವಿಧಿಮ್ ।

ಯುಧಿಷ್ಠಿರನು ಪ್ರಶ್ನಿಸುತ್ತಾನೆ - ಪುಸ್ತಕವನ್ನು ಧಾರಣೆ ಮಾಡಿರುವ ವಿದ್ಯಾಭಿಮಾನಿನಿಯಾದ ಆ ಮಹಾದೇವಿಯನ್ನು ಯಾವ ಕಾಲದಲ್ಲಿ ಪೂಜೆ ಮಾಡಬೇಕು. ಆ ವಿದ್ಯಾಮೂರ್ತಿಯ ಪೂಜಾವಿಧಾನವನ್ನು ನನಗೆ ಕೃಪೆಯಿಂದ ತಿಳಿಸಿರಿ.

ಭೀಷ್ಮ ಉವಾಚ

ಅಥೋ ವದಾಮಿ ವೈ ದೇವ್ಯಾಃ ಪೂಜಾಂ ಸರ್ವಸಮೃದ್ಧಿದಾಮ್ ॥೭॥

# ಸರಸ್ವತಿ ಕಥೆ

ಭೀಷ್ಮ ಉವಾಚ -

ಇಮಾಂ ವಿದ್ಯಾಂ ಶೃಣುಷ್ವಾದ್ಯ ಲೋಕವಂದ್ಯೋಽಸಿ ಮೇಽನಘ ।
ತದರ್ಥಮದ್ಯ ತೇ ವಚ್ಮಿ ಸರ್ವಸಿದ್ಧಿಪ್ರದಂ ವ್ರತಮ್ ॥೧॥

ಭೀಷ್ಮರು ಧರ್ಮರಾಜನನ್ನು ಕುರಿತು ಹೇಳುತ್ತಿದ್ದಾರೆ - ಓ ಪಾಪರಹಿತನಾದ ಯುಧಿಷ್ಠಿರನೇ ! ನಿನಗಾಗಿ ಇಂದು ಸರ್ವಸಿದ್ಧಿಗಳನ್ನು ನೀಡುವಂಥ ಸರಸ್ವತೀವ್ರತದ ಕಥೆಯನ್ನು ಹೇಳುತ್ತೇನೆ. ಈ ವಿದ್ಯಾಭಿಮಾನಿ ದೇವತೆಯ ಮಹಿಮೆಯನ್ನು ಕೇಳಿ ಅದರಂತೆ ಅನುಷ್ಠಾನ ಮಾಡುವುದರಿಂದ ನೀನು ಸಮಸ್ತ ಲೋಕಗಳಿಂದ ವಂದ್ಯನಾಗುವಿ.

ರಾಜ್ಯಲಾಭಕರಂ ತಾತ ಸರ್ವತ್ರ ಸುಖದಂ ಶುಭಮ್ ।
ಕೃಷ್ಣಪ್ರಿಯಕರಂ ವಿದ್ಧಿ ಲೋಕಮಾತುಶ್ಚ ತತ್ಪ್ರಿಯಮ್ ॥೨॥

ಲೋಕಕ್ಕೆ ತಾಯಿಯಾದ ಈ ಸರಸ್ವತೀದೇವಿಯ ವ್ರತವನ್ನು ಆಚರಣೆ ಮಾಡುವುದರಿಂದ ನಿನ್ನ ರಾಜ್ಯವು ಸಂಪದ್ಭರಿತವಾಗುತ್ತದೆ. ಸುಖಮಯವಾಗುತ್ತದೆ. ಮಂಗಳಮಯವಾಗುತ್ತದೆ. ಶ್ರೀಕೃಷ್ಣಪರಮಾತ್ಮನಿಗೆ ಈ ವ್ರತದ ಆಚರಣೆಯು ಅತ್ಯಂತ ಪ್ರಿಯಕರವಾಗಿದೆ. ಲೋಕಮಾತೆಯಾದ ಸರಸ್ವತೀದೇವಿಗೆ ಪ್ರೀತಿಪಾತ್ರನೂ ಕೂಡ ಆಗುವಿ.

ತತ್ಪ್ರಿಯಂ ಸರ್ವದೇವಾನಾಂ ನವರಾತ್ರವ್ರತಂ ಶುಭಮ್ ।
ಗಜಾಶ್ವರಥವಸ್ತ್ರಾದಿನಾಲಂಕೃತ್ಯ ಶುಭೇ ದಿನೇ ॥೩॥

ನವರಾತ್ರಿಯ ಕಾಲದಲ್ಲಿ ಈ ವ್ರತವನ್ನು ಆಚರಣೆ ಮಾಡುವುದರಿಂದ ಸಮಸ್ತ ದೇವತೆಗಳಿಗೆ ಸಂತೋಷವಾಗುತ್ತದೆ. ನವರಾತ್ರಿಯ ಶುಭದಿವಸದಲ್ಲಿ ಆನೆ, ಕುದುರೆ, ರಥ, ವಸ್ತ್ರ ಮೊದಲಾದವುಗಳಿಂದ ಅಲಂಕಾರ ಮಾಡುವ ಮೂಲಕ ಪೂಜೆಯನ್ನು ಪ್ರಾರಂಭ ಮಾಡಬೇಕು.

ಕಲ್ಪೋಕ್ತಹೋಮಕರ್ಮಾದಿ ಕೃತ್ವಾ ಚಾಂತೇ ಪಠೇದಿದಮ್ ।
ಶೃಣ್ವತಾಮಾಯುರಾರೋಗ್ಯಂ ಸರ್ವಸಂಪತ್ಕರಂ ಶುಭಮ್ ॥೪॥

ಸರಸ್ವತಿ ಪೂಜಾಕಲ್ಪದಲ್ಲಿ ಹೇಳಿದ ಪ್ರಕಾರ ಸರಸ್ವತೀದೇವಿಯ ಪೂಜೆಯನ್ನು ಹಾಗೂ ಹೋಮಗಳನ್ನು ಆಚರಿಸಿ, ಕೊನೆಯಲ್ಲಿ ಈ ಸರಸ್ವತೀಪೂಜಾಕಥೆಯನ್ನು ಪಠಿಸಬೇಕು. ಯಾರು ಈ ಕಥೆಯನ್ನು ಕೇಳುತ್ತಾನೋ, ಅವನಿಗೆ ಆಯುಷ್ಯ , ಆರೋಗ್ಯ, ಸಕಲವಿಧವಾದ ಸಂಪತ್ತುಗಳು ಅಭಿವೃದ್ಧವಾಗುತ್ತವೆ.

ಕೋಶವೃದ್ಧಿರ್ಭವೇತ್ತೇಷಾಂ ರಾಜ್ಯವೃದ್ಧಿಶ್ಚ ಭೂಭೃತಾಮ್ ।
ವಾಕ್ಸಿದ್ಧಿರ್ಬಹುಪುತ್ರಾಶ್ಚ ಭಾರತ್ಯಾಸ್ತು ಪ್ರಸಾದತಃ ॥೫॥

ರಾಜರುಗಳ ಸಂಪತ್ತಿನ ಭಾಂಡಾಗಾರವು ಅಭಿವೃದ್ಧವಾಗುತ್ತದೆ. ರಾಜ್ಯವು ಮತ್ತಷ್ಟು ಸಂಪದ್ಭರಿತವಾಗುತ್ತದೆ. ಸಮಸ್ತ ಜನರಿಗೂ ವಾಕ್ಸಿದ್ಧಿ ಉಂಟಾಗುತ್ತದೆ. ಅನೇಕ ಪುತ್ರರನ್ನು ಹೊಂದುತ್ತಾರೆ. ಇದೆಲ್ಲವೂ ಭಾರತೀದೇವಿಯ ಅನುಗ್ರಹದಿಂದ ದೊರೆಯುತ್ತದೆ. (ಸರಸ್ವತಿಗೂ ಕೂಡ ಭಾರತೀ ಎಂಬ ಹೆಸರಿದೆ. ಮತ್ತು ಸರಸ್ವತೀಪೂಜೆಯಂದು ಮುಖ್ಯಪ್ರಾಣದೇವರ ಪತ್ನಿಯಾದ ಭಾರತಿಯ ಪೂಜೆಯನ್ನೂ ಕೂಡ ಮಾಡಬೇಕಾದ್ದರಿಂದ ಇದು ಭಾರತೀ ಪೂಜೆಯೂ ಆಗುತ್ತದೆ.)

ತಸ್ಮಾತ್ತವಾಪಿ ರಾಜೇಂದ್ರ ರಾಜ್ಯಪ್ರಾಪ್ತಿರ್ಭವೇದ್ಧ್ರುವಮ್ ।

ಓ ರಾಜೇಂದ್ರನೇ ! ಈ ಸರಸ್ವತೀವ್ರತವನ್ನು ನೀನು ಶ್ರದ್ಧೆಯಿಂದ ಆಚರಣೆ ಮಾಡು. ನಿನಗೆ ಪುನಃ ರಾಜ್ಯಪ್ರಾಪ್ತಿಯಾಗುತ್ತದೆ. ಈ ವಿಷಯದಲ್ಲಿ ಸಂಶಯವನ್ನು ಪಡಬೇಡ.

ಯುಧಿಷ್ಠಿರ ಉವಾಚ

ಕಸ್ಮಿನ್ ಕಾಲೇ ಮಹಾದೇವೀ ಪೂಜ್ಯಾ ಪುಸ್ತಕಧಾರಣೀ ॥೬॥
ವಿದ್ಯಾಮೂರ್ತಿರ್ವದಾಸ್ಮಾಕಮಾಖ್ಯಾಹಿ ತ್ವಂ ಶುಭಂ ವಿಧಿಮ್ ।

ಯುಧಿಷ್ಠಿರನು ಪ್ರಶ್ನಿಸುತ್ತಾನೆ - ಪುಸ್ತಕವನ್ನು ಧಾರಣೆ ಮಾಡಿರುವ ವಿದ್ಯಾಭಿಮಾನಿನಿಯಾದ ಆ ಮಹಾದೇವಿಯನ್ನು ಯಾವ ಕಾಲದಲ್ಲಿ ಪೂಜೆ ಮಾಡಬೇಕು. ಆ ವಿದ್ಯಾಮೂರ್ತಿಯ ಪೂಜಾವಿಧಾನವನ್ನು ನನಗೆ ಕೃಪೆಯಿಂದ ತಿಳಿಸಿರಿ.

ಭೀಷ್ಮ ಉವಾಚ

ಅಥೋ ವದಾಮಿ ವೈ ದೇವ್ಯಾಃ ಪೂಜಾಂ ಸರ್ವಸಮೃದ್ಧಿದಾಮ್ ॥೭॥

ಸರ್ವದಾ ಪೂಜಯೇದ್ದೇವೀಂ ಭಾರತೀಂ ಸರ್ವಮಾತರಮ್ ।
ಮಹಾನವಮ್ಯಾಂ ಪ್ರಾಪ್ತಾಯಾಂ ಪೂಜಾಂ ಕುರ್ವೀತ ಯತ್ನತಃ ॥೮॥

ಭೀಷ್ಮಾಚಾರ್ಯರು ಉತ್ತರಿಸುತ್ತಿದ್ದಾರೆ - ಎಲೈ ಧರ್ಮರಾಜನೇ ! ಎಲ್ಲ ಬಗೆಯ ಇಷ್ಟಾರ್ಥಗಳನ್ನು ದಯಪಾಲಿಸುವ ಆ ಸರಸ್ವತೀದೇವಿಯ ವ್ರತವನ್ನು ನಿನಗೆ ಹೇಳುತ್ತೇನೆ ಕೇಳುವವನಾಗು. ಜಗತ್ತಿನ ತಾಯಿಯಾದ ಸರಸ್ವತೀದೇವಿಯ ಪೂಜೆಯನ್ನು ಪ್ರತಿನಿತ್ಯ ಮಾಡಬೇಕು. ವಿಶೇಷವಾಗಿ ನವರಾತ್ರಿಯ ಮಹಾನವಮಿಯಲ್ಲಿ ಪ್ರಯತ್ನಪೂರ್ವಕವಾಗಿ ವೈಭವೋಪೇತವಾಗಿ ಆಚರಿಸಬೇಕು.

ಪ್ರಾಪ್ತೇ ಚಾಶ್ವಯುಜೇ ಮಾಸೇ ಶುಕ್ಲಪಕ್ಷೇ ಸಮುದ್ಭವಾ ।
ಯಾ ತಿಥಿರ್ನವಮೀ ಪ್ರೋಕ್ತಾ ಸಾ ಮಹಾನವಮೀ ಸ್ಮೃತಾ ॥೯॥

ಆಶ್ವಯುಜಮಾಸದ ಶುಕ್ಲಪಕ್ಷದ ನವಮೀ ತಿಥಿಯು ಮಹಾನವಮಿ ಎಂಬುದಾಗಿ ಪ್ರಸಿದ್ಧವಾಗಿದೆ. ಅಂದು ಮಾಡುವಂಥ ವಿಧಿಗಳು ಹೀಗಿವೆ -

ಉಷಸ್ಯುತ್ಥಾಯ ಸಂಕಲ್ಪಮಾಚರೇತ್ತತ್ತಿಥೌ ಸುಧೀಃ ।
ಅರ್ಚಯಿಷ್ಯೇ ಜಗತ್ಪೂಜ್ಯಾಂ ಶಾರದಾಂ ವಿತತಪ್ರಭಾಮ್ ॥೧೦॥

ಬುದ್ಧಿವಂತನಾದವನು ಮಹಾನವಮಿಯ ಉಷಃಕಾಲದಲ್ಲಿ ಎದ್ದು ಹೀಗೆ ಸಂಕಲ್ಪವನ್ನು ಮಾಡಬೇಕು - ವಿದ್ಯಾಜಗತ್ತು ಯಾರನ್ನು ನಿರಂತರ ಪೂಜಿಸುತ್ತದೋ ಅಂಥ ಕಾಂತಿಯುಕ್ತಳಾದ ಶಾರದಾದೇವಿಯನ್ನು ಇಂದು ನಾನು ಶ್ರದ್ಧೆಯಿಂದ ಪೂಜೆ ಮಾಡುತ್ತೇನೆ.

ಸ್ಥಿತಪದ್ಮಾಸನಾಂ ದೇವೀಂ ಶ್ರಿಯಂ ಶಶಿನಿಭಾನನಾಮ್ ।
ವಿದ್ಯಾಮೂರ್ತಿಂ ವಿಶಾಲಾಕ್ಷೀಂ ಮುಕ್ತಾದಾಮವಿಭೂಷಿತಾಮ್ ॥೧೧॥

ಆ ಶಾರದೆಯು ಪದ್ಮಾಸನದಲ್ಲಿ ಕುಳಿತಿದ್ದಾಳೆ. ಸಂಪದ್ರೂಪಳಾಗಿದ್ದಾಳೆ. ಆದ್ದರಿಂದಲೇ ಅವಳನ್ನು ಶ್ರೀದೇವಿ ಎನ್ನುತ್ತಾರೆ. ಅವಳ ಮುಖವು ಚಂದ್ರನ ಕಾಂತಿಯನ್ನೂ ಮೀರಿಸುತ್ತಿದೆ. ವಿದ್ಯಾಸ್ವರೂಪಳಾಗಿದ್ದಾಳೆ. ವಿಶಾಲವಾದ ಕಣ್ಣುಗಳುಳ್ಳವಳಾಗಿದ್ದಾಳೆ. ಮುತ್ತಿನ ಸರವನ್ನು ಧರಿಸಿದ್ದಾಳೆ.

ವಜ್ರವೈಡೂರ್ಯವಲಯೈರ್ಭೂಷಣೈಶ್ಚ ಸಮನ್ವಿತಾಮ್ ।
ಇತಿ ಧ್ಯಾತ್ವಾ ತು ಸಂಕಲ್ಪ್ಯ ಸ್ನಾತ್ವಾ ತು ಸುಸಮಾಹಿತಃ ॥೧೨॥

ಆ ವಿದ್ಯಾಭಿಮಾನಿದೇವತೆಯ ಸೌಂದರ್ಯ ಅಪ್ರತಿಮವಾಗಿದೆ. ವಜ್ರ, ವೈಢೂರ್ಯಗಳ ಬಳೆಗಳನ್ನು ಧರಿಸಿದ್ದಾಳೆ. ಎಲ್ಲ ಆಭರಣಗಳನ್ನು ಧರಿಸಿ, ಆಭರಣಗಳಿಗೆ ಮೆರಗು ತಂದಿದ್ದಾಳೆ. ಇಂಥ ಸರಸ್ವತೀದೇವಿಯನ್ನು ಪೂಜಿಸುವ ಸೌಭಾಗ್ಯ ಇಂದು ನನ್ನದಾಗಿದೆ. ಹೀಗೆ ಸರಸ್ವತಿಯನ್ನು ಆಪಾದಮೌಳಿಪರ್ಯಂತವಾಗಿ ಧ್ಯಾನ ಮಾಡಿ, ಸಂಕಲ್ಪ ಮಾಡಿ, ಅನಂತರ ಸ್ನಾನ ಮೊದಲಾದ ನಿತ್ಯಕರ್ಮಗಳಲ್ಲಿ ತೊಡಗಬೇಕು.

ಆವಾಹ್ಯ ಪೂಜಯೇದ್ದೇವೀಂ ವಿದ್ಯಾಪುಸ್ತಕಮಂಡಲೇ ।
ಮೇಧಾದೇವ್ಯಾನುವಾಕೇನ ಉಪಚಾರಾನ್ ಪ್ರಕಲ್ಪ್ಯ ಚ ॥೧೩॥

ಪುಸ್ತಕಗಳಲ್ಲಿ (ದೇವಪೂಜಾದಿಗಳನ್ನು ಮುಗಿಸಿ) ವಿದ್ಯಾಭಿಮಾನಿ ದೇವತೆಯಾದ ಸರಸ್ವತೀದೇವಿಯನ್ನು ಮತ್ತು ಭಾರತೀದೇವಿಯನ್ನು ಆವಾಹನೆ ಮಾಡಬೇಕು. ಮೇಧಾದೇವಿ ಎಂಬ ಮಹಾನಾರಾಯಣೋಪನಿಷತ್ತಿನಲ್ಲಿ ಬರುವ ಸರಸ್ವತೀಮಂತ್ರದಿಂದ ಷೋಡಶೋಪಚಾರ ಪೂಜೆಯನ್ನು ಮಾಡಬೇಕು.

ಗಂಧಧೂಪಾದಿಮಲ್ಯೈಶ್ಚ ಅರ್ಚಯೇತ್ಪ್ರಯತೇಂದ್ರಿಯಃ ।
ಸ್ವಸೂತ್ರವಿಧಿನಾ ವೇದ್ಯಾಂ ಪ್ರತಿಷ್ಠಾಪ್ಯ ಹುತಾಶನಮ್ ॥೧೪॥
ಹೋಮಂ ಪ್ರಕಲ್ಪಯೇದ್ವಿದ್ವಾಂಸ್ತಿಲಪಾಯಸಸರ್ಪಿಷಾ ।
ಮೇಧಾದೇವ್ಯಾನುವಾಕೇನ ಪ್ರತ್ಯೃಚಂ ಜಾತವೇದಸಿ ॥೧೫॥

ಜಿತೇಂದ್ರಿಯನಾಗಿದ್ದು ಸರಸ್ವತಿಯನ್ನು ಭಕ್ತಿಯಿಂದ ಪೂಜಿಸಬೇಕು. ಗಂಧವನ್ನು ಸಮರ್ಪಿಸಬೇಕು. ಧೂಪಾರತಿ ಮಾಡಬೇಕು. ದೀಪವನ್ನು ಸಮರ್ಪಿಸಬೇಕು. ಪರಿಮಳಭರಿತವಾದ ಮಾಲೆಗಳಿಂದ ಅರ್ಚಿಸಬೇಕು. ತಮ್ಮ ತಮ್ಮ ಶಾಖಾಸೂತ್ರಗಳಿಗೆ ಅನುಸಾರಿಯಾಗಿ ವಿಧಿಪ್ರಕಾರ ಅಗ್ನಿಪ್ರತಿಷ್ಠಾಪನೆಯನ್ನು ಮಾಡಿ, ಸರಸ್ವತಿದೇವಿಯ ಪ್ರೀತ್ಯರ್ಥವಾಗಿ ಹೋಮವನ್ನು ಮಾಡಬೇಕು. ಎಳ್ಳು, ಪಾಯಸ ಮತ್ತು ತುಪ್ಪಗಳಿಂದ ಆಹುತಿಗಳನ್ನು ನೀಡಬೇಕು. ಮೇಧಾದೇವಿ ಇತ್ಯಾದಿಯಾಗಿ ಪ್ರಾರಂಭವಾಗುವ ಸರಸ್ವತೀ ಸೂಕ್ತದ ಪ್ರತಿಯೊಂದು ಮಂತ್ರಗಳಿಂದ ಅಗ್ನಿಯಲ್ಲಿ ಆಹುತಿ ನೀಡಬೇಕು.

ಅಗ್ನಿಂ ಸಂಸ್ಥಾಪ್ಯ ಶಾಲಾಯಾಂ ಗೃಹಮಧ್ಯೇಽಥವಾ ಪುನಃ ।
ಪೂಜಿತಾಯಾಂ ತು ಭಾರತ್ಯಾಮನೇನ ವಿಧಿನಾ ನೃಪ ॥೧೬॥

ಅಗ್ನಿಶಾಲೆಯಲ್ಲಿ ಅಥವಾ ತನ್ನ ಮನೆಯಲ್ಲಿ ಸರಸ್ವತೀ ದೇವಿಯ ಕುರಿತಾದ ಹೋಮಕ್ಕಾಗಿ ಅಗ್ನಿಯ ಪ್ರತಿಷ್ಠಾಪನೆಯನ್ನು ಮಾಡಿ, ವಿಧಿಪ್ರಕಾರವಾಗಿ ಹೋಮವನ್ನು ಮಾಡಿ, ಅವಳನ್ನು ತೃಪ್ತಿ ಪಡಿಸಬೇಕು.

ಪೂಜಕಸ್ಯ ಚ ಯೇ ಕಾಮಾಸ್ತೇ ಸರ್ವೇ ವಶವರ್ತಿನಃ ।
ಸೇವಂತೇ ತಂ ನೃಪಶ್ರೇಷ್ಠಾಃ ಸೇವಕಾ ಇವ ಹಿ ಧ್ರುವಮ್ ॥೧೭॥

ಯಾರು ಅತ್ಯಂತ ಶ್ರದ್ಧೆಯಿಂದ ಸರಸ್ವತಿ ಕುರಿತಾದ ಪೂಜೆ, ಹೋಮಾದಿಗಳನ್ನು ಆಚರಿಸುತ್ತಾನೋ, ಅವನ ಎಲ್ಲ ಅಭೀಷ್ಟಗಳು ನೆರವೇರುತ್ತವೆ. ಶ್ರೇಷ್ಠ ರಾಜರುಗಳು ಸೇವಕರಂತೆ ಅವನ ಅಧೀನರಾಗಿರುತ್ತಾರೆ.

ಬ್ರಾಹ್ಮಣಾನ್ ಭೋಜಯೇತ್ಪಶ್ಚಾತ್ ಷಡ್ರಸಾನ್ನೈಃ ಪ್ರಯತ್ನತಃ ।
ವಿಪ್ರಾಗ್ನಿಹುತಶೇಷೇಣ ತತೋ ಗಾಂ ಭೋಜಯೇದ್ವ್ರತಿಃ ॥೧೮॥

ಹೋಮವಾದ ಮೇಲೆ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಪ್ರಯತ್ನಪೂರ್ವಕವಾಗಿ ಷಡ್ರಸಾನ್ನಗಳನ್ನು ತಯಾರುಗೊಳಿಸಿ ಬಡಿಸಬೇಕು. ಹೀಗೆ ಬ್ರಾಹ್ಮಣಮುಖದಲ್ಲಿ ಯಜ್ಞವನ್ನು ಮಾಡಿದ ಮೇಲೆ ಗೋಗ್ರಾಸವನ್ನು ನೀಡಿ, ಗೋವುಗಳನ್ನು ತೃಪ್ತಿ ಪಡಿಸಬೇಕು.

ಆಯುಧಸ್ಯಂದನಾನ್ವಾಹಾನ್ ಯಾನಾನಿ ವಿವಿಧಾನಿ ಚ ।
ಅರ್ಚಯೇದಾತ್ಮರಕ್ಷಾರ್ಥಂ ಶುಭೈರ್ನೀರಾಜನಾದಿಭಿಃ ॥೧೯॥

ಅನಂತರ ಆಯುಧಗಳಿಗೆ, ವಾಹನಗಳಿಗೆ ಮಂಗಳಾರತಿಗಳನ್ನು ಮಾಡಿ, ತನ್ನ ರಕ್ಷಣೆಗೋಸ್ಕರ ಪ್ರಾರ್ಥನೆಯನ್ನು ಮಾಡಿ, ಪೂಜೆಯನ್ನು ಸಮರ್ಪಣೆ ಮಾಡಬೇಕು.

ಅಸ್ಯ ವ್ರತಸ್ಯ ಮಾಹಾತ್ಮ್ಯಂ ವೇತ್ತಿ ಕೋ ವಿಷ್ಣುನಾ ಋತೇ ।
ಸೋಮದತ್ತೇ ಪುರಾ ದೃಷ್ಟಂ ವ್ರತಸ್ಯ ಸುಮಹತ್ಫಲಮ್ ॥೨೦॥

ಈ ಸರಸ್ವತೀ ವ್ರತದ ಮಹಿಮೆಯನ್ನು ವಿಷ್ಣು ಒಬ್ಬನು ಮಾತ್ರ ತಿಳಿದಿರುವನು. ಉಳಿದ ಸಾಧಕರಿಂದ ತಿಳಿಯಲು ಸಾಧ್ಯವಾಗುವುದಿಲ್ಲ. ಸೋಮದತ್ತನೆಂಬ ಅರಸನು ಈ ವ್ರತದ ಪ್ರಭಾವವನ್ನು ಪ್ರತ್ಯಕ್ಷವಾಗಿ ಕಂಡಿರುವನು.

ಯುಧಿಷ್ಠಿರ ಉವಾಚ

ಸೋಮದತ್ತೇ ಯಥಾ ದೃಷ್ಟಂ ಭವತಾ ವ್ರತಮುತ್ತಮಮ್ ।
ತದೇತದಖಿಲಂ ಶ್ರೋತುಂ ಪರಂ ಕೌತೂಹಲಂ ಹಿ ಮೇ ॥೨೦॥

ಯುಧಿಷ್ಠಿರನು ಪ್ರಶ್ನಿಸುತ್ತಾನೆ - ಸೋಮದತ್ತನು ಈ ವ್ರತದ ಮಹಿಮೆಯನ್ನು ಹೇಗೆ ಅನುಭವಿಸಿದನೆಂಬ ವಿಷಯದಲ್ಲಿ ನಾನು ಅತ್ಯಂತ ಕಾತರನಾಗಿದ್ದಾನೆ.

ಭೀಷ್ಮ ಉವಾಚ

ಸೋಮದತ್ತೋ ಮಹಾನಾಸೀತ್ ಪುರಾ ಸೋಮಕುಲೋದ್ಭವಃ ।
ರಾಜಾ ಪರಮಧರ್ಮಾತ್ಮಾ ಬಂಧುಮಾನನಹಂಕೃತಃ ॥೨೧॥

ಹಿಂದೆ ಚಂದ್ರವಂಶದಲ್ಲಿ ಸೋಮದತ್ತ ಎಂಬ ಮಹಾತ್ಮನಾದ ರಾಜನು ಹುಟ್ಟಿದನು. ಅವನು ಅತ್ಯಂತ ಧರ್ಮಿಷ್ಠನಾಗಿದ್ದನು. ಅನೇಕ ಬಂಧುಗಳುಳ್ಳವನಾಗಿದ್ದನು. ಸ್ವಲ್ಪವೂ ಅಹಂಕಾರವನ್ನು ಹೊಂದಿರಲಿಲ್ಲ.

ಸತ್ಯವಾದೀ ಸದಾ ಮೌನೀ ಹ್ಯಾತಿಥೇಯೋ ಬಹುಪ್ರದಃ ।
ಸತ್ಸಂಪೂಜಾಂ ಪ್ರಕುರ್ವಾಣಃ ಸನ್ನ ಶತ್ರುಃ ಪರಾಕ್ರಮೈಃ ॥೨೩॥

ಸತ್ಯವನ್ನೇ ನುಡಿಯುತ್ತಿದ್ದನು, ಮಿತಭಾಷಿಯಾಗಿದ್ದನು, ಅತಿಥಿ-ಅಭ್ಯಾಗತರಿಗೆ ಸತ್ಕಾರವನ್ನು ಮಾಡುತ್ತಿದ್ದನು, ಬಹಳ ದಾನವನ್ನು ಮಾಡುತ್ತಿದ್ದನು, ಭಗವಂತನ ಪೂಜೆಯನ್ನು ಭಕ್ತಿ-ಶ್ರದ್ಧೆಗಳಿಂದ ಆಚರಿಸುತ್ತಿದ್ದನು. ತನ್ನ ಪರಾಕ್ರಮದಿಂದ ಎಲ್ಲ ಶತ್ರುಗಳನ್ನು ಗೆದ್ದಿದ್ದನು.

ಬುಭುಜೇ ಭುವಮವ್ಯಗ್ರಃ ಸ ರತ್ನಾಕರ ಮೇಖಲಾಮ್ ।

ಆ ರಾಜನು ಸಮುದ್ರದ ತನಕವಿರುವ ಸಮಸ್ತ ಭೂಮಂಡಲವನ್ನು ಅನುಭವಿಸಿದನು.

ತೇನ ಸನ್ನಿಹಿತಾ ರಾಜ್ಞಾ ಸಮೇತಾಃ ಶತ್ರವಃ ಪರೇ ॥೨೪॥
ಮಾಹಿಷ್ಮತೀಂ ಪುರೀಂ ಗತ್ವಾ ತ್ರೈಗರ್ತ್ಯೈಃ ಪೀಡಿತೋ ರಣೇ ।

ಒಮ್ಮೆ ಅವನ ಸಮೀಪದ ದೇಶದ ರಾಜನ ಜೊತೆ ಅನೇಕ ಶತ್ರುಗಳು ಸೇರಿಕೊಂಡರು. ತ್ರಿಗರ್ತ ದೇಶದ ರಾಜನು ಮಾಹಿಷ್ಮತಿ ಎಂಬ ಸೋಮದತ್ತನ ಪಟ್ಟಣವನ್ನು ಆಕ್ರಮಣ ಮಾಡಿಕೊಳ್ಳುವುದಕ್ಕಾಗಿ ಯುದ್ಧ ಮಾಡಲು ಬಂದನು.

ಅಕ್ಷೋಹಿಣೀಸಹಸ್ರೈಶ್ಚ ಹ್ಯಯುತೈಃ ಕರಿಣಾಂ ವ್ರಜೈಃ ॥೨೩॥
ಅಶ್ವೈಃ ಕಾಶ್ಮೀರಜೈಸ್ತಾತ ಲಕ್ಷಕೋಟಿಸಮನ್ವಿತೈಃ ।
ಸಂಗ್ರಾಮಸ್ತುಮುಲಸ್ತತ್ರ ಸೋಮದತ್ತಸ್ಯ ತೈರಭೂತ್ ॥೨೬॥

ಆಗ ಸೋಮದತ್ತನು ಸಾವಿರ ಅಕ್ಷೋಹಿಣಿ ಸೈನ್ಯದಿಂದ ಪರಿವೃತನಾಗಿ ಹತ್ತುಸಾವಿರ ಆನೆಗಳಿಂದ ಕಾಶ್ಮೀರದ ಲಕ್ಷಕೋಟಿ ಕುದುರೆಗಳಿಂದ ಕೂಡಿ, ಆ ತ್ರಿಗರ್ತರಾಜನ ಮೇಲೆ ಭಯಂಕರವಾದ ಯುದ್ಧವನ್ನು ಮಾಡಿದನು.

ಶಕ್ತಿತೋಮರಖಡ್ಗೈಶ್ಚ ಭಿಂಡಿವಾಲೈಸ್ತಥಾಶ್ಮಭಿಃ ।
ಯಥಾ ದೇವಾಸುರಂ ಯುದ್ಧಂ ತಥಾಭೂತ್ಕಿಮು ವರ್ಣ್ಯತೇ ॥೨೭॥

ಆ ತ್ರಿಗರ್ತದೇಶದ ರಾಜನೂ ಕೂಡ ಬಹಳ ಸೈನ್ಯವನ್ನು ಹೊಂದಿ, ಬಲಿಷ್ಠವಾಗಿ ಯುದ್ಧವನ್ನು ಮಾಡಿದನು. ಶಕ್ತ್ಯಾಯುಧ, ತೋಮರ, ಖಡ್ಗ, ಭಿಂಡಿವಾಲ ಮೊದಲಾದ ಆಯುಧಗಳಿಂದ ಯುದ್ಧವು ಘೋರವಾಗಿ ನಡೆಯಿತು. ದೇವಾಸುರರ ಯುದ್ಧದಂತೆ ಅದು ಕಾಣಿಸುತ್ತಿತ್ತು.

ಪರೈರ್ಹತಬಲಸ್ಸಂಖ್ಯೇ ಯಯೌ ಗರ್ಗಾಶ್ರಮಂ ಪ್ರತಿ ।
ತತ್ರೈವ ಪಂಚ ಮಾಸಾನ್ವೈ ಸ್ಥಿತ್ವಾ ಶೋಕಸಮನ್ವಿತಃ ॥೨೮॥

ಅಂತಿಮವಾಗಿ ಸೋಮದತ್ತ ರಾಜನು ಸೋತನು. ತನ್ನ ಸೈನ್ಯವನ್ನು ಕಳೆದುಕೊಂಡನು. ನಿರಾಯುಧನಾಗಿ ಸೋಲನ್ನೊಪ್ಪಿಕೊಂಡು ರಾಜ್ಯವನ್ನು ಪರಿತ್ಯಾಗ ಮಾಡಿ, ಗರ್ಗ ಮುನಿಗಳ ಆಶ್ರಮಕ್ಕೆ ತೆರಳಿದನು. ಅಲ್ಲಿ ಅತ್ಯಂತ ದುಃಖದಿಂದ ಐದು ತಿಂಗಳ ಕಾಲ ವಾಸ ಮಾಡಿದನು.

ಪಂಗುತ್ವಮಪಿ ಮೂಕತ್ವಮಂಧತ್ವಮಗಮನ್ನೃಪ ।
ರಾಜ್ಯಭ್ರಷ್ಟಂ ಪತಿಂ ಪತ್ನೀ ಪ್ರಾಪ್ತುಕಾಮಂ ಪುನಃ ಪ್ರಿಯಮ್ ॥೨೯॥

ಅತ್ಯಂತ ಖಿನ್ನನಾದ ರಾಜನು ಕೈಕಾಲಿಲ್ಲದ ಕುಂಟನಂತೆ ಇದ್ದನು. ಬಾಯಿ ಇಲ್ಲದ ಮೂಕನಂತಾದನು. ಕಣ್ಣಿಲ್ಲದ ಕುರುಡನಂತಾದನು. ರಾಜ್ಯವನ್ನು ಕಳೆದುಕೊಂಡು ಬಹಳ ದುಃಖಿಸುತ್ತಿದ್ದನು. ಇಂಥ ರಾಜನನ್ನು ಕುರಿತು, ಅವನ ಪತ್ನಿಯು ಅವನ ಉದ್ಧಾರಕ್ಕಾಗಿ ಅತ್ಯಂತ ಪ್ರಿಯವಾದ ಸಮಾಧಾನದ ಮಾತುಗಳನ್ನು ಆಗಾಗ ಹೇಳುತ್ತಿದ್ದಳು.

ಪ್ರಲಪಂತಂ ಮುಹುಃ ಪುತ್ರಾನ್ ಹತಾನ್ ಯುದ್ಧೇ ಸುದುರ್ಲಭಾನ್ ।
ಪುತ್ರಾಂಶ್ಚ ರಾಜ್ಯಭೋಗಂ ಚ ಸಮುದ್ದಿಶ್ಯ ಪುನಃ ಪುನಃ ॥೩೦॥
ಆಶ್ವಾಸಯಂತೀ ಸಾ ದೇವೀ ಜಗೌ ಶ್ಲೋಕಚತುಷ್ಟಯಮ್ ।

ಮತ್ತೆ ಮತ್ತೆ ವಿಲಾಪ ಮಾಡುತ್ತಿರುವ ದುರ್ಲಭರಾದ ಮಕ್ಕಳನ್ನು ಕಳೆದುಕೊಂಡ ರಾಜ್ಯದ ಭೋಗಗಳನ್ನೆಲ್ಲಾ ನಾಶಮಾಡಿಕೊಂಡ ತನ್ನ ಪತಿಯನ್ನು ಕುರಿತು ಪುನಃ ಪುನಃ ಸಮಾಧಾನದ ಮಾತುಗಳನ್ನು ಹೇಳಿದಳು. ಆಗ ಈ ಮುಂದಿನ ನಾಕು ಶ್ಲೋಕಗಳನ್ನು ಅವನ ಜ್ಞಾನೋದಯಕ್ಕಾಗಿ ಹೇಳಿದಳು.

ವೇದಿಕೋವಾಚ -

ಧೈರ್ಯಂ ವಿಪದಿ ಕರ್ತವ್ಯಂ ಸಂಪತ್ತೌ ಚ ಕ್ಷಮಾ ವರಾ ॥೩೧॥
ವಾಚಾಲತ್ವಂ ಸತಾಂ ಮಧ್ಯೇ ತದ್ವೈಶಾಸ್ತ್ರಪುರಸ್ಸರಮ್ ।
ವಿಕ್ರಮೋ ಯುಧಿ ಕರ್ತವ್ಯಃ ಸ್ಥಿರತ್ವಂ ಸ್ತ್ರೀಸಮೀಪತಃ ॥೩೨॥

ವಿಪತ್ತು ಬಂದಾಗ ಧೈರ್ಯವಾಗಿರಬೇಕು. ಸಂಪತ್ತು ಬಂದಾಗ ಕ್ಷಮೆಯಿಂದ ಇರಬೇಕು. ಸಜ್ಜನರ ಸಮೂಹದಲ್ಲಿ ಮಾತ್ರ ಉತ್ತಮವಾದ ಮಾತುಗಳನ್ನಾಡಬೇಕು. ಆ ಮಾತುಗಳು ಶಾಸ್ತ್ರಸಮ್ಮತವಾಗಿರಬೇಕು. ಯುದ್ಧದಲ್ಲಿ ಪರಾಕ್ರಮಶಾಲಿ-ಯಾಗಿರಬೇಕು. ಸ್ತ್ರೀಯರ ಜೊತೆ ಸ್ಥಿರವಾದ ಬುದ್ಧಿಯುಳ್ಳವನಾಗಿರಬೇಕು.

ಐಶ್ವರ್ಯೇ ತು ಸದಾ ಶಾಂತಿಃ ಶಶ್ವದ್ಭಕ್ತಿಸ್ತು ಭೂಸುರೇ ।
ಭವಿತವ್ಯಂ ಭವತ್ಯೇವ ನಾರಿಕೇಲಫಲಾಂಬುವತ್ ॥೩೩॥

ಐಶ್ವರ್ಯವು ಬಂದಾಗ ಶಾಂತಿಯಿಂದ ಇರಬೇಕು. ನಿರಂತರ ಬ್ರಾಹ್ಮಣರಲ್ಲಿ ಭಕ್ತಿಸಂಪನ್ನರಾಗಿರಬೇಕು. ಯಾವುದು ಆಗಬೇಕೋ, ಅದು ತೆಂಗಿನಕಾಯಿಯ ಒಳಗೆ ನೀರು ಹೇಗೆ ಬರುತ್ತದೋ, ಅದರಂತೆ ಆಗಿಯೇ ತೀರುತ್ತದೆ.

ಗಂತವ್ಯಂ ಗಚ್ಛತಿ ಸದಾ ಗಜಭುಕ್ತ ಕಪಿತ್ಥವತ್ ।
ಯದ್ಭಾವಿ ತದ್ಭವತ್ಯೇವ ಯದಭಾವಿ ನ ತದ್ಭವೇತ್ ॥೩೪॥

ಯಾವುದು ಹೋಗಬೇಕೋ ಅದು ತಾನಾಗಿಯೇ ಹೋಗುತ್ತದೆ. ಆನೆಯು ತಿಂದ ಬೇಲದ ಹಣ್ಣಿನ ಒಳಗೆ ಹಣ್ಣು ಮಾತ್ರ ನಾಶವಾಗುವಂತೆ ಹೋಗುವುದು

ಹೋಗಿಯೇ ಹೋಗುತ್ತದೆ. ಆಗುವುದೆಲ್ಲವೂ ಆಗಿಯೇ ತೀರುತ್ತದೆ. ಆಗಲಾರದ್ದು ಎಂದೂ ಆಗುವುದಿಲ್ಲ.

ಇತಿ ನಿಶ್ಚಿತ ಬುದ್ಧೀನಾಂ ನ ಚಿಂತಾ ಬಾಧಕತೇ ಕ್ವಚಿತ್ ।
ಏವಂ ಮನೀಷಿಣಃ ಪ್ರಾಹುರ್ನೀತಿಶಾಸ್ತ್ರವಿದೋ ನೃಪ ॥೩೫॥

ಯಾರು ಈ ಮರ್ಮವನ್ನು ತಿಳಿದು ನಿಶ್ಚಿತವಾದ ಬುದ್ಧಿಯನ್ನು ಹೊಂದಿರುತ್ತಾರೋ, ಅಂಥವರನ್ನು ಚಿಂತೆಯು ಪೀಡಿಸುವುದಿಲ್ಲ. ನೀತಿಶಾಸ್ತ್ರಜ್ಞರಾದ ಬುದ್ಧಿವಂತರು ಹೀಗೆ ತಿಳಿದು ಸ್ಥಿತಪ್ರಜ್ಞರಾಗಿರುತ್ತಾರೆ.

ಮುಂಚಶೋಕಂ ಚ ಮೋಹಂ ಚ ಚಿಂತಾ ದೇಹವಿನಾಶಿನೀ ।
ಗರ್ಗಾಶ್ರಮಮಿದಂ ರಾಜನ್ ಪ್ರಾಪಯಿಷ್ಯೇ ತದಂತಿಕಮ್ ॥೩೬॥

ಆಗಾಧವಾದ ದುಃಖವನ್ನು ಪರಿತ್ಯಾಗ ಮಾಡು. ಅಜ್ಞಾನವನ್ನು ಬಿಟ್ಟುಬಿಡು. ಚಿಂತೆಯು ದೇಹದ ಜೊತೆ ಆತ್ಮನನ್ನೂ ಕೂಡ ನಾಶ ಮಾಡುತ್ತದೆ. ಪ್ರಭುವೇ ! ಇದು ಗರ್ಗಋಷಿಗಳ ಆಶ್ರಮವಾಗಿದೆ. ಅವರ ಬಳಿ ನಿನ್ನನ್ನು ಕರೆದುಕೊಂಡು ಹೋಗಿ ಸಮಾಧಾನ ಮಾಡುತ್ತೇನೆ.

ಸ ತೇ ದಾಸ್ಯತಿ ಧರ್ಮಾತ್ಮಾ ಸರ್ವಾನ್ ಕಾಮಾನಶೇಷತಃ ।

ಆ ಮಹರ್ಷಿಗಳು ನಿನ್ನ ಎಲ್ಲ ಅಭೀಷ್ಟಗಳನ್ನು ನೆರವೇರಿಸುತ್ತಾರೆ.

ಭೀಷ್ಮ ಉವಾಚ -

ಸಾಂತ್ವಯಿತ್ವಾ ತದಾ ವೀರಂ ನೃಪತಿಂ ರಾಷ್ಟ್ರವರ್ಜಿತಮ್ ॥೩೭॥
ಅಶಕ್ತಂ ಗಮನೇ ದೇವೀ ಬಿಭ್ರತೀ ನಿಜಕಂಧರೇ ।
ಪ್ರಾಪಯಾಮಾಸ ಮುದಿತಾ ಗರ್ಗಾಶ್ರಮಮಕಲ್ಮಷಮ್ ॥೩೮॥

ಭೀಷ್ಮಾಚಾರ್ಯರು ಕಥೆಯನ್ನು ಮುಂದುವರೆಸುತ್ತಾರೆ - ಯುಧಿಷ್ಠಿರನೇ ! ಹೀಗೆ ಆ ಸಾಧ್ವಿಯು ತನ್ನ ಪತಿಯಾದ ರಾಜನನ್ನು ಸಾಂತ್ವನ ಮಾಡಿದಳು. ಆದರೂ ಅವನಿಗೆ ನಡೆಯಲೂ ಕೂಡ ಆಗುತ್ತಿರಲಿಲ್ಲ. ಅಂಥ ವೀರನಾದ ರಾಜ್ಯಪರಿಭ್ರಷ್ಟನಾದ ಆ ನೃಪತಿಯನ್ನು ತನ್ನ ಹೆಗಲಿನ ಮೇಲೆ ಹೊತ್ತು ಕೊಂಡು ಪಾಪರಹಿತವಾದ ಗರ್ಗಮಹರ್ಷಿಗಳ ಆಶ್ರಮಕ್ಕೆ ಸಂತೋಷದಿಂದ ತೆರಳಿದಳು.

ಪತಿಂ ತತ್ರ ಪ್ರತಿಷ್ಠಾಪ್ಯ ಮುನಿಂ ನತ್ವಾ ಪುನಃ ಪುನಃ ।
ಕ್ರಂದಮಾನಾ ತದಾ ಸಾಧ್ವೀ ಪೀನೋನ್ನತತಪಯೋಧರಾ ॥೩೯॥

ಮಹರ್ಷಿಗಳ ಎದುರಿನಲ್ಲಿ ಆ ಪತಿಯನ್ನು ಇಳಿಸಿದಳು. ಭಕ್ತಿಯಿಂದ ಗರ್ಗಮಹರ್ಷಿಗಳಿಗೆ ನಮಸ್ಕಾರ ಮಾಡಿದಳು. ಪುನಃ ಪುನಃ ನಮಿಸಿದಳು. ಕಣ್ಣೀರಿಡುತ್ತಾ ಪ್ರಾರ್ಥನೆ ಮಾಡಿದಳು.

ಚಂದ್ರಾನನಾ ಸುಕೇಶೀ ಚ ಬಿಂಬೋಷ್ಠೀ ಮಂಜುಭಾಷಿಣೀ ।
ಕರ್ಣಾಂತನಯನಾ ಬಾಲಾ ಚಂದ್ರಿಕಾಮಲಸುಚ್ಛವಿಃ ॥೪೦॥

ಆ ಪತಿವ್ರತೆಯು ಉನ್ನತವಾದ ಪಯೋಧರಗಳುಳ್ಳವಳು, ಚಂದ್ರನಂತೆ ಮುಖವುಳ್ಳವಳು, ಸುಂದರವಾದ ಕೂದಲುಗಳುಳ್ಳವಳು, ಬಿಂಬದಂತೆ ಕೆಂಪು ತುಟಿಗಳುಳ್ಳವಳು, ಇಂಪಾದ ಮಾತುಗಳುಳ್ಳವಳು, ಕಿವಿಯ ತನಕ ದೀರ್ಘವಾದ ಕಣ್ಣುಗಳುಳ್ಳವಳು, ಬೆಳದಿಂಗಳಿನಂತೆ ನಿಷ್ಕಲ್ಮಶವಾದ ದೇಹಕಾಂತಿಯುಳ್ಳವಳು.

ವೇದಿಕಾವೇದಿಮಧ್ಯಾ ಸಾ ಪಂಚವಿಂಶತಿವಾರ್ಷಿಕೀ ।
ಕೋಮಲಾಂಗೀ ತು ಸಾ ದೇವೀ ಶ್ಯಾಮಾ ಸಾಪ್ಯುತ್ಪಲೇಕ್ಷಣಾ ॥೪೧॥

ಯಜ್ಞವೇದಿಕೆಯಂತೆ ಕಟಿಪ್ರದೇಶವುಳ್ಳವಳು. ಇಪ್ಪತ್ತೈದು ವರ್ಷದ ತರುಣಿಯಾಗಿರುವಳು. ಕೋಮಲ ಶರೀರವುಳ್ಳವಳೂ, ನೀಲಮೇಘಶ್ಯಾಮ-ಬಣ್ಣದವಳೂ, ಅರಳಿದ ಕಣ್ಣುಗಳುಳ್ಳವಳೂ ಆಗಿರುವಳು.

ಮುನಿಂ ಪ್ರೋವಾಚ ಧರ್ಮಿಷ್ಠಾ ಪಾಹಿ ಪಾಹೀತಿ ಮೇ ಪತಿಮ್ ।
ಭಗವನ್ ಪತಿನಾ ಸಾರ್ಧಮಾಗತಾ ಶತ್ರುಪೀಡಿತಾ ॥೪೨॥

ಆ ಮುನಿಗಳ ಬಳಿ ಧರ್ಮಿಷ್ಠಳಾದ ಈ ಪತಿವ್ರತೆಯು ರಕ್ಷಿಸಿ ! ನಮ್ಮನ್ನು ರಕ್ಷಿಸಿ ! ಎಂಬುದಾಗಿ ಪ್ರಾರ್ಥಿಸಿದಳು. ಓ ಜ್ಞಾನಿಗಳೇ ! ಶತ್ರುಗಳಿಂದ ಪೀಡಿತನಾದ ಪತಿಯ ಜೊತೆ ನಾನಿಂದು ಬಂದು ನಿಮಗೆ ಶರಣಾಗತಳಾಗಿರುವೆನು.

ರಾಜ್ಯಭ್ರಷ್ಟೋ ಹ್ಯಯಂ ರಾಜಾ ತ್ವಾಮೇವ ಶರಣಂ ಗತಃ ।

ರಾಜ್ಯಭ್ರಷ್ಟನಾದ ನನ್ನ ಪತಿಯಾದ ಈ ರಾಜನು ನಿಮ್ಮನ್ನು ನಂಬಿ ಸಂಪೂರ್ಣವಾಗಿ ಶರಣಾಗತನಾಗಿರುವನು.

ಮುನಿಸ್ತತಶ್ಚಿರಂ ಧ್ಯಾತ್ವಾ ಧ್ಯಾನಮಾರ್ಗೇಣ ಚಕ್ಷುಷಾ ॥೪೩॥
ದೃಷ್ಟವಾನ್ ಸರ್ವಮೇವೈತದ್ರಾಜ್ಞಸ್ತಸ್ಯ ಮಹಾತ್ಮನಃ ।
ಉವಾಚ ಮುನಿಶಾರ್ದೂಲೋ ರಾಜಾನಂ ಮಹಿಷೀಸಖಮ್ ॥೪೪॥

ಅವನ ದುಃಖದ ಸ್ಥಿತಿಯನ್ನು ಕಂಡ ಗರ್ಗ ಋಷಿಗಳು ಚಿರಕಾಲ ಧ್ಯಾನಾಸಕ್ತರಾದರು. ಧ್ಯಾನಮಾರ್ಗದ ಮೂಲಕ ಆ ರಾಜನ ಏಳಿಗೆಯನ್ನು ಕಂಡುಕೊಂಡರು. ಧ್ಯಾನದಿಂದ ಹೊರಗೆ ಬಂದು, ಮಹಿಷಿಯ ಜೊತೆ ಇರುವ ರಾಜನನ್ನು ಕುರಿತು ಹೀಗೆ ಹೇಳಿದರು -

ಯುವಯೋಃ ಕಷ್ಟಮತ್ಯುಗ್ರಂ ಸರ್ವಭಾವಂ ಸುದುಸ್ಸಹಮ್ ।
ಯೇನೇದಮೀದೃಶಂ ಪ್ರಾಪ್ತಂ ತಂ ಬ್ರವೀಮಿ ಚ ತೇಽಧುನಾ ॥೪೫॥

ನಿಮ್ಮಿಬ್ಬರ ಕಷ್ಟ ಭಯಾನಕವಾಗಿದೆ. ಯಾರಿಂದಲೂ ಈ ಕಷ್ಟವನ್ನು ಸಹಿಸಲು ಸಾಧ್ಯವಿಲ್ಲ. ಇಂಥ ಘೋರವಾದ ಸ್ಥಿತಿಯು ಯಾವ ಕಾರಣದಿಂದ ನಿಮಗೆ ಬಂದಿದೆಯೊ, ಅದರ ಬಗ್ಗೆ ನಾನು ನಿಮಗೆ ಈಗ ಹೇಳುತ್ತೇನೆ ಕೇಳಿರಿ -

ದೇವೀನಾಮುತ್ತಮಾ ದೇವೀ ವ್ರತಾನಾಂ ಪ್ರವರೇ ಶುಭೇ ।
ಸರ್ವಕಾಮಪ್ರದಾ ದೇವೀ ಭಾರತೀ ನೈವ ಪೂಜಿತಾ ॥೪೬॥

ಲಕ್ಷ್ಮೀದೇವಿಯನ್ನು ಹೊರತಾಗಿ ಸಕಲ ದೇವತಾ ಸ್ತ್ರೀಯರಲ್ಲಿ ಸರಸ್ವತೀ ದೇವಿಯೇ ಶ್ರೇಷ್ಠಳಾಗಿದ್ದಾಳೆ. ಅವಳನ್ನು ಕುರಿತು ಮಾಡಬೇಕಾದ ಶ್ರೇಷ್ಠವಾದ ವ್ರತವೊಂದಿದೆ. ಆ ವ್ರತವು ಸರ್ವಕಾಮಪ್ರದವಾಗಿದೆ. ಆದರೆ ನೀವು ಎಚ್ಚರ ವಹಿಸದೇ ಆ ವ್ರತವನ್ನು ಪರಿತ್ಯಾಗ ಮಾಡಿರುವಿರಿ.

ತಸ್ಮಾತ್ತ್ವಮೀದೃಶೀಂ ಪ್ರಾಪ್ತೋ ಗತಿಂ ದುರವಬೋಧಿನೀಮ್ ।

ಸರಸ್ವತೀ ವ್ರತವನ್ನು ಆಚರಣೆ ಮಾಡದೇ ನೀವು ಇಂಥ ದುಃಸ್ಥಿತಿಯನ್ನು ಹೊಂದಿರುವಿರಿ.

ಅಹೋ ಮೂರ್ಖಾ ನರಾಃ ಸರ್ವೇ ಐಶ್ವರ್ಯಮದಗರ್ವಿತಾಃ ॥೪೭॥
ಧರ್ಮ್ಯಂ ವ್ರತಂ ನ ಕುರ್ವಂತಿ ಪೀಡಾಂ ಗಚ್ಛಂತಿ ದುಃಖಿತಾಃ ।

ಏನಾಶ್ಚರ್ಯ ! ಅನೇಕ ರಾಜರು ಹೀಗೆ ಮೂರ್ಖತನದಿಂದ ಐಶ್ವರ್ಯದ ಮದದಿಂದ ಗರ್ವಿತರಾಗಿ ಧರ್ಮಮಯವಾದ ಈ ಸರಸ್ವತೀ ವ್ರತವನ್ನೇ ಆಚರಣೆ ಮಾಡುವುದಿಲ್ಲ. ಇದರಿಂದ ಅತ್ಯಂತ ದುಃಖವನ್ನು ಹೊಂದುತ್ತಾರೆ.

ವ್ರತೋಪವಾಸಃ ಕರ್ತವ್ಯೋ ಹ್ಯಾತ್ಮನಃ ಶ್ರೇಯ ಇಚ್ಛತಾ ॥೪೮॥
ಅತ್ಯಂತಂ ಸುಖಮಾಪ್ನೋತಿ ಪರತ್ರಾಮುತ್ರ ಚ ಪ್ರಭೋ ।
ಕಿಮತ್ರ ಬಹುನೋಕ್ತೇನ ದೃಷ್ಟಮಾಶ್ಚರ್ಯಮುತ್ತಮಮ್ ॥೪೯॥

ಯಾರಿಗೆ ತಮಗೆ ಶ್ರೇಯಸ್ಸು ಪ್ರಾಪ್ತವಾಗಬೇಕೆಂಬ ಇಚ್ಛೆ ಇರುತ್ತದೆಯೋ ಅಂಥವನು ಸರಸ್ವತೀ ವ್ರತವನ್ನು ಉಪವಾಸದಿಂದ ಆಚರಣೆ ಮಾಡಬೇಕು. ಇದರಿಂದ ಬಹಳ ಸುಖವನ್ನು ಹೊಂದುತ್ತಾನೆ. ಈ ಲೋಕದಲ್ಲಷ್ಟೇ ಅಲ್ಲದೇ ಪರಲೋಕದಲ್ಲಿಯೂ ಕೂಡ ಸುಖವಾಗಿ ಬಾಳುತ್ತಾನೆ. ಇದರ ಬಗ್ಗೆ ಹೆಚ್ಚು ಏಕೆ ವರ್ಣಿಸಬೇಕು ! ಒಂದು ಅತ್ಯಂತ ಆಶ್ಚರ್ಯ ವಿಷಯವನ್ನು ನಿಮಗೆ ಹೇಳುತ್ತೇನೆ.

ಶುಭವ್ರತೇನ ಭಾರತ್ಯಾ ನಲೋ ವೈ ಪ್ರಾಪ್ತವಾನ್ ಪುರಮ್ ।
ವಿರೂಪಾಕ್ಷಸ್ಯ ಕೃಪಯಾ ಪಂಪಾತೀರನಿವಾಸಿನಃ ॥೫೦॥

ಪ್ರಸಿದ್ಧನಾದ ನಳ ಎಂಬ ರಾಜನು ಶುಭಪ್ರದವಾದ ಈ ಸರಸ್ವತಿವ್ರತವನ್ನು ಆಚರಣೆ ಮಾಡಿ, ತನ್ನ ರಾಜ್ಯವನ್ನು ಮರಳಿ ಪಡೆದನು. ಪಂಪಾತೀರದಲ್ಲಿ ವಾಸವಿರುವ ವಿರೂಪಾಕ್ಷನ ಕೃಪೆಗೆ ಪಾತ್ರನಾದನು.

ಪ್ರಾಪ್ತವಾನಾಚಲಾಂ ಲಕ್ಷ್ಮೀಂ ನಲೋ ರಾಜಾ ವಿಚಕ್ಷಣಃ ।

ಅಚಲವಾದ ಸಂಪತ್ತನ್ನು ಆ ಬುದ್ಧಿವಂತನಾದ ನಲರಾಜನು ಪಡೆದು ಸುಖವನ್ನು ಪಡೆದನು.

ಏತಚ್ಛ್ರುತ್ವಾ ತು ಸಾ ದೇವೀ ವೇದಿಕಾ ಶುಭಲೋಚನಾ ॥೫೧॥
ನತ್ವಾ ಪುನಃ ಪುನಃ ಪ್ರಾಹ ಋಷಿಂ ಪರಮಧಾರ್ಮಿಕಮ್ ।

ಮಹರ್ಷಿಗಳ ಮಾತನ್ನು ಕೇಳಿದ ಪತಿವ್ರತೆಯಾದ ಆ ಶುಭಲೋಚನಳಾದ ವೇದಿಕಾ ಎಂಬುವಳು ಬಹಳ ಆಶ್ಚರ್ಯಭರಿತಳಾದಳು. ಮಹರ್ಷಿಗಳಿಗೆ ಪುನಃ ಪುನಃ ನಮಸ್ಕಾರ ಮಾಡಿ, ಪ್ರಶ್ನಿಸಿದಳು.

ವೇದಿಕೋವಾಚ -

ವಿರೂಪಾಕ್ಷಸ್ಯ ಮಹಾತ್ಮ್ಯಂ ಪಂಪಾತೀರನಿವಾಸಿನಃ ॥೫೨॥
ತೀರ್ಥಸ್ಯ ವಿಭವಂ ಮೇಽದ್ಯ ವಿಸ್ತರಾದ್ವಕ್ತುಮರ್ಹಸಿ ।

ವೇದಿಕೆಯು ಕೇಳುತ್ತಾಳೆ. ಮಹಾತ್ಮನಾದ ಪಂಪಾತೀರ ನಿವಾಸಿಯಾದ ಆ ವಿರೂಪಾಕ್ಷನ ಮಹಿಮೆಯನ್ನು ಮತ್ತು ಆ ಪಂಪಾತೀರ್ಥದ ವೈಭವವನ್ನು ವಿಸ್ತಾರವಾಗಿ ನನಗೆ ತಿಳಿಸಿರಿ.

ಗರ್ಗ ಉವಾಚ -

ಶೃಣು ದೇವಿ ಪ್ರವಕ್ಷ್ಯಾಮಿ ಸರ್ವಪಾಪಪ್ರಣಾಶನಮ್ ॥೫೩॥
ತುಂಗಭದ್ರಾ ಶುಭಂ ತೀರ್ಥಂ ಕೋಟಿಶಂಕರಸಂಭವಮ್ ।
ಯಸ್ಯ ಸ್ಮರಣಮಾತ್ರೇಣ ವಾಜಪೇಯಫಲಂ ಲಭೇತ್ ॥೫೪॥

ಗರ್ಗಾಚಾರ್ಯರು ಉತ್ತರಿಸುತ್ತಾರೆ - ದೇವೀ ! ಹೇಳುತ್ತೇನೆ ಕೇಳು. ಎಲ್ಲಾ ಪಾಪಗಳನ್ನು ನಾಶ ಮಾಡುವ ಆ ಪಂಪಾತೀರ್ಥದ ಮಹಿಮೆಯನ್ನೂ ಕೂಡ ಹೇಳುತ್ತೇನೆ. ಕಲ್ಯಾಣಕರವಾದ ತುಂಗಭದ್ರಾ ಎಂಬ ತೀರ್ಥವು ಕೋಟಿಸಂಖ್ಯೆಯ ವಿರೂಪಾಕ್ಷ ಲಿಂಗಗಳ ಉದ್ಭವಸ್ಥಾನವಾಗಿದೆ. ಅದರ ಸ್ಮರಣೆಯನ್ನು ಮಾಡುವುದರಿಂದಲೇ ವಾಜಪೇಯ ಯಾಗವು ಮಾಡಿದ ಪುಣ್ಯವು ಬರುತ್ತದೆ.

ವಿರೂಪಾಕ್ಷಂ ಶಿವಂ ದೃಷ್ಟ್ವಾ ನರಾಃ ಪಾಪರತಾ ಅಪಿ ।
ವಿಮುಕ್ತಕಿಲ್ಬಿಷಾ ಏತೇ ರುದ್ರಲೋಕಾಧಿವಾಸಿನಃ ॥೫೫॥

ಪಾಪದಲ್ಲಿ ಆಸಕ್ತರಾದ ಮನುಷ್ಯರೂ ಕೂಡ ವಿರೂಪಾಕ್ಷನ ದರ್ಶನವನ್ನು ಮಾಡುವುದರಿಂದ ಪಾಪರಹಿತರಾಗುತ್ತಾರೆ. ಅಂತಿಮವಾಗಿ ರುದ್ರಲೋಕದಲ್ಲಿಯೇ ವಾಸಮಾಡುವ ಸೌಭಾಗ್ಯವನ್ನು ಹೊಂದುತ್ತಾರೆ.

ತಸ್ಮಿನ್ ಬ್ರಹ್ಮಶಿಲಾಮಧ್ಯೇ ದೇವವೃಂದೈರಭಿಷ್ಟುತಮ್ ।
ತಂ ತು ನತ್ವಾ ವಿರೂಪಾಕ್ಷಂ ಸರ್ವಲೋಕಾಧಿಪೋ ಭವೇತ್ ॥೫೬॥

ಅಲ್ಲೊಂದು ಬ್ರಹ್ಮಶಿಲೆಯಿದೆ. ಅದು ಸಕಲ ದೇವತೆಗಳಿಂದ ವಂದ್ಯವಾಗಿದೆ. ಆ ಬ್ರಹ್ಮಶಿಲೆಯ ಮಧ್ಯದಲ್ಲಿ ವಿರೂಪಾಕ್ಷನ ಸನ್ನಿಧಾನವಿದೆ. ಸಕಲ ಲೋಕಕ್ಕೆ ಆ ವಿರೂಪಾಕ್ಷನು ಒಡೆಯನಾಗಿದ್ದಾನೆ.

ಸ್ವಪ್ನಾದ್ವಾ ಕೈತವಾದ್ವಾಪಿ ವಿರೂಪಾಕ್ಷೇತಿ ಯೋ ವದೇತ್ ।
ಗಂಗಾಸ್ನಾನಫಲಂ ತಸ್ಯ ಭವೇತ್ಪಾಪಕ್ಷಯೋ ನೃಪ ॥೫೭॥

ಯುಧಿಷ್ಠಿರನೇ ! ಯಾವ ವ್ಯಕ್ತಿಯು ಸ್ವಪ್ನದಲ್ಲಿ ಅಥವಾ ತಮಾಷೆಗಾಗಿ ವಿರೂಪಾಕ್ಷ ಎಂಬುದಾಗಿ ಉಚ್ಚಾರ ಮಾಡಿ, ಅಂತಿಮವಾಗಿ ಅವನಲ್ಲಿ ಭಕ್ತಿಯನ್ನು ಹೊಂದುತ್ತಾನೋ, ಅವನು ಗಂಗಾಸ್ನಾನ ಮಾಡಿದ ಫಲವನ್ನು ಹೊಂದುತ್ತಾನೆ. ಎಲ್ಲಾ ಪಾಪಗಳನ್ನು ಪರಿಹರಿಸಿಕೊಳ್ಳುತ್ತಾನೆ.

ಪಿತ್ರೋರ್ಯದಿ ನೃಪಾಸ್ಥೀನಿ ನಖಕೇಶಾನಿ ವಾ ಪುನಃ ।
ವಾಮಭಾಗೇ ಮಹಾನದ್ಯಾಂ ದೇವದೇವಸ್ಯ ಚಾಜ್ಞಯಾ ॥೫೮॥

ಓ ನೃಪೋತ್ತಮನೇ ! ಯಾವ ವ್ಯಕ್ತಿಯು ತನ್ನ ತಂದೆತಾಯಿಯ ಅಸ್ಥಿ ವಿಸರ್ಜನೆಯನ್ನು ನಖಕೇಶಗಳ ವಿಸರ್ಜನೆಯನ್ನು ಈ ವಿರೂಪಾಕ್ಷನ ಆಜ್ಞೆಯಂತೆ ಅವನ ಎಡಭಾಗದ ನದಿಯ ಸ್ಥಳದಲ್ಲಿ ಮಾಡುತ್ತಾನೋ ಅವನು ವಂಶೋದ್ಧಾರಕನಾಗುತ್ತಾನೆ.

ಪ್ರಕ್ಷಿಪ್ತಮಾತ್ರೇ ತದ್ವಂಶ್ಯಾಸ್ತೇಷಾಂ ಯೇಽಪಿ ಚ ತತ್ಪದಮ್ ।
ಭವಿಷ್ಯತಿ ನರಶ್ರೇಷ್ಠ ಕಿಮು ತತ್ತೀರವಾಸಿನಾಮ್ ॥೫೯॥

ನೃಪಶ್ರೇಷ್ಠನೇ ! ಹೀಗೆ ಅಸ್ಥಿವಿಸರ್ಜನೆ ಮಾಡುವುದರಿಂದ ಅವನ ವಂಶದಲ್ಲಿ ಹುಟ್ಟಿದವರೆಲ್ಲರೂ ವಿರೂಪಾಕ್ಷನ ಸ್ಥಾನವನ್ನು ಹೊಂದುತ್ತಾರೆ. ಹೀಗಿರುವಾಗ ಆ ತುಂಗಭದ್ರೆಯ ತೀರದಲ್ಲೇ ವಾಸಿಸುವರ ಮಹತ್ವವನ್ನು ಹೇಳಲು ಹೇಗೆ ಸಾಧ್ಯ ?

ತುಂಗಭದ್ರಾ ಮಹಾದೇವೀ ಪಾಪಘ್ನೀ ಪುಣ್ಯದಾಯಿನೀ ।
ಮಜ್ಜಂತಿ ಯೇ ಮಹಾರಾಜ ತೇಷಾಂ ಪಾಪಂ ಭಿನತ್ತಿ ಹಿ ॥೬೦॥

ಮಹಾರಾಜನೇ ! ಅತ್ಯಂತ ಪುಣ್ಯಪ್ರದಳೂ ಸಕಲಪಾಪ ಪರಿಹಾರಕಳೂ ಆದ ಆ ತುಂಗೆಭದ್ರೆಯಲ್ಲಿ ಯಾವ ಪಾಪಿ ಜನನು ಸ್ನಾನವನ್ನು ಮಾಡುತ್ತಾನೋ ಅವನು ತನ್ನೆಲ್ಲ ಪಾಪಗಳನ್ನು ಪರಿಹರಿಸಿಕೊಳ್ಳುತ್ತಾನೆ.

ಸರಯೂರ್ನರ್ಮದಾ ಗಂಗಾ ಗೌತಮೀ ಶಾರದಾ ನೃಪ ।
ತುಂಗಭದ್ರಾ ಚ ಕಾವೇರಿ ಲೋಕೇ ಪುಣ್ಯಮಾಃ ಸ್ಮೃತಾಃ ॥೬೧॥

ರಾಜನೇ ! ಈ ಭೂಲೋಕದಲ್ಲಿ ಸರಯೂ, ನರ್ಮದಾ, ಗಂಗಾ, ಗೋದಾವರಿ, ಸರಸ್ವತೀ, ತುಂಗಭದ್ರಾ, ಕಾವೇರಿ ಇವುಗಳು ಮಹಾನದಿಗಳೆಂದು ಪ್ರಖ್ಯಾತವಾಗಿವೆ. ಅತ್ಯಂತ ಪುಣ್ಯಪ್ರದಗಳಾಗಿವೆ.

ಪುರಾ ನಲೋ ಮಹಾರಾಜಃ ಕಲಿನಾ ಸಂ ಪ್ರಪೀಡಿತಃ ।
ಸ್ವಂ ದೇಶಂ ಸಂಪರಿತ್ಯಜ್ಯ ಪ್ರಾಪ್ತವಾನತ್ರ ಬಂಧುಮಾನ್ ॥೬೨॥

ಹಿಂದೆ ಆ ನಳಮಹಾರಾಜನು ಕಲಿಯಿಂದ ಪೀಡಿತನಾಗಿ ತನ್ನ ರಾಜ್ಯವನ್ನು ಕಳೆದುಕೊಂಡು ಈ ತುಂಗಭದ್ರೆಯ ದಡಕ್ಕೆ ಆಗಮಿಸುತ್ತಾನೆ.

ಸ್ನಾತ್ವಾ ತತ್ರ ತ್ರಿಕಾಲೇಷು ನಿಗೃಹೀತಾಖಿಲೇಂದ್ರಿಯಃ ।
ಶಂಕರಂ ತೋಷಯಾಮಾಸ ವಿರೂಪಾಕ್ಷಂ ಮಹಾಮತಿಃ ॥೬೩॥

ವಿಶಾಲಮನಸ್ಕನಾದ ಸಮಸ್ತ ಇಂದ್ರಿಯಗಳನ್ನು ನಿಗ್ರಹ ಮಾಡಿದ ಆ ನಳಮಹಾರಾಜನು ಮೂರು ಕಾಲಗಳಲ್ಲಿತುಂಗಭದ್ರೆಯಲ್ಲಿ ಮಿಂದು ಶಂಕರನನ್ನು ಸಂತೋಷಪಡಿಸುತ್ತಾನೆ.

ತಸ್ಯ ಪ್ರಸನ್ನೋ ದೇವೇಶಃ ಕೃಪಾಂ ಚಕ್ರೇ ಸುಶೋಭನಾಮ್ ।
ಅಶರೀರೋ ವಿರೂಪಾಕ್ಷೋ ದಿವಿ ಸ್ಥಿತ್ವಾ ಗಣೈರ್ಯುತಃ ॥೬೪॥

ಪ್ರಸನ್ನನಾದ ದೇವತೆಗಳ ಒಡೆಯನಾದ ಆ ವಿರೂಪಾಕ್ಷನು ತನ್ನ ಸ್ವರೂಪವನ್ನು ತೋರಿಸದೇ ಆಕಾಶದಲ್ಲಿ ಪ್ರಮಥಗಣಗಳ ಜೊತೆ ನಿಂತು ಹೀಗೆ ಮಾತನಾಡಿದನು-

ಪ್ರೋವಾಚ ತಂ ವಿರೂಪಾಕ್ಷೋ ಜಗದೀಶೋ ಜಗನ್ಮಯಃ ।
ಕೃತಾರ್ಥೋಽಸಿ ಮಹಾಭಾಗ ತಪಸಾ ತೋಷಿತೋಽಸ್ಮ್ಯಹಮ್ ॥೬೫॥

ಜಗದೀಶನಾದ ಜಗತ್ತಿನೆಲೆಲ್ಲೆಡೆ ವ್ಯಾಪಿಸಿದ ಆ ವಿರೂಪಾಕ್ಷನು ಆ ರಾಜನನ್ನು ಕುರಿತು ಓ ಮಹಾಭಾಗ್ಯಶಾಲಿಯೇ ! ನೀನು ಕೃತಾರ್ಥನಾಗಿರುವಿ. ತಪಸ್ಸಿನಿಂದ ನನ್ನನ್ನು ಮೆಚ್ಚಿಸಿರುವಿ ಎಂದು ಹೇಳಿದನು.

ವರಂ ವರಯ ಭದ್ರಂ ತೇ ವಿದ್ಧಿ ಮಾಂ ಪಾರ್ವತೀಪತಿಮ್ ।

ನಿನಗೆ ಮಂಗಳವಾಗಲಿ ! ಪಾರ್ವತೀಪತಿಯಾದ ನನ್ನ ಬಳಿ ನಿನ್ನ ಅಪೇಕ್ಷಿತವಾದ ವರವನ್ನು ಅಪೇಕ್ಷಿಸು.

ನಲ ಉವಾಚ

ಕಿಮರ್ಥಂ ದೇವ ದೇವೇಶ ಪ್ರಾರ್ಥನಾದಾನತತ್ಪರಃ ॥೬೬॥
ಅದೃಷ್ಟಪೂರ್ವೋ ಭಗವಾನಾಕಾಶೇ ವರ್ತಸೇಽಧುನಾ ।
ಅಹಂ ಪಾಪೀತಿ ವಿದಿತಃ ಪೂರ್ವಸ್ಮಿನ್ನಪಿ ಜನ್ಮನಿ ॥೬೭॥

ದೇವತೆಗಳಿಗೂ ಒಡೆಯನಾದ ಮಹಾದೇವನೇ ! ನನ್ನ ಪ್ರಾರ್ಥನೆಗೆ ಓಗೊಟ್ಟು ಆಗಮಿಸಿದ ನೀನು ಏಕೆ ನಿನ್ನ ಸ್ವರೂಪವನ್ನು ತೋರಿಸುತ್ತಿಲ್ಲ? ನಿನ್ನ ಸ್ವರೂಪವನ್ನು ತೋರಿಸದೇ ಆಕಾಶದಲ್ಲಿ ನಿಂತು ಏಕೆ ಮಾತನಾಡುತ್ತಿರುವಿ ? ನಾನು ಯಾವ ಜನ್ಮದಲ್ಲಿ ಯಾವ ಪಾಪವನ್ನು ಮಾಡಿರುವೆನು ? ಯಾವ ಪಾಪ ಪ್ರಯುಕ್ತವಾಗಿ ನನಗೆ ನೀನು ದರ್ಶನ ನೀಡುತ್ತಿಲ್ಲ ?

ಸರ್ವಪಾಪಹರಂ ದೇವಂ ದ್ರಷ್ಟುಂ ತ್ವಾಮಕ್ಷಮೋಽಭವಮ್ ।
ಕಿಂ ನು ಕರ್ಮ ಕೃತಂ ದೇವ ಕರ್ತವ್ಯಂ ಕಿಂ ನು ಪಾಪಿನಾ ॥೬೮॥

ನನ್ನೆಲ್ಲಾ ಪಾಪಗಳನ್ನು ಯಾವ ಕರ್ಮದಿಂದ ಪರಿಹರಿಸಿಕೊಳ್ಳಲು ಸಾಧ್ಯ ? ಆ ಪಾಪಗಳ ಪರಿಹಾರದಿಂದ ನಿನ್ನ ದರ್ಶನವು ಯಾವಾಗ ನನಗೆ ಆಗುತ್ತದೆ ? ನಾನೀಗ ಏನು ಮಾಡಬೇಕು ? ಪಾಪಿಯಾದ ನನಗೆ ಹೇಗೆ ಉದ್ಧಾರ ?

ವದ ಭೂತೇಶ ವಿತ್ತೇಶ ತತ್ಕರೋಮಿ ತವಾಜ್ಞಯಾ ।

ಭೂತಗಳ ಈಶನಾದ ವಿತ್ತೇಶನೇ ! ನಿನ್ನ ಆಜ್ಞೆಯಿಂದ ನೀನು ಹೇಳಿದಂತೆ ಆಚರಿಸುತ್ತೇನೆ.

ಈಶ್ವರ ಉವಾಚ

ಮುನಿಭಿಃ ಪ್ರೇರಿತೋ ಮೂರ್ಖೋ ದುಷ್ಟಪಾಪವಿವರ್ಧನಃ ॥೬೯॥
ಕಲಿಃ ಕಲೇವರೇ ಪ್ರೀತ್ಯಾ ಭವಾಂಸ್ತೇನಾನುವರ್ತತೇ ।
ತದ್ದೋಷಪರಿಹಾರಾರ್ಥಂ ಭಾರತೀವ್ರತಮುತ್ತಮಮ್ ॥೭೦॥
ಕುರುಷ್ವ ನರಶಾರ್ದೂಲ ಪ್ರತ್ಯಕ್ಷೋಸ್ಮಿ ತತಃ ಪರಮ್ ।

ಈಶ್ವರನು ಉತ್ತರಿಸುತ್ತಾನೆ - ಮೂರ್ಖನಾದ ದುಷ್ಟರ ಪಾಪವನ್ನು ಅಭಿವೃದ್ಧಿಗೊಳಿಸುವ ಕಲಿಯು ನಿನ್ನ ದೇಹದಲ್ಲಿ ಕುಳಿತ್ತಿದ್ದಾನೆ. ಆದ್ದರಿಂದ ನಾನು ನಿನಗೆ ದರ್ಶನವನ್ನು ನೀಡುತ್ತಿಲ್ಲ. ಕಲಿದೋಷ ಪರಿಹಾರಕ್ಕಾಗಿ ನೀನು ಶ್ರೇಷ್ಠವಾದ

ಸರಸ್ವತೀವ್ರತವನ್ನು ಆಚರಿಸು. ನರಶಾರ್ದೂಲನೇ ! ಆ ಸರಸ್ವತೀವ್ರತದ ಆಚರಣೆಯ ಬಳಿ ನಿನಗೆ ನಾನು ದರ್ಶನವನ್ನು ನೀಡುತ್ತೇನೆ.

ಸಹಸ್ರಮಾಯುರ್ದಾಸ್ಯಾಮಿ ತಾವದ್ರಾಜ್ಯಂ ಚ ಶಾಶ್ವತಮ್ ॥೭೧॥

ಕೀರ್ತಿಂ ಚ ವಿಪುಲಾಂ ಲೋಕೇ ಸ್ವರ್ಲೋಕಂ ತೇಽಪಿ ಶಾಶ್ವತಮ್ ।
ಪ್ರೀತ್ಯಾ ತವ ಕಲೇರ್ನಾಶಂ ಯಾವಚ್ಚಂದ್ರಿದಿವಾಕರಮ್ ॥೭೨॥

ನಿನಗೆ ಸಾವಿರ ವರ್ಷಗಳ ಕಾಲ ಆಯುಷ್ಯವನ್ನು ನೀಡುತ್ತೇನೆ. ನಿಷ್ಕಂಟಕವಾದ ರಾಜ್ಯವನ್ನೂ ಕೂಡ ನೀಡುತ್ತೇನೆ. ವಿಪುಲವಾದ ಕೀರ್ತಿಯನ್ನು, ನಿತ್ಯವಾದ ಸ್ವರ್ಗಲೋಕವನ್ನು ನಿನಗೆ ನೀಡಿ ರಕ್ಷಿಸುತ್ತೇನೆ. ಮತ್ತು ಆಚಂದ್ರಾರ್ಕಪರ್ಯಂತ ನಿನಗೆ ಕಲಿಪೀಡೆಯು ಆಗದಂತೆ ರಕ್ಷಿಸುತ್ತೇನೆ.

ನಲೋಽಪಿ ತಂ ನಮಸ್ಕೃತ್ಯಾ ವಿರೂಪಾಕ್ಷಂ ಜಗನ್ಮಯಮ್ ।
ಋತುಪರ್ಣಪುರಂ ಶ್ರೀಮಾನ್ ಯಯೌ ಧ್ಯಾಯನ್ಮಹೇಶ್ವರಮ್ ॥೭೩॥

ಜಗತ್ತಿನಲ್ಲಿ ಎಲ್ಲೆಡೆ ವ್ಯಾಪಿಸಿದ ಆ ವಿರೂಪಾಕ್ಷನನ್ನು ನಳನು ಭಕ್ತಿಯಿಂದ ನಮಸ್ಕಾರ ಮಾಡಿದನು. ಋತುಪರ್ಣರಾಜನ ಪಟ್ಟಣವಾದ ಆಯೋಧ್ಯೆಗೆ ಮಹೇಶ್ವರನನ್ನೇ ಧ್ಯಾನಿಸುತ್ತಾ ತೆರಳಿದನು.

ತುಂಗಭದ್ರಾಸಮಂ ಲೋಕೇ ನಾಸ್ತಿ ಕಿಂಚಿನ್ನೃಪೋತ್ತಮ ।
ಸ್ನಾತವ್ಯಮತ್ರ ಯತ್ನೇನ ಮಾಘಮಾಸೇ ವಿಶೇಷತಃ ॥೭೪॥

ತುಂಗಭದ್ರಾನದಿಗೆ ಸಮಾನವಾದ ನದಿ ಲೋಕದಲ್ಲಿ ಮತ್ತೊಂದು ಇಲ್ಲವೇ ಇಲ್ಲ. ನೃಪೋತ್ತಮನೇ! ಪ್ರಯತ್ನಪೂರ್ವಕವಾಗಿ ಮಾಘಮಾಸದಲ್ಲಿ ಈ ತುಂಗಭದ್ರೆಯಲ್ಲಿ ವಿಶೇಷವಾಗಿ ಸ್ನಾನ ಮಾಡಬೇಕು.

ಸ್ನಾತಾನಾಂ ಪಿತರಃ ಸರ್ವೇ ಬ್ರಹ್ಮಲೋಕನಿವಾಸಿನಃ ।
ದೇವರ್ಷಿಣಾ ಪುರಾ ಗೀತಾ ನಾರದೇನ ಮಹಾತ್ಮನಾ ॥೭೫॥

ಮಾಘಸ್ನಾನದಿಂದ ಪಿತೃಗಳು ಬ್ರಹ್ಮಲೋಕದಲ್ಲಿ ವಾಸಮಾಡುವರು. ನಾರದರು ಸ್ವತಃ ತುಂಗಭದ್ರೆಯ ಮಹಿಮೆಯನ್ನು ಗಾನ ಮಾಡಿರುವರು.

ಶ್ರೀಶೈಲಶಿಖರೇ ಸ್ಥಿತ್ವಾ ತಸ್ಮಾದಾಶ್ರಾವಿ ತನ್ಮಯಾ ।

ಶ್ರೀಶೈಲ ಎಂಬ ಪರ್ವತದಲ್ಲಿ ನಾರದರು ಹೇಳಿದ ತುಂಗಭದ್ರೆಯ ಮಹಿಮೆಯನ್ನು ಸ್ವತಃ ನಾನು ಕೇಳಿರುವೆನು.

ಇತಿ ದೇವೇನ ಸಂದಿಷ್ಟೋ ನಲೋ ನಾಮ ಮಹೀಪತಿಃ ॥೭೬॥
ತುಂಗಭದ್ರಾಂ ಸಮಾಗಮ್ಯ ಋತುಪರ್ಣೇನ ಧೀಮತಾ ।
ದೇವಸ್ಯ ಸನ್ನಿಧೌ ಕೃತ್ವಾ ವಿಧಿನಾ ನವಮೀವ್ರತಮ್ ॥೭೭॥

ವಿರೂಪಾಕ್ಷನ ಅಪ್ಪಣೆಯಂತೆ ನಳಮಹಾರಾಜನು ಋತುಪರ್ಣರಾಜನ ಜೊತೆ ತುಂಗಭದ್ರಾನದಿಗೆ ಆಗಮಿಸಿದನು. ಭಕ್ತಿಯಿಂದ ಸ್ನಾನವನ್ನು ಮಾಡಿ, ವಿರೂಪಾಕ್ಷನ ಸನ್ನಿಧಿಗೆ ತೆರಳಿ ಮಹಾನವಮಿಯ ವ್ರತವನ್ನು ವಿಧಿಪ್ರಕಾರವಾಗಿ ಆಚರಣೆ ಮಾಡಿದನು.

ಸ್ವಪುರಂ ಪ್ರಯಯೌ ಶ್ರೀಮಾನ್ ದಮಯಂತ್ಯಾ ಚ ಸಂಗತಃ ।
ಸರ್ವಾನ್ ಕಾಮಾನವಾಪ್ಯೈವ ಸ್ವರ್ಲೋಕೇಽದ್ಯಾಪಿ ವರ್ತತೇ ॥೭೮॥

ಮಹಾನವಮಿಯ ದಿವಸ ಸರಸ್ವತೀ ವ್ರತವನ್ನು ಆಚರಣೆ ಮಾಡಿದ ಪ್ರಭಾವದಿಂದ ನಳಮಹಾರಾಜನು ಕಳೆದುಕೊಂಡ ತನ್ನ ರಾಜ್ಯವನ್ನು ಪುನಃ ಪಡೆದನು. ದಮಯಂತಿಯನ್ನೂ ಕೂಡ ಹೊಂದಿದನು. ಸಕಲ ಇಷ್ಟಾರ್ಥಗಳನ್ನು ಹೊಂದಿದನು. ಅನೇಕ ಭೋಗಗಳನ್ನು ಅನುಭವಿಸಿದನು. ಅಂತಿಮವಾಗಿ ಸ್ವರ್ಗಲೋಕವನ್ನು ಹೊಂದಿದನು. ಅಲ್ಲಿ ಈಗಲೂ ಕೂಡ ಸುಖವಾಗಿ ಕಾಲ ಕಳೆಯುತ್ತಿದ್ದಾನೆ.

ತಸ್ಮಾತ್ತ್ವಮಪಿ ರಾಜೇಂದ್ರ ತತ್ರ ಗತ್ವಾ ವ್ರತಂ ಕುರು ।
ಇತ್ಯುಕ್ತಮಾತ್ರೇ ಮುನಿನಾ ಸರ್ವರೋಗವಿವರ್ಜಿತಾಮ್ ॥೭೯॥

ಓ ಸೋಮದತ್ತನೇ ! ನೀನೂ ಸಹ ನಳಮಹಾರಾಜನ ಆದರ್ಶದಲ್ಲಿ ಸರಸ್ವತೀವ್ರತವನ್ನು ಶ್ರದ್ಧೆಯಿಂದ ಆಚರಣೆ ಮಾಡು. ಹೀಗೆ ಆ ಗರ್ಗಋಷಿಗಳು ಎಲ್ಲ ರೋಗಗಳಿಗೆ ಪರಿಹಾರಕವಾದ ಭಾರತೀವ್ರತದ ಕ್ರಮವನ್ನು ನಿರೂಪಣೆ ಮಾಡಿದರು.

ತುಂಗಭದ್ರಾಂ ಸಮಾಗಮ್ಯ ಸಸ್ತ್ರೌ ವೇದಿಕಯಾ ಸಹ ।
ವಿರೂಪಾಕ್ಷಂ ಮಹಾದೇವಂ ನತ್ವಾ ಸಂಪೂಜ್ಯ ಭಕ್ತಿಮಾನ್ ॥೮೦॥

ಈ ಸೋಮದತ್ತರಾಜನು ತನ್ನ ಪತ್ನಿಯಾದ ವೇದಿಕೆಯ ಜೊತೆಗೆ ತುಂಗಭದ್ರೆಯ ನದಿಗೆ ಆಗಮಿಸಿದನು. ಅಲ್ಲಿ ವಿರೂಪಾಕ್ಷನನ್ನು ಭಕ್ತಿಯಿಂದ ಪೂಜಿಸಿದನು.

ಮುನಿನೋಕ್ತಂ ವ್ರತಂ ಕೃತ್ವಾ ಮುದಮಾಪ ಬಲಾನ್ವಿತಃ ।
ವಿರೂಪಾಕ್ಷಪ್ರಸಾದೇನ ಪುಣ್ಯತೀರ್ಥನಿಷೇವಣಾತ್ ॥೮೧॥

ಗರ್ಗಮುನಿಗಳಿಂದ ಹೇಳಲ್ಪಟ್ಟ ಸರಸ್ವತೀವ್ರತವನ್ನು ಆಚರಣೆ ಮಾಡಿ, ಆ ಸೋಮದತ್ತರಾಜನು ಅತ್ಯಂತ ಸಂತೋಷವನ್ನು ಹೊಂದಿದನು. ಪುಣ್ಯತೀರ್ಥಸ್ನಾನದಿಂದ ಹಾಗೂ ವಿರೂಪಾಕ್ಷನ ಅನುಗ್ರಹದಿಂದ ತನ್ನ ದೇಹದಲ್ಲಿ ಬಲವನ್ನು ಆರೋಗ್ಯವನ್ನು ಹೊಂದಿದನು.

ಪ್ರಾಪ್ತವಾನ್ ಸ್ವಪುರಂ ಶ್ರೀಮಾನ್ ಶತ್ರುಹಂತಾಭವತ್ತದಾ ।
ತಸ್ಮಾತ್ತ್ವಮಪಿ ರಾಜೇಂದ್ರ ಶತ್ರುಹಂತಾ ಭವಿಷ್ಯಸಿ ॥೮೨॥

ಮತ್ತು ತಾನು ಕಳೆದುಕೊಂಡ ರಾಜ್ಯವನ್ನು ಪುನಃ ಪಡೆದನು. ಸಂಪದ್ಭರಿತನಾದನು. ಸಕಲಶತ್ರುಗಳನ್ನು ನಿಗ್ರಹ ಮಾಡಿದನು. ಓ ಯುಧಿಷ್ಠಿರನೇ ! ಆ ಸೋಮದತ್ತರಾಜನ ಮಾರ್ಗದರ್ಶನದಲ್ಲಿ ಸರಸ್ವತೀವ್ರತವನ್ನು ಆಚರಣೆ ಮಾಡು. ಇದರಿಂದ ಶತ್ರುಗಳನ್ನು ಸದೆಬಡೆಯುವ ಸಾಮರ್ಥ್ಯವನ್ನು ಹೊಂದುವಿ.

ಗಚ್ಛ ಗಚ್ಛ ವಿರೂಪಾಕ್ಷಮತ್ರ ತ್ವಂ ಕಿಂ ಕರಿಷ್ಯಸಿ ।
ಸೀತಾಮದೃಷ್ಟ್ವಾ ರಾಮೋಽಪಿ ರಾವಣೇನ ಹೃತಾಂ ಪ್ರಿಯಾಮ್ ॥೮೩॥

ಧರ್ಮರಾಜನೇ ! ಅರಣ್ಯದಲ್ಲಿದ್ದು ಏನು ಮಾಡುವಿ ? ವಿರೂಪಾಕ್ಷದೇವನ ಸನ್ನಿಧಿಗೆ ತೆರಳು. ಶ್ರೀರಾಮಚಂದ್ರನೂ ಕೂಡ ತನ್ನ ಪತ್ನಿಯಾದ ಸೀತೆಯನ್ನು ರಾವಣನು ಕಳ್ಳತನ ಮಾಡಿದಾಗ ಇಲ್ಲಿಗೆ ತೆರಳಿದ್ದನು.

ಪಂಪಾಸರೋವರಂ ಗತ್ವಾ ಶ್ರಮಂ ಶೋಕಂ ಜಹೌ ತದಾ ।
ಮುದಮಾಪ ಸ ರಾಜೇಂದ್ರ ತುಂಗಾಂ ದೃಷ್ಟ್ವಾ ಸಭದ್ರಕಾಮ್ ॥೮೪॥

ರಾಜೇಂದ್ರನೇ ! ದುಃಖದಲ್ಲಿ ಶ್ರೀರಾಮಚಂದ್ರನು ಪಂಪಾಸರೋವರವನ್ನು ನೋಡಿದನು. ತನ್ನ ಮನಸ್ಸಿಗಾದ ದುಃಖವನ್ನು ದೇಹಕ್ಕೆ ಆದ ಆಯಾಸವನ್ನು ಇಲ್ಲಿ ಕಳೆದುಕೊಂಡು ಸಂತೋಷವನ್ನು ಹೊಂದಿದನು. ತುಂಗಭದ್ರೆ ನದಿಯನ್ನು ನೋಡಿ ಆನಂದವನ್ನು ಪಡೆದನು.

ವೈಶಂಪಾಯನ ಉವಾಚ -

ಶ್ರುತ್ವಾ ತದಾಖ್ಯಾನಮಶೇಷಮಾದ್ಯಂ ಧರ್ಮಾತ್ಮಜಃ ಶೋಕವಿಮುಕ್ತಚೇತಾಃ ।
ಮುದಂ ಪ್ರಪೇದೇ ಸಹ ವಿಪ್ರವರ್ಗ್ಯೈಃ ಸಹಾನುಜೋ ವೈ ಗತಕಲ್ಮಷೋऽಭೂತ್ ॥೮೫॥

॥ ಇತಿ ಶ್ರೀ ಮಹಾಭಾರತಖಿಲೇ ಹರಿವಂಶೇ ಆಶ್ಚರ್ಯಪರ್ವಣಿ
ಶೇಷಧರ್ಮೋಽಪಾಖ್ಯಾನೇ ಭಾರತೀವ್ರತಮಹಿಮಾ ವರ್ಣನಸಂಗ್ರಹಃ ಸಮಾಪ್ತಃ ॥

ವೈಶಂಪಾಯನರು ಹೇಳುತ್ತಾರೆ - ಹೀಗೆ ಯುಧಿಷ್ಠಿರನು ಭೀಷ್ಮಾಚಾರ್ಯರು ಹೇಳಿದ ಎಲ್ಲ ಕಥೆಯನ್ನು ಶ್ರದ್ಧೆಯಿಂದ ಕೇಳಿ ದುಃಖವನ್ನು ಪರಿಹರಿಸಿಕೊಂಡನು. ತನ್ನ ತಮ್ಮಂದಿರಿಂದ ಹಾಗೂ ಮಹರ್ಷಿಗಳಿಂದ ಕೂಡಿಕೊಂಡು ಸಂತೋಷವನ್ನು ಹೊಂದಿದನು.

ಮಹಾಭಾರತಖಿಲಭಾಗದ ಹರಿವಂಶದ ಆಶ್ಚರ್ಯಪರ್ವದಲ್ಲಿ
ಶೇಷಧರ್ಮ ಉಪಾಖ್ಯಾನದಲ್ಲಿ ಭಾರತೀವ್ರತಮಹಿಮೆಯ ವರ್ಣನೆಯ
ಸಂಗ್ರಹವು ಮುಗಿಯಿತು.

---

ಪಾವಂಜೆ ಗುರುರಾವ್ ಇವರು ೧೯೩೦ರಲ್ಲಿ ಪ್ರಕಟಿಸಿದ ಪುಸ್ತಕದಲ್ಲಿ ಇರುವ ಶ್ಲೋಕಗಳನ್ನು ತೆಗೆದುಕೊಂಡು ಇಲ್ಲಿ ಅನುವಾದ ಮಾಡಲಾಗಿದೆ.

* * * *

# ಸರಸ್ವತೀದೇವಿ

ಸೃಷ್ಟಿಯ ಪ್ರಾರಂಭದಲ್ಲಿ ಚತುರ್ಮುಖಬ್ರಹ್ಮನು ಸೃಷ್ಟಿಯನ್ನು ಪ್ರಾರಂಭಿಸಿದನು. ಆಗ ಅವನ ಒಂದೊಂದು ಅಂಗಗಳಿಂದ ಒಬ್ಬೊಬ್ಬ ದೇವತೆಗಳು ಹುಟ್ಟಿದರು. ನಾಲಿಗೆಯಿಂದ ಸರಸ್ವತೀ ಜನಿಸಿದಳು. ವಾಗಭಿಮಾನಿಯಾದ ಇವಳು ಅತ್ಯಂತ ಸುಂದರಿಯಾಗಿದ್ದಳು. ಆಗ ಚತುರ್ಮುಖನು ಇವಳನ್ನು ಕಾಮಿಸಿದಂತೆ ಅಸುರ ಮೋಹನಕ್ಕಾಗಿ ನಟಿಸಿದನು. ಆಗ ಚತುರ್ಮುಖನನ್ನು ಮರೀಚಿ ಮೊದಲಾದ ಮಹರ್ಷಿಗಳು ಮಗಳನ್ನು ಬಯಸುವುದು ತಪ್ಪು ಎಂಬುದಾಗಿ ಉಪದೇಶಿಸುವ ನಟನೆಯನ್ನು ಮಾಡಿದರು. ಅದನ್ನು ಕೇಳಿದ ಚತುರ್ಮುಖನು ಅವಳನ್ನು ವಿವಾಹವಾಗದೇ ತೊರೆದನು. ಆ ಕೃಶಾಂಗಿಯನ್ನು ಅನಂತರ ದುರ್ಜನರು ಸ್ವೀಕಾರ ಮಾಡಿದರು.

ಇಲ್ಲಿ ಗಮನಿಸಬೇಕಾದ ಅಂಶ ಇವಳು ಬ್ರಹ್ಮನ ನಿಜವಾದ ಪತ್ನಿಯಲ್ಲ. ಇವಳು ದುಷ್ಟಶಾಸ್ತ್ರಗಳಿಗೆ ಹಾಗೂ ದುರ್ಜನರಿಗೆ ಅಭಿಮಾನಿನಿಯಾದವಳು. ಲೌಕಿಕಪದಾರ್ಥಗಳಲ್ಲಿಯೇ ಆಸಕ್ತಳಾದವಳು. ಇವಳನ್ನು ಬ್ರಹ್ಮದೇವರು ಕಾಮಿಸುವಂತೆ ಕೇವಲ ನಟನೆ ಮಾಡಿದರು. ವೇದಾಭಿಮಾನಿನಿಯಾದ ಸರಸ್ವತಿಯೇ ಬೇರೆ. ಇವಳು ಚತುರ್ಮುಖನ ಅರ್ಧದೇಹದಿಂದ ಜನಿಸುವಳು. ಇವಳು ಅನಾದಿಯಾದ ಸ್ವರೂಪಪತ್ನಿಯಾಗಿರುವುದರಿಂದ ಬ್ರಹ್ಮನನ್ನು ವರಿಸುವಳು. ಅರ್ಧನಾರೀ ರೂಪದಿಂದ ಚತುರ್ಮುಖನ ಜೊತೆ ಇರುವಳು. ಬ್ರಹ್ಮ-ಸರಸ್ವತೀಯರು ಬೇರೆ ಬೇರೆ ಶರೀರವನ್ನು ಸ್ವೀಕರಿಸಿ ಪರಸ್ಪರ ಸಮಾಗಮ ಮಾಡಿದರು. ಆಗ ಗಂಡು-ಹೆಣ್ಣಿನ ಮತ್ತೊಂದು ಜೋಡಿಯು ಹುಟ್ಟಿತು. ಅದರಲ್ಲಿ ಗಂಡು ಎಂಬ ಭಾಗವು ಸ್ವಾಯಂಭುವ ಮನು ಎನಿಸಿತು. ಹೆಣ್ಣೇ ಶತರೂಪಾದೇವಿ ಎನಿಸಿತು. ಏತನ್ಮೂಲಕವಾಗಿ ಸಂತತಿಯ ಪರಂಪರೆ ಮುಂದುವರೆಯಿತು.

ಸರಸ್ವತಿಯು ಅನೇಕ ಪ್ರಾಣಿಗಳ ರೂಪವನ್ನು ಹಾಗೂ ಪಶು-ಪಕ್ಷಿಗಳ ರೂಪವನ್ನು ಸ್ವೀಕರಿಸುವಳು. ಅದಕ್ಕನುಗುಣವಾಗಿ ಚತುರ್ಮುಖಬ್ರಹ್ಮದೇವರೂ ಕೂಡ

ಆದರೇ ಪ್ರಾಣಿಗಳ ಪುರುಷರೂಪವನ್ನು ಸ್ವೀಕರಿಸುವರು. ಹೀಗೆ ಇವರಿಬ್ಬರ ಬಗೆಬಗೆಯ ಸಮಾಗಮದಿಂದ ಅನೇಕ ಲಕ್ಷಯೋನಿಗಳಲ್ಲಿ ಪ್ರಾಣಿಗಳು ಜನ್ಮತಾಳಿದವು. ಹೀಗೆ ಸೃಷ್ಟಿಪ್ರಕ್ರಿಯೆಗೆ ಮುಖ್ಯಕಾರಣಳಾದ ಸರಸ್ವತಿಯ ಮಹಿಮೆ ಅಪಾರವಾಗಿದೆ. ಅಷ್ಟೇ ಅಲ್ಲದೇ ಎಲ್ಲರ ವಿದ್ಯಾಪ್ರದಾತೃವೂ ಇವಳೇ ಆಗಿದ್ದಾಳೆ. ಇಂಥ ಸರಸ್ವತಿಯ ಅನುಗ್ರಹ ನಮ್ಮ ಮೇಲೆ ನಿರಂತರವಾಗಿರಲಿ.

'ಇಡಾ ಭಾಗಿರಥೀ ನಾಮ್ನೀ ಪಿಂಗಳಾ ಯಮುನಾ ಸ್ಮೃತಾ ತಯೋರ್ಮಧ್ಯೇ ಗತನಾಡೀ ಸುಷುಮ್ನಾಖ್ಯಾ ಸರಸ್ವತೀ' ಎಂಬಂತೆ ಇಡಾನಾಡಿಯಲ್ಲಿ ಗಂಗೆಯು, ಪಿಂಗಳಾ ನಾಡಿಯಲ್ಲಿ ಯಮುನೆಯು, ಸುಷುಮ್ನಾನಾಡಿಯಲ್ಲಿ ಸರಸ್ವತಿಯು ನೆಲೆಸಿರುವಳು. ಹೇಗೆ ಗಂಗಾ ಯಮುನೆಗಳ ನಡುವೆ ಸರಸ್ವತೀ ನದೀಯು ಗುಪ್ತಗಾಮಿನಿಯಾಗಿ ಪ್ರಯಾಗದಲ್ಲಿ ಹರಿಯುತ್ತಿರುವಳೋ, ಅದರಂತೆ ದೇಹದಲ್ಲೂ ಕೂಡ ಗಂಗಾ-ಯಮುನೆಗಳ ಮಧ್ಯದಲ್ಲಿ ಸರಸ್ವತಿಯು ಹರಿಯುತ್ತಿರುವಳು. ಮೋಕ್ಷಮಾರ್ಗವೆಂದರೆ ಸುಷುಮ್ನಾ ನಾಡಿಯ ಮೂಲಕ ಪ್ರಾಣೋತ್ಕ್ರಮಣ ಮಾಡುವುದೇ ಆಗಿದೆ. ಆದ್ದರಿಂದ ಮೋಕ್ಷವನ್ನು ಬಯಸುವವರು. ಸುಷುಮ್ನಾನಾಡಿಯಲ್ಲಿರುವ ಸರಸ್ವತಿಯನ್ನೇ ನಿರಂತರ ಆರಾಧನೆ ಮಾಡಬೇಕು.

* * * *

## ಸರಸ್ವತೀದೇವಿಯ ಜನನ

ಚತುರ್ಮುಖನಿಂದ ಸರಸ್ವತೀ ಹೇಗೆ ಹುಟ್ಟಿದಳು ?

ಬೃಹದಾರಣ್ಯಕೋಪನಿಷತ್ತು ಹೇಳುವಂತೆ ಅರ್ಧನಾರೀಶ್ವರ-ರೂಪದಿಂದ ಚತುರ್ಮುಖನ ಅರ್ಧದೇಹದಲ್ಲಿ ಸರಸ್ವತಿನಿಂತಿದ್ದಾಳೆ. ಇಂಥ ಸರಸ್ವತಿಯನ್ನು ಬ್ರಹ್ಮನು ವರಿಸಿ, ಸಕಲ ದೇವತೆಗಳನ್ನು ಸೃಷ್ಟಿಸಿದನು. ಬ್ರಹ್ಮಾಂಡವು ಸೃಷ್ಟಿಯಾದ ಮೇಲೆ, ಬ್ರಹ್ಮಾಂಡದ ಒಳಗೆ ಗರ್ಭೋದಕದಲ್ಲಿ ಅನಂತಪದ್ಮನಾಭನು ಪವಡಿಸಿದ್ದನು. ಅವನ ನಾಭಿಕಮಲದಿಂದ ಚತುರ್ಮುಖಬ್ರಹ್ಮದೇವರು ಅರ್ಧನಾರೀನರ-ರೂಪದಿಂದ ಪ್ರಕಟವಾದರು. ತನ್ನ ಶರೀರದಿಂದ ನಾರೀಆದ ಸರಸ್ವತಿಯನ್ನು ಬೇರ್ಪಡಿಸಿ, ಅವಳನ್ನೇ ಮದುವೆಯಾದರು. ಸರಸ್ವತಿಯು ಬ್ರಹ್ಮನ ಶರೀರದಿಂದ ಹೀಗೆ ಬೇರ್ಪಟ್ಟ ಮಾತ್ರದಿಂದ ಚತುರ್ಮುಖನ ಮಗಳೆಂದು ಭಾವಿಸಬಾರದು. ಅರ್ಧಾಂಗಿನೀಯೆಂದೇ ಭಾವಿಸಬೇಕು.

ಪ್ರದ್ಯುಮ್ನನಿಂದ ಕೃತಿ ಎಂಬ ಲಕ್ಷ್ಮೀದೇವಿಯಲ್ಲಿ ಸರಸ್ವತೀ ಹಾಗೂ ಭಾರತಿಯರು ಜನಿಸಿದರೆಂದು. ಗರುಡಪುರಾಣವು ಹೇಳುತ್ತಿದೆ. ಮಹಾಭಾರತ ತಾತ್ಪರ್ಯನಿರ್ಣಯವೂ ಕೂಡ ಅದನ್ನು ನಿರ್ಣಯಿಸುತ್ತದೆ. ವರಾಹಪುರಾಣದಲ್ಲಿ ಇದನ್ನು ವಿವರಿಸಲಾಗಿದೆ. ಕೃತಿದೇವಿಯಲ್ಲಿ ಗಾಯಿತ್ರೀ, ಸಾವಿತ್ರೀ, ಸರಸ್ವತೀ, ಭಾರತೀ ಎಂಬ ನಾಕು ಮಂದಿ ಮಕ್ಕಳು ಹುಟ್ಟುತ್ತಾರೆ. ಗಾಯತ್ರಿ ಹಾಗೂ ಸಾವಿತ್ರಿ ಎಂಬುದು ಸರಸ್ವತಿಯ ಬೇರೆ ಎರಡು ರೂಪಗಳು. ಈ ಗಾಯತ್ರೀ, ಸಾವಿತ್ರಿ, ಸರಸ್ವತಿ ಎಂಬ ಮೂರು ರೂಪಗಳನ್ನು ಚತುರ್ಮುಖ ಬ್ರಹ್ಮದೇವರು ಪುರುಷ, ವಿರಿಂಚ ಚತುರ್ಮುಖ ಎಂಬ ಮೂರುರೂಪಗಳಿಂದ ವಿವಾಹವಾಗುತ್ತಾರೆ. ಭಾರತಿಯನ್ನು ವಾಯುದೇವರು ವಿವಾಹವಾಗುತ್ತಾರೆ.

## ಸರಸ್ವತಿಯ ವಿವಾಹ

ಚತುರ್ಮುಖ ಬ್ರಹ್ಮದೇವರು ತನ್ನಿಂದಲೇ ಹುಟ್ಟಿದ ಸರಸ್ವತಿಯನ್ನು ತಾನೇ ಮದುವೆಯಾಗುತ್ತಾರೆ, ಮಗಳನ್ನು ಮದುವೆಯಾಗುವುದು ಯಾವ ನ್ಯಾಯ ಎಂಬುದಾಗಿ ಆಧುನಿಕರು ಇದನ್ನು ಬಲವಾಗಿ ಆಕ್ಷೇಪ ಮಾಡುತ್ತಿದ್ದಾರೆ. ಆದರೆ

ಸರಸ್ವತಿಯು ಈ ಜನ್ಮದಲ್ಲಿ ಮಾತ್ರ ಹೆಂಡತಿಯಲ್ಲ. ಅನಾದಿ ಅನಂತ ಕಾಲದ ತನಕ ಬ್ರಹ್ಮದೇವರ ಪತ್ನಿಯೇ ಆಗಿರುವಳು. ಲಕ್ಷ್ಮಿಯು ಹೇಗೆ ಪರಮಾತ್ಮನೊಬ್ಬನನ್ನು ಬಿಟ್ಟು, ಬೇರೆ ಯಾರನ್ನೂ ಕೂಡ ಅನಾದಿ ಅನಂತ ಕಾಲದಲ್ಲಿ ಅಪೇಕ್ಷೆ ಪಡುವುದಿಲ್ಲವೋ, ಅದರಂತೆ ಸರಸ್ವತಿಯೂ ಕೂಡ ನಿಯತ ಪತ್ನಿಯಾಗಿರುವಳು. ಆದ್ದರಿಂದ ಸರಸ್ವತಿಯನ್ನು ಮಗಳೆಂದು ಸರ್ವಥಾ ತಿಳಿಯಬಾರದು.

ಇದರ ಮೇಲೆ ಮತ್ತೊಂದು ಪ್ರಶ್ನೆಯು ಉದ್ಭವಿಸುತ್ತದೆ. ತಮ್ಮ ಮಡದಿಯನ್ನು ಮಗಳನ್ನಾಗಿ ಏಕೆ ಸೃಷ್ಟಿಸಿರುವರು? ಬೇರೆ ಉಪಾಯಗಳಿಂದ ಸೃಷ್ಟಿಸಿ, ವಿವಾಹವಾಗಬಹುದಿತ್ತಲ್ಲವೇ? ಎಂದು. ಇದಕ್ಕೆ ಉತ್ತರ ಹೀಗಿದೆ - ದುಷ್ಟಕಾಮವನ್ನು ಚತುರ್ಮುಖ ಬ್ರಹ್ಮದೇವರು ಹುಟ್ಟಿಸಬೇಕಾಗಿದೆ. ಅದಕ್ಕಾಗಿ ತನ್ನ ಹೆಂಡತಿಯನ್ನೇ ಮಗಳನ್ನಾಗಿ ಮಾಡಿಕೊಂಡು ದುಷ್ಟಕಾಮವೆಂಬ ಪದಾರ್ಥವನ್ನು ಇದರಿಂದ ಸೃಷ್ಟಿ ಮಾಡಿದ್ದಾರೆ.

ದುಷ್ಟಕಾಮವನ್ನೇಕೆ ಸೃಷ್ಟಿ ಮಾಡಿದರು ? ಅದಕ್ಕಾಗಿ ಈ ನಾಟಕವನ್ನೇ ಏಕೆ ಮಾಡಬೇಕಿತ್ತು? ಎಂದರೆ ಸೃಷ್ಟಿಪ್ರಕ್ರಿಯೆಯ ಭಾಗವಾಗಿ ಕಾಮ, ಭಯ, ಅಜ್ಞಾನ, ಕ್ರೋಧ ಮೊದಲಾದವುಗಳನ್ನೆಲ್ಲಾ ಸೃಷ್ಟಿ ಮಾಡಲೇ ಬೇಕು. ಅದಕ್ಕಾಗಿ ಒಂದೊಂದು ಸಂದರ್ಭದಲ್ಲಿ ಒಂದೊಂದು ದೋಷಗಳ ಪ್ರದರ್ಶನವನ್ನು ಮಾಡಿ, ಆಯಾ ಪದಾರ್ಥಗಳನ್ನು ಚತುರ್ಮುಖ ಬ್ರಹ್ಮದೇವರು ಸೃಷ್ಟಿ ಮಾಡಿರುವರು. ಉದಾಹರಣೆಗೆ ಮಾನಸಪುತ್ರರಾದ ಸನಕಾದಿಗಳು ಸೃಷ್ಟಿಯ ಪ್ರಕ್ರಿಯೆಯನ್ನು ಮುಂದುವರೆಸಲಿಲ್ಲ ಎಂಬ ವಿಷಯಕ್ಕೆ ಸಿಟ್ಟುಗೊಂಡರು. ಇದರಿಂದ ಕ್ರೋಧ ಎಂಬ ಪದಾರ್ಥವು ಸೃಷ್ಟವಾಯಿತು.

ಭಾಗವತ ತೃತೀಯ ಸ್ಕಂಧದಲ್ಲಿ ತನ್ನಿಂದ ಹುಟ್ಟಿದ ಮಗಳನ್ನು ಮದುವೆಯಾಗಲು ಬ್ರಹ್ಮದೇವರು ಮುಂದಾದರು. ಆಗ ಮರೀಚ್ಯಾದಿ ಋಷಿಗಳು ವಿರೋಧ ಮಾಡಿದ್ದಕ್ಕೆ ಅವಳನ್ನು ತ್ಯಾಗ ಮಾಡಿದರು. ಆಗ ದುರ್ಜನರು ಅವಳನ್ನು ಸ್ವೀಕರಿಸಿದರೆಂದು ಹೇಳಲಾಗಿದೆ. ಇದಕ್ಕೆ ಭಾಗವತ ತಾತ್ಪರ್ಯದಲ್ಲಿ ಸ್ಪಷ್ಟವಾದ ಉತ್ತರವಿದೆ - ಮಡದಿಯ ಅಪೇಕ್ಷೆಯಿಂದ ಬ್ರಹ್ಮದೇವರು ತಮ್ಮ ದೇಹವನ್ನು ಎರಡು ಭಾಗ

ಮಾಡುತ್ತಾರೆ. ಆ ದೇಹದ ಎಡಭಾಗದಿಂದ ಸರಸ್ವತಿ ಹುಟ್ಟುತ್ತಾಳೆ. ಇವಳನ್ನು ಸ್ವತಃ ತಾವೇ ಮದುವೆಯಾಗಿ ಅರ್ಧಾಂಗಿನಿಯನ್ನಾಗಿ ಮಾಡಿಕೊಳ್ಳುತ್ತಾರೆ. ಮತ್ತೊಂದು ಸಂದರ್ಭದಲ್ಲಿ ಒಬ್ಬ ದುಷ್ಟಳಾದ ಸರಸ್ವತಿಯನ್ನು ಹುಟ್ಟಿಸುತ್ತಾರೆ. ಇವಳು ದುಷ್ಟ ಶಾಸ್ತ್ರಗಳಿಗೆ ಹಾಗೂ ದುರ್ವಿಚಾರಗಳಿಗೆ ಅಭಿಮಾನಿನಿಯಾಗಿದ್ದಾಳೆ. ಲೌಕಿಕಪದಾರ್ಥಗಳಲ್ಲಿ ಆಸಕ್ತಳಾದ ಇವಳನ್ನು ಬ್ರಹ್ಮದೇವರು ಕಾಮಿಸುವಂತೆ ನಟನೆ ಮಾಡುವರು. ಆಗ ಮರೀಚಿ ಮೊದಲಾದ ಋಷಿಗಳು ವಿರೋಧ ಮಾಡಿದಾಗ ಅವಳನ್ನು ತ್ಯಾಗ ಮಾಡಿ ದುರ್ಜನರೆಡೆ ಕಳುಹಿಸುವರು. ದುರ್ಜನರು ಇವಳ ಪ್ರಭಾವದಿಂದ ದುರ್ಮಾರ್ಗಿಗಳಾಗುವರು ಎಂದು ತಿಳಿಯಬೇಕು. ಆದ್ದರಿಂದ ವೇದಾಭಿಮಾನಿನಿಯಾದ ಸರಸ್ವತಿಯನ್ನು ತಾವು ವಿವಾಹವಾಗಿ, ದುಷ್ಟಶಾಸ್ತ್ರಗಳಿಗೆ ಅಭಿಮಾನಿನಿಯಾದ ದುಷ್ಟಸರಸ್ವತಿಯನ್ನು ವಿವಾಹವಾಗದೇ ದುರ್ಜನರೆಡೆ ಕಳಿಸಿದರು ಎಂಬ ಪ್ರಮೇಯವನ್ನು ತಿಳಿಯಬೇಕು.

ಬ್ರಹ್ಮದೇವರ ಶರೀರದ ಒಂದು ಭಾಗ ಸರಸ್ವತಿಯಾಗಿ, ಮತ್ತೊಂದು ಭಾಗ ತಾನಾಗಿ ನಿಂತು ತನ್ಮೂಲಕ ಪತ್ನಿಯು ತನ್ನ ದೇಹದ ಅರ್ಧಭಾಗವೆಂದು ತಿಳಿಸುವ ಮೂಲಕ ದಂಪತಿಗಳ ಅನ್ಯೋನ್ಯವನ್ನು ಸಾರಿರುವರು. ಇದರಿಂದಲೇ ಪ್ರಜಾಸೃಷ್ಟಿಯು ಅವಿಚ್ಛಿನ್ನವಾಗಿ ನಡೆಯುವಂತೆ ಮಾಡಿರುವರು. ಅಷ್ಟೇ ಅಲ್ಲದೇ ಅರ್ಧನಾರೀನರರೂಪದಿಂದ ಒಂದಾಗಿದ್ದ ಬ್ರಹ್ಮ-ಸರಸ್ವತಿಯರು ಬೇರೆ ಬೇರೆ ಶರೀರವನ್ನು ಸ್ವೀಕರಿಸಿ ಪರಸ್ಪರ ಸಮಾಗಮ ಮಾಡಿದರು. ಆಗ ಮತ್ತೊಂದು ಗಂಡು-ಹೆಣ್ಣಿನ ಜೋಡಿಯು ಹುಟ್ಟಿತು. ಅದರಲ್ಲಿ ಗಂಡು ಸ್ವಾಯಂಭುವ ಮನು. ಹೆಣ್ಣು ಶತರೂಪಾದೇವಿ. ಈ ಸ್ವಾಯಂಭುವಮನುವು ಶತರೂಪಾದೇವಿಯನ್ನು ವಿವಾಹವಾಗಿ, ಏತನ್ಮೂಲಕ ಪ್ರಿಯವ್ರತ, ಉತ್ತಾನಪಾದ ಮೊದಲಾದವರ ಸಂತತಿಯು ಪ್ರಾರಂಭವಾಯಿತು. ದೇವಲೋಕದಲ್ಲಿ ಗರುಡ, ಶೇಷ, ರುದ್ರಾದಿಗಳು ಇವರಿಂದಲೇ ಹುಟ್ಟನ್ನು ಪಡೆದು ಸಂತತಿಯನ್ನು ಪ್ರಾರಂಭ ಮಾಡಿದರು.

ಚತುರ್ಮುಖ ಬ್ರಹ್ಮನು ಸರಸ್ವತಿಯನ್ನು ಕಾಮದಿಂದ ಬಯಸಿದಾಗ ಶಿವನ ಬಳಿ ರಕ್ಷಣೆಗೆ ಹೆಣ್ಣು ಜಿಂಕೆಯಾಗಿ ಓಡಿ ಬರುವಳು. ಆಗ ಶಿವನು ಆ ಜಿಂಕೆಯನ್ನು

ತನ್ನ ತೊಡೆಯ ಮೇಲಿಟ್ಟು ರಕ್ಷಿಸಿದನು. ಬ್ರಹ್ಮನನ್ನು ಹೊಡೆದು ಓಡಿಸಿದನು ಎಂಬ ಕಥೆಯನ್ನು ಶೈವರು ಹೇಳುತ್ತಾರೆ. ಇದು ಸರಿಯೇ ?

ಈ ಕಥೆಯೂ ಕೂಡ ಲಿಂಗಪುರಾಣದಲ್ಲೇ ಇರುತ್ತದೆ. ಜಿಂಕೆಯ ರೂಪದಲ್ಲಿರುವ ಸರಸ್ವತಿಯನ್ನು ರಕ್ಷಣೆ ಮಾಡಿದ್ದರಿಂದಲೇ, ಶಿವನಿಗೆ ಮೃಗಧರ, ಮೃಗಾಲಯ ಇತ್ಯಾದಿ ಹೆಸರುಗಳನ್ನೂ ಕೂಡ ಬಂದಿರುತ್ತವೆ. ಆದರೆ ವೇದಾಭಿಮಾನಿನಿಯಾದ ಸರಸ್ವತಿಯು ಹೆಣ್ಣು ಜಿಂಕೆಯ ರೂಪದಲ್ಲಿ ಶಿವನ ಬಳಿ ಓಡಿ ಬಂದಿರುವುದೇ ಅಲ್ಲ. ಶಿವನ ಬಳಿ ಓಡಿ ಬಂದವಳೇ ಬೇರೆ.

ಉಪನಿಷತ್ತಿನಲ್ಲಿ ಅಥವಾ ಶಾಸ್ತ್ರಗ್ರಂಥಗಳಲ್ಲಿ ಸರಸ್ವತಿಯ ಪ್ರಾಣಿರೂಪದ ಬಗ್ಗೆ ಮಾಹಿತಿ ಇದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಸ್ಪಷ್ಟವಾಗಿಯೇ ಮಾಹಿತಿ ಇದೆ. 'ತನ್ನಿಂದಲೇ ನನ್ನನ್ನು ಹುಟ್ಟಿಸಿ, ನನ್ನನ್ನು ಮದುವೆಯಾಗುತ್ತಿರುವನಲ್ಲಾ?' ಎಂಬುದಾಗಿ ಸರಸ್ವತಿಯು ಆಶ್ಚರ್ಯವನ್ನು ಹೊಂದಿ, ಹಸುವಾದಳು. ಆಗ ಬ್ರಹ್ಮನು ಎತ್ತಾಗಿ ಅವಳನ್ನು ಭೋಗಿಸಿ ಗೋವು ಮೊದಲಾದವುಗಳನ್ನು ಸೃಷ್ಟಿ ಮಾಡಿದನು. ಪುನಃ ನಾಚಿದ ಸರಸ್ವತಿಯು ಹೆಣ್ಣು ಕುದುರೆಯಾದಳು. ಆಗ ಬ್ರಹ್ಮನು ಗಂಡು ಕುದುರೆಯಾದನು. ಅವಳು ಹೆಣ್ಣು ಕತ್ತೆಯಾದಾಗ, ಬ್ರಹ್ಮನು ಗಂಡು ಕತ್ತೆಯಾದನು. ಹೀಗೆ ಅನೇಕ ಪ್ರಾಣಿಗಳ ರೂಪವನ್ನು ಸರಸ್ವತಿಯು ಧರಿಸಿದರೆ, ಅದಕ್ಕನುಗುಣವಾಗಿ ತಾನೂ ಕೂಡ ಆ ಎಲ್ಲಾ ಪ್ರಾಣಿಗಳ ರೂಪವನ್ನು ಹೊಂದಿ, ಜಗತ್ತಿನಲ್ಲಿರುವ ಎಲ್ಲಾ ಪ್ರಾಣಿಗಳ ಸೃಷ್ಟಿಗೆ ಕಾರಣಕರ್ತನಾದನು. ಇಷ್ಟೇ ಅಭಿಪ್ರಾಯ ಹೊರತು, ಬ್ರಹ್ಮದೇವರು ತನಗೆ ಬೇಡವೆಂಬ ಅಭಿಪ್ರಾಯದಿಂದ ಸರಸ್ವತಿಯು ಪ್ರಾಣಿಯ ರೂಪ ತಾಳಿ ಓಡಿದ್ದಲ್ಲ.

ಹೃದಿ ಕಾಮೋ ಭ್ರುವೋಃ ಕ್ರೋಧೋ ಲೋಭಶ್ಚಾಧರದಚ್ಛದಾತ್।
ಆಸ್ಯಾದ್ವಾಕ್ ಸಿಂಧವೋ ಮೇಢ್ರಾನ್ನಿರ್ಋತಿಃ ಪಾಯೋರಘಾಶ್ರಯಃ॥

(ಭಾ ೩-೧೩-೨೬)

ಚತುರ್ಮುಖನ ಹೃದಯದಿಂದ ಕಾಮ, ಹುಬ್ಬುಗಳಿಂದ ಕ್ರೋಧ, ಕೆಳತುಟಿಯಿಂದ ಲೋಭ, ವಾಗಿಂದ್ರಿಯದಿಂದ ಸರಸ್ವತಿ, ಗುಹ್ಯೇಂದ್ರಿಯದಿಂದ ವರುಣ, ಗುಧೇಂದ್ರಿಯದಿಂದ ನಿರ್ಋತಿ ಇವರು ಜನಿಸಿದರು ಎಂದು.

ಹಾಗಿದ್ದರೆ ಎರಡು ಬಾರಿ ಹುಟ್ಟಿರುವಳೇ ? ಎಂದರೆ, ಹೌದು ಒಮ್ಮೆ ಅರ್ಧಾಂಗಿನಿಯಾಗಿ ಹುಟ್ಟಿದಳು. ಮತ್ತೊಮ್ಮೆ ವಾಗಿಂದ್ರಿಯದಿಂದ ಹುಟ್ಟಿದಳು. ಇದು ಬ್ರಹ್ಮಾಂಡದ ಒಳಗಿನ ಸೃಷ್ಟಿ. ಬಾಹ್ಯಸೃಷ್ಟಿಯಲ್ಲಿ ನೇರವಾಗಿ ಪರಮಾತ್ಮನ ದೇಹದಿಂದಲೂ ಕೂಡ ಹುಟ್ಟಿರುವಳು. ಉತ್ತಮ ದೇವತೆಗಳೆಲ್ಲರೂ ಒಟ್ಟು ಹದಿನಾಕು ಬಗೆಯಲ್ಲಿ ಹುಟ್ಟುವರು. (ಇದು ಸಾಧಾರಣ ನಿಯಮ) ದೇವತೆಗಳು ಹೀಗೆ ಹದಿನಾಕು ಬಾರಿ ಹುಟ್ಟುವುದರಿಂದ ಇವರಿಗೆ ಹೆಚ್ಚಿನ ಸಾಧನೆಯಾಗುತ್ತದೆಂಬುದೇ ಗುಹ್ಯಪ್ರಮೇಯ.

## ಸರಸ್ವತಿಯ ಸಂತಾನ

ಸಕಲದೇವತೆಗಳೆಲ್ಲರೂ ಸರಸ್ವತಿಯ ಮಕ್ಕಳು. ಅಷ್ಟೇ ಅಲ್ಲದೇ ಕುದುರೆ, ಕತ್ತೆ, ಆಡು, ಬಗೆಬಗೆಯ ಮೃಗಗಳು, ಕೀಟಗಳು, ಪಶುಗಳು, ಪಕ್ಷಿಗಳು ಕ್ರಿಮಿಗಳು ಇರುವೆ ಮೊದಲಾದವುಗಳು ಇವೆಲ್ಲದರ ರೂಪವನ್ನು ಸರಸ್ವತಿಯು ತಾಳಿ, ಒಟ್ಟು ೮೪ ಲಕ್ಷ ಯೋನಿಗಳಿಗೂ ಕಾರಣೀಭೂತಳಾಗಿರುವಳು. ಹೀಗೆ ಎಂಬತ್ನಾಕು ಲಕ್ಷ ಯೋನಿಗಳ ರೂಪವನ್ನು ತಾಳಿರುವಳು. ಇದೊಂದು ಸರಸ್ವತಿಯ ಅದ್ಭುತವಾದ ಮಹಿಮೆ. ಚತುರ್ಮುಖನು ಅದೇ ರೂಪಗಳಿಂದ ಇವಳ ಪತಿಯಾಗಿ ಸೃಷ್ಟಿಗೆ ಕಾರಣನಾದನು.

ಬೃಹದಾರಣ್ಯಕೋಪನಿಷತ್ತು ಹೀಗೆ ಹೇಳಿದೆ - 'ಯಸ್ತೇ ಸ್ತನಃ ಶಶಯೋ ಯೋ ಮಯೋಭೂಃ ಯೇನ ವಿಶ್ವಾ ಪುಷ್ಯಸಿ ವಾರ್ಯಾಣಿ । ಯೋ ರತ್ನಧಾ ವಸುವಿದ್ ಯಃ ಸುದತ್ರ ಸರಸ್ವತಿ ತಮಿಹ ಧಾತವೇ ಕಃ ॥' ಸಕಲ ದೇವತೆಗಳೇ ಸರಸ್ವತಿಯ ಶಿಶುಗಳಾಗಿದ್ದಾರೆ. ಆ ಎಲ್ಲ ದೇವತೆಗಳಿಗೆ ಸರಸ್ವತಿಯ ಸ್ತನಗಳು ಹಾಲುಣಿಸುವ ಮೂಲಕ ಪ್ರಜ್ಞಾಶಕ್ತಿ, ಮೇಧಾಶಕ್ತಿಗಳನ್ನೇ ನೀಡುತ್ತವೆ. ಕೇವಲ ದೇವತೆಗಳಿಗಷ್ಟೇ ಹೀಗೆ ಬೌದ್ಧಿಕ ಶಕ್ತಿಯನ್ನು ನೀಡುವುದಲ್ಲ. ಪ್ರತಿಯೊಬ್ಬ ಪ್ರಾಣಿಗಳಿಗೂ ಕೂಡ ಇಂಥ ಬೌದ್ಧಿಕ ಶಕ್ತಿಯನ್ನು ನೀಡುವುದು ಸರಸ್ವತಿಯ ಸ್ತನಗಳೇ ಆಗಿವೆ. ಹೀಗೆ ಪ್ರಜಾಸಂತತಿಯ ಬೆಳವಣಿಗೆಯನ್ನು ನೀಡುವವಳು ಸರಸ್ವತಿಯೇ ಆಗಿದ್ದಾಳೆ.

## ಸರಸ್ವತೀ ಶಬ್ದದ ನಿಷ್ಪತ್ತಿ

ಗಮನ ಎಂಬ ಅರ್ಥವುಳ್ಳ ಸೃ ಧಾತುವಿನಿಂದ ಈ ಶಬ್ದವು ನಿಷ್ಪನ್ನವಾಗಿದೆ. ನಿರಂತರ ಪ್ರವಹಿಸುವಳು ಎಂದರ್ಥ. ಮಾತಿನ ರೂಪದಲ್ಲಿ, ಭಾಷಾರೂಪದಲ್ಲಿ,

ತನ್ನ ತೊಡೆಯ ಮೇಲಿಟ್ಟು ರಕ್ಷಿಸಿದನು. ಬ್ರಹ್ಮನನ್ನು ಹೊಡೆದು ಓಡಿಸಿದನು ಎಂಬ ಕಥೆಯನ್ನು ಶೈವರು ಹೇಳುತ್ತಾರೆ. ಇದು ಸರಿಯೇ ?

ಈ ಕಥೆಯೂ ಕೂಡ ಲಿಂಗಪುರಾಣದಲ್ಲೇ ಇರುತ್ತದೆ. ಜಿಂಕೆಯ ರೂಪದಲ್ಲಿರುವ ಸರಸ್ವತಿಯನ್ನು ರಕ್ಷಣೆ ಮಾಡಿದ್ದರಿಂದಲೇ, ಶಿವನಿಗೆ ಮೃಗಧರ, ಮೃಗಾಲಯ ಇತ್ಯಾದಿ ಹೆಸರುಗಳನ್ನೂ ಕೂಡ ಬಂದಿರುತ್ತವೆ. ಆದರೆ ವೇದಾಭಿಮಾನಿನಿಯಾದ ಸರಸ್ವತಿಯು ಹೆಣ್ಣು ಜಿಂಕೆಯ ರೂಪದಲ್ಲಿ ಶಿವನ ಬಳಿ ಓಡಿ ಬಂದಿರುವುದೇ ಅಲ್ಲ. ಶಿವನ ಬಳಿ ಓಡಿ ಬಂದವಳೇ ಬೇರೆ.

ಉಪನಿಷತ್ತಿನಲ್ಲಿ ಅಥವಾ ಶಾಸ್ತ್ರಗ್ರಂಥಗಳಲ್ಲಿ ಸರಸ್ವತಿಯ ಪ್ರಾಣಿರೂಪದ ಬಗ್ಗೆ ಮಾಹಿತಿ ಇದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಸ್ಪಷ್ಟವಾಗಿಯೇ ಮಾಹಿತಿ ಇದೆ. 'ತನ್ನಿಂದಲೇ ನನ್ನನ್ನು ಹುಟ್ಟಿಸಿ, ನನ್ನನ್ನು ಮದುವೆಯಾಗುತ್ತಿರುವನಲ್ಲಾ?' ಎಂಬುದಾಗಿ ಸರಸ್ವತಿಯು ಆಶ್ಚರ್ಯವನ್ನು ಹೊಂದಿ, ಹಸುವಾದಳು. ಆಗ ಬ್ರಹ್ಮನು ಎತ್ತಾಗಿ ಅವಳನ್ನು ಭೋಗಿಸಿ ಗೋವು ಮೊದಲಾದವುಗಳನ್ನು ಸೃಷ್ಟಿ ಮಾಡಿದನು. ಪುನಃ ನಾಚಿದ ಸರಸ್ವತಿಯು ಹೆಣ್ಣು ಕುದುರೆಯಾದಳು. ಆಗ ಬ್ರಹ್ಮನು ಗಂಡು ಕುದುರೆಯಾದನು. ಅವಳು ಹೆಣ್ಣು ಕತ್ತೆಯಾದಾಗ, ಬ್ರಹ್ಮನು ಗಂಡು ಕತ್ತೆಯಾದನು. ಹೀಗೆ ಅನೇಕ ಪ್ರಾಣಿಗಳ ರೂಪವನ್ನು ಸರಸ್ವತಿಯು ಧರಿಸಿದರೆ, ಅದಕ್ಕನುಗುಣವಾಗಿ ತಾನೂ ಕೂಡ ಆ ಎಲ್ಲಾ ಪ್ರಾಣಿಗಳ ರೂಪವನ್ನು ಹೊಂದಿ, ಜಗತ್ತಿನಲ್ಲಿರುವ ಎಲ್ಲಾ ಪ್ರಾಣಿಗಳ ಸೃಷ್ಟಿಗೆ ಕಾರಣಕರ್ತನಾದನು. ಇಷ್ಟೇ ಅಭಿಪ್ರಾಯ ಹೊರತು, ಬ್ರಹ್ಮದೇವರು ತನಗೆ ಬೇಡವೆಂಬ ಅಭಿಪ್ರಾಯದಿಂದ ಸರಸ್ವತಿಯು ಪ್ರಾಣಿಯ ರೂಪ ತಾಳಿ ಓಡಿದ್ದಲ್ಲ.

ಹೃದಿ ಕಾಮೋ ಭ್ರುವೋಃ ಕ್ರೋಧೋ ಲೋಭಶ್ಚಾಧರದಚ್ಛದಾತ್।
ಆಸ್ಯಾದ್ವಾಕ್ ಸಿಂಧವೋ ಮೇಢ್ರಾನ್ನಿರ್ಋತಿಃ ಪಾಯೋರಘಾಶ್ರಯಃ॥

(ಭಾ ೩-೧೨-೨೬)

ಚತುರ್ಮುಖನ ಹೃದಯದಿಂದ ಕಾಮ, ಹುಬ್ಬುಗಳಿಂದ ಕ್ರೋಧ, ಕೆಳತುಟಿಯಿಂದ ಲೋಭ, ವಾಗಿಂದ್ರಿಯದಿಂದ ಸರಸ್ವತಿ, ಗುಹ್ಯೇಂದ್ರಿಯದಿಂದ ವರುಣ, ಗುಧೇಂದ್ರಿಯದಿಂದ ನಿರ್ಋತಿ ಇವರು ಜನಿಸಿದರು ಎಂದು.

ಹಾಗಿದ್ದರೆ ಎರಡು ಬಾರಿ ಹುಟ್ಟಿರುವಳೇ ? ಎಂದರೆ, ಹೌದು ಒಮ್ಮೆ ಅರ್ಧಾಂಗಿನಿಯಾಗಿ ಹುಟ್ಟಿದಳು. ಮತ್ತೊಮ್ಮೆ ವಾಗಿಂದ್ರಿಯದಿಂದ ಹುಟ್ಟಿದಳು. ಇದು ಬ್ರಹ್ಮಾಂಡದ ಒಳಗಿನ ಸೃಷ್ಟಿ. ಬಾಹ್ಯಸೃಷ್ಟಿಯಲ್ಲಿ ನೇರವಾಗಿ ಪರಮಾತ್ಮನ ದೇಹದಿಂದಲೂ ಕೂಡ ಹುಟ್ಟಿರುವಳು. ಉತ್ತಮ ದೇವತೆಗಳೆಲ್ಲರೂ ಒಟ್ಟು ಹದಿನಾಕು ಬಗೆಯಲ್ಲಿ ಹುಟ್ಟುವರು. (ಇದು ಸಾಧಾರಣ ನಿಯಮ) ದೇವತೆಗಳು ಹೀಗೆ ಹದಿನಾಕು ಬಾರಿ ಹುಟ್ಟುವುದರಿಂದ ಇವರಿಗೆ ಹೆಚ್ಚಿನ ಸಾಧನೆಯಾಗುತ್ತದೆಂಬುದೇ ಗುಹ್ಯಪ್ರಮೇಯ.

## ಸರಸ್ವತಿಯ ಸಂತಾನ

ಸಕಲದೇವತೆಗಳೆಲ್ಲರೂ ಸರಸ್ವತಿಯ ಮಕ್ಕಳು. ಅಷ್ಟೇ ಅಲ್ಲದೇ ಕುದುರೆ, ಕತ್ತೆ, ಆಡು, ಬಗೆಬಗೆಯ ಮೃಗಗಳು, ಕೀಟಗಳು, ಪಶುಗಳು, ಪಕ್ಷಿಗಳು ಕ್ರಿಮಿಗಳು ಇರುವೆ ಮೊದಲಾದವುಗಳು ಇವೆಲ್ಲದರ ರೂಪವನ್ನು ಸರಸ್ವತಿಯು ತಾಳಿ, ಒಟ್ಟು ೮೪ ಲಕ್ಷ ಯೋನಿಗಳಿಗೂ ಕಾರಣೀಭೂತಳಾಗಿರುವಳು. ಹೀಗೆ ಎಂಬತ್ತಾನಾಕು ಲಕ್ಷ ಯೋನಿಗಳ ರೂಪವನ್ನು ತಾಳಿರುವಳು. ಇದೊಂದು ಸರಸ್ವತಿಯ ಅದ್ಭುತವಾದ ಮಹಿಮೆ. ಚತುರ್ಮುಖನು ಅದೇ ರೂಪಗಳಿಂದ ಇವಳ ಪತಿಯಾಗಿ ಸೃಷ್ಟಿಗೆ ಕಾರಣನಾದನು.

ಬೃಹದಾರಣ್ಯಕೋಪನಿಷತ್ತು ಹೀಗೆ ಹೇಳಿದೆ - 'ಯಸ್ತೇ ಸ್ತನಃ ಶಶಯೋ ಯೋ ಮಯೋಭೂಃ ಯೇನ ವಿಶ್ವಾ ಪುಷ್ಯಸಿ ವಾರ್ಯಾಣಿ । ಯೋ ರತ್ನಧಾ ವಸುವಿದ್ ಯಃ ಸುದತ್ರ ಸರಸ್ವತಿ ತಮಿಹ ಧಾತವೇ ಕಃ ॥' ಸಕಲ ದೇವತೆಗಳೇ ಸರಸ್ವತಿಯ ಶಿಶುಗಳಾಗಿದ್ದಾರೆ. ಆ ಎಲ್ಲ ದೇವತೆಗಳಿಗೆ ಸರಸ್ವತಿಯ ಸ್ತನಗಳು ಹಾಲುಣಿಸುವ ಮೂಲಕ ಪ್ರಜ್ಞಾಶಕ್ತಿ, ಮೇಧಾಶಕ್ತಿಗಳನ್ನೇ ನೀಡುತ್ತವೆ. ಕೇವಲ ದೇವತೆಗಳಿಗಷ್ಟೇ ಹೀಗೆ ಬೌದ್ಧಿಕ ಶಕ್ತಿಯನ್ನು ನೀಡುವುದಲ್ಲ. ಪ್ರತಿಯೊಬ್ಬ ಪ್ರಾಣಿಗಳಿಗೂ ಕೂಡ ಇಂಥ ಬೌದ್ಧಿಕ ಶಕ್ತಿಯನ್ನು ನೀಡುವುದು ಸರಸ್ವತಿಯ ಸ್ತನಗಳೇ ಆಗಿವೆ. ಹೀಗೆ ಪ್ರಜಾಸಂತತಿಯ ಬೆಳವಣಿಗೆಯನ್ನು ನೀಡುವವಳು ಸರಸ್ವತಿಯೇ ಆಗಿದ್ದಾಳೆ.

## ಸರಸ್ವತೀ ಶಬ್ದದ ನಿಷ್ಪತ್ತಿ

ಗಮನ ಎಂಬ ಅರ್ಥವುಳ್ಳ ಸೃ ಧಾತುವಿನಿಂದ ಈ ಶಬ್ದವು ನಿಷ್ಪನ್ನವಾಗಿದೆ. ನಿರಂತರ ಪ್ರವಹಿಸುವಳು ಎಂದರ್ಥ. ಮಾತಿನ ರೂಪದಲ್ಲಿ, ಭಾಷಾರೂಪದಲ್ಲಿ,

ಶ್ರುತಿ, ಸ್ಮೃತಿ, ಇತಿಹಾಸ, ಪುರಾಣ, ಷಡಂಗ ಇತ್ಯಾದಿ ಸಮಸ್ತ ವಾಙ್ಮಯ ರೂಪದಲ್ಲಿ ನಿರಂತರ ಪ್ರವಹಿಸುತ್ತಲೇ ಬಂದಿರುವಳು. ಅಷ್ಟೇ ಅಲ್ಲದೇ ಸಂಗೀತ, ಸಾಹಿತ್ಯ , ನಾಟ್ಯ , ಶಿಲ್ಪ , ಚಿತ್ರಕಲೆ ಇವುಗಳೂ ಕೂಡ ಗುರುಪರಂಪರೆಯಲ್ಲಿ ಪ್ರವಹಿಸುತ್ತಲೇ ಬಂದಿವೆ. ಇದೆಲ್ಲದಕ್ಕೂ ಉಗಮಸ್ಥಾನವೇ ಸರಸ್ವತೀ. 'ಸರಸ್' ಎಂದರೆ ಜ್ಞಾನದಾಯಕವಾದ ಸಕಲ ವಿದ್ಯೆಗಳು. ೧. ಸರಾಂಸಿ ಅಸ್ಯಾಮಸ್ತೀತಿ ಸರಸ್ವತೀ ಎಂಬುದು ಈ ಶಬ್ದದ ನಿಷ್ಪತ್ತಿ, ೨. ಸಾರಂ ವಾತೀತಿ ಸರಸ್ವತಿ ನಿರಂತರ ಪರಮಾತ್ಮನೆಡೆ ಸಂಚರಿಸುವ ಶಕ್ತಿ, ೩. ಸರಾಂಸಿ = ಜಲಾನಿ ಅಸ್ಯಾಮಸ್ತೀತಿ ಸರಸ್ವತೀ ಹೀಗೆ ಮೂರು ರೀತಿಯಲ್ಲಿ ನಿಷ್ಪತ್ತಿಯನ್ನು ತಿಳಿಯಬಹುದು.

ಚತುರ್ಮುಖ ಬ್ರಹ್ಮನ ನಾಲಿಗೆಯಿಂದ ಹುಟ್ಟಿದ್ದರಿಂದ ವಾಗಭಿಮಾನಿನೀ ಎನಿಸಿದಳು. ಸಕಲ ವಿದ್ಯೆಗಳಿಗೆ ವಾಗಿಂದ್ರಿಯವೇ ಆಶ್ರಯವಾದ್ದರಿಂದ ವಿದ್ಯಾಭಿಮಾನಿನೀ ಎನಿಸಿದಳು. ಈ ಸರಸ್ವತಿಯ ಬಗ್ಗೆ ದಂಡಿಯೆಂಬ ಕವಿಯೊಬ್ಬನು ಸುಂದರವಾಗಿ ಹೀಗೆ ಹೇಳುವನು - 'ಇದಮಂಧಂತಮಃ ಕೃತ್ಸ್ನಂ ಜಾಯೇತ ಭುವನತ್ರಯಮ್ । ಯದಿ ಶಬ್ದಾಹ್ವಯಂ ಜ್ಯೋತಿಃ ಆಸಂಸಾರಂ ನ ದೀಪ್ಯತೇ' ಶಬ್ದಾಭಿಮಾನಿನಿಯಾದ ಸರಸ್ವತಿಯೇ ಇಲ್ಲದಿದ್ದರೆ ಮೂರು ಲೋಕಗಳೇ ಅಂಧಕಾರಮಯವಾಗುತ್ತದೆ. ಆದ್ದರಿಂದ ಈ ಸರಸ್ವತಿಯೇ ನಮ್ಮ ಜೀವನದ ಹಾಗೂ ಸಕಲ ಲೋಕಗಳ ಜ್ಯೋತಿ.

## ಸರಸ್ವತಿಯು ವಿದ್ಯಾಭಿಮಾನಿ ದೇವತೆ

'ಚತುರವದನನ ರಾಣಿ ಅತಿರೋಹಿತ ವಿಮಲವಿಜ್ಞಾನಿ' ಎಂದು. ಸರಸ್ವತೀದೇವಿಯ ನಿರ್ಮಲವಾದ ಜ್ಞಾನಕ್ಕೆ ಎಂದೂ ಕೂಡ ತಿರೋಧಾನವಿಲ್ಲ. ಮತ್ತು ಪ್ರತಿಯೊಂದು ವಸ್ತುಗಳ ಬಗ್ಗೆ ವಿಶೇಷ ಜ್ಞಾನವನ್ನು ಪಡೆದಿರುತ್ತಾಳೆ. ಎಂದೆಂದೂ ಕೂಡ ಕಲಿಯ ಬಾಧೆ ಇವಳಿಗೆ ಇರುವುದಿಲ್ಲ. ಹರಿಯ ವಿಷಯದಲ್ಲಿ ಕ್ಷಣಕಾಲವೂ ವಿಮುಖಳಾಗಿರುವುದಿಲ್ಲ. ಆದ್ದರಿಂದಲೇ ಸಕಲವೇದಗಳಿಗೆ ಅಭಿಮಾನಿನೀ ಎನಿಸಿದ್ದಾಳೆ.

ಸರಸಭಾರತಿವಿಲಾಸದಲ್ಲಿ ಹೃದಯಂಗಮವಾಗಿ ಸರಸ್ವತಿಯನ್ನು ಶ್ರೀವಾದಿರಾಜರು ವರ್ಣಿಸಿದ್ದಾರೆ.

ನಮಾಮಿ ವಾಣೀಂ ಬ್ರಹ್ಮಾಣೀಂ ಕಲ್ಯಾಣೀಂ ಶುದ್ಧಧರ್ಮಿಣೀಮ್।
ಅಘೌಘಹಾರಿಣೀಂ ನಿತ್ಯತರುಣೀಂ ಮುಕ್ತಿಕಾರಿಣೀಮ್ ॥
ಹರೌ ಭಕ್ತಿಮತೀಂ ಭಾಗ್ಯವತೀಂ ಶತಧೃತೇಃ ಸತೀಮ್ ।
ಸರಸ್ವತೀಂ ಪುಣ್ಯವತೀಂ ಸ್ಮರಾಮೀಂದುಸಮದ್ಯುತೀಮ್ ॥

ಬ್ರಹ್ಮನ ಮಡದಿಯೂ, ಮಂಗಳಾತ್ಮಕಳೂ, ನಿಷ್ಕಲ್ಮಷ ಧರ್ಮವುಳ್ಳವಳೂ, ಭಕ್ತಪಾಪಾಪಹಾರಿಣಿಯೂ, ನಿತ್ಯ ಯೌವ್ವನಸಂಪನ್ನಳೂ, ಮುಕ್ತಿಗೆ ಕಾರಣಳೂ ಹರಿಯಲ್ಲಿ ಭಕ್ತಿಯುಳ್ಳವಳೂ, ಐಶ್ವರ್ಯಸಂಪನ್ನಳೂ, ಸುಕೃತಿಯುಕ್ತಳೂ, ಚಂದ್ರನಿಗೆ ಸಮಾನವಾದ ಕಾಂತಿಯುಳ್ಳವಳೂ ಆದ ಸರಸ್ವತಿಯನ್ನು ಸ್ಮರಿಸುತ್ತೇನೆ.

ಋಗ್ವೇದದಲ್ಲಿ ಸರಸ್ವತಿರಹಸ್ಯೋಪನಿಷತ್ತು ಬಹಳ ಅಪೂರ್ವವಾಗಿದೆ. ಸಕಲ ಋಷಿಗಳು ಒಮ್ಮೆ ಆಶ್ವಲಾಯನರ ಬಳಿ ತೆರಳಿ ಪ್ರಶ್ನಿಸಿದರು 'ಭಗವಂತನ ತತ್ವಜ್ಞಾನವನ್ನು ಪಡೆಯಲು ನಾವು ಯಾವ ದೇವತೆಯನ್ನು ಉಪಾಸನೆ ಮಾಡಬೇಕು' ಎಂದು. ಆಗ ಆಶ್ವಲಾಯನರು ಉಪದೇಶಿಸಿದ ಮಂತ್ರವೇ ಈ ಸರಸ್ವತಿರಹಸ್ಯೋಪನಿಷತ್ತು. ಇದನ್ನು ಪ್ರತಿನಿತ್ಯ ಪಠಿಸುವುದರಿಂದ ವಿಶೇಷವಾಗಿ ಜ್ಞಾನಾರ್ಜನೆಯಾಗುತ್ತದೆ. ವಾಕ್‌ಸಿದ್ಧಿಯಾಗುತ್ತದೆ. ಇದರಲ್ಲಿ ಲವಲೇಶವೂ ಸಂದೇಹವಿಲ್ಲ.

## ಸರಸ್ವತೀ ರಹಸ್ಯೋಪನಿಷತ್ತು

ಉಪನಿಷತ್ತು ಎಂಬ ಹೆಸರನ್ನು ಪಡೆದಿದ್ದರೂ ಕೂಡ ಅತ್ಯಂತ ಸಣ್ಣದಾದ ಮಂತ್ರವಿದು. 'ಪ್ರಣೋ ದೇವಿ ಸರಸ್ವತೀ ವಾಜೇಭಿರ್ವಾಜಿನೀವತಿ' ಎಂಬುದಾಗಿ ಪ್ರಾರಂಭವಾಗುತ್ತದೆ. ಮತ್ತು ವೇದಾಧ್ಯಯನದ ಪ್ರಾರಂಭದಲ್ಲಿ ಎಲ್ಲರೂ ಪಠಿಸುವ 'ಪಾವಕಾ ನಃ ಸರಸ್ವತೀ ವಾಜೇಭಿರ್ವಾಜಿನೀವತಿ' ಎಂಬ ಮಂತ್ರವೂ ಕೂಡ ಇದರಲ್ಲೇ ಗರ್ಭಿತವಾಗಿದೆ. 'ಅಂಬಿತಮೇ ನದೀತಮೇ' ಎಂಬುದು ಇದರ ಕೊನೆಯ ಮಂತ್ರ. ಪ್ರತಿಯೊಂದು ಮಂತ್ರಗಳೂ ಕೂಡ ಬಹಳ ಅರ್ಥಪೂರ್ಣ, ಬಹಳ ಸ್ವರಸವಾಗಿದೆ. ಸರಸ್ವತೀ ದೇವಿಯ ಮಹಿಮೆಯನ್ನು ಹೃದಯಂಗಮವಾಗಿ ಕೊಂಡಾಡುತ್ತವೆ.

## ವಿದ್ಯಾರಂಭದಲ್ಲಿ ಪಠಿಸಲೇ ಬೇಕಾದ ಉಪನಿಷತ್ತು

ಒಂದು ವೇಳೆ ಪೂರ್ಣ ಉಪನಿಷತ್ತನ್ನು ಪಠಿಸಲಾಗದಿದ್ದರೆ ಒಂದೇ ಮಾತಿನಲ್ಲಿ ಪಠಿಸಬಹುದು -

ಅಂಬಿತಮೇ ನದೀತಮೇ ದೇವಿತಮೇ ಸರಸ್ವತೀ ।
ಅಪ್ರಶಸ್ತಾ ಇವ ಸ್ಮಸಿ ಪ್ರಶಸ್ತಿಮಂಬ ನಸ್ಕೃಧಿ ॥

ಈ ಮಂತ್ರದ ಅರ್ಥ-ಅಂಬಿತಮೇ = ಸಕಲ ಮಾತೆಯರಿಗೂ ತಾಯಿಯಾದ ಸರಸ್ವತಿಯೇ, ನದೀತಮೇ = ಸಕಲ ನದಿಗಳಲ್ಲಿ ಶ್ರೇಷ್ಠಳಾದವಳೇ, ದೇವಿತಮೇ = ಸಕಲ ದೇವಿಯರಲ್ಲಿ ಅಗ್ರಗಣ್ಯಳಾದವಳೇ, ಸರಸ್ವತೀ = ನಿರಂತರ ಹರಿಚಿಂತನೆಯಲ್ಲಿ ಆಸಕ್ತಳಾದವಳೇ, ಅಪ್ರಶಸ್ತಾ ಇವ ಸ್ಮಸಿ ಪ್ರಶಸ್ತಿಮಂಬ ನಸ್ಕೃಧಿ = ಪ್ರಜ್ಞಾ, ಮೇಧ, ಧೃತಿ, ಯಶಸ್ಸು ಮೊದಲಾದ ಗುಣಗಳಿಲ್ಲದೇ ಆತ್ಮವು ಅಪ್ರಶಸ್ತವಾಗಿದೆ. ಆದ್ದರಿಂದಲೇ ಪರಮಾತ್ಮನ ದೆಸೆಯಿಂದ ಬಲು ದೂರದಲ್ಲೇ ಉಳಿದಿದೆ. ಓ ಸರಸ್ವತಿಯೇ ಈ ಎಲ್ಲ ನನ್ನ ಅಡೆತಡೆಗಳನ್ನು ಪರಿಹರಿಸಿ, ಗುಣಗಳನ್ನುಂಟು ಮಾಡಿ ಭಗವಂತನ ತತ್ವಜ್ಞಾನವನ್ನು ನೀಡು.

## ಸರಸ್ವತೀ ನದಿಯ ಬಗ್ಗೆ

ಸರಸ್ವತಿಯು ನದಿಯಾದುದರ ಬಗ್ಗೆ ಪುರಾಣಗಳಲ್ಲಿ ರೋಚಕ ಕಥೆಯಿದೆ. ಒಮ್ಮೆ ಸಂಪದಭಿಮಾನಿನಿಯಾದ ಲಕ್ಷ್ಮಿಗೂ, ವಿದ್ಯಾಭಿಮಾನಿನಿಯಾದ ಸರಸ್ವತಿಗೂ ವಿನೋದಕ್ಕಾಗಿ ಸಂಭಾಷಣೆ ನಡೆಯುತ್ತದೆ. ಆಗ ಲಕ್ಷ್ಮಿಯು ಸರಸ್ವತಿಗೆ 'ನೀನು ನೀರಾಗು' ಎನ್ನುವಳು. ಸರಸ್ವತಿಯು ಲಕ್ಷ್ಮಿಗೆ 'ಗಿಡವಾಗು' ಎನ್ನುವಳು. ಆದ್ದರಿಂದಲೇ ಲಕ್ಷ್ಮಿಯು ತುಳಸೀಗಿಡವಾದಳು. ಸರಸ್ವತಿಯು ನದಿಯಾಗಿ ಹರಿದಳು.

ಪ್ರಯಾಗಕ್ಷೇತ್ರದಲ್ಲಿ ಗಂಗಾ, ಯಮುನಾಗಳ ನಡುವೆ ಗುಪ್ತಗಾಮಿನಿಯಾಗಿ ಹರಿಯುವಳು. ಏಕೆಂದರೆ ಹಿಂದೊಮ್ಮೆ ತನ್ನ ಪತಿಯಾದ ಚತುರ್ಮುಖಬ್ರಹ್ಮನು ಹತ್ತು ಅಶ್ವಮೇಧಯಾಗವನ್ನು ಆ ಕ್ಷೇತ್ರದಲ್ಲಿ ಆಚರಿಸಿದ್ದನು. ಮತ್ತು ಪ್ರಾಚೀನಕಾಲದಲ್ಲಿ ಈ ನದಿಯ ತೀರದಲ್ಲಿ ಎಲ್ಲಾ ಋಷಿಮುನಿಗಳು ಯಜ್ಞಯಾಗಾದಿಗಳನ್ನು ನಡೆಸುತ್ತಿದ್ದರೆಂದು ಸರಸ್ವತೀ ನದಿಯನ್ನು ಸುಂದರವಾಗಿ ವರ್ಣಿಸಲಾಗಿದೆ.

ಋಗ್ವೇದದ ೧, ೩, ೭, ೮, ೧೦ನೆಯ ಮಂಡಲಗಳಲ್ಲಿ ಈ ನದಿಯನ್ನು ಮುಕ್ತಕಂಠದಿಂದ ಕೊಂಡಾಡಲಾಗಿದೆ. ಹತ್ತನೇ ಮಂಡಲದ ಎಪ್ಪತ್ತೈದನೆಯ ಸೂಕ್ತವು

ಆಮೂಲಾಗ್ರವಾಗಿ ಈ ನದಿಯನ್ನೇ ವರ್ಣಿಸಿದೆ. ನದಿಯ ವರ್ಣನೆ ಜೊತೆಗೆ ಸರಸ್ವತೀದೇವಿಯ ವರ್ಣನೆಯನ್ನು ಇದರಲ್ಲಿ ಕಾಣಬಹುದು. ಸರಸ್ವತೀ ಹಾಗೂ ಋಷದ್ವತಿ ನದಿಗಳ ಮಧ್ಯದ ಪ್ರದೇಶವು ವಿಲಾಸ್ಯಪದ ಎನಿಸುತ್ತದೆ. ಈ ಪ್ರದೇಶದ ಮೇಲೆ ಹಾದು ಹೋಗುವ ರೇಖಾಂಶವೇ ಭಾರತೀಯ ಖಗೋಳಶಾಸ್ತ್ರದ ನಮ್ಮ ದೇಶದ ಮಧ್ಯರೇಖೆಯೆಂದು ಗುರುತಿಸಲ್ಪಟ್ಟಿದೆ. ಈಗಲೂ ಇದರ ಬಳಕೆಯಿದೆ. ಉದ್ದ, ಅಗಲ, ಆಳಗಳಲ್ಲಿ ಅತ್ಯಂತ ವಿಸ್ತಾರವಾದ ವೈದಿಕಸಂಸ್ಕೃತಿಯ ಜೀವಾಳವಾಗಿದ್ದ ಈ ಭವ್ಯ ಸರಸ್ವತೀ ನದಿಯು ಸುಮಾರು ನಾಕು ಸಾವಿರ ವರ್ಷಗಳ ಹಿಂದೆಯೇ ಅದೃಶ್ಯವಾಗಿದೆ ಎಂದು ಹೇಳುತ್ತಾರೆ. ಈಗ ಪ್ರಯಾಗದಲ್ಲಿ ಗುಪ್ತಗಾಮಿನಿಯಾಗಿ ಹರಿಯುವುದಷ್ಟೇ ನಮ್ಮ ಸೌಭಾಗ್ಯ.

ಸರಸ್ವತಿನದಿಯಷ್ಟೇ ಅಲ್ಲ. ಸರಸ್ವತೀ ಎಂಬ ಗಿಡವನ್ನೂ ಕೂಡ ಕೇಳಿದ್ದೇವೆ. ಇದಕ್ಕೂ ಕೂಡ ಸರಸ್ವತಿಯೇ ಅಭಿಮಾನಿಯಾಗಿದ್ದಾಳೆ. ಆದ್ದರಿಂದಲೇ ಈ ಸಸ್ಯವನ್ನು ಉಪಯೋಗಿಸುವುದರಿಂದ ಮನೋರೋಗಗಳು ಪರಿಹಾರವಾಗುವುದಲ್ಲದೇ, ಬುದ್ಧಿಯಲ್ಲಿ ಉತ್ತಮ ಬೆಳವಣಿಗೆಯೂ ಕೂಡ ಉಂಟಾಗುವುದು. ಮರೆಯುವಿಕೆ ಮೊದಲಾದ ದೋಷಗಳೆಲ್ಲವೂ ಪರಿಹಾರವಾಗುವುದು. ಇದೇ ಸರಸ್ವತೀ ಗಿಡವನ್ನು 'ಬ್ರಾಹ್ಮೀ' ಎಂದು ಕರೆಯುವರು. ಕನ್ನಡದಲ್ಲಿ 'ಒಂದೆಲಗ' ಎನ್ನುವರು. ಕೃಷ್ಣ ಯಜುರ್ವೇದದಲ್ಲಿ ಬರುವ 'ಮೇಧಾಂ ದೇವಿ ಸರಸ್ವತಿ' ಎಂಬ ಮೇಧಾ ಸೂಕ್ತವನ್ನು ಅಭಿಮಂತ್ರಣ ಮಾಡಿ, ಈ ಎಲೆಯ ರಸವನ್ನು ಪಾನ ಮಾಡಬೇಕು. ಇದರಿಂದ ಮೇಧಾಶಕ್ತಿಯು ಅಭಿವೃದ್ಧಿಯಾಗುವುದು.

ಸರಸ್ವತಿಯ ರೂಪವು ಹೇಗಿದೆ ? ಹಾಗೂ ಇವಳಿಗೆ ಎಷ್ಟು ರೂಪಗಳು ಎಂದರೆ ಸರಸ್ವತಿಯ ಹೆಸರುಗಳು ಸಾವಿರಾರು ಇವೆ. ಆದರೆ ಪುರಾಣಗಳಲ್ಲಿ ಹನ್ನೆರಡು ರೂಪಗಳನ್ನು ವಿವಿಧ ಭಂಗಿಯಲ್ಲಿ ವರ್ಣಿಸಲಾಗಿದೆ. ಹಾಗೂ ತನ್ನ ಒಂದೊಂದು ರೂಪಗಳಿಂದ ಧಾರಣೆ ಮಾಡಿದ ಅಕ್ಷಮಾಲಾದಿಗಳು ವಿಭಿನ್ನವಾಗುತ್ತವೆ. ಅದು ಹೀಗಿದೆ - ೧. ಮಹಾ ಸರಸ್ವತಿ - ಅಕ್ಷಮಾಲೆ, ಕಮಲ, ವೀಣೆ, ಪುಸ್ತಕ. ೨. ಸರಸ್ವತಿ - ಅಕ್ಷಮಾಲೆ, ವೀಣೆ, ಪುಸ್ತಕ, ಕಮಲ, ೩. ಕಮಲ - ವರದ, ಅಕ್ಷಮಾಲೆ, ಕಮಲ,

ಪುಸ್ತಕ, ೪. ಜಯ - ವರದ, ಕಮಲ, ಪುಸ್ತಕ, ಅಕ್ಷಮಾಲೆ, ೫. ವಿಜಯ - ವರದ, ಅಕ್ಷಮಾಲೆ, ಪುಸ್ತಕ, ಕಮಲ, ೬. ಸಾರಂಗಿ - ವರದ, ಪುಸ್ತಕ, ಅಕ್ಷಮಾಲೆ, ಕಮಲ, ೭. ತಂಬೂರಿ - ಅಭಯ, ಅಕ್ಷಮಾಲೆ, ವೀಣೆ, ಪುಸ್ತಕ, ೮. ನಾರದಿ - ವರದ, ಪುಸ್ತಕ, ವೀಣೆ, ಕಮಲ, ೯. ಸರ್ವಮಂಗಳ - ವರದ, ಕಮಲ, ಪುಸ್ತಕ, ಅಭಯ, ೧೦. ವಿದ್ಯಾಧರೆ - ಕಮಲ, ಅಕ್ಷಮಾಲೆ, ವೀಣೆ, ಪುಸ್ತಕ, ೧೧. ಸರ್ವವಿದ್ಯಾ-ಅಕ್ಷಮಾಲೆ, ಕಮಲ, ಪುಸ್ತಕ, ಅಭಯ, ೧೨. ಶಾರದಾ - ಅಭಯ, ಕಮಲ, ಪುಸ್ತಕ, ಅಕ್ಷಮಾಲೆ.

## ಸರಸ್ವತೀ ಧರಿಸಿದ ವೀಣೆಯೇ ಕಚ್ಛಪಿ

'ಕಚ್ಛಪೀ' ಎಂಬುದು ಈ ವೀಣೆಯ ಹೆಸರು. 'ವಲ್ಲಕೀ' ಎಂಬ ಮತ್ತೊಂದು ವೀಣೆಯನ್ನೂ ಕೂಡ ಇವಳು ಧರಿಸುತ್ತಾಳೆನ್ನುತ್ತಾರೆ. ದೇವತೆಗಳಲ್ಲಿ ಒಬ್ಬೊಬ್ಬರು ಒಂದೊಂದು ವೀಣೆಯನ್ನು ಧಾರಣೆ ಮಾಡಿದ್ದಾರೆ. ಶಿವನ ವೀಣೆಗೆ 'ರುದ್ರವೀಣೆ' ಎಂದು, ನಾರದರ ವೀಣೆಗೆ 'ಮಹತೀ' ಎಂದು, ತುಂಬುರುವಿನ ವೀಣೆಗೆ 'ಕಲಾವತೀ' ಎಂದು, ವಿಶ್ವಾವಸುವಿನ ವೀಣೆಗೆ 'ಬೃಹತೀ' ಎಂದು, ಶ್ಯಾಮಲಾದೇವಿಯ ವೀಣೆಗೆ 'ಮಾಣಿಕ್ಯ'ವೆಂದು, ದಕ್ಷನ ವೀಣೆಗೆ 'ತುಂಬುರು' ಎಂದು, ಉದಯನನ ವೀಣೆಗೆ 'ಘೋಷವತೀ' ಎಂದು ಹೇಳುತ್ತಾರೆ. ಪ್ರಾಚೀನ ಗ್ರಂಥಗಳಲ್ಲಿ ಒಟ್ಟು ಹತ್ತೊಂಬತ್ತು ಬಗೆಯ ವೀಣೆಗಳಿವೆ. ವೀಣೆಯ ನಾದವು ದಶ ವಿಧದ ಅನಾಹತನಾದಗಳಲ್ಲಿ ಒಂದಾಗಿದೆ. ಹೀಗೆ ಸಂಗೀತ ಪ್ರಪಂಚದಲ್ಲೇ ವೀಣೆಗೆ ಮಹತ್ವವು ಬಂದಿದೆ.

## ಸರಸ್ವತೀಯ ವಾಹನ

ಹಂಸವು ಇವಳ ವಾಹನ. ಆದ್ದರಿಂದಲೇ ಹಂಸವಾಹಿನಿ ಎಂದು ಪುರಾಣಗಳಲ್ಲಿ ಇವಳನ್ನು ಹೆಸರಿಸಲಾಗಿದೆ. ಕೆಲವರು ನವಿಲೂ ಕೂಡ ಇವಳ ವಾಹನ ಎನ್ನುವರು. ಇದಕ್ಕೆ ಆಧಾರ ಎಲ್ಲೂ ಕಂಡು ಬರುವುದಿಲ್ಲ.

## ಸಕಲ ಕಲಾವಲ್ಲಭೆ

ಸರಸ್ವತಿಯು ಕೇವಲ ವಿದ್ಯೆಗೆ ಅಭಿಮಾನಿಯಲ್ಲ ಎಲ್ಲ ಕಲೆಗಳಿಗೂ ಅಭಿಮಾನಿನಿ ಆಗಿರುವಳು. 'ಸಂಗೀತಮಪಿಸಾಹಿತ್ಯಂ ಸರಸ್ವತ್ಯಾಃಸ್ತನದ್ವಯಂ' ಎಂಬ ಪ್ರಸಿದ್ಧ

ಸುಭಾಷಿತದಂತೆ ಸಂಗೀತ, ಸಾಹಿತ್ಯಗಳೆರಡು ಸರಸ್ವತಿಯ ಸ್ತನಗಳು. ಇದನ್ನು ಅವಲಂಬಿಸಿಯೇ ವಿದ್ಯೆಯ ಪರಂಪರೆ ಪ್ರವಹಿಸಿ ಬಂದಿದೆ. ಆದ್ದರಿಂದ ಕೇವಲ ವೇದಾದಿ ವಿದ್ಯೆಗಳಷ್ಟೇ ಅಲ್ಲದೇ ಸಂಗೀತ ನೃತ್ಯ, ಶಿಲ್ಪಕಲೆ, ಚಿತ್ರಕಲೆ, ನಾಟ್ಯ ಇನ್ನೂ ಅನೇಕ ಬಗೆಯ ಕ್ರೀಡಾಕಲೆಗಳೆಲ್ಲವೂ ಸರಸ್ವತಿಯಿಂದಲೇ ಹರಿದುಬಂದವು. ಅದೆಲ್ಲದಕ್ಕೂ ಇವಳೇ ಅಭಿಮಾನಿನಿ ಆಗಿರುವಳು.

## ಸರಸ್ವತಿಯ ಜನನ ಕಾಲ

ಮಾಘ ಶುದ್ಧ ಪಂಚಮಿ ಸರಸ್ವತಿಯ ಆವಿರ್ಭಾವದ ದಿವಸವೆಂದು ಪರಿಗಣಿಸುತ್ತಾರೆ. ಅತ್ಯಂತ ಸಂಭ್ರಮೋತ್ಸಾಹಗಳಿಂದ ಅಂದು ಸರಸ್ವತಿಯ ಹಬ್ಬವನ್ನು ಸರಸ್ವತೀ ದೇವಸ್ಥಾನಗಳಲ್ಲಿ ಆಚರಣೆ ಮಾಡುತ್ತಾರೆ.

## ಸರಸ್ವತಿಗೆ ಅವತಾರವಿಲ್ಲ

ಸರಸ್ವತಿಯು ಭೂಲೋಕದಲ್ಲಿ ಯಾವಾಗ ಅವತರಿಸಿರುವಳು. ಹಾಗೂ ಅವಳ ಅವತಾರಗಳೆಷ್ಟು? ಎಂಬ ಪ್ರಶ್ನೆಯು ಸಹಜವಾಗಿ ಬರುತ್ತದೆ. ಆದರೆ ಚತುರ್ಮುಖಬ್ರಹ್ಮದೇವರಿಗೆ ಹೇಗೆ ಅವತಾರವಿಲ್ಲವೋ, ಅದರಂತೆ ಸರಸ್ವತೀದೇವಿಗೂ ಕೂಡ ಭೂಲೋಕದಲ್ಲಿ ಅವತಾರವಿಲ್ಲ. ಭಕ್ತರ ಉದ್ಧಾರಕ್ಕಾಗಿ ಅನೇಕ ಬಾರಿ ಮೂಲರೂಪದಿಂದಲೇ ಬಂದು ಅನುಗ್ರಹಿಸುವಳು.

## ಸರಸ್ವತಿಯ ಉಪಾಸನೆ ನಮ್ಮಲ್ಲೂ ಇದೆ

ಚತುರ್ಮುಖಬ್ರಹ್ಮದೇವರಿಗೆ ಪ್ರತ್ಯೇಕವಾದ ಪೂಜೆಯಿಲ್ಲ ಆದ್ದರಿಂದ, ಅವರ ಪತ್ನಿಯಾದ ಸರಸ್ವತಿಗೂ ಕೂಡ ಪ್ರತ್ಯೇಕವಾಗಿ ಪೂಜೆ ಮಾಡುವ ವಾಡಿಕೆ ನಮ್ಮಲ್ಲಿ ಬಂದಿಲ್ಲ. ಆದರೆ ಭಾರತೀದೇವಿಗೆ ನಿಯಮೇನ ಪೂಜೆ ಮಾಡುವ ಸಂಪ್ರದಾಯ ನಮ್ಮಲ್ಲಿದೆ. ಮುಖ್ಯಪ್ರಾಣನ ಪ್ರತಿಮೆಯಲ್ಲಿ ಬ್ರಹ್ಮದೇವರು ವಾಸಿಸುವಂತೆ. ಭಾರತೀದೇವಿಯ ಪ್ರತಿಮೆಯಲ್ಲಿ ಸರಸ್ವತಿಯೂ ಕೂಡ ವಾಸಿಸುತ್ತಾಳೆ. ಆದ್ದರಿಂದ ಭಾರತಿಗೆ ಪೂಜೆ ಸಲ್ಲಿಸಿದಾಗ ಸರಸ್ವತಿಗೂ ಕೂಡ ಸಲ್ಲುತ್ತದೆಂಬುದು ನಮ್ಮ ಸಂಪ್ರದಾಯ. ಇಷ್ಟೇ ಅಲ್ಲದೇ 'ವಾಣೀಹಿರಣ್ಯಗರ್ಭಾಭ್ಯಾಂ ನಮಃ' ಇತ್ಯಾದಿಯಾಗಿ

ಯಾವುದೇ ಸತ್ಕಾರ್ಯಗಳ ಪ್ರಾರಂಭದಲ್ಲಿ ಸರಸ್ವತಿಗೆ ಹಾಗೇ ಚತುರ್ಮುಖಬ್ರಹ್ಮದೇವರಿಗೆ ನಮಸ್ಕರಿಸುವ ಸಂಪ್ರದಾಯವಿದೆ.

## ಗಾಯತ್ರೀ, ಸಾವಿತ್ರೀ, ಸರಸ್ವತೀ ರೂಪತ್ರಯಗಳು

ಬಹಳ ಮುಖ್ಯವಾದ ವಿಚಾರ ಎಂದರೆ ಸರಸ್ವತಿಗೆ ಮೂರು ರೂಪಗಳಿವೆ. ಗಾಯತ್ರೀ, ಸಾವಿತ್ರೀ, ಸರಸ್ವತೀ ಎಂದು. ಆದ್ದರಿಂದ ಪ್ರತಿನಿತ್ಯ ನಾವು ಗಾಯತ್ರೀ ಮಂತ್ರವನ್ನು ಜಪಿಸುವಾಗ ಸರಸ್ವತಿರೂಪವನ್ನೇ ಧ್ಯಾನ ಮಾಡಬೇಕೆಂದು ಸ್ಮಾರ್ತರು ಹೇಳುತ್ತಾರೆ. ಇದು ತಪ್ಪು. ಶ್ರೀಮದಾಚಾರ್ಯರು ಸ್ಪಷ್ಟವಾಗಿ ಗಾಯತ್ರೀ ಶಬ್ದದಿಂದ ಸೂರ್ಯನಾರಾಯಣನೇ ಪ್ರತಿಪಾದ್ಯನಾಗಿದ್ದಾನೆಂದು ನಿರ್ಣಯಿಸಿದ್ದಾರೆ. ಆದ್ದರಿಂದ ಗಾಯತ್ರೀಜಪವನ್ನು ಮಾಡುವಾಗ ಚತುರ್ಮುಖನ ಪತ್ನಿಯಾದ ಸರಸ್ವತಿಯ ಉಪಾಸನೆ ಅನಾವಶ್ಯಕ.

## ಗಾಯತ್ರೀ ಮಂತ್ರ ಜಪದಲ್ಲಿ ಭಗವಂತನ ಉಪಾಸನೆಯೇ ಮುಖ್ಯ

ಸರಸ್ವತೀ ದೇವಿಗೆ ಗಾಯತ್ರೀ, ಸಾವಿತ್ರಿ, ಸರಸ್ವತಿ ಎಂಬ ಮೂರು ರೂಪಗಳಿವೆ. ಆದರೆ ತದಂತರ್ಯಾಮಿಯಾದ ಭಗವಂತನೇ ಮುಖ್ಯವಾಗಿ ಆ ರೂಪಗಳುಳ್ಳವನೆಬುಂದು ನಿಜವಾದ ಅಭಿಪ್ರಾಯ. ಗಾಯತ್ರೀ ಎಂಬ ರೂಪದಿಂದ ಪ್ರಾತಃಕಾಲದಲ್ಲಿ, ಸಾವಿತ್ರೀ ಎಂಬ ರೂಪದಿಂದ ಮಧ್ಯಾಹ್ನಕಾಲದಲ್ಲಿ, ಸರಸ್ವತೀ ಎಂಬ ರೂಪದಿಂದ ಸಾಯಂಕಾಲದಲ್ಲಿ ಚತುರ್ಮುಖನ ಪತ್ನಿಯಾದ ದೇವಿಯು ಅಭಿಮಾನಿನೀ ಆಗಿರುವಳು.

## ಸರಸ್ವತಿಯು ಕೂಡ ಗಾಯತ್ರೀ ಮಂತ್ರಕ್ಕೆ ಅಭಿಮಾನಿನೀ

ಶ್ರೀಮಧ್ವಾಚಾರ್ಯರು ಬೃಹದಾರಣ್ಯಕೋಪನಿಷತ್ತಿನ ಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ - 'ಅಭಿಮಾನಿನೀ ತು ಗಾಯತ್ರ್ಯಾ ಮುಖ್ಯಾ ಶ್ರೀಃ ಪರಿಕೀರ್ತಿತಾ ।' ಗಾಯತ್ರೀಮಂತ್ರಕ್ಕೆ ಮುಖ್ಯವಾಗಿ ಲಕ್ಷ್ಮೀಯೂ ಅಭಿಮಾನಿನೀ. ಅಮುಖ್ಯವಾಗಿ ಸರಸ್ವತಿಯು ಅಭಿಮಾನಿನೀ ಎಂದು. ಹೀಗೆ ಉಪಾಸನೆ ಮಾಡುವುದು ತಪ್ಪಲ್ಲ. ಆದರೆ ಸೂರ್ಯನಾರಾಯಣನನ್ನು ಮರೆತು ಸರಸ್ವತಿಯೊಬ್ಬಳೇ ಗಾಯತ್ರೀಮಂತ್ರ

ಪ್ರತಿಪಾದ್ಯಳೆಂದು ಉಪಾಸನೆ ಮಾಡುವುದು ತಪ್ಪೆಂಬುದು ಶ್ರೀಮದಾಚಾರ್ಯರ ಅಭಿಪ್ರಾಯ.

## ಗಾಯತ್ರ್ಯಾದಿ ಹೆಸರುಗಳ ಬಗ್ಗೆ

ಬೃಹದಾರಣ್ಯಕೋಪನಿಷತ್ತಿನ ಪಂಚಮಾಧ್ಯಾಯದಲ್ಲಿ ಇದರ ಬಗ್ಗೆ ಬಹಳಷ್ಟು ವಿವರಣೆ ಇದೆ. ಸರಸ್ವತಿಯ ಮಹಿಮೆಯೂ ಕೂಡ ಅತ್ಯಂತವಾಗಿ ಅಲ್ಲಿ ಪ್ರಶಂಸೆ ಮಾಡಲಾಗಿದೆ. ಭಗವಂತನ ಗಾಯತ್ರ್ಯಾದಿ ರೂಪಗಳನ್ನು ಆಶ್ರಯಿಸಿರುವುದರಿಂದಲೇ ಇವಳಿಗೂ ಗಾಯತ್ರ್ಯಾದಿ ರೂಪಗಳು ಬಂದಿವೆ ಎಂದು ಸಾಧಾರಣವಾಗಿ ಹೇಳಬಹುದು.

## ದುರ್ಗೆ, ಪಾರ್ವತೀ, ಸರಸ್ವತಿಯರಲ್ಲಿ ಪರಸ್ಪರ ಭೇದ

ಸರಸ್ವತಿಯನ್ನೇ, ಮಹಾಕಾಳಿಯೆಂದು, ದುರ್ಗೆಯೆಂದು, ಪಾರ್ವತಿಯೆಂದು ಎಲ್ಲರೂ ಹೇಳುತ್ತಾರೆ. ಇದು ಸರ್ವಥಾ ತಪ್ಪು. ದುರ್ಗಾಸಪ್ತಶತಿಯು ಸರಸ್ವತಿಯನ್ನು ಪ್ರತಿಪಾದನೆ ಮಾಡುತ್ತಿದೆ ಎಂದೂ ಕೂಡ ಹೇಳುತ್ತಾರೆ. ಆದರೆ ಪರಮಾತ್ಮನ ಪತ್ನಿ ದುರ್ಗೆಯೇ ಬೇರೆ. ಚತುರ್ಮುಖನ ಪತ್ನಿಯಾದ ಸರಸ್ವತಿಯೇ ಬೇರೆ, ರುದ್ರ ಪತ್ನಿಯಾದ ಪಾರ್ವತಿಯೇ ಬೇರೆ. ಈ ಮೂವರಿಗೆ ಐಕ್ಯವನ್ನು ಸರ್ವಥಾ ತಿಳಿಯಬಾರದು. ಹಾಗೇನಾದರೂ ಕೆಲವೊಮ್ಮೆ ಐಕ್ಯವ್ಯವಹಾರವು ಕಂಡರೆ ಅಂತರ್ಯಾಮಿ ವಿವಕ್ಷೆಯಿಂದ ಕೂಡಿಸಬೇಕು. ಮತ್ತು ಫಲಾಧಿಕ್ಯಕ್ಕಾಗಿ, ಶೀಘ್ರಫಲಕ್ಕಾಗಿ, ಮೂರೂ ದೇವಿಯರನ್ನು ಒಗ್ಗೂಡಿಸಿ ಉಪಾಸಿಸುವ ತಂತ್ರಗಳಿವೆ. ಈ ತಂತ್ರಗಳನ್ವಯ ಉಪಾಸನೆ ಮಾಡಿದರೂ ಇವರುಗಳಿಗೆ ಸ್ವರೂಪೈಕ್ಯವಿಲ್ಲವೆಂದು ಎಚ್ಚರಿಕೆ ಇರಬೇಕು.

## ನಲಿದಾಡೇ ಎನ್ನ ನಾಲಿಗೆ ಮೇಲೆ ಶಾರದಾದೇವಿ

ಚತುರ್ಮುಖನ ನಾಲಿಗೆಯಿಂದ ಜನಿಸಿದ ಶುದ್ಧಸತ್ವಾತ್ಮಕಳಾದ ಸರಸ್ವತಿಯು ನಮ್ಮ ನಾಲಿಗೆ ಮೇಲೆ ನಿರಂತರ ನಲಿದಾಡುವಂತೆ ಪ್ರಾರ್ಥಿಸಬೇಕು. ರಾಘವೇಂದ್ರಸ್ವಾಮಿಗಳ ನಾಲಿಗೆಯಲ್ಲಿ ಸರಸ್ವತಿಯ ಸನ್ನಿಧಾನವನ್ನು ಅತ್ಯಂತ ಸುಂದರವಾಗಿ ವರ್ಣಿಸಿದ್ದಾರೆ. ಮೋಕ್ಷಸಾಧನೆಯಾಗಬೇಕೆಂದರೆ ಸರಸ್ವತಿಯ

ಅನುಗ್ರಹ ಬೇಕೇ ಬೇಕು. ಇಲ್ಲದಿದ್ದರೆ ವಾಙ್ಮನಸ್ಸುಗಳ ಸಿದ್ಧಿಯಾಗದೇ ಮತ್ತಷ್ಟು ಅಧೋಗತಿಗೀಡಾಗಬೇಕಾಗುತ್ತದೆ. ಮತ್ತು ಪ್ರತಿಯೊಬ್ಬರೂ ಕೂಡ ವಿದ್ಯಾರಂಭಕಾಲದಲ್ಲಿ ಹೇಳುವ ಶ್ಲೋಕ - 'ಸರಸ್ವತೀ ನಮಸ್ತುಭ್ಯಂ ವರದೇ ಕಾಮರೂಪಿಣೀ, ವಿದ್ಯಾರಂಭಂ ಕರಿಷ್ಯಾಮಿ ಸಿದ್ಧಿರ್ಭವತು ಮೇ ಸದಾ' ಹೀಗೆ ಸರಸ್ವತಿಯನ್ನು ಪ್ರಾರ್ಥನೆ ಮಾಡಿ, ಭಗವಂತನ ತತ್ವವನ್ನು ಅರಿಯುವ ವಿದ್ಯೆಯಲ್ಲಿ ಮುಂದುವರೆಯಬೇಕು. ಅದಕ್ಕಾಗಿ ಸರಸ್ವತೀಯ ಅನುಗ್ರಹವನ್ನು ಪ್ರಾರ್ಥನೆ ಮಾಡಬೇಕು.

## ಸರಸ್ವತೀ ಆರಾಧನೆಯಲ್ಲಿ ಗಮನಿಸಬೇಕಾದ ಅಂಶಗಳು ಹೀಗಿವೆ

ಸರಸ್ವತೀ ಆರಾಧನೆಯಲ್ಲಿ ತೊಡಗಬೇಕಾದರೆ ಗಮನಿಸಬೇಕಾದ ಅಶಂಗಳಿಷ್ಟು- ಅಜ್ಞಾನ-ವಿಪರೀತಜ್ಞಾನಗಳನ್ನು ಸರಸ್ವತಿಯು ಎಂದೂ ಹೊಂದಿದವಳಲ್ಲ. ಆದ್ದರಿಂದಲೇ ಪರಶುಕ್ಲತ್ರಯಗಣದಲ್ಲಿ ಇವಳು ಸೇರಿರುವಳು. ಇಂಥ ಸರಸ್ವತಿಯೇ ಸರ್ವಶಕ್ತಳೆಂದು ಸರ್ವಥಾ ತಿಳಿಯಬಾರದು. ಮತ್ತು ಗಾಯತ್ರೀಮಂತ್ರದ ಜಪ ಮಾಡುವಾಗ ಸರಸ್ವತಿಯೇ ಗಾಯತ್ರೀ ಮಂತ್ರದಿಂದ ಮುಖ್ಯವಾಗಿ ಪ್ರತಿಪಾದ್ಯಳೆಂದು ತಿಳಿಯಬಾರದು. ಹಾಗೂ ಲಕ್ಷ್ಮೀ ಮತ್ತು ಪಾರ್ವತಿಯರ ಜೊತೆ ಐಕ್ಯವನ್ನೂ ಕೂಡ ತಿಳಿಯಬಾರದು. ಹೀಗೆ ಯಥಾರ್ಥವಾಗಿ ಉಪಾಸನೆ ಮಾಡಿದರೆ ಮಾತ್ರ ಸರಸ್ವತಿಯ ಪೂರ್ಣ ಅನುಗ್ರಹವಾಗುವುದು. ಆಗ ಮಾತ್ರ ಸರಸ್ವತಿಯು ಜ್ಞಾನಪ್ರದಳಾಗುವಳು.

## ಸರಸ್ವತಿಯ ವ್ರತ

ಆಶ್ವೀನಮಾಸದಲ್ಲಿ ಬರುವ ನವರಾತ್ರಿಯಂದು ಸರಸ್ವತಿಯ ಪೂಜೆಯನ್ನು ಪ್ರತಿಯೊಬ್ಬರೂ ಆಚರಿಸುತ್ತಾರೆ. ಆ ಸಂದರ್ಭದಲ್ಲಿ ಸರಸ್ವತಿ ಅವತರಿಸಿದ್ದಲ್ಲವೇ? ಎಂಬ ಪ್ರಶ್ನೆಯು ಬರುತ್ತದೆ. ಆದರೆ ಇದು ಅವತಾರದ ದಿವಸವಲ್ಲ. ಕೇವಲ ವ್ರತದ ದಿವಸವಾಗಿದೆ. ನವರಾತ್ರಿಯ ಷಷ್ಠೀ ತಿಥಿಯಲ್ಲಿ ಮೂಲಾನಕ್ಷತ್ರವು ಪ್ರಾಪ್ತವಾದಾಗ ಸರಸ್ವತಿಯನ್ನು ವಿಶೇಷವಾಗಿ ಪೂಜೆ ಮಾಡುತ್ತಾರೆ. ಇದು ಸರಸ್ವತಿಯ ಆವಿರ್ಭಾವದ ದಿವಸವಲ್ಲ. ಪುರಾಣಗಳಲ್ಲಿ ಹೇಳಲ್ಪಟ್ಟ ಸರಸ್ವತಿಯ ವ್ರತ ಮಾತ್ರ. ವ್ರತ ಬೇರೆ, ಹಬ್ಬ ಬೇರೆ. ಇದನ್ನು ಪ್ರತಿಯೊಬ್ಬರೂ ಕೂಡ ಆಚರಿಸಲೇ ಬೇಕು.

## ನವರಾತ್ರಿಯ ವೈಶಿಷ್ಟ್ಯ

ಸರಸ್ವತಿಯನ್ನು ನವರಾತ್ರಿಯ ಸಂದರ್ಭದಲ್ಲಿ ಪೂಜಿಸಲು ಯಾವ ವೈಶಿಷ್ಟ್ಯವಿದೆ ಎಂದರೆ - ಸರಸ್ವತಿಯ ಮತ್ತೊಂದು ಹೆಸರು ಶಾರದಾ. ಶರತ್ಕಾಲಕ್ಕೆ ಇವಳು ಅಭಿಮಾನಿನಿಯಾಗಿರುವುದರಿಂದ 'ಶಾರದಾ' ಎನಿಸಿದ್ದಾಳೆ. ಆಸೇತುಹಿಮಾಚಲ ಪ್ರತಿಯೊಬ್ಬರೂ ಕೂಡ ನವರಾತ್ರಿಯನ್ನು ವೈಭವದಿಂದ ಆಚರಿಸುತ್ತಾರೆ. ನವರಾತ್ರಿಗೆ ವೈಶಿಷ್ಟ್ಯ ಬಂದಿರುವುದೇ ಸರಸ್ವತಿ ಆರಾಧನೆಯ ಪ್ರಯುಕ್ತವಾಗಿದೆ.

## ಸರಸ್ವತೀ ಪೂಜಾಕ್ರಮ

ಸರಸ್ವತಿಯ ಪ್ರತಿಮೆಯೆಂದರೆ ಪುಸ್ತಕ. ಸಚ್ಛಾಸ್ತ್ರದ ಪುಸ್ತಕಗಳನ್ನಿಟ್ಟು ಅಂದು ಪೂಜಿಸಬೇಕು. ಧ್ಯಾನ, ಆವಾಹನ ಮೊದಲಾದ ಷೋಡಶೋಪಚಾರ ಪೂಜೆಗಳನ್ನು ಮಾಡಬೇಕು. ಪ್ರತಿಯೊಂದು ಉಪಚಾರಗಳನ್ನು ಮಾಡುವಾಗಲೂ ಸರಸ್ವತಿಗೆ ಸಂಬಂಧಪಟ್ಟ ಮಂತ್ರಗಳಿವೆ. ಅಂಗಪೂಜೆ, ಪುಷ್ಪಪೂಜೆ, ಪತ್ರಪೂಜೆ ಹಾಗೂ ಅಷ್ಟೋತ್ತರನಾಮಾವಳಿ ಪೂಜೆಯನ್ನು ಆಚರಿಸಬೇಕು. ಕೊನೆಯಲ್ಲಿ 'ಚತುರ್ದಶಸು ವಿದ್ಯಾಸು ರಮತೇ ಯಾ ಸರಸ್ವತೀ, ಚತುರ್ದಶಸು ಲೋಕೇಷು ಸಾ ಮೇ ವಾಚೀ ವಸೇತ್ ಸದಾ' ಎಂಬುದಾಗಿ ಭಕ್ತಿಯಿಂದ ನಮಿಸಬೇಕು.

## ವ್ರತಾಚರಣೆಯ ಕಾಲ

ಮೂಲಾನಕ್ಷತ್ರದಂದು ಮಾತ್ರ ಸರಸ್ವತಿಯ ಪೂಜೆ ಮಾಡಿದರೆ ಸಾಲದು. 'ಮೂಲೇನಾವಾಹಯೇದ್ದೇವೀಂ ಶ್ರವಣೇನ ವಿಸರ್ಜಯೇತ್' ಮೂಲಾನಕ್ಷತ್ರದಲ್ಲಿ ಸರಸ್ವತಿಯ ಆವಾಹನೆಯನ್ನು ಮಾಡಿ, ಪೂಜೆಯನ್ನು ಪ್ರಾರಂಭಿಸಿ ಶ್ರವಣಾ ನಕ್ಷತ್ರವು ಪ್ರಾಪ್ತವಾದಾಗ ವಿಸರ್ಜನೆ ಮಾಡಬೇಕು. ಸಾಮಾನ್ಯವಾಗಿ ಷಷ್ಠಿಯ ದಿವಸ ಸರಸ್ವತಿಯ ಪೂಜೆಯು ಪ್ರಾರಂಭವಾದರೆ, ವಿಜಯದಶಮಿಯಂದು ಮುಕ್ತಾಯವಾಗುತ್ತದೆ. ಆಗ ಪ್ರತಿನಿತ್ಯವೂ ಕೂಡ ಭಕ್ತಿಯಿಂದ ಪೂಜೆಗೈಯಬೇಕು. ಸಾಧ್ಯವಾಗದಿದ್ದರೆ ಮೂಲಾನಕ್ಷತ್ರದ ದಿವಸ ವಿಸ್ತೃತ ಪೂಜೆ ಮಾಡಿ, ಉಳಿದ ದಿವಸಗಳಲ್ಲಿ ಸಂಕ್ಷೇಪವಾಗಿಯಾದರೂ ಪೂಜೆ ಮಾಡಲೇಬೇಕು.

## ಸರಸ್ವತಿಯ ವ್ರತದಲ್ಲಿ ಅನಧ್ಯಯನ

ಸರಸ್ವತಿಯ ಪೂಜೆಯ ದಿವಸ ವಿಶೇಷವಾಗಿ ಅಧ್ಯಯನದಲ್ಲಿ ತೊಡಗಬೇಕೆಂಬ ಪ್ರಶ್ನೆ ಬರುತ್ತದೆ. ಆದರೆ ಇದು ತಪ್ಪು. ಎಲ್ಲಾ ಪುಸ್ತಕಗಳನ್ನು ಪೂಜೆಗಾಗಿ ಇಟ್ಟು ಅನಧ್ಯಾಯವನ್ನು ಆಚರಿಸಬೇಕು. ಸರ್ವಥಾ ಅಧ್ಯಯನದಲ್ಲಿ ತೊಡಗಬಾರದು. ಕೇವಲ ಮಂತ್ರ-ಜಪ, ಪಾರಾಯಣಗಳಿಗಷ್ಟೇ ಆ ಸಂದರ್ಭದಲ್ಲಿ ಅಧಿಕಾರ. ಒಂದುವೇಳೆ ಅಧ್ಯಯನವನ್ನು ಮಾಡಿದರೆ ಕಲಿತ ವಿದ್ಯೆಯೆಲ್ಲವೂ ನಷ್ಟವಾಗುತ್ತದೆ.

ನವರಾತ್ರಿಯ ದಿವಸದಲ್ಲಿ ಮೂರು ದಿವಸಗಳ ಕಾಲ ಸರಸ್ವತಿದೇವಿಯನ್ನು ಭಕ್ತಿಯಿಂದ ಭಜಿಸೋಣ, ಪೂಜಿಸೋಣ, ಆರಾಧಿಸೋಣ, ಅವಳ ಅನುಗ್ರಹವನ್ನು ಪಡೆದು ವಿದ್ಯಾವಂತರಾಗಿ ಬಾಳೋಣ. ತನ್ಮೂಲಕ ಈ ಜನ್ಮವನ್ನು ಸಾರ್ಥಕ ಮಾಡಿಕೊಳ್ಳೋಣ. ಸರಸ್ವತಿ ಸಹಿತರಾದ ಚತುರ್ಮುಖಬ್ರಹ್ಮದೇವರ ಅನುಗ್ರಹಕ್ಕೆ ಪಾತ್ರರಾಗಿ ಶ್ರೀಲಕ್ಷ್ಮೀನಾರಾಯಣರ ಪಾದಕಮಲಗಳ ಆರಾಧನೆಯಲ್ಲಿ ತಲ್ಲೀನರಾಗೋಣ.

## ಇತಿಹಾಸ ಪುರಾಣಗಳಲ್ಲಿ ಸರಸ್ವತಿ

೧. ಅಗ್ನಿಪುರಾಣ - ಸರಸ್ವತಿಯ ಪೂಜಾವಿಧಾನವನ್ನು ತಿಳಿಸಲಾಗಿದೆ.

೨. ಗರುಡಪುರಾಣ - ಸರಸ್ವತಿಯ ಮಂತ್ರದ ಬಗ್ಗೆ, ಸರಸ್ವತಿಯ ಪೂಜೆಯ ಬಗ್ಗೆ ತಿಳಿಸಲಾಗಿದೆ. ಆಚಾರಖಂಡದ ಏಳನೆಯ ಅಧ್ಯಾಯದಲ್ಲಿ ಈ ವಿಚಾರವಿದೆ.

೩. ಗರುಡಪುರಾಣದ ಬ್ರಹ್ಮಕಾಂಡದಲ್ಲಿ ಸರಸ್ವತಿಯು ಬ್ರಹ್ಮಾಣಿ, ಸಾವಿತ್ರಿ, ಸರಸ್ವತಿ ಎಂಬ ಮೂರು ರೂಪಗಳನ್ನು ತಾಳಿದ್ದಾಳೆಂಬ ವರ್ಣನೆಯು ಇರುತ್ತದೆ. ಅದೇ ಬ್ರಹ್ಮಕಾಂಡದಲ್ಲಿ ಸರಸ್ವತೀದೇವಿಯು ಅಚ್ಛಿನ್ನಭಕ್ತಳಾಗಿದ್ದಾಳೆಂಬ ನಿರೂಪಣೆಯೂ ಇರುತ್ತದೆ.

೪. ದೇವೀಭಾಗವತ - ಸರಸ್ವತಿಯಸ್ತೋತ್ರ ಸರಸ್ವತಿಯ ಪೂಜೆಯ ವಿಧಾನವಿದೆ. ಸರಸ್ವತಿಯ ಮಹಾಸ್ತೋತ್ರವು ಇರುತ್ತದೆ. ಮತ್ತು ಸರಸ್ವತಿಯ ಉತ್ಪತ್ತಿಯ ವರ್ಣನೆಯೂ ಕೂಡ ಇರುತ್ತದೆ. ಸರಸ್ವತಿಯ ಚರಿತ್ರೆಯನ್ನು ನಿರೂಪಣೆ ಮಾಡಲಾಗಿದೆ.

ಪದ್ಮಪುರಾಣ - ಸೃಷ್ಟಿಕಾಂಡದಲ್ಲಿ ಸರಸ್ವತೀ ನದಿಯು ಅಂತರ್ಧಾನದಿಂದ ಪುಷ್ಕರಕ್ಷೇತ್ರಕ್ಕೆ ಹೋಗುವುದರ ಬಗ್ಗೆ ನಿರೂಪಣೆಯು ಇರುತ್ತದೆ.

ಪುಷ್ಕರದಲ್ಲಿರುವ ಸರಸ್ವತಿ ನದಿಯ ಮಹಿಮೆಯನ್ನು ವರ್ಣಿಸಲಾಗಿದೆ. ಪುಷ್ಕರಕ್ಷೇತ್ರದ ಸಮೀಪದಲ್ಲಿರುವ ಖರ್ಜೂರೀ ಎಂಬ ವನದಲ್ಲಿ ಸರಸ್ವತೀ ನದಿಯು ಉದ್ಭವಳಾಗುತ್ತಾಳೆ. ಇಂಥ ಸರಸ್ವತಿಯಲ್ಲಿ ಸ್ನಾನವನ್ನು, ದಾನಾದಿಗಳನ್ನು ಮಾಡುವುದರಿಂದ ಪ್ರಾಪ್ತವಾಗುವ ಫಲದ ವರ್ಣನೆಯು ಇರುತ್ತದೆ.

ಸರಸ್ವತೀನದಿಯಿಂದಲೇ ಪುಷ್ಕರತೀರ್ಥವು ಪೂರ್ಣವಾಗುತ್ತದೆ. ಸರಸ್ವತೀನದಿಯು ಐದು ಸ್ರೋತಸ್ಸುಗಳಿಂದ ಹರಿಯುತ್ತಾಳೆ ಎಂಬ ವರ್ಣನೆಯೂ ಇರುತ್ತದೆ. ಸರಸ್ವತೀತೀರದ ಮಹಾತ್ಮ್ಯೆಯೂ ಇದೆ. ಸರಸ್ವತೀನದಿಯು ಪೂರ್ವಾಭಿಮುಖವಾಗಿಯೇ ಹರಿಯಲು ಕಾರಣವನ್ನು ನಿರೂಪಣೆ ಮಾಡಲಾಗಿದೆ. ಪೂರ್ವಕ್ಕೆ ಹರಿದ ಸರಸ್ವತಿಯು ಮುಂದೆ ಪಶ್ಚಿಮಾಭಿಮುಖವಾಗಿ ಹೇಗೆ ಹರಿಯುತ್ತಾಳೆಂಬ ವರ್ಣನೆಯೂ ಇರುತ್ತದೆ.

ಸರಸ್ವತೀ ಸಾಗರಗಳ ಸಂಗಮವು ಎಲ್ಲಿ ಆಗುತ್ತದೆ ? ಹೇಗೆ ಆಗುತ್ತದೆ ಎಂಬುದರ ವರ್ಣನೆಯು ಇರುತ್ತದೆ. ಸರಸ್ವತಿ ಸಂಗಮ ತೀರ್ಥದ ಮಹಾತ್ಮ್ಯೆವನ್ನು ವರ್ಣಿಸಲಾಗಿದೆ.

ಬ್ರಹ್ಮಪುರಾಣದಲ್ಲಿ ಬ್ರಹ್ಮಶಾಪದಿಂದ ಸರಸ್ವತಿಯು ನದಿಯಾಗಿ ಹರಿಯುತ್ತಾಳೆ ಎಂಬ ನಿರೂಪಣೆಯು ಇರುತ್ತದೆ. ಗಂಗಾಸರಸ್ವತೀ ಸಂಗಮದಲ್ಲಿ ತಪಸ್ಸು ಮಾಡುತ್ತಿರುವ ಪೂರುರವಸ್ಸಿಗೆ ಮೋಕ್ಷವಾಗುತ್ತದೆ. ಇತ್ಯಾದಿಯಾಗಿ ಸರಸ್ವತೀ-ಗಂಗಾನದಿಯ ಸಂಗಮದ ವರ್ಣನೆಯು ಇರುತ್ತದೆ.

ಶಾಕಲ್ಯರು ಮಾಡಿದ ಸರಸ್ವತೀಸ್ತೋತ್ರವು ಇರುತ್ತದೆ.

ಭವಿಷ್ಯಪುರಾಣದಲ್ಲಿ ಸರಸ್ವತಿಯ ವರ್ಣನೆ, ಸರಸ್ವತಿಯ ಸ್ತೋತ್ರವು ಇರುತ್ತದೆ.

ಮತ್ಸ್ಯಪುರಾಣದಲ್ಲಿ ಸರಸ್ವತಿನದಿಯ ತೀರದಲ್ಲಿ ಸಮಂತಕಪಂಚಕದಲ್ಲಿ ನಡೆದ ಘಟನೆಯ ಬಗ್ಗೆ ಉಲ್ಲೇಖವಿದೆ.

ವಾಮನಪುರಾಣದಲ್ಲಿ ಮೂವತ್ತೆರಡನೆಯ ಅಧ್ಯಾಯದಲ್ಲಿ ಸರಸ್ವತೀಸ್ತೋತ್ರವಿದೆ.

* * * *

# ಶ್ರೀಸರಸ್ವತೀದೇವಿಯ ಹಾಡುಗಳು

ಕೊಡು ಬೇಗ ದಿವ್ಯಮತಿ-ಸರಸ್ವತಿ ॥ಪ॥ ಮೃಡ ಹರಿ ಹಯಮುಖರೊಡೆಯರೆ-ನಿನ್ನಯ ಅಡಿಗಳಿಗೆರಗುವೆ ಅಮ್ಮ ಬ್ರಹ್ಮನ ರಾಣಿ ॥ಅ.ಪ.॥ ಇಂದಿರಾ ರಮಣನ ಹಿರಿಯ ಸೊಸೆಯು ನೀನು ಬಂದೆನ್ನ ವದನದಿ । ನಿಂದು ನಾಮವ ನುಡಿಸೆ ॥೧॥ ಅಖಿಲ ವಿದ್ಯಾಭಿಮಾನಿ-ಅಜನಪಟ್ಟದ ರಾಣಿ ಸುಖವಿತ್ತು ಪಾಲಿಸೆ ಸುಜನ ಶಿರೋಮಣಿ ॥೨॥ ಪತಿತ ಪಾವನೆ ನೀ ಗತಿಯೆಂದು ನಂಬಿದೆ ವಿತತ ಪುರಂದರವಿಠಲನ ತೋರೆ ॥೩॥

* * * *

ಶರಣೆಂಬೆ ವಾಣಿ-ಪೊರೆಯೆ ಕಲ್ಯಾಣಿ ॥ಪ॥ ವಾಗಭಿಮಾನಿ ವರಬ್ರಹ್ಮಾಣಿ । ಸುಂದರವೇಣಿ-ಸುಚರಿತ್ರಾಣಿ ॥ ಜಗದೊಳು ನಿಮ್ಮ ಪೊಗಳುವೆನಮ್ಮ ಹರಿಯ ತೋರಿಸೆಂದು ಪ್ರಾರ್ಥಿಪೆನಮ್ಮ ॥೧॥ ಪಾಡುವೆ ಶ್ರುತಿಯ-ಬೇಡುವೆ ಮತಿಯ ಪುರಂದರ ವಿಠಲನ ಹಿರಿಯ ಸೊಸೆಯ ॥೨॥

* * * *

ಪಾಲಿಸಮ್ಮ ಮುದ್ದು ಶಾರದೆ । ಎನ್ನ ನಾಲಿಗೆಯಲಿ ನಿಲ್ಲ ಬಾರದೆ ॥ಪ॥ ಲೋಲಲೋಚನೆ ತಾಯಿ ನಿರುತ ॥ಅ.ಪ॥ ನಂಬಿದೆ ನಿನ್ನ ಅಕ್ಷರಕ್ಷರ ವಿವೇಕ ॥ ನಿನ್ನ ॥ ಕುಕ್ಷಿಯೊಳೀರೇಳು ಲೋಕವ ॥ ಸಾಕ್ಷರ ರೂಪದಿಂದ ಒಲಿದು ರಕ್ಷಿಸು ತಾಯೇ ॥೧॥ ಶೃಂಗಾರಪುರ ನೆಲೆವಾಸಿನಿ । ಸಂಗೀತ ಗಾನ ವಿಲಾಸಿನಿ ॥ ಮಂಗಳಗಾತ್ರಳೇ ಭಳಿರೆ ಬ್ರಹ್ಮನ ರಾಣಿ ॥೨॥ ಸರ್ವಾಲಂಕಾರ ದಯಾಮೂರುತಿ ನಿನ್ನ ಚರಣವ ಸ್ತುತಿಸುವೆ ಕೀರುತಿಗುರುಮೂರ್ತಿಪುರಂದರವಿಠಲನ್ನ ಸ್ತುತಿಸುವೆ ॥೩॥

* * * *

ಸರಸ್ವತೀಪೂಜೆ

ಒಂದೇ ಮನದಲಿ ಭಜಿಸು ವಾಗ್ದೇವಿಯ ||ಪ|| ಇಂದು ಮತಿ ಕೊಡುವಳು ಶ್ರೀಹರಿಯ ಧ್ಯಾನದಲಿ ||ಅ.ಪ.|| ಹಿಂದೆ ಪ್ರಹ್ಲಾದನು ಕಮಲಜನ ಸತಿಗೆರಗಿ ನಿಂದು ಆರಾಧಿಸಲು ಹರಿವಿಶ್ವಮಯನೆಂದು | ಬಂದು ವಿಘ್ನವ ಕಳೆದ ಭಾವಶುದ್ಧಿಯನ್ನಿತ್ತು | ಹೊಂದಿಸಿದಳಾಗ ಶ್ರೀಹರಿಯ ಚರಣದಲ್ಲಿ ||೧|| ಅಂದು ದಶಮುಖನನುಜ ವಂದಿಸದೆ ವಾಣಿಯನು | ಬಂದು ತಪವನು ಗೈಯೆ ಬಹುಕಾಲಕೆ | ಅಂದದಿಂದಜಮೆಚ್ಚಿ ವರವಧಿಕ ಬೇಡೆನಲು | ನಿಂದು ಜಿಹ್ವೆಯಲಿ ನಿದ್ರೆಯ ಬೇಡಿಸಿದಳು ||೨|| ಅರಿತು ಭಜಿಸಲು ಬಿಡದೆ ಅಜನರಸಿಯ ನಿತ್ಯ ಉರುತರವಾದ ವಾಕ್ ಶುದ್ಧಿಯನ್ನಿತ್ತು | ನಿರುತ ಶ್ರೀಪುರಂದರವಿಠಲ| ಸೇವೆಯೊಳು | ಪರತತ್ತ್ವವಾದ ಕಥಾಮೃತವನುಣಿಸುವಳು ||೩||

ಶರಣು ಶರಣು ಶಾರದಾಂಬಾ | ಕರುಣಾರಸ ಕಲಿತಾನನಬಿಂಬಾ ||ಪ|| ಜಲದಾಲಕ ನಿರ್ಜಿತ ರೋಲಂಬಾ | ಸುಲಲಿತಾಯತ ಪುಳಿನ ನಿತಂಬಾ ||೧|| ಜಲಜಭವೇಪ್ಸಿತ ಸಾದರ ಬಿಂಬಾ | ವಿಲಸಿತ ಮಣಿಗನ ಹಾರ ಕದಂಬಾ||೨|| ಸುಮಹಿತ ಗುಣಗಣ ಭವ್ಯ ಹೇರಂಬ | ಕಮಲೇಶವಿಠಲನ ಕರುಣ ಪ್ರದಾಂಬಾ ||೩||

* * * *

ವಾಣಿ ಪರಮ ಕಲ್ಯಾಣಿ | ವಾರಿಜೋದ್ಭವನ ರಾಣಿ ನಾರಿ ಶಿರೋಮಣಿ ||ಪ|| ಕ್ಷೋಣಿಯೊಳಗೆ ಸರಿಗಾಣೆನೆ ನಿನಗೆ ಸುಪ್ರಾಣಿಯೆ ಹರಿಪಾದರೇಣು ಧರಿಪೆ ಸದಾ ||ಅ|| ಸರಸ್ವತಿ ನಿತ್ಯ ಸಾವಿತ್ರಿದೇವಿಗಾಯತ್ರಿ ಸರಸಸರಸಿಜ ನೇತ್ರಿ | ಸುರಮುನಿನಿಕರಸ್ತೋತ್ರ ಶೋಭನಗಾತ್ರೆ | ಪರಮಪಾವನಚರಿತ್ರೆ | ಚರಣದಂದಿಗೆ ಪಂಚ ಬೆರಲ ಭೂಷಣ | ಧ್ವನಿ ಗರನಿಕರ ಗೆಜ್ಜೆ ಪೊಳೆವಾಂಬರಧರೆ ಸುಂದರಿ ಎರಗುವೆ| ಎನ್ನನು ಯರವು ಮಾಡದ ತ್ರಿ| ಕರಣ ಶುದ್ಧನ ಮಾಡೆ||೧|| ಸರ್ವಲೋಕದಿ ವಿಖ್ಯಾತೆ ಧವಳಗೀತೆ | ಪೂರ್ವ ದೇವತೆ ವಿಧಿಪ್ರೀತೆ | ಗೀರ್ವಾಣ ವೃಂದವಂದಿತೆ ನಿತ್ಯ ಸುಚರಿತೆ ಸರ್ವರಿಗೆ ಮಹಾಪ್ರೀತೆ | ಊರ್ವಿಯೊಳಗೆ ಬಹುಗರ್ವದವನು ನಾನೋರ್ವನಲ್ಲದೆ ಮತ್ತೋರ್ವರ ಕಾಣೆನು | ಸರ್ವಜನ್ಮದ ಪಾಪ

ಪರ್ವತದಂತಿರೆ। ನಿರ್ವಾಹವನು ಮಾಡು ದೂರ್ವಾಂಕುರದಿಂದ ॥೨॥ ನಗೆ ಮೊಗದ ಜಗಜ್ಜನನೀ ಗಂಧಲೇಪಿನಿ । ನಿಗಮಾಭಿಮಾನಿ ಸುಜ್ಞಾನಿ । ಬಗೆ ಬಗೆ ವಿದ್ಯಾಭ್ಯಾಸಿನಿ ಬಲು ವಿಚಕ್ಷಿಣೆ ಅಗಣಿತ ಫಲದಾಯಿನಿ । ಝುಗಝುಗಿಸುವ ಕರಯುಗಳ ಭೂಷಣ ಪನ್ನಗ ವೇಣಿ ಕುಂಕುಮ ಮೃಗಮದ ಒಪ್ಪಲು । ಜಗಪತಿ ಪ್ರದ್ಯುಮ್ನ ವಿಜಯವಿಠ್ಠಲನ ಮಗಳೆ ಸುಖಾತ್ಮಕೆ ಮಿಗಿಲಾದ ಲಕ್ಷಣಳೆ ॥೩॥

* * * *

ವಂದಿಪೆನಮ್ಮ ಮುದ್ದು ಶಾರದೆ ಶರಚ್ಚಂದಿರವದನೆ ಶಾರದೆ ॥ಪ॥ ಇಂದೀವರಾಕ್ಷಿ ಶತಾನಂದಪ್ರಿಯೆ ದೇವಿ । ಕುಂದುನೋಡದೆ ಶ್ರುತಿವಂದ್ಯೆ ಜ್ಞಾನವ ನೀಡೆ ॥ಅ.ಪ.॥ ಸಿತಾಬ್ಜಾಸನೆ ಸುಖದಾಯಕಿ ಸುರ ನಾಥಾರಾಧಿತೆ ವಿಶ್ವನಾಯಕಿ । ವೀತದುರಿತೆ ಶಿವಮಾತೆ ಸದ್ಗುಣಮಣಿ ವ್ರಾತೆ ವೇದೋಪನಿಷದ್ಗೀತೆ ವಾಗ್ದೇವಿ ಮಾತೆ ॥೧॥ ಕೋಕಿಲವಾಣಿ ಕವಿಸೇವಿತೆ ಎನ್ನ । ವಾಕುಲಾಲಿಸೆ ಮುನಿವಂದಿತೆ । ತೋಕನೆಂದು ಸುವಿವೇಕ ಬುದ್ಧಿಯನಿತ್ತು । ಸಾಕು ಸಜ್ಜನರನ್ನು ವಾಕುಮನ್ನಿಸು ತಾಯೆ ॥೨॥ ಪಾತಕಿಗಳೊಡನಾಡಿ ನಾ ನಿನ್ನ। ಪೂತಾಬ್ಜಪದ ಭಜಿಸದ್ಹೋದೆ ನಾ । ಪಾತಕವೆಣಿಸದೆ ಸೀತರಾಮ ಜಗನ್ನಾಥವಿಠಲನಂಘ್ರಿ ಗೀತಾಮೃತವನುಣಿಸು ॥೩॥

* * * *

ನಲಿದಾಡೆ ಎನ್ನ ನಾಲಿಗೆ ಮೇಲೆ ಸರಸ್ವತಿದೇವಿ । ನಲಿದಾಡೆ ಎನ್ನ ನಾಲಿಗೆ ಮೇಲೆ ॥ಪ॥ ಸಲಿಲಜೋದ್ಭವನ ವದನನಿಲಯಳೆ । ಇಳೆಯೊಳಪ್ರತಿಮ ಗುಣಗಣಾಂಬುಧಿ ತಾಯೆ ॥ಅ॥ ಘುಲು ಘುಲು ಘುಲು ಗೆಜ್ಜೆಯ ನಾದ। ಭಳಿಭಳಿರೆ ನಿಮ್ಮ। ಹೊಳೆವ ಬೆರಳುಂಗುರ ಕಿಣಿಕಿಣಿ ನಾದ। ಎಳೆ ಮಾವಿನ। ತಳಿರ ಪೋಲುವ ದಿವ್ಯಪಾದ। ಚೆಲುವ ಪೆಂಡೆಯ ಭೇದ ನಲಿವ ಯುಗಳ ಜಂಘೆ। ಜಲಗುಳೆಯಂತೆ ಜಾನು ಥಳಥಳಿಸುವ ತೊಡೆ ಒಲುವ ಸುಗುಣೆಯೆ ॥೧॥ ದಿನಕರಕೋಟಿತೇಜದಿ ಹೊಳೆವ । ಅನುಪಮವಾದ । ಕನಕವಸನದಿಂದ ಎಸೆವ । ಘನವಾದ ಜಘನ

ಗಗನದಂದದಿ ಸುಂದರ ಕಟಿಯಲಿ ಮೆರೆವ । ಮಣಿದಾಮ ವಿಭವ । ತನು ಜಠರವು ಜಾನ್ಹವಿ ಸುಳಿನಾಭಿಯು । ಘನಸ್ತನಯುಗಳ ಚಂದನಲೇಪಿತಳೆ ॥೨॥ ದುಂಡುಮುತ್ತಿನ ಕೊರಳ ಹಾರ । ಮಿಣಿಮಿಣಿಸುವ ಉದ್ದಂಡ ಮನೋಹರ ಹೊನ್ನಿನ ಸರ । ಕರಿರಾಜಪೋತನ । ಸೊಂಡಿಲಿನಂತೆ ಭುಜದ ಭಾರ । ನಡೆವ ಒಯ್ಯಾರ। ಮಂಡಿತವಾದ ಕಂಕಣ ತೋಳಬಳೆಗಳು । ದುಂಡು ಹವಳ ಕೈಕಟ್ಟುಳ್ಳವಳೆ ॥೩॥ ನಸುನಗುಮುಖವು ನಾಸಾಭರಣ । ಎಸೆವ ಕಪೋಲ । ಹೊಸಕುಂಡಲ ಚಳತೊಂಬುಳ್ಳ ಶ್ರವಣ । ಬಿಸಜದಳದಂತೆ । ಲಸಿತಾಕರ್ಣಾಂತವಾದ ನಯನ । ತಿಲಕದ ಹಸನ । ಶಶಿಸೂರ್ಯರ ಆಭರಣಶೋಭಿತೆ । ಕುಸುಮ ಮುಡಿದ ಮೂರ್ಧಜವುಳ್ಳವಳೆ ॥೪॥ ಶೃಂಗಾರವಾದ ಜಡೆ ಬಂಗಾರ । ಹೊಂಗ್ಯಾದಿಗೆ ಮುಡಿದ । ಬಂಗಾರದ ಹೆರಳಿನ ರಾಕಟಿ ವರ । ಭೃಂಗದ ಸ್ವರ । ಹಿಂಗದೆ ಭಕ್ತರ ಸಲಹುವ ಭಾರ । ಕಂಗಳ ಮನೋಹರ । ರಂಗ ಪುರಂದರ ವಿಠ್ಠಲರಾಯನ । ಮಂಗಳಮೂರ್ತಿಯ ತೋರೆ ಶುಭಾಂಗಿ ॥೫॥

* * * *

ಸೇವಿಸುವೆನು ಸರಸ್ವತಿ ತಾಯೆ ॥ಪ॥ ವಾಗಾಭಿಮಾನಿ ವರ ಬ್ರಹ್ಮಾಣಿ । ಸುಂದರವೇಣಿ ಸುಚರಿತ್ರಾಣಿ ॥೧॥ ಸಭೆಯೊಳು ನಾ ನಿನಗೊಂದನೆಗೈವೆನು । ವಿಭುಜೆಯೆ ಕಾಮಿಸಿ ನಿನ್ನಭಯ ಬೇಡುವೆನು ॥೨॥ ಪಾಡುವೆ ಶ್ರುತಿಯ ಬೇಡುವೆ ಮತಿಯ । ಉಡುಪಿಯ ಕೃಷ್ಣನ ಮೋಹದ ಸೊಸೆಯೆ ॥೩॥

* * * *

## ಸರಸ್ವತೀಹಬ್ಬದ ಅಡುಗೆಗಳು

**ಹೆಸರುಬೇಳೆ ಕೋಸಂಬರಿ, ಕಡ್ಲೆಬೇಳೆ ಕೋಸಂಬರಿ, ಬೆಂಡೇಕಾಯಿ ಪಲ್ಯ, ಬೀನ್ಸ್‌ಪಲ್ಯ, ಉಪ್ಪಿನಕಾಯಿ, ಗೊಜ್ಜು, ಚಿತ್ರಾನ್ನ, ಗಸಗಸೆ ಪಾಯಸ, ಮುಂಬಯಿ ಬೋಂಡಾ, ಸಕ್ಕರೆ ಹೋಳಿಗೆ, ಕೂಟು, ಸಾರು, ಮೈಸೂರು ಪಾಕ್.**

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ಸರಸ್ವತೀಪೂಜೆ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ ಶ್ರೀಲಕ್ಷ್ಮೀಹಯಗ್ರೀವದೇವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ



ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ).

ಗಿರಿನಗರ, ಬೆಂಗಳೂರು - 560 085

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಫಾಲ್ಗುಣಮಾಸ – ಅಧಿಕಮಾಸ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಫಾಲ್ಗುಣ ಮಾಸ

# ಅಧಿಕ ಮಾಸ

## ಧನುರ್ಮಾಸ-ಮಕರ ಸಂಕ್ರಾಂತಿ
## ಗ್ರಹಣ-ಜನ್ಮದಿನಾಚರಣೆ ಮೊದಲಾದವು


**ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ,**

ಬೆಂಗಳೂರು.



ಪ್ರಕಾಶನ :

**ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ.),**

ಬೆಂಗಳೂರು.

''**ಫಾಲ್ಗುಣಮಾಸ, ಅಧಿಕಮಾಸ,** ಧನುರ್ಮಾಸ, ಮಕರಸಂಕ್ರಾಂತಿ, ಗ್ರಹಣ, ಜನ್ಮದಿನಾಚರಣೆ ಮೊದಲಾದವು'' ಶಾರ್ವರಿ ।। ಶ್ರಾವಣ ।। ಶುದ್ಧ ಹುಣ್ಣಿಮೆ (ದಿನಾಂಕ 03.08.2020) ಶುಭ ಪರ್ವ ಕಾಲದಲ್ಲಿ ಈ ಕೃತಿಯನ್ನು ಪಲಿಮಾರು ಮಠಾಧೀಶರಾದ ಶ್ರೀಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರ ಕರಕಮಲಗಳ ಮೂಲಕ ಭಾರತೀರಮಣಹೃದಯಗುಹಾನಿವಾಸಿಗಳಾದ ಶ್ರೀ ಲಕ್ಷ್ಮೀ-ಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : **2020**



ಪ್ರಕಾಶಕರು : **ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ)**
**4171, 2ನೇ ಮೇನ್, ಗಿರಿನಗರ, ಸೀತಾಸರ್ಕಲ್ ಹತ್ತಿರ,**
**ಬೆಂಗಳೂರು-85.**
**ದೂರವಾಣಿ : 9141495120**

ಸಂಪಾದನೆ : **ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ**

ಪ್ರತಿಗಳು : **1000**

ಪುಟಗಳು : vi + 122 = 128

ಅಕ್ಷರಜೋಡಣೆ : **ಶರತ್ ಚಂದ್ರ, ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್**
**ಮೈಸೂರು. ✆ : 7899779255**

ಮುಖಪುಟ : **ಶ್ರೀವಿಶ್ವಾತ್ಮಾ, ಕಾರ್ತಿಕ ಜೋಷಿ**

ಮುದ್ರಕರು : **ಮುಕ್ತಿಪಥ ಮುದ್ರಣಾಲಯ**
(ಪಿ. ಮಂಜುನಾಥ)
ಬೆಂಗಳೂರು.

# ಕೃತಜ್ಞತೆಗಳು



ಉತ್ತಮ ಸಾಧಕರಾದ ಕಠಿಣ ಪರಿಶ್ರಮದಲ್ಲಿ ಜೀವನ ಸಾಗಿಸಿ ನಮ್ಮನ್ನೆಲ್ಲ ಸಂಸ್ಕಾರವಂತರನ್ನಾಗಿ ಮಾಡಿ ಉತ್ತಮ ವಿದ್ಯೆ ನೀಡಿ ಜೀವನದ ದಾರಿದೀಪರಾದ ದಿ|| ರಂಗರಾವ್ ಭೀಮರಾವ್ ಕುಲಕರ್ಣಿ ಇವರ ಆಶೀರ್ವಾದ ನಮ್ಮ ಮೇಲೆ ನಿರಂತರ ಇರಬೇಕೆಂಬ ಉದ್ದೇಶದಿಂದ ಈ ಜ್ಞಾನಸೇವೆಯನ್ನು ಆಚರಿಸಲಾಗಿದೆ. ಇದರಿಂದ ಪ್ರಾಪ್ತವಾಗುವ ಪುಣ್ಯರಾಶಿಯು ಇವರಿಗೆ ತಲುಪಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀಮತಿ ಕಾಂತಾಬಾಯಿ ಆರ್. ಕುಲಕರ್ಣಿ,
ಶ್ರೀ ನರಸಿಂಹಮೂರ್ತಿ ಆರ್. ಕುಲಕರ್ಣಿ ಮತ್ತು
ಕುಂ||ಸೌ|| ವೀಣಾ ಎನ್. ಕುಲಕರ್ಣಿ,
ಶ್ರೀ ಸಂದೀಪ್ ಕುಲಕರ್ಣಿ ಮತ್ತು
ಕುಂ||ಸೌ|| ಶ್ರಿಯಾ ಕುಲಕರ್ಣಿ

★ ★ ★ ★

# ವಿಷಯಾನುಕ್ರಮಣಿಕೆ

★ ★ ★ ★

# ಮುನ್ನುಡಿ

ಫಾಲ್ಗುಣ ಮಾಸ, ಅಧಿಕ ಮಾಸ ಹಾಗೂ ಇತರ ವಿಚಾರಗಳ ಬಗ್ಗೆ ಈ ಕೃತಿಯು ಹೊರಟಿದೆ. ಸ್ಕಂದನ ಬಗ್ಗೆ ಸಂಪೂರ್ಣ ವಿವರವನ್ನು ನೀವಿಲ್ಲಿ ಕಾಣಬಹುದು. ಅಧಿಕ ಮಾಸದ ವಿಧಿ-ವಿಧಾನಗಳನ್ನು ಪರಿಪೂರ್ಣವಾಗಿ ಇದರಿಂದ ತಿಳಿದುಕೊಳ್ಳಬಹುದು ಹಾಗೂ ಮಕರ ಸಂಕ್ರಾಂತಿಯ ಬಗ್ಗೆ ಅಪೂರ್ವ ವಿಷಯಗಳೂ ಕೂಡ ಇಲ್ಲಿ ನಿರೂಪಿತವಾಗಿವೆ. ಧನುರ್ಮಾಸ, ಗ್ರಹಣ, ವರ್ಧಾಪನೋತ್ಸವ- ಈ ಎಲ್ಲ ವಿಚಾರಗಳನ್ನೂ ಈ ಪುಸ್ತಕದಿಂದ ತಿಳಿದು ಅದರಂತೆ ಅನುಷ್ಠಾನಗೈದು ಭಗವಂತನ ಒಲವಿಗೆ ಪಾತ್ರರಾಗಬಹುದು. ಪ್ರತಿಯೊಬ್ಬರೂ ತಮ್ಮ ಜನ್ಮದಿನದ ಆಚರಣೆಯನ್ನು ಮಾಡಿಕೊಳ್ಳಲು ದಾಕ್ಷಿಣ್ಯ ಪಡುತ್ತಾರೆ. ಆದರೆ ಇದರಲ್ಲಿ ನೀಡಿರುವ ವಿವರಣೆಯನ್ನು ತಾವು ನೋಡಿದಾಗ ಜನ್ಮದಿನದ ಉತ್ಸವವನ್ನು, ವರ್ಷ ವೃದ್ಧಿಕರ್ಮವನ್ನು ಆಚರಿಸಬೇಕೆಂದು ನಿಶ್ಚಯವಾಗುತ್ತದೆ ಹಾಗೂ ಎಲ್ಲಾ ಬಗೆಯ ಶಾಂತಿಗಳನ್ನೂ ಕೂಡ ಇಲ್ಲಿ ಸಂಗ್ರಹಿಸಲಾಗಿದೆ. ಈ ಎಲ್ಲ ವಿಷಯಗಳ ಸದುಪಯೋಗಗಳನ್ನು ಪಡೆದುಕೊಳ್ಳಬೇಕೆಂದು ವಿನಂತಿಸುತ್ತೇನೆ. ಈ ಕೃತಿಗಳ ವಿಷಯಗಳನ್ನು ಸಂಗ್ರಹಿಸಿಕೊಟ್ಟ ವಿದ್ವಾನ್ ಸಿ.ಆರ್. ಪ್ರದೀಪ ಸಿಂಹಾಚಾರ್ಯರಿಗೆ ಅನಂತ ಕೃತಜ್ಞತೆಗಳನ್ನು ಸಂಗ್ರಹಿಸುತ್ತೇನೆ. ಪ್ರಾಮಾಣಿಕವಾಗಿ ಸರಳತನದಲ್ಲಿ ಅಚ್ಚುಕಟ್ಟಾಗಿ ಈ ಪುಸ್ತಕವಷ್ಟೇ ಅಲ್ಲದೆ ಇನ್ನೂ ಅನೇಕ ಪುಸ್ತಕಗಳನ್ನು , ಇತರ ಪುಸ್ತಕಗಳಲ್ಲಿ ವಿಚಾರಗಳನ್ನು ಡಿ.ಟಿ.ಪಿ. ಮಾಡಿಕೊಟ್ಟ ಮೈಸೂರಿನ ಪವನ್ ಗ್ರಾಫಿಕ್ಸ್‌ನ ಶರತ್ ಚಂದ್ರ ಎಂ. ಇವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

ದಿ|| ರಂಗರಾವ್ ಭೀಮರಾವ್ ಕುಲಕರ್ಣಿ ಇವರ ಸ್ಮರಣಾರ್ಥವಾಗಿ ಶ್ರೀಮತಿ ಕಾಂತಾಬಾಯಿ ರಂಗರಾವ್ ಕುಲಕರ್ಣಿರವರು ಹಾಗೂ ಕುಲಕರ್ಣಿ ಕುಟುಂಬದವರೇ ಆದ ಶ್ರೀ ನರಸಿಂಹಮೂರ್ತಿ ಮತ್ತು ಕುಂ||ಸೌ|| ವೀಣಾ ನರಸಿಂಹಮೂರ್ತಿ, ಶ್ರೀ ಸಂದೀಪ್ ಕುಲಕರ್ಣಿ ಮತ್ತು ಕುಂ||ಸೌ|| ಶ್ರಿಯಾ ಕುಲಕರ್ಣಿ ಮೊದಲಾದವರು ಸೇವೆಯನ್ನು ಸಲ್ಲಿಸಿದ್ದಾರೆ. ಶ್ರೀ ಕೃಷ್ಣರಾವ್ ಹಾಗೂ ಕುಂ||ಸೌ|| ಪರಿಮಳಾ ಇವರೂ ಸಹ ಇವರ ಜೊತೆ ಕೈಜೋಡಿಸಿದ್ದಾರೆ. ಇವರೆಲ್ಲರಿಗೂ ಶ್ರೀಹರಿ-ವಾಯು-ಗುರುಗಳು ಅನುಗ್ರಹವನ್ನು ಮಾಡಿ ಜ್ಞಾನ-ಭಕ್ತಿ-ವೈರಾಗ್ಯಗಳ ಮೂಲಕ ಮೋಕ್ಷಸಾಧನೆಯನ್ನು ಪ್ರಾರ್ಥಿಸುತ್ತೇನೆ ಹಾಗೂ ಈ ಕೃತಿಯಿಂದ ಲಭ್ಯವಾಗುವ ಅಪಾರ ಪುಣ್ಯರಾಶಿಯು ದಿ|| ರಂಗರಾವ್ ಭೀಮರಾವ್ ಕುಲಕರ್ಣಿಯವರಿಗೆ ತಲುಪಲಿ ಎಂದು ಶ್ರೀಹರಿ-ವಾಯು-ಗುರುಗಳಲ್ಲಿ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

**ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ**

ಬೆಂಗಳೂರು

# ಫಾಲ್ಗುಣ ಮಾಸ

### ಮಾಸನಿಯಾಮಕಪದ್ಮಾಪತಿಗೋವಿಂದಾಯ ನಮಃ

## ಫಾಲ್ಗುಣಮಾಸದ ಧರ್ಮಗಳು

ಈ ಮಾಸದಲ್ಲಿ ಶಯ್ಯಾ, ಆಸನ, ಭೂಮಿ, ಗೃಹ, ಗೋ, ತಿಲ, ತಿಲಧೇನು, ಘೃತ, ಎತ್ತು, ಉಣ್ಣೆ, ವಸ್ತ್ರ, ಚಪ್ಪಲಿ, ವಸ್ತ್ರ, ಅನ್ನ, ನೀರು, ಹಾಲು, ಬಗೆಬಗೆಯ ಧಾನ್ಯ ಇವುಗಳ ದಾನಗಳು ವಿಹಿತವಾಗಿವೆ.

**ಶಯ್ಯಾದಾನ–** ಅಲಂಕೃತವಾದ ಶಯ್ಯೆಯಲ್ಲಿ ಬ್ರಾಹ್ಮಣಯುವ ದಂಪತಿಗಳನ್ನು ಕೂಡಿಸಿ ನಾನಾವಸ್ತ್ರಾಭರಣಗಳನ್ನು ಕೊಟ್ಟು ಆರತಿ ಮಾಡಿ ಅನಂತರ ಭೋಜನ ಮಾಡಿಸಿ ತಾಂಬೂಲ ದಕ್ಷಿಣೆಗಳನ್ನು ಕೊಡಬೇಕು. ಇದರೊಂದಿಗೆ ಅನೇಕ ವಿಪ್ರರಿಗೆ ಕೂಡ ಭೋಜನ ಮಾಡಿಸಬೇಕು. ಇದರಿಂದ ಸ್ತ್ರೀವಿರಹೋತ್ಪನ್ನದುಃಖವನ್ನು ಕನಸಿನಲ್ಲಿಯೂ ಅನುಭವಿಸುವುದಿಲ್ಲ.

**ಭೂದಾನ–** ಎತ್ತು ಹಾಗು ಇತರ ಕೃಷಿಸಾಧನಗಳೊಂದಿಗೆ ಬಹುದಕ್ಷಿಣೆಯನ್ನು ಕೊಟ್ಟು ಶ್ರೋತ್ರಿಯ ಬ್ರಾಹ್ಮಣನಿಗೆ ಭೂದಾನವನ್ನು ಕೊಡಬೇಕು. ಇದರಿಂದ ದಾನಿಯು ಮತ್ತೆ ಭೂಸ್ಪರ್ಶ ಮಾಡಲಾರನು. ಅಂದರೆ ಭೂಮಿಯ ಮೇಲೆ ಹುಟ್ಟಿ ಬರುವುದಿಲ್ಲ.

**ಗೃಹದಾನ–** ಲಕ್ಷಣಸಂಪನ್ನವಾದ ದೃಢವಾದ ಎರಡು ಬಾಗಿಲುಗಳುಳ್ಳ ಮನೆಯನ್ನು ಕಟ್ಟಿಸಿ ಆ ಮನೆಯಲ್ಲಿ ಗೋವುಗಳನ್ನು ಕಟ್ಟಿ ದಾಸಿಯರು, ಧಾನ್ಯಗಳು, ವಸ್ತ್ರಗಳು ಹಾಗು ಗೃಹೋಪಯೋಗಿ ವಸ್ತುಗಳೊಂದಿಗೆ ಗೃಹದಾನವನ್ನು ಕೊಡಬೇಕು. ನೀರಿನ ವ್ಯವಸ್ಥೆ ಸರಿಯಾಗಿರಬೇಕು. ಹೂಗಿಡಗಳನ್ನು ನೆಟ್ಟಿರಬೇಕು. ಮನೆಯನ್ನು ಅಲಂಕರಿಸಿ ಸುತ್ತಲೂ ದಾರದಿಂದ ಸುತ್ತಿ ಅನೇಕ ಮಕ್ಕಳಿರುವ ಶ್ರೋತಿಯಬ್ರಾಹ್ಮಣನಿಗೆ ದಾನ ಕೊಡಬೇಕು. ಅವನು ಅಲ್ಲಿ ಬಹುಕಾಲ ವಾಸಿಯಾಗಿರಬೇಕು. ಅಸಮರ್ಥನಾಗಿದ್ದರೆ ಒಂದು ವರ್ಷಕಾಲದಷ್ಟು ಮಾತ್ರವಾದರೂ ಆ ಬ್ರಾಹ್ಮಣನ ಯೋಗಕ್ಷೇಮಗಳನ್ನು ನೋಡಿಕೊಳ್ಳಬೇಕು. ಇದರಿಂದ ದಾನಿಯು ಇಂದ್ರಲೋಕವನ್ನು ಸೇರುವನು.

**ತಿಲದಾನ–** ಸುವರ್ಣಾದಿಪಾತ್ರೆಯಲ್ಲಿ ತಿಲವನ್ನು ತುಂಬಿ ದಾನ ಕೊಡಬೇಕು. ಸುವರ್ಣಪಾತ್ರೆ ಕೊಡಲಾಗದವನು ದಕ್ಷಿಣೆಯೊಂದಿಗೆ ಕೇವಲ ತಿಲವನ್ನಾದರೂ ಕೊಡಬೇಕು. ದಾನಿಯು ತಿಲಸಂಖ್ಯೆಯ ಸಾವಿರ ವರ್ಷ ಉತ್ತಮಲೋಕಗಳಲ್ಲಿ ವಾಸ ಮಾಡುವನು.

**ಗೋದಾನ–** ಸಾಲಂಕೃತ ಹಸುವನ್ನು ಕರುವಿನೊಂದಿಗೆ ದಾನ ಮಾಡಬೇಕು. ಕಪ್ಪು ಬಣ್ಣದ ಹಸು ಶ್ರೇಷ್ಠ. ಬ್ರಾಹ್ಮಣನಿಗೆ ಯಥಾಶಕ್ತಿ ವಸ್ತ್ರಾಭರಣಗಳನ್ನಿತ್ತು ಪೂಜಿಸಿ ದಾನ ಕೊಡಬೇಕು. ಬ್ರಾಹ್ಮಣ ಶಾಸ್ತ್ರಸಂಪನ್ನನು ವೇದಶಾಸ್ತ್ರಪುರಾಣ ಪ್ರವಚನಕಾರನಾಗಿರಬೇಕು. ಅಗ್ನಿಹೋತ್ರವನ್ನಿಟ್ಟುಕೊಂಡಿರುವವನಾದರೆ ತುಂಬ ಶ್ರೇಷ್ಠ. ತಿಲಧೇನು, ಸ್ವರ್ಣಧೇನು, ಜಲಧೇನು, ಘೃತಧೇನು, ಮಧುಧೇನು, ಧಾನ್ಯಧೇನು, ಗುಢಧೇನು, ರಸಧೇನು, ರತ್ನಧೇನು, ಸಪ್ತಧಾತುಗಳಿಂದ ನಿರ್ಮಿತಧೇನುಗಳನ್ನು ದಾನ ಕೊಟ್ಟವನು ಗೋಲೋಕವನ್ನು ಸೇರುತ್ತಾರೆ.

ಸಾಧುಸ್ವಭಾವದ ಎತ್ತನ್ನು ಚೆನ್ನಾಗಿ ಅಲಂಕಾರ ಮಾಡಿ ಸ್ವಚ್ಛಂದವಾಗಿರಲು ಬಿಟ್ಟು ಬಿಡಬೇಕು. ವೃಷೋತ್ಸರ್ಗ ಎಂದು ಇದರ ಹೆಸರು. ಇದು ಫಾಲ್ಗುಣದಲ್ಲಿ ಶ್ರೇಷ್ಠ.

ನಿತ್ಯಬೇಗ ನಸುಕಿನಲ್ಲಿಯೇ ಏಳುವ ಸ್ವಭಾವದ ಸದಾಚಾರ ಸಂಪನ್ನ ವಿಪ್ರನಿಗೆ ಬೆಚ್ಚಗಿರುವ ಉಣ್ಣೆಯ ವಸ್ತ್ರದ ದಾನ ಕೊಡಬೇಕು. ತಂತು ಸಂಖ್ಯೆಯನ್ನು ಕಾಲ ಉತ್ತಮ ಲೋಕ ಪ್ರಾಪ್ತಿ .

## ।। ಫಾಲ್ಗುಣ ।। ಶುದ್ಧ ।। ಪ್ರತಿಪತ್ ।।

**ಪಯೋವ್ರತ–** ಇಂದಿನಿಂದ ದ್ವಾದಶಿಯ ತನಯ ಪಯೋವ್ರತವನ್ನು ಮಾಡಬೇಕು. ಇದರಿಂದ ಮಕ್ಕಳಾಗದವರಿಗೆ ಪುತ್ರಸಂತಾನವು ದೊರೆಯುತ್ತದೆ. ಪಯೋವ್ರತವನ್ನು ಮಾಡುವಾಗ ಮೃತ್ತಿಕೆಯನ್ನು ಹಚ್ಚಿಕೊಂಡು ನದಿಯಲ್ಲಿ ಸ್ನಾನ ಮಾಡಬೇಕು. ನಿತ್ಯವೂ ಕಳಸದಲ್ಲಿ ಭಗವಂತನನ್ನು ಆವಾಹನೆ ಮಾಡಿ ಪಾಯಸವನ್ನು ನೈವೇದ್ಯ ಮಾಡಬೇಕು ಮತ್ತು ನಿತ್ಯವೂ ಹೋಮವನ್ನು ಮಾಡಬೇಕು. ಬ್ರಹ್ಮಚರ್ಯಪಾಲನೆ, ಮೌನವ್ರತಾಚರಣೆ, ನಿರಂತರ ಭಗವಂತನ ಚಿಂತನೆ, ಅನ್ನಸಂತರ್ಪಣೆ ಮೊದಲಾದ ಸತ್ಕಾರ್ಯಗಳಲ್ಲಿ ನಿತ್ಯವೂ ನಿರತರಾಗಿರಬೇಕು.

## ।। ಫಾಲ್ಗುಣ ।। ಶುದ್ಧ ।। ದ್ವಿತೀಯಾ ।।

### ಮೃತ್ಯುಂಜಯ ದ್ವಿತೀಯಾ

ತ್ರ್ಯಂಬಕಂ ಯಜಾಮಹೇ ಎಂಬ ಮಂತ್ರದಿಂದ ರುದ್ರದೇವರನ್ನು ಆರಾಧನೆ ಮಾಡಬೇಕು.

### ಶ್ರೀಗುರುಸಾರ್ವಭೌಮರ ಪಟ್ಟಾಭಿಷೇಕ ಮಹೋತ್ಸವ

ಇಂದು ಗುರುರಾಯರಿಗೆ ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕವಾದ

ಮಹಾಪರ್ವಕಾಲವಾಗಿದೆ. ಇಂದಿನಿಂದ ಏಳು ದಿವಸಗಳ ಕಾಲ ಸಪ್ತೋತ್ಸವವು ನಡೆಯುತ್ತದೆ. ಪ್ರತಿಯೊಬ್ಬರೂ ಕೂಡ ಏಳು ದಿವಸಗಳ ಕಾಲ ಗುರುರಾಯರ ಆರಾಧನೆಯನ್ನು ಮಾಡಿ ಧನ್ಯರಾಗಬೇಕು. ಶ್ರಾವಣ ಮಾಸದ ಪುಸ್ತಕದಲ್ಲಿ ಗುರುರಾಯರ ಚರಿತ್ರೆಯು ಸಂಪೂರ್ಣವಾಗಿ ನಿರೂಪಿತವಾಗಿದೆ. ಅದನ್ನು ಓದಿ ಗುರುರಾಯರ ಮಹಿಮೆಯನ್ನು ತಿಳಿದುಕೊಳ್ಳಬೇಕು.

## ॥ ಫಾಲ್ಗುಣ ॥ ಶುದ್ಧ ॥ ತೃತೀಯಾ ॥

### ಗೌರೀಪೂಜೆ

ಇಂದು ಗೌರೀಪೂಜೆಯನ್ನು ಮಾಡುವುದರಿಂದ ಅನೇಕ ಅನಿಷ್ಟಗಳು ಪರಿಹಾರವಾಗುವುದಷ್ಟೇ ಅಲ್ಲದೆ, ಪತಿಯ ಆಯುಷ್ಯವು ಅಭಿವೃದ್ಧಿಯಾಗುತ್ತದೆ.

## ॥ ಫಾಲ್ಗುಣ ॥ ಶುದ್ಧ ॥ ಚತುರ್ಥೀ ॥

### ವಿನಾಯಕ ಚತುರ್ಥೀ

ಗಣೇಶನ ಪ್ರೀತಿಗಾಗಿ ಇಂದು ಕ್ಷಿಪ್ರಪ್ರಸಾದ ಮಂತ್ರವನ್ನು ವಿಶೇಷವಾಗಿ ಜಪಿಸಬೇಕು.

## ॥ ಫಾಲ್ಗುಣ ॥ ಶುದ್ಧ ॥ ಸಪ್ತಮೀ ॥

### ಅರ್ಕಪುಟ ಸಪ್ತಮೀ

ಎಕ್ಕದ ಗಿಡದ ಹೂವುಗಳಿಂದ ಸೂರ್ಯನನ್ನು ಪೂಜಿಸಬೇಕು ಮತ್ತು ಸೂರ್ಯನ ಕುರಿತಾದ ವೇದಮಂತ್ರಗಳನ್ನು ಪಠಿಸಬೇಕು. ಸೂರ್ಯನ ಆರಾಧನೆಯಲ್ಲಿ ನಿರತರಾಗಬೇಕು.

### ಶ್ರೀಗುರುಸಾರ್ವಭೌಮರ ವರ್ಧಂತ್ಯುತ್ಸವ

ಇಂದು ಪ್ರತಿಯೊಬ್ಬರೂ ರಾಘವೇಂದ್ರಸ್ತೋತ್ರವನ್ನು ಪಾರಾಯಣ ಮಾಡಬೇಕು. ಅಷ್ಟೋತ್ತರವನ್ನು ಜಪಿಸಬೇಕು. ಗುರುರಾಯರ ಗುಡಿಗೆ ತೆರಳಿ ಪ್ರದಕ್ಷಿಣೆ ನಮಸ್ಕಾರವನ್ನು ಹಾಕಬೇಕು. ಹಾಗೂ ಗುರುರಾಯರ ಚರಿತ್ರೆಯನ್ನು ಶ್ರವಣ ಮಾಡಬೇಕು.

## ॥ ಫಾಲ್ಗುಣ ॥ ಶುಕ್ಲ ॥ ಏಕಾದಶೀ

### ಯುಧಿಷ್ಠಿರ ಉವಾಚ

**ಮಾಹಾತ್ಮ್ಯಂ ವಿಜಯಾಯಾಶ್ಚ ಶ್ರುತಂ ಕೃಷ್ಣ ಮಹತ್ಫಲಂ ।**
**ಫಾಲ್ಗುನಸ್ಯಾರ್ಜುನೇ ಪಕ್ಷೇ ಯನ್ನಾಮ್ನೀ ತಾಂ ವದಾಧುನಾ ॥೧॥**

**ಯುಧಿಷ್ಠಿರನು ಹೇಳಿದನು-** ಎಲೈ ಕೃಷ್ಣನೇ! ಮಹಾಫಲವುಳ್ಳ ವಿಜಯೈಕಾದಶಿಯ ಮಹಿಮೆಯನ್ನು ಕೇಳಿದೆನು. ಅದೇ ಫಾಲ್ಗುಣ ಶುಕ್ಲಪಕ್ಷದಲ್ಲಿ ಬರುವ ಏಕಾದಶಿಯ ಹೆಸರೇನು? ಹೇಳು.

**ಶ್ರೀಕೃಷ್ಣ ಉವಾಚ**

**ಧರ್ಮಪುತ್ರ ಮಹಾಭಾಗ ಶ್ರುಣು ವಕ್ಷ್ಯಾಮಿ ತೇಽಧುನಾ ।**
**ಪ್ರೋಕ್ತಾ ಪೃಷ್ಟೇನ ಮಾಂಧಾತ್ರಾ ವಸಿಷ್ಠೇನ ಮಹಾತ್ಮನಾ ॥೨॥**

ಕೃಷ್ಣನು ಹೇಳಿದನು- ಎಲೈ ಧರ್ಮಜನೇ! ಮಾಂಧಾತನು ವಸಿಷ್ಠನನ್ನು ಕೇಳಲಾಗಿ ಆತನು ಹೇಳಿದುದನ್ನು ಹೇಳುತ್ತೇನೆ. ಕೇಳು.

**ಫಾಲ್ಗುನಸ್ಯ ವಿಶೇಷೇಣ ವಿಶೇಷಃ ಕಥಿತೋ ನೃಪ ।**
**ಆಮಲಕ್ಯಾ ವ್ರತಂ ಪುಣ್ಯಂ ವಿಷ್ಣುಲೋಕಫಲಪ್ರದಂ ॥೩॥**

ಫಾಲ್ಗುಣಮಾಸದಲ್ಲಿ ಅತಿಶಯವಾಗಿ ಒಂದು ವಿಶೇಷವ್ರತವನ್ನು ಹೇಳಿದ್ದಾರೆ. ಆ ವ್ರತಕ್ಕೆ ಆಮಲಕೀವ್ರತವೆಂದು ಹೆಸರು. ಅದು ವಿಷ್ಣುಲೋಕದ ಫಲವನ್ನು ಕೊಡುತ್ತದೆ.

**ಆಮಲಕ್ಯಾ ಅಧೋ ಗತ್ವಾ ಜಾಗರಂ ತತ್ರ ಕಾರಯೇತ್ ।**
**ಕೃತ್ವಾ ಜಾಗರಣಂ ರಾತ್ರೌ ಗೋಸಹಸ್ರಫಲಂ ಲಭೇತ್ ॥೪॥**

ನೆಲ್ಲಿಯ ಮರದಕೆಳಗೆ ಹೋಗಿ ಜಾಗರಣೆಯನ್ನು ಮಾಡಬೇಕು. ಆ ರೀತಿಯಾಗಿ ರಾತ್ರಿಯೆಲ್ಲಾ ಜಾಗರಣೆ ಮಾಡಿದರೆ ಸಾವಿರಗೋಗಳನ್ನು ದಾನ ಮಾಡಿದ ಫಲವು ಬರುತ್ತದೆ.

**ಮಾಂಧಾತೋವಾಚ**

**ಆಮಲಕೀ ಕದಾ ಹ್ಯೇಷಾ ಉತ್ಪನ್ನಾ ದ್ವಿಜಸತ್ತಮ।**
**ಏತತ್ಸರ್ವಂ ಮಮಾಚಕ್ಷ್ವ ಪರಂ ಕೌತೂಹಲಂ ಹಿ ಮೇ ॥೫॥**

**ಮಾಂಧಾತನು ಹೇಳಿದನು-** ಎಲೈ ಋಷಿಶ್ರೇಷ್ಠನೇ! ಈ ಆಮಲಕೀ ವ್ರತವು ಯಾವಾಗ ಉತ್ಪನ್ನವಾಯಿತು? ನನಗೆ ಬಹು ಆಸೆಯಿದೆ ಇದೆಲ್ಲವನ್ನೂ ಹೇಳು.

**ಕಸ್ಮಾದಿಯಂ ಪವಿತ್ರಂ ಚ ಕಸ್ಮಾತ್ಪಾಪಪ್ರಣಾಶಿನೀ ।**
**ಕಸ್ಮಾಜ್ಜಾಗರಣಂ ಕೃತ್ವಾ ಗೋಸಹಸ್ರಫಲಂ ಲಭೇತ್ ॥೬॥**

ಆಮಲಕೀವ್ರತವು ಹೇಗೆ ಪವಿತ್ರವಾಯಿತು? ಪಾಪವನ್ನು ಹೇಗೆ ಹಾಳು ಮಾಡುತ್ತದೆ? ಜಾಗರಣೆಯನ್ನು ಮಾಡಿದರೆ ಸಾವಿರ ಗೋದಾನದ ಫಲವನ್ನು ಹೊಂದುವುದು ಹೇಗೆ?

ವಸಿಷ್ಠ ಉವಾಚ

**ಕಥಯಾಮಿ ಮಹಾಭಾಗ ಯಥೇಯಮಭವತ್‍ಕ್ಷಿತೌ ।**
**ಆಮಲಕೀ ಮಹಾವೃಕ್ಷಃ ಸರ್ವಪಾಪಪ್ರಣಾಶನಃ ॥೭॥**

ವಸಿಷ್ಠನು ಹೇಳಿದನು–ಆ ನೆಲ್ಲಿಯ ಮರವು ಪಾಪವನ್ನು ನಾಶಮಾಡುವ ಬಗೆಯನ್ನೂ ಆಮಲಕೀವ್ರತವು ಭೂಮಿಯಲ್ಲಿ ಹರಡಿದ ಬಗೆಯನ್ನೂ ಹೇಳುತ್ತೇನೆ, ಕೇಳು.

**ಏಕಾರ್ಣವೇ ಪುರಾ ಜಾತೇ ನಷ್ಟೇ ಸ್ಥಾವರಜಂಗಮೇ ।**
**ನಷ್ಟೇ ದೇವಾಸುರಗಣೇ ನಷ್ಟೇ ಚೋರಗರಾಕ್ಷಸೇ ॥೮॥**

ಪ್ರಪಂಚವೆಲ್ಲವೂ ನೀರಿನಿಂದ ಆವರಿಸಲ್ಪಟ್ಟು ಒಂದೇ ಸಮುದ್ರವಾಯಿತು. ಆಗ ದೇವತೆಗಳೂ ದೈತ್ಯರೂ ಸರ್ಪಗಳೂ ರಾಕ್ಷಸರೂ ಎಲ್ಲರೂ ನಾಶವಾದರು.

**ತತ್ರ ದೇವಾಧಿದೇವೇಶಃ ಪರಮಾತ್ಮಾ ಸನಾತನಃ ।**
**ಜಗಾಮ ಬ್ರಹ್ಮ ಪರಮಾತ್ಮನಃ ಪದಮವ್ಯಯಂ ॥೯॥**

ಆಗ ದೇವಾಧಿದೇವನೂ ಸನಾತನನೂ ಪರಮಾತ್ಮನೂ ಆದ ಸ್ವಾಮಿಯು ತನ್ನ ಪರಮಪದವನ್ನು ಹೊಂದಿದ್ದನು.

**ತತೋಽಸ್ಯ ಜಗತೋ ಬ್ರಹ್ಮಮುಖಾಚ್ಛಶಿಸಮಪ್ರಭಃ ।**
**ಷ್ಠೀವನಾದ್ಬಿಂದುರುತ್ಪನ್ನಃ ಸ ಭೂಮೌ ನಿಪಪಾತ ಹ ॥೧೦॥**

ಆಗ ಆ ಪರಬ್ರಹ್ಮನು ಉಗಿಯಲು ಚಂದ್ರನಂತೆ ಪ್ರಕಾಶವಾದ ಬಿಂದುವು ಹುಟ್ಟಿ ಭೂಮಿಯಲ್ಲಿ ಬಿದ್ದಿತು.

**ತಸ್ಮಾದ್ಬಿಂದೋಃ ಸಮುತ್ಪನ್ನಃ ಸ್ವಯಂ ಧಾತ್ರೀನಗೋ ಮಹಾನ್ ।**
**ಶಾಖಾಪ್ರಶಾಖಾಬಹುಳಃ ಫಲಭಾರೇಣ ನಾಮಿತಃ ॥೧೧॥**

ಆ ಬಿಂದುವಿನ ದೆಸೆಯಿಂದ ಒಂದು ನೆಲ್ಲಿಯ ಮರವು ದೊಡ್ಡದಾಗಿ ಹುಟ್ಟಿತು. ಅದು ಕೊಂಬೆ ಮರುಗೊಂಬೆಗಳಿಂದ ಕೂಡಿ ಹಣ್ಣಿನಿಂದ ತುಂಬಿ ಬಗ್ಗಿತು.

**ಸರ್ವೇಷಾಂ ಚೈವ ವೃಕ್ಷಾಣಾಮಾದಿರೋಹಃ ಪ್ರಕೀರ್ತಿತಃ ।**
**ಏತಸ್ಮಿನ್ನೇವ ಕಾಲೇತು ಸಿಸೃಕ್ಷುರಖಿಲಾಃ ಪ್ರಜಾಃ ॥೧೨॥**

ಆ ಮರವೇ ಮರಗಳಿಗೆಲ್ಲಾ ಮೊದಲನೆಯದಾಯಿತು. ಇದೇ ಕಾಲದಲ್ಲಿಯೇ ಎಲ್ಲಾ ಪ್ರಜೆಗಳನ್ನೂ ಸೃಷ್ಟಿಸಲು ಆ ಪರಬ್ರಹ್ಮನಿಗೆ ಇಚ್ಛೆಯು ಬಂದಿತು.

**ಬ್ರಹ್ಮಾಣಮಸೃಜತ್ತಸ್ಮಾತ್ಸಂಸೃಷ್ಟಾಶ್ಚ ಇಮಾಃ ಪ್ರಜಾಃ ।**
**ದೇವದಾನವಗಂಧರ್ವಯಕ್ಷರಾಕ್ಷಸಪನ್ನಗಾನ್ ॥೧೩॥**

ಆಗ ಆ ಸ್ವಾಮಿಯು ಬ್ರಹ್ಮನನ್ನು ಸೃಷ್ಟಿಸಿದನು. ಅನಂತರ ಆ ಬ್ರಹ್ಮನು ಈ ಪ್ರಜೆಗಳೆಲ್ಲರನ್ನೂ, ದೇವ, ದಾನವ, ಗಂಧರ್ವ, ಯಕ್ಷ, ರಾಕ್ಷಸ, ಪನ್ನಗರನ್ನೂ ಸೃಷ್ಟಿಸಿದನು. ಅನಂತರ ಅತ್ಯುತ್ತಮರಾದ ಋಷಿಗಳನ್ನೂ ಸೃಷ್ಟಿಸಿದನು.

**ಅಸೃಜದ್ಭಗವಾನ್ ದೇವೋ ಮಹರ್ಷೀಂಶ್ಚ ತಥಾಮಲಾನ್ ।**
**ಆಜಗ್ಮುಸ್ತತ್ರ ದೇವಾಸ್ತೇ ಯತ್ರ ಧಾತ್ರೀ ಹರಿಪ್ರಿಯಾ ॥೧೪॥**
**ತಾಂ ದೃಷ್ಟ್ವಾ ತೇ ಮಹಾಭಾಗ ಪರಂ ವಿಸ್ಮಯಮಾಗತಾಃ ।**
**ಪರಸ್ಪರಮವೇಕ್ಷಂತೋ ವೃಕ್ಷದರ್ಶನಲಾಲಸಃ ॥೧೫॥**

ಆಗ ದೇವತೆಗಳು ಹರಿಪ್ರಿಯವಾದ ನೆಲ್ಲಿಯ ಮರವಿದ್ದಲ್ಲಿಗೆ ಬಂದರು. ಆ ಮರವನ್ನು ಅವರು ನೋಡಿ ಆಶ್ಚರ್ಯಪಡುತ್ತಾ ಒಬ್ಬರಿಗೊಬ್ಬರು ನೋಡಿಕೊಳ್ಳುತ್ತ ಮಾತಾಡಿಕೊಳ್ಳುತ್ತಿದ್ದರು.

**ಪ್ಲಕ್ಷಾದಯೋ ಯಥಾಪೂರ್ವಂ ವಿತಿತಾಸ್ಸರ್ವ ಏವ ಚ ।**
**ನ ಜಾನೀಮ ಇಮಂ ವೃಕ್ಷಂ ಚಿಂತಯಂತೋಽಭಿಸಂಸ್ಥಿತಾಃ ॥೧೬॥**
**ಏವಂ ಚಿಂತಯತಾಂ ತೇಷಾಂ ವಾಗುವಾಚಾಶರೀರಿಣೀ ॥೧೭॥**

ಇದೇನು! ಬಸರಿ ಮುಂತಾದ ಮರಗಳನ್ನೂ ಎಲ್ಲವನ್ನೂ ನೋಡಿದ್ದೇವೆ. ಅವೆಲ್ಲವೂ ನಮಗೆ ಗೊತ್ತಿವೆ. ಈ ಮರವು ನಮಗೆ ಯಾವುದೆಂದು ತಿಳಿಯದಾಗಿದೆ ಎಂದು ಅದರ ಸುತ್ತಲೂ ನಿಂತಿದ್ದರು. ಹೀಗೆ ಇವರು ಯೋಚಿಸುತ್ತ ನಿಂತಿರಲು ಆಗ ಒಂದು ಅಶರೀರವಾಣಿಯು ನುಡಿಯಿತು.

**ಆಕಾಶವಾಣ್ಯುವಾಚ**

**ಆಮಲಕೀನಗೋ ಹ್ಯೇಷಃ ಪ್ರವರೋ ವೈಷ್ಣವೋ ಮತಃ ।**
**ಅಸ್ಯ ಸಂಸ್ಮರಣಾದೇವ ಲಭೇದ್ಗೋದಾನಜಂ ಫಲಂ ॥೧೮॥**

**ಆಕಾಶವಾಣಿಯು ಹೇಳಿತು-** ಇದು ನೆಲ್ಲಿಯ ಮರವು. ಇದು ವೈಷ್ಣವರಿಗೆ ಉತ್ತಮವಾದುದು. ಇದನ್ನು ಸ್ಮರಿಸಿದರೇನೆ ಗೋದಾನಮಾಡಿದ ಫಲವು ಬರುತ್ತದೆ.

**ಸ್ಪರ್ಶನಾದ್ದ್ವಿಗುಣಂ ಪುಣ್ಯಂ ತ್ರಿಗುಣಂ ಭಕ್ಷಣಾತ್ತಥಾ ।**
**ತಸ್ಮಾತ್ಸರ್ವಪ್ರಯತ್ನೇನ ಸೇವ್ಯಾ ಆಮಲಕೀ ಸದಾ ॥೧೯॥**

ಅದನ್ನು ಮುಟ್ಟಿದರೆ ನೋಡಿದುದಕ್ಕಿಂತ ಎರಡರಷ್ಟು ಪುಣ್ಯವೂ ಅದರ ಕಾಯನ್ನು ತಿಂದರೆ ಮುಟ್ಟಿದುದಕ್ಕಿಂತಲೂ ಮೂರರಷ್ಟು ಪುಣ್ಯವೂ ಬರುತ್ತದೆ. ಆದುದರಿಂದ ಪ್ರಯತ್ನಪಟ್ಟು ನೆಲ್ಲಿಯಕಾಯನ್ನು ತಿನ್ನಬೇಕು.

**ಸ್ಕಂಧೇ ಚ ಭಗವಾನ್ರುದ್ರಃ ಸಂಸ್ಥಿತಃ ಪರಮೇಶ್ವರಃ ।**
**ಶಾಖಾಸು ಮುನಯಸ್ಸರ್ವೇ ಪ್ರಶಾಖಾಸು ಚ ದೇವತಾಃ ॥೨೦॥**
**ಪರ್ಣೇಷು ವಸವೋ ದೇವಾಃ ಪುಷ್ಪೇಷು ಮರುತಸ್ತಥಾ ।**
**ಪ್ರಜಾನಾಂ ಪತಯಸ್ಸರ್ವೇ ಫಲೇಷ್ವೇವ ವ್ಯವಸ್ಥಿತಾಃ ॥೨೧॥**
**ಸರ್ವದೇವಮಯೀ ಹ್ಯೇಷಾ ಧಾತ್ರೀ ಚ ಕಥಿತಾ ಮಯಾ ।**
**ತಸ್ಮಾತ್ಪೂಜ್ಯತಮಾ ಹ್ಯೇಷಾ ವಿಷ್ಣುಭಕ್ತಿಪರಾಯಣೈಃ ॥೨೩॥**

ಈ ನೆಲ್ಲಿಯು ಎಲ್ಲಾ ಪಾಪಗಳನ್ನೂ ನಾಶಮಾಡುತ್ತದೆ. ವಿಷ್ಣುವಿನ ಸಂಬಂಧವಾದುದು. ಪಾಪನಾಶಕವು. ಆ ಮರದ ಬುಡದಲ್ಲಿ ವಿಷ್ಣುವೂ ಮೇಲುಗಡೆಯಲ್ಲಿ ಬ್ರಹ್ಮನೂ ಮಧ್ಯದಲ್ಲಿ ರುದ್ರನೂ ದಪ್ಪವಾದ ಕೊಂಬೆಗಳಲ್ಲಿ ಮುನಿಗಳೂ ಸಣ್ಣ ಕೊಂಬೆಗಳಲ್ಲಿ ದೇವತೆಗಳೂ ಎಲೆಗಳಲ್ಲಿ ವಸುಗಳೂ ಹೂಗಳಲ್ಲಿ ಮರುತ್ತುಗಳೂ ಫಲಗಳಲ್ಲಿ ಪ್ರಜಾಪತಿಗಳೂ ವಾಸವಾಗಿದ್ದಾರೆ. ಈ ರೀತಿಯಾಗಿ ಈ ನೆಲ್ಲಿಯ ಮರವು ಸರ್ವದೇವತೆಗಳ ಸ್ವರೂಪವಾದುದು. ಆದುದರಿಂದ ವಿಷ್ಣುಭಕ್ತರು ಈ ನೆಲ್ಲಿಯ ಮರವನ್ನು ಪೂಜಿಸಲೇಬೇಕು.

**ಋಷಯ ಊಚುಃ**

**ಕಂ ಭವಂತಂ ಹಿ ಜಾನೀಮಃ ಕಸ್ಮಾತ್ಕಾರಣತಸ್ಸದಾ ।**
**ದೇವೋ ವಾ ಯದಿ ವಾ ಚಾನ್ಯಃ ಕಥಯಸ್ವ ಯಥಾತಥಂ ॥೨೪॥**

**ಋಷಿಗಳು ಹೇಳಿದರು-** ನೀನು ಯಾರೆಂದು ತಿಳಿಯೋಣ? ನೀನು ಹೀಗೆ ಹೇಳಲು ಕಾರಣವೇನು? ನೀನು ದೇವರೆ? ಅಥವಾ ಮತ್ತೆ ಯಾವನಾದರೂ ಆಗಿದ್ದೀಯಾ? ನಿಶ್ಚಯವಾಗಿ ಹೇಳು.

**ವಾಗುವಾಚ**

**ಯಃ ಕರ್ತಾ ಸರ್ವಭೂತಾನಾಂ ಭುವನಾನಾಂ ಚ ಸರ್ವಶಃ ।**
**ವಿಸ್ಮಿತಾನ್ವಿದುಷಃ ಪ್ರೇಕ್ಷ್ಯ ಸೋಽಹಂ ವಿಷ್ಣುಸ್ಸನಾತನಃ ॥೨೫॥**

**ವಾಣಿಯು ಹೇಳಿತು-** ಎಲ್ಲಾ ಭೂತಗಳನ್ನೂ, ಪ್ರಪಂಚಗಳನ್ನೂ ಸೃಷ್ಟಿಸಿದ ಜ್ಞಾನಿಗಳಿಗೂ ನೋಡಲಾಗದ ಆ ಸನಾತನವಾದ ವಿಷ್ಣುವೇ ನಾನು.

**ವಸಿಷ್ಠ ಉವಾಚ**

**ತತಶ್ಶ್ರುತ್ವಾ ದೇವದೇವಭಾಷಿತಂ ಬ್ರಹ್ಮಣಸ್ಸುತಾಃ ।**
**ವಿಸ್ಮಯೋತ್ಫುಲ್ಲನಯನಾಃ ಪರಂ ವಿಸ್ಮಯಮಾಗತಃ ॥**

**ಅನಾದಿನಿಧನಂ ದೇವಂ ಸ್ತೋತುಂ ತತ್ರ ಪ್ರಚಕ್ರಮುಃ ॥೨೬॥**

**ವಸಿಷ್ಠನು ಹೇಳಿದನು-** ಆ ಬ್ರಹ್ಮನ ಮಕ್ಕಳು ಆ ಸ್ವಾಮಿಯ ಮಾತನ್ನು ಕೇಳಿ ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳವರಾದರು. ಆಮೇಲೆ ಸಾವುನೋವುಗಳೂ ಆದಿ ಅಂತ್ಯಗಳೂ ಇಲ್ಲದ ಆ ಸ್ವಾಮಿಯನ್ನು ಸ್ತೋತ್ರ ಮಾಡಿದರು.

**ಋಷಯ ಊಚುಃ**

**ನಮೋ ಭೂತಾತ್ಮಭೂತಾಯ ಆತ್ಮನೇ ಪರಮಾತ್ಮನೇ ।**
**ಅಚ್ಯುತಾಯ ನಮೋ ನಿತ್ಯಮನಂತಾಯ ನಮೋ ನಮಃ ॥೨೭॥**

**ಋಷಿಗಳು ಹೇಳಿದರು-** ಪ್ರಾಣಿಗಳೆಲ್ಲದಕ್ಕೂ ಜೀವಸ್ವರೂಪನಾದ ಆತ್ಮನೂ ಪರಮಾತ್ಮನೂ ಆದ ಸ್ವಾಮಿಗೆ ನಮಸ್ಕಾರವು. ಅಚ್ಯುತ (ನಾಶರಹಿತ)ನಿಗೆ ನಮಸ್ಕಾರವು. ಅನಂತನಿಗೆ(ನಾಶವಿಲ್ಲದವನಿಗೆ) ನಮಸ್ಕಾರವು.

**ದಾಮೋದರಾಯ ಕವಯೇ ಯಜ್ಞೇಶಾಯ ನಮೋ ನಮಃ ।**
**ನಮೋ ಮಾಯಾವತೇ ತುಭ್ಯಂ ವಿಶ್ವೇಶಾಯ ನಮೋಸ್ತುತೇ ॥೨೮॥**

ದಾಮೋದರನೂ ಕವಿಯೂ ಆದ ನಿನಗೆ ನಮಸ್ಕಾರವು. ಯಜ್ಞಕ್ಕೆ ಒಡೆಯನಾದ ನಿನಗೆ ನಮಸ್ಕಾರವು.

**ವಸಿಷ್ಠ ಉವಾಚ**

**ಏವಂ ಸ್ತುತಸ್ತು ಋಷಿಭಿಃ ತುತೋಷ ಭಗವಾನ್ ಹರಿಃ ।**
**ಪ್ರತ್ಯುವಾಚ ಮಹರ್ಷೀಂಸ್ತಾನಭೀಷ್ಟಂ ಕಿಂ ದದಾಮಿ ವಃ ॥೨೯॥**

**ವಸಿಷ್ಠನು ಹೇಳಿದನು-** ಋಷಿಗಳು ಹೀಗೆ ಸ್ತೋತ್ರಮಾಡಲು ಭಗವಂತನಾದ ಹರಿಯು ಆ ಮಹರ್ಷಿಗಳನ್ನು ಕುರಿತು ನಿಮಗೆ ಇಷ್ಟವಾದುದನ್ನು ಏನನ್ನು ಕೊಡಲಿ? ಎಂದು ಕೇಳಿದನು.

**ಋಷಯ ಊಚುಃ**

**ಯದಿ ತುಷ್ಟೋಽಸಿ ಭಗವನ್ನಸ್ಮಾಕಂ ಹಿತಕಾಮ್ಯಯಾ ।**
**ವ್ರತಂ ಕಿಂಚಿತ್ಸಮಾಖ್ಯಾಹಿ ಸ್ವರ್ಗಮೋಕ್ಷಫಲಪ್ರದಂ ॥೩೦॥**

**ಋಷಿಗಳು ಹೇಳಿದರು-** ಎಲೈ ಸ್ವಾಮಿಯೇ! ನೀನು ಪ್ರಸನ್ನನಾಗಿದ್ದರೆ ನಮ್ಮಗಳ ಹಿತಕ್ಕೋಸ್ಕರ ಸ್ವರ್ಗಮೋಕ್ಷಫಲವನ್ನು ಕೊಡುವ ಯಾವುದಾದರೂ ಒಂದು ವ್ರತವನ್ನು ಉಪದೇಶಿಸು.

**ಧನಧಾನ್ಯಪ್ರದಂ ಪುಣ್ಯಮಾತ್ಮನಸ್ತುಷ್ಟಿ ಕಾರಣಂ ।**
**ಅಲ್ಪಾಯಾಸಂ ಬಹುಫಲಂ ವ್ರತಾನಾಂ ವ್ರತಮುತ್ತಮಂ ॥೩೦॥**
**ಕೃತೇನ ಯೇನ ದೇವೇಶ ವಿಷ್ಣುಲೋಕೇ ಮಹೀಯತೇ ॥೩೧॥**

ಧನ ಧಾನ್ಯಗಳನ್ನು ಕೊಡುವ ಪರಮಾತ್ಮನಿಗೆ ಸಂತೋಷವನ್ನುಂಟುಮಾಡುವ ಸ್ವಲ್ಪ ಕಷ್ಟದಿಂದಲೇ ಬಹುಫಲವನ್ನು ಕೊಡುವ ಉತ್ತಮವಾದ ವ್ರತವನ್ನು ಉಪದೇಶಿಸು. ಅದನ್ನು ಮಾಡಿದರೆ ವಿಷ್ಣುಲೋಕದಲ್ಲಿ ಸುಖಿಸುತ್ತಾನೆ.

**ವಿಷ್ಣುರುವಾಚ -**

**ಫಾಲ್ಗುಣೇ ಶುಕ್ಲಪಕ್ಷೇ ತು ಪುಷ್ಯೇಣ ದ್ವಾದಶೀ ಯದಿ ।**
**ಭವೇತ್ಸಾ ಚ ಮಹಾಪುಣ್ಯಾ ಮಹಾಪಾತಕನಾಶಿನೀ ॥೩೨॥**

**ವಿಷ್ಣುವು ಹೇಳಿದನು-** ಫಾಲ್ಗುಣ ಶುಕ್ಲಪಕ್ಷದಲ್ಲಿ ದ್ವಾದಶಿಯ ದಿವಸ ಪುಷ್ಯನಕ್ಷತ್ರವು ಕೂಡಿದರೆ ಆ ದಿನವು ಮಹಾಪುಣ್ಯವುಳ್ಳದ್ದು. ಪಾಪನಾಶಕವಾದುದು.

**ವಿಶೇಷಸ್ತತ್ರ ಕರ್ತವ್ಯಃ ಶ್ರುಣುಧ್ವಂ ದ್ವಿಜಸತ್ತಮಾಃ ।**
**ಆಮಲಕೀಂ ಚ ಸಂಪ್ರಾಪ್ಯ ಜಾಗರಂ ತತ್ರ ಕಾರಯೇತ್ ॥೩೪॥**

ಆದಿನ ಹೆಚ್ಚಾಗಿ ಒಂದು ಕೆಲಸವನ್ನು ಮಾಡಬೇಕು. ಎಲೈ ಬ್ರಾಹ್ಮಣರಿರಾ! ಕೇಳಿರಿ. ಆದಿವಸ ನೆಲ್ಲಿಯಮರದ ಸಮೀಪದಲ್ಲಿ ಜಾಗರಣೆಯನ್ನು ಮಾಡಬೇಕು.

**ಸರ್ವಪಾಪವಿನಿರ್ಮುಕ್ತೋ ಗೋಸಹಸ್ರಫಲಂ ಲಭೇತ್ ।**
**ಏತದ್ವಃ ಕಥಿತಂ ವಿಪ್ರಾ ವ್ರತಾನಾಂ ವ್ರತಮುತ್ತಮಂ ॥೩೫॥**
**ಅರ್ಚಯಿತ್ವಾಚ್ಯುತಂ ತಸ್ಯಾಂ ವಿಷ್ಣುಲೋಕಾನ್ನ ಮುಚ್ಯತೇ ॥೩೬॥**

ಹಾಗೆ ಮಾಡಿದರೆ ಪಾಪಗಳೆಲ್ಲವನ್ನೂ ಕಳೆದುಕೊಂಡು ಸಾವಿರ ಗೋದಾನದ ಫಲವನ್ನು ಹೊಂದುತ್ತಾನೆ. ಈ ಉತ್ತಮವಾದ ವ್ರತವನ್ನು ನಿಮಗೆ ಹೇಳಿದ್ದೇನೆ. ಆದಿನ ಆ ನೆಲ್ಲಿಯ ಮರದಲ್ಲಿ ವಿಷ್ಣುವನ್ನು ಪೂಜಿಸಿದರೆ ವಿಷ್ಣುಲೋಕದಿಂದ ಅವನಿಗೆ ಬಿಡುಗಡೆಯೇ ಇರುವುದಿಲ್ಲ.

**ಋಷಯ ಊಚುಃ**

**ವ್ರತಸ್ಯಾಸ್ಯ ವಿಧಿಂ ಬ್ರೂಹಿ ಪರಿಪೂರ್ಣಂ ಕಥಂ ಭವೇತ್ ।**
**ಕೇ ಮಂತ್ರಾಃ ಕೇ ನಮಸ್ಕಾರಾ ದೇವತಾಃ ಕಾಃ ಪ್ರಕೀರ್ತಿತಾಃ ॥೩೭॥**
**ಕಥಂ ದಾನಂ ಕಥಂ ಸ್ನಾನಂ ಕಶ್ಚ ಪೂಜಾ ವಿಧಿಸ್ಮೃತಃ ।**
**ಅರ್ಚನಸ್ಯ ಚ ಮಂತ್ರಂ ತು ಕಥಯಸ್ವ ಯಥಾತಥಂ ॥೩೮॥**

**ಋಷಿಗಳು ಹೇಳಿದರು-** ಈ ವ್ರತದ ವಿಧಿಯನ್ನು ಹೇಳು. ಪೂರ್ತಿಯಾಗುವುದು ಹೇಗೆ? ಮಂತ್ರಗಳಾವು? ನಮಸ್ಕಾರವು ಹೇಗೆ? ದೇವತೆಗಳಾವುವು? ದಾನವೇನು? ಸ್ನಾನದ ವಿಧಿಯೇನು? ಪೂಜಾವಿಧಿಯು ಹೇಗೆ? ಅರ್ಚನೆಯ ಮಂತ್ರವಾವುದು? ಇದೆಲ್ಲವನ್ನೂ ಸರಿಯಾಗಿ ಹೇಳು?

**ವಿಷ್ಣುರುವಾಚ**

**ಶ್ರೂಯತಾಂ ಯೋ ವಿಧಿಸ್ಸಮ್ಯಗ್ವ್ರತಸ್ಯಾಸ್ಯ ದ್ವಿಜರ್ಷಭಾಃ ।**
**ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾ ಚೈವ ಪರೇಽಹನಿ ॥೩೯॥**

**ವಿಷ್ಣುವು ಹೇಳಿದನು-** ಎಲೈ ಬ್ರಾಹ್ಮಣರಿರಾ! ವಿಧಿಯನ್ನು ಹೇಳುತ್ತೇನೆ. ಸರಿಯಾಗಿ ಕೇಳಿರಿ. ಏಕಾದಶಿಯದಿನ ಉಪವಾಸ ಮಾಡಿ ಮರುದಿವಸ ಊಟ ಮಾಡುತ್ತೇನೆ. ಎಲೈ ಪುಂಡರೀಕಾಕ್ಷನೆ! ನನ್ನನ್ನು ರಕ್ಷಿಸು ಎಂದು ಹೇಳಬೇಕು.

**ಭೋಕ್ಷ್ಯೇಽಹಂ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ।**
**ಇತಿ ಕೃತ್ವಾ ತು ನಿಯಮಂ ದಂತಧಾವನಪೂರ್ವಕಂ ॥೪೦॥**
**ನಾಲಪೇತ್ಪತಿತಾಂಶ್ಚೌರಾಂಸ್ತಥಾಪಾಷಂಡಿನೋ ನರಾನ್ ।**
**ದುರ್ವೃತ್ತಾನ್ಭಿನ್ನಮರ್ಯಾದಾನ್ ಗುರುದಾರಪ್ರಧರ್ಷಕಾನ್ ॥೪೧॥**

ಈ ರೀತಿಯಾಗಿ ನಿಯಮವನ್ನು ಮಾಡಿಕೊಂಡು ಶಾಸ್ತ್ರದಲ್ಲಿ ಹೇಳಿರುವಂತೆ ಹಲ್ಲುಗಳನ್ನುಜ್ಜಿಕೊಂಡು ಸ್ನಾನಾದಿಗಳನ್ನು ಮಾಡಿಕೊಳ್ಳಬೇಕು. ಪತಿತರು ಚೋರರು ಪಾಷಂಡಿಗಳು ಅಯೋಗ್ಯರು ಲೋಕರೀತಿಯಲ್ಲಿ ನಡೆಯದ ಮರ್ಯಾದೆಗೆಟ್ಟವರು ಗುರುಗಳ ಹೆಂಡರಲ್ಲಿ ರಮಿಸುವವರು ಇವರೊಡನೆ ಮಾತನಾಡಬಾರದು.

**ಅಪರಾಹ್ಣೇ ತತಸ್ಸ್ನಾನಂ ವಿಧಿವತ್ಕಾರಯೇದ್ಬುಧಃ ।**
**ನದ್ಯಾಂ ತಟಾಕೇ ಕೂಪೇ ವಾ ಗೃಹೇ ವಾ ನಿಯತಾತ್ಮವಾನ್ ॥೪೨॥**

ಅಪರಾಹ್ಣ ಬರುತ್ತಲೂ ನದಿಯಲ್ಲಾಗಲಿ ಕೆರೆಯಲ್ಲಾಗಲಿ ಬಾವಿಯಲ್ಲಾಗಲಿ ಮನೆಯಲ್ಲಾಗಲಿ ಶಾಸ್ತ್ರನಿಯಮದಂತೆ ಸ್ನಾನ ಮಾಡಬೇಕು.

**ಮೃತ್ತಿಕಾಲಾಂಭನಂ ಪೂರ್ವಂ ತತಸ್ಸ್ನಾನಂ ಚ ಕಾರಯೇತ್ ।**
**ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ ॥**
**ಮೃತ್ತಿಕೇ ಹರ ಮೇ ಪಾಪಂ ಜನ್ಮಕೋಟ್ಯಾಂ ಸಮಾರ್ಜಿತಂ ॥೪೩॥**
**ಇತಿ ಮೃತ್ತಿಕಾಮಂತ್ರಃ ॥**

ಮಣ್ಣನ್ನು ಮೈಗೆ ಬಳಿದುಕೊಂಡು ಆಮೇಲೆ ಸ್ನಾನ ಮಾಡಬೇಕು. ಅಶ್ವಕ್ರಾಂತೆ ಎಂಬ ಮಂತ್ರವನ್ನು ಹೇಳಬೇಕು. ಕುದುರೆಗಳಿಂದಲೂ ರಥಗಳಿಂದಲೂ ವಿಷ್ಣುವಿನಿಂದಲೂ ಆಕ್ರಮಿಸಲ್ಪಟ್ಟ ಎಲೈ ಭೂಮಿಯೇ! ನಾನು ಕೋಟ್ಯಂತರ ಜನ್ಮಗಳಲ್ಲಿ ಮಾಡಿದ ಪಾಪಗಳನ್ನು ನಾಶಮಾಡು ! ಇದು ಮೃತ್ತಿಕೆಯನ್ನು ಬಳಿದುಕೊಳ್ಳುವ ಮಂತ್ರವು.

**ತ್ವಂ ಮಾತಸ್ಸರ್ವಭೂತಾನಾಂ ಜೀವನಂ ತತ್ತು ರಕ್ಷಕಂ ।**
**ಸ್ವೇದಜೋದ್ಭಿಜಜಾತೀನಾಂ ರಸಾನಾಂ ಪತಯೇ ನಮಃ ॥೪೪॥**

ಎಲೈ ನೀರೇ! ನೀನೇ ಎಲ್ಲಾ ಪ್ರಾಣಿಗಳಿಗೂ ತಾಯಿಯು. ಜೀವನವು. ರಕ್ಷಿಸುವವಳು. ಹುಳು ಮೊಳಕೆ, ಪೈರು ಮೊದಲಾದುವುಗಳಿಗೆಲ್ಲಾ ರಕ್ಷಕಳು. ರಸಗಳಿಗೆ ಒಡೆಯಳು. ಇಂತಹ ನಿನಗೆ ನಮಸ್ಕಾರವು.

**ಸ್ನಾತೋಽಹಂ ಸರ್ವತೀರ್ಥೇಷು ಹ್ರದಪ್ರಸ್ರವಣೇಷು ಚ ।**
**ನದೀಷು ದೇವಖಾತೇಷು ಇದಂ ಸ್ನಾನಂ ತು ಮೇ ಭವೇತ್ ॥೪೫॥**

ನಾನು ಸರ್ವತೀರ್ಥಗಳಲ್ಲಿಯೂ ಸ್ನಾನಮಾಡಿದೆನು. ಮಡು, ತೊರೆ, ಹೊಳೆ, ಕೆರೆಗಳೆಲ್ಲದರಲ್ಲಿಯೂ ಸ್ನಾನಮಾಡಿದ ಫಲವು ನನಗೆ ಬರಲಿ. ಇದು ಸ್ನಾನದ ಮಂತ್ರವು.

**ಜಾಮದಗ್ನ್ಯಂ ಮುನಿಂ ಚೈವ ಕಾರಯಿತ್ವಾ ಹಿರಣ್ಮಯಂ ।**
**ವಿತ್ತಾನುಸಾರತಶ್ಶಕ್ತ್ಯಾ ಕಾರಯೇತ್ಪ್ರತಿಮಾಂ ಬುಧಃ ॥೪೬॥**

ಚಿನ್ನದಲ್ಲಿ ತನ್ನ ಹಣಕ್ಕೂ ಶಕ್ತಿಗೂ ಅನುಗುಣವಾಗಿ ಪರಶುರಾಮನ ಪ್ರತಿಮೆಯನ್ನು ಮಾಡಿಸಬೇಕು.

**ಮಾಷಕಸ್ಯ ಸುವರ್ಣಸ್ಯ ತದರ್ಧಾರ್ಧೇನ ವಾ ಪುನಃ ।**
**ಗೃಹಮಾಗತ್ಯ ಸಂಪೂಜ್ಯ ಪೂಜಾಹೋಮಂ ತು ಕಾರಯೇತ್ ॥೪೭॥**

ಮಾಷತೂಕದ ಚಿನ್ನದಲ್ಲಿ ಅಥವಾ ಅದರ ಅರ್ಧ ಅಥವಾ ಅರ್ಧದ ಅರ್ಧದಲ್ಲಿಯಾಗಲಿ ಪ್ರತಿಮೆಯನ್ನು ಮಾಡಿಸಬೇಕು. ಮನೆಗೆ ಬಂದು ಅದನ್ನು ಪೂಜಿಸಿ ಹೋಮಾದಿಗಳನ್ನು ಮಾಡಿಸಬೇಕು.

**ತತಶ್ಚಾಮಲಕೀಂ ಗಚ್ಛೇತ್ ಸರ್ವೋಪಸ್ಕರಸಂಯುತಃ ।**
**ಆಮಲಕೀಂ ತತೋ ಗತ್ವಾ ಪರಿಶೋಧ್ಯ ಸಮಂತತಃ ॥೪೮॥**
**ಸ್ಥಾಪಯೇತ್ತತ್ರತಂ ಕುಂಭಮವ್ರಣಂ ಮಂತ್ರಪೂರ್ವಕಂ ।**
**ಪಂಚರತ್ನಸಮೋಪೇತಂ ದಿವ್ಯಗಂಧಾಧಿವಾಸಿತಂ ॥೪೯॥**

ಅನಂತರ ನೆಲ್ಲಿಯ ಮರದ ಹತ್ತಿರಕ್ಕೆ ಹೋಗಬೇಕು. ಎಲ್ಲಾ ಪದಾರ್ಥಗಳನ್ನೂ ತೆಗೆದುಕೊಂಡು ಹೋಗಬೇಕು. ಆ ನೆಲ್ಲಿಯ ಮರದ ಬುಡಕ್ಕೆ ಹೋಗಿ ಅದರ ಸುತ್ತಲೂ ಅಸಹ್ಯವಿಲ್ಲದಂತೆ ಶೋಧಿಸಬೇಕು. ಅಲ್ಲಿ ಒಡಕು, ತಗ್ಗುಗಳಿಲ್ಲದ ಕುಂಭವನ್ನು ತಂದು ಮಂತ್ರಪೂರ್ವಕವಾಗಿ ಕಲಶವನ್ನು ಸ್ಥಾಪಿಸಬೇಕು.

**ಛತ್ರೋಪಾನದ್ವಸ್ತ್ರಯುತಂ ಸಿತಚಂದನಚರ್ಚಿತಂ ।**
**ಸ್ರಙ್ಮಾಲಲಂಬಿತಗ್ರೀವಂ ಸರ್ವಧೂಪವಿಧೂಪಿತಂ ॥೫೦॥**

ಆ ಕಲಶಕ್ಕೆ ಪಂಚರತ್ನಗಳನ್ನು ಹಾಕಬೇಕು. ಒಳ್ಳೆಯ ಗಂಧವನ್ನು ಪೂಸಬೇಕು. ಛತ್ರಿ, ಕೆರ ಬಟ್ಟೆ ಶ್ರೀಗಂಧಗಳಿಂದ ಅಲಂಕರಿಸಬೇಕು. ಕತ್ತಿಗೆ ಹೂಮಾಲೆಯನ್ನು ಹಾಕಬೇಕು. ಧೂಪದಿಂದ ವಾಸನೆ ಬರುವಂತೆ ಮಾಡಬೇಕು. ಎಲ್ಲಾ ಕಡೆಗಳಲ್ಲಿಯೂ ದೀಪದ ಸಾಲುಗಳನ್ನೂ ಬೆಳಗಬೇಕು.

**ದೀಪಮಾಲಾಕುಲಂ ಕುರ್ಯಾತ್ ಸರ್ವತಸ್ಸುಮನೋಹರಂ ।**
**ತಸ್ಯೋಪರಿ ನ್ಯಸೇತ್ಪಾತ್ರಂ ದಿವ್ಯಲಾಜೈಃ ಪ್ರಪೂರಿಗಂ ॥೫೧॥**
**ಪಾತ್ರೋಪರಿ ನ್ಯಸೇದ್ದೇವಂ ಜಾಮದಗ್ನ್ಯಂ ಮಹಾಶುಭಂ ।**
**ವಿಶೋಕಾಯ ನಮಃ ಪಾದೌ ಜಾನುನೀ ವಿಶ್ವರೂಪಿಣೇ ॥೫೨॥**
**ಉಗ್ರಾಯ ಚ ತತೋಪ್ಯೂರೂ ಕಟಿಂ ದಾಮೋದರಾಯ ಚ ।**
**ಉದರಂ ಪದ್ಮನಾಭಾ ಉರಶ್ರೀವತ್ಸಧಾರಣೇ ॥೫೩॥**
**ಚಕ್ರಿಣೇ ವಾಮಬಾಹುಂ ಚ ದಕ್ಷಿಣಂ ಗದಿನೇ ನಮಃ ।**
**ವೈಕುಂಠಾಯ ನಮಃ ಕಂಠಮಾಸ್ಯಂ ಯಜ್ಞಮುಖಾಯ ವೈ ॥೫೪॥**
**ನಾಸಾಂ ವಿಶೋಕನಿಧಯೇ ವಾಸುದೇವಾಯ ಚಾಕ್ಷಿಣೀ!**
**ಲಲಾಟಂ ವಾಮನಾಯೇತಿ ಸರ್ವಮಂಗಂ ಪ್ರಪೂಜಯೇತ್ ।**
**ನಮಸ್ಸರ್ವಾತುನೇ ಶೀರ್ಷಮಿತಿ ಸಂಪ್ರೋಚ್ಯ ಪೂಜಯೇತ್ ॥೫೫॥**
**ಇತಿ ಪೂಜಾಮಂತ್ರಃ ॥**

ಆ ಕಲಶದ ಮೇಲೆ ಒಂದು ಪಾತ್ರೆಯನ್ನಿಡಬೇಕು. ಅದರ ತುಂಬ ಭತ್ತದ ಅರಳನ್ನು ತುಂಬಬೇಕು. ಆ ಪಾತ್ರೆಯಲ್ಲಿ ಜಾಮದಗ್ನ್ಯಮೂರ್ತಿಯನ್ನಿಡಬೇಕು. ''ವಿಶೋಕಾಯ ನಮಃ'' ಎಂದು ಪಾದಗಳನ್ನೂ ''ವಿಶ್ವರೂಪಿಣೆ ನಮಃ'' ಎಂದು ಮೊಣಕಾಲುಗಳನ್ನೂ ''ಉಗ್ರಾಯ ನಮಃ'' ಎಂದು ತೊಡೆಗಳನ್ನೂ ''ದಾಮೋದರಾಯ ನಮಃ'' ಎಂದು ಸೊಂಟವನ್ನೂ ''ಪದ್ಮನಾಭಾಯ ನಮಃ'' ಎಂದು ಹೊಟ್ಟೆಯನ್ನೂ, ''ವೈಕುಂಠಾಯ

ನಮಃ'' ಎಂದು ಕಂಠವನ್ನೂ, ''ಯಜ್ಞಮುಖಾಯ ನಮಃ'' ಎಂದು ಮುಖವನ್ನೂ, ''ವಿಶೋಕನಿಧಯೇ ನಮಃ'' ಎಂದು ಮೂಗನ್ನೂ, ''ವಾಸುದೇವಾಯ ನಮಃ'' ಎಂದು ಕಣ್ಣುಗಳನ್ನೂ ''ವಾಮನಾಯ ನಮಃ'' ಎಂದು ಹಣೆಯನ್ನೂ ''ಸರ್ವಾತ್ಮನೇ ನಮಃ'' ಎಂದು ತಲೆಯನ್ನೂ ಪೂಜಿಸಬೇಕು. ಇದು ಪೂಜಾ ಮಂತ್ರವು.

**ತತೋ ದೇವಾಧೀದೇವಾಯ ಅರ್ಘ್ಯಂ ಚೈವ ಪ್ರದಾಪಯೇತ್ ।**
**ಘಟೇನ ಚೈವ ಶುಭ್ರೇಣ ಭಕ್ತಿಯುಕ್ತೇನ ಚೇತಸಾ ॥೫೬॥**

ಅನಂತರ ಕೈಯಲ್ಲಿ ಒಳ್ಳೆಯ ಫಲವನ್ನು ಇಟ್ಟುಕೊಂಡು ಭಕ್ತಿಯಿಂದ ದೇವಾಧಿ ದೇವನಿಗೆ ನಮಸ್ಕಾರವು. ಎಂದು ಅರ್ಘ್ಯವನ್ನು ಕೊಡಬೇಕು.

**ನಮಸ್ತೇ ದೇವದೇವೇಶ ಜಾಮದಗ್ನ್ಯ ನಮೋಸ್ತುತೇ ।**
**ಗೃಹಾಣಾರ್ಘ್ಯಮಿಮಂ ದತ್ತಮಾಮಲತ್ಯಾಸಹಿತೋ ಹರೇ ॥೫೭॥**

ದೇವದೇವನೆ! ನಮಸ್ಕಾರವು. ಜಾಮದಗ್ನ್ಯನೆ! ನಮಸ್ಕಾರವು. ನೆಲ್ಲಿಯಿಂದ ಕೂಡಿದ ದೇವನೇ ನಾನು ಕೊಟ್ಟ ಈ ಅರ್ಘ್ಯವನ್ನು ಸ್ವೀಕರಿಸು ಎಂದು ಹೇಳುತ್ತ ಆರ್ಘ್ಯವನ್ನು ಕೊಡಬೇಕು. ಇದು ಅರ್ಘ್ಯಮಂತ್ರವು.

ಇತ್ಯರ್ಘ್ಯಮಂತ್ರಃ

**ತತೋ ಜಾಗರಣಂ ಕುರ್ಯಾತ್ ಭಕ್ತಿಯುಕ್ತೇನ ಚೇತಸಾ ।**
**ನೃತ್ಯೈರ್ಗೀತೈಶ್ಚ ವಾದಿತ್ರೈರ್ಧರ್ಮಾಖ್ಯಾನವರ್ರೈರಪಿ ॥೫೮॥**
**ವೈಷ್ಣವೈಶ್ಚ ತಥಾಖ್ಯಾನೈಃ ಕ್ಷಪಯೇಚ್ಛರ್ವರೀಮಿಮಾಂ ।**
**ಪ್ರದಕ್ಷಿಣಂ ತತಃ ಕುರ್ಯಾದಾಮಲತ್ಯಾಂ ವಿಷ್ಣುನಾಮಭಿಃ ॥೫೯॥**
**ಅಷ್ಟಾಧಿಕಶತಂ ಚೈವ ಅಷ್ಟಾವಿಂಶತಿರೇವ ಚ ।**
**ತತಃ ಪ್ರಭಾತಸಮಯೇ ಕೃತ್ವಾ ನೀರಾಜನಂ ಹರೇಃ ॥೬೦॥**

ಅನಂತರ ಭಕ್ತಿಯಿಂದ ಜಾಗರಣೆಯನ್ನು ಮಾಡಬೇಕು. ನೃತ್ಯ, ಗೀತ, ವಾದ್ಯ, ಧರ್ಮಪ್ರಧಾನವಾದ ಕಥೆಗಳು, ವೈಷ್ಣವ ಚರಿತ್ರೆಗಳು ಇವುಗಳಿಂದ ರಾತ್ರಿಯನ್ನು ಕಳೆಯಬೇಕು. ಅನಂತರ ವಿಷ್ಣುವಿನ ನಾಮಗಳನ್ನು ಹೇಳುತ್ತಾ ನೆಲ್ಲಿಯ ಮರವನ್ನು ಸೇರಿಸಿಕೊಂಡು ನೂರೆಂಟು ಅಥವಾ ಇಪ್ಪತ್ತೆಂಟು ನಮಸ್ಕಾರಗಳನ್ನಾದರೂ ಮಾಡಬೇಕು. ಅನಂತರ ಬೆಳಗಿನ ಜಾವದಲ್ಲಿ ಸ್ವಾಮಿಗೆ ಮಂಗಳಾರತಿ ಮಾಡಬೇಕು.

**ಬ್ರಾಹ್ಮಣಂ ಪೂಜಯಿತ್ವಾ ತು ಸರ್ವಂ ತಸ್ಮೈ ನಿವೇದಯತ್ ।**
**ಜಾಮದಗ್ನ್ಯಂ ಘಟಂ ತತ್ರ ವಸ್ತ್ರಯುಗ್ಮಮುಪಾನಹೌ ॥೬೧॥**

ಜಾಮದಗ್ನ್ಯಸ್ವರೂಪೇಣ ಪ್ರೀಯತಾಂ ಮಮ ಕೇಶವಃ ।
ತತಶ್ಚಾಮಲಕೀಂ ಸ್ಪೃಷ್ಟ್ವಾ ಕೃತ್ವಾ ಚೈವ ಪ್ರದಕ್ಷಿಣಾಂ ॥೬೨॥
ಸ್ನಾನಂ ಕೃತ್ವಾ ವಿಧಾನೇನ ಬ್ರಾಹ್ಮಣಾನ್ಭೋಜಯೇತ್ತತಃ ।
ತತಶ್ಚ ಸ್ವಯಮಶ್ನೀಯಾತ್ಕುಟುಂಬೇನ ಸಮಾವೃತಃ ॥೬೩॥

ಬ್ರಾಹ್ಮಣನಿಗೆ ಅವೆಲ್ಲವನ್ನೂ ಕೊಟ್ಟುಬಿಡಬೇಕು. ಜಾಮದಗ್ನ್ಯ ಕಲಶವನ್ನು, ವಸ್ತ್ರ, ಕೆರಗಳನ್ನೂ ಆ ಬ್ರಾಹ್ಮಣನಿಗೆ ಕೊಡುತ್ತಾ ಜಾಮದಗ್ನ್ಯ ಸ್ವರೂಪನಾದ ಸ್ವಾಮಿಯು ಪ್ರೀತನಾಗಲಿ, ಎಂದು ದಾನ ಮಾಡಬೇಕು. ಆಮೇಲೆ ನೆಲ್ಲಿಯ ಮರವನ್ನು ಮುಟ್ಟಿ ಆದಕ್ಕೆ ಪ್ರದಕ್ಷಿಣೆ ಮಾಡಿ, ಅನಂತರ ಸ್ನಾನವಿಧಿಯಿಂದ ಸ್ನಾನ ಮಾಡಿ ಬ್ರಾಹ್ಮಣರಿಗೆ ಸಂತರ್ಪಣೆ ಮಾಡಿಸಬೇಕು. ಆಮೇಲೆ ಮನೆಯವರೊಡನೆ ತಾನು ಊಟ ಮಾಡಬೇಕು.

ಏವಂ ಕೃತೇನ ಯತ್ಪುಣ್ಯಂ ತತ್ಸರ್ವಂ ಕಥಯಾಮಿ ತೇ ।
ಸರ್ವತೀರ್ಥೇಷು ಯತ್ಪುಣ್ಯಂ ಸರ್ವದಾನೇಷು ಯತ್ಫಲಂ ॥೬೪॥
ಸರ್ವಯಜ್ಞಾಧಿಕಂ ಚೈವ ಲಭತೇ ನಾತ್ರ ಸಂಶಯಃ ।
ಏತದ್ವಸ್ಸರ್ವಮಾಖ್ಯಾತಂ ವ್ರತಮುತ್ತಮಮಮಂ ॥೬೫॥

ಹೀಗೆ ಮಾಡಿದರೆ ಬರುವ ಪುಣ್ಯವನ್ನು ಹೇಳುತ್ತೇನೆ – ಎಲ್ಲಾ ತೀರ್ಥಗಳಲ್ಲಿಯೂ ಸ್ನಾನ ಮಾಡಿದರೆ ಯಾವ ಪುಣ್ಯವು ಬರುತ್ತದೆಯೋ ಅದಕ್ಕಿಂತ ಹೆಚ್ಚು ಪುಣ್ಯವು ಬರುತ್ತದೆ. ಎಲ್ಲಾ ದಾನಗಳನ್ನೂ ಮಾಡಿದರೆ ಯಾವ ಫಲವು ಬರುತ್ತದೆಯೋ ಅದಕ್ಕಿಂತಲೂ ಹೆಚ್ಚು ಫಲವು ಬರುತ್ತದೆ. ಎಲ್ಲಾ ಯಜ್ಞಗಳನ್ನೂ ಮಾಡಿದರೆ ಬರುವ ಪುಣ್ಯಕ್ಕಿಂತಲೂ ಹೆಚ್ಚು ಪುಣ್ಯವು ಬರುತ್ತದೆ. ಸಂಶಯವಿಲ್ಲ. ಈರೀತಿ ವ್ರತಗಳಲ್ಲೆಲ್ಲಾ ಉತ್ತಮವಾದ ಈ ಆಮಲಕೀ ವ್ರತವನ್ನು ಹೇಳಿದ್ದೇನೆ.

ವಸಿಷ್ಠ ಉವಾಚ

ಏತಾವದುಕ್ತ್ವಾ ದೇವೇಶಸ್ತತ್ರೈವಾಂತರಧೀಯತ ।
ತೇ ಚಾಪಿ ಋಷಯಸ್ಸರ್ವೇ ಚಕ್ರುಸ್ಸರ್ವಮಶೇಷತಃ ॥
ತಥಾ ತ್ವಮಪಿ ರಾಜೇಂದ್ರ ಕರ್ತುಮರ್ಹಸಿ ಸತ್ತಮ ॥೬೬॥

ವಸಿಷ್ಠನು ಹೇಳಿದನು – ದೇವನು ಇಷ್ಟನ್ನು ಹೇಳಿ ಅಂತರ್ಧಾನನಾದನು. ಅದೇ ರೀತಿಯಾಗಿ ಆ ಋಷಿಗಳೆಲ್ಲರೂ ಆ ವ್ರತವನ್ನು ಪೂರ್ಣವಾಗಿ ಮಾಡಿದರು. ಅವರಂತೆ ನೀನೂ ಮಾಡಲು ಯೋಗ್ಯನಾಗಿದ್ದೀಯೆ.

**ಶ್ರೀಕೃಷ್ಣ ಉವಾಚ**

**ವ್ರತಮೇತದ್ದುರಾಧರ್ಷಂ ರಾಜೇಂದ್ರ ಕರ್ತುಮರ್ಹಸಿ ॥೬೭॥**

॥ ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾಂಶೇ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಫಾಲ್ಗುಣ ಶುಕ್ಲ ಆಮಲಕ್ಯೇಕಾದಶೀ ಮಾಹಾತ್ಮ್ಯಂ ನಾಮ ಸಪ್ತಚತ್ವಾರಿಂಶೋಽಧ್ಯಾಯಸ್ಸಮಾಪ್ತಃ॥

**ಶ್ರೀ ಕೃಷ್ಣನು ಹೇಳಿದನು-** ಎಲೈ ಧರ್ಮಜನೇ! ಈ ಕಷ್ಟವಾದ ವ್ರತವನ್ನು ನೀನು ಮಾಡಲು ಯೋಗ್ಯನಾಗಿದ್ದೀಯೆ. ಮಾಡು. ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದೊಳಗಿನ ಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಫಾಲ್ಗುಣ ಶುಕ್ಲ ಆಮಲಕೀ ಏಕಾದಶಿಯ ಮಹಿಮೆ ಎಂಬ ನಲವತ್ತೇಳನೆಯ ಅಧ್ಯಾಯವು ಮುಗಿದುದು,

★ ★ ★ ★

# ॥ ಫಾಲ್ಗುಣ ॥ ಶುಕ್ಲ ॥ ದ್ವಾದಶೀ

## ನರಸಿಂಹದ್ವಾದಶೀವ್ರತ

**ದುರ್ವಾಸಮುನಿ–** ತಿಳಿದವನು, ಫಾಲ್ಗುನಮಾಸದ ಶುಕ್ಲಪಕ್ಷದ ಏಕಾದಶಿಯ ದಿನ ಹಿಂದಿನ ಹಾಗೆಯೇ ಉಪವಾಸ ಮಾಡಿ ಶಾಸ್ತ್ರೋಕ್ತವಾಗಿ ಹರಿಯನ್ನು ಆರಾಧಿಸಬೇಕು. ನರಸಿಂಹಾಯ ನಮಃ ಎಂದು ಹರಿಯ ಪಾದಗಳನ್ನೂ, ಗೋವಿಂದಾಯ ನಮಃ ಎಂದು ತೊಡೆಗಳನ್ನೂ, ವಿಶ್ವಭುಜೇ ನಮಃ ಎಂದು ನಡುವನ್ನೂ, ಅನಿರುದ್ಧಾಯ ನಮಃ ಎಂದು ಎದೆಯನ್ನೂ, ಶಿತಿಕಂಠಾಯ ನಮಃ ಎಂದು ಕತ್ತನ್ನೂ, ಪಿಂಗಕೇಶಾಯ ನಮಃ ಎಂದು ತಲೆಯನ್ನೂ, ಅಸುರಧ್ವಂಸನಾಯ ನಮಃ ಎಂದು ಚಕ್ರವನ್ನೂ, ತೋಯಾತ್ಮನೇ ನಮಃ ಎಂದು ಶಂಖವನ್ನೂ ಅರ್ಚಿಸಿ, ಗಂಧಪುಷ್ಪಫಲಾದಿಗಳನ್ನೂ ಅರ್ಪಿಸಿ, ಆ ದೇವನ ಮುಂದುಗಡೆಯಲ್ಲಿ ಬಿಳಿಯ ವಸ್ತ್ರಗಳೆರಡರಿಂದ ಅಲಂಕೃತವಾದ ಪೂರ್ಣಕಲಶವನ್ನು ಇಡಬೇಕು. ರತ್ನಗರ್ಭವಾದ ಆ ಕಲಶದ ಮೇಲೆ ಸುವರ್ಣದ ನರಸಿಂಹಮೂರ್ತಿಯನ್ನು ಅನುಕೂಲವಿದ್ದಂತೆ ಮಾಡಿಸಿ, ತಾಮ್ರದ ಪಾತ್ರೆಯಲ್ಲಾಗಲೀ, ಮರದ ಅಥವಾ ಬಿದಿರಿನ ಪಾತ್ರೆಯಲ್ಲಾಗಲೀ ಇರುವಂತೆ ಸ್ಥಾಪಿಸಿ, ಆ ದಿನ ಚೆನ್ನಾಗಿ ಪೂಜಿಸಿ, ದ್ವಾದಶಿಯ ದಿನ ವೇದವಿದ್ವಾಂಸನಾದ ಬ್ರಾಹ್ಮಣನಿಗೆ ಅರ್ಪಿಸಬೇಕು. ಹೀಗೆ ವ್ರತವನ್ನು ಮಾಡಿ ವತ್ಸನೆಂಬ ರಾಜನು ಏನು ಫಲವನ್ನು ಪಡೆದನೋ ಅದನ್ನು ಹೇಳುವೆನು. ಕೇಳು. ಮಹಾಮುನಿಯೇ! ಕಿಂಪುರುಷವರ್ಷದಲ್ಲಿ ಭಾರತನೆಂದು ಪ್ರಸಿದ್ಧನೂ

ಪರಮಧಾರ್ಮಿಕನೂ ಆದ ದೊರೆಯಿದ್ದನು. ಅವನಿಗೆ ವತ್ಸನೆಂಬ ಮಗನುದಿಸಿದನು. ಶತ್ರುಗಳು ವತ್ಸನನ್ನು ಯುದ್ಧದಲ್ಲಿ ಸೋಲಿಸಿ, ಅವನ ಕೋಶವನ್ನೂ ಅಪಹರಿಸಿಬಿಟ್ಟರು. ವತ್ಸನು ಕಾಲುನಡಿಗೆಯಿಂದ ಪತ್ನಿಯೊಡನೆ ವಸಿಷ್ಠಾಶ್ರಮಕ್ಕೆ ಹೋಗಿ ನಿಂತನು. ಬಹುಕಾಲವಾದ ಮೇಲೆ ಮಹಾತ್ಮನಾದ ವಸಿಷ್ಠನು ವತ್ಸನನ್ನು ''ಏತಕ್ಕಾಗಿ ಈ ಮಹಾಶ್ರಮದಲ್ಲಿ ವಾಸಿಸುತ್ತಿದ್ದೀಯೆ?'' ಎಂದು ಕೇಳಿದನು. ದೊರೆ – ''ಪೂಜ್ಯನೇ! ಹಗೆಗಳು ನನ್ನ ರಾಜ್ಯಕೋಶಗಳೇ ಮೊದಲಾದದುದೆಲ್ಲವನ್ನೂ ಕಿತ್ತುಕೊಂಡರು. ಅಸಹಾಯನಾದ ನಾನು ನಿನ್ನನ್ನು ಮೊರೆಹೊಕ್ಕಿದ್ದೇನೆ. ನನಗೆ ಉಪದೇಶಮಾಡುವುದರಿಂದ ಅನುಗ್ರಹಿಸಬೇಕು'' ಎಂದು ಹೇಳಿದನು. ದುರ್ವಾಸ – ಸತ್ಯತಪನೇ! ಹೀಗೆ ಹೇಳಲ್ಪಟ್ಟ ವಸಿಷ್ಠಮುನಿಯು ಅವನಿಗೆ ಈ ನರಸಿಂಹದ್ವಾದಶೀವ್ರತವನ್ನು ಉಪದೇಶಿಸಿದನು. ವತ್ಸರಾಜನು ಎಲ್ಲವನ್ನೂ ವಿಧಿಯಂತೆ ಮಾಡಿದನು. ವ್ರತದ ಕಡೆಯಲ್ಲಿ ಭಗವಂತನಾದ ನರಸಿಂಹನು ಸಂತಸಗೊಂಡು ಒಲಿದು, ಅವನಿಗೆ ಯುದ್ಧದಲ್ಲಿ ಶತ್ರುಗಳನ್ನು ಧ್ವಂಸಮಾಡುವ ಚಕ್ರವನ್ನು ಅನುಗ್ರಹಿಸಿದನು. ಆ ರಾಜನು ಆ ಚಕ್ರಾಸ್ತ್ರದಿಂದ ತನ್ನ ರಾಜ್ಯವನ್ನು ಮತ್ತೆ ಜಯಿಸಿದನು. ರಾಜ್ಯದಲ್ಲಿದ್ದುಕೊಂಡು, ಪ್ರಭುವಾದ ಆ ವತ್ಸನು ಸಾವಿರ ಅಶ್ವಮೇಧ ಯಜ್ಞಗಳನ್ನು ಮಾಡಿದನು. ಸತ್ಪುರುಷರಲ್ಲಿ ಮೇಲಾದ ಅವನು ಕೊನೆಗೆ ವಿಷ್ಣುಲೋಕವೆಂಬ ಸ್ಥಾನವನ್ನು ಪಡೆದನು. ಸತ್ಯತಪನೇ! ಪುಣ್ಯಪ್ರದವೂ ಪಾಪಹರವೂ ಆದ ಈ ದ್ವಾದಶಿಯನ್ನು ನಿನಗೆ ಹೇಳಿದ್ದೇನೆ. ಶುದ್ಧವಾದ ಮನಸ್ಸಿನಿಂದ ಇದನ್ನು ಕೇಳಿ ನೀನು, ಹೇಗೆ ಇಷ್ಟವೋ ಹಾಗೆ ಮಾಡು.

★ ★ ★ ★

# ॥ ಫಾಲ್ಗುಣ ॥ ಶುದ್ಧ ॥ ಚತುರ್ದಶೀ ॥

## ಧೀರೇಂದ್ರತೀರ್ಥರ ಆರಾಧನೆ

ಧರಣೀಮಂಡಲೇಖ್ಯಾತಂ ಧೈರ್ಯಾದಿಗುಣ ಬೃಂಹಿತಮ್ । ಧಿಕ್ಕೃತಾಶೇಷವಾದೀಭಂ ಧೀರಸಿಂಹ ಗುರುಂ ಭಜೇ ॥ ವರದಾತೀರದಿ ಶೋಭಿಪ ಯತಿವರನ್ಯಾರೇ ನೋಡಮ್ಮಯ್ಯಾ ॥ಪ॥ ತ್ವರದಿ ಭಕುತರ ದುರಿತವ ತರಿದತಿ ತ್ವರದಿ ಪಾಲಿಪ ಶ್ರೀಧೀರೇಂದ್ರ ಕಾಣಮ್ಮ ॥ಅ.ಪ॥ ಸುಂದರ ತಮ್ಮವೃಂದಾವನ ಶುಭತರ ಮಂದಿರಗತನ್ಯಾರೇ ನೋಡಮ್ಮಯ್ಯ ನಂದದಿ ಮಹಜನಸಂದಣಿ ಮಧ್ಯದಿ ಚಂದಿರ ತೆರದಿಹನ್ಯಾರೇ ನೋಡಮ್ಮಯ್ಯ ಇಂದಿರಪತಿ – ಗುಣ – ವೃಂದವ ಭಜಿಸುತ ನಂದದಿ ಶೋಭಿಪನ್ಯಾರೇ ಪೇಳಮ್ಮಯ್ಯಾ ಅಂಧ ಬಧಿರರ ವೃಂದಗಳಿಗಿಷ್ಟವ ನಿಂದು ನೀಡುವ

ವಾದೀಂದ್ರರ ತನುಜ ॥೧॥ ಮೂಢ ಮತಿಯನು ಓಡಿಸಿ ಜನರಿಗೆ ಗಾಢಭಕುತಿಯನು ನೋಡಮ್ಮಯ್ಯ ನೀಡುವ, ಭಜಕರು ಮಾಡುವ ಸೇವೆಗೆ ನೀಡುವ ವರಗಳನ್ಯಾರೇ, ನೋಡಮ್ಮಯ್ಯ ಪಾಡುವದಾಸರು ಬೇಡುವ ಇಷ್ಟವ ನೀಡುವದಿನ್ಯಾರೇ ಪೇಳಮ್ಮಯ್ಯಾ ರೂಢಿಯೊಳಗೆ ಇಷ್ಟನೀಡುವ ವಿಷಯದಿ ಜೋಡುಗಾಣೆ ನಾ ನೋಡಮ್ಮಯ್ಯ ॥೨॥ ಭೂತಿಪೀಡೆ ಮಹ ಪ್ರೇತಪಿಶಾಚಿಯ ವ್ರಾತಗಳ ಬಲು ನೋಡಮ್ಮಯ್ಯ ಭೀತಿಬಡುತ ಮಹ ಆತುರದಲಿ ಈ ಭೂತಳ ಬಿಡುತಿಹವೋ ನೋಡಮ್ಮಯ್ಯ ಯಾತುಧಾನಗಣ ಈತನ ನಾಮದ ಭೀತಿಗೆ ಪೋಗುತಿಹುದು ನೋಡಮ್ಮಯ್ಯ ತಾತನ ತೆರದಲಿ ಈತನು ನಿಜಪದ ದೂತರ ಪೊರೆವನು ನೋಡಮ್ಮಯ್ಯ ದಾತಗುರು ಜಗನ್ನಾಥ ವಿಠಲಗೆ ಪ್ರೀತ ಜನರೊಳತಿ ಪ್ರೀತನೀತಮ್ಮಾ ॥೩॥

# ॥ ಫಾಲ್ಗುಣ ॥ ಶುದ್ಧ ॥ ಹುಣ್ಣಿಮೆ ॥

## ಹೋಳಿ ಹುಣ್ಣಿಮೆ

ಇಂದು ಹೋಳಿಗೆಯನ್ನು ಮಾಡಿ ಮನ್ಮಥನನ್ನು ಸಮರ್ಪಿಸಿ, ಹೋಳಿ ಹುಣ್ಣಿಮೆಯನ್ನು ಆಚರಿಸಬೇಕು.

ತಾರಕಾಸುರನಿಂದ ಪೀಡಿತರಾದ ದೇವತೆಗಳು ಮದನನ್ನು ಪ್ರಾರ್ಥಿಸಿಕೊಂಡು ಸಮಾಧಿಸ್ಥನಾದ ಶಿವನನ್ನು ಎಬ್ಬಿಸಿ ಘೋರತಪಸ್ಸಾಧನೆಯಲ್ಲಿ ತೊಡಗಿದ್ದ ಪಾರ್ವತಿಯ ಕಲ್ಯಾಣ ಮಹೋತ್ಸವಕ್ಕೆ ಸಹಾಯಕನಾಗಲು ಕಳುಹಿಸಿಕೊಟ್ಟರೆಂದೂ ಆಗ ಕಾಮದೇವ ವಸಂತನನ್ನು ಮುಂದಿಟ್ಟುಕೊಂಡು ಕೋಗಿಲೆಯ ಕಲಕಂಠದಿಂದ ಕೇಕೆ ಹಾಕುತ್ತ ಪುಷ್ಪಬಾಣನಾಗಿ ಮೂರುವರೆ ಘಳಿಗೆಯಲ್ಲಿ ಮೂರು ಲೋಕವನ್ನೂ ಗೆದ್ದು ಸಕಲರ ಮನಸ್ಸಿನಲ್ಲೂ ಕಾಮ ಪ್ರಚೋದನೆಯನ್ನು ಉಂಟು ಮಾಡಿ ಮನ್ಮಥನಾದನೆಂದೂ ಹೇಳಲಾಗಿದೆ.

ದೇವತೆಗಳ ಒಂದು ಘಟಿ, ಮಾನವ ಮಾನದಂತೆ ಒಂದು ದಿನವಾಗುವುದರಿಂದ ದ್ವಾದಶಿಯಿಂದ ಮೊದಲ್ಗೊಂಡು ಹುಣ್ಣಿಮೆವರೆಗೆ ಈ ಹಬ್ಬವನ್ನು ಆಚರಿಸಲಾಗುವುದು. ಕಾಮನನ್ನು ಸುಂದರವಾದ ರತ್ನಾಭರಣಗಳಿಂದ ಅಲಂಕೃತವಾದ ಪ್ರತಿಮೆಯಲ್ಲಿ ಆವಾಹನ ಮಾಡುತ್ತಾರೆ. ಕಾಮನ ಚಪ್ಪರದಲ್ಲಿ ನೃತ್ಯಗೀತಾದಿಗಳೂ ನಡೆಯುತ್ತವೆ.

ಹುಣ್ಣಿಮೆಯ ದಿನ ದಿಗ್ವಿಜಯೋತ್ಸವ ಸಂಕೇತವಾಗಿ ರಂಗಿನ ಓಕಳಿಯನ್ನಾಡುತ್ತಾರೆ. ಕಾಮದೇವನ ಈ ಎಲ್ಲ ಉಪಟಳದಿಂದಲೂ ಪುಷ್ಪ ಬಾಣ ಪ್ರಯೋಗದಿಂದಲೂ ವಿಚಲಿತನಾಗಿ ಮಹಾದೇವ ಮೂರನೆಯ ಕಣ್ತೆರೆದು ನೋಡಿದಾಗ ಕಾಮದೇವ ಸುಟ್ಟು

ಬೂದಿಯಾದನಾದ್ದರಿಂದ ಮೆರವಣಿಗೆಯ ಅನಂತರ ಕಾಮನನ್ನು ದಹಿಸುವುದು ರೂಢಿಗೆ ಬಂದಿದೆ. ಆಗ ರತಿ ಬಂದು ಶೋಕಾರ್ತಳಾಗಿ ಶಿವನನ್ನು ಪ್ರಾರ್ಥಿಸಿದ್ದರಿಂದಲೂ ದೇವತೆಗಳು ಬಂದು ಕ್ಷಮಾಯಾಚನೆ ಮಾಡಿ ತಮ್ಮ ಪ್ರಾರ್ಥನೆಯನ್ನು ಸಲ್ಲಿಸಿದ್ದರಿಂದಲೂ ಆಶುತೋಷನಾದ ಶಿವ ಸಂತೃಪ್ತಿಯಿಂದ ಕಾಮನನ್ನು ಬದುಕಿಸಿದನಲ್ಲದೆ ರತಿಗೆ ಶಾಶ್ವತ ಸೌಭಾಗ್ಯವನ್ನು ಕರುಣಿಸಿದ. ಅಂದಿನಿಂದ ಕಾಮ ಅನಂಗನಾದ. ಆ ನೆನಪಿಗಾಗಿ ಜನ ಆನಂದದಿಂದ ಒಬ್ಬರನ್ನೊಬ್ಬರು ಆಲಂಗಿಸಿಕೊಂಡು ನಕ್ಕುನಲಿಯುತ್ತಾರೆ. ಈ ಹಬ್ಬಕ್ಕೆ ಮದನೋತ್ಸವವೆಂದೂ ಹೆಸರು.

# ಕಾಮದೇವ

## ಇತಿಹಾಸ-ರಾಮಾಯಣ-ಪುರಾಣಗಳ ಆಧಾರದಲ್ಲಿ ಮನ್ಮಥನ ಬಗ್ಗೆ ಒಂದು ಪಕ್ಷಿನೋಟ

ಕಾಮದೇವ ಸಾಮಾನ್ಯದೇವತೆಯಲ್ಲ. ದೇವೇಂದ್ರನ ಶಕ್ತಿಸಾಮರ್ಥ್ಯಗಳಿಗೆ ಸರಿಸಾಟಿಯಾದ ಒಬ್ಬ ಉತ್ತಮ ಮನೋಭಿಮಾನಿಯಾದ ದೇವತೆ. ಶ್ರೀಹರಿಯ ಮನಸ್ಸಿನಿಂದ ಹುಟ್ಟಿದ ಇವನು ಮನಸಿಜ ಎಂದೇ ಪ್ರಸಿದ್ಧನಾದವನು. ಯಾವ ಸುದರ್ಶನ ಚಕ್ರವು ಶ್ರೀಹರಿಯ ಕೈಯಲ್ಲಿಮಾತ್ರ ಇರಲು ಸಾಧ್ಯವೋ, ಯಾವ ಸುದರ್ಶನ ಚಕ್ರದಿಂದ ಯಮದೇವರೇ ಮೊದಲಾದವರೂ ಕೂಡ ಭಯಭೀತರಾಗುತ್ತಾರೋ, ಅಂಥ ಸುದರ್ಶನ ಚಕ್ರಕ್ಕೆ ಅಭಿಮಾನಿಯಾದ ಮೃತ್ಯುವಿಗೂ ಮೃತ್ಯುವೆನಿಸಿದ ಅದ್ಭುತ ಪರಾಕ್ರಮಶಾಲಿಯಾದವನೇ ಕಾಮದೇವ. 'ಯಮಃ ಕಾಲೋ ಮನುಷ್ಯಾಣಾಂ ತಸ್ಯ ಕಾಲಃ ಸುದರ್ಶನಃ'

ಎಲ್ಲ ಮನುಷ್ಯರಿಗೆ ಯಮದೇವರು ಮೃತ್ಯು ಎನಿಸಿದರೆ, ಆ ಯಮನಿಗೂ ಕೂಡ ಸುದರ್ಶನಚಕ್ರಕ್ಕೆ ಅಭಿಮಾನಿಯಾದ ಕಾಮದೇವನು ಮೃತ್ಯು ಎನಿಸಿರುವನು. ಭಗವಂತನ ಆದೇಶವನ್ನು ಹೊಂದಿದ ಪ್ರದ್ಯುಮ್ನ ಎಂಬುದು ಇವನ ಮತ್ತೊಂದು ರೂಪ.

ಅರವಿಂದ, ಅಶೋಕ, ಸೂತ, ನವಮಲ್ಲಿಕಾ, ನಿಲೋತ್ಪಲ ಎಂಬ ಐದು ಹೂವಿನ ಬಾಣಗಳಿಂದ ಸ್ತ್ರೀಪುರುಷರ ಮೇಲೆ ಮನ್ಮಥನು ಬಾಣಗಳನ್ನು ಹೂಡುವ ಮೂಲಕ ಬೇರ್ಪಟ್ಟ ಹೃದಯಗಳನ್ನು ಒಗ್ಗೂಡಿಸುವುದು ಇವನ ಪ್ರಧಾನ ಕಾರ್ಯ. ಇದಕ್ಕೂ ಬಗ್ಗದವರಿಗೆ, ಹರ್ಷಣ, ರೋಚನ, ಮೋಹನ, ಶೋಷಣ, ಮಾರಣವೆಂಬ ಐದು ಭಯಂಕರ ಅಸ್ತ್ರಗಳನ್ನೂ ಕೂಡ ಪ್ರಯೋಗಿಸುವನು. ಈ ಮನ್ಮಥನಿಗೆ ವಸಂತ ಮಾಸದ ಅಭಿಮಾನಿಯಾದ ವಸಂತನು ಮಂತ್ರಿಯಾಗಿರುವನು. ಶೃಂಗಾರ ರಸಕ್ಕೆ ಅಭಿಮಾನಿಯಾದವನು ಸೇನಾನಾಯಕನಾಗಿರುವನು. ನಲ್ವತ್ತೊಂಬತ್ತು ಬಗೆಯ

ಶೃಂಗಾರದ ಭಾವಗಳೇ ಸೈನಿಕರಾಗಿರುವರು. ಮಲಯಾಚಲದ ತಂಪಾದ ಗಾಳಿ, ಕೋಗಿಲೆಯ ಇಂಪಾದ ಧ್ವನಿ, ಮನಸ್ಸನ್ನು ಕುಲುಕುವ ದುಂಬಿಯ ಝೇಂಕಾರ ಇವುಗಳ ಅಭಿಮಾನಿಗಳು ಈ ಮನ್ಮಥನ ಪರಿವಾರದವರು. ಇವನು ಧರಿಸಿದ ಬಿಲ್ಲು, ಕಬ್ಬಿನದ್ದು, ಈ ಬಿಲ್ಲಿಗೆ ದುಂಬಿಗಳ ಹೆಗಲೇರಿಸಿ ಅರವಿಂದ ಮೊದಲಾದ ಹೂ ಬಾಣಗಳನ್ನು ಬಿಟ್ಟರೆ ಎಂಥ ಬೇರ್ಪಟ್ಟ ಹೃದಯಗಳೂ ಕೂಡ ಒಂದಾಗಿ ಬೆಸೆದು ಹೋಗುತ್ತದೆ. ವಜ್ರಾಯುಧದ ಪೆಟ್ಟನ್ನೂ ಲೆಕ್ಕಿಸದ ತಪಸ್ವಿಗಳು ಮನ್ಮಥನ ಹೂಬಾಣಗಳಿಗೆ ಭಯಂಕರ ಹೆದರುತ್ತಾರೆ. ಕೆಲವೊಮ್ಮೆ ಸೋತು ನಿರ್ವೀರ್ಯರಾಗುತ್ತಾರೆ. ಹೀಗೆ ತಪಸ್ವಿಗಳಿಗೂ ಕೂಡ ಗೆಲ್ಲಲು ಸಾಧ್ಯವಾಗದ ಕಾಮದೇವನ ಪ್ರತಾಪವನ್ನು ವರ್ಣಿಸಲು ಯಾರಿಂದ ಸಾಧ್ಯ ?

ಅರವತ್ನಾಕು ಕಲೆಗಳಿಂದ ಕೂಡಿದ ದಕ್ಷನ ಕುವರಿಯಾದ ರತೀದೇವಿಯೇ ಇವನ ಪಟ್ಟದ ರಾಣಿ. ಈ ರತೀದೇವಿಯ ಸಹೋದರಿಯೇ ಸತೀದೇವಿ. ಸತೀದೇವಿಯು ಪಾರ್ವತಿಯಾಗಿ ಹಿಮವಂತನ ಮಗಳಾಗಿ ಅವತರಿಸಿದಾಗ, ಅವಳು ರುದ್ರದೇವರ ಕೈ ಹಿಡಿಯಬೇಕೆಂಬ ವಿಷಯದಲ್ಲಿ ಮಹಾ ಪ್ರಯತ್ನ ಪಟ್ಟು ಆತ್ಮಾರ್ಪಣೆಯನ್ನೇ ಮಾಡಿಕೊಂಡವನೇ ಮನ್ಮಥ. ರುದ್ರದೇವರ ಘೋರವಾದ ತಪಸ್ಸನ್ನು ಭಂಗಗೊಳಿಸಲು ಪ್ರಯತ್ನ ಪಟ್ಟು ಪಾರ್ವತಿಯ ಮೇಲೆ ಅನುರಾಗವನ್ನು ಉಂಟು ಮಾಡಿ, ರುದ್ರದೇವರ ಮೂರನೆಯ ಕಣ್ಣಿನ ಸಿಟ್ಟಿನ ದೃಷ್ಟಿಗೆ ಬಿದ್ದು ಭಸ್ಮೀಭೂತನಾದನು. ಉಳಿದೆಲ್ಲಾ ದೇವತೆಗಳ ತಪಸ್ಸನ್ನು ಭಂಗ ಮಾಡಲು ಸಾಮರ್ಥ್ಯವಿರುವ ಮನ್ಮಥನಿಗೆ ರುದ್ರದೇವರ ತಪಸ್ಸನ್ನು ಭಂಗಗೊಳಿಸಲು ಸಾಧ್ಯವಾಗಲಿಲ್ಲ. –'ಸ್ಮರೋ ನಿಯಮಘಸ್ಮರೋ ನಿಯಮಿನಾಮಭೂದ್ ಭಸ್ಮಸಾತ್।'. ಮನ್ಮಥನು ಹಿಂದೊಮ್ಮೆ ಬ್ರಹ್ಮದೇವರು ವಾಗ್ದೇವತೆಯ ವಿಷಯದಲ್ಲಿ ಮೋಹಗೊಳ್ಳುವಂತೆ ಪ್ರಯತ್ನಪಟ್ಟಿದ್ದ. ಆಗ ಬ್ರಹ್ಮದೇವರು ಇವನ ಅಪರಾಧಕ್ಕೆ ಶಾಪವನ್ನು ನೀಡಿದ್ದರು. ಅದರ ಫಲವಾಗಿ ರುದ್ರನ ಕೆಂಗೆಣ್ಣಿಗೆ ಪಾತ್ರನಾಗಿ ಈಗ ಭಸ್ಮನಾದನು.

ರುದ್ರದೇವರು ಮನ್ಮಥನನ್ನು ಭಸ್ಮ ಮಾಡಿದ್ದು, ಯಾವ ನ್ಯಾಯ ? ಮನ್ಮಥನು ತನ್ನ ಕರ್ತವ್ಯದಲ್ಲಿ ತೊಡಗಿದ್ದಕ್ಕೆ ಇಷ್ಟೊಂದು ಶಿಕ್ಷೆಯೇಕೆ? ಎಂಬ ಪ್ರಶ್ನೆಗೆ ಶ್ರೀ ವಾದಿರಾಜತೀರ್ಥಗುರುಸಾರ್ವಭೌಮರು ರುಗ್ಮಿಣೀಶವಿಜಯದಲ್ಲಿ ಉತ್ತರಿಸಿದ್ದಾರೆ – **'ಭಸ್ಮೀಭೂತಮಿವಾರಚಯ್ಯ ಗಿರಿಶೋ ಯಂ ಬಾಹ್ಯದೃಷ್ಟ್ಯಾ ಪುನಃ । ಚಿತ್ತಾಂತಸ್ಥಿಮೂರ್ಪಯದ್ ಗಿರಿಸುತಾಗರ್ಭೇ ಹ್ಯನೇಕಾನನಂ ॥'** ರುದ್ರದೇವರು ಮನ್ಮಥನನ್ನು ಉರಿಗಣ್ಣಿನಿಂದ ನೋಡಿ, ಭಸ್ಮ ಮಾಡಿದರು. ಇದು ಬಾಹ್ಯದೃಷ್ಟಿಯಿಂದಷ್ಟೇ ತಿಳಿಯುವ ವಿಚಾರ. ಆದರೆ ಭಸ್ಮೀಭೂತನಾದ ಆ ಮನ್ಮಥನನ್ನು ತಮ್ಮ ಹೃದಯದಲ್ಲೇ

ಕರೆದುಕೊಂಡು ಇಟ್ಟುಕೊಂಡರು. ಒಂದು ಮುಖದಿಂದ ಜಗತ್ತನ್ನು ಸೂರೆಗೊಳ್ಳುತ್ತಿದ್ದ ಮನ್ಮಥನನ್ನು ಅನೇಕ ಮುಖಗಳಿಂದ ಪಾರ್ವತಿಯ ಗರ್ಭದಲ್ಲಿಟ್ಟು ಷಣ್ಮುಖನಾಗಿ ಅವತರಿಸುವಂತೆ ಮಾಡಿದನು.

ಮನ್ಮಥನ ಸಾಧನೆ ಅತ್ಯದ್ಭುತವಾದದ್ದು. ದಂಪತಿಗಳನ್ನು ಜತೆ ಸೇರಿಸಿ, ಸುಖಸಮೃದ್ಧಿಗಳನ್ನು ನೀಡುವವನು. ಪುತ್ರ-ಪೌತ್ರಾದಿ ಸಂತತಿಗಳನ್ನು ಅಭಿವೃದ್ಧಿ ಪಡಿಸುವನು. ಇವನ ಅನುಗ್ರಹದಿಂದಲೇ ಸಂಸಾರದಲ್ಲಿ ಸ್ವಲ್ಪವಾದರೂ ನೆಮ್ಮದಿಯನ್ನು ಅನುಭವಿಸುವರು. ಜಗತ್ತಿನ ಚಕ್ರ ತಿರುಗಲು, ಇವನ ಪಾತ್ರ ಪ್ರಧಾನವಾಗಿದೆ. ಉತ್ತಮ ಶೀಲವುಳ್ಳವನು ಈ ಮನ್ಮಥ. ಇದನ್ನು ಭಾಗವತವೇ ಹೇಳುತ್ತದೆ - 'ಕ್ವಚಿತ್ತದಪ್ಯಸ್ತಿ ನ ವೇದ್ಯಮಾಯುಷಃ' ಶೀಲ ಇವನಲ್ಲಿದ್ದರೂ ಆಯುಷ್ಯ ಇವನಿಗಿಲ್ಲ ಎಂದು.

## ದುಷ್ಟ ಕಾಮನೆಗಳು ಹುಟ್ಟುವುದು ಮನ್ಮಥನಿಂದಲ್ಲ

ಯೋಗ್ಯರೀತಿಯಲ್ಲಿ ವಿವಾಹವಾದ ಪತಿ-ಪತ್ನಿಯರು ಅನುರಾಗದಿಂದ ಜೀವನ ನಡೆಸಲು ಮನ್ಮಥನೇ ಪ್ರಧಾನ ಪಾತ್ರ ವಹಿಸುವನು. ಪತಿಗೆ ಪತ್ನಿಯಲ್ಲಿ, ಪತ್ನಿಗೆ ಪತಿಯಲ್ಲಿ ನಿರಂತರ ಅನುರಾಗವು ಅಭಿವೃದ್ಧಿಯಾಗಬೇಕು. ಯಾವ ಕ್ಷಣದಲ್ಲೂ ಅನುರಾಗವನ್ನು ಅವರು ಕಳೆದುಕೊಳ್ಳಬಾರದು. ಸಾಮರಸ್ಯವು ನಾಶವಾಗಬಾರದು ಎಂಬ ಉದ್ದೇಶವಿದ್ದವರು ಕಾಮದೇವನನ್ನು ಆರಾಧನೆ ಮಾಡಬೇಕು. ಇವನ ಅನುಗ್ರಹವನ್ನು ಸಂಪಾದನೆ ಮಾಡಿದರೆ, ಆ ಮನ್ಮಥನು ವಸಂತ ಮೊದಲಾದ ಮಂತ್ರಿಗಳ ಮೂಲಕ, ಶೃಂಗಾರ ಮೊದಲಾದ ಸೇನಾ ನಾಯಕರ ಮೂಲಕ, ಶೃಂಗಾರ ಭಾವಗಳೆಂಬ ಸೈನಿಕರಿಂದ ಇಂಚರಾದಿಗಳ ಪರಿವಾರದಿಂದ ಕೂಡಿ, ಅರವಿಂದ ಮೊದಲಾದ ಹೂ ಬಾಣಗಳನ್ನು ಪ್ರಯೋಗಿಸುತ್ತಾ, ಪತಿ-ಪತ್ನಿಯರ ಎರಡು ಹೃದಯಗಳನ್ನು ಒಂದು ಮಾಡಿಸುತ್ತಾನೆ. ಒಂದು ವೇಳೆ ಪತಿಯು ಪತ್ನಿಯಲ್ಲಿ ಅನುರಾಗವನ್ನು ಹೊಂದದೇ, ಅನ್ಯಸ್ತ್ರೀಯರಲ್ಲಿ ಅನುರಾಗವನ್ನು ಹೊಂದಿದರೆ ಪತ್ನಿಯಾದವಳು ಪತಿಯ ವಿಷಯದಲ್ಲಿ ಅನುರಾಗವನ್ನು ಹೊಂದದೆ, ಪರಪುರುಷನ ವಿಷಯದಲ್ಲಿ ಅನುರಾಗವನ್ನು ಹೊಂದಿದರೆ ಸುಬ್ರಹ್ಮಣ್ಯನ ಅನುಗ್ರಹ ತಪ್ಪಿದೆ ಎಂದೇ ಅರ್ಥ. ದುಷ್ಟಕಾಮನೆಗಳನ್ನು ಮನ್ಮಥನು ಎಂದೂ ಮೂಡಿಸುವುದಿಲ್ಲ. ದುಷ್ಟಕಾಮನೆಗಳನ್ನು ಮೂಡಿಸುವುದಕ್ಕೆ ಕೀಚಕನು ಅಭಿಮಾನಿಯಾಗಿದ್ದಾನೆ. ಈ ಕೀಚಕನು ಸತ್ಕಾಮನೆಗಳನ್ನು ನಾಶ ಮಾಡಿ, ದುಷ್ಟಕಾಮನೆಗಳನ್ನು ಹುಟ್ಟಿಸುವ ಮೂಲಕ ಪತಿ-ಪತ್ನಿಯರಲ್ಲಿರುವ ಸಾಮರಸ್ಯವನ್ನು ನಾಶಮಾಡಿ, ಅವರ ಸಾಧನೆಯನ್ನು ಹಾಳು ಮಾಡಲು ನಿರಂತರ ಪ್ರಯತ್ನ ಪಡುತ್ತಿರುತ್ತಾನೆ. ಆದ್ದರಿಂದ ಪರಪುರುಷನಲ್ಲಿ ಅಥವಾ ಪರಸ್ತ್ರೀಯಲ್ಲಿ ಅನುರಾಗ ಉಂಟಾದಾಗ ಇದನ್ನು ಮನ್ಮಥನ ಅನುಗ್ರಹವೆಂದು ಸರ್ವಥಾ ತಿಳಿಯಬಾರದು.

ಇದರಂತೆ ವಿವಾಹವಾಗದ ಸ್ತ್ರೀಯರು ಅಥವಾ ಪುರುಷರು ಹೆಚ್ಚಾಗಿ ಅನರ್ಥಕಾರ್ಯಗಳನ್ನು ಮಾಡಲು ಮುಂದಾದಾಗ ಕೀಚಕನೇ ನಿಂತು ಅಲ್ಲಿ ವ್ಯಾಪಾರಗಳನ್ನು ಮಾಡುತ್ತಾನೆ. ಮನ್ಮಥನು ಅಂಥ ವ್ಯಾಪಾರಗಳಲ್ಲಿ ತೊಡಗುವುದಿಲ್ಲ ಎಂದು ತಿಳಿಯಬೇಕು.

## ಕೃಷ್ಣನ ಮಗನಾಗಿ ಅವತರಿಸಿದ ಮಹಾಪುರುಷ

ಒಮ್ಮೆ ಕೃಷ್ಣನು ಕೈಲಾಸಯಾತ್ರೆಯನ್ನು ಕೈಗೊಂಡನು. ಆಗ ಶಿವನು ಶ್ರೀಕೃಷ್ಣನಿಗೆ ಪುತ್ರವರವನ್ನು ನೀಡಿದನು. ಮನ್ಮಥನಿಗೆ ಪ್ರದ್ಯುಮ್ನರೂಪದಿಂದ ಅವತರಿಸುವಂತೆ ಅನುಗ್ರಹಿಸಿದನು. ಶಿವವರಬಲದಿಂದ ಮನ್ಮಥನು ಪ್ರದ್ಯುಮ್ನನಾಗಿ ಶ್ರೀಕೃಷ್ಣಪರಮಾತ್ಮನಿಂದು ರುಗ್ಮಿಣಿಯಲ್ಲಿ ಅವತಾರ ಮಾಡಿದನು. ಅಪ್ರತಿಮವಾದ ಯುದ್ಧವೀರರೆಂದು ಪ್ರಸಿದ್ಧನಾದನು. ಶ್ರೀಕೃಷ್ಣನ ಪ್ರತಿಬಿಂಬದಂತೆ ರೂಪಲಾವಣ್ಯಭರಿತನಾಗದ್ದನು. ಶ್ರೀಕೃಷ್ಣನ ಮಗನಾಗಿ ಅವತರಿಸಿದ ಇವನ ಮಹಾಮಹಿಮೆಗಿಂತ ಬೇರೆನಿನ್ನೇನು ಹೇಳಲು ಸಾಧ್ಯ. ಶ್ರೀಕೃಷ್ಣನ ಲಕ್ಷಾಂತರಪುತ್ರರಲ್ಲಿ ಪ್ರದ್ಯುಮ್ನನು ಬಹಳ ಗುಣಾಧಿಕನಾಗಿದ್ದನು. ಶ್ರೀಮಧ್ವಾಚಾರ್ಯರೇ ಪ್ರಶಂಸೆ ಮಾಡಿದ್ದಾರೆ- 'ಪ್ರದ್ಯುಮ್ನಾಸಾಂಬಾವಪಿ ಭಾನುಚಾರುದೇಷ್ಣೌ ಚ ತೇಷಾಂ ನಿತರಾಂ ಗುಣಾಧಿಕಾಃ'

## ಮನ್ಮಥನೇ ಷಣ್ಮುಖ

ಇಂದ್ರದೇವರ ಸಮಾನ ಕಕ್ಷ್ಯೆಯಲ್ಲಿ ಬರುವ ಮನ್ಮಥನೇ ಷಣ್ಮುಖನಾಗಿ ರುದ್ರದೇವರಿಂದ ಜನಿಸಿದನು. ಇವನನ್ನು ಸುಬ್ರಹ್ಮಣ್ಯ ಎಂದೂ ಕೂಡ ಕರೆಯುತ್ತಾರೆ. ಬ್ರಹ್ಮದೇವರ ಶಾಪದಿಂದ ಈ ಸುಬ್ರಹ್ಮಣ್ಯನು ಹಾವಿನ ದೇಹವನ್ನು ಪಡೆಯುತ್ತಾನೆ. ಆಗ ತಾಯಿಯಾದ ಪಾರ್ವತಿಯು ಷಷ್ಠೀ ವ್ರತವನ್ನು ಆಚರಣೆ ಮಾಡಿ, ತನ್ನ ಮಗನನ್ನು ಶಾಪಮುಕ್ತನನ್ನಾಗಿ ಮಾಡುತ್ತಾಳೆ. ಅಂದಿನಿಂದ ಶಾಪಮುಕ್ತನಾದ ಆ ದಿವಸ ಸುಬ್ರಹ್ಮಣ್ಯನಿಗೆ ಅತ್ಯಂತ ಇಷ್ಟವಾದ ದಿವಸವಾಗುತ್ತದೆ. ಇಂದಿಗೂ ಕೂಡ ಸುಬ್ರಹ್ಮಣ್ಯಷಷ್ಠಿಯ ಆಚರಣೆಯನ್ನು ಎಲ್ಲೆಡೆಯೂ ವ್ಯಾಪಕವಾಗಿ ಆಚರಿಸಲಾಗುತ್ತದೆ. ವಟುಗಳಲ್ಲಿ ಸುಬ್ರಹ್ಮಣ್ಯನನ್ನು ಆವಾಹನೆ ಮಾಡಿ, ಪೂಜಿಸುವುದರಿಂದ ಮಕ್ಕಳಾಗದ ದಂಪತಿಗಳಿಗೆ ಮನ್ಮಥನ ಅನುಗ್ರಹದಿಂದ ಮಕ್ಕಳಾಗುತ್ತದೆ. ಸಾಮರಸ್ಯ ಹೊಂದದ ದಂಪತಿಗಳಲ್ಲಿ ಸಾಮರಸ್ಯ ಮೂಡುತ್ತದೆ. ಅದಕ್ಕಾಗಿ ಪ್ರತಿಯೊಬ್ಬ ಗೃಹಸ್ಥನು ಸುಬ್ರಹ್ಮಣ್ಯಷಷ್ಠಿಯನ್ನು ಆಚರಿಸಲೇ ಬೇಕು.

ಜಾತಕದಲ್ಲಿ ಸರ್ಪದೋಷವಿದ್ದಾಗ ಸರ್ಪಾರಾಧನೆಯನ್ನು ಮಾಡಬೇಕು ಅಥವಾ ಸರ್ಪದೋಷವನ್ನು ಪರಿಹಾರ ಮಾಡುವುದಕ್ಕೆ ಸುಬ್ರಹ್ಮಣ್ಯನ ಆರಾಧನೆಯನ್ನೂ ಕೂಡ

ಮಾಡಬೇಕೆಂದು ಜೋಯಿಸರು ಹೇಳುತ್ತಾರೆ. ಸಂತಾನವನ್ನು ನೀಡುವ ಸುಬ್ರಹ್ಮಣ್ಯನ ಆಯುಧವೇ ಸರ್ಪವಾಗಿವೆ. ಆದ್ದರಿಂದ ನಮಗಿರುವ ಸರ್ಪದೋಷವನ್ನು ಆ ಸುಬ್ರಹ್ಮಣ್ಯನು ಪರಿಹರಿಸಿ, ಸಂತಾನವನ್ನು ನೀಡಿ, ಅನುಗ್ರಹಿಸುತ್ತಾನೆ. ಕುಮಾರತಂತ್ರ ಎಂಬ ಗ್ರಂಥವು ಸುಬ್ರಹ್ಮಣ್ಯನ ಆರಾಧನೆಯನ್ನು ಹೇಗೆ ಮಾಡಬೇಕೆಂದು ವಿವರವಾಗಿ ತಿಳಿಸಿದೆ.

## ಸುಬ್ರಹ್ಮಣ್ಯನನ್ನು ಸರ್ಪವೆಂದು ತಿಳಿಯಬಾರದು

ಮೇಲೆ ಹೇಳಿದಂತೆ ಸಂತಾನಪ್ರದವಾದ ರೂಪದಲ್ಲಿ ಸುಬ್ರಹ್ಮಣ್ಯನು ಸರ್ಪವನ್ನು ಹಿಡಿದುಕೊಂಡಿದ್ದಾನೆ. ಮತ್ತು ಸುಬ್ರಹ್ಮಣ್ಯ ಕ್ಷೇತ್ರದಲ್ಲಿ ನೆಲಸಿದ ವಾಸುಕಿಯಲ್ಲಿ ನಿತ್ಯ ಸನ್ನಿಹಿತನಾಗಿದ್ದಾನೆ. ಸುಬ್ರಹ್ಮಣ್ಯನನ್ನೇ ಸರ್ಪವೆಂದು ತಿಳಿಯಬಾರದು. ಶಾಪನಿಮಿತ್ತವಾಗಿ ಸ್ವಲ್ಪ ಸಮಯ ಮಾತ್ರ ಅವನಿಗೆ ಸರ್ಪಜನ್ಮವು ಬಂದಿತ್ತು. ವಾಸುಕಿಯಲ್ಲಿ ವಿಶೇಷರೀತಿಯಲ್ಲಿ ಸನ್ನಿಹಿತನಾಗಿ ನೆಲಸಿರುವ ಕಾರಣದಿಂದಲೇ ಆ ಕ್ಷೇತ್ರವು ಇಂದು ಸುಬ್ರಹ್ಮಣ್ಯ ಎಂದು ಪ್ರಸಿದ್ಧಿಯಾಗಿದೆ. ಇಲ್ಲಿರುವ ಸುಬ್ರಹ್ಮಣ್ಯನನ್ನು ಆರಾಧನೆ ಮಾಡುವುದರಿಂದ ಸರ್ಪದೋಷಗಳೆಲ್ಲವೂ ಪರಿಹಾರವಾಗುತ್ತದೆ. ಮತ್ತು ಸುಬ್ರಹ್ಮಣ್ಯನ ಅನುಗ್ರಹದಿಂದ ಸಂತಾನವೂ ಕೂಡ ಪ್ರಾಪ್ತವಾಗುತ್ತದೆ. ಆದರೆ ಇಲ್ಲಿ ವಾಸುಕಿಯನ್ನೇ ಸುಬ್ರಹ್ಮಣ್ಯನೆಂದು ಕೆಲವರು ತಿಳಿದು ಬಿಡುತ್ತಾರೆ. ಇದು ತಪ್ಪು. ಸುಬ್ರಹ್ಮಣ್ಯನು ಸರ್ಪವೂ ಅಲ್ಲ, ನಾಗವೂ ಅಲ್ಲ, ವಾಸುಕಿಯೂ ಅಲ್ಲ. ಇವೆಲ್ಲವನ್ನೂ ಮೀರಿದ ಉತ್ತಮ ದೇವತೆ. ಪ್ರತಿಯೊಬ್ಬ ದೇವತೆಗಳಿಗೂ, ಸರ್ಪಗಳಿಗೂ, ನಾಗಗಳಿಗೂ ಆಶ್ರಯವನ್ನು ನೀಡಿದ ಮನೋಭಿಮಾನಿಯಾದ ಅತ್ಯುತ್ತಮ ದೇವತೆಯೇ ಸುಬ್ರಹ್ಮಣ್ಯ.

## ಸುಬ್ರಹ್ಮಣ್ಯ ಹಾಗೂ ಮನ್ಮಥನ ಆರಾಧನೆ

ವರ್ಷದಲ್ಲಿ ಎರಡು ಬಾರಿ ಮನ್ಮಥನ ಆರಾಧನೆಯನ್ನು ಮಾಡಬೇಕು.

೧)ಸುಬ್ರಹ್ಮಣ್ಯಷಷ್ಠೀ, ೨)ಹೋಳಿಹಬ್ಬ. ಮಾಘಮಾಸದಲ್ಲಿಸುಬ್ರಹ್ಮಣ್ಯಷಷ್ಠಿಯನ್ನು ಹಿಂದೆ ಹೇಳಿದಂತೆ ಆಚರಣೆ ಮಾಡಲೇ ಬೇಕು. ಎಂಟು ವಟುಗಳನ್ನು ಕರೆಸಿ, ಎಂಟು ನಾಗಗಳನ್ನು ಆವಾಹನೆ ಮಾಡಿ, ತದಂತರ್ಯಾಮಿಯಾದ ಸುಬ್ರಹ್ಮಣ್ಯನು ಪ್ರೀತನಾಗಲಿ ಎಂದು ಭಾವಿಸಬೇಕು. ಮತ್ತೊಮ್ಮೆ ಹೋಳಿಹಬ್ಬವನ್ನು ಫಾಲ್ಗುಣ ಮಾಸದ ಹುಣ್ಣಿಮೆಯಂದು ಆಚರಣೆ ಮಾಡಬೇಕು. ಕಾಠಕಗೃಹ್ಯಸೂತ್ರದಲ್ಲಿ 'ರಾಕಾ ಹೋಲಾಕೇ' ಎಂದು ಹೇಳಲಾಗಿದೆ. ಈ ಗೃಹ್ಯಸೂತ್ರಕ್ಕೆ ವ್ಯಾಖ್ಯಾನ ಮಾಡುವ ದೇವಪಾಲನು ಸ್ತ್ರೀಯರು ತನ್ನ ಸೌಭಾಗ್ಯಕ್ಕಾಗಿ ಆಚರಿಸಲ್ಪಡುವ ಕರ್ಮವಿಶೇಷವೇ ಹೋಲಾ ಎಂದು ಕರೆಸಿಕೊಳ್ಳುತ್ತದೆ. ಇದಕ್ಕೆ ಪೂರ್ಣಚಂದ್ರನು ದೇವತೆಯಾಗಿದ್ದಾನೆ. ಆದ್ದರಿಂದ ರಾಕಾ

ಎಂದು ಕರೆಯಲಾಗಿದೆ. ವಾತ್ಸ್ಯಾಯನನು ಕಾಮಸೂತ್ರದಲ್ಲಿ ಹೀಗೆ ಹೇಳಿದ್ದಾನೆ - **'ಯಕ್ಷರಾತ್ರಿಃ ಕೌಮುದೀಜಾಗರಃ, ಸುವಸಂತಕಃ ..... ಮದನೋತ್ಸವಃ ಹೋಲಾಕಾ ತಾಸ್ತಾಶ್ಚ ಮಾಹಿಮಾನ್ಯೋ ವೇಶ್ಯಾಶ್ಚ ಕ್ರೀಡಾಜನೇಭ್ಯೋ ವಿಶಿಷ್ಟಮಾಚರೇಯುರಿತಿ ಸಂಭೂಯ ಕ್ರೀಡಾಃ ।।'** ಎಂದು. ಇದಕ್ಕೆ ಜಯಮಂಗಳವೆಂಬ ವ್ಯಾಖ್ಯಾನದಲ್ಲಿ **'ಹೋಲಾಕಾ ಫಾಲ್ಗುನಪೌರ್ಣಮಾಯಾಂ ಶೃಂಗಕಾದ್ ಮುಕ್ತೇನ ಕಿಂಶುಕಾದಿಸುಂಭರಾಗಾಂಭಸಾ ಪರಸ್ಪರೋಕ್ಷಣಂ ಮಿಥಂ ಪಟವಾಸಪ್ರಕ್ಷೇಪಶ್ಚ'**. ಫಾಲ್ಗುಣ ಮಾಸದ ಶುದ್ಧ ಹುಣ್ಣಿಮೆಯಂದು ಎಲ್ಲರು ಪರಸ್ಪರವಾಗಿ ಕೊಂಬು ಮೊದಲಾದವುಗಳಿಂದ ಬಣ್ಣಬಣ್ಣದ ನೀರುಗಳನ್ನು ಮೈಗೆ ಹಾಕಿಕೊಳ್ಳುತ್ತಾರೆ. ಬಣ್ಣಗಳನ್ನು ಲೇಪಿಸಿಕೊಳ್ಳುತ್ತಾರೆ. ಗಂಧಗಳನ್ನು ಹಚ್ಚಿಕೊಳ್ಳುತ್ತಾರೆ. ಎರಚುತ್ತಾರೆ. ಅತ್ಯಂತ ಸಂತೋಷ ಪಡುತ್ತಾರೆ ಎಂಬುದಾಗಿ ಹೇಳಿರುತ್ತಾನೆ. ಈ ಆಚರಣೆಯನ್ನು ಇಂದೂ ಕೂಡ ನಾವು ಕಾಣಬಹುದು. ಹೇಮಾದ್ರಿಯಲ್ಲಿ ಹೋಲಿಹುಣ್ಣಿಮೆಯನ್ನು 'ಹುತಾಶನೀ' ಎಂದು ಕರೆಯಲಾಗಿದೆ. ವರಾಹಪುರಾಣದಲ್ಲಿ 'ಪಟವಾಸವಿಲಾಸಿನೀ' 'ಬಣ್ಣದ ಚೂರ್ಣಗಳನ್ನು ಎರಚಾಡುವ ಹಬ್ಬ' ಎಂದು ಹೆಸರಿಸಲಾಗಿದೆ. ಸ್ಕಂದಪುರಾಣದಲ್ಲೂ ಕೂಡ ಶ್ರೀಕೃಷ್ಣ ಪರಮಾತ್ಮನು ಈ ಹಬ್ಬದ ಬಗ್ಗೆ ವಿವರವಾಗಿ ತಿಳಿಸಿದ್ದಾನೆ. ಕಾಮದೇವನಿಗೆ ಗಂಧಾಕ್ಷತೆ, ಹಸಿರೆಲೆಗಳಿಂದ ಅಲಂಕಾರವನ್ನು ಮಾಡಿ, ಮಾವಿನ ಚಿಗುರು ಮೊದಲಾದವುಗಳಿಂದ ಪೂಜಿಸಬೇಕು. ಗಾಯಕರಿಂದ ಗಾನ ಮಾಡಿಸಬೇಕು. ಈ ಹಬ್ಬವನ್ನು ಕೆಲವರು ಒಂದು ದಿವಸ, ಕೆಲವರು ಮೂರು ದಿವಸ, ಕೆಲವರು ಐದು ದಿವಸಗಳ ಕಾಲ ಆಚರಣೆ ಮಾಡುತ್ತಾರೆ. ಕೆಲವರು ಪಂಚಮಿಯ ದಿವಸ ರಂಗಪಂಚಮಿಯನ್ನು ಆಚರಿಸುತ್ತಾರೆ. ಮನ್ಮಥನನ್ನು ಸುಡುವುದು ತಪ್ಪು. ದುಷ್ಟಕಾಮನೆಗಳನ್ನು ಓಡಿಸುವ ಕೀಚಕನನ್ನಷ್ಟೇ ಸುಡಬೇಕು. ಮನ್ಮಥನ ಸನ್ನಿಧಾನ ಬರುವಂತೆ ಹದಿನಾರು ಪೂರ್ಣ ಕಲಶಗಳಲ್ಲಿ ಆವಾಹನೆ ಮಾಡಿ, ಕಾಮದೇವನು ತೃಪ್ತನಾಗುವಂತೆ ಪೂಜೆ ಮಾಡಬೇಕೆಂದಷ್ಟೇ ಧರ್ಮಶಾಸ್ತ್ರಗಳು ತಿಳಿಸುತ್ತವೆ. ಆದ್ದರಿಂದ ಇಂದ್ರನಿಗೆ ಸಮಾನಕಕ್ಷ್ಯೆಯಲ್ಲಿನಿಂತ ಅತ್ಯಂತ ಶ್ರೇಷ್ಠನಾದ ಮನೋಭಿಮಾನಿಯಾದ ಮನ್ಮಥನನ್ನು ಸುಡಬೇಕೆಂಬ ಭಾವನೆಯು ಅತ್ಯಂತ ಪಾಪಕಾರ್ಯವಾಗುತ್ತದೆ. ಸರ್ವಥಾ ಹಾಗೇ ಭಾವಿಸಬಾರದು. ದುಷ್ಟಕಾಮಕ್ಕೆ ಅಭಿಮಾನಿಯಾದ ಅಸುರನನ್ನಷ್ಟೇ ಸುಟ್ಟು ಮನ್ಮಥನು ಪುನಃ ಹುಟ್ಟಿಬರುವಂತೆ ಬೇಡಿ, ಅವನ ಅನುಗ್ರಹವನ್ನು ಪ್ರಾರ್ಥಿಸಿ, ಆಗಮಿಸುವ ವಸಂತಕಾಲದಲ್ಲಿ ತಮ್ಮ ದಾಂಪತ್ಯದ ಸುಖ ಅಭಿವೃದ್ಧಿಯಾಗುವಂತಷ್ಟೇ ಪ್ರಾರ್ಥಿಸಬೇಕು.

ಭಗವಂತನು ಒಬೊಬ್ಬ ದೇವತೆಗೆ ವರ್ಷದಲ್ಲಿ ಒಂದೊಂದು ದಿವಸಗಳ ಆರಾಧನೆಯನ್ನು ವಿಧಾನ ಮಾಡಿದ್ದಾನೆ. ಆದರೆ ಮನ್ಮಥನಿಗೆ ಎರಡು ಬಾರಿ

ಆರಾಧನೆಯ ಮಾಡಲು ಹೇಳಿರುತ್ತಾನೆ. ಪಾಲ್ಗುಣ ಶುದ್ಧ ಹುಣ್ಣಿಮೆಯಂದು ಮೂಲರೂಪದ ಅವತಾರಕ್ಕೆ ಆರಾಧನೆ. ಮಾಘಮಾಸದ ಪಂಚಮಿಯಂದು ಸುಬ್ರಹ್ಮಣ್ಯನ ಆರಾಧನೆ. ಎರಡನ್ನೂ ಕೂಡ ಅವಶ್ಯವಾಗಿ ದಂಪತಿಗಳು ಸೇರಿ ಆಚರಿಸಬೇಕು.

## ವರಾಹಪುರಾಣದಲ್ಲಿ ಸೇನಾನಾಯಕನ ಬಗ್ಗೆ ಒಂದು ಚಿಂತನೆ

ಪ್ರಜಾಪಾಲನು ಮಹಾತಪನ ಬಳಿ ಆರುಮುಖದ ಸ್ಕಂದನು ಹೇಗೆ ಉತ್ಪನ್ನನಾದನು? ಎಂದು ಪ್ರಶ್ನಿಸುತ್ತಾನೆ. ಆಗ ಮಹಾತಪನು ಉತ್ತರಿಸುತ್ತಾನೆ. ಪರಮಾತ್ಮನಿಂದ ಅನೇಕ ಬಗೆಯ ಸೃಷ್ಟಿಯು ಹಬ್ಬಿತ್ತು. ಕೋಟಿಗಟ್ಟಳೆ ದೇವತೆಗಳು, ಕೋಟಿಗಟ್ಟಳೆ ಅಸುರರು ಜನಿಸಿದರು. ದೈತ್ಯಸಮೂಹದಲ್ಲಿ ಹಿರಣ್ಯಾಕ್ಷ, ಹಿರಣ್ಯಕಶಿಪು, ವಿಪ್ರಚಿತ್ತಿ ಮೊದಲಾದವರು ಸೇನಾಪತಿಗಳಾಗಿದ್ದರು. ಆದರೆ ದೇವತೆಗಳ ಸೈನ್ಯದಲ್ಲಿ ಯಾರೊಬ್ಬನೂ ಕೂಡ ಸೇನಾನಾಯಕನಿರಲಿಲ್ಲ. ದೇವೇಂದ್ರನಿಗೆ ಎಲ್ಲ ಸೈನ್ಯವನ್ನು ರಕ್ಷಣೆ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಆಗ ಬೃಹಸ್ಪತ್ಯಾಚಾರ್ಯರ ಮಾರ್ಗದರ್ಶನದಂತೆ ಎಲ್ಲ ದೇವತೆಗಳು ಬ್ರಹ್ಮದೇವರ ಬಳಿ ಸೇನಾಪತಿಯನ್ನು ಕರುಣಿಸಬೇಕೆಂದು ಪ್ರಾರ್ಥಿಸಿದರು. ಆಗ ಬ್ರಹ್ಮದೇವರು ಮನ್ಮಥನು ಷಣ್ಮುಖನಾಗಿ ಅವತರಿಸಿಬಂದು ಸೇನಾನಾಯಕನಾಗುವನೆಂದು ಅನುಗ್ರಹವನ್ನು ಮಾಡಿದರು. ಹೀಗಿರುವಾಗ ಜಗತ್ತಿನಲ್ಲಿ ಅಸುರರ ಕೋಲಾಹಲ ಹೆಚ್ಚಾಯಿತು. ಅವರಲ್ಲಿಯೂ ತಾರಕಾಸುರನೆಂಬ ದೈತ್ಯನು ಬಹಳ ಉಪದ್ರವವನ್ನು ಕೊಡಲು ಪ್ರಾರಂಭ ಮಾಡಿದನು. ಭೂಲೋಕದಲ್ಲಿ, ಹಾಗೂ ದೇವಲೋಕದಲ್ಲಿ ಲಗ್ಗೆ ಇಟ್ಟು, ಎಲ್ಲ ಸಾಧಕರ ಸಾಧನೆಗೆ ಮಹಾವಿಘ್ನವನ್ನುಂಟು ಮಾಡಿದನು. ಯಾವೊಬ್ಬ ದೇವತೆಗೂ ಇವನನ್ನು ಸೋಲಿಸಲು ಸಾಧ್ಯವಾಗಲಿಲ್ಲ. ಎಲ್ಲ ದೇವತೆಗಳು ಕಂಗೆಟ್ಟು ಪುನಃ ಬ್ರಹ್ಮದೇವನಲ್ಲೇ ಶರಣಾಗತರಾದರು. ಆಗ ಬ್ರಹ್ಮದೇವರು ರುದ್ರದೇವರ ಬಳಿ ಎಲ್ಲ ದೇವತೆಗಳನ್ನು ಕರೆದುಕೊಂಡು ಹೋಗಿ, ರುದ್ರಾಂತರ್ಯಾಮಿಯಾದ ಸಂಕರ್ಷಣರೂಪಿಯಾದ ಭಗವಂತನನ್ನು ಪ್ರಾರ್ಥನೆ ಮಾಡಿದರು. ಆಗ ರುದ್ರದೇವರು ಎಲ್ಲ ದೇವತೆಗಳಿಗೆ ಅನುಗ್ರಹವನ್ನು ಮಾಡಿ, ತಾರಕಾಸುರನನ್ನು ಸಂಹಾರ ಮಾಡುವ ಮಗನನ್ನು ನಾನು ಪಡೆಯುತ್ತೇನೆ. ಚಿಂತಿಸುವ ಅವಶ್ಯಕತೆಯಿಲ್ಲ ಎಂಬುದಾಗಿ ಧೈರ್ಯವನ್ನು ನೀಡಿ, ಅನುಗ್ರಹ ಮಾಡಿ ಕಳುಹಿಸಿದರು.

ಹೀಗೆ ತಾರಕಾಸುರನ ಸಂಹಾರಕ್ಕಾಗಿ ದೇವತೆಗಳು ಪ್ರಾರ್ಥಿಸಿದಾಗ ಅವರಿಗೆ ವರರೂಪದಲ್ಲಿ ಆಗಮಿಸಿದವನೇ ಸ್ಕಂದ. ಇವನೇ ಸುಬ್ರಹ್ಮಣ್ಯ. ಇವನೇ ಷಣ್ಮುಖ. ರುದ್ರದೇವರಿಂದ ಜನಿಸಿದ ಈ ಸ್ಕಂದನು ದೇವತೆಗಳ ಸೇನಾನಾಯಕನಾಗಿ ಸೇನಾಪತಿಯೆನಿಸಿದನು. ಇದನ್ನು ವರಾಹಪುರಾಣ ಹೀಗೆ ವರ್ಣಿಸುತ್ತದೆ-

**ಭವ ತ್ವಂ ದೇವಸೇನಾನೀರ್ಮಹೇಶ್ವರಸುತ ಪ್ರಭೋ**
**ಷಣ್ಮುಖ ಸ್ಕಂದ ವಿಶ್ವೇಶ ಕುಕ್ಕಟಧ್ವಜ ಪಾವಕ ॥**
**ಕಂಪಿತಾರೇ ಕುಮಾರೇಶ ಸ್ಕಂದ ಬಾಲಗ್ರಹಾನುಗ**
**ಜಿತಾರೇ ಕ್ರೌಂಚವಿಧ್ವಂಸ ಕೃತ್ತಿಕಾಜ ಶಿವಾತ್ಮಜ ॥**
**ಭೂತಗ್ರಹ ಪ್ರತಿಶ್ರೇಷ್ಠ ಪಾಪಕಪ್ರಿಯದರ್ಶನ**
**ಮಹಾಭೂತಪತೇಃ ಪುತ್ರ ತ್ರಿಲೋಚನ ನಮೋಽಸ್ತುತೇ ॥**

## ರಾಮಾಯಣದಲ್ಲಿ ಷಣ್ಮುಖನ ಉತ್ಪತ್ತಿ

ವಿಶ್ವಾಮಿತ್ರಋಷಿಗಳು ಸೀತಾಸ್ವಯಂವರಕ್ಕಾಗಿ ಶ್ರೀರಾಮಚಂದ್ರನನ್ನು ಕರೆದುಕೊಂಡು ಹೋಗುತ್ತಿದ್ದರು. ಮಾರ್ಗಮಧ್ಯದಲ್ಲಿ ಅನೇಕ ಕಥೆಗಳನ್ನು ಹೇಳುತ್ತಿದ್ದರು. ಆಗ ಷಣ್ಮುಖನು ಜನಿಸಿದ ಕಥೆಯನ್ನೂ ಕೂಡ ಹೇಳಿದರು – ಶ್ರೀರಾಮಚಂದ್ರನೇ ! ಮಹಾರುದ್ರದೇವನು ಪಾರ್ವತಿಯನ್ನು ವಿವಾಹವಾದ ಮೇಲೆ ಅವಳೊಡನೆ ರತಿಕ್ರೀಡೆಯಲ್ಲಿ ಆಸಕ್ತರಾದರು. ನೂರು ವರ್ಷಗಳು ರತಿಕ್ರೀಡೆಯಲ್ಲಿಯೇ ಕಳೆದುಹೋದವು. ಆದರೆ ಉಮಾದೇವಿಯಲ್ಲಿ ಯಾರೊಬ್ಬ ಮಗನೂ ಸಹ ಹುಟ್ಟಲಿಲ್ಲ. ದೇವತೆಗಳಿಗೆ ಇದೇ ದೊಡ್ಡ ಚಿಂತೆಯಾಯಿತು. ತಾರಕಾಸುರನ ಸಂಹಾರಕ್ಕಾಗಿ ಪಾರ್ವತಿಯ ಜೊತೆ ವಿವಾಹವನ್ನು ಮಾಡಿದ್ದಾಯಿತು. ಆದರೆ ಪ್ರಜೋತ್ಪತ್ತಿಯನ್ನೇ ಮಾಡುತ್ತಿಲ್ಲವೆಂಬ ಚಿಂತೆಗೆ ಒಳಗಾದರು. ಅಂತಿಮವಾಗಿ ಮಹಾದೇವರಲ್ಲಿ ಶರಣಾಗತರಾದರು. ತ್ರಿಲೋಕಗಳ ರಕ್ಷಣೆಗಾಗಿ ನಿನ್ನ ತೇಜೋಮಯವಾದ ರೇತಸ್ಸನ್ನು ಧಾರಣೆ ಮಾಡು, ತಾರಕಾಸುರನ ಸಂಹಾರಕ್ಕೆ ಅನುಗ್ರಹವನ್ನು ಮಾಡು ಎಂಬುದಾಗಿ ಪ್ರಾರ್ಥನೆ ಮಾಡಿದರು. ದೇವತೆಗಳ ಪ್ರಾರ್ಥನೆಯಂತೆ ರುದ್ರದೇವರು ತಮ್ಮ ತೇಜಸ್ಸನ್ನು ಪಾರ್ವತಿಯಲ್ಲಿ ಇಟ್ಟರು. ಆದರೆ ಆ ತೇಜಸ್ಸನ್ನು ಧರಿಸುವುದು ಪಾರ್ವತಿಗೂ ಕಠಿಣವಾಯಿತು.

ರುದ್ರದೇವರ ತೇಜಸ್ಸನ್ನು ಧಾರಣೆ ಮಾಡಲು ಯಾರಿಗೂ ಸಾಧ್ಯವಾಗಲಿಲ್ಲ. ಮೊದಲು ಪೃಥಿವಿಯು ಅದನ್ನು ಧರಿಸಲು ಪ್ರಯತ್ನಪಟ್ಟಳು. ಸಾಧ್ಯವಾಗದೇ ಅಗ್ನಿಗೆ ನೀಡಿದಳು. ಅಗ್ನಿಗೂ ಕೂಡ ಶಿವನ ತೇಜಸ್ಸನ್ನು ಧಾರಣೆ ಮಾಡಲು ಸಾಧ್ಯವಾಗಲಿಲ್ಲ. ಆ ಸಂದರ್ಭದಲ್ಲಿ ದೇವತೆಗಳ ಮಾರ್ಗದರ್ಶನದಂತೆ ಗಂಗೆಯಲ್ಲಿ ಆ ರೇತಸ್ಸನ್ನು ವಿಸರ್ಜನೆ ಮಾಡಿದನು. ಗಂಗೆಗೂ ಕೂಡ ಅದನ್ನು ಧರಿಸಲು ಸಾಧ್ಯವಾಗಲಿಲ್ಲ. ಗಂಗೆಯು ತನ್ನ ಪ್ರವಾಹದಿಂದ ಹೊರಕ್ಕೆ ಆ ರೇತಸ್ಸನ್ನು ಚೆಲ್ಲಿದಳು. ಆಗ ಭೂಮಿಯಲ್ಲಿ ಚಿನ್ನ, ಬೆಳ್ಳಿ,

ತಾಮ್ರ , ಕಬ್ಬಿಣ ಮೊದಲಾದವು ಉತ್ಪನ್ನವಾದವು. ಸಂಪೂರ್ಣವಾದ ಅರಣ್ಯವೇ ಸುವರ್ಣಮಯವಾಯಿತು. ಅಲ್ಲೊಂದು ದರ್ಭೆಯ ವನವಿತ್ತು. ಅದರಲ್ಲಿ ತೇಜಸ್ಸು ಬಿದ್ದಿತು. ಅಲ್ಲಿಂದ ಕುಮಾರನೊಬ್ಬನು ಉದಯಿಸಿದನು. ಅವನ ಸೌಂದರ್ಯವನ್ನು ಕಂಡು, ಆರು ಮಂದಿ ಕೃತ್ತಿಕೆಯರು ಆ ಬಾಲಕನನ್ನು ಎತ್ತಿಕೊಂಡರು. ತಮ್ಮ ಪುತ್ರನೆಂದು ತಿಳಿದು ಸ್ತನ್ಯಪಾನ ಮಾಡಿಸಲು ಆಸಕ್ತರಾದರು. ದರ್ಭೆಯ ವನದಲ್ಲಿ ಹುಟ್ಟಿದ್ದರಿಂದ ಆ ಕುಮಾರನು ಶರವಣನೆಂದು, ಅಗ್ನಿಯಿಂದ ಸ್ಕನ್ನನಾದ್ದರಿಂದ ಸ್ಕಂದನೆಂದು. ಕೃತ್ತಿಕೆಯರ ಪಾಲನೆಗೆ ಒಳಗಾದ್ದರಿಂದ ಕಾರ್ತಿಕೇಯನೆಂದು ಪ್ರಸಿದ್ಧನಾದನು. ಆರುಮಂದಿ ಕೃತ್ತಿಕಾದೇವಿಯರಿಗೆ ಒಟ್ಟಿಗೆ ಸಂತೋಷ ಪಡಿಸುವುದಕ್ಕಾಗಿ ಆರುಮುಖಗಳನ್ನು ಹೊಂದಿ, ಸ್ತನ್ಯಪಾನವನ್ನು ಮಾಡಿದನು. ಆದ್ದರಿಂದ ಷಣ್ಮುಖನೆಂದು ಪ್ರಸಿದ್ಧನಾದನು. ಹುಟ್ಟಿದ ಷಣ್ಮುಖನು ಮಹಾಪರಾಕ್ರಮಶಾಲಿಯಾಗಿದ್ದನು. ಆದ್ದರಿಂದ ಇಂದ್ರಾದಿ ದೇವತೆಗಳೆಲ್ಲರೂ ಈ ಕುಮಾರನನ್ನು ದೇವಸೇನಾನಿಯನ್ನಾಗಿ ಪಟ್ಟಾಭಿಷೇಕ ಮಾಡಿದರು. ಯಾರು ಈ ಕಾರ್ತಿಕೇಯನ ಚರಿತ್ರೆಯನ್ನು ಕೇಳುತ್ತಾರೋ, ಅವರು ಪುತ್ರ-ಪೌತ್ರರೊಡನೆ, ಸುಖ-ಸಮೃದ್ಧಿಯಿಂದ ಬಾಳುತ್ತಾನೆ.

**ಅಭ್ಯಷಿಂಚನ್ ಸುರಗಣಾಃ ಸಮೇತ್ಯಾಗ್ನಿ ಪುರೋಗಮಾಃ ।**
**ಏಷ ತೇ ರಾಮ ಗಂಗಾಯಾಃ ವಿಸ್ತರೋऽಭಿಹಿತೋ ಮಯಾ ॥**

**ಕುಮಾರಸಂಭವಶ್ಚೈವ ಧನ್ಯಃ ಪುಣ್ಯಸ್ತಥೈವ ಚ ।**
**ಭಕ್ತಶ್ಚ ಯಃ ಕಾರ್ತಿಕೇಯೇ ಕಾಕುತ್ಸ್ಥ ಭುವಿ ಮಾನವಃ ॥**
**ಆಯುಷ್ಮಾನ್ ಪುತ್ರಪೌತ್ರೈಶ್ಚ ಸ್ಕಂದಸಾಲೋಕ್ಯತಾಂ ವ್ರಜೇತ್ ॥**

(ರಾ.ಬಾ.37)

## ಲಿಂಗಪುರಾಣದಲ್ಲಿ ಸ್ಕಂದನ ಜನನ

ಕೈಲಾಸಪರ್ವತದ ಸುಂದರ ಪ್ರದೇಶಗಳಲ್ಲಿ ನೂರಾರು ವರ್ಷಗಳ ಕಾಲ ಪಾರ್ವತಿಯ ಜೊತೆ ಮಹಾದೇವರು ರತಿಕ್ರೀಡೆಯಲ್ಲಿ ಆಸಕ್ತರಾದರು. ದೇವತೆಗಳಿಗೆ ತಾರಕಾಸುರನನ್ನು ಕೊಲ್ಲುವ ಮಹಾವರ್ಚಸ್ವಿಯು ರುದ್ರದೇವರಿಂದ ಯಾವಾಗ ಹುಟ್ಟುತ್ತಾನೆಂಬ ಚಿಂತೆ ಪ್ರಬಲವಾಯಿತು. ಅವರೆಲ್ಲರೂ ಅಗ್ನಿಯ ಬಳಿ ತೆರಳಿ ಪ್ರಾರ್ಥನೆ ಮಾಡಿದರು. ಅವರ ಪ್ರಾರ್ಥನೆಯಂತೆ ಅಗ್ನಿಯು ಪಾರ್ವತೀ ಪರಮೇಶ್ವರರ ಕ್ರೀಡಾಸ್ಥಳಕ್ಕೆ ತೆರಳಿದನು. ಬಾಗಿಲ ಹೊರಗೆ ನಿಂತು, ಭಿಕ್ಷೆಯನ್ನು ಕೊಡು ಎಂದು ಉಚ್ಚಸ್ವರದಿಂದ ಮೂರು ಬಾರಿ ಬೇಡಿದನು. ಇದರಿಂದ ಪಾರ್ವತೀಪರಮೇಶ್ವರರ ವಿಹಾರಕ್ಕೆ ಭಂಗವುಂಟಾಯಿತು. ಅದೇ ಸಂದರ್ಭದಲ್ಲಿ ರುದ್ರದೇವರ ತೇಜಸ್ಸು ಪಾತವಾಗಿತ್ತು. ಅದನ್ನು ಪಾರ್ವತೀದೇವಿಯು

ಅಂಜಲಿಯಲ್ಲಿ ಧಾರಣೆ ಮಾಡಿ, ಬ್ರಾಹ್ಮಣರೂಪದಲ್ಲಿ ಭಿಕ್ಷೆ ಬೇಡಲು ಬಂದ ಅಗ್ನಿಗೆ ಭಿಕ್ಷಾರೂಪವಾಗಿ ಹಾಕಿದಳು. ಇದು ಮಹಾದೇವರ ಶಕ್ತಿ. ಒಂದುವೇಳೆ ನೆಲದ ಮೇಲೆ ಇದನ್ನು ಬೀಳಿಸಿದರೆ ಮೂರು ಲೋಕಗಳೇ ಭಸ್ಮವಾಗುತ್ತವೆ ಎಂಬುದಾಗಿ ಎಚ್ಚರಿಕೆ ನೀಡಿದಳು. ಇವಳ ಮಾತನ್ನು ಕೇಳಿ ಅಗ್ನಿಯು ಭಯಭೀತನಾದನು. ಏನೂ ಮಾಡಲು ತೋಚದೇ ಆ ರುದ್ರದೇವರ ತೇಜಸ್ಸನ್ನು ಪಾನ ಮಾಡಿದನು. ಆದರೆ ಅದನ್ನು ಧರಿಸುವ ಸಾಮರ್ಥ್ಯ ಅಗ್ನಿಗೆ ಇರಲಿಲ್ಲ. ಎಲ್ಲವನ್ನು ಸುಡುವ ಅಗ್ನಿಯನ್ನೇ ಈ ತೇಜಸ್ಸು ಸುಡಲು ಪ್ರಾರಂಭ ಮಾಡಿತು. ತಾಳಲಾರದೇ ಗಂಗೆಯ ತಣ್ಣಗಿನ ನೀರಿನಲ್ಲಿ ಮಹಾದೇವರ ಶಕ್ತಿಯನ್ನು ವಿಸರ್ಜನೆ ಮಾಡಿದನು. ಅದು ಕಾರ್ತಿಕ ಮಾಸ. ಪ್ರಾತಃಸ್ನಾನಕ್ಕೆ ಕೃತ್ತಿಕೆ ಮೊದಲಾದ ನಕ್ಷತ್ರ ನಾರಿಯರು ಗಂಗಾನದಿಯ ಪುಣ್ಯಸ್ನಾನಕ್ಕಾಗಿ ಆಗಮಿಸಿದ್ದರು. ತಿಳಿಯದೇ ಸ್ನಾನ ಮಾಡುವ ಸಮಯದಲ್ಲಿ ಮಹಾದೇವರ ತೇಜಸ್ಸನ್ನು ಪಾನ ಮಾಡಿದರು. ಆರು ಮಂದಿಯೂ ಗರ್ಭಿಣಿಯಾದರು. ಇದನ್ನು ನೋಡಿದ ಅವರ ಗಂಡಂದಿರಿಗೆ ಸಿಟ್ಟು ಬಂದಿತು. ಮತ್ತೊಬ್ಬರಿಂದ ಗರ್ಭವನ್ನು ಧಾರಣೆ ಮಾಡಿದ್ದಾರೆಂಬ ದೃಷ್ಟಿಯಿಂದ ಆರು ಮಂದಿ ಹೆಂಡಂದಿರನ್ನು ಅವರವರ ಗಂಡಂದಿರು ಪರಿತ್ಯಾಗ ಮಾಡಿದರು. ಇದರಿಂದ ಖಿನ್ನರಾದ ಆ ಕೃತ್ತಿಕೆಯರು ಗಂಗಾತೀರದಲ್ಲಿದ್ದ ದರ್ಭೆಯ ವನದಲ್ಲಿ ಆ ಶಕ್ತಿಯನ್ನು ವಿಸರ್ಜನೆ ಮಾಡಿದರು. ಆಗ ಆ ದರ್ಭೆಯ ಮಧ್ಯದಿಂದ ಆರು ತಲೆಯ ಹನ್ನೆರೆಡು ಭುಜಗಳ ಸುಂದರವಾದ ತೇಜಸ್ವಿ ಶಿಶುವು ಮೈಯೆತ್ತಿ ನಿಂತಿತು. ಆ ಹುಟ್ಟಿದ ತೇಜಃಪುಂಜವಾದ ಮಗುವನ್ನು ಕಂಡು ಕೃತ್ತಿಕೆಯರಿಗೆ ಪ್ರೀತಿ ಉಕ್ಕಿ ಹರಿಯಿತು. ಹುಟ್ಟಿದ ಮಗು ಹ್ಲೂಂಕಾರವನ್ನು ಮಾಡಿತು. ಭೂವ್ಯಾಕಾಶಗಳೇ ಸಿಡಿದೆದ್ದವು. ಮಗುವಿನ ಜನನದ ಬಗ್ಗೆ ಪಾರ್ವತೀ-ಪರಮೇಶ್ವರರಿಗೆ ವಿವರವಾಗಿ ತಿಳಿಸಿದರು. ಪುತ್ರಸ್ನೇಹದಿಂದ ಪಾರ್ವತಿ ಪರಮೇಶ್ವರರಿಬ್ಬರು ಮಗುವಿರುವಲ್ಲಿ ಶೀಘ್ರವಾಗಿ ಆಗಮಿಸಿದರು. ನನ್ನ ಮಗು ಎಂಬ ಅಭಿಮಾನದಿಂದ ಪಾರ್ವತಿಯು ಎತ್ತಿಕೊಂಡು ಮುದ್ದು ಮಾಡಿದಳು. ಆಗ ಗಂಗೆಯು ಅಗ್ನಿಯು ಶಿವಶಕ್ತಿಯನ್ನು ನನ್ನಲ್ಲಿ ವಿಸರ್ಜನೆ ಮಾಡಿದ್ದ ಕಾರಣ ಇದು ನನ್ನ ಮಗು ಎಂದು ಹೇಳಿದಳು. ಅದೇ ಸಂದರ್ಭದಲ್ಲಿ ಅಗ್ನಿಯೂ ಕೂಡ ಬಂದು ಪಾರ್ವತಿಯು ನನಗೆ ನೀಡಿದ ಭಿಕ್ಷೆ ನೀಡಿದ ಮಗುವಿದು. ಇದು ನನ್ನ ಮಗು ಎಂದು ಕಲಹವಾಡಿದನು. ಹೀಗಿರುವಾಗ ಕೃತ್ತಿಕಾ ಮೊದಲಾದ ನಕ್ಷತ್ರ ನಾರಿಯರೂ ಕೂಡ ಅಲ್ಲಿಗೆ ಬಂದು ಈ ಮಗುವನ್ನು ಹೆತ್ತವರು ನಾವು. ಇದು ನಮ್ಮ ಮಗು ಎಂದು ವಾದ ಮಾಡಿದರು. ಅನಂತರ ರುದ್ರದೇವರು ಆ ಮಗುವನ್ನು ಎತ್ತಿಕೊಂಡು, ಆ ಮಗುವಿನ ನೆತ್ತಿಯನ್ನು ಮೂಸಿ ನೋಡಿ ಮೈದಡವಿ ಮುದ್ದಾಡಿದರು. ರುದ್ರದೇವರ ಪುತ್ರವಾತ್ಸಲ್ಯವನ್ನು ಕಂಡು ಎಲ್ಲರು ಸುಮ್ಮನಾದರು. ರುದ್ರದೇವರಿಗೆ ಶರಣೆಂದರು. ಬೃಹಸ್ಪತ್ಯಾಚಾರ್ಯರನ್ನು ಕರೆಸಿ ಆ ಮಗುವಿಗೆ ನಾಮಕರಣ

ಮಾಡಿಸಿದರು. ಕಾರ್ತಿಕ ಮಾಸದಲ್ಲಿ ಹುಟ್ಟಿದ್ದರಿಂದ ಕಾರ್ತಿಕೇಯ ಎಂದು, ಪಾರ್ವತಿಯ ಮಗನಾದ್ದರಿಂದ ಪಾರ್ವತೀಕುಮಾರನೆಂದು, ದರ್ಭೆಯ ಮಧ್ಯದಲ್ಲಿ ಹುಟ್ಟಿದ್ದರಿಂದ ಶರಜನ್ಮ ಎಂದು, ಆರು ಮಂದಿ ಕೃತ್ತಿಕಾಮಾತೆಯರು ಸ್ತನ್ಯ ಪಾನವನ್ನು ಮಾಡಿಸಿದ್ದರಿಂದ ಷಣ್ಮುಖನೆಂದು, ಷಡಾನನೆಂದು, ತೇಜಸ್ಸು ಜಾರಿ ಹುಟ್ಟಿದ ಕಾರಣ ಸ್ಕಂದನೆಂದು, ಮುಂದೆ ದೇವಸೇನೆಗೆ ಸೇನಾಪತಿ ಆಗುವುದರಿಂದ ಸೇನಾನೀ ಎಂದು. ಹೀಗೆ ಅನೇಕ ಬಗೆಗಳಲ್ಲಿ ನಾಮಕರಣವನ್ನು ಮಾಡಿದರು.

## ಮತ್ಸ್ಯಪುರಾಣದಲ್ಲಿ ವರ್ಣಿಸಿದಂತೆ ತಾರಕಾಸುರನ ಸಂಹಾರ

ಸಕಲ ದೇವತೆಗಳು ಷಣ್ಮುಖನಿಗೆ ಜಯಘೋಷವನ್ನು ಹಾಕುತ್ತಿದ್ದರು. ಈ ಶಬ್ದವು ತಾರಕಾಸುರನ ಕಿವಿಗೆ ಅಪ್ಪಳಿಸಿತು. ಏಳುದಿನದ ಬಾಲಕನಿಂದ ತನಗೆ ಮರಣವಾಗುತ್ತದೆ ಎಂಬ ಬ್ರಹ್ಮದೇವರ ಮಾತು ಅವನಿಗೆ ನೆನಪಾಯಿತು. ಈ ಹುಡುಗನಿಂದಲೇ ನನಗೆ ಮರಣವು ನಿಶ್ಚಯ ಎಂದು ತಿಳಿದುಬಿಟ್ಟನು.

ಷಣ್ಮುಖನು ನಿರಾತಂಕವಾಗಿ ತಾರಕಾಸುರನೆಡೆ ತೆರಳಿದನು. ತಾರಕಾಸುರನು ತನ್ನ ದೇಹದಲ್ಲಿ ಯಾವುದೇ ಕವಚವನ್ನು ಧಾರಣೆ ಮಾಡದೇ, ರಥ ಹಾಗೂ ಕುದುರೆಗಳನ್ನೂ ಕೂಡ ಹತ್ತದೆ, ಅನುಚರರಿಲ್ಲದೇ ಪಾದಚಾರಿಯಾಗಿ ಆ ಷಣ್ಮುಖನೆಡೆ ಹೊರಟನು. ತಾರಕಾಸುರನ ಮನಸ್ಸಿನಲ್ಲಿ ಭಯಶೋಕಗಳು ಹೆಮ್ಮರವಾಗಿದ್ದವು. ಚಿಂತಾಕ್ರಾಂತನಾಗಿದ್ದನು. ಇಂಥ ತಾರಕಾಸುರನು ಕುಮಾರಸ್ವಾಮಿಯ ಮುಂದೆ ಬಂದು ಹೀಗೆ ಮಾತನಾಡಿದನು – ''ಮಗುವೇ ! ನೀನೇಕೆ ಯುದ್ಧಕ್ಕೆ ಬಂದಿರುವಿ? ನೀನಿನ್ನು ಪುಟ್ಟ ಮಗು. ಚೆಂಡಿನ ಆಟವನ್ನು ಆಡುವ ವಯಸ್ಸು. ಭೀಕರವಾದ ರಣರಂಗಕ್ಕೆ ನಿಮ್ಮಂಥ ಮಕ್ಕಳು ಬರಬಾರದು. ನಿನಗೆ ಯುದ್ಧವೆಂದರೆ ಏನೆಂದು ತಿಳಿದಿರುವುದಿಲ್ಲ. ತೆರಳು ಮನೆಗೆ'' ತಾರಕಾಸುರನ ಈ ಮಾತುಗಳನ್ನು ಕೇಳಿ, ನಗುತ್ತಾ, ಕುಮಾರಸ್ವಾಮಿಯು ಹೀಗೆ ಉತ್ತರಿಸಿದನು – ''ತಾರಕನೇ! ಇದು ಶಾಸ್ತ್ರಾಸ್ತ್ರವನ್ನು ವಿಚಾರ ಮಾಡುವ ಸಂದರ್ಭವಲ್ಲ. ರಣರಂಗವಿದು. ನೀನು ಉಪದೇಶಿಸಲು ಇದು ಸಮಯವೂ ಅಲ್ಲ. ಅದನ್ನು ಕೇಳುವುದು ನನಗೂ ಸಮಯವಲ್ಲ. ನಾನು ಮಗುವಾಗಿರಬಹುದು. ನಿನಗೆ ಸಾಮರ್ಥ್ಯವಿದ್ದರೆ ನನ್ನ ಬಳಿ ಯುದ್ಧಮಾಡು. ಕಾಳಸರ್ಪ ಸಣ್ಣಮರಿಯಾಗಿದ್ದರೂ ಕೂಡ ಎಂಥವರನ್ನೂ ಕೂಡ ಕಚ್ಚಿಕೊಲ್ಲುವುದಿಲ್ಲವೇ? ಮಂತ್ರಗಳಲ್ಲಿ ಬಹಳ ಕಡಿಮೆ ಅಕ್ಷರಗಳಿರುತ್ತವೆ. ಆದರೆ ಆ ಸಾಮರ್ಥ್ಯವೆಷ್ಟೆಂದು ಊಹಿಸಲು ಯಾರಿಂದ ಸಾಧ್ಯ''.

ತಾರಕಾಸುರನಿಗೆ ಸ್ಕಂದನ ಮಾತಿನಿಂದ ಕೋಪ ಉಕ್ಕೇರಿತು. ಕೂಡಲೇ ಮುದ್ಗರಾಯುಧವನ್ನು ತೆಗೆದುಕೊಂಡು ಆ ಕುಮಾರಸ್ವಾಮಿಯ ತಲೆಯ ಮೇಲೆ ಅಪ್ಪಳಿಸಿದನು. ಆದರೆ ಅವನು ಅಪ್ಪಳಿಸುವಷ್ಟರಲ್ಲಿ ಆ ಕುಮಾರನು ಅದನ್ನು ಮುರಿದು

ಹಾಕಿಬಿಟ್ಟನು. ಹೀಗೆ ಅವರಿಬ್ಬರ ಯುದ್ಧ ಪ್ರಾರಂಭವಾಯಿತು. ಘೋರವಾದ ಅಸ್ತ್ರ ಪ್ರಯೋಗಗಳನ್ನು ಮಾಡಿದನು. ಗದಾಪ್ರಹಾರ ಮಾಡಿದನು. ಷಣ್ಮುಖನಿಗೆ ಏನೂ ಆಗಲಿಲ್ಲ. ಹೀಗಿರುವಾಗ ಕಾಲನೇಮಿ ಮೊದಲಾದ ದೈತ್ಯರು ಒಗ್ಗಟ್ಟಾಗಿ ಕುಮಾರನ ಮೇಲೆ ನುಗ್ಗಿ ಬಂದರು. ಭಯಂಕರವಾದ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿದರು. ಆದರೆ ಕುಮಾರಸ್ವಾಮಿಗೆ ಯಾವುದರಿಂದಲೂ ಏನೂ ಆಗಲಿಲ್ಲ. ದೇವತೆಗಳ ಸೇನೆಗೆ ಬಹಳ ತೊಂದರೆಯಾಯಿತು. ಬಹಳ ಗಾಯಗಳಾದವು. ಗಾಯಗಳಿಂದ ಹಿಂಸೆಪಡುತ್ತಿರುವ ದೇವತೆಗಳನ್ನು ಕಂಡು, ಕುಮಾರಸ್ವಾಮಿಗೆ ಎಲ್ಲಿಲ್ಲದ ಸಿಟ್ಟು ಬಂದಿತು. ದಾನವರ ಸೈನ್ಯದ ಮೇಲೆ ಏಕಾಂಗಿಯಾಗಿ ಕಾಡ್ಗಿಚ್ಚಿನಂತೆ ಹೊರಟನು. ಕಾಲನೇಮಿ ಮೊದಲಾದ ಎಲ್ಲ ಅಸುರರು ಹೌಹಾರಿದರು. ಆಗ ತಾರಕಾಸುರನು ಭಯಂಕರವಾದ ಗದೆಯನ್ನೆತ್ತಿ ಷಣ್ಮುಖನಿಗೆ ಪ್ರಹಾರ ಮಾಡಿದನು. ಷಣ್ಮುಖನಿಗೆ ಏನೂ ಆಗದಿದ್ದರೂ ನವಿಲಿಗೆ ಪೆಟ್ಟಾಯಿತು. ರಕ್ತಕಾರಿ ಯುದ್ಧದಿಂದ ಓಡಿಹೋಯಿತು. ಆಗ ಕೋಪದ ಪರಾಕಾಷ್ಠೆಯಿಂದ ಕುಮಾರನು ಶಕ್ತ್ಯಾಯುಧವನ್ನು ಎತ್ತಿಕೊಂಡನು. ತಾರಕಾಸುರನನ್ನು ಕುರಿತು ಹೀಗೆ ಮಾತನಾಡಿದನು - ''ದುಷ್ಟನಾದ ತಾರಕಾಸುರನೇ ! ಈ ಪ್ರಪಂಚವನ್ನು ಕೊನೆಯ ಬಾರಿ ಒಮ್ಮೆ ನೋಡಿಬಿಡು. ಈ ಶಕ್ತ್ಯಾಯುಧವು ನಿನ್ನನ್ನು ಈಗ ನುಂಗಿಹಾಕುತ್ತದೆ. ನಿನ್ನ ಎಲ್ಲ ಪಾಪಕೃತ್ಯಗಳಿಗೆ ಇತಿಶ್ರೀಯನ್ನು ಹಾಡುತ್ತಿದೆ.'' ಹೀಗೆ ಹೇಳಿ ತಾರಕಾಸುರನ ಎದೆಗೆ ಗುರಿಯಿಟ್ಟು ಗದೆಯಿಂದ ಅಪ್ಪಳಿಸಿದನು. ವಜ್ರಸಮಾನವಾದ ಆ ಗದೆಯು ಧ್ವನಿ ಮಾಡುತ್ತಾ , ವಜ್ರಪರ್ವತಕ್ಕೆ ಸದೃಶವಾದ ತಾರಕಾಸುರನ ಎದೆಯನ್ನು ಸೀಳಿ ಹಾಕಿತು. ದೊಡ್ಡ ಬೆಟ್ಟ ಭೂಮಿಯ ಮೇಲೆ ಉರುಳಿ ಬೀಳುವಂತೆ ಆ ತಾರಕಾಸುರನು ನೆಲದ ಮೇಲೆ ಉರುಳಿಬಿದ್ದನು. ಅವನ ಕಿರೀಟದಲ್ಲಿದ್ದ ಅಪೂರ್ವ ಮಣಿಗಳೆಲ್ಲವೂ ಚೆಲ್ಲಾಪಿಲ್ಲಿಯಾಗಿ ಬಿದ್ದವು. ವಸ್ತ್ರಾಭರಣಗಳು ದಿಕ್ಕಾಪಾಲಾಗಿ ಎರಚಲ್ಪಟ್ಟವು. ತಾರಕಾಸುರನು ಮೃತನಾದನು.

ದೇವತೆಗಳಿಗೆ ಆದ ಸಂತೋಷಕ್ಕೆ ಇತಿಮಿತಿಯೇ ಇಲ್ಲ. ಅನೇಕ ವರ್ಷಗಳ ಕಾಲದಿಂದ ತಾರಕಾಸುರನ ಉಪಟಳವನ್ನು ಸಹಿಸಿಕೊಂಡು ಬೇಸತ್ತು ಹೋದ ದೇವತೆಗಳಿಗೆ ಬಹಳ ಸಂತೋಷವಾಯಿತು. ಷಣ್ಮುಖನಿಗೆ ಜಯಕಾರವನ್ನು ಹಾಕಿದರು.

## ಮಹಾಭಾರತದಲ್ಲಿ ಸ್ಕಂದನ ಚರಿತ್ರೆ

ವನಪರ್ವದ ಮಾರ್ಕಂಡೇಯ ಸಮಸ್ಯಾಪರ್ವದಲ್ಲಿ ಬಹಳ ವಿಸ್ತಾರವಾಗಿ ಸ್ಕಂದನ ಚರಿತ್ರೆಯನ್ನು ಮಾರ್ಕಂಡೇಯರು ವರ್ಣನೆ ಮಾಡಿದ್ದಾರೆ. ಅಗ್ನಿವಂಶದ ಬಗ್ಗೆ ವಿಸ್ತಾರವಾಗಿ ನಿರೂಪಣೆ ಮಾಡುವ ಸಂದರ್ಭದಲ್ಲಿ ಅದೇ ಅಗ್ನಿಯಿಂದ ಹುಟ್ಟಿದವನೇ ಸ್ಕಂದನೆಂದು ಹೇಳಿರುತ್ತಾರೆ.

**ಅದ್ಭುತಸ್ಯಾದ್ಭುತಂ ಪುತ್ರಂ ಪ್ರವಕ್ಷ್ಯಾಮ್ಯಮಿತೌಜಸಮ್ ।**
**ಜಾತಂ ಬ್ರಹ್ಮರ್ಷಿಭಾರ್ಯಾಭಿರ್ಬ್ರಹ್ಮಣ್ಯಂ ಕೀರ್ತಿವರ್ಧನಮ್ ॥**

ಅದ್ಭುತ ಎಂಬ ಅಗ್ನಿಯಿಂದ ಹುಟ್ಟಿದ ಬ್ರಹ್ಮರ್ಷಿಗಳ ಪತ್ನಿಯರಿಂದ ಹುಟ್ಟಿದ ಬ್ರಾಹ್ಮಣ ವತ್ಸಲನಾದ ಅತ್ಯಂತ ಕೀರ್ತಿಸಂಪನ್ನನಾದ ಅಪಾರವಾದ ಪರಾಕ್ರಮವನ್ನು ಹೊಂದಿದ ಅದ್ಭುತ ಎಂಬ ಕಾರ್ತಿಕೇಯನ ಚರಿತ್ರೆಯನ್ನು ಹೇಳುತ್ತೇನೆಂದು ಮೊದಲು ಪ್ರತಿಜ್ಞೆಮಾಡಿದ್ದಾರೆ. ಅಗ್ನಿಗೆ ಅನೇಕ ರೂಪಗಳಿವೆ. ಅದರಲ್ಲಿ ಅದ್ಭುತ ಎಂಬ ರೂಪದಿಂದ ಈ ಷಣ್ಮುಖನು ಹುಟ್ಟಿದನೆಂದು ತಿಳಿಯುತ್ತದೆ. ಬೇರೆ ಪುರಾಣಗಳಲ್ಲಿ ಹೇಳಿದಂತೆ ತಾರಕಾಸುರನ ಸಂಹಾರಕ್ಕೋಸ್ಕರ ಸ್ಕಂದನ ಜನನವೆಂಬ ವಿಚಾರವನ್ನು ಮಹಾಭಾರತದಲ್ಲಿ ಹೇಳಿರುವುದಿಲ್ಲ. ದೈತ್ಯರ ಉಪಟಳವು ಅತಿಯಾಗಿದ್ದಾಗ ಒಬ್ಬ ಸೇನಾಧಿಪತಿಯ ಅವಶ್ಯಕತೆಗಾಗಿ ಇಂದ್ರದೇವರು ಬಹಳ ಅಪೇಕ್ಷೆಯನ್ನು ಪಡುತ್ತಾರೆ. ಈ ಸಂದರ್ಭದಲ್ಲಿ ಭಗವಂತನ ಅನುಗ್ರಹದಂತೆ ಸ್ಕಂದನ ಜನನವಾಗುತ್ತದೆ. ಅವನನ್ನೇ ಸೇನಾಧಿಪತಿಯನ್ನಾಗಿ ಮಾಡುತ್ತಾರೆ ಎಂಬ ವಿಚಾರವಷ್ಟೇ ಇರುತ್ತದೆ. ಒಮ್ಮೆ ಮಾನಸ ಸರೋವರದಲ್ಲಿ ದೇವಸೇನೆಯನ್ನು ಪಾಲಿಸುವ ಮಹಾಬಲಶಾಲಿಯಾದ ಪುರುಷನೊಬ್ಬನು ಬೇಕೆಂದು ಇಂದ್ರನು ಚಿಂತನೆಯನ್ನು ನಡೆಸುತ್ತಿರುವಾಗ ಒಬ್ಬ ಸ್ತ್ರೀಯು ರಾಕ್ಷಸನ ಉಪಟಳದಿಂದ ಆರ್ತಸ್ವರವನ್ನು ಮಾಡುತ್ತಿರುತ್ತಾಳೆ. ದೇವೇಂದ್ರನು ಅವಳಿಗೆ ರಕ್ಷಣೆಯನ್ನು ನೀಡಿ, ಕೇಶೀ ಎಂಬ ಆ ರಾಕ್ಷಸನನ್ನು ನಿಗ್ರಹ ಮಾಡುತ್ತಾನೆ. ಆಗ ಆ ಶುಭಾನನೆಯು ನಾನು ದಕ್ಷಪ್ರಜಾಪತಿಯ ಪುತ್ರಿ . ದೇವಸೇನೆ ಎಂದು ನನ್ನ ಹೆಸರು. ದೈತ್ಯಸೇನೆ ಎಂಬ ಮತ್ತೊಬ್ಬ ಸೇನೆಯನ್ನು ಈ ಕೇಶಿರಾಕ್ಷಸನು ಅಪಹಾರ ಮಾಡಿದ್ದನು ಇತ್ಯಾದಿಯಾಗಿ ತನ್ನ ಪರಿಚಯವನ್ನು ಮಾಡಿಕೊಳ್ಳುತ್ತಾಳೆ. ಅಮಿತಪರಾಕ್ರಮವುಳ್ಳ ಎಲ್ಲ ದೇವತೆಗಳ ಸೇನೆಗೆ ಒಡೆಯನಾದ ಉತ್ತಮ ಪತಿಯನ್ನು ನಾನು ಅಪೇಕ್ಷಿಸುತ್ತಿದ್ದೇನೆ ಎಂದು ಹೇಳುತ್ತಾಳೆ. ಆಗ ದೇವೇಂದ್ರನು ನೀನು ನನ್ನ ಚಿಕ್ಕಮ್ಮನ ಮಗಳೇ ಆಗಿರುವಿ ಎಂದು ಹೇಳಿ, ಅವಳಿಗೆ ಸಂಪೂರ್ಣವಾಗಿ ರಕ್ಷಣೆಯನ್ನು ನೀಡುತ್ತಾನೆ. ಅವಳ ಅಪೇಕ್ಷೆಯಂತೆ ದೇವೇಂದ್ರನು ಬ್ರಹ್ಮದೇವನ ಬಳಿ ಅವಳನ್ನು ಕರೆದುಕೊಂಡು ಹೋಗಿ ಅನುಗ್ರಹವನ್ನು ಮಾಡಿಸುತ್ತಾನೆ. ಆಗ ಬ್ರಹ್ಮದೇವರು ಸದ್ಯದಲ್ಲಿಯೇ ಬಲಿಷ್ಠನಾದ ವಿಕ್ರಮಶಾಲಿಯಾದ ಒಬ್ಬ ಸೇನಾಪತಿಯು ಹುಟ್ಟುವವನಿದ್ದಾನೆ. ಅವನು ನಿನ್ನ ಪತಿಯಾಗುತ್ತಾನೆ ಎಂಬುದಾಗಿ ಅನುಗ್ರಹಿಸುತ್ತಾರೆ.

ಇದೇ ಸಂದರ್ಭದಲ್ಲಿ ವಸಿಷ್ಠ ಮೊದಲಾದ ಸಪ್ತರ್ಷಿಗಳು ಒಂದು ದೊಡ್ಡ ಯಾಗವನ್ನು ಆಚರಿಸುತ್ತಾರೆ. ಮೊದಲು ಅದ್ಭುತ ಎಂಬ ಹೆಸರಿನ ಅಗ್ನಿಯನ್ನು ಆವಾಹನೆ ಮಾಡುತ್ತಾರೆ. ಆ ಸಂದರ್ಭದಲ್ಲಿ ಸಪ್ತರ್ಷಿಗಳ ಪತ್ನಿಯರನ್ನು ನೋಡಿ, ಅಗ್ನಿಗೆ

ಮನೋವಿಕಾರವಾಗುತ್ತದೆ. ಕಾಮವಶನಾದ ಅಗ್ನಿಯು ವರಾಂಗನೆಯರನ್ನು ಕಾಮಿಸುತ್ತಾ, ಆ ಸಪ್ತರ್ಷಿಗಳ ಸ್ತ್ರೀಯರು ತನಗೆ ದೊರಕದಿದ್ದರೆ, ದೇಹತ್ಯಾಗವನ್ನು ಮಾಡಿಬಿಡುತ್ತೇನೆಂದು ಕಾಡಿಗೆ ಹೊರಡುತ್ತಾನೆ. ಇದೇ ಸಂದರ್ಭದಲ್ಲಿ ಅಗ್ನಿಯನ್ನು ಬಹಳ ದಿವಸಗಳಿಂದ ದಕ್ಷನ ಮಗಳಾದ ಸ್ವಾಹಾದೇವಿಯು ಕಾಮಿಸುತ್ತಿರುತ್ತಾಳೆ. ಏಕಾಂತದಲ್ಲಿ ಕಾಡಿಗೆ ಹೊರಟ ಅಗ್ನಿಯನ್ನು ಗಮನಿಸುತ್ತಾಳೆ. ಕಾಮತಪ್ತನಾದ ಅಗ್ನಿಯ ವಿಚಾರವನ್ನು ತಿಳಿದು ಆ ಸ್ವಾಹಾದೇವಿಯು ಸಪ್ತರ್ಷಿಗಳ ಪತ್ನಿಯ ರೂಪವನ್ನು ಧರಿಸಿ, ಅಗ್ನಿಯ ಬಳಿ ಕಾಮಭಿಕ್ಷೆಯನ್ನು ಕೇಳುತ್ತಾಳೆ. ಸಪ್ತರ್ಷಿಗಳಲ್ಲಿ ಒಬ್ಬೊಬ್ಬ ಸ್ತ್ರೀಯ ವೇಷವನ್ನು ಧರಿಸಿ, ಅಗ್ನಿಯ ಜೊತೆ ಸಮಾಗಮ ಮಾಡಿ, ಅಗ್ನಿಗೆ ಸಂತೋಷ ಪಡಿಸಿ, ತಾನೂ ಕೂಡ ಸಂತೋಷ ಪಡುತ್ತಾಳೆ. ಆ ಸಂದರ್ಭದಲ್ಲಿ ಅತ್ಯಂತ ಸಂತೋಷದಿಂದ ಸಮಾಗಮ ಮಾಡುವಾಗ ಅಗ್ನಿಯ ತೇಜಸ್ಸನ್ನು ತಾನು ಧಾರಣೆ ಮಾಡದೇ, ಕೈಗಳಲ್ಲಿ ಅದನ್ನು ತೆಗೆದುಕೊಂಡು, ಹೆಣ್ಣು ಗರುಡಪಕ್ಷಿರೂಪವನ್ನು ಧರಿಸಿ, ಕಾಡಿನಿಂದ ಹೊರಟು, ಶ್ವೇತಪರ್ವತದ ಹುಲ್ಲಿನ ಪೊದೆಯೊಳಗೆ ಅದನ್ನು ಹಾಕುತ್ತಾಳೆ.

**ಸಪ್ತಾನಾಮಪಿ ದೇವೀನಾಂ ಸಪ್ತರ್ಷೀಣಾಂ ಮಹಾತ್ಮನಾಮ್ ।**
**ಪತ್ನೀಸರೂಪತಾಂ ಕೃತ್ವಾ ಕಾಮಯಾಮಾಸ ಪಾವಕಮ್ ॥**

ಏಳು ಸಪ್ತ ಋಷಿಗಳ ಪತ್ನಿಯರ ವೇಷವನ್ನು ಧರಿಸಿ ಹೀಗೆ ಅಗ್ನಿಯನ್ನು ಆ ಸ್ವಾಹಾದೇವಿಯು ಸಂಪರ್ಕ ಮಾಡುತ್ತಾಳೆ. ಆದರೆ ಅರುಂಧತಿಯ ತಪಃಪ್ರಭಾವದಿಂದ ಅವಳ ರೂಪವನ್ನು ಧರಿಸಲು ಸಾಧ್ಯವಾಗುವುದಿಲ್ಲ. ಪ್ರತಿಪತ್ ದಿವಸ ಆರುಬಾರಿ ವೀರ್ಯವನ್ನು ಆ ಶ್ವೇತಪರ್ವತದಲ್ಲಿ ಹಾಕುತ್ತಾಳೆ. ಸ್ಖಲನಗೊಂಡ ತೇಜಸ್ಸಿನಿಂದ ರಕ್ಷಿತವಾದ ವೀರ್ಯದಿಂದ ಸ್ಕಂದನು ಜನಿಸುತ್ತಾನೆ. ಆರು ತಲೆಗಳು, ಹನ್ನೆರಡು ಕಿವಿಗಳು, ಹನ್ನೆರಡು ಕಣ್ಣುಗಳು, ಒಂದು ಭುಜ, ಒಂದು ಕತ್ತು ಮತ್ತು ಒಂದು ಜಠರವಿರುವ ಕುಮಾರನು ಅದರಿಂದ ಹುಟ್ಟುತ್ತಾನೆ.

**ತತ್ ಸ್ಕನ್ನಂ ತೇಜಸಾ ತತ್ರ ಸಂವೃತಂ ಜನಯತ್ ಸುತಮ್ ।**
**ಋಷಿಭಿಃ ಪೂಜಿತಂ ಸ್ಕನ್ನಮನಯತ್ ಸ್ಕಂದತಾಂ ತತಃ ॥**

ಗಾರುಡಿಯು ಅಗ್ನಿಯ ವೀರ್ಯವನ್ನು ಅಲ್ಲಿ ಹಾಕುವ ಮೊದಲೇ ಸುದ್ರದೇವರ ತೇಜಸ್ಸು ಅಲ್ಲಿರುತ್ತದೆಂದು ಮಹಾಭಾರತ ಸ್ಪಷ್ಟಪಡಿಸುತ್ತದೆ. ಪಾರ್ವತೀ-ಪರಮೇಶ್ವರರ ವಿಚಾರದ ಪ್ರಸಕ್ತಿಯೇ ಬರುವುದಿಲ್ಲ. ಆದರೆ ಲಕ್ಷಾಲಂಕಾರದಲ್ಲಿ ಇದರ ಸಮನ್ವಯವನ್ನು ಹೀಗೆ ಮಾಡಿದ್ದಾರೆ - ''ರುದ್ರನ ವೀರ್ಯವನ್ನು ಪಾರ್ವತಿಯು ಧರಿಸಲು ಸಾಧ್ಯವಾಗದೇ ಅಗ್ನಿಯಲ್ಲಿ ಹಾಕಿದಳು. ಅಗ್ನಿಯು ಅದನ್ನು ಧರಿಸಲು ಸಾಧ್ಯವಾಗದೇ

ಗಂಗೆಯಲ್ಲಿ ಹಾಕಿದನು. ಗಂಗೆಯು ಸಹ ವೀರ್ಯವನ್ನು ಧರಿಸಲಾಗದೇ ಹುಲ್ಲಿನ ವನದಲ್ಲಿ ಹಾಕಿದಳು. ಅದು ಬಹಳವಾಗಿದ್ದರಿಂದ ಒಂದು ಪರ್ವತವಾಯಿತು. ಆ ಪರ್ವತದಲ್ಲಿ ಹೆಣ್ಣು ಗರುಡರೂಪವನ್ನು ಧರಿಸಿದ ಸ್ವಾಹಾದೇವಿಯು ಅಗ್ನಿಯ ವೀರ್ಯವನ್ನು ತಂದು ಸೇರಿಸಿದಳು. ಅದು ಶ್ವೇತಪರ್ವತವಾಯಿತು. ಆ ರುದ್ರವೀರ್ಯವೇ ಸ್ಕಂದವಾಗಿ ಜನಿಸಿತು. ಆದ್ದರಿಂದ ಸ್ಕಂದನಿಗೆ ಪಾರ್ವತಿ-ಪರಮೇಶ್ವರರು, ಹಾಗೂ ಅಗ್ನಿ ಮತ್ತು ಸ್ವಾಹಾದೇವಿಯು ಇಬ್ಬರು ಮಾತಾಪಿತೃಗಳಿದ್ದಾರೆಂದು ತಿಳಿಯಬೇಕು''. ಹೀಗೆ ಲಕ್ಷಾಲಂಕಾರದಲ್ಲಿ ಸಮನ್ವಯ ಮಾಡಿದ್ದಾರೆ. ಮಹಾಭಾರತದ ಮುಂದಿನ ಅಧ್ಯಾಯವೂ ಕೂಡ ಇದನ್ನು ಸ್ಪಷ್ಟಪಡಿಸುತ್ತದೆ. ರುದ್ರನು ವಿಸರ್ಜನೆ ಮಾಡಿದ ವೀರ್ಯವೇ ಶ್ವೇತಪರ್ವತವಾಗಿದೆ. ಅಲ್ಲಿ ಕೃತ್ತಿಕೆಯರು ಅಗ್ನಿಯ ವೀರ್ಯವನ್ನು ಧಾರಣೆ ಮಾಡಿ, ಪೋಷಣೆ ಮಾಡುತ್ತಾರೆ. ಅಗ್ನಿಯಲ್ಲಿರುದ್ರನೇ ಪ್ರವೇಶವನ್ನು ಮಾಡಿ, ಶ್ವೇತಪರ್ವತದಲ್ಲಿ ಆ ಸ್ಕಂದನು ಹುಟ್ಟುವಂತೆ ಕಾರಣನಾಗುತ್ತಾನೆ. ಆದ್ದರಿಂದ ಈ ಸ್ಕಂದನು ರುದ್ರನಿಂದ, ಅಗ್ನಿಯಿಂದ, ಪಾರ್ವತಿಯಿಂದ, ಸ್ವಾಹಾದೇವಿಯಿಂದ ಮತ್ತು ಆರು ಮಂದಿ ಕೃತ್ತಿಕಾ ಮಾತೆಯರಿಂದ ಹುಟ್ಟುತ್ತಾನೆ.

ದೇವಸೇನೆಯು ಆ ಸ್ಕಂದನನ್ನು ವಿವಾಹವಾಗುತ್ತಾಳೆ. ಆ ಸ್ಕಂದನು ದೇವೇಂದ್ರನನ್ನು ಸೋಲಿಸುವಷ್ಟು ಶಕ್ತಿಸಂಪನ್ನನಾಗಿರುತ್ತಾನೆ. ಆದರೆ ದೇವೇಂದ್ರನು ಸ್ಕಂದನ ಜೊತೆ ಸ್ನೇಹವನ್ನು ಬೆಳೆಸಿ ದೇವತೆಗಳ ಸೈನ್ಯಕ್ಕೆ ಅಧಿಪತಿಯನ್ನಾಗಿ ನಿಯೋಜಿಸಿ ಅಭಿಷೇಕ ಮಾಡುತ್ತಾನೆ.

# ॥ ಫಾಲ್ಗುಣ ॥ ಕೃಷ್ಣ ॥ ತೃತೀಯಾ ॥

## ಶ್ರೀವಾದಿರಾಜತೀರ್ಥಗುರುಸಾರ್ವಭೌಮರ ಆರಾಧನೆ

## ಭಾವೀಸಮೀರರೆಂದೇ ಪ್ರಸಿದ್ಧರಾದ ಶ್ರೀವಾದಿರಾಜ ಗುರುಸಾರ್ವಭೌಮರು

ಎಂಟರ ಎಳವೆಯಲ್ಲಿ ಕಾಷಾಯ ತೊಟ್ಟು ಸತತವಾಗಿ ೧೧೨ ವರ್ಷಗಳ ಕಾಲ ಕಡಲತೀರದ ಕಡೆಗೋಲು ಕೃಷ್ಣನನ್ನು ಪೂಜಿಸಿದ ಕೀರ್ತಿ ರಾಜರಿಗೇ ಸಲ್ಲುವಂತಹದ್ದು.

ಶ್ರೀಕೃಷ್ಣಪರ್ಯಾಯವನ್ನು ಎರಡುವರ್ಷಗಳ ಅವಧಿಗೆ ವಿಸ್ತರಿಸಿ ನಾಲ್ಕು ಪರ್ಯಾಯಗಳನ್ನು ಸ್ವತಃ ತಾವೇ ನಡೆಸಿ ಐದನೇ ಪರ್ಯಾಯವನ್ನು ಸೋದೆಯಲ್ಲಿ ವೇಣುಗೋಪಾಲನನ್ನು ಸ್ಥಾಪಿಸಿ ಪೂಜಿಸಿ ಸಂಭ್ರಮದಿಂದ ಪೂರೈಸಿದ ಮಹಾವಿಭೂತಿಪುರುಷರು.

ರಾಜರೊಮ್ಮೆ ಸಂಚಾರದಲ್ಲಿದ್ದಾಗ ಜಹಗೀರದಾರನ ಮಗನೊಬ್ಬನು ಮದುವೆ ಮಂಟಪದಲ್ಲಿಯೇ ತಲೆಗೆಸುತ್ತಿದ್ದ ರುಮಾಲಿನಲ್ಲಿದ್ದ ಹಾವೊಂದು ಕಡಿದು ಅಸುನೀಗಿದ.

ಮದುವೆಗೆ ಕಟ್ಟಿದ ಮಂಟಪವೇ ಮಸಣಕ್ಕೆ ಸಾಗುವ ಮಂಚವಾಗುವ ಸ್ಥಿತಿ. ತಂದ ತೋಮಾಲೇಗಳೇ ಹೆಣಕ್ಕೆ ಅಲಂಕಾರವಾಗುವ ವಿಷಮಘಳಿಗೆ ಸಮೀಪಿಸಿತು. ವಿಷವೈದ್ಯನ ಕೈಚಳಕಕ್ಕೂ ಗುಣವಾಗದೆ ಅಸುನೀಗಿದ. ದೈವವಶಾತ್ ರಾಜರು ಬಂದ ಸುದ್ದಿ ತಿಳಿದ ಜಹಗೀರ ತ್ವರಿತದಿಂದ ಬಂದು ರಾಜರ ಚರಣಸನ್ನಿಧಿಯಲ್ಲಿ ಕುಸಿದುಬಿದ್ದ. ಗೋಳಿಟ್ಟ. ವೈರಾಗ್ಯ ಪ್ರತೀಕವಾದ ದಂಡ; ಕರುಣೆಗೆ ಸಂಕೇತವಾದ ಕಮಂಡಲುವನ್ನು ಹಿಡಿದ ರಾಜರು ಅಭಯದಾನ ಮಾಡಿದರು. ವಿವಾಹ ನಡೆಯುವುದೆಂದರು. ಅದೆಂತಹ ಪವಾಡ! ರಾಜರು ಕ್ಷಣಮಾತ್ರದಲ್ಲಿ ಮಹಾಲಕುಮಿಯೇ ಬಯಸಿ ಬರೆಸಿದ ಲಕ್ಷ್ಮೀಶೋಭಾನಪದವನ್ನು ಸುಶ್ರಾವ್ಯವಾಗಿ ಹಾಡಿ-ಹಾಡಿಸಿದರು. ಸತ್ತ ಮಧುಮಗ ಚೈತನ್ಯ ಹೊಂದಿದ. ಅಂದಿನಿಂದ ಇಂದಿಗೂ ಈ ಕೃತಿಯ ಮಹಿಮೆ ಮನೆಮನೆಗಳಲ್ಲಿ ಅಳಿಯದೆ ಉಳಿದಿರುವುದೂ ಒಂದು ರಾಜರ ಪವಾಡದಲ್ಲೇ ಅಡಗಿದೆ.

ಹಯಗ್ರೀವನ ಉಪಾಸನೆಯ ಆಳವನ್ನರಿತ ರಾಜರಿಗೆ ಜಗತ್ತಿನ ಸಂತಾಪವನ್ನು ಕಳೆಯುವುದು ದೊಡ್ಡಸಾಧನೆ ಎನಿಸಲಿಲ್ಲ. 'ವ್ಯಾಘ್ರೇಣ ಖಾದ್ಯಮನೋಽಪಿ ನ ವಿಶೇಜ್ಜೈನಮಂದಿರಮ್' 'ತಿನ್ನಬೇಕೆಂದು ಹುಲಿ ಅಟ್ಟಿಸಿಕೊಂಡು ಬಂದರೂ ಜೈನಾಲಯಕ್ಕೆ ಹೊಕ್ಕಬಾರದೆಂದು' ಶಾಸ್ತ್ರದ ಮಾತಿದೆ. ಆದರೆ ರಾಜರು ಜೈನಾಲಯವನ್ನು ಕೃಷ್ಣಾಲಯ ಮಾಡಿ ಒಳಹೋದರು. ಶಿಷ್ಯರೆಲ್ಲರೂ ಗಾಬರಿಯಾದರೆ 'ನವರತ್ನಾಲಂಕೃತ ಪಚ್ಚೆ ಬುದ್ಧವಿಗ್ರಹವನ್ನು ವಿಟ್ಠಲನನ್ನಾಗಿ ಪರಿವರ್ತಿಸಿ ತಂದರು. ಗಣಪತಿಯನ್ನು ಹಯಗ್ರೀವನನ್ನಾಗಿ ಮಾಡಿದರು. ಬ್ರಹ್ಮರಾಕ್ಷಸನನ್ನು ಬ್ರಾಹ್ಮಣನನ್ನಾಗಿ ಮಾಡಿದರು, ಬಂಜೆಗೆ ಮಕ್ಕಳಾಗುವಂತೆ ಮಾಡಿದರು. ಅಮಾವಾಸ್ಯೆ ಚಂದ್ರನನ್ನು ತೋರಿಸಿದರು. ಮೃತ್ತಿಕೆಯಿಂದ ಹಸುವಿನ ಕೆಚ್ಚಲಲ್ಲಿ ಹಾಲೂರುವಂತೆ ಮಾಡಿದರು. ನೆಲೆಗಡಲೆಯನ್ನು ಬಂಗಾರದ ಕಡಲೆಯನ್ನಾಗಿ ಮಾಡಿದರು. ಬದನೆಯನ್ನು - ಔಷಧಿಯನ್ನಾಗಿಯೂ, ಹುಲಿಯನ್ನು ಹಸುವಿನಂತೆಯೂ ಮಾಡಿದರು.

ರಾಜರೊಂದುದಿನ ರಥೋತ್ಸವ ಮಾಡುವಾಗ ಧೋ ಧೋ ಎಂದು ಮಳೆಯು ಸುರಿಯಲಾರಂಭಿಸಿತು. ಹರಿಯಲ್ಲಿ 'ಎನ್ನ ಮೇಲೆ ಕರುಣಾಮೃತದ ರಸಮಳೆಯ ಸುರಿಸೆಂದು' ಸೊಲ್ಲೊಂದನ್ನು ಹೊಸೆದದ್ದೇ ತಡ, ಆರಿದ ದೀಪಗಳು ಉರಿದವು. ತಾವೇ ರಥ ಎಳೆದರು. ಮಳೆಯಲ್ಲಿಯೂ ದೀಪೋತ್ಸವ ಮಾಡುವ ಶಕ್ತಿ. ವಿಷತಿಂದು ಜೀರ್ಣಿಸಿಕೊಳ್ಳುವ ಶಕ್ತಿ, ಜ್ವರವನ್ನು ದಂಡಕ್ಕೆ ಆವಾಹಿಸುವ ಶಕ್ತಿ. ಮೊಸಳೆ - ಇಲಿ - ಸರ್ಪ - ಹುಲಿ - ಮನುಷ್ಯರ ಸ್ವಭಾವವನ್ನೇ ತಿದ್ದಿ ಮೆರೆವ ಶಕ್ತಿ ಋಜುಯೋಗಿಗಳಾದ ರಾಜರಿಗಲ್ಲದೆ ಮತ್ರ್ಯರಿಗೆ ಒಲಿಯಲು ಸಾಧ್ಯವೇ? ರಾಜರ ಮೈಧೂಳು ಭಕ್ತರ ತಲೆಶೂಲೆಯನ್ನು ಓಡಿಸಿದೆ. ರಾಜರ ಶೇಷವಸ್ತ್ರ ಕುಷ್ಠರೋಗವನ್ನಪಹರಿಸಿದೆ. ರಾಜರ ಗಂಡೂಷ ಜಲ ಹುಚ್ಚನ್ನು ಹೊಡೆದಟ್ಟಿದೆ. ರಾಜರ ಉಚ್ಚಿಷ್ಟ ಮೃತ್ಯುವನ್ನೇ

ಹೊಡೆದೊಡಿಸಿದೆ. ಪಾದೋದಕ ಉದರವ್ಯಾಧಿ - ಜ್ವರಗಳನ್ನು ಪರಿಹರಿಸಿದೆ. ಇಂತಹ ಮಹಿಮೆಗಳನ್ನು ಕಂಡ ಕವಿಗಳು ಹೀಗೆ ಬಣ್ಣಿಸುತ್ತಾರೆ -

**ಚಿತ್ರಂ ಗುರೋಸ್ತಚ್ಚರಣಾರವಿಂದಂ ಚಿತ್ರಂ ಗುರೋಸ್ತನ್ನಯನಾರವಿಂದವ್ ।**
**ಚಿತ್ರಂ ಗುರೋಸ್ತದ್ವದನಾರವಿಂದಂ ಚಿತ್ರಂ ಚ ಚಿತ್ರಂ ಪುನರಂಬಚಿತ್ರಮ್॥** ಎಂದು.

ಸ್ವತಃ ರಾಜರೇ ತಮ್ಮ ಉಪಾಸನೆಯ ಸಿದ್ಧಿಯನ್ನು ಕಂಡು ಹೀಗೆ ಉದ್ಗರಿಸಿದ್ದಾರೆ -

**''ನ ಶಸ್ತ್ರೀ ಮೇ ಭೃತ್ಯೋ ನಚ ಕಪಟಚಾಟೂಕ್ತಿಕುಮನುಃ**
**ನ ವಿತ್ತೈರ್ಭೈಷಜ್ಯಂ ನ ಚ ಪದರಯೋ ನಾಪಿ ಖಗರಾಜ್ ।**
**ತಥಾಪ್ಯೇಷಾದೋಷಾನಲಸಪಿಶುನೋಸ್ಮತ್ತ ಭುಜಗೀ**
**ಹಯಗ್ರೀವಶ್ರೀಮಚ್ಚರಣಶರಣಂ ಮಾಂ ಸ್ಪೃಶತಿ ಕಿಮ್ ॥''**

'ಶಸ್ತ್ರಧಾರಿ ಭೃತ್ಯನು ನನ್ನ ಬಳಿ ಇಲ್ಲ. ಕಪಟ ಚಾಟೂಕ್ತಿಯ ಕುಮಂತ್ರವೂ ಇಲ್ಲ. ಹಣಕೊಟ್ಟು ಔಷಧಿಮಾಡುವವನಲ್ಲ. ಗರುಡನೂ ಅಲ್ಲ. ಹೀಗಿದ್ದರೂ ಹೀನಬುದ್ಧಿಯವರಿಂದ ಬಿಡಲ್ಪಟ್ಟ ಸರ್ಪಗಳು ಹಯಗ್ರೀವನ ಪಾದವನ್ನು ಭಜಿಸುವ ನನ್ನನ್ನು ಮುಟ್ಟಲಾರವು ಎಂದಿದ್ದಾರೆ.

ಆದ್ದರಿಂದ ರಾಜರನ್ನು ಸರ್ಪಕಚ್ಚಲಾರದು, ರಾಜರನ್ನು ರಾಜರಿಂದ ಬಂಧಿಸಲಾಗದು, ಕಳ್ಳರಿಂದ ಹೊಡೆಯಲಾಗದು. ಕುಮತಿಗಳ ಕ್ರೌರ್ಯ, ಪ್ರಕೃತಿಯ ಶೌರ್ಯ, ರೋಗರುಜಿನಗಳ ತಾಪ, ಮಾನಸಿಕ ಚಿಂತೆ ಮುಂತಾದ ಪ್ರಕೃತಿಯ ಯಾವ ವಿಭ್ರಮ ವಿಪರ್ಯಾಸಗಳಿಗೆ ತುತ್ತಾಗದೆ ಆಖಣಾಶ್ಮ ಸಮರಂತೆ ಮೆರೆದ ಮಹಾನುಭಾವರು.

ರಾಜರು ಸನ್ಯಾಸಕ್ಕೆ ತೆರಳಿದಾಗ ಪುತ್ರವಿರಹವನ್ನು ತಂದೆ ಸಹಿಸದಾದರು. ರಾಜರು ಶ್ರೀಮದಾಚಾರ್ಯರಂತೆ ನಾರಾಯಣನೆಂಬ ಮಗ ಹುಟ್ಟುವಂತೆ ಮಾಡಿ ಸನ್ಯಾಸಿಯಾದರು. ಸನ್ಯಾಸಿಯಾಗಿದ್ದರೂ ಹಂಪೆಯ ಕೃಷ್ಣರಾಯನು ದಾರಿದ್ರ್ಯದಿಂದ ಕಂಗೆಟ್ಟಾಗ ವಾಲಿ ಭಂಡಾರವನ್ನು ತೋರಿ ಹರಿಸಿದರು. ದುರ್ಭಿಕ್ಷೆಯು ದೇಶದಲ್ಲಿ ತಾಂಡವವಾಡುವಾಗ ಮಂತ್ರಶಕ್ತಿಯಿಂದ ಸುವರ್ಣವೃಷ್ಟಿಸುರಿಸಿದರು. ಶ್ರೀಕೃಷ್ಣಾಷ್ಟಕದಿಂದ ಕೃಷ್ಣಯತಿಗಳ ಜ್ವರ ಪರಿಹರಿಸಿದರು. ಶ್ರೀಶಗುಣದರ್ಪಣದಿಂದ ಬ್ರಾಹ್ಮಣನ ದಾರಿದ್ರ್ಯಪರಿಹಾರ ಮಾಡಿದರು. ದೆಹಲಿ ರಾಜನ ಮಗನನ್ನು ಸಮಾಧಿಯಿಂದ ತೆಗೆಸಿ ಬದುಕಿಸಿದರು. ಭಕ್ತನಿಗಾಗಿ ಭಾಗವತ ರಚಿಸಿಕೊಟ್ಟರು. ಶಿಷ್ಯರು ದಾರಿತಪ್ಪಿದಾಗ 'ಕಂಜಾಕ್ಷಕಾಯಯ್ಯ' ಎಂದು ಪ್ರಾರ್ಥಿಸಿ ಗುರಿಮುಟ್ಟಿಸಿದರು. ಹಾವಿಗೆ ಹೆದರಿದ ಇಲಿಯ ಭೀತಿಯನ್ನೂ ಪರಿಹರಿಸಿದರು. ಭಕ್ತನಿಗಾಗಿ ನದಿಯಲ್ಲಿ ಬಿಸಿನೀರಿನ ಕುಂಡ

ನಿರ್ಮಿಸಿದರು. ನೀರೇ ಇಲ್ಲದ ಪ್ರದೇಶದಲ್ಲಿ ತಮ್ಮ ಕಮಂಡಲುವನ್ನಿಟ್ಟು ನಿತ್ಯವೂ ನೀರು ಇರುವಂತೆ ಮಾಡಿದರು. ಕಣ್ಣಿಲ್ಲದವಗೆ ಕಣ್ಣು ಕೊಟ್ಟರು. ಅಚ್ಯುತರಾಯನ ರೋಗವನ್ನು ಪರಿಹರಿಸಿದರು. ರಾಜರ ಸಂತಾನ ಪರಂಪರೆ ಮುಂದುವರೆಯುವಂತೆ ಅನುಗ್ರಹಿಸಿದರು. ಹೀಗೆ ರಾಜರು ಕರುಣೆಯ ಕಡಲು. ಅವರ ಮಹಿಮೆ ಹರಿಯಂತೆ ಬಲು ಚಿತ್ರ – ಅದ್ಭುತ.

ರಾಜರ ಬಳಿ ಪ್ರತಿವಾದಿಗಳೇ ನಿಲ್ಲದಾದರು. ಹಯಗ್ರೀವನ ಸುತನನ್ನು ಮುಸುಕುವ ಕಾರ್ಬೊಗೆಯುಂಟೇ? ಹೀಗಿದ್ದರೂ ಕೆಲವರು ಜಯಿಸಬಂದರು. ಮಲ್ಲಣ ಪಂಡಿತ, ಕುಂಭಕೋಣದ ಪಂಡಿತರು, ಜಂಗಮರು, ಅದ್ವೈತಿಗಳ ದಂಡೇ ರಾಜರ ಬಳಿ ವಾದಕ್ಕೆಂದು ಬಂದು ಪತಂಗದಂತೆ ಅಪಜಯವೆಂಬ ಸಾವಿಗೆ ಶರಣಾಗತರಾದರು. ಅಹೋಬಲದಲ್ಲಿ ಶೃಂಗೇರಿಯಲ್ಲಿ ರಾಜರ ಜಯವನ್ನು ಸಂಕೇತಿಸುವ ಕುರುಹು–ಜಯಸ್ತಂಭಗಳಿವೆ. ಮಾಘಕಾವ್ಯವನ್ನು ಮೀರಿಸುವ ರುಕ್ಮಿಣೀಶವಿಜಯ ಕಾವ್ಯವು ಆನೆಯ ಮೇಲೆ ಅಲಂಕೃತವಾಗಿ ಮೆರವಣಿಗೆ ಮಾಡಿದ ಇತಿಹಾಸ ಪೂನಾದಲ್ಲಿ ನಡೆದಿದೆ. ರಾಜರವಿದ್ವತ್ತೆಯನ್ನು ಕಂಡು ಕಂಗಾಲಾದ ವೆಂಕಟಪತಿಭೂಪ ಪ್ರಸಂಗಾಭರಣತೀರ್ಥರೆಂದು ಗೌರವಿಸಿದ್ದಾನೆ.

ಕೆಲವರು ಶಾಸ್ತ್ರ ಹೇಳಿದರೆ ಶಸ್ತ್ರದಿಂದ ಚುಚ್ಚುವಂತಿರುತ್ತದೆ. ಕೆಲವರು ಕಾವ್ಯವೆಂದು ಹೇಳಿದರೆ ಶ್ರಾವ್ಯವೆಂದೇ ಅನಿಸುವುದಿಲ್ಲ. ರಾಜರು ಹೊಸೆದ ಕಾವ್ಯವು ಶ್ರಾವ್ಯವಾಗಿಯೂ ಶಾಸ್ತ್ರವೂ ಆಗಿ ಕಾಣುತ್ತದೆ. ಶಾಸ್ತ್ರವನ್ನೂ ಕಾವ್ಯದಂತೆ ಹೇಳುವ ಶೈಲಿ ರಾಜರದ್ದು. ಇದರ ಸವಿಯನ್ನು ಅನುಭವಿಸಿಯೇ ತಿಳಿಯಬೇಕು. ಶ್ರೀಮದಾಚಾರ್ಯರ ಅನುವ್ಯಾಖ್ಯಾನಕ್ಕೆ ತುಲನೆಯಾಗುವ ರಾಜರ ಶಾಸ್ತ್ರಕಾವ್ಯ ಯುಕ್ತಿಮಲ್ಲಿಕಾ ಎಂಬ ಪ್ರೌಢಗ್ರಂಥ. ಇದರಲ್ಲಿ ವ್ಯಾಕರಣ, ಭಾಟ್ಟ – ವೇದಾಂತ – ತರ್ಕ – ಅಲಂಕಾರ – ಲೋಕನೀತಿಗಳು ಪರಸ್ಪರ ಬೆರೆತು ಸರಸವಾಡಿವೆ. ಶಾಸ್ತ್ರರಸಿಕರಿಗೆ ಈ ಪ್ರೌಢಳಾದ ಯುಕ್ತಿಮಲ್ಲಿಕೆಯಲ್ಲಿ ಸಿಗುವ ಸುಖ ಮೋಕ್ಷಾನಂದವನ್ನೂ ಮೀರಿಸುವಂತಹದ್ದು. ಇದರಂತೆ ವ್ಯಾಸರ ಆಜ್ಞೆಯನ್ನು ಸ್ವೀಕರಿಸಿ ಮಹಾಭಾರತಕ್ಕೆ ಲಕ್ಷಾಲಂಕಾರ ರಚಿಸಿ ತಾಯಿಯ ಹರಕೆಯನ್ನು ಪೂರೈಸಿದ್ದಾರೆ. ತಾತ್ಪರ್ಯನಿರ್ಣಯ ವ್ಯಾಖ್ಯಾನ ಪ್ರಕಾಶಿಕಾ, ತತ್ವಪ್ರಕಾಶಿಕಾ ವ್ಯಾಖ್ಯಾನ ಗುರ್ವರ್ಥದೀಪಿಕಾ, ಭೂಗೋಲವರ್ಣನೆ, ವೈಕುಂಠ ವರ್ಣನೆ, ಸರಸಭಾರತೀವಿಲಾಸ, ಹರಿಭಕ್ತಿಲತಾ, ಗುಂಡಕ್ರಿಯೆ, ಸ್ವಪ್ನಪದ, ತುಳಸೀ ಸಂಕೀರ್ತನೆ ಉಪನಿಷದ್ವ್ಯಾಖ್ಯಾನ ಮುಂತಾದ ರಾಜರ ಗ್ರಂಥರಚನೆಯು ಆಳವಾದ ಪಾಂಡಿತ್ಯವನ್ನು ನೀಡಿ ಜೀವರಿಗೆ ಮಹತ್ವವನ್ನು ತುಂಬುವಂತಹವು. ಇಷ್ಟಾಗಿ ಪ್ರತಿನಿತ್ಯವೂ ಹಾಡುವಂತಹ ಸ್ತುತಿಸುವಂತ ಸ್ತೋತ್ರ ಪದ್ಯಗಳನ್ನು ಹೇರಳವಾಗಿ ಕೊಟ್ಟು ಅಧ್ಯಾತ್ಮ ಬಂಧುಗಳ ಕೊರತೆಯನ್ನು ತುಂಬಿಸಿದ ಕೀರ್ತಿ ರಾಜರಿಗೇ ಸಲ್ಲುವಂತಹದ್ದು.

ರಾಜರು ಶ್ರೀಹರಿಗೆ ಸಲ್ಲಿಸಿದ ಸೇವೆಗಳು ಅಭೂತಪೂರ್ವವಾದವುಗಳು. ಸಮಸ್ತ ಜನರ ಕಷ್ಟಗಳನ್ನು ಪರಿಹರಿಸಲೆಂದು ಶ್ರೀಮದಾಚಾರ್ಯರು ದ್ವಾರಕಾಧೀಶ ಶ್ರೀಕೃಷ್ಣನನ್ನು ಪ್ರತಿಷ್ಠಾಪಿಸಿದಂತೆ ರಾಜರು ಬದರಿಯಿಂದ ಒಲಿದು ಬಂದ ತ್ರಿವಿಕ್ರಮದೇವರನ್ನು ಪ್ರತಿಷ್ಠಾಪಿಸಿದರು. ತ್ರಿವಿಕ್ರಮನ ಪ್ರತಿಷ್ಠಾಪನೆಯ ಮೂಲಕ ತಮ್ಮ ಸಮೀರತ್ವವನ್ನು ಸಾಬೀತುಪಡಿಸಿದರು. ಅಯೋಧ್ಯೆಯಿಂದ ಗರುಡ-ಮುಖ್ಯಪ್ರಾಣದೇವರನ್ನು ತಂದು ಪ್ರತಿಷ್ಠಾಪಿಸಿ, ಭಕ್ತರ ಕಷ್ಟಗಳಿಗೆಲ್ಲ ಉತ್ತರಿಸಿದರು. ಶಾಲಗ್ರಾಮ ಕ್ಷೇತ್ರ ಎನಿಸಿದ ಗಂಡಕೀ ನದಿಯಿಂದ ಶಾಲಗ್ರಾಮಗಳನ್ನು ತಂದು ಶ್ರೀನಿವಾಸನಿಗರ್ಪಿಸಿದರು. ಕೃಷ್ಣನ ಗರ್ಭಗುಡಿ ಪಕ್ಕದಲ್ಲಿ ಮತ್ತು ಪಾಜಕದಲ್ಲಿ ಆಚಾರ್ಯರ ಪ್ರತೀಕಗಳನ್ನು ಪ್ರತಿಷ್ಠಾಪಿಸಿದರು. ಸುಬ್ರಹ್ಮಣ್ಯ - ಧರ್ಮಸ್ಥಳಗಳ ಇಂದಿನ ಮಹಿಮೆಗಳು ರಾಜರ ಹಸ್ತಸ್ಪರ್ಶದ ವೈಭವದಿಂದ.

ತೀರ್ಥಕ್ಷೇತ್ರ ಸಂಚಾರ ನಿಮಿತ್ತದಿಂದ ರಾಜರು ಅನೇಕ ಮುಖವಾದ ಲೋಕೋಪಕಾರಗಳನ್ನು ಮಾಡಿದ್ದಾರೆ. ಲೋಭಿಗಳನ್ನು ಉದಾರಿಗಳನ್ನಾಗಿ ಮಾಡಿದ್ದಾರೆ. ದರಿದ್ರರನ್ನು ಧನಿಕರನ್ನಾಗಿಸಿದ್ದಾರೆ. ದಂಡದಿಂದ ತೀರ್ಥನೀಡಿದ್ದಾರೆ. ಕಾಲಿಟ್ಟು ನೀರು ಬರಿಸಿದ್ದಾರೆ. ಬೆರಳಿನಿಂದ ಬಂಡೆ ಒಡೆದಿದ್ದಾರೆ. ಕೆಳಗೆ ಬೀಳುವ ಶಿಲೆಯನ್ನು ಹೆಸರಿನಿಂದಲೇ ನಿಲ್ಲಿಸಿದ್ದಾರೆ. ಹೀಗೆ ಒಂದೇ ಎರಡೇ? ರಾಜರೆಂಬ ಕಲ್ಪತರುವಿನ ವೈಭವದಿಂದ ಭಕ್ತರು ಪಡೆಯದ ಇಷ್ಟಾರ್ಥಗಳೇ ಇಲ್ಲ. (ಇದನ್ನು ಯುಕ್ತಿಮಲ್ಲಿಕಾ ಎಂಬ ಪುಸ್ತಕದಿಂದ ಸಂಗ್ರಹಿಸಿದ್ದು).

ಇಂತಹ ಶ್ರೇಷ್ಠರಾದ ಶ್ರೀವಾದಿರಾಜಗುರುಸಾರ್ವಭೌಮರ ಆರಾಧನೆಯನ್ನು ಭಕ್ತಿಯಿಂದ ಆಚರಿಸೋಣ.

## ಶ್ರೀ ವ್ಯಾಸರಾಜರ ಆರಾಧನೆ

## ಶ್ರೀವ್ಯಾಸತೀರ್ಥರು - ತಾತ್ಪರ್ಯಚಂದ್ರಿಕಾ

ಶ್ರೀವ್ಯಾಸತೀರ್ಥರ ಮುಖಕಮಲದಿಂದ ಧುಮುಕಿದ ನ್ಯಾಯಗಂಗಾಪ್ರವಾಹವೇ 'ವ್ಯಾಸ- ತ್ರಯ'. ವ್ಯಾಸತ್ರಯಗಳಲ್ಲಿಯೂ ಅತ್ಯಂತ ಶ್ರೇಷ್ಠವಾದ ಮಹೋನ್ನತ ಕೃತಿಯೆಂದರೆ 'ತಾತ್ಪರ್ಯ- ಚಂದ್ರಿಕಾ'. ಆದ್ದರಿಂದಲೇ ಶ್ರೀವ್ಯಾಸತೀರ್ಥರಿಗೆ ಇತಿಹಾಸ ನೀಡಿದ ಬಿರುದು ''ಚಂದ್ರಿಕಾ-ಚಾರ್ಯ''ರೆಂದು.

ಮೊದಲು ಚಂದ್ರಿಕಾಚಾರ್ಯರ ಜೀವನವನ್ನು ಸ್ವಲ್ಪ ತಿಳಿಯೋಣ. ಸರ್ವಜ್ಞ ಸಿಂಹಾಸನದ ಪರಂಪರೆಯಲ್ಲಿ ಬಂದ ಸಿದ್ಧಪುರುಷರು ಶ್ರೀ ಬ್ರಹ್ಮಣ್ಯತೀರ್ಥರು. ಇವರು ಶ್ರೀ ವ್ಯಾಸತೀರ್ಥರಿಗೆ ಆಶ್ರಮ ನೀಡಿದ ಗುರುಗಳು. ಇವರನ್ನು ಚಂದ್ರಿಕಾಚಾರ್ಯರು ಗ್ರಂಥದ ಪ್ರಾರಂಭದಲ್ಲಿ ಹೀಗೆ ಪ್ರಶಂಸಿಸುತ್ತಾರೆ.

**ಕಂಸಧ್ವಂಸಿಪದಾಂಭೋಜಸಂಸಕ್ತೋ ಹಂಸಪುಂಗವಃ ।**
**ಬ್ರಹ್ಮಣ್ಯಗುರುರಾಜಾಖ್ಯೋ ವರ್ತತಾಂ ಮಮ ಮಾನಸೇ ॥**

''ಎಲ್ಲಾ ಗುರುಗಳಿಗೂ ರಾಜರಾದವರು ಶ್ರೀ ಬ್ರಹ್ಮಣ್ಯತೀರ್ಥರು; ಕೃಷ್ಣನ ಪಾದಕಮಲಗಳಲ್ಲಿ ಆಸಕ್ತರಾದ ಪರಮಹಂಸರಿವರು. ನನ್ನ ಮನಸ್ಸೆಂಬ ಸರೋವರದಲ್ಲಿ ನಿರಂತರ ನೆಲಸಲಿ''.

ಮೈಸೂರು ಜಿಲ್ಲೆಯ ಸೋಸಲೆಯ ಬಳಿ ಇರುವ ಬನ್ನೂರು ಗ್ರಾಮದಲ್ಲಿ ಶ್ರೀವ್ಯಾಸತೀರ್ಥರು ಜನಿಸಿದರು. ಅವರ ತಂದೆ ಬಲ್ಲಣ್ಣಸುಮತಿ. ಇವರು ರಾಮಾಚಾರ್ಯರ ಆರು ಗಂಡುಮಕ್ಕಳಲ್ಲಿ ಕೊನೆಯವರು. ಮೊದಲನೇ ಹೆಂಡತಿಯಲ್ಲಿ ಸಂತಾನವಾಗದಿದ್ದಾಗ ಎರಡನೆಯ ಮದುವೆ- ಯಾದರು. ಎರಡನೆಯ ಹೆಂಡತಿಯು ಚೆನ್ನಪಟ್ಟಣದಲ್ಲಿ ಬ್ರಹ್ಮಣ್ಯತೀರ್ಥರ ಅನುಗ್ರಹದಿಂದ ಒಬ್ಬ ಮಗಳು ಇಬ್ಬರು ಗಂಡುಮಕ್ಕಳಿಗೆ ಜನ್ಮನೀಡಿದಳು. ಅವರಲ್ಲಿ ಕಿರಿಯವನೇ ಮುಂದೆ ವ್ಯಾಸತೀರ್ಥ-ರಾದರು. ಆ ಕಿರಿಯ ಬಾಲಕನಿಗೆ ಐದನೇ ವರ್ಷದಲ್ಲಿ ಅಕ್ಷರಾಭ್ಯಾಸ ಮಾಡಿಸಿ ಏಳನೇ ವರ್ಷದಲ್ಲಿ ಉಪನಯನ ಮಾಡಲಾಯಿತು. ಆನಂತರ ನಾಲ್ಕು ವರ್ಷಗಳ ಕಾಲ ಗುರುಕುಲವಾಸ ಮಾಡಿದರು. ಈ ಸಂದರ್ಭದಲ್ಲಿ ದಂಪತಿಗಳೂ ಬ್ರಹ್ಮಣ್ಯತೀರ್ಥರಿಗೆ ತಮ್ಮ ಎರಡನೇ ಮಗನನ್ನು ಒಪ್ಪಿಸುವುದಾಗಿ ಮಾತು ಕೊಟ್ಟಿದ್ದರು. ಬ್ರಹ್ಮಣ್ಯತೀರ್ಥರು ಇದು ಸರಿಯಾದ ಸಮಯವೆಂದು ಅರಿತು ದಂಪತಿಗಳಿಗೆ ಕೊಟ್ಟ ಮಾತನ್ನು ಜ್ಞಾಪಿಸಿದರು. ಮೊದಲು ಸ್ವಲ್ಪ ಬೇಸರವಾದರೂ ಕೊನೆಯಲ್ಲಿ ತಮ್ಮ ಮಗನನ್ನು ತಂದೊಪ್ಪಿಸಲು ನಿರ್ಧರಿಸಿದರು. ಸ್ವತಃ ದಂಪತಿಗಳೇ ಬಂದು ಬ್ರಹ್ಮಣ್ಯತೀರ್ಥರಿಗೆ ಮಗನನ್ನು ಸಮರ್ಪಿಸಿದರು. ಶಿಷ್ಯನ ಪ್ರೌಢಿಮೆಯನ್ನು ಗಮನಿಸಿ ಗುರುಗಳಿಗೆ ಅತ್ಯಂತ ಆನಂದವಾಯಿತು. ಕಾಲಕ್ರಮದಲ್ಲಿ ಅವರಿಗೆ ಸನ್ಯಾಸ ದೀಕ್ಷೆಯನ್ನು ನೀಡಬೇಕೆಂದು ಚಿಂತಿಸುತ್ತಿದ್ದರು. ಇದನ್ನು ಅರಿತ ಬಾಲಕನು ಸನ್ಯಾಸಾಶ್ರಮಕ್ಕೆ ತಾನು ಯೋಗ್ಯನಲ್ಲವೆಂದು ಭಾವಿಸಿ ಗುರುಗಳ ಆಶ್ರಮದಿಂದ ಹೇಳದೆ ಕೇಳದೆ ಹೊರಬಂದನು. ಬಹುದೂರ ಧಾವಿಸಿ ಆಯಾಸಗೊಂಡಾಗ ಮರದ ನೆರಳಿನಲ್ಲಿ ಮಲಗಿದನು. ಆವಾಗ ಸ್ವಪ್ನದಲ್ಲಿ ಭಗವಂತನು ದರ್ಶನವಿತ್ತು ಕರ್ತವ್ಯಕರ್ಮವನ್ನು ಉಪದೇಶಿಸಿದನು. ಏನೂ ತಿಳಿಯದ ಬಾಲಕ ಆಶ್ಚರ್ಯಚಕಿತನಾಗಿ ಆಶ್ರಮಕ್ಕೆ ಮರಳಿ ಬಂದನು. ಅನಂತರ ಕೆಲವೇ ದಿವಸಗಳಲ್ಲಿ ಶ್ರೀ ಬ್ರಹ್ಮಣ್ಯತೀರ್ಥರು ಅವರಿಗೆ ಸನ್ಯಾಸದೀಕ್ಷೆಯನ್ನು ನೀಡಿ ''ವ್ಯಾಸತೀರ್ಥ'' ಎಂದು ನಾಮಕರಣ ಮಾಡಿದರು.

ಆಶ್ರಮ ಸ್ವೀಕರಿಸಿದ ಕೆಲವು ದಿನಗಳ ಕಾಲ ತಮ್ಮ ಗುರುಗಳ ಬಳಿಯೇ ಇದ್ದರು. ಸುಮಾರು ಕ್ರಿ.ಶ. ೧೪೭೫ರಲ್ಲಿ ಗುರುಗಳಾದ ಬ್ರಹ್ಮಣ್ಯತೀರ್ಥರು ಅಬ್ಬೂರು ಕ್ಷೇತ್ರದಲ್ಲಿ

ವೃಂದಾವನಸ್ಥರಾದರು. ಪ್ರಾಯಃ ಆವಾಗ ಶ್ರೀವ್ಯಾಸತೀರ್ಥರಿಗೆ ಹದಿನೈದು ವರ್ಷವಿರಬಹುದು. ಅನಂತರ ದಕ್ಷಿಣ ಭಾರತದಲ್ಲಿ ಪ್ರಸಿದ್ಧವಾದ ಕಂಚಿ ಕ್ಷೇತ್ರಕ್ಕೆ ಹೋಗಿ ಅನೇಕ ವರ್ಷಗಳ ಕಾಲ ಅನೇಕ ವಿದ್ವಾಂಸರಿಂದ ಷಡ್ದರ್ಶನಗಳನ್ನು ಅಧ್ಯಯನ ಮಾಡಿದರು. ಅದ್ವೈತ, ವಿಶಿಷ್ಟಾದ್ವೈತ, ಮೀಮಾಂಸಾ, ನ್ಯಾಯ, ವ್ಯಾಕರಣ ಮೊದಲಾದ ಶಾಸ ಗಳಲ್ಲಿ ಅಪ್ರತಿಮವೈದುಷ್ಯವನ್ನು ಸಂಪಾದಿಸಿದರು. ಮುಂದೆ ನ್ಯಾಯಾಮೃತ, ತಾತ್ಪರ್ಯಚಂದ್ರಿಕಾ, ತರ್ಕತಾಂಡವ ಮೊದಲಾದ ಮೇರುಕೃತಿಗಳನ್ನು ರಚಿಸಲು ಭದ್ರಬುನಾದಿಯನ್ನು ನಿರ್ಮಾಣ ಮಾಡಿಕೊಂಡರು. ವಿದ್ಯಾಭ್ಯಾಸ ಮುಗಿಸಿದ ಅನಂತರ ಮುಳಬಾಗಿಲು ಕ್ಷೇತ್ರದಲ್ಲಿದ್ದ ಶ್ರೀಪಾದರಾಜರ ಸನಿಹಕ್ಕೆ ಬಂದರು. ಆಗಿನ ಕಾಲದಲ್ಲಿ ಕಂಚಿಯಂತೇ ಮುಳಬಾಗಿಲು ಸಹ ಹೆಸರಾಂತ ವಿದ್ಯಾಕೇಂದ್ರವಾಗಿತ್ತು. ಶ್ರೀಪಾದರಾಜರ ಬಳಿ ಶಿಷ್ಯತ್ವವನ್ನು ವಹಿಸಿ ದ್ವೈತವೇದಾಂತವನ್ನು ಅಮೂಲಾಗ್ರವಾಗಿ ಅಧ್ಯಯನ ಮಾಡಿದರು. ಶ್ರೀಪಾದರಾಜರಿಂದಲೇ ತಾವು ವಿದ್ಯಾಭ್ಯಾಸ ಮಾಡಿದ್ದಾರೆಂಬುದನ್ನು ಉಪಾಽಖಂಡನ ಟೀಕೆಯ ಮಂದಾರಮಂಜರಿಯಲ್ಲಿ ತಾವೇ ಹೇಳಿಕೊಂಡಿದ್ದಾರೆ. – ಲಕ್ಷ್ಮೀನಾರಾಯಣಾಖ್ಯಾತ್ ದ್ವೈತಕುಲತಿಲಕಾದಽತಮಧ್ವಶಾಸಾ –

ವೃತೇನ ವ್ಯಾಸಯತಿನಾ ವಿರಚಿತ ಮಂದಾರಮಂಜರಿ ಸಮಾಪ್ತಾ – ಎಂದು.

ಶ್ರೀವ್ಯಾಸತೀರ್ಥರು ಸುಮಾರು ಐದಾರು ವರ್ಷಗಳಷ್ಟು ಕಾಲ ಕೇವಲ ದ್ವೈತಶಾಸಾ – ಧ್ಯಯನವನ್ನು ಶ್ರೀಪಾದರಾಜರ ಬಳಿ ಮಾಡಿದರು. ಅಧ್ಯಯನದ ಅನಂತರ ಒಮ್ಮೆ ಚಂದ್ರಗಿರಿಗೆ ಬಂದಾಗ ನರಸಿಂಹ ಎಂಬ ರಾಜನು ಅಭೂತಪೂರ್ವಸ್ವಾಗತದಿಂದ ಆಹ್ವಾನಿಸಿದನು. ಕೆಲಕಾಲ ಅಲ್ಲಿಯೇ ವಾಸಮಾಡಿದರು. ಗಂಗೇಶೋಪಾಧ್ಯಾಯನ ತತ್ವಚಿಂತಾಮಣಿ ಗ್ರಂಥದ ಬಗ್ಗೆ ವಿಶೇಷ ಚರ್ಚೆ ನಡೆಸಿದರು. ಅದೇ ಸಂದರ್ಭದಲ್ಲಿ ತಿರುಪತಿ ಶ್ರೀನಿವಾಸನ ಪೂಜಾಕೈಂಕರ್ಯದ ಸೌಭಾಗ್ಯವೂ ಪ್ರಾಪ್ತವಾಯಿತು. ಶ್ರೀ ವ್ಯಾಸತೀರ್ಥರು ಹನ್ನೆರಡು ವರ್ಷಗಳ ಕಾಲ ಶ್ರೀನಿವಾಸನನ್ನು ಪೂಜಿಸಿದರೆಂಬ ದಾಖಲೆಯಿದೆ. ಕೆಲವೊಮ್ಮೆ ಮಧ್ಯದಲ್ಲಿ ಪೂಜೆಯನ್ನು ಶಿಷ್ಯರಿಗೆ ವಹಿಸಿ ಸಂಚಾರಕ್ಕೂ ಹೋಗಿ ಬರುತ್ತಿದ್ದರು. ಸುಮಾರು ೧೪೮೬ರಿಂದ ೯೮ರ ತನಕ ತಿರುಪತಿಯಲ್ಲಿ ನೆಲೆಸಿ ೯೮ರ ಅನಂತರ ಸ್ವಲ್ಪ ಕಾಲ ಚಂದ್ರಗಿರಿಯನ್ನು ಬಿಟ್ಟು ಎಲ್ಲಿಯೂ ಹೋಗದೆ ಕೇವಲ ಪಾಠಪ್ರವಚನ ಗ್ರಂಥರಚನೆಗಳಲ್ಲಿ ತಲ್ಲೀನರಾಗಿದ್ದರು. ಅನಂತರ ವ್ಯಾಸತೀರ್ಥರು ವಿಜಯನಗರಕ್ಕೆ ತೆರಳಿದರು. ಆಸ್ಥಾನದ ವರಿಷ್ಠಗುರುವೆಂದು ಅಲ್ಲಿನ ರಾಜನು ಗೌರವಿಸಿದನು. ಆದರೆ ಅನೇಕ ಜನರು ಮತ್ತು ವಿದ್ವಜ್ಜನರೂ ಸಹ ಶ್ರೀ ವ್ಯಾಸತೀರ್ಥರನ್ನು ಪ್ರತಿಭಟಿಸಿದರು. ಕಳಿಂಗದ ಬಸವಭಟ್ಟನ ನೇತೃತ್ವದಲ್ಲಿ ತಮ್ಮ ಬಿರುದು ಪತ್ರಗಳನ್ನು ಅರಮನೆಯ ಕಂಬಗಳಿಗೆ ತೂಗುಹಾಕಿ ವಾಕ್ಯಾರ್ಥಕ್ಕೆ ಬರಲು ಕೆಣಕಿದರು.

ಸುಮಾರು ೩೦ ದಿನಗಳ ವ್ಯಾಕ್ಯಾರ್ಥವನ್ನು ನಡೆಸಿ ಎಲ್ಲಾ ವಿದ್ವಾಂಸರುಗಳನ್ನು ಶ್ರೀವ್ಯಾಸತೀರ್ಥರು ಪರಾಭವಗೊಳಿಸಿದರು.

ಸೋಮನಾಥಕವಿಯು 'ವ್ಯಾಸಯೋಗಚರಿತೆ' ಎಂಬ ಗ್ರಂಥದಲ್ಲಿ ವ್ಯಾಸತೀರ್ಥರ ಜೀವನದ ಒಂದು ಘಟನೆಯನ್ನು ವರ್ಣಿಸಿದ್ದಾನೆ. ಒಮ್ಮೆ ಕಳಿಂಗ ದೇಶದ ಅರಸನಿಂದ ವಿಮರ್ಶೆಗಾಗಿ ಕಳುಹಿಸಿದ್ದ ಅದ್ವೈತ ಗ್ರಂಥವೊಂದನ್ನು ಕೃಷ್ಣದೇವರಾಯನು ವ್ಯಾಸತೀರ್ಥರಿಗೆ ನೀಡಿದನು. ವ್ಯಾಸತೀರ್ಥರು ಪಂಡಿತರಾಗಿದ್ದಲ್ಲಿ ಈ ಅದ್ವೈತಗ್ರಂಥವನ್ನು ಖಂಡಿಸಲಿ ಎಂಬ ಅಹಂಕಾರದಿಂದ ಇದನ್ನು ಕಳುಹಿಸಿದ್ದನು. ಆ ಸಂದರ್ಭದಲ್ಲಿ ಶ್ರೀವ್ಯಾಸತೀರ್ಥರು ಅದರ ಖಂಡನೆಯನ್ನು ಸಣ್ಣ ಗ್ರಂಥದಿಂದಲೇ ಮಾಡಿ ಪುನಃ ಹಿಂತಿರುಗಿಸಿದರು.

ವ್ಯಾಸತೀರ್ಥರು ಒಟ್ಟು ಎಂಟು ಗ್ರಂಥಗಳನ್ನು ರಚಿಸಿದ್ದಾರೆ. ಅವರು ರಚಿಸಿದ ಪ್ರಮುಖ- ಗ್ರಂಥಗಳು ಮೂರು. ನ್ಯಾಯಾಮೃತ, ತರ್ಕತಾಂಡವ ಮತ್ತು ಚಂದ್ರಿಕಾ. ಇವನ್ನು ''ವ್ಯಾಸತ್ರಯ'' ಎನ್ನುವುದು ವಾಡಿಕೆ. ಅವರ ಉಳಿದ ಕೃತಿಗಳಲ್ಲಿ ಪ್ರಥಮಸ್ಥಾನ ಭೇದೋಜ್ಜೀವನಕ್ಕೆ ಸಲ್ಲತಕ್ಕದ್ದು. ಅನಂತರ ಖಂಡನತ್ರಯ ಹಾಗೂ ತತ್ವವಿವೇಕಕ್ಕೆ ರಚಿಸಿರುವ ಶಾಸಿ ೀಯಪ್ರಕ್ರಿಯೆ ಮತ್ತು ಪಾರಿ- ಭಾಷಿಕಶಬ್ದಗಳನ್ನೊಳಗೊಂಡ ಗಂಭೀರಟಿಪ್ಪಣಿಗಳದ್ದು. (ಇವನ್ನು ಮಂದಾರಮಂಜರಿ ಎಂದು ಕರೆದಿದ್ದಾರೆ.) ಮಧ್ವಾಚಾರ್ಯರ ಮೂವತ್ತೇಳು ಗ್ರಂಥಗಳ ಉಲ್ಲೇಖವಿರುವ ಗ್ರಂಥಮಾಲಿಕಾ- ಸ್ತೋತ್ರ ಎಂಬುದೂ ಸಹ ಇವರ ರಚನೆಯೆಂದು ಹೇಳಲಾಗುತ್ತದೆ. ಸಾಮಾನ್ಯವಾಗಿ ಮಧ್ವಮತದ ಪ್ರಮುಖ ಒಂಭತ್ತು ಪ್ರಮೇಯಗಳನ್ನು ತಿಳಿಸುವ ಶ್ಲೋಕವಾದ ''ಶ್ರೀಮನ್ಮಧ್ವಮತೇ ......'' ಎಂಬುದೂ ಅವರ ರಚನೆಯೆಂದು ಹೇಳುತ್ತಾರೆ.

ತಾತ್ಪರ್ಯಚಂದ್ರಿಕಾ ಅಥವಾ ಸಂಕ್ಷೇಪವಾಗಿ ''ಚಂದ್ರಿಕಾ'' ಎಂದು ಪ್ರಸಿದ್ಧಿ ಇರುವ ಗ್ರಂಥವು ದ್ವೈತವೇದಾಂತದ ಸೂತ್ರಪ್ರಸ್ಥಾನದ ಶ್ರೀಜಯತೀರ್ಥರ 'ತತ್ವಪ್ರಕಾಶಿಕಾ'ಕ್ಕೆ ಬರೆದಿರುವ ವಿಸ್ತೃತಟಿಪ್ಪಣಿಯಾಗಿದೆ. ಇದು ನ್ಯಾಯಾಮೃತದ ನಂತರ ರಚಿಸಿದ್ದೆಂಬುದು ಸುಸ್ಪಷ್ಟ. ಏಕೆಂದರೆ ಅನೇಕಸಂದರ್ಭಗಳಲ್ಲಿ ಈ ಕೃತಿಯಲ್ಲಿ ನ್ಯಾಯಾಮೃತಗ್ರಂಥದ ಉಲ್ಲೇಖವಿದೆ. ಇದು ಟಿಪ್ಪಣಿ ಗ್ರಂಥವೆಂದು ಪ್ರಸಿದ್ಧಿ ಪಡೆದಿದ್ದರೂ ವಸ್ತುತಃ ಇದು ಸೂತ್ರಪ್ರಸ್ಥಾನದಲ್ಲಿ ಶಂಕರ, ರಾಮಾನುಜ ಮತ್ತು ಮಧ್ವ- ಇವರು ಬರೆದಿರುವ ಭಾಷ್ಯಗಳ ಸಮಗ್ರ ತೌಲನಿಕ ಅಧ್ಯಯನರೂಪವಾಗಿದೆ. ಈ ಕೃತಿಯಲ್ಲಿ ಶ್ರೀವ್ಯಾಸತೀರ್ಥರು ಅದ್ವೈತಭಾಷ್ಯದ ಮೇಲೆ ರಚಿಸಲ್ಪಟ್ಟ ಭಾಮತೀ, ಕಲ್ಪತರು, ಪಂಚಪಾದಿಕಾ, ವಿವರಣ ಮೊದಲಾದ ಟೀಕಾಟಿಪ್ಪಣಿಗಳನ್ನೂ, ಶ್ರುತಪ್ರಕಾಶ ಮತ್ತು ಅಽಕರಣ- ಸಾರಾವಲೀ ಎಂಬ ವಿಶಿಷ್ಟಾದ್ವೈತಗ್ರಂಥಗಳನ್ನೂ, ನ್ಯಾಯಸುಧಾ, ತತ್ವಪ್ರಕಾಶಿಕಾ ಮುಂತಾದ

ದ್ವೈತಗ್ರಂಥಗಳನ್ನೂ ವಿಮರ್ಶೆಮಾಡಿದ್ದಾರೆ. ಹೀಗೆ ಈ ಗ್ರಂಥವು ತತ್ವಶಾಸ ಕ್ಕೆ ನೀಡಿದ ಅಮೋಘಸ್ವತಂತ್ರಕೃತಿಯಾಗಿದೆ.

ಗ್ರಂಥಕಾರರು ತಮ್ಮ ಗ್ರಂಥದಲ್ಲಿ ಬ್ರಹ್ಮಸೂತ್ರಗಳ ಪದಾನುಸಾರಿ ಅರ್ಥ ಹಾಗೂ ತಾತ್ಪರ್ಯ- ವನ್ನು ಸಮರ್ಪಕವಾಗಿ ಹೇಳುವಲ್ಲಿ ಶ್ರೀಮಧ್ವಾಚಾರ್ಯರು ಮತ್ತು ಅವರ ಅನುಯಾಯಿಗಳು ಮಾತ್ರ ಯಶಸ್ವಿಗಳಾಗಿದ್ದಾರೆಂದೂ, ಮಿಕ್ಕ ಆಚಾರ್ಯರ ಭಾಷ್ಯಗಳು ಮತ್ತು ಅವರ ಅನುಯಾಯಿಗಳು ಬರೆದ ಟೀಕಾಟಿಪ್ಪಣಿಗಳು ಸಾಮಾನ್ಯವಾಗಿ ಅಷ್ಟು ಸಮಂಜಸವಾಗಿಲ್ಲವೆಂದೂ, ಅನೇಕ ಸಂದರ್ಭಗಳಲ್ಲಿ ಸೂತ್ರಕ್ಕೂ ಅವರು ಹೇಳಿರುವ ಅರ್ಥಕ್ಕೂ ಸಂಬಂಧವೇ ಇರುವುದಿಲ್ಲ- ವೆಂದು ಸ್ಪಷ್ಟವಾಗಿ ಹೇಳಿದ್ದಾರೆ.

ಅಂದರೆ ಈ ಗ್ರಂಥದಲ್ಲಿ ಎರಡು ದೃಷ್ಟಿಕೋನಗಳಿಂದ ಅಧ್ಯಯನವನ್ನು ಪ್ರಸ್ತುತ ಪಡಿಸಿ- ದಂತಾಯಿತು. (೧) ಸಿದ್ಧಾಂತದ ಪ್ರಕಾರ ಹೇಳಿರುವ ಅರ್ಥ ಸುಸಂಗತವಾದುದು; ತರ್ಕ ಸಮ್ಮತವಾದುದು ಎಂದು ಸಮರ್ಥಿಸುವುದು; (೨) ಪರಮತದವರು ಹೇಳಿದ ಅರ್ಥವನ್ನು ವಿಮರ್ಶಿಸಿ ಅದು ಯುಕ್ತಿಯುಕ್ತವಲ್ಲವೆಂದು ಪ್ರಮಾಣಪೂರ್ವಕವಾಗಿ ಸ್ಥಾಪಿಸುವುದು.

(೧) ಮೊದಲನೆಯದ್ದರಲ್ಲಿ ಅವರು ಶ್ರೀಮಧ್ವಾಚಾರ್ಯರು (ಸೂತ್ರಗಳಿಗೂ, ಅಽಕರಣ- ಗಳಿಗೂ) ಹೇಳಿರುವ ಅರ್ಥವನ್ನು ಪುಷ್ಟೀಕರಿಸುವಾಗ ನಡೆಸಿರುವ ಚರ್ಚೆಯಲ್ಲಿ ''ಅನೇಕ ಪ್ರಮಾಣಗಳಿಂದ, ಹಾಗೂ ವ್ಯಾಕರಣ ಮೀಮಾಂಸಾದಿಶಾಸ ಗಳಲ್ಲಿ ಹೇಳಿರುವ ನ್ಯಾಯ ಹಾಗೂ ನಿರ್ಣಯಿಸುವ ಕ್ರಮಾನುಸಾರಿಯಾಗಿ ಹೊಸ ಯುಕ್ತಿಯುಕ್ತ ಸಮರ್ಥನೆ''ಯನ್ನು ಕಾಣಬಹುದು. ಅಂತೆಯೇ ಮಾಧ್ವಪ್ರಾಚೀನಟೀಕಾಟಿಪ್ಪಣಿಕಾರರು ಈ ನಿಟ್ಟಿನಲ್ಲಿ ಭಿನ್ನ ಭಿನ್ನ ದೃಷ್ಟಿಕೋನದಿಂದ ಹೇಳಿರುವ ಅರ್ಥಗಳ ಸ್ವರಸಸಾಮರಸ್ಯವನ್ನು ಸ್ಥಾಪಿಸಿದ್ದಾರೆ. (ಜ್ಯೋತಿರಽಕರಣ -೧/೧/೧೦ಅಽ; ಭೋಕಾ ್ಯಪತ್ಯಽಕರಣ ೨/೧/೫ಅಽ.ಗಳಲ್ಲಿ ನೋಡಬಹುದು.) ಅನೇಕ ಸಂದರ್ಭಗಳಲ್ಲಿ ಸೂತ್ರ, ಭಾಷ್ಯ ಹಾಗೂ ಟೀಕಾಗಳಲ್ಲಿ ಅಸ್ಪಷ್ಟವಾಗಿರುವುದನ್ನು --

**''ಸೂತ್ರೇ ಭಾಷ್ಯೇಧಿನುಭಾಷ್ಯೇ ಚ ಸನ್ನ್ಯಾಯವಿವೃತೌ ತಥಾ ।**
**ಟೀಕಾಸು ಚ ಯದಸ್ಪಷ್ಟಂ ತಚ್ಚ ಸ್ಪಷ್ಟೀಕರಿಷ್ಯತೇ ॥''**

ಎಂದು ತಾವೇ ಹೇಳಿಕೊಂಡಂತೆ ಸ್ಪಷ್ಟೀಕರಿಸಿದ್ದಾರೆ. ಅವಶ್ಯಕವೆನಿಸಿದಾಗ ಅನುವ್ಯಾಖ್ಯಾನ, ವಿಷ್ಣುತತ್ವನಿರ್ಣಯ, ನ್ಯಾಯವಿವರಣಗಳಿಂದ ಅನೇಕವಾಕ್ಯಗಳನ್ನು ಉಲ್ಲೇಖಿಸುತ್ತಾರೆ.

(೧) ಎರಡನೆಯದಾಗಿ ಪರಮತವಿಮರ್ಶೆಯನ್ನು ಮಾಡುವಾಗ ಶ್ರೀವ್ಯಾಸತೀರ್ಥರು ಪರವಾದಿಗಳ, ಅದರಲ್ಲೂ ವಿಶೇಷವಾಗಿ ಶಂಕರ ಹಾಗೂ ರಾಮಾನುಜರ, ಸೂತ್ರಭಾಷ್ಯ, ಅವುಗಳ ಪ್ರಸಿದ್ಧವಾದ ಟೀಕಾಟಿಪ್ಪಣಿಗಳಲ್ಲಿ ಹೇಳಿರುವ ಪ್ರತಿಯೊಂದು ಅSಕರಣ ಮತ್ತು ಪ್ರತಿಸೂತ್ರದ ಅರ್ಥವೂ ಅಸಂಗತವೆಂದು ಹೇಳಿ, ನಿರ್ದಾಕ್ಷಿಣ್ಯವಾಗಿ ಪುಂಖಾನುಪುಂಖವಾಗಿ ಲೋಪದೋಷ- ಗಳನ್ನು ತೋರಿಸಿಕೊಟ್ಟಿದ್ದಾರೆ.

**''ಪ್ರತಿಸೂತ್ರಂ ಪ್ರಕಾಶ್ಯೇತೇ ಘಟನಾಘಟನೇ ಮಯಾ ।**
**ಸ್ವೀಯಾನ್ಯಪಕ್ಷಯೋಃ ಸಮ್ಯಕ್ ವಿದಾಂ ಕುರ್ವಂತು ಸೂರಯಃ ॥''**

ಅವರ ವಿಮರ್ಶೆಯ ತೀಕ್ಷ್ಣತೆಯನ್ನು ಪರಿಚಯ ಮಾಡಿಕೊಡಲು ಒಂದು ಉದಾಹರಣೆ ಸಾಕು -- ''ಭೂಮಾ ಸಂಪ್ರಸಾದಾದಧ್ಯುಪದೇಶಾತ್'' (ಬ್ರ.ಸೂ. ೧/೩/೮). ಈ ಸೂತ್ರಕ್ಕೆ ಮಧ್ವಾಚಾರ್ಯರು ಹೇಳಿರುವ ಅರ್ಥವು ಸೂತ್ರದಲ್ಲಿ ''ಚ''ಕಾರವು ಘಟಿತವಾಗಿಲ್ಲದಿರುವ ಕಾರಣ ಅಸಂಗತವೆಂದು ಒಬ್ಬ ಆಧುನಿಕ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ವ್ಯಾಸತೀರ್ಥರು 'ಮಧ್ವಾಚಾರ್ಯರು ಹೇಳಿರುವ ಅರ್ಥವೇ ಸಮಂಜಸ ಹಾಗೂ ಸಮರ್ಥನೀಯ; ಇತರರು ಹೇಳಿರುವುದು ಅಸಂಗತ'ವೆಂದು ಪ್ರತಿಪಾದಿಸಿದ್ದಾರೆ. ಮಧ್ವಾಚಾರ್ಯರು ಹೇಳುವಂತೆ ಬ್ರಹ್ಮನ ಭೂಮತ್ವವನ್ನು ಸಾSಸಲು 'ಸಂಪ್ರಸಾದಾತ್' ಮತ್ತು 'ಅಧ್ಯುಪದೇಶಾತ್' ಎಂಬ ಎರಡು ಹೇತುಗಳು ಉಕ್ತವಾಗಿವೆ. ಬ್ರಹ್ಮನೇ ಭೂಮಾ, ಸರ್ವೋತ್ಕೃಷ್ಟ. ಏಕೆಂದರೆ ನಿರತಿಶಯಸುಖ-

ಪೂರ್ಣನಾಗಿರುವುದರಿಂದ (ಸಮ್ಯಕ್+ಪ್ರಸಾದ) ಮತ್ತು ಇತರರೆಲ್ಲರಿಗಿಂತಲೂ ಶ್ರೇಷ್ಠನಾದ- ವನೆಂದು ಶಾಸ ದಲ್ಲಿ ಪ್ರತಿಪಾದಿತವಾಗಿರುವುದರಿಂದ (ಸರ್ವೇಷಾಮುಪರಿ ಉಪದೇಶಾಚ್ಚ). ಎಲ್ಲ ಭಾಷ್ಯಕಾರರೂ ಈ ಸೂತ್ರಕ್ಕೆ ವಿಷಯವಾಕ್ಯವಾಗಿ ಛಾಂದೋಗ್ಯೋಪನಿಷತ್ತಿನ ೭/೨೩-೨೪ ವನ್ನು ಗ್ರಹಿಸಿದ್ದಾರೆ. ಆದರೆ ಶ್ರೀಮಧ್ವಾಚಾರ್ಯರು ಮಾತ್ರ 'ಸಂಪ್ರಸಾದ' ಮತ್ತು 'ಅಧ್ಯುಪದೇಶ' ಈ ಎರಡು ಪದಗಳಿಗೆ ಇತರರಿಗಿಂತ ಬೇರೆಯ ಅರ್ಥವನ್ನು ಹೇಳುತ್ತಾರೆ. ಅವುಗಳು ಬ್ರಹ್ಮನ ಅಗ್ಗಳಿಕೆಯನ್ನು ಎರಡು ಹೇತುಗಳಿಂದ ಸಾರುತ್ತಿವೆ ಎನ್ನುತ್ತಾರೆ. ಇತರರು ಶಂಕರರ ಜಾಡನ್ನೇ ಹಿಡಿದು ಈ ಪದಪುಂಜದಿಂದ ಒಂದೇ ಹೇತು ಉಕ್ತವಾಗಿದೆ 'ಪ್ರಾಣನ ನಂತರ ಭೂಮಾ ಇತ್ಯಾದಿ ಎಂದು ಹೇಳಿದೆಯಾದ್ದರಿಂದ' ಎನ್ನುತ್ತಾರೆ. ವ್ಯಾಸತೀರ್ಥರು ಹೀಗೆ ಅರ್ಥಮಾಡುವುದರಿಂದ ಉದ್ಭವಿಸುವ ಅನೇಕ ದೋಷಗಳನ್ನು ಎತ್ತಿ ತೋರಿಸಿದ್ದಾರೆ.

ಹೀಗೆ ದ್ವೈತವಾಙ್ಮಯದಲ್ಲೇ ಚಂದ್ರಿಕಾ ಅನುಪಮ ವ್ಯಾಖ್ಯಾನಗ್ರಂಥವಾಗಿದೆ. ಇದರಲ್ಲಿ ಸೂತ್ರಗಳ ಹಾರ್ದವನ್ನು ಸ್ಪಷ್ಟೀಕರಿಸುವ ವ್ಯಾಜದಲ್ಲಿ ಅವರ ವಾಕ್ಯಾರ್ಥಕುಶಲತೆಯನ್ನು ಕಾಣಬಹುದು.

ಶ್ರೀಮಧ್ವಾಚಾರ್ಯರು ಅನುವ್ಯಾಖ್ಯಾನದಲ್ಲಿ ಹಾಗೂ ಶ್ರೀಜಯತೀರ್ಥರು ಶ್ರೀಮನ್ನ್ಯಾಯ- ಸುಧಾದಲ್ಲಿ ಅನುಸರಿಸಿದ ವಾದಪದ್ಧತಿಯನ್ನು ಶ್ರೀವ್ಯಾಸತೀರ್ಥರು ಅನುಸರಿಸಿ, ಸಮರ್ಥರೀತಿಯಲ್ಲಿ ನ್ಯಾಯ, ಮೀಮಾಂಸಾದಿ ಪ್ರಕ್ರಿಯೆಗಳನ್ನು ಅವರುಗಳಿಗೆ ಸಮ್ಮತವಾದ ರೀತಿಯಲ್ಲಿ ಪ್ರಯೋಗಿಸಿದ್ದಾರೆ. ''ಸೂತ್ರಾಕ್ಷರಾಣಾಮ್ ಆರ್ಜವಾನಾರ್ಜವಚಿಂತಾ ಶಿಷ್ಯೈರೇವ ಕ್ರಿಯತಾವ್' ಎಂಬ ನ್ಯಾಯಸುಧೆಯ ಮಾತಿನಂತೆ 'ಚಂದ್ರಿಕಾ'ದಲ್ಲಿ ವಿದ್ವತ್ತು ಮುಗಿಲು ಮುಟ್ಟಿದೆ. ಸಮಗ್ರತೆ, ವಿವರಣೆಯನ್ನು ಕೊಡುವುದರಲ್ಲಿ ನಿಷ್ಕೃಷ್ಟತೆ, ಎಲ್ಲಕ್ಕಿಂತ ಮಿಗಿಲಾಗಿ ತಟಸ್ಥ ವಿಚಾರಕ್ಷಮತೆ ಇವುಗಳು ಅನ್ಯತ್ರ ದುರ್ಲಭವಾದ ಗುಣಗಳು. ಇಡೀ ಸಂಸ್ಕೃತವಾಙ್ಮಯದ ತತ್ವಶಾಸ್ತ್ರೀಯ ಗ್ರಂಥಪ್ರಪಂಚದಲ್ಲಿ ಈ ಕೃತಿಗೆ ವ್ಯಾಪಕ ಹಾಗೂ ಗಂಭೀರವಿಚಾರಪರತೆಯ ದೃಷ್ಟಿಯಿಂದ ಸರಿಸಮಾನವಾದ ಇನ್ನೊಂದು ಕೃತಿ ದುರ್ಲಭ. ಬ್ರಹ್ಮಸೂತ್ರಗಳ ಹಾಗೂ ಅವುಗಳ ಅರ್ಥವಿವರಣೆಗೆಂದೇ ಮೀಸಲಾದ ಭಾಷ್ಯಗಳ ವಿಮರ್ಶಾತ್ಮಕ ಅಧ್ಯಯನಕ್ಕೆ ಹೆಸರಾದಂತಹ ಈ ಕೃತಿಯು ಪಾಂಡಿತ್ಯ, ಸೂಕ್ಷ್ಮವಿಶ್ಲೇಷಣೆ, ನಿಶಿತವಿಮರ್ಶೆ, ಪ್ರೌಢಪ್ರತಿಪಾದನಾಶೈಲಿ ಮತ್ತು ಬಾದರಾಯಣರ ಕೃತಿಗಳ ಅಂತಃಪ್ರಜ್ಞೆ - ಈ ಎಲ್ಲ ದೃಷ್ಟಿಗಳಿಂದಲೂ ಅತ್ಯುತ್ತಮವಾದುದು. ಈ ಕೃತಿಯನ್ನು ಮೀರಬಲ್ಲ ಇನ್ನೊಂದು ಗ್ರಂಥ ಇದುವರೆಗೂ ಬಂದಿಲ್ಲ; ಮುಂದೆಯೂ ಬರಲಾರದು.

ಬ್ರಹ್ಮಸೂತ್ರಗಳ ಮೊದಲ ಎರಡು ಅಧ್ಯಾಯಗಳಿಗೆ ಮಾತ್ರ ಸೀಮಿತವಾಗಿದೆ ಚಂದ್ರಿಕಾ. ಉಳಿದ ಎರಡು ಅಧ್ಯಾಯಗಳಿಗೆ ವ್ಯಾಖ್ಯೆಯನ್ನು ಬರೆದು ಪೂರೈಸಿದವರು ಶ್ರೀರಘುನಾಥತೀರ್ಥರು(ಶೇಷಚಂದ್ರಿಕಾಚಾರ್ಯರು). ಇವರು ವ್ಯಾಸರಾಜರ ನಂತರ ಪೀಳಿಗೆಯಲ್ಲಿ ಬಂದ ಹತ್ತನೆಯ ಪೀಠಾಧಿಪತಿಗಳು.

ಚಂದ್ರಿಕಾಕೃತಿಯು ಸ್ಥೂಲವಾಗಿ ೩೪೫೦ಗ್ರಂಥಗಳಷ್ಟಿದೆ. ಇದು ತತ್ವಪ್ರಕಾಶಿಕಾ ಟಿಪ್ಪಣಿಗಳಲ್ಲಿ ಪ್ರಥಮತಃ ಉಪಲಬ್ಧವಾದ ಗ್ರಂಥ. ಆದರೂ ತತ್ವಪ್ರಕಾಶಿಕಾದ ಮರ್ಮವನ್ನು ತಿಳಿಸುವುದರಲ್ಲಿ ಅಲಂಕೃತವೂ, ವಿಮರ್ಶಾತ್ಮಕವೂ ಆಗಿದೆ. ಇಂದಿಗೂ ಶ್ರೀಮದಾಚಾರ್ಯರ ಸೂತ್ರಪ್ರಸ್ಥಾನದಲ್ಲಿ ಅಂತಿಮವಾಗಿ ಸಿದ್ಧಾಂತತತ್ವವನ್ನು ನಿರ್ಧರಿಸಿರುವ ಗ್ರಂಥವಾಗಿದೆ. ವ್ಯಾಸತೀರ್ಥರ ನಂತರ ವೈಚಾರಿಕ, ವಾಕ್ಯಾರ್ಥಕೌಶಲಗಳಿಗೆ ಹೆಸರಾದಂತಹ ಟಿಪ್ಪಣೀಕಾರರೆಲ್ಲರೂ ನಿಃಸಂಕೋಚವಾಗಿ ವ್ಯಾಸತೀರ್ಥರಿಗೆ ಋಣಿಯಾಗಿದ್ದಾರೆ. ಅವರ ವಾಕ್ಯಗಳನ್ನೇ ಪ್ರಮಾಣವಾಗಿ

ಉದಾಹರಿಸಿರುತ್ತಾರೆ. ಈ ಕಾರಣಗಳಿಂದಾಗಿಯೇ ಶ್ರೀಮಧ್ವ ಮತ್ತು ಶ್ರೀಜಯತೀರ್ಥರೊಂದಿಗೆ ಶ್ರೀವ್ಯಾಸತೀರ್ಥರನ್ನೂ ಸೇರಿಸಿ ಮಧ್ವಸಿದ್ಧಾಂತದ ಮುನಿತ್ರಯರೆಂದು ಜನತೆ ಸ್ಮರಿಸುತ್ತಾ ಬಂದಿದೆ. ಇದೆಂತಹ ಅಸಾಧಾರಣಗೌರವ; ಎಷ್ಟು ಔಚಿತ್ಯಪೂರ್ಣವಾದುದು.

**ಶ್ರೀಮಧ್ವಃ ಕಲ್ಪವೃಕ್ಷಸ್ತು ಜಯಾರ್ಯಃ ಕಾಮಧುಕ್ ಸ್ಮೃತಃ ।**
**ಚಿಂತಾಮಣಿಸ್ತು ವ್ಯಾಸಾರ್ಯೋ ಮುನಿತ್ರಯಮುದೀರಿತಮ್ ॥**

ಶ್ರೀಮಧ್ವಾಚಾರ್ಯರ ಸೂತ್ರಭಾಷ್ಯದಲ್ಲಾಗಲೀ ಅವರ ನಂತರ ಬಂದ ಅವರ ಸಮೀಪವರ್ತಿಗಳಾದ ವ್ಯಾಖ್ಯಾನಕಾರರಾಗಲೀ ಪೂರ್ವಮೀಮಾಂಸಾಶಾಸ ದ ನ್ಯಾಯಗಳನ್ನು ಮತ್ತು ಅಽಕರಣಗಳನ್ನು ಪ್ರಧಾನವಾಗಿ ತಮ್ಮ ವಾದಮಂಡನೆಯಲ್ಲಿ ಬಳಸಿಲ್ಲವೆಂಬುದು ಸರ್ವವಿದಿತ. (ಅಗತ್ಯವಿದ್ದಲ್ಲಿ ಮಾಡಿರುವುದು ಕಂಡಿದೆಯಾದ್ದರಿಂದ ಸಂಪೂರ್ಣವಾಗಿ ಉಪೇಕ್ಷೆ ಮಾಡಿದ್ದಾರೆ ಎನ್ನುವುದು ಸರಿಯಲ್ಲ.) ಆದರೆ ಶಂಕರ ಮತ್ತು ರಾಮಾನುಜರ ಭಾಷ್ಯಗಳಲ್ಲಿ ಹಾಗೂ ಅವರ ಅನುಯಾಯಿಗಳ ಕೃತಿಗಳಲ್ಲಿ ಈ ನ್ಯಾಯಗಳನ್ನು ಬಳಸಿರುವುದು ಕಂಡಿದೆ. ಹಾಗಾಗಿ ಮಧ್ವಾಚಾರ್ಯರು ಈ ನ್ಯಾಯಗಳು ತಮ್ಮ ಅಭಿಪ್ರಾಯಕ್ಕೆ ವಿರುದ್ಧವಾಗಿವೆಯೆಂದರಿತು ಅವುಗಳನ್ನು ಉಲ್ಲೇಖಿಸದೆ ಉಪೇಕ್ಷೆ ಮಾಡಿದ್ದಾರೆ ಎಂಬ ಆರೋಪವು ಸಹಜವಾಗಿದೆ. ಈ ಆಪಾದನೆಯನ್ನು ಶ್ರೀವ್ಯಾಸತೀರ್ಥರು ತಮ್ಮ ಚಂದ್ರಿಕಾಗ್ರಂಥದಲ್ಲಿ ಆ ನ್ಯಾಯಗಳನ್ನು ಬಳಸಿಕೊಂಡು ಮಧ್ವಾಚಾರ್ಯರ ಭಾಷ್ಯವು ಪೂರ್ವಮೀಮಾಂಸಾಶಾಸ ಕ್ಕೆ ಸಮ್ಮತವಾದುದೆಂದು ತೋರಿಸಿ, ನಿರಾಕರಿಸಿದ್ದಾರೆ. ಈ ರೀತಿಯ ವಿಮರ್ಶಾತ್ಮಕ ಅಧ್ಯಯನವನ್ನು ಪ್ರಸ್ತುತಪಡಿಸಿ ಮಧ್ವಾಚಾರ್ಯರು ಹೇಳಿರುವ ಸೂತ್ರಾರ್ಥಕ್ಕೂ ಪೂರ್ವಮೀಮಾಂಸಾಶಾಸ ಗಳ ನ್ಯಾಯಗಳಿಗೂ ತಾತ್ಪರ್ಯಕ್ಕೂ ಏನೂ ವಿರೋಧವಿಲ್ಲ; ಅಷ್ಟೇ ಅಲ್ಲ ಸಂಪೂರ್ಣ ಹೊಂದಾಣಿಕೆ ಇದೆ ಎಂಬುದನ್ನು ತೋರಿಸಿದ್ದಾರೆ.

ಈ ಕಾರ್ಯವು ಸುಲಭವಾದುದೇನಲ್ಲ. ಆದರೂ ತಮ್ಮ ಕಾಲದಲ್ಲಿ ಅಗತ್ಯವೆನಿಸಿದ ಈ ಸವಾಲನ್ನು ಸ್ವೀಕರಿಸಿ ವ್ಯಾಸತೀರ್ಥರು ತಮ್ಮ ಚಂದ್ರಿಕಾದಲ್ಲಿ ಸಮಯೋಚಿತವಾಗಿ ಪೂರ್ವ- ಮೀಮಾಂಸಾನ್ಯಾಯಗಳನ್ನು ಉಲ್ಲೇಖಿಸಿ ಅವುಗಳ ಅಭಿಪ್ರಾಯವನ್ನು ವಿವರಿಸಿ, ಮಧ್ವರ ಅರ್ಥಕ್ಕೂ ಆ ನ್ಯಾಯಗಳಿಗೂ ಇರುವ ಸಾಮರಸ್ಯವನ್ನು ಪ್ರಕಟಿಸಿ ಅದ್ಭುತಕಾರ್ಯವನ್ನು ಮಾಡಿದರು. (ಶಾಸ ದೀಪಿಕಾ, ತಂತ್ರರತ್ನ, ಶಾಬರಭಾಷ್ಯ, ಕುಮಾರಿಲನ ವಾರ್ತಿಕ ಮುಂತಾದವುಗಳ ವಾಕ್ಯಗಳನ್ನು ಉಲ್ಲೇಖಿಸಿರುವುದನ್ನು ಕಾಣಬಹುದು. ಇದರಿಂದ ಮುಂದೆ ಚಂದ್ರಿಕಾಕ್ಕೆ ವ್ಯಾಖ್ಯಾನ ಬರೆದಿರುವ ಕೇಶವಾಚಾರ್ಯರು, ಶ್ರೀರಾಘವೇಂದ್ರತೀರ್ಥರು ಮೊದಲಾದವರು ನಿರಾತಂಕವಾಗಿ

ಮೀಮಾಂಸಾಶಾಸ ದ ಅsಕೃತಗ್ರಂಥಗಳಿಂದ ಉಲ್ಲೇಖಿಸಿ, ತಮ್ಮ ನಿಲುವನ್ನು ಸಮರ್ಥಿಸಲು ಅವಕಾಶವಾಯಿತು).

ಅದಲ್ಲದೆ ಪಾಣಿನೀಯ ವ್ಯಾಕರಣಶಾಸ ಮತ್ತು ಅವುಗಳ ವ್ಯಾಖ್ಯಾನಗಳನ್ನೂ ಉದಾಹರಿಸಿ, ಮಧ್ವಭಾಷ್ಯವನ್ನು ಪುಷ್ಟೀಕರಿಸಿದರು. ಈ ಎರಡು ವೈಶಿಷ್ಟ್ಯಗಳನ್ನು ನ್ಯಾಯಾಮೃತದಲ್ಲೂ ಕಾಣಬಹುದು. ಪ್ರಾಯಃ ಆ ಕಾಲದ ವಿಮತೀಯರು ದ್ವೈತವೇದಾಂತದಲ್ಲಿದ್ದ ಈ ನ್ಯೂನತೆಯನ್ನು ಕುರಿತು ಆಕ್ಷೇಪಿಸುತ್ತಿದ್ದಿರಬೇಕು. ಆದ್ದರಿಂದ ಶ್ರೀವ್ಯಾಸತೀರ್ಥರು ತಮ್ಮ ನೆಲೆ ಬೆಲೆಗಳೆರಡೂ ಅಚ್ಚುಕಟ್ಟಾಗಿವೆ ಎಂದು ತೋರಿಸಲು ಯತ್ನಿಸಿ, ಯಶಸ್ವಿಗಳಾದರು. ಅವರು ಹಾಕಿದ ಈ ನವೀನಪದ್ಧತಿಯು ಎಷ್ಟು ಶಾಸಿ ೀಯವಾಗಿತ್ತೆಂದರೆ ದ್ವೈತವೇದಾಂತದಲ್ಲಿ ಹೊಸಪ್ರಕ್ರಿಯೆಯನ್ನೇ ಅನುಸರಿಸುವಂತೆ ಮಾಡಿತು; ಮುಂದೆ ಈ ಕ್ಷೇತ್ರದಲ್ಲಿ ನಿರ್ಮಿತವಾದ ಟಿಪ್ಪಣಿಗಳಲ್ಲಿ ಇದನ್ನು ಕಾಣಬಹುದು. ವ್ಯಾಸತೀರ್ಥರ ತರುವಾಯ ಬಂದ ಮಾಧ್ವಗ್ರಂಥಕಾರರೆಲ್ಲರೂ ಪೂರ್ವ- ಮೀಮಾಂಸಾ ಮತ್ತು ವ್ಯಾಕರಣಗಳ ಆಲೋಕದಲ್ಲಿಯೇ ತಮ್ಮ ಕೃತಿಗಳನ್ನು ವಿವೇಚಿಸುವ ಸಂಪ್ರದಾಯ ಬೆಳೆದು ಬಂದಿತು. ನ್ಯಾಯಾಮೃತ ಮತ್ತು ಚಂದ್ರಿಕಾಗ್ರಂಥಗಳಲ್ಲಿ ವ್ಯಾಸತೀರ್ಥರು ಪೂರ್ವಮೀಮಾಂಸಾನ್ಯಾಯಗಳಲ್ಲಿ ಮತ್ತು ಅದಕ್ಕೆ ಸಂಬಂsಸಿದ ಸಾಹಿತ್ಯದಲ್ಲಿ ಎಷ್ಟು ಪ್ರೌಢಿಮೆಯನ್ನು ಪಡೆದಿದ್ದರೆಂಬುದನ್ನು ಕಾಣಬಹುದು. ಮುಂದಿನ ವಿದ್ವತ್ ಪ್ರಪಂಚದಲ್ಲಿ ಮಧ್ವಾಚಾರ್ಯರ ಅನುಯಾಯಿಗಳು ಪೂರ್ವಮೀಮಾಂಸಾಶಾಸ ಕ್ಕೆ ಅಂಜುವಂತಹ ಪರಿಸ್ಥಿತಿ ಇರಲಿಲ್ಲ. ಹಾಗೂ ಪೂರ್ವಮೀಮಾಂಸಾನಿಲುವು ತಮ್ಮ ಸಿದ್ಧಾಂತಕ್ಕೆ ಸಮಾಖ್ಯಾರೂಪವಾಗಿದೆ ಎಂಬುದನ್ನು ಸ್ಪಷ್ಟೀಕರಿಸಲು ಆ ನ್ಯಾಯಗಳನ್ನು ಬಳಸಬಹುದೆಂದು ಅರಿಯುವಂತಾಯಿತು.

ಚಂದ್ರಿಕಾದಲ್ಲಿ ಸಂದರ್ಭೋೀಚಿತವಾಗಿ ಉಲ್ಲೇಖಿಸಿರುವ ವಿಮತೀಯ ಗ್ರಂಥಕರ್ತರ ಹೆಸರು ಮತ್ತು ಕೃತಿಗಳು ಹೀಗಿವೆ. -- ಭಾಸ್ಕರ, ಕೈಯಟ, ಯಾದವಪ್ರಕಾಶ, ಕಲ್ಪತರು(ಅದ್ವೈತ), ಮಹಾಭಾಷ್ಯ, ನ್ಯಾಸ, ನಿಬಂಧನಾ, ಪದಮಂಜರೀ, ಪಂಚಪಾದಿಕಾ, ಭಾಮತೀ, ಋಗ್ವೇದಾ-ನುಕ್ರಮಣೀ(ಕಾತ್ಯಾಯನ), ಶಂಕರ(ಬ್ರ.ಸೂ.ಭಾ.), ಶ್ರೀಭಾಷ್ಯ, ತಂತ್ರಸಾರ- (ಮೀಮಾಂಸಾ), ವಿವರಣ, ಶ್ಲೋಕವಾರ್ತಿಕ.

ಹೀಗೆ ವ್ಯಾಸತೀರ್ಥರ ತಾತ್ಪರ್ಯಚಂದ್ರಿಕಾಗ್ರಂಥವು ಹೆಸರಿಗೆ ಮಾತ್ರ ಟಿಪ್ಪಣಿಗ್ರಂಥ. ವಾಸ್ತವವಾಗಿ ಬ್ರಹ್ಮಸೂತ್ರಗಳ ಮೇಲೆ ಆಚಾರ್ಯತ್ರಯರು ರಚಿಸಿರುವ ಭಾಷ್ಯ ಹಾಗೂ ಅವುಗಳ ಪ್ರೌಢಟೀಕಾಟಿಪ್ಪಣಿಗಳ ತುಲನಾತ್ಮಕ ಅಧ್ಯಯನವನ್ನು ಕೈಗೊಂಡು, ಕೂಲಂಕಷವಿಮರ್ಶೆ- ಗೊಳಪಡಿಸಿರುವ ಉದ್‌ಗ್ರಂಥವಾಗಿದೆ. ಇದರಲ್ಲಿ

ಪುಂಖಾನುಪುಂಖವಾಗಿ ಬರುವ ವಿಚಾರಸರಣಿ, ಪ್ರತಿವಾದಿಗಳನ್ನು ಉಸಿರುಕಟ್ಟಿಸುವಂತಹ ವಿಮರ್ಶೆ ಇವುಗಳನ್ನೆಲ್ಲಾ ಆಧುನಿಕ ವಿದ್ವಾಂಸರು ಅಧ್ಯಯನ ಮಾಡಬೇಕು. ಬ್ರಹ್ಮಸೂತ್ರಗಳು ಮತ್ತು ಅವುಗಳ ಭಾಷ್ಯಗಳನ್ನು ವಿಮರ್ಶಿಸುವ ಪ್ರಾಮಾಣಿಕ ಹಂಬಲವಿರುವ ಅವರಿಗೆ ವ್ಯಾಸತೀರ್ಥರು ಹೇಗೆ ಸೂತ್ರಗಳನ್ನು ತಮ್ಮದೇ ಆದ ವೈಶಿಷ್ಟ್ಯತೆಯಿಂದ ವ್ಯಾಖ್ಯಾನಿಸಿದ್ದಾರೆ ಮತ್ತು ಹೇಗೆ ಪ್ರತಿವಾದಿಗಳನ್ನು ನಿರುತ್ತರರನ್ನಾಗಿ ಮಾಡಿದ್ದಾರೆಂಬುದನ್ನು ಕಂಡು ಆಶ್ಚರ್ಯಚಕಿತರಾಗದೇ ಇರುವುದು ಅಸಾಧ್ಯ. ಈ ಉದ್ಗ್ರಂಥವನ್ನು ಸರಿಯಾದ ರೀತಿಯಲ್ಲಿ ಆಧುನಿಕವಿದ್ವಾಂಸರ ಹಾಗೂ ವಿಮರ್ಶಕರ ಅವಗಾಹನೆಗೆ ಬರುವಂತೆ ಮಾಡಿದ್ದೇ ಆದರೆ, ತೌಲನಿಕ ಅಧ್ಯಯನದ ಕ್ಷೇತ್ರದಲ್ಲಿ ಕ್ರಾಂತಿಕಾರಕ ಪರಿಣಾಮವನ್ನುಂಟುಮಾಡಿ ಬ್ರಹ್ಮಸೂತ್ರಗಳ ಅಧ್ಯಯನಕ್ರಮವನ್ನು ಹಸನಾಗಿಸುವುದರಲ್ಲಿ ಸಂದೇಹವಿಲ್ಲ.

ದ್ವೈತಸಂಪ್ರದಾಯದಲ್ಲಿಯೇ 'ಚಂದ್ರಿಕಾ'ಗ್ರಂಥವು ಅಽಕರಣಪ್ರಸ್ಥಾನಕ್ಕೊಂದು ಹೊಸ ಆಯಾಮವನ್ನೇ ತಂದುಕೊಟ್ಟಿದೆ. ಏಕೆಂದರೆ ಪರವಾದಿಗಳ ಶ್ರೇಷ್ಠಗ್ರಂಥಗಳಿಗೆ ವಿಷಯ ಹಾಗೂ ಪ್ರತಿಪಾದನಾಪದ್ಧತಿಯಲ್ಲಿ ಹೆಗಲೆಣೆಯಾಗಿ ನಿಂತದ್ದು ಮಾತ್ರವಲ್ಲ; ಜ್ಞಾನದ ಪರಿಽಯನ್ನು ಹಾಗೂ ಸಮಕಾಲೀನ ಸಕಲಶಾಸ ಗಳ ಕೂಲಂಕಷವಿಮರ್ಶೆಯನ್ನು ನಡೆಸಿ ಅಧ್ಯನಕ್ಕೊಂದು ಮಾದರಿಯಾಗಿರುವುದರಿಂದಲೂ. ಈ ಕಾರ್ಯ ಅಂದಿನ ಪರಿಸ್ಥಿತಿಯಲ್ಲಿ ಅಗತ್ಯವಾಗಿತ್ತು. ಆದುದರಿಂದಲೇ ಈ ಸಂಪ್ರದಾಯವು ಇತರೆ ಸಂಪ್ರದಾಯಗಳಿಗಿಂತ ಸಮಕಾಲೀನತತ್ವಶಾಸ ಪ್ರಪಂಚದಲ್ಲಿ ಪರರ ದೃಷ್ಟಿಯಿಂದಲೂ ಅತ್ಯುಚ್ಚ ಮಾನ್ಯತೆಯನ್ನು ಪಡೆದಿದೆ.

ಹೀಗೆ ವ್ಯಾಸತೀರ್ಥರು ದ್ವೈತವೇದಾಂತವೆಂಬ ದಿವಿಲೋಕದಲ್ಲಿ ಅತ್ಯಂತ ದೇದೀಪ್ಯಮಾನ ನಕ್ಷತ್ರದಂತೆ ಇದ್ದಾರೆ. ಇವರು ದ್ವೈತವೇದಾಂತದ ಪ್ರತಿಪಾದನೆಯಲ್ಲಿ ಹೊಸ ಆಯಾಮವನ್ನು ತಮ್ಮ ವಿಶಿಷ್ಟತಂತ್ರದಿಂದಾಗಿ ಅಽಕೃತವಾಗಿ ಸ್ಥಾಪಿಸಿದರೆಂಬುದು ಅಲ್ಲದೆ, ಆ ತತ್ವಜ್ಞಾನದಲ್ಲಿ ಅತ್ಯಂತ ನಿಷ್ಠಾವಂತರೂ ಆಗಿದ್ದರು. ಅವರ ಗ್ರಂಥತ್ರಯಗಳು ಅಂದರೆ ತಾತ್ಪರ್ಯಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವಗಳು 'ವ್ಯಾಸತ್ರಯ'ವೆಂದೇ ಗೌರವ ಪಡೆದಿವೆ. ಅವುಗಳನ್ನು ಮಾಧ್ವಸಿದ್ಧಾಂತವೆಂಬ ನರಸಿಂಹದೇವರ ಮೂರು ಕಣ್ಣುಗಳೆಂದೇ ಸಂಪ್ರದಾಯದಲ್ಲಿ ಭಾವಿಸಿದ್ದಾರೆ.

**ಮಾಯಾತಂತ್ರಾಮರಾರಿಸ್ಮಯಮಪನಯತೋ ಮಧ್ವಸಿದ್ಧಾಂತನಾಮ್ನೋ ।**
**ನೇತ್ರಾಣೀವ ತ್ರಯೋಧಿಪಿ ತ್ರಿಜಗತಿ ನೃಹರೇರಿಂಧತೇ ಯತ್‌ಪ್ರಬಂಧಾಃ॥**

(ವಾದೀಂದ್ರರು)

ವ್ಯಾಸತೀರ್ಥರು ದ್ವೈತತತ್ವಜ್ಞಾನದ ಪರಿಽಯನ್ನು ವಿಶದೀಕರಿಸುವ ಮೂಲಕ

ಸ್ವಮತೀಯರಿಗೆ ತತ್ವಶಾಸ ದೃಷ್ಟಿಯಿಂದ ಸ್ವಸಿದ್ಧಾಂತವನ್ನು ಎಷ್ಟು ಸಮೃದ್ಧವಾಗಿ ವ್ಯಾಖ್ಯಾನಿಸಬಹುದೆಂಬ ಹೊಸಪಂಥವನ್ನು ತೋರಿಸಿದರೆಂದಷ್ಟೇ ಅಲ್ಲ; ಸ್ವತಃ ಮಧ್ವರ ವಿಚಾರವು ಎಷ್ಟು ಹೊಸದು ಮತ್ತು ಶಕ್ತಿಯುತವಾದುದೆಂಬುದನ್ನು ಅನ್ಯಶಾಸ ಕೋವಿದರೂ ಒಪ್ಪಿಕೊಳ್ಳುವಂತೆ ಮಾಡಿದರು. ಅವರು ಮಾಧ್ವತತ್ವಜ್ಞಾನವು ಕೇವಲ ಪುರಾಣವನ್ನಾಶ್ರಯಿಸಿದ ಹಿಂದೂ ಧರ್ಮ ಅಥವಾ ಭಕ್ತಿಪಂಥದ ನವ್ಯವಿಕಾಸ ಅಥವಾ ಸಮಕಾಲೀನ ತತ್ವಶಾಸ ಗಳಲ್ಲಿ ಆಧ್ಯಾತ್ಮಿಕಪ್ರಧಾನವಾದ ಸಂಪ್ರದಾಯ ಮಾತ್ರವಲ್ಲ; ಅದೊಂದು ತತ್ವಜ್ಞಾನದಲ್ಲಿ ಕ್ರಾಂತಿಯನ್ನುಂಟುಮಾಡಿರುವ ತತ್ವಶಾಸ ; ವೈಚಾರಿಕ- ಜಗತ್ತಿನಲ್ಲಿ ಇತರ ಸಂಪ್ರದಾಯಗಳಿಗಿಂತ ಗಂಭೀರವೂ, ವ್ಯಾಪಕವೂ, ನಿರ್ದುಷ್ಟವೂ ಆಗಿರುವ ಸುಸಂಪನ್ನವಿಚಾರಶಾಸ ವೆಂದು ಸರ್ವರಿಗೂ ಮನವರಿಕೆ ಮಾಡಿಕೊಟ್ಟರು. ಒಟ್ಟಿನಲ್ಲಿ ತಮ್ಮ ಅಮೋಘಕೃತಿಗಳ ಮೂಲಕ ನಿರ್ದುಷ್ಟವಿಚಾರವೇದಿಕೆಯಲ್ಲಿ ಸಮಕಾಲೀನಶಾಸ ಜ್ಞರ ಮಧ್ಯೆ ಅತ್ಯುಚ್ಚಸ್ಥಾನವನ್ನು ಮಾಧ್ವತತ್ವಜ್ಞಾನಕ್ಕೆ ದೊರೆಯುವಂತೆ ಮಾಡಿದರೆಂದಷ್ಟೇ ಅಲ್ಲ; ತಲ- ತಲಾಂತರಕ್ಕೂ ಅದು ಉಳಿಯುವಂತೆ ಮಾಡಿದ ಸತ್ಕೀರ್ತಿ ಶ್ರೀವ್ಯಾಸರಾಯರಿಗೆ ಸಲ್ಲುತ್ತದೆ.

ಅಷ್ಟಲ್ಲದೇ ಮಾಧ್ವಸಂಪ್ರದಾಯದ ಪ್ರಚಾರಕ್ಕಾಗಿ ಜನಸಾಮಾನ್ಯರ ಧರ್ಮಭಾವನೆಗೆ ಇಂಬುಕೊಟ್ಟು, ಅವರಲ್ಲಿ ವಿಷ್ಣುಭಕ್ತಿಯು ನೆಲೆಸುವಂತೆ ಮಾಡಲು 'ದಾಸಕೂಟ'ವನ್ನು ಸಂಘಟಿಸುವ ಮೂಲಕ ಹೊಸ ಅಧ್ಯಾಯವನ್ನೇ ಪ್ರಾರಂಭಿಸಿದರು. ಅತ್ಯಂತ ದೀಕ್ಷಾಬದ್ಧರಾದ ಹರಿದಾಸರುಗಳು ಜ್ಞಾನಭಕ್ತಿಗಳ ಪ್ರಚಾರಕ್ಕಾಗಿ ಕಟಿಬದ್ಧರಾಗಿ ಹೊರಟರು. ಸಂಗೀತ ಹಾಗೂ ಸಾಹಿತ್ಯಕ್ಷೇತ್ರಗಳಲ್ಲಿ ಕನ್ನಡಸಾಹಿತ್ಯಕ್ಕೆ ಹೊಸ ದಿಗಂತವನ್ನೇ ಸೃಷ್ಟಿಸಿದರು. ವ್ಯಾಸರಾಯರು ತಾವಷ್ಟೇ ಕನ್ನಡದಲ್ಲಿ ಗೀತೆಗಳನ್ನು ರಚಿಸಿ ಹಾಡಿದುದಲ್ಲದೆ, ಪುರಂದರದಾಸರು, ಕನಕದಾಸರು ಮುಂತಾದ ದಾಸಶ್ರೇಷ್ಠರಿಗೆ ದೀಕ್ಷಾಗುರುಗಳಾಗಿ ಕರ್ನಾಟಕಸಂಗೀತಕ್ಕೆ ಭದ್ರಬುನಾದಿಯನ್ನು ಹಾಕಿಕೊಟ್ಟರು. ಎಲ್ಲೆಲ್ಲೂ ಭಗವದ್‌ಭಕ್ತಿಭರಿತ ಗೀತೆಗಳು ಮೊಳಗುವಂತೆ ಮಾಡಿದರು.

ಇಂತಹ ಶ್ರೇಷ್ಠರಾದ ಶ್ರೀವ್ಯಾಸರಾಜಗುರುಸಾರ್ವಭೌಮರ ಆರಾಧನೆಯನ್ನು ಭಕ್ತಿಪೂರ್ವಕವಾಗಿ ಆಚರಿಸೋಣ.

## ॥ ಫಾಲ್ಗುಣ ॥ ಕೃಷ್ಣ ॥ ಏಕಾದಶೀ

**ಯುಧಿಷ್ಠಿರ ಉವಾಚ**

**ಫಾಲ್ಗುನಸ್ಯಾಸಿತೇ ಪಕ್ಷೇ ಕಿನ್ನಾಮ್ನ್ಯೇಕಾದಶೀ ಭವೇತ್ ।**
**ಕಥಯಸ್ವ ಪ್ರಸಾದೇವ ವಾಸುದೇವ ಮಮಾಗ್ರತಃ ॥೧॥**

**ಯುಧಿಷ್ಠಿರನು ಹೇಳಿದನು-** ಎಲೈ ವಾಸುದೇವನೇ! ಫಾಲ್ಗುಣ ಮಾಸದ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಯು ಯಾವ ಹೆಸರುಳ್ಳದ್ದು? ದಯವಿಟ್ಟು ನನಗೆ ಹೇಳು.

**ಕೃಷ್ಣ ಉವಾಚ**

**ನಾರದಃ ಪರಿಪಪ್ರಚ್ಛ ಬ್ರಹ್ಮಾಣಂ ಕಮಲಾಸನಂ ।**
**ಫಾಲ್ಗುನಸ್ಯಾಸಿತೇ ಪಕ್ಷೇ ವಿಜಯಾ ನಾಮ ನಾಮತಃ ॥**
**ತಸ್ಯಾಃ ಪುಣ್ಯಂ ಸುರಶ್ರೇಷ್ಠ ಕಥಯಸ್ವ ಪ್ರಸಾದತಃ ॥೨॥**

**ಕೃಷ್ಣನು ಹೇಳಿದನು-** ನಾರದನು ಕಮಲಾಸನನಾದ ಬ್ರಹ್ಮನನ್ನು ಹೀಗೆಂದು ಕೇಳಿದನು. ಫಾಲ್ಗುಣಮಾಸದ ಕೃಷ್ಣಪಕ್ಷದಲ್ಲಿ ವಿಜಯಾ ಎಂಬ ಏಕಾದಶಿಯು ಬರುತ್ತದಷ್ಟೆ. ಅದರಲ್ಲಿ ಬರುವ ಪುಣ್ಯವನ್ನು ಕೃಪೆಮಾಡಿ ಹೇಳು.

**ಬ್ರಹ್ಮೋವಾಚ**

**ಶೃಣು ನಾರದ ವಕ್ಷ್ಯಾಮಿ ಕಥಂ ಪಾಪಹರಾಂ ಪರಾಂ ।**
**ಯನ್ನ ಕಸ್ಯಚಿದಾಖ್ಯಾತಂ ಮಯ್ಯೈತದ್ವಿಜಯಾವ್ರತಂ ॥೩॥**

**ಬ್ರಹ್ಮನು ಹೇಳಿದನು-** ಎಲೈ ನಾರದನೇ! ಪಾಪಹಾರಕವಾದ ಒಂದು ಕಥೆಯನ್ನು ಹೇಳುತ್ತೇನೆ, ಕೇಳು. ಈ ವಿಜಯಾವ್ರತದ ಕಥೆಯನ್ನು ಯಾರಿಗೂ ಹೇಳಿಲ್ಲ.

**ಪುರಾತನಂ ವ್ರತಂ ಹ್ಯೇತತ್ಪವಿತ್ರಂ ಪಾಪನಾಶನಂ ।**
**ಜಯಂ ದದಾತಿ ವಿಜಯಾ ನೃಪಾಣಾಂ ವೈ ನ ಸಂಶಯಃ ॥೪॥**

ಈ ವಿಜಯಾ ವ್ರತವು ಬಹು ಪುರಾತನವಾದುದು. ಪವಿತ್ರವೂ, ಪಾಪನಾಶಕವೂ ಆಗಿದೆ. ಇದು ರಾಜರಿಗೂ ಕೂಡ ಜಯವನ್ನು ಕೊಡುತ್ತದೆ. ಸಂಶಯವಿಲ್ಲ.

**ಪುರಾ ರಾಮೋ ವನಂ ಯಾತೋ ವರ್ಷಾಣ್ಯೇವ ಚತುರ್ದಶ ।**
**ನ್ಯವಸತ್ಪಂಚವಟ್ಯಾಂ ತು ಸಸೀತಸ್ಸಹಲಕ್ಷ್ಮಣಃ ॥೫॥**

ಹಿಂದೆ ರಾಮನು ಸೀತಾಲಕ್ಷ್ಮಣರೊಡನೆ ಹದಿನಾಲ್ಕು ವರ್ಷಗಳು ವನವಾಸಮಾಡಿದನಷ್ಟೆ. ಆಗ ಪಂಚವಟಿಯಲ್ಲಿದ್ದನು.

**ತತ್ರೈವ ವಸತಸ್ತಸ್ಯ ರಾಮಸ್ಯವಿಜಯಾತ್ಮನಃ ।**
**ರಾವಣೇನ ಹೃತಾ ಲೌಲ್ಯಾತ್ ಭಾರ್ಯಾ ಸೀತಾ ತಪಸ್ವಿನೀ ॥೬॥**

ಮಂಗಳಸ್ವರೂಪನಾದ ರಾಮನು ಆ ಪಂಚವಟಿಯಲ್ಲಿಯೇ ವಾಸವಾಗಿರಲು ಅವನ ಹೆಂಡತಿಯಾದ ಸೀತೆಯನ್ನು ರಾವಣನು ಚಪಲತೆಯಿಂದ ಕದ್ದು ಕೊಂಡುಹೋದನು.

**ತೇನ ದುಃಖೇನ ರಾಮೋಪಿ ಮೋಹಮಭ್ಯಾಗತಸ್ತದಾ ।**
**ಭ್ರಮನ್ ಜಟಾಯುಷಮಥೋ ದದರ್ಶ ವಿಗತಾಯುಷಂ ॥೭॥**

ಹಾಗೆ ಹೆಂಡತಿಯು ಅಪಹೃತಳಾದ ಕಾರಣದಿಂದ ರಾಮನು ಮೋಹಗೊಂಡು ಹುಡುಕಿಕೊಂಡು ಸುತ್ತುತ್ತಿರಲು ಪ್ರಾಣಬಿಡುವ ಸ್ಥಿತಿಯಲ್ಲಿರುವ ಜಟಾಯುವನ್ನು ಕಂಡನು.

**ಕಬಂಧೋ ನಿಹತಃ ಪಶ್ಚಾದ್ಭ್ರಮತಾರಣ್ಯಮಧ್ಯತಃ ।**
**ಸುಗ್ರೀವೇಣ ಸಮಂ ತಸ್ಯ ಸಖಿತ್ವಂ ಸಮಪದ್ಯತ ॥೮॥**

ಅರಣ್ಯದಲ್ಲಿ ಸುತ್ತುತ್ತಿರುವಾಗ ಕಬಂಧನನ್ನು ಕೊಂದನು. ಅನಂತರ ಸುಗ್ರೀವನೊಡನೆ ಸ್ನೇಹವಾಯಿತು.

**ವಾನರಾಣಾಮನೀಕಾನಿ ರಾಮಾರ್ಥಂ ಸಂಗತಾನಿ ಚ ।**
**ತತೋ ಹನೂಮತಾ ದೃಷ್ಟಾ ಲಂಕೋದ್ಯಾನೇ ತು ಜಾನಕೀ ॥೯॥**

ರಾಮನ ಸಹಾಯಕ್ಕೋಸ್ಕರ ಕಪಿಗಳ ಸೇನೆಯು ಸೇರಿ ಸಿದ್ಧವಾಯಿತು. ಅನಂತರ ಹನುಮಂತನು ಲಂಕೆಯ ಉದ್ಯಾನದಲ್ಲಿ ಸೀತೆಯನ್ನು ಕಂಡನು.

**ರಾಮಸಂಜ್ಞಾಪನಂ ತಸ್ಯೈ ದತ್ತಂ ಕರ್ಮ ಮಹತ್ಕೃತಂ ।**
**ಸಮೇತ್ಯ ರಾಮಂ ಸ ಪುನಃ ಸರ್ವಂ ತತ್ರ ನ್ಯವೇದಯತ್ ॥೧೦॥**

ರಾಮನ ಗುರುತನ್ನು ಆ ಸೀತೆಗೆ ಕೊಟ್ಟು ಅಗಾಧವಾದ ಕೆಲಸವನ್ನು ಮಾಡಿದನು. ಅನಂತರ ಮತ್ತೆ ರಾಮನ ಬಳಿಗೆ ಬಂದು ಎಲ್ಲವನ್ನೂ ಹೇಳಿದನು.

**ಅಥ ಶ್ರುತ್ವಾ ರಾಮಚಂದ್ರೋ ವಾಕ್ಯಂ ಚೈವ ಹನೂಮತಃ ।**
**ಸುಗ್ರೀವಾನುಮತೇನೈವ ಪ್ರಸ್ಥಾನಂ ಸಮರೋಚಯತ್ ॥೧೧॥**

ರಾಮನು ಆ ಹನುಮಂತನ ಮಾತೆಲ್ಲವನ್ನೂ ಕೇಳಿ ಸುಗ್ರೀವನ ಒಪ್ಪಿಗೆಯಿಂದ ಸೇನೆಯನ್ನು ಹೊರಡಿಸಲು ಅಪೇಕ್ಷಿಸಿದನು.

**ಶ್ರೀರಾಮ ಉವಾಚ**

**ಸೌಮಿತ್ರೇ ಕೇನ ಪುಣ್ಯೇನ ತೀರ್ಯತೇ ವರುಣಾಲಯಃ ।**
**ಅಗಾಧೋ ನಿತರಾಮೇಷ ಯಾದೋಭಿಶ್ಚ ಸಮಾಕುಲಃ ॥೧೨॥**
**ಉಪಾಯಂ ನೈವ ಪಶ್ಯಾಮಿ ಯೇನೈವ ಸುತರೋ ಭವೇತ್ ॥೧೩॥**

ಶ್ರೀರಾಮನು ಹೇಳಿದನು- ಎಲೈ ಸೌಮಿತ್ರಿಯೆ! ಯಾವಪುಣ್ಯದಿಂದ ಈ ಸಮುದ್ರವನ್ನು ದಾಟಬಹುದು? ಇದಾದರೋ ಬಹು ಆಳವಾಗಿದೆ. ಅನೇಕವಾದ ಜಲಜಂತುಗಳಿಂದ ಕೂಡಿದೆ. ಇದನ್ನು ಸುಲಭವಾಗಿ ದಾಟಲು ಯಾವ ಉಪಾಯವೂ ಕಾಣುವುದಿಲ್ಲವಲ್ಲ!

ಲಕ್ಷ್ಮಣ ಉವಾಚ

**ಆದಿದೇವಸ್ತ್ವಮೇವಾಸಿ ಪುರಾಣಃ ಪುರುಷೋತ್ತಮಃ ।**
**ಬಕದಾಲ್ಭ್ಯೋ ಮುನಿಶ್ಚಾತ್ರ ವರ್ತತೇ ದ್ವೀಪಮಧ್ಯತಃ ॥೧೪॥**

**ಲಕ್ಷ್ಮಣನು ಹೇಳಿದನು-** ಎಲೈ ರಾಮನೆ! ನೀನೇ ಆದಿದೇವನು. ಪುರಾಣಪುರುಷನೂ ಆಗಿದ್ದೀಯೆ. ಇಲ್ಲಿಯೇ ಹತ್ತಿರದಲ್ಲಿರುವ ದ್ವೀಪದಲ್ಲಿ ಬಕದಾಲ್ಭ್ಯರೆಂಬ ಋಷಿಗಳು ವಾಸವಾಗಿದ್ದಾರೆ.

**ಅಸ್ಮಾತ್ ಸ್ಥಾನಾದ್ಯೋಜನಾರ್ಧಮಾಶ್ರಮಸ್ತಸ್ಯ ರಾಘವ ।**
**ಅನ್ಯೇ ಚ ಬ್ರಾಹ್ಮಣಾಸ್ತತ್ರ ಬಹವೋ ರಘುನಂದನ ॥**
**ತಂ ಪೃಚ್ಛ ಗತ್ವಾ ರಾಜೇಂದ್ರ ಪುರಾಣಮೃಷಿಪುಂಗವಂ ॥೧೫॥**

ಇಲ್ಲಿಗೆ ಅವರ ಆಶ್ರಮವು ಅರ್ಧಯೋಜನ ದೂರವಿದೆ. ಅಲ್ಲಿ ಇನ್ನೂ ಅನೇಕರು ಬ್ರಾಹ್ಮಣರು ವಾಸವಾಗಿದ್ದಾರೆ. ಅಲ್ಲಿಗೆ ಹೋಗಿ ಆ ಹಳಬರಾದ ಋಷಿಗಳನ್ನು ಕೇಳೋಣ.

ಬ್ರಹ್ಮೋವಾಚ

**ಇತಿ ವಾಕ್ಯಂ ತತಶ್ರುತ್ವಾ ಲಕ್ಷ್ಮಣಸ್ಯಾತಿಶೋಭನಂ ।**
**ಜಗಾಮ ರಾಘವೋ ದ್ರಷ್ಟುಂ ಬಕದಾಲ್ಭ್ಯಂ ಮಹಾಮುನಿಂ ॥೧೬॥**

**ಬ್ರಹ್ಮನು ಹೇಳಿದನು-** ಲಕ್ಷ್ಮಣನ ಈ ಉಚಿತವಾದ ಮಾತನ್ನು ಕೇಳಿ ರಾಮನು ಬಕದಾಲ್ಭ್ಯರನ್ನು ನೋಡಲು ಹೋದನು.

**ಪ್ರಣನಾಮ ಮುನಿಂ ಮೂರ್ಧ್ನಾ ರಾಮೋ ವಿಷ್ಣುಮಿವಾಮರಃ ।**
**ಜ್ಞಾತ್ವಾ ಮುನಿಸ್ತತೋ ರಾಮಂ ಪುರಾಣಂ ಪುರುಷೋತ್ತಮಂ ॥೧೭॥**
**ಕೇನಾಪಿ ಕಾರಣೇನೈವ ಪ್ರವಿಷ್ಟಂ ಮಾನುಷೀಂ ತನುಂ ।**
**ಉವಾಚ ಸ ಋಷಿಸ್ತುಷ್ಟಃ ಕುತೋ ರಾಮ ತವಾಗಮಃ ॥೧೮॥**

ರಾಮನು ಅಲ್ಲಿಗೆ ಹೋಗಿ ಆ ಬಕದಾಲ್ಭ್ಯರನ್ನು ಇಂದ್ರನು ವಿಷ್ಣುವನ್ನು ನಮಸ್ಕರಿಸುವಂತೆ ನಮಸ್ಕರಿಸಿದನು. ಆಗ ಋಷಿಯು ಕಾರಣಾಂತರದಿಂದ ಮನುಷ್ಯ ಶರೀರವನ್ನು ಹೊಂದಿರುವ ಪುರಾಣಪುರುಷನಾದ ಆ ರಾಮನನ್ನು ನೋಡಿದನು. ಅನಂತರ ಸಂತೋಷಗೊಂಡ ಆ ಋಷಿಯು ರಾಮಾ ! ನೀನು ! ಏನು ಬಂದಿದ್ದೀಯೆ? ಎಂದನು.

ರಾಮ ಉವಾಚ

**ತ್ವತ್ಪ್ರಸಾದಾದಹಂ ವಿಪ್ರ ತೀರಂ ನದನದೀಪತೇಃ ।**
**ಆಗತೋಸ್ಮಿ ಸಸೈನ್ಯೋತ್ರ ಲಂಕಾಂ ಜೇತುಂ ಸರಾಕ್ಷಸಾಂ ॥೧೯॥**

**ರಾಮನು ಹೇಳಿದನು-** ಎಲೈ ಋಷಿಯೇ! ನಾನು ಸೈನ್ಯದೊಡನೆ ಸಮುದ್ರತೀರಕ್ಕೆ ಬಂದಿರುವೆನು. ನಿನ್ನ ಅನುಗ್ರಹದಿಂದ ರಾಕ್ಷಸರಿಂದ ಕೂಡಿದ ಲಂಕೆಯನ್ನು ಜಯಿಸಬೇಕು.

**ಭವತಶ್ಚಾನುಕೂಲತ್ವಾತ್ತೀರ್ಯತೇಬ್ಧಿರ್ಯಥಾ ಮಯಾ ।**
**ತಮುಪಾಯಂ ವದ ಮುನೇ ಪ್ರಸಾದಂ ಕುರು ಸಾಂಪ್ರತಂ ॥**
**ಏತಸ್ಮಾತ್ಕಾರಣಾದೇವ ದ್ರಷ್ಟುಂ ತ್ವಾಮಿಹ ಚಾಗತಃ ॥೨೦॥**

ನಿನ್ನ ಅನುಗ್ರಹದಿಂದ ನಾನು ಆ ಸಮುದ್ರವನ್ನು ದಾಟಬೇಕು. ಆ ಉಪಾಯವನ್ನು ಹೇಳಿ ನನಗೆ ಅನುಗ್ರಹವನ್ನು ಮಾಡು. ನಿನ್ನನ್ನು ನೋಡಲು ನಾನು ಅದಕ್ಕೆ ಇಲ್ಲಿಗೆ ಬಂದಿದ್ದೇನೆ.

**ಬ್ರಹ್ಮೋವಾಚ**

**ರಾಮಸ್ಯ ವಚನಂ ಶ್ರುತ್ವಾ ಬಕದಾಲ್ಭ್ಯೋ ಮಹಾಮುನಿಃ ।**
**ಉವಾಚ ಸುಪ್ರಸನ್ನಾತ್ಮಾ ರಾಮಂ ರಾಜೀವಲೋಚನಂ ॥೨೧॥**

**ಬ್ರಹ್ಮನು ಹೇಳಿದನು-** ರಾಮನ ಈ ಮಾತನ್ನು ಕೇಳಿ ಬಕದಾಲ್ಭ್ಯ ಋಷಿಯು ಸಂತೋಷಪಟ್ಟು ಅವನನ್ನು ಕುರಿತು ಇಂತೆಂದನು.

**ಬಕದಾಲ್ಭ್ಯ ಉವಾಚ**

**ಕರ್ತವ್ಯಮದ್ಯ ತೇ ರಾಮ ವ್ರತಾನಾಂ ವ್ರತಮುತ್ತಮಂ ।**
**ಕೃತೇನ ಯೇನ ಸಹಸಾ ವಿಜಯಸ್ತೇ ಭವಿಷ್ಯತಿ ॥೨೨॥**

**ಬಕದಾಲ್ಭ್ಯನು ಹೇಳಿದನು-** ಎಲೈ ರಾಮನೆ! ಈಗೊಂದು ಉತ್ತಮವಾದ ವ್ರತವನ್ನು ನೀನು ಮಾಡಬೇಕು. ಅದನ್ನು ಮಾಡಿದರೆ ನಿನಗೆ ವಿಜಯವು ಲಭಿಸುತ್ತದೆ.

**ಲಂಕಾಂ ಜಿತ್ವಾ ರಾಕ್ಷಸಾಂಶ್ಚ ಸ್ವಚ್ಛಾಂ ಕೀರ್ತಿಮವಾಪ್ಸ್ಯಸಿ ।**
**ಏಕಾಗ್ರ ಮನಸೋ ಭೂತ್ವಾ ವ್ರತಮೇತತ್ಸಮಾಚರ ॥೨೩॥**

ಹಾಗೆ ಮಾಡಿದರೆ ಲಂಕೆಯನ್ನೂ ರಾಕ್ಷಸರನ್ನೂ ಜಯಿಸಿ ಒಳ್ಳೆಯ ಕೀರ್ತಿಯನ್ನು ಹೊಂದುತ್ತೀಯೆ. ಒಂದೇ ಮನಸ್ಸಿನಿಂದ ಈ ವ್ರತವನ್ನು ಮಾಡು.

**ಫಾಲ್ಗುನಸ್ಯಾಯೈಕಾದಶೀ ಭವೇತ್ ।**
**ತಸ್ಯಾ ವ್ರತೇನ ಹೇ ರಾಮ ವಿಜಯಸ್ತೇ ಭವಿಷ್ಯತಿ ॥೨೪॥**

ಫಾಲ್ಗುಣದ ಬಹುಳ ಏಕಾದಶಿಯು ವಿಜಯೈಕಾದಶಿಯು. ಆ ವ್ರತವನ್ನು ನೀನು ಮಾಡಿದರೆ ನಿನಗೆ ಜಯವು ಲಭಿಸುತ್ತದೆ.

**ನಿಸ್ಸಂಶಯಂ ಸಮುದ್ರಂ ತ್ವಂ ತರಿಷ್ಯಸಿ ಸವಾನರಃ ।**
**ವಿಧಿಸ್ತು ಶ್ರೂಯತಾಂ ರಾಜನ್ ವ್ರತಸ್ಯಾಸ್ಯ ಫಲಪ್ರದಃ ॥೨೫॥**

ಬ್ರಹ್ಮನು ಹೇಳಿದನು - ಹಾಗೆ ಮಾಡಿದರೆ ನೀನು ಕಪಿಗಳೊಡನೆ ಸಮುದ್ರವನ್ನು ದಾಟುತ್ತೀಯೆ. ಸಂಶಯವಿಲ್ಲ. ಈ ವ್ರತದ ವಿಧಿಯನ್ನು ಹೇಳುತ್ತೇನೆ. ಕೇಳು.

**ದಶಮ್ಯಾಂ ದಿವಸೇ ಪ್ರಾಪ್ತೇ ಕುಂಭಮೇಕಂ ತು ಕಾರಯೇತ್ ।**
**ಹೈಮಂ ವಾ ರಾಜತಂ ವಾಪಿ ತಾಮ್ರಂ ವಾಪ್ಯಥ ಮೃಣ್ಮಯಂ ॥೨೬॥**

ದಶಮಿಯ ದಿನ ಚಿನ್ನ, ಬೆಳ್ಳಿ, ತಾಮ್ರ, ಮಣ್ಣು ಇವುಗಳಲ್ಲಿ ಶಕ್ತಿಯಿದ್ದ ಯಾವುದಾದರೂ ಒಂದು ಕುಂಭವನ್ನು ಮಾಡಿರಬೇಕು.

**ಸ್ಥಾಪಯೇಚ್ಛೋಭಿತಂ ಕುಂಭಂ ಜಲಪೂರ್ಣಂ ಸಪಲ್ಲವಂ ।**
**ತಸ್ಯೋಪರಿ ನ್ಯಸೇದ್ದೇವಂ ಹೈಮಂ ನಾರಾಯಣಂ ಪ್ರಭುಂ ॥೨೭॥**

ಆ ಕುಂಭಕ್ಕೆ ಅಲಂಕರಿಸಿ ನೀರನ್ನು ತುಂಬಿ ಮೇಲೆ ಪಂಚಪಲ್ಲವಗಳನ್ನಿಟ್ಟು ಅದರ ಮೇಲೆ ಚಿನ್ನದ ನಾರಾಯಣ ಪ್ರತಿಮೆಯನ್ನು ಇಡಬೇಕು.

**ಏಕಾದಶೀ ದಿನೇ ಪ್ರಾಪ್ತೇ ಪ್ರಾತಸ್ಸ್ನಾನಂ ಸಮಾಚರೇತ್ ।**
**ನಿಶ್ಚಲಂ ಸ್ಥಾಪಯೇತ್ಕುಂಭಂ ಕಂಠಮಾಲ್ಯಾನುಲೇಪನೈಃ ॥೨೮॥**

ಏಕಾದಶಿಯದಿವಸ ಸ್ನಾನಮಾಡಿ ಆ ಕುಂಭವನ್ನು ಅಲ್ಲಾಡದಂತೆ ಇಡಬೇಕು. ಅದರ ಕತ್ತಿಗೆ ಹೂವಿನ ಮಾಲೆಯನ್ನು ಹಾಕಬೇಕು. ಗಂಧವನ್ನು ಹಚ್ಚಬೇಕು.

**ಪೂಗೀಫಲೈರ್ನಾರಿಕೇರೈಃ ಪೂಜಯೇಚ್ಚ ವಿಶೇಷತಃ ।**
**ಸಪ್ತಧಾನ್ಯಾನಿ ಸರ್ವಾಣಿ ಯವಾನ್ಯುಪರಿ ವಿನ್ಯಸೇತ್ ॥೨೯॥**

ಅಡಕೆ, ತೆಂಗುಗಳಿಂದ ಪೂಜಿಸಬೇಕು. ಏಳು ಧಾನ್ಯಗಳನ್ನೂ ಅಕ್ಷತೆಯನ್ನೂ ಮೇಲೆ ಹಾಕಿ ಪೂಜೆ ಮಾಡಬೇಕು.

**ಗಂಧೈರ್ಧೂಪೈಶ್ಚದೀಪೈಶ್ಚ ನೈವೇದ್ಯೈರ್ವಿವಿಧೈರಪಿ ।**
**ಕುಂಭಾಗ್ರೇ ತದ್ದಿನಂ ರಾಮ ನೀಯತಾಂ ಸತ್ಕಥಾದಿಭಿಃ ॥೩೦॥**

ಗಂಧ, ಧೂಪ, ದೀಪಗಳಿಂದಲೂ ನೈವೇದ್ಯಗಳಿಂದಲೂ ಪೂಜಿಸಬೇಕು. ಆ ದಿನವೆಲ್ಲವೂ ಆ ಕಲಶದ ಎದುರಿನಲ್ಲಿ ಪುಣ್ಯಕಥೆಗಳನ್ನು ಹೇಳುತ್ತಾ ಕಾಲವನ್ನು ಕಳೆಯಬೇಕು.

**ರಾತ್ರೌ ಜಾಗರಣಂ ಚೈವ ತಸ್ಯಾಗ್ರೇ ಕಾರಯೇದ್ಬುಧಃ ।**
**ಪ್ರಕಾಶಯೇದ್-ವ್ರತಂ ದೀಪಮಖಂಡವ್ರತಹೇತವೇ ॥೩೧॥**

ರಾತ್ರಿಯಲ್ಲಿ ಜಾಗರಣವನ್ನು ಅದರ ಎದುರಿನಲ್ಲಿಯೇ ಮಾಡಬೇಕು. ವ್ರತಸಂಪೂರ್ತಿಗೋಸ್ಕರ ತುಪ್ಪದ ದೀಪವನ್ನು ಆದಿನ ಹಗಲೂ ರಾತ್ರಿಯೂ ಇರುವಂತೆ ಇಡಬೇಕು.

**ದ್ವಾದಶೀ ದಿವಸೇ ಪ್ರಾಪ್ತೇ ಮಾರ್ತಾಂಡಸ್ಯೋದಯೇ ಸತಿ ।**
**ನೀತ್ವಾ ಕುಂಭಂ ಜಲೋದ್ದೇಶೇ ನದ್ಯಾಂ ಪ್ರಸ್ರವಣೇ ತಥಾ ॥೩೨॥**
**ತಟಾಕೇ ಸ್ಥಾಪಯಿತ್ವಾ ತಂ ಪೂಜಯಿತ್ವಾ ಯಥಾವಿಧಿ ।**
**ದದ್ಯಾತ್ಸದೈವತಂ ಕುಂಭಂ ಬ್ರಾಹ್ಮಣೇ ವೇದಪಾರಗೇ ॥೩೩॥**

ದ್ವಾದಶಿಯ ದಿವಸ ಸೂರ್ಯನು ಹುಟ್ಟಿದಮೇಲೆ ಆ ಕಲಶವನ್ನು ನೀರಿರುವ ನದಿ,ಕೊಳ, ಕೆರೆ ಇವುಗಳಲ್ಲಿ ಯಾವುದಾದರೂ ಒಂದರ ಬಳಿಗೆ ತೆಗೆದುಕೊಂಡು ಹೋಗಿ ಅಲ್ಲಿ ಅದನ್ನಿಟ್ಟು ಪೂಜಿಸಿ ಆ ದೇವತಾ ಪ್ರತಿಮೆಸಹಿತವಾಗಿ ಆ ಕಲಶವನ್ನು ವೇದವನ್ನು ಓದಿದ ಬ್ರಾಹ್ಮಣನಿಗೆ ಕೊಡಬೇಕು.

**ಕುಂಭೇನ ಸಹ ರಾಜೇಂದ್ರ ಮಹಾದಾನಾನಿ ದಾಪಯೇತ್ ।**
**ಅನೇನ ವಿಧಿನಾ ರಾಮ ಯೂಥಪೈಸ್ಸಹ ಸಂಗತಃ ।**
**ಕುರು ವ್ರತಂ ಪ್ರಯತ್ನೇನ ವಿಜಯಸ್ತೇ ಭವಿಷ್ಯತಿ ॥೩೪॥**

ಆ ಕಲಶದಾನದ ಜೊತೆಯಲ್ಲಿ ಮಹಾದಾನಗಳನ್ನೂ ಮಾಡಬೇಕು. ಈ ವಿಧಿಯ ಪ್ರಕಾರವಾಗಿ ನೀನು ಸೈನ್ಯಸಮೇತವಾಗಿ ವ್ರತವನ್ನು ಮಾಡು. ನಿನಗೆ ವಿಜಯವು ಲಭಿಸುತ್ತದೆ.

ಬ್ರಹ್ಮೋವಾಚ

**ಇತಿ ಶ್ರುತ್ವಾ ತತೋ ರಾಮೋ ಯಥೋಕ್ತಮಕರೋತ್ತದಾ ।**
**ಕೃತೇ ವ್ರತೇ ಸ ವಿಜಯೀ ಬಭೂವ ರಘುನಂದನಃ ॥೩೫॥**

**ಬ್ರಹ್ಮನು ಹೇಳಿದನು-** ರಾಮನು ಇದನ್ನು ಕೇಳೀ ಅವನು ಹೇಳಿದಂತೆ ಮಾಡಿದನು. ಈ ವ್ರತವನ್ನು ಮಾಡುತ್ತಲೂ ಜಯವನ್ನು ಹೊಂದಿದನು.

**ಪ್ರಾಪ್ತಾ ಸೀತಾ ಜಿತಾ ಲಂಕಾ ಪೌಲಸ್ತ್ಯೋ ನಿಹತೋ ರಣೇ ।**
**ಅನೇನ ವಿಧಿನಾ ಪುತ್ರ ಯೇ ಕುರ್ವಂತಿ ನರಾ ವ್ರತಂ ॥**
**ಇಹ ಲೋಕೇ ಜಯಪ್ರಾಪ್ತಿಃ ಪರಲೋಕಸ್ತಥಾಕ್ಷಯಃ ॥೩೬॥**

ಹೀಗೆ ಮಾಡಲು ರಾಮನು ಸೀತೆಯನ್ನು ಹೊಂದಿದನು. ಲಂಕೆಯನ್ನು ಜಯಿಸಿದನು. ರಾವಣನನ್ನು ಕೊಂದನು. ಈ ವ್ರತವನ್ನು ವಿಧಿವತ್ತಾಗಿ ಮಾಡುವವರು ಇಹದಲ್ಲಿ ಜಯವನ್ನೂ ಹೊಂದಿ ಪರದಲ್ಲಿ ಅಕ್ಷಯವಾದ ಮೋಕ್ಷವನ್ನೂ ಹೊಂದುವರು.

**ಶ್ರೀಕೃಷ್ಣ ಉವಾಚ**

**ಏತಸ್ಮಾತ್ಕಾರಣಾತ್ಪಾರ್ಥ ಕರ್ತವ್ಯಂ ವಿಜಯಾವ್ರತಂ ।**
**ಪಠನಾಚ್ಛ್ರವಣಾಚ್ಚೈವ ವಾಜಪೇಯಫಲಂ ಲಭೇತ್ ॥೩೭॥**

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾಂತರ್ಗತ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಫಾಲ್ಗುಣ ಕೃಷ್ಣ ವಿಜಯೈಕಾದಶೀ ಮಹಾತ್ಮ್ಯಂ ನಾಮ ಷಟ್‌ಚತ್ವಾರಿಂಶೋಽಧ್ಯಾಯಸ್ಸಮಾಪ್ತಃ ॥

**ಕೃಷ್ಣನು ಹೇಳಿದನು-** ಈ ಕಾರಣದಿಂದ ಎಲೈ ಯುಧಿಷ್ಠಿರನೇ ಈ ವಿಜಯಾವ್ರತವನ್ನು ಮಾಡಬೇಕು. ಇದನ್ನು ಹೇಳಿದೂ ಕೇಳಿದರೂ ವಾಜಪೇಯ ಫಲವನ್ನು ಹೊಂದುವನು. ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದೊಳಗಿನ ಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಫಾಲ್ಗುಣ ಕೃಷ್ಣವಿಜಯೈಕಾದಶೀ ಮಹಿಮೆ ಎಂಬ ನಲವತ್ತೆರಡನೆಯ ಅಧ್ಯಾಯವು ಮುಗಿದುದು.

★ ★ ★ ★

## ॥ ಫಾಲ್ಗುಣ ॥ ಕೃಷ್ಣ ॥ ಅಮಾವಾಸ್ಯೆ ॥

ವರ್ಷ ಪೂರ್ತಿ ಮಾಡಿದ ಎಲ್ಲಾ ಸತ್ಕರ್ಮಗಳನ್ನು ಸ್ಮರಣೆ ಮಾಡಿಕೊಂಡು ಇಂದು ಭಗವಂತನಿಗೆ ಸಮರ್ಪಣೆ ಮಾಡಬೇಕು. ಪ್ರತಿಯೊಂದು ತಿಂಗಳಲ್ಲಿ, ಪ್ರತಿಯೊಂದು ವಾರಗಳಲ್ಲಿ, ಪ್ರತಿಯೊಂದು ದಿವಸಗಳಲ್ಲಿ, ಪ್ರತಿಯೊಂದು ನಿಮಿಷಗಳಲ್ಲಿ ಮಾಡಿದ ಕಾರ್ಯಗಳನ್ನು ಆದಷ್ಟು ಸ್ಮರಣೆಗೆ ತಂದುಕೊಂಡು ಎಲ್ಲವನ್ನೂ ಪೂಜಾರೂಪವಾಗಿ ಭಗವಂತನಿಗೆ ಸಮರ್ಪಣೆ ಮಾಡಬೇಕು. ಆಗ ಒಂದು ವರ್ಷಗಳ ಕಾಲ ಮಾಡಿದ ಸಕಲ ಕಾರ್ಯಗಳು ಸೇವಾ ರೂಪವಾಗಿ ಭಗವಂತನಿಗೆ ಸಲ್ಲುತ್ತದೆ. ಅವಶ್ಯವಾಗಿ ಇಂದು ಲಯಚಿಂತನೆಯನ್ನು ಮಾಡಬೇಕು. ಯುಗಾದಿಯ ದಿವಸ ಸೃಷ್ಟಿ ಚಿಂತನೆಯನ್ನು ಮಾಡಬೇಕು. ಸೃಷ್ಟಿ ಚಿಂತನೆ ಹಾಗೂ ಲಯಚಿಂತನೆಗಾಗಿ ಭಜನಮಾಲಾ ಪುಸ್ತಕದ ಕೊನೆಯ ಭಾಗವನ್ನು ನೋಡಬೇಕು.

ಇಲ್ಲಿಗೆ ಫಾಲ್ಗುಣ ಮಾಸದ ಮಹಿಮೆ ಹಾಗೂ ಕರ್ತವ್ಯಗಳ ವಿಚಾರವು ಸಮಾಪ್ತವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★ ★

# ಅಧಿಕ ಮಾಸ

## ಅಧಿಕ ಮಾಸದ ಆಚರಣೆ

ಸೂರ್ಯನ ಸಂಕ್ರಮಣ ಯಾವ ಮಾಸದಲ್ಲಿ ಇಲ್ಲವೋ ಆ ಮಾಸ ಅಧಿಕ ಮಾಸ. ಯಾವ ಮಾಸದಲ್ಲಿ ಎರಡು ಸಂಕ್ರಮಣ ಬರುವುದೋ ಅದು ಕ್ಷಯ ಮಾಸ. ಅಧಿಕ ಮಸವು ೩೩ ತಿಂಗಳಿಗೊಮ್ಮೆ ಬರುತ್ತದೆ. ಪುರುಷೋತ್ತಮನು ಈ ಮಾಸಕ್ಕೆ ಅಧಿಪತಿ.ಹಿಂದೆ ಭಗವಂತನು ದೇವತೆಗಳಿಗೆ ಒಂದೊಂದು ಮಾಸವನ್ನು ಹಂಚತ್ತಾನೆ. ಅಧಿಕ ಮಾಸವನ್ನು ಸ್ವತಃ ಸೂರ್ಯಯನಿಗೆ ಹಂಚುತ್ತಾನೆ. ಆಗ ಸೂರ್ಯನು ಈ ಮಾಸವು ಮಲ ಮಾಸ ವಾದುದರಿಂದ ಯಾರು ವ್ರತಾಚರಣೆ ಮಾಡುವುದಿಲ್ಲ, ಆದ್ದರಿಂದ ಈ ಮಾಸವನ್ನು ಶುದ್ಧೀಕರಿಸು ಎಂದು ಹೇಳಿದಾಗ ಸ್ವಯಂ ಭಗವಂತನು ತಾನೇ ಪುರುಷೋತ್ತಮ ರೂಪದಿಂದ ಈ ಮಾಸಕ್ಕೆ ಅಭಿಮಾನಿಯಾಗಿ ನಿಂತಿದ್ದಾನೆ. ಆದ್ದರಿಂದ ಈ ಮಲಮಾಸದಲ್ಲಿ ಏನು ಪುಣ್ಯಾಚರಣೆ ಮಾಡಿದರೂ ಅದನ್ನು ಪುರುಷೋತ್ತಮನು ಸ್ವೀಕರಿಸಿ ಎಲ್ಲರ ಒಳಗಿನ ಮಲ(ಪಾಪ) ವನ್ನು ನಾಶ ಮಾಡುತ್ತಾನೆ.ಈ ಮಾಸದಲ್ಲಿ ವರ್ಷದಲ್ಲಿ ಆಚರಿಸುವ ಎಲ್ಲಾ ವ್ರತವನ್ನು ಆಚರಿಸಿ ಮುಗಿಸಬಹುದು. ಅಶಕ್ತರು ಒಂದು ವರ್ಷ ಪರ್ಯಂತ ವಿಷ್ಣು ಪಂಚಕಾದಿವ್ರತಗಳನ್ನು ಆಚರಿಸಲು ಅಶಕ್ತರಾದರೆ ಈ ಮಾಸದಲ್ಲಿ ಉಪವಾಸಮಾಡುವುದರ ಮೂಲಕ ವಿಷ್ಣುಪಂಚಕವನ್ನಾಚರಿಸಿ ಅದರ ಪುಣ್ಯವನ್ನು ಪಡೆಯಬಹುದು.

ಈ ಅಧಿಕಮಾಸದಲ್ಲಿ ಹಿಂದೆ ಮಾಡುತ್ತಿದ್ದ ವ್ರತ ಮುಂತಾದವುಗಳನ್ನು ಆಚರಿಸಬಹುದು. ಈ ಮಾಸದಲ್ಲಿಯೇ ಕೊನೆಗೊಳಿಸುವ ವ್ರತಾದಿಗಳನ್ನು ಮಾಡಿದಾಗ ' ಅಧಿಕಸ್ಯ ಅಧಿಕಂ ಫಲಂ ಎಂಬಂತೆ ಅಧಿಕವಾದ ಫಲ ಲಭಿಸುತ್ತದೆ.

ಅಧಿಕಮಾಸದಲ್ಲಿ ಉಪನಯನ, ಚೌಲ,ವಿವಾಹ, ತೀರ್ಥಯಾತ್ರೆ ಮುಂತಾದವುಗಳು ನಿಷಿದ್ಧ. ಆದರೂಈ ಮಾಸದಲ್ಲಿ ಮಾಡುವ ಎಲ್ಲಾ ಆಚರಣೆಗೆ ಬೇರೆ

ಎಲ್ಲಾ ಮಾಸಗಳಲ್ಲಿ ಮಾಡುವ ಅನುಷ್ಠಾನಗಳಿಗಿಂತಲೂ ಅಧಿಕಫಲ. ಈ ಮಾಸದ ಆಚರಣೆ ಮಾಡದ ಕಾರಣ ಸ್ವರ್ಗವೇರಿದ ನಹುಷನು ಅಗಸ್ತ್ಯರ ಶಾಪದಿಂದ ಹಾವಾಗಿ ಹುಟ್ಟಿದನು.ನಂತರ ವೇದವ್ಯಾಸರ ದರ್ಶನದಿಂದ ಪೂರ್ವ ಜನ್ಮ ಸ್ಮರಣೆ ಬಂದು ತನ್ನ ದುಃಸ್ಥಿತಿಗೆ ಕಾರಣ ಕೇಳಲು ಅವನು ಅಧಿಕಮಾಸ ವ್ರತಾಚರಣೆ ಮಾಡದೇ ಅವಮಾನಿಸಿದ ಕಾರಣವನ್ನು ಹೇಳಿ ಅಧಿಕ ಮಾಸವನ್ನು ಅಪೂಪದಾನದ ಮೂಲಕ ಆಚರಿಸಲು ಹೇಳಿದರು. ಅದರಂತೆ ಅವನು ಮಾಡಿದಾಗ ಅದರ ಪುಣ್ಯಫಲದಿಂದ ಮುಂದೆ ಭೀಮಸೇನದರ್ಶನವಾಗುತ್ತದೆ. ಯುಧಿಷ್ಠಿರನೊಂದಿಗೆ ಸಂಭಾಷಣೆಯಾಗಿ ಹಾವಿನ ಜನ್ಮದಿಂದ ಮುಕ್ತಿಯಾಯಿತು.

೩೩ ತಿಂಗಳಿಗೆ ಬರುವ ಅಧಿಕ ಮಾಸದಲ್ಲಿ ೩೩ ಭಗವಂತನ ಚಿಂತನೆಯನ್ನು ೩೩ ದೇವತೆಗಳಲ್ಲಿ ಮಾಡಬೇಕು. ಮುಖ್ಯವಾಗಿ ಭೂದಾನಕ್ಕೆಸಮಾನವಾದ ೩೩ ಅಪೂಪಗಳನ್ನು ದಾನ ಮಾಡಿದರೆ ಭಗವಂತ ದೇಹದ ಒಳಗಿನ ಪಾಪಗಳನ್ನು ಪರಿಹರಿಸುತ್ತಾನೆ. ಅಪೂಪಗಳಲ್ಲಿ ಎಷ್ಟುರಂಧ್ರಗಳಿರುತ್ತವೆಯೋ ಅಷ್ಟುಕಾಲ ಸ್ವರ್ಗದಲ್ಲಿ ವಾಸ ಎಂದು ಪುರಾಣ ಹೇಳುತ್ತದೆ. ಶನಿದೋಷವಿದ್ದರೂ ಅಧಿಕಾಮಾಸ ಆಚರಣೆಯಿಂದ ಪರಿಹರಿಸಿಕೊಳ್ಳಬಹುದು. ಅಪೂಪ ದಾನದ ಜೊತೆಯಲ್ಲಿ ದೀಪ ದಾನವನ್ನು ಕೊಡಬೇಕು. ದೀಪವು ಮಲಕ್ಕೆ ಸಮಾನವಾದ ಕತ್ತಲೆಯನ್ನು ಕಳೆಯುವುದು.

ಈ ಮಾಸದಲ್ಲಿಮೌನ ವ್ರತ,ಭಾಗವತ ಶ್ರವಣ, ವ್ಯಾಸಪೂಜೆ, ಗೋದಾನ ,ಸುವರ್ಣ ದಾನ ಮುಂತಾದ ವ್ರತದಾನಗಳನ್ನು ಮಾಡಬೇಕು.ಈ ಮಾಸದಲ್ಲಿ ಪರಾನ್ನಭೋಜನತ್ಯಾಗ, ಉಪವಾಸ, ಅಯಾಚಿತ ವ್ರತ, ಧಾರಣ-ಪಾರಣವ್ರತವೂ ಬಹಳಶ್ರೇಷ್ಠ. ಆಧಿಕಮಾಸದಲ್ಲಿ ಬ್ರಹ್ಮಯಜ್ಞಾಂಗ ಪಿತೃತರ್ಪಣ, ತಿಲ ತರ್ಪಣಾದಿಗಳನ್ನು ಎಂದಿನಂತೆ ತಪ್ಪದೇ ನೀಡಬೇಕು.

ಅಧಿಕ ಮಾಸದಲ್ಲಿ ಮೃತರಾಗಿದ್ದರೆ ಅಧಿಕ ಮಾಸದಲ್ಲಿಯೇ ಅವರ ಶ್ರಾದ್ಧವನ್ನು ಮಾಡಬೇಕು. ನಿಜಮಾಸದಲ್ಲಿ ಮೃತರಾಗಿದ್ದರೆ ನಿಜಮಾಸದಲ್ಲಿಯೂ ಶ್ರಾದ್ಧವನ್ನು ಮಾಡಬೇಕು.ಅಧಿಕಮಾಸದ ಆಚರಣೆಯನ್ನು ಪ್ರತಿಯೊಬ್ಬರೂ ಆಚರಿಸಲೇಬೇಕು.

ಮಲಮಾಸದಲ್ಲಿ ಹೊಸ ವ್ರತ ಧಾರಣೆ ಮಾಡಲು ಬರುವುದಿಲ್ಲ. ಆದಕ್ಕೆ ಮೊದಲು ಅಧಿಕಮಾಸ ಪ್ರಾರಂಭವಾಗುವ ಮೊದಲು ಮೂರುದಿನ ಹಿಡಿಯುವ ವ್ರತ ಆಚರಣೆ ಮಾಡಿ ನಂತರ ಅಧಿಕದಲ್ಲಿ ಮಾಸದಲ್ಲಿ ಸಂಕಲ್ಪ ಪೂರ್ವಕ ವ್ರತ ಧಾರಣೆ ಮಾಡಿ ನೀವು ಯಾವುದೇ ವ್ರತ ಒಂದು ತಿಂಗಳು ಮಾಡಿದರೂ ಚಾತುರ್ಮಾಸ್ಯಪೂರ್ತಿ ಆಚರಣೆ ಮಾಡಿದ ಫಲ ಸಿಗುತ್ತೆ

## ಸ್ತ್ರೀಯರು ಸುಲಭವಾಗಿ ಮಾಡಬಹುದಾದ ದಾನಗಳು

ಮೂವತ್ತ್ಮೂರು ಶಂಖ, ಚಕ್ರ , ಪದ್ಮ ರಂಗೋಲಿ ವ್ರತ

ಮೂವತ್ತ್ಮೂರು ಸ್ವಸ್ತಿಕ ರಂಗೋಲಿ ಶ್ರೀಕಾರ ರಂಗೋಲಿ ವ್ರತ

ಮೂವತ್ತ್ಮೂರು ನಮಸ್ಕಾರ ವ್ರತ

ಮೂವತ್ತ್ಮೂರು ಗೆಜ್ಜೆವಸ್ತ್ರ ಏರಿಸುವ ವ್ರತ

ಮೂವತ್ತ್ಮೂರು ತುಪ್ಪದ ಬತ್ತಿ ಹಚ್ಚುವ ವ್ರತ

ಮೂವತ್ತ್ಮೂರು ಹಾಡು ಹೇಳುವುದು (ದೇವರ ಭಜನೆ)

ಮೂವತ್ತ್ಮೂರು ಹೂ ಎರಿಸುವ ವ್ರತ

ನಿತ್ಯವೂ ಲಕ್ಷ್ಮೀಶೋಭಾನ ಪದದ ಪಾರಾಯಣ

ಮೂವತ್ತ್ಮೂರು ಬೆಳ್ಳಿಯ ಆಕಳುಕರು ದಾನ

ಮುವತ್ತ್ಮೂರು ವಿಷ್ಣುಪಾದ ದಾನ

ಮೂವತ್ತ್ಮೂರು ಅನ್ನಪೂರ್ಣೇಶ್ವರಿ ಮೂರ್ತಿ ದಾನ

ಮೂವತ್ತ್ಮೂರು ಅರಿಷಿಣ ಕುಂಕುಮ ಬಟ್ಟಲು ದಾನ

ಮೂವತ್ತ್ಮೂರು ಮುತ್ತೈದೆಯರಿಗೆ ಉಡಿ ತುಂಬುವ ವ್ರತ

ಮೂವತ್ತ್ಮೂರು ಮುತ್ತೈದೆಯರಿಗೆ ಬಳೆ ಇಡಿಸುವ ವ್ರತ

ಒಂದು ವಟುವಿಗೆ ನಿತ್ಯ ಊಟ ಹಾಕುವ ವ್ರತ

ಒಂದು ಮುತ್ತೈ ದೆಗೆ ನಿತ್ಯ ಹರಳು ಹಾಕಿ ಹೂ ಮುಡಿಸುವ ವ್ರತ ..

ಒಂದು ಬ್ರಾಹ್ಮಣ ಮುತ್ತೈದೆಗೆ ನಿತ್ಯ ತಾಂಬೂಲದಕ್ಷಿಣೆ ವ್ರತ

ಒಂದು ಒಣಕೊಬ್ಬರಿ ಗಿಟುಕಿನಲ್ಲಿ ರಂದ್ರಮಾಡಿ ಅಕ್ಕಿಯನ್ನು ತುಂಬಿ ಕೃಷ್ಣನ ಮೂರ್ತಿಯನ್ನು ಇಟ್ಟು ಮತ್ತೆ ಗಿಕಿನ ರಂದ್ರ ಮುಚ್ಚಿ ತಾಂಬೂಲದಕ್ಷಿಣೆ ಸಹಿತ ದಾನ ಮಾಡಬೇಕು.

ಮೂವತ್ತ್ಮೂರು ಮುತ್ತೈದೆಯರಿಗೆ ವಸ್ತ್ರದಾನ

ಮೂವತ್ತ್ಮೂರು ವಟುಗಳಿಗೆ ಸಂಧ್ಯಾವಂದನೆ ಸಾಮಗ್ರಿ ದಾನ

ಮೂವತ್ತ್ಮೂರು ಮರದ ಬಾಗಿಣ ಸಹಿತ ಮೂವತ್ತ್ಮೂರು ದಂಪತಿ ಭೋಜನ

ಮೂವತ್ತ್ಮೂರು ಗಣದ ಜೊತೆ ಸೀರೆಯ ದಾನ.

ಮೂವತ್ತ್ಮೂರು ಜೊತೆ ದೀಪ ದಾನ .

ಅಪೂಪ ದಾನ ವಿಶೇಷವಾದದ್ದು ಅಂದೆ ಅಕ್ಕಿ ಬೆಲ್ಲ ತುಪ್ಪ ದಿಂದ ಮಾಡಿದ ಭಕ್ಷ್ಯ ಮೂವತ್ತ್ಮೂರು ಒಂದು ತಟ್ಟೆಯಲ್ಲಿಟ್ಟು ತಟ್ಟೆಸಮೇತ ಬ್ರಾಹ್ಮಣನಿಗೆ ಅಥವಾ ಅಳಿಯನಿಗೆ ದಾನ ಕೊಡಬೇಕು . ಅನಾರಸ ಶ್ರೇಷ್ಠ, ಖರ್ಚಿಕಾಯಿ, ಬೇಸನಲಾಡು, ಅಥವಾ ನಿಮಗೆ ಏನು ಅನುಕೂಲ ಅದನ್ನು ಮಾಡಿ ದಾನ ಮಾಡಿ.

## ಅಧಿಕಮಾಸದಲ್ಲಿ ನಿತ್ಯ ದಾನ

### ಶುಕ್ಲ ಪಕ್ಷ

| | |
|---|---|
| ಪಾಡ್ಯ | ಅರಿಶಿನ ಕುಂಕುಮ ಎಲೆಅಡಿಕೆದಕ್ಷಿಣೆ |
| ಬಿದಿಗೆ | ಕುಂಕುಮ ಅರಿಶಿನ ಎಲೆಅಡಿಕೆದಕ್ಷಿಣೆ |
| ತದಿಗೆ | ಕೊಬ್ಬರಿ ಸಕ್ಕರೆ |
| ಚೌತಿ | ನಿಂಬೆ ಹಣ್ಣು ಸಕ್ಕರೆ ಏಲಕ್ಕಿ |
| ಪಂಚಮಿ | ಅಕ್ಕಿ ಎಲೆ ಅಡಿಕೆ ದಕ್ಷಿಣೆ |
| ಷಷ್ಠಿ | ಮೊಸರು |
| ಸಪ್ತಮಿ | ಹಣ್ಣು |
| ಅಷ್ಟಮಿ | ತೊಗರಿಬೇಳೆ |
| ನವಮಿ | ಗೋರಿಕಾಯಿ |
| ದಶಮಿ | ೨ ಬೆಲ್ಲದ ಅಚ್ಚು |
| ದ್ವಾದಶಿ | ಹಾಲು |
| ತ್ರಯೋದಶಿ | ಗೋಧಿಹಿಟ್ಟು |
| ಚತುರ್ದಶಿ | ಮಲ್ಲಿಗೆ ಹೂವು |
| ಹುಣ್ಣಿಮೆ | ಸೌತೆಕಾಯಿ |

### ಕೃಷ್ಣ ಪಕ್ಷ

| | |
|---|---|
| ಪಾಡ್ಯ | ಹೀರೇಕಾಯಿ |
| ಬಿದಿಗೆ | ಗೆಡ್ಡೆ ಗೆಣಸು |
| ತದಿಗೆ | ಕುಪ್ಪಸ ಎಲೆ ಅಡಿಕೆ ದಕ್ಷಿಣೆ |
| ಚೌತಿ | ಹುರಿಗಡಲೆ |
| ಪಂಚಮಿ | ಕಡಲೆಕಾಯಿ ಬೀಜ |
| ಷಷ್ಠಿ | ರವೆ ಎಲೆ ಅಡಿಕೆ ದಕ್ಷಿಣೆ |
| ಸಪ್ತಮಿ | ಶ್ರೀ ಕೃಷ್ಣ ಸಮೇತ ತುಳಸಿ ದಾನ |
| ಅಷ್ಟಮಿ | ಹತ್ತಿ |
| ನವಮಿ | ಕಡ್ಲೆಹಿಟ್ಟು |
| ದಶಮಿ | ಗಾಜಿನ ಬಳೆ |
| ದ್ವಾದಶಿ | ಹೆಸರುಬೇಳೆ |
| ತ್ರಯೋದಶಿ | ಅವಲಕ್ಕಿ |

| | |
|---|---|
| **ಚತುರ್ದಶಿ** | ಕಡ್ಲೆಕಾಯಿ ಎಣ್ಣೆ |
| **ಅಮಾವಾಸ್ಯೆ** | ಕಡ್ಲೆಬೇಳೆ |
| **ಶುದ್ಧ ಪಾಡ್ಯ** | ಕುಪ್ಪಸ ಎಲೆ ಅಡಿಕೆ ದಕ್ಷಿಣೆ |

★ ★ ★ ★

# ಅಪೂಪದಾನ

**ಅಧಿಮಾಸೇ ತು ಸಂಪ್ರಾಪ್ತೇ ಗುಡಸರ್ಪಿಯುತಾನಿ ಚ ।**
**ತ್ರಯಸ್ತ್ರಿಂಶದಪೂಪಾನಿ ದಾತವ್ಯಾನಿ ದಿನೇ ದಿನೇ ॥**
**ಯಾವಂತಿ ತತ್ರ ಛಿದ್ರಾಣಿ ಅಪೂಪಸ್ಯ ಚ ಪಾರ್ಥಿವ ।**
**ತಾವದ್ ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥**

'ಅಧಿಕಮಾಸದಲ್ಲಿ ಪ್ರತಿದಿನವೂ ಮೂವತ್ತಮೂರು ಅಪೂಪಗಳನ್ನು ದಾನವೀಯಬೇಕು. ಆ ಅಪೂಪಗಳಲ್ಲಿ ಎಷ್ಟು ಛಿದ್ರಗಳಿವೆಯೋ ಅಷ್ಟು ಸಾವಿರ ವರ್ಷಗಳ ತನಕ ದಾನವಿತ್ತವ ಸ್ವರ್ಗದಲ್ಲಿ ಪೂಜಿಸಲ್ಪಡುತ್ತಾನೆ.' ಇತ್ಯಾದಿ ವಚನಗಳು ಪುರಾಣಗಳಲ್ಲೂ ಸ್ಮೃತಿಗಳಲ್ಲೂ ಹತ್ತು ಹಲವು ಕಾಣಿಸುತ್ತಿವೆ. ಅಧಿಕಮಾಸದಲ್ಲಿ ಅಪೂಪದಾನವು ಅತಿಪ್ರಶಸ್ತವೆಂಬುದು ಇದರ ಅಭಿಪ್ರಾಯ.

ಅಪೂಪ ಎಂಬುದೊಂದು ಸಿಹಿತಿಂಡಿ. ಕನ್ನಡದಲ್ಲಿ ಮತ್ತು ತುಳುವಿನಲ್ಲಿ 'ಅಪ್ಪ' ಎನ್ನಲಾಗುತ್ತದೆ. ಈ ಅಪೂಪವೂ ಹಲವು ರೀತಿಯಿದೆ. ತುಳುನಾಡಿನಲ್ಲಿ ಮಾಡುವ ಅಪ್ಪಕ್ಕೆ ಛಿದ್ರಗಳಿರುವುದಿಲ್ಲ, ಇಲ್ಲಿ ಛಿದ್ರಗಳಿರುವ ಅಪೂಪವನ್ನು ದಾನಕ್ಕಾಗಿ ಸ್ಮೃತಿಗಳು ಹೇಳಿವೆ. ಹಾಗಾಗಿ 'ಅತಿರಸ'ವೆಂದು ಕರೆಸಿಕೊಳ್ಳುವ ಚಿಕ್ಕ ಹಪ್ಪಳದಂತಿರುವ ಅಪೂಪವನ್ನು ಇಲ್ಲಿ ದಾನಕ್ಕಾಗಿ ಉಪಯೋಗಿಸುವುದು ಪ್ರಶಸ್ತ. ಇದನ್ನು ಅಕ್ಕಿಬೆಲ್ಲದಿಂದ ಮಾಡಿ ತುಪ್ಪದಲ್ಲಿ ಕರಿಯಬೇಕು. 'ಗುಡಸರ್ಪಿಯುತಾನಿ ಚ' ಎಂದಿದ್ದಾರೆ.

ಮೂವತ್ತಮೂರು ಅತಿರಸಗಳನ್ನು ಕಂಚಿನ ಪಾತ್ರೆಯಲ್ಲಿಟ್ಟು, ಚಿಕ್ಕ ಪಾತ್ರೆಯಲ್ಲಿ ತುಪ್ಪವನ್ನು ಇಟ್ಟು, ಹಿರಣ್ಯದಕ್ಷಿಣೆಯೊಂದಿಗೆ ವಿಪ್ರನಿಗೆ ದಾನವೀಯಬೇಕು.

**ತ್ರಯಸ್ತ್ರಿಂಶದಪೂಪಾನ್ನಂ ಕಾಂಸ್ಯಪಾತ್ರೇ ನಿಧಾಯ ಚ ।**
**ಸಘೃತಂ ಸಹಿರಣ್ಯಂ ಚ ಬ್ರಾಹ್ಮಣಾಯ ನಿವೇದಯೇತ್ ॥**

ಅಧಿಕಮಾಸದ ಪ್ರತಿದಿನ ಈ ದಾನವನ್ನು ನೀಡುವುದು ಅಶಕ್ಯವಾದರೆ ಒಂದು ದಿನವಾದರೂ ನೀಡಬಹುದು. ಅದರಲ್ಲಿಯೂ ಅಧಿಕಮಾಸದ ಎರಡು ದ್ವಾದಶಿಗಳು, ಹುಣ್ಣಿಮೆ, ಅಮಾವಾಸ್ಯೆ, ಕೃಷ್ಣಚತುರ್ದಶೀ, ವೈಧೃತಿ, ವ್ಯತೀಪಾತ ಈ ದಿನಗಳಲ್ಲಿ ನೀಡಿದ ದಾನ ಅತಿಶಯಫಲದಾಯಕ.

ಮೂವತ್ತಮೂರು ಅಪೂಪಗಳಲ್ಲಿ ಭಗವಂತನ ಮೂವತ್ತಮೂರು ರೂಪಗಳನ್ನು ಚಿಂತಿಸಬೇಕು. ಪದ್ಮಪುರಾಣವು ವಿಷ್ಣು ಜಿಷ್ಣು ಮೊದಲಾದ ಈ ರೂಪಗಳನ್ನು ಹೇಳಿದೆ. ಅಲ್ಲದೇ ಏಕಾದಶರುದ್ರರು ಅಷ್ಟವಸುಗಳು ದ್ವಾದಶಾದಿತ್ಯರು, ವಷಟ್ಕಾರದೇವತೆ ಮತ್ತು ಪ್ರಜಾಪತಿಯೆಂಬ ಮೂವತ್ತಮೂರು ದೇವತೆಗಳನ್ನು ಅಲ್ಲಿ ಚಿಂತಿಸಿ ದಾನವೀಯಬೇಕು.

**ಎರಡು ಬಾರಿ ಆಚಮನ, ಪ್ರಾಣಾಯಾಮ, ಶುಭತಿಥೌ ಅಧಿಕಮಾಸನಿಯಾಮಕ ಪುರುಷೋತ್ತಮರೂಪಿ ಪರಮಾತ್ಮಪ್ರೀತ್ಯರ್ಥಂ ಅಮುಕ ಗೋತ್ರೋದ್ಭವಸ್ಯ ಅಮುಕಶರ್ಮಣಃ ಮಮ ಸಪತ್ನೀಕಸ್ಯ ನಿಖಿಲಪಾಪಕ್ಷಯ ಪೂರ್ವಕಂ ಭೂದಾನಫಲಾವಾಪ್ತಯೇ, ಅಪೂಪಚ್ಛಿದ್ರ ಸಮಸಂಖ್ಯವರ್ಷ ಸಹಸ್ರಾವಧಿ ಸ್ವರ್ಲೋಕನಿವಾಸಾದಿಪುರಾಣೋಕ್ತ ಫಲ ಸಿದ್ಧ್ಯರ್ಥಂ ತ್ರಯಸ್ತ್ರಿಂಶದಪೂಪದಾನಾಖ್ಯಂ ಕರ್ಮ ಕರಿಷ್ಯೇ । ತದಂಗತ್ವೇನ ಅಪೂಪಪೂಜಾಂ ಬ್ರಾಹ್ಮಣಪೂಜಾಂ ಚ ಕರಿಷ್ಯೇ ॥**

ಅಪೂಪ ಪೂಜೆ–ಮೂವತ್ತಮೂರು ದೇವತೆ ಹಾಗೂ ಭಗವದ್ರೂಪಗಳನ್ನು ಆವಾಹಿಸಬೇಕು.

೧. ದ್ರೋಣನಾಮಕವಸುಂ ತದಂತರ್ಗತಂ ವಿಷ್ಣುಮಾವಾಹಯಾಮಿ ।
೨. ಧ್ರುವನಾಮಕವಸುಂ ತದಂತರ್ಗತಂ ಜಿಷ್ಣುಮಾವಾಹಯಾಮಿ ।
೩. ದೋಷನಾಮಕವಸುಂ ತದಂತರ್ಗತಂ ಮಹಾವಿಷ್ಣುಮಾವಾಹಯಾಮಿ ।
೪. ಅರ್ಕನಾಮಕವಸುಂ ತದಂತರ್ಗತಂ ಹರಿಮಾವಾಹಯಾಮಿ ।
೫. ಅಗ್ನಿನಾಮಕವಸುಂ ತದಂತರ್ಗತಂ ಕೃಷ್ಣಮಾವಾಹಯಾಮಿ ।
೬. ದ್ಯುನಾಮಕವಸುಂ ತದಂತರ್ಗತಂ ಅಧೋಕ್ಷಜಮಾವಾಹಯಾಮಿ ।
೭. ಪ್ರಾಣನಾಮಕವಸುಂ ತದಂತರ್ಗತಂ ಕೇಶವಮಾವಾಹಯಾಮಿ ।
೮. ವಿಭಾವಸುನಾಮಕವಸುಂ ತದಂತರ್ಗತಂ ಮಾಧವಮಾವಾಹಯಾಮಿ ।
೯. ಭೀಮನಾಮಕರುದ್ರಂ ತದಂತರ್ಗತಂ ರಾಮಮಾವಾಹಯಾಮಿ ।
೧೦. ರೈವತನಾಮಕರುದ್ರಂ ತದಂತರ್ಗತಮಚ್ಯುತಮಾವಾಹಯಾಮಿ ।
೧೧. ಓಜೋನಾಮಕರುದ್ರಂ ತದಂತರ್ಗತಂ ಪುರುಷೋತ್ತಮಮಾವಾಹಯಾಮಿ।
೧೨. ಅಜೈಕಪಾನ್ನಾಮಕರುದ್ರಂ ತದಂತರ್ಗತಂ ಗೋವಿಂದಮಾವಾಹಯಾಮಿ।
೧೩. ಮಹನ್ನಾಮಕರುದ್ರಂ ತದಂತರ್ಗತಂ ವಾಮನಮಾವಾಹಯಾಮಿ ।
೧೪.ಬಹುರೂಪನಾಮಕರುದ್ರಂ ತದಂತರ್ಗತಂ ಶ್ರೀಶಮಾವಾಹಯಾಮಿ ।
೧೫. ಭವನಾಮಕರುದ್ರಂ ತದಂತರ್ಗತಂ ಶ್ರೀಕಂಠಮಾವಾಹಯಾಮಿ ।

೧೬. ವಾಮದೇವನಾಮಕರುದ್ರಂ ತದಂತರ್ಗತಂ ವಿಶ್ವಸಾಕ್ಷಿಣಮಾವಾಹಯಾಮಿ।
೧೭. ಉಗ್ರನಾಮಕರುದ್ರಂ ತದಂತರ್ಗತಂ ನಾರಾಯಣಮಾವಾಹಯಾಮಿ ।
೧೮. ವೃಷಾಕಪಿನಾಮಕರುದ್ರಂ ತದಂತರ್ಗತಂ ಮಧುರಿಪುಮಾವಾಹಯಾಮಿ।
೧೯. ಅಹಿರ್ಬುಧ್ನ್ಯನಾಮಕರುದ್ರಂ ತದಂತರ್ಗತಂ ಅನಿರುದ್ಧಮಾವಾಹಯಾಮಿ।
೨೦ ವಿವಸ್ವನ್ನಾಮಕಾದಿತ್ಯಂ ತದಂತರ್ಗತಂ ತ್ರಿವಿಕ್ರಮಮಾವಾಹಯಾಮಿ ।
೨೧. ಅರ್ಯಮನಾಮಕಾದಿತ್ಯಂ ತದಂತರ್ಗತಂ ವಾಸುದೇವಮಾವಾಹಯಾಮಿ।
೨೨. ಪೂಷನಾಮಕಾದಿತ್ಯಂ ತದಂತರ್ಗತಂ ಜಗದ್ಯೋನಿಮಾವಾಹಯಾಮಿ ।
೨೩. ತ್ವಷ್ಟ್ರುನಾಮಕಾದಿತ್ಯಂ ತದಂತರ್ಗತಮನಂತಮಾವಾಹಯಾಮಿ ।
೨೪. ಸವಿತೃನಾಮಕಾದಿತ್ಯಂ ತದಂತರ್ಗತಂ ಶೇಷಶಾಯಿನಮಾವಾಹಯಾಮಿ।
೨೫. ಭಗನಾಮಕಾದಿತ್ಯಂ ತದಂತರ್ಗತಂ ಸಂಕರ್ಷಣಮಾವಾಹಯಾಮಿ ।
೨೬. ಧಾತೃನಾಮಕಾದಿತ್ಯಂ ತದಂತರ್ಗತಂ ಪ್ರದ್ಯುಮ್ನಮಾವಾಹಯಾಮಿ ।
೨೭. ಪರ್ಜನ್ಯನಾಮಕಾದಿತ್ಯಂ ತದಂತರ್ಗತಂ ದೈತ್ಯಾರಿಮಾವಾಹಯಾಮಿ ।
೨೮. ವರುಣನಾಮಕಾದಿತ್ಯಂ ತದಂತರ್ಗತಂ ವಿಶ್ವತೋಮುಖಮಾವಾಹಯಾಮಿ।
೨೯. ಮಿತ್ರನಾಮಕಾದಿತ್ಯಂ ತದಂತರ್ಗತಂ ಜನಾರ್ದನಮಾವಾಹಯಾಮಿ ।
೩೦. ಶಕ್ರನಾಮಕಾದಿತ್ಯಂ ತದಂತರ್ಗತಂ ಧರಾವಾಸಮಾವಾಹಯಾಮಿ ।
೩೧. ಉರುಕ್ರಮನಾಮಕಾದಿತ್ಯಂ ತದಂತರ್ಗತಂ ದಾಮೋದರಮಾವಾಹಯಾಮಿ।
೩೨. ವಷಟ್ಕಾರಮಪೂಪದೇವತಾಂ ತದತರ್ಗತಂ ಅಘಾರ್ದನಮಾವಾಹಯಾಮಿ।
೩೩. ಪ್ರಜಾಪತಿಮಪೂಪದೇವತಾಂ ತದಂತರ್ಗತಂ ಶ್ರೀಪತಿಮಾವಾಹಯಾಮಿ।

ಆವಾಹಿತತ್ರಯಸ್ತ್ರಿಂಶದ್ದೇವತಾಭ್ಯೋ ನಮಃ ।
ಧ್ಯಾನಾವಾಹನಾದ್ಯುಪಚಾರಾನ್ ಸಮರ್ಪಯಾಮಿ ।

ವಿಷ್ಣುಂ ಜಿಷ್ಣುಂ ಮಹಾವಿಷ್ಣು ಹರಿಂ ಕೃಷ್ಣಮಧೋಕ್ಷಜಮ್ ।
ಕೇಶವಂ ಮಾಧವಂ ರಾಮಮಚ್ಯುತಂ ಪುರುಷೋತ್ತಮಮ್ ॥

ಗೋವಿಂದಂ ವಾಮನಂ ಶ್ರೀಶಂ ಶ್ರೀಕಂಠಂ ವಿಶ್ವಸಾಕ್ಷಿಣಮ್ ।
ನಾರಾಯಣಂ ಮಧುರಿಪುಮನಿರುದ್ಧಂ ತ್ರಿವಿಕ್ರಮಮ್ ॥

ವಾಸುದೇವಂ ಜಗದ್ಯೋನಿಮನಂತಂ ಶೇಷಶಾಯಿನಮ್ ।
ಸಂಕರ್ಷಣಂ ಚ ಪ್ರದ್ಯುಮ್ನಂ ದೈತ್ಯಾರಿಂ ವಿಶ್ವತೋಮುಖಮ್ ॥

ಜನಾರ್ದನಂ ಧರಾವಾಸಂ ದಾಮೋದರಮಘಾರ್ದನಮ್ ।
ಶ್ರೀಪತಿಂ ಚ ತ್ರಯಸ್ತ್ರಿಂಶದುದ್ದಿಶ್ಯ ಪ್ರತಿನಾಮಭಿಃ ॥
ಮಂತ್ರೈರೇತೈಶ್ಚ ಯೋ ದದ್ಯಾದ್ ತ್ರಯಸ್ತ್ರಿಂಶದಪೂಪಕಮ್ ।
ಪ್ರಾಪ್ನೋತಿ ವಿಪುಲಾಂ ಲಕ್ಷ್ಮೀಂ ಪುತ್ರಪೌತ್ರಾದಿಸಂತತಿಮ್ ॥

ಈ ಶ್ಲೋಕಗಳನ್ನು ಪಠಿಸಿ ಅಪೂಪಗಳಿಗೆ ನಮಿಸಿ, ವಿಪ್ರರನ್ನು ಗಂಧಪುಷ್ಪಾಕ್ಷತ ತಾಂಬೂಲಾದಿಗಳಿಂದ ಪೂಜಿಸಿ ಅಪೂಪದಾನವನ್ನು ಕೊಡಬೇಕು.

★ ★ ★ ★

## ಅಪೂಪದಾನ ಮಂತ್ರ

ವಿಷ್ಣುರೂಪೀ ಸಹಸ್ರಾಂಶುಃ ಸರ್ವಪಾಪಪ್ರಣಾಶನಃ ।
ಅಪೂಪಾನ್ನಪ್ರದಾನೇನ ಮಮ ಪಾಪಂ ವ್ಯಪೋಹತು ॥

ನಾರಾಯಣ ಜಗದ್ಬೀಜ ಭಾಸ್ಕರಪ್ರತಿರೂಪದೃಕ್ ।
ವ್ರತೇನಾನೇನ ಪುತ್ರಾಂಶ್ಚ ಸಂಪದಂ ಚಾಭಿವರ್ಧಯ ॥

ಯಸ್ಯ ಹಸ್ತೇ ಗದಾಚಕ್ರೇ ಗರುಡೋ ಯಸ್ಯ ವಾಹನಮ್ ।
ಶಂಖಃ ಕರತಲೇ ಯಸ್ಯ ಸ ಮೇ ವಿಷ್ಣುಃ ಪ್ರಸೀದತು ॥

ಕಲಾಕಾಷ್ಠಾದಿರೂಪೇಣ ನಿಮೇಷಘಟಿಕಾದಿನಾ ।
ಯೋ ವಂ(ಪಂ)ಚಯತಿ ಭೂತಾನಿ ತಸ್ಮೈ ಕಾಲಾತ್ಮನೇ ನಮಃ ॥

ಕುರುಕ್ಷೇತ್ರಮಯೋ ದೇಶಃ ಕಾಲಃ ಪರ್ವ ದ್ವಿಜೋ ಹರಿಃ ।
ಪೃಥ್ವೀಸಮಮಿದಂ ದಾನಂ ಗೃಹಾಣ ಪುರುಷೋತ್ತಮ ॥

ಮಲಾನಾಂ ಚ ವಿಶುದ್ಧ್ಯರ್ಥಂ ಪಾಪಪ್ರಶಮನಾಯ ಚ ।
ಪುತ್ರಪೌತ್ರಾಭಿವೃದ್ಧ್ಯರ್ಥಂ ತವ ದಾಸ್ಯಾಮಿ ಭಾಸ್ಕರ ॥

(ಮಂತ್ರೇಣಾನೇನ ಯೋ ದದ್ಯಾತ್ ತ್ರಯಸ್ತ್ರಿಂಶದಪೂಪಕಾನ್ ।
ಪ್ರಾಪ್ನೋತಿ ವಿಪುಲಾಂ ಲಕ್ಷ್ಮೀಂ ಪುತ್ರಪೌತ್ರಾದಿಸಂಪದಃ ॥)

ಪದ್ಮಪುರಾಣದ ಈ ಶ್ಲೋಕಗಳಿಂದ 'ಅಮುಕನಾಮಕೋಽಹಂ ಅಮುಕಶರ್ಮಣೇ ತುಭ್ಯಂ ಸಂಪ್ರದದೇ ನ ಮಮ ।' ಎಂದು ದಾನವಿತ್ತು ದಕ್ಷಿಣೆಯನ್ನು ಕೊಟ್ಟು ನಮಿಸಿ ಆಶೀರ್ವಾದವನ್ನು ಪಡೆಯಬೇಕು.

ಅನೇನ ಸೋಪಸ್ಕರಾಪೂಪದಾನೇನ ಮಾಸನಿಯಾಮಕಪುರುಷೋತ್ತಮಾತ್ಮಕ ಮಧ್ವಪತಿಃ ಗೋಪಾಲಕೃಷ್ಣಃ ಪ್ರೀಯತಾಮ್ ॥

★ ★ ★ ★

# ಅಧಿಕಮಾಸದ ಧರ್ಮಗಳು

ಅಧಿಕಮಾಸಕ್ಕೆ ರಾಧಾಸಮೇತ ಪುರುಷೋತ್ತಮನು ನಿಯಾಮಕ. ಆ ಭಗವಂತನ ಪ್ರೀತಿಗಾಗಿ ಈ ಧರ್ಮಗಳನ್ನು

ನಡೆಸಬೇಕು. ಸ್ನಾನ, ದಾನ, ಉಪವಾಸಗಳು ವಿಶೇಷವಾಗಿ ಪುಣ್ಯದಾಯಕ.

**ಸ್ನಾನ–** ತನಗೆ ಹತ್ತಿರವಿರುವ ನದೀ, ಸರೋವರ, ಕೊಳ ಮೊದಲಾದವುಗಳಲ್ಲಿ ಬೆಳಿಗ್ಗೆ ಮತ್ತು ಮಧ್ಯಾಹ್ನ ಸ್ನಾನವನ್ನು ಮಾಡಬೇಕು. ಅದಕ್ಕಾಗಿ ದೂರದ ತೀರ್ಥಗಳಿಗೆ ಹೋಗಬಾರದು. ಅಧಿಕಮಾಸದಲ್ಲಿ ತೀರ್ಥಯಾತ್ರೆ ನಿಷಿದ್ಧ.

**ದಾನ—** ಅಪೂಪದಾನ ಹಾಗೂ ದೀಪದಾನಗಳು ವಿಶೇಷ. ಕಂಚಿನ ಸಂಪುಟದಲ್ಲಿ ೩೩ ಅಪೂಪಗಳನ್ನು ಇಟ್ಟು ದಾನ ಮಾಡುವುದರಿಂದ ಬ್ರಹ್ಮಾಂಡದಾನದ ಪುಣ್ಯವೆಂದು ಮಹದೇವರು ಪಾರ್ವತೀದೇವಿಯವರಿಗೆ ಉಪದೇಶಿಸಿದ್ದಾರೆ. ದೇವರಮುಂದೆ ಅಖಂಡದೀಪವನ್ನು ತುಪ್ಪ, ಎಳ್ಳೆಣ್ಣೆ ಅಥವಾ ಹಿಪ್ಪೆ ಎಣ್ಣೆಯಿಂದ ಇಡಬೇಕು. ಇದಕ್ಕೆ ಅನುಕೂಲ ಮಾಡಿಕೊಡಲುಬ್ರಾಹ್ಮಣರಿಗೆ ದೀಪದ ಕಂಭ, ತೈಲ/ತುಪ್ಪ, ಬತ್ತಿಗಳನ್ನು ದಾನ ಮಾಡಬಹುದು.

**ಉಪವಾಸ–** ಒಂದು ದಿನ ಉಪವಾಸ ಮಾಡಿದರೂ ಮಹಾಪುಣ್ಯವಿದೆ. ಯಥಾಶಕ್ತಿ ಉಪವಾಸ ಮಾಡಬಹುದು. ಒಪ್ಪತ್ತು ಊಟಮಾಡಿಕೊಂಡೂ ಒಂದು ತಿಂಗಳು ಕಳೆಯಬಹುದು.

**ಪೂಜಾ–** ನಮ್ಮ ಯೋಗ್ಯತೆಗೆ ತಕ್ಕಂತೆ ಬಂಗಾರ, ಬೆಳ್ಳಿ, ತಾಮ್ರ ಅಥವಾ ಮಣ್ಣಿನ ಕಲಶವನ್ನು ಇಟ್ಟು ಅದರಲ್ಲಿ ರಾಧಾಸಮೇತ ಪುರುಷೋತ್ತಮನನ್ನು ಆವಾಹಿಸಿ ಪೂಜಿಸಬೇಕು. ತಿಂಗಳೂ ಹೀಗೆ ಪೂಜೆ ಮಾಡಬೇಕು. ಕಡೆಗೆ ಒಂದುದಿವಸವಾದರೂ ಪೂಜಿಸಬೇಕು.

**ಜ್ಞಾನಕಾರ್ಯ–** ಯಥಾಶಕ್ತಿ ಶ್ರೀಮದ್ಭಾಗವತ, ಶ್ರೀಮದ್ಭಗವದ್ಗೀತಾ, ಅಧಿಕಮಾಸಮಹಾತ್ಮೆ, ಶ್ರೀವಿಷ್ಣುಸಹಸ್ರನಾಮ

ಇವುಗಳನ್ನು ಪ್ರವಚನ/ಪಾರಾಯಣ/ಶ್ರವಣವನ್ನು ಮಾಡಬೇಕು.

ನಿರಂತರವೂ ಪಠಿಸಬೇಕಾದ ಶ್ಲೋಕ–

**ಗೋವರ್ಧನಧರಂ ವಂದೇ ಗೋಪಾಲಂ ಗೋಪರೂಪಿಣಮ್ ।**
**ಗೋಕುಲೋತ್ಸವಮೀಶಾನಂ ಗೋವಿಂದಂ ಗೋಪಿಕಾಪ್ರಿಯಮ್ ॥**

**ಹೋಮ–** ಅಧಿಕಮಾಸದಲ್ಲಿ ಪವಮಾನಹೋಮ ಮೊದಲಾದ ವಿಶೇಷಹೋಮಗಳನ್ನು ಮಾಡಬಾರದು. ನಿತ್ಯ

ಹೋಮಗಳಾದ ಅಗ್ನಿಕಾರ್ಯ, ಔಪಾಸನ, ವೈಶ್ವದೇವಗಳನ್ನು ಮಾತ್ರ ಮಾಡಬೇಕು.

**ಸಂಸ್ಕಾರಗಳು–** ಅಧಿಕಮಾಸದಲ್ಲಿ ಗರ್ಭಾಧಾನ, ಸೀಮಂತ, ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನಗಳನ್ನು ಮಾಡಬಹುದು. ಚೌಲ, ಉಪನಯನ, ವಿವಾಹಗಳು ಕೂಡದು. ವ್ರತಗಳನ್ನು ಆರಂಭಿಸುವುದೂ ಉದ್ಯಾಪನೆ ಮಾಡುವುದೂ ನಿಷಿದ್ಧ.

**ಶ್ರಾದ್ಧಗಳು–** ಮನ್ವಾದಿ, ಯುಗಾದಿ, ದರ್ಶಶ್ರಾದ್ಧಗಳನ್ನು ಅಧಿಕಮಾಸದಲ್ಲೂ ಮಾಡಬೇಕು. ಪ್ರತಿಸಾಂವತ್ಸರಿಕಶ್ರಾದ್ಧ ವನ್ನು ಅಧಿಕಮಾಸದಲ್ಲಿ ಸಂಕಲ್ಪವಿಧಾನದಿಂದ ಮಾಡಿ, ನಿಜಮಾಸದಲ್ಲಿ ಪಿಂಡಸಹಿತವಾಗಿ ಮಾಡಬೇಕು. ಅಧಿಕಮಾಸದಲ್ಲೇ ಮೃತರಾದವರಿಗೆ ಅಧಿಕಮಾಸದಲ್ಲಿ ಪಿಂಡಸಹಿತಶ್ರಾದ್ಧವನ್ನು ಮಾಡಿ, ನಿಜಮಾಸದಲ್ಲಿ ಸಂಕಲ್ಪಶ್ರಾದ್ಧ ಮಾಡಿದರೆ ಸಾಕು. ಹಿಂದಿನ ವರ್ಷದಲ್ಲಿ ಈ ಅಧಿಕಮಾಸದಲ್ಲಿ ಹನ್ನೆರಡು ತಿಂಗಳು ತುಂಬಿದರೆ, (ಸರ್ವಜಿತ್‌ಸಂವತ್ಸರದ ಅಧಿಕಜ್ಯೇಷ್ಠದಲ್ಲಿ ಹನ್ನೆರಡು ತಿಂಗಳು ತುಂಬಿದರೆ) ಅಧಿಕಮಾಸದಲ್ಲೇ ಊನಾಬ್ಧಿಕ, ವಿಮೋಕ, ವರ್ಷಾಬ್ಧಿಕಗಳನ್ನು ಮಾಡಬೇಕು. ನಿಜಮಾಸದಲ್ಲಿ ಪ್ರತಿಸಾಂವತ್ಸರಿಕಶ್ರಾದ್ಧ ವನ್ನು ಮಾತ್ರ ಪುನಃ ಮಾಡಬೇಕು.

ವರ್ಷದ ಮಧ್ಯೆ ಅಧಿಕಮಾಸ ಬಂದಿದ್ದರೆ ಆ ಮಾಸಿಕವನ್ನೇ ಅಧಿಕಮಾಸ ಮತ್ತು ನಿಜಮಾಸದಲ್ಲಿ ಎರಡು ಸಾರಿ ಮಾಡಬೇಕು. ಉದಾಹರಣೆಗೆ, ಯಾರಾದರೂ ಈ ಚೈತ್ರಮಾಸದಲ್ಲಿ ಮೃತರಾಗಿದ್ದರೆ, ತೃತೀಯಮಾಸಿಕವನ್ನೇ ಅಧಿಕಜ್ಯೇಷ್ಠ, ನಿಜಜ್ಯೇಷ್ಠ ಎರಡರಲ್ಲೂ ಮಾಡಬೇಕು. ಯಾರಾದರೂ ಈ ಅಧಿಕಮಾಸದಲ್ಲೇ ಮೃತರಾದರೆ ಅವರಿಗೆ ಪ್ರಥಮಮಾಸಿಕವನ್ನೇ ನಿಜಮಾಸದಲ್ಲೂ ಮಾಡಿ ಅನಂತರ ಕ್ರಮವಾಗಿ ಊನಮಾಸಿಕ ಮೊದಲಾದುವನ್ನು ಮಾಡುತ್ತಾ ಹೋಗಬೇಕು.

# ॥ ಪುರುಷೋತ್ತಮ (ಅಧಿಕ) ॥ ಶುದ್ಧ ॥ ಏಕಾದಶೀ ॥

**ಯುಧಿಷ್ಠಿರ ಉವಾಚ**

**ಶ್ರುತಾನಿ ಬಹುಧರ್ಮಾಣಿ ವ್ರತಾನಿ ಚ ಜಗತ್ಪ್ರಭೋ ।**
**ಏಕಾದಶೀಸಮಂ ಕಿಂಚಿಚ್ಛ್ರುತಂ ನೈವ ಜನಾರ್ದನ ॥೧॥**

**ಯುಧಿಷ್ಠಿರನು ಹೇಳಿದನು-** ಎಲೈ ಪ್ರಭುವಾದ ಕೃಷ್ಣನೇ ! ನಾನು ಅನೇಕವಾದ ವ್ರತಗಳನ್ನೂ ಧರ್ಮಗಳನ್ನೂ ಕೇಳಿದ್ದೇನೆ. ಆದರೆ ಏಕಾದಶಿಗೆ ಸಮವಾದುದೊಂದನ್ನೂ ಕೇಳಿಯೇ ಇಲ್ಲ.

**ಪುನಸ್ತ್ವೇಕಾದಶೀಂ ಬ್ರೂಹಿ ಪಾಪಘ್ನೀಂ ಪುಣ್ಯದಾಯಿನೀಂ ।**
**ಯಾಂ ಕೃತ್ವಾ ಮನುಜೋ ಲೋಕೇ ಪ್ರಾಪ್ನುಯಾತ್ಪರಮಂ ಪದಂ ॥೨॥**

ಮತ್ತೆ ಮತ್ತೆ ಆ ಪಾಪನಾಶವಾದ ಪುಣ್ಯಪ್ರದವಾದ ಏಕಾದಶಿಯ ವಿಷಯವನ್ನೇ ಹೇಳು. ಆ ಏಕಾದಶಿಯನ್ನು ಲೋಕದಲ್ಲಿ ಆಚರಿಸುವುದರಿಂದ ಮನುಷ್ಯನು ಮುಕ್ತಿಯನ್ನು ಹೊಂದುತ್ತಾನೆ.

**ಶ್ರೀಕೃಷ್ಣ ಉವಾಚ**

**ಶುಕ್ಲೇ ವಾ ಯದಿ ವಾ ಕೃಷ್ಣೇ ಯದಾ ಚೈಕಾದಶೀ ಭವೇತ್ ।**
**ನ ತ್ಯಾಜ್ಯಾ ಜಗತೀಪಾಲ ಮೋಕ್ಷಸೌಖ್ಯವಿವರ್ಧಿನೀ ॥೩॥**

**ಶ್ರೀಕೃಷ್ಣನು ಹೇಳಿದನು-** ಎಲೈ ಧರ್ಮಜನೇ ! ಶುಕ್ಲಪಕ್ಷದಲ್ಲಾಗಲೀ ಕೃಷ್ಣಪಕ್ಷದಲ್ಲಾಗಲೀ ಏಕಾದಶಿಯು ಬಂದರೆ ಬಿಡಬಾರದು. ಅದನ್ನೂ ಮಾಡಬೇಕು. ಅದು ಮೋಕ್ಷವನ್ನೂ ಸೌಖ್ಯವನ್ನೂ ಕೊಡುತ್ತದೆ.

**ಏಕಾದಶೀ ಕಲೌ ರಾಜನ್ ಭವಬಂಧನಮೋಚನೀ ।**
**ಕಾಮದಾ ಸರ್ವಕಾಮಾನಾಂ ಪಾಪಾನಾಂ ಪಾಪಹಾ ಭುವಿ ॥೪॥**

ಎಲೈ ರಾಜನೇ! ಈ ಏಕಾದಶಿಯು ಕಲಿಯುಗದಲ್ಲಿ ಸಂಸಾರ ಬಂಧನವನ್ನು (ಜನನ ಮರಣಗಳನ್ನು) ಬಿಡಿಸುತ್ತದೆ. ಭೂಮಿಯಲ್ಲಿರುವ ಇಚ್ಛೆಗಳೆಲ್ಲವನ್ನೂ ಒದಗಿಸಿಕೊಡುತ್ತದೆ. ಪಾಪಿಗಳ ಪಾಪವೆಲ್ಲವನ್ನೂ ನಾಶಮಾಡುತ್ತದೆ.

**ರವಿವಾರೇಥ ಮಾಂಗಲ್ಯೇ ಸಂಕ್ರಮೇ ವಾ ನೃಪೋತ್ತಮ ।**
**ಏಕಾದಶೀ ಸದೋಪೋಷ್ಯಾ ಪುತ್ರಪೌತ್ರವಿವರ್ಧಿನೀ ॥೫॥**

ಭಾನುವಾರದ ಏಕಾದಶೀ, ಮಂಗಳವಾರದ ಏಕಾದಶೀ, ಸಂಕ್ರಮಣದ ಏಕಾದಶೀ, ಇವನ್ನು ಯಾವಾಗಲೂ ಬಿಡದೆ ಉಪವಾಸ ಮಾಡಬೇಕು. ಪುತ್ರ ಪೌತ್ರರನ್ನು ಕೊಟ್ಟು ಹೆಚ್ಚಿಸುತ್ತದೆ.

**ಏಕಾದಶೀವ್ರತಂ ಕ್ವಾಪಿ ನ ತ್ಯಾಜ್ಯಂ ವಿಷ್ಣುವಲ್ಲಭೈಃ ।**
**ಆಯುಷ್ಕೀರ್ತಿಪ್ರದಂ ನಿತ್ಯಂ ಸಂತಾನಾರೋಗ್ಯವಿತ್ತದಂ ॥೬॥**
**ಮೋಕ್ಷದಂ ರೂಪದಂ ರಾಜನ್ನಿತ್ಯಮೇಕಾದಶೀ ವ್ರತಂ ।**
**ಯೇ ಕುರ್ವಂತಿ ಮಹೀಪಾಲ ಶ್ರದ್ಧಯಾ ಪರಯಾ ಯುತಾಃ ॥೭॥**

ಎಲೈ ಧರ್ಮಜನೇ! ವೈಷ್ಣವರಾದವರು ಏಕಾದಶೀ ವ್ರತವನ್ನು ಬಿಡಲೇಬಾರದು. ಯಾರು ಹೆಚ್ಚಾದ ಶ್ರದ್ಧೆಯಿಂದ ಮಾಡುವರೋ ಅವರಿಗೆ ಆಯಸ್ಸು, ಕೀರ್ತಿ, ಸಂತಾನ, ಹಣ, ಮೋಕ್ಷ, ಸೌಂದರ್ಯ ಇವನ್ನು ಕೊಡುತ್ತದೆ.

**ಯಥೋಕ್ತವಿಧಿನಾ ಲೋಕೇ ತೇ ನರಾ ವಿಷ್ಣುರೂಪಿಣಃ ।**
**ಜೀವನ್ಮುಕ್ತಾಸ್ತು ಭೂಪಾಲ ದೃಶ್ಯಂತೇ ನಾತ್ರ ಸಂಶಯಃ ॥೮॥**

ಯಾರು ಹೆಚ್ಚು ಶ್ರದ್ಧೆಯಿಂದ ಲೋಕದಲ್ಲಿ ವಿಧಿವತ್ತಾಗಿ ಏಕಾದಶೀ ವ್ರತವನ್ನು ಮಾಡುತ್ತಾರೆಯೋ ಅವರು ವಿಷ್ಣುರೂಪಿಗಳು. ಅವರೇ ಲೋಕದಲ್ಲಿ ಜೀವನ್ಮುಕ್ತರಾಗಿ ಕಾಣಿಸುತ್ತಿರುತ್ತಾರೆ.

**ಯುಧಿಷ್ಠಿರ ಉವಾಚ**

**ಜೀವನ್ಮುಕ್ತಾಃ ಕಥಂ ಕೃಷ್ಣ ವಿಷ್ಣುರೂಪಾಃ ಕಥಂ ಪುನಃ ।**
**ಕಾಮರೂಪಾಶ್ಚ ದೃಶ್ಯಂತೇ ಪರಂ ಕೌತೂಹಲಂ ಹಿ ಮೇ ॥೯॥**

**ಯುಧಿಷ್ಠಿರನು ಹೇಳಿದನು-** ಎಲೈ ಕೃಷ್ಣನೇ! ಅವರು ಹೇಗೆ ಜೀವನ್ಮುಕ್ತರು? ವಿಷ್ಣುರೂಪಿಗಳು ತಾನೆ ಹೇಗೆ? ಅವರನ್ನು ನೋಡಿದರೆ ಪಾಪಿಗಳಂತೆಯೇ ಕಾಣುತ್ತಾರೆ. ಇದನ್ನು ನೋಡಿ ನನಗೆ ಬಹು ಆಶ್ಚರ್ಯ ಉಂಟಾಗುತ್ತದೆ.

**ಶ್ರೀಕೃಷ್ಣ ಉವಾಚ**

**ಯೇ ಚ ರಾಜನ್ಕಲೌ ಭಕ್ತ್ಯಾ ನಿರ್ಜಲಂ ವ್ರತಮುತ್ತಮಂ ।**
**ಏಕಾದಶ್ಯಾಃ ಪ್ರಕುರ್ವಂತಿ ವಿಧಿದೃಷ್ಟೇನ ಕರ್ಮಣಾ ॥೧೦॥**
**ನ ಕಥಂವಿಷ್ಣುರೂಪಾಸ್ತೇ ಜೀವನ್ಮುಕ್ತಾಃ ಕಥಂ ನ ಹಿ ।**
**ಸರ್ವಪಾಪಹರಂ ಪುಣ್ಯಂ ವ್ರತಮೇಕಾದಶೀಸಮಂ ॥೧೧॥**

**ಶ್ರೀಕೃಷ್ಣನು ಹೇಳಿದನು-** ಎಲೈ ಧರ್ಮಜನೇ! ಯಾರು ಕಲಿಯುಗದಲ್ಲಿ ಏಕಾದಶಿಯನ್ನು ವಿಧಿವತ್ತಾಗಿ ಆಚರಿಸಿ ನೀರನ್ನೂ ಕುಡಿಯದೆ ಇರುವರೋ ಅವರು ಹೇಗೆತಾನೇ ವಿಷ್ಣುಬಿಂಬರಲ್ಲ! ಜೀವನ್ಮುಕ್ತರೂ ತಾನೇ ಅಲ್ಲ! ಏಕಾದಶಿಯು ಎಲ್ಲಾ ಪಾಪಗಳನ್ನೂ ಹಾಳುಮಾಡುತ್ತದೆ.

**ನ ಕಿಂಚಿದ್ವಿದ್ಯತೇ ರಾಜನ್ ಸರ್ವಕಾಮಪ್ರದಂ ನೃಣಾಂ ।**
**ಏಕಾಶನಂ ದಶಮ್ಯಾಂ ತು ನಂದಾಯಾಂ ನಿರ್ಜಲಂ ವ್ರತಂ ॥೧೨॥**

**ಪಾರಣಂ ಚೈವ ಭದ್ರಾಯಾಂ ಕೃತ್ವಾ ವಿಷ್ಣುಸಮಾ ನರಾಃ ।**
**ಶ್ರದ್ಧಾವಾನ್ಯಸ್ತು ಕುರುತೇ ಕಾಮದಾಯಾ ವ್ರತಂ ಶುಭಂ ॥೧೩॥**
**ವಾಂಛಿತಂ ಲಭತೇ ಸೋऽಪಿ ಇಹ ಲೋಕೇ ಪರತ್ರ ಚ ।**
**ಪವಿತ್ರಾ ಪಾವನೀ ಹ್ಯೇಷಾ ಮಹಾಪಾತಕನಾಶಿನೀ ॥೧೪॥**

ಈ ಏಕಾದಶಿಗೆ ಸಮವಾದ ವ್ರತವು ಯಾವುದೂ ಇಲ್ಲವೇ ಇಲ್ಲ. ಎಲ್ಲಾ ಇಷ್ಟಾರ್ಥಗಳನ್ನೂ ಕೊಡುತ್ತದೆ. ದಶಮಿಯ ದಿನ ಒಪ್ಪತ್ತು ಊಟಮಾಡಿ ಏಕಾದಶಿಯ ದಿನ ನೀರನ್ನು ಕುಡಿಯದೆ ವ್ರತವನ್ನು ಮಾಡಿ ದ್ವಾದಶಿಯ ದಿವಸ ಪಾರಣೆಯನ್ನು ಮಾಡಿದವನು ಹೇಗೆತಾನೇ ವಿಷ್ಣುವಿಗೆ ಸಮಾನನಾಗುವುದಿಲ್ಲ! ಶ್ರದ್ಧೆಯಿಂದ ಈ ಏಕಾದಶಿಯನ್ನು ಮಾಡಿದವನು ಈ ಲೋಕದಲ್ಲಿ ಇಷ್ಟವಾದುವನ್ನೆಲ್ಲಾ ಹೊಂದಿ ಪರಲೋಕದಲ್ಲಿ ಉತ್ತಮ ಪದವನ್ನು ಹೊಂದುತ್ತಾನೆ. ಈ ಕಾಮದೈಕಾದಶಿಯು ಪಾವನವಾದುದು. ಪಾಪನಾಶಕವಾದುದು.

**ಭುಕ್ತಿಮುಕ್ತಿಪ್ರದಾ ಚೈವ ಕರ್ತೄಣಾಂ ನೃಪಸತ್ತಮ ।**
**ಕಾಮದಾಯಾಂ ವಿಧಾನೇನ ಪೂಜಯೇತ್ಪುರುಷೋತ್ತಮಂ ॥೧೫॥**
**ಪುಷ್ಪಧೂಪಾದಿಭಿಶ್ಚೈವ ನೈವೇದ್ಯೈಶ್ಚ ಫಲಪ್ರದಾ।**
**ಕಾಂಸ್ಯಂ ಮಾಂಸಂ ಮಸೂರಾಂಶ್ಚ ಚಣಕಾನ್ಕೋದ್ರವಾಂಸ್ತಥಾ ॥೧೬॥**
**ಶಾಕಂ ಮಧು ಪರಾನ್ನಂ ಚ ಪುನರ್ಭೋಜನಮೈಥುನೇ ।**
**ವೈಷ್ಣವೋ ವ್ರತಕರ್ತಾ ಚ ದಶಮ್ಯಾಂ ದಶ ವರ್ಜಯೇತ್ ॥೧೭॥**

ಈ ಕಾಮದೈಕಾದಶಿಯನ್ನು ಮಾಡತಕ್ಕವರಿಗೆ ಭುಕ್ತಿ ಮುಕ್ತಿಗಳನ್ನು ಕೊಟ್ಟು ಸಕಲ ಇಷ್ಟಾರ್ಥಗಳನ್ನೂ ಕೊಡುತ್ತದೆ. ಕಾಮದೆಯನ್ನು ವಿಧಿವತ್ತಾಗಿ ಮಾಡಿ ಪುರುಷೋತ್ತಮನನ್ನು ಹೂವು, ಧೂಪ, ದೀಪ, ನೈವೇದ್ಯಗಳಿಂದ ಪೂಜಿಸಿದರೆ ಇಷ್ಟಾರ್ಥಗಳನ್ನು ಕೊಡುತ್ತದೆ. ಕಂಚು, ಮಾಂಸ, ನವಣೆ, ಕಡಲೆ, ಹಾರಕ, ಕಾಯಿಪಲ್ಯಗಳು, ಜೇನು, ಪರಾನ್ನ, ಮತ್ತೆ ಊಟ ಮಾಡುವುದು, ಹೆಂಗಸರನ್ನು ರಮಿಸುವುದು. ದಶಮಿಯ ದಿವಸ ಈ ಹತ್ತನ್ನೂ ಬಿಟ್ಟು ಬಿಡಬೇಕು.

**ದ್ಯೂತಂ ಕ್ರೀಡಾಂ ತಥಾ ನಿದ್ರಾಂ ತಾಂಬೂಲಂ ದಂತಧಾವನಂ ।**
**ಪರಾಪವಾದಂ ಪೈಶುನ್ಯಂ ಸ್ತೇಯಂ ಹಿಂಸಾಂ ತಥಾ ರತಿಂ ॥೧೮॥**
**ಕ್ರೋಧಂ ಚ ವಿತಥಂ ವಾಕ್ಯಮೇಕಾದಶ್ಯಾಂ ವಿವರ್ಜಯೇತ್ ।**
**ಕಾಂಸ್ಯಂ ಮಾಂಸಂ ಮಸೂರಾಂಶ್ಚ ತೈಲಂ ವಿತಥಭಾಷಣಂ ॥೧೯॥**
**ವ್ಯಾಯಾಮಂ ಚ ಪ್ರವಾಸಂ ಚ ಪುನರ್ಭೋಜನಮೈಥುನೇ ।**
**ವೃಷಪೃಷ್ಠಂ ಪರಾನ್ನಂ ಚ ಶಾಕಂ ಚ ದ್ವಾದಶೀದಿನೇ ॥೨೦॥**

ಕಂಚು, ಮಾಂಸ, ನವಣೆ, ಎಳ್ಳೆಣ್ಣೆ, ಸುಳ್ಳು ಹೇಳುವುದು, ಸಾಧನೆ, ಪ್ರಯಾಣ, ಮತ್ತೆ ಊಟಮಾಡುವುದು. ಮೈಥುನ, ಎತ್ತಿನ ಮೇಲೆ ಕೂರುವುದು, ಪರಾನ್ನ, ಕಾಯಿಪಲ್ಯಗಳು ಇವನ್ನು ದ್ವಾದಶಿಯ ದಿವಸ ಬಿಟ್ಟು ಬಿಡಬೇಕು.

**ಅನೇನ ವಿಧಿನಾ ರಾಜನ್ ವಿಹಿತಾ ಯೈಶ್ಚ ಕಾಮದಾ । ರಾತ್ರೌ**
**ಜಾಗರಣಂ ಕೃತ್ವಾ ಪೂಜಿತಃ ಪುರುಷೋತ್ತಮಃ ॥೨೦॥**
**ಸರ್ವಪಾಪವಿನಿರ್ಮುಕ್ತಾಸ್ತೇ ಯಾಂತಿ ಪರಮಾಂ ಗತಿಂ ।**
**ಪಠನಾಚ್ಛ್ರವಣಾದ್ರಾಜನ್ ಗೋಸಹಸ್ರಫಲಂ ಲಭೇತ್ ॥೨೨॥**

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾಂತರ್ಗತ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಪುರುಷೋತ್ತಮ ಮಾಸಸ್ಯ ಶುಕ್ಲ ಕಾಮದ್ಯೆಕಾದಶೀ ಮಾಹಾತ್ಮ್ಯಂ ಪಂಚಷಷ್ಟಿತಮೋಽಧ್ಯಾಯಸ್ಸಮಾಪ್ತಃ॥

ಈ ರೀತಿಯಲ್ಲಿ ಕಾಮದ್ಯೆಕಾದಶಿಯನ್ನು ಆಚರಿಸಿ ರಾತ್ರಿಯಲ್ಲಿ ಪುರುಷೋತ್ತಮನನ್ನು ಪೂಜಿಸುತ್ತಾ ಜಾಗರಣೆ ಮಾಡಿದವರು ಪಾಪಗಳೆಲ್ಲವನ್ನೂ ಕಳೆದುಕೊಂಡು ಉತ್ತಮಗತಿಯನ್ನು ಹೊಂದುತ್ತಾರೆ. ಈ ಕಾಮದೆಯ ವ್ರತವನ್ನು ಓದಿದವರೂ ಕೇಳಿದವರೂ ಸಾವಿರಗೋದಾನ ಮಾಡಿದ ಫಲವನ್ನು ಹೊಂದುತ್ತಾರೆ. ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದೊಳಗಿನ ಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಪುರುಷೋತ್ತಮ(ಅಧಿಕ)ಮಾಸದ ಕಾಮದ್ಯೆಕಾದಶೀ ಮಹಿಮೆ ಎಂಬ ಅರವತ್ತೈದನೆಯ ಅಧ್ಯಾಯವು ಮುಗಿದುದು,

★ ★ ★ ★

## ॥ ಪುರುಷೋತ್ತಮಮಾಸ (ಅಧಿಕ ಮಾಸ) ॥ ಕೃಷ್ಣ ॥ ಏಕಾದಶೀ ॥

**ಯುಧಿಷ್ಠಿರ ಉವಾಚ**

**ಭಗವನ್ ಶ್ರೋತುಮಿಚ್ಛಾಮಿ ವ್ರತಾನಾಂ ವ್ರತಮುತ್ತಮಂ ।**
**ಸರ್ವಪಾಪಹರಂ ವಿಷ್ಣೋಃ ಫಲದಂ ವ್ರತಿನಾಂ ಚ ಯತ್ ॥೧॥**

**ಯುಧಿಷ್ಠಿರನು ಹೇಳಿದನು-** ಎಲೈ ಭಗವಂತನೇ ! ಸರ್ವಪಾಪಗಳನ್ನೂ ನಾಶಮಾಡುವ ವ್ರತಮಾಡಿದವರಿಗೆ ಫಲಗಳನ್ನು ಕೊಡುವ ಉತ್ತಮವಾದ ವ್ರತ ಯಾವುದು ? ಅದನ್ನು ಕೇಳಬೇಕೆಂದಿದ್ದೇನೆ.

**ಪುರುಷೋತ್ತಮಮಾಸಸ್ಯ ಕಥಾಂ ಬ್ರೂಹಿ ಜನಾರ್ದನ ।**
**ಕೋ ವಿಧಿಃ ಫಲಂ ತಸ್ಯ ಕೋ ದೇವಸ್ತತ್ರ ಪೂಜ್ಯತೇ ॥೨॥**

ಎಲೈ ಜನಾರ್ದನನೆ ! ಅಧಿಕ ಮಾಸಗಳು ಬಂದರೇನು ಮಾಡಬೇಕು? ಆಗ ವಿಧಿ

ಯೇನು? ಅದರ ಫಲವೇನು? ಆಗ ಪೂಜಿಸಬೇಕಾದ ದೇವರಾವುದು? ಇವನ್ನು ದಯವಿಟ್ಟು ಹೇಳು.

**ಅಧಿಕಮಾಸೇ ಚ ಸಂಪ್ರಾಪ್ತೇ ವ್ರತಂ ಬ್ರೂಹಿ ಜನಾರ್ದನ ।**
**ಕಸ್ಯ ದಾನಸ್ಯ ಕಿಂ ಪುಣ್ಯಂ ಕಿಂ ಕರ್ತವ್ಯಂ ನೃಭಿಃ ಪ್ರಭೋ ॥೩॥**
**ಕಥಂ ಸ್ನಾನಂ ಚ ಕಿಂ ಜಾಪ್ಯಂ ಕಥಂ ಪೂಜಾವಿಧಿಃ ಸ್ಮೃತಃ । ಕಿಂ**
**ಭೋಜ್ಯಮುತ್ತಮಂ ಚಾನ್ನಂ ಮಾಸ್ಯಸ್ಮಿನ್ಪುರುಷೋತ್ತಮ ॥೪॥**

ಎಲೈ ಜನಾರ್ದನನೆ ! ಅಧಿಕಮಾಸ ಬಂದಾಗ ಮಾಡಬೇಕಾದುದನ್ನು ಹೇಳು. ಯಾವ ದಾನ ಮಾಡಿದರೆ ಯಾವ ಪುಣ್ಯ ಬರುತ್ತದೆ? ಅವನ್ನು ಹೇಗೆ ಮಾಡಬೇಕು? ಸ್ನಾನದ ವಿಧಿಯೇನು? ಜಪವೇನು, ಪೂಜೆಯ ವಿಧಾನವೇನು? ಯಾವುದನ್ನು ತಿನ್ನಬಹುದು? ಈ ಮಾಸದಲ್ಲಿ ಉತ್ತಮವಾದ ಪದಾರ್ಥಗಳು ಯಾವುವು?

ಶ್ರೀಕೃಷ್ಣ ಉವಾಚ

**ಕಥಯಿಷ್ಯಾಮಿ ರಾಜೇಂದ್ರ ಭವತಸ್ನೇಹಕಾರಣಾತ್ ।**
**ಪುರುಷೋತ್ತಮಮಾಸಸ್ಯ ಮಾಹಾತ್ಮ್ಯಂ ಪಾಪನಾಶನಂ ॥೫॥**

**ಶ್ರೀಕೃಷ್ಣನು ಹೇಳಿದನು-** ಎಲೈ ದೊರೆಯೆ ! ನಿನ್ನಲ್ಲಿರುವ ಸ್ನೇಹದಿಂದ ಪಾಪನಾಶಕವಾದ ಆ ಅಧಿಕಮಾಸದ ಮಹಿಮೆಯನ್ನು ಹೇಳುತ್ತೇನೆ, ಕೇಳು.

**ಅಧಿಮಾಸೇ ತು ಸಂಪ್ರಾಪ್ತೇ ಭವೇದೇಕಾದಶೀ ತು ಯಾ ।**
**ಕಮಲಾ ನಾಮ ಸಾ ನಾಮ್ನಾ ತಿಥೀನಾಮುತ್ತಮಾ ತಿಥಿಃ ॥೬॥**

ಅಧಿಕಮಾಸ ಬಂದಾಗ ಬರತಕ್ಕ ಏಕಾದಶಿಗೆ ''ಕಮಲಾ'' ಏಕಾದಶಿಯೆಂದು ಹೆಸರು. ಅದು ಉತ್ತಮವಾದ ತಿಥಿಯು.

**ತಸ್ಯಾ ವ್ರತಪ್ರಭಾವೇಣ ಕಮಲಾಭಿಮುಖೀ ಭವೇತ್ ।**
**ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಸಂಸ್ಮೃತ್ಯ ಪುರುಷೋತ್ತಮಂ ॥೭॥**

ಆ ವ್ರತವನ್ನು ಮಾಡುವುದರಿಂದ ಲಕ್ಷ್ಮಿಯು ಪ್ರಸನ್ನನಾಗುತ್ತಾಳೆ. ಆ ದಿನ ಬ್ರಾಹ್ಮೀಮುಹೂರ್ತದಲ್ಲಿ ಎದ್ದು ವಾಸುದೇವನನ್ನು ಸ್ಮರಿಸಬೇಕು. ಮತ್ತು ವಿಧಿಯಿಂದ ಸ್ನಾನ ಮಾಡಿ ನಿಯಮಗಳನ್ನು ಕೈಗೊಳ್ಳಬೇಕು.

**ಸ್ನಾತ್ವಾ ಚೈವ ವಿಧಾನೇನ ನಿಯಮಂ ಕಾರಯೇದ್ವ್ರತೀ ।**
**ಗೃಹೇ ತ್ವೇಕಗುಣಂ ಜಾಪ್ಯಂ ನದ್ಯಾಂ ತು ದ್ವಿಗುಣಂ ಸ್ಮೃತಂ ॥೮॥**
**ಗವಾಂ ಗೋಷ್ಠೇ ಸಹಸ್ರೋರ್ಧ್ವಮಗ್ನ್ಯಾಗಾರೇ ಶತಾನ್ವಿತಂ ।**
**ಶಿವಕ್ಷೇತ್ರೇಷು ತೀರ್ಥೇಷು ದೇವತಾನಾಂ ಚ ಸನ್ನಿಧೌ ॥೯॥**
**ಲಕ್ಷಂ ತುಲಸ್ಯಾಸ್ಸಾನ್ನಿಧ್ಯೇ ಹ್ಯನಂತಂ ವಿಷ್ಣು ಸನ್ನಿಧೌ ।**

ಅವಂತ್ಯಾಮಭವತ್ಕಶ್ಚಿಟ್ಟಿವಶರ್ಮಾ ದ್ವಿಜೋತ್ತಮಃ ॥೧೦॥
ತಸ್ಯಾತ್ಮಜಾಸ್ತು ಪಂಚಾಸನ್ ಕನಿಷ್ಠೋ ದೋಷವಾನಭೂತ್ ।
ತದಾ ಪಿತ್ರಾ ಪರಿತ್ಯಕ್ತಃ ತ್ಯಕ್ತಸ್ಸ್ವಜನಬಾಂಧವೈಃ ॥೧೧॥
ವಿಕರ್ಮಣಃ ಪ್ರಭಾವೇಣ ಗತೋ ದೂರತರಂ ವನಂ ।
ಏಕದಾ ದೈವಯೋಗೇನ ತೀರ್ಥರಾಜಂ ಸಮಾಗಮತ್ ॥೧೨॥
ಕ್ಷುತ್‌ಕ್ಷಾಮೋ ದೀನವದನಸ್ತ್ರಿವೇಣ್ಯಾಂ ಸ್ನಾನಮಾಚರತ್ ।
ಮುನೀನಾಮಾಶ್ರಮಾಂಸ್ತತ್ರ ವಿಚಿನ್ವ ನ್ ಕ್ಷುಧಯಾರ್ದಿತಃ ॥೧೩॥

ಮನೆಯಲ್ಲಿ ಜಪಮಾಡಿದರೆ ಎಷ್ಟು ಹೇಳಿದೆಯೋ ಅಷ್ಟೇ ಫಲವೂ ನದಿಯಲ್ಲಿ ಜಪಿಸಿದರೆ ಅದಕ್ಕೆ ಎರಡರಷ್ಟು, ದನಗಳ ಕೊಟ್ಟಿಗೆಯಲ್ಲಿ ಜಪಿಸಿದರೆ ಸಾವಿರದಷ್ಟೂ, ಔಪಾಸನದ ಅಗ್ನಿಯನ್ನಿಟ್ಟಿರುವ ಬಳಿಯಲ್ಲಿ ಜಪಿಸಿದರೆ ನೂರು ಸಾವಿರದಷ್ಟು, ಶಿವಕ್ಷೇತ್ರ ತೀರ್ಥಗಳು, ತುಳಸಿ ದೇವತೆಗಳ ಸನ್ನಿಧಿಗಳಲ್ಲಿ ಜಪಿಸಿದರೆ ಲಕ್ಷದಷ್ಟೂ, ವಿಷ್ಣುವಿನ ಸನ್ನಿಧಿಯಲ್ಲಿ ಜಪಿಸಿದರೆ ಅನಂತ ಫಲವೂ ಬರುತ್ತದೆ. ಅವಂತಿಯಲ್ಲಿ ಶಿವಶರ್ಮನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನಿಗೆ ಐದು ಜನ ಮಕ್ಕಳಿದ್ದರು. ಕೊನೆಯವನು ಬಹು ಕೆಟ್ಟವನಾದನು. ಅವನ ಕೆಟ್ಟ ನಡತೆಯಿಂದ ಅವನನ್ನು ಜನಗಳೂ, ಬಂಧುಗಳೂ, ತಂದೆಯೂ ಬಿಟ್ಟುಬಿಟ್ಟರು. ಇದರಿಂದ ಆಶ್ರಯವಿಲ್ಲದೆ ದೂರವಾದ ಕಾಡಿಗೆ ಹೋದನು. ಹೀಗೆ ಸಂಚರಿಸುತ್ತಾ ಕಂಗೆಟ್ಟು ಪ್ರಯಾಗಕ್ಕೆ ಹೋಗಿ ಅಲ್ಲಿದ್ದ ತ್ರಿವೇಣಿಯಲ್ಲಿ ಸ್ನಾನಮಾಡಿ ಆ ಕಾಡಿನಲ್ಲಿ ಮುನಿಗಳ ಆಶ್ರಮವನ್ನು ಹುಡುಕುತ್ತಾ ಹಸಿವಿನಿಂದ ಬಳಲಿ ಬೆಂಡಾದನು.

ಹರಿಮಿತ್ರಮುನೇಸ್ತತ್ರ ದದರ್ಶಾಶ್ರಮಮುತ್ತಮಂ ।
ಪುರುಷೋತ್ತಮಮಾಸೇ ವೈ ಜನಾನಾಂ ಚ ಸಮಾಗಮೇ ॥೧೪॥
ತತ್ರಾಶ್ರಮೇ ಕಥಯತಾಂ ಕಥಾಂ ಕಲ್ಮಷನಾಶಿನೀಂ ।
ಬ್ರಾಹ್ಮಣಾನಾಂ ಮುಖಾತ್ತೇನ ಶ್ರದ್ಧಯಾ ಕಮಲಾ ಶ್ರುತಾ ॥೧೫॥
ಏಕಾದಶೀ ಪುಣ್ಯತಮಾ ಭುಕ್ತಿಮುಕ್ತಿಪ್ರದಾಯಿನೀ ।
ಜಯಶರ್ಮಾ ವಿಧಾನೇನ ಶ್ರುತ್ವಾ ತಾಂ ಕಮಲಾಕಥಾಂ ॥೧೬॥
ವ್ರತಂ ತೈಶ್ಶ್ರುತವಾನ್ಸಾರ್ಧಂ ಸ್ಥಿತ್ವಾ ಮುನ್ಯಾಲಯೇ ತದಾ ।
ನಿಶೀಥೇ ಸಮನುಪ್ರಾಪ್ತೇ ಲಕ್ಷ್ಮೀಸ್ತತ್ರ ಸಮಾಗತಾ ॥೧೭॥

ಹೀಗೆ ಓಡಾಡುತ್ತ ಹುಡುಕುತ್ತರಲು ಹರಿಮಿತ್ರನೆಂಬ ಋಷಿಯ ಆಶ್ರಮವು ಸಿಕ್ಕಿತು. ಆಗ ಅಧಿಕಮಾಸವಾಗಿದ್ದಿತು. ಜನಗಳೆಲ್ಲರೂ ಅಲ್ಲಿಗೆ ಸೇರಿದ್ದರು. ಅಲ್ಲಿ ಪಾಪಹಾರಕವಾದ ಕಮಲಾ ಏಕಾದಶಿಯ ಕಥೆಗಳನ್ನು ಬ್ರಾಹ್ಮಣರು ಹೇಳಿಕೊಳ್ಳುತ್ತಲಿದ್ದರು. ಅದನ್ನು ಇವನು ಕೇಳಿದನು. ಆದಿನ ಈ ಕಮಲೈಕಾದಶಿಯಾಗಿದ್ದಿತು. ಅದು ಭುಕ್ತಿ ಮುಕ್ತಿಗಳನ್ನು

ಕೊಡುವಂಥದು. ಇವನ ಹೆಸರು ಜಯಶರ್ಮನು. ಈ ಜಯಶರ್ಮನು ಆ ಕಥೆಯನ್ನು ಕೇಳಿ ಕೊಂಡಿರಲು ಅಲ್ಲಿಯೇ ಸಾಯಂಕಾಲವಾಯಿತು. ಆ ರಾತ್ರಿಯು ಅಲ್ಲಿಯೇ ಇದ್ದು ಆ ವ್ರತವನ್ನು ಮಾಡಲು ಅಲ್ಲಿಗೆ ಲಕ್ಷ್ಮಿಯೂ ಬಂದಳು.

**ಲಕ್ಷ್ಮೀರುವಾಚ**

**ವರಂ ದದಾಮಿ ಭೋ ವಿಪ್ರ ಕಮಲಾಯಾಃ ಪ್ರಭಾವತಃ ॥೧೮॥**

**ಲಕ್ಷ್ಮಿಯು ಹೇಳಿದಳು-** ಎಲೈ ಬ್ರಾಹ್ಮಣನೇ! ನೀನು ಕಮಲೈಕಾದಶಿ ವ್ರತವನ್ನು ಮಾಡಿದ್ದಿಯೇ. ಅದರ ಪ್ರಭಾವದಿಂದ ವರವನ್ನು ಕೊಡಲು ಬಂದಿದ್ದೇನೆ.

**ಜಯಶರ್ಮೋವಾಚ**

**ಕಾ ತ್ವಂ ಕಸ್ಯಾಲಿ ರಂಭೋರು ಪ್ರಸನ್ನಾ ಚ ಕಥಂ ಮಮ ।**
**ಇಂದ್ರಾಣೀ ಸುರನಾಥಸ್ಯ ಭವಾನೀ ಶಂಕರಸ್ಯ ವಾ ॥೧೯॥**
**ಗಂಧರ್ವೀ ಕಿನ್ನರೀ ವಾऽಥ ವಧೂರ್ವಾ ಚಂದ್ರಸೂರ್ಯಯೋಃ ।**
**ತ್ವತ್ಸದೃಕ್ಷಾ ನ ದೃಷ್ಟಾ ಚ ನ ಶ್ರುತಾ ಚ ಶುಭಾನನೇ ॥೨೦॥**

**ಜಯಶರ್ಮನು ಹೇಳಿದನು-** ಅಮ್ಮಾ ನೀನಾರು? ಯಾರ ಮಗಳು? ನನಗೇಕೆ ಪ್ರಸನ್ನಳಾಗಿ ಬಂದಿದ್ದೀಯೆ? ಇಂದ್ರನ ಹೆಂಡತಿಯಾದ ಶಚಿದೇವಿಯೆ? ಶಂಕರನ ಹೆಂಡತಿಯಾದ ಪಾರ್ವತಿಯೇ? ಗಂಧರ್ವ ಸ್ತ್ರೀಯೆ? ಇಲ್ಲವೆ ಚಂದ್ರ ಸೂರ್ಯರ ಹೆಂಡತಿಯಾದರೂ ಆಗಿರುವೆಯಾ? ನೀನಾರು? ನಿನ್ನಂಥವರನ್ನು ನಾನು ನೋಡಲಿಲ್ಲ. ಕಡೆಗೆ ಕೇಳಿಯೂ ಇಲ್ಲ.

**ಲಕ್ಷ್ಮೀರುವಾಚ**

**ಪ್ರಸನ್ನಾ ಸಾಂಪ್ರತಂ ಜಾತಾ ವೈಕುಂಠಾದಹಮಾಗತಾ ।**
**ಪ್ರೇರಿತಾ ದೇವದೇವೇನ ಕಮಲಾಯಾಃ ಪ್ರಭಾವತಃ ॥೨೧॥**

**ಲಕ್ಷ್ಮಿಯು ಹೇಳಿದಳು-** ಅಯ್ಯಾ ನಾನು ವೈಕುಂಠದಿಂದ ಬಂದಿದ್ದೇನೆ. ನಿನಗೆ ಪ್ರಸನ್ನಳಾಗಿದ್ದೇನೆ. ವಿಷ್ಣುವು ನನ್ನನ್ನು ಕಳುಹಿಸಿರುವನು. ನೀನು ಈ ಕಮಲಾ ಏಕಾದಶಿಯನ್ನು ಮಾಡಿದ ಪ್ರಭಾವದಿಂದ ನಿನ್ನ ಬಳಿಗೆ ಬಂದಿರುವೆನು.

**ಪುರುಷೋತ್ತಮಮಾಸಸ್ಯ ಕೃಷ್ಣಪಕ್ಷಸ್ಯ ಯಾ ಭವೇತ್ ।**
**ಕಮಲಯಾ ವ್ರತಾತ್ತಸ್ಯಾಃ ಕಮಲಾ ದಾತುಮಾಗತಾ ॥೨೨॥**

ಅಧಿಕಮಾಸದಲ್ಲಿ ಕೃಷ್ಣಪಕ್ಷದಲ್ಲಿ ಬರುವ ಏಕಾದಶಿಗೆ ಕಮಲೈಕಾದಶಿಯೆಂದು ಹೆಸರು. ಆ ವ್ರತವನ್ನು ನೀನು ಮಾಡಿದ್ದೀಯೆ. ಅದರಿಂದ ಪ್ರಸನ್ನಳಾದ ನಾನು ನಿನಗೆ ವರವನ್ನು ಕೊಡಲು ಬಂದಿದ್ದೇನೆ. ನಾನು ಲಕ್ಷ್ಮಿಯು.

**ಪುರುಷೋತ್ತಮಮಾಸಸ್ಯ ಯಾ ಪಕ್ಷೇ ಪ್ರಥಮೇ ಭವೇತ್ ।**
**ತಸ್ಯಾಂ ವ್ರತಂ ತ್ವಯಾ ಚೀರ್ಣಂ ಪ್ರಯಾಗೇ ಮುನಿಸನ್ನಿಧೌ ॥೨೩॥**

ಅಧಿಕಮಾಸವೆನಿಸಿದ ಪುರುಷೋತ್ತಮ ಮಾಸದಲ್ಲಿ ಮೊದಲು ಬರುವ ಕಮಲೈಕಾದಶಿಯನ್ನು ನೀನು ಮಾಡಿದ್ದೀಯೆ. ಅದು ಪ್ರಯಾಗದಲ್ಲಿ ಒಳ್ಳೆಯ ಫಲವನ್ನು ಕೊಡುತ್ತದೆ. ಅಲ್ಲದೆ ಋಷಿಗಳ ಸನ್ನಿಧಿಯಲ್ಲಂತೂ ಇನ್ನೂ ಹೆಚ್ಚಾದ ಫಲವನ್ನು ಕೊಡುತ್ತದೆ.

**ವ್ರತಸ್ಯಾಸ್ಯ ಪ್ರಭಾವೇಣ ವಶಗಾಹಂ ನ ಸಂಶಯಃ ।**
**ತವ ವಂಶೇ ಭವಿಷ್ಯಂತಿ ಮಾನವಾ ದ್ವಿಜಸತ್ತಮಾಃ ॥**
**ಮತ್ಪ್ರಸಾದಾದವಾಪ್ಸ್ಯಂತಿ ಸತ್ಯಂ ತೇ ವ್ಯಾಹೃತಂ ಮಯಾ ॥೨೪॥**

ಈ ವ್ರತದ ಮಹಿಮೆಯಿಂದ ನಾನು ನಿನಗೆ ವಶಳಾಗಿದ್ದೇನೆ. ಸಂಶಯವಿಲ್ಲ. ನಿನ್ನ ವಂಶದಲ್ಲಿ ಉತ್ತಮರಾದ ಬ್ರಾಹ್ಮಣರು ಹುಟ್ಟುತ್ತಾರೆ. ಮತ್ತು ಅವರು ಈ ವ್ರತದ ಮಹಿಮೆಯಿಂದ ಐಶ್ವರ್ಯವನ್ನು ಹೊಂದುತ್ತಾರೆ. ಸಂಶಯವಿಲ್ಲ. ಸತ್ಯವು.

ಬ್ರಾಹ್ಮಣ ಉವಾಚ

**ಪ್ರಸನ್ನಾ ಯದಿ ಮೇ ಪದ್ಮೇ ವ್ರತಂ ವಿಸ್ತರತೋ ವದ ।**
**ಯತ್ಕಥಾಸು ಪ್ರವರ್ತಂತೇ ಸಾಧವೋ ಯೇ ಜನಾ ದ್ವಿಜಾಃ ॥೨೫॥**

**ಬ್ರಾಹ್ಮಣನು ಹೇಳಿದನು–** ಎಲೈ ಲಕ್ಷ್ಮಿಯೇ! ನೀನು ಪ್ರಸನ್ನಳಾಗಿದ್ದರೆ ಆ ಕಮಲಾ ವ್ರತವನ್ನು ವಿಸ್ತಾರವಾಗಿ ಹೇಳು. ಆ ಕಥೆಯನ್ನು ಸಾಧುಗಳಾದ ಜನರೆಲ್ಲರೂ ಹೇಳುತ್ತಿರುವರಲ್ಲ!

ಲಕ್ಷ್ಮೀರುವಾಚ

**ಶ್ರೋತೄಣಾಂ ಪರಮಂ ಶ್ರಾವ್ಯಂ ಪವಿತ್ರಾಣಾಮನುತ್ತಮಂ ।**
**ದುಸ್ಸ್ವಪ್ನನಾಶನಂ ಪುಣ್ಯಂ ಶ್ರೋತವ್ಯಂ ಯತ್ನತಸ್ತತಃ ॥೨೬॥**

**ಲಕ್ಷ್ಮಿಯು ಹೇಳಿದಳು–** ಆ ಕಥೆಯು ಕೇಳತಕ್ಕವರಿಗೆ ಆನಂದವನ್ನುಂಟು ಮಾಡುತ್ತದೆ. ಪವಿತ್ರವಾದುವುಗಳೊಳಗೆಲ್ಲಾ ಪವಿತ್ರವಾದುದು. ದುಸ್ಸ್ವಪ್ನವನ್ನು ನಾಶಮಾಡುತ್ತದೆ. ಪುಣ್ಯವನ್ನು ಉಂಟುಮಾಡುತ್ತದೆ. ಆದುದರಿಂದ ಪ್ರಯತ್ನಪಟ್ಟು ಕೇಳಬೇಕು.

**ಉತ್ತಮಶ್ರದ್ಧಯಾ ಯುಕ್ತಃ ಶ್ಲೋಕಂ ಶ್ಲೋಕಾರ್ಧಮೇವ ಚ ।**
**ಪಠಿತ್ವಾ ಮುಚ್ಯತೇ ಸದ್ಯೋ ಮಹಾಪಾತಕಕೋಟಿಭಿಃ ॥೨೭॥**

ಯೋಗ್ಯನಾಗಿ ಶ್ರದ್ಧೆಯಿಂದ ಆ ಕಥೆಯನ್ನಾಗಲಿ ಅಥವಾ ಅದರಲ್ಲಿ ಒಂದು ಶ್ಲೋಕವನ್ನಾಗಲಿ ಕೊನೆಗೆ ಶ್ಲೋಕದಲ್ಲಿ ಅರ್ಧವನ್ನಾಗಲಿ ಓದಿದರೂ ಕೇಳಿದರೂ ಅನೇಕ ಕೋಟಿ ಪಾಪಗಳನ್ನು ಮಾಡಿದ್ದರೂ ಅದರಿಂದ ಮುಕ್ತನಾಗುತ್ತಾನೆ.

**ಮಾಸಾನಾಂ ಪರಮೋ ಮಾಸಃ ಪಕ್ಷಿಣಾಂ ಗರುಡೋ ಯಥಾ ।**
**ನದೀನಾಂ ಚ ಯಥಾ ಗಂಗಾ ತಿಥೀನಾಂ ದ್ವಾದಶೀ ತಿಥಿಃ ॥೨೮॥**

ಪಕ್ಷಿಗಳಲ್ಲಿ ಗರುಡನಂತೆಯೂ ನದಿಗಳಲ್ಲಿ ಗಂಗೆಯಂತೆಯೂ ತಿಥಿಗಳಲ್ಲಿ ದ್ವಾದಶಿಯ ತಿಥಿಯಂತೆಯೂ ಈ ಅಧಿಕಮಾಸವು ಮಾಸಗಳಲ್ಲಿ ಉತ್ತಮವಾದ ಮಾಸವು.

**ಅದ್ಯಾಪಿ ನಿರ್ಜರಾಸ್ಸರ್ವೇ ಭಾರತೇ ಜನ್ಮಲಿಪ್ಸವಃ ।**
**ತಮರ್ಚಯಂತಿ ವಿಬುಧಾ ನಾರಾಯಣನಾಮಯಂ ॥೨೯॥**

ಈ ವ್ರತಾದಿಗಳನ್ನು ಆಚರಿಸಲು ದೇವತೆಗಳೂ ಕೂಡ ಈಗಲೂ ಭಾರತದಲ್ಲಿ ಜನ್ಮವೆತ್ತಬೇಕೆನ್ನುತ್ತಾರೆ. ಆದ್ದರಿಂದಲೇ ವಿದ್ವಾಂಸರೂ ನಾರಾಯಣನನ್ನು ಪೂಜಿಸುತ್ತಾರೆ.

**ಯೇ ಜಪಂತಿ ಸದಾ ಭಕ್ತ್ಯಾ ದೇವಂ ನಾರಾಯಣಂ ಪ್ರಭುಂ ।**
**ತಾನರ್ಚಯಂತಿ ಸತತಂ ಬ್ರಹ್ಮಾದ್ಯಾ ದೇವತಾಗಣಾಃ ॥೩೦॥**

ಯಾರು ನಾರಾಯಣನನ್ನು ಭಕ್ತಿಯಿಂದ ಪೂಜಿಸುವರೋ ಅವರನ್ನು ಬ್ರಹ್ಮನೇ ಮುಂತಾದ ದೇವತಾ ಗಣಗಳೂ ಕೂಡ ಪೂಜಿಸುತ್ತಾರೆ.

**ಯೇಽಪಿ ನಾಮಪರಾ ಯೇ ಚ ಹರಿಕೀರ್ತನತತ್ಪರಾಃ ।**
**ಹರಿಪೂಜಾ ಪರಾ ಯೇ ಚ ತೇ ಕೃತಾರ್ಥಾಃ ಕಲೌ ಯುಗೇ ॥೩೧॥**

ಯಾರು ಹರಿನಾಮವನ್ನು ಭಜಿಸುವರೋ ಯಾರು ಕೀರ್ತಿಸುವರೋ ಯಾರು ಆ ಹರಿಯನ್ನು ಪೂಜಿಸುವರೋ ಅವರೇನ ಈ ಕಲಿಯುಗದಲ್ಲಿ ಕೃತಾರ್ಥರು.

**ಶುಕ್ಲೇ ವಾ ಯದಿ ವಾ ಕೃಷ್ಣೇ ಭವೇದೇಕಾದಶೀ ದ್ವಯಂ ।**
**ಗ್ರಹಸ್ಥಾನಾಂ ಭವೇತ್ಪೂರ್ವಾ ಯತೀನಾಮುತ್ತರಾಸ್ಮೃತಾ ॥೩೨॥**

ಶುಕ್ಲಪಕ್ಷದಲ್ಲಾಗಲೀ ಕೃಷ್ಣಪಕ್ಷದಲ್ಲಾಗಲೀ ಬರುವ ಏಕಾದಶಿಗಳು ಎರಡು ದಿನಗಳಲ್ಲಿದ್ದರೆ ಮೊದಲನೆಯದರಲ್ಲಿ ಗೃಹಸ್ಥರೂ ಎರಡನೆಯದರಲ್ಲಿ ಯತಿಗಳೂ ಉಪವಾಸವಿರಬೇಕು.

**ಏಕಾದಶೀ ದ್ವಾದಶೀ ಚ ರಾತ್ರಿಶೇಷೇ ತ್ರಯೋದಶೀ ।**
**ತತ್ರ ಕ್ರತುಶತಂ ಪುಣ್ಯಂ ತ್ರಯೋದಶ್ಯಾಂ ತು ಪಾರಣೇ ॥೩೩॥**

ಬೆಳಗ್ಗೆ ಏಕಾದಶಿ ಸ್ವಲ್ಪವಿದ್ದು ಆ ದಿನವೆಲ್ಲಾ ದ್ವಾದಶಿಯಿದ್ದು ಮಾರನೆಯ ದಿನ ಪಾರಣೆಯ ವೇಳೆಗೆ ತ್ರಯೋದಶಿಯು ಸಿಕ್ಕಿದರೆ ಆ ತ್ರಯೋದಶಿಯಲ್ಲಿ ಪಾರಣೆ ಮಾಡಿದರೆ ನೂರು ಯಾಗಗಳನ್ನು ಮಾಡಿದ ಪುಣ್ಯವು ಬರುವುದು.

**ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾಽಹಮಪರೇಽಹನಿ ।**
**ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥೩೪॥**

''ಏಕಾದಶಿಯದಿನ ಆಹಾರವಿಲ್ಲದೆ ಇದ್ದು ಮಾರನೆಯ ದಿನದಲ್ಲಿ ಭೋಜನವನ್ನು ಮಾಡುತ್ತೇನೆ. ಎಲೈ ಅಚ್ಯುತನೇ! ನೀನು ನನಗೆ ರಕ್ಷಕನಾಗು ಎಂದು ಹೇಳಿ ನಿಯಮದಿಂದ ಇರಬೇಕು.

**ಅಮುಂ ಮಂತ್ರಂ ಸಮುಚ್ಚಾರ್ಯ ದೇವದೇವಸ್ಯ ಚಕ್ರಿಣಃ ।**
**ಭಕ್ತಿಭಾವೇನ ತುಷ್ಟಾತ್ಮಾ ಉಪವಾಸಂ ಸಮಾಚರೇತ್ ॥೩೫॥**

ಹಿಂದೆ ಹೇಳಿದ ಮಂತ್ರವನ್ನು ಹೇಳಿ ಆ ಸ್ವಾಮಿಯಾದ ವಿಷ್ಣುವಿನಲ್ಲಿ ಭಕ್ತಿಯಿಟ್ಟು ಸಂತೋಷದಿಂದ ಉಪವಾಸವಿರಬೇಕು.

**ಕುರ್ಯಾದ್ದೇವಸ್ಯ ಪುರತೋ ಜಾಗರಂ ನಿಯತೋ ವ್ರತೀ ।**
**ಗೀತೈರ್ವಾದ್ಯೈಶ್ಚ ನೃತ್ಯೈಶ್ಚ ಪುರಾಣಪಠನಾದಿಭಿಃ ॥೩೬॥**

ಅನಂತರ ರಾತ್ರಿಯೆಲ್ಲವೂ ದೇವರ ಎದುರಿನಲ್ಲಿ ನಿಯಮದಿಂದ ಗಾನ, ವಾದ್ಯ, ನರ್ತನ, ಪುರಾಣವನ್ನು ಓದುವುದು ಇವುಗಳನ್ನು ಮಾಡುತ್ತ ಜಾಗರಣೆಯನ್ನು ಮಾಡಬೇಕು.

**ತತಃ ಪ್ರಾತಸ್ಸಮುತ್ಥಾಯ ದ್ವಾದಶೀದಿವಸೇ ವ್ರತೀ ।**
**ಸ್ನಾತ್ವಾ ವಿಷ್ಣುಂ ಸಮಭ್ಯರ್ಚ್ಯ ವಿಧಿವತ್ಪ್ರಯತೇಂದ್ರಿಯಃ ॥೩೭॥**
**ಪಂಚಾಮೃತೇನ ಸಂಸ್ನಾಪ್ಯ ಏಕಾದಶ್ಯಾಂ ಜನಾರ್ದನಂ ।**
**ದ್ವಾದಶ್ಯಾಂ ಚ ಪಯಸ್ನಾನಾತ್ ಹರೇಸ್ಸಾಯುಜ್ಯಮಶ್ನುತೇ ॥೩೮॥**

ಅನಂತರ ದ್ವಾದಶಿಯ ದಿನ ಬೆಳಗ್ಗೆ ಎದ್ದು ಆ ವ್ರತಿಯು ಸ್ನಾನಮಾಡಿ ನಿಯಮದಿಂದ ವಿಷ್ಣುವನ್ನು ಪೂಜಿಸಬೇಕು. ಏಕಾದಶಿಯ ದಿವಸ ಪಂಚಾಮೃತದಿಂದ ಸ್ನಾನಮಾಡಿಸಿ ದ್ವಾದಶಿಯ ದಿವಸ ಹಾಲಿನ ಅಭಿಷೇಕವನ್ನು ವಿಷ್ಣುವಿಗೆ ಮಾಡಬೇಕು. ಹಾಗೆ ಮಾಡಿದರೆ ಹರಿಯ ಸಾಯುಜ್ಯವನ್ನು ಹೊಂದುತ್ತಾನೆ.

**ಅಜ್ಞಾನತಿಮಿರಾಂಧಸ್ಯ ವ್ರತೇನಾನೇನ ಕೇಶವ ।**
**ಪ್ರಸೀದ ಸಮ್ಮುಖೋ ಭೂತ್ವಾ ಜ್ಞಾನದೃಷ್ಟಿಪ್ರದೋ ಭವ ॥೩೯॥**
**ಏವಂ ವಿಜ್ಞಾಪ್ಯ ದೇವೇಶಂ ದೇವದೇವಂ ಗದಾಧರಂ ।**
**ಬ್ರಾಹ್ಮಣಾನ್ ಭೋಜಯೇದ್ಭಕ್ತ್ಯಾ ತೇಭ್ಯೋ ದದ್ಯಾಚ್ಚ ದಕ್ಷಿಣಾಂ ॥೪೦॥**

ಎಲೈ ಕೇಶವನೇ! ಅಜ್ಞಾನವೆಂಬ ಕತ್ತಲೆಯಲ್ಲಿ ಕಣ್ಣುಕಾಣಿಸದ ನನಗೆ ಈ ವ್ರತದಿಂದ ಪ್ರಸನ್ನನಾಗಿ ಜ್ಞಾನದೃಷ್ಟಿಯನ್ನು ಕೊಡು ಎಂದು ವಿಷ್ಣುವನ್ನು ಕೇಳಿಕೊಂಡು ಅನಂತರ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಅವರಿಗೆ ಭಕ್ತಿಯಿಂದ ದಕ್ಷಿಣೆಯನ್ನು ಕೊಡಬೇಕು.

**ತತಸ್ತ್ವ ಬಂಧುಭಿಸ್ಸಾರ್ಧಂ ನಾರಾಯಣಪರಾಯಣಃ ।**
**ಕೃತ್ವಾ ಪಂಚಮಹಾಯಜ್ಞಾನ್ ಸ್ವಯಂ ಭುಂಜೀತ ವಾಗ್ಯತಃ ॥೪೧॥**

ಆದರಂತೆ ಈ ವ್ರತ ಮಾಡುವವನು ಪಂಚ ಮಹಾಯಜ್ಞಗಳನ್ನು ಮಾಡಿ ಬಂಧುಗಳೊಡನೆ ಸೇರಿಕೊಂಡು ತಾನೂ ನಿಯಮದಿಂದ ಊಟ ಮಾಡಬೇಕು.

**ಏವಂ ಯಃ ಪ್ರಯತಃ ಕುರ್ಯಾತ್ ಪುಣ್ಯಮೇಕಾದಶೀವ್ರತಂ ।**
**ಸ ಯಾತಿ ವಿಷ್ಣುಭವನಂ ಪುನರಾವೃತ್ತಿದುರ್ಲಭಂ ॥೪೨॥**

ಈ ರೀತಿಯಾಗಿ ಯಾವನು ಪುಣ್ಯವಾದ ಏಕಾದಶಿಯ ವ್ರತವನ್ನು ಮಾಡುತ್ತಾನೆಯೋ ಅವನು ಪುನರಾವೃತ್ತಿಯಿಲ್ಲದ ವೈಕುಂಠವನ್ನು ಹೊಂದುವನು.

**ಶ್ರೀಕೃಷ್ಣ ಉವಾಚ**

**ಇತ್ಯುಕ್ತ್ವಾ ಕಮಲಾ ತಸ್ಮೈ ವರಂ ದತ್ವಾ ತಿರೋದಧೇ ।**
**ಸೋಽಪಿ ವಿಪ್ರೋ ಧನೀಭೂತ್ವಾ ಪಿತುರ್ಗೇಹಂ ಸಮಾಗತಃ ॥೪೩॥**

**ಶ್ರೀಕೃಷ್ಣನು ಹೇಳಿದನು**– ಕಮಲೆಯು ಆ ಜಯಶರ್ಮನಿಗೆ ಹೀಗೆ ಹೇಳೀ ವರವನ್ನು ಕೊಟ್ಟು ಹೊರಟುಹೋದಳು. ಆ ಬ್ರಾಹ್ಮಣನೂ ಧನಿಕನಾಗಿ ಮತ್ತೆ ತಂದೆಯ ಮನೆಗೆ ಬಂದನು.

**ಏವಂ ಯಃ ಕುರುತೇ ರಾಜನ್ ಕಮಲಾವ್ರತಮುತ್ತಮಂ ।**
**ಶೃಣುಯಾದ್ವಾಸರೇ ವಿಷ್ಣೋಃ ಸರ್ವಪಾಪೈಃ ಪ್ರಮುಚ್ಯತೇ ॥೪೪॥**

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದಾಂಶ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಅಧಿಕಮಾಸ ಕೃಷ್ಣೈಕಾಶೀ ಮಾಹಾತ್ಮ್ಯಂ ನಾಮ ಸಪ್ತಚತ್ವಾರಿಂಶೋಽಧ್ಯಾಯಸ್ಸಮಾಪ್ತಃ ॥

ಈ ರೀತಿಯಾಗಿ ಯಾವನು ಕಮಲಾ ವ್ರತವನ್ನು ಮಾಡುತ್ತಾನೆಯೋ, ಆ ವಿಷ್ಣುವಿನ ಪುಣ್ಯದಿನದಲ್ಲಿ ಯಾವನು ಕಥೆಗಳನ್ನು ಕೇಳುತ್ತಾನೆಯೋ ಅವರು ಎಲ್ಲಾ ಪಾಪಗಳನ್ನೂ ಕಳೆದುಕೊಂಡು ಮುಕ್ತಿಯನ್ನು ಹೊಂದುತ್ತಾರೆ. ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದರ ಸಂವಾದದೊಳಗಿನ ಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಪುರುಷೋತ್ತಮ(ಅಧಿಕ)ಮಾಸದ ಕೃಷ್ಣಕಮಲೈಕಾದಶಿಯ ವರ್ಣನೆ ಎಂಬ ಅರವತ್ತನಾಲ್ಕನೆಯ ಅಧ್ಯಾಯವು ಮುಗಿದುದು,

★ ★ ★ ★

# ಧನುರ್ಮಾಸ

ಮಾರ್ಗಶೀರ್ಷ ಶುಕ್ಲ ಏಕಾದಶೀ ಅಥವಾ ಧನುರ್ಮಾಸಾರಂಭ ಕಾಲದಲ್ಲಿ ದೇವತೆಗಳಿಗೆ ರಾತ್ರಿಯ ಕೊಎಯ ಭಾಗವಾದ ಅರುಣೋದಯ ಕಾಲದ ಆರಂಭವಾಗುವುದು. ಆಗ ದೇವತೆಗಳು ಶ್ರೀಹರಿಯನ್ನು ಪೂಜಿಸಿ ಹುಗ್ಗಿಯನ್ನು ಅರ್ಪಿಸುವರು. ದೇವತೆಗಳು ತಮ್ಮ ಅರುಣೋದಯ ಕಾಲದಲ್ಲಿ ದೇವರನ್ನು ಪೂಜಿಸುವುದರಿಂದ ಮನುಷ್ಯರು ದೇವತೆಗಳ ಅರುಣೋದಯ ಕಾಲವಾದ ಧನುರ್ಮಾಸದಲ್ಲಿ ತಮ್ಮ ಅರುಣೋದಯ ಕಾಲದಲ್ಲಿ ಪೂಜಿಸಬೇಕು. ಅರುಣೋದಯ ಕಾಲದಲ್ಲಿ ಪೂಜೆಯನ್ನು ಮಾಡದವನು ಏಳು ಜನ್ಮಗಳಲ್ಲಿ ದರಿದ್ರನೂ, ಕುಷ್ಠರೋಗಿಯೂ ಆಗುತ್ತಾನೆ. ಪೂಜಿಸುವವನು ನಿರೋಗಿಯೂ ಪ್ರತಿಜನ್ಮದಲ್ಲಿ ವೈಷ್ಣವನೂ ಆಗುತ್ತಾನೆ. ಈ ಪೂಜೆ ನಿತ್ಯವೆನಿಸುತ್ತದೆ.

ಧನುರ್ಮಾಸ ಪೂಜೆಯನ್ನು ಮೊದಲು ಮಾಡಿ ಆಮೇಲೆ ಅರ್ಘ್ಯ , ಗಾಯತ್ರಿಜಪ ಮತ್ತು ಸೂರ್ಯೋಪಸ್ಥಾನವನ್ನು ಮಾಡಬೇಕು. ಈ ಪೂಜೆಗೆ ಅರುಣೋದಯ ಕಾಲ ಮುಖ್ಯ . ನಕ್ಷತ್ರಗಳು ಮರೆಯಾದ ಸಮಯ ಮಧ್ಯಮ. ಸೂರ್ಯೋದಯಾ ನಂತರದ ಕಾಲ ಅಧಮ. ಮಧ್ಯಾಹ್ನಕಾಲ ನಿಷ್ಫಲವಾಗುತ್ತದೆ. ಮುದ್ಗಾನ್ನಕ್ಕೆ (ಹುಗ್ಗಿಗೆ) ಅಕ್ಕಿಗೆ ಹೆಸರುಬೇಳೆ ದ್ವಿಗುಣವಾಗಿದ್ದರೆ ಉತ್ತಮೋತ್ತಮ, ಸಮವಾಗಿದ್ದರೆ ಉತ್ತಮ, ಅರ್ಧವಾಗಿದ್ದರೆ ಮಧ್ಯಮ, ಕಾಲುಭಾಗವಾಗಿದ್ದರೆ ಅಧಮವೆನಿಸುತ್ತದೆ. ಅಕ್ಕಿಯ ಪ್ರಮಾಣಕ್ಕೆ ಅರ್ಧಕ್ಕೆ ಕಡಿಮೆಯಿಲ್ಲದೆ ಅವರವರು ತಮ್ಮ ಶಕ್ತಿಯನ್ನು ಅನುಸರಿಸಿ ಹೆಸರುಬೇಳೆಯನ್ನು ಸೇರಿಸಬೇಕು. ಶುಂಠಿಮಿಶ್ರಿತ ಹುಗ್ಗಿಯನ್ನು ಧನುರ್ಮಾಸದಲ್ಲಿ ನಾರಾಯಣನಿಗೆ ಅರ್ಪಿಸಿ ಶಚೀದೇವಿಯು ದುಃಖದಿಂದ ಮುಕ್ತಳಾದಳು. ಮೊಸರು, ಬೆಲ್ಲ ಮತ್ತು ಶುಂಠಿ ಮಿಶ್ರಿತವಾದ ತ್ರಿವಿಧ ಮುದ್ಗಾನ್ನವನ್ನು ದೇವರಿಗೆ ಅರ್ಪಿಸಿ ಪ್ರಾತಃಕಾಲದಲ್ಲಿ ಬ್ರಾಹ್ಮಣಭೋಜನ ಮಾಡಿಸಬೇಕು.

'ಶ್ರೀದೇವಿ ಪ್ರಥಮಂ ನಾಮ ದ್ವಿತೀಯಮಮೃತೋದ್ಭವಾ ।
ತೃತೀಯಂ ಕಮಲಾ ಪ್ರೋಕ್ತಾ ಚತುರ್ಥಂ ಲೋಕಸುಂದರೀ ॥
ಪಂಚಮಂ ವಿಷ್ಣುಪತ್ನೀತಿ ಷಷ್ಠಂ ಶ್ರೀವೈಷ್ಣವೀತಿ ಚ ।
ಸಪ್ತಮಂ ತು ವರಾರೋಹಾ ಅಷ್ಟಮಂ ಹರಿವಲ್ಲಭಾ ॥
ನವಮಂ ಶಾರ್ಙ್ಗಿಣೀ ಪ್ರೋಕ್ತಾದಶಮಂ ದೇವದೇವಿಕಾ ।
ಏಕಾದಶಂ ಮಹಾಲಕ್ಷ್ಮೀರ್ದ್ವಾದಶಂ ಲೋಕಸುಂದರೀ ॥
ಶ್ರೀ ಪದ್ಮಾ ಕಪಿಲಾ ಮುಕುಂದ ಮಹಿತೋ ಲಕ್ಷ್ಮೀ ಸ್ತ್ರೀ ಲೋಕೇಶ್ವರಿ ।
ಮಾಕ್ಷೀರಾಬ್ಧಿ ಸುತಾರವಿಂದ ಜನನೀ ವಿದ್ಯಾಸರೋಜಾತ್ಮಿಕಾ ॥
ಸರ್ವಾಭೀಷ್ಟ ಪ್ರದೇತಿ ಸತತಂ ನಾಮಾನಿಯೇ ದ್ವಾದಶ ।
ಪ್ರಾತಃ ಶುದ್ಧತರಾ ಪಠಂತಿ ಸತತಂ ಸರ್ವಾಲ್ಲಭತೇ ಶುಭಾನ್ ॥
ಭದ್ರಲಕ್ಷ್ಮೀ ಸ್ತವಂ ನಿತ್ಯಂ ಪುಣ್ಯಮೇತಚ್ಛುಭಾವಹಂ ।
ಕಾಲೇ ಸ್ನಾತ್ವಾಪಿ ಕಾವೇರ್ಯಾಂ ಜಪ ಶ್ರೀವೃಕ್ಷ ಸನ್ನಿಧೌ ॥

ಎಂಬ ಭದ್ರಲಕ್ಷ್ಮೀಸ್ತುತಿಯನ್ನು ಪೂಜಾನಂತರದಲ್ಲಿ ಪಠಿಸಬೇಕು.

ಸಾಧನಾ ದ್ವಾದಶೀ ದಿನದಲ್ಲಿ ಕರ್ಮ ಸಂಕೋಚವನ್ನು ಮಾಡಿಕೊಂಡು ಶ್ರೀಹರಿಯನ್ನು ಪೂಜಿಸಿ ಪಾರಣೆಯನ್ನು ಮಾಡಿದಂತೆ ಧನುರ್ಮಾಸದಲ್ಲಿಯೂ ಮಾಡಬೇಕು. ಈ ವಿಷಯವು

'ಯಥಾ ಸಂಕೋಚ್ಯ ಸತ್ಕರ್ಮ ಭುಂಕ್ತೇಲ್ಪ ದ್ವಾದಶೀ ದಿನೇ ।
ತಥಾ ಪ್ರಾತರ್ಧನುರ್ಮಾಸೇ ಕೃತ್ವಾ ಕರ್ಮಾರ್ಚಯೇಚ್ಚ ಮಾಂ ॥

ಇತ್ಯಾದಿ ಸ್ಮೃತಿ ಮುಕ್ತಾವಳಿಯಲ್ಲಿ ಉದಾಹೃತವಾದ ಪ್ರಮಾಣವಚನದಿಂದ ಸಿದ್ಧವಾಗಿದೆ. ಈ ಮಾಸದಲ್ಲಿ ಪೂಜೆಯು ಮುಖ್ಯವೇ ಹೊರತು ಭೋಜನವಲ್ಲ. ಆದ್ದರಿಂದ ಪೂಜೆಯನ್ನು ಮಾಡಿ ದೇವ, ಋಷಿ, ಪಿತೃತರ್ಪಣ, ವೈಶ್ವದೇವಾದಿಕರ್ಮಗಳನ್ನು ಮುಗಿಸಿ ಬ್ರಾಹ್ಮಣ ಭೋಜನಾನಂತರದಲ್ಲಿ ತಾನೂ ಭೋಜನವನ್ನು ಪ್ರಾತಃಕಾಲದಲ್ಲಿಯೇ ಮಾಡಿದರೂ ಮಾಡಬಹುದು. ಅಥವಾ ಮಧ್ಯಾಹ್ನದಲ್ಲಿ ಪುನಃ ಪೂಜೆಯನ್ನು ಮಾಡಿ ಭೋಜನವನ್ನು ಮಾಡಿದರೂ ಮಾಡಬಹುದು. ಎರಡು ವಿಧವಾದ ಸಂಪ್ರದಾಯಗಳೂ ಲೋಕ ವ್ಯವಹಾರದಲ್ಲಿವೆ.

ಧನುರ್ವ್ಯತೀಪಾತಯೋಗ : ಧನುರ್ಮಾಸದಲ್ಲಿ ವ್ಯತೀಪಾತಯೋಗದಲ್ಲಿ ಅರುಣೋದಯ ಕಾಲದಲ್ಲಿ ವಿಷ್ಣುವನ್ನು ಪೂಜಿಸಿ

**'ವ್ಯತೀಪಾತ ಮಹಾಸತ್ಯ ಸರ್ವಪಾಪ ಪ್ರಣಾಶನ ।**
**ಸಹಸ್ರಬಾಹೋ ವಿಶ್ವಾತ್ಮನ್ ಗೃಹಾಣಾರ್ಘ್ಯಂ ನಮೋಸ್ತುತೇ ॥**
**ವ್ಯತೀಪಾತ ನಮಸ್ತೇಸ್ತು ನಮಸ್ತೇ ವಿಶ್ವಮಂಗಲಂ ।**
**ವಿಷ್ಣುಚಕ್ರಸ್ವರೂಪಾಯ ನಮಸ್ತೇ ದಿವ್ಯ ತೇಜಸೇ॥'**

ಎಂಬ ಮಂತ್ರದಿಂದ ವಿಷ್ಣು ಚಕ್ರರೂಪಿಯಾದ ವ್ಯತೀಪಾತದೇವತೆಗೆ ಅರ್ಘ್ಯವನ್ನು ಕೊಡಬೇಕು. ಆಮೇಲೆ ದಕ್ಷಿಣಾಮುಖವಾಗಿ ವಂಶದ್ವಯ ಪಿತೃಗಳ ತೃಪ್ತಿಗಾಗಿ ಅವರನ್ನು ಸ್ಮರಿಸುತ್ತಾ

**'ವಿಷ್ಣುಪ್ರಿಯ ವ್ಯತೀಪಾತ ಪಿತೃಣಾನುನೃಣಪ್ರದ ।**
**ಪಿತೃಣಾಂ ಮಮ ವೈಕುಂಠಂ ಪ್ರಯಚ್ಛ ಭಗವನ್ ಹರೇ ॥**
**ತ್ವತ್ಪ್ರಸಾದೇನ ಮೇ ಭಕ್ತಿ ರಸ್ತ್ವೆವಮನಪಾಯಿನೀ ।**
**ಜ್ಞಾನವಿಜ್ಞಾನವೈರಾಗ್ಯಂ ಪ್ರಯಚ್ಛಭಗವನ್ಮಮ ॥'**

ಎಂಬ ಮಂತ್ರದಿಂದ ತರ್ಪಣವನ್ನು ಕೊಡಬೇಕು. ಈ ವ್ಯತೀಪಾತ ದಿನದ ಪೂಜೆಯು ಅರ್ಧೋದಯಾದಿ ಮಹಾಪುಣ್ಯಕಾಲಕ್ಕಿಂತ ಸಹಸ್ರಪಾಲು ಅಧಿಕ ಪುಣ್ಯಪ್ರದವಾಗಿದೆ.

★ ★ ★ ★

# ಮಕರಸಂಕ್ರಾಂತಿ

ದಾಮೋದರಾಯನಮಃ ಎಂಬ ನಾಮಸ್ಮರಣೆಯನ್ನು ಯಥಾಶಕ್ತಿ ಮಾಡುವುದರಿಂದ ದಾಮೋದರನ ಪೂಜೆ ಮಾಡುವುದರಿಂದ ಸ್ತ್ರೀಯರಿಗೆ ರಜಸ್ವಲಾ ದೋಷವು ಪರಿಹಾರವಾಗುತ್ತದೆ.

ಪುರುಷರು ಅವಶ್ಯವಾಗಿ ನೂರೆಂಟು ಗಾಯತ್ರಿಮಂತ್ರ ಜಪವನ್ನು ಅದರ ಮೂರುಪಟ್ಟು ನಾರಾಯಣಾಷ್ಟಾಕ್ಷರಮಂತ್ರ ಜಪವನ್ನು ಇಂದು ಮಾಡಲೇಬೇಕು. ಮತ್ತು ಸೂರ್ಯನಾರಾಯಣನನ್ನು ವಿಶೇಷವಾಗಿ ಪೂಜಿಸಬೇಕು.

**ಸಂಕ್ರಾಂತಿಹಬ್ಬದ ಆಚರಣೆಗೆ ಬೇಕಾಗುವ ಸಾಮಗ್ರಿಗಳು.**

ಎಳ್ಳುಬೆಲ್ಲ, ಎಳ್ಳಿನ ಬರ್ಫಿ, ಕಬ್ಬು, ಮಾವಿನಚಿಗುರು, ಪೂಜಾಸಾಮಗ್ರಿಗಳು, ಮುತ್ತೈದೆಯರಿಗೆ ಮರದ ಬಾಗಿನಗಳು, ಇತ್ಯಾದಿ.

## ಸಂಕ್ರಾಂತಿಹಬ್ಬದ ಆಚರಣೆಗಳು

೧) ಜೀವನದಲ್ಲಿ ಆತ್ಮೀಯರ ಜೊತೆ ವೈಮನಸ್ಸನ್ನು ಮರೆತು ಬೇಡದ ಒಣಪ್ರತಿಷ್ಠೆಗಳನ್ನು ಪರಿತ್ಯಾಗಮಾಡಿ ಉಲ್ಲಾಸದಿಂದ ಹೊಸ ಪಥದಲ್ಲಿ ಸಾಗುವ ಪರ್ವಕಾಲವೇ ಮಕರಸಂಕ್ರಮಣ.

೨) ಸೂರ್ಯನು ದಕ್ಷಿಣಾಯಣದಿಂದ ಉತ್ತರಾಯಣಕ್ಕೆ ತೆರಳಲು ಪಥವನ್ನು ಬದಲಿಸುತ್ತಾನೆ. ತನ್ಮೂಲಕ ನಮಗೂ ಸಹ ಜೀವನದಲ್ಲಿ ಹೊಸಪಥದೆಡೆ ಸಂಚಲನೆಯನ್ನು ಮೂಡಿಸುತ್ತಾನೆ.

೩.) ಇಲ್ಲಿಯ ತನಕ ರಾತ್ರಿ ಜಾಸ್ತಿ ಹಗಲು ಕಡಿಮೆ ಇತ್ತು. ಇನ್ನು ಮುಂದೆ ಹಗಲು ಹೆಚ್ಚು ರಾತ್ರಿ ಕಡಿಮೆ. ಜ್ಞಾನವನ್ನು ಹೆಚ್ಚಿಸುವುದರ ಮೂಲಕ ಅಜ್ಞಾನದಿಂದ ಜ್ಞಾನದೆಡೆಗೆ ಸಾಗೋಣ.

೪) ದೇವತೆಗಳಿಗೂ ರಾತ್ರಿಕಾಲ ಮುಗಿದು ಹಗಲು ಪ್ರಾರಂಭವಾಗಿದೆ. ಇಂದು ವೈಕುಂಠದಲ್ಲಿ ಸನಕಾದಿ ಋಷಿಗಳು ಸಕಲ ದೇವಾನುದೇವತೆಗಳು ಭಗವಂತನ ದರ್ಶನಕ್ಕಾಗಿ ಬಾಗಿಲಮುಂದೆ ಕಾಯುತ್ತಾರೆ. ದೀಪವನ್ನು ಬೆಳಗುತ್ತಾರೆ. ವೈಕುಂಠದ ಬಾಗಿಲು ಇಂದು ತೆರೆಯುತ್ತದೆ. ಎಲ್ಲರೂ ಭಕ್ತಿಭರಾಭಿನುನ್ನರಾಗಿ ಭಗವಂತನ ದರ್ಶನವನ್ನು ಮಾಡುತ್ತಾರೆ. ಇಂಥ ಪರಮೋನ್ನತವಾದ ದಿವ್ಯಸುಕ್ಷಣವೇ ಈ ಮಕರಸಂಕ್ರಾಂತಿಯಾಗಿದೆ.

೫) ಆದಿರಂಗ, ಅಂತ್ಯರಂಗ, ಮಧ್ಯರಂಗಗಳಲ್ಲಿ ಮಲಗಿದ ರಂಗನಾಥನಿಗೆ ಮಹಾಮಜ್ಜನಮಾಡಿಸಿ ಎಂಭತ್ತು ಕಿಲೋ ಬೆಣ್ಣೆಯ ಅಲಂಕಾರವನ್ನು ಮಾಡಿ ಭಗವಂತನನ್ನೆ ವೈಭವೋಪೇತವಾಗಿ ಇಂದು ಪೂಜಿಸುತ್ತಾರೆ.

೬) ಇಂದು ಎಲ್ಲಾಗೋವುಗಳನ್ನು ವಿಶೇಷವಾಗಿ ಪೂಜಿಸಬೇಕು. ಹಳ್ಳಿಗಳಲ್ಲಿ ಆವಿಪಾಲಗೋಪಾಲರೆಲ್ಲರೂ ಹಸುಗಳಿಗೆ ಸ್ನಾನ ಮಾಡಿಸಿ ಅರಿಶಿನ ಹಚ್ಚಿ ಕೊಂಬುಗಳಿಗೆ ಕುಂಕುಮವನ್ನು ಹಚ್ಚಿ ಆರತಿ ಮಾಡಿ ಗೋ ಪೂಜೆಯನ್ನು ಮಾಡುತ್ತಾರೆ. ಮೂವತ್ತಮೂರು ಕೋಟಿ ದೇವತೆಗಳು ಇಂದು ಹಸುಗಳಲ್ಲಿ ಪ್ರವೇಶ ಮಾಡುತ್ತಾರೆಂದು ನಂಬುತ್ತಾರೆ.

೭) ವೈಶ್ವದೇವ ಬಲಿಹರಣ ಆದಮೇಲೆ ಇಂದು ಅವಶ್ಯವಾಗಿ ಗೋಗ್ರಾಸವನ್ನು ನೀಡಬೇಕು. ಗೋವುಗಳು ಇಲ್ಲದಿದ್ದರೆ ಗೋಗ್ರಾಸಕ್ಕಾಗಿ ದಕ್ಷಿಣೆಯನ್ನಾದರೂ ಎತ್ತಿಡಬೇಕು.

೮) ಇಂದು ಷಟ್‌ತಿಲಾಕಾರ್ಯವನ್ನು ಆಚರಿಸಲೇಬೇಕು-

**ತಿಲಸ್ನಾಯೀ ತಿಲೋದ್ವರ್ತೀ ತಿಲಹೋಮೀ ತಿಲೋದಕೀ ।**
**ತಿಲಭುಕ್ ತಿಲದಾತಾ ಚ ಷಟ್‌ತಿಲಾ ಪಾಪನಾಶಕಾಃ ॥**

೧. ಸ್ನಾನಮಾಡುವ ನೀರಿನಲ್ಲಿ ಎಳ್ಳುಗಳನ್ನು ಹಾಕಿ ಮೀಯಬೇಕು.
೨. ಎಳ್ಳಿನ ಎಣ್ಣೆಯಿಂದ ದೀಪವನ್ನು ಬೆಳಗಬೇಕು.
೩. ತಿಲಹೋಮವನ್ನು ಮಾಡಬೇಕು.
೪. ಪಿತೃಗಳಿಗೆ ತಿಲತರ್ಪಣವನ್ನು ನೀಡಬೇಕು.
೫. ಎಳ್ಳನ್ನು ತಿನ್ನಬೇಕು.
೬. ಎಳ್ಳನ್ನು ದಾನಮಾಡಬೇಕು.

ಇದುವೇ ಷಟ್‌ತಿಲಕಾರ್ಯ, ಇದನ್ನು ಆಚರಿಸುವುದರಿಂದ ಎಲ್ಲ ಪಾಪಗಳು ಭಸ್ಮವಾಗುತ್ತವೆ. ಅಧಿಕಾರಿಗಳಿಗೆ ಮಾತ್ರ ತಿಲತರ್ಪಣ. ಉಳಿದವರು ಪಂಚತಿಲಕಾರ್ಯವನ್ನು ಮಾಡಬೇಕು.

೯) ಸ್ತ್ರೀಯರು ದಾಮೋದರನನ್ನು ಪೂಜೆಮಾಡುವುದರಿಂದ ರಜಸ್ವಲಾದೋಷದಿಂದ ವಿಮುಕ್ತರಾಗುತ್ತಾರೆಂದು ಸ್ಮೃತಿಗ್ರಂಥಗಳು ಹೇಳುತ್ತವೆ. ಆದ್ದರಿಂದ ಪ್ರತಿಯೊಬ್ಬ ಸ್ತ್ರೀಯರೂ ದಾಮೋದರನನ್ನು ಪೂಜಿಸಬೇಕು. ತಾವು ನಿತ್ಯವೂ ಪೂಜಿಸುತ್ತಿರುವ ಅಂಬೆಗಾಲು ಕೃಷ್ಣನೇ ದಾಮೋದರನಾಗಿದ್ದಾನೆ. ಅವನಿಗೆ ಮಕರಸಂಕ್ರಾಂತಿಯ ಪ್ರಯುಕ್ತ ವಿಶೇಷಪೂಜೆಯುನ್ನು ಮಾಡಬೇಕು. ಮಕರಸಂಕ್ರಮಣದ ಪರ್ವಕಾಲವನ್ನು ಪಂಚಾಂಗವನ್ನು ನೋಡಿ ಸರಿಯಾಗಿ ತಿಳಿದುಕೊಳ್ಳಬೇಕು, ಆ ಕಾಲದಲ್ಲಿ ಸೂರ್ಯನಾರಾಯಣನಿಗೆ ತುಳಸೀ ಕಟ್ಟೆಯ ಬಳಿ ಹಾಲಿನ ನೈವೇದ್ಯವನ್ನು ಸಮರ್ಪಣೆ ಮಾಡಬೇಕು.

೧೦) ಪಥವನ್ನು ಬದಲಿಸುವಾಗ ಸೂರ್ಯನು ಒಂದುಕ್ಷಣ ನಿಂತು ಎಲ್ಲರನ್ನೂ ಅನುಗ್ರಹಿಸುತ್ತಾನೆ ಎಂಬ ನಂಬಿಕೆಯು ನಮ್ಮಲ್ಲಿದೆ. ಆದ್ದರಿಂದ ಅಂದು ಪ್ರತಿಯೊಬ್ಬರೂ ಸೂರ್ಯದರ್ಶನವನ್ನು ಮಾಡಿ ಸೂರ್ಯನ ಹಾಗೂ ತದಂತರ್ಯಾಮಿಯಾದ ನಾರಾಯಣನ ಅನುಗ್ರಹವನ್ನು ಪಡೆದುಕೊಳ್ಳಬೇಕು. ಆ ಕ್ಷಣದಲ್ಲಿ ಮನೆಯ ಒಳಗೆ ಇರುವುದಕ್ಕಿಂತ ಹೊರಗಡೆ ಬಂದು ದರ್ಶನಮಾಡುವುದು ಉತ್ತಮವಾಗಿದೆ.

೧೧) ಮಕರಸಂಕ್ರಾಂತಿ ಎಂಬುದು ಉತ್ತಮಪರ್ವಕಾಲವಾಗಿದೆ. ಇಂದು ಮಾಡುವ ತೀರ್ಥಸ್ನಾನಕ್ಕೆ ವಿಶೇಷ ಮಹತ್ವವಿದೆ. ಗಂಗಾ, ಯಮುನಾ, ಗೋದಾವರಿ, ಕೃಷ್ಣಾ,

ಕಾವೇರಿ, ತುಂಗಭದ್ರಾ ಈ ನದಿಗಳಲ್ಲಿ ಪ್ರಯತ್ನಪೂರ್ವಕವಾಗಿ ಸ್ನಾನವನ್ನು ಮಾಡಬೇಕು. ಸಾಧ್ಯವಾಗದಿದ್ದರೆ ಆಯಾ ನದಿಗಳ ನೀರನ್ನು ಮೊದಲೇ ಮನೆಯಲ್ಲಿ ತಂದಿಟ್ಟುಕೊಂಡು ಸ್ನಾನವನ್ನು ಮಾಡಬೇಕು.

## ಸಂಕ್ರಾಂತಿ ಹಬ್ಬದ ಆಚರಣೆ

ಐದು ಮಣ್ಣಿನ ಮಡಿಕೆಗಳನ್ನು ತೆಗೆದುಕೊಂಡು ಅವುಗಳಲ್ಲಿ ಗಜ್ಜರೀ, ಬೋರೇಹಣ್ಣು, ಕಬ್ಬಿನತುಂಡು, ನೆಲಗಡಲೆ, ಹತ್ತಿ, ಕಡಲೇಕಾಳು, ಎಳ್ಳು, ಬೆಲ್ಲ, ಅರಿಶಿನ, ಕುಂಕುಮ ಇವುಗಳನ್ನು ತುಂಬಿಸುತ್ತಾರೆ. ಅನಂತರ ದಾಮೋದರನನ್ನು ಪೂಜಿಸಿ ಈ ಐದು ಮಡಿಕೆಗಳನ್ನು ನೈವೇದ್ಯಮಾಡುತ್ತಾರೆ. ಅವುಗಳಲ್ಲಿ ಮೂರನ್ನು ಸುವಾಸಿನಿಯರಿಗೆ ಬಾಗಿನ ನೀಡಿ ಒಂದನ್ನು ತುಳಸಿಗೆ ಸಮರ್ಪಣೆ ಮಾಡಿ ಮತ್ತೊಂದನ್ನು ಪ್ರಸಾದವೆಂದು ತಾವು ಸ್ವೀಕರಿಸುತ್ತಾರೆ.

'ಎಳ್ಳುಬೆಲ್ಲವನ್ನು ಕೊಟ್ಟು ಒಳ್ಳೊಳ್ಳೆಯ ಮಾತನಾಡೋಣ' ಎಂದು ಹೇಳುತ್ತಾ ಪ್ರತಿಯೊಬ್ಬ ಹಿರಿಯರಿಗೂ ಎಳ್ಳುಬೆಲ್ಲವನ್ನು ನೀಡಿ ನಮಸ್ಕಾರವನ್ನು ಮಾಡಿ ಆಶೀರ್ವಾದವನ್ನು ಪಡೆದುಕೊಳ್ಳಲೇಬೇಕು.

ಎಳ್ಳುಬೆಲ್ಲವನ್ನು ದಾನಮಾಡುವಾಗ ದಕ್ಷಿಣೆಯನ್ನು ಇಟ್ಟೇ ದಾನಮಾಡಬೇಕು. ಕೇವಲ ಎಳ್ಳುಬೆಲ್ಲವನ್ನು ನೀಡಬಾರದು.

ಇತ್ತೀಚಿನ ದಿವಸಗಳಲ್ಲಿ ಶೇಂಗಾ, ಪುಟಾಣಿಗಳೇ ಹೆಚ್ಚು ಇರುತ್ತವೆ. ಎಳ್ಳು ಇರುವುದೇ ಇಲ್ಲ. ಇಂಥ ಸಂದರ್ಭದಲ್ಲಿ ಎಳ್ಳಿನ ಬರ್ಫಿಯನ್ನು ಮಾಡಿ ಅದನ್ನು ದಾನಮಾಡುವುದೇ ಹೆಚ್ಚು ಅರ್ಥಪೂರ್ಣವಾಗುತ್ತದೆ.

ದೇವರ ಪೂಜೆ, ನೈವೇದ್ಯ, ವೈಶ್ವದೇವ ಮಾಡುವಾಗ ಅವಶ್ಯವಾಗಿ ಎಳ್ಳುಬೆಲ್ಲವನ್ನು ಉಪಯೋಗಿಸಲೇಬೇಕು. ವೈಶ್ವದೇವದಲ್ಲಿಯೂ ಅನ್ನದ ಜೊತೆ ಎಳ್ಳನ್ನು ಆಹುತಿಯನ್ನಾಗಿ ನೀಡಬೇಕು.

ಹೊಸದಾಗಿ ಮದುವೆಯಾದ ಸುವಾಸಿನಿಯರು ಐದು ಮನೆಗೆ ತೆರಳಿ ಎಳ್ಳನ್ನು ಬೀರುತ್ತಾರೆ. ಆ ಸಂಪ್ರದಾಯವನ್ನು ಅನುಷ್ಠಾನ ಮಾಡಬೇಕು.

ವಿವಾಹವಾದ ವರ್ಷದಿಂದ ಐದು ಸಂಖ್ಯೆಯಲ್ಲಿ ಬಾಳೆಹಣ್ಣಿನ ದಾನವನ್ನೂ ಕೂಡ ಹೆಚ್ಚಿಸುತ್ತಾರೆ. ಹೀಗೆ ಐದು ವರ್ಷಗಳ ಕಾಲ ಐದು ಮಂದಿ ಸುವಾಸಿನಿಯರಿಗೆ ಕಾಲು ತೊಳೆದು ಬಾಗಿನವನ್ನು ನೀಡುತ್ತಾರೆ.

ಪ್ರತಿಯೊಬ್ಬರೂ ಕೂಡ ಹಿರಿಯರ ಮನೆಗಳಿಗೆ ತೆರಳಿ ಎಳ್ಳುಬೆಲ್ಲವನ್ನು ಕೊಟ್ಟು ಪರಸ್ಪರ ಸಂತೋಷವನ್ನು ಹಂಚಿಕೊಳ್ಳಬೇಕು. ತನ್ಮೂಲಕ ಮಕರಸಂಕ್ರಾಂತಿಯನ್ನು ಉತ್ಸಾಹದಿಂದ ಆಚರಿಸಬೇಕು.

ಮುಂದೆ ಹೇಳುವ ಪ್ರಕಾರ ದಾಮೋದರನನ್ನು ಇಂದು ಪೂಜಿಸಬೇಕು. ಹಾಗೂ ಅವಶ್ಯವಾಗಿ ಸೂರ್ಯನಾರಾಯಣನ ಪೂಜೆಯನ್ನು ಮರೆಯಬಾರದು.

ಬ್ರಾಹ್ಮೀಮುಹೂರ್ತದಲ್ಲೆದ್ದು ತೀರ್ಥಸ್ನಾನವನ್ನು ಮಾಡಿ ಸೂರ್ಯೋದಯವಾಗುವಷ್ಟರಲ್ಲಿ ನೂರೆಂಟು ಗಾಯತ್ರಿ ಮಂತ್ರವನ್ನು ಜಪಿಸಿ ನಾರಾಯಣಾಷ್ಟಾಕ್ಷರಮಂತ್ರವನ್ನು ಕೂಡ ಭಕ್ತಿಯಿಂದ ವಿಶೇಷವಾಗಿ ಜಪಮಾಡಬೇಕು.

ಯಾರಿಗೆ ಜಾತಕದಲ್ಲಿ ರವಿಯು ನೀಚನಾಗಿರುತ್ತಾನೋ, ಶತ್ರು ಸ್ಥಾನದಲ್ಲಿರುತ್ತಾನೋ ಶಕ್ತಿಯನ್ನು ಕಳೆದುಕೊಂಡು ಕ್ರೂರಗ್ರಹಗಳ ದೃಷ್ಟಿಗೆ ಪಾತ್ರನಾಗಿರುತ್ತಾನೋ ಅಂಥಹವರಿಗೆ ಮಕರಸಂಕ್ರಾಂತಿಯ ವಿಶೇಷವಾದ ಆಚರಣೆಯಿಂದ ರವಿಯ ಅನುಗ್ರಹವಾಗುತ್ತದೆ. ಜಾತಕದಲ್ಲಿರುವ ದೋಷಗಳು ಪರಿಹಾರವಾಗುತ್ತದೆ. ಮತ್ತು ಇಂದು ಗೋದಿಯನ್ನು ಹಸುಗಳಿಗೆ ತಿನ್ನಿಸುವುದರಿಂದ ಸೂರ್ಯನ ಅನುಗ್ರಹವಾಗುತ್ತದೆ. ಮತ್ತು ಜಾತಕದಲ್ಲಿ ರವಿಯ ಬಲವು ಹೆಚ್ಚುತ್ತದೆ.

ರವಿಯು ತನ್ನ ಪುತ್ರನಾದ ಶನಿಯ ಮನೆಯನ್ನು ಇಂದು ಪ್ರವೇಶ ಮಾಡುವುದರಿಂದ ತಿಲದಾನವು ವಿಹಿತವಾಗಿದೆ. ಈ ತಿಲದಾನದಿಂದ ಶನಿದೋಷವು ಪರಿಹಾರವಾಗುತ್ತದೆ. ಅಪಘಾತ, ದುರ್ಮರಣ, ಅನಾರೋಗ್ಯ ಇತ್ಯಾದಿಯಾದ ಅವಗಡಗಳೆಲ್ಲವೂ ಪರಿಹಾರವಾಗಿ ಶನಿಯ ಅನುಗ್ರಹವಾಗಿ ವಿಷ್ಣುಭಕ್ತಿಯು ಅಭಿವೃದ್ಧಿಯಾಗುತ್ತದೆ. ಆದ್ದರಿಂದ ಎಳ್ಳಿನ ದಾನದಿಂದ ಮಕರರಾಶ್ಯಾಧಿಪತಿಯಾದ ಶನಿಯು ಪ್ರೀತನಾಗಲಿ ಎಂದು ಪ್ರಾರ್ಥಿಸಬೇಕು.

ಮಕರಸಂಕ್ರಮಣದ ಮರುದಿನವನ್ನು ಕರಿದಿನ ಎಂದು ಕರೆಯುತ್ತಾರೆ. ಒಂದು ವರ್ಷದಿಂದ ಐದು ವರ್ಷದವರೆಗಿನ ಗಂಡು ಮಕ್ಕಳಿಗೆ ಇಂದು 'ಕರಿ' ಎರೆಯುತ್ತಾರೆ.

ಹಣ್ಣು, ಬೆಂಡು, ಬತ್ತಾಸು, ಶೇಂಗಾ, ಗೇರು ಹಣ್ಣು, ಬೋರೆ ಹಣ್ಣು, ಕಬ್ಬಿನ ತುಂಡು, ಗೋಡಂಬಿ, ದ್ರಾಕ್ಷಿ, ಇವುಗಳನ್ನು ಸಣ್ಣದಾಗಿ ಮಾಡಿ ಕರಿ ಎರೆಯುತ್ತಾರೆ. ಕರಿ ಎರೆದ ಮೇಲೆ ಆರತಿ ಮಾಡುತ್ತಾರೆ. ಇದನ್ನು ಮಕ್ಕಳಿರುವ ಮನೆಯಲ್ಲಿ ಬಹಳ ಉಲ್ಲಾಸದಿಂದ ಆಚರಿಸಲಾಗುತ್ತದೆ.

ಮಕರಸಂಕ್ರಮಣವನ್ನು 'ಪೊಂಗಲ್' ಹಬ್ಬವೆಂದು ಹೆಸರಿಸುತ್ತಾರೆ. ಇಷ್ಟು ದಿವಸ ಹುಗ್ಗಿಯನ್ನು ಮಾಡಿ ಇಂದು ಪೊಂಗಲ್ ಮಾಡುವುದೇ ಹಬ್ಬದ ವಿಶೇಷ.

ಹೀಗೆ ಎಲ್ಲ ರೀತಿಯಿಂದಲೂ ಅತ್ಯಂತ ಶ್ರೇಷ್ಠವಾದ ಮಕರಸಂಕ್ರಮಣವನ್ನು ವೈಭವೋಪೇತವಾಗಿ ಆಚರಿಸಿ ಸೂರ್ಯನಾರಾಯಣನ ಕೃಪೆಗೆ ಪಾತ್ರರಾಗಿ ಒಳ್ಳೆಯ ವಿದ್ಯೆ, ಬುದ್ಧಿಗಳನ್ನು ಹೊಂದಿ ಜೀವನವನ್ನು ಸಾರ್ಥಕಮಾಡಿಕೊಳ್ಳೋಣ.

## ಮಕರಸಂಕ್ರಾಂತಿ ಪೂಜೆ

## ದಾಮೋದರ ಪೂಜೆ

ದೇವರ ಪೂಜೆಯ ಜೊತೆಯೇ ಈ ಮಂತ್ರಗಳನ್ನು ಹೇಳಿಕೊಂಡು ಪೂಜೆ ಮಾಡಬೇಕು. ಆದ್ದರಿಂದ ಪ್ರತ್ಯೇಕವಾಗಿ ಎಲ್ಲವನ್ನು ನೀಡಿರುವುದಿಲ್ಲ.

ಶ್ರೀ ಗುರುಭ್ಯೋನಮಃ

**ಸಂಕಲ್ಪ** – ಪ್ರಾಣಾನಾಯಮ್ಯ । ದೇಶಕಾಲೌ ಸಂಕೀರ್ತ್ಯ ।

ಸಂಕಲ್ಪಂ ಕುರ್ಯಾತ್ ॥ ಏವಂಗುಣವಿಶೇಷಣವಿಶಿಷ್ಟಾಯಾಂ ಮಮ ಆಚರಿತ ವ್ರತಸ್ಯ ಸಮಗ್ರ ಸಂಪೂರ್ಣ ಫಲಾವಾಪ್ತ್ಯರ್ಥಂ ಮಮ ಸಕಲ ಸೌಭಾಗ್ಯಸುಖಸಂತಾನ ಪ್ರಾಪ್ತಿದ್ವಾರಾ ಸಮಸ್ತದುರಿತಕ್ಷಯಾರ್ಥಂ ಶ್ರೀದಾಮೋದರದೇವತಾಮುದ್ದಿಶ್ಯ ಶ್ರೀದಾಮೋದರದೇವತಾಪ್ರೀತ್ಯರ್ಥಂ ಯಾವಚ್ಛಕ್ತ್ಯಧ್ಯಾನಾವಾಹನಾದಿ ಷೋಡಶೋಪಚಾರಪುರಸ್ಸರಂ ಶ್ರೀಮಕರಸಂಕ್ರಾಂತಿವ್ರತಂ ಕರಿಷ್ಯೇ ॥ ಇತಿ ಸಂಕಲ್ಪ್ಯ॥

**ಲಕ್ಷ್ಮೀನಾರಾಯಣಂ ವಂದೇ ಶಂಖಚಕ್ರಗದಾಧರಮ್ ।**
**ವಾಮಭಾಗೇ ಯುತಂ ದೇವ್ಯಾ ಸರ್ವಾಭರಣಭೂಷಿತಮ್ ॥**
**ದಾಮೋದರಾಯ ನಮಃ ಧ್ಯಾನಂ ಸಮರ್ಪಯಾಮಿ ॥**
**ದಾಮೋದರ ಮಹಾದೇವ ಭಗವಾನ್ ಭಕ್ತವತ್ಸಲ ।**
**ದೀಪವ್ರತೇನ ಮೇ ದೇವ ಮಮ ಪಾಪಂ ವ್ಯಪೋಹಯ ॥**
**ದಾಮೋದರಾಯ ನಮಃ ಆವಾಹನಂ ಸಮರ್ಪಯಾಮಿ ॥**
**ನಾರಾಯಣ ಜಗನ್ನಾಥ ಭಕ್ತಾನಾಮಭಯಪ್ರದ ।**
**ತ್ರಾಹಿ ಮಾಂ ಪುಂಡರೀಕಾಕ್ಷ ಜಗನ್ನಾಥ ನಮೋಽಸ್ತು ತೇ ॥**
**ದಾಮೋದರಾಯ ನಮಃ ಸಿಂಹಾಸನಂ ಸಮರ್ಪಯಾಮಿ ॥**
**ಸರ್ವಾತ್ಮನ್ ಸರ್ವಲೋಕೇಶ ಸರ್ವವ್ಯಾಪಿ ಸನಾತನ ।**
**ಪಾದ್ಯಂ ಗೃಹಾಣ ಭಗವನ್ ದಿವ್ಯರೂಪ ನಮೋಽಸ್ತುತೇ ॥**

ದಾಮೋದರಾಯ ನಮಃ ಪಾದ್ಯಂ ಸಮರ್ಪಯಾಮಿ ||
ಅಷ್ಟಗಂಧಸಮಾಯುಕ್ತಂ ತುಲಸೀದಳಸಂಯುತಮ್ ।
ಅರ್ಘ್ಯಂ ಗೃಹಾಣ ದೇವೇಶ ಭಕ್ತಪಾಪವಿನಾಶನ ||
ದಾಮೋದರಾಯ ನಮಃ ಅರ್ಘ್ಯಂ ಸಮರ್ಪಯಾಮಿ ||
ಏಲಾಲವಂಗತಕ್ಕೋಲ ಕರ್ಪೂರಾದಿಸಮನ್ವಿತಮ್ ।
ಆಚಮ್ಯತಾಂ ಹೃಷೀಕೇಶ ಮಯಾ ದತ್ತೇನ ವಾರಿಣಾ ||
ದಾಮೋದರಾಯ ನಮಃ ಆಚಮನಂ ಸಮರ್ಪಯಾಮಿ ||
ಮಧುರಂ ಫಲಸಂಯುಕ್ತಂ ಕ್ಷೀರಶರ್ಕರಯಾನ್ವಿತಮ್ ।
ಮಧುಪರ್ಕಂ ಗೃಹಾಣೇದಂ ಮಧುಸೂದನ ತೇ ನಮಃ ||
ದಾಮೋದರಾಯ ನಮಃ ಮಧುಪರ್ಕಂ ಸಮರ್ಪಯಾಮಿ ||
ಪಯೋದಧಿ ಘತೋಪೇತಂ ಶರ್ಕರಾಮಧು ಸಂಯುತಮ್ ।
ಪಂಚಾಮೃತ ಸ್ನಾನಮಿದಂ ಗೃಹಾಣ ಪುರುಷೋತ್ತಮ ||
ದಾಮೋದರಾಯ ನಮಃ ಪಂಚಾಮೃತಸ್ನಾನಂ ಸಮರ್ಪಯಾಮಿ ||
ಗಂಗಾಜಲಸಮಾನೀತಂ ಸರ್ವತೀರ್ಥಸಮನ್ವಿತಮ್ ।
ಶುದ್ಧೋಕದಸ್ನಾನಮಿದಂ ಗೃಣಾಣ ಪುರುಷೋತ್ತಮ ||
ದಾಮೋದರಾಯ ನಮಃ ಶುದ್ಧೋಕದಸ್ನಾನಂ ಸಮರ್ಪಯಾಮಿ ||
ಶುಭ್ರಂ ಸೂಕ್ಷ್ಮತರಂ ವಸ್ತ್ರಂ ಕೌಶೇಯಂ ಚಿತ್ರವರ್ಣಕಮ್ ।
ವಸ್ತ್ರಯುಗ್ಮಂ ಪ್ರದಾಸ್ಯಾಮಿ ಸಂಗೃಹಾಣ ಜನಾರ್ದನ ||
ದಾಮೋದರಾಯ ನಮಃ ವಸ್ತ್ರಯುಗ್ಮಂ ಸಮರ್ಪಯಾಮಿ ||
ಬ್ರಹ್ಮಸೂತ್ರಂ ಚೋತ್ತರೀಯಂ ಕಾರ್ಪಾಸೇನ ವಿನಿರ್ಮಿತಮ್ ।
ಉಪವೀತಮಿದಂ ದಿವ್ಯಂ ಗೃಹಾಣ ಪುರುಷೋತ್ತಮ ||
ದಾಮೋದರಾಯ ನಮಃ ಉಪವೀತಂ ಸಮರ್ಪಯಾಮಿ ||
ಕಿರೀಟಹಾರಕೇಯೂರಕುಂಡಲಾದ್ಯೈರಲಂಕೃತಂ ।
ಅನರ್ಘ್ಯ ಮಣಿಮಾಣಿಕ್ಯಭೂಷಣಾನಿ ದದಾಮ್ಯಹಮ್ ||
ದಾಮೋದರಾಯ ನಮಃ ಆಭರಣಂ ಸಮರ್ಪಯಾಮಿ ||
ಕುಂಕುಮಾಗರುಸಂಯುಕ್ತಂ ಗಂಧಂ ಶ್ರೀವೃಕ್ಷಸಂಭವಮ್ ।
ಮಯಾ ದತ್ತಮಿದಂ ದೇವ ಹೃಷೀಕೇಶ ನಮೋಽಸ್ತು ತೇ ||
ದಾಮೋದರಾಯ ನಮಃ ಗಂಧಂ ಸಮರ್ಪಯಾಮಿ ||

ಅಕ್ಷತಾನ್ ಧವಳಾನ್ ದಿವ್ಯಾನ್ ಕುಂಕುಮಾದಿಸಮಾಯುತಾನ್ ।
ಶಾಲೀಯಾನ್ ಶುಭ್ರವರ್ಣಾಭಾನ್ ಸಂಗೃಹಾಯ ಶ್ರಿಯಾ ಸಹ ॥
ದಾಮೋದರಾಯ ನಮಃ ಅಕ್ಷತಾನ್ ಸಮರ್ಪಯಾಮಿ ॥
ಜಾತೀಚಂಪಕಪುನ್ನಾಗತುಲಸೀಕರವೀರಕಮ್ ।
ಕಲ್ಹಾರ ಪಾರಿಜಾತಂ ಚ ಪುಷ್ಪಂ ಸ್ವೀಕುರು ಕೇಶವ ॥
ದಾಮೋದರಾಯ ನಮಃ ಪುಷ್ಪಾಣಿ ಸಮರ್ಪಯಾಮಿ ॥
ಮಂಗಳಾಂಗ ಮಹಾದೇವ ಮಹಾಲಕ್ಷ್ಮೀ ಮನಃಪ್ರಿಯ ।
ಅರ್ಚಯಾಮಿ ಜಗನ್ನಾಥ ತವಾಂಗಾನಿ ಪೃಥಕ್ ಪೃಥಕ್ ॥

## ಅಥ ಅಂಗಪೂಜಾ

ಓಂ ಕೇಶವಾಯ ನಮಃ ಪಾದೌ ಪೂಜಯಾಮಿ ॥
ಓಂ ನಾರಾಯಣಾಯ ನಮಃ ಗುಲ್ಫೌ ಪೂಜಯಾಮಿ ॥
ಓಂ ಮಾಧವಾಯ ನಮಃ ಜಾನುನೀ ಪೂಜಯಾಮಿ ॥
ಓಂ ಜಗನ್ನಾಥಾಯ ನಮಃ ಜಂಘೇ ಪೂಜಯಾಮಿ ॥
ಓಂ ಪದ್ಮನಾಭಾಯ ನಮಃ ನಾಭಿಂ ಪೂಜಯಾಮಿ ॥
ಓಂ ಶ್ರೀವಕ್ಷಸೇ ನಮಃ ಹೃದಯಂ ಪೂಜಯಾಮಿ ॥
ಓಂ ಚಕ್ರಧರಾಯ ನಮಃ ಬಾಹೂ ಪೂಜಯಾಮಿ ॥
ಓಂ ದಾಮೋದರಾಯ ನಮಃ ಉದರಂ ಪೂಜಯಾಮಿ ॥
ಓಂ ವಿಶ್ವತೇಜಸೇ ನಮಃ ಮುಖಂ ಪೂಜಯಾಮಿ ॥
ಓಂ ಕುಂಡಲಧರಾಯ ನಮಃ ಲಲಾಟಂ ಪೂಜಯಾಮಿ ॥
ಓಂ ಸಹಸ್ರ ಶಿರಸೇ ನಮಃ ಶಿರಃ ಪೂಜಯಾಮಿ ॥
ಶ್ರೀ ಅಜ್ಞಾನನಾಶನಾಯ ನಮ. ಸರ್ವಾಂಗಾನಿ ಪೂಜಯಾಮಿ ॥

## ಅಥ ದಿಕ್ಪಾಲಕ ಪೂಜಾ

ಓಂ ಇಂದ್ರಾಯ ನಮಃ । ಓಂ ಅಗ್ನಯೇ ನಮಃ ।
ಓಂ ಯಮಾಯ ನಮಃ । ಓಂ ನಿರ್ಋತಯೇ ನಮಃ ।
ಓಂ ವರುಣಾಯ ನಮಃ । ಓಂ ವಾಯವೇ ನಮಃ ।
ಓಂ ಕುಬೇರಾಯ ನಮಃ । ಓಂ ಈಶಾನಾಯ ನಮಃ ।
ಇತಿ ದಿಕ್ಪಾಲಕ ಪೂಜಾಂ ಪೂಜಯಾಮಿ ॥

## ಅಥ ಪುಷ್ಪ ಪೂಜಾ

ಓಂ ದಾಮೋದರಾಯ ನಮಃ ಮಲ್ಲಿಕಾಪುಷ್ಪಂ ಸಮರ್ಪಯಾಮಿ ॥
ಓಂ ಸಂಕರ್ಷಣಾಯ ನಮಃ ಜಾಜೀಪುಷ್ಪಂ ಸಮರ್ಪಯಾಮಿ ॥
ಓಂ ವಾಮದೇವಾಯ ನಮಃ ಕರವೀರಪುಷ್ಪಂ ಸಮರ್ಪಯಾಮಿ ॥
ಓಂ ಪ್ರದ್ಯುಮ್ನಾಯ ನಮಃ ಸೇವಂತಿಕಾಪುಷ್ಪಂ ಸಮರ್ಪಯಾಮಿ ॥
ಓಂ ಅನಿರುದ್ಧಾಯ ನಮಃ ತಿಲಕಪುಷ್ಪಂ ಸಮರ್ಪಯಾಮಿ ॥
ಓಂ ಜಗನ್ನಾಥಾಯ ನಮಃ ಚೂತಪುಷ್ಪಂ ಸಮರ್ಪಯಾಮಿ ॥
ಓಂ ಪುರುಷೋತ್ತಮಾಯ ನಮಃ ಪಾಟಲೀಪುಷ್ಪಂ ಸಮರ್ಪಯಾಮಿ ॥
ಓಂ ಅಧೋಕ್ಷಜಾಯ ನಮಃ ಪದ್ಮಪುಷ್ಪಂ ಸಮರ್ಪಯಾಮಿ ॥
ಓಂ ನಾರಸಿಂಹಾಯ ನಮಃ ಅತಸೀಪುಷ್ಪಂ ಸಮರ್ಪಯಾಮಿ ॥
ಓಂ ಅಚ್ಯುತಾಯ ನಮಃ ಸೌಗಂಧಿಕಾಪುಷ್ಪಂ ಸಮರ್ಪಯಾಮಿ ॥
ಓಂ ಜನಾರ್ದನಾಯ ನಮಃ ಗೋದಾರಪುಷ್ಪಂ ಸಮರ್ಪಯಾಮಿ ॥
ಓಂ ಉಪೇಂದ್ರಾಯ ನಮಃ ಕೇತಕೀಪುಷ್ಪಂ ಸಮರ್ಪಯಾಮಿ ॥
ಓಂ ಹರಯೇ ನಮಃ ಚಂಪಕಪುಷ್ಪಂ ಸಮರ್ಪಯಾಮಿ ॥
ಓಂ ಲಕ್ಷ್ಮೀಪತಯೇ ನಮಃ ನಾನಾವಿಧ ಪರಿಮಳಪುಷ್ಪಾಣಿ ಸಮರ್ಪಯಾಮಿ॥

ಕಾಲಾಗರುಸುಮದ್ಭೂತಂ ಕಪಿಲಾಘೃತಸಂಯುತಮ್ ।
ಧೂಪಂ ದಾಸ್ಯಾಮಿ ದೇವೇಶ ಜಗನ್ನಾಥ ನಮೋಽಸ್ತು ತೇ ॥
ದಾಮೋದರಾಯ ನಮಃ ಧೂಪಂ ಸಮರ್ಪಯಾಮಿ ॥

ಸಾಜ್ಯಂ ತ್ರಿವರ್ತಿಸಂಯುಕ್ತಂ ವಹ್ನಿನಾ ಯೋಜಿತಂ ಮಯಾ ।
ಗೃಹಾಣ ಮಂಗಳಂ ದೀಪಂ ತ್ರೈಲೋಕ್ಯಂ ಮಂಗಳಂ ಕುರು ॥
ದಾಮೋದರಾಯ ನಮಃ ದೀಪಂ ದರ್ಶಯಾಮಿ ॥

ಅನ್ನಂ ಚತುರ್ವಿಧಂ ಸ್ವಾದು ಭಕ್ಷ್ಯಭೋಗ್ಯಸಮನ್ವಿತಮ್ ।
ನಾನಾಫಲಸಮಾಯುಕ್ತಂ ನೈವೇದ್ಯಂ ಪ್ರತಿಗೃಹ್ಯತಾಮ್ ॥
ದಾಮೋದರಾಯ ನಮಃ ನಾನಾವಿಧ ನೈವೇದ್ಯಂ ಸಮರ್ಪಯಾಮಿ ॥

ಮಧ್ಯೇ ಮಧ್ಯೇ ಪಾನೀಯಂ ಸಮರ್ಪಯಾಮಿ ॥ ಉತ್ತರಾಪೋಶನಂ ಸಮರ್ಪಯಾಮಿ ॥ ಹಸ್ತಪ್ರಕ್ಷಾಳನಂ ಸಮರ್ಪಯಾಮಿ ॥ಪಾದಪ್ರಕ್ಷಾಳನಂ

ಸಮರ್ಪಯಾಮಿ ॥ ಕರೋದ್ವರ್ತನಂ ಸಮರ್ಪಯಾಮಿ ॥ ಪೂಗೀಫಲ ಸತಾಂಬೂಲಂ ಸಮರ್ಪಯಾಮಿ ॥

ನೀರಾಜಯಾಮಿ ದೇವೇಶ ಸರ್ವಮಂಗಳದಾಯಕ ।
ಭಕ್ತವತ್ಸಲ ದೇವೇಶ ಭಕ್ತಿಂ ಮೇ ಹ್ಯಚಲಾಂ ಕುರು ॥
ದಾಮೋದರಾಯ ನಮಃ । ಉತ್ತರ ನೀರಾಜನಂ ಸಮರ್ಪಯಾಮಿ ॥

ಮಂಗಳಾಂ ಮಹಾದೇವ ಮಹಾಸೌಭಾಗ್ಯದಾಯಕ ।
ಮಹಾಲಕ್ಷ್ಮೀಶ ದೇವೇಶ ಭಕ್ತಾಭೀಷ್ಟ ವರಪ್ರದ ॥
ದಾಮೋದರಾಯ ನಮಃ ಮಂತ್ರಪುಷ್ಪಂ ಸಮರ್ಪಯಾಮಿ ॥

ಯಾನಿಕಾನಿಚ ಪಾಪಾನಿ ಜನ್ಮಾಂತರಕೃತಾನಿಚ ।
ತಾನಿತಾನಿ ಪ್ರಣಶ್ಯಂತಿ ಪ್ರದಕ್ಷಿಣ ಪದೇಪದೇ ।
ಪಾಪೋऽಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪಸಂಭವಃ ।
ತ್ರಾಹಿ ಮಾಂ ಕೃಪಯಾ ದೇವ ಶರಣಾಗತವತ್ಸಲ ।
ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।
ತಸ್ಮಾತ್ ಕಾರುಣ್ಯಭಾವೇನ ರಕ್ಷರಕ್ಷ ಜನಾರ್ದನ ॥
ದಾಮೋದರಾಯ ನಮಃ ಪ್ರದಕ್ಷಿಣನಮಸ್ಕಾರಾನ್ ಸಮರ್ಪಯಾಮಿ ॥

ಛತ್ರಚಾಮಾರಾದಿಕಂ ಸಮರ್ಪಯಾಮಿ ॥

ಅನಯಾ ಮಯಾ ಕೃತಷೋಡಶೋಪಚಾರಪೂಜಯಾ ಶ್ರೀಭಾರತೀರಮಣ-ಮುಖ್ಯಪ್ರಾಣಾಂತರ್ಗತಃ ದಾಮೋದರಃ ಪ್ರೀಯತಾಂ ಸರ್ವಂ ಶ್ರೀ ದಾಮೋದರಾರ್ಪಣ-ಮಸ್ತು । ಸಮ್ತುಸ ಸನ್ಮಂಗಳಾನಿ ಭವಂತು ।

★ ★ ★ ★

## ಸುವಾಸಿನಿಯರು ಮಾಡಬೇಕಾದ ಸಂಕಲ್ಪ

ಆಚಮನ ಮಾಡಿ ಸಂಕಲ್ಪದಲ್ಲಿ ಹೀಗೆ ಹೇಳಬೇಕು – ರಜಸ್ವಲಾದೋಷ ನಿವೃತ್ಯರ್ಥಂ ಸಕಲ ಸೌಭಾಗ್ಯಸುಖಸಂತಾನ ಪ್ರಾಪ್ತ್ಯರ್ಥಂ ಅಸ್ಮತ್-ಪತ್ಯಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀದಾಮೋದರಪ್ರೇರಣಯಾ ಶ್ರೀದಾಮೋದರಪ್ರೀತ್ಯರ್ಥಂ ದಾಮೋದರಪೂಜಾಂ ಕರಿಷ್ಯೇ ।

ನಿತ್ಯ ಪೂಜಿಸುವ ಉಡುಪಿ ಕೃಷ್ಣನ ಅಥವಾ ಅಂಬೆಗಾಲು ಕೃಷ್ಣನ ಪ್ರತಿಮೆಗೆ ಹೂಗಳಿಂದ ವಿಶೇಷ ಪೂಜೆ ಸಲ್ಲಿಸಬೇಕು. ದಾಮೋದರನ ಹಾಡು ಹೇಳಬೇಕು.

★★★★

## ಮೊಸರು ತುಂಬಿದ ಪಾತ್ರೆ ಹಾಗೂ ಕಡೆಗೋಲು ದಾನ

## (ದಧಿಮಂಥಾನದಾನ)

ಸೂರ್ಯೋ್ ಪೂಜ್ಯ್ಯೆವ ತತಃ ದಧಿಮಂಥಾನಘಟೇ ಯಶೋದಾಕೃಷ್ಣಸ್ಯ ಸುವರ್ಣ ಪ್ರತಿಮಾಂ ಸ್ಥಾಪ್ಯ ವಿಧಿವತ್ ಸಂಪೂಜ್ಯ ಪ್ರಾರ್ಥಯೇತ್ - ಮಕರಸಂಕ್ರಾಂತಿಯಂದು ಸೂರ್ಯನು ಅವಶ್ಯವಾಗಿ ಪೂಜ್ಯನಾಗಿದ್ದಾನೆ. ಮೊಸರು ತುಂಬಿದ ಮಡಿಕೆಯಲ್ಲಿ ಕಡೆಗೋಲನ್ನು ಇಟ್ಟು ಯಶೋದಾ ಕೃಷ್ಣನ ಸುವರ್ಣ ಪ್ರತಿಮೆಯ ಜೊತೆ ದಾನವನ್ನು ಮಾಡಬೇಕು. ಈ ಸಂದರ್ಭದಲ್ಲಿ ಹೀಗೆ ಪ್ರಾರ್ಥನೆ ಮಾಡಬೇಕು -

**ಯಶೋದೇ ತ್ವಂ ಮಹಾಭಾಗೇ ಸುತಂ ದೇಹಿ ಮನೋರಮಮ್ ।**
**ಪೂಜಿತಾಸಿ ಮಹಾದೇವಿ ದಧಿಮಂಥಾನಭಾಜನೇ ॥೧॥**

ಮಹಾಭಾಗ್ಯಶಾಲಿಯಾದ ಯಶೋದೆಯೇ ! ಅನುಗ್ರಹವನ್ನು ಮಾಡಿ ನನಗೆ ಉತ್ತಮ ಪುತ್ರನನ್ನು ಕರುಣಿಸು. ನನ್ನಿಂದ ನೀನು ಪೂಜಿತಳಾಗಿರುವಿ. ಮೊಸರು ಹಾಗೂ ಕಡೆಗೋಲಿನಲ್ಲಿ ನೀನು ನೆಲೆಸಿರುವಿ.

**ಶ್ರೀಕೃಷ್ಣಪರಮಾನಂದ ಸಂಸಾರಾರ್ಣವತಾರಕ ।**
**ಪುತ್ರಂ ದೇಹಿ ಮನೋಜ್ಞಂಚ ಋಣತ್ರಯ ವಿಮೋಚಕಂ ॥೨॥**

ಶ್ರೀಕೃಷ್ಣಪರಮಾತ್ಮನೇ ! ನೀನು ಸಂಸಾರವನ್ನು ಪಾರು ಮಾಡುವಿ, ನನಗೆ ಮನೋಜ್ಞನಾದ ಪುತ್ರನನ್ನು ಕರುಣಿಸಿ ಋಣತ್ರಯಗಳನ್ನು ವಿಮೋಚನೆಗೊಳಿಸು.

**ದಾನಮಂತ್ರ ಹೀಗಿದೆ -**

**ಗೃಹಾಣ ತ್ವಂ ದ್ವಿಜಶ್ರೇಷ್ಠ ದಧಿಮಂಥಾನಭಾಜನಮ್ ।**
**ನವನೀತೇನ ಸಹಿತಂ ದೇವಕ್ಯಾ ಸಹಿತಂ ಹರಿಮ್ ॥೩॥**

**ಪ್ರಸಾದಃ ಕ್ರಿಯತಾಂ ಮಹ್ಯಂ ಸರ್ವರೂಪ ನಮೋಽಸ್ತು ತೇ ।**

ದ್ವಿಜಶ್ರೇಷ್ಠನೇ ! ಕಡೆಗೋಲಿನಿಂದ ಕೂಡಿ ಮೊಸರಿನ ಪಾತ್ರೆಯನ್ನು ಸ್ವೀಕರಿಸು. ದೇವಕಿಯಿಂದ ಸಹಿತನಾದ ಶ್ರೀಹರಿಯು ನವನೀತವನ್ನು ಹಿಡಿದು ಇಲ್ಲಿ ನಿಂತಿರುವನು. ಎಲ್ಲ ರೂಪಗಳಿಂದ ನನ್ನ ವಿಷಯದಲ್ಲಿ ಪ್ರಸನ್ನನಾಗಿ ಅನುಗ್ರಹಿಸು.

ಇಲ್ಲಿಗೆ ಮಕರ ಮಾಸದಲ್ಲಿ ದಧಿಮಂಥಾನದಾನದ ವಿಧಾನವು ಸಮಾಪ್ತವಾಯಿತು.

★ ★ ★ ★

## ತಾಂಬೂಲ ದಾನ

**ದ್ವಾತ್ರಿಂಶತ್ಪರ್ಣೈರ್ಯುಕ್ತಂ ಪೂಗೀಫಲಸಮನ್ವಿತಂ ।**
**ಏಲಾಲವಂಗಕರ್ಪೂರೈರ್ಯುಕ್ತಂ ತಾಂಬೂಲಮುಚ್ಯತೇ ॥**

೩೨ ವೀಳ್ಯೆದೆಳೆಗಳು ಅಡಿಕೆ, ಏಲಕ್ಕಿ, ಲವಂಗ, ಕರ್ಪೂರ ಇವುಗಳನ್ನಿಟ್ಟಾಗ ತಾಂಬೂಲ ಎಂದು ಕರೆಸಿಕೊಳ್ಳುತ್ತದೆ.

**ಯಥಾಲಾಭಂ ಭವೇದ್ವಾಪಿ ದೇಯಂ ದ್ವಿಜವರಾಯ ಚ ।**
**ದ್ವಿಜಾಭಾವೇ ಸುವಾಸಿನ್ಯೈ ತದಭಾವೇ ಕುಮಾರಿಕೇ ॥**

ಶ್ರೇಷ್ಠ ಬ್ರಾಹ್ಮಣನಿಗೆ ಈ ತಾಂಬೂಲವನ್ನು ದಾನ ಮಾಡಬೇಕು. ಬ್ರಾಹ್ಮಣನು ಸಿಗದೇ ಇದ್ದಾಗ ಸುವಾಸಿನಿಯರಿಗೆ ನೀಡಬೇಕು. ಅವಳೂ ಸಿಗದೇ ಇದ್ದಾಗ ಕುಮಾರಿಗೆ ನೀಡಬೇಕು.

**ಉದ್ಯಾಪನಂ ಪ್ರಕರ್ತವ್ಯಂ ಯಥಾವಿಭವಾನುಸಾರತಃ ।**
**ಶುಭೇಽಹ್ನಿ ಮಾಸೇ ಕರ್ತವ್ಯಂ ಋಕ್ಷೇ ವೈವಾಹಿಕೇ ತತಃ ॥**

ತಮ್ಮ ವೈಭವಕ್ಕೆ ಅನುಸಾರಿಯಾಗಿ ಉದ್ಯಾಪನೆಯನ್ನು ಮಾಡಬೇಕು. ವಿವಾಹದಿವಸ ಬಿಟ್ಟು ಉಳಿದ ಶುಭದಿವಸದಲ್ಲಿ ಆಚರಿಸಬೇಕು.

**ಪಂಚಸಪ್ತ ಚ ಸದ್ವಿಪ್ರಾನ್ ಸಪತ್ನೀಕಾನ್ ಪ್ರಪೂಜಯೇತ್ ।**
**ಪೂರ್ವರಾತ್ರೌ ತು ಸಂಪೂಜ್ಯ ಲಕ್ಷ್ಮೀನಾರಾಯಣಾವುಭೌ ॥**

ಹನ್ನೆರಡು ಮಂದಿ ಸದ್ವಿಪ್ರರನ್ನು ಪತ್ನೀಸಹಿತರಾಗಿ ಪೂಜೆ ಮಾಡಬೇಕು. ಹಿಂದಿನ ರಾತ್ರಿಯಲ್ಲಿ ಲಕ್ಷ್ಮೀನಾರಾಯಣರನ್ನು ವಿಶೇಷವಾಗಿ ಪೂಜಿಸಿರಬೇಕು.

**ಉಮಾಮಹೇಶ್ವರೌ ಪೂಜ್ಯೌ ಬ್ರಹ್ಮಣಾಂ ಭಾನುನಾ ಸಹ ।**
**ರತಿಂ ಚ ಪಂಚಬಾಣಂ ಚ ಪೂಜಯೇಚ್ಚ ಯಥಾವಿಧಿ ॥**

ಸೂರ್ಯನನ್ನು ಪೂಜಿಸುವ ಮೊದಲು ಸೂರ್ಯನಾರಾಯಣನನ್ನು, ಅನಂತರ ಚತುರ್ಮುಖಬ್ರಹ್ಮನನ್ನು, ಉಮಾಮಹೇಶ್ವರರನ್ನು ಪೂಜಿಸಿ, ಸೂರ್ಯನನ್ನು ಪೂಜಿಸಬೇಕು. ರತಿಯಿಂದ ಕೂಡಿದ ಮನ್ಮಥನನ್ನು ಪೂಜಿಸಬೇಕು.

**ಬುದ್ಧಿಂ ಸಿದ್ಧಿಂ ವಿಘ್ನರಾಜಂ ಲೋಕಪಾಲಾಂಶ್ಚ ಪೂಜಯೇತ್ ।**
**ರಾತ್ರೌ ಪೂಜಾ ಪ್ರಕರ್ತವ್ಯಾ ಷೋಡಶೈರುಪಚಾರಕೈಃ ॥**

ಬುದ್ಧಿ, ಸಿದ್ಧಿ, ವಿಘ್ನರಾಜ, ಲೋಕಪಾಲಕರು ಇವರನ್ನೂ ಕೂಡ ಷೋಡಶೋಪಚಾರಗಳಿಂದ ರಾತ್ರಿಕಾಲದಲ್ಲಿ ಪೂಜಿಸಬೇಕು.

**ತಾಂಬೂಲೋಪಸ್ಕರಾನ್ ತತ್ರ ಸಂಸ್ಥಾಪ್ಯೋತ್ತರದೇವತಾ ।**

ಅಲ್ಲಿ ತಾಂಬೂಲ ಮೊದಲಾದ ದಾನ ಮಾಡುವ ಪದಾರ್ಥಗಳನ್ನು ಇಟ್ಟಿರಬೇಕು.

ಪುರುಷೋತ್ತಮಾಯ ನಮಃ, ಶಾರ್ಙ್ಗಪಾಣಯೇ ನಮಃ ಗರುಡಧ್ವಜಾಯ ನಮಃ, ಅನಂತಾಯ ನಮಃ, ಯಜ್ಞಪುರುಷಾಯ ನಮಃ, ಪುಂಡರೀಕಾಕ್ಷಯ ನಮಃ, ನಿತ್ಯಾಯ ನಮಃ, ದೇವಗರ್ಭಾಯ ನಮಃ, ಗೋವರ್ಧನಾಯ ನಮಃ ಸುಬ್ರಹ್ಮಣ್ಯಾಯ ನಮಃ, ಶೌರಯೇ ನಮಃ ಈಶ್ವರಾಯ ನಮಃ,

ಈ ಹನ್ನೆರಡು ನಾಮಗಳಿಂದ ಹನ್ನೆರಡು ಬ್ರಾಹ್ಮಣರಲ್ಲಿ ಭಗವಂತನನ್ನು ಪೂಜಿಸಬೇಕು.

**ಘೃತಂ ವಾ ಪಾಯಸಂ ವಾಪಿ ಪಂಚಾಮೃತತಿಲೋದನಮ್ ।**
**ತತ್ತನ್ಮಂತ್ರೈಶ್ಚ ಹೋತವ್ಯಂ ಅಷ್ಟಾವಿಂಶತಿಸಂಖ್ಯಯಾ ॥**

ತುಪ್ಪ, ಪಾಯಸ, ಪಂಚಾಮೃತ, ಎಳ್ಳಿನಿಂದ ಕೂಡಿದ ಚರು ಇವುಗಳಿಂದ ಆಯಾ ಮಂತ್ರಗಳನ್ನು ಹೇಳುತ್ತಾ ಇಪ್ಪತ್ತೆಂಟು ಸಂಖ್ಯೆಯಲ್ಲಿ ಹೋಮವನ್ನು ಮಾಡಬೇಕು.

**ಸಂಪೂರ್ಣಸ್ಥಾನಪಾತ್ರಂ ಚ ಪೂರ್ಣಪಾತ್ರಂ ತಥೈವ ಚ ।**
**ಸ್ವರ್ಣಂ ರೌಪ್ಯಮಯಂ ವಾಪಿ ಪೈತ್ತಲಂ ಸೀಸಸಂಭವಂ ॥**
**ಸರ್ವಶೋಭಾ ಸಮಾಯುಕ್ತಾಂ ಲೋಹಜಾಂ ಪೂಗಭಾಜಕಾಂ ।**
**ಪೂಜಯಿತ್ವಾ ತತಸ್ತತ್ರ ತತೋ ಪೂರ್ಣಾಹುತಿಂ ಚರೇತ್ ॥**
**ಬ್ರಾಹ್ಮಣಾನ್ ಭೋಜಯಿತ್ವಾಥ ದದ್ಯಾತ್ತಾಂಬೂಲಮುತ್ತಮಂ ।**

ಹೋಮವನ್ನು ಮಾಡಿದ ಮೇಲೆ ಬ್ರಾಹ್ಮಣರಿಗೆ ಊಟವನ್ನು ಬಡಿಸಿ, ತಾಂಬೂಲವನ್ನು ದಾನ ಮಾಡಬೇಕು.

**ಫಲೇನ ತೃಪ್ಯತೇ ಬ್ರಹ್ಮಾ ಪತ್ರೇಣ ಭಗವಾನ್ ಹರಿಃ ॥**
**ಚೂರ್ಣಮೀಶ್ವರತೃಪ್ತ್ಯರ್ಥಂ ಖದಿರೋ ಕಾಮತೃಪ್ತಯೇ ।**
**ಕರ್ಪೂರೇಲಾ ಲವಂಗಾದಿ ಜಾತೀಪತ್ರಫಲೈಸ್ತಥಾ ॥**
**ಇಂದ್ರಾದ್ಯಾ ಲೋಕಪಾಲಾಶ್ಚ ಸಂತುಷ್ಟಾಶ್ಚ ಭವಂತಿ ಹಿ ।**
**ವಾರಿದೋ ಸುಖಮಾಪ್ನೋತಿ ರಾಜ್ಯಮಾಪ್ನೋತಿ ಚಾನ್ನದಃ ॥**

ಅಡಿಕೆಯಿಂದ ಬ್ರಹ್ಮನು ತೃಪ್ತನಾಗುತ್ತಾನೆ. ವೀಳ್ಯೆದೆಳೆಯಿಂದ ಶ್ರೀಹರಿಯು ತೃಪ್ತನಾಗುತ್ತಾನೆ. ಸುಣ್ಣದಿಂದ ಈಶ್ವರನು ತೃಪ್ತನಾಗುತ್ತಾನೆ. ಖದಿರಾದಿಂದ ಕಾಮನು ತೃಪ್ತನಾಗುತ್ತಾನೆ. ಕರ್ಪೂರ, ಏಲಕ್ಕಿ, ಜಾತೀಪ್ರತಗಳಿಂದ ಇಂದ್ರಾದಿದೇವತೆಗಳು, ಲೋಕಪಾಲಕರು ಸಂತುಷ್ಟರಾಗುತ್ತಾರೆ. ನೀರನ್ನು ನೀಡಿದವನು ಸುಖವನ್ನು ಹೊಂದುತ್ತಾನೆ. ಅನ್ನವನ್ನು ನೀಡಿದವನು ರಾಜ್ಯವನ್ನು ಹೊಂದುತ್ತಾನೆ.

**ದೀಪದಶ್ಚಕ್ಷು ರಾಪ್ನೋತಿ ತ್ರಯಂ ತಾಂಬೂಲದಾನತಃ ।**
**ಏವಂ ಕೃತೇ ವಿಧಾನೇನ ಸರ್ವಾನ್ಕಾಮಾ ನಾವಾಪ್ನುಯಾತ್ ॥**

ದೀಪವನ್ನು ದಾನ ಮಾಡಿದವನು ಚಕ್ಷುಸ್ಸನ್ನು ಹೊಂದುತ್ತಾನೆ. ತಾಂಬೂಲವನ್ನು ದಾನ ಮಾಡಿದವನು, ಸುಖ, ರಾಜ್ಯ, ಚಕ್ಷುಸ್ಸು ಮೂರನ್ನೂ ಕೂಡ ಹೊಂದುತ್ತಾನೆ. ಹೀಗೆ ವಿಧಾನ ಮಾಡಿದ ಪ್ರಕಾರ ತಾಂಬೂಲವನ್ನು ದಾನ ಮಾಡಬೇಕು.

ಇತಿ ವಾಯುಪುರಾಣೇ ಶ್ರೀ ಕೃಷ್ಣಯುಧಿಷ್ಠಿರ ಸಂವಾದೇ ತಾಂಬೋದ್ಯಾಪನವ್ರತಂ ಸಂಪೂರ್ಣಂ ॥ ಅತ ಏವ ಮಕರ ಸಂಕ್ರಾಂತೌ ಏತಾನಿ ದಾನವ್ರತಾನಿ ಮುಖ್ಯಾನಿ ಕರ್ತವ್ಯಾನಿ ॥

★ ★ ★ ★

## ಇತಿ ದಾನ ಪ್ರಕರಣಂ

ಹೀಗೆ ವಾಯುಪುರಾಣದಲ್ಲಿ ತಾಂಬೂಲ ದಾನದ ಬಗ್ಗೆ ಮಹಿಮೆಯನ್ನು ಹೇಳಿರುತ್ತಾರೆ. ಮಕರಸಂಕ್ರಾಂತಿಯಲ್ಲಿ ತಾಂಬೂಲ ದಾನವು ವಿಶಿಷ್ಟಫಲವನ್ನು ನೀಡುತ್ತದೆ. ಆದ್ದರಿಂದ ಹನ್ನೆರಡು ಮಂದಿ ಬ್ರಾಹ್ಮಣರಿಗೆ ತಾಂಬೂಲವನ್ನು ದಾನ ಮಾಡಬೇಕು.

## ನಿತ್ಯವೂ ತಾಂಬೂಲ ಸೇವಿಸಿರಿ

**ಪೂಗೀಫಲಂ ಸಖದಿರಚೂರ್ಣಕರ್ಪೂರಸಂಯುತಮ್ ।**
**ನಾಗವಲ್ಲೀದಲೈರ್ಯುಕ್ತಂ ತಾಂಬೂಲಂ ಗೃಹ್ಯತಾಂ ವಿಭೋ ॥**

ಅಡಿಕೆ, ಕಾಚು, ಸುಣ್ಣ, ಕರ್ಪೂರ ಇವೇ ಮೊದಲಾದವುಗಳಿಂದ ಸಹಿತವಾದ ವೀಳ್ಯೆದೆಲೆಗಳಿಂದ ಕೂಡಿದ ತಾಂಬೂಲವನ್ನು ಓ ಸ್ವಾಮಿಯೇ ಸ್ವೀಕರಿಸು ಎಂಬುದಾಗಿ ಪದ್ಯಮಾಲಾದಲ್ಲಿ ಶ್ರೀಮಟ್ಟೀಕಾಕೃತ್ಪಾದರು ತಾಂಬೂಲ ಪೂಜೆಯ ಬಗ್ಗೆ ತಿಳಿಸಿದ್ದಾರೆ. ಷೋಡಶೋಪಚಾರ ಪೂಜೆಯಲ್ಲಿ ತಾಂಬೂಲ ಪೂಜೆಯನ್ನು ವಿಶೇಷವಾಗಿ ಮತ್ತು ಪ್ರತ್ಯೇಕವಾಗಿ ಆಚರಿಸಬೇಕು. ನೈವೇದ್ಯದಲ್ಲಿಯೇ ತಾಂಬೂಲವನ್ನು ಸಮರ್ಪಿಸುವಂತಿಲ್ಲ. ನೈವೇದ್ಯ ಮಾಡಿ ಮುಗಿಸಿ, ಹಸ್ತಪ್ರಕ್ಷಾಲನಾದಿಗಳನ್ನು ಮಾಡಿ, ಅನಂತರ ತಾಂಬೂಲವನ್ನು

ಭಗವಂತನಿಗೆ ಸಮರ್ಪಣೆ ಮಾಡಬೇಕು. ತಾಂಬೂಲದ ಬಗ್ಗೆ ಶಾಸ್ತ್ರಗಳಲ್ಲಿ ಪುರಾಣಗಳಲ್ಲಿ ದಾಸರ ಪದ್ಯಗಳಲ್ಲಿ ಬಹಳವಾಗಿ ಮಹತ್ವವನ್ನು ನೀಡಿದ್ದಾರೆ. ಆದರೆ ನಾವಿಂದು ತಾಂಬೂಲದ ಸೇವನೆಯನ್ನೇ ಬಿಟ್ಟಿದ್ದೇವೆ. ಊಟದ ಅನಂತರ ಪ್ರತಿಯೊಬ್ಬರೂ ತಾಂಬೂಲವನ್ನು ಸೇವನೆ ಮಾಡಬೇಕು. ತಾಂಬೂಲಕ್ಕೆ ಗಂಗೆ ಅಭಿಮಾನಿಯಾಗಿದ್ದಾಳೆ. ಶ್ರೀಹರಿಯು ನಿಯಾಮಕನಾಗಿದ್ದಾನೆ. ಆದ್ದರಿಂದ ಅಂತರಂಗಶುದ್ಧಿಯೂ ಕೂಡ ತಾಂಬೂಲ ಸೇವನೆಯಿಂದ ಆಗುತ್ತದೆ. ಪುಣ್ಯವು ಬರುವುದರ ಜೊತೆ ಆರೋಗ್ಯವೂ ಕೂಡ ಹೆಚ್ಚುತ್ತದೆ.

ಅಷ್ಟಾಂಗಹೃದಯದಲ್ಲಿ ತಾಂಬೂಲ ಚರ್ವಣದ ಬಗ್ಗೆಯೇ ಪ್ರತ್ಯೇಕವಾದ ಪ್ರಕರಣವಿದೆ. ಕಬ್ಬಿಣದ ಅಂಶ, ಪೋಷಕಾಂಶಗಳು ಅತ್ಯಂತ ಹೇರಳವಾಗಿ ಈ ತಾಂಬೂಲದಲ್ಲಿದೆ. ಆದರೆ ಇದನ್ನು ಊಟದ ಅನಂತರವೇ ಸೇವನೆ ಮಾಡಬೇಕು. ಇದನ್ನು ಸೇವಿಸುವುದರಿಂದ (ಗ್ಯಾಸ್ಟ್ರಿಕ್) ಕಿಡ್ನಿ ಸಮಸ್ಯೆ, ಉಷ್ಣತೆ, ಒಣಕೆಮ್ಮು, ತಲೆನೋವು, ಉಸಿರಾಟದ ತೊಂದರೆ, ಅರ್ಧ ತಲೆನೋವು, ಬಾಯಿಹುಣ್ಣು, ಹೊಟ್ಟೆ ಹುಳು, ಹೊಟ್ಟೆ ಉಬ್ಬರ, ನರಗಳ ದೌರ್ಬಲ್ಯ, ಅತಿಯಾದ ರಕ್ತದ ಒತ್ತಡ ಇವೇ ಮೊದಲಾದ ದೋಷಗಳು ಖಂಡಿತವಾಗಿಯೂ ತಾಂಬೂಲ ಸೇವನೆಯಿಂದ ಪರಿಹಾರವಾಗುತ್ತದೆ. ಈ ತಾಂಬೂಲವನ್ನು ಸೇವನೆ ಮಾಡುವುದರಿಂದ ಪತಿ-ಪತ್ನಿಯರ ಅನುಬಂಧವೂ ಕೂಡ ಹೆಚ್ಚುತ್ತದೆ. ಶಾಸ್ತ್ರೀಯವಾದ ತಾಂಬೂಲ ಸೇವನೆಯನ್ನು ಬಿಟ್ಟು, ಈ ಎಲ್ಲಾ ರೋಗಗಳಿಗೆ ಪ್ರತಿಯೊಬ್ಬರೂ ಬೇರೆ ಬೇರೆ ಔಷಧಿಗಳ ದಾಸರಾಗಿದ್ದಾರೆ. ಯಾವ ಔಷಧಿಗಳನ್ನು ತೆಗೆದುಕೊಳ್ಳದೇ ತಾಂಬೂಲದಿಂದಲೇ ಎಲ್ಲ ರೋಗಗಳನ್ನು ಪರಿಹರಿಸಿಕೊಳ್ಳಬಹುದು.

ತಾಂಬೂಲದಲ್ಲಿ ಇಷ್ಟು ಪದಾರ್ಥಗಳನ್ನು ಹಾಕಿದರೆ ಅತ್ಯುತ್ತಮ ಆರೋಗ್ಯವು ದೊರಕುತ್ತದೆ - ಅಡಿಕೆ, ಸುಣ್ಣ, ಲವಂಗ, ಜಾಯಿಕಾಯಿ, ಏಲಕ್ಕಿ, ಕೇಸರಿ, ಕರ್ಪೂರ, ಕಾಚು, ಗಸಗಸೆ, ಒಣಕೊಬ್ಬರಿ, ಸಿಹಿಕುಂಬಳದ ಬೀಜ.

ಕಪ್ಪು ಬಣ್ಣದ ಖಾರವಿರುವ ವೀಳ್ಯೆದೆಲೆಗಳಷ್ಟೇ ಹೆಚ್ಚು ಆರೋಗ್ಯದಾಯಕವಾಗಿವೆ. ಬಿಳಿಬಣ್ಣದ ಕಾರವಿಲ್ಲದ ಮಿಶ್ರತಳಿಯಿಂದ ಹುಟ್ಟಿದ ವೀಳ್ಯೆದೆಲೆಗಳನ್ನು ಸೇವಿಸುವುದರಿಂದ ಹೆಚ್ಚಿನ ಉಪಯೋಗವಿರುವುದಿಲ್ಲ.

ಐದು ವೀಳ್ಯೆದೆಲೆಗಳನ್ನೇ ಉಪಯೋಗಿಸಬೇಕು. ಕಮ್ಮಿ ಉಪಯೋಗಿಸುವುದು ಪಾಪದಾಯಕವಾಗಿದೆ. ಮತ್ತು ವೀಳ್ಯೆದೆಲೆಗಳ ಬುಡ, ತುದಿಗಳನ್ನು ತೆಗೆದು ಸೇವಿಸಬೇಕು.

ಗೃಹಸ್ಥರಿಗಷ್ಟೇ ಇದು ವಿಹಿತ. ಬ್ರಹ್ಮಚಾರಿಗಳು, ಕನ್ಯೆಯರು ಇದನ್ನು ತಿನ್ನಬಾರದು. ಹಾಗೇನಾದರೂ ತಿಂದರೆ ಅವರ ವಾಕ್‌ಶಕ್ತಿಯು ನಷ್ಟವಾಗುತ್ತದೆ.

★ ★ ★ ★

## ಸಂಕ್ರಾಂತಿಯ ಪುಣ್ಯಕಾಲದ ಪರಿಗಣನೆ

★ ಸಂಕ್ರಾಂತಿಯು ಹಗಲು ಅಥವಾ ರಾತ್ರಿ ಯಾವಾಗಬೇಕಾದರೂ ಬರಬಹುದು. ಹಗಲು ಬಂದಲ್ಲಿ ಸಂಪೂರ್ಣ ದಿನವು ಪುಣ್ಯಕಾಲವಾಗಿರುತ್ತದೆ. ರಾತ್ರಿಕಾಲವಾದಲ್ಲಿ ಧರ್ಮಶಾಸ್ತ್ರಗಳು ಬಹಳಷ್ಟು ಚರ್ಚೆಯನ್ನು ಮಾಡುತ್ತವೆ. ರಾತ್ರಿ ಸಂಕ್ರಾಂತಿ ಬಂದರೂ ಕೂಡ ಮಕರ ಮತ್ತು ಕರ್ಕಾಟಕ ಸಂಕ್ರಾಂತಿಗಳನ್ನು ಬಿಟ್ಟು ಉಳಿದ ಹತ್ತು ಸಂಕ್ರಾಂತಿಗಳ ಪುಣ್ಯಕಾಲವು ಹಗಲೇ ಆಗುತ್ತದೆ ಎಂದು.

★ ಸಂಕ್ರಾಂತಿಯ ಮೊದಲ ಹದಿನಾರು ಘಳಿಗೆ ಅನಂತರದ ಹದಿನಾರು ಘಳಿಗೆಯು ಪುಣ್ಯಕಾಲವೆಂದು ಪರಿಗಣಿಸಬೇಕು.

**ಅತೀತಾನಾಗತೋ ಭೋಗೋ ನಾಡ್ಯಃ ಪಂಚದಶ ಸ್ಮೃತಾಃ ।** (ದೇವೀಪುರಾಣ)

'ಭೋಗ' ಎಂಬುದನ್ನು ಹೇಮಾದ್ರಿಯಲ್ಲಿ ಹೀಗೆ ವಿವರಿಸಿದ್ದಾರೆ – 'ಸಂಕ್ರಾಂತೌ ನಿಮಿತ್ತೇ ವಿಹಿತಸ್ಯ ಸ್ನಾನದಾನಾದೇರ್ನಿಷಿದ್ಧಸ್ಯವಾದಾಧ್ಯಯನಾದೇಃ ಪಾಲನಂ ಭೋಗಃ' ಎಂದರೆ – ಸಂಕ್ರಾಂತಿಯ ನಿಮಿತ್ತ ವಿಹಿತವಾಗಿರುವ ಸ್ನಾನಾದಾನಾದಿಗಳ ಅನುಷ್ಠಾನ ಮತ್ತು ನಿಷಿದ್ಧವಾಗಿರುವ ವೇದಾಧ್ಯಯನಾದಿಗಳ ಪರಿತ್ಯಾಗವನ್ನೇ 'ಭೋಗ'ವೆಂದು ವಿವರಿಸುತ್ತಾರೆ.

★ ಸೂರ್ಯನ ಸಂಚಾರವು ಮೇಷ ಹಾಗೂ ತುಲಾ ರಾಶಿಗಳಲ್ಲಿದ್ದಾಗ ಸಂಕ್ರಾಂತಿಯ ಹಿಂದಿನ ಮತ್ತು ಮುಂದಿನ ಹದಿನೈದು ಘಳಿಗೆಗಳು ಪುಣ್ಯಕಾಲವೆಂದು ತಿಳಿಯಬೇಕು. ವೃಷಭ, ಸಿಂಹ, ಕುಂಭರಾಶಿಗಳಲ್ಲಿದ್ದಾಗ ಸಂಕ್ರಾಂತಿಯ ಹಿಂದಿನ ಹದಿನಾರು ಘಳಿಗೆ ಪುಣ್ಯಕಾಲವೆಂದು ಮಿಥುನ, ಕನ್ಯಾ , ಧನುಸ್ಸು ಮತ್ತು ಮೀನಗಳಲ್ಲಿದ್ದಾಗ ಮುಂದಿನ ಹದಿನಾರು ಘಳಿಗೆಯು ಪುಣ್ಯಕಾಲವೆಂದು ಪರಿಗಣಿಸಬೇಕು. ಕರ್ಕಾಟಕದಲ್ಲಿದ್ದಾಗ ಸಂಕ್ರಾಂತಿಯ ಮುಂದಿನ ಮೂವತ್ತುಘಳಿಗೆಯೂ ಪುಣ್ಯಕಾಲವಾಗುತ್ತದೆ, ಮಕರದಲ್ಲಿದ್ದಾಗ ಸಂಕ್ರಾಂತಿಯ ಮುಂದಿನ ನಲವತ್ತು ಘಳಿಗೆಯು ಪುಣ್ಯಕಾಲವಾಗುತ್ತದೆ.

★ ಇಷ್ಟೆಲ್ಲಾ ಗಮನಿಸಿದಾಗ ಮಕರ ಸಂಕ್ರಾಂತಿಯ ವೈಶಿಷ್ಟತೆಯು ಚೆನ್ನಾಗಿ ಅರ್ಥವಾಗುತ್ತದೆ.

★ ಸಂಕ್ರಾಂತಿ ಹಗಲು ಆದಾಗ ಹಗಲು ಮುಗಿಯಲು ಎರಡು ಘಳಿಗೆ ಅಥವಾ ಇನ್ನೂ ಕಡಿಮೆ ಅವಧಿಯು ಉಳಿದಿರುತ್ತದೆ. ಆಗ ಮಿಥುನ, ಕನ್ಯಾ, ಧನುಸ್ಸು, ಮೀನ ಮತ್ತು ಮಕರ ಸಂಕ್ರಾಂತಿಯಲ್ಲಿಯೂ ಕೂಡ ಪುಣ್ಯಕಾಲವು ಪ್ರತಿಯೊಂದಕ್ಕೂ ಮೇಲೆ ಹೇಳಿದಂತೆ ಘಳಿಗೆಗಳು ಸಂಕ್ರಾಂತಿಯು ಹಿಂದಿನವು ಮಾತ್ರ ಪುಣ್ಯಕಾಲವಾಗುತ್ತದೆ. ಸೂರ್ಯೋದಯದಿಂದ ಎರಡು ಘಳಿಗೆ ಅಥವಾ ಅದಕ್ಕೂ ಕಡಿಮೆ ಕಾಲಾವಧಿಯಲ್ಲಿ ಸಂಕ್ರಾಂತಿಯು ಆದರೆ ಆಗ ವೃಷಭ, ಸಿಂಹ, ವೃಶ್ಚಿಕ, ಕುಂಭ ಮತ್ತು ಕರ್ಕಾಟಕ ಸಂಕ್ರಾಂತಿಯಲ್ಲಿಯೂ ಕೂಡ ಪುಣ್ಯಕಾಲವು ಮೇಲೆ ಹೇಳಿದಂತೆ ಸಂಕ್ರಾಂತಿಯ ಮುಂದಿನದ್ದು ಮಾತ್ರ ಪುಣ್ಯಕಾಲವಾಗುತ್ತದೆ. ಮಧ್ಯರಾತ್ರಿಯ ಮೊದಲು ಸಂಕ್ರಾಂತಿಯಾದಾಗ ಹಿಂದಿನ ಹಗಲಿನ ಉತ್ತರಾರ್ಧವು ಪುಣ್ಯಕಾಲವೆನಿಸುತ್ತದೆ. ಮಧ್ಯರಾತ್ರಿಯ ಅನಂತರ ಸಂಕ್ರಾಂತಿ ಆದಾಗ ಎರಡೂ ದಿನವೂ ಪುಣ್ಯಕಾಲವಾಗುತ್ತದೆ. ಮಕರ ಮತ್ತು ಕರ್ಕಾಟಕ ಸಂಕ್ರಾಂತಿಗಳನ್ನು ಬಿಟ್ಟು ಉಳಿದ ಸಂಕ್ರಾಂತಿಗಳಲ್ಲಿ ಹೀಗೆ ತಿಳಿಯಬೇಕು.

★ ಮಕರ ಸಂಕ್ರಾಂತಿಯು ರಾತ್ರಿ ಆದರೆ ಸಂಕ್ರಾಂತಿಯ ಮರುದಿನವೇ ಪುಣ್ಯಕಾಲವೆಂದು ಪರಿಗಣಿಸಬೇಕು. ಕರ್ಕಾಟದಲ್ಲಿ ರಾತ್ರಿ ಹೊತ್ತು ಸಂಕ್ರಾಂತಿ ಆದರೆ ಹಿಂದಿನ ದಿನವು ಪುಣ್ಯಕಾಲವೆಂದು ಪರಿಗಣಿಸಬೇಕು.

★ ಒಟ್ಟು ಉತ್ತರಾಯಣ ಬಂದಮೇಲೆ ಪುಣ್ಯಕಾಲವೆಂದು ಮಕರ ಸಂಕ್ರಾಂತಿಯಲ್ಲಿ ತಿಳಿಯಬೇಕು. ಕರ್ಕಾಟಕ ಸಂಕ್ರಾಂತಿಯಲ್ಲಿ ಉತ್ತರಾಯಣ ಬರುವ ಮೊದಲು ಪುಣ್ಯಕಾಲವೆಂದು ತಿಳಿಯಬೇಕು.

## ರಾತ್ರಿಕಾಲದಲ್ಲಿ ಸ್ನಾನದಾನಾದಿಗಳನ್ನು ಮಾಡಬಹುದೇ?

ರಾತ್ರಿಯಕಾಲದಲ್ಲಿ ಸ್ನಾನದಾನಾದಿಗಳನ್ನು ಮಾಡಬಾರದೆಂಬ ನಿಯಮವಿದೆ-

**ದಿವಾಕರಕರೈಃ ಪೂತಂ ದಿವಾ ಸ್ನಾನಂ ಪ್ರಶಸ್ಯತೇ ।**

**ಅಪ್ರಶಸ್ತಂ ನಿಶಿ ಸ್ನಾನಂ ರಾಹೋರನ್ಯತ್ರ ದರ್ಶನಾತ್ ॥** (ಪರಾಶರ ಸ್ಮೃತಿ)

ಈ ಪ್ರಮಾಣ ಶ್ಲೋಕದಂತೆ ಚಂದ್ರಗ್ರಹಣ ಬಿಟ್ಟು ಉಳಿದ ಸಂದರ್ಭದಲ್ಲಿ ರಾತ್ರಿಸ್ನಾನವು ಪ್ರಶಸ್ತವಲ್ಲವೆಂದು ತಿಳಿಯುತ್ತದೆ.

**ರಾತ್ರೌ ಸ್ನಾನಂ ನ ಕುರ್ವೀತ ದಾನಂ ಚೈವ ವಿಶೇಷತಃ ।**

**ನೈಮಿತ್ತಿಕಂ ಚ ಕುರ್ವೀತ ಸ್ನಾನಂ ದಾನಂ ಚ ರಾತ್ರಿಷು ॥**

**ಗ್ರಹಣೋದ್ವಾಹಸಂಕ್ರಾಂತಿಯಾತ್ರಾರ್ತಿಪ್ರಸವೇಷು ಚ ।**
**ಶ್ರವಣೇ ಚೇತಿಹಾಸಸ್ಯ ರಾತ್ರೌ ದಾನಂ ಪ್ರಶಸ್ಯತೇ॥**

ಭವಿಷ್ಯತ್‌ಪುರಾಣ. ಉದಾಹರಣೆ ಹೇಮಾದ್ರಿ ಕಾಲಖಂಡ.

ರಾತ್ರಿಯಕಾಲದಲ್ಲಿ ಸ್ನಾನ ಮತ್ತು ದಾನಗಳು ನಿಷಿದ್ದವಾಗಿವೆ ಆದರೆ ನೈಮಿತ್ತಿಕವಾಗಿ ಕೆಲವು ಸಂದರ್ಭಗಳಲ್ಲಿ ಸ್ನಾನದಾನಾದಿಗಳನ್ನು ಮಾಡಬಹುದು. ಗ್ರಹಣ, ವಿವಾಹ, ಸಂಕ್ರಾಂತಿ, ಯಾತ್ರೆ , ಮರಣ, ಪ್ರಸವ ಈ ಕಾಲಗಳಲ್ಲಿ ಸ್ನಾನವು ಅನಿವಾರ್ಯ ಎಂಬುದಾಗಿ ಗೋಭಿಲನು ಹೇಳುತ್ತಾನೆ –

**ಗೋಭಿಲಃ । ರಾಹುದರ್ಶನಸಂಕ್ರಾಂತಿವಿವಾಹಾತ್ಯಯವೃದ್ಧಿಷು ।**
**ಸ್ನಾನದಾನಾದಿಕಂ ಕುರ್ಯುರ್ನಿಶಿ ಕಾಮ್ಯವ್ರತೇಷು ॥**

ಹೇಮಾದ್ರಿಕಾಲಖಂಡ.

## ಸಂಕ್ರಾಂತಿಗಳಲ್ಲಿ ಮಾಡಬೇಕಾದ ದಾನಗಳು

ಮೇಷಸಂಕ್ರಮಣದಲ್ಲಿ ಮೇಷದ ದಾನ, ವೃಷಭಸಂಕ್ರಮಣದಲ್ಲಿ ವೃಷಭ ದಾನ ಮತ್ತು ಗೋದಾನ, ಮಿಥುನಸಂಕ್ರಮಣದಲ್ಲಿ ವಸ್ತ್ರದಾನ, ಅನ್ನಪಾನಾದಿಗಳ ದಾನ, ಕರ್ಕಾಟಕ ಸಂಕ್ರಮಣದಲ್ಲಿ ಘೃತಧೇನುವಿನ ದಾನ. ಸಿಂಹಸಂಕ್ರಮಣದಲ್ಲಿ ಸುವರ್ಣಸಹಿತವಾದ ವಾಹನದಾನ, ಕನ್ಯಾಸಂಕ್ರಮಣದಲ್ಲಿ ವಸ್ತ್ರದಾನ ಹಾಗೂ ಗೋದಾನ, ತುಲಾಸಂಕ್ರಮಣದಲ್ಲಿ ಧಾನ್ಯಗಳ ದಾನ, ವೃಶ್ಚಿಕಸಂಕ್ರಮಣದಲ್ಲಿ ವಸ್ತ್ರದಾನ, ಗೃಹದಾನ, ಧನುಸ್ಸಂಕ್ರಮಣದಲ್ಲಿ ವಸ್ತ್ರದಾನ, ವಾಹನದಾನ ಮಕರಸಂಕ್ರಮಣದಲ್ಲಿ ಕಟ್ಟಿಗೆಗಳ ದಾನ, ಕುಂಭಸಂಕ್ರಮಣದಲ್ಲಿ ಜಲದಾನ, ಗೋದಾನ, ಮೀನಸಂಕ್ರಮಣದಲ್ಲಿ ಪುಷ್ಪದಾನ ಹೀಗೆ ಧರ್ಮಶಾಸ್ತ್ರವು ಹೇಳುತ್ತದೆ.

ಆದರೆ ಮಕರಸಂಕ್ರಮಣದಲ್ಲಿ ವಿಶೇಷದಾನವನ್ನು ಸ್ಕಂದಪುರಾಣವು ವಿಧಾನಮಾಡುತ್ತದೆ –

**ಧೇನುಂ ತಿಲಮಯೀಂ ರಾಜನ್ ದದ್ಯಾದ್ಯಶ್ಚೋತ್ತರಾಯಣೇ ।**
**ಸರ್ವಾನ್ ಕಾಮಾನವಾಪ್ನೋತಿ ವಿಂದತೇ ಪರಮಂ ಸುಖಮ್ ॥**

ಉತ್ತರಾಯಣ ಪರ್ವಕಾಲದಲ್ಲಿ ಯಾರು ತಿಲಧೇನುವನ್ನು ದಾನಮಾಡುತ್ತಾನೋ ಅವನು ಎಲ್ಲ ಇಷ್ಟಾರ್ಥಗಳನ್ನು ಪಡೆಯುತ್ತಾನೆ, ಪರಮಸುಖವನ್ನು ಅನುಭವಿಸುತ್ತಾನೆ.

**ವಿಷ್ಣುಧರ್ಮೋತ್ತರದಲ್ಲಿ ಹೀಗೆ ಹೇಳಿದ್ದಾರೆ-**

**ಉತ್ತರೇ ತ್ವಯನೇ ವಿಪ್ರಾ ವಸ್ತ್ರದಾನಮ್ ಮಹಾಫಲಮ್ ।**
**ತಿಲಪೂರ್ವಮನಡ್ವಾಹಂ ದತ್ತ್ವಾ ರೋಗೈಃ ಪ್ರಮುಚ್ಯತೇ ॥**

ಉತ್ತರಾಯಣದಲ್ಲಿ ವಸ್ತ್ರದಾನವು ಮಹಾಫಲವನ್ನು ನೀಡುತ್ತದೆ ಮತ್ತು ತಿಲಪೂರ್ವಕವಾಗಿ ಎತ್ತಿನ ದಾನವನ್ನು ಮಾಡಬೇಕು. ಇದರಿಂದ ಮನುಷ್ಯನು ರೋಗಮುಕ್ತನಾಗುತ್ತಾನೆ.

**ಶಿವರಹಸ್ಯವು ಹೀಗೆ ಹೇಳುತ್ತದೆ-**

**ಪುರಾ ಮಕರಸಂಕ್ರಾಂತೌ ಶಂಕರೋ ಗೋಸವೇ ಕೃತೇ ।**
**ತಿಲಾನುತ್ಪಾದಯಾಮಾಸ ತೃಪ್ತಯೇ ಸರ್ವದೇಹಿನಾಮ್ ॥**

**ತಸ್ಮಾತ್ತಸ್ಯಾಂ ತಿಲೈಃ ಸ್ನಾನಂ ಕಾರ್ಯಂ ಚೋದ್ವರ್ತನಂ ಬುಧೈಃ ।**
**ದೇವತಾನಾಂ ಪಿತೄಣಾಂ ಚ ಸೋದಕೈಸ್ತರ್ಪಣಂ ತಿಲೈಃ ॥**

**ತಿಲಾ ದೇಯಾಶ್ಚ ವಿಪ್ರೇಭ್ಯಃ ಸರ್ವದೈವೋತ್ತರಾಯಣೇ ।**
**ತಿಲಾಂಶ್ಚ ಭಕ್ಷಯೇತ್ಪುಣ್ಯಾನ್ ಹೋತವ್ಯಾಶ್ಚ ತಥಾ ತಿಲಾಃ ॥**

**ತಸ್ಯಾಂ ತಿಥೌ ತಿಲೈರ್ಹುತ್ವಾ ಯೇಽರ್ಚಯಂತಿ ದ್ವಿಜೋತ್ತಮಾನ್ ।**
**ತ್ರಿದಿವೇ ತೇ ವಿರಾಜಂತೇ ಗೋಸಹಸ್ರಪ್ರದಾಯಿನಃ ॥**

**ತಿಲತೈಲೇನ ದೀಪಾಶ್ಚ ದೇಯಾಃ ಶಿವಗೃಹೇ ಶುಭಾಃ ।**
**ಸತಿಲೈಸ್ತಂಡುಲೈರ್ದೇವಂ ಪೂಜಯೇದ್ವಿಧಿವದ್ ದ್ವಿಜಃ ॥**

ಹೇಮಾದ್ರಿಕಾಲಖಂಡ.

ಗೋಸವೆ ಯಾಗವನ್ನು ಮಾಡಿದ ನಂತರ ರುದ್ರದೇವರು ಮಕರಸಂಕ್ರಾಂತಿಯಂದು ಎಳ್ಳನ್ನು ಸೃಷ್ಟಿಮಾಡಿದರು .ಆದ್ದರಿಂದ ಇಂದು ಎಲ್ಲರೂ ಎಳ್ಳು ದಾನವನ್ನು ಮಾಡಬೇಕು. ಎಳ್ಳು ಸೇರಿರುವ ನೀರಿನಿಂದ ಸ್ನಾನವನ್ನು ಮಾಡಬೇಕು. ಮೈಯನ್ನು ಉಜ್ಜಿಕೊಳ್ಳಬೇಕು. ದೇವತೆಗಳಿಗೂ, ಪಿತೃಗಳಿಗೂ ಎಳ್ಳುನೀರಿನಿಂದ ಅಧಿಕಾರಿಗಳು ತರ್ಪಣವನ್ನು ಕೊಡಬೇಕು. ಉತ್ತರಾಯಣದ ಸಂಕ್ರಾಂತಿಯಂದು ಬ್ರಾಹ್ಮಣರಿಗೆ ತಿಲದಾನವು ಬಹಳ ಮಹತ್ಫಲಧಾಯಕವಾಗಿದೆ. ಅಂದು ಎಳ್ಳನ್ನು ತಿನ್ನಬೇಕು. ಎಳ್ಳಿನಿಂದ ಹೋಮ ಮಾಡಬೇಕು. ಇದರಿಂದ ಸಹಸ್ರಗೋದಾನ ಮಾಡಿದ ಪುಣ್ಯವು ಬರುತ್ತದೆ. ಎಳ್ಳು ದಾನ ಮಾಡಿದವರು ಸ್ವರ್ಗದಲ್ಲಿ ನಕ್ಷತ್ರಗಳಂತೆ ವಿರಾಜಿಸುತ್ತಾರೆ. ದೇವಾಲಯಗಳಲ್ಲಿ,

ಶಿವಾಲಯಗಳಲ್ಲಿ ಎಳ್ಳೆಣ್ಣೆಯ ದೀಪಗಳನ್ನು ಹಚ್ಚಿಡಬೇಕು. ಬ್ರಾಹ್ಮಣನು ಎಳ್ಳಿನಿಂದಲೇ ರುದ್ರದೇವರನ್ನು ಅರ್ಚಿಸಬೇಕು.

ಈ ಅಪೂರ್ವವಾದ ಮೇಲಿನ ಪ್ರಮಾಣಶ್ಲೋಕದಂತೆ ಮಕರಸಂಕ್ರಾಂತಿಯಂದು ಎಳ್ಳನ್ನು ರುದ್ರದೇವರು ಸೃಷ್ಟಿಮಾಡಿದ್ದಾರೆ ಆದ್ದರಿಂದಲೇ ನಮ್ಮಲ್ಲಿ ಎಳ್ಳು ಬೆಲ್ಲ ಕೊಡುವ ಸಂಪ್ರದಾಯ ಬಂದಿದೆ. ಎಳ್ಳಿನ ಜೊತೆ ಬೆಲ್ಲವನ್ನು ದಾನಮಾಡುವುದರಿಂದಲೂ ವಿಶೇಷ ಫಲವು ಬರುತ್ತದೆ. ದಕ್ಷಿಣೆಯ ಸಹಿತವಾಗಿ ಪ್ರತಿಯೊಬ್ಬರೂ ಎಳ್ಳು ಬೆಲ್ಲವನ್ನು ಬ್ರಾಹ್ಮಣರಿಗೆ ದಾನಮಾಡಲೇಬೇಕು.

## ಮಕರ ಸಂಕ್ರಾಂತಿಯಂದು ಮಾಡಿದ ದಾನದ ಫಲ

**ಅಯನೇ ಕೋಟಿಗುಣಿತಂ ಲಕ್ಷಂ ವಿಷ್ಣುಪದೀಫಲವ್ ಷಡಶೀತಿಸಹಸ್ರಾಣಿ ಷಡಶೀತ್ಯಾಮುದಾಹೃತಮ್ । ಶತಮಿಂದುಕ್ಷಯೇ ದಾನಂ ಸಹಸ್ರಂ ತು ದಿನಕ್ಷಯೇ ವಿಷುವೇ ಶತಸಾಹಸ್ರಮಾಕಾವ್ಯೆಷ್ವನಂತಕಮ್ ॥** (ರಾಜಮಾರ್ತಂಡ)

ಸಾಮಾನ್ಯದಿನಗಳಲ್ಲಿ ಮಾಡಿದ ದಾನಕ್ಕಿಂತಲೂ ಉತ್ತರಾಯಣದ ಪುಣ್ಯಕಾಲವೆನಿಸಿದ ಮಕರಸಂಕ್ರಾಂತಿಯಲ್ಲಿ ಮಾಡಿದ ದಾನಕ್ಕೆ ಕೋಟಿಪಾಲು ಪುಣ್ಯವು ಅಧಿಕವಾಗಿ ಬರುತ್ತದೆ. ವಿಷ್ಣುಪದಿಯ ದಿವಸ ಮಾಡಿದ ದಾನಕ್ಕೆ ಲಕ್ಷದಷ್ಟು ಅಧಿಕಪುಣ್ಯವಿದೆ. ಷಡಶೀತಿಯಂದು ಮಾಡಿದ ದಾನಕ್ಕೆ ಎಂಭತ್ತಾರುಸಾವಿರದಷ್ಟು ಅಧಿಕ ಪುಣ್ಯವಿದೆ. ಚಂದ್ರಗ್ರಹಣದಂದು ಮಾಡಿದ ದಾನಕ್ಕೆ ನೂರರಷ್ಟು ಅಧಿಕ ಪುಣ್ಯವಿದೆ. ಸೂರ್ಯಗ್ರಹಣದಂದು ಮಾಡಿದ ದಾನಕ್ಕೆ ಸಹಸ್ರದಷ್ಟು ಅಧಿಕ ಫಲವಿದೆ. ವಿಷುವಾದಿನಗಳಲ್ಲಿ ಮಾಡಿದ ದಾನಕ್ಕೆ ಶತಸಹಸ್ರದಷ್ಟು ಅಧಿಕ ಪುಣ್ಯವಿದೆ. ಆಷಾಢ, ಕಾರ್ತೀಕ, ಮಾಘ ಮತ್ತು ವೈಶಾಖಮಾಸದ ಹುಣ್ಣಿಮೆಗಳಲ್ಲಿ ಮಾಡಿದ ದಾನಕ್ಕೆ ಅನಂತಫಲವಿದೆ.

ಯಾರು ಅಯನ ಮತ್ತು ವಿಷುದಿನಗಳಲ್ಲಿ ಗಂಗಾಸ್ನಾನ ಮಾಡುತ್ತಾನೋ ಅವನಿಗೆ ಆರು ತಿಂಗಳ ಗಂಗಾಸ್ನಾನ ಮಾಡಿದ ಫಲವು ಬರುತ್ತದೆ ಎಂಬುದಾಗಿಯೂ ಅನೇಕ ಸ್ಮೃತಿ ಗ್ರಂಥಗಳು ಪ್ರತಿಪಾದನೆ ಮಾಡುತ್ತವೆ.

ಮಕರಸಂಕ್ರಾಂತಿಯಲ್ಲಿ ಮಾಡಿದ ದಾನಕ್ಕೆ ಕೋಟಿಪಟ್ಟು ಪುಣ್ಯವಿರುವುದರಿಂದ ಗ್ರಹಣಾದಿಗಳಲ್ಲಿ ಮಾಡಿದ ಫಲಕ್ಕಿಂತಲೂ ಅಧಿಕಫಲವಿರುವುದರಿಂದ ಪ್ರಯತ್ನಪೂರ್ವಕವಾಗಿ ಪ್ರತಿಯೊಬ್ಬರೂ ದಾನಧರ್ಮಗಳನ್ನು ಮಾಡಬೇಕು. ಎಳ್ಳುಬೆಲ್ಲದ ದಾನವನ್ನಂತೂ ಮಾಡಲೇಬೇಕು.

ಎಳ್ಳಿನ ಮಹತ್ವವನ್ನು ಶಾತಾತಪ ಗ್ರಂಥವು ಹೀಗೆ ಹೇಳುತ್ತದೆ-

**ತಿಲೋದ್ವರ್ತೀ ತಿಲಸ್ನಾಯೀ ಶುಚಿರ್ನಿತ್ಯಂ ತಿಲೋದಕೀ ।**
**ಹೋತಾ ದಾತಾ ಚ ಭೋಕ್ತಾ ಚ ಷಟ್ತಿಲೀ ನಾವಸೀದತಿ ॥** (ಶಾತಾತಪ)

ಎಳ್ಳಿನಿಂದ ಮೈಯನ್ನು ಉಜ್ಜಿಕೊಳ್ಳುವವನು, ಎಳ್ಳಿನಿಂದ ಸ್ನಾನಮಾಡುವವನು ಶುಚಿಯಾಗಿ ನಿತ್ಯವೂ ತಿಲದ ಉದಕವನ್ನು ನೀಡುವವನು, ಎಳ್ಳಿನ ಹೋಮವನ್ನು ಮಾಡುವವನು, ಎಳ್ಳನ್ನು ದಾನ ಮಾಡುವವನು, ಎಳ್ಳನ್ನು ತಿನ್ನುವವನು ಎಂದೂ ನಾಶವಾಗಲಾರನು. ಕೆಟ್ಟದ್ದನ್ನು ಹೊಂದಲಾರನು.

ಸಂಕ್ರಾಂತಿಯಂದು ಶ್ರಾದ್ಧವನ್ನು ಆಚರಿಸಬೇಕೆಂದು ವಿಷ್ಣುಧರ್ಮೋತ್ತರವು ಹೇಳುತ್ತದೆ-

**ಆದಿತ್ಯಸಂಕ್ರಮಣಂ ವಿಷುವದ್ವಯಂ ವಿಶೇಷೇಣಾಯನದ್ವಯಂ**
**ವ್ಯತೀಪಾತೋ ಜನ್ಮರ್ಕ್ಷಮಭ್ಯುದಯಶ್ಚ ।**
**ಏತಾಂಸ್ತು ಶ್ರಾದ್ಧಕಾಲಾನ್ ವೈ ಕಾಮ್ಯಾನಾಹ ಪ್ರಜಾಪತಿಃ ॥**
**ಶ್ರಾದ್ಧಮೇತೇಷು ಯದ್ದತ್ತಂ ತದಾನಂತ್ಯಾಯ ಕಲ್ಪತೇ ॥** (ವಿಷ್ಣುಧರ್ಮಸೂತ್ರ)

ಮಕರಸಂಕ್ರಾಂತಿಯಂದು ಹೆಂಗಸರು ಹೆಚ್ಚಾಗಿ ಎಳ್ಳುಬೆಲ್ಲವನ್ನು ದಾನಮಾಡುತ್ತಾರೆ. ಮತ್ತು ಅರಿಶಿನ ಕುಂಕುಮ ಅಡಿಕೆ ಮೊದಲಾದವುಗಳಿಂದ ಕೂಡಿದ ಬಾಗಿನವನ್ನು ದಾನಮಾಡುತ್ತಾರೆ.

ದಕ್ಷಿಣಭಾರತದ ಕೆಲವೆಡೆ ಇದನ್ನು ಪೊಂಗಲ್‌ಹಬ್ಬ ಎಂದು ಕರೆಯುತ್ತಾರೆ. ಧನುರ್ಮಾಸದಲ್ಲಿನಿತ್ಯವೂ ಹುಗ್ಗಿಯನ್ನುಸಮರ್ಪಣೆ ಮಾಡುತ್ತಾರೆ, ಇಂದು ಪೊಂಗಲ್ ಮಾಡಿ ದೇವರಿಗೆ ಸಮರ್ಪಣೆ ಮಾಡುವುದರಿಂದ ಇದನ್ನು ಪೊಂಗಲ್‌ಹಬ್ಬ ಎಂದೇ ಕರೆಯುತ್ತಾರೆ.

## ಸಂಕ್ರಾಂತಿಯು ಎಂದು ಬರುತ್ತದೆ ?

ಜ್ಯೋತಿರ್ಗಣಿತದ ಲೆಕ್ಕದಂತೆ ಚಳಿಗಾಲದ ಸಂಕ್ರಾಂತಿಬಿಂದು ಡಿಸೆಂಬರ್ ೨೧ಕ್ಕೆ ಬರುತ್ತದೆ .ಅಂದೇ ಸೂರ್ಯನು ಉತ್ತರಾಯಣಸಂಚಾರವನ್ನುಪ್ರಾರಂಭಮಾಡುತ್ತಾನೆ. ಆದರೆ, ನಮ್ಮಲ್ಲಿ ಪ್ರಾಚೀನಸಂಪ್ರದಾಯವನ್ನು ಅನುಸರಿಸಿ ಜನವರಿ ೧೪ರಂದೇ ಉತ್ತರಾಯಣಪರ್ವಕಾಲವೆಂದು ಪರಿಗಣಿಸುತ್ತಿದ್ದಾರೆ. ವಾಸ್ತವಿಕವಾಗಿ ಸೂರ್ಯನು ಉತ್ತರಾಯಣಸಂಚಾರವನ್ನು ಪ್ರಾರಂಭಮಾಡಿರುತ್ತಾನೆ. ಮಕರಸಂಕ್ರಾಂತಿಯ ಪ್ರಾರಂಭದಿಂದ ೨೩ ದಿನಗಳ ಮೊದಲೇ ಉತ್ತರಾಯಣವು ಪ್ರಾರಂಭವಾಗಿರುತ್ತದೆ.

ಮಕರಸಂಕ್ರಮಣದಿಂದ ಕರ್ಕಸಂಕ್ರಮಣದ ತನಕ ಉತ್ತರಾಯಣವು ಇರುತ್ತದೆ.

ಮಾರ್ಚಿ ೨೩ ಹಾಗೂ ಸೆಪ್ಟಂಬರ್ ೨೩ ರಂದು ವಿಷುವದ್ ವೃತ್ತಿದಲ್ಲಿಸಂಚಾರವು ಇರುತ್ತದೆ. ಅಂದು ಸರಿಯಾಗಿ ಹಗಲು ಮೂವತ್ತು ಘಳಿಗೆ ರಾತ್ರಿ ಮೂವತ್ತು ಘಳಿಗೆ ಇರುತ್ತದೆ.

ಜೂನ್ ೨೩ ರಂದು ಸೂರ್ಯನು ಪೂರ್ಣವಾಗಿ ಉತ್ತರದಿಕ್ಕಿನಲ್ಲಿರುತ್ತಾನೆ. ಡಿಸೆಂಬರ್ ೨೩ ರಂದು ಪೂರ್ಣವಾಗಿ ದಕ್ಷಿಣದಿಕ್ಕಿನಲ್ಲಿರುತ್ತಾನೆ.

ಅಯನಾಂಶ ಸೇರಿಸಿದಾಗ ೨೩ ದಿವಸದ ಮೊದಲೇ ಸಂಕ್ರಮಣವು ಪ್ರಾರಂಭವಾಗುತ್ತದೆ. ಆದ್ದರಿಂದ ಡಿಸೆಂಬರ್ ೨೩ ರಂದು ಉತ್ತರಾಯಣಪರ್ವಕಾವೆಂದು ಜೂನ್ ೨೩ ರಂದು ದಕ್ಷಿಣಾಯನಪರ್ವಕಾಲವೆಂದು ಸಾಯನದವರು ತಿಳಿಯುತ್ತಾರೆ. ನಿರಯನದ ಪ್ರಕಾರ ಜನವರಿ ೧೪ ರಂದು ಉತ್ತರಾಯಣ ಪರ್ವಕಾಲವೆಂದು ಜುಲೈ ೧೬ ರಂದು ದಕ್ಷಿಣಾಯನ ಪರ್ವಕಾಲವೆಂದು ಹೇಳುತ್ತಾರೆ.

ಯಾವ ಮಾಸದಲ್ಲಿ ಸೂರ್ಯಸಂಕ್ರಾಂತಿಯಿರುವುದಿಲ್ಲವೋ ಅದನ್ನೇ ಅಧಿಕಮಾಸವೆಂದು ಪರಿಗಣಿಸುತ್ತೇವೆ. ಇದು ಮೂರು ವರ್ಷಕ್ಕೊಮ್ಮೆ ಬರುತ್ತದೆ.

ಯಾವ ಮಾಸದಲ್ಲಿ ಎರಡು ಸಂಕ್ರಾಂತಿಗಳು ಬರುತ್ತವೋ ಅದನ್ನು ಕ್ಷಯಮಾಸವೆಂದು ಪರಿಗಣಿಸುತ್ತೇವೆ. ೧೯೬೩ ರಲ್ಲಿ ಈ ಕ್ಷಯ ಮಾಸವು ಬಂದಿತ್ತು. ಪುನಃ ೨೧೨೭ ನೇ ವರ್ಷಕ್ಕೆ ಈ ಕ್ಷಯಮಾಸವು ಬರುತ್ತದೆ. ಇದು ನೂರನಲವತ್ನಾಲ್ಕು ವರ್ಷಕ್ಕೊಮ್ಮೆ ಬರುತ್ತದೆ.

ಸಾಯನಸಂಕ್ರಾಂತಿ, ನಿರಯನಸಂಕ್ರಾಂತಿ ಎಂಬುದಾಗಿ ಸಂಕ್ರಾಂತಿಗಳು ಎರಡು ವಿಧವಾಗಿದೆ. ರವಿಯ ರಾಶಿಪ್ರವೇಶವನ್ನು ಮಾತ್ರ ಸಂಕ್ರಾಂತಿಯೆಂದು ಪರಿಗಣಿಸುತ್ತೇವೆ. ಉಳಿದ ಗ್ರಹಗಳು ಮತ್ತೊಂದು ರಾಶಿಯನ್ನು ಪ್ರವೇಶಿಸಿದಾಗ ಸಂಕ್ರಾಂತಿಯನ್ನಾಗಿ ಆಚರಿಸುವುದಿಲ್ಲ.

ಮೇಷಸಂಕ್ರಾಂತಿ, ತುಲಾಸಂಕ್ರಾಂತಿಗಳನ್ನು ವಿಷು ಸಂಕ್ರಾಂತಿಯೆಂದು ಹೇಳುತ್ತಾರೆ. ಕರ್ಕಸಂಕ್ರಾಂತಿ, ಮಕರಸಂಕ್ರಾಂತಿಗಳನ್ನು ಅಯನಸಂಕ್ರಾಂತಿ ಎಂದು ಧನು, ಮಿಥುನ, ಕನ್ಯಾ, ಮೀನ ಸಂಕ್ರಾಂತಿಗಳನ್ನು ಷಡಶೀತಿಸಂಕ್ರಾಂತಿ ಎಂದು ಉಳಿದವುಗಳನ್ನು ವಿಷ್ಣುಪದ ಸಂಕ್ರಾಂತಿ ಎಂದು ಹೇಳುತ್ತಾರೆ.

ಈಗಿನ ಪಂಚಾಂಗಗಳಲ್ಲಿ ಮಕರ ಸಂಕ್ರಾಂತಿಯನ್ನು ಒಂದು ದೇವತೆಯೆಂದು ಪರಿಗಣಿಸಿ ವರ್ಣಿಸಲಾಗುತ್ತದೆ. ಸಂಕ್ರಾಂತಿಯು ವಾಹನವನ್ನು ಹತ್ತಿರುತ್ತಾಳೆ. ಕರಿಯ,

ಬಿಳಿಯ ಅಥವಾ ಕೆಂಪು ವಸ್ತ್ರವನ್ನು ಧರಿಸಿರುತ್ತಾಳೆ. ಬಿಲ್ಲು, ಈಟಿ ಆಯುಧವನ್ನು ಧಾರಣೆ ಮಾಡಿರುತ್ತಾಳೆ. ಗೋರೋಚನವನ್ನು ಹಣೆಗೆ ಇಟ್ಟಿರುತ್ತಾಳೆ. ನಡುಹರೆಯದವಳು ಅಥವಾ ವೃದ್ಧಳು ಆಗಿರುತ್ತಾಳೆ. ವಾರ ನಕ್ಷತ್ರಗಳನ್ನು ಅವಲಂಬಿಸಿ ಅವಳ ನಾಮಗಳು ನಿರ್ಣಯವಾಗುತ್ತದೆ. ಯಾವ ದಿಕ್ಕಿನಿಂದ ಬರುತ್ತಾಳೋ, ಯಾವ ದಿಕ್ಕಿಗೆ ಹೋಗುತ್ತಾಳೋ, ಯಾವ ದಿಕ್ಕನ್ನು ನೋಡುತ್ತಾಳೋ ಅವೆಲ್ಲವನ್ನೂ ತಿಳಿಸಲಾಗುತ್ತದೆ. ಜೋಲು ತುಟಿಗಳು, ಉದ್ದಮೂಗು, ನವಭುಜಗಳು ಇವುಗಳಿಂದ ಭವಿಷ್ಯವನ್ನು ಸೂಚಿಸುತ್ತಾರೆ. ಅವಳು ನೋಡಿದ್ದೆಲ್ಲವೂ ಹಾಳಾಗುತ್ತದೆ, ಅವಳು ಬಂದ ದಿಕ್ಕು ಜನರಿಗೆ ಶುಭವಾಗುತ್ತದೆ. ಅವಳು ತೆರಳುವ ದಿಕ್ಕು ಜನರಿಗೆ ಅಶುಭವಾಗುತ್ತೆಂದು ಹೇಳುತ್ತಾರೆ.

## ಸಂಕ್ರಾಂತಿಯ ಸೂಕ್ತಕಾಲ

ಸೂರ್ಯನು ಯಾವ ಕ್ಷಣಕ್ಕೆ ಒಂದು ರಾಶಿಯನ್ನು ಬಿಟ್ಟು ಮತ್ತೊಂದು ರಾಶಿಯನ್ನು ಪ್ರವೇಶಿಸುತ್ತಾನೋ ಅದನ್ನು ಸಂಕ್ರಾಂತಿಯೆಂದು ಕರೆಯುತ್ತಾರೆ. ಅದು ಯಾವ ಚಕ್ಷುಸ್ಸಿಗೂ ಗೋಚರವಾಗುವುದಿಲ್ಲ. ಹಿಂದಿನ ರಾಶಿಯನ್ನು ಬಿಟ್ಟು ಮುಂದಿನ ರಾಶಿಯನ್ನು ಪ್ರವೇಶಿಸುವ ಸೂರ್ಯನ ಕಾಲವು ಎಷ್ಟು ಸೂಕ್ಷ್ಮವೆಂಬುದನ್ನು ದೇವೀಪುರಾಣವು ಹೀಗೆ ಹೇಳುತ್ತದೆ–

**ಸ್ವಸ್ಥೇ ನರೇ ಸುಖಾಸೀನೇ ಯಾವತ್ ಸ್ಪಂದತಿ ಲೋಚನಮ್ ।**
**ತಸ್ಯ ತ್ರಿಂಶತ್ತಮೋ ಭಾಗಸ್ತತ್ಪರಃ ಪರಿಕೀರ್ತಿತಃ ।**
**ತತ್ಪರಾಚ್ಛತಶೋಭಾಗಸ್ತ್ರುಟಿರಿತ್ಯಭಿಧೀಯತೇ ।**
**ತ್ರುಟೇಃ ಸಹಸ್ರಭಾಗೋ ಯಃ ಸ ಕಾಲೋ ರವಿಸಂಕ್ರಮೇ ॥**

(ದೇವೀಪುರಾಣ)

ಸುಖವಾಗಿ ಕುಳಿತಿರುವನೊಬ್ಬನು ಸ್ವಸ್ಥವಾದ ಮನಸ್ಸಿನಿಂದ ಕಣ್ಣುಮುಚ್ಚಿತೆಗೆಯಲು ಎಷ್ಟುಕಾಲವು ಬೇಕಾಗುತ್ತದೋ ಅದರ ಮೂವತ್ತನೆಯ ಒಂದಂಶವನ್ನು ತತ್ಪರಾ ಎಂದು ಕರೆಯುತ್ತಾರೆ. ಆ ತತ್ಪರದ ನೂರನೆಯ ಒಂದು ಅಂಶವನ್ನು ತ್ರುಟಿ ಎಂದು ಕರೆಯುತ್ತಾರೆ.ಆ ತ್ರುಟಿಯ ಸಾವಿರದ ಒಂದಂಶದ ಕಾಲದಲ್ಲಿ ಸೂರ್ಯನು ಒಂದು ರಾಶಿಯಿಂದ ಇನ್ನೊಂದು ರಾಶಿಯನ್ನು ಪ್ರವೇಶಿಸುವಾಗ ತೆಗೆದುಕೊಳ್ಳುತ್ತಾನೆ. ಇದುವೇ ಸಂಕ್ರಾಂತಿಕಾಲ. ಇಷ್ಟು ಸೂಕ್ಷ್ಮವಾದ ಕಾಲಾವಧಿಯನ್ನು ಸಂಕ್ರಾಂತಿಯನ್ನಾಗಿ ಪರಿಗಣಿಸಬೇಕು. ಆದರೆ, ಇದು ಅಚಿಂತ್ಯವಾಗಿದೆ. ಅತರ್ಕ್ಯವಾಗಿದೆ. ಇಷ್ಟು ಸೂಕ್ಷ್ಮವಾದ ಕಾಲವನ್ನು ಪುಣ್ಯಕಾಲವನ್ನಾಗಿ ಆಚರಿಸಲು ಸಾಧ್ಯವೇ ಇಲ್ಲ. ಆದ್ದರಿಂದ ಈ ಕಾಲಕ್ಕೆ ಹತ್ತಿರವಿರುವ ಹೆಚ್ಚಿನ ಕಾಲವನ್ನು ಪರ್ವಕಾಲವೆಂದು ಶಾಸ್ತ್ರಕಾರರು ಪರಿಗಣಿಸುತ್ತಾರೆ.

**ಯಾ ಯಾ ಸನ್ನಿಹಿತಾ ನಾಡ್ಯಸ್ತಾಸ್ತಾಃ ಪುಣ್ಯತಮಾಃ ಸ್ಮೃತಾಃ ॥** (ಹೇಮಾದ್ರಿ)

ವರ್ಷದ ಹನ್ನೆರಡು ಸಂಕ್ರಾಂತಿಗಳಿಗೂ ಒಂದೊಂದು ಹೆಸರಿದೆ. ಸಂಕ್ರಾಂತಿಯು ಭಾನುವಾರ ಬಂದರೆ ಘೋರ ಎಂದು, ಸೋಮವಾರ ಬಂದರೆ ಧ್ವಾಂಕ್ಷೀ ಎಂದು, ಮಂಗಳವಾರ ಬಂದರೆ ಮಹೋದರೀ ಎಂದು, ಬುಧವಾರ ಬಂದರೆ ಮಂದಾಕಿನೀ ಎಂದು, ಗುರವಾರ ಬಂದರೆ ಮಂದಾ ಎಂದು, ಶುಕ್ರವಾರ ಬಂದರೆ ಮಿಶ್ರಿತಾ ಎಂದು, ಶನಿವಾರ ಬಂದರೆ ರಾಕ್ಷಸೀ ಎಂದು ಹೆಸರನ್ನು ಹೊಂದುತ್ತದೆ. ವಾರಗಳಿಗೆ ಅನುಗುಣವಾಗಿ ಸಂಕ್ರಾಂತಿಯ ಹೆಸರುಗಳನ್ನು ವಿವಕ್ಷಿಸಬೇಕು.

★ ★ ★ ★

# ಮಕರಸಂಕ್ರಾಂತಿ ವ್ರತ

ಈ ವ್ರತವನ್ನು ಮಾಡುವ ನಾನು ಈಗ ಆಚರಿಸತಕ್ಕ ವ್ರತದ ಫಲವು ಸಂಪೂರ್ಣವಾಗಿ ನನಗೆ ದೊರೆಯಲೆಂಂದು ಸಜಸ್ವಲಾದೋಷವು ನಿವೃತ್ತಿಯಾಗಲೆಂದು ದಾಮೋದರ ಪ್ರೀತ್ಯರ್ಥವಾಗಿ ಕಲ್ಪೋಕ್ತದಲ್ಲಿ ಹೇಳಿರುವಂತೆ ದಾವೋದರ ಪೂಜೆಯನ್ನು ವಾಡುತ್ತೇನೆಂದು ಧ್ಯಾನಾವಾಹನಾದಿ ಷೋಡಶೋಪಚಾರಪೂಜೆಯನ್ನು ಮಾಡುತ್ತೇನೆಂದು ಸಂಕಲ್ಪ ಮಾಡಬೇಕು. ಕಲಶ ಪೂಜೆ ಮಾಡುವುದು, ಪ್ರಾಣಪ್ರತಿಷ್ಠಾ ಮಾಡಬೇಕು. ಹೂವು ಮಂತ್ರಾಕ್ಷತೆಯನ್ನು ಕೈಯಲ್ಲಿ ಹಿಡಿದುಕೊಂಡು ಮೊದಲು ಗಣಪತಿ ಪೂಜೆಯನ್ನು ಮಾಡಿ ನಂತರ ಸಂಕ್ರಾಂತಿ ಯುಕ್ತವಾದ ದೀಪವ್ರತವನ್ನು ಮಾಡುತ್ತೇನೆಂದು ಲಕ್ಷ್ಮೀಸಮೇತನಾಗಿ ಶಂಖ, ಚಕ್ರ , ಗದಾಪದ್ಮಧಾರಿಯಾಗಿ ಸರ್ವಾಭರಣಭೂಷಿತನಾಗಿರುವ ಲಕ್ಷ್ಮೀಪತಿಯನ್ನು ಧ್ಯಾನ ಮಾಡಬೇಕು. ಭಗವಂತನೂ ಭಕ್ತವತ್ಸಲನೂ ದಾಮೋದರನೂ ಆದ ದೇವನೇ ! ನನ್ನ ಪಾಪ ಪರಿಹರಿಸೆಂದು ಆವಾಹನೆ ವಾಡಬೇಕು. ಲೋಕನಾಯಕನಾದ ಭಕ್ತರಿಗೆ ಅಭಯಪ್ರದನಾದ ಪುಂಡರೀಕಾಕ್ಷನಿಗೆ ಹೂವನ್ನು ಅರ್ಪಿಸಬೇಕು. ಅಷ್ಟಗಂಧದಿಂದ ಕೂಡಿದ ಅರ್ಘ್ಯವನ್ನು ಕಲ್ಮಶನಾಶವಾಗಲು ಕೊಡಬೇಕು. ಏಲಕ್ಕಿ, ಲವಂಗ ತಕ್ಕೋಲ, ಕರ್ಪೂರಗಳಿಂದ ಕೂಡಿದ ನಿರ್ಮಲವಾದ ನೀರಿನಿಂದ ಆಚಮನವನ್ನು ಕೊಡಬೇಕು. ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆಯಿಂದ ಪಂಚಾಮೃತವನ್ನು ಮಾಡಬೇಕು. ಶುಭ್ರವೂ ಸೂಕ್ಷ್ಮವೂ ಚಿತ್ರವಿಚಿತ್ರವೂ ಆದ ಬಣ್ಣಗಳಿಂದ ಕೂಡಿದ ವಸ್ತ್ರಗಳನ್ನು ಜನಾರ್ದನನನ್ನು ಪೂಜಿಸಬೇಕು. ಬ್ರಹ್ಮಸೂತ್ರವನ್ನು ಕಮಲಾಕಾಂತನಿಗೆ ಅರ್ಪಿಸಬೇಕು. ಕಿರೀಟ ಹಾರ ಭುಜಕೀರ್ತಿ ಕರ್ಣಕುಂಡಲ ಮೊದಲಾದ ಆಭರಣಗಳನ್ನು ಪರಮಾತ್ಮನಿಗೆ ಅರ್ಪಿಸಬೇಕು. ಕುಂಕುಮ ರಕ್ತಗಂಧ ಶ್ರೀಗಂಧಗಳಿಂದ ಕೂಡಿದ ದಿವ್ಯವಾದ ಪರಿಮಳ ಗಂಧವನ್ನು ಹಾಗೂ ದಿವ್ಯ ಅಕ್ಷತೆಯನ್ನು

ಶ್ರೀಹರಿಗೆ ಸಮರ್ಪಿಸಬೇಕು. ಜಾಜಿ, ಸಂಪಿಗೆ, ಪುನ್ನಾಗ ಮುಂತಾದ ಹೂಗಳಿಂದಲೂ ನಾನಾವಿಧ ಪತ್ರಿಗಳಿಂದಲೂ ಜನಾರ್ದನನಿಗೆ ಅರ್ಪಿಸಬೇಕು. ಧೂಪ ದೀಪಗಳಿಂದಲೂ ನೈವೇದ್ಯ ತಾಂಬೂಲಗಳಿಂದಲೂ ಪ್ರದಕ್ಷಿಣೆ ನಮಸ್ಕಾರಗಳಿಂದಲೂ ಪರಮಾತ್ಮನನ್ನು ಸತ್ಕರಿಸಬೇಕು. ನಂತರ ಅರ್ಘ್ಯವನ್ನು ಬಿಡಬೇಕು. ಬ್ರಾಹ್ಮಣನಿಂದ ಕಥೆಯನ್ನು ಕೇಳಿ ವಾಯನದಾನವನ್ನು ಕೊಡಬೇಕು. ಪುನಃ ಪೂಜೆ ಮಾಡಿ ಪರಬ್ರಹ್ಮ ಸ್ವರೂಪನಾದ ದೇವಾದಿ ದೇವನಾದ ಜಗನ್ನಾಥ ಸ್ವಾಮಿಯನ್ನು ಮನಸಾ ಆರಾಧನೆ ಮಾಡುತ್ತಾ ವ್ರತದ ಕಥೆಯನ್ನು ಕೇಳಿ ಪರಮಾತ್ಮನಿಗೆ ಸಮರ್ಪಿಸಬೇಕು.

★ ★ ★ ★

# ಗ್ರಹಣ

## ವೇಧದ ಆಚರಣೆ

ಸಾಮಾನ್ಯವಾಗಿ ಗ್ರಹಣ ಆರಂಭವಾಗುವ ಹನ್ನೆರಡು ಗಂಟೆಗಳನ್ನು (ನಾಲ್ಕು ಯಾಮಗಳು) ವೇಧ ಎನ್ನುತ್ತಾರೆ. ಈ ಸಂದರ್ಭದಲ್ಲಿ ಮೈಲಿಗೆಯಿರುವದಿಲ್ಲ, ಆದರೆ, ಊಟ, ಉಪಾಹಾರ, ನೀರು, ಏನನ್ನೂ ಸೇವಿಸಬಾರದು. ಪೂಜೆ, ಅರ್ಚನೆಗಳನ್ನೂ ಮಾಡಬಾರದು. ಸಂಧ್ಯಾವಂದನೆ, ಪಾರಾಯಣಗಳನ್ನು ಮಾಡಬೇಕು.

ಸಂಜೆಯ ಹೊತ್ತು, ರಾತ್ರಿಯ ಹೊತ್ತು ಗ್ರಹಣವಿದ್ದಾಗ ಸೂರ್ಯೋದಯದಿಂದಲೇ ವೇಧವಿರುತ್ತದೆ. ಅಂತಹ ಸಂದರ್ಭದಲ್ಲಿ ಬೆಳಿಗ್ಗೆ ಸ್ನಾನ ಮಾಡಿ, ನಿರ್ಮಾಲ್ಯ ವಿಸರ್ಜನೆಯನ್ನು ಮಾತ್ರ ಮಾಡಬೇಕು. ಗ್ರಹಣ ಬಿಟ್ಟ ನಂತರ ಪೂಜೆಯನ್ನು ಮಾಡಬೇಕು. ಗ್ರಹಣ ಬಿಟ್ಟ ನಂತರವೇ ಅಡಿಗೆ ಮಾಡಿ, ನೈವೇದ್ಯ ಮಾಡಿ ಊಟ ಮಾಡಬೇಕು. ಗ್ರಹಣಕ್ಕಿಂತ ಮುಂಚೆ ಮಾಡಿಟ್ಟು, ಅಥವಾ ಗ್ರಹಣಕಾಲದಲ್ಲಿ ಮಾಡಿಟ್ಟು ತಿನ್ನಬಾರದು ಚಂದ್ರಗ್ರಹಣ ಆರಂಭವಾಗುವ ಮೂರು ಯಾಮಗಳ ಮೊದಲು (ಒಂಭತ್ತು ಗಂಟೆಗಳು) ಸೂರ್ಯಗ್ರಹಣ ಆರಂಭವಾಗುವ ನಾಲ್ಕು ಯಾಮಗಳ (ಹನ್ನೆರಡು ಗಂಟೆಗಳು) ವೇಧ ಇರುತ್ತದೆ ಎನ್ನುವದು ಸಾಮಾನ್ಯ ನಿಯಮ. ಚಂದ್ರೋದಯವಾಗಬೇಕಾದರೇ ಗ್ರಹಣವಿದ್ದರೆ ಆ ಇಡಿಯ ಹಗಲಿನಲ್ಲಿ ಉಪವಾಸವಿರಬೇಕು.

## ಗ್ರಹಣದ ಸ್ನಾನ

ಗ್ರಹಣದ ಆರಂಭ ಅಂತ್ಯಗಳಲ್ಲಿ ಸ್ನಾನವನ್ನು ಮಾಡಬೇಕು. ಗ್ರಹಣ ಹಿಡಿದಾಗ ಮಾಡುವ ಸ್ನಾನವನ್ನು ಸ್ಪರ್ಶಸ್ನಾನ ಎನ್ನುತ್ತಾರೆ. ಗ್ರಹಣ ಬಿಟ್ಟಾಗ ಮಾಡುವ ಸ್ನಾನವನ್ನು

ಮೋಕ್ಷಸ್ನಾನ ಎನ್ನುತ್ತಾರೆ. ಗ್ರಹಣದ ಸಂದರ್ಭದಲ್ಲಿ ಮನುಷ್ಯರಿಗೆ ಅಶೌಚದ ಮೈಲಿಗೆ ಉಂಟಾಗುತ್ತದೆ. ಅದಕ್ಕೇ ಆರಂಭದಲ್ಲಿ ಸ್ನಾನ ಮಾಡಿಯೇ ದಾನಾದಿಗಳನ್ನು ಮಾಡಬೇಕು.

ಇಡಿಯ ಒಂದು ವರ್ಷದ ಸಮಯದಲ್ಲಿ ಪ್ರತೀದಿವಸ ಉಷಃಕಾಲದಲ್ಲಿ ಸ್ನಾನಮಾಡಿದರೆ ಪ್ರಾಜಾಪತ್ಯದಿಂದ ಉಂಟಾಗುವ ಫಲ ದೊರೆಯುತ್ತದೆ. ಗ್ರಹಣದಲ್ಲಿ ಆರಂಭ ಮತ್ತು ಅಂತ್ಯದಲ್ಲಿ ಸ್ನಾನ ಮಾಡುವದರಿಂದ ಈ ಪ್ರಾಜಾಪತ್ಯದ ಫಲ ಬರುತ್ತದೆ.

ಗ್ರಹಣದ ಆರಂಭದಲ್ಲಿ, ಅಂತ್ಯದಲ್ಲಿ ಸ್ನಾನಮಾಡದ ಮನುಷ್ಯ ಏಳು ಜನ್ಮಗಳಲ್ಲಿ ಕುಷ್ಠರೋಗಿಯಾಗಿ ಹುಟ್ಟುತ್ತಾನೆ. ಪರಮದುಃಖವನ್ನು ಅನುಭವಿಸುತ್ತಾನೆ. ಅಷ್ಟೇ ಅಲ್ಲ, ಗ್ರಹಣದ ಆದಿ ಅಂತ್ಯಗಳಲ್ಲಿ ಸ್ನಾನ ಮಾಡದವನು ಮುಂದಿನ ಗ್ರಹಣ ಬರುವವರೆ ಮೈಲಿಗೆಯಾಗಿರುತ್ತಾನೆ. ಆದ್ದರಿಂದ ಅಂತ್ಯದಲ್ಲಿ ಸ್ನಾನ ಮಾಡಿದರೇ ಮುಂದಿನ ಕಾರ್ಯಗಳಿಗೆ ಶುದ್ಧಿ.

ಗ್ರಹಣದ ಆರಂಭದಲ್ಲಿ ಸ್ನಾನ ಮಾಡಿದರೆ ಮಾತ್ರ ನಾವು ಮಾಡುವ ಜಪ, ಪಾರಾಯಣ ಮತ್ತು ದಾನಾದಿಗಳು ಫಲಪ್ರದ. ಇಲ್ಲದಿದ್ದರೆ ಸರ್ವಥಾ ಇಲ್ಲ. ಗ್ರಹಣದ ಆರಂಭದಲ್ಲಿ ಮಾಡುವ ಸ್ನಾನದಿಂದ ಜಪ-ಪಾರಾಯಣ-ದಾನಾದಿಗಳಿಗೆ ಮಾತ್ರ ಅಧಿಕಾರ. ಊಟ, ಉಪಾಹಾರಗಳಿಗಿಲ್ಲ. ಎಲ್ಲ ವರ್ಣದವರೂ ಗ್ರಹಣಕಾಲದಲ್ಲಿ ಮೈಲಿಗೆಯನ್ನು ಆಚರಿಸಬೇಕು. ಜನನಾಶೌಚವಿರುವವರು, ಜನನಾಶೌಚವಿರುವವರು,

ಮೃತಾಶೌಚವಿರುವವರು ಮತ್ತು ರಜಸ್ವಲೆಯಾದವರೂ ಸಹ ಗ್ರಹಣದ ಸ್ಪರ್ಶಸ್ನಾನ, ಮುಕ್ತಿಸ್ನಾನಗಳನ್ನು ಮಾಡಲೇಬೇಕು. ಅವರು ಜಪ ಪಾರಾಯಣಗಳನ್ನು ಮಾಡಬಾರದು

ಗ್ರಹಣದ ಎರಡೂ ಸ್ನಾನಗಳಲ್ಲಿ ಉಟ್ಟ ಬಟ್ಟೆಯಲ್ಲಿಯೇ ಸ್ನಾನ ಮಾಡಬೇಕು ಗ್ರಹಣಕಾಲದಲ್ಲಿ ಬಿಸಿನೀರಿನ ಸ್ನಾನ ಮಾಡಬಾರದು ಎಂದು ಯಮನ ಆದೇಶವಿದೆ. ತೀರ ಅಶಕ್ತರಾದವರು ಮಾತ್ರ ಬಿಸಿನೀರಿನಿಂದ ಸ್ನಾನವನ್ನು ಮಾಡಬೇಕು.

ಯಾವುದೇ ಬೇಯಿಸಿದ ಪದಾರ್ಥ ಗ್ರಹಣಕಾಲದಲ್ಲಿ ಮೈಲಿಗೆ, ಹೀಗಾಗಿ ಗ್ರಹಣದ ನಂತರ ಅದನ್ನು ತಿನ್ನಲು ಬರುವದಿಲ್ಲ.

ಗ್ರಹಣದ ಸಮಯದ ಸೂರ್ಯನ ಕಿರಣವು ದುಃಖಕರ ಮತ್ತು ಹಾನಿಕಾರಕ ಎಂದು ಪರಿಗಣಿಸಲಾಗಿದೆ. ಈ ಸಮಯದಲ್ಲಿ ಆಹಾರ ತಯಾರಿಸುವುದು ಮತ್ತು ಅದನ್ನು ಸೇವಿಸುವುದನ್ನು ನಿರಾಕರಿಸಲಾಗಿದೆ. ಈ ವೇಳೆಯಲ್ಲಿ ಎಲ್ಲಾ ವಸ್ತು ಕಲುಶಿತವಾಗಿರುತ್ತವೆ. ಅವುಗಳನ್ನು ಸೇವಿಸಿದರೆ ಅನಾರೋಗ್ಯ ಉಂಟಾಗುವುದು. ಹಾಲು, ಮೊಸರು, ತುಪ್ಪ ಮತ್ತು ಎಣ್ಣೆಯಲ್ಲಿ ಕರಿದ ಪದಾರ್ಥಗಳು, ಈ ಭೋಜ್ಯ ಪದಾರ್ಥಗಳ ಮೇಲೆ

ದರ್ಭೆಯನ್ನು ಹಾಕಿರಬೇಕು. ಆಗ ಮಾತ್ರ ಗ್ರಹಣದ ನಂತರವೂ ತೆಗೆದುಕೊಳ್ಳಲು ಬರುತ್ತದೆ. ನೀರೂ ಸಹ ಮೈಲಿಗೆಯಾಗುತ್ತದೆ. ಆದರೆ ತುಂಬ ದೊಡ್ಡದಾದ ಮಡಿಕೆಯಲ್ಲಿನ ನೀರಿನ ಮೇಲೆ ದರ್ಭೆ ಹಾಕಿದ್ದಾಗ ಮೈಲಿಗೆಯಿರುವದಿಲ್ಲ

ಗ್ರಹಣಕಾಲದಲ್ಲಿ ಬಿಸಿನೀರಿನ ಸ್ನಾನ ಮಾಡಬಾರದು. (ತೀರ ಅಶಕ್ತರನ್ನು ಹೊರತುಪಡಿಸಿ) ಗ್ರಹಣಕಾಲದಲ್ಲಿ ಮಲಮೂತ್ರ ವಿಸರ್ಜನೆ ಮಾಡಬಾರದು.

ಗ್ರಹಣಕಾಲದಲ್ಲಿ ಏನನ್ನೂ ತಿನ್ನಬಾರದು, ಏನನ್ನೂ ಕುಡಿಯಬಾರದು. (ಹಾಲು ಕುಡಿಯುವ ವಯಸ್ಸಿನ ಮಕ್ಕಳಿಗೂ ಸಾಧ್ಯವಿದ್ದಷ್ಟು ಹಾಲನ್ನು ಆ ಸಂದರ್ಭದಲ್ಲಿ ಕುಡಿಸಬೇಡಿ. ಆದರೆ, ಕೆಲವು ಬಾರಿ ಗ್ರಹಣದ ಸಮಯ ಹೆಚ್ಚಾಗಿದ್ದಾಗ ಕುಡಿಸಬಹುದು. ಆದರೆ ಬೇಯಿಸಿದ ಪದಾರ್ಥವನ್ನು ಅವರಿಗೂ ತಿನ್ನಿಸತಕ್ಕದ್ದಲ್ಲ).

ಗ್ರಹಣಕಾಲದಲ್ಲಿ ನಿದ್ರೆ ಮಾಡಬಾರದು. (ಮಾಡುವವರು ಬುದ್ಧಿಮಾಂದ್ಯರಾಗಿ ಹುಟ್ಟುತ್ತಾರೆ)

ಸೂರ್ಯಗ್ರಹಣದ ಸಮಯದಲ್ಲಿ ಬರೀಗಣ್ಣಿನಿಂದ ಸೂರ್ಯನನ್ನು ನೋಡಬಾರದು.

೨) ಗರ್ಭಿಣಿಯರು ಮನೆಯಿಂದ ಹೊರಗೆ ಬರಬಾರದು. ಯಾಕೆಂದರೆ ಸೂರ್ಯಗ್ರಹಣದ ಸಮಯದಲ್ಲಿ ಸೂರ್ಯನ ಕಿರಣಗಳು ಗರ್ಭಿಣಿಯರ ಮೇಲೆ ಬಿದ್ದಾಗ ಹೊಟ್ಟೆಯಲ್ಲಿರುವ ಮಗುವಿನ ಮೇಲೆ ದುಷ್ಪರಿಣಾಮವನ್ನುಂಟು ಮಾಡುತ್ತದೆ.

೩) ಸೂರ್ಯಗ್ರಹಣದ ಸಮಯದಲ್ಲಿ ನಿದ್ರೆ, ಸ್ನಾನ, ಊಟ ಅಥವಾ ಪ್ರಯಾಣ ಮಾಡದಿರುವುದು ಸೂಕ್ತ.

೪) ಈ ಸಮಯದಲ್ಲಿ ದೇವತಾ ವಿಗ್ರಹಗಳನ್ನು ಮುಟ್ಟಬಾರದು.

೫) ಹಣ, ಕಾಸಿಗೆ ಸಂಬಂಧಿಸಿದ ವ್ಯವಹಾರಗಳಲ್ಲಿ ಒಪ್ಪಂದವನ್ನು ಮಾಡಿಕೊಳ್ಳಬಾರದು.

೬) ಗ್ರಹಣದ ಸಮಯದಲ್ಲಿ ಬೆಳಕಿಗೆ ತೆರೆದಿದ್ದ ಹಣ್ಣು-ಹಂಪಲುಗಳನ್ನು ಸಹ ಸೇವಿಸಬಾರದು. ವೈಜ್ಞಾನಿಕವಾಗಿ ಸೂರ್ಯನ ಹಾನಿಕಾರಕ ಕಿರಣವು ಇವುಗಳ ಮೇಲೆ ಬಿದ್ದಿರುತ್ತವೆ.

★ ★ ★ ★

## ಗ್ರಹಣಕಾಲೇ ಪಠನೀಯಾಃ ಶ್ಲೋಕಾಃ

ಯೋಽಸೌ ವಜ್ರಧರೋ ದೇವ ಆದಿತ್ಯಾನಾಂ ಪ್ರಭುರ್ಮತಃ ।
ಸಹಸ್ರನಯನಃ ಶಕ್ರೋ ಗ್ರಹಪೀಡಾಂ ವ್ಯಪೋಹತು ॥ ೧ ॥

ಮುಖಂ ಯಃ ಸರ್ವದೇವಾನಾಂ ಸಪ್ತಾರ್ಚಿರಮಿತದ್ಯುತಿಃ ।
(ಸೂರ್ಯೋ)ಚಂದ್ರೋಪರಾಗಸಂಭೂತಾಮಗ್ನಿಃ ಪೀಡಾಂ ವ್ಯಪೋಹತು ॥ ೨ ॥

ಯಃ ಕರ್ಮಸಾಕ್ಷೀ ಲೋಕಾನಾಂ ಧರ್ಮೋ ಮಹಿಷವಾಹನಃ ।
ಯಮ(ಸೂರ್ಯೋ)ಶ್ಚಂದ್ರೋಪರಾಗೋತ್ಥಾಂ ಗ್ರಹಪೀಡಾಂ ವ್ಯಪೋಹತು ॥ ೩ ॥

ರಕ್ಷೋಗಣಾಧಿಪಸ್ಸಾಕ್ಷಾತ್ ನೀಲಾಂಜನಸಮಪ್ರಭಃ ।
ಖಡ್ಗಹಸ್ತೋಽತಿಭೀಮಶ್ಚ ಗ್ರಹಪೀಡಾಂ ವ್ಯಪೋಹತು ॥ ೪ ॥

ನಾಗಪಾಶಧರೋ ದೇವಃ ಸದಾ ಮಕರವಾಹನಃ ।
ಸ ಜಲಾಧಿಪತಿರ್ದೇವೋ ಗ್ರಹಪೀಡಾಂ ವ್ಯಪೋಹತು ॥ ೫ ॥

ಪ್ರಾಣರೂಪೋ ಹಿ ಲೋಕಾನಾಂ ಸದಾ ಕೃಷ್ಣಮೃಗಪ್ರಿಯಃ ।
ವಾಯು(ಸೂರ್ಯೋ)ಶ್ಚಂದ್ರೋಪರಾಗೋತ್ಥಾಂ ಗ್ರಹಪೀಡಾಂ ವ್ಯಪೋಹತು ॥ ೬ ॥

ಯೋಽಸೌ ನಿಧಿಪತಿರ್ದೇವಃ ಖಡ್ಗಶೂಲಗದಾಧರಃ ।
(ಸೂರ್ಯೋ)ಚಂದ್ರೋಪರಾಗಕಲುಷಂ ಧನದೋಽತ್ರ ವ್ಯಪೋಹತು ॥ ೭ ॥

ಯೋಽಸಾವಿಂದುಧರೋ ದೇವಃ ಪಿನಾಕೀ ವೃಷವಾಹನಃ ।
(ಸೂರ್ಯೋ)ಚಂದ್ರೋಪರಾಗಪಾಪಾನಿ ಸ ನಾಶಯತು ಶಂಕರಃ ॥ ೮ ॥

ತ್ರೈಲೋಕ್ಯೇ ಯಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ ।
ಬ್ರಹ್ಮವಿಷ್ಣ್ವರ್ಕರುದ್ರಾಶ್ಚ ದಹಂತು ಮಮ ಪಾತಕಮ್ ॥ ೯ ॥

## ಗ್ರಹಣದೋಷಶಾಂತಿಃ

ಇಂದ್ರೋಽನಲೋ ದಂಢಧರಶ್ಚ ರಕ್ಷಃ
ಪಾಶಾಯುಧೋ ವಾಯುಧನೇಶರುದ್ರಾಃ ।
ಕುರ್ವಂತು ಸರ್ವೇ ಮಮ ಜನ್ಮಋಕ್ಷ -
ರಾಶಿಸ್ಥ (ಸೂರ್ಯ) ಚಂದ್ರಗ್ರಹದೋಷಶಾಂತಿಮ್ ॥

ಯೋಽಸೌ ವಜ್ರಧರೋ ದೇವ ಆದಿತ್ಯಾನಾಂ ಪ್ರಭುರ್ಮತಃ ।
ಸೂರ್ಯಗ್ರಹೋಪರಾಗೋತ್ಥ ಗ್ರಹಪೀಡಾಂ ವ್ಯಪೋಹತು ॥ ೧ ॥

ಯೋऽಸೌ ದಂಡಧರೋ ದೇವಃ ಯಮೋ ಮಹಿಷವಾಹನಃ ।
ಸೂರ್ಯಗ್ರಹೋಪರಾಗೋತ್ಥ ಗ್ರಹಪೀಡಾಂ ವ್ಯಪೋಹತು ॥ ೨ ॥
ಯೋऽಸೌ ಶೂಲಧರೋ ದೇವಃ ಪಿನಾಕೀ ವೃಷವಾಹನಃ ।
ಸೂರ್ಯಗ್ರಹೋಪರಾಗೋತ್ಥ ಗ್ರಹಪೀಡಾಂ ವ್ಯಪೋಹತು ॥ ೩ ॥

## ಶ್ರೀ ರಾಹುದೇವ ಸ್ತೋತ್ರ

ಅಭಯ ಹರಿ ಅನುಗ್ರಹ ರಾಹುದೇವನೇ ನಮೋ ॥ಪ॥
ಸ್ವರ್ಭಾನು ಛಾಯಾಗ್ರಹಕೆ ನೀ ದೇವ ॥ಅ.ಪ॥
ಹೃತ್‌ತಿಮಿರ ತನು ರೋಗ ಸರ್ವಪೀಡೆ ಪರಿಹರಿಸಿ
ಸುದರ್ಶನೀಯ ಒಲಿಸೆನಗೆ ಸತ್‌ಜ್ಞಾನ ಕರ್ಮಜದೇವ ॥೧॥
ಮಹಾವೀರ್ಯನೇ ಊರ್ಧ್ವಕೇಶ ಮಹಾಶೀರ್ಷನೆ
ಮಹಾವಕ್ತ್ರ ಮಹಾದಂಷ್ಟ್ರ ಮಹಾಯಶ ನಮಸ್ತೇ ॥೨॥
ನೀರಜಪಿತ ಶ್ರೀ ಪ್ರಸನ್ನ ಶ್ರೀನಿವಾಸ ವಿಭು
ಹರಿಯ ಭೃತ್ಯನೇ ನಮೋ ಪಾಹಿ ಮಾಂ ಸತತ ॥೩॥

## ಶ್ರೀ ಕೇತುದೇವ ಸ್ತೋತ್ರ

ತ್ರಾತ ಹರಿ ಪದ್ಮಜರ ಅನುಗ್ರಹ ನಿಯಮನದಿ
ಕೇತುಗಳ ದೇವನೇ ಕೇತುವೇ ನಮಸ್ತೇ ॥ಪ॥
ಕರಾಳ ದ್ಯುತಿ ಸಂಕಾಶ ರೌದ್ರನೇ ನಮೊ
ಘೋರ ಪಾಪ ಕಷ್ಟಂಗಳ ದೂರಮಾಡಿ ಸಲಹೆನ್ನ ॥೧॥
ಅನೇಕರೂಪ ವರ್ಣಾಶ್ಚ ಶತಶೋಥ ಸಹಸ್ರಶಃ
ಎನ್ನನ್ನ ಕೃಪದಿ ಸಂರಕ್ಷಿಸೋ ಸತ್‌ಜ್ಞಾನ ಕರ್ಮಜದೇವ ॥೨॥
ವೇದಪಿತ ಶ್ರೀ ಪ್ರಸನ್ನ ಶ್ರೀನಿವಾಸ ಮುಕುಂದನ್ನ
ಸದಾ ದಯದಿ ಒಲಿಸೆನಗೆ ಪಾಹಿ ನಮೋ ಕೇತೋ ॥೩॥

ಈ ಮೇಲಿನ ಶ್ಲೋಕವನ್ನು ಒಂದು ಕಾಗದದ ಮೇಲೆ ಬರೆದು ಗ್ರಹಣ ಮುಗಿಯುವವರೆಗೂ ಇಟ್ಟುಕೊಂಡು

ಗ್ರಹಣಮೋಕ್ಷಾನಂತರ ದಕ್ಷಿಣೆ ಸಮೇತ ದಾನ ಮಾಡಬೇಕು– ಆಧಾರ ಒಂಟಿಕೊಪ್ಪಲ್ ಪಂಚಾಂಗ

# ಜನ್ಮದಿನದ ಕರ್ತವ್ಯಗಳು

**ಸರ್ವೈಃ ಸ್ವಜನ್ಮದಿವಸೇ ಸ್ನಾತೈರ್ಮಂಗಲವಾರಿಭಿಃ ।**
**ಗುರುದೇವಾಗ್ನಿವಿಪ್ರಾಶ್ಚ ಪೂಜನೀಯಾ ವಿಶೇಷತಃ ॥**
**ಸ್ವನಕ್ಷತ್ರಂ ಚ ಪಿತರಸ್ತಥಾ ದೇವಃ ಪ್ರಜಾಪತಿಃ ।**
**ಪ್ರತಿಸಂವತ್ಸರಂ ಯತ್ನಾತ್ ಕರ್ತವ್ಯಶ್ಚ ಮಹೋತ್ಸವಃ ॥**

ಜನ್ಮದಿನದಂದು ಹಬ್ಬವನ್ನು ಆಚರಿಸಬೇಕು. ಮಂಗಳಸ್ನಾನದೊಂದಿಗೆ ಹೊಸವಸ್ತ್ರವನ್ನುಟ್ಟು ಗುರುಹಿರಿಯರು ದೇವತೆಗಳಿಗೂ ನಮಸ್ಕಾರಮ ಮಾಡಿ ಪೂಜೆ ಮಾಡಬೇಕು . ಪಿತೃಗಳನ್ನೂ, ತನ್ನ ನಕ್ಷತ್ರದೇವತೆಯನ್ನೂ ಪ್ರಜಾಪತಿ ಇತ್ಯಾದಿದೇವತೆಗಳನ್ನೂ ಪೂಜಿಸಬೇಕು.

## ಸಂಕಲ್ಪ

**ಆಯುರಭಿವೃದ್ಧ್ಯರ್ಥಂ ವರ್ಷವೃದ್ಧಿಕರ್ಮ ಕರಿಷ್ಯೇ ।**
**ಶ್ರೀಗುರುಭ್ಯೋ ನಮಃ । ವೃದ್ಧಿಕರ್ಮಣ್ಯಾಜ್ಞಾ ದೀಯತಾಮ್ ।**
**ಗಂ ಗಣಪತಯೇ ನಮಃ । ಅವಿಘ್ನಂ ಕುರು ॥**

ರಂಗೋಲಿಯಿಂದ ಅಷ್ಟದಲಪದ್ಮವನ್ನು ಬರೆದು ಅದರ ಮೇಲೆ ತಟ್ಟೆಯಲ್ಲಿ ಅಕ್ಕಿಯನ್ನಿಟ್ಟು ಅದರಲ್ಲಿ ೧೬ ಬಟ್ಟಲಡಕೆಗಳನ್ನು ಇಟ್ಟು ದೇವತೆಗಳನ್ನು ಆವಾಹಿಸುತ್ತಾ ಮಂತ್ರಾಕ್ಷತೆ ಹಾಕಿ ಪೂಜೆ ಮಾಡಬೇಕು.

೧. **ಕುಲದೇವತಾಯೈ ನಮಃ । ಕುಲದೇವತಾಮ್ (ಲಕ್ಷ್ಮೀವೇಂಕಟೇಶಂ, ಲಕ್ಷ್ಮೀನರಸಿಂಹಂ) ಆವಾಹಯಾಮಿ ॥**

೨. ಜನ್ಮನಕ್ಷತ್ರದೇವತಾಯೈ ನಮಃ । ಜನ್ಮನಕ್ಷತ್ರದೇವತಾಂ ...ಆವಾಹಯಾಮಿ ॥ (ಜನ್ಮನಕ್ಷತ್ರದೇವತೆಯನ್ನು ಹೇಳಿ ಆವಾಹಿಸಬೇಕು.)

೩. ಪಿತೃಗಣೇಭ್ಯೋ ನಮಃ । ಪಿತೄನ್ ಆವಾಹಯಾಮಿ ॥

೪. ಪ್ರಜಾಪತಯೇ ನಮಃ । ಪ್ರಜಾಪತಿಂ ಆವಾಹಯಾಮಿ ॥

೫. ವೇದವ್ಯಾಸಾಯ ನಮಃ । ವೇದವ್ಯಾಸಮಾವಾಹಯಾಮಿ ॥

೬. ಜಾಮದಗ್ನ್ಯರಾಮಾಯನಮಃ । ಪರಶುರಾಮಮಾವಾಹಯಾಮಿ ॥

೭. ಹನೂಮತೇ ನಮಃ । ಹನೂಮಂತಮಾವಾಹಯಾಮಿ ॥

೮. ಅಶ್ವತ್ಥಾಮ್ನೇ ನಮಃ । ಅಶ್ವತ್ಥಾಮಾನಮಾವಾಹಯಾಮಿ ॥

೯. ಬಲಯೇ ನಮಃ । ಬಲಿಮಾವಾಹಯಾಮಿ ॥
೧೦. ವಿಭೀಷಣಾಯನಮಃ । ವಿಭೀಷಣಮಾವಾಹಯಾಮಿ ॥
೧೧. ಕೃಪಾಯ ನಮಃ । ಕೃಪಮಾವಾಹಯಾಮಿ ॥
೧೨. ಮಾರ್ಕಂಡೇಯಾಯ ನಮಃ । ಮಾರ್ಕಂಡೇಯಮಾವಾಹಯಾಮಿ ॥
೧೩. ಷಷ್ಠೀದೇವ್ಯೈ ನಮಃ । ಷಷ್ಠೀದೇವೀಮಾವಾಹಯಾಮಿ ॥
೧೪. ಪ್ರಹ್ಲಾದಾಯ ನಮಃ । ಪ್ರಹ್ಲಾದಮಾವಾಹಯಾಮಿ ॥
೧೫. ಭಾನವೇ ನಮಃ । ಭಾನುಮಾವಾಹಯಾಮಿ ॥
೧೬. ವಿಘ್ನೇಶಾಯ ನಮಃ । ವಿಘ್ನೇಶಮಾವಾಹಯಾಮಿ ॥

## ನಕ್ಷತ್ರದೇವತೆಗಳು ಕ್ರಮವಾಗಿ

೧. ಅಶ್ವಿನೀ-ಅಶ್ವಿನೌ ಆವಾಹಯಾಮಿ ॥

ತದಶ್ವಿನಾವಶ್ವಯುಜೋಪಯಾತಾಮ್ । ಶುಭಂ ಗಮಿಷ್ಠೌ ಸುಯಮೇಭಿರಶ್ವೈಃ । ಸ್ವಂ ನಕ್ಷತ್ರಗ್ಂ ಹವಿಷಾ ಯಜಂತೌ । ಮಧ್ವಾಸಂಪೃಕೌ ಯಜುಷಾ ಸಮಕ್ತೌ । ಯೌ ದೇವಾನಾಂ ಭಿಷಜೌ ಹವ್ಯವಾಹೌ । ವಿಶ್ವಸ್ಯ ದೂತಾವಮೃತಸ್ಯ ಗೋಪೌ । ತೌ ನಕ್ಷತ್ರಂ ಜುಜುಷಾಣೋಪಯಾತಾಮ್ । ನಮೋಽಶ್ವಿಭ್ಯಾಂ ಕೃಣುಮೋಽಶ್ವಯುಗ್ಭ್ಯಾಮ್ ॥೨೮॥

೨. ಭರಣೀ-ಯಮಂ ಆವಾಹಯಾಮಿ ॥

ಆಪ ಪಾಪ್ಮಾನಂ ಭರಣೀರ್ಭರಂತು । ತದ್ಯಮೋ ರಾಜಾ ಭಗವಾನ್, ವಿಚಷ್ಟಾಮ್॥ ಲೋಕಸ್ಯ ರಾಜಾ ಮಹತೋ ಮಹಾನ್, ಹಿ । ಸುಗಂ ನಃ ಪಂಥಾಮಭಯಂ ಕೃಣೋತು। ಯಸ್ಮಿನ್ನಕ್ಷತ್ರೇ ಯಮ ಏತಿ ರಾಜಾ । ಯಸ್ಮಿನ್ನೇನಮಭ್ಯಷಿಂಚಂತ ದೇವಾಃ । ತದಸ್ಯ ಚಿತ್ರಗ್ಂ ಹವಿಷಾ ಯಜಾಮ । ಅಪ ಪಾಪ್ಮಾನಂ ಭರಣೀರ್ಭರಂತು ॥ ೨೯ ॥

೩. ಕೃತ್ತಿಕಾ-ಅಗ್ನಿಂ ಆವಾಹಯಾಮಿ ॥

ಅಗ್ನಿರ್ನಃ ಪಾತು ಕೃತ್ತಿಕಾಃ । ನಕ್ಷತ್ರಂ ದೇವಮಿಂದ್ರಿಯಮ್ । ಇದಮಾಸಾಂ ವಿಚಕ್ಷಣಮ್ । ಹವಿರಾಸಂ ಜುಹೋತನ । ಯಸ್ಯ ಭಾಂತಿ ರಶ್ಮಯೋ ಯಸ್ಯ ಕೇತವಃ । ಯಸ್ಯೇಮಾ ವಿಶ್ವಾ ಭುವನಾನಿ ಸರ್ವಾ । ಸ ಕೃತ್ತಿಕಾಭಿರಬಿಸಂವಸಾನಃ । ಅಗ್ನಿರ್ನೋ ದೇವಸ್ಸುವಿತೇ ದಧಾತು ॥ ೧ ॥

೪. ರೋಹಿಣೀ-ಧಾತಾರಂ ಆವಾಹಯಾಮಿ ॥

ಪ್ರಜಾಪತೇ ರೋಹಿಣೀ ವೇತು ಪತ್ನೀ । ವಿಶ್ವರೂಪಾ ಬೃಹತೀ ಚಿತ್ರಭಾನುಃ । ಸಾ ನೋ ಯಜ್ಞಸ್ಯ ಸುವಿತೇ ದಧಾತು । ಯಥಾ ಜೀವೇಮ ಶರದಸ್ಸವೀರಾಃ । ರೋಹಿಣೀ ದೇವ್ಯುದಗಾತ್ಪುರಸ್ತಾತ್ । ವಿಶ್ವಾ ರೂಪಾಣಿ ಪ್ರತಿಮೋದಮಾನಾ । ಪ್ರಜಾಪತಿಗ್ಂ ಹವಿಷಾ ವರ್ಧಯಂತೀ । ಪ್ರಿಯಾ ದೇವಾನಾಮುಪಯಾತು ಯಜ್ಞಮ್ ॥ ೨ ॥

೫. ಮೃಗಶಿರಸ್-ಶಶಿನಂ ಆವಾಹಯಾಮಿ ॥

ಸೋಮೋ ರಾಜಾ ಮೃಗಶೀರ್‌ಷೇಣ ಆಗನ್ನ್ । ಶಿವಂ ನಕ್ಷತ್ರಂ ಪ್ರಿಯಮಸ್ಯ ಧಾಮ। ಆಪ್ಯಾಯಮಾನೋ ಬಹುಧಾ ಜನೇಷು । ರೇತಃ ಪ್ರಜಾಂ ಯಜಮಾನೇ ದಧಾತು। ಯತ್ತೇ ನಕ್ಷತ್ರಂ ಮೃಗಶೀರ್‌ಷಮಸ್ತಿ । ಪ್ರಿಯಗ್ಂ ರಾಜನ್ ಪ್ರಿಯತಮಂ ಪ್ರಿಯಾಣಾಮ್। ತಸ್ಮೈ ತೇ ಸೋಮ ಹವಿಷಾ ವಿಧೇಮ । ಶನ್ನ ಏಧಿ ದ್ವಿಪದೇ ಶಂ ಚತುಷ್ಪದೇ ॥೩॥

೬. ಆರ್ದ್ರಾ-ರುದ್ರಂ ಆವಾಹಯಾಮಿ ॥

ಆರ್ದ್ರಯಾ ರುದ್ರಃ ಪ್ರಥಮಾನ ಏತಿ । ಶ್ರೇಷ್ಠೋ ದೇವಾನಾಂ ಪತಿರಘ್ನಿಯಾನಾಮ್। ನಕ್ಷತ್ರಮಸ್ಯ ಹವಿಷಾ ವಿಧೇಮ । ಮಾ ನಃ ಪ್ರಜಾಗ್ಂ ರೀರಿಷನ್ಮೋತ ವೀರಾನ್ । ಹೇತೀ ರುದ್ರಸ್ಯ ಪರಿಣೋ ವೃಣಕ್ತು । ಆರ್ದ್ರಾ ನಕ್ಷತ್ರಂ ಜುಷತಾಗ್ಂ ಹವಿರ್ನಃ । ಪ್ರಮುಂಚಮಾನೌ ದುರಿತಾನಿ ವಿಶ್ವಾ । ಅಪಾಘಶಗ್ಂಸಂ ನುದತಾಮರಾತಿಮ್ ॥೪॥

೭. ಪುನರ್ವಸು-ಅದಿತಿಂ ಆವಾಹಯಾಮಿ ॥

ಪುನರ್ನೋ ದೇವ್ಯದಿತಿಸ್ಸ್ಪೃಣೋತು । ಪುನರ್ವಸೂ ನಃ ಪುನರೇತಾಂ ಯಜ್ಞಮ್।ಪುನರ್ನೋ ದೇವಾ ಅಭಿಯಂತು ಸರ್ವೇ । ಪುನಃ ಪುನರ್ವೋ ಹವಿಷಾ ಯಜಾಮಃ । ಏವಾ ನ ದೇವ್ಯದಿತಿರನರ್ವಾ । ವಿಶ್ವಸ್ಯ ಭರ್ತ್ರೀ ಜಗತಃ ಪ್ರತಿಷ್ಠಾ । ಪುನರ್ವಸೂ ಹವಿಷಾ ವರ್ಧಯಂತೀ । ಪ್ರಿಯಂ ದೇವಾನಾಮಪ್ಯೇತು ಪಾಥಃ ॥೫॥

೮. ಪುಷ್ಯ-ಬೃಹಸ್ಪತಿಂ ಆವಾಹಯಾಮಿ ॥

ಬೃಹಸ್ಪತಿಃ ಪ್ರಥಮಂ ಜಾಯಮಾನಃ । ತಿಷ್ಯಂ ನಕ್ಷತ್ರಮಭಿ ಸಂಬಭೂವ । ಶ್ರೇಷ್ಠೋ ದೇವಾನಾಂ ಪೃತನಾಸು ಜಿಷ್ಣುಃ । ದಿಶೋಽನು ಸರ್ವಾ ಅಭಯಂ ನೋ ಅಸ್ತು । ತಿಷ್ಯಃ ಪುರಸ್ತಾದುತ ಮಧ್ಯತೋ ನಃ । ಬೃಹಸ್ಪತಿರ್ನಃ ಪರಿಪಾತು ಪಶ್ಚಾತ್ । ಬಾಧೇತಾಂ ದ್ವೇಷೋ ಅಭಯಂ ಕೃಣುತಾಮ್ । ಸುವೀರ್ಯಸ್ಯ ಪತಯಸ್ಸ್ಯಾಮ ॥ ೬ ॥

೯. ಆಶ್ಲೇಷಾ-ಸರ್ಪಾನ್ ಆವಾಹಯಾಮಿ ॥

ಇದಗ್ಂ ಸರ್ಪೇಭ್ಯೋ ಹವಿರಸ್ತು ಜುಷ್ಟಮ್ । ಆಶ್ರೇಷಾ ಯೇಷಾಮನುಯಂತಿ ಚೇತಃ । ಯೇ ಅಂತರಿಕ್ಷಂ ಪೃಥಿವೀಂ ಕ್ಷಿಯಂತಿ । ತೇ ನಸ್ಸರ್ಪಾಸೋ ಹವಮಾಗಮಿಷ್ಠಾಃ । ಯೇ ರೋಚನೇ ಸೂರ್ಯಸ್ಯಾಪಿ ಸರ್ಪಾಃ । ಯೇ ದಿವಂ ದೇವೀಮನು ಸಂಚರಂತಿ । ಯೇಷಾಮಾಶ್ರೇಷಾ ಅನುಯಂತಿ ಕಾಮಮ್ । ತೇಭ್ಯಸ್ಸರ್ಪೇಭ್ಯೋ ಮಧುಮಜ್ಜುಹೋಮಿ ॥ ೭ ॥

೧೦. ಮಖಾ-ಪಿತೄನ್ ಆವಾಹಯಾಮಿ ॥

ಉಪಹೂತಾಃ ಪಿತರೋ ಯೇ ಮಘಾಸು । ಮನೋಜವಸಸ್ಸುಕೃತಸ್ಸುಕೃತ್ಯಾಃ । ತೇ ನೋ ನಕ್ಷತ್ರೇ ಹಮಾಗಮಿಷ್ಠಾಃ । ಸ್ವಧಾಭಿರ್ಯಜ್ಞಂ ಪ್ರಯತಂ ಜುಷಂತಾಮ್ । ಯೇ ಅಗ್ನಿದಗ್ಧಾಯೇಽನಗ್ನಿದಗ್ಧಾಃ । ಯೇಽಮುಂಲೋಕಂ ಪಿತರಃ, ಕ್ಷಿಯಂತಿ । ಯಾಗ್‌ಶ್ಚ ವಿದ್ಮಯಾಗ್ಂ ಉ ಚ ನ ಪ್ರವಿದ್ಮ । ಮಘಾಸು ಯಜ್ಞಗ್ಂ ಸುಕೃತಂ ಜುಷಂತಾಮ್ ॥ ೮ ॥

೧೧. ಪೂರ್ವಫಲ್ಗುನೀ-ಅರ್ಯಮಣಂ ಆವಾಹಯಾಮಿ ॥

ಗವಾಂ ಪತಿಃ ಫಲ್ಗುನೀನಾಮಸಿ ತ್ವಮ್ । ತದರ್ಯಮನ್ವರುಣ ಮಿತ್ರ ಚಾರು । ತಂ ತ್ವಾ ವಯಗ್ಂ ಸನಿತಾರಗ್ಂ ಸನೀನಾಮ್ । ಜೀವಾ ಜೀವಂತಮುಪ ಸಂವಿಶೇಮ। ಯೇನೇಮಾ ವಿಶ್ವಾ ಭುವನಾನಿ ಸಂಜಿತಾ । ಯಸ್ಯ ದೇವಾ ಅನು ಸಂಯಂತಿ ಚೇತಃ। ಅರ್ಯಮಾ ರಾಜಾಽಜರಸ್ತುವಿಷ್ಮಾನ್ । ಫಲ್ಗುನೀನಾಮೃಷಭೋ ರೋರವೀತಿ ॥೯॥

೧೨. ಉತ್ತರಫಲ್ಗುನೀ-ಭಗಂ ಆವಾಹಯಾಮಿ ॥

ಶ್ರೇಷ್ಠೋ ದೇವಾನಾಂ ಭಗವೋ ಭಗಾಸಿ । ತತ್ತ್ವಾ ವಿದುಃ ಫಲ್ಗುನೀಸ್ತಸ್ಯ ವಿತ್ತಾತ್ । ಅಸ್ಮಭ್ಯಂ ಕ್ಷತ್ರಮಜರಗ್ಂ ಸುವೀರ್ಯಮ್ । ಗೋಮದಶ್ವವದುಪಸಂನುದೇಹ । ಭಗೋ ಹ ದಾತಾ ಭಗ ಇತ್ಪ್ರದಾತಾ । ಭಗೋ ದೇವೀಃ ಫಲ್ಗುನೀರಾವಿವೇಶ । ಭಗಸ್ಯೇತ್ತಂ ಪ್ರಸವಂ ಗವೇಮ । ಯತ್ರ ದೇವೈಸ್ಸಧಮಾದಂ ಮದೇಮ ॥ ೧೦ ॥

೧೩. ಹಸ್ತ-ರವಿಂ ಆವಾಹಯಾಮಿ ॥

ಆಯಾತು ದೇವಸ್ಸವಿತೋಪಯಾತು । ಹಿರಣ್ಯಯೇನ ಸುವೃತಾ ರಥೇನ । ವಹನ್, ಹಸ್ತಗ್ಂ ಸುಭಗಂ ವಿದ್ಮನಾಪಸಮ್ । ಪ್ರಯಚ್ಛಂತಂ ಪಪುರಿಂ ಪುಣ್ಯಮಚ್ಛ ।

ಹಸ್ತಃಪ್ರಯಚ್ಛತ್ವಮೃತಂ ವಸೀಯಃ । ದಕ್ಷಿಣೇನ ಪ್ರತಿಗೃಭ್ಣೀಮ ಏನತ್ । ದಾತಾರಮದ್ಯ ಸವಿತಾ ವಿದೇಯ । ಯೋ ನೋ ಹಸ್ತಾಯ ಪ್ರಸೂವತಿ ಯಜ್ಞಮ್ ॥ ೧೧ ॥

೧೪. ಚಿತ್ತಾ-ತ್ವಷ್ಟಾರಂ ॥

ತ್ವಷ್ಟಾ ನಕ್ಷತ್ರಮಭ್ಯೇತಿ ಚಿತ್ರಾಮ್ । ಸುಭಗ್ಂಸಸಂ ಯುವತಿಗ್ಂ ರೋಚಮಾನಾಮ್। ನಿವೇಶಯನ್ನಮೃತಾನ್ಮರ್ತ್ಯಾಗ್ಶ್ಚ। ರೂಪಾಣಿ ಪಿಗ್ಂಶನ್ ಭುವನಾನಿ ವಿಶ್ವಾ। ತನ್ನಸ್ತ್ವಷ್ಟಾ ತದು ಚಿತ್ರಾ ವಿಚಷ್ಟಾಮ್ । ತನ್ನಕ್ಷತ್ರಂ ಭೂರಿದಾ ಅಸ್ತು ಮಹ್ಯಮ್ । ತನ್ನಃ ಪ್ರಜಾಂ ವೀರವತೀಗ್ಂ ಸನೋತು । ಗೋಭಿರ್ನೋ ಅಶ್ವೈಸ್ಸಮನಕ್ತು ಯಜ್ಞಮ ॥ ೧೨ ॥

೧೫. ಸ್ವಾತಿ-ವಾಯುಂ ಆವಾಹಯಾಮಿ ॥

ವಾಯುರ್ನಕ್ಷತ್ರಮಭ್ಯೇತಿ ನಿಷ್ಟ್ಯಾಮ್ । ತಿಗ್ಮಶೃಂಗೋ ವೃಷಭೋರೋರುವಾಣಃ। ಸಮೀರಯನ್ ಭುವನಾ ಮಾತರಿಶ್ವಾ । ಅಪ ದ್ವೇಷಾಗ್ಂಸಿ ನುದತಾಮಾರಾತೀಃ । ತನ್ನೋ ವಾಯುಸ್ತದು ನಿಷ್ಟ್ಯಾ ಶೃಣೋತು । ತನ್ನಕ್ಷತ್ರಂ ಭೂರಿದಾ ಅಸ್ತು ಮಹ್ಯಮ್। ತನ್ನೋ ದೇವಾಸೋ ಅನುಜಾನಂತು ಕಾಮಮ್ । ಯಥಾ ತರೇಮ ದುರಿತಾನಿ ವಿಶ್ವಾ ॥ ೧೩ ॥

೧೬. ವಿಶಾಖಾ-ಇಂದ್ರಾಗ್ನೀ ಆವಾಹಯಾಮಿ ॥

ದೂರಮಸ್ಮಚ್ಛತ್ರವೋ ಯಂತು ಭೀತಾಃ । ತದಿಂದ್ರಾಗ್ನೀ ಕೃಣುತಾಂ ತದ್ವಿಶಾಖೇ । ತನ್ನೋ ದೇವಾ ಅನುಮದಂತು ಯಜ್ಞಮ್ । ಪಶ್ಚಾತ್ಪುರಸ್ತಾದಭಯಂ ನೋ ಅಸ್ತು । ನಕ್ಷತ್ರಾಣಾಮಧಿಪತ್ನೀ ವಿಶಾಖೇ । ಶ್ರೇಷ್ಠಾವಿಂದ್ರಾಗ್ನೀ ಭುವನಸ್ಯ ಗೋಪೌ । ವಿಷೂಚಶ್ಶತ್ರೂನಪಬಾಧಮಾನೌ । ಅಪ ಕ್ಷುಧಂ ನುದತಾಮರಾತಿಮ್ ॥ ೧೪ ॥

೧೭. ಅನುರಾಧಾ-ಮಿತ್ರಂ ಆವಾಹಯಾಮಿ ॥

ಪೂರ್ಣಾ ಪಶ್ಚಾದುತ ಪೂರ್ಣಾ ಪುರಸ್ತಾತ್ । ಉನ್ಮಧ್ಯತಃ ಪೌರ್ಣಮಾಸೀ ಜಿಗಾಯ। ತಸ್ಯಾಂ ದೇವಾ ಅಧಿ ಸಂವಸಂತಃ । ಉತ್ತಮೇ ನಾಕ ಇಹ ಮಾದಯಂತಾಮ್ । ಪೃಥ್ವೀ ಸುವರ್ಚಾ ಯುವತಿಸ್ಸಜೋಷಾಃ । ಪೌರ್ಣಮಾಸ್ಯುದಗಾಚ್ಛೋಭಮಾನಾ । ಆಪ್ಯಾಯಯಂತೀ ದುರಿತಾನಿ ವಿಶ್ವಾ। ಉರುಂ ದುಹಾಂ ಯಜಮಾನಾಯ ಯಜ್ಞಮ್ ॥ ೧೫ ॥

ಋಧ್ಯಾಸ್ಮ ಹವ್ಯೈರ್ನಮಸೋಪಸದ್ಯ । ಮಿತ್ರಂ ದೇವಂ ಮಿತ್ರಧೇಯಂ ನೋ ಅಸ್ತು। ಅನೂರಾಧಾನ್, ಹವಿಷಾ ವರ್ಧಯಂತಃ । ಶತಂ ಜೀವೇಮ ಶರದಸ್ಸವೀರಾಃ । ಚಿತ್ರಂ ನಕ್ಷತ್ರಮುದಗಾತ್ಪುರಸ್ತಾತ್ । ಅನೂರಾಧಾಸ ಇತಿ ಯದ್ವದಂತಿ । ತನ್ಮಿತ್ರ ಏತಿ ಪಥಿಭಿರ್ದೇವಯಾನೈಃ । ಹಿರಣ್ಯಯೈರ್ವಿತತೈರಂತರಿಕ್ಷೇ ॥ ೧೭ ॥

೧೮. ಜ್ಯೇಷ್ಠಾ-ಇಂದ್ರಂ ಆವಾಹಯಾಮಿ ॥

ಇಂದ್ರೋ ಜ್ಯೇಷ್ಠಾಮನು ನಕ್ಷತ್ರಮೇತಿ । ಯಸ್ಮಿನ್ವೃತ್ರಂ ವೃತ್ರತೂರ್ಯೇ ತತಾರ । ತಸ್ಮಿನ್ವಯಮಮೃತಂ । ದುಹಾನಾಃ । ಕ್ಷುಧಂ ತರೇಮ ದುರಿತಿಂ ದುರಿಷ್ಟಿಮ್ । ಪುರಂದರಾಯ ವೃಷಭಾಯ ಧೃಷ್ಣವೇ । ಅಷಾಢಾಯ ಸಹಮಾನಾಯ ವೀಢುಷೇ । ಇಂದ್ರಾಯ ಜ್ಯೇಷ್ಠಾ ಮಧುಮದ್ದುಹಾನಾ । ಉರಂ ಕೃಣೋತು ಯಜಮಾನಾಯ ಲೋಕಮ್ ॥೧೭॥

೧೯. ಮೂಲ-ನಿರ್‌ಋತಿಂ ಆವಾಹಯಾಮಿ ॥

ಮೂಲಂ ಪ್ರಜಾಂ ವೀರವತೀಂ ವಿದೇಯ । ಪರಾಚ್ಯೇತು ನಿರ್‌ಋತಿಃ ಪರಾಚಾ। ಗೋಭಿರ್ನಕ್ಷತ್ರಂ ಪಶುಭಿಸ್ಸಮಕ್ತಮ್ । ಅಹರ್ಭೂಯಾದ್ಯಜಮಾನಾಯ ಮಹ್ಯಮ್॥ ಅಹರ್ನೋ ಅದ್ಯ ಸುವಿತೇ ದಧಾತು । ಮೂಲಂ ನಕ್ಷತ್ರಮಿತಿ ಯದ್ವದಂತಿ । ಪರಾಚೀಂ ವಾಚಾ ನಿರ್‌ಋತಿಂ ನುದಾಮಿ । ಶಿವಂ ಪ್ರಜಾಯೈ ಶಿವಮಸ್ತು ಮಹ್ಯಮ್ ॥೧೮॥

೨೦. ಪೂರ್ವಾಷಾಢಾ-ಅಪಃ ಆವಾಹಯಾಮಿ ॥

ಯಾ ದಿವ್ಯಾ ಆಪಃ ಪಯಸಾ ಸಂಬಭೂವುಃ । ಯಾ ಅಂತರಿಕ್ಷ ಉತ ಪಾರ್ಥಿವೀರ್ಯಾಃ । ಯಾಸಾಮಷಾಢಾ ಅನುಯಂತಿ ಕಾಮಮ್ । ತಾ ನ ಆಪಶ್ಶಗ್ಂ ಸ್ಯೋನಾ ಭವಂತು । ಯಾಶ್ಚ ಕೂಪ್ಯಾ ಯಾಶ್ಚ ನಾದ್ಯಾಸ್ಸಮುದ್ರಿಯಾಃ । ಯಾಶ್ಚ ವೈಶಂತೀರುತ ಪ್ರಾಸಚೀರ್ಯಾಃ । ಯಾಸಾಮಷಾಢಾ ಮಧು ಭಕ್ಷಯಂತಿ । ತಾ ನ ಆಪಶ್ಶಗ್ಂ ಸ್ಯೋನಾ ಭವಂತು ॥ ೧೯ ॥

೨೧. ಉತ್ತರಾಷಾಢಾ-ವಿಶ್ವಾನ್ ದೇವಾನ್ ಆವಾಹಯಾಮಿ ॥

ತನ್ನೋ ವಿಶ್ವೇ ಉಪಶೃಣ್ವಂತು ದೇವಾಃ । ತದಷಾಢಾ ಅಭಿ ಸಂಯಂತು ಯಜ್ಞಮ್। ತನ್ನಕ್ಷತ್ರಂ ಪ್ರಥತಾಂ ಪಶುಭ್ಯಃ । ಕೃಷಿರ್ವೃಷ್ಟಿರ್ಯಜಮಾನಾಯ ಕಲ್ಪತಾಮ್ । ಶುಭ್ರಾಃ

ಕನ್ಯಾ ಯುವತಯಸ್ಸುಪೇಶಸಃ । ಕರ್ಮಕೃತಸ್ಸುಕೃತೋ ವೀರ್ಯಾವತೀಃ । ವಿಶ್ವಾನ್ದೇವಾನ್, ಹವಿಷಾ ವರ್ಧಯಂತೀಃ । ಅಷಾಢಾಃ ಕಾಮಮುಪಯಾಂತು ಯಜ್ಞಮ್ ॥ ೨೦ ॥

ಯಸ್ಮಿನ್‌ಬ್ರಹ್ಮಾಽಭ್ಯಜಯತ್ಸರ್ವಮೇತತ್ । ಅಮುಂ ಚ ಎ ಲೋಕಮಿದಮೂ ಚ ಡ ಸರ್ವಮ್ । ತನ್ನೋ ನಕ್ಷತ್ರಮಭಿಜಿದ್ವಿಜಿತ್ಯ । ಶ್ರಿಯಂ ದಧಾತ್ವಹನೀಯಮಾನಮ್। ಉಭೌ ಲೋಕೌ ಬ್ರಹ್ಮಣಾ ಸಂಜಿತೇಮೌ । ತನ್ನೋ ನಕ್ಷತ್ರಮಭಿಜಿದ್ವಿಚಷ್ಟಾಮ್ । ತಸ್ಮಿನ್ವಯಂ ಪೃತನಾಸ್ಸಂ ಜಯೇಮ । ತನ್ನೋ ದೇವಾಸೋ ಅನುಜಾನಂತು ಕಾಮಮ್ ॥೨೧॥

೨೨. ಶ್ರವಣ-ವಿಷ್ಣುಂ ಆವಾಹಯಾಮಿ ॥

ಶೃಣ್ವಂತಿ ಶ್ರೋಣಾಮಮೃತಸ್ಯ ಗೋಪಾಮ್ । ಪುಣ್ಯಾಮಸ್ಯಾ ಉಪಶೃಣೋಮಿ ವಾಚಮ್ । ಮಹೀಂ ದೇವೀಂ ವಿಷ್ಣುಪತ್ನೀಮಜೂರ್ಯಾಮ್ । ಪ್ರತೀಚೀಮೇನಾಗ್‌ಂ ಹವಿಷಾ ಯಜಾಮಃ । ತ್ರೇಧಾ ವಿಷ್ಣುರುರುಗಾಯೋ ವಿಚಕ್ರಮೇ । ಮಹೀಂ ದಿವಂ ಪೃಥಿವೀಮಂತರಿಕ್ಷಮ್ । ತಚ್ಛ್ರೋಣೈತಿ ಶ್ರವ ಇಚ್ಛಮಾನಾ । ಪುಣ್ಯಗ್‌ಂ ಶ್ಲೋಕಂ ಯಜಮಾನಾಯ ಕೃಣ್ವತೀ ॥ ೨೨ ॥

೨೩. ಧನಿಷ್ಠಾ-ವಸೂನ್ ಆವಾಹಯಾಮಿ ॥

ಅಷ್ಟೌ ದೇವಾ ವಸವಸ್ಸೋಮ್ಯಾಸಃ । ಚತಸ್ರೋಽದೇವೀರಜರಾಶ್ಶ್ರವಿಷ್ಠಾಃ । ತೇ ಯಜ್ಞಂ ಪಾಂತು ರಜಸಃ ಪರಸ್ತಾತ್ । ದಕ್ಷಿಣತೋಽಭಿಯಂತು ಶ್ರವಿಷ್ಠಾಃ । ಪುಣ್ಯಂ ನಕ್ಷತ್ರಮಭಿ ಸಂವಿಶಾಮ । ಮಾ ನೋ ಅರಾತಿರಘಶಗ್‌ಂಸಾಽಗನ್ ॥ ೨೩ ॥

೨೪. ಶತಭಿಷಕ್-ವರುಣಂ ಆವಾಹಯಾಮಿ ॥

ಕ್ಷತ್ರಸ್ಯ ರಾಜಾ ವರುಣೋಽಧಿರಾಜಃ । ನಕ್ಷತ್ರಾಣಾಗ್‌ಂ ಶತಭಿಷಗ್ವಸಿಷ್ಠಃ । ತೌ ದೇವೇಭ್ಯಃ ಕೃಣುತೋ ದೀರ್ಘಮಾಯುಃ । ಶತಗ್‌ಂ ಸಹಸ್ರಾ ಭೇಷಜಾನಿ ಧತ್ತಃ । ಯಜ್ಞಂ ನೋ ರಾಜಾ ವರುಣ ಉಪಯಾತು । ತನ್ನೋ ವಿಶ್ವೇ ಅಭಿ ಸಂಯಂತು ದೇವಾಃ। ತನ್ನೋ ನಕ್ಷತ್ರಗ್‌ಂ ಶತಭಿಷಗ್ಜುಷಾಣಮ್ । ದೀರ್ಘಮಾಯುಃ ಪ್ರತಿರದ್ಭೇಷಜಾನಿ ॥೨೪॥

೨೫. ಪೂರ್ವಾಭಾದ್ರಾ-ಅಜೈಕಪಾದಂ ಆವಾಹಯಾಮಿ ॥

ಅಜ ಏಕಪಾದುದಗಾತ್ಪುರಸ್ತಾತ್ । ವಿಶ್ವಾ ಭೂತಾನಿ ಪ್ರತಿ ಮೋದಮಾನಃ । ತಸ್ಯ ದೇವಾಃ ಪ್ರಸವಂ ಯಂತಿ ಸರ್ವೇ । ಪ್ರೋಷ್ಠಪದಾಸೋ ಅಮೃತಸ್ಯ ಗೋಪಾಃ ।

ವಿಭ್ರಾಜಮಾನಸ್ಸಮಿಧಾನ ಉಗ್ರಃ । ಆಽಂತರಿಕ್ಷಮರುಹದಗನ್ದ್ಯಾಮ್ । ತಗ್ಂ ಸೂರ್ಯಂ ದೇವಮಜಮೇಕಪಾದಮ್ । ಪ್ರೋಷ್ಠಪದಾಸೋ ಅನುಯಂತಿ ಸರ್ವೇ॥

೨೬. ಉತ್ತರಾಷಾಢಾ-ಅಹಿರ್ಬುಧ್ನ್ಯಂ ಆವಾಹಯಾಮಿ ॥

ಅಹಿರ್ಬುಧ್ನಿಯಃ ಪ್ರಥಮಾನ ಏತಿ । ಶ್ರೇಷ್ಠೋ ದೇವಾನಾಮುತ ಮಾನುಷಾಣಾಮ್ ತಂ ಬ್ರಾಹ್ಮಣಾಸ್ಸೋಮಪಾಸ್ಸೋಮ್ಯಾಸಃ । ಪ್ರೋಷ್ಠಪದಾಸೋ ಅಭಿ ರಕ್ಷಂತಿ ಸರ್ವೇ । ಚತ್ವಾರ ಏಕಮಭಿ ಕರ್ಮ ದೇವಾಃ । ಪ್ರೋಷ್ಠಪದಾಸ ಇತಿ ಯಾನ್, ವದಂತಿ । ತೇ ಬುಧ್ನಿಯಂ ಪರಿಷದ್ಯಗ್ಗ್ ಸ್ತುವಂತಃ । ಅಹಿಗ್ಂ ರಕ್ಷಂತಿ ನಮಸೋಪಸದ್ಯ ॥ ೨೬ ॥

೨೭. ರೇವತಿ-ಪೂಷಣಂ ಆವಾಹಯಾಮಿ ॥

ಪೂಷಾ ರೇವತ್ಯನ್ವೇತಿ ಪಂಥಾಮ್ । ಪುಷ್ಟಿಪತೀ ಪಶುಪಾ ವಾಜಬಸ್ತ್ಯೌ । ಇಮಾನಿ ಹವ್ಯಾಪ್ರಯತಾ ಜುಷಾಣಾ । ಸುಗೈರ್ನೋ ಯಾನ್ಯೈರುಪಯಾತಾಂ ಯಜ್ಞಮ್ । ಕ್ಷುದ್ರಾನ್ಪಶೂನ್ರಕ್ಷತು ರೇವತೀ ನಃ । ಗಾವೋ ನೋ ಅಶ್ವಾಗ್ಂ ಅನ್ವೇತು ಪೂಷಾ । ಅನ್ನಗ್ಂ ರಕ್ಷಂತೌ ಬಹುಧಾ ವಿರೂಪಮ್ । ವಾಜಗ್ಂ ಸನುತಾಂ ಯಜಮಾನಾಯ ಯಜ್ಞಮ್ ॥ ೨೭ ॥

ಕೈಯಲ್ಲಿ ಅಕ್ಷತೆ-ಪುಷ್ಪಗಳನ್ನು ಹಿಡಿದು 'ಕುಲದೇವತಾದಿಷೋಡಶ ವರ್ಷವೃದ್ಧಿ ದೇವತಾಃ ಏತೇಷು ಅಕ್ಷತಪುಂಜೇಷು ಆವಾಹಯಾಮಿ' ಹೀಗೆನ್ನುತ್ತಾ ಸ್ವಸ್ತಿಕೆಯ ಮೇಲೆ ಹಾಕಿ ಷೋಡಶೋಪಚಾರಪೂಜೆಯನ್ನು ಮಾಡಬೇಕು. ಪಾಯಸ ಅಥವಾ ಫಲವನ್ನು ನಿವೇದಿಸಿ ಎದ್ದು ನಿಂತು ಪ್ರಾರ್ಥಿಸಬೇಕು.

## ಪ್ರಾರ್ಥನೆಗಾಗಿ ಶ್ಲೋಕಗಳು

ಮಾರ್ಕಂಡೇಯಮಹಾಭಾಗ ಸಪ್ತಕಲ್ಪಾಂತಜೀವನ ।
ಆಯುರಾರೋಗ್ಯಮೈಶ್ವರ್ಯಂ ದೇಹಿ ಮೇ ಮುನಿಪುಂಗವ ॥
ನವವರ್ಷಾಯುಷಂ ಪ್ರಾಪ್ಯ ತಪಸಾ ಮಹತಾ ಪುರಾ ।
ಸಪ್ತಕಲ್ಪಂ ಕೃತಂ ಯೇನ ಆಯುಷ್ಯಂ ಮೇ ಸ ಯಚ್ಛತು ॥
ಮಾರ್ಕಂಡೇಯಾಯ ನಮಃ ॥

ಆಯುರ್ದೇಹಿ ಯಶೋ ದೇಹಿ ಶ್ರಿಯಂ ದೇಹಿ ವಿನಾಯಕ ।
ಪುತ್ರಪೌತ್ರಾನ್ ಪ್ರಪೌತ್ರಾಂಶ್ಚ ದೇಹಿ ಮೇ ಗಣನಾಯಕ ॥
ಗಣಪತಯೇ ನಮಃ ॥

ಷಷ್ಠೀದೇವಿ ನಮಸ್ತುಭ್ಯಂ ಸೂತಿಕಾಗೃಹಶಾಯಿನಿ ।
ಪೂಜಿತೇ ಪರಯಾ ಭಕ್ತ್ಯಾ ದೀರ್ಘಮಾಯುಃ ಪ್ರಯಚ್ಛ ಮೇ ॥
ಷಷ್ಠೀದೇವ್ಯೈ ನಮಃ ॥

ದ್ರೋಣಪುತ್ರ ಮಹಾಭಾಗ ರುದ್ರತೇಜಃಸಮುದ್ಭವ ।
ಆಯುರ್ಬಲಂ ಯಶೋ ದೇಹಿ ಚಾಶ್ವತ್ಥಾಮನ್ ನಮೋಽಸ್ತು ತೇ ॥
ಅಶ್ವತ್ಥಾಮ್ನೇ ನಮಃ ॥

ದೈತ್ಯೇಂದ್ರಕುಲಸಂಭೂತ ದಾನಯಜ್ಞಕ್ರಿಯಾಪರ ।
ಬಲೇ ತ್ವಾಂ ಶರಣಂ ಯಾಮಿ ದೀರ್ಘಮಾಯುಃ ಪ್ರಯಚ್ಛ ಮೇ ॥
ಬಲಯೇ ನಮಃ ॥

ವಸಿಷ್ಠಕುಲಸಂಭೂತ ವೇದಶಾಸ್ತ್ರವಿಶಾರದ ।
ನಾರಾಯಣಾಂಶಸಂಭೂತ ವೇದವ್ಯಾಸ ನಮೋಽಸ್ತು ತೇ ॥
ವೇದವ್ಯಾಸಾಯ ನಮಃ ॥

ಆಂಜನೇಯ ಮಹಾಭಾಗ ಕಪೀಂದ್ರ ಸಚಿವೋತ್ತಮ ।
ರಾಮಪ್ರಿಯ ನಮಸ್ತುಭ್ಯಂ ಹನೂಮನ್ ರಕ್ಷ ಸರ್ವದಾ ॥
ಹನೂಮತೇ ನಮಃ ॥

ವಿಭೀಷಣ ನಮಸ್ತುಭ್ಯಂ ರಾಮಪಾದಾಬ್ಜಪೂಜಕ ।
ಆಯುರಾರೋಗ್ಯಮೈಶ್ವರ್ಯಂ ದೇಹಿ ಪೌಲಸ್ತ್ಯನಂದನ ॥
ವಿಭೀಷಣಾಯ ನಮಃ ॥

ದ್ವಿಜೇಂದ್ರ ಭಾರತಾಚಾರ್ಯ ಸರ್ವಶಾಸ್ತ್ರವಿಶಾರದ ।
ಶರಣಂ ತ್ವಾಂ ಪ್ರಪನ್ನೋಽಸ್ಮಿ ಕೃಪಂ ಮಾಂ ರಕ್ಷ ಸರ್ವದಾ ॥
ಕೃಪಾಯ ನಮಃ ॥

ರೇಣುಕೇಯ ಮಹಾವೀರ್ಯ ಕಾರ್ತವೀರ್ಯಕುಲಾಂತಕ ।
ಆಯುಃ ಪ್ರಯಚ್ಛ ಮೇ ರಾಮ ಜಾಮದಗ್ನ್ಯ ನಮೋಽಸ್ತು ತೇ ॥
ಪರಶುರಾಮಾಯ ನಮಃ ॥

ತ್ರೈಲೋಕ್ಯೇ ಯಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ ।
ಬ್ರಹ್ಮವಿಷ್ಣುಶಿವೈಃ ಸಾರ್ಧಂ ರಕ್ಷಾಂ ಕುರ್ವಂತು ತಾನಿ ಮೇ ॥
ಸರ್ವೇಭ್ಯೋ ದೇವೇಭ್ಯೋ ನಮಃ ॥ ಪ್ರಾರ್ಥನಾಂ ಸಮರ್ಪಯಾಮಿ॥

## ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ

ಸತಿಲಗುಡಪಯಃಪಾನವನ್ನು ಮಾಡಬೇಕು. ಕೈಯಲ್ಲಿ ಬೆಲ್ಲ ಎಳ್ಳಿನೊಂದಿಗೆ ಹಾಲು ಬೆರಸಿ ಪ್ರಾಶನಕ್ಕಾಗಿ ಹಿಡಿದುಕೊಂಡು-

**ಸತಿಲಂ ಗುಡಸಮ್ಮಿಶ್ರಮಂಜಲ್ಯರ್ಧಮಿತಂ ಪಯಃ ।**

**ಮಾರ್ಕಂಡೇಯಾತ್ ವರಂ ಲಬ್ಧ್ವಾ ಪಿಬಾಮ್ಯಾಯುಷ್ಯವೃದ್ಧಯೇ ॥**

ಎಂಬ ಶ್ಲೋಕವನ್ನು ಹೇಳುತ್ತಾ ಕುಡಿಯಬೇಕು.

'ಅನೇನ ವರ್ಷವೃದ್ಧಿಪೂಜಾಕರಣೇನ ಭಗವಾನ್ ಮಧ್ವಪತಿಗೋಪಾಲಕೃಷ್ಣಃ ಪ್ರೀಯತಾಮ್' ಶ್ರೀಕೃಷ್ಣಾರ್ಪಣಮಸ್ತು.

ಜನ್ಮದಿನದಂದು ಕೇಶ-ಉಗುರುಗಳ ಕರ್ತನ, ಮೈಥುನ, ದೂರಪ್ರಯಾಣ, ಮಾಂಸಭಕ್ಷಣ, ಕಲಹ ಹಾಗೂ ಹಿಂಸೆ. ಇವುಗಳನ್ನು ಮಾಡಬಾರದು

**ಖಂಡನಂ ನಖಕೇಶಾನಾಂ ಮೈಥುನಾಧ್ವಾಗಮೌ ತಥಾ ।**

**ಆಮಿಷಂ ಕಲಹಂ ಹಿಂಸಾಂ ವರ್ಷವೃದ್ಧೌ ವಿವರ್ಜಯೇತ್ ॥**

★ ಜನ್ಮನಕ್ಷತ್ರವು ಏಕಾದಶಿಯಂದು ಬಂದಲ್ಲಿ ಮರುದಿನ ಆಚರಿಸಿಕೊಳ್ಳುವುದು.

★ ಶ್ರಾದ್ಧದಿನದಂದು ಜನ್ಮನಕ್ಷತ್ರವೊದಗಿದರೆ ಚಿರಂಜೀವಿಪೂಜೆ ಮೊದಲಾದ ವರ್ಧಾಪನವಿಧಿಯನ್ನು ಶ್ರಾದ್ಧಕ್ಕಿಂತ ಪೂರ್ವದಲ್ಲಿ ಅಂದೇ ಮಾಡುವುದು. ಆದರೆ ಮಂಗಲಸ್ನಾನ, ಎಳ್ಳುಸಹಿತವಾದ ಹಾಲುಕುಡಿಯುವುದು ಇತ್ಯಾದಿಗಳನ್ನು ಮಾಡಬಾರದು.

★. ಜನ್ಮನಕ್ಷತ್ರಕ್ಕೆ ಬದಲಾಗಿ ಜನ್ಮತಿಥಿಯಂದು ಜನ್ಮದಿನದ ಆಚರಣೆ ಕೆಲವೆಡೆ ಇದೆ. ಪ್ರಯೋಗಗ್ರಂಥಗಳೆಲ್ಲ ಜನ್ಮನಕ್ಷತ್ರವನ್ನೇ ಉಲ್ಲೇಖಿಸಿವೆ. ಹಾಗಾಗಿಯೇ **'ವರ್ಧಂತಿಗೆ ನಕ್ಷತ್ರ, ಶ್ರಾದ್ಧಕ್ಕೆ ತಿಥಿ'** ಎಂಬ ಗಾದೆ ಚಾಲ್ತಿಯಲ್ಲಿದೆ.

ಕೆಲವು ಜನ್ಮನಕ್ಷತ್ರವನ್ನು ಆಚರಿಸುತ್ತಾರೆ, ಕೆಲವರು ಜನ್ಮದಿನವನ್ನು ಆಚರಿಸುತ್ತಾರೆ. ಅವರವರ ಸಂಪ್ರದಾಯದಂತೆ ಆಚರಣೆಯನ್ನು ನಡೆಸಬೇಕು. ಇಲ್ಲಿಗೆ ವರ್ಧಂತಿಯ ವಿಚಾರವು ಸಮಾಪ್ತಿಯಾಯಿತು.

★ ★ ★ ★

# ಶಾಂತಿಗಳು

ಪ್ರತ್ಯೇಕ ವ್ಯಕ್ತಿಗಾಗಿ ಮಾಡುವ ವೈದಿಕ ಪೂಜಾ ವಿಧಾನಕ್ಕೆ ಶಾಂತಿ ಎನ್ನುತ್ತಾರೆ. ಯಾವ ಕಾರಣಕ್ಕಾಗಿ ಯಾವ ಶಾಂತಿಯನ್ನು ಮಾಡ ಬೇಕು? ಮಗುವಿನ ಜನನ ಕಾಲದಲ್ಲಿ ನಾನಾ ವಿಧ ದೋಷಾದಿಗಳು ಬರುತ್ತವೆ. ಇದನ್ನು ಗುರುಗಳ ಮುಖೇನ ತಿಳಿದು ಬಂದಿರುವ ದೋಷ ನಿವಾರಣೆಗೆ ಶಾಂತ್ಯಾದಿಗಳನ್ನು ಮಾಡಿಕೊಳ್ಳಬೇಕು.

೧. **ಕೃಷ್ಣ ಚತುರ್ದಶಿ ಜನನ ಶಾಂತಿ:** ಮಗು ಕೃಷ್ಣ ಪಕ್ಷದ ಚತುರ್ದಶಿಯ ದಿನ ಜನನವಾದಲ್ಲಿ ಅನೇಕವಾದ ಅನಿಷ್ಠ ಫಲಗಳು ಬರುತ್ತದೆ. ಚತುರ್ದಶಿ ತಿಥಿಯ ಕಾಲವನ್ನು ಆರು ಭಾಗ ಮಾಡಿ; ಒಂದನೇಯ ಭಾಗವನ್ನು ಶುಭ ಎಂತಲೂ, ಎರಡನೇಯ ಭಾಗವನ್ನು ತಂದೆಗೆ ಅನಿಷ್ಠ ಎಂತಲೂ,ಮೂರನೇಯ ಭಾಗವನ್ನು ತಾಯಿಗೆ ಅನಿಷ್ಠ ಎಂತಲೂ, ನಾಲ್ಕನೇಯ ಭಾಗವನ್ನು ಮಾವನಿಗೆ ಅನಿಷ್ಠ ಎಂದೂ, ಐದನೇಯ ಭಾಗವನ್ನು ವಂಶನಾಶ ಎಂತಲೂ,ಆರನೇಯ ಭಾಗವನ್ನು ಧನಹಾನಿ ಎಂದೂ ಶಾಸ್ತ್ರದಲ್ಲಿ ಹೇಳಿದೆ.

೨. **ಸಿನೀವಾಲೀ- ಕುಹೂ ಜನನ ಶಾಂತಿ:** ಮಗುವು ಅಮಾವಾಸ್ಯೆಯ ದಿನದಂದು ಜನಿಸಿದಲ್ಲಿ, ಅಮಾವಾಸ್ಯೆಯ ಪರಮ ಘಟಿಯನ್ನು ೮ ಭಾಗವನ್ನು ಮಾಡಿ ಪ್ರಥಮ ಭಾಗ ಜನನಕ್ಕೆ ಸಿನೀವಾಲೀ, ಅಷ್ಟಮ ಭಾಗಕ್ಕೆ ಕುಹೂ ಜನನ ಎಂದೂ ಕರೆಯುತ್ತಾರೆ. ಈ ಜನನದಲ್ಲಿ ಬರುವ ದೋಷ ನಿವಾರಣೆಗೆ ಶಾಂತ್ಯಾದಿಗಳನ್ನು ಮಾಡಿಸಿ ಕೊಳ್ಳ ಬೇಕು.

೩. **ದರ್ಶ ಜನನ ಶಾಂತಿ:** ಅಮಾವಾಸ್ಯೆ ತಿಥಿಯ ಪರಮ ಘಟಿಯನ್ನು ಭಾಗವನ್ನಾಗಿ ಮಾಡಿದಾಗ ೨ನೇಯ ಭಾಗದಿಂದ ೬ನೇ ಭಾಗದವರೆಗೆ ಹುಟ್ಟಿದ ಮಗುವಿಗೆ ಬರುವ ದೋಷ ನಿವಾರಣೆಗೆ ದರ್ಶ ಜನನ ಶಾಂತಿ ಅಥವಾ ಅಮಾವಾಸ್ಯೆ ಜನನ ಶಾಂತಿ ಮಾಡಿಸಿ ಕೊಳ್ಳ ಬೇಕು.

೪. **ಸೂರ್ಯ ಸಂಕ್ರಾಂತಿ ಜನನ ಶಾಂತಿ ಮತ್ತು ವ್ಯತಿಪಾತ, ವೈದ್ರತಿ, ಅತೀಗಂಡ, ಗಂಡಯೋಗ ಜನನ ಶಾಂತಿ**

೫. **ಆಶ್ಲೇಷಾ ಜನನ ಶಾಂತಿ:** ಮಗುವು ಆಶ್ಲೇಷಾ ನಕ್ಷತ್ರ ಇರುವ ಸಮಯದಲ್ಲಿ ಜನಿಸಿದರೆ ದೋಷಾದಿಗಳ ನಿವಾರಣೆಗೆ ಶಾಂತಿಗಳನ್ನು ಮಾಡಿಸಿ ಕೊಳ್ಳ ಬೇಕು. ಮೊದಲನೇ ಪಾದ ಜನನಕ್ಕೆ ಶುಭ ಫಲ, ದ್ವಿತೀಯ ಪಾದ ಜನನಕ್ಕೆ ಧನನಾಶ, ತೃತೀಯ ಪಾದ ಜನನಕ್ಕೆ ತಾಯಿಗೆ ಅನಿಷ್ಠ.

೬. **ಜ್ಯೇಷ್ಠ ನಕ್ಷತ್ರ ಜನನ ಶಾಂತಿ:** ಮಗುವು ಜ್ಯೇಷ್ಠ ನಕ್ಷತ್ರ ಇರುವ ಸಮಯದಲ್ಲಿ ಜನಿಸಿದರೆ ದೋಷಾದಿಗಳ ನಿವಾರಣೆಗೆ ಶಾಂತಿಗಳನ್ನು ಮಾಡಿಸಿ ಕೊಳ್ಳ ಬೇಕು. ವಿಶೇಷತಃ ೪ನೇ ಪಾದದಲ್ಲಿ ಜನಿಸಿದರೆ ತಂದೆ- ತಾಯಿಗೆ ಅನಿಷ್ಠ.

೭. **ಮೂಲಾ ನಕ್ಷತ್ರ ಜನನ ಶಾಂತಿ:** ಮಗುವು ಮೂಲಾ ನಕ್ಷತ್ರ ಇರುವ ಸಮಯದಲ್ಲಿ ಜನಿಸಿದರೆ ೧ನೇ ಪಾದಕ್ಕೆ ಅತೀ ಅನಿಷ್ಠ. ೨ನೇ ಪಾದಕ್ಕೆ ತಾಯಿಗೆ ಅನಿಷ್ಠ. ೩ನೇ ಪಾದಕ್ಕೆ ಧನನಾಶ. ೪ನೇ ಪಾದಕ್ಕೆ ಕುಲನಾಶ. ಹೆಣ್ಣು ಮಗು ಈ ನಕ್ಷತ್ರದಲ್ಲಿ ಜನಿಸಿದರೆ ಗಂಡನ ತಂದೆಗೆ ಅತೀ ಅನಿಷ್ಠ.

೮. **ಗ್ರಹಣ ಜನನ ಶಾಂತಿ:** ಮಗುವು ಸೂರ್ಯ ಅಥವಾ ಚಂದ್ರ ಗ್ರಹಣ ಕಾಲದಲ್ಲಿ ಜನಿಸಿದರೆ ದೋಷ ನಿವಾರಣೆಗೆ ಶಾಂತ್ಯಾದಿಗಳನ್ನು ಮಾಡಿಸಿ ಕೊಳ್ಳ ಬೇಕು.

೯. **ಏಕ ನಕ್ಷತ್ರ ಜನನ ಶಾಂತಿ:** ತಾಯಿ, ತಂದೆ, ಅಣ್ಣ-ತಮ್ಮ ಎಲ್ಲರ ನಕ್ಷತ್ರ ಒಂದೇ ಆದಲ್ಲಿ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು.

೧೦. **ವಿಷ ಘಟಿ ಜನನ ಶಾಂತಿ:** ಮಗುವು ವಿಷ ನಾಡಿಯಲ್ಲಿ ಜನಿಸಿದರೆ ಸರ್ವರಿಷ್ಠ. ಆದ್ದರಿಂದ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು.

೧೧. **ತ್ರಿಕ ಪ್ರಸವ ಶಾಂತಿ:** ತಾಯಿಗೆ ಏಕ ಕಾಲದಲ್ಲಿ ಮೂರು ಮಗುವಿನ ಜನನವಾದರೆ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು.

೧೨. **ಭದ್ರಾ ಜನನ ಶಾಂತಿ:** ಭದ್ರಾ ಯೋಗದಲ್ಲಿ ಜನಿಸಿದ ಮಗುವಿಗೆ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು.

೧೩. **ಅಧೋಮುಖ ಜನನ ಶಾಂತಿ:** ಮಗು ಜನಿಸಿವಾಗ ಕೆಳಮುಖವಾಗಿ ಜನಿಸಿದರೆ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು. ೧೪. ಸದಂತ ಜನನ ಶಾಂತಿ: ಮಗು ಹುಟ್ಟಿದಾಗಲೇ ಹಲ್ಲು ಇದ್ದರೆ ಬರುವ ದೋಷ ನಿವಾರಣೆಗಾಗಿ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು.

೧೫. **ಯಮಳ ಜನನ ಶಾಂತಿ:** ಏಕ ಕಾಲದಲ್ಲಿ ಎರಡು ಮಗುವಿನ ಜನನವಾದಲ್ಲಿ ದೋಷ ನಿವಾರಣೆಗಾಗಿ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು.

೧೬. **ಪ್ರಸವ ವೈಕ್ರತಿ ಜನನ ಶಾಂತಿ:** ಮಗು ಜನಿಸುವಾಗ ಅಂಗ ವಿಕಲವಿದ್ದಲ್ಲಿ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು.

೧೭. **ದಿನ ಕ್ಷಯ, ವ್ಯತಿಪಾತ ಯೋಗಾದಿ ಜನನ ಶಾಂತಿ.**

೧೮. **ಬಾಲಾರಿಷ್ಠ ಜನನ ಶಾಂತಿ:** ಮಗು ಜನಿಸಿದಾಗ ಜನ್ಮದಲ್ಲಿ ರವಿ, ಕುಜ, ಶನಿ, ರಾಹು, ಕೇತುಗಳು ವಿಷಮ ಸ್ಥಿತವಾದಲ್ಲಿ ವಿಪರೀತ ಕಷ್ಟಗಳನ್ನು ಕೊಡುತ್ತದೆ. ಈ ಕಷ್ಟಗಳ ನಿವಾರಣೆಗಾಗಿ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು. ಈ ಶಾಂತಿಯನ್ನು ಮಗುವಿನ ಜನ್ಮದ ನಂತರದ ೧೨ನೆ ದಿನದ ಮೇಲೆ ಮಗು ಚಿಕ್ಕದಿದ್ದಾಗಲೆ ಮಾಡಿಸಿ ಕೊಳ್ಳುವುದು ಒಳ್ಳೆಯದು.

೧೯. **ಬಾಲಗ್ರಹ ಶಾಂತಿ:** ಮಗುವು ಪೂರ್ವ ಜನ್ಮಂತರದಲ್ಲಿ ಮಾಡಿದ ದೇವರ, ವೇದಗಳ, ಶಾಸ್ತ್ರಗಳ ಮತ್ತು ಗುರು ಹಿರಿಯರ ನಿಂದನಾದಿ ಸರ್ವ ಪಾತಕಗಳಿಂದ ಬರುವ ಪೀಡಾ ನಿವಾರಣೆಗಾಗಿ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು. ೨೦. ಬಾಲ ಮಾರ್ಕಾಂಡೇಯ ಶಾಂತಿ: ಮಗುವಿಗೆ ಮಹತ್ ಬಾಲಾರಿಷ್ಟ ವಶದಿಂದ ಆಯುಷ್ಯಕ್ಕೆ ಕಂಟಕ ಸೂಚಿಸಿದಲ್ಲಿ ಅನಿಷ್ಟ ಪರಿಹಾರಕ್ಕಾಗಿ ಈ ಶಾಂತಿಯನ್ನು ಮಾಡಿಸ ಬೇಕು.

೨೧. **ರೋಹಿಣಿ ನಕ್ಷತ್ರ ಜನನ ಶಾಂತಿ:** ಮಗುವು ರೋಹಿಣಿ ನಕ್ಷತ್ರದಲ್ಲಿ ಜನಿಸಿದರೆ ಮಾವನಿಗೆ ಅರಿಷ್ಟ ಸೂಚನೆ ಆಗುವುದರಿಂದ ಈ ಶಾಂತಿಯನ್ನು ಮಾಡಿಸ ಬೇಕು.

೨೨. **ಕುಜ-ರಾಹು ಸಂಧಿ ಶಾಂತಿ:** ನವಗ್ರಹದಲ್ಲಿ ಒಂದೊಂದು ಗ್ರಹಕ್ಕೆ ಇಷ್ಟು ವರ್ಷಗಳು ಮನುಷ್ಯನ ಜೀವನದಲ್ಲಿ ಅಧಿಪತ್ಯ (ಅಧಿಕಾರ) ಎಂದಿರುತ್ತದೆ. ಆದರೆ ಪರಸ್ಪರ ಶತ್ರು ಗ್ರಹಗಳ ಅಧಿಕಾರ ಅವಧಿ ಮುಗಿದು ಇನ್ನೊಂದು ಶತ್ರು ಗ್ರಹದ ಅಧಿಕಾರ ಆರಂಭ ಕಾಲದಲ್ಲಿ ೬ ತಿಂಗಳು ಮುಂಚಿತವಾಗಿ ಸಂಧಿ ಶಾಂತಿ ಮಾಡಿಸುತ್ತಾರೆ. ಇಲ್ಲಿ ಕುಜ ದಶಾ ೭ ವರ್ಷಗಳು ಮುಗಿದು ರಾಹು ದಶಾ ೧೮ ವರ್ಷಗಳು ಆರಂಭವಾಗುವ ಸಮಯಕ್ಕೆ ಈ ಶಾಂತಿಯನ್ನು ಮಾಡಿಸ ಬೇಕು. ಈ ಸಂಧಿ ಕಾಲದವಿಶೇಷವಾಗಿ ಗಂಡಸರಿಗಿಗೆ ಹೆಚ್ಚು ಹಾನಿಕಾರಕ ಆಗಿರುತ್ತದೆ. ಆಯುಷ್ಯದಲ್ಲಿ ಒಂದು ಕಂಟಕ ಎನ್ನ ಬಹುದು.

೨೩. **ರಾಹು-ಬೃಹಸ್ಪತಿ ಸಂಧಿ ಶಾಂತಿ:** ರಾಹುವಿನ ಅಧಿಕಾರ ಅವಧಿ ೧೮ ವರ್ಷಗಳು ಕಳೆದು ಗುರುವಿನ ೧೬ ವರ್ಷದ ಅಧಿಕಾರದ ಅವಧಿ ಆರಂಭವಾಗುವ ೬

ತಿಂಗಳು ಮೊದಲು ಈ ಶಾಂತಿಯನ್ನು ಅಗತ್ಯವಾಗಿ ಮಾಡಿಸಿ ಕೊಳ್ಳ ಬೇಕು. ಈ ಸಂಧಿಕಾಲವು ವಿಶೇಷವಾಗಿ ಮಹಿಳೆಯರಿಗೆ ಹೆಚ್ಚು ಹಾನಿಕಾರಕ ಆಗಿರುತ್ತದೆ.

೨೪. **ಶುಕ್ರಾದಿತ್ಯ ಸಂಧಿ ಶಾಂತಿ:** ಶುಕ್ರ ಅಧಿಕಾರ ಅವಧಿ ೨೦ ವರ್ಷಗಳು ಕಳೆದು ಸೂರ್ಯನ ೬ ವರ್ಷದ ಅಧಿಕಾರದ ಅವಧಿ ಆರಂಭವಾಗುವ ೬ ತಿಂಗಳು ಮೊದಲು ಈ ಶಾಂತಿಯನ್ನು ಅಗತ್ಯವಾಗಿ ಮಾಡಿಸಿ ಕೊಳ್ಳ ಬೇಕು. ಈ ಸಂಧಿ ಕಾಲವು ಪುರುಷ ಮತ್ತು ಮಹಿಳೆ ಇಬ್ಬರಿಗೂ ಹಾನಿಕಾರಕ ಆಗಿರುತ್ತದೆ.

೨೫. **ಷಷ್ಟ್ಯಬ್ಧ ಅಥವಾ ಉಗ್ರರಥ ಶಾಂತಿ:** ಮನುಷ್ಯನು ತನ್ನ ಜೀವನದ ಕಷ್ಟ-ಸುಖಗಳನ್ನು ಅನುಭವಿಸುತ್ತ ಸಕಾಲದಲ್ಲಿ ವಿವಾಹವಾಗಿ ಪತ್ನಿಯನ್ನು ಒಡಗೂಡಿ ಮಕ್ಕಳ ಆಗು ಹೋಗುಗಳನ್ನು ಪೂರೈಸುತ್ತ ತನ್ನ ಜೀವನದ ೬೦ನೇ ಸಂವತ್ಸರವನ್ನು ಪ್ರವೇಶಿಸಿದಾಗ ಜನ್ಮ ನಕ್ಷತ್ರದಲ್ಲಿ ಈ ಶಾಂತಿಯನ್ನು ಮಾಡ ಬೇಕು. ಇದನ್ನು ಏಕೆ ಮಾಡ ಬೇಕು? ಇದನ್ನು ಮುಂದಿನ ಜೀವನದಲ್ಲಿ ಬರುವಂತಹ ಅಪಮೃತ್ಯು, ದುಃಸ್ವಪ್ನ ದರ್ಶನ, ಗ್ರಹಪೀಡೆ, ವಿವಿಧ ರೋಗಬಾಧೆ, ಛಾಯಾ ವಿಕೃತಿ. ಭೂತ-ಪ್ರೇತಾದಿ ಪೀಡಾ ರೂಪಕವಾದಂತಹ ನಾನಾ ವಿಧ ಅರಿಷ್ಟ ನಿವಾರಣೆಗಾಗಿ ಮಾಡುವಂತಹ ಶಾಂತಿಯನ್ನು ಉಗ್ರರಥ ಶಾಂತಿ ಎನ್ನುತ್ತೇವೆ. ಈ ವಿಧಿಯಲ್ಲಿ ಗಣಪತಿ, ನವಗ್ರಹ ದೇವತೆಗಳನ್ನು, ಪೀಡಾ ಪರಿಹಾರಕನಾದ ಮೃತುಂಜಯನನ್ನು ಅಶ್ವತ್ಥಾಮಾದಿ ಸಪ್ತ ಚಿರಂಜೀವಿಗಳನ್ನು, ಮೃತ್ಯುವನ್ನೇ ಜಯಿಸಿದ ಮಾರ್ಕಂಡೆಯನನ್ನು, ಆಯುರ್ದೇವತೆ ನಕ್ಷತ್ರ ದೇವತೆಗಳನ್ನು ಆರಾಧಿಸ ಬೇಕು. ಜಪ, ಹೋಮ, ತರ್ಪಣ, ಮಾರ್ಜನ, ಬ್ರಾಹ್ಮಣ ಭೋಜನವನ್ನಾಚರಿಸಿ ಗುರು-ಹಿರಿಯರ ಆಶೀರ್ವಾದವನ್ನು ಪಡೆಯ ಬೇಕು. ಈ ವಿಧಿಯಲ್ಲಿ ಉಗ್ರನೆಂಬ ಹೆಸರಿನ ಮೃತ್ಯುಂಜಯನು ಪ್ರಧಾನ ದೇವತೆಯಾದ್ದರಿಂದ ಉಗ್ರರಥ ಶಾಂತಿ ಎಂಬ ಹೆಸರು ಬಂತು. ಈ ವಿಧಿಯ ಅಂತ್ಯದಲ್ಲಿ ಕಲಶ ತೀರ್ಥಸ್ನಾನ ಮತ್ತು ಮಂಗಳ ದ್ರವ್ಯ ದರ್ಶನ ಅಲ್ಲದೇ ಪುನಃ ಮಂಗಳ ಸೂತ್ರ ಕಟ್ಟುವುದು ಮುಖ್ಯವಾಗಿರುತ್ತದೆ.

೨೬. **ಗ್ರಹ ಶಾಂತಿ:** ಮನೆಯಲ್ಲಿ ಸಾಲದ ಬಾಧೆ, ಅಶಾಂತಿ, ಕೆಟ್ಟ ಕನಸು ಮತ್ತು ರೋಗ-ರುಜಿನಗಳಿಂದ ತೊಂದರೆ ಅನುಭವಿಸುತ್ತಿದ್ದಲ್ಲಿ ಗ್ರಹ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು.

೨೭. **ವಾಸ್ತು ಶಾಂತಿ:** ಹೊಸದಾಗಿ ತೆಗೆದು ಕೊಂಡ ಮನೆ ಅಥವಾ ವಸತಿ ಸಮುಚ್ಚಯ ನಿರ್ಮಿಸುವಾಗ ಸ್ಥಳದಲ್ಲಿ ಇರುವಂತಹ ನ್ಯೂನ್ಯತೆಯನ್ನು ಹೋಗಲಾಡಿಸಿ ಸುಖ

ಶಾಂತಿ, ಸಮೃದ್ಧಿಯಿಂದ ನೆಲೆಸುವುದಕ್ಕಾಗಿ ವಾಸ್ತು ಶಾಂತಿಯನ್ನು ಮಾಡುವುದು ಅಗತ್ಯ.

೩೦. **ರಾಕ್ಷೋಘ್ನ ಶಾಂತಿ:** ಹೊಸ ಮನೆಯನ್ನು ನಿರ್ಮಿಸುವಾಗ ಸ್ಥಳದಲ್ಲಿ ಉಪಯೋಗಿಸಿರುವ ಮರದ ಸಲಕರಣೆಗಳಲ್ಲಿ ಇರುವ ಭೂತ, ಪ್ರೇತ, ಪಿಶಾಚಿ ಬಾಧೆ ನಿವಾರಣೆಗಾಗಿ ವಾಸ್ತು ಹೋಮದ ಪೂರ್ವದಲ್ಲಿ ಈ ಹೋಮವನ್ನು ರಾತ್ರಿಯಲ್ಲಿ ಮಾಡ ಬೇಕು.

೩೧. **ಗೇಹಾಭಿವೃದ್ಧಿ ಶಾಂತಿ:** ದೇವಸ್ಥಾನದಲ್ಲಿ ಸ್ಥಾಪಿಸಿರುವ ವಿಗ್ರಹಕ್ಕೆ ದೇವರ ಸಾನಿಧ್ಯ ಪ್ರಾಪ್ತಿಗಾಗಿ, ದೇವಾಲಯದ ಅಭಿವೃದ್ಧಿಗಾಗಿ ಈ ಶಾಂತಿಯನ್ನು ಮಾಡ ಬೇಕು.

೩೨. **ಸರ್ವಾದ್ಭುತ ಶಾಂತಿ:** ಮನೆಯಲ್ಲಿ ಅಮಂಗಲವಾದ ಘಟನೆಗಳು ನಡೆದಾಗ; ಉದಾಹರಣೆಗೆ ಮನೆಗೆ ಬೆಂಕಿ ತಗಲುವುದು, ಮನೆಗೆ ಕಾಗೆ ಪ್ರವೇಶಿಸುವುದು, ಮನೆಯಲ್ಲಿ ಜೇನುಗೂಡು ಕಟ್ಟುವುದು ಮನೆಯ ಒಂದು ಭಾಗ ಕುಸಿಯುವುದು ಇಂತಹ ಅನಿಷ್ಟಗಳಿದ್ದಲ್ಲಿ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು.

೩೩. **ಗ್ರಾಮೊತ್ಪಾತ ಶಾಂತಿ:** ಗ್ರಾಮದಲ್ಲಿ ಉತ್ಪನ್ನವಾಗಿರುವ ನಾನ ಾವಿಧ ಭಾದೆ ನಿವಾರಣೆಗೆ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು.

೩೪. **ರಕ್ತ ವಲ್ಮೀಕ ಶಾಂತಿ:** ದೇವಾಲಯದಲ್ಲಿ, ಮನೆಯಲ್ಲಿ ಅಥವಾ ಸಭಾಸ್ಥಾನದಲ್ಲಿ ಉತ್ಪತ್ತಿಯಾಗಿರುವ ಹುತ್ತವು ಅಶುಭ ಸೂಚಕ ಆಗಿರುವುದರಿಂದ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು. ೩೫. ವಾನರ ಪ್ರವೇಶ ಶಾಂತಿ: ಮನೆಯೊಳಗೆ ವಾನರ ಪ್ರವೇಶವಾದಲ್ಲಿ ಬರುವ ಅಪಮೃತ್ಯು, ಮಹಾರೋಗಾದಿ ಸರ್ವ ಅಮಂಗಲ ನಿವಾರಣೆಗಾಗಿ ಈ ಶಾಂತಿಯನ್ನು ಮಾಡ ಬೇಕು.

೩೬. **ಮರ್ಕಟ ಪ್ರವೇಶ ಶಾಂತಿ:** ಮನೆಯೊಳಗೆ ಕೃಷ್ಣಮುಖ ವಾನರ ಪ್ರವೇಶ ಆದಲ್ಲಿ ಬರುವ ಅಪಮೃತ್ಯು, ಮಹಾರೋಗಾದಿ ಸರ್ವ ಅಮಂಗಲ ನಿವಾರಣೆಗಾಗಿ ಈ ಶಾಂತಿಯನ್ನು ಮಾಡ ಬೇಕು.

೩೭. **ಮಹಿಷಿ ಪ್ರವೇಶ ಶಾಂತಿ:** ಮನೆಯೊಳಗೆ ಎಮ್ಮೆ ಅಥವಾ ಕೋಣ ಪ್ರವೇಶಿಸಿದರೆ ಸೂಚಿತ ಅಪಮೃತ್ಯು ಹಾಗೂ ಸರ್ವ ಅಮಂಗಲ ನಿವಾರಣೆಗಾಗಿ ಈ ಶಾಂತಿಯನ್ನು ಮಾಡ ಬೇಕು. ೩೮. ದೀಪ ಪತನ ಶಾಂತಿ: ಮನೆಯಲ್ಲಿ ಪೂಜೆ ಮಾಡುತ್ತಿರುವಾಗ ಉರಿಯುತ್ತಿರುವ ದೀಪ ಆರಿ ಹೋದಲ್ಲಿ ಅಮಂಗಲ ನಿವಾರಣೆಗಾಗಿ ಈ ಶಾಂತಿಯನ್ನು ಮಾಡ ಬೇಕು.

೩೯. **ಭೀತಿಹರ ದಕ್ಷಾಕರ ದುರ್ಗಾ ಶಾಂತಿ:** ಗ್ರಹ ಪೀಡೆಗಳಿಂದ ಪುನಃ ಪುನಃ ಆಗುತ್ತಿರುವ ತೊಂದರೆಗಳ ನಿವಾರಣೆಗೆ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು.

೪೦. **ಅನಾವೃಷ್ಟಾದಿ ಶಾಂತಿ:** ಇದನ್ನು ಸಾಮೂಹಿಕವಾಗಿ ಉತ್ಪತ್ತಿ ಯಾಗಿರುವ ಮಹಾಮಾರಿ, ಪಶುರೋಗಾದಿ ನಿವಾರಣೆಗೆ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು.

೪೧. **ಕೃತ್ಯಾದ್ರೋಹ ಶಾಂತಿ:** ವಿರೋಧಿಗಳ ಯಾವುದೇ ಕುಟುಂಬ, ಉದ್ಯಮ, ಕೋಷ್ಠಗಳ ಮೇಲೆ ಮಾಡಿದ ಕೃತ್ರಿಮ ದೋಷ ನಿವಾರಣೆಗಾಗಿ ಈ ಶಾಂತಿಯನ್ನು ಮಾಡ ಬೇಕು.

೪೨. **ದುಃಸ್ವಪ್ನ ಶಾಂತಿ:** ಕೆಲವೊಂದು ಸ್ವಪ್ನಗಳು ಅಮಂಗಲತೆಯ ಮುನ್ಸೂಚನೆ ಆಗಿರುವುದರಿಂದ ಈ ದೋಷ ನಿವಾರಣೆಗಾಗಿ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು.

೪೩. **ಪರ್ಜನ್ಯ ಶಾಂತಿ:** ದೇಶದ ಅಥವಾ ಯಾವುದೇ ಪ್ರಾಂತದಲ್ಲಿ ಸಕಾಲದಲ್ಲಿ ಮಳೆ ಆಗದಿದ್ದಲ್ಲಿ ಜೀವಿಗಳಿಗೆ ಅತಿ ಆತಂಕ ಆಗುವುದು. ಆ ಪರಿಸ್ಥಿತಿ ನಿವಾರಣೆಗೆ ಪ್ರಕೃತಿ ದೇವಿಯನ್ನು ಶಾಂತಿಗೊಳಿಸಿ ಮಳೆ ಪಡೆಯುವುದಕ್ಕೆ ಈ ಶಾಂತಿ ಹೆಸರಿದೆ.

೪೪. **ಸರ್ವ ವ್ಯಾಧಿಹರ ನಾಮತ್ರಯೀ ಶಾಂತಿ:** ಜನ್ಮ ಜನ್ಮಾಂತರಗಳಿಂದ ಸಂಚಿತ ಪ್ರಾರಾಬ್ಧ ರೂಪ, ಪಾಪ, ನಿವೃತ್ತಿ ಮತ್ತು ವ್ಯಾಧಿ ಬಾಧೆ ನಿವಾರಣೆಗಾಗಿ ಮತ್ತು ಆಯುಃ ಆರೋಗ್ಯ ಪ್ರಾಪ್ತಿಗಾಗಿ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು.

೪೫. **ನಾಳವೇಷ್ಟನ ಶಾಂತಿ:** ಮಗುವಿನ ಜನನ ಸಮಯದಲ್ಲಿ ತಾಯಿಯಿಂದ ಮಗುವಿಗೆ ಆಹಾರಾದಿಗಳನ್ನು ಕೊಡುವ ನಾಳವು ಕಂಠ, ಕೈ, ಕಾಲುಗಳಿಗೆ ಸುತ್ತಿಕೊಂಡು ಜನಿಸಿದರೆ ತಂದೆ, ತಾಯಿಗೆ ಅನಿಷ್ಟ, ಸಂಪತ್ತು ನಾಶ, ಸರ್ವ ನಾಶ ಎಂದಿರುತ್ತದೆ. ಆದ್ದರಿಂದ ದೋಷ ನಿವಾರಣೆಗೆ ಈ ಶಾಂತಿಯನ್ನು ಮಾಡ ಬೇಕು.
೪೬. ವಿಶಾಖಾ ನಕ್ಷತ್ರ ಜನನ ಶಾಂತಿ: ವಿಶೇಷವಾಗಿ ಮಗುವು ವಿಶಾಖಾ ನಕ್ಷತ್ರದ ೪ನೇ ಚರಣದಲ್ಲಿ ಜನಿಸಿದರೆ ತಂದೆ, ತಾಯಿ, ಬಂಧುಗಳಿಗೆ ವಿವಾಹದ ನಂತರ ವರನ ಸಹೋದರರಿಗೂ ಅನಿಷ್ಟ ಆದ್ದರಿಂದ ಶಾಂತಿಯ ಅಗತ್ಯವಿದೆ. ೧, ೨, ೩ ಚರಣಗಳಿಗೆ ಅಗತ್ಯವಿಲ್ಲ.

೪೭. **ಯೋನಿ ವೈಕೃತಿ ಶಾಂತಿ:** ಒಂದು ಹೆಣ್ಣು ಮಗಳು ಮೊದಲನೇ ಬಾರಿಗೆ ರಜೋ ದರ್ಶನವಾಗಿ (ಮಾಸಿಕ ರಜೆ) ನಂತರ ೬ ತಿಂಗಳವರೆಗೆ ರಜೋ ದರ್ಶನ

ಆಗದಿದ್ದಲ್ಲಿ ಮುಂದೆ ಮದುವೆಯಾದ ಮೇಲೆ ಬರುವಂತಹ ದೋಷ ನಿವಾರಣೆಗಾಗಿ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು.

೪೮. **ಪ್ರಪೌತ್ರ ದರ್ಶನ ಶಾಂತಿ:** ಒಂದು ವೇಳೆ ನಮ್ಮ ಮಗನಿಗೆ ಮಗನು ಜನಿಸಿ,ಅವನಿಗೆ ಮಗನು ಜನಿಸಿದಾಗ ನಾವು ಪ್ರಪೌತ್ರವನ್ನು ಪಡೆದಂತೆ.ಈ ಪ್ರಪೌತ್ರ ದರ್ಶನವು ಮುತ್ತಜ್ಜನಿಗೆ ಒಳ್ಳೆಯದಲ್ಲ. ಆದ್ದರಿಂದ ಈ ಶಾಂತಿಯನ್ನು ಮಾಡಿಸಿ ಕೊಳ್ಳ ಬೇಕು.

೪೯. **ಕುಂಭ ವಿವಾಹ ಶಾಂತಿ:** ಒಂದು ವೇಳೆ ಯುವತಿಯ ಕುಂಡಲಿಯಲ್ಲಿ ವೈಧವ್ಯ ಯೋಗವಿದ್ದಾಗ ಅಥವಾ ಎರಡು ಇಲ್ಲವೇ ಮೂರು ವಿವಾಹ ಯೋಗವಿದ್ದಲ್ಲಿ ದೋಷ ನಿವಾರಣೆಗೆ ಈ ಶಾಂತಿಯನ್ನು ಮಾಡಿಸುವುದು ಉತ್ತಮ.

೫೦. **ಕದಳಿ ವಿವಾಹ ಶಾಂತಿ:** ಈ ವಿಧಿಯನ್ನು ಸಹ ಮೇಲೆ ಕಾಣಿಸಿದ ದೋಷ ನಿವಾರಣೆಗೆ ಮಾಡಿಸಲಾಗುತ್ತದೆ.

೫೧. **ಅರ್ಕ ವಿವಾಹ ಶಾಂತಿ:** ಒಂದು ವೇಳೆ ಯುವಕನ ಜಾತಕದಲ್ಲಿ ಮೊದಲನೇಯ ವಿವಾಹವಾಗಿ ಆತನ ಪತ್ನಿಯು ಪತಿಯನ್ನು ತ್ಯಜಿಸಿದಾಗ ಇಲ್ಲವೇ ಮರಣ ಹೊಂದಿದಾಗ ಅದೇ ರೀತಿ ಎರಡನೇಯ ವಿವಾಹವು ಇದೇ ರೀತಿಯಾದಲ್ಲಿ ಮೂರನೇಯ ವಿವಾಹವಾಗುವ ಮುನ್ನ ಈ ಶಾಂತಿಯನ್ನು ಮಾಡಿಸಿ ಕೊಂಡು ವಿವಾಹವಾಗ ಬೇಕು. ಹೀಗೆ ಅನೇಕ ವಿಧವಾದ ಶಾಂತಿ, ಹೋಮ,ಯಜ್ಞಾದಿಗಳು ಇರುತ್ತಿದ್ದು ಅವುಗಳನ್ನು ಜ್ಯೋತಿಷಿಗಳ ಅಥವಾ ಪುರೋಹಿತರ ಸಲಹೆ ಅಗತ್ಯ.

★ ★ ★

**ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।**
**ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥**

**ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ**
**ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ**
**ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ**
**ಅಚ್ಯುತಾನಂತಗೋವಿಂದೇಭ್ಯೋ ನಮಃ ॥**

ಅಸ್ಮದ್ಗುರ್ವಂತರ್ಗತ ಶ್ರೀಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕರಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಈ ಕೃತಿಕುಸುಮವು ಸಮರ್ಪಿತವಾಗಿದೆ.

॥ ಶ್ರೀಕೃಷ್ಣಾರ್ಪಣಮಸ್ತು ॥

★ ★ ★ ★ ★

ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ



ಪ್ರಕಾಶನ :

**ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ).**

ಗಿರಿನಗರ, ಬೆಂಗಳೂರು - 560 085

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಉತ್ಥಾನದ್ವಾದಶೀ

ಕಾರ್ತಿಕ || ಶುದ್ಧ || ದ್ವಾದ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಉತ್ಥಾನದ್ವಾದಶಿ

## ದೀಪೋತ್ಸವ ಮತ್ತು ಧಾತ್ರೀಹವನ

### ಕಾರ್ತೀಕ ॥ ಶುಕ್ಲ ॥ ದ್ವಾದಶಿ

ವಿದ್ವಾನ್ ॥ ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :
ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),
ಗಿರಿನಗರ, ಬೆಂಗಳೂರು-೮೫

'ಉತ್ಥಾನದ್ವಾದಶಿ' ಶಾಲಿವಾಹನ ಶಕೆ ೧೯೪೩ ಶಾರ್ವರಿ॥ ಶ್ರಾವಣ ॥ ಶುದ್ಧ ॥ ಪೂರ್ಣಿಮೆ (ದಿನಾಂಕ:೩-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥಶ್ರೀಪಾದಂಗಳವರ ಕರಕಮಲಗಳಿಂದ ಭಾರತೀರಮಣಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವ-ದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.


ಪ್ರಥಮ ಮುದ್ರಣ: ೨೦೨೦

ಪುಟಗಳು : ೧೧೦

ಪ್ರಕಾಶಕರು : ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ)
4271, 2ನೇ ಮೇನ್, ಗಿರಿನಗರ,
ಸೀತಾಸರ್ಕಲ್ ಹತ್ತಿರ, ಬೆಂಗಳೂರು-85
ದೂರವಾಣಿ : 9141495120





ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಶ್ರೀಮತಿ ನಾಗಲತಾ

ಮುಖಪುಟ : ಶ್ರೀವಿಶ್ವಾತ್ಮಾ
ಕಾರ್ತಿಕ ಜೋಷಿ

ಮುದ್ರಣ : ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.



ದಿ|| ಶ್ರೀ ಶ್ರೀಧರಗಡ್ಡ ರಾಮರಾವ್ (1926-2011)

ಇವರ ಸ್ಮರಣಾರ್ಥ ಇವರ ಧರ್ಮಪತ್ನಿ ಶ್ರೀಮತಿ ಸುಮಿತ್ರಾ ಬಾಯಿ ಮತ್ತು ಎಸ್.ಆರ್.ಆರ್. ಕುಟುಂಬದವರು ಈ ಕೃತಿಯ ಸೇವೆಯನ್ನು ಸಲ್ಲಿಸಿರುತ್ತಾರೆ.

## ಶ್ರೀ ತುಳಸೀ

ಯಾ ದೃಷ್ಟಾ ನಿಖಿಲಾಘಸಂಘಶಮನೀ ಸ್ಪೃಷ್ಟಾವಪುಃ ಪಾವನೀ
ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಂತಕತ್ರಾಸಿನೀ ।
ಪ್ರತ್ಯಾಸಕ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ
ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ॥

ಪ್ರಸೀದ ತುಲಸೀದೇವಿ ಪ್ರಸೀದ ಹರಿವಲ್ಲಭೇ ।
ಕ್ಷೀರೋದಮಥನೋದ್ಭೂತೇ ತುಲಸೀ ತ್ವಾಂ ನಮಾಮ್ಯಹಮ್ ॥

'ಉತ್ಥಾನದ್ವಾದಶಿ' ಶಾಲಿವಾಹನ ಶಕೆ ೧೯೪೨ ಶಾರ್ವರಿ॥ ಶ್ರಾವಣ ॥ ಶುದ್ಧ ॥ ಪೂರ್ಣಿಮೆ (ದಿನಾಂಕ:೩-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥಶ್ರೀಪಾದಂಗಳವರ ಕರಕಮಲಗಳಿಂದ ಭಾರತೀರಮಣಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವ-ದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.


ಪ್ರಥಮ ಮುದ್ರಣ : ೨೦೨೦

ಪುಟಗಳು : ೧೧೦

ಪ್ರಕಾಶಕರು : ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ)
4271, 2ನೇ ಮೇನ್, ಗಿರಿನಗರ,
ಸೀತಾಸರ್ಕಲ್ ಹತ್ತಿರ, ಬೆಂಗಳೂರು-85
ದೂರವಾಣಿ : 9141495120





ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಶ್ರೀಮತಿ ನಾಗಲತಾ

ಮುಖಪುಟ : ಶ್ರೀವಿಶ್ವಾತ್ಮಾ
ಕಾರ್ತಿಕ ಜೋಷಿ

ಮುದ್ರಣ : ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.



ದಿ|| ಶ್ರೀ ಶ್ರೀಧರಗಡ್ಡ ರಾಮರಾವ್ (1926-2011)

ಇವರ ಸ್ಮರಣಾರ್ಥ ಇವರ ಧರ್ಮಪತ್ನಿ ಶ್ರೀಮತಿ ಸುಮಿತ್ರಾ ಬಾಯಿ ಮತ್ತು ಎಸ್.ಆರ್.ಆರ್. ಕುಟುಂಬದವರು ಈ ಕೃತಿಯ ಸೇವೆಯನ್ನು ಸಲ್ಲಿಸಿರುತ್ತಾರೆ.

## ಶ್ರೀ ತುಳಸೀ

ಯಾ ದೃಷ್ಟ್ವಾ ನಿಖಿಲಾಘಸಂಘಶಮನೀ ಸ್ಪೃಷ್ಟ್ವಾವಪುಃ ಪಾವನೀ
ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಂತಕತ್ರಾಸಿನೀ ।
ಪ್ರತ್ಯಾಸಕ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ
ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ॥

ಪ್ರಸೀದ ತುಲಸೀದೇವಿ ಪ್ರಸೀದ ಹರಿವಲ್ಲಭೇ ।
ಕ್ಷೀರೋದಮಥನೋದ್ಭೂತೇ ತುಲಸೀ ತ್ವಾಂ ನಮಾಮ್ಯಹಮ್ ॥

# ವಿಷಯಾನುಕ್ರಮಣಿಕೆ

# ಮುನ್ನುಡಿ

ಅಮೃತಮಥನದ ಸಂದರ್ಭದಲ್ಲಿ ಧನ್ವಂತರಿರೂಪಿಯಾದ ಭಗವಂತನ ಆನಂದಾಶ್ರುವಿನಿಂದ ಜನಿಸಿದವಳೇ ತುಳಸೀ. ಉತ್ಥಾನದ್ವಾದಶಿಯ ದಿವಸವೇ ಇವಳು ಜನಿಸಿದ್ದಾಳೆ. ತುಳಸಿಯಲ್ಲಿರುವ ಲಕ್ಷ್ಮೀದೇವಿಗೆ ಕಾರ್ತೀಕದಾಮೋದರನ ಜೊತೆ ವಿವಾಹವು ಉತ್ಥಾನದ್ವಾದಶಿಯ ದಿವಸ ನಡೆಯುತ್ತದೆ.

ಇಂಥ ತುಳಸಿಯ ಮಹಿಮೆ, ಮಹತ್ತ್ವ, ತುಳಸಿಯ ಆರಾಧನೆ, ತುಳಸೀ ಗಿಡಗಳ ಸಂರಕ್ಷಣೆ, ತುಳಸೀ ದಳಗಳ ಸಂಗ್ರಹ, ತುಳಸಿ ಅರ್ಚನೆ, ತುಳಸೀ ಮೃತ್ತಿಕಾ, ತುಳಸೀ ಮಾಲೆಯಧಾರಣೆ, ತುಳಸಿ ಸ್ತೋತ್ರ, ತುಳಸೀ ವಿವಾಹ. ಇವೆಲ್ಲದರ ಬಗ್ಗೆ ಶಾಸ್ತ್ರದ ಆಧಾರದಲ್ಲಿ ಅನೇಕ ಮಾಹಿತಿಗಳನ್ನು ಈ ಹೊತ್ತಿಗೆಯಲ್ಲಿ ಸಂಗ್ರಹಿಸಲಾಗಿದೆ.

ಉತ್ಥಾನದ್ವಾದಶಿಯ ದಿವಸ ತುಳಸೀವೃಂದಾವನದಲ್ಲಿ ನೆಲ್ಲೀಗಿಡದ ಟೊಂಗೆಯನ್ನು ಇಟ್ಟು ನೆಲ್ಲಿಕಾಯಿಗಳಿಂದ ಆರತಿ ಮಾಡುವುದಷ್ಟೇ ಕೆಲವರಲ್ಲಿ ಉಳಿದುಕೊಂಡಿರುವ ಸಂಪ್ರದಾಯವಾಗಿದೆ. ಉತ್ಥಾನದ್ವಾದಶಿ ಎಂದರೇನು? ಉತ್ಥಾನದ್ವಾದಶಿಯ ದಿವಸ ಮಾಡಬೇಕಾದ ಕರ್ತವ್ಯಗಳು ಎಷ್ಟು? ಪ್ರಬೋಧೋತ್ಸವ ಎಂದರೇನು? ತುಳಸಿಯ ಮಹತ್ತ್ವವೇನು? ಈ ಎಲ್ಲ ವಿಚಾರವನ್ನು ತಿಳಿಸುವ ಜೊತೆಗೆ ತುಳಸೀಸ್ತೋತ್ರ, ತುಳಸಿಯ ಬಗ್ಗೆ ಇರುವ ದಾಸರಾಯರ ಪದ್ಯ ಇವುಗಳನ್ನೂ ಕೂಡ ಈ ಹೊತ್ತಿಗೆಯಲ್ಲಿ ಸಂಗ್ರಹಿಸಲಾಗಿದೆ. ಭಗವಂತನ ಅನುಗ್ರಹವನ್ನು ನಾವು ಪಡೆಯಬೇಕೆಂದರೆ ಭಕ್ತಿಯಿಂದ ತುಳಸಿಯ ಆರಾಧನೆಯನ್ನು ಮಾಡಬೇಕು. ಆದ್ದರಿಂದ ತುಳಸಿಯ ಬಗ್ಗೆ ಪ್ರತಿಯೊಬ್ಬರೂ ತಿಳಿದುಕೊಳ್ಳಲೇಬೇಕು. ಉತ್ಥಾನದ್ವಾದಶಿಯ

ಪರ್ವಕಾಲದಲ್ಲಿ ಈ ತುಳಸಿಯ ಬಗ್ಗೆ ತಿಳಿದುಕೊಂಡು, ತನ್ಮೂಲಕ ಭಗವಂತನ ಸೇವೆಗೈಯ್ದು ಕೃತಕೃತ್ಯರಾಗೋಣ.

ಈ ಪುಸ್ತಕದ ಸೇವೆಯನ್ನು ಮಾಡಿದ ಶ್ರೀಮತಿ ಸುಮಿತ್ರಾ ಬಾಯಿ ಮತ್ತು ಎಸ್.ಆರ್.ಆರ್. ಕುಟುಂಬದವರಿಗೆ ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ-ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ದಿ॥ ಶ್ರೀ ಶ್ರೀಧರಗಡ್ಡ ರಾಮರಾವ್‌ರವರಿಗೆ ಈ ಜ್ಞಾನಯಜ್ಞದ ಪುಣ್ಯರಾಶಿಯು ತಲುಪಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ.

# ಆಚಾರ-ವಿಚಾರ

## ಉತ್ಥಾನದ್ವಾದಶಿ, ಪ್ರಬೋಧೋತ್ಸವ, ಕ್ಷೀರಾಬ್ಧಿಗಳ ಬಗ್ಗೆ

## ತುಳಸೀವಿವಾಹಕ್ಕೆ ಮತ್ತು ಪ್ರಬೋಧೋತ್ಸವಕ್ಕೆ ಬೇಕಾಗುವ ಪೂಜಾ ಸಾಮಗ್ರಿಗಳು

* ಶುದ್ಧ ಹಸುವಿನ ಹಾಲು.
* ಸಾಯಂಕಾಲದ ಕ್ಷೀರಾಬ್ಧಿಗೆ ಪ್ರತ್ಯೇಕವಾದ ಶಾಲಗ್ರಾಮ
* ಶ್ರೀಕೃಷ್ಣನ ಪ್ರತಿಮೆ
* ಸುದರ್ಶನಚಕ್ರ
* ವಿಷ್ಣುಪಾದ
* ಚಕ್ರಾಂಕಿತ
* ನೆಲ್ಲಿಕಾಯಿಗಳು
* ನೆಲ್ಲಿಗಿಡ (ನೆಲ್ಲಿಗಿಡ ಇಲ್ಲದಿದ್ದರೆ, ನೆಲ್ಲಿಗಿಡದ ಟೊಂಗೆ)
* ನೆಲ್ಲಿಕಾಯಿಯ ಹಾರ
* ನೆಲ್ಲಿಕಾಯಿಯಲ್ಲಿ ತುಪ್ಪದ ದೀಪ.
* ಪೂಜಾಸಾಮಗ್ರಿಗಳು
* ಗೆಜ್ಜೆವಸ್ತ್ರ
* ನೈವೇದ್ಯ ಪದಾರ್ಥಗಳು
* ತುಳಸೀ ವೃಂದಾವನಕ್ಕೆ ಸುಣ್ಣ ಹಚ್ಚಿ ರಂಗೋಲಿ ಬರೆದು ಗೋಮಯದಿಂದ ಸಾರಿಸಿ ಹೂವಿನಿಂದ ಅಲಂಕರಿಸಿರಬೇಕು.

## ಉತ್ಥಾನದ್ವಾದಶಿ ಎಂದರೇನು ?

೧. ಭಗವಂತನು ನಿದ್ರೆಯಿಂದ ಎದ್ದೇಳುವ ದ್ವಾದಶಿಯಾದ್ದರಿಂದ ಇದನ್ನು ಉತ್ಥಾನದ್ವಾದಶಿ ಎಂಬುದಾಗಿ ಕರೆಯುತ್ತಾರೆ.

೨. ಶೇತೇ ವಿಷ್ಣುಃ ಸದಾಷಾಢೇ ಭಾದ್ರೇ ಚ ಪರಿವರ್ತತೇ ।
ಕಾರ್ತಿಕೇ ಪರಿಬುದ್ಧ್ಯೇತಾ ಶುಕ್ಲಪಕ್ಷೇ ಹರೇರ್ದಿನೇ ॥ (ಮತ್ಸ್ಯಪುರಾಣ)

ಆಷಾಢದ ಶುಕ್ಲಪಕ್ಷದ ಏಕಾದಶಿಯಂದು ಮಹಾವಿಷ್ಣುವು ಕ್ಷೀರಸಮುದ್ರದಲ್ಲಿ ಮಲಗುತ್ತಾನೆ. ಭಾದ್ರಪದಮಾಸದ ಶುಕ್ಲಪಕ್ಷದ ಏಕಾದಶಿಯಂದು ಎಡಮಗ್ಗಲಿನಿಂದ ಬಲಮಗ್ಗಲಿಗೆ ಹೊರಳುತ್ತಾನೆ. ಕಾರ್ತೀಕಮಾಸದ ಶುಕ್ಲಪಕ್ಷದ ಏಕಾದಶಿಯಂದು ನಿದ್ರೆಯಿಂದ ಎದ್ದೇಳುತ್ತಾನೆ.

೩. ನಿಶಿ ಸ್ವಾಪೋ ದಿವೋತ್ಥಾನಂ ಸಂಧ್ಯಾಯಾಂ ಪರಿವರ್ತನಂ ।
ಅನ್ಯತ್ರಪಾದಯೋಗೇಽಪಿ ದ್ವಾದಶ್ಯಾಮೇವ ಕಾರಯೇತ್ ॥

ಎಂಬ ಭವಿಷ್ಯಪುರಾಣದ ಮಾತಿನಂತೆ ಏಕಾದಶಿಯ ದಿವಸ ನಿದ್ರೆಯಿಂದ ಕಣ್ಣುಬಿಟ್ಟ ಭಗವಂತನನ್ನು ದ್ವಾದಶಿಯ ಸಂಧ್ಯಾಕಾಲದಲ್ಲಿಯೇ ನಾವು ಮೇಲೆಬ್ಬಿಸಬೇಕು.

೪. 'ದ್ವಾದಶ್ಯಾಂ ಸಂಧಿಸಮಯೇ ನಕ್ಷತ್ರಾಣಾಮಸಂಭವೇ' ದ್ವಾದಶಿಯ ದಿವಸ ಸಂಧ್ಯಾಕಾಲದಲ್ಲಿ ನಕ್ಷತ್ರಗಳು ಹುಟ್ಟದೇ ಇರುವಾಗ ಭಗವಂತನನ್ನು ನಿದ್ರೆಯಿಂದ ಎಬ್ಬಿಸಬೇಕು.

೫. ವರ್ಷದಲ್ಲಿ ಒಟ್ಟು ಐದು ಉತ್ಸವಗಳು ಅತ್ಯಂತ ಶ್ರೇಷ್ಠವಾಗಿವೆ.

೧. ಪವಿತ್ರೋತ್ಸವ, ೨. ಕಾರ್ತಿಕೋತ್ಸವ, ೩. ಫಲೋತ್ಸವ, ೪. ದವನೋತ್ಸವ, ೫. ವಸಂತೋತ್ಸವ. ಈ ಐದರಲ್ಲೂ ಕಾರ್ತಿಕೋತ್ಸವಕ್ಕೆ ಹೆಚ್ಚಿನ ಮಹತ್ವವಿದೆ. ಈ ಐದು ಉತ್ಸವಗಳನ್ನು ಶ್ರದ್ಧೆಯಿಂದ ಪ್ರತಿಯೊಬ್ಬರೂ ಆಚರಿಸಲೇಬೇಕು.

## ತುಳಸೀವಿವಾಹಕ್ಕೆ ಮತ್ತು ಪ್ರಬೋಧೋತ್ಸವಕ್ಕೆ ಬೇಕಾಗುವ ಪೂಜಾ ಸಾಮಗ್ರಿಗಳು

* ಶುದ್ಧ ಹಸುವಿನ ಹಾಲು.
* ಸಾಯಂಕಾಲದ ಕ್ಷೀರಾಬ್ಧಿಗೆ ಪ್ರತ್ಯೇಕವಾದ ಶಾಲಗ್ರಾಮ
* ಶ್ರೀಕೃಷ್ಣನ ಪ್ರತಿಮೆ
* ಸುದರ್ಶನಚಕ್ರ
* ವಿಷ್ಣುಪಾದ
* ಚಕ್ರಾಂಕಿತ
* ನೆಲ್ಲಿಕಾಯಿಗಳು
* ನೆಲ್ಲಿಗಿಡ (ನೆಲ್ಲಿಗಿಡ ಇಲ್ಲದಿದ್ದರೆ, ನೆಲ್ಲಿಗಿಡದ ಟೊಂಗೆ)
* ನೆಲ್ಲಿಕಾಯಿಯ ಹಾರ
* ನೆಲ್ಲಿಕಾಯಿಯಲ್ಲಿ ತುಪ್ಪದ ದೀಪ.
* ಪೂಜಾಸಾಮಗ್ರಿಗಳು
* ಗೆಜ್ಜೆವಸ್ತ್ರ
* ನೈವೇದ್ಯ ಪದಾರ್ಥಗಳು
* ತುಳಸೀ ವೃಂದಾವನಕ್ಕೆ ಸುಣ್ಣ ಹಚ್ಚಿ ರಂಗೋಲಿ ಬರೆದು ಗೋಮಯದಿಂದ ಸಾರಿಸಿ ಹೂವಿನಿಂದ ಅಲಂಕರಿಸಿರಬೇಕು.

## ಉತ್ಥಾನದ್ವಾದಶಿ ಎಂದರೇನು ?

೧. ಭಗವಂತನು ನಿದ್ರೆಯಿಂದ ಎದ್ದೇಳುವ ದ್ವಾದಶಿಯಾದ್ದರಿಂದ ಇದನ್ನು ಉತ್ಥಾನದ್ವಾದಶಿ ಎಂಬುದಾಗಿ ಕರೆಯುತ್ತಾರೆ.

೨. ಶೇತೇ ವಿಷ್ಣುಃ ಸದಾಷಾಢೇ ಭಾದ್ರೇ ಚ ಪರಿವರ್ತತೇ ।
ಕಾರ್ತಿಕೇ ಪರಿಬುದ್ಧ್ಯೇತಾ ಶುಕ್ಲಪಕ್ಷೇ ಹರೇರ್ದಿನೇ ॥ (ಮತ್ಸ್ಯಪುರಾಣ)

ಆಷಾಢದ ಶುಕ್ಲಪಕ್ಷದ ಏಕಾದಶಿಯಂದು ಮಹಾವಿಷ್ಣುವು ಕ್ಷೀರಸಮುದ್ರದಲ್ಲಿ ಮಲಗುತ್ತಾನೆ. ಭಾದ್ರಪದಮಾಸದ ಶುಕ್ಲಪಕ್ಷದ ಏಕಾದಶಿಯಂದು ಎಡಮಗ್ಗಲಿನಿಂದ ಬಲಮಗ್ಗಲಿಗೆ ಹೊರಳುತ್ತಾನೆ. ಕಾರ್ತೀಕಮಾಸದ ಶುಕ್ಲಪಕ್ಷದ ಏಕಾದಶಿಯಂದು ನಿದ್ರೆಯಿಂದ ಎದ್ದೇಳುತ್ತಾನೆ.

೩. ನಿಶಿ ಸ್ವಾಪೋ ದಿವೋತ್ಥಾನಂ ಸಂಧ್ಯಾಯಾಂ ಪರಿವರ್ತನಂ ।
ಅನ್ಯತ್ರಪಾದಯೋಗೇಽಪಿ ದ್ವಾದಶ್ಯಾಮೇವ ಕಾರಯೇತ್ ॥

ಎಂಬ ಭವಿಷ್ಯಪುರಾಣದ ಮಾತಿನಂತೆ ಏಕಾದಶಿಯ ದಿವಸ ನಿದ್ರೆಯಿಂದ ಕಣ್ಣುಬಿಟ್ಟ ಭಗವಂತನನ್ನು ದ್ವಾದಶಿಯ ಸಂಧ್ಯಾಕಾಲದಲ್ಲಿಯೇ ನಾವು ಮೇಲೆಬ್ಬಿಸಬೇಕು.

೪. 'ದ್ವಾದಶ್ಯಾಂ ಸಂಧಿಸಮಯೇ ನಕ್ಷತ್ರಾಣಾಮಸಂಭವೇ' ದ್ವಾದಶಿಯ ದಿವಸ ಸಂಧ್ಯಾಕಾಲದಲ್ಲಿ ನಕ್ಷತ್ರಗಳು ಹುಟ್ಟದೇ ಇರುವಾಗ ಭಗವಂತನನ್ನು ನಿದ್ರೆಯಿಂದ ಎಬ್ಬಿಸಬೇಕು.

೫. ವರ್ಷದಲ್ಲಿ ಒಟ್ಟು ಐದು ಉತ್ಸವಗಳು ಅತ್ಯಂತ ಶ್ರೇಷ್ಠವಾಗಿವೆ.

೧. ಪವಿತ್ರೋತ್ಸವ, ೨. ಕಾರ್ತಿಕೋತ್ಸವ, ೩. ಫಲೋತ್ಸವ, ೪. ದವನೋತ್ಸವ, ೫. ವಸಂತೋತ್ಸವ. ಈ ಐದರಲ್ಲೂ ಕಾರ್ತಿಕೋತ್ಸವಕ್ಕೆ ಹೆಚ್ಚಿನ ಮಹತ್ವವಿದೆ. ಈ ಐದು ಉತ್ಸವಗಳನ್ನು ಶ್ರದ್ಧೆಯಿಂದ ಪ್ರತಿಯೊಬ್ಬರೂ ಆಚರಿಸಲೇಬೇಕು.

೬. ದ್ವಾದಶಿಗೆ ಉತ್ಥಾನದ್ವಾದಶಿ ಎಂಬ ಹೆಸರು ಇರುವಂತೆ ಏಕಾದಶೀತಿಥಿಗೆ ಪ್ರಭೋದಿನೀ ಏಕಾದಶಿ ಎಂಬ ಹೆಸರು ಇರುತ್ತದೆ.

೭. ಉತ್ಥಾನದ್ವಾದಶಿ ಎಂಬ ಹೆಸರಿನಂತೆ ಕ್ಷೀರಾಬ್ಧಿವ್ರತ, ತುಳಸೀವಿವಾಹ, ತುಳಸೀಮದುವೆ, ಪ್ರಬೋಧೋತ್ಸವ ಮತ್ತು ಕಾರ್ತಿಕೋತ್ಸವ ಇವೇ ಮೊದಲಾದ ಹಲವಾರು ಹೆಸರುಗಳಿಂದ ಈ ದಿವಸವು ಪ್ರಸಿದ್ಧವಾಗಿದೆ.

೮. ರೇವತೀ ನಕ್ಷತ್ರದ ಯೋಗವಿಲ್ಲದ ಕಾರ್ತಿಕಶುದ್ಧ ದ್ವಾದಶಿಯು ಶ್ರೇಷ್ಠವಾಗಿರುತ್ತದೆ. ರೇವತೀ ನಕ್ಷತ್ರವು ಇರುವುದೇ ಆಗಿದ್ದಲ್ಲಿ, ರೇವತೀ ನಕ್ಷತ್ರದ ನಾಕನೆಯ ಪಾದವನ್ನಾದರೂ ಕೂಡ ಪರಿತ್ಯಾಗ ಮಾಡಬೇಕೆಂದು ಹೇಳುತ್ತಾರೆ.

೯. ಉಡುಪಿಕೃಷ್ಣಮಠದಲ್ಲಿ ಕಾರ್ತಿಕಮಾಸದ ಶುಕ್ಲಪಕ್ಷದ ಪ್ರತಿಪತ್ ತಿಥಿಯಿಂದ ದ್ವಾದಶಿ ತಿಥಿಯತನಕ ಪ್ರತಿನಿತ್ಯವು ಬೆಳಗಿನ ಝಾವ ನಾಕು ಗಂಟೆಯಿಂದ ಐದುಮೂವತ್ತರ ತನಕ ಉಷಃಕಾಲದಲ್ಲಿ ಭಗವಂತನನ್ನು ಪಂಚವಾದ್ಯಗಳಿಂದ ಎಬ್ಬಿಸುವ ಸೇವೆಯನ್ನು ಮಾಡುತ್ತಾರೆ.

೧೦. ಉತ್ಥಾನದ್ವಾದಶಿಯ ಸಾಯಂಕಾಲದಲ್ಲಿ (೪-೩೦ಕ್ಕೆ) ಮನೆಯ ಹೊರಗೆ ಇರುವ ತುಳಸೀಕಟ್ಟೆಯ ಸನ್ನಿಧಾನದಲ್ಲಿ ಭಗವಂತನಿಗೆ ಕ್ಷೀರಾಭಿಷೇಕವನ್ನು ಮಾಡಿ, ನಿದ್ರೆಯಿಂದ ಎಬ್ಬಿಸಬೇಕು.

೧೧. ಕ್ಷೀರಸಮುದ್ರದಲ್ಲಿ ಪವಡಿಸಿದ ಭಗವಂತನು ಈಗ ಎದ್ದಿದ್ದಾನೆ ಎಂಬುದಾಗಿ ಅನುಸಂಧಾನ ಮಾಡಿಕೊಂಡು ವೈಭವೋಪೇತವಾದ ವಿಷ್ಣುಪೂಜೆಯನ್ನು ಆಚರಿಸಬೇಕು.

೧೨. ಮುಂದೆ ನೀಡಿದ ನೇತ್ರೋನ್ಮೀಲನ ಮಂತ್ರವನ್ನು ಉಚ್ಚಸ್ವರದಲ್ಲಿ ಪಠಿಸುತ್ತಾ ಕಣ್ಮುಚ್ಚಿದ ಭಗವಂತನು ಕಣ್ತೆರೆಯುತ್ತಿದ್ದಾನೆ ಅವನ ದೃಷ್ಟಿ ನನ್ನ ಮೇಲೆ ಬಿದ್ದು, ನನ್ನ ಪಾಪಗಳೆಲ್ಲವೂ ಪರಿಹಾರವಾಗಿ ಭಗವಂತನ ಕೃಪಾಭಾಜನನಾಗಿರುತ್ತೇನೆ ಎಂಬುದಾಗಿ ತಿಳಿದುಕೊಳ್ಳಬೇಕು.

೧೩. ಹೀಗೆ ಕ್ಷೀರಸಮುದ್ರದಲ್ಲಿ ಮಲಗಿದ ಭಗವಂತನನ್ನು ಎಬ್ಬಿಸುವ ದ್ವಾದಶಿಯು ಉತ್ಥಾನದ್ವಾದಶಿ ಎಂಬುದಾಗಿ ಕರೆಸಿಕೊಳ್ಳುತ್ತದೆ. ಇದರ ಆಚರಣೆಯಿಂದ ಸಮಸ್ತ ಸನ್ಮಂಗಳಗಳನ್ನು ದಯಪಾಲಿಸುತ್ತಾನೆ.

## ಉತ್ಥಾನ ದ್ವಾದಶಿಯ ಆಚರಣೆಯನ್ನು ಹೇಗೆ ಮಾಡಬೇಕು ?

೧. ತುಳಸೀವೃಂದಾವನದ ಬುಡದಲ್ಲಿ ನೆಲ್ಲಿಗಿಡದ (ಧಾತ್ರೀವೃಕ್ಷದ) ಕೊಂಬೆಯನ್ನಿಟ್ಟು ಅದರ ಎದುರಿನಲ್ಲಿ ಭಗವಂತನ ಪ್ರತಿಮೆ ಮತ್ತು ಶಾಲಗ್ರಾಮಗಳನ್ನಿಟ್ಟು ಪೂಜಿಸುವುದು ಎಲ್ಲೆಡೆ ಇರುವ ಸಂಪ್ರದಾಯವಾಗಿದೆ.

೨. ಧಾತ್ರೀವೃಕ್ಷದ ಟೊಂಗೆಯನ್ನು ಕತ್ತರಿಸಿ, ತುಳಸಿಗಿಡದ ಜೊತೆ ಇಡುವುದು ಶ್ರೇಷ್ಠಪಕ್ಷವಲ್ಲ. ಧಾತ್ರೀವೃಕ್ಷ ಇರುವಲ್ಲಿಯೇ ತುಳಸಿವೃಂದಾವನವನ್ನು ತೆಗೆದುಕೊಂಡು ಹೋಗಿ, ಅಲ್ಲಿ ಭಗವಂತನಿಗೆ ಪೂಜೆ ಮಾಡುವುದೇ ಶ್ರೇಷ್ಠಪಕ್ಷವಾಗಿದೆ.

೩. ಕೆಲವೊಂದು ಯಜ್ಞಭಾಗಗಳಿಗೆ ಬಿಟ್ಟು, ಉಳಿದ ಯಾವುದೇ ಧಾರ್ಮಿಕವಿಧಾನಗಳಿಗೆ ವೃಕ್ಷವನ್ನು ಕತ್ತರಿಸುವುದು ಅಧರ್ಮವಾಗುತ್ತದೆ. ಆದ್ದರಿಂದ ನೆಲ್ಲಿಮರದ ಟೊಂಗೆಯನ್ನು ಕತ್ತರಿಸಿ ತರುವುದು ಶಾಸ್ತ್ರೀಯವಲ್ಲ. ಮತ್ತು ಯಾವುದೇ ಗ್ರಂಥಗಳಲ್ಲಿಯೂ ಕೂಡ ಹಾಗೆ ಹೇಳಿರುವುದಿಲ್ಲ.

೪. ಆದರೆ ಇಂದು ವ್ಯಾಪಕವಾಗಿ ನೆಲ್ಲಿಮರದ ಟೊಂಗೆಯನ್ನು ತಂದು ಪೂಜಿಸುವ ವಾಡಿಕೆಯು ಬಂದಿದೆ. ಇದನ್ನು ಅಧಮಪಕ್ಷವೆಂದೇ ತಿಳಿದುಕೊಳ್ಳಬೇಕು.

೫. 'ನಾಽಶಕ್ಯೇ ಶಾಸ್ತ್ರಚೋದನಾ' ಎಂಬ ಮಾತಿನಂತೆ ಅಶಕ್ಯವಿದ್ದಾಗ ಮಾತ್ರ ಇಂಥ ಸಂಪ್ರದಾಯಗಳು ಅನುಕರಣೀಯವಾಗುತ್ತವೆ.

೬. ನೆಲ್ಲಿಕಾಯಿಗಳಲ್ಲಿ ತುಪ್ಪದ ದೀಪವನ್ನು ಹಚ್ಚಿ ಇಂದು ಆರತಿ ಮಾಡಬೇಕು. ಐದು, ಏಳು, ಒಂಬತ್ತು ನೆಲ್ಲಿಕಾಯಿಗಳನ್ನಿಟ್ಟು ಆರತಿ ಮಾಡಬೇಕು. ಮತ್ತು ದೀಪಸ್ತಂಭಗಳಲ್ಲಿಯೂ ನೆಲ್ಲಿಕಾಯಿಯನ್ನಿಟ್ಟು ತುಪ್ಪದ ದೀಪವನ್ನು ಹಚ್ಚಬೇಕು.

೭. ನೆಲ್ಲಿಕಾಯಿಗಳನ್ನು ಬಾಳೆನಾರಿನಲ್ಲಿ ಪೋಣಿಸಿ ಭಗವಂತನಿಗೆ ಹಾರವನ್ನಾಗಿ ಮಾಡಿ, ಸಮರ್ಪಣೆ ಮಾಡಬೇಕು. ಸಾಧ್ಯವಿದ್ದರೆ ನೆಲ್ಲೀಗಿಡದ ಕಡ್ಡಿಯಿಂದ ಮಣಿಗಳನ್ನು ಮಾಡಿ ಮಾಲೆಯನ್ನು ಮಾಡಿ, ಅದನ್ನೂ ಕೂಡ ಭಗವಂತನಿಗೆ ಸಮರ್ಪಣೆ ಮಾಡಬೇಕು.

೮. ಶಮೀಪತ್ರವನ್ನು ಭಗವಂತನಿಗೆ ಸಮರ್ಪಣೆ ಮಾಡುವಂತೆ ಧಾತ್ರೀವೃಕ್ಷದ ಪತ್ರಗಳನ್ನೂ ಕೂಡ ಇಂದು ಭಗವಂತನಿಗೆ ಸಮರ್ಪಣೆ ಮಾಡಬೇಕು. (ಪೂಜಾಸಂದರ್ಭದಲ್ಲಿ ತುಳಸಿಯ ಜೊತೆ ನೆಲ್ಲಿಮರದ ಎಲೆಗಳನ್ನು ಏರಿಸಬೇಕು)

೯. ಏಕಾದಶೀ ದಿವಸದಂದು ತುಳಸೀ ವೃಂದಾವನಕ್ಕೂ ಹಾಗೂ ಅದರ ಸುತ್ತಲಿನ ಪರಿಸರಕ್ಕೂ ಸುಣ್ಣ-ಬಣ್ಣಗಳನ್ನು ಹಚ್ಚಿರಬೇಕು. ತೋರಣಗಳಿಂದ ಅಲಂಕರಿಸಬೇಕು.

೧೦. ತುಳಸೀವೃಂದಾವನಕ್ಕೆ ಕಾವೀಬಣ್ಣವನ್ನು ಹಚ್ಚದೇ ಇರಬಾರದು. ಮತ್ತು ಸುತ್ತಲೂ ರಂಗವಲ್ಲಿಗಳನ್ನೂ ಕೂಡ ಹಾಕಲೇಬೇಕು.

೧೧. ತುಳಸೀವೃಂದಾವನವನ್ನು ಮನೆಯ ಒಳಗೆ ತಂದು ಪೂಜಿಸುವುದು ಉತ್ತಮಪಕ್ಷವಲ್ಲ. ಮನೆಯ ಹೊರಗೆ ಸ್ಥಳಾವಕಾಶ ಇಲ್ಲದಿದ್ದಾಗ ಮಾತ್ರ ಮನೆಯ ಒಳಗೆ ಆಚರಿಸಬೇಕು.

೧೨. ಭಗವಂತನ ಪೂಜೆಯ ಅನಂತರ ತುಳಸೀ ಪೂಜೆಯನ್ನು ಮಾಡಿ, ಅನಂತರವೇ ಮುಖ್ಯಪ್ರಾಣದೇವರ ಪೂಜೆಯನ್ನು ಮಾಡಬೇಕು. ಉಡುಪಿ ಶ್ರೀಕೃಷ್ಣಮಠದ ಸಂಪ್ರದಾಯ ಹೀಗೆಯೇ ಇರುತ್ತದೆ. ಅದನ್ನನುಸರಿಸುವುದು ಸೂಕ್ತ.

೧೩. ಪ್ರಾತಃಕಾಲದಲ್ಲಿ ವಾದ್ಯಘೋಷಗಳನ್ನು ಹಾಗೂ ಶಂಖನಾದವನ್ನು ಮಾಡಬೇಕು. ಸಾಯಂಕಾಲದ ಸಮಯದಲ್ಲಿಯೂ ಭಗವಂತನನ್ನು ಎಬ್ಬಿಸಲು ವಿಶೇಷವಾಗಿ ಪಂಚವಾದ್ಯಘೋಷಗಳನ್ನು, ಸಾಧ್ಯವಾಗದಿದ್ದರೆ ಶಂಖನಾದವನ್ನು

ಮಾಡಬೇಕು. ಶಂಖವು ಇಲ್ಲದಿದ್ದ ಪಕ್ಷದಲ್ಲಿ ಭಗವಂತನನ್ನು ಎಬ್ಬಿಸುವ ಮಂತ್ರಗಳನ್ನು ಅನೇಕರು ಒಟ್ಟಿಗೆ ಕೈಮುಗಿದು ಉಚ್ಚಕಂಠದಿಂದ ಪಠಿಸಬೇಕು.

೧೪. ಬೆಳಗಿನ ಪೂಜಾಸಮಯದಲ್ಲಿ ಭಗವಂತನ ಪೂಜೆಯ ಅನಂತರ ತುಳಸಿಯ ಪೂಜೆಯನ್ನು, ಹಾಗೂ ತುಳಸಿಯ ಜೊತೆಗಿರುವ ಶ್ರೀಕೃಷ್ಣನ ಪೂಜೆಯನ್ನು ಮಾಡಲೇಬೇಕು. ಅನಂತರ ಮುಖ್ಯಪ್ರಾಣದೇವರ ಪೂಜೆಯನ್ನು ಮಾಡಬೇಕು.

೧೫. ಸಾಯಂಕಾಲದ ಸಮಯದಲ್ಲಿ ವಿಶೇಷವಾಗಿ ತುಳಸೀಪೂಜೆ ಹಾಗೂ ಪ್ರಬೋಧೋತ್ಸವ ಕಾರ್ಯವನ್ನು ನೆರವೇರಿಸಬೇಕು.

೧೬. ಬೆಳಗಿನ ಕಾಲದಲ್ಲಿ ನೆಲ್ಲಿಕಾಯಿಯಿಂದ ಆರತಿ ಮಾಡುವಂತೆ, ಸಾಯಂಕಾಲವೂ ಕೂಡ ನೆಲ್ಲಿಕಾಯಿಯಿಂದ ಆರತಿಯನ್ನು ಮಾಡಬೇಕು.

೧೭. ಬಗೆಬಗೆಯ ಭಕ್ಷ್ಯ, ಭೋಜ್ಯಗಳು ಲೇಹ್ಯ, ಪೇಯ, ಚೋಷ್ಯ , ಮೊದಲಾದ ವಿವಿಧ ಬಗೆಯ ತಿನಿಸುಗಳನ್ನು ಸಾಯಂಕಾಲದ ಸಮಯದಲ್ಲಿ ಅರ್ಪಣೆ ಮಾಡುವುದು ಸೂಕ್ತವಾಗಿರುತ್ತದೆ.

೧೮. ದ್ವಾದಶಿಯ ಪಾರಣೆಯನ್ನು ಮುಗಿಸಿದ ಮೇಲೆ ಸಾಯಂಕಾಲದ ತನಕ ನೀರನ್ನೂ ಕೂಡ ಕುಡಿಯದೇ ಉಪವಾಸವಿರಬೇಕು. ಸಾಯಂಕಾಲ ಪೂಜೆ ಮಾಡುವವನಿಗೆ ಇದು ಅನಿವಾರ್ಯ. ಉಳಿದವರು ಅವರವರ ಶಕ್ತ್ಯನುಸಾರವಾಗಿ ಆಚರಿಸಬೇಕು.

೧೯. ಸಾಯಂಕಾಲ ಸುಮಾರು ೪-೩೦ ಸಮಯಕ್ಕೆ ಶುದ್ಧವಾದ ಮಡಿಸ್ನಾನವನ್ನು ಆಚರಿಸಬೇಕು. ಆಗ ಬೆಳಗಿನ ಕಾಲದಲ್ಲಿ ಎಷ್ಟು ಮಡಿ ಇರುತ್ತದೋ, ಅಷ್ಟೇ ಮಡಿಯು ಪ್ರಾಪ್ತವಾಗಿರುತ್ತದೆ. ಆದ್ದರಿಂದ ಶುಭ್ರಭಾವನೆಯನ್ನು ಹೊಂದಿ, ಪ್ರಬೋಧೋತ್ಸವದ ಆಚರಣೆಯನ್ನು ಮಾಡಬೇಕು.

೨೦. ಪ್ರತಿನಿತ್ಯ ಪೂಜಿಸುವ ಎಲ್ಲ ಭಗವಂತನ ಪ್ರತೀಕಗಳನ್ನು ಭೋಜನದ ನಂತರ ಪೂಜಿಸಲು ಶಾಸ್ತ್ರಗಳ ಸಮ್ಮತಿ ಇಲ್ಲ. ಒಂದು ಕೃಷ್ಣನ ಪ್ರತಿಮೆ, ಒಂದು ಶಾಲಗ್ರಾಮ,

ಎರಡು ಚಕ್ರಾಂಕಿತ, ಒಂದು ವಿಷ್ಣುಪಾದ ಇಷ್ಟನ್ನು ತಂದು ತುಳಸಿಯ ಸನಿಹದಲ್ಲಿ ಇಟ್ಟು ಪೂಜೆಯನ್ನು ಮಾಡಬೇಕು.

೨೧. ಮೊದಲು ಕ್ಷೀರಾಬ್ಧಿಯನ್ನು ಮಾಡಿ, ಅನಂತರ ಸೂರ್ಯಾಸ್ತಕಾಲಕ್ಕೆ ಸಂಧ್ಯಾವಂದನೆಯನ್ನು ಮಾಡಬೇಕು.

೨೨. ಸೂರ್ಯಾಸ್ತದ ನಂತರ ಪ್ರಬೋಧೋತ್ಸವವನ್ನು ಮಾಡುವುದು ಶ್ರೇಷ್ಠವಾಗಿರುವುದಿಲ್ಲ.

* * * *

# ತುಳಸೀದಾಮೋದರ ವಿವಾಹ

ಶ್ರೀಗುರುಭ್ಯೋ ನಮಃ। ಶ್ರೀ ಪರಮ ಗುರುಭ್ಯೋನಮಃ॥

ನಾರಾಯಣಾಯ ಪರಿಪೂರ್ಣಗುಣಾರ್ಣವಾಯ।
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ
ಸತ್ಕಾರಣಾಯ ವಿತತಾಯ ನಮೋ ನಮಸ್ತೇ॥

ಸರ್ವದಾ ಸರ್ವಕಾರ್ಯೇಷು ನಾಸ್ತಿ ತೇಷಾಮಮಂಗಲಮ್।
ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನೋ ಹರಿಃ॥

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ॥

ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ।
ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ॥

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ॥

ನಮಸ್ತೇ ಪ್ರಾಣೇಶ ಪ್ರಣತವಿಭವಾಯಾವನಿಮಗಾಃ
ನಮಃ ಸ್ವಾಮಿನ್ ರಾಮಪ್ರಿಯತಮ ಹನೂಮನ್ ಗುರುಗುಣ।
ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟಭಗವನ್
ನಮಃ ಶ್ರೀಮನ್‌ಮಧ್ವ ಪ್ರದಿಶ ಸುದೃಶಂ ನೋ ಜಯ ಜಯ॥

ಮೃತ್ಯುಂಜಯ ನಮಸ್ತುಭ್ಯಂ ಮೃತ್ಯುಂ ಹರ ನಮಾಮ್ಯಹಮ್।
ಸರ್ವಮೃತ್ಯುವಿನಾಶಾಯ ಮೃತ್ಯುಂಜಯ ನಮೋನಮಃ॥

ದುಷ್ಟಾನಾಂ ವಿಘ್ನಕರ್ತಾ ಸುಚರಿತ ಸುಜನಸ್ತೋಮ ವಿಘ್ನಾಪಹರ್ತಾ।
ತಸ್ಮಾದ್ ವಿಘ್ನಾಧಿಪೋಽಹಂ ಮತ ಇತಿ ಸುಧಿಯಾಂ ಸ್ಪಷ್ಟಮಾಜ್ಞಾಪನಾಯ॥

ಪೌಲಸ್ತ್ಯೇಚ್ಛಾಂತರಾಯಃ ಸುರಮುನಿಕರಾಭೀಷ್ಟಸಂಪ್ರಾಪ್ತ್ಯುಪಾಯಃ ।
ಶ್ರೇಯೋ ವಿಘ್ನಾಧಿರಾಜಃ ಪ್ರದಿಶತು ಸತತಂ ಭೂರಿಗೌರೀತನೂಜಃ ॥

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ।
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ ॥

## ಆಚಮನ

ಕೇಶವಾಯ ಸ್ವಾಹಾ । ನಾರಾಯಣಾಯ ಸ್ವಾಹಾ । ಮಾಧವಾಯ ಸ್ವಾಹಾ । ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ । ತ್ರಿವಿಕ್ರಮಾಯ ನಮಃ । ವಾಮನಾಯ ನಮಃ । ಶ್ರೀಧರಾಯ ನಮಃ । ಹೃಷೀಕೇಶಾಯ ನಮಃ । ಪದ್ಮನಾಭಾಯ ನಮಃ । ದಾಮೋದರಾಯ ನಮಃ । ಸಂಕರ್ಷಣಾಯ ನಮಃ । ವಾಸುದೇವಾಯ ನಮಃ । ಪ್ರದ್ಯುಮ್ನಾಯ ನಮಃ । ಅನಿರುದ್ಧಾಯ ನಮಃ । ಪುರುಷೋತ್ತಮಾಯ ನಮಃ । ಅಧೋಕ್ಷಜಾಯ ನಮಃ । ನಾರಸಿಂಹಾಯ ನಮಃ । ಅಚ್ಯುತಾಯ ನಮಃ । ಜನಾರ್ದನಾಯ ನಮಃ । ಉಪೇಂದ್ರಾಯ ನಮಃ । ಹರಯೇ ನಮಃ । ಶ್ರೀಕೃಷ್ಣಾಯ ನಮಃ ।

(ಆಚಮನವನ್ನು ಎರಡುಬಾರಿ ಮಾಡಬೇಕು)

## ಪ್ರಾಣಾಯಾಮ

ಓಂ ಪ್ರಣವಸ್ಯ ಪರಬ್ರಹ್ಮಋಷಿಃ ಪರಮಾತ್ಮಾದೇವತಾ ದೈವೀ ಗಾಯತ್ರೀ-ಛಂದಃ । ಪ್ರಾಣಾಯಾಮೇ ವಿನಿಯೋಗಃ ।

ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಂ ಸತ್ಯಂ । ಓಂ ತತ್ಸವಿತುರ್ವರೇಣ್ಯಂ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್॥ ಓಮಾಪೋಜ್ಯೋಽತಿರಸೋಽಮೃತಂ ಬ್ರಹ್ಮ ಭೂರ್ಭುವಸ್ವರೋಮ್ ॥

## ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಅದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ ಪ್ರಭವಾದಿ ಷಷ್ಟಿಸಂವತ್ಸರಾಣಾಂ ಮಧ್ಯೇ ........... ನಾಮಸಂವತ್ಸರೇ ದಕ್ಷಿಣಾಯನೇ ಶರದ್‌ಋತೌ, ಕಾರ್ತೀಕ ಮಾಸ ಶುಕ್ಲಪಕ್ಷೇ ದ್ವಾದಶ್ಯಾಂ ಶುಭತಿಥೌ ............. ವಾಸರಯುಕ್ತಾಯಾಂ ......... ನಕ್ಷತ್ರೇ ...... ಯೋಗೇ..... ಕರಣೇ ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ, ಅಸ್ಮಾಕಂ ಸಹ ಕುಟುಂಬಾನಾಂ ಕ್ಷೇಮಸ್ಥೈರ್ಯವಿಜಯವೀರ್ಯ ಆಯುರಾರೋಗ್ಯಭಿವೃದ್ಧ್ಯರ್ಥ ಧರ್ಮಾರ್ಥ-ಕಾಮಮೋಕ್ಷಾಖ್ಯಚತುರ್ವಿಧಪುರುಷಾರ್ಥಸಿದ್ಧ್ಯರ್ಥಂ, ಪುತ್ರ-ಪೌತ್ರಾದ್ಯಭಿ-ವೃದ್ಧ್ಯರ್ಥಂ, ಇಷ್ಟಾರ್ಥಸಿದ್ಧ್ಯರ್ಥಂ, ಸೌಮಾಂಗಲ್ಯಾಭಿವೃದ್ಧ್ಯರ್ಥಂ, ಸಮಸ್ತ-ದುರಿತೋಪಕ್ಷಯಾರ್ಥಂ ಜ್ಞಾನಭಕ್ತಿವೈರಾಗ್ಯಸಿದ್ಧ್ಯರ್ಥಂ ಚ ವಿಶೇಷತಃ ಭಗವದನುಗ್ರಹಸಿದ್ಧ್ಯರ್ಥಂ, ಭಾರತೀರಮಣಮುಖ್ಯಪ್ರಾಣಾಂತರ್ಗತ ಏತನ್ಮಾಸನಿಯಾಮಕ ಶ್ರೀಕಾರ್ತೀಕದಾಮೋದರ ಪ್ರೇರಣಯಾ ಶ್ರೀಕಾರ್ತೀಕ-ದಾಮೋದರ ಪ್ರೀತ್ಯರ್ಥಂ ಪ್ರಬೋಧೋತ್ಸವಪ್ರಯುಕ್ತ ತುಳಸ್ಯಂತರ್ಗತ ಶ್ರೀಲಕ್ಷ್ಮೀನಾರಾಯಣಪ್ರೀತ್ಯರ್ಥಂ ಪ್ರಬೋಧೋತ್ಸವಂ, ತುಳಸೀವಿವಾಹಂ ಚ ಕರಿಷ್ಯೇ ॥

(ಯಜಮಾನನು ತುಳಸಿ ಹೂ ಮಂತ್ರಾಕ್ಷತೆಗಳನ್ನು ಕೈಯಲ್ಲಿ ಹಿಡಿದುಕೊಂಡು ಪತ್ನಿಯಿಂದ ನೀರು ಹಾಕಿಸಿಕೊಂಡು ಅರ್ಘ್ಯಪಾತ್ರೆಯಲ್ಲಿ ಬಿಡಬೇಕು.)

## ದೀಪ ಹಚ್ಚಬೇಕು

ದೀಪಃ ಪಾಪಹರೋ ನೃಣಾಂ ದೀಪ ಆಪನ್ನಿವಾರಕಃ ।
ದೀಪೋ ವಿಧತ್ತೇ ಸುಕೃತಂ ದೀಪಃ ಸಂಪತ್ಪ್ರದಾಯಕಃ ॥

ದೀಪಜ್ಯೋತಿ ಪರಬ್ರಹ್ಮ ದೀಪಜ್ಯೋತಿಃ ಜನಾರ್ದನಃ ।
ದೀಪೋಃ ಹರತು ಮೇ ಪಾಪಂ ಸಂಧ್ಯಾದೀಪ ನಮೋಽಸ್ತು ತೇ ॥

ಶುಭಂ ಕುರುಷ್ವ ಕಲ್ಯಾಣಂ ಆರೋಗ್ಯಂ ಸುಖಸಂಪದಮ್ ।
ಮಮ ಬುದ್ಧಿ ಪ್ರಕಾಶಂ ಚ ದೀಪಜ್ಯೋತಿರ್ನಮೋಽಸ್ತು ತೇ ॥

ಭೋ ದೀಪ ಬ್ರಹ್ಮರೂಪಸ್ತ್ವಂ ಕರ್ಮಸಾಕ್ಷಿ ಇಹಾರ್ಹಸಿ ।
ಯಾವತ್ ಕರ್ಮಸಮಾಪ್ತಿಃ ಸ್ಯಾತ್ ತಾವತ್ ತ್ವಂ ಸುಸ್ಥಿರೋ ಭವ ॥

## ಘಂಟಾನಾದ ಮಾಡಬೇಕು

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।
ಕುರ್ವೇ ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ॥

## ಭೂತೋಚ್ಚಾಟನೆ ಮಾಡಬೇಕು

ಅಪಸರ್ಪಂತು ಯೇ ಭೂತಾಃ ಯೇ ಭೂತಾಃ ಭುವಿ ಸಂಸ್ಥಿತಾಃ ।
ಯೇ ಭೂತಾಃ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ॥
ಅಪಕ್ರಾಮಂತು ಯೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ ।
ತೇಷಾಮಪ್ಯವಿರೋಧೇನ ಪೂಜಾಕರ್ಮ ಸಮಾರಭೇ ॥

## ಗುರುಗಣಪತಿ ಪೂಜೆ ಮಾಡಬೇಕು

ಪ್ರತಿಯೊಂದು ಪೂಜೆಯ ಪ್ರಾರಂಭದಲ್ಲಿ ಗುರುಗಳಿಗೆ ಹಾಗೂ ಗಣಪತಿಗೆ ಮೊದಲು ಪೂಜೆ ಮಾಡಬೇಕು.

ಶ್ರೀಗುರುಭ್ಯೋ ನಮಃ । ಆದಿಗುರುಭ್ಯೋ ನಮಃ । ಮೂಲಗುರುಭ್ಯೋ ನಮಃ । ಪರಮಗುರುಭ್ಯೋ ನಮಃ । ಶ್ರೀವೇದವ್ಯಾಸಾಯ ನಮಃ । ಆಶ್ವಲಾಯನಾಚಾರ್ಯೇಭ್ಯೋ ನಮಃ ।

ಬಲಭಾಗದಲ್ಲಿ ಬರೆದ ಶ್ರೀಕಾರದಲ್ಲಿ ಗಂಧಾಕ್ಷತೆ ಪುಷ್ಪಗಳಿಂದ ಗುರುಗಳನ್ನು ಪೂಜಿಸಬೇಕು.

ಅಸ್ಮದ್ ಗುರುಸಮಾರಂಭಾಂ ಟೀಕಾಕೃತ್ಪಾದಮಧ್ಯಗಾಮ್ ।
ಶ್ರೀಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಮ್ ॥

ಆಪಾದಮೌಳಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥

ಓಂ ಶ್ರೀಗುರುಭ್ಯೋ ನಮಃ ಅನುಜ್ಞಾಂ ದೇಹಿ ।

ಶ್ರೀಕಾರದ ಪಕ್ಕದಲ್ಲಿ ಬರೆದ ಷಟ್ಕೋಣಮಂಡಲದಲ್ಲಿ ಬೆಳ್ಳಿಯ ಗಣಪತಿಯನ್ನಿಟ್ಟು ಪೂಜಿಸಬೇಕು. ಬೆಳ್ಳಿಗಣಪತಿ ಇಲ್ಲದಿದ್ದಲ್ಲಿ ಅಡಿಕೆಬೆಟ್ಟು, ಅರಿಶಿನಕೊಂಬುಗಳಲ್ಲಿ ಗಣಪತಿ ಆವಾಹನೆ ಮಾಡಿ ಪೂಜಿಸಬೇಕು.

ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ ।
ಲಂಬೋದರಶ್ಚ ವಿಕಟೋ ವಿಘ್ನರಾಜೋ ಗಣಾಧಿಪಃ ॥ 1 ॥

ಧೂಮಕೇತುರ್ಗಣಾಧ್ಯಕ್ಷೋ ಫಾಲಚಂದ್ರೋ ಗಜಾನನಃ ।
ದ್ವಾದಶೈತಾನಿ ನಾಮಾನಿ ಯಃ ಪಠೇಚ್ಛೃಣುಯಾದಪಿ ॥ 2 ॥

ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ ।
ಸಂಗ್ರಾಮೇ ಸರ್ವಕಾರ್ಯೇಷು ವಿಘ್ನಸ್ತಸ್ಯ ನ ಜಾಯತೇ ॥ 3 ॥

ಅಭೀಪ್ಸಿತಾರ್ಥಸಿದ್ಧ್ಯರ್ಥಂ ಪೂಜಿತೋ ಯಃ ಸುರೈರಪಿ ।
ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥ 4 ॥

ಗಣಾನಾಂ ತ್ವಾ ಗೃತ್ಸಮದ ಋಷಿಃ । ಜಗತೀಛಂದಃ ಗಣಪತಿರ್ದೇವತಾ ।
ಗಣಪತ್ಯಾವಾಹನೇ ವಿನಿಯೋಗಃ ॥

ಸೇವೆಗೈಯುತ್ತಾಳೆ. ಶ್ರೀಮದಾಚಾರ್ಯರ ಸಿದ್ಧಾಂತದ ಚೌಕಟ್ಟಿನಲ್ಲಿ ಹೀಗೆ ಅರ್ಥ ಮಾಡಿಕೊಳ್ಳಬೇಕು: ಜಗತ್ತಿನಲ್ಲಿ ಕಂಡುಬರುವ ಪ್ರತಿಯೊಂದು ತುಳಸಿ ಗಿಡದಲ್ಲಿ ನಿರ್ದಿಷ್ಟ ಜೀವ, ಅದರೊಳಗೆ ಆರನೇ ಕಕ್ಷ್ಯದ ಜಾಂಬವತಿ, ಆಕೆಯಲ್ಲಿ ಮುಖ್ಯಪ್ರಾಣಾಂತರ್ಗತ ತುಳಸಿ ರೂಪಕ ಲಕ್ಷ್ಮೀಸಹಿತ ದಾಮೋದರ.

## ತುಳಸಿಗೆ ಯಾವಾಗ ಪೂಜೆ ?

ತುಳಸಿಗೆ ಪ್ರತಿದಿನವೂ ದೇವರಪೂಜೆಯಾದ ಬಳಿಕ ಹರಿನಿರ್ಮಾಲ್ಯಗಳಿಂದ ಪೂಜಿಸಬೇಕು. ಒಳಗಿರುವ ಲಕ್ಷ್ಮೀರೂಪ ದಿದಕ್ಷಯಾ ಪ್ರಾಣನಿಗೂ ಮೊದಲು ಈಕೆಗೆ ಪೂಜೆ. ಉತ್ಥಾನದ್ವಾದಶಿಯಂದು ಹರಿಗೆ ಪೂಜೆಯಾದ ಕೂಡಲೇ ಈಕೆಗೆ ಪೂಜೆ. ಶ್ರೀಕೃಷ್ಣಮಠದಲ್ಲಿ ಈ ಕ್ರಮವು ಆಚಾರ್ಯರ ಕಾಲದಿಂದಲೂ ಅನೂಚಾನವಾಗಿ ನಡೆದು ಬಂದಿದೆ. ಪ್ರತಿದಿನವು ವೈಭವದಿಂದ ತುಳಸೀ ಸಂಕೀರ್ತನೆಯನ್ನು ನಡೆಸಿ ಉತ್ಥಾನ ದ್ವಾದಶಿಯಂದು ಕೃಷ್ಣನನ್ನು ಪೂಜಿಸಿ ನಂತರ ತುಳಸಿಯನ್ನು ಪೂಜಿಸಿ ಬಳಿಕ ಪ್ರಾಣದೇವರನ್ನು ಪೂಜಿಸುತ್ತಾರೆ.

* ಏಕಾದಶೀ ದಿವಸ ತುಳಸಿಗೆ ಪೂಜೆ ಇಲ್ಲದಿದ್ದರೂ ನೀರು ಹಾಕಬಹುದು.
* ಸ್ತ್ರೀಯರು ಶುದ್ಧರಾಗಿ ತುಳಸಿಗಿಡವನ್ನು ಮುಟ್ಟಿ ಅದನ್ನು ಆರೈಕೆ ಮಾಡಬಹುದು. ಪೂಜೆಗೆ ತೆಗೆಯಬಾರದು.
* ಸ್ತ್ರೀಯರು ತುಳಸಿಯನ್ನು ಹೂವಿನ ಜೊತೆಗೆ ಖಂಡಿತವಾಗಿಯೂ ನಿರ್ಮಾಲ್ಯವೆಂದು ಮುಡಿದುಕೊಳ್ಳಬಹುದು.
* ತೀರ್ಥಕೊಡುವಾಗ ಕೈಗೆ ತುಳಸಿ ಬಿದ್ದರೆ ವೈಧ್ಯವ್ಯ ಸೂಚನೆಯಲ್ಲ. ಹರಿ ಒಲುಮೆಯ ಸೂಚನೆ.
* ತುಳಸೀ ನಮಸ್ಕಾರ ಮಾಡದವರಿಗೆ ಕರ್ಮಶುದ್ಧಿಯಿಲ್ಲ.
* ಸ್ತ್ರೀಯರು ಪೂಜೆಗೆಂದು ತುಳಸಿ ತೆಗೆಯಬಾರದು.

* ಸ್ನಾನ ಮಾಡದೆ ತುಳಸಿ ತೆಗೆಯಬಾರದು.

* ಪ್ರತಿದಿನವೂ ದೇವರ ನಂದಾದೀಪವನ್ನು ತುಳಸೀಕಾಷ್ಠಂದಿದಲೇ ಹಚ್ಚಬೇಕು. ಇದರಿಂದ ಲಕ್ಷದೀಪವನ್ನು ಹಚ್ಚಿದ ಪುಣ್ಯವಿದೆ.

* ತುಳಸೀ ಮೃತ್ತಿಕೆಯನ್ನು ಕಡ್ಡಾಯವಾಗಿ ಹಚ್ಚಿಕೊಂಡೇ ಸ್ನಾನ ಮಾಡಬೇಕು. ಇದರಿಂದ ಬ್ರಹ್ಮಹತ್ಯಾದಿ ಪಾಪಗಳು ನಾಶವಾಗುತ್ತವೆ.

* ಕಂಠದಲ್ಲಿ ಸದಾ ತುಳಸೀಮಾಲೆಯನ್ನು ಧರಿಸಲೇಬೇಕು. ಧರಿಸದ ದೇಹವು ಅಪವಿತ್ರ .

* ಇತರಾದಿಗಳ ಸಂಪರ್ಕವಾದಾಗ ತುಳಸೀಮಾಲೆ ಧರಿಸಿದ್ದರೆ ಸಂಪರ್ಕದೋಷ ತಟ್ಟುವುದಿಲ್ಲ. ಆದ್ದರಿಂದ ಮನೆಯಿಂದ ಹೊರಗಡೆ ಹೊರಟಾಗ ಕತ್ತಿನಲ್ಲಿ ತುಳಸೀಮಾಲೆ ಇದೆಯೇ? ಎಂದು ಪರಿಕ್ಷೀಸಿಕೊಳ್ಳಿರಿ.

## ಮಂಜರಿಸಹಿತ ದಳವೇ ಶ್ರೇಷ್ಠ

ಸಮಂಜರೀದಳೈರೇವ ತುಲಸ್ಯಾ ವಿಷ್ಣುಮರ್ಚಯೇತ್ ।
ತಸ್ಯ ಪುಣ್ಯಫಲಂ ಸ್ಕಂದ ಕಥಿತುಂ ನೈವ ಶಕ್ಯತೇ ॥

ತುಳಸೀ ವನವಿರುವಲ್ಲಿ ವಿಷ್ಣುವೂ, ಬ್ರಹ್ಮನೂ, ಲಕ್ಷ್ಮಿಯೂ, ಎಲ್ಲಾ ದೇವತೆಗಳೂ ಇರುತ್ತಾರೆ. ಆದ್ದರಿಂದ ಆ ವನದ ಸಮೀಪದಲ್ಲಿ ದೇವಿಯನ್ನು ಪೂಜಿಸಬೇಕು. ಆ ವನದ ಬಳಿಯಲ್ಲಿ ಹೇಳಿದ ಸ್ತೋತ್ರವೂ, ಮಂತ್ರಾದಿಗಳೂ, ಅನಂತ ಫಲವನ್ನು ಕೊಡುತ್ತವೆ. ಪ್ರೇತಗಳೂ, ಕೂಷ್ಮಾಂಡಗಳೂ, ಪಿಶಾಚಗಳೂ, ಬ್ರಹ್ಮರಾಕ್ಷಸರೂ, ಭೂತದೈತ್ಯರೂ ಅಲ್ಲಿರದೆ ಓಡಿಹೋಗುತ್ತಾರೆ. ಅಲಕ್ಷ್ಮಿಯು ನಾಶವಾಗುತ್ತಾಳೆ. ಡಾಕಿನ್ಯಾದಿಗಳೂ ತುಳಸಿಯ ದಳವನ್ನು ನೋಡಿದೊಡನೆಯೇ ಹಿಂಜರಿಯುತ್ತಾರೆ. ಬ್ರಹ್ಮಹತ್ಯಾದಿಗಳೂ, ಪಾಪದಿಂದ ಬಂದ ರೋಗಗಳೂ, ಮಾಟ ಮುಂತಾದ ಮಂತ್ರಗಳೂ, ಅವೆಲ್ಲವೂ ಈ ತುಳಸಿಯ ವನದ ಸೇವೆಯಿಂದ ನಾಶಹೊಂದುತ್ತವೆ.

ಬ್ರಹ್ಮಹತ್ಯಾದಯಃ ಪಾಪಾ ವ್ಯಾಧಯಃ ಪಾಪಸಂಭವಾಃ ।
ಕುಮಂತ್ರೇಣ ಕೃತಾ ಯೇ ಚ ಸರ್ವೇ ನಶ್ಯಂತಿ ತತ್ರ ವೈ ॥

ಯಾವನು ಹರಿಗೋಸ್ಕರ ತುಳಸಿಯ ವನವನ್ನು ಮಾಡುತ್ತಾನೋ, ಅವನು ವಿಧಿವತ್ತಾಗಿ ದಕ್ಷಿಣೆಯಿಂದ ಕೂಡಿದ ನೂರು ಯಾಗಗಳನ್ನು ಮಾಡಿದಂತಾಗುತ್ತದೆ. ಹರಿಯ ಪ್ರತಿಮೆಗೆ ಶಾಲಿಗ್ರಾಮಗಳಿಗೆ ತುಳಸಿಯನ್ನು ಕೊಯ್ದು ಕೊಟ್ಟರೆ ವಿಷ್ಣುವಿನ ಸಾಯುಜ್ಯವು ಬರುತ್ತದೆ. ಮಾಧವನಿಗೋಸ್ಕರ ತುಳಸಿಯನ್ನು ಬೆಳೆಸಿದರೆ ಅವನ ಪಿತೃಗಳು ಸಂತೋಷಗೊಳ್ಳುತ್ತಾರೆ. ಅವನು ವೈಕುಂಠಕ್ಕೆ ಹೋಗುತ್ತಾನೆ. ಹರಿಯನ್ನು ಪೂಜಿಸಿ ಆ ನಿರ್ಮಾಲ್ಯದ ತುಳಸೀದಳವನ್ನು ತಲೆಯಲ್ಲಿ ಧರಿಸಿದರೆ ಅವನು ಪಾಪಗಳಿಂದ ಮುಕ್ತನಾಗಿ ಸ್ವರ್ಗವನ್ನು ಹೊಂದುತ್ತಾನೆ. ಕಲಿಯುಗದಲ್ಲಿ ತುಳಸಿಯ ಪೂಜೆ, ಕೀರ್ತನೆ, ಧ್ಯಾನ, ಬೆಳೆಸುವಿಕೆ ಧರಿಸುವಿಕೆಗಳಿಂದ ಪಾಪಗಳನ್ನು ಕಳೆದುಕೊಂಡು ಮೋಕ್ಷವನ್ನು ಹೊಂದುತ್ತಾನೆ.

ಯಾವನು ಪರರಿಗೂ ಉಪದೇಶ ಮಾಡಿ ತಾನೂ ಅದರಂತೆ ತುಳಸಿಯ ವಿಷಯದಲ್ಲಿ ಆಚರಿಸುತ್ತಾನೆಯೋ ಅವನು ವೈಕುಂಠವನ್ನು ಹೊಂದುತ್ತಾನೆ. ಹರಿಗೆ ಪ್ರಿಯವಾದುದು ನನಗೆ ಹೆಚ್ಚು ಪ್ರಿಯವಾಗಿರುತ್ತದೆ. ಅದು ಎಲ್ಲಾ ದೇವತೆಗಳಿಗೂ, ದೇವಿಯರಿಗೂ ಪ್ರಿಯವಾಗಿರುತ್ತದೆ. ಶ್ರಾದ್ಧದಲ್ಲಿ, ಯಜ್ಞಗಳಲ್ಲಿ, ಒಂದು ಎಲೆಯಾದರೂ ಇದ್ದರೆ ಪರಿಶುದ್ಧವು. ಅವರಿಗೆ ತೃಪ್ತಿಯನ್ನುಂಟು ಮಾಡುತ್ತದೆ. ಆದ್ದರಿಂದ ತುಳಸಿಯನ್ನು ಸೇವಿಸಿದರೆ ಎಲ್ಲರನ್ನೂ ಗೌರವಿಸಿದಂತಾಗುತ್ತದೆ. ತಲೆಯಲ್ಲಿ ತುಳಸಿಯನ್ನು ಇಟ್ಟುಕೊಂಡು ಪ್ರಾಣಬಿಟ್ಟರೆ ಪಾಪಗಳು ಪರಿಹಾರವಾಗಿ ಸ್ವರ್ಗವನ್ನು ಹೊಂದುತ್ತಾನೆ.

ಶಿಖಾಯಾಂ ತುಲಸೀಂ ಕೃತ್ವಾ ಯಸ್ತು ಪ್ರಾಣಾನ್ಪರಿತ್ಯಜೇತ್ ।
ದುಷ್ಕೃತಾಘಾದ್ವಿನಿರ್ಮುಕ್ತಸ್ಸ್ವರ್ಗಮೇತಿ ನಿರಾಮಯಮ್ ॥

# ತುಳಸೀ ಸ್ತವಃ

## ತುಳಸೀದರ್ಶನದಿಂದ ಗೋದಾನದ ಪುಣ್ಯ

ಸಾ ಕಥಂ ತುಲಸೀ ಲೋಕೈಃ ಪೂಜ್ಯತೇ ವಂದ್ಯತೇ ನ ಹಿ ।
ದರ್ಶನಾದೇವ ಯಸ್ಯಾಸ್ತು ದಾನಂ ಕೋಟಿಗವಾಂ ಭವೇತ್ ॥

ಆ ತುಳಸಿಯು ಲೋಕದಲ್ಲಿ ಯಾರಿಂದ ತಾನೆ ಪೂಜಿತಳಲ್ಲ, ವಂದಿತಳಲ್ಲ ! ಯಾವ ತುಳಸಿಯ ದರ್ಶನದಿಂದಲೇ ಕೋಟಿ ಗೋದಾನ ಮಾಡಿದ ಪುಣ್ಯವು ಬರುತ್ತದೆ.

## ತುಳಸೀ ತೆಗೆಯುವುದರಿಂದ ಪುಣ್ಯಲಾಭ

ಧನ್ಯಾಸ್ತೇ ಮಾನವಾ ಲೋಕೇ ಯದ್ಗೃಹೇ ವಿದ್ಯತೇ ಕಲೌ ।
ಶಾಲಿಗ್ರಾಮಶಿಲಾರ್ಥಂ ತು ತುಲಸೀಪ್ರತ್ಯಹಂ ಕ್ಷಿತೌ ॥
ತುಲಸೀಂ ಯೇ ವಿಚಿನ್ವಂತಿ ಧನ್ಯಾಸ್ತೇ ಕರಪಲ್ಲವಾಃ ।
ಕೇಶವಾರ್ಥಂ ಕಲೌ ಯೇ ಚ ರೋಪಯನ್ತೀಹ ಭೂತಲೇ ॥

ಕಲಿಯುಗದಲ್ಲಿ ಯಾರ ಮನೆಯಲ್ಲಿ ತುಳಸಿಯು ಇದೆಯೋ ಅವರೇ ಧನ್ಯರು. ಆ ತುಳಸಿಯನ್ನು ಸಾಲಿಗ್ರಾಮಕ್ಕೆ ಸಮರ್ಪಣೆಗೋಸ್ಕರ ತೆಗೆಯಬೇಕು. ಹೀಗೆ ಯಾರು ತುಳಸಿಯನ್ನು ಕೊಯ್ಯುತ್ತಾನೋ ಅವನ ಬೆರಳುಗಳು ಧನ್ಯವಾದುವು. ಕಲಿಯುಗದಲ್ಲಿ ಕೇಶವನಿಗೋಸ್ಕರ ತುಳಸಿಯನ್ನು ಬೆಳೆಯತಕ್ಕವರೇ ಧನ್ಯರು.

## ತುಳಸಿಯನ್ನು ಬಿಡಿಸುವಾಗ ಹೇಳಬೇಕಾದ ಮಂತ್ರ

ಕಿಂ ಕರಿಷ್ಯಸಿ ಸಂರುಷ್ಟೋ ಯಮೋಽಪಿ ಸಹ ಕಿಂಕರೈಃ ।
ತುಳಸೀದಳೇನ ದೇವೇಶಃ ಪೂಜಿತೋ ಯೈರ್ನ ದುಃಖಹಾ ॥
ತೀರ್ಥಯಾತ್ರಾದಿಗಮನೈಃ ಫಲೈಸ್ಸಿಧ್ಯಂತಿ ಕಿಂ ನರಾಃ ।
ಸ್ನಾನೇ ದಾನೇ ತಥಾ ಧ್ಯಾನೇ ಪ್ರಾಶನೇ ಕೇಶವಾರ್ಚನೇ ॥
ತುಲಸೀ ವಹತೇ ಪಾಪಂ ಕೀರ್ತನೇ ರೋಪಣೇ ಕಲೌ ।

ತುಲಸ್ಯಮೃತಜನ್ಮಾಸಿ ತಥಾ ತ್ವಂ ಕೇಶವಪ್ರಿಯೇ ॥
ಕೇಶವಾರ್ಥಂ ಚಿನೋಮಿ ತ್ವಾಂ ವರದಾ ಭವ ಶೋಭನೇ ।
ತ್ವದಂಗಸಂಭವೈರ್ನಿತ್ಯಂ ಪೂಜಯಾಮಿ ಯಥಾ ಹರಿಂ ॥
ತಥಾ ಕುರು ಪವಿತ್ರಾಂಗಿ ಕಲೌ ಮಲವಿನಾಶಿನೀ ।
ಮಂತ್ರೇಣಾನೇನ ಯಃ ಕುರ್ಯಾದ್ವಿಚಿತ್ಯ ತುಲಸೀದಳಂ ॥
ಪೂಜನಂ ವಾಸುದೇವಸ್ಯ ಲಕ್ಷಕೋಟಿಗುಣಂ ಭವೇತ್ ।
ಪ್ರಭಾವಂ ತವ ದೇವೇಶಿ ಗಾಯಂತಿ ಸುರಸತ್ತಮಾಃ ॥
ಮುನಯಸ್ಸಿದ್ಧಗಂಧರ್ವಾಃ ಪಾತಾಲೇ ನಾಗರಾಟ್ಸ್ವಯಂ ।
ನ ತೇ ಪ್ರಭಾವಂ ಜಾನಂತಿ ದೇವತಾಃ ಕೇಶವಾದೃತೇ ॥
ಗುಣಾನಾಂ ಪರಿಮಾಣಂ ತು ಕಲ್ಪಕೋಟಿಶತೈರಪಿ ।
ಕೃಷ್ಣಾನಂದಾತ್ಸಮುದ್ಭೂತಾ ಕ್ಷೀರೋದಮಥನೋದ್ಯಮೇ ॥
ಉತ್ತಮಾಂಗೇ ಪುರಾ ಯೇನ ತುಳಸೀ ವಿಷ್ಣುನಾ ಧೃತಾ ।
ಪ್ರಾಪ್ಯೈತಾನಿ ತ್ವಯಾ ದೇವಿ ವಿಷ್ಣೋರಂಗಾನಿ ಸರ್ವಶಃ ॥
ಪವಿತ್ರತಾ ತ್ವಯಾ ಪ್ರಾಪ್ತಾ ತುಲಸೀಂ ತ್ವಾಂ ನಮಾಮ್ಯಹಂ ।
ತ್ವದಂಗಸಂಭವೈಃ ಪತ್ರೈಃ ಪೂಜಯಾಮಿ ಯಥಾ ಹರಿಂ ॥
ತಥಾ ಕುರುಷ್ವ ಮೇಽವಿಘ್ನಂ ಯತೋ ಯಾಮಿ ಪರಾಂ ಗತಿಂ ।
ರೋಪಿತಾ ಗೋಮತೀತೀರೇ ಸ್ವಯಂ ಕೃಷ್ಣೇನ ಪಾಲಿತಾ ॥
ಜಗದ್ಧಿತಾಯ ತುಳಸೀ ಗೋಪೀನಾಂ ಹಿತಹೇತವೇ ।
ವೃಂದಾವನೇ ವಿಚರತಾ ಸೇವಿತಾ ವಿಷ್ಣುನಾ ಸ್ವಯಂ ॥
ಗೋಕುಲಸ್ಯ ವಿವೃದ್ಧ್ಯರ್ಥಂ ಕಂಸಸ್ಯ ನಿಧನಾಯ ಚ ।
ವಸಿಷ್ಠವಚನಾತ್ಪೂರ್ವಂ ರಾಮೇಣ ಸರಯೂತಟೇ ॥
ರಾಕ್ಷಸಾನಾಂ ವಧಾರ್ಥಾಯ ರೋಪಿತಾ ತ್ವಂ ಜಗತ್ತ್ರಯೇ ।
ರೋಪಿತಾ ತಪಸೋ ವೃದ್ಧ್ಯೈ ತುಳಸೀಂ ತ್ವಾಂ ನಮಾಮ್ಯಹಮ್ ॥

ತುಳಸಿಯನ್ನು ನೆಟ್ಟವನ ಬಗ್ಗೆ ಕೋಪಗೊಂಡ ಯಮನೂ, ಅವನ ಆಳುಗಳೂ ಏನು ಮಾಡಬಲ್ಲರು?! ತುಳಸಿಯ ದಳದಿಂದ ಯಾವನು ಸ್ವಾಮಿಯನ್ನು

ಪೂಜಿಸುವುದಿಲ್ಲವೋ, ಅವನು ಅತ್ಯಂತ ದುಃಖಿಯಾಗುವುದರಲ್ಲಿ ಸಂಶಯವಿಲ್ಲ. ತೀರ್ಥಯಾತ್ರೆಗಳಿಂದ ಏನು ಫಲಬರುತ್ತದೋ, ಆ ಫಲವು ತುಳಸೀಸ್ನಾನ, ತುಳಸೀದಾನ, ತುಳಸೀಧ್ಯಾನ, ತುಳಸೀಪ್ರಾಶನ, ತುಳಸ್ಯರ್ಚನಗಳಿಂದಲೇ ಲಭಿಸುತ್ತದೆ. ಇಂಥ ತುಳಸಿಗಿಡವನ್ನು ನೆಡುವುದರಿಂದ ಕೀರ್ತನೆ ಮಾಡುವುದರಿಂದ ತುಳಸಿಯು ಎಲ್ಲಾ ಪಾಪಗಳನ್ನು ಪರಿಹರಿಸುತ್ತಾಳೆ. ಎಲೈ ತುಳಸಿಯೇ ! ನೀನು ಅಮೃತದಿಂದ ಹುಟ್ಟಿದ್ದಿಯೇ, ಮತ್ತು ನೀನು ಕೇಶವನಿಗೆ ಪ್ರಿಯಳಾಗಿರುವಿ. ಕೇಶವನ ಪೂಜೆಗೋಸ್ಕರ ನಿನ್ನನ್ನು ಕೊಯ್ಯುತ್ತೇನೆ. ವರವನ್ನು ಕೊಡು. ನಿನ್ನಿಂದ ಉತ್ಪನ್ನವಾದ ದಳಗಳಿಂದ ಹರಿಯನ್ನು ಪೂಜಿಸುವಂತೆ ನನಗೆ ಅನುಗ್ರಹ ಮಾಡು. ನಿನಗೆ ನಮಸ್ಕಾರವು. ಕಲಿಯುಗದ ಪಾಪಹಾರಕಳೇ ! ನಿನಗೆ ನಮಸ್ಕಾರವು. ಈ ಮಂತ್ರದಿಂದ ತುಳಸೀ ದಳವನ್ನು ಕೊಯ್ದು ವಾಸುದೇವನ ಪೂಜೆಯನ್ನು ಮಾಡಿದರೆ ಲಕ್ಷಕೋಟಿಯಷ್ಟು ಪುಣ್ಯವು ಬರುತ್ತದೆ. ಎಲೈ ದೇವೇಶಿಯೇ ! ನಿನ್ನ ಪ್ರಭಾವವನ್ನು ದೇವತೆಗಳೂ ಹಾಡುತ್ತಾರೆ. ಮುನಿಗಳೂ, ಸಿದ್ಧರೂ, ಗಂಧರ್ವರೂ, ಆದಿಶೇಷನೂ ಕೂಡ ಪಾತಾಳದಲ್ಲಿ ಗಾನ ಮಾಡುತ್ತಾರೆ. ವಿಷ್ಣುವು ಹೊರತಾಗಿ ನಿನ್ನ ಗುಣವನ್ನು ಮತ್ತಾರೂ ತಿಳಿಯರು. ಅವರು ನಿನ್ನ ಗುಣಗಳ ಲೆಕ್ಕವನ್ನು ಕಲ್ಪಗಳ ಕೋಟಿಗಳಾದರೂ ತಿಳಿಯಲಾರರು. (ಇದು ಲಕ್ಷ್ಮೀದೇವಿಯ ತುಳಸೀರೂಪ ಸ್ತೋತ್ರ). ಕ್ಷೀರಸಮುದ್ರವನ್ನು ಕಡೆಯುವಾಗ ಕೃಷ್ಣನ ಆನಂದದಿಂದ ನೀನು ಹುಟ್ಟಿದೆ. ಆಗ ವಿಷ್ಣುವು ನಿನ್ನನ್ನು ತಲೆಯ ಮೇಲೆ ಧರಿಸಿದನು. ಎಲೈ ದೇವಿಯೇ ! ವಿಷ್ಣುವಿನ ಅಂಗಗಳನ್ನು ನೀನು ಎಲ್ಲಾ ಭಾಗದಲ್ಲಿಯೂ ಹೊಂದಿರುವುದರಿಂದ ನೀನು ಪವಿತ್ರಳಾಗಿರುವೆ. ನಿನ್ನನ್ನು ನಮಸ್ಕರಿಸುತ್ತೇನೆ. ಎಲೈ ತುಳಸಿಯೇ ! ನಿನ್ನಿಂದ ಹುಟ್ಟಿದ ಪತ್ರಗಳಿಂದ ಹರಿಯನ್ನು ಪೂಜಿಸುತ್ತೇನೆ. ನನ್ನ ಮೋಕ್ಷಮಾರ್ಗದ ವಿಘ್ನಗಳನ್ನು ಪರಿಹರಿಸು. ಆದರಿಂದ ಉತ್ತಮ ಗತಿಯನ್ನು ಹೊಂದುವೆನು. ಗೋಮತಿಯ ತೀರದಲ್ಲಿ ಕೃಷ್ಣನೇ ತುಳಸಿಯನ್ನು ಬೆಳೆಸಿ ಪ್ರಪಂಚದ ಹಿತಕ್ಕೂ, ಗೋಪಿಯರ ಹಿತಕ್ಕೂ ಅದನ್ನು ಕಾಪಾಡಿದನು. ವೃಂದಾವನದಲ್ಲಿಯೂ ಕೃಷ್ಣನು ತಾನೇ ಸೇವಿಸಿದನು.

ವೃಂದಾವನದಲ್ಲಿ ಗೋವುಗಳ ವೃದ್ಧಿಗೋಸ್ಕರವೂ ಕಂಸನನ್ನು ಕೊಲ್ಲುವುದಕ್ಕೋಸ್ಕರವೂ ಕೃಷ್ಣನು ತುಳಸಿಯನ್ನು ಬೆಳೆಸಿದನು. ಪೂರ್ವದಲ್ಲಿ ರಾಮನು

ವಸಿಷ್ಠರ ಮಾತಿನಂತೆ ಸರಯೂನದಿಯ ದಡದಲ್ಲಿ ನಿನ್ನನ್ನು ಬೆಳೆಸಿ ರಾಕ್ಷಸರನ್ನು ಕೊಂದನು. ತಪಸ್ಸಿನ ವೃದ್ಧಿಗೋಸ್ಕರವೂ ನಿನ್ನನ್ನು ಬೆಳೆಸಿದರು. ಅಂತಹ ನಿನಗೆ ನಮಸ್ಕಾರವು.

ವಿಯೋಗೇ ವಾಸುದೇವಸ್ಯ ಧ್ಯಾತ್ವಾ ತ್ವಾಂ ಜನಕಾತ್ಮಜಾ ।
ಅಶೋಕವನಮಧ್ಯೇ ತು ಪ್ರಿಯೇಣ ಸಹ ಸಂಗತಾ ॥

ಸೀತೆಯು ಗಂಡನಿಂದ ವಿಯೋಗವಾದಾಗ ಆ ಅಶೋಕವನದ ಮಧ್ಯದಲ್ಲಿಯೇ ನಿನ್ನನ್ನು ಧ್ಯಾನಿಸಿ ಗಂಡನೊಡನೆ ಸೇರಿದಳು.

ಶಂಕರಾರ್ಥಂ ಪುರಾ ದೇವೀ ಪಾರ್ವತೀ ತ್ವಾಂ ಹಿಮಾಲಯೇ ।
ರೋಪಿತಾ ಸೇವಿತಾ ಸಿದ್ಧ್ಯೈ ತುಳಸೀಂ ತ್ವಾಂ ನಮಾಮ್ಯಹಂ ॥

ಪೂರ್ವದಲ್ಲಿ ಶಂಕರನನ್ನು ಹೊಂದಲು ಪಾರ್ವತಿಯು ನಿನ್ನನ್ನು ಬೆಳೆಸಿ ಧ್ಯಾನಿಸಿ ತಪಸ್ಸಿದ್ಧಿಯನ್ನು ಹೊಂದಿದಳು. ಅಂತಹ ನಿನಗೆ ನಮಸ್ಕಾರವು.

## ದೇವಲೋಕದಲ್ಲಿಯೂ ತುಳಸಿಯು ಮಾನ್ಯಳು

ಸರ್ವಾಭಿರ್ದೇವಪತ್ನೀಭಿಃ ಕಿನ್ನರೈಶ್ಚಾಪಿ ನಂದನೇ ।
ದುಃಸ್ವಪ್ನನಾಶನಾರ್ಥಾಯ ಸೇವಿತಾ ತ್ವಂ ನಮೋಽಸ್ತು ತೇ ॥

ಎಲ್ಲ ಕಿನ್ನರರೂ, ದೇವತಾಸ್ತ್ರೀಯರೂ, ದುಃಸ್ವಪ್ನಪರಿಹಾರಕ್ಕೋಸ್ಕರ ನಿನ್ನನ್ನು ನಂದನವನದಲ್ಲಿ ಸೇವಿಸಿದರು. ಅಂತಹ ನಿನಗೆ ನಮಸ್ಕಾರವು.

## ಪಿತೃದೇವತೆಗಳಿಂದಲೂ ವಂದ್ಯಳು

ಧರ್ಮಾರಣ್ಯೇ ಗಯಾಯಾಂ ಚ ಸೇವಿತಾ ಪಿತೃಭಿಸ್ಸ್ವಯಂ ।
ಸೇವಿತಾ ತುಳಸೀ ಪುಣ್ಯಾ ಆತ್ಮನೋ ಹಿತಮಿಚ್ಛತಾ ॥

ಪಿತೃಗಳು ಧರ್ಮಾರಣ್ಯದಲ್ಲಿಯೂ, ಗಯೆಯಲ್ಲಿಯೂ ಬೆಳೆಸಿ ತಮ್ಮ ಹಿತಕ್ಕೋಸ್ಕರ ಸೇವಿಸಿದರು. ಅಂತಹ ನಿನಗೆ ನಮಸ್ಕಾರವು.

## ಶ್ರೀರಾಮನು ತುಳಸಿ ಬೆಳೆದಿರುವನು

ರೋಪಿತಾ ರಾಮಚಂದ್ರೇಣ ಸೇವಿತಾ ಲಕ್ಷ್ಮಣೇನ ಚ ।
ಸೀತಯಾ ಪಾಲಿತಾ ಭಕ್ತ್ಯಾ ತುಳಸೀ ದಂಡಕೇ ವನೇ ॥

ದಂಡಕಾರಣ್ಯದಲ್ಲಿ ರಾಮಚಂದ್ರನು ತುಳಸೀಗಿಡವನ್ನು ನೆಟ್ಟನು. ಲಕ್ಷ್ಮಣನು ಆರಾಧನೆ ಮಾಡಿದನು. ಸೀತೆಯು ಬೆಳೆಸಿ, ರಕ್ಷಿಸಿದಳು.

## ಗಂಗೆಯಂತೆ ತುಳಸೀ ಕೂಡ

ತ್ರೈಲೋಕ್ಯವ್ಯಾಪಿನೀ ಗಂಗಾ ಯಥಾ ಶಾಸ್ತ್ರೇಷು ಗೀಯತೇ ।
ತಥೈವ ತುಳಸೀದೇವಿ ದೃಶ್ಯತೇ ಸಚರಾಚರೇ ॥

ಗಂಗೆಯು ಮೂರುಲೋಕವನ್ನು ವ್ಯಾಪಿಸಿರುವಳೆಂದು ಶಾಸ್ತ್ರದಲ್ಲಿ ಹೇಳಿರುವಂತೆಯೇ ತುಳಸಿಯೂ ಚರಾಚರಗಳಲ್ಲಿ ವ್ಯಾಪಿಸಿರುವಳು.

## ಋಷ್ಯಮೂಕದಲ್ಲಿ ತುಳಸೀಗಿಡ

ಋಷ್ಯಮೂಕೇ ಚ ವಸತಾ ಕಪಿರಾಜೇನ ಸೇವಿತಾ ।
ತುಲಸೀ ವಾಲಿನಾಶಾಯ ತಾರಾಸಂಗಮಹೇತವೇ ॥

ಋಷ್ಯಮೂಕಪರ್ವತದಲ್ಲಿ ಸುಗ್ರೀವನು ತುಳಸಿಯನ್ನು ಬೆಳೆಸಿ ಸೇವಿಸಿ ವಾಲಿ ನಾಶವನ್ನು ಮಾಡಿ ತಾರೆಯನ್ನು ಹೊಂದಿದನು.

## ಹನುಮಂತದೇವರ ಸೇವೆ

ಪ್ರಣಮ್ಯ ತುಳಸೀಂ ದೇವೀಂ ಸಾಗರೋತ್ಕ್ರಮಣಂ ಕೃತಂ ।
ಕೃತಕಾರ್ಯಃ ಪ್ರಹೃಷ್ಟಶ್ಚ ಹನೂಮಾನ್ಪುನರಾಗತಃ ॥

ಹನುಮಂತನು ತುಳಸಿಯನ್ನು (ಲಕ್ಷ್ಮಿಯನ್ನು) ಭಕ್ತಿಯಿಂದ ನಮಸ್ಕಾರ ಮಾಡಿ ಸಾಗರವನ್ನು ದಾಟಿದನು. ಆದ್ದರಿಂದ ತನ್ನ ಕಾರ್ಯಸಿದ್ಧಿಯನ್ನು ಹೊಂದಿ ಸಂತೋಷದಿಂದ ಮರಳಿ ಬಂದನು.

## ತುಳಸಿಗ್ರಾಹಣದಿಂದ ಬ್ರಹ್ಮಹತ್ಯಾ ಪರಿಹಾರ

ತುಳಸೀಗ್ರಹಣಂ ಕೃತ್ವಾ ವಿಮುಕ್ತೋ ಯಾತಿ ಪಾತಕೈಃ ।
ಅಥವಾ ಮುನಿಶಾರ್ದೂಲ ಬ್ರಹ್ಮಹತ್ಯಾಂ ವ್ಯಪೋಹತಿ ॥

ತುಳಸಿಯನ್ನು ಕೊಯ್ದರೆ ಪಾಪಗಳು ಹೋಗುತ್ತವೆ. ಮುನಿಶ್ರೇಷ್ಠನೇ ! ಬ್ರಹ್ಮಹತ್ಯೆಯೂ ಕೂಡ ಹೋಗುತ್ತದೆ.

## ತುಳಸೀದಳದ ಮೇಲೆ ಬಿದ್ದ ನೀರನ್ನು ಕುಡಿಯಬೇಕು ಶಿರಸಾ ಧರಿಸಬೇಕು

ತುಳಸೀಪತ್ರಗಳಿತಂ ಯಸ್ತೋಯಂ ಶಿರಸಾ ವಹೇತ್ ।
ಗಂಗಾಸ್ನಾನಮವಾಪ್ನೋತಿ ದಶಧೇನುಫಲಪ್ರದಮ್ ॥

ತುಳಸಿಯ ದಳದಿಂದ ಬಿದ್ದ ನೀರನ್ನು ತಲೆಯ ಮೇಲೆ ಹಾಕಿಕೊಂಡರೆ ಗಂಗಾಸ್ನಾನ ಮಾಡಿದ ಪುಣ್ಯವು ಬರುತ್ತದೆ. ಮತ್ತು ಹತ್ತು ಗೋದಾನದ ಫಲವೂ ಬರುತ್ತದೆ.

## ಪ್ರಸಿದ್ಧವಾದ ತುಳಸೀಸ್ತೋತ್ರ

ಪ್ರಸೀದ ತುಳಸಿ ದೇವಿ ಪ್ರಸೀದ ಹರಿವಲ್ಲಭೇ ।
ಕ್ಷೀರೋದಮಥನೋದ್ಭೂತೇ ತುಳಸಿ ತ್ವಾಂ ನಮಾಮ್ಯಹಮ್ ॥

ತುಳಸೀದೇವಿಯೇ ಪ್ರಸನ್ನಳಾಗು. ಕ್ಷೀರಸಮುದ್ರದ ಮಥನದಿಂದ ಹುಟ್ಟಿದ ತುಳಸಿಯೇ! ನಿನಗೆ ಭಕ್ತಿಯ ನಮಸ್ಕಾರವು.

## ಉತ್ಥಾನ ದ್ವಾದಶೀ ತುಳಸೀಹಬ್ಬ

ದ್ವಾದಶ್ಯಾಂ ಜಾಗರೇ ರಾತ್ರೌ ಯಃ ಪಠೇತ್ತುಲಸೀಸ್ತವಂ ।
ದ್ವಾತ್ರಿಂಶದಪರಾಧಾಂಶ್ಚ ಕ್ಷಮತೇ ತಸ್ಯ ಕೇಶವಃ ॥

ದ್ವಾದಶಿಯ ರಾತ್ರಿ ಜಾಗರಣೆ ಮಾಡುತ್ತಾ ಈ ತುಲಸೀಸ್ತವವನ್ನು ಹೇಳಿದರೆ ಅವನ ಮೂವತ್ತೆರಡು ತಪ್ಪುಗಳನ್ನು ಕೇಶವನು ಕ್ಷಮಿಸುತ್ತಾನೆ.

## ಈ ಸ್ತೋತ್ರವು ಸಕಲ ಪಾಪಪರಿಹಾರಕ

ಯತ್ಪಾಪಂ ಯೌವನೇ ಬಾಲ್ಯೇ ಕೌಮಾರೇ ವಾರ್ಧಕೇ ಕೃತಂ ।
ತತ್ಸರ್ವಂ ವಿಲಯಂ ಯಾತಿ ತುಲಸೀಸ್ತವಪಾಠತಃ ॥

ಬಾಲ್ಯ , ಯೌವನ, ಕೌಮಾರ, ವಾರ್ಧಕ್ಯಗಳಲ್ಲಿ ಮಾಡಿದ ಪಾಪಗಳೆಲ್ಲವೂ ಈ ಸ್ತೋತ್ರವನ್ನು ಪಠಿಸುವುದರಿಂದ ನಾಶವಾಗುತ್ತವೆ.

## ವಿಷ್ಣುಪ್ರೀತಿಕರವಾದ ಸ್ತೋತ್ರವಿದು

ಪ್ರೀತಿಮಾಯಾತಿ ದೇವೇಶಸ್ತುಷ್ಟೋ ಲಕ್ಷ್ಮೀಂ ಪ್ರಯಚ್ಛತಿ ।
ಕುರುತೇ ಶತ್ರುನಾಶಂ ಚ ಸುಖಂ ವಿದ್ಯಾಂ ಪ್ರಯಚ್ಛತಿ ॥

ಇದರಿಂದ ವಿಷ್ಣುವು ತುಷ್ಟನಾಗಿ ಸಂಪತ್ತನ್ನು ಕೊಡುತ್ತಾನೆ. ಶತ್ರುಗಳನ್ನು ನಾಶ ಮಾಡುತ್ತಾನೆ. ಸುಖವನ್ನೂ ವಿದ್ಯೆಯನ್ನೂ ಕೊಡುತ್ತಾನೆ.

## ತುಳಸೀನಾಮಸ್ಮರಣೆಗೂ ಫಲವಿದೆ

ತುಲಸೀನಾಮಮಾತ್ರೇಣ ದೇವಾ ಯಚ್ಛಂತಿ ವಾಂಛಿತಮ್ ।
ಗರ್ಹ್ಯಾಣಾಮಪಿ ದೇವೇಶೋ ಮುಕ್ತಿಂ ಯಚ್ಛತಿ ದೇಹಿನಾಮ್ ॥

ತುಳಸಿಯ ಹೆಸರನ್ನು ಹೇಳಿದರೇ ಮಾತ್ರದಿಂದಲೇ ದೇವತೆಗಳು ಇಷ್ಟಾರ್ಥವನ್ನು ಕೊಡುತ್ತಾರೆ. ವಂದಿತನಾಗಿದ್ದರೂ ವಿಷ್ಣು ಅವರಿಗೆ ಮೋಕ್ಷವನ್ನು ಕೊಡುತ್ತಾನೆ.

## ತುಳಸೀಸ್ತೋತ್ರ ಮಹಿಮೆ

ತುಳಸೀಸ್ತವಸಂತುಷ್ಟೋ ಸುಖಂ ವೃದ್ಧಿಂ ದಧಾತಿ ಚ ।
ಉದ್ಗತಂ ಹೇಲಯಾ ವಿದ್ಧಿ ಪಾಪಂ ಯಮಪಥೇ ಸ್ಥಿತಮ್ ॥

ಈ ಸ್ತವದಿಂದ ತುಷ್ಟನಾದ ವಿಷ್ಣುವು ಸುಖವನ್ನೂ ವೃದ್ಧಿಯನ್ನೂ ಕೊಡುತ್ತಾನೆ. ಯಮಪಥದಲ್ಲಿದ್ದರೂ ಅವನ ಪಾಪವೆಲ್ಲವೂ ಪರಿಹಾರವಾಯಿತೆಂದು ತಿಳಿ.

ಯಸ್ಮಿನ್ಗೃಹೇ ಚ ಲಿಖಿತೋ ವಿದ್ಯತೇ ತುಳಸೀಸ್ತವಃ ।
ನಾಶುಭಂ ವಿದ್ಯತೇ ತಸ್ಯ ಶುಭಮಾಪ್ನೋತಿ ನಿಶ್ಚಿತಮ್ ॥

ಈ ತುಳಸೀಸ್ತವವನ್ನು ಬರೆದು ಯಾರು ಮನೆಯಲ್ಲಿಟ್ಟುಕೊಂಡಿರುವರೋ ಅವರಿಗೆ ಅಶುಭಗಳು ಹೋಗಿ ಶುಭವುಂಟಾಗುತ್ತದೆ. ಇದು ನಿಶ್ಚಯವು.

ಸರ್ವಂ ಚ ಮಂಗಳಂ ತಸ್ಯ ನಾಸ್ತಿ ಕಿಂಚಿದಮಂಗಳಮ್ ।
ಸುಭಿಕ್ಷಂ ಸರ್ವದಾ ತಸ್ಯ ಧನಂ ಧಾನ್ಯಂ ಚ ಪುಷ್ಕಲಮ್ ॥

ಅವನಿಗೆ ಎಲ್ಲವೂ ಮಂಗಳವು. ಅಮಂಗಳವು ಆಗುವುದೇ ಇಲ್ಲ. ಅವನಿಗೆ ಧನಧಾನ್ಯಗಳೆಲ್ಲವೂ ಸುಭಿಕ್ಷವಾಗಿರುತ್ತವೆ.

ನಿಶ್ಚಲಾ ಕೇಶವೇ ಭಕ್ತಿರ್ನ ವಿಯೋಗೈಶ್ಚ ವೈಷ್ಣವೈಃ ।
ಜೀವತಿ ವ್ಯಾಧಿನಿರ್ಮುಕ್ತೋ ನಾಧರ್ಮೇ ಜಾಯತೇ ಮತಿಃ ॥

ಅವನಿಗೆ ಕೇಶವನಲ್ಲಿ ಚಲಿಸದ ಭಕ್ತಿಯು ಹುಟ್ಟುತ್ತದೆ. ವೈಷ್ಣವರೊಡನೆಯೇ ಯಾವಾಗಲೂ ಇರುತ್ತಾನೆ. ವ್ಯಾಧಿಯು ಬರುವುದಿಲ್ಲ. ಪಾಪದಲ್ಲಿ ಬುದ್ಧಿಯು ಹುಟ್ಟುವುದಿಲ್ಲ.

ದ್ವಾದಶ್ಯಾಂ ಜಾಗರೇ ರಾತ್ರೌ ಯಃ ಪಠೇತ್ತುಳಸೀಸ್ತವಂ ।
ತೀರ್ಥಕೋಟಿಸಹಸ್ರೈಸ್ತು ಯತ್ಫಲಂ ಲಕ್ಷಕೋಟಿಭಿಃ ।
ತತ್ಫಲಂ ಸಮವಾಪ್ನೋತಿ ಪಠಿತ್ವಾ ತುಳಸೀಸ್ತವಮ್ ॥

ಉತ್ಥಾನ ದ್ವಾದಶಿಯಲ್ಲಿಯೂ ಹಿಂದಿನ ಜಾಗರಣ ರಾತ್ರಿಯಲ್ಲಿಯೂ ಈ ತುಳಸೀಸ್ತವವನ್ನು ಪಠಿಸಿದರೆ ಲಕ್ಷ್ಯಕೋಟಿ ತೀರ್ಥಗಳಿಂದ ಬರುವ ಫಲವು ಬರುತ್ತದೆ.

॥ ಇತಿ ಶ್ರೀಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ತುಳಸೀಸ್ತವೋ ನಾಮ ಊನಷಷ್ಟಿತಮೋಧ್ಯಾಯಃ ಸಂಪೂರ್ಣಮ್ ॥

* * * *

# ಮರಣಕಾಲದಲ್ಲಿ ತುಳಸಿಯ ಉಪಯೋಗ

ತುಳಸಿಯದಳ ಎಲೆ, ಹೂ, ಬೇರು, ಕಡ್ಡಿ, ಸಿಪ್ಪೆ, ಕೊಂಬೆ ಅದರ ಬುಡದ ಮಣ್ಣು, ಇವೆಲ್ಲವೂ ಪವಿತ್ರವಾದವುಗಳು. ತುಳಸಿಯ ಕಡ್ಡಿಯಿಂದ ಯಾವನ ದೇಹವನ್ನು ಸುಡುತ್ತಾರೆಯೋ ಅವನು ವೈಕುಂಠವನ್ನು ಹೊಂದುತ್ತಾನೆ. ಮತ್ತೆ ಹಿಂದಿರುಗುವುದಿಲ್ಲ. ಅಗಮ್ಯಾಗಮನವೇ ಮುಂತಾದ ಪಾಪಗಳಿಂದ ಕೂಡಿದ್ದರೂ ಸತ್ತವನನ್ನು ತುಳಸಿಯ ಕಡ್ಡಿಯ ಬೆಂಕಿಯಿಂದ ಸುಟ್ಟರೆ ಅವನು ಶುದ್ಧನಾಗುತ್ತಾನೆ.

ಸತ್ತವನ ಅಂಗಾಂಗಗಳಿಗೆ ಯಾವನು ತುಳಸಿಯ ಕಡ್ಡಿಯನ್ನು ಕಟ್ಟಿ ಅನಂತರದಲ್ಲಿ ಸುಡುತ್ತಾನೆಯೋ ಆ ಕಡ್ಡಿಯನ್ನು ಕಟ್ಟಿದವನೂ ಪಾಪದಿಂದ ಮುಕ್ತನಾಗುತ್ತಾನೆ. ಮರಣ ಕಾಲದಲ್ಲಿ ಯಾವನು ಹರಿಯ ಕೀರ್ತನವನ್ನೂ ಸ್ಮರಣೆಯನ್ನೂ ಮಾಡುತ್ತಾನೋ, ತುಳಸಿಯ ಕಡ್ಡಿಯಿಂದ ಸುಡಿಸಿಕೊಳ್ಳುತ್ತಾನೆಯೋ ಅವನು ಮತ್ತೆ ಹುಟ್ಟುವುದಿಲ್ಲ. ಶವವನ್ನು ಸುಡಲು ಮಾಡಿರುವ ಚಿತೆಯ ಮಧ್ಯದಲ್ಲಿ ಒಂದು ತುಳಸಿ ಕಡ್ಡಿಯಿಟ್ಟು ಸುಟ್ಟರೂ ಅವನು ಕೋಟಿ ಪಾಪದಿಂದ ಕೂಡಿದ್ದರೂ ಮುಕ್ತನಾಗುತ್ತಾನೆ.

ಯದ್ಯೇಕಂ ತುಳಸೀಕಾಷ್ಠಂ ಮಧ್ಯೇ ಕಾಷ್ಠಸ್ಯ ತಸ್ಯ ಹಿ ।
ದಾಹಕಾಲೇ ಭವೇನ್ಮುಕ್ತಿಃ ಕೋಟಿಪಾಪಾಯುತಸ್ಯ ಚ ॥
ಗಂಗಾಂಭಸಾऽಭಿಷೇಕೇಣ ಯಾಂತಿ ಪುಣ್ಯಾನಿ ಪುಣ್ಯತಾಮ್ ।
ತುಲಸೀ ಕಾಷ್ಠಮಿಶ್ರಾಣಿ ಯಾಂತಿ ದಾರೂಣಿ ಪುಣ್ಯತಾಮ್ ॥

ಗಂಗೆಯ ನೀರಿನಿಂದ ಸ್ನಾನ ಮಾಡಿದರೆ ಪುಣ್ಯಗಳೂ ಕೂಡ ಇನ್ನೂ ಹೆಚ್ಚು ಪುಣ್ಯಗಳಾಗುತ್ತವೆ. ಚಿತೆಯಲ್ಲಿ ತುಳಸಿಯ ಕಡ್ಡಿಯಿದ್ದರೆ ಆ ಉಳಿದ ಸೌದೆಗಳೆಲ್ಲವೂ ಪುಣ್ಯವುಳ್ಳ ಸೌದೆಗಳಾಗುತ್ತವೆ. ತುಳಸಿಯ ಕಡ್ಡಿಯನ್ನು ಹಾಕಿ ಚಿತೆಗೆ ಬೆಂಕಿ ಹಚ್ಚಿದರೆ ಆ ಮೃತನ ಕೋಟಿಕಲ್ಪಕೃತ ಪಾಪಗಳೆಲ್ಲವೂ ನಾಶವಾಗುತ್ತವೆ. ತುಳಸಿಯ ಕಡ್ಡಿಯಿಂದ ಮೃತನನ್ನು ಸುಡುತ್ತಿರುವುದನ್ನು ನೋಡಿದರೇನೇ ಅವನನ್ನು ವಿಷ್ಣುದೂತರು ಕರೆದುಕೊಂಡು ಹೋಗುತ್ತಾರೆ. ಯಮಕಿಂಕಕರು ಅವನ ಬಳಿಗೆ ಬರುವುದೇ ಇಲ್ಲ.

ಲೋಕದಲ್ಲಿ ತುಳಸಿಯ ಕಡ್ಡಿಯಿಂದ ಸುಡಿಸಿಕೊಂಡವನು ಕೋಟಿ ಜನ್ಮಗಳ ಪಾಪಗಳನ್ನು ಕಳೆದುಕೊಂಡು ಜನಾರ್ದನನನ್ನು ಹೊಂದುತ್ತಾನೆ. ಅವರು ವಿಮಾನದಲ್ಲಿ ಕುಳಿತು ಹೋಗುತ್ತಿರುವಾಗ ದೇವತೆಗಳು ಅವರ ಮೇಲೆ ಹೂಮಳೆಯನ್ನು ಸುರಿಸುತ್ತಾರೆ. ಅವರ ಸುತ್ತಲೂ ಅಪ್ಸರ ಸ್ತ್ರೀಯರು ಕುಣಿಯುತ್ತಾರೆ. ಗಂಧರ್ವರು ಹಾಡುತ್ತಾರೆ. ಅಂತಹವನನ್ನು ನೋಡಿ ವಿಷ್ಣುವೂ, ಶಂಭುವೂ, ಸಂತೋಷಗೊಳ್ಳುತ್ತಾರೆ. ಅವನನ್ನು ವಿಷ್ಣುವು ಕೈಯಲ್ಲಿ ಹಿಡಿದುಕೊಂಡು ತನ್ನ ಮನೆಗೆ ಕರೆದುಕೊಂಡು ಹೋಗುತ್ತಾನೆ. ಮತ್ತು ದೇವತೆಗಳ ಎದುರಿಗೇನೇ ಅವನ ಪಾಪಗಳನ್ನೆಲ್ಲಾ ನಾಶ ಮಾಡುತ್ತಾನೆ. ಜಯ ಜಯ ಎಂದು ಕೂಗುತ್ತಾ ಉತ್ಸವವನ್ನು ಮಾಡಿಸುತ್ತಾನೆ.

ತುಳಸಿಯ ಕಡ್ಡಿಯಿಂದ ಬೆಂಕಿಯನ್ನು ಹತ್ತಿಸಿ ಮನೆಯಲ್ಲಾಗಲೀ, ಸ್ಮಶಾನದಲ್ಲಿಯಾಗಲಿ, ತುಪ್ಪವನ್ನು ಹಾಕಿ ಉರಿಸಿದರೆ (ಹೋಮ ಮಾಡಿದರೆ) ಆ ಮನುಷ್ಯನ ಪಾಪವೆಲ್ಲವೂ ಹೋಗುತ್ತವೆ. ಯಾರು ತುಳಸಿಯ ಕಡ್ಡಿಯ ಬೆಂಕಿಯಲ್ಲಿ ಹೋಮ ಮಾಡುತ್ತಾನೋ, ಅವನು ಒಂದೊಂದು ಅಗುಳಿಗೂ ಎಳ್ಳಿನಲ್ಲಾದರೆ ಒಂದೊಂದು ಎಳ್ಳಿಗೂ ಅಗ್ನಿಷ್ಟೋಮದ ಫಲವನ್ನು ಹೊಂದುತ್ತಾನೆ.

## ಧೂಪಾರತಿಗೆ ತುಳಸೀಕಾಷ್ಠದ ಪುಡಿ ಬೇಕು

ಯೋ ದದಾತಿ ಹರೇರ್ಧೂಪಂ ತುಲಸೀಕಾಷ್ಠ ಸಂಭವಮ್ ।
ಶತಕ್ರತುಸಮಂ ಪುಣ್ಯಂ ಲಭತೇ ಗೋಶತಂ ಫಲಮ್ ॥

ಯಾವನು ತುಳಸೀ ಕಡ್ಡಿಯ ಬೆಂಕಿಯಲ್ಲಿ ಧೂಪವನ್ನು ಶ್ರೀಹರಿಗೆ ಹಾಕುತ್ತಾನೆಯೋ ಅವನು ನೂರು ಹಸುಗಳನ್ನು ದಾನ ಮಾಡಿದ ಪುಣ್ಯವನ್ನೂ ಹೊಂದುತ್ತಾನೆ.

## ಬೆಂಕಿಗೆ ಕಾಷ್ಠ ಹಾಕಿಯೇ ಅಡುಗೆ ಮಾಡಬೇಕು

ನೈವೇದ್ಯಂ ಪಚತೇ ಯಸ್ತು ತುಲಸೀಕಾಷ್ಠವಹ್ನಿನಾ ।
ಮೇರುತುಲ್ಯಂ ಭವೇದ್ದತ್ತಂ ತದನ್ನಂ ಕೇಶವಸ್ಯ ಹಿ ॥

ಬೆಂಕಿಗೆ ತುಳಸಿಯ ಕಡ್ಡಿಯನ್ನು ಹಾಕಿ ಅನ್ನವನ್ನು ಮಾಡಿ ಅದನ್ನು ಕೇಶವನಿಗೆ ನಿವೇದನೆ ಮಾಡಿದರೆ ಆ ಅನ್ನವು ಮೇರುಸಮಾನವೃದ್ಧಿಯಾಗಿ ಪರಿಣಮಿಸುವುದು.

## ತುಳಸೀಕಾಷ್ಠದಿಂದಲೇ ದೀಪ ಹಚ್ಚಬೇಕು.

ತುಳಸೀಪಾವಕೇನಾಽಥ ಯೋ ದೀಪಂ ಕುರುತೇ ಹರೇಃ ।

ದೀಪಲಕ್ಷಸಹಸ್ರಾಣಾಂ ಪುಣ್ಯಂ ಸ ಲಭತೇ ಫಲಮ್ ॥

ತುಳಸಿಯ ಕಾಷ್ಠದಿಂದ ಶ್ರೀಹರಿಗೆ ದೀಪ ಹಚ್ಚಿದರೆ ಲಕ್ಷದೀಪಗಳನ್ನು ಹಚ್ಚಿದ ಪುಣ್ಯಗಳನ್ನು ಅವನು ಹೊಂದುತ್ತಾನೆ.

## ಗಂಧ ತೇಯುವಾಗ ತುಳಸೀಕಾಷ್ಠ ತೇಯಬೇಕು

ನ ತೇನ ಸದೃಶೋ ಲೋಕೇ ವೈಷ್ಣವೋ ಭುವಿ ದೃಶ್ಯತೇ ।

ಯಃ ಪ್ರಯಚ್ಛತಿ ಕೃಷ್ಣಸ್ಯ ತುಳಸೀಕಾಷ್ಠಚಂದನಮ್ ॥

ಯಾವನು ತುಳಸಿಯ ಕಡ್ಡಿಯನ್ನು ತೇದು ಆ ಗಂಧವನ್ನು ಹರಿಗೆ ಕೊಡುತ್ತಾನೆಯೋ ಅವನಿಗಿಂತಲೂ ಹೆಚ್ಚಿನ ವೈಷ್ಣವನು ಲೋಕದಲ್ಲಿರುವುದಿಲ್ಲ. ಕಲಿಯುಗದಲ್ಲಿ ತುಳಸಿಯ ಗಂಧವನ್ನು ತೇದು ವಿಷ್ಣುವಿಗೆ ಹಚ್ಚಿದರೆ ಅವನು ವಿಷ್ಣುವಿನ ಕೃಪಾಪಾತ್ರನಾಗುತ್ತಾನೆ. ದೇವರಿಗೆ ಆ ತುಳಸೀ ಚಂದನವನ್ನು ಹಚ್ಚಿದರೆ ಅವನು ಹರಿಯ ಸನ್ನಿಧಿಯಲ್ಲಿಯೇ ರಮಿಸುತ್ತಾನೆ.

## ತುಳಸೀ ಸ್ತೋತ್ರ

ಪ್ರಸೀದ ಮಮ ದೇವೇಶಿ ಪ್ರಸೀದ ಹರಿವಲ್ಲಭೇ ।

ತುಲಸೀಮಿತಿ ಸಂಪ್ರಾರ್ಥ್ಯ ಅರ್ಚಯೇದ್ಧರಿಮವ್ಯಯಮ್ ॥1॥

ಅಸ್ನಾತ್ವಾ ತುಲಸೀಂ ಛಿತ್ವಾ ದೇವಾರ್ಚನಪರಾಯಣಃ ।

ತತ್ಸರ್ವಂ ನಿಷ್ಫಲಂ ಚೈವ ಪಂಚಗವ್ಯೇನ ಶುದ್ಧ್ಯತಿ ॥2॥

ಹರಿಪ್ರಿಯೇ ಭಕ್ತನುತೇ ತುಳಸಿ ಶ್ರೀಹರಿವಲ್ಲಭೇ ।

ಭಕ್ತ್ಯಾ ದತ್ತಂ ಮಯಾ ತೋಯಂ ತುಲಸಿ ಪ್ರತಿಗೃಹ್ಯತಾಮ್ ॥3॥

ಯನ್ಮೂಲೇ ಸರ್ವತೀರ್ಥಾನಿ ಯನ್ಮಧ್ಯೇ ಸರ್ವದೇವತಾಃ ।
ಯದಗ್ರೇ ಸರ್ವವೇದಾಶ್ಚ ತುಲಸಿ ತ್ವಾಂ ನಮಾಮ್ಯಹಮ್ ॥4॥
ಪಾಪಾನಿ ಯಾನಿ ರವಿಸೂನುಪಟಸ್ಥಿತಾನಿ ।
ಗೋಬ್ರಹ್ಮಬಾಲಪಿತೃಮಾತೃವಧಾದಿಕಾನಿ ।
ನಶ್ಯಂತಿ ತಾನಿ ತುಲಸೀವನದರ್ಶನೇನ
ಗೋಕೋಟಿದಾನಸದೃಶಂ ಫಲಮಾಪ್ನುವಂತಿ ॥5॥
ಯಾ ದೃಷ್ಟಾ ನಿಖಿಲಾಘಸಂಘಶಮನೀ ಸ್ಪೃಷ್ಟಾ ವಪುಃಪಾವನೀ
ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಽಂತಕತ್ರಾಸಿನೀ ।
ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ
ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ॥6॥
ತುಲಸೀಕಾನನಂ ಯತ್ರ ಯತ್ರ ಪದ್ಮವನಾನಿ ಚ ।
ವಸಂತಿ ವೈಷ್ಣವಾ ಯತ್ರ ತತ್ರ ಸನ್ನಿಹಿತೋ ಹರಿಃ ॥7॥
ಮನಃಪ್ರಸಾದಜನನೀ ಸುಖಸೌಭಾಗ್ಯದಾಯಿನೀ ।
ಆಧಿವ್ಯಾಧಿಹರೇ ದೇವಿ ತುಲಸಿ ತ್ವಾಂ ನಮಾಮ್ಯಹಮ್ ॥8॥
ಮೋಕ್ಷೈಕಹೇತೋರ್ಧರಣೀಧರಸ್ಯ ವಿಷ್ಣೋಃ ಸಮಸ್ತಸ್ಯ ಗುರೋಃ ಸದಾ ತೇ ।
ಆರಾಧನಾರ್ಥಂ ಪುರುಷೋತ್ತಮಸ್ಯ ಲುನಾಮಿ ಪತ್ರಂ ತುಲಸಿ ಕ್ಷಮಸ್ವ ॥9॥
ತುಲಸೀಮಂಜರೀ ಗ್ರಾಹ್ಯಾ ತದಭಾವೇ ದಲಂ ಸ್ಮೃತಮ್ ।
ದಲಾಭಾವೇ ತು ಪತ್ರಂ ಸ್ಯಾತ್ ಪತ್ರಾಭಾವೇ ತು ಕಾಷ್ಠಕಮ್ ॥10॥
ಕಾಷ್ಠಾಭಾವೇ ತು ಮೂಲಂ ಸ್ಯಾತ್ ಮೂಲಾಭಾವೇ ತು ಮೃತ್ತಿಕಾ ।
ಮೃತ್ತಿಕಾಯಾ ಅಭಾವೇ ತು ತುಲಸೀಶಬ್ದ ಇಷ್ಯತೇ ॥11॥
ಪಂಕಜಂ ಪಂಚರಾತ್ರಂ ಸ್ಯಾತ್ ಸಪ್ತರಾತ್ರಂ ತು ಬಿಲ್ವಕಮ್ ।
ತುಲಸೀ ದಶರಾತ್ರಂ ಸ್ಯಾತ್ ತತಃ ಪ್ರರ್ಯುಷಿತಂ ಭವೇತ್ ॥12॥
ಸಂಕ್ರಾಂತೌ ಪಕ್ಷಯೋರಂತೇ ದ್ವಾದಶ್ಯಾಂ ನಿಶಿ ಸಂಧ್ಯಯೋಃ ।
ಚಿನ್ವಂತಿ ತುಲಸೀಂ ಯೇ ವೈ ನಿಕೃಣ್ವಂತಿ ಹರೇಃ ಶಿರಃ ॥13॥
ಗ್ರಹಣೇ ಚ ವ್ಯತಿಪಾತೇ ಭೌಮಭಾರ್ಗವಭಾನುಷು ।

ನಾಹರೇತ್ ತುಲಸೀಪತ್ರಂ ನ ಮಧ್ಯಾಹ್ನೇ ತತಃ ಪರಮ್ ||14||
ಮಧ್ಯಾಹ್ನಕೇ ಪರೇ ಯಸ್ತು ಹರಿಪೂಜಾಪರಾಯಣಃ ।
ಚಿನೋತಿ ಯಸ್ತು ತುಲಸೀಮಧೋ ಗಚ್ಛತಿ ನಾನ್ಯಥಾ ||15||
ನಿರ್ಮಾಲ್ಯಮಪಿ ವೈ ಗ್ರಾಹ್ಯಂ ತುಲಸ್ಯಾ ಹೇಮಪುಷ್ಪವತ್ ।
ಶಂಖೋದಕೇನ ಪ್ರಕ್ಷಾಲ್ಯ ವಿಷ್ಣವೇ ಚ ನಿವೇದಯೇತ್ ||16||
ತುಲಸ್ಯಾಃ ಕೋಮಲೈಃ ಪತ್ರೈಃ ಶ್ರೀಹರೇಃ ಪಾದಪಂಕಜಮ್ ।
ಪೂಜನಂ ಯೇ ಪ್ರಕುರ್ವಂತಿ ಕೃತಾರ್ಥಾಃ ಸ್ಯುರ್ನ ಸಂಶಯಃ ||17||
ದ್ವಾದಶ್ಯಾಂ ಜಾಗರೇ ರಾತ್ರೌ ಪ್ರಾಶಯೇತ್ ತುಲಸೀದಲಮ್ ।
ದ್ವಾತ್ರಿಂಶದಪರಾಧಾಂಶ್ಚ ಕ್ಷಮತೇ ಹರಿರವ್ಯಯಃ ||18||
ವಿಷ್ಣೋರ್ವಿಮಾನಂ ಯಃ ಕುರ್ಯಾತ್ ತುಲಸ್ಯಾಃ ಕೋಮಲೈರ್ದಲೈಃ ।
ಹಂಸಯುಕ್ತವಿಮಾನೇನ ವಿಷ್ಣುಲೋಕಂ ಸ ಗಚ್ಛತಿ ||19||
ತುಲಸೀಪಕ್ವಪತ್ರೇಣ ಶ್ರೀಹರೇಃ ಪಾದಪಂಕಜೇ ।
ಪಕ್ಷದ್ವಯೇ ಚ ಸಂಕ್ರಾಂತೌ ದ್ವಾದಶ್ಯಾಂ ಸೂತಕದ್ವಯೇ ||20||
ಭ್ರೂಣಹತ್ಯಾದಿಕಂ ಪಾಪಂ ಸ್ವವಂಶ್ಯೈರ್ನರಕಂ ವ್ರಜೇತ್ ।
ವೈಷ್ಣವೈಃ ಸರ್ವದಾ ಗ್ರಾಹ್ಯಾ ತುಲಸೀ ದ್ವಾದಶೀಂ ವಿನಾ ||21||
ಸಂಗ್ರಹೋ ನೈವ ಕರ್ತವ್ಯೋ ನಿಷಿದ್ಧದಿವಸೇಷ್ವಪಿ ।
ತ್ಯಜೇತ್ ಪರ್ಯುಷಿತಂ ಪುಷ್ಪಂ ತ್ಯಜೇತ್ ಪರ್ಯುಷಿತಂ ಜಲಮ್ ||22||
ನ ತ್ಯಜೇತ್ ತುಲಸೀಪತ್ರಂ ನ ತ್ಯಜೇಜ್ಜಾಹ್ನವೀಜಲಮ್ ।
ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾ ಸರಿತಸ್ತಥಾ ||23||
ವಾಸುದೇವಾದಯೋ ದೇವಾ ವಸಂತಿ ತುಲಸೀವನೇ ।
ತುಲಸೀಗಂಧಮಾಘ್ರಾಯ ಪಿತರಸ್ತುಷ್ಟಮಾನಸಾಃ ||24||
ಪ್ರಯಾಂತಿ ಗರುಡಾರೂಢಾಃ ಸಹಿತಾಶ್ಚಕ್ರಪಾಣಿನಾ ।
ರೋಪಣಾತ್ ಪಾಲನಾತ್ ಸೇಕಾದ್ದರ್ಶನಾತ್ ಸ್ಪರ್ಶನಾನ್ನೃಣಾಮ್ ||25||
ತುಲಸೀ ದಹತೇ ಪಾಪಂ ವಾಙ್ಮನಃಕಾಯಸಂಚಿತಮ್ ।
ಅಮೃತಾಂ ಸರ್ವಕಲ್ಯಾಣೀಂ ಶೋಕಸಂತಾಪನಾಶನೀಮ್ ||26||

ಆಧಿವ್ಯಾಧಿಹರಾಂ ನೃಣಾಂ ತುಲಸಿ ತ್ವಾಂ ನಮಾಮ್ಯಹಮ್ ।
ಆಮ್ರಾರೋಪಸಹಸ್ರಾಣಿ ಪಿಪ್ಪಲಾನಿ ಶತಾನಿ ಚ ॥27॥
ತತ್ಫಲಂ ಸಮಮೇಕೇನ ತುಲಸೀವಿಟಪೇನ ಚ ।
ರಾಜದ್ವಾರೇ ಸಭಾಮಧ್ಯೇ ಸಂಗ್ರಾಮೇ ಶತ್ರುಪೀಡನೇ ॥28॥

॥ ಇತಿ ಶ್ರೀಬ್ರಹ್ಮಾಂಡಪುರಾಣೇ ಬ್ರಹ್ಮನಾರದಸಂವಾದೇ ಶ್ರೀತುಲಸೀಸ್ತೋತ್ರಮ್ ॥

* * * *

## ತುಳಸೀ ಪೂಜೆ ಹಾಡು

ಆರುತಿ ಬೆಳಗಿರೆ ನಾರಿ ತುಳಸಮ್ಮಗೆ । ಕೋರಿದಾ ವರಗಳ ಕೊಡುವಾಕೆಗೆ ॥ಪ॥ ಬಂಟರ ಬಾಗಿಲ ಮುಂದೆ ತಾನಿರುವ ಮಂಟಪಾವನ ಕಟ್ಟಿಸಿ ಕೊಂಬಳೆ । ಗಂಟು ಗಂಟಿಗೆ ಎಂಟು ಪೆಂಡೆಗಳ ಒಡೆಯುವಳೆ ಜಾಣೆ ತುಳಸಿಗೂ ನನಗೂ ಸರಿ ಬರುವದೆ ॥೧॥ ದೊಡ್ಡ ಹಂದರದೊಳಗೆ ತಾನಿರುವಳೆ ಬಡ್ಡಿ ಸಾಲವನು ಕಟ್ಟಿಸಿಕೊಂಬಳೆ । ದುಡ್ಡುದುಡ್ಡಿಗೆ ಭಾರಿ ಬಡ್ಡಿಗಳ ಹೊಡೆಯುವಳೆ ಜಾಣೆ ಲಕ್ಷ್ಮೀಗೂ ನನಗೂ ಸರಿ ಬರುವದೆ ॥೨॥ ಅಡವಿಯಾ ಒಳಗೆಲ್ಲಾ ಗಿಡವಾಗಿ ಇರುವಳೆ ಹುಡುಗರಾ ಕೈಲಿ ಚೂಟಿಸಿಕೊಂಬಳೆ । ಒಡೆಯ ಕೃಷ್ಣಯ್ಯಗೆ ವನಮಾಲೆಯಾಗುವಳೆ ಜಾಣೆ ತುಳಸಿಗೂ ನನಗೂ ಸರಿ ಬರುವದೆ ॥೩॥ ಕಾಸಿ ಕರಗಿಸಿ ತೂಗಿಸಿ ಕೊಂಬಳೆ ಝಾಡಿಸಿ ಪೆಟ್ಟನು ಹಾಕಿಕೊಂಬಳೆ । ರಾಯರಾಯರಿಗೆಲ್ಲ ಝಗಳವನೆ ಹಚ್ಚುವಳೆ ಜಾಣೆ ಲಕ್ಷ್ಮೀಗೂ ನನಗೆ ಸರಿ ಬರುವದೆ ॥೪॥ ಇಬ್ಬರ ಝಗಳವಾ ಕೇಳಿ ತಾ ಶ್ರೀಕೃಷ್ಣ ಪರಮ ಸಂತೋಷದಲಿ ನಸುನಕ್ಕನು । ಮುದ್ರೆಯುಂಗುರ ಕೊಟ್ಟು ಮುನಿಸನ್ನು ತೀರಿಸಿದಾ ಉದ್ಧಾರ ಮಾಡು ತುಳಸಮ್ಮ ॥೫॥

## ಕಾರ್ತಿಕ ದೀಪೋತ್ಸವ

ವರ್ಷದಲ್ಲಿ ಐದು ಉತ್ಸವಗಳನ್ನು ಅವಶ್ಯವಾಗಿ ಆಚರಿಸಬೇಕು. ದವನೋತ್ಸವ, ಫಲೋತ್ಸವ, ಪವಿತ್ರೋತ್ಸವ, ದೀಪೋತ್ಸವ ಹಾಗೂ ವಸಂತೋತ್ಸವ ಎಂದು. ಕಾರ್ತಿಕಮಾಸದ ಶುಕ್ಲಪಕ್ಷದ ದ್ವಾದಶಿಯ ದಿವಸ ದೀಪೋತ್ಸವವನ್ನು ಆಚರಿಸಬೇಕು. ಈ ಐದು ಉತ್ಸವಗಳು ಏಕಾದಶಿ ಹಾಗೂ ದ್ವಾದಶಿಯ ದಿವಸಗಳಲ್ಲಿಯೇ ವಿಹಿತವಾಗಿವೆ. ದ್ವಾದಶಿಯ ದಿವಸ ಸಾಧ್ಯವಾಗದಿದ್ದರೆ, ಹುಣ್ಣಿಮೆಯ ದಿವಸ ಮಾಡಬೇಕೆಂದು ಶಾಸ್ತ್ರಗಳು ಹೇಳುತ್ತವೆ. ಕೆಲವರು ದ್ವಾದಶಿ ಆಚರಿಸುತ್ತಾರೆ. ಕೆಲವರು ಹುಣ್ಣಿಮೆಯ ದಿವಸ ಆಚರಿಸುತ್ತಾರೆ. ಘಟ್ಟದ ಮೇಲಿನ ಸಂಪ್ರದಾಯದಲ್ಲಿ ಪವಿತ್ರೋತ್ಸವವನ್ನು ದ್ವಾದಶಿಯ ದಿವಸ ಆಚರಿಸುತ್ತಾರೆ. ಘಟ್ಟದ ಕೆಳಗಿನವರು ಹುಣ್ಣಿಮೆಯ ದಿವಸ ಆಚರಿಸುತ್ತಾರೆ. ಹಾಗೆಯೇ ಕಾರ್ತಿಕಮಾಸದ ದೀಪೋತ್ಸವವನ್ನು ಹುಣ್ಣಿಮೆಯ ದಿವಸವೇ ಆಚರಿಸುವ ಪದ್ಧತಿಯು ಬಂದಿದೆ. ದ್ವಾದಶಿಯೂ ಕೂಡ ಆಚರಣೆ ಮಾಡಬಹುದು. ಬೇರೆ ಉತ್ಸವಗಳಂತೆ ಈ ಉತ್ಸವವನ್ನೂ ಕೂಡ ಅಧಿವಾಸಾದಿಗಳ ಮೂಲಕವೇ ಆಚರಿಸಬೇಕು. ಸಾವಿರ ದೀಪಗಳನ್ನು ಹಚ್ಚಲು ಸಾಧ್ಯವಾಗದಿದ್ದರೆ ಯಥಾಶಕ್ತಿ ದೀಪಗಳನ್ನು ಹಚ್ಚಿ ಭಗವಂತನಿಗೆ ಸಮರ್ಪಿಸಬೇಕು.

(ಇದರ ಬಗ್ಗೆ ಪೂಜ್ಯ ಗಿರಿಯಾಚಾರ್ಯರಿಂದ ಸಂಪಾದಿತವಾದ ಕೃಷ್ಣಾಚಾರ್ಯಸ್ಮೃತಿಮುಕ್ತಾವಳಿಯಲ್ಲಿ ನೀಡಿದ ಭಾಗವನ್ನು ಯಥಾವತ್ತಾಗಿ ಇಲ್ಲಿ ಸಂಗ್ರಹಿಸಲಾಗಿದೆ.)

ಕಾರ್ತಿಕಶುದ್ಧಪೌರ್ಣಮಾಸ್ಯಾಂ ಪಂಚರಾತ್ರಾದೌ ದೀಪೋತ್ಸವಃ ಕಾರ್ಯ ಇತ್ಯುಕ್ತಮ್।

ಕಾರ್ತಿಕ ಶುದ್ಧ ಹುಣ್ಣಿಮೆದಿನ ದೀಪೋತ್ಸವವನ್ನು ಮಾಡತಕ್ಕದ್ದು ಎಂಬುದಾಗಿ ಪಂಚರಾತ್ರಾದಿಗಳಲ್ಲಿ ಹೇಳಿದ್ದಾರೆ.

ತತ್ರ ಸಂಧ್ಯಾವ್ಯಾಪಿನೀ ಪೂರ್ಣಿಮಾ ಗ್ರಾಹ್ಯಾ -

ಕರ್ಮಣೋ ಯಸ್ಯ ಯಃ ಕಾಲಸ್ತತ್ಕಾಲವ್ಯಾಪಿನೀ ತಿಥಿಃ ।
ತಯಾ ಕರ್ಮಾಣಿ ಕುರ್ವೀತ ಹ್ರಾಸವೃದ್ಧೀ ನ ಕಾರಣಮ್ ॥

ಇತಿ ತಸ್ಯಾಃ ಕರ್ಮಕಾಲತ್ವಾತ್ ।

ಸಂಧ್ಯಾಕಾಲೇ ತು ಸಂಪ್ರಾಪ್ತೇ ಬ್ರಹ್ಮಘೋಷಜಯಸ್ವನೈಃ ।
ದೀಪಂ ಪ್ರಜ್ವಾಲಯೇತ್' ಇತಿ ॥

ತತ್ರೈವ -

ವೃಶ್ಚಿಕಸ್ಥೇ ದಿವಾನಾಥೇ ವೃಷಭಸ್ಥೇ ನಿಶಾಕರೇ ।
ವೃಷಭಸ್ಯೋದಯೇ ಕುರ್ಯಾದ್ದೀಪಾರೋಪಮಹೋತ್ಸವಮ್ ॥ ಇತಿ ॥

ಜ್ಯೋತಿಸ್ಸಿದ್ಧಾಂತೇಽಪಿ -

ಮಾಸ್ಯೂರ್ಜೇ ಕೃತ್ತಿಕಾಧಿಷ್ಣ್ಯೇ ಸಾಯಂಕಾಲೇ ಪ್ರರೋಪಯೇತ್ ।
ದೀಪಾಂಶ್ಚೈವ ಮಹಾದೀಪಾನನೇಕಾನ್ ಸರ್ವತೋ ಗೃಹೇ ॥
ಇತ್ಯಭಿಧಾನಾತ್, ತಥಾ ಭಾರದ್ವಾಜಸ್ಮೃತೌ ಚ ತತ್ರ
ದೀಪದಾನಕರ್ತವ್ಯತಾಭಿಧಾನಾಚ್ಚ ಅವಸೀಯತೇ ॥

ದೀಪೋತ್ಸವಕ್ಕೆ ಸಂಧ್ಯಾವ್ಯಾಪಿನಿಯಾದ ಪೂರ್ಣಿಮಾ ತಿಥಿಯನ್ನೇ ಸ್ವೀಕರಿಸಬೇಕು. ಯಾವ ಉತ್ಸವಾದಿ ಕಾರ್ಯಕ್ಕೆ ಯಾವ ಕಾಲವನ್ನು ಹೇಳಿದ್ದಾರೋ ಆ ಕಾಲವನ್ನು ವ್ಯಾಪಿಸಿ ಕೊಂಡಿರುವ ತಿಥಿಯೇ ಸ್ವೀಕಾರಾರ್ಹವಾಗಿದೆ. ಆ ತಿಥಿಯ ಸಮಯದಲ್ಲಿಯೇ ಉತ್ಸವಾದಿಗಳನ್ನು ಮಾಡಬೇಕು. ತಿಥಿಹ್ರಾಸ ಅಥವಾ ವೃದ್ಧಿಗಳು ಆಯಾ ಉತ್ಸವಾದಿಗಳಿಗೆ ನಿಮಿತ್ತವಾಗುವುದಿಲ್ಲ ಎಂಬುದಾಗಿ ಹೇಳಿರುವುದರಿಂದ ತಿಥಿಯು ಉತ್ಸವಾದಿ ಆಚರಣೆಯ ಕಾಲವಾಗಿದೆ. ಆದುದರಿಂದ ಪ್ರಕೃತವಾದ ದೀಪೋತ್ಸವಕ್ಕೆ ದೀಪೋತ್ಸವ ಕಾಲದಲ್ಲಿ ಹುಣ್ಣಿಮೆಯಿರಬೇಕು. ಸಂಧ್ಯಾಕಾಲದಲ್ಲಿ ಪ್ರಾಪ್ತವಾದಾಗ ವೇದಘೋಷ ಜಯಕಾರಗಳಿಂದ ದೀಪಗಳನ್ನು ಹಚ್ಚಿ ಉರಿಸಬೇಕೆಂದೂ ಮತ್ತು ಅಲ್ಲಿಯೇ 'ಸೂರ್ಯನು ವೃಶ್ಚಿಕ ರಾಶಿಯಲ್ಲಿರುವಾಗ

## ಕಾರ್ತಿಕ ದೀಪೋತ್ಸವ

ವರ್ಷದಲ್ಲಿ ಐದು ಉತ್ಸವಗಳನ್ನು ಅವಶ್ಯವಾಗಿ ಆಚರಿಸಬೇಕು. ದವನೋತ್ಸವ, ಫಲೋತ್ಸವ, ಪವಿತ್ರೋತ್ಸವ, ದೀಪೋತ್ಸವ ಹಾಗೂ ವಸಂತೋತ್ಸವ ಎಂದು. ಕಾರ್ತಿಕಮಾಸದ ಶುಕ್ಲಪಕ್ಷದ ದ್ವಾದಶಿಯ ದಿವಸ ದೀಪೋತ್ಸವವನ್ನು ಆಚರಿಸಬೇಕು. ಈ ಐದು ಉತ್ಸವಗಳು ಏಕಾದಶಿ ಹಾಗೂ ದ್ವಾದಶಿಯ ದಿವಸಗಳಲ್ಲಿಯೇ ವಿಹಿತವಾಗಿವೆ. ದ್ವಾದಶಿಯ ದಿವಸ ಸಾಧ್ಯವಾಗದಿದ್ದರೆ, ಹುಣ್ಣಿಮೆಯ ದಿವಸ ಮಾಡಬೇಕೆಂದು ಶಾಸ್ತ್ರಗಳು ಹೇಳುತ್ತವೆ. ಕೆಲವರು ದ್ವಾದಶಿ ಆಚರಿಸುತ್ತಾರೆ. ಕೆಲವರು ಹುಣ್ಣಿಮೆಯ ದಿವಸ ಆಚರಿಸುತ್ತಾರೆ. ಘಟ್ಟದ ಮೇಲಿನ ಸಂಪ್ರದಾಯದಲ್ಲಿ ಪವಿತ್ರೋತ್ಸವವನ್ನು ದ್ವಾದಶಿಯ ದಿವಸ ಆಚರಿಸುತ್ತಾರೆ. ಘಟ್ಟದ ಕೆಳಗಿನವರು ಹುಣ್ಣಿಮೆಯ ದಿವಸ ಆಚರಿಸುತ್ತಾರೆ. ಹಾಗೆಯೇ ಕಾರ್ತಿಕಮಾಸದ ದೀಪೋತ್ಸವವನ್ನು ಹುಣ್ಣಿಮೆಯ ದಿವಸವೇ ಆಚರಿಸುವ ಪದ್ಧತಿಯು ಬಂದಿದೆ. ದ್ವಾದಶಿಯೂ ಕೂಡ ಆಚರಣೆ ಮಾಡಬಹುದು. ಬೇರೆ ಉತ್ಸವಗಳಂತೆ ಈ ಉತ್ಸವವನ್ನೂ ಕೂಡ ಅಧಿವಾಸಾದಿಗಳ ಮೂಲಕವೇ ಆಚರಿಸಬೇಕು. ಸಾವಿರ ದೀಪಗಳನ್ನು ಹಚ್ಚಲು ಸಾಧ್ಯವಾಗದಿದ್ದರೆ ಯಥಾಶಕ್ತಿ ದೀಪಗಳನ್ನು ಹಚ್ಚಿ ಭಗವಂತನಿಗೆ ಸಮರ್ಪಿಸಬೇಕು.

(ಇದರ ಬಗ್ಗೆ ಪೂಜ್ಯ ಗಿರಿಯಾಚಾರ್ಯರಿಂದ ಸಂಪಾದಿತವಾದ ಕೃಷ್ಣಾಚಾರ್ಯಸ್ಮೃತಿಮುಕ್ತಾವಳಿಯಲ್ಲಿ ನೀಡಿದ ಭಾಗವನ್ನು ಯಥಾವತ್ತಾಗಿ ಇಲ್ಲಿ ಸಂಗ್ರಹಿಸಲಾಗಿದೆ.)

ಕಾರ್ತಿಕಶುದ್ಧಪೌರ್ಣಮಾಸ್ಯಾಂ ಪಂಚರಾತ್ರಾದೌ ದೀಪೋತ್ಸವಃ ಕಾರ್ಯ ಇತ್ಯುಕ್ತಮ್।

ಕಾರ್ತಿಕ ಶುದ್ಧ ಹುಣ್ಣಿಮೆದಿನ ದೀಪೋತ್ಸವವನ್ನು ಮಾಡತಕ್ಕದ್ದು ಎಂಬುದಾಗಿ ಪಂಚರಾತ್ರಾದಿಗಳಲ್ಲಿ ಹೇಳಿದ್ದಾರೆ.

ತತ್ರ ಸಂಧ್ಯಾವ್ಯಾಪಿನೀ ಪೂರ್ಣಿಮಾ ಗ್ರಾಹ್ಯಾ -

ಕರ್ಮಣೋ ಯಸ್ಯ ಯಃ ಕಾಲಸ್ತತ್ಕಾಲವ್ಯಾಪಿನೀ ತಿಥಿಃ ।
ತಯಾ ಕರ್ಮಾಣಿ ಕುರ್ವೀತ ಹ್ರಾಸವೃದ್ಧೀ ನ ಕಾರಣಮ್ ॥

ಇತಿ ತಸ್ಯಾಃ ಕರ್ಮಕಾಲತ್ವಾತ್ ।

ಸಂಧ್ಯಾಕಾಲೇ ತು ಸಂಪ್ರಾಪ್ತೇ ಬ್ರಹ್ಮಘೋಷಜಯಸ್ವನೈಃ ।
ದೀಪಂ ಪ್ರಜ್ವಾಲಯೇತ್' ಇತಿ ॥

ತತ್ರೈವ -

ವೃಶ್ಚಿಕಸ್ಥೇ ದಿವಾನಾಥೇ ವೃಷಭಸ್ಥೇ ನಿಶಾಕರೇ ।
ವೃಷಭಸ್ಯೋದಯೇ ಕುರ್ಯಾದ್ದೀಪಾರೋಪಮಹೋತ್ಸವಮ್ ॥ ಇತಿ ॥

ಜ್ಯೋತಿಸ್ಸಿದ್ಧಾಂತೇಽಪಿ -

ಮಾಸ್ಯೂರ್ಜೇ ಕೃತ್ತಿಕಾಧಿಷ್ಣ್ಯೇ ಸಾಯಂಕಾಲೇ ಪ್ರರೋಪಯೇತ್ ।
ದೀಪಾಂಶ್ಚೈವ ಮಹಾದೀಪಾನನೇಕಾನ್ ಸರ್ವತೋ ಗೃಹೇ ॥
ಇತ್ಯಭಿಧಾನಾತ್, ತಥಾ ಭಾರದ್ವಾಜಸ್ಮೃತೌ ಚ ತತ್ರ
ದೀಪದಾನಕರ್ತವ್ಯತಾಭಿಧಾನಾಚ್ಚ ಅವಸೀಯತೇ ॥

ದೀಪೋತ್ಸವಕ್ಕೆ ಸಂಧ್ಯಾವ್ಯಾಪಿನಿಯಾದ ಪೂರ್ಣಿಮಾ ತಿಥಿಯನ್ನೇ ಸ್ವೀಕರಿಸಬೇಕು. ಯಾವ ಉತ್ಸವಾದಿ ಕಾರ್ಯಕ್ಕೆ ಯಾವ ಕಾಲವನ್ನು ಹೇಳಿದ್ದಾರೋ ಆ ಕಾಲವನ್ನು ವ್ಯಾಪಿಸಿ ಕೊಂಡಿರುವ ತಿಥಿಯೇ ಸ್ವೀಕಾರಾರ್ಹವಾಗಿದೆ. ಆ ತಿಥಿಯ ಸಮಯದಲ್ಲಿಯೇ ಉತ್ಸವಾದಿಗಳನ್ನು ಮಾಡಬೇಕು. ತಿಥಿಹ್ರಾಸ ಅಥವಾ ವೃದ್ಧಿಗಳು ಆಯಾ ಉತ್ಸವಾದಿಗಳಿಗೆ ನಿಮಿತ್ತವಾಗುವುದಿಲ್ಲ ಎಂಬುದಾಗಿ ಹೇಳಿರುವುದರಿಂದ ತಿಥಿಯು ಉತ್ಸವಾದಿ ಆಚರಣೆಯ ಕಾಲವಾಗಿದೆ. ಆದುದರಿಂದ ಪ್ರಕೃತವಾದ ದೀಪೋತ್ಸವಕ್ಕೆ ದೀಪೋತ್ಸವ ಕಾಲದಲ್ಲಿ ಹುಣ್ಣಿಮೆಯಿರಬೇಕು. ಸಂಧ್ಯಾಕಾಲದಲ್ಲಿ ಪ್ರಾಪ್ತವಾದಾಗ ವೇದಘೋಷ ಜಯಕಾರಗಳಿಂದ ದೀಪಗಳನ್ನು ಹಚ್ಚಿ ಉರಿಸಬೇಕೆಂದೂ ಮತ್ತು ಅಲ್ಲಿಯೇ 'ಸೂರ್ಯನು ವೃಶ್ಚಿಕ ರಾಶಿಯಲ್ಲಿರುವಾಗ

ಚಂದ್ರನು ವೃಷಭ ರಾಶಿಯಲ್ಲಿರುವಾಗ, ವೃಷಭ ಲಗ್ನದಲ್ಲಿ ದೀಪಾರೋಪಣ ಮಹೋತ್ಸವವನ್ನು ಮಾಡಬೇಕು' ಎಂದು ಹೇಳಿದ್ದಾರೆ.

'ಕಾರ್ತಿಕ ಮಾಸದಲ್ಲಿ ಕೃತ್ತಿಕಾ ನಕ್ಷತ್ರದಲ್ಲಿ ಸಾಯಂಕಾಲ ಚಿಕ್ಕ ಮತ್ತು ದೊಡ್ಡ ಅನೇಕ ದೀಪಗಳನ್ನು ಮನೆಯಲ್ಲಿ ಒಳಗೂ ಹೊರಗೂ ಸುತ್ತಲೂ ಹಚ್ಚಿ ಉರಿಸಬೇಕು' ಎಂದು ಜ್ಯೋತಿಸ್ಸಿದ್ಧಾಂತದಲ್ಲಿಯೂ ಹೇಳಿದ್ದಾರೆ. ಹಾಗೆಯೇ ಭಾರದ್ವಾಜ ಸ್ಮೃತಿಯಲ್ಲಿಯೂ ಕಾರ್ತಿಕ ಮಾಸದಲ್ಲಿ ಹುಣ್ಣಿಮೆದಿನ ದೀಪದಾನ ಮಾಡಬೇಕು ಎಂದು ಹೇಳಿರುವುದರಿಂದ ಹುಣ್ಣಿಮೆಯ ತಿಥಿಯು ಇರುವ ಸಾಯಂಕಾಲದಲ್ಲಿಯೇ ದೀಪೋತ್ಸವವನ್ನು ಆಚರಿಸಬೇಕೆಂದು ನಿರ್ಣಯವು ತಿಳಿದುಬರುತ್ತದೆ.

ತತ್ರೈವ ತತ್ಪೂಜಾಪ್ರಕಾರಃ ಪಂಚರಾತ್ರೇ ವಿಸ್ತರೇಣ ಅಭಿಹಿತಃ ।

ಬ್ರಹ್ಮೋವಾಚ

ದೇವ ದೇವ ! ಜಗನ್ನಾಥ ! ವಾಂಛಿತಾರ್ಥಫಲಪ್ರದ ।<br>
ದೀಪೋತ್ಸವವಿಧಾನಂ ಮೇ ಬ್ರೂಹಿ ಲಕ್ಷಣತಃ ಪ್ರಭೋ! ॥

ಶ್ರೀಭಗವಾನ್ ಉವಾಚ

ದೀಪೋತ್ಸವಃ ಕೃತೋ ಯೇನ ಸರ್ವಾಭೀಷ್ಟಪ್ರದಾಯಕಃ ।<br>
ವರ್ಧಂತೇ ತಸ್ಯ ಸತತಂ ಜ್ಞಾನಸೌಭಾಗ್ಯಸಂಪದಃ ॥

ದೀಪೋತ್ಸವಂ ಯಃ ಕುರುತೇ ತಂ ಯಮೋಽಪಿ ನ ಪಶ್ಯತಿ ।<br>
ಆಧಯೋ ವ್ಯಾಧಯೋ ಬ್ರಹ್ಮನ್ ! ನ ಸ್ಪೃಶಂತಿ ಕದಾಚನ ॥

ಊರ್ಜೇ ಸಿತೇ ಪೂರ್ಣಿಮಾಯಾಂ ಕೃತಸ್ನಾನಾದಿ ಸತ್‌ಕ್ರಿಯಃ ।<br>
ದೀಪಸ್ಯ ಪುರುತೋ ಮಂತ್ರಮಿಮಮುಚ್ಚಾರಯೇಚ್ಛುಚಿಃ ॥

ಆದ್ಯ ದೀಪೋತ್ಸವಂ ದೇವ! ಕರಿಷ್ಯೇ ತ್ವತ್ ಪ್ರಸಾದತಃ ।<br>
ನಿರ್ವಿಘ್ನಂ ಸಿದ್ಧಿಮಾಯಾತು ಯಥೋಕ್ತಫಲದೋ ಭವ ॥

ಇತಿ ಸಂಕಲ್ಪ್ಯ ದೀಪಸ್ಯ ಪಾತ್ರಾಣಿ ಪರಿಸಾದಯೇತ್ ।

ಅಲ್ಲಿಯೇ ದೀಪೋತ್ಸವ ಪೂಜೆಯ ರೀತಿಯನ್ನು ಪಂಚರಾತ್ರದಲ್ಲಿ ವಿಸ್ತಾರವಾಗಿ ಹೇಳಿದ್ದಾರೆ - ಬ್ರಹ್ಮದೇವರು ಹೀಗೆ ಹೇಳುತ್ತಾರೆ - 'ಜಗತ್ತಿಗೆ ಒಡೆಯನಾದ ದೇವದೇವನಾದ ಸರ್ವೋತ್ತಮನಾದ ಇಷ್ಟಾರ್ಥಫಲವನ್ನು ಕೊಡುವ ಸರ್ವಸಮರ್ಥನಾದ ಶ್ರೀಹರಿಯೇ! ದೀಪೋತ್ಸವ ವಿಧಿ-ವಿಧಾನವನ್ನು ಶಾಸ್ತ್ರೋಕ್ತವಾಗಿ ನನಗೆ ಹೇಳುವ ಕೃಪೆ ಮಾಡಬೇಕು' ಎಂದು ಬ್ರಹ್ಮದೇವರು ಕೇಳಿದಾಗ ಭಗವಂತನು ಈ ರೀತಿ ಹೇಳುತ್ತಾನೆ - 'ದೀಪೋತ್ಸವವು ಸಕಲ ಅಭೀಷ್ಟಗಳನ್ನೂ ಕೊಡತಕ್ಕಂತಹುದಾಗಿದೆ. ಇಂತಹ ದೀಪೋತ್ಸವವನ್ನು ಯಾವನು ಮಾಡುತ್ತಾನೋ ಅವನಿಗೆ ನಿರಂತರವಾಗಿ ಜ್ಞಾನಾಭಿವೃದ್ಧಿಯಾಗುತ್ತದೆ. ಇಂತಹ ದೀಪೋತ್ಸವವನ್ನು ಯಾವನು ಮಾಡುತ್ತಾನೋ ಅವನಿಗೆ ನಿರಂತರವಾಗಿ ಜ್ಞಾನಾಭಿವೃದ್ಧಿಯಾಗುತ್ತದೆ. ಅವನ ಮನೆಯಲ್ಲಿ ನಿರಂತರವಾಗಿ ಸೌಭಾಗ್ಯ ಸಂಪತ್ತುಗಳು ಹೆಚ್ಚುತ್ತವೆ. ಯಾವ ಮಾನವನು ದೀಪೋತ್ಸವವನ್ನು ಮಾಡುತ್ತಾನೋ ಅವನನ್ನು ಯಮನು ಕಣ್ಣೆತ್ತಿ ನೋಡುವುದಿಲ್ಲ. ಮಾನಸಿಕ ವ್ಯಥೆಗಳು ಅವನನ್ನು ಎಂದೂ ಪೀಡಿಸುವುದಿಲ್ಲ. ಅವನಿಗೆ ಶರೀರದಲ್ಲಿ ರೋಗಾದ್ಯುಪದ್ರವಗಳೂ ಎಂದೂ ಉಂಟಾಗುವುದಿಲ್ಲ. ಕಾರ್ತಿಕ ಶುಕ್ಲ ಪಕ್ಷದ ಹುಣ್ಣಿಮೆಯ ದಿನ ಸ್ನಾನ ಮುಂತಾದ ದೈನಂದಿನ ಕಾರ್ಯವನ್ನು ಪೂರೈಸಿ ಶುಚಿಯಾಗಿ ಈ ಮಂತ್ರವನ್ನು ಉಚ್ಚರಿಸಬೇಕು. ಆ ಮಂತ್ರವು ಹೀಗಿದೆ -

ಅದ್ಯ ದೀಪೋತ್ಸವಂ ದೇವ ! ಕರಿಷ್ಯೇ ತ್ವತ್ಪ್ರಸಾದತಃ ।
ನಿರ್ವಿಘ್ನಂ ಸಿದ್ಧಿಮಾಯಾತು ಯಥೋಕ್ತಫಲದೋ ಭವ ॥

ಈ ಮಂತ್ರದ ತಾತ್ಪರ್ಯವು ಹೀಗಿದೆ - ಪರಮಾತ್ಮನೇ! ಈ ದಿನ ನಿನ್ನ ಅನುಗ್ರಹದಿಂದ ದೀಪೋತ್ಸವವನ್ನು ಮಾಡಲಿದ್ದೇನೆ. ಈ ದೀಪೋತ್ಸವವು ವಿಘ್ನವಿಲ್ಲದೆ ನಡೆಯುವಂತಾಗಲಿ. ನನಗೆ ನಿನ್ನ ಅನುಗ್ರಹದಿಂದ ದೀಪೋತ್ಸವದ ಶಾಸ್ತ್ರೋಕ್ತವಾದ ಫಲವೆಲ್ಲಾ ಉಂಟಾಗಲಿ. ಈ ಅಭಿಪ್ರಾಯದಿಂದ ಮಂತ್ರವನ್ನು ಹೇಳಿ ಸಂಕಲ್ಪಮಾಡಿ ದೀಪದ ಪಾತ್ರೆಗಳನ್ನೆಲ್ಲಾ ಒದಗಿಸಿಕೊಳ್ಳಬೇಕು.

* * * *

## ರಂಗಪೂಜಾ

ನೈವೇದ್ಯಾರ್ಪಣಕಾಲೇ ತು ರಂಗಪೂಜಾಂ ಸಮರ್ಪಯೇತ್ ।
ಪ್ರಾಸಾದಕಂ ಚ ಪೂತಾತ್ಮಾ ಕುರ್ಯಾಚ್ಚ ಶಬಲಾಕೃತಿಮ್ ॥

ದೇವರಿಗೆ ನೈವೇದ್ಯ ಸಮರ್ಪಣ ಮಾಡುವ ಕಾಲದಲ್ಲಿ ರಂಗಪೂಜೆಯನ್ನು ಸಮರ್ಪಿಸಬೇಕು. ಪವಿತ್ರಾಂತಃಕರಣನಾಗಿ ನಾನಾ ಬಣ್ಣಗಳಿಂದ ಕೂಡಿದ ಆಕಾರವುಳ್ಳ ಮಹಡಿಯ ಆಕಾರವನ್ನು ಮಾಡಬೇಕು.

ಅಥವಾ ಪಂಕ್ತಿಪೀಠಾನಿ ಕುರ್ಯಾದಾರಂಗಮಂಟಪೇ ।
ವಸ್ತ್ರೇಣ ಪೂರಿಕಾಭಿರ್ವಾ ಸಂಛಾದ್ಯೋಪರಿ ಬುದ್ಧಿಮಾನ್ ॥
ಮಹಾಪಾತ್ರೇಷು ಬಹ್ವನ್ನಂ ಭಕ್ಷ್ಯಭೋಜ್ಯಸಮನ್ವಿತಮ್ ।
ತಸ್ಯೋಪರಿ ಮಹಾದೀಪ್ತೈಃ ಪರಿತಃ ಪಂಕ್ತಿದೀಪಿಕಾಃ ॥
ಫಲಪುಷ್ಪೈರಲಂಕೃತ್ಯ ಪಂಚವಾದ್ಯೈಃ ಸಮರ್ಪಯೇತ್ ।

ಅಥವಾ ಸಾಲಾಗಿರುವ ಮಣೆಗಳನ್ನು ದೇವರ ರಂಗಮಂಟಪದ ಸುತ್ತಲೂ ಮಾಡಬೇಕು. ಅವುಗಳಲ್ಲಿ ಪಂಚಖಾದ್ಯ ಮುಂತಾದ ನೈವೇದ್ಯ ವಸ್ತುಗಳನ್ನು ರಾಶಿಯಾಗಿ ಇಡಬೇಕು. ಅವುಗಳ ಮೇಲೆ ಬಟ್ಟೆ ಅಥವಾ ಪೂರಿಗಳಿಂದ ಮುಚ್ಚಬೇಕು. ಈ ರೀತಿ ಬುದ್ಧಿವಂತರಾದವರು ದೊಡ್ಡ ಪಾತ್ರೆಗಳಲ್ಲಿ ಬಹಳವಾದ ಅನ್ನ ಮತ್ತು ಭಕ್ಷ್ಯಭೋಜ್ಯಗಳನ್ನು ಇಡಬೇಕು. ಅದರ ಮೇಲೆ ಎಣ್ಣೆಯಿಂದ ಅದ್ದಿದ ಬಟ್ಟೆಗಳುಳ್ಳ ಕೋಲುದೀಪಗಳನ್ನು ಪ್ರಜ್ವಲಿಸಬೇಕು. ಅದರ ಸುತ್ತಲೂ ಸಾಲು ದೀಪಗಳನ್ನಿಡಬೇಕು. ಈ ನೈವೇದ್ಯರಾಶಿಯನ್ನು ಫಲಪುಷ್ಪಗಳಿಂದ ಅಲಂಕರಿಸಿ ಪಂಚವಾದ್ಯ ಘೋಷಪುರಸ್ಸರವಾಗಿ ನೈವೇದ್ಯವನ್ನು ದೇವರಿಗೆ ಸಮರ್ಪಿಸಬೇಕು.

''ಶ್ರೀನಿವಾಸ! ನಮಸ್ತುಭ್ಯಂ ಮಹಾನ್ನೈವೇದ್ಯಮುತ್ತಮಮ್ ।
ಸಂಗೃಹಾಂ ಸುರಶ್ರೇಷ್ಠ! ಭಕ್ತಿಮುಕ್ತಿಪ್ರದಾಯಕ!'' ॥

ದೇವೋತ್ತಮನಾದ, ಭೋಗ ಮೋಕ್ಷಪ್ರದಾಯಕನಾದ ಶ್ರೀನಿವಾಸನೇ! ನಿನಗೆ ಉತ್ತಮವಾದ ಮಹಾನ್ನೈವೇದ್ಯವನ್ನು ಸ್ವೀಕರಿಸು ಎಂದು ಪ್ರಾರ್ಥಿಸಬೇಕು.

"ನೀರಾಜನಂ ತತಃ ಕೃತ್ವಾ ಪ್ರಾರ್ಥಯಿತ್ವಾ ಹರಿಂ ಪುನಃ ।
ಕೌಸ್ತುಭೋರಸ್ಕ ! ಲಕ್ಷ್ಮೀಶ! ವನಮಾಲಾದ್ಯಲಂಕೃತ! ॥"
ತ್ವತ್ಪ್ರೀತಯೇ ಮಯಾ ದತ್ತಾಂ ವನಮಾಲಾಂ ಗೃಹಾಣ ತಾಮ್ ।
ನ ಜಾನೇ ಕರ್ಮ ಯತ್ಕಿಂಚಿನ್ನಾಪಿ ವೈದಿಕಲೌಕಿಕೇ ॥
ತಥಾಪಿ ಮತ್ಕೃತಾಂ ಪೂಜಾಂ ಸ್ವೀಕುರುಷ್ವ ಜನಾರ್ದನ! ।
ಕಾಮತೋಽಕಾಮತೋ ವಾಪಿ ನ ಕೃತಂ ನಿಯಮಾರ್ಚನಮ್ ॥
ಕೇನಚಿದ್ ವಿಘ್ನದೋಷೇಣ ಪರಿಪೂರ್ಣಂ ತದಸ್ತು ತೇ" ॥

ಅನಂತರ ಮಂಗಳನೀರಾಜನವನ್ನು ಮಾಡಿ ಪುನಃ ಶ್ರೀಹರಿಯನ್ನು ಪ್ರಾರ್ಥಿಸಬೇಕು. 'ಕೌಸ್ತುಭಾಲಂಕೃತವಾದ ವಕ್ಷಃಸ್ಥಳವುಳ್ಳವನೇ! ಲಕ್ಷ್ಮೀಪತಿಯೇ! ವನಮಾಲಾದಿದಿವ್ಯಭೂಷಣಗಳಿಂದ ಅಲಂಕೃತನೇ! ನಿನ್ನ ಪ್ರೀತಿಗಾಗಿ ನಾನು ಅರ್ಪಿಸಿರುವ ಈ ದೀಪಮಾಲೆಯನ್ನು ಸ್ವೀಕರಿಸು'. 'ಸ್ವಾಮಿಯೇ!, ನಾನು ವೈದಿಕ ಅಥವಾ ಲೌಕಿಕವಾದ ಯಾವ ಪೂಜಾದಿಕರ್ಮವನ್ನೂ ತಿಳಿದಿಲ್ಲ. ಸಂಸಾರನಾಶಕನಾದ ಶ್ರೀಹರಿಯೇ! ಆದರೂ ನಾನು ಮಾಡಿರುವ ಈ ಪೂಜೆಯನ್ನು ಸ್ವೀಕರಿಸು. ನನ್ನ ಇಚ್ಛೆಯಿಂದಲೋ ಅಥವಾ ತಿಳಿಯದೆಯೋ ಯಾವುದೋ ವಿಘ್ನದೋಷದಿಂದ ನಿಯತವಾಗಿ ನಿನ್ನ ಪೂಜೆಯು ನಡೆಯದಿದ್ದ ಪ್ರಯುಕ್ತ ನನಗೆ ಬಂದಿರುವ ಪಾಪವೆಲ್ಲವೂ ಪರಿಹಾರವಾಗಿ ನಾನು ಮಾಡಿದ ಪೂಜೆಯ ನ್ಯೂನ್ಯತೆಗಳೆಲ್ಲವೂ ಪರಿಹಾರವಾಗಿ ನನ್ನ ಈ ಪೂಜೆಯು ಪರಿಪೂರ್ಣವಾಗಲಿ.

ಇತಿ ಸಂಪ್ರಾರ್ಥ್ಯ ದೇವೇಶಂ ನಮಸ್ಕೃತ್ಯ ಕ್ಷಮಾಪ್ಯ ಚ ।
ಸಂಪೂಜ್ಯ ಸ್ವಗುರುಂ ಪಶ್ಚಾದ್ ಗಂಧಪುಷ್ಪಾಂಬರಾದಿಭಿಃ ॥
ಯಥಾಶಕ್ತಿ ನಮಸ್ಕೃತ್ಯ ದೀಪೌ ದದ್ಯಾತ್ತು ಪಾರ್ಶ್ವಯೋಃ ।
ಇತರಾನ್ ಕ್ರಮಶೋಽಭ್ಯರ್ಚ್ಯ ದತ್ವಾ ತಾಂಬೂಲಖಾದ್ಯಕಾನ್ ॥
ವಾದಿತ್ರಜಯಘೋಷೇಣ ಗುರುದೇವೌ ಪ್ರತೋಷಯೇತ್ ।

ಈ ರೀತಿ ಪ್ರಾರ್ಥಿಸಿ ದೇವೇಶ್ವರನಾದ ಶ್ರೀಹರಿಯನ್ನು ನಮಸ್ಕರಿಸಿ. ಕ್ಷಮೆ ಕೇಳಿಕೊಂಡು. ಅನಂತರ ತನ್ನ ಗುರುವನ್ನು ಗಂಧ-ಪುಷ್ಪ-ವಸ್ತ್ರಾದಿಗಳಿಂದ ಪೂಜಿಸಿ,

ಅವರ ಎರಡು ಪಾರ್ಶ್ವಗಳಲ್ಲಿಯೂ ಎರಡು ದೀಪಗಳನಿಡಬೇಕು. ಇತರನನ್ನೂ, ಕ್ರಮವಾಗಿ ಪೂಜಿಸಿ ತಾಂಬೂಲ ಕಜ್ಜಾಯಗಳನ್ನು ಕೊಡಬೇಕು. ವಾದ್ಯಘೋಷ ಜಯಘೋಷಗಳಿಂದ ಗುರುಗಳನ್ನೂ ದೇವರನ್ನೂ ಸಂತೋಷಪಡಿಸಬೇಕು.

ಏವಂ ಯಃ ಕುರುತೇ ವಿಷ್ಣೋಃ ದೀಪೋತ್ಸವಮತಂದ್ರಿತಃ ।
ತಸ್ಯ ಸಾವಂತ್ಸರೀ ಪೂಜಾ ಸಫಲಾ ಭವತಿ ಧ್ರುವಮ್ ॥

ದೇವಪೂಜಾದಿಕರ್ತುಶ್ಚ ದ್ವಾತ್ರಿಂಶದಪರಾಧಕಾಃ ।
ತಾನ್ ಸಹಿತ್ವಾ ಗದಾಪಾಣಿಃ ಸ್ವೀಕರೋತ್ಯರ್ಚನಂ ಹರಿಃ ॥

ಈ ರೀತಿಯಾಗಿ ಯಾವನು ಆಲಸ್ಯರಹಿತನಾಗಿ ವಿಷ್ಣುವಿನ ದೀಪೋತ್ಸವವನ್ನು ಮಾಡುತ್ತಾನೋ ಅವನು ಸಂವತ್ಸರಪೂರ್ತಿಯಾಗಿ ಮಾಡಿದ ಪೂಜೆಯು ಸಫಲವಾಗುತ್ತದೆ ನಿಶ್ಚಯವು. ದೇವಪೂಜೆಯನ್ನು ಮಾಡುವಾಗ ೩೨ ಅಪರಾಧಗಳು ಸಂಭವಿಸುತ್ತವೆ. ಆದರೆ ಭಕ್ತಿಯಿಂದ ಈ ದೀಪೋತ್ಸವವನ್ನು ಮಾಡುವವನ ೩೨ ಅಪರಾಧಗಳನ್ನು ಗದಾಧರನಾದ ಶ್ರೀಹರಿಯು ಕ್ಷಮಿಸುತ್ತಾನೆ. ಅವನು ಮಾಡಿದ ಪೂಜೆಯನ್ನು ಸ್ವೀಕರಿಸುತ್ತಾನೆ.

ಊರ್ಜೇ ಶ್ರೇಷ್ಠಂ ನರೋ ಯಸ್ತು ನ ಕುರ್ಯಾದ್ ದೀಪಕೋತ್ಸವಮ್ ।
ತಸ್ಯ ಸಾಂವತ್ಸರೀ ಪೂಜಾ ನಿಷ್ಫಲಾ ಭವತಿ ಧ್ರುವಮ್ ॥

ತಸ್ಮಾದ್ ದೀಪೋತ್ಸವಃ ಕಾರ್ಯಃ ಮಂತ್ರತಂತ್ರವಿಧಾನತಃ ।
ಆಯುರಾರೋಗ್ಯಮೈಶ್ವರ್ಯಜ್ಞಾನಸೌಭಾಗ್ಯಸಂಪದಃ ॥

ಲಕ್ಷ್ಮೀಪತಿಪ್ರಸಾದಶ್ಚ ತಸ್ಯ ನಿತ್ಯಂ ಭವೇದ್ ಧ್ರುವಮ್ ।
ತಸ್ಯ ದೀಪೋತ್ಸವಂ ದೃಷ್ಟ್ವಾ ದೇವತಿರ್ಯಙ್ನರಾದಯಃ ॥
ಸರ್ವಪಾಪವಿನಿರ್ಮುಕ್ತಾ ಯಾಂತಿ ಮತ್‌ಸ್ಥಾನಮುತ್ತಮಮ್ ॥

॥ ಇತಿ ದೀಪೋತ್ಸವವಿಧಿಃ ॥

ಯಾವ ಮನುಷ್ಯನು ಕಾರ್ತಿಕಮಾಸದಲ್ಲಿ ಈ ಶ್ರೇಷ್ಠವಾದ ದೀಪೋತ್ಸವವನ್ನು ಮಾಡುವುದಿಲ್ಲವೋ ಅವನು ಒಂದು ವರ್ಷ ಪೂರ್ತಿ ಮಾಡಿದ ಪೂಜೆಯು

ಖಂಡಿತವಾಗಿಯೂ ನಿಷ್ಫಲವಾಗುತ್ತದೆ. ಆದುದರಿಂದ ಮಂತ್ರತಂತ್ರ ವಿಧಿಗಳಿಂದ ದೀಪೋತ್ಸವವನ್ನು ಮಾಡಬೇಕು. ಇದರಿಂದ ಆಯುಸ್ಸು, ಆರೋಗ್ಯ, ಐಶ್ವರ್ಯ, ಜ್ಞಾನ, ಸೌಭಾಗ್ಯ, ಸಂಪತ್ತು ಲಕ್ಷ್ಮೀಪತಿಯಾದ ಹರಿಯ ಅನುಗ್ರಹ ಇವೆಲ್ಲವೂ ನಿತ್ಯದಲ್ಲಿಯೂ ನಿಶ್ಚಯವಾಗಿಯೂ ಉಂಟಾಗುತ್ತವೆ. ಇಂತಹ ಭಗವಂತನ ಭಕ್ತನು ಮಾಡುವ ದೀಪೋತ್ಸವವನ್ನು ನೋಡಿ ದೇವತೆಗಳು ತಿರ್ಯಕ್ ಪ್ರಾಣಿಗಳು ಮನುಷ್ಯರು ಇವರೇ ಮೊದಲಾದವರು ಎಲ್ಲಾ ಪಾಪಗಳಿಂದಲೂ ಬಿಡುಗಡೆ ಹೊಂದಿ ಶ್ರೇಷ್ಠವಾದ ನನ್ನ ಸ್ಥಾನವನ್ನು ಪಡೆಯುತ್ತಾರೆ.

ಇಲ್ಲಿಗೆ ದೀಪೋತ್ಸವ ವಿಧಿಯು ಸಮಾಪ್ತವಾಯಿತು.

* * * *

ಅನಿರುದ್ಧಸಂಹಿತೆಯಲ್ಲಿ ದೀಪೋತ್ಸವದ ಬಗ್ಗೆ ಹೀಗೆ ಹೇಳಿದ್ದಾರೆ -

## ಕಾರ್ತಿಕ ದೀಪೋತ್ಸವ

ಕೃತ್ತಿಕೋತ್ಸವವಿಧಿಂ ವಕ್ಷ್ಯೇ ಸಮಾಸಾನ್ಮುನಿಪುಂಗವ
ಕೃತ್ತಿಕಾಪರ್ವಯುಗ್ಮೇನ ದೀಪಾರೋಪಣಮಾಚರೇತ್ ॥

ಋಕ್ಷಯುತ್ತಸಂಯುಕ್ತಂ ವಾ ಕೇವಲಂ ಪರ್ವಮೇವ ವಾ
ಮಧ್ಯಾಹ್ನೇ ಸಮನುಪ್ರಾಪ್ತೇ ಸ್ನಪನಂ ಸಮ್ಯಗಾಚರೇತ್ ॥

ಅಂಕುರಂ ಪೂರ್ವವತ್ ಕೃತ್ವಾ ಕರ್ಮಾರಂಭೇ ತು ಕೌತುಕಮ್ ।
ಷಟ್ ತ್ರಿಂಶತ್ಕಲಶೈರ್ವಾಪಿ ಪಂಚವಿಂಶತಿಮಸ್ತು ವಾ ॥

ಯದ್ವಾ ಸಪ್ತದಶೈ ರ್ವಾಪಿ ಯುಕ್ತದ್ರವ್ಯಯುತೈಸ್ತು ವಾ
ಕ್ಷೀರಂ ವಾ ಗೋಘೃತಂ ವಾಪಿ ಗಂಧತೋಯಮಥಾಪಿ ವಾ ।

ಚೂರ್ಣಸ್ನಾನಂ ತತಃ ಕೃತ್ವಾ ಅಲಂಕಾರಾಸನೇ ನಯೇತ್
ಕಂಚುಕಾದ್ಯೈರಲಂಕೃತ್ಯ ಲಿಪ್ತಂ ಮೃಗಮದೇನ ವಾ ।

ಅವರ ಎರಡು ಪಾರ್ಶ್ವಗಳಲ್ಲಿಯೂ ಎರಡು ದೀಪಗಳನಿಡಬೇಕು. ಇತರನನ್ನೂ, ಕ್ರಮವಾಗಿ ಪೂಜಿಸಿ ತಾಂಬೂಲ ಕಜ್ಜಾಯಗಳನ್ನು ಕೊಡಬೇಕು. ವಾದ್ಯಘೋಷ ಜಯಘೋಷಗಳಿಂದ ಗುರುಗಳನ್ನೂ ದೇವರನ್ನೂ ಸಂತೋಷಪಡಿಸಬೇಕು.

ಏವಂ ಯಃ ಕುರುತೇ ವಿಷ್ಣೋಃ ದೀಪೋತ್ಸವಮತಂದ್ರಿತಃ ।
ತಸ್ಯ ಸಾವಂತ್ಸರೀ ಪೂಜಾ ಸಫಲಾ ಭವತಿ ಧ್ರುವಮ್ ॥

ದೇವಪೂಜಾದಿಕರ್ತುಶ್ಚ ದ್ವಾತ್ರಿಂಶದಪರಾಧಕಾಃ ।
ತಾನ್ ಸಹಿತ್ವಾ ಗದಾಪಾಣಿಃ ಸ್ವೀಕರೋತ್ಯರ್ಚನಂ ಹರಿಃ ॥

ಈ ರೀತಿಯಾಗಿ ಯಾವನು ಆಲಸ್ಯರಹಿತನಾಗಿ ವಿಷ್ಣುವಿನ ದೀಪೋತ್ಸವವನ್ನು ಮಾಡುತ್ತಾನೋ ಅವನು ಸಂವತ್ಸರಪೂರ್ತಿಯಾಗಿ ಮಾಡಿದ ಪೂಜೆಯು ಸಫಲವಾಗುತ್ತದೆ ನಿಶ್ಚಯವು. ದೇವಪೂಜೆಯನ್ನು ಮಾಡುವಾಗ ೩೨ ಅಪರಾಧಗಳು ಸಂಭವಿಸುತ್ತವೆ. ಆದರೆ ಭಕ್ತಿಯಿಂದ ಈ ದೀಪೋತ್ಸವವನ್ನು ಮಾಡುವವನ ೩೨ ಅಪರಾಧಗಳನ್ನು ಗದಾಧರನಾದ ಶ್ರೀಹರಿಯು ಕ್ಷಮಿಸುತ್ತಾನೆ. ಅವನು ಮಾಡಿದ ಪೂಜೆಯನ್ನು ಸ್ವೀಕರಿಸುತ್ತಾನೆ.

ಊರ್ಜೇ ಶ್ರೇಷ್ಠಂ ನರೋ ಯಸ್ತು ನ ಕುರ್ಯಾದ್ ದೀಪಕೋತ್ಸವಮ್ ।
ತಸ್ಯ ಸಾಂವತ್ಸರೀ ಪೂಜಾ ನಿಷ್ಫಲಾ ಭವತಿ ಧ್ರುವಮ್ ॥

ತಸ್ಮಾದ್ ದೀಪೋತ್ಸವಃ ಕಾರ್ಯಃ ಮಂತ್ರತಂತ್ರವಿಧಾನತಃ ।
ಆಯುರಾರೋಗ್ಯಮೈಶ್ವರ್ಯಜ್ಞಾನಸೌಭಾಗ್ಯಸಂಪದಃ ॥

ಲಕ್ಷ್ಮೀಪತಿಪ್ರಸಾದಶ್ಚ ತಸ್ಯ ನಿತ್ಯಂ ಭವೇದ್ ಧ್ರುವಮ್ ।
ತಸ್ಯ ದೀಪೋತ್ಸವಂ ದೃಷ್ಟ್ವಾ ದೇವತಿರ್ಯಙ್ನರಾದಯಃ ॥
ಸರ್ವಪಾಪವಿನಿರ್ಮುಕ್ತಾ ಯಾಂತಿ ಮತ್ ಸ್ಥಾನಮುತ್ತಮಮ್ ॥

॥ ಇತಿ ದೀಪೋತ್ಸವವಿಧಿಃ ॥

ಯಾವ ಮನುಷ್ಯನು ಕಾರ್ತಿಕಮಾಸದಲ್ಲಿ ಈ ಶ್ರೇಷ್ಠವಾದ ದೀಪೋತ್ಸವವನ್ನು ಮಾಡುವುದಿಲ್ಲವೋ ಅವನು ಒಂದು ವರ್ಷ ಪೂರ್ತಿ ಮಾಡಿದ ಪೂಜೆಯು

ಖಂಡಿತವಾಗಿಯೂ ನಿಷ್ಫಲವಾಗುತ್ತದೆ. ಆದುದರಿಂದ ಮಂತ್ರತಂತ್ರ ವಿಧಿಗಳಿಂದ ದೀಪೋತ್ಸವವನ್ನು ಮಾಡಬೇಕು. ಇದರಿಂದ ಆಯುಸ್ಸು, ಆರೋಗ್ಯ, ಐಶ್ವರ್ಯ, ಜ್ಞಾನ, ಸೌಭಾಗ್ಯ, ಸಂಪತ್ತು ಲಕ್ಷ್ಮೀಪತಿಯಾದ ಹರಿಯ ಅನುಗ್ರಹ ಇವೆಲ್ಲವೂ ನಿತ್ಯದಲ್ಲಿಯೂ ನಿಶ್ಚಯವಾಗಿಯೂ ಉಂಟಾಗುತ್ತವೆ. ಇಂತಹ ಭಗವಂತನ ಭಕ್ತನು ಮಾಡುವ ದೀಪೋತ್ಸವವನ್ನು ನೋಡಿ ದೇವತೆಗಳು ತಿರ್ಯಕ್ ಪ್ರಾಣಿಗಳು ಮನುಷ್ಯರು ಇವರೇ ಮೊದಲಾದವರು ಎಲ್ಲಾ ಪಾಪಗಳಿಂದಲೂ ಬಿಡುಗಡೆ ಹೊಂದಿ ಶ್ರೇಷ್ಠವಾದ ನನ್ನ ಸ್ಥಾನವನ್ನು ಪಡೆಯುತ್ತಾರೆ.

ಇಲ್ಲಿಗೆ ದೀಪೋತ್ಸವ ವಿಧಿಯು ಸಮಾಪ್ತವಾಯಿತು.

* * * *

ಅನಿರುದ್ಧಸಂಹಿತೆಯಲ್ಲಿ ದೀಪೋತ್ಸವದ ಬಗ್ಗೆ ಹೀಗೆ ಹೇಳಿದ್ದಾರೆ -

## ಕಾರ್ತಿಕ ದೀಪೋತ್ಸವ

ಕೃತ್ತಿಕೋತ್ಸವವಿಧಿಂ ವಕ್ಷ್ಯೇ ಸಮಾಸಾನ್ಮುನಿಪುಂಗವ
ಕೃತ್ತಿಕಾಪರ್ವಯುಗ್ಮೇನ ದೀಪಾರೋಪಣಮಾಚರೇತ್ ॥

ಋಕ್ಷಯುತ್ತಸಂಯುಕ್ತಂ ವಾ ಕೇವಲಂ ಪರ್ವಮೇವ ವಾ
ಮಧ್ಯಾಹ್ನೇ ಸಮನುಪ್ರಾಪ್ತೇ ಸ್ನಪನಂ ಸಮ್ಯಗಾಚರೇತ್ ॥

ಅಂಕುರಂ ಪೂರ್ವವತ್ ಕೃತ್ವಾ ಕರ್ಮಾರಂಭೇ ತು ಕೌತುಕಮ್ ।
ಷಟ್ ತ್ರಿಂಶತ್ಕಲಶೈರ್ವಾಪಿ ಪಂಚವಿಂಶತಿಮಸ್ತು ವಾ ॥

ಯದ್ವಾ ಸಪ್ತದಶೈ ರ್ವಾಪಿ ಯುಕ್ತದ್ರವ್ಯಯುತೈಸ್ತು ವಾ
ಕ್ಷೀರಂ ವಾ ಗೋಘೃತಂ ವಾಪಿ ಗಂಧತೋಯಮಥಾಪಿ ವಾ ।

ಚೂರ್ಣಸ್ನಾನಂ ತತಃ ಕೃತ್ವಾ ಅಲಂಕಾರಾಸನೇ ನಯೇತ್
ಕಂಚುಕಾದ್ಯೈರಲಂಕೃತ್ಯ ಲಿಪ್ತಂ ಮೃಗಮದೇನ ವಾ ।

ಮೂಲಮೂರ್ತಿಂ ವಿಶೇಷೇಣ ಅಲಂಕಾರೈರಲಂಕೃತಮ್

ಮಂಡಪೇ ಸನ್ನಿವೇಶ್ಯಾಥ ಚತುಸ್ಥಾನಾರ್ಚನಂ ಚರೇತ್ ।

ಮಹಾಹವಿರ್ನಿವೇದ್ಯಾಥ ಅಪರಾಹ್ಣೇ ವಿಶೇಷತಃ

ದೀಪಾಧಿವಾಸನಂ ಕೃತ್ವಾ ದೇವಮಂಡಪಮಧ್ಯಮೇ ।

ಮಾರ್ಗತ್ರಯಂ ತತಃ ಕೃತ್ವಾ ಧಾನ್ಯರಾಶಿಂ ವಿನಿಕ್ಷಿಪೇತ್

ನವಾನಿ ಪಾತ್ರಾಣ್ಯಾದಾಯ ಗೋಘೃತೇನೈವ ಪೂರಯೇತ್ ॥

ಸೂತ್ರವರ್ತಿಂ ವಿನಿಕ್ಷಿಪ್ಯ ಮಧ್ಯೇ ಸಂಸ್ಥಾಪ್ಯ ದೇಶಿಕಃ

ತದ್ಬಾಹ್ಯೇ ಪರಿತಶ್ಚಾಷ್ಟೌ ಶರಾವಾನ್ ವಿನ್ಯಸೇತ್ ಕ್ರಮಾತ್ ॥

ಇಂದ್ರಾದೀಶಾನಪರ್ಯಂತಮಾಜ್ಯವರ್ತಿಸುಸಂಯುತಮ್

ದೀಪಪಾತ್ರಂ ಜ್ವಲಿತ್ವಾಥ ಪಾತ್ರವರ್ತಿಷು ಯೋಜಯೇತ್ ।

ಆರ್ಘ್ಯಗಂಧಾದಿಭಿಶ್ಚೈವ ಅರ್ಚಯೇದಗ್ನಿಮಂತ್ರತಃ

ಪೂರ್ವಾದ್ಯಷ್ಟಶರಾವೇಷು ಇಂದ್ರಮಂತ್ರಾದಿಕೈರ್ಯಜೇತ್ ।

ಸರ್ವವಾದ್ಯಾದಿಸಂಯುಕ್ತಂ ಕ್ಷ್ವೇಲನಾಭಿರಲಂಕೃತಮ್

ದೇಶಿಕಃ ಪಾತ್ರಮಾದಾಯ ವಿಷ್ಣುಹಸ್ತೇ ಪ್ರದರ್ಶಯೇತ್ ।

ಸಾಯಾಹ್ನೇ ಸಮನುಪ್ರಾಪ್ತೇ ದೀಪಾರೋಪಣಮಾಚರೇತ್

ದ್ವಾರೇ ದ್ವಾರೇ ಪ್ರತಿಷ್ಠಾಪ್ಯ ದೀಪದಂಡಾನ್ ವಿಶೇಷತಃ ।

ಕ್ರಮುಕಂ ನಾಲಿಕೇರಂಚ ತಾಲಂ ವೇಣುಂ ತಥೈವ ಚ

ಚಂಪಕಂದೇವವೃಕ್ಷಂಚ ವಕ್ರಕೋಟರವರ್ಜಿತಮ್ ।

ತಕ್ಷಯಿತ್ವಾ ಋಜುಂ ವಿಪ್ರ ಸ್ಥೂಪಿಮಾನಪ್ರಮಾಣತಃ

ತದರ್ಧಂ ದ್ವಾರಮಾನಂ ವಾ ಶತತಾಲಾಯತಂತು ವಾ ।

ಅಶೀತಿ ತಾಲಮಿಚ್ಛಂತಿ ಕೇಚಿತ್ತಸ್ಯಾರ್ಧಮೇವ ವಾ

ಪ್ರಕಾರಸ್ಯ ಬಹಿರ್ವಿಪ್ರ ಅಷ್ಟದಿಕ್ಷು ಸಮಂತತಃ ।

ದೀಪದಂಡಾನ್ ಪ್ರತಿಷ್ಠಾಪ್ಯ ತತ್ತದ್ದೀಪಂ ಪ್ರಕಾಶಯೇತ್
ಪಾತ್ರಸ್ಥಂ ಪೂವಖದಿಗ್ದಂಡೇ ಯೋಜಯೇದ್ವಾದ್ಯಸಂಯುತಮ್ ।
ಪುಣ್ಯಾಹಂ ವಾಚಯೇತ್ಪೂರ್ವೇ ತಾಂಸ್ತಾಂದಂಡಾನ್ ಪ್ರಪೂಜಯೇತ್
ಪ್ರಾಸಾದೇ ಗೋಪುರೇ ಚೈವ ಪ್ರಾಕಾರೇ ಮಂಡಪೇ ತಥಾ ।
ತೀರ್ಥದೇಶೇ ನವೋದ್ಯಾನೇ ಕೂಪದೇಶೇ ವಿಶೇಷತಃ
ಶ್ರಿಯಾದಿಮಂದಿರಾದ್ಯೇಷು ಪರಿವಾರಾಲಯೇಷು ಚ ।
ದೀಪಾರೋಪಂ ತತಃ ಕುರ್ಯಾದ್ದೇವದೇವಸು ಸನ್ನಿಧೌ
ಗೃಹೇ ಗೃಹೇ ತಥಾ ಕುರ್ಯಾತ್ ಗಮಯೇತ್ಸರ್ವವೀಥಿಕಾಃ ।
ಮಂಡಪಂ ಸಂಪ್ರವಿಶ್ಯಾಥ ಸಮಾರೋಪ್ಯ ಚ ವಿಷ್ಟರೇ
ನೃತ್ತಗೀತಾದಿಕಂ ಸರ್ವಂ ದರ್ಶಯಿತ್ವಾ ವಿಶೇಷತಃ ।
ಪುನಃ ಪೂಜಾಂ ತಥಾ ಕೃತ್ವಾ ಪೃಥುಕಾದಿ ನಿವೇದಯೇತ್
ಅಪೂಪಾದಿ ವಿಶೇಷೇಣ ದಾಪಯೇತ್ಸರ್ವಜಂತುಷು ।

ಇತಿ ಶ್ರೀಪಂಚರಾತ್ರೇ ಮಹೋಪನಿಷದಿ ಅನಿರುದ್ಧಸಂಹಿತಾಯಾಂ
ಜಯಂತೀಕೃತ್ತಿಕೋತ್ಸವವಿಧಾನನ್ನಾಮ ಪಂಚವಿಂಶೋಽಧ್ಯಾಯಃ ॥

* * * *

# ಪಂಚರಾತ್ರಾಗಮೋಕ್ತ ವನಭೋಜನ ಮಾಹಾತ್ಮ್ಯ

ಬ್ರಹ್ಮೋವಾಚ

ವನಭೋಜನ ಮಹಾತ್ಮ್ಯಂ ವದ ಪುರುಷೋತ್ತಮ ।
ಕಸ್ಮಿನ್ ಕಾಲೇ ಚ ಕರ್ತವ್ಯಂ ಕಿಮರ್ಥಂ ತತ್ರ ಭೋಜನಮ್ ।
ಕೋ ದೇವಃ ಕೋ ವಿಧಿಸ್ತಸ್ಯ ಕಿಂ ಫಲಂ ಬ್ರೂಹಿ ಕೇಶವ ॥1॥

ಬ್ರಹ್ಮ ನಿಂತೆಂದನು - ಪುರುಷೋತ್ತಮ! ವನಭೋಜನ ಮಹಿಮೆ ಹೇಳು. ಅದರ ಕಾಲ ಯಾವುದು? ಆ ಭೋಜನದ ಪ್ರಯೋಜನವೇನು? ದೇವತೆ ಯಾರು? ಮಾಡುವ ವಿಧಿ ಏನು? ಅದರ ಫಲವನ್ನು ಹೇಳು ಕೇಶವ.

ಹಂಸೋವಾಚ

ಜಪ ಹೋಮಾರ್ಚನಾಕಾಲೇ ಭೋಜನೇ ಪಿತೃತರ್ಪಣೇ ।
ಚಂಡಾಲಪತಿತಾನಾಂ ಚ ಶೂದ್ರಸೂತಕಿಭಾಷಣೇ ॥2॥

ಶ್ರವಣೇ ದರ್ಶನೇ ಚೈವ ಸ್ಪರ್ಶನೇನ ಚ ಯತ್ಕೃತಂ ।
ತತ್ಸರ್ವಂ ಪಾತಕಂ ಯಸ್ಮಾನ್ನಶ್ಯತೇ ವನಭೋಜನಾತ್ ॥3॥

ಹಂಸನೆಂದನು– ಜಪ, ಹೋಮ, ಅರ್ಚನ, ಭೋಜನ, ಪಿತೃತರ್ಪಣ ಕಾಲದಲ್ಲಿ ಚಂಡಾಲ, ಪತಿತ ಶೂದ್ರ , ಸೂತಕ ಬಂದವರೊಡನೆ ಸಂಭಾಷಣ, ಅದರ ಶ್ರವಣ, ಅದರ ದರ್ಶನ, ಸ್ಪರ್ಶಗಳಿಂದೊದಗಿದ ಪಾತಕದ ಪರಿಹಾರ ವನಭೋಜನದಿಂದ,

ಅದ್ಯಮಾನಂ ಚ ಯತ್ಸರ್ವಮನ್ನಮಿತ್ಯಭಿಧೀಯತೇ ।
ತದನ್ನಂ ದ್ವಿವಿಧಂ ಪ್ರೋಕಂ ಜನ್ಮಕಾಲವಿಶೇಷತಃ ।
ಉತ್ತರಾಯಣಜಂ ಚಾನ್ನಂ ದಕ್ಷಿಣಾಯನಜಂ ತಥಾ ॥4॥

ತಿನ್ನಲ್ಪಡುವುದೆಲ್ಲ ಅನ್ನವೆನಿಸುವುದು. ಅದೆರಡು ವಿಧ - ಬೆಳೆದ ಕಾಲವಿಶೇಷದ ಅನುಸಾರವಾಗಿ, ಉತ್ತರಾಯಣ ಜನ್ಯ ಅನ್ನ ಹಾಗೆ ದಕ್ಷಿಣಾಯನ ಜನ್ಯ ಎಂದು.

ಉತ್ತರಾಯಣಜಂ ಚಾನ್ನಂ ಶುದ್ಧಮಾಗ್ರಾಯಣೇಷ್ಟಿತಃ।
ದಕ್ಷಿಣಾಯಣಜಂ ಚಾನ್ನಂ ಕಾರ್ತಿಕೇ ವನಭೋಜನಾತ್।
ಶುದ್ಧಂ ಭವತಿ ತತ್ಸರ್ವಮಪವಿತ್ರಾನ್ನಭೋಜಿನಾಮ್ ॥5॥

ಉತ್ತರಾಯಣದಲ್ಲಿ ಬೆಳೆದ ಆಹಾರಗಳು ಆಗ್ರಾಯಣ ಇಷ್ಟಿಯಿಂದಲೂ, ದಕ್ಷಿಣಾಯನದಲ್ಲಿ ಬೆಳೆದ ಆಹಾರಗಳು ಕಾರ್ತಿಕದಲ್ಲಿ ವನಭೋಜನ (ಧಾತ್ರಿ ಹವನ) ದಿಂದ ಶುದ್ಧವಾಗುವುದು. ಅಪವಿತ್ರವಾದ ಆಹಾರ ತಿಂದವರ ಶುದ್ಧಿ ವನಭೋಜನದಿಂದಾಗುವುದು.

ಕ್ಷೀರಾಬ್ಧೌ ಶೇಷಶಯನೇ ಯದಾ ಶೇತೇ ಶ್ರಿಯಾ ಸಹ।
ಹರಿಸ್ತದಾ ಮಹಾನ್ಕಾಲಶ್ಚಾತುರ್ಮಾಸ್ಯಾಭಿದೋ ಭವೇತ್ ॥6॥

ಕ್ಷೀರಸಮುದ್ರದಲ್ಲಿ ಶೇಷಮಂಚದಲ್ಲಿ ಲಕ್ಷ್ಮೀಸಹಿತನಾಗಿ ಶ್ರೀಹರಿಯು ಮಲಗುವ ಕಾಲಕ್ಕೆ ಚಾತುರ್ಮಾಸ್ಯ ಎಂದು ಹೆಸರು.

ನಿದ್ರಾಸಕ್ತೇನ ಹರಿಣಾ ಯದ್ಯದಸ್ವೀಕೃತಂ ಭವೇತ್।
ಅಭಕ್ಷ್ಯಮಿತಿ ತತ್ಪ್ರಾಹುರ್ಮಹಾಂತಸ್ತತ್ವಕೋವಿದಾಃ ॥7॥

ಯೋಗನಿದ್ರಾಸಕ್ತನಾದ ಶ್ರೀಹರಿಯು ಯಾವುದನ್ನು ಸ್ವೀಕರಿಸುವುದಿಲ್ಲವೋ ಅದೆಲ್ಲ 'ಅಭೋಜ್ಯ' ಎಂದು ತತ್ವಜ್ಞರಾದ ಮಹನೀಯರು ಹೇಳುವರು.

ಯದಿ ಭುಂಜಿತ ವೈ ಪ್ರಾಜ್ಞಃ ಹ್ಯಭುಕ್ತಂ ಹರಿಣಾ ಚ ಯತ್।
ಚಾಪಲ್ಯಾದಕಿತೇ ಶಾಕೇ ಪ್ರಥಮೇ ಮಾಸಿ ಪದ್ಮಜ ॥
ಪ್ರಥಮೇ ಭಕ್ಷಿತಂ ಭೂಯೋ ಹೃದಿ ಶಲ್ಯಂ ಮಮಾರ್ಪಿತಮ್ ॥8॥

ಶ್ರೀಹರಿಯಿಂದ ಅಭುಕ್ತವಾದ ಶಾಕಗಳನ್ನು ಮೊದಲ ತಿಂಗಳಲ್ಲಿ ತಿಂದರೆ ಅಸ್ಥಿ (ಮೂಳೆ)ಗಳನ್ನು ತಿಂದಂತೆ, ಭಗವಂತನಿಗೆ ನಿವೇದಿಸಿದರೆ ಅವನ ಹೃದಯಕ್ಕೆ ಆಯುಧ ಪ್ರಹಾರ ಮಾಡಿದಂತೆ.

ದ್ವಿತೀಯೇ ಭಕ್ಷಿತೇ ದಧ್ನಿ ಗೋಮಾಂಸಭಕ್ಷಿತಂ ಭವೇತ್।
ಕ್ಷೀರೇ ಪೀತೇ ತೃತೀಯೇ ತು ಸುರಾಪೀ ಸ್ಯಾನ್ನ ಸಂಶಯಃ ॥9॥

ಚತುರ್ಥೇ ಮಾಸಿ ದ್ವಿದಳೇ ಭಕ್ಷಿತೇ ಕ್ರಿಮಿಭುಗ್ಭವೇತ್ ।
ತದ್ಭುಕ್ತಿದೋಷಶಾಂತ್ಯರ್ಥಂ ವನಭೋಜನಮಾಚರೇತ್ ॥10॥

ಎರಡನೇ ತಿಂಗಳಲ್ಲಿ ಮೊಸರು ತಿಂದರೆ ಗೋಮಾಂಸ ತಿಂದಂತೆ, ಮೂರನೇ ತಿಂಗಳಲ್ಲಿ ಹಾಲು ಕುಡಿದರೆ ಸುರಾಪಾನದಂತೆ, ನಾಲ್ಕನೇ ತಿಂಗಳಲ್ಲಿ ದ್ವಿದಳ ತಿಂದರೆ ಕ್ರಿಮಿ ತಿಂದಂತೆ. ಈ ಚಾತುರ್ಮಾಸ್ಯ ಕಾಲದಲ್ಲಿ ನಿಷಿದ್ಧ ಆಹಾರವನ್ನು ಸ್ವೀಕರಿಸಿದುದರ ದೋಷ ಪರಿಹಾರಕ್ಕೆ ಧಾತ್ರೀಹವನದ ವನಭೋಜನವನ್ನು ಮಾಡಬೇಕು.

ದರಿದ್ರೋ ಯದಿ ಯಾಚಿತ್ವಾ ಸದ್ಭ್ಯೋ ದ್ರವ್ಯಂ ಚರೇದ್ಬುಧಃ ।
ತೇನಾಪಿ ಫಲಮಾಪ್ನೋತಿ ಪೂರ್ಣಮೇವ ನ ಸಂಶಯಃ ॥11॥

ಶಕ್ತಃ ಕುರ್ಯಾತ್ಸ್ವಾರ್ಜಿತೇನ ದರಿದ್ರೋ ಯಾಚಿತೇನ ಹಿ ।
ಯಥಾಕಥಂಚಿತ್ ಕರ್ತವ್ಯಂ ಪಾಪಘ್ನಂ ವನಭೋಜನಮ್ ॥12॥

ದರಿದ್ರನಾಗಿದ್ದರೆ ಸಜ್ಜನರಿಂದ ಬೇಡಿ ಹಣ ಸಂಗ್ರಹಿಸಿ, ಸಮರ್ಥನಾಗಿದ್ದರೆ ತನ್ನ ಸಂಪಾದನೆಯ ಹಣದಿಂದಲೇ (ಧಾತ್ರೀ ಹವನ) ವನಭೋಜನವನ್ನು ಮಾಡಬೇಕು. ಬೇಡಿ ಬಂದ ಹಣದಿಂದ ಮಾಡಿದರೂ ಪೂರ್ಣಫಲ ಬರುತದೆ. ಸಂಶಯವಿಲ್ಲ. ಪಾಪ ಪರಿಹಾರಕವಾದ ವನಭೋಜನವನ್ನು ಹೇಗಾದರೂ ಮಾಡಬೇಕು.

ಕಾರ್ತಿಕೇ ಮಾಸಿ ಯೋ ಭಕ್ತ್ಯಾ ಮಾಸಮೇಕಂ ನಿರಂತರಮ್ ।
ಪುಣ್ಯತೀರ್ಥೇಷು ಚ ಸ್ನಾತ್ವಾ ಕೃತ್ವಾ ಪೂಜಾಂ ಕಥಾಂ ಹರೇಃ ॥13॥

ಶ್ರುತ್ವಾ ದತ್ವಾ ಚ ದಾನಾನಿ ಪುರಾಣೋಕ್ತಾನಿ ಸರ್ವಶ ।
ಅಭಕ್ಷ್ಯಾಣಿ ಚ ಶಾಕಾನಿ ತ್ಯಕ್ತ್ವಾ ನಿಯತಭೋಜನೈಃ ॥14॥

ಸ್ವಕೃತಾನಾಂ ಸ್ನಾನದಾನಪೂಜಾನಾಂ ಫಲಸಿದ್ಧಯೇ ।
ವನಭೋಜನಪೂಜಾದಿ ಕುರ್ಯಾತ್ಪಾಪವಿಶುದ್ಧಯೇ ॥15॥

ಕಾರ್ತಿಕ ಮಾಸದಲ್ಲಿ ಪ್ರತಿನಿತ್ಯವು ಭಕ್ತಿಯಿಂದ ಪುಣ್ಯತೀರ್ಥಗಳಲ್ಲಿ ಮಿಂದು ಶ್ರೀ ದಾಮೋದರನ ಪೂಜೆ ಮಾಡಿ, ಕಥಾಶ್ರವಣ ಮಾಡಿ, ಪುರಾಣದಲ್ಲಿ ತಿಳಿಸಿದ,

ದಾನಗಳನ್ನು ಕೊಟ್ಟು, ತಿನ್ನಬಾರದ್ದನ್ನು ತಿನ್ನದೆ, ತಾನು ಮಾಡಿದ ಸ್ನಾನ, ದಾನ, ಪೂಜಾದಿಗಳ ಸಾಫಲ್ಯಕ್ಕಾಗಿಯೂ, ಪಾಪ ಪರಿಹಾರಕ್ಕಾಗಿಯೂ ವನಭೋಜನವನ್ನು ಮಾಡಬೇಕು.

ದ್ವಾದಶ್ಯಾಂ ವಾ ಚತುರ್ದಶ್ಯಾಂ ಪೌರ್ಣಮಾಸ್ಯಾಮಥಾಪಿ ವಾ ।<br>
ಪಂಚಮ್ಯಾಂ ವಾ ವಿಶೇಷೇಣ ನಂದಾ ಭದ್ರಾ ಜಯಾದಿಷು ॥16॥

ಭಾನುಂ ಭೌಮಂ ಪರಿತ್ಯಜ್ಯ ಭೃಗು ವಾಸರಮೇವ ಚ ।<br>
ಅನ್ಯವಾರೇಷು ಕುರ್ವೀತ ಶುದ್ಧ್ಯರ್ಥಂ ವನಭೋಜನಮ್ ॥17॥

ದ್ವಾದಶಿಯಂದು ಅಥವಾ ಚತುರ್ದಶೀ, ಹುಣ್ಣಿಮೆ, ಪಂಚಮೀ, ವಿಶೇಷವಾಗಿ (ಪಾಡ್ಯ , ಬಿದಿಗೆ, ತದಿಗೆ ಮುಂತಾದ ನಂದಾಭದ್ರಾ ಜಯಾದಿ) ತಿಥಿಗಳಲ್ಲಿ ಭಾನು, ಮಂಗಳ, ಶುಕ್ರವಾರಗಳನ್ನು ಬಿಟ್ಟು ಬೇರೆ ವಾರಗಳಲ್ಲಿ ಶುದ್ಧಿಗಾಗಿ ವನಭೋಜನ ಮಾಡಬೇಕು.

ಧರ್ಮೇಣೇಜ್ಯಾಸಾಧನಾನಿ ಗ್ರಾಮಸ್ಥಜನಸಂವೃತಃ ।<br>
ಆಚಾರ್ಯಂ ದೇವತಾಂ ಚೈವ ಪುರಸ್ಕೃತ್ಯ ಸುಹೃಜ್ಜನೈಃ ॥18॥

ಸರ್ವೋಪಸ್ಕರ ಸಂಯುಕ್ತಃ ಸ್ನಾನಂ ಕೃತ್ವಾ ಸಮಾಹಿತಃ ।<br>
ಧಾತ್ರೀವನಂ ಗಮಿಷ್ಯಾಮಿ ವನಭೋಜನಸಿದ್ಧಯೇ ॥19॥

ನಿರ್ವಿಘ್ನಂ ಕುರು ಮೇ ದೇವ ದಾಮೋದರ ಜಗತ್ಪತೇ ।<br>
ಇತ್ಯುಕ್ತ್ವಾ ದೇವದೇವೇಶಂ ನತ್ವಾ ದಾಮೋದರಂ ಹರಿಮ್ ॥20॥

ಧರ್ಮಮಾರ್ಗದಲ್ಲಿ ಯಜ್ಞಸಾಧನ ಸಾಮಗ್ರಿಗಳನ್ನು ಸಂಪಾದಿಸಿ, ಗ್ರಾಮದ ಜನರೊಂದಿಗೆ ಸೇರಿ ಆಚಾರ್ಯರನ್ನು, ದೇವರನ್ನು ಮುಂದಿರಿಸಿ, ಬಂಧುಗಳಿಂದ ಒಡಗೂಡಿ ಎಲ್ಲ ಪೂಜಾಪರಿಕರಗಳೊಂದಿಗೆ ಭಗವಂತನಲ್ಲಿ ಮನವನ್ನು ನೆಲೆಗೊಳಿಸಿ 'ವನಭೋಜನಕ್ಕಾಗಿ ಧಾತ್ರೀ (ನೆಲ್ಲಿ) ವನವನ್ನು ಕುರಿತು ಹೊರಟಿದ್ದೇನೆ. ದಾಮೋದರ! ಜಗತ್ಪತೇ! ನಿರ್ವಿಘ್ನವಾಗಿ ನೆರವೇರಿಸು' ಎಂದು ಹೇಳಿ ಸರ್ವೋತ್ತಮನಾದ ದಾಮೊದರನನ್ನು ನಮಸ್ಕರಿಸಬೇಕು.

ಗ್ರಾಮಾದ್ಬಹಿಃ ಸ್ಥಿತಂ ರಮ್ಯಂ ವಿಶೇದ್ಧಾತ್ರೀವನಂ ಶುಭಮ್ ।
ಚೂತೈಃ ಪ್ರಿಯಾಳಪನಸೈಶ್ಚಂಪಕೈಶ್ಚಂದನೈಸ್ತಥಾ ॥21॥
ನ್ಯಗ್ರೋಧೈಸ್ತಿಂತ್ರಿಣೀವೃಕ್ಷೈಃ ನಾಗಪುನ್ನಾಗಬಿಲ್ವಕೈಃ ।
ಬಕುಲೈಸ್ತುಲಸೀವೃಕ್ಷೈಃ ನಾರಿಕೇಳೈಶ್ಚ ಪೂಗಕೈಃ ॥22॥
ಪಿಚುಮಂದೈರ್ಮಧೂಕೈಶ್ಚ ಪ್ಲಕ್ಷೋದುಂಬರ ವೇಣುಭಿಃ ।
ಕಪಿತ್ಥಾಶ್ವತ್ಥಜಂಬೀರಧಾತ್ರೀ ಪಂಕ್ತಿಸಮನ್ವಿತಮ್ ॥23॥
ಪದ್ಮಾಕರಸೋಭಿಶ್ಚ ನದೀನದವಿಭೂಷಿತಮ್ ।

ಗ್ರಾಮದ ಹೊರಗಿರುವ ರಮ್ಯವಾದ, ಮಾವು, ಪ್ರಿಯಾಳ, ಹಲಸು, ಸಂಪಿಗೆ, ಚಂದನ, ಆಲ, ಹುಣಸೇ, ನಾಗಪುನ್ನಾಗ, ಬಿಲ್ವ, ಬಕುಲ, ತುಲಸೀ, ತೆಂಗು, ಅಡಿಕೆ, ಪಿಚುಮಂದ, ಮಧೂಕ, ಪ್ಲಕ್ಷ, ಅತ್ತಿ, ಬಿದಿರು, ಕಪಿತ್ಥ, ಅರಳಿ, ನೇರಳೆ ನೆಲ್ಲಿ ವೃಕ್ಷಗಳಿಂದಲೂ ತಾವರೆಯ ಕೊಳಗಳು, ನದೀನದಗಳಿಂದಲೂ ಶೋಭಿಸುವ ವನವನ್ನು ಪ್ರವೇಶಿಸಬೇಕು.

ತಸ್ಮಿನ್ ಪುಣ್ಯವನೇ ರಮ್ಯೇ ಧಾತ್ರೀಮೂಲಂ ಮನೋಹರಮ್ ॥24॥
ದಾಮೋದರಸ್ಯ ಪೂಜಾರ್ಥಂ ಮಂಟಪಂ ಕಾರಯೇಚ್ಛುಭಮ್ ।
ದ್ವಾದಶಾಷ್ಟಚತುಸ್ತಂಭೈಶ್ಚತುರ್ದ್ವಾರೈರ್ವಿರಾಜಿತಮ್ ॥25॥
ವಿನಾತಮಿಕ್ಷುಕದಲೀ ನಾರಿಕೇಳೈಶ್ಚ ಶೋಭಿತಮ್ ।
ಪುಷ್ಪಮಾಲಾ ಚೂತ ಪತ್ರ ಮುಕ್ತಾಮಾಲಾ ವಿರಾಜಿತಮ್ ॥26॥

ಆ ಪುಣ್ಯಕವಾದ ವನದಲ್ಲಿ ನೆಲ್ಲಿಮರದ ಬುಡದಲ್ಲಿ ದಾಮೋದರನ ಪೂಜೆಗಾಗಿ ಮಂಟಪವನ್ನು ನಿರ್ಮಾಣ ಮಾಡಿಸಬೇಕು. ಹನ್ನೆರಡು ಅಥವಾ ಎಂಟು ಅಥವಾ ನಾಲ್ಕು ಕಂಬಗಳು, ನಾಲ್ಕು ದ್ವಾರಗಳು, ಮೇಲ್ಕಟ್ಟು, ಕಬ್ಬು, ಬಾಳೆ, ತೆಂಗಿನಕಾಯಿಗಳ ಅಲಂಕಾರ, ಹೂಮಾಲೆ, ಮಾವಿನೆಲೆ, ಮುತ್ತಿನ ಹಾರಗಳ ತೋರಣಗಳು ಸಿಂಗಾರದ ಮಂಟಪವನ್ನು ನಿರ್ಮಿಸಬೇಕು.

ತನ್ಮಧ್ಯೇ ವೇದಿಕಾಂ ಕುರ್ಯಾತ್ ಚತುರಸ್ರಂ ವಿಭೂಷಿತಾಮ್ ।
ಚಕ್ರಶಂಕಾಬ್ಜರೇಖಾಭಿಃ ನಾನಾಧಾತುವಿರಾಜಿತಮ್ ॥27॥

ತನ್ಮಧ್ಯೇ ಕಲ್ಪಯೇತ್ಪೀಠಂ ಸೋಪಾನತ್ರಯಸಂಯುತಮ್ ।
ವೈಕುಂಠಾನಂತಶ್ವೇತಾಖ್ಯಂ ವಿಚಿತ್ರಂ ಸುಮನೋಹರಮ್ ॥28॥

ಆಸ್ತೃತಂ ಕೌಷುವಸ್ತ್ರೇಣ ಸ್ವರ್ಣ ಪುಷ್ಪಯುತೇನ ಚ ।
ತತ್ರ ಸಂಸ್ಥಾಪಯೇದ್ದೇವಂ ದಾಮೋದರಸುನಾಮಕಮ್ ॥29॥

ಆ ಮಂಟಪದ ಮಧ್ಯೇ ಚೌಕಾಕಾರದ ವೇದಿಕೆಯನ್ನು ನಿರ್ಮಿಸಬೇಕು. ಚಕ್ರ, ಶಂಖ, ಬಣ್ಣದ ರಂಗವಲ್ಲಿಗಳ ಚಿತ್ತಾರವಿರಬೇಕು. ಆದರ ಮಧ್ಯದಲ್ಲಿ ವೈಕುಂಠ, ಆನಂತಾಸನ, ಶ್ವೇತದ್ವೀಪಗಳೆಂಬ ಹೆಸರಿನ ಮೂರು ಮೆಟ್ಟಿಲುಗಳುಳ್ಳ ಪೀಠವಿಡಬೇಕು. ಆದರ ಮೇಲೆ ರೇಷ್ಮೆ ವಸ್ತ್ರವನ್ನು ಹಾಸಬೇಕು. ಸುವರ್ಣ ಪುಷ್ಪವನ್ನಿರಿಸಿ ಅಲ್ಲಿ ದಾಮೋದರನನ್ನು ಸ್ಥಾಪಿಸಬೇಕು.

ಶ್ರೀಭೂಮಿಸಹಿತಂ ಶಾಂತಂ ಶಂಖಚಕ್ರಗದಾಧರಮ್ ।
ಕಿರೀಟಕುಂಡಲಾದ್ಯೈಶ್ಚ ದಿವ್ಯೈರಾಭರಣೈರ್ಯುತಮ್ ॥30॥

ವನಮಾಲಾವೈಜಯಂತೀ ಕೌಸ್ತುಭಾದಿಸುಭಾಷಿತಮ್ ।
ದಿವ್ಯಂ ಪೀತಾಂಬರಯುತಂ ಮಂದಸ್ಮಿತ ಮುಖಾಂಬುಜಮ್ ॥31॥

ಪೂಜಯೇದ್ವಿಧಿವದ್ಭಕ್ತ್ಯಾ ಷೋಡಶೈರುಪಚಾರಕೈಃ ।
ಶ್ರುಣುಯಾಚ್ಚ ಕಥಾಂ ದಿವ್ಯಾಂ ಹರಿಮಾಹಾತ್ಮ್ಯಶಂಸಿನೀಮ್ ॥32॥

ಶ್ರೀಭೂಸಹಿತನಾದ, ಶಾಂತನು, ಶಂಖಚಕ್ರ ಗದಾಧಾರಿಯಾದ, ಕಿರೀಟ ಕುಂಡಲಾದಿ ದಿವ್ಯಾಭರಣಗಳಿಂದ ಕೂಡಿದ, ವನಮಾಲೆ ವೈಜಯಂತೀ ಕೌಸ್ತುಭಾದಿಗಳಿಂದ ಅಲಂಕೃತನಾದ, ಪೀತಾಂಬರಧಾರಿಯಾದ ಮುಗುಳ್ನಗೆಯ ಮುಖಕಮಲದ ದಾಮೋದರನನ್ನು ವಿಧಿಗೆ ಅನುಸಾರವಾಗಿ ಷೋಡಶೋಪಚಾರ ಗಳಿಂದ ಪೂಜಿಸಬೇಕು. ಭಗವಂತನ ಮಹಿಮೆಯ ಕಥೆಯನ್ನು ಭಕ್ತಿಯಿಂದ ಕೇಳಬೇಕು.

ಪೂಜಾಕಾಲೇ ಚ ಪೂಜಾಂತೇ ಧಾತ್ರೀಹೋಮಂ ಸಮಾಚರೇತ್ ।
ಸ್ವಸ್ತಿವಾಚನಮಾದೌ ಹಿ ಹೋಮಂ ಕುರ್ಯಾತ್ತತಃ ಪರಮ್ ॥33॥

ಪೂಜಾಕಾಲದಲ್ಲಿ ಅಥವಾ ಪೂಜೆಯ ಕಾಲದಲ್ಲಿ ಧಾತ್ರೀ ಹೋಮವನ್ನು ಮಾಡಬೇಕು. ಮೊದಲು ಸ್ವಸ್ತಿವಾಚನ. ಬಳಿಕ ಹೋಮ.

ದೇವಸ್ಯ ಪಶ್ಚಿಮೇ ದೇಶೇ ಕಾರಯೇತ್ಕುಂಡಮಂಜಸಾ ।
ಮೇಖಲಾತ್ರಯಸಂಯುಕ್ತಂ ಪಿಪ್ಪಲಛದಭೂಷಿತಮ್ ॥34॥

ಹಸ್ತಮಾತ್ರಾಯುತಂ ಸಮ್ಯಕ್ ನಾನಾಧಾತುಸುಶೋಭಿತಮ್ ।
ತನ್ಮಧ್ಯೇಽಗ್ನಿಂ ಸಮಾಧಾಯ ಹೋಮಂ ಕುರ್ಯಾದ್ಯಥಾವಿಧಿ ॥35॥

ದೇವರಿಗೆ ಪಶ್ಚಿಮ ಭಾಗದಲ್ಲಿ ಯಜ್ಞಕುಂಡವನ್ನು ರಚಿಸಬೇಕು. ಮೂರು ಮೇಖಲೆಗಳು, ಪಿಪ್ಪಲದ ಆವರಣವುಳ್ಳ ಒಂದು ಮೊಳ ವಿಸ್ತಾರದ, ರಂಗವಲ್ಯಾದಿಗಳಿಂದ ಶೋಭಿತವಾದ ಆ ಕುಂಡದ ಮಧ್ಯದಲ್ಲಿ ಅಗ್ನಿಯನ್ನು ಸ್ಥಾಪಿಸಿ ವಿಧ್ಯುಕ್ತ ರೀತಿಯಿಂದ ಹೋಮಿಸಬೇಕು.

ಏಕವಿಂಶತಿಸಂಖ್ಯಾಕಾಃ ದೇವತಾಃ ಶ್ರೀಸ್ವರೂಪಿಣೀ ।
ಧಾತ್ರೀ ಶಾಂತಿಸ್ತಥಾ ಕಾಂತಿರ್ಮಾಯಾ ಪ್ರಕೃತಿರೇವ ಚ ॥36॥

ವಿಷ್ಣುಪತ್ನೀ ಮಹಾಲಕ್ಷ್ಮೀ ರಮಾ ಚ ಕಮಲಾ ತಥಾ ।
ಇಂದಿರಾ ಲೋಕಮಾತಾ ಚ ಕಲ್ಯಾಣೀ ಮಂಗಲಾ ತಥಾ ॥37॥

ಸಾವಿತ್ರೀ ಚ ಜಗದ್ಧಾತ್ರೀ ಗಾಯತ್ರೀ ಸುಧೃತಿಸ್ತಥಾ ।
ಅವ್ಯಕ್ತಾ ವಿಶ್ವರೂಪಾ ಚ ಕ್ಷೀರಾಬ್ಧಿತನಯಾ ತಥಾ ॥38॥

ಪ್ರಧಾನದೇವತಾ ಹ್ಯೇತಾ ರಕ್ಷಾಹೋಮಂ ತತಶ್ಚರೇತ್ ।
ತಸ್ಮಿನ್ನೇವ ಹಿ ಕುಂಡೇತು - ಏಭಿರ್ಮಂತ್ರೈಶ್ಚರೇದ್ಬುಧಃ ॥39॥

ಶ್ರೀ, ಧಾತ್ರೀ, ಶಾಂತಿ, ಕಾಂತಿ, ಮಾಯಾ, ಪ್ರಕೃತಿ, ವಿಷ್ಣುಪತ್ನೀ, ಮಹಾಲಕ್ಷ್ಮೀ, ರಮಾ, ಕಮಲಾ, ಇಂದಿರಾ, ಲೋಕಮಾತಾ, ಕಲ್ಯಾಣೀ, ಮಂಗಲಾ, ಸಾವಿತ್ರೀ, ಜಗದ್ಧಾತ್ರೀ, ಗಾಯತ್ರೀ, ಸುಧೃತಿ, ಅವ್ಯಕ್ತಾ, ವಿಶ್ವರೂಪಾ, ಕ್ಷೀರಾಬ್ಧಿತನಯಾ ಲಕ್ಷ್ಮೀದೇವಿಯ ಈ ಇಪ್ಪತ್ತೊಂದು ರೂಪಗಳು ಪ್ರಧಾನ ದೇವತೆಗಳು. ಇವರಿಗೆ

ನಾಮಮಂತ್ರಗಳಿಂದ ಆಹುತಿ ಕೊಟ್ಟು ಬಳಿಕ ರಕ್ಷಾ ಹೋಮವನ್ನು ಅದೇ ಕುಂಡದಲ್ಲಿ ಆಚರಿಸಬೇಕು.

'ಸಂಸೃಷ್ಟೇ' ತಿ ಚ ಮಂತ್ರೇಣ 'ಋಷಭಂ ಮೇ' ತಿ ಮಂತ್ರತಃ ।
ಅಪೂಪಗುಡ ಸೂಪಾಭ್ಯಾಂ ಸಂಯುತಂ ಜುಹುಯಾದ್ಧವಿಃ ।
ಧಾತ್ರೀ ಹೋಮೇ ಮಹಾಪ್ರಾಜ್ಞಾಃ ರಕ್ಷಾಹೋಮೇ ಚ ಪಾಯಸಮ್॥

'ಸಂಸೃಷ್ಟಂ ಧನಮುಭಯಂ.....' ಎಂಬ ಮಂತ್ರದಿಂದ ಮತ್ತು 'ಋಷಭಂ ಮಾ ಸಮಾನಾನಾಂ...' ಎಂಬ ಮಂತ್ರದಿಂದ ತೊವ್ವೆ, ಬೆಲ್ಲ (ಹೋಳಿಗೆ) ಅಪೂಪದಿಂದ ಕೂಡಿದ ಹವಿಸ್ಸಿನಿಂದ ಆಹುತಿ ಹಾಕಬೇಕು. ಧಾತ್ರಿಹೋಮದಲ್ಲಿ ರಕ್ಷಾ ಹೋಮದಲ್ಲಿ ಪಾಯಸವನ್ನು ಆಹುತಿ ಹಾಕಬೇಕು.

ಪೂರ್ಣಾಹುತಿಂ ತತೋ ಹುತ್ವಾ ಹೋಮಶೇಷಂ ಸಮಾಪಯೇತ್ ।

ಬಳಿಕ ಪೂರ್ಣಾಹುತಿಯನ್ನು ಹೋಮಿಸಿ ಹೋಮಶೇಷವನ್ನು ಮುಗಿಸಬೇಕು.

ಧಾತ್ರೀವೃಕ್ಷಸ್ಯ ಸರ್ವತ್ರ ವೇದಿಕಾಸಹಿತಸ್ಯ ಚ ।
ಸೂಪೇನ ಗುಡಯುಕ್ತೇನ ಬಲಿಂ ದಿಕ್ಷು ವಿನಿಕ್ಷಿಪೇತ್ ॥41॥

ವೇದಿಕಾ ಸಹಿತವಾದ ಧಾತ್ರೀ ವೃಕ್ಷದ ಸುತ್ತಲೂ ಬೆಲ್ಲದಿಂದ ಕೂಡಿದ ತೊವ್ವೆಯಿಂದ ಎಂಟು ದಿಕ್ಕುಗಳಲ್ಲಿ ಬಲಿಯನ್ನು ಹಾಕಬೇಕು.

ದೇವೀ ಧಾತ್ರೀ ನಮಸ್ತುಭ್ಯಂ ಗೃಹಾಣ ಬಲಿಮುತ್ತಮಮ್ ।
ಮಿಶ್ರಿತಂ ಗುಡಸೂಪಾಭ್ಯಾಂ ಸರ್ವಮಂಗಳದಾಯಿನಿ ॥42॥

ಪುತ್ರಾನ್ ದೇಹಿ ಮಹಾಪ್ರಾಜ್ಞೇ ಯಶೋ ದೇಹಿ ನಿರಂತರಮ್ ।
ಪ್ರಜ್ಞಾಂ ಮೇಧಾಂ ಚ ಸೌಭಾಗ್ಯಂ ವಿಷ್ಣುಭಕ್ತಿಂ ಚ ದೇಹಿ ಮೇ ।
ನಿರೋಗಂ ಕುರು ಮಾಂ ನಿತ್ಯಂ ನಿಷ್ಪಾಪಂ ಕುರು ಸರ್ವದಾ ॥43॥
ವಾಗ್ಮಿನಂ ಕುರು ಮಾಂ ದೇವಿ ಧನವಂತಂ ಚ ಮಾಂ ಕುರು ।
ಇತಿ ತಾಂ ಪ್ರಾರ್ಥಯೇದ್ದೇವೀಂ ಪ್ರಾಣಾದಿ ಪ್ರಕ್ಷಿಪೇದ್ಬಲಿಮ್ ॥44॥

ಧಾತ್ರಿ ದೇವಿಯೇ! ಉತ್ತಮವಾದ ಗುಡಸೂಪಗಳ ಮಿಶ್ರಣವಾದ ಬಲಿಯನ್ನು ಸ್ವೀಕರಿಸು. ಸರ್ವಮಂಗಲದಾಯಿಯೇ! ಪುತ್ರರನ್ನು ನೀಡು, ಯಶಸ್ಸು ಸಿಗಲಿ. ಪ್ರಜ್ಞೆ, ಮೇಧಾಶಕ್ತಿ, ಸೌಭಾಗ್ಯ, ವಿಷ್ಣುಭಕ್ತಿಯನ್ನು ಕೊಡು. ನನ್ನನ್ನು ರೋಗರಹಿತನನ್ನಾಗಿ, ಪಾಪರಹಿತನನ್ನಾಗಿ ಮಾಡು. ವಾಗ್ಮಿಯನ್ನಾಗಿ, ಸಿರಿವಂತನನ್ನಾಗಿ ಮಾಡು ಎಂದು ಪ್ರಾರ್ಥಿಸಬೇಕು. ಪೂರ್ವದಿಂದ ಆರಂಭಿಸಿ ಬಲಿ ನೀಡಬೇಕು.

ಬಲಿಪ್ರದಾನಕಾಲೇ ತು ಯೇ ಕುರ್ವಂತಿ ಪ್ರದಕ್ಷಿಣಂ ।
ತೇ ಯಾಂತಿ ವಿಷ್ಣುಸಾಲೋಕ್ಯಂ ಪಿತೃಭಿಃ ಸಾರ್ಧಮೇವ ಚ ॥45॥

ಬಲಿ ನೀಡುವ ಸಮಯದಲ್ಲಿ ಯಾರು ಪ್ರದಕ್ಷಿಣೆ ಮಾಡುವರೋ ಅವರು ತಮ್ಮ ಪಿತೃಗಳೊಂದಿಗೆ ವಿಷ್ಣುಸಾಲೋಕ್ಯವನ್ನು ಹೊಂದುವರು.

ಧಾತ್ರೀ ವೃಕ್ಷಸ್ಯ ಮೂಲಸ್ಥಂ ಮಂದಸ್ಮಿತ್ರರಮಾಪತಿಮ್ ।
ತೇ ಯಾಂತಿ ವಿಷ್ಣುಸಾಯುಜ್ಯಂ ಯೇ ಪಶ್ಯಂತೀಹ ಚಕ್ಷುಷಾ ॥46॥

ನೆಲ್ಲಿಮರದ ಬುಡದಲ್ಲಿ ನೆಲೆಸಿರುವ ಮುಗುಳ್ನಗೆಯ ರಮಾಪತಿಯನ್ನು ಯಾರು ನೋಡುವರೋ ಅವರು ವಿಷ್ಣುಸಾಯುಜ್ಯವನ್ನು ಹೊಂದುವರು.

ಪಲ್ಲವೈಃ ಕದಲೀಸ್ತಂಭೈಸ್ತೋರಣೈಃ ಪೂಗಪೋತಕೈಃ ।
ಯೇ ಕುರ್ವಂತಿ ಮಹಾಭಾಗ ತೈಃ ಪ್ರಾಪ್ತಂ ಮಮ ಮಂದಿರಮ್ ॥47॥

ಯಾರು ಬಾಳೆಕಂಬ, ಅಡಿಕೆಯ ಸಿಂಗಾರ, ತಳಿರುಗಳಿಂದ ಮಂಟಪವನ್ನು ಅಲಂಕರಿಸುವರೋ ಅವರು ನನ್ನ ಮನೆಗೆ ಬರುವರು.

ಯೇ ಕುರ್ವಂತಿ ಮಹಾಭಾಗ ಹರೇಃ ಸಂದರ್ಶನಂ ತಥಾ ।
ತೇಷಾಂ ವಿಷ್ಣುಃ ಪ್ರಸನ್ನಾತ್ಮಾ ದದಾತಿ ವಿಮಲಾಂ ಮತಿಮ್ ॥48॥

ಶ್ರೀ ದಾಮೋದರರ ದರ್ಶನ ಮಾಡಿದರೆ ಪ್ರಸನ್ನನಾಗಿ ನಿರ್ಮಲಮತಿಯನ್ನು ಕರುಣಿಸುವನು.

ಯೇ ಕುರ್ವಂತಿ ಮಹಾಪೂಜಾಂ ಕಮಲಾವಲ್ಲಭಸ್ಯ ಚ ।
ಮಹಿಮಾನಂ ತು ಸಂಪ್ರಾಪ್ಯ ಮೋದಂತೇ ಪಿತೃಭಿಃ ಸಹ ॥49॥

ರಮಾಪತಿಯ ಮಹಾಪೂಜೆಯನ್ನು ಮಾಡಿದವನು ಪಿತೃಗಳೊಂದಿಗೆ ಮಹಿಮೆಯನ್ನು ಹೊಂದುವನು.

ಯೇ ಕುರ್ವಂತಿ ಮಹಾಭಾಗ ಪೂಜನಂ ಪರಮಾತ್ಮನಃ ।
ಧಾತ್ರೀಛಾಯಾಂ ಸಮಾಶ್ರಿತ್ಯ ತೇಷಾಂ ವಿಷ್ಣುಃ ಪ್ರಸೀದತಿ ॥50॥

ನೆಲ್ಲಿಯ ನೆರಳಲ್ಲಿ ದಾಮೋದರನ ಪೂಜೆ ಮಾಡಿದರೆ ವಿಷ್ಣು ಅವರಿಗೆ ಪ್ರಸನ್ನನಾಗುವನು.

ಧಾತ್ರೀಫಲಕೃತಾಂ ಮಾಲಾ ಸ್ಕಂಧೇ ಧೃತ್ವಾ ಸುಕೋಮಲಾಮ್ ।
ಪೂಜಯಂತಿ ಜಗನ್ನಾಥಂ ತೇಷಾಮಿಷ್ಟಪ್ರದಃ ಸ ಹಿ ॥51॥

ನೆಲ್ಲಿಯ ಫಲದ ಮಾಲೆಯನ್ನು ಕುತ್ತಿಗೆಯಲ್ಲಿ ಧರಿಸಿ ಶ್ರೀಹರಿಯನ್ನು ಪೂಜಿಸಿದರೆ ಅವರಿಗೆ ಶ್ರೀಹರಿಯು ಇಷ್ಟಪ್ರದನಾಗುವನು.

ಯೇ ವೈ ಪುರುಷಶಾರ್ದೂಲ ವನೇಷು ವಿವಿಧೇಷು ಚ ।
ಧಾತ್ರೀತರುತಲೇ ದೇವಂ ಪೂಜಯಂತಿ ಮಮ ಪ್ರಿಯಃ ॥52॥

ಜೀವೋತ್ತಮನೇ! ನಾನಾ ವನಗಳಲ್ಲಿ ನೆಲ್ಲಿಯ ಬುಡದಲ್ಲಿ ಯಾರು ನನ್ನನ್ನು ಪೂಜೆ ಮಾಡುವರೋ ಅವರು ನನಗೆ ಪ್ರಿಯರು.

ಕಾರ್ತೀಕೇ ವೈಷ್ಣವೋ ಲೋಕೋ ಧಾತ್ರೀಛಾಯಾಂ ಗಮಿಷ್ಯತಿ ।
ತತ್ರ ತ್ವಾಯಾಂತಿ ಬ್ರಹ್ಮಾದ್ಯಾಃ ಹೃಷ್ಟಾಸ್ಸರ್ವಾರ್ಥದಾಯಿನಃ ॥53॥
ಧಾತ್ರೀವನಂ ಸಮಾಯಾಂತಂ ದೃಷ್ಟ್ವಾ ವಿಬುಧನಾಯಕಾಃ ।
ತದ್ವಂಶ್ಯಾನ್ನರಕಾಚ್ಛೀಘ್ರಂ ನಯಂತಿ ಸ್ವಗೃಹಾಂಗಣಮ್ ॥54॥

ಕಾರ್ತೀಕ ಮಾಸದಲ್ಲಿ ವೈಷ್ಣವ ನೆಲ್ಲಿಯ ನೆರಳಿಗೆ ಹೋದರೆ ಸರ್ವಾರ್ಥ ಪ್ರದರಾದಿ ಬ್ರಹ್ಮಾದಿ ದೇವತೆಗಳು ಹೃಷ್ಟರಾಗಿ ಅಲ್ಲಿಗೆ ಹೋಗುವರು. ಧಾತ್ರೀವನಕ್ಕೆ

ಬಂದ ಸಜ್ಜನನನ್ನು ಕಂಡು ದೇವತಾ ಶ್ರೇಷ್ಠರು ಕೂಡಲೇ ಅವರ ವಂಶದವರನ್ನೆಲ್ಲ ನರಕದಿಂದ ಉದ್ಧರಿಸಿ ತಮ್ಮ ಮನೆಯಂಗಳಕ್ಕೆ ಕರೆದೊಯ್ದರು.

ಕಾರ್ತಿಕೇ ಮಾಸಿ ಯೇ ಮರ್ತ್ಯಾಃ ಸ್ಕಂಧೇ ಧೃತ್ವಾ ವಿಭುಂ ಹರಿಮ್ ।
ಧಾತ್ರೀವನಂ ಗಮಿಷ್ಯಂತಿ ತತ್ರೈವ ತು ಹರೇಃ ಪದಮ್ ॥55॥

ಕಾರ್ತೀಕ ಮಾಸದಲ್ಲಿ ಯಾರು ಭಗವಂತನನ್ನು ಭುಜದಲ್ಲಿ ಹೊತ್ತು ಧಾತ್ರೀವನಕ್ಕೆ ಹೋಗುವರೋ ಅವರು ಶ್ರೀಹರಿಯ ಸ್ಥಾನವನ್ನು ಸೇರುವರು.

ಯೋಗಿನಾಂ ಹೃದೇ ಯದ್ವದ್ಯಥಾ ಸೂರ್ಯೇ ಹರಿಃ ಸ್ವಯಂ ।
ತಥಾ ಧಾತ್ರೀತರೌಚೈವ ಹರಿಸ್ತಿಷ್ಠತಿ ಕಾರ್ತಿಕೇ ॥56॥

ಯೋಗಿಗಳ ಹೃದಯದಲ್ಲಿ, ಸೂರ್ಯಮಂಡಲದಲ್ಲಿ ಹೇಗೆ ಹರಿ ಸ್ವಯಂ ಸನ್ನಿಹಿತನಾಗಿರುವನೋ ಹಾಗೆಯೇ ಧಾತ್ರಿ (ನೆಲ್ಲಿ) ವೃಕ್ಷದಲ್ಲಿಯೂ ಕಾರ್ತೀಕ ಮಾಸದಲ್ಲಿ ಶ್ರೀಹರಿಯು ನೆಲೆಸಿರುವನು.

ಧಾತ್ರೀವನಂ ಸಮಾಶ್ರಿತ್ಯ ಪೂಜಯೇತ್ಪುರುಷೋತ್ತಮಮ್ ।
ತಂ ದಾಮೋದರ ನಾಮಾನಂ ಅರ್ಘ್ಯಪಾದ್ಯವಿಧಾನತಃ ॥57॥

ಧಾತ್ರೀವನ! ನಮಸ್ತೇಽಸ್ತು ಧಾತ್ರಿಛಾಯಾಧಿವಾಸಿನೇ ।
ಧಾತ್ರೀಫಲಕೃತಾಹಾರೋ ನರೋ ಭವತಿ ಮುಕ್ತಿಭಾಕ್ ॥58॥

ಧಾತ್ರೀವನದಲ್ಲಿ ದಾಮೋದರನನ್ನು ಪೂಜಿಸಿ, ನನ್ನನ್ನು ಕಾಪಾಡೆಂದು ಪ್ರಾರ್ಥಿಸಿ, ಧಾತ್ರೀ ಫಲವನ್ನು ಸ್ವೀಕರಿಸಿದ ನರನು ಪಾಪದಿಂದ ಬಿಡುಗಡೆಗೊಳ್ಳುವನು.

ವೈಶ್ವದೇವಂ ತತಃ ಕೃತ್ವಾ ಪೂಜಯೇದನ್ಯದೇವತಾಃ ।

ಬಳಿಕ ವೈಶ್ವದೇವವನ್ನು ಮಾಡಿ ಇತರ ಪರಿವಾರ ದೇವತೆಗಳನ್ನು ಪೂಜಿಸಬೇಕು.

ಛಾಯಯಾ ಫಲಪುಷ್ಪಾದ್ಯೈಃ ಪ್ರಾಣಿನಾಮುಪಕಾರಿಣಿ ।
ಬಲಿಂ ಗೃಹೀತ್ವಾ ಮುದ್ಧತ್ತಂ ರಕ್ಷ ಮಾಂ ವನದೇವತೇ ॥59॥

ನೆರಳು, ಹಣ್ಣು-ಹೂಗಳಿಂದ ಪ್ರಾಣಿಗಳಿಗೆ ಉಪಕಾರಿಯಾದ ವನದೇವತೆಯೇ, ನನ್ನ ಪೂಜೆಯನ್ನು ಸ್ವೀಕರಿಸಿ ನನ್ನನ್ನು ರಕ್ಷಿಸು.

ಗಂಧಾಕ್ಷತಾನ್ ತಥಾ ದತ್ವಾ ವಿಪ್ರೇಭ್ಯಃ ಪದ್ಮಸಂಭವ ।
ಬ್ರಾಹ್ಮಣಾನ್ ಭೋಜಯೇತ್ಪಶ್ಚಾತ್ ಸ್ವಯಂ ಭುಂಜೀತ ಬಂಧುಭಿಃ ॥

ಬ್ರಾಹ್ಮಣರಿಗೆ ಗಂಧಾಕ್ಷತೆಯನ್ನು ಕೊಟ್ಟು ಭೋಜನ ಮಾಡಿಸಿ ಬಂಧುಗಳಿಂದ ಕೂಡಿಕೊಂಡು ತಾನು ಭೋಜನ ಮಾಡಬೇಕು.

ದಾಮೋದರಪ್ರಸಾದೇನ ಜ್ಞಾನೀ ಭೂತ್ವಾ ಪರಂ ಪದಮ್ ।
ಗತ್ವಾ ಚ ಮೋದತೇ ತತ್ರ ಭವಬಂಧವಿವರ್ಜಿತಃ ॥60॥

ದಾಮೋದರನ ಅನುಗ್ರಹದಿಂದ ತತ್ವಜ್ಞಾನಿಯಾಗಿ ಸಂಸಾರದ ಬಿಡುಗಡೆ ಹೊಂದಿ ಭಗವಂತನ ಲೋಕವನ್ನು ಹೊಂದಿ ಸುಖಪಡುವನು.

॥ ಇತಿ ಶ್ರೀಪಂಚರಾತ್ರಾಗಮೇ ಭರದ್ವಾಜಸಂಹಿತಾಯಾಂ
ಕಾರ್ತೀಕಮಾಸಮಾಹಾತ್ಮ್ಯೇ ವನಭೋಜನಮಾಹಾತ್ಮ್ಯಂ ನಾಮ
ಚತುರ್ದಶೋಽಧ್ಯಾಯಃ ॥

* * * * *

# ಅಡುಗೆಗಳು

* 2 ಕೋಸಂಬರಿಗಳು
* 2 ಪಲ್ಯಗಳು
* ಚಟ್ನಿಗಳು
* ಗೊಜ್ಜುಗಳು
* ಇಡ್ಲಿ
* ಗೋಡಂಬಿ ಪಾಯಸ
* ಸಕ್ಕರೆ ಹೋಳಿಗೆ
* ಬೂದುಗುಂಬಳ ಹಲ್ವ
* ಬೇಸನ್ ಉಂಡೆ
* ಬಿಸಿಬೇಳೆಬಾತ್
* ಬಾದಾಮಿ ಹಾಲು
* ರಸಾಯನಗಳು

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ಉತ್ಥಾನದ್ವಾದಶಿ ಪೂಜೆ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ
ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ
ಶ್ರೀಲಕ್ಷ್ಮೀಹಯಗ್ರೀವದೇವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ



ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ)

ಗಿರಿನಗರ, ಬೆಂಗಳೂರು - 560 085

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶನೀ

# ಗಣೇಶ ಚತುರ್ಥೀ

ಭಾದ್ರಪದ || ಶುದ್ಧ || ಚತುರ್ಥೀ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಗಣೇಶಚತುರ್ಥೀ

ಭಾದ್ರಪದ ॥ ಶುಕ್ಲಪಕ್ಷ ॥ ಚತುರ್ಥೀ

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ,

ಬೆಂಗಳೂರು.

ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),

ಗಿರಿನಗರ, ಬೆಂಗಳೂರು-೮೫

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶನೀ

# ಗಣೇಶ ಚತುರ್ಥೀ

ಭಾದ್ರಪದ || ಶುದ್ಧ || ಚತುರ್ಥೀ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

**ಗಣೇಶಚತುರ್ಥೀ** ಶಾಲಿವಾಹನ ಶಕೆ ೧೯೪೨ ಶಾರ್ವರಿ॥ ಶ್ರಾವಣ ॥ ಶುದ್ಧ ॥ ಪೂರ್ಣಿಮೆ (ದಿನಾಂಕ:೩-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥಶ್ರೀಪಾದಂಗಳವರ ಕರಕಮಲಗಳಿಂದ ಭಾರತೀರಮಣಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವ-ದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು : ೧೬೮



ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಸುಬ್ಬಣ್ಣ ಕೆಂಪದಾಳಿಹಳ್ಳಿ,
ದೂರವಾಣಿ : 9141311280

ಮುದ್ರಣ : ಮುಕ್ತಿಪಥ ಮುದ್ರಣಾಲಯ,
ಬೆಂಗಳೂರು.



ಹರಿಭಕ್ತರಾದ ದಿ || ಶ್ರೀ ಪರಿಗಿ ಭೀಮಾಚಾರ್ ಹಾಗೂ ದಿ|| ಶ್ರೀಮತಿ ಪರಿಗಿ ಶೇಷಮ್ಮ

ಶ್ರೀ ಪಿ.ಜಿ. ನರಸಿಂಹಮೂರ್ತಿ ಮತ್ತು ಶ್ರೀಮತಿ ಶಕುಂತಲಾ, ಹಿಂದೂಪುರ ಇವರು ತಮ್ಮ ದೊಡ್ಡಪ್ಪ ಮತ್ತು ದೊಡ್ಡಮ್ಮನವರಾದ ದಿ || ಶ್ರೀ ಪರಿಗಿ ಭೀಮಾಚಾರ್ ಹಾಗೂ ದಿ|| ಶ್ರೀಮತಿ ಪರಿಗಿ ಶೇಷಮ್ಮ ಇವರುಗಳ ಸ್ಮರಣಾರ್ಥ ಈ ಕೃತಿಯ ಸೇವೆಯನ್ನು ಸಲ್ಲಿಸಿರುತ್ತಾರೆ.

ಗಣೇಶಚತುರ್ಥಿಯ ದಿವಸ ''ಮಹಾಗಣಪತಯೇ ನಮಃ'' ಎಂಬ ಮಂತ್ರವನ್ನು ನಿರಂತರ ಮನದಲ್ಲಿ ಜಪಿಸುತ್ತಿರಬೇಕು. ಹರಿಕಥಾಮೃತಸಾರದ ವಿಘ್ನೇಶ್ವರಸಂಧಿಯನ್ನು ೨೧ ಬಾರಿ ಪಠಿಸಬೇಕು.

ಪುರುಷರು 'ಕ್ಷಿಪ್ರಪ್ರಸಾದ'ಮಂತ್ರವನ್ನು ೮,೦೦೦ ಜಪಿಸಿ ಹೋಮ ಮಾಡಬೇಕು. ಪ್ರಾತಃಕಾಲದಲ್ಲಿ ಎದ್ದ ಕೂಡಲೇ ಮಹಾಗಣಪತಿಯ ಸ್ವರೂಪವನ್ನು ಆಪಾದಮೌಲಿಪರ್ಯಂತವಾಗಿ ಧ್ಯಾನಮಾಡಿ ಗಣೇಶಚತುರ್ಥಿಯ ಆಚರಣೆಯ ಸಂಕಲ್ಪವನ್ನು ಮರೆಯದೇ ಮಾಡಬೇಕು. ಮಲಗುವಾಗ ಸಕಲ ಸತ್ಕರ್ಮಗಳನ್ನು ಶ್ರೀಕೃಷ್ಣಾರ್ಪಣ ಎನ್ನಬೇಕು.

# ವಿಷಯಾನುಕ್ರಮಣಿಕೆ

# ಮುನ್ನುಡಿ

ಉದ್ದೇಶಿತಕಾರ್ಯಗಳು ನೆರವೇರದೇ ಇದ್ದಾಗ, ನಡೆಯುತ್ತಿರುವ ಕಾರ್ಯಗಳಿಗೆ ವಿಘ್ನವು ಎದುರಾದಾಗ ಅನಿರೀಕ್ಷಿತ ಅಪಾಯಗಳ ಭಯವುಂಟಾದಾಗ, ಮಂದಗತಿಯ ಕಾರ್ಯವು ಶೀಘ್ರದಲ್ಲಿ ಮುಕ್ತಾಯವಾಗಬೇಕೆಂದಾಗ, ಜಾತಕದಲ್ಲಿ ಕೇತುಗ್ರಹದಿಂದ ಉಂಟಾಗುವ ದೋಷಗಳಿಗೆ ಪರಿಹಾರದ ಅಪೇಕ್ಷೆ ಇದ್ದಾಗ, ಸತ್ಕೀರ್ತಿ ಸತ್ಸಂಪತ್ತುಗಳ ಬಯಕೆ ಉಂಟಾದಾಗ ಗಣೇಶನನ್ನೇ ಶರಣೆನ್ನಬೇಕು. ಗಣೇಶನನ್ನೇ ಆರಾಧನೆ ಮಾಡಬೇಕು. ವರ್ಷದಲ್ಲೊಮ್ಮೆ ಬರುವ ಗಣೇಶಚತುರ್ಥಿಯನ್ನಾದರೂ ಸಂಪೂರ್ಣ ಪ್ರಯತ್ನದಿಂದ ಭಕ್ತಿಶ್ರದ್ಧಾಪೂರ್ವಕವಾಗಿ ಆಚರಿಸಬೇಕು. ಅದಕ್ಕಾಗಿ ಈ ಕಿರುಹೊತ್ತಿಗೆಯನ್ನು ಸಿದ್ಧಪಡಿಸಲಾಗಿದೆ.

ಗಣೇಶವ್ರತದ ಪೂಜೆಯೂ ಸೇರಿದಂತೆ ಪ್ರತಿಯೊಂದು ಧಾರ್ಮಿಕ-ಪೂಜೆಗಳನ್ನೂ ಶಾಸ್ತ್ರದಲ್ಲಿ ವಿಧಿಸಿರುವ ನಿಯಮಗಳನ್ವಯ ಮಾಡಿದಾಗ ಮಾತ್ರವೇ ಪ್ರೇಯಸ್ಸು-ಶ್ರೇಯಸ್ಸು ಉಂಟಾಗುವುದು. ಇಲ್ಲವಾದಲ್ಲಿ ಇಹಲೋಕದಲ್ಲಾಗಲೀ, ಪರಲೋಕದಲ್ಲಾಗಲೀ ಸುಖವಿಲ್ಲ. ಇಂದಿನ ಸಮಾಜದಲ್ಲಿ ಪೂಜಿಸುವವರ ಸಂಖ್ಯೆ ಬೆಳೆಯುತ್ತಲೇ ಇದೆ. ಮನಬಂದಂತೆ ಮೂರ್ತಿ ಮಾಡಿ, ತಲೆಗೆ ತೋಚಿದಂತೆ ಅಲಂಕರಿಸಿ, ಪವಿತ್ರ ಮಂತ್ರಗಳಿಲ್ಲದೆಯೇ ಮಾಡುವ ಪೂಜೆಯಿಂದ ದೇಶವಿಪ್ಲವವಾಗುತ್ತದೆ.

ಈ ಕೃತಿಯಲ್ಲಿ ತನಗೂ, ತನ್ನವರಿಗೂ, ಎಲ್ಲರಿಗೂ ಹಿತವಾಗುವಂತೆ ಶಾಸ್ತ್ರಸಮ್ಮತ-ಪೂಜೆಯನ್ನು ಮಾಡುವ ವಿಧ-ವಿಧಾನಗಳನ್ನು ಎಚ್ಚರಿಕೆಯಿಂದ ನಿರೂಪಿಸಲಾಗಿದೆ.

ಗಣಪತಿಯ ಪೂಜೆಯನ್ನು ಭಕ್ತಿಯಿಂದ ಮಾಡುವುದಕ್ಕಾಗಿ ಗಣಪತಿಯ ಚರಿತ್ರೆ, ಗಣಪತಿಯ ಮಹಿಮೆಗಳನ್ನು ಈ ಕಿರುಹೊತ್ತಿಗೆಯಲ್ಲಿ ನೀಡಲಾಗಿದೆ. ಪೂಜೆಯನ್ನು

ಆಚರಿಸುವ ಮೊದಲು ಪ್ರತಿಯೊಬ್ಬರೂ ಕೂಡ ಅವನ ಮಹಿಮೆ ಮತ್ತು ಚರಿತ್ರೆಗಳನ್ನು ಓದಬೇಕು. ಪೂಜೆಯು ಮುಗಿದ ಮೇಲೆ ಅವನ ಪ್ರೀತ್ಯರ್ಥವಾಗಿ ಶ್ರೀಕೃಷ್ಣಪರಮಾತ್ಮನ ಸ್ಯಮಂತಕೋಪಾಖ್ಯಾನವನ್ನು ಪಠಿಸಬೇಕು.

ವ್ರತರಾಜ, ಚತುರ್ವರ್ಗಚಿಂತಾಮಣಿ, ಧರ್ಮಶಾಸ್ತ್ರದ ಇತಿಹಾಸ ಮೊದಲಾದ ಪುಸ್ತಕಗಳ ಆಧಾರದಲ್ಲಿ ಅನೇಕ ಸಂಪ್ರದಾಯಗಳ ಮಾಹಿತಿಯನ್ನು ಸಂಗ್ರಹಿಸಿ ಅನೇಕ ಪುರಾಣಗಳನ್ನು ಪರಿಶೀಲನೆ ಮಾಡಿ ಈ ಪುಸ್ತಕವನ್ನು ಸಿದ್ಧಗೊಳಿಸಲಾಗಿದೆ. ಪ್ರತಿಯೊಬ್ಬರೂ ಇದರ ಸದುಪಯೋಗವನ್ನು ಪಡೆದಕೊಂಡು ಗಣಪತಿಯ ವಿಶೇಷ ಅನುಗ್ರಹಕ್ಕೆ ಪಾತ್ರರಾಗಿ ಧನ್ಯರಾಗೋಣ.

ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ಹಿಂದೂಪುರ ನಗರವಾಸಿ ಶ್ರೀ ಪಿ.ಜಿ. ನರಸಿಂಹಮೂರ್ತಿ ಮತ್ತು ಶ್ರೀಮತಿ ಶಕುಂತಲಾ ದಂಪತಿಗಳಿಗೆ ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ-ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಇವರ ದೊಡ್ಡಪ್ಪ ಮತ್ತು ದೊಡ್ಡಮ್ಮನವರಿಗೆ ಈ ಜ್ಞಾನಯಜ್ಞದ ಪುಣ್ಯರಾಶಿಯು ತಲುಪಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ.

# ಪೂಜೆಗೆ ಬೇಕಾಗುವ ಸಾಮಗ್ರಿಗಳು

* ಪಂಚಪಾತ್ರೆ, ಉದ್ಧರಣೆ, ಅರ್ಘ್ಯಪಾತ್ರೆ, ಕಲಶ, ಹೊಸವಸ್ತ್ರ, ಮಣೆ,
* ಹಾಲು ಮೊಸರು, ತುಪ್ಪ, ಜೇನುತುಪ್ಪ, ಬೆಲ್ಲ, ಎಳನೀರು,
* ಕುಂಕುಮದ ಎರಡು ಗೆಜ್ಜೆವಸ್ತ್ರ, ಅರಿಶಿನ ಕುಂಕುಮ, ಮಂತ್ರಾಕ್ಷತೆ.
* ಭಗವಂತನಿಗೆ ಸಮರ್ಪಿಸಿದ ಎರಡು ಯಜ್ಞೋಪವೀತ, ಗಂಧ, ಅಕ್ಷತೆ, ಹೂವು ಮೊದಲಾದ ಹರಿನಿರ್ಮಾಲ್ಯಗಳು. ಭಗವಂತನಿಗೆ ಅರ್ಪಿತವಾದ ಎಲ್ಲ ಬಗೆಯ ಹೂವುಗಳು, ಎಲ್ಲ ಬಗೆಯ ಪತ್ರೆಗಳು.
* ಕರ್ಪೂರ, ಮಂಗಳಾರತಿಯ ಬತ್ತಿಗಳು, ಮಂಗಳಾರತಿತಟ್ಟೆ, ವೀಳ್ಯದೆಲೆ, ಅಡಿಕೆ, ಹೂಮಾಲೆಗಳು, ಹಣ್ಣುಗಳು, ಬಾಳೆ ಎಲೆ.
* ದೀಪದ ಕಂಬಗಳು, ತೆಂಗಿನ ಕಾಯಿ, ಬಾಳೆ ಹಣ್ಣು, ಖರ್ಜೂರ, ವಾಯನ ದಾನಕ್ಕೆ ಉಪಯುಕ್ತವಾದ ಎಲ್ಲಾ ಸಾಮಗ್ರಿಗಳು.
* ೨೧ ಗರಿಕೆ.
* ೨೧ ಮೋದಕ, ೨೧ ಕಡುಬು, ಪಂಚಭಕ್ಷ್ಯ ಪರಮಾನ್ನ.

* * * * *

## ಗಣಪತಿಪೂಜೆಗೆ ಸಿದ್ಧತೆಗಳು

೧. ಗಣಪತಿ ಪೂಜೆಯಿಂದ ಎಲ್ಲಾ ವಿಘ್ನಗಳೂ ಪರಿಹಾರವಾಗುತ್ತವೆ. ಆದ್ದರಿಂದ ಬಹಳ ಶ್ರದ್ಧೆಯಿಂದ ಯಥಾಶಕ್ತಿ ವೈಭವೋಪೇತವಾಗಿ ಗಣಪತಿಯ ಪೂಜೆಯನ್ನು ಮಾಡಲು ಮನಸ್ಸಿನ ಸಿದ್ಧತೆಯನ್ನು ಮೊಟ್ಟಮೊದಲು ಮಾಡಿಕೊಳ್ಳಬೇಕು. ಯಾವ ರೀತಿಯಾಗಿ ಪೂಜೆ ಮಾಡುವುದರಿಂದ ಗಣಪತಿಯು ಪ್ರಸನ್ನನಾಗುತ್ತಾನೆ ಎಂಬುದನ್ನು ಹತ್ತಾರು ದೃಷ್ಟಿಕೋನಗಳಿಂದ ಆಲೋಚನೆ ಮಾಡಬೇಕು. ಬಲ್ಲವರ ಬಳಿ ಕೇಳಿ ತಿಳಿದುಕೊಳ್ಳಬೇಕು. ಮನೆಯಲ್ಲಿರುವ ಪ್ರತಿಯೊಬ್ಬರೂ ಶ್ರದ್ಧೆಯಿಂದ ಪೂಜೆಯಲ್ಲಿ ಪಾಲ್ಗೊಳ್ಳುವಂತೆ ಉತ್ಸಾಹವನ್ನು ತುಂಬಬೇಕು. ಶಾಸ್ತ್ರನಿಯಮಗಳನ್ನು ಅನುಸರಿಸಿದರಷ್ಟೇ ಸಾರ್ಥಕ. ಇಲ್ಲದಿದ್ದರೆ ಮಹಾ ಅನರ್ಥಕ ಎಂಬುದನ್ನು ಮರೆಯಬಾರದು.

೨. ವಾಯನದಾನವನ್ನು ಯಾವ ಬ್ರಾಹ್ಮಣನಿಗೆ ನೀಡಬೇಕೆಂಬುದನ್ನು ಖಚಿತ-ಪಡಿಸಿಕೊಳ್ಳಬೇಕು. ಹಾಗೂ ಯಾವುದೇ ವ್ರತವು ಸಾರ್ಥಕವಾಗಬೇಕೆಂದರೆ ದಂಪತಿಗಳಿಗೆ ಮತ್ತು ಬ್ರಹ್ಮಚಾರಿಗಳಿಗೆ ಯಥೇಚ್ಛ ಭೋಜನವನ್ನು ಮಾಡಿಸಿ ದಾನಗಳನ್ನು ಮಾಡಬೇಕು. ಅದಕ್ಕಾಗಿ ಸತ್ಪಾತ್ರರಾದ ಬ್ರಾಹ್ಮಣ-ಮುತ್ತೈದೆಯರ ಮನೆಗೆ ತೆರಳಿ ಅವರನ್ನು ಆಹ್ವಾನ ಮಾಡಬೇಕು.

೩. ಬ್ರಾಹ್ಮಣ-ಮುತ್ತೈದೆಯರು ದೊರಕದಿದ್ದಲ್ಲಿ ಯೋಗ್ಯ ವಟುವನ್ನು ಆಹ್ವಾನಮಾಡಿ ಭೋಜನವನ್ನು ನೀಡಬೇಕು. ಅದೂ ಸಾಧ್ಯವಾಗದಿದ್ದಲ್ಲಿ ಸತ್ಪಾತ್ರರು ಇರುವಲ್ಲಿಯೇ ತೆರಳಿ ಸ್ವಯಂಪಾಕಕ್ಕೆ ಉಪಯುಕ್ತವಾದ ದವಸ-ಧಾನ್ಯಗಳನ್ನು ದಕ್ಷಿಣಾ ಸಹಿತವಾಗಿ ನೀಡಿ ಅವರ ಆಶೀರ್ವಾದವನ್ನು ಪಡೆದುಕೊಳ್ಳಬೇಕು. ಅನ್ನದಾನವನ್ನು ಮಾಡದೇ ವ್ರತ, ಹೋಮಾದಿಗಳನ್ನು ಆಚರಿಸಿದರೆ ಫಲವು ದೊರಕುವುದಿಲ್ಲ.

# ದೂರ್ವಾಯುಗ್ಮಪೂಜಾ

(ಏಕವಿಂಶತಿದೂರ್ವಾಃ ಗೃಹೀತ್ವಾ ತನ್ಮಧ್ಯತೋ ಗಂಧಪುಷ್ಪಾಕ್ಷತೈರ್ಯುತಂ ಯುಗ್ಮಂ ಯುಗ್ಮಂ ಏಕೈಕನಾಮ್ನಾ ಸಮರ್ಪ್ಯ ಅವಶಿಷ್ಟಾಮೇಕಾಂ ದೂರ್ವಾಂ ಶ್ಲೋಕದ್ವಯೇನ ಸಮರ್ಪಯೇತ್– ೨೧ ಗರಿಕೆಗಳನ್ನು ತೆಗೆದುಕೊಂಡು ಒಂದೊಂದು ನಾಮಗಳಿಂದ ಎರಡೆರಡು ಗರಿಕೆಗಳನ್ನು ಸಮರ್ಪಿಸಬೇಕು. ಕೊನೆಯಲ್ಲಿ ಉಳಿದ ಒಂದು ಗರಿಕೆಯನ್ನು ಎರಡು ಶ್ಲೋಕಗಳನ್ನು ಪಠಿಸಿ ಸಮರ್ಪಿಸಬೇಕು.)

ಓಂ ಗಣಾಧಿಪಾಯ ನಮಃ । ದೂರ್ವಾಯುಗ್ಮಂ ಸಮರ್ಪಯಾಮಿ ।
ಓಂ ಉಮಾಪುತ್ರಾಯ ನಮಃ । ದೂರ್ವಾಯುಗ್ಮಂ ಸಮರ್ಪಯಾಮಿ ।
ಓಂ ಅಘನಾಶನಾಯ ನಮಃ । ದೂರ್ವಾಯುಗ್ಮಂ ಸಮರ್ಪಯಾಮಿ ।
ಓಂ ವಿನಾಯಕಾಯ ನಮಃ । ದೂರ್ವಾಯುಗ್ಮಂ ಸಮರ್ಪಯಾಮಿ ।
ಓಂ ಈಶಪುತ್ರಾಯ ನಮಃ । ದೂರ್ವಾಯುಗ್ಮಂ ಸಮರ್ಪಯಾಮಿ ।
ಓಂ ಸರ್ವಸಿದ್ಧಿಪ್ರದಾಯ ನಮಃ । ದೂರ್ವಾಯುಗ್ಮಂ ಸಮರ್ಪಯಾಮಿ ।
ಓಂ ಏಕದಂತಾಯ ನಮಃ । ದೂರ್ವಾಯುಗ್ಮಂ ಸಮರ್ಪಯಾಮಿ ।
ಓಂ ಇಭವಕ್ತ್ರಾಯ ನಮಃ । ದೂರ್ವಾಯುಗ್ಮಂ ಸಮರ್ಪಯಾಮಿ ।
ಓಂ ಆಖುವಾಹನಾಯ ನಮಃ । ದೂರ್ವಾಯುಗ್ಮಂ ಸಮರ್ಪಯಾಮಿ ।
ಓಂ ಕುಮಾರಗುರವೇ ನಮಃ । ದೂರ್ವಾಯುಗ್ಮಂ ಸಮರ್ಪಯಾಮಿ ।

ಗಣಾಧಿಪ ನಮಸ್ತೇಽಸ್ತು ಉಮಾಪುತ್ರಾಘನಾಶನ ।
ವಿನಾಯಕೇಶತನಯ ಸರ್ವಸಿದ್ಧಿಪ್ರದಾಯಕ ।
ಏಕದಂತೇಭವದನ ತಥಾ ಮೂಷಿಕವಾಹನ ।
ಕುಮಾರಗುರವೇ ತುಭ್ಯಂ ಅರ್ಪಯಾಮಿ ಸುಮಾಂಜಲಿಮ್ ॥

ದೂರ್ವಾಯುಗ್ಮಂ ಗೃಹೀತ್ವಾ ತು ಗಂಧಯುಕ್ತಂ ಪ್ರಪೂಜಯೇತ್ ।
ಏಕೈಕೇನ ತು ನಾಮ್ನಾ ಚ ದತ್ತ್ವೈಕಂ ಸರ್ವನಾಮಭಿಃ ॥

ಶ್ರೀಸಿದ್ಧಿವಿನಾಯಕಾಯ ನಮಃ । ಏಕವಿಂಶತಿದೂರ್ವಾಂ ಸಮರ್ಪಯಾಮಿ ॥

ತತೋ ನೀರಾಜನಂ ಸಮರ್ಪಯಾಮಿ । ಮಂತ್ರಪುಷ್ಪಂ ಸಮರ್ಪಯಾಮಿ । ಛತ್ರಂ ಸಮರ್ಪಯಾಮಿ । ಚಾಮರಂ ಸಮರ್ಪಯಾಮಿ । ಮಾಲ್ಯಂ ಸಮರ್ಪಯಾಮಿ ದರ್ಪಣಂ ಸಮರ್ಪಯಾಮಿ । ವ್ಯಜನಂ ಸಮರ್ಪಯಾಮಿ । ನೃತ್ಯಂ ಸಮರ್ಪಯಾಮಿ । ಗೀತಂ ಸಮರ್ಪಯಾಮಿ । ವಾದ್ಯಂ ಸಮರ್ಪಯಾಮಿ। ಪುಷ್ಪವೃಷ್ಟಿಂ ಸಮರ್ಪಯಾಮಿ ॥

## ಪ್ರಸನ್ನಾರ್ಘ್ಯ

### ಮನೆಮಂದಿಯೆಲ್ಲರೂ ಅರ್ಘ್ಯನೀಡಿರಿ

ಗೌರ್ಯಂಗಮಲಸಂಭೂತ ಜ್ಯೇಷ್ಠಸ್ವಾಮಿನ್ ಕುಮಾರಕ ।
ಗೃಹಾಣಾರ್ಘ್ಯಂ ಮಯಾ ದತ್ತಂ ಗಜವಕ್ತ್ರ ನಮೋಽಸ್ತು ತೇ ॥
ಶ್ರೀಸಿದ್ಧಿ ವಿನಾಯಕಾಯ ನಮ । ಪ್ರಸನ್ನಾರ್ಘ್ಯಂ ಸಮರ್ಪಯಾಮಿ ॥

ಗಣೇಶಾಯ ನಮಸ್ತುಭ್ಯಂ ಸರ್ವಕಾಮಫಲಪ್ರದ ।
ವಾಂಛಿತಂ ದೇಹಿ ಮೇ ನಿತ್ಯಂ ಗೃಹಾಣಾರ್ಘ್ಯಂ ನಮೋಽಸ್ತು ತೇ ।

ಹೂ ಮಂತ್ರಾಕ್ಷತೆ ದಕ್ಷಿಣೆಗಳ ಸಹಿತವಾಗಿ ಬೊಗಸೆಯಲ್ಲಿ ಅರ್ಘ್ಯವನ್ನು ನೀಡಬೇಕು. ಮನೆಯಲ್ಲಿರುವ ಪ್ರತಿಯೊಬ್ಬರಿಂದಲೂ ಈ ಶ್ಲೋಕ ಹೇಳಿಸಿ ಅರ್ಘ್ಯಪ್ರದಾನ ಮಾಡಿಸಬೇಕು. ಅನಂತರ ಎಲ್ಲರೂ ಒಟ್ಟಿಗೆ ದೇವರ ಮುಂದೆ ನಿಂತುಕೊಂಡು ಹೂ ಮಂತ್ರಾಕ್ಷತೆಗಳನ್ನು ಕೈಯಲ್ಲಿ ಹಿಡಿದುಕೊಂಡು ಗಣಪತಿಯನ್ನು ಹೀಗೆ ಪ್ರಾರ್ಥನೆ ಮಾಡಬೇಕು.

## ಪ್ರಾರ್ಥನಾ

### ಮನೆ ಮಂದಿಯೆಲ್ಲರೂ ಈ ಶ್ಲೋಕ ಹೇಳಿರಿ

ನಮಸ್ತೇ ವಿಘ್ನರಾಜಾಯ ಅಭೀಷ್ಟವರದಾಯಿನೇ ।
ಈಪ್ಸಿತಂ ಮೇ ವರಂ ದೇಹಿ ನಮಸ್ತೇ ಸಿದ್ಧಿದಾಯಕ ॥
ಯನ್ಮಯಾ ಚರಿತಂ ದೇವ ವ್ರತಮೇತತ್ ಸುದುರ್ಲಭಮ್ ।
ಗಣೇಶ ತ್ವಂ ಪ್ರಸನ್ನಃ ಸನ್ ಸಫಲಂ ಕುರು ಸರ್ವದಾ ॥

ವಿನಾಯಕ ಗಣೇಶಾನ ಸರ್ವದೇವನಮಸ್ಕೃತ ।
ಪಾರ್ವತೀಪ್ರಿಯ ವಿಘ್ನೇಶ ಮಮ ವಿಘ್ನಾನ್ನಿವಾರಯ ॥

ತ್ವತ್ಪ್ರಸಾದಾದ್ಗಣೇಶ ತ್ವಂ ಸಫಲಂ ಕುರು ಸರ್ವದಾ ।
ಕಾರ್ಯಂ ಮೇ ಸಿದ್ಧಿಮಾಯಾತು ಪೂಜಿತೇ ತ್ವಯಿ ಧಾತರಿ ।
ವಿಘ್ನಾನಿ ನಾಶಮಾಯಾಂತು ಸರ್ವಾಣಿ ಸುರನಾಯಕ ॥
ಶ್ರೀಸಿದ್ಧಿವಿನಾಯಕಾಯ ನಮಃ । ಪ್ರಾರ್ಥನಾಂ ಸಮರ್ಪಯಾಮಿ ॥

## ಪ್ರದಕ್ಷಿಣೆ

### ೨೧ ಪ್ರದಕ್ಷಿಣೆ ಮಾಡಿರಿ

ಅಭಿಖ್ಯಾನೋ ಮಘವನ್ನಾಧಮಾನಾನ್ತ್ಸಖೇ ಬೋಧಿ ವಸುಪತೇ ಸಖೀನಾಮ್ । ರಣಂ ಕೃಧಿ ರಣಕೃತ್ಸತ್ಯಶುಷ್ಮಾಭಕ್ತೇ ಚಿದಾ ಭಜಾ ರಾಯೇ ಅಸ್ಮಾನ್॥

ವಿಘ್ನೇಶ್ವರ ವಿಶಾಲಾಕ್ಷ ಸರ್ವಾಭೀಷ್ಟಫಲಪ್ರದ ।
ಪ್ರದಕ್ಷಿಣಂ ಕರೋಮಿ ತ್ವಾಂ ಸರ್ವಾನ್ ಕಾಮಾನ್ ಪ್ರಯಚ್ಛ ಮೇ ॥
ಶ್ರೀಸಿದ್ಧಿವಿನಾಯಕಾಯ ನಮಃ । ಪ್ರದಕ್ಷಿಣಾಃ ಸಮರ್ಪಯಾಮಿ ।

## ನಮಸ್ಕಾರ

### ೨೧ ನಮಸ್ಕಾರ ಮಾಡಿರಿ

ನಮಸ್ತೇ ವಿಘ್ನಸಂಹರ್ತ್ರೇ ನಮಸ್ತೇ ಈಪ್ಸಿತಪ್ರದ ।
ನಮಸ್ತೇ ದೇವದೇವೇಶ ನಮಸ್ತೇ ಗಣನಾಯಕ ॥

ಶ್ರೀಸಿದ್ಧಿವಿನಾಯಕಾಯ ನಮಃ । ನಮಸ್ಕಾರಾನ್ ಸಮರ್ಪಯಾಮಿ ॥

ಗಣೇಶಾಥರ್ವಶೀರ್ಷವನ್ನು ಪಠಿಸುತ್ತಾ, ಅಥವಾ ೨೧ ಗಣಪತಿ ನಾಮಗಳನ್ನು ಹೇಳುತ್ತಾ ೨೧ ಪ್ರದಕ್ಷಿಣೆ ನಮಸ್ಕಾರಗಳನ್ನು ತಪ್ಪದೇ ಮಾಡಬೇಕು.

# ಗಣೇಶಾಥರ್ವಶೀರ್ಷಮ್

## ಉಚ್ಚಸ್ವರದಿಂದ ವೇದಮಂತ್ರಪಠಿಸಿರಿ

ಹರಿಃ ಓಂ ॥ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ । ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ । ಸ್ಥಿರೈರಂಗೈಸ್ತುಷ್ಟುವಾಗ್‍ಂ ಸಸ್ತನೂಭಿಃ । ವ್ಯಶೇಮ ದೇವಹಿತಂ ಯದಾಯುಃ । ಸ್ವಸ್ತಿನ ಇಂದ್ರೋ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವವೇದಾಃ । ಸ್ವಸ್ತಿ ನಸ್ತಾರ್ಕ್ಷ್ಯೋ ಅರಿಷ್ಟನೇಮಿಃ । ಸ್ವಸ್ತಿ ನೋ ಬೃಹಸ್ಪತಿರ್ದಧಾತು। ಓಂ ಶಾಂತಿಃ ಶಾಂತಿಃ ಶಾಂತಿಃ ॥

ಓಂ ನಮಸ್ತೇ ಗಣಪತಯೇ । ತ್ವಮೇವ ಪ್ರತ್ಯಕ್ಷಂ ತತ್ತ್ವಮಸಿ । ತ್ವಮೇವ ಕೇವಲಂ ಕರ್ತಾಽಸಿ । ತ್ವಮೇವ ಕೇವಲಂ ಧರ್ತಾಽಸಿ । ತ್ವಮೇವ ಕೇವಲಂ ಹರ್ತಾಽಸಿ। ತ್ವಮೇವ ಸರ್ವಂ ಖಲ್ವಿದಂ ಬ್ರಹ್ಮಾಸಿ । ತ್ವಂ ಸಾಕ್ಷಾದಾತ್ಮಾಽಸಿ ನಿತ್ಯಮ್ ॥ ಋತಂ ವಚ್ಮಿ । ಸತ್ಯಂ ವಚ್ಮಿ । ಅವ ತ್ವಂ ಮಾಮ್ । ಅವ ವಕ್ತಾರಮ್ । ಅವ ಶ್ರೋತಾರಮ್। ಅವ ದಾತಾರಮ್ । ಅವ ಧಾತಾರಮ್ । ಅವಾನೂಚಾನಮವಶಿಷ್ಯಮ್ । ಅವ ಪಶ್ಚಾತ್ತಾತ್ । ಅವ ಪುರಸ್ತಾತ್ । ಅವೋತ್ತರಾತ್ತಾತ್ । ಅವ ದಕ್ಷಿಣಾತ್ತಾತ್ । ಅವ ಚೋರ್ಧ್ವಾತ್ತಾತ್ । ಅವಾಧರಾತ್ತಾತ್ । ಸರ್ವತೋ ಮಾಂ ಪಾಹಿ ಪಾಹಿ ಸಮಂತಾತ್ । ತ್ವಂ ವಾಙ್ಮಯಸ್ತ್ವಂ ಚಿನ್ಮಯಃ । ತ್ವಮಾನಂದಮಯ-ಸ್ತ್ವಂ ಬ್ರಹ್ಮಮಯಃ । ತ್ವಂ ಸಚ್ಚಿದಾನಂದಾಽದ್ವಿತೀಯೋಽಸಿ । ತ್ವಂ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಂ ಜ್ಞಾನಮಯೋ ವಿಜ್ಞಾನಮಯೋಽಸಿ । ಸರ್ವಂ ಜಗದಿದಂ ತ್ವತ್ತೋ ಜಾಯತೇ । ಸರ್ವಂ ಜಗದಿದಂ ತ್ವತ್ತಸ್ತಿಷ್ಠತಿ । ಸರ್ವಂ ಜಗದಿದಂ ತ್ವಯಿ ಲಯಮೇಷ್ಯತಿ । ಸರ್ವಂ ಜಗದಿದಂ ತ್ವಯಿ ಪ್ರತ್ಯೇತಿ । ತ್ವಂ ಭೂಮಿರಾಪೋಽ-ನಲೋಽನಿಲೋ ನಭಃ । ತ್ವಂ ಚತ್ವಾರಿ ವಾಕ್ಪದಾನಿ ॥ ತ್ವಂ ಗುಣತ್ರಯಾತೀತಃ । ತ್ವಂ ಅವಸ್ಥಾತ್ರಯಾತೀತಃ । ತ್ವಂ ದೇಹತ್ರಯಾತೀತಃ । ತ್ವಂ ಕಾಲತ್ರಯಾತೀತಃ । ತ್ವಂ

ಮೂಲಾಧಾರೇ ಸ್ಥಿತೋಽಸಿ ನಿತ್ಯಮ್ । ತ್ವಂ ಶಕ್ತಿತ್ರಯಾತ್ಮಕಃ । ತ್ವಾಂ ಯೋಗಿನೋ ಧ್ಯಾಯಂತಿ ನಿತ್ಯಮ್ । ತ್ವಂ ಬ್ರಹ್ಮಾ ತ್ವಂ ವಿಷ್ಣುಸ್ತ್ವಂ ರುದ್ರಸ್ತ್ವಮಿಂದ್ರಸ್ತ್ವಮಗ್ನಿಸ್ತ್ವಂ ವಾಯುಸ್ತ್ವಂ ಸೂರ್ಯಸ್ತ್ವಂ ಚಂದ್ರಮಾಸ್ತ್ವಂ ಬ್ರಹ್ಮ ಭೂರ್ಭುವಸ್ಸ್ವರೋಮ್ ॥

ಗಣಾದಿಂ ಪೂರ್ವಮುಚ್ಚಾರ್ಯ ವರ್ಣಾದಿಂಸ್ತದನಂತರಮ್ । ಅನುಸ್ವಾರಃ ಪರತರಃ । ಅರ್ಧೇಂದುಲಸಿತಮ್ । ತಾರೇಣ ರುದ್ಧಮ್ । ಏತತ್ ತವ ಮನುಸ್ವರೂಪಮ್ । ಗಕಾರಃ ಪೂರ್ವರೂಪಮ್ । ಅಕಾರೋ ಮಧ್ಯಮರೂಪಮ್ । ಅನುಸ್ವಾರಶ್ಚಾಂತ್ಯರೂಪಮ್ । ಬಿಂದುರುತ್ತರರೂಪಮ್ । ನಾದಃ ಸಂಧಾನಮ್ । ಸಗ್‌ಂಹಿತಾ ಸಂಧಿಃ । ಸೈಷಾ ಗಣೇಶವಿದ್ಯಾ । ಗಣಕ ಋಷಿಃ । ನಿಚೃದ್‌ಗಾಯತ್ರೀ ಛಂದಃ । ಶ್ರೀಮಹಾಗಣಪತಿರ್ದೇವತಾ । ಓಂ ಗಂ ಗಣಪತಯೇ ನಮಃ । ಏಕದಂತಾಯ ವಿದ್ಮಹೇ ವಕ್ರತುಂಡಾಯ ಧೀಮಹಿ । ತನ್ನೋ ದಂತೀ ಪ್ರಚೋದಯಾತ್ । ಏಕದಂತಂ ಚತುರ್ಹಸ್ತಂ ಪಾಶಮಂಕುಶಧಾರಿಣಮ್ । ರದಂ ಚ ವರದಂ ಹಸ್ತೈರ್ಬಿಭ್ರಾಣಂ ಮೂಷಕಧ್ವಜಮ್ । ರಕ್ತಂ ಲಂಬೋದರಂ ಶೂರ್ಪ- ಕರ್ಣಕಂ ರಕ್ತವಾಸಸಮ್ । ರಕ್ತಗಂಧಾನುಲಿಪ್ತಾಂಗಂ ರಕ್ತಪುಷ್ಪೈಃ ಸುಪೂಜಿತಮ್ ॥ ಭಕ್ತಾನುಕಂಪಿನಂ ದೇವಂ ಜಗತ್ಕಾರಣಮಚ್ಯುತಮ್ । ಆವಿರ್ಭೂತಂ ಚ ಸೃಷ್ಟ್ಯಾದೌ ಪ್ರಕೃತೇಃ ಪುರುಷಾತ್ ಪರಮ್ । ಏವಂ ಧ್ಯಾಯತಿ ಯೋ ನಿತ್ಯಂ ಸ ಯೋಗೀ ಯೋಗಿನಾಂ ವರಃ ॥ ನಮೋ ವ್ರಾತಪತಯೇ ನಮೋ ಗಣಪತಯೇ ನಮಃ ಪ್ರಮಥಪತಯೇ ನಮಸ್ತೇಽಸ್ತು ಲಂಬೋದರಾಯೈಕದಂತಾಯ ವಿಘ್ನನಾಶಿನೇ ಶಿವಸುತಾಯ ಶ್ರೀವರದಮೂರ್ತಯೇ ನಮಃ ॥ ಏತದಥರ್ವಶೀರ್ಷಂ ಯೋಽಧೀತೇ ಸ ಬ್ರಹ್ಮಭೂಯಾಯ ಕಲ್ಪತೇ । ಸ ಸರ್ವವಿಘ್ನೈರ್ನ ಬಾಧ್ಯತೇ । ಸ ಸರ್ವತ್ರ ಸುಖಮೇಧತೇ । ಸ ಪಂಚಮಹಾಪಾಪಾತ್ ಪ್ರಮುಚ್ಯತೇ । ಸಾಯಮಧೀಯಾನೋ ದಿವಸಕೃತಂ ಪಾಪಂ ನಾಶಯತಿ ।

ಪ್ರಾತರಧೀಯಾನೋ ರಾತ್ರಿಕೃತಂ ಪಾಪಂ ನಾಶಯತಿ । ಸಾಯಂಪ್ರಾತಃ ಪ್ರಯುಂಜಾನೋ ಪಾಪೋಽಪಾಪೋ ಭವತಿ। ಸರ್ವತ್ರಾಧೀಯಾನೋಽಪವಿಘ್ನೋ ಭವತಿ। ಧರ್ಮಾರ್ಥಕಾಮಮೋಕ್ಷಂ ಚ ವಿಂದತಿ। ಇದಮಥರ್ವಶೀರ್ಷಮಶಿಷ್ಯಾಯ ನ ದೇಯಮ್ । ಯೋ ಯದಿ ಮೋಹಾದ್ದಾಸ್ಯತಿ ಸ ಪಾಪೀಯಾನ್ ಭವತಿ । ಸಹಸ್ರಾವರ್ತನಾದ್ ಯಂ ಯಂ ಕಾಮಮಧೀತೇ ತಂ ತಮನೇನ ಸಾಧಯೇತ್ ॥ ಅನೇನ ಗಣಪತಿಮಭಿಷಿಂಚತಿ ಸ ವಾಗ್ಮೀ ಭವತಿ । ಚತುರ್ಥ್ಯಾಮನಶ್ನಞ್ಜಪತಿ ಸ ವಿದ್ಯಾವಾನ್ಭವತಿ । ಇತ್ಯಥರ್ವಣವಾಕ್ಯಮ್ । ಬ್ರಹ್ಮಾದ್ಯಾವರಣಂ ವಿದ್ಯಾನ್ನ ಬಿಭೇತಿ ಕದಾಚನೇತಿ ॥ ಯೋ ದೂರ್ವಾಂಕುರೈರ್ಯಜತಿ ಸ ವೈಶ್ರವಣೋಪಮೋ ಭವತಿ। ಯೋ ಲಾಜೈರ್ಯಜತಿ ಸ ಯಶೋವಾನ್ಭವತಿ । ಸ ಮೇಧಾವಾನ್ಭವತಿ । ಯೋ ಮೋದಕಸಹಸ್ರೇಣ ಯಜತಿ ಸ ವಾಂಛಿತಫಲಮವಾಪ್ನೋತಿ । ಯಃ ಸಾಜ್ಯ ಸಮಿದ್ಭಿರ್ಯಜತಿ ಸ ಸರ್ವಂ ಲಭತೇ ಸ ಸರ್ವಂ ಲಭತೇ । ಅಷ್ಟೌ ಬ್ರಾಹ್ಮಣಾನ್ ಸಮ್ಯಗ್ಗ್ರಾಹಯಿತ್ವಾ ಸೂರ್ಯವರ್ಚಸ್ವೀ ಭವತಿ । ಸೂರ್ಯಗ್ರಹೇ ಮಹಾನದ್ಯಾಂ ಪ್ರತಿಮಾಸನ್ನಿಧೌ ವಾ ಜಪ್ತ್ವಾ ಸಿದ್ಧಮಂತ್ರೋ ಭವತಿ । ಮಹಾವಿಘ್ನಾತ್ ಪ್ರಮುಚ್ಯತೇ । ಮಹಾಪ್ರತ್ಯವಾಯಾತ್ ಪ್ರಮುಚ್ಯತೇ । ಸ ಸರ್ವವಿದ್ ಭವತಿ ಸ ಸರ್ವವಿದ್ಭವತಿ ಯ ಏವಂ ವೇದ ॥

ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ। ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ। ಸ್ಥಿರೈರಂಗೈಸ್ತುಷ್ಟುವಾಗ್ಂ ಸಸ್ತನೂಭಿಃ। ವ್ಯಶೇಮ ದೇವಹಿತಂ ಯದಾಯುಃ। ಸ್ವಸ್ತಿನ ಇಂದ್ರೋ ವೃದ್ಧಶ್ರವಾಃ । ಸ್ವಸ್ತಿ ನಃ ಪೂಷಾ ವಿಶ್ವವೇದಾಃ । ಸ್ವಸ್ತಿ ನಸ್ತಾರ್ಕ್ಷ್ಯೋ ಅರಿಷ್ಟನೇಮಿಃ । ಸ್ವಸ್ತಿ ನೋ ಬೃಹಸ್ಪತಿರ್ದಧಾತು । ಓಂ ಶಾಂತಿಃ ಶಾಂತಿಃ ಶಾಂತಿಃ ॥

ಹರಿಃ ಓಂ ॥

# ಮೋದಕ-ವಾಯನ ದಾನ

ಒಂದು ತಟ್ಟೆಯಲ್ಲಿ ಅಕ್ಕಿ, ಬೇಳೆ, ತೆಂಗಿನಕಾಯಿ, ಬೆಲ್ಲ, ಹಣ್ಣುಗಳು, ಎಲೆ ಅಡಿಕೆ ಹಣ್ಣು ಇವುಗಳನ್ನು ಎರಡು ಬಾಳೆ ಎಲೆಗಳಲ್ಲಿ ಇಟ್ಟು ಪೂಜಿಸಿ ಬ್ರಾಹ್ಮಣರಿಗೆ ನೀಡಬೇಕು.

ಆಚಮ್ಯ – ಪ್ರಾಣಾನಾಯಮ್ಯ– ಶುಭತಿಥೌ ಸಿದ್ಧಿವಿನಾಯಕಾಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀವಿಶ್ವಂಭರಪ್ರೇರಣಯಾ ವಿಶ್ವಂಭರ-ಪ್ರೀತ್ಯರ್ಥಂ ವ್ರತಮಧ್ಯೇ ಸಂಭಾವಿತದೋಷಪ್ರಯುಕ್ತಪ್ರಾಪ್ತನ್ಯೂನತಾ ದೋಷಪರಿಹಾರದ್ವಾರಾ ಸಂಪೂರ್ಣವ್ರತಫಲಸಿದ್ಧ್ಯರ್ಥಂ ಬ್ರಾಹ್ಮಣಾಂತರ್ಯಾಮಿ ಶ್ರೀವಿಶ್ವನಾಮಕಪರಮಾತ್ಮಾನಂ ವಾಯನಮೋದಕದಾನೇನ ಪೂಜಯಿಷ್ಯೇ ।

ಓಂ ನಮೋಸ್ತ್ವನಂತಾಯ ಸಹಸ್ರಮೂರ್ತಯೇ
ಸಹಸ್ರಪಾದಾಕ್ಷಿಶಿರೋರುಬಾಹವೇ ।
ಸಹಸ್ರನಾಮ್ನೇ ಪುರುಷಾಯ ಶಾಶ್ವತೇ
ಸಹಸ್ರಕೋಟ್ಯಾಯುಗಧಾರಿಣೇ ನಮಃ ॥

ಬ್ರಾಹ್ಮಣಾಯ ಇದಮಾಸನಮ್; ಸುಖಾಸನಮ್ । ಇದಂ ಪಾದ್ಯಂ ಸುಪಾದ್ಯಮ್ । ಇದಮರ್ಘ್ಯಂ; ಅಸ್ತ್ವರ್ಘ್ಯಂ । ಇದಮಾಚಮನೀಯಂ । ಅಸ್ತು ಆಚಮನಮ್ । ಗಂಧಾಃ ಪಾಂತು । ಸೌಮಂಗಲ್ಯಂ ಚಾಸ್ತು । ಅಕ್ಷತಾಃ ಪಾಂತು । ಆಯುಷ್ಯಮಸ್ತು । ಪುಷ್ಪಾಣಿ ಪಾಂತು । ಸೌಶ್ರೀಯಮಸ್ತು ।

ಗೃಹಾಣೇದಂ ದ್ವಿಜಶ್ರೇಷ್ಠ ವಾಯನಂ ದಕ್ಷಿಣಾನ್ವಿತಮ್ ।
ಫಲತಂಡುಲಸಂಯುಕ್ತಂ ದಕ್ಷಿಣಾಘೃತಸಂಯುತಮ್ ॥

ಮೋದಕಾದಿಯುತಂ ಚೈವ ಅಪೂಪಾದಿಯುತಂ ತಥಾ ।
ಸಫಲಾಂಸ್ತು ಗುಡಾಜ್ಯಾಢ್ಯಾನ್ ದಾಸ್ಯಾಮಿ ದಶ ಮೋದಕಾನ್ ॥

ಸದಕ್ಷಿಣಾನ್ ದ್ವಿಜಶ್ರೇಷ್ಠ ಗಣೇಶಃ ಪ್ರೀಯತಾಂ ಮಮ ।
ಗಣೇಶಃ ಪ್ರತಿಗೃಹ್ಣಾತಿ ಗಣೇಶೋ ವೈ ದದಾತಿ ಚ ।
ಗಣೇಶಸ್ತಾರಕೋಭಾಭ್ಯಾಂ ಗಣೇಶಾಯ ನಮೋ ನಮಃ ॥

ಏತದಪೂಪಮೋದಕಸಹಿತಮುಪಾಯನದಾನಂ ಸದಕ್ಷಿಣಾಕಂ ಸತಾಂಬೂಲಂ ವಿಘ್ನರಾಜಾಂತರ್ಗತಶ್ರೀವಿಶ್ವಂಭರರೂಪಿಪರಮಾತ್ಮನಃ ಪ್ರೀತಿಂ ಕಾಮಯಮಾನಃ, (...) ಗೋತ್ರೋದ್ಭವಸ್ಯ –(...)ನಾಮಧೇಯಸ್ಯ– (...)ತುಭ್ಯಮಹಂ ಸಂಪ್ರದದೇ । ದತ್ತಂ ನ ಮಮ । ಪ್ರತಿಗೃಹ್ಯತಾಮ್ ॥

ಬ್ರಾಹ್ಮಣಃ – ಏಷ ಪ್ರತಿಗೃಹ್ಣಾಮಿ । ಸಂಪೂರ್ಣಫಲಾವಾಪ್ತಿರಸ್ತು । ಅನೇನ ವಾಯನದಾನೇನ ಗಣೇಶಾಂತರ್ಗತ ಶ್ರೀವಿಶ್ವಂಭರಃ ಪ್ರೀಯತಾಂ ಪ್ರೀತೋ ಭವತು ॥

ಅಬುದ್ಧಮತಿರಿಕ್ತಂ ಯದ್ ದ್ರವ್ಯಹೀನಂ ಮಯಾ ಕೃತಮ್ ।
ತತ್ಸರ್ವಂ ಪೂರ್ಣತಾಂ ಯಾತು ವಿಶ್ವಂಭರ ಗಣೇಶ್ವರ ॥

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋಯಜ್ಞಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯತಿ ಸದ್ಯೋ ವಂದೇ ತಮಚ್ಯುತಮ್ ॥

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣ ತದಸ್ತು ಮೇ ॥

ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾಽನುಸೃತಸ್ವಭಾವಃ।
ಕರೋಮಿ ಯದ್ಯತ್ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ॥

ಅನೇನ ಸಿದ್ಧಿವಿನಾಯಕವ್ರತಾಚರಣೇನ ಸಿದ್ಧಿವಿನಾಯಕಾಂತರ್ಯಾಮಿ ಶ್ರೀವಿಶ್ವಂಭರಃ ಪ್ರೀಯತಾಮ್ ॥ ಶ್ರೀ ಕೃಷ್ಣಾರ್ಪಣಮಸ್ತು ॥

ಇಲ್ಲಿಗೆ ಗಣಪತಿಪೂಜಾವಿಧಾನವು ಸಮಾಪ್ತವಾಯಿತು.

* * * * *

## ಗಣಪತಿ ವಿಸರ್ಜನಾಪೂಜಾವಿಧಾನ

ಅನಂತಚತುರ್ದಶಿಯಂದು ಗಣಪತಿಯನ್ನು ವಿಸರ್ಜನೆ ಮಾಡುವ ಸಂಪ್ರದಾಯವಿದೆ. ಅಂದು ಕೆಳಗಿನ ಕ್ರಮದಲ್ಲಿ ಪೂಜಿಸಿ ವಿಸರ್ಜನೆ ಮಾಡಬೇಕು. ಮತ್ತು ಎಷ್ಟು ದಿವಸ ಗಣಪತಿಯನ್ನು ಇಟ್ಟಿರುತ್ತೇವೋ ಅಷ್ಟು ದಿವಸವೂ ಪೂಜೆಯನ್ನು ತಪ್ಪದೇ ಮಾಡಬೇಕು.

ಆಚಮ್ಯ– ಪ್ರಾಣಾನಾಯಮ್ಯ– ಶುಭತಿಥೌ – ಶ್ರೀಸಿದ್ಧಿವಿನಾಯಕಾಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತಶ್ರೀವಿಶ್ವಂಭರಪ್ರೇರಣಯಾ, ಶ್ರೀ ವಿಶ್ವಂಭರಪ್ರೀತ್ಯರ್ಥಂ ಗಣಪತಿವಿಸರ್ಜನಾಂಗ ಉತ್ತರಪೂಜಾಂ ಕರಿಷ್ಯೇ ।

## ಪಂಚೋಪಚಾರಪೂಜೆಯನ್ನು ಮಾಡಬೇಕು.

ಓಂ ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪ ವಶ್ರವಸ್ತಮಮ್ । ಜೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಃ ಶೃಣ್ವನ್ನೂತಿಭಿಃ ಸೀದ ಸಾದನಮ್ ॥

ಶ್ರೀ ಮಹಾಸಿದ್ಧಿವಿನಾಯಕಾಯ ನಮಃ ।
ಗಂಧಂ ಸಮರ್ಪಯಾಮಿ । ಪುಷ್ಪೈಃ ಪೂಜಯಾಮಿ ॥

ಸುಮುಖಾಯ ನಮಃ । ಏಕದಂತಾಯ ನಮಃ । ಕಪಿಲಾಯ ನಮಃ । ಗಜಕರ್ಣಿಕಾಯ ನಮಃ । ಲಂಬೋದರಾಯ ನಮಃ । ವಿಕಟಾಯ ನಮಃ । ವಿಘ್ನರಾಜಾಯ ನಮಃ । ಗಣಾಧಿಪಾಯ ನಮಃ । ಧೂಮಕೇತವೇ ನಮಃ । ಗಣಾಧ್ಯಕ್ಷಾಯ ನಮಃ । ಫಾಲಚಂದ್ರಾಯ ನಮಃ । ಗಜಾನನಾಯ ನಮಃ ।

ಧೂಪಮಾಘ್ರಾಪಯಾಮಿ । ದೀಪಂ ದರ್ಶಯಾಮಿ । ನೈವೇದ್ಯಂ ಸಮರ್ಪಯಾಮಿ । ಹಸ್ತಪ್ರಕ್ಷಾಲನಂ ಸಮರ್ಪಯಾಮಿ । ತಾಂಬೂಲಂ ಸಮರ್ಪಯಾಮಿ । ದಕ್ಷಿಣಾಂ ಸಮರ್ಪಯಾಮಿ । ಮಹಾನೀರಾಜನಂ ಸಮರ್ಪಯಾಮಿ । ಮಂತ್ರಪುಷ್ಪಾಂಜಲಿಂ ಸಮರ್ಪಯಾಮಿ । ಪ್ರದಕ್ಷಿಣ ನಮಸ್ಕಾರಾನ್ ಸಮರ್ಪಯಾಮಿ॥

ಅನೇನ ವಿಸರ್ಜನಾಂಗ ಉತ್ತರ ಪೂಜನೇನ ಸಿದ್ಧಿವಿನಾಯಕಾಂತರ್ಗತ ಶ್ರೀ ವಿಶ್ವಂಭರಃ ಪ್ರೀಯತಾಮ್ । ಪ್ರೀತೋ ವರದೋ ಭವತು । ॥ ಶ್ರೀಕೃಷ್ಣಾರ್ಪ ಮಸ್ತು ॥

## ಉದ್ವಾಸನೆ

ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತಸ್ತ್ವೇಮಹೇ ।
ಉಪಪ್ರಯಂತು ಮರುತಃ ಸುದಾನವ ಇಂದ್ರ ಪಾಶೂರ್ಭವಾ ಸಚಾ ॥
ಅಭ್ಯಾರಮಿದದ್ರಯೋನಿಷಿಕ್ತಂ ಪುಷ್ಕರೇ ಮಧು । ಅವತಸ್ಯ ವಿಸರ್ಜನೇ ॥
ಯಾಂತು ದೇವಗಣಾಃ ಸರ್ವೇ ಪೂಜಾಮಾದಾಯ ಮತ್ಕೃತಾಮ್ ।
ಇಷ್ಟಕಾಮ್ಯಾರ್ಥಸಿದ್ಧ್ಯರ್ಥಂ ಪುನರಾಗಮನಾಯ ಚ ॥
ಶ್ರೀ ಸಿದ್ಧಿವಿನಾಯಕಾಯ ನಮಃ । ಯಥಾಸ್ಥಾನಮುದ್ವಾಸಯಾಮಿ ॥

ಗಣಪತಿಯ ಮೂರ್ತಿಯನ್ನು ವಿಸರ್ಜನೆ ಮಾಡುವ ಮೊದಲು ಗೌರಿಯ ಮೂರ್ತಿಯನ್ನು ವಿಸರ್ಜನೆ ಮಾಡಬೇಕು. ಕೆರೆ, ಬಾವಿಗಳಲ್ಲಿ ಮುಳುಗಿಸುವ ಮೊದಲು ಪಕ್ಕದಲ್ಲಿಟ್ಟು ತೆಂಗಿನ ಕಾಯಿ ಒಡೆದು ನೈವೇದ್ಯ ಮಾಡಿ ಮಂಗಳಾರತಿ ಮಾಡಬೇಕು. ಅನಂತರ ನೀರಿನಲ್ಲಿ ಮುಳುಗಿಸಬೇಕು.

ಗಣಪತಿ ಹಾಗೂ ಗೌರೀ ಮೂರ್ತಿಯನ್ನು ತೆಗೆದುಕೊಂಡು ಹೋಗುವಾಗ ಮನೆಯ ಬಾಗಿಲಿಗೆ ಮೂರು ಬಾರಿ ಪ್ರದಕ್ಷಿಣೆ ಮಾಡಿ ಸಕಲವಿಧಸೌಭಾಗ್ಯವನ್ನು ತನ್ನ ದೃಷ್ಟಿಯಿಂದ ಗಣಪತಿಯು ನೀಡಿದ್ದಾನೆಂದು ಅನುಸಂಧಾನ ಮಾಡಿ ಗಣಪತಿಗೆ ಜಯಕಾರವನ್ನು ಹೇಳುತ್ತಾ ಗಂಟೆ, ಜಾಗಂಟೆಗಳ ನಾದದ ಜೊತೆಗೆ ವಿಸರ್ಜನೆಗೆ ತೆರಳಬೇಕು.

ಹೃದಯದಲ್ಲಿ ರುದ್ರ, ಪಾರ್ವತಿ, ಗಣಪತಿದೇವರು ಪ್ರಸನ್ನರಾಗಿ ನಮ್ಮನ್ನು ಅನುಗ್ರಹಿಸುತ್ತಿದ್ದಾರೆಂದು ಭಕ್ತಿಯ ಭಾವನೆ ಹೊಂದಿ ತೀರ್ಥಪ್ರಸಾದಗಳನ್ನು ಎಲ್ಲರೂ ಸ್ವೀಕರಿಸಬೇಕು.

॥ ಶ್ರೀಕೃಷ್ಣಾರ್ಪಣಮಸ್ತು ॥

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ

# ವರಾಹಪುರಾಣದಲ್ಲಿ 'ವಿನಾಯಕೋತ್ಪತ್ತಿ'

## ತ್ರಯೋವಿಂಶೋಽಧ್ಯಾಯಃ

ಪ್ರಜಾಪಾಲ ಉವಾಚ –

ಕಥಂ ಗಣಪತೇರ್ಜನ್ಮ ಮೂರ್ತಿಮತ್ವಂ ಚ ಸತ್ತಮ ।

ಏತನ್ಮೇ ಸಂಶಯಂ ಛಿಂದಿ ಹೃದಿ ಕಷ್ಟಂ ವ್ಯವಸ್ಥಿತಮ್ ॥೧॥

ಪ್ರಜಾಪಾಲರಾಜ – ಸಜ್ಜನೋತ್ತಮನೇ! ಗಣಪತಿಯ ಜನ್ಮವೂ, ದೇಹಧಾರಣೆಯೂ ಹೇಗೆಂಬ ನನ್ನ ಈ ಸಂದೇಹವನ್ನು ಹೋಗಲಾಡಿಸು. ತಿಳಿಯದೇ ಮನಸ್ಸಿಗೆ ಕಷ್ಟವಾಗಿದೆ.

ಮಹಾತಪಾ ಉವಾಚ –

ಪೂರ್ವಂ ದೇವಗಣಾಃ ಸರ್ವೇ ಋಷಯಶ್ಚ ತಪೋಧನಾಃ ।

ಕಾರ್ಯಾರಂಭಂ ತಥಾ ಚಕ್ರುಃ ಸಿಧ್ಯಂತೇ ಚ ನ ಸಂಶಯಃ ॥೨॥

ಮಹಾತಪಮುನಿ – ಪೂರ್ವದಲ್ಲಿ ಎಲ್ಲಾ ದೇವತೆಗಳೂ, ತಪೋಧನರಾದ ಋಷಿಗಳೂ ಸಂದೇಹವಿಲ್ಲದೇ ಸಿದ್ಧಿಸುವಂತೆ ಕಾರ್ಯಗಳನ್ನು ಪ್ರಾರಂಭಿಸುತ್ತಿದ್ದರು.

ಸನ್ಮಾರ್ಗವರ್ತಿಷು ತಥಾ ಸಿದ್ಧ್ಯಂತೇ ವಿಘ್ನತಃ ಕ್ರಿಯಾಃ ।

ಅಸತ್ಕಾರಿಷು ಸರ್ವೇಷು ತದ್ವದೇವಮವಿಘ್ನತಃ ॥೩॥

ಒಳ್ಳೆಯ ದಾರಿಯಲ್ಲಿ ನಡೆಯುವವರ ಕೆಲಸಗಳು ತಡೆಯಿಲ್ಲದೇ ಕೈಗೂಡು-ವಂತೆಯೇ ಕೆಟ್ಟದಾರಿಯಲ್ಲಿರುವವರ ಎಲ್ಲವೂ ತಡೆಯಿಲ್ಲದೇ ಕೈಗೂಡುತ್ತಿದ್ದವು.

ತತೋ ದೇವಾಃ ಸಪಿತರಶ್ಚಿಂತಯಾಮಾಸುರೋಜಸಾ ।

ಅಸತ್ಕಾರ್ಯೇಷು ವಿಘ್ನಾರ್ಥೇ ಸರ್ವ ಏವಾಭ್ಯಮಂತ್ರಯನ್ ॥೪॥

ಬಳಿಕ ಪಿತೃಗಳೊಡಗೂಡಿದ ದೇವತೆಗಳೆಲ್ಲರೂ ಸೇರಿ, ಕೆಟ್ಟಕೆಲಸಗಳಲ್ಲಿ ತಡೆಯನ್ನುಂಟುಮಾಡಬೇಕೆಂದು ಚಿಂತಿಸಿ, ಬಲವಾದ ಮಂತ್ರಾಲೋಚನೆಯನ್ನು ಮಾಡಿದರು.

ತತಸ್ತೇಷಾಂ ತದಾ ಮಂತ್ರಂ ಕುರ್ವತಾಂ ತ್ರಿದಿವೌಕಸಾಮ್ ।
ಬಭೂವ ಬುದ್ಧಿರ್ಗಮನೇ ರುದ್ರಂ ಪ್ರತಿ ಮಹಾಮತಿಮ್ ॥೫॥

ಹಾಗೆ ಮಂತ್ರಾಲೋಚನೆಯನ್ನು ಮಾಡುತ್ತಿದ್ದ ದೇವತೆಗಳಿಗೆ ಆ ವಿಚಾರಕ್ಕೆ ಮಹಾಬುದ್ಧಿಯುಳ್ಳ ರುದ್ರನ ಹತ್ತಿರ ಹೋಗಬೇಕೆಂದು ತೋರಿತು.

ತೇ ತತ್ರ ರುದ್ರಮಾಮಂತ್ರ್ಯ ಕೈಲಾಸನಿಲಯಂ ಗುರುಮ್ ।
ಊಚುಃ ಸವಿನಯಂ ಸರ್ವೇ ಪ್ರಣಿಪಾತಪುರಸ್ಸರಮ್ ॥೬॥

ಅವರೆಲ್ಲರೂ ಕೈಲಾಸದಲ್ಲಿ ವಾಸಿಸುವ ಗುರುವಾದ ಆ ರುದ್ರನ ಹತ್ತಿರ ಹೋಗಿ ಅವನಿಗೆ ಪ್ರಣಾಮಪುರಸ್ಸರವಾಗಿ ವಿನಯದಿಂದ (ಮುಂದಿರುವಂತೆ) ಹೇಳಿದರು.

ದೇವಾ ಊಚುಃ –

ದೇವದೇವ ಮಹಾದೇವ ಶೂಲಪಾಣೇ ತ್ರಿಲೋಚನ ।
ವಿಘ್ನಾರ್ಥಮವಿಶಿಷ್ಟಾನಾಮುತ್ಪಾದಯಿತುಮರ್ಹಸಿ ॥೭॥

ದೇವತೆಗಳು – ದೇವದೇವ! ಮಹಾದೇವ! ಶೂಲಪಾಣಿ! ತ್ರಿಲೋಚನ! ಕೆಟ್ಟಕೆಲಸಗಳ ತಡೆಗಾಗಿ ಯಾರನ್ನಾದರೂ ಸೃಷ್ಟಿಸಲು ನೀನೇ ಶಕ್ತನು.

ಏವಮುಕ್ತಸ್ತದಾ ದೇವೈರ್ಭವಃ ಪರಮಯಾ ಮುದಾ ।
ಉಮಾಂ ನಿರೀಕ್ಷಯಾಮಾಸ ಚಕ್ಷುಷಾಽನಿಮಿಷೇಣ ಹ ॥೮॥

ಆಗ ದೇವತೆಗಳು ಹೀಗೆ ಹೇಳಲು ಶಿವನು ಅತಿಸಂತೋಷದಿಂದ ಪಾರ್ವತಿಯನ್ನು ಎವೆಯಿಕ್ಕದೇ ನೋಡಿದನು.

ದೇವಾನಾಂ ಸನ್ನಿಧೌ ತಸ್ಯ ಪಶ್ಯತಸ್ತಾಂ ಮಹಾತ್ಮನಃ ।
ಚಿಂತಾಭೂದ್ವ್ಯೋಮ್ನಿ ಮೂರ್ತಿರ್ನೋ ದೃಶ್ಯತೇ ಕೇನ ಹೇತುನಾ ॥೯॥

ದೇವತೆಗಳ ಸಮೀಪದಲ್ಲಿ ಆಕೆಯನ್ನು ನೋಡುತ್ತಿದ್ದ ಆ ಮಹಾತ್ಮನಿಗೆ ಆಕಾಶದಲ್ಲಿ ಏಕೆ ಯಾವ ಮೂರ್ತಿಯೂ ಕಾಣುವುದಿಲ್ಲ ಎಂದು ಯೋಚನೆಯುಂಟಾಯಿತು.

ಪೃಥಿವ್ಯಾ ವಿದ್ಯತೇ ಮೂರ್ತಿರಪಾಂಮೂರ್ತಿಸ್ತಥೈವ ಚ ।
ತೇಜಸಃ ಶ್ವಸನಸ್ಯಾಪಿ ಮೂರ್ತಿರೇಷಾ ತು ದೃಶ್ಯತೇ ।
ಆಕಾಶಂ ಚ ಕಥಂ ನೈತಿ ಮತ್ವಾ ದೇವೋ ಜಹಾಸ ಚ ॥೧೦॥

ಭೂಮಿಗೆ ರೂಪವಿದೆ. ನೀರಿಗೂ ರೂಪವಿದೆ. ತೇಜಸ್ಸಿಗೂ ವಾಯುವಿಗೂ ರೂಪವಿರುವುದು ಕಾಣುತ್ತಿದೆ. ಆಕಾಶವು ಮಾತ್ರ ಹೇಗ ರೂಪವಿಲ್ಲದುದಾಯಿತು? ಎಂದು ಆಲೋಚಿಸಿ ಆ ದೇವನು ನಕ್ಕನು.

ಜ್ಞಾನಶಕ್ತಿಃ ಪುಮಾನ್ ದೃಷ್ಟ್ವಾ ಯದ್ದೃಷ್ಟಂ ವ್ಯೋಮ್ನಿ ಶಂಭುನಾ ॥೧೧॥
ಯಥೋಕ್ತಂ ಬ್ರಹ್ಮಣಾ ಪೂರ್ವಂ ಶರೀರಂ ತು ಶರೀರಿಣಾಮ್ ।
ಯಚ್ಚಾಪಿ ಹಸಿತಂ ತೇನ ದೇವೇನ ಪರಮೇಷ್ಠಿನಾ ॥೧೨॥

ಏತತ್ಕಾರ್ಯಂ ಚತುಷ್ಕೇಣ ಪೃಥಿವ್ಯಾದಿಚತುರ್ಷ್ವಪಿ ।
ಮೂರ್ತಿಮಾನತಿತೇಜಸ್ವೀ ಹಸತಃ ಪರಮೇಷ್ಠಿನಃ ॥೧೩॥

ಪ್ರದೀಪ್ತಾಸ್ಯೋ ಮಹಾದೀಪ್ತಃ ಕುಮಾರೋ ಭಾಸಯನ್ ದಿಶಃ ।
ಪರಮೇಷ್ಠಿಗುಣೈರ್ಯುಕ್ತಃ ಸಾಕ್ಷಾದ್ ರುದ್ರ ಇವಾಪರಃ ॥೧೪॥

ರುದ್ರನು ನೋಡಿದ ಜ್ಞಾನಶಕ್ತಿ (ಗೌರಿ), ಅವನ ಆಕಾಶದ ನೋಟದ ಹಿಂದೆ ಪರಬ್ರಹ್ಮನು ಅಗ್ನಿಯೇ ಮೊದಲಾದವರಿಗೆ ಶರೀರಗಳನ್ನು ಕರುಣಿಸಿದಾಗ ಪೃಥಿವ್ಯಪ್ತೇಜೋವಾಯುಗಳ ಗುಣವು ಗಣಪತಿಯಾಗುವುದೆಂದು ಹೇಳಿದ್ದುದು ಉತ್ಕೃಷ್ಟಸ್ಥಾನದಲ್ಲಿರುವ ರುದ್ರದೇವನ ನಗು ಈ ನಾಲ್ಕರಿಂದ (ಪೃಥಿವಿ ಜಲ ತೇಜಸ್ಸು ವಾಯು ಈ ನಾಲ್ಕರಿಂದ ಹಾಗೂ ನಗುತ್ತಿದ್ದ ರುದ್ರನ ದೆಸೆಯಿಂದ) ಮೂರ್ತೀಭವಿಸಿದವನೂ, ಅತಿತೇಜೋವಂತನೂ, ಹೊಳೆಯುವ ಮುಖವುಳ್ಳವನೂ, ತನ್ನ ಕಾಂತಿಯಿಂದ ದಿಕ್ಕುಗಳನ್ನು ಪ್ರಕಾಶಗೊಳಿಸುವವನೂ, ಬ್ರಹ್ಮಗುಣಗಳುಳ್ಳವನೂ ಎರಡನೆಯ ಸಾಕ್ಷಾದ್ ರುದ್ರನೋ ಎಂಬಂತಿರುವವನೂ ಆದ ಕುಮಾರನೊಬ್ಬನು ಉದಯಿಸಿದನು.

ಉತ್ಪನ್ನಮಾತ್ರೋ ದೇವಾನಾಂ ವ್ಯಷಿತಃ ಸಂಪ್ರಮೋಹಯನ್ ।
ಕಾಂತ್ಯಾ ದೀಪ್ತ್ಯಾ ತಥಾ ಮೂರ್ತ್ಯಾ ರೂಪೇಣ ಚ ಮಹಾತ್ಮವಾನ್ ॥೧೫॥

ಮಹಾತ್ಮನಾದ ಅವನು ಹುಟ್ಟಿದಾಗಲೇ ತನ್ನ ಕಾಂತಿದೇಹ-ಸೌಂದರ್ಯಾದಿಗಳಿಂದ ದೇವಸಮೂಹಗಳನ್ನು ಸಮ್ಮೋಹಗೊಳಿಸುತ್ತಿದ್ದನು.

ತಂ ದೃಷ್ಟ್ವಾ ಪರಮಂ ರೂಪಂ ಕುಮಾರಸ್ಯ ಮಹಾತ್ಮನಃ ।
ಉಮಾನಿಮೇಷನೇತ್ರಾಭ್ಯಾಂ ತಮವಶ್ಯಚ್ಚ ಭಾಮಿನೀ ॥೧೬॥

ಮಹಾತ್ಮನಾದ ಆ ಕುಮಾರನ ಅತಿಸೌಂದರ್ಯವನ್ನು ನೋಡಿ ಪಾರ್ವತೀದೇವಿಯು ಎವೆಯಿಕ್ಕದ ಕಣ್ಣುಗಳಿಂದ ಅವನನ್ನು ನೋಡಿದಳು.

ತಂ ದೃಷ್ಟ್ವಾ ಕುಪಿತೋ ದೇವಃ ಸ್ತ್ರೀಭಾವಂ ಚಂಚಲಂ ತಥಾ ।
ಮತ್ವಾ ಕುಮಾರರೂಪಂ ತು ಶೋಭನಂ ಮೋಹನಂ ದೃಶಾಮ್ ॥೧೭॥

ತತಃ ಶಶಾಪ ತಂ ದೇವೋ ಗಣೇಶಂ ಪರಮೇಶ್ವರಃ ।
ಕುಮಾರ ಗಜವಕ್ತ್ರಸ್ತ್ವಂ ಪ್ರಲಂಬಜಠರಸ್ತಥಾ ॥
ಭವಿಷ್ಯಸಿ ತಥಾ ಸರ್ಪೈರುಪವೀತಗತಿರ್ಧ್ರುವಮ್ ॥೧೮॥

ಏವಂ ಶಶಾಪ ತಂ ದೇವಸ್ತೀವ್ರಕೋಪಸಮನ್ವಿತಃ ।
ಧುನ್ವನ್ ಶರೀರಮುತ್ಥಾಪ್ಯ ತತೋ ದೇವೋ ರುಷಾನ್ವಿತಃ ॥೧೯॥

ರುದ್ರದೇವನು ಆ ಬಗೆಯ ಚಂಚಲವಾದ ಸ್ತ್ರೀಸ್ವಭಾವವನ್ನು ನೋಡಿ ಕೋಪಗೊಂಡು ಆ ಕುಮಾರನ (ಸೊಗಸಾದ) ರೂಪವು ಕಣ್ಣುಗಳಿಗೆ ಸೊಗಸಾದುದು ಮೋಹಕವಾದುದು ಎಂದರಿತು ಬಳಿಕ ಆ ಪರಮೇಶ್ವರನು ಉಗ್ರಕೋಪದಿಂದ ಅವನನ್ನು 'ಕುಮಾರ! ನೀನು ಗಜಮುಖನೂ, ಲಂಬೋದರನೂ (ಡೊಳ್ಳು ಹೊಟ್ಟೆಯವನೂ), ಸರ್ಪಗಳ ಯಜ್ಞೋಪವೀತವುಳ್ಳವನೂ ನಿಜವಾಗಿ ಆಗುವೆ' ಎಂದು ಶಪಿಸಿದನು. ಬಳಿಕ ಇನ್ನೂ ಕೋಪದಿಂದಲೇ ಎದ್ದು ನಿಂತು ಆ ದೇವನು ಮೈಯೊದರಿದನು.

ಯಥಾ ಯಥಾಸೌ ಸ್ವಶರೀರಮಾದ್ಯಂ
ಧುನೋತಿ ದೇವಸ್ತ್ರಿಶಿಖಾಸ್ತ್ರಪಾಣಿಃ ।
ತಥಾ ತಥಾ ಚಾಂಗರುಹಾಚ್ಚಕಾಸೇ
ಜಲಂ ಕ್ಷಿತೌ ಸನ್ಯಪತತ್ ತಥಾನ್ಯೇ ॥೨೦॥

ತ್ರಿಶೂಲಪಾಣಿಯಾದ ಆ ದೇವನು ಆದಿಭೂತವಾದ ತನ್ನ ದೇಹವನ್ನು ಒದರಿದಷ್ಟೂ ಮೈಯ ರೋಮಗಳಿಂದ ನೀರು ಭೂಮಿಯ ಮೇಲೆ ಬಿದ್ದಿತು.

ವಿನಾಯಕಾನೇಕವಿಧಾ ಗಜಾಸ್ಯಾಃ
ತಮಾಲನೀಲಾಂಜನಸನ್ನಿಕಾಶಾಃ ।
ಉತ್ತಸ್ಥುರುಚ್ಚೈರ್ವಿವಿಧಾಸ್ತ್ರಹಸ್ತಾಃ
ತತಸ್ತು ದೇವೋ ಮನಸಾಕುಲೇನ ॥೨೧॥

ಕಿಮೇತದಿತ್ಯದ್ಭುತಕರ್ಮಕಾರೀ
ಹ್ಯೇಕಃ ಕರೋತ್ಯಪ್ರತಿಮಂ ಮಹಚ್ಚ ।
ಕಾರ್ಯಂ ಸುರಾಣಾಂ ಕೃತಮೇತದಿಷ್ಟಂ
ಭವೇದಥೈನಂ ಪರಿತಃ ಕುತಸ್ತತ್ ॥೨೨॥

ಆದರಿಂದ ಆನೆಯ ಮೊಗದವರೂ, ಹೊಂಗೆಯ ಮರ, ನೀಲಮಣಿ, ಕಾಡಿಗೆ ಇವುಗಳಂಥೆ ಮೈಬಣ್ಣವುಳ್ಳವರೂ, ಬಗೆ ಬಗೆಯಾದ ಆಯುಧಗಳನ್ನು ಹಿಡಿದಿರುವವರೂ ಆದ ಹಲವು ಬಗೆಯ ವಿನಾಯಕರು ಎದ್ದು ನಿಂತರು. ಬಳಿಕ ರುದ್ರದೇವನು ವ್ಯಾಕುಲಗೊಂಡ ಮನಸ್ಸಿನಿಂದ 'ಇದೇನು! ಅದ್ಭುತಕಾರ್ಯಗಳನ್ನು ಮಾಡುವ ಒಬ್ಬನು ಅಸದೃಶವಾದ ಮಹಿಮೆಯನ್ನು ತೋರಿಸಿದ್ದಾನೆ. ದೇವತೆಗಳಿಗೆ ಇಷ್ಟವಾದ ಇವನ ಸೃಷ್ಟಿಯನ್ನು ನಾನು ಮಾಡಿದೆನು. ಆಮೇಲೆ ಇವನ ಸುತ್ತಲೂ ಇರುವುದು ಹೇಗಾಯಿತು?' ಎಂದು ಚಿಂತಿಸುತ್ತಿದ್ದನು.

ದಿವೌಕಸಾಂ ಚಿಂತಯತಾಂ ತಥಾ ತು
ವಿನಾಯಕೈಃ ಕ್ಷ್ಮಾ ಕ್ಷುಭಿತಾ ಬಭೂವ ।
ಚತುರ್ಮುಖಶ್ಚಾಪ್ರತಿಮಂ ವಿಮಾನಮ್
ಆರುಹ್ಯ ಖೇ ವಾಕ್ಯಮಿದಂ ಜಗಾದ ॥೨೩॥

ದೇವತೆಗಳೂ ಹಾಗೆಯೇ ಚಿಂತಿಸುತ್ತಿರುವಷ್ಟರಲ್ಲಿ ಆ ವಿನಾಯಕರಿಂದ ಭೂಮಿಯು ಅಲ್ಲೋಲಕಲ್ಲೋಲವಾಯಿತು. ಬ್ರಹ್ಮನು ಅಸದೃಶವಾದ ವಿಮಾನವನ್ನೇರಿ ಬಂದು ಆಕಾಶದಲ್ಲಿ ನಿಂತು ಈ (ಮುಂದಿನ) ಮಾತನಾಡಿದನು.

ಧನ್ಯಾಃ ಸ್ಥ ದೇವಾಃ ಸುರನಾಯಕೇನ
ತ್ರಿಲೋಚನೇನಾದ್ಭುತರೂಪಿಣಾ ಚ ।
ಅನುಗ್ರಹೀತಾಃ ಪರಮೇಶ್ವರೇಣ
ಸುರದ್ವಿಷಾಂ ವಿಘ್ನಕೃತಾಂ ನತೌ ಚ ॥೨೪॥

'ದೇವತೆಗಳೇ! ನಿಮಗೊಡೆಯನೂ, ಮೂರುಕಣ್ಣುಳ್ಳವನೂ, ಅದ್ಭುತರೂಪನೂ ಆದ ಪರಮೇಶ್ವರನಿಂದ ಸುರದ್ವೇಷಿಗಳಿಗೆ ವಿಘ್ನಕಾರಿಯನ್ನು ಸೃಷ್ಟಿಸುವುದರ ಮೂಲಕ ಮೂಲಕವಾಗಿ ಅನುಗ್ರಹವನ್ನು ಪಡೆದ ನೀವು ಧನ್ಯರು'.

ಇತ್ಯೇವಮುಕ್ತ್ವಾ ಪ್ರಪಿತಾಮಹಸ್ತಾನ್
ಉವಾಚ ದೇವಸ್ತ್ರಿಶಿಖಾಸ್ತ್ರಪಾಣಿಮ್ ।
ಯಸ್ತೇ ವಿಭೋ ವಕ್ತ್ರಸಮುದ್ಭವಃ ಪ್ರಭುಃ
ವಿನಾಯಕಾನಾಂ ಭವ ಸಂತ್ವಿಮೇನುಗಾಃ ॥೨೫॥

ಹೀಗೆಂದು ಆ ಬ್ರಹ್ಮದೇವನು ಶೂಲಪಾಣಿಯಾದ ರುದ್ರನನ್ನು ಕುರಿತು 'ವಿಭುವಾದ ಭವನೇ! ನಿನ್ನ ಮುಖದಿಂದುದಿಸಿದವನು ಈ ವಿನಾಯಕರಿಗೆ ಪ್ರಭುವಾಗಲಿ. ಇವರು ಈತನ ಅನುಚರರಾಗಲಿ'.

ಭವಾನ್ ತಥಾಸ್ಯಾತ್ಮವರೇಣ ಚಾಂಬರೇ
ತ್ವಯಾ ಚತುರ್ಷ್ವಾಸ್ತು ಶರೀರಚಾರೀ ।
ಆಕಾಶಮೇತದ್ ಬಹುಧಾ ವ್ಯವಸ್ಥಿತಂ
ತ್ವಯಾ ಚೈ(ಕೋ)ತೇ ವದತಾ ತೇಽಪಯಾಂತು ॥೨೬॥

ನೀನು ಹಾಗೆಯೇ ಈತನಿಗೆ ಪ್ರಭು. ಬೇಕಾದ ವರವನ್ನು ಕೊಡುವ ನಿನ್ನಿಂದ ಈ ವಿನಾಯಕನು ಆಕಾಶದಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಈ ದೇಹದಿಂದಲೇ ಸಂಚರಿಸುವವನಾಗಲಿ. ಈ ಆಕಾಶವು ಆ ವಿನಾಯಕರಿಂದ ಬಹಳವಾಗಿ ತುಂಬಿದೆ. ನಿನ್ನ ಮಾತಿನಿಂದ ಅವರೆಲ್ಲರೂ ಹೊರಟುಹೋಗಲಿ.

ಪ್ರಭುರ್ಭವ ತ್ವಂ ಪ್ರತಿಮಾಸ್ತ್ರಪಾಣಯೇ
ಇಮಾನಿ ಚಾಸ್ತ್ರಾಣಿ ವರಾಂಶ್ಚ ದೇಹಿ ।
ಇತ್ಯೇವಮುಕ್ತ್ವಾ ವಿಗತೇ ಪಿತಾಮಹೇ
ತ್ರಿಲೋಚನಶ್ಚಾತ್ಮಭವಂ ಜಗಾದ ॥೨೭॥

ಭವನೇ! ಪ್ರಭುವಾದ ನೀನು ಅಸದೃಶವಾದ ಅಸ್ತ್ರವನ್ನು ಕೈಯಲ್ಲಿ ಹಿಡಿದುಕೊಂಡಿರುವ ಈ ಮೂಲವಿನಾಯಕನಿಗೆ ಈ ಅಸ್ತ್ರಗಳನ್ನೂ ವರಗಳನ್ನೂ ಕೊಡು' ಎಂದು ಹೇಳಿ ಬ್ರಹ್ಮನು ಹೊರಟು ಹೋಗಲು ತ್ರಿನೇತ್ರನಾದ ರುದ್ರನು ಮಗನನ್ನು ಕುರಿತು ಹೇಳಿದನು.

ವಿನಾಯಕೋ ವಿಘ್ನಕರೋ ಗಜಾಸ್ಯೋ
ಗಣೇಶನಾಮಾ ಚ ಭವಸ್ಯ ಪುತ್ರಃ ।

ಏತೇ ಚ ಸರ್ವೇ ತ್ವಪಯಾಂ ತು ಭೃತ್ಯಾ
ವಿನಾಯಕಾಃ ಕ್ರೂರದೃಶಃ ಪ್ರಚಂಡಾಃ ॥೨೮॥

'ನಿನಗೆ ವಿನಾಯಕ, (ದುಷ್ಕಾರ್ಯ) ವಿಘ್ನಕರ, ಗಜಾಸ್ಯ, ಗಣೇಶ, ಮಹೇಶಪುತ್ರ ಎಂಬ ಹೆಸರುಗಳಾಗಲಿ. ಕ್ರೂರವಾದ ದೃಷ್ಟಿಯುಳ್ಳವರೂ, ಅತಿಕ್ರೂರರರೂ, ನಿನ್ನ ಭೃತ್ಯರೂ ಆದ ಈ ವಿನಾಯಕರು ಇಲ್ಲಿಂದ ಹೊರಟುಹೋಗಲಿ.

ಉಚ್ಛೃಷ್ಮದಾನಾದಿ-ವಿವೃದ್ಧದೇಹಾಃ ಕಾರ್ಯೇಷು ಸಿದ್ಧಿಂ ಪ್ರತಿಪಾದಯಂತಃ॥೨೯॥

ಅವರು ಹೆಚ್ಚಾದ ತೇಜಸ್ಸಾಮರ್ಥ್ಯಮದಗಳಿಂದ ಕೂಡಿ ಬೆಳೆದು ಸಜ್ಜನರ ಮತ್ತು ದೇವತೆಗಳ ಕಾರ್ಯದಲ್ಲಿ ಸಿದ್ಧಿಯನ್ನುಂಟುಮಾಡುವವರಾಗಲಿ.

ಭವಾಂಶ್ಚ ದೇವೇಷು ತಥಾ ಮಖೇಷು
ಕಾರ್ಯೇಷು ಚಾನ್ಯೇಷು ಮಹಾನುಭಾವಃ ।
ಅಗ್ರೇ ತು ಪೂಜಾಂ ಲಭತೇನ್ಯಥಾ ಚ
ವಿನಾಶಯಿಷ್ಯಸ್ಯಥ ಕಾರ್ಯಸಿದ್ಧಿಮ್ ॥೩೦॥

ಮಹಾನುಭಾವನಾಗಿ ನೀನು ಯಜ್ಞಗಳಲ್ಲಿಯೂ ಬೇರೆ ಕಾರ್ಯಗಳಲ್ಲಿಯೂ ದೇವತೆಗಳಲ್ಲಿ ಅಗ್ರಪೂಜೆಯನ್ನು ಪಡೆಯುತ್ತೀಯೆ. ನಿನಗೆ ಅಗ್ರಪೂಜೆಯಾಗದಿದ್ದರೆ ಕಾರ್ಯಸಿದ್ಧಿಯನ್ನು ಹಾಳು ಮಾಡುತ್ತೀಯೆ'.

ಇತ್ಯೇವಮುಕ್ತ್ವಾ ಪರಮೇಶ್ವರೇಣ
ಸುರೈಃ ಸಮಂ ಕಾಂಚನಕುಂಭಸಂಸ್ಥೈಃ ।
ಜಲೈಸ್ತಥಾಸಾವಭಿಷಿಕ್ತಗಾತ್ರೋ
ರರಾಜ ರಾಜೇಂದ್ರ ವಿನಾಯಕಾನಾಮ್ ॥೩೧॥

ಹೀಗೆ ಹೇಳಿ ದೇವತೆಗಳೊಡನೆ ಪರಮೇಶ್ವರನು ಸುವರ್ಣಕಲಶಗಳಲ್ಲಿದ್ದ ನೀರಿನಿಂದ ಅಭಿಷೇಕಮಾಡಲಾಗಿ ಆ ವಿನಾಯಕರಾಜನಾದ ಗಣಪತಿಯು ಪ್ರಕಾಶಿಸಿದನು.

ದೃಷ್ಟ್ವಾಭಿಷಿಚ್ಯಮಾನಂ ತು ದೇವಾಸ್ತಂ ಗಣನಾಯಕಮ್ ।
ತುಷ್ಟುವುಃ ಪ್ರಯತಾಃ ಸರ್ವೇ ತ್ರಿಶೂಲಾಸ್ತ್ರಸ್ಯ ಸನ್ನಿಧೌ ॥೩೨॥

ಅಭಿಷೇಕ ಮಾಡಿಸಿಕೊಳ್ಳುತ್ತಿದ್ದ ಆ ಗಣಪತಿಯನ್ನು ನೋಡಿ ದೇವತೆಗಳೆಲ್ಲರೂ ತ್ರಿಶೂಲಪಾಣಿಯಾದ ಆ ಶಿವನೆದುರಿನಲ್ಲಿಯೇ ಪರಿಶುದ್ಧರಾಗಿ ಸ್ತೋತ್ರಮಾಡಿದರು.

ದೇವಾ ಊಚುಃ –
ನಮಸ್ತೇ ಗಜವಕ್ತ್ರಾಯ ನಮಸ್ತೇ ಗಣನಾಯಕ ।
ವಿನಾಯಕ ನಮಸ್ತೇಽಸ್ತು ನಮಸ್ತೇ ಚಂಡವಿಕ್ರಮ ॥೩೩॥

ವಂದನಂ ಗಜವಕ್ತ್ರಂಗೆ ವಂದನಂ ಗಣನಾಯಕ. ಬೆನಕಂಗೆ ನಮಸ್ಕಾರಂ, ವಂದನಂ ಚಂಡವಿಕ್ರಮ.

ನಮೋಽಸ್ತು ತೇ ವಿಘ್ನಕರ್ತ್ರೇ ನಮಸ್ತೇ ಸರ್ಪಮೇಖಲ ।
ನಮಸ್ತೇ ರುದ್ರವಕ್ತ್ರೋತ್ಥ ಪ್ರಲಂಬಜಠರಾಶ್ರಿತಃ ॥
ಸರ್ವದೇವನಮಸ್ಕಾರಾದವಿಘ್ನಂ ಕುರು ಸರ್ವದಾ ॥೩೪॥

ನಮಸ್ಕಾರಂ ವಿಘ್ನಕಾರಿ, ವಂದನಂ ಸರ್ಪಮೇಖಲ, ವಂದನಂ ರುದ್ರಮುಖಜ, ಲಂಬೋದರನೆ ವಂದನಂ. ಸರ್ವದೇವ ನಮಸ್ಕಾರಂ ಅವಿಘ್ನಂ ಮಾಳ್ಪುದಾವಗಮ್.

ಏವಂ ಸ್ತುತಸ್ತದಾ ದೇವೈಃ ಮಹಾತ್ಮಾ ಗಣನಾಯಕಃ ।
ಅಭಿಷಿಕ್ತಸ್ತು ರುದ್ರೇಣ ಸೋಮಾಯಾಃಪತ್ಯತಾಂಗತಃ ॥೩೫॥

ರುದ್ರನಿಂದ ಅಭಿಷಿಕ್ತನಾಗಿ ದೇವತೆಗಳಿಂದ ಹೀಗೆ ಸ್ತುತನಾದ ಮಹಾತ್ಮನಾದ ಆ ಗಣಪತಿಯು ಆಗ ಪಾರ್ವತಿಗೂ ಪುತ್ರತ್ವವನ್ನು ಪಡೆದನು.

ಏತಚ್ಚತುರ್ಥ್ಯಾಂ ಸಂಪನ್ನಂ ಗಣಾಧ್ಯಕ್ಷಸ್ಯ ಪಾರ್ಥಿವ ।
ಯತಸ್ತತೋಽಯಂ ಮಹತೀ ತಿಥೀನಾಂ ಪರಮಾ ತಿಥಿಃ ॥೩೬॥

ದೊರೆಯೇ! ಗಣನಾಥನ ಈ ವಿಚಾರವು ಚೌತಿಯ ದಿನ ನಡೆದುದರಿಂದ ಉತ್ತಮವಾದ ಈ ಚೌತಿಯು ತಿಥಿಗಳಲ್ಲೆಲ್ಲಾ ಶ್ರೇಷ್ಠವಾದುದು.

ಏತಸ್ಯಾಂ ಯಸ್ತಿಲಾನ್ ಭುಕ್ತ್ವಾ ಭಕ್ತ್ಯಾ ಗಣಪತಿಂ ನೃಪ ।
ಆರಾಧಯತಿ ತಸ್ಯಾಶು ತುಷ್ಯತೇ ನಾತ್ರ ಸಂಶಯಃ ॥೩೭॥

ಈ ಚೌತಿಯಲ್ಲಿ ಭಕ್ತಿಯಿಂದ ಗಣಪತಿಯನ್ನು ಪೂಜಿಸಿ, ಎಳ್ಳನ್ನು ಮಾತ್ರ ತಿಂದಿರುವವರಿಗೆ ತೃಪ್ತನಾದ ಅವನು ಒಲಿಯುವುದರಲ್ಲಿ ಸಂದೇಹವಿಲ್ಲ.

ಯಶ್ಚೈತತ್ಪಠತಿ ಸ್ತೋತ್ರಂ ಯಶ್ಚೈತಚ್ಛೃಣುಯಾತ್ ಸದಾ ।
ನ ತಸ್ಯ ವಿಘ್ನಾ ಜಾಯಂತೇ ನ ಪಾಪಂ ಸರ್ವಥಾ ನೃಪ ॥೩೮॥

ಇತಿ ಶ್ರೀವರಾಹಪುರಾಣೇ ಆದಿವೃತ್ತಾಂತೇ ಮಹಾತಪ ಉಪಾಖ್ಯಾನೇ
ವಿನಾಯಕೋತ್ಪತ್ತಿರ್ನಾಮ ತ್ರಯೋವಿಂಶೋಽಧ್ಯಾಯಃ ॥

ಯಾರು ಸದಾ ಈ ಸ್ತೋತ್ರವನ್ನು ಹೇಳುವರೋ, ಯಾರು ಕೇಳುವರೋ, ಅವರಿಗೆ ನಿಜವಾಗಿಯೂ ಕಾರ್ಯಗಳಲ್ಲಿ ತಡೆಯುಂಟಾಗುವುದಿಲ್ಲ. ಪಾಪವೂ ಇಲ್ಲ.

ವರಾಹಪುರಾಣದಲ್ಲಿ 'ವಿನಾಯಕೋತ್ಪತ್ತಿ' ಎಂಬ
೨೩ನೆಯ ಅಧ್ಯಾಯವು ಮುಗಿಯಿತು.

* * * * *

# ಗಣಪತಿ ವ್ರತದ ಕಥೆ

## ವಿಘ್ನಗಳ ನಿವಾರಣೆಗೆ ಏನು ಉಪಾಯ?

ಋಷಯೋ ವಿಘ್ನಬಾಹುಲ್ಯಂ ವಿಚಾರ್ಯಾಽದೌ ಸ್ವಕರ್ಮಸು ।
ಸಂಗತಾ ನೈಮಿಷಾರಣ್ಯೇ ಸರ್ವೇ ಸೂತಮಥಾಬ್ರುವನ್ ॥೧॥

ಎಲ್ಲ ಋಷಿಗಳೂ ತಮ್ಮ ಸತ್ಕರ್ಮಗಳಲ್ಲಿ ನಿರಂತರ ಆಸಕ್ತರಾಗಿದ್ದಾರೆ. ಆದ್ದರಿಂದ ತಮ್ಮ ಸತ್ಕರ್ಮಗಳಿಗೆ ಎದುರಾಗುತ್ತಿದ್ದ ವಿಘ್ನಗಳ ಪರಿಹಾರಕ್ಕೆ ಏನು ಮಾಡಬೇಕೆಂದು ವಿಚಾರ ಮಾಡಿದರು. ಅದಕ್ಕಾಗಿ ಆ ನೈಮಿಷಾರಣ್ಯದಲ್ಲಿ ಕಥೆಯನ್ನು ಹೇಳಲು ತೊಡಗಿದ ಸೂತಪುರಾಣಿಕರ ಬಳಿ ವಿಘ್ನಪರಿಹಾರಕ್ಕೆ ಉಪಾಯವನ್ನು ಕೇಳಿದರು.

## ಇಷ್ಟಾರ್ಥಪ್ರಾಪ್ತಿಗೇನು ಉಪಾಯ?

ಋಷಯಃ

ನಿರ್ವಿಘ್ನೇನ ತು ಕಾರ್ಯಾಣಿ ಕಥಂ ಸಿಧ್ಯಂತಿ ಸೂತಜ ।
ಅರ್ಥಸಿದ್ಧಿಃ ಕಥಂ ನೃಣಾಂ ಪುತ್ರಸೌಭಾಗ್ಯಸಂಪದಃ ॥೨॥

ದೃಷ್ಟ್ವಾಭಿಷಿಚ್ಯಮಾನಂ ತು ದೇವಾಸ್ತಂ ಗಣನಾಯಕಮ್ ।
ತುಷ್ಟುವುಃ ಪ್ರಯತಾಃ ಸರ್ವೇ ತ್ರಿಶೂಲಾಸ್ತ್ರಸ್ಯ ಸನ್ನಿಧೌ ॥೩೨॥

ಅಭಿಷೇಕ ಮಾಡಿಸಿಕೊಳ್ಳುತ್ತಿದ್ದ ಆ ಗಣಪತಿಯನ್ನು ನೋಡಿ ದೇವತೆಗಳೆಲ್ಲರೂ ತ್ರಿಶೂಲಪಾಣಿಯಾದ ಆ ಶಿವನೆದುರಿನಲ್ಲಿಯೇ ಪರಿಶುದ್ಧರಾಗಿ ಸ್ತೋತ್ರಮಾಡಿದರು.

ದೇವಾ ಊಚುಃ –
ನಮಸ್ತೇ ಗಜವಕ್ತ್ರಾಯ ನಮಸ್ತೇ ಗಣನಾಯಕ ।
ವಿನಾಯಕ ನಮಸ್ತೇಸ್ತು ನಮಸ್ತೇ ಚಂಡವಿಕ್ರಮ ॥೩೩॥

ವಂದನಂ ಗಜವಕ್ತ್ರಂಗೆ ವಂದನಂ ಗಣನಾಯಕ. ಬೆನಕಂಗೆ ನಮಸ್ಕಾರಂ, ವಂದನಂ ಚಂಡವಿಕ್ರಮ.

ನಮೋಸ್ತು ತೇ ವಿಘ್ನಕರ್ತ್ರೇ ನಮಸ್ತೇ ಸರ್ಪಮೇಖಲ ।
ನಮಸ್ತೇ ರುದ್ರವಕ್ತ್ರೋತ್ಥ ಪ್ರಲಂಬಜಠರಾಶ್ರಿತಃ ॥
ಸರ್ವದೇವನಮಸ್ಕಾರಾದವಿಘ್ನಂ ಕುರು ಸರ್ವದಾ ॥೩೪॥

ನಮಸ್ಕಾರಂ ವಿಘ್ನಕಾರಿ, ವಂದನಂ ಸರ್ಪಮೇಖಲ, ವಂದನಂ ರುದ್ರಮುಖಜ, ಲಂಬೋದರನೆ ವಂದನಂ. ಸರ್ವದೇವ ನಮಸ್ಕಾರಂ ಅವಿಘ್ನಂ ಮಾಳ್ಪುದಾವಗಮ್.

ಏವಂ ಸ್ತುತಸ್ತದಾ ದೇವೈಃ ಮಹಾತ್ಮಾ ಗಣನಾಯಕಃ ।
ಅಭಿಷಿಕ್ತಸ್ತು ರುದ್ರೇಣ ಸೋಮಾಯಾಪತ್ಯತಾಂಗತಃ ॥೩೫॥

ರುದ್ರನಿಂದ ಅಭಿಷಿಕ್ತನಾಗಿ ದೇವತೆಗಳಿಂದ ಹೀಗೆ ಸ್ತುತನಾದ ಮಹಾತ್ಮನಾದ ಆ ಗಣಪತಿಯು ಆಗ ಪಾರ್ವತಿಗೂ ಪುತ್ರತ್ವವನ್ನು ಪಡೆದನು.

ಏತಚ್ಚತುರ್ಥ್ಯಾಂ ಸಂಪನ್ನಂ ಗಣಾಧ್ಯಕ್ಷಸ್ಯ ಪಾರ್ಥಿವ ।
ಯತಸ್ತತೋಽಯಂ ಮಹತೀ ತಿಥೀನಾಂ ಪರಮಾ ತಿಥಿಃ ॥೩೬॥

ದೊರೆಯೇ! ಗಣನಾಥನ ಈ ವಿಚಾರವು ಚೌತಿಯ ದಿನ ನಡೆದುದರಿಂದ ಉತ್ತಮವಾದ ಈ ಚೌತಿಯು ತಿಥಿಗಳಲ್ಲೆಲ್ಲಾ ಶ್ರೇಷ್ಠವಾದುದು.

ಏತಸ್ಯಾಂ ಯಸ್ತಿಲಾನ್ ಭುಕ್ತ್ವಾ ಭಕ್ತ್ಯಾ ಗಣಪತಿಂ ನೃಪ ।
ಆರಾಧಯತಿ ತಸ್ಯಾಶು ತುಷ್ಯತೇ ನಾತ್ರ ಸಂಶಯಃ ॥೩೭॥

ಈ ಚೌತಿಯಲ್ಲಿ ಭಕ್ತಿಯಿಂದ ಗಣಪತಿಯನ್ನು ಪೂಜಿಸಿ, ಎಳ್ಳನ್ನು ಮಾತ್ರ ತಿಂದಿರುವವರಿಗೆ ತೃಪ್ತನಾದ ಅವನು ಒಲಿಯುವುದರಲ್ಲಿ ಸಂದೇಹವಿಲ್ಲ.

ಯಶ್ಚೈತತ್ಪಠತಿ ಸ್ತೋತ್ರಂ ಯಶ್ಚೈತಚ್ಛೃಣುಯಾತ್ ಸದಾ ।
ನ ತಸ್ಯ ವಿಘ್ನಾ ಜಾಯಂತೇ ನ ಪಾಪಂ ಸರ್ವಥಾ ನೃಪ ॥೩೮॥

ಇತಿ ಶ್ರೀವರಾಹಪುರಾಣೇ ಆದಿವೃತ್ತಾಂತೇ ಮಹಾತಪ ಉಪಾಖ್ಯಾನೇ
ವಿನಾಯಕೋತ್ಪತ್ತಿರ್ನಾಮ ತ್ರಯೋವಿಂಶೋಽಧ್ಯಾಯಃ ॥

ಯಾರು ಸದಾ ಈ ಸ್ತೋತ್ರವನ್ನು ಹೇಳುವರೋ, ಯಾರು ಕೇಳುವರೋ, ಅವರಿಗೆ ನಿಜವಾಗಿಯೂ ಕಾರ್ಯಗಳಲ್ಲಿ ತಡೆಯುಂಟಾಗುವುದಿಲ್ಲ. ಪಾಪವೂ ಇಲ್ಲ.

ವರಾಹಪುರಾಣದಲ್ಲಿ 'ವಿನಾಯಕೋತ್ಪತ್ತಿ' ಎಂಬ
೨೩ನೆಯ ಅಧ್ಯಾಯವು ಮುಗಿಯಿತು.

* * * * *

# ಗಣಪತಿ ವ್ರತದ ಕಥೆ

## ವಿಘ್ನಗಳ ನಿವಾರಣೆಗೆ ಏನು ಉಪಾಯ?

ಋಷಯೋ ವಿಘ್ನಬಾಹುಲ್ಯಂ ವಿಚಾರ್ಯಾಽದೌ ಸ್ವಕರ್ಮಸು ।
ಸಂಗತಾ ನೈಮಿಷಾರಣ್ಯೇ ಸರ್ವೇ ಸೂತಮಥಾಬ್ರುವನ್ ॥೧॥

ಎಲ್ಲ ಋಷಿಗಳೂ ತಮ್ಮ ಸತ್ಕರ್ಮಗಳಲ್ಲಿ ನಿರಂತರ ಆಸಕ್ತರಾಗಿದ್ದಾರೆ. ಆದ್ದರಿಂದ ತಮ್ಮ ಸತ್ಕರ್ಮಗಳಿಗೆ ಎದುರಾಗುತ್ತಿದ್ದ ವಿಘ್ನಗಳ ಪರಿಹಾರಕ್ಕೆ ಏನು ಮಾಡಬೇಕೆಂದು ವಿಚಾರ ಮಾಡಿದರು. ಅದಕ್ಕಾಗಿ ಆ ನೈಮಿಷಾರಣ್ಯದಲ್ಲಿ ಕಥೆಯನ್ನು ಹೇಳಲು ತೊಡಗಿದ ಸೂತಪುರಾಣಿಕರ ಬಳಿ ವಿಘ್ನಪರಿಹಾರಕ್ಕೆ ಉಪಾಯವನ್ನು ಕೇಳಿದರು.

## ಇಷ್ಟಾರ್ಥಪ್ರಾಪ್ತಿಗೇನು ಉಪಾಯ?

ಋಷಯಃ

ನಿರ್ವಿಘ್ನೇನ ತು ಕಾರ್ಯಾಣಿ ಕಥಂ ಸಿದ್ಧ್ಯಂತಿ ಸೂತಜ ।
ಅರ್ಥಸಿದ್ಧಿಃ ಕಥಂ ನೄಣಾಂ ಪುತ್ರಸೌಭಾಗ್ಯಸಂಪದಃ ॥೨॥

ಋಷಿಗಳು ಹೇಳುತ್ತಾರೆ – ಓ ಸೂತಪುರಾಣಿಕರೇ! ನಮ್ಮ ಸತ್ಕರ್ಮಗಳಿಗೆ ಅನೇಕ ವಿಘ್ನಗಳು ಎದುರಾಗುತ್ತವೆ. ಆ ಎಲ್ಲ ವಿಘ್ನಗಳು ಪರಿಹಾರವಾಗಬೇಕು. ಸತ್ಕಾರ್ಯಗಳು ಸಮಾಪ್ತಿಗೊಳ್ಳಬೇಕು. ಮತ್ತು ಆ ಸತ್ಕರ್ಮಾಚರಣೆಯಿಂದ ಫಲವು ದೊರಕಬೇಕು. ಪುತ್ರಪ್ರಾಪ್ತಿಯಾಗಬೇಕು. ಸಂಪತ್ತು ಹೆಚ್ಚಬೇಕು. ಇಷ್ಟಾರ್ಥಗಳು ನೆರವೇರಬೇಕು. ಇದಕ್ಕೇನು ಉಪಾಯ? ತಿಳಿಸಿರಿ.

## ಸಂತೋಷವಾಗಿರಲು ಏನು ಉಪಾಯ?

ದಂಪತ್ಯೋಃ ಕಲಹೇ ಚೈವ ಬಂಧುಭೇದೇ ತಥಾ ನೃಣಾಮ್ ।
ಉದಾಸೀನೇಷು ಲೋಕೇಷು ಕಥಂ ಸುಮುಖತಾ ಭವೇತ್ ॥೩॥

ಗಂಡಹೆಂಡಂದಿರ ಮಧ್ಯದಲ್ಲಿ ಜಗಳವುಂಟಾದರೆ, ಬಂಧುಗಳಿಗೆ ಜಗಳವಾದರೆ, ಸಮಸ್ತಲೋಕವೇ ಇವನ ವಿಷಯದಲ್ಲಿ ಉದಾಸೀನ ಮಾಡಿದರೆ ಆಗ ಪ್ರಸನ್ನನಾಗಿ ಇರುವ ಬಗೆ ಹೇಗೆ?

ವಿದ್ಯಾರಂಭೇ ತಥಾ ನೃಣಾಂ ವಾಣಿಜ್ಯಾಯಾಂ ಕೃಷೌ ತಥಾ ।
ನೃಪತೇಃ ಪರಚಕ್ರಸ್ಯ ಜಯಸಿದ್ಧಿಃ ಕಥಂ ಭವೇತ್ ॥೪॥

ವಿದ್ಯೆಯನ್ನು ಕಲಿಯಲು ಪ್ರಾರಂಭಿಸುವಾಗ, ವ್ಯಾಪಾರವನ್ನು ಮಾಡಲು ಪ್ರಾರಂಭಿಸಿದಾಗ, ಕೃಷಿಯನ್ನು ಪ್ರಾರಂಭಿಸುವಾಗ, ರಾಜನಾದವನು ಶತ್ರುನಿಗ್ರಹಕ್ಕಾಗಿ ಹೊರಟಾಗ ಜಯವು ಹೇಗೆ ಲಭಿಸುತ್ತದೆ? ಎಂಬುದರ ಬಗ್ಗೆ ತಿಳಿಸಿರಿ.

ಕಾಂ ದೇವತಾಂ ನಮಸ್ಕೃತ್ಯ ಪೂಜಾಸಿದ್ಧಿರ್ಭವೇನ್ನೃಣಾಮ್ ।
ಉಕ್ತಂ ಸರ್ವಂ ಯದೇತತ್ ತು ಸೂತ ವಿಸ್ತರತೋ ವದ ॥೫॥

ಯಾವ ದೇವತೆಯನ್ನು ನಮಸ್ಕಾರ ಮಾಡುವುದರಿಂದ ಪೂಜೆಯ ಫಲವು ಮನುಷ್ಯರಿಗೆ ಸಂಪೂರ್ಣವಾಗಿ ದೊರಕುತ್ತದೋ, ಅದನ್ನು ವಿಸ್ತಾರವಾಗಿ ತಿಳಿಸಿರಿ.

## ಸೂತರಿಂದ ಪ್ರಶ್ನೆಗಳಿಗೆ ಉತ್ತರ

ಸೂತಃ –
ಸನ್ನದ್ಧಯೋಃ ಪುರಾ ವಿಪ್ರಾ ಕುರುಪಾಂಡವಸೇನಯೋಃ ।
ಪೃಷ್ಟವಾನ್ ದೇವಕೀಪುತ್ರಂ ಧರ್ಮಪುತ್ರೋ ಯುಧಿಷ್ಠಿರಃ ॥೬॥

ಸೂತಪುರಾಣಿಕರು ಶೌನಕಾದಿ ಋಷಿಗಳಿಗೆ ಹೇಳಲು ಪ್ರಾರಂಭ ಮಾಡುತ್ತಾರೆ –

ಓ ವಿಪ್ರರೇ! ಕೇಳಿರಿ ಹೇಳುತ್ತೇನೆ. ಹಿಂದೆ ಕುರುಪಾಂಡವರಿಗೆ ಮಹಾಭಾರತದ ಯುದ್ಧವಾಯಿತು. ಆ ಸಂದರ್ಭದಲ್ಲಿ ದೇವಕೀತನಯನಾದ ಶ್ರೀಕೃಷ್ಣನನ್ನು ಕುರಿತು ಯಮಧರ್ಮನ ಅವತಾರನಾದ ಯುಧಿಷ್ಠಿರನು ಪ್ರಶ್ನಿಸುತ್ತಾನೆ.

ಯುಧಿಷ್ಠಿರಃ –

ನಿರ್ವಿಘ್ನೇನ ಜಯಂ ಮಹ್ಯಂ ವದ ತ್ವಂ ದೇವಕೀಸುತ ।

ಕಾಂ ದೇವತಾಂ ನಮಸ್ಕೃತ್ಯ ಸಮ್ಯಗ್ ರಾಜ್ಯಂ ಲಭೇಮಹಿ ॥೭॥

ಯುಧಿಷ್ಠಿರನು ಹೇಳುತ್ತಾನೆ – ಶ್ರೀಕೃಷ್ಣಪರಮಾತ್ಮನೇ! ಈ ಮಹಾಯುದ್ಧದಲ್ಲಿ ನಾನು ಜಯಗಳಿಸಬೇಕು. ಯಾವ ದೇವನನ್ನು ಪೂಜೆ ಮಾಡುವುದರಿಂದ ನನ್ನೆಲ್ಲ ವಿಘ್ನಗಳು ಪರಿಹಾರವಾಗುತ್ತವೆ. ನಾನು ಯುದ್ಧದಲ್ಲಿ ಹೇಗೆ ಜಯಶೀಲನಾಗುತ್ತೇನೆ ಮತ್ತು ಸಮಸ್ತರಾಜ್ಯವನ್ನು ಹೇಗೆ ಪಡೆಯುತ್ತೇನೆ? ಕೃಪೆಯಿಂದ ನನಗೆ ತಿಳಿಸು.

## ಶ್ರೀಕೃಷ್ಣನಿಂದ ಗಣೇಶಚತುರ್ಥಿಯ ಮಹಿಮೆ
## ಬಿಳಿ ಎಳ್ಳಿನಿಂದ ಸ್ನಾನ ಮಾಡಿರಿ

ಶ್ರೀಕೃಷ್ಣಃ–

ಮಾಸಿ ಭಾದ್ರಪದೇ ಶುಕ್ಲೇ ಚತುರ್ಥ್ಯಾಂ ಪೂಜಯೇನ್ನೃಪ ।

ಯದಾ ಚೋತ್ಪದ್ಯತೇ ಭಕ್ತಿಸ್ತದಾ ಪೂಜ್ಯೋ ಗಣಾಧಿಪಃ ॥೮॥

ಶ್ರೀಕೃಷ್ಣನು ಉತ್ತರಿಸುತ್ತಾನೆ– ಧರ್ಮರಾಜನೇ! ಹೇಳುವೆನು ಕೇಳು. ಭಾದ್ರಪದ ಮಾಸದ ಶುಕ್ಲಪಕ್ಷದಲ್ಲಿ ಬರುವ ಚತುರ್ಥಿಯ ದಿವಸ ಮಹಾಗಣಪತಿಯನ್ನು ಪೂಜೆ ಮಾಡಬೇಕು. ನೀನು ಭಕ್ತಿಯಿಂದ ಪೂಜಿಸಿದಲ್ಲಿ ನಿನ್ನ ಅಭೀಷ್ಟವು ನೆರವೇರುತ್ತದೆ.

ಪ್ರಾತಃ ಶುಕ್ಲತಿಲೈಃ ಸ್ನಾತ್ವಾ ಮಧ್ಯಾಹ್ನೇ ದೇವಮರ್ಚಯೇತ್ ।

ಸ್ವಶಕ್ತ್ಯಾ ಗಣನಾಥಸ್ಯ ಸ್ವರ್ಣರೂಪ್ಯಮಯಾಕೃತಿಮ್ ॥೯॥

ಗಣೇಶಚತುರ್ಥಿಯ ದಿವಸ ಉಷಃಕಾಲದಲ್ಲಿ ಬಿಳಿಯ ಎಳ್ಳುಗಳನ್ನು ಹಚ್ಚಿಕೊಂಡು ಸ್ನಾನ ಮಾಡಬೇಕು. ಮಧ್ಯಾಹ್ನ ಕಾಲದಲ್ಲಿ ಭಕ್ತಿಪೂರ್ವಕವಾಗಿ

ಗಣಪತಿಯನ್ನು ಪೂಜೆ ಮಾಡಬೇಕು. ಶಕ್ತ್ಯನುಸಾರವಾಗಿ ಚಿನ್ನದ ಪ್ರತಿಮೆಯನ್ನು ಅಥವಾ ಬೆಳ್ಳಿಯ ಪ್ರತಿಮೆಯನ್ನು ಮಾಡಿಸಿ ಪೂಜೆಗೈಯಬೇಕು.

ಅಥವಾ ಮೃಣ್ಮಯಂ ಕುರ್ಯಾದ್ ವಿತ್ತಶಾಠ್ಯಂ ನ ಕಾರಯೇತ್ ।
ಏಕದಂತಂ ಶೂರ್ಪಕರ್ಣಂ ಗಜವಕ್ತ್ರಂ ಚತುರ್ಭುಜಮ್ ॥೧೦॥

ಅಥವಾ ಮಣ್ಣಿನ ಗಣಪತಿಯ ಪ್ರತಿಮೆಯನ್ನು ನಿರ್ಮಾಣ ಮಾಡಿ ಭಕ್ತಿಯಿಂದ ಪೂಜೆ ಮಾಡಬೇಕು. ಆದರೆ ದುಡ್ಡು ಖರ್ಚುಮಾಡುವಲ್ಲಿ ಜಿಪುಣತನ ಮಾಡಬಾರದು. ಆ ಮಣ್ಣಿನ ಪ್ರತಿಮೆಯು ಒಂದು ದಂತ, ಮೊರದಂತಹ ಎರಡು ಕಿವಿ, ಆನೆಯ ಮುಖ, ನಾಕು ತೋಳುಗಳಿಂದ ಕೂಡಿರಬೇಕು.

ಪಾಶಾಂಕುಶಧರಂ ದೇವಂ ಧ್ಯಾಯೇದ್ ಸಿದ್ಧಿವಿನಾಯಕಮ್ ।
ಕೃತ್ವಾ ಪೂಜಾಂ ಪ್ರಯತ್ನೇನ ಸ್ನಾಪ್ಯ ಪಂಚಾಮೃತೈಃ ಪೃಥಕ್ ॥೧೧॥

ನಾಕು ತೋಳುಗಳಲ್ಲಿ ಪಾಶ, ದಂತ, ಅಂಕುಶ, ಅಭಯಗಳನ್ನು ಧಾರಣೆ ಮಾಡಿರಬೇಕು. ಇಂಥ ಗಣಪತಿಯ ಮೂರ್ತಿಯನ್ನು ಧ್ಯಾನ ಮಾಡಬೇಕು. ಪಂಚಾಮೃತಗಳಿಂದ ಸ್ನಾನಮಾಡಿಸಿ, ಷೋಡಶೋಪಚಾರಪೂಜೆಯನ್ನು ಪ್ರಯತ್ನಪೂರ್ವಕವಾಗಿ ಮಾಡಬೇಕು.

## ಗಣಪತಿಪೂಜಾವಿಧಾನ

ಗಣಾಧ್ಯಕ್ಷೇತಿ ನಾಮ್ನಾ ತು ಗಂಧಂ ದದ್ಯಾಚ್ಚ ಭಕ್ತಿತಃ ।
ವಿನಾಯಕೇತಿ ಪುಷ್ಪಾಣಿ ಧೂಪಂ ಚೋಮಾಸುತಾಯ ಚ ॥೧೨॥

'ಗಣಾಧ್ಯಕ್ಷ' ಎಂಬ ನಾಮವನ್ನು ಹೇಳಿ ಗಂಧವನ್ನು ಲೇಪನೆ ಮಾಡಬೇಕು. ಯಾವ ಕ್ಷಣದಲ್ಲೂ ಭಕ್ತಿಹೀನನಾಗಬಾರದು. ''ವಿನಾಯಕ'' ಎಂಬ ಹೆಸರನ್ನು ಹೇಳಿ ಪುಷ್ಪಗಳಿಂದ ಅಲಂಕರಿಸಬೇಕು. ''ಉಮಾಸುತ'' ಎಂಬ ನಾಮದಿಂದ ಧೂಪವನ್ನು ಸಮರ್ಪಿಸಬೇಕು.

ದೀಪಂ ರುದ್ರಪ್ರಿಯಾಯೇತಿ ನೈವೇದ್ಯಂ ವಿಘ್ನನಾಶಿನೇ ।
ತತೋ ದೂರ್ವಾಃ ಸುಸಂಗೃಹ್ಯ ವಿಂಶತಿಂ ಚೈಕಮೇವ ಚ ॥೧೩॥

''ರುದ್ರಪ್ರಿಯ''ನೆಂದು ಭಾವಿಸಿ ಗಣಪತಿಗೆ ದೀಪಸಮರ್ಪಣೆ ಮಾಡಬೇಕು. ''ವಿಘ್ನನಾಶಕ''ನೆಂದು ಚಿಂತನೆ ಮಾಡುತ್ತಾ ನೈವೇದ್ಯವನ್ನು ಮಾಡಬೇಕು. ಅನಂತರ ಸಂಗ್ರಹಿಸಿದ ೨೧ಗರಿಕೆಗಳಿಂದ ಗಣಪತಿಯನ್ನು ಪೂಜಿಸಬೇಕು.

ಪೂಜನೀಯಂ ಗಣಾಧ್ಯಕ್ಷಮೇಭಿರ್ನಾಮಭಿರರ್ಚಯೇತ್ ।
ಗಣಾಧಿಪ ನಮಸ್ತೇಽಸ್ತು ಉಮಾಪುತ್ರಾಘನಾಶನ ॥೧೪॥

೨೧ ಗರಿಕೆಗಳನ್ನು ತೆಗೆದುಕೊಂಡು ಮುಂದೆ ಹೇಳುವ ಗಣಪತಿಯ ನಾಮಗಳಿಂದ ಕ್ರಮವಾಗಿ ಪೂಜೆ ಮಾಡಬೇಕು. ಗಣಾಧಿಪನೇ ನಿನಗೆ ನನ್ನ ಭಕ್ತಿಪೂರ್ವಕವಾದ ನಮಸ್ಕಾರಗಳು. ನೀನು ಉಮೆಯ ಪುತ್ರನಾಗಿರುವೆ. ಪಾಪಗಳನ್ನು ಪರಿಹರಿಸುವುದರಿಂದ ಅಘನಾಶನ ಆಗಿರುವೆ.

ವಿನಾಯಕೇಶಪುತ್ರೇತಿ ಸರ್ವಸಿದ್ಧಿಪ್ರದಾಯಕ ।
ಏಕದಂತೇಭವಕ್ತ್ರೇತಿ ತಥಾ ಮೂಷಿಕವಾಹನ ॥೧೫॥

ವಿಶಿಷ್ಟನಾಯಕನಾಗಿರುವುದರಿಂದ ''ವಿನಾಯಕ'' ಎನಿಸಿರುವಿ. ಮಹಾರುದ್ರದೇವರ ಮಗನಾಗಿರುವುದರಿಂದ ''ಈಶಪುತ್ರ'' ಆಗಿರುವಿ. ಭಕ್ತರ ಎಲ್ಲ ಅಭೀಷ್ಟಗಳನ್ನು ನೀಡುವವನಾಗಿರುವುದರಿಂದ ''ಸರ್ವಸಿದ್ಧಿಪ್ರದಾಯಕ'' ಆಗಿರುವಿ. ಯುದ್ಧಕ್ಕಾಗಿ ನಿನ್ನ ದಂತವನ್ನೇ ಉಪಯೋಗಿಸಿ ''ಏಕದಂತ'' ಆಗಿರುವಿ. ಆನೆಯ ಮುಖವನ್ನು ಧರಿಸಿ ''ಇಭವಕ್ತ್ರ'' ಎನಿಸಿರುವಿ. ಇಲಿಯನ್ನೇ ವಾಹನವನ್ನಾಗಿ ಮಾಡಿಕೊಂಡು ''ಮೂಷಕವಾಹನ'' ಆಗಿರುವಿ.

ಕುಮಾರಗುರವೇ ತುಭ್ಯಂ ನಮಸ್ಕುರ್ಯಾತ್ ಪ್ರಯತ್ನತಃ ।
ದೂರ್ವಾಯುಗ್ಮಂ ಗೃಹೀತ್ವಾತು ಗಂಧಯುಕ್ತಂ ಪ್ರಪೂಜಯೇತ್ ॥೧೬॥

ಕುಮಾರರಿಗೆ ಗುರುವಾದ ನಿನಗೆ ಈ ನಾಮಗಳಿಂದ ಗರಿಕೆಗಳನ್ನು ಸಮರ್ಪಣೆ ಮಾಡುತ್ತೇನೆ. ಹೀಗೆ ಪ್ರಯತ್ನಪೂರ್ವಕವಾಗಿ ಗಣಪತಿಯ ನಾಮಗಳನ್ನು ಹೇಳಿ ಗಂಧಸಹಿತವಾದ ದೂರ್ವಾಯುಗ್ಮಗಳಿಂದ ಪೂಜಿಸಬೇಕು.

ಏಕೈಕೇನ ತು ನಾಮ್ನಾ ವೈ ಸರ್ವಮೇವಂ ಪ್ರಪೂಜಯೇತ್ ।
ಏಕವಿಂಶತಿಸಂಖ್ಯಾಕಾನ್ ಮೋದಕಾನ್ ಘೃತಪಾಚಿತಾನ್ ॥೧೭॥

ಒಂದೊಂದು ನಾಮಗಳಿಂದ ಎರಡೆರೆಡು ಗರಿಕೆಗಳನ್ನು ಏರಿಸಿ ಪೂಜಿಸಬೇಕು. ಅನಂತರ ತುಪ್ಪದಲ್ಲಿ ಮಾಡಿದ ೨೧ ಮೋದಕಗಳನ್ನು ಸಮರ್ಪಣೆ ಮಾಡಬೇಕು.

## ಗಣಪತಿನೈವೇದ್ಯಕ್ರಮ

ಸ್ಥಾಪಯಿತ್ವಾ ಗಣಾಧ್ಯಕ್ಷಸಮೀಪೇ ಕುರುನಂದನ ।
ದಶ ವಿಪ್ರಾಯ ದಾತವ್ಯಂ ಸ್ವಯಂ ಚಾದ್ಯಾತ್ ತಥಾ ದಶ ॥೧೮॥

ಆ ೨೧ ಮೋದಕಗಳನ್ನು ಗಣಪತಿಯ ಸಮೀಪದಲ್ಲಿಟ್ಟು, ವಿಶ್ವಂಭರನಿಗೆ ಸಮರ್ಪಿತವಾಗಿದೆಯೆಂದು ಭಾವಿಸಬೇಕು. ಓ ಕುರುನಂದನನೇ! ಅವುಗಳಲ್ಲಿ ಹತ್ತನ್ನು ಬ್ರಾಹ್ಮಣನಿಗೆ ನೀಡಬೇಕು. ಹತ್ತನ್ನು ತಾನು ತಿನ್ನುವುದಕ್ಕಾಗಿ ಇಟ್ಟುಕೊಳ್ಳಬೇಕು.

ಏಕಂ ಗಣಾಧಿಪೇ ದದ್ಯಾನ್ನೈವೇದ್ಯಂ ಚ ನೃಪೋತ್ತಮ ।
ಬ್ರಾಹ್ಮಣಾನ್ ಭೋಜಯೇತ್ ಪಶ್ಚಾದ್ ಭುಂಜೀಯಾತ್ ತೈಲವರ್ಜಿತಮ್॥೧೯॥

ಇಪ್ಪತ್ತೊಂದು ಮೋದಕಗಳಲ್ಲಿ ಒಂದು ಮೋದಕವನ್ನು ಗಣಪತಿಗೆ ನೈವೇದ್ಯ ಮಾಡಬೇಕು. ಓ ನೃಪೋತ್ತಮನೇ! ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಅನಂತರ ಎಣ್ಣೆಯಲ್ಲಿ ಕರಿದ ಪದಾರ್ಥಗಳನ್ನು ಬಿಟ್ಟು, ಉಳಿದವನ್ನು ಭೋಜನ ಮಾಡಬೇಕು.

**ಟಿಪ್ಪಣಿ** – ೨೧ ಮೋದಕಗಳನ್ನು ಭಗವಂತನಿಗೆ ಹಾಗೂ ಮುಖ್ಯಪ್ರಾಣದೇವರಿಗೆ ಸಮರ್ಪಣೆ ಮಾಡಿ, ಒಂದನ್ನು ತೆಗೆದು ಗಣಪತಿಗೆ ಸಮರ್ಪಣೆ ಮಾಡಬೇಕು. ಉಳಿದ ಇಪ್ಪತ್ತನ್ನು ಗಣಪತಿಯು ವಿಶ್ವಂಭರನಿಗೆ ಸಮರ್ಪಣೆ ಮಾಡಿದ್ದಾನೆಂದು ಅನುಸಂಧಾನ ಮಾಡಬೇಕು. ಆ ೨೦ರಲ್ಲಿ ೧೦ನ್ನು ಬ್ರಾಹ್ಮಣರಿಗೆ ನೀಡಿ, ಉಳಿದ ೧೦ನ್ನು ಮನೆಯ ಮಂದಿ ಸ್ವೀಕಾರ ಮಾಡಬೇಕು – ಎಂಬುದು ಈ ಪ್ರಮಾಣಶ್ಲೋಕಗಳಿಂದ ಸ್ಪಷ್ಟವಾಗಿ ತಿಳಿಯುತ್ತದೆ.

ಕೃತ್ವಾ ನೈಮಿತ್ತಿಕಂ ಕರ್ಮ ಪೂಜಯೇದ್ ಇಷ್ಟದೇವತಾಮ್ ।
ಏವಂ ಕೃತೇ ಧರ್ಮರಾಜ ಗಣನಾಥಸ್ಯ ಪೂಜನಮ್ ॥೨೦॥

ನೈಮಿತ್ತಿಕಕರ್ಮವೆನಿಸಿದ ಗಣಪತಿಯ ಪೂಜೆಯನ್ನು ಹೀಗೆ ಮಾಡಬೇಕು. ಇಷ್ಟದೇವತೆಯನ್ನು ಪೂಜಿಸಬೇಕು. ಓ ಧರ್ಮರಾಜನೇ! ಈ ಕ್ರಮದಲ್ಲಿ ಗಣಪತಿಯ ಪೂಜೆಯು ವಿಹಿತವಾಗಿದೆ.

## ರುದ್ರನಿಂದಲೂ ಗಣಪತಿ ಪೂಜೆ

ವಿಜಯಸ್ತೇ ಭವೇನ್ನಿತ್ಯಂ ಸತ್ಯಂ ಸತ್ಯಂ ವದಾಮ್ಯಹಮ್ ।
ತ್ರಿಪುರಂ ಹಂತುಕಾಮೇನ ಪೂಜಿತಃ ಶೂಲಪಾಣಿನಾ ॥೨೦॥

ಧರ್ಮರಾಜನೇ! ನೀನು ಈ ಕ್ರಮದಲ್ಲಿ ಗಣಪತಿಯ ಪೂಜೆಯನ್ನು ಮಾಡು. ಆಗ ನಿತ್ಯವಾಗಿಯೂ ನಿನಗೆ ವಿಜಯವಾಗುತ್ತದೆ. ನಾನು ಹೇಳುತ್ತಿರುವುದು ಸತ್ಯವೇ ಆಗಿದೆ. ನಾನು ಹೇಳುತ್ತಿರುವುದು ಸತ್ಯವಾಗಿದೆ. ಹಿಂದೆ ತ್ರಿಪುರಾಸುರರನ್ನು ಸಂಹಾರ ಮಾಡುವುದರ ಮೊದಲು ರುದ್ರದೇವರೂ ಕೂಡ ಗಣಪತಿ ಪೂಜೆಯನ್ನು ಮಾಡಿದ್ದರು.

## ಶ್ರೀರಾಮನಿಂದ ಗಣಪತಿಪೂಜೆ

ರಾಮಚಂದ್ರೇಣ ತದ್ವಚ್ಚ ಸೀತಾನ್ವೇಷಣಕರ್ಮಣಿ ।
ದೃಷ್ಟಾ ಸೀತಾ ಮಹಾಭಾಗಾ ವೀರೇಣ ಚ ಹನೂಮತಾ ॥೨೧॥

ಸೀತೆಯನ್ನು ಅನ್ವೇಷಣ ಮಾಡಿ ಪಡೆಯುವುದಕ್ಕೋಸ್ಕರ ಶ್ರೀರಾಮಚಂದ್ರ-ದೇವರೂ ಕೂಡ ಗಣಪತಿಯ ಪೂಜೆಯನ್ನು ಮಾಡಿದ್ದರು. ಇದರ ಫಲವಾಗಿ ಪ್ರತಾಪಶಾಲಿಯಾದ ಹನುಮಂತದೇವರು ಮಹಾಭಾಗ್ಯವಂತಳಾದ ಸೀತಾದೇವಿಯನ್ನು ಕಂಡರು.

## ಅಮೃತಕ್ಕಾಗಿ ದೇವತೆಗಳಿಂದ ಗಣಪತಿಯ ಪೂಜೆ

ಭಗೀರಥೇನ ತದ್ವಚ್ಚ ಗಂಗಾಮಾನಯತಾ ಪುರಾ ।
ಅಮೃತೋತ್ಪಾದನಾರ್ಥಾಯ ತಥಾ ದೇವಾಸುರೈರಪಿ ॥೨೩॥

ಭಗೀರಥನು ಗಂಗೆಯನ್ನು ಭೂಮಿಗೆ ತರುವುದಕ್ಕಾಗಿ ಮೊದಲು ಗಣಪತಿಯ ಪೂಜೆಯನ್ನು ಮಾಡಿದ್ದನು. ದೇವಾಸುರರು ಅಮೃತವನ್ನು ಪಡೆಯುವುದಕ್ಕಾಗಿ ಕ್ಷೀರಸಾಗರ ಮಥನದ ಪ್ರಾರಂಭದಲ್ಲಿ ವಿಘ್ನರಾಜನನ್ನು ಪೂಜಿಸಿದ್ದರು.

## ಗರುಡನಿಂದ, ಕೃಷ್ಣನಿಂದಲೂ ಕೂಡ ಗಣಪತಿಪೂಜೆ

ಅಮೃತಂ ಹರತಾ ಪೂರ್ವಂ ವೈನತೇಯೇನ ಪಕ್ಷಿಣಾ ।
ಆರಾಧಿತೋ ಮಯಾ ಸೋಽಪಿ ರುಗ್ಮಿಣ್ಯಾ ಸಹಿತೇನ ಚ ॥೨೪॥

ಪಕ್ಷಿಶ್ರೇಷ್ಠರಾದ ಗರುಡದೇವರು ಅಮೃತವನ್ನು ಅಪಹರಣ ಮಾಡುವ ಮೊದಲು ವಿಘ್ನೇಶನನ್ನು ಪೂಜೆ ಮಾಡಿದ್ದರು. ಇಷ್ಟೇ ಏಕೆ? ನಾನೂ ಸಹ ರುಗ್ಮಿಣಿಯ ಜೊತೆ ಗಣಪತಿ ದೇವರನ್ನು ಪೂಜೆ ಮಾಡಿರುವೆನು.

## ಗಣಪತಿ ಪೂಜೆ ಮಾಡಲು ಶ್ರೀಕೃಷ್ಣನ ಪ್ರೇರಣೆ

ಕುಷ್ಠವ್ಯಾಧಿಯುತೇನಾಪಿ ಸಾಂಬೇನಾರಾಧಿತಃ ಪುರಾ ।
ಜಯಕಾಮಸ್ತಥಾ ತ್ವಂ ಹಿ ತಮಾರಾಧಯ ಶಾಂಕರಮ್ ॥೨೫॥

ನನ್ನ ಮಗನಾದ ಸಾಂಬನು ಕುಷ್ಠವ್ಯಾಧಿಪರಿಹಾರಕ್ಕಾಗಿ ಗಣಪತಿಯನ್ನು ಪೂಜಿಸಿದನು. ಈ ರೀತಿಯಾಗಿ ಶ್ರೇಷ್ಠವ್ಯಕ್ತಿಗಳೆಲ್ಲರೂ ಗಣಪತಿಯನ್ನು ಪೂಜೆ ಮಾಡಿ ತಮ್ಮ ಅಭೀಷ್ಟಗಳನ್ನು ಪಡೆದುಕೊಂಡಿದ್ದಾರೆ. ಆದರಂತೆ ನೀನೂ ಸಹ ರುದ್ರದೇವರ ಮಗನಾದ ಗಣಪತಿಯನ್ನು ವಿಜಯಕ್ಕೋಸ್ಕರ ಪೂಜಿಸು.

ಪ್ರಾಪ್ಸ್ಯಸಿ ತ್ವಂ ಸ್ವಕಂ ರಾಜ್ಯಂ ಹತ್ವಾ ಶತ್ರೂನ್ ರಣಾಜಿರೇ ।
ಸಿದ್ಧಿದಸ್ಯ ಪ್ರಸಾದೇನ ನಾತ್ರ ಕಾರ್ಯಾ ವಿಚಾರಣಾ ॥೨೬॥

ಆಗ ಅವರೆಲ್ಲರಂತೆ ನೀನೂ ಕೂಡ ಯುದ್ಧದಲ್ಲಿ ಶತ್ರುಗಳನ್ನು ಕೊಂದು ಜಯವನ್ನು ಹೊಂದಿ ನಿನ್ನ ರಾಜ್ಯವನ್ನು ಸಂಪಾದನೆ ಮಾಡುವಿ. ಗಣಪತಿಯ ಪ್ರಸಾದದಿಂದ ಎಲ್ಲ ಅಭೀಷ್ಟಗಳು ನೆರವೇರುತ್ತದೆ. ಈ ವಿಷಯದಲ್ಲಿ ಸ್ವಲ್ಪವೂ ಸಂಶಯವು ಇರುವುದಿಲ್ಲ.

ಏವಮುಕ್ತಸ್ತು ಕೃಷ್ಣೇನ ಸಾನುಜಃ ಪಾಂಡುನಂದನಃ ।
ಪೂಜಯಾಮಾಸ ದೇವೇಶಂ ಪುತ್ರಂ ತ್ರಿಪುರಘಾತಿನಃ ॥೨೭॥

ಧರ್ಮರಾಜನಿಗೆ ಶ್ರೀಕೃಷ್ಣಪರಮಾತ್ಮನು ಈ ಕ್ರಮದಲ್ಲಿ ಗಣಪತಿಪೂಜೆಯನ್ನು ಮಾಡಬೇಕೆಂದು ತಿಳಿಸಿದನು. ಆಗ ತಮ್ಮಂದಿರಿಂದ ಕೂಡಿಕೊಂಡು ಯುಧಿಷ್ಠಿರನು ಆ ತ್ರಿಪುರಾಸುರಸಂಹಾರಕರಾದ ರುದ್ರದೇವರ ಮಗನಾದ ಗಣಪತಿಯನ್ನು ಭಕ್ತಿಯಿಂದ ಪೂಜೆಗೈದನು.

## ಗಣಪತಿಪೂಜೆಯಿಂದ ಯುಧಿಷ್ಠರನಿಗೆ ರಾಜ್ಯಪ್ರಾಪ್ತಿ

ಶತ್ರುಸಂಘಂ ನಿಹತ್ಯಾಽಶು ಪ್ರಾಪ್ತವಾನ್ ರಾಜ್ಯಮೋಜಸಾ ।
ಪೂಜನೀಯೋ ಮಹಾಭಾಗೋ ಗಣೇಶಃ ಸಿದ್ಧಿದಾಯಕಃ ॥೨೮॥

ಶತ್ರುಗಳ ಸಮೂಹವನ್ನು ತನ್ನ ಓಜಸ್ಸಿನಿಂದ ಕೂಡಲೇ ಸಂಹಾರ ಮಾಡಿ ಯುಧಿಷ್ಠಿರನು ರಾಜ್ಯವನ್ನು ಪಡೆದನು. ಆದ್ದರಿಂದಲೇ ಗಣಪತಿಯು ಪೂಜಿಸಲು ಅತ್ಯಂತ ಅರ್ಹನಾಗಿದ್ದಾನೆ. ಮಹಾಭಾಗ್ಯವಂತನಾಗಿದ್ದಾನೆ. ಗಣಗಳಿಗೆಲ್ಲ ಈಶನಾಗಿದ್ದಾನೆ. ಅಭೀಷ್ಟಗಳ ಸಿದ್ಧಿದಾಯಕನಾಗಿದ್ದಾನೆ.

## ಇವನು ಸಿದ್ಧಿವಿನಾಯಕ

ಸಿಧ್ಯಂತಿ ಸರ್ವಕಾರ್ಯಾಣಿ ಮನಸಾ ಚಿಂತಿತಾನ್ಯಪಿ ।
ತೇನ ಖ್ಯಾತಿಂ ಗತೋ ದೇವೋ ನಾಮ್ನಾ ಸಿದ್ಧಿವಿನಾಯಕಃ ॥೨೯॥

ಗಣಪತಿಯನ್ನು ಪೂಜಿಸುವುದರಿಂದ ಮನಸ್ಸಿನಲ್ಲಿ ಆಲೋಚಿಸಿದ ಎಲ್ಲ ಕಾರ್ಯಗಳೂ ನೆರವೇರುತ್ತದೆ. ಹೀಗೆ ಇಷ್ಟಾರ್ಥಪ್ರದನಾದ್ದರಿಂದಲೇ ಗಣಪತಿಯು ''ಸಿದ್ಧಿವಿನಾಯಕ'' ಎಂಬುದಾಗಿ ಪ್ರಸಿದ್ಧಿಯನ್ನು ಪಡೆದಿರುತ್ತಾನೆ.

## ವಿದ್ಯೆ ಹಣ ಎಲ್ಲದಕ್ಕೂ ಗಣಪತಿಯೇ ಬೇಕು

ವಿದ್ಯಾಕಾಮೋ ಲಭೇದ್ ವಿದ್ಯಾಂ ಧನಕಾಮೋ ಲಭೇದ್ ಧನಮ್ ।
ಜಯಂ ಚ ಜಯಕಾಮಶ್ಚ ಪುತ್ರಾರ್ಥೀ ಲಭತೇ ಸುತಾನ್ ॥೩೦॥

ಗಣೇಶನನ್ನು ಪೂಜೆ ಮಾಡುವುದರಿಂದ ವಿದ್ಯೆಯನ್ನು ಬಯಸುವವನಿಗೆ ವಿದ್ಯೆಯು ಲಭಿಸುತ್ತದೆ; ಹಣವನ್ನು ಅಪೇಕ್ಷಿಸುವವನಿಗೆ ಯಥೇಚ್ಛ ಹಣವು ದೊರಕುತ್ತದೆ; ಜಯವನ್ನು ಅಪೇಕ್ಷಿಸುವವನು ವಿಜಯಶಾಲಿಯಾಗುತ್ತಾನೆ; ಸಂತಾನವನ್ನು ಬಯಸಿದವನು ಸತ್ಪುತ್ರರನ್ನು ಪಡೆಯುತ್ತಾನೆ.

ವಿವಾಹೇ ಚ ಪ್ರಯಾಣೇ ಚ ಪೂಜ್ಯಶ್ಚಾದೌ ಗಣಾಧಿಪಃ ।
ಕೃಷಿಪ್ರಾರಂಭಸಮಯೇ ಚ ಕರ್ಷಕೇಣ ವಿನಾಯಕಃ ॥೩೧॥

ವಿವಾಹದ ಮೊದಲು, ಪ್ರಯಾಣಮಾಡುವ ಮೊದಲು, ಅವಶ್ಯವಾಗಿ ಗಣಪತಿಯನ್ನು ಪೂಜೆ ಮಾಡಬೇಕು. ಮತ್ತು ಯಾವುದೇ ಕೃಷಿಯನ್ನು ಪ್ರಾರಂಭ ಮಾಡುವ ಮೊದಲು ಕೃಷಿಕನು ವಿನಾಯಕನನ್ನು ಪೂಜಿಸಬೇಕು.

ಪೂಜನೀಯಃ ಪ್ರಯತ್ನೇನ ಕಾರ್ಯಸಿದ್ಧಿರ್ಭವಿಷ್ಯತಿ ।
ಪೂಜಕಸ್ಯ ಪ್ರಯತ್ನೇನ ಧನಂ ತಸ್ಯಾಕ್ಷಯಂ ಭವೇತ್ ॥೩೨॥

ಯಾವುದೇ ಕಾರ್ಯಗಳನ್ನು ಮಾಡುವ ಮೊದಲು ಗಣಪತಿಯನ್ನು ಭಕ್ತಿಯಿಂದ ಪೂಜೆ ಮಾಡಬೇಕು. ಪ್ರಯತ್ನಪೂರ್ವಕವಾಗಿ ಮಾಡುವ ಗಣಪತಿಯ ಪೂಜೆಯಿಂದ

ಎಲ್ಲ ಕಾರ್ಯಗಳು ಸಿದ್ಧಿಸುತ್ತವೆ. ಪೂಜೆ ಮಾಡುವವನ ಭಕ್ತಿಪ್ರಯತ್ನಗಳಿಗೆ ಅನುಗುಣವಾಗಿ ಅಕ್ಷಯವಾದ ಸಂಪತ್ತು ಒದಗುತ್ತದೆ.

## ಗಣಪತಿಪೂಜೆಯಿಂದ ವಿವಾಹಯೋಗ

ವೈಷ್ಣವಾದ್ಯಾಸು ದೀಕ್ಷಾಸು ಆದೌ ಪೂಜ್ಯೋ ಗಣಾಧಿಪಃ ।
ಪತಿಕಾಮಾ ಚ ಭರ್ತಾರಂ ಲಭೇತ್ ಸೌಖ್ಯಂ ಸುವಾಸಿನೀ ॥೩೩॥

ವೈಷ್ಣವದೀಕ್ಷೆಯನ್ನು ಪಡೆಯುವ ಮೊದಲು ಗಣಾಧಿಪನನ್ನು ಪೂಜಿಸಬೇಕು. ಉತ್ತಮಪತಿ ಬಯಸುವ ಸ್ತ್ರೀಯು ಗಣಪತಿಯನ್ನು ಪೂಜೆ ಮಾಡಬೇಕು. ಹಾಗೆ ಮಾಡುವುದರಿಂದ ಸೌಭಾಗ್ಯವತಿಯಾಗಿ ಸುಖವಾಗಿ ಜೀವಿಸುತ್ತಾಳೆ.

## ಗಣಪತಿಪೂಜೆಯ ಮಹಿಮೆ

ವಿಧವಾ ಪೂಜಯಿತ್ವಾ ವೈ ವೈಧವ್ಯಂ ನಾಽಪ್ನುಯಾತ್ ಕ್ವಚಿತ್ ।
ತಸ್ಮಿನ್ ಸಂಪೂಜಿತೇ ವಿಷ್ಣುರೀಶೋ ಭಾನುಸ್ತಥಾ ಹ್ಯುಮಾ ॥೩೪॥

ವಿಧವೆಯು ಗಣಪತಿಯನ್ನು ಪೂಜೆ ಮಾಡುವುದರಿಂದ ಮುಂದಿನ ಯಾವ ಜನ್ಮಗಳಲ್ಲೂ ಅವಳಿಗೆ ವೈಧವ್ಯವು ಬರುವುದಿಲ್ಲ. ಇಂಥ ಗಣಪತಿಯನ್ನು ಪೂಜಿಸುವುದರಿಂದ ಮಹಾವಿಷ್ಣು, ಮಹಾರುದ್ರ , ಸೂರ್ಯ, ಪಾರ್ವತಿ ಇವರುಗಳನ್ನು ಪೂಜಿಸಿದಂತಾಗುವುದು.

ಹವ್ಯವಾಹಮುಖಾ ದೇವಾಃ ಪೂಜಿತಾಃ ಸ್ಯುರ್ನ ಸಂಶಯಃ ।
ಚಂಡಿಕಾದ್ಯಾ ಮಾತೃಗಣಾಃ ಪರಿತುಷ್ಟಾ ಭವಂತಿ ಚ ॥೩೫॥

ಗಣಪತಿಯನ್ನು ಪೂಜೆ ಮಾಡುವುದರಿಂದ ಅಗ್ನಿ ಮೊದಲಾದ ದೇವತೆಗಳಿಗೆ ಸಂತೋಷವಾಗುತ್ತದೆ. ಇದರಲ್ಲಿ ಸಂಶಯವಿಲ್ಲ. ಚಂಡಿಕೆ ಮೊದಲಾದ ಮಾತೃದೇವತೆಗಳೂ ಕೂಡ ಸಂತುಷ್ಟರಾಗುತ್ತಾರೆ.

ಯ ಇದಂ ಶೃಣುಯಾನ್ನಿತ್ಯಂ ಶ್ರಾವಯೇದ್ ವಾ ಸಮಾಹಿತಃ ।
ಸಿದ್ಧ್ಯಂತಿ ಸರ್ವಕಾರ್ಯಾಣಿ ಸಿದ್ಧಿದಸ್ಯ ಪ್ರಸಾದತಃ ॥೩೬॥

॥ ಇತಿ ಸ್ಕಾಂದಪುರಾಣೇ ಶ್ರೀಕೃಷ್ಣಯುಧಿಷ್ಠಿರಸಂವಾದೇ
ವರಸಿದ್ಧಿವಿನಾಯಕವ್ರತಕಥಾ ಸಂಪೂರ್ಣಾ ॥

ಯಾರು ನಿತ್ಯದಲ್ಲೂ ಗಣಪತಿಯ ಪೂಜೆಯ ಮಹತ್ವವನ್ನು ಸಮಾಧಾನ ಚಿತ್ತದಿಂದ ಕೇಳುತ್ತಾನೋ, ಇತರರಿಗಾಗಿ ಪಠಿಸುತ್ತಾನೋ ಅವನಿಗೆ ಎಲ್ಲಾ ಕಾರ್ಯಗಳೂ ಕೈಗೂಡುತ್ತವೆ. ಗಣಪತಿಯ ಅನುಗ್ರಹದಿಂದ ಅವನ ಭವಿಷ್ಯ ಉಜ್ಜ್ವಲವಾಗುತ್ತದೆ.

ಇಲ್ಲಿಗೆ ಸ್ಕಂದಪುರಾಣದಲ್ಲಿ ಶ್ರೀಕೃಷ್ಣ ಯುಧಿಷ್ಠಿರಸಂವಾದದಲ್ಲಿ
ವರಸಿದ್ಧಿವಿನಾಯಕ ವ್ರತಕಥೆಯ ಅನುವಾದ ಮುಕ್ತಾಯವಾಯಿತು.

* * * * *

## ಚತುರ್ಥಿಯಂದು ಚಂದ್ರದರ್ಶನ ಮಾಡಬಾರದು

ಮಾಸಿ ಭಾದ್ರಪದೇ ಶುಕ್ಲೇ ಶಿವಲೋಕೇ ಪ್ರಪೂಜಿತಾ ।
ತಸ್ಯಾಂ ಸ್ನಾನಂ ತಥಾ ದಾನಮುಪವಾಸೋಽರ್ಚನಂ ತಥಾ ।
ಕ್ರಿಯಮಾಣಂ ಶತಗುಣಂ ಪ್ರಸಾದಾದ್ ಯಾತಿ ತಾನ್ ನೃಪ ॥

ಭಾದ್ರಪದಮಾಸದ ಶುಕ್ಲಪಕ್ಷದಲ್ಲಿ ಬರುವ ಚತುರ್ಥಿಯ ದಿವಸ ಗಣಪತಿಯನ್ನು ಪೂಜೆ ಮಾಡಬೇಕು. ಅಂದು ಮಾಡುವ ಸ್ನಾನ ದಾನ ಉಪವಾಸ ಅರ್ಚನೆಗಳು ನೂರು ಪಟ್ಟು ಫಲವನ್ನು ನೀಡುತ್ತವೆ.

ಕನ್ಯಾದಿತ್ಯೇ ಚತುರ್ಥ್ಯಾಂ ತು ಶುಕ್ಲೇ ಚಂದ್ರಸ್ಯ ದರ್ಶನಮ್ ।
ಮಿಥ್ಯಾಽಭಿದೂಷಣಂ ಕುರ್ಯಾತ್ ತಸ್ಮಾತ್ ಪಶ್ಯೇನ್ನ ತಂ ತದಾ ॥

ಸೂರ್ಯನು ಕನ್ಯಾರಾಶಿಯನ್ನು ಪ್ರವೇಶ ಮಾಡಿದಾಗ ಶುಕ್ಲಪಕ್ಷದ ಚತುರ್ಥೀದಿವಸ ಚಂದ್ರನನ್ನು ಕಂಡಾಗ ಸುಳ್ಳು ಅಪವಾದವು ಬರುತ್ತದೆ. ಆದ್ದರಿಂದ ಅಂದು ಚಂದ್ರನನ್ನು ನೋಡಬಾರದು.

ತದ್ದೋಷಶಾಂತಯೇ ಜಾಪ್ಯಂ ವಿಷ್ಣುನೋಕ್ತಂ ಸ್ಯಮಂತಕಮ್ ।

ಹಾಗೇನಾದರೂ ಪ್ರಮಾದದಿಂದ ಚಂದ್ರನನ್ನು ನೋಡಿದರೆ ವಿಷ್ಣುವಿನಿಂದ ಹೇಳಲ್ಪಟ್ಟ ಸ್ಯಮಂತಕರತ್ನದ ಕಥೆಯನ್ನು ಪಠಿಸಬೇಕು. ಮಂತ್ರ ಹೀಗಿದೆ –

ಮಂತ್ರಃ –

ಸಿಂಹಃ ಪ್ರಸೇನಮವಧೀತ್ ಸಿಂಹೋ ಜಾಂಬವತಾ ಹತಃ ।
ಸುಕುಮಾರಕ ಮಾ ರೋದೀಸ್ತವ ಹ್ಯೇಷ ಸ್ಯಮಂತಕಃ ॥

'ಸಿಂಹವು ಪ್ರಸೇನನನ್ನು ಕೊಂದಿತು. ಆ ಸಿಂಹವನ್ನು ಜಾಂಬವಂತನು ಕೊಂದನು. ಈ ಸ್ಯಮಂತಕಮಣಿಯು ನಿನಗೇ 'ಇರಲಿ, ಮಗು ಅಳಬೇಡ' ಎಂಬುದಾಗಿ ತನ್ನ ಮಗುವಿಗೆ ಆ ಮಣಿಯನ್ನು ಜಾಂಬವಂತನು ನೀಡಿದನು.

* * * *

## ಸ್ಯಮಂತಕೋಪಾಖ್ಯಾನಮ್
## ಗಣೇಶವ್ರತವನ್ನು ಆಚರಿಸಲೇಬೇಕು

ನಂದಿಕೇಶ್ವರಃ –

ಶೃಣುಷ್ವೈಕಾಗ್ರಚಿತ್ತಃ ಸನ್ ವ್ರತಂ ಗಾಣೇಶ್ವರಂ ಮಹತ್ ।
ಚತುರ್ಥ್ಯಾಂ ಶುಕ್ಲಪಕ್ಷೇ ತು ಸದಾ ಕಾರ್ಯಂ ಪ್ರಯತ್ನತಃ ॥೧॥

ನಂದಿಕೇಶ್ವರನು ಹೇಳುತ್ತಾನೆ – ಸನಕಾದಿ ಮುನಿಗಳೇ! ನಾನು ಹೇಳುವುದನ್ನು ಕೇಳಿರಿ. ಏಕಾಗ್ರಮನಸ್ಸಿನಿಂದ ಈ ಗಣೇಶನ ವ್ರತದ ಮಹಿಮೆಯನ್ನು ಚಿಂತನೆ ಮಾಡಿರಿ. ಭಾದ್ರಪದ ಮಾಸದ ಶುಕ್ಲಪಕ್ಷದ ಚತುರ್ಥಿಯಲ್ಲಿ ಪ್ರಯತ್ನಪೂರ್ವಕವಾಗಿ ಈ ಗಣೇಶ ವ್ರತವನ್ನು ಆಚರಣೆ ಮಾಡಬೇಕು.

ಸನತ್ಕುಮಾರ ಯೋಗೀಂದ್ರ ಯದೀಚ್ಛೇತ್ ಶುಭಮಾತ್ಮನಃ ।
ನಾರೀ ವಾ ಪುರುಷೋ ವಾಽಪಿ ಯಃ ಕುರ್ಯಾದ್ ವಿಧಿವದ್ ವ್ರತಮ್॥೨॥

ಯೋಗಿವರ್ಯರಾದ ಸನತ್ಕುಮಾರರೇ! ಕೇಳಿರಿ. ಪುರುಷ ಅಥವಾ ಸ್ತ್ರೀ ಯಾರಾದರೂ ತಮಗೆ ಕಲ್ಯಾಣವಾಗಬೇಕೆಂಬ ಅಪೇಕ್ಷೆಯನ್ನು ಹೊಂದಿದ್ದರೆ ವಿಧಿಪ್ರಕಾರವಾಗಿ ಗಣೇಶವ್ರತವನ್ನು ಆಚರಣೆ ಮಾಡಬೇಕು. ಅದರಿಂದ ತಮ್ಮೆಲ್ಲ ಬಯಕೆಗಳನ್ನು ಪಡೆದುಕೊಳ್ಳುತ್ತಾರೆ.

ಮೋಚಯತ್ಯಾಶು ವಿಪ್ರೇಂದ್ರ ಸಂಕಟಾದ್ ವ್ರತಿನಂ ಮಹತ್ ।
ಅಪವಾದಹರಂ ಚೈವ ಸರ್ವವಿಘ್ನಪ್ರಣಾಶನಮ್ ॥೩॥

ವಿಪ್ರೇಂದ್ರರೇ! ಜೀವನದಲ್ಲಿ ಎದುರಾಗುವ ದೊಡ್ಡ ಸಂಕಷ್ಟಗಳೆಲ್ಲವೂ ಈ ವ್ರತಾಚರಣೆಯಿಂದ ಪರಿಹಾರವಾಗುತ್ತದೆ. ಅಪವಾದವೂ ಕೂಡ ಪರಿಹಾರವಾಗುತ್ತದೆ. ಕ್ಷಣಕ್ಷಣದಲ್ಲಿ ಎದುರಾಗುವ ವಿಘ್ನಗಳು ಸಂಪೂರ್ಣವಾಗಿ ನಾಶವಾಗುತ್ತವೆ.

ಕಾಂತಾರೇ ವಿಷಮೇ ವಾಽಪಿ ರಣೇ ರಾಜಕುಲೇಽಥವಾ ।
ಸರ್ವಸಿದ್ಧಿಕರಂ ವಿದ್ಧಿ ವ್ರತಾನಾಮುತ್ತಮಂ ವ್ರತಮ್ ॥೪॥

ಗೊಂಡಾರಣ್ಯದಲ್ಲಿ, ಭಯಂಕರವಾದ ಯುದ್ಧದಲ್ಲಿ, ಅಥವಾ ರಾಜಕುಲದಲ್ಲಿ ಕಷ್ಟಗಳು ಎದುರಾದಾಗ ಇಷ್ಟಾರ್ಥವನ್ನು ನೆರವೇರಿಸಿಕೊಳ್ಳಲು ಈ ಗಣಪತಿವ್ರತವನ್ನು ಆಚರಣೆ ಮಾಡಬೇಕು.

## ಗಣೇಶವ್ರತದ ಮಹಿಮೆ

ಗಜಾನನಪ್ರಿಯಂ ಚಾಥ ತ್ರಿಷು ಲೋಕೇಷು ವಿಶ್ರುತಮ್ ।
ಅತೋ ನ ವಿದ್ಯತೇ ಬ್ರಹ್ಮನ್ ಸರ್ವಸಂಕಷ್ಟನಾಶನಮ್ ॥೫॥

ಬ್ರಾಹ್ಮಣಶ್ರೇಷ್ಠರೇ! ಈ ಗಣಪತಿವ್ರತವು ಗಣಪತಿಗೆ ಅತ್ಯಂತ ಪ್ರಿಯಕರವಾಗಿದೆ ಎಂಬ ವಿಷಯವು ಮೂರು ಲೋಕಗಳಲ್ಲಿಯೂ ಪ್ರಸಿದ್ಧಿಯನ್ನು ಪಡೆದಿದೆ. ಎಲ್ಲರ ಸಂಕಷ್ಟಗಳನ್ನು ಪರಿಹರಿಸುವ ವಿಷಯದಲ್ಲಿ ಈ ವ್ರತ ಬಿಟ್ಟು ಮತ್ತೊಂದು ಇರುವುದಿಲ್ಲ.

## ಗಣೇಶವ್ರತದ ಪ್ರಾರಂಭದ ಬಗ್ಗೆ

ಸನತ್ಕುಮಾರಃ

ಕೇನ ಚಾದೌ ಪುರಾ ಚೀರ್ಣಂ ಮರ್ತ್ಯಲೋಕೇ ಕಥಂ ಗತಮ್ ।
ಏತತ್ ಸಮಸ್ತಂ ವಿಸ್ತಾರ್ಯ ಬ್ರೂಹಿ ಗಾಣೇಶ್ವರಂ ಮಹತ್ ॥೬॥

ಸನತ್ಕುಮಾರರು ಪ್ರಶ್ನಿಸುತ್ತಾರೆ – ಈ ಗಾಣೇಶ್ವರವ್ರತವನ್ನು ಮೊದಲು ಯಾರು ಪ್ರಾರಂಭ ಮಾಡಿದರು. ಮನುಷ್ಯಲೋಕದಲ್ಲಿ ಹೇಗೆ ಪ್ರಸಿದ್ಧಿಯನ್ನು ಪಡೆಯಿತು ? ಇದನ್ನು ವಿಸ್ತಾರವಾಗಿ ಉಪದೇಶಿಸು.

ನಂದಿಕೇಶ್ವರಃ

ಚಕ್ರೇ ವ್ರತಂ ಜಗನ್ನಾಥೋ ವಾಸುದೇವಃ ಪ್ರತಾಪವಾನ್ ।
ಆದಿಷ್ಟೋ ನಾರದೇನೈವ ವೃಥಾ ಲಾಂಛನಮುಕ್ತಯೇ ॥೭॥

ನಂದಿಕೇಶ್ವರನು ಉತ್ತರಿಸುತ್ತಾನೆ – ಬೇರಾರೂ ಅಲ್ಲ; ಜಗದೊಡೆಯನಾದ ವಸುದೇವ ಸುತನಾದ ಆ ಶ್ರೀಕೃಷ್ಣಪರಮಾತ್ಮನೇ ಈ ವ್ರತವನ್ನು ಮೊಟ್ಟ ಮೊದಲು

ಆಚರಣೆ ಮಾಡಿದನು. ತನಗೆ ಒದಗಿದ ವ್ಯರ್ಥವಾದ ಅಪವಾದವನ್ನು ಪರಿಹಾರ ಮಾಡಿಕೊಳ್ಳುವುದಕ್ಕಾಗಿ ನಾರದರಿಂದ ಉಪದೇಶವನ್ನು ಪಡೆದುಕೊಂಡು ಈ ವ್ರತವನ್ನು ಆಚರಿಸಿದನು.

ಸನತ್ಕುಮಾರಃ

ಷಡ್ಗುಣೈಶ್ವರ್ಯಸಂಪನ್ನಃ ಸೃಷ್ಟಿಸಂಹಾರಕಾರಕಃ ।
ವಾಸುದೇವೋ ಜಗದ್ವ್ಯಾಪೀ ಪ್ರಾಪ್ತವಾನ್ ಲಾಂಛನಂ ಕಥಮ್ ।
ಏತದಾಶ್ಚರ್ಯಮಾಖ್ಯಾನಂ ಬ್ರೂಹಿ ತ್ವಂ ನಂದಿಕೇಶ್ವರ ॥೮॥

ಸನತ್ಕುಮಾರರು ಪುನಃ ಪ್ರಶ್ನಿಸುತ್ತಾರೆ – ಆ ಶ್ರೀಕೃಷ್ಣಪರಮಾತ್ಮನು ಷಡ್ಗುಣೈಶ್ವರ್ಯ ಸಂಪನ್ನನಾಗಿದ್ದಾನೆ. ಸೃಷ್ಟಿಸ್ಥಿತಿಸಂಹಾರಗಳಿಗೆ ಕಾರಣಕರ್ತೃವಾಗಿದ್ದಾನೆ. ಸಮಸ್ತ ಜಗತ್ತಿನಲ್ಲಿ ಎಲ್ಲೆಡೆಯೂ ವ್ಯಾಪಿಸಿದ್ದಾನೆ. ಇಂಥವನಿಗೆ ಅಪವಾದವು ಹೇಗೆ ತಾನೇ ಪ್ರಾಪ್ತವಾಯಿತು? ಅತ್ಯಂತ ಆಶ್ಚರ್ಯಕರವಾದ ಈ ಕಥೆಯನ್ನು ನಂದಿಕೇಶ್ವರನೇ ನಮಗೆ ತಿಳಿಸಿಕೊಡು.

## ನಂದಿಕೇಶ್ವರನಿಂದ ಶ್ರೀಕೃಷ್ಣಚರಿತ್ರೆ

ನಂದಿಕೇಶ್ವರಃ

ಭೂಮಿಭಾರನಿವೃತ್ಯರ್ಥಂ ವಸುದೇವಸುತಾವುಭೌ ॥೯॥
ರಾಮಕೃಷ್ಣೌ ಸಮುತ್ಪನ್ನೌ ಪದ್ಮನಾಭಫಣೀಶ್ವರೌ ।
ಜರಾಸಂಧಭಯಾತ್ ಕೃಷ್ಣೋ ದ್ವಾರಕಾಂ ಸಮಕಲ್ಪಯತ್ ॥೧೦॥
ವಿಶ್ವಕರ್ಮಾಣಮಾಹೂಯ ಪುರೀಂ ಹಾಟಕನಿರ್ಮಿತಾಮ್ ।

ನಂದಿಕೇಶ್ವರನು ಉತ್ತರಿಸಿದನು – ಭೂಮಿಗೆ ಭಾರಭೂತರಾದ ದೈತ್ಯರನ್ನು ಸಂಹಾರ ಮಾಡುವುದಕ್ಕಾಗಿ ಭಗವಾನ್ ಮಹಾವಿಷ್ಣುವು ವಸುದೇವಸುತನಾಗಿ ಅವತರಿಸಿದನು. ಶೇಷದೇವರು ಬಲರಾಮನಾಗಿ ಅವತರಿಸಿದರು. ಜರಾಸಂಧನ ಭಯವನ್ನು ಪರಿಹಾರ ಮಾಡುವುದಕ್ಕಾಗಿ ಶ್ರೀಕೃಷ್ಣಪರಮಾತ್ಮನು ದ್ವಾರಕೆಯನ್ನು ವಿಶ್ವಕರ್ಮನ ಮೂಲಕ ನಿರ್ಮಾಣ ಮಾಡಿಸಿದನು. ವಿಶ್ವಕರ್ಮನನ್ನು ಕರೆಸಿ, ಚಿನ್ನದ ದ್ವಾರಕಾಪಟ್ಟಣವನ್ನು ನಿರ್ಮಾಣ ಮಾಡಿಸಿದನು.

ತತ್ರ ಷೋಡಶಸಾಹಸ್ರಂ ಸ್ತ್ರೀಣಾಂ ಚೈವ ಶತಾಧಿಕಮ್ ॥೧೧॥
ಭವನಾನಿ ಮನೋಜ್ಞಾನಿ ತೇಷಾಂ ಮಧ್ಯೇ ವ್ಯಕಲ್ಪಯತ್ ।
ಪಾರಿಜಾತತರುಂ ಮಧ್ಯೇ ತಾಸಾಂ ಭೋಗಾಯ ಕಲ್ಪಯತ್ ॥೧೨॥

ಆ ದ್ವಾರಕಾಪಟ್ಟಣದಲ್ಲಿ ಹದಿನಾರುಸಾವಿರದ ನೂರ ಎಂಟು ಪತ್ನಿಯರಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಭವನಗಳನ್ನು ನಿರ್ಮಾಣ ಮಾಡಿಸಿದನು. ಆ ಸ್ತ್ರೀಯರ ಸುಖಭೋಗಕ್ಕಾಗಿ ಸ್ವರ್ಗಲೋಕದಿಂದ ಪಾರಿಜಾತ ವೃಕ್ಷವನ್ನು ತಂದು ಸ್ಥಾಪನೆ ಮಾಡಿದನು.

ಯಾದವಾನಾಂ ಗೃಹಾಸ್ತತ್ರ ಷಟ್‌ಪಂಚಶತಕೋಟಯಃ ।
ಅನ್ಯೇಽಪಿ ಬಹವೋ ಲೋಕಾ ವಸಂತಿ ವಿಗತಜ್ವರಾಃ ॥೧೩॥

ಆ ದ್ವಾರಕಾಪಟ್ಟಣದಲ್ಲಿ ಹನ್ನೊಂದು ಸಾವಿರ ಕೋಟಿ ಯಾದವರ ಭವನಗಳಿದ್ದವು. ಅಷ್ಟೇ ಅಲ್ಲದೇ ಇನ್ನೂ ಅನೇಕರು ಅಲ್ಲಿ ನಿಶ್ಚಿಂತೆಯಿಂದ ವಾಸ ಮಾಡುತ್ತಿದ್ದರು.

ಯತ್ಕಿಂಚಿತ್ ತ್ರಿಷು ಲೋಕೇಷು ಸುಂದರಂ ತತ್ರ ದೃಶ್ಯತೇ ।
ಸತ್ರಾಜಿತಪ್ರಸೇನಾಖ್ಯೌ ಪುತ್ರಾವುಗ್ರಸ್ಯ ವಿಶ್ರುತೌ ॥೧೪॥

ಮೂರು ಲೋಕಗಳಲ್ಲಿ ಯಾವುದೆಲ್ಲವೂ ಸುಂದರವಾದ ವಸ್ತುಗಳಿವೆಯೋ ಅವೆಲ್ಲವೂ ದ್ವಾರಾವತಿಯಲ್ಲಿ ಕಾಣಿಸುತ್ತಿದ್ದವು. ಅಲ್ಲಿಯೇ ಉಗ್ರ ಎಂಬ ಯಾದವನಿದ್ದನು. ಅವನಿಗೆ ಸತ್ರಾಜಿತ ಹಾಗೂ ಪ್ರಸೇನ ಎಂಬಿಬ್ಬರು ಪ್ರಸಿದ್ಧರಾದ ಮಕ್ಕಳು ಇದ್ದರು.

## ಸೂರ್ಯನನ್ನು ಕುರಿತು ಸತ್ರಾಜಿತನ ತಪಸ್ಸು

ಅಂಭೋಧಿತೀರಮಾಸಾದ್ಯ ತನ್ಮನಸ್ಕತಯಾ ಚ ಸಃ ।
ಸತ್ರಾಜಿತಸ್ತಪಸ್ತೇಪೇ ಸೂರ್ಯಮುದ್ದಿಶ್ಯ ಬುದ್ಧಿಮಾನ್ ॥೧೫॥

ಬುದ್ಧಿವಂತನಾದ ಸತ್ರಾಜಿತನು ಸೂರ್ಯನಾರಾಯಣನ ಅನುಗ್ರಹವನ್ನು ಪಡೆಯುವುದಕ್ಕಾಗಿ ಸಮುದ್ರತೀರಕ್ಕೆ ತೆರಳಿ ತಪಸ್ಸನ್ನು ಆಚರಿಸಿದನು.

ವ್ರತಂ ನಿರಶನಂ ಗೃಹ್ಯ ಸೂರ್ಯಸಂಬದ್ಧಲೋಚನಃ ।
ತತಃ ಪ್ರಸನ್ನೋ ಭಗವಾನ್ ಸತ್ರಾಜಿತಪುರಃಸ್ಥಿತಃ ॥೧೬॥

ಯಾವುದೇ ಆಹಾರಪದಾರ್ಥಗಳನ್ನು ಸ್ವೀಕರಿಸದೇ ತದೇಕಾಗ್ರದೃಷ್ಟಿಯಿಂದ ಸೂರ್ಯನನ್ನೇ ನೋಡುತ್ತಾ ಭಕ್ತಿಯಿಂದ ತಪಸ್ಸನ್ನು ಆಚರಿಸಿದನು. ಇವನ ತಪಸ್ಸಿಗೆ ಮೆಚ್ಚಿದ ಸೂರ್ಯನು ಸತ್ರಾಜಿತನಿಗೆ ಪ್ರತ್ಯಕ್ಷನಾದನು.

ಸತ್ರಾಜಿತೋऽಪಿ ತುಷ್ಟಾವ ದೃಷ್ಟ್ವಾ ದೇವಂ ದಿವಾಕರಮ್ ।
ತೇಜೋರಾಶೇ ನಮಸ್ತೇऽಸ್ತು ನಮಸ್ತೇ ಸರ್ವತೋಮುಖ ॥೧೭॥

ಸಾಕ್ಷಾತ್ಕಾರಗೊಂಡ ಸೂರ್ಯನನ್ನು ಸತ್ರಾಜಿತನು ಅತ್ಯಂತಭಕ್ತಿಯಿಂದ ಸ್ತೋತ್ರ ಮಾಡಿದನು. ತೇಜಸ್ಸಿನ ರಾಶಿಯಾದ ನಿನಗೆ ಎಲ್ಲೆಡೆಯೂ ಮುಖವನ್ನು ಹೊಂದಿದ ನಿನಗೆ ನನ್ನ ನಮನಗಳು.

ವಿಶ್ವವ್ಯಾಪಿನ್ ನಮಸ್ತೇऽಸ್ತು ಹರಿದಶ್ವ ನಮೋऽಸ್ತು ತೇ ।
ಗ್ರಹರಾಜ ನಮಸ್ತೇऽಸ್ತು ನಮಸ್ತೇ ಚಂದ್ರರೋಚಿಷೇ ॥೧೮॥

ನೀನು ವಿಶ್ವದಲ್ಲೆಲ್ಲೆಡೆಯೂ ವ್ಯಾಪಿಸಿರುವಿ. ಸಕಲ ಗ್ರಹಗಳಿಗೆ ರಾಜನಾಗಿರುವಿ. ಚಂದ್ರನಿಗೆ ಕಾಂತಿಯನ್ನು ನೀಡುವವನಾಗಿರುವಿ. ನಿನಗಿದೋ ನನ್ನ ಭಕ್ತಿಯ ನಮನ.

**ಟಿಪ್ಪಣಿ** – ಹರಿದಶ್ವ ಎಂದರೆ ಹರಿತ್ = ನೀಲ ಹಾಗೂ ಪೀತವರ್ಣಗಳಿಂದ ಮಿಶ್ರಿತವಾದ ಅಶ್ವಃ = ಕುದುರೆಗಳುಳ್ಳ ಸೂರ್ಯ ಎಂದರ್ಥ.

ವೇದತ್ರಯ ನಮಸ್ತೇऽಸ್ತು ಸರ್ವದೇವ ನಮೋऽಸ್ತು ತೇ ।
ಪ್ರಸೀದ ಪಾಹಿ ದೇವೇಶ ಸಂದೃಷ್ಟ್ವಾ ಮಾಂ ದಿವಾಕರ ॥೧೯॥

ಮೂರು ವೇದಗಳ ಸ್ವರೂಪನಾಗಿರುವಿ. ಸಕಲ ದೇವತೆಗಳೂ ನಿನ್ನಲ್ಲೇ ನೆಲೆಗೊಂಡಿರುವರು. ದೇವಶ್ರೇಷ್ಠನೇ! ನಿನಗೆ ವಂದನೆ. ನನ್ನ ವಿಷಯದಲ್ಲಿ ಪ್ರಸನ್ನನಾಗು. ನನ್ನನ್ನು ರಕ್ಷಣೆ ಮಾಡು. ಕೃಪಾದೃಷ್ಟಿಯಿಂದ ನನ್ನನ್ನು ನೋಡು.

ಇತ್ಥಂ ಸಂಸ್ತೂಯಮಾನೋऽಸೌ ದೇವದೇವೋ ದಿವಾಕರಃ ।
ಸ್ನಿಗ್ಧಗಂಭೀರಮಧುರಂ ಸತ್ರಾಜಿತಮುವಾಚ ಸಃ ॥೨೦॥

ಸಕಲ ದೇವತೆಗಳಿಗೂ ದೇವತೆಯಾದ ಆ ದಿವಾಕರನು ಸತ್ರಾಜಿತನಿಂದ ಹೀಗೆ ಸ್ತುತಿಸಲ್ಪಟ್ಟನು. ಇಂಪಾದ ಗಂಭೀರವಾದ ಮಧುರವಾದ ಮಾತುಗಳಿಂದ ಸತ್ರಾಜಿತನನ್ನು ಕುರಿತು ಹೀಗೆ ಹೇಳಿದನು.

ಸೂರ್ಯಃ –

ವರಂ ಬ್ರೂಹಿ ಪ್ರದಾಸ್ಯಾಮಿ ಯತ್ ತೇ ಮನಸಿ ವರ್ತತೇ ।
ಸತ್ರಾಜಿತ ಮಹಾಭಾಗ ತುಷ್ಟೋऽಹಂ ತವ ನಿಶ್ಚಯಾತ್ ॥೨೦॥

ಸೂರ್ಯನು ಹೇಳುತ್ತಾನೆ – ಸತ್ರಾಜಿತನೇ! ಮಹಾಭಾಗ್ಯಶಾಲಿಯೇ! ನಿನ್ನ ತಪಸ್ಸಿನ ಆಚರಣೆಯಿಂದ ನನಗೆ ಸಂತೋಷವಾಗಿದೆ. ನಿನ್ನ ಮನಸ್ಸಿನಲ್ಲಿ ಯಾವ ಅಪೇಕ್ಷೆಯಿದೆಯೋ ಅದನ್ನು ಕೇಳು. ನಿಶ್ಚಯವಾಗಿ ನಿನಗೆ ನೀಡುತ್ತೇನೆ.

## ಸತ್ರಾಜಿತ ಕೇಳಿದ ವರ

ಸತ್ರಾಜಿತಃ

ಸ್ಯಮಂತಕಮಣಿಂ ದೇಹಿ ಯದಿ ತುಷ್ಟೋऽಸಿ ಭಾಸ್ಕರ ।

ಸತ್ರಾಜಿತನು ಕೇಳುತ್ತಾನೆ – ಓ ಸೂರ್ಯದೇವನೇ! ಒಂದು ವೇಳೆ ನನ್ನ ವಿಷಯದಲ್ಲಿ ನೀನು ಪ್ರಸನ್ನನಾಗಿದ್ದರೆ ಸ್ಯಮಂತಕಮಣಿಯನ್ನು ನನಗೆ ನೀಡು.

## ಸೂರ್ಯನಿಂದ ಸ್ಯಮಂತಕಮಣಿಪ್ರದಾನ

ನಂದಿಕೇಶ್ವರಃ

ದದೌ ತಸ್ಯ ಚ ತದ್‌ರತ್ನಂ ಸ್ವಕಂಠಾದವತಾರ್ಯ ಸಃ ॥೨೧॥

ನಂದಿಕೇಶ್ವರನು ಹೇಳುತ್ತಾನೆ –

ಕೂಡಲೇ ಸೂರ್ಯದೇವನು ತನ್ನ ಕಂಠದಲ್ಲಿದ್ದ ಸ್ಯಮಂತಕಮಣಿಯನ್ನು ತೆಗೆದು ಸತ್ರಾಜಿತರಾಜನಿಗೆ ನೀಡಿದನು.

ಭಾಸ್ಕರಃ –

ಭಾರಾಷ್ಟಕಂ ಶಾತಕುಂಭಂ ಸ್ರವತೇऽಸೌ ಮಹಾಮಣಿಃ ।
ಶುಚಿಷ್ಮತಾ ಸದಾ ಧಾರ್ಯಂ ರತ್ನಮೇತನ್ಮಹೋತ್ತಮಮ್ ॥೨೨॥

ಸತ್ರಾಜಿತನೇ! ಈ ರತ್ನವು ಮಹಾಮಣಿಯೆನಿಸಿದೆ. ಪ್ರತಿನಿತ್ಯವೂ ಎಂಟು ಭಾರ ಚಿನ್ನವನ್ನು ನೀಡುತ್ತದೆ. ಅತ್ಯಂತ ಶುಚಿರ್ಭೂತನಾಗಿ ಪರಮಶ್ರೇಷ್ಠವಾದ ಈ ರತ್ನವನ್ನು ದೇಹದಲ್ಲಿ ಧಾರಣೆ ಮಾಡಬೇಕು.

ಸತ್ರಾಜಿತ ಕ್ಷಣೇನೈತದಶುಭಂ ಹಂತಿ ಮಾನವಮ್ ।
ಇತ್ಯುಕ್ತ್ವಾಽಂತರ್ದಧೇ ದೇವಸ್ತೇಜೋರಾಶಿರ್ದಿವಾಕರಃ ॥೨೪॥

ಸತ್ರಾಜಿತನೇ! ಒಂದು ವೇಳೆ ಶುಚಿರ್ಭೂತನಾಗದೇ ಈ ರತ್ನವನ್ನು ಧಾರಣೆ ಮಾಡಿದರೆ ಒಂದು ಕ್ಷಣದಲ್ಲಿಯೇ ಮಣಿಯು ಆ ಮಾನವನನ್ನು ಕೊಲ್ಲುತ್ತದೆ. ಹೀಗೆ ಹೇಳಿ ತೇಜೋಮಯಸ್ವರೂಪನಾದ ದಿವಾಕರನು ಕಣ್ಮರೆಯಾದನು.

ತತ್ಕಂಠರತ್ನಜ್ವಲಮಾನರೂಪೀ ಪುರೀಂ ಸ ಕೃಷ್ಣಸ್ಯ ವಿವೇಶ ಸತ್ವರಮ್ ।
ದೃಷ್ಟ್ವಾತು ಲೋಕಾ ಮನಸಾ ದಿವಾಕರಂ ಸಂಚಿಂತಯಂತೋಽಸ್ತಮಿತಸ್ವದೃಷ್ಟಯಃ

ಸೂರ್ಯನು ನೀಡಿದ ಸ್ಯಮಂತಕಮಣಿಯನ್ನು ತನ್ನ ಕಂಠದಲ್ಲಿ ಸತ್ರಾಜಿತನು ಧಾರಣೆ ಮಾಡಿದನು. ಇದರಿಂದ ಸೂರ್ಯನಂತೆ ಜಾಜ್ವಲ್ಯಮಾನನಾದನು. ಕೃಷ್ಣನ ಪುರಿಯಾದ ದ್ವಾರಾವತಿಗೆ ಆಗಮಿಸಿದನು. ಆ ರತ್ನದ ಪ್ರಭೆಯನ್ನು ಕಂಡ ಜನರು ಸತ್ರಾಜಿತನನ್ನು ನೋಡಲಿಕ್ಕಾಗದೇ ಕಣ್ಣುಗಳನ್ನು ಮುಚ್ಚಿಕೊಂಡರು. ಸತ್ರಾಜಿತನು ಸಾಕ್ಷಾತ್ ಸೂರ್ಯನೇ ಆಗಿರಬಹುದೆಂದು ತಿಳಿದುಕೊಂಡರು.

## ಸ್ಯಮಂತಕಮಣಿಯ ವೈಭವ

ಸಮಾಗತೋಽಯಂ ಹರಿದಶ್ವದೀಧಿತಿ-
ರ್ಜನಾರ್ದನಂ ದ್ರಷ್ಟುಮಸಂಶಯೇನ ।
ನಾಯಂ ಸಹಸ್ರಾಂಶುರಿತೀಹ ಲೋಕಾಃ
ಸತ್ರಾಜಿತೋಽಯಂ ಮಣಿಕಂಠಭಾಸ್ವಾನ್ ॥೨೬॥

ಶ್ರೀಕೃಷ್ಣನ ದರ್ಶನಕ್ಕೆ ಆ ಸೂರ್ಯನೇ ಬಂದಿರಬಹುದೆಂದು ಕೆಲವರು ಊಹಿಸಿದರು. ಇನ್ನು ಕೆಲವರು ಪರೀಕ್ಷಿಸಿ ಹೀಗೆಂದುಕೊಂಡರು – ಇವನು ಸೂರ್ಯನಲ್ಲ; ಸ್ಯಮಂತಕಮಣಿಯುನ್ನು ಕಂಠದಲ್ಲಿ ಧಾರಣೆ ಮಾಡಿ ಸತ್ರಾಜಿತನು ಸೂರ್ಯನಂತೆ ಕಂಗೊಳಿಸುತ್ತಿದ್ದಾನೆ ಎಂದು.

ಸ್ಯಮಂತಕಂ ಮಹಾರತ್ನಂ ದೃಷ್ಟ್ವಾ ತತ್ಕಂಠಮಂಡಲೇ ।
ಸ್ಪೃಹಾಂ ಚಕ್ರೇ ಜಗನ್ನಾಥೋ ನ ಜಹಾರ ಮಣಿಂ ತತಃ ॥೨೭॥

ಸತ್ರಾಜಿತನ ಕಂಠದಲ್ಲಿ ಶ್ರೇಷ್ಠವಾದ ಸ್ಯಮಂತಕಮಣಿಯನ್ನು ಶ್ರೀಕೃಷ್ಣಪರಮಾತ್ಮನು ನೋಡಿದನು. ಮತ್ತು ತನಗೆ ಅದು ಬೇಕು ಎಂಬುದಾಗಿ ಅಪೇಕ್ಷೆ ಪಟ್ಟನು. ಆದರೆ ಬಲಾತ್ಕಾರದಿಂದ ಆ ಮಣಿಯನ್ನು ತೆಗೆದುಕೊಳ್ಳಲಿಲ್ಲ.

## ಸತ್ರಾಜಿತನಿಗೆ ಕೃಷ್ಣನ ಭಯ

ಸತ್ರಾಜಿತೋ ಜಾತಭಯೋ ಯಾಚಯಿಷ್ಯತಿ ಮಾಂ ಹರಿಃ ।
ಪ್ರಸೇನಾಯ ದದೌ ಭ್ರಾತ್ರೇ ಧಾರ್ಯೋಽಯಂ ಶುಚಿನಾ ತ್ವಯಾ ॥೨೮॥

'ತಾನು ಧರಿಸಿದ ಸ್ಯಮಂತಕಮಣಿಯನ್ನು ಎಲ್ಲಿ ಶ್ರೀಕೃಷ್ಣಪರಮಾತ್ಮನು ಕೇಳುತ್ತಾನೋ' ಎಂಬ ಭಯದಿಂದ ಸತ್ರಾಜಿತನು ಅದನ್ನು ತನ್ನ ತಮ್ಮನಾದ ಪ್ರಸೇನನಿಗೆ ಕೊಟ್ಟು ಬಿಟ್ಟನು. ಶುಚಿರ್ಭೂತನಾಗಿ ಈ ಮಣಿಯನ್ನು ಧರಿಸು ಎಂದು ಹೇಳಿದನು.

ಏಕದಾ ಕಂಠದೇಶೇ ತು ಕ್ಷಿಪ್ತ್ವಾ ತಂ ಮಣಿಮುತ್ತಮಮ್ ।
ಮೃಗಯಾಕ್ರೀಡನಾರ್ಥಾಯ ಯಯೌ ಕೃಷ್ಣೇನ ಸಂಯುತಃ ॥೨೯॥

ಒಮ್ಮೆ ಪ್ರಸೇನನು ಆ ಸ್ಯಮಂತಕಮಣಿಯನ್ನು ಕಂಠದಲ್ಲಿ ಧರಿಸಿ ಮೃಗಗಳ ಬೇಟೆಗಾಗಿ ಶ್ರೀಕೃಷ್ಣನ ಜೊತೆ ಕಾಡಿಗೆ ತೆರಳಿದನು.

ಅಶ್ವಾರೂಢೋಽಶುಚಿಶ್ಚಾಸೌ ಹತಃ ಸಿಂಹೇನ ತತ್‌ಕ್ಷಣಾತ್ ।
ರತ್ನಮಾದಾಯ ಸಿಂಹೋಽಪಿ ಗಚ್ಛನ್ ಜಾಂಬವತಾ ಹತಃ ॥೩೦॥

ಆದರೆ ಅಶುಚಿಯಾಗಿದ್ದನು. ಅಶ್ವಾರೂಢನಾಗಿದ್ದನು. ಈ ಕಾರಣದಿಂದಲೇ ಕಾಡಿನಲ್ಲಿದ್ದ ಒಂದು ಸಿಂಹವು ಆ ಪ್ರಸೇನನನ್ನು ಒಂದೇ ಕ್ಷಣದಲ್ಲಿ ಕೊಂದಿತು. ಸ್ಯಮಂತಕರತ್ನವನ್ನು ತೆಗೆದುಕೊಂಡು ಹೊರಟಿತು. ಆ ಸಿಂಹವೂ ಕೂಡ ಜಾಂಬವಂತನಿಂದ ಆ ಸಿಂಹವನ್ನು ಕೊಂದನು.

## ಜಾಂಬವಂತನಿಗೆ ದೊರಕಿತು ಆ ಮಣಿ

ನೀತ್ವಾ ಸ ವಿವರೇ ರತ್ನಂ ದದೌ ಪುತ್ರಾಯ ಜಾಂಬವಾನ್ ।
ಪುರೀಂ ವಿವೇಶ ಕೃಷ್ಣೋಽಪಿ ಸ್ವಕೈಃ ಸರ್ವೈಃ ಸಮಾವೃತಃ ॥೩೧॥

ಜಾಂಬವಂತನು ಆ ರತ್ನವನ್ನು ತೆಗೆದುಕೊಂಡು ತನ್ನ ಗುಹೆಯೊಳಗೆ ಪ್ರವೇಶಿಸಿದನು. ತನ್ನ ಮಗುವಿಗೆ ಅದನ್ನು ಕೊಟ್ಟನು. ಶ್ರೀಕೃಷ್ಣಪರಮಾತ್ಮನು ಬೇಟೆಯಾಡಿ ತನ್ನ ಪರಿವಾರದ ಜೊತೆ ದ್ವಾರಕೆಗೆ ಹಿಂತಿರುಗಿದನು.

ಪ್ರಸೇನೋಽದ್ಯಾಪಿ ನಾಽಯಾತಿ ಹತಃ ಕೃಷ್ಣೇನ ನಿಶ್ಚಿತಮ್ ।
ಮಣಿಲೋಭೇನ ಹಾ ಕಷ್ಟಂ ಬಾಂಧವಃ ಪಾಪಿನಾ ಹತಃ ॥೩೨॥

ಆದರೆ ಪ್ರಸೇನನು ಇಷ್ಟು ಹೊತ್ತಾದರೂ ಹಿಂತಿರುಗಲಿಲ್ಲ. ಇದನ್ನು ಗಮನಿಸಿ ಶ್ರೀಕೃಷ್ಣನೇ ಮಣಿಯ ಆಸೆಯಿಂದ ಪ್ರಸೇನನನ್ನು ನಿಶ್ಚಯವಾಗಿ ಕೊಂದಿದ್ದಾನೆ. ಎಂಥ ದುಃಸ್ಥಿತಿ ಬಂತು. ಈ ಪಾಪಿಯು ತನ್ನ ಬಂಧುವನ್ನೇ ಕೊಂದುಬಿಟ್ಟನಲ್ಲ.

## ಶ್ರೀಕೃಷ್ಣನಿಗೆ ಮಿಥ್ಯಾಪವಾದ

ದ್ವಾರಕಾವಾಸಿನಃ ಸರ್ವೇ ಜನಾ ಊಚುಃ ಪರಸ್ಪರಮ್ ।
ವೃಥಾಽಪವಾದಸಂತಪ್ತಃ ಕೃಷ್ಣೋಽಪಿ ನಿರಗಾಚ್ಛನೈಃ ॥೩೩॥

ಎಂಬುದಾಗಿ ದ್ವಾರಕಾಪಟ್ಟಣದಲ್ಲಿ ವಾಸ ಮಾಡುತ್ತಿದ್ದ ಎಲ್ಲ ಜನರೂ ಶ್ರೀಕೃಷ್ಣನ ಬಗ್ಗೆ ಮಿಥ್ಯಾಪವಾದವನ್ನು ಹಾಕುತ್ತಾ ಪರಸ್ಪರ ಮಾತನಾಡಲು ಪ್ರಾರಂಭಿಸಿದರು. ಇದರಿಂದ ನೊಂದ ಶ್ರೀಕೃಷ್ಣನು ಮೆಲ್ಲನೆ ದ್ವಾರಕೆಯಿಂದ ಹೊರಟು ಬಿಟ್ಟನು.

## ಸ್ಯಮಂತಕಮಣಿಯನ್ನು ಹುಡುಕಿದ ಶ್ರೀಕೃಷ್ಣ

ಸಹೈವ ತೈಸ್ತಥಾರಣ್ಯೇ ದೃಷ್ಟ್ವಾ ಸಿಂಹೇನ ಪಾತಿತಮ್ ।
ಪ್ರಸೇನಂ ವಾಹನಯುತಂ ತತ್ಪದಾನುಚರೈರ್ಹರಿಃ ॥೩೪॥

ಋಕ್ಷೇಣ ನಿಹತಂ ದೃಷ್ಟ್ವಾ ಕೃಷ್ಣಶ್ಚರ್ಕ್ಷಬಿಲಂ ಗತಃ ।
ವಿವೇಶ ಯೋಜನಶತಮಂಧಕಾರಂ ಸ್ವತೇಜಸಾ ॥೩೫॥

ಶ್ರೀಕೃಷ್ಣಪರಮಾತ್ಮನು ಅಪವಾದಪರಿಹಾರಕ್ಕಾಗಿ ಯಾದವರೊಂದಿಗೆ ತೆರಳಿ, ಪ್ರಸೇನನು ಕುದುರೆಯೊಂದಿಗೆ ಸಿಂಹದಿಂದ ಹತನಾಗಿರುವುದನ್ನು, ಸಿಂಹದ ಪಾದದ ಗುರುತುಗಳನ್ನು ಅನುಸರಿಸಿ ಹೋಗಿ ಶ್ರೀಹರಿಯು, ಸಿಂಹವನ್ನು ಕರಡಿಯು ಕೊಂದಿದ್ದನ್ನು ಕಂಡನು. ಆ ಕರಡಿಯ ಹೆಜ್ಜೆಯನ್ನು ಹಿಂಬಾಲಿಸಿಕೊಂಡು ತೆರಳಿದಾಗ ಒಂದು ಗುಹೆಯು ಸಿಕ್ಕಿತು. (ಆ ಗುಹೆಯ ಹೊರಗೆ ಉಳಿದ ಬಂಧು ಜನರನ್ನು

ನಿಲ್ಲಿಸಿ) ತಾನು ಒಳಹೊಕ್ಕನು. ತನ್ನ ದೇಹದ ತೇಜಸ್ಸಿನಿಂದಲೇ ಅಂಧಕಾರವನ್ನು ನಾಶ ಮಾಡುತ್ತಾ ನೂರು ಯೋಜನ ತೆರಳಿದನು.

ನಿವಾರಯನ್ ದದರ್ಶಾಗ್ರೇ ಪ್ರಾಸಾದಂ ಬದ್ಧಭೂಮಿಕಮ್ ।
ತಂ ಕುಮಾರಂ ಜಾಂಬವತೋ ಡೋಲಾಯಾಮಮಿತದ್ಯುತಿಃ ॥೩೬॥

ಮುಂದೆ ರತ್ನನಿರ್ಮಿತವಾದ ಅರಮನೆಯನ್ನು ನೋಡಿದನು. ಅಲ್ಲಿ ತೊಟ್ಟಿಲೊಳಗೆ ಮಲಗಿ ನಿದ್ರಿಸುತ್ತಿದ್ದ ಜಾಂಬವಂತನ ಮಗನನ್ನು ಅಪರಿಮಿತಕಾಂತಿಯುಳ್ಳ ಶ್ರೀಕೃಷ್ಣನು ಕಂಡನು.

ಮಾಣಿಕ್ಯಂ ಲಂಬಮಾನಂ ಚ ದದರ್ಶ ಭಗವಾನ್ ಹರಿಃ ।
ರೂಪಯೌವನಸಂಪನ್ನಾಂ ಕನ್ಯಾಂ ಜಾಂಬವತೀಂ ಪುನಃ ॥೩೭॥

ಆ ತೊಟ್ಟಿಲಲ್ಲಿ ಸ್ಯಮಂತಕಮಣಿಯು ಜೋತಾಡುತ್ತಿತ್ತು. ಆ ತೊಟ್ಟಿಲನ್ನು ತೂಗುತ್ತಿರುವ ಸೌಂದರ್ಯ ಹಾಗೂ ತಾರುಣ್ಯಗಳಿಂದ ಕಂಗೊಳಿಸುತ್ತಿದ್ದ ಜಾಂಬವಂತನ ಮಗಳನ್ನು ಕೂಡ ಭಗವಾನ್ ಶ್ರೀಹರಿಯು ಕಂಡನು.

ಡೋಲಾಂ ಡೋಲಾಯಮಾನಾಂ ಚ ದದರ್ಶ ಕಮಲೇಕ್ಷಣಃ ।
ಮಹಾಂತಂ ವಿಸ್ಮಯಂ ಚಕ್ರೇ ದೃಷ್ಟ್ವಾ ತಾಂ ಚಾರುಹಾಸಿನೀಮ್ ॥೩೮॥

ತೊಟ್ಟಿಲನ್ನು ತೂಗುತ್ತಿರುವ ಸುಂದರವಾದ ನಗುಮುಖದ ಕನ್ಯೆಯನ್ನು ಕಂಡ ಕಮಲದ ಕಣ್ಣುಳ್ಳ ಶ್ರೀಕೃಷ್ಣನಿಗೆ ಬಹಳ ಆಶ್ಚರ್ಯವಾಯಿತು.

## 'ಸಿಂಹಃ ಪ್ರಸೇನಂ' ಎಂಬ ಶ್ಲೋಕ ಕೇಳಿಸಿತು

ಡೋಲಾಂ ಡೋಲಾಯಮಾನಾ ಸಾ ಜಗೌ ಗೀತಮಿದಂ ಮುಹುಃ ।
ಸಿಂಹಃ ಪ್ರಸೇನಮವಧೀತ್ ಸಿಂಹೋ ಜಾಂಬವತಾ ಹತಃ ॥೩೯॥
ಸುಕುಮಾರಕ ಮಾ ರೋದೀಸ್ತವ ಹ್ಯೇಷ ಸ್ಯಮಂತಕಃ ।

ಆ ಸುಂದರಳಾದ ಬಾಲೆಯು ತೊಟ್ಟಿಲನ್ನು ತೂಗುತ್ತಾ ಹೀಗೆ ಪದ್ಯವನ್ನು ಹೇಳುತ್ತಿದ್ದಳು. – 'ಸಿಂಹಃ ಪ್ರಸೇನಮವಧೀತ್ ಸಿಂಹೋ ಜಾಂಬವತಾ ಹತಃ । ಸುಕುಮಾರಕ ಮಾ ರೋದೀಸ್ತವ ಹ್ಯೇಷ ಸ್ಯಮಂತಕಃ' ಓ ಮಗುವೇ ನೀನು ಅಳಬೇಡ. ಈ ಸ್ಯಮಂತಕ- ಮಣಿಯು ನಿನಗೆ ಇರಲಿ. ಇದನ್ನು ಪಡೆಯಲು ಸಿಂಹವು ಪ್ರಸೇನನನ್ನು ಕೊಂದಿತು. ಆ ಸಿಂಹವನ್ನು ಜಾಂಬವಂತನು ಕೊಂದನು.

ಮದನಜ್ವರದಾಹಾರ್ತಾ ದೃಷ್ಟ್ವಾ ತಂ ಕಮಲೇಕ್ಷಣಮ್ ॥೪೦॥

ಹೀಗೆ ಪದ್ಯವನ್ನು ಹೇಳುತ್ತಿದ್ದ ಆ ಬಾಲೆಯು ಕಮಲೇಕ್ಷಣನಾದ ಶ್ರೀಕೃಷ್ಣನನ್ನು ಕಂಡು ಕಾಮಜ್ವರಪೀಡಿತಳಾದಳು.

ಉವಾಚ ಲಲಿತಾ ಬಾಲಾ ಗಮ್ಯತಾಂ ಗಮ್ಯತಾಮಿತಿ ।
ರತ್ನಂ ಗೃಹೀತ್ವಾ ವೇಗೇನ ಯಾವಚ್ಛೇತೇ ಸ ಜಾಂಬವಾನ್ ॥೪೧॥

ಕೋಮಲಾಂಗಿಯಾದ ಆ ಬಾಲೆಯು ಶ್ರೀಕೃಷ್ಣನನ್ನು ಕುರಿತು ಹೀಗೆ ಹೇಳಿದಳು– ಜಾಂಬವಂತನು ಮಲಗಿರುವಾಗಲೇ ಈ ರತ್ನವನ್ನು ತೆಗೆದುಕೊಂಡು ನೀನು ಬೇಗನೇ ಇಲ್ಲಿಂದ ಹೊರಟು ಬಿಡು.

ಜಾಂಬವಂತನನ್ನು ಯುದ್ಧಕ್ಕೆ ಕರೆದ ಶ್ರೀಕೃಷ್ಣ

ಇತ್ಯಾಕರ್ಣ್ಯ ಹಸನ್ ಶೌರಿಃ ಶಂಖಂ ದಧ್ಮೌ ಪ್ರತಾಪವಾನ್ ।
ಆಕರ್ಣ್ಯ ಸಹಸೋತ್ಥಾಯ ಯುಯುಧೇ ಋಕ್ಷರಾಟ್ ತತಃ ॥೪೨॥

ಪ್ರತಾಪವಂತನಾದ ಶ್ರೀಕೃಷ್ಣನು ಬಾಲೆಯ ಮಾತನ್ನು ಕೇಳಿ ನಗುವವನಾಗಿ ಪಾಂಚಜನ್ಯಶಂಖವನ್ನು ಊದಿದನು. ಅದರ ಧ್ವನಿಯನ್ನು ಕೇಳಿದ ಜಾಂಬವಂತನು ಕೂಡಲೇ ಎದ್ದು ಯುದ್ಧಮಾಡಿದನು.

ತಯೋರ್ಯುದ್ಧಮಭೂದ್ ಘೋರಂ ಹರಿಜಾಂಬವತೋಸ್ತದಾ ।
ದ್ವಾರಕಾವಾಸಿನಃ ಸರ್ವೇ ಗತಾಸ್ತೇ ಸಪ್ತಮೇ ದಿನೇ ॥೪೩॥

ಆಗ ಶ್ರೀಕೃಷ್ಣನಿಗೂ ಜಾಂಬವಂತನಿಗೂ ಭಯಂಕರವಾದ ಯುದ್ಧವೇ ನಡೆಯಿತು. ಶ್ರೀಕೃಷ್ಣನ ಜೊತೆ ಆಗಮಿಸಿದ್ದ ದ್ವಾರಕೆಯ ಜನರು ಏಳನೆಯ ದಿವಸದಲ್ಲಿ ಹಿಂತಿರುಗಿದರು.

ಮೃತಂ ಕೃಷ್ಣಂ ನಿರೀಕ್ಷಂತೋ ನಿಸ್ಸಂದಿಗ್ಧಂ ವಿಚಾರ್ಯ ಚ ।
ಪರಲೋಕಕ್ರಿಯಾಂ ಚಕ್ರುಃ ಪುರೇ ತಸ್ಯ ತು ತೇ ತದಾ ॥೪೪॥

ಅನೇಕ ದಿವಸಗಳ ಕಾಲ ಕಾದರೂ ಶ್ರೀಕೃಷ್ಣನು ಬಾರದ್ದನ್ನು ಕಂಡು ಅವನು ನಿಶ್ಚಯವಾಗಿ ಮೃತನಾಗಿದ್ದಾನೆಂದು ಭಾವಿಸಿ, ಔರ್ಧ್ವದೈಹಿಕಕ್ರಿಯೆಗಳನ್ನು ದ್ವಾರಕಾಪಟ್ಟಣದಲ್ಲಿ ಎಲ್ಲಾ ಬಾಂಧವರು ನಡೆಸಿದರು.

## ೨೧ ದಿವಸಗಳ ಭಯಂಕರ ಯುದ್ಧ

ಏಕವಿಂಶದ್ದಿನಂ ಯಾವದ್ ಬಾಹುಪ್ರಹರಣೋ ವಿಭುಃ ।
ಯುಯುಧೇ ತೇನ ಋಕ್ಷೇಣ ಯುದ್ಧಕರ್ಮಣಿ ತೋಷಿತಃ ॥೪೫॥

ಇಪ್ಪತ್ತೊಂದು ದಿವಸಗಳ ಕಾಲ ವಿಭುವಾದ ಶ್ರೀಕೃಷ್ಣನು ಜಾಂಬವಂತನ ಜೊತೆ ಬಾಹುಯುದ್ಧವನ್ನು ಮಾಡಿದನು. ಜಾಂಬವಂತನ ಯುದ್ಧಚಮತ್ಕಾರದಿಂದ ಶ್ರೀಕೃಷ್ಣನು ಸಂತುಷ್ಟನಾದನು.

ಜಾಂಬವಾನ್ ಪ್ರಾಕ್ತನಂ ಸ್ಮೃತ್ವಾ ದೃಷ್ಟ್ವಾ ದೇವಬಲಂ ಮಹತ್ ।
ಜಾಂಬವಾನ್ ಅಜೇಯೋಽಹಂ ಸುರೈಃ ಸರ್ವೈರ್ಯಕ್ಷರಾಕ್ಷಸದಾನವೈಃ ॥೪೬॥

ಜಾಂಬವಂತನಿಗೆ ಶ್ರೀರಾಮಚಂದ್ರನಲ್ಲಿದ್ದ ಯುದ್ಧಸಾಮರ್ಥ್ಯವು ನೆನಪಾಯಿತು. ಆಗ ಶ್ರೀಕೃಷ್ಣನನ್ನು ಕುರಿತು ಹೀಗೆ ಹೇಳಿದನು – ದೇವತೆಗಳು ಯಕ್ಷರು ರಾಕ್ಷಸರು ದಾನವರು ಇವರುಗಳಲ್ಲಿ ಯಾರೊಬ್ಬರಿಗೂ ನನ್ನನ್ನು ಗೆಲ್ಲುವ ಶಕ್ತಿಯು ಇರುವುದಿಲ್ಲ.

ತ್ವಯಾ ಜಿತೋಽಹಂ ದೇವೇಶ ದೇವಸ್ತ್ವಮಸಿ ನಿಶ್ಚಿತಮ್ ।
ಜಾನೇ ತ್ವಾಂ ವೈಷ್ಣವಂ ತೇಜೋ ನಾನ್ಯಥಾ ಬಲಮೀದೃಶಮ್ ॥೪೭॥

ದೇವಶ್ರೇಷ್ಠನೇ! ನೀನು ಮಾತ್ರ ನನ್ನನ್ನು ಯುದ್ಧದಲ್ಲಿ ಗೆದ್ದಿರುವಿ. ನೀನು ದೇವಶ್ರೇಷ್ಠನೇ ಆಗಿರುವಿ. ನೀನು ಮಹಾವಿಷ್ಣುವೇ ಆಗಿರುವಿ ಎಂದು ನಾನು ತಿಳಿಯುತ್ತೇನೆ. ಬೇರೆ ಯಾರಲ್ಲಿಯೂ ಇಂಥ ಸಾಮರ್ಥ್ಯವನ್ನು ಕಾಣಲು ಸಾಧ್ಯವಿಲ್ಲ.

## ಶ್ರೀಕೃಷ್ಣನಿಗೆ ಶರಣೆಂದ ಜಾಂಬವಂತ

ಇತಿ ಪ್ರಸಾದ್ಯ ಗೋವಿಂದಂ ದದೌ ಮಾಣಿಕ್ಯಮುತ್ತಮಮ್ ।
ಸುತಾಂ ಜಾಂಬವತೀಂ ನಾಮ ಭಾರ್ಯಾರ್ಥಂ ವರವರ್ಣಿನೀಮ್ ॥೪೮॥

ಹೀಗೆ ಗೋವಿಂದನನ್ನು ಸಂತೋಷಪಡಿಸಿ, ತನ್ನಲ್ಲಿದ್ದ ಸ್ಯಮಂತಕಮಣಿಯನ್ನು ಶ್ರೀಕೃಷ್ಣನಿಗೆ ನೀಡಿದನು. ಮತ್ತು ತನ್ನ ಮಗಳಾದ ಸುಂದರಿಯಾದ ಜಾಂಬವತಿಯ ಜೊತೆ ವಿವಾಹ ಮಾಡಿದನು.

ಪಾಣಿಂ ವೈ ಗ್ರಾಹಯಾಮಾಸ ದೇವದೇವಂ ಚ ಜಾಂಬವಾನ್ ।
ಮಣಿಮಾದಾಯ ದೇವೋಽಪಿ ಜಾಂಬವತ್ಯಾಽಪಿ ಸಂಯುತಃ ॥೪೯॥

ಜಾಂಬುವಂತನು ಜಾಂಬವತಿಯ ಪಾಣಿಗ್ರಹಣವನ್ನು ದೇವದೇವನೊಂದಿಗೆ ಮಾಡಿಸಿದನು. ಶ್ರೀಕೃಷ್ಣನು ಜಾಂಬವತಿಯ ಜೊತೆ ಸ್ಯಮಂತಕಮಣಿಯನ್ನು ಕೂಡ ತೆಗೆದುಕೊಂಡು ದ್ವಾರಕಾಪಟ್ಟಣಕ್ಕೆ ತೆರಳಿದನು.

ತದ್‌ವೃತ್ತಾಂತಂ ಸಮಾಚಷ್ಟೇ ದ್ವಾರಕಾವಾಸಿನಾಂ ಸ್ವಯಮ್ ।
ಸತ್ರಾಜಿತಸ್ಯ ಮಾಣಿಕ್ಯಂ ದತ್ತವಾನ್ ಸಂಸದಿ ಸ್ಥಿತಃ ॥೫೦॥

ದ್ವಾರಾವತಿಯಲ್ಲಿದ್ದ ಎಲ್ಲ ಯಾದವರಿಗೆ ನಡೆದ ಸಮಾಚಾರವನ್ನು ವಿವರಿಸಿದನು. ಸತ್ರಾಜಿತನಿಗೆ ಸ್ಯಮಂತಕಮಣಿಯನ್ನು ಸಭೆಯಲ್ಲಿ ನೀಡಿದನು.

## ಸತ್ಯಭಾಮೆಯ ಜೊತೆಗೆ ವಿವಾಹ

ಮಿಥ್ಯಾಽಪವಾದಸಂಶುದ್ಧಿಂ ಪ್ರಾಪ್ತವಾನ್ ಮಧುಸೂದನಃ ।
ಸತ್ರಾಜಿತೋಽಪಿ ಸಂತ್ರಸ್ತಃ ಕೃಷ್ಣಾಯ ಪ್ರದದೌ ಸುತಾಮ್ ॥೫೧॥

ಶ್ರೀಕೃಷ್ಣಪರಮಾತ್ಮನು ಮಿಥ್ಯಾಪವಾದವನ್ನು ಹೀಗೆ ಕಳೆದು ಕೊಂಡನು. ಅನಂತರ ಸತ್ರಾಜಿತನಿಗೆ ಬಹಳ ದುಃಖವಾಯಿತು. ವ್ಯರ್ಥವಾಗಿ ಶ್ರೀಕೃಷ್ಣನ ಮೇಲೆ ಅಪವಾದವನ್ನು ಹೊರಿಸಿಬಿಟ್ಟೆನು. ಇದಕ್ಕಾಗಿ ಶ್ರೀಕೃಷ್ಣನಿಗೆ ಅತ್ಯಂತ ಸಂತೋಷಕರವಾದ ಕಾರ್ಯವನ್ನು ಮಾಡಬೇಕೆಂದು ಸಂಕಲ್ಪಿಸಿದನು. ತನ್ನ ಮಗಳನ್ನೇ ಶ್ರೀಕೃಷ್ಣನಿಗೆ ಧಾರೆಯೆರೆದನು.

**ಸತ್ಯಭಾಮಾಂ ಮಹಾಬುದ್ಧಿಂ ದದೌ ಸರ್ವಗುಣಾನ್ವಿತಾಮ್ ।**

ಸತ್ಯಭಾಮೆಯು ಅತ್ಯಂತ ಚತುರೆಯೂ, ಎಲ್ಲ ಗುಣಗಳಿಂದ ಕೂಡಿದವಳೂ, ಶ್ರೇಷ್ಠ ಸ್ತ್ರೀಯೂ ಆಗಿದ್ದಳು. ಇವಳನ್ನು ಶ್ರೀಕೃಷ್ಣನಿಗೆ ವಿವಾಹ ಮಾಡಿಕೊಟ್ಟನು.

ಶತಧನ್ವಾಽಕ್ರೂರಮುಖಾ ಯಾದವಾ ದುಷ್ಟಮಾನಸಾಃ ॥೫೨॥

ಸತ್ರಾಜಿತೇನ ತೇ ವೈರಂ ಚಕ್ರೂ ರತ್ನಾಭಿಲಾಷಿಣಃ ।
ದುರಾತ್ಮಾ ಶತಧನ್ವಾಽಪಿ ಗತೇ ಕೃಷ್ಣೇಽಥ ಪಾಂಡವಾನ್ ॥೫೩॥

ಶತಧನ್ವಾ, ಅಕ್ರೂರ ಮೊದಲಾದ ಯಾದವರು ಸ್ಯಮಂತಕಮಣಿಯ ವಿಷಯದಲ್ಲಿ ಆಸೆಯುಳ್ಳವರಾಗಿ ಕೆಟ್ಟಮನಸ್ಸುಳ್ಳವರಾದರು. ಸತ್ರಾಜಿತನ ವಿಷಯದಲ್ಲಿ ದ್ವೇಷವನ್ನು ಮಾಡಿದರು. ಶ್ರೀಕೃಷ್ಣನು ಆ ಸಂದರ್ಭದಲ್ಲಿ ಪಾಂಡವರ ಬಳಿ ಹೋಗಿದ್ದನು.

## ಸತ್ರಾಜಿತನೂ ಸಹ ಮೃತನಾದ

ಸತ್ರಾಜಿತಂ ನಿಹತ್ಯಾಽಶು ಮಣಿಂ ಜಗ್ರಾಹ ಪಾಪಧೀಃ ।
ಕೃಷ್ಣಸ್ಯ ಪುರತಃ ಸತ್ಯಾ ಸಮಾಚಷ್ಟೇ ವಿಚೇಷ್ಟಿತಮ್ ॥೫೪॥

ಪಾಪಬುದ್ಧಿಯ ಶತಧನ್ವನು ಸತ್ರಾಜಿತನನ್ನು ಕೊಂದೇ ಬಿಟ್ಟನು. ಮತ್ತು ಮಣಿಯನ್ನು ಅಪಹರಿಸಿದನು. ನಡೆದದ್ದೆಲ್ಲವನ್ನೂ ಸತ್ಯಭಾಮೆಯು ಶ್ರೀಕೃಷ್ಣನ ಮುಂದೆ ತಿಳಿಸಿದಳು.

## ಕಪಟನಾಟಕಸೂತ್ರಧಾರಿಯ ತೃಪ್ತಿ

ಅಂತರ್ಹೃಷ್ಟೋ ಬಹಿಃಕೋಪೀ ಕೃಷ್ಣಃ ಕಪಟನಾಟಕಃ ।
ಬಲದೇವಪುರೋ ವಾಕ್ಯಮುವಾಚ ಧರಣೀಧರಃ ॥೫೫॥

ಏನು ನಡೆಯಬೇಕೋ ಅದೇ ನಡೆಯಿತೆಂದು ಶ್ರೀಕೃಷ್ಣನಿಗೆ ಒಳಗೇ ಸಂತೋಷವಾಯಿತು. ಆದರೆ ಕಪಟನಾಟಕಸೂತ್ರಧಾರಿಯಾದ ಪರಮಾತ್ಮನು ಲೋಕರೀತಿಯಂತೆ ಕೋಪವುಳ್ಳವನಂತೆ ಹೊರಗೆ ಕಾಣಿಸಿದನು. ಬಲರಾಮನ ಮುಂದೆ ಧರಣೀಧರನು ಹೀಗೆ ಹೇಳಿದನು.

ಹತ್ವಾ ಸತ್ರಾಜಿತಂ ದುಷ್ಟೋ ಮಣಿಮಾದಾಯ ಗಚ್ಛತಿ ।
ನಿಹತ್ಯ ಶತಧನ್ವಾನಂ ಗೃಹೀತ್ವಾ ರತ್ನಮಾವಯೋಃ ॥೫೬॥

ದುಷ್ಟನಾದ ಶತಧನ್ವನು ಸತ್ರಾಜಿತನನ್ನು ಕೊಂದಿದ್ದಾನೆ. ಸ್ಯಮಂತಕಮಣಿಯನ್ನು ಅಪಹಾರ ಮಾಡಿದ್ದಾನೆ. ಆ ಶತಧನ್ವನನ್ನು ಕೊಂದು ಸ್ಯಮಂತಕಮಣಿಯನ್ನು ನಾವಿಬ್ಬರೂ ತೆಗೆದುಕೊಳ್ಳಬೇಕಾಗಿದೆ.

ನಿತ್ಯಭೋಗಂ ಚ ತದ್ರತ್ನಂ ಕರಿಷ್ಯಾವೋಽದ್ಯ ನಿಶ್ಚಿತಮ್ ।
ಏತಚ್ಛ್ರುತ್ವಾ ಭಯತ್ರಸ್ತಃ ಶತಧನ್ವಾಽಪಿ ಯಾದವಃ ॥೫೭॥

ಆ ಸ್ಯಮಂತಕಮಣಿಯನ್ನು ನಾವೇ ಇಟ್ಟುಕೊಳ್ಳೋಣ; ಅದರ ಉಪಯೋಗವನ್ನು ನಾವೇ ಪಡೆದುಕೊಳ್ಳೋಣ. ಈ ವಿಷಯವನ್ನು ಕೇಳಿದ ಯಾದವನಾದ ಶತಧನ್ವನೂ ಕೂಡ ಭಯಗೊಂಡವನಾದನು.

## ಅಕ್ರೂರನಿಗೆ ಸ್ಯಮಂತಕಮಣಿಪ್ರಾಪ್ತಿ

ಆಹೂಯಾಕ್ರೂರನಾಮಾನಂ ಮಾಣಿಕ್ಯಂ ಪ್ರದದೌ ಚ ಸಃ ।
ಆರುಹ್ಯ ವಡವಾಂ ವೇಗಾನ್ನಿರ್ಗತೋ ದಕ್ಷಿಣಾಂ ದಿಶಮ್ ॥೫೮॥

ಆ ಶತಧನ್ವನು ಕೂಡಲೇ ಅಕ್ರೂರನನ್ನು ಕರೆದನು. ಸ್ಯಮಂತಕಮಣಿಯನ್ನು ನೀಡಿದನು. ಕುದುರೆಯನ್ನು ಏರಿ ವೇಗವಾಗಿ ದಕ್ಷಿಣದಿಕ್ಕಿಗೆ ಓಡಿದನು.

ರಥಸ್ಥಾವನುಗಚ್ಛೇತಾಂ ತದಾ ರಾಮಜನಾರ್ದನೌ ।
ಶತಯೋಜನಮಾತ್ರೇಣ ಮಮಾರ ವಡವಾ ತದಾ ॥೫೯॥

ಆಗ ಬಲರಾಮ ಹಾಗೂ ಶ್ರೀಕೃಷ್ಣ ಇಬ್ಬರೂ ಕೂಡ ಮತ್ತೊಂದು ರಥವನ್ನು ಹತ್ತಿ, ಶತಧನ್ವನ ಬೆನ್ನಟ್ಟಿದರು. ಆಗ ನೂರು ಯೋಜನವನ್ನು ಮಾತ್ರ ದಾಟಿದ ಶತಧನ್ವನ ಕುದುರೆಯು ಆಯಾಸದಿಂದ ಮರಣಹೊಂದಿತು.

ಪಲಾಯಮಾನೋ ನಿಹತಃ ಕೃಷ್ಣೇನ ಸಪದಾತಿನಾ ।
ರಥಸ್ಥೋ ಬಲದೇವಸ್ತು ಹತೇ ರತ್ನಸ್ಯ ಲೋಭತಃ ॥೬೦॥

ಕಾಲು ನಡಿಗೆಯಿಂದಲೇ ಶತಧನ್ವನು ಓಡಲು ಪ್ರಾರಂಭಿಸಿದನು. ಶ್ರೀಕೃಷ್ಣನು ರಥದಿಂದ ಇಳಿದು ಕಾಲುನಡಿಗೆಯಲ್ಲೇ ಆ ದುಷ್ಟನನ್ನು ಕೊಂದನು. ಬಲರಾಮನು ರಥದಲ್ಲಿಯೇ ಇದ್ದನು.

ನ ದೃಷ್ಟಂ ತತ್ರ ತದ್ರತ್ನಮಿತ್ಯೂಚೇ ಹರಿರಗ್ರಜಮ್ ।
ತದಾಕರ್ಣ್ಯ ಮಹಾರೋಷಾದುವಾಚ ವಚನಂ ಬಲಃ ॥೬೧॥

ಶ್ರೀಕೃಷ್ಣನು ಶತಧನ್ವನ ಬಳಿ ಹುಡುಕಿದನು. "ಸ್ಯಮಂತಕಮಣಿಯು ಕಾಣಿಸಲಿಲ್ಲ" ಎಂದು ಅಣ್ಣನ ಬಳಿ ಹೇಳಿದನು. ಅದನ್ನು ಕೇಳಿ ಬಲರಾಮನು ಸಿಟ್ಟುಗೊಂಡು ಹೀಗೆ ಹೇಳಿದನು.

## ಬಲರಾಮನಿಗೂ ಶ್ರೀಕೃಷ್ಣನಲ್ಲಿ ವಿಶ್ವಾಸವಿಲ್ಲ

ಕಪಟೀ ತ್ವಂ ಸದಾ ಕೃಷ್ಣ ಲೋಭೀ ಪಾಪೀ ಸುನಿಶ್ಚಿತಮ್ ।
ಅರ್ಥಾಯ ಸ್ವಜನಂ ಹಂಸಿ ಕಸ್ತ್ವಾಂ ಬಂಧುಂ ಸಮಾಶ್ರಯೇತ್ ॥೬೨॥

ಕೃಷ್ಣ! ನೀನು ಕಪಟಿ, ಲೋಭಿ, ಪಾಪಿ, ಹಣಕ್ಕೋಸ್ಕರ ಬಂಧುಜನರನ್ನೂ ಕೂಡ ಕೊಲ್ಲುವವನು. ನಿನ್ನನ್ನು ಯಾರು ತಾನೇ ಆಶ್ರಯಿಸುತ್ತಾರೆ ?

ಅನೇಕಶಪಥೈಃ ಕೃಷ್ಣೋ ಬಲದೇವಂ ಪ್ರಸಾದಯತ್ ।
ಸ ತು ಧಿಕ್ಕಷ್ಟಮಿತ್ಯುಕ್ತ್ವಾ ಯಯೌ ವೈದೇಹಮಂಡಲಮ್ ॥೬೩॥

ಅಣ್ಣನಾದ ಬಲರಾಮನಿಗೆ ಅರ್ಥ ಮಾಡಿಸುವುದಕ್ಕಾಗಿ ಶ್ರೀಕೃಷ್ಣನು ಅನೇಕ ಶಪಥಗಳನ್ನು ಮಾಡಿದನು. ತಾನು ಆ ಸ್ಯಮಂತಕಮಣಿಯನ್ನು ತೆಗೆದುಕೊಂಡಿಲ್ಲವೆಂದು ಆಣೆ ಮಾಡಿದನು. ಆದರೂ ಕೂಡ ಬಲರಾಮನಿಗೆ ಸಮಾಧಾನವಾಗಲಿಲ್ಲ. ಶ್ರೀಕೃಷ್ಣನಿಗೆ ಧಿಕ್ಕಾರವನ್ನು ಹೇಳಿ ವಿದರ್ಭದೇಶಕ್ಕೆ ಹೊರಟು ಹೋದನು.

## ದ್ವಾರಕೆಗೆ ಶ್ರೀಕೃಷ್ಣ

ಕೃಷ್ಣೋಽಪಿ ರಥಮಾರುಹ್ಯ ದ್ವಾರಕಾಂ ಪ್ರಯಯೌ ಪುನಃ ।
ತಥೈವೋಚುರ್ಜನಾಃ ಸರ್ವೇ ನ ಸಾಧೀಯಾನಯಂ ಹರಿಃ ॥೬೪॥

ಶ್ರೀಕೃಷ್ಣನೂ ಕೂಡ ರಥವನ್ನು ಹತ್ತಿ ದ್ವಾರಕೆಗೆ ತೆರಳಿದನು. ಆಶ್ಚರ್ಯವೆಂದರೆ ಬಲರಾಮನಂತೆ ಆ ಊರಿನ ಜನರೂ ಕೂಡ ಶ್ರೀಕೃಷ್ಣನನ್ನು ಧಿಕ್ಕಾರ ಮಾಡಿದರು. ಶ್ರೀಕೃಷ್ಣನು ಸಾತ್ವಿಕನಲ್ಲವೆಂದು ಹೇಳುತ್ತಿದ್ದರು.

ನಿಷ್ಕಾಸಿತೋ ರತ್ನಲೋಭಾತ್ ಜ್ಯೇಷ್ಠಭ್ರಾತಾ ಬಲೋ ಬಲೀ ।
ತಚ್ಛ್ರುತ್ವಾ ದೀನವದನಃ ಪಾಪೀಯಾನಿವ ಸಂಸ್ಥಿತಃ ॥೬೫॥

ಹಿರಿಯಣ್ಣನಾದ ಬಲರಾಮನನ್ನೇ ಮಣಿಯ ಆಸೆಯಿಂದ ಊರಿನಿಂದ ಓಡಿಸಿರುವನು ಎಂದರು. ಜನರ ಅಪವಾದವನ್ನು ಕೇಳಿ ಶ್ರೀಕೃಷ್ಣನು ಪಾಪಿಷ್ಠನಂತೆ ಬಾಡಿದ ಮುಖವುಳ್ಳವನಾದನು.

## ಶ್ರೀಕೃಷ್ಣನಿಗೆ ಪುನಃ ಅಪವಾದ

ವೃಥಾಽಭಿಶಾಪಾತ್ ಸಂತಪ್ತೋ ಬಭೂವ ಸ ಜಗತ್ಪತಿಃ ।
ಅಕ್ರೂರೋಽಪಿ ವಿನಷ್ಕ್ರಮ್ಯ ತೀರ್ಥಯಾತ್ರಾ ನಿಮಿತ್ತತಃ ॥೬೬॥

ಜಗತ್ಪತಿಯಾದ ಶ್ರೀಕೃಷ್ಣನು ಪುನಃ ಮಿಥ್ಯಾಪವಾದದಿಂದ ಸಂತಾಪಗೊಂಡವನಂತೆ ನಟಿಸಿದನು. ಸ್ಯಮಂತಕಮಣಿಯನ್ನು ಹೊಂದಿರುವ ಅಕ್ರೂರನಾದರೋ ತೀರ್ಥಯಾತ್ರೆಯ ನೆಪಮಾಡಿಕೊಂಡು ದ್ವಾರಕಾಪಟ್ಟಣವನ್ನು ಬಿಟ್ಟು ಹೊರಟನು.

ಕಾಶೀಂ ಗತ್ವಾ ಸುಖೇನಾಸೌ ಯಜನ್ ಯಜ್ಞಪತಿಂ ಪ್ರಭುಮ್ ।
ತೋಷಮುತ್ಪಾದಯಾಮಾಸ ತೇನ ದ್ರವ್ಯೇಣ ಬುದ್ಧಿಮಾನ್ ॥೯೭॥

ಬುದ್ಧಿವಂತನಾದ ಅಕ್ರೂರನು ಕಾಶಿಗೆ ಸುಖವಾಗಿ ಹೋಗಿ ಸ್ಯಮಂತಕಮಣಿಯು ಕೊಡುವ ಸಂಪತ್ತಿನಿಂದ ಪ್ರಭುವಾದ ಯಜ್ಞಪತಿಯನ್ನು ಅನೇಕ ಯಜ್ಞಯಾಗಾದಿಗಳನ್ನು ಮಾಡುವ ಮೂಲಕ ಸಂತೋಷ ಪಡಿಸಿದನು.

## ಕಾಶಿಯಲ್ಲಿ ಮಣಿಯಿಂದ ಸುವೃಷ್ಟಿ

ಸುರಾಲಯಗೃಹೈಶ್ಚಿತ್ರೈರ್ನಗರಂ ಸಮಕಲ್ಪಯತ್ ।
ನ ದುರ್ಭಿಕ್ಷಂ ನ ವೈ ರೋಗಾ ಈತಯೋ ನ ಚ ವಿಜ್ವರಮ್ ॥೯೮॥

ಸ್ಯಮಂತಕಮಣಿಯು ಕೊಡುತ್ತಿದ್ದ ಸಂಪತ್ತಿನಿಂದ ಅಕ್ರೂರನು ಚಿತ್ರವಿಚಿತ್ರವಾದ ಅನೇಕ ದೇವಾಲಯಗಳನ್ನುಳ್ಳ ನಗರವನ್ನು ಕಟ್ಟಿಸಿದನು. ಸ್ಯಮಂತಕಮಣಿಯನ್ನು ಇಟ್ಟುಕೊಂಡಿದ್ದರಿಂದ ಅಲ್ಲಿ ದುರ್ಭಿಕ್ಷ ಇರಲಿಲ್ಲ. ಯಾರಿಗೂ ರೋಗಾದಿ ಪೀಡೆಗಳು ಇರಲಿಲ್ಲ. ಜ್ವರಾದಿಗಳೂ ಕೂಡ ಬರುತ್ತಿರಲಿಲ್ಲ.

ಶುಚಿನಾ ಧಾರ್ಯತೇ ತತ್ರ ಮಣಿಃ ಸೂರ್ಯಸ್ಯ ನಿಶ್ಚಿತಮ್ ।
ಜಾನನ್ನಪಿ ಹಿ ತತ್ಸರ್ವಂ ಮಾನುಷಂ ಭಾವಮಾಶ್ರಿತಃ ॥೯೯॥

ಅಕ್ರೂರನು ಎಂದೆಂದೂ ಶುಚಿರ್ಭೂತನಾಗಿಯೇ ಸ್ಯಮಂತಕಮಣಿಯನ್ನು ಧಾರಣೆ ಮಾಡುತ್ತಿದ್ದನು. ಶ್ರೀಕೃಷ್ಣನಿಗೆ ಮಾತ್ರ ಅಕ್ರೂರನ ಬಳಿ ಸ್ಯಮಂತಕಮಣಿಯಿರುವ ವಿಚಾರವು ನಿಶ್ಚಯವಾಗಿ ತಿಳಿದಿತ್ತು. ಆದರೂ ತನಗೆ ತಿಳಿಯದವನಂತೆ ಮನುಷ್ಯರಂತೆ ನಟನೆ ಮಾಡುತ್ತಿದ್ದನು.

## ಶ್ರೀಕೃಷ್ಣನ ಬಳಿಗೆ ನಾರದರ ಆಗಮನ

ಲೋಕಾಚಾರಂ ತಥಾ ಮಾಯಾಮಜ್ಞಾನಂ ಚಾಽಶ್ರಿತೋ ಯಥಾ ।
ಬಂಧುವೈರಸಮುತ್ಪನ್ನಲಾಂಛನಂ ಸಮುಪಸ್ಥಿತಮ್ ॥೭೦॥

ವೃಥಾಽಪವಾದಬಹುಲಂ ಜಾಯಮಾನಂ ಕಥಂ ಹರೇತ್ ।
ಇತಿ ಚಿಂತಾತುರಂ ಕೃಷ್ಣಂ ನಾರದಃ ಸಮುಪಸ್ಥಿತಃ ॥೭೧॥

ಲೋಕದ ನಿಯಮದಂತೆ ಮನುಷ್ಯನ ಹಾಗೆ ಅಜ್ಞಾನ ಮಂಕುಕವಿದವನಂತೆ ಶ್ರೀಕೃಷ್ಣನು ನಾಟಕ ಮಾಡುತ್ತಿದ್ದನು. ಎಲ್ಲ ಬಂಧುಗಳಿಂದ ತನಗೆ ಅಪವಾದ

ಬಂದಿದೆಯೆಂಬ ಲಾಂಛನವನ್ನು ಹೊಂದಿದ್ದನು. ವ್ಯರ್ಥವಾಗಿ ಬಂದ ಅಪವಾದವನ್ನು ಹೇಗೆ ಕಳೆದುಕೊಳ್ಳಬೇಕೆಂದು ವ್ಯಸನ ಪಡುತ್ತಿದ್ದನು. ಇದೇ ಸಂದರ್ಭದಲ್ಲಿ ನಾರದ ಮಹರ್ಷಿಗಳು ಅಲ್ಲಿಗೆ ಆಗಮಿಸಿದರು.

ಗೃಹೀತ್ವಾ ತತ್ಕೃತಾಂ ಪೂಜಾಂ ಸುಖಾಸನಗತೋಽಬ್ರವೀತ್ ।

ನಾರದಃ –

ಕಿಮರ್ಥಂ ಖಿದ್ಯತೇ ದೇವ ಕಿಂ ವಾ ತೇ ಶೋಕಕಾರಣಮ್ ॥೭೨॥

ಶ್ರೀಕೃಷ್ಣನು ನಾರದರಿಗೆ ಸತ್ಕಾರ ಮಾಡಿದನು. ಅತಿಥಿಪೂಜೆಯನ್ನು ಮಾಡಿದನು. ನಾರದರು ಅದೆಲ್ಲವನ್ನೂ ಸ್ವೀಕರಿಸಿ ಹೀಗೆ ಪ್ರಶ್ನಿಸಿದರು. – 'ಓ ದೇವನೇ! ಏಕಿಷ್ಟು ದುಃಖಪಡುತ್ತಿರುವಿ. ನಿನ್ನ ದುಃಖಕ್ಕೆ ಕಾರಣವೇನು?'

ಯಥಾವೃತ್ತಂ ಸಮಾಚಷ್ಟೇ ನಾರದಾಯ ಸ ಕೇಶವಃ ।

ಜಾನಾಮಿ ಕಾರಣಂ ದೇವ ಯದರ್ಥಂ ಲಾಂಛನಂ ತವ ॥೭೩॥

ಶ್ರೀಕೃಷ್ಣನು ನಡೆದ ಎಲ್ಲ ಘಟನೆಗಳನ್ನೂ ನಾರದರಿಗೆ ತಿಳಿಸಿದನು. ಆಗ ನಾರದರು ಹೀಗೆ ಉತ್ತರಿಸಿದರು – 'ಯಾವ ನಿಮಿತ್ತದಿಂದ ನಿನಗೆ ಅಪವಾದ ಬಂದಿದೆಯೋ ಅದರ ಕಾರಣವನ್ನು ನಾನು ತಿಳಿದಿರುವೆನು'.

## ಮಿಥ್ಯಾಪವಾದಕ್ಕೆ ಚತುರ್ಥೀಚಂದ್ರದರ್ಶನವೇ ಕಾರಣ

ತ್ವಯಾ ಭಾದ್ರಪದೇ ಶುಕ್ಲೇ ಚತುರ್ಥ್ಯಾಂ ಚಂದ್ರದರ್ಶನಮ್ ।

ಕೃತಂ ತೇನ ಸಮುತ್ಪನ್ನಂ ಲಾಂಛನಂ ತು ವೃಥೈವ ಹಿ ॥೭೪॥

ನೀನು ಭಾದ್ರಪದ ಮಾಸದ ಶುಕ್ಲಪಕ್ಷದ ಚತುರ್ಥಿಯ ದಿವಸ ಚಂದ್ರದರ್ಶನವನ್ನು ಮಾಡಿರುವಿ. ಆ ಕಾರಣದಿಂದ ನಿನಗೆ ಮಿಥ್ಯಾಪವಾದವು ಬಂದೊದಗಿದೆ.

ಶ್ರೀಕೃಷ್ಣಃ–

ವದ ನಾರದ ಮೇ ಶೀಘ್ರಂ ಕೋ ದೋಷಶ್ಚಂದ್ರದರ್ಶನೇ ।

ಕಿಮರ್ಥಂ ತು ದ್ವಿತೀಯಾಯಾಂ ತಸ್ಯ ಕುರ್ವಂತಿ ದರ್ಶನಮ್ ॥೭೫॥

ಶ್ರೀಕೃಷ್ಣನು ಪ್ರಶ್ನಿಸಿದನು – ನಾರದ ಮಹರ್ಷಿಗಳೇ! ಶೀಘ್ರವಾಗಿ ಅದರ ಬಗ್ಗೆ ನನಗೆ ಹೇಳಿರಿ. ಅಂದು ಚಂದ್ರನನ್ನು ನೋಡಿದರೆ ಯಾವ ದೋಷ ಬರುತ್ತದೆ?

ಮತ್ತು ದ್ವಿತೀಯಾ ದಿವಸ ಚಂದ್ರನನ್ನು ಕಾದು ಕುಳಿತು ಎಲ್ಲರೂ ನೋಡುತ್ತಾರೆ. ಇದಕ್ಕೇನು ಕಾರಣ?

ನಾರದಃ –

ಗಣನಾಥೇನ ಸಂಶಪ್ತಶ್ಚಂದ್ರಮಾ ರೂಪಗರ್ವಿತಃ ।
ತದ್ದರ್ಶನೇ ನರಾಣಾಂ ಹಿ ವೃಥಾ ನಿಂದಾ ಭವಿಷ್ಯತಿ ॥೭೬॥

ನಾರದರು ಉತ್ತರಿಸಿದರು – ರೂಪದಿಂದ ಅಹಂಕಾರವನ್ನು ಹೊಂದಿದ ಚಂದ್ರನಿಗೆ ಗಣಪತಿಯು ಶಾಪವನ್ನು ನೀಡಿದ್ದಾನೆ. ಯಾರು ಆ ದಿವಸ ಚಂದ್ರನನ್ನು ನೋಡುತ್ತಾರೋ ಅವರಿಗೆ ನಿಷ್ಕಾರಣವಾಗಿ ಅಪವಾದವು ಬರುತ್ತದೆ.

## ಚಂದ್ರನಿಗೇಕೆ ಇಂಥ ಶಾಪ?

ಶ್ರೀಕೃಷ್ಣಃ–

ಕಿಮರ್ಥಂ ಗಣನಾಥೇನ ಶಪ್ತಶ್ಚಂದ್ರಃ ಸುಧಾಮಯಃ ।
ಇದಮಾಖ್ಯಾನಕಂ ಶ್ರೇಷ್ಠಂ ಯಥಾವದ್ ವಕ್ತುಮರ್ಹಸಿ ॥೭೭॥

ಶ್ರೀಕೃಷ್ಣನು ಪ್ರಶ್ನಿಸಿದನು – ಮುನಿಯೇ! ಗಣಪತಿಯು ಯಾವ ಕಾರಣದಿಂದ ಅಮೃತಕಿರಣವನ್ನು ಸೂಸುವ ಚಂದ್ರನಿಗೆ ಶಾಪವನ್ನು ನೀಡಿದನು. ಈ ಚರಿತ್ರೆಯನ್ನು ನನಗೆ ತಿಳಿಸಿರಿ.

ನಾರದಃ –

ಗಣಾನಾಮಾಧಿಪತ್ಯೇ ಚ ರುದ್ರೇಣ ವಿಹಿತಃ ಪುರಾ ।
ಅಣಿಮಾ ಮಹಿಮಾ ಚೈವ ಲಘಿಮಾ ಗರಿಮಾ ತಥಾ ॥೭೮॥

ಪ್ರಾಪ್ತಿಃ ಪ್ರಾಕಾಮ್ಯಮೀಶಿತ್ವಂ ವಶಿತ್ವಂ ಚಾಷ್ಟಸಿದ್ಧಯಃ ।
ಭಾರ್ಯಾರ್ಥಂ ಪ್ರದದೌ ದೇವೋ ಗಣೇಶಸ್ಯ ಪ್ರಜಾಪತಿಃ ॥೭೯॥

ನಾರದರು ಉತ್ತರಿಸಿದರು – ಮಹಾರುದ್ರದೇವರು ಗಣಪತಿಯನ್ನು ತಮ್ಮೆಲ್ಲ ಗಣಗಳಿಗೆ ಅಧಿಪತಿಯನ್ನಾಗಿ ಮಾಡಿದರು. ಆಗ ಬ್ರಹ್ಮದೇವರು ಅಣಿಮಾ, ಮಹಿಮಾ, ಲಘಿಮಾ, ಗರಿಮಾ, ಪ್ರಾಪ್ತಿಃ, ಪ್ರಾಕಾಮ್ಯ, ಈಶಿತ್ವ, ವಶಿತ್ವ ಎಂಬ ಅಷ್ಟಸಿದ್ಧಿಗಳನ್ನು ಗಣಪತಿಯ ಹೆಂಡಂದಿರನ್ನಾಗಿ ಮಾಡಿದರು.

ಪೂಜಯಿತ್ವಾ ಗಣಾಧ್ಯಕ್ಷಂ ಸ್ತುತಿಂ ಕರ್ತುಂ ಪ್ರಚಕ್ರಮೇ ।
ಗಜವಕ್ತ್ರ ಗಣಾಧ್ಯಕ್ಷ ಲಂಬೋದರ ವರಪ್ರದ ॥೮೦॥

ಎಂಟು ಮಂದಿ ಹೆಂಡತಿಯರನ್ನು ನೀಡಿ ಗಣಾಧ್ಯಕ್ಷನನ್ನು ಸ್ತುತಿಸಲು ಪ್ರಾರಂಭಿಸಿದರು. ಬ್ರಹ್ಮದೇವರು ಹೇಳಿದರು– ಓ ಗಜವಕ್ತ್ರನೇ! ನೀನು ಗಣಗಳಿಗೆ ಅಧ್ಯಕ್ಷನಾಗಿರುವಿ. ಲಂಬೋದರನಾಗಿರುವಿ. ಭಕುತರಿಗೆ ಎಲ್ಲ ವರಗಳನ್ನು ನೀಡುವಿ.

ವಿಘ್ನಾಧಿರಾಜ ದೇವೇಶ ಸೃಷ್ಟಿಸಂಹಾರಕಾರಕ ।
ಸಂಪೂಜಯೇದ್ ಗಣಾಧ್ಯಕ್ಷಂ ಮೋದಕಾದ್ಯೈಃ ಪ್ರಯತ್ನತಃ ॥೮೧॥

ಎಲ್ಲ ವಿಘ್ನಗಳನ್ನು ಪರಿಹರಿಸುವುದರಲ್ಲಿ ಅದ್ವಿತೀಯನಾಗಿರುವಿ. ಸಮಸ್ತದೇವತೆ-ಗಳಿಗೂ ಒಡೆಯನಾಗಿರುವಿ. ಜಗತ್ತಿನ ಸೃಷ್ಟಿ ಮತ್ತು ಸಂಹಾರಗಳಿಗೆ ಕಾರಕನಾಗಿರುವಿ. ಇಂಥ ಗಣಪತಿಯನ್ನು ಮೋದಕಾದಿಭಕ್ಷ್ಯಭೋಜ್ಯಗಳನ್ನು ಮಾಡಿ ನೈವೇದ್ಯ ಮಾಡುವ ಮೂಲಕ ಪ್ರಯತ್ನಪೂರ್ವಕವಾಗಿ ಪೂಜೆ ಮಾಡಬೇಕು.

ನಿರ್ವಿಘ್ನಕಾರ್ಯಕ್ಕೆ ಗಣಪತಿಪೂಜೆ ಮಾಡಲೇಬೇಕು

ತೇಷಾಂ ಪ್ರಜಾಯತೇ ಸಿದ್ಧಿರ್ನಿರ್ವಿಘ್ನೇನ ನ ಸಂಶಯಃ ।
ಅಸಂಪೂಜ್ಯ ಗಣಾಧ್ಯಕ್ಷಂ ಯೇ ವಾಂಛಂತಿ ಸುರಾಸುರಾಃ ॥೮೨॥

ನಿರ್ವಿಘ್ನವಾಗಿ ಕಾರ್ಯಸಿದ್ಧಿಯು ಆಗಬೇಕೆಂದರೆ ಗಣಪತಿಯನ್ನು ಪೂಜೆ ಮಾಡಬೇಕು. ಗಣಪತಿಯನ್ನು ಪೂಜೆ ಮಾಡದೇ ದೇವತೆಗಳಿಗಾಗಲೀ ದೈತ್ಯರಿಗಾಗಲೀ ನಿರ್ವಿಘ್ನವಾಗಿ ಕಾರ್ಯಸಿದ್ಧಿಯು ಆಗುವುದಿಲ್ಲ.

ನ ತೇಷಾಂ ಜಾಯತೇ ಸಿದ್ಧಿಃ ಕಲ್ಪಕೋಟಿಶತೈರಪಿ ।
ತ್ವದ್‌ಭಕ್ತ್ಯಾ ತು ಗಣಾಧ್ಯಕ್ಷ ವಿಷ್ಣುಃ ಪಾಲಯತೇ ಸದಾ ॥೮೩॥

ಶತಕೋಟಿಕಲ್ಪಗಳು ಕಳೆದರೂ ಕಾರ್ಯವು ಆಗುವುದೇ ಇಲ್ಲ. ಆದ್ದರಿಂದ ಗಣಾಧ್ಯಕ್ಷನೇ ನಿನ್ನನ್ನು ಎಲ್ಲ ಭಕ್ತರು ಆರಾಧನೆ ಮಾಡಬೇಕೆಂಬುದನ್ನು ತೋರಿಸುವುದಕ್ಕಾಗಿಯೇ ಮಹಾವಿಷ್ಣುವೂ ಕೂಡ ನಿನ್ನ ಪೂಜೆಯನ್ನು ಭಕ್ತಿಯಿಂದ ಮಾಡಿರುವನು.

ರುದ್ರೋಽಪಿ ಸಂಹರತ್ಯಾಶು ತ್ವದ್‌ಭಕ್ತ್ಯೈವ ಸೃಜಾಮ್ಯಹಮ್ ।
ಇತ್ಥಂ ಸಂಸ್ತೂಯಮಾನೋಽಸೌ ದೇವದೇವೋ ಗಜಾನನಃ ॥೮೪॥

'ನಿನ್ನ ಪೂಜೆಯನ್ನು ಮಾಡಿಯೇ ರುದ್ರನು ಜಗತ್ತಿನ ಸಂಹಾರವನ್ನು ಮಾಡುತ್ತಾನೆ. ನಾನೂ ಸಹ ಜಗತ್ತಿನ ಸೃಷ್ಟಿಯನ್ನು ಮಾಡುತ್ತೇನೆ' ಹೀಗೆ ದೇವದೇವನಾದ ಗಣೇಶನು ಬ್ರಹ್ಮದೇವರಿಂದ ಸ್ತುತನಾದನು.

ಉವಾಚ ಪರಮಪ್ರೀತೋ ಬ್ರಹ್ಮಾಣಂ ಜಗತಾಂ ಪತಿಃ ।

ಜಗತ್ಪತಿಯಾದ ಪರಮಪ್ರೀತನಾದ ಗಣೇಶನು ಬ್ರಹ್ಮನನ್ನು ಕುರಿತು ಹೀಗೆ ಹೇಳಿದನು.

ಶ್ರೀಗಣೇಶಃ –

ವರಂ ಬ್ರೂಹಿ ಪ್ರದಾಸ್ಯಾಮಿ ಯತ್ತೇ ಮನಸಿ ವರ್ತತೇ ॥೮೫॥

ಗಣೇಶನು ಹೇಳುತ್ತಾನೆ – ಚತುರ್ಮುಖಬ್ರಹ್ಮನೇ! ನಿನ್ನ ಮನಸ್ಸಿನಲ್ಲಿ ಯಾವ ಬಯಕೆಯು ಇದೆಯೋ ಅದನ್ನು ತಿಳಿಸು. ಕೂಡಲೇ ನಿನಗೆ ಅದನ್ನು ವರವಾಗಿ ಕೊಡುತ್ತೇನೆ.

## ಚಂದ್ರಲೋಕಕ್ಕೆ ಗಣಪತಿ ಬಂದನು

ಬ್ರಹ್ಮೋವಾಚ –

ಕ್ರಿಯಮಾಣಾ ಹಿ ಮೇ ಸೃಷ್ಟಿರ್ನಿರ್ವಿಘ್ನಂ ಜಾಯತಾಂ ಪ್ರಭೋ ।
ಏವಮಸ್ತ್ವಿತಿ ದೇವೋಽಸೌ ಗೃಹೀತ್ವಾ ಮೋದಕಾನ್ ಕರೇ ॥೮೬॥

ಸಪ್ತ ಲೋಕಾನ್ ಸಮಾಗತ್ಯ ಸ್ವೇಚ್ಛಯಾ ಗಗನೇ ಶನೈಃ ।
ಚಂದ್ರಲೋಕಂ ಸಮಾಸಾದ್ಯ ಚಲಿತೋ ಗಣನಾಯಕಃ ॥೮೭॥

ಪ್ರಭೋ! ನಾನು ಮಾಡುವ ಸೃಷ್ಟ್ಯಾದಿ ವ್ಯಾಪಾರಗಳು ನಿರ್ವಿಘ್ನವಾಗಿ ನೆರವೇರಬೇಕು. ಬ್ರಹ್ಮದೇವರಿಗೆ ಗಣಪತಿಯು 'ತಥಾಽಸ್ತು' ಎಂಬುದಾಗಿ ವರವನ್ನು ನೀಡಿದನು. ಅನಂತರ ಮೋದಕಗಳನ್ನು ಕೈಯಲ್ಲಿ ಧರಿಸಿ ಏಳು ಲೋಕಗಳನ್ನು ನೋಡುತ್ತಾ, ನಿಧಾನವಾಗಿ ತನ್ನ ಇಚ್ಛಾನುಸಾರವಾಗಿ ಸಂಚಾರ ಮಾಡುತ್ತಾ ಚಂದ್ರಲೋಕಕ್ಕೆ ಆಗಮಿಸಿದನು.

## ಅಲ್ಲಿ ಚಂದ್ರನು ಅಪಹಾಸ ಮಾಡಿದನು

ಅಪಹಾಸಂ ತದಾ ಚಕ್ರೇ ಸೋಮೋ ರೂಪಮದಾನ್ವಿತಃ ।
ತಂ ದೃಷ್ಟ್ವಾ ಕೋಪತಾಮ್ರಾಕ್ಷೋ ಗಣನಾಥಃ ಶಶಾಪ ಹ ॥೮೮॥

ಚಂದ್ರನು ಅತ್ಯಂತ ರೂಪವಂತನಾಗಿದ್ದನು. ನಾನೇ ರೂಪವಂತನೆಂಬ ಅಹಂಕಾರವೂ ಕೂಡ ಅವನಲ್ಲಿ ಅಡಗಿತ್ತು. ಲಂಬೋದರನಾದ ಗಣಪತಿಯನ್ನು ಕಂಡು ಪರಿಹಾಸ ಮಾಡಿದನು. ಗಣಪತಿಯು ಆದರಿಂದ ಕುಪಿತನಾದನು. ಕಣ್ಣುಗಳನ್ನು ಕೆಂಪು ಮಾಡಿಕೊಂಡು ಶಾಪ ನೀಡಿದನು.

## ಸುರೂಪೀ ಚಂದ್ರನಿಗೆ ಗಣಪತಿಯ ಶಾಪ

ದರ್ಶನೀಯಃ ಸುರೂಪೋಽಹಂ ಸುಂದರಶ್ಚಾಹಮಿತ್ಯಥ ।
ಗರ್ವಿತೋಽಸಿ ಶಶಾಂಕ ತ್ವಂ ಫಲಂ ಪ್ರಾಪ್ಸ್ಯಸಿ ಸತ್ವರಮ್ ॥೮೯॥

ಮೊಲದ ಚಿಹ್ನೆಯುಳ್ಳ ಚಂದ್ರನೇ! ನಾನೇ ಅತ್ಯಂತ ರೂಪವಂತನೆಂದು ಸುಂದರನೆಂದು ಅಹಂಕಾರ ಪಡುತ್ತಿರುವಿ. ಈ ಅಹಂಕಾರದ ಫಲವನ್ನು ಸದ್ಯದಲ್ಲಿಯೇ ಅನುಭವಿಸುವಿ.

ಅದ್ಯಪ್ರಭೃತಿ ಲೋಕಾಸ್ತ್ವಾಂ ನ ಹಿ ಪಶ್ಯಂತಿ ಪಾಪಿನಮ್ ।
ಯೇ ಪಶ್ಯಂತಿ ಪ್ರಮಾದೇನ ತ್ವಾಂ ನರಾ ಮೃಗಲಾಂಛನಮ್ ॥೯೦॥

ಪಾಪಿಷ್ಠನಾದ ನಿನ್ನನ್ನು ಲೋಕದ ಜನರು ಇನ್ನು ಮುಂದೆ ನೋಡುವುದಿಲ್ಲ. ಯಾರಾದರೂ ಪ್ರಮಾದವಶಾತ್ ನಿನ್ನನ್ನು ನೋಡಿದರೆ ಮಿಥ್ಯಾಪವಾದದಿಂದ ಅವರು ಶಿಕ್ಷೆಯನ್ನು ಅನುಭವಿಸುತ್ತಾರೆ.

ಮಿಥ್ಯಾಭಿಶಾಪಸಂಯುಕ್ತಾ ಭವಿಷ್ಯಂತೀಹ ತೇ ಧ್ರುವಮ್ ।
ಹಾಹಾಕಾರೋ ಮಹಾನ್ ಜಾತಃ ಶ್ರುತ್ವಾ ಶಾಪಂ ಚ ಭೀಷಣಮ್ ॥೯೧॥

ನಿನ್ನನ್ನು ನೋಡಿದ ಜನರು ಮಿಥ್ಯಾಪವಾದಕ್ಕೆ ಭಾಗಿಯಾಗುತ್ತಾರೆ. ಇದು ನಿಶ್ಚಯ. ಗಣಪತಿಯು ಹೀಗೆ ಶಾಪಪ್ರದಾನ ಮಾಡಿದ ಮೇಲೆ ಹಾಹಾಕಾರ ಉಂಟಾಯಿತು. ಎಂಥಾ ಭಯಂಕರವಾದ ಶಾಪ ಎಂಬ ಧ್ವನಿಗಳು ಕೇಳಿದವು.

## ಚಂದ್ರನ ದುರವಸ್ಥೆ

ಅತ್ಯಂತಮ್ಲಾನವದನಶ್ಚಂದ್ರೋ ಜಲಮಥಾವಿಶತ್ ।
ಕುಮುದೇ ಕೌಮುದೀನಾಥಃ ಸ್ಥಿತಸ್ತತ್ರ ಕೃತಾಲಯಃ ॥೯೨॥

ಶಪಿತನಾದ ಚಂದ್ರನು ಬಾಡಿದ ಮುಖವುಳ್ಳವನಾಗಿ ನೀರನ್ನು ಪ್ರವೇಶ ಮಾಡಿದನು. ಕೌಮುದೀನಾಥನಾದ ಚಂದ್ರನು ಕುಮುದಪುಷ್ಪದ ದಂಟಿನಲ್ಲಿ ಕುಳಿತುಬಿಟ್ಟನು.

ತತೋ ದೇವರ್ಷಿಗಂಧರ್ವಾ ನಿರಾಶೋದ್ವಿಗ್ನಮಾನಸಾಃ ।
ದೇವೇಂದ್ರಂ ಚ ಪುರೋಧಾಯ ಜಗ್ಮುಸ್ತೇ ತಂ ಪಿತಾಮಹಮ್ ॥೯೩॥

ಚಂದ್ರನೇ ಇಲ್ಲದೇ ದೇವತೆಗಳಿಗೆ ಋಷಿಗಳಿಗೆ ಗಂಧರ್ವರಿಗೆ ಅತ್ಯಂತ ನಿರಾಶೆ-ಯಾಯಿತು. ಕಳವಳಗೊಂಡರು. ಮುಂದೇನು ಮಾಡಬೇಕೆಂದೇ ತೋಚದಾಯಿತು. ಇಂದ್ರನನ್ನು ಮುಂದಿಟ್ಟುಕೊಂಡು ಬ್ರಹ್ಮದೇವರ ಬಳಿಗೆ ನಡೆದರು.

ದೇವಂ ಶಶಂಸುಶ್ಚಂದ್ರಸ್ಯ ಗಣೇಶಸ್ಯ ಚ ಚೇಷ್ಟಿತಮ್ ।
ದತ್ತಃ ಶಾಪೋ ಗಣೇಶೇನ ಕಥಯಾಮಾಸುರಾದರಾತ್ ॥೯೪॥

ಸಕಲ ದೇವತೆಗಳು ಭಕ್ತಿಯಿಂದ ಚತುರ್ಮುಖಬ್ರಹ್ಮದೇವರ ಬಳಿ ಚಂದ್ರ ಮತ್ತು ಗಣಪತಿಯರ ಪ್ರಸಂಗವನ್ನು ನಿವೇದಿಸಿದರು. ಗಣಪತಿ ನೀಡಿದ ಶಾಪದ ವೃತ್ತಾಂತವನ್ನು ತಿಳಿಸಿದರು.

## ಗಣೇಶಶಾಪವಿಮೋಚನೆಗೆ ಪರಿಹಾರ

ವಿಚಾರ್ಯ ಭಗವಾನ್ ಬ್ರಹ್ಮಾ ತಾನ್ ಸುರಾನಿದಮಬ್ರವೀತ್ ।
ಗಣೇಶಶಾಪೋ ದೇವೇಂದ್ರ ನ ಶಕ್ಯತೇ ಕೇನ ವಾಽನ್ಯಥಾ ॥೯೫॥

ಚತುರ್ಮುಖಬ್ರಹ್ಮದೇವರು ಆಲೋಚನೆ ಮಾಡಿ ದೇವತೆಗಳಿಗೆ ಹೀಗೆ ಹೇಳಿದರು – ದೇವೇಂದ್ರನೇ! ಗಣೇಶನ ಶಾಪವನ್ನು ಪರಿಹರಿಸಲು ಯಾರಿಗೂ ಸಾಧ್ಯವಿಲ್ಲ.

ಕರ್ತುಂ ರುದ್ರೇಣ ನ ಮಯಾ ವಿಷ್ಣುನಾ ಚಾಪಿ ನಿಶ್ಚಿತಮ್ ।
ತಮೇವ ದೇವದೇವೇಶಂ ವ್ರಜಧ್ವಂ ಶರಣಂ ಸುರಾಃ ॥೯೬॥

ನನಗಾಗಲೀ ರುದ್ರನಿಗಾಗಲೀ ವಿಷ್ಣುವಿಗಾಗಲೀ ಶಾಪವನ್ನು ಪರಿಹರಿಸಲಾಗದು. ಆದ್ದರಿಂದ ಆ ಗಣಪತಿಯನ್ನೇ ನೀವು ಶರಣು ಹೊಂದಿರಿ.

**ಟಿಪ್ಪಣಿ–** ಶಾಪನೀಡಿರುವ ದೇವತೆಯೇ ಪರಿಹಾರವನ್ನು ಸೂಚಿಸಲಿ ಎಂಬ ದೃಷ್ಟಿಯಿಂದ ಬ್ರಹ್ಮದೇವರು ದೇವತೆಗಳಿಗೆ ಗಣಪತಿಯ ಬಳಿಗೇ ತೆರಳುವಂತೆ ಹೇಳಿದರು ಎಂದರ್ಥ ಮಾಡಿಕೊಳ್ಳಬೇಕು.

ಸ ಏವ ಶಾಪಮೋಕ್ಷಂ ಚ ಕರಿಷ್ಯತಿ ನ ಸಂಶಯಃ ।

ದೇವಾಃ –

ಕೇನೋಪಾಯೇನ ವರದೋ ಗಜವಕ್ತ್ರೋ ಗಣೇಶ್ವರಃ ॥೯೭॥

ಪಿತಾಮಹ ಮಹಾಪ್ರಾಜ್ಞ ತದಸ್ಮಾಕಂ ವದ ಪ್ರಭೋ ।

ಆ ಗಣಪತಿಯೇ ತಾನು ನೀಡಿದ ಶಾಪವನ್ನು ಪರಿಹರಿಸುತ್ತಾನೆ. ಈ ವಿಷಯದಲ್ಲಿ ಸಂಶಯ ಬೇಡ - ಎಂಬುದಾಗಿ ಬ್ರಹ್ಮದೇವರು ಹೇಳಿದರು. ದೇವತೆಗಳು ಕೇಳುತ್ತಾರೆ – ಯಾವ ಉಪಾಯದಿಂದ ಗಜಮುಖಧಾರಿಯಾದ ಗಣೇಶ್ವರನು ನಮಗೆ ವರಪ್ರದನಾಗುವನು; ಮಹಾಪ್ರಾಜ್ಞರಾದ ಪ್ರಭುವಾದ ಪಿತಾಮಹರೇ ಆ ಸೂಕ್ಷ್ಮವನ್ನು ನಮಗೆ ತಿಳಿಸಿರಿ.

ಪಿತಾಮಹಃ –

ಚತುರ್ಥ್ಯಾಂ ದೇವದೇವೋಽಸೌ ಪೂಜನೀಯಃ ಸದೈವ ಹಿ ॥೯೮॥

ಚತುರ್ಥಿಯ ದಿವಸ ದೇವತೆಗಳಿಗೂ ದೇವನಾದ ಈ ಗಣಪತಿಯನ್ನು ಭಕ್ತಿಯಿಂದ ಪೂಜೆಗೈಯಬೇಕು.

## ಗಣೇಶಚತುರ್ಥಿಯ ವಿಧಿ-ವಿಧಾನ

ಕೃಷ್ಣಪಕ್ಷೇ ವಿಶೇಷೇಣ ನಕ್ತಂ ಕುರ್ಯಾಚ್ಚ ತದ್‌ವ್ರತಮ್ ।

ಅಪೂಪೈರ್ಘೃತಸಂಯುಕ್ತೈರ್ಮೋದಕೈಃ ಪರಿತೋಷಯೇತ್ ॥೯೯॥

ವಿಶೇಷವಾಗಿ ಕೃಷ್ಣಪಕ್ಷದಲ್ಲಿ ಗಣಪತಿವ್ರತವನ್ನು ಆಚರಿಸಬೇಕು. ತುಪ್ಪದಿಂದ ಮಾಡಲ್ಪಟ್ಟ ಅಪೂಪ ಹಾಗೂ ಮೋದಕಗಳನ್ನು ನೈವೇದ್ಯ ಮಾಡಿ ಸಂತೋಷಪಡಿಸಬೇಕು.

ಮಧುರಾನ್ನಂ ಹವಿಷ್ಯಂ ಚ ಸ್ವಯಂ ಭುಂಜೀತ ವಾಗ್ಯತಃ ।

ಸ್ವರ್ಣರೂಪಂ ಗಣೇಶಸ್ಯ ದಾತವ್ಯಂ ಬ್ರಾಹ್ಮಣಾಯ ಚ ॥೧೦೦॥

ವ್ರತವನ್ನು ಆಚರಿಸುವವನು ಮಧುರವಾದ ಶುಚಿಯಾದ ಆಹಾರವನ್ನೇ ಸ್ವೀಕರಿಸಬೇಕು. ಮೌನಿಯಾಗಿರಬೇಕು. ಚಿನ್ನದ ಗಣಪತಿಯ ಪ್ರತಿಮೆಯನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು.

ಶಕ್ತ್ಯಾ ಚ ದಕ್ಷಿಣಾಂ ದದ್ಯಾದ್ ವಿತ್ತಶಾಠ್ಯಂ ನ ಕಾರಯೇತ್ ।
ಏವಂ ಶ್ರುತ್ವೈವ ತೇ ಸರ್ವೇ ಪ್ರೈಷಯನ್ ಗೀಷ್ಪತಿಂ ಸುರಾಃ ॥೧೦೧॥

ಯಥಾಶಕ್ತಿ ದಕ್ಷಿಣೆಯನ್ನು ನೀಡಬೇಕು. ಅಂದಮಾತ್ರಕ್ಕೆ ವಿತ್ತಶಾಠ್ಯವನ್ನು ಎಂದೂ ಮಾಡಬಾರದು. ಚತುರ್ಮುಖಬ್ರಹ್ಮದೇವರ ಈ ಮಾತುಗಳನ್ನು ಕೇಳಿ ಗಣಪತಿ ವ್ರತವನ್ನು ಮಾಡಿಸಲು ಬೃಹಸ್ಪತ್ಯಾಚಾರ್ಯರಿಗೆ ದೂತರ ಮೂಲಕ ಆಹ್ವಾನವನ್ನು ನೀಡಿದರು.

## ಚಂದ್ರನಿಂದ ಗಣೇಶಚತುರ್ಥಿಯ ಆಚರಣೆ

ಸ ಗತ್ವಾ ಕಥಯಾಮಾಸ ಚಂದ್ರಾಯ ಬ್ರಹ್ಮಣೋದಿತಮ್ ।
ವ್ರತಂ ಚಕ್ರೇ ತತಶ್ಚಂದ್ರೋ ಯಥೋಕ್ತಂ ಬ್ರಹ್ಮಣಾ ಪುರಾ ॥೧೦೨॥

ಆ ಬೃಹಸ್ಪತ್ಯಾಚಾರ್ಯರು ಚಂದ್ರನ ಬಳಿ ತೆರಳಿದರು. ಬ್ರಹ್ಮನು ತಿಳಿಸಿದ್ದನ್ನು ಚಂದ್ರನಿಗೆ ತಿಳಿಸಿದರು. ಬ್ರಹ್ಮನು ಹೇಳಿದ ಕ್ರಮದಲ್ಲಿಯೇ ಗಣೇಶವ್ರತವನ್ನು ಚಂದ್ರನು ಮಾಡಿದನು.

ಆವಿರ್ಬಭೂವ ಭಗವಾನ್ ಗಣೇಶೋ ವ್ರತತೋಷಿತಃ ॥೧೦೩॥

ಈ ವ್ರತದಿಂದ ಗಣಪತಿಗೆ ಸಂತೋಷವಾಯಿತು. ಚಂದ್ರನೆದುರು ಪ್ರತ್ಯಕ್ಷನಾದನು.

ತಂ ಕ್ರೀಡಮಾನಂ ಗಣನಾಯಕಂ ಚ
ದೃಷ್ಟ್ವಾ ತು ತುಷ್ಟಾವ ಕಲಾನಿಧಾನಮ್ ।
ತ್ವಂ ಕಾರಣಂ ಕಾರಣಕಾರಣಾನಾಂ
ವೇತ್ತಾಽಸಿ ವೇದ್ಯಂ ಚ ವಿಭೋ ಪ್ರಸೀದ ॥೧೦೪॥

ಕ್ರೀಡಾದಿಗುಣಯುಕ್ತನಾದ ಗಣಪತಿಯನ್ನು ಕಂಡ ಚಂದ್ರನಿಗೆ ಬಹಳ ಸಂತೋಷವಾಯಿತು. ನೀನು ಜಗತ್ತಿಗೆ ಕಾರಣನಾಗಿರುವಿ. ಕಾರಣ ಮತ್ತು ಅಕಾರಣಗಳೆರಡನ್ನೂ ತಿಳಿದಿರುವಿ. ಸ್ವಾಮಿಯೇ! ನಿನಗೆ ನನ್ನ ಭಕ್ತಿಯ ನಮಸ್ಕಾರಗಳು.

## ಪ್ರಸೀದ ದೇವೇಶ ಜಗನ್ನಿವಾಸ

ಗಣೇಶ ಲಂಬೋದರ ವಕ್ರತುಂಡ ।
ವಿರಿಂಚಿನಾರಾಯಣಪೂಜ್ಯಮಾನ
ಕ್ಷಮಸ್ವ ಮೇ ಗರ್ವಕೃತಂ ಚ ಹಾಸ್ಯಮ್ ॥೧೦೫॥

ದೇವತೆಗಳಿಗೂ ನೀನು ಈಶನಾಗಿರುವಿ. ಲಂಬೋದರನಾಗಿರುವಿ. ವಕ್ರತುಂಡನಾಗಿರುವಿ. ಚತುರ್ಮುಖ, ನಾರಾಯಣ ಮೊದಲಾದವರಿಂದಲೂ ಪೂಜ್ಯನಾಗಿರುವಿ. ಅಹಂಕಾರದಿಂದ ನಾನು ಮಾಡಿದ ಅಪಹಾಸ್ಯವನ್ನು ಕ್ಷಮಿಸು.

ಯೇ ತ್ವಾಮಸಂಪೂಜ್ಯ ಗಣೇಶ ನೂನಂ
ವಾಂಛಂತಿ ಮೂಢಾಃ ಸುಕೃತಾಂ ಪ್ರಸಿದ್ಧಿಮ್ ।
ತೇ ದೇವ ನಷ್ಟಾ ಹಿ ಭವಂತಿ ತಸ್ಯ
ಜ್ಞಾತೋ ಮಯಾ ತೇ ಸಕಲಃ ಪ್ರಭಾವಃ ॥೧೦೬॥

ಯಾರು ನಿನ್ನನ್ನು ಪೂಜೆ ಮಾಡುವುದಿಲ್ಲವೋ, ಕೇವಲ ತಮ್ಮ ಅಪೇಕ್ಷೆಗಳು ಈಡೇರಬೇಕೆಂದು ಬಯಸುವರೋ, ಅವರೆಲ್ಲರೂ ದೌರ್ಭಾಗ್ಯಶಾಲಿಗಳು. ಅವರು ಸಂಪೂರ್ಣ ನಾಶವನ್ನೇ ಹೊಂದುತ್ತಾರೆ. ದೇವನೇ! ನಿನ್ನ ಪ್ರಭಾವವನ್ನು ಚೆನ್ನಾಗಿ ಅರಿತಿರುವೆನು.

**ಟಿಪ್ಪಣಿ** – ಅನೇಕರು ದೇವರ ಎದುರು ಹೋಗಿ ಯಾವುದೇ ರೀತಿ ಆರಾಧನೆ ಮಾಡದೇ ಅಪೇಕ್ಷೆಗಳನ್ನಷ್ಟೇ ಕೇಳುತ್ತಾರೆ. ಅಂಥವರು ಈ ಶ್ಲೋಕ ಓದಿ ಎಚ್ಚೆತ್ತುಕೊಳ್ಳಬೇಕು.

ಯೇ ಚಾಪ್ಯುದಾಸೀನರತಾಸ್ತು ಪಾಪಾಃ
ತೇ ಯಾಂತಿ ವಾಸಂ ನರಕೇ ಸದೈವ ।
ಹೇರಂಬ ಲಂಬೋದರ ಮೇ ಕ್ಷಮಸ್ವ
ದುಶ್ಚೇಷ್ಟಿತಂ ತತ್ ಕರುಣಾಸಮುದ್ರ ॥೧೦೭॥

ಯಾರು ನಿನ್ನನ್ನು ಪೂಜೆ ಮಾಡಲು ಉದಾಸೀನ ಮಾಡುತ್ತಾರೋ ಅವರು ನಿತ್ಯದಲ್ಲಿಯೂ ನರಕವನ್ನೇ ಹೊಂದುತ್ತಾರೆ. ದಯಾಸಮುದ್ರನೇ! ನನ್ನ ಈ ಕೆಟ್ಟ ಕೆಲಸವನ್ನು ಕ್ಷಮೆ ಮಾಡು.

**ಟಿಪ್ಪಣಿ** – ಚಂದ್ರನು ಗಣಪತಿಗಿಂತಲೂ ಉತ್ತಮದೇವತೆ ಆಗಿದ್ದಾನೆ. ನಮ್ಮ ಪರವಾಗಿ ಪ್ರಾರ್ಥಿಸುತ್ತಾನೆಂದಷ್ಟೇ ತಿಳಿಯಬೇಕು. ಅಥವಾ ಅಂತರ್ಯಾಮಿಯಾದ ವಿಶ್ವಂಭರನಲ್ಲಿ ಪ್ರಾರ್ಥಿಸುತ್ತಾನೆಂದು ತಿಳಿಯಬೇಕು.

**ಏವಂ ಸಂಸ್ತೂಯಮಾನೋಽಸೌ ಚಂದ್ರೇಣಾಥ ಗಜಾನನಃ ।**

**ಗಣೇಶಃ –**

**ತುಷ್ಟೋಽಹಂ ತವ ದಾಸ್ಯಾಮಿ ಯಥೇಚ್ಛಸಿ ವರಂ ತವ ॥೧೦೮॥**

ಹೀಗೆ ಚಂದ್ರನಿಂದ ಸ್ತುತಿಸಲ್ಪಟ್ಟ ಗಣೇಶನು ಪ್ರಸನ್ನನಾಗಿ ಹೀಗೆ ಹೇಳುತ್ತಾನೆ – ಚಂದ್ರನೇ! ನಿನ್ನ ವಿಷಯದಲ್ಲಿ ನಾನು ಪ್ರಸನ್ನನಾಗಿರುವೆನು. ಯಾವ ವರವನ್ನು ಅಪೇಕ್ಷಿಸುವಿಯೋ ಅದನ್ನು ನೀಡುತ್ತೇನೆ.

## ಚಂದ್ರನಿಗೆ ನೀಡಿದ್ದ ಶಾಪಕ್ಕೆ ಪರಿಹಾರ

**ತತೋ ಬ್ರಹ್ಮಾದಯಃ ಸರ್ವೇ ಸಮಾಜಗ್ಮುರ್ಭಯಾರ್ದಿತಾಃ ।**

**ವಿಶಾಪಂ ಕುರು ದೇವೇಂದುಂ ಪ್ರಾರ್ಥಯಾಮೋ ವಯಂ ತವ ॥೧೦೯॥**

ಅನಂತರ ಭಯಗೊಂಡವರಂತೆ ಬ್ರಹ್ಮಾದಿದೇವತೆಗಳು ಚಂದ್ರನ ದುರವಸ್ಥೆಯ ಪರಿಹಾರಕ್ಕಾಗಿ ಗಣಪತಿಯ ಬಳಿ ಆಗಮಿಸಿದರು. ಚಂದ್ರನ ಶಾಪವನ್ನು ಪರಿಹರಿಸಬೇಕೆಂದು ಗಣಪತಿಯನ್ನು ಪ್ರಾರ್ಥಿಸಿದರು.

**ವಿಶಾಪಮಕರೋಚ್ಚಂದ್ರಂ ಕಮಲಾಸನಗೌರವಾತ್ ।**

**ಶುಕ್ಲಪಕ್ಷೇ ಚತುರ್ಥ್ಯಾಂ ತು ಯೇ ಪಶ್ಯಂತಿ ಸದೈವ ಹಿ ॥೧೧೦॥**

ಎಲ್ಲ ದೇವತೆಗಳ ಪ್ರಾರ್ಥನೆಯಂತೆ ಚತುರ್ಮುಖಬ್ರಹ್ಮದೇವರ ವಿಷಯದಲ್ಲಿರುವ ಗೌರವಭಾವದಿಂದ ಚಂದ್ರನ ಶಾಪವನ್ನು ಗಣೇಶನು ಪರಿಹಾರ ಮಾಡಿದನು. ಮತ್ತು ಚಂದ್ರನಿಗೆ ಹೀಗೆ ಹೇಳಿದನು. ಶುಕ್ಲಪಕ್ಷದ ಚತುರ್ಥಿಯ ದಿವಸ ಯಾರು ನಿನ್ನನ್ನು ನೋಡುವರೋ ಅವರಿಗಷ್ಟೇ ಪಾಪವು ಬರಲಿ.

**ಮಿಥ್ಯಾಪವಾದಮಾವರ್ಷಂ ಪ್ರಾಪ್ಸ್ಯಂತೀಹ ನ ಸಂಶಯಃ ।**

**ಮಾಸಾದೌ ಪೂರ್ವಮೇವ ತ್ವಾಂ ಯೇ ಪಶ್ಯಂತಿ ಸದಾ ಜನಾಃ ॥೧೧೧॥**

ಒಂದು ವರ್ಷಕಾಲ ಮಿಥ್ಯಾಪವಾದವನ್ನು ಹೊಂದುತ್ತಾರೆ. ಆದರೆ ದ್ವಿತೀಯಾ ದಿವಸ ನಿನ್ನನ್ನು ನೋಡಿ ನಮಿಸಿದರೆ ಅವರ ಅಪವಾದವು ಪರಿಹಾರವಾಗುತ್ತದೆ.

ಚತುರ್ಥ್ಯಾಂ ಶುಕ್ಲಪಕ್ಷಸ್ಯ ತೇಷಾಂ ದೋಷೋ ನ ಜಾಯತೇ ।
ತದಾಪ್ರಭೃತಿ ಲೋಕೋಽಯಂ ದ್ವಿತೀಯಾಯಾಂ ಕೃತಾದರಃ ॥೧೧೨॥

ಶುಕ್ಲಪಕ್ಷದ ಚತುರ್ಥಿಯ ದಿವಸ ಚಂದ್ರದರ್ಶನ ಮಾಡಿದ ದೋಷವನ್ನು ಕಳೆದುಕೊಳ್ಳುತ್ತಾರೆ. ಹೀಗೆ ಶಾಪವನ್ನು ನಿವೃತ್ತಿ ಮಾಡಿದ ಮೇಲೆ, ಲೋಕದ ಜನರೆಲ್ಲರೂ ಅಂದಿನಿಂದ ದ್ವಿತೀಯಾಚಂದ್ರದರ್ಶನವನ್ನು ನೋಡುವ ವಿಷಯದಲ್ಲಿ ಆದರವುಳ್ಳವರಾದರು.

ಪುನರೇವ ತು ಪಪ್ರಚ್ಛ ಕಲಾವಾನ್ ಗಣನಾಯಕಮ್ ।
ಕೇನೋಪಾಯೇನ ದೇವೇಶ ಪೂಜ್ಯೋ ಭವಸಿ ತದ್ವದ ॥೧೧೩॥

ಚಂದ್ರನು ಪುನಃ ಗಣಪತಿಯನ್ನು ಕೇಳಿದನು. ಯಾವ ವಿಧಾನದಿಂದ ನಿನ್ನನ್ನು ಪೂಜೆ ಮಾಡಬೇಕೆಂದು ತಿಳಿಸು.

## ಗಣೇಶಚತುರ್ಥೀ ರೋಹಿಣಿ ಇದ್ದರೆ ಮಹಾಫಲ

ಗಣೇಶಃ –

ಸದಾ ಕೃಷ್ಣಚತುರ್ಥ್ಯಾಂ ತು ಮೋದಕಾದ್ಯೈಃ ಪ್ರಪೂಜ್ಯ ಮಾಮ್ ।
ರೋಹಿಣ್ಯಾ ಸಹಿತಂ ಮಾಂ ಚ ಸಮಭ್ಯರ್ಚ್ಯ ವಿಧಾನತಃ ॥೧೧೪॥

ಯಥಾಶಕ್ತಿ ಚ ಮದ್ರೂಪಂ ಸ್ವರ್ಣೇನ ಪರಿಕಲ್ಪಿತಮ್ ।
ದದ್ಯಾದ್ ದ್ವಿಜಾಯ ಭಕ್ತ್ಯಾ ಚ ಕಥಾಂ ಶ್ರುತ್ವಾ ವಿಧಾನತಃ ॥೧೧೫॥

ಗಣೇಶನು ಉತ್ತರಿಸಿದನು – ಕೃಷ್ಣಪಕ್ಷದ ಚತುರ್ಥಿಯ ದಿವಸ ರೋಹಿಣೀನಕ್ಷತ್ರದಲ್ಲಿ ಮೋದಕ ಮೊದಲಾದವುಗಳನ್ನು ಮಾಡಿ, ವಿಧಿಪ್ರಕಾರವಾಗಿ ನನ್ನ ಪೂಜೆಯನ್ನು ಮಾಡಬೇಕು. ಯೋಗ್ಯತಾನುಸಾರವಾಗಿ ನನ್ನ ಸುವರ್ಣದ ಪ್ರತಿಮೆಯನ್ನು ನಿರ್ಮಾಣ ಮಾಡಿ, ವಿಧಿಪ್ರಕಾರವಾಗಿ ಭಕ್ತಿಯಿಂದ ಬ್ರಾಹ್ಮಣನಿಗೆ ದಾನವನ್ನು ನೀಡಬೇಕು. ನನ್ನ ಚರಿತ್ರೆಯನ್ನು ಕೇಳಬೇಕು.

## ಒಂದು ಮುಖ್ಯಪ್ರಮೇಯ

ಕೃಷ್ಣಪಕ್ಷದ ಚತುರ್ಥಿಯಂದು ಸಂಕಷ್ಟಚತುರ್ಥೀಯನ್ನು ಆಚರಿಸುತ್ತಾರೆ. ಆ ಸಂದರ್ಭದಲ್ಲಿ ಗಣಪತಿಯನ್ನು ಪೂಜಿಸುತ್ತಾರೆ. ಆದರೆ ಸಂಕಷ್ಟಚತುರ್ಥಿಪೂಜೆಯನ್ನು

ಮಾಡಬಾರದೆಂದು ಸ್ಪಷ್ಟವಾಗಿ ಹರಿಕಥಾಮೃತಸಾರದಲ್ಲಿ ಶ್ರೀಜಗನ್ನಾಥದಾಸರು ತಿಳಿಸಿದ್ದಾರೆ –

ಶಂಕರಾತ್ಮಜ ದೈತ್ಯರಿಗತಿಭಯಂಕರಗತಿಗಳೀಯಲೋಸುಗ
ಸಂಕಟಚತುರ್ಥಿಗನೆನಿಸಿ ಅಹಿತಾರ್ಥಗಳ ಕೊಟ್ಟು
ಮಂಕುಗಳ ಮೋಹಿಸುವೆ, ಚಕ್ರದರಂಕಿತನೆ ದಿನದಿನದಿ ತ್ವತ್ಪದ-
ಪಂಕಜಕೆರಗಿ ಬಿನ್ನಯಿಸುವೆನು ಪಾಲಿಪುದು ಎಮ್ಮ ॥

ಸದಾ ತಸ್ಯ ಕರಿಷ್ಯಾಮಿ ಸಂಕಷ್ಟಸ್ಯ ನಿವಾರಣಮ್ ।
ಭಾದ್ರಶುಕ್ಲಚತುರ್ಥ್ಯಾಂ ತು ಮೃಣ್ಮಯೀ ಪ್ರತಿಮಾ ಶುಭಾ ॥೧೧೬॥

ನಿತ್ಯದಲ್ಲಿಯೂ ಅವನ ಎಲ್ಲ ಕಷ್ಟಗಳನ್ನು ಪರಿಹಾರ ಮಾಡುತ್ತೇನೆ. ಭಾದ್ರಪದ ಮಾಸದ ಶುಕ್ಲಪಕ್ಷದ ಚತುರ್ಥಿಯ ದಿವಸ ನನ್ನನ್ನು ಮಣ್ಣಿನ ಪ್ರತಿಮೆಯನ್ನು ಮಾಡಿ ಪೂಜೆ ಮಾಡಬೇಕು.

ಹೇಮಾಭಾವೇ ತು ಕರ್ತವ್ಯಾ ನಾನಾಪುಷ್ಪೈಃ ಪ್ರಪೂಜಯೇತ್ ।
ಬ್ರಾಹ್ಮಣಾನ್ ಭೋಜಯೇತ್ ಪಶ್ಚಾಜ್ಜಾಗರಂ ಚ ವಿಶೇಷತಃ ॥೧೧೭॥

ಸುವರ್ಣಪ್ರತಿಮೆ ಮಾಡಲು ಶಕ್ತಿ ಇಲ್ಲದಿದ್ದ ಪಕ್ಷದಲ್ಲಿ ಅನೇಕ ವನಪುಷ್ಪಗಳನ್ನು ತಂದು ಪೂಜೆ ಮಾಡಬೇಕು. ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ರಾತ್ರಿಯ ಕಾಲ ಜಾಗರಣೆಯನ್ನು ಮಾಡಬೇಕು.

ಸ್ಥಾಪಯೇದವ್ರಣಂ ಕುಂಭಂ ಧಾನ್ಯಸ್ಯೋಪರಿ ಶೋಭಿತಮ್ ।
ಯಥಾಶಕ್ತಿ ತು ಮದ್ರೂಪಂ ಶಾತಕುಂಭೇನ ನಿರ್ಮಿತಮ್ ॥೧೧೮॥

ಧಾನ್ಯದ ಮೇಲೆ ಛಿದ್ರವಲ್ಲದ ಶುದ್ಧವಾದ ಕಲಶವನ್ನಿಡಬೇಕು. ಚಿನ್ನದಿಂದ ನಿರ್ಮಿತವಾದ ಪ್ರತಿಮೆಯನ್ನು ಅಲ್ಲಿಡಬೇಕು.

## ಗಣಪತಿಯನ್ನು ಪೂಜಿಸುವ ವಿಧಾನ

ವಸ್ತ್ರದ್ವಯಸಮಾಚ್ಛನ್ನಂ ಮೋದಕಾದ್ಯೈಃ ಪ್ರಪೂಜ್ಯ ಮಾಮ್ ।
ರಕ್ತಾಂಬರಧರೋ ಮರ್ತ್ಯೋ ಬ್ರಹ್ಮಚರ್ಯವ್ರತಃ ಶುಚಿಃ ॥೧೧೯॥

ಎರಡು ವಸ್ತ್ರಗಳನ್ನು ಪ್ರತಿಮೆಗೆ ಹೊದ್ದಿಸಬೇಕು. ಮೋದಕಾದಿಗಳನ್ನು ಸಮರ್ಪಿಸಬೇಕು. ಕೆಂಪುಬಟ್ಟೆಯನ್ನುಟ್ಟು ಬ್ರಹ್ಮಚರ್ಯವ್ರತದಲ್ಲಿದ್ದು ಮಾನವನು ಪರಿಶುದ್ಧನಾಗಿ ಗಣಪತಿಯನ್ನು ಪೂಜಿಸಬೇಕು.

ರಾಜತಸ್ಯ ತು ರೂಪಂ ಮೇ ಯಥಾಶಕ್ತಿ ವಿನಿರ್ಮಿತಮ್ ।
ವಸ್ತ್ರಂ ಶಿವಪ್ರಿಯಾಯೇತಿ ಗಣೇಶಾಯೋಪವಸ್ತ್ರಕಮ್ ॥೧೨೦॥

ಚಿನ್ನದ ಪ್ರತಿಮೆಯನ್ನು ಮಾಡಿಸಲು ಸಾಧ್ಯವಾಗದಿದ್ದರೆ ಬೆಳ್ಳಿಯ ಪ್ರತಿಮೆಯನ್ನಿಟ್ಟು ಶಕ್ತ್ಯನುಸಾರವಾಗಿ ಪೂಜಿಸಬೇಕು. 'ಶಿವಪ್ರಿಯಾಯ ನಮಃ' ಎನ್ನುತ್ತಾ ಗಣೇಶನಿಗೆ ವಸ್ತ್ರವನ್ನು, 'ಗಣೇಶಾಯ ನಮಃ' ಎನ್ನುತ್ತಾ ಉತ್ತರೀಯವನ್ನು ಹೊದಿಸಬೇಕು.

ಗಂಧಂ ಲಂಬೋದರಾಯೇತಿ ಪುಷ್ಪಂ ಸಿದ್ಧಿಪ್ರದಾಯಿನೇ ।
ಧೂಪಂ ಗಜಮುಖಾಯೇತಿ ದೀಪಂ ಮೂಷಿಕಗಾಮಿನೇ ॥೧೨೧॥

'ಲಂಬೋದರಾಯ ನಮಃ' ಎಂದು ಹೇಳಿ ಗಂಧವನ್ನು ಸಮರ್ಪಿಸಬೇಕು. 'ಸಿದ್ಧಿಪ್ರದಾಯಿನೇ ನಮಃ' ಎನ್ನುತ್ತಾ ಪುಷ್ಪವನ್ನೂ, 'ಗಜಮುಖಾಯ ನಮಃ' ಎನ್ನುತ್ತಾ ಧೂಪವನ್ನೂ ಸಮರ್ಪಿಸಬೇಕು. ಹಾಗೂ 'ಮೂಷಿಕಗಾಮಿನೇ ನಮಃ' ಎಂದು ದೀಪವನ್ನು ಹಚ್ಚಬೇಕು.

ವಿಘ್ನನಾಥಾಯ ನೈವೇದ್ಯಂ ಫಲಂ ಸರ್ವಾರ್ಥದಾಯಿನೇ ।
ತಾಂಬೂಲಂ ಕಾಮರೂಪಾಯ ದಕ್ಷಿಣಾಂ ಧನದಾಯ ಚ ॥೧೨೨॥

'ವಿಘ್ನನಾಥಾಯ ನಮಃ' ಎನ್ನುತ್ತಾ ನೈವೇದ್ಯವನ್ನೂ, 'ಸರ್ವಾರ್ಥದಾಯಿನೇ ನಮಃ' ಎನ್ನುತ್ತಾ ಫಲವನ್ನೂ, 'ಕಾಮರೂಪಾಯ ನಮಃ' ಎಂದು ಹೇಳಿ ತಾಂಬೂಲವನ್ನೂ, 'ಧನದಾಯ ನಮಃ' ಎಂದು ಉಚ್ಚರಿಸಿ ದಕ್ಷಿಣೆಯನ್ನು ಸಮರ್ಪಿಸಬೇಕು.

ಇಕ್ಷುದಂಡೈರ್ಮೋದಕೈಶ್ಚ ಹೋಮಂ ಕುರ್ಯಾಚ್ಚ ನಾಮಭಿಃ ।
ವಿಸರ್ಜನಂ ತತಃ ಕುರ್ಯಾತ್ ಸರ್ವಸಿದ್ಧಿಪ್ರದಾಯಕಮ್ ॥೧೨೩॥

ನಾಮಗಳನ್ನು ಪಠಿಸುತ್ತಾ ಕಬ್ಬು, ಮೋದಕಗಳಿಂದ ಹೋಮವನ್ನು ಮಾಡಬೇಕು. ನಂತರ ಸರ್ವಸಿದ್ಧಿದಾಯಕನ ಮೂರ್ತಿಯನ್ನು ವಿಸರ್ಜಿಸಬೇಕು.

ಏವಂ ಮಾಂ ಪೂಜ್ಯ ವಿಘ್ನೇಶಂ ಕಥಾಂ ಶ್ರುತ್ವಾ ವಿಧಾನತಃ ।

ಮಂತ್ರೇಣಾನೇನ ತತ್ಸರ್ವಂ ಬ್ರಾಹ್ಮಣಾಯ ಪ್ರದಾಪಯೇತ್ ॥೧೨೪॥

ಈ ಕ್ರಮದಲ್ಲಿ ವಿಘ್ನೇಶನಾದ ನನ್ನನ್ನು ಪೂಜೆ ಮಾಡಬೇಕು. ನನ್ನ ಚರಿತ್ರೆಯನ್ನು ಕೇಳಬೇಕು. ಮುಂದೆ ಹೇಳುವ ಮಂತ್ರದಿಂದ ಬ್ರಾಹ್ಮಣನಿಗೆ ದಾನ ಮಾಡಬೇಕು.

## ಗಣಪತಿಯಲ್ಲಿ ಮಾಡಬೇಕಾದ ಪ್ರಾರ್ಥನೆ

ದಾನೇನಾನೇನ ದೇವೇಶ ಪ್ರೀತೋ ಭವ ಗಣೇಶ್ವರ ।

ಸರ್ವತ್ರ ಸರ್ವದಾ ದೇವ ನಿರ್ವಿಘ್ನಂ ಕುರು ಸರ್ವದಾ ॥೧೨೫॥

ದೇವಶ್ರೇಷ್ಠನಾದ ಗಣಪತಿಯೇ! ನಾನು ಮಾಡುತ್ತಿರುವ ದಾನದಿಂದ ನೀನು ಪರಿತುಷ್ಟನಾಗು. ನನ್ನೆಲ್ಲ ಕಾರ್ಯಗಳ ವಿಘ್ನವನ್ನು ಪರಿಹಾರ ಮಾಡು.

ಮಾನೋನ್ನತಿಂ ಚ ರಾಜ್ಯಂ ಚ ಪುತ್ರಪೌತ್ರಾನ್ ಪ್ರದೇಹಿ ಮೇ ।

ಗಾಶ್ಚ ಧಾನ್ಯಂ ಚ ವಾಸಾಂಸಿ ದದ್ಯಾತ್ ಸರ್ವಂ ಸ್ವಶಕ್ತಿತಃ ॥೧೨೬॥

ನನಗೆ ಉನ್ನತ ಗೌರವವನ್ನು ನೀಡು; ರಾಜ್ಯವನ್ನು ನೀಡು; ಮಕ್ಕಳು-ಮೊಮ್ಮಕ್ಕಳನ್ನು ನೀಡು ಎಂದು ಪ್ರಾರ್ಥಿಸಬೇಕು. ಹಸುಗಳನ್ನು ಧಾನ್ಯಗಳನ್ನು ಬಟ್ಟೆಗಳನ್ನು (ಬದುಕಲು ಆವಶ್ಯಕವಾದ ಎಲ್ಲ ಸಂಪತ್ತುಗಳನ್ನು) ಯಥಾಶಕ್ತಿ ದಾನ ಮಾಡಬೇಕು.

ದತ್ವಾ ತು ಬ್ರಾಹ್ಮಣೇಭ್ಯಶ್ಚ ಸ್ವಯಂ ಭುಂಜೀತ ವಾಗ್ಯತಃ ।

ಮೋದಕಾಪೂಪಮಧುರಂ ಲವಣಕ್ಷಾರವರ್ಜಿತಮ್ ॥೧೨೭॥

ಬ್ರಾಹ್ಮಣರಿಗೆ ದಾನವನ್ನು ಮಾಡಿ ಊಟವನ್ನು ಬಡಿಸಿ, ಅನಂತರ ತಾನು ಮೋದಕ, ಅಪೂಪ, ಸಿಹಿಪದಾರ್ಥಗಳಿಂದ ಕೂಡಿದ, ಉಪ್ಪುಖಾರಗಳಿಂದ ರಹಿತವಾದ ಭೋಜನವನ್ನು ಮಾಡಬೇಕು.

## ಗಣಪತಿಪೂಜಾಫಲ

ಏವಂ ಕರೋತಿ ಯಶ್ಚಂದ್ರ ತಸ್ಯಾಹಂ ಸರ್ವದಾ ಜಯಮ್ ।
ಸಿದ್ಧಿಂ ಚ ಧನಧಾನ್ಯಂ ಚ ದದಾಮಿ ವಿಪುಲಾಂ ಪ್ರಜಾಮ್ ॥೧೨೮॥

ಚಂದ್ರನೇ! ಯಾರು ಈ ಕ್ರಮದಲ್ಲಿ ಪೂಜೆಯನ್ನು ಮತ್ತು ವ್ರತವನ್ನು ಅನುಷ್ಠಾನ ಮಾಡುತ್ತಾನೋ ಅವನಿಗೆ ಎಲ್ಲಾ ಕಾರ್ಯದಲ್ಲಿ ಜಯವು ಲಭಿಸುತ್ತದೆ. ಧನಧಾನ್ಯಗಳು ಅಭಿವೃದ್ಧವಾಗುತ್ತವೆ. ವಂಶಾಭಿವೃದ್ಧಿಯು ಆಗುತ್ತದೆ.

ಇತ್ಯುಕ್ತ್ವಾಽಂತರ್ದಧೇ ದೇವೋ ವಿಘ್ನರಾಜೋ ವಿನಾಯಕಃ ।
ತದ್ವ್ರತಂ ಕುರು ಕೃಷ್ಣ ತ್ವಂ ತತಃ ಸಿದ್ಧಿಮವಾಪ್ಸ್ಯಸಿ ॥೧೨೯॥

ಗಣಪತಿಯು ಚಂದ್ರನಿಗೆ ಹೀಗೆ ವರವನ್ನು ನೀಡಿ ಅದೃಶ್ಯನಾದನು. ಶ್ರೀಕೃಷ್ಣನೇ! ನೀನೂ ಕೂಡ ಈ ವ್ರತವನ್ನು ಆಚರಿಸು. ಇದರಿಂದ ನಿನ್ನ ಮನೋಭಿಲಾಷೆಯು ನೆರವೇರುತ್ತದೆ.

ನಾರದೇನೈವಮುಕ್ತಶ್ಚ ವ್ರತಂ ಚಕ್ರೇ ಹರಿಃ ಸ್ವಯಮ್ ।
ಮಿಥ್ಯಾಪವಾದಸಂಶುದ್ಧ್ಯೈ ದ್ವಿತೀಯಂ ಕೃಷ್ಣಯಾಚಿತಮ್ ॥೧೩೦॥

ನಾರದರು ಶ್ರೀಕೃಷ್ಣನಿಗೆ ಹೀಗೆ ಹೇಳಿದರು. ಅದರಂತೆ ಅಪವಾದಪರಿಹಾರಕ್ಕಾಗಿ ಶ್ರೀಕೃಷ್ಣನು ಗಣೇಶವ್ರತವನ್ನು ಆಚರಿಸಿದನು.

## ಸ್ಯಮಂತಕೋಪಾಖ್ಯಾನ ಕೇಳಬೇಕು

ಯೇ ಶೃಣ್ವಂತಿ ತವಾಽಖ್ಯಾನಂ ಸ್ಯಮಂತಕಮಣೇಯಕಮ್ ।
ಚಂದ್ರಸ್ಯ ಚರಿತಂ ಸರ್ವಂ ತೇಷಾಂ ದೋಷೋ ನ ಜಾಯತೇ ॥೧೩೧॥

ಯಾರು ಸ್ಯಮಂತಕೋಪಾಖ್ಯಾನದ ಕಥೆಯನ್ನು ಕೇಳುತ್ತಾರೋ ಚಂದ್ರನ ಸಮಸ್ತಚರಿತ್ರೆಯನ್ನು ಕೇಳುತ್ತಾರೋ ಅವರಿಗೆ ಚತುರ್ಥಿಯ ದಿವಸ ಚಂದ್ರನನ್ನು ನೋಡಿದ ಪಾಪವು ಬರುವುದಿಲ್ಲ.

ಭಾದ್ರಶುಕ್ಲಚತುರ್ಥ್ಯಾಂ ತು ಕ್ವಚಿಚ್ಚಂದ್ರಸ್ಯ ದರ್ಶನಮ್ ।
ಜಾತಂ ತತ್ಪರಿಹಾರಾರ್ಥಂ ಶ್ರೋತವ್ಯಂ ಸರ್ವಮೇವ ಹಿ ॥೧೩೨॥

ಭಾದ್ರಪದ ಶುಕ್ಲಪಕ್ಷದ ಚತುರ್ಥಿ ದಿವಸ ಚಂದ್ರನನ್ನು ನೋಡಿದರೆ ಆ ದೋಷದ ಪರಿಹಾರಕ್ಕಾಗಿ ಈ ಚರಿತ್ರೆಯನ್ನು ಕೇಳಬೇಕು.

ಯದಾಯದಾ ಮನಃಕಷ್ಟಂ ನರಾಣಾಮುಪಜಾಯತೇ ।
ತದಾತದಾ ಚ ಶ್ರೋತವ್ಯಮಾಖ್ಯಾನಂ ಕಷ್ಟನಾಶನಮ್ ।
ಏವಮುಕ್ತ್ವಾಗತೋ ದೇವೋ ಗಣೇಶಃ ಕೃಷ್ಣತೋಷಿತಃ ॥೧೩೩॥

ಅಷ್ಟೇ ಅಲ್ಲದೇ ಜೀವನದಲ್ಲಿ ಯಾವಾಗ ಕಷ್ಟವು ಬರುತ್ತದೋ ಆಗೆಲ್ಲಾ ಈ ಕಥೆಯನ್ನು ಕೇಳಬೇಕು. ಇದರಿಂದ ಕಷ್ಟಗಳೆಲ್ಲವೂ ಪರಿಹಾರವಾಗುತ್ತವೆ. ಹೀಗೆ ಕೃಷ್ಣನಿಗೂ ಕೂಡ ಸಂತೋಷಪಡಿಸಿದನು. ಗಣೇಶನು ಅಲ್ಲಿಂದ ಹೊರಟುಹೋದನು.

## ವಿಘ್ನನಾಶಕನ ಅನುಗ್ರಹವಾದರೆ ಯಾವುದು ದುರ್ಲಭ?

ಯದಾಯದಾ ಶ್ರೇಯಸಿ ಕಾರ್ಯ ಉತ್ಥಿತೇ
ನಾರೀ ನರಾಶ್ಚಾಥ ಕರೋತಿ ತದ್ವ್ರತಮ್ ।
ಸಿದ್ಧ್ಯಂತಿ ಕಾರ್ಯಾಣಿ ತಥೇಪ್ಸಿತಾನಿ
ಕಿಂ ದುರ್ಲಭಂ ವಿಘ್ನಹರೇ ಪ್ರಸನ್ನೇ ॥೧೩೪॥

॥ ಇತಿ ಸ್ಕಾಂದಪುರಾಣೇ ನಂದಿಕೇಶ್ವರಸನತ್ಕುಮಾರಸಂವಾದೇ
ಸ್ಯಮಂತಕೋಪಾಖ್ಯಾನಂ ಸಂಪೂರ್ಣಮ್ ॥

ಜೀವನದಲ್ಲಿ ಯಾವಾಗ ಮಂಗಳಕಾರ್ಯಗಳು ನಡೆಯುತ್ತವೋ ಆ ಸಂದರ್ಭದಲ್ಲಿ ಪುರುಷರು ಹಾಗೂ ಸ್ತ್ರೀಯರು ಈ ಗಣೇಶವ್ರತವನ್ನು ಆಚರಣೆ ಮಾಡಬೇಕು. ಆಗ ಮಂಗಳ ಕಾರ್ಯವು ನಿರ್ವಿಘ್ನವಾಗಿ ನೆರವೇರುತ್ತದೆ. ಸಕಲ ಕಾರ್ಯಗಳೂ ಪರಿಪೂರ್ಣವಾಗುತ್ತವೆ. ಇಷ್ಟಾರ್ಥವು ನೆರವೇರುತ್ತದೆ. ವಿಘ್ನನಾಶಕನು ಪ್ರಸನ್ನನಾದರೆ ಜೀವನದಲ್ಲಿ ದುರ್ಲಭವಾದದ್ದು ಯಾವುದಿದೆ?

ಇಲ್ಲಿಗೆ ಸ್ಕಾಂದಪುರಾಣದಲ್ಲಿ ನಂದಿಕೇಶ್ವರ ಹಾಗೂ ಸನತ್ಕುಮಾರರ ನಡುವೆ ನಡೆದ ಸಂವಾದದಲ್ಲಿ ಗಣೇಶಚರಿತ್ರೆಯ ಕಥೆಯು ಸಂಪೂರ್ಣವಾಯಿತು.

* * * * *

# ಗಣಪತಿಯನ್ನು ಪೂಜಿಸುವವರು ಇದನ್ನು ಮರೆಯಬಾರದು

* ಗಣಪತಿಯ ಮಹಿಮೆ ಚರಿತ್ರೆ ವರ್ಣನೆಗಳು ಅನಂತವಾಗಿವೆ. ಆದರೆ 'ಗಣಪತಿಯು ಭಗವಂತನ ಪಾದಪದ್ಮಾರಾಧಕನಾಗಿದ್ದಾನೆ' ಎಂಬ ಗುಣವೇ ಮುಖ್ಯವಾದದ್ದು. ಇದನ್ನು ಆಶ್ರಯಿಸಿಯೇ ಅವನಲ್ಲಿ ಉಳಿದ ಮಹಿಮೆಗಳು ಬಂದಿವೆ ಎಂದು ತಿಳಿಯತಕ್ಕದ್ದು.

* ಗಣಪತಿಯ ಚಿಂತನೆ, ಆರಾಧನೆ, ಪೂಜೆಗಳನ್ನು ಗಣೇಶಚತುರ್ಥೀಯಂದು ಮಾತ್ರ ಮಾಡಿ ಸುಮ್ಮನಿರುವುದಲ್ಲ. ಪ್ರತಿನಿತ್ಯವೂ ಮಾಡಬೇಕು.

* ಗಣೇಶಚತುರ್ಥಿಯಂದು ಮಣ್ಣಿನಲ್ಲಿ ಗಣಪತಿಯನ್ನು ಆವಾಹನೆ ಮಾಡಿ ಪೂಜೆಯನ್ನು ಮಾಡಲೇಬೇಕು. ಮಾಡದೇ ಇರಬಾರದು. ಹಾಗೇನಾದರೂ ಪೂಜೆಯನ್ನು ಮಾಡದಿದ್ದಲ್ಲಿ ಜೀವನದಲ್ಲಿ ಅನರ್ಥಗಳನ್ನು ಎದುರಿಸಬೇಕಾಗುತ್ತದೆ.

* ಗಣಪತಿಯನ್ನೇ ಸರ್ವೋತ್ತಮನೆಂದು ತಿಳಿಯುವುದು; ಭಗವಂತನನ್ನು ಮರೆತು ಗಣಪತಿಗೆ ಸಕಲ ಕರ್ಮಗಳನ್ನು ಸಮರ್ಪಣೆ ಮಾಡುವುದು; ಗಣಪತಿಗೆ ನೇರವಾಗಿ ನೈವೇದ್ಯವನ್ನು ಸಮರ್ಪಣೆ ಮಾಡಿ ಸ್ವೀಕಾರ ಮಾಡುವುದು; ಗಣಪತಿಯು ಭಗವಂತನಿಗೆ ಸಮಾನನಾಗಿದ್ದಾನೆಂದು ತಿಳಿಯುವುದು. ಇವೆಲ್ಲವೂ ಕೂಡ ಅತ್ಯಂತ ಅನರ್ಥದಾಯಕಗಳು.

* ಗಣಪತಿಯಲ್ಲಿ ಮುಖ್ಯಪ್ರಾಣದೇವರನ್ನು, ಅವರಲ್ಲಿ ವಿಶ್ವನಾಮಕನಾದ ಪರಮಾತ್ಮನನ್ನು ಆರಾಧನೆ ಮಾಡಬೇಕು. ಇದುವೇ ನಿಜವಾದ ಗಣಪತಿಯ ಆರಾಧನೆಯಾಗುತ್ತದೆ.

* ಗಣಪತಿಯು ತಾರತಮ್ಯದಲ್ಲಿ ೧೮ನೆಯ ಕಕ್ಷೆಯಲ್ಲಿರುವ ದೇವತೆ. ಭೂತಾಕಾಶಕ್ಕೆ ಅಭಿಮಾನಿ. ಮೂಲಾಧಾರಚಕ್ರದ ದೇವತೆ. ಸಾಧನೆ ಮುಗಿಸಿ, ವಿಷ್ಣುಲೋಕಕ್ಕೆ ತೆರಳುವ ಸಾತ್ವಿಕಚೇತನ, ಷಟ್‌ಚಕ್ರಗಳ ಬಿಡುಗಡೆಯ

ಪ್ರಯತ್ನದಲ್ಲಿ ಮೊದಲಿಗೆ ಮೂಲಾಧಾರಚಕ್ರಕ್ಕೆ ಅಧಿಪತಿಯಾದ ಗಣಪತಿಯನ್ನು ಒಲಿಸಿಕೊಳ್ಳಬೇಕು.

## ಅಚ್ಚರಿಮೂಡಿಸುವ ಗಣಪತಿಯ ಮಹಿಮೆಗಳು

* ಭಗವಂತನಲ್ಲಿರುವ ಕಾರುಣ್ಯ, ಶೀಘ್ರಫಲದಾತೃತ್ವ, ವಿಘ್ನಪರಿಹಾರಕತ್ವ ಎಂಬ ಗುಣಗಳು ನಮಗೆ ಪ್ರತಿಬಿಂಬಿತವಾಗುವುದು ಗಣಪತಿಯ ಅಧಿಷ್ಠಾನದಲ್ಲಿ.
* ಬ್ರಹ್ಮಾಂಡವು ಸೃಷ್ಟಿಯಾಗುವ ಮೊದಲೇ ಗಣಪತಿಯ ಸೃಷ್ಟಿಯಾಗಿದೆ. ಅಹಂಕಾರತತ್ವಕ್ಕೆ ಅಭಿಮಾನಿಯಾದ ರುದ್ರದೇವರು ವೈಕಾರಿಕಾಹಂಕಾರದಿಂದ ಗಣಪತಿಯನ್ನು ಸೃಷ್ಟಿ ಮಾಡಿರುವರು. ಮತ್ತು ತಾಮಸಾಹಂಕಾರದಿಂದಲೂ ಕೂಡ ಗಣಪತಿಯ ಶರೀರವನ್ನು ಸೃಷ್ಟಿ ಮಾಡಿರುವರು. ನಿಜವಾಗಿಯೂ ಗಣಪತಿಯ ಸೃಷ್ಟಿಯು ಬ್ರಹ್ಮಾಂಡದ ಸೃಷ್ಟಿಗಿಂತಲೂ ಮೊದಲೇ ರುದ್ರದೇವರಿಂದ ನಡೆದಿದೆ. ಪಾರ್ವತಿಯ ದೇಹದ ಮಣ್ಣಿನಿಂದ ಗಣಪತಿ ಹುಟ್ಟಿದನೆಂಬುದು ಅನಂತರದಲ್ಲಿ ನಡೆದ ಘಟನೆ.
* ಮೋಕ್ಷವನ್ನು ಹೊಂದಬೇಕೆಂದರೆ ಗಣಪತಿಯ ಅನುಗ್ರಹ ಇರಲೇಬೇಕು – 'ತಾತ್ವಿಕಸುರಕೃಪಾವಿಷಯತಾಂಗತಾಃ ಏತೇ ಏವ ವಿಮುಚ್ಯಂತೇ' (ಭಾಗವತ ತಾತ್ಪರ್ಯ) – ತತ್ವಾಭಿಮಾನಿದೇವತೆಗಳ ಅನುಗ್ರಹವಿದ್ದವರಷ್ಟೇ ಮುಕ್ತರಾಗುತ್ತಾರೆ.
* ಗಣಪತಿಯು ೧೮ ನೆಯ ಕಕ್ಷೆಯಲ್ಲಿರುವ ಆಕಾಶಕ್ಕೆ ಅಭಿಮಾನಿಯಾದ ತತ್ವಾಭಿಮಾನಿ ದೇವತೆಯಾಗಿದ್ದಾನೆ.
* ಗಣಪತಿಗೆ ಬ್ರಹ್ಮಚಾರಿ ಎಂಬ ರೂಪವಿದೆ. ಸನ್ಯಾಸಿಯ ರೂಪವಿದೆ. ಕಾಡಿನಲ್ಲಿ ಕುಳಿತು ತಪಸ್ಸು ಮಾಡುವ ವಾನಪ್ರಸ್ಥದ ರೂಪವಿದೆ. ಗೃಹಸ್ಥಾಶ್ರಮವನ್ನು ಹೊಂದಿದ ರೂಪವೂ ಇದೆ.
* 'ಗಣಪತಿಗೆ ವಿವಾಹವಾಗಿಲ್ಲ' ಎಂಬರ್ಥದಲ್ಲಿ 'ಗಣಪತಿಯ ಮದುವೆ' ಎಂಬುದು ಅರ್ಥಹೀನವಾಗಿದೆ.

* ಸಿದ್ಧಿ ಹಾಗೂ ಬುದ್ಧಿ ಎಂಬೀರ್ವರು ಗಣಪತಿಯ ಪತ್ನಿಯರು. ಗಣಪತಿ ಎಂಬ ಹೆಸರನ್ನೇ ಹೊಂದಿದ ಪುತ್ರನು ಇವನಿಗೆ ಇರುವನು.
* ಸಮಗ್ರ ನಭೋಮಂಡಲಕ್ಕೆ ಗಣಪತಿಯು ಅಭಿಮಾನಿಯಾಗಿರುವನು. 'ನಭೋಭಿಮಾನೀ ವಿಘ್ನೇಶಃ' ನಮ್ಮ ಕಣ್ಣಿಗೆ ಕಾಣಿಸುವ ಭೂಮಿ, ಹಾಗೂ ಸ್ವರ್ಗಗಳ ನಡುವೆ ಇರುವ ಅಂತರಿಕ್ಷಕ್ಕೆ ಗಣಪತಿಯ ಮಗನಾದ ಗಣಪತಿ ಎಂಬ ಹೆಸರನ್ನೇ ಹೊಂದಿರುವವನು ಅಭಿಮಾನಿಯಾಗಿರುವನು. ಇದನ್ನು ಶ್ರೀಮಧ್ವಾಚಾರ್ಯರು ಬೃಹದಾರಣ್ಯಕಭಾಷ್ಯದಲ್ಲಿ ಹೇಳಿರುವರು.
* ಗಣಪತಿಯು ಭಗವಂತನ ಜ್ಞಾನಾನಂದಾತ್ಮಕವಾದ ಮಾಂಸವನ್ನು ಆಶ್ರಯಿಸಿ ನೆಲೆಸಿರುವನು. ಗಣಪತಿಯ ಮಗನಾದ ಗಣಪತಿಯು ಭಗವಂತನ ಉದರವನ್ನು ಆಶ್ರಯಿಸಿರುವನು.
* ನಮ್ಮ ಬಲಗಣ್ಣಿನಲ್ಲಿ ಹಾಗೂ ಕಂಠದಲ್ಲಿ ಭಗವಂತನ ಅತ್ಯದ್ಭುತವಾದ ರೂಪವಿದೆ. ಮಧ್ಯದಲ್ಲಿ ಮಾತ್ರ ಆನೆಯ ಮುಖ, ಬಲಗಡೆ ೯ ಎಡಗಡೆ ೯ ಮನುಷ್ಯನ ಮುಖದಂತೆ ಮುಖಗಳಿವೆ. ೧೯ ಮುಖಗಳ ಈ ಎರಡು ರೂಪಗಳು 'ವಿಶ್ವ' ಹಾಗೂ 'ತೈಜಸ' ಎಂದು ಕರೆಸಿಕೊಳ್ಳುತ್ತವೆ. ಈ ಎರಡು ರೂಪಗಳನ್ನು ಕಂಡರೆ ಗಣಪತಿಗೆ ಎಲ್ಲಿಲ್ಲದ ಭಕ್ತಿ. ಹಗಲಿರುಳು ಈ ಎರಡು ರೂಪಗಳಲ್ಲೇ ಆಸಕ್ತನಾಗಿರುತ್ತಾನೆ. ಯಾರು ಭಗವಂತನ ಈ ಎರಡು ರೂಪಗಳನ್ನು ಹೆಚ್ಚು ಸ್ಮರಣೆ ಮಾಡುತ್ತಾರೋ ಅವರಿಗೆ ಗಣಪತಿಯು ಬೇಗ ಒಲಿದು ಬರುತ್ತಾನೆ.
* ನಿರಂತರ ಭಗವಂತನ ವಿಶ್ವ ಹಾಗೂ ತೈಜಸ ರೂಪಗಳನ್ನು ಧ್ಯಾನ ಮಾಡಿದ್ದರಿಂದ ಇವನಿಗೂ ಆನೆಯ ಮುಖವು ಬಂದಿದೆ.
* ಕಥೆ ಹೇಳುವಂತೆ ಗಣಪತಿಯ ತಲೆಯನ್ನು ರುದ್ರದೇವರು ಕಡಿದಾಗ ಗಣಪತಿಯು ಭಗವಂತನ ವಿಶ್ವಂಭರ ರೂಪವನ್ನು ಹಾಗೂ ತೈಜಸರೂಪವನ್ನು ಧ್ಯಾನಮಾಡುತ್ತಿದ್ದನು. ಆದ್ದರಿಂದಲೇ ಇವನಿಗೆ ಗಜಮುಖವು ಬಂದಿತು.
* ವಿನಾಯಕನು ಕೇವಲ ವಿಶ್ವನಾಮಕನ ಧ್ಯಾನದಿಂದ ಗಜಮುಖ ಹೊಂದಿದನೆಂದು ಹಲವರು ತಿಳಿದಿದ್ದಾರೆ. ಆದರೆ ತೈಜಸನನ್ನೂ ಕೂಡ ಧ್ಯಾನ

ಮಾಡುತ್ತಿದ್ದನು – ವಿನಾಯಕಸ್ತು ವಿಶ್ವಸ್ಯ ಧ್ಯಾನಾದ್ಯೈದ್ ಗಜವಕ್ತ್ರತಾಮ್ । ಅತೀವ ತೈಜಸಧ್ಯಾನಾತ್ ..... ಎಂಬುದಾಗಿ ಶ್ರೀಮಧ್ವಾಚಾರ್ಯರು ಮಾಂಡೂಕ್ಯಭಾಷ್ಯದಲ್ಲಿ ನಿಖರವಾಗಿ ತಿಳಿಸಿದ್ದಾರೆ.

* ವಿನಾಯಕನು ವಿಶ್ವ ಹಾಗೂ ತೈಜಸರೂಪಗಳ ಧ್ಯಾನದಿಂದ ಗಣಪತಿಯಾದನು. ಇಂದ್ರನು ವಿಶ್ವ, ತೈಜಸ, ಪ್ರಾಜ್ಞ ಎಂಬ ರೂಪಗಳನ್ನು ಉಪಾಸನೆ ಮಾಡಿ ಇಂದ್ರಪದವಿಯನ್ನು ಹೊಂದಿದನು. ವಿಶ್ವ, ತೈಜಸ, ಪ್ರಾಜ್ಞ, ತುರ್ಯ ಎಂಬ ನಾಕು ರೂಪಗಳ ಉಪಾಸನೆ ಮಾಡಿ ರುದ್ರದೇವರು ರುದ್ರಪದವಿಯನ್ನು ಪಡೆದರು. – 'ತ್ರಿ- ಧ್ಯಾನಾದಿಂದ್ರ ಇಂದ್ರತಾಮ್ ॥ ಚತುರ್ಧ್ಯಾನಾಚ್ಚ ರುದ್ರತ್ವಂ ರುದ್ರ ಆಪ ಜನಾರ್ದನಾತ್'

* ಗಣಪತಿಯು ಭಗವಂತನ ಶರೀರದ ನಾಭಿಸ್ಥಳದಲ್ಲಿ ರಕ್ತಗಂಧದಿಂದ ಸುಶೋಭಿತನಾಗಿ ನೆಲೆಸಿರುತ್ತಾನೆ.

* ನಮ್ಮೆಲ್ಲರ ನಾಭಿಸ್ಥಳದಲ್ಲಿ ಅತ್ಯಂತ ಮನೋಹರವಾದ ನಾಕುದಳದ ಕಮಲವಿದೆ. ಕ್ರಮವಾಗಿ ಋಗ್ವೇದ ಯಜುರ್ವೇದ ಸಾಮವೇದಗಳು ಅಥರ್ವವೇದ ಆ ನಾಕು ದಳಗಳಲ್ಲಿವೆ. ಮಧ್ಯದ ಕರ್ಣಿಕೆಯಲ್ಲಿ ಭಗವಂತನನ್ನು ಆರಾಧನೆ ಮಾಡುತ್ತಾ ಗಜಮುಖನಾದ ವಿನಾಯಕನು ನೆಲೆಸಿದ್ದಾನೆ. ಇಂಥ ಅದ್ಭುತವಾದ ಗಣಪತಿಯನ್ನು ಸ್ತುತಿಸಿ ಧನ್ಯ ಧನ್ಯ ಎನ್ನೋಣ.

* ಬೇಡಿದ ಇಷ್ಟಾರ್ಥಗಳನ್ನು ಕೂಡಲೇ ನೀಡುವವನು ಗಣಪತಿ. ಆದ್ದರಿಂದಲೇ ಶ್ರೀಮಧ್ವಾಚಾರ್ಯರು ಗಣಪತಿಯನ್ನು ''ಕ್ಷಿಪ್ರಪ್ರಸಾದ'' ಎಂದೇ ಕರೆಯುತ್ತಾರೆ. ತಡಮಾಡದೇ ಇಂದೇ ಇಂಥ ಕ್ಷಿಪ್ರಪ್ರಸಾದನ ಆರಾಧನೆಯನ್ನು ಪ್ರಾರಂಭಿಸೋಣ. ನಮ್ಮೆಲ್ಲ ಇಷ್ಟಾರ್ಥಗಳನ್ನು ಪಡೆದುಕೊಂಡು ಜೀವನದಲ್ಲಿ ಸುಖ, ಶಾಂತಿ, ನೆಮ್ಮದಿಗಳಿಂದ ಬದುಕೋಣ.

* * * * *

* ಸಿದ್ಧಿ ಹಾಗೂ ಬುದ್ಧಿ ಎಂಬೀರ್ವರು ಗಣಪತಿಯ ಪತ್ನಿಯರು. ಗಣಪತಿ ಎಂಬ ಹೆಸರನ್ನೇ ಹೊಂದಿದ ಪುತ್ರನು ಇವನಿಗೆ ಇರುವನು.

* ಸಮಗ್ರ ನಭೋಮಂಡಲಕ್ಕೆ ಗಣಪತಿಯು ಅಭಿಮಾನಿಯಾಗಿರುವನು. 'ನಭೋಭಿಮಾನೀ ವಿಘ್ನೇಶಃ' ನಮ್ಮ ಕಣ್ಣಿಗೆ ಕಾಣಿಸುವ ಭೂಮಿ, ಹಾಗೂ ಸ್ವರ್ಗಗಳ ನಡುವೆ ಇರುವ ಅಂತರಿಕ್ಷಕ್ಕೆ ಗಣಪತಿಯ ಮಗನಾದ ಗಣಪತಿ ಎಂಬ ಹೆಸರನ್ನೇ ಹೊಂದಿರುವವನು ಅಭಿಮಾನಿಯಾಗಿರುವನು. ಇದನ್ನು ಶ್ರೀಮಧ್ವಾಚಾರ್ಯರು ಬೃಹದಾರಣ್ಯಕಭಾಷ್ಯದಲ್ಲಿ ಹೇಳಿರುವರು.

* ಗಣಪತಿಯು ಭಗವಂತನ ಜ್ಞಾನಾನಂದಾತ್ಮಕವಾದ ಮಾಂಸವನ್ನು ಆಶ್ರಯಿಸಿ ನೆಲೆಸಿರುವನು. ಗಣಪತಿಯ ಮಗನಾದ ಗಣಪತಿಯು ಭಗವಂತನ ಉದರವನ್ನು ಆಶ್ರಯಿಸಿರುವನು.

* ನಮ್ಮ ಬಲಗಣ್ಣಿನಲ್ಲಿ ಹಾಗೂ ಕಂಠದಲ್ಲಿ ಭಗವಂತನ ಅತ್ಯದ್ಭುತವಾದ ರೂಪವಿದೆ. ಮಧ್ಯದಲ್ಲಿ ಮಾತ್ರ ಆನೆಯ ಮುಖ, ಬಲಗಡೆ ೯ ಎಡಗಡೆ ೯ ಮನುಷ್ಯನ ಮುಖದಂತೆ ಮುಖಗಳಿವೆ. ೧೯ ಮುಖಗಳ ಈ ಎರಡು ರೂಪಗಳು 'ವಿಶ್ವ' ಹಾಗೂ 'ತೈಜಸ' ಎಂದು ಕರೆಸಿಕೊಳ್ಳುತ್ತವೆ. ಈ ಎರಡು ರೂಪಗಳನ್ನು ಕಂಡರೆ ಗಣಪತಿಗೆ ಎಲ್ಲಿಲ್ಲದ ಭಕ್ತಿ. ಹಗಲಿರುಳು ಈ ಎರಡು ರೂಪಗಳಲ್ಲೇ ಆಸಕ್ತನಾಗಿರುತ್ತಾನೆ. ಯಾರು ಭಗವಂತನ ಈ ಎರಡು ರೂಪಗಳನ್ನು ಹೆಚ್ಚು ಸ್ಮರಣೆ ಮಾಡುತ್ತಾರೋ ಅವರಿಗೆ ಗಣಪತಿಯು ಬೇಗ ಒಲಿದು ಬರುತ್ತಾನೆ.

* ನಿರಂತರ ಭಗವಂತನ ವಿಶ್ವ ಹಾಗೂ ತೈಜಸ ರೂಪಗಳನ್ನು ಧ್ಯಾನ ಮಾಡಿದ್ದರಿಂದ ಇವನಿಗೂ ಆನೆಯ ಮುಖವು ಬಂದಿದೆ.

* ಕಥೆ ಹೇಳುವಂತೆ ಗಣಪತಿಯ ತಲೆಯನ್ನು ರುದ್ರದೇವರು ಕಡಿದಾಗ ಗಣಪತಿಯು ಭಗವಂತನ ವಿಶ್ವಂಭರ ರೂಪವನ್ನು ಹಾಗೂ ತೈಜಸರೂಪವನ್ನು ಧ್ಯಾನಮಾಡುತ್ತಿದ್ದನು. ಆದ್ದರಿಂದಲೇ ಇವನಿಗೆ ಗಜಮುಖವು ಬಂದಿತು.

* ವಿನಾಯಕನು ಕೇವಲ ವಿಶ್ವನಾಮಕನ ಧ್ಯಾನದಿಂದ ಗಜಮುಖ ಹೊಂದಿದನೆಂದು ಹಲವರು ತಿಳಿದಿದ್ದಾರೆ. ಆದರೆ ತೈಜಸನನ್ನೂ ಕೂಡ ಧ್ಯಾನ

ಮಾಡುತ್ತಿದ್ದನು – ವಿನಾಯಕಸ್ತು ವಿಶ್ವಸ್ಯ ಧ್ಯಾನಾದ್ಭೈದ್ ಗಜವಕ್ತ್ರತಾಮ್ । ಅತೀವ ತೈಜಸಧ್ಯಾನಾತ್ ..... ಎಂಬುದಾಗಿ ಶ್ರೀಮಧ್ವಾಚಾರ್ಯರು ಮಾಂಡೂಕ್ಯಭಾಷ್ಯದಲ್ಲಿ ನಿಖರವಾಗಿ ತಿಳಿಸಿದ್ದಾರೆ.

* ವಿನಾಯಕನು ವಿಶ್ವ ಹಾಗೂ ತೈಜಸರೂಪಗಳ ಧ್ಯಾನದಿಂದ ಗಣಪತಿ-ಯಾದನು. ಇಂದ್ರನು ವಿಶ್ವ, ತೈಜಸ, ಪ್ರಾಜ್ಞ ಎಂಬ ರೂಪಗಳನ್ನು ಉಪಾಸನೆ ಮಾಡಿ ಇಂದ್ರಪದವಿಯನ್ನು ಹೊಂದಿದನು. ವಿಶ್ವ, ತೈಜಸ, ಪ್ರಾಜ್ಞ, ತುರ್ಯ ಎಂಬ ನಾಕು ರೂಪಗಳ ಉಪಾಸನೆ ಮಾಡಿ ರುದ್ರದೇವರು ರುದ್ರಪದವಿಯನ್ನು ಪಡೆದರು. –'ತ್ರಿ- ಧ್ಯಾನಾದಿಂದ್ರ ಇಂದ್ರತಾಮ್ ॥ ಚತುರ್ಧ್ಯಾನಾಚ್ಚ ರುದ್ರತ್ವಂ ರುದ್ರ ಆಪ ಜನಾರ್ದನಾತ್'

* ಗಣಪತಿಯು ಭಗವಂತನ ಶರೀರದ ನಾಭಿಸ್ಥಳದಲ್ಲಿ ರಕ್ತಗಂಧದಿಂದ ಸುಶೋಭಿತನಾಗಿ ನೆಲೆಸಿರುತ್ತಾನೆ.

* ನಮ್ಮೆಲ್ಲರ ನಾಭಿಸ್ಥಳದಲ್ಲಿ ಅತ್ಯಂತ ಮನೋಹರವಾದ ನಾಕುದಳದ ಕಮಲವಿದೆ. ಕ್ರಮವಾಗಿ ಋಗ್ವೇದ ಯಜುರ್ವೇದ ಸಾಮವೇದಗಳು ಅಥರ್ವವೇದ ಆ ನಾಕು ದಳಗಳಲ್ಲಿವೆ. ಮಧ್ಯದ ಕರ್ಣಿಕೆಯಲ್ಲಿ ಭಗವಂತನನ್ನು ಆರಾಧನೆ ಮಾಡುತ್ತಾ ಗಜಮುಖನಾದ ವಿನಾಯಕನು ನೆಲೆಸಿದ್ದಾನೆ. ಇಂಥ ಅದ್ಭುತವಾದ ಗಣಪತಿಯನ್ನು ಸ್ತುತಿಸಿ ಧನ್ಯ ಧನ್ಯ ಎನ್ನೋಣ.

* ಬೇಡಿದ ಇಷ್ಟಾರ್ಥಗಳನ್ನು ಕೂಡಲೇ ನೀಡುವವನು ಗಣಪತಿ. ಆದ್ದರಿಂದಲೇ ಶ್ರೀಮಧ್ವಾಚಾರ್ಯರು ಗಣಪತಿಯನ್ನು ''ಕ್ಷಿಪ್ರಪ್ರಸಾದ'' ಎಂದೇ ಕರೆಯುತ್ತಾರೆ. ತಡಮಾಡದೇ ಇಂದೇ ಇಂಥ ಕ್ಷಿಪ್ರಪ್ರಸಾದನ ಆರಾಧನೆಯನ್ನು ಪ್ರಾರಂಭಿಸೋಣ. ನಮ್ಮೆಲ್ಲ ಇಷ್ಟಾರ್ಥಗಳನ್ನು ಪಡೆದುಕೊಂಡು ಜೀವನದಲ್ಲಿ ಸುಖ, ಶಾಂತಿ, ನೆಮ್ಮದಿಗಳಿಂದ ಬದುಕೋಣ.

* * * * *

# ಗಣಪತಿಯ ಚರಿತ್ರೆ

## ಭಗವಂತನ ನಾಭಿಯಿಂದ ಉದಿಸಿದನು ಗಣಪತಿ

ಭಗವಂತನು ಬ್ರಹ್ಮಾಂಡಸೃಷ್ಟಿಯ ಪ್ರಾರಂಭದಲ್ಲಿ ತನ್ನ ನಾಭಿಪ್ರದೇಶದಿಂದ ಗಣಪತಿಯನ್ನು ಸೃಷ್ಟಿ ಮಾಡಿದನು. ಆಕಾಶಕ್ಕೆ ಆ ಗಣಪತಿಯನ್ನು ಅಭಿಮಾನಿದೇವತೆಯನ್ನಾಗಿ ನಿಯೋಜನೆ ಮಾಡಿದನು. ಎಲ್ಲ ಸಜ್ಜನರ ಸಾಧನೆಗೆ ಉಂಟಾಗುವ ವಿಘ್ನಗಳನ್ನು ಪರಿಹರಿಸುವುದಕ್ಕಾಗಿ, ದುಷ್ಟರ ಸತ್ಕಾರ್ಯಗಳಿಗೆ ವಿಘ್ನಗಳನ್ನು ಉಂಟುಮಾಡುವುದಕ್ಕಾಗಿ ಆಜ್ಞೆ ಮಾಡಿದನು. ಪ್ರತಿಯೊಬ್ಬರೂ ಯಾವುದೇ ಸತ್ಕಾರ್ಯಗಳನ್ನು ಮಾಡುವ ಮೊದಲು ಗಣಪತಿಯನ್ನು ಪೂಜೆ ಮಾಡಿಯೇ ಕಾರ್ಯವನ್ನು ಪ್ರಾರಂಭ ಮಾಡಬೇಕೆಂದು ಸಕಲ ಭಕ್ತವರ್ಗಕ್ಕೆ ಆಜ್ಞೆ ಮಾಡಿದನು. ಹೀಗೆ ಗಣಪತಿಯು ಸೃಷ್ಟಿಯ ಆರಂಭದಲ್ಲಿ ಭಗವಂತನಿಂದಲೇ ಜನ್ಮವನ್ನು ಪಡೆದಿರುವನು.

## ಗಜಮುಖನಾಗಲು ಏನು ಕಾರಣ?

ಗಣಪತಿಯು ಆನೆಯ ಮುಖವನ್ನು ಹೊಂದಿರುವನು. ಇದಕ್ಕೆ ಕಾರಣ ಹೀಗಿದೆ – ಭಗವಂತನಿಗೂ ಆನೆಯ ಮುಖವುಳ್ಳ ಒಂದು ರೂಪವಿದೆ. ಅದೇ ಜಾಗ್ರದವಸ್ಥಾ ಪ್ರೇರಕವಾದ ವಿಶ್ವ ಎಂಬ ರೂಪ. ಈ ರೂಪಕ್ಕೆ ಒಟ್ಟು ೧೯ ಮುಖಗಳು. ಮಧ್ಯದ ಮುಖವು ಗಜಮುಖವಾಗಿದ್ದರೂ ಬಲ ಹಾಗೂ ಎಡಭಾಗದಲ್ಲಿರುವ ಹದಿನೆಂಟು ಮುಖಗಳು ನರಮುಖಗಳದ್ದಾಗಿವೆ. ಭಗವಂತನ ಈ ವಿಶ್ವ ಎಂಬ ರೂಪವನ್ನು ಕಂಡ ಗಣಪತಿಗೆ ಎಲ್ಲಿಲ್ಲದ ಆನಂದವಾಯಿತು. ಭಕ್ತ್ಯುದ್ರೇಕವಾಯಿತು. ಅಂದಿನಿಂದ ನಿರಂತರ ವಿಶ್ವನ ಉಪಾಸನೆಯನ್ನೇ ಮಾಡುತ್ತಾ ಕುಳಿತುಬಿಟ್ಟನು. ವಿಶ್ವನನ್ನೇ ನಿರಂತರ ಪೂಜಿಸುತ್ತಿದ್ದನು. ಗಣಪತಿಯ ಆರಾಧನೆಯಿಂದ ಸಂತುಷ್ಟನಾದ ವಿಶ್ವನಾಮಕನು ಗಣಪತಿಗೂ ಗಜಮುಖವು ದೊರೆಯುವಂತೆ ಅನುಗ್ರಹವನ್ನು ಮಾಡಿದನು. ಅದರ ಫಲವಾಗಿ ಮುಂದಿನ ಜನ್ಮದಲ್ಲಿ ಗಣಪತಿಯು ಗಜಮುಖನಾದನು.

# ಗಣಪತಿಯ ಜನನ

ಉಮಾದೇವಿಯು ಪರ್ವತರಾಜನ ಮಗಳಾಗಿ ಜನಿಸಿದಳು. ಪಾರ್ವತಿ ಎನಿಸಿದಳು. ರುದ್ರದೇವರನ್ನು ವರಿಸಿದಳು. ಅದೊಂದು ದಿನ ತಾನು ಸ್ನಾನ ಮಾಡಬೇಕು; ಆಗ ಯಾರೂ ತನಗೆ ವಿಘ್ನಮಾಡಬಾರದು. ಆಕಸ್ಮಿಕವಾಗಿ ಯಾರಾದರೂ ಬಂದರೆ ತನಗೆ ವಿಘ್ನವಾಗಬಹುದು. ಅದಕ್ಕಾಗಿ ವಿಘ್ನನಿವಾರಕನೊಬ್ಬನನ್ನು ಸೃಷ್ಟಿಸಬೇಕೆನ್ನಿಸಿತು. ಉಪಾಯ ತಿಳಿಯಲಿಲ್ಲ. ತಾನು ತನ್ನ ಮೈಯಲ್ಲಿ ಧರಿಸಿದ ಗಂಧಕರ್ಪೂರಾದಿ ಲೇಪಗಳನ್ನೇ ಮಣ್ಣನ್ನಾಗಿ ಭಾವಿಸಿದಳು. ತನ್ನ ದೇಹದ ಈ ಮಣ್ಣಿನಿಂದ ಒಬ್ಬ ವಟುವನ್ನೇ ಸೃಷ್ಟಿಮಾಡಬೇಕೆಂಬ ಬಯಕೆ ಆಯಿತು. ದೇಹದ ಮಣ್ಣನ್ನು ತೆಗೆದಳು. ಒಬ್ಬ ವಟುವಿನಂತೆ ಆ ಮಣ್ಣನ್ನು ಮೂರ್ತಿಯನ್ನಾಗಿ ಮಾಡಿದಳು. ವಿನಾಯಕನನ್ನು ಅದರಲ್ಲಿ ಪ್ರವೇಶಿಸುವಂತೆ ಆದೇಶಿಸಿದಳು. ಆ ಮಣ್ಣಿನ ಮೂರ್ತಿಯಲ್ಲಿ ವಿನಾಯಕ ಬಂದು ಕುಳಿತನು. ಮಣ್ಣಿನ ದೇಹ ಈಗ ಚೈತನ್ಯಮಯವಾಯಿತು.

ಆ ವಿನಾಯಕನು ಬಾಗಿ ಪ್ರಾರ್ಥಿಸಿದನು. 'ಏನಮ್ಮ! ನನ್ನಿಂದ ಏನಾಗಬೇಕು?' ಪಾರ್ವತಿಯು ಹೇಳಿದಳು 'ಮನೆಯ ಬಾಗಿಲಲ್ಲಿ ದ್ವಾರಪಾಲಕನಾಗಿ ನಿಲ್ಲು. ನಾನು ಸ್ನಾನ ಮಾಡಿ ಬರುವ ತನಕ ಯಾರನ್ನೂ ಬಿಡಬೇಡ. ಇದು ನಿನಗೆ ನನ್ನ ಕಟ್ಟಪ್ಪಣೆ' ಎಂದಳು. ಮಗು ಹೇಳಿತು 'ಅಮ್ಮ! ನಿರ್ವಿಘ್ನವಾಗಿ ಸ್ನಾನಕ್ಕೆ ತೆರಳು; ನಾನು ಯಾರನ್ನೂ ಒಳಗೆ ಬಿಡುವುದಿಲ್ಲ'.

ಅದೇ ಸಮಯದಲ್ಲಿ ರುದ್ರದೇವರು ಆಗಮಿಸಿದರು. ತನ್ನ ತಂದೆಯೇ ರುದ್ರದೇವರೆಂಬ ಅರಿವಿಲ್ಲದಂತೆ ಮಗು ವರ್ತನೆ ಮಾಡಿತು. ರುದ್ರದೇವರು ಕಡು ಕುಪಿತರಾದರು. ಮಗು ಹೇಳಿತು 'ನನ್ನಮ್ಮ ಸ್ನಾನ ಮಾಡುತ್ತಿರುವಳು; ನೀವು ಒಳಗೆ ಪ್ರವೇಶಿಸುವಂತಿಲ್ಲ' ಎಂದು ತಡೆಗಟ್ಟಿತು. ಕುಪಿತರಾದ ರುದ್ರದೇವರು ಆ ಮಗುವಿನ ತಲೆಯನ್ನೇ ತುಂಡರಿಸಿದರು.

ಕೆಲವು ನಿಮಿಷಗಳು ಕಳೆದವು. ಪಾರ್ವತಿ ಸ್ನಾನ ಮುಗಿಸಿ ಬಂದಳು. ತಾನು ಸೃಷ್ಟಿಸಿದ ಕುಮಾರ ಸತ್ತು ಬಿದ್ದಿದ್ದಾನೆ. ರುದ್ರದೇವರು ಕುಪಿತರಾಗಿ ನಿಂತಿದ್ದಾರೆ.

ದಿಗ್ಭ್ರಾಂತಳಾದಳು. ದಾರಿಗಾಣದೇ ಪತಿಯನ್ನೇ ಮೊರೆಹೊಕ್ಕಳು. ವಿಲಾಪ ಮಾಡಿದಳು. ಆ ಮಗುವನ್ನು ಬದುಕಿಸಿ ನೀಡಿ' ಎಂದು ವರಬೇಡಿದಳು. ರುದ್ರದೇವರು ಶಾಂತಚಿತ್ತರಾದರು. ಪತ್ನಿಯನ್ನು ಸಮಾಧಾನಗೊಳಿಸಿದರು. ಉಪಾಯವನ್ನೊಂದು ಹೂಡಿದರು. ಅತ್ತ ಭೃತ್ಯರಿದ್ದ ಕಡೆ ನೋಡಿದರು. ಭೃತ್ಯರು ಕೈಮುಗಿದು ಆಗಮಿಸಿದರು. 'ಏನಾಗಬೇಕು. ಪ್ರಭುಗಳೇ!' ಎಂದರು. ರುದ್ರದೇವರು ಭೃತ್ಯರಿಗೆ ಅಪ್ಪಣೆ ಮಾಡಿದರು – 'ಯಾರು ಉತ್ತರಾಭಿಮುಖವಾಗಿ ತಲೆಯನ್ನಿಟ್ಟು ಮಲಗಿರುವರೋ ಅವರ ತಲೆಯನ್ನು ಭೇದಿಸಿ ತನ್ನಿರಿ'.

ರುದ್ರಭಟರು 'ಏನಿದು! ರುದ್ರಾಪ್ಪಣೆ' ಎಂದು ಅಚ್ಚರಿಪಟ್ಟರು. ಉತ್ತರದಿಕ್ಕಿನ ಕಡೆ ತೆರಳಿದರು. ಉತ್ತರದಿಕ್ಕಿನೆಡೆ ತಲೆಹಾಕಿ ಮಲಗಿದವರನ್ನು ಹುಡುಕಿದರು. ಯಾವ ಮನುಷ್ಯರೂ ಹಾಗೆ ಮಲಗಿರಲಿಲ್ಲ. ಆದರೆ ಆನೆಯೊಂದು ಹಾಗೆ ಉತ್ತರಕ್ಕೆ ತಲೆ ನೀಡಿ ಮಲಗಿತ್ತು. ಕತ್ತಿಯಿಂದ ಆನೆಯ ಕತ್ತನ್ನು ಕತ್ತರಿಸಿದರು. ಭಕ್ತಿಯಿಂದ ತಂದು ರುದ್ರದೇವರಿಗೆ ಅರ್ಪಿಸಿದರು. 'ಆನೆಯಾದರೇನು?' ಎಂದರು ರುದ್ರದೇವರು. ಸ್ವತಃ ತಾವೇ ಆ ತಲೆಯನ್ನು ಮೃತನಾದ ಬಾಲಕನ ಶರೀರಕ್ಕೆ ಜೋಡಿಸಿದರು. ಜೀವ ತುಂಬಿದರು. ಮಗು ಬದುಕಿತು. ನರಮುಖದ ಮಗು ಗಜಮುಖವಾಯಿತು. ತಂದೆ-ತಾಯಿಯರಿಗೆ ಭಕ್ತಿಯಿಂದ ನಮಿಸಿತು. ಆಶೀರ್ವದಿಸಿರಿ ಎಂದಿತು. ಆಗ ಆ ಮಗುವಿನ ಸೌಂದರ್ಯವನ್ನು ಕಂಡ ರುದ್ರದೇವರಿಗೆ ಪ್ರೀತಿ ಉಕ್ಕಿಹರಿಯಿತು. ತಮ್ಮೆಲ್ಲ ಭೂತಗಣಗಳಿಗೆ ಪತಿಯನ್ನಾಗಿ ಮಾಡಿ ''ಗಣಪತಿ'' ಎಂದೇ ಹೆಸರಿಟ್ಟರು. ವರವನ್ನಿತ್ತರು. ಶಕ್ತಿ ತುಂಬಿದರು. ವಿಘ್ನಪರಿಹಾರಕನಾಗಿ ಸಿದ್ಧಿವಿನಾಯಕನಾದನು. ಗಣಗಳ ಅಧ್ಯಕ್ಷನಾಗಿ ಗಣಪತಿಯಾದನು. ಅಂದಿನಿಂದ ಎಲ್ಲರೂ ಇವನನ್ನು ವಿಶೇಷವಾಗಿ ಪೂಜಿಸಲು ಪ್ರಾರಂಭಿಸಿದರು.

ಇದು ಪುರಾಣದ ಕಥೆ. ಜಗಜ್ಜನಿತವಾದ ಕಥೆ. ಹೆಚ್ಚಿನ ಜನಗಳಿಗೆ ಗಣಪತಿಯ ಇದೊಂದೇ ಕಥೆ ತಿಳಿದಿದೆ. ಆದರೆ ಇದು ನಂತರದ ಸೃಷ್ಟಿಯ ಕಥೆ. ವಿನಾಯಕನು ಗಜಮುಖನಾದದ್ದು ವಿಶ್ವನಾಮಕನಾದ ಭಗವಂತನ ಧ್ಯಾನದಿಂದ. ಮತ್ತು ಬ್ರಹ್ಮಾಂಡ ಹುಟ್ಟುವ ಮೊದಲೇ ತಾನು ಜನಿಸಿದ್ದನು. ಅಹಂಕಾರತತ್ತ್ವಕ್ಕೆ ಅಭಿಮಾನಿಯಾದ

ರುದ್ರದೇವರು ವೈಕಾರಿಕಾಹಂಕಾರದಿಂದ ಇವನನ್ನು ಈ ಹಿಂದೆಯೇ ಸೃಷ್ಟಿಮಾಡಿದ್ದರು. ಇವೆಲ್ಲವನ್ನೂ ಅರಿತು ಮೇಲಿನ ಕಥೆಯನ್ನು ಅರ್ಥ ಮಾಡಿಕೊಳ್ಳಬೇಕು.

## ಗಣಪತಿಯ ಮನಮೋಹಕರೂಪ

ಮೊರದಂತೆ ಎರಡು ದೊಡ್ಡದಾದ ಕಿವಿಗಳು. ಕಾರುಣ್ಯ ತುಂಬಿದ ಪುಟ್ಟ ಎರಡು ಕಣ್ಣುಗಳು. ಆಗ ತಾನೇ ಹುಟ್ಟಿದ ಸೂರ್ಯನ ಬಣ್ಣದಂತೆ ಕೆಂಪುಬಣ್ಣದ ದೇಹ. ಸರ್ಪವನ್ನೇ ಕಟಿಸೂತ್ರದಂತೆ ಧರಿಸಿರುವ ಬೃಹತ್ತಾದ ಉದರ. ಪಾಶ, ದಂತ, ಅಂಕುಶ, ಅಭಯಗಳನ್ನು ಧರಿಸಿರುವ ನಾಕು ಕೈಗಳು. ಕೆಂಪು ಗಂಧವನ್ನು ಲೇಪಿಸಿಕೊಂಡು, ಕೆಂಪು ಮಾಲೆಯನ್ನು ಧರಿಸಿ, ಕೆಂಪು ಬಟ್ಟೆಯನ್ನುಟ್ಟು ಕೆಂಪು ಬಣ್ಣದ್ದೇ ಉತ್ತರೀಯವನ್ನು ಹೊದ್ದಿರುವ ಸುಂದರರೂಪ. ಊರ್ಧ್ವಪುಂಡ್ರವನ್ನು ಧರಿಸಿ ದ್ವಾದಶನಾಮಗಳನ್ನು ಧಾರಣೆ ಮಾಡಿ, ಶಂಖ, ಚಕ್ರ , ಗದಾ, ಪದ್ಮ, ನಾರಾಯಣ ಎಂಬ ಪಂಚಮುದ್ರೆಗಳನ್ನು ಧರಿಸಿ, ಸಿದ್ಧಿ ಹಾಗೂ ಬುದ್ಧಿ ಎಂಬ ಹೆಂಡಂದಿರಿಂದ ಸೇವಿತನಾಗಿ ಸಿಂಹಾಸನದಲ್ಲಿ ಕುಳಿತಿರುವ, ಪ್ರತಿಯೊಬ್ಬರು ಮಾಡುವ ಕರ್ಮಗಳನ್ನು ಸಾಕ್ಷಿಯಾಗಿ ನೋಡುತ್ತಿರುವ ಗಜವದನನ ಮನಮೋಹಕರೂಪಕ್ಕೆ ಅನಂತ ಅನಂತ ಭಕ್ತಿಯ ನಮನಗಳು.

## ಇಂದುದರ್ಪಹರ

'ಚಂದ್ರನಿಗೆ ಗಣಪತಿಯು ಶಾಪವನ್ನು ನೀಡಿರುವನು' ಎಂಬುದು ಲೋಕ-ಪ್ರಸಿದ್ಧವಾಗಿದೆ. ಆದರೆ ಗಣಪತಿಯು ಚಂದ್ರನ ಪಾದಪದ್ಮಾರಾಧಕನಾಗಿದ್ದಾನೆ. ಚಂದ್ರನು ಗಣಪತಿಗೆ ಗುರುಸ್ಥಾನದಲ್ಲಿದ್ದಾನೆ. ಬಿಂಬರೂಪನೂ ಆಗಿದ್ದಾನೆ. ಚಂದ್ರನು ೧೨ನೆಯ ಕಕ್ಷೆಯಲ್ಲಿದ್ದರೆ ಗಣಪತಿಯು ೧೮ನೆಯ ಕಕ್ಷೆಯಲ್ಲಿದ್ದಾನೆ. ಹಾಗೇನಾದರೂ ಶಾಪವನ್ನು ನೀಡಿದ್ದಲ್ಲಿ ಅದು ಸ್ವೋತ್ತಮದ್ರೋಹದಲ್ಲಿ ಪರ್ಯವಸಾನವಾಗುತ್ತದೆ. ಆದ್ದರಿಂದ 'ಗಣಪತಿಯು ಚಂದ್ರನ ಮೇಲೆ ಕುಪಿತನಾದನು. ಶಪಿಸಿದನು' ಇತ್ಯಾದಿಯಾಗಿ ತಿಳಿದರೆ ಅನರ್ಥವಾಗುತ್ತದೆ.

ಆದರೆ ಗಣೇಶಚತುರ್ಥಿಯಂದು ಚಂದ್ರದರ್ಶನ ಮಾಡಬಾರದೆಂಬುದನ್ನು ಸ್ಯಮಂತಕೋಪಾಖ್ಯಾನದ ಮೂಲಕ ಶ್ರೀಕೃಷ್ಣನು ಕೂಡ ನಮಗೆ ತಿಳಿಸಿದ್ದಾನೆ.

ಗಣಪತಿಯ ಮಹಿಮೆಯ ವೈಭವಕ್ಕೋಸ್ಕರ ಮಾತ್ರ ಈ ಕಥೆ ಪುರಾಣಗಳಲ್ಲಿ ಹೇಳಿದ್ದಾರೆಂದು ತಿಳಿಯತಕ್ಕದ್ದು. ಇದೂ ಸಹ ಕೇವಲ ಲೀಲೆಗೋಸ್ಕರ ನಡೆದ ಘಟನೆ ಎಂದು ತಿಳಿಯಬೇಕು. ಚಂದ್ರನಿಗೆ ಶಾಪ ನೀಡಿದ ಕಥೆ ಹೀಗಿದೆ –

ಅದೊಂದು ತಪಸ್ವಿಗಳ ಕಾಲ. ಅಗಸ್ತ್ಯರು ಪರಮಾತ್ಮನನ್ನು ಕುರಿತು ಏಕಾಗ್ರ ಮನದಿಂದ ತಪಸ್ಸು ಮಾಡಿದರು. ಅದೇ ಸಂದರ್ಭದಲ್ಲಿ ತಾವೊಂದು ಸಂಕಲ್ಪ ಮಾಡಿದ್ದರು. ತಾವಿದ್ದ ವಿಂಧ್ಯಪರ್ವತದಿಂದ ತೆರಳಿ, ಕಾಶಿಯ ಗಂಗೆಯಲ್ಲಿ ಮಿಂದು ಗಂಗೋದಕವನ್ನು ತೆಗೆದುಕೊಂಡು ರಾಮೇಶ್ವರದಲ್ಲಿರುವ ಶಿವಲಿಂಗಕ್ಕೆ ಅಭಿಷೇಕ ಮಾಡಬೇಕೆಂಬುದೇ ಈ ಸಂಕಲ್ಪವಾಗಿತ್ತು. ಅದಕ್ಕಾಗಿ ಪರಮಾತ್ಮನ ಬಳಿ ವರವನ್ನು ಪಡೆದುಕೊಂಡಿದ್ದರು. ಪರಮಾತ್ಮನು ವರವನ್ನು ನೀಡುವಾಗ ಗಂಗೋದಕದ ಪಾತ್ರೆಯನ್ನು ಎಂದೂ ಕೆಳಗಿಡಬಾರದೆಂದು ಅಪ್ಪಣೆ ಮಾಡಿದ್ದನು. ಅದರಂತೆ ಪ್ರತಿನಿತ್ಯವೂ ಅಗಸ್ತ್ಯರು ಕೊಡದಿಂದ ಗಂಗೋದಕವನ್ನು ತೆಗೆದುಕೊಂಡು ರಾಮೇಶ್ವರಕ್ಕೆ ತೆರಳಿ ಶಿವಲಿಂಗಕ್ಕೆ ಅಭಿಷೇಕ ಮಾಡುತ್ತಿದ್ದರು. ಅನೇಕ ವರ್ಷಗಳ ಕಾಲ ಹೀಗೆ ಕಠಿಣ ತಪಸ್ಸನ್ನಾಚರಿಸಿದರು.

ಅದೊಂದು ದಿನ ದೇಹಬಾಧೆ ಉಂಟಾಯಿತು. ಮಾರ್ಗಮಧ್ಯದಲ್ಲಿ ಗಂಗೋದಕದ ಕಲಶವನ್ನು ಇಡಲೇಬೇಕಾದ ಪರಿಸ್ಥಿತಿ ಎದುರಾಯಿತು. ಅಂದು ಭಾದ್ರಪದ ಶುಕ್ಲಪಕ್ಷದ ಚತುರ್ಥೀ ದಿವಸ. ಗಣಪತಿಯು ಮೂಷಿಕವಾಹನನಾಗಿ ಭಕ್ತರ ಮನೆಗೆ ತೆರಳುತ್ತಿದ್ದನು. ಆಗ ಅಗಸ್ತ್ಯರು ಗಣಪತಿಯನ್ನು ಕರೆದರು. 'ನಾನು ದೇಹಬಾಧೆಯನ್ನು ಪರಿಹಾರ ಮಾಡಿ- ಕೊಂಡು ಬರುವ ತನಕ ಈ ಗಂಗೋದಕದ ಕಲಶವನ್ನು ಹಿಡಿದುಕೊಂಡಿರು; ಯಾವುದೇ ಕಾರಣಕ್ಕೂ ಕೆಳಗಿಡಬೇಡ' ಎಂದು ಹೇಳಿದರು. ಸ್ವಲ್ಪವೇ ಸಮಯದಲ್ಲಿ ಮರಳಿ ಬರಬೇಕೆಂದು ಗಣಪತಿ ನಿಯಮ ಹಾಕಿದನು. ಅಷ್ಟರಲ್ಲಿ ಅಗಸ್ತ್ಯರು ಬರಲಿಲ್ಲ. ತನ್ನ ಮಾತಿಗೆ ತಕ್ಕಂತೆ ಗಣಪತಿಯು ನೆಲದ ಮೇಲೆ ಆ ಗಂಗೋದಕ ಕಲಶವನ್ನು ಇಟ್ಟೇ ಬಿಟ್ಟನು. ಆ ಕಲಶ ಒಡೆದು ಹೋಯಿತು. ಅಗಸ್ತ್ಯರು ಗಣಪತಿಗೆ ಶಪಿಸಿದರು. ಇದನ್ನು ಕಂಡು ಚಂದ್ರನು ನಕ್ಕನು. ಇದರಿಂದ ಕುಪಿತನಾದ ಗಣಪತಿಯು ಚಂದ್ರನಿಗೆ ಶಾಪವನ್ನಿತ್ತನು – 'ಯಾರು ನಿನ್ನನ್ನು ಇಂದು ನೋಡುವರೋ ಅವರಿಗೆ ನಿಷ್ಕಾರಣವಾಗಿ ಅಪವಾದ ಬರಲಿ – ಎಂದು.

ಮತ್ತೊಂದು ಕಥೆ –

ಗಣಪತಿಯು ಗಣೇಶಚತುರ್ಥಿಯ ದಿವಸ ಮೂಷಕದ ಮೇಲೆ ಭಕ್ತರ ಮನೆಗೆ ಆಗಮಿಸುತ್ತಿದ್ದನು. ಸರ್ಪವನ್ನು ಕಂಡು ಮೂಷಕವು ಹೆದರಿ ಓಡಿತು. ಗಣಪತಿಯು ಕೆಳಗೆ ಬಿದ್ದನು. ಇದನ್ನು ಕಂಡು ಚಂದ್ರನು ನಕ್ಕನು. ಚಂದ್ರನ ಮೇಲೆ ಕೋಪದಿಂದ ತನ್ನ ದಂತವೊಂದನ್ನು ಕಿತ್ತು ಚಂದ್ರನನ್ನು ಹೊಡೆದನು. ಮತ್ತು ಅದೇ ದಿನದಲ್ಲಿ ಯಾರೂ ಸಹ ಚಂದ್ರದರ್ಶನವನ್ನು ಮಾಡಬಾರದು. ಹಾಗೇನಾದರೂ ಚಂದ್ರದರ್ಶನ ಮಾಡಿದರೆ ಜಾರತ್ವ, ಚೋರತ್ವಗಳು ಆರೋಪಿತವಾಗುತ್ತವೆಂದು ಶಪಿಸಿದನು.

ಮೇಲೆ ಉದಾಹರಿಸಿದ ಕಥೆಗಳೆಲ್ಲವೂ ಲೋಕದಲ್ಲಿ ಹೆಚ್ಚು ಪ್ರಸಿದ್ಧವಾಗಿವೆ. ಅವುಗಳ ಅಭಿಪ್ರಾಯ ಏನೆಂಬುದನ್ನಷ್ಟೇ ಇಲ್ಲಿ ಉಲ್ಲೇಖಿಸಲಾಗಿದೆ. ಚಂದ್ರದರ್ಶನ ಏಕೆ ಮಾಡಬಾರದೆನ್ನಲು ಪುರಾಣಗಳಲ್ಲಿರುವ ಕಥೆಯು ಬೇರೆಯೇ ಇದೆ. ಆ ಕಥೆಯನ್ನು ಮುಂದೆ ಶ್ಲೋಕ ಹಾಗೂ ಅನುವಾದಗಳ ಜೊತೆ ಇರುವುದನ್ನು ಗಮನಿಸಬೇಕು.

## ತಂದೆ ತಾಯಿಯರಲ್ಲಿ ಸಮಸ್ತಜಗತ್ತನ್ನು ಕಂಡ ಗಣಪತಿ

ನಾರದರು ಒಮ್ಮೆ ಕೈಲಾಸಕ್ಕೆ ಬಂದರು. ಒಂದು ಹಣ್ಣನ್ನು ತಂದು ಶಿವನಿಗೆ ನೀಡಿದರು. ಅದನ್ನು ಕಂಡ ಶಿವನ ಮಕ್ಕಳಾದ ಗಣಪತಿ ಹಾಗೂ ಷಣ್ಮುಖರು ತನಗೆ ಆ ಹಣ್ಣು ಬೇಕೆಂದು ಹಟ ಮಾಡಿದರು. ಆಗ ಶಿವನು ಯಾರು ಈ ಪ್ರಪಂಚವನ್ನು ಮೊದಲು ಪ್ರದಕ್ಷಿಣೆ ಹಾಕಿ ಬರುತ್ತಾರೋ ಅವರಿಗೆ ಹಣ್ಣನ್ನು ನೀಡುತ್ತೇನೆಂದು ಹೇಳಿದರು. ಷಣ್ಮುಖನು ತನ್ನ ವಾಹನವನ್ನು ಏರಿ ಪ್ರದಕ್ಷಿಣೆ ಮಾಡಲು ಹೊರಟನು. ಆದರೆ ಗಣಪತಿಯು ''ಸಮಸ್ತಜಗತ್ತು ತಂದೆ ತಾಯಿಯರಲ್ಲೇ ಇರುತ್ತದೆ. ತಂದೆ ತಾಯಿಯರನ್ನು ಪ್ರದಕ್ಷಿಣೆ ಮಾಡಿದರೆ ಸಮಸ್ತಪ್ರಪಂಚವನ್ನು ಪ್ರದಕ್ಷಿಣೆ ಮಾಡಿದಂತೆ'' ಎಂಬುದಾಗಿ ನಾರದರನ್ನು ಕೇಳಿದನು. ನಾರದರು ಹೌದು ಎಂಬುದಾಗಿ ಸಮ್ಮತಿಯನ್ನುನೀಡಿದರು. ಗಣಪತಿಯು ತಂದೆ ತಾಯಿಗೆ ಭಕ್ತಿಯಿಂದ ಪ್ರದಕ್ಷಿಣೆ ಹಾಕಿ ನಮಸ್ಕಾರ ಹಾಕಿದನು. ರುದ್ರದೇವರು ಗಣಪತಿಗೆ ಹಣ್ಣನ್ನು ನೀಡಿದರು. ಷಣ್ಮುಖನಿಗೆ

ಈ ವಿಷಯ ತಿಳಿಯಿತು. ಸಿಟ್ಟುಮಾಡಿಕೊಂಡನು. ಅನಂತರ ಶಿವಪಾರ್ವತಿಯರು ಹಾಗೂ ನಾರದರು ಸಮಾಧಾನ ಮಾಡಿದರು. ಅಣ್ಣ, ತಮ್ಮ ಇಬ್ಬರೂ ಸಹ ಹಣ್ಣನ್ನು ಹಂಚಿಕೊಂಡು ತಿಂದರು.

## ಗಣಪತಿಯ ವಾಹನದ ಕಥೆ

ದೇವೇಂದ್ರನ ಸಭೆಯಲ್ಲಿ ಕ್ರೌಂಚ ಎಂಬ ಗಂಧರ್ವನಿದ್ದನು. ಅದೊಂದು ದಿನ ಯಾವುದೋ ಕಾರ್ಯಭಾರದಿಂದ ವೇಗವಾಗಿ ನಡೆದು ಹೋಗುತ್ತಿದ್ದನು. ಗಮನಿಸದೇ ಅವನ ಕಾಲು ವಾಮದೇವ ಋಷಿಗಳಿಗೆ ತಗುಲಿತು. ಋಷಿಗಳಿಗೆ ಸಿಟ್ಟು ಬಂದಿತು. 'ನೀನು ಮೂಷಕಾಸುರನಾಗು' ಎಂದು ಶಪಿಸಿದರು. ಗಂಧರ್ವನು ಕ್ಷಮೆ ಕೇಳಿದನು. ವಿವಿಧವಾಗಿ ಪ್ರಾರ್ಥಿಸಿದನು. ಋಷಿಗಳ ಸಿಟ್ಟು ಶಾಂತವಾಯಿತು. ಮೂಷಕಾಸುರನಾದರೂ ಸಹ ಗಣಪತಿಯಿಂದ ಪರಾಜಿತನಾಗಿ ಅವನ ವಾಹನನಾಗುವ ಭಾಗ್ಯವು ನಿನಗೆ ದೊರಕಲಿ ಎಂದು ಶಾಪವನ್ನು ಪರಿವರ್ತನೆ ಮಾಡಿದರು. ಕ್ರೌಂಚ ಗಂಧರ್ವನು ಮೂಷಕಾಸುರನಾದನು. ಜನ್ಮಗುಣದಂತೆ ಜಗತ್ತನ್ನು ಪೀಡಿಸಿದನು. ಗಣಪತಿಯನ್ನು ಕೂಡ ಅದೊಂದು ದಿನ ಕೆಣಕಲು ಬಂದನು. ತನ್ನ ಪಾಶವನ್ನು ಗಣಪತಿಯು ಎಸೆದನು. ಇದರಿಂದ ಹೆದರಿದ ಮೂಷಕಾಸುರನು ಪಾತಾಳಕ್ಕೆ ಓಡಿದನು. ಬಿಡದ ಪಾಶವು ಅವನನ್ನು ಅಟ್ಟಿಸಿಕೊಂಡು ಹೋಯಿತು.? ಅಂತಿಮವಾಗಿ ಅವನನ್ನು ಎಳೆದು ತಂದನು. ಮೂಷಕಾಸುರನು ಗಣಪತಿಗೆ ಶರಣಾಗತನಾದನು. ಗಣಪತಿಯ ಕಾಲುಗಳನ್ನು ಹಿಡಿದುಕೊಂಡು ನಮಸ್ಕರಿಸಿ ತಪ್ಪಾಯಿತೆಂದು ಕ್ಷಮೆ ಯಾಚಿಸಿದನು. ಗಣಪತಿಯು ಅವನ ವಿಷಯದಲ್ಲಿ ಪ್ರಸನ್ನನಾದನು. ಅವನ ಅಪೇಕ್ಷೆಯಂತೆ ತನ್ನ ವಾಹನವನ್ನಾಗಿ ಮಾಡಿಕೊಂಡನು. ಅಂದಿನಿಂದ ಗಣಪತಿಯು ಮೂಷಕವಾಹನನಾದನು.

## ತಂದೆ ತಾಯಿಯರಲ್ಲಿ ಭಕ್ತಿ

ಮಹಾರುದ್ರದೇವರು ದೊಡ್ಡ ಯಾಗವನ್ನು ಮಾಡಬೇಕೆಂದು ಸಂಕಲ್ಪಿಸಿದರು. ಆ ಯಾಗಕ್ಕೆ ಸಕಲದೇವತೆಗಳನ್ನೂ ಆಹ್ವಾನ ಮಾಡಬೇಕೆಂಬ ಅಪೇಕ್ಷೆಯಾಯಿತು. ತಮ್ಮಿಬ್ಬರು ಮಕ್ಕಳನ್ನು ಕರೆದು ಎಲ್ಲ ದೇವತೆಗಳಿಗೆ ಆಹ್ವಾನ ನೀಡುವಂತೆ

ಆಜ್ಞೆ ಮಾಡಿದರು. ಆದರೆ ಕೂಡಲೇ ಮಾಡಬೇಕಾದ ಯಾಗಕ್ಕೆ ಎಲ್ಲ ದೇವತೆಗಳನ್ನು ಕರೆತರುವುದು ಹೇಗೆ ಎಂಬ ಚಿಂತೆ ಉಂಟಾಯಿತು. ಆಗ ಗಣಪತಿಯು ಒಂದು ಉಪಾಯವನ್ನು ಮಾಡಿದನು. 'ಎಲ್ಲ ದೇವತೆಗಳೂ ತಂದೆ ತಾಯಿಯಲ್ಲೇ ಇರುತ್ತಾರೆ. ಅವರಲ್ಲಿ ಭಕ್ತಿಯಿಂದಪ್ರಾರ್ಥನೆ ಮಾಡಿದರೆ ಎಲ್ಲ ದೇವತೆಗಳೂ ಖಂಡಿತವಾಗಿಯೂ ಆಗಮಿಸುತ್ತಾರೆ'' ಎಂಬ ಭಾವನೆಯನ್ನು ತಾಳಿದನು. ತಂದೆ ತಾಯಿಯರ ಎದುರಿನಲ್ಲಿ ನಿಂತು ಭಕ್ತಿಯಿಂದ ಎಲ್ಲ ದೇವತೆಗಳನ್ನೂ ಸ್ತುತಿಸಿದನು. ಯಜ್ಞಕ್ಕೆ ಆಗಮಿಸಬೇಕೆಂದು ಆಹ್ವಾನಿಸಿದನು. ಎಲ್ಲ ದೇವತೆಗಳಿಗೆ ಗಣಪತಿಯ ಭಕ್ತಿ ಕಂಡು ಸಂತೋಷವಾಯಿತು. ಪ್ರತಿಯೊಬ್ಬರೂ ಪರಿವಾರ ಸಹಿತರಾಗಿ ಆಗಮಿಸಿದರು. ಯಜ್ಞವು ವೈಭವೋಪೇತವಾಗಿ ಜರುಗಿತು. ಶಿವಪಾರ್ವತಿಯರು ಅಚ್ಚರಿಯಿಂದ ಸಂತೋಷ ಹೊಂದಿದರು.

## ಗಣಪತಿಯಿಂದ ಕಾವೇರಿ ಹರಿದಳು

ಕಾವೇರಿನದಿಯ ಅಭಿಮಾನಿದೇವತೆಯು ಅಗಸ್ತ್ಯ ಋಷಿಗಳ ಮುಂದೆ ದರ್ಪವನ್ನು ತೋರಿಸಿದಳು. ಅಗಸ್ತ್ಯರು ತಮ್ಮ ತಪಸ್ಸಿನ ಶಕ್ತಿಯಿಂದ ಅವಳನ್ನು ಹಿಡಿದು ತಮ್ಮ ಕಮಂಡಲುವಿನ ಒಳಗೆ ಹಾಕಿಬಿಟ್ಟರು. ಎಲ್ಲೂ ಕಾವೇರಿ ನೀರು ಹರಿಯದೇ ಹಾಹಾಕಾರ ಉಂಟಾಯಿತು. ಕೃಷಿ ಇಲ್ಲದೇ ಜನರು ಪರದಾಟಪಟ್ಟರು. ಜನರ ಉದ್ವಿಗ್ನಸ್ಥಿತಿಯನ್ನು ಕಂಡು ಗಣಪತಿಗೆ ಕನಿಕರ ಬಂದಿತು. ಒಂದುಕಾಗೆಯ ರೂಪವನ್ನು ತಾಳಿದನು. ಅಗಸ್ತ್ಯರಿದ್ದಲ್ಲಿಗೆ ಬಂದು ಕಾವೇರಿಯು ಕಮಂಡಲುವಿನ ಮೇಲೆ ಕುಳಿತು ಅದನ್ನು ಉರುಳಿಸಿ ಬಿಟ್ಟನು. ಕಾವೇರಿಯು ಬಂಧನದಿಂದ ಮುಕ್ತಳಾದಳು. ನದಿಯು ಎಲ್ಲೆಡೆಯೂ ಹರಿಯಿತು. ಅಗಸ್ತ್ಯರಿಗೆ ವಿಷಯ ತಿಳಿದು ಸಂತೋಷವಾಯಿತು. ಗಣಪತಿಯನ್ನು ಕುರಿತು ಸತ್ಕಾರ ಮಾಡಿದರು. ಎಲ್ಲ ಜನರಿಗೆ ಸಂತೋಷವಾಯಿತು.

## ಗಣಪತಿಯಿಂದ ಗಂಗೆಯು ಗೋದಾವರಿಯಾಗಿ ಹರಿದಳು

ಒಮ್ಮೆ ಪಾರ್ವತಿಯು ಗಣಪತಿಯ ಬಳಿ ಬಂದು ಹೀಗೆ ಹೇಳಿದಳು. ತನ್ನ ಪತಿಯ ಮೇಲೆ ಗಂಗೆಯು ಕುಳಿತಿದ್ದಾಳೆ. ಅವಳನ್ನು ಹೇಗಾದರೂ ಮಾಡಿ ಇಳಿಸಬೇಕಾಗಿದೆ. ಅದಕ್ಕಾಗಿ ಉಪಾಯವೊಂದನ್ನು ನೀನು ಮಾಡಬೇಕಾಗಿದೆ ಎಂದಳು. ಗಣಪತಿಯು

ತಾಯಿಯ ಮಾತಿಗೆ ಒಪ್ಪಿ ಹಾಗೆಯೇ ಮಾಡುತ್ತೇನೆಂದು ನಮಿಸಿ ಹೊರಟನು. ಗೌತಮರ ಆಶ್ರಮಕ್ಕೆ ಬಂದನು. ಗೌತಮರು ಆಶ್ರಮದಲ್ಲಿ ಇರಲಿಲ್ಲ. ಗೌತಮರ ಶಿಷ್ಯರು, ಆಹ್ವಾನಿತ ಋಷಿ, ಮುನಿಗಳು ಮಾತ್ರ ಅಲ್ಲಿ ಇದ್ದರು. ಗೌತಮ ಋಷಿಗಳ ಅಪ್ಪಣೆಯು ಸಿಗದೇ ತಮ್ಮ ಮನೆಗಳಿಗೆ ತೆರಳಲು ಸಾಧ್ಯವಾಗದೇ ದಾಕ್ಷಿಣ್ಯದಿಂದ ಅಲ್ಲಿ ಕುಳಿತಿದ್ದರು. ಆಗ ಗಣಪತಿಯು ''ನೀವೆಲ್ಲರೂ ನಿಮ್ಮ ಮನೆಗೆ ಮರಳಿ ಹೋಗಬೇಕೆಂದರೆ ನಾನು ಹೇಳಿಕೊಟ್ಟ ಉಪಾಯವನ್ನು ಮಾಡಿರಿ. ಆಗ ಮಾತ್ರ ನೀವು ನಿಮ್ಮ ಮನೆಗಳಿಗೆ ತೆರಳಬಹುದು. ಇಲ್ಲವಾದಲ್ಲಿ ನೀವು ಇಲ್ಲಿಯೇ ಕೊನೆಯ ತನಕ ಇರಬೇಕಾಗುತ್ತದೆ'' ಎಂದು ಹೇಳಿದನು. ಆಗ ಋಷಿಮುನಿಗಳೆಲ್ಲರೂ ನೀನು ಹೇಳಿದಂತೆ ಕೇಳುತ್ತೇವೆಂದು ಒಪ್ಪಿಗೆ ನೀಡಿದರು. ಆಗ ಗಣಪತಿಯು ಹೀಗೆ ಹೇಳಿದನು ''ನಿಮ್ಮ ತಪಸ್ಸಿನಿಂದ ಒಂದು ಹಸುವನ್ನು ಸೃಷ್ಟಿಮಾಡಿರಿ. ಅದನ್ನು ಗೌತಮರ ಗದ್ದೆಯಲ್ಲಿ ಬಿಟ್ಟು ಬಿಡಿರಿ. ತೆನೆಭರಿತವಾದ ಹುಲ್ಲನ್ನು ಅದು ತಿನ್ನುತ್ತಿರುವಾಗ ಗೌತಮರು ಅದನ್ನು ಓಡಿಸಲು ತೆರಳುತ್ತಾರೆ. ಮುಟ್ಟಿದ ಕೂಡಲೇ ಆ ಹಸು ಸಾಯುವಂತಿರಬೇಕು. ಗೋಹತ್ಯೆಮಾಡಿದ ಮೇಲೆ ಅವರ ಮನೆಯಲ್ಲಿ ಕ್ಷಣಕಾಲವೂ ಇರಬಾರದು. ಇದನ್ನೇ ಉಪಾಯವಮಾಡಿಕೊಂಡು ಇಲ್ಲಿಂದ ಹೊರಟು ಬಿಡಿರಿ'' ಎಂದು. ಗಣಪತಿಯುಹೇಳಿಕೊಟ್ಟ ಉಪಾಯದಂತೆ ಎಲ್ಲ ಋಷಿಮುನಿಗಳೂ ಹಾಗೆಯೇ ಮಾಡಿದರು. ತಮ್ಮ ತಪಸ್ಸಿನಿಂದ ಒಂದು ಹಸುವನ್ನು ಸೃಷ್ಟಿಮಾಡಿದರು. ಆ ಹಸುವು ಗದ್ದೆಯನ್ನು ಮೇಯುತ್ತಿರುವಾಗ ಗೌತಮರು ಹುಲ್ಲುಕಡ್ಡಿಯನ್ನು ತೆಗೆದುಕೊಂಡು ಓಡಿಸಲು ಹೋದರು. ಅಷ್ಟರಲ್ಲಿಯೇ ಗೋ ಸತ್ತುಹೋಯಿತು. ಎಲ್ಲ ಋಷಿಮುನಿಗಳೂ ತಾವು ಗೋ ಹತ್ಯೆ ಮಾಡಿರುವಿರಿ ಎಂದು ತಮ್ಮ ತಮ್ಮ ಮನೆಗಳಿಗೆ ತೆರಳಿ ಬಿಟ್ಟರು. ಗೌತಮರು ಚಿಂತಾಕ್ರಾಂತರಾದರು. ಶಿವನನ್ನು ಕುರಿತು ತಪಸ್ಸು ಮಾಡಿದರು. ಶಿವನ ತಲೆಯ ಮೇಲಿರುವ ಗಂಗೆಯನ್ನು ಕೆಳಗಿಳಿಸುವಂತೆ ಪ್ರಾರ್ಥನೆ ಮಾಡಿದರು. ಶಿವನ ಅಣತಿಯಂತೆ ಗಂಗೆ ಕೆಳಗೆ ಇಳಿದಳು. ಹರಿದು ಬಂದಳು. ಆದರಿಂದ ತರ್ಪಣ ನೀಡಿ ಗೋವನ್ನು ಬದುಕಿಸಿದರು. ಈಗ ಗಂಗೆಯು ಗೋದಾವರಿಯಾದಳು. ಹೀಗೆ ಗಣಪತಿಯಿಂದ ಗೋದಾವರಿಯೆಂಬ ಪುಣ್ಯನದಿಯು ಭೂಮಿಯಲ್ಲಿ ಹರಿಯುವಂತಾಯಿತು. ಪಾರ್ವತಿಯು ಸಂತೋಷಗೊಂಡಳು. ಎಲ್ಲ

ಋಷಿಮುನಿಗಳಿಗೂ ತಪಸ್ವಿಗಳಿಗೂ ಸಂತೋಷವಾಯಿತು. ಎಲ್ಲ ಭಕ್ತರಿಗೂ ಸಂತೋಷವಾಯಿತು.

## ಗಣಪತಿಗೇಕೆ ಮೊದಲ ಪೂಜೆ?

ರುದ್ರದೇವರು ಗಣಪತಿಯನ್ನು ಬದುಕಿಸಿದ ಮೇಲೆ ಪಾರ್ವತಿ ದೇವಿಯ ಪ್ರಾರ್ಥನೆಯಂತೆ ಗಣಪತಿಗೆ ವರವನ್ನು ನೀಡಿದರು. 'ಇಂದಿನಿಂದ ಯಾರು ಯಾವುದೇ ಕೆಲಸವನ್ನು ಮಾಡಬೇಕಾದರೂ ಮೊದಲು ಗಣಪತಿಯನ್ನು ಪೂಜಿಸಬೇಕು. ಪ್ರಾರಂಭದಲ್ಲಿ ಗಣಪತಿಯ ಪೂಜೆಯನ್ನು ಮಾಡಿದರೆ ಮಾತ್ರ ವಿಘ್ನಗಳು ಪರಿಹಾರವಾಗುತ್ತವೆ. ಕಾರ್ಯವು ನಿರ್ವಿಘ್ನವಾಗಿ ಸಮಾಪ್ತಿಗೊಳ್ಳುತ್ತದೆ. ಇಲ್ಲದಿದ್ದರೆ ಆ ಕಾರ್ಯವು ಪೂರ್ಣವಾಗುವುದಿಲ್ಲ. ನಾಶವಾಗುತ್ತದೆ – ಎಂಬುದಾಗಿ ರುದ್ರದೇವರು ವರವನ್ನಿತ್ತರು. ಮತ್ತು ಶಿವಗಣಗಳಿಗೆ ಪತಿಯನ್ನಾಗಿ ಮಾಡಿದರು. ಅಂದಿನಿಂದ ಗಣಪತಿಗೆ ಮೊದಲ ಪೂಜೆ ಪ್ರಾರಂಭವಾಯಿತು.

ತ್ರಿಪುರಾಸುರರನ್ನು ಸಂಹಾರಮಾಡುವಾಗ ರುದ್ರದೇವರೂ ಕೂಡ ಮೊದಲು ಗಣಪತಿಪೂಜೆಯನ್ನು ಮಾಡಿದರು. ಎಲ್ಲರಿಗೂ ಮಾರ್ಗದರ್ಶಕರಾದರು. ಹೀಗೆ ರುದ್ರದೇವರಿಂದ ಪ್ರಾರಂಭವಾದ ಗಣಪತಿಗೆ ಮೊದಲ ಪೂಜೆ ಎಂಬ ಪದ್ಧತಿಯು ಅಂದಿನಿಂದ ಅನೂಚಾನವಾಗಿ ನಡೆದು ಬಂದಿತು.

ಶ್ರೀರಾಮದೇವರೂ ರುದ್ರದೇವರ ವರಕ್ಕೆ ಅನುಮೋದನೆಯನ್ನು ನೀಡುವುದಕ್ಕಾಗಿ ರಾವಣನನ್ನು ಸಂಹಾರ ಮಾಡುವ ಮೊದಲು ಗಣಪತಿಯನ್ನು ಪೂಜಿಸಿದರು.

ಅಮೃತಮಥನದ ಪ್ರಾರಂಭದಲ್ಲಿ ಗಣಪತಿಯನ್ನು ಪೂಜೆ ಮಾಡದೇ ಪ್ರಾರಂಭ ಮಾಡಿದ್ದರಿಂದ ಬೆಟ್ಟವು ನೀರಿನಲ್ಲಿ ಮುಳುಗಿ ಹೋಯಿತು. ಅನಂತರ ಪರಮಾತ್ಮನು ಕೂರ್ಮಾವತಾರವನ್ನು ಮಾಡಿ ಅದನ್ನು ಮೇಲಕ್ಕೆ ಎತ್ತಿದನು. ಅನಂತರ ಪುನಃ ಮಥನ- ವನ್ನು ಪ್ರಾರಂಭಿಸುವ ಮೊದಲು ಗಣಪತಿಗೆ ಪೂಜೆಯನ್ನು ದೇವೇಂದ್ರನು ಮಾಡಿದನು. 'ವಿಲೋಕ್ಯ ವಿಘ್ನೇಶ್ವರಗತಿಂ ತದೀಶ್ವರೋ ದುರಂತವೀರ್ಯೋ ವಿತಥಾಭಿಸಂಧಿಃ'. ಅನಂತರ ಅಮೃತವನ್ನು ದೇವತೆಗಳು ಪಡೆದರು.

ವೃತ್ರಾಸುರನ ಸಂಹಾರಕ್ಕೆ ತೆರಳುವಾಗ ದೇವೇಂದ್ರನು ಗಣಪತಿಯನ್ನು ಪೂಜೆ ಮಾಡಿದನು. ನಾವು ಪ್ರತಿನಿತ್ಯಮಾಡುವ ದೇವರ ಪೂಜೆಯ ಪ್ರಾರಂಭದಲ್ಲೂ ಕೂಡ 'ನಿಷುಸೀದ ಗಣಪತೇ' ಎಂಬ ಮಂತ್ರವನ್ನು ಹೇಳಿ ಗಣಪತಿಯನ್ನು ಪೂಜಿಸಿಯೇ ದೇವರಪೂಜೆಯನ್ನು ಪ್ರಾರಂಭ ಮಾಡಬೇಕು. 'ನಿಷುಸೀದ ಗಣಪತೇ' ಎಂಬ ಮಂತ್ರವು ಮುಖ್ಯವಾಗಿ ಪರಮಾತ್ಮನನ್ನು ಪ್ರತಿಪಾದನೆಮಾಡುತ್ತದೆ. ಅಮುಖ್ಯವಾಗಿ ಗಣಪತಿಯನ್ನು ಪ್ರತಿಪಾದನೆ ಮಾಡುತ್ತದೆಂದು ತಿಳಿಯಬೇಕು.

ಗಣೇಶಚತುರ್ಥಿಯಂದು ಮಾಡುವ ಗಣಪತಿಯ ಪೂಜೆಯ ಪ್ರಾರಂಭದಲ್ಲೂ ಕೂಡ ಗಣಪತಿಪೂಜೆಯನ್ನು ಮಾಡಬೇಕು. ಎಲ್ಲಾ ಸತ್ಕರ್ಮಗಳ ಪ್ರಾರಂಭದಲ್ಲಿ ಗಣಪತಿ ಪೂಜೆ ಮಾಡುವುದು ವಿಹಿತ. ಇದನ್ನು ಗಣಪತಿಪೂಜೆಯಲ್ಲೂ ಸಹ ಬಿಡಬಾರದು.

## ಗಣಪತಿಗೆ ತುಳಸಿಯನ್ನು ಸಮರ್ಪಣೆ ಮಾಡಬಹುದೇ?

**ಪ್ರಶ್ನೆ –** ತುಲಸಿ ಎಂಬ ದೇವತೆಯು ಗಣಪತಿಗಿಂತ ಅತ್ಯಂತ ಉತ್ತಮಳಾಗಿದ್ದಾಳೆ. ಒಂದು ವೇಳೆ ಗಣಪತಿಯು ತುಲಸಿಯನ್ನು ಮುಡಿಯದಿದ್ದರೆ ಸ್ವೋತ್ತಮದ್ರೋಹ ಮಾಡಿದಂತಾಗುತ್ತದಲ್ಲವೇ?

**ಉತ್ತರ –** ಶಾಸ್ತ್ರದಲ್ಲಿ ಗಣಪತಿಗೆ ತುಲಸಿಯನ್ನು ಸಮರ್ಪಣೆ ಮಾಡಬಾರದೆಂದು ನಿಖರವಾಗಿ ತಿಳಿಸಲಾಗಿದೆ. ಅನೇಕ ಪುರಾಣಗಳಲ್ಲಿ ಅದನ್ನು ಸಮರ್ಥನೆ ಮಾಡಲಾಗಿದೆ. ಈ ಕಾರಣದಿಂದ ಗಣಪತಿಗೆ ತುಲಸಿಯನ್ನು ಸಮರ್ಪಣೆ ಮಾಡಬಾರದು. ತುಲಸಿಯನ್ನು ಸಮರ್ಪಣೆ ಮಾಡದಿರುವುದೇ ಗಣಪತಿಗೆ ಹಾಗೂ ತುಲಸಿಗೆ ಸಂತೋಷವಾಗುತ್ತದೆ. ತುಲಸಿಯನ್ನು ಮುಡಿಯುವುದಿಲ್ಲ ಎಂದ ಮಾತ್ರಕ್ಕೆ ಗಣಪತಿಯು ತುಳಸಿಗೆ ಸ್ವೋತ್ತಮ ದ್ರೋಹ ಮಾಡುತ್ತಾನೆ ಎಂಬ ಚಿಂತನೆಯನ್ನು ಮಾಡಬಾರದು. ಚತುರ್ಥಿಯ ದಿವಸ ಚಂದ್ರನನ್ನು ನೋಡಬಾರದು ಎಂಬುದಾಗಿಯೂ ಶಾಸ್ತ್ರವಿದೆ. ಗಣಪತಿಗಿಂತಲೂ ಉತ್ತಮನಾದ ಚಂದ್ರನನ್ನು ನೋಡಿದರೆ ಪಾಪವು ಹೇಗೆ ಬರುತ್ತದೆ? ಆದ್ದರಿಂದ ಚಂದ್ರನನ್ನು ನಾನು ನೋಡುತ್ತೇನೆ ಎಂಬ ಕುವಾದದಂತೆ ಇದೂ ಕೂಡ ಆಗಿದೆ. ಆದ್ದರಿಂದ ನಮ್ಮ ಬುದ್ಧಿಯ ಮಟ್ಟಕ್ಕೆ ಶಾಸ್ತ್ರವನ್ನು ಆಲೋಚನೆ ಮಾಡುವುದು ತಪ್ಪು.

**ಪ್ರಶ್ನೆ**– ಹರಿನಿರ್ಮಾಲ್ಯವನ್ನು ಎಲ್ಲ ದೇವತೆಗಳೂ ಕೂಡ ಅತ್ಯಂತ ಭಕ್ತಿಯಿಂದ ಸ್ವೀಕಾರ ಮಾಡುತ್ತಾರೆ. ತುಲಸಿಯು ಕೂಡ ಹರಿನಿರ್ಮಾಲ್ಯವಾದಾಗ ಗಣಪತಿಯು ಕೂಡ ಅದನ್ನು ಸ್ವೀಕಾರ ಮಾಡುತ್ತಾನಲ್ಲವೆ?

**ಉತ್ತರ**– ಹರಿನಿರ್ಮಾಲ್ಯವಾದ್ದರಿಂದ ಸಮರ್ಪಣೆ ಮಾಡಬಹುದೆಂಬ ಈ ಪ್ರಶ್ನೆಯು ಕೂಡ ತಪ್ಪು. ಏಕೆಂದರೆ ಎಲ್ಲ ದೇವತೆಗಳು ಹರಿಗೆ ಸಮರ್ಪಣೆ ಮಾಡದೇ ನೇರವಾಗಿ ಯಾವುದನ್ನೂ ಸ್ವೀಕಾರ ಮಾಡುವುದಿಲ್ಲ. ಆದರೂ ತುಲಸಿಯನ್ನು ಸಮರ್ಪಣೆ ಮಾಡಬಾರದೆಂಬ ನಿಷೇಧವಿರುವುದರಿಂದ ಹರಿನಿರ್ಮಾಲ್ಯವಾದರೂ ಕೂಡ ಸಮರ್ಪಣೆ ಮಾಡಬಾರದು ಎಂದೇ ಅರ್ಥ.

**ಪ್ರಶ್ನೆ** – ಅನೇಕ ಶಿಷ್ಟರು ಗಣಪತಿಗೆ ತುಲಸಿಯನ್ನು ಸಮರ್ಪಣೆ ಮಾಡುತ್ತಿದ್ದಾರೆ. ಆದ್ದರಿಂದ ನಾವೂ ಕೂಡ ಗಣಪತಿಗೆ ತುಳಸಿಯನ್ನು ಸಮರ್ಪಣೆ ಮಾಡುತ್ತೇವೆ?

**ಉತ್ತರ** – ಈ ವಾದವೂ ಸರಿಯಲ್ಲ. ಬಲವಾದ ಶಾಸ್ತ್ರಪ್ರಮಾಣ-ವಿರೋಧವಿದ್ದಾಗ ಶಿಷ್ಟರು ಮಾಡುವುದನ್ನು ನಾವು ಅನುಸರಿಸಬೇಕಾಗಿಲ್ಲ. ಆದರೆ ಕೆಲವು ಶಿಷ್ಟರು ತುಳಸಿಯನ್ನು ಸಮರ್ಪಿಸುವುದಿಲ್ಲ. ಶಾಸ್ತ್ರಾವಿರುದ್ಧವಾದ ಶಿಷ್ಟಾಚಾರವನ್ನಷ್ಟೇ ನಾವು ಅನುಸರಿಸಬೇಕು.

**ಪ್ರಶ್ನೆ** – ಗಣೇಶಚತುರ್ಥಿಯ ದಿವಸ ಮಾತ್ರ ತುಲಸಿಯನ್ನು ಸಮರ್ಪಣೆ ಮಾಡ- ಬಹುದೆಂದು ಕೆಲವರು ಹೇಳುತ್ತಾರಲ್ಲವೇ?

**ಉತ್ತರ** – ಇದಕ್ಕೆ ಯಾವುದೇ ಆಧಾರವಿಲ್ಲ. ಉಳಿದ ದಿವಸ ಗಣಪತಿಗೆ ತುಳಸಿ ಸಮರ್ಪಣೆ ಮಾಡಬಾರದು. ಗಣೇಶಚತುರ್ಥಿಯ ದಿವಸ ಮಾಡಬಹುದೆಂದು ಯಾವ ಶಾಸ್ತ್ರಗ್ರಂಥದಲ್ಲೂ ಪುರಾಣದಲ್ಲೂ ಹೇಳಿರುವುದಿಲ್ಲ. ಆದ್ದರಿಂದ ಗಣೇಶ ಚತುರ್ಥಿಯ ದಿವಸವೂ ಕೂಡ ಗಣಪತಿಗೆ ತುಲಸಿಯನ್ನು ಸಮರ್ಪಣೆ ಮಾಡಬಾರದು.

**ಪ್ರಶ್ನೆ** – ಪುರಾಣದಲ್ಲಿ ಅನೇಕವಿಚಾರಗಳು ಗೊಂದಲಮಯವಾಗಿರುತ್ತವೆ. ನಮಗೆ ಅರ್ಥವಾಗದ ಭಾಷೆಯಲ್ಲಿರುತ್ತವೆ. ಆದ್ದರಿಂದ ತುಳಸಿಯನ್ನು ಸಮರ್ಪಣೆ ಮಾಡಬಾರದು ಎಂಬುದನ್ನು ನಾವು ಅನುಸರಿಸಬೇಕಾಗಿಲ್ಲ?

**ಉತ್ತರ** – ಈ ವಾದವೂ ಕೂಡ ಅರ್ಥವಿಲ್ಲದ್ದು. ಏಕೆಂದರೆ ಗುರುಸಾರ್ವಭೌಮರಾದ ಶ್ರೀವಾದಿರಾಜತೀರ್ಥಶ್ರೀಪಾದಂಗಳವರು ರುಕ್ಮಿಣೀಶ-ವಿಜಯದಲ್ಲಿ ತುಲಸಿಯು ಗಣಪತಿಗೆ ವಿಹಿತವಲ್ಲ ಎಂದು ತಿಳಿಸಿದ್ದಾರೆ. ಆದ್ದರಿಂದ ಅವರು ತುಳಸಿಯನ್ನು ಸಮರ್ಪಣೆ ಮಾಡುತ್ತಿರಲಿಲ್ಲ. ಅವರ ಸಂಪ್ರದಾಯದಂತೆ ನಾವೂ ಸಹ ಗಣಪತಿಗೆ ತುಳಸಿಯನ್ನು ಸಮರ್ಪಣೆ ಮಾಡಬಾರದು. ಗಣಪತಿಗೆ ಮಾತ್ರ ತುಳಸಿಯನ್ನು ಸಮರ್ಪಣೆ ಮಾಡಬಾರದು ಎಂದಷ್ಟೇ ಅಲ್ಲ; ಕೇತಕಿಯು ಹರಿನಿರ್ಮಾಲ್ಯವಾದರೂ ರುದ್ರದೇವರಿಗೆ ಅರ್ಪಿಸುವಂತಿಲ್ಲ; ಸಂಪಿಗೆಯನ್ನು ಬ್ರಹ್ಮದೇವರಿಗೆ ಅರ್ಪಿಸುವಂತಿಲ್ಲ. ಒಬ್ಬೊಬ್ಬ ದೇವತೆಗಳಿಗೆ ಒಂದೊಂದು ಹೂವುಗಳು ನಿಷಿದ್ಧವಾಗಿದೆ ಎಂಬುದು ಶ್ರೀವಾದಿರಾಜತೀರ್ಥರು ತಿಳಿಸಿದ ಈ ಪ್ರಮಾಣದಿಂದ ಸ್ಪಷ್ಟವಾಗುತ್ತದೆ.

ಮುಕುಂದನ ಕೊರಳಲ್ಲಿ ಯಾವ ಹೂಮಾಲೆಯನ್ನು ಹಾಕಬೇಕೆಂದು ಲಕ್ಷ್ಮೀದೇವಿ ಯೋಚನೆ ಮಾಡಿದಳು. ಆ ಹೂಮಾಲೆಯು ಇತರ ಯಾವ ದೇವತೆಗಳಿಗೂ ಪ್ರಿಯವಾಗಿರುವುದಿಲ್ಲ ಎಂಬುದನ್ನು ಈ ಶ್ಲೋಕವು ತಿಳಿಸುತ್ತದೆ.

> ಯಾ ವೈ ಚಂಪಕಸಂಪದಾಽಬ್ಜವಸತೇರ್ದೂರ್ವಾಶ್ರಿಯಾ ಸ್ವಾತ್ಮನಃ
> ಕೇತಕ್ಯಾ ವಿಭವೇನ ಕೃತ್ತಿವಸನಸ್ಯಾಂಭೋಜಕಾಂತ್ಯಾ ವಿಧೋಃ ।
> ಸನ್ನೀಲೋತ್ಪಲಶೋಭಯಾ ದಿನಮಣೇಃ ಶ್ರೀಮತ್ತುಲಸ್ಯಾಽಮತಾ
> ಹೇರಂಬಸ್ಯ ಹರೇಃ ಪರಂ ಸಮುಚಿತಾ ಸಾ ಮಾಲಿಕಾ ಶೋಭತೇ ॥
>
> ರುಕ್ಮಿಣೀಶವಿಜಯ ಸರ್ಗ ೧೬ ಶ್ಲೋಕ. ೪೨

ಮಾಲೆಯಲ್ಲಿ ಸಂಪಿಗೆ ಹೂವು ಇರುವುದರಿಂದ ಬ್ರಹ್ಮದೇವರಿಗೆ ಸಮರ್ಪಣೆ ಮಾಡಲು ಯೋಗ್ಯವಲ್ಲ. ಗರಿಕೆ ಇರುವುದರಿಂದ ದುರ್ಗೆಗೆ ಸಮರ್ಪಣೆ ಮಾಡಲು ಯೋಗ್ಯವಲ್ಲ. ಕೇತಕಿ ಪುಷ್ಪ ಇರುವುದರಿಂದ ರುದ್ರದೇವರಿಗೆ ಸಮರ್ಪಣೆ ಮಾಡಲು ಯೋಗ್ಯವಲ್ಲ. ಕಮಲವಿರುವುದರಿಂದ ಚಂದ್ರನಿಗೆ ಸಮರ್ಪಣೆ ಮಾಡಲು ಯೋಗ್ಯವಲ್ಲ. ನೈದಿಲೆ ಇರುವುದರಿಂದ ಸೂರ್ಯನಿಗೆ ಇಷ್ಟವಾಗುವುದಿಲ್ಲ. ತುಳಸಿ ಇರುವುದರಿಂದ ಗಣಪತಿಗೆ ಸಮರ್ಪಣೆ

ಮಾಡಲು ಯೋಗ್ಯವಲ್ಲ. ಈ ಎಲ್ಲವನ್ನೂ ಪರಮಾತ್ಮನಿಗೊಬ್ಬನಿಗೆ ಸಮರ್ಪಣೆ ಮಾಡಬೇಕು. ಆದ್ದರಿಂದ ಈ ಮಾಲೆಯು ಶ್ರೀಹರಿಗೆ ಮಾತ್ರ ಪ್ರಿಯವಾಗುತ್ತದೆ. ಅವನಿಗೆ ಯೋಗ್ಯವಾಗುತ್ತದೆ. ವಿಹಿತವಾಗುತ್ತದೆ. ಹೀಗೆ ಈ ಮಾಲೆಯು ಮುಕುಂದನ ಕಂಠದಲ್ಲಿ ಶೋಭಿತವಾಯಿತು.

ಗಣಪತಿಗೆ ತುಲಸಿಯುನ್ನು ಸಮರ್ಪಣೆ ಮಾಡಬಾರದೆಂದು 'ನ ತುಲಸ್ಯಾ ಗಣಾಧಿಪಂ' ಎಂಬ ಪ್ರಸಿದ್ಧಪ್ರಮಾಣಶ್ಲೋಕವು ಹೇಳುತ್ತಿದೆ. ಶಾಸ್ತ್ರಕ್ಕೆ ಅನುಗುಣವಾಗಿ ಪೂಜೆಯನ್ನು ಮಾಡಿದರೆ ಮಾತ್ರ ಆಯಾ ದೇವತೆಗಳು ಸ್ವೀಕಾರ ಮಾಡುತ್ತಾರೆ. ಅಶಾಸ್ತ್ರೀಯವಾದ ಪೂಜೆಯನ್ನು ಯಾವ ದೇವತೆಗಳೂ ಕೂಡ ಸ್ವೀಕಾರ ಮಾಡುವುದಿಲ್ಲ. ಆದ್ದರಿಂದ ಗಣಪತಿಗೆ ತುಲಸಿಯನ್ನು ಸಮರ್ಪಣೆ ಮಾಡಬಾರದು.

* * * * *

# ಭಾಗವತದಲ್ಲಿ ಸ್ಯಮಂತಕೋಪಾಖ್ಯಾನ

ಶ್ರೀಶುಕಃ–

ಸತ್ರಾಜಿತ್ತನಯಾಂ ತನ್ವೀಂ ಕೃಷ್ಣಾಯ ಕೃತಕಿಲ್ಬಿಷಃ ।
ಸ್ಯಮಂತಕೇನ ಮಣಿನಾ ಸ್ವಯಮುದ್ಯಮ್ಯ ದತ್ತವಾನ್ ॥೧॥

ರಾಜಾ–

ಸತ್ರಾಜಿತಃ ಕಿಮಕರೋದ್ ಬ್ರಹ್ಮನ್ ಕೃಷ್ಣಸ್ಯ ಕಿಲ್ಬಿಷಮ್ ।
ಸ್ಯಮಂತಕಃ ಕುತಸ್ತಸ್ಯ ಕಸ್ಮಾದ್ ದತ್ತಾ ಸುತಾ ಹರೇಃ ॥೨॥

ಶ್ರೀಶುಕಃ –

ಆಸೀತ್ ಸತ್ರಾಜಿತಃ ಸೂರ್ಯಭಕ್ತಸ್ಯ ಪರಮಃ ಸಖಾ ।
ಪ್ರೀತಸ್ತಸ್ಮೈ ಮಣಿಂ ಪ್ರಾದಾತ್ ಸೂರ್ಯಸ್ತುಷ್ಟಃ ಸ್ಯಮಂತಕಮ್ ॥೩॥

ಸ ತಂ ಬಿಭ್ರನ್ ಮಣಿಂ ಕಂಠೇ ಭ್ರಾಜಮಾನೋ ಯಥಾ ರವಿಃ ।
ಪ್ರವಿಷ್ಟೋ ದ್ವಾರಕಾಂ ರಾಜಂಸ್ತೇಜಸಾ ನೋಪಲಕ್ಷಿತಃ ॥೪॥

ತಂ ವಿಲೋಕ್ಯ ಜನಾ ದೂರಾತ್ ತೇಜಸಾ ಮುಷ್ಟದೃಷ್ಟಯಃ ।
ದೀವ್ಯತೇಽಕ್ಷೈರ್ಭಗವತೇ ಶಶಂಸುಃ ಸೂರ್ಯಶಂಕಿತಾಃ ॥೫॥

ನಾರಾಯಣ ನಮಸ್ತೇಽಸ್ತು ಶಂಖಚಕ್ರಗದಾಧರ ।
ದಾಮೋದರಾರವಿಂದಾಕ್ಷ ಗೋವಿಂದ ಯದುನಂದನ ॥೬॥

ಏಷ ಆಯಾತಿ ಸವಿತಾ ತ್ವಾಂ ದಿದೃಕ್ಷುರ್ಜಗತ್ಪತೇ ।
ಮುಷ್ಣನ್ ಗಭಸ್ತಿಚಕ್ರೇಣ ನೃಣಾಂ ಚಕ್ಷೂಂಷಿ ತಿಗ್ಮರುಕ್ ॥೭॥

ನನ್ವನ್ವಿಚ್ಛಂತಿ ತೇ ಮಾರ್ಗಂ ತ್ರಿಲೋಕ್ಯಾಂ ವಿಬುಧರ್ಷಭಾಃ ।
ಜ್ಞಾತ್ವಾಽದ್ಯ ಗೂಢಂ ಯದುಷು ದ್ರಷ್ಟುಂ ತ್ವಾಂ ಯಾತ್ಯಜಃ ಪ್ರಭೋ ॥೮॥

ನಿಶಮ್ಯ ಬಾಲವಚನಂ ಪ್ರಹಸ್ಯಾಂಬುಜಲೋಚನಃ ।
ಪ್ರಾಹ ನಾಸೌ ರವಿರ್ದೇವಃ ಸತ್ರಾಜಿನ್ಮಣಿನಾ ಜ್ವಲನ್ ॥೯॥

ಸತ್ರಾಜಿತ್ ಸ್ವಗೃಹಂ ಶ್ರೀಮತ್ ಕೃತಕೌತುಕಮಂಗಲಮ್ ।
ಪ್ರವಿಶ್ಯ ದೇವಸದನೇ ಮಣಿಂ ವಿಪ್ರೈರ್ನ್ಯವೇಶಯತ್ ॥೧೦॥

ದಿನೇ ದಿನೇ ಸ್ವರ್ಣಭಾರಾನಷ್ಟೌ ಸ ಸೃಜತಿ ಪ್ರಭೋ ।
ದುರ್ಭಿಕ್ಷಮಾರ್ಯರಿಷ್ಟಾನಿ ಸರ್ವೇಽಪಿ ವ್ಯಾಧಯೋಽಶುಭಾಃ ॥೧೧॥

ನ ಸಂತಿ ಮಾಯಿನಸ್ತತ್ರ ಯದ್ ರಾಷ್ಟ್ರೇಽಭ್ಯರ್ಚಿತೋ ಮಣಿಃ ।
ಸ ಯಾಚಿತೋ ಮಣಿಃ ಕ್ವಾಪಿ ಯದುರಾಜಾಯ ಶೌರಿಣಾ ॥೧೨॥

ನೈವಾರ್ಥಕಾಮುಕಃ ಪ್ರಾದಾದ್ ಯಾಂಚಾಭಂಗಮತರ್ಕಯತ್ ।
ತಮೇಕದಾ ಮಣಿಂ ಕಂಠೇ ಪ್ರತಿಮುಚ್ಯ ಮಹಾಪ್ರಭಮ್ ॥೧೩॥

ಪ್ರಸೇನೋ ಹಯಮಾರುಹ್ಯ ಮೃಗಯಾಂ ವ್ಯಚರದ್ ವನೇ ।
ಪ್ರಸೇನಂ ಸಹಯಂ ಹತ್ವಾ ಮಣಿಮಾಚ್ಛಿದ್ಯ ಕೇಸರೀ ॥೧೪॥

ಬಿಲಂ ವಿಶನ್ ಜಾಂಬವತಾ ನಿಹತೋ ಮಣಿಮಿಚ್ಛತಾ ।
ಸೋಽಪಿ ಚಕ್ರೇ ಕುಮಾರಸ್ಯ ಮಣಿಂ ಕ್ರೀಡನಕಂ ಬಿಲೇ ॥೧೫॥

ಅಪಶ್ಯನ್ ಭ್ರಾತರಂ ಭ್ರಾತಾ ಸತ್ರಾಜಿತ್ ಪರ್ಯತಪ್ಯತ ।
ಪ್ರಾಯಃ ಕೃಷ್ಣೇನ ನಿಹತೋ ಮಣಿಗ್ರೀವೋ ವನಂ ಗತಃ ॥೧೬॥

ಭ್ರಾತಾ ಮಮೇತಿ ತಚ್ಛ್ರುತ್ವಾ ಕರ್ಣೇ ಕರ್ಣೇಽಜಪನ್ ಜನಾಃ ।
ಭಗವಾಂಸ್ತದುಪಶ್ರುತ್ಯ ದುರ್ಯಶೋ ಲಿಪ್ತಮಾತ್ಮನಿ ॥೧೭॥

ಮಾರ್ಷ್ಟುಂ ಪ್ರಸೇನಪದವೀಮನ್ವಪದ್ಯತ ನಾಗರೈಃ ।
ಹತಂ ಪ್ರಸೇನಮಶ್ವಂ ಚ ವೀಕ್ಷ್ಯ ಕೇಸರಿಣಾ ವನೇ ॥೧೮॥

ತಂ ಚಾದ್ರಿಪೃಷ್ಠೇ ನಿಹತಮೃಕ್ಷೇಣ ದದೃಶುರ್ಜನಾಃ ।
ಋಕ್ಷರಾಜಬಿಲಂ ಭೀಮಮಂಧೇನ ತಮಸಾಽಽವೃತಮ್ ।
ಏಕೋ ವಿವೇಶ ಭಗವಾನವಸ್ಥಾಪ್ಯ ಬಹಿಃ ಪ್ರಜಾಃ ॥೧೯॥

ತತ್ರ ದೃಷ್ಟ್ವಾ ಮಣಿಶ್ರೇಷ್ಠಂ ಬಾಲಕ್ರೀಡನಕಂ ಕೃತಮ್ ।
ಹರ್ತುಂ ಕೃತಮತಿಃ ತಸ್ಮಿನ್ನವತಸ್ಥೇಽರ್ಭಕಾಂತಿಕೇ ॥೨೦॥

ತಮಪೂರ್ವಂ ನರಂ ದೃಷ್ಟ್ವಾ ಧಾತ್ರೀ ಚುಕ್ರೋಶ ಭೀತವತ್ ।
ತಚ್ಛ್ರುತ್ವಾಽಭ್ಯದ್ರವತ್ ಕ್ರುದ್ಧೋ ಜಾಂಬವಾನ್ ಬಲಿನಾಂ ವರಃ ॥೨೧॥

ಸ ವೈ ಭಗವತಾ ತೇನ ಯುಯುಧೇ ಸ್ವಾಮಿನಾಽಽತ್ಮನಃ ।
ಪುರುಷಂ ಪ್ರಾಕೃತಂ ಮತ್ವಾ ಕುಪಿತೋ ನಾನುಭಾವವಿತ್ ॥೨೨॥

ದ್ವಂದ್ವಯುದ್ಧಂ ಸುತುಮುಲಮುಭಯೋರ್ವಿಜಿಗೀಷತೋಃ ।
ಆಯುಧಾಶ್ಮದ್ರುಮೈರ್ದೋರ್ಭಿಃ ಕ್ರವ್ಯಾರ್ಥೇ ಶ್ಯೇನಯೋರಿವ ॥೨೩॥

ಆಸೀತ್ ತದಷ್ಟವಿಂಶಾಹಮಿತರೇತರಮುಷ್ಟಿಭಿಃ ।
ವಜ್ರನಿಷ್ಪೇಷಪರುಷೈರವಿಶ್ರಮಮಹರ್ನಿಶಮ್ ॥೨೪॥

ಕೃಷ್ಣಮುಷ್ಟಿವಿನಿಷ್ಪಾತನಿಷ್ಪಿಷ್ಟಾಂಗೋರುಬಂಧನಃ ।
ಕ್ಷೀಣಸತ್ತ್ವಃ ಸ್ವಿನ್ನಗಾತ್ರಸ್ತಮಾಹಾತೀವವಿಸ್ಮಿತಃ ॥೨೫॥

ಜಾನೇ ತ್ವಾಂ ಸರ್ವಭೂತಾನಾಂ ಪ್ರಾಣಓಜಃಸಹೋಬಲಮ್ ।
ವಿಷ್ಣುಂ ಪುರಾಣಂ ಪುರುಷಂ ಪ್ರಭವಿಷ್ಣುಮಧೀಶ್ವರಮ್ ॥೨೬॥

ತ್ವಂ ಹಿ ವಿಶ್ವಸೃಜಾಂ ಸ್ರಷ್ಟಾ ಸೃಷ್ಟಾನಾಮಪಿ ಯಚ್ಚ ಸತ್ ।
ಕಾಲಃ ಕಲಯತಾಮೀಶ ಪರ ಆತ್ಮಾ ತಥಾಽಽತ್ಮನಾಮ್ ॥೨೭॥

ಯಸ್ಯೇಷದುತ್ಕಲಿತರೋಷಕಟಾಕ್ಷಮೋಕ್ಷೈ-
ರ್ವರ್ತ್ಮಾದಿಶತ್ ಕ್ಷುಭಿತನಕ್ರತಿಮಿಂಗಿಲೋಽಬ್ಧಿಃ ।
ಸೇತುಃ ಕೃತಃ ಸ್ವಯಶ ಉಜ್ಜ್ವಲಿತಾ ಚ ಲಂಕಾ
ರಕ್ಷಃ ಶಿರಾಂಸಿ ಭುವಿ ಪೇತುರಿಷುಕ್ಷತಾನಿ ॥೨೮॥

ಇತಿ ವಿಜ್ಞಾತವಿಜ್ಞಾನಮೃಕ್ಷರಾಜಾನಮಚ್ಯುತಃ ।
ವ್ಯಾಜಹಾರ ಮಹಾರಾಜ ಭಗವಾನ್ ದೇವಕೀ ಸುತಃ ॥೨೯॥

ಅಭಿಮೃಶ್ಯಾರವಿಂದಾಕ್ಷಃ ಪಾಣಿನಾ ಶಂಕರೇಣ ತಮ್ ।
ಕೃಪಯಾ ಪರಯಾ ಭಕ್ತಂ ಮೇಘಗಂಭೀರಯಾ ಗಿರಾ ॥೩೦॥

ಮಣಿಹೇತೋರಿಹ ಪ್ರಾಪ್ತಾ ವಯಮೃಕ್ಷಪತೇ ಬಿಲಮ್ ।
ಮಿಥ್ಯಾಭಿಶಾಪಂ ಪ್ರಮೃಜನ್ನಾತ್ಮನೋ ಮಣಿನಾಽಮುನಾ ॥೩೧॥

ಇತ್ಯುಕ್ತಃ ಸ್ವಾಂ ದುಹಿತರಂ ಕನ್ಯಾಂ ಜಾಂಬವತೀಂ ಮುದಾ ।
ಅರ್ಹಣಾರ್ಥಂ ಸಹ ಮಣಿಂ ಕೃಷ್ಣಾಯೋಪಜಹಾರ ಸಃ ॥೩೨॥

ಅದೃಷ್ಟ್ವಾ ನಿರ್ಗಮಂ ಶೌರೇಃ ಪ್ರವಿಷ್ಟಸ್ಯ ಬಿಲಂ ಜನಾಃ ।
ಪ್ರತೀಕ್ಷ್ಯ ದ್ವಾದಶಾಹಾನಿ ದುಃಖಿತಾಸ್ತೇ ಪುರಂ ಯಯುಃ ॥೩೩॥

ನಿಶಮ್ಯ ದೇವಕೀ ದೇವೀ ರುಕ್ಮಿಣ್ಯಾನಕದುಂದುಭಿಃ ।
ಸುಹೃದೋ ಜ್ಞಾತಯೋಽಶೋಚನ್ ಬಿಲಾತ್ ಕೃಷ್ಣಮನಿರ್ಗತಮ್ ॥೩೪॥

ಸತ್ರಾಜಿತಂ ಶಪಂತಸ್ತೇ ದುಃಖಿತಾ ದ್ವಾರಕೌಕಸಃ ।
ಉಪತಸ್ಥುರ್ಮಹಾಮಾಯಾಂ ದುರ್ಗಾಂ ಕೃಷ್ಣೋಪಲಬ್ಧಯೇ ॥೩೫॥

ತೇಷಾಂ ತು ದೇವ್ಯುಪಸ್ಥಾನಾತ್ ಪ್ರತ್ಯಾದಿಷ್ಟಾಶಿಷಾಂ ಭವನ್ ।
ಪ್ರಾದುರ್ಬಭೂವ ಸಿದ್ಧಾರ್ಥಃ ಸದಾರೋ ಹರ್ಷಯನ್ ಹರಿಃ ॥೩೬॥

ಉಪಲಭ್ಯ ಹೃಷೀಕೇಶಂ ಮೃತಂ ಪುನರಿಹಾಗತಮ್ ।
ಸಹಪತ್ನ್ಯಾ ಮಣಿಗ್ರೀವಂ ಸರ್ವೇ ಜಾತಮಹೋತ್ಸವಾಃ ॥೩೭॥

ಸತ್ರಾಜಿತಂ ಸಮಾಹೂಯ ಸಭಾಯಾಂ ರಾಜಸನ್ನಿಧೌ ।
ಪ್ರಾಪ್ತಿಂ ಚಾಖ್ಯಾಯ ಭಗವಾನ್ ಮಣಿಂ ತಸ್ಮೈ ನ್ಯವೇದಯೇತ್ ॥೩೮॥

ಸ ಚಾತಿವ್ರೀಡಿತೋ ರತ್ನಂ ಗೃಹೀತ್ವಾಽವಾಙ್ಮುಖಸ್ತತಃ ।
ಅನುತಪ್ಯನ್ ಸ್ವಭವನಮಗಮತ್ ಸ್ವೇನ ಪಾಪ್ಮನಾ ॥೩೯॥

ಸೋಽನುಧ್ಯಾಯಂಸ್ತದೇವಾಘಂ ಬಲವದ್ ವಿಗ್ರಹಾಕುಲಃ ।
ಕಥಂ ಮೃಜಾಮ್ಯಾತ್ಮರಜಃ ಪ್ರಸೀದೇದ್ ವಾಽಚ್ಯುತಃ ಕಥಮ್ ॥೪೦॥

ಕಿಂ ಕೃತ್ವಾ ಸಾಧು ಮಹ್ಯಂ ಸ್ಯಾನ್ನ ಶಪೇದ್ ವಾ ಜನೋ ಯಥಾ ।
ಅದೀರ್ಘದರ್ಶನಂ ಧಿಕ್ ಮಾಂ ಮೂಢಂ ದ್ರವಿಣಲೋಲುಪಮ್॥೪೧॥

ದಾಸ್ಯೇ ದುಹಿತರಂ ತಸ್ಮೈ ಸ್ತ್ರೀರತ್ನಂ ರತ್ನಮೇವ ಚ ।
ಉಪಾಯೋಽಯಂ ಸಮೀಚೀನಸ್ತಸ್ಯ ಶಾಂತಿರ್ನ ಚಾನ್ಯಥಾ ॥೪೨॥

ಏವಂ ವ್ಯವಸಿತೋ ಬುದ್ಧ್ಯಾ ಸತ್ರಾಜಿತ್ ಸ್ವಸುತಾಂ ಶುಭಾಮ್ ।
ಮಣಿಂ ಚ ಸ್ವಯಮುದ್ಯಮ್ಯ ಕೃಷ್ಣಾಯೋಪಜಹಾರ ತಾಮ್ ॥೪೩॥

ತಾಂ ಸತ್ಯಭಾಮಾಂ ಭಗವಾನುಪಯೇಮೇ ಯಥಾವಿಧಿ ।
ಬಹುಭಿರ್ಯಾಚಿತಾಂ ಶೀಲರೂಪೌದಾರ್ಯಗುಣಾನ್ವಿತಾಮ್ ॥೪೪॥

ಭಗವಾನಾಹ ನ ಮಣಿಂ ಪ್ರತೀಚ್ಛಾಮೋ ವಯಂ ನೃಪ ।
ತವಾಸ್ತು ದೇವಭಕ್ತಸ್ಯ ವಯಂ ಹಿ ಫಲಭಾಗಿನಃ ॥೪೫॥

ಭಾಗವತಮಹಾಪುರಾಣದ ಸ್ಯಮಂತಕೋಪಾಖ್ಯಾನದಲ್ಲಿ ಮೊದಲನೆಯ ಅಧ್ಯಾಯವು ಮುಗಿಯಿತು

# ಎರಡನೇ ಅಧ್ಯಾಯ

ವಿಜ್ಞಾತಾರ್ಥೋಽಪಿ ಗೋವಿಂದೋ ದಗ್ಧಾನಾಕರ್ಣ್ಯ ಪಾಂಡವಾನ್ ।
ಕುಂತೀಂ ಚ ಕುಲ್ಯಕರಣೇ ಸಹರಾಮೋ ಯಯೌ ಕುರೂನ್ ||೧||

ಭೀಷ್ಮಂ ನೃಪಂ ಸವಿದುರಂ ಗಾಂಧಾರೀಂ ದ್ರೋಣಮೇವ ಚ ।
ಸಮದುಃಖೌ ಸಮಾಗಮ್ಯ ಹಾ ಕಷ್ಟಮಿತಿ ಹೋಚತುಃ ||೨||

ಲಬ್ಧ್ವೈತದಂತರಂ ರಾಜನ್ ಶತಧನ್ವಾನಮೂಚತುಃ ।
ಅಕ್ರೂರಕೃತವರ್ಮಾಣೌ ಮಣಿಃ ಕಸ್ಮಾನ್ನ ಗೃಹ್ಯತೇ ||೩||

ಯೋಽಸ್ಮಭ್ಯಂ ಸಂಪ್ರತಿಶ್ರುತ್ಯ ಕನ್ಯಾರತ್ನಂ ವಿಗರ್ಹ್ಯ ನಃ ।
ಕೃಷ್ಣಾಯಾದಾತ್ ಸ ಸತ್ರಾಜಿತ್ ತಸ್ಮಾದ್ ಭ್ರಾತರಮನ್ವಿಯಾತ್ ||೪||

ಏವಂ ಭಿನ್ನಮತಿಸ್ತಾಭ್ಯಾಂ ಸತ್ರಾಜಿತಮಸತ್ತಮಃ ।
ಶಯಾನಮವಧೀಲ್ಲೋಭಾತ್ ಸ ಪಾಪಃ ಕ್ಷೀಣಜೀವಿತಃ ||೫||

ಸ್ತ್ರೀಣಾಂ ವಿಕ್ರೋಶಮಾನಾನಾಂ ಕ್ರಂದಂತೀನಾಮನಾಥವತ್ ।
ಹತ್ವಾ ಪಶೂನ್ ಸೌನಿಕವನ್ಮಣಿಮಾದಾಯ ಜಗ್ಮಿವಾನ್ ||೬||

ಸತ್ಯಭಾಮಾ ಚ ಪಿತರಂ ಹತಂ ವೀಕ್ಷ್ಯ ಶುಚಾರ್ಪಿತಾ ।
ವ್ಯಲಪತ್ ತಾತ ತಾತೇತಿ ಹಾ ಹತಾಽಸ್ಮೀತಿ ಮುಹ್ಯತೀ ||೭||

ತೈಲದ್ರೋಣ್ಯಾಂ ಮೃತಂ ಪ್ರಾಸ್ಯ ಜಗಾಮ ಗಜಸಾಹ್ವಯಮ್ ।
ಕೃಷ್ಣಾಯ ವಿದಿತಾರ್ಥಾಯ ತಪ್ತಾಽಽಚಖ್ಯೌ ಪಿತುರ್ವಧಮ್ ||೮||

ತದಾಕರ್ಣ್ಯೇಶ್ವರೌ ರಾಜನ್ನನುಸೃತ್ಯ ನೃಲೋಕತಾಮ್ ।
ಅಹೋ ನಃ ಪರಮಂ ಕಷ್ಟಮಿತ್ಯಸ್ರಾಕ್ಷೌ ವಿಲೇಪತುಃ ||೯||

ಆಗಮ್ಯ ಭಗವಾಂಸ್ತಸ್ಮಾದ್ ಭಾರ್ಯಾಯಾ ಸಾಗ್ರಜಃ ಪುರಮ್ ।
ಶತಧನ್ವಾನಮಾರೇಭೇ ಹಂತುಂ ಹರ್ತುಂ ಚ ತಂ ಮಣಿಮ್ ||೧೦||

ತತಃ ಪಾಂಚಾಲನಗರಾದ್ ಯಜ್ಞಸೇನ್ಯಾಃ ಸ್ವಯಂವರಮ್ ।
ಘುಷ್ಯತಾ ಯಜ್ಞಸೇನೇನ ಪ್ರೇಷಿತೋ ದೂತ ಆಗತಃ ||೧೧||

ಆಹೂತಸ್ತೇನ ಗೋವಿಂದೋ ಗತ್ವಾ ಪಾಂಚಾಲಕೇ ಪುರೇ ।
ದದರ್ಶ ಸಾಗ್ರಜಸ್ತತ್ರ ಕಿಶೋರಾನ್ ಪಾಂಡುನಂದನಾನ್ ॥೧೨॥

ಅದೃಷ್ಟಪೂರ್ವಾನ್ ಸುವ್ಯಕ್ತಂ ಬ್ರಹ್ಮರೂಪಧರಾನ್ ನೃಪಾನ್ ।
ತ್ರೈವಿದ್ಧಲಕ್ಷ್ಮೈಃ ಪೌರುಷ್ಯಪ್ರತಿಲಬ್ಧಮನೋರಥೈಃ ॥೧೩॥

ಕುಂಭಕಾರಸ್ಯ ಶಾಲಾಯಾಂ ಸಮಾಗಮ್ಯಾಭಿವಂದ್ಯ ಚ ।
ಪಿತೃಷ್ವಸಾಮನುಜ್ಞಾಪ್ಯ ರಾಜಾನಂ ಚ ಯುಧಿಷ್ಠಿರಮ್ ॥೧೪॥

ನಿಹಂತುಂ ಶತಧನ್ವಾನಂ ತೂರ್ಣಂ ದ್ವಾರಾವತೀಮಿಯಾತ್ ।
ಸೋಽಪಿ ಕೃಷ್ಣೋದ್ಯಮಂ ಜ್ಞಾತ್ವಾ ಭೀತಃ ಪ್ರಾಣಪರೀಪ್ಸಯಾ ॥೧೫॥

ಸಾಹಾಯ್ಯೇ ಕೃತವರ್ಮಾಣಮಯಾಚತ ಸ ಚಾಬ್ರವೀತ್ ।
ನಾಹಮೀಶ್ವರಯೋಃ ಕುರ್ಯಾಂ ಹೇಲನಂ ರಾಮಕೃಷ್ಣಯೋಃ ॥೧೬॥

ಕೋ ನು ಕ್ಷೇಮಾಯ ಕಲ್ಪೇತ ತಯೋರ್ವೃಜಿನಮಾಚರನ್ ।
ಕಂಸಃ ಸಹಾನುಗೋ ವೀರೋ ಯದ್ ದ್ವೇಷಾತ್ ತ್ಯಾಜಿತಃ ಶ್ರಿಯಾ ॥೧೭॥

ಜರಾಸಂಧಃ ಸಪ್ತದಶಸಂಯುಗಾದ್ ವಿರಥೋ ಗತಃ ।
ಪ್ರತ್ಯಾಖ್ಯಾತಃ ಸ ಚಾಕ್ರೂರಂ ಪಾರ್ಷ್ಣಿಗ್ರಾಹಮಯಾಚತ ॥೧೮॥

ಸೋಽಪ್ಯಾಹ ಕೋ ವಿರುದ್ಧ್ಯೇತ ವಿದ್ವಾನೀಶ್ವರಯೋರ್ಬಲಮ್ ।
ಯಂ ಕೈಲಾಸಾಶ್ರಯಃ ಶಂಭುರ್ನನಾಮ ಶಿರಸಾ ಹರಿಮ್ ॥೧೯॥

ಯೋ ಹಂಸಡಿಭಿಕೌ ಯುದ್ಧೇ ಜಿತವಾನ್ ವರದುರ್ಮದೌ ।
ಆಶೀವಿಷೋ ಮಹಾನಾಗೋ ಯೇನ ನಿರ್ವಾಸಿತೋ ಹ್ರದಾತ್ ॥೨೦॥

ಯ ಇದಂ ಲೀಲಯಾ ವಿಶ್ವಂ ಸೃಜತ್ಯವತಿ ಹಂತಿ ಚ ।
ಚೇಷ್ಟಾಂ ವಿಶ್ವಸೃಜೋ ಯಸ್ಯ ನ ವಿದುರ್ಮೋಹಿತಾ ಯಯಾ ॥೨೧॥

ಯಃ ಸಪ್ತಹಾಯನಃ ಶೈಲಮುತ್ಪಾಟ್ಯೈಕೇನ ಪಾಣಿನಾ ।
ದಧಾರ ಲೀಲಯಾ ಬಾಲ ಉಚ್ಛಿಲೀಂಧ್ರಮಿವಾರ್ಭಕಃ ॥೨೨॥

ನಮಸ್ತಸ್ಮೈ ಭಗವತೇ ಕೃಷ್ಣಾಯಾದ್ಭುತಕರ್ಮಣೇ ।
ಅನಂತಾಯಾದಿಭೂತಾಯ ಕೂಟಸ್ಥಾಯಾತ್ಮನೇ ನಮಃ ॥೨೩॥

ಪ್ರತ್ಯಾಖ್ಯಾತಃ ಸ ತೇನಾಪಿ ಶತಧನ್ವಾ ಮಹಾಮಣಿಮ್ ।
ತಸ್ಮಿನ್ ನ್ಯಸ್ಯಾಶ್ವಮಾರುಹ್ಯ ಶತಯೋಜನಗಂ ಯಯೌ ॥೨೪॥

ಗರುಡಧ್ವಜಮಾರುಹ್ಯ ರಥಂ ರಾಮ ಜನಾರ್ದನೌ ।
ಅನ್ವಯಾತಾಂ ಮಹಾವೇಗೈರಶ್ವೈ ರಾಜನ್ ಗುರುದ್ರುಹಮ್ ॥೨೫॥

ಮಿಥಿಲಾಯಾ ಉಪವನೇ ವಿಸೃಜ್ಯ ಪತಿತಂ ಹಯಮ್ ।
ಪದ್ಭ್ಯಾಮಧಾವತ್ ಸಂತ್ರಸ್ತಃ ಕೃಷ್ಣೋಽನ್ವಭ್ಯದ್ರವದ್ ರುಷಾ ॥೨೬॥

ಪದಾತೇರ್ಭಾವತಸ್ತಸ್ಯ ಪದಾತಿಸ್ತಿಗ್ಮನೇಮಿನಾ ।
ಚಕ್ರೇಣ ಶಿರ ಉತ್ಕೃತ್ಯ ವಾಸಸೋರ್ವ್ಯಚಿನೋನ್ಮಣಿಮ್ ॥೨೭॥

ಅಲಬ್ಧಮಣಿರಾಗತ್ಯ ಕೃಷ್ಣ ಆಹಾಗ್ರಜಾಂತಿಕಮ್ ।
ವೃಥಾ ಹತಃ ಶತಧನುರ್ಮಣಿಸ್ತತ್ರ ನ ವಿದ್ಯತೇ ॥೨೮॥

ತತ ಆಹ ಬಲೋ ನೂನಂ ಸ ಮಣಿಃ ಶತಧನ್ವನಾ ।
ಕಸ್ಮಿಂಶ್ಚಿತ್ಪುರುಷೇ ನ್ಯಸ್ತಸ್ತಮನ್ವೇಷ್ವನ್ ಪುರಂ ವ್ರಜ ॥೨೯॥

ಅಹಂ ವೈದೇಹಮಿಚ್ಛಾಮಿ ದ್ರಷ್ಟುಂ ಪ್ರಿಯತರಂ ಮಮ ।
ಇತ್ಯುಕ್ತ್ವಾ ಮಿಥಿಲಾಂ ರಾಜನ್ ವಿವೇಶ ಯದುನಂದನಃ ॥೩೦॥

ತಂ ದೃಷ್ಟ್ವಾ ಸಹಸೋತ್ಥಾಯ ಮೈಥಿಲಃ ಪ್ರೀತಮಾನಸಃ ।
ಅರ್ಹಯಾಮಾಸ ವಿಧಿವದರ್ಹಣೀಯಂ ವೈ ಸಮರ್ಹಣೈಃ ॥೩೧॥

ಉವಾಸ ತಸ್ಯಾಂ ಕತಿಚಿನ್ಮಿಥಿಲಾಯಾಂ ಸಮಾ ವಿಭುಃ ।
ತತೋಽಶಿಕ್ಷದ್ ಗದಾಂ ಕಾಲೇ ಧಾರ್ತರಾಷ್ಟ್ರಃ ಸುಯೋಧನಃ ।
ಮಾನಿತಃ ಪ್ರೀತಿಯುಕ್ತೇನ ಜನಕೇನ ಮಹಾತ್ಮನಾ ॥೩೨॥

ಕೇಶವೋ ದ್ವಾರಕಾಮೇತ್ಯ ನಿಧನಂ ಶತಧನ್ವನಃ ।
ಅಪ್ರಾಪ್ತಿಂ ಚ ಮಣೇಃ ಪ್ರಾಹ ಪ್ರಿಯಾಯಾಃ ಪ್ರಿಯಕೃದ್ ವಿಭುಃ ॥೩೩॥

ತತಃ ಸ ಕಾರಯಾಮಾಸ ಕ್ರಿಯಾಂ ಬಂಧೋರ್ಮೃತಸ್ಯ ವೈ ।
ಸಾಕಂ ಸುಹೃದ್ಭಿರ್ಭಗವಾನ್ ಯಾ ಯಾಃ ಸ್ಯುಃ ಸಾಂಪರಾಯಿಕಾಃ ॥೩೪॥

ಅಕ್ರೂರಕೃತವರ್ಮಾಣೌ ಶ್ರುತ್ವಾ ಶತಧನೋರ್ವಧಮ್ ।
ವ್ಯೂಷತುರ್ಭಯವಿತ್ರಸ್ತೌ ದ್ವಾರಕಾಯಾಃ ಪ್ರಯೋಜಕೌ ॥೩೫॥

ಅಕ್ರೂರೇ ಪ್ರೋಷಿತೇಽರಿಷ್ಟಾನ್ಯಾಸನ್ ವೈ ದ್ವಾರಕೌಕಸಾಮ್ ।
ಶಾರೀರಾ ಮಾನಸಾಸ್ತಾಪಾ ಮುಹುರ್ದೈವಿಕಭೌತಿಕಾಃ ॥೩೬॥

ತತೋಽಪೃಚ್ಛದ್ವೃದ್ಧಿರ್ವೃದ್ಧಾನುಗ್ರಸೇನಪುರೋಗಮಾನ್ ।
ಕಸ್ಮಾದಿಹಾರಿಷ್ಟಾನ್ಯಾಸನ್ ಮಹತಾ ಸುಚಿರೇಣ ನಃ ॥೩೭॥

ಇತ್ಯಂತೋಪದಿಶಂತ್ಯೇಕೇ ವಿಸ್ಮಿತಾ ವೈ ಗದಾಭೃತಃ ।
ನಿವಾಸನಿಕಟೇ ಕಿಂ ವಾ ಘಟೇತಾರಿಷ್ಟದರ್ಶನಾತ್ ॥೩೮॥

ದೇವೇಽವರ್ಷತಿ ಕಾಶೀಶಃ ಶ್ವಫಲ್ಕಾಯಾಗತಾಯ ಗಾಮ್ ।
ಸ್ವಸುತಾಂ ಗಾಂದಿನೀಂ ಪ್ರಾದಾತ್ ತತೋಽವರ್ಷತ್ ಸ್ಮ ಕಾಶಿಷು ॥೩೯॥

ತತ್ಸುತಸ್ತತ್ಪ್ರಭಾವೋಽಸಾವಕ್ರೂರೋ ಯತ್ರ ಯತ್ರ ಸಃ ।
ದೇವೋಽಭಿವರ್ಷತೇ ತತ್ರ ನೋಪತಾಪಾ ನ ಮಾರಿಕಾಃ ॥೪೦॥

ಇತಿ ವೃದ್ಧವಚಃ ಶ್ರುತ್ವಾನೈತಾವದಿಹ ಕಾರಣಮ್ ।
ಇತಿ ದೂತೈಃ ಸಮಾನೀಯ ರಾಮಾಕ್ರೂರೌ ಜನಾರ್ದನಃ ॥೪೧॥

ಅಕ್ರೂರಂ ಮಾನಯನ್ ಕೃಷ್ಣಃ ಕಥಯಿತ್ವಾ ಪ್ರಿಯಾಃ ಕಥಾಃ ।
ವಿಜ್ಞಾತಾಖಿಲತತ್ತ್ವಜ್ಞಃ ಸ್ಮಯಮಾನ ಉವಾಚ ಹ ॥೪೨॥

ನನು ದಾನಪತೇ ನ್ಯಸ್ತಸ್ತ್ವಯ್ಯಸೌ ಶತಧನ್ವನಾ ।
ಸ್ಯಮಂತಕೋ ಮಣಿಃ ಶ್ರೀಮಾನ್ ವಿದಿತಃ ಪೂರ್ವಮೇವ ನಃ ॥೪೩॥

ನನು ದಾನಪತೇ ನ್ಯಸ್ತಸ್ತ್ವಯ್ಯಸೌ ಶತಧನ್ವನಾ ।
ಸ್ಯಮಂತಕೋ ಮಣಿಃ ಶ್ರೀಮಾನ್ ವಿದಿತಃ ಪೂರ್ವಮೇವ ನಃ ॥೪೩॥

ಸತ್ರಾಜಿತೋಽನಪತ್ಯತ್ವಾದ್ ಗೃಹ್ಣೀಯುರ್ದುಹಿತುಃ ಸುತಾಃ ।
ದಾಯಂ ನಿನೀಯಾಪ ಪಿಂಡಾನ್ ವಿಮುಚ್ಯರ್ಣಮಶೇಷತಃ ।
ತಥಾಪಿ ದುರ್ಧರೋ ಹ್ಯನ್ಯೈಸ್ತ್ವಯ್ಯಾಸ್ತಾಂ ಪ್ರಾಪಿತೋ ಮಣಿಃ ॥೪೪॥

ಕಿಂತು ಮಮಾಗ್ರಜಃ ಸಮ್ಯಙ್ ನ ಪ್ರತ್ಯೇತಿ ಮಣಿಂ ಪ್ರತಿ ।
ದರ್ಶಯಸ್ವ ಮಹಾಭಾಗ ಬಂಧೂನಾಂ ಶಾಂತಿಮಾವಹ ॥೪೫॥

ಅವ್ಯುಚ್ಛಿನ್ನಾ ಮಖಾಸ್ತೇಽದ್ಯ ವರ್ತಂತೇ ರುಗ್ಮವೇದಯಃ ।
ಏವಂ ಸಾಮಭಿರಾರಬ್ಧಃ ಶ್ವಫಲ್ಕತನಯೋ ಮಣಿಮ್ ॥೪೬॥

ಆದಾಯ ವಾಸಸಾ ಚ್ಛನ್ನಂ ದದೌ ಸೂರ್ಯಸಮಪ್ರಭಮ್ ।
ಸ್ಯಮಂತಕಂ ದರ್ಶಯಿತ್ವಾ ಜ್ಞಾತಿಭ್ಯೋ ರಜ ಆತ್ಮನಃ ॥೪೭॥

ಮಾರ್ಜಯಾಮಾಸ ಲೋಕೇಶ ಅಭಿಭಾಷ್ಯ ಹಲಾಯುಧಮ್ ।
ದೃಷ್ಟ್ವಾ ಮಣಿಂ ಹಲಧರಸ್ತದರ್ಥಂ ಪ್ರೋಷ್ಯ ಆಗತಃ ॥೪೮॥

ಯೋಗ್ಯೋಽಹಮಿತಿ ಮನ್ವಾನಶ್ಚಕಮೇ ಕುರುಪುಂಗವ ।
ಸತ್ಯಭಾಮಾಪಿತೃಧನಂ ಮನ್ವಾನಾ ಸ್ವಾತ್ಮನೋಚಿತಮ್ ॥೪೯॥

ಗ್ರಹೀತುಮೈಚ್ಛದ್ ವಿಸ್ರಬ್ಧಂ ಹರೇಶ್ಚಿತ್ತಮಜಾನತೀ ।
ಜಾಂಬವತ್ಯಪಿ ಶುಲ್ಕಾರ್ಥಂ ಪಿತ್ರಾ ದತ್ತಂ ಮಮೇತಿ ಹ ॥೫೦॥

ಸ್ಪೃಹಾಂ ಚಕ್ರೇ ಮಣೌ ತಸ್ಮಿನ್ ಸರ್ವಂ ವಿಜ್ಞಾಯ ಮಾಧವ ।
ಅಕ್ರೂರಸ್ಯ ಕರೇ ಭೂಯೋ ಮಣಿಂ ಪ್ರತ್ಯರ್ಪಯದ್ ವಿಭುಃ ॥೫೧॥

ಯಸ್ತ್ವೇತದ್ ಭಗವತ ಈಶ್ವರಸ್ಯ ವಿಷ್ಣೋಃ
ವೀರ್ಯಾಖ್ಯಂ ವೃಜಿನಹರಂ ಸುಮಂಗಲಂ ಚ ।
ಆಖ್ಯಾನಂ ಪಠತಿ ಶೃಣೋತ್ಯನುಸ್ಮರೇದ್ ವಾ
ದುಷ್ಕೀರ್ತಿಂ ದುರಿತಮಪೋಹ್ಯ ಯಾತಿ ಶಾಂತಿಮ್ ॥೫೨॥

॥ ಭಾಗವತದಶಮಸ್ಕಂಧದಲ್ಲಿ ಸ್ಯಮಂತಕೋಪಾಖ್ಯಾನವು ಮುಗಿಯಿತು ॥

* * * * *

## ವಿನಾಯಕ ಕಥಾ

ಆಸೀತ್ ಪುರಾ ಚಂದ್ರವಂಶೇ ರಾಜಾ ಧರ್ಮ ಇತಿ ಶ್ರುತಃ ।
ಸ್ವರಾಜ್ಯೇ ದೈವಯೋಗೇನ ಜ್ಞಾತಿಭಿಃ ಕುಟಿಲೈರ್ಹೃತೇ ॥೧॥

ಅನುಜೈರ್ಭಾರ್ಯಯಾ ಸಾರ್ಧಂ ಜಗಾಮ ಗಹನಂ ವನಮ್ ।
ಬಹುವೃಕ್ಷಸಮಾಕೀರ್ಣಂ ನಾನಾ ಮೃಗಸಮನ್ವಿತಮ್ ॥೨॥

ಬಹುಪಕ್ಷಿಕುಲೋಪೇತಂ ವ್ಯಾಘ್ರಭಲ್ಲೂಕಸಂಕುಕಲಮ್ ।
ತತ್ರ ತತ್ರ ಸಮಾವಿಷ್ಟಾ ಮುನಯೋ ಬ್ರಹ್ಮವಾದಿನಃ ॥೩॥

ಆದಿತ್ಯಸನ್ನಿಭಾಃ ಸರ್ವೇ ಸರ್ವೇ ವಹ್ನಿಸಮಪ್ರಭಾಃ ।
ತೇಜೋಮಂಡಲಸಂಕಾಶಾ ವಾಯುಪರ್ಣಾಂಬುಭಕ್ಷಕಾಃ ॥೪॥

ಅಗ್ನಿಹೋತ್ರರತಾ ನಿತ್ಯಮತಿಥೀನಾಂ ಚ ಪೂಜಕಾಃ ।
ಊರ್ಧ್ವಬಾಹುನಿರಾಲಂಬಾಃ ಸರ್ವೇ ಮುನಿಗಣಾಸ್ತಥಾ ॥೫॥

ತಾನ್ ಪಶ್ಯನ್ ಧರ್ಮರಾಜೋಽಪಿ ಸಂಭ್ರಮೇಣ ಸಮನ್ವಿತಃ ।
ಸೂತಾಶ್ರಮಂ ಸಮಾಸಾದ್ಯ ಸೂತಂ ದೃಷ್ಟ್ವಾ ಸಸಂಭ್ರಮಃ ॥೬॥

ನತ್ವಾ ಚ ಭಾರ್ಯಯಾ ಸಾರ್ಧಮನುಜ್ಞೈಃ ಸಮುಪಾವಿಶತ್ ।

ಧರ್ಮಃ –

ಸೂತ ಸೂತ ಮಹಾಪ್ರಾಜ್ಞ ಸರ್ವಶಾಸ್ತ್ರವಿಶಾರದ ॥೭॥

ವಯಂ ಚ ಭಾರ್ಯಯಾ ಸಾರ್ಧಂ ಜ್ಞಾತಿಭಿಃ ಪರಿಪೀಡಿತಾಃ ।
ಸ್ವರಾಜ್ಯಂ ಸಕಲಂ ಚೈವ ಪುತ್ರಾಶ್ಚಾಪಹೃತಾ ಹಿ ನಃ ॥೮॥

ತವ ದರ್ಶನಮಾತ್ರೇಣ ಸರ್ವಂ ದುಃಖಂ ವಿನಾಶಿತಮ್ ।
ಮಮೋಪರಿ ಕೃಪಾಂ ಕೃತ್ವಾ ವ್ರತಂ ಬ್ರೂಹಿ ದಯಾನಿಧೇ ॥೯॥

ಸೂತಃ

ವ್ರತಂ ಸಂಪತ್ಕರಂ ನೄಣಾಂ ಸರ್ವಸೌಖ್ಯಪ್ರವರ್ಧನಮ್ ।
ಶೃಣುಧ್ವಂ ಪಾಂಡವಾಃ ಸರ್ವೇ ವ್ರತಾನಾಮುತ್ತಮಂ ವ್ರತಮ್ ॥೧೦॥

ರಹಸ್ಯಂ ಸರ್ವಪಾಪಘ್ನಂ ಪುತ್ರಪೌತ್ರಾಭಿವರ್ಧನಮ್ ।
ವ್ರತಂ ಸಾಂಬಶಿವೇನೈವ ಸ್ಕಂದಸ್ಯೋದ್ಬೋಧಿತಂ ಪುರಾ ॥೧೧॥

ಕೈಲಾಸಶಿಖರೇ ರಮ್ಯೇ ನಾನಾಮುನಿನಿಷೇವಿತೇ ।
ಮಂದಾರವಿಟಪಿಪ್ರಾಂತೇ ನಾನಾ ಮಣಿವಿಭೂಷಿತೇ ॥೧೨॥

ಹೇಮಸಿಂಹಾಸನಾಸೀನಂ ಶಂಕರಂ ಲೋಕಶಂಕರಮ್ ।
ಪಪ್ರಚ್ಛ ಷಣ್ಮುಖಸ್ತುಷ್ಟ್ಯೋ ಲೋಕಾನುಗ್ರಹಕಾಂಕ್ಷಯಾ ॥೧೩॥

ಸ್ಕಂದಃ –

ಕೇನ ವ್ರತೇನ ಭಗವನ್ ಸೌಭಾಗ್ಯಮತುಲಂ ಭವೇತ್ ।
ಪುತ್ರಪೌತ್ರಾನ್ ಧನಂ ಲಬ್ಧ್ವಾ ಮನುಜಃ ಸುಖಮೇಧತೇ ॥೧೪॥

ತನ್ಮೇ ವದ ಮಹಾದೇವ ವ್ರತಾನಾಮುತ್ತಮಂ ವ್ರತಮ್ ।

ಈಶ್ವರಃ –

ಅಸ್ತಿ ಚಾತ್ರ ಮಹಾಭಾಗ ಗಣನಾಥಪ್ರಪೂಜನಮ್ ॥೧೫॥
ಸರ್ವಸಂಪತ್ಕರಂ ಶ್ರೇಷ್ಠಮಾಯುಃಕಾಮಾರ್ಥಸಿದ್ಧಿದಮ್ ।
ಮಾಸೇ ಭಾದ್ರಪದೇ ಶುಕ್ಲಚತುರ್ಥ್ಯಾಂ ವ್ರತಮಾಚರೇತ್ ॥೧೬॥

ಪ್ರಾತಃ ಸ್ನಾತ್ವಾ ಶುಚಿರ್ಭೂತ್ವಾ ನಿತ್ಯಕರ್ಮ ಸಮಾಚರೇತ್ ।
ಸ್ವಶಕ್ತ್ಯಾ ಗಣನಾಥಸ್ಯ ಸ್ವರ್ಣರೌಪ್ಯಮಥಾಕೃತಿಮ್ ॥೧೭॥

ಅಥವಾ ಮೃಣ್ಮಯಂ ಕುರ್ಯಾದ್ ವಿತ್ತಶಾಠ್ಯಂ ನ ಕಾರಯೇತ್ ।
ಸ್ವಗೃಹಸ್ಯೋತ್ತರೇ ದೇಶೇ ಮಂಟಪಂ ಕಾರಯೇತ್ ತತಃ ॥೧೮॥

ತನ್ಮಧ್ಯೇಽಷ್ಟದಳಂ ಪದ್ಮಂ ಯವೈರ್ವಾ ತಂಡುಲೇನ ವಾ ।
ಪ್ರತಿಮಾಂ ತತ್ರ ಸಂಸ್ಥಾಪ್ಯ ಪೂಜಯಿತ್ವಾ ಪ್ರಯತ್ನತಃ ॥೧೯॥

ಶ್ವೇತಗಂಧಾಕ್ಷತೈಃ ಪುಷ್ಪೈರ್ದೂರ್ವಾಂಕುರಸಮನ್ವಿತೈಃ ।
ಧೂಪೈರ್ದೀಪೈಶ್ಚ ನೈವೇದ್ಯೈರ್ಮೋದಕೈರ್ಘೃತಪಾಚಿತೈಃ ॥೨೦॥

ಏಕವಿಂಶತಿಸಂಖ್ಯಾನಿ ನಾರಿಕೇಶಫಲಾನ್ಯಪಿ ।
ರಂಭಾಜಂಬುಕಪಿತ್ಥಾನಿ ಘನೀಕ್ಷುಖಂಡಾಶ್ಚ ತಾವತಃ ॥೨೧॥

ಏವಮನ್ಯಫಲಾಪೂಪೈರ್ನೈವೇದ್ಯಂ ಕಾರಯೇತ್ ಸುತಃ ।
ನೃತ್ತಗೀತೈಶ್ಚ ವಾದ್ಯೈಶ್ಚ ಪುರಾಣಪಠನಾದಿಭಿಃ ॥೨೨॥

ತರ್ಪಯೇದ್ ಗಣನಾಥಂ ಚ
ವಿಪ್ರಾನ್ ದಾನೇನ ಶ್ರೋತ್ರಿಯಾನ್ ।
ಬಂಧುಭಿಃ ಸ್ವಜನೈಃ ಸಾರ್ಧಂ
ಭುಂಜೀಯಾತ್ ತೈಲವರ್ಜಿತಮ್ ॥೨೩॥

ಏವಂ ಯಃ ಕುರುತೇ ಮರ್ತ್ಯೋ ಗಣನಾಥಪ್ರಸಾದತಃ ।
ಸಿಧ್ಯಂತಿ ಸರ್ವಕಾರ್ಯಾಣಿ ನಾತ್ರ ಕಾರ್ಯಾ ವಿಚಾರಣಾ ॥೨೪॥

ತತಃ ಪ್ರಭಾತೇ ವಿಮಲೇ ಪುನಃ ಪೂಜಾಂ ಸಮಾಚರೇತ್ ।
ಮೌಂಜಿಂ ಕೃಷ್ಣಾಜಿನಂ ದಂಡಮುಪವೀತಂ ಕಮಂಡಲುಮ್ ॥೨೫॥

ಪರಿಧಾನಂ ತಥಾ ದದ್ಯಾದ್ ಯಥಾ ವಿಭವಮುತ್ತಮಮ್ ।
ಉಪಾಯನಂ ತತೋ ದದ್ಯಾದ್ ಆಚಾರ್ಯಾಯ ಸ್ವಶಕ್ತಿತಃ ॥೨೬॥

ಅನ್ಯೇಭ್ಯೋ ದಕ್ಷಿಣಾಂ ದದ್ಯಾದ್ ಬ್ರಾಹ್ಮಣಾನ್ ಭೋಜಯೇತ್ ತತಃ।
ತ್ರೈಲೋಕ್ಯೇ ವಿಶ್ರುತಂ ಚೈತದ್ ವ್ರತಾನಾಮುತ್ತಮೋತ್ತಮಮ್ ॥೨೭॥

ಅನ್ಯೈಶ್ಚ ದೇವಮುನಿಭಿಃ ಗಂಧರ್ವೈಃ ಕಿನ್ನರೈಸ್ತಥಾ ।
ಚೀರ್ಣಮೇತದ್ವ್ರತಂ ಸರ್ವೈಃ ಪುರಾಕಲ್ಪೇ ಷಡಾನನ ॥೨೮॥

ಇತಿ ಪುತ್ರಾಯ ಶರ್ವೇಣ ಷಣ್ಮುಖಾಯೋದಿತಂ ಪುರಾ ।
ಏವಂ ಕುರುಷ್ವ ಧರ್ಮಜ್ಞ ಗಣನಾಥಪ್ರಪೂಜನಮ್ ॥೨೯॥

ವಿಜಯಸ್ತೇ ಭವೇನ್ನಿತ್ಯಂ ಸತ್ಯಂ ಸತ್ಯಂ ವದಾಮ್ಯಹಮ್ ।
ಏತದ್ ವ್ರತಂ ಹರಿಶ್ಚಾಪಿ ದಮಯಂತೀ ಪುರಾಽಕರೋತ್ ॥೩೦॥

ಕೃಷ್ಣೋ ಜಾಂಬವತೀಮಾಗಾದ್ ರತ್ನಂ ಚಾಪಿ ಸ್ಯಮಂತಕಮ್ ।
ದಮಯಂತೀ ನಳಂ ಚೈವ ವ್ರತಸ್ಯಾಸ್ಯ ಪ್ರಭಾವತಃ ॥೩೧॥

ಶಕ್ರೇಣ ಪೂಜಿತಃ ಪೂರ್ವಂ ವೃತ್ರಾಸುರವಧೇ ತಥಾ ।
ರಾಮದೇವೇನ ಯದ್ವಚ್ಚ ಸೀತಾಯಾ ಮಾರ್ಗಣೇ ತಥಾ ॥೩೩॥

ಭಗೀರಥೇನ ಯದ್ವಚ್ಚ ಗಂಗಾಮಾನಯತಾ ಪುರಾ ।
ಅಮೃತೋತ್ಪಾದನಾರ್ಥಾಯ ತಥಾ ದೇವಾಸುರೈರಪಿ ॥೩೪॥

ಕುಷ್ಠವ್ಯಾಧಿಯುತೇನಾಪಿ ಸಾಂಬೇನಾರಾಧಿತಃ ಪುರಾ ।
ಏವಮುಕ್ತಸ್ತು ಸೂತೇನ ಸಾನುಜಃ ಪಾಂಡುನಂದನಃ ॥೩೫॥

ಪೂಜಯಾಮಾಸ ದೇವಸ್ಯ ಪುತ್ರಂ ತ್ರಿಪುರಘಾತಿನಃ ।
ಶತ್ರುಸಂಘಂ ನಿಹತ್ಯಾಶು ಪ್ರಾಪ್ತವಾನ್ ರಾಜ್ಯಮೋಜಸಾ ॥೩೬॥

ಪೂಜಯಿತ್ವಾ ಮಹಾಭಾಗಂ ಗಣೇಶಂ ಸಿದ್ಧಿದಾಯಕಮ್ ।
ಸಿದ್ಧ್ಯಂತಿ ಸರ್ವಕಾರ್ಯಾಣಿ ಮನಸಾ ಚಿಂತಿತಾನ್ಯಪಿ ॥೩೭॥

ಜಯಂ ಚ ಜಯಕಾಮಶ್ಚ ಪುತ್ರಾರ್ಥೀ ಲಭತೇ ಸುತಾನ್ ।
ಪತಿಕಾಮಾ ಚ ಭರ್ತಾರಂ ಸೌಭಾಗ್ಯಂ ಚ ಸುವಾಸಿನೀ ॥೩೮॥

ವಿಧವಾ ಪೂಜಯಿತ್ವಾ ತು ವೈಧವ್ಯಂ ನಾಪ್ನುಯಾತ್ ಕ್ವಚಿತ್ ।
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾಽಪ್ಯಥವಾ ಸ್ತ್ರಿಯಃ ॥೩೯॥

ಅರ್ಭಕಶ್ಚಾಪಿ ಭಕ್ತ್ಯಾ ಚ ವ್ರತಂ ಕುರ್ಯಾದ್ ಯಥಾವಿಧಿ ।
ಸಿದ್ಧ್ಯಂತಿ ಸರ್ವಕಾರ್ಯಾಣಿ ಗಣನಾಥಪ್ರಸಾದತಃ ॥೪೦॥

ಪುತ್ರಪೌತ್ರಾಭಿವೃದ್ಧಿಂ ಚ ಗಜಾದ್ಯೈಶ್ವರ್ಯಮಾಪ್ನುಯಾತ್ ॥೪೧॥

॥ ಇತಿ ವಿನಾಯಕಕಲ್ಪಃ ಸಮಾಪ್ತಃ ॥

* * * * *

# ಗಣಪತಿಯ ಕುರಿತಾದ ಹಾಡುಗಳು

## ವಿಘ್ನೇಶ್ವರಸ್ತೋತ್ರ ಸಂಧಿ
## (ಹರಿಕಥಾಮೃತಸಾರ)

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮಭಗವದ್ಭಕ್ತರಿದನಾದರದಿ ಕೇಳುವುದು ॥ ಪ ॥

ಶ್ರೀಶನಂಘ್ರಿಸರೋಜಭೃಂಗ ಮ-
ಹೇಶಸಂಭವ ಮನ್ಮನದೊಳು ಪ್ರ-
ಕಾಶಿಸನುದಿನ ಪ್ರಾರ್ಥಿಸುವೆ ಪ್ರೇಮಾತಿಶಯದಿಂದ ।
ನೀ ಸಲಹು ಸಜ್ಜನರ ವೇದ-
ವ್ಯಾಸಕರುಣಾಪಾತ್ರ ಮಹದಾ-
ಕಾಶಪತಿ ಕರುಣಾಳು ಕೈಪಿಡಿದೆಮ್ಮನುದ್ಧರಿಸು ॥ 1 ॥

ಏಕದಂತ ಇಭೇಂದ್ರಮುಖ ಚಾ-
ಮೀಕರಕೃತಭೂಷಣಾಂಗ ಕೃ-

ಪಾಕಟಾಕ್ಷದಿ ನೋಡು ವಿಜ್ಞಾಪಿಸುವೆ ಇನಿತೆಂದು ।
ನೋಕನೀಯನ ತುತಿಸುತಿಪ್ಪ ವಿ-
ವೇಕಿಗಳ ಸಹವಾಸಸುಖಗಳ
ನೀ ಕರುಣಿಸುವುದೆಮಗೆ ಸಂತತ ಪರಮ ಕರುಣಾಳು ॥2 ॥

ವಿಘ್ನರಾಜನೆ ದುರ್ವಿಷಯದೊಳು
ಮಗ್ನವಾಗಿಹ ಮನವ ಮಹದೋ-
ಷಘ್ನನಂಘ್ರಿಸರೋಜಯುಗಳದಿ ಭಕ್ತಿಪೂರ್ವಕದಿ ।
ಲಗ್ನವಾಗಲಿ ನಿತ್ಯ ನರಕಭ-
ಯಾಗ್ನಿಗಳಿಗಾನಂಜೆ ಗುರುವರ
ಭಗ್ನಗೈಸೆನ್ನವಗುಣಗಳನು ಪ್ರತಿದಿವಸದಲ್ಲಿ ॥ 3 ॥

ಧನಪ ವಿಷ್ವಕ್ಸೇನ ವೈದ್ಯಾ-
ಶ್ವಿನಿಗಳಿಗೆ ಸರಿಯೆನಿಪ ಷಣ್ಮುಖ-
ನನುಜ ಶೇಷಶತಸ್ಥದೇವೋತ್ತಮ ವಿಯದ್ಗಂಗಾ ।
ವಿನುತ ವಿಶ್ವೋಪಾಸಕನೆ ಸ-
ನ್ಮನದಿ ವಿಜ್ಞಾಪಿಸುವೆ ಲಕ್ಷ್ಮೀ
ವನಿತೆಯರಸನ ಭಕ್ತಿಜ್ಞಾನವ ಕೊಟ್ಟು ಸಲಹುವುದು ॥ 4 ॥

ಚಾರುದೇಷ್ಣಾಹ್ವಯನೆನಿಸಿ ಅವ-
ತಾರ ಮಾಡಿದೆ ರುಗ್ಮಿಣೀಯಲಿ
ಗೌರಿಯರಸನ ವರದಿ ಉದ್ಧಟರಾದ ರಾಕ್ಷಸರ ।
ಶೌರಿಯಾಜ್ಞದಿ ಸಂಹರಿಸಿ ಭೂ-
ಭಾರವಿಳುಹಿದ ಕರುಣಿ ತ್ವತ್ಪಾ-
ದಾರವಿಂದಕೆ ನಮಿಪೆ ಕರುಣಿಪುದೆಮಗೆ ಸನ್ಮತಿಯ ॥ 5 ॥

ಶೂರ್ಪಕರ್ಣದ್ವಯ ವಿಜಿತಕಂ-
ದರ್ಪಶರ ಉದಿತಾರ್ಕಸನ್ನಿಭ
ಸರ್ಪವರಕಟಿಸೂತ್ರ ವೈಕೃತಗಾತ್ರ ಸುಚರಿತ್ರ ।

ಸ್ವರ್ಪಿತಾಂಕುಶಪಾಶಕರ ಖಳ-
ದರ್ಪಭಂಜನ ಕರ್ಮಸಾಕ್ಷಿಗ
ತರ್ಪಕನು ನೀನಾಗಿ ತೃಪ್ತಿಯಪಡಿಸು ಸಜ್ಜನರ ॥ 6 ॥

ಖೇಶ ಪರಮಸುಭಕ್ತಿಪೂರ್ವಕ
ವ್ಯಾಸಕೃತಗ್ರಂಥಗಳನರಿತು ಪ್ರ-
ಯಾಸವಿಲ್ಲದೆ ಬರೆದು ವಿಸ್ತರಿಸಿದೆಯೊ ಲೋಕದೊಳು ।
ಪಾಶಪಾಣಿಯೆ ಪ್ರಾರ್ಥಿಸುವೆನುಪ-
ದೇಶಿಸೆನಗದರರ್ಥಗಳ ಕರು-
ಣಾಸಮುದ್ರ ಕೃಪಾಕಟಾಕ್ಷದಿ ನೋಡು ಪ್ರತಿದಿನದಿ ॥ 7 ॥

ಶ್ರೀಶನತಿನಿರ್ಮಲಸುನಾಭೀ-
ದೇಶವಸ್ಥಿತ ರಕ್ತ ಶ್ರೀಗಂಧಾತಿ-
ಸುಶೋಭಿತಗಾತ್ರ ಲೋಕಪವಿತ್ರ ಸುರಮಿತ್ರ(ಸುರಸ್ತೋತ್ರ) ।
ಮೂಷಕಾಸುರವಹನ ಪ್ರಾಣಾ-
ವೇಶಯುತ ಪ್ರಖ್ಯಾತ ಪ್ರಭು ಪೂ-
ರೈಸು ಭಕ್ತರು ಬೇಡಿದಿಷ್ಟಾರ್ಥಗಳ ಪ್ರತಿದಿನದಿ ॥ 8 ॥

ಶಂಕರಾತ್ಮಜ ದೈತ್ಯರಿಗತಿಭ-
ಯಂಕರಗತಿಗಳೀಯಲೋಸುಗ
ಸಂಕಟಚತುರ್ಥಿಗನೆನಿಸಿ ಅಹಿತಾರ್ಥಗಳ ಕೊಟ್ಟು ।
ಮಂಕುಗಳ ಮೋಹಿಸುವೆ ಚಕ್ರದ-
ರಾಂಕಿತನೆ ದಿನದಿನದಿ ತ್ವತ್ಪದ ।
ಪಂಕಜಗಳಿಗೆ ಬಿನ್ನೈಸುವೆನು ಪಾಲಿಪುದು ॥ 9 ॥

ಸಿದ್ಧವಿದ್ಯಾಧರಗಣಸಮಾ-
ರಾಧ್ಯಚರಣಸರೋಜ ಸರ್ವಸು-
ಸಿದ್ಧಿದಾಯಕ ಶೀಘ್ರದಿಂ ಪಾಲಿಪುದು ಬಿನ್ನೈಪೆ (ಬಿನ್ನಪವ) ।

ಪಾಕಟಾಕ್ಷದಿ ನೋಡು ವಿಜ್ಞಾಪಿಸುವೆ ಇನಿತೆಂದು ।
ನೋಕನೀಯನ ತುತಿಸುತಿಪ್ಪ ವಿ-
ವೇಕಿಗಳ ಸಹವಾಸಸುಖಗಳ
ನೀ ಕರುಣಿಸುವುದೆಮಗೆ ಸಂತತ ಪರಮ ಕರುಣಾಳು ॥2 ॥

ವಿಘ್ನರಾಜನೆ ದುರ್ವಿಷಯದೊಳು
ಮಗ್ನವಾಗಿಹ ಮನವ ಮಹದೋ-
ಷಘ್ನನಂಘ್ರಿಸರೋಜಯುಗಳದಿ ಭಕ್ತಿಪೂರ್ವಕದಿ ।
ಲಗ್ನವಾಗಲಿ ನಿತ್ಯ ನರಕಭ-
ಯಾಗ್ನಿಗಳಿಗಾನಂಜೆ ಗುರುವರ
ಭಗ್ನಗೈಸೆನ್ನವಗುಣಗಳನು ಪ್ರತಿದಿವಸದಲ್ಲಿ ॥ 3 ॥

ಧನಪ ವಿಷ್ವಕ್ಸೇನ ವೈದ್ಯಾ-
ಶ್ವಿನಿಗಳಿಗೆ ಸರಿಯೆನಿಪ ಷಣ್ಮುಖ-
ನನುಜ ಶೇಷಶತಸ್ಥದೇವೋತ್ತಮ ವಿಯದ್ಗಂಗಾ ।
ವಿನುತ ವಿಶ್ವೋಪಾಸಕನೆ ಸ-
ನ್ಮನದಿ ವಿಜ್ಞಾಪಿಸುವೆ ಲಕ್ಷ್ಮೀ
ವನಿತೆಯರಸನ ಭಕ್ತಿಜ್ಞಾನವ ಕೊಟ್ಟು ಸಲಹುವುದು ॥ 4 ॥

ಚಾರುದೇಷ್ಣಾಹ್ವಯನೆನಿಸಿ ಅವ-
ತಾರ ಮಾಡಿದೆ ರುಗ್ಮಿಣೀಯಲಿ
ಗೌರಿಯರಸನ ವರದಿ ಉದ್ಧಟರಾದ ರಾಕ್ಷಸರ ।
ಶೌರಿಯಾಜ್ಞದಿ ಸಂಹರಿಸಿ ಭೂ-
ಭಾರವಿಳುಹಿದ ಕರುಣಿ ತ್ವತ್ಪಾ-
ದಾರವಿಂದಕೆ ನಮಿಪೆ ಕರುಣಿಪುದೆಮಗೆ ಸನ್ಮತಿಯ ॥ 5 ॥

ಶೂರ್ಪಕರ್ಣದ್ವಯ ವಿಜಿತಕಂ-
ದರ್ಪಶರ ಉದಿತಾರ್ಕಸನ್ನಿಭ
ಸರ್ಪವರಕಟಿಸೂತ್ರ ವೈಕೃತಗಾತ್ರ ಸುಚರಿತ್ರ ।

ಸ್ವರ್ಪಿತಾಂಕುಶಪಾಶಕರ ಖಳ-
ದರ್ಪಭಂಜನ ಕರ್ಮಸಾಕ್ಷಿಗ
ತರ್ಪಕನು ನೀನಾಗಿ ತೃಪ್ತಿಯಪಡಿಸು ಸಜ್ಜನರ ॥ 6 ॥

ಖೇಶ ಪರಮಸುಭಕ್ತಿಪೂರ್ವಕ
ವ್ಯಾಸಕೃತಗ್ರಂಥಗಳನರಿತು ಪ್ರ-
ಯಾಸವಿಲ್ಲದೆ ಬರೆದು ವಿಸ್ತರಿಸಿದೆಯೊ ಲೋಕದೊಳು ।
ಪಾಶಪಾಣಿಯೆ ಪ್ರಾರ್ಥಿಸುವೆನುಪ-
ದೇಶಿಸೆನಗದರರ್ಥಗಳ ಕರು-
ಣಾಸಮುದ್ರ ಕೃಪಾಕಟಾಕ್ಷದಿ ನೋಡು ಪ್ರತಿದಿನದಿ ॥ 7 ॥

ಶ್ರೀಶನತಿನಿರ್ಮಲಸುನಾಭೀ-
ದೇಶವಸ್ಥಿತ ರಕ್ತ ಶ್ರೀಗಂಧಾತಿ-
ಸುಶೋಭಿತಗಾತ್ರ ಲೋಕಪವಿತ್ರ ಸುರಮಿತ್ರ(ಸುರಸ್ತೋತ್ರ) ।
ಮೂಷಕಾಸುರವಹನ ಪ್ರಾಣಾ-
ವೇಶಯುತ ಪ್ರಖ್ಯಾತ ಪ್ರಭು ಪೂ-
ರೈಸು ಭಕ್ತರು ಬೇಡಿದಿಷ್ಟಾರ್ಥಗಳ ಪ್ರತಿದಿನದಿ ॥ 8 ॥

ಶಂಕರಾತ್ಮಜ ದೈತ್ಯರಿಗತಿಭ-
ಯಂಕರಗತಿಗಳೀಯಲೋಸುಗ
ಸಂಕಟಚತುರ್ಥಿಗನೆನಿಸಿ ಅಹಿತಾರ್ಥಗಳ ಕೊಟ್ಟು ।
ಮಂಕುಗಳ ಮೋಹಿಸುವೆ ಚಕ್ರದ-
ರಾಂಕಿತನೆ ದಿನದಿನದಿ ತ್ವತ್ಪದ ।
ಪಂಕಜಗಳಿಗೆ ಬಿನ್ನೈಸುವೆನು ಪಾಲಿಪುದು ॥ 9 ॥

ಸಿದ್ಧವಿದ್ಯಾಧರಗಣಸಮಾ-
ರಾಧ್ಯಚರಣಸರೋಜ ಸರ್ವಸು-
ಸಿದ್ಧಿದಾಯಕ ಶೀಘ್ರದಿಂ ಪಾಲಿಪುದು ಬಿನ್ನೈಪೆ (ಬಿನ್ನಪವ) ।

ಬುದ್ಧಿವಿದ್ಯಾಜ್ಞಾನಬಲ ಪರಿ-
ಶುದ್ಧಭಕ್ತಿವಿರಕ್ತಿ ನಿರುತನ-
ವದ್ಯನ ಸ್ಮೃತಿಲೀಲೆಗಳ ಸುಸ್ತವನ ವದನದಲಿ ॥ 10 ॥

ರಕ್ತವಾಸದ್ವಯವಿಭೂಷಣ
ಉಕ್ತಿ ಲಾಲಿಸು ಪರಮಭಗವ-
ದ್ಭಕ್ತವರ ಭವ್ಯಾತ್ಮ ಭಾಗವತಾದಿ ಶಾಸ್ತ್ರದಲಿ ।
ಸಕ್ತವಾಗಲಿ ಮನವು ವಿಷಯವಿ-
ರಕ್ತಿ ಪಾಲಿಸು ವಿದ್ವದಾದ್ಯ ವಿ-
ಮುಕ್ತನೆಂದೆನಿಸೆನ್ನ ಭವಭಯದಿಂದಲನುದಿನದಿ ॥ 11 ॥

ಶುಕ್ರಶಿಷ್ಯರ ಸಂಹರಿಪುದಕೆ
ಶಕ್ರ ನಿನ್ನನು ಪೂಜಿಸಿದನು ಉ-
ರುಕ್ರಮ ಶ್ರೀರಾಮಚಂದ್ರನು ಸೇತುಮುಖದಲ್ಲಿ ।
ಚಕ್ರವರ್ತೀ ಧರ್ಮರಾಜನು
ಚಕ್ರಪಾಣಿಯ ನುಡಿಗೆ ಭಜಿಸಿದ
ವಕ್ರತುಂಡನೆ ನಿನ್ನೊಳೆಂತದೋ ಈಶನುಗ್ರಹವು ॥ 12 ॥

ಕೌರವೇಂದ್ರನು ನಿನ್ನ ಭಜಿಸದ
ಕಾರಣದಿ ನಿಜಕುಲಸಹಿತ ಸಂ-
ಹಾರವೈದಿದ ಗುರುವರವೃಕೋದರನ ಗದೆಯಿಂದ ।
ತಾರಕಾಂತಕನನುಜ ಎನ್ನ ಶ-
ರೀರದೊಳು ನೀನಿಂತು ಧರ್ಮ-
ಪ್ರೇರಕನು ನೀನಾಗಿ ಸಂತೈಸೆನ್ನ ಕರುಣದಲಿ ॥ 13 ॥

ಏಕವಿಂಶತಿಮೋದಕಪ್ರಿಯ
ಮೂಕರನು ವಾಗ್ಮಿಗಳ ಮಾಳ್ಪ ಕೃ-
ಪಾಕರೇಶ ಕೃತಜ್ಞ ಕಾಮದ ಕಾಯೊ ಕೈವಿಡಿದು ।

ಲೇಖಕಾಗ್ರಣಿ ಮನ್ಮನದ ದು-
ರ್ವ್ಯಾಕುಲವ ಪರಿಹರಿಸು ದಯದಿ ಪಿ-
ನಾಕಿಭಾರ್ಯಾತನುಜ ಮೃದ್ಭವ ಪ್ರಾರ್ಥಿಸುವೆ ನಿನಗೆ || 14 ||

ನಿತ್ಯಮಂಗಳಚರಿತ ಜಗದು-
ತ್ಪತ್ತಿಸ್ಥಿತಿಲಯನಿಯಮನಜ್ಞಾ-
ನತ್ರಯಪ್ರದ ಬಂಧಮೋಚಕ ಸುಮನಸಾಸುರರ ।
ಚಿತ್ತವೃತ್ತಿಗಳಂತೆ ನಡೆವ ಪ್ರ-
ಮತ್ತನಲ್ಲ ಸುಹೃಜ್ಜನಾಪ್ತನ
ನಿತ್ಯದಲಿ ನೆನೆನೆನೆದು ಸುಖಿಸುವ ಭಾಗ್ಯ ಕರುಣಿಪುದು || 15 ||

ಪಂಚಭೇದಜ್ಞಾನವರುಪು ವಿ-
ರಿಂಚಿಜನಕನ ತೋರು ಮನದಲಿ
ವಾಂಛಿತಪ್ರದ ಒಲುಮೆಯಿಂದಲಿ ದಾಸನೆಂದರಿದು ।
ಪಂಚವಕ್ತ್ರನ ತನಯ ಭವದೊಳು
ವಂಚಿಸದೆ ಸಂತೈಸು ವಿಷಯದಿ
ಸಂಚರಿಸಂದದಲಿ ಮಾಡು ಮನಾದಿಕರಣಗಳ || 16 ||

ಏನು ಬೇಡುವುದಿಲ್ಲ ನಿನ್ನ ಕು-
ಯೋನಿಗಳು ಬರಲಂಜೆ ಲಕ್ಷ್ಮೀ
ಪ್ರಾಣಪತಿ ತತ್ತ್ವೇಶರಿಂದೊಡಗೂಡಿ ಗುಣಕಾರ್ಯ ।
ತಾನೆ ಮಾಡುವನೆಂಬ ಈ ಸು-
ಜ್ಞಾನವನೆ ಕರುಣಿಸುವುದೆಮಗೆ ಮ-
ಹಾನುಭಾವ ಮುಹುರ್ಮುಹುಃ ಪ್ರಾರ್ಥಿಸುವೆ ಇನಿತೆಂದು || 17 ||

ನಮೊ ನಮೋ ಗುರುವರ್ಯ ವಿಬುಧೋ-
ತ್ತಮ ವಿವರ್ಜಿತನಿದ್ರ ಕಲ್ಪ-
ದ್ರುಮನೆನಿಪೆ ಭಜಕರಿಗೆ ಬಹುಗುಣಭರಿತ ಶುಭಚರಿತ ।

ಉಮೆಯ ನಂದನ ಪರಿಹರಿಸಹಂ-
ಮಮತೆ ಬುದ್ಧ್ಯಾದಿಂದ್ರಿಯಗಳಾ-
ಕ್ರಮಿಸಿ ದಣಿಸುತಲಿಹವು ಭವದೊಳಗಾವಕಾಲದಲಿ ॥ 18 ॥

ಜಯಜಯತು ವಿಘ್ನೇಶ ತಾಪ-
ತ್ರಯವಿನಾಶನ ವಿಶ್ವಮಂಗಳ
ಜಯ ಜಯತು ವಿದ್ಯಾಪ್ರದಾಯಕ ವೀತಭಯಶೋಕ ।
ಜಯ ಜಯತು ಚಾರ್ವಂಗ ಕರುಣಾ-
ನಯನದಿಂದಲಿ ನೋಡಿ ಜನ್ಮಾ-
ಮಯಮೃತಿಗಳನು ಪರಿಹರಿಸು ಭಕ್ತರಿಗೆ ಭವದೊಳಗೆ ॥ 19 ॥

ಕಡುಕರುಣಿ ನೀನೆಂದರಿದು ಹೇ-
ರೊಡಲ ನಮಿಸುವೆ ನಿನ್ನಡಿಗೆ ಬೆಂ-
ಬಿಡದೆ ಪಾಲಿಸು ಪರಮಕರುಣಾಸಿಂಧು ಎಂದೆಂದು ।
ನಡುನಡುವೆ ಬರುತಿಪ್ಪ ವಿಘ್ನವ
ತಡೆದು ಭಗವನ್ನಾಮಕೀರ್ತನೆ
ನುಡಿದು ನುಡಿಸೆನ್ನಿಂದ ಪ್ರತಿದಿವಸದಲಿ ಮರೆಯದಲೆ ॥ 20 ॥

ಏಕವಿಂಶತಿ ಪದಗಳೆನಿಸುವ
ಕೋಕನದ ನವಮಾಲಿಕೆಯ ಮೈ-
ನಾಕಿತನಯಾಂತರ್ಗತಶ್ರೀಪ್ರಾಣಪತಿಯೆನಿಪ ।
ಶ್ರೀಕರ ಜಗನ್ನಾಥವಿಠ್ಠಲ
ಸ್ವೀಕರಿಸಿ ಸ್ವರ್ಗಾಪವರ್ಗದಿ
ತಾ ಕೊಡಲಿ ಸೌಖ್ಯಗಳ ಭಕುತರಿಗಾವಕಾಲದಲಿ ॥ 21 ॥

* * * * *

## ಶ್ರೀ ವಿನಾಯಕಸ್ತುತಿ

ಅಂಬಿಕಾತನಯ ಭೂತಂಬರಾಧಿಪ ಸುರಕ-
ದಂಬ ಸಂಪೂಜ್ಯ ನಿರವದ್ಯ । ನಿರವದ್ಯ ನಿನ್ನ ಪಾ-
ದಾಂಬುಜಗಳೆನ್ನ ಸಲಹಲಿ ॥1॥

ಗಜವಕ್ತ್ರ ಷಣ್ಮುಖಾನುಜ ಶಬ್ದ ಗುಣಗ್ರಾಹಕ
ಭುಜಗ ಕಟಿಸೂತ್ರ ಸುಚರಿತ್ರ । ಸುಚರಿತ್ರ ತ್ವತ್ಪಾದಾಂ-
ಬುಜಗಳಿಗೆ ಎರಗಿ ಬಿನ್ನೈಪೆ ॥2॥

ವಿತ್ತಪತಿ ಮಿತ್ರಸುತ ಭೃತ್ಯಾನುಭೃತ್ಯನ್ನ ವಿ-
ಪತ್ತು ಬಡಿಸುವ ಅಜ್ಞಾನ । ಅಜ್ಞಾನ ಬಿಡಿಸಿ ಮಮ
ಚಿತ್ತ ಮಂದಿರದಿ ನೆಲೆಗೊಳ್ಳೊ ॥3॥

ಕಕುಭೀಶ ನಿನ್ನ ಸೇವಕನ ಬಿನ್ನಪವ ಚಿ-
ತ್ತಕೆ ತಂದು ಹರಿಯ ನೆನೆವಂತೆ । ನೆನೆವಂತೆ ಕರುಣಿಸೊ
ಅಕುಟಿಲಾತ್ಮಕನೆ ಅನುಗಾಲ ॥4॥

ಮಾತಂಗ ವರದ ಜಗನ್ನಾಥವಿಠಲನ್ನ ಸಂ-
ಪ್ರೀತಿಯಿಂದ ಸಾರೂಪ್ಯ । ಸಾರೂಪ್ಯವೈದಿ ವಿ-
ಖ್ಯಾತ ಯುತನಾದೆ ಜಗದೊಳು ॥5॥

* * * *

ರಾಗ : ನಾಟಿ ತಾಳ : ಆದಿ

ಗಜಮುಖ ವಂದಿಸುವೆ ಕರುಣಿಸಿ ಕಾಯೊ ॥ಪ॥

ಗಜಮುಖ ವಂದಿಪೆ ಗಜಗೌರಿಯ ಪುತ್ರ
ಅಜನ ಪಿತನ ಮೊಮ್ಮಗನ ಮೋಹದ ಬಾಲ ॥ಅ.ಪ॥

ನೀಲಕಂಠನ ಸುತ ಬಾಲಗಣೇಶನೆ
ಬಾರಿ ಬಾರಿಗೆ ನಿನ್ನ ಭಜನೆ ಮಾಡುವೆನಯ್ಯ ॥1॥

ಪರುವತನ ಪುತ್ರಿ ಪಾರ್ವತಿಯ ಕುಮಾರ
ಗರುವಿಯಾ ಚಂದ್ರಗೆ ಸ್ಥಿರಶಾಪ ಕೊಟ್ಟನೆ ॥2॥

ಹರಿಹರರು ನಿನ್ನ ಚರಣ ಪೂಜೆಯ ಮಾಡಿ
ದುರುಳ ಕಂಟಕರನು ತರಿದು ಬಿಸುಡಿದರಯ್ಯ ॥3॥

ಮತಿಗೆಟ್ಟ ರಾವಣ ಪೂಜಿಸದೆ
ಸೀತಾಪತಿ ಕರದಿಂದಲಿ ಹತವಾಗಿ ಪೋದನು ॥4॥

ವಾರಿಜನಾಭ ಶ್ರೀ ಹಯವದನನ ಪದ
ಸೇರುವ ಮಾರ್ಗದ ದಾರಿಯ ತೋರಿಸೊ ॥5॥

* * * *

ರಾಗ ಮೋಹನ ಕಲ್ಯಾಣಿ ಅಟ್ಟ ತಾಳ

ಲಂಬೋದರ ಪಾಹೀ ಪಾಹೀ ಜಗದ್ಗುರು ।
ಶಂಭುನಂದನ ಸುರಸುತ ಪಾದಾ ॥ಪ॥

ಯೋಗೀಶಾರ್ಚಿತ ಶ್ರೀ ಪಾರ್ವತಿ ಪುತ್ರ ನತಮಿತ್ರಾ ।
ಆಗಸವಾಳ್ದ ಮೂಷಕ ರೂಢಾ ॥
ನಾಗಶಯನನ ಪಾದ ಧ್ಯಾನದಲ್ಲಿಡು ನಿತ್ಯಾ ।
ಶ್ರೀ ಗಣಪತಿ ನಿನ್ನ ಬಲಗೊಂಬೆ ॥1॥

ಶ್ರೀವರ ಶ್ರೀರಾಮಚಂದ್ರ ಧರ್ಮರಾಯಾ ।
ದೇವೇಂದ್ರಾ ನಿನ್ನ ಪೂಜಿಸಿದಾರೋ ॥
ಕೇವಲ ಕಲಿ ದುರ್ಯೋಧನ ಪೂಜಿಸದೆ ಕೆಟ್ಟಾ ।
ಶ್ರೀ ವಿಘ್ನೇಶ್ವರ ನಿನ್ನ ಬಲಗೊಂಬೆ ॥2॥

ದನುಜಾರ ಮೋಹೀಸೂವದಕೆ ಸಂಕಟ ಚೌತಿ ।
ಯೆನಿಸೀ ಪೂಜಿಸಿಕೊಂಬೆ ಖಳರಿಂದಾ ॥

ಮುನಿ ವ್ಯಾಸ ಕೃತ ಗ್ರಂಥಾರ್ಥವ ತಿಳಿದು ಬರೆದಾ ।
ಗಣರಾಜಾ ನಿನ್ನ ಪಾದಾ ಬಲಗೊಂಬೆ ॥3॥
ಶಂಬು ಚಕ್ರಾಂಕಿತಾ ಪಾಶಧಾರನೇ ರಕ್ತ ।
ಅಂಬರಾದ್ವಯ ಭೂಷಾ ನಿರ್ದೋಷಾ ॥
ಶಂಬರಾರಿಪು ಶಿರಾವಿಜಿತಾ ಮೃದ್ಭವ ಗಾತ್ರಾ ।
ಅಂಬಾರಾಧಿಪ ನಿನ್ನ ಬಲಗೊಂಬೆ ॥4॥
(ಅಂಬೂಜಾಲಯಜಾನೆ ಬಲಗೊಂಬೆ)
ಏಕವಿಂಶತಿ ಪುಷ್ಪಾನ ಮನ ಮೋದಕ ಪ್ರೀಯ ।
ನೀ ಕರುಣಿಪುದೂ ನಿನ್ನವಾನೆಂದು ॥
ಸಾಕು ವಿಷಯ ಸುಖಾ ಸುಜನಾರೋಳಾಡಿಸೊ ।
ಏಕಾದಂತನೆ ನಿನ್ನ ಬಲಗೊಂಬೆ ॥5॥
ಏನು ಬೇಡುವೊದಿಲ್ಲಾ ಏನು ಮಾಡುವ್ದೊ ಕರ್ಮ ।
ಶ್ರೀನಿವಾಸನೆ ಮಾಡಿಸುವನೆಂಬೊ ॥
ಜ್ಞಾನಾವೆ ಯಂದೆಂದಿಗಿರಲಿ ತಾರಶಾಂತ- ।
ಕಾನುಜಾ ನಿನ್ನ ಬಲಗೊಂಬೆ ॥6॥
ಪ್ರಾಣಸೇವಕ ಚಾಮೀಕರವರ್ಣ ಗಜಮುಖ ।
ಪ್ರಾಣೇಶ ವಿಠಲನಾ ಸುಕುಮಾರಾ ॥
ನೀನೊಲಿದೆಮಗೆ ವಿಘ್ನವ ಪರಿಹರಿಸುತ ।
ಪೋಣಿಸು ಸನ್ಮತೀ ಬಲಗೊಂಬೆ ॥7॥

* * * *

ರಾಗ : ಕಮಾಚ್ ತಾಳ : ಆದಿ

ಗಜವದನ ಪಾವನ ವಿಘ್ನನಾಶನ ॥ಪ॥
ವರ ಪಾಶಾಂಕುಶಧರ ಪರಮದಯಾಳೊ
ಕರುಣಾಪೂರಿತ ಗೌರೀವರಕುಮಾರನೆ ॥1॥

ಸುಂದರವದನಾರವಿಂದನಯನ ಘನ-
ಸುಂದರಿ ಕಂದನೆ ಬಂದು ರಕ್ಷಿಸೊ ॥2॥

ಗೋಪಾಲವಿಠಲನ ಅಪಾರ ಭಜಕನೆ
ಶಾಪಾನುಗ್ರಹಶಕ್ತಾನೇಕ ಮಹಿಮಾ ॥3॥

* * * *

ರಾಗ : ಕಾಪಿ ತಾಳ : ಆದಿ

ಗಜವದನ ಪಾಲಿಸೊ ॥ಪ॥

ತ್ರಿಜಗದೊಡೆಯ ಶ್ರೀ ಭುಜಗಭೂಷಣ
ಗಜವದನ ಪಾಲಿಸೊ ॥ಅ ಪ॥

ಭಕ್ತಿಯೊಳು ಭಜಿಪೆನು ರಕ್ತಾಂಬರಧರ
ಮುಕ್ತಿಪಥವ ತೋರೊ ಶಕ್ತಿ ಸ್ವರೂಪನೇ ॥1॥

ಏಸು ದಿನಕೆ ನಿನ್ನ ವಾಸವ ಪೊಗಳುವೆ
ಲೇಸಪಾಲಿಸೊ ನಿತ್ಯವಾಸವನುತ ॥2॥

ಪೊಡವಿಯೊಳಗೆ ನಿನ್ನ ಬಿಡುವರ್ಯಾರೊ ಎನ್ನ
ಕಡುಹರುಷದಿ ಕಾಯೋ ವಿಜಯ ವಿಟ್ಠಲದಾಸ ॥3॥

* * * *

ರಾಗ : ಸೌರಾಷ್ಟ್ರ ತಾಳ : ಛಾಪು

ಶರಣು ಶರಣು ॥ಪ॥

ಶರಣು ಬೆನಕನೆ ಕನಕ ರೂಪನೆ ಕಾಮಿನಿ ಸಂಗ ದೂರನೆ ।
ಶರಣು ಸಾಂಬನ ಪ್ರೀತಿ ಪುತ್ರನೆ ಶರಣು ಜನರಿಗೆ ಮಿತ್ರನೆ ॥ಅ.ಪ.॥

ಏಕದಂತನೆ ಲೋಕಖ್ಯಾತನೆ ಏಕವಾಕ್ಯ ಪ್ರವೀಣನೆ ।
ಏಕವಿಂಶತಿ ಪತ್ರ ಪೂಜಿತಾನೇಕ ವಿಘ್ನ ವಿನಾಯಕನೆ ॥1॥

ಲಂಬಕರ್ಣನೆ ನಾಸಿಕಾಧರನೆ ಗಾಂಭೀರ್ಯ ಶಿವಗುಣ ಸಾಗರನೆ ।
ಕಂಬುಕಂಧರ ಇಂದು ಮೌಳಿಜ ಚಂದನ ಚರ್ಚಿತಾಂಗನೆ ॥ ॥2॥

ಚತುರ್ಬಾಹು ಚರಣತೊರವಿನ ಚತುರ ಆಯುಧ ಧಾರನೆ ।
ಮತಿಯವಂತನೆ ಮಲಿನಜನಿತನೆ ಅತಿಯ ಮಧುರಾಹಾರನೆ ॥ ॥3॥

ವಕ್ರತುಂಡನೆ ಮಹಾಕಾಯನೆ ಅರ್ಕಕೋಟಿ ಪ್ರದೀಪನೆ ।
ಚಕ್ರಧರ ಹರಬ್ರಹ್ಮ ಪೂಜಿತ ರಕ್ತವಸ್ತ್ರಾಧಾರನೆ ॥4॥

ಮೂಷಿಕಾಸನ ಶೇಷಭೂಷಣ ಅಶೇಷ ವಿಘ್ನವಿನಾಯಕನೆ ।
ದಾಸ ಪುರಂದರ ವಿಟ್ಠಲೇಶನ ಈಶಗುಣಗಳ ಪೊಗಳುವೆ ॥5॥

* * * *

ಗಣಪತಿ ಎನ್ನ ಪಾಲಿಸೋ । ಗಂಭೀರಾ ॥ಪ॥

ಪಾರ್ವತಿನಂದನ ಸುಂದರವದನಾ ।
ಶರ್ವಾದಿ ಸುರಪ್ರಿಯ ಶಿರಬಾಗುವೆನು ॥1॥

ಆದಿಪೂಜಿತ ನೀನು ಮೋದ ಭಕ್ತರಿಗಿತ್ತು ।
ಮಾಧವನಲಿ ಸದಾ ನಿಲಿಸು ನೀ ॥2॥

ಪಂಕಜನಯನ ಶ್ರೀ ವೇಂಕಟವಿಟ್ಠಲನ ।
ಕಿಂಕರನೆನಿಸೆನ್ನ ಶಂಕರತನಯನೇ ॥3॥

* * * *

ರಾಗ: ದರ್ಬಾರ್ ತಾಳ : ಅಟ

ನಮ್ಮಮ್ಮ ಶಾರದೆ ಉಮಾಮಹೇಶ್ವರಿ-
ನಿಮ್ಮೊಳಗಿಹನ್ಯಾರಮ್ಮ ॥ಪ ॥

ಕಮ್ಮಗೋಲನವೈರಿಸುತನಾದ ಸೊಂಡಿಲ -
ಹೆಮ್ಮೆಯ ಗಣನಾಥನೆ ಅಮ್ಮಯ್ಯ ॥ಅ॥

ಮೋರೆ ಕಪ್ಪಿನಭಾವ ಮೊರದಗಲದ ಕಿವಿ -
ಕೋರೆದಾಡೆಯನ್ಯಾರಮ್ಮ

ಗಣೇಶಚತುರ್ಥೀ

ಮೂರುಕಣ್ಣಿನ ಸುತ ಮುರಿದಿಟ್ಟ ಚಂದ್ರನ -
ಧೀರ ತಾ ಗಣನಾಥನೇ ಅಮ್ಮಯ್ಯ ||1||

ಉಟ್ಟ ದಟ್ಟಿಯು ಬಿಗಿದುಟ್ಟ ಚಲ್ಲಣವು -
ಧಿಟ್ಟ ತಾನಿವನ್ಯಾರಮ್ಮ
ಪಟ್ಟದರಾಣಿ ಪಾರ್ವತಿಯ ಕುಮಾರ -
ಹೊಟ್ಟೆಯ ಗಣನಾಥನೆ ಅಮ್ಮಯ್ಯ ||2||

ರಾಶಿವಿದ್ಯೆಯ ಬಲ್ಲ ರಮಣಿಹಂಬಲನೊಲ್ಲ -
ಭಾಷಿಗನಿವನ್ಯಾರಮ್ಮ
ಲೇಸಾಗಿ ಸುಜನರ ಸಲಹುವ ನೆಲೆಯಾದಿ-
ಕೇಶವನ ದಾಸ ಕಾಣೇ ಅಮ್ಮಯ್ಯ ||3||

* * * *

ಗಜಮುಖನೆ ಸಿದ್ಧಿದಾಯಕನೆ ವಂದಿಪೆ ಶರಣು ||ಪ||

ತ್ರಿಜಗವಂದಿತನಾದ ದೇವದೇವನೆ ಶರಣು ।
ಸುಜನರಿಗೆ ವಿಘ್ನವನು ಪರಿಹರಿಪೆ ಶರಣು ||ಅ.ಪ.||

ಮಂದಮತಿಯನು ಬಿಡಿಸಿ ಚಂದ ಜ್ಞಾನವನಿತ್ತು ।
ಇಂದಿರೇಶನ ಪಾದ ಪೊಂದಿಪ್ಪ ತೆರದಿ ।
ಸುಂದರಾಂಗನೆ ನಿನ್ನ ಪದದ್ವಂದ್ವಕೆರಗುವೆನು ।
ಸಂದೇಹ ಮಾಡದೆಲೆ ಇಂದು ಕರುಣಿಪುದು ||1||

ಹರನ ತನಯನೆ ಕರುಣಾಕರನೆ ಸುರನರವರದ ।
ಪೊರೆಯ ಲಾಲಿಸಿ ಎನ್ನ ಕರಗಳ ಪಿಡಿದು ।
ಪೊರೆಯದಿದ್ದರೆ ಬಿಡೆನು ನೆರೆ ನಿನ್ನ ಅಡಿಗಳನು ।
ತ್ವರಿಯದಿಂದಲಿ ನೋಡು ಶರಣೆಂಬೆ ನಿನಗೆ ||2||

ಸಿದ್ಧಿದಾಯಕ ನಿನ್ನ ಪೊದ್ದಿ(ಪೊಂದಿ) ಮೆರೆವೆನೊ ನಾನು ।
ಅಬ್ಧಿಶಯನನ ಮಹಿಮೆ ಬದ್ಧದಲಿ ಪೇಳುವೆ ।

ಶುದ್ಧಮತಿಯನು ಕೊಟ್ಟು ಉದ್ಧರಿಸಬೇಕೆನ್ನ ।
ಮಧ್ವವಲ್ಲಭ ನಮ್ಮ ಶ್ರೀಕೃಷ್ಣಗತಿಪ್ರಿಯ ॥3॥

* * * *

(ರಾಗ ನಾಟಿ - ಉಗಾಭೋಗ)

ಆದಿಯಲಿ ಗಜಮುಖನ ಅರ್ಚಿಸಿ ಆರಂಭಿಸಲು
ಆವ ಬಗೆ ಕಾರ್ಯತತಿ ಸಿದ್ಧಿಗೊಳಿಸಿ
ಮೋದದಿಂ ಸಲಿಸುವ ಮನದಿಷ್ಟವ
ಸಾಧುಜನರೆಲ್ಲ ಕೇಳಿ ಸಕಲ ಸಾರರಿಂಗೆ
ಮಾಧವನೇ ನೇಮಿಸಿಪ್ಪ ಈ ಅಧಿಕಾರವ
ಆದರದಿಂದ ಅವರವರೊಳು ನಿಂದು
ಭೇದಗೊಳಿಸದೆ ಕಾರ್ಯ ಮಾಳ್ಪ ಪುರಂದರವಿಟ್ಠಲ ॥

* * * *

ರಾಗ : ತಾಳ : ತ್ರಿವಿಡೆ

ಶರಣು ಶರಣು ವಿನಾಯಕ
ಶರಣು ವಿದ್ಯಾ ಪ್ರದಾಯಕ ॥ಪ॥
ಶರಣು ಪಾರ್ವತಿ ತನಯ ಮೂರುತಿ
ಶರಣು ಮೂಷಕ ವಾಹನ ॥ಅ.ಪ.॥
ನಿಟಿಲ ನೇತ್ರನ ವರದ ಸುತನೆ ನಾಗ ಯಜ್ಞೋಪವೀತನೆ
ಕಟಿಯ ಸೂತ್ರದ ಕೋಮಲಾಂಗನೆ ಕರ್ಣಕುಂಡಲಧಾರನೆ ॥1॥
ಬಟ್ಟಮುತ್ತಿನ ಪದಕ ಹಾರನೆ ದಿವ್ಯಬಾಹು ಚತುಷ್ಕನೆ
ಇಟ್ಟ ತೊಡುಗೆಯ ಹೇಮ ಕಂಕಣ ಪಾಶ-ಅಂಕುಶಧಾರನೆ ॥2॥
ಕುಕ್ಷಿ ಮಹಾ ಲಂಬೋದರನೆ ಇಕ್ಷುಚಾಪನ ಗೆಲಿದನೆ
ಪಕ್ಷಿ ವಾಹನನಾದ ಪುರಂದರ ವಿಠಲನ ನಿಜದಾಸನೆ ॥3॥

* * * *

## ಗಣೇಶಚತುರ್ಥೀ

ರಾಗ : ನಾಟ ತಾಳ : ಆದಿ

ವಂದಿಸುವುದಾದಿಯಲಿ ಗಣನಾಥನ ||ಪ||
ಸಂದೇಹ ಸಲ್ಲ ಶ್ರೀಹರಿಯಾಜ್ಞೆಯಿದಕುಂಟು ||ಅ.ಪ.||
ಹಿಂದೆ ರಾವಣ ತಾನು ವಂದಿಸದೆ ಗಜಮುಖನ
ನಿಂದು ತಪವನು ಗೈದು ವರ ಪಡೆಯಲು
ಒಂದು ನಿಮಿಷದಿ ಬಂದು ವಿಘ್ನವನು ಆಚರಿಸಿ
ತಂದ ವರಗಳನೆಲ್ಲ ಧರೆಗೆ ಇಳಿಸಿದನು ||1||
ಅಂದಿನಾ ಬಗೆಯರಿತು ಬಂದು ಹರಿ ಧರ್ಮಜಗೆ
ಮುಂದೆ ಗಣಪನ ಪೂಜಿಸೆಂದು ಪೇಳೆ
ಒಂದೆ ಮನದಲಿ ಬಂದು ಪೂಜಿಸಲು ಗಣನಾಥ
ಹೊಂದಿಸಿದ ನಿರ್ವಿಘ್ನದಿಂದ ರಾಜ್ಯವನು ||2||
ಇಂದು ಜಗವೆಲ್ಲ ಉಮೆನಂದನನ ಪೂಜಿಸಲು
ಚೆಂದದಿಂದಲಿ ಸಕಲಸಿದ್ಧಿಗಳನಿತ್ತು
ತಂದೆ ಸಿರಿ ಪುರಂದರವಿಠಲನ ಸೇವೆಯೊಳು
ಬಂದು ವಿಘ್ನವ ಕಳೆದಾನಂದವನು ಕೊಡುವ

* * * *

ರಾಗ : ಪಂತುವರಾಳಿ ತಾಳ : ಅಟ್ಟ

ಲಂಬೋದರ ರಕ್ತಾಂಬರಧರ
ಅಂಬರಾಧೀಶ್ವರ ಗೌರೀಕುಮಾರ ||ಪ||
ಸಿಂಧುರವದನಾರವಿಂದ ಸುಂದರ ವಿಘ್ನಾ-
ಘಾಂಧಕಾರ ಶರಶ್ಚಂದಿರ ಧೀರ ||1||
ವರ ಪಾಶಾಂಕುಶ ದಂತಧರ ಸುಮೋದಕ ಶೂರ್ಪ-
ಕರಣ ತ್ವಚ್ಚರಣ ಪಂಕಜಕಾನಮಿಪೆ ||2||
ಜಗನ್ನಾಥವಿಠಲನ ಮಗನಾಗಿ ದ್ವಾಪರ-
ಯುಗದಲ್ಲಿ ಜನಿಸಿದ ಸುಗುಣ ನೀ ಸಲಹೊ ||3||

* * * *

ಗಣೇಶಚತುರ್ಥೀ

ರಾಗ : ಪೀಲು ತಾಳ : ಆದಿ

ಗಜವದನ ಬೇಡುವೆ ಗೌರೀತನಯ
ತ್ರಿಜಗವಂದಿತನೆ ಸುಜನರ ಪೊರೆವನೆ ||ಪ||

ಪಾಶಾಂಕುಶ ಧರ ಪರಮ ಪವಿತ್ರ ।
ಮೂಷಕವಾಹನ ಮುನಿಜನ ಪ್ರೇಮ ||1||

ಮೋದದಿಂದಲಿ ನಿನ್ನ ಪಾದವ ನಂಬಿದೆ ।
ಸಾಧುವಂದಿತನೆ ಅನಾದರ ಮಾಡದೆ ||2||

ಸರಸಿಜನಾಭ ಶ್ರೀ ಪುರಂದರ ವಿಠಲನ ।
ನಿರುತ ನೆನೆಯುವಂತೆ ವರ ದಯ ಮಾಡೊ ||3||

* * * *

ರಾಗ : ಪಂತುವರಾಳಿ ತಾಳ : ಆದಿ

ಅಂಬಾತನಯ ಹೇರಂಬ ಪೂರ್ಣಕರು ||ಪ||

ಣಾಂಬುಧೇ ತವ ಚರಣಾಂಬುಜ ಕೆರಗುವೆ ||ಅ.ಪ||

ದಶನ ಮೋದಕ ಪಾಶಾಂಕುಶ ಪಾಣೇ
ಅಸಮಸಾಹಸ ಚಾರುದೇಷ್ಣ ವಂದಿಪೆ ||1||

ವೃಂದಾರಕ ವೃಂದವಂದಿತ ಚರಣಾರ
ವಿಂದುಯುಗಳ ದಯದಿಂದ ತೋರೆನಗೆ ||2||

ಯೂಥಪವದನ ಪ್ರದ್ಯೋತ ಸನ್ನಿಭ ಜಗ-
ನ್ನಾಥವಿಟ್ಠಲನ ಸಂಪ್ರೀತಿ ವಿಜಯ ಜಯ ||3||

* * * *

ವಂದಿಪೆ ನಿನಗೆ ಗಣನಾಥಾ । ಮೊದ-
ಲೊಂದಿಪೆ ನಿನಗೆ ಗಣನಾಥಾ ||ಪ||

ಬಂದ ವಿಘ್ನವ ಕಳೆಯೊ ಗಣನಾಥ ||ಅ.ಪ.||

ಹಿಂದೆ ರಾವಣನು ಮದದಿಂದ ನಿನ್ನ ಪೂಜಿಸದೆ ।
ಸಂದ ರಣದಲಿ ಗಣನಾಥಾ ॥1॥
ಆದಿಯಲ್ಲಿ ಧರ್ಮರಾಜ ಪೂಜಿಸಿದ ನಾನಾವಿಧ ।
ಸಾಧಿಸಿದ ರಾಜ್ಯ ಗಣನಾಥಾ ॥2॥
ಮಂಗಳಮೂರುತಿ ಸಿರಿ ರಂಗವಿಠಲನ ಪಾದ-
ಭೃಂಗನೆ ಪಾಲಿಸೋ ಗಣನಾಥಾ ॥3॥

* * * * *

## ಗಣೇಶಹಬ್ಬದ ಅಡುಗೆಗಳು

**ಸ್ವರ್ಣಗೌರಿ ಪುಸ್ತಕದಲ್ಲಿ ಗಣೇಶ ಚತುರ್ಥೀಯ ಅಡುಗೆಗಳನ್ನು ನೀಡಲಾಗಿದೆ. ಅದನ್ನು ನೋಡಿ ತಿಳಿದುಕೊಂಡು ಹಬ್ಬದ ಎಲ್ಲಾ ಅಡುಗೆಗಳನ್ನು ಅವಶ್ಯವಾಗಿ ಮಾಡಬೇಕು. 21 ಕಡುಬು, 21 ಮೋದಕ, 21 ಲಾಡುಗಳು, 21 ಬಾಳೇಹಣ್ಣು, 21 ಕಬ್ಬಿನ ತುಂಡುಗಳನ್ನು ಮಾಡಿ ಸಮರ್ಪಿಸಬೇಕು.**

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥
ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ಗಣೇಶಚತುರ್ಥೀಪೂಜೆ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ
ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ
ಶ್ರೀಲಕ್ಷ್ಮೀಹಯಗ್ರೀವದೇವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ



ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),

ಗಿರಿನಗರ, ಬೆಂಗಳೂರು - 560 085

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಋಷಿಪಂಚಮೀ

ಭಾದ್ರಪದ || ಶುದ್ಧ || ಪಂಚಮೀ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಋಷಿಪಂಚಮೀ

ಭಾದ್ರಪದ ॥ ಶುಕ್ಲ ಪಕ್ಷ ॥ ಪಂಚಮಿ

ವಿದ್ವಾನ್॥ ಬೆಮ್ಮತ್ತಿ ವೇಂಕಟೇಶಾಚಾರ್ಯ,

ಬೆಂಗಳೂರು.

ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),

ಗಿರಿನಗರ, ಬೆಂಗಳೂರು-೮೫

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಋಷಿಪಂಚಮೀ

ಭಾದ್ರಪದ ।। ಶುಕ್ಲ ಪಕ್ಷ ।। ಪಂಚಮಿ

ವಿದ್ವಾನ್।। ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :
ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),
ಗಿರಿನಗರ, ಬೆಂಗಳೂರು-೮೫

'ಋಷಿಪಂಚಮೀ' ಶಾಲಿವಾಹನ ಶಕೆ ೧೯೪೨ ಶಾರ್ವರಿ ॥ ಶ್ರಾವಣ ॥ ಶುದ್ಧ ॥ ಪೂರ್ಣಿಮೆ (ದಿನಾಂಕ:೩-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥಶ್ರೀಪಾದಂಗಳವರ ಕರಕಮಲಗಳಿಂದ ಭಾರತೀರಮಣಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವ-ದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು : ೧೨೦


4271, 2ನೇ ಮೇನ್, ಗಿರಿನಗರ,
ಸೀತಾಸರ್ಕಲ್ ಹತ್ತಿರ, ಬೆಂಗಳೂರು-85
ದೂರವಾಣಿ : 9141495120

ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಸುಬ್ಬಣ್ಣ ಕೆಂಪದಾಳಿಹಳ್ಳಿ,
ದೂರವಾಣಿ : 9141311280

ಮುದ್ರಣ : ಮುಕ್ತಿಪಥ ಮುದ್ರಣಾಲಯ,
ಬೆಂಗಳೂರು.



ದಿ|| ಡಿ.ಕೆ. ವನಜಾಕ್ಷಮ್ಮ, ದೊಡ್ಡಬಳ್ಳಾಪುರ.

ಹರಿಭಕ್ತರೂ, ಉದಾರಿಗಳೂ, ಶ್ರೇಷ್ಠಸಾಧಕರೂ ಆದ ಬೆಂಗಳೂರು ನಿವಾಸಿಗಳಾದ ವಿಶ್ವಾಮಿತ್ರಗೋತ್ರೋದ್ಭವರಾದ ಶ್ರೀ ಪಿ. ಸುಚೇಂದ್ರ ಇವರು ತಮ್ಮ ಸೋದರತ್ತೆಯವರಾದ ದಿ|| ಡಿ.ಕೆ. ವನಜಾಕ್ಷಮ್ಮ, ದೊಡ್ಡಬಳ್ಳಾಪುರ ಇವರ ಸ್ಮರಣಾರ್ಥವಾಗಿ ಋಷಿಪಂಚಮೀ ಪುಸ್ತಕವನ್ನು ಸೇವೆಯನ್ನು ಮಾಡಿದ್ದಾರೆ. ಶ್ರೀ ಪಿ. ಸುಚೇಂದ್ರ ಹಾಗೂ ಶ್ರೀಮತಿ ಪ್ರಿಯ ಸುಚೇಂದ್ರ ಇವರು ಮಾಡಿದ ಜ್ಞಾನಸೇವೆಯು ದಿ|| ಡಿ.ಕೆ. ವನಜಾಕ್ಷಮ್ಮ ಇವರಿಗೆ ತಲುಪಲಿ.

**ಈ ದಿವಸ ನಿರಂತರ ಸ್ಮರಿಸಿರಿ –**

ಅದಿತಿಸಹಿತಾಯ ಕಶ್ಯಪಾಯ ನಮಃ

ಅನಸೂಯಾಸಹಿತಾಯ ಅತ್ರಯೇ ನಮಃ

ಸುಶೀಲಾಸಹಿತಾಯ ಭರದ್ವಾಜಾಯ ನಮಃ

ಕುಮುದ್ವತೀಸಹಿತಾಯ ವಿಶ್ವಾಮಿತ್ರಾಯ ನಮಃ

ಅಹಲ್ಯಾಸಹಿತಾಯ ಗೌತಮಾಯ ನಮಃ

ರೇಣುಕಾಸಹಿತಾಯ ಜಮದಗ್ನಯೇ ನಮಃ

ಅರುಂಧತೀಸಹಿತಾಯ ವಸಿಷ್ಠಾಯ ನಮಃ

# ವಿಷಯಾನುಕ್ರಮಣಿಕೆ

# ಮುನ್ನುಡಿ

ಸ್ತ್ರೀಯರು ಮಾತ್ರ ಆಚರಿಸಬೇಕಾದ ವ್ರತದ ಪುಸ್ತಕವಿದು. ಒಂದು ವೇಳೆ ತಾಯಿ, ಅಜ್ಜಿ ಮೊದಲಾದವರು ಋಷಿಪಂಚಮಿಯನ್ನು ಆಚರಿಸದೇ ಸ್ವರ್ಗಸ್ಥರಾಗಿದ್ದಲ್ಲಿ ಅವರ ಹೆಸರಿನಲ್ಲಿ ಮಗನೇ ಆಚರಿಸಬೇಕು. ಹಿರಿಯರು ಋಷಿಪಂಚಮಿಯನ್ನು ಮಾಡದೇ ಅವರ ವಂಶದ ಕಿರಿಯರು ಋಷಿಪಂಚಮಿಯನ್ನು ಆಚರಿಸಬಾರದು ಎಂಬ ಸಂಪ್ರದಾಯವಿದೆ. ಏಕೆಂದರೆ ಋಷಿಪಂಚಮೀವ್ರತವನ್ನು ಆಚರಿಸದೇ ರಜಸ್ವಲಾದೋಷವು ಪರಿಹಾರವಾಗುವುದಿಲ್ಲ. ಇದು ಪರಿಹಾರವಾಗದೇ ದೇಹವು ಪವಿತ್ರವಾಗುವುದಿಲ್ಲ. ಆಗ ಅವರಿಗೆ ಸದ್ಗತಿಯಾಗುವುದಿಲ್ಲ. ಹಿರಿಯರ ಹೆಸರಿನಲ್ಲಿ ಮಕ್ಕಳು ಋಷಿಪಂಚಮೀ ವ್ರತವನ್ನು ಮಾಡಿದಾಗ ಹಿರಿಯರು ಪಾಪವಿಮುಕ್ತರಾಗುತ್ತಾರೆ. ಸದ್ಗತಿಯನ್ನು ಹೊಂದುತ್ತಾರೆ. ಸೊಸೆಗೆ ಆಶೀರ್ವದಿಸುತ್ತಾರೆ. ಸೊಸೆಯು ಮಾಡುವ ಋಷಿಪಂಚಮಿ ವ್ರತವು ಸಫಲವಾಗುತ್ತದೆ. ಆದ್ದರಿಂದ ಹಿಂದಿನವರ ಹೆಸರಿನಲ್ಲಿ ಗಂಡುಮಕ್ಕಳು ಋಷಿಪಂಚಮೀ ಅನುಷ್ಠಾನವನ್ನು ಮಾಡಬೇಕು.

ಈ ಪುಸ್ತಕದಲ್ಲಿ ಋಷಿಪಂಚಮಿಯ ಬಗ್ಗೆ ನಿಖರವಾದ ವಿಚಾರಗಳನ್ನು ನೀಡಲಾಗಿದೆ. ಆದರೂ ಪೂಜಾವಿಧಾನವು ಅತ್ಯಂತ ವಿಸ್ತೃತವಾಗಿರುವುದರಿಂದ ಕಥಾ ಭಾಗವೂ ಕೂಡ ವಿವರವಾಗಿ ಇರುವುದರಿಂದ ಎಲ್ಲ ವಿಷಯವನ್ನು ವಿವರವಾಗಿ ತಿಳಿಸಲು ಸಾಧ್ಯವಾಗಲಿಲ್ಲ. ಪ್ರತಿಯೊಬ್ಬ ಸ್ತ್ರೀಯರು ರಜಸ್ವಲಾದೋಷವು ಪರಿಹಾರವಾದ ಮೇಲೆ ಏಳು ವರ್ಷಗಳ ನಂತರ ಈ ವ್ರತವನ್ನು ಅನುಷ್ಠಾನ ಮಾಡಲೇ ಬೇಕು. ಅದಕ್ಕಾಗಿ ಈ ಕೃತಿಯ ಸದುಪಯೋಗವನ್ನು ಸಕಲ ಹರಿಭಕ್ತರು ಪಡೆದುಕೊಳ್ಳಬೇಕು. ಈ ಕೃತಿಯಲ್ಲಿ

ಉದ್ಯಾಪನೆಯ ವಿಧಿ ವಿಧಾನಗಳನ್ನು ನೀಡಿರುವುದಿಲ್ಲ. ಆದನ್ನು ಪುರೋಹಿತರ ಮೂಲಕ ತಿಳಿದುಕೊಳ್ಳಬೇಕು.

ಈ ಪುಸ್ತಕದ ಸೇವೆಯನ್ನು ಮಾಡಿದ ವಿಶ್ವಾಮಿತ್ರಗೋತ್ರದಲ್ಲಿ ಹುಟ್ಟಿದ ಹರಿಭಕ್ತರಾದ ಶ್ರೀ ಪಿ. ಸುಚೇಂದ್ರ ಹಾಗೂ ಶ್ರೀಮತಿ ಪ್ರಿಯ ಸುಚೇಂದ್ರ ಹಾಗೂ ಕುಟುಂಬದವರಿಗೆಲ್ಲರಿಗೂ ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ-ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಇವರ ಸೋದರತ್ತೆಯವರಿಗೆ ಈ ಜ್ಞಾನಯಜ್ಞದ ಪುಣ್ಯರಾಶಿಯು ತಲುಪಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ.

## ಸ್ತ್ರೀಯರಿಗೆ ಸೂಚನೆ

ಈ ಪುಸ್ತಕದಲ್ಲಿ ನೀಡಿದ ಪೂಜೆಯನ್ನು ಓದಿಕೊಂಡು ಸ್ತ್ರೀಯರು ಸರ್ವಥಾ ಪೂಜೆಯನ್ನು ಮಾಡಬಾರದು. ಪತಿಯ ಮೂಲಕವೇ ಮಾಡಿಸಬೇಕು.

ಸ್ತ್ರೀಯರು ಈ ಪುಸ್ತಕವನ್ನು ತೆಗೆದುಕೊಂಡು ಪತಿಗೆ ನೀಡಿ; ಪೂಜೆ ಮಾಡಿಸಲು ಎಂದು ಪ್ರಾರ್ಥಿಸಬೇಕು. ಪತಿಯು ದೊರೆಯದೇ ಇದ್ದಾಗ ಪುರೋಹಿತರ ಮೂಲಕ ಪೂಜೆಯನ್ನು ಮಾಡಿಸಬೇಕು. ಪುರೋಹಿತರೂ ಇಲ್ಲದೇ ಇದ್ದಾಗ ಮಕ್ಕಳ ಮೂಲಕ ಮಾಡಿಸಬೇಕು.

ಋಷಿಪಂಚಮಿವ್ರತವನ್ನು ಸ್ತ್ರೀಯರೇ ಆಚರಿಸಬೇಕಾದರೂ ಕೂಡ ಇದರಲ್ಲಿರುವ ಯಾವುದೇ ಮಂತ್ರಗಳನ್ನು ಅವರು ಪಠಿಸುವಂತಿಲ್ಲ. ಸಪ್ತರ್ಷಿಗಳ ಹೆಸರನ್ನಷ್ಟೇ ಹೇಳಿ ಅರ್ಚನೆ ಮಾಡಬೇಕು. ಅರ್ಘ್ಯ ನೀಡಬೇಕು.

## ಋಷಿಪೂಜೆ ಕುರಿತು ಅಪೂರ್ವಮಾಹಿತಿಗಳು

* ಈ ಮನ್ವಂತರದ ಸಪ್ತರ್ಷಿಗಳ ಪೂಜೆಯನ್ನು ಋಷಿಪಂಚಮಿಯ ದಿವಸ ಆಚರಿಸಬೇಕು. ೧. ಕಶ್ಯಪ, ೨. ಅತ್ರಿ, ೩. ಭರದ್ವಾಜ, ೪. ವಿಶ್ವಾಮಿತ್ರ, ೫. ಗೌತಮ, ೬. ಜಮದಗ್ನಿ ೭. ವಸಿಷ್ಠ ಇವರು ಈಗಿನ ಸಪ್ತರ್ಷಿಗಳು. ವಸಿಷ್ಠರ ಪತ್ನಿಯಾದ ಅರುಂಧತಿಯ ಪೂಜೆಯನ್ನೂ ಅವಶ್ಯವಾಗಿ ಮಾಡಬೇಕು.

* ೧. ಕಶ್ಯಪರ ಪತ್ನಿ ಅದಿತಿ ದೇವಿ. ೨. ಅತ್ರಿಋಷಿಗಳ ಪತ್ನಿ ಅನಸೂಯಾ. ೩. ಭರದ್ವಾಜಋಷಿಗಳ ಪತ್ನಿ ಸುಶೀಲಾ ೪. ವಿಶ್ವಾಮಿತ್ರಋಷಿಗಳ ಪತ್ನಿ ಕುಮುದ್ವತಿ. ೫. ಗೌತಮಋಷಿಗಳ ಪತ್ನಿ ಅಹಲ್ಯೆ. ೬. ಜಮದಗ್ನಿಋಷಿಗಳ ಪತ್ನಿ ರೇಣುಕೆ. ೭. ವಸಿಷ್ಠ ಋಷಿಗಳ ಪತ್ನಿ ಅರುಂಧತಿ. ಈ ಸಪ್ತರ್ಷಿಗಳ ಪತ್ನಿಯ ಪೂಜೆಯೇ ಸುವಾಸಿನಿಯರಿಗೆ ವಿಹಿತ.

* ಋಷಿಗಳ ಪೂಜೆಯನ್ನು ಪತಿಯು ಮಾಡಬೇಕು. ಋಷಿಪತ್ನಿಯರ ಪೂಜೆಯನ್ನು ಪತ್ನಿಯು ಮಾಡಬೇಕು.

* ಎಲ್ಲ ಋಷಿಪತ್ನಿಯರಲ್ಲಿ ಅರುಂಧತಿಯು ಶ್ರೇಷ್ಠಳಾಗಿದ್ದಾಳೆ. ನಭೋ ಮಂಡಲದಲ್ಲಿ ಅರುಂಧತೀ ನಕ್ಷತ್ರವು ಪ್ರಕಾಶಮಾನವಾಗಿ ಗೋಚರಿಸುತ್ತದೆ. ಆದ್ದರಿಂದ ಉಳಿದ ಪತ್ನಿಯರ ಪ್ರತೀಕವಾಗಿ ಅರುಂಧತಿಯ ಪೂಜೆಯಷ್ಟೇ ಸಂಪ್ರದಾಯಾಗತ- ವಾಗಿದೆ. ವಿಚಾರ ಮಾಡಿದಾಗ ಎಲ್ಲ ಋಷಿಗಳ ಪತ್ನಿಯರನ್ನೂ ಕೂಡ ಪೂಜಿಸಲೇ ಬೇಕು.

* ಭಗವಂತನು ಒಬ್ಬೊಬ್ಬರಿಗೆ ಒಂದೊಂದು ಕರ್ತವ್ಯಗಳನ್ನು ಆಜ್ಞೆಮಾಡಿದ್ದಾನೆ. ಸಪ್ತರ್ಷಿಗಳಿಗೆ ಹಾಗೂ ಅವರ ಪತ್ನಿಯರಿಗೆ ರಜೋದರ್ಶನದಿಂದ ಉಂಟಾದ ಪಾಪಪರಿಹಾರವನ್ನು ಮಾಡುವ ಕರ್ತವ್ಯವನ್ನು ನೀಡಿದ್ದಾನೆ. ಆದ್ದರಿಂದ ಋಷಿಪಂಚಮಿಯ ದಿವಸ ಪತ್ನಿಯರಿಂದೊಡಗೂಡಿದ ಋಷಿಗಳ ಪೂಜೆಯನ್ನು ಆಚರಿಸುವ ಸಂಪ್ರದಾಯವು ಅನೂಚಾನವಾಗಿ ನಡೆದುಕೊಂಡು ಬಂದಿದೆ.

* ಮೇಲೆ ಉಲ್ಲೇಖಿಸಿದ ಏಳು ಋಷಿಗಳ ಸಾಧನೆಯ ಮತ್ತು ಚರಿತ್ರೆಯ ಬಗ್ಗೆ ಋಷಿಪಂಚಮಿ ದಿನ ಪ್ರಾಜ್ಞರಿಂದ ಕೇಳಿ ತಿಳಿದುಕೊಳ್ಳಬೇಕು. ಅವರ ಪತ್ನಿಯರ ಸಾಧನೆಯನ್ನು ಕೂಡ ತಿಳಿದುಕೊಳ್ಳಬೇಕು.

* ಈ ಕೃತಿಯಲ್ಲಿ ಸಪ್ತರ್ಷಿಗಳ ಬಗ್ಗೆ ಸಂಕ್ಷೇಪವಾದ ವಿವರವನ್ನು ನೀವು ನೋಡಬಹುದು.

* ರಾತ್ರಿಯ ಕಾಲದಲ್ಲಿ ನಭೋಮಂಡಲದಲ್ಲಿ ನಕ್ಷತ್ರಗಳ ರೂಪದಲ್ಲಿ ಸಪ್ತರ್ಷಿಗಳಿರುತ್ತಾರೆ. ಇವರ ದರ್ಶನವನ್ನು ಇಂದು ಅವಶ್ಯವಾಗಿ ಮಾಡಬೇಕು.

* ಸಮಗ್ರವರ್ಷದ ಈ ದಿನದಂದು ನಭೋಮಂಡಲದಲ್ಲಿ ಅರುಂಧತೀ ಸಹಿತರಾದ ಸಪ್ತರ್ಷಿಗಳು ವಿಶೇಷವಾಗಿ ಪ್ರಕಾಶಿಸುತ್ತಾರೆ. ಆದ್ದರಿಂದಲೇ ಇಂದು ಋಷಿಗಳ ಪೂಜೆಯ ವಿಧಾನವು ಉಕ್ತವಾಗಿದೆ.

* ಅನೇಕರು ಪ್ರಾತಃಕಾಲದಲ್ಲಿಯೇ ಋಷಿಗಳ ಪೂಜೆಯನ್ನು ಮಾಡಿ, ಸಾಯಂಕಾಲದಂದು ನಭೋಮಂಡಲವನ್ನು ಕೂಡ ಗಮನಿಸದೆ ಋಷಿಪಂಚಮಿಯನ್ನು ಆಚರಿಸುತ್ತಾರೆ. ಇದು ಸರ್ವಥಾ ತಪ್ಪು. ರಾತ್ರಿಯ ಕಾಲದ ಪೂಜೆಗೆ ವಿಶೇಷಮಹತ್ವ ಎಂಬುದನ್ನು ಗಮನಿಸಬೇಕು.

* ಸಾಯಂಕಾಲದಿಂದ ನಾಕು ಯಾಮಗಳಲ್ಲಿ ಋಷಿಪಂಚಮಿಯ ಆಚರಣೆಯನ್ನು ಮಾಡಬೇಕು. ನಾಕು ಯಾಮಗಳಲ್ಲಿ ಸಪ್ತರ್ಷಿಗಳ ಪೂಜೆಯನ್ನು ಆಚರಿಸಬೇಕು.

* ಮೊದಲ ಯಾಮದಲ್ಲಿ ಆಚರಿಸುವ ಪೂಜಾವಿಧಾನವನ್ನು ಈ ಪುಸ್ತಕದಲ್ಲಿ ನೀಡಿದಂತೆ ಮಾಡಬೇಕು. ಮುಂದಿನ ಮೂರು ಯಾಮಗಳಲ್ಲಿ ಸಂಕ್ಷೇಪವಾಗಿ ಪೂಜೆಯನ್ನು ಮಾಡಬೇಕು.

* ಪ್ರಾತಃಕಾಲದಲ್ಲಿ ನೂರೆಂಟು ದಂತಧಾವನ, ನೂರೆಂಟು ಸ್ನಾನ, ಪಂಚಗವ್ಯಪ್ರಾಶನ ಇವುಗಳನ್ನು ಮುಗಿಸಿರಬೇಕು. ಸಾಯಂಕಾಲದಲ್ಲೂ ಋಷಿಪೂಜೆಯನ್ನು ಪ್ರಾರಂಭ ಮಾಡಬೇಕು. ಯಾವುದೇ ಕಾರಣಕ್ಕೂ ಬೆಳಿಗ್ಗೆ ಋಷಿಪೂಜೆಯು ವಿಹಿತವಲ್ಲ.

* ಸಪ್ತರ್ಷಿಗಳನ್ನು ಕಲಶದಲ್ಲಿ ಆವಾಹನೆ ಮಾಡಬೇಕು. ಕೆಲವರು ಕಲ್ಲಿನಲ್ಲಿ ಆವಾಹನೆ ಮಾಡುತ್ತಾರೆ. ಕಲ್ಲಿನಲ್ಲಿ ಆವಾಹನೆ ಮಾಡುವುದಕ್ಕಿಂತ ಕೂರ್ಚದಲ್ಲಿ ಆವಾಹನೆ ಮಾಡುವುದು ಶ್ರೇಷ್ಠ. ಕಲಶದಲ್ಲಿ ಆವಾಹನೆ ಮಾಡುವುದು ಮತ್ತಷ್ಟು ಶ್ರೇಷ್ಠ.

* ಆವಾಹನೆ ಮಾಡಿ ಪೂಜಿಸಿದ ಏಳು ಕಲಶಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದರೆ ವಿಶೇಷಫಲವು ದೊರಕುತ್ತದೆ.

* ಕಲಶಸ್ಥಾಪನೆಯ ಮಂತ್ರಗಳನ್ನು ಪ್ರತ್ಯೇಕವಾಗಿ ಉಚ್ಚರಿಸಿ, ಧಾನ್ಯರಾಶಿಯ ಮೇಲೆ ಏಳು ಕಲಶಗಳನ್ನಿಟ್ಟು ಆಯಾ ಋಷಿಪತ್ನಿಯರ ಸಹಿತರಾಗಿ ಋಷಿಗಳನ್ನು ನ್ಯಾಸಾದಿಗಳ ಮೂಲಕ ಆವಾಹನೆ ಮಾಡಬೇಕು.

* ಕೆಲವರು ರಾತ್ರಿಯ ಎರಡು ಯಾಮಗಳಲ್ಲಿ ಪೂಜೆಯನ್ನು ಮಾಡದೆ ನಿದ್ರೆ ಮಾಡುತ್ತಾರೆ. ಇದು ಅಶಾಸ್ತ್ರೀಯ. ಸಂಪೂರ್ಣ ಜಾಗರಣೆಯನ್ನು ಮಾಡಿ ಪ್ರತಿ ಯಾಮಗಳಲ್ಲಿ ಪೂಜೆಯನ್ನು ಸಂಕ್ಷೇಪವಾಗಿಯಾದರೂ ಮಾಡಬೇಕು. ಮತ್ತು ಭಜನೆ ಮೊದಲಾದವುಗಳನ್ನು ಮಾಡುತ್ತಾ ನಿದ್ರೆಯನ್ನು ಗೆಲ್ಲಬೇಕು.

* ಅತ್ಯಂತ ಶ್ರದ್ಧಾಭಕ್ತಿಗಳಿಂದ ಪತ್ನಿಸಹಿತರಾದ ಋಷಿಗಳ ಪೂಜೆಯನ್ನು ಆಚರಣೆ ಮಾಡುವುದರಿಂದ ದೇಹವು ಪವಿತ್ರವಾಗುತ್ತದೆ. ಋತುದೋಷವು ಪೂರ್ಣವಾಗಿ ಪರಿಹಾರವಾಗುತ್ತದೆ. ಪವಿತ್ರವಾದ ದೇಹವನ್ನು ಕೊನೆಯ ಕಾಲದಲ್ಲಿ ಪರಮಾತ್ಮನಿಗೆ ಸಮರ್ಪಣೆ ಮಾಡಲು ಅರ್ಹವಾಗುತ್ತದೆ. ಮುಂದೆ ಸದ್ಗತಿಯಾಗುತ್ತದೆ. ಮೋಕ್ಷಮಾರ್ಗವು ಸುಲಭವಾಗುತ್ತದೆ.

* * * * *

## ಸ್ತ್ರೀಯರು ಇದನ್ನು ಅವಶ್ಯ ಓದಬೇಕು

* ಯಾವುದೇ ಕಾರಣಕ್ಕೂ ಸ್ತ್ರೀಯರು ಋಷಿಗಳ ಪೂಜೆಯನ್ನು ಮಾಡಬಾರದು. ಕೇವಲ ಋಷಿಪತ್ನಿಯರ ಪೂಜೆಯನ್ನು ಮಾಡಬೇಕು. ಪತಿಯಾದವನು ಋಷಿಗಳ ಪೂಜೆಯನ್ನು ಮಾಡಬೇಕು. ಸ್ತ್ರೀಯರಿಗೆ ಪುರುಷದೇವತೆಗಳ ಋಷಿಗಳ ಪೂಜೆಯಿಲ್ಲ. ಪುರುಷರಿಗೆ ಸ್ತ್ರೀದೇವತೆಯ ಸ್ತ್ರೀಯರ ಪೂಜೆಯಿರುವುದಿಲ್ಲ.

* ಮುಂದೆ ತಿಳಿಸುವಂತೆ ಆಯಾ ಋಷಿಪತ್ನಿಯರ ಬಗ್ಗೆ ತಿಳಿದುಕೊಂಡು ಅವರ ಪೂಜೆಯನ್ನು ಸುವಾಸಿನಿಯಾದವಳು ಆಚರಿಸಬೇಕು. ಪತಿಯು ಉಪವಾಸವಿದ್ದು ಋಷಿಗಳ ಪೂಜೆಯನ್ನು ಆಚರಿಸಬೇಕು.

* ಈ ಕೃತಿಯಲ್ಲಿ ಅನೇಕ ವೇದಮಂತ್ರಗಳಿಂದ ಸಹಿತವಾಗಿ ಪೂಜೆಯನ್ನು ನೀಡಲಾಗಿದೆ. ಮತ್ತು ಆವಾಹನೆ ಮೊದಲಾದವುಗಳನ್ನು ತಂತ್ರದಲ್ಲಿ ಹೇಳಿದಂತೆ ನೀಡಲಾಗಿದೆ. ಈ ಯಾವುದೇ ಪೂಜೆಯನ್ನು ಸ್ತ್ರೀಯರಿಗೆ ಮಾಡಲು ಅಧಿಕಾರವಿರುವುದಿಲ್ಲ. ಇದನ್ನು ಖಂಡಿತವಾಗಿಯೂ ಪಾಲಿಸಬೇಕು.

* ಪತಿಯಾದವನು ಏಳು ಕಲಶಗಳಲ್ಲಿ ಸಪ್ತ ಋಷಿಗಳನ್ನು ಆವಾಹನೆ ಮಾಡಿ ಪೂಜಿಸಬೇಕು. ಪತ್ನಿಯು ಅದೇ ಕಲಶದಲ್ಲಿ ಆಯಾ ಋಷಿಗಳ ಜೊತೆಯಲ್ಲಿ ಋಷಿಪತ್ನಿಯರನ್ನು ಕರೆದು ಪೂಜಿಸಬೇಕು. ಅರ್ಘ್ಯ ಪಾದ್ಯ ಆಚಮನ ಮಧುಪರ್ಕ ಪುನರಾಚಮನ ಸ್ನಾನ ವಸ್ತ್ರ ಧೂಪ ದೀಪ ನೈವೇದ್ಯ ಎಲ್ಲವನ್ನೂ ಋಷಿಗಳಿಗೆ ಪುರುಷನೇ ಸಮರ್ಪಿಸಬೇಕು.

* ಋಷಿಪಂಚಮಿಯು ಕೇವಲ ಋತುದೋಷದ ಪರಿಹಾರಕ್ಕಾಗಿ ವಿಹಿತವಾಗಿದೆ. ಹೀಗಿರುವಾಗ ಪುರುಷನೇಕೆ ಉಪವಾಸವಿರಬೇಕು? ಪುರುಷನೇಕೆ ಋಷಿಗಳ ಪೂಜೆಯನ್ನು ಆಚರಿಸಬೇಕು? – ಎಂಬ ಗೊಂದಲದಿಂದ ಇಂದು ಕೇವಲ ಸ್ತ್ರೀಯರು ಪೂಜೆಯನ್ನು ಮಾಡುತ್ತಿದ್ದಾರೆ. ಇದು ಶಾಸ್ತ್ರಕ್ಕೆ ವಿರುದ್ಧವಾಗಿದೆ. ಪತ್ನಿಯ ಉದ್ಧಾರಕ್ಕಾಗಿ ಪ್ರಯತ್ನಪಟ್ಟು ಪತಿಯು ಪೂಜೆಯನ್ನು ಆಚರಿಸಿ ಪತ್ನಿಗೆ ಪ್ರಾಪ್ತವಾದ ಋತುದೋಷದ ಪರಿಹಾರವನ್ನು ಮಾಡಬೇಕು.

* ಪತಿಯು ಸ್ವರ್ಗಸ್ಥನಾಗಿದ್ದರೆ ಸ್ತ್ರೀಯಾದವಳು ಪುರೋಹಿತರ ಮೂಲಕ ಋಷಿಪೂಜೆಯನ್ನು ಮಾಡಿಸಬೇಕು. ಅನಂತರ ತಾನು ಋಷಿಪತ್ನಿಯರಿಗೆ ಯಥಾಶಕ್ತಿ ಪೂಜಿಸಿ ಪ್ರಾರ್ಥನೆಯನ್ನಷ್ಟೇ ಮಾಡಬೇಕು.

* ಪತಿಯು ಅನಿವಾರ್ಯಕಾರಣಗಳಿಂದ ಮನೆಯಲ್ಲಿ ಇಲ್ಲದೇ ಇದ್ದಾಗ ಸುವಾಸಿನಿಯು ಅಣ್ಣತಮ್ಮಂದಿರ ಮೂಲಕ ಅಥವಾ ಬ್ರಾಹ್ಮಣದಂಪತಿಯರನ್ನು ಕರೆಸಿ ಅವರ ಮೂಲಕ ಋಷಿಪಂಚಮಿಯ ಆಚರಣೆಯನ್ನು ಮಾಡಿಸಬೇಕು. ಅದರಲ್ಲಿ ತಾನು ಸಕ್ರಿಯವಾಗಿ ಪಾಲ್ಗೊಳ್ಳಬೇಕು.

* ಯಾವುದೇ ಅನುಕೂಲವಿಲ್ಲದಿದ್ದ ಪಕ್ಷದಲ್ಲಿ ಋಷಿಗಳಿಗೆ ದೀಪವನ್ನು ಹಚ್ಚಿ ಅವರ ನಾಮಸ್ಮರಣೆಯನ್ನು ಮಾಡುತ್ತ ಆರತಿಯನ್ನು ಮಾಡಿ ಪ್ರಾರ್ಥನೆಯನ್ನಷ್ಟೇ ಸುವಾಸಿನಿಯರು ಆಚರಿಸಬೇಕು.

* ಋತುಕಾಲವು ಮುಗಿದು ಆರುವರ್ಷಗಳ ತನಕ ಋಷಿಪಂಚಮಿಯ ಆಚರಣೆಯನ್ನು ಮಾಡುವ ಸಂಪ್ರದಾಯವಿಲ್ಲ. ಏಳನೆಯ ವರ್ಷದ ಅನಂತರ ಋಷಿಪಂಚಮಿಯ ಆಚರಣೆಯನ್ನು ಮಾಡಬೇಕು.

* ಒಂದು ವೇಳೆ ಋಷಿಪಂಚಮಿವ್ರತವನ್ನು ಹಿಡಿದ ಅನಂತರ ಋತುಮತಿ-ಯಾದರೆ ಹಿಂದೆ ಮಾಡಿದ್ದನ್ನು ಲೆಕ್ಕಕ್ಕೆ ತೆಗೆದುಕೊಳ್ಳದೇ ಪುನಃ ೮ವರ್ಷಗಳ ಕಾಲ ಋಷಿಪಂಚಮೀ ವ್ರತವನ್ನು ಆಚರಿಸಬೇಕು.

* ಋಷಿಗಳು ಶ್ವೇತಾಂಬರಧಾರಿಗಳಾಗಿರುವುದರಿಂದ ಅಂದು ಋಷಿಗಳ ಆರಾಧನೆಯಲ್ಲಿ ತೊಡಗಿದ ಪತಿಪತ್ನಿಯರು ಶ್ವೇತಾಂಬರಧಾರಿಗಳೇ ಆಗಿರಬೇಕು. ಅಂಚಿಲ್ಲದ ಸೀರೆಯನ್ನು ವಿಧವೆಯರು ಧರಿಸಿದರೆ, ಅಂಚು ಇರುವ ಶ್ವೇತವಸ್ತ್ರವನ್ನು ಸುವಾಸಿನಿಯರು ಧರಿಸಬೇಕೆಂಬ ಸಂಪ್ರದಾಯವಿದೆ.

* ಒಂದು ವೇಳೆ ಅತ್ತೆ ಅಥವಾ ಅವರ ಅತ್ತೆ (ಗಂಡನ ತಾಯಿ) ಅಥವಾ ಅವರ ತಾಯಿ ಋಷಿಪಂಚಮೀ ವ್ರತವನ್ನು ಆಚರಣೆ ಮಾಡದಿದ್ದರೆ ಅವರ ಹೆಸರಿನಲ್ಲಿ

ಮಗನು ಆಚರಿಸಬೇಕು. ಏಕೆಂದರೆ ಋಷಿಪಂಚಮಿಯ ವ್ರತವನ್ನು ಆಚರಣೆ ಮಾಡದಿದ್ದರೆ ದೇಹವು ಪವಿತ್ರವಾಗುವುದಿಲ್ಲ. ಅಪವಿತ್ರವಾದ ದೇಹದಿಂದ ಸದ್ಗತಿಯಾಗುವುದಿಲ್ಲ. ಈ ಕಾರಣದಿಂದ ಹಿರಿಯರ ಹೆಸರಿನಲ್ಲಿ ಋಷಿಪಂಚಮೀ ವ್ರತವನ್ನು ಆಚರಿಸಬೇಕು. ಇದರಿಂದ ಅವರ ಋತುದೋಷವು ಪರಿಹಾರವಾಗುತ್ತದೆ. ಅವರಿಗೆ ಸದ್ಗತಿಯಾಗುತ್ತದೆ. ಅನಂತರ ತನ್ನ ಪತ್ನಿಯ ಮೂಲಕ ಋಷಿಪಂಚಮೀ ವ್ರತವನ್ನು ಮಾಡಿಸಬೇಕು.

* ಹಿರಿಯರು ಋಷಿಪಂಚಮಿ ವ್ರತವನ್ನು ಮಾಡದಿದ್ದರೆ ಕಿರಿಯರಿಗೆ ಅದರ ಆಚರಣೆಯಲ್ಲಿ ಅಧಿಕಾರವಿರುವುದಿಲ್ಲ. ಅರ್ಥಾತ್ ಹಿರಿಯರಿಗೆ ಸದ್ಗತಿಯನ್ನು ಭಾವಿಸದೆ ತಾನು ಸದ್ಗತಿಯನ್ನು ಭಾವಿಸಬಾರದು.

## ಋಷಿಪಂಚಮಿಯ ಕರ್ತವ್ಯಗಳು

* ಸ್ತ್ರೀಯರು ರಜೋದರ್ಶನದ ಸಂದರ್ಭದಲ್ಲಿ ಮಾಡಿದ ಅನೇಕ ದೋಷಗಳ ಪರಿಹಾರಕ್ಕಾಗಿ ಮತ್ತು ಪ್ರಾಯಶ್ಚಿತ್ತರೂಪವಾಗಿ ಋಷಿಪಂಚಮೀ ವ್ರತವನ್ನು ಅನುಷ್ಠಾನ ಮಾಡಬೇಕು.

* ಅರುಂಧತೀದೇವಿಯಿಂದ ಕೂಡಿದ ವಸಿಷ್ಠರನ್ನು ಹಾಗೂ ಉಳಿದ ಋಷಿಗಳನ್ನು ಪೂಜಿಸುವುದರಿಂದ ರಜೋದರ್ಶನದ ದೋಷವು ಪರಿಹಾರವಾಗುತ್ತದೆಂದು ಧರ್ಮಶಾಸ್ತ್ರವು ಹೇಳಿದೆ. ಆದ್ದರಿಂದ ಅವಶ್ಯವಾಗಿ ಋಷಿಪೂಜೆಯನ್ನು ಮಾಡಬೇಕು.

* ಭಾದ್ರಪದ ಶುಕ್ಲ ಪಂಚಮಿಯ ದಿವಸ ಋಷಿಪಂಚಮೀ ವ್ರತವನ್ನು ಎಂಟು ವರ್ಷಗಳ ಕಾಲ ಆಚರಿಸಬೇಕು.

* ಎಂಟು ವರ್ಷದ ಅವಧಿಯಲ್ಲಿ ಮೊದಲು ಮಧ್ಯ ಅಥವಾ ಕೊನೆ. ಯಾವಾಗ ಅನುಕೂಲವಾಗುತ್ತದೋ ಆ ಸಮಯದಲ್ಲಿ ಉದ್ಯಾಪನೆಯನ್ನು ಆಚರಿಸಬೇಕು.

ಋಷಿಪಂಚಮೀ

* ಋಷಿಪಂಚಮಿಯ ದಿವಸ ನದಿ ಅಥವಾ ಸರೋವರಗಳಲ್ಲಿಯೇ ಸ್ನಾನವನ್ನು ಪ್ರಯತ್ನಪೂರ್ವಕವಾಗಿ ಮಾಡಬೇಕು.

* ೧೦೮ ಉತ್ತರಣಿ ಕಡ್ಡಿಗಳನ್ನು, ೧೦೮ ಉತ್ತರಣಿ ಎಲೆಗಳನ್ನು, ೧೦೮ ನೆಲ್ಲಿ ಕಾಯಿಗಳನ್ನು, ೧೦೮ ಗೋಮಯ ಹಾಗೂ ಮೃತ್ತಿಕೆಗಳನ್ನು ಸಂಗ್ರಹ ಮಾಡಿಟ್ಟುಕೊಂಡು ಸ್ನಾನವನ್ನು ಆಚರಿಸಬೇಕು. ಸುವಾಸಿನಿಯರು (ಮೃತ್ತಿಕೆಯ ಬದಲು) ಅರಿಶಿನ ಹಚ್ಚಿಕೊಳ್ಳಬೇಕು.

* ರಜೋದರ್ಶನದ ಸಮಯದಲ್ಲಿ ಹಲ್ಲು ತಿಕ್ಕದೇ ಇರುವ, ಸ್ನಾನ ಮಾಡದೇ ಇರುವ ದೋಷಗಳ ಪ್ರಾಯಶ್ಚಿತ್ತಾರ್ಥವಾಗಿ ಹೀಗೆ ಎಂಟು ವರ್ಷಗಳ ಕಾಲ ನೂರೆಂಟುಬಾರಿ ಸ್ನಾನಾದಿಗಳನ್ನು ಮಾಡಬೇಕು.

* ಋಷಿಪಂಚಮಿವ್ರತವನ್ನು ಯಾರು ಅನುಷ್ಠಾನಮಾಡುತ್ತಾರೋ ಅವರು ಅವಶ್ಯವಾಗಿ ಉಪವಾಸವಿರಬೇಕು. ಫಲಾಹಾರವನ್ನೂ ಸಹ ಮಾಡಬಾರದು.

* ಋಷಿಪಂಚಮೀ ವ್ರತವನ್ನು ಮುಗಿಸಿದವರು, ಅಥವಾ ಅನುಷ್ಠಾನ ಮಾಡದೇ ಇರುವವರು ಉಪವಾಸವಿರಬೇಕಾಗಿಲ್ಲ.

* ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಸಿಷ್ಠ ಹಾಗೂ ಅರುಂಧತಿ ಇವರ ಪ್ರತೀಕವಾಗಿ ಎಂಟು ಬಿಳಿಯಕಲ್ಲುಗಳನ್ನು ಇಟ್ಟು ಕೆಲವರು ಪೂಜಿಸುತ್ತಾರೆ. ಏಳು ದರ್ಭೆಗಳಿಂದ ಕೂರ್ಚವನ್ನು ಮಾಡಿ ಅದರಲ್ಲಿ ಈ ಎಂಟು ಮಂದಿಗಳನ್ನು ಆವಾಹನೆ ಮಾಡಿ ಕೆಲವರು ಪೂಜಿಸುತ್ತಾರೆ. ಎಂಟು ಕಲಶಗಳನ್ನಿಟ್ಟು ಅದರಲ್ಲಿ ಆವಾಹನೆ ಮಾಡಿ ಪೂಜಿಸುವುದೇ ಉತ್ತಮಪಕ್ಷ.

* ಏಳು ಋಷಿಗಳಿಗೆ ಎರಡೆರಡು ಯಜ್ಞೋಪವೀತಗಳನ್ನು ಹಾಗೂ ಅರುಂಧತಿಗೆ ಮಾಂಗಲ್ಯವನ್ನು ಸಮರ್ಪಣೆ ಮಾಡಬೇಕು.

* ವಾಸ್ತವಿಕವಾಗಿ ನಾಕು ಯಾಮಗಳಲ್ಲಿ ಪುನಃ ಪುನಃ ಋಷಿಗಳ ಪೂಜೆಯನ್ನು ಮಾಡಬೇಕೆಂದು ಶಾಸ್ತ್ರವು ಹೇಳುತ್ತದೆ. ಈಗ ಅನುಕೂಲಕ್ಕಾಗಿ ಒಟ್ಟಿಗೆ ಎಲ್ಲ ಪೂಜೆಗಳನ್ನು ಮುಗಿಸುತ್ತಾರೆ.

* ಮರುದಿವಸ ಮಡಿಯಲ್ಲಿ ಸ್ನಾನ ಮಾಡಿ, ಸಾಮೆ ಅಕ್ಕಿಯ ಪಾಯಸ ಹಾಗೂ ಅನೇಕ ಬಗೆಯ ಅಡುಗೆಗಳನ್ನು ಸಿದ್ಧಗೊಳಿಸಿ, ಭಗವಂತನಿಗೆ ಮುಖ್ಯಪ್ರಾಣದೇವರಿಗೆ ಹಾಗೂ ಋಷಿಗಳಿಗೆ ಸಮರ್ಪಣೆ ಮಾಡಿ, ದಂಪತಿಗಳಿಗೆ ಭೋಜನ ಮಾಡಿಸಿ, ತಾನು ಪಾರಣೆ ಮಾಡಬೇಕು.

* ಋಷಿಗಳನ್ನು ಪೂಜಿಸುವಾಗ ಶ್ವೇತವಸ್ತ್ರವನ್ನೇ ಧಾರಣೆ ಮಾಡಬೇಕು. ಹಾಗೂ ಎರೆದುಕೊಂಡಿರಬೇಕು.

* ಪುರೋಹಿತರು ಅಥವಾ ಪತಿ ಅಥವಾ ಮಕ್ಕಳೇ ಮೊದಲಾದವರು ಯಾರೂ ಸಹ ಸಿಗದೇ ಇದ್ದಾಗ ಕೇವಲ ಋಷಿಗಳ ನಾಮಸ್ಮರಣೆಯನ್ನು ಮಾಡುತ್ತಾ, ಅಥವಾ ಋಷಿಗಳಿಗೆ ಸಂಬಂಧಪಟ್ಟ ಹಾಡುಗಳನ್ನಷ್ಟೇ ಹೇಳುತ್ತಾ ಪೂಜಿಸಿ, ಋಷಿಗಳ ಕೃಪೆಗೆ ಪಾತ್ರರಾಗಬೇಕು. ಯಾವುದೇ ಕಾರಣಕ್ಕೂ ಈ ಪುಸ್ತಕದಲ್ಲಿರುವ ವೇದಮಂತ್ರ- ಗಳನ್ನು ಹಾಗೂ ಇತರ ಮಂತ್ರಗಳನ್ನು ಪಠಿಸಿ ಪೂಜಿಸಬಾರದು.

* ಋಷಿಪಂಚಮೀ ಪೂಜೆಯು ಮುಗಿದ ಮೇಲೆ ಉಪಾಯನದಾನವನ್ನು ವಿಪ್ರರಿಗೆ ಅವಶ್ಯವಾಗಿ ನೀಡಬೇಕು. ಇಲ್ಲದಿದ್ದರೆ ವ್ರತಾನುಷ್ಠಾನದ ಫಲವು ಪ್ರಾಪ್ತ- ವಾಗುವುದಿಲ್ಲ.

* ಶ್ರದ್ಧೆಯಿಂದ ಋಷಿಪಂಚಮೀವ್ರತವನ್ನು ಶಾಸ್ತ್ರೋಕ್ತವಾಗಿ ಮಾಡಿ ಪರಿಪೂರ್ಣಫಲವನ್ನು ಪಡೆದು ಧನ್ಯರಾಗೋಣ.

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ

## ೧೦೮ ಬಾರಿ ದಂತಧಾವನ ಮಾಡಬೇಕು.

* ಭಾದ್ರಪದಶುಕ್ಲಪಂಚಮೀ ದಿವಸ ಉಷಃಕಾಲದಲ್ಲಿ ಎದ್ದು ಭಗವಂತನನ್ನು ಪ್ರಾರ್ಥನೆ ಮಾಡಿ ಎಲ್ಲ ದೇವತೆಗಳನ್ನೂ ಗುರುಹಿರಿಯರನ್ನೂ ನಮಿಸಿ ಋಷಿಪಂಚಮೀ ವ್ರತದ ಸಂಕಲ್ಪವನ್ನು ಮಾಡಬೇಕು.
* ಸುವಾಸಿನಿಯು ಶೌಚಾಚಾರಗಳನ್ನು ಮುಗಿಸಿದ ಮೇಲೆ ಉತ್ತರಣೆ ಗಿಡದ ಬಳಿ ತೆರಳಿ ಈ ಮಂತ್ರವನ್ನು ಹೇಳಬೇಕು –

ಆಯುರ್ಬಲಂ ಯಶೋ ವರ್ಚ್ಯಃ ಪ್ರಜಾಃ ಪಶು ವಸೂನಿ ಚ ।
ಬ್ರಹ್ಮಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ದೇಹಿ ವನಸ್ಪತೇ ॥

ಓ ವನಸ್ಪತಿಯೇ! ನಿನಗೆ ಭಕ್ತಿಯ ನಮಸ್ಕಾರಗಳು. ಆಯುಷ್ಯ, ಬಲ, ಯಶಸ್ಸು, ವರ್ಚಸ್ಸು, ಸಂತಾನ, ಗೋ ಮೊದಲಾದ ಪಶುಸಂಪತ್ತು, ದಾನಾದಿಗಳಿಗೆ ಅನುಕೂಲಕರವಾದ ಅನೇಕ ಬಗೆಯ ಸಂಪತ್ತುಗಳು, ಪರಮಾತ್ಮನ ಸರ್ವೋತ್ತಮತ್ವದ ಪರಿಜ್ಞಾನ, ಮೇಧಸ್ಸು ಈ ಎಲ್ಲ ಗುಣಗಳನ್ನೂ ಎನಗೆ ಕೊಟ್ಟು ಉದ್ಧರಿಸು.

ಹೀಗೆ ಆ ಉತ್ತರಣೀ ಗಿಡವನ್ನು ಕೈಮುಗಿದು ಪ್ರಾರ್ಥನೆ ಮಾಡಬೇಕು. ಅನಂತರ ಉತ್ತರಣೀ ಕಡ್ಡಿಯನ್ನು ತೆಗೆದುಕೊಂಡು ಮುಂದೆ ಹೇಳುವ ಮಂತ್ರವನ್ನು ಪಠಿಸಬೇಕು–

ಮುಖದುರ್ಗಂಧನಾಶಾಯ ದಂತಾನಾಂ ಚ ವಿಶುದ್ಧಯೇ ।
ಷ್ಠೀವನಾಯ ಚ ಗಾತ್ರಾಣಾಂ ಕುರ್ವೇಽಹಂ ದಂತಧಾವನಮ್ ॥

ಮುಖದ ದುರ್ಗಂಧ ನಾಶವಾಗಲಿ; ಹಲ್ಲುಗಳು ಸ್ವಚ್ಛವಾಗಲಿ; ಶರೀರದಲ್ಲಿರುವ ಶ್ಲೇಷ್ಮಾದಿಗಳ ಪರಿಹಾರಕ್ಕಾಗಿ ದಂತಧಾವನವನ್ನು ಮಾಡುತ್ತೇನೆ.

**– ಹೀಗೆ ಪ್ರಾರ್ಥಿಸಿ, ೧೦೮ ಕಡ್ಡಿಗಳಿಂದ ೧೦೮ ಬಾರಿ ಹಲ್ಲುಜ್ಜಬೇಕು.**

ಅನಂತರ ಮುಖವನ್ನು ತೊಳೆದು ಈ ದಂತಧಾವನದ ಆಚರಣೆಯಿಂದ ಸಪ್ತಋಷಿಗಳ ಅಂತರ್ಯಾಮಿಯಾದ ಭಗವಂತನು ಸುಪ್ರೀತನಾಗಲಿ ಎಂದು ಭಾವಿಸಿ ಕೃಷ್ಣಾರ್ಪಣ ಎನ್ನಬೇಕು.

## ೧೦೮ ಬಾರಿ ಸ್ನಾನ ಮಾಡಬೇಕು

* ಬೆಟ್ಟದ ನೆಲ್ಲಿಕಾಯಿಯನ್ನು ಜಜ್ಜಿ ಅದರ ರಸವನ್ನು ತೆಗೆದು ಎಳ್ಳೆಣ್ಣೆಯ ಜೊತೆಗೆ ಬೆರೆಸಿ ತಲೆಗೆ ಹಚ್ಚಿಕೊಂಡು ಸ್ನಾನ ಮಾಡಬೇಕು. 'ತಿಲಾಮಲಕೇನ ಕೇಶಾನ್ ಸಂಶೋಧ್ಯ' ಎಂದು ಹೇಳುತ್ತಾರೆ.

* ಋಷಿಪಂಚಮೀ ದಿವಸ ಪ್ರಯತ್ನಪೂರ್ವಕವಾಗಿ ನದೀಸ್ನಾನವನ್ನು ಮಾಡಬೇಕು. ನದಿಯ ಬಳಿ ತೆರಳಿ, ನಿರ್ಮಾಲ್ಯಸ್ನಾನವನ್ನು ಮಾಡಿ, ಮೂರು ಬಾರಿ ಆಚಮನವನ್ನು ಮಾಡಿ ಹೀಗೆ ಸಂಕಲ್ಪವನ್ನು ಮಾಡಬೇಕು –

ದೇಶಕಾಲಗಳನ್ನು ಉಚ್ಚರಿಸಿ – ಶೋಧಿತೋ ಮಮ ಇಹ ಜನ್ಮನಿ ಜ್ಞಾನತಃ ಅಜ್ಞಾನತಶ್ಚ ಕೃತಾನಾಂ ಕಾಯಿಕ-ವಾಚಿಕಮಾನಸಿಕಸಾಂಸರ್ಗಿಕಸ್ಪೃಷ್ಟಾಸ್ಪೃಷ್ಟ-ಭುಕ್ತಾಭುಕ್ತಪೀತಾಪೀತಸಮಸ್ತಪಾಪಕ್ಷಯದ್ವಾರಾ, ಧರ್ಮಾರ್ಥಕಾಮಮೋಕ್ಷಾಖ್ಯ-ಚತುರ್ವಿಧಪುರುಷಾರ್ಥಸಿದ್ಧ್ಯರ್ಥಂ, ಅಂತಃಕರಣಶುದ್ಧ್ಯರ್ಥಂ, ಶರೀರ-ಶುದ್ಧ್ಯರ್ಥಂ ಅಸ್ಯಾಂ ಮಹಾನದ್ಯಾಂ ವಿಷ್ಣುವೈಷ್ಣವಸನ್ನಿಧೌ ಶಾಲಗ್ರಾಮಚಕ್ರಾಂಕಿತ-ಸನ್ನಿಧೌ ಶ್ರೀತುಲಸ್ಯಶ್ವತ್ಥಸನ್ನಿಧೌ ಋಷಿಪಂಚಮೀ ವ್ರತಾಂಗತ್ವೇನ ಅಸ್ಮತ್‌ಪತ್ಯಂತರ್ಗತ ಪರಮಗುರ್ವಂತರ್ಗತಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ-ಗುರ್ವಂತರ್ಗತಹೃತ್ಕಮಲಮಧ್ಯನಿವಾಸಿ ವಾಸುದೇವ ಸಂಕರ್ಷಣ ಪ್ರದ್ಯುಮ್ನಾನಿರುದ್ಧಾದಿ ಚತುರ್ಮೂರ್ತ್ಯಾದ್ಯನಂತಾವತಾರಾತ್ಮಕಮಾಂಗಲ್ಯ-ಮೂರ್ತಿಶ್ರೀಸೇತುಮಾಧವಬಿಂದುಮಾಧವ-ಬದರೀನಾರಾಯಣಪ್ರೇರಣಯಾ ಶ್ರೀಬದರೀನಾರಾಯಣಪ್ರೀತ್ಯರ್ಥಂ ಅರುಣೋದಯಕಾಲೇ ಅಷ್ಟೋತ್ತರಶತವಾರಂ ಗಂಗಾಸ್ನಾನಮಹಂ ಕರಿಷ್ಯೇ ॥

ಗಂಗಾಗಂಗೇತಿ ಯೋ ಬ್ರೂಯಾತ್ ಯೋಜನಾನಾಂ ಶತೈರಪಿ ।
ಮುಚ್ಯತೇ ಸರ್ವಪಾಪೇಭ್ಯಃ ವಿಷ್ಣುಲೋಕಂ ಸ ಗಚ್ಛತಿ ॥
ಯೋಽಸೌ ಸರ್ವಗತೋ ವಿಷ್ಣುಃ ಚಿತ್ಸ್ವರೂಪೋ ನಿರಂಜನಃ ।
ಸ ಏವ ದ್ರವರೂಪೇಣ ಗಂಗಾಂಭೋ ನಾತ್ರ ಸಂಶಯಃ ॥

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ

## ೧೦೮ ಬಾರಿ ದಂತಧಾವನ ಮಾಡಬೇಕು.

* ಭಾದ್ರಪದಶುಕ್ಲಪಂಚಮೀ ದಿವಸ ಉಷಃಕಾಲದಲ್ಲಿ ಎದ್ದು ಭಗವಂತನನ್ನು ಪ್ರಾರ್ಥನೆ ಮಾಡಿ ಎಲ್ಲ ದೇವತೆಗಳನ್ನೂ ಗುರುಹಿರಿಯರನ್ನೂ ನಮಿಸಿ ಋಷಿಪಂಚಮೀ ವ್ರತದ ಸಂಕಲ್ಪವನ್ನು ಮಾಡಬೇಕು.
* ಸುವಾಸಿನಿಯು ಶೌಚಾಚಾರಗಳನ್ನು ಮುಗಿಸಿದ ಮೇಲೆ ಉತ್ತರಣೆ ಗಿಡದ ಬಳಿ ತೆರಳಿ ಈ ಮಂತ್ರವನ್ನು ಹೇಳಬೇಕು –

ಆಯುರ್ಬಲಂ ಯಶೋ ವರ್ಚ್ಯಃ ಪ್ರಜಾಃ ಪಶು ವಸೂನಿ ಚ ।

ಬ್ರಹ್ಮಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ದೇಹಿ ವನಸ್ಪತೇ ॥

ಓ ವನಸ್ಪತಿಯೇ! ನಿನಗೆ ಭಕ್ತಿಯ ನಮಸ್ಕಾರಗಳು. ಆಯುಷ್ಯ, ಬಲ, ಯಶಸ್ಸು, ವರ್ಚಸ್ಸು, ಸಂತಾನ, ಗೋ ಮೊದಲಾದ ಪಶುಸಂಪತ್ತು, ದಾನಾದಿಗಳಿಗೆ ಅನುಕೂಲಕರವಾದ ಅನೇಕ ಬಗೆಯ ಸಂಪತ್ತುಗಳು, ಪರಮಾತ್ಮನ ಸರ್ವೋತ್ತಮತ್ವದ ಪರಿಜ್ಞಾನ, ಮೇಧಸ್ಸು ಈ ಎಲ್ಲ ಗುಣಗಳನ್ನೂ ಎನಗೆ ಕೊಟ್ಟು ಉದ್ಧರಿಸು.

ಹೀಗೆ ಆ ಉತ್ತರಣೀ ಗಿಡವನ್ನು ಕೈಮುಗಿದು ಪ್ರಾರ್ಥನೆ ಮಾಡಬೇಕು. ಅನಂತರ ಉತ್ತರಣೀ ಕಡ್ಡಿಯನ್ನು ತೆಗೆದುಕೊಂಡು ಮುಂದೆ ಹೇಳುವ ಮಂತ್ರವನ್ನು ಪಠಿಸಬೇಕು–

ಮುಖದುರ್ಗಂಧನಾಶಾಯ ದಂತಾನಾಂ ಚ ವಿಶುದ್ಧಯೇ ।

ಷ್ಠೀವನಾಯ ಚ ಗಾತ್ರಾಣಾಂ ಕುರ್ವೇಽಹಂ ದಂತಧಾವನಮ್ ॥

ಮುಖದ ದುರ್ಗಂಧ ನಾಶವಾಗಲಿ; ಹಲ್ಲುಗಳು ಸ್ವಚ್ಛವಾಗಲಿ; ಶರೀರದಲ್ಲಿರುವ ಶ್ಲೇಷ್ಮಾದಿಗಳ ಪರಿಹಾರಕ್ಕಾಗಿ ದಂತಧಾವನವನ್ನು ಮಾಡುತ್ತೇನೆ.

**– ಹೀಗೆ ಪ್ರಾರ್ಥಿಸಿ, ೧೦೮ ಕಡ್ಡಿಗಳಿಂದ ೧೦೮ ಬಾರಿ ಹಲ್ಲುಜ್ಜಬೇಕು.**

ಅನಂತರ ಮುಖವನ್ನು ತೊಳೆದು ಈ ದಂತಧಾವನದ ಆಚರಣೆಯಿಂದ ಸಪ್ತಋಷಿಗಳ ಅಂತರ್ಯಾಮಿಯಾದ ಭಗವಂತನು ಸುಪ್ರೀತನಾಗಲಿ ಎಂದು ಭಾವಿಸಿ ಕೃಷ್ಣಾರ್ಪಣ ಎನ್ನಬೇಕು.

# ೧೦೮ ಬಾರಿ ಸ್ನಾನ ಮಾಡಬೇಕು

* ಬೆಟ್ಟದ ನೆಲ್ಲಿಕಾಯಿಯನ್ನು ಜಜ್ಜಿ ಅದರ ರಸವನ್ನು ತೆಗೆದು ಎಳ್ಳೆಣ್ಣೆಯ ಜೊತೆಗೆ ಬೆರೆಸಿ ತಲೆಗೆ ಹಚ್ಚಿಕೊಂಡು ಸ್ನಾನ ಮಾಡಬೇಕು. 'ತಿಲಾಮಲಕೇನ ಕೇಶಾನ್ ಸಂಶೋಧ್ಯ' ಎಂದು ಹೇಳುತ್ತಾರೆ.

* ಋಷಿಪಂಚಮೀ ದಿವಸ ಪ್ರಯತ್ನಪೂರ್ವಕವಾಗಿ ನದೀಸ್ನಾನವನ್ನು ಮಾಡಬೇಕು. ನದಿಯ ಬಳಿ ತೆರಳಿ, ನಿರ್ಮಾಲ್ಯಸ್ನಾನವನ್ನು ಮಾಡಿ, ಮೂರು ಬಾರಿ ಆಚಮನವನ್ನು ಮಾಡಿ ಹೀಗೆ ಸಂಕಲ್ಪವನ್ನು ಮಾಡಬೇಕು –

ದೇಶಕಾಲಗಳನ್ನು ಉಚ್ಚರಿಸಿ – ಶೋಧಿತೋ ಮಮ ಇಹ ಜನ್ಮನಿ ಜ್ಞಾನತಃ ಅಜ್ಞಾನತಶ್ಚ ಕೃತಾನಾಂ ಕಾಯಿಕ-ವಾಚಿಕಮಾನಸಿಕಸಾಂಸರ್ಗಿಕಸ್ಪೃಷ್ಟಾಸ್ಪೃಷ್ಟ-ಭುಕ್ತಾಭುಕ್ತಪೀತಾಪೀತಸಮಸ್ತಪಾಪಕ್ಷಯದ್ವಾರಾ, ಧರ್ಮಾರ್ಥಕಾಮಮೋಕ್ಷಾಖ್ಯ-ಚತುರ್ವಿಧಪುರುಷಾರ್ಥಸಿದ್ಧ್ಯರ್ಥಂ, ಅಂತಃಕರಣಶುದ್ಧ್ಯರ್ಥಂ, ಶರೀರ-ಶುದ್ಧ್ಯರ್ಥಂ ಅಸ್ಯಾಂ ಮಹಾನದ್ಯಾಂ ವಿಷ್ಣುವೈಷ್ಣವಸನ್ನಿಧೌ ಶಾಲಗ್ರಾಮಚಕ್ರಾಂಕಿತ-ಸನ್ನಿಧೌ ಶ್ರೀತುಲಸ್ಯಶ್ವತ್ಥಸನ್ನಿಧೌ ಋಷಿಪಂಚಮೀ ವ್ರತಾಂಗತ್ವೇನ ಅಸ್ಮತ್ಪತ್ಯಂತರ್ಗತ ಪರಮಗುರ್ವಂತರ್ಗತಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ-ಗುರ್ವಂತರ್ಗತಹೃತ್ಕಮಲಮಧ್ಯನಿವಾಸಿ ವಾಸುದೇವ ಸಂಕರ್ಷಣ ಪ್ರದ್ಯುಮ್ನಾನಿರುದ್ಧಾದಿ ಚತುರ್ಮೂರ್ತ್ಯಾದ್ಯನಂತಾವತಾರಾತ್ಮಕಮಾಂಗಲ್ಯ-ಮೂರ್ತಿಶ್ರೀಸೇತುಮಾಧವಬಿಂದುಮಾಧವ-ಬದರೀನಾರಾಯಣಪ್ರೇರಣಯಾ ಶ್ರೀಬದರೀನಾರಾಯಣಪ್ರೀತ್ಯರ್ಥಂ ಅರುಣೋದಯಕಾಲೇ ಅಷ್ಟೋತ್ತರಶತವಾರಂ ಗಂಗಾಸ್ನಾನಮಹಂ ಕರಿಷ್ಯೇ ॥

ಗಂಗಾಗಂಗೇತಿ ಯೋ ಬ್ರೂಯಾತ್ ಯೋಜನಾನಾಂ ಶತೈರಪಿ ।
ಮುಚ್ಯತೇ ಸರ್ವಪಾಪೇಭ್ಯಃ ವಿಷ್ಣುಲೋಕಂ ಸ ಗಚ್ಛತಿ ॥
ಯೋಽಸೌ ಸರ್ವಗತೋ ವಿಷ್ಣುಃ ಚಿತ್ಸ್ವರೂಪೋ ನಿರಂಜನಃ ।
ಸ ಏವ ದ್ರವರೂಪೇಣ ಗಂಗಾಂಭೋ ನಾತ್ರ ಸಂಶಯಃ ॥

ಈ ಮಂತ್ರವನ್ನು ಹೇಳಿ ಮೂರು ಬಾರಿ ಮುಳುಗಬೇಕು. ಮುಂದೆ ತೀರ್ಥರಾಜನನ್ನು ಪ್ರಾರ್ಥನೆ ಮಾಡಬೇಕು.

ತ್ವಂ ರಾಜಾ ಸರ್ವತೀರ್ಥಾನಾಂ ತ್ವಮೇವ ಜಗತಃ ಪಿತಾ ।
ಯಾಚಿತಂ ದೇಹಿ ಮೇ ತೀರ್ಥಂ ಸರ್ವಪಾಪಪ್ರಮೋಚನಮ್ ॥
ನಂದಿನೀ ನಲಿನೀ ಸೀತಾ ಮಾಲತೀ ಚ ಮಲಾಪಹಾ ।
ವಿಷ್ಣುಪಾದಾಬ್ಜಸಂಭೂತಾ ಗಂಗಾ ತ್ರಿಪಥಗಾಮಿನೀ ॥
ಭಾಗೀರಥೀ ಭೋಗವತೀ ಜಾಹ್ನವೀ ತ್ರಿದಶೇಶ್ವರೀ ।
ದ್ವಾದಶೈತಾನಿ ನಾಮಾನಿ ಯತ್ರ ಯತ್ರ ಜಲಾಶಯೇ ।
ಸ್ನಾನಕಾಲೇ ಪಠೇನ್ನಿತ್ಯಂ ತತ್ರ ತತ್ರ ವಸಾಮ್ಯಹಮ್ ॥
ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾ ಸರಿತಸ್ತಥಾ ।
ಆಗಚ್ಛಂತು ಪವಿತ್ರಾಣಿ ಸ್ನಾನಕಾಲೇ ಸದಾ ಮಮ ॥
ಗಂಡೂಷಂ ಪಾದನಿಕ್ಷೇಪಂ ಕ್ಷಾಲನಂ ಮಲಿನಸ್ಯ ಚ ।
ಉತ್‌ಕ್ಷೇಪಕ್ಷೇಪಣೇ ದೇವಿ ಮತ್ಕೃತಂ ಕ್ಷಮಯಾ ಪಾಹಿ ಮಾಮ್ ॥
ಊರ್ಧ್ವಪುಂಡ್ರವನ್ನು ಧರಿಸಿ, ಅರ್ಘ್ಯವನ್ನು ನೀಡಬೇಕು.

## ವಿಷ್ಣ್ವರ್ಘ್ಯಮ್ -

ನಮಃ ಕಮಲನಾಭಾಯ ನಮಸ್ತೇ ಜಲಶಾಯಿನೇ ।
ನಮಸ್ತೇಽಸ್ತು ಹೃಷೀಕೇಶ ಗೃಹಾಣಾರ್ಘ್ಯಂ ನಮೋಽಸ್ತು ತೇ ॥
ಶ್ರೀಕಮಲನಾಭಾಯ ನಮಃ ಇದಮರ್ಘ್ಯಂ ಸಮರ್ಪಯಾಮಿ ।

## ಸೂರ್ಯಾರ್ಘ್ಯಮ್ -

ಏಹಿ ಸೂರ್ಯ ಸಹಸ್ರಾಂಶೋ ತೇಜೋರಾಶೇ ಜಗತ್ಪತೇ ।
ಅನುಕಂಪಯ ಮಾಂ ನಿತ್ಯಂ ಗೃಹಾಣಾರ್ಘ್ಯಂ ನಮೋಽಸ್ತು ತೇ ॥
ಶ್ರೀಸೂರ್ಯಾಯ ನಮಃ ಇದಮರ್ಘ್ಯಂ ಸಮರ್ಪಯಾಮಿ ।
ತ್ವಂ ರಾಜಾ ಸರ್ವತೀರ್ಥಾನಾಂ ತ್ವಮೇವ ಜಗತಃ ಪಿತಾ ।

ಯಾಚಿತಂ ದೇಹಿ ಮೇ ತೀರ್ಥಂ ಸರ್ವಪಾಪಪ್ರಮೋಚನಮ್ ॥
ಶ್ರೀಸಮುದ್ರರಾಜಾಯ ನಮಃ । ಇದಮರ್ಘ್ಯಂ ಸಮರ್ಪಯಾಮಿ ।

ಭಾಗೀರಥಿ ನಮಸ್ತುಭ್ಯಂ ಸರ್ವಪಾಪಪ್ರಣಾಶಿನಿ ।

ಭಕ್ತ್ಯಾ ತುಭ್ಯಂ ಮಯಾ ದತ್ತಂ ಗೃಹಾಣಾರ್ಘ್ಯಂ ನಮೋಽಸ್ತು ತೇ ॥

ಶ್ರೀಗಂಗಾದೇವ್ಯೈ ನಮಃ । ಇದಮರ್ಘ್ಯಂ ಸಮರ್ಪಯಾಮಿ ।

ಗಂಗೇ ಚ ಯಮುನೇ ಚೈವ ಗೋದಾವರೀ ಸರಸ್ವತೀ ।

ನರ್ಮದೇ ಸಿಂಧುಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥

ಸರಸ್ವತ್ಯಾದಿ ನದೀದೇವತಾಭ್ಯೋ ನಮಃ । ಇದಮರ್ಘ್ಯಂ ಸಮರ್ಪಯಾಮಿ ।

ಕಶ್ಯಪೋತ್ರಿರ್ಭರದ್ವಾಜಃ ವಿಶ್ವಾಮಿತ್ರಶ್ಚ ಗೌತಮಃ ।

ಜಮದಗ್ನಿರ್ವಸಿಷ್ಠಶ್ಚ ಸಾಧ್ವೀ ಚೈವಾಪ್ಯರುಂಧತೀ ॥

ಅರುಂಧತೀಸಹಿತಕಶ್ಯಪಾದಿಸಪ್ತಋಷಿಭ್ಯೋ ನಮಃ । ಇದಮರ್ಘ್ಯಂ ಸಮರ್ಪಯಾಮಿ ।

ಅರ್ಘ್ಯಸಮರ್ಪಣಾನಂತರ ಮುಳುಗಿ ಸ್ನಾನ ಮಾಡಬೇಕು. ಆಗ ಹೇಳಬೇಕಾದ ಮಂತ್ರ –

ಗಂಗಾಗಂಗೇತಿ ಯೋ ಬ್ರೂಯಾತ್ ಯೋಜನಾನಾಂ ಶತೈರಪಿ ।

ಮುಚ್ಯತೇ ಸರ್ವಪಾಪೇಭ್ಯಃ ವಿಷ್ಣುಲೋಕಂ ಸ ಗಚ್ಛತಿ ॥

ಯೋಽಸೌ ಸರ್ವಗತೋ ವಿಷ್ಣುಃ ಚಿತ್ಸ್ವರೂಪೋ ನಿರಂಜನಃ ।

ಸ ಏವ ದ್ರವರೂಪೇಣ ಗಂಗಾಂಭೋ ನಾತ್ರ ಸಂಶಯಃ ॥

* ಪ್ರತಿಯೊಂದು ಸ್ನಾನದ ನಂತರವೂ ಆಚಮನವನ್ನು ಮಾಡಬೇಕು.

ಅರಿಶಿನ, ಉತ್ತರಣಿ ಎಲೆ, ಮೃತ್ತಿಕೆ, ನೆಲ್ಲಿಕಾಯಿ, ಗೋಮಯಗಳನ್ನು ನೂರೆಂಟು ಬಾರಿ ಹಚ್ಚಿಕೊಂಡು ಪ್ರತಿಯೊಂದು ಸ್ನಾನಕ್ಕೆ ಒಂದು ಬಾರಿಯಂತೆ ಸ್ನಾನ ಮಾಡಬೇಕು. (ಸುವಾಸಿನಿಯರು ಮಾತ್ರ ಅರಿಶಿನ ಕುಂಕುಮದಿಂದ ಸ್ನಾನ ಮಾಡಬೇಕು)

## ಹರಿದ್ರಾ ಸ್ನಾನ

ಹರಿದ್ರೇ ಪೀತವರ್ಣೇ ತ್ವಂ ಹಾರಿಣೀ ಜನರಂಜಿನೀ।

ಅತಸ್ತ್ವಾಂ ಧಾರಯಿಷ್ಯಾಮಿ ಸೌಭಾಗ್ಯಂ ದೇಹಿ ಮೇಽನಘೇ ॥

ಈ ಶ್ಲೋಕವನ್ನು ಹೇಳಿಕೊಂಡು ಅರಿಷಿಣವನ್ನು ಹಚ್ಚಿಕೊಂಡು ಸ್ನಾನ ಮಾಡಬೇಕು.

## ಕುಂಕುಮಸ್ನಾನ

ಕುಂಕುಮಂ ಕಾಂತಿದಂ ದಿವ್ಯಂ ಕಾಮಿನೀ ಕಾಮಸಂಭವಮ್ ।

ಸ್ನಾಸ್ಯೇಹಂ ಕುಂಕುಮೇನಾತಃ ಪ್ರಸನ್ನೋ ಭವ ಮೇ ಹರೇ ॥

ಎಂಬ ಶ್ಲೋಕ ಹೇಳಿಕೊಂಡು ಕುಂಕುಮದ ನೀರಿನಿಂದ ಸ್ನಾನ ಮಾಡಬೇಕು.

## ಭಸ್ಮಸ್ನಾನ

ಸರ್ವರಕ್ಷಾಕರಂ ಭಸ್ಮ ಕಾರ್ಶ್ಯದಾರಿದ್ರ್ಯನಾಶನಮ್ ।

ತಸ್ಯ ಲೇಪನಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ॥

ಈ ಮಂತ್ರವನ್ನು ಹೇಳಿ ಭಸ್ಮಸ್ನಾನವನ್ನು ಮಾಡಬೇಕು. ಯಜ್ಞಯಾಗಾದಿಗಳಲ್ಲಿ ಸಂಪಾದಿಸಿದ ಭಸ್ಮದಿಂದ ಸ್ನಾನವನ್ನು ಮಾಡುವುದು ವಿಶೇಷ. ಅದು ಲಭ್ಯವಿಲ್ಲದಿದ್ದಾಗ ಹಸುವಿನ ಸೆಗಣಿಯಿಂದ ಮಾಡಿದ ಬೆರಣಿಯ ಭಸ್ಮದಿಂದ ಲೇಪನಮಾಡಿ ಸ್ನಾನ ಮಾಡಬೇಕು.

## ಗೋಮಯಸ್ನಾನ

ಅಗ್ರಮಗ್ರಚರಂತೀನಾಂ ಓಷಧೀನಾಂ ವನೇ ವನೇ ।

ತಾಸಾಂ ವೃಷಭಪತ್ನೀನಾಂ ಪವಿತ್ರಂ ಕಾಯಶೋಧನಮ್ ।

ತನ್ಮೇ ರೋಗಾಂಶ್ಚ ಶೋಕಾಂಶ್ಚ ನುದ ಗೋಮಯ ಸರ್ವದಾ ॥

ಈ ಮಂತ್ರದಿಂದ ಗೋಮಯವನ್ನು ಲೇಪ ಮಾಡಿಕೊಂಡು ಸ್ನಾನ ಮಾಡಬೇಕು.

## ಮೃತ್ತಿಕಾಸ್ನಾನ

ತುಳಸೀಮೃತ್ತಿಕೆಯನ್ನು ಹಚ್ಚಿಕೊಂಡು ಸ್ನಾನ ಮಾಡಬೇಕು.

## ಗಂಗಾಸ್ನಾನ

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।

ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ।

ಹರಿನಿರ್ಮಾಲ್ಯವಾದ ತುಳಸೀದಳವನ್ನು ಗಂಗೆಗೆ ಹಾಕಿ ಮೇಲಿನ ಮಂತ್ರವನ್ನು ಹೇಳಿ ಸ್ನಾನವನ್ನು ಮಾಡಬೇಕು.

ಪ್ರಯಾಗಮಾಧವ, ವೇಣಿಮಾಧವ, ಬಿಂದುಮಾಧವ, ಬದರೀನಾರಾಯಣ ಮೊದಲಾದ ಕ್ಷೇತ್ರಗಳಲ್ಲಿರುವ ಭಗವಂತನ ವಿಭೂತಿರೂಪಗಳನ್ನು ನೆನೆಯುತ್ತಾ ೧೦೮ ಬಾರಿ ಗಂಗಾಸ್ನಾನವನ್ನು ಮಾಡಬೇಕು. ಕೊನೆಯಲ್ಲಿ ಈ ಮಂತ್ರವನ್ನು ಪಠಿಸಬೇಕು.

## ಯಕ್ಷ್ಮತರ್ಪಣ

ಯನ್ಮಯಾ ದೂಷಿತಂ ತೋಯಂ ಶಾರೀರಮಲಸಂಭವಮ್(ಸಂಗಮಾತ್) ।

ತದ್ದೋಷಪರಿಹಾರಾರ್ಥಂ ಯಕ್ಷ್ಮಾಣಂ ತರ್ಪಯಾಮ್ಯಹಮ್ ॥

ಸ್ನಾನಮಾಡಿ, ನನ್ನ ಶರೀರದ ದುರ್ಗಂಧವನ್ನು ನಿನ್ನಲ್ಲಿ ಬಿಟ್ಟಿದ್ದೇನೆ. ಇದರ ಪರಿಹಾರಕ್ಕೋಸ್ಕರ ಯಕ್ಷ್ಮನನ್ನು ತೃಪ್ತಿಗೊಳಿಸುತ್ತೇನೆಂದು ಅನುಸಂಧಾನ ಮಾಡಿ ಯಕ್ಷ್ಮನಿಗೆ ವಸ್ತ್ರನಿಷ್ಪೀಡನವನ್ನು ಮಾಡಿ ತರ್ಪಣವನ್ನು ನೀಡಬೇಕು.

ನಂತರ ಬೇರೆ ವಸ್ತ್ರಗಳನ್ನು ಧರಿಸಿ, ಗಂಗಾಂ ತುಲಸೀಂ ಸೂರ್ಯಂ ಚ ಗಂಧಪುಷ್ಪಾಕ್ಷತೈಃ ಸಂಪೂಜ್ಯ । ಗಂಗೆ, ತುಲಸೀ, ಸೂರ್ಯರನ್ನು ಅರಿಷಿನ ಕುಂಕುಮ, ಗಂಧಪುಷ್ಪ ಅಕ್ಷತೆ ದೀಪ ಮೊದಲಾದವುಗಳಿಂದ ಪೂಜಿಸಿ ನಮಿಸಿ ಸ್ನಾನವಿಧಿಯನ್ನು ಗಂಗಾಜನಕನ ಪಾದಕಮಲಗಳಲ್ಲಿ ಸಮರ್ಪಣೆ ಮಾಡಬೇಕು.

ಅನೇನ ಋಷಿಪಂಚಮೀವ್ರತಾಂಗ ಅಷ್ಟೋತ್ತರಶತವಾರಂ ದಂತಧಾವನ-ಕರ್ಮಣಾ ತಥಾ ಭಸ್ಮಸ್ನಾನ, ಗೋಮಯಸ್ನಾನ, ಮೃತ್ತಿಕಾಸ್ನಾನ, ಆಮಲಕಸ್ನಾನ, ಹರಿದ್ರಾಸ್ನಾನೇನ ಗಂಗಾಸ್ನಾನಕರ್ಮಣಾ ಚ ಕಶ್ಯಪಾದಿಸಪ್ತರ್ಷ್ಯಂತರ್ಗತಭಾರತೀ-ರಮಣಮುಖ್ಯಪ್ರಾಣಾಂತರ್ಗತ-ಶ್ರೀವೇದವ್ಯಾಸಃ ಪ್ರೀಯತಾಂ ಸುಪ್ರೀತೋ ವರದೋ ಭವತು । ಶ್ರೀಕೃಷ್ಣಾರ್ಪಣಮಸ್ತು ॥

ಇಲ್ಲಿಗೆ ಸ್ನಾನವಿಧಿಯು ಮುಗಿಯಿತು.

## ಪಂಚಗವ್ಯಮೇಲನವಿಧಿ

ಎರಡುಬಾರಿ ಆಚಮನವನ್ನುಮಾಡಿ, ಪ್ರಾಣಾಯಾಮ ಮಾಡಿ, ದೇಶಕಾಲಾದಿ-ಗಳನ್ನು ಉಚ್ಚರಿಸಿ ಹೀಗೆ ಸಂಕಲ್ಪ ಮಾಡಬೇಕು.

ಮಮೇಹ ಜನ್ಮನಿ ಜ್ಞಾನತೋಽಜ್ಞಾನತಶ್ಚ ಕೃತಾನಾಂ ಕಾಯಿಕವಾಚಿಕಮಾನಸಿಕ-ಸಾಂಸರ್ಗಿಕಾದಿ ಜನಿತದೋಷಾಣಾಂ ಪರಿಹಾರಾರ್ಥಂ ಚಾಂಡಾಲಾದ್ಯಸ್ಪೃಶ್ಯ-ಸ್ಪರ್ಶನ-ಅಗಮ್ಯಾಗಮನ-ಅಭಕ್ಷ್ಯಭಕ್ಷಣಾದಿಸಮಸ್ತಪಾಪಕ್ಷಯಾರ್ಥಂ ದೇಹಗತ, ತ್ವಗ್ಗತ, ಅಸ್ಥಿಗತಪಾಪಪರಿಹಾರಾರ್ಥಂ ಶರೀರಶುದ್ಧ್ಯರ್ಥಂ ಋಷಿಪಂಚಮೀ-ವ್ರತಾಂಗಪಂಚಗವ್ಯಪ್ರಾಶನಾಂಗಂ ಪಂಚಗವ್ಯಮೇಲನಾಖ್ಯಂ ಕರ್ಮ ಕರಿಷ್ಯೇ ।

## ಪಂಚಗವ್ಯದ ಅಳತೆ

ನೀಲವರ್ಣಾಯಾಃ ಗೋಮೂತ್ರಮೇಕಪಲಪರಿಮಿತಂ, ಕೃಷ್ಣಾಯಾ ಗೋ-ಮಯಂ ಗೋಮೂತ್ರಾರ್ಧಪರಿಮಿತಂ, ತಾಮ್ರಾಯಾಃ ಕ್ಷೀರಂ ಸಪ್ತಪಲಂ, ಶ್ವೇತಾಯಾ ದಧಿ ತ್ರಿಪಲಮಿತಂ, ಕಪಿಲಾಯಾ ಘೃತಮೇಕಪಲಮಿತಂ ದರ್ಭೋದಕಮ್ ಏಕಪಲಂ ಸಂಪಾದ್ಯ ,

(೧) ನೀಲಬಣ್ಣದ ಗೋಮೂತ್ರ ಪರಿಮಾಣ ೪೮ ಗ್ರಾಂ, (೨) ಕಪ್ಪು ಹಸುವಿನ ಗೋಮಯದ ೨೪ ಗ್ರಾಂ, (೩) ಕೆಂಪುಹಸುವಿನ ಹಾಲು ೩೩೬ ಗ್ರಾಂ,

(೪) ಬಿಳಿ- ಬಣ್ಣದ ಹಸುವಿನ ಮೊಸರಿನ ಪರಿಮಾಣ ೧೪೪ ಗ್ರಾಂ, (೫) ಕಪಿಲ ಹಸುವಿನ ತುಪ್ಪ - ಪರಿಮಾಣ ೪೮ ಗ್ರಾಂ. (೬) ಕುಶೋದಕ - ಪರಿಮಾಣ ೪೮ಗ್ರಾಂ.

## ಪಂಚಗವ್ಯಸ್ಥಾಪನೆ

ಸ್ಥಂಡಿಲಮಧ್ಯಕಲಶಸ್ಯ ಪೂರ್ವಭಾಗೇ ಗೋಮೂತ್ರಂ, ದಕ್ಷಿಣೇ ಗೋಮಯಂ, ಪಶ್ಚಿಮೇ ಕ್ಷೀರಮ್, ಉತ್ತರೇ ದಧಿ, ವಾಯವ್ಯೇ ಘೃತಮ್, ಈಶಾನ್ಯೇ ಕುಶೋದಕಂ ಸ್ಥಾಪಯೇತ್ ।

ಸ್ಥಂಡಿಲವನ್ನು ಬರೆದು ಮಧ್ಯಕಲಶದ (೧) ಪೂರ್ವಕ್ಕೆ ಗೋಮೂತ್ರ, (೨) ದಕ್ಷಿಣಕ್ಕೆ ಗೋಮಯ, (೩) ಪಶ್ಚಿಮಕ್ಕೆ ಹಾಲು (೪) ಉತ್ತರಕ್ಕೆ - ಮೊಸರು, (೫) ವಾಯವ್ಯಕ್ಕೆ ಘೃತ, (೬) ಈಶಾನ್ಯಕ್ಕೆ ಕುಶೋದಕ ಈ ಕ್ರಮದಲ್ಲಿ ಪಾತ್ರೆಗಳನ್ನು ಇಡಬೇಕು. ಅನಂತರ ಮುಂದಿನ ಮಂತ್ರಗಳನ್ನು ಪಠಿಸಬೇಕು.

ಗೋಮೂತ್ರೇ – ಆದಿತ್ಯಾಯ ನಮಃ। ಓಂ ಭೂಃ ಆದಿತ್ಯಮಾವಾಹಯಾಮಿ। ಓಂ ಭುವಃ ಆದಿತ್ಯಮಾವಾಹಯಾಮಿ । ಓಂ ಸ್ವಃ ಆದಿತ್ಯಮಾವಾಹಯಾಮಿ । ಓಂ ಭೂರ್ಭುವಸ್ವಃ ಆದಿತ್ಯಮಾವಾಹಯಾಮಿ, ಸ್ಥಾಪಯಾಮಿ,ಪೂಜಯಾಮಿ ।

ಗೋಮಯೇ – ವಾಯವೇ ನಮಃ। ಓಂ ಭೂಃ ವಾಯುಮಾವಾಹಯಾಮಿ। ಓಂ ಭುವಃ ವಾಯುಮಾವಾಹಯಾಮಿ । ಓಂ ಸ್ವಃ ವಾಯುಮಾವಾಹಯಾಮಿ । ಓಂ ಭೂರ್ಭುವಸ್ವಃ ವಾಯುಮಾವಾಹಯಾಮಿ, ಸ್ಥಾಪಯಾಮಿ,ಪೂಜಯಾಮಿ ।

ಕ್ಷೀರೇ – ಸೋಮಾಯ ನಮಃ। ಓಂ ಭೂಃ ಸೋಮಮಾವಾಹಯಾಮಿ । ಓಂ ಭುವಃ ಸೋಮಮಾವಾಹಯಾಮಿ । ಓಂ ಸ್ವಃ ಸೋಮಮಾವಾಹಯಾಮಿ । ಓಂ ಭೂರ್ಭುವಸ್ವಃ ಸೋಮಮಾವಾಹಯಾಮಿ, ಸ್ಥಾಪಯಾಮಿ,ಪೂಜಯಾಮಿ ।

ದಧ್ನಿ – ಶುಕ್ರಾಯ ನಮಃ। ಓಂ ಭೂಃ ಶುಕ್ರಮಾವಾಹಯಾಮಿ। ಓಂ ಭುವಃ ಶುಕ್ರಮಾವಾಹಯಾಮಿ । ಓಂ ಸ್ವಃ ಶುಕ್ರಮಾವಾಹಯಾಮಿ । ಓಂ ಭೂರ್ಭುವಸ್ವಃ ಶುಕ್ರಮಾವಾಹಯಾಮಿ, ಸ್ಥಾಪಯಾಮಿ,ಪೂಜಯಾಮಿ ।

ಆಜ್ಯೇ ಅಗ್ನಯೇ ನಮಃ । ಓಂ ಭೂಃ ಅಗ್ನಿಮಾವಾಹಯಾಮಿ । ಓಂ ಭುವಃ ಅಗ್ನಿಮಾವಾಹಯಾಮಿ । ಓಂ ಸ್ವಃ ಅಗ್ನಿಮಾವಾಹಯಾಮಿ । ಓಂ ಭೂರ್ಭುವಸ್ವಃ ಅಗ್ನಿಮಾವಾಹಯಾಮಿ, ಸ್ಥಾಪಯಾಮಿ,ಪೂಜಯಾಮಿ ।

ಕುಶೋದಕೇ ಗಂಧರ್ವಾಯ ನಮಃ । ಓಂ ಭೂಃ ಗಂಧರ್ವಮಾವಾಹಯಾಮಿ। ಓಂ ಭುವಃ ಗಂಧರ್ವಮಾವಾಹಯಾಮಿ । ಓಂ ಸ್ವಃ ಗಂಧರ್ವಮಾವಾಹಯಾಮಿ। ಓಂ ಭೂರ್ಭುವಸ್ವಃ ಗಂಧರ್ವಮಾವಾಹಯಾಮಿ, ಸ್ಥಾಪಯಾಮಿ, ಪೂಜಯಾಮಿ।

## ಪಂಚಗವ್ಯಮೇಲನಮ್

ಮುಂದೆ ಹೇಳುವ ಮಂತ್ರಗಳಿಂದ ಪಂಚಗವ್ಯಗಳನ್ನು ಸೇರಿಸಬೇಕು.

ತತ್ಸವಿತುಃ ಗಾಧಿನೋ ವಿಶ್ವಾಮಿತ್ರ ಋಷಿಃ । ಗಾಯತ್ರೀಛಂದಃ । ಸವಿತಾದೇವತಾ। ಗೋಮೂತ್ರಪೂರಣೇ ವಿನಿಯೋಗಃ –

ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ।

ಧಿಯೋ ಯೋ ನಃ ಪ್ರಚೋದಯಾತ್ ॥

ಗಂಧದ್ವಾರಾಂ ಚಿಕ್ಲೀತಃ ಋಷಿಃ । ಅನುಷ್ಟುಪ್ ಛಂದಃ । ಇಂದಿರಾದೇವತಾ । ಗೋಮಯಪೂರಣೇ ವಿನಿಯೋಗಃ ।

ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್ ।

ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಮ್ ॥

ದಧಿಕ್ರಾವ್ಣೋ ಗೌತಮೋ ವಾಮದೇವಋಷಿಃ । ಅನುಷ್ಟುಪ್ ಛಂದಃ । ದಧಿದೇವತಾ । ದಧಿಪೂರಣೇ ವಿನಿಯೋಗಃ ।

ಓಂ ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ ।

ಸುರಭಿನೋ ಮುಖಾ ಕರತ್ ಪ್ರ ಣ ಆಯೂಂಷಿ ತಾರಿಷತ್ ॥

ಓಂ ಶುಕ್ರಮಸಿ ಜ್ಯೋತಿರಸಿ ತೇಜೋಽಸಿ ದೇವೋ ವಃ ಸವಿತೋತ್ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ ರಶ್ಮಿಭಿಃ ॥

ಘೃತಂ ಮಿಮಿಕ್ಷೇ ಶೌನಕೋ ಗೃತ್ಸಮದ ಋಷಿಃ । ತ್ರಿಷ್ಟುಪ್ ಛಂದಃ । ಸ್ವಾಹಾಕೃತಯಃ ದೇವತಾಃ । ಘೃತಪೂರಣೇ ವಿನಿಯೋಗಃ ।

ಓಂ ಘೃತಂ ಮಿಮಿಕ್ಷೇ ಘೃತಮಸ್ಯ ಯೋನಿರ್ಘೃತೇ ಶ್ರಿತೋ ಘೃತಮ್ವಸ್ಯ ಧಾಮ। ಅನುಷ್ವಧಮಾ ವಹ ಮಾದಯಸ್ವ ಸ್ವಾಹಾಕೃತಂ ವೃಷಭ ವಕ್ಷಿ ಹವ್ಯಮ್ ॥

ಕೆಳಗಿನ ಮಂತ್ರದಿಂದ ಕಲಶದಲ್ಲಿ ಕೂರ್ಚೋದಕವನ್ನು ಪೂರಣೆ ಮಾಡಬೇಕು.

ಓಂ ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮ್ ।

## ಪಂಚಗವ್ಯಮಥನಮ್

(ಸಪ್ತದರ್ಭದಿಂದ ಮಾಡಿದ ಕೂರ್ಚದಿಂದ ಹಾಗೂ ಪಾಲಾಶಸಮಿಧೆಯಿಂದ ಕೆಳಗಿನ ವೇದಮಂತ್ರಗಳನ್ನು ಆಲೋಡನೆ ಮಾಡಬೇಕು)

ಮಂಥತಾ ನರಃ ಇತಿ ಮಂತ್ರಸ್ಯ ಗಾಧಿನೋ ವಿಶ್ವಾಮಿತ್ರ ಋಷಿಃ । ತ್ರಿಷ್ಟುಪ್ ಛಂದಃ । ಅಗ್ನಿರ್ದೇವತಾ । ಪಂಚಗವ್ಯಮಥನೇ ವಿನಿಯೋಗಃ ।

ಓಂ ಮಂಥತಾ ನರಃ ಕವಿಮದ್ವಯಂತಂ ಪ್ರಚೇತಸಮಮೃತಂ ಸುಪ್ರತೀಕಮ್ । ಯಜ್ಞಸ್ಯ ಕೇತುಂ ಪ್ರಥಮಂ ಪುರಸ್ತಾದಗ್ನಿಂ ನರೋ ಜನಯತಾ ಸುಶೇವಮ್ ॥

ಓಂ ಸದ್ಯೋಜಾತಂ ಪ್ರಪದ್ಯಾಮಿ ಸದ್ಯೋಜಾತಾಯ ವೈ ನಮೋ

ನಮಃ । ಭವೇಽಭವೇ ನಾತಿಭವೇ ಭವಸ್ವ ಮಾಂ ಭವೋದ್ಭವಾಯ ನಮಃ ।

ಓಂ ವಾಮದೇವಾಯ ನಮೋ ಜ್ಯೇಷ್ಠಾಯ ನಮಃ ಶ್ರೇಷ್ಠಾಯ ನಮೋ ರುದ್ರಾಯ ನಮಃ । ಕಾಲಾಯ ನಮಃ ಕಲವಿಕರಣಾಯ ನಮೋ ಬಲವಿಕರಣಾಯ

ನಮೋ ಬಲಾಯ ನಮೋ ಬಲಪ್ರಮಥನಾಯ ನಮಃ ಸರ್ವಭೂತದಮನಾಯ ನಮೋ ಮನೋನ್ಮನಾಯ ನಮಃ ॥

ಓಂ ಅಘೋರೇಭ್ಯೋಽಥ ಘೋರೇಭ್ಯೋ ಘೋರಘೋರತರೇಭ್ಯಃ । ಸರ್ವೇಭ್ಯಃ ಸರ್ವಶರ್ವೇಭ್ಯೋ ನಮಸ್ತೇ ಅಸ್ತು ರುದ್ರರೂಪೇಭ್ಯಃ ॥

ಓಂ ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ । ತನ್ನೋ ರುದ್ರಃ ಪ್ರಚೋದಯಾತ್ ।

ಓಮ್ ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ ಬ್ರಹ್ಮಾಧಿಪತಿ-ರ್ಬ್ರಹ್ಮಣೋಽಧಿಪತಿರ್ಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಮ್

## ಆವಾಹನಮಂತ್ರಗಳು

ಇರಾವತೀ ಇತಿ ಮಂತ್ರಸ್ಯ ವಸಿಷ್ಠ ಋಷಿಃ । ತ್ರಿಷ್ಟುಪ್ ಛಂದಃ । ವಿಷ್ಣುರ್ದೇವತಾ । ಪಂಚಗವ್ಯಮಧ್ಯೇ ವಿಷ್ಣ್ವಾವಾಹನೇ ವಿನಿಯೋಗಃ ।

ಓಮ್ ಇರಾವತೀ ಧೇನುಮತೀ ಹಿ ಭೂತಂ ಸೂಯವಸಿನೀ ಮನುಷೇ ದಶಸ್ಯಾ । ವ್ಯಸ್ತಭ್ನಾ ರೋದಸೀ ವಿಷ್ಣವೇತೇ ದಾಧರ್ಥ ಪೃಥಿವೀಮಭಿತೋ ಮಯೂಖೈಃ

'ಇದಂ ವಿಷ್ಣುಃ' ಇತಿ ಮಂತ್ರಸ್ಯ ಮೇಧಾತಿಥಿಃ ಋಷಿಃ । ಗಾಯತ್ರೀಛಂದಃ । ವಿಷ್ಣುರ್ದೇವತಾ । ಪಂಚಗವ್ಯಮಧ್ಯೇ ವಿಷ್ಣ್ವಾವಾಹನೇ ವಿನಿಯೋಗಃ ।

ಓಮ್ ಇದಂ ವಿಷ್ಣುರ್ವಿ ಚಕ್ರಮೇ ತ್ರೇಧಾ ನಿ ದಧೇ ಪದಮ್ । ಸಮೂಳ್ಹಮಸ್ಯ ಪಾಂಸುರೇ ॥

ವಿಷ್ಣವೇ ನಮಃ । ಓಂ ಭೂಃ ವಿಷ್ಣುಮಾವಾಹಯಾಮಿ । ಓಂ ಭುವಃ ವಿಷ್ಣು-ಮಾವಾಹಯಾಮಿ । ಓಂ ಸ್ವಃ ವಿಷ್ಣುಮಾವಾಹಯಾಮಿ । ಓಂ ಭೂರ್ಭುವಸ್ವಃ ವಿಷ್ಣುಮಾವಾಹಯಾಮಿ, ಸ್ಥಾಪಯಾಮಿ, ಪೂಜಯಾಮಿ ।

'ಮಾ ನೋ ಮಹಾಂತಮ್' ಇತಿ ಮಂತ್ರಸ್ಯ ಕುತ್ಸ ಋಷಿಃ । ಜಗತೀಛಂದಃ । ರುದ್ರೋ ದೇವತಾ । ಪಂಚಗವ್ಯಮಧ್ಯೇ ರುದ್ರಾವಾಹನೇ ವಿನಿಯೋಗಃ ।

ಓಂ ಮಾ ನೋ ಮಹಾಂತಮುತ ಮಾ ನೋ ಅರ್ಭಕಂ ಮಾ ನ ಉಕ್ಷಂತಮುತ ಮಾ ನ ಉಕ್ಷಿತಮ್ । ಮಾ ನೋ ವಧೀಃ ಪಿತರಂ ಮೋತ ಮಾತರಂ ಮಾ ನಃ ಪ್ರಿಯಾಸ್ತನ್ವೋ ರುದ್ರ ರೀರಿಷಃ ॥

ಮಾನ ಸ್ತೋಕೇತಿ ಕುತ್ಸಃ ಋಷಿಃ । ಜಗತೀ ಛಂದಃ । ರುದ್ರೋ ದೇವತಾ । ಪಂಚಗವ್ಯಮಧ್ಯೇ ರುದ್ರಾವಾಹನೇ ವಿನಿಯೋಗಃ ।

ಮಾನಸ್ತೋಕೇ ತನಯೇ ಮಾನ ಆಯೌ ಮಾನೋ ಗೋಷು ಮಾನೋ ಅಶ್ವೇಷು ರೀರಿಷಃ । ವೀರಾನ್ಮಾ ನೋ ರುದ್ರ ಭಾಮಿತೋ ವಧೀರ್ಹವಿಷ್ಮಂತಃ ಸದಮಿತ್ತ್ವಾ ಹವಾಮಹೇ ॥

ರುದ್ರಾಯ ನಮಃ । ಓಂ ಭೂಃ ರುದ್ರಮಾವಾಹಯಾಮಿ । ಓಂ ಭುವಃ ರುದ್ರಮಾವಾಹಯಾಮಿ । ಓಂ ಸ್ವಃ ರುದ್ರಮಾವಾಹಯಾಮಿ । ಓಂ ಭೂರ್ಭುವಸ್ವಃ ರುದ್ರಮಾವಾಹಯಾಮಿ, ಸ್ಥಾಪಯಾಮಿ,ಪೂಜಯಾಮಿ ।

ಬ್ರಹ್ಮಜಜ್ಞಾನಂ ನಕುಲ ಋಷಿಃ । ತ್ರಿಷ್ಟುಪ್ ಛಂದಃ । ಬ್ರಹ್ಮಾ ದೇವತಾ । ಪಂಚಗವ್ಯಮಧ್ಯೇ ಬ್ರಹ್ಮಾವಾಹನೇ ವಿನಿಯೋಗಃ ।

ಓಂ ಬ್ರಹ್ಮ ಜಜ್ಞಾನಂ ಪ್ರಥಮಂ ಪುರಸ್ತಾದ್ವಿ ಸೀಮತಃ ಸುರುಚೋ ವೇನ ಆವಃ । ಸ ಬುಧ್ನಿಯಾ ಉಪಮಾ ಅಸ್ಯ ವಿಷ್ಠಾಃ ಸತಶ್ಚ ಯೋನಿಮಸತಶ್ಚ ವಿವಃ ॥

ಬ್ರಹ್ಮಣೇ ನಮಃ । ಓಂ ಭೂಃ ಬ್ರಹ್ಮಾಣಮಾವಾಹಯಾಮಿ । ಓಂ ಭುವಃ ಬ್ರಹ್ಮಾಣಮಾವಾಹಯಾಮಿ । ಓಂ ಸ್ವಃ ಬ್ರಹ್ಮಾಣಮಾವಾಹಯಾಮಿ । ಓಂ ಭೂರ್ಭುವಸ್ವಃ ಬ್ರಹ್ಮಾಣಮಾವಾಹಯಾಮಿ, ಸ್ಥಾಪಯಾಮಿ,ಪೂಜಯಾಮಿ ।

'ಅಗ್ನ ಆಯೂಂಷಿ' ಇತ್ಯಸ್ಯ ಶತಂ ವೈಖಾನಸಾ ಋಷಯಃ । ಗಾಯತ್ರೀ ಛಂದಃ । ಅಗ್ನಿಃ ಪವಮಾನೋ ದೇವತಾ । ಪಂಚಗವ್ಯಮಧ್ಯೇ ಅಗ್ನ್ಯಾವಾಹನೇ ವಿನಿಯೋಗಃ ।

ಓಮ್ ಅಗ್ನ ಆಯೂಂಷಿ ಪವಸ ಆ ಸುವೋರ್ಜಮಿಷಂ ಚ ನಃ । ಆರೇ ಬಾಧಸ್ವ ದುಚ್ಛುನಾಮ್ ॥

ಅಗ್ನಯೇ ನಮಃ । ಓಂ ಭೂಃ ಅಗ್ನಿಮಾವಾಹಯಾಮಿ । ಓಂ ಭುವಃ ಅಗ್ನಿಮಾವಾಹಯಾಮಿ । ಓಂ ಸ್ವಃ ಅಗ್ನಿಮಾವಾಹಯಾಮಿ । ಓಂ ಭೂರ್ಭುವಸ್ವಃ ಅಗ್ನಿಮಾವಾಹಯಾಮಿ, ಸ್ಥಾಪಯಾಮಿ, ಪೂಜಯಾಮಿ ।

ಆ ಪ್ಯಾಯಸ್ವ ಇತ್ಯಸ್ಯ ಗೌತಮ ಋಷಿಃ । ಗಾಯತ್ರೀಛಂದಃ । ಸೋಮೋ ದೇವತಾ । ಪಂಚಗವ್ಯಮಧ್ಯೇ ಸೋಮಾವಾಹನೇ ವಿನಿಯೋಗಃ ॥

ಓಂ ಆ ಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಮ್ ।

ಭವಾ ವಾಜಸ್ಯ ಸಂಗಥೇ ॥

ಸೋಮಾಯ ನಮಃ । ಓಂ ಭೂಃ ಸೋಮಮಾವಾಹಯಾಮಿ । ಓಂ ಭುವಃ ಸೋಮಮಾವಾಹಯಾಮಿ । ಓಂ ಸ್ವಃ ಸೋಮಮಾವಾಹಯಾಮಿ । ಓಂ ಭೂರ್ಭುವಸ್ವಃ ಸೋಮಮಾವಾಹಯಾಮಿ, ಸ್ಥಾಪಯಾಮಿ, ಪೂಜಯಾಮಿ ।

ತತ್ಸವಿತುಃ ಇತ್ಯಸ್ಯ ಗಾಥಿನೋ ವಿಶ್ವಾಮಿತ್ರ ಋಷಿಃ । ಗಾಯತ್ರೀಛಂದಃ । ಸವಿತಾ ದೇವತಾ । ಪಂಚಗವ್ಯಮಧ್ಯೇ ಸವಿತ್ರಾವಾಹನೇ ವಿನಿಯೋಗಃ ।

ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ। ಧಿಯೋ ಯೋನಃ ಪ್ರಚೋದಯಾತ್ ॥

ಸವಿತ್ರೇ ನಮಃ । ಓಂ ಭೂಃ ಸವಿತಾರಮಾವಾಹಯಾಮಿ । ಓಂ ಭುವಃ ಸವಿತಾರಮಾವಾಹಯಾಮಿ । ಓಂ ಸ್ವಃ ಸವಿತಾರಮಾವಾಹಯಾಮಿ । ಓಂ ಭೂ-ರ್ಭುವಸ್ವಃ ಸವಿತಾರಮಾವಾಹಯಾಮಿ, ಸ್ಥಾಪಯಾಮಿ, ಪೂಜಯಾಮಿ ।

ಪ್ರಜಾಪತೇ ಇತ್ಯಸ್ಯ ಹಿರಣ್ಯಗರ್ಭ ಋಷಿಃ । ತ್ರಿಷ್ಟುಪ್ ಛಂದಃ । ಪ್ರಜಾಪತಿ-ರ್ದೇವತಾ । ಪಂಚಗವ್ಯಮಧ್ಯೇ ಪ್ರಜಾಪತ್ಯಾವಾಹನೇ ವಿನಿಯೋಗಃ ।

ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ ।

ಯತ್ ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಮ್ ॥

ಪ್ರಜಾಪತಯೇ ನಮಃ । ಓಂ ಭೂಃ ಪ್ರಜಾಪತಿಮಾವಾಹಯಾಮಿ । ಓಂ ಭುವಃ ಪ್ರಜಾಪತಿಮಾವಾಹಯಾಮಿ । ಓಂ ಸ್ವಃ ಪ್ರಜಾಪತಿಮಾವಾಹಯಾಮಿ । ಓಂ ಭೂರ್ಭುವಸ್ವಃ ಪ್ರಜಾಪತಿಮಾವಾಹಯಾಮಿ, ಸ್ಥಾಪಯಾಮಿ, ಪೂಜಯಾಮಿ।

ಈ ಮಂತ್ರಗಳಿಂದ ಆವಾಹನೆ ಮಾಡಿ, ಕಲಶವನ್ನು ಮುಟ್ಟಿಕೊಂಡು, ೧೦೦ಬಾರಿ ಗಾಯತ್ರೀಮಂತ್ರವನ್ನು ಜಪಿಸಿ, ಷೋಡಶೋಪಚಾರ ಪೂಜಾದಿಗಳನ್ನು ಮಾಡಿ, ಪಂಚಗವ್ಯಲೋಡನವಾತ್ರವಿದ್ದಲ್ಲಿ ಆವಾಹಿತ ದೇವತೆಗಳನ್ನು ಉದ್ವಾಸಿಸಬೇಕು. ಅನಂತರ 'ಯಸ್ಯಸ್ಮೃತ್ಯಾ' ಮಂತ್ರ ಹೇಳಬೇಕು. 'ಪಂಚಗವ್ಯಮೇಲಾನಾಖ್ಯಕರ್ಮಣಾ ಭಗವಾನ್ ಶ್ರೀಭಾರತೀರಮಣ-ಮುಖ್ಯಪ್ರಾಣಾಂತರ್ಗತಃ ಶ್ರೀಕೃಷ್ಣಃ ಪ್ರೀಯತಾಂ ಪ್ರೀತೋ ವರದೋ ಭವತು. ಶ್ರೀಕೃಷ್ಣಾರ್ಪಣಮಸ್ತು' ಎಂದು ಸಮರ್ಪಣೆ ಮಾಡಬೇಕು.

ಯತ್ ತ್ವಗಸ್ಥಿಗತಂ ಪಾಪಂ ದೇಹೇ ತಿಷ್ಠತಿ ಮಾಮಕೇ ।
ಪ್ರಾಶನಂ ಪಂಚಗವ್ಯಸ್ಯ ದಹತ್ಯಗ್ನಿರಿವೇಂಧನಮ್ ॥

'ಓಂ' ಎಂಬ ಮಂತ್ರದಿಂದ ಮುತ್ತುಗದ ಎಲೆಯಲ್ಲಿ ಹಾಕಿಕೊಂಡು ಪ್ರಾಶನ ಮಾಡಬೇಕು. ಅನಂತರ ಋಷಿಪಂಚಮೀಪೂಜೆಯನ್ನು ಮಾಡಬೇಕು.

# ಋಷಿಪಂಚಮೀಪೂಜೆ ಪ್ರಾರಂಭ

## ಪ್ರಾರ್ಥನೆ

## ಸಂಕಲ್ಪ

(ಈಶಾನ್ಯಭಾಗೇ ವೇದಿಕಾಯಾಂ ಸ್ವಸ್ತಿಕಂ ನಿಧಾಯ, ದ್ವಾದಶಾಂಗುಲ-ಪ್ರಮಾಣಕಾನ್ ಸಪ್ತದರ್ಭಾನ್ ಏಕೀಕೃತ್ಯ, ಅಗ್ರತಃ ಚತುರಂಗುಲಂ ವಿಹಾಯ ಮಧ್ಯೇ ಏಕಾಂಗುಲಪ್ರಮಾಣಂ ಪ್ರದಕ್ಷಿಣಗ್ರಂಥಿಂ ಕೃತ್ವಾ, ತತ್ ಕೂರ್ಚಂ ಸ್ವಸ್ತಿಕೋ - ಪರಿ ನಿಧಾಯ, ಅಥವಾ ಸಪ್ತಕಲಶಾನ್ ಸಂಪಾದ್ಯ) –

ದ್ವಿರಾಚಮ್ಯ, ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ । ಏವಂಗುಣ-ವಿಶೇಷಣವಿಶಿಷ್ಟಾಯಾಂ ಶುಭತಿಥೌ ಮಮ ಇಹ ಜನ್ಮನಿ ಜನ್ಮಾಂತರೇ ವಾ ಬಾಲ್ಯ ಕೌಮಾರಯೌವನವಾರ್ಧಕ್ಯೇಷು, ಜಾಗ್ರತ್‌ಸ್ವಪ್ನಸುಷುಪ್ತ್ಯವಸ್ಥಾಸು ವಾಙ್ಮನಃ ಕಾಯಕರ್ಮಭಿಃ ಜ್ಞಾನತೋಽಜ್ಞಾನತಶ್ಚ ಋತುಸಂಪರ್ಕಾದಿಜನಿತ-ದೋಷಪರಿಹಾರಾರ್ಥಂ ಅಸ್ಮತ್ಪತ್ಯಂತರ್ಗತಶ್ರೀಅರುಂಧತೀಸಮೇತ-ಕಶ್ಯಪಾದಿಸಪ್ತಋಷ್ಯಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ-ಶ್ರೀವೇದವ್ಯಾಸಪ್ರೇರಣಯಾ ಶ್ರೀವೇದವ್ಯಾಸಪ್ರೀತ್ಯರ್ಥಂ ಋಷಿಪಂಚಮೀ-ವ್ರತಾಂಗತ್ವೇನ ಅರುಂಧತೀಸಮೇತಕಶ್ಯಪಾದಿಸಪ್ತರ್ಷೀಣಾಂ ಷೋಡಶೋಪಚಾರಪೂಜಾಂ ಕಾರಯಿಷ್ಯೇ । ತದಂಗತ್ವೇನ ಗಣಪತಿಪೂಜಾಂ, ಯಮುನಾಪೂಜಾಂ, ಕಲಶಪೂಜಾಂ, ಶಂಖಪೂಜಾಂ, ಪೀಠಪೂಜಾಂ ಚ ಕಾರಯಿಷ್ಯೇ॥ (ಈ ಸಂಕಲ್ಪವನ್ನು ಸ್ತ್ರೀಯರು ಮಾಡಬೇಕು. ಮುಂದಿನದ್ದನ್ನು ಪುರುಷರು ಮಾಡಬೇಕು.)

## ಗುರುಗಣಪತಿ ಪೂಜೆ ಮಾಡಬೇಕು

ಪ್ರತಿಯೊಂದು ಪೂಜೆಯ ಪ್ರಾರಂಭದಲ್ಲಿ ಗುರುಗಳಿಗೆ ಹಾಗೂ ಗಣಪತಿಗೆ ಮೊಟ್ಟಮೊದಲು ಪೂಜೆ ಮಾಡಬೇಕು.

ಶ್ರೀಗುರುಭ್ಯೋ ನಮಃ । ಆದಿಗುರುಭ್ಯೋ ನಮಃ । ಮೂಲಗುರುಭ್ಯೋ ನಮಃ। ಪರಮಗುರುಭ್ಯೋ ನಮಃ। ಶ್ರೀವೇದವ್ಯಾಸಾಯ ನಮಃ। ಆಶ್ವಲಾಯನಾ-ಚಾರ್ಯೇಭ್ಯೋ ನಮಃ।

ಬಲಭಾಗದಲ್ಲಿ ಬರೆದ ಶ್ರೀಕಾರದಲ್ಲಿ ಗಂಧಾಕ್ಷತೆ ಪುಷ್ಪಗಳಿಂದ ಗುರುಗಳನ್ನು ಪೂಜಿಸಬೇಕು.

ಅಸ್ಮದ್ ಗುರುಸಮಾರಂಭಾಂ ಟೀಕಾಕೃತ್ಪಾದಮಧ್ಯಗಾಮ್ ।
ಶ್ರೀಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಮ್ ॥
ಆಪಾದಮೌಳಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥
ಓಂ ಶ್ರೀಗುರುಭ್ಯೋ ನಮಃ ಅನುಜ್ಞಾಂ ದೇಹಿ ।

ಶ್ರೀಕಾರದ ಪಕ್ಕದಲ್ಲಿ ಬರೆದ ಷಟ್ಕೋಣಮಂಡಲದಲ್ಲಿ ಬೆಳ್ಳಿಯ ಗಣಪತಿಯನ್ನಿಟ್ಟು ಪೂಜಿಸಬೇಕು. ಬೆಳ್ಳಿಗಣಪತಿ ಇಲ್ಲದಿದ್ದಲ್ಲಿ ಅಡಿಕೆಬೆಟ್ಟ, ಅರಿಶಿನಕೊಂಬುಗಳಲ್ಲಿ ಗಣಪತಿ ಆವಾಹನೆ ಮಾಡಿ ಪೂಜಿಸಬೇಕು.

ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ ।
ಲಂಬೋದರಶ್ಚ ವಿಕಟೋ ವಿಘ್ನರಾಜೋ ಗಣಾಧಿಪಃ ॥೧॥
ಧೂಮಕೇತುರ್ಗಣಾಧ್ಯಕ್ಷೋ ಫಾಲಚಂದ್ರೋ ಗಜಾನನಃ ।
ದ್ವಾದಶೈತಾನಿ ನಾಮಾನಿ ಯಃ ಪಠೇಚ್ಛೃಣುಯಾದಪಿ ॥೨॥
ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ ।
ಸಂಗ್ರಾಮೇ ಸರ್ವಕಾರ್ಯೇಷು ವಿಘ್ನಸ್ತಸ್ಯ ನ ಜಾಯತೇ ॥೩॥
ಅಭೀಪ್ಸಿತಾರ್ಥಸಿದ್ಧ್ಯರ್ಥಂ ಪೂಜಿತೋ ಯಃ ಸುರೈರಪಿ ।
ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥೪॥

ಗಣಾನಾಂ ತ್ವಾ ಗೃತ್ಸಮದ ಋಷಿಃ । ಜಗತೀಛಂದಃ ಗಣಪತಿರ್ದೇವತಾ । ಗಣಪತ್ಯಾವಾಹನೇ ವಿನಿಯೋಗಃ ॥

ಋಷಿಪಂಚಮೀ

ಓಂ ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪಮಶ್ರವ-ಸ್ತಮಮ್ । ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆ ನಃ ಶೃಣ್ವನ್ನೂತಿಭಿಃ ಸೀದ ಸಾದನಮ್ ॥

ಗಣಪತಿಗೆ ಸಂಕ್ಷೇಪವಾಗಿ ಷೋಡಶೋಪಚಾರ ಪೂಜೆ ಮಾಡಬೇಕು.

ಶ್ರೀಮಹಾಗಣಪತಯೇ ನಮಃ ॥ ಓಂ ಭೂಃ ಗಣಪತಿಮ್ ಆವಾಹಯಾಮಿ। ಓಂ ಭುವಃ ಗಣಪತಿಮ್ ಆವಾಹಯಾಮಿ । ಓಂ ಸ್ವಃ ಗಣಪತಿಮ್ ಆವಾಹಯಾಮಿ । ಓಂ ಭೂರ್ಭುವಃ ಸ್ವಃ ಗಣಪತಿಮ್ ಆವಾಹಯಾಮಿ । ಮಹಾಗಣಪತಯೇ ನಮಃ । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ । ಆವಾಹಯಾಮಿ ಆವಾಹನಂ ಸಮರ್ಪಯಾಮಿ । ಸ್ವಾಗತಂ ಸಮರ್ಪಯಾಮಿ । ಆಸನಂ ಸಮರ್ಪಯಾಮಿ । ಪಾದಯೋಃ ಪಾದ್ಯಂ ಸಮರ್ಪಯಾಮಿ । ಅರ್ಘ್ಯಂ ಸಮರ್ಪಯಾಮಿ । ಆಚಮನಂ ಸಮರ್ಪಯಾಮಿ । ಮಧುಪರ್ಕಂ ಸಮರ್ಪಯಾಮಿ । ಪುನರಾಚಮನಂ ಸಮರ್ಪಯಾಮಿ । ಸ್ನಾನಂ ಸಮರ್ಪಯಾಮಿ । ವಸ್ತ್ರಂ ಸಮರ್ಪಯಾಮಿ । ಉಪವೀತಂ ಸಮರ್ಪಯಾಮಿ । ಆಭರಣಂ ಸಮರ್ಪಯಾಮಿ । ಗಂಧಂ ಸಮರ್ಪಯಾಮಿ । ಪುಷ್ಪಾಣಿ ಸಮರ್ಪಯಾಮಿ । ಧೂಪಮಾಘ್ರಾಪಯಾಮಿ । ದೀಪಂ ದರ್ಶಯಾಮಿ ।

ಮಹಾಗಣಪತಯೇ ನಮಃ ॥ ನೈವೇದ್ಯಾರ್ಥೇ ಗುಡೋಪಹಾರಮಹಾ-ನೈವೇದ್ಯಂ ನಿವೇದಯಾಮಿ । ತಾಂಬೂಲಂ ಸಮರ್ಪಯಾಮಿ । ನೀರಾಜನಂ ಸಮರ್ಪಯಾಮಿ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ।

ನಿಷುಸೀದೇತಿ ವೈರೂಪೋ ನಭಃಪ್ರಭೇದನ ಋಷಿಃ । ತ್ರಿಷ್ಟುಪ್ ಛಂದಃ । ಗಣಪತಿರ್ದೇವತಾ ಮಂತ್ರಪುಷ್ಪಾರ್ಚನೇ ವಿನಿಯೋಗಃ ।

ಓಂ ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಮ್। ನ ಋತೇ ತ್ವತ್ ಕ್ರಿಯತೇ ಕಿಂ ಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ ॥

ಭವಂತಃ ಪ್ರತಿಗೃಹ್ಣಂತು ಜ್ಯೋತೀರೂಪಾಸ್ತಪೋಧನಾಃ ।
ಉಭಯೋಸ್ತಾರಕಾಃ ಸಂತು ವಾಯನಸ್ಯ ಪ್ರಭಾವತಃ ॥
ನ್ಯೂನಾತಿರಿಕ್ತಕರ್ಮಾಣಿ ಮಯಾ ಯಾನಿ ಕೃತಾನಿ ಹಿ ।
ಕ್ಷಮಧ್ವಂ ತಾನಿ ಸರ್ವಾಣಿ ಯೂಯಂ ಸರ್ವೇ ತಪೋಧನಾಃ ॥
ವಿಪ್ರಾಯ ವೇದವಿದುಷೇ ಶ್ರೋತ್ರಿಯಾಯ ಕುಟುಂಬಿನೇ ।
ನರಕೋತ್ತಾರಣಾರ್ಥಾಯ ಅಚ್ಯುತಃ ಪ್ರೀಯತಾಮಿತಿ ॥

## ಉತ್ತರದಿನೇ ಪೂಜಾ

## ಮರುದಿವಸ ಬೆಳಿಗ್ಗೆ ಮಾಡಬೇಕಾದ ಪೂಜೆ

ಆದ್ಯ ಪೂರ್ವೋಚ್ಚರಿತ-ವರ್ತಮಾನ ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಅರುಂಧತೀಸಹಿತಕಶ್ಯಪಾದಿಸಪ್ತಋಷಿಪ್ರೀತ್ಯರ್ಥಂ ಪುರಾಣೋಕ್ತಫಲ-ಪ್ರಾಪ್ತ್ಯರ್ಥಂ ಉತ್ತರಪೂಜಾಂ ಕರಿಷ್ಯೇ ।

ಅರುಂಧತೀಸಹಿತಕಶ್ಯಪಾದಿಸಪ್ತಋಷಿಭ್ಯೋ ನಮಃ ॥

ವಿಲೇಪನಾರ್ಥೇ ಚಂದನಂ ಸಮರ್ಪಯಾಮಿ । ಸರ್ವೋಪಚಾರಾರ್ಥೇ ಅಕ್ಷತಾನ್ ಸಮರ್ಪಯಾಮಿ। ಪೂಜಾರ್ಥೇ ಪುಷ್ಪಾಣಿ ಸಮರ್ಪಯಾಮಿ। ಧೂಪಂ ಸಮರ್ಪಯಾಮಿ । ದೀಪಂ ಸಮರ್ಪಯಾಮಿ ।

ನೈವೇದ್ಯಂ ಸಮರ್ಪಯಾಮಿ । ಹಸ್ತಪ್ರಕ್ಷಾಲನಂ ಸಮರ್ಪಯಾಮಿ । ಕರೋದ್ವರ್ತನಾರ್ಥೇ ಚಂದನಂ ಸಮರ್ಪಯಾಮಿ । ಮುಖವಾಸಾರ್ಥೇ ತಾಂಬೂಲಂ ಸಮರ್ಪಯಾಮಿ ।

ಅರುಂಧತೀ ಸಹಿತ ಕಶ್ಯಪಾದಿ ಸಪ್ತ ಋಷಿಭ್ಯೋ ನಮಃ। ಸುವರ್ಣಪುಷ್ಪಾರ್ಥೇ ದಕ್ಷಿಣಾಂ ಸಮರ್ಪಯಾಮಿ । ಮಂತ್ರಪುಷ್ಪಂ ಸಮರ್ಪಯಾಮಿ । ನಮಸ್ಕರೋಮಿ ।

ಅನೇನ ಉತ್ತರಾರಾಧನೇನ ಶ್ರೀಅರುಂಧತೀಸಹಿತಕಶ್ಯಪಾದಿಸಪ್ತಋಷ್ಯಂತ-ರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀವೇದವ್ಯಾಸಾಭಿನ್ನಃ ಶ್ರೀಕೃಷ್ಣಃ

ಪ್ರೀಯತಾಂ ಸುಪ್ರೀತೋ ವರದೋ ಭವತು ॥ ಶ್ರೀಮಧ್ವೇಶಾರ್ಪಣಮಸ್ತು ॥
ಸಪ್ತಋಷಯಃ ಪ್ರೀಯಂತಾಂ ।

ಯಾಂತು ದೇವಗಣಾಃ ಸರ್ವೇ ಪೂಜಾಮಾದಾಯ ಮಾಮಕೀಮ್ ।
ಇಷ್ಟಕಾಮಾರ್ಥಸಿದ್ಧ್ಯರ್ಥಂ ಪುನರಾಗಮನಾಯ ಚ ॥
ಆವಾಹಿತ ಋಷೀನ್ ಅರುಂಧತೀಸಾಧ್ವೀಂ ಚ ವಿಸರ್ಜಯಾಮಿ ।

ಈ ಮಂತ್ರದಿಂದ ಋಷಿಪ್ರತೀಕಗಳನ್ನು ವಿಸರ್ಜನೆ ಮಾಡುವುದು. ಆಚಮನ ಮಾಡುವುದು.

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥
ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾಽನುಸೃತಸ್ವಭಾವಃ ।
ಕರೋಮಿ ಯದ್ಯತ್ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ ॥
ಅನೇನ ಪ್ರತಿವಾರ್ಷಿಕವಿಹಿತಪೂಜನೇನ ಅರುಂಧತೀಸಹಿತಕಶ್ಯಪಾದಿಸಪ್ತ ಋಷಯಃ ಪ್ರೀಯಂತಾಮ್ ॥

* * * * *

# ಋಷಿಪಂಚಮೀ ವ್ರತದ ಕಥೆ

ಸಿತಾಶ್ವ ಉವಾಚ –

ಶ್ರುತಾನಿ ದೇವದೇವೇಶ ವ್ರತಾನಿ ಸುಬಹೂನಿ ಚ ।
ಸಾಂಪ್ರತಂ ಮೇ ಸಮಾಚಕ್ಷ್ವ ವ್ರತಂ ಪಾಪಪ್ರಣಾಶನಮ್ ॥೧॥

ಸಿತಾಶ್ವನು ಹೇಳುತ್ತಾನೆ – 'ದೇವತೆಗಳಿಗೆ ಒಡೆಯನಾದ ಚತುರ್ಮುಖ-ಬ್ರಹ್ಮದೇವನೇ! ನಿನಗೆ ನನ್ನ ಭಕ್ತಿಯ ನಮಸ್ಕಾರಗಳು. ನಾನು ಹಿಂದೆ ಅನೇಕ ವ್ರತಗಳನ್ನು ಕೇಳಿರುವೆನು. ಆ ಎಲ್ಲ ವ್ರತಗಳ ನಡುವೆ ಪಾಪವನ್ನು ಸಂಪೂರ್ಣವಾಗಿ ಸುಡಬಲ್ಲ ಶ್ರೇಷ್ಠವಾದ ವ್ರತವು ಯಾವುದು? ಇದನ್ನು ನನಗೆ ತಿಳಿಸಿಕೊಡು.

ಬ್ರಹ್ಮೋವಾಚ –

ಶೃಣು ರಾಜನ್ ಪ್ರವಕ್ಷ್ಯಾಮಿ ವ್ರತಾನಾಮುತ್ತಮಂ ವ್ರತಮ್ ।
ಋಷಿಪಂಚಮೀತಿ ವಿಖ್ಯಾತಂ ಸರ್ವಪಾಪಹರಂ ಪರಮ್ ॥೨॥

ಚತುರ್ಮುಖಬ್ರಹ್ಮದೇವರು ಉತ್ತರಿಸುತ್ತಾರೆ. ರಾಜನೇ! ಹೇಳುತ್ತೇನೆ ಕೇಳು. ಎಲ್ಲ ವ್ರತಗಳ ನಡುವೆ ಯಾವುದು ಶ್ರೇಷ್ಠವೆಂದರೆ ಋಷಿಪಂಚಮೀವ್ರತ. ಇದು ಜಗತ್ತಿನಲ್ಲಿ ಎಲ್ಲ ಪಾಪಗಳನ್ನೂ ಪರಿಹರಿಸುತ್ತದೆಂಬ ಖ್ಯಾತಿಯನ್ನು ಪಡೆದಿದೆ.

ಯೇನ ಚೀರ್ಣೇನ ರಾಜೇಂದ್ರ ನರಕಂ ನೈವ ಪಶ್ಯತಿ ।
ಅತ್ರೈವೋದಾಹರಿಷ್ಯಂತಿ ಇತಿಹಾಸಂ ಪುರಾತನಮ್ ॥೩॥

ರಾಜೇಂದ್ರನೇ! ಯಾವ ವ್ರತವನ್ನು ಅನುಷ್ಠಾನ ಮಾಡುವುದರಿಂದ ನರಕಕ್ಕೆ ಹೋಗಲು ಸಾಧ್ಯವಿಲ್ಲವೋ ಆ ವ್ರತವೇ ಋಷಿಪಂಚಮೀ ವ್ರತ. ಈ ವಿಷಯದಲ್ಲಿ ಪ್ರಾಚೀನವಾದ ಇತಿಹಾಸವೊಂದನ್ನು ಬಲ್ಲವರು ಉದಾಹರಿಸುತ್ತಾರೆ.

ವೈದರ್ಭೇ(ವೈದೇಹೇ) ಚ ದ್ವಿಜವರಃ ಉದಂಕೋ ನಾಮ ನಾಮತಃ ।
ತಸ್ಯ ಭಾರ್ಯಾ ಸುಶೀಲೇತಿ ಪತಿವ್ರತಪರಾಯಣಾ ॥೪॥

ವಿದೇಹರಾಜ್ಯದಲ್ಲಿ ಉದಂಕ ಎಂಬ ಹೆಸರುಳ್ಳ ಶ್ರೇಷ್ಠಬ್ರಾಹ್ಮಣನು ಇದ್ದನು. ಅವನ ಹೆಂಡತಿಯು ಸುಶೀಲೆ ಎಂದು. ಪಾತಿವ್ರತ್ಯದಲ್ಲಿ ಅತ್ಯಂತ ಆಸಕ್ತಳಾಗಿದ್ದಳು.

ತಸ್ಯಾ ಅಪತ್ಯಯುಗಲಂ ಪುತ್ರೋ ಹಿ ಸುವಿಭೂಷಣಃ ।
ಅಧೀತವಾನ್ ಸುತಸ್ತಸ್ಯ ವೇದಾನ್ ಸಾಂಗಪದಕ್ರಮಾನ್ ॥೫॥

ಆ ಸುಶೀಲೆಗೆ ಗಂಡು ಮಗು ಹಾಗೂ ಹೆಣ್ಣುಮಗು ಹುಟ್ಟಿದವು. ಉದಂಕನು ಗಂಡುಮಗುವಿಗೆ ಗರ್ಭಾಷ್ಟಮದಲ್ಲಿ ಉಪನಯನವನ್ನು ಮಾಡಿದನು. ಗುರುಕುಲ-ವಾಸಕ್ಕೆ ಕಳುಹಿಸಿದನು. ಅಲ್ಲಿ ಆ ಉದಂಕನ ಪುತ್ರನು ಭಕ್ತಿ ಮೊದಲಾದ ಗುಣಗಳಿಂದ ಕೂಡಿದವನಾಗಿ ಗುರುಶುಶ್ರೂಷೆಯನ್ನು ಮಾಡುತ್ತಾ ಸಮಸ್ತವೇದಗಳನ್ನು ವೇದಾಂಗ-ಗಳನ್ನು ಅಧ್ಯಯನ ಮಾಡಿದನು.

ಸಮಾನೇ ಚ ಕುಲೇ ತೇನ ಸುತಾ ಚಾಪಿ ವಿವಾಹಿತಾ ।
ವಿವಾಹಿತ್ಯೈವ ಸಾ ದೈವಾದ್ ವೈಧವ್ಯಂ ಪ್ರಾಪ ಸತ್ತಮ ॥೬॥

ಪ್ರಾಪ್ತವಯಸ್ಕಳಾದ ಮಗಳಿಗೆ ಸತ್ಕುಲಪ್ರಸೂತನಾದ ಉತ್ತಮನಾದ ವಿದ್ಯಾ-ವಂತನಾದ ಬ್ರಾಹ್ಮಣನ ಜೊತೆ ವಿವಾಹ ಮಾಡಿದನು. ದೈವವಶದಿಂದ ಸ್ವಲ್ಪಕಾಲ-ದಲ್ಲಿಯೇ ಮಗಳು ವಿಧವೆಯಾದಳು.

ಸತೀತ್ವಂ ಪಾಲಯಂತೀ ಸಾ ಆಸ್ತೇ ನಿಜಪಿತುರ್ಗೃಹೇ ।
ತಸ್ಯಾ ದುಃಖೇನ ಸಂತಪ್ತಃ ಸುತಂ ಸಂಸ್ಥಾಪ್ಯ ವೇಶ್ಮನಿ ॥೭॥
ಗಂಗಾತೀರವನಂ ಪ್ರಾಪ್ತಃ ಸಕಲತ್ರಸ್ತಯಾ ಸಹ ।
ಸ ತತ್ರಾಧ್ಯಾಪಯಾಮಾಸ ಶಿಷ್ಯಾನ್ ವೇದಂ ದ್ವಿಜೋತ್ತಮಃ ॥೮॥

ವೈಧವ್ಯದ ದುಃಖದಿಂದ ನರಳುತ್ತಿರುವ ತನ್ನ ಮಗಳನ್ನು ತನ್ನ ಮನೆಯಲ್ಲಿಯೇ ಉದಂಕನು ಇಟ್ಟುಕೊಂಡನು. ಅವಳ ದುಃಖದಿಂದ ತಾನೂ ಕೂಡ ಸಂತಪ್ತನಾದನು. ಒಮ್ಮೆ ಮಗನನ್ನು ಸೊಸೆಯ ಜೊತೆ ಮನೆಯಲ್ಲಿ ಬಿಟ್ಟು, ತನ್ನ ಹೆಂಡತಿ ಹಾಗೂ ಮಗಳೊಂದಿಗೆ ತೀರ್ಥಯಾತ್ರೆಗೆ ಹೊರಟನು. ಗಂಗಾತೀರದಲ್ಲಿರುವ ಒಂದು ವನದಲ್ಲಿ ಅನೇಕಮಂದಿ ಶಿಷ್ಯರಿಗೆ ಪಾಠವನ್ನು ಹೇಳುತ್ತಾ ವಾಸ ಮಾಡಿದನು.

ಸುತಾ ಚ ಕುರುತೇ ತಸ್ಯ ಪಿತುಃ ಶುಶ್ರೂಷಣಂ ಪರಮ್ ।
ಪಿತುಃ ಶುಶ್ರೂಷಣಂ ಕೃತ್ವಾ ಪರಿಶ್ರಾಂತಾ ಕದಾಚನ ॥೯॥

ಆ ಮಗಳು ತಂದೆಯ ಶುಶ್ರೂಷೆಯಲ್ಲಿ ರತಳಾಗಿದ್ದಳು. ತಂದೆಯ ಸೇವೆಯನ್ನು ಮಾಡಿ ಅದೊಂದು ದಿವಸ ಆಯಾಸಗೊಂಡು ಮಲಗಿದ್ದಳು.

ನಿಶೀಥೇ ಕಿಲ ಸಂಸುಪ್ತಾ ಕೃಮಿರಾಶಿರಜಾಯತ ।
ತಥಾವಿಧಾಂ ಚ ತಾಂ ದೃಷ್ಟ್ವಾ ವಿವಸ್ತ್ರಾಂ ಪ್ರಸ್ತರಸ್ಥಿತಾಮ್ ॥೧೦॥

ಶಿಷ್ಯಾ ನಿವೇದಯಾಮಾಸುಸ್ತನ್ಮಾತುಃ ಕರುಣಾನ್ವಿತಾಃ ।

ಮಲಗಿದ್ದಾಗ ಇದ್ದಕ್ಕಿದ್ದಂತೆ ಅವಳ ದೇಹದಲ್ಲಿ ಕ್ರಿಮಿಗಳು ಉಂಟಾದವು. ವಿವಸ್ತ್ರ- ಳಾಗಿ ದುಃಖವನ್ನು ಹೊಂದಿದ್ದಳು. ಇವಳ ಈ ಸ್ಥಿತಿಯನ್ನು ಕಂಡು ಶಿಷ್ಯರು ಕರುಣೆಯನ್ನು ಹೊಂದಿದವರಾಗಿ ಅವಳ ತಾಯಿಗೆ ಮಗಳ ಸ್ಥಿತಿಯನ್ನು ತಿಳಿಸಿದರು.

ನ ಜಾನೀಮೋ ವಯಂ ಕಿಂಚಿದ್ ದೇವೀಂ ಸಾಧ್ವೀಂ ತಥಾವಿಧಾಮ್ ॥೧೧॥
ಕೃಮಿರಾಶಿಮಯೀ ಜಾತಾ ಮಾತಃ ಸಂಪ್ರತಿ ದೃಶ್ಯತೇ ।
ವಜ್ರಪಾತಸದೃಕ್ಷಂ ತಚ್ಛ್ರುತ್ವಾ ಶಿಷ್ಯೈರುದೀರಿತಮ್ ॥೧೨॥

ಸಾಧ್ವಿಯಾದ ನಿನ್ನ ಮಗಳ ದೇಹವು ಕ್ರಿಮಿಗಳಿಂದ ಕೂಡಿದೆ. ಏಕೆ ಹೀಗಾಗಿದೆ ಎಂಬುದನ್ನು ನಮ್ಮಿಂದ ತಿಳಿಯಲು ಸಾಧ್ಯವಿಲ್ಲವೆಂದು ವಿನಂತಿಸಿದರು. ಎಲ್ಲ ಶಿಷ್ಯರೂ ಹೇಳಿದ ಈ ಮಾತುಗಳು ಆ ತಾಯಿಯ ಹೃದಯಕ್ಕೆ ವಜ್ರಾಘಾತ ಮಾಡಿದಂತಾಯಿತು.

ಸಾ ಭ್ರಾಂತಮನಸಾ ಶೀಘ್ರಂ ತತ್ಸಮೀಪಮುಪಾಗಮತ್ ।
ಸಾ ತಾಂ ತಥಾವಿಧಾಂ ದೃಷ್ಟ್ವಾ ವಿಲಲಾಪ ಸುದುಃಖಿತಾ ॥೧೩॥

ತಾಯಿಯು ಅತ್ಯಂತ ಉದ್ವಿಗ್ನವಾದ ಮನಸ್ಸಿನಿಂದ ಕೂಡಲೇ ತನ್ನ ಮಗಳ ಸಮೀಪಕ್ಕೆ ಓಡಿ ಬಂದಳು. ಕ್ರಿಮಿರಾಶಿಗಳಿಂದ ಕೂಡಿದ್ದ ತನ್ನ ಮಗಳ ದೇಹವನ್ನು ನೋಡಿದಳು. ಸತ್ಕುಲಪ್ರಸೂತಳಾದ ನನ್ನ ಮಗಳಿಗೇಕೆ ಇಂಥ ಪರಿಸ್ಥಿತಿ ಎದುರಾಯಿತು ಎಂಬುದಾಗಿ ಗೋಳಾಡಿದಳು.

ಉರಶ್ಚ ತಾಡಯಾಮಾಸ ಸುತರಾಂ ಮೋಹಮಾಪ ಚ ।
ಕ್ಷಣೇನ ಪ್ರಾಪ್ತಚೈತನ್ಯಾಂ ತಾಮುತ್ಥಾಪ್ಯ ಪ್ರಮೃಜ್ಯ ಚ ॥೧೪॥

ಮಗಳ ದುಸ್ಥಿತಿಯನ್ನು ಕಂಡು ತೊಡೆಯನ್ನು ಬಡಿದುಕೊಂಡು ಬಿಕ್ಕಿ ಬಿಕ್ಕಿ ಅತ್ತಳು. ಮೂರ್ಛೆ ಹೊಂದಿದಳು. ಮರುಕ್ಷಣದಲ್ಲಿ ಎಚ್ಚೆತ್ತುಕೊಂಡು ಮಗಳನ್ನು ಎಬ್ಬಿಸಿದಳು. ಕ್ರಿಮಿಗಳನ್ನು ದೂರಗೊಳಿಸಿ ಸ್ವಚ್ಛಗೊಳಿಸಲು ಪ್ರಯತ್ನಪಟ್ಟಳು.

ಸಮಾಲಂಬ್ಯ ಚ ಬಾಹುಭ್ಯಾಂ ನಿನ್ಯೇ ತತ್ಪಿತುರಂತಿಕಮ್ ।
ಸ್ವಾಮಿನ್ ಕಥಯ ಮೇ ಸಾಧ್ವೀ ಕೇನ ದುಷ್ಕೃತಕರ್ಮಣಾ ॥೧೫॥

ಮಗಳನ್ನು ಆಲಿಂಗನೆ ಮಾಡಿಕೊಂಡಳು. ಆ ಮಗಳನ್ನು ತಂದೆಯ ಬಳಿ ಕರೆದುಕೊಂಡು ಹೋದಳು. ಓ ಸ್ವಾಮಿಯೇ! ನನ್ನ ಮಗಳಾದ ಈ ಸಾಧ್ವಿಯು

ಯಾವ ಕೆಟ್ಟ ಕೆಲಸವನ್ನು ಮಾಡಿದ್ದಾಳೆ. ಯಾವುದಕ್ಕಾಗಿ ಇಂಥ ಶಿಕ್ಷೆಯನ್ನು ಅನುಭವಿಸುತ್ತಿದ್ದಾಳೆ.

ನಿಶೀಥೇ ಸಂಪ್ರಸುಪ್ತೇಯಂ ಜಾಯತೇ ಕೃಮಿಸಂಕುಲಾ ।
ಏತಚ್ಛ್ರುತ್ವಾ ತತೋ ವಾಕ್ಯಮ್ ಋಷಿರ್ಧ್ಯಾನಪರಾಯಣಃ ॥೧೬॥

ರಾತ್ರಿಯ ಕಾಲದಲ್ಲಿ ಮಲಗಿದ್ದಾಗ ಇವಳ ದೇಹದಲ್ಲಿ ಕ್ರಿಮಿಗಳ ರಾಶಿಯೇ ಹುಟ್ಟಿಕೊಂಡಿವೆ. ತನ್ನ ಪತ್ನಿಯ ಮಾತನ್ನು ಕೇಳಿ ಉದಂಕ ಋಷಿಯು ತನ್ನ ಮಗಳ ಇಂಥ ಘೋರಪರಿಸ್ಥಿತಿಗೆ ಏನು ಕಾರಣ ಎಂಬುದನ್ನು ಧ್ಯಾನಾಸಕ್ತನಾಗಿ ಕಂಡನು.

ಜ್ಞಾತ್ವಾ ನಿವೇದಯಾಮಾಸ ತಸ್ಯಾ ಪ್ರಾಕ್ ಜನ್ಮಚೇಷ್ಟಿತಮ್ ॥

ತನ್ನ ಮಗಳ ಕರ್ಮವನ್ನು ಅಪರೋಕ್ಷವಾಗಿ ಕಂಡು ತನ್ನ ಪತ್ನಿಗೆ ಮಗಳ ಹಿಂದಿನ ಜನ್ಮದ ಕರ್ಮವನ್ನು ತಿಳಿಸಿದನು.

**ಋಷಿರುವಾಚ –**

ಪ್ರಾಗಿಯಂ ಸಪ್ತಮೇಽತೀತೇ ಜನ್ಮನಿ ಬ್ರಾಹ್ಮಣೀ ಹ್ಯಭೂತ್ ॥೧೭॥
ರಜಸ್ವಲಾ ಚ ಸಂಜಾತಾ ಭಾಂಡಾದೀನ್ಯಸ್ಪೃಶತ್ ತದಾ ।
ಅಸ್ಯಾಸ್ತು ಪಾಪ್ಮನಾ ತೇನ ಜಾಯತೇ ಕ್ರಿಮಿವದ್ ವಪುಃ ॥೧೮॥

ನಿನ್ನ ಈ ಮಗಳು ಏಳು ಜನ್ಮಗಳ ಹಿಂದೆ ಬ್ರಾಹ್ಮಣ ಕುಮಾರಿಯಾಗಿ ಹುಟ್ಟಿದ್ದಳು. ರಜಸ್ವಲಾದೋಷದಿಂದ ತಾನು ಬಹಿಷ್ಠೆಯಾಗಿದ್ದರೂ ಕೂಡ ಮೈಲಿಗೆಯನ್ನು ಆಚರಣೆ ಮಾಡದೇ ಭಾಂಡಗಳನ್ನು ಪಾತ್ರೆ ಮೊದಲಾದವುಗಳನ್ನು ಸ್ವಚ್ಛಮಾಡುತ್ತಿದ್ದಳು. ಆ ಪಾತ್ರೆ ಮೊದಲಾದವುಗಳನ್ನು ಮುಟ್ಟಿದ ದೋಷದಿಂದ ಈ ಜನ್ಮದಲ್ಲಿ ಕ್ರಿಮಿಗಳುಳ್ಳ ದೇಹವನ್ನು ಹೊಂದಿದ್ದಾಳೆ.

ರಜಸ್ವಲಾಯಾಃ ಪಾಪೇನ ಯುಕ್ತಾ ಭವತಿ ಸಾನಘೇ ।
ಪ್ರಥಮೇಽಹನಿ ಚಾಂಡಾಲೀ ದ್ವಿತೀಯೇ ಬ್ರಹ್ಮಘಾತಿನೀ ॥೧೯॥

ಯಾರು ರಜಸ್ವಲೆಯಾಗಿರುತ್ತಾರೋ ಅವರು ಪಾಪಯುಕ್ತರಾಗಿರುತ್ತಾರೆ. ದೋಷವಿದೂರಳೇ! ರಜಸ್ವಲೆಯ ಧರ್ಮವನ್ನು ಹೇಳುತ್ತೇನೆ ಕೇಳು. ರಜಸ್ವಲೆಯಾದ ಸ್ತ್ರೀಯು ಮೊದಲ ದಿನದಲ್ಲಿ ಚಂಡಾಲೆಯಾಗಿರುತ್ತಾಳೆ. ಎರಡನೆಯ ದಿವಸ ಬ್ರಹ್ಮಘಾತಕಿಯಾಗಿರುತ್ತಾಳೆ.

ತೃತೀಯೇ ರಜಕೀ ಪ್ರೋಕ್ತಾ ಚತುರ್ಥೇಽಹನಿ ಶುಧ್ಯತಿ ।

ಮೂರನೆಯ ದಿವಸ ಅಗಸಗಿತ್ತಿಯಾಗಿರುತ್ತಾಳೆ. ನಾಲ್ಕನೆಯ ದಿವಸ ಶುಭ್ರಳಾಗುತ್ತಾಳೆ.

ತದಾ ತಯಾ ಸಖೀಸಂಗಾದ್ ವ್ರತಂ ದೃಷ್ಟ್ವಾವಮಾನಿತಮ್ ॥೨೦॥
ದೃಷ್ಟವ್ರತಪ್ರಭಾವೇಣ ಜಾತಾ ದ್ವಿಜಕುಲೇಽಮಲೇ ।
ಅವಮಾನಾದ್ ವ್ರತಸ್ಯಾಸ್ಯ ಕೃಮಿರಾಶೀಮಯೀಧುನಾ ॥೨೧॥
ಏತತ್ ತೇ ಕಥಿತಂ ಸರ್ವಂ ಕಾರಣಂ ದುಷ್ಕೃತಸ್ಯ ಚ ॥

ಆದರೆ ಈ ನಿನ್ನ ಮಗಳು ತನ್ನ ದುಷ್ಟರಾದ ಸಖಿಯರ ಸಂಗದಿಂದ ರಜಸ್ವಲಾವ್ರತವನ್ನು ಆಚರಣೆ ಮಾಡಲಿಲ್ಲ. ಋಷಿಪಂಚಮೀ ವ್ರತಾಚರಣೆಯನ್ನು ನೋಡಿದಳು. ಕಂಡರೂ ಅವಮಾನ ಮಾಡಿದಳು. ರಜಸ್ವಲಾಧರ್ಮವನ್ನು ತಿಳಿದಿದ್ದರೂ ಕೂಡ ಎಲ್ಲವನ್ನೂ ತಿರಸ್ಕರಿಸಿದಳು. ರಜಸ್ವಲಾದೋಷವನ್ನು ಪರಿಹರಿಸಿಕೊಳ್ಳುವ ಋಷಿಪಂಚಮೀ ವ್ರತವನ್ನು ನೋಡಿದ ಫಲದ ಪ್ರಭಾವದಿಂದಷ್ಟೇ ಇವಳು ಈ ಜನ್ಮದಲ್ಲಿ ಬ್ರಾಹ್ಮಣ ಸ್ತ್ರೀಯಾಗಿ ಹುಟ್ಟಿರುವಳು. ರಜಸ್ವಲಾಧರ್ಮವನ್ನು ಅವಮಾನ ಮಾಡಿರುವುದರಿಂದ ಈಗ ಕ್ರಿಮಿರಾಶಿಯುಳ್ಳ ದೇಹವನ್ನು ಹೊಂದಿರುವಳು. ನಿನ್ನ ಮಗಳ ಈ ಪರಿಸ್ಥಿತಿಗೆ ಕಾರಣವಾದ ದುಷ್ಕೃತ್ಯಗಳು ಇಷ್ಟು ಇವೆ. ಇವುಗಳನ್ನು ನಿನಗೆ ತಿಳಿಸಿರುವೆನು.

ಸುಶೀಲೋವಾಚ –

ದರ್ಶನಾದಪಿ ಯಸ್ಯಾಸ್ಯ ವಿಪ್ರಾಣಾಂ ನಿರ್ಮಲೇ ಕುಲೇ ॥೨೨॥
ಜನ್ಮ ಯುಷ್ಮದ್ವಿಧಾನಾಂ ಹಿ ಜಾಯತೇ ಬ್ರಹ್ಮತೇಜಸಾಮ್ ।
ಅವಜ್ಞಯಾ ಪ್ರಜಾಯಂತೇ ನಿಶೀಥೇ ಕೃಮಿರಾಶಯಃ ॥೨೩॥
ಮಹಾಶ್ಚರ್ಯಕರಂ ನಾಥ ತದ್‌ವ್ರತಂ ಕಥಯಸ್ವ ಮೇ ॥

ಸುಶೀಲೆಯು ಪುನಃ ಪ್ರಶ್ನಿಸಿದಳು – ಪ್ರಭುವೇ! ತಾವು ಹೇಳಿದ ಆ ಋಷಿಪಂಚಮೀ ವ್ರತವನ್ನು ನೋಡಿದ ಮಾತ್ರದಿಂದ ನಿರ್ಮಲವಾದ ವಿಪ್ರರ ವಂಶದಲ್ಲಿ ಹುಟ್ಟಬೇಕೆಂದರೆ ಆ ಋಷಿಪಂಚಮೀ ವ್ರತದ ಪ್ರಭಾವ ಎಷ್ಟಿರಬೇಕು. ಆದರಲ್ಲಿಯೂ

ಬ್ರಹ್ಮತೇಜಸ್ವಿಗಳಾದ ತಮ್ಮಂಥವರ ಕುಲದಲ್ಲಿ ಹುಟ್ಟಬೇಕೆಂದರೆ ಆ ವ್ರತವು ಪರಮಶ್ರೇಷ್ಠವೇ ಆಗಿರಬೇಕು. ಮತ್ತು ಆ ಋಷಿಪಂಚಮೀವ್ರತದ ವಿಧಾನವನ್ನು ತಿರಸ್ಕಾರ ಮಾಡಿರುವುದರಿಂದ ಒಂದೇ ರಾತ್ರಿಯಲ್ಲಿ ಕ್ರಿಮಿರಾಶಿಯ ದೇಹವನ್ನು ಹೊಂದುತ್ತಾಳೆಂದರೆ ಇದು ಅತ್ಯಂತ ಆಶ್ಚರ್ಯಕರವಾಗಿದೆ. ಪ್ರಭುವೇ! ಆ ಋಷಿಪಂಚಮೀವ್ರತದ ಬಗ್ಗೆ ನನಗೆ ದಯವಿಟ್ಟು ತಿಳಿಸಿರಿ.

ಋಷಿರುವಾಚ –

ಸುಶೀಲೇ ಶೃಣು ತತ್ಸಮ್ಯಗ್ ವ್ರತಾನಾಮುತ್ತಮಂ ವ್ರತಮ್ ॥೨೪॥
ಯೇನ ಚೀರ್ಣೇನ ಸಹಸಾ ಪಾಪಾದಸ್ಮಾತ್ ಪ್ರಮುಚ್ಯತೇ।
ದುಃಖತ್ರಯಾಚ್ಚ ಮುಚ್ಯೇತ ನಾರೀ ಸೌಭಾಗ್ಯಮಾಪ್ನುಯಾತ್ ॥೨೫॥

ಉದಂಕ ಋಷಿಯು ಉತ್ತರಿಸುತ್ತಾನೆ – ಎಲ್ಲ ವ್ರತಗಳಲ್ಲಿ ಋಷಿಪಂಚಮೀ ವ್ರತವು ಉತ್ತಮವಾಗಿದೆ. ಓ ಸುಶೀಲೆಯೇ! ಇದರ ಮಹಾತ್ಮ್ಯೆಯನ್ನು ಹೇಳುತ್ತೇನೆ. ಕೇಳು. ಯಾವ ಋಷಿಪಂಚಮೀ ವ್ರತದ ಆಚರಣೆ ಮಾಡುವುದರಿಂದಲೇ ರಜಸ್ವಲಾ-ದೋಷದಿಂದ ಉಂಟಾದ ಪಾಪವೆಲ್ಲವೂ ಪರಿಹಾರವಾಗುತ್ತದೆ. ತಾಪತ್ರಯಗಳು ನಾಶವಾಗುತ್ತವೆ. ಹೆಂಗಸರು ಸೌಭಾಗ್ಯಯುಕ್ತರಾಗುತ್ತಾರೆ.

ಕಲ್ಯಾಣಾನಿ ವಿವರ್ಧಂತೇ ಸಂಪದಶ್ಚ ನಿರಾಪದಃ।

ಋಷಿಪಂಚಮೀ ವ್ರತವನ್ನು ಆಚರಣೆ ಮಾಡುವುದರಿಂದ ಕಲ್ಯಾಣವಾಗುತ್ತದೆ. ಸಂಪತ್ತುಗಳು ಯಥೇಚ್ಛವಾಗಿ ಪ್ರಾಪ್ತವಾಗುತ್ತವೆ. ಆಪತ್ತುಗಳೆಲ್ಲವೂ ಪರಿಹಾರವಾಗುತ್ತವೆ.

ನಭಸ್ಯಾಃ ಶುಕ್ಲಪಕ್ಷೇ ತು ಯದಾ ಭವತಿ ಪಂಚಮೀ ॥೨೬॥
ನದ್ಯಾದಿಷು ತದಾ ಸ್ನಾತ್ವಾ ಕೃತ್ವಾ ನಿಯಮಮೇವ ಚ।
ವಿಧಾಯ ನಿತ್ಯಕರ್ಮಾಣಿ ಗತ್ವಾ ದ್ವಾರವತೀಮೃಷೀನ್ ॥೨೭॥

ಭಾದ್ರಪದಮಾಸದ ಶುಕ್ಲಪಕ್ಷದಲ್ಲಿ ಬರುವ ಪಂಚಮೀದಿವಸ ಋಷಿಪಂಚಮೀ ವ್ರತವನ್ನು ಆಚರಣೆ ಮಾಡಬೇಕು. ಅಂದು ಉಷಃಕಾಲದಲ್ಲೆದ್ದು ನದಿ, ಕೆರೆ ಮೊದಲಾದವುಗಳಲ್ಲಿ ಸ್ನಾನವನ್ನು ಮಾಡಬೇಕು. ನಿಯಮಬದ್ಧವಾಗಿ ನಿತ್ಯಕರ್ಮಗಳನ್ನು ಆಚರಿಸಬೇಕು. ಅನಂತರ ಋಷಿಗಳ ಸಮೀಪಕ್ಕೆ ತೆರಳಬೇಕು.

ಸ್ನಾಪಯೇದ್ ವಿಧಿವದ್ ಭಕ್ತ್ಯಾ ಪಂಚಾಮೃತರಸೈಃ ಶುಭೈಃ ।
ದ್ವಾರವತೀ-ಅಗ್ನಿಹೋತ್ರಶಾಲಾ ವಸ್ತ್ರಮಂಡಪಂ ಗೃಹಂ ವಾ ॥೨೮॥

ವಿಧಿಪ್ರಕಾರವಾಗಿ ಪಂಚಾಮೃತಗಳಿಂದ ಶುದ್ಧೋದಕದಿಂದ ಋಷಿಗಳಿಗೆ ಅಭಿಷೇಕ ಮಾಡಬೇಕು. ಅಗ್ನಿಹೋತ್ರಶಾಲೆ ವಸ್ತ್ರಮಂಟಪ ಅಥವಾ ಮನೆ ಇವುಗಳಲ್ಲಿ ಋಷಿಪೂಜೆಯನ್ನು ಮಾಡಬೇಕು.

ಚಂದನಾಗುರುಕರ್ಪೂರೈರ್ವಿಲಿಪ್ಯ ಚ ಸುಗಂಧಿಭಿಃ ।
ಪೂಜಯೇದ್ ವಿವಿಧೈಃ ಪುಷ್ಪೈರ್ಗಂಧಧೂಪಾದಿದೀಪಕೈಃ ॥೨೯॥

ಚಂದನ, ಅಗುರು, ಕರ್ಪೂರ ಮೊದಲಾದ ಸುಗಂಧದ್ರವ್ಯಗಳನ್ನು ಸಮರ್ಪಿಸಬೇಕು. ನಾನಾವಿಧವಾದ ಪುಷ್ಪಗಳಿಂದ ಅರ್ಚಿಸಬೇಕು. ಧೂಪಾರತಿ ಮಾಡಬೇಕು. ದೀಪಾರತಿಯನ್ನು ಕೂಡ ಮಾಡಬೇಕು.

ಸಮಾಚ್ಛಾದ್ಯ ಶುಭ್ರೈರ್ವಸ್ತ್ರೈಃ ಸೋಪವೀತೈರ್ಯಥಾವಿಧಿ ।
ತತೋ ನೈವೇದ್ಯಸಂಪನ್ನಮರ್ಘ್ಯಂ ದದ್ಯಾಚ್ಛುಭೈಃ ಫಲೈಃ ॥೩೦॥

ಶ್ವೇತವಸ್ತ್ರಗಳನ್ನು ಋಷಿಗಳಿಗೆ ಸಮರ್ಪಿಸಬೇಕು. ಯಜ್ಞೋಪವೀತವನ್ನು ವಿಧಿಯು ಹೇಳುವಂತೆ ಅರ್ಪಣೆ ಮಾಡಬೇಕು. ಅನಂತರ ನೈವೇದ್ಯವನ್ನು ಮಾಡಿ ಎಲ್ಲ ಋಷಿಗಳಿಗೆ ಅರ್ಘ್ಯವನ್ನು ಕೊಟ್ಟು ಶುಭವಾದ ಫಲಸಮರ್ಪಣೆಯನ್ನು ಮಾಡಬೇಕು.

ಕಶ್ಯಪೋಽತ್ರಿರ್ಭರದ್ವಾಜೋ ವಿಶ್ವಾಮಿತ್ರಸ್ತು ಗೌತಮಃ ।
ಜಮದಗ್ನಿರ್ವಸಿಷ್ಠಶ್ಚ ಸಪ್ತೈತೇ ಋಷಯಃ ಸ್ಮೃತಾಃ ॥೩೧॥
ಗೃಹ್ಣಂತ್ವರ್ಘ್ಯಂ ಮಯಾ ದತ್ತಂ ತುಷ್ಟಾ ಭವತ ಮೇ ಸದಾ ।
ಶ್ರೋತ್ರವ್ಯಮಿದಮಾಖ್ಯಾನಂ ಶಾಕಾಹಾರಂ ಪ್ರಕಲ್ಪಯೇತ್ ॥೩೨॥

ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಸಿಷ್ಠ ಇವರು ಸಪ್ತರ್ಷಿಗಳೆಂದು ಕರೆಸಿಕೊಳ್ಳುತ್ತಾರೆ. ಇವರನ್ನು ಕುರಿತು ನನ್ನಿಂದ ನೀಡಲ್ಪಟ್ಟ ಅರ್ಘ್ಯವನ್ನು ತಾವು ಸ್ವೀಕರಿಸಿರಿ ಎಂದು ಪ್ರಾರ್ಥಿಸಬೇಕು. ಅನಂತರ ಈ ಋಷಿಪಂಚಮೀ ವ್ರತದ ಕಥೆಯನ್ನು ಕೇಳಬೇಕು. ಕಾಯಿಪಲ್ಲೆಗಳನ್ನು ಸಮರ್ಪಣೆ ಮಾಡಬೇಕು.

ಸ್ಥಾತವ್ಯಂ ಬ್ರಹ್ಮಚರ್ಯೇಣ ಋಷಿಧ್ಯಾನಪರಾಯಣೈಃ ।
ಅನೇನ ವಿಧಿನಾ ಸಮ್ಯಗ್ ವ್ರತಮೇತತ್ ಸಮಾಚರೇತ್ ॥೩೩॥

ಅಂದು ಕೇವಲ ಋಷಿಗಳ ಧ್ಯಾನದಲ್ಲಿಯೇ ಆಸಕ್ತರಾಗಿರಬೇಕು. ಬ್ರಹ್ಮಚರ್ಯವನ್ನು ಪರಿಪಾಲನೆ ಮಾಡಬೇಕು. ಹೀಗೆ ಹೇಳಿದ ವಿಧಿಯಂತೆ ಋಷಿಪಂಚಮೀ ವ್ರತವನ್ನು ಶ್ರದ್ಧೆಯಿಂದ ಆಚರಿಸಬೇಕು.

ತಸ್ಯ ಯಜ್ಞಾಯತೇ ಪುಣ್ಯಂ ಸರ್ವತೀರ್ಥೇಷು ಯತ್ಫಲಮ್ ।
ಸರ್ವದಾನೇಷು ಯತ್ಪುಣ್ಯಂ ತದಸ್ಯ ವ್ರತಚಾರಣಾತ್ ॥೩೪॥

ಈ ಋಷಿಪಂಚಮೀ ವ್ರತದ ಆಚರಣೆಯಿಂದ ಎಷ್ಟು ಪುಣ್ಯವು ಬರುತ್ತದೆಂದರೆ ಸಕಲ ತೀರ್ಥಸ್ನಾನಗಳಿಂದ ಎಲ್ಲಾ ಸಂಪತ್ತುಗಳ ದಾನದಿಂದ ಎಲ್ಲ ವ್ರತಗಳ ಆಚರಣೆಯಿಂದ ಎಷ್ಟು ಪುಣ್ಯವು ಬರುತ್ತದೋ ಅದೆಲ್ಲ ಪುಣ್ಯವು ಋಷಿಪಂಚಮೀ ವ್ರತದ ಆಚಣೆಯಿಂದಲೇ ಬರುತ್ತದೆ.

ಕುರುತೇ ಯಾ ವ್ರತಂ ಚೈತತ್ಸಾ ನಾರೀ ಸುಖಭಾಗಿನೀ ।
ರೂಪಲಾವಣ್ಯಪುತ್ರಪೌತ್ರಾದಿಸಂಯುತಾ ॥೩೫॥

ನಾರಿಯು ಈ ವ್ರತವನ್ನು ಆಚರಿಸಿದಾಗ ಸುಖಿಯಾಗಿ ಇರುತ್ತಾಳೆ. ರೂಪಲಾವಣ್ಯಗಳಿಂದ ಕಂಗೊಳಿಸುತ್ತಾಳೆ. ಪುತ್ರಪೌತ್ರಾದಿಗಳನ್ನು ಹೊಂದುತ್ತಾಳೆ.

ಇಹ ಲೋಕೇ ಸದೈವ ಸ್ಯಾತ್ ಪರತ್ರಾಪ್ಯಕ್ಷಯಾ ಗತಿಃ ।
ವ್ರತಸ್ಯಾಸ್ಯ ಪ್ರಭಾವೇಣ ಜಾತಿಂ ಸ್ಮರತಿ ಪೌರ್ವಿಕೀಮ್ ॥೩೬॥

॥ ಇತಿ ಹೇಮಾದ್ರೌ ಬ್ರಹ್ಮಾಂಡೇ ಋಷಿಪಂಚಮೀ ಕಥಾ ॥

ಈ ಲೋಕದಲ್ಲಿ ಸಂತೋಷದಿಂದಿದ್ದು, ಪರಲೋಕದಲ್ಲಿ ಅಕ್ಷಯವಾದ ಸುಖವನ್ನು ಅನುಭವಿಸುತ್ತಾಳೆ. ಈ ಋಷಿಪಂಚಮೀವ್ರತದ ಪ್ರಭಾವದಿಂದ ಹಿಂದಿನ ಜನ್ಮಗಳ ಸ್ಮರಣೆಯೂ ಕೂಡ ಆ ವರಾಂಗನೆಗೆ ಬರುತ್ತದೆ.

ಇಲ್ಲಿಗೆ ಬ್ರಹ್ಮಾಂಡಪುರಾಣದಲ್ಲಿ ಋಷಿಪಂಚಮೀ ವ್ರತದ ಕಥೆಯು ಮುಗಿಯಿತು.

* * * * *

# ಭವಿಷ್ಯೋತ್ತರದಲ್ಲಿ ಋಷಿಪಂಚಮೀ ಕಥೆ

ಯುಧಿಷ್ಠಿರ ಉವಾಚ–

ಶ್ರುತಾನಿ ದೇವದೇವೇಶ ವ್ರತಾನಿ ಸುಬಹೂನಿ ಚ ।
ಸಾಂಪ್ರತಂ ಮೇಽನ್ಯದಾಚಕ್ಷ್ವ ವ್ರತಂ ಪಾಪಪ್ರಣಾಶನಮ್ ॥೧॥

ಶ್ರೀಕೃಷ್ಣ ಉವಾಚ–

ಅಥಾನ್ಯದಪಿ ರಾಜೇಂದ್ರ ಪಂಚಮೀಮೃಷಿಸಂಜ್ಞಿತಾಮ್ ।
ಕಥಯಿಷ್ಯಾಮಿ ತು ಯತ್ಕೃತ್ವಾ ನಾರೀ ಪಾಪಾತ್ ಪ್ರಮುಚ್ಯತೇ ॥೨॥

ಯುಧಿಷ್ಠಿರ ಉವಾಚ –

ಕೀದೃಶೀ ಪಂಚಮೀ ಕೃಷ್ಣ ಕಥಂ ಚ ಋಷಿಸಂಜ್ಞಿತಾ ।
ಪಾತಕಾತ್ ಮುಚ್ಯತೇ ಕಸ್ಮಾನ್ನಾರೀ ಯದುಕುಲೋದ್ಭವ ॥೩॥
ಪಾಪಾನಿ ಚ ಬಹೂನ್ಯತ್ರ ವಿದ್ಯತೇ ಕಿಲ ಕೇಶವ ।
ಕಥಂ ವಾ ಋಷಿಪಂಚಮ್ಯಾಂ ನಾರೀ ಕಸ್ಮಾತ್ ಪ್ರಮುಚ್ಯತೇ ॥೪॥

ಕೃಷ್ಣ ಉವಾಚ –

ಅಜ್ಞಾನಾತ್ ಜ್ಞಾನತೋ ವಾಪಿ ಯಾ ಸ್ತ್ರೀ ಜಾತಾ ರಜಸ್ವಲಾ ।
ದುಷ್ಟಾ ಸ್ಪೃಶತಿ ಭಾಂಡಾನಿ ಗೃಹಕರ್ಮಣಿ ಸಂಸ್ಥಿತಾ ॥೫॥
ಪ್ರಾಪ್ನೋತಿ ಸಾ ಮಹಾಪಾಪಂ ಸತ್ಯಂ ಸಾ ನರಕಂ ವ್ರಜೇತ್ ।
ಶೃಣು ತತ್ಕಾರಣಂ ಯಸ್ಮಾದ್ ವರ್ಜನೀಯಾ ರಜಸ್ವಲಾ ॥೬॥
ಪ್ರೋತ್ಸಾರ್ಯಾ ಗೃಹತೋ ದೂರಂ ಚಾತುರ್ವರ್ಣ್ಯೇನ ಭಾರತ ।
ಬ್ರಹ್ಮಹತ್ಯಾಂ ಪುರಾ ಶಕ್ರೋ ವೃತ್ರಂ ಹತ್ವಾ ಹ್ಯವಾಪ ಚ ॥೭॥
ತಯಾ ವೈ ರಾಜಶಾರ್ದೂಲ ವ್ರೀಡಿತೋ ವೃತ್ರಸೂದನಃ ।
ಬ್ರಹ್ಮಾಣಂ ಸಮುಪಾಗಚ್ಛತ್ ಆತ್ಮನಃ ಶುದ್ಧಿಕಾರಣಾತ್ ॥೮॥
ತತೋ ದೇವೈಃ ಸಮಂ ಬ್ರಹ್ಮಾ ಕ್ಷಣಂ ಧ್ಯಾತ್ವಾ ಚಕಾರ ವೈ ।
ಶುದ್ಧಿಂ ಶಕ್ರಸ್ಯ ರಾಜೇಂದ್ರ ಪ್ರಹೃಷ್ಟೇನಾಂತರಾತ್ಮನಾ ॥೯॥
ವಿಭಜ್ಯ ಬ್ರಹ್ಮಹತ್ಯಾಂ ತು ಚತುರ್ಧಾ ಚ ಚತುರ್ಮುಖಃ ।
ಪ್ರಾಕ್ಷಿಪದ್ ರಾಜಶಾರ್ದೂಲ ಚತುಃಸ್ಥಾನೇಷು ವೈ ತದಾ ॥೧೦॥

ವಹ್ನೌ ಪ್ರಥಮಜ್ವಾಲಾಸು ನದೀಷು ಪ್ರಥಮೋದಕೇ ।
ಪರ್ವತೇಷು ಚ ರಾಜೇಂದ್ರ ನಾರೀರಜಸಿ ಪಾರ್ಥಿವ ॥೧೧॥
ಅತೋ ರಜಸ್ವಲಾ ನಾರೀ ಪ್ರೋಕ್ತಾರ್ಯಾ ಚ ಪ್ರಯತ್ನತಃ ।
ಬ್ರಹ್ಮಣಃ ಶಾಸನಾತ್ ಪಾರ್ಥ ಚಾತುರ್ವರ್ಣ್ಯೇನ ಸರ್ವದಾ ॥೧೨॥
ಪ್ರಥಮೇಽಹನಿ ಚಾಂಡಾಲೀ ದ್ವಿತೀಯೇ ಬ್ರಹ್ಮಘಾತಿಕೀ ।
ತೃತೀಯೇ ರಜಕೀ ಪ್ರೋಕ್ತಾ ಚತುರ್ಥೇಽಹನಿ ಶುದ್ಧ್ಯತಿ ॥೧೩॥
ಅಜ್ಞಾನಾಜ್ಜ್ಞಾನತೋ ವಾಪಿ ಜಾತಂ ಸಂಪರ್ಕಪಾತಕಮ್ ।
ತತ್ಪಾಪಸಂಕ್ಷಯಾರ್ಥಂ ವೈ ಕಾರ್ಯೇಯಮೃಷಿಪಂಚಮೀ ॥೧೪॥
ಸರ್ವಪಾಪಪ್ರಶಮನೀ ಸರ್ವೋಪದ್ರವನಾಶಿನೀ ।
ಬ್ರಹ್ಮಕ್ಷತ್ರಿಯವಿಟ್‌ಶೂದ್ರೈಃ ಸ್ತ್ರೀಭಿಃ ಕಾರ್ಯಾ ವಿಶೇಷತಃ ॥೧೫॥
ಅತ್ರಾರ್ಥೇ ಯತ್ಪುರಾವೃತ್ತಂ ಪ್ರವಕ್ಷ್ಯಾಮಿ ಕಥಾನಕಮ್ ।
ಪುರಾ ಕೃತಯುಗೇ ರಾಜಾ ವಿದರ್ಭಾಯಾಂ ಬಭೂವ ಹ ॥೧೬॥
ಶ್ಯೇನಜಿನ್ನಾಮ ರಾಜರ್ಷಿಶ್ಚಾತುರ್ವರ್ಣ್ಯಾನುಪಾಲಕಃ ।
ತಸ್ಯ ದೇಶೇಽವಸದ್ ವಿಪ್ರೋ ವೇದವೇದಾಂಗಪಾರಗಃ ॥೧೭॥
ಸುಮಿತ್ರೋ ನಾಮ ರಾಜೇಂದ್ರ ಸರ್ವಭೂತಹಿತೇ ರತಃ ।
ಕೃಷಿವೃತ್ತ್ಯಾ ಸದಾ ಯುಕ್ತಃ ಕುಟುಂಬಪರಿಪಾಲಕಃ ॥೧೮॥
ತಸ್ಯ ಭಾರ್ಯಾ ಸುಸಾಧ್ವೀ ಚ ಪತಿಶುಶ್ರೂಷಣೇ ರತಾ ।
ಜಯಶ್ರೀರ್ನಾಮವಿಖ್ಯಾತಾ ಬಹುಭೃತ್ಯಸುಹೃಜ್ಜನಾ ॥೧೯॥
ಅತಿಚಿಂತಾನ್ವಿತಾ ಸಾ ಚ ಪ್ರಾವೃಟ್‌ಕಾಲೇ ಸುಮಧ್ಯಮಾ ।
ಕ್ಷೇತ್ರಾದಿಷು ರತಾ ಸಾಧ್ವೀ ವ್ಯಾಕುಲೀ ಕೃತಮಾನಸಾ ॥೨೦॥
ಏಕದಾ ಸಾತ್ಮನಃ ಪ್ರಾಪ್ತಮೃತುಕಾಲಂ ವ್ಯಲೋಕಯತ್ ।
ರಜಸ್ವಲಾಪಿ ಸಾ ರಾಜನ್ ಗೃಹಕರ್ಮ ಚಕಾರ ಹ ॥೨೧॥
ಭಾಂಡಾದೀನ್ ಅಸ್ಪೃಶದ್ ರಾಜನ್ ಋತೌ ಪ್ರಾಪ್ತೇಽಪಿ ಭಾಮಿನೀ ।
ಕಾಲೇನ ಬಹುನಾ ಸಾಧ್ವೀ ಪಂಚತ್ವಮಗಮತ್ ತದಾ ॥೨೨॥
ತಸ್ಯಾ ಭರ್ತಾಽಪಿ ವಿಪ್ರೋಽಸೌ ಕಾಲಧರ್ಮಮುಪೇಯಿವಾನ್ ।
ಏವಂ ತೌ ದಂಪತೀ ರಾಜನ್ ಸ್ವಕರ್ಮವಶಗೋ ತದಾ ॥೨೩॥
ಭಾರ್ಯಾ ತಸ್ಯ ಜಯಶ್ರೀಃ ಸಾ ಋತುಸಂಪರ್ಕದೋಷತಃ ।

ಶುನೀಯೋನಿಮನುಪ್ರಾಪ್ತಾ ಸುಮಿತ್ರೋಽಪಿ ನರೇಶ್ವರ ॥೨೪॥
ತಸ್ಯಾ ಸಂಪರ್ಕದೋಷೇಣ ಬಲೀವರ್ದೋ ಬಭೂವ ಹ ।
ಏವಂ ತೌ ದಂಪತೀ ರಾಜನ್ ಸ್ವಕರ್ಮವಶಗೌ ತದಾ ॥೨೫॥
ಋತುಸಂಪರ್ಕದೋಷೇಣ ತಿರ್ಯಗ್ಯೋನಿಮುಪಾಗತೌ ।
ಸ್ವಧರ್ಮಾಚರಣಾಜ್ಜಾತಾವುಭೌ ಜಾತಿಸ್ಮರೌ ತಥಾ ॥೨೬॥
ಸುತಸ್ಯೈವ ಗೃಹೇ ರಾಜನ್ ಸ್ಮರಂತೌ ಪೂರ್ವಪಾತಕಮ್ ।
ಸುಮಿತ್ರಸ್ಯ ಚ ಪುತ್ರೋಽಭೂದ್ ಗುರುಶುಶ್ರೂಷಣೇ ರತಃ ॥೨೭॥
ಸುಮತಿರ್ನಾಮ ಧರ್ಮಜ್ಞೋ ದೇವತಾತಿಥಿಪೂಜಕಃ ।
ಅಥ ಕ್ಷಯಾಹೇ ಸಂಪ್ರಾಪ್ತೇ ಪಿತುಸ್ತು ಸುಮತಿಸ್ತದಾ ॥೨೮॥
ಭಾರ್ಯಾ ಚಂದ್ರವತೀಂ ಪ್ರಾಹ ಸುಮತಿಃ ಶ್ರದ್ಧಯಾನ್ವಿತಃ ।
ಅದ್ಯಂ ಸಾಂವತ್ಸರದಿನಂ ಪಿತುರ್ಮೇ ಚಾರುಹಾಸಿನಿ ॥೨೯॥
ಭೋಜನೀಯಾ ದ್ವಿಜಾ ಭೀರು ಪಾಕಸಿದ್ಧಿರ್ವಿಧೀಯತಾಮ್ ।
ತಯಾ ಕೃತಾ ಪಾಕಸಿದ್ಧಿಃ ಸುಮತೇರ್ಭರ್ತುರಾಜ್ಞಯಾ ॥೩೦॥
ಮುಕ್ತಂ ಪಾಯಸಭಾಂಡೇ ವೈ ಸರ್ಪೇಣ ಗರಲಂ ತತಃ ।
ದೃಷ್ಟ್ವಾ ಬ್ರಹ್ಮವಧಾದ್ ಭೀತಾ ಶುನೊ ಭಾಂಡಾನಿ ಸಾಸ್ಪೃಶತ್ ॥೩೧॥
ದ್ವಿಜಭಾರ್ಯಾ ಚ ತಂ ದೃಷ್ಟ್ವಾ ಉಲ್ಮುಕೇನ ಜಘಾನ ಹ ।
ಭಾಂಡಾದೀನಿ ಚ ಪ್ರಕ್ಷಾಲ್ಯ ತ್ಯಕ್ತ್ವಾ ಪಾಕಂ ಸುಮಧ್ಯಮಾ ॥೩೨॥
ಪುನಃ ಪಾಕಂ ಚ ಕೃತ್ವಾತು ಶ್ರಾದ್ಧಂ ಕೃತ್ವಾ ವಿಧಾನತಃ ।
ತತೋ ಭುಕ್ತೇಷು ವಿಪ್ರೇಷು ನೋಚ್ಛಿಷ್ಟಂ ಚ ದದೌ ಬಹಿಃ ॥೩೩॥
ಭೂಮೌ ಕ್ಷಿಪ್ತಂ ತಯಾ ಶುನ್ಯಾ ಉಪವಾಸಸ್ತದಾಭವತ್ ।
ತತೋ ರಾತ್ರ್ಯಾಂ ಪ್ರವೃತ್ತಾಯಾಂ ಸಾ ಶುನೀ ಕ್ಷುಧಿತಾ ಭೃಶಮ್ ॥೩೪॥
ಬಲೀವರ್ದಮುಪಾಗತ್ಯ ಭರ್ತಾರಮಿದಮಬ್ರವೀತ್ ।
ಬುಭುಕ್ಷಿತಾದ್ಯ ಹೇ ಭರ್ತರ್ನ ದತ್ತಂ ಭೋಜನಾದಿಕಮ್ ॥೩೫॥
ಗ್ರಾಸಾದಿಕಂ ಚ ನ ಪ್ರಾಪ್ತಂ ಕ್ಷುಧಾ ಮಾಂ ಬಾಧತೇ ಭೃಶಮ್ ।
ಅನ್ಯಸ್ಮಿನ್ ದಿವಸೇ ಪುತ್ರೋ ಮಮ ಲೇಹ್ಯಂ ದದಾತ್ಯಸೌ ॥೩೬॥
ಅದ್ಯಂ ಮಹ್ಯಂ ಕಿಮಪ್ಯೇಷ ಉಚ್ಛಿಷ್ಟಮಪಿ ನೋ ದದೌ ।

ಪಾಯಸಾನ್ನೇ ಪಪಾತಾದ್ಯ ಗರಲಂ ಸರ್ಪಸಂಭವಮ್ ॥೩೭॥
ಮಯಾ ವಿಚಿಂತ್ಯ ಮನಸಾ ಮರಿಷ್ಯಂತಿ ದ್ವಿಜೋತ್ತಮಾಃ ।
ಸಂಸ್ಪೃಷ್ಟಂ ಪಾಯಸಂ ಗತ್ವಾ ಬದ್ಧಾಹಂ ತಾಡಿತಾ ಭೃಶಮ್ ॥೩೮॥
ದುಃಖಿತಂ ತೇನ ಮೇ ಗಾತ್ರಂ ಕಟಿರ್ಭಗ್ನಾ ಕರೋಮಿ ಕಿಮ್ ।
ತತಃ ಪ್ರಾಹ ಚ ಸೋಽನಡ್ವಾನ್ ಭದ್ರೇ ತೇ ಪಾಪಸಂಗ್ರಹಮ್ ॥೩೯॥
ಕಿಂ ಕರೋಮಿ ಹ್ಯಶಕ್ತೋಽಹಂ ಭಾರವಾಹತ್ವಮಾಗತಃ ।
ಅದ್ಯಾಹಮಾತ್ಮನಃ ಕ್ಷೇತ್ರೇ ವಾಹಿತಃ ಸಕಲಂ ದಿನಮ್ ॥೪೦॥
ಮಾರಿತಶ್ಚಾತ್ಮಜೇನಾಹಂ ಮುಖಂ ಬದ್ಧ್ವಾ ಬುಭುಕ್ಷಿತಃ ।
ವೃಥಾ ಶ್ರಾದ್ಧಂ ಕೃತಂ ತೇನ ಜಾತಾದ್ಯ ಮಮ ಕಷ್ಟತಾ ॥೪೧॥

ಕೃಷ್ಣ ಉವಾಚ –

ತಯೋಃ ಸಂವದತೋರೇವಂ ಮಾತಾಪಿತ್ರೋಶ್ಚ ಭಾರತ ।
ಶ್ರುತ್ವಾ ಪುತ್ರಸ್ತಥಾ ವಾಕ್ಯಂ ಯದುಕ್ತಂ ಚ ತದೋಭಯೋಃ ॥೪೨॥
ಪಿತರೌ ತೌ ವಿವಿತ್ವಾ ತು ದತ್ತವಾನ್ ಸುಮತಿಸ್ತದಾ ।
ತಸ್ಯಾಂ ರಜನ್ಯಾಂ ತತ್ಕಾಲಂ ದದೌ ತಸ್ಯೈ ಚ ಭೋಜನಮ್ ॥೪೩॥
ತದಾಸೌ ದುಃಖಿತ ಪುತ್ರೋ ಜ್ಞಾತ್ವಾವಸ್ಥಾಂ ತಥಾ ತಯೋಃ ।
ಮಾತಾಪಿತ್ರೋಸ್ತು ರಾಜೇಂದ್ರ ದ್ರುತಂ ಸಂಪ್ರಸ್ಥಿತೋ ವನಮ್ ॥೪೪॥
ಜ್ಞಾತುಮಿಚ್ಛಾಮಿ ವೈ ಕಷ್ಟಮಿತಿ ನಿಶ್ಚಿತ್ಯ ಭಾರತ ।
ತತ್ರ ಗತ್ವಾ ಜ್ಞಾನವೃದ್ಧಾನ್ ಋಷೀನ್ ಪರಮಧಾರ್ಮಿಕಾನ್ ॥೪೫॥
ಪ್ರಣಿಪತ್ಯಾಬ್ರವೀದ್ ವಾಕ್ಯಂ ಹಿತಂ ಚೈವ ತದಾ ತಯೋಃ ।

ಸುಮತಿರುವಾಚ –

ಕಥಯಧ್ವಂ ವಿಪ್ರವರ್ಯಾಃ ಪ್ರಶ್ನಮೇಕಂ ಸಮಾಹಿತಾಃ ॥೪೬॥
ಕೇನ ಕರ್ಮವಿಪಾಕೇನ ಪಿತರೌ ಮೇ ತಪೋಧನಾಃ ।
ಇಮಾಮವಸ್ಥಾಂ ಸಂಪ್ರಾಪ್ತೌ ಮೋಕ್ಷ್ಯೇತೇ ಪಾತಕಾತ್ ಕಥಮ್ ॥೪೭॥

ಕೃಷ್ಣ ಉವಾಚ –

ತದಾಕರ್ಣ್ಯ ವಚಸ್ತಸ್ಯ ಪ್ರತ್ಯುವಾಚೇದಂ ತತ್ಪಿತ್ರೋರ್ಮುಕ್ತಯೇ ತದಾ ।

ಋಷಿರುವಾಚ –

ತವ ಮಾತಾ ಪುರಾ ವಿಪ್ರ ಸ್ವಗೃಹೇ ಬಾಲಭಾವತಃ ॥೪೯॥

ಪ್ರಾಪ್ತಮೃತ್ಯುಂ ವಿದಿತ್ವಾ ತು ಸಂಪರ್ಕಮಕರೋದ್ ದ್ವಿಜ ।

ತೇನ ಕರ್ಮವಿಪಾಕೇನ ಶುನೀಯೋನಿಮುಪಾಗತಾ ॥೫೦॥

ಪಿತಾಪಿ ಸ್ಪರ್ಶದೋಷೇಣ ಬಲೀವರ್ದೋ ಬಭೂವ ಹ ।

ಏತಯೋರ್ಮುಕ್ತಿಕಾಮಾರ್ಥಂ ಕುರು ತ್ವಮೃಷಿಪಂಚಮೀಮ್ ॥೫೧॥

ಭಾರ್ಯಯಾ ಸಹ ವಿಪ್ರೇಂದ್ರ ಋಷೀನ್ ಸಂಪೂಜ್ಯ ಯತ್ನತಃ ।

ಆಚರಸ್ವ ವ್ರತಂ ತತ್ರ ಸಪ್ತವರ್ಷ ದ್ವಿಜೋತ್ತಮ ॥೫೨॥

ಅಂತೇ ಚೋದ್ಯಾಪನಂ ಕುರ್ಯಾದ್ ವಿತ್ತಶಾಠ್ಯವಿವರ್ಜಿತಃ ।

ಶಾಕಾಹಾರಸ್ತು ಕರ್ತವ್ಯೋ ನೀವಾರೈಃ ಶ್ಯಾಮಕೈಸ್ತಥಾ ॥೫೩॥

ಕಂದೈರ್ವಾಥ ಫಲೈರ್ಮೂಲೈರ್ಹಲಕೃಷ್ಟಂ ನ ಭಕ್ಷಯೇತ್ ।

ಪ್ರಾಪ್ಯ ಭಾದ್ರಪದೇ ಮಾಸಿ ಶುಕ್ಲಪಕ್ಷಸ್ಯ ಪಂಚಮೀಮ್ ॥೫೪॥

ತಸ್ಯಾಂ ಮಧ್ಯಾಹ್ನಸಮಯೇ ನದ್ಯಾದೌ ವಿಮಲೇ ಜಲೇ ।

ಕೃತ್ವಾಽಪಾಮಾರ್ಗಸಮಿಧಾ ದಂತಧಾವನಮಾದಿತಃ ॥೫೫॥

ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶುವಸೂನಿ ಚ ।

ಬ್ರಹ್ಮ ಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ದೇಹಿ ವನಸ್ಪತೇ ॥೫೬॥

ಸಂಪ್ರಾರ್ಥ್ಯಾನೇನ ಮಂತ್ರೇಣ ಕುರ್ಯಾದ್ ವೈ ದಂತಧಾವನಮ್ ।

ಮುಖದುರ್ಗಂಧನಾಶಾಯ ದಂತಾನಾಂ ಚ ವಿಶುದ್ಧಯೇ ॥೫೭॥

ಷ್ಠೀವನಾಯ ಚ ಗಾತ್ರಾಣಾಂ ಕುರ್ವೇಽಹಂ ದಂತಧಾವನಮ್ ।

ಅನೇನ ದಂತಾನ್ ಸಂಶೋಧ್ಯ ಸ್ನಾಯಾನ್ಮೃತ್ಸ್ನಾನಪೂರ್ವಕಮ್ ॥೫೮॥

ತಿಲಾಮಲಕಕಲ್ಕೇನ ಕೇಶಾನ್ ಸಂಶೋಧ್ಯ ಯತ್ನತಃ ।

ಪರಿಧಾಯ ನವೇ ಶುದ್ಧೇ ವಾಸಸೀ ಚ ಸಮಾಹಿತಃ ॥೫೯॥

ಪೂಜಯಸ್ವ ಋಷೀನ್ ದಿವ್ಯಾನರುಂಧತ್ಯಾ ಸಮನ್ವಿತಾನ್ ।
ಕಶ್ಯಪೋಽತ್ರಿರ್ಭರದ್ವಾಜೋ ವಿಶ್ವಾಮಿತ್ರೋಽಥ ಗೌತಮಃ ॥೬೦॥
ಜಮದಗ್ನಿರ್ವಸಿಷ್ಠಶ್ಚ ಸಾಧ್ವೀ ಚೈವಾಪ್ಯರುಂಧತೀ ।
ಮಂತ್ರೇಣಾನೇನ ಸಪ್ತರ್ಷೀನ್ ಪೂಜಯೇತ್ ಸುಸಮಾಹಿತಃ ॥೬೧॥
ವ್ರತೇನ ಋಷಿಪಂಚಮ್ಯಾಃ ಕೃತೇನೈವ ದ್ವಿಜೋತ್ತಮ ।
ಋತುಸಂಪರ್ಕಜೋ ದೋಷಃ ಕ್ಷಯಂ ಯಾತಿ ನ ಸಂಶಯಃ ॥೬೨॥

ಶ್ರೀಕೃಷ್ಣ ಉವಾಚ –

ತಚ್ಛ್ರುತ್ವಾ ಸುಮತಿರ್ವಾಕ್ಯಂ ಪರಮಮೃಷಿಭಾಷಿತಮ್ ।
ಗೃಹಮೇತ್ಯ ವ್ರತಂ ಚಕ್ರೇ ಸಭಾರ್ಯಃ ಶ್ರದ್ಧಯಾನ್ವಿತಃ ॥೬೩॥
ವ್ರತಂ ತು ಋಷಿಪಂಚಮ್ಯಾಃ ಸರ್ವಪಾಪಪ್ರಣಾಶನಮ್ ।
ಕೃತ್ವಾ ಸರ್ವಂ ಯಥೋಕ್ತಂ ಚ ಮಾತಾ ಪಿತ್ರೋಃ ಫಲಂ ದದೌ ॥೬೪॥
ವ್ರತಪುಣ್ಯಪ್ರಭಾವೇಣ ಮಾತಾ ತಸ್ಯ ಶ್ವಯೋನಿತಃ ।
ಮುಕ್ತಾ ನೃಪತಿಶಾರ್ದೂಲ ವಿಮಾನವರಸಂಸ್ಥಿತಾ ॥೬೫॥
ದಿವ್ಯಾಂಬರಧರಾ ಭೂತ್ವಾ ಗತಾ ಸ್ವರ್ಗಂ ಚ ಭಾರತ ।
ಪಿತಾಽಪಿ ಸ ಮೃತೋ ಮುಕ್ತಃ ಸುಮತೇ ಪಶುಯೋನಿತಃ ॥೬೬॥
ಸ್ವರ್ಗಂ ಪ್ರಾಪ್ತೋ ಮಹಾರಾಜ ವ್ರತಸ್ಯಾಸ್ಯ ಪ್ರಭಾವತಃ ।
ಕಾಯಿಕಂ ವಾಚಿಕಂ ವಾಪಿ ಮಾನಸಂ ಯಚ್ಚ ದುಷ್ಕೃತಮ್ ॥೬೭॥
ತತ್ಸರ್ವಂ ವಿಲಯಂ ಯಾತಿ ವ್ರತಸ್ಯಾಸ್ಯ ಪ್ರಭಾವತಃ ।
ತಸ್ಯ ಯಜ್ಜಾಯತೇ ಪುಣ್ಯಂ ತತ್ ಶೃಣುಷ್ವ ನೃಪೋತ್ತಮ ॥೬೮॥
ಸರ್ವವ್ರತೇಷು ಯತ್ಪುಣ್ಯಂ ಸರ್ವತೀರ್ಥೇಷು ಯತ್ಫಲಮ್ ।
ಸರ್ವಂ ದಾನೇಷು ದತ್ತೇಷು ತದೇತದ್ವ್ರತಚಾರಣಾತ್ ॥೬೯॥
ಕುರುತೇ ಯಾ ವ್ರತಂ ನಾರೀ ಸಾ ಭವೇತ್ ಸುಖಭಾಗಿನೀ ।
ರೂಪಲಾವಣ್ಯಯುಕ್ತಾ ಚ ಪುತ್ರಪೌತ್ರಾದಿಸಂಯುತಾ ॥೭೦॥
ಇಹ ಲೋಕೇ ಸದೈವ ಸ್ಯಾತ್ ಪರತ್ರ ಚ ಪರಾಂಗತಿಮ್ ।
ಏತತ್ ತೇ ಕಥಿತಂ ರಾಜನ್ ವ್ರತಾನಾಮುತ್ತಮಂ ವ್ರತಮ್ ॥೭೧॥

ಸರ್ವಸಂಪತ್ಪ್ರದಂ ಚೈವ ನಾರೀಣಾಂ ಪಾಪನಾಶನಮ್ ।
ಧನ್ಯಂ ಯಶಸ್ಯಂ ಸ್ವರ್ಗ್ಯಂ ಚ ಪುತ್ರದಂ ಚ ಯುಧಿಷ್ಠಿರ ।
ಪಠತಾಂ ಶೃಣ್ವತಾಂ ಚಾಪಿ ಸರ್ವಪಾಪಪ್ರಣಾಶನಮ್ ॥೭೨॥

॥ ಇತಿ ಶ್ರೀಭವಿಷ್ಯಪುರಾಣೇ ಋಷಿಪಂಚಮೀವ್ರತಕಥಾ ಸಂಪೂರ್ಣಾ ॥

* * * * *

## ॥ ಅಥೋದ್ಯಾಪನಮ್ ॥

ಯುಧಿಷ್ಠಿರ ಉವಾಚ –

ಕಿಮಸ್ಯೋದ್ಯಾಪನಂ ಪ್ರೋಕ್ತಂ ವ್ರತಪೂರ್ಣಫಲಪ್ರದಮ್ ।
ಸುಮತಿಃ ಕೇನ ವಿಧಿನಾ ಚಕಾರ ವದ ತತ್ತ್ವತಃ ॥೧॥

ಕೃಷ್ಣ ಉವಾಚ –

ಪೂರ್ವಸ್ಮಿನ್ ದಿವಸೇ ಕುರ್ಯಾದೇಕಭಕ್ತಂ ಸಮಾಹಿತಃ ।
ಪ್ರಾತರುತ್ಥಾಯ ಸುಸ್ನಾತಸ್ತತೋ ಗುರುಗೃಹಂ ವ್ರಜೇತ್ ॥೨॥
ಪ್ರಾರ್ಥಯೇತ್ ತಂ ತ್ವಮಾಚಾರ್ಯೋ ಭವೋದ್ಯಾಪನಕರ್ಮಣಿ ।
ಪೂರ್ವೋಕ್ತೇನೈವ ವಿಧಿನಾ ಸ್ನಾತ್ವಾ ಭಕ್ತ್ಯಾ ಸಮನ್ವಿತಃ ॥೩॥
ಶುಚೌ ದೇಶೇ ಸಮಾಲಿಪ್ಯ ಸರ್ವತೋಭದ್ರಮಂಡಲೇ ।
ಅವ್ರಣಂ ಸಜಲಂ ಕುಂಭಂ ತಾಮ್ರಂ ಮೃನ್ಮಯಮೇವ ವಾ ॥೪॥
ಸಂಸ್ಥಾಪ್ಯ ವಸ್ತ್ರಸಂವೀತಂ ಕಂಠದೇಶೇ ಸುಶೋಭನಮ್ ।
ಪಂಚರತ್ನಸಮಾಯುಕ್ತಂ ಫಲಗಂಧಾಕ್ಷತೈರ್ಯುತಮ್ ॥೫॥
ಸಹಿರಣ್ಯಂ ಸಮಾಚ್ಛಾದ್ಯ ತಾಮ್ರೇಣ ಪಟಲೇನ ವಾ ।
ವಂಶಮೃನ್ಮಯಪಾತ್ರೇಣ ಯವಪೂರ್ಣೇನ ಚೈವ ಹಿ ॥೬॥
ಆಚ್ಛಾದಯೇತ್ ತು ಚೈಲೇನ ಲಿಖೇದಷ್ಟದಲಂ ತತಃ ।
ಸೌವರ್ಣ್ಯಃ ಪ್ರತಿಮಾಃ ಕಾರ್ಯಾ ಋಷೀಣಾಂ ಭಾವಿತಾತ್ಮನಾಮ್ ॥೭॥
ಪಲೇನ ವಾ ತದರ್ಧೇನ ತದರ್ಧಾರ್ದೇನ ವಾ ಪುನಃ ।
ಶಕ್ತ್ಯಾ ವಾ ಕಾರಯೇತ್ ತತ್ರ ವಿತ್ತಶಾಠ್ಯವಿವರ್ಜಿತಃ ॥೮॥
ವಿತಾನಂ ಪಂಚವರ್ಣಂ ಚ ಫಲಪುಷ್ಪಸಮನ್ವಿತಮ್ ।
ಬಧ್ನೀಯಾದುಪರಿ ಶ್ರೀಮತ್ಸಂಭಾರಾನ್ ಸಂವಿಧಾಯ ಚ ॥೯॥

ಮಧ್ಯಾಹ್ನೇ ಪೂಜಯೇದ್ ಭಕ್ತ್ಯಾ ಋಷೀನ್ ಶ್ರದ್ಧಾಸಮನ್ವಿತಃ ।
ಕಶ್ಯಪೋಽತ್ರಿರ್ಭರದ್ವಾಜೋ ವಿಶ್ವಾಮಿತ್ರೋಽಥ ಗೌತಮಃ ॥೧೦॥
ಜಮದಗ್ನಿರ್ವಸಿಷ್ಠಶ್ಚ ಸಾಧ್ವೀ ಚೈವಾಪ್ಯರುಂಧತೀ ।
ಮಂತ್ರೇಣಾನೇನ ರಾಜೇಂದ್ರ ಕೃತ್ವಾ ಪೂಜಾಂ ಸಮಾಹಿತಃ ॥೧೧॥
ರಾತ್ರೌ ಜಾಗರಣಂ ಕುರ್ಯಾತ್ ಪುರಾಣಶ್ರವಣಾದಿಭಿಃ ।
ಕೃತನಿತ್ಯಕ್ರಿಯಃ ಪ್ರಾತರ್ಜುಹುಯಾತ್ ತಿಲಸರ್ಪಿಷಾ ॥೧೨॥
ವೈದಿಕೋ ವಾಥ ಪೌರಾಣ ಅಧಿಕಾರಾನ್ಮನುಃ ಸ್ಮೃತಃ ।
ಅಷ್ಟೋತ್ತರಸಹಸ್ರಂ ವಾ ಶತಮಷ್ಟೋತ್ತರಂ ತು ವಾ ॥೧೩॥
ಪುನಃ ಪೂಜಾಂ ತತಃ ಕೃತ್ವಾ ಗುರುಂ ಸಂಪೂಜಯೇದ್ ವ್ರತೀ ।
ಸ್ವರ್ಣಾಂಗುಲೀಯವಾಸೋಭಿಃ ಕುಂಡಲಾಮೃತಭೋಜನೈಃ ॥೧೪॥
ದದ್ಯಾದೇಕಾಂ ಸವತ್ಸಾಂ ಚ ಗುರವೇ ಗಾಂ ಪಯಸ್ವಿನೀಮ್ ।
ಪೂಜಯೇದ್ ಋತ್ವಿಜಃ ಸಪ್ತ ವಾಸೋಭಿರ್ದಕ್ಷಿಣಾದಿಭಿಃ ॥೧೫॥
ಕಲಶಾನುಪವೀತಾನಿ ದದ್ಯಾತ್ ತೇಭ್ಯಃ ಸುಭಕ್ತಿತಃ ।
ಆಚಾರ್ಯಂ ಚ ಸಪತ್ನೀಕಂ ಪ್ರಣಿಪತ್ಯ ಕ್ಷಮಾಪಯೇತ್ ॥೧೬॥
ಭೋಜಯೇದ್ ಬ್ರಾಹ್ಮಣಾನ್ ಭಕ್ತ್ಯಾ ದೀನಾನಾಥಾನ್ ಪ್ರತರ್ಪ್ಯ ಚ ।
ಲಬ್ಧ್ವಾನುಜ್ಞಾಂ ತು ಭುಂಜೀತ ಇಷ್ಟೈರ್ಬಂಧುಜನೈಃ ಸಹ ॥೧೭॥
ಉದ್ಯಾಪನವಿಧಿಃ ಪ್ರೋಕ್ತಃ ಸರ್ವತ್ರಾಯಂ ಫಲಾರ್ಥಿನಾಮ್ ।
ಏವಂ ಯಾ ಕುರುತೇ ಭೂಪ ಉದ್ಯಾಪನವಿಧಿಂ ಪರಮ್ ॥೧೮॥
ಸರ್ವಪಾಪವಿನಿರ್ಮುಕ್ತಾ ಸ್ವರ್ಗೇ ಲೋಕೇ ಮಹೀಯತೇ ।
ಇಹ ಲೋಕೇ ಚಿರಂ ಕಾಲಂ ಭರ್ತ್ರಾ ಸಹ ಶುಚಿಸ್ಮಿತಾ ॥೧೯॥
ಪುತ್ರಪೌತ್ರೈಃ ಪರಿವೃತಾ ಭುಕ್ತ್ವಾ ಭೋಗಾನ್ ಮನೋಹರಾನ್ ।
ನಿಷ್ಪಾಪಾ ಸುಭಗಾ ನಿತ್ಯಂ ಲಭತೇ ಚಾಕ್ಷಯಾಂ ಗತಿಮ್ ॥೨೦॥

॥ ಇತಿ ಶ್ರೀಭವಿಷ್ಯಪುರಾಣೇ ಋಷಿಪಂಚಮೀವ್ರತೋದ್ಯಾಪನವಿಧಿಃ ॥

* * * * *

# ಸಪ್ತ ಋಷಿಗಳ ಬಗ್ಗೆ ಸಂಕ್ಷೇಪ ಮಾಹಿತಿ

(ಆಧಾರ - ಪುರಾಣಭಾರತಕೋಷ ಹಾಗೂ ಋಷಿಗಳು ಪುಸ್ತಕ)

## ಕಶ್ಯಪರು

ಕಶ್ಯಪರು ಮರೀಚಿ ಮುನಿಗಳ ಮಗ. ಕಶ್ಯಪರ ತಾಯಿ ಕರ್ದಮಪ್ರಜಾಪತಿಗಳ ಪುತ್ರಿಯಾದ ಕಲೆ. ಕಶ್ಯಪರಿಗೆ ದಕ್ಷಪ್ರಜೇಶ್ವರರ ಹದಿಮೂರು ಮಂದಿ ಪುತ್ರಿಯರು. ಅವರ ಹೆಸರುಗಳು ಅದಿತಿ, ದಿತಿ, ಮುನಿ, ಕದ್ರು ಇತ್ಯಾದಿ. ಭಾಗವತದಲ್ಲಿ ಕಶ್ಯಪರಿಗೆ ೧೭ ಪತ್ನಿಯರು ಎಂದು ಹೇಳಲಾಗಿದೆ. ವೈಶ್ವಾನರನ ಪುತ್ರಿಯಾದ ಕಾಲಾ ಮತ್ತು ಪುಲೋಮಾ ಎಂಬವರೂ ಕಶ್ಯಪರ ಮಡದಿಯರು. ಕಶ್ಯಪರಿಗೆ ಪರಶುರಾಮರಿಂದ ಭೂಮಿಯು ದಾನವಾಗಿ ಕೊಡಲ್ಪಟ್ಟಿತು. ಇದರಿಂದ ಭೂಮಿಗೆ ಕಾಶ್ಯಪಿ ಎಂಬುದಾಗಿ ಹೆಸರಿದೆ. ವರುಣನ ಗೋವುಗಳನ್ನು ಕಶ್ಯಪರು ಎರವಲು ತಂದು ಇಬ್ಬರು ಪತ್ನಿಯರ ಮಾತು ಕೇಳಿ ಹಿಂದಕ್ಕೆ ಕೊಡದಿದ್ದರಿಂದ ವರುಣನ ಶಾಪಕ್ಕೆ ಗುರಿಯಾಗಿ ವಸುದೇವ ಮತ್ತು ದೇವಕಿ, ರೋಹಿಣಿಯರಾಗಿ ದ್ವಾಪರಯುಗದಲ್ಲಿ ಜನ್ಮವೆತ್ತಿದರು. ದನಗಳನ್ನು ವಸುದೇವನು ನಿರ್ಬಂಧಿಸಿದ್ದರಿಂದ ವಸುದೇವನಿಗೆ ಕಾರಾಗೃಹವಾಸ ಪ್ರಾಪ್ತವಾಯಿತು. ಕಶ್ಯಪರು ಗೋತ್ರಪ್ರವರ್ತಕರಾದ ಮಹರ್ಷಿಗಳಲ್ಲಿ ಮೊದಲನೆಯವರು. ಗೋತ್ರ ಗೊತ್ತಿಲ್ಲದವರು ತಮ್ಮದು ಕಾಶ್ಯಪಗೋತ್ರವೆಂದು ತಿಳಿಯಬೇಕೆಂದೇ ಧರ್ಮಶಾಸ್ತ್ರಗಳು ಹೇಳುತ್ತವೆ.

ಪರ್ವತರೆಂಬ ದೇವರ್ಷಿ ಹಾಗೂ ವಿಭಾಂಡಕರೆಂಬ ಬ್ರಹ್ಮರ್ಷಿ ಕಾಶ್ಯಪರ ಮಕ್ಕಳು. ಕಶ್ಯಪರಿಗೆ ಅದಿತಿಯಲ್ಲಿ ದೇವತೆಗಳೂ, ದಿತಿಯಲ್ಲಿ ದೈತ್ಯರೂ, ದನುವಿನಲ್ಲಿ ದಾನವರೂ, ಕಾಲೆಯಲ್ಲಿ ಕಾಲಕೇಯರೂ, ದನಾಯುವಿನಲ್ಲಿ ಸಿದ್ಧರೂ, ಕ್ರೋಧೆಯಲ್ಲಿ ಮಾಂಸಾಹಾರಿ ಪ್ರಾಣಿಗಳೂ, ಪ್ರಾಧೆಯಲ್ಲಿ ಗಂಧರ್ವರೂ, ವಿನತೆಯಲ್ಲಿ ಅರುಣ ಗರುಡರೂ, ಕಪಿಲೆಯಲ್ಲಿ ಗೋವುಗಳೂ, ಮುನಿಯಲ್ಲಿ ಅಪ್ಸರೆಯರೂ, ಕದ್ರುವಿನಲ್ಲಿ ಸರ್ಪಗಳೂ, ಸುರಸೆಯಲ್ಲಿ ಯಕ್ಷರೂ ನಾಗರೂ, ಇಲೆಯಲ್ಲಿ ಮರ ಬಳ್ಳಿ ಹುಲ್ಲು-ಗಳೂ, ತಾಮ್ರೆಯಲ್ಲಿ ಅಶ್ವ ಗರ್ದಭ ಹದ್ದುಗಳೂ ಮಕ್ಕಳಾಗಿ ಹುಟ್ಟಿದರು.

ಭೂಮಿಯು ದುರಾತ್ಮರಿಂದ ಪೀಡಿತವಾಗಿ ರಸಾತಳಕ್ಕೆ ಇಳಿಯುತ್ತಿರಲು ಉದಾರಬುದ್ಧಿಯುಳ್ಳ ಕಶ್ಯಪರು ಭೂಮಿಯನ್ನೆತ್ತಿ ತಮ್ಮ ತೊಡೆಯಲ್ಲಿ ಧರಿಸಿದರು. ಇದರಿಂದ ಭೂಮಿಗೆ ಉರ್ವಿ ಎಂಬ ಹೆಸರು ಬಂದಿತು. ಕಾಶ್ಯಪಿ ಎಂಬ ಹೆಸರೂ ಬಂದಿತು.

## ಅತ್ರಿ ಋಷಿಗಳು

ಇವರೂ ಬ್ರಹ್ಮರ್ಷಿಗಳೇ. ಬ್ರಹ್ಮದೇವರ ಮಾನಸಪುತ್ರರು. ಇವರು ಬ್ರಹ್ಮದೇವರ ಅಧಿಕಾರದಲ್ಲಿ ಕೆಲಕಾಲವಿದ್ದರು. ಚಂದ್ರನಾಗಿಯೂ ಕೆಲವು ಕಾಲ ಕಾರ್ಯ ನಿರ್ವಹಿಸಿದವರು. ಇವರಿಗೆ ಅನೇಕ ಮಹರ್ಷಿಗಳು ಮಕ್ಕಳಾಗಿ ಜನಿಸಿದರು. ಇವರ ಪತ್ನಿ ಕರ್ದಮರ ಪುತ್ರಿಯಾದ ಅನಸೂಯೆ. ಪ್ರಮುಖರಾದ ಮಕ್ಕಳು ಆತ್ರೇಯ, ದುರ್ವಾಸ, ಚಂದ್ರರೆಂಬ ಮೂವರು. ಅತ್ರಿ ಋಷಿಗಳ ನೇತ್ರದಿಂದ ಚಂದ್ರನು ಹುಟ್ಟಿದನು. ಅಸುರರು ಅತ್ರಿ ಋಷಿಗಳನ್ನು ನೂರು ದ್ವಾರಗಳುಳ್ಳ ಯಂತ್ರಗಳಲ್ಲಿ ಹಾಕಿ ತುಷಾಗ್ನಿಯಿಂದ ಸುಡುವಾಗ ಅತ್ರಿ ಋಷಿಗಳು ಅಶ್ವಿನೀದೇವತೆಗಳನ್ನು ಸ್ತುತಿಸಲು, ಅವರು ಬಂದು ನೀರಿನಿಂದ ಬೆಂಕಿಯನ್ನು ನಂದಿಸಿ ಅತ್ರಿ ಋಷಿಗಳನ್ನು ಬದುಕಿಸಿದರು. ಧ್ರುವರಾಜನ ತಂದೆಯಾದ ಉತ್ತಾನಪಾದನನ್ನು ಅತ್ರಿ ಋಷಿಗಳು ದತ್ತಕ್ಕೆ ತೆಗೆದು ಕೊಂಡರು.

## ಭರದ್ವಾಜರು

ಉಚಥ್ಯ ಮುನಿಗಳ ಪತ್ನಿಯಾದ ಮಮತೆಯಲ್ಲಿ ಬೃಹಸ್ಪತಿಗಳಿಂದ ಹುಟ್ಟಿದವರು ಭರದ್ವಾಜರು. ಭರದ್ವಾಜರು ಗಂಗಾತೀರದಲ್ಲಿ ತಪಸ್ಸು ಮಾಡುತ್ತಿದ್ದಾಗ ಘೃತಾಚಿ ಎಂಬ ಅಪ್ಸರೆಯ ಸೌಂದರ್ಯಕ್ಕೆ ಮರುಳಾಗಿ ಪತನವಾದ ವೀರ್ಯವನ್ನು ದ್ರೋಣ(ದೊನ್ನೆ) ದಲ್ಲಿಟ್ಟು ರಕ್ಷಿಸಿದರು. ರಕ್ಷಿಸಿಟ್ಟ ಆ ವೀರ್ಯದಿಂದ ಹುಟ್ಟಿದವರೇ ಪಾಂಡವ ಕೌರವರ ಗುರುಗಳಾದ ದ್ರೋಣಾಚಾರ್ಯರು. ಇಬ್ಬರಿಂದ ಪೋಷಿಸಲ್ಪಟ್ಟವರು ಭರದ್ವಾಜರು. ಬೃಹಸ್ಪತಿಗಳು ಮಮತೆಯೊಡನೆ 'ಎಲಾ ಮೂಢಬುದ್ಧಿಯವಳೇ! ಧ್ವಾಜನಾದ ಈ ಮಗುವನ್ನು ಭರಿಸು' ಎಂದಾಗ 'ಬೃಹಸ್ಪತಿಯೇ ಧ್ವಾಜನಾದ ಇವನನ್ನು ನಾನೊಬ್ಬಳೇ ಏಕೆ ಸಾಕಬೇಕು. ನೀನೇ ಇವನನ್ನು ಸಾಕು' ಎಂದು ಹೇಳಿದಳು. ಹೀಗೆ ಪರಸ್ಪರವಾಗಿ ಹೇಳಿ ಯಾವ ಕಾರಣ ತಾಯಿ ತಂದೆಗಳಾದ ಬೃಹಸ್ಪತಿ ಮಮತೆಯರು ಹೊರಟುಹೋದರೋ ಆ ಕಾರಣದಿಂದ ಆ ಮಗುವು ಭರದ್ವಾಜನೆಂದು ಹೆಸರು ಪಡೆಯಿತು. ಹೀಗೆ ಭರದ್ವಾಜರು ತಮ್ಮ ಹೆಸರನ್ನು ಪಡೆದರು.

ಆಗ ಮರುತ್ತರು ಆ ಮಗುವನ್ನು ಎತ್ತಿಕೊಂಡು ಭೂಮಂಡಲದ ಚಕ್ರವರ್ತಿ ಭರತನಿಗೆ ತಂದು ಒಪ್ಪಿಸಿದರು. ದುಷ್ಯಂತಸಾರ್ವಭೌಮ ಮತ್ತು ಶಕುಂತಲೆಯರ ಮಗನಾದ ಭರತ ಚಕ್ರವರ್ತಿಗೆ ಮೂವರು ಹೆಂಡಂದಿರಿದ್ದರು. ಮೂರು ಹೆಂಡಂದಿರಿಗೂ ಒಬ್ಬೊಬ್ಬ ಮಕ್ಕಳಿದ್ದರೂ ದುಷ್ಯಂತನಷ್ಟು ಸುಂದರವಾಗಿರಲಿಲ್ಲ.

ಆದರಿಂದ ಮಹಾರಾಜನು ಕುಪಿತನಾಗಿ ತಮ್ಮನ್ನೇ ಬಿಟ್ಟು ಬಿಡಬಹುದೆಂದು ಭಯದಿಂದ ಮೂವರು ರಾಣಿಯರೂ ತಮ್ಮ ಮಕ್ಕಳನ್ನು ಕೊಂದುಬಿಟ್ಟರು. ಇದನ್ನು ತಿಳಿದು ಚಕ್ರವರ್ತಿಯು ನಿರಾಶನಾಗಿ ತನ್ನ ವಂಶದ ಕುಡಿಯೇ ಬಾಡಿಹೋಯಿತೆಂದು ದುಃಖದಿಂದ ಮಕ್ಕಳ ಸಲುವಾಗಿ ಮರುತ್‌ಸ್ತೋಮ ಎಂಬ ಯಜ್ಞವನ್ನು ಮಾಡತೊಡಗಿದನು. ಆಗ ದೇವತೆಗಳು ತಾಯಿತಂದೆಗಳು ತೊರೆದು ಹೋದ ಅನಾಥ ಭರದ್ವಾಜನನ್ನು ತಂದು ಅವನಿಗಿತ್ತು ಇವನನ್ನೇ ನಿನ್ನ ಮಗನನ್ನಾಗಿ ಮಾಡಿಕೋ ಎಂದು ಹೇಳಿದರು. ಆದರಂತೆ ಭರತನು ಭರದ್ವಾಜನನ್ನು ತನ್ನ ಪುತ್ರನೆಂದು ಸ್ವೀಕರಿಸಿದನು.

ಭರದ್ವಾಜರು ಮಾತ್ರವಲ್ಲದೇ ಅವರ ಸಂತತಿಯ ಅನೇಕ ಋಷಿಗಳು ವೇದದ್ರಷ್ಟಾರರಾದರು. ರಾಮನು ವನವಾಸಕ್ಕೆ ಹೋಗುವಾಗ ಭರದ್ವಾಜರ ಆಶ್ರಮದಲ್ಲಿ ತಂಗಿದ್ದ, ಮುಂದೆ ಅಣ್ಣನನ್ನು ಕಾಣಲಿಕ್ಕೆ ಬಂದ ಭರತನ ರಾಜಪರಿವಾರಕ್ಕೆಲ್ಲ ಭರದ್ವಾಜರು ರಾಜಾತಿಥ್ಯವನ್ನು ನೀಡಿದರು. ಪಂಚರಾತ್ರಸಂಪ್ರದಾಯದಲ್ಲಿ ಭರದ್ವಾಜಸಂಹಿತಾ ಎಂಬ ನಾಲ್ಕು ಅಧ್ಯಾಯದ ಗ್ರಂಥವಿದೆ. ಪದ್ಮಪುರಾಣದಲ್ಲಿ ಭರದ್ವಾಜಸ್ಮೃತಿಯ ಉಲ್ಲೇಖವಿದೆ. ಮಹಾಭಾರತ ಹಾಗೂ ಕೌಟಿಲೀಯ ಅರ್ಥಶಾಸ್ತ್ರದಲ್ಲಿ ಭರದ್ವಾಜರ ದಂಡನೀತಿಯ ಉಲ್ಲೇಖವಿದೆ. ಮತ್ತು ಸಂವಾದಗಳೂ ದೊರಕುತ್ತವೆ. ಇದರಿಂದ ಭರದ್ವಾಜರು ಭಾರತೀಯ ಅರ್ಥಶಾಸ್ತ್ರದ ಜನಕರಾಗಿದ್ದರೆಂದು ತಿಳಿಯುತ್ತದೆ.

## ವಿಶ್ವಾಮಿತ್ರ ಋಷಿಗಳು

ವಿಶ್ವಾಮಿತ್ರರು ಕೂಡ ಬ್ರಹ್ಮರ್ಷಿಗಳೇ. ಚಂದ್ರವಂಶದ ಗಾಧಿರಾಜನ ಮಗರಾದ ಇವರಿಗೆ ಮೊದಲು ವಿಶ್ವರಥ ಎಂಬ ಹೆಸರಿತ್ತು. ಇವರು ಹುಟ್ಟಿನಿಂದ ಕ್ಷತ್ರಿಯರಾಗಿದ್ದು ಮುಂದೆ ತಪಸ್ಸಿನಿಂದ ಬ್ರಾಹ್ಮಣರಾದರು. ಇವರ ಧರ್ಮಪತ್ನಿಯ ಹೆಸರು ಹೈಮವತಿ. ಇವರಿಗೆ ಶಾಲಾವತಿ, ದೃಷದ್ವತಿ, ರೇಣು, ಮಾಧವಿ ಎಂಬ ಹೆಂಡಂದಿರೂ ಇದ್ದರು. ಆದರೂ ವಿಶ್ವಾಮಿತ್ರ - ಮೇನಕೆಯರು ದಂಪತಿಗಳೆನ್ನುವುದು ರೂಢಿಯಲ್ಲಿದೆ. ಇವರಿಗೆ ಶಾಲಾವತಿಯೆಂಬ ಭಾರ್ಯೆಯಲ್ಲಿ ಹಿರಣ್ಯಾಕ್ಷ, ದೇವಶ್ರವ, ಕತಿ ಎಂಬ ಮೂವರು ಮಕ್ಕಳಾದರು. ಇವರಲ್ಲಿ ಕತಿ ಎಂಬುವರ ವಂಶಜರೇ ಕಾತ್ಯಾಯನರು ಎಂದು ಪ್ರಸಿದ್ಧರಾದರು. ರೇಣು ಎಂಬ ಪತ್ನಿಯಲ್ಲಿ ವಿಶ್ವಾಮಿತ್ರರಿಗೆ ರೇಣುಮಾನ್, ಸಂಕೃತಿ, ಗಾಲವ, ಮುದ್ಗಲ, ಮಧುಚ್ಛಂದ, ಜಯ, ದೇವ ಎಂಬುವರು ಪುತ್ರರಾದರು. ದೃಷದ್ವತಿಯಲ್ಲಿ ಅಷ್ಟಕ, ಕಚ್ಛಪ, ಹಾರೀತರೆಂಬ ಮೂವರು ಮಕ್ಕಳಾದರು. ವಿಶ್ವಾಮಿತ್ರರಿಗೆ ಶುನಶ್ಶೇಫ ಅಥವಾ ದೇವರಾತರು ಅತ್ಯಂತ ಅಭಿಮಾನದ ಪುತ್ರರು.

## ಅತ್ರಿ ಋಷಿಗಳು

ಇವರೂ ಬ್ರಹ್ಮರ್ಷಿಗಳೇ. ಬ್ರಹ್ಮದೇವರ ಮಾನಸಪುತ್ರರು. ಇವರು ಬ್ರಹ್ಮದೇವರ ಅಧಿಕಾರದಲ್ಲಿ ಕೆಲಕಾಲವಿದ್ದರು. ಚಂದ್ರನಾಗಿಯೂ ಕೆಲವು ಕಾಲ ಕಾರ್ಯ ನಿರ್ವಹಿಸಿದವರು. ಇವರಿಗೆ ಅನೇಕ ಮಹರ್ಷಿಗಳು ಮಕ್ಕಳಾಗಿ ಜನಿಸಿದರು. ಇವರ ಪತ್ನಿ ಕರ್ದಮರ ಪುತ್ರಿಯಾದ ಅನಸೂಯೆ. ಪ್ರಮುಖರಾದ ಮಕ್ಕಳು ಆತ್ರೇಯ, ದುರ್ವಾಸ, ಚಂದ್ರರೆಂಬ ಮೂವರು. ಅತ್ರಿ ಋಷಿಗಳ ನೇತ್ರದಿಂದ ಚಂದ್ರನು ಹುಟ್ಟಿದನು. ಅಸುರರು ಅತ್ರಿ ಋಷಿಗಳನ್ನು ನೂರು ದ್ವಾರಗಳುಳ್ಳ ಯಂತ್ರಗಳಲ್ಲಿ ಹಾಕಿ ತುಷಾಗ್ನಿಯಿಂದ ಸುಡುವಾಗ ಅತ್ರಿ ಋಷಿಗಳು ಅಶ್ವಿನೀದೇವತೆಗಳನ್ನು ಸ್ತುತಿಸಲು, ಅವರು ಬಂದು ನೀರಿನಿಂದ ಬೆಂಕಿಯನ್ನು ನಂದಿಸಿ ಅತ್ರಿ ಋಷಿಗಳನ್ನು ಬದುಕಿಸಿದರು. ಧ್ರುವರಾಜನ ತಂದೆಯಾದ ಉತ್ತಾನಪಾದನನ್ನು ಅತ್ರಿ ಋಷಿಗಳು ದತ್ತಕ್ಕೆ ತೆಗೆದು ಕೊಂಡರು.

## ಭರದ್ವಾಜರು

ಉಚಥ್ಯ ಮುನಿಗಳ ಪತ್ನಿಯಾದ ಮಮತೆಯಲ್ಲಿ ಬೃಹಸ್ಪತಿಗಳಿಂದ ಹುಟ್ಟಿದವರು ಭರದ್ವಾಜರು. ಭರದ್ವಾಜರು ಗಂಗಾತೀರದಲ್ಲಿ ತಪಸ್ಸು ಮಾಡುತ್ತಿದ್ದಾಗ ಘೃತಾಚಿ ಎಂಬ ಅಪ್ಸರೆಯ ಸೌಂದರ್ಯಕ್ಕೆ ಮರುಳಾಗಿ ಪತನವಾದ ವೀರ್ಯವನ್ನು ದ್ರೋಣ(ದೊನ್ನೆ) ದಲ್ಲಿಟ್ಟು ರಕ್ಷಿಸಿದರು. ರಕ್ಷಿಸಿಟ್ಟ ಆ ವೀರ್ಯದಿಂದ ಹುಟ್ಟಿದವರೇ ಪಾಂಡವ ಕೌರವರ ಗುರುಗಳಾದ ದ್ರೋಣಾಚಾರ್ಯರು. ಇಬ್ಬರಿಂದ ಪೋಷಿಸಲ್ಪಟ್ಟವರು ಭರದ್ವಾಜರು. ಬೃಹಸ್ಪತಿಗಳು ಮಮತೆಯೊಡನೆ 'ಎಲಾ ಮೂಢಬುದ್ಧಿಯವಳೇ! ಧ್ವಾಜನಾದ ಈ ಮಗುವನ್ನು ಭರಿಸು' ಎಂದಾಗ 'ಬೃಹಸ್ಪತಿಯೇ ಧ್ವಾಜನಾದ ಇವನನ್ನು ನಾನೊಬ್ಬಳೇ ಏಕೆ ಸಾಕಬೇಕು. ನೀನೇ ಇವನನ್ನು ಸಾಕು' ಎಂದು ಹೇಳಿದಳು. ಹೀಗೆ ಪರಸ್ಪರವಾಗಿ ಹೇಳಿ ಯಾವ ಕಾರಣ ತಾಯಿ ತಂದೆಗಳಾದ ಬೃಹಸ್ಪತಿ ಮಮತೆಯರು ಹೊರಟುಹೋದರೋ ಆ ಕಾರಣದಿಂದ ಆ ಮಗುವು ಭರದ್ವಾಜನೆಂದು ಹೆಸರು ಪಡೆಯಿತು. ಹೀಗೆ ಭರದ್ವಾಜರು ತಮ್ಮ ಹೆಸರನ್ನು ಪಡೆದರು.

ಆಗ ಮರುತ್ತರು ಆ ಮಗುವನ್ನು ಎತ್ತಿಕೊಂಡು ಭೂಮಂಡಲದ ಚಕ್ರವರ್ತಿ ಭರತನಿಗೆ ತಂದು ಒಪ್ಪಿಸಿದರು. ದುಷ್ಯಂತಸಾರ್ವಭೌಮ ಮತ್ತು ಶಕುಂತಲೆಯರ ಮಗನಾದ ಭರತ ಚಕ್ರವರ್ತಿಗೆ ಮೂವರು ಹೆಂಡಂದಿರಿದ್ದರು. ಮೂರು ಹೆಂಡಂದಿರಿಗೂ ಒಬ್ಬೊಬ್ಬ ಮಕ್ಕಳಿದ್ದರೂ ದುಷ್ಯಂತನಷ್ಟು ಸುಂದರವಾಗಿರಲಿಲ್ಲ.

ಆದರಿಂದ ಮಹಾರಾಜನು ಕುಪಿತನಾಗಿ ತಮ್ಮನ್ನೇ ಬಿಟ್ಟು ಬಿಡಬಹುದೆಂದು ಭಯದಿಂದ ಮೂವರು ರಾಣಿಯರೂ ತಮ್ಮ ಮಕ್ಕಳನ್ನು ಕೊಂದುಬಿಟ್ಟರು. ಇದನ್ನು ತಿಳಿದು ಚಕ್ರವರ್ತಿಯು ನಿರಾಶನಾಗಿ ತನ್ನ ವಂಶದ ಕುಡಿಯೇ ಬಾಡಿಹೋಯಿತೆಂದು ದುಃಖದಿಂದ ಮಕ್ಕಳ ಸಲುವಾಗಿ ಮರುತ್‌ಸ್ತೋಮ ಎಂಬ ಯಜ್ಞವನ್ನು ಮಾಡತೊಡಗಿದನು. ಆಗ ದೇವತೆಗಳು ತಾಯಿತಂದೆಗಳು ತೊರೆದು ಹೋದ ಅನಾಥ ಭರದ್ವಾಜನನ್ನು ತಂದು ಅವನಿಗಿತ್ತು ಇವನನ್ನೇ ನಿನ್ನ ಮಗನನ್ನಾಗಿ ಮಾಡಿಕೋ ಎಂದು ಹೇಳಿದರು. ಅದರಂತೆ ಭರತನು ಭರದ್ವಾಜನನ್ನು ತನ್ನ ಪುತ್ರನೆಂದು ಸ್ವೀಕರಿಸಿದನು.

ಭರದ್ವಾಜರು ಮಾತ್ರವಲ್ಲದೇ ಅವರ ಸಂತತಿಯ ಅನೇಕ ಋಷಿಗಳು ವೇದದ್ರಷ್ಟಾರರಾದರು. ರಾಮನು ವನವಾಸಕ್ಕೆ ಹೋಗುವಾಗ ಭರದ್ವಾಜರ ಆಶ್ರಮದಲ್ಲಿ ತಂಗಿದ್ದ, ಮುಂದೆ ಅಣ್ಣನನ್ನು ಕಾಣಲಿಕ್ಕೆ ಬಂದ ಭರತನ ರಾಜಪರಿವಾರಕ್ಕೆಲ್ಲ ಭರದ್ವಾಜರು ರಾಜಾತಿಥ್ಯವನ್ನು ನೀಡಿದರು. ಪಂಚರಾತ್ರಸಂಪ್ರದಾಯದಲ್ಲಿ ಭರದ್ವಾಜಸಂಹಿತಾ ಎಂಬ ನಾಲ್ಕು ಅಧ್ಯಾಯದ ಗ್ರಂಥವಿದೆ. ಪದ್ಮಪುರಾಣದಲ್ಲಿ ಭರದ್ವಾಜಸ್ಮೃತಿಯ ಉಲ್ಲೇಖವಿದೆ. ಮಹಾಭಾರತ ಹಾಗೂ ಕೌಟಿಲೀಯ ಅರ್ಥಶಾಸ್ತ್ರದಲ್ಲಿ ಭರದ್ವಾಜರ ದಂಡನೀತಿಯ ಉಲ್ಲೇಖವಿದೆ. ಮತ್ತು ಸಂವಾದಗಳೂ ದೊರಕುತ್ತವೆ. ಇದರಿಂದ ಭರದ್ವಾಜರು ಭಾರತೀಯ ಅರ್ಥಶಾಸ್ತ್ರದ ಜನಕರಾಗಿದ್ದರೆಂದು ತಿಳಿಯುತ್ತದೆ.

## ವಿಶ್ವಾಮಿತ್ರ ಋಷಿಗಳು

ವಿಶ್ವಾಮಿತ್ರರು ಕೂಡ ಬ್ರಹ್ಮರ್ಷಿಗಳೇ. ಚಂದ್ರವಂಶದ ಗಾಧಿರಾಜನ ಮಗರಾದ ಇವರಿಗೆ ಮೊದಲು ವಿಶ್ವರಥ ಎಂಬ ಹೆಸರಿತ್ತು. ಇವರು ಹುಟ್ಟಿನಿಂದ ಕ್ಷತ್ರಿಯರಾಗಿದ್ದು ಮುಂದೆ ತಪಸ್ಸಿನಿಂದ ಬ್ರಾಹ್ಮಣರಾದರು. ಇವರ ಧರ್ಮಪತ್ನಿಯ ಹೆಸರು ಹೈಮವತಿ. ಇವರಿಗೆ ಶಾಲಾವತಿ, ದೃಷದ್ವತಿ, ರೇಣು, ಮಾಧವಿ ಎಂಬ ಹೆಂಡಂದಿರೂ ಇದ್ದರು. ಆದರೂ ವಿಶ್ವಾಮಿತ್ರ - ಮೇನಕೆಯರು ದಂಪತಿಗಳೆನ್ನುವುದು ರೂಢಿಯಲ್ಲಿದೆ. ಇವರಿಗೆ ಶಾಲಾವತಿಯೆಂಬ ಭಾರ್ಯೆಯಲ್ಲಿ ಹಿರಣ್ಯಾಕ್ಷ, ದೇವಶ್ರವ, ಕತಿ ಎಂಬ ಮೂವರು ಮಕ್ಕಳಾದರು. ಇವರಲ್ಲಿ ಕತಿ ಎಂಬುವರ ವಂಶಜರೇ ಕಾತ್ಯಾಯನರು ಎಂದು ಪ್ರಸಿದ್ಧರಾದರು. ರೇಣು ಎಂಬ ಪತ್ನಿಯಲ್ಲಿ ವಿಶ್ವಾಮಿತ್ರರಿಗೆ ರೇಣುಮಾನ್, ಸಂಕೃತಿ, ಗಾಲವ, ಮುದ್ಗಲ, ಮಧುಚ್ಛಂದ, ಜಯ, ದೇವ ಎಂಬುವರು ಪುತ್ರರಾದರು. ದೃಷದ್ವತಿಯಲ್ಲಿ ಅಷ್ಟಕ, ಕಚ್ಛಪ, ಹಾರೀತರೆಂಬ ಮೂವರು ಮಕ್ಕಳಾದರು. ವಿಶ್ವಾಮಿತ್ರರಿಗೆ ಶುನಶ್ಶೇಫ ಅಥವಾ ದೇವರಾತರು ಅತ್ಯಂತ ಅಭಿಮಾನದ ಪುತ್ರರು.

ವಿಶ್ವಾಮಿತ್ರರು ಕ್ಷತ್ರಿಯರಾಗಿದ್ದಾಗ ಜಗತ್ತಿನ ರಾಜ ಮಹಾರಾಜರುಗಳನ್ನೆಲ್ಲ ಜಯಿಸಿ ರಾಜಧಾನಿಗೆ ಮರಳುತ್ತಿದ್ದಾಗ ದಾರಿಯಲ್ಲಿ ವಸಿಷ್ಠರ ಆಶ್ರಮದಲ್ಲಿ ಮಧ್ಯಾಹ್ನದ ಹೊತ್ತಿಗೆ ಸೈನ್ಯಸಮೇತ ತಂಗಿದರು. ವಸಿಷ್ಠರಿಂದ ಸತ್ಕೃತರಾದ ಅವರು ವಸಿಷ್ಠರ ನಂದಿನಿ ಧೇನುವನ್ನು ಮೆಚ್ಚಿದರು. ನಂದಿನಿಯನ್ನು ತಮ್ಮೊಂದಿಗೆ ಅಪೇಕ್ಷೆ ಪಟ್ಟರಾದರೂ ಅಪ್ಪಣೆಯು ಸಿಗದ ಕಾರಣ ಅದನ್ನು ಬಲಾತ್ಕಾರವಾಗಿ ಸೆಳೆದೊಯ್ದರು. ಈ ಪ್ರಯತ್ನದಲ್ಲಿ ವಸಿಷ್ಠರಿಂದ ಪರಾಭವ ಹೊಂದಿ ವಿಫಲರಾದರು. ವಸಿಷ್ಠರ ಬ್ರಹ್ಮತೇಜಸ್ಸನ್ನು ಮನಗಂಡ ವಿಶ್ವಾಮಿತ್ರರು ಬ್ರಾಹ್ಮಣರಾಗುವ ಹಂಬಲದಿಂದ ತಪಸ್ವಿಯಾದರು. ಈ ತಪಸ್ಸಿನಲ್ಲಿ ತೊಡಗಿದ್ದಾಗ ಸ್ವರ್ಗದಿಂದ ಪತಿತನಾಗುತ್ತಿದ್ದ ತ್ರಿಶಂಕುವನ್ನು ಆಕಾಶದಲ್ಲೇ ನಿಲ್ಲಿಸಿ ಅವನಿಗೊಂದು ಸ್ವರ್ಗವನ್ನು ನಿರ್ಮಾಣ ಮಾಡಿಕೊಟ್ಟ ಕೀರ್ತಿ ಅವರದ್ದು. ಇದೇ ಕಾಲದಲ್ಲಿ ಮೇನಕೆಯಿಂದ ವಿಶ್ವಾಮಿತ್ರರಿಗೆ ಶಕುಂತಲೆಯು ಜನಿಸಿದಳು.

ಮಹರ್ಷಿಗಳಾದ ಋಚೀಕರು ತಮ್ಮ ಪತ್ನಿಯಾದ ಸತ್ಯವತಿದೇವಿಯ ಸೇವೆಗೆ ಮೆಚ್ಚಿ ಅವಳಿಗೂ (ಮಕ್ಕಳಿಲ್ಲದ) ಅವಳ ತಾಯಿಗೂ ಸಂತತಿಯಾಗುವುದಕಾಗಿ ಎರಡು ಬೇರೆ ಬೇರೆ ಚರುಗಳನ್ನು ತಮ್ಮ ಮಂತ್ರಶಕ್ತಿಯಿಂದ ಸಿದ್ಧಪಡಿಸಿದರು. ಚರುವನ್ನು ತಮ್ಮ ಪತ್ನಿಯ ಕೈಯ್ಯಲ್ಲಿ ಕೊಟ್ಟು ನೀನಗಾಗಿ ಮಂತ್ರಿಸಿರುವ ಈ ಚರುವಿನಿಂದ ಶಾಂತನೂ, ತೇಜಸ್ವಿಯೂ ಆದ ತಪಸ್ವೀಪುತ್ರನು ಜನಿಸುವನು, ನಿನ್ನ ತಾಯಿಗಾಗಿ ಮಂತ್ರಿಸಿರುವ ಚರುವಿನಿಂದ ಕ್ಷತ್ರಿಯಾಂತಕನೂ, ಜಗಜ್ಜೇತೃವೂ, ದೀಪ್ತಿಮಂತನೂ, ಧೀರನೂ ಆದ ಪುತ್ರನು ಜನಿಸುವನೆಂದು ಹೇಳಿ ತಪಸ್ಸಿಗಾಗಿ ಹೊರಟು ಹೋದರು. ಆದರೆ ದೈವವಶಾತ್ ಚರುಗಳು ಬದಲಾಗಿ ಮಗಳ ಚರುವನ್ನು ತಾಯಿಯೂ, ತಾಯಿಯ ಚರುವನ್ನು ಮಗಳೂ ತಿಂದರು.

ಈ ವಿಷಯ ತಿಳಿದ ಋಚೀಕರ ಬಳಿ ಸತ್ಯವತಿಯು ಪ್ರಾರ್ಥಿಸಿದಾಗ ಸತ್ಯವತಿಯ ಮೊಮ್ಮಗನಾಗಿ ಪ್ರಚಂಡ ಶಕ್ತಿವಂತರಾದ ಪರಶುರಾಮರು ಜನಿಸಿದರು; ಹಾಗೂ

ಕ್ಷತ್ರಿಯನಾದ ಗಾಧಿಯೆಂಬ ಸತ್ಯವತಿಯ ತಂದೆಗೆ ವಿಶ್ವಾಮಿತ್ರರು ಮಗನಾಗಿ ಜನಿಸಿದರು. ಕ್ಷತ್ರಿಯರಾದರೂ ವಿಶ್ವಾಮಿತ್ರರು ಋಚೀಕರ ಮಂತ್ರಪೂತವಾದ ಚರುವಿನ ಪ್ರಭಾವದಿಂದ ಬ್ರಹ್ಮರ್ಷಿಯ ಪದವಿಗೇರಿದರು.

ವಿಶ್ವಾಮಿತ್ರರು ಹೀಗೆ ತಪಸ್ಸಿನ ಪ್ರಭಾವದಿಂದ ಬ್ರಾಹ್ಮಣರಾದರು. ಅವರು ಯಯಾತಿಯ ಪುತ್ರಿಯಾದ ಮಾಧವಿಯನ್ನು ಮದುವೆಯಾಗಿ ಅವಳಲ್ಲಿ ಅಷ್ಟಕನೆಂಬ ಮಗನನ್ನು ಪಡೆದರು.

ವಿಶ್ವಾಮಿತ್ರರು ವಸಿಷ್ಠರ ಮೇಲೆ ಮುನಿದು ಅವರ ಮಕ್ಕಳಿಗೆ ಸಾಯುವಂತೆ ಶಾಪ ಕೊಡಲು ಅವರೆಲ್ಲಾ ನಾಶವಾದರು. ಇದರಿಂದ ವ್ಯಸನಗೊಂಡ ವಸಿಷ್ಠರು ಆತ್ಮಹತ್ಯೆ ಮಾಡಿಕೊಳ್ಳಲೆಂದು ಸಮುದ್ರಕ್ಕೆ ಹಾರಿಕೊಳ್ಳಲು ಅವರಿಗೆ ಪಾದ ಮುಳುಗುವಷ್ಟು ನೀರಾಗಿ ಆತ್ಮಹತ್ಯೆ ಸಾಧ್ಯವಾಗಲಿಲ್ಲ.

ವಿಶ್ವಾಮಿತ್ರರು ಹರಿಶ್ಚಂದ್ರನ ರಾಜ್ಯವನ್ನು ದಾನವನ್ನಾಗಿ ಪಡೆದು, ಅವನನ್ನು ಅನೇಕ ವಿಧವಾಗಿ ಹಿಂಸಿಸಿ ಅವನಿಂದ ಸತ್ಯವ್ರತವನ್ನು ಬಿಡಿಸಲಾಗದೇ ಪರಾಜಿತರಾದರು. ಹಾಗೂ ಅವನಿಗೆ ಅವನ ರಾಜ್ಯವನ್ನೂ ತಮ್ಮ ತಪಸ್ಸಿನ ಫಲವನ್ನೂ ಕೊಟ್ಟು ಹೊರಟುಹೋದರು.

ವಿಶ್ವಾಮಿತ್ರರು ಈಗಿನ ವೈವಸ್ವತಮನ್ವಂತರದಲ್ಲಿ ಸಪ್ತರ್ಷಿಗಳಲ್ಲಿ ಒಬ್ಬರು. ಇವರು ಮಂತ್ರದ್ರಷ್ಟಾರರು. ಜಗತ್ತಿಗೆ ಗಾಯತ್ರೀಮಂತ್ರವನ್ನು ನೀಡಿದ ಹೆಗ್ಗಳಿಕೆ ಇವರದ್ದು. ಮುಂದೆ ಇವರ ವಂಶದಲ್ಲಿ ಹುಟ್ಟಿದ ದೇವರಾತ, ಮಧುಚ್ಛಂದ, ಅಘಮರ್ಷಣ, ಅಷ್ಟಕ ಇವರೇ ಮೊದಲಾದವರೆಲ್ಲರೂ ವೇದದ್ರಷ್ಟಾರರು.

## ಗೌತಮರು

ಗೌತಮರು ಸಪ್ತರ್ಷಿಗಳಲ್ಲಿ ಒಬ್ಬರು. ಅವರ ಪತ್ನಿ ಅಹಲ್ಯೆ. ಗೌತಮ ಅಹಲ್ಯೆಯರಿಗೆ ಶತಾನಂದ ಎಂಬ ಬ್ರಹ್ಮಜ್ಞಾನಿಯಾದ ಮಗನಿದ್ದ. ಏಕತ, ದ್ವಿತ, ತ್ರಿತ ಎಂಬ ಮೂವರು ಗೌತಮರ ಮಕ್ಕಳೆಂದು ಮಹಾಭಾರತ ಶಾಂತಿಪರ್ವದಲ್ಲಿ ಉಲ್ಲೇಖಿಸಲಾಗಿದೆ. ವೈವಸ್ವತ ಮನ್ವಂತರದಲ್ಲಿ ಇಪ್ಪತ್ತನೆಯ ದ್ವಾಪರದಲ್ಲಿ ಗೌತಮರೇ ವೇದವ್ಯಾಸರ ಪೀಠವನ್ನು ಅಲಂಕರಿಸಿದ್ದರು. ಇವರು ಆಗಿನ ಕಾಲದ ಋಷಿಶ್ರೇಷ್ಠರು ಎಂದು ಉಲ್ಲೇಖ ಕಂಡು ಬರುತ್ತದೆ. ಋಗ್ವೇದದ ಪ್ರಥಮಮಂಡಲದ ೭೪ರಿಂದ ೯೩ವರೆಗಿನ ಸೂಕ್ತಗಳಿಗೆ ಗೌತಮರೇ ದ್ರಷ್ಟಾರರು.

ಭಾರತೀಯ ನ್ಯಾಯಶಾಸ್ತ್ರದ ಆದ್ಯಪ್ರವರ್ತಕರೆಂದು ಗೌತಮರ ಹೆಸರು ಹೇಳುತ್ತಾರೆ. ಸಾಮವೇದದ ಗೋಭಿಲಗೃಹ್ಯಸೂತ್ರದಲ್ಲಿ ಗೌತಮರ ಉಲ್ಲೇಖ ಮೇಲಿಂದ ಮೇಲೆ ಬರುತ್ತದೆ. ಗೌತಮಸ್ಮೃತಿ ಎಂಬ ಗದ್ಯಗ್ರಂಥವು ಮುದ್ರಿತವಾಗಿದೆ. ಬೋಧಾಯನ ಧರ್ಮಸೂತ್ರದಲ್ಲಿ ಗೌತಮರ ಧರ್ಮಶಾಸ್ತ್ರದ ಉಲ್ಲೇಖ ಕಂಡು ಬರುತ್ತದೆ.

ಗೌತಮಧರ್ಮಸೂತ್ರದ ಮೇಲೆ ಹರದತ್ತನು 'ಮಿತಾಕ್ಷರಾ' ಎಂಬ ಟೀಕೆಯನ್ನು ಬರೆದಿದ್ದಾನೆ. ಮಸ್ಕರೀ ಮತ್ತು ಅಸಹಾಯರು ಅದರ ಮೇಲೆ ಭಾಷ್ಯ ಬರೆದಿದ್ದಾರೆ. ಈ ಗೌತಮ ಧರ್ಮಸೂತ್ರದಲ್ಲಿ ರಾಜಧರ್ಮದ ಬಗ್ಗೆ ವಿಸ್ತೃತವಾದ ವಿವೇಚನೆ ಇದೆ. ಮತ್ತು ಹೆಣ್ಣುಮಕ್ಕಳ ಕರ್ತವ್ಯ ಮತ್ತು ಅವರ ಬಗೆಗೆ ಸಮಾಜದ ಹೊಣೆಗಾರಿಕೆಯ ಬಗೆಗೂ ಸೂಕ್ಷ್ಮವಾದ ವಿಚಾರವನ್ನು ಮಾಡಲಾಗಿದೆ. ಅದರಂತೆ ಬ್ರಾಹ್ಮಣಶೂದ್ರಾದಿ ಜಾತಿಯವರ ಸಹ ಜೀವನದ ಆಚಾರವಿಚಾರಗಳನ್ನು ಶಾಸ್ತ್ರಶುದ್ಧರೀತಿಯಿಂದ ನಿರೂಪಿಸಲಾಗಿದೆ. ಚಿಕ್ಕಪುಟ್ಟ ಪಾಪ ಮತ್ತು ಮಹಾಪಾತಕಗಳ ಪ್ರಾಯಶ್ಚಿತ್ತದ ಬಗೆಗೂ ಅದರಲ್ಲಿ ವಿವೇಚಿಸಲಾಗಿದೆ.

ಗೌತಮಧರ್ಮಸೂತ್ರದಲ್ಲಿಯೂ ಅತ್ಯಂತ ಉಪಯುಕ್ತವಾದ ಅನೇಕ ವಿಷಯಗಳ ವಿವೇಚನೆಯು ಕಂಡು ಬರುತ್ತದೆ. ಮಿತಾಕ್ಷರಾ, ಸ್ಮೃತಿಚಂದ್ರಿಕೆಗಳಲ್ಲಿ 'ಶ್ಲೋಕ ಗೌತಮ' ಎಂಬ ಗ್ರಂಥವನ್ನು ನಿರ್ದೇಶಿಸಲಾಗಿದೆ. ಅಪರಾರ್ಕದ ದತ್ತಕಮೀಮಾಂಸೆಯ ಸಂದರ್ಭದಲ್ಲಿ 'ವೃದ್ಧಗೌತಮ' ಎಂಬ ಎರಡು ಧರ್ಮಶಾಸ್ತ್ರಗ್ರಂಥಗಳನ್ನು ಉದಾಹರಿಸಿದ್ದಾರೆ. ಜೀವಾನಂದಪ್ರೆಸ್ಸಿನಲ್ಲಿ 'ಗೌತಮಸ್ಮೃತಿ' ಎಂಬ ಪದ್ಯಗ್ರಂಥವೂ ಮುದ್ರಿತವಾಗಿದೆ. ಇವಲ್ಲದೇ ಆಹ್ನಿಕಸೂತ್ರ, ಪಿತೃಮೇಧಸೂತ್ರ, ದಾನಚಂದ್ರಿಕಾನ್ಯಾಯಸೂತ್ರ, ಗೌತಮೀಶಿಕ್ಷಾ ಮುಂತಾದ ಅನೇಕ ಗ್ರಂಥಗಳು ಗೌತಮರ ಹೆಸರಿನಿಂದ ಬೆಳಕು ಕಂಡಿವೆ. ಇದರಿಂದ ಗೌತಮಮುನಿಗಳ ಜ್ಞಾನವು ಹಿಮಾಲಯದಂತೆ ಉನ್ನತವೂ, ಸಮುದ್ರದಂತೆ ಅಪಾರವೂ ಆಗಿದ್ದಿತೆಂದು ತಿಳಿದುಬರುತ್ತದೆ.

## ಜಮದಗ್ನಿ ಋಷಿಗಳು

ಗಾಧಿಯೆಂಬ ಪರಮಧಾರ್ಮಿಕನಾದ ರಾಜನಿದ್ದನು. ಅವನಿಗೊಬ್ಬ ಸತ್ಯವತಿ ಎಂಬ ಸುಂದರಳಾದ ಮಗಳಿದ್ದಳು. ಋಚೀಕರೆಂಬ ಮುನಿಗಳು ಈಕೆಯನ್ನು ತನಗೆ ಕನ್ಯಾದಾನವನ್ನಾಗಿ ಕೊಡು ಎಂದು ಕೇಳಿಕೊಂಡರು.

ಪ್ರತಿಯಾಗಿ ಗಾಧಿಯು ಕನ್ಯಾಶುಲ್ಕವನ್ನು ಬಯಸಿದ. ಶುಲ್ಕದ ನಿಯಮ ಹೀಗಿತ್ತು – ಒಂದು ಕಿವಿ ಕಪ್ಪಾಗಿರುವ ಉಳಿದೆಲ್ಲ ಭಾಗ ಬಿಳಿಯಾಗಿರುವ ಸಾವಿರ ಕುದುರೆಗಳನ್ನು ಕನ್ಯಾಶುಲ್ಕವನ್ನಾಗಿ ನೀಡಿದರೆ ತನ್ನ ಮಗಳನ್ನು ದಾನ ಮಾಡುವುದಾಗಿ ಹೇಳಿದ. ಈ ಶರತ್ತಿಗನುಗುಣವಾಗಿ (ಕುದುರೆಗಳನ್ನು ತಂದು ಕೊಡಲು) ಋಚೀಕರು ವರುಣನ ಬಳಿಗೆ ಬಂದರು. ವರುಣನ ಬಳಿ ಅಂತಹ ಸಾವಿರಾರು ಕುದುರೆಗಳಿದ್ದವು. ಅವನಿಂದ

ಸಾವಿರ ಕುದುರೆಗಳನ್ನು ಪಡೆದು ಋಚೀಕರು ಗಾಧಿಗೆ ನೀಡಿದರು. ಗಾಧಿರಾಜ ತನ್ನ ಮಗಳನ್ನು ಋಚೀಕರಿಗೆ ದಾನ ಮಾಡಿದ.

ಗಾಧಿಗೆ ತನ್ನ ಅಳಿಯರಾದ ಋಚೀಕರು ಒಬ್ಬ ಅಸಾಮಾನ್ಯತಪಸ್ವಿ ಎಂದು ತಿಳಿಯಿತು. ಗಾಧಿಗೆ ಗಂಡು ಮಕ್ಕಳಿರಲಿಲ್ಲ. ಅದಕ್ಕಾಗಿ ಋಚೀಕರಲ್ಲಿ ಪ್ರಾರ್ಥಿಸಿದ. ಋಚೀಕರು ತನ್ನ ಪತ್ನಿ ಹಾಗೂ ತನ್ನ ಅತ್ತೆ ಗಾಧಿಯ ಪತ್ನಿಗೆ ಸಂತಾನವಾಗಲೆಂದು ಎರಡು ಚರುಗಳನ್ನು ಅಭಿಮಂತ್ರಿಸಿದ. ಪ್ರತ್ಯೇಕವಾಗಿ ವಿಭಿನ್ನಮಂತ್ರಗಳಿಂದ ಪೂತವಾದ ಚರುವನ್ನು ಪತ್ನಿ - ಅತ್ತೆಯರಿಗೆ ಭಕ್ಷಿಸಿರಿ ಎಂದ. ಇಬ್ಬರೂ ಚರುವನ್ನು ಸ್ವೀಕರಿಸಿದರು. ಋಚೀಕರ ಪತ್ನಿಯ ತಾಯಿಯು ಹೀಗೆ ಯೋಚಿಸಿದಳು. ಗಂಡನಿಗೆ ಪತ್ನಿಯ ಮೇಲೆ ಅಗಾಧವಾದ ಪ್ರೀತಿ. ಆದ್ದರಿಂದ ನನ್ನ ಮಗಳಿಗೆ ಕೊಟ್ಟ ಚರುವಿನಲ್ಲಿ ಅಧಿಕವಾದ ಮಂತ್ರಶಕ್ತಿಯನ್ನು ಋಚೀಕರು ತುಂಬಿರುತ್ತಾರೆ. ಆದ್ದರಿಂದ ಆ ಚರುವನ್ನು ನಾನು ಭಕ್ಷಿಸಿದಲ್ಲಿ ನನಗೆ ಉತ್ತಮೋತ್ತಮನಾದ ಮಗನು ಜನಿಸುತ್ತಾನೆ ಎಂದು ಚಿಂತಿಸಿದಳು. ತನ್ನ ಮಗಳನ್ನು ಅನುನಯದಿಂದ ವಶ ಮಾಡಿಕೊಂಡು ಚರುವನ್ನು ಬದಲಾಯಿಸಿ ಕೊಳ್ಳೋಣ ಎಂದಳು. ಮಾತೃಪ್ರೇಮದಿಂದ ಮಗಳು ಒಪ್ಪಿದಳು. ಇಬ್ಬರೂ ಮಂತ್ರಪೂತವಾದ ಚರುವನ್ನು ಸೇವಿಸಿದರು.

ಋಚೀಕರಿಗೆ ಅನಂತರ ನಡೆದ ವಿಷಯ ತಿಳಿಯಿತು. ಬಹಳ ಬೇಸರವಾಯಿತು. ಏಕೆಂದರೆ ತನ್ನ ಅತ್ತೆಗೆ ಕ್ಷಾತ್ರತೇಜದ ಸುತನೂ, ತನಗೆ ಬ್ರಹ್ಮವರ್ಚಸ್ವಿಯಾದ ಮಗನೂ ಜನಿಸಲೆಂದು ಚರುವನ್ನು ಅಭಿಮಂತ್ರಿಸಿದ್ದರು. ಇದನ್ನು ಅವರು ಬದಲಾಯಿಸಿಕೊಂಡಿದ್ದಾರೆ. ತನಗೆ ಇನ್ನು ಕ್ಷಾತ್ರತೇಜಸ್ಸಿನ ಮಗನು ಹುಟ್ಟುತ್ತಾನೆ. ಅದು ಅವರಿಗೆ ಇಷ್ಟವಿರಲಿಲ್ಲ.

ಪತ್ನಿಗೆ ಹೇಳಿದರು – 'ಈ ತಪ್ಪಿನಿಂದಾಗಿ ನಿನಗೆ ಬಹು ಕ್ಷಾತ್ರತೇಜಸ್ಸುಳ್ಳ ಕ್ಷತ್ರಿಯ ಕುಲಾಂತಕನಾದ ಮಗನು ಹುಟ್ಟುತ್ತಾನೆ' ಎಂದರು. ಸತ್ಯವತಿಯು ಪತಿಯನ್ನು 'ಹಾಗಾಗ ಬಾರದು. ನನ್ನ ಮಗನು ಬ್ರಹ್ಮತೇಜಸ್ವಿಯಾಗಿರಬೇಕು' ಎಂದು ಬಗೆ ಬಗೆಯಲ್ಲಿ ಪ್ರಾರ್ಥಿಸಿಕೊಂಡಳು. ಋಚೀಕರು ಹೇಳಿದರು – 'ನನ್ನ ಮಂತ್ರವೀರ್ಯವು ನಿರ್ವೀರ್ಯವಾಗುವುದಿಲ್ಲ. ನಿನ್ನ ಮೊಮ್ಮಗನು ಕ್ಷಾತ್ರತೇಜಸ್ಸುಳ್ಳವನಾಗುವನು. ಮಗನು ಉತ್ತಮ ಬ್ರಹ್ಮತೇಜಸ್ವಿಯಾಗುವನು' ಎಂದು ಆಕೆಗೆ ಸಾಂತ್ವನ ಹೇಳಿದರು.

ಹೀಗಾಗಿ ಋಚೀಕರಿಗೆ ಜಮದಗ್ನಿಗಳು ಮಗನಾಗಿ ಹುಟ್ಟಿದರೆ, ಜಮದಗ್ನಿಗಳಿಗೆ ಅನಂತಕಲ್ಯಾಣಗುಣನಿಧಿಯಾದ ಪರಮಾತ್ಮನೇ ಕ್ಷಾತ್ರತೇಜಸ್ಸಿನಿಂದ ಪರಶುರಾಮನಾಗಿ ಅವತರಿಸಿದನು.

ಇತ್ತ ಗಾಧಿಗೆ ಹುಟ್ಟಿದ ಮಗನೇ ಕೌಶಿಕ. ಈತನೇ ಮುಂದೆ ವಿಶ್ವಾಮಿತ್ರಮುನಿಯಾಗಿ ಮೆರೆದಿದ್ದಾನೆ.

ಈ ಜಮದಗ್ನಿ ಋಷಿಗಳಿಗೆ ರೇಣುಕೆ ಎಂಬಾಕೆ ಪತ್ನಿ. ಏಕೆಗೆ ಐದು ಮಕ್ಕಳು. ಇವರಲ್ಲಿ ಕೊನೆಯವನೇ ಪರಶುರಾಮ.

ಒಮ್ಮೆ ರೇಣುಕೆಯು ಸ್ನಾನಕ್ಕೆಂದು ನದಿಗೆ ಹೋಗಿದ್ದಳು. ಅದೇ ಸಮಯದಲ್ಲಿ ಜಲಕ್ರೀಡೆಯಾಡಲೆಂದು ಚಿತ್ರರಥನೆಂಬ ರಾಜನು ಬಂದಿದ್ದನು. ಜಲಕ್ರೀಡೆಯಲ್ಲಿ ರತನಾದ ಚಿತ್ರರಥನನ್ನು ಕಂಡು ಒಂದು ಕ್ಷಣ ರೇಣುಕೆಯ ಮನದಲ್ಲಿ ಗಂಧರ್ವರಿಗೆ ಇರುವ ಸುಖ ಅವರ ಜೊತೆಗಿನ ವಿಹಾರ ಮುಂತಾದ ಸುಖ ತನಗೂ ಬೇಕೆಂಬ ಭಾವ ತಲೆದೋರಿತು. ಕೊನೆಗೆ ಹರಿಚಿತ್ತವೆಂದು ಆಶ್ರಮಕ್ಕೆ ಬಂದಳು. ಆಕೆಯ ಮುಖವನ್ನು ನೋಡಿದ ಜಮದಗ್ನಿಗಳಿಗೆ ಅವಳ ಮಾನಸಿಕ ವ್ಯಭಿಚಾರದಿಂದಾದ ಪಾತಿವ್ರತ್ಯದ ಶಕ್ತಿಯ ಪತನ ಸ್ಪಷ್ಟವಾಗಿ ಗೋಚರಿಸುತ್ತಿತ್ತು. ಮುಖವನ್ನು ನೋಡಿದಾಕ್ಷಣ ಮನಸ್ಸಿನ ಮರ್ಮವನ್ನರಿಯುವ ಶಕ್ತಿ ಅವರಿಗಿತ್ತು.

ಜಮದಗ್ನಿಗಳು ಚಿಂತಿಸಿದರು. ರೇಣುಕೆಯು ತನ್ನ ಪತ್ನಿಯಾಗಿ ಉಳಿಯಬೇಕು ಎಂದೆನಿಸಲಿಲ್ಲ. ಬಳಿಯಲ್ಲಿಯೇ ಇದ್ದ ಮಕ್ಕಳಾದ ರುಮಣ್ವಂತ, ಸುಷೇಣ, ವಸು, ವಿಶ್ವಾವಸು ಎಂಬ ನಾಲ್ಕು ಮಕ್ಕಳನ್ನು ಕರೆದರು. ಅಪರಾಧಿನಿಯಾದ ತಾಯಿಯ ಶಿರಚ್ಛೇದನಗೈಯ್ಯಲು ಆದೇಶಿಸಿದರು. ಆದರೆ ಮಾತೃಭಕ್ತಿಯಿಂದ ಆ ನಾಲ್ವರೂ ತಂದೆಯ ಮಾತನ್ನು ನಡೆಸಲಿಲ್ಲ. ಪಿತೃವಾಕ್ಯ ಉಲ್ಲಂಘಿಸಿದ ಪಾಪಕ್ಕೆ ಜಮದಗ್ನಿಗಳು ಅವರನ್ನು ಮೃತರಾಗಿರೆಂದು ಶಪಿಸಿದರು. ತಂದೆಯ ಶಾಪಕ್ಕೆ ಬಲಿಯಾಗಿ ನಾಲ್ವರೂ ಸತ್ತು ಬಿದ್ದರು.

ಈ ವೇಳೆಗೆ ಸಮಿತ್ತು ತರಲು ಹೋದ ಕೊನೆಯ ಮಗ ಪರಶುರಾಮ ಆಶ್ರಮಕ್ಕೆ ಬಂದನು. ಜಮದಗ್ನಿಗಳು ತಾಯಿಯ ಶಿರಕಡಿಯಲು ಅವನಿಗೆ ಆದೇಶಿಸಿದರು. ಪರಶುರಾಮ ಚಿಂತಿಸಲಿಲ್ಲ. ಪಿತೃವಾಕ್ಯ ಪರಿಪಾಲನೆ ಮಾಡಿದ. ಜಮದಗ್ನಿಗಳಿಗೆ ರಾಮನ ಪಿತೃವಾಕ್ಯಪರಿಪಾಲನೆಯು ಮುದ ನೀಡಿತು. 'ಮಗು! ನಿನಗಿಷ್ಟವಾದ ವರ ಬೇಡು' ಎಂದರು.

ಪರಶುರಾಮ 'ತಾಯಿ - ಸಹೋದರರನ್ನು ಬದುಕಿಸಬೇಕೆಂದು ವರ ಬೇಡಿದ. ಅವರಿಗೆ ಪಾತಿತ್ಯದ ಪಾಪ ಹಾಗೂ ಪಿತೃವಾಕ್ಯ ಉಲ್ಲಂಘನೆಯ ಪಾಪ ಬರಬಾರದೆಂದು ಕೂಡ ಕೇಳಿದ. ತನಗೆ ಯುದ್ಧದಲ್ಲಿ ಎದುರಾಳಿಗಳು ಇರಬಾರದೆಂದೂ, ತಾಯಿ

ಮತ್ತು ಸಹೋದರರಿಗೆ ಸತ್ತು ಬದುಕಿದೆವೆಂಬ ನೆನಪು ಇರಬಾರದೆಂದು ವರಗಳನ್ನು ಕೇಳಿದ.

ಇದಿಷ್ಟೂ ಪರಶುರಾಮದೇವರ ನರನಟನೆಯೆಂದು ಕೇಳಿಸುತ್ತದೆ –

ಸರ್ವೇಶ್ವರಃ ಸ್ವತಂತ್ರೋಽಪಿ ಸರ್ವಶಕ್ತಿಶ್ಚ ಸರ್ವದಾ ।
ಸರ್ವಜ್ಞೋಽಪಿ ವಿಮೋಹಾಯ ಜನಾನಾಂ ಪುರುಷೋತ್ತಮಃ ॥ ೧೩೪ ॥
ಕ್ವಚಿಚ್ಛಿವಂ ಕ್ವಚಿದೃಷೀನ್ ಕ್ವಚಿದ್ದೇವಾನ್ ಕ್ವಚಿನ್ನರಾನ್ ।
ನಮತ್ಯರ್ಚಯತಿ ಸ್ತೌತಿ ವರಾನರ್ಥಯತೇಽಪಿ ಚ ॥ – ತಾ.ನಿ. ೨-೧೩೩

ಸಾಕ್ಷಾತ್ ಪರಶುರಾಮದೇವರನ್ನೇ ಮಗನನ್ನಾಗಿ ಪಡೆದ ಸೌಭಾಗ್ಯ ಜಮದಗ್ನಿಗಳದ್ದು.

## ವಸಿಷ್ಠರು

ವಸಿಷ್ಠರು ಬ್ರಹ್ಮರ್ಷಿಗಳು. ಇವರು ಬ್ರಹ್ಮದೇವರ ಮಾನಸಪುತ್ರರು. ಇವರ ಪತ್ನಿಯು ಮಹಾಪತಿವ್ರತೆಯಾದ ಅರುಂಧತಿ. ಈಕೆ ನಾರದರ ಸಹೋದರಿ. ಶಕ್ತಿಯು ಈಕೆಯ ಮಗ. ಮೊಮ್ಮಗ ಪರಾಶರ ಋಷಿಗಳು. .

ವಸಿಷ್ಠರ ಜನನದ ವಿಷಯದಲ್ಲಿ ಒಂದು ಕಥೆಯಿದೆ – ವಸಿಷ್ಠರು ಮಿತ್ರವರುಣರಿಂದ ಊರ್ವಶಿಯಲ್ಲಿ ಹುಟ್ಟಿದವರು. ಇವರು ವರುಣನ ಪುತ್ರರು.

ಮಿತ್ರವರುಣರು ಕಶ್ಯಪರ ಮಕ್ಕಳು. ಅದಿತಿಯಲ್ಲಿ ಹುಟ್ಟಿದ ಅವಳಿ ಮಕ್ಕಳು. ಇವರಿಬ್ಬರೂ ಮಾಡುವ ಭವ್ಯ ಯಜ್ಞಕ್ಕೆ ದೇವತೆಗಳೂ ಗಂಧರ್ವರೂ ಪಿತೃಗಳೂ ಬಂದಂತೆ ಅಪ್ಸರೆಯರಲ್ಲಿ ಲಾವಣ್ಯಯುಕ್ತಳಾದ ಊರ್ವಶಿಯೂ ಬಂದಿದ್ದಳು. ದೀಕ್ಷಾಬದ್ಧರಾಗಿದ್ದ ಮಿತ್ರವರಣರ ದೃಷ್ಟಿಯು ಊರ್ವಶಿಯ ಮೇಲೆ ಬಿತ್ತು. ಆಕೆಯನ್ನು ಕಂಡು ಮಿತ್ರವರುಣರು ವಿಕಾರವಶರಾದರು. ಅಖಂಡನಿಷ್ಠೆಯಿಂದ ಪಾಲಿಸಿದ ಬ್ರಹ್ಮಚರ್ಯ ಶಿಥಿಲವಾಯಿತು. ಇಬ್ಬರಿಗೂ ವೀರ್ಯಸ್ಖಲನವಾಯಿತು. ಆ ವೀರ್ಯವನ್ನು ಒಂದು ಕುಂಭದಲ್ಲಿಟ್ಟರು. ಅದರಲ್ಲಿ ಈರ್ವರು ಮುತ್ತಿನಂಥ ಮಕ್ಕಳು ಜನಿಸಿದರು. ಮೊದಲನೆಯ ಮಗುವು ಅಗಸ್ತ್ಯ. ಆಮೇಲೆ ಕುಂಭದಲ್ಲಿದ್ದ ನೀರನ್ನು ಸರೋವರದಲ್ಲಿ ಚೆಲ್ಲಿದಾಗ ಅದರಲ್ಲಿದ್ದ ಎರಡನೆಯ ಮಗುವು ಸರೋವರದಲ್ಲಿ ತೇಲಿಕೊಂಡು ಬಂದು ಒಂದು ಕಮಲದ ಎಲೆಯ ಮೇಲೆ ಕುಳಿತಿತು. ಈ ಮಗುವು ವಿಶಿಷ್ಟರೀತಿಯಲ್ಲಿ ಜನಿಸಿದುದರಿಂದ 'ವಸಿಷ್ಠ' ನೆಂದು ದೇವತೆಗಳು ನಾಮಕರಣ ಮಾಡಿದರು.

ಮೊದಲು ಹುಟ್ಟಿದ ಅಗಸ್ತ್ಯರು ಮಿತ್ರನೊಡನೆ – 'ನಾನು ನಿನ್ನ ವೀರ್ಯದಿಂದ ಹುಟ್ಟಿದವನಲ್ಲ' ಎಂದು ಹೇಳಿದ್ದರಿಂದ ಅಗಸ್ತ್ಯರು ವರುಣನ ಮಗನೆಂದೂ ವಸಿಷ್ಠರು ಮಿತ್ರನ ಮಗನೆಂದೂ ಹೇಳುತ್ತಾರೆ.

ಈ ವಸಿಷ್ಠರ ಹಸುವಾದ ನಂದಿನಿ ಎಂಬ ಧೇನುವನ್ನು ಪಡೆಯಲಾಗದೇ ಯುದ್ಧದಲ್ಲಿ ಸೋತು ವಿಶ್ವಾಮಿತ್ರರು ಬ್ರಹ್ಮತೇಜಸ್ಸನ್ನು ಪಡೆಯಲು ಬ್ರಾಹ್ಮಣರಾಗ-ಬೇಕೆಂದು ಘೋರತಪಸ್ಸು ಮಾಡಿದರು. ನಂತರ ವಸಿಷ್ಠರ ಅನುಗ್ರಹದಿಂದ ಬ್ರಹ್ಮರ್ಷಿಯಾದರು.

ಇಕ್ಷ್ವಾಕು ವಂಶಕ್ಕೆ ವಸಿಷ್ಠರೆಂಬುವರು ಪುರೋಹಿತರಾದುದರಿಂದ, ಹಾಗೂ ವಸಿಷ್ಠರೆಂಬ ಹೆಸರು ಸೂರ್ಯವಂಶದ ರಾಜರಿಗೆ ಪುರೋಹಿತರ ಸಾಮಾನ್ಯವಾದ ಹೆಸರಾಗಿರಬೇಕು.

ವೈದಿಕವಾಙ್ಮಯದ ಮಂತ್ರದ್ರಷ್ಟಾರರಾದ ಋಷಿಪುಂಗವರಲ್ಲಿ ವಸಿಷ್ಠರು ಶ್ರೇಷ್ಠರಾಗಿದ್ದಾರೆ. ಸುಮಾರು ೮೪೮ ಮಂತ್ರಗಳನ್ನು ಕಂಡು ಹಿಡಿದ ಅವರಂಥ ಅಪರೋಕ್ಷ ಜ್ಞಾನಿಗಳು ವೈದಿಪ್ರಪಂಚದಲ್ಲಿಯೂ ವಿರಳರೇ ಆಗಿದ್ದಾರೆ.

ಅವರ ಹೆಸರಿನಿಂದ ನಮಗೀಗ ದೊರಕುವ ಋಗ್ವೇದದ ೧೦೪ಸೂಕ್ತಗಳಲ್ಲಿ ಅವರ ಉದಾತ್ತವಾದ ತತ್ವಜ್ಞಾನದ ತಿಳಿವು ಅರಳಿ ನಿಂತಿದೆ. ಅವರ ಆರ್ಷಜೀವನದ ದಿವ್ಯದರ್ಶನ ಋಗ್ವೇದದ ಸಪ್ತಮಮಂಡಲದಲ್ಲಿ ಹೂತು ವೇದಪ್ರಪಂಚವನ್ನೇ ಪರಿಮಳಿತಗೊಳಿಸಿದೆ. ಅವರ ಸತ್ಯನಿಷ್ಠೆ, ಶಾಂತಿಪ್ರಿಯತೆ, ಯಜ್ಞವಿಜ್ಞತೆ, ಪರೋಪಕಾರ ವ್ಯಸನಿತೆಗಳು ಶ್ರೌತಸಂಸಾರದ ಸೀಮೋಲ್ಲಂಘನ ಮಾಡಿ ಪುರಾಣಪ್ರಪಂಚದಲ್ಲಿಯೂ ತಮ್ಮ ಯಶೋಗಾಥೆಯಿಂದ ಮೆರೆದಿವೆ.

ಅತ್ರಿ, ಮರೀಚಿ, ಅಂಗಿರ, ಪುಲಸ್ತ್ಯ, ಪುಲಹ, ಕ್ರತು, ಭೃಗು, ದಕ್ಷ, ನಾರದ ಮುಂತಾದ ಋಷಿ ಪ್ರಜಾಪತಿಗಳಂತೆ ವಸಿಷ್ಠರೂ ಬ್ರಹ್ಮದೇವರ ಮಾನಸಪುತ್ರರಾಗಿದ್ದಾರೆ. ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮದೇವರ ಪ್ರಾಣವಾಯುವಿನಿಂದಲೇ ವಸಿಷ್ಠರು ಹುಟ್ಟಿದರೆಂದು ಭಾಗವತದಲ್ಲಿ ಉಲ್ಲೇಖ ಬರುತ್ತದೆ.

ಇಲ್ಲಿಗೆ ಸಪ್ತರ್ಷಿಗಳ ಸಂಕ್ಷೇಪ ಪರಿಚಯವು ಮುಕ್ತಾಯವಾಯಿತು. ಋಷಿಪಂಚಮಿಯ ದಿವಸ ಇವರ ಈ ಚರಿತ್ರೆಯನ್ನು ಅವಶ್ಯ ಮನನ ಮಾಡಬೇಕು.

॥ ಶ್ರೀಕೃಷ್ಣಾರ್ಪಣಮಸ್ತು ॥

* * * * *

## ಋಷಿಪಂಚಮಿಯ ಮರುದಿವಸ ಮಾಡಬೇಕಾದ ಅಡುಗೆಗಳು

* ಕೋಸಂಬರಿಗಳು, ಪಲ್ಯಗಳು, ಉದ್ದಿನ ಹಪ್ಪಳ. ಚಿತ್ರಾನ್ನ, ಗೆಣಸಿನ ಪಲ್ಯ, ಸುವರ್ಣಗೆಡ್ಡೆಯ ಪಲ್ಯ, ಬಾಳೆಹಣ್ಣಿನ ಕೋಸಂಬರಿ. ನವಣೆ ಹಾಗೂ ಸಾಮೆ ಇವುಗಳು ಋಷಿಗಳಿಗೆ ಅತ್ಯಂತ ಪ್ರೀತಿಕರವಾಗಿದೆ. ಆದ್ದರಿಂದ ಋಷಿಗಳ ನೈವೇದ್ಯಕ್ಕೆ ನವಣೆಯ ಅನ್ನ, ಸಾಮೆಯ ಪಾಯಸ ಇವುಗಳನ್ನು ಮಾಡಿ ಸಮರ್ಪಿಸಬೇಕು.

## ಹೆಸರುಬೇಳೆಯ ಪಾಯಸ

1 ಪಾವು ಹೆಸರು ಬೇಳೆಯನ್ನು ತುಪ್ಪದಿಂದ ಕೆಂಪಗೆ ಹುರಿದು ತೋಡಿಕೊಳ್ಳಬೇಕು, ಆಮೇಲೆ ಒಂದು ಪಾತ್ರೆಯಲ್ಲಿ ಸಿಹಿನೀರನ್ನು ಹಾಕಿ ಚೆನ್ನಾಗಿ ಕುದಿಸಿದ ಬಳಿಕ ಅದಕ್ಕೆ ಆ ಹುರಿದ ಹೆಸರುಬೇಳೆಯನ್ನು ಸುರಿದು ಅದನ್ನು ಚೆನ್ನಾಗಿ ಪಕ್ವವಾಗುವಂತೆ ಬೇಯಿಸಬೇಕು. ಬೆಂದ ಬಳಿಕ ಸೌಟಿನಿಂದ ಕೆದಕಿ ತಕ್ಕಷ್ಟು ಹಾಲನ್ನು ಹಾಕಿ ಕಾಯಿಸಿ ಅದಕ್ಕೆ ಒಂದು ಸೇರು ಸಕ್ಕರೆ ಅಥವಾ 1 ಅಚ್ಚು ಬಿಳೀ ಬೆಲ್ಲವನ್ನು ಪುಡಿಮಾಡಿ ಹಾಕಿ ಹೊಂದಿಸಿ ಅದಕ್ಕೆ ಏಲಕ್ಕಿಪುಡಿ, ಕರಿದ ದ್ರಾಕ್ಷಿ, ಲವಂಗ, ಬಾದಾಮಿ, ಗೇರುಪೊಪ್ಪಿನ ಚೂರು ಸಹ ಹಾಕಿ, ಹೊಂದಿಸಿ ಮುಚ್ಚಿಡಬೇಕು.

## ಉದ್ದಿನಹಪ್ಪಳ

**ಬೇಕಾಗುವ ಪದಾರ್ಥಗಳು** : ಒಂದು ಕೆ.ಜಿ. ಉದ್ದಿನ ಬೇಳೆ; ಉಪ್ಪು, ಇಂಗು, ಒಂದು ಬಟ್ಟಲು ಅಕ್ಕಿಹಿಟ್ಟು ಮತ್ತು ಒಣಮೆಣಸಿನಕಾಯಿ.

**ತಯಾರಿಸುವ ವಿಧಾನ** : ಉದ್ದಿನಬೇಳೆಯನ್ನು ಶುಚಿಗೊಳಿಸಿ ಹಿಟ್ಟು ಮಾಡಿಟ್ಟುಕೊಳ್ಳಿ. ಒಣಮೆಣಸಿನಕಾಯಿ (ರುಚಿಗೆ ತಕ್ಕಷ್ಟು) ಇಂಗು ಹಾಗೂ ಉಪ್ಪು ಬೆರೆಸಿ ನೀರಿನಲ್ಲಿ ಕಲಸಿ ಸಣ್ಣ ಸಣ್ಣ ಬಿಲ್ಲೆಗಳನ್ನಾಗಿ ಮಾಡಿ ಚಪಾತಿಯ ಮಣೆಯ ಮೇಲೆ ಅಕ್ಕಿಹಿಟ್ಟು ಹಾಕಿಕೊಂಡು ಹಪ್ಪಳ ಲಟ್ಟಿಸಿ. ಬಿಸಿಲಿನಲ್ಲಿ ಒಣಹಾಕಿ. ಒಣಗಿದ ಮೇಲೆ ಡಬ್ಬದಲ್ಲಿ ತುಂಬಿ ಇಟ್ಟುಕೊಳ್ಳಿ.

ಹಪ್ಪಳವನ್ನು ಹದವಾದ ಕಾವಿನಲ್ಲಿ ಕರಿದುಕೊಳ್ಳಿ. ಅದನ್ನು ದೇವರಿಗೆ ಪ್ರಾಣದೇವರಿಗೆ ಸಮರ್ಪಿಸಿ. ಅದನ್ನು ಏಳು ವಿಭಾಗ ಮಾಡಿ ಏಳು ಋಷಿಗಳ ಮುಂದಿಟ್ಟು ನೈವೇದ್ಯ ಮಾಡಿ ಧನ್ಯರೆನ್ನಿರಿ.

## ಬಾಳೆಕಾಯಿ ಪಲ್ಯ

**ಬೇಕಾಗುವ ಪದಾರ್ಥಗಳು** : ಬಾಳೆಕಾಯಿ, ಒಂದು ಹೋಳು ತೆಂಗಿನಕಾಯಿ, ಒಗ್ಗರಣೆ ಸಾಮಾನು, ಉಪ್ಪು ಮತ್ತು ಒಂದು ಸಣ್ಣ ತುಂಡು ಬೆಲ್ಲ.

**ತಯಾರಿಸುವ ವಿಧಾನ** : ಮೊದಲು ಬಾಳೆಕಾಯಿಗಳ ಸಿಪ್ಪೆ ಹೆರೆದು ಈಳಿಗೆ ಮಣೆಯ ಸಹಾಯದಿಂದ ಬಾಳೆಕಾಯನ್ನು ಹೆಚ್ಚಿ ಹೋಳುಗಳನ್ನು ಒಂದು ಪಾತ್ರೆಯಲ್ಲಿ ಹಾಕಿ ತಕ್ಕಷ್ಟು ನೀರಿನಲ್ಲಿ ಬೇಯಿಸಿ ಉಪ್ಪು, ಬೆಲ್ಲ ಹಾಕಬೇಕು. ಬಾಳೆಕಾಯಿ ಬೆಂದ ಮೇಲೆ ಕಡಲೆಕಾಯಿ ಎಣ್ಣೆಯಲ್ಲಿ ಸಾಸಿವೆ, ಮೆಣಸಿನಕಾಯಿ ಚೂರು, ಉದ್ದಿನಬೇಳೆ, ಕಡಲೆ ಬೇಳೆ ಹಾಕಿದ ಒಗ್ಗರಣೆಯನ್ನು ಬಾಳೆಕಾಯಿ ಹೋಳುಗಳ ಮೇಲೆ ಸುರಿದು ಚಮಚದ ಸಹಾಯದಿಂದ ಕೆದಕಿ, ತೆಂಗಿನ ತುರಿಯನ್ನು ಹಾಕಿ. ಇದೇ ರೀತಿ ಬಾಳೆದಿಂಡಿನ ಪಲ್ಯವನ್ನು ತಯಾರಿಸಬಹುದು. ದಿಂಡು ಪಲ್ಯ ಮಾಡುವಾಗ ಮೇಲಿನ ನಾರನ್ನು ತೆಗೆಯಬೇಕು. ಗೆಣಸಿನ ಪಲ್ಯವನ್ನು ಹೀಗೆಯೇ ಮಾಡಬೇಕು.

ಮಾಡಿದ ಪದಾರ್ಥವನ್ನು ದೇವರಿಗೆ, ಪ್ರಾಣದೇವರಿಗೆ ಸಮರ್ಪಿಸಿ. ಅದನ್ನು ಏಳು ವಿಭಾಗ ಮಾಡಿ ಏಳು ಋಷಿಗಳ ಮುಂದಿಟ್ಟು ನೈವೇದ್ಯ ಮಾಡಿ ಧನ್ಯರೆನ್ನಿರಿ.

## ಕಡಲೆಬೇಳೆ ಹೋಳಿಗೆ

**ಬೇಕಾಗುವ ಪದಾರ್ಥಗಳು** : ಕಡಲೆಬೇಳೆ 1/4 ಕೆ.ಜಿ. ಮೈದಾಹಿಟ್ಟು 1/4 ಕೆ.ಜಿ., ಬೆಲ್ಲ - 1/4 ಕೆ.ಜಿ., ಏಲಕ್ಕಿ ಪುಡಿ - ಸ್ವಲ್ಪ, ಎಣ್ಣೆ - 250 ಗ್ರಾಂ.

**ತಯಾರಿಸುವ ರೀತಿ** : ಒಂದು ಪಾತ್ರೆಯಲ್ಲಿ ನೀರು ಹಾಕಿ ಒಲೆಯ ಮೇಲಿಡಿ. ಕುದಿಯಲು ತೊಡಗಿದ ಮೇಲೆ ಶುದ್ಧಮಾಡಿದ ಕಡಲೆಬೇಳೆಯನ್ನು ತೊಳೆದು ಅದರಲ್ಲಿ ಹಾಕಿ. (ಅದು ಬೇಯುವಷ್ಟರಲ್ಲಿ ಬೆಲ್ಲವನ್ನು ಕುಟ್ಟಿ ಪುಡಿ ಮಾಡಿಕೊಳ್ಳಿ. ಮೈದಾಹಿಟ್ಟನ್ನು ಜರಡಿ ಹಿಡಿದುಕೊಳ್ಳಿ). ಚೆನ್ನಾಗಿ ಬೆಂದ ಮೇಲೆ ಒಲೆಯ ಉರಿಯನ್ನು ಆರಿಸಿ, ಕಡಲೆಬೇಳೆ ಕಟ್ಟನ್ನು ಬಗ್ಗಿಸಿ ಬೇಳೆಯನ್ನು ಏಲಕ್ಕಿ ಪುಡಿ, ಬೆಲ್ಲದ ಪುಡಿಯೊಂದಿಗೆ ಸೇರಿಸಿ, ಆರೆಯುವ ಕಲ್ಲಿನ ಮೇಲೆ ನಯವಾಗಿ ಆರೆಯಿರಿ (ರುಬ್ಬುವ ಗುಂಡಿನಲ್ಲಿ ರುಬ್ಬಿರಿ). ಮೈದಾ ಹಿಟ್ಟಿಗೆ ಎಣ್ಣೆ, ನೀರು ಅರಿಶಿನ ಪುಡಿ ಸೇರಿಸಿ ಕಲೆಸಿಕೊಳ್ಳಿ. ನಂತರ ಇನ್ನಷ್ಟು ಎಣ್ಣೆ ಹಾಕಿ ಚೆನ್ನಾಗಿ ನಾದಿರಿ. ನಿಂಬೆ ಹಣ್ಣಿನ ಗಾತ್ರದ ಉಂಡೆಗಳನ್ನು ತಯಾರಿಸಿಕೊಳ್ಳಿ. ಅದನ್ನು ಕೈಯ್ಯಲ್ಲಿ ತೆಗೆದುಕೊಂಡು ಬಟ್ಟಲಿನಂತೆ ಮಾಡಿ ಅದರಲ್ಲಿ ಹೂರಣದ ಉಂಡೆಯನ್ನು ಇಟ್ಟು ಮೇಲ್ಭಾಗದ ಹಿಟ್ಟಿನಿಂದ ಅದನ್ನು ಮುಚ್ಚಿ.

ನಂತರ ಒಂದು ಬಾಳೆ ಎಲೆಯ ತುಂಡನ್ನು (ಸೀಳನ್ನು) ನೀರಿನಲ್ಲಿ ತೊಳೆದು, ಬಟ್ಟೆಯಿಂದ ಒರೆಸಿ, ಒಲೆಯ ಮುಂದೆ ಹಿಡಿಯಿರಿ. ಬಿಸಿಗೆ ಎಲೆ ಮೃದುವಾಗುತ್ತದೆ. ನಂತರ ಅದಕ್ಕೆ ಎಣ್ಣೆ ಸವರಿ ಹೂರಣ ತುಂಬಿದ ಕಣಕದ ಉಂಡೆಯನ್ನಿಟ್ಟು

ಲಟ್ಟಣಿಗೆಯಿಂದ ಚಪಾತಿಯ ಆಕಾರಕ್ಕೆ ಲಟ್ಟಿಸಿ. ಆಮೇಲೆ ಅದನ್ನು ಕಾಯ್ದ ಕಾವಲಿಯ ಮೇಲೆ ಹಾಕಿ ಬೇಯಿಸಿಕೊಳ್ಳಿ. (ಹೋಳಿಗೆಯನ್ನು ಬೇಯಿಸುವಾಗ ಬೇಕಿದ್ದರೆ ಸ್ವಲ್ಪ ಎಣ್ಣೆಯನ್ನು ಹಾಕಬಹುದು). ಎರಡೂ ಬದಿ ಚೆನ್ನಾಗಿ ಬೆಂದಮೇಲೆ ಹೋಳಿಗೆಯನ್ನು ಮಗಚುಕೈಯಿಂದ ತೆಗೆಯಿರಿ. ಹೀಗೆ ಸಿದ್ಧವಾದ ಹೋಳಿಗೆಯನ್ನು ದೇವರಿಗೆ, ಪ್ರಾಣದೇವರಿಗೆ ಸಮರ್ಪಿಸಿ. ಅದನ್ನು ಏಳು ವಿಭಾಗ ಮಾಡಿ ಏಳು ಋಷಿಗಳ ಮುಂದಿಟ್ಟು ನೈವೇದ್ಯ ಮಾಡಿ ಧನ್ಯರೆನ್ನಿರಿ.

## ಬಾಳೆಯ ಹಣ್ಣಿನ ಚಟ್ನಿ

**ಬೇಕಾಗುವ ಸಾಮಾನುಗಳು** : 5-10 ಹಸಿಮೆಣಸಿನಕಾಯಿಗಳು, ಐದಾರು ಬಾಳೆಯ ಹಣ್ಣುಗಳು, ಒಂದು ಲೋಟ ದ್ರಾಕ್ಷಿ ಹಣ್ಣಿನ ರಸ, ಇತರ ಯಾವುದಾದರೂ ಹಣ್ಣಿನ ಷರಬತ್ತು. ಒಣದ್ರಾಕ್ಷಿ ಹಾಗೂ ಖರ್ಜೂರ, ಶುಂಠಿ, ಒಂದು ಟೀಚಮಚ ಉಪ್ಪು ಹಾಗೂ ಮೆಣಸಿನ/ಹುಳಿಯ ಪುಡಿ.

**ತಯಾರಿಸುವ ವಿಧಾನ** : ಒಂದು ಪಾತ್ರೆಯಲ್ಲಿ ಹೆಚ್ಚಿದ ಹಸಿಮೆಣಸಿನಕಾಯಿಯನ್ನು ತೆಗೆದುಕೊಳ್ಳಿ. ಐದಾರು ಬಾಳೆಯ ಹಣ್ಣುಗಳನ್ನು ಸಿಪ್ಪೆ ಸುಲಿದ ಸಣ್ಣ ಸಣ್ಣ ತುಂಡುಗಳನ್ನಾಗಿ ಕತ್ತರಿಸಿ, ಈ ಮಿಶ್ರಣಕ್ಕೆ ಖರ್ಜೂರದ ತುಂಡುಗಳು, ದ್ರಾಕ್ಷಿಹಣ್ಣಿನ ರಸ, ಯಾವುದಾದರೂ ಹಣ್ಣಿನ ಷರಬತ್ತು, ಶುಂಠಿ ಚೂರು, ಒಣದ್ರಾಕ್ಷಿ, ಮೆಣಸಿನ ಪುಡಿ, ಉಪ್ಪು ಸೇರಿಸಿ ಒಟ್ಟು ಮಿಶ್ರಣವನ್ನು ಕಲಕುತ್ತಿರಿ. ಪಾಕ ಚೆನ್ನಾಗಿ ಹದವಾಗುವವರೆಗೂ ಸ್ವಲ್ಪ ಕುದಿಸಿ ನಂತರ ತೆಗೆದಿಡಿ. ಸುಮಾರು 20 ನಿಮಿಷಗಳಲ್ಲಿ ಚಟ್ನಿಯು ತಯಾರಾಗುತ್ತದೆ.

* * * * *

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥
ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥
॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ಋಷಿಪಂಚಮೀ ಪೂಜೆ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ ಶ್ರೀಲಕ್ಷ್ಮೀಹಯಗ್ರೀವದೇವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಅನಂತ ಚತುರ್ದಶೀ

ಭಾದ್ರಪದ || ಶುದ್ಧ || ಚತುರ್ದಶೀ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಅನಂತಚತುರ್ದಶೀ

ಭಾದ್ರಪದ ॥ ಶುದ್ಧ ॥ ಚತುರ್ದಶೀ ॥

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ,
ಬೆಂಗಳೂರು.

ಪ್ರಕಾಶನ :
ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),
ಗಿರಿನಗರ, ಬೆಂಗಳೂರು-೮೫

ಅನಂತಚತುರ್ದಶೀ ಶಾಲಿವಾಹನಶಕೆ ೧೯೪೩ ಶಾರ್ವರಿ॥ ಚೈತ್ರ॥ ಶುದ್ಧ ॥ ಹುಣ್ಣಿಮೆ, ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥಶ್ರೀಪಾದಂಗಳವರ ಕರಕಮಲಗಳಿಂದ ಭಾರತೀರಮಣಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವ-ದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು : ೧೬೮



ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಸುಬ್ಬಣ್ಣ ಕೆಂಪದಾಳಿಹಳ್ಳಿ,
ದೂರವಾಣಿ : 9141311280

ಮುದ್ರಣ : ಮುಕ್ತಿಪಥ ಮುದ್ರಣಾಲಯ,
ಬೆಂಗಳೂರು.



ಶ್ರೀಮದ್ಭಾಗವತ, ಹರಿಕಥಾಮೃತಸಾರ ಮತ್ತು ಇತರ ಮಧ್ವಶಾಸ್ತ್ರಗಳಲ್ಲೇ ತಮ್ಮ ಜೀವನವನ್ನು ಮುಡುಪಾಗಿಟ್ಟು, ಚಳ್ಳಕೆರೆ ನಿವಾಸಿಗಳಾಗಿದ್ದ ದಿವಂಗತರಾದ ಶ್ರೀಯುತರಾದ ಎನ್.ಎ. ವಿಜೇಂದ್ರರಾವ್ ಮತ್ತು ಎನ್.ವಿ. ಮಂದಾಕಿನಿ ಬಾಯಿ ಇವರುಗಳ ಸ್ಮರಣಾರ್ಥ ಬೆಂಗಳೂರು ಸಹಕಾರನಗರದಲ್ಲಿರುವ ಇವರ ಪುತ್ರ ಶ್ರೀ ಎನ್.ವಿ. ಅನಂತಮೂರ್ತಿ ಮತ್ತು ಅವರ ಧರ್ಮಪತ್ನಿ ಶ್ರೀಮತಿ ಬಿ.ಆರ್. ಪ್ರಿಯಂವದ, ಅವರು ಮಾಡಿದ ಸೇವೆ.

---

* ಪುರೋಹಿತರನ್ನು ಕರೆಸಿ ಅವರ ಮೂಲಕ ಪೂಜೆಯನ್ನು ಮಾಡಿಸುವುದು ಉತ್ತಮಪಕ್ಷವಾಗಿದೆ. ಸಾಧ್ಯವಾಗದಿದ್ದರೆ ಯಜಮಾನನು ಈ ಅನಂತಪದ್ಮನಾಭನ ಪೂಜೆಯನ್ನು ಮಾಡಬೇಕು.

## ಅನಂತಚತುರ್ದಶಿಯಂದು ಹಗಲಿರುಳು ಹೇಳಿಕೊಳ್ಳಬೇಕಾದ ಮಂತ್ರ

ಅನಂತಸಂಸಾರಮಹಾಸಮುದ್ರೇ ಮಗ್ನಂ ಸಮುದ್ಧರ ವಾಸುದೇವ ।
ಅನಂತರೂಪೇ ನಿಯೋಜಯಸ್ವ ಅನಂತರೂಪಾಯ ನಮೋ ನಮಸ್ತೇ ॥

* ಅನಂತವಾದ ಸಂಸಾರಸಮುದ್ರದಲ್ಲಿ ಮಗ್ನನಾದ ನನ್ನನ್ನು ಉದ್ಧಾರ ಮಾಡು. ನಿನ್ನ ಅನಂತರೂಪದ ಸನ್ನಿಧಾನದಲ್ಲಿ ನನ್ನನ್ನು ಇಟ್ಟು ಸಲಹು. ವಾಸುದೇವನೇ ಅನಂತರೂಪಿಯಾದ ನಿನಗೆ ನನ್ನ ಅನಂತ ನಮನಗಳು.

# ವಿಷಯಾನುಕ್ರಮಣಿಕೆ

# ಮುನ್ನುಡಿ

ವರ್ಷದಲ್ಲೊಮ್ಮೆ ಬರುವ ಅನಂತಚತುರ್ದಶಿಯ ವ್ರತಕ್ಕೆ ಎಲ್ಲಿಲ್ಲದ ವೈಶಿಷ್ಟ್ಯವಿದೆ. ಭಾದ್ರಪದಮಾಸದ ಶುಕ್ಲಪಕ್ಷದ ಚತುರ್ದಶಿಯ ದಿವಸ ಪ್ರತಿಯೊಬ್ಬರೂ ಕೂಡ ಅನಂತನ ಪೂಜೆಯನ್ನು ಆಚರಿಸುತ್ತಾರೆ. ಯತಿಗಳೂ ಪೀಠಾಧಿಪತಿಗಳೂ ಕೂಡ ತಪ್ಪದೆ ಅನಂತಚತುರ್ದಶಿಯ ಆಚರಣೆಯನ್ನು ಅನೂಚಾನವಾಗಿ ಮಾಡುತ್ತಾ ಬಂದಿದ್ದಾರೆ.

ಈ ಪುಸ್ತಕವನ್ನು ನೋಡಿದಾಗ ಅನಂತಪದ್ಮನಾಭನ ಪೂಜೆ ಇಷ್ಟೊಂದು ದೀರ್ಘವಾಗಿ ಇದೆಯಾ? ನಮ್ಮಿಂದ ಮಾಡಲು ಸಾಧ್ಯವಾ? ಎಂಬ ಭಯ ಕೆಲವರಿಗೆ ಆಗಬಹುದು. ಆದರೆ ಪುರೋಹಿತರ ಮೂಲಕ ಮಾಡಿಸಿದಾಗ ಒಂದು ಗಂಟೆಯಲ್ಲಿ ಪೂಜೆಯು ಮುಗಿಯುತ್ತದೆ. ಪುರೋಹಿತರು ಸಿಗದೇ ಇದ್ದಾಗ ಒಂದುವರೆ ಗಂಟೆಗಳ ಕಾಲ ಸಮಯಾವಕಾಶ ಬೇಕಾಗುತ್ತದೆ. ಇಷ್ಟು ಸಮಯವನ್ನು ಭಗವಂತನ ಪೂಜೆಗೋಸ್ಕರ ಇಡಲು ಯಾರಿಗೂ ಕಷ್ಟವಾಗುವುದಿಲ್ಲವೆಂದು ಭಾವಿಸುತ್ತೇನೆ. ಅತ್ಯಂತ ಭಕ್ತಿ ಶ್ರದ್ಧೆಗಳುಳ್ಳ ಮನಸ್ಸನ್ನು ಮೊದಲು ತಯಾರು ಮಾಡಿಕೊಂಡು ಅನಂತಪದ್ಮನಾಭನ ಪೂಜೆಯನ್ನು ಪ್ರಾರಂಭ ಮಾಡಬೇಕು. ಭಗವಂತನು ಭಕ್ತಿಗೆ ಬಹುಬೇಗ ಪ್ರಸನ್ನನಾಗುತ್ತಾನೆ. ಭಕ್ತಿಯಿಲ್ಲದಿದ್ದರೆ ಎಷ್ಟು ವೈಭವದಿಂದ ಪೂಜೆಯನ್ನಾಚರಿಸಿದರೂ ಭಗವಂತನು ಅದನ್ನು ಸ್ವೀಕರಿಸುವುದಿಲ್ಲ.

ಅನೇಕ ಪುಸ್ತಕಗಳ ಅವಲೋಕನದಿಂದ ಮತ್ತು ವ್ರತರಾಜ, ವ್ರತಕೌಸ್ತುಭ, ಹೇಮಾದ್ರಿ ಮೊದಲಾದ ಪುಸ್ತಕಗಳ ಆಧಾರದಲ್ಲಿಯೂ ಪೂಜೆಯ ಮಂತ್ರಗಳನ್ನು ಸಂಗ್ರಹಿಸಲಾಗಿದೆ. ಕಥಾಭಾಗದಲ್ಲಿ ನೀಡಿದ ಶ್ಲೋಕಗಳು ಮೂಲಪುರಾಣದಲ್ಲಿ ದೊರೆಯದ ಕಾರಣ ಉಡುಪಿಯ ಮಧ್ವಸಿದ್ಧಾಂತಗ್ರಂಥಾಲಯದಿಂದ ಪ್ರಕಟಿತವಾದ

# ವಿಷಯಾನುಕ್ರಮಣಿಕೆ

# ಮುನ್ನುಡಿ

ವರ್ಷದಲ್ಲೊಮ್ಮೆ ಬರುವ ಅನಂತಚತುರ್ದಶಿಯ ವ್ರತಕ್ಕೆ ಎಲ್ಲಿಲ್ಲದ ವೈಶಿಷ್ಟ್ಯವಿದೆ. ಭಾದ್ರಪದಮಾಸದ ಶುಕ್ಲಪಕ್ಷದ ಚತುರ್ದಶಿಯ ದಿವಸ ಪ್ರತಿಯೊಬ್ಬರೂ ಕೂಡ ಅನಂತನ ಪೂಜೆಯನ್ನು ಆಚರಿಸುತ್ತಾರೆ. ಯತಿಗಳೂ ಪೀಠಾಧಿಪತಿಗಳೂ ಕೂಡ ತಪ್ಪದೆ ಅನಂತಚತುರ್ದಶಿಯ ಆಚರಣೆಯನ್ನು ಅನೂಚಾನವಾಗಿ ಮಾಡುತ್ತಾ ಬಂದಿದ್ದಾರೆ.

ಈ ಪುಸ್ತಕವನ್ನು ನೋಡಿದಾಗ ಅನಂತಪದ್ಮನಾಭನ ಪೂಜೆ ಇಷ್ಟೊಂದು ದೀರ್ಘವಾಗಿ ಇದೆಯಾ? ನಮ್ಮಿಂದ ಮಾಡಲು ಸಾಧ್ಯವಾ? ಎಂಬ ಭಯ ಕೆಲವರಿಗೆ ಆಗಬಹುದು. ಆದರೆ ಪುರೋಹಿತರ ಮೂಲಕ ಮಾಡಿಸಿದಾಗ ಒಂದು ಗಂಟೆಯಲ್ಲಿ ಪೂಜೆಯು ಮುಗಿಯುತ್ತದೆ. ಪುರೋಹಿತರು ಸಿಗದೇ ಇದ್ದಾಗ ಒಂದುವರೆ ಗಂಟೆಗಳ ಕಾಲ ಸಮಯಾವಕಾಶ ಬೇಕಾಗುತ್ತದೆ. ಇಷ್ಟು ಸಮಯವನ್ನು ಭಗವಂತನ ಪೂಜೆಗೋಸ್ಕರ ಇಡಲು ಯಾರಿಗೂ ಕಷ್ಟವಾಗುವುದಿಲ್ಲವೆಂದು ಭಾವಿಸುತ್ತೇನೆ. ಅತ್ಯಂತ ಭಕ್ತಿ ಶ್ರದ್ಧೆಗಳುಳ್ಳ ಮನಸ್ಸನ್ನು ಮೊದಲು ತಯಾರು ಮಾಡಿಕೊಂಡು ಅನಂತಪದ್ಮನಾಭನ ಪೂಜೆಯನ್ನು ಪ್ರಾರಂಭ ಮಾಡಬೇಕು. ಭಗವಂತನು ಭಕ್ತಿಗೆ ಬಹುಬೇಗ ಪ್ರಸನ್ನನಾಗುತ್ತಾನೆ. ಭಕ್ತಿಯಿಲ್ಲದಿದ್ದರೆ ಎಷ್ಟು ವೈಭವದಿಂದ ಪೂಜೆಯನ್ನಾಚರಿಸಿದರೂ ಭಗವಂತನು ಅದನ್ನು ಸ್ವೀಕರಿಸುವುದಿಲ್ಲ.

ಅನೇಕ ಪುಸ್ತಕಗಳ ಅವಲೋಕನದಿಂದ ಮತ್ತು ವ್ರತರಾಜ, ವ್ರತಕೌಸ್ತುಭ, ಹೇಮಾದ್ರಿ ಮೊದಲಾದ ಪುಸ್ತಕಗಳ ಆಧಾರದಲ್ಲಿಯೂ ಪೂಜೆಯ ಮಂತ್ರಗಳನ್ನು ಸಂಗ್ರಹಿಸಲಾಗಿದೆ. ಕಥಾಭಾಗದಲ್ಲಿ ನೀಡಿದ ಶ್ಲೋಕಗಳು ಮೂಲಪುರಾಣದಲ್ಲಿ ದೊರೆಯದ ಕಾರಣ ಉಡುಪಿಯ ಮಧ್ವಸಿದ್ಧಾಂತಗ್ರಂಥಾಲಯದಿಂದ ಪ್ರಕಟಿತವಾದ

ಪುಸ್ತಕದಿಂದ ಸಂಗ್ರಹಿಸಿದ್ದೇನೆ. ಮೊಟ್ಟಮೊದಲು ಈ ಪೂಜೆಯನ್ನು ಅನುಷ್ಠಾನ ಮಾಡಿದ ಕೌಂಡಿನ್ಯಬ್ರಾಹ್ಮಣನೇ ಪುನರ್ವಸು ನಕ್ಷತ್ರನಾದನು ಎಂಬ ಅಪೂರ್ವವಿಷಯವನ್ನು ವ್ರತರತ್ನಮಾಲಾದಿಂದ ಸಂಗ್ರಹಿಸಿದ್ದೇನೆ.

ಭಾದ್ರಪದಮಾಸದ ಶುಕ್ಲಚತುರ್ದಶಿಯಂದು ಅನಂತಪದ್ಮನಾಭನ ಪೂಜೆಯನ್ನು ಮಾಡಬೇಕೆಂಬುದು ನಾವೆಲ್ಲರೂ ತಿಳಿದ ವಿಚಾರ. ಆದರೆ ಭವಿಷ್ಯಪುರಾಣವನ್ನು ತೆಗೆದು ನೋಡಿದಾಗ, ಅದರಲ್ಲಿ ಹನ್ನೆರಡು ಮಾಸಗಳ ನಕ್ಷತ್ರಗಳಲ್ಲಿ ಅನಂತನ ಒಂದೊಂದು ಅವಯುವದ ಪೂಜಾವಿಧಾನವನ್ನು ನೋಡಿ, ಅತ್ಯಂತ ಆಶ್ಚರ್ಯವಾಯಿತು. ಅನೇಕ ದೇವತೆಗಳ ಅನೇಕರೀತಿಯ ಪೂಜೆಗಳು ಪುರಾಣಗಳಲ್ಲಿ ಕಾಣಿಸುತ್ತವೆ. ಆದರೆ ಅನಂತಪದ್ಮನಾಭನ ಈ ಪೂಜಾವೈಭವವನ್ನು ಅನುಸಂಧಾನದ ಅಸಾಧಾರಣ್ಯದ ಬಗೆಯನ್ನು ಕಂಡಾಗ ಇದನ್ನು ಮುದ್ರಿಸಲೇ ಬೇಕೆಂಬ ಅಪೇಕ್ಷೆಯುಂಟಾಯಿತು. ಪ್ರತಿಯೊಂದು ಚೈತ್ರಾದಿ ಮಾಸಗಳು ಆಯಾ ನಕ್ಷತ್ರಗಳಿಂದ ಪ್ರಸಿದ್ಧಿ ಹೊಂದಿವೆ. ಆಯಾ ಮಾಸಗಳ ಆಯಾ ನಕ್ಷತ್ರಗಳಲ್ಲಿ ಉದಾಹರಣೆ - ಚೈತ್ರ ಮಾಸದಲ್ಲಿ ಚಿತ್ರಾ ನಕ್ಷತ್ರವು ಬಂದಾಗ, ವೈಶಾಖದಲ್ಲಿ ವಿಶಾಖಾ ನಕ್ಷತ್ರವು ಬಂದಾಗ ಅನಂತಪದ್ಮನಾಭನ ಒಂದೊಂದು ಅವಯುವಗಳನ್ನು ಪೂಜಿಸಬೇಕೆಂದು ಭವಿಷ್ಯಪುರಾಣವು ಹೇಳುತ್ತದೆ. ಭಾದ್ರಪದಮಾಸದಲ್ಲಿ ಉತ್ತರಾಭಾದ್ರ ನಕ್ಷತ್ರವಿದ್ದಾಗ ಅನಂತಪದ್ಮನಾಭನ ಹೃದಯವನ್ನು ಪೂಜಿಸಬೇಕೆಂದು ಹೇಳುತ್ತದೆ. ಬಹುಷಃ ಹೃದಯವೇ ಪ್ರಧಾನವಾದ್ದರಿಂದ ನಮ್ಮ ಹೃದಯದಲ್ಲಿ ಭಗವಂತನ ಹೃದಯವನ್ನು ಕಾಣಬೇಕಾದ್ದರಿಂದ ಭಾದ್ರಪದ ಮಾಸದಲ್ಲಷ್ಟೇ ಅನಂತನ ಪೂಜಾವಿಧಾನವು ಸಂಪ್ರದಾಯಾಗತವಾಗಿದೆ ಎಂದು ಭಾವಿಸಬಹುದು. ವರ್ಷಪೂರ್ತಿ ನಮ್ಮಿಂದ ಪೂಜಿಸಲು ಸಾಧ್ಯವಾಗದಿದ್ದರೂ ಅನಂತಚತುರ್ದಶಿಯಂದು ಭವಿಷ್ಯಪುರಾಣ-ದಲ್ಲಿರುವ ಆ ಪೂಜಾವೈಭವದ ಭಾಗವನ್ನು ಪಾರಾಯಣಮಾಡಿ ಧನ್ಯರಾಗೋಣ.

ಈ ಪುಸ್ತಕದಲ್ಲಿ ಅನಂತಚತುರ್ದಶಿಯಂದು ಮಾಡಬೇಕಾದ ಪೂಜಾವಿಧಾನವನ್ನು ನೀಡಿದ್ದಷ್ಟೇ ಅಲ್ಲದೇ ಮರುದಿವಸ ಆಚರಿಸಲೇ ಬೇಕಾದ ವಿಸರ್ಜನಾಂಗವಾದ ಪೂಜಾವಿಧಾನವನ್ನೂ ಕೂಡ ನೀಡಲಾಗಿದೆ. ಇದರಲ್ಲಿ ನೀಡಿದ

ಕ್ರಮದಂತೆ ವಿಸರ್ಜನೆಯನ್ನು ಮಾಡಬೇಕು. ಅದರಂತೆ ಧರಿಸಿದ ದೋರದ ವಿಸರ್ಜನೆಯನ್ನು ಈ ಪುಸ್ತಕದಲ್ಲಿ ನೀಡಿದ ಕ್ರಮದಲ್ಲಿಯೇ ಮಾಡಬೇಕು. ಆವಾಹನೆಯನ್ನು ಶ್ರದ್ಧೆಯಿಂದ ಮಾಡಿ ವಿಸರ್ಜನೆಯ ವಿಷಯದಲ್ಲಿ ಅಸಡ್ಡೆಯನ್ನು ತೋರಿದರೆ ಅನರ್ಥವಾಗುತ್ತದೆ ಎಂಬ ವಿಷಯವನ್ನು ಇದೇ ಅನಂತವ್ರತದ ಕಥೆಯಲ್ಲಿ ಶ್ರೀವೇದವ್ಯಾಸರು ತಿಳಿಸಿದ್ದಾರೆ.

ಸ್ತ್ರೀಯರು ಭಗವಂತನ ಅನೇಕ ಹಾಡುಗಳನ್ನು ಇಂದು ಪಠಿಸಬೇಕು; ಕೆಲವೊಂದನ್ನಷ್ಟೇ ಪುಸ್ತಕದ ಕೊನೆಯಲ್ಲಿ ನೀಡಲಾಗಿದೆ. ಅನಂತಪದ್ಮನಾಭನ ಆರಾಧನೆಯನ್ನು ನಮ್ಮ ನಮ್ಮ ಶಕ್ತಿಗೆ ಅನುಗುಣವಾಗಿ ಆಚರಿಸಿ ಧನ್ಯರಾಗೋಣ.

ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ಸಹಕಾರನಗರದಲ್ಲಿರುವ ಶ್ರೀ ಅನಂತಮೂರ್ತಿ ದಂಪತಿಗಳಿಗೆ ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ-ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಇವರ ಮಾತಾ-ಪಿತೃಗಳಿಗೆ ಈ ಜ್ಞಾನಯಜ್ಞದ ಪುಣ್ಯರಾಶಿಯು ತಲುಪಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ.

# ಪೂಜೆಗೆ ಸಾಮಗ್ರಿಗಳು

* ದೇವರ ಪೂಜೆಯ ಜೊತೆ ಅನಂತಪೂಜೆಯನ್ನು ಮಾಡುವುದು ಸೂಕ್ತವಾದ್ದರಿಂದ ದಿನನಿತ್ಯದ ಪೂಜಾ ಸಾಮಗ್ರಿಗಳು ಇರಬೇಕು.

* ಮಹಾಗಣಪತಿಪೂಜೆಗೆ ಗರಿಕೆ, ತಾಂಬೂಲ, ಅಡಿಕೆಬೆಟ್ಟ, ನೈವೇದ್ಯಕ್ಕೆ ಹಣ್ಣು.

* ಯಮುನಾಪೂಜೆಗೆ ದೊಡ್ಡ ಕೊಡ, ಬೆಳ್ಳಿಯ ಕಲಶ, ಐದು ಬಗೆಯ ಚಿಗುರು, ಅರಿಶಿನ, ಕುಂಕುಮ ಮೊದಲಾದವು.

* 'ಮುಷ್ಟಿಮಾತ್ರೈಶ್ಚ ದರ್ಭೈಸ್ತು ಫಣಿರಾಜಂ ಚ ಕಾರಯೇತ್' ಎಂಬ ಸ್ಮೃತಿವಾಕ್ಯದಂತೆ ಮುಷ್ಟಿದರ್ಭೆಯಿಂದ ಫಣಿರಾಜನನ್ನು ನಿರ್ಮಿಸಬೇಕು. ನೆನೆಸಿದ ದರ್ಭೆಗಳನ್ನು ಎರಡೆರಡನ್ನು ಸೇರಿಸಿ, ಅಗ್ರಭಾಗದಲ್ಲಿ ಒಂದು ಇಂಚಿನಷ್ಟು ಬಿಟ್ಟು ಗಂಟುಗಳನ್ನು ಹಾಕಬೇಕು. ಹದಿನಾಲ್ಕು ಜೊತೆ ಸಿದ್ಧಪಡಿಸಬೇಕು. ಏಳು ಜೊತೆಗಳನ್ನು ಸೇರಿಸಿ ಒಂದು ಗಂಟನ್ನು ಹಾಕಿ ಜಡೆಯನ್ನು ಹೆಣೆಯಬೇಕು. ಏಳು ಹೆಡೆಗಳ ಎರಡು ಶೇಷನ ಪ್ರತಿಮೆಯನ್ನು ನಿರ್ಮಾಣ ಮಾಡಬೇಕು. ಎರಡು ಕಲಶದಲ್ಲಿ ಪ್ರತ್ಯೇಕವಾಗಿ ಇಡಬೇಕು. ಅಥವಾ ಏಳು ಹೆಡೆಗಳ ದೊಡ್ಡ ಶೇಷನನ್ನು ಮಾಡಿ ಒಂದೇ ಕಲಶದಲ್ಲಿ ಇಡಬಹುದು.

* ಗ್ರಂಥಿಗೆ ಅಂಗಡಿಗಳಲ್ಲಿ ಅನಂತನ ವಸ್ತ್ರವು ದೊರೆಯುತ್ತದೆ. ಎರಡು ವಸ್ತ್ರವನ್ನು ತರಬೇಕು. 'ವಸ್ತ್ರಯುಗ್ಮೇನ ವೇಷ್ಟಿತಮ್' ಮತ್ತು ಅನಂತನ ದಾರವನ್ನು ರೇಷ್ಮೆಯಲ್ಲಿ ಅಥವಾ ಹಸಿದಾರದಲ್ಲಿ ಸ್ವತಃ ಮಾಡಿಟ್ಟುಕೊಳ್ಳಬೇಕು. ಗೋಚರ್ಮದಷ್ಟು ವಿಶಾಲವಾದ ಸ್ಥಳವನ್ನು ಗೋಮಯದಿಂದ ಸಾರಿಸಬೇಕು. ಮಧ್ಯದಲ್ಲಿ ಸ್ಥಂಡಿಲ ಮಾಡಿ ಅಷ್ಟದಲಪದ್ಮವನ್ನು ಬರೆಯಬೇಕು. ಅದರ ಮೇಲೆ ಕಲಶವನ್ನಿಡಬೇಕು. ಮಾವು ಹಲಸುಗಳ ಚಿಗುರುಗಳನ್ನು ಅದರಲ್ಲಿಡಬೇಕು.

ಗೋಚರ್ಮಮಾತ್ರಮಾಲಿಪ್ಯಂ ಗೋಮಯೇನ ವಿಚಕ್ಷಣಃ ।
ತನ್ಮಧ್ಯೇ ಸ್ಥಂಡಿಲಂ ಕೃತ್ವಾ ಪದ್ಮಮಷ್ಟದಲಂ ಲಿಖೇತ್ ॥

* ಅನಂತದೋರಕ್ಕೆ ಹದಿನಾಲ್ಕು ಗಂಟುಗಳನ್ನು ಹಾಕಿರಬೇಕು. ಗೃಹಸ್ಥನಾದವನು ಯಜ್ಞೋಪವೀತವನ್ನು ವ್ರತಗಳಲ್ಲಿ ಉಪಯೋಗಿಸುವ ದೋರವನ್ನು ಸ್ವತಃ ತಾನೇ ತಯಾರು ಮಾಡಿಕೊಳ್ಳಬೇಕು. ಇದೇ ಉತ್ತಮಪಕ್ಷ. ಅಥವಾ ಪ್ರಯತ್ನಪೂರ್ವಕವಾಗಿ ತಿಳಿದವರು ಮಾಡಿದ್ದನ್ನು ತೆಗೆದುಕೊಂಡು ಬರಬೇಕು. ಅದೂ ಸಾಧ್ಯವಾಗದಿದ್ದರೆ ಅಂಗಡಿಯಲ್ಲಿ ದೊರೆಯುವುದನ್ನು ತಂದು ವೇದಮಂತ್ರಾದಿಗಳನ್ನು ಹೇಳುತ್ತಾ ಅದರ ರಚನೆಯ ಸಾನ್ನಿಧ್ಯವನ್ನು ತರಲು ಪ್ರಯತ್ನಿಸಬೇಕು.

* ಒಂದು ತಟ್ಟೆಯಲ್ಲಿ ಅಕ್ಕಿಯನ್ನು ಹಾಕಿ ಅಷ್ಟದಳ ಪದ್ಮದ ಮೇಲೆ ಕಲಶವನ್ನು ಇಡುವುದಕ್ಕೆ ಒಂದು ಪೀಠವನ್ನು ರಚನೆ ಮಾಡಿಕೊಳ್ಳಬೇಕು.

* ಹದಿನಾಕುಬಗೆಯ ಪುಷ್ಪಗಳನ್ನು, ಹದಿನಾಕು ಬಗೆಯ ಪತ್ರೆಗಳನ್ನು ಪೂಜೆಗೆ ಇಟ್ಟುಕೊಳ್ಳಬೇಕು.

* ಪುರಿಉಂಡೆ, ಪುಳ್ಳಂಗಾಯಿಉಂಡೆ, ಅರಳುಂಡೆ, ಅತಿರಸ, ಕಡುಬು, ಮಿಠಾಯಿ ಮೊದಲಾದ ಹದಿನಾಕು ಭಕ್ಷ್ಯಗಳನ್ನು ಮಾಡಿ ಸಮರ್ಪಿಸಬೇಕು.

ಬೆಳಿಗ್ಗೆ ಎದ್ದ ಕೂಡಲೇ ಈ ಶ್ಲೋಕ ಹೇಳಿ ಅನಂತನನ್ನು ಪ್ರಾರ್ಥಿಸಿರಿ.

ಪಾಪೋಽಹಂ ಪಾಪಕರ್ಮಾಽಹಂ ಪಾಪಾತ್ಮಾ ಪಾಪಸಂಭವಃ ।
ತ್ರಾಹಿ ಮಾಂ ಪುಂಡರೀಕಾಕ್ಷ ಸರ್ವಪಾಪಹರೋ ಭವ ॥
ಅದ್ಯ ಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಮ್ ।
ಯತ್ ತವಾಂಘ್ರ್ಯಬ್ಜಯುಗಲೇ ಮನ್ಮೂರ್ಧಾ ಭ್ರಮರಾಯತೇ ॥

ನಾನು ಕಡುಪಾಪಿ. ಪಾಪಕರವಾದ ಕೆಲಸಗಳನ್ನೇ ಮಾಡಿರುವೆನು. ನನ್ನ ಬುದ್ಧಿ ಪಾಪದೆಡೆ ಸಾಗುತ್ತದೆ. ಪಾಪದಿಂದಲೇ ನನ್ನ ಹುಟ್ಟು. ಓ ಪುಂಡರೀಕಾಕ್ಷನೇ! ನನ್ನನ್ನು

# ಪೂಜೆಗೆ ಸಾಮಗ್ರಿಗಳು

* ದೇವರ ಪೂಜೆಯ ಜೊತೆ ಅನಂತಪೂಜೆಯನ್ನು ಮಾಡುವುದು ಸೂಕ್ತವಾದ್ದರಿಂದ ದಿನನಿತ್ಯದ ಪೂಜಾ ಸಾಮಗ್ರಿಗಳು ಇರಬೇಕು.

* ಮಹಾಗಣಪತಿಪೂಜೆಗೆ ಗರಿಕೆ, ತಾಂಬೂಲ, ಅಡಿಕೆಬೆಟ್ಟ, ನೈವೇದ್ಯಕ್ಕೆ ಹಣ್ಣು.

* ಯಮುನಾಪೂಜೆಗೆ ದೊಡ್ಡಕೊಡ, ಬೆಳ್ಳಿಯ ಕಲಶ, ಐದು ಬಗೆಯ ಚಿಗುರು, ಅರಿಶಿನ, ಕುಂಕುಮ ಮೊದಲಾದವು.

* 'ಮುಷ್ಟಿಮಾತ್ರೈಶ್ಚ ದರ್ಭೈಸ್ತು ಫಣಿರಾಜಂ ಚ ಕಾರಯೇತ್' ಎಂಬ ಸ್ಮೃತಿವಾಕ್ಯದಂತೆ ಮುಷ್ಟಿದರ್ಭೆಯಿಂದ ಫಣಿರಾಜನನ್ನು ನಿರ್ಮಿಸಬೇಕು. ನೆನೆಸಿದ ದರ್ಭೆಗಳನ್ನು ಎರಡೆರಡನ್ನು ಸೇರಿಸಿ, ಅಗ್ರಭಾಗದಲ್ಲಿ ಒಂದು ಇಂಚಿನಷ್ಟು ಬಿಟ್ಟು ಗಂಟುಗಳನ್ನು ಹಾಕಬೇಕು. ಹದಿನಾಲ್ಕು ಜೊತೆ ಸಿದ್ಧಪಡಿಸಬೇಕು. ಏಳು ಜೊತೆಗಳನ್ನು ಸೇರಿಸಿ ಒಂದು ಗಂಟನ್ನು ಹಾಕಿ ಜಡೆಯನ್ನು ಹೆಣೆಯಬೇಕು. ಏಳು ಹೆಡೆಗಳ ಎರಡು ಶೇಷನ ಪ್ರತಿಮೆಯನ್ನು ನಿರ್ಮಾಣ ಮಾಡಬೇಕು. ಎರಡು ಕಲಶದಲ್ಲಿ ಪ್ರತ್ಯೇಕವಾಗಿ ಇಡಬೇಕು. ಅಥವಾ ಏಳು ಹೆಡೆಗಳ ದೊಡ್ಡ ಶೇಷನನ್ನು ಮಾಡಿ ಒಂದೇ ಕಲಶದಲ್ಲಿ ಇಡಬಹುದು.

* ಗ್ರಂಥಿಗೆ ಅಂಗಡಿಗಳಲ್ಲಿ ಅನಂತನ ವಸ್ತ್ರವು ದೊರೆಯುತ್ತದೆ. ಎರಡು ವಸ್ತ್ರವನ್ನು ತರಬೇಕು. 'ವಸ್ತ್ರಯುಗ್ಮೇನ ವೇಷ್ಟಿತಮ್' ಮತ್ತು ಅನಂತನ ದಾರವನ್ನು ರೇಷ್ಮೆಯಲ್ಲಿ ಅಥವಾ ಹಸಿದಾರದಲ್ಲಿ ಸ್ವತಃ ಮಾಡಿಟ್ಟುಕೊಳ್ಳಬೇಕು. ಗೋಚರ್ಮದಷ್ಟು ವಿಶಾಲವಾದ ಸ್ಥಳವನ್ನು ಗೋಮಯದಿಂದ ಸಾರಿಸಬೇಕು. ಮಧ್ಯದಲ್ಲಿ ಸ್ಥಂಡಿಲ ಮಾಡಿ ಅಷ್ಟದಲಪದ್ಮವನ್ನು ಬರೆಯಬೇಕು. ಅದರ ಮೇಲೆ ಕಲಶವನ್ನಿಡಬೇಕು. ಮಾವು ಹಲಸುಗಳ ಚಿಗುರುಗಳನ್ನು ಅದರಲ್ಲಿಡಬೇಕು.

ಆ ಜ್ವರವನ್ನು ತಡೆಯಲಾಗದೇ ನದಿಯ ತೀರದಲ್ಲಿ ಮೃತಳಾದಳು. ತನ್ನ ಪಾತಿವ್ರತ್ಯದಿಂದ ಸ್ವರ್ಗವನ್ನು ಪಡೆದಳು. ಅವಳ ಪತಿಯಾದ ಸುಮಂತು ಎಂಬ ಬ್ರಾಹ್ಮಣನು ಮತ್ತೊಬ್ಬ ಧರ್ಮದಲ್ಲಿ ಆಸಕ್ತನಾದ ಬ್ರಾಹ್ಮಣನ ಮಗಳನ್ನು ವಿವಾಹವಾದನು. ಅವಳ ಹೆಸರು ಕರ್ಕಶಾ ಎಂಬುದಾಗಿ. ಇವಳು ಬ್ರಾಹ್ಮಣನ ಮಗಳಾಗಿದ್ದರೂ ಹೆಸರಿಗೆ ತಕ್ಕಂತೆ ದುಷ್ಟವಾದ ಶೀಲವುಳ್ಳವಳಾಗಿದ್ದಳು. ಅತ್ಯಂತ ಕ್ರೂರಿಯಾಗಿದ್ದಳು. ಮಹಾಕೋಪವುಳ್ಳವಳಾಗಿದ್ದಳು. ಪ್ರತಿಯೊಂದಕ್ಕೂ ನಿತ್ಯವೂ ಜಗಳವಾಡುತ್ತಿದ್ದಳು.

ಸಾಽಪಿ ಶೀಲಾ ಪಿತುರ್ಗೇಹೇ ಗೃಹಾರ್ಚನಪರಾ ಬಭೌ।
ಕುಡ್ಯಸ್ತಂಭಬಹಿರ್ದ್ವಾರದೇಹಲೀತೋರಣಾದಿಷು ॥೩೮॥
ವರ್ಣಕೈಶ್ಚಿತ್ರಮಕರೋತ್ ನೀಲಪೀತಸಿತಾಸಿತೈಃ।
ಸ್ವಸ್ತಿಕೈಃ ಶಂಖಪದ್ಮೈಶ್ಚ ಅರ್ಚಯಂತೀ ಪುನಃ ಪುನಃ ॥೩೯॥

ಶೀಲಾ ಎಂಬ ಮಗಳು ತಂದೆಯ ಮನೆಯಲ್ಲಿ ಬೆಳೆಯುತ್ತಿದ್ದಳು. ಸ್ತ್ರೀಯರಿಗೆ ಸಹಜವಾಗಿರಬೇಕಾದ ಎಲ್ಲ ಸ್ವಭಾವಗಳೂ ಗುಣಗಳೂ ಇವಳಲ್ಲಿ ಹೇರಳವಾಗಿದ್ದವು. ಗೋಡೆ, ಕಂಬ, ಹೊರಬಾಗಿಲು, ಹೊಸ್ತಿಲು, ತೋರಣ ಮುಂತಾದ ಸ್ಥಳಗಳಲ್ಲಿ ಕಪ್ಪು, ಹಳದಿ, ಬಿಳಿ, ನೀಲಿ ಮೊದಲಾದ ಬಣ್ಣಗಳಿಂದ ಚಿತ್ರವನ್ನು ಬರೆಯುತ್ತಿದ್ದಳು. ಸ್ವಸ್ತಿಕ, ಶಂಖ, ಪದ್ಮ ಮೊದಲಾದ ರಂಗವಲ್ಲಿಗಳನ್ನು ಬರೆದು ಮನೆಯನ್ನು ಸಿಂಗರಿಸುತ್ತಿದ್ದಳು.

ತತಃ ಕಾಲೇ ಬಹುಗತೇ ಕೌಮಾರವಶವರ್ತಿನೀ।
ಏವಂ ಸಾ ವರ್ಧತೇ ಶೀಲಾ ಪಿತೃವೇಶ್ಮನಿ ಮಂಗಲಾ ॥೪೦॥

ಸ್ವಲ್ಪಕಾಲವು ಕಳೆದ ಅನಂತರ ಕೌಮಾರಾವಸ್ಥೆಯನ್ನು ಶೀಲೆಯು ಹೊಂದಿದಳು. ಅನಂತರ ಆ ಶೀಲೆಯು ತಂದೆಯ ಮನೆಯಲ್ಲಿ ಅತ್ಯಂತ ಮಂಗಳರೂಪಿಯಾಗಿ ಯೌವನವನ್ನು ಪ್ರವೇಶಿಸಿದಳು.

ಪಿತ್ರಾ ದೃಷ್ಟಾ ತದಾ ತೇನ ಸ್ತ್ರೀಚಿಹ್ನಾ ಯೌವನೇ ಸ್ಥಿತಾ।
ತಾಂ ದೃಷ್ಟ್ವಾ ಚಿಂತಯಾಮಾಸ ವರಾನನುಗುಣಾನ್ ಭುವಿ ॥೪೧॥

ಶೀಲೆಯು ಯಾವಾಗ ಯೌವನವನ್ನು ಹೊಂದಿದಳೋ, ಆಗ ಯೌವನದ ಚಿಹ್ನೆಗಳನ್ನು ಗಮನಿಸಿದ ಅವಳ ತಂದೆಯು ಇವಳಿಗೆ ಅನುಕೂಲವಾದ ವರನನ್ನು ಹುಡುಕಬೇಕೆಂದು ಆಲೋಚನೆ ಮಾಡಿದನು.

ಕಸ್ಮೈ ದೇಯಾ ಮಯಾ ಕನ್ಯಾ ವಿಚಾರ್ಯೇತಿ ಸುದುಃಖಿತಃ ।
ಏತಸ್ಮಿನ್ನೇವ ಕಾಲೇ ತು ಮುನಿರ್ವೇದವಿದಾಂವರಃ ॥೪೨॥

ನನ್ನ ಮಗಳನ್ನು ಯಾರಿಗೆ ಕೊಡಬೇಕು? ಎಂಬ ಚಿಂತಿಯಿಂದಲೇ ದುಃಖಿತನಾದನು. ಇದೇ ಸಂದರ್ಭದಲ್ಲಿ ಒಬ್ಬ ವೇದಜ್ಞನಾದ ಉತ್ತಮವರನಾದ ಮುನಿಯು ಅಲ್ಲಿಗೆ ಆಗಮಿಸಿದನು.

ಕನ್ಯಾರ್ಥೀ ಚಾಽಗತಃ ಶ್ರೀಮಾನ್ ಕೌಂಡಿಣ್ಯೋ ಮುನಿಸತ್ತಮಃ ।
ಉವಾಚ ರೂಪಸಂಪನ್ನಾಂ ತ್ವದೀಯಾಂ ತನಯಾಂ ವೃಣೇ ॥೪೩॥

ಕಾಂತಿಯುಕ್ತನಾದ ಕೌಂಡಿಣ್ಯ ಎಂಬ ಹೆಸರುಳ್ಳ ಮುನಿಶ್ರೇಷ್ಠನಾದ ಅವನು ಕನ್ಯಾರ್ಥಿಯಾಗಿ ಬಂದಿರುವೆನೆಂದು ಹೇಳಿದನು. ಅತ್ಯಂತ ರೂಪವತಿಯಾದ ನಿನ್ನ ಮಗಳನ್ನು ನನಗೆ ನೀಡೆಂದು ಪ್ರಾರ್ಥಿಸಿದನು.

ಪಿತಾ ದದೌ ದ್ವಿಜೇಂದ್ರಾಯ ಕೌಂಡಿಣ್ಯಾಯ ಶುಭೇ ದಿನೇ ।
ಗೃಹ್ಯೋಕ್ತವಿಧಿನಾ ಪಾರ್ಥ ವಿವಾಹಮಕರೋತ್ ತದಾ ॥೪೪॥

ತಂದೆಯು ಬ್ರಾಹ್ಮಣಶ್ರೇಷ್ಠನಾದ ಕೌಂಡಿನ್ಯನಿಗೆ ಶುಭದಿವಸದಲ್ಲಿ ಗೃಹ್ಯಸೂತ್ರದಲ್ಲಿ ಹೇಳಿದ ವಿಧಾನದಿಂದ ವಿವಾಹವನ್ನು ಮಾಡಿಕೊಟ್ಟನು.

ಬ್ರಾಹ್ಮಣಾಃ ಸ್ವಸ್ತಿವಚನಂ ಜಯಘೋಷಂ ಚ ಬಂದಿನಃ ।
ನಿರ್ವರ್ತ್ಯೋದ್ವಾಹಿಕಂ ಸರ್ವಂ ಪ್ರೋಕ್ತವಾನ್ ಕರ್ಕಶಾಂ ದ್ವಿಜಃ ॥೪೫॥

ವಿವಾಹಕಾಲದಲ್ಲಿ ಬ್ರಾಹ್ಮಣರು ಸ್ವಸ್ತಿವಾಚನವನ್ನು ಮಾಡಿದರು. ಸ್ತುತಿಪಾಠಕರು ಜಯಘೋಷ ಮಾಡಿದರು. ಆ ಬ್ರಾಹ್ಮಣನು ತನ್ನ ಹೆಣ್ಣುಮಗಳ ಹಾಗೂ ಅವಳ ಗಂಡನ ಜೊತೆಗೆ ತನ್ನ ಮನೆಗೆ ಆಗಮಿಸಿದನು. ತನ್ನ ಹೆಂಡತಿಯಾದ ಕರ್ಕಶೆಯ ಬಳಿ ಹೀಗೆ ಮಾತನಾಡಿದನು.

ಸುಮಂತುಃ

ಕಿಂಚಿದ್ ದಾಯಾದಿಕಂ ದೇಯಂ ಜಾಮಾತುಃ ಪಾರಿತೋಷಿಕಮ್ ।

ತಚ್ಛ್ರುತ್ವಾ ಕರ್ಕಶಾ ಕ್ರುದ್ಧಾ ಪ್ರೋತ್ಸಾರ್ಯ ಗೃಹಮಂಡನಮ್ ॥೪೬॥

ಪೇಟಿಕೇ ಸುಸ್ಥಿರಂ ಬದ್ಧ್ವಾ ಸ್ವಗೃಹಂ ಗಮ್ಯತಾಮಿತಿ ।

ಭೋಜ್ಯಾವಶಿಷ್ಟಚೂರ್ಣೇನ ಪಾಥೇಯಂ ಚ ಚಕಾರ ಸಾ ॥೪೭॥

ಓ ಪ್ರಿಯೆ! ಬಳುವಳಿ ರೂಪವಾಗಿ ಅಳಿಯನಿಗೆ ಏನಾದರೂ ಪಾರಿತೋಷಿಕವನ್ನು ಕೊಡಬೇಕು. ಇಷ್ಟು ಹೇಳಿದ್ದೇ ತಡ ಕರ್ಕಶೆಯ ಸಿಟ್ಟು ಭುಗಿಲೆದ್ದಿತು. ಮನೆಯಲ್ಲಿದ್ದ ಅಲಂಕಾರವಸ್ತುಗಳನ್ನು ತೆಗೆದುಕೊಂಡು ತನ್ನ ಪೆಟ್ಟಿಗೆಯಲ್ಲಿ ಭದ್ರವಾಗಿ ಕಟ್ಟಿಟ್ಟಳು. ತಿಂದುಳಿದ ಹಿಟ್ಟಿನಿಂದ ಬುತ್ತಿಯನ್ನು ಕಟ್ಟಿ ಕೊಟ್ಟು, ನಿಮ್ಮ ಮನೆಗೆ ತೆರಳಿರೆಂದು ವಧುವರರಿಗೆ ಹೇಳಿದಳು.

ಉವಾಚ ವಿತ್ತಂ ನೈವಾಸ್ತಿ ಗೃಹೇ ಪಶ್ಯ ಯದಿ ಸ್ಥಿತಮ್ ।

ತಚ್ಛ್ರುತ್ವಾ ವಿಮನಾಃ ಪಾರ್ಥ ಸಂಯತಾತ್ಮಾ ಮುನಿಸ್ತದಾ ॥೪೮॥

ಗಂಡನಿಗೂ ಸಹ 'ಮನೆ ಬಿಟ್ಟು ತೆರಳು; ಹಣವಿಲ್ಲ' ಎಂದು ಗದರಿದಳು. ಇದನ್ನು ಕೇಳಿದ ಸುಮಂತು ಬ್ರಾಹ್ಮಣನ ಮನಸ್ಸು ಬಹಳ ನೊಂದಿತು. ಜಿತೇಂದ್ರಿಯನಾದ ಮುನಿಯು ಆ ದುಃಖವನ್ನು ತನ್ನಲ್ಲಿಯೇ ಅಡಗಿಸಿಕೊಂಡನು.

ಕೌಂಡಿಣ್ಯೋऽಪಿ ವಿವಾಹ್ಯೈನಾಂ ಪಥಿ ಗಚ್ಛನ್ ಶನೈಃ ಶನೈಃ ।

ಶೀಲಾಂ ಸುಶೀಲಾಮಾದಾಯ ನವೋಢಾಂ ಗೋರಥೇನ ಹಿ ॥೪೯॥

ಕೌಂಡಿಣ್ಯಮುನಿಯು ಆ ಕನ್ಯೆಯನ್ನು ವಿವಾಹವಾಗಿ, ದಾರಿಯಲ್ಲಿ ಮೆಲ್ಲ ಮೆಲ್ಲನೆ ಎತ್ತಿನ ಬಂಡಿಯಲ್ಲಿ ಪ್ರಯಾಣ ಮಾಡುತ್ತಾ ಹೊರಟನು.

ದದರ್ಶ ಯಮುನಾಂ ಪುಣ್ಯಾಂ ತಾಮುತ್ತೀರ್ಯ ತಟೇ ರಥಮ್ ।

ಸಂಸ್ಥಾಪ್ಯಾವಶ್ಯಕಂ ಕರ್ತುಂ ಗತಃ ಶಿಷ್ಯಾನ್ನಿಯುಜ್ಯ ವೈ ॥೫೦॥

ದಾರಿಯಲ್ಲಿ ಪುಣ್ಯಕರವಾದ ಯಮುನಾನದಿಯನ್ನು ಕಂಡನು. ಅದನ್ನು ದಾಟಿ ಅದರ ದಡದಲ್ಲಿ ತನ್ನ ರಥವನ್ನು ನಿಲ್ಲಿಸಿದನು. ಮಾಧ್ಯಾಹ್ನಿಕ ಸ್ನಾನ ಹಾಗೂ ಸಂಧ್ಯಾವಂದನೆಗಳನ್ನು ಮಾಡುವುದಕ್ಕಾಗಿ ತನ್ನ ಶಿಷ್ಯರನ್ನು ಆ ಬಂಡಿಯ ರಕ್ಷಣೆಗೆ ನಿಲ್ಲಿಸಿ ನದಿಗೆ ಹೊರಟನು.

ಮಧ್ಯಾಹ್ನೇ ಭೋಜ್ಯವೇಲಾಯಾಂ ಸಮುತ್ತೀರ್ಯ ಸರಿತ್ತಟೇ ।
ದದರ್ಶ ಶೀಲಾ ಸಾ ಸ್ತ್ರೀಣಾಂ ಸಮೂಹಂ ರಕ್ತವಾಸಸಮ್ ॥೫೦॥

ಆಗ ಮಧ್ಯಾಹ್ನದ ಭೋಜನಸಮಯ. ಆದಕ್ಕಾಗಿ ಹೊಳೆಯ ಬದಿಗೆ ಅನೇಕರು ಆಗಮಿಸಿದ್ದರು. ಕೆಂಪು ಬಟ್ಟೆಯನ್ನುಟ್ಟ ಹೆಂಗಸರ ಗುಂಪೊಂದು ಅಲ್ಲಿಗೆ ಬಂದಿತ್ತು. ಶೀಲೆಯು ಅದನ್ನು ಕಂಡಳು.

ಚತುರ್ದಶ್ಯಾಮರ್ಚಯಂತಂ ಭಕ್ತ್ಯಾ ದೇವಂ ಜನಾರ್ದನಮ್ ।
ಉಪಗಮ್ಯ ಶನೈಃ ಶೀಲಾ ಪಪ್ರಚ್ಛ ಸ್ತ್ರೀಕದಂಬಕಮ್ ॥೫೨॥

ಅಂದು ಭಾದ್ರಪದಮಾಸದ ಶುಕ್ಲಪಕ್ಷದ ಚತುರ್ದಶಿಯ ದಿವಸವಾಗಿತ್ತು. ಆ ಎಲ್ಲ ಸ್ತ್ರೀಯರು ಜನಾರ್ದನನನ್ನು ಭಕ್ತಿಯಿಂದ ಅರ್ಚನೆ ಮಾಡಿದರು. ಅವರ ಬಳಿಗೆ ಶೀಲೆಯು ಆಗಮಿಸಿ ಹೀಗೆ ಪ್ರಶ್ನಿಸಿದಳು.

ಆರ್ಯಾಃ ಕಿಮೇತನ್ಮೇ ಬ್ರೂತ ಕಿಂ ನಾಮ ವ್ರತಮೀದೃಶಮ್ ।
ತಾ ಊಚುರ್ಯೋಷಿತಸ್ತಾಂ ತು ಶೀಲಾಂ ಶೀಲವಿಭೂಷಣಾಮ್ ॥೫೩॥

ಪೂಜ್ಯರಾದ ಸ್ತ್ರೀಯರೇ! ಇದು ಯಾವ ವ್ರತ? ಇದನ್ನು ನನಗೂ ತಿಳಿಸಿರಿ ಎಂದಳು. ಆಗ ಆ ಸ್ತ್ರೀಯರು ಶೀಲವತಿಯಾದ ಶೀಲೆಗೆ ಹೀಗೆ ಹೇಳಿದರು.

ಅನಂತವ್ರತಮೇತದ್ಧಿ ವ್ರತೇಽನಂತಸ್ತು ಪೂಜ್ಯತೇ ।
ಸಾಽಬ್ರವೀದಹಮಪ್ಯೇತತ್ ಕರಿಷ್ಯೇ ವ್ರತಮುತ್ತಮಮ್ ॥೫೪॥
ವಿಧಾನಂ ಕೀದೃಶಂ ತತ್ರ ಕಿಂ ದಾನಂ ಕೋಽತ್ರ ಪೂಜ್ಯತೇ ।

ಓ ಬಾಲೆ! ಇದು ಅನಂತನ ವ್ರತ. ಇದರಲ್ಲಿ ಅನಂತನಾಮಕನಾದ ಭಗವಂತನು ಆರಾಧ್ಯನಾಗುತ್ತಾನೆ. ಇದನ್ನು ಕೇಳಿದ ಶೀಲೆಯು ಪುನಃ ಪ್ರಶ್ನಿಸಿದಳು. ಈ ವ್ರತವನ್ನು ನಾನು ?ಕೂಡ ಮಾಡುತ್ತೇನೆ. ಈ ವ್ರತದ ವಿಧಾನವೇನು. ಏನು ದಾನ ಮಾಡಬೇಕು? ಯಾರನ್ನು ಹೇಗೆ ಪೂಜಿಸಬೇಕು?

ಸ್ತ್ರಿಯಃ
ಶೀಲೇ ಸದನ್ನಪ್ರಸ್ಥಸ್ಯ ಪುನ್ನಾಮ್ನಾ ಸಂಸ್ಕೃತಸ್ಯ ಚ ॥೫೫॥

ಸ್ತ್ರೀಯರು ಉತ್ತರಿಸಿದರು. ಓ ಶೀಲೆಯೇ! ಒಂದು ಸೇರು ಅಕ್ಕಿಯನ್ನು ತೆಗೆದು-ಕೊಳ್ಳಬೇಕು. ಆದರಿಂದ ಅನ್ನವನ್ನು ಮಾಡಬೇಕು. ಪುರುಷನಾಮಕನಾದ

ಪರಮಾತ್ಮನಿಗಾಗಿ ಎಂದು ಅನುಸಂಧಾನ ಮಾಡಬೇಕು. ಅನ್ನವನ್ನು ಅನಂತನಾಮಕನಾದ ಪರಮಾತ್ಮನಿಗೆ ಸಮರ್ಪಿಸಬೇಕು.

ಅರ್ಧಂ ವಿಪ್ರಾಯ ದಾತವ್ಯಮರ್ಧಂ ಭುಂಜೀತ ತತ್ ಸ್ವಯಮ್ ।
ಶಕ್ತ್ಯಾ ಚ ದಕ್ಷಿಣಾಂ ದದ್ಯಾದ್ ವಿತ್ತಶಾಠ್ಯವಿವರ್ಜಿತಃ ॥೫೬॥

ಅರ್ಧ ಭಾಗವನ್ನು ಬ್ರಾಹ್ಮಣರಿಗೆ ದಾನ ಮಾಡಿ, ಉಳಿದರ್ಧವನ್ನು ತಾನು ಭುಂಜಿಸಬೇಕು. ಯಥಾಶಕ್ತಿ ದಕ್ಷಿಣೆಯನ್ನು ನೀಡಬೇಕು. ಆದರೆ ವಿತ್ತಶಾಠ್ಯವನ್ನು ಸರ್ವಥಾ ಮಾಡಬಾರದು.

ಕರ್ತವ್ಯಂ ಚ ಸರಿತ್ತೀರೇ ಸದಾಽನಂತಸ್ಯ ಪೂಜನಮ್ ।
ಶೇಷಂ ಕುಶಮಯಂ ಕೃತ್ವಾ ವಂಶಪಾತ್ರೇ ನಿಧಾಯ ಚ ॥೫೭॥

ನದಿಯ ದಡದಲ್ಲಿ ಅನಂತನಾಮಕನಾದ ಭಗವಂತನನ್ನು ಪೂಜೆ ಮಾಡಬೇಕು. ಮೊದಲು ದರ್ಭೆಯಿಂದ ಶೇಷನ ಪ್ರತಿಮೆಯನ್ನು ಮಾಡಿ ಬಿದಿರಿನ ಪಾತ್ರೆಯಲ್ಲಿಡ-ಬೇಕು.

ಸ್ನಾತ್ವಾಽನಂತಂ ಸಮಭ್ಯರ್ಚ್ಯ ಮಂಡಲೇ ಗಂಧದೀಪಕೈಃ ।
ಪುಷ್ಪೈರ್ಧೂಪೈಶ್ಚ ನೈವೇದ್ಯೈರ್ನಾನಾಪಕ್ವಾನ್ನಸಂಯುತೈಃ ॥೫೮॥

ಸ್ನಾನಮಾಡಿ ಬಂದು ಮಂಡಲದ ಮೇಲೆ ಅನಂತನನ್ನಿಡಬೇಕು. ಗಂಧ, ಪುಷ್ಪ, ಧೂಪ, ದೀಪಗಳಿಂದ ಪೂಜಿಸಬೇಕು. ಅನೇಕ ವಿಧವಾದ ಪಕ್ವಾನ್ನಗಳ ಜೊತೆ ನೈವೇದ್ಯವನ್ನು ಮಾಡಬೇಕು.

ತಸ್ಯಾಗ್ರತೋ ದೃಢಂ ನ್ಯಸ್ಯ ಕುಂಕುಮಾಕ್ತಂ ಸುದೋರಕಮ್ ।
ಚತುರ್ದಶಗ್ರಂಥಿಯುತಂ ಗಂಧಾದ್ಯೈರರ್ಚಯೇಚ್ಛುಭೈಃ ।
ತತಸ್ತು ದಕ್ಷಿಣೇ ಪುಂಸಾಂ ಸ್ತ್ರೀಣಾಂ ವಾಮೇ ಕರೇ ನ್ಯಸೇತ್ ॥೫೯॥

ಅನಂತರ ಅನಂತನ ಎದುರು ಒಂದು ದೋರವನ್ನು ಇಡಬೇಕು. ಆ ದೋರವು ಕುಂಕುಮದಿಂದ ಲಿಪ್ತವಾಗಿರಬೇಕು. ಹದಿನಾಕು ಗಂಟುಗಳನ್ನು ಹೊಂದಿರಬೇಕು. ಅಂಥ ದೋರವನ್ನು ಗಂಧ, ಪುಷ್ಪ ಮೊದಲಾದ ಶುಭದ್ರವ್ಯಗಳಿಂದ ಪೂಜೆ ಮಾಡಬೇಕು. ಅನಂತರ ಗಂಡಸರು ಬಲಗೈಯಲ್ಲಿ, ಹೆಂಗಸರು ಎಡಗೈಯಲ್ಲಿ ಆ ದೋರವನ್ನು ಕಟ್ಟಿಕೊಳ್ಳಬೇಕು.

ಅನಂತಸಂಸಾರಮಹಾಸಮುದ್ರಮಗ್ನಂ ಸಮಭ್ಯುದ್ಧರ ವಾಸುದೇವ ।
ಅನಂತರೂಪೇ ವಿನಿಯೋಜಯಸ್ವ ಹ್ಯನಂತಸೂತ್ರಾಯ ನಮೋ ನಮಸ್ತೇ ॥೬೦॥

ಓ ಅನಂತನೇ! ಸಂಸಾರವೆಂಬ ಮಹಾಸಮುದ್ರದಲ್ಲಿ ಮುಳುಗಿರುವೆನು. ಓ ವಾಸುದೇವನೇ! ನನ್ನನ್ನು ಉದ್ಧಾರ ಮಾಡು. ನಾಶವಿಲ್ಲದ ನಿನ್ನ ಸನ್ನಿಧಾನದಲ್ಲಿ ನನ್ನನ್ನು ವಿನಿಯೋಗಿಸು. ಅನಂತರೂಪಿಯಾದ ನೀನು ಈ ಸೂತ್ರದಲ್ಲಿ ಸನ್ನಿಹಿತನಾಗಿರುವಿ. ನಿನಗೆ ಪುನಃ ಪುನಃ ನಮಸ್ಕಾರಗಳು.

ಅನೇನ ದೋರಕಂ ಬದ್ಧ್ವಾ ಕಥಾಂ ಶ್ರುತ್ವಾ ಹರೇರಿಮಾಮ್ ।
ಧ್ಯಾತ್ವಾ ನಾರಾಯಣಂ ದೇವಮನಂತಂ ವಿಶ್ವರೂಪಿಣಮ್ ॥೬೧॥

''ಅನಂತಸಂಸಾರ''ವೆಂಬ ಶ್ಲೋಕವನ್ನು ಹೇಳುತ್ತಾ ಆ ದೋರವನ್ನು ಕಟ್ಟಿಕೊಳ್ಳಬೇಕು. ಅನಂತನ ಕಥೆಯನ್ನು ಕೇಳಬೇಕು. ಜಗತ್ತಿನಲ್ಲಿ ಎಲ್ಲೆಡೆಯೂ ವ್ಯಾಪಿಸಿರುವ ಸಾಕ್ಷಾತ್ ನಾರಾಯಣಸ್ವರೂಪಿಯಾದ ಅನಂತಪದ್ಮನಾಭನನ್ನು ಧ್ಯಾನ ಮಾಡಬೇಕು.

ಭುಕ್ತ್ವಾ ಚಾಂತೇ ವ್ರಜೇದ್ ವೇಶ್ಮ ಭದ್ರೇ ಪ್ರೋಕ್ತಂ ವ್ರತಂ ತವ ।
ಶ್ರೀಕೃಷ್ಣಃ
ಏವಮಾಕರ್ಣ್ಯ ರಾಜೇಂದ್ರ ಪ್ರಹೃಷ್ಟೇನಾಂತರಾತ್ಮನಾ ॥೬೨॥

ಅನಂತನ ಪ್ರಸಾದವನ್ನು ತಿಂದು, ನದೀತೀರದಿಂದ ಮನೆಗೆ ತೆರಳಬೇಕು. ಎಲೈ ಕಲ್ಯಾಣಿಯೇ ಇದುವೇ ಅನಂತವ್ರತದ ವಿಧಾನ ಎಂದು ಹೇಳಿದರು. ಶ್ರೀಕೃಷ್ಣನು ಹೇಳುತ್ತಾನೆ. ಓ ರಾಜೇಂದ್ರನೇ! ಹೀಗೆ ಆ ಶೀಲೆಯು ಅನಂತನ ವ್ರತವಿಧಾನವನ್ನು ಕೇಳಿ, ಬಹಳ ಸಂತೋಷವನ್ನು ಅನುಭವಿಸಿದಳು.

ಸಾಽಪಿ ಚಕ್ರೇ ವ್ರತಂ ಶೀಲಾ ಕರೇ ಬದ್ಧ್ವಾ ಸುದೋರಕಮ್ ।
ಪಾಥೇಯಮರ್ಧಂ ವಿಪ್ರಾಯ ದತ್ತ್ವಾ ಭುಕ್ತ್ವಾ ಸ್ವಯಂ ತತಃ ॥೬೩॥

ಮತ್ತೆ ಅವಳೂ ಸಹ ಈ ಅನಂತವ್ರತವನ್ನು ಆಚರಿಸಿದಳು. ತನ್ನ ಕೈಯಲ್ಲಿ ದೋರವನ್ನು ಕಟ್ಟಿಕೊಂಡಳು. ಪಾಥೇಯವಾಗಿ ತಂದ ಬುತ್ತಿಯಲ್ಲಿ ಅರ್ಧಭಾಗವನ್ನು ಬ್ರಾಹ್ಮಣನಿಗೆ ದಾನ ಮಾಡಿದಳು. ಉಳಿದರ್ಧವನ್ನು ತಾನು ಉಂಡಳು.

ಪುನರ್ಜಗಾಮ ಸಂಹೃಷ್ಟಾ ಗೋರಥೇನ ಸ್ವಕಂ ಗೃಹಮ್ ।
ಭರ್ತ್ರಾ ಸಹೈವ ಶನಕೈಃ ಪ್ರತ್ಯಯಸ್ತತ್ಕ್ಷಣಾದಭೂತ್ ॥೬೪॥

ಅನಂತವ್ರತವನ್ನು ಆಚರಿಸಿ ಬಹಳ ಸಂತೋಷದಿಂದ ಎತ್ತಿನ ಬಂಡಿಯ ಮೂಲಕ ತನ್ನ ಮನೆಗೆ ಗಂಡನ ಜೊತೆ (ಶನೈಃ) ತೆರಳಿದಳು. ಈ ವ್ರತದ ಅನುಷ್ಠಾನದ ಫಲವಾಗಿ ತನ್ನ ಪತಿಯ ವಿಷಯದಲ್ಲಿ ಅವಳಿಗೆ ತತ್‌ಕ್ಷಣದಿಂದಲೇ ವಿಶ್ವಾಸವು ಅಭಿವೃದ್ಧವಾಯಿತು.

ತೇನಾನಂತವ್ರತೇನಾಸ್ಯ ಬಭೌ ಗೋಧನಸಂಕುಲಮ್ ।
ಗೃಹಾಶ್ರಮಂ ಶ್ರಿಯಾ ಜುಷ್ಟಂ ಧನಧಾನ್ಯಸಮನ್ವಿತಮ್ ॥೬೫॥

ಈ ಅನಂತವ್ರತದಿಂದ ಆ ಕೌಂಡಿನ್ಯ ಋಷಿಯ ಆಶ್ರಮವು ಗೋವುಗಳಿಂದ ಸಂಪತ್ತಿನಿಂದ ಧನಧಾನ್ಯಗಳಿಂದ ಅಭಿವೃದ್ಧವಾಯಿತು.

ಆಕುಲಂ ವ್ಯಾಕುಲಂ ರಮ್ಯಂ ಸರ್ವದಾಽತಿಥಿಪೂಜನೈಃ ।
ಸಾಽಪಿ ಮಾಣಿಕ್ಯಕಾಂಚೀಭಿರ್ಮುಕ್ತಾಹಾರೈರ್ವಿಭೂಷಿತಾ ॥೬೬॥

ಪ್ರತಿನಿತ್ಯವೂ (ಆಕುಲಂ ವ್ಯಾಕುಲಂ ರಮ್ಯಂ) ಅತಿಥಿಸತ್ಕಾರವನ್ನು ಮಾಡುತ್ತಿದ್ದರು. ಶೀಲೆಯು ಮಾಣಿಕ್ಯ, ಒಡ್ಯಾಣ, ಮುತ್ತಿನ ಹಾರ ಇವುಗಳಿಂದ ಅಲಂಕರಿಸಿಕೊಳ್ಳುತ್ತಿದ್ದಳು.

ದಿವ್ಯವಸ್ತ್ರಸಮಾಯುಕ್ತಾ ಸಾವಿತ್ರೀಪ್ರತಿಮಾಽಭವತ್ ।
ವಿಚಚಾರ ಗೃಹೇ ಭರ್ತುಃ ಸಮೀಪೇ ಸುಖರೂಪಿಣೀ ॥೬೭॥

ಪೀತಾಂಬರವನ್ನು ಧರಿಸುತ್ತಿದ್ದಳು. ಸಾವಿತ್ರೀದೇವಿಯಂತೆ ಕಂಗೊಳಿಸಿದಳು. ಗಂಡನಿಗೆ (ಸಮೀಪೇ) ಸುಖಸ್ವರೂಪಳಾಗಿ ಮನೆಯಲ್ಲಿ ಸಂಚರಿಸುತ್ತಿದ್ದಳು.

ಕದಾಚಿದುಪವಿಷ್ಟಾಯಾ ದೃಷ್ಟೋ ಬದ್ಧಃ ಸುದೋರಕಃ ।
ಶೀಲಾಯಾ ಹಸ್ತಮೂಲೇ ತು ಭರ್ತ್ರಾ ತಸ್ಯಾ ದ್ವಿಜನ್ಮನಾ ॥೬೮॥

ಅದೊಂದು ದಿನ ಶೀಲೆಯು ಕುಳಿತಿದ್ದಳು. ಅವಳ ತೋಳಿನಲ್ಲಿ ಕಟ್ಟಿದ್ದ ದೋರವನ್ನು ಗಂಡನಾದ ಕೌಂಡಿನ್ಯನು ಕಂಡನು. (ದ್ವಿಜನ್ಮನಾ)

ಕಿಮಿದಂ ದೋರಕಂ ಶೀಲೇ ಮಮ ವಶ್ಯಾಯ ಕಲ್ಪಿತಮ್ ।
ಧೃತಂ ಸುದೋರಕಂ ತ್ವೇತತ್ ಕಿಮರ್ಥಂ ಬ್ರೂಹಿ ತತ್ತ್ವತಃ ॥೧೯॥

ಓ ಶೀಲೇ! ಏನಿದು ದಾರ? ನನ್ನನ್ನು ವಶಮಾಡಿಕೊಳ್ಳುವುದಕ್ಕಾಗಿ ಈ ದೋರವನ್ನು ಕಟ್ಟಿಕೊಂಡಿರುವೆಯೇನು? ಸತ್ಯವನ್ನು ಹೇಳು. ಯಾವ ಕಾರಣಕ್ಕಾಗಿ ಇದನ್ನು ಧರಿಸಿರುವಿ?

ಶೀಲಾ –

ಯಸ್ಯ ಪ್ರಸಾದಾತ್ ಸಕಲಾ ಧನಧಾನ್ಯಾದಿಸಂಪದಃ ।
ಲಭ್ಯಂತೇ ಮಾನವೈಶ್ಚಾಪಿ ಸೋಽನಂತೋಽಯಂ ಮಯಾ ಧೃತಃ ॥೨೦॥

ಶೀಲೆಯು ಉತ್ತರಿಸಿದಳು. ಪ್ರಿಯನೇ! ಯಾವ ದೇವರ ಅನುಗ್ರಹದಿಂದ ಎಲ್ಲ ಬಗೆಯ ಧನಧಾನ್ಯಾದಿಸಂಪತ್ತುಗಳನ್ನು ಮಾನವರು ಹೊಂದುತ್ತಾರೋ, ಆ ಅನಂತನ ಸನ್ನಿಧಾನವುಳ್ಳ ಈ ದೋರವನ್ನು ನಾನು ಕಟ್ಟಿಕೊಂಡಿರುವೆನು.

ಶೀಲಾಯಾಸ್ತದ್ವಚಃ ಶ್ರುತ್ವಾ ಭರ್ತ್ರಾ ತೇನ ದ್ವಿಜನ್ಮನಾ ।
ಶ್ರೀಮದಾಂಧೇನ ಕೌರವ್ಯ ಸಾಕ್ಷೇಪಂ ತ್ರೋಟಿತಸ್ತದಾ ॥೨೧॥

ಶೀಲೆಯ ಮಾತನ್ನು ಕೇಳಿದ ಆಕೆಯ ಗಂಡನಿಗೆ ವಿಶ್ವಾಸ ಮೂಡಲಿಲ್ಲ. ಶ್ರೀಮಂತಿಕೆಯ ಮದದಿಂದ ಕುರುಡನಾಗಿದ್ದನು. ಅವಳನ್ನು, ಅವಳು ಕಟ್ಟಿಕೊಂಡ ದೋರವನ್ನು ತಿರಸ್ಕರಿಸುತ್ತಾ, ಆ ದೋರವನ್ನು ಕಿತ್ತು ಎಸೆದನು.

ಕೋಽನಂತ ಇತಿ ಮೂಢೇನ ಜಲ್ಪತಾ ಪಾಪಕಾರಿಣಾ ।
ಕ್ಷಿಪ್ತೋ ಜ್ವಾಲಾಕುಲೇ ವಹ್ನೌ ಹಾಹಾಕೃತ್ವಾ ಪ್ರಧಾವತೀ ॥೨೨॥

ಯಾರು ಆ ಅನಂತ? ಎಂಬುದಾಗಿ ಮೂರ್ಖನಂತೆ ಮಾತನಾಡಿದನು. ಪಾಪಿಷ್ಠನಾದನು. ಜ್ವಲಿಸುತ್ತಿರುವ ಅಗ್ನಿಯಲ್ಲಿ ಆ ದೋರವನ್ನು ಎಸೆದುಬಿಟ್ಟನು. ಆಗ ಹಾಹಾಕಾರವನ್ನು ಮಾಡುತ್ತಾ ಶೀಲೆಯು ಕೂಡಲೇ ಓಡಿಹೋದಳು.

ಶೀಲಾ ಗೃಹೀತ್ವಾ ತತ್ ಸೂತ್ರಂ ಕ್ಷೀರಮಧ್ಯೇ ಸಮಾಕ್ಷಿಪತ್ ।
ತೇನ ಕರ್ಮವಿಪಾಕೇನ ಸಾ ಶ್ರೀಸ್ತಸ್ಯ ಕ್ಷಯಂ ಗತಾ ॥೨೩॥

ಶೀಲೆಯು ಬೆಂಕಿಯಲ್ಲಿದ್ದ ಆ ದೋರವನ್ನು ಕೈಯಿಂದ ಹಿಡಿದೆತ್ತಿದಳು. ಹಾಲಿನ ಮಧ್ಯದಲ್ಲಿ ಕೂಡಲೇ ಹಾಕಿದಳು. ಹೀಗೆ ಕುಕೃತ್ಯವನ್ನು ಮಾಡಿದ್ದರಿಂದ ಆ ಕೌಂಡಿನ್ಯ ಮುನಿಯ ಸಂಪತ್ತೆಲ್ಲವೂ ನಾಶವಾಯಿತು.

ಗೋಧನಂ ತಸ್ಕರೈರ್ನೀತಂ ಗೃಹಂ ದಗ್ಧಂ ಧನಂ ಗತಮ್ ।
ಯದ್ ಯಥೈವಾಽಗತಂ ಗೇಹೇ ತತ್ತಥೈವ ಪುನರ್ಗತಮ್ ॥೭೪॥

ಹಸುಗಳ ಸಂಪತ್ತನ್ನು ಕಳ್ಳಕಾಕರು ಕದ್ದರು; ಮನೆಯು ಸುಟ್ಟುಹೋಯಿತು. ಹಣವು ನಷ್ಟವಾಯಿತು. ಸಂಪತ್ತು ಹೇಗೆ ಹೇಗೆ ಮನೆಗೆ ಬಂದಿತ್ತೋ ಹಾಗೆಯೇ ನಷ್ಟವಾಯಿತು.

ಸ್ವಜನೈಃ ಕಲಹೋ ನಿತ್ಯಂ ಬಂಧುಭಿಸ್ತಾಡನಂ ತಥಾ ।
ಅನಂತಾಕ್ಷೇಪದೋಷೇಣ ದಾರಿದ್ರ್ಯಂ ಪತಿತಂ ಗೃಹೇ ।
ನ ಕಶ್ಚಿದ್ ವದತೇ ಲೋಕೇ ತೇನ ಸಾರ್ಧಂಯುಧಿಷ್ಠಿರ ॥೭೫॥

ಬಂಧುಜನರ ಜೊತೆ ನಿತ್ಯವೂ ಜಗಳವಾಗುತ್ತಿತ್ತು. ಬಂಧುಗಳಿಂದ ಹೊಡೆಸಿ-ಕೊಳ್ಳಬೇಕಾದ ದುಃಸ್ಥಿತಿ ಬಂದಿತು. ಅನಂತನನ್ನು ತಿರಸ್ಕಾರ ಮಾಡಿದ್ದರಿಂದ ಮನೆಯಲ್ಲಿ ದಾರಿದ್ರ್ಯವು ಆವರಿಸಿತು. ಯುಧಿಷ್ಠಿರನೇ! ಲೋಕದಲ್ಲಿ ಯಾರೂ ಸಹ ಅವನ ಜೊತೆ ಮಾತನಾಡುತ್ತಿರಲಿಲ್ಲ.

ಶರೀರೇಣಾತಿಸಂತಪ್ತೋ ಮನಸಾಽಪ್ಯತಿದುಃಖಿತಃ ।
ನಿರ್ವೇದಂ ಪರಮಂ ಪ್ರಾಪ್ತಃ ಕೌಂಡಿನ್ಯಃ ಪ್ರಾಹ ತಾಂ ಪ್ರಿಯಮ್ ॥೭೬॥

ದೇಹದಿಂದಲೂ ರೋಗಿಷ್ಠನಾದನು. ಮನಸ್ಸಿನಿಂದಲೂ ದುಃಖಿತನಾದನು. ಅತ್ಯಂತ ದೀನಪರಿಸ್ಥಿತಿಯನ್ನು ಹೊಂದಿದನು. ತನ್ನ ಪ್ರಿಯಳಾದ ಹೆಂಡತಿಯನ್ನು ಕುರಿತು ಒಮ್ಮೆ ಹೀಗೆ ಮಾತನಾಡಿದನು.

ಕೌಂಡಿನ್ಯಃ
ಶೀಲೇ ಮಮೇದಮುತ್ಪನ್ನಂ ಸಹಸಾ ಶೋಕಕಾರಣಮ್ ।
ಯೇನಾತಿದುಃಖಮಸ್ಮಾಕಂ ಜಾತಃ ಸರ್ವಧನಕ್ಷಯಃ ॥೭೭॥

ಓ ಶೀಲೆಯೇ! ಹುಟ್ಟಿದ ಈ ದುಃಖವು ನನಗೆ ಅತ್ಯಂತ ಆಕಸ್ಮಿಕ. ಈ ಎಲ್ಲ ಶೋಕಕ್ಕೆ ಏನು ಕಾರಣವೆಂದೇ ತಿಳಿಯುತ್ತಿಲ್ಲ. ಯಾವುದರಿಂದ ಸಕಲಸಂಪತ್ತು ನಷ್ಟವಾಗಿದೆ. ಯಾವುದರಿಂದ ಈ ದುಃಖವು ಆವರಿಸಿದೆ ಎಂಬುದೇ ನನಗೆ ಅರ್ಥವಾಗುತ್ತಿಲ್ಲ.

ಸ್ವಜನೈಃ ಕಲಹೋ ಗೇಹೇ ನ ಕಶ್ಚಿನ್ಮಾಂ ಪ್ರಭಾಷತೇ ।
ಶರೀರೇ ನಿತ್ಯಸಂತಾಪಃ ಖೇದಶ್ಚೇತಸಿ ದಾರುಣಃ ॥೭೮॥

ಮನೆಯಲ್ಲಿ ನಿತ್ಯವೂ ಜಗಳ; ಯಾರೂ ಸಹ ನನ್ನ ಜೊತೆ ಮಾತನಾಡುತ್ತಿಲ್ಲ. ರೋಗದಿಂದ ಶರೀರವು ಪೀಡಿತವಾಗಿದೆ. ಮನಸ್ಸಿನಲ್ಲಿ ಹೇಳಲಾಗದಷ್ಟು ದುಃಖವು ತುಂಬಿದೆ.

ಜಾನಾಸಿ ದುರ್ನಯಃ ಕೋಽತ್ರ ಕಿಂ ಕೃತ್ವಾ ಸುಕೃತಂ ಭವೇತ್ ।

ಯಾವ ದುರ್ನಡತೆ ನಡೆದಿದೆ ಎಂಬುಧರ ಬಗ್ಗೆ ನಿನಗೆ ತಿಳಿದಿದೆ. ಯಾವ ಒಳ್ಳೆಯ ಕೆಲಸವನ್ನು ಆಚರಣೆ ಮಾಡುವದರಿಂದ ಪುನಃ ನಮಗೆ ಒಳ್ಳೆಯದಾಗುತ್ತದೆ ಎಂಬುದನ್ನು ನೀನೇ ತಿಳಿಸು.

ಶ್ರೀಕೃಷ್ಣಃ

ಪ್ರತ್ಯುವಾಚಾಥ ಸಾ ಶೀಲಾ ಸುಶೀಲಾ ಶೀಲಮಂಡನಾ ॥೭೯॥

ಹೀಗೆ ಪ್ರಶ್ನಿಸಿದ ಪತಿಗೆ ಈ ಶೀಲೆಯು ಶೀಲತನದಿಂದ ಸುಶೀಲೆಯಾಗಿ ಉತ್ತರಿಸುತ್ತಾಳೆ.

ಪ್ರಾಯೋಽನಂತಕೃತಾಕ್ಷೇಪಪಾಪಸಂಭವಜಂ ಫಲಮ್ ।
ಭವಿಷ್ಯತಿ ಮಹಾಭಾಗ ತದರ್ಥಂ ಯತ್ನಮಾಚರ ॥೮೦॥

ಮಹಾಭಾಗ್ಯಶಾಲಿಯೇ ನೀನು ಅಂದು ಅನಂತನನ್ನು ಧಿಕ್ಕಾರ ಮಾಡಿದೆ. ಅದರ ಪಾಪದ ಫಲವೇ ಇದಾಗಿದೆ. ಆದ್ದರಿಂದ ಅನಂತನ ಅನುಗ್ರಹವನ್ನು ಸಂಪಾದನೆ ಮಾಡುವುದಕ್ಕಾಗಿ ಪ್ರಯತ್ನವನ್ನು ಮಾಡು.

ಶೀಲೆಯು ಬೆಂಕಿಯಲ್ಲಿದ್ದ ಆ ದೋರವನ್ನು ಕೈಯಿಂದ ಹಿಡಿದೆತ್ತಿದಳು. ಹಾಲಿನ ಮಧ್ಯದಲ್ಲಿ ಕೂಡಲೇ ಹಾಕಿದಳು. ಹೀಗೆ ಕುಕೃತ್ಯವನ್ನು ಮಾಡಿದ್ದರಿಂದ ಆ ಕೌಂಡಿನ್ಯ ಮುನಿಯ ಸಂಪತ್ತೆಲ್ಲವೂ ನಾಶವಾಯಿತು.

ಗೋಧನಂ ತಸ್ಕರೈರ್ನೀತಂ ಗೃಹಂ ದಗ್ಧಂ ಧನಂ ಗತಮ್ ।
ಯದ್ ಯತ್ಥೈವಾಽಗತಂ ಗೇಹೇ ತತ್ತಥೈವ ಪುನರ್ಗತಮ್ ॥೭೪॥

ಹಸುಗಳ ಸಂಪತ್ತನ್ನು ಕಳ್ಳಕಾಕರು ಕದ್ದರು; ಮನೆಯು ಸುಟ್ಟುಹೋಯಿತು. ಹಣವು ನಷ್ಟವಾಯಿತು. ಸಂಪತ್ತು ಹೇಗೆ ಹೇಗೆ ಮನೆಗೆ ಬಂದಿತ್ತೋ ಹಾಗೆಯೇ ನಷ್ಟವಾಯಿತು.

ಸ್ವಜನೈಃ ಕಲಹೋ ನಿತ್ಯಂ ಬಂಧುಭಿಸ್ತಾಡನಂ ತಥಾ ।
ಅನಂತಾಕ್ಷೇಪದೋಷೇಣ ದಾರಿದ್ರ್ಯಂ ಪತಿತಂ ಗೃಹೇ ।
ನ ಕಶ್ಚಿದ್ ವದತೇ ಲೋಕೇ ತೇನ ಸಾರ್ಧಂಯುಧಿಷ್ಠಿರ ॥೭೫॥

ಬಂಧುಜನರ ಜೊತೆ ನಿತ್ಯವೂ ಜಗಳವಾಗುತ್ತಿತ್ತು. ಬಂಧುಗಳಿಂದ ಹೊಡೆಸಿ-ಕೊಳ್ಳಬೇಕಾದ ದುಃಸ್ಥಿತಿ ಬಂದಿತು. ಅನಂತನನ್ನು ತಿರಸ್ಕಾರ ಮಾಡಿದ್ದರಿಂದ ಮನೆಯಲ್ಲಿ ದಾರಿದ್ರ್ಯವು ಆವರಿಸಿತು. ಯುಧಿಷ್ಠಿರನೇ! ಲೋಕದಲ್ಲಿ ಯಾರೂ ಸಹ ಅವನ ಜೊತೆ ಮಾತನಾಡುತ್ತಿರಲಿಲ್ಲ.

ಶರೀರೇಣಾತಿಸಂತಪ್ತೋ ಮನಸಾಽತ್ಯತಿದುಃಖಿತಃ ।
ನಿರ್ವೇದಂ ಪರಮಂ ಪ್ರಾಪ್ತಃ ಕೌಂಡಿನ್ಯಃ ಪ್ರಾಹ ತಾಂ ಪ್ರಿಯಮ್ ॥೭೬॥

ದೇಹದಿಂದಲೂ ರೋಗಿಷ್ಠನಾದನು. ಮನಸ್ಸಿನಿಂದಲೂ ದುಃಖಿತನಾದನು. ಅತ್ಯಂತ ದೀನಪರಿಸ್ಥಿತಿಯನ್ನು ಹೊಂದಿದನು. ತನ್ನ ಪ್ರಿಯಳಾದ ಹೆಂಡತಿಯನ್ನು ಕುರಿತು ಒಮ್ಮೆ ಹೀಗೆ ಮಾತನಾಡಿದನು.

ಕೌಂಡಿನ್ಯಃ

ಶೀಲೇ ಮಮೇದಮುತ್ಪನ್ನಂ ಸಹಸಾ ಶೋಕಕಾರಣಮ್ ।
ಯೇನಾತಿದುಃಖಮಸ್ಮಾಕಂ ಜಾತಃ ಸರ್ವಧನಕ್ಷಯಃ ॥೭೭॥

ಓ ಶೀಲೆಯೇ! ಹುಟ್ಟಿದ ಈ ದುಃಖವು ನನಗೆ ಅತ್ಯಂತ ಆಕಸ್ಮಿಕ. ಈ ಎಲ್ಲ ಶೋಕಕ್ಕೆ ಏನು ಕಾರಣವೆಂದೇ ತಿಳಿಯುತ್ತಿಲ್ಲ. ಯಾವುದರಿಂದ ಸಕಲಸಂಪತ್ತು ನಷ್ಟವಾಗಿದೆ. ಯಾವುದರಿಂದ ಈ ದುಃಖವು ಆವರಿಸಿದೆ ಎಂಬುದೇ ನನಗೆ ಅರ್ಥವಾಗುತ್ತಿಲ್ಲ.

ಸ್ವಜನೈಃ ಕಲಹೋ ಗೇಹೇ ನ ಕಶ್ಚಿನ್ಮಾಂ ಪ್ರಭಾಷತೇ ।
ಶರೀರೇ ನಿತ್ಯಸಂತಾಪಃ ಖೇದಶ್ಚೇತಸಿ ದಾರುಣಃ ॥೭೮॥

ಮನೆಯಲ್ಲಿ ನಿತ್ಯವೂ ಜಗಳ; ಯಾರೂ ಸಹ ನನ್ನ ಜೊತೆ ಮಾತನಾಡುತ್ತಿಲ್ಲ. ರೋಗದಿಂದ ಶರೀರವು ಪೀಡಿತವಾಗಿದೆ. ಮನಸ್ಸಿನಲ್ಲಿ ಹೇಳಲಾಗದಷ್ಟು ದುಃಖವು ತುಂಬಿದೆ.

ಜಾನಾಸಿ ದುರ್ನಯಃ ಕೋಽತ್ರ ಕಿಂ ಕೃತ್ವಾಸುಕೃತಂ ಭವೇತ್ ।

ಯಾವ ದುರ್ನಡತೆ ನಡೆದಿದೆ ಎಂಬುದರ ಬಗ್ಗೆ ನಿನಗೆ ತಿಳಿದಿದೆ. ಯಾವ ಒಳ್ಳೆಯ ಕೆಲಸವನ್ನು ಆಚರಣೆ ಮಾಡುವದರಿಂದ ಪುನಃ ನಮಗೆ ಒಳ್ಳೆಯದಾಗುತ್ತದೆ ಎಂಬುದನ್ನು ನೀನೇ ತಿಳಿಸು.

ಶ್ರೀಕೃಷ್ಣಃ

ಪ್ರತ್ಯುವಾಚಾಥ ಸಾ ಶೀಲಾ ಸುಶೀಲಾ ಶೀಲಮಂಡನಾ ॥೭೯॥

ಹೀಗೆ ಪ್ರಶ್ನಿಸಿದ ಪತಿಗೆ ಈ ಶೀಲೆಯು ಶೀಲತನದಿಂದ ಸುಶೀಲೆಯಾಗಿ ಉತ್ತರಿಸುತ್ತಾಳೆ.

ಪ್ರಾಯೋಽನಂತಕೃತಾಕ್ಷೇಪಪಾಪಸಂಭವಜಂ ಫಲಮ್ ।
ಭವಿಷ್ಯತಿ ಮಹಾಭಾಗ ತದರ್थಂ ಯತ್ನಮಾಚರ ॥೮೦॥

ಮಹಾಭಾಗ್ಯಶಾಲಿಯೇ ನೀನು ಅಂದು ಅನಂತನನ್ನು ಧಿಕ್ಕಾರ ಮಾಡಿದೆ. ಅದರ ಪಾಪದ ಫಲವೇ ಇದಾಗಿದೆ. ಆದ್ದರಿಂದ ಅನಂತನ ಅನುಗ್ರಹವನ್ನು ಸಂಪಾದನೆ ಮಾಡುವುದಕ್ಕಾಗಿ ಪ್ರಯತ್ನವನ್ನು ಮಾಡು.

ಏವಮುಕ್ತಃ ಸ ವಿಪ್ರರ್ಷಿರ್ಜಗಾಮ ಮನಸಾ ಹರಿಮ್ ।
ನಿರ್ವೇದಾನ್ನಿರ್ಜಗಾಮಾಥ ಕೌಂಡಿನ್ಯಃ ಪ್ರಯತೋ ವನಮ್ ॥೮೧॥

ಸತಿಯು ಹೀಗೆ ಹೇಳಿದಾಗ ವಿಪ್ರರ್ಷಿಯಾದ ಬ್ರಾಹ್ಮಣನು ಮನಸ್ಸಿನಿಂದಲೇ ಶ್ರೀಹರಿಯನ್ನು ಸ್ಮರಣೆ ಮಾಡಿದನು. ಭಗವಂತನ ಅನುಗ್ರಹವನ್ನು ಪಡೆಯಬೇಕೆಂದು ತಿಳಿದುಕೊಂಡನು. ಅನಂತನ ಅನುಗ್ರಹವನ್ನು ಪಡೆಯುವುದಕ್ಕಾಗಿ ಎಲ್ಲವನ್ನೂ ಪರಿತ್ಯಾಗ ಮಾಡಿ ಕಾಡಿಗೆ ಹೊರಟೇ ಬಿಟ್ಟನು.

ತಪಸೇ ಕೃತಸಂಕಲ್ಪೋ ವಾಯುಭಕ್ಷೋ ದ್ವಿಜೋತ್ತಮಃ ।
ಮನಸಾಧ್ಯಾಯ ಚಾನಂತಂ ಕ್ವ ದ್ರಕ್ಷ್ಯಾಮಿ ಚ ತಂ ವಿಭುಮ್ ॥೮೨॥

ಘೋರವಾದ ತಪಸ್ಸನ್ನು ಮಾಡಲು ಸಂಕಲ್ಪ ಮಾಡಿದನು. ಆಹಾರವನ್ನೂ ಕೂಡ ಪರಿತ್ಯಾಗ ಮಾಡಿದನು. ಗಾಳಿಯನ್ನಷ್ಟೇ ಆಹಾರವನ್ನಾಗಿ ಸ್ವೀಕರಿಸುತ್ತಿದ್ದನು. ಆ ದ್ವಿಜೋತ್ತಮನು ಮನಸ್ಸಿನಿಂದ ಅನಂತನನ್ನು ಯಾವಾಗ ನೋಡುತ್ತೇನೆ ಎಂಬುದಾಗಿ ಹಂಬಲಿಸುತ್ತಿದ್ದನು.

ಯಸ್ಯ ಪ್ರಸಾದಾತ್ ಸಂಜಾತಮಾಕ್ಷೇಪಾನ್ನಿಧನಂ ಗತಮ್ ।
ಧನಾದಿಕಂ ಮಮಾತೀವ ಸುಖದುಃಖಪ್ರದಾಯಕಮ್ ॥೮೩॥

ಯಾವ ದೇವನ ಅನುಗ್ರಹದಿಂದ ಎಲ್ಲ ಸಂಪತ್ತು ಬಂದೊದಗಿತೋ, ಯಾವ ದೇವನನ್ನು ನಾನು ತಿರಸ್ಕಾರ ಮಾಡಿದ್ದರಿಂದ ಸಂಪತ್ತೆಲ್ಲವೂ ನಾಶವಾಯಿತೋ ಅಂಥ ದೇವನನ್ನು ನಾನು ನೋಡಬೇಕು - ಎಂದೇ ಚಿಂತಿಸುತ್ತಾ ಘೋರವಾದ ಅರಣ್ಯದಲ್ಲಿ ಸಂಚರಿಸತೊಡಗಿದನು.

ಏವಂ ಸಂಚಿಂತಯನ್ ಸೋಽಥ ಬಭ್ರಾಮ ಗಹನೇ ವನೇ ।
ತತ್ರಾಪಶ್ಯನ್ಮಹಾಚೂತಂ ಪುಷ್ಪಿತಂ ಫಲಿತಂ ದ್ರುತಮ್ ॥೮೪॥

ಹೂವುಗಳಿಂದ ತುಂಬಿದ ಫಲಗಳುಳ್ಳ ಒಂದು ದೊಡ್ಡ ಮಾವಿನ ಮರವನ್ನು ನೋಡಿದನು.

ತಮಪೃಚ್ಛದ್ ದ್ವಿಜೋಽನಂತಃ ಕ್ವಚಿದ್ ದೃಷ್ಟೋ ಮಹಾತರೋ ॥೮೫॥

ಆ ಮಾವಿನ ಮರವನ್ನು ಕೇಳಿದನು – ಎಲೈ ಮಹಾವೃಕ್ಷವೇ! ನೀನು ಅನಂತನನ್ನು ಕಂಡಿರುವೆಯಾ?

ಬ್ರೂಹಿ ಸೌಮ್ಯ ಮಮಾತೀವ ದುಃಖಂ ಚೇತಸಿ ವರ್ತತೇ ।
ಸೋಽಬ್ರವೀದ್ ಭದ್ರ ನಾನಂತಃ ಕ್ವಚಿದ್ ದೃಷ್ಟೋ ಮಯಾ ದ್ವಿಜ ॥೮೬॥

ನನ್ನ ಮನಸ್ಸಿನಲ್ಲಿ ಬಹಳ ದುಃಖವಾಗುತ್ತಿದೆ. ನನ್ನ ದುಃಖವನ್ನು ಪರಿಹರಿಸಲು ಆ ಅನಂತನನ್ನು ನನಗೆ ತೋರಿಸು. ಆಗ ಮಾವಿನ ಮರ ಉತ್ತರಿಸಿತು – ಬ್ರಾಹ್ಮಣನೇ! ನೀನು ಕೇಳುತ್ತಿರುವ ಅನಂತನನ್ನು ನಾನು ಎಲ್ಲಿಯೂ ನೋಡಿಲ್ಲ.

ಏವಂ ನಿರಾಕೃತಸ್ತೇನ ಸಂಜಗಾಮಾಥ ದುಃಖಿತಃ ।
ಕ್ವ ದ್ರಕ್ಷ್ಯಾಮೀತಿ ಗಚ್ಛನ್ ಸ ಗಾಮಪಶ್ಯತ್ ಸವತ್ಸಕಾಮ್ ॥೮೭॥

ಆ ಮರವು ನೋಡಿಲ್ಲವೆಂದು ಉತ್ತರಿಸಿದ ಮೇಲೆ ಮತ್ತಷ್ಟು ದುಃಖಿತನಾಗಿ ಮುಂದೆ ನಡೆದ. ಅನಂತನನ್ನು ಎಲ್ಲಿ ಕಾಣುತ್ತೇನೆ ಎಂದೇ ಚಿಂತಿಸುತ್ತಾ ಒಂದು ಕರುವಿನಿಂದ ಕೂಡಿದ ಒಂದು ಹಸುವನ್ನು ಕಂಡನು.

ವನಮಧ್ಯೇ ಪ್ರಧಾವಂತೀಮಿತಶ್ಚೇತಶ್ಚ ಪಾಂಡವ ।
ಸೋಽಬ್ರವೀದ್ ಧೇನುಕೇ ಬ್ರೂಹಿ ಯದ್ಯನಂತಸ್ತ್ವಯೇಕ್ಷಿತಃ ॥೮೮॥

ಪಾಂಡವನೇ! ಕಾಡಿನ ಮಧ್ಯದಲ್ಲಿ ಇತ್ತ ಅತ್ತ ಓಡುತ್ತಿರುವ ಆ ಹಸುವನ್ನು ಕುರಿತು ಕೌಂಡಿನ್ಯನು ಪ್ರಶ್ನಿಸಿದನು. ಹಸುವೇ ನೀನು ಏನಾದರೂ ಅನಂತನನ್ನು ಕಂಡಿರು- ವೆಯಾ?

ಗೌರುವಾಚಾಥ ಕೌಂಡಿನ್ಯಂ ನಾನಂತಂ ವೇದ್ಮ್ಯಹಂ ದ್ವಿಜ ।
ತತೋ ವ್ರಜನ್ ದದರ್ಶಾಗ್ರೇ ವೃಷಭಂಶಾದ್ವಲೇ ಸ್ಥಿತಮ್ ॥೮೯॥

ಆಗ ಹಸುವು ಕೌಂಡಿನ್ಯನನ್ನು ಕುರಿತು ಹೇಳಿತು – ನಾನು ಅನಂತನನ್ನು ತಿಳಿದಿರುವುದಿಲ್ಲ. ಅನಂತರ ಆ ಕೌಂಡಿನ್ಯನು ಮುಂದೆ ನಡೆಯುತ್ತಾ ಸಾಗಿದನು. ಹಸಿರು ಹುಲ್ಲನ್ನು ಮೇಯುತ್ತಿರುವ ಒಂದು ಎತ್ತನ್ನು ಕಂಡನು.

ದೃಷ್ಟ್ವಾ ಪಪ್ರಚ್ಛ ಗೋಸ್ವಾಮಿನ್ ಅನಂತೋ ವೀಕ್ಷಿತಸ್ತ್ವಯಾ ।
ವೃಷಭಸ್ತಮುವಾಚೇದಂ ನಾನಂತೋ ವೀಕ್ಷಿತೋ ಮಯಾ ॥೯೦॥

ಆ ಎತ್ತನ್ನು ನೋಡಿ ಕೌಂಡಿನ್ಯನು ಪ್ರಶ್ನಿಸಿದನು – ಗೋವುಗಳಿಗೆ ಸ್ವಾಮಿಯಾದ ವೃಷಭವೇ! ನೀನೇನಾದರೂ ಅನಂತನನ್ನು ಕಂಡಿರುವೆಯಾ? ಆಗ ಆ ಎತ್ತು ಮಾತನಾಡಿತು - ನಾನು ಅನಂತನನ್ನು ಎಲ್ಲಿಯೂ ಕಂಡಿಲ್ಲ?

ತತೋ ವ್ರಜನ್ ದದರ್ಶಾಗ್ರೇ ರಮ್ಯಂ ಪುಷ್ಕರಿಣೀದ್ವಯಮ್ ।
ಅನ್ಯೋನ್ಯಜಲಕಲ್ಲೋಲೈರ್ವೀಚೀಪರ್ಯಂತಸಂಗಮಮ್ ॥೯೧॥

ಹೀಗೆ ಕೌಂಡಿನ್ಯನು ಮುಂದೆ ಮುಂದೆ ಸಾಗಿದನು. ರಮ್ಯವಾದ ಎರಡು ಪುಷ್ಕರಿಣಿಗಳನ್ನು ಕಂಡನು. ಆ ಎರಡು ಕೆರೆಗಳು ಪರಸ್ಪರವಾಗಿ ತಮ್ಮ ತೆರೆಗಳಿಂದ ಹೊಡೆದಾಡಿಕೊಳ್ಳುತ್ತಿದ್ದವು. ಇದರಿಂದ ದಡದ ತನಕ ಆ ತೆರೆಗಳು ಅಪ್ಪಳಿಸುತ್ತಿದ್ದವು.

ಛನ್ನಂ ಕಮಲಕಹ್ಲಾರೈಃ ಕುಮುದೋತ್ಪಲಮಂಡಿತಮ್ ।
ಸೇವಿತಂ ಭ್ರಮರೈರ್ಹಂಸೈಶ್ಚಕ್ರಕಾರಂಡವೈರ್ಬಕೈಃ ॥೯೨॥

ತಾವರೆಯ ಹೂವುಗಳಿಂದ ಸರೋವರವು ಮುಚ್ಚಿ ಹೋಗಿತ್ತು. ಕುಮುದ ಪುಷ್ಪಗಳಿಂದ ಅಲಂಕೃತವಾಗಿತ್ತು. ಭ್ರಮರಗಳು ಹಾರಾಡುತ್ತಿದ್ದವು. ಹಂಸ, ಕೊಕ್ಕರೆ, ನೀರುಕೋಳಿ, ಚಕ್ರವಾಕ ಮೊದಲಾದ ಪಕ್ಷಿಗಳು ಅಲ್ಲಿ ಕುಳಿತಿದ್ದವು.

ತೇ ಅಪೃಚ್ಛದ್ದ್ವಿಜೋಽನಂತೋ ಯುವಾಭ್ಯಾಮುಪಲಕ್ಷಿತಃ ।
ಊಚತುಸ್ತೇ ಪುಷ್ಕರಿಣ್ಯೌ ನಾನಂತೋ ವೀಕ್ಷಿತೋ ದ್ವಿಜ ॥೯೩॥

ಆ ದ್ವಿಜಶ್ರೇಷ್ಠನಾದ ಕೌಂಡಿನ್ಯನು ಕೆರೆಗಳನ್ನು ಪ್ರಶ್ನಿಸಿದನು. ನೀವೇನಾದರೂ ಅನಂತನನ್ನು ನೋಡಿರುವಿರಾ ಎಂದು. ಆಗ ಆ ಪುಷ್ಕರಿಣಿಗಳು ದ್ವಿಜನೇ ನಾವು ಅನಂತನನ್ನು ನೋಡಿರುವುದಿಲ್ಲ ಎಂದು ಉತ್ತರಿಸಿದವು.

ತತೋ ವ್ರಜನ್ ದದರ್ಶಾಗ್ರೇ ಗರ್ದಭಂ ಕುಂಜರಂ ತಥಾ ।
ತಾವಪ್ಯುಕ್ತೌ ದ್ವಿಜೇನೇತ್ಥಂ ನೇತಿ ತಾಭ್ಯಾಂ ನಿವೇದಿತಮ್ ॥೯೪॥

ದುಃಖಿತನಾಗಿ ಮುಂದೆ ಮುಂದೆ ಸಾಗಿದನು. ಒಂದು ಕತ್ತೆಯನ್ನು ಮತ್ತು ಆನೆಯನ್ನು ಕಂಡನು. ಹಿಂದಿನಂತೆ ಅವುಗಳ ಬಳಿಯೂ ಪ್ರಶ್ನಿಸಿದಾಗ 'ನಾವು ಅನಂತನನ್ನು ಕಂಡಿಲ್ಲ' ಎಂದು ಉತ್ತರಿಸಿದವು.

ಏವಂ ಸ ಪೃಚ್ಛನ್ ನಷ್ಟಾಶಸ್ತತ್ರೈವ ನಿಷಸಾದ ಹ।
ಕೌಂಡಿನ್ಯೋ ವಿಹ್ವಲೀಭೂತೋ ನಿರಾಶೋ ಜೀವಿತೇ ನೃಪ ॥೯೫॥
ದೀರ್ಘಮುಷ್ಣಂ ಚ ನಿಃಶ್ವಸ್ಯ ಪಪಾತ ಭುವಿ ಭಾರತ।
ಪ್ರಾಪ್ಯ ಸಂಜ್ಞಾಮನಂತೇತಿ ಜಲ್ಪನ್ನುತ್ಥಾಯ ಸ ದ್ವಿಜ ॥೯೬॥

ಹೀಗೆ ಬ್ರಾಹ್ಮಣನು ಪ್ರಶ್ನಿಸುತ್ತಾ ಮುಂದೆ ಸಾಗಿದನು. ಅವನು ಹತಾಶನಾದನು. ತನಗೆ ಜೀವನವೇ ಬೇಡವೆನ್ನುವಷ್ಟು ನಿರಾಶೆಯುಳ್ಳವನಾದನು. ಬಿಸಿಯುಸಿರನ್ನು ಬಿಟ್ಟು ಭೂಮಿಯಲ್ಲಿ ಬಿದ್ದು ಬಿಟ್ಟನು. ಸ್ವಲ್ಪ ಹೊತ್ತು ಕಳೆದ ಬಳಿಕ ಚೇತರಿಸಿಕೊಂಡನು. ''ಅನಂತ'' ಎಂಬುದಾಗಿ ಬಾಯಲ್ಲಿ ಹೇಳುತ್ತಾ ಆ ದ್ವಿಜನು ಎದ್ದು ನಿಂತುಕೊಂಡನು.

ನೂನಂ ತ್ಯಕ್ಷ್ಯಾಮ್ಯಹಂ ಪ್ರಾಣಾನಿತಿ ಸಂಕಲ್ಪ್ಯ ಚೇತಸಿ।
ಯಾವದುದ್ಬಂಧನಂ ವೃಕ್ಷೇ ಚಕ್ರೇ ತಾವದ್ ಯುಧಿಷ್ಠಿರ ॥೯೭॥

ಅನಂತನೇ! ನಿಶ್ಚಯವಾಗಿ ನಾನು ಪ್ರಾಣವನ್ನು ಪರಿತ್ಯಾಗ ಮಾಡುತ್ತೇನೆ. ಎಂಬುದಾಗಿ ಮನಸ್ಸಿನಲ್ಲಿ ಸಂಕಲ್ಪ ಮಾಡಿದನು. ಯುಧಿಷ್ಠಿರನೇ! ಆಗ ಅವನು ಮರಕ್ಕೆ ಹಗ್ಗವನ್ನು ಕಟ್ಟಿ ಕುತ್ತಿಗೆಗೆ ಹಗ್ಗವನ್ನು ಕಟ್ಟಿದನು.

ಕೃಪಯಾಽನಂತದೇವೋಽಸ್ಯ ಪ್ರತ್ಯಕ್ಷಃ ಸಮಜಾಯತ।
ವೃದ್ಧಬ್ರಾಹ್ಮಣರೂಪೇಣ ಇತ ಏಹೀತ್ಯುವಾಚ ತಮ್ ॥೯೮॥

ಇವನಿಗಿರುವ ಭಕ್ತಿಯನ್ನು ಕಂಡು ಅನಂತನಿಗೆ ಕಾರುಣ್ಯವು ಉಕ್ಕಿಹರಿಯಿತು. ಅವನೆದುರು ವೃದ್ಧಬ್ರಾಹ್ಮಣರೂಪದಿಂದ ಪ್ರತ್ಯಕ್ಷನಾದನು. ಅವನನ್ನು 'ಈ ಕಡೆ ಬಾ' ಎಂದು ಕರೆದನು.

ಪ್ರಗೃಹ್ಯ ದಕ್ಷಿಣೇ ಪಾಣೌ ಗುಹಾಯಾಂ ಪ್ರವಿವೇಶ ತಮ್।
ಸ್ವಾಂ ಪುರೀಂ ದರ್ಶಯಾಮಾಸ ದಿವ್ಯನಾರೀನರೈರ್ಯುತಾಮ್ ॥೯೯॥

ಬಲಗೈಯಲ್ಲಿ ಅವನನ್ನು ಹಿಡಿದುಕೊಂಡನು. ಒಂದು ಗುಹೆಗೆ ಕರೆದುಕೊಂಡು ಹೋಗಿ, ತನ್ನ ಪಟ್ಟಣವನ್ನು ತೋರಿಸಿದನು. ದಿವ್ಯವಾದ ವೇಷಧಾರಿಗಳಾದ ಸ್ತ್ರೀ ಹಾಗೂ ಪುರುಷರು ಅಲ್ಲಿ ಇದ್ದರು.

ತಸ್ಯಾಂ ನಿವಿಷ್ಟಮಾತ್ಮಾನಂ ದಿವ್ಯಸಿಂಹಾಸನೇ ಶುಭೇ ।
ಪಾರ್ಶ್ವಸ್ಥಶಂಖಚಕ್ರಾಬ್ಜಗದಾಗರುಡಶೋಭಿತಮ್ ॥೧೦೦॥

ಆ ಪಟ್ಟಣದಲ್ಲಿ ದಿವ್ಯವಾದ ಒಂದು ಸಿಂಹಾಸನವಿತ್ತು. ಅದರ ಮೇಲೆ ಕಂಗೊಳಿ- ಸುತ್ತಾ ಅನಂತನು ಕುಳಿತಿದ್ದನು. ತಾನೇ ಆ ರೂಪದಲ್ಲಿ ಅಲ್ಲಿದ್ದನು. ಕೈಗಳಲ್ಲಿ ಶಂಖ, ಚಕ್ರ, ಕಮಲ, ಗದೆಗಳನ್ನು ಧರಿಸಿದ್ದನು. ಗರುಡನಿಂದ ಶೋಭಿತನಾಗಿದ್ದನು.

ದರ್ಶಯಾಮಾಸ ವಿಪ್ರಾಯ ವಿಶ್ವರೂಪಮನಂತಕಮ್ ।
ವಿಭೂತಿಭೇದೈಶ್ಚಾನಂತ್ಯೈ ರಾಜಂತಮಮಿತೌಜಸಮ್ ॥೧೦೧॥

ಆ ಬ್ರಾಹ್ಮಣನಿಗೆ ತನ್ನ ವಿಭೂತಿರೂಪವನ್ನು ತೋರಿಸಿದನು. ಪ್ರತಿಯೊಂದು ವಿಭೂತಿರೂಪಗಳೂ ಅನಂತವಾಗಿದ್ದವು. ವ್ಯಾಪ್ತವಾಗಿದ್ದವು. ವಿಲಕ್ಷಣವಾಗಿದ್ದವು. ಮಹಾತೇಜೋಭರಿತವಾಗಿದ್ದವು.

ಕೌಸ್ತುಭೇನ ವಿರಾಜಂತಂ ವನಮಾಲಾವಿಭೂಷಿತಮ್ ।
ತಂ ದೃಷ್ಟ್ವಾ ದೇವದೇವೇಶಮನಂತಮಪರಾಜಿತಮ್ ॥೧೦೨॥

ಕೌಸ್ತುಭರತ್ನದಿಂದ ಆ ವಿಭೂತಿರೂಪವು ಕಂಗೊಳಿಸುತ್ತಿತ್ತು. ವನಮಾಲೆಯಿಂದ ಅಲಂಕೃತವಾಗಿತ್ತು. ಯಾರಿಂದಲೂ ಗೆಲ್ಲಲಾಗದ ದೇವತೆಗಳಿಗೂ ದೇವತೆಯಾದ ಅನಂತನನ್ನು ಆ ಬ್ರಾಹ್ಮಣನು ನೋಡಿದನು.

ವಂದಮಾನೋ ಜಗಾದೋಚ್ಚೈರ್ಜಯಶಬ್ದಪುರಸ್ಸರಮ್ ।
ಪಾಪೋಽಹಂ ಪಾಪಕರ್ಮಾಽಹಂ ಪಾಪಾತ್ಮಾ ಪಾಪಸಂಭವಃ ॥೧೦೩॥
ತ್ರಾಹಿ ಮಾಂ ಪುಂಡರೀಕಾಕ್ಷ ಸರ್ವಪಾಪಹರೋ ಭವ ।
ಅದ್ಯ ಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಮ್ ॥೧೦೪॥

ಈ ಅದ್ಭುತವಾದ ರೂಪವನ್ನು ಕಂಡ ಆ ಬ್ರಾಹ್ಮಣನು ಉಚ್ಚ ಕಂಠದಿಂದ 'ಜಯ, ಜಯ' ಎಂದು ಘೋಷಣೆ ಮಾಡಿದನು. ಭಕ್ತಿಯಿಂದ ನಮಸ್ಕಾರ ಮಾಡಿದನು. ಹೀಗೆ ಪ್ರಾರ್ಥಿಸಿದನು –

ನಾನು ಕಡುಪಾಪಿ. ಪಾಪಕರವಾದ ಕೆಲಸಗಳನ್ನೇ ಮಾಡಿರುವೆನು. ನನ್ನ ಬುದ್ಧಿಯೆಲ್ಲವೂ ಪಾಪದೆಡೆ ಸಾಗುತ್ತದೆ. ನನ್ನ ಪಾಪದಿಂದಲೇ ನನ್ನ ಹುಟ್ಟು.

ಓ ಪುಂಡರೀಕಾಕ್ಷನೇ! ನನ್ನನ್ನು ಈ ಪಾಪಕೂಪದಿಂದ ಎತ್ತಿ ರಕ್ಷಿಸು. ನನ್ನೆಲ್ಲ ಪಾಪಗಳನ್ನು ಪರಿಹರಿಸು. ಇಂದು ನನ್ನ ಜನ್ಮವು ಸಫಲವಾಗಿದೆ. ನನ್ನ ಜೀವನವು ಸಾರ್ಥಕವಾಗಿದೆ.

ಯತ್ ತವಾಂಘ್ರ್ಯಬ್ಜಯುಗಲೇ ಮನ್ಮೂರ್ಧಾ ಭ್ರಮರಾಯತೇ ।
ತಚ್ಛ್ರುತ್ವಾಽನಂತದೇವೇಶಃ ಪ್ರಾಹ ಸುಸ್ನಿಗ್ಧಯಾ ಗಿರಾ ॥೧೦೫॥

ನಿನ್ನ ಎರಡು ಪಾದಪದ್ಮಗಳಲ್ಲಿ ನನ್ನ ತಲೆಯು ದುಂಬಿಯಂತೆ ಮಗ್ನವಾಗಿದೆ. ಈ ಮಾತನ್ನು ಕೇಳಿದ ದೇವೋತ್ತಮನಾದ ಅನಂತನು ಮಧುರವಾದ ಮಾತಿನಿಂದ ಹೀಗೆ ಹೇಳಿದನು.

ಮಾ ಭೈಸ್ತ್ವಂ ಬ್ರೂಹಿ ವಿಪ್ರೇಂದ್ರ ಯತ್ ತೇ ಮನಸಿ ವರ್ತತೇ ।

ವಿಪ್ರಶ್ರೇಷ್ಠನೇ! ಹೆದರಬೇಡ. ನಿನ್ನ ಮನಸ್ಸಿನಲ್ಲಿ ಏನಿದೆಯೆಂಬುದನ್ನು ನನಗೆ ತಿಳಿಸು.

ಕೌಂಡಿನ್ಯಃ

ಮಯಾ ಭೂತ್ಯವಲಿಪ್ತೇನ ತ್ರೋಟಿತೋಽನಂತದೋರಕಃ ॥೧೦೬॥
ತೇನ ಪಾಪವಿಪಾಕೇನ ಭೂತಿರ್ಮೇ ಪ್ರಲಯಂ ಗತಾ ।
ಸ್ವಜನೈಃ ಕಲಹೋ ಗೇಹೇ ನ ಕಶ್ಚಿನ್ಮಾಂ ಪ್ರಭಾಷತೇ ॥೧೦೭॥

ಕೌಂಡಿನ್ಯನು ಪ್ರಾರ್ಥಿಸಿದನು – ಅನಂತನೇ! ಶ್ರೀಮಂತಿಕೆಯ ದರ್ಪದಿಂದ ಅನಂತ ದೋರವನ್ನು ನಾನು ಕಡಿದು ಹಾಕಿದೆನು. ಆ ಪಾಪಕರ್ಮದ ದುಷ್ಪರಿಣಾಮವಾಗಿ ನನ್ನ ಸಂಪತ್ತೆಲ್ಲವೂ ನಾಶವಾಗಿದೆ. ಮನೆಯಲ್ಲಿ ಬಂಧುಗಳ ಕಲಹ ಬಲು ಹೆಚ್ಚಾಗಿದೆ. ನನ್ನ ಜೊತೆ ಯಾರೂ ಸಹ ಮಾತನಾಡುತ್ತಿಲ್ಲ.

ನಿರ್ವೇದಾದ್ ಗಮಿತೋಽರಣ್ಯೇ ತವ ದರ್ಶನಕಾಂಕ್ಷಯಾ ।
ಕೃಪಯಾ ದೇವದೇವೇಶ ತ್ವಯಾತ್ಮಾ ಸಂಪ್ರದರ್ಶಿತಃ ॥೧೦೮॥
ತಸ್ಯ ಪಾಪಸ್ಯ ಮೇ ಶಾಂತಿಂ ಕಾರುಣ್ಯಾದ್ ವಕ್ತುಮರ್ಹಸಿ ।

ಏನೆಂದು ತಿಳಿಯದೇ ನಾನು ಕಾಡಿಗೆ ಬಂದು ನಿನ್ನನ್ನು ನೋಡುವ ತವಕ ಹೊಂದಿದ್ದೇನೆ. ಸ್ವಾಮಿಯೇ! ನಿನ್ನ ಕೃಪೆಯಿಂದ ನಿನ್ನ ದರ್ಶನ ಎನಗಾಯಿತು.

ಅನಂತದೋರವನ್ನು ತಿರಸ್ಕಾರ ಮಾಡಿದ್ದಕ್ಕೆ ಏನು ಪರಿಹಾರವೆಂಬುದನ್ನು ಕಾರುಣ್ಯದಿಂದ ನೀನೇ ಎನಗೆ ತಿಳಿಸು.

ಶ್ರೀಕೃಷ್ಣಃ

ತಚ್ಛ್ರುತ್ವಾಽನಂತದೇವೇಶ ಉವಾಚ ದ್ವಿಜಸತ್ತಮಮ್ ॥೧೦೯॥

ಭಕ್ತ್ಯಾ ಸಂತೋಷಿತೋ ದೇವಃ ಕಿಂ ನ ದದ್ಯಾದ್ ಯುಧಿಷ್ಠಿರ ।

ಶ್ರೀಕೃಷ್ಣನು ಹೇಳುತ್ತಾನೆ – ದೇವೇಶನಾದ ಅನಂತನು ವಿಪ್ರನ ಮಾತುಗಳನ್ನು ಕೇಳಿ ಅವನಿಗೆ ಹೀಗೆ ಹೇಳಿದನು – ಎಲೈ ಯುಧಿಷ್ಠಿರನೇ! ಭಕ್ತಿಯಿಂದ ಸಂತುಷ್ಟನಾದ ದೇವನಾದ ಅನಂತನು ಏನು ತಾನೇ ಕೊಡದಿರಲಾರ? ಭಕ್ತನೇ! ನಿನ್ನ ಭಕ್ತಿಯಿಂದ ನಾನು ಸಂತುಷ್ಟನಾಗಿರುವೆನು.

ಅನಂತಃ

ಸ್ವಗೃಹಂ ಗಚ್ಛ ಕೌಂಡಿನ್ಯ ಮಾ ವಿಲಂಬಂ ಕುರು ದ್ವಿಜ ॥೧೧೦॥

ಚರಾನಂತವ್ರತಂ ಭಕ್ತ್ಯಾ ನವ ವರ್ಷಾಣಿ ಪಂಚ ಚ ।

ಸರ್ವಪಾಪವಿಶುದ್ಧಾತ್ಮಾ ಪ್ರಾಪ್ಸ್ಯಸೇ ಸಿದ್ಧಿಮುತ್ತಮಾಮ್ ॥೧೧೧॥

ಅನಂತನು ಬ್ರಾಹ್ಮಣನಿಗೆ ಹೀಗೆ ಹೇಳುತ್ತಾನೆ. ಎಲೈ ದ್ವಿಜನೇ! ತಡ ಮಾಡಬೇಡ. ನಿನ್ನ ಮನೆಗೆ ತೆರಳು. ಅನಂತವ್ರತವನ್ನು ಭಕ್ತಿಯಿಂದ ಮಾಡು. ಇದನ್ನು ಹದಿನಾಕು ವರ್ಷಗಳ ತನಕ ಆಚರಿಸಬೇಕು.ಆಗ ಎಲ್ಲ ಪಾಪಗಳಿಂದ ನೀನು ವಿಮುಕ್ತನಾಗುವಿ. ಉತ್ತಮ ಸಿದ್ಧಿಗಳನ್ನು ಕೂಡ ನೀನು ಹೊಂದುವಿ.

ಪುತ್ರಪೌತ್ರಾನ್ ಸಮುತ್ಪಾದ್ಯ ಭುಕ್ತ್ವಾ ಭೋಗಾನ್ ಯಥೇಪ್ಸಿತಮ್ ।

ಅಂತೇ ಮತ್ಸ್ಮರಣಂ ಪ್ರಾಪ್ಯ ಮಾಮುಪೈಷ್ಯಸಿ ಅಸಂಶಯಮ್ ॥೧೧೨॥

ಮಕ್ಕಳನ್ನೂ ಮೊಮ್ಮಕ್ಕಳನ್ನೂ ಪಡೆದು ನಿನ್ನ ಅಭೀಷ್ಟಗಳನ್ನು ಭೋಗಿಸುವಿ. ಜೀವನದ ಕೊನೆಯಲ್ಲಿ ನನ್ನ ಸ್ಮರಣೆಯನ್ನು ಹೊಂದುವಿ. ಅಂತಿಮವಾಗಿ ನನ್ನನ್ನೇ ಹೊಂದುವಿ.

ಅನ್ಯಂ ಚ ತೇ ವರಂ ದದ್ಮಿ ಸರ್ವಲೋಕೋಪಕಾರಕಮ್ ।

ಇದಮಾಖ್ಯಾನಕವರಂ ಶೀಲಾನಂತವ್ರತಾದಿಕಮ್ ॥೧೧೩॥

ನಿನಗೆ ಮತ್ತೊಂದು ಉತ್ತಮವಾದ ಸಕಲಲೋಕಕ್ಕೆ ಉಪಕಾರಕವಾದ ವರವನ್ನು ನೀಡುವೆ. ನಿನ್ನ ಪತ್ನಿಯಾದ ಶೀಲೆಯು ಯಾವ ಅನಂತವ್ರತವನ್ನು ಆಚರಿಸಿದಳೋ ಆದು ಅತ್ಯಂತಶ್ರೇಷ್ಠವಾಗಿದೆ.

ಕರಿಷ್ಯತಿ ನರೋ ಯಸ್ತು ಕುರ್ವನ್ ವ್ರತಮಿದಂ ಶುಭಮ್ ।

ಸೋಽಚಿರಾತ್ ಪಾಪನಿರ್ಮುಕ್ತಃ ಪ್ರಾಪ್ನೋತಿ ಪರಮಾಂ ಗತಿಮ್ ॥೧೧೪॥

ಯಾವ ಮನುಷ್ಯನು ಈ ಶುಭವ್ರತವನ್ನು ಆಚರಿಸಿ ಈ ಕಥೆಯನ್ನು ಕೇಳುತ್ತಾನೋ ಅವನು ಕೂಡಲೇ ಪಾಪರಹಿತನಾಗುತ್ತಾನೆ. ಉತ್ತಮ ಗತಿಯನ್ನು ಹೊಂದುತ್ತಾನೆ.

ಗಚ್ಛ ವಿಪ್ರ ಗೃಹಂ ಶೀಘ್ರಂ ಯಥಾ ಯೇನಾಽಗತೋ ಹ್ಯಸಿ ।

ಹೇಗೆ ಮನೆಯಿಂದ ಆಗಮಿಸಿದೆಯೋ ಹಾಗೆಯೇ ಮನೆಗೆ ಹೊರಡು.

ಕೌಂಡಿನ್ಯಃ

ಸ್ವಾಮಿನ್ ಪೃಚ್ಛಾಮಿ ತೇ ಬ್ರೂಹಿ ಕಿಂಚಿತ್ ಕೌತೂಹಲಂ ಮಯಾ ॥೧೧೫॥

ಕೌಂಡಿನ್ಯನು ಪ್ರಶ್ನಿಸುತ್ತಾನೆ – ಸ್ವಾಮಿನ್! ಕುತೂಹಲಕಾರಿಯಾದ ಒಂದು ವಿಷಯ -ವನ್ನು ನಿನ್ನ ಬಳಿ ಕೇಳಬೇಕೆಂದು ಅಪೇಕ್ಷಿಸುತ್ತಿರುವೆನು.

ಅರಣ್ಯೇ ಭ್ರಮತಾ ದೃಷ್ಟಂ ತದ್ವದಸ್ವ ಜಗದ್ಗುರೋ ।

ಯಶ್ಚೂತವೃಕ್ಷಃ ಕಸ್ತತ್ರ ಕಾ ಗೌಃ ಕೋ ವೃಷಭಸ್ತಥಾ ॥೧೧೬॥

ಜಗದ್ಗುರುವೇ! ನಾನು ಅರಣ್ಯದಲ್ಲಿ ನಿನ್ನನ್ನು ಹುಡುಕಿಕೊಂಡು ಸಾಗುತ್ತಿರುವಾಗ ನನಗೆ ಕಂಡ ಆ ಮಾವಿನ ಮರವು ಯಾರು? ಆ ಹಸು ಯಾವುದು? ಎತ್ತು ಯಾರು?

ಕಮಲೋತ್ಪಲಕಹ್ಲಾರೈಃ ಶೋಭಿತಂ ಸುಮನೋಹರಮ್ ।

ಮಯಾ ದೃಷ್ಟಂ ಮಹಾರಣ್ಯೇ ಕಿಂ ತತ್ ಪುಷ್ಕರಿಣೀದ್ವಯಮ್ ॥೧೧೭॥

ಕಃ ಖರಃ ಕುಂಜರಃ ಕೋಽಸೌ ಕೋಽಸೌ ವೃದ್ಧೋ ದ್ವಿಜೋತ್ತಮಃ ।

ಅನೇಕವಿಧವಾದ ತಾವರೆಗಳಿಂದ ಶೋಭಿಸುತ್ತಿದ್ದ ಅತ್ಯಂತ ಮನೋಹರವಾದ ಆ ಎರಡು ಸರೋವರಗಳು ಯಾವವು? ಕತ್ತೆ, ಆನೆ, ವೃದ್ಧಬ್ರಾಹ್ಮಣ ಇವರೆಲ್ಲರೂ ಯಾರು?

ಅನಂತಃ

ಸ ಚೂತವೃಕ್ಷೋ ವಿಪ್ರೋಽಸೌ ವೇದವಿದ್ಯಾವಿಶಾರದಃ ॥೧೧೮॥

ವಿದ್ಯಾ ನ ದತ್ತಾ ಶಿಷ್ಯೇಭ್ಯಸ್ತೇನಾಸೌ ತರುತಾಂ ಗತಃ ।

ಯಾ ಗೌರ್ವಸುಂಧರಾ ದೃಷ್ಟ್ವಾ ಸಾ ಪೂರ್ವಂ ಬೀಜಹಾರಿಣೀ ॥೧೧೯॥

ಆ ಮಾವಿನ ಮರ ಬೇರಾರೂ ಅಲ್ಲ? ವೇದವಿದ್ಯೆಯಲ್ಲಿ ಪರಿಣತನಾದ ಒಬ್ಬ ಬ್ರಾಹ್ಮಣೋತ್ತಮ. ಅವನು ತನ್ನ ಶಿಷ್ಯರಿಗೆ ವಿದ್ಯೆಯನ್ನು ಉಪದೇಶಿಸಿರಲಿಲ್ಲ. ಆದ್ದರಿಂದ ಈಗ ಮಾವಿನ ಮರವಾಗಿ ಹುಟ್ಟಿರುವನು.

ಯಾವ ಹಸುವನ್ನು ಕಂಡಿಯೋ ಅದು ಎಲ್ಲ ಬೀಜಗಳನ್ನು ತನ್ನಲ್ಲೇ ಅಡಗಿಸಿಕೊಂಡ ಭೂಮಿಯಾಗಿತ್ತು.

ವೃಷೋ ಧರ್ಮಸ್ತ್ವಯಾ ದೃಷ್ಟಃ ಶಾದ್ವಲೇ ಯಃ ಸಮಾಸ್ಥಿತಃ ।

ಧರ್ಮಾಧರ್ಮವ್ಯವಸ್ಥಾನಂ ತಚ್ಚ ಪುಷ್ಕರಿಣೀದ್ವಯಮ್ ॥೧೨೦॥

ಎಳೆ ಹುಲ್ಲನ್ನು ಮೇಯುತ್ತಿದ್ದ ಯಾವ ಎತ್ತನ್ನು ನೀನು ಕಂಡೆಯೋ ಅದು ಸಾಕ್ಷಾತ್ ಧರ್ಮದೇವತೆಯಾಗಿದೆ. ಎರಡು ಕೆರೆಗಳು ಧರ್ಮ ಮತ್ತು ಅಧರ್ಮದ ವ್ಯವಸ್ಥೆಯನ್ನು ಮಾಡುವ ದೇವತೆಗಳು.

ಬ್ರಾಹ್ಮಣ್ಯೌ ಕೇಚಿದಪ್ಯಾಸ್ತಾಂ ಭಗಿನ್ಯೌ ತೇ ಪರಸ್ಪರಮ್ ।

ಧರ್ಮಾಧರ್ಮಾದಿ ಯತ್ಕಿಂಚಿತ್ ತನ್ನಿವೇದಯತೋ ಮಿಥಃ ॥೧೨೧॥

ಧರ್ಮ ಮತ್ತು ಅಧರ್ಮಗಳನ್ನು ವ್ಯವಸ್ಥೆ ಮಾಡುವ ದೇವತೆಗಳೂ ಬ್ರಾಹ್ಮಣ ಕನ್ಯೆಯರಾಗಿ ಒಮ್ಮೆ ಹುಟ್ಟಿದರು. ಅವರು ಪರಸ್ಪರ ಸಹೋದರಿಯರಾಗಿದ್ದರು. ಧರ್ಮ ಮತ್ತು ಅಧರ್ಮಗಳ ಬಗ್ಗೆ ಪರಸ್ಪರ ಚರ್ಚೆ ಮಾಡುತ್ತಿದ್ದರು. ಹಾಗೆ ವಿಚಾರ ಮಾಡಿ ದಾನಾದಿಗಳನ್ನು ತಾವೇ ಹಂಚಿಕೊಳ್ಳುತ್ತಿದ್ದರು.

ವಿಪ್ರಾಯ ನ ಕ್ವಚಿದ್ ದತ್ತಮತಿಥೌ ದುರ್ಬಲೇಽಪಿ ವಾ ।

ಭಿಕ್ಷಾ ನ ದತ್ತಾ ಚಾರ್ಥಿಭ್ಯಸ್ತೇನ ಪಾಪೇಣ ಕರ್ಮಣಾ ॥೧೨೨॥

ವೀಚೀಕಲ್ಲೋಲಮಾಲಾಭಿರ್ಗಚ್ಛತಸ್ತೇ ಪರಸ್ಪರಮ್ ।

ಬ್ರಾಹ್ಮಣರಿಗೆ, ಅತಿಥಿಗಳಿಗೆ, ದುರ್ಬಲರಿಗೆ, ಯಾವುದನ್ನೂ ಕೂಡ ನೀಡುತ್ತಿರಲಿಲ್ಲ. ಬೇಡುವವರಿಗೆ ಭಿಕ್ಷೆಯನ್ನೂ ಕೂಡ ಕೊಡುತ್ತಿರಲಿಲ್ಲ. ಈ ಪಾಪಕರ್ಮದಿಂದ

ಪರಸ್ಪರ ಅಲೆಗಳಾಗಿ(ಪುಷ್ಕರಿಣಿಗಳಾಗಿ) ಹುಟ್ಟಿದರು. ಪರಸ್ಪರ ಅಲೆಗಳಿಂದ ತಾವೇ ಅಲಂಕಾರ ಮಾಡಿಕೊಳ್ಳುತ್ತಾರೆ. ಬೇರೆಯವರಿಗೆ ಉಪಕಾರವನ್ನು ಮಾಡುವುದಿಲ್ಲ.

ಖರಃ ಕ್ರೋಧಸ್ತು ಯೋ ದೃಷ್ಟಃ ಕುಂಜರೋ ಮದ ಉಚ್ಯತೇ ||೧೨೩||

ಬ್ರಾಹ್ಮಣೋಽಸಾವನಂತೋಽಹಂ ಗುಹಾ ಸಂಸಾರಗಹ್ವರಮ್ ।

ಇತ್ಯುಕ್ತ್ವಾ ದೇವದೇವೇಶಃ ತತ್ರೈವಾಂತರಧೀಯತ ||೧೨೪||

ನಿನಗೆ ಮುಂದೆ ಸಿಕ್ಕ ಕತ್ತೆಯೇ ಕೋಪಾಭಿಮಾನಿ. ನೀನು ಕಂಡ ಆನೆಯು ಮದಕ್ಕೆ ಅಭಿಮಾನಿ. ಮುದುಕಬ್ರಾಹ್ಮಣನು ಸಾಕ್ಷಾತ್ ನಾನೇ ಆಗಿದ್ದೇನೆ. ನೀನು ಪ್ರವೇಶಿಸಿದ ಗುಹೆಯು ಸಂಸಾರದ ಗುಹೆಯಾಗಿದೆ. ಹೀಗೆ ಬ್ರಾಹ್ಮಣನ ಪ್ರಶ್ನೆಗೆ ಉತ್ತರವನ್ನು ನೀಡಿ, ದೇವಶ್ರೇಷ್ಠನಾದ ಅನಂತನು ಅಲ್ಲಿಯೇ ತಿರೋಹಿತನಾದನು.

ಸ್ವಪ್ನಪ್ರಾಯಂ ತತೋ ದೃಷ್ಟ್ವಾ ತತಃ ಸ್ವಗೃಹಮಾಗತಃ ।

ಕೃತ್ವಾಽನಂತವ್ರತಂ ಸಮ್ಯಗ್ ನವ ವರ್ಷಾಣಿ ಪಂಚ ಚ ||೧೨೫||

ಕೌಂಡಿನ್ಯನಿಗೆ ಈ ಎಲ್ಲ ಘಟನೆಯು ಸ್ವಪ್ನದಂತೆ ಕಂಡಿತು. ತನ್ನ ಮನೆಗೆ ನಿರ್ಗಮಿಸಿದನು. ಹದಿನಾಕು ವರ್ಷಗಳ ಕಾಲ ಭಕ್ತಿಯಿಂದ ಅನಂತನ ವ್ರತವನ್ನು ಆಚರಿಸಿದನು.

ಭುಕ್ತ್ವಾ ಸರ್ವಮನಂತೇನ ಯಥೋಕ್ತಂ ಪಾಂಡುನಂದನ ।

ಅಂತೇ ಚ ಸ್ಮರಣಂ ಪ್ರಾಪ್ಯ ಗತೋಽನಂತಪುರಂ ದ್ವಿಜ ||೧೨೬||

ಪಾಂಡುನಂದನನೇ! ಅನಂತನಾಮಕನಾದ ಪರಮಾತ್ಮನು ಹೇಗೆ ವರವನ್ನು ನೀಡಿದ್ದನೋ ಅದರ ಪ್ರಕಾರ ಬ್ರಾಹ್ಮಣನು ಎಲ್ಲಾ ಬಗೆಯ ಭೋಗಗಳನ್ನು ಅನುಭವಿಸಿದನು. ಅಂತ್ಯಕಾಲದಲ್ಲಿ ಅನಂತನ ಸ್ಮರಣೆಯನ್ನು ಹೊಂದಿದನು. ಸತ್ತ ಮೇಲೆ ಅನಂತದೇವನ ಪಟ್ಟಣವನ್ನು ಪ್ರವೇಶಿಸಿದನು.

ತಥಾ ತ್ವಮಪಿ ರಾಜರ್ಷೇ ಕಥಾಂ ಶೃಣ್ವನ್ ವ್ರತಂ ಕುರು ।

ಪ್ರಾಪ್ಸ್ಯಸೇ ಚಿಂತಿತಂ ಸರ್ವಮನಂತಸ್ಯ ವಚೋ ಯಥಾ ||೧೨೭||

ರಾಜರ್ಷಿಯೇ! ಅವನಂತೆ ನೀನೂ ಸಹ ಅನಂತದೇವನ ಕಥೆಯನ್ನು ಶ್ರವಣ ಮಾಡು. ಅನಂತವ್ರತವನ್ನು ಆಚರಿಸು. ಅನಂತನ ಮಾತಿನಂತೆ ನಿನ್ನ ಅಭೀಷ್ಟಗಳನ್ನು ಪಡೆದುಕೋ.

ಯದ್ವೈ ಚತುರ್ದಶೇ ವರ್ಷೇ ಫಲಂ ಪ್ರಾಪ್ತಂ ದ್ವಿಜನ್ಮನಾ ।
ವರ್ಷೈಕೇನ ತದಾಪ್ನೋತಿ ಕೃತ್ವಾ ಸಾಖ್ಯಾನಕವ್ರತಮ್ ॥೧೨೮॥

ಬ್ರಾಹ್ಮಣನು ಹದಿನಾಕು ವರ್ಷಗಳ ಕಾಲ ವ್ರತಾನುಷ್ಠಾನವನ್ನು ಮಾಡಿ ಯಾವ ಫಲವನ್ನು ಹೊಂದಿದನೋ ಆ ಫಲವನ್ನು ಆಖ್ಯಾನಸಹಿತವಾಗಿ ಒಂದು ವರ್ಷ ಆಚರಣೆ ಮಾಡಿದರೂ ಕೂಡ ಪಡೆಯಲು ಸಾಧ್ಯವಿದೆ.

ಏತತ್ ತೇ ಕಥಿತಂ ಭೂಪ ವ್ರತಾನಾಮುತ್ತಮಂ ವ್ರತಮ್ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥೧೨೯॥

ರಾಜನೇ! ಈ ವ್ರತವು ಎಲ್ಲ ವ್ರತಗಳಲ್ಲಿ ಅತ್ಯುತ್ತಮವಾಗಿದೆ. ಇಂಥ ಶ್ರೇಷ್ಠವಾದ ಅನಂತವ್ರತದ ಕಥೆಯನ್ನು ನಿನಗೆ ನಾನು ತಿಳಿಸಿರುವೆನು. ಇದನ್ನು ಕೇಳಿದ ಮನುಷ್ಯನು ಎಲ್ಲಾ ಪಾಪಗಳಿಂದ ಮುಕ್ತನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.

ಯೇಽಪಿ ಶೃಣ್ವಂತಿ ಸತತಂ ಪಠ್ಯಮಾನಂ ಪಠಂತಿ ಯೇ ।
ತೇಽಪಿ ಸರ್ವಪಾಪವಿನಿರ್ಮುಕ್ತಾಃ ಪ್ರಾಪ್ಸ್ಯಂತಿ ಚ ಹರೇಃ ಪದಮ್ ॥೧೩೦॥

ಯಾರು ಈ ಕಥೆಯನ್ನು ಕೇಳುತ್ತಾರೋ ಅಥವಾ ಪಠಿಸುತ್ತಾರೋ ಅವರೆಲ್ಲರೂ ಎಲ್ಲಾ ಬಗೆಯ ಪಾಪಗಳಿಂದ ರಹಿತರಾಗುತ್ತಾರೆ. ಅಂತಿಮವಾಗಿ ವಿಷ್ಣುಲೋಕವನ್ನೇ ಹೊಂದುತ್ತಾರೆ.

ಸಂಸಾರಗಹ್ವರಗುಹಾಸು ಸುಖಂ ವಿಹರ್ತುಂ
ವಾಂಛಂತಿ ಯೇ ಕುರುಕುಲೋದ್ಭವ ಶುದ್ಧಸತ್ತ್ವಾಃ ।
ಸಂಪೂಜ್ಯ ಚ ತ್ರಿಭುವನೇಶಮನಂತದೇವಂ
ಬಧ್ನಂತಿ ದಕ್ಷಿಣಕರೇ ವರದೋರಕಂ ತೇ ॥೧೩೧॥

॥ ಇತಿ ಭವಿಷ್ಯೋತ್ತರಪುರಾಣೇ ಶ್ರೀಮದನಂತವ್ರತಕಥಾ ಸಂಪೂರ್ಣಾ ॥

ಈ ಸಂಸಾರವು ಭಯಂಕರವಾದ ಗುಹೆಯಂತಿದೆ. ಇದರಲ್ಲಿ ಸುಖವಾಗಿ ವಿಹಾರ ಮಾಡುವ ಬಯಕೆಯನ್ನು ಹೊಂದಿದವರು ಮೂರು ಲೋಕಗಳಿಗೆ

ಸ್ವಾಮಿಯಾದ ಅನಂತದೇವನನ್ನು ಭಕ್ತಿಯಿಂದ ಪೂಜೆ ಮಾಡಬೇಕು. ಬಲತೋಳಿನಲ್ಲಿ ಶ್ರೇಷ್ಠವಾದ ಅನಂತನ ದೋರವನ್ನು ಕಟ್ಟಿಕೊಳ್ಳಬೇಕು.

ಇಲ್ಲಿಗೆ ಭವಿಷ್ಯೋತ್ತರಪುರಾಣದಲ್ಲಿ ಅನಂತವ್ರತದ ಕಥೆಯು ಸಮಾಪ್ತವಾಯಿತು.

॥ ಶ್ರೀಮಧ್ವೇಶಾರ್ಪಣಮಸ್ತು ॥

(ಭವಿಷ್ಯಪುರಾಣದಲ್ಲಿ ಕೆಲವು ಪುಸ್ತಕಗಳಲ್ಲಿರುವ ಪಾಠಾಂತರ ಹೀಗಿದೆ) –

ಇತ್ಯುಕ್ತಂ ಚ ಮಯಾ ಸರ್ವಮನಂತೋ ವಿಪ್ರರೂಪಧೃತ್ ।
ಚರಾನಂತವ್ರತಂ ತ್ವಂ ಚ ನವವರ್ಷಾಣಿ ಪಂಚ ಚ ॥
ಸಂಸ್ತುಷ್ಟಃ ಪ್ರದಾಸ್ಯಾಮಿ ನಕ್ಷತ್ರಸ್ಥಾನಮುತ್ತಮಮ್ ।
ಇಹ ಲೋಕೇ ಸುವಿಪುಲಾನ್ ಸರ್ವಾನ್ ಕಾಮಾನವಾಪ್ನುಹಿ ॥

ಅನಂತನಾಮಕನಾದ ನಾನು ಆ ವಿಪ್ರನಿಗೆ ಎಲ್ಲವನ್ನೂ ಕೂಡ ತಿಳಿಸಿದೆನು. ಅನಂತರ ಹೀಗೆ ಹೇಳಿದೆನು. ಹೇ ವಿಪ್ರನೇ ನೀನು ನಿನ್ನ ಮನೆಗೆ ತೆರಳು. ಹದಿನಾಕು ವರ್ಷಗಳ ಕಾಲ ಅನಂತವ್ರತವನ್ನು ಭಕ್ತಿಯಿಂದ ಆಚರಿಸು. ಇದರಿಂದ ಸಂತುಷ್ಟನಾದ ನಾನು ಉತ್ತಮವಾದ ನಕ್ಷತ್ರಸ್ಥಾನವನ್ನೇ ನೀಡುತ್ತೇನೆ. ಈ ಲೋಕದಲ್ಲಿ ಯಥೇಚ್ಛವಾಗಿ ಭೋಗಗಳನ್ನು ಅನುಭವಿಸುವಿ, ಎಲ್ಲ ಕಾಮನೆಗಳನ್ನು ಈಡೇರಿಸಿಕೊಳ್ಳುವಿ, ಪುತ್ರಪೌತ್ರರಿಂದ ಸಹಿತನಾಗಿ ಅಂತಿಮವಾಗಿ ಮೋಕ್ಷವನ್ನೇ ಹೊಂದುವಿ.

ಇತಿ ದತ್ವಾ ವರಂ ದೇವಸ್ತತ್ರೈವಾಂತರಧೀಯತ?।
ಕೌಂಡಿಣ್ಯೋಽಪ್ಯಾಗತೋ ಗೇಹೇ ಚಚಾರ ವ್ರತಮುತ್ತಮಮ್ ॥

ಹೀಗೆ ಅನಂತನಾಮಕನಾದ ಪರಮಾತ್ಮನು ಆ ವಿಪ್ರನಿಗೆ ವರವನ್ನು ನೀಡಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಕೌಂಡಿಣ್ಯ ಬ್ರಾಹ್ಮಣನೂ ಕೂಡ ತನ್ನ ಮನೆಗೆ ಮರಳಿದನು. ಅಂದಿನಿಂದ ಹದಿನಾಕುವರ್ಷಗಳ ಕಾಲ ಭಕ್ತಿಯಿಂದ ಅನಂತವ್ರತವನ್ನು ಆಚರಣೆ ಮಾಡಿದನು.

ಶೀಲಯಾ ಸಹ ಧರ್ಮಾತ್ಮಾ ಭುಕ್ತ್ವಾ ಭೋಗಾನ್ ಯಥೇಪ್ಸಿತಾನ್।

ಪುತ್ರಪೌತ್ರೈಃ ಸಮಾವೃತಃ ತತೋ ನಕ್ಷತ್ರತಾಂ ಗತಃ ।

ಕಲ್ಪಸ್ಥಾಯೀ ಚ ಸಂಭೂತೋ ದೃಶ್ಯತೇऽದ್ಯಾಪಿ ಸೋ ದ್ವಿಜಃ ॥

ತನ್ನ ಹೆಂಡತಿಯಾದ ಶೀಲೆಯ ಜೊತೆ ಮಕ್ಕಳು ಮೊಮ್ಮಕ್ಕಳಿಂದ ಸಹಿತನಾಗಿ ಧರ್ಮನಿಷ್ಠನಾದ ಆ ಕೌಂಡಿಣ್ಯ ಬ್ರಾಹ್ಮಣನು ಮನೋಹರವಾದ ಎಲ್ಲ ಭೋಗಗಳನ್ನು ಅನುಭವಿಸಿದನು. ಅಂತಿಮವಾಗಿ ಸ್ವರ್ಗವನ್ನು ಪಡೆದನು. ಮತ್ತು ಪುನರ್ವಸು ಎಂಬ ನಕ್ಷತ್ರವನ್ನು ಹೊಂದಿದನು. ಒಂದು ಕಲ್ಪಗಳ ಕಾಲ ಆ ಪುನರ್ವಸು ನಕ್ಷತ್ರವಾಗಿ ಬೆಳಗುತ್ತಿದ್ದಾನೆ. ಇಂದೂ ಕೂಡ ನಮ್ಮೆಲ್ಲರಿಗೂ ಆ ಪುನರ್ವಸು ನಕ್ಷತ್ರವು ಪ್ರಕಾಶಿಸುವುದು ಕಾಣಿಸುತ್ತದೆ.

ಕುಂಭಜೇನ ಪುರಾ ಚೀರ್ಣಂ ಮರ್ತ್ಯಲೋಕೇ ಪ್ರಕಾಶಿತಾ ।

ಸಗರೇಣ ದಿಲೀಪೇನ ಭರತೇನ ಮಹಾತ್ಮನಾ ॥

ಹರಿಶ್ಚಂದ್ರೇಣ ಭೂಪೇನ ಜನಕೇನಾಪಿ ಪಾಂಡವ ।

ಏತೇ ಚಾನ್ಯೇ ಬಹವೋ ರಾಜ್ಯಂ ಭುಕ್ತ್ವಾ ದಿವಂ ಗತಾಃ ॥

ಹಿಂದೆ ಅಗಸ್ತ್ಯಮುನಿಗಳು ಈ ವ್ರತವನ್ನು ಆಚರಿಸಿ ಭೂಲೋಕದಲ್ಲಿ ಪ್ರಸಿದ್ಧಿಗೆ ತಂದರು. ಅನಂತರ ಸಗರ, ದಿಲೀಪ, ಭರತ, ಹರಿಶ್ಚಂದ್ರ ಮೊದಲಾದ ಚಕ್ರವರ್ತಿಗಳು ಈ ಅನಂತವ್ರತವನ್ನು ಶ್ರದ್ಧೆಯಿಂದ ಆಚರಿಸಿ ಪೃಥಿವಿಯನ್ನು ಅನುಭವಿಸಿದರು. ಇನ್ನೂ ಅನೇಕರಾಜರು ಇದನ್ನು ಆಚರಿಸಿ ಸ್ವರ್ಗವನ್ನೂ ಪಡೆದರು.

ಏತತ್ ತೇ ಕಥಿತಂ ಪಾರ್ಥ ವ್ರತಾನಾಮುತ್ತಮಂ ವ್ರತಮ್ ।

ಯತ್ಕೃತ್ವಾ ಸರ್ವಪಾಪೇಭ್ಯೋ ವಿಮುಕ್ತಃ ಸುಖಮಶ್ನುತೇ ॥

ಎಲ್ಲ ವ್ರತಗಳಲ್ಲಿ ಸರ್ವೋತ್ತಮವಾದ ವ್ರತವನ್ನು ನಿನಗೆ ಉಪದೇಶಿಸಿದ್ದೇನೆ. ಇದನ್ನು ಆಚರಣೆ ಮಾಡುವುದರಿಂದ ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ. ಈ ವಿಷಯದಲ್ಲಿ ಸ್ವಲ್ಪವೂ ಸಂಶಯಕ್ಕೆ ಅವಕಾಶವಿರುವುದಿಲ್ಲ.

* * * * *

# ಭವಿಷ್ಯಪುರಾಣದಲ್ಲಿ ಅನಂತವ್ರತದ ಬಗ್ಗೆ ಹೊಸವಿಚಾರ
# ಅಧ್ಯಾಯ ೧೦೬

ಸತ್ಪುತ್ರಪ್ರಾಪ್ತಿಗೆ ಏನು ಮಾಡಬೇಕೆಂದು ಯುಧಿಷ್ಠಿರನ ಪ್ರಶ್ನೆ

ಯುಧಿಷ್ಠಿರಃ –

ಸರ್ವಕಾಮಾನವಾಪ್ನೋತಿ ಸಮಾರಾಧ್ಯ ಜನಾರ್ದನಮ್ ।
ಪ್ರಕಾರೈರ್ಬಹುಭಿಃ ಕೃಷ್ಣ ಯಾನ್ಯಾನಿಚ್ಛತಿ ಚೇತಸಾ ॥೧॥

ಎಲೈ ಶ್ರೀಕೃಷ್ಣನೇ! ಪುರುಷನು ತನ್ನ ಮನಸ್ಸಿನಲ್ಲಿ ಆಶಿಸಿದ ಫಲಪ್ರಾಪ್ತಿಗಾಗಿ ಶ್ರೀಜನಾರ್ದನನನ್ನು ಅನೇಕ ಪ್ರಕಾರಗಳಿಂದ ಆರಾಧಿಸಿ ಸರ್ವಕಾಮಗಳನ್ನೂ ಪಡೆಯುತ್ತಾನಷ್ಟೇ.

ನೃಣಾಂ ಸ್ತ್ರೀಣಾಂ ಚ ಸರ್ವೇಷಾಂ ನಾನ್ಯಚ್ಛೋಕಸ್ಯ ಕಾರಣಮ್ ।
ಅಪತ್ಯಾದಧಿಕಂ ಕಿಂಚಿತ್ ವಿದ್ಯತೇ ಹ್ಯತ್ರ ಜನ್ಮನಿ ॥೨॥

ಈ ಜನ್ಮದಲ್ಲಿ ಸಂತಾನಕ್ಕಿಂತಲೂ ಅಧಿಕವಾದುದು ಇನ್ನೊಂದಿಲ್ಲ. ಹೆಂಗಸಿಗೂ ಗಂಡಸಿಗೂ ಎಲ್ಲರಿಗೂ ಶೋಕಕ್ಕೆ ಕಾರಣವಾದದ್ದು ಸಂತತಿಯನ್ನು ಬಿಟ್ಟರೆ ಇನ್ನೊಂದಿಲ್ಲ.

ಅಪುತ್ರತಾ ಮಹಾದುಃಖಮತಿದುಃಖಂ ಕುಪುತ್ರತಾ ।
ಸುಪುತ್ರಃ ಸರ್ವಸೌಖ್ಯಾನಾಂ ಹೇತುಭೂತಂ ಮತೋ ಮಮ ॥೩॥

ಅಪುತ್ರತ್ವವು ಮಹಾದುಃಖದಾಯಕವಾದುದು. ದುಷ್ಪುತ್ರತ್ವವು ಅತಿದುಃಖದಾಯಕವು ಮಾತ್ರವಲ್ಲದೇ ಹೇಯವೂ ಆದುದು. ಆದುದರಿಂದ ಸುಪುತ್ರನೇ ಸರ್ವಸೌಖ್ಯಗಳಿಗೂ ಕಾರಣನೆಂದು ನನ್ನ ಅಭಿಪ್ರಾಯ.

ಧನ್ಯಾಸ್ತೇ ಯೇ ಸುತಂ ಪ್ರಾಪ್ತಾಃ ಸರ್ವದುಃಖವಿವರ್ಜಿತಮ್ ।
ಶಕ್ತಂ ಪ್ರಶಾಂತಂ ಬಲಿನಂ ಪರಾಂ ನಿರ್ವೃತಿಮಾಗತಮ್ ॥೪॥

ಸರ್ವದುಃಖವರ್ಜಿತನೂ, ಶಕ್ತನೂ, ಶಾಂತನೂ, ಬಲಶಾಲಿಯೂ, ಪರಮ-ಸಂತೋಷಯುಕ್ತನೂ ಆದ ಪುತ್ರನನ್ನು ಯಾರು ಪಡೆದಿರುವರೋ ಅವರೇ ಧನ್ಯರು.

ಸ್ವಕರ್ಮಾಭಿರತಂ ನಿತ್ಯಂ ದೇವದ್ವಿಜಪರಾಯಣಮ್ ।
ಶಾಸ್ತ್ರಜ್ಞಂ ಸರ್ವಧರ್ಮಜ್ಞಂ ದೀನಾನಾಥಾನುಕಂಪಿನಮ್ ॥೫॥

ಯಾವಾಗಲೂ ಸತ್ಕರ್ಮಗಳಲ್ಲಿ (ತನ್ನ ವರ್ಣಾಶ್ರಮೋಚಿತಕರ್ಮಗಳಲ್ಲಿ) ನಿರತನೂ, ದೇವಬ್ರಾಹ್ಮಣಪೂಜಾಪರಾಯಣನೂ, ಶಾಸ್ತ್ರಜ್ಞನೂ, ಸರ್ವಧರ್ಮಜ್ಞನೂ, ದೀನರೂ ಅನಾಥರಲ್ಲಿ ದಯೆಯುಳ್ಳವನೂ,

ವಿನಿರ್ಜಿತಾರಿಸರ್ವಸ್ವಂ ಮನೋಹೃದಯನಂದನಮ್ ।
ದೇವಾನುಕೂಲತಾಯುಕ್ತಂ ಯುಕ್ತಂ ಸಮ್ಯಗ್ ಗುಣೇನ ಚ ॥೬॥

ಮತ್ತು ಶತ್ರುವನ್ನು ಜಯಿಸಿ ಅವನ ಸರ್ವಸ್ವವನ್ನೂ ಸ್ವಾಧೀನಪಡಿಸಿಕೊಂಡವನೂ, ಮನಸ್ಸಿಗೆ ಆಹ್ಲಾದವನ್ನುಂಟು ಮಾಡುವವನೂ, ದೈವಾನುಕೂಲ್ಯವುಳ್ಳವನೂ, ಸದ್ಗುಣಭರಿತನೂ,

ಮಿತಸ್ವಜನಸನ್ಮಾನಲಬ್ಧಂ ನಿರ್ವಾಣಮುತ್ತಮಮ್ ।
ಯಃ ಪ್ರಾಪ್ನೋತಿ ಸುತಂ ತಸ್ಮಾತ್ ನಾನ್ಯೋ ಧನ್ಯತರೋ ಭುವಿ ॥೭॥

ಮತ್ತು ಸ್ವಜನಪ್ರಿಯನೂ, ಜನಾದರಣೆ ಪಡೆದವನೂ ಆದ ಉತ್ತಮಪುತ್ರನನ್ನು ಯಾವನು ಪಡೆಯುವನೋ ಅವನಿಗಿಂತ ಕೃತಾರ್ಥನು ಈ ಭೂಲೋಕದಲ್ಲಿಯೇ ಇಲ್ಲ.

ಸೋಽಹಮೇವಂವಿಧಂ ಶ್ರೋತುಂ ಕರ್ಮೇಚ್ಛಾಮಿ ಮಹಾಮತೇ ।
ಯೇನೇದೃಗ್ ಶ್ಲಕ್ಷ್ಣಃ ಪುತ್ರಃ ಪ್ರಾಪ್ಯತೇ ಭುವಿ ಮಾನವೈಃ ॥೮॥

ಎಲೈ ಮಹಾಪ್ರಾಜ್ಞನೇ! ಪುರುಷನು ಇಂತಹ ಶುಭಲಕ್ಷಣಗಳಿಂದ ಕೂಡಿದ ಮಗನನ್ನು ಯಾವ ಕರ್ಮಾಚರಣೆಯಿಂದ ಹೊಂದಬಹುದು? ಅಂತಹ ಕರ್ಮವಿಶೇಷವನ್ನು ನಿನ್ನಿಂದ ತಿಳಿದುಕೊಳ್ಳಲು ಅಪೇಕ್ಷಿಸುತ್ತೇನೆ ಎಂದನು.

## ಅನಂತವ್ರತ ಆಚರಿಸಬೇಕೆಂದು ಶ್ರೀಕೃಷ್ಣನ ಉತ್ತರ

ಶ್ರೀಕೃಷ್ಣಃ

ಏವಮೇತನ್ಮಹಾಭಾಗ ಪುತ್ರಾಪುತ್ರಸಮುದ್ಭವಮ್ ।
ದುಃಖಂ ಪ್ರಯಾತ್ಯುಪಶಮಂ ತನಯಾನ್ನೇಹ ಕೇನಚಿತ್ ॥೯॥

ಶ್ರೀಕೃಷ್ಣನು ಹೇಳುತ್ತಾನೆ– ಅಯ್ಯಾ ಮಹಾಭಾಗ್ಯಶಾಲಿಯೇ! ನೀನು ಕೇಳುವುದು ಶ್ಲಾಘ್ಯವಾಗಿದೆ. ಈ ಭೂಲೋಕದಲ್ಲಿ ದುಷ್ಪುತ್ರತ್ವದ ಸಂಕಟವೂ, ಅಪುತ್ರತ್ವದಿಂದ ಹುಟ್ಟಿದ ದುಃಖವೂ ಸತ್ಪುತ್ರನಿಂದಲ್ಲದೇ ಬೇರೆ ಯಾವುದರಿಂದಲೂ ಉಪಶಮನ-ವಾಗುವುದಿಲ್ಲ.

ಅತ್ರಾಪಿ ಶ್ರೂಯತಾಂ ವೃತ್ತಂ ಯತ್ಪೂರ್ವಮಭವನ್ಮುನೇ ।
ಉತ್ಪತ್ತೌ ಕಾರ್ತವೀರ್ಯಸ್ಯ ಹೈಹಯಸ್ಯ ಮಹಾತ್ಮನಃ ॥೧೦॥

ಅಯ್ಯಾ ಮನನಶೀಲನೇ! ಈ ವಿಷಯದಲ್ಲಿ ಪೂರ್ವದಲ್ಲಿ ಮಹಾತ್ಮನಾಗಿಯೂ, ಹೈಹಯಕುಲೋತ್ಪನ್ನನಾಗಿಯೂ ಇರುವ ಕಾರ್ತವೀರ್ಯಾರ್ಜುನನ ಉತ್ಪತ್ತಿವಿಷಯಕವಾದ ಇತಿಹಾಸವನ್ನು ಹೇಳುತ್ತೇನೆ. ಶ್ರವಣಮಾಡು.

ಕೃತವೀರ್ಯೋ ಮಹೀಪಾಲಃ ಹೈಹಯೋ ನಾಮ ವೈ ಪುರಾ ।
ಶಸ್ಯ ಶೀಲಧನಾ ನಾಮ ಬಭೂವ ವರವರ್ಣಿನೀ ॥೧೧॥

ಪೂರ್ವದಲ್ಲಿ ಹೈಹಯಕುಲೋತ್ಪನ್ನನಾದ ಕೃತವೀರ್ಯನೆಂಬ ಅರಸನಿದ್ದನು. ಅವನಿಗೆ ಶೀಲಧನೆ ಎಂಬ ಸುಂದರಿಯು ಧರ್ಮಪತ್ನಿಯಾಗಿದ್ದಳು.

ಪತ್ನೀಸಹಸ್ರಪ್ರವರಾ ಮಹಿಷೀ ಶೀಲಮಂಡನಾ ।
ಸಾ ತ್ವಪುತ್ರಾ ಮಹಾಭಾಗಾ ಮೈತ್ರೇಯೀಂ ಪರ್ಯಪೃಚ್ಛತ ॥೧೨॥

ಆ ರಾಜನ ಧರ್ಮಪತ್ನಿಯಾದ ಅವಳು ಸ್ತ್ರೀಸಮುದಾಯದಲ್ಲಿ ಉತ್ತಮಳೂ, ಆಚಾರವೇ ಭೂಷಣವಾಗಿ ಉಳ್ಳವಳೂ ಎನಿಸಿ, ಪಟ್ಟದರಸಿಯಾಗಿದ್ದಳು. ಆದರೂ ಆ ಮಹಾಭಾಗ್ಯವತಿಯು ಅಪುತ್ರಳಾದುದರಿಂದ ಪೂಜ್ಯಳಾದ ಮೈತ್ರೇಯಿಯನ್ನು(?) ಈ ರೀತಿ ಪ್ರಶ್ನೆ ಮಾಡಿದಳು.

## ಕೃತವೀರ್ಯನಿಗೆ ಮಕ್ಕಳಿರಲಿಲ್ಲ

ಗುಣವತ್ ಪುತ್ರಲಾಭಾಯ ಕೃತಾಸನಪರಿಗ್ರಹಮ್ ।
ತಯಾ ಪೃಷ್ಟಾಥ ಸಾ ಸಮ್ಯಕ್ ಮೈತ್ರೇಯೀ ಬ್ರಹ್ಮವಾದಿನೀ ॥೧೩॥
ಕಥಯಾಮಾಸ ಪರಮಂ ನಾಮ್ನಾನಂತವ್ರತಂ ಮಹತ್ ।

ಸರ್ವಕಾಮಫಲಾವಾಪ್ತಿಕಾರಣಂ ಪಾಪನಾಶನಮ್ ।

ತಸ್ಯಾಃ ಸುಪುತ್ರಲಾಭಾಯ ರಾಜಪುತ್ರ್ಯಾಸ್ತಪಸ್ವಿನೀ ॥೧೪॥

ಒಂದು ದಿನ ಬ್ರಹ್ಮವಾದಿನಿಯಾದ ಮೈತ್ರೇಯಿಯು ಆ ರಾಣಿಯ ಬಳಿಗೆ ಬಂದು, ಸತ್ಕೃತಳಾಗಿ, ಆಸನವನ್ನು ಪರಿಗ್ರಹಮಾಡಿದಳು. ಬಳಿಕ ಆ ಶೀಲಧನಾ ರಾಣಿಯು ಸುಪುತ್ರಪ್ರಾಪ್ತಿಯ ವಿಚಾರವಾಗಿ ಆಕೆಯನ್ನು ಪ್ರಶ್ನೆ ಮಾಡಿದಳು. ಆಗ ಮೈತ್ರೇಯಿಯು ಆ ರಾಜಪುತ್ರಿಗೆ ಸುಪುತ್ರಾವಾಪ್ತಿಸಾಧನವೂ, ಸರ್ವಾಭೀಷ್ಟಸಿದ್ಧಿಪ್ರದವೂ, ಪಾಪನಾಶಕವೂ, ಮಹಿಮಾಯುಕ್ತವೂ ಆದ ಅನಂತವ್ರತವೆಂಬ ಸರ್ವೋತ್ತಮವಾದ ವ್ರತವನ್ನು ಉಪದೇಶಮಾಡತೊಡಗಿದಳು.

## ಕೃತವೀರ್ಯನ ಪತ್ನಿಗೆ ಮೈತ್ರೇಯೀಯ ಉಪದೇಶ

ಮೈತ್ರೇಯೀ

ಯೋ ಯಮಿಚ್ಛೇನ್ನರಃ ಕಾಮಂ ನಾರೀ ವಾ ವರವರ್ಣಿನೀ ॥೧೫॥

ಸ ತಂ ಸಮಾರಾಧ್ಯ ವಿಭುಂ ಸಮಾಪ್ನೋತಿ ಜನಾರ್ದನಾತ್ ।

ಮಾರ್ಗಶೀರ್ಷೇ ಮೃಗಶಿರೋ ಭೀಮೋ ಯಸ್ಮಿನ್ ದಿನೇಽಭವತ್ ॥೧೬॥

ಮೈತ್ರೇಯಿಯು ಹೇಳುತ್ತಾಳೆ – ಭೀಮನು ಯಾವ ದಿವಸದಲ್ಲಿ ಜನಿಸಿದನೋ ಅಂತಹ ಮೃಗಶಿರಾ ನಕ್ಷತ್ರದಿಂದ ಕೂಡಿದ ಮಾರ್ಗಶೀರ್ಷಮಾಸದ ಶುಭದಿನದಲ್ಲಿ ಜನಾರ್ದನನನ್ನು ಆರಾಧಿಸ ಬೇಕು. ಹೀಗೆ ಆರಾಧಿಸಿದರೆ ಆ ಶ್ರೀಜನಾರ್ದನನ ವರಪ್ರಸಾದದಿಂದ ಗಂಡಸಾಗಲೀ ಅಥವಾ ಶೀಲವತಿಯಾದ ಹೆಂಗಸಾಗಲೀ ಯಾವ ಯಾವ ಇಷ್ಟಾರ್ಥವನ್ನು ಬೇಡುವರೋ, ಅವರು ಆಯಾಯಾ ಇಷ್ಟಾರ್ಥಗಳನ್ನು ಹೊಂದುವರು.

## ಮಾರ್ಗಶಿರಮಾಸದಲ್ಲಿ ಪ್ರಾರಂಭ ಮಾಡಿ ಕಾರ್ತಿಕದಲ್ಲಿ ಮುಗಿಸಬೇಕು

ತಸ್ಮಿನ್ ಸಂಪ್ರಾಪ್ಯ ಗೋಮೂತ್ರಂ ಸ್ನಾತೋ ನಿಯತಮಾನಸಃ ।

ಪುಷ್ಪೈರ್ಧೂಪೈಸ್ತಥಾಗಂಧೈರುಪವಾಸೈಶ್ಚ ಭಕ್ತಿತಃ ॥

ವಾಮಪಾದಮನಂತಸ್ಯ ಪೂಜಯೇದ್ ವರವರ್ಣಿನಿ ॥೧೭॥

ಎಲೈ ಸುಂದರಿಯೇ! ಆ ದಿನದಲ್ಲಿ ನಿಯಮಯುಕ್ತಮನಸ್ಸುಳ್ಳವನಾಗಿ ಸ್ನಾನಮಾಡಿ, ಗೋಮೂತ್ರಪ್ರಾಶನಮಾಡಿ, ಉಪವಾಸದಿಂದಿದ್ದು ಭಕ್ತಿಪೂರ್ವಕವಾಗಿ ಗಂಧ, ಪುಷ್ಪ, ಧೂಪಾದಿಗಳಿಂದ ಶ್ರೀಅನಂತನ ವಾಮಪಾದವನ್ನು ಪೂಜಿಸಬೇಕು.

ಅನಂತಃಸರ್ವಕಾಮಾನಾಮನಂತಂ ಭಗವಾನ್ ಫಲಮ್ ।
ದದಾತ್ವನಂತಂ ಚ ಪುನಸ್ತದೇವಾನ್ಯತ್ರ ಜನ್ಮನಿ ॥೧೮॥
ಅನಂತಪುಣ್ಯೋಪಚಯಮನಂತಂ ತು ಮಹಾವ್ರತಮ್ ।
ಯಥಾಭಿಲಷಿತಾವಾಪ್ತಿಂ ಕುರು ಮೇ ಪುರುಷೋತ್ತಮ ॥೧೯॥

"ಶ್ರೀಅನಂತನು ಸರ್ವಕಾಮಗಳಿಗೂ ಸಾರ್ಥಕನು. ಪೂಜ್ಯನಾದ ಅನಂತನು ಅನಂತಫಲದಾಯಕನು. ಆದುದರಿಂದ ಅವನು ಜನ್ಮಾಂತರಗಳಲ್ಲಿಯೂ ನನಗೆ ಅನಂತಫಲವನ್ನು ಕೊಡಲಿ. ಅನಂತನಾಮಕ ಈ ಮಹಾವ್ರತವು ಅನಂತ ಪುಣ್ಯೋಪಚಯುವನ್ನು ಉಂಟುಮಾಡಲಿ. ಓ ಪುರುಷೋತ್ತಮನೇ! ಅಭಿಲಷಿತಫಲಪ್ರಾಪ್ತಿಯನ್ನು ನನಗೆ ಅನುಗ್ರಹಿಸು" – (ಎಂಬರ್ಥವುಳ್ಳ ಮಂತ್ರವನ್ನು ಹೇಳಿ ಪ್ರಾರ್ಥನೆ ಮಾಡಬೇಕು).

ಇತ್ಯುಚ್ಚಾರ್ಯಾಭಿಪೂಜ್ಯೈನಂ ಯಥಾವದ್ ವಿಧಿನಾ ನರಃ ।
ಸಮಾಹಿತಮನಾ ಭೂತ್ವಾ ಪ್ರಣಿಪಾತಪುರಸ್ಸರಮ್ ॥೨೦॥

ಈ ವ್ರತಾನುಷ್ಠಾನಮಾಡುವವನು ಏಕಾಗ್ರವಾದ ಮನಸ್ಸುಳ್ಳವನಾಗಿ, ನಮಸ್ಕಾರ ಪೂರ್ವಕವಾಗಿ ಈ ರೀತಿ ಪ್ರಾರ್ಥನಾಮಂತ್ರವನ್ನು ಉಚ್ಚರಿಸಿ, ಶ್ರೀಅನಂತದೇವನನ್ನು ವಿಧಿಪೂರ್ವಕವಾಗಿ ಪೂಜಿಸಬೇಕು.

ವಿಪ್ರಾಯ ದಕ್ಷಿಣಾಂ ದದ್ಯಾದನಂತಃ ಪ್ರೀಯತಾಮಿತಿ ।
ಸಮುಚ್ಚಾರ್ಯ ತತೋ ನಕ್ತಂ ಭುಂಜೀತ ತೈಲವರ್ಜಿತಮ್ ॥೨೧॥

ಅನಂತರ 'ಅನಂತಃ ಪ್ರೀಯತಾಮ್' ಎಂದು ಹೇಳಿ, ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಟ್ಟು, ಆ ದಿನ ರಾತ್ರಿಯಲ್ಲಿ ತೈಲವರ್ಜಿತವಾಗಿ ಭೋಜನ ಮಾಡಬೇಕು.

ತತಶ್ಚ ಪೌಷೇ ಪುಷ್ಯರ್ಕ್ಷೇ ತದ್ವೈವ ಭಗವತ್ಕಟಿಮ್ ।
ವಾಮಾಮಭ್ಯರ್ಚಯೇದ್ ಭಕ್ತ್ಯಾ ಗೋಮೂತ್ರಪ್ರಾಶನಂ ತತಃ ॥೨೨॥

ಬಳಿಕ ಪುಷ್ಯಮಾಸದಲ್ಲಿ ಪುಷ್ಯನಕ್ಷತ್ರಯುತವಾದ ದಿನದಲ್ಲಿ, ಹೀಗೆಯೇ ಭಗವಂತನ ಎಡದ ಕಟಿಪ್ರದೇಶವನ್ನು ಭಕ್ತಿಯಿಂದ ಪೂಜಿಸಬೇಕು. ಅನಂತರ ಗೋಮೂತ್ರವನ್ನು ಪ್ರಾಶನ ಮಾಡಬೇಕು.

ಅನಂತಃ ಸರ್ವಕಾಮಾನಾಮಿತಿ ಚೋಚ್ಚಾರಯೇತ್ ಪುನಃ ।
ಭೋಜಯೇತ ತಥಾ ವಿಪ್ರಾನ್ ವಾಚಯಿತ್ವಾ ಯಥಾವಿಧಿ ॥೨೩॥

ಈ ತಿಂಗಳಿನ ಪೂಜೆಯಲ್ಲಿ ಹಿಂದೆ ಹೇಳಿದಂತೆಯೇ 'ಅನಂತಃ ಸರ್ವಕಾಮಾನಾಮ್' (ಅನಂತನು ಸರ್ವಕಾಮಗಳಿಗೂ ಎಂಬರ್ಥವುಳ್ಳ) ಎರಡು ಮಂತ್ರಗಳನ್ನು ಪಠಿಸಬೇಕು. ಮತ್ತು ಶಾಸ್ತ್ರೋಕ್ತವಾಗಿ ಬ್ರಾಹ್ಮಣರಿಂದ ಮಂತ್ರವಾಚನ ಮಾಡಿಸಿ, ಅವರಿಗೆ ಭೋಜನ ಮಾಡಿಸಬೇಕು.

ಮಾಘೇ ಮಘಾಸು ತದ್ವಚ್ಚ ಬಾಹುಂ ದೇವಸ್ಯ ಪೂಜಯೇತ್ ।
ಸ್ಕಂಧೌ ಚ ಮಮ ಫಾಲ್ಗುನ್ಯೋಃ ಫಾಲ್ಗುನೇ ಮಾಸಿ ಭಾಮಿನಿ ॥೨೪॥

ಎಲೌ ಭಾಗ್ಯವತಿಯೇ! ಅದೇ ರೀತಿ ಮಾಘಮಾಸದಲ್ಲಿ ಮಘಾನಕ್ಷತ್ರ-ಯುಕ್ತವಾದ ದಿನದಲ್ಲಿ, ಶ್ರೀಅನಂತದೇವನ ಬಾಹುಪ್ರದೇಶವನ್ನು ಪೂಜಿಸಬೇಕು. ಫಾಲ್ಗುಣಮಾಸದಲ್ಲಿ ಉತ್ತರಾಫಲ್ಗುನೀ ನಕ್ಷತ್ರದ ದಿವಸ ಶ್ರೀಅನಂತದೇವನ ಸ್ಕಂಧ(ಹೆಗಲು) ಪ್ರದೇಶವನ್ನು ಪೂಜಿಸಬೇಕು.

ಚತುರ್ಷ್ವೇತೇಷು ಗೋಮೂತ್ರಂ ಪ್ರಾಶಯೇನ್ನೃಪನಂದಿನಿ ।
ಬ್ರಾಹ್ಮಣಾಯ ತಥಾ ದದ್ಯಾತ್ ತಿಲಾನ್ ಕನಕಮೇವ ಚ ॥೨೫॥

ಎಲೌ ರಾಜಪುತ್ರಿಯೇ! ಹಿಂದೆ ಹೇಳಿದಂತೆ ಈ ಮಾಘ, ಫಾಲ್ಗುಣಮಾಸ-ಗಳಲ್ಲಿಯೂ ಗೋಮೂತ್ರಪ್ರಾಶನವನ್ನು ಮಾಡಬೇಕು. ಮತ್ತು ಮಾಘದಲ್ಲಿ ತಿಲವನ್ನೂ, ಫಾಲ್ಗುಣದಲ್ಲಿ ಹಿರಣ್ಯವನ್ನೂ ಬ್ರಾಹ್ಮಣನಿಗೆ ದಾನ ಮಾಡಬೇಕು.

ದೇವಸ್ಯ ದಕ್ಷಿಣಂ ಸ್ಕಂಧಂ ಚೈತ್ರೇ ಚಿತ್ರಾಸು ಪೂಜಯೇತ್ ।
ತಥೈವ ಪ್ರಾಶನಂ ಚಾತ್ರ ಪಂಚಗವ್ಯಮುದಾಹೃತಮ್ ।
ವಿಪ್ರೇ ಪ್ರವಾಚಕೇ ದದ್ಯಾದ್ ಯವಾನ್ ಮಾಸಚತುಷ್ಟಯಮ್ ॥೨೬॥

ಚೈತ್ರಮಾಸದ ಚಿತ್ತಾನಕ್ಷತ್ರಯುತವಾದ ದಿನದಲ್ಲಿ ಶ್ರೀಅನಂತದೇವನ ದಕ್ಷಿಣ (ಬಲ) ಸ್ಕಂಧವನ್ನು ಪೂಜಿಸಬೇಕು. ಮತ್ತು ಆ ದಿನ ಪಂಚಗವ್ಯಪ್ರಾಶನೆಯನ್ನು ಮಾಡಬೇಕೆಂದು ಉಕ್ತವಾಗಿದೆ. ಈ ಚೈತ್ರಾದಿ ನಾಲ್ಕು ಮಾಸಗಳಲ್ಲಿ ಪ್ರವಚನತತ್ಪರನಾದ ಬ್ರಾಹ್ಮಣನಿಗೆ ಯವಧಾನ್ಯವನ್ನು ದಾನಮಾಡಬೇಕು.

ವೈಶಾಖೇ ಚ ವಿಶಾಖಾಸು ಬಾಹುಂ ಸಂಪೂಜ್ಯ ದಕ್ಷಿಣಮ್ ।
ತಥೈವೋಕ್ತಾನ್ ಯವಾನ್ ದದ್ಯಾತ್ ನಕ್ತಂ ಕುರ್ಯಾದ್ ಭುಜಿಕ್ರಿಯಾಮ್ ॥

ವೈಶಾಖಮಾಸದಲ್ಲಿ ವಿಶಾಖಾನಕ್ಷತ್ರಯುಕ್ತವಾದ ದಿನದಲ್ಲಿ, ಶ್ರೀಅನಂತದೇವನ ದಕ್ಷಿಣ ಬಾಹುವನ್ನು ಪೂಜಿಸಿ, ಹಾಗೆಯೇ ಹಿಂದೆ ಹೇಳಿದ ಯವಧಾನ್ಯವನ್ನು ಬ್ರಾಹ್ಮಣನಿಗೆ ದಾನಮಾಡಿ, ಆ ದಿನ ರಾತ್ರಿಭೋಜನವನ್ನು ಮಾಡಬೇಕು.

ಜ್ಯೇಷ್ಠಾಸು ಕಟಿಪೂಜಾಂ ಚ ಜ್ಯೇಷ್ಠಮಾಸಿ ಶುಭವ್ರತೇ ।
ಆಷಾಢಾಸು ತಥಾಷಾಢೇ ಕುರ್ಯಾತ್ ಪಾದಾರ್ಚನಂ ಶುಭೇ ॥೨೮॥

ಓ ಶುಭವ್ರತಳೇ! ಜ್ಯೇಷ್ಠಮಾಸದಲ್ಲಿ ಜ್ಯೇಷ್ಠಾನಕ್ಷತ್ರದ ದಿನ ಶ್ರೀಅನಂತನ ಕಟಿಯನ್ನು ಪೂಜೆ ಮಾಡಬೇಕು. ಓ ಮಂಗಳಕರಳೇ! ಹಾಗೆಯೇ ಆಷಾಢಮಾಸದಲ್ಲಿ ಪೂರ್ವಾಷಾಢನಕ್ಷತ್ರದಲ್ಲಿ ಆ ಶ್ರೀಅನಂತದೇವನ ದಕ್ಷಿಣಪಾದವನ್ನು ಪೂಜೆ ಮಾಡಬೇಕು.

ಪಾದದ್ವಯಂ ತು ಶ್ರವಣೇ ಶ್ರಾವಣೇ ಮಾಸಿ ಪೂಜಯೇತ್?।
ಘೃತಂ ವಿಪ್ರಾಯ ದಾತವ್ಯಂ ಪ್ರಾಶನೀಯಂ ಯಥಾವಿಧಿ ॥೨೯॥

ಶ್ರಾವಣಮಾಸದ ಶ್ರವಣ ನಕ್ಷತ್ರದಲ್ಲಿ ಪಾದದ್ವಯಾರ್ಚನೆಯನ್ನು ಮಾಡಬೇಕು. ಮತ್ತು ಬ್ರಾಹ್ಮಣನಿಗೆ ಘೃತದಾನ ಮಾಡಿ ತಾನೂ ಶಾಸ್ತ್ರೋಕ್ತವಾಗಿ ಘೃತಪ್ರಾಶನೆಯನ್ನು ಮಾಡಬೇಕು.

ಶ್ರಾವಣಾದಿಷು ಮಾಸೇಷು ಪ್ರಾಶನಂ ದಾನಮೇವ ಚ ।
ಏತದೇವಂ ಸಮಾಖ್ಯಾತಂ ದೇವಾಂಸ್ತದ್ವಚ್ಚ ಪೂಜಯೇತ್ ॥೩೦॥

ಶ್ರಾವಣಾದಿಯಾಗಿ ಮುಂದಿನ ಮಾಸಗಳಲ್ಲಿ, ಪ್ರಾಶನಕ್ಕೂ ದಾನಕ್ಕೂ ಈ ಘೃತವೇ ಉಕ್ತವಾಗಿದೆ. ಮೊದಲಿನಂತೆಯೇ ದೇವಪೂಜಾದಿಗಳನ್ನು ಮಾಡಬೇಕು.

## ಭಾದ್ರಪದದಲ್ಲಿ ಅನಂತನ ಹೃದಯಕ್ಕೆ ಪೂಜೆ

ಗುಹ್ಯಂ ಪ್ರೋಷ್ಠಪದಾಯೋಗೇ ಮಾಸಿ ಭಾದ್ರಪದೇऽರ್ಚಯೇತ್ ।
ತದ್ವದಾಶ್ವಯುಜೇ ಪೂಜ್ಯಂ ಹೃದಯಂ ಚಾಶ್ವಿನೀಷು ಚ ॥೩೦॥

ಭಾದ್ರಪದಮಾಸದ ಪ್ರೋಷ್ಠಪದನಕ್ಷತ್ರಯುತವಾದ ದಿನದಲ್ಲಿಯೂ, ಹಾಗೆಯೇ ಆಶ್ವಯುಜಮಾಸದ ಅಶ್ವಿನೀನಕ್ಷತ್ರಯುತವಾದ ದಿನದಲ್ಲಿಯೂ ಸ್ವಾಮಿಯ ಹೃದಯಪೂಜೆಯನ್ನು ಮಾಡಬೇಕು.

ಕುರ್ಯಾತ್ ಸಮಾಹಿತಮನಾಃ ಸ್ನಾನಂ ಪ್ರಾಶನಮರ್ಚನಮ್ ।
ಅನಂತಶಿರಸಃ ಪೂಜಾಂ ಕಾರ್ತಿಕೇ ಕೃತ್ತಿಕಾಸು ಚ ॥೩೨॥

ಈ ವ್ರತಾನುಷ್ಠಾನವನ್ನು ಮಾಡುವವನು ಏಕಾಗ್ರತೆಯ ಮನಸ್ಸುಳ್ಳವನಾಗಿ ಸ್ನಾನ, ಪ್ರಾಶನೆ, ಅರ್ಚನೆ ಇವುಗಳನ್ನೆಲ್ಲಾ ಮಾಡಬೇಕು. ಕಾರ್ತಿಕಮಾಸದಲ್ಲಿ ಕೃತ್ತಿಕಾನಕ್ಷತ್ರ-ಯುತವಾದ ದಿನದಲ್ಲಿ ಶ್ರೀಅನಂತದೇವನ ಶಿರಸ್ಸನ್ನು ಪೂಜೆ ಮಾಡತಕ್ಕದು.

ಯಸ್ಮಿನ್ ಯಸ್ಮಿನ್ ದಿನೇ ಪೂಜಾ ತತ್ರ ತತ್ರ ತದಾ ದಿನೇ ।
ನಾಮಾನಂತಸ್ಯ ಜಪ್ತವ್ಯಂ ಕ್ಷುತಪ್ರಸ್ಖಲಿತಾದಿಷು ॥೩೩॥

ಯಾವ ಯಾವ ದಿನದಲ್ಲಿ ಶ್ರೀಅನಂತದೇವನ ಪೂಜೆ ಮಾಡಬೇಕೋ, ಆಯಾಯ ದಿನದಲ್ಲಿ ಪೂಜಾಕಾಲದಲ್ಲಿ ಕ್ಷುತ(ಸೀನು), ಸ್ವರವರ್ಣಾದಿ ಸ್ಖಾಲಿತ್ಯ ಇತ್ಯಾದಿ ದೋಷಗಳು ಪ್ರಾಪ್ತವಾದರೆ, ಆ ದೋಷದ ಪ್ರಾಯಶ್ಚಿತ್ತಾರ್ಥವಾಗಿ ಶ್ರೀಅನಂತದೇವನ ನಾಮವನ್ನು ಜಪಿಸಬೇಕು.

ಘೃತೇನಾನಂತಮುದ್ದಿಶ್ಯ ಪೂರ್ವಂ ಮಾಸಚತುಷ್ಟಯಮ್ ।
ಕುರ್ವೀತ ಹೋಮಂ ಚೈತ್ರಾದೌ ಶಾಲಿನಾ ಕುಲನಂದಿನಿ ॥೩೪॥

ಎಲೌ ಕುಲಸ್ತ್ರೀಯೆ! ಮಾರ್ಗಶೀರ್ಷಾದಿ ಮೊದಲನೆಯ ನಾಲ್ಕು ತಿಂಗಳಲ್ಲಿ ಶ್ರೀಅನಂತದೇವನನ್ನು ಉದ್ದೇಶಿಸಿ ಘೃತಹೋಮವನ್ನು ಮಾಡಬೇಕು. ಚೈತ್ರಾದಿ ನಾಲ್ಕು ತಿಂಗಳಲ್ಲಿ ಶಾಲಿ(ಭತ್ತ)ಹೋಮವನ್ನು ಮಾಡಬೇಕು.

ಕ್ಷೀರೇಣ ಶ್ರಾವಣಾದೌ ಚ ಹೋಮೋ ಮಾಸಚತುಷ್ಟಯಮ್ ।
ಪ್ರಶಸ್ತಂ ಸರ್ವಮಾಸೇಷು ಹವಿಷ್ಯಾನ್ನೇನ ಭೋಜನಮ್ ॥೩೫॥

ಶ್ರಾವಣಾದಿ ನಾಲ್ಕು ತಿಂಗಳುಗಳಲ್ಲಿ ಕ್ಷೀರದಿಂದ ಹವನವನ್ನು ನಡೆಸಬೇಕು. ಎಲ್ಲಾ ತಿಂಗಳುಗಳಲ್ಲಿಯೂ ಈ ಹುತಶಿಷ್ಟಾನ್ನವನ್ನು ಭುಂಜಿಸುವುದು ಪ್ರಶಸ್ತವಾದುದು.

ಏವಂ ದ್ವಾದಶಭಿರ್ಮಾಸೈಃ ಪಾರಣಾತ್ರಿತಯಂ ಶುಭೇ ।
ವ್ರತಾವಸಾನೇ ಚಾನಂತಂ ಸೌವರ್ಣಂ ಕಾರಯೇಚ್ಛುಭಮ್ ॥೩೬॥

ಎಲೌ ಸೌಭಾಗ್ಯವತೀ! ಈ ರೀತಿ ನಾಲ್ಕು ನಾಲ್ಕು ತಿಂಗಳಿಗೊಮ್ಮೆ ಒಂದು ಪಾರಣದಂತೆ, ವರ್ಷದಲ್ಲಿ ಮೂರು ಪಾರಣೆ ಪೂರ್ತಿಯಾಗುವುದು. ಈ ವ್ರತಸಮಾಪ್ತಿಯಲ್ಲಿ ಶ್ರೀಅನಂತದೇವನ ಶುಭಪ್ರತಿಮೆಯನ್ನು ಚಿನ್ನದಿಂದ ಮಾಡಿಸಬೇಕು.

ರಾಜತಂ ಮುಸಲಂ ಚೈವ ಹಲಂ ಪಾರ್ಶ್ವೇಷು ವಿನ್ಯಸೇತ್ ।
ಪುಷ್ಪಧೂಪಾದಿನೈವೇದ್ಯೈಃ ಪೂಜಾ ಕಾರ್ಯಾ ಯಥಾವಿಧಿ ॥೩೭॥

ಮತ್ತು ಹಲ (ನೇಗಿಲು), ಮುಸಲ (ಒನಕೆ) ಇವೆರಡನ್ನೂ ಬೆಳ್ಳಿಯಿಂದ ಮಾಡಿಸಿ, ಆ ಸುವರ್ಣದ ಅನಂತಪ್ರತಿಮೆಯ ಪಾರ್ಶ್ವದಲ್ಲಿ ಇರಿಸಿ, ಶಾಸ್ತ್ರೋಕ್ತರೀತಿಯಲ್ಲಿ ಪುಷ್ಪ, ಧೂಪಾದಿಗಳಿಂದ ಪೂಜಿಸಿ, ನೈವೇದ್ಯ ಸಮರ್ಪಣೆ ಮಾಡಬೇಕು.

ತಾಮ್ರಪೀಠೋಪರಿ ಹರೇರ್ಮಂತ್ರೈರೇಭಿಃ ಯಥಾಕ್ರಮಮ್ ।
ನಮೋಽಸ್ತ್ವನಂತಾಯ ಶಿರಃ ಪಾದೌ ಸರ್ವಾತ್ಮನೇ ನಮಃ ॥೩೮॥

ತಾಮ್ರದ ಪೀಠದ ಮೇಲೆ ಶ್ರೀಹರಿಯ ಪ್ರತಿಮೆಯನ್ನಿಟ್ಟು, ಕ್ರಮಪ್ರಕಾರವಾಗಿ ಈ ಮುಂದೆ ಹೇಳುವ ನಾಮಮಂತ್ರಗಳಿಂದ ಪೂಜೆ ಮಾಡಬೇಕು. 'ಅನಂತಾಯ ನಮಃ' ಎಂದು ಶಿರಸ್ಸನ್ನೂ, 'ಸರ್ವಾತ್ಮನೇ ನಮಃ' ಎಂದು ಪಾದದ್ವಯಗಳನ್ನೂ ಪೂಜಿಸಬೇಕು.

ಶೇಷಾಯ ಜಾನುಯುಗಳಂ ಕಾಮಾಯೇತಿ ಕಟಿಂ ನಮಃ ।
ನಮೋಽಸ್ತು ವಾಸುದೇವಾಯ ಪಾರ್ಶ್ವಂ ಸಂಪೂಜಯೇದ್ಧರೇಃ ॥೩೯॥

'ಶೇಷಾಯ ನಮಃ' ಎಂದು ಎರಡು ಮೊಣಕಾಲುಗಳನ್ನೂ, 'ಕಾಮಾಯ ನಮಃ' ಎಂದು ಕಟಿಪ್ರದೇಶವನ್ನೂ, 'ವಾಸುದೇವಾಯ ನಮಃ' ಎಂದು ಶ್ರೀಹರಿಯ ಪಾರ್ಶ್ವವನ್ನೂ ಸಹ ಪೂಜಿಸಬೇಕು.

ಸಂಕರ್ಷಣಾಯ ಇತ್ಯುದರಂ ಭುಜಂ ಸರ್ವಾಸುಧಾರಿಣೇ ।
ಕಂಠಂ ಶ್ರೀಕಂಠನಾಥಾಯ ಮುಖಮಿಂದುಮುಖಾಯ ಚ ॥೪೦॥

'ಸಂಕರ್ಷಣಾಯ ನಮಃ' ಎಂದು ಉದರವನ್ನೂ, 'ಸರ್ವಾಸುಧಾರಿಣೇ ನಮಃ' ಎಂದು ಭುಜವನ್ನೂ, 'ಶ್ರೀಕಂಠನಾಥಾಯ ನಮಃ' ಎಂದು ಕಂಠವನ್ನೂ, 'ಇಂದುಮುಖಾಯ ನಮಃ' ಎಂದು ಹೇಳಿ ಮುಖವನ್ನೂ ಅರ್ಚಿಸಬೇಕು.

ಹಲಂ ಚ ಮುಸಲಂ ಚೈವ ಸ್ವನಾಮ್ನಾ ಪೂಜಯೇದ್ ಬುಧಃ ।
ಏವಂ ಸಂಪೂಜ್ಯ ಗೋವಿಂದಂ ಸಿತವಸ್ತ್ರವಿಭೂಷಿತಮ್ ॥೪೧॥

ಈ ವ್ರತಾನುಷ್ಠಾನವನ್ನು ಮಾಡುವ ಪಂಡಿತನು ಹಲ, ಮುಸಲ ಇವನ್ನು ಆಯಾಯಾ ನಾಮಗಳನ್ನೇ ಹೇಳಿ ಪೂಜಿಸಬೇಕು. ಬಳಿಕ ಶುಕ್ಲವಸ್ತ್ರದಿಂದ ಅಲಂಕರಿಸಿ, ಶ್ರೀಹರಿಯನ್ನು ಪೂಜಿಸಬೇಕು.

ಛತ್ರೋಪಾನತ್ಸುಸಂಯುಕ್ತಂ ಸ್ರಗ್‌ದಾಮಾಲಂಕೃತಂ ತಥಾ?।
ನಕ್ಷತ್ರದೇವತಾಃ ಪೂಜ್ಯಾ ನಕ್ಷತ್ರಾಣಿ ಚ ಸರ್ವಶಃ ॥೪೨॥

ಮತ್ತು ಛತ್ರಿ, ಪಾದುಕಾಯುಗಳ ಇವುಗಳನ್ನು ಸಮರ್ಪಿಸಿ ಉಪಚರಿಸಿ, ಗಂಧಮಾಲ್ಯಾದಿಗಳಿಂದಲೂ ಅಲಂಕರಿಸಿ ಅರ್ಚಿಸಬೇಕು. ಮತ್ತು ಎಲ್ಲಾ ನಕ್ಷತ್ರಾಭಿಮಾನಿದೇವತೆಗಳನ್ನೂ, ನಕ್ಷತ್ರಗಳನ್ನೂ ಪೂಜಿಸಬೇಕು.

ಸೋಮೋ ನಕ್ಷತ್ರರಾಜಶ್ಚ ಮಾಸಃ ಸಂವತ್ಸರಂ ತಥಾ ।
ದ್ವಾದಶಾತ್ರಘಟಾನ್ ಕುರ್ಯಾತ್ ಸತೋಯಾಂಶ್ಚಾನ್ನ ಸಂಯುತಾನ್ ॥೪೩॥

ಹಾಗೆಯೇ ನಕ್ಷತ್ರರಾಜನಾದ ಚಂದ್ರನನ್ನೂ, ಮಾಸ, ಸಂವತ್ಸರಗಳ ಅಭಿಮಾನ-ದೇವತೆಗಳನ್ನೂ ಪೂಜಿಸಬೇಕು. ಮತ್ತು ಈ ವ್ರತದಲ್ಲಿ ಜಲಪೂರಿತವಾಗಿಯೂ, ಅನ್ನಸಹಿತವಾಗಿಯೂ ಇರುವ, ಹನ್ನೆರಡು ಕಲಶಗಳನ್ನು ಸ್ಥಾಪಿಸಿ ಪೂಜಿಸಬೇಕು.

ಏವಂ ಸಂಪೂಜ್ಯ ವಿಧಿವತ್ ದೇವದೇವಂ ಜನಾರ್ದನಮ್ ।
ಬ್ರಾಹ್ಮಣಂ ಪೂಜಯಿತ್ವಾ ಚ ವಸ್ತ್ರೈರಾಭರಣೈಸ್ತಥಾ ॥೪೪॥

ಈ ರೀತಿ ಶಾಸ್ತ್ರೋಕ್ತಪ್ರಕಾರವಾಗಿ ದೇವದೇವನಾದ ಶ್ರೀಜನಾರ್ದನನನ್ನು ಪೂಜಿಸಿ, ಆಮೇಲೆ ವಸ್ತ್ರಾಭರಣಾದಿಗಳಿಂದ ಬ್ರಾಹ್ಮಣನನ್ನು ಪೂಜೆ ಮಾಡಬೇಕು.

ಕರ್ಣಾಂಗುಲ್ಯೈಃ ಪವಿತ್ರೈಶ್ಚ ಶಾಂತಂ ದಾಂತಂ ಜಿತೇಂದ್ರಿಯಮ್ ।
ಪುರಾಣಜ್ಞಂ ಧರ್ಮನಿತ್ಯಮವ್ಯಂಗಂ ಸುಪ್ರಿಯಂವದಮ್ ॥೪೫॥

ಮತ್ತು ಆ ಬ್ರಾಹ್ಮಣನಿಗೆ ಕರ್ಣಕುಂಡಲ, ಪವಿತ್ರದುಂಗುರ ಇತ್ಯಾದಿಗಳನ್ನು ಕೊಟ್ಟು ಉಪಚರಿಸಬೇಕು. ಆ ಪೂಜ್ಯ ಬ್ರಾಹ್ಮಣನು ಶಾಂತನೂ, ಜಿತೇಂದ್ರಿಯನೂ, ಪುರಾಣಜ್ಞನೂ ಯಾವಾಗಲೂ ಧರ್ಮಾನುಷ್ಠಾನಪರನೂ, ಅಂಗವೈಕಲ್ಯರಹಿತನೂ, ಪ್ರಿಯವಾದಿಯೂ ಆಗಿರಬೇಕು.

ತಸ್ಮೈ ದೇಯಂ ಸಮಸ್ತಂ ತದನಂತಃ ಪ್ರೀಯತಾಮಿತಿ ।
ಅನ್ಯೇಷಾಂ ಬ್ರಾಹ್ಮಣಾನಾಂ ಚ ದೇಯಂ ಶಕ್ತ್ಯಾ ಯಥೇಪ್ಸಿತಮ್ ॥೪೬॥

ಅಂತಹ ಬ್ರಾಹ್ಮಣನಿಗೆ 'ಶ್ರೀಮದನಂತಃ ಪ್ರೀಯತಾಮ್' ಎಂದು ಹೇಳಿ, ಆ ಅನಂತಪ್ರತಿಮೆ, ಕಲಶ ಇತ್ಯಾದಿಗಳನ್ನೆಲ್ಲಾ ದಾನ ಕೊಡಬೇಕು. ಇತರ ಬ್ರಾಹ್ಮಣರಿಗೂ ಸ್ವಶಕ್ತ್ಯಾನುಸಾರವಾಗಿ ಇತರ ವಸ್ತುಗಳನ್ನು ದಾನ ಮಾಡಬೇಕು.

ಅನೇನ ವಿಧಿನಾ ಪಾರ್ಥ ವ್ರತಂ ಚೈತತ್ ಸಮಾಪ್ಯತೇ ।
ಪಾರಿತೇ ಚ ಸಮಾಪ್ನೋತಿ ಸರ್ವಾನೇವ ಮನೋರಥಾನ್ ॥೪೭॥

ಅಯ್ಯಾ ಪಾರ್ಥನೇ! ಈ ವಿಧಿಯಿಂದ ಆಚರಿಸಿದರೆ, ಈ ವ್ರತವು ಸಾಂಗವಾಗಿ ಸಮಾಪ್ತಿಯನ್ನು ಹೊಂದುವುದು. ಈ ವ್ರತವನ್ನು ಸಾಂಗವಾಗಿ ಆಚರಿಸಿ, ವ್ರತಾಂಗವಾದ ಪಾರಣೆಯನ್ನೂ ಕ್ರಮವಾಗಿ ಪೂರೈಸಿದರೆ, ಆ ಪುರುಷನು ತನ್ನ ಮನೋರಥಗಳನ್ನೆಲ್ಲಾ ಪಡೆಯುತ್ತಾನೆ.

ಪುತ್ರಾರ್ಥಿಭಿರ್ವಿತ್ತಕಾಮೈಃ ಭೃತ್ಯದಾರಾನಭೀಪ್ಸುಭಿಃ ।
ಪ್ರಾರ್ಥಯದ್ಭಿಶ್ಚ ಮರ್ತ್ಯೈರ್ಽಸ್ಮಿನ್ನಾರೋಗ್ಯಫಲಸಂಪದಃ ॥೪೮॥

ಈ ಲೋಕದಲ್ಲಿ ಪುತ್ರಾಭಿಲಾಷೆಯುಳ್ಳವರು, ಧನಾಭಿಲಾಷಿಗಳು, ಭೃತ್ಯ-ಪತ್ನಿ ಇವರನ್ನು ಇಚ್ಛಿಸುವವರು, ಹಾಗೆಯೇ ಆರೋಗ್ಯಫಲ ಸಂಪತ್ತುಗಳನ್ನು ಬಯಸುವವರು ಎಲ್ಲರೂ ಈ ವ್ರತವನ್ನು ಆಚರಿಸತಕ್ಕದ್ದು.

ಏತದ್ ವ್ರತಂ ಮಹಾಭಾಗೇ ಪುಣ್ಯಂ ಸ್ವಸ್ತ್ಯಯನಪ್ರದಮ್ ।
ಅನಂತವ್ರತಸಂಜ್ಞಂ ವೈ ಸರ್ವಪಾಪಪ್ರಣಾಶನಮ್ ॥೪೯॥

ಎಲೌ ಮಹಾಸೌಭಾಗ್ಯವತಿಯೇ! ಅನಂತವ್ರತವೆಂಬ ನಾಮಧೇಯವನ್ನು ಹೊಂದಿದ ಈ ವ್ರತವು ಪುಣ್ಯಪ್ರದವೂ, ಸಕಲಪಾಪನಾಶಕವೂ, ಕಲ್ಯಾಣನಿಲಯವೂ ಆಗಿದೆ.

ತತ್ಕುರುಷ್ವೈವ ದೇವಿ ತ್ವಂ ವ್ರತಂ ಶೀಲಧನೇ ಪರಮ್ ।
ವರಿಷ್ಠಂ ಸರ್ವಲೋಕಸ್ಯ ಯದಿ ಪುತ್ರಮಭೀಪ್ಸ್ಯಸಿ ॥೫೦॥

ಎಲೌ ಶೀಲಧನದೇವಿಯೇ! ನೀನು ಪುತ್ರಾಭಿಲಾಷೆಯುಳ್ಳವಳಾದರೆ ಸರ್ವ-ಲೋಕದಲ್ಲೂ ಉತ್ತಮವೆಂದೆನಿಸಿಕೊಂಡ ಈ ಅನಂತವ್ರತವನ್ನು ಆಚರಿಸು - ಎಂದಳು.

ಶ್ರೀಕೃಷ್ಣಃ
ಇತಿ ಶೀಲಧನಾ ಶ್ರುತ್ವಾ ಮೈತ್ರೇಯೀವಚನಂ ಶುಭಮ್ ।
ಚಕಾರೈತದ್ ವ್ರತವರಂ ಸಾ ವಿಷ್ಣ್ವರ್ಪಿತಮಾನಸಾ ॥೫೧॥

ಶ್ರೀಕೃಷ್ಣನು ಹೇಳುತ್ತಾನೆ – ಆ ಶೀಲಧನಳೆಂಬ ರಾಜಮಹಿಷಿಯು ಆ ಮೈತ್ರೇಯಿಯು ಆಡಿದ ಆ ಶುಭವಚನವನ್ನು ಕೇಳಿ, ವಿಷ್ಣುವಿನಲ್ಲಿ ಏಕಾಗ್ರ-ಚಿತ್ತವುಳ್ಳವಳಾಗಿ ಈ ಅನಂತವ್ರತವನ್ನು ಆಚರಿಸಿದಳು.

ಪುತ್ರಾರ್ಥಿನ್ಯಾಃ ತತಸ್ತಸ್ಮಾದ್ ವ್ರತೇನಾನೇನ ಸುವ್ರತ ।
ವಿಷ್ಣುಸ್ತುತೋಷ ತುಷ್ಟೇ ಚ ವಿಷ್ಣೌ ಸಾ ಸುಷುವೇ ಸುತಮ್ ॥೫೨॥

ಅಯ್ಯಾ ಸದ್ವ್ರತನೇ! ಪುತ್ರಾರ್ಥಿನಿಯಾಗಿ ಆ ಶೀಲಧನೆಯು ಆಚರಿಸಿದ ಈ ವ್ರತದಿಂದ ಶ್ರೀಮಹಾವಿಷ್ಣುವು ಸಂತುಷ್ಟನಾದನು. ಅವನ ಕೃಪೆಯಿಂದ ಆ ಶೀಲಧನೆಯು ಒಬ್ಬ ಪುತ್ರನನ್ನು ಪ್ರಸವಿಸಿದಳು.

ತಸ್ಯ ವೈ ಜಾತಮಾತ್ರಸ್ಯ ಪ್ರವವೌ ಚಾನಿಲಃ ಶುಭಮ್ ।
ನೀರಜಸ್ಕಮಭೂದ್ ವ್ಯೋಮ ಮುದಂ ಪ್ರಾಪಾಖಿಲಂ ಜಗತ್ ॥೫೩॥

ಆ ಪುತ್ರನು ಭೂಮಿಯಲ್ಲಿ ಜನಿಸಿದ ತತ್ಕ್ಷಣದಲ್ಲೇ ಮಂದಮಾರುತವು ಶುಭಕರವಾಗಿ ಬೀಸಿತು. ಅಂತರಿಕ್ಷವು ನಿರ್ಮಲವಾಯಿತು. ಸಕಲಪ್ರಪಂಚವೂ ಸಂತೋಷಹೊಂದಿತು.

ದೇವದುಂದುಭಯೋ ನೇದುಃ ಪುಷ್ಪವೃಷ್ಟಿಃ ಪಪಾತ ಚ ।
ಪ್ರಜಗುರ್ದೇವಗಂಧರ್ವಾ ನನೃತುಶ್ಚಾಪ್ಸರೋಗಣಾಃ ॥೫೪॥

ಮತ್ತು ದೇವದುಂದುಭಿಗಳು ಮೊಳಗಿದವು. ಆಕಾಶದಿಂದ ಪುಷ್ಪವೃಷ್ಟಿಯು ಸುರಿಯಿತು. ದೇವತೆಗಳೂ ಗಂಧರ್ವರೂ ಗಾನಮಾಡಿದರು. ಅಪ್ಸರಸರ ಸಮುದಾಯವು ನರ್ತನಾಭಿನಯ ಮಾಡಿತು.

ಧರ್ಮೇ ಮನಃ ಸಮಸ್ತಸ್ಯ ಪಾರ್ಥ ಲೋಕಸ್ಯ ಚಾಭವತ್ ।
ತಸ್ಯ ನಾಮ ಪಿತಾ ಚಕ್ರೇ ತನಯಸ್ಯಾರ್ಜುನೇತಿ ವೈ ॥೫೫॥

ಅಯ್ಯಾ ಕುಂತೀಪುತ್ರನೇ! ಆಗ ಎಲ್ಲರಿಗೂ ಧರ್ಮಮಾರ್ಗದಲ್ಲೇ ಮನಸ್ಸು ಹುಟ್ಟಿತು. ಆ ಮಗುವಿನ ತಂದೆಯಾದ ಕೃತವೀರ್ಯನು ಆ ಪುತ್ರನಿಗೆ 'ಅರ್ಜುನ' ಎಂದು ನಾಮಕರಣ ಮಾಡಿದನು.

## ಅನಂತವ್ರತದ ಆಚರಣೆಯಿಂದ ಹುಟ್ಟಿದವನೇ ಕಾರ್ತವೀರ್ಯಾರ್ಜುನ

ಕೃತವೀರ್ಯಸುತತ್ವಾಚ್ಚ ಕಾರ್ತವೀರ್ಯೋ ಬಭೂವ ಸಃ ।
ತೇನಾಪಿ ಭಗವಾನ್ ವಿಷ್ಣುಃ ದತ್ತಾತ್ರೇಯಸ್ವರೂಪವಾನ್ ।
ಆರಾಧಿತೋಽತಿಮಹತಾ ತಪಸಾ ಪಾರ್ಥ ಭೂಭೃತಾ ॥೫೬॥

ಅಯ್ಯಾ ಪಾರ್ಥನೇ! ಕೃತವೀರ್ಯನ ಪುತ್ರನಾದುದರಿಂದ ಆ ಮಗುವಿಗೆ 'ಕಾರ್ತ- ವೀರ್ಯ' ಎಂಬ ನಾಮಧೇಯವು ಬಂದಿತು. ಆ ಕಾರ್ತವೀರ್ಯಾರ್ಜುನನು ಪರಮಪೂಜ್ಯನಾದ ಶ್ರೀದತ್ತಾತ್ರೇಯಸ್ವರೂಪದ ಶ್ರೀಮಹಾವಿಷ್ಣುವನ್ನು ಮಹಾಘೋರತಪಸ್ಸಿನಿಂದ ಆರಾಧಿಸಿದನು.

ತಸ್ಯ ತುಷ್ಟೋ ಜಗನ್ನಾಥಶ್ಚಕ್ರವರ್ತಿತ್ವಮುತ್ತಮಮ್ ।
ದದೌ ಶೌರ್ಯಧನೇ ಚಾಪಿ ಸಕಲಾನ್ಯಾಯುಧಾನಿ ಚ ।
ಸ ವವ್ರೇ ಚ ವಧೋ ದೇವ ಮಮ ತ್ವತ್ತೋ ಭವೇದಿತಿ ॥೫೭॥

ಜಗದೀಶನಾದ ಶ್ರೀವಿಷ್ಣುವು ಆ ತಪಸ್ಸಿಗೆ ಮೆಚ್ಚಿ, ಅವನಿಗೆ ಉತ್ತಮವಾದ ಚಕ್ರವರ್ತಿಪದವಿಯನ್ನು ಅನುಗ್ರಹಿಸಿದುದಲ್ಲದೇ ಶೌರ್ಯಧನನಾದ ಆ ಕಾರ್ತವೀರ್ಯಾರ್ಜುನನಿಗೆ ಸಕಲ ಆಯುಧಗಳನ್ನೂ ಕೊಟ್ಟನು. ಆಗ ಕಾರ್ತವೀರ್ಯಾರ್ಜುನನು 'ಓ ದೇವಾಧಿದೇವನೇ! ನನಗೆ ಸಾಕ್ಷಾತ್ತಾಗಿ ನಿನ್ನ ಕೈಯಿಂದ ಮರಣವು ಲಭಿಸಬೇಕು' ಎಂದೂ,

ಪರಂ ತು ಸ್ಮರಣಂ ಜ್ಞಾನಂ ಭೀತಾನಾಮೂರ್ತಿನಾಶನಮ್ ।
ಸ್ಮರಣಾದುಪಕಾರಿತ್ವಂ ಜಗತೋಽಸ್ಯ ಜಗತ್ಪತೇ ॥೫೮॥

ಓ ಜಗತ್ಪತಿಯೇ! ಸರ್ವವಿಷಯಕವಾದ ಸ್ಮರಣ, ಜ್ಞಾನ, ಭಯಪೀಡಿತರಾದವರ ಭಯವನ್ನು ನಾಶಮಾಡುವಶಕ್ತಿ, ಯಾರಾದರೂ ನನ್ನನ್ನು ಸ್ಮರಿಸಿದ ಮಾತ್ರಕ್ಕೆ ಅವರಿಗೆ ಉಪಕಾರಮಾಡುವ ಶಕ್ತಿ, ಇವೆಲ್ಲಾ ನನಗೆ ಬರಬೇಕು ಎಂದೂ ಕೇಳಿಕೊಂಡನು.

ತಮಾಹ ದೇವದೇವೇಶಃ ಪುಂಡರೀಕನಿಭೇಕ್ಷಣಃ ।
ಸರ್ವಮೇತನ್ಮಹಾಭಾಗ ತವ ಭೂಯೋ ಭವಿಷ್ಯತಿ ॥೫೯॥

ಕಮಲದಳನಯನನೂ ದೇವಾಧಿದೇವನೂ ಆದ ಶ್ರೀಮಹಾವಿಷ್ಣುವು ಅವನನ್ನು ಕುರಿತು ಹೇಳುತ್ತಾನೆ – 'ಅಯ್ಯಾ ಮಹಾಭಾಗ್ಯಶಾಲಿಯೇ! ನೀನು ಕೇಳಿದ ವರವಲ್ಲದೆ ಈ ಮಹಿಮೆಗಳೂ ಕೂಡ ನಿನಗೆ ಲಭಿಸುವವು'.

ಯಶ್ಚ ಪ್ರಭಾ ತೇ ರಾತ್ರೌ ಚ ತ್ವಾಂ ನರಃ ಕೀರ್ತಯಿಷ್ಯತಿ ।
ನಮೋಽಸ್ತು ಕಾರ್ತವೀರ್ಯಾಯೇತ್ಯಭಿಧಾಸ್ಯತಿ ಚೈವ ಯಃ ।
ತಿಲಪ್ರಸ್ಥಪ್ರದಾನಸ್ಯ ನರಃ ಪುಣ್ಯಮವಾಪ್ಸ್ಯತಿ ॥೬೦॥

'ಮತ್ತು ಯಾವ ಪುರುಷನು ಪ್ರಾತಃಕಾಲದಲ್ಲಾಗಲೀ, ರಾತ್ರಿಯ ಕಾಲದಲ್ಲಾಗಲೀ, ನಿನ್ನ ನಾಮಸಂಕೀರ್ತನೆ ಮಾಡುವನೋ, ಮತ್ತು

'ಕಾರ್ತವೀರ್ಯಾಯ ನಮೋಸ್ತು' ಎಂದು ಯಾವನು ಹೇಳುವನೋ ಅಂತಹ ಪುರುಷನು ಒಂದು ಸೇರು ತಿಲದಾನ ಮಾಡಿದ್ದರಿಂದ ಬರುವಷ್ಟು ಪುಣ್ಯಕ್ಕೆ ಭಾಗಿಯಾಗುವನು.

ಅನಷ್ಟದ್ರವ್ಯತಾ ಚೈವ ತವ ನಾಮಾನುಕೀರ್ತನೇ ।
ಭವಿಷ್ಯತಿ ಮಹೀಪಾಲೇತ್ಯುಕ್ತ್ವಾ ತಂ ಪ್ರಯಯೌ ಹರಿಃ ॥೬೧॥

'ಅಯ್ಯಾ ರಾಜನೇ! ನಿನ್ನ ನಾಮಸಂಕೀರ್ತನೆ ಮಾಡುವವನಿಗೆ ಯಾವಾಗಲೂ ದ್ರವ್ಯನಷ್ಟಸಂಭವಿಸುವಿಕೆಯು ಇಲ್ಲದಂತಾಗುವುದು. ನಷ್ಟವಾದ ದ್ರವ್ಯವೂ ಮತ್ತೆ ಲಭಿಸುವುದು' - ಹೀಗೆಂದು ಆ ಕಾರ್ತವೀರ್ಯಾರ್ಜುನನಿಗೆ ಶ್ರೀಹರಿಯು ವರದಾನ ಮಾಡಿ ಅಂತರ್ಹಿತನಾದನು.

ಸ ಚಾಪಿ ವರಮಾಸಾದ್ಯ ಪ್ರಸನ್ನಾದ್ ಗರುಡಧ್ವಜಾತ್ ।
ಪಾಲಯಾಮಾಸ ಭೂಪಾಲಃ ಸಪ್ತದ್ವೀಪಾಂ ವಸುಂಧರಾಮ್ ॥೬೨॥

ಆ ರಾಜನು ಪ್ರಸನ್ನನಾದ ಗರುಡಧ್ವಜನಿಂದ ಈ ವರಗಳನ್ನು ಪಡೆದು, ಸಪ್ತದ್ವೀಪ ಸಹಿತವಾದ ಈ ಭೂಮಂಡಲವನ್ನು ರಕ್ಷಿಸಿದನು.

ತೇನೇಷ್ಟಂ ವಿವಿಧೈರ್ಯಜ್ಞೈಃ ಸಮಾಪ್ತವರದಕ್ಷಿಣೈಃ ।
ಜಿತ್ವಾರಿವರ್ಗಮಖಿಲಂ ಧರ್ಮತಃ ಪಾಲಿತಾಃ ಪ್ರಜಾಃ ॥೬೩॥

ಇಂತಹ ಕಾರ್ತವೀರ್ಯಾರ್ಜುನ ಚಕ್ರವರ್ತಿಯು ಉತ್ತಮವಾದ ದಕ್ಷಿಣೆ ಕೊಟ್ಟು, ಸಾಂಗವಾಗಿ ಆಚರಿಸಬಹುದಾದ ವಿವಿಧಯಾಗಗಳನ್ನು ಮಾಡಿದನು.

ಅನಂತವ್ರತಮಾಹಾತ್ಮ್ಯಾದ್ ಆಸಾದ್ಯ ತನಯಂ ಚ ತಮ್ ।
ಪಿತುಃ ಪುತ್ರೋದ್ಭವಂ ದುಃಖಂ ನಾಸೀತ್ ಸ್ವಲ್ಪಮಪಿ ಪ್ರಭೋ ॥೬೪॥

ಅಯ್ಯಾ ರಾಜನೇ! ಈ ಕಾರ್ತವೀರ್ಯಾರ್ಜುನನ ತಂದೆಗೆ ಈ ಅನಂತವ್ರತ-ಮಾಹಾತ್ಮ್ಯದಿಂದ ಸತ್ಸಂತಾನ ಪ್ರಾಪ್ತಿಯಾಗಿ, ಅವನಿಗೆ ಸ್ವಲ್ಪವೂ ಪುತ್ರಶೋಕವು ಒದಗಲಿಲ್ಲ.

ಏವಮೇತತ್ ಸಮಾಖ್ಯಾತಮನಂತಾಖ್ಯಂ ವ್ರತಂ ತವ ।

ಯತ್ಕೃತ್ವಾ ರಾಜಪತ್ನೀ ಸಾ ಕಾರ್ತವೀರ್ಯಮಸೂಯತ ॥೬೫॥

ಈ ರೀತಿ ಈ ಅನಂತವ್ರತವೆಂಬುದನ್ನು ನಾನು ನಿನಗೆ ಹೇಳಿದ್ದಾಯಿತು. ಈ ವ್ರತವನ್ನು ವಿಧಿಪೂರ್ವಕವಾಗಿ ಆಚರಿಸಿ, ರಾಜಪತ್ನಿಯಾದ ಆ ಶೀಲಧನಳು ಕಾರ್ತವೀರ್ಯನೆಂಬ ಪುತ್ರನನ್ನು ಪ್ರಸವಿಸಿದಳು.

## ಕಾರ್ತವೀರ್ಯಾರ್ಜುನನ ಸ್ಮರಣೆಯಿಂದ ಪುತ್ರಪ್ರಾಪ್ತಿ

ಯಶ್ಚೈತತ್ ಶ್ರುಣುಯಾಜ್ಜನ್ಮ ಕಾರ್ತವೀರ್ಯಸ್ಯ ಮಾನವಃ ।

ಸ್ತ್ರೀ ವಾ ದುಃಖಮಪತ್ಯೋತ್ಥಂ ಸಪ್ತಜನ್ಮಸು ನಾಽಶ್ನುತೇ ॥೬೬॥

ಈ ಕಾರ್ತವೀರ್ಯಾರ್ಜುನನ ಕಥೆಯನ್ನು ಯಾವ ಪುರುಷರಾಗಲೀ ಅಥವಾ ಸ್ತ್ರೀಯಾಗಲೀ ಶ್ರವಣಮಾಡುತ್ತಾರೋ ಅವರು ಏಳು ಜನ್ಮಗಳವರೆಗೂ ಪುತ್ರಶೋಕವೆಂಬುದನ್ನು ಹೊಂದುವುದಿಲ್ಲ.

ಐಶ್ವರ್ಯಮಪ್ರತಿಹತಂ ಪರಮಂ ವಿವೇಕಂ

ಪುತ್ರಾನಮಿತ್ರಹೃದಯಾರ್ತಿಕರಾನ್ ಬಹೂಂಶ್ಚ ।

ಕೃತ್ವಾತ್ವನಂತ ಇತಿ ಯದ್‌ವ್ರತನಾಮಧೇಯಂ

ಪ್ರಾಪ್ನೋತ್ಯನಂತವಿಭವಸ್ಯ ವಿಭೋಃ ಪ್ರಸಾದಾತ್ ॥೬೭॥

ಇತಿ ಶ್ರೀಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣಯುಧಿಷ್ಠಿರಸಂವಾದೇ ಅನಂತವ್ರತವರ್ಣನಂ ನಾಮ ಷಡಧಿಕಶತತಮೋಽಧ್ಯಾಯಃ ॥೧೦೬॥

ಅನಂತ ಎಂಬ ನಾಮಧೇಯವುಳ್ಳ ಈ ವ್ರತವನ್ನು ಆಚರಿಸಿದರೆ ಅಂತಹವನು ಅನಂತಮಹಿಮೆಯುಳ್ಳ ಸ್ವಾಮಿಯಾದ ಶ್ರೀಹರಿಯ ವರಪ್ರಸಾದದಿಂದ ಐಶ್ವರ್ಯವನ್ನೂ ಸೌಭಾಗ್ಯವನ್ನೂ, ಪರಮವಿವೇಕವನ್ನೂ, ಶತ್ರುಹೃದಯ-ವಿದಾರಕರಾದ ಬಹುಪುತ್ರರನ್ನೂ ಪಡೆಯುತ್ತಾನೆ.

ಇಲ್ಲಿಗೆ ಭವಿಷ್ಯಪುರಾಣದ ಉತ್ತರಪರ್ವದಲ್ಲಿ ಅನಂತವ್ರತವರ್ಣನೆ ಎಂಬ ನೂರಆರನೆಯ ಅಧ್ಯಾಯವು ಮುಗಿಯಿತು.

* * * * *

## ಅನಂತಪದ್ಮನಾಭನ ಮುಂದೆ ನಿಂತು
## ಈ ಶ್ರೀಪಾದರಾಜವಿರಚಿತ ಸುಳಾದಿಯನ್ನು ಹೇಳಿರಿ

ಅನ್ನಂತ ಕಾಲದಲಿ ನಿನ್ನ ನಾನರಿಯದೆ ಭವಗಳಲ್ಲಿ ಬಂದೆನೊ
ಅನ್ನಂತ ಕಾಲದಲಿ ನಿನ್ನವನೆನಿಸದೆ ಮೂರುಖನಾದೆನೊ
ಅನ್ನಂತ ಕಾಲದಲಿ ನಿನ್ನ ಚರಣಗತಿಯಿಲ್ಲದೆ ನೊಂದೆನೊ
ಅನ್ನಂತ ಕಾಲದಲಿ ಅದಾವ ಪುಣ್ಯದಿಂದ ಬಂದು ಇಂದು
ನಿನ್ನವನೆನಿಸಿದೆ ಅದಾವ ಪುಣ್ಯದಿಂದಲೆನ್ನ ಮನ
ನಿನ್ನಲ್ಲೆರಗಿತೊ ನೋಯದಂತೆ
ಎನ್ನ ಪೊರೆದು ಪಾಲಿಸೊ ದೀನನಾಥ ಶ್ರೀರಂಗವಿಠಲ ॥೧॥

ಮಠ್ಯತಾಳ

ಅನ್ನಕ ಭಯದ್ರವಿಣ ದೇಹನಿಮಿತ್ತ
ಅನ್ನಕ ಶೋಕಾಶಯ ಮಾರಿ
ಅನ್ನಕ ಲೋಭ ಅಶುಭದ ಲಾಭ
ಅನ್ನಕ ನನ್ನದು ನಾನೆಂಬ ಹಮ್ಮಿಕೆ
ಆವನ್ನಕ ನಿನ್ನ ಚರಣರತಿ ದೊರೆಕೊಳ್ಳದೊ
ಉನ್ನಂತ ಗುಣಪರಿಪೂರ್ಣ ರಂಗವಿಠಲ ॥೨॥

ತ್ರಿಪುಟ ತಾಳ

ತೊಳಲಿ ಸಂಸಾರ ಚಕ್ರದಲಿ
ಬಳಲಿದ ಜೀವಗಣಕೆ ಸಂತಸ
ನಳಿನನಾಭಾ ನಿನ್ನ ಪದಾಂಭೋಜ
ನೆಳಲುನೆಮ್ಮುಗೆಯಲ್ಲವೆ
ಒಳವೆ ಜಗದೊಳು ಸಕಲ ಸುಖಂಗಳು
ಕಳವಳಿಸುವರು ರಂಗವಿಠಲ ॥೩॥

ಅನಂತಚತುರ್ದಶೀ

ರೂಪಕ ತಾಳ

ನೀ ಕರುಣಿಯೆಂದು ನಿನ್ನ ನಾ ಮರೆಹೊಕ್ಕೆ
ನಿರಾಕರಿಸದೆ ಎನ್ನ ಶ್ರೀಕಾಂತ ಕಾಯಯ್ಯ
ನಿನ್ನವನೆಂಬೆ ನಾನು ಮತ್ತನ್ಯವನರಿಯೆನು
ನಿನ್ನವನೆಂಬೆ ನಾನು
ಕಂದರ್ಪನೆಂದೆಂದು ಕಾಡದಂತೆ ಮಾಡೊ
ವೃಂದಾರಕಾಧೀಶ ರಂಗವಿಠಲ ||೪||

ಪರರ ಬಾಗಿಲು ಕಾಯಿದು ಹೋಯಿತೀ ಸಂಸಾರ
ಪರರ ಗುಣಗಳ ತುತಿಸಿ ಹೋಯಿತೀ ನಾಲಗೆ
ಪರರ ಹಾರಿ ಹಾರಿ ಹೋಯಿತ್ತಿಂತೆನ್ನ ಮನ
ಪರಮ ಕಾರುಣಿಕನೆ ನಮೋ ರಂಗವಿಠಲಯ್ಯ ||೫||

ಅಟ್ಟತಾಳ

ಎನ್ನ ಮನ ಹರಿ ನಿನ್ನ ಚರಣದೊಳೊಮ್ಮೆ
ಎರಗದು ದುರಿತ ದುಷ್ಕೃತವೆಂತು ಸೈರಿಪೆನೊ
ನಂದನಂದನ ಮುಕುಂದ ಎಂತು ಸೈರಿಪೆನೊ
ಮಂದಹಾಸ ಗೋವಿಂದ ಎಂತು ಸೈರಿಪೆನೊ

ಎನ್ನ ಮನವನು ನಿನ್ನ ಚರಣದೊಳೊಮ್ಮೆ
ಎರಗಿಸೊ ರಂಗವಿಠಲ ಎಂತು ಸೈರಿಪೆನೊ ||೬||

ತ್ರಿಪುಟ ತಾಳ

ವ್ರತ ಜಪತಪ ಯಾಗಂಗಳ ಮಾಡುವೆನೆಂದು
ಮನೆಮನೆದಪ್ಪದೆ ತಿರುಗಿ ಬಳಲಿದೆ
ಬೆಲೆಗೆ ಹೋಗದು ಸರಕು ಷಡಿಲದಯ್ಯಾ ಹರಿಯೆ
ಕೊಂಬುವರಿಲ್ಲ ಬೆಲೆಗೆ ಹೋಗದು ಸರಕು

ಸಡಿಲುವಂತೆ ಮರೆಗೆ ತೆಗೆದು ನಿನ್ನ
ಚರಣದಡಿಯಲ್ಲಿಟ್ಟು ಕಾಯೊ ರಂಗವಿಠಲ ॥೭॥

ಏಕತಾಳ

ಭವವೆಂಬಟವಿಯಲ್ಲಿ ಭಯಕೊಳದಲಿ ಸಿಕ್ಕಿ
ತಾಪತ್ರಯವೆಂಬ ದಾವಾನಲ ತಪ್ತ ನರರಿಗೆ
ಹರಿ ನಿನ್ನ ನಾಮಾಶ್ರಯವಲ್ಲದೆ ಮತ್ತುಂಟೆ
ಯಮಲೋಕದಲ್ಲುಂಟೆ ತನುಪರಿಣ ವಲ್ಲಭ
ಅಮೃತ ವಸರುವ ಪದಪದುಮದ
ನೆಳಲ ನೆಲೆಮನೆಯಲಿ ಎನ್ನನಿರಿಸೊ ರಂಗವಿಠಲ ॥೮॥

ಜತೆ

ಬೆಂದ ಸಂಸಾರದಿ ಬಂದು ನೊಂದು ಬಳಲಿದೆನಯ್ಯ
ನಂದ ನಂದನ ಕಾಯೊ ರಂಗವಿಠಲ ॥೯॥

* * * *

## ಅನಂತದೇವರ ವ್ರತಕಥೆ ಸುಳಾದಿ

ಧ್ರುವತಾಳ

ವ್ರತವೆ ಉತ್ತಮ ವ್ರತವು ಕ್ಷಿತಿಯೊಳಗೆ ನೋಡಲು ।
ಮತಿವಂತರಿಗೆ ಮುಕ್ತಿ ಪಥಕೆ ಮೊದಲೂ ।
ಲತೆ ಪಲ್ಲವಿಸಿದಂತೆ ಸತತದಲ್ಲಿ ಭಕ್ತಿ ।
ಪ್ರತಿದಿನ ವೆಚ್ಚುವದು ಅತಿಶಯದಲ್ಲಿ ।
ಖತಿಗೊಳದಿರಿ ಶಾಶ್ವತವೆನ್ನಿರೋ ಜನರೂ ।
ಪತಿತರಾಗದೆ ಸಮ್ಮತ ಬಡುವದೂ ।
ಶತಕೋಟಿ ಅನ್ಯದೇವತಿಗಳ ವ್ರತಮಾಡೆ ।
ಹತವಾಗುವದು ಸುಕೃತವಿದ್ದದ್ದೂ ।

## ಅನಂತಚತುರ್ದಶೀ

ಚತುರ ಮೂರುತಿ ನಮ್ಮ ವಿಜಯವಿಠಲನಂತಾ ।
ವ್ರತ ಕಾವುದು ಎಲ್ಲಿ ಪ್ರತಿಗಾಣೆ ಶ್ರುತಿಯೊಳು ॥೧॥

ಮಟ್ಟತಾಳ

ಸುಮಂತ ಭೂಸುರನಾ ಕುಮಾರಿ ಸುಶೀಲೆ ।
ವಿಮಲಾ ಗುಣವಂತೆ ಶಮೆದಮೆಯಲ್ಲಿರಲು ।
ಸುಮಂತ ವಿಪ್ರಾ ಉತ್ತುಮ ಕೌಂಡಣ್ಯಗೆ ।
ಸುಮತಿಯಳಾನಿತ್ತಾ ಸುಮನಸರು ಮೆಚ್ಚೆ ।
ರಮೆಯರಸ ನಮ್ಮ ವಿಜಯವಿಠಲನ್ನಾ ।
ತುಮದೊಳಗೆ ನೆನೆದು ಯಮುನಾ ತೀರಕೆ ಬರಲೂ ॥೨॥

ರೂಪಕತಾಳ

ಮೌನಿ ಕೌಂಡಿಣ್ಯನು ಮಧ್ಯಾನದಾ ಆನ್ಹಿಕೆಯನು ।
ಪ್ರಣವ ಪೂರ್ವದಿಂದಾರ್ಚನೆ ಮಾಡ ಪೋದಾ ಯ ।
ಮುನ ನದಿ ಸಲಿಲಿಗೆ ಘನತೀವರದಿಂದ ।
ವನಿತೆ ಸುಶೀಲಿತಾ ವನಜಾಕ್ಷಿಯರು ವ್ರತಾ ।
ವನು ಮಾಡುತಿರೆ ಆ ಕ್ಷಣದಿಂದ ಗಮನಿಸೀ ।
ಎನಗೆ ಪೇಳೆಂದವರನನುಸರಿಸಿ ಕೇಳಲೂ ।
ಸನುಮತ ಅನಂತನ ವ್ರತವೆಂದೆನಲೂ ।
ವಿನಯದಿಂದ ನಮಿಸಿ ಮನದಿಚ್ಛೆಲಿ ನೋಂಪಿ ।
ಏನುನೋ ತಾಳದಾನಂತನ ಸೂತ್ರ ತೋಳಿಲಿ ।
ದಿನ ಭದ್ರಪದ ಶೋಭನ ಶುಕ್ಲ ಚತರ್ದಶಿ ।
ದಿನದಲ್ಲಿ ವಾಮಲೋಚನೆ ಕಟ್ಟಿದಳೊಲಿದೂ ।
ಪ್ರಣುತಾರ್ಥಹರ ನಮ್ಮ ವಿಜಯವಿಠಲನ್ನ ।
ನೆನದು ಪತಿಯಾ ಕೂಡಿ ಮನೆಗೆ ಬರುತೀರೆ ॥೩॥

ಅನಂತಚತುರ್ದಶೀ

ಝಂಪೆತಾಳ

ವಾರಿಯೊಳಗೆ ಮದವಾರುಣಾ ಶ್ವದ್ಧನಾ ಶ್ಯಂದನಾ ।
ವಾರುಗಂಗಳು ಪರಿವಾರಾವೊಪ್ಪುತಲಿರೇ ।
ಸಾರರತುನಾ ಬಂಗಾರಮಯದಾ ಶ್ಯಂ ।
ಗಾರದಾ ಮಂದಿರಾ ತೋರುತಿರಲು ಮನಕೆ
ಕಾರುಣಿಕವು ಮುಂದೆ ನಾರಿಯೊಡನೆ ಮುನಿ ।
ವರೇಣ್ಯ ತನ್ನಯಾ ಕುಟೀರಕ್ಕೆ ಬರಲಾಗಿ ।
ಕಾರಣಾ ಪುರುಷಶಿರಿ ವಿಜಯವಿಠಲನ್ನಾ ।
ದೋರದಾ ಮಹಿಮೇಲಿ ಪೂರೈಸಿತು ಭಾಗ್ಯಾ ॥೪॥

ತ್ರಿವಿಡಿತಾಳ

ಎತ್ತ ನೋಡಿದರತ್ತ ತತ್ತುಳಕಲು ಭಾಗ್ಯ ।
ನಿತ್ಯಸಂದಣಿಯಿಂದ ಇತ್ತಮುನಿ ಇರುತಿರೆ ।
ಚಿತ್ತದೊಲ್ಲಭ ಕರದಿ ಸೂತ್ರವಿರಲೂ ಮುನಿ ।
ಪೋತ್ತಮಾ ನುಡಿಸಿ ಅದರುತ್ತರವ ತಿಳಿದು ।
ಎತ್ತಣ ವ್ರತವೆಂದು ಮಿತ್ರಿಯಜರದು ಮೋರಾ ।
ಕಿತ್ತು ಬಿಸುಟನಾಗಾ ಪಿತ್ತದೊಳಗೆ ತೆಗೆದು ।
ಉತ್ತಮಗುಣವಂತೆ ಎತ್ತಿ ಮನದಿ ಹಾ, ಯೆ ।
ನುತ್ತ ಪಾಲಿನೊಳದ್ದಿ ತುತಿಸಿ ಗತಿ ಹರಿಯೆ ।
ನುತ್ತ ಜತನ ಮಾಡಿ ಚಿತ್ತಜಾಪಿತ ।
ನಂತ, ವಿಜಯವಿಠಲರೇಯಗೆ ।
ಹತ್ತದವನಾಗಿ ಮುನಿ ಪೊತ್ತಾ ಕ್ಲೇಶದೊಳಾದ ॥೫॥

ಅಟ್ಟತಾಳ

ಬಡತನ ಬಂದು ಬೆಂಬಿಡದಲೆ ಕಾಡಲು ।
ಒಡನೆ ಬಿದ್ದವರೆಲ್ಲಾ ಬಡಿದರು ಪಗೆಯಾಗಿ ।

ಪಿಡದಾ ಪರಿಚಾರಾ ಕಿಡಿಗೆಡಿಗೆ ಮುನಿ ।
ದಡಿಗಡಿಗೆ ಬೈದೊಡಂಬಡದಿಪ್ಪಾರು ।
ಕಡುನೊಂದು ಯತಿ ತನ್ನ ಮಡದಿ ವಿನಯದಿಂದಾ ।
ನುಡಿವ ಮಾತನು ತನ್ನೊಡಲೊಳು ಚಿಂತಿಸಿ ।
ಸುಡು ಎನ್ನ ಶರೀರ ಬಿಡುವೆ ರಂಗನ ದಿವ್ಯಾ ।
ಅಡಿಗಳ ಬಳಿಯಲ್ಲಿ ತಡಿಯದಲೆ ಪೋಗಿ ।
ಕೊಡವೆನೆನುತ ನೀರು ಕುಡಿಯದೆ ಪೊರಮಟ್ಟಾ ।
ಅಡವಿ ಗಿಡಗಳು ಪಿಡಿದು ಕ್ಲೇಶದಿಂದ ।
ಮಿಡಕುತಾಳಲ್ಲಿ ಕಾಲೊಡದು ನೆತ್ತರಧಾರಿ ।
ಇಡುತಲಿ ಬಲುದೂರಾ ಹುಡುಕುತಾ ಮಹೇಂದ್ರ ।
ದಡಿಗೆ ಬಂದನು ಋಷಿ ।
ಕಡು ಕೃಪಾಸಾಗರಾ ನಮ್ಮ ವಿಜಯವಿಠಲನಂತಾ ।
ತಡಿಯ ಕೌಂಡಣ್ಯನು ನಡುಗಿ ಬಾಯಾರಿ ॥೬॥

ಆದಿತಾಳ

ಬರುತಾ ಚೂತಾ ತರುವು ಸರೋ ।
ವರಾವೆರಡು ಗೋ ವೃಷಭಾ ।
ಖರ ಮದಕುಂಜರಗಳನು ।
ನಿರೀಕ್ಷಿಸಿ ಅನಂತನಾ । ಕುರುಹನಾನೀವುತೋ ।
ರಿರಿ ಎಂದು ಬೆಸಗೊಳಲು । ಅರಿಯಲಿಲ್ಲಂದು ಉ ।
ತ್ತರ ನೆರದಾವು ಕೊಡಲು । ಪರಮ ಮೂರ್ಛಿತನಾಗಿ ।
ಒರಗಿದ ಧರಿಗೆ ಮುನಿ । ಹರಿ ಅರಿದು ವೃದ್ಧ ಭೂ ।
ಸುರನಾಗಿ ಬಂದು ವಿ । ವರಿಸಿ ತಿಳಿದು ತಡ ।
ವರಿಸಿ ಕಿಂಕರ ನೋಡಿರದೆ ಬೆಂಬಲವಾಗಿ ।
ಕರತಂದು ತನ್ನ ನಿಜ । ಸ್ವರೂಪವಾ ತೋರಿ ಮುನಿಯಾ ।
ಪರಿಶ್ರಮ ಪರಿಹರಿಸಿ ಕರುಣವ ಮಾಡಿದನು ।

ಸುರರಿಗಸಾಧ್ಯವು । ಮರಿಯದೆ ಪದಿನಾಲ್ಕೋ ।
ತ್ಸರಾನಂತನಾ ವ್ರತ । ಚರಿಸಿ ಸುಖದಿ ಬಂದು ।
ವರ ಪುನರ್ವಸು ಸ್ಥಾನಾ । ಇರ ಹೇಳಿ ಹಿಂದೆ ಕಂಡಾ ।
ದರ ಶಂಕೆಯನು ಪೇಳಿ । ಹರಿ ಅಂತರ್ಧಾನನಾದಾ ।
ತಿರುಗಿ ಕೌಂಡಣ್ಯ ಮುನೀಶ್ವರಾ ಅಕ್ಲೇಶದಲ್ಲಿ ।
ಕರುಣಿ ಜ್ಞಾನವಾ ನೆನದು ಹರಿಯಾ ಕೊಂಡಾಡುತ್ತಾ ।
ಭರದಿಂದ ತನ್ನ ಮಂದಿರಕೈತಂದು ವ್ರತವ ।
ಚರಿಸಿದ ಮನಃ ಪೂರ್ವದರ ಭಕುತಿ ತಪ್ಪದಲೇ ।
ಸರಿ ಇಲ್ಲಾದೈಶ್ವರ್ಯ ಪರಿಪೂರ್ಣವಾಗಿ ಬಾಳಿ ।
ಮರಳೆ ಸೇರಿದ ತನ್ನವರ ಸ್ಥಾನದಲಿ ಪೋಗಿ ।
ಶಿರಿ ಶ್ರೀಮದನಂತ ವಿಜಯವಿಠಲರೇಯಾ ।
ಸ್ಥಿರವಾದಾನಂದು ಮೊದಲು । ಶರಧಿ ದಕ್ಷಿಣಾದಲ್ಲಿ ॥೭॥

ಜತೆ

ಯಮ ಸುತನ ನೋತು ಬಲು ಶ್ರಮದಿಂದ ದೂರಾದ
ತಮರಿಗೆ ಸಲ್ಲಾದಿದು ವಿಜಯವಿಠಲ ಬಲ್ಲಾ ॥೮॥

* * * *

ರಾಗ : ಶಂಕರಾಭರಣ ಧ್ರುವತಾಳ

ಅನಂತಕಾಲದೊಳಗೊಂದೆ ಕಾಲವಿದೆ
ಅನಂತಾನಂತ ದೇಶದೊಳಗೊಂದೆ ದೇಶವಿದೆ
ಅನಂತ ಗುಣ ದೊಳುಗೊಂದೆ ಗುಣವಿದೆ
ಅನಂತಾನಂತ ಕರ್ಮದೊಳಗೊಂದೆ ಕರ್ಮವಿದೆ
ಅನಂತಾನಂತ ಜನುಮದೊಳಗೊಂದೆ ಜನುಮವಿದೆ
ಅನಂತಾನಂತ ಯಾತ್ರಿಯೊಳಗೊಂದೆ ಯಾತ್ರಿಯಿದೆ
ಅನಂತಾನಂತ ತೀರ್ಥದೊಳಗೊಂದೆ ತೀರ್ಥವಿದೆ

ಅನಂತಾನಂತ ಶ್ರುತಿಯೊಗೊಂದೆ ಶ್ರುತಿಯಿದೆ
ಅನಂತಾನಂತ ಮಂತ್ರದೊಳಗೊಂದೆ ಮಂತ್ರವಿದೆ
ಅನಂತಾನಂತ ವರ್ಣದೊಳಗೊಂದೆ ವರ್ಣವಿದೆ
ಅನಂತಾನಂತ ದ್ರವ್ಯದೊಳಗೊಂದೆ ದ್ರವ್ಯವಿದೆ
ಅನಂತಾನಂತ ಜಾಂಡಜಾಂಡದೊಳಗೊಂದೆ ಜಾಂಡವಿದೆ
ಅನಂತಾನಂತ ಕಲ್ಪದೊಳಗೊಂದೆ ಕಲ್ಪವಿದೆ
ಅನಂತಾನಂತ ಯುಗದೊಳಗೊಂದೆ ಯುಗವಿದೆ
ಅನಂತಾನಂತ ಕಾಲದೊಳಗೊಂದೆ ಕಾಲವಿದೆ
ಅನಂತಾನಂತ ಒಂದೆ ಒಂದೊಂದೆ ಅನಂತಾನಂತ
ಅನಂತ ಗುಣಪೂರ್ಣ ವಿಜಯವಿಟ್ಠಲರೇಯಾ
ಅನಂತ ಜೀವರಾಶಿಯೊಳು ಒಂದು ಜೀವ ನಾನಾ ॥೧॥

ಮಟ್ಟತಾಳ

ಅನಂತ ಮೂರ್ತಿಯೊಳಗೊಂದೆ ಮೂರ್ತಿಯಿದೆ ಅನಂತಾ
ಅನಂತ ನಾಮದೊಳಗೊಂದೆ ನಾಮವಿದೆ ಅನಂತಾ
ಅನಂತ ಸ್ಮರಣೆಯೊಳಗೊಂದೆ ಧ್ಯಾನವಿದೆ ಅನಂತಾ
ಅನಂತಾನಂತಾ ಅನಂತ ಬಗೆ ವಿಜಯವಿಟ್ಠಲರೇಯಾ
ಅನಂತಾವತಾರ ಅನಂತ ಚರಿತಾ ॥೨॥

ತ್ರಿವಿಡಿ ತಾಳ

ತೃಣ ಜೀವರಾಶಿಗಳು ಬೊಮ್ಮನ ತನಕವರು
ಗುಣದಲ್ಲಿ ಪರಮಾಣು ಪ್ರಾದೇಶದಿ
ಎಣಿಸಿ ನೋಡುವರಯ್ಯಾ ತಮ್ಮ ಯೋಗ್ಯತದರಿತು
ಎಣಿಕೆ ಅಧಿಕಾಧಿಕವೆನಿಸಿ
ಇನಿತಲ್ಲದೆ ಲಕುಮಿ ಬೊಮ್ಮನ ನೋಡಲು
ಗಣನೆ ಇಲ್ಲದೆ ಒಂದಾನಂತ ಮಡಿಯಾಗಿ
ಮನದಲ್ಲಿ ಕಾಂಬಳು ಲೇಶ ಬಿಡದೆ

ಜನುಮರಹಿತ ನೀನೆ ಲಕುಮಿ ನೋಡಿದರೊಳು
ಅಣು ಅತ್ಯಣುಗಳು ಕಾಣುತಿಪ್ಪೆ
ನಿನಗೆ ನಿನ್ನಿಚ್ಛೆಗೆ ಭೇದ ಎಂದಿಗಿಲ್ಲಾ
ಚಿನುಮಯ ರೂಪನೆ ತತ್ವಮೋದಾ
ಅನಿಮಿಷಾದಿಗಳಿಗೆ ಸೋಜಿಗ ತೋರುವ
ಘನ ಮಹಿಮಾ ವೈಕುಂಠವಾಸಾ ಶ್ರೀಶಾ
ತನು ಹತ್ತು ಇಂದ್ರಿಯಂಗಳು ಚಿತ್ತ ಬುದ್ಧಿಯು
ಮನ ಅಹಂಕಾರ ನಾನಾ ವರ್ಣನೆ
ತನುರೂಹ ಸರ್ವಾವಯವಗಳು ಜ್ಞಾನಪೂ
ರಣನಾಗಿ ಇಪ್ಪ ಸ್ವಂತಂತ್ರ ಪುರುಷರ್ಚನೆ ಮಾಡಿ
ನಿನ್ನ ಮೆಚ್ಚಿಸ ಬಲ್ಲನೆ ದೇವಾ
ಎನಗಾವದು ನಿನ್ನ ನೆಲೆಯೆ ತಿಳಿಯೆ
ಬಿನಗು ದೈವದೊಡಿಯಾ ವಿಜಯವಿಠ್ಠಲ ನಿನ್ನ
ನೆನಹೆ ಮುಕ್ತಿಗೆ ಮಾರ್ಗವೆಂಬೋದೆ ಶ್ರುತಿಸಿದ್ಧಾ ||೩||

ಅಟ್ಟತಾಳ

ಧರಣಿ ಉದಕ ತೇಜ ವಾಯು ಅಂತರಿಕ್ಷಾ
ಸ್ಪರಶ ರೂಪರಸ ಗಂಧ ಶಬ್ದ ಮಿಗಿಲಾದ
ಪರಮಾಣುಗಳು ಚತುರವಿಂಶತಿ ತತ್ವ
ವಿರುತಿರೆ ಅತಿ ಸೂಕ್ಷ್ಮವಾಗಿ ಅದರೊಳು
ಹರಿನೀನೇ ಅಂಥ ಪರಮಾಣುಗಳಲ್ಲಿ
ಪರಿ ಪರಿ ಬಗೆಯಿಂದಲಿ ಒಳಗಿಪ್ಪೆ ಕಾಣುತ್ತ
ನಿರುತ ನೀನರಿಯದ ದ್ರವ್ಯಂಗಳ ತಂದು
ವರ ಪೂಜೆ ಮಾಡು ಎಂದರೆ ಆವದಿಪ್ಪದು
ಚರಾಚರದಲ್ಲಿ ಪ್ರಾಣ ಪ್ರಕೃತಿ ನೀನಲ್ಲದೆ
ತಿರುಗುವ ವ್ಯಾಪಾರ ಮತ್ತಾವದು ಪೇಳೋ

ಚರಣದಲ್ಲಿ ಧರೆ ಅಳೆದ ಮಹಾತುಮಾ
ಸರಿಯಿಲ್ಲ ನಿನಗೆಲ್ಲಿ ವಿಜಯವಿಟ್ಠಲ ಎನ್ನ
ಇರವ ಬಲ್ಲವನಿಗೆ ವಿಸ್ತರಿಸುವುದೇನೊ ||೪||

ಆದಿತಾಳ

ಸನಕಾದಿ ಮುನಿ ಮನುಗಳು
ಅನಿಮಿಷಗಣ ಪಾಕಶಾಸನ ರುದ್ರ
ಪನ್ನಗ ಖಗ ವನಜಭವನ ಮನಕೆ ತೋರದಾ
ಕಣ್ಣಿಗೆ ಪೊಳೆಯದ ಚಿನುಮಯ ಅನ್ನಮಯಾ
ಘನಕೆ ಘನ ನಿನ್ನ ಪೂಜೆಯನ್ನು ಮಾಡಿ
ದಣಿಸುವನಾರು ಬಣ್ಣಿಸಲರಿದು ಬಿ
ನ್ನಾಣದಲ್ಲಿ ಎನ್ನ ಭವದ ಬನ್ನ ಬಿಡಿಸೊ
ಅನಂತಾನಂತ ಚನ್ನ ಮೂರುತಿ ವಿಜಯವಿಟ್ಠಲ
ನಿನ್ನ ಪಾದವನ್ನು ನಂಬಿದೆ ||೫||

ಜತೆ

ನನ್ನಂಥವನ ಪೂಜೆಯಿಂದ ನಿನಗೇನು
ಅನಂತಾನಂತನೆ ವಿಜಯವಿಟ್ಠಲ ಸುಲಭಾ ||೬||

ಜನ್ಮ ಸಫಲವಾಯಿತು ||ಪ||

ಆದಿ ಅನಂತ ಜನಾರ್ದನನ ಕಂಡು
ಎನ್ನ ಜನ್ಮಸಫಲವಾಯಿತು ||ಅ.ಪ||

ಬ್ರಹ್ಮಾನಂದ ಸುಗುಣ ನಿಮ್ಮ ಮಹಿಮೆಯ ಅಗ
ಮ್ಯಗೋಚರನೆಂದು ಸ್ತುತಿಸುತಿರೆ
ಬ್ರಹ್ಮರುದ್ರಾದಿಗಳು ಇಂದ್ರ ಚಂದ್ರಾದಿಗಳು
ನಿರ್ಮಲಮೂರುತಿ ನಿಮ್ಮ ನಿಜವ ತೋರಿದಮ್ಯಾಲೆ ||೧||

ಚತುರಮುಖನು ಬಂದು ಪೃಥುವಿ ಒಳಗೆ ನಿಂದು

ಕ್ರತುಗಳ ಮಾಡಿ ಆಹುತಿ ಕೊಡಲು
ಅತಿಗ್ರಾಸವಾಯಿತೆಂದು ಅನಲ ಬಂದು ಮೊರೆಯಿಡಲು
ದ್ವಿತೀಯ ಗ್ರಾಸಕೆ ಕೈಯ ಒಡ್ಡಿ ನಿಂತದ್ದು ಕಂಡು ||೨||

ಮೊದಲ ಬಾಗಿಲಲಿ ನಿಮ್ಮ ಮುಖಕಮಲವ ಕಂಡೆ
ಮುದದಿಂದ ಮಕರಕುಂಡಲ ಕಿರೀಟವ ಕಂಡೆ
ಭುಜದ್ವಯವನು ಕಂಡೆ ಶ್ರೀವತ್ಸ ಕೌಸ್ತುಭ ಕೊರಳ
ವೈಜಯಂತೀ ಮಾಲಿಕೆಗಳ ಕಂಡು ಎನ್ನ ||೩||

ನಡುವಿನ ಬಾಗಿಲಲಿನಾಭಿಕಮಲ ಕಂಡೆ
ಉದ್ಭವಿಸಿ ಮೆರೆವ ವಿರಿಂಚಿಯ ಕಂಡೆ
ಜಡಿವೊ ಪೀತಾಂಬರ ನಡುವಿನೊಡ್ಯಾಣವ
ಉಡಿಗೆಜ್ಜೆ ಮೇಲಿನ ಕಿರುಗೆಜ್ಜೆಗಳ ಕಂಡು ||೪||

ಮೂರನೆ ಬಾಗಿಲಲಿ ಮುದ್ದು ಶ್ರೀಚರಣವು
ಶ್ರೀದೇವಿ ಭೂದೇವಿ ಸೇವೆಮಾಳ್ಪುದ ಕಂಡೆ
ಸುರರು ಮಾನವರ ಕಂಡೆ ಸ್ತೋತ್ರಮಾಳ್ಪುದ ಕಂಡೆ
ಉರಗಶಯನ ಮ್ಯಾಲೆ ಹಯವದನನ ಕಂಡು ಎನ್ನ ||೫||

ರಾಗ : ಮಧ್ಯಮಾವತಿ ತಾಳ : ಛಾಪು

ರಂಗನಾಥನೆ ನೀಲಘನಂಗ ದೇವರದೇವ ಗು-
ಣಂಗಳ ಖಣಿಯೆ ನಿನ್ನ ಪದಂಗಳು ಗತಿಯೆಮಗೆ ||ಪ||

ಉಭಯಕಾವೇರಿ ಮಧ್ಯದಲಭಯನೀವುತ ಪವಡಿಸಿ
ದಬುಜಲೋಚನನೆ ನಿನ್ನ ವಿಭವಕ್ಕೆ ನಮೋಯೆಂಬೆ ||೧||

ದೋಷದೂರನೆ ಭೂಮಿಗೆ ಭೂಮೋಹನನೆ ರಂಗ
ಶ್ರೀಶ ನಿನ್ನ ನಂಬಿದೆ ಶೇಷಶಯನ ಕಾಯೊ ||೨||

ಚೆಲುವ ನಿನ್ನನು ಪೋಲುವರಿಲ್ಲ ಮೂಜಗದೊಳು ಲಕುಮಿಯ
ನಲ್ಲ ನಿನ್ನನು ಬಣ್ಣಿಸಲಳವಲ್ಲವೋ ಹಯವದನ ||೩||

* * * * *

# ಅನಂತಚತುರ್ದಶೀ ಹಬ್ಬದಂದು ಮಾಡಬೇಕಾದ ಅಡುಗೆಗಳು

* ಕೋಸಂಬರಿಗಳು, ಪಲ್ಯಗಳು, ಉಪ್ಪಿನಕಾಯಿ. ಚಿತ್ರಾನ್ನ, ಗೊಜ್ಜು, ತೊವ್ವೆ, ಗೋಧಿ ಅನ್ನ.

## ಗೋಧಿಯ ಪಾಯಸ

ಗೋಧಿಯನ್ನು ಮಣ್ಣು ಕಲ್ಲುಯಿಲ್ಲದಂತೆ ಮಾಡಿ, ಅದಕ್ಕೆ ಅರಿಶಿನ ಸುಣ್ಣ ನೀರು ಬೆರಸಿ ಗೋಧಿಯನ್ನು ಕಲೆಸಿ ಒತ್ತಿಡಬೇಕು. ಚೆನ್ನಾಗಿ ನೆನೆದ ಬಳಿಕ ಅದನ್ನು ಒರಳಲ್ಲಿ ಹಾಕಿಕೊಂಡು ಒನಕೆಯಿಂದ ಚೆನ್ನಾಗಿ ಕುಟ್ಟಿ ಕೇರಬೇಕು. ಕಸವೆಲ್ಲವೂ ಹೋದ ಬಳಿಕ ಆ ಕುಟ್ಟಿದ ಗೋಧಿಯನ್ನು ಕುದಿವ ನೀರಲ್ಲಿ ಹಾಕಿ, ಚೆನ್ನಾಗಿ ಬೇಯಿಸಬೇಕು. ಆ ಬಳಿಕ ನೀರನ್ನು ಬಾಗಿ, ಅದಕ್ಕೆ ತಕ್ಕಷ್ಟು ಹಾಲನ್ನು ಹಾಕಿ, ಮರಳಿಸಬೇಕು. ಇಲ್ಲದಿದ್ದರೆ ನೀರುಹಾಕಿ, ಬೆಂದಗೋಧಿಯನ್ನು ಚೆನ್ನಾಗಿ ತೊಳೆದು ಬೇರೆ ಪಾತ್ರೆಗೆ ಹಾಲನ್ನು ಹಾಕಿ, ಚೆನ್ನಾಗಿ ಕಾಯಿಸಿ, ಆ ಪಾತ್ರೆಗೆ ತೊಳೆದ ಗೋಧಿಯನ್ನು ಹಾಕಿ ಚೆನ್ನಾಗಿ ಕಾಯಿಸಿ ಅದಕ್ಕೆ ಪುಡಿಸಕ್ಕರೆ ಏಲಕ್ಕಿ ಪುಡಿ ಕರಿದ ದ್ರಾಕ್ಷಿ ಲವಂಗ, ಬಾದಾಮಿ, ಇವನ್ನು ಹಾಕಿ ಹೊಂದಿಸಬೇಕು. ಅನಂತರ ನೈವೇದ್ಯಕ್ಕೆ ಸಮರ್ಪಿಸಬೇಕು.

### 14 ಭಕ್ಷ್ಯಗಳು

1. ಗೋಧಿ ಹಲ್ವಾ
2. ಅರಳುಂಡೆ.
3. ಕಡ್ಲೆ ಉಂಡೆ.
4. ಮೋಹನ್ ಲಾಡು.
5. ಕಡುಬು
6. ಹೋಳಿಗೆ.
7. ಪುರಿ ಉಂಡೆ.

## 8. ಅನರಸ

ಅಕ್ಕಿಯನ್ನು ನೆನೆಸಿ ತೊಳೆದು ಅದನ್ನು ನೆರಳಲ್ಲಿ 1 ಬಟ್ಟೆಯ ಮೇಲೆ ಹರವಬೇಕು. ಆ ಬಳಿಕ ಆ ಅಕ್ಕಿಯನ್ನು ಒರಳಲ್ಲಿ ಹಾಕಿ ಚೆನ್ನಾಗಿ ಕುಟ್ಟಿ ತೆಳ್ಳಗೆ ಇರುವ ಬಟ್ಟೆಯಿಂದ ಶೋಧಿಸಿಕೊಳ್ಳಬೇಕು. ಈ ಹಿಟ್ಟನ್ನು ತೆಗೆದುಕೊಂಡು ದೋಸೆ ಕೋಡಬಳೆ ರೊಟ್ಟಿ ವತ್ತಶ್ಯಾಮಿಗೆ ಮುಂತಾದುವನ್ನು ಮಾಡಬಹುದು. ಈ ಹಿಟ್ಟಿನಲ್ಲಿ 1 ಪಾವನ್ನು ತೆಗೆದುಕೊಂಡು ತುಪ್ಪಹಾಕಿ ಹುರಿದು ಸಮ ಸಕ್ಕರೆ (ಸಕ್ಕರೆಗೆ ಬದಲಾಗಿ ಬಿಳೀ ಬೆಲ್ಲವನ್ನು ಉಪಯೋಗಿಸಬಹುದು.)ಬೆರೆಸಿ ಹಾಲು ಹಾಕಿ 3-4 ಬಾಳೆ ಹಣ್ಣನ್ನು ಸಹ ಸೇರಿಸಿ ಏಲಕ್ಕಿ ಪುಡಿ ಮುಂತಾದ ಪರಿಮಳ ದ್ರವ್ಯವನ್ನು ಸೇರಿಸಿ ತುಪ್ಪ ಅಥವಾ ಬೆಣ್ಣೆ ಹಾಕಿ ಕಲಿಸಿ ಚೆನ್ನಾಗಿ ಮರ್ದಿಸಿ ಇಡಬೇಕು. ಒಂದು ದಿವಸದವರೆಗೂ ಬಾಳೆಲೆಯಲ್ಲಿ ಸುತ್ತಿಟ್ಟು ಮಾರನೆಯ ದಿವಸ ಸಣ್ಣ ಸಣ್ಣ ಉಂಡೆಗಳನ್ನು ಮಾಡಿ ಬಾಳಲೆಯ ಮೇಲೆ ಅಗಲವಾಗಿ ತಟ್ಟಿ ತುಪ್ಪದಲ್ಲಿ ಕರಿಯಬೇಕು. (ಇದನ್ನು ಗಸಗಸೆಯಲ್ಲಿ ಅದ್ದಿ ಕರಿಯಬಹುದು.) ಅನಂತರ ನೈವೇದ್ಯಕ್ಕೆ ಸಮರ್ಪಿಸಬೇಕು.

## 9. ಬಾದಾಮಿ ಹಲ್ವ

1 ಸೇರು ಹಾಲನ್ನು ಅರ್ಧಕ್ಕೆ ಕಡಿಮೆಯಾಗುವಂತೆ ಇಂಗಿಸಿ ಕಾಯಿಸಿದ ಹಾಲಿಗೆ ಕಹಿಯಿಲ್ಲದ 1 ತೂಕದ ಸೇರು ಬಾದಾಮಿಯನ್ನು ಸಿಪ್ಪೆ ತೆಗೆದು ಚೆನ್ನಾಗಿ ಒರಳಲ್ಲಿ ಸ್ವಲ್ಪ ನೆನದಕ್ಕಿಯನ್ನು ಹಾಕಿಕೊಂಡು ನುಣ್ಣಗೆ ತಿರುವಬೇಕು. ಈ ಮುದ್ದೆಯನ್ನು ಕಾಯುವ ಹಾಲಿನಲ್ಲಿ ಹಾಕಿ ಹಿತ್ತಾಳೆ ಸೌಟಿನಿಂದ ಚೆನ್ನಾಗಿ ತಿರುವಬೇಕು. ಹ್ವ ಗಂಟಾಗದಂತೆ ಆಗಾಗ ತಿರುವುತ್ತಿರಬೇಕು. ಕೇಸರದ ಪುಡಿ ಏಲಕ್ಕಿ ಪುಡಿ ಸ್ವಲ್ಪ ಪಚ್ಚಕರ್ಪೂರ, 1 ಮಂತೆಯದ ಕಾಳಿನಷ್ಟು ಕಸ್ತೂರಿ ಇವನ್ನು ಬೇಕಾದರೆ ಹಾಕಿ ಚೆನ್ನಾಗಿ ತೊಳಸಿ 1 ಪಾವು ಪುಡಿಸಕ್ಕರೆಯನ್ನು ಹಾಕಿ ಚೆನ್ನಾಗಿ ಹೊಂದಿಸಿ ಪಕ್ವವಾದ ಹದವನ್ನು ನೋಡಿ ಪಾತ್ರೆಯನ್ನು ಕೆಳಗೆ ತೆಗೆದುಕೊಂಡು ಸೌಟಿಗೆ ತುಪ್ಪ ಸವರಿ ಒಂದು ತಟ್ಟೆಯಲ್ಲಿ ಹಾಕಿಕೊಂಡು ಗೋಧಿಹಿಟ್ಟಿನಲ್ಲಿ ಕೈಗಳನ್ನು ಸವರಿಕೊಂಡು ಒತ್ತಾಸಿನಂತೆ ಗುಂಡಗೆ ಮಾಡಿ ಮುಚ್ಚಿಡುವುದು. ಅನಂತರ ನೈವೇದ್ಯಕ್ಕೆ ಸಮರ್ಪಿಸಬೇಕು.

## 10. ಶಿರಾ

ಮೋಹನಭೋಗಿನಂತೆ ರವೆಯನ್ನು ತುಪ್ಪದಲ್ಲಿ ಹುರಿದು, 2 ಪಾವು ಹಾಲನ್ನು ಹಾಕಿಕಾಯಿಸಿ, ಅದಕ್ಕೆ ಈ ರವೆಯನ್ನು ಸುರಿಯಬೇಕು. ಅದನ್ನು ಹಿತ್ತಾಳೆ ಸೌಟಿನ ಕಾಮಿನಿಂದ ಚೆನ್ನಾಗಿ ತೊಳಿಸಬೇಕು. ತುಪ್ಪಹಾಕಿ ಹೊಂದಿಸಿ ಪುಡಿಸಕ್ಕರೆ ಏಲಕ್ಕಿ ಪುಡಿ ಕಲ್ಲು ಸಕ್ಕರೆ ಹರಳು ಕರಿದು ಬಾದಾಮಿ ದ್ರಾಕ್ಷಿಯನ್ನು ಸಹ ಹಾಕಿ ಹೊಂದಿಸಿ ಅದಕ್ಕೆ ಪನ್ನೀರು ಅಥವಾ ಪರಿಮಳದ ನೀರನ್ನು ಹಾಕಿ ಮುಚ್ಚಿಡಬೇಕು. ಸಕ್ಕರೆಗೆ ಬದಲಾಗಿ ಬಿಳೀ ಬೆಲ್ಲವನ್ನು ಉಪಯೋಗಿಸಬಹುದು. ಅನಂತರ ನೈವೇದ್ಯಕ್ಕೆ ಸಮರ್ಪಿಸಬೇಕು.

## 11. ಕೇಸರೀಬಾತ್

ನುಚ್ಚಿಲ್ಲದ ಹಳೆಯದಾದ ಬೆಳ್ಳಗಿರುವ ಸಣ್ಣಕ್ಕಿ 1 ಪಾವನ್ನು ನೆನಸಿ 2-3 ವೇಳೆ ನೀರು ಹಾಕಿ ತೊಳೆದು ಅದನ್ನು ಒಂದು ಶುಭ್ರವಾದ ಬಟ್ಟೆಯ ಮೇಲೆ ಹರವಬೇಕು. ಆ ಬಳಿಕ ಹಸನಾದ ಕೇಸರಿಯನ್ನು ಹಾಲಲ್ಲಿ ಅರೆದು, ಆ ನೆನೆದ ಅಕ್ಕಿಗೆ ಸವರಬೇಕು. ಆಗ ಅದೆಲ್ಲವೂ ಹಚ್ಚಗೆ ಮಂತ್ರಾಕ್ಷತೆಯಂತೆ ಆಗುವುದು. 1 ಪಾವು ನೀರನ್ನು ಒಂದು ತಪ್ಪಲೆಯಲ್ಲಿ ಹಾಕಿ ಚೆನ್ನಾಗಿ ಮರಳಿಸಬೇಕು. ಆ ಬಳಿಕ ಈ ಅಕ್ಕಿಯನ್ನು ಸುರಿದು ಕೆದಕಬೇಕು. ಅನ್ನ ಪಕ್ವವಾಗುವಾಗ ತುಪ್ಪಹಾಕಿ ಹೊಂದಿಸಬೇಕು. ಒಂದು ಸೇರು ಹಸನಾದ ಪುಡಿ ಸಕ್ಕರೆ ಏಲಕ್ಕಿ ಪುಡಿ ಕರಿದ ದ್ರಾಕ್ಷಿ ಲವಂಗ ಬಾದಾಮಿ ಚೂರು ಬಿಳೀ ಕಲ್ಲು ಸಕ್ಕರೆ ಹರಳು ಕರಿದ ಗೇರುಪೊಪ್ಪು ಇವನ್ನು ಹಾಕಿ ಸರಿಹೊಂದಿಸಿದ ತರುವಾಯ ಪಚ್ಚ ಕರ್ಪೂರ 1 ಮೆಂತ್ಯದ ಕಾಳಿನಷ್ಟು ಕಸ್ತೂರಿ ಹಾಕಿ, ಹೊಂದಿಸಿ ಮುಚ್ಚಿಡಬೇಕು. ಅನಂತರ ನೈವೇದ್ಯಕ್ಕೆ ಸಮರ್ಪಿಸಬೇಕು.

## 12. ಪುಳ್ಳಂಗಾಯಿ ಉಂಡೆ

**ಬೇಕಾಗುವ ಪದಾರ್ಥಗಳು** : ಬೆಲ್ಲದ ಪುಡಿ - 500 ಗ್ರಾಂ. ಹುರಿದ ಹೆಸರುಬೇಳೆ ಹಿಟ್ಟು - 250 ಗ್ರಾಂ. ಕಡಲೆಬೇಳೆ - 250 ಗ್ರಾಂ., ಕಡಲೆಕಾಯಿ ಬೀಜ - 200ಗ್ರಾಂ. ಅಕ್ಕಿಹಿಟ್ಟು - 250 ಗ್ರಾಂ. ಹುರಿಗಡಲೆ ಬೀಜ - 100 ಗ್ರಾಂ.

**ಮಾಡುವ ರೀತಿ :** ಮೊದಲು ಬೆಲ್ಲದ ಪಾಕ ಮಾಡಿಕೊಂಡು ಅದಕ್ಕೆ ಎಲ್ಲಾ ಹಿಟ್ಟು ಹಾಕಿ ಕೆದಕಿರಿ. ಹಿಟ್ಟು ಪಾಕದಲ್ಲಿ ಬೆಂದ ನಂತರ ಕಡಲೆಕಾಯಿ ಬೀಜ, ಹುರಿಗಡಲೆ, ಯಾಲಕ್ಕಿ ಪುಡಿ ಹಾಕಿ ಮಿಶ್ರಣ ಮಾಡಿ. ಆಮೇಲೆ ಕೆಳಗಿಳಿಸಿಕೊಂಡು ಉಂಡೆ ಮಾಡಿ ಅನಂತರ ನೈವೇದ್ಯಕ್ಕೆ ಸಮರ್ಪಿಸಬೇಕು.

## 13. ಬೇಸನ್ ಲಾಡು

1 ಪಾವು ಕಡಲೆಯ ಹಿಟ್ಟನ್ನು 3 ಪಾವು ತುಪ್ಪಹಾಕುತ್ತಾ ಚೆನ್ನಾಗಿ ಹುರಿದು ಪರಿಮಳ ಬರಬೇಕು. ಹಾಲನ್ನು ಚುಮುಕಿಸಿ ಉದುರುದುರಾಗುವಂತೆ ಮಾಡಿ, ಪಕ್ವ ಮಾಡಬೇಕು ಇದನ್ನು ಕೆಳಗೆ ತೆಗೆದುಕೊಂಡು, ಸಕ್ಕರೆ ಹಾಕಿ, ಸರಿ ಹೊಂದಿಸಿ, ಹಾಲು ಚುಮುಕಿಸಿ, ಬಾದಾಮಿ, ಏಲಕ್ಕಿ ಪುಡಿ, ಲವಂಗ, ಪತ್ರೆ, ಕೇಸರ, ದ್ರಾಕ್ಷಿ, ಹಾಕಿ ಹೊಂದಿಸಿ, ಲಾಡುಗಳನ್ನು ಕಟ್ಟುವುದು ಅಥವಾ 1 ಸೇರು ಸಕ್ಕರೆಯನ್ನು ಹಾಕಿ ಪಾಕ ಮಾಡಿಕೊಂಡು ಹುರಿದ ಕಡಲೆಯ ಹಿಟ್ಟನ್ನು ಪಾಕಕ್ಕೆ ಸುರಿದು ತುಪ್ಪ ಹಾಕಿ ಹೊಂದಿಸಿ, ಉಂಡೆಯನ್ನು ಕಟ್ಟುವುದು. ಅನಂತರ ನೈವೇದ್ಯಕ್ಕೆ ಸಮರ್ಪಿಸಬೇಕು.

## 14. ಸಕ್ಕರೆ ಮಿಠಾಯಿ

ಸಕ್ಕರೆಯಿಂದ ಪಾಕ ಮಾಡಿಕೊಂಡು ಏಲಕ್ಕಿ ಹಾಕಿ ಕೊಬ್ಬರಿ ತುರಿ ಗಸಗಸೆ ಇವನ್ನು ಹಾಕಿ ಹೊಂದಿಸಿದ ಬಳಿಕ ತಟ್ಟೆಯಲ್ಲಾಗಲೀ ಮಿಠಾಯಿ ಮಣೆಯ ಮೇಲಾಗಲೀ ತುಪ್ಪ ಹಚ್ಚಿದ ಬಳಿಕ ಆ ಪಾಕವನ್ನು ಸುರಿದು ಸಮನಾಗಿ ಮಾಡಿ ಚೂರಿಯಿಂದ ಬಿಲ್ಲೆಗಳನ್ನು ಮಾಡುವುದು. ಪಾಕವು ಹಸಿಯಾಗಿ ಇರುವಾಗಲೇ ಚಾಕುವಿನಿಂದಕೊಯ್ದು ಆರಿದ ನಂತರ ತೆಗೆದು ನೈವೇದ್ಯಕ್ಕೆ ಸಮರ್ಪಿಸಬೇಕು.

ಈ 14 ಭಕ್ಷ್ಯಗಳನ್ನು ಭಕ್ತಿಯಿಂದ ಅನಂತಚತುರ್ದಶೀ ದಿವಸ ಸಮರ್ಪಣೆ ಮಾಡಬೇಕು. ಹಾಗೂ ಅನೇಕ ಖಾರದ ಪದಾರ್ಥಗಳನ್ನೂ ಕೂಡ ತಯಾರು ಮಾಡಬೇಕು.

* * * * *

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ಅನಂತಚತುರ್ದಶೀ ಎಂಬ ಈ ಕೃತಿಯು ಅಸ್ಮದ್ಗುರ್ವಂತರ್ಗತರಾದ
ಹನುಮದ್ಭೀಮಮಧ್ವಾಂತರ್ಗತರಾದ ರಾಮಕೃಷ್ಣವೇದವ್ಯಾಸರೂಪಿಯಾದ
ಶ್ರೀಲಕ್ಷ್ಮೀಹಯಗ್ರೀವದೇವರ ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ನರಕಚತುರ್ದಶೀ

ಆಶ್ವೀನ || ಶುದ್ಧ || ಚತುರ್ದಶೀ



ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ಜಲಪೂರಣತ್ರಯೋದಶೀ
# ನರಕಚತುರ್ದಶಿ

## ದೀಪಾವಳಿ - 1

ವಿದ್ವಾನ್|| ಚೆಮ್ಮತ್ತಿ ವೇಂಕಟೇಶಾಚಾರ್ಯ,

ಬೆಂಗಳೂರು.

ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),

ಗಿರಿನಗರ, ಬೆಂಗಳೂರು-೮೫

ದೀಪಾವಳಿ-೧ ಜಲಪೂರಣ ತ್ರಯೋದಶೀ-ನರಕಚತುರ್ದಶೀ-ಶಾಲಿವಾಹನ ಶಕೆ ೧೯೪೨ ಶಾರ್ವರಿ ॥ ಶ್ರಾವಣ ॥ ಶುದ್ಧ ॥ ಪೂರ್ಣಿಮೆ (ದಿನಾಂಕ:೩-೮-೨೦೨೦) ಹಯಗ್ರೀವಜಯಂತಿಯ ಶುಭ-ಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥಶ್ರೀಪಾದಂಗಳವರ ಕರಕಮಲಗಳಿಂದ ಭಾರತೀರಮಣಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವ-ದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.


ಪ್ರಥಮ ಮುದ್ರಣ : ೨೦೨೦

ಪುಟಗಳು : ೮೭





ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಶ್ರೀಮತಿ ನಾಗಲತಾ

ಮುಖಪುಟ : ಶ್ರೀವಿಶ್ವಾತ್ಮಾ
ಕಾರ್ತಿಕ ಜೋಷಿ

ಮುದ್ರಣ : ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.



ಶ್ರೀ ಸುಮಂತ್ ಎನ್. ಜೆ. ಕುಟುಂಬದವರು

'ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ' ಎಂಬ ಅನುಸಂಧಾನದಿಂದ ಈ ಕೃತಿಕುಸುಮವನ್ನು ಸೇವಾರೂಪವಾಗಿ ಶ್ರೀಲಕ್ಷ್ಮೀನಾರಾಯಣರ ಪಾದಕಮಲಗಳಲ್ಲಿ ಸಮರ್ಪಿಸುವ ಮೂಲಕ ತಮ್ಮ ತಂದೆ-ತಾಯಿಯವರಾದ ಶ್ರೀ ಜಗನ್ನಾಥ ರಾವ್. ಎನ್.ಎ., ಮತ್ತು ಶ್ರೀಮತಿ ಪ್ರೇಮಲತಾ. ಎನ್. ಎಸ್. ೬೦ನೇ ವರ್ಷದ ಶಾಂತಿಯನ್ನು ನೆರವೇರಿಸಿ ತಮ್ಮ ಪಾಣಿಗ್ರಹಣದ ೧೫ನೇ ವರ್ಷದ ವರ್ಧಂತಿಯನ್ನು ಸಾರ್ಥಕಗೊಳಿಸಿದ ಶ್ರೀ ಸುಮಂತ್ ಎಸ್. ಜೆ. ಮತ್ತು ಶ್ರೀಮತಿ ಮಾನಸಾ ಆರ್. ದಂಪತಿಗಳಿಗೆ ಈ ಜ್ಞಾನಯಜ್ಞದಿಂದ ಅಪಾರಪುಣ್ಯರಾಶಿಯು ಪ್ರಾಪ್ತವಾಗಲಿ ಎಂದು ಶ್ರೀಹರಿವಾಯುಗುರುಗಳಲ್ಲಿ ಪ್ರಾರ್ಥಿಸಲಾಗಿದೆ.

ಸಂಪಾದಕ

**ನೀರುತುಂಬುವ ಹಬ್ಬದಲ್ಲಿ ಪ್ರತಿಯೊಬ್ಬರೂ ಪಠಿಸಬೇಕಾದ ಗಂಗಾಮಂತ್ರ**

ಹೇ ಗಂಗೇ ತವ ಕೋಮಲಾಂಘ್ರಿನಲಿನಂ ರಂಭೋರುನೀವೀಲಸ-
ತ್ಕಾಂಚೀದಾಮತನೂದರಂ ಘನಕುಚವ್ಯಾಕೀರ್ಣಹಾರಂ ವಪುಃ ।
ಸನ್ಮುದ್ರಾಂಗದಕಂಕಣಾವೃತಕರಂ ಸ್ಮೇರಂ ಸ್ಫುರತ್ಕುಂಡಲಂ
ಸಾರಂಗಾಕ್ಷಿ ಜಲಾನ್ಯದಿಂದುರುಚಿ ಯೇ ಜಾನಂತಿ ತೇಽನ್ಯೇ ಜಲಾತ್ ॥

**ಶ್ರೀಕೃಷ್ಣಮಂತ್ರ**

ವಸುದೇವಸುತಂ ದೇವಂ ಕಂಸಚಾಣೂರಮರ್ದನಮ್ ।
ದೇವಕೀಪರಮಾನಂದಂ ಕೃಷ್ಣಂ ವಂದೇ ಜಗದ್ಗುರುಮ್ ॥

# ವಿಷಯಾನುಕ್ರಮಣಿಕೆ

## ಜಲಪೂರಣತ್ರಯೋದಶೀ-ನೀರುತುಂಬುವ ಹಬ್ಬ



## ನರಕಚತುರ್ದಶಿ

* * * *

# ಮುನ್ನುಡಿ

ವರ್ಷದಲ್ಲೇ ಬಹುದೊಡ್ಡ ಹಬ್ಬ ಎಂದರೆ ದೀಪಾವಳಿ. ಮಕ್ಕಳಿಂದ ವೃದ್ಧರ ತನಕ ಪ್ರತಿಯೊಬ್ಬರು ಸಂಭ್ರಮ ಪಡುವ ಏಕೈಕ ಹಬ್ಬವಿದು. ಭಾರತಾದ್ಯಂತ ಜಾತಿಮತಭೇದವಿಲ್ಲದೆ ಪ್ರತಿಯೊಬ್ಬರು ಆಚರಿಸುವ ದೀಪವನ್ನು ಬೆಳಗಿ ಸಂತೋಷ ಪಡುವ ಹಬ್ಬವಿದು. ಕೇವಲ ಒಬ್ಬ ದೇವತೆಯ ಆರಾಧನೆ ಆಗಿರುವುದಿಲ್ಲ. ಅನೇಕ ದೇವತೆಗಳ ಆರಾಧನೆಯು ಇದರಲ್ಲಿ ಸೇರಿರುತ್ತದೆ.

ಇಂದಿನ ದಿವಸದಲ್ಲಿ ದೀಪಾವಳಿ ಎಂದರೆ ನರಕಚತುರ್ದಶಿಯಂದು ಆರತಿಯನ್ನು ಮಾಡಿಸಿಕೊಂಡು ಅಭ್ಯಂಗ ಮಾಡುತ್ತಾರೆ. ಯಥಾಶಕ್ತಿ ಅಡುಗೆಯನ್ನು ಮಾಡಿ ಊಟ ಮಾಡುತ್ತಾರೆ. ಅಲ್ಲಿಗೆ ದೀಪಾವಳಿ ಮುಗಿದೇ ಹೋಗುತ್ತದೆ. ಆದರೆ ತ್ರಯೋದಶಿಯಿಂದ ಪ್ರಾರಂಭಮಾಡಿ ಭಗಿನಿದ್ವಿತೀಯಾ ತನಕ ಎಷ್ಟೋಂದು ಆಚರಣೆಗಳಿವೆ. ಪ್ರತಿಯೊಂದು ಆಚರಣೆಗಳು ಎಷ್ಟೋಂದು ಅರ್ಥಪೂರ್ಣವಾಗಿವೆ. ಅದನ್ನು ಅನುಸರಿಸುವುದರಿಂದ ನಾವು ಎಷ್ಟೋಂದು ಫಲಗಳನ್ನು ಹೊಂದಬಹುದು. ಇದನ್ನೆಲ್ಲಾ ಆಚರಣೆ ಮಾಡದೇ, ಕೇವಲ ಅಭ್ಯಂಗಸ್ನಾನವನ್ನು ಮಾಡಿ, ದೀಪಾವಳಿಯನ್ನು ಮಾಡಿ ಮುಗಿಸುವುದರಿಂದ ನಾವು ಎಷ್ಟೋಂದು ಫಲಗಳಿಂದ ವಂಚಿತರಾಗುತ್ತಿದ್ದೇವೆ. ಈ ಎಲ್ಲ ವಿಷಯಗಳ ಕೂಲಂಕಷವಾದ ವಿಚಾರಗಳನ್ನು ಈ ಕಿರುಹೊತ್ತಿಗೆ ಮೂಲಕ ನೀಡಲಾಗಿದೆ. ಅನೇಕ ಪುರಾಣಗಳ ಹಾಗೂ ಧರ್ಮಶಾಸ್ತ್ರ ಗ್ರಂಥಗಳ ಆಧಾರದಲ್ಲಿ ಮತ್ತು ಹತ್ತಾರು ಸಂಪ್ರದಾಯಗಳ ಮಾಹಿತಿಯ ಸಂಗ್ರಹದಲ್ಲಿ ಈ ಕಿರುಹೊತ್ತಿಗೆಯನ್ನು ಸಿದ್ಧಪಡಿಸಲಾಗಿದೆ. ಪ್ರಯತ್ನಪೂರ್ವಕವಾಗಿ ಈ ಪುಸ್ತಕವನ್ನು ಆಮೂಲಾಗ್ರವಾಗಿ ತಾವು ಓದಬೇಕು. ಸಾಧ್ಯವಾದಷ್ಟು ಅನಸರಿಸಬೇಕು. ಮತ್ತು ಮತ್ತೊಬ್ಬರಿಗೂ ಇದರ ಬಗ್ಗೆ ತಿಳಿಸಬೇಕು. ಆಗ ಈ ಎಲ್ಲ ಪ್ರಯತ್ನವು ಸಾರ್ಥಕವಾಗುತ್ತದೆ. ಭಗವಂತನ ಕೃಪೆಗೆ ನಾವೆಲ್ಲರೂ ಪಾತ್ರರಾಗುತ್ತೇವೆ.

ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ಶ್ರೀ ಸುಮಂತ್ ಎನ್. ಜೆ. ಮತ್ತು ಶ್ರೀಮತಿ ಮಾನಸಾ ಆರ್. ದಂಪತಿಗಳಿಗೆ ಹಾಗೂ ಇವರ ತಂದೆ-ತಾಯಿಯವರಾದ ಶ್ರೀ ಜಗನ್ನಾಥ ರಾವ್. ಎನ್.ಎ., ಮತ್ತು ಶ್ರೀಮತಿ ಪ್ರೇಮಲತಾ. ಎನ್. ಎಸ್. ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ-ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಈ ಜ್ಞಾನಯಜ್ಞದ ಪುಣ್ಯರಾಶಿಯು ದೊರಕಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ.

# ಆಚಾರ ವಿಚಾರ
# ಜಲಪೂರಣ ತ್ರಯೋದಶೀ
# ನೀರುತುಂಬುವ ಹಬ್ಬ

## ನೀರು ತುಂಬುವ ಹಬ್ಬಕ್ಕೆ ಬೇಕಾಗುವ ಸಾಮಗ್ರಿಗಳು :

೧. ಸ್ನಾನಗೃಹದ ಸ್ವಚ್ಛತೆ.

೨. ಹಂಡೆ, ಕಲಶ, ಹಾಗೂ ಪಾತ್ರೆಗಳ ಶುದ್ಧೀಕರಿಸುವಿಕೆ.

೩. ಮಾವಿನ ಹಾಗೂ ಹಲಸಿನ ಚಿಗುರುಗಳಿಂದ ಸಿಂಗಾರ.

೪. ಅತ್ತಿ, ಮಾವು, ಅರಳಿ, ಆಲ, ಪ್ಲಕ್ಷ ಎಂಬ ಐದು ಮರದ ತೊಗಟೆಗಳು.

೫. ಮನೆಯ ಅಂಗಳದ ಸ್ವಚ್ಛಗೊಳಿಸುವಿಕೆ.

೬. ವಿವಿಧ ಬಣ್ಣದ ರಂಗೋಲಿಗಳು.

೭. ಗಂಗಾಪೂಜೆಗೆ ಗೆಜ್ಜೆವಸ್ತ್ರ.

೮. ಪೂಜೆಗೆ ಬೇಕಾದ ಸಾಮಗ್ರಿಗಳು.

೯. ನೈವೇದ್ಯಕ್ಕಾಗಿ ಏಲಪ್ಪದ ತಯಾರಿಕೆ.

೧೦. ಅರಿಶಿನ ಹಾಗೂ ಕುಂಕುಮಗಳ ನೀರಿನ ಆರತಿ.

* * * *

## ದೀಪಹಚ್ಚುವ ಮೊದಲು ದೀಪದ ಬಗ್ಗೆ ತಿಳಿಯಿರಿ

ಶತಾಪರಾಧಸ್ತೋತ್ರದಲ್ಲಿ ದೀಪ ಹಚ್ಚದೇ ದೇವರ ಮನೆಯನ್ನು ಪ್ರವೇಶಿಸುವುದು ಒಂದು ಅಪರಾಧವೆಂದು ಮೊದಲ ಶ್ಲೋಕದಲ್ಲಿಯೇ ಹೇಳಿದ್ದಾರೆ. ನಾವು ಅನೇಕ ಬಾರಿ ದೇವರ ದರ್ಶನವನ್ನು ಮಾಡುವುದಕ್ಕಾಗಿ ದೇವರ ಮನೆಗೆ ಹೋಗುತ್ತೇವೆ. ದೇವರನ್ನು ಪೂಜಿಸುವುದಕ್ಕಾಗಿಯೂ ದೇವರ ಮನೆಗೆ ಹೋಗುತ್ತೇವೆ. ಆಗ ಅಲ್ಲಿ ದೀಪವು ಬೆಳಗುತ್ತಿರಬೇಕು. ಮನೆಯ ದೇವರ ಕೋಣೆಯಲ್ಲಿ ದೀಪವು ಎಂದೂ ಕೂಡ ನಂದಬಾರದು. ನಂದದ ದೀಪವಾಗಿರಬೇಕು. ಆದ್ದರಿಂದಲೇ ಅದು ನಂದಾದೀಪ. ಬೆಳಗುತ್ತಿರುವ ದೀಪವನ್ನು ಕಂಡಾಗ ನಮ್ಮ ಮನಸ್ಸಿಗೆ ಹಾಗು ಆತ್ಮನಿಗೆ ಆನಂದವು ಉಂಟಾಗುವುದರಿಂದಲೂ ಇದು ನಂದದ ದೀಪ. ಅಂದರೆ ಆನಂದದ ದೀಪ. ಪ್ರತಿಯೊಬ್ಬರೂ ತಮ್ಮ ಮನೆಯಲ್ಲಿ ಈ ನಂದಾದೀಪವನ್ನು ಪ್ರಯತ್ನಪಟ್ಟು ನಿರಂತರ ಬೆಳಗುವಂತೆ ಮಾಡಬೇಕು. ವರ್ಷಪೂರ್ತಿ ನಂದಾದೀಪವನ್ನು ಹಚ್ಚದೇ ದೀಪಾವಳಿಯಲ್ಲಿ ಸಡಗರದಲ್ಲಿ ಅನೇಕ ದೀಪಗಳನ್ನು ಬೆಳಗುವುದರಿಂದ ಉತ್ತಮ ಫಲವು ದೊರಕುವುದಿಲ್ಲ. ವರ್ಷಪೂರ್ತಿ ಮನೆಯಲ್ಲಿ ನಂದಾದೀಪವನ್ನು ಹಚ್ಚಿ, ದೀಪಾವಳಿ ದಿವಸ ಸಡಗರದಲ್ಲಿ ಅನೇಕ ದೀಪಗಳನ್ನು ಹಚ್ಚಿದಾಗ ಭಗವಂತನಿಗೆ ಪರಿಪೂರ್ಣವಾಗಿ ಸಂತೋಷವಾಗುತ್ತದೆ.

## ದೀಪ ಹಚ್ಚುವ ವಿಧಾನ

ಈಗ ಬರುತ್ತಿರುವ ಬೆಂಕಿಪೊಟ್ಟಣಗಳು ಶುದ್ಧವಾಗಿರುವುದಿಲ್ಲ. ಅದನ್ನು ತಯಾರಿಸುವಾಗಲೂ ಅಶಾಸ್ತ್ರೀಯವಾದ ಪದಾರ್ಥಗಳನ್ನು ಸೇರಿಸುತ್ತಾರೆಂದು ಬಲ್ಲವರು ಹೇಳುತ್ತಾರೆ. ಮಡಿಯಲ್ಲಿ ಉಪಯೋಗಿಸಲು ಸಾಧ್ಯವೇ ಆಗದ ಪದಾರ್ಥಗಳು ಅದರಲ್ಲಿರುತ್ತವೆ. ಆದ್ದರಿಂದ ಶುದ್ಧಮಡಿಯಲ್ಲಿ ಬೆಂಕಿಪೊಟ್ಟಣವನ್ನು ಮುಟ್ಟಬಾರದು. ಅನಿವಾರ್ಯವಾದ್ದರಿಂದ ತುಳಸೀಕಾಷ್ಠಕ್ಕೆ ಬೆಂಕಿಪೊಟ್ಟಣದಿಂದ ಬೆಂಕಿಯನ್ನು ಹಚ್ಚಿಕೊಂಡು ತುಳಸೀಕಾಷ್ಠದಿಂದಲೇ ದೇವರದೀಪವನ್ನು ಹಚ್ಚಬೇಕು.

ನೇರವಾಗಿ ಬೆಂಕಿಕಡ್ಡಿಯಿಂದ ದೀಪವನ್ನು ಹಚ್ಚಬಾರದು. ಮತ್ತು ಬೆಂಕಿಯಲ್ಲಿ ಬ್ರಹ್ಮಹತ್ಯೆಯು ಇರುವುದರಿಂದ ಅದರ ಪರಿಹಾರಕ್ಕಾಗಿಯೂ ಕೂಡ ತುಳಸೀಕಾಷ್ಠದಿಂಧಲೇ ದೀಪವನ್ನು ಹಚ್ಚಬೇಕು.

ನಂದಾದೀಪ ಬಿಟ್ಟು ಬೇರೆ ದೀಪಸ್ತಂಭಗಳಲ್ಲಿ ದೀಪವನ್ನು ಹಚ್ಚುವಾಗ ನಿತ್ಯವೂ ಹೊಸದಾದ ಬತ್ತಿಯಿಂದಲೇ ದೀಪವನ್ನು ಹಚ್ಚಬೇಕು.

## ದೀಪದ ಪಾತ್ರೆಗಳ ಬಗ್ಗೆ

ಪಂಚಾರಾತ್ರಾಗಮದಲ್ಲಿ ಚತುರ್ಮುಖಬ್ರಹ್ಮದೇವರನ್ನು ಕುರಿತು ಭಗವಂತನು ಯಾವ ಲೋಹದಿಂದ ನಿರ್ಮಿತವಾದ ಪಾತ್ರೆಗಳಲ್ಲಿ ದೀಪಗಳನ್ನು ಬೆಳಗಬೇಕೆಂಬುದನ್ನು ತಿಳಿಸಿರುತ್ತಾರೆ -

ಅಯೋಮಯಾನಿ ತಾಮ್ರಾಣಿ ಕಾಂಸ್ಯಸ್ವರ್ಣಮಯಾನಿ ಚ ।
ಮೃನ್ಮಯೇನ ತು ಪಾತ್ರೇಣ ಗೋಘೃತೇನ ಸುರಾಧಿಪ ।
ದೀಪಂ ದದಾತಿ ಯೋ ಭಕ್ತ್ಯಾ ಜ್ಞಾನೀ ಯೋಗೀ ಸುಖೀ ಭವೇತ್ ॥

ಕಾಲನಿರ್ಣಯ ಪ್ರಕಾರ -

ಅಯೋಮಯೇನ ಪಾತ್ರೇಣ ದೀಪಮರ್ಪಯತೇ ಹರೇಃ ।
ಸ ತು ದೀಪಶತೇನೈವ ಫಲಮಾಪ್ನೋತಿ ಪದ್ಮಜ! ॥
ಕಾಂಸ್ಯಪಾತ್ರೇಣ ದೀಪೇನ ಪೂಜಾಂ ಯಃ ಕುರುತೇ ನರಃ ।
ತಸ್ಯ ತೇಜಃ ಸುಸೌಭಾಗ್ಯಂ ವರ್ಧತೇ ಪದ್ಮಸಂಭವ ! ॥
ಯಸ್ತು ತಾಮ್ರಮಯೇ ಪಾತ್ರೇ ದೀಪಂ ದದ್ಯಾಚ್ಚ ಭಕ್ತಿತಃ ।
ಸತು ದೀಪಸಹಸ್ರೇಣ ಫಲಮಾಪ್ನೋತಿ ಶೋಭನಮ್ ॥
ಬ್ರಹ್ಮನ್ ! ರಜತಪಾತ್ರೇಷು ಯೋ ದದಾತಿ ಚ ದೀಪಿಕಾಮ್ ।
ಸ ತು ಲಕ್ಷಗುಣೋ ಭೂತ್ವಾ ಮಾಂ ಸಮಾಯಾತಿ ನಿತ್ಯದಾ ॥

# ಆಚಾರ ವಿಚಾರ

# ಜಲಪೂರಣ ತ್ರಯೋದಶೀ

# ನೀರುತುಂಬುವ ಹಬ್ಬ

## ನೀರು ತುಂಬುವ ಹಬ್ಬಕ್ಕೆ ಬೇಕಾಗುವ ಸಾಮಗ್ರಿಗಳು :

೧. ಸ್ನಾನಗೃಹದ ಸ್ವಚ್ಛತೆ.

೨. ಹಂಡೆ, ಕಲಶ, ಹಾಗೂ ಪಾತ್ರೆಗಳ ಶುದ್ಧೀಕರಿಸುವಿಕೆ.

೩. ಮಾವಿನ ಹಾಗೂ ಹಲಸಿನ ಚಿಗುರುಗಳಿಂದ ಸಿಂಗಾರ.

೪. ಅತ್ತಿ, ಮಾವು, ಅರಳಿ, ಆಲ, ಪ್ಲಕ್ಷ ಎಂಬ ಐದು ಮರದ ತೊಗಟೆಗಳು.

೫. ಮನೆಯ ಅಂಗಳದ ಸ್ವಚ್ಛಗೊಳಿಸುವಿಕೆ.

೬. ವಿವಿಧ ಬಣ್ಣದ ರಂಗೋಲಿಗಳು.

೭. ಗಂಗಾಪೂಜೆಗೆ ಗೆಜ್ಜೆವಸ್ತ್ರ.

೮. ಪೂಜೆಗೆ ಬೇಕಾದ ಸಾಮಗ್ರಿಗಳು.

೯. ನೈವೇದ್ಯಕ್ಕಾಗಿ ಏಲಪ್ಪದ ತಯಾರಿಕೆ.

೧೦. ಅರಿಶಿನ ಹಾಗೂ ಕುಂಕುಮಗಳ ನೀರಿನ ಆರತಿ.

* * * *

## ದೀಪಹಚ್ಚುವ ಮೊದಲು ದೀಪದ ಬಗ್ಗೆ ತಿಳಿಯಿರಿ

ಶತಾಪರಾಧಸ್ತೋತ್ರದಲ್ಲಿ ದೀಪ ಹಚ್ಚದೇ ದೇವರ ಮನೆಯನ್ನು ಪ್ರವೇಶಿಸುವುದು ಒಂದು ಅಪರಾಧವೆಂದು ಮೊದಲ ಶ್ಲೋಕದಲ್ಲಿಯೇ ಹೇಳಿದ್ದಾರೆ. ನಾವು ಅನೇಕ ಬಾರಿ ದೇವರ ದರ್ಶನವನ್ನು ಮಾಡುವುದಕ್ಕಾಗಿ ದೇವರ ಮನೆಗೆ ಹೋಗುತ್ತೇವೆ. ದೇವರನ್ನು ಪೂಜಿಸುವುದಕ್ಕಾಗಿಯೂ ದೇವರ ಮನೆಗೆ ಹೋಗುತ್ತೇವೆ. ಆಗ ಅಲ್ಲಿ ದೀಪವು ಬೆಳಗುತ್ತಿರಬೇಕು. ಮನೆಯ ದೇವರ ಕೋಣೆಯಲ್ಲಿ ದೀಪವು ಎಂದೂ ಕೂಡ ನಂದಬಾರದು. ನಂದದ ದೀಪವಾಗಿರಬೇಕು. ಆದ್ದರಿಂದಲೇ ಅದು ನಂದಾದೀಪ. ಬೆಳಗುತ್ತಿರುವ ದೀಪವನ್ನು ಕಂಡಾಗ ನಮ್ಮ ಮನಸ್ಸಿಗೆ ಹಾಗು ಆತ್ಮನಿಗೆ ಆನಂದವು ಉಂಟಾಗುವುದರಿಂದಲೂ ಇದು ನಂದದ ದೀಪ. ಅಂದರೆ ಆನಂದದ ದೀಪ. ಪ್ರತಿಯೊಬ್ಬರೂ ತಮ್ಮ ಮನೆಯಲ್ಲಿ ಈ ನಂದಾದೀಪವನ್ನು ಪ್ರಯತ್ನಪಟ್ಟು ನಿರಂತರ ಬೆಳಗುವಂತೆ ಮಾಡಬೇಕು. ವರ್ಷಪೂರ್ತಿ ನಂದಾದೀಪವನ್ನು ಹಚ್ಚದೇ ದೀಪಾವಳಿಯಲ್ಲಿ ಸಡಗರದಲ್ಲಿ ಅನೇಕ ದೀಪಗಳನ್ನು ಬೆಳಗುವುದರಿಂದ ಉತ್ತಮ ಫಲವು ದೊರಕುವುದಿಲ್ಲ. ವರ್ಷಪೂರ್ತಿ ಮನೆಯಲ್ಲಿ ನಂದಾದೀಪವನ್ನು ಹಚ್ಚಿ, ದೀಪಾವಳಿ ದಿವಸ ಸಡಗರದಲ್ಲಿ ಅನೇಕ ದೀಪಗಳನ್ನು ಹಚ್ಚಿದಾಗ ಭಗವಂತನಿಗೆ ಪರಿಪೂರ್ಣವಾಗಿ ಸಂತೋಷವಾಗುತ್ತದೆ.

## ದೀಪ ಹಚ್ಚುವ ವಿಧಾನ

ಈಗ ಬರುತ್ತಿರುವ ಬೆಂಕಿಪೊಟ್ಟಣಗಳು ಶುದ್ಧವಾಗಿರುವುದಿಲ್ಲ. ಅದನ್ನು ತಯಾರಿಸುವಾಗಲೂ ಅಶಾಸ್ತ್ರೀಯವಾದ ಪದಾರ್ಥಗಳನ್ನು ಸೇರಿಸುತ್ತಾರೆಂದು ಬಲ್ಲವರು ಹೇಳುತ್ತಾರೆ. ಮಡಿಯಲ್ಲಿ ಉಪಯೋಗಿಸಲು ಸಾಧ್ಯವೇ ಆಗದ ಪದಾರ್ಥಗಳು ಅದರಲ್ಲಿರುತ್ತವೆ. ಆದ್ದರಿಂದ ಶುದ್ಧಮಡಿಯಲ್ಲಿ ಬೆಂಕಿಪೊಟ್ಟಣವನ್ನು ಮುಟ್ಟಬಾರದು. ಅನಿವಾರ್ಯವಾದ್ದರಿಂದ ತುಳಸೀಕಾಷ್ಠಕ್ಕೆ ಬೆಂಕಿಪೊಟ್ಟಣದಿಂದ ಬೆಂಕಿಯನ್ನು ಹಚ್ಚಿಕೊಂಡು ತುಳಸೀಕಾಷ್ಠದಿಂದಲೇ ದೇವರದೀಪವನ್ನು ಹಚ್ಚಬೇಕು.

ನೇರವಾಗಿ ಬೆಂಕಿಕಡ್ಡಿಯಿಂದ ದೀಪವನ್ನು ಹಚ್ಚಬಾರದು. ಮತ್ತು ಬೆಂಕಿಯಲ್ಲಿ ಬ್ರಹ್ಮಹತ್ಯೆಯು ಇರುವುದರಿಂದ ಅದರ ಪರಿಹಾರಕ್ಕಾಗಿಯೂ ಕೂಡ ತುಳಸೀಕಾಷ್ಠದಿಂಧಲೇ ದೀಪವನ್ನು ಹಚ್ಚಬೇಕು.

ನಂದಾದೀಪ ಬಿಟ್ಟು ಬೇರೆ ದೀಪಸ್ತಂಭಗಳಲ್ಲಿ ದೀಪವನ್ನು ಹಚ್ಚುವಾಗ ನಿತ್ಯವೂ ಹೊಸದಾದ ಬತ್ತಿಯಿಂದಲೇ ದೀಪವನ್ನು ಹಚ್ಚಬೇಕು.

## ದೀಪದ ಪಾತ್ರೆಗಳ ಬಗ್ಗೆ

ಪಂಚಾರಾತ್ರಾಗಮದಲ್ಲಿ ಚತುರ್ಮುಖಬ್ರಹ್ಮದೇವರನ್ನು ಕುರಿತು ಭಗವಂತನು ಯಾವ ಲೋಹದಿಂದ ನಿರ್ಮಿತವಾದ ಪಾತ್ರೆಗಳಲ್ಲಿ ದೀಪಗಳನ್ನು ಬೆಳಗಬೇಕೆಂಬುದನ್ನು ತಿಳಿಸಿರುತ್ತಾರೆ -

ಅಯೋಮಯಾನಿ ತಾಮ್ರಾಣಿ ಕಾಂಸ್ಯಸ್ವರ್ಣಮಯಾನಿ ಚ ।
ಮೃನ್ಮಯೇನ ತು ಪಾತ್ರೇಣ ಗೋಘೃತೇನ ಸುರಾಧಿಪ ।
ದೀಪಂ ದದಾತಿ ಯೋ ಭಕ್ತ್ಯಾ ಜ್ಞಾನೀ ಯೋಗೀ ಸುಖೀ ಭವೇತ್ ॥

ಕಾಲನಿರ್ಣಯ ಪ್ರಕಾರ -

ಅಯೋಮಯೇನ ಪಾತ್ರೇಣ ದೀಪಮರ್ಪಯತೇ ಹರೇಃ ।
ಸ ತು ದೀಪಶತೇನೈವ ಫಲಮಾಪ್ನೋತಿ ಪದ್ಮಜ! ॥
ಕಾಂಸ್ಯಪಾತ್ರೇಣ ದೀಪೇನ ಪೂಜಾಂ ಯಃ ಕುರುತೇ ನರಃ ।
ತಸ್ಯ ತೇಜಃ ಸುಸೌಭಾಗ್ಯಂ ವರ್ಧತೇ ಪದ್ಮಸಂಭವ ! ॥
ಯಸ್ತು ತಾಮ್ರಮಯೇ ಪಾತ್ರೇ ದೀಪಂ ದದ್ಯಾಚ್ಚ ಭಕ್ತಿತಃ ।
ಸತು ದೀಪಸಹಸ್ರೇಣ ಫಲಮಾಪ್ನೋತಿ ಶೋಭನಮ್ ॥
ಬ್ರಹ್ಮನ್ ! ರಜತಪಾತ್ರೇಷು ಯೋ ದದಾತಿ ಚ ದೀಪಿಕಾಮ್ ।
ಸ ತು ಲಕ್ಷಗುಣೋ ಭೂತ್ವಾ ಮಾಂ ಸಮಾಯಾತಿ ನಿತ್ಯದಾ ॥

ಯೋ ವೈ ಸ್ವರ್ಣಮಯೇ ಪಾತ್ರೇ ದೀಪಂ ದಾಸ್ಯತಿ ವಿಷ್ಣವೇ ।
ಅನಂತಗುಣಿತೋ ಭೂತ್ವಾ ಯಾತಿ ಮಾಂ ನಾತ್ರ ಸಂಶಯಃ ॥

ಕಬ್ಬಿಣ, ತಾಮ್ರ, ಕಂಚು, ಸುವರ್ಣ, ಬೆಳ್ಳಿ, ಮಣ್ಣು ಇಷ್ಟು ಲೋಹದ ದೀಪಗಳನ್ನು ಭಗವಂತನಿಗೆ ಬೆಳಗಬೇಕು. ಇಂಥ ವ್ಯಕ್ತಿಯು ಜ್ಞಾನಿಯಾಗುತ್ತಾನೆ. ಯೋಗಿಯಾಗುತ್ತಾನೆ. ಹಾಗೂ ಸುಖಿಯಾಗುತ್ತಾನೆ. ಕಬ್ಬಿಣದ ಪಾತ್ರೆಯಲ್ಲಿ ದೀಪವನ್ನು ಸಮರ್ಪಿಸಿದರೆ ನೂರು ದೀಪಗಳನ್ನು ಹಚ್ಚಿದ ಫಲವು ಪ್ರಾಪ್ತಿಯಾಗುತ್ತದೆ. ಕಂಚಿನ ದೀಪವು ಹಚ್ಚಿದರೆ ಸೌಭಾಗ್ಯವು ದೊರೆಯುತ್ತದೆ. ತಾಮ್ರದ ಹಚ್ಚಿದರೆ ಸಾವಿರ ದೀಪ ಹಚ್ಚಿದ ಪುಣ್ಯವು ಬರುತ್ತದೆ. ಬೆಳ್ಳಿ ದೀಪವನ್ನು ಹಚ್ಚಿದರೆ ಲಕ್ಷದೀಪೋತ್ಸವ ಮಾಡಿದ ಪುಣ್ಯವು ಬರುತ್ತದೆ. ಸುವರ್ಣ ದೀಪ ಹಚ್ಚಿದರೆ ಅನಂತ ದೀಪ ಹಚ್ಚಿದ ಪುಣ್ಯವು ಬರುತ್ತದೆ. ಅನುಕೂಲವಾದರೆ ಕಬ್ಬಿಣ, ತಾಮ್ರ, ಕಂಚು, ಮಣ್ಣು, ಬೆಳ್ಳಿ, ಸುವರ್ಣ ಈ ಆರು ಲೋಹಗಳ ಎರೆಡರೆಡು ದೀಪಗಳನ್ನು ಅರ್ಥಾತ್ ಹನ್ನೆರಡು ದೀಪಗಳನ್ನು ಭಗವಂತನಿಗೆ ಹಚ್ಚಬೇಕು. ಸಾಧ್ಯವಾಗದಿದ್ದರೆ ದೀಪಾವಳಿಯ ಈ ಪರ್ವಕಾಲಗಳಲ್ಲಿ ಈ ಆರು ಬಗೆಯ ಲೋಹದ ದೀಪಗಳನ್ನು ಹಚ್ಚಬೇಕು.

## ದೀಪಕ್ಕೆ ಹಾಕುವ ಎಣ್ಣೆ

ಕರ್ಪೂರಂ ಗೋಘೃತಂ ತೈಲಂ ಕೌಸುಭಂ ನಾಲಿಕೇರಜಮ್ ।
ಆಜ್ಯಂ ಘೃತಂ ವಾ ಸಂಪಾದ್ಯ ಪುಮಾನೇವಂ ಸ್ವಶಕ್ತಿತಃ ॥
ಕರ್ಪೂರದೀಪಂ ಯೋ ಮಹ್ಯಂ ದದಾತಿ ಪ್ರಯತಾತ್ಮವಾನ್ ।
ತಸ್ಯ ಪುಣ್ಯಫಲಂ ವಕ್ತುಂ ನಾಲಂ ವರ್ಷಶತೈರಪಿ ।
ಜ್ಞಾನತೋಽಜ್ಞಾನತೋ ವಾಪಿ ನಿರಂತರಕೃತಂ ಬಹು ॥
ತಸ್ಯ ಜನ್ಮಾರ್ಜಿತಂ ಪಾಪಮುನ್ಮೂಲಯತಿ ಪುತ್ರಕ ।
ಆಯುರಾರೋಗ್ಯಸೌಭಾಗ್ಯಪುತ್ರಪೌತ್ರಾದಿಸಂಪದಃ ॥
ಜ್ಞಾನಂ ಭಕ್ತಿರ್ಭವೇತ್ ತಸ್ಯ ಮೋಕ್ಷಃ ಕರತಲೇ ಸ್ಥಿತಃ ।
ಗೋಘೃತೇನ ತು ಸರ್ವೇಷ್ಟಫಲಸಿದ್ಧಿಂ ಲಭೇನ್ನರಃ ॥

ಅಮಾಂಗಲ್ಯಹರಂ ತೈಲಂ ಕೌಸುಭಂ ಕೀರ್ತಿವರ್ಧನಮ್ ।
ನಾಲಿಕೇರಂ ಸೌಖ್ಯದಂ ಚ ಹ್ಯಾಜ್ಯಂ ಭೋಗೈಕಸಾಧನಮ್ ॥
ಏರಂಡಂ ಮಾಹಿಷಘೃತಂ ಸರ್ವಥಾ ವರ್ಜಯೇದ್ ಬುಧಃ ॥

ಕರ್ಪೂರದ ದೀಪವನ್ನು ಹಚ್ಚಿದರೆ ಎಲ್ಲ ಪಾಪಗಳು ಪರಿಹಾರವಾಗುತ್ತವೆ. ಶುದ್ಧವಾದ ಎಳ್ಳೆಣ್ಣೆಯ ದೀಪವನ್ನು ಹಚ್ಚಿದರೆ ಮಾಂಗಲ್ಯವು ಪ್ರಾಪ್ತವಾಗುತ್ತದೆ. ಅಮಾಂಗಲ್ಯವು ಪರಿಹಾರವಾಗುತ್ತದೆ. ಮುತ್ತೈದೆಯರು ನಿತ್ಯವೂ ಎಳ್ಳೆಣ್ಣೆಯ ದೀಪವನ್ನು ಮನೆಯಲ್ಲಿ ಹಚ್ಚಬೇಕು. ತುಪ್ಪದ ದೀಪವನ್ನು ಹಚ್ಚಿದರೆ ಎಲ್ಲ ಅಭೀಷ್ಟಗಳು ನೆರವೇರುತ್ತದೆ. ಕುಸುಬಿ ಎಣ್ಣೆಯ ದೀಪವನ್ನು ಹಚ್ಚಿದರೆ ಕೀರ್ತಿಯು ಅಭಿವೃದ್ಧಿಯಾಗುತ್ತದೆ. ತೆಂಗಿನಎಣ್ಣೆಯ ದೀಪವನ್ನು ಹಚ್ಚಿದರೆ ಸುಖವು ಪ್ರಾಪ್ತಿಯಾಗುತ್ತದೆ. ಆಡಿನ ತುಪ್ಪದಿಂದ ದೀಪವನ್ನು ಹಚ್ಚಿದರೆ ಭೋಗವು ಲಭಿಸುತ್ತದೆ. ಆದರೆ ಹರಳೆಣ್ಣೆ, ಎಮ್ಮೆಯ ತುಪ್ಪ ಇವುಗಳನ್ನು ದೀಪಕ್ಕೆ ಸರ್ವಥಾ ಉಪಯೋಗಿಸಬಾರದು.

## ಈಗ ನಾವೇನು ಮಾಡಬಹುದು

ಶುದ್ಧವಾದ ಯಾವುದೇ ರಾಸಾಯನಿಕ ಪದಾರ್ಥಗಳ ಮಿಶ್ರಣವಿಲ್ಲದ ಎಳ್ಳೆಣ್ಣೆಯು ಇಂದು ದೊರಕುವುದೇ ಕಠಿಣವಾಗಿದೆ. ಕಡಿಮೆ ಬೆಲೆಗೆ ಸಿಗುವ ಎಣ್ಣೆಗಳಲ್ಲಿ ಸ್ವಲ್ಪವೂ ಕೂಡ ಎಳ್ಳೆಣ್ಣೆಯ ಭಾಗವು ಇರುವುದಿಲ್ಲವೆಂದು ಬಲ್ಲವರು ಹೇಳುತ್ತಾರೆ. ಆದ್ದರಿಂದ ಸಾಧಕರು ಶುದ್ಧವಾದ ಎಳ್ಳೆಣ್ಣೆಯ ಬಗ್ಗೆ ವಿಚಾರವನ್ನು ಮಾಡಬೇಕು. ಈಗ ಎಣ್ಣೆ ತೆಗೆಯುವ ಯಂತ್ರಗಳಿಂದ ಎದುರಿನಲ್ಲಿಯೇ ಎಣ್ಣೆಯನ್ನು ತೆಗೆದುಕೊಡುತ್ತಾರೆ. ಅದನ್ನು ಮನೆಯಲ್ಲಿ ತಂದಿಟ್ಟುಕೊಂಡು ಅದರಿಂದ ದೀಪವನ್ನು ಹಚ್ಚಿದರೆ ಪರಿಪೂರ್ಣವಾದ ಫಲವು ದೊರಕುತ್ತದೆ. ಹಣದ ಉಳಿತಾಯವೂ ಆಗುತ್ತದೆ. ಪ್ರಕೃತಿಯ ರಕ್ಷಣೆಯೂ ಆಗುತ್ತದೆ. ಆರೋಗ್ಯದ ರಕ್ಷಣೆಯೂ ಕೂಡ ಸಂಪನ್ನವಾಗುತ್ತದೆ.

# ಶುದ್ಧವಾದ ಎಣ್ಣೆ ಹಾಗೂ ತುಪ್ಪಗಳಿಂದ ಹಚ್ಚಿದ ದೀಪದ ಮಹಿಮೆ

ಶುದ್ಧವಾದ ತುಪ್ಪದಿಂದ ಅರ್ಧನಿಮಿಷ ದೀಪ ಹಚ್ಚಿದರೂ ಸಾಕು, ಸಾವಿರ ಕಲ್ಪಗಳು ವಿಷ್ಣುಲೋಕದಲ್ಲಿ ಪೂಜ್ಯನಾಗುತ್ತಾನೆಂದು ನರಸಿಂಹಪುರಾಣವು ಹೇಳುತ್ತದೆ- ''ನಿಮಿಷಂ ನಿಮಿಷಾರ್ಧಂ ವಾ ಘೃತದೀಪಂ ನಿವೇದಯೇತ್ ।ಕಲ್ಪಕೋಟಿ- ಸಹಸ್ರಾಣಿ ವಿಷ್ಣುಲೋಕೇ ಮಹೀಯತೇ ॥''

ಶುದ್ಧವಾದ ತೈಲದಿಂದ ದೀಪವನ್ನು ಹಚ್ಚಿದರೆ ಅವನ ಪುಣ್ಯವನ್ನು ವರ್ಣಿಸಲು ಸಾಧ್ಯವಿಲ್ಲವೆಂದು ಪಾರ್ವತೀದೇವಿಗೆ ರುದ್ರದೇವರು ಪದ್ಮಪುರಾಣದಲ್ಲಿ ಹೇಳುತ್ತಾರೆ - ''ಭವೇದೇಕಸ್ಯ ದೀಪಸ್ಯ ಭೂಮೌ ರಾಜ್ಯಂ ಭವೇದಿತಿ । ಬಹೂನಾಂ ತು ಫಲಂ ವಕ್ತುಮಹಂ ನಾರ್ಹಾಮಿ ಪಾರ್ವತಿ ॥''

ಯಾರು ಹೀಗೆ ದೀಪವನ್ನು ನಿತ್ಯವು ಮನೆಯಲ್ಲಿ ಬೆಳಗುತ್ತಾರೋ, ದೀಪಾವಳಿಯ ಪರ್ವಕಾಲದಲ್ಲಿ ದೀಪವನ್ನು ಹಚ್ಚುತ್ತಾರೋ ಅವರು ಸಾವಿರ ಸೂರ್ಯನ ಕಾಂತಿಯಿಂದ ಕೂಡಿದವರಾಗಿ ವಿಮಾನದಲ್ಲಿ ಕುಳಿತು ಭಗವಂತನ ಲೋಕಕ್ಕೆ ತೆರಳುತ್ತಾರೆ ಎಂಬುದಾಗಿ ನರಸಿಂಹಪುರಾಣವು ಹೇಳುತ್ತದೆ - ''ಘೃತೇನ ವಾಽಥ ತೈಲೇನ ದೀಪಂ ಯೋ ಜ್ವಾಲಯೇನ್ನರಃ । ವಿಷ್ಣವೇ ವಿಧಿವದ್ಭಕ್ತ್ಯಾ ತಸ್ಯ ಪುಣ್ಯಫಲಂ ಶೃಣು ॥ ವಿಹಾಯ ಸಕಲಂ ಪಾಪಂ ಸಹಸ್ರಾದಿತ್ಯಸನ್ನಿಭಃ । ಜ್ಯೋತಿಷ್ಮತಾ ವಿಮಾನೇನ ವಿಷ್ಣುಲೋಕೇ ಮಹೀಯತೇ ॥''

ಆದ್ದರಿಂದ ನಿತ್ಯವೂ ಕೂಡ ನಾವು ಭಗವಂತನಿಗೆ ಶುದ್ಧವಾದ ಎಳ್ಳೆಣ್ಣೆಯಿಂದ ಹಾಗು ತುಪ್ಪದಿಂದ ದೀಪವನ್ನು ಹಚ್ಚೋಣ. ಅದೇ ರೀತಿಯಾಗಿ ದೀಪಾವಳಿಯ ಈ ಪರ್ವಕಾಲದಲ್ಲಿಯೂ ಕೂಡ ಶುದ್ಧವಾದ ದೀಪವನ್ನು ಹಚ್ಚಿ ಧನ್ಯರಾಗೋಣ.

॥ ಶ್ರೀಕೃಷ್ಣಾರ್ಪಣಮಸ್ತು ॥

# ದೀಪಾವಳಿ

* 'ದೀಪಾನಾಂ ಆವಳಿಃ ದೀಪಾವಳಿಃ' ಎಂಬ ನಿಷ್ಪತ್ತಿಯಂತೆ ಸಾಲು ಸಾಲಾಗಿ ಹಚ್ಚುವ ದೀಪಗಳ ಹಬ್ಬಕ್ಕೆ ದೀಪಾವಳಿ ಎಂಬುದಾಗಿ ಕರೆಯುತ್ತಾರೆ. ಇದು ವರ್ಷದ ಬಹುದೊಡ್ಡ ಹಬ್ಬ.
* ಭಾರತ ದೇಶದಲ್ಲಿ ಸಾರ್ವತ್ರಿಕವಾಗಿ ಆಚರಿಸಲ್ಪಡುವ ಏಕೈಕ ಹಬ್ಬವೇ ದೀಪಾವಳಿ.
* ಕೃಷ್ಣಾಷ್ಟಮಿ, ರಾಮನವಮಿ ಮೊದಲಾದ ಹಬ್ಬಗಳಲ್ಲಿ ಒಬ್ಬ ದೇವತೆಯ ಆರಾಧನೆಯಷ್ಟೇ ಇರುತ್ತದೆ. ಆದರೆ ದೀಪಾವಳಿಯಲ್ಲಿ ಬೇರೆ ಬೇರೆ ದೇವತೆಯ ಕುರಿತಾಗಿ ಆರಾಧನೆಯನ್ನು ಉತ್ಸವವನ್ನು ಮಾಡಲಾಗುತ್ತದೆ. ನಾಲ್ಕೈದು ದಿವಸಗಳ ಕಾಲ ಇದನ್ನು ಆಚರಿಸಲಾಗುತ್ತದೆ.
* ಭವಿಷ್ಯೋತ್ತರಪುರಾಣದ ೧೪೦ನೇ ಅಧ್ಯಾಯದಲ್ಲಿ 'ದೀಪಾಲಿಕಾ' ಎಂದು ಈ ಹಬ್ಬವನ್ನು ಹೆಸರಿಸಲಾಗಿದೆ. ರಾಜಮಾರ್ತಾಂಡದಲ್ಲಿ 'ಸುಖರಾತ್ರಿ' ಎಂದು ಪುರಾಣಗಳ ಆಧಾರದಿಂದ ಉಲ್ಲೇಖಿಸಲಾಗಿದೆ. ಕಾಲವಿವೇಕದಲ್ಲಿ 'ಯಕ್ಷರಾತ್ರಿ' ಎಂದು, ವಾತ್ಸಾಯನಕಾಮಸೂತ್ರದಲ್ಲಿ 'ಸುಖಸುಪ್ತಿಕಾ' ಎಂಬುದಾಗಿ ಈ ಹಬ್ಬವನ್ನು ಪರಿಗಣಿಸಲಾಗಿದೆ.

  'ಉಪಶಮಿತಾ ಮೇಘನಾದಂ ಪ್ರಜ್ವಲಿತಾ ದಶಾನನಂ ರಮಿತರಾಮಂ'

  ಪದ್ಮಪುರಾಣದಲ್ಲಿ ತ್ರಯೋದಶಿಯಿಂದ ದ್ವಿತೀಯಾ ದಿವಸದ ತನಕ ಐದು ದಿವಸಗಳ ಕಾಲ ದೀಪಾವಳಿಯ ಆಚರಣೆಯನ್ನು ಹೇಳಲಾಗಿದೆ. ಆದರೆ ನಾರದ ಪುರಾಣದಲ್ಲಿ ದ್ವಾದಶಿಯಿಂದ ಪ್ರಾರಂಭ ಮಾಡಿ, ಪ್ರತಿಪತ್ ದಿವಸದ ತನಕ ಐದುದಿವಸಗಳ ಕಾಲ ದೀಪಾವಳಿಯ ಆಚರಣೆಯನ್ನು ಹೇಳಲಾಗಿದೆ. ಪದ್ಮಪುರಾಣದಲ್ಲಿ ಹೇಳಿದ್ದರ ಆಚರಣೆಯೇ ಇಂದು ಹೆಚ್ಚಾಗಿ ಕಾಣಿಸುತ್ತಿದೆ.

ದ್ವಾದಶಿಯಿಂದಲೇ ದೀಪಾವಳಿಯ ಆಚರಣೆಯ ಪದ್ಧತಿಯು ಸಂಪ್ರದಾಯದಲ್ಲಿ ಹೆಚ್ಚಾಗಿ ಕಾಣಿಸುವುದಿಲ್ಲ. ನಾರದಪುರಾಣದ ವಾಕ್ಯ ಹೀಗಿದೆ -

ಆಶ್ವಿನೇ ಕೃಷ್ಣಪಕ್ಷೇ ತು ದ್ವಾದಶ್ಯಾದಿಷು ಪಂಚಸು ।
ತಿಥಿಷೂಕ್ತಃ ಪೂರ್ವರಾತ್ರೇ ನೃಣಾಂ ನೀರಾಜನೋ ವಿಧಿಃ ॥

ಕೃಷ್ಣಪಕ್ಷದಲ್ಲಿ ಬರುವ ದ್ವಾದಶಿಯಿಂದ ಪ್ರಾರಂಭಮಾಡಿ, ಐದು ರಾತ್ರಿಗಳಲ್ಲಿ ಮೊದಲ ಜಾವದ ಸಮಯದಲ್ಲಿ ನೀರಾಜನವನ್ನು ಮಾಡಬೇಕು.

ನೀರಾಜಯೇಯುರ್ದೇವಾಂಸ್ತು ವಿಪ್ರಾನ್ ಗಾಶ್ಚ ತುರಂಗಮಾನ್
ಜ್ಯೇಷ್ಠಾನ್ ಶ್ರೇಷ್ಠಾನ್ ಜಘನ್ಯಾಂಶ್ಚ ಮಾತೃಮುಖ್ಯಾಶ್ಚ ಯೋಷಿತಃ ॥

ದ್ವಾದಶಿಯಿಂದ ಐದು ದಿವಸಗಳ ಕಾಲ ದೇವತೆಗಳಿಗೆ, ವಿಪ್ರರಿಗೆ, ಹಸುಗಳಿಗೆ, ಕುದುರೆಗಳಿಗೆ, ಜ್ಯೇಷ್ಠರಿಗೆ, ಶ್ರೇಷ್ಠರಿಗೆ, ತಂದೆ-ತಾಯಿ ಮೊದಲಾದವರಿಗೆ ನೀರಾಜನದ ಆರತಿಯನ್ನು ಮಾಡಬೇಕು.

ಪದ್ಮಪುರಾಣದಲ್ಲಿ ಬರುವ ದೀಪಾವಳಿಯ ಮಹಿಮೆ ಹೀಗಿದೆ -

## ಪದ್ಮಪುರಾಣದ ಉತ್ತರಖಂಡದ ೧೨೪ನೆಯ ಅಧ್ಯಾಯ

## ದೀಪಾವಳಿಯ ಬಗ್ಗೆ ಶ್ರೀಕೃಷ್ಣನ ಬಳಿ ಸತ್ಯಭಾಮೆಯ ಪ್ರಶ್ನೆ

ದೀಪಾವಳೀಫಲಂ ನಾಥ ವಿಶೇಷಾದ್ಬ್ರೂಹಿ ಮೇ ಪ್ರಭೋ ।
ಕಿಮರ್ಥಂ ಕ್ರಿಯತೇ ಸಾ ತು ತಸ್ಯಾಃ ಕಾ ದೇವತಾ ಭವೇತ್ ॥

ಕಿಂ ಚ ತತ್ರ ಭವೇದ್ದೇಯಂ ಕಿನ್ನ ದೇಯಂ ವದ ಪ್ರಭೋ ।
ಪ್ರಹರ್ಷಃ ಕೋತ್ರ ನಿರ್ದಿಷ್ಟಃ ಕ್ರೀಡಾ ಕಾತ್ರ ಪ್ರಕೀರ್ತಿತಾ ॥

ಸತ್ಯಭಾಮೆಯು ಪ್ರಶ್ನಿಸುತ್ತಾಳೆ - ಎಲೈ ಸ್ವಾಮಿಯೇ ! ದೀಪಗಳನ್ನು ಹತ್ತಿಸುವ ಫಲವನ್ನು ವಿಸ್ತಾರವಾಗಿ ಹೇಳು. ಆ ದೀಪಗಳನ್ನು ಏಕೆ ಹತ್ತಿಸುತ್ತಾರೆ ? ಅದಕ್ಕೆ ದೇವತೆ ಯಾರು ?

ಆ ಸಮಯದಲ್ಲಿ ಯಾವುದನ್ನು ದಾನಮಾಡಬೇಕು ? ಯಾವುದನ್ನು ದಾನ ಮಾಡಬಾರದು ? ಆವಾಗ ದೊರೆಯುವ ಸಂತೋಷವು ಯಾವ ಬಗೆಯದು? ಆವಾಗ ಆಡುವ ಆಟವಾವುದು ?

ಸೂತ ಉವಾಚ

ಇತಿ ಸತ್ಯಾವಚಶ್ಶ್ರುತ್ವಾ ಭಗವಾನ್ಕಮಲೇಕ್ಷಣಃ ।

ಸಾಧೂಕ್ತ್ವಾ ಕಮಲಾಕಾನ್ತಃ ಪ್ರಹಸನ್ನಿದಮಬ್ರವೀತ್ ॥

ಸೂತನು ಹೇಳಿದನು - ಕಮಲೇಕ್ಷಣನೂ, ಕಮಲಾಕಾಂತನೂ ಆದ ಸ್ವಾಮಿಯು ಸತ್ಯಭಾಮೆಯ ಈ ಮಾತನ್ನು ಕೇಳಿ ಒಳ್ಳೆಯದೆನ್ನುತ್ತಾ ನಗುತ್ತಾ ಇಂತೆಂದನು.

## ತ್ರಯೋದಶಿಯಂದು ಯಮದೀಪ ಹಚ್ಚಿರಿ

ಶ್ರೀ ಕೃಷ್ಣ ಉವಾಚ -

ಕಾರ್ತೀಕಸ್ಯಾಸಿತೇ ಪಕ್ಷೇ ತ್ರಯೋದಶ್ಯಾಂ ನಿಶಾಮುಖೇ ।

ಯಮದೀಪಂ ಬಹಿರ್ದದ್ಯಾದಪಮೃತ್ಯುರ್ವಿನಶ್ಯತಿ ॥

ಶ್ರೀಕೃಷ್ಣನು ಉತ್ತರಿಸಿದನು - ಎಲೈ ಸತ್ಯಭಾಮೆಯೇ ! ಕೃಷ್ಣಪಕ್ಷದ ತ್ರಯೋದಶಿಯ ದಿವಸ ಹೊರಗಡೆ ದೀಪವನ್ನು ಹತ್ತಿಸಬೇಕು. ಇದಕ್ಕೆ ಯಮದೀಪವೆಂದು ಹೆಸರು. ಇದರಿಂದ ಅಪಮೃತ್ಯುವು ಹೋಗುತ್ತದೆ.

ಮೊದಲಿಗೆ ಒಂದು ದೊಡ್ಡ ದೀಪವನ್ನು ತೆಗೆದುಕೊಂಡು ಅದರಲ್ಲಿ ಸಾಕಷ್ಟು ಎಳ್ಳೆಣ್ಣೆಯನ್ನು ತುಂಬಿಸಬೇಕು. (ದೀಪವು ರಾತ್ರಿಯೆಲ್ಲ ಉರಿಯುವುದು ಅತ್ಯಂತ ಪ್ರಶಸ್ತ) ಆ ಬಳಿಕ ದೊಡ್ಡ ಹೂಬತ್ತಿಯನ್ನು ಅದರಲ್ಲಿಟ್ಟು, ದೇವರ ಮುಂದೆ ಅಪಮೃತ್ಯು ಪರಿಹಾರಕ್ಕಾಗಿ ಪ್ರಾರ್ಥಿಸಬೇಕು.

## ಯಮಪ್ರಾರ್ಥನೆ

ಮೃತ್ಯುನಾ ಪಾಶಹಸ್ತೇನ ಕಾಲೇನ ಭಾರ್ಯಯಾ ಸಹ ।

ತ್ರಯೋದಶ್ಯಾಂ ದೀಪದಾನಾತ್ ಸೂರ್ಯಜಃ ಪ್ರೀಯತಾಮಿತಿ ॥

ಪಾಶವನ್ನು ಕೈಯಲ್ಲಿ ಹಿಡಿದಿರುವ ಕಾಲಮೃತ್ಯು ಎಂಬ ಹೆಂಡತಿಯಿಂದ ಕೂಡಿದ ಸೂರ್ಯಪುತ್ರನಾದ ಯಮಧರ್ಮ ರಾಜನು ಅವನ ಹೆಂಡತಿಯೂ ನಾನು ಈ ತ್ರಯೋದಶಿಯ ದಿವಸ ದೀಪವನ್ನು ಹತ್ತಿಸುವುದರಿಂದ ಸಂತೋಷಪಡಲಿ ಎಂದು ಪ್ರಾರ್ಥಿಸಬೇಕು.

ದೇವರ ಮುಂದೆ ಯಮದೀಪ ಹಚ್ಚಿ ಲಕ್ಷ್ಮೀನರಸಿಂಹದೇವರಿಗೆ ಸಮರ್ಪಿಸಿ ಭೀಮಸೇನದೇವರಿಗೆ ಸಮರ್ಪಿಸಿ ಅನಂತರ ಹೊರಗಡೆ ತಂದು ದಕ್ಷಿಣದಿಕ್ಕಿನ ಕಡೆ ತಿರುಗಿ ಈ ಶ್ಲೋಕವನ್ನು ಪಠಿಸಬೇಕು.

ಮೃತ್ಯುನಾ ಪಾಶದಂಡಾಭ್ಯಾಂ ಕಾಲೇನ ಶ್ಯಾಮಯಾ ಸಹ ।

ತ್ರಯೋದಶ್ಯಾಂ ದೀಪದಾನಾತ್ ಸೂರ್ಯಜಃ ಪ್ರೀಯತಾಮಿತಿ॥

ಅನಂತರ ಆ ದೀಪವನ್ನು ತೆಗೆದುಕೊಂಡು ಮನೆಯ ಆಗ್ನೇಯ ಅಥವಾ ದಕ್ಷಿಣ ದಿಕ್ಕಿನಲ್ಲಿ ಎತ್ತರದ ಸ್ಥಾನದಲ್ಲಿಡಬೇಕು. ಮನೆಯ ಮೇಲ್ಭಾಗದಲ್ಲಿಟ್ಟರೆ ಇನ್ನೂ ಒಳಿತು.

## ತ್ರಯೋದಶಿಯಂದು ಮಾಡಬೇಕಾದ ಕರ್ತವ್ಯ
## ಯಮದೀಪ ಆಕಾಶದೀಪ

ತ್ರಯೋದಶಿಯ ಸಾಯಂಕಾಲದಲ್ಲಿ ದಕ್ಷಿಣದಿಕ್ಕಿಗೆ ಮುಖಮಾಡಿ ಮಣ್ಣಿನ ಹಣತೆಯಲ್ಲಿ ಯಮದೀಪವನ್ನು ಹಚ್ಚಬೇಕು. ಹದಿನಾಕು ಬತ್ತಿಗಳಿಂದ ಯಮದೇವರ ಹದಿನಾಕು ರೂಪಗಳನ್ನು ಸ್ಮರಿಸಿ ಬತ್ತಿಯನ್ನು ಹಚ್ಚುವುದು ವಿಶೇಷ. ಬೆಳಿಗ್ಗೆ ಅರುಣೋದಯದ ಕಾಲದ ತನಕ ದೀಪ ಉರಿಯುವಂತೆ ಯಮದೀಪವನ್ನು ಹಚ್ಚಬೇಕು. ಇದನ್ನೇ ಕೆಲವರು ಆಕಾಶದೀಪ, ಆಕಾಶಬುಟ್ಟಿ, ಗೂಡುದೀಪ ಎಂಬುದಾಗಿಯೂ ಕರೆಯುತ್ತಾರೆ.

* ದೇವಸ್ಥಾನಗಳ ಮುಂದೆ ಪುರುಷ ಪ್ರಮಾಣದ ಒಂದು ಕಂಬವನ್ನು ನಿಲ್ಲಿಸಿ, ಕೆಂಪುಬಟ್ಟೆಯನ್ನು ಹೊಂದಿದ ಅಷ್ಟಭುಜದ ಅಥವಾ ದ್ವಾದಶಭುಜದ ಒಂದು ಗೂಡನ್ನು ತಯಾರು ಮಾಡಿ ದೀಪವನ್ನು ಹಚ್ಚುತ್ತಾರೆ. ಮತ್ತೊಂದು ಬಿಳಿಯ

ಬಟ್ಟೆಯಿಂದ ಗೂಡೊಂದನ್ನು ಅದೇರೀತಿಯಲ್ಲಿ ನಿರ್ಮಾಣ ಮಾಡಿ, ದೀಪವನ್ನು ಹಚ್ಚುತ್ತಾರೆ. ದಕ್ಷಿಣದಿಕ್ಕಿನ ಕಡೆ ಮುಖಮಾಡಿ, ಕೆಂಪು ಹಾಗೂ ಬಿಳಿಯ ಎರಡು ಗೂಡುಗಳಲ್ಲಿ ಯಮದೀಪವನ್ನು ಹಾಗೂ ಆಕಾಶದೀಪವನ್ನು ಹಚ್ಚುವ ಪದ್ಧತಿಯು ಮಠ, ದೇವಸ್ಥಾನಗಳಲ್ಲಿ ನಡೆಯುತ್ತದೆ. ಮನೆಗಳಲ್ಲಿ ಕೇವಲ ಒಂದು ದೀಪವನ್ನು ಹಚ್ಚುವ ಪದ್ಧತಿಯು ಬಂದಿದೆ.

* ತ್ರಯೋದಶಿಯ ದಿವಸ ಈ ಆಕಾಶದೀಪ ಹಚ್ಚುವ ಸಂಪ್ರದಾಯ ವ್ಯಾಪಕವಾಗಿದೆ. ಕೆಲವರು ಅಮಾವಾಸ್ಯೆಯಿಂದ ಒಂದು ತಿಂಗಳು ಹಚ್ಚುತ್ತಾರೆ.

* ಆಕಾಶದೀಪಂ ಯೋ ದದ್ಯಾತ್ ಮಾಸಮೇಕಂ ಹರಿಂ ಪ್ರತಿ ।
  ಮಹತೀಂ ಶ್ರಿಯಮಾಪ್ನೋತಿ ರೂಪಸೌಭಾಗ್ಯಸಂಪದಮ್ ॥

  ಒಂದು ತಿಂಗಳು ಯಾರು ಆಕಾಶದೀಪವನ್ನು ಬೆಳಗುತ್ತಾರೋ ಅವರು ಅಪಾರವಾದ ಸಂಪತ್ತನ್ನು,ರೂಪ ಸೌಭಾಗ್ಯಸಂಪತ್ತುಗಳನ್ನು ಪಡೆದುಕೊಳ್ಳುತ್ತಾರೆ.

* ಯಮದೀಪದ ತಯಾರಿಕೆ ಹೀಗಿದೆ - ಬಿದಿರಿನ ಸಣ್ಣ ಕೋಲುಗಳಿಂದ ಅಷ್ಟಭುಜಾಕಾರದಲ್ಲಿ ಅಥವಾ ದ್ವಾದಶಭುಜಾಕಾರದಲ್ಲಿ ಗೂಡೊಂದನ್ನು ರಚನೆ ಮಾಡಬೇಕು. ಗಾಳಿಯಿಂದ ದೀಪವು ಶಾಂತವಾಗದಂತೆ ಬಟ್ಟೆ ಅಥವಾ ಕಾಗದಗಳಿಂದ ಅದನ್ನು ಸುತ್ತಬೇಕು. ದೀಪವನ್ನು ಇಡುವ ಸ್ಥಳದಲ್ಲಿ ಸೆಗಣಿಯನ್ನು ತಟ್ಟಿ ಅದರ ಮೇಲೆ ಒಂದು ದೊಡ್ಡ ಮಣ್ಣಿನ ಹಣತೆಯನ್ನಿಟ್ಟು ದೀಪವನ್ನು ಮೇಲೆ ಉಲ್ಲೇಖಿಸಿದ 'ಮೃತ್ಯುನಾ ಪಾಶಹಸ್ತೇನ' ಎಂಬ ಶ್ಲೋಕವನ್ನು ಪಠಿಸುತ್ತಾ ಹಚ್ಚಬೇಕು.

* ಮನೆಯ ಎತ್ತರ ಭಾಗದ ಆಕಾಶದಲ್ಲಿ ಈ ಯಮದೀಪವನ್ನು ಹಚ್ಚುವುದರಿಂದಲೇ ಇದನ್ನು ಆಕಾಶದೀಪ ಎನ್ನುತ್ತಾರೆ. ಗಾಳಿಗೆ ಇದು ನಂದದಂತೆ ರಕ್ಷಣೆಗಾಗಿ ಗೂಡಿನಲ್ಲಿ ಇದನ್ನು ಹಚ್ಚುವುದರಿಂದ ಗೂಡುದೀಪ ಎಂದೂ ಇದನ್ನು ಕರೆಯುತ್ತಾರೆ.

* ಆಕಾಶದೀಪ ಹಾಗೂ ಯಮದೀಪವನ್ನು ಹಚ್ಚುವ ಉದ್ದೇಶ ಹೀಗಿದೆ - ೧) ಪಿತೃದೇವತೆಗಳು ಗಗನಮಾರ್ಗದಲ್ಲಿ ಸಂಚರಿಸುತ್ತಾ ತೆರಳುತ್ತಾರೆ. ಅವರಿಗೆ ದಾರಿ ತೋರಿಸುವುದು. ೨) ಪಿತೃದೇವತೆಗಳನ್ನು ಸಂತೋಷ ಪಡಿಸುವುದು, ೩) ದೀಪವನ್ನು ಬೆಳಗುವ ಮೂಲಕ ನಮ್ಮ ಸಂಸ್ಕೃತಿಯನ್ನು ಹಾಗೂ ಹರಿಭಕ್ತಿಯನ್ನು ಪ್ರಜ್ವಲಿಸುವ ಭಾವನೆಯನ್ನು ತಿಳಿಸುವುದು. ೪) ಈ ದೀಪವನ್ನು ಯಮದೇವರಿಗೆ ಹಚ್ಚುವುದರಿಂದ ಯಮದೇವರ ಸ್ಮರಣೆಯಲ್ಲಿ ಯಾವುದೇ ದುಷ್ಕಾರ್ಯವನ್ನು ಮಾಡದೇ, ಸನ್ಮಾರ್ಗದಲ್ಲಿ ನಾನಿದ್ದೇನೆ ಎಂಬ ಭಾವನೆಯನ್ನು ಹೊಂದುವುದು. ೫) ಯಮದೇವರು ನೀಡಿದ ಸಾಧನೆಗೆ ಅನುಕೂಲಗಳನ್ನು ಅನೇಕ ಅಲೌಕಿಕವಾದ ಸಂಪತ್ತುಗಳನ್ನು ಸ್ಮರಣೆ ಮಾಡಿ, ಯಮದೇವರಿಗೆ ಕೃತಜ್ಞತಾಪೂರ್ವಕವಾಗಿ ದೀಪವನ್ನು ಹಚ್ಚುವುದು. ಈ ಅನೇಕ ಉದ್ದೇಶಗಳಿಂದ ಯಮದೀಪವನ್ನು ಹಚ್ಚಲಾಗುತ್ತದೆ.

* ಇಂದಿನ ದಿವಸಗಳಲ್ಲಿ ಪ್ರತಿಯೊಬ್ಬರೂ ತಮ್ಮ ಮನೆಯ ಮುಂದೆ ಹಣಕೊಟ್ಟು ಆಕಾಶದೀಪವನ್ನು ತಂದು ವಿದ್ಯುದ್ದೀಪಗಳನ್ನು ಅದರೊಳಗಿಟ್ಟು ಬೆಳಗುತ್ತಾರೆ. ಇದು ಉತ್ತಮ ಪಕ್ಷವಲ್ಲ. ಎಳ್ಳೆಣ್ಣೆಯ ದೀಪವನ್ನು ಹದಿನಾಕು ಬತ್ತಿಗಳಿಂದ ದಕ್ಷಿಣದಿಕ್ಕಿಗೆ ಮುಖಮಾಡಿ ಮಂತ್ರಪೂರ್ವಕವಾಗಿ ಹಚ್ಚುವುದರಿಂದಷ್ಟೇ ಯಮದೇವರಿಗೆ ಹೆಚ್ಚು ಸಂತೋಷವಾಗುತ್ತದೆ.

* ಯಮದೀಪವನ್ನು ದಾನ ಮಾಡಬೇಕೆಂದು ಶಾಸ್ತ್ರದಲ್ಲಿ ಹೇಳಿದ್ದಾರೆ. ಆದ್ದರಿಂದ ಯೋಗ್ಯರಾದ ಸದ್‌ಬ್ರಾಹ್ಮಣರಿಗೆ ಯಮದೀಪದ ದಾನವನ್ನು ಮಾಡುವುದರಿಂದ ನೂರುಪಟ್ಟು ಫಲವನ್ನು ಪಡೆಯಬಹುದು.

## ಆಕಾಶದೀಪ ಹಚ್ಚುವಾಗ ಹೇಳಬೇಕಾದ ಶ್ಲೋಕ

ದಾಮೋದರಾಯ ನಭಸಿ ತುಲಾಯಾಂ ದೋಲಯಾ ಸಹ ।
ಪ್ರದೀಪಂ ತೇ ಪ್ರದಾಸ್ಯಾಮಿ ನಮೋಽನಂತಾಯ ವೇಧಸೇ ॥

ಯಮಲೋಕಂ ಪರಿತ್ಯಜ್ಯ ಆಗತಾ ಯೇ ಮಹಾಲಯೇ ।
ಉಜ್ವಲಜ್ಯೋತಿಷಾ ವರ್ತ್ಮ ಪ್ರಪಶ್ಯಂತು ವ್ರಜಂತು ತೇ ॥

## ತ್ರಯೋದಶೀನಿರ್ಣಯ

ಕೃಷ್ಣ ತ್ರಯೋದಶ್ಯಾಸ್ತು ಪರವಿದ್ಧಾಯಾಃ ಗ್ರಾಹ್ಯತ್ವಮುಕ್ತಂ ನಿಗಮೇ -

ಷಷ್ಠ್ಯಷ್ಟಮ್ಯಪ್ಯಮಾವಾಸ್ಯಾ ಕೃಷ್ಣಪಕ್ಷತ್ರಯೋದಶೀ ।
ಏತಾಃ ಪರಯುತಾಃ ಪೂಜ್ಯಾಃ ಪರಾಃ ಪೂರ್ವಯುತಾಸ್ತಥಾ ॥

ಕೃಷ್ಣಪಕ್ಷ ತ್ರಯೋದಶಿಯು ಪರತಿಥಿಯ ವೇಧವಿದ್ದಾಗಲೇ ಗ್ರಾಹ್ಯವು ಎಂಬುದಾಗಿ ನಿಗಮದಲ್ಲಿ ಹೇಳಲಾಗಿದೆ.

'ಷಷ್ಠೀ, ಅಷ್ಟಮೀ ಮತ್ತು ಅಮಾವಾಸ್ಯೆ ಹಾಗೂ ಕೃಷ್ಣಪಕ್ಷದ ತ್ರಯೋದಶೀ ಇವು ಪರತಿಥಿಯಿಂದ ಕೂಡಿದಾಗ ಅನುಷ್ಠಾನಾರ್ಹವಾಗುತ್ತವೆ. ಪರತಿಥಿಗಳು ಅಂದರೆ ಸಪ್ತಮೀ, ನವಮೀ, ಪಾಡ್ಯ, ಕೃಷ್ಣಪಕ್ಷ, ಚತುರ್ದಶಿಗಳು ಪೂರ್ವತಿಥಿಯಿಂದ ಕೂಡಿದ್ದಾಗ ಗ್ರಾಹ್ಯವಾಗುತ್ತವೆ' ಎಂಬುದು ನಿಗಮ.

## ದೀಪವನ್ನು ಬೆಳಗುವಾಗ ಪ್ರಾರ್ಥಿಸುವ ಮಂತ್ರ

ಸ್ನೇಹೋ ದೀಪಂ ಯಥಾ ಧೃತ್ವಾ ಸರ್ವಲೋಕೋಪಕಾರಕಃ ।
ತಥಾಭವಾನ್ ಮಮ ಜ್ಞಾನಂ ಹೃದಿ ಧಾರಯ ಸಂತತಮ್ ॥
ತದ್ಧೂಮಗಂಧಮಾಘ್ರಾಯ ಯಥಾ ಪೂತಶ್ಚ ಖೇಚರಾಃ ।
ತಥಾ ಪ್ರಜ್ವಲ ದೀಪ ! ತ್ವಂ ಸಪ್ತಲೋಕಸಮಾಶ್ರಯಾಃ ॥

ಎಣ್ಣೆಯ ದೀಪವನ್ನು ಧರಿಸಿ ಪ್ರಾರ್ಥಿಸಬೇಕು - ಹೇಗೆ ಈ ದೀಪವು ಎಲ್ಲಾ ಲೋಕಗಳಿಗೆ ಉಪಕಾರಕವಾಗಿದೆಯೋ, ಹಾಗೆಯೇ ಎಲೈ ದೀಪಾಭಿಮಾನಿ ದೇವತೆಯೇ ! ನೀನು ಯಾವಾಗಲೂ ನನ್ನ ಜ್ಞಾನವನ್ನು ಹೃದಯದಲ್ಲಿ ಧರಿಸು. ನನ್ನ ಜ್ಞಾನವು ಸ್ಥಿರವಾಗಿ ನಿಲ್ಲುವಂತೆ ಮಾಡು. ಎಲೈ ದೀಪವೇ ! ಏಳು ಲೋಕಗಳಲ್ಲಿರುವ

ದೀಪಾವಳಿ -೧ ಜಲಪೂರಣತ್ರಯೋದಶೀ

ಗಗನಚಾರಿಗಳು ನಿನ್ನ ಹೊಗೆಯ ವಾಸನೆಯನ್ನು ಮೂಸಿ ಹೇಗೆ ಪವಿತ್ರರಾಗುತ್ತಾರೋ ಹಾಗೆ ನೀನು ಪ್ರಜ್ವಲಿಸು.

* ಮಠಗಳಲ್ಲಿ ಆಚರಿಸುವಂತೆ ಎರಡು ದೀಪಗಳನ್ನು ಹಚ್ಚುವುದೇ ಶ್ರೇಷ್ಠ. ೧) ಆಕಾಶದೀಪ ೨) ಯಮದೀಪ
* ರಾಧಾದಾಮೋದರನಿಗೆ ಆಕಾಶದೀಪವನ್ನು ಒಂದು ತಿಂಗಳುಗಳ ಕಾಲ ಹಚ್ಚಬೇಕು. ಯಮದೀಪವನ್ನು ತ್ರಯೋದಶಿ ಮಾತ್ರ ಹಚ್ಚಿದರೆ ಸಾಕು.
* ಅನುಕೂಲವಿಲ್ಲದಿದ್ದಲ್ಲಿ ಒಂದೇ ದೀಪದಲ್ಲಿ ಎರಡನ್ನೂ ಅನುಸಂಧಾನ ಮಾಡಿಕೊಳ್ಳಬೇಕು.
* ಆಕಾಶದೀಪವನ್ನು ವ್ಯೋಮದೀಪ ಎನ್ನುತ್ತಾರೆ. ಇದನ್ನು ಬೆಳಗುವಾಗ ಹೇಳಬೇಕಾದ ಮಂತ್ರ ಹೀಗಿದೆ -

  ದಾಮೋದರಾಯ ನಭಸಿ ತುಲಾಯಾಂ ರಾಧಯಾ ಸಹ
  ಪ್ರದೀಪಂ ತೇ ಪ್ರಯಚ್ಛಾಮಿ ನಮೋಽನಂತಯಾ ವೇಧಸೇ ॥

## ಗಂಗಾಪೂಜೆ ಎಲ್ಲಿ ಮಾಡಬೇಕು, ಹೇಗೆ ಮಾಡಬೇಕು ?

* ತ್ರಯೋದಶಿಯ ದಿವಸ ಮಧ್ಯಾಹ್ನ ಕಾಲದಲ್ಲಿ ತಾಮ್ರದ ಬಿಂದಿಗೆ, ತಾಮ್ರದ ಕಲಶ, ನೀರು ಕಾಯಿಸುವ ಹಿತ್ತಾಳೆ ಅಥವಾ ತಾಮ್ರದ ಹಂಡೆ ಇವುಗಳನ್ನು ಚೆನ್ನಾಗಿ ಹುಣಸೇಹಣ್ಣಿನಲ್ಲಿ ತೊಳೆದುಕೊಳ್ಳಬೇಕು. ಸುಣ್ಣ, ಕೆಮ್ಮಣ್ಣು ಮೊದಲಾದವುಗಳನ್ನು ಹಚ್ಚಿ ಅವುಗಳನ್ನು ಅಲಂಕಾರ ಮಾಡಬೇಕು.
* ಸಾಯಂಕಾಲದಲ್ಲಿ ನದೀ ಅಥವಾ ಸರೋವರಗಳಿಗೆ ತೆರಳಿ, ಅಲ್ಲಿಯೇ ವರುಣಪೂಜೆಯನ್ನು ಅಥವಾ ಗಂಗಾಪೂಜೆಯನ್ನು ಮಾಡುವುದು ಬಹಳ ಪ್ರಶಸ್ತ.
* ಸಾಧ್ಯವಾಗದಿದ್ದರೆ ಮನೆಯಲ್ಲಿ ಬಾವಿಯು ಇದ್ದರೆ ಅಲ್ಲಿಯೇ ವರುಣಪೂಜೆ, ಗಂಗಾಪೂಜೆಯನ್ನು ಮಾಡಬೇಕು. ಬಾವಿಯೂ ಇಲ್ಲದ ಪಕ್ಷದಲ್ಲಿ ದೊಡ್ಡ ಹಂಡೆಯಲ್ಲಿ ಮರುದಿವಸ ಸ್ನಾನಕ್ಕೆ ಉಪಯೋಗಿಸುವ ನೀರನ್ನು ತುಂಬಿಟ್ಟು ಅಲ್ಲಿಯೇ ವರುಣನನ್ನು ಹಾಗೂ ಗಂಗೆಯನ್ನು ಆವಾಹನೆ ಮಾಡಿ ಪೂಜಿಸಬೇಕು.
* ಸರೋವರ ಅಥವಾ ಬಾವಿಯಲ್ಲಿ ಗಂಗೆಯನ್ನು ಪೂಜಿಸಿ ನೀರಿನ್ನು ತರುವಾಗ ಮುತ್ತೈದೆಯರು ಕದಲಾರತಿಯನ್ನು ಮಾಡಿ, ಮನೆಯ ಒಳಗೆ ಬರಮಾಡಿಕೊಳ್ಳಬೇಕು.
* ಸ್ನಾನಗೃಹದಲ್ಲಿ ಗಂಗಾಪೂಜೆಯನ್ನು ಮಾಡಬಹುದು. ಅನುಕೂಲವಿಲ್ಲದಿದ್ದಲ್ಲಿ ದೇವರ ಮನೆಯ ಎದುರು ಮಂಡಲವನ್ನು ಮಾಡಿ, ರಂಗೋಲಿಯನ್ನು ಹಾಕಿ, ಅಲ್ಲಿ ಕಲಶವನ್ನಿಟ್ಟು ಗಂಗಾಪೂಜೆಯನ್ನು ಮಾಡಬಹುದು.

**ಸುಲಭ ಉಪಾಯ** - ತುಳಸೀಗಿಡದ ಬುಡದಲ್ಲಿ ಸರ್ವತೀರ್ಥಗಳ ಸಾನ್ನಿಧ್ಯವಿದೆಯೆಂಬ ವಿಷಯದಲ್ಲಿ 'ಯನ್ಮೂಲೇ ಸರ್ವತೀರ್ಥಾನಿ' ಎಂಬ ಪ್ರಮಾಣವಿದೆ. ಆದ್ದರಿಂದ ತುಳಸೀಕಟ್ಟೆಯ ಕೆಳಗೆ ನೀರಿನ ಕಲಶವನ್ನಿಟ್ಟು ಪೂಜೆ ಮಾಡಬಹುದು. ಅಥವಾ ದೇವರೆದುರು ತುಳಸಿಕುಂಡವನ್ನು ತಂದಿಟ್ಟುಕೊಂಡು

ಗಂಗಾಪೂಜೆ ಮಾಡಬಹುದು . ಹೀಗೆ ಮಾಡುವುದರಿಂದ ಗಂಗಾದಿನದಿಗಳಿಗೆ ತೆರಳಿ ನೀರನ್ನು ತರಲಾಗದ್ದರಿಂದ ಉಂಟಾದ ದೋಷವನ್ನು ತಪ್ಪಿಸಿಕೊಳ್ಳಬಹುದು.

* ಮಧ್ಯಾಹ್ನ ಕಾಲದಲ್ಲಿಯೇ ಸ್ನಾನಗೃಹವನ್ನು ಸಂಪೂಣವಾಗಿ ಸ್ವಚ್ಛಗೊಳಿಸಿ-ಕೊಳ್ಳಬೇಕು. ಯಾವುದೇ ಅಶುದ್ಧವಾದ ಪದಾರ್ಥಗಳು ಅಲ್ಲಿ ಇಲ್ಲದಂತೆ ಎಚ್ಚರ ವಹಿಸಬೇಕು. ಎಲೆಕ್ಟ್ರಾನಿಕ್ ಉಪಕರಣಗಳಿಂದ ನೀರನ್ನು ಕಾಯಿಸುವುದು ಶ್ರೇಷ್ಠವಲ್ಲ. ಆದ್ದರಿಂದ ನರಕಚತುರ್ದಶಿಯ ದಿವಸವಾದರೂ ಕಟ್ಟಿಗೆ ಒಲೆಯಲ್ಲಿ ಅಥವಾ ಇಜ್ಜಿಲಿನ ಒಲೆಯಲ್ಲಿ ನೀರನ್ನು ಕಾಯಿಸುವಂತೆ ಅನುಕೂಲ ಮಾಡಿಕೊಳ್ಳಬೇಕು.
* ಒಲೆಯ ಮೇಲೆ ಪಾತ್ರೆ ಅಥವಾ ಹಂಡೆಯನ್ನು ಇಟ್ಟು ಪೂಜೆಯ ಅನಂತರ ಅದನ್ನು ಕದಲಿಸದಂತೆ ಮರುದಿವಸ ಅಲ್ಲಿಯೇ ಬಿಸಿನೀರನ್ನು ಕಾಯಿಸಿ ಸ್ನಾನ ಮಾಡುವಂತೆ ವ್ಯವಸ್ಥೆ ಮಾಡಿಕೊಂಡಿರಬೇಕು.
* ಶೆಗಣಿಯಿಂದ ಸಾರಿಸಿದ ಒಲೆಗೆ ಚಕ್ರ-ಶಂಖ ಚಿಹ್ನೆಗಳನ್ನು ರಂಗೋಲಿಯಿಂದ ಹಾಕಬೇಕು. ಪಾತ್ರೆಗೂ ಅಲಂಕಾರ ಮಾಡಬೇಕು.
* ಪತಿ-ಪತ್ನಿಯರು ಒಟ್ಟಿಗೆ ಕುಳಿತು ವರುಣ-ಗಂಗಾಪೂಜೆಯನ್ನು ಆಚರಿಸಬೇಕು.
* ಹಿಂದಿನ ದಿವಸವೇ ಮನೆಗೆ ಸುಣ್ಣ-ಬಣ್ಣವನ್ನು ಮಾಡಿದ್ದರೆ ವಿಶೇಷ ಹರಿಪ್ರೀತಿಯಾಗುತ್ತದೆ.
* ತಳಿರುತೋರಣಗಳಿಂದ ಮನೆಯನ್ನು ಸಿಂಗರಿಸಿರಬೇಕು. ಬಗೆಬಗೆಯ ರಂಗೋಲಿಗಳನ್ನು ಹಾಕಿರಬೇಕು.
* ಮುಂದೆ ಹೇಳುವ ಪ್ರಕಾರ ಗಂಗೆಯನ್ನು ಪೂಜೆ ಮಾಡಬೇಕು.
* ವರುಣನಿಗೆ ಪ್ರೀತಿಕರವಾದ ಭಕ್ಷ್ಯವನ್ನು ಅಂದು ಮಾಡಬೇಕು.
* ಸಾಯಂಕಾಲದಲ್ಲಿ ಮತ್ಸ್ಯನಾರಾಯಣನಿಗೆ ಮೊದಲು ಪೂಜೆಯನ್ನು ಆಚರಿಸಿ, ಅನಂತರ ವರುಣ ಹಾಗೂ ಗಂಗೆಯ ಪೂಜೆಯನ್ನು ಮಾಡಬೇಕು.

## ಕಾಯಿಸುವ ಪಾತ್ರೆಯಲ್ಲಿ ಏನು ಹಾಕಬೇಕು ?

* ಪೂಜಿಸಿದ ಆ ಬಿಸಿನೀರಿನ ಹಂಡೆಯಲ್ಲಿ ಒಟ್ಟು ಐದು ಪಲ್ಲವಗಳನ್ನು ಹಾಕಬೇಕು. ಅತ್ತಿ, ಮಾವು, ಅರಳಿ, ಆಲ, ಪ್ಲಕ್ಷ ಎಂಬ ಐದು ಮರದ ತೊಗಟೆಗಳನ್ನು ನೀರಿನಲ್ಲಿ ಹಾಕಿರಬೇಕು. ಅಥವಾ ಈ ಐದು ಮರದ ಎಲೆಗಳನ್ನೂ ಕೂಡ ನೀರಿನಲ್ಲಿ ಹಾಕಿರಬೇಕು. ಕಷಾಯ ಸದೃಶವಾದ ಈ ಬಿಸಿನೀರಿನಿಂದ ಸ್ನಾನ ಮಾಡಿದಾಗ ಶಾರೀರಿಕವಾದ ಎಲ್ಲಾ ರೋಗಗಳು ಪರಿಹಾರವಾಗುವುದಷ್ಟೇ ಅಲ್ಲದೇ ದೇಹಕ್ಕೆ ಅಂಟಿಕೊಂಡ ಪಾಪಪಕ್ಷಿಗಳೂ ಕೂಡ ಹಾರಿಹೋಗುತ್ತವೆ.
* ಹೀಗೆ ಜಲಪೂರಣ ತ್ರಯೋದಶಿಯ ದಿವಸ ದೀಪಾವಳಿಹಬ್ಬದ ಪ್ರಾರಂಭವನ್ನು ವಿಜೃಂಭಣೆಯಿಂದ ಮಾಡಬೇಕು. ಆದಷ್ಟು ಬೇಗ ಮಲಗಿಕೊಂಡು ಮರುದಿವಸದ ನರಕಚತುರ್ದಶಿ ಹಬ್ಬಕ್ಕೆ ಬೇಗ ಎದ್ದು ಸಿದ್ಧರಾಗಬೇಕು.
* ತ್ರಯೋದಶಿಯ ರಾತ್ರಿ ೮.೩೦ ಕ್ಕೆ ಮಲಗಿ ಚತುರ್ದಶಿಯಂದು ಬ್ರಾಹ್ಮೀ ಮುಹೂರ್ತವೆನಿಸಿದ ೩.೨೦ ಕ್ಕೆ ಎದ್ದೇಳಬೇಕು.

## ಹಾಲು ಕುಡಿಯಬಾರದು

ನರಕಚತುರ್ದಶಿಯ ಹಿಂದಿನ ರಾತ್ರಿ ಹಾಲು ಕುಡಿಯಬಾರದು. ನರಕಾಸುರನ ಸಂಹಾರಕ್ಕೆ ಹೊರಟ ಕೃಷ್ಣದೇವರಿಗೆ ಕುಡಿಯಲು ಹಾಲು ದೊರಕಲಿಲ್ಲ. ಹಾಲು ಕುಡಿಯದೆ ಕೃಷ್ಣದೇವರು ತ್ರಯೋದಶಿ ರಾತ್ರಿ ಹೊರಟರು. ಅಂದಿನಿಂದ ಯಾರೂ ಸಹ ತ್ರಯೋದಶಿ ರಾತ್ರಿ ಹಾಲು ಕುಡಿಯಲಿಲ್ಲ. ಮತ್ತು ಯಾವುದಾದರೂ ಮುಖ್ಯಕಾರ್ಯಗಳಿಗೆ ಮನೆಯಿಂದ ಹೊರಟಾಗ 'ಹಾಲು ಕುಡಿಯಿರಿ' ಎಂದೂ ಕೂಡ ಹೇಳಬಾರದೆಂಬ ಸಂಪ್ರದಾಯ ಬಂದಿತು. ಆದ್ದರಿಂದ ಜಲಪೂರಣ ತ್ರಯೋದಶಿಯ ರಾತ್ರಿಯಂದು ಹಾಲು ಕುಡಿಯಬಾರದೆಂದು ನಮ್ಮ ಮನೆಯ ಹಿರಿಯರು ಹೇಳುತ್ತಾರೆ.

# ಭಾಗೀರಥಿ ಪೂಜಾವಿಧಾನ ಜಲಪೂರಣತ್ರಯೋದಶೀ

ಆಶ್ವೀನಮಾಸದ ಕೃಷ್ಣಪಕ್ಷದ ತ್ರಯೋದಶಿಯ ರಾತ್ರಿಯಲ್ಲಿ ದೇವರಿಗೆ ದಿನನಿತ್ಯದ ರಾತ್ರಿಪೂಜೆಯ ಜೊತೆ ಸಂಕ್ಷೇಪವಾಗಿ ತ್ರಿವಿಕ್ರಮನಿಗೆ ಷೋಡಶೋಪಚಾರ ಪೂಜೆಗಳನ್ನು ಸಮರ್ಪಣೆ ಮಾಡಿ, ಗಂಗಾ ಪೂಜೆಯನ್ನು ಪ್ರಾರಂಭಮಾಡಬೇಕು. ಭಗವಂತನಿಗೆ ಸಮರ್ಪಣೆ ಮಾಡಿದ ಹೂವು, ತುಳಸಿ, ನೈವೇದ್ಯದ ಪದಾರ್ಥಗಳು, ಗಂಧ ಮೊದಲಾದವುಗಳನ್ನು ಇಟ್ಟುಕೊಂಡು ಗಂಗಾಪೂಜೆಯನ್ನು ಪ್ರಾರಂಭ ಮಾಡಬೇಕು. ಶುದ್ಧವಾದ ಸ್ಥಳದಲ್ಲಿ ರಂಗವಲ್ಲಿಯನ್ನು ಹಾಕಿ ಒಲೆಯನ್ನಿಟ್ಟು, (ನೀರು ಕಾಯಿಸುವ ದೊಡ್ಡ ತಾಮ್ರದ ಪಾತ್ರೆ) ಅದಕ್ಕೆ ಪುಷ್ಪಾದಿಗಳಿಂದ ಅಲಂಕಾರಾದಿಗಳನ್ನು ಮಾಡಿ, ಪೂಜೆಯನ್ನು ಪ್ರಾರಂಭ ಮಾಡಬೇಕು.

''ಪ್ರಸೀದ ಭಗವನ್ ಆಗಚ್ಛಾಗಚ್ಛ ಭಗವಂತಂ ಗಂಗಾಜನಕಂ ತ್ರಿವಿಕ್ರಮಮಸ್ಮಿನ್ ಕಲಶೇ ಆವಾಹಯಾಮಿ''

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧುಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥
ಭಾಗೀರಥೀಮಾವಾಹಯಾಮಿ ॥

ಓಂ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಸ್ತೋಮಂ ಸಚತಾ ಪರುಷ್ಣ್ಯಾ।
ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾಽಽರ್ಜೀಕೀಯೇ ಶೃಣುಹ್ಯಾ ಸುಷೋಮಯಾ॥

(ಇತಿ ಅಭಿಮಂತ್ರ್ಯ)
ಓಂ ಭೂಃ ಭಾಗೀರಥೀಮಾವಾಹಯಾಮಿ
ಓಂ ಭುವಃ ಭಾಗೀರಥೀಮಾವಾಹಯಾಮಿ

ದೀಪಾವಳಿ -೧ ಜಲಪೂರಣತ್ರಯೋದಶೀ

ಓಂ ಸ್ವಃ ಭಾಗೀರಥೀಮಾವಾಹಯಾಮಿ

ಓಂ ಭೂರ್ಭುವಃಸ್ವಃ ಭಾಗೀರಥೀಮಾವಾಹಯಾಮಿ

## ಧ್ಯಾನ

ಚತುರ್ಭುಜಾಂ ತ್ರಿನೇತ್ರಾಂ ಚ ಸರ್ವಾವಯವಶೋಭಿತಾಮ್ ॥

ರತ್ನಕುಮ್ಭಸಿತಾಂಭೋಜವರದಾಭಯಸತ್ಕರಾಮ್ ॥

ಶ್ವೇತವಸ್ತ್ರಪರೀಧಾನಾಂ ಮುಕ್ತಾಮಣಿವಿಭೂಷಿತಾಮ್ ॥

ಏವಂ ಧ್ಯಾಯೇತ್ಸುಸೌಮ್ಯಾಂ ಚ ಚಂದ್ರಾಯುತಸಮಪ್ರಭಾಮ್ ॥

ಚಾಮರೈರ್ವೀಜ್ಯಮಾನಾಂ ಚ ಶ್ವೇತಚ್ಛತ್ರೋಪಶೋಭಿತಾಮ್ ॥

ಸುಪ್ರಸನ್ನಾಂ ಚ ವರದಾಂ ಕರುಣಾರ್ದ್ರಾಂ ನಿರಂತರಾಮ್ ॥

ಸುಧಾಪ್ಲಾವಿತಭೂಪೃಷ್ಠಾಂ ದಿವ್ಯಗಂಧಾನುಲೇಪನಾಮ್ ॥

ತ್ರೈಲೋಕ್ಯಪೂಜಿತಾಂ ಗಂಗಾಂ ಸರ್ವದೇವೈರಧಿಷ್ಠಿತಾಮ್ ॥

ದಿವ್ಯರತ್ನವಿಭೂಷಾಂ ಚ ದಿವ್ಯಮಾಲ್ಯಾನುಲೇಪನಾಮ್ ॥

ಧ್ಯಾತ್ವಾ ಜಲೇಽಥ ಮಂತ್ರೇಣ ಕುರ್ಯಾದರ್ಚಾಂಚ ಭಕ್ತಿತಃ ॥

ಗಂಗಾಸಹಿತವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ ।

## ಆವಾಹನ

ಓಂ ನಮೋ ಭಗವತಿ ಹಿಲಿ ಹಿಲಿ ಮಿಲಿ ಮಿಲಿ ।

ಗಂಗೇ ಮಾಂ ಪಾವಯ ಪಾವಯ ಸ್ವಾಹಾ ॥

ಭಾಗೀರಥೀಸಹಿತವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ನಮಃ ಆವಾಹಯಾಮಿ ಆವಾಹನಂ ಸಮರ್ಪಯಾಮಿ ।

## ಅರ್ಘ್ಯ

ವಿಷ್ಣುಪಾದಾಬ್ಜಸಂಭೂತೇ ಗಂಗೇ ತ್ರಿಪಥಗಾಮಿನೀ ।

ಗೃಹಾಣಾರ್ಘ್ಯಂ ಮಯಾದತ್ತಂ ಜಲೇ ಸನ್ನಿಹಿತಾ ಭವ ॥

ತ್ರಿಪಥಗಾಮಿನೀಸಹಿತವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ಹಸ್ತಯೋಃ ಅರ್ಘ್ಯಂ ಸಮರ್ಪಯಾಮಿ ।

## ಪಾದ್ಯ

ಸರ್ವಸ್ಯ ಸರ್ವವ್ಯಾಧೀನಾಂ ಭಿಷಕ್‌ಶ್ರೇಷ್ಠೈ ನಮೋಽಸ್ತು ತೇ ॥

ಸ್ಥಾಸ್ನುಜಂಗಮಸಂಭೂತವಿಷಹಂತ್ರ್ಯೇ ನಮೋಽಸ್ತು ತೇ ॥

ಜಾಹ್ನವೀಪತಿವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ಪಾದಯೋಃ ಪಾದ್ಯಂ ಸಮರ್ಪಯಾಮಿ ।

## ಆಚಮನ

ಸಂಸಾರವಿಷನಾಶಿನ್ಯೈ ಜೀವನಾಯೈ ನಮೋಸ್ತು ತೇ ॥

ತಾಪತ್ರಿತಯಸಂಹರ್ತ್ರ್ಯೇ ಪ್ರಾಣೇಶ್ಯೈ ತೇ ನಮೋ ನಮಃ ॥

ತ್ರಿದಶೇಶ್ವರಿಪತಿಸಹಿತವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ನಮಃ ಆಚಮನಂ ಸಮರ್ಪಯಾಮಿ ।

## ಮಧುಪರ್ಕ

ಶಾಂತಿಸಂತಾನಕಾರಿಣ್ಯೈ ನಮಸ್ತೇ ಶುದ್ಧಮೂರ್ತಯೇ ॥

ಸರ್ವಸಂಶುದ್ಧಿಕಾರಿಣ್ಯೈ ನಮಃ ಪಾಪಾರಿಮೂರ್ತಯೇ ॥

ಗಂಗಾಪತಿಸಹಿತವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ಮಧುಪರ್ಕಂ ಸಮರ್ಪಯಾಮಿ ।

## ಪುನರಾಚಮನ

ಭುಕ್ತಿಮುಕ್ತಿಪ್ರದಾಯಿನ್ಯೈ ಭದ್ರದಾಯ್ಯೈ ನಮೋ ನಮಃ ।
ಭೋಗೇಷು ಭೋಗದಾಯಿನ್ಯೈ ಭೋಗವತ್ಯೈ ನಮೋಽಸ್ತು ತೇ ॥

ಭೋಗವತೀಪತಿವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ನಮಃ ಪುನರಾಚಮನಂ ಸಮರ್ಪಯಾಮಿ ।

## ಪಂಚಾಮೃತ

ಮಂದಾಕಿನ್ಯೈ ನಮಸ್ತೇಽಸ್ತು ಸ್ವರ್ಗದಾಯ್ಯೈ ನಮೋ ನಮಃ ।
ನಮಸ್ತ್ರೈಲೋಕ್ಯಭೂಷಾಯ್ಯೈ ತ್ರಿಪಥಾಯ್ಯೈ ನಮೋ ನಮಃ ॥

ಮಂದಾಕಿನೀಪತಿವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ನಮಃ ಪಂಚಾಮೃತಾಭಿಷೇಕಂ ಸಮರ್ಪಯಾಮಿ ।

## ಸ್ನಾನ

ಆದಾವಾದಿಪಿತಾಮಹಸ್ಯ ನಿಗಮವ್ಯಾಪಾರಪಾತ್ರೇ ಜಲಂ
ಪಶ್ಚಾತ್ಪನ್ನಗಶಾಯಿನೋ ಭಗವತಃ ಪಾದೋದಕಂ ಪಾವನಮ್ ॥
ಭೂಯಃ ಶಂಭುಜಟಾವಿಭೂಷಮಣಿರ್ಜಹ್ನೋರ್ಮಹರ್ಷೋರಿಯಂ
ಕನ್ಯಾ ಕಲ್ಮಷನಾಶಿನೀ ಭಗವತೀ ಭಗೀರಥೀ ದೃಶ್ಯತೇ॥

ವಿಷ್ಣುಪಾದೋದಕಾಪತಿವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ನಮಃ ಸ್ನಾನಂ ಸಮರ್ಪಯಾಮಿ ।

## ವಸ್ತ್ರದ್ವಯಂ

ತ್ವಂ ದೀನೇಷು ದಯಾವತೀತಿ ವಿದಿತಂ ಯದ್ಬ್ರಹ್ಮಹಸ್ತಾಶ್ರಯಂ
ಪ್ರಾಪ್ತಾಽಥಾಚ್ಯುತಪಾದಸಂಗಮಹಿತಾ ಪಶ್ಚಾಚ್ಚ ನಾಕಂ ಶ್ರಿತಾ ।

ಸೌವರ್ಣಾಚಲಶೃಂಗಮೇತ್ಯ ಮುದಿತಾ ಶಂಭೋಃ ಶಿರಃಸಂಗತಾऽ-
ಪ್ಯಾಸ್ಮಾತ್ಕ್ಷಿತಿಮಂಡಲೇ ತ್ರಿಪಥಗೇ ತುಷ್ಟಾಸ್ಯಭೀಷ್ಟಪ್ರದಾ ॥

ಗೋದಾವರೀಪತಿವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ನಮಃ ವಸ್ತ್ರಯುಗ್ಮಂ ಸಮರ್ಪಯಾಮಿ ।

## ಆಭರಣ

ಆದೌ ಪಾದತಲೋರ್ಧ್ವಭಾಗಮಹಸಾ ಯಾ ರಕ್ತನೀಲಾ ಹರೇಃ
ಸ್ವರ್ಗಸ್ತ್ರೀಕುಚಕುಂಕುಮಾಂಕನಯನೋಪಾಂತಶ್ರಿಯಾऽಭ್ಯಂತರೇ ।
ಅಂತೇ ಶಂಭುಕಪರ್ದಪನ್ನಗಗಲಶ್ರೇಣೀಜ್ವಲಜ್ಜ್ಯೋತಿಷಾ
ಜನ್ಮಾರಭ್ಯ ಸರಸ್ವತೀನತನಯಾಸಂಗೇವ ಗಂಗಾऽಸ್ತಿ ಸಾ ॥

ವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ನಮಃ ಆಭರಣಂ ಸಮರ್ಪಯಾಮಿ ।

## ಹರಿದ್ರಾಕುಂಕುಮಗಂಧಾದಿಗಳ ಸಮರ್ಪಣೆ

ಅಜ್ಞಾನಾದ್ಯದಿ ಸಜ್ಜನೇಷು ರಚಿತದ್ರೋಹಾನ್ಮಯಿ ಸ್ವರ್ಧುನಿ
ಸ್ಫೂರ್ತ್ಯಾ ಸುಜನೇಷು ದೂಷಣಗಣಾರೋಪಾದವಜ್ಞಾ ತವ ।
ತರ್ಹಿ ತ್ವಾಂ ಸಗರಾತ್ಮಜಾಸ್ಥಿನಿಕರಾ ಜಾನಂತಿ ಕಿಂ ತೈಃ ಪ್ರಭೋ-
ರ್ದ್ರೋಹಃ ಕಿಂ ನ ಕೃತಃ ಕಿಮಂಬ ನ ಹರಾವಾರೋಪಿತಾ ಚೋರತಾ ॥

ಸ್ವರ್ಗಂಗಾಪತಿವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ನಮಃ ಹರಿದ್ರಾಕುಂಕುಮಾದಿಕಂ ಸಮರ್ಪಯಾಮಿ ।

## ಪುಷ್ಪಾರ್ಚನೆ

ಆರಭ್ಯಾಬ್ಜಜಲೋಕಮಾಕ್ಷಿತಿತಲಾದಾಯಾತಯಾ ಕಿಂ ತ್ವಯಾ
ಮುಚ್ಚಿತ್ತಂ ಬಹುದೂರಮಿತ್ಯಬಲಯಾ ತ್ಯಕ್ತಂ ಭಿಯಾ ಜಾಹ್ನವಿ ।

ಅಕ್ಷಯ್ಯಾಚಲತುಂಗಶೃಂಗನಿಕರಾನ್ನಿರ್ಭಿದ್ಯ ಯಾಂತೀ ಮಮ
ಸ್ವಲ್ಪಂ ಕಿಂ ಬಹು ಮನ್ಯಸೇ ಶುಭಕುಲಂ ಗಂಗೇಽಂತರಂಗೇ ಚಲಮ್ ॥

ಭಾಗೀರಥೀಸಹಿತವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ನಮಃ ಪುಷ್ಪಾಣಿ ಸಮರ್ಪಯಾಮಿ ।

## ನಾಮಪೂಜಾ

ದ್ವಾದಶನಾಮಪೂಜಾಂ ಕರಷ್ಯೇ ॥ ನಂದಿನ್ಯೈ ನಮಃ । ನಲಿನ್ಯೈ ನಮಃ । ಸೀತಾಯೈ ನಮಃ । ಮಾಲತ್ಯೈ ನಮಃ । ಮಲಾಪಹಾಯೈ ನಮಃ । ವಿಷ್ಣುಪಾದಾಬ್ಜಸಂಭೂತಾಯೈ ನಮಃ । ಗಂಗಾಯೈ ನಮಃ । ತ್ರಿಪಥಗಾಮಿನ್ಯೈ ನಮಃ । ಭಾಗೀರಥ್ಯೈ ನಮಃ । ಭೋಗವತ್ಯೈ ನಮಃ । ಜಾಹ್ನವ್ಯೈ ನಮಃ । ತ್ರಿದಶೇಶ್ವರ್ಯೈ ನಮಃ । ಗಂಗಾಭಾಗೀರಥ್ಯೈ ನಮಃ । ದ್ವಾದಶನಾಮಪೂಜಾಂ ಸಮರ್ಪಯಾಮಿ ॥

## ಧೂಪದೀಪ ಸಮರ್ಪಣೆ

ಅಸ್ಥಿಸ್ಪರ್ಶನಮಾತ್ರತಃ ಕಿಲ ತವ ಶ್ರೇಯಃಪ್ರದತ್ವಂ ಗತಂ
ವಿಸ್ತೀರ್ಣಾ ನ ಕಿಮಚ್ಯುತಸ್ಯ ನಗರೀ ಮನ್ಯಾತ್ರದೇಶೋಜ್ಝಿತಾ ।
ತದ್ವರ್ತ್ಮಾಽಪಿ ಸಕಂಟಕಂ ಕಿಮು ಸತಾಂ ಸಂತಾನಜೋಽಹಂ ನ ಕಿಂ
ಕಸ್ಮಾದಂಬ ನ ಮೇ ಪ್ರದಾಸ್ಯಸಿ ಪದಂ ಗಂಗೇಽಖಿಲಾರ್ಥಪ್ರದಮ್ ॥

ನಲಿನೀಪತಿವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ನಮಃ ಧೂಪಂ ಆಘ್ರಾಪಯಾಮಿ ದೀಪಂ ದರ್ಶಯಾಮಿ ॥

## ಮಹಾನ್ನೈವೇದ್ಯ

ಹೇ ಗಂಗೇ ತವ ಕೋಮಲಾಂಘ್ರಿನಲಿನಂ ರಂಭೋರುನೀವೀಲಸತ್-
ಕಾಂಚೀದಾಮತನೂದರಂ ಘನಕುಚವ್ಯಾಕೀರ್ಣಹಾರಂ ವಪುಃ ।

ಸನ್-ಮುದ್ರಾಂಗದಕಂಕಣಾದ್ಯತಕರಂ ಸ್ಮೇರಂ ಸ್ಫುರತ್ಕುಂಡಲಂ
ಸಾರಂಗಾಕ್ಷಿ ಜಲಾನ್ಯದಿಂದುರುಚಿ ಯೇ ಜಾನಂತಿ ತೇಽನ್ಯೇ ಜಲಾತ್ ॥

ಮಾಲತೀಪತಿವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ನಮಃ ಮಹಾನೈವೇದ್ಯಂ ನಿವೇದಯಾಮಿ ।

## ಮಂಗಳಾರತಿ ನೀರಾಜನ

ಶ್ರೀನಾರಾಯಣರಾಮಗೋಪತಿಹೃಷೀಕೇಶಾದಿರೂಪೋಽಕ್ಷಮ-
ಸ್ತ್ವಾಂ ಹಾತುಂ ಹರಿಸೂಕರಾಕೃತಿರಥ ಶ್ರೀದೇವಹೂತ್ಯಾತ್ಮಜಃ ।
ವೇಣೀಮಾಧವಬಿಂದುಮಾಧವತನುಸ್ತೀರೇ ವ್ಯಧತ್ತ ಸ್ಥಿತಿಂ
ಗಂಗೇ ಕಿಂ ಬಹುನಾಽದ್ಭನಾಽಪಿ ವಸತಿ ತ್ವದ್ಭರ್ತೃಗೇಹೇಽಪ್ಯಸೌ ॥

ವಿಷ್ಣುಪಾದಾಬ್ಜಸಂಭೂತಾಸಹಿತವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ನಮಃ ಮಹಾಮಂಗಳಾರತಿನೀರಾಜನಂ ಕರಿಷ್ಯೇ ॥

## ಮಂತ್ರಪುಷ್ಪ

ಗಂಗೇ ತ್ವಂ ಶುಭಸಂಚಯಸ್ಯ ಜಯದಾ ದೋಷಾತ್ಮನಾಂ ನ ತ್ವಿತಿ
ಜ್ಞಾತಂ ಯತ್ ಕ್ರತುಕೋಟಿಲಭ್ಯಸುಕೃತಸ್ಯಾಭ್ಯುನ್ನತಿಂ ಯಚ್ಛಸಿ ।
ದುಷ್ಕರ್ಮಾಣ್ಯಮಿತಾನಿ ದೂರಯಸಿ ಯತ್ ತ್ವದ್ಗೇಯತೋಯೇಕ್ಷಯಾ
ಪಾನೇನಾಪ್ಯವಗಾಹನೇನ ಮನಸಾ ಧ್ಯಾನೇನ ಗಾನೇನ ವಾ ॥

ಮಲಾಪಹಾಪತಿವರುಣಾಂತರ್ಗತಪ್ರಾಣಸ್ಥತ್ರಿವಿಕ್ರಮಾಯ ನಮಃ ಮಂತ್ರಪುಷ್ಪಂ ಸಮರ್ಪಯಾಮಿ ।

# ಪ್ರಾರ್ಥನೆ

## ಶ್ರೀಭಾಗೀರಥೀಗದ್ಯಮ್

ಯತ್ರ ಭಗವತಃ ಸಾಕ್ಷಾದ್ಯಜ್ಞಲಿಂಗಸ್ಯ ವಿಷ್ಣೋರ್ವಿಕ್ರಮತೋ ವಾಮಪಾದಾಂಗುಷ್ಠನಖನಿರ್ಭಿಣ್ಣೋರ್ಧ್ವಾಂಡಕಟಾಹವಿವರೇಣಾಂತಃಪ್ರವಿಷ್ಟಾ ಯಾ ಬಾಹ್ಯಜಲಧಾರಾ ತಚ್ಚರಣಪಂಕಜಾವನೇಜನಾರುಣಕಿಂಜಲ್ಕಕುಂಕುಮೋಪ-ರಂಜಿತಾಖಿಲಜಗದಘಮಲಾಪಹೋಪಸ್ಪರ್ಶನಾಮಲಾ ಸಾಕ್ಷಾದ್ಭಗವತ್ಪದೀತ್ಯ-ನುಪಲಕ್ಷಿತವಚೋಭಿರಭಿಧೀಯಮಾನಾಽತಿಮಹತಾ ಕಾಲೇನ ಯುಗಸಹಸ್ರೋಪ-ಲಕ್ಷಣೇನ ದಿವೋಮೂರ್ಧನ್ಯವತತಾರ ಯತ್ತದ್-ವಿಷ್ಣುಪದಮಾಹುಃ ॥೧॥

ಯತ್ರ ಹ ವಾವ ವೀರವ್ರತ ಔತ್ತಾನಪಾದಿಃ ಪರಮಭಾಗವತೋಽಸ್ಮತ್ಕುಲದೇವತಾ ಚರಣಾರವಿಂದೋದಕಮಿತಿ ಯಾಮನುಸವನಮುತ್ಕೃಷ್ಯಮಾಣಭಗವದ್ಭಕ್ತಿಯೋಗೇನ ದೃಢಂ ಕ್ಲಿದ್ಯಮಾನಾಂತರ್ಹೃದಯ ಔತ್ಕಂಠ್ಯವಿವಶಾಮೀಲಿತಲೋಚನಯುಗಲ-ಕುಡ್ಮಲವಿಗಲಿತಾಮಲಬಾಷ್ಪಕಲಯಾಽಭಿವ್ಯಜ್ಯಮಾನರೋಮಪುಲಕಕುಲಕೋಽಧುನಾಽಪಿ ಪರಮಾದರೇಣ ಶಿರಸಾ ಬಿಭರ್ತಿ ॥೨॥

ತತಃಸಪ್ತಋಷಯಸ್ತತ್ಪ್ರಭಾವಾಭಿಜ್ಞಾ ಯಾಂ ನನು ತಪಸ ಆತ್ಯಂತಿಕೀ-ಸಿದ್ಧಿರೇತಾವತೀತಿ ಭಗವತಿ ಸರ್ವಾತ್ಮನಿ ವಾಸುದೇವೇಽನವರತಭಕ್ತಿಯೋಗ-ಲಾಭೇನೈವೋಪೇಕ್ಷಿತಾನ್ಯಾರ್ಥಾತ್ಮಗತಯೋ ಮುಕ್ತಿಮಿವಾಗತಾಂ ಮುಮುಕ್ಷವಃ ಸಬಹುಮಾನಮೇವಾದ್ಯಾಪಿ ಜಟಾಜೂಟೈರುದ್ವಹಂತಿ ॥೩॥

ತತೋಽನೇಕಸಹಸ್ರಕೋಟಿವಿಮಾನಾನೀಕಸಂಕುಲದೇವಯಾನೇನಾವತರಂತೀ-ದುಮಂಡಲಮಾಪ್ಲಾವ್ಯ ಬ್ರಹ್ಮಸದನೇ ನಿಪತತಿ ॥೪॥

ತತ್ರ ಚತುರ್ಧಾ ಭಿದ್ಯಮಾನಾ ಚತುರ್ಭಿರ್ನಾಮಭಿಶ್ಚತುರ್ದಿಶಮಭಿಸ್ಯಂದಂತೀ ನದನದೀಪತಿಮೇವಾಭಿನಿವಿಶತಿ ಸೀತಾಽಲಕನಂದಾ ಚಕ್ಷುರ್ಭದ್ರೇತಿ ॥೫॥

ದೀಪಾವಳಿ -೧ ಜಲಪೂರಣತ್ರಯೋದಶೀ

ಸೀತಾ ತು ಬ್ರಹ್ಮಸದನಾತ್ ಕೇಸರಾದ್ರಿಶಿಖರೇಭ್ಯೋಽಧೋಧಃಪಸ್ರವಂತೀ ಗಂಧಮಾದನಮೂರ್ಧ್ನಿ ಪತಿತ್ವಾಽಂತರೇಣ ಭದ್ರಾಶ್ವವರ್ಷಂ ಪ್ರಾಚ್ಯಾಂ ದಿಶಿ ಕ್ಷಾರಸಮುದ್ರಮಭಿಪ್ರವಿಶತಿ ॥೬॥

ಏವಂ ಮಾಲ್ಯವಚ್ಛಿಖರಾನ್ನಿಷ್ಪತಂತೀ ತತೋಽನುಪರತವೇಗಾ ಕೇತುಮಾಲಮಭಿ ಚಕ್ಷುಃ ಪ್ರತೀಚ್ಯಾಂ ದಿಶಿ ಸರಿತ್ಪತಿಂ ಪ್ರವಿಶತಿ ॥೭॥

ಭದ್ರಾಚೋತ್ತರತೋಮೇರುಶಿರಸೋನಿಪತಿತಾ ಗಿರಿಶಿಖರಾದ್ಗಿರಿಶಿಖರ-ಮತಿಹಾಯ ಶೃಂಗವತಃ ಶೃಂಗಾದವಸ್ಯಂದಮಾನಾ ಉತ್ತರಾಂಸ್ತು ಕುರೂನತಿಕ್ರಮ್ಯೋದೀಚ್ಯಾಂ ದಿಶಿ ಲವಣಾರ್ಣವಂ ಪ್ರವಿಶತಿ ॥೮॥

ತಥೈವಾಲಕನಂದಾ ದಕ್ಷಿಣೇನ ತು ಬ್ರಹ್ಮಸದನಾದ್ಬಹೂನಿ ಗಿರಿಕೂಟಾನ್ಯತಿಕ್ರಮ್ಯ ಹೇಮಕೂಟಾದ್ಧೈಮಕೂಟಾನ್ಯತಿರಭಸತರರಂಹಸಾ ಲುಠಯಂತೀ ಭಾರತಮಭಿವರ್ಷಂ ದಕ್ಷಿಣಸ್ಯಾಂ ದಿಶಿ ಜಲನಿಧಿಂ ಪ್ರವಿಶತಿ ॥೯॥

ಅನ್ಯೇ ನದಾ ನದ್ಯಶ್ಚ ವರ್ಷೇ ತಸ್ಮಿನ್ ಸಂತಿ ಬಹುಶೋ ಮೇರ್ವಾದಿ-ಗಿರಿದುಹಿತರಃ ॥೧೦॥

॥ ಇತಿ ಶ್ರೀಮದ್ಭಾಗವತೇ (೫/೧೭) ಭಾಗೀರಥೀಗದ್ಯಮ್ ॥

ಪ್ರಾರ್ಥನಾಂ ಸಮರ್ಪಯಾಮಿ ॥

ಅನೇನ ತ್ರಿವಿಕ್ರಮಪೂಜಾಕರ್ಮಣಾ ಗಂಗಾಪೂಜನೇನ ಚ ಭಗವಾನ್ ಮಧ್ವಾಂತರ್ಗತಃ ಗಂಗಾಜನಕತ್ರಿವಿಕ್ರಮಾತ್ಮಕಶ್ರೀಗೋಪಾಲಕೃಷ್ಣಃ ಪ್ರೀಯತಾಮ್ ॥ಶ್ರೀಕೃಷ್ಣಾರ್ಪಣಮಸ್ತು॥

# ನೀರು ತುಂಬುವ ಹಬ್ಬ

## ಗಂಗಾಪೂಜೆಯ ಹಾಡು

ಗಂಗೆ ಭಾಗೀರಥಿ ಮಂಗಳಾಂಗಿ ಅಲಕನಂದಳೇ ನೀ ಮಹಾ ಸುಂದರಾಂಗಿ । ಸಿಂಧುರಾಜನ ರಾಣಿ ಸರಯು ಸಂಪತ್ತು ಕೊಡು ಕಂಗಳಿಂದಲಿ ನೋಡಿ ಕರುಣಿಸೆನ್ನ ॥ಪ॥ ಕಾಶಿ ಪಟ್ಟಣದಲ್ಲಿ ವಾಸವಾಗಿ ಸರ । ಸ್ವತಿಯನು ಕೂಡಿ ನೀ ಸರಸವಾಗಿ । ಸೋಸಿಲಿಂದಲಿ ಸೂರ್ಯಪುತ್ರಿ ಯಮುನೆಯ ಕೂಡಿ । ಉಲ್ಲಾಸದಿಂದ್ಹರಿದು ವಾರಣಾಸಿಗ್ಹೋಗಿ ॥೧॥ ಹಾಲಿನಂತೆ ಹರಿವೊ ಗಂಗೆ ನೀನು । ನೀಲದಂತಿದ್ದ ಯುಮನೆಯನು ಕೂಡಿ ॥ ಲೀಲೆಯಿಂದಲಿ ಸರಸ್ವತಿಯನು ಕೂಡಿ । ಓಲ್ಯಾಡುತ ಬಂದೆ ಒಯ್ಯಾರದಿಂದ ॥೨॥ ಭಗೀರಥನ ಹಿಂದೆ ನೀ ಬಂದೆ ಓಡಿ । ಸಗರನ ಸುತರ ಉದ್ಧಾರ ಮಾಡಿ ॥ ಜಗವ ಪಾವನ ಮಾಡೋ ಜಾಹ್ನವಿಯೇ ನೀ ಎನ್ನ । ಮಗುವೆಂದು ಮುಂದಕೆ ಕರೆಯೆ ತಾಯಿ ॥೩॥ ಬಿಂದು ಮಾಧವ ವೇಣಿಮಾಧವನ್ನ ಆ -। ನಂದ ಭೈರವ ಕಾಳ ಭೈರವನ್ನ ॥ ಚಂದದಿಂದ್ವಿಶ್ವನಾಥನ ಗುಡಿಮುಂದೆ । ಹೊಂದಿ ಹರಿದ್ಹನುಮಂತ ಘಾಟಿನ್ನಿಂದೆ ॥೪॥ ಧಡಧಡನೆ ಬಂದು ದಡಗಳನು ಕೊರೆದು । ಪೊಡವಿ ಮ್ಯಾಲಿಂಥ ಸಡಗರದಿ ಹರಿಯ ॥ ಕಡಲಶಯನನ್ನ ಕಾಲುಂಗುಷ್ಠದ ಮಗಳು । ಕಡಲರಾಣಿಯೆ ಕಯ್ಯ ಪಿಡಿಯೆ ನೀನು ॥೫॥ ಮೊರದ ಬಾಗಿಣ ಕುಂಕುಮರಿಷಿಣವು ಗಂಧ । ಪರಿಪರಿಯಿಂದ ಪೂಜೆಯಗೊಂಬುವಿ ॥ ಸ್ಥಿರವಾದ ಮುತ್ತೈದೆತನ ಜನುಮ ಜನುಮಕ್ಕು । ವರವ ಕೊಟ್ಟು ವೈಕುಂಠವನು ತೋರಿಸೆ ॥೬॥ ಮಧ್ಯಾಹ್ನದಲಿ ಮಲಕರ್ಣಿಕೆಯ ಸ್ನಾನ । ಶುದ್ಧವಾಗಿ ಪಂಚಗಂಗೆಯಲ್ಲಿ ॥ ಆದ್ದಿದ ದೇಹ ಪವಿತ್ರವನು ಮಾಡಿ ಭವಸ- । ಮುದ್ರವನು ದಾಟಿಸೆ ಭಾಗೀರಥಿ ॥೭॥ ಎಷ್ಟು ಜನ್ಮ ಸುಕೃತ ಒದಗಿತೆಂದು ಗಂಗೆ । ಭೆಟ್ಟಿಯಾಗೊ ಪುಣ್ಯ ಬಂದಿತಿಂದು ॥ ಚಕ್ರತೀರ್ಥದ ಸ್ನಾನ ಸಂಕಲ್ಪದ ಫಲವ । ಕೊಟ್ಟು ರಕ್ಷಿಸು ತಾಯಿ ತರಂಗಿಣಿ ॥೮॥ ಸಾಸಿರ ಮುಖದಿ ಶರಧಿಯನು ಕೂಡಿ ॥ ಹೋಗಿ ಬಾ ಊರಿಗೆ ಭಕ್ತಿ ನೀಡಿ ॥ ನೀನು ಭೀಮೇಶ ಕೃಷ್ಣನಲಿ ಹುಟ್ಟಿದ್ದ । ಪಾದವನು ತೋರೆನ್ನ ಪೊರೆಯಬೇಕೆ ॥೯॥

# ಭಾಗೀರಥೀ ಹಾಡುಗಳು

೧) ಭಾಗೀರಥೀದೇವಿ ಭಯನಿವಾರಣ ಗಂಗೆ । ಸಾಗರನ ನಿಜರಾಣಿ ಸಕಲ ಕಲ್ಯಾಣಿ॥ಪ॥ ಒಮ್ಮೆ ಶ್ರೀಹರಿ ಪಾದಕಮಲದಿಂದುದುಭವಿಸಿ । ಬ್ರಹ್ಮ ಕರಪಾತ್ರಿಯಲಿ ನಿಂದು ಬಂದೆ। ಶ್ರೀಮನ್ನಾರಾಯಣನ ಪಾದ ತೀರ್ಥವಾಗಿ। ಬ್ರಹ್ಮಾಂಡವನು ಪಾವನ ಮಾಡಬಂದೆ ॥೧॥ ದೇವಿ ನೀ ವಿಷ್ಣು ಪಾದೋಕದವೆಂದೆನಿಸಿ । ದೇವತೆಗಳಿಗೆಲ್ಲ ಅಧಿಕವಾದೆ ॥ ದೇವರೆಲ್ಲರು ನೆರೆದು ತಲೆವಾಗಿದರು ಮಹ - । ದೇವನ ಶಿರದಿಂದ ಧರೆಗಿಳಿದು ಬಂದೆ ॥೨॥ ಜಹ್ನುವಿಗೆ ಉದರದಲಿ ಪೊಕ್ಕ ಕಾರಣದಿಂದ । ಜಾನ್ಹವೀಯೆಂದು ನೀ ಎನಿಸಿಕೊಂಡು ॥ ಮುನ್ನೆ ನರಕಕ್ಕಿಳಿದ ಸಗರರಾಯನ ವಂಶ। ವನ್ನು ಪಾವನವಿನ್ನು ನೀ ಮಾಡಬಂದೆ॥೩॥ ದಿಟ್ಟಿಸಲು ಮುನ್ನೂರು ಜನ್ಮದ ಪಾತಕವು। ನೀಟಿಸಲು ಮೂರು ಜನ್ಮದ ಮುಕುತಿಯು । ಮುಟ್ಟಿ ಮಾಡಿದರೊಂದು ಸ್ನಾನ ಮಾತ್ರದಲಿ। ಸುಟ್ಟು ಹೋಹುದು ಸಾಹಸ್ರ ಜನ್ಮದ ಪಾಪ ॥೪॥ ಹಲವು ಪರಿಯಲ್ಲಿ ಹರಿಸ್ಮರಣೆಯಿಲ್ಲದೆ ಭವ - । ದೊಳಗೆ ಸಿಲುಕಿ ಕಡುನೊಂದೆ ನಾನು ॥ ಹಲವು ಮಾತ್ಯಾಕೆ ಶ್ರೀಪುರಂದರ ವಿಠಲನ । ಚಲುವ ಪದ ನಖದಿಳಿದೆ ಒಲಿದು ದಯ ಮಾಡೆ ॥೫॥

೨) ಭಾಗೀರಥೀತಾಯಿ ಶೃಂಗಾರ ಶುಭಕಾಯೆ । ಶ್ರೀಭೂರಮಣ ತನಯೆ ॥ಪ॥ ನಿನ್ನ ಯಾತ್ರಿಗೋಸುಗ ಎನ್ನ। ಮನಸು ಪುಟ್ಟಿತ್ತು ಇನ್ನು ನೀ ಮರಿಸದೆ। ಪುಣ್ಯ ನರನ ಮಾಡೊ ಪೂತೋಭಾವವೆಂದು । ಧನ್ಯ ಜನಮಾನ್ಯೆ ಭಕ್ತಜನ ಪ್ರಸನ್ನೆ ॥೧॥ ಶಿವ ನಿನ್ನ ಶಿರದಲ್ಲಿ ಧರಿಸಿದ ಕಾರಣ । ಪವಿತ್ರಗಂಗನಾನೆಂದು ॥ ಅವನಿಯೊಳಗೆ ಮಹಕವಿಜನ ಪೇಳಿದ । ಶ್ರವಣದಿಂದಲಿ ಭಕುತಿಯಿಂದಲಿ ನಿಂದೆ ॥೨॥ ದೂರದಿಂದಲಿ ನಿನ್ನ ಸ್ಮರಿಸಿದವರ ಪಾಪ । ಹಾರಿಪೋಗುವದು ಸಿದ್ಧ॥ ಶ್ರೀರಮಣ ವಿಜಯವಿಠ್ಠಲರೇಯನ ಪಾದ। ವಾರಿಜ ಪೊಗಳುವಂತೆ ಬುದ್ಧಿ ಪಾಲಿಸುವುದು ॥೩॥

# ಭಾಗೀರಥೀ ಸ್ತೋತ್ರ

ಜೈ ಜೈ ಭಾಗೀರಥಿಗೆ ಜೈ ಜೈ ಭೋಗಾಪತಿಗೆ ಜೈ ಜೈ ಜಾನ್ಹವಿಗೆ ಕೂಡಿದ ತ್ರಿವೇಣಿ ತಾಯಿಗೆ ಕರ್ಕಾಟಕ ಮಾಸದಲ್ಲಿ । ಅರ್ಥಿಯಿಂದಲಿ ಭಾಗೀರಥಿ ವಸತಿ ಮಾಡಿದಳು ಗೋದಾವರೀ ಮಧ್ಯದಲ್ಲಿ । ಭೀಮರಥಿ ದಾಟಿ ಪ್ರೇಮದಿ ಕೃಷ್ಣೆಯ ದಾಟಿ ಹಂಪಿ ಕ್ಷೇತ್ರಕ್ಕೆ ಬಂದು ನಿಂತಳು. ತುಂಗಭದ್ರೆಯಲ್ಲಿ ನಿಂತ ಫಲ ಜನರಿಗೆಲ್ಲ ಪಾನಂಗಳನೆ ಮಾಡಿಸುವ ಅಜ ಬಂದಳು ಶ್ರೀ ಗಂಗೆ ನಿಜ ಬಂದಳು ಶ್ರೀಯಮುನೆ ಮದನಪಿತನ ಸುತೆ ಭಾಗೀರಥಿ ಬಂದಳೆಂದು ಭೂಸುರರೆಲ್ಲ ಗುಡಿ ತೋರಣ ಕಟ್ಟುವರು ಸಡಗರದಿಂದಲಿ । ಎದುರುಗೊಂಡರು ಗಂಗೆಯ, ಆಗರದ ಅಡಿಕೆ ಹೋಳು, ನಾಗಬಳ್ಳಿಯ ಎಲಿಯು ನಾರಿಯರೆಲ್ಲ ಮೊರದ ಬಾಗಿಣ ಕೊಡುವ್ಹೋರು । ಅಷ್ಟ ಭೋಗದಿ ಅಡಿಕೆಹೋಳು ಉತ್ತರಬಳ್ಳಿಯ ಬಿಳಿ ಎಲೆಯು ಮಿತ್ರರೆಲ್ಲ ಮೊರದ ಬಾಗಿಣ ಕೊಡುವ್ಹೋರು । ಒಂದು ದಿನ ಮಾಘ ಮಾಡಿದರೆ ಹಿಂಗಿತು ಸರ್ವಪಾಪಗಳು । ದಾರು ಬಲ್ಲರು ಮೂರು ದಿನ ಮಾಘದ ಫಲದೆಡೆಗಳನು ॥ ಮೂರು ದಿನ ಮಾಘ ಮಾಡಿದರ ಸಾಯುಜ್ಯ ಪದವುಂಟು, ದಾರು ಬಲ್ಲರು ಹತ್ತು ದಿನ ಮಾಘದ ಫಲದೆಡೆಗಳನು ॥ ಹತ್ತು ದಿನ ಮಾಡಿದರ ಪುತ್ರೋತ್ಸವವಾಗುವದು। ದಾರು ಬಲ್ಲರು ತಿಂಗಳ ಮಾಘದ ಫಲದೆಡೆಗಳನು ॥ ತಿಂಗಳ ಮಾಘ ಮಾಡಿದರ ಗೋವಿಂದನ ದಯವಾಹೋದು ॥

॥ ಭಾಗೀರಥೀ ಸ್ತೋತ್ರಂ ಸಂಪೂರ್ಣಂ ॥

* * * *

ಶಾರಾ ದೊಡ್ಡದು ಪ್ರಯಾಗವೆಂಬೋದು ಕ್ಷೇತ್ರ ಸಾರಿ ಹೇಳುವೆ ಗಂಗೆ ಯಮುನೆಯರ ಚರಿತೆ ॥

ಸ್ನಾನ ಮಾತ್ರದಿ ಭಕ್ತರಿಗೆ ಅಭಯಗಳನು ತಾನೆ ಕೊಡುವಳು ವೇಣಿಮಾಧವನ ದಯದಿ ॥೧॥

ಹಸಿರರು ಪಚ್ಚದಂತೆ ಹೊಳೆವಳ ಮುದ್ದುಸುರಿವಳ ನಂಬಿದವರ ಮರೆಯಳ ಕುಂದುಕೊರತೆಗಳ ಎಣಿಸಳ ನಮ್ಮನ್ ದಣಿಸಳ ದೋಷಿಗರ ದಣಿಸುವಳ ಗಂಧ

ಕುಂಕುಮ ಧ್ಯಾನ ಲೇಪಳ ಶುಭ್ರ ತಾಪಳ ಪಾವನ ಸ್ವರೂಪಳ ತುಳಸಿಯ ಸೇವಿಸೋಣ ಬಾರ ಬ್ಯಾಗನೆ ನೀರೆ ॥೨॥

ದೂರ ದೇಶದಿ ಬಂದೆ ನಾನಿನ್ನ ಬಳಿಗೆ ಬಾಗಿ ನಮಿಸುವೆ ನಿನ್ನ ಪಾದಾಬ್ಜಗಳಿಗೆ ಘೋರ ಜನ್ಮದೊಳ್ ಪಾರುಗಾಣಿಸು ಎಂದು ಧರ್ಮನನುಜಕೇಳ್ ಬೇಡಿಕೊಂಬುವೆ ನಿನ್ನ ॥೩॥

ಮಿಂದು ಮಡಿಯನುಟ್ಟು ಸಖಿಯರು ಸಂಭ್ರಮದಿಂದ ತಂದು ಪೂಜಿಸಿ ಅಲಂಕೃತರಾಗಿ ತೋಷಿತರಾಗಿ ತಮ್ಮ ಪತಿಸಹಿತರಾಗಿ ಬಂದು ನಿನಗೆ ವೇಣಿದಾನವ ಕೊಡುವೆನು ಪ್ರೇಮಮನದಣಿಯೆ ನೋಡಿದೆ ಹೋಗಿ ನೋಡೋಣು ಬಾರ ಜಾಣೆಯ ತ್ರಿವೇಣಿಯ ॥೪॥

ಶ್ರೇಷ್ಠ ಜನ್ಮದೊಳ್ ಪುಟ್ಟಿದಕೆ ಫಲವು ಈಗ ಧಿಟ್ಟೆರಿಬ್ಬರ ನೋಡಿ ನಾ ಧನ್ಯನಾದೆ ಒಲಿದು ಬಾಗಿಲಿಗೆ ಗಂಗಾ ಭರದಿಂದ ಬಹುತ್ವರದಿಂದ ಹರಿ ನದಿಯೋಗದಿಂದ ಗುರುಕೃಷ್ಣ ವಿಠ್ಠಲನ ಚರಣದಿ ಉದ್ಭವಿಸಿದಿ ಮನದಣಿಯೆ ನೋಡಿದೆ ಹೋಗಿ ನೋಡೋಣು ಬಾರ ಜಾಣೆಯ ತ್ರಿವೇಣಿಯ ॥೫॥

* * * *

ನಡೆದು ಬಂದೆನು ಭಾಗೀರಥಿಗೆ ಎನ್ನ ಒಡಲೊಳಗಿದ್ದ ಪಾಪಗಳೆಲ್ಲ ಕಳೆಯೇ ಕಶ್ಮಲಗಳೆಲ್ಲ ತೊಳೆಯೆ ॥ಪ॥

ಸಿಂಹಕ್ಕೆ ಬೃಹಸ್ಪತಿ ಇರಲು ಅಲ್ಲೆ ಶ್ರೀ ಗೌತಮ ಭಾಗೀರಥಿ ಬರಲು ಸೀಮೆಯ ಜನರೆಲ್ಲ ನೆರೆದು ಭೂಮಿಯ ಪಾವನ ಮಾಡಿದ ಶ್ರೀಗಂಗಾ ॥೧॥

ಕಾಲ ಬಲವು ಎನಗಿಲ್ಲ ದ್ರವ್ಯ ಬಲವು ಆದಕ್ಕಿಂತಯಿಲ್ಲ ಎನ್ನೊಡೆಯ ಮಾಧವರಾಯಾ ಬಲ್ಲ ಹೀಂಗ ದೃಡಭಕ್ತಿಯನೋಡಿ ಹನುಮ ಭೀಮ ಮಧ್ವ ಕರೆತಂದೆರು ॥೨॥

ಮಧ್ವರಾಯರ ನಂಬಿ ಬಂದೆ ಅಲ್ಲೆ ಮುದ್ಗಲ್ಲ ನರಸಿಂಹನ ಪಾದವ ಕಂಡೆ ಸಕಲತೀರ್ಥಗಳಲ್ಲಿ ಮಿಂದೆ ಕಾಶಿ ಬಿಂದುಮಾಧವನ ಪಾದವ ಕಂಡೆ ॥೩॥

* * * *

# ನರಕಚತುರ್ದಶಿ

## ಶ್ರೀಕೃಷ್ಣಪರಮಾತ್ಮನಿಗೆ ವಿಶೇಷ ಪೂಜೆ

### ದೀಪಾವಳಿ - 1

# ಆಚಾರ ವಿಚಾರ

## ನರಕಚತುರ್ದಶಿ

## ಶ್ರೀಕೃಷ್ಣಪರಮಾತ್ಮನಿಗೆ ವಿಶೇಷ ಪೂಜೆ

# ನರಕಚತುರ್ದಶಿಯ ಆಚರಣೆಗೆ ಬೇಕಾಗುವ ಸಾಮಗ್ರಿಗಳು

೧. ಗರಿಕೆ

೨. ಭೃಂಗಾಮಲಕ ತೈಲ ಅಥವಾ ಬ್ರಾಹ್ಮೀ ತೈಲ

೩. ಪರಿಶುದ್ಧವಾದ ಎಳ್ಳೆಣ್ಣೆ.

೪. ಸೀಗೆಪುಡಿ.

೫. ಹೊಸಬಟ್ಟೆಗಳು.

೬. ಮಾವಿನ ಚಿಗುರು.

೭. ಅತ್ತಿ, ಮಾವು, ಅರಳಿ, ಆಲ, ಪ್ಲಕ್ಷ ಈ ಮರದ ತೊಗಟೆಗಳು. ಶುದ್ಧವಾದ ಹೂವುಗಳು. ತುಳಸಿ, ಪೂಜೆಗೆ ಬೇಕಾಗುವ ಎಲ್ಲ ಸಾಮಗ್ರಿಗಳು. ಹಾಗೂ ಅಡುಗೆಯಲ್ಲಿ ಮಾಡಬೇಕಾದ ನೀರುದೋಸೆ. ಅದಕ್ಕೆ ಸಿದ್ಧತೆಗಳು.

೮. ಸಾಯಂಕಾಲದಂದು ಹಚ್ಚಲು ಮಣ್ಣಿನ ಹಣತೆಗಳು.

* * * *

# ಆಚಾರ ವಿಚಾರ

## ನರಕಚತುರ್ದಶಿ

## ಶ್ರೀಕೃಷ್ಣಪರಮಾತ್ಮನಿಗೆ ವಿಶೇಷ ಪೂಜೆ

## ನರಕಚತುರ್ದಶಿಯ ಆಚರಣೆಗೆ ಬೇಕಾಗುವ ಸಾಮಗ್ರಿಗಳು

೧. ಗರಿಕೆ

೨. ಭೃಂಗಾಮಲಕ ತೈಲ ಅಥವಾ ಬ್ರಾಹ್ಮೀ ತೈಲ

೩. ಪರಿಶುದ್ಧವಾದ ಎಳ್ಳೆಣ್ಣೆ.

೪. ಸೀಗೆಪುಡಿ.

೫. ಹೊಸಬಟ್ಟೆಗಳು.

೬. ಮಾವಿನ ಚಿಗುರು.

೭. ಅತ್ತಿ, ಮಾವು, ಅರಳಿ, ಆಲ, ಪ್ಲಕ್ಷ ಈ ಮರದ ತೊಗಟೆಗಳು. ಶುದ್ಧವಾದ ಹೂವುಗಳು. ತುಳಸಿ, ಪೂಜೆಗೆ ಬೇಕಾಗುವ ಎಲ್ಲ ಸಾಮಗ್ರಿಗಳು. ಹಾಗೂ ಅಡುಗೆಯಲ್ಲಿ ಮಾಡಬೇಕಾದ ನೀರುದೋಸೆ. ಆದಕ್ಕೆ ಸಿದ್ಧತೆಗಳು.

೮. ಸಾಯಂಕಾಲದಂದು ಹಚ್ಚಲು ಮಣ್ಣಿನ ಹಣತೆಗಳು.

* * * *

# ನರಕಚತುರ್ದಶಿಯ ಬಗ್ಗೆ

ಕೃಷ್ಣಾಷ್ಟಮಿಯಂತೆ ನರಕಚತುರ್ದಶಿಯೂ ಕೂಡ ಕೃಷ್ಣನ ಹಬ್ಬವೇ ಆಗಿದೆ. ಇಂದು ವಿಶೇಷವಾಗಿ ಕೃಷ್ಣಪರಮಾತ್ಮನನ್ನು ವೈಭವದಿಂದ ಪೂಜೆ ಮಾಡಬೇಕು. ಬ್ರಾಹ್ಮೀ ಮುಹೂರ್ತದಲ್ಲಿ ಶ್ರೀಕೃಷ್ಣಪರಮಾತ್ಮನಿಗೆ ಅಭ್ಯಂಜನ ಸ್ನಾನವನ್ನು ಮಾಡಿಸಬೇಕು. ಪೂಜಾಸಂದರ್ಭದಲ್ಲಿ ಪಂಚಾಮೃತ ಅಭಿಷೇಕ, ಭಕ್ಷ್ಯಭೋಜ್ಯಗಳ ಮಹಾನೈವೇದ್ಯ, ೧೪ ಬಗೆಯ ಆರತಿಗಳು. ಹೂ, ತುಳಸಿಗಳ ವಿಶೇಷ ಅಲಂಕಾರ. ಅನ್ನಸಂತರ್ಪಣೆ, ಇವೆ ಮೊದಲಾದವುಗಳಿಂದ ಕೃಷ್ಣಪರಮಾತ್ಮನನ್ನು ಆರಾಧನೆ ಮಾಡಿ, ಅವನ ಅನುಗ್ರಹಕ್ಕಾಗಿ ಮಹಾಪ್ರಯತ್ನವನ್ನು ಪಡಬೇಕು.

ರಾತ್ರಿಯ ನಾಕನೆಯ ಯಾಮದಲ್ಲಿ ಚತುರ್ದಶಿ ತಿಥಿಯು ಇರಬೇಕು. ಸೂರ್ಯೋದಯಕ್ಕೆ ಅಮಾವಾಸ್ಯೆಯು ಬಂದರೂ ಕೂಡ ದೋಷವಿಲ್ಲ. ಈ ತಿಥಿಯಲ್ಲಿ ಶ್ರೀಕೃಷ್ಣಪರಮಾತ್ಮನು ಚಂದ್ರೋದಯ ಕಾಲದಲ್ಲಿ ತೈಲಾಭ್ಯಂಗವನ್ನು ಮಾಡಿ, ಮಂಗಲಸ್ನಾನವನ್ನು ಮುಗಿಸಿ, ಲೋಕಕಂಟಕನಾದ ನರಕಾಸುರನನ್ನು ಸಂಹಾರ ಮಾಡಿದನು. ಆದ್ದರಿಂದಲೇ ಇದು ನರಕಚತುರ್ದಶಿ ಎಂಬ ಹೆಸರು ಪ್ರಸಿದ್ಧವಾಯಿತು. ಇಂದು ಯಾರು ಅಭ್ಯಂಗಸ್ನಾನವನ್ನು ಮಾಡುವುದಿಲ್ಲವೋ, ಅಂಥವರಿಗೆ ಘೋರಪಾಪಗಳನ್ನು ಶಾಸ್ತ್ರವು ವಿಧಾನ ಮಾಡಿದೆ. ಆದ್ದರಿಂದ ಚಂದ್ರೋದಯದಲ್ಲಿ ಸುಗಂಧಭರಿತವಾದ ತೈಲಾದಿಗಳನ್ನು ಹಾಗೂ ಹಿಂದಿನ ದಿವಸ ಪಾತ್ರೆಗೆ ತುಂಬಿಸಿದ ನೀರನ್ನು ಭಗವಂತನ ಎದುರಿಗೆ ಇಟ್ಟು ಅವನಿಗೆ ಸಮರ್ಪಣೆ ಮಾಡಿ, ನಾವು ಸ್ನಾನವನ್ನು ಮಾಡಬೇಕು. ನರಕಚತುರ್ದಶಿಯ ದಿವಸ ಶ್ರೀಕೃಷ್ಣಪರಮಾತ್ಮನು ನರಕಾಸುರನನ್ನು ಕೊಂದು, ೧೬೧೦೦ ಮಂದಿ ಸ್ತ್ರೀಯರನ್ನು ಬಂಧನದಿಂದ ಮೋಚನಗೊಳಿಸಿದನು. ಆದ್ದರಿಂದ ಇಂದು ಹಬ್ಬದ ಆಚರಣೆಯು ಸಂಪ್ರದಾಯವಾಗಿ ಬಂದಿತು. ಪ್ರಯತ್ನಪೂರ್ವಕವಾಗಿ ಇಂದು ಬೆಳಗಿನ ಬ್ರಾಹ್ಮಿಮುಹೂರ್ತದಲ್ಲಿ ಳಕ್ಕೆ ಸರಿಯಾಗಿ ಎದ್ದೇಳಬೇಕು. ಶೌಚಾಚಾರಗಳನ್ನು ಮುಗಿಸಿ, ಚಂದ್ರೋದಯಕ್ಕೆ ಸರಿಯಾಗಿ ಎಣ್ಣೆಶಾಸ್ತ್ರ ಮಾಡಿಕೊಳ್ಳಬೇಕು. ಸೂರ್ಯೋದಯದ ಒಳಗೆ ಸ್ನಾನವನ್ನು ಮುಗಿಸಿರಬೇಕು.

ಸ್ನಾನದ ಸಂದರ್ಭದಲ್ಲಿ ಮುಂದೆ ತಿಳಿಸಿದಂತೆ ಉತ್ತರಣೆ ಕಡ್ಡಿಯಿಂದ ತಮ್ಮನ್ನು ನಿವಾಳಿಸಿಕೊಳ್ಳಬೇಕು. ದೇವರಪೂಜೆ ಮುಗಿದ ಮೇಲೆ ಯಮದೇವರ ೧೪ ನಾಮಗಳನ್ನು ಹೇಳಿ, ೧೪ ತರ್ಪಣಗಳನ್ನು ನೀಡಬೇಕು. ಸಾಯಂಕಾಲದಂದು ನರಕಾಸುರನಲ್ಲಿ ನೆಲೆಸಿದ ವಾಯುದೇವರ ಪ್ರೀತಿಗಾಗಿ ೪ ಬತ್ತಿಗಳ ಹಣತೆಗಳನ್ನು ಹಚ್ಚಬೇಕು. ಮನೆಯ ಮುಂದೆ, ತುಳಸಿಯ ಮುಂದೆ ಹಾಗು ಮನೆಯ ಒಳಗೆ ಪ್ರತಿಯೊಂದು ಕೋಣೆಗಳಲ್ಲಿ ದೀಪವನ್ನು ಬೆಳಗಬೇಕು. ಬೆಳಗಿನಿಂದ ರಾತ್ರಿಯ ತನಕ ಶ್ರೀಕೃಷ್ಣಪರಮಾತ್ಮನ ಸ್ಮರಣೆಯನ್ನೇ ಮಾಡುತ್ತಿರಬೇಕು. ಭಗವಂತನನ್ನು ಮರೆಸುವ ದೇಹಕ್ಕೆ ಪ್ರಾಣಕ್ಕೆ ಅಪಾಯಕಾರಿಯಾದ ಸಿಡಿಮದ್ದುಗಳನ್ನು ಹಚ್ಚುವುದರಲ್ಲಿಯೇ ಕಾಲವನ್ನು ಕಳೆಯುವುದಕ್ಕಿಂತ ದೀಪವನ್ನು ಬೆಳಗಿ ಭಗವಂತನ ಸ್ಮರಣೆಯಲ್ಲಿ ಆರಾಧನೆಯಲ್ಲಿ ಮುಳುಗುವುದೇ ಶ್ರೇಯಸ್ಕರ. ಭಗವಂತನಾದ ಶ್ರೀಕೃಷ್ಣಪರಮಾತ್ಮನ ಸ್ಮರಣೆಯೊಂದಿಗೆ ಸಾರ್ಥಕವಾಗಬೇಕು.

* * * *

## ನರಕಚತುರ್ದಶಿಯಂದು ಮಾಡಬೇಕಾದ ಕರ್ತವ್ಯಗಳು

* ಬ್ರಾಹ್ಮಮುಹೂರ್ತದಲ್ಲಿ ೩-೨೦ಕ್ಕೆ ಎದ್ದು ಶೌಚಾಚಾರಗಳನ್ನು ಮುಗಿಸಿ ಕಾರ್ತೀಕಸ್ನಾನವನ್ನು ಮಾಡಬೇಕು. ಸ್ನಾನವನ್ನು ಮಾಡಿ ನಿರ್ಮಾಲ್ಯ-ವಿಸರ್ಜನೆಯನ್ನು ಮಾಡಿ, ನಿರ್ಮಾಲ್ಯ ಅಭಿಷೇಕವನ್ನು ಮಾಡಬೇಕು. ದೇವರ ಪ್ರತಿಮೆಗಳಿಗೆ, ಶಾಲಗ್ರಾಮಗಳಿಗೆ, ಪ್ರಾಣದೇವರೇ ಮೊದಲಾದ ದೇವತೆಗಳ ಪ್ರತಿಮೆಗಳಿಗೆ ಎಣ್ಣೆಯನ್ನು ಹಚ್ಚಿ, ಸೀಗೆಪುಡಿಯಿಂದ ತಿಕ್ಕಿ ಬಿಸಿನೀರಿನಿಂದ ಅಭಿಷೇಕವನ್ನು ಮಾಡಬೇಕು. ದೇವರಿಗೆ ಮಂಗಳಾರತಿಯನ್ನು ಮಾಡಿ, ಮಂಗಳಾಷ್ಟಕವನ್ನು ಪಠಿಸಿ ಅರುಣೋದಯಕಾಲದ ಪೂಜೆಯನ್ನು ಸಮಾಪ್ತಿಗೊಳಿಸಬೇಕು.
* ಪರಮಾತ್ಮನಿಗೆ ಸಮರ್ಪಿಸಿದ ಎಣ್ಣೆ, ಸೀಗೆಪುಡಿ ಇವುಗಳನ್ನೇ ಅಭ್ಯಂಗಕ್ಕಾಗಿ ಉಪಯೋಗಿಸಬೇಕು.
* ಮನೆಯಲ್ಲಿ ಒಬ್ಬರು ಮಾತ್ರ ದೇವರಿಗೆ ಹೀಗೆ ಎಣ್ಣೆ, ಸೀಗೆಕಾಯಿಗಳನ್ನು ಸಮರ್ಪಣೆ ಮಾಡಿದರೆ ಸಾಕು.
* ಅನಂತರ ಹಿರಿಯ ಇಬ್ಬರು ಮುತ್ತೈದೆಯರು ಮನೆಮಂದಿಯನ್ನೆಲ್ಲ ಆಸನದಲ್ಲಿ ಕುಳ್ಳಿರಿಸಿ, ಹಣೆಗೆ ಸಿಂಧೂರದ ತಿಲಕವನ್ನಿಟ್ಟು ಆರತಿಯನ್ನು ಮಾಡಬೇಕು. ಕೆಲವರು ಇಬ್ಬಿಬ್ಬರನ್ನೇ ಕೂಡಿಸಿ ಆರತಿ ಮಾಡುತ್ತಾರೆ. ದೇವರ ಪ್ರಸಾದ ರೂಪದಲ್ಲಿರುವ ಭೃಂಗಾಮಲಕ ಎಣ್ಣೆಯನ್ನು ನೆತ್ತಿಗೆ ಹಚ್ಚಬೇಕು. ತೈಲವನ್ನು ಎದೆ ಮತ್ತು ಕೈಗಳಿಗೆ ಹಚ್ಚಬೇಕು.
* ಕೆಲವೊಬ್ಬರು ಬಂಗಾರದ ಉಂಗುರದಿಂದ ಎಣ್ಣೆಯನ್ನು ಹಚ್ಚುತ್ತಾರೆ. ಕೆಲವರು ಗರಿಕೆಯಿಂದ ತಲೆಗೆ ಎಣ್ಣೆಯನ್ನು ಹಚ್ಚುತ್ತಾರೆ. ಲಕ್ಷ್ಮೀದೇವಿಯು ಅಂತರ್ಯಾಮಿಯಾದ ಭಗವಂತನಿಗೆ ಅಭ್ಯಂಗ ಮಾಡಿಸುತ್ತಾಳೆಂಬ ಅನುಸಂಧಾನಕ್ಕಾಗಿ ಈ ಸಂಪ್ರದಾಯ ಬಂದಿರುತ್ತದೆ.

* ಸಾಮಾನ್ಯವಾಗಿ ಐದು ಗಂಟೆಗೆ ಚಂದ್ರೋದಯವಾಗುತ್ತದೆ. ಈ ಸಂದರ್ಭದಲ್ಲಿಯೇ ಆರತಿಯನ್ನು ಮಾಡಿ, ಎಣ್ಣೆಯನ್ನು ಹಚ್ಚುವುದು ಶ್ರೇಷ್ಠ.

* ಸೂರ್ಯೋದಯವಾದ ಮೇಲೆ ಎಣ್ಣೆಶಾಸ್ತ್ರ ಮಾಡುವುದು ಅನರ್ಥಕಾರಿಯೆಂದು ಶಾಸ್ತ್ರ ತಿಳಿಸುತ್ತದೆ. ಆದ್ದರಿಂದ ಚಂದ್ರೋದಯದ ಅನಂತರ ಸೂರ್ಯೋದಯದ ಮೊದಲೇ ಎಣ್ಣೆಶಾಸ್ತ್ರವನ್ನು ಪ್ರಯತ್ನ-ಪೂರ್ವಕವಾಗಿ ಮಾಡಬೇಕು.

* ಒಂದುವೇಳೆ ಪ್ರಾತಃಕಾಲದಲ್ಲಿ ಸ್ನಾನಾದಿಗಳನ್ನು ಮುಗಿಸಿ, ಭಗವಂತನಿಗೆ ತೈಲಾದ್ಯಭಿಷೇಕಗಳನ್ನು ಮಾಡಲು ಸಾಧ್ಯವಾಗದಿದ್ದರೆ, ತೈಲಾದಿಗಳನ್ನು ದೇವರ ಮುಂದಿಟ್ಟು ಮಾನಸಿಕವಾಗಿಯೇ ಸಮರ್ಪಣೆ ಮಾಡಿ, ಎಣ್ಣೆಶಾಸ್ತ್ರವನ್ನು ಮಾಡಿಕೊಳ್ಳಬೇಕು. ಯಾವುದೇ ಕಾರಣಕ್ಕೂ ಸೂರ್ಯೋದಯದ ಅನಂತರ ಎಣ್ಣೆಶಾಸ್ತ್ರವನ್ನು ಮಾಡದಂತೆ ಎಚ್ಚರ ವಹಿಸಬೇಕು.

* ಮುತ್ತೈದೆಯರು ಮನೆಮುಂದಿಗೆ ಎಣ್ಣೆಯನ್ನು ಹಚ್ಚುವ ಮೊದಲು ಅಷ್ಟಚಿರಂಜೀವಿಗಳಿಗೆ ಯಾರೂ ತುಳಿಯದ ಜಾಗದಲ್ಲಿ ಎಣ್ಣೆಯನ್ನು ಹಚ್ಚಬೇಕು.

ವ್ಯಾಸಃ ಪರಶುರಾಮಶ್ಚ ಹನೂಮಾನ್ ದ್ರೋಣಜಃ ಕೃಪಃ ।
ಮಾರ್ಕಂಡೇಯೋ ಬಲೀಂದ್ರಶ್ಚ ಅಷ್ಟಮಸ್ತು ವಿಭೀಷಣಃ ॥

ಎಂಬ ಶ್ಲೋಕವನ್ನು ಪಠಿಸಿ, ಎಣ್ಣೆಹಚ್ಚುವುದು ಸಂಪ್ರದಾಯವಾಗಿದೆ.

* ಮುತ್ತೈದೆಯರಿಂದಲೇ ಎಣ್ಣೆಯನ್ನು ಹಚ್ಚಿಸಿಕೊಳ್ಳಬೇಕು. ಬೇರೆಯವರಿಂದ ಎಣ್ಣೆಯನ್ನು ಹಚ್ಚಿಸಿಕೊಳ್ಳಲು ಯಾವುದೇ ಶಾಸ್ತ್ರ ಪ್ರಮಾಣಗಳು ಇರುವುದಿಲ್ಲ.

* ಎಣ್ಣೆ ಹಚ್ಚಿಕೊಂಡು ಹಿರಿಯರಿಗೆ ನಮಸ್ಕಾರ ಮಾಡಬಾರದು. ಎಣ್ಣೆ ಹಚ್ಚಿಸಿಕೊಳ್ಳುವ ಮೊದಲು, ಅಥವಾ ಸ್ನಾನವನ್ನು ಮಾಡಿದ ಅನಂತರವೇ ಹಬ್ಬದ ನಮಸ್ಕಾರವನ್ನು ಮಾಡಬೇಕು.

ದೀಪಾವಳಿ -೧ ನರಕಚತುರ್ದಶಿ

* ಪ್ರಾತಃಕಾಲದಲ್ಲಿ ಚಂದ್ರೋದಯದ ಸಂದರ್ಭದಲ್ಲಿ ಎಣ್ಣೆಶಾಸ್ತ್ರವನ್ನು ಮಾಡುವಾಗ ದೇವರ ಎದುರು, ತುಳಸಿಯ ಎದುರು ಹಾಗೂ ಮನೆ ಬಾಗಿಲುಗಳ ಮುಂದೆ ದೀಪವನ್ನು ಹಚ್ಚುವುದು ಮರೆಯಬಾರದು.

* ಭಗವಂತನಿಗೆ ಎಣ್ಣೆ ಸೀಗೆಪುಡಿ ಮೊದಲಾದವುಗಳನ್ನು ಸಮರ್ಪಿಸುವ ಸಂದರ್ಭದಲ್ಲಿಯೇ ಹೊಸ ವಸ್ತ್ರಗಳನ್ನು ಅವಶ್ಯವಾಗಿ ಭಗವಂತನಿಗೆ ಸಮರ್ಪಣೆ ಮಾಡಬೇಕು.

* ನರಕಚತುರ್ದಶಿಯಂದು ಆರತಿಯನ್ನು ಮಾಡಿಸಿಕೊಳ್ಳಲು ಕುಳಿತುಕೊಳ್ಳುವಾಗ ಹೊಸ ಬಟ್ಟೆಯನ್ನೇ ಪ್ರಯತ್ನಪೂರ್ವಕವಾಗಿ ಉಟ್ಟುಕೊಳ್ಳಬೇಕು. ಹಳೆಬಟ್ಟೆಯನ್ನು ಉಟ್ಟುಕೊಳ್ಳಬಾರದು. ಉಟ್ಟುಕೊಳ್ಳುವ ಮೊದಲು ಭಗವಂತನಿಗೆ ಸಮರ್ಪಣೆ ಮಾಡಿರಬೇಕು.

* ಒಂದುವೇಳೆ ಮಗಳಿಗೆ ಮದುವೆಯಾದ ಹೊಸದೀಪಾವಳಿಯಾಗಿದ್ದರೆ ಅಳಿಯ ಹಾಗೂ ಮಗಳಿಗೆ ವಿಶೇಷವಾಗಿ ಆರತಿಯನ್ನು ಹಾಗೂ ಊಟೋಪಚಾರಗಳನ್ನು ಇಂದಿನ ದಿವಸ ನಡೆಸಬೇಕು.

* ಮಗಳನ್ನು ವಿವಾಹ ಮಾಡಿಕೊಡುವಾಗ ಕಾಶೀಯಾತ್ರೆಯನ್ನು ತಡೆದಿದ್ದರ ಪ್ರಾಯಶ್ಚಿತ್ತವಾಗಿ ಇಂದು ಹೊಸ ದೀಪಾವಳಿಯನ್ನು ಆಚರಿಸುವ ಮೂಲಕ, ಗಂಗಾಸ್ನಾನವನ್ನು ಅಳಿಯನಿಗೆ ಮಾಡಿಸಬೇಕು. ಆಗ ವಿವಾಹಕಾಲದಲ್ಲಿ ಗಂಗಾಸ್ನಾನವನ್ನು ತಪ್ಪಿಸಿದ ಪಾಪವು ಪರಿಹಾರವಾಗುತ್ತದೆ.

* ನರಕಚತುರ್ದಶಿಯಂದು ಯತಿಗಳು, ವಿಧವೆಯರು, ಬ್ರಹ್ಮಚಾರಿಗಳು, ಗೃಹಸ್ಥರು ಪ್ರತಿಯೊಬ್ಬರೂ ಕೂಡ ತೈಲಾಂಭ್ಯಂಗವನ್ನು ಮಾಡಬೇಕು. ಮಾಡದಿದ್ದರೆ ಅನರ್ಥವಾಗುತ್ತದೆಂಬುದಾಗಿ ಕೃಷ್ಣಾಚಾರ್ಯಸ್ಮೃತಿಮುಕ್ತಾವಳಿಯಲ್ಲಿ ಹೀಗೆ ಹೇಳಿದ್ದಾರೆ -

ತದಾನೀಂತು ರಮಾದೇವೀ ಸಮುತ್ತಿಷ್ಠತಿ ತಲ್ಪತಃ ।
ತತೋ ನೀರಾಜನಂ ತಸ್ಯಾಃ ಕುರ್ವೀತ ವಿಧಿವನ್ನರಃ ॥

ನ ಕರೋತಿ ಚ ಯೋ ಮೋಹಾತ್ ತಸ್ಯ ಲಕ್ಷ್ಮೀಃ ಪ್ರಕುಪ್ಯತಿ।
ನರಕಶ್ಚ ಹತೋ ದೈತ್ಯಸ್ತಿಥೌ ತಸ್ಯಾಂ ತತೋ ಹಿ ಸಾ ॥
ಖ್ಯಾತಾ ಲೋಕೇ ಮಹಾಪುಣ್ಯಾ ನರಕಾಖ್ಯಚತುರ್ದಶೀ।
ನ ಹಿ ವ್ರತಂ ವಿಲುಪ್ಯೇತ ಕಾರ್ತಿಕವ್ರತಿನಾಂ ನೃಣಾಮ್ ॥
ವಿಧವಾನಾಂ ಯತೀನಾಂ ಚ ತಸ್ಯಾಂ ತೈಲಸ್ಯ ಸೇವನಾತ್ ।
ಯೋ ವಾ ನ ಕುರುತೇ ತಸ್ಯಾಂ ತೈಲಸ್ನಾನಂ ವಿಮೂಢಧೀಃ ॥
ಸಪ್ತಜನ್ಮದರಿದ್ರಸ್ಸ್ಯಾನ್ನಾರೀ ಚ ವಿಧವಾ ಭವೇತ್ ।
ತಸ್ಯಾಂ ಯಸ್ಸ್ನಾಪಯೇದ್ವಿಪ್ರಾಂಸ್ತೈಲೇನೋಷ್ಣೇನ ವಾರಿಣಾ ॥
ತಸ್ಯ ಗೇಹೇ ಸದಾ ಲಕ್ಷ್ಮೀರ್ಭವೇಜ್ಜನ್ಮನಿ ಜನ್ಮನಿ ॥
ಪಿತರಸ್ತಸ್ಯ ಮೋದಂತೇ ತೈಲಸ್ನಾನೇನ ತರ್ಪಿತಾಃ ॥

ನರಕಚತುರ್ದಶೀ ದಿನದಲ್ಲಿ ರಮಾದೇವಿಯು ಶಯನದಿಂದ ಮೇಲೇಳುತ್ತಾಳೆ. ಆಗ ಮಾನವನು ಶಾಸ್ತ್ರೋಕ್ತವಾಗಿ ರಮಾದೇವಿಗೆ ಆರತಿಯನ್ನು ಮಾಡಬೇಕು. ಮೋಹದಿಂದ ಆರತಿ ಪೂಜೆ ಮಾಡದಿದ್ದರೆ ಲಕ್ಷ್ಮಿಯು ಸಿಟ್ಟಾಗುತ್ತಾಳೆ. ಆ ಚತುರ್ದಶೀ ದಿನ ನರಾಕಸುರನ ಸಂಹಾರವಾದುದರಿಂದ ಮಹಾಪುಣ್ಯಕರವಾದ ಆ ಚತುರ್ದಶಿಗೆ ನರಕಚತುರ್ದಶೀ ಎಂದು ಹೆಸರು. ಕಾರ್ತಿಕಮಾಸದ ವ್ರತವುಳ್ಳವರಿಗೂ ವಿಧವೆಯರಿಗೂ, ಯತಿಗಳಿಗೂ ಆ ದಿನ ತೈಲಸ್ನಾನದಿಂದ ವ್ರತಲೋಪವಾಗುವುದಿಲ್ಲ. ಯಾವನು ಅನ್ಯಥಾಜ್ಞಾನಿಯಾಗಿದ್ದು ನರಕಚತುರ್ದಶೀ ದಿನ ತೈಲಾಭ್ಯಂಜನ ಮಾಡಿಕೊಳ್ಳುವುದಿಲ್ಲವೋ ಅವನು ಏಳು ಜನ್ಮಗಳಲ್ಲಿ ಬಡವನಾಗುತ್ತಾನೆ. ಹೆಂಗಸು ವಿಧವೆಯಾಗುತ್ತಾಳೆ. ನರಕಚತುರ್ದಶೀದಿನದಲ್ಲಿ ಬ್ರಾಹ್ಮಣರಿಗೆ ಎಣ್ಣೆ ಹಚ್ಚಿ ಬಿಸಿನೀರಿನಿಂದ ಸ್ನಾನ ಮಾಡಿಸಿದರೆ ಅವನ ಮನೆಯಲ್ಲಿ ಜನ್ಮ ಜನ್ಮದಲ್ಲಿಯೂ ಲಕ್ಷ್ಮಿಯು ವಾಸಮಾಡುತ್ತಾಳೆ. ಎಣ್ಣೆ ಸ್ನಾನದಿಂದ ಸಂತುಷ್ಟರಾದ ಅವನ ಪಿತೃಗಳೂ ಆನಂದ ಪಡುತ್ತಾರೆ. ಇತ್ಯಾದಿ ವಿಷಯವು ಅಲ್ಲಿ ಹೇಳಲ್ಪಟ್ಟಿದೆ.

ದೀಪಾವಳಿ -೧ ನರಕಚತುರ್ದಶಿ

* ತೈಲದಲ್ಲಿ ಲಕ್ಷ್ಮಿಯು, ಜಲದಲ್ಲಿ ಗಂಗೆಯು ಸನ್ನಿಹಿತಳಾಗಿರುತ್ತಾಳೆ ಎಂಬುದನ್ನು ಪದ್ಮಪುರಾಣವು ಹೀಗೆ ತಿಳಿಸುತ್ತದೆ -

ತೈಲೇ ಲಕ್ಷ್ಮೀರ್ಜಲೇ ಗಂಗಾ ದೀಪಾವಳ್ಯಾಂ ಚತುರ್ದಶೀಂ ।
ಪ್ರಾತಸ್ನಾನಂ ಹಿ ಯಃ ಕುರ್ಯಾದ್ಯಮಲೋಕಂ ನ ಪಶ್ಯತಿ ॥

ಎಣ್ಣೆಯಲ್ಲಿ ಲಕ್ಷ್ಮಿಯೂ ನೀರಿನಲ್ಲಿ ಗಂಗೆಯೂ ಆ ದೀಪಾವಳಿಯ ಚತುರ್ದಶಿಯ ದಿವಸ ವಾಸಮಾಡುತ್ತಾರೆ. ಆಗ ಸ್ನಾನ ಮಾಡಿದವನು ಯಮಲೋಕವನ್ನು ನೋಡುವುದೇ ಇಲ್ಲ.

* ೩-೨೦ಕ್ಕೆ ಎದ್ದು ೪-೫೫ರ ಒಳಗೆ ಸ್ನಾನ ಮಾಡಬೇಕು. ಇದೇ ಉತ್ತಮ ಪಕ್ಷ. ೬ ಗಂಟೆಯ ಒಳಗೆ ಸ್ನಾನ ಮಾಡುವುದು ಮಧ್ಯಮಪಕ್ಷ. ಸೂರ್ಯೋದಯದ ಅನಂತರ ಸ್ನಾನ ಮಾಡುವುದು ಅಧಮಪಕ್ಷ.

ಆಯುರ್ವೇದದಲ್ಲಿ ಅಭ್ಯಂಗಸ್ನಾನದ ಬಗ್ಗೆ ಹೀಗೆ ಹೇಳಲಾಗಿದೆ -

ಅಭ್ಯಂಗಮಾಚರೇನ್ನಿತ್ಯಂ, ಸ ಜರಾಶ್ರಮವಾತಹಾ ।
ದೃಷ್ಟಿಪ್ರಸಾದಪುಷ್ಟ್ಯಾಯುಃ ಸ್ವಪ್ನಸುತ್ವಕ್ತ್ವದಾರ್ಢ್ಯಕೃತ್ ।
ಶಿರಃಶ್ರವಣಪಾದೇಷು ತಂ ವಿಶೇಷೇಣ ಶೀಲಯೇತ್ ।
ವರ್ಜ್ಯೋಽಭ್ಯಂಗಃ ಕಫಗ್ರಸ್ತಕೃತಸಂಶುದ್ಧ್ಯಜೀರ್ಣಿಭಿಃ ॥

ನಿತ್ಯವು ಅಭ್ಯಂಗವನ್ನು ಮಾಡಬೇಕು. ಇದರಿಂದ ಮುಪ್ಪು ದೂರವಾಗುತ್ತದೆ. ಎಷ್ಟೇ ಕೆಲಸ ಮಾಡಿದರೂ ದೇಹಕ್ಕೆ ಶ್ರಮವಾಗುವುದಿಲ್ಲ. ವಾತವಿಕಾರದಿಂದ ಉಂಟಾಗುವ ಯಾವುದೇ ರೋಗಗಳೂ ಕೂಡ ಬರುವುದಿಲ್ಲ. ಕಣ್ಣಿಗೆ ದೃಷ್ಟಿಶಕ್ತಿಯು ಹೆಚ್ಚುತ್ತದೆ. ನರಗಳಿಗೆ ಶಕ್ತಿಯು ಹೆಚ್ಚಾಗಿ ನರಹೀನತೆಯು ಉಂಟಾಗುವುದಿಲ್ಲ. ಗಾಢವಾಗಿ ನಿದ್ರೆಯೂ ಬರುತ್ತದೆ. ಚರ್ಮವು ಸುಕ್ಕುಗಟ್ಟುವುದಿಲ್ಲ. ದೇಹವು ಬಲಿಷ್ಠವಾಗುತ್ತದೆ. ಅಭ್ಯಂಗವನ್ನು ಮಾಡುವಾಗ ಶಿರಸ್ಸಿಗೆ ಹಾಗೂ ಕಿವಿಗಳಿಗೆ ಮತ್ತು ಅಂಗಾಲಿಗೆ ವಿಶೇಷವಾಗ ಎಣ್ಣೆಯನ್ನು ಹಾಕಬೇಕು. ಆದರೆ ಯಾರಿಗೆ ಕಫವು

ಹೆಚ್ಚಾಗಿರುತ್ತದೋ, ಅವರು ಅಭ್ಯಂಗವನ್ನು ಮಾಡಬಾರದು. ಮತ್ತು ಅಜೀರ್ಣ, ಜ್ವರ ಮೊದಲಾದ ದೋಷವಿರುವವರೂ ಕೂಡ ಅಭ್ಯಂಗವನ್ನು ಮಾಡಬಾರದು.

(ಈ ಶ್ಲೋಕ ದೀಪಾವಳಿಗೆ ಸಂಬಂಧಪಟ್ಟಿದ್ದಲ್ಲ. ಅಭ್ಯಂಗಸ್ನಾನದ ಪ್ರಯೋಜನ ತಿಳಿಸುವುದಕ್ಕಾಗಿ ಪ್ರಾಸಂಗಿಕವಾಗಿ ಅಷ್ಟಾಂಗಹೃದಯಲ್ಲಿ ವಾಗ್ಭಟನು ಹೇಳಿದ್ದನ್ನು ಉಲ್ಲೇಖಿಸಲಾಗಿದೆ.)

* ತಲೆಗೆ ಭೃಂಗಾಮಲಕತೈಲವನ್ನು ಅಥವಾ ಬ್ರಾಹ್ಮೀತೈಲವನ್ನು ಹಚ್ಚಿಕೊಳ್ಳಬೇಕು. ಉಳಿದ ದೇಹದ ಭಾಗಕ್ಕೆ ಎಳ್ಳೆಣ್ಣೆಯನ್ನು ಉಪಯೋಗಿಸಬೇಕು.
* ದೊಡ್ಡವರು ಸಣ್ಣವರಿಗೆ, ಸಣ್ಣವರು ದೊಡ್ಡವರಿಗೆ ಪರಸ್ಪರವಾಗಿ ಎಣ್ಣೆಯನ್ನು ಹಚ್ಚಿ ಸಂತೋಷ ಪಡಬೇಕು. ಅನಂತರ ಹಿಂದಿನ ದಿವಸ ಯಾವ ನೀರಿಗೆ ಪೂಜೆಯನ್ನು ಮಾಡಲಾಗಿರುತ್ತದೋ, ಆ ನೀರನ್ನೇ ಕಾಯಿಸಿ ಸ್ನಾನ ಮಾಡಬೇಕು. ಹಿಂದೆ ಹೇಳಿದಂತೆ ಐದು ಬಗೆಯ ತೊಗಟೆಗಳನ್ನು ಆ ನೀರಿಗೆ ಹಾಕಿ ಕುದಿಸಿರಬೇಕು.
* ಸ್ನಾನದ ಮಧ್ಯದಲ್ಲಿ ಉತ್ತರಣಿಕಡ್ಡಿಯಿಂದ ತಮ್ಮನ್ನು ತಾವೇ ನಿವಾಳಿಸಿಕೊಳ್ಳಬೇಕು. ಇದರ ಉಲ್ಲೇಖ ಹೀಗಿದೆ -

  ಅಪಾಮಾರ್ಗಸ್ತಥಾ ತುಂಬೀ ಪ್ರಪುನ್ನಾಟಂ ಚ ಕಟ್ಫಲಂ ।
  ಭ್ರಾಮಯೇತ್ ಸ್ನಾನಮಧ್ಯೇ ತು ನರಕಸ್ಯ ಕ್ಷಯಾಯ ವೈ ॥

  ಸ್ನಾನ ಮಾಡುವಾಗ ಮಧ್ಯದಲ್ಲಿ ಉತ್ತರಣೆ ಕಡ್ಡಿ, ಸೋರೆಬಳ್ಳಿ ಕಿರುಶಿವನಗಿಡ ತಗಚೆ ಗಿಡಗಳನ್ನು ತಲೆಯ ಸುತ್ತಲೂ ತಿರುಗಿಸಿ ಎಸೆಯಬೇಕು. ಹೀಗೆ ಮಾಡಿದರೆ ನರಕದ ಬಾಧೆಯು ತಪ್ಪುತ್ತದೆ.
* ಉತ್ತರಣಿಕಡ್ಡಿಯಿಂದ ತಲೆಯನ್ನು ಸುತ್ತುವಾಗ ಹೀಗೆ ಪ್ರಾರ್ಥನೆಯನ್ನು ಮಾಡಬೇಕು-

  ಸೀತಾಲೋಷ್ಟಸಮಾಯುಕ್ತಃ ಸಕಂಟಕದಳಾನ್ವಿತಃ ।
  ಹರ ಪಾಪಮಪಮಾರ್ಗ ಭ್ರಾಮ್ಯಮಾಣಃ ಪುನಃ ಪುನಃ ॥

ನೇಗಿಲಿನ ತುದಿಯಲ್ಲಿರುವ ಒಂದು ಚೂರು ಹೆಂಟೆಯನ್ನು ತೆಗೆದುಕೊಂಡು ಮುಳ್ಳಿರುವ ಒಂದು ಚೂರು ಕಡ್ಡಿಯನ್ನು ಯಾವುದನ್ನಾದರೂ ಮುಳ್ಳೂ ಎಲೆಯೂ ಇರುವಂತೆ ತೆಗೆದುಕೊಂಡು ಅವೆರಡನ್ನೂ ಈ ಉತ್ತರಣೆಯ ಕಡ್ಡಿಯ ಜೊತೆಗೆ ಸೇರಿಸಿಕೊಂಡು ಎಲೈ ಉತ್ತರಣೆಯೇ ! ನನ್ನ ತಲೆಯ ಸುತ್ತಲೂ ತಿರುಗಿಸುತ್ತೇನೆ. ನನ್ನ ಪಾಪವನ್ನು ನಾಶ ಮಾಡು ಎಂದೆನ್ನುತ್ತಾ ಅನೇಕ ಬಾರಿ ತಲೆಯ ಸುತ್ತಲೂ ತಿರುಗಿಸಬೇಕು.

* ಪ್ರಯತ್ನಪೂರ್ವಕವಾಗಿ ಉತ್ತರಣೆಕಡ್ಡಿಯನ್ನು ತಂದು ಹೀಗೆ ನಿವಾಳಿಸಬೇಕು. ಗ್ರಂಥಿಗೆ ಅಂಗಡಿಗಳಲ್ಲಿ ಸಿಗುವ ಉತ್ತರಣೆಯ ಕಾಷ್ಠಗಳನ್ನಾದರೂ ತಂದು ಹೀಗೆ ನಿವಾಳಿಸುವ ಕ್ರಮವನ್ನು ಅನುಸರಿಸಬೇಕು.

* ಹೀಗೆ ಸ್ನಾನವನ್ನು ಮಾಡಿದ ಮೇಲೆ ಮಡಿಸ್ನಾನವನ್ನು ಮಾಡಿ, ದೇವರ ಪೂಜೆಯನ್ನು ವೈಭವೋಪೇತವಾಗಿ ಆಚರಿಸಬೇಕು. ಮುತ್ತೈದೆಯರು ಸ್ನಾನವನ್ನು ಮಾಡಿ ವಿವಿಧ ಭಕ್ಷ್ಯಭೋಜ್ಯಗಳನ್ನು ಸಿದ್ಧಪಡಿಸಬೇಕು.

* ಚತುರ್ದಶ ಎಂಬ ಸಂಖ್ಯೆಗೆ ಅನುಗುಣವಾಗಿ ಹದಿನಾಲ್ಕು ಬಗೆಯ ಕಾಯಿಪಲ್ಯಗಳನ್ನು ಬೇಯಿಸಿ ಸಮರ್ಪಣೆ ಮಾಡುವ ರೂಢಿಯನ್ನು ಸ್ಮೃತಿತತ್ತ್ವ ಗ್ರಂಥವು ಉಲ್ಲೇಖ ಮಾಡುತ್ತದೆ.

* ಅಕ್ಕಿ ಹಾಗೂ ತೆಂಗಿನಕಾಯಿಯಿಂದ ತಯಾರುಗೊಳಿಸುವ ನೀರುದೋಸೆಯನ್ನು ಅಂದು ಮಾಡುವ ಕ್ರಮವನ್ನು ಕೆಲವರು ಅನುಸರಿಸುತ್ತಾರೆ.

* ಇಂದು ಭಗವಂತನಿಗೆ ಪಂಚಾಮೃತ ಅಭಿಷೇಕವನ್ನು ಮಾಡಬೇಕು. ಪ್ರತಿನಿತ್ಯ ಮಾಡುವ ಪೂಜೆಗಿಂತ ಹೆಚ್ಚಿನ ಸಮಯವನ್ನು ವಿನಿಯೋಗ ಮಾಡಿ, ಮತ್ತಷ್ಟು ವೈಭವದಿಂದ ಭಗವಂತನಿಗೆ ಷೋಡಶೋಪಚಾರ ಪೂಜೆಯನ್ನು ಆಚರಿಸಬೇಕು. (ನಮ್ಮ ಪ್ರಕಾಶನದಿಂದಲೇ ಪ್ರಕಟಿತವಾದ ಭಗವಂತನ ಷೋಡಶೋಪಚಾರ ಪೂಜೆಯನ್ನು ಸಂಪೂರ್ಣವಾಗಿ ಅನುಷ್ಠಾನ ಮಾಡಿದಲ್ಲಿ ಭಗವಂತನ ವಿಶೇಷ ಅನುಗ್ರಹಕ್ಕೆ ಪಾತ್ರರಾಗುವುದರಲ್ಲಿ ಸಂಶಯವಿಲ್ಲ.)

ದೀಪಾವಳಿ -೧ ನರಕಚತುರ್ದಶಿ

* ನರಕಚತುರ್ದಶಿಯಂದು ಲಕ್ಷ್ಮೀಪೂಜೆಯನ್ನು ವಿಶೇಷವಾಗಿ ಆಚರಿಸಬೇಕೆಂದು ಕೃಷ್ಣಾಚಾರಸ್ಮೃತಿಮುಕ್ತಾವಳಿಯಲ್ಲಿ ತಿಳಿಸಿರುತ್ತಾರೆ. ಕೆಲವು ಗ್ರಂಥಗಳಲ್ಲಿ ಅಮಾವಾಸ್ಯೆಯಂದು ಲಕ್ಷ್ಮಿಯು ಮೇಲೆದ್ದೇಳುತ್ತಾಳೆಂದು ಹೇಳಲಾಗಿದೆ. ಆದರೆ ಕೃಷ್ಣಾಚಾರ್ಯರು ನರಕಚತುರ್ದಶಿಯಂದೇ ಲಕ್ಷ್ಮೀದೇವಿಯು ಎದ್ದೇಳುವ ಸಮಯವೆಂದು ಹೇಳುತ್ತಾರೆ.

* ಅಮಾವಾಸ್ಯೆಯಂದು ಲಕ್ಷ್ಮಿಯು ಎದ್ದೇಳುತ್ತಾಳೆ. ಚತುರ್ದಶಿಯ ದಿವಸ ಅವಳು ಎದ್ದೇಳುವ ಸಮಯ. ಆ ಸಂದರ್ಭದಲ್ಲಿಯೂ ಲಕ್ಷ್ಮೀದೇವಿಗೆ ಪೂಜೆಯನ್ನು ಮಾಡಬೇಕು. ಅಮಾವಾಸ್ಯೆಯಂದು ಎದ್ದಿರುವ ಲಕ್ಷ್ಮಿಗೆ ಪೂಜೆಯನ್ನು ಆಚರಿಸಬೇಕೆಂದು ಸಮನ್ವಯವನ್ನು ತಿಳಿಯಬಹುದು.

* ಲಕ್ಷ್ಮೀದೇವಿಯ ಪೂಜೆಯನ್ನು ವಿಶೇಷವಾಗಿ ಮಾಡಬೇಕೆನ್ನುವುದರಲ್ಲಿ ಸಂದೇಹವಿಲ್ಲ. ಭಗವಂತನ ಪೂಜೆಯ ಅನಂತರ ಲಕ್ಷ್ಮಿಯ ಪೂಜೆಯನ್ನು ಆಚರಿಸಿ, ಮುಖ್ಯಪ್ರಾಣಾದಿ ದೇವತೆಗಳ ಪೂಜೆಯನ್ನು ಆಚರಿಸಿ, ಪೂಜೆಯ ಕೊನೆಯಲ್ಲಿ ಬ್ರಹ್ಮಯಜ್ಞವನ್ನು ಮಾಡಿ, ಬ್ರಹ್ಮಯಜ್ಞದ ಕೊನೆಯಲ್ಲಿ ಯಮತರ್ಪಣವನ್ನು ನೀಡಬೇಕು.

* ಯಮತರ್ಪಣವನ್ನು ನೀಡುವ ಮೊದಲು ಯಮದೇವರ ಹದಿನಾಕು ರೂಪಗಳಿಗೆ ನಮಸ್ಕಾರವನ್ನು ಮಾಡಬೇಕು. ಅನಂತರ ಆ ಹದಿನಾಕು ರೂಪಗಳಿಗೆ ತರ್ಪಣವನ್ನು ನೀಡಿ 'ಯಮೋ ನಿಹಂತಾ' 'ಪಿತೃಧರ್ಮರಾಜೋ ವೈವಸ್ವತೋ ದಂಡಧರಶ್ಚ ಕಾಲಃ । ಪ್ರೇತಾಧಿಪೋ ದತ್ತಕೃತಾನುಸಾರೀ ಕೃತಾಂತ ಏತದ್ದಶ ಕೃಜ್ಜಪಂತೀ ॥ ಎಂಬ ಶ್ಲೋಕವನ್ನು ಪಠಿಸಬೇಕು.

* ನಾವು ಮಾಡುವ ಸಹಸ್ರ ಸಹಸ್ರ ಅಪರಾಧಗಳನ್ನು ಮನ್ನಿಸುವಂತೆ ಯಮದೇವರಲ್ಲಿ ಪ್ರಾರ್ಥಿಸಬೇಕು. ಮೋಕ್ಷಮಾರ್ಗದೆಡೆ ಧಾವಿಸುವಂತೆ ಶರಣೆನ್ನಬೇಕು.

## ಸ್ವಾತಿನಕ್ಷತ್ರದಲ್ಲಿ ನರಕಚತುರ್ದಶಿಯ ಆಚರಣೆ

ಸ್ವಾತಿಸ್ಥಿತೇ ರವಾವಿಂದುರ್ಯದಿ ಸ್ವಾತಿಗತೋ ಭವೇತ್ ।
ಪಂಚತ್ವಗುದಕಸ್ನಾಯೀ ಕೃತಾಭ್ಯಂಗವಿಧಿರ್ನರಃ ॥
ನೀರಾಜಿತೋ ಯದಾ ಲಕ್ಷ್ಮೀಮರ್ಚಯೇತ್ ಸುಸಮಾಹಿತಃ ।
ಸರ್ವಸಂಪದಮಾಪ್ನೋತಿ ಲಕ್ಷ್ಮೀಸ್ತತ್ರೈವ ತಿಷ್ಠತಿ ॥

ಸೂರ್ಯನು ಸ್ವಾತಿನಕ್ಷತ್ರದಲ್ಲಿ ಇದ್ದಾಗ ನರಕಚತುರ್ದಶಿಯು ಬರುತ್ತದೆ. ಒಂದು ವೇಳೆ ಅಂದು ಚಂದ್ರನೂ ಕೂಡ ಸ್ವಾತಿನಕ್ಷತ್ರದಲ್ಲಿದ್ದರೆ ವಿಶೇಷಫಲವನ್ನು ಶಾಸ್ತ್ರದಲ್ಲಿ ಹೇಳಿದ್ದಾರೆ. ಅಂದು ಐದುಬಗೆಯ ತೊಗಟೆಗಳನ್ನು ಬಿಸಿನೀರಿನಲ್ಲಿ ಹಾಕಿ ಸ್ನಾನ ಮಾಡಬೇಕು. ಎಳ್ಳೆಣ್ಣೆಯಿಂದ ಅಭ್ಯಂಗವನ್ನು ಮಾಡಬೇಕು. ಸುಮಂಗಲಿಯರಿಂದ ಆರತಿಯನ್ನು ಮಾಡಿಸಿಕೊಳ್ಳಬೇಕು. ಏಕಾಗ್ರಚಿತ್ತನಾಗಿ ಲಕ್ಷ್ಮಿಯನ್ನು ಪೂಜೆ ಮಾಡಬೇಕು. ಹೀಗೆ ನರಕಚತುರ್ದಶಿಯನ್ನು ಆಚರಣೆ ಮಾಡುವುದರಿಂದ ಸಕಲವಿಧವಾದ ಸಂಪತ್ತನ್ನು ಹೊಂದುತ್ತಾನೆ. ಲಕ್ಷ್ಮಿಯು ಅವನ ಮನೆಯಲ್ಲಿ ವಾಸ ಮಾಡುತ್ತಾಳೆ. ಹೀಗೆ ಸ್ಮೃತಿಮುಕ್ತಾವಳಿಯಲ್ಲಿ ತಿಳಿಸಿದ್ದಾರೆ.

ಚತುರ್ದಶೀ ಚಾಶ್ವಯುಜಸ್ಯ ಕೃಷ್ಣ
ಸ್ವಾತ್ಯರ್ಕ್ಷಯುಕ್ತಾ ಚ ಭವೇತ್ ಪ್ರಭಾತೇ
ಸ್ನಾನಂ ಸಮಭ್ಯಂಜ್ಯ ನರೈಸ್ತು ಕಾರ್ಯಂ
ಸುಗಂಧತೈಲೇನ ವಿಭೂತಿಕಾಮೈಃ ॥

ಎಂಬುದಾಗಿ ಸ್ವಾತಿನಕ್ಷತ್ರದಲ್ಲಿ ಸೂರ್ಯ, ಚಂದ್ರರಿಬ್ಬರೂ ಇದ್ದಾಗ ನರಕಚತುರ್ದಶಿಯು ವಿಶೇಷಫಲದಾಯಕವಾಗುತ್ತದೆಂದು ಸ್ಮೃತಿದರ್ಪಣದಲ್ಲಿ ತಿಳಿಸಲಾಗಿದೆ.

## ನರಕಚತುರ್ದಶಿಯ ನಿರ್ಣಯ

ಪೂರ್ವವಿದ್ಧಚತುರ್ದಶ್ಯಾಂ ಕಾರ್ತಿಕಸ್ಯಾಸಿತೇ ಪರೇ ।
ಪಕ್ಷೇ ಪ್ರತ್ಯೂಷಸಮಯೇ ಸ್ನಾನಂ ಕುರ್ಯಾತ್ ಪ್ರಯತ್ನತಃ ॥

ಎರಡು ದಿವಸಗಳಲ್ಲಿ ಚಂದ್ರೋದಯ ಸಮಯದಲ್ಲಿ ಚತುರ್ದಶಿ ಇದ್ದರೆ ಹಿಂದಿನ ದಿನದಲ್ಲೇ ನರಕಚತುರ್ದಶಿಯ ಆಚರಣೆ ಮಾಡಬೇಕು.

ಉಭಯತ್ರ ವಿಧೂದಯೇ ಚತುರ್ದಶ್ಯಭಾವೇ
ಹ್ರಾಸೇ ಹ್ರಾಸಂ ಪೂರ್ವೇದ್ಯುಃ ಪ್ರವೇಶ್ಯ
ಪ್ರವೇಽಹ್ನಿ ತ್ರಯೋದಶ್ಯಾಮೇವಾಭ್ಯಂಗಂ ಕುರ್ಯಾದಿತಿ ದಿವೋದಾಸಃ ॥

ಒಂದುವೇಳೆ ಎರಡೂ ದಿವಸ ಚಂದ್ರೋದಯ ಕಾಲದಲ್ಲಿ ಚತುರ್ದಶಿಯು ಇಲ್ಲದಿದ್ದರೆ ಹಿಂದಿನ ದಿವಸ ಅಭ್ಯಂಜನವನ್ನು ಮಾಡಬೇಕು ಎಂಬುದು ದಿವೋದಾಸರ ಅಭಿಪ್ರಾಯ.

ಆದ್ದರಿಂದ ತ್ರಯೋದಶಿಯಿಂದ ವಿದ್ಧವಾದ ಚತುರ್ದಶಿಯೇ ನರಕಚತುರ್ದಶಿಯ ಆಚರಣೆಗೆ ಶ್ರೇಷ್ಠ ದಿವಸವಾಗಿದೆ. ಅರುಣೋದಯಕಾಲದಲ್ಲಿ ಚತುರ್ದಶಿತಿಥಿಯು ಇದ್ದರೆ ಅಂದು ಅಭ್ಯಂಗವನ್ನು ಆಚರಣೆ ಮಾಡಬೇಕು.

## ಯಮತರ್ಪಣದ ವಿಚಾರ

ತಥಾ ಕೃಷ್ಣಾಂಗರಚತುರ್ದಶ್ಯಾಂ ಯಮತರ್ಪಣಮುಕ್ತಂ ವೃದ್ಧಮನುನಾ-ದೀಪೋತ್ಸವಚತುರ್ದಶ್ಯಾಂ ಕಾರ್ಯಂ ತು ಯಮತರ್ಪಣಮ್ ।

ಕೃಷ್ಣಾಂಗಾರಚತುರ್ದಶ್ಯಾಮಪಿ ಕಾರ್ಯಂ ತದೈವ ವಾ ॥
ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ ।
ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯ ಚ ॥
ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ ।
ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ವೈ ನಮಃ ॥

ಕೃಷ್ಣಪಕ್ಷದ ಮಂಗಳವಾರ ಚತುರ್ದಶೀ ದಿನ ಯಮತರ್ಪಣ ಕೊಡಬೇಕೆಂದು ವೃದ್ಧಮನುಗಳು ಹೇಳಿದ್ದಾರೆ - 'ದೀಪಾವಳಿಯ ಚತುರ್ದಶೀದಿನ ಯಮತರ್ಪಣವನ್ನು ಕೊಡತಕ್ಕದ್ದು. ಕೃಷ್ಣಪಕ್ಷದ ಮಂಗಳವಾರ ಚತುರ್ದಶೀ ಬಂದರೆ

ಆಗಲೂ ಯಮತರ್ಪಣ ಕೊಡತಕ್ಕದ್ದು. ಅಥವಾ ಪ್ರತಿಯೊಂದು ಕೃಷ್ಣಪಕ್ಷದ ಚತುರ್ದಶೀದಿನ ಯಮತರ್ಪಣ ಕೊಡಬೇಕು. ಯಮಾಯ ನಮಃ, ಧರ್ಮರಾಜಾಯ ನಮಃ, ಮೃತ್ಯುವೇ ನಮಃ, ಅಂತಕಾಯ ನಮಃ, ವೈವಸ್ವತಾಯ ನಮಃ, ಕಾಲಾಯ ನಮಃ,ಸರ್ವಭೂತಕ್ಷಯಾಯ ನಮಃ, ಔದುಂಬರಾಯ ನಮಃ, ದಧ್ನಾಯ ನಮಃ, ನೀಲಾಯ ನಮಃ, ಪರಮೇಷ್ಠಿನೇ ನಮಃ, ವೃಕೋದರಾಯ ನಮಃ, ಚಿತ್ರಾಯ ನಮಃ, ಚಿತ್ರಗುಪ್ತಾಯ ನಮಃ, ಎಂದು ಯಮತರ್ಪಣ ಕೊಡಬೇಕು, ಮತ್ತು ನಮಸ್ಕಾರ ಮಾಡಬೇಕು.

ದೀಪೋತ್ಸವಚತುರ್ದಶ್ಯಾಂ ಕಾರ್ಯಂ ತು ಯಮತರ್ಪಣಮ್ ।
ಜೀವತ್ಪಿತಾಪಿ ಕುರ್ವೀತ ತರ್ಪಣಂ ಯಮಭೀಷ್ಮಯೋಃ ॥

ಎಂಬ ಪ್ರಮಾಣದಂತೆ ಜೀವತ್ಪಿತೃಗಳೂ ಸಹ ಯಮತರ್ಪಣವನ್ನು ನೀಡಬೇಕು. ಅಂಗೈ ಮಧ್ಯದಲ್ಲಿ ಹಾಕಿದ ಹರಿನಿರ್ಮಾಲ್ಯವು ಬೆರಳುಗಳ ತುದಿಯಿಂದ ಬೀಳಬೇಕು.

## ನರಕಚತುರ್ದಶಿಯಂದು ಪ್ರತಿಯೊಬ್ಬರೂ ನೀಡಲೇ ಬೇಕಾದ ಯಮತರ್ಪಣ

೧. ಯಮಂ ತರ್ಪಯಾಮಿ.
೨. ಧರ್ಮರಾಜಂ ತರ್ಪಯಾಮಿ.
೩. ಮೃತ್ಯುಂ ತರ್ಪಯಾಮಿ
೪. ಅಂತಕಂ ತರ್ಪಯಾಮಿ
೫. ವೈವಸ್ವತಂ ತರ್ಪಯಾಮಿ
೬. ಕಾಲಂ ತರ್ಪಯಾಮಿ
೭. ಸರ್ವಭೂತಕ್ಷಯಂ ತರ್ಪಯಾಮಿ
೮. ಔದುಂಬರಂ ತರ್ಪಯಾಮಿ
೯. ದಧ್ನಂ ತರ್ಪಯಾಮಿ.
೧೦. ನೀಲಂ ತರ್ಪಯಾಮಿ

೧೧. ಪರಮೇಷ್ಠಿನಂ ತರ್ಪಯಾಮಿ

೧೧. ವೃಕೋದರಂ ತರ್ಪಯಾಮಿ

೧೨. ಚಿತ್ರಂ ತರ್ಪಯಾಮಿ

೧೩. ಚಿತ್ರಗುಪ್ತಂ ತರ್ಪಯಾಮಿ.

* ನರಕಚತುರ್ದಶಿಯ ದಿವಸ ಶ್ರೀಕೃಷ್ಣಪರಮಾತ್ಮನು ನರಕಾಸುರನನ್ನು ಸಂಹಾರ ಮಾಡಿದ ಚರಿತ್ರೆಯನ್ನು ಪೂಜೆಯ ಅನಂತರ ಪ್ರವಚನ ಮಾಡಬೇಕು. ಅಥವಾ ಪ್ರವಚನವನ್ನು ಕೇಳಬೇಕು.

* ಉತ್ತರದ ಕಡೆ ಕವಟೆಕಾಯಿಯನ್ನು ತುಳಿದು ಹಾಕುತ್ತಾರೆ. ನರಕಾಸುರನ ಪ್ರತಿನಿಧಿಯಾಗಿ ಕವಟೆಕಾಯಿಯನ್ನು ಇಟ್ಟು ಅದನ್ನು ತುಳಿಯುವ ಮೂಲಕ ನರಕಾಸುರನ ಸಂಹಾರವನ್ನು ಚಿಂತನೆ ಮಾಡುತ್ತಾರೆ.

## ನರಕಚತುರ್ದಶಿಯ ಸಾಯಂಕಾಲದ ಆಚರಣೆ

ಸಾಯಂಕಾಲದಲ್ಲಿ ಸೂರ್ಯಾಸ್ತವಾದ ಮೇಲೆ ನರಕಾಸುರನಿಗೆ ನಾಕು ಬತ್ತಿಯ ಒಂದು ದೀಪವನ್ನು ಹಚ್ಚಬೇಕು. ನರಕಾಸುರನಲ್ಲಿ ಇರುವ ವಾಯುದೇವರಿಗೆ ಈ ದೀಪವು ಅರ್ಪಿತವಾಗುತ್ತದೆ ಎಂದು ಚಿಂತನೆ ಮಾಡಬೇಕು. ಭೂದೇವಿಯ ಪ್ರಾರ್ಥನೆಯಂತೆ ಭಗವಂತನು ನರಕಾಸುರನ ಹೆಸರಿನಿಂದ ಈ ದಿವಸ ಪ್ರಸಿದ್ಧವಾಗುವಂತೆ ಮತ್ತು ಅವನಿಗೆ ದೀಪವನ್ನು ಹಚ್ಚುವಂತೆ ವರವನ್ನು ನೀಡಿದ್ದನು. ಆದ್ದರಿಂದ ಪದ್ಮಪುರಾಣವು ಹೀಗೆ ಹೇಳುತ್ತದೆ-

ನರಕಾಯ ಪ್ರದಾತವ್ಯೋ ದೀಪಸ್ಸಂಪೂಜ್ಯ ದೇವತಾಃ ।
ತತಃ ಪ್ರದೋಷಸಮಯೇ ದೀಪಾನ್‌ದಂದ್ಯಾನ್ಮನೋಹರಾನ್ ॥

ನರಕನಿಗೂ ಒಂದು ದೀಪವನ್ನು ಹತ್ತಿಸಬೇಕು. ದೇವತೆಗಳನ್ನೂ ಪೂಜಿಸಬೇಕು. ಅನಂತರ ಸಾಯಂಕಾಲದ ಪ್ರದೋಷ ಸಮಯದಲ್ಲಿ ಬಗೆ ಬಗೆಯಾದ ಅನೇಕ ಮನೋಹರ ದೀಪಗಳನ್ನು ಹತ್ತಿಸಬೇಕು.

## ಸಾಯಂಕಾಲ ಎಲ್ಲೆಲ್ಲಿ ದೀಪ ಹಚ್ಚಬೇಕು ?

ಬ್ರಹ್ಮವಿಷ್ಣು ಶಿವಾದೀನಾಂ ಭವನೇಷು ವಿಶೇಷತಃ ।
ಕೂಟಾಗಾರೇಷು ಚೈತ್ಯೇಷು ಸಭಾಸು ಚ ನದೀಷು ಚ ॥
ಪ್ರಾಕಾರೋದ್ಯಾನವಾಪೀಷು ಪ್ರತೋಳೀ ನಿಷ್ಕುಟೇಷು ಚ ।
ಮಂದಾರಾಸು ವಿವಿಕ್ತಾಸು ಹಸ್ತಿಶಾಲಾಸು ಚೈವ ಹಿ ॥

ಬ್ರಹ್ಮ, ವಿಷ್ಣು, ಶಿವ ಮೊದಲಾದ ದೇವಸ್ಥಾನಗಳಲ್ಲಿಯೂ, ಮನೆಗಳ ಮಹಡಿ ಮೇಲೆಯೂ, ಮಂಟಪಗಳಲ್ಲಿಯೂ, ಸಭೆಗಳಲ್ಲಿಯೂ, (ಅಂಗಳದಲ್ಲಿಯೂ) ನದಿಗಳಲ್ಲಿಯೂ, ಮನೆಯ ಸುತ್ತಲೂ, ಇರುವ ಆವರಣ ಗೋಡೆಗಳ ಮೇಲೂ, ಉದ್ಯಾನಗಳಲ್ಲೂ, ಬಾವಿಗಳ ಪಕ್ಕದಲ್ಲಿಯೂ, ಮಾರ್ಗಗಳಲ್ಲಿಯೂ, ಕುದುರೆಗಳ ಲಾಯದಲ್ಲಿಯೂ, ಆನೆಗಳ ಶಾಲೆಗಳಲ್ಲಿಯೂ, ಎಲ್ಲಾ ಕಡೆಗಳಲ್ಲಿಯೂ ದೀಪವನ್ನು ಹತ್ತಿಸಬೇಕು.

* ನರಕಚತುರ್ದಶಿಯ ಹಾಗೂ ಅಮಾವಾಸ್ಯೆಯ ಸಾಯಂಕಾಲದಲ್ಲಿ ಪುರುಷರು ಕೈಯಲ್ಲಿ ಪಂಜುದೀವಟಿಗೆಗಳನ್ನು ಹಿಡಿದು ತಮ್ಮ ಪಿತೃಗಳಿಗೆ ಮಾರ್ಗದರ್ಶನವನ್ನು ಮಾಡಬೇಕು. ಇದನ್ನು ಧರ್ಮಸಿಂಧು ಮೊದಲಾದ ಗ್ರಂಥಗಳಲ್ಲಿ ಸಮರ್ಥಿಸಿದ್ದಾರೆ -

  ತುಲಾಸಂಸ್ಥೇ ಸಹಸ್ರಾಂಶೌ ಪ್ರದೋಷೇ ಭೂತದರ್ಶಯೋಃ ।
  ಉಲ್ಕಾಹಸ್ತಾ ನರಾಃ ಕುರ್ಯುಃ ಪಿತೄಣಾಂ ಮಾರ್ಗದರ್ಶನಮ್ ।
  ಅಗ್ನಿದಗ್ಧಾಶ್ಚ ಯೇ ಜೀವಾ ಯೇಽಪ್ಯದಗ್ಧಾಃ ಕುಲೇ ಮಮ ।
  ಉಜ್ವಲಜ್ಯೋತಿಷಾ ದಗ್ಧಾಸ್ತೇ ಯಾಸ್ತು ಪರಮಾಂ ಗತಿಮ್ ।
  ಯಮಲೋಕಂ ಪರಿತ್ಯಜ್ಯ ಆಗತಾ ಯೇ ಮಹಾಲಯೇ ।
  ಉಜ್ವಲಜ್ಯೋತಿಷಾ ವರ್ತ್ಮ ಪ್ರಶ್ಯನ್ತೋ ವ್ರಜಸ್ತು ತೇ ॥

  ಪುರುಷರು ಕೈಯಲ್ಲಿ ಪಂಜುದೀವಟಿಗೆಗಳನ್ನು ಹಿಡಿದುಕೊಂಡು ತಮ್ಮ ಪಿತೃಗಳಿಗೆ ದಾರಿಯನ್ನು ತೋರಿಸಬೇಕು. ಆಗ ಹೇಳಬೇಕಾದ ಮಂತ್ರ ಹೀಗಿದೆ - ಅಗ್ನಿ ದಹನದ ಸಂಸ್ಕಾರವನ್ನು ಪಡೆದ, ಮತ್ತು ಸರಿಯಾಗಿ ಸಂಸ್ಕಾರ ಪಡೆಯದ

ನನ್ನ ಪಿತೃದೇವತೆಗಳೇ ತಾವೆಲ್ಲರೂ ಶಾಶ್ವತವಾದ ಉತ್ತಮಗತಿಯನ್ನು ಹೊಂದಿರಿ. ಯಾವ ಪಿತೃದೇವತೆಗಳು ಮಹಾಲಯಶ್ರಾದ್ಧಕಾಲದಲ್ಲಿ ಯಮಲೋಕದಿಂದ ಭೂಲೋಕಕ್ಕೆ ಆಗಮಿಸಿರುತ್ತಾರೋ ಆ ಎಲ್ಲಾ ಪಿತೃದೇವತೆಗಳು, ಈ ಬೆಳಗುವ ಪಂಜಿನ ಬೆಳಕಿನ ಮೂಲಕ ತಮ್ಮ ದಾರಿಯನ್ನು ಕಾಣುತ್ತಾ ತಮ್ಮ ಲೋಕವನ್ನು ಸೇರಲಿ.

* ಮಹಾಲಯ ಅಮಾವಾಸ್ಯೆಯ ಪರ್ವಕಾಲಕ್ಕಾಗಿ ಆಗಮಿಸಿದ ಪಿತೃದೇವತೆಗಳು ನಮಗೆಲ್ಲರಿಗೂ ಆಶೀರ್ವಾದವನ್ನು ಮಾಡಿ, ತಮ್ಮ ಲೋಕಕ್ಕೆ ತೆರಳುತ್ತಾರೆಂದು ಅನುಸಂಧಾನವನ್ನು ಮಾಡಬೇಕು.
* ಪುರುಷರಾದವರು ಹೀಗೆ ಪಿತೃದೇವತೆಗಳಿಗೆ ದೀವಟಿಗೆಗಳನ್ನು ಹಿಡಿಯುವ ಮೂಲಕ ಮಾರ್ಗವನ್ನು ತೋರದಿದ್ದರೆ ಅವರು ಬೇಸರ ಮಾಡಿಕೊಂಡು ತೆರಳುತ್ತಾರೆ. ಪಿತೃಗಳ ಅನುಗ್ರಹಕ್ಕೆ ಪಾತ್ರರಾಗಲು ಸಾಧ್ಯವಿಲ್ಲ ಎಂಬುದನ್ನು ಅರಿತುಕೊಳ್ಳಬೇಕು.

## ನರಕಚತುರ್ದಶಿಯ ಸಮರ್ಪಣೆ

* ಹೀಗೆ ಬೆಳಿಗ್ಗೆ ಅರುಣೋದಯದ ಕಾಲದಿಂದ ರಾತ್ರಿಯ ತನಕ ಅತ್ಯಂತ ಶ್ರದ್ಧೆಯಿಂದ ನರಕಚತುರ್ದಶಿಯ ಹಬ್ಬವನ್ನು ಆಚರಣೆ ಮಾಡಬೇಕು. ಶ್ರೀಕೃಷ್ಣಜನ್ಮಾಷ್ಟಮಿಯಂತೆ ನರಕಚತುರ್ದಶಿಯೂ ಕೂಡ ಶ್ರೀಕೃಷ್ಣನ ಹಬ್ಬವೆಂದು ತಿಳಿದುಕೊಳ್ಳಬೇಕು. ಶ್ರೀಕೃಷ್ಣನನ್ನೇ ಸ್ಮರಣೆ ಮಾಡುತ್ತಾ ಆಚರಿಸಿದ ಎಲ್ಲಾ ಸತ್ಕರ್ಮಗಳನ್ನು ಭಾರತೀರಮಣ ಮುಖ್ಯಪ್ರಾಣನ ಹೃದಯಗುಹಾವಾಸಿಯಾದ ರುಕ್ಮಿಣೀ ಸತ್ಯಭಾಮಾ ಸಹಿತನಾದ ಶ್ರೀಕೃಷ್ಣನ ಪಾದಕಮಲಗಳಲ್ಲಿ ಭಕ್ತಿಪೂರ್ವಕವಾಗಿ ಸಮರ್ಪಣೆ ಮಾಡಬೇಕು. ಶ್ರೀಕೃಷ್ಣನ ಅನುಗ್ರಹವನ್ನು ನಿರಂತರ ಅಪೇಕ್ಷಿಸುತ್ತಾ ಮಲಗಿಕೊಳ್ಳಬೇಕು.

ಇಲ್ಲಿಗೆ ನರಕಚತುರ್ದಶಿಹಬ್ಬದ ವಿಚಾರವು ಸಮಾಪ್ತವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

ದೀಪಾವಳಿ -೧ ನರಕಚತುರ್ದಶಿ

ಬ್ರಾಹ್ಮೀಮುಹೂರ್ತದಲ್ಲಿ ಮನೆಯಲ್ಲಿ ಒಬ್ಬರು ಸ್ನಾನವನ್ನು ಮಾಡಿ, ಈ ಕೆಳಗಿನ ಕ್ರಮದಂತೆ ಶ್ರೀಕೃಷ್ಣಪರಮಾತ್ಮನಿಗೆ ಅಭ್ಯಂಜನ ಸ್ನಾನಸಮರ್ಪಣ ಪೂಜೆಯನ್ನು ಮಾಡುವುದು ಅತ್ಯಂತ ಶ್ರೇಷ್ಠ. ಸಾಧ್ಯವಾಗದಿದ್ದರೆ, ಕಟಿಸ್ನಾನವನ್ನು ಮಾಡಿ, ಭಗವಂತನ ಎದುರು ಬಿಸಿನೀರು, ಸುಗಂಧಭರಿತವಾದ ತೈಲಗಳು, ಸೀಗೆಪುಡಿ ಇವುಗಳನ್ನಿಟ್ಟು ಪ್ರಾರ್ಥನೆ ಮಾಡಿ ಸಮರ್ಪಿಸಬೇಕು.

॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾಯ ನಮಃ ॥

ಶ್ರೀಗುರುಭ್ಯೋ ನಮಃ । ಶ್ರೀ ಪರಮಗುರುಭ್ಯೋ ನಮಃ ॥

ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥

ಸರ್ವದಾ ಸರ್ವಕಾರ್ಯೇಷು ನಾಸ್ತಿ ತೇಷಾಮಮಂಗಲಮ್ ।
ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನೋ ಹರಿಃ ॥

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ ।
ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ ॥

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ ॥

ನಮಸ್ತೇ ಪ್ರಾಣೇಶ ಪ್ರಣತವಿಭವಾಯಾವನಿಮಗಾಃ
ನಮಃ ಸ್ವಾಮಿನ್ ರಾಮಪ್ರಿಯತಮ ಹನೂಮನ್ ಗುರುಗುಣ ।

ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟಭಗವನ್

ನಮಃ ಶ್ರೀಮನ್ಮಧ್ವ ಪ್ರದಿಶ ಸುದೃಶಂ ನೋ ಜಯ ಜಯ ॥

ಮೃತ್ಯುಂಜಯ ನಮಸ್ತುಭ್ಯಂ ಮೃತ್ಯುಂ ಹರ ನಮಾಮ್ಯಹಮ್ ।
ಸರ್ವಮೃತ್ಯುವಿನಾಶಾಯ ಮೃತ್ಯುಂಜಯ ನಮೋ ನಮಃ ॥

ದುಷ್ಟಾನಾಂ ವಿಘ್ನಕರ್ತಾ ಸುಚರಿತ ಸುಜನಸ್ತೋಮವಿಘ್ನಾಪಹರ್ತಾ
ತಸ್ಮಾದ್ ವಿಘ್ನಾಧಿಪೋಽಹಂ ಮತ ಇತಿ ಸುಧಿಯಾಂ ಸ್ಪಷ್ಟಮಾಜ್ಞಾಪನಾಯ ।
ಪೌಲಸ್ತ್ಯೇಚ್ಛಾಂತರಾಯಃ ಸುರಮುನಿನಿಕರಾಭೀಷ್ಟಸಂಪ್ರಾಪ್ತ್ಯುಪಾಯಃ
ಶ್ರೇಯೋ ವಿಘ್ನಾಧಿರಾಜಃ ಪ್ರದಿಶತು ಸತತಂ ಭೂರಿಗೌರೀತನೂಜಃ ॥

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ।
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ ॥

## ಆಚಮನಮ್

ಕೇಶವಾಯ ಸ್ವಾಹಾ । ನಾರಾಯಣಾಯ ಸ್ವಾಹಾ । ಮಾಧವಾಯ ಸ್ವಾಹಾ । ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ । ತ್ರಿವಿಕ್ರಮಾಯ ನಮಃ । ವಾಮನಾಯ ನಮಃ । ಶ್ರೀಧರಾಯ ನಮಃ । ಹೃಷೀಕೇಶಾಯ ನಮಃ । ಪದ್ಮನಾಭಾಯ ನಮಃ । ದಾಮೋದರಾಯ ನಮಃ । ಸಂಕರ್ಷಣಾಯ ನಮಃ । ವಾಸುದೇವಾಯ ನಮಃ । ಪ್ರದ್ಯುಮ್ನಾಯ ನಮಃ । ಅನಿರುದ್ಧಾಯ ನಮಃ । ಪುರುಷೋತ್ತಮಾಯ ನಮಃ । ಅಧೋಕ್ಷಜಾಯ ನಮಃ । ನಾರಸಿಂಹಾಯ ನಮಃ । ಅಚ್ಯುತಾಯ ನಮಃ । ಜನಾರ್ದನಾಯ ನಮಃ । ಉಪೇಂದ್ರಾಯ ನಮಃ । ಹರಯೇ ನಮಃ । ಶ್ರೀ ಕೃಷ್ಣಾಯ ನಮಃ ।

(ಆಚಮನವನ್ನು ಎರಡು ಬಾರಿ ಮಾಡಬೇಕು)

## ಪ್ರಾಣಾಯಾಮ

ಓಂ ಪ್ರಣವಸ್ಯ ಪರಬ್ರಹ್ಮಋಷಿಃ ಪರಮಾತ್ಮಾ ದೇವತಾ ದೈವೀ ಗಾಯತ್ರೀ ಛಂದಃ ಪ್ರಾಣಾಯಾಮೇ ವಿನಿಯೋಗಃ ।

ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಂ ಸತ್ಯಂ । ಓಂ ತತ್ಸವಿತುರ್ವರೇಣ್ಯಮ್ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಓಮಾಪೋಜ್ಯೋಽತಿ ರಸೋಽಮೃತಂ ಬ್ರಹ್ಮ ಭೂರ್ಭುವಸ್ಸ್ವರೋಮ್ ।

## ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲೀವಾಹನಶಕೇ ಶಾಲೀವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ದಕ್ಷಿಣಾಯನೇ ಶರದ್‌ಋತೌ ಆಶ್ವೀನಮಾಸೇ ಕೃಷ್ಣಪಕ್ಷೇ ಚತುರ್ದಶ್ಯಾಂ ಶುಭಪುಣ್ಯತಿಥೌ .... ವಾಸರಯುಕ್ತಾಯಾಂ ಶುಭನಕ್ಷತ್ರ..... ಶುಭಯೋಗ.... ಶುಭಕರಣ..... ಏವಂಗುಣವಿಶೇಷಣವಿಶಿಷ್ಟಾಯಾಂ ಚಂದ್ರೋದಯಕಾಲೇ ನರಕಾಂತಕ ಶ್ರೀಗೋಪಾಲಕೃಷ್ಣಪ್ರೇರಣಯಾ, ಶ್ರೀಗೋಪಾಲಕೃಷ್ಣಪ್ರೀತ್ಯರ್ಥಂ, ಸಶ್ರೀಕಾಯ ಸಪರಿವಾರಾಯ ಶ್ರೀಗೋಪಾಲಕೃಷ್ಣಾಯ ಸುಗಂಧಿತೈಲಾಭ್ಯಂಜನ ಸ್ನಾನ ಸಮರ್ಪಣಮ್ ಕರಿಷ್ಯೇ. ತದಂಗತ್ವೇನ ಪೂಜಾಂ ಚ ಕರಿಷ್ಯೇ.

## ತೈಲಾಭ್ಯಂಜನ ಮಂತ್ರ

ಚಂದ್ರೋಯದಕಾಲೇ ನರಕಾಂತಕಶ್ರೀಗೋಪಾಲಕೃಷ್ಣ- ಪ್ರೇರಣಯಾ ಶ್ರೀಗೋಪಾಲಕೃಷ್ಣಪ್ರೀತ್ಯರ್ಥಂ ಸಶ್ರೀಕಾಯ ಸಪರಿವಾರಾಯ ಶ್ರೀಗೋಪಾಲಕೃಷ್ಣಾಯ ಸುಗಂಧಿತೈಲಾಭ್ಯಂಗಸ್ನಾನಸಮರ್ಪಣಪೂಜಾಂ ಕರಿಷ್ಯೇ ॥ (ಇತಿ ಸಂಕಲ್ಪ್ಯ, ಜಲೇ ಗಂಗಾಂ ತೈಲೇ ಲಕ್ಷ್ಮೀಂ ಧ್ಯಾತ್ವಾ ಉಭಯತ್ರಾಪಿ ಅಂತರ್ಯಾಮಿಣಂ ಗೋಪಾಲಕೃಷ್ಣಮಾವಾಹ್ಯ ಅರ್ಘ್ಯಪಾದ್ಯಾದಿಕಂ ಸಮರ್ಪ್ಯಣೀಯಮ್)

ಓಂ ಕನಿಕ್ರದಜ್ಜನುಷಂ ಪ್ರಬ್ರುವಾಣ ಇಯರ್ತಿ ವಾಚಮರಿತೇವ ನಾವಮ್ ।
ಸುಮಂಗಲಶ್ಚ ಶಕುನೇ ಭವಾಸಿ ಮಾ ತ್ವಾ ಕಾ ಚಿದಭಿಭಾ ವಿಶ್ವ್ಯಾ ವಿದತ್ ॥೧॥

ಮಾ ತ್ವಾ ಶ್ಯೇನ ಉದ್ವಧೀನ್ಮಾ ಸುಪರ್ಣೋ ಮಾತ್ವಾ ವಿದದಿಷುಮಾನ್, ವೀರೋ ಅಸ್ತಾ । ಪಿತ್ರ್ಯಾಮನು ಪ್ರದಿಶಂ ಕನಿಕ್ರದತ್ಸುಮಂಗಲೋ ಭದ್ರವಾದೀ ವದೇಹ ॥೨॥

ಅವಕ್ರಂದ ದಕ್ಷಿಣತೋ ಗೃಹಾಣಾಂ ಸುಮಂಗಲೋ ಭದ್ರವಾದೀ ಶಕುಂತೇ।
ಮಾ ನಃ ಸ್ತೇನ ಈಶತ ಮಾಘಶಂಸೋಬೃಹದ್ವದೇಮ ವಿದಥೇ ಸುವೀರಾಃ ॥೩॥

ಓಂ ಪ್ರದಕ್ಷಿಣಿದಭಿ ಗೃಣಂತಿ ಕಾರವೋ ವಯೋ ವದಂತ ಋತುಥಾ ಶಕುಂತಯಃ । ಉಭೇ ವಾಚೌ ವದತಿ ಸಾಮಗಾ ಇವ ಗಾಯತ್ರಂ ಚ ತ್ರೈಷ್ಟುಭಂ ಚಾನು ರಾಜತಿ ॥೧॥

ಉದ್ಗಾತೇವ ಶಕುನೇ ಸಾಮ ಗಾಯಸಿ ಬ್ರಹ್ಮಪುತ್ರ ಇವ ಸವನೇಷು ಶಂಸಿ ।
ವೃಷೇವ ವಾಜೀ ಶಿಶುಮತೀರಪೀತ್ಯಾ ಸರ್ವತೋ ನಃ ಶಕುನೇ ಭದ್ರಮಾ ವದ ವಿಶ್ವತೋ ನಃ ಶಕುನೇ ಪುಣ್ಯಮಾ ವದ ॥೨॥

ಆವದಂಸ್ತ್ವಂ ಶಕುನೇ ಭದ್ರಮಾ ವದ ತೂಷ್ಣೀಮಾಸೀನಃ ಸುಮತಿಂ ಚಿಕಿದ್ಧಿ ನಃ । ಯದುತ್ಪತನ್ವದಸಿ ಕರ್ಕರಿರ್ಯಥಾ ಬೃಹದ್ವದೇಮ ವಿದಥೇ ಸುವೀರಾಃ ॥೩॥

ಓಂ ಭದ್ರಂ ವದ ದಕ್ಷಿಣತೋ ಭದ್ರಮುತ್ತರತೋ ವದ । ಭದ್ರಂ ಪುರಸ್ತಾನ್ನೋ ವದ ಭದ್ರಂ ಪ್ರಾತ್ ಕಪಿಂಜಲ ॥೧॥

ಭದ್ರಂ ವದ ಪುತ್ರೈರ್ಭದ್ರಂ ವದ ಗೃಹೇಷು ಚ । ಭದ್ರಮಸ್ಮಾಕಂ ನೋ ವದ ಭದ್ರಂ ನೋ ಅಭಯಂ ವದ ॥೨॥

ಭದ್ರಮಧಸ್ತಾನ್ನೋ ವದ ಭದ್ರಮುಪರಿಷ್ಟಾನ್ನೋ ವದ । ಭದ್ರಂಭದ್ರಂ ನ ಆ ವದ ಭದ್ರಂ ನಃ ಸರ್ವತೋ ವದ ॥೩॥

ಅಸಪತ್ನಃ ಪುರಸ್ತಾನ್ನಃ ಶಿವಂ ದಕ್ಷಿಣತಸ್ಕೃಧಿ । ಅಭಯಂ ಸತತಂ ಪಶ್ಚಾದ್ಭದ್ರಮುತ್ತರತೋ ಗೃಹೇ ॥೪॥

ಯೌವನಾನಿ ಮಹಯಸಿ ಜಿಗ್ಯುಷಾಮಿವ ದುಂದುಭಿಃ । ಶಕುಂತಕ ಪ್ರದಕ್ಷಿಣಂ ಶತಪತ್ರಾಭಿ ನೋ ವದ ॥೫॥

ಆವದಂಸ್ತ್ವಂ ಶಕುನೇ ಭದ್ರಮಾ ವದ ತೂಷ್ಣೀಮಾಸೀನಃ ಸುಮತಿಂ ಚಿಕಿದ್ಧಿ ನಃ । ಯದುತ್ಪತನ್ ವದಸಿ ಕರ್ಕರಿರ್ಯಥಾ ಬೃಹದ್ವದೇಮ ವಿದಥೇ ಸುವೀರಾಃ ॥೬॥

ಸ್ವಸ್ತ್ಯಾತ್ರೇಯಋಷಿಃ । ಆದ್ಯಾನಾಂ ತ್ರಯಾಣಂ ತ್ರಿಷ್ಟುಪ್‌ಛಂದಃ । ತತೋಽನುಷ್ಟುಪ್‌ಛಂದಃ । ವಿಶ್ವೇದೇವಾಃ ದೇವತಾಃ ॥

ಓಂ ಸ್ವಸ್ತಿ ನೋ ಮಿಮೀತಾಮಶ್ವಿನಾ ಭಗಃ ಸ್ವಸ್ತಿ ದೇವ್ಯದಿತಿರನರ್ವಣಃ । ಸ್ವಸ್ತಿ ಪೂಷಾ ಅಸುರೋ ದಧಾತು ನಃ ಸ್ವಸ್ತಿ ದ್ಯಾವಾಪೃಥಿವೀ ಸುಚೇತುನಾ ॥೧॥

ಸ್ವಸ್ತಯೇ ವಾಯುಮುಪ ಬ್ರವಾಮಹೈ ಸೋಮಂ ಸ್ವಸ್ತಿ ಭುವನಸ್ಯ ಯಸ್ಪತಿಃ । ಬೃಹಸ್ಪತಿಂ ಸರ್ವಗಣಂ ಸ್ವಸ್ತಯೇ ಸ್ವಸ್ತಯ ಆದಿತ್ಯಾಸೋ ಭವಂತು ನಃ ॥೨॥

ದೀಪಾವಳಿ -೧ ನರಕಚತುರ್ದಶಿ

ವಿಶ್ವೇ ದೇವಾ ನೋ ಅದ್ಯಾ ಸ್ವಸ್ತಯೇ ವೈಶ್ವಾನರೋ ವಸುರಗ್ನಿಃ ಸ್ವಸ್ತಯೇ । ದೇವಾ ಅವಂತ್ವೃಭವಃ ಸ್ವಸ್ತಯೇ ಸ್ವಸ್ತಿ ನೋ ರುದ್ರಃ ಪಾತ್ವಂಹಸಃ ॥೩॥

ಸ್ವಸ್ತಿ ಮಿತ್ರಾವರುಣಾ ಸ್ವಸ್ತಿ ಪಥ್ಯೇ ರೇವತಿ । ಸ್ವಸ್ತಿ ನ ಇಂದ್ರಾಶ್ಚಾಗ್ನಿಶ್ಚ ಸ್ವಸ್ತಿ ನೋ ಅಧಿತೇ ಕೃಧಿ ॥೪॥

ಸ್ವಸ್ತಿ ಪಂಥಾಮನು ಚರೇಮ ಸೂರ್ಯಾಚಂದ್ರಮಸಾವಿವ । ಪುನರ್ದದತಾಘ್ನತಾ ಜಾನತಾ ಸಂ ಗಮೇಮಹಿ ॥೫॥

ಸ್ವಸ್ತ್ಯಯನಂ ತಾರ್ಕ್ಷ್ಯಮರಿಷ್ಟನೇಮಿಂ ಮಹದ್ಭೂತಂ ವಾಯಸಂ ದೇವತಾನಾಮ್ । ಅಸುರಘ್ನಮಿಂದ್ರಸಖಿಂ ಸಮತ್ಸು ಬೃಹದ್ಯಶೋ ನಾವಮಿವಾ ರುಹೇಮ ॥೬॥

ಅಂಹೋಮುಚಮಾಂಗಿರಸಂ ಗಯಂ ಚ ಸ್ವಸ್ತ್ಯಾತ್ರೇಯಂ ಮನಸಾ ಚ ತಾರ್ಕ್ಷ್ಯಮ್ । ಪ್ರಯತಪಾಣಿಃ ಶರಣಂ ಪ್ರ ಪದ್ಯೇ ಸ್ವಸ್ತಿ ಸಂಬಾಧೇಷ್ವಭಯಂ ನೋ ಅಸ್ತು ॥೭॥

ಘಂಟಾನಾದ, ಶಂಖನಾದ, ಭೇರಿನಾದಗಳ ಮೂಲಕ ಪರಿವಾರಸಹಿತನಾದ ಶ್ರೀಕೃಷ್ಣಪರಮಾತ್ಮನಿಗೆ ತೈಲಾಭ್ಯಂಜನಪೂರ್ವಕವಾದ ಸ್ನಾನವನ್ನು ಮಾಡಿಸಬೇಕು. ಅನಂತರ ಪೀತಾಂಬರಗಳನ್ನು ಉಡಿಸಿ ಅನೇಕ ಅಲಂಕಾರಗಳನ್ನು ಮಾಡಿ, ಭಗವಂತನಿಗೆ ಕೇಶವಾದಿನಾಮಗಳಿಂದ ಪುಷ್ಪ ಪೂಜೆಯನ್ನು ಮಾಡಬೇಕು. ಹಣ್ಣನ್ನು ಇಟ್ಟು ನೈವೇದ್ಯ ಮಾಡಿ, ಶ್ರೀಕೃಷ್ಣಾಷ್ಟೋತ್ತರ ಸ್ತೋತ್ರವನ್ನು ಹೇಳುತ್ತಾ ಮಹಾಮಂಗಳಾರತಿಯನ್ನು ಮಾಡಬೇಕು. ಅನಂತರ ಅವನ ಅನುಗ್ರಹವನ್ನು ಪ್ರಾರ್ಥನೆ ಮಾಡಬೇಕು.

(ಯಸ್ಯ ಸ್ಮೃತ್ಯೇತ್ಯಾದ್ಯುಕ್ತ್ವಾ) ಅನೇನ ತೈಲಾಭ್ಯಂಗಸ್ನಾನಸಮರ್ಪಣೇನ ಮಧ್ವಾಂತರ್ಗತಃ ನರಕಾಂತಕಗೋಪಾಲಕೃಷ್ಣಾತ್ಮಕಃ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಮ್ ॥ ಶ್ರೀ ಕೃಷ್ಣಾರ್ಪಣಮಸ್ತು ॥ ಅಚ್ಯುತಾಯ ನಮಃ । ಅನಂತಾಯ ನಮಃ । ಗೋವಿಂದಾಯ ನಮಃ ॥

ಪೂಜೆಮುಗಿದ ಮೇಲೆ ಅಷ್ಟಚಿರಂಜೀವಿಗಳನ್ನು ನಮಿಸಿ, ಅವರಿಗೆ ಅಭ್ಯಂಗಸ್ನಾನವನ್ನು ಮಾಡಿಸಬೇಕು.

ಅಶ್ವತ್ಥಾಮಾ ಬಲಿರ್ವ್ಯಾಸೋ ಹನೂಮಾಂಶ್ಚ ವಿಭೀಷಣಃ ।
ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ ।
ಸಪ್ತೈತಾನ್ ಸಂಸ್ಮರೇನ್ನಿತ್ಯಂ ಮಾರ್ಕಂಡೇಯಮಥಾಷ್ಟಮಮ್ ।
ಜೀವೇದ್ವರ್ಷಶತಂ ಸಾಗ್ರಮಪಮೃತ್ಯುವಿವರ್ಜಿತಃ ॥
ನಮಶ್ಚಿರಜೀವಿಭ್ಯಃ । ಆಯುರಾರೋಗ್ಯೈಶ್ವರ್ಯಾಭಿವೃದ್ಧಿಂ ಕುರ್ವಂತು ॥

ಸುವಾಸಿನಿಯ ಹಸ್ತದಿಂದ ಗರಿಕೆಯ ಮೂಲಕ ಎಣ್ಣೆಯನ್ನು ಹಚ್ಚಿಸಿಕೊಳ್ಳಬೇಕು. ಮೊದಲು ಏಳು ಚಿರಂಜೀವಿಗಳಿಗೆ ಯಾರೂ ತುಳಿಯದ ಜಾಗದಲ್ಲಿ ಎಣ್ಣೆಯನ್ನು ಹಚ್ಚಿಸಿ, ಅನಂತರ ಮೊದಲು ಭೂಮಿ, ಅನಂತರ ತನ್ನ ತಲೆ ಈ ಕ್ರಮದಲ್ಲಿ ಮೂರುಬಾರಿ ತೈಲವನ್ನು ಹಚ್ಚಿಸಿಕೊಳ್ಳಬೇಕು. ಅನಂತರ ದೇಹದ ಎಲ್ಲ ಅಂಗಗಳಿಗೆ ತೈಲಲೇಪವನ್ನು ಮಾಡಿಕೊಂಡು ಸ್ನಾನ ಮಾಡಬೇಕು.

ಸ್ನಾನ ಮಧ್ಯದಲ್ಲಿ ಉತ್ತರಣೆ ಕಡ್ಡಿಯಿಂದ ಈ ಮಂತ್ರವನ್ನು ಹೇಳಿ ನಿವಾಳಿಸಬೇಕು -

ಸೀತಾಲೋಷ್ಟಸಮಾಯುಕ್ತ ಸಂಕಟಕದಲಾನ್ವಿತ ।
ಹರ ಪಾಪಮಪಾಮಾರ್ಗ ಭ್ರಾಮ್ಯಮಾಣಃ ಪುನಃಪುನಃ ॥

ಇಲ್ಲಿಗೆ ತೈಲಾಭ್ಯಂಜನಸ್ನಾನವಿಧಾನವು ಸಮಾಪ್ತವಾಯಿತು.

* * * * *

# ನರಕಚತುರ್ದಶಿ ಕಥೆ

ಪರಮಾತ್ಮನು ಹಿರಣ್ಯಾಕ್ಷನನ್ನು ಸಂಹಾರ ಮಾಡಲು ವರಾಹಾವತಾರವನ್ನು ಮಾಡಿದನು. ಆಗ ಭೂದೇವಿಯಲ್ಲಿ ವರಾಹರೂಪಿಪರಮಾತ್ಮನಿಂದ ನರಕಾಸುರನು ಹುಟ್ಟಿದನು. ಭೂದೇವಿ ಎಂದರೆ ಪಂಚಭೂತಾಭಿಮಾನಿಗಳಲ್ಲಿ ಕೊನೆಯವಳಾದ ಭೂದೇವಿ ಎಂದರ್ಥ. ಮಹಾಲಕ್ಷ್ಮಿಯ ಸ್ವರೂಪಳಲ್ಲ. ಇವಳಲ್ಲಿ ಮೂಲಪ್ರಕೃತಿಯಾದ ಮಹಾಲಕ್ಷ್ಮಿಯ ಭೂರೂಪದ ಆವೇಶವಿತ್ತು. ಇದನ್ನು ತಾತ್ಪರ್ಯನಿರ್ಣಯದಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ -

ತದಾ ಭೂಮಿಃ ಪಂಚಭೂತಾವರಾ ಯಾ
ಯಸ್ಯಾಂ ಜಜ್ಞೇ ನರಕಃ ಶ್ರೀವರಾಹಾತ್ ।
ಮೂಲಪ್ರಕೃತ್ಯೈವ ಭೂಮ್ಯಾ ನಿಶಾಂತ-
ಮಾವಿಷ್ಟಾಯಾಂ ಸಾಽಽಗಮತ್ ಕೃಷ್ಣಪಾದೌ ॥

ಭೂದೇವಿಯ ಮಗನಾದ್ದರಿಂದಲೇ ನರಕಾಸುರನಿಗೆ ಭೌಮಾಸುರ ಎಂದು ಮತ್ತೊಂದು ಹೆಸರು. ಭೂದೇವಿಯು ವಿಷ್ಣುವಿನ ಬಳಿ ಪ್ರಾರ್ಥನೆ ಮಾಡಿ, ಈ ನರಕಾಸುರನಿಗೆ ವೈಷ್ಣವಾಸ್ತ್ರ ಕೊಡಿಸಿದ್ದಳು. ಇಂಥ ವೈಷ್ಣವಾಸ್ತ್ರವು ತನ್ನ ಬಳಿ ಇದೆ ಎಂಬ ಅಹಂಕಾರವು ಈ ನರಕಾಸುರನನ್ನು ಆವರಿಸಿತ್ತು. ಆದ್ದರಿಂದ ಮಹಾವಿಷ್ಣುವು ಕೃಷ್ಣನಾಗಿ ಅವತರಿಸಿ ಇವನನ್ನು ಸಂಹಾರ ಮಾಡಬೇಕಾಯಿತು. ಮುಂದೆ ಈ ವೈಷ್ಣವಾಸ್ತ್ರವು ನರಕಾಸುರನ ಮಗನಾದ ಭಗದತ್ತನನ್ನು ಸೇರುತ್ತದೆ. ಭಗದತ್ತನು ಕುರುಕ್ಷೇತ್ರದಲ್ಲಿ ಅರ್ಜುನನ ಮೇಲೆ ಈ ವೈಷ್ಣವಾಸ್ತ್ರವನ್ನು ಪ್ರಯೋಗಿಸಿದಾಗ ಶ್ರೀಕೃಷ್ಣನು ನಡುವೆ ಬಂದು ತಡೆದು ಅದನ್ನು ವೈಜಯಂತೀ ಮಾಲೆಯನ್ನಾಗಿ ಧಾರಣೆ ಮಾಡುತ್ತಾನೆ. ಈ ನರಕಾಸುರನಿಗೆ ಬ್ರಹ್ಮದೇವರು ಅವಧ್ಯತ್ವವರವನ್ನು ನೀಡಿದ್ದರು. ಶಸ್ತ್ರಧಾರಿಯಾಗಿ ನಿಂತರೆ ಯಾರಿಂದಲೂ ಪರಾಜಿತನಾಗಲಾರೆ ಎಂಬ ವರವನ್ನು ನೀಡಿದ್ದರು. ಅವನ ಮಂತ್ರಿಗಳಿಗೂ ಕೂಡ ಅಜೇಯತ್ವವರವನ್ನು ನೀಡಿದ್ದರು. ಮತ್ತು ದುರ್ಗಮವಾದ

ದೀಪಾವಳಿ -೧ ನರಕಚತುರ್ದಶಿ

ಸಕಲ ಸಂಪದ್ಭರಿತವಾದ ಪ್ರಾಗ್-ಜ್ಯೋತಿಷ ಎಂಬ ಪಟ್ಟಣವನ್ನೂ ಕೂಡ ವರವನ್ನಾಗಿ ಬ್ರಹ್ಮದೇವರು ನೀಡಿದ್ದರು. ಅಭೇದ್ಯವಾದ ಗಿರಿದುರ್ಗ, ಅದರೊಳು ಜಲದುರ್ಗ, ಅದರೊಳಗೆ ಕ್ಷೌರಿಕನ ಕತ್ತಿಯಂತೆ ಅಲುಗಿನ ಅತ್ಯಂತ ತೀಕ್ಷ್ಣವಾದ ಮೂರಾಸುರನಿಂದ ನಿರ್ಮಿತವಾದ ಪಾಶದುರ್ಗವಿದೆ. ೬೦೦೦ ಪಾಶಗಳಿಂದ ಆ ದುರ್ಗವು ಆವರಿಸಿ ಅತ್ಯಂತ ಭಯಂಕರವಾಗಿದೆ. ಈ ಎಲ್ಲಾ ದುರ್ಗಗಳು ಶತ್ರುಗಳಿಗೆ ಅಭೇದ್ಯವೂ, ಯಾರಿಂದಲೂ ದಾಟಲು ಅಸಾಧ್ಯವೂ ಆಗಿರುತ್ತದೆಂದು ಅದೇ ಬ್ರಹ್ಮದೇವರು ನರಕಾಸುರನಿಗೆ ವರವನ್ನು ನೀಡಿದ್ದರು. ಪೀಠ, ಮುರ, ನಿಕುಂಬ, ಹಯಗ್ರೀವ ಮತ್ತು ಪಂಚಜನ ಎಂಬ ಐದು ಮಂದಿ ಮಂತ್ರಿಗಳು ನರಕಾಸುರನ ಬೆಂಬಲಕ್ಕಿದ್ದರು. ಇವರೇ ಲೋಕಪಾಲಕರಾಗಿದ್ದಾರೆಂದು ನರಕಾಸುರನು ತಿಳಿದುಬಿಟ್ಟಿದ್ದನು. ಅಷ್ಟೇ ಅಲ್ಲದೇ ತಾನೇ ಬ್ರಹ್ಮನಾಗಿದ್ದೇನೆಂದೂ ಕೂಡ ಎಲ್ಲರ ಬಳಿ ಹೇಳುತ್ತಿದ್ದನು. ಇಂಥ ನರಕಾಸುರನು ದೇವಯಾನಮಾರ್ಗವನ್ನೇ ಅಡ್ಡಗಟ್ಟುತ್ತಿದ್ದನು. ಸಾಧಕರಿಗೆ ದೇವಯಾನ ಮಾರ್ಗದಲ್ಲಿ ತೆರಳದಂತೆ ಪ್ರತಿಬಂಧಕನಾಗಿದ್ದನು. ವರುಣನ ಶ್ವೇತಛತ್ರವನ್ನು, ಇಂದ್ರನ ಮಣಿಶಿಖರವನ್ನು ಅಪಹರಿಸಿದ್ದನು, ಐರಾವತವನ್ನೂ ಸಹ ಅಪಹರಿಸಲು ಸಂಚು ಹಾಕುತ್ತಿದ್ದನು. ಅಮೃತವನ್ನು ಸುರಿಸುವ ದೇವಮಾತೆಯಾದ ಅದಿತಿಯ ಕುಂಡಲಗಳನ್ನು ಅಪಹರಿಸಿದ್ದನು. ಪ್ರತಿಯೊಂದು ದೇವತೆಗಳಿಗೂ ನಿರಂತರ ಅವಮಾನ ಮಾಡುತ್ತಿದ್ದನು.

ಇಂಥ ಮಹಾಬಲಿಷ್ಠನಾದ ನರಕಾಸುರನು ಭೂಲೋಕದಲ್ಲಿರುವ ಎಲ್ಲ ಪ್ರಸಿದ್ಧರಾಜರನ್ನು ಯುದ್ಧದಲ್ಲಿ ಗೆದ್ದಿದ್ದನು. ಆ ಎಲ್ಲಾ ರಾಜರ ಪುತ್ರಿಯರನ್ನು ಅಪಹಾರ ಮಾಡಿಕೊಂಡು ಬಂದಿದ್ದನು. ಹದಿನಾರು ಸಾವಿರದ ನೂರು ಮಂದಿ ರಾಜಕುಮಾರಿಯರನ್ನು ಬಂಧನದಲ್ಲಿ ಇಟ್ಟಿದ್ದನು. ಪ್ರತಿಯೊಬ್ಬರೂ ರೂಪಶೀಲವಂತರಾಗಿದ್ದರು, ಶ್ರೇಷ್ಠರಾಗಿದ್ದರು, ಪ್ರತಿಯೊಬ್ಬರೂ ಅಕ್ಷತಯೋನಿಯರಾಗಿದ್ದರು. ನಿರಂತರ ವ್ರತನಿಷ್ಠರಾಗಿದ್ದರು. ಇವರಲ್ಲಿ ಕೆಲವರು ದೇವಕನ್ಯೆಯರು ಕೆಲವರು ದೇವಗಂಧರ್ವಕನ್ಯೆಯರು ಆಗಿದ್ದರು. ತ್ವಷ್ಟ್ರ ಪ್ರಜಾಪತಿಯ

ಮಗಳಾದ ಕಶೇರು ಎಂಬುವಳು ಪ್ರಧಾನಳಾಗಿದ್ದಳು. ಮೊದಲು ಇವರೆಲ್ಲರೂ ಅಗ್ನಿಪುತ್ರರಾಗಿದ್ದರು. ಸ್ತ್ರೀತ್ವ ಪ್ರಾಪ್ತಿಗಾಗಿ ಉತ್ತಮವಾದ ತಪಸ್ಸನ್ನು ಆಚರಿಸಿದ್ದರು.

ನರಕಾಸುರನ ಬಂಧನದಲ್ಲಿ ಸಿಲುಕಿದ ಈ ಎಲ್ಲ ಸ್ತ್ರೀಯರು ನಿರಂತರ ದುಃಖಿತರಾಗಿದ್ದರು. ''ತಮಗೆ ಮತ್ತೊಂದು ಜೀವನವೇ ಇಲ್ಲ. ನರಕಾಸುರನಿಂದಲೇ ತಮಗೆ ಮರಣವೆಂದು ಭಾವಿಸಿದ್ದರು. ಒಂದುವೇಳೆ ಬಂಧನದಿಂದ ಬಿಡುಗಡೆ ಹೊಂದಿದರೂ ಕೂಡ ಯಾರೊಬ್ಬರೂ ತಮ್ಮನ್ನು ಸ್ವೀಕಾರ ಮಾಡುವುದಿಲ್ಲ. ಪ್ರತಿಯೊಬ್ಬರೂ ಸಂಶಯದೃಷ್ಟಿಯಿಂದಲೇ ಕಾಣುತ್ತಾರೆ. ಆದ್ದರಿಂದ ತಮ್ಮ ಮುಂದಿನ ಜೀವನವೆಲ್ಲವೂ ಅಂಧಕಾರಮಯವಾಗಿದೆ'' ಎಂಬುದಾಗಿ ೧೬ ವರ್ಷವೂ ತುಂಬದ ಆ ಬಾಲೆಯರು ನಿಶ್ಚಯಿಸಿಬಿಟ್ಟಿದ್ದರು. ಹೀಗಿರುವಾಗ ಒಮ್ಮೆ ನಾರದರು ಆ ಕನ್ಯೆಯರ ಬಳಿಗೆ ಆಗಮಿಸಿದರು. ಪ್ರತಿಯೊಬ್ಬರಿಗೂ ಸಾಂತ್ವನದ ಮಾತುಗಳನ್ನು ಹೇಳಿದರು. 'ಶ್ರೀಕೃಷ್ಣನು ಆಗಮಿಸುತ್ತಾನೆ. ನರಕಾಸುರನನ್ನು ಕೊಲ್ಲುತ್ತಾನೆ. ನಿಮ್ಮೆಲ್ಲರನ್ನು ಬಂಧನದಿಂದ ಬಿಡಿಸುತ್ತಾನೆ. ಅಷ್ಟೇ ಅಲ್ಲದೇ ನೀವೆಲ್ಲರೂ ಶ್ರೀಕೃಷ್ಣನ ಪತ್ನಿಯರಾಗಿ ಶ್ರೇಷ್ಠವಾದ ಜೀವನವನ್ನು ನಡೆಸಿ ಕೀರ್ತಿಶಾಲಿಗಳಾಗುತ್ತೀರಿ. ಅದಕ್ಕಾಗಿ ಲಕ್ಷ್ಮೀವ್ರತವನ್ನು ಆಚರಣೆ ಮಾಡಿರಿ' ಎಂಬುದಾಗಿ ನಾರದರು ಆ ಎಲ್ಲಾ ಕನ್ಯೆಯರಿಗೆ ಹೇಳಿದರು. ಅಂದಿನಿಂದ ಪ್ರತಿಯೊಬ್ಬ ಸ್ತ್ರೀಯೂ ಏಕವೇಣೀಧಾರಿಗಳಾದರು. ಕಷಾಯ-ವಸ್ತ್ರವನ್ನುಟ್ಟರು. ಸಂಪೂರ್ಣ ಇಂದ್ರಿಯನಿಗ್ರಹವುಳ್ಳವರಾದರು. ಲಕ್ಷ್ಮೀವ್ರತನಿಷ್ಠರಾದರು. ಶ್ರೀಕೃಷ್ಣನೇ ತಮಗೆ ಪತಿಯಾಗಿ ಒಲಿಯಬೇಕೆಂದು ಘೋರ ತಪಸ್ಸನ್ನು ಆಚರಣೆ ಮಾಡಿದರು. ನರಕಾಸುರನು ಒಡ್ಡುತ್ತಿದ್ದ ಎಲ್ಲ ಆಮಿಷಗಳನ್ನು ಧಿಕ್ಕರಿಸಿದರು. ಇಂಥ ಅವರ ತಪಸ್ಸಿಗೆ ಮೆಚ್ಚಿದ ವಾಯುದೇವರು 'ನಾರದರು ಹೇಳಿದ ಮಾತು ಸತ್ಯವಾಗುತ್ತದೆ. ಶ್ರೀಕೃಷ್ಣನು ತಮಗೆ ಪತಿಯಾಗಿ ದೊರಕುತ್ತಾನೆ' ಎಂದು ವರವನ್ನು ನೀಡಿದರು.

ವಾಯುದೇವರ ವರಪಡೆದ ಹದಿನಾರು ಸಾವಿರದ ನೂರುಮಂದಿ ರಾಜಕುಮಾರಿಯರ ಸಂತಸ ಹೇಳತೀರದು. ಶ್ರೀಕೃಷ್ಣನು ಎಂದು ಬರುತ್ತಾನೆ ? ಈ ನರಕಾಸುರನನ್ನು ಎಂದು ಕೊಲ್ಲುತ್ತಾನೆ ? ಎಂಬ ತವಕದಲ್ಲಿಯೇ ಕಾಲವನ್ನು

ಸಕಲ ಸಂಪದ್ಭರಿತವಾದ ಪ್ರಾಗ್-ಜ್ಯೋತಿಷ ಎಂಬ ಪಟ್ಟಣವನ್ನೂ ಕೂಡ ವರವನ್ನಾಗಿ ಬ್ರಹ್ಮದೇವರು ನೀಡಿದ್ದರು. ಅಭೇದ್ಯವಾದ ಗಿರಿದುರ್ಗ, ಅದರೊಳು ಜಲದುರ್ಗ, ಅದರೊಳಗೆ ಕ್ಷೌರಿಕನ ಕತ್ತಿಯಂತೆ ಅಲುಗಿನ ಅತ್ಯಂತ ತೀಕ್ಷ್ಣವಾದ ಮೂರಾಸುರನಿಂದ ನಿರ್ಮಿತವಾದ ಪಾಶದುರ್ಗವಿದೆ. ೬೦೦೦ ಪಾಶಗಳಿಂದ ಆ ದುರ್ಗವು ಆವರಿಸಿ ಅತ್ಯಂತ ಭಯಂಕರವಾಗಿದೆ. ಈ ಎಲ್ಲಾ ದುರ್ಗಗಳು ಶತ್ರುಗಳಿಗೆ ಅಭೇದ್ಯವೂ, ಯಾರಿಂದಲೂ ದಾಟಲು ಅಸಾಧ್ಯವೂ ಆಗಿರುತ್ತದೆಂದು ಅದೇ ಬ್ರಹ್ಮದೇವರು ನರಕಾಸುರನಿಗೆ ವರವನ್ನು ನೀಡಿದ್ದರು. ಪೀಠ, ಮುರ, ನಿಕುಂಬ, ಹಯಗ್ರೀವ ಮತ್ತು ಪಂಚಜನ ಎಂಬ ಐದು ಮಂದಿ ಮಂತ್ರಿಗಳು ನರಕಾಸುರನ ಬೆಂಬಲಕ್ಕಿದ್ದರು. ಇವರೇ ಲೋಕಪಾಲಕರಾಗಿದ್ದಾರೆಂದು ನರಕಾಸುರನು ತಿಳಿದುಬಿಟ್ಟಿದ್ದನು. ಅಷ್ಟೇ ಅಲ್ಲದೇ ತಾನೇ ಬ್ರಹ್ಮನಾಗಿದ್ದೇನೆಂದೂ ಕೂಡ ಎಲ್ಲರ ಬಳಿ ಹೇಳುತ್ತಿದ್ದನು. ಇಂಥ ನರಕಾಸುರನು ದೇವಯಾನಮಾರ್ಗವನ್ನೇ ಅಡ್ಡಗಟ್ಟುತ್ತಿದ್ದನು. ಸಾಧಕರಿಗೆ ದೇವಯಾನ ಮಾರ್ಗದಲ್ಲಿ ತೆರಳದಂತೆ ಪ್ರತಿಬಂಧಕನಾಗಿದ್ದನು. ವರುಣನ ಶ್ವೇತಛತ್ರವನ್ನು, ಇಂದ್ರನ ಮಣಿಶಿಖರವನ್ನು ಅಪಹರಿಸಿದ್ದನು, ಐರಾವತವನ್ನೂ ಸಹ ಅಪಹರಿಸಲು ಸಂಚು ಹಾಕುತ್ತಿದ್ದನು. ಅಮೃತವನ್ನು ಸುರಿಸುವ ದೇವಮಾತೆಯಾದ ಅದಿತಿಯ ಕುಂಡಲಗಳನ್ನು ಅಪಹರಿಸಿದ್ದನು. ಪ್ರತಿಯೊಂದು ದೇವತೆಗಳಿಗೂ ನಿರಂತರ ಅವಮಾನ ಮಾಡುತ್ತಿದ್ದನು.

ಇಂಥ ಮಹಾಬಲಿಷ್ಠನಾದ ನರಕಾಸುರನು ಭೂಲೋಕದಲ್ಲಿರುವ ಎಲ್ಲ ಪ್ರಸಿದ್ಧರಾಜರನ್ನು ಯುದ್ಧದಲ್ಲಿ ಗೆದ್ದಿದ್ದನು. ಆ ಎಲ್ಲಾ ರಾಜರ ಪುತ್ರಿಯರನ್ನು ಅಪಹಾರ ಮಾಡಿಕೊಂಡು ಬಂದಿದ್ದನು. ಹದಿನಾರು ಸಾವಿರದ ನೂರು ಮಂದಿ ರಾಜಕುಮಾರಿಯರನ್ನು ಬಂಧನದಲ್ಲಿ ಇಟ್ಟಿದ್ದನು. ಪ್ರತಿಯೊಬ್ಬರೂ ರೂಪಶೀಲವಂತರಾಗಿದ್ದರು, ಶ್ರೇಷ್ಠರಾಗಿದ್ದರು, ಪ್ರತಿಯೊಬ್ಬರೂ ಅಕ್ಷತಯೋನಿಯರಾಗಿದ್ದರು. ನಿರಂತರ ವ್ರತನಿಷ್ಠರಾಗಿದ್ದರು. ಇವರಲ್ಲಿ ಕೆಲವರು ದೇವಕನ್ಯೆಯರು ಕೆಲವರು ದೇವಗಂಧರ್ವಕನ್ಯೆಯರು ಆಗಿದ್ದರು. ತ್ವಷ್ಟ ಪ್ರಜಾಪತಿಯ

ಮಗಳಾದ ಕಶೇರು ಎಂಬುವಳು ಪ್ರಧಾನಳಾಗಿದ್ದಳು. ಮೊದಲು ಇವರೆಲ್ಲರೂ ಅಗ್ನಿಪುತ್ರರಾಗಿದ್ದರು. ಸ್ತ್ರೀತ್ವ ಪ್ರಾಪ್ತಿಗಾಗಿ ಉತ್ತಮವಾದ ತಪಸ್ಸನ್ನು ಆಚರಿಸಿದ್ದರು.

ನರಕಾಸುರನ ಬಂಧನದಲ್ಲಿ ಸಿಲುಕಿದ ಈ ಎಲ್ಲ ಸ್ತ್ರೀಯರು ನಿರಂತರ ದುಃಖಿತರಾಗಿದ್ದರು. ''ತಮಗೆ ಮತ್ತೊಂದು ಜೀವನವೇ ಇಲ್ಲ. ನರಕಾಸುರನಿಂದಲೇ ತಮಗೆ ಮರಣವೆಂದು ಭಾವಿಸಿದ್ದರು. ಒಂದುವೇಳೆ ಬಂಧನದಿಂದ ಬಿಡುಗಡೆ ಹೊಂದಿದರೂ ಕೂಡ ಯಾರೊಬ್ಬರೂ ತಮ್ಮನ್ನು ಸ್ವೀಕಾರ ಮಾಡುವುದಿಲ್ಲ. ಪ್ರತಿಯೊಬ್ಬರೂ ಸಂಶಯದೃಷ್ಟಿಯಿಂದಲೇ ಕಾಣುತ್ತಾರೆ. ಆದ್ದರಿಂದ ತಮ್ಮ ಮುಂದಿನ ಜೀವನವೆಲ್ಲವೂ ಅಂಧಕಾರಮಯವಾಗಿದೆ'' ಎಂಬುದಾಗಿ ೧೬ ವರ್ಷವೂ ತುಂಬದ ಆ ಬಾಲೆಯರು ನಿಶ್ಚಯಿಸಿಬಿಟ್ಟಿದ್ದರು. ಹೀಗಿರುವಾಗ ಒಮ್ಮೆ ನಾರದರು ಆ ಕನ್ಯೆಯರ ಬಳಿಗೆ ಆಗಮಿಸಿದರು. ಪ್ರತಿಯೊಬ್ಬರಿಗೂ ಸಾಂತ್ವನದ ಮಾತುಗಳನ್ನು ಹೇಳಿದರು. 'ಶ್ರೀಕೃಷ್ಣನು ಆಗಮಿಸುತ್ತಾನೆ. ನರಕಾಸುರನನ್ನು ಕೊಲ್ಲುತ್ತಾನೆ. ನಿಮ್ಮೆಲ್ಲರನ್ನು ಬಂಧನದಿಂದ ಬಿಡಿಸುತ್ತಾನೆ. ಅಷ್ಟೇ ಅಲ್ಲದೇ ನೀವೆಲ್ಲರೂ ಶ್ರೀಕೃಷ್ಣನ ಪತ್ನಿಯರಾಗಿ ಶ್ರೇಷ್ಠವಾದ ಜೀವನವನ್ನು ನೆಡೆಸಿ ಕೀರ್ತಿಶಾಲಿಗಳಾಗುತ್ತೀರಿ. ಅದಕ್ಕಾಗಿ ಲಕ್ಷ್ಮೀವ್ರತವನ್ನು ಆಚರಣೆ ಮಾಡಿರಿ' ಎಂಬುದಾಗಿ ನಾರದರು ಆ ಎಲ್ಲಾ ಕನ್ಯೆಯರಿಗೆ ಹೇಳಿದರು. ಅಂದಿನಿಂದ ಪ್ರತಿಯೊಬ್ಬ ಸ್ತ್ರೀಯೂ ಏಕವೇಣೀಧಾರಿಗಳಾದರು. ಕಷಾಯ-ವಸ್ತ್ರವನ್ನುಟ್ಟರು. ಸಂಪೂರ್ಣ ಇಂದ್ರಿಯನಿಗ್ರಹವುಳ್ಳವರಾದರು. ಲಕ್ಷ್ಮೀವ್ರತನಿಷ್ಠರಾದರು. ಶ್ರೀಕೃಷ್ಣನೇ ತಮಗೆ ಪತಿಯಾಗಿ ಒಲಿಯಬೇಕೆಂದು ಘೋರ ತಪಸ್ಸನ್ನು ಆಚರಣೆ ಮಾಡಿದರು. ನರಕಾಸುರನು ಒಡ್ಡುತ್ತಿದ್ದ ಎಲ್ಲ ಆಮಿಷಗಳನ್ನು ಧಿಕ್ಕರಿಸಿದರು. ಇಂಥ ಅವರ ತಪಸ್ಸಿಗೆ ಮೆಚ್ಚಿದ ವಾಯುದೇವರು 'ನಾರದರು ಹೇಳಿದ ಮಾತು ಸತ್ಯವಾಗುತ್ತದೆ. ಶ್ರೀಕೃಷ್ಣನು ತಮಗೆ ಪತಿಯಾಗಿ ದೊರಕುತ್ತಾನೆ' ಎಂದು ವರವನ್ನು ನೀಡಿದರು.

ವಾಯುದೇವರ ವರಪಡೆದ ಹದಿನಾರು ಸಾವಿರದ ನೂರುಮಂದಿ ರಾಜಕುಮಾರಿಯರ ಸಂತಸ ಹೇಳತೀರದು. ಶ್ರೀಕೃಷ್ಣನು ಎಂದು ಬರುತ್ತಾನೆ ? ಈ ನರಕಾಸುರನನ್ನು ಎಂದು ಕೊಲ್ಲುತ್ತಾನೆ ? ಎಂಬ ತವಕದಲ್ಲಿಯೇ ಕಾಲವನ್ನು

ಕಳೆಯುತ್ತಿದ್ದರು. ಅದೊಂದು ಶುಭದಿವಸ ಬಂದೇ ಬಿಟ್ಟಿತು. ಆಶ್ವೀನಮಾಸದ ಕೃಷ್ಣಪಕ್ಷದ ಚತುರ್ದಶಿಯ ದಿವಸ ಶ್ರೀಕೃಷ್ಣನು ನರಕಾಸುರನನ್ನು ಸಂಹಾರ ಮಾಡುವ ಸುಮುಹೂರ್ತ ಪ್ರಾಪ್ತವಾಯಿತು.

ಇತ್ತ ರೈವತಪರ್ವತದಲ್ಲಿ ಒಮ್ಮೆ ರಾಜರೆಲ್ಲರೂ ಸೇರಿದ್ದರು. 'ಶ್ರೀಕೃಷ್ಣನು ಸರ್ವೋತ್ತಮನು ಅನಂತರ ಲಕ್ಷ್ಮೀದೇವಿಯೇ ಸರ್ವೋತ್ತಮಳು' ಈ ತತ್ವವನ್ನು ಸಾರುವುದಕ್ಕಾಗಿ ನಾರದರು ಅಲ್ಲಿಗೆ ಆಗಮಿಸಿ, ಶ್ರೀಕೃಷ್ಣ ಹಾಗೂ ರುಕ್ಮಿಣೀದೇವಿಯ ಮಹಿಮೆಯನ್ನು ಸಭೆಯಲ್ಲಿ ಪ್ರಶಂಸೆ ಮಾಡಿದರು. ಮತ್ತು ರುಕ್ಮಿಣೀದೇವಿಗೆ ಪಾರಿಜಾತಪುಷ್ಪವನ್ನು ನೀಡಿ ಬ್ರಹ್ಮಲೋಕಕ್ಕೆ ತೆರಳಿದರು. ಇದನ್ನು ಕಂಡು ಸತ್ಯಭಾಮೆಗೆ ಸವತಿಮಾತ್ಸರ್ಯವು ಉಂಟಾಯಿತು. 'ನಾರದರು ರುಕ್ಮಿಣಿಯನ್ನು ಮಾತ್ರ ಪ್ರಶಂಸೆ ಮಾಡಿದರು. ಶ್ರೀಕೃಷ್ಣನು ಅದನ್ನು ಅನುಮೋದಿಸಿದನು. ತನ್ನ ಮಹಿಮೆಯನ್ನು ಶ್ರೀಕೃಷ್ಣನು ತಿಳಿಸಲಿಲ್ಲ' ಎಂದು ಅಸಮಾಧಾನಪಟ್ಟುಕೊಂಡಳು. (ಇದು ಕೇವಲ ವಿಡಂಬನೆ. ಸತ್ಯಭಾಮೆ ಮತ್ತು ರುಕ್ಮಿಣಿ ಇಬ್ಬರು ಸಾಕ್ಷಾತ್ ಲಕ್ಷ್ಮಿಯ ರೂಪಗಳೇ ಆಗಿವೆ. ಸವತಿಯರ ಸ್ವಭಾವ ಪ್ರದರ್ಶನಕ್ಕಾಗಿ ಕೋಪಿಸಿಕೊಂಡಂತೆ ಸತ್ಯಭಾಮೆಯು ಹೀಗೆ ನಟನೆ ಮಾಡುತ್ತಾಳೆ.) ಸತ್ಯಭಾಮೆಯ ಕುಪಿತವಾದ ಮುಖವನ್ನು ಕಂಡು ಶ್ರೀಕೃಷ್ಣನು ವಿಡಂಬನೆಗಾಗಿ ಹೀಗೆ ಸಾಂತ್ವನ ಮಾಡುತ್ತಾನೆ -

''ನಿನಗೆ ಪಾರಿಜಾತವೃಕ್ಷವನ್ನೇ ತಂದುಕೊಡುತ್ತೇನೆ. ದುಃಖ ಪಡಬೇಡ'' ಎಂದು. ಅದೇ ಸಂದರ್ಭದಲ್ಲಿ ದೇವೇಂದ್ರನು ಅಲ್ಲಿಗೆ ಆಗಮಿಸಿದನು. ಎಲ್ಲಾ ದೇವತೆಗಳ ಜೊತೆ ನರಕಾಸುರನಿಂದ ದೇವೇಂದ್ರನಂದು ಪರಾಜಿತನಾಗಿದ್ದನು. ಮತ್ತು ತನ್ನ ತಾಯಿಯಾದ ಅದಿತಿಯ ಕುಂಡಲಗಳನ್ನು ಆ ನರಕಾಸುರನು ಅಪಹಾರ ಮಾಡಿಬಿಟ್ಟಿದ್ದನು. ನರಕಾಸುರನಿಂದ ಪೀಡಿತರಾದ ಅನೇಕ ಮುನಿಗಳು ಬದರಿಕ್ಷೇತ್ರದಿಂದ ಆಗಮಿಸಿ ಶ್ರೀಕೃಷ್ಣನನ್ನು ಅದೇ ಸಂದರ್ಭದಲ್ಲಿ ಮೊರೆಹೊಕ್ಕರು. ನರಕಾರಸುರನನ್ನು ಸಂಹಾರ ಮಾಡುವಂತೆ ಎಲ್ಲ ಋಷಿಮುನಿಗಳು ಪ್ರಾರ್ಥನೆ ಮಾಡಿದರು. ಇಂದ್ರಾದಿ ದೇವತೆಗಳೂ ಕೂಡ ಪ್ರಾರ್ಥನೆ ಮಾಡಿದರು. ಆಗ

ಶ್ರೀಕೃಷ್ಣನು ಗರುಡನನ್ನು ನೆನೆದನು. ಕೂಡಲೇ ಗರುಡನು ಆಗಮಿಸಿ, ಶ್ರೀಕೃಷ್ಣನಿಗೆ ನಮಸ್ಕಾರ ಮಾಡಿದನು. ಶ್ರೀಕೃಷ್ಣನು ಸತ್ಯಭಾಮೆಯನ್ನು ಕರೆದುಕೊಂಡು, ಗರುಡನನ್ನು ಏರಿ ವಾಯುವ್ಯದಿಕ್ಕಿನ ಕಡೆ ಪ್ರಯಾಣ ಮಾಡಿದನು.

ಹಂತಂ ಕೃಷ್ಣೋ ನರಕಂ ತತ್ರ ಗತ್ವಾ
ಗಿರಿಂ ದುರ್ಗಂ ಗದಯಾ ನಿರ್ಬಿಭೇದ ।
ವಾಯವ್ಯಾಸ್ತ್ರೇಣೋದಕಂ ಶೋಷಯಿತ್ವಾ
ಚಕರ್ತ ಖಡ್ಗೇನ ಮುರಸ್ಯ ಪಾಶಾನ್ ॥

ನರಕಾಸುರನನ್ನು ಸಂಹಾರ ಮಾಡುವುದಕ್ಕಾಗಿ ಶ್ರೀಕೃಷ್ಣನು ಪ್ರಾಗ್ಜ್ಯೋತಿಷ ಪುರಕ್ಕೆ ಹೊರಟನು. ಅಲ್ಲಿ ಯಾರಿಂದಲೂ ಹೋಗಲು ಸಾಧ್ಯವಿಲ್ಲದ ಗಿರಿದುರ್ಗವನ್ನು ತನ್ನ ಗದೆಯಿಂದ ಭೇದಿಸಿದನು. ಮುಂದಿರುವ ಜಲದುರ್ಗವನ್ನು ವಾಯುವ್ಯಾಸ್ತ್ರದಿಂದ ಶೋಷಣೆಗೈದನು. ಆಲ್ಲಿರುವ ಮುರನ ಪಾಶಗಳನ್ನು ಖಡ್ಗದಿಂದ ಕತ್ತರಿಸಿದನು. ಇದನ್ನು ಕಂಡ ಮುರ ಎಂಬ ಮಂತ್ರಿಯು ಯುದ್ಧಕ್ಕೆ ಆಗಮಿಸಿದನು. ಈ ಮುರನು ಶಂಖಾಸುರನ ಮಗನು. ಇವನಿಗೆ ಐದು ತಲೆ ಇತ್ತು. ಜಲಸ್ತಂಭ ವಿದ್ಯೆಯನ್ನು ಕಲಿತು ನೀರಿನಲ್ಲಿ ವಾಸ ಮಾಡುತ್ತಿದ್ದನು. ೭೦೦೦ ಮಂದಿ ಮಕ್ಕಳು ಇವನಿಗಿದ್ದರು. ಇಂಥ ಮುರನನ್ನು ಕೊಂದು ಶ್ರೀಕೃಷ್ಣನು ಅಂದಿನಿಂದ ಮುರಾರಿ ಎನಿಸಿದನು. ಇದರಂತೆ ಪೀಠ, ನಿಶುಂಭ, ಹಯಗ್ರೀವ, ಪಂಚಜನ ಎಂಬ ಉಳಿದ ಮಂತ್ರಿಜನರನ್ನೂ ಕೂಡ ಸಂಹಾರ ಮಾಡಿದನು. ತನ್ನ ಚಕ್ರದಿಂದ ಎಲ್ಲರ ಶಿರಸ್ಸನ್ನು ತುಂಡರಿಸಿದನು. ಇವರೆಲ್ಲರೂ ಮಹಾಪರಾಕ್ರಮಿಗಳು. ರುದ್ರವರದೃಪ್ತರು, ಅವಧ್ಯರು ಆಗಿದ್ದರು. ಅನಂತರ ರುದ್ರದೇವರಿಂದ ವರವನ್ನು ಪಡೆದ ಮೂವತ್ತೈದು ಮಂದಿ ಮಂತ್ರಿಪುತ್ರರು ಯುದ್ಧಕ್ಕೆ ಬಂದರು. ಅವರೆಲ್ಲರನ್ನು ಶ್ರೀಕೃಷ್ಣನು ಮುಗಿಸಿದನು. ಅಂತಿಮವಾಗಿ ನರಕಾಸುರನ ಜೊತೆ ಯುದ್ಧಕ್ಕೆ ತೆರಳಿದನು. ಶ್ರೀಕೃಷ್ಣನು ತನ್ನ ಬಳಿ ಯುದ್ಧಕ್ಕೆ ಬರುತ್ತಿದ್ದಾನೆಂಬ ವಾರ್ತೆಯನ್ನು ತಿಳಿದ ನರಕಾಸುರನು ೩೦ ಅಕ್ಷೋಹಿಣಿ ಸೈನ್ಯ ಸಮೇತನಾಗಿ ಯುದ್ಧಕ್ಕೆ ಬಂದನು.

ಜಘ್ನೇ ಸೇನಾಂ ಗರುಡಃ ಪಕ್ಷಪಾತೈಃ
ಪಾದಂ ಶೇಷಂ ಕೇಶವಃ ಸಾಯಕೌಘೈಃ ।
ಅಥಾಸಸಾದಾಶು ಭೌಮೋಽಚ್ಯುತಂ ತಂ
ಮುಂಚನ್ ಬಾಣಾನಸ್ತ್ರಸಮ್ಮಂತ್ರಿತಾನ್ ದ್ರಾಕ್ ॥

ಆ ನರಕಾಸುರನ ಸೈನ್ಯದ ಕಾಲಂಶವನ್ನು ಗರುಡನು ತನ್ನ ರೆಕ್ಕೆಗಳ ಹೊಡೆತದಿಂದಲೇ ನಾಶಮಾಡಿದನು. ಉಳಿದ ಸೈನ್ಯವನ್ನು ಶ್ರೀಕೃಷ್ಣನು ಬಾಣಸಮೂಹಗಳಿಂದ ನಾಶ ಮಾಡಿದನು. ಅನಂತರ ನರಕಾಸುರನು ಅಸ್ತ್ರಪ್ರಯೋಗವನ್ನು ಮಾಡಿದನು. ಅನೇಕ ಬಾಣಗಳನ್ನು ಎಸೆದನು. ಶ್ರೀಕೃಷ್ಣನು ನಗರದ ಹೊರಗೆ ಮಂತ್ರಿಪುತ್ರರನ್ನು, ಮಂತ್ರಿಜನರನ್ನು ಕೊಂದಿದ್ದನು. ಅನಂತರ ನಗರದ ದ್ವಾರದಲ್ಲಿ ನರಕಾಸುರನು ಸೈನ್ಯಸಮೇತನಾಗಿ ಯುದ್ಧಕ್ಕೆ ಬಂದನು. ನರಕಾಸುರನ ರಥವು ೪೦೦ ಮೊಳದಷ್ಟು ಉದ್ದವಾಗಿತ್ತು. ಅದಕ್ಕೆ ಎಂಟು ಚಕ್ರಗಳಿದ್ದವು. ಒಂದು ಸಾವಿರ ಕುದುರೆಗಳನ್ನು ಅದಕ್ಕೆ ಕಟ್ಟಲಾಗಿತ್ತು. ಬ್ರಹ್ಮದೇವರು ನೀಡಿದ ಶತಘ್ನೀ ಎಂಬ ಗದೆಯನ್ನು ಶ್ರೀಕೃಷ್ಣನ ಮೇಲೆ ಎಸೆದನು.

ಅಚ್ಛೇದ್ಯೋಽಭೇದ್ಯೋ ನಿತ್ಯಸಂವಿತ್ಸುಖಾತ್ಮಾ
ನಿತ್ಯಾವ್ಯಯಃ ಪೂರ್ಣಶಕ್ತಿಃ ಸ ಕೃಷ್ಣಃ ।
ನಿಗೀರ್ಯ ತಾಂ ದೇವವರಃ ಶತಘ್ನೀಂ
ನಿತ್ಯಾಶ್ರಾಂತೋಽದರ್ಶಯಚ್ಛ್ರಾಂತವಚ್ಚ ॥

ಶ್ರೀಕೃಷ್ಣನು ನಿತ್ಯಜ್ಞಾನಾನಂದಸ್ವರೂಪನಾಗಿದ್ದಾನೆ. ಪೂರ್ಣವಾದ ಶಕ್ತಿವುಳ್ಳವನಾಗಿದ್ದಾನೆ. ಅಚ್ಛೇದ್ಯನು, ಅಭೇದ್ಯನು, ದೇವೋತ್ತಮನೂ ಆಗಿದ್ದಾನೆ. ಆದರೂ ಕೂಡ ಶತಘ್ನಿ ಎಂಬ ಬ್ರಹ್ಮದೇವರ ಆಯುಧವನ್ನು ನುಂಗಿ. ಅಸುರಮೋಹನಕ್ಕೋಸ್ಕರ ಶ್ರಮಗೊಂಡವನಂತೆ ನಟಿಸುತ್ತಾನೆ. ಕ್ಷಣಕಾಲ ಮೂರ್ಛೆಯನ್ನು ಹೊಂದಿದವನಂತೆ ನಟಿಸಿದನು. ಎಚ್ಚೆತ್ತ ಮೇಲೆ ಸತ್ಯಭಾಮೆಗೆ ಹೇಳುತ್ತಾನೆ. ನಾನು ಆಯಾಸಗೊಂಡಿದ್ದೇನೆ ನೀನು ಯುದ್ಧವನ್ನು ಮಾಡು ಎನ್ನುತ್ತಾ

ತನ್ನಲಿರುವ ಬಿಲ್ಲನ್ನು ಸತ್ಯಭಾಮೆಗೆ ನೀಡುತ್ತಾನೆ. ಸತ್ಯಭಾಮೆಯು ಶಾರ್ಙ್ಗ ಎಂಬ ಬಿಲ್ಲನ್ನು ಹಿಡಿದುಕೊಂಡು ಯುದ್ಧ ಮಾಡರಲಾರಂಭಿಸಿದಳು. ನರಕಾಸುರನು ಸತ್ಯಭಾಮೆಯನ್ನು ಪರಾಭವಗೊಳಿಸಲು ಮಹಾಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ಒಂದು ಕ್ಷಣದಲ್ಲಿಯೇ ನರಕಾಸುರನನ್ನು ನಿರಾಯುಧನನ್ನಾಗಿ ಮಾಡಿದಳು. ಅವನ ಬೃಹತ್ತಾದ ರಥವನ್ನು ಭಗ್ನಗೊಳಿಸಿದಳು.

ಆಲಿಂಗ್ಯ ಕೃಷ್ಣಃ ಸತ್ಯಭಾಮಾಂ ಪುನಶ್ಚ
ರಥಾಂತರೇ ಸಂಸ್ಥಿತಂ ಭೌಮಮುಗ್ರಂ ।
ಸೃಜಂತಮಸ್ತ್ರಾಣ್ಯರಿಣಾ ನಿಕೃತ್ತ-
ಸ್ಕಂಧಂ ಮೃತ್ಯೋರರ್ಪಯಾಮಾಸ ಶೀಘ್ರಂ ॥

ಸತ್ಯಭಾಮೆಯ ಈ ಯುದ್ಧದಿಂದ ತೃಪ್ತನಾದ ಶ್ರೀಕೃಷ್ಣನು ಮೇಲೆದ್ದು ಅವಳನ್ನು ಆಲಂಗಿಸಿದನು. ನರಕಾಸುರನನ್ನು ಸಂಹಾರ ಘಾಡಲು ಸ್ವತಃ ಉದ್ಯುಕ್ತನಾದನು. ಸುದರ್ಶನಚಕ್ರದಿಂದ ನರಕಾಸುರನ ಶಿರಸ್ಸನ್ನು ಛೇದನೆಗೊಳಿಸಿ ಮೃತ್ಯುವಿಗೆ ಒಪ್ಪಿಸಿದನು.

ಶ್ರೀಕೃಷ್ಣನು ನರಕಾಸುರನನ್ನು ಸಂಹಾರ ಮಾಡಿದ ಮೇಲೆ ಅವನಲ್ಲಿ ಆವಿಷ್ಟರಾದ ವಾಯುದೇವರು ಶ್ರೀಕೃಷ್ಣನನ್ನೇ ಸೇರಿದರು. ಪಾಪಿಷ್ಟನಾದ ನರಕಾಸುರನು ಅಂಧಂತಮಸ್ಸಿಗೆ ಹೋದನು.

ನರಕಾಸುರನ ಸಂಹಾರವಾದ ಮೇಲೆ ಸತ್ಯಭಾಮೆಯ ಜೊತೆಗೆ ಶ್ರೀಕೃಷ್ಣನು ಆ ನರಕನ ಅಂತಃಪುರವನ್ನು ಪ್ರವೇಶ ಮಾಡಿದನು. ಅಲ್ಲಿ ನರಕಾಸುರನ ತಾಯಿಯಾದ ಭೂದೇವಿಯು ಶ್ರೀಕೃಷ್ಣನ ಪಾದಗಳಿಗೆ ನಮಿಸಿ ಅದಿತಿಯ ಕುಂಡಲಗಳನ್ನು ಶ್ರೀಕೃಷ್ಣನಿಗೆ ಸಮರ್ಪಿಸಿದಳು. ಭಗದತ್ತನೆಂಬ ನರಕಾಸುರನ ಮಗನನ್ನೂ ಕೂಡ ಸಮರ್ಪಣೆ ಮಾಡಿದಳು. ಶ್ರೀಕೃಷ್ಣನು ಆ ನರಕಾಸುರನ ಪ್ರಾಗ್‌ಜ್ಯೋತಿಷಪುರವನ್ನು ತಾನು ಇಟ್ಟುಕೊಳ್ಳದೇ ಭಗದತ್ತನಿಗೆ ನೀಡಿ ಪಟ್ಟಾಭಿಷೇಕ ಮಾಡಿದನು.

ದೀಪಾವಳಿ -೧ ನರಕಚತುರ್ದಶಿ

ಹಿಂದೆ ರುದ್ರದೇವರು ಕುಬೇರನಿಗೆ ಸುಪ್ರತೀಕ ಎಂಬ ಆನೆಯನ್ನು ನೀಡಿದ್ದರು. ಆ ಕುಬೇರನಿಂದ ಬಲಾತ್ಕಾರವಾಗಿ ನರಕಾಸುರನು ಸುಪ್ರತೀಕವೆಂಬ ಆನೆಯನ್ನು ಅಪಹಾರ ಮಾಡಿರುತ್ತಾನೆ. ಶ್ರೀಕೃಷ್ಣನು ಭಗದತ್ತನಿಗೆ ಈ ಆನೆಯನ್ನು ನೀಡಿದನು. ಸಮುದ್ರದಿಂದ ಉದಿಸಿದ ನಾಕು ದಂತಗಳುಳ್ಳ ೬೦೦೦ ಉತ್ತಮ ಆನೆಗಳನ್ನು ದ್ವಾರಕೆಗೆ ಕಳುಹಿಸಿದನು. ೨೦೦ ಯೋಜನೆಗಳಷ್ಟು ಎತ್ತರವಿದ್ದ ಬಂಗಾರದ ಹಾಗೂ ರತ್ನಗಳ ಪರ್ವತಗಳನ್ನೇ ದ್ವಾರಕಾಪಟ್ಟಣಕ್ಕೆ ಕಳುಹಿಸಿದನು.

ನರಕಾಸುರನು ಯುದ್ಧದಲ್ಲಿ ಗೆದ್ದುತಂದ ೧೬೧೦೦ ಮಂದಿ ರಾಜಕಮಾರಿಯರು ಬಂಧನದಲ್ಲಿರುವುದನ್ನು ಶ್ರೀಕೃಷ್ಣನು ಕಂಡನು. ಕೂಡಲೇ ಅವರನ್ನು ಬಂಧನದಿಂದ ಬಿಡಿಸಿದನು. ಪ್ರತಿಯೊಬ್ಬರೂ ಶ್ರೀಕೃಷ್ಣನ ಪಾದಕಮಲಗಳನ್ನು ಹಿಡಿದು ಆನಂದಬಾಷ್ಪವನ್ನು ಸುರಿಸುತ್ತಾ 'ನೀನೇ ನಮಗೆ ಪ್ರಾಣದೇವ' ಎಂಬುದಾಗಿ ಮೊರೆಹೊಕ್ಕರು. ಆಗ ಶ್ರೀಕೃಷ್ಣನು ಭಗದತ್ತನಿಗೆ ಅಪ್ಪಣೆಯನ್ನು ಮಾಡುತ್ತಾನೆ. ''ಈ ಎಲ್ಲ ಸ್ತ್ರೀಯರಿಗೆ ಅಭ್ಯಂಗಸ್ನಾನವನ್ನು ಮಾಡಿಸಿ, ರಾಜಕುಮಾರಿಯರು ಧರಿಸುವಂಥ ಶ್ರೇಷ್ಠವಾದ ಪೀತಾಂಬರಗಳನ್ನು ಉಡಿಸಿ, ಕಳುಹಿಸು'' ಎಂದು. ಆಗ ಭಗದತ್ತನು ಶ್ರೀಕೃಷ್ಣನ ಅಪ್ಪಣೆಯಂತೆ ಆ ಎಲ್ಲಾ ಸ್ತ್ರೀಯರಿಗೆ ಅಭ್ಯಂಗಸ್ನಾನದ ವ್ಯವಸ್ಥೆಯನ್ನು ಮಾಡಿ, ದಿವ್ಯಪೀತಾಂಬರಗಳನ್ನು ನೀಡಿ, ವೈಭವೋಪೇತವಾದ ಷಡ್ರಾಸನ್ನಗಳಿಂದ ಊಟೋಪಾಚಾರಗಳನ್ನು ಮಾಡಿಸಿದನು.

ಭೂದೇವಿಯು ತನ್ನ ಮಗನಾದ ನರಕಾಸುರನಿಗೆ ಮಾಡಿದ್ದಕ್ಕೆ ಅನುಗ್ರಹ ಮಾಡಬೇಕೆಂದು ಪ್ರಾರ್ಥಿಸಿದಾಗ ನರಕಚತುರ್ದಶಿಯೆಂದು ಇಂದಿನ ದಿವಸವು ಪ್ರಖ್ಯಾತವಾಗಲಿ ಎಂಬುದಾಗಿ ಶ್ರೀಕೃಷ್ಣನು ಅನುಗ್ರಹವನ್ನು ಮಾಡುತ್ತಾನೆ.

ಬಂಧನದಲ್ಲಿದ್ದ ಎಲ್ಲ ಸ್ತ್ರೀಯರು 'ಮುಂದೇನು ಗತಿ ? ನಮ್ಮನ್ನು ಯಾರು ಸ್ವೀಕಾರ ಮಾಡುತ್ತಾರೆ. ನಮಗೆ ಜೀವನದಲ್ಲಿ ಬೇರೆ ದಾರಿಯೇ ಇಲ್ಲ' ಎಂಬುದಾಗಿ ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತಾರೆ. ಆಗ ಶ್ರೀಕೃಷ್ಣನು ಪ್ರತಿಯೊಬ್ಬರಿಗೂ ಸಾಂತ್ವನದ ಮಾತುಗಳನ್ನು ಹೇಳಿ, ''ನೀವು ಚಿಂತಿಸುವುದು ಬೇಡ. ನಿಮ್ಮೆಲ್ಲರನ್ನು ನಾನೇ

ವಿವಾಹವಾಗುತ್ತೇನೆ. ಲೋಕವು ಏನೇ ಹೇಳಲಿ ನಿಮ್ಮನ್ನು ನಾನು ಬಿಡುವುದಿಲ್ಲ. ಇನ್ನುಮುಂದೆ ನೀವು ಶ್ರೀಕೃಷ್ಣನ ಪತ್ನಿಯರು ಎಂಬ ಕೀರ್ತಿಗೆ ಪಾತ್ರರಾಗಿ ಕೀರ್ತಿಶಾಲಿಗಳಾಗುತ್ತೀರಿ'' ಎಂಬುದಾಗಿ ಹೇಳಿ, ೧೬೧೦೦ ಸ್ತ್ರೀಯರನ್ನು ದ್ವಾರಕಾಪಟ್ಟಣಕ್ಕೆ ಉತ್ಸವದ ಮೂಲಕ ಪಲ್ಲಕ್ಕಿಯಲ್ಲಿ ಕರೆದುಕೊಂಡು ಹೋಗಿ ವಿವಾಹವಾಗುತ್ತಾನೆ. ಪ್ರತಿಯೊಬ್ಬರನ್ನು ಪ್ರತ್ಯೇಕ ಪ್ರತ್ಯೇಕವಾಗಿ ವೈಭವೋಪೇತವಾಗಿ ವಿವಾಹವನ್ನು ಮಾಡಿಕೊಳ್ಳುತ್ತಾನೆ. ಪ್ರತಿಯೊಬ್ಬ ಸ್ತ್ರೀಯರಿಗೂ ಪ್ರತ್ಯೇಕ ಅರಮನೆಯನ್ನು ನಿರ್ಮಾಣ ಮಾಡಿಕೊಟ್ಟು, ಪ್ರತಿಯೊಂದು ಅರಮನೆಗಳಲ್ಲಿಯೂ ಪ್ರತಿಯೊಂದು ರೂಪದಿಂದ ಅವರ ಜೊತೆ ಸಂಸಾರ ನಡೆಸುತ್ತಾನೆ. ಪ್ರತಿಯೊಬ್ಬರಲ್ಲಿಯೂ ಪ್ರತ್ಯೇಕ ಪ್ರತ್ಯೇಕವಾಗಿ ಹತ್ತು ಗಂಡುಮಕ್ಕಳು ಒಂದು ಹೆಣ್ಣುಮಗುವಿಗೆ ಜನ್ಮವನ್ನು ನೀಡುತ್ತಾನೆ. ಹೀಗೆ ಜೀವನದಲ್ಲಿ ದಿಕ್ಕನ್ನೇ ಕಾಣದಂತೆ ಕುರುಡರಾಗಿದ್ದ, ೧೬೧೦೦ ಮಂದಿ ರಾಜಕುಮಾರಿಯರಿಗೆ ಜೀವನಪಥವನ್ನು ತೋರಿಸಿ, ಅವರೆಲ್ಲರ ಜೀವನಕ್ಕೆ ದಿವ್ಯಜ್ಯೋತಿಯಾಗಿ ಬೆಳಗಿದ ದಿವಸವೇ ನರಕಚತುರ್ದಶಿ.

ಪರಮಾತ್ಮನು ಲಕ್ಷ್ಮೀದೇವಿಯನ್ನು ಬಿಟ್ಟು ಉಳಿದ ಯಾವ ಸ್ತ್ರೀಯರ ಸಂಪರ್ಕವನ್ನೂ ಕೂಡ ಮಾಡುವುದಿಲ್ಲ. ಆದರೆ ಈ ೧೬೧೦೦ ಸ್ತ್ರೀಯರು ವಿಶೇಷವಾಗಿ ಲಕ್ಷ್ಮಿಯ ವ್ರತವನ್ನು ಆಚರಣೆ ಮಾಡಿದ್ದರಿಂದ ಅವರೆಲ್ಲರಲ್ಲಿ ಲಕ್ಷ್ಮೀದೇವಿಯ ಸನ್ನಿಧಾನವು ಬಂದಿರುತ್ತದೆ. ಹಾಗಾಗಿ ಅವರೆಲ್ಲರನ್ನು ಶ್ರೀಕೃಷ್ಣನು ವಿವಾಹವಾಗುತ್ತಾನೆ.

ಇಲ್ಲಿಗೆ ನರಕಚತುರ್ದಶಿಯ ಕಥೆ ಮುಗಿಯಿತು.

* * * * *

# ನರಕಚತುರ್ದಶಿಯ ಹಾಡುಗಳು

## ಬೆಳಿಗ್ಗೆ ಆರತಿ ಮಾಡುವಾಗ ಹೇಳಬೇಕು

ಆರುತಿ ಮಾಡಿರೆ ಶ್ರೀ ಹರಿಗೆ
ಚೆನ್ನದಾರುತಿಯನು ತಂದು ಬೆಳಗೀರೆ
ಕಾರ್ತಿಕ ಮಾಸದಲ್ಲಿ ಕಾಮಪಿತನ ಪೂಜಿಸ
ಮಾಸಾಭಿಮಾನಿ ದಾಮೋದರನ ಭಜಿಸಿ
ಲೇಸು ಸಂಪಿಗೆ ಗಂಧೆಣ್ಣೆ ಸಮರ್ಪಿಸಿ
ಪುರುಷೋತ್ತಮನ ಕೊಂಡಾಡಿರೇ

ಸೃಷ್ಟಿಗೆ ಕರ್ತೃ ಶ್ರೀ ಹರಿಯು
ಸೃಷ್ಟಿಸಿದನು ದೀಪಾವಳಿಯು
ಉತ್ತಮ ನರಕಚತುರ್ದಶಿ ದಿನದಿ,
ನರಕಾಸುರನ ವಧೆ ಮಾಡಿ ಬಂದ

ಬ್ರಾಹ್ಮಿ ಮುಹೂರ್ತದಲೆದ್ದು
ಗೋವು ತುಳಸಿ ಪೂಜೆಯ ಮಾಡಿ, ಮತ್ತೆ
ಧರೆಗಿಳಿದ ಕೃಷ್ಣ ಹಯವದನಗೆ
ಮುತ್ತಿನಾರುತಿಯ ಬೆಳಗೀರೆ

* * * *

ಹಕ್ಕಿಯ ಹೆಗಲೇರಿ ಬಂದವಗೆ ನೋ । ಡಕ್ಕ ಮನಸೋತೆ ನಾನವಗೆ ॥ಪ॥ ಸತ್ರಾಜಿತನ ಮಗಳೆತ್ತಿನ ಉ। ನ್ಮತ್ತ ನರಕನೊಳು ಕಾದಿದ। ಮತ್ತೆ ಕೆಡಹಿದ ಆವನಂಗವ। ಸತಿಗಿತ್ತನು ಆಲಿಂಗನವ ॥೧॥ ಹದಿನಾರು ಸಾವಿರ ನಾರಿಯರ ಸೆರೆ । ಮುದದಿಂದ

ಬಿಡಿಸಿ ಮಾ ಮನೋಹರ । ಅದಿತಿಯ ಕುಂಡಲ ತಳೆದಾ ಹರ । ವಿಧಿ ಸುರ ನೃಪರನು ಸಲಹಿದ ॥೨॥ ಉತ್ತಮ ಪ್ರಾಗ್ಜ್ಯೋತಿಷ ಪುರವ ಭಗ । ದತ್ತಗೆ ಕೊಟ್ಟ ವರಾಭಯವ । ಕರ್ತ ಕೃಷ್ಣಯ್ಯನ ನಂಬಿದೆ ಶ್ರೀ । ಮೂರ್ತಿಯ ಪಾದವ ಹೊಂದಿದೆ ॥೩॥ ನರಕ ಚತುರ್ದಶಿ ಪರ್ವವ ಹರಿ ಹರುಷದಿ ಪ್ರಕಟಿಸಿದನು ದೇವ । ಶರಣಾಗತಜನ ವತ್ಸಲ ರಂಗ । ಪರಮ ಭಾಗವತರ ಪ್ರತಿಪಾಲ ॥೪॥ ಹೊಗಳಿ ಕೃಷ್ಣಯ್ಯನ ಮಹಿಮೆಯ ಮುಕ್ತಿ । ನಗರದ ಅರಸನ ಕೀರ್ತಿಯ । ಜಗದೀಶ ಪ್ರಸನ್ವೇಂಕಟೇಶನೆ ಭಕ್ತ । ರಘುಹಾರಿ ರವಿಕೋಟಿಕಾಶನೆ ॥೫॥

* * * *

ಬಣ್ಣಿಸಿ ಗೋಪಿ ಹರಸಿದಳು ॥ಪ॥ ಎಣ್ಣೆಯನೊತ್ತುತ ಯದುಕುಲತಿಲಕಗೆ ॥ಅ॥ ಆಯುಷ್ಯವಂತನಾಗು ಅತಿ ಬಲ್ಲಿದವನಾಗು । ಮಾಯದ ಖಳರ ಮರ್ದನನಾಗು ॥ ರಾಯರ ಪಾಲಿಸು ರಕ್ಕಸರ ಸೋಲಿಸು । ವಾಯುಸುತಗೆ ನೀನೊಡೆಯನಾಗೆನುತ ॥೧॥ ಧೀರನು ನೀನಾಗು ದಯಾಂಬುಧಿಯಾಗು । ಆ ರುಗ್ಮಿಣಿಗೆ ನೀನರಸನಾಗು ॥ ಮಾರನ ಪಿತನಾಗು ಮಧುಸೂದನನಾಗು । ದ್ವಾರಾವತಿಗೆ ನೀ ದೊರೆಯಾಗೆನುತ ॥೨॥ ಆನಂದ ನೀನಾಗು ಅಚ್ಯುತ ನೀನಾಗು । ದಾನವಾಂತಕನಾಗು ದಯವಾಗು ॥ ಶ್ರೀನಿವಾಸನಾಗು ಶ್ರೀನಿಧಿ ನೀನಾಗು ॥ ಜ್ಞಾನಿ ಪುರಂದರವಿಠಲನಾಗೆನುತ ॥೩॥

* * * *

ಬಂದದ್ದೆಲ್ಲಾ ಬರಲಿ । ಗೋ । ವಿಂದನ ದಯ ನಮಗಿರಲಿ ॥ಪ॥ ಮಂದರಧರ ಗೋವಿಂದ ಮುಕುಂದನ । ಸಂದರುಶನವೊಂದಿದ್ದರೆ ಸಾಲದೆ ॥ಅ॥ ಆರು ಅರಿಯದಿರಲೆನ್ನ । ಮು । ರಾರಿಯು ಎನಗೆ ಪ್ರಸನ್ನ । ಘೋರದುರಿತದ ಬನ್ನ । ಭಯ । ಹಾರಿ ಗುಣಾಂಬುಧಿ ಘನ್ನ ॥ ಶ್ರೀರಮಣನ ಸಿರಿ ಚರಣಸೇವಕರಿಗೆ । ಕ್ರೂರ ಯಮನು ಶರಣಾಗತನಲ್ಲವೆ ॥೧॥ ಅರಗಿನ ಮನೆಯೊಳಗಂದು । ಪಾಂಡ । ವರನು

ಕೊಲಲುಬೇಕೆಂದು । ದುರುಳ ಕೌರವ ಕಪಟ । ದಿಂದ । ಇರಲು ಆ ಕ್ಷಣದಿಂದ ॥ ಹರಿಕೃಪೆಯವರಲ್ಲಿದ್ದ ಕಾರಣ ಬಂದ । ದುರಿತ ಭಯವು ಬದಲಾಯಿತಲ್ಲವೆ ॥೨॥ ಸಿಂಗನ ಪೆಗಲೇರಿ ಸಾಗೆ । ಕರಿ । ಭಂಗವೇಕೆ ಮತ್ತವಗೆ । ರಂಗನ ದಯವುಳ್ಳವಗೆ । ಭವ । ಭಂಗದ ಬಯಕೆಯ ಹಂಗೇಕೆ ॥ ಮಂಗಳಮಹಿಮೆ ಪುರಂದರವಿಠಲ । ರಂಗನ ದಯವೊಂದಿದ್ದರೆ ಸಾಲದೆ ॥೩॥

* * * * *

ಬಂದನೇನೆ ರಂಗ ಬಂದನೇನೆ ॥ಪ॥ ಎನ್ನ । ತಂದೆ ಬಾಲಕೃಷ್ಣ ನವನೀತಚೋರ ॥ಅ॥ ಘಲುಘಲುಘಲುರೆಂಬ ಪೊನ್ನಂದುಗೆ ಗೆಜ್ಜೆ । ಹೊಳೆಹೊಳೆಯುವ ಪಾದವನೂರುತ ॥ ನಲಿನಲಿದಾಡುವ ಉಂಗುರ ಅರಳೆಲೆ । ಥಳ ಥಳ ಹೊಳೆಯುತ ಶ್ರೀಕೃಷ್ಣ॥೧॥ ಕಿಣಿ ಕಿಣಿ ಕಿಣಿರೆಂಬ ಕರದ ಕಂಕಣ ಬಳೆ । ಝುಣ ಝುಣ ಝುಣರೆಂಬ ನಡುವಿನ ಗಂಡೆ ॥ ಧಣ ಧಣ ಧಣರೆಂಬ ಪಾದವ ತೊಡವಿನ । ಮಿಣಿ ಮಿಣಿ ಕುಣಿದಾಡುತ ಶ್ರೀಕೃಷ್ಣ॥೨॥ ಹಿಡಿ ಹಿಡಿ ಹಿಡಿಯೆಂದು ಪುರಂದರವಿಠಲನ । ದುಡು ದುಡು ದುಡು ದುಡುನೇ ಒಡುತ ॥ ನಡೆ ನಡೆ ನಡೆಯೆಂದು ಮೆಲ್ಲನೆ ಪಿಡಿಯಲು । ಬಿಡಿ ಬಿಡಿ ಬಿಡಿ ದಮ್ಮಯ್ಯ ಎನ್ನುತ ॥೩॥

* * * * *

ಬಂದ ನೋಡಿ ಗೋವಿಂದ ಕೃಷ್ಣ ॥ಪ॥ ಬಂದ ಬಂದ ಆನಂದತೀರ್ಥ ಮು । ನೀಂದ್ರವಂದ್ಯ ಹರಿ ನಂದಮುಕುಂದನು ॥ಅ॥ ಸರಸಿಜಾಕ್ಷ ಧೊರೆಯೆ । ಸರ್ವರ । ಪೊರೆವ ದಯಾನಿಧಿಯೆ ॥ ಕರಿಯ ವರನ ಚಕ್ರದಿ ಉದ್ಧರಿಸಿದ । ಹರಿ ನಮ್ಮ ಪಾಲಿಪ ಪಾಲ್ಗಡಲೊಡೆಯನು ॥೧॥ ಇಂದ್ರದೇವವಂದ್ಯ । ಇಷ್ಟರ । ಇಂದು ಕಾಯ್ವ ನಿತ್ಯಾನಂದ ॥ ಚಂದ್ರಕೋಟಿಲಾವಣ್ಯ ಮುಖದಲಿ । ಸುಂದರ ಅರಳೆಲೆ ಹಾರಗಳಿಂದಲಿ ॥೨॥ ಚರಣಕಮಲಕಾಂತೆ । ಸರ್ವದಾ । ಮಾಳ್ಪದು ದಯವಂತೆ ॥ ತರತರ ಜನರಿಗೆ ಕರೆದು ವರವನೀವ । ಸರಸಿಜಾಕ್ಷ ನಮ್ಮ ಪುರಂದರವಿಠಲನು ॥೩॥

* * * * *

# ಜಲಪೂರಣತ್ರಯೋದಶೀ ಹಾಗೂ ನರಕಚತುರ್ದಶಿ ಹಬ್ಬದ ಅಡುಗೆಗಳು

## ಎರೆಯಪ್ಪ

ಗೊಧಿ ಬಿಳೀಬೆಲ್ಲ ಇವನ್ನಾಗಲಿ ಅಕ್ಕಿ ಬೆಲ್ಲ ಇವನ್ನಾಗಲಿ ಸೇರಿಸಿ ಸಣ್ಣಾಗಿ ತಿರುವಿ ಹಾಕಿ ಬಾಣಲೆಯಲ್ಲಿ ಅಂಗಯ್ಯಿನ ಅಗಲವಾಗುವಂತೆ ಕರಿಯುವುದು.

## ಅಪ್ಪೀ ಪಾಯಸ

ಹಸನಾದ ರವೆಗೆ ನೀರುಹಾಕಿ ಕಲೆಸಿ ತುಪ್ಪ ಸವರಿ ಚೆನ್ನಾಗಿ ಕುಟ್ಟಬೇಕು. ಅದಕ್ಕೆ ಮತ್ತಷ್ಟು ತುಪ್ಪ ಹಚ್ಚಿ ಚೆನ್ನಾಗಿ ನಾದಿ ರೂಲುದೊಣ್ಣೆಯಂತೆ ಮಾಡಿಕೊಂಡು ಸಣ್ಣ ಸಣ್ಣ ನಿಂಬೆಹಣ್ಣಿನ ದಪ್ಪಕ್ಕೆ, ಉಂಡೆಗಳನ್ನು ಮಾಡಿ ಅಕ್ಕಿಹಿಟ್ಟು ಹಾಕಿ ಹಪ್ಪಳದಂತೆ ತೆಳ್ಳಗೆ ಲಟ್ಟಿಸಿ ಹದನಾಗಿ ಕರಿಯಬೇಕು. ಹೀಗೆ ಕಠೆದ ಬಳಿಕ ಎಷ್ಟು ಬೇಕೋ ಅಷ್ಟು ಹಪ್ಪಳಗಳನ್ನು ಒಂದು ತಟ್ಟೆಗೆ ಹಾಕಿಕೊಂಡು ಕೈಗಳಿಂದ ಚೆನ್ನಾಗಿ ಪುಡಿ ಮಾಡಬೇಕು. ಆ ಬಳಿಕ 1 ಪಾತ್ರೆಗೆ 2 ಸೇರಿನಷ್ಟು ಹಾಲು ಹಾಕಿ ಚೆನ್ನಾಗಿ ಕಾಯಿಸಿ ಅದಕ್ಕೆ ಈ ಹಪ್ಪಳದ ಪುಡಿಯನ್ನು ಹಾಕಿ ಮರಳಿಸಬೇಕು. ಆ ಬಳಿಕ 1 ಸೇರು ಸಕ್ಕರೆ ಹಾಕಿ ಹೊಂದಿಸಬೇಕು. ಕೆಂಡದ ಮೇಲೆ ಮುಚ್ಚಿಡಬೇಕು. ಗಟ್ಟಿಯಾಗಿದ್ದರೆ ಕಾಯಿಸಿದ ಹಾಲನ್ನು ಹಾಕಬೇಕು. ಅಪ್ಪಿಪಾಯಸ ಸಿದ್ಧವಾಗುವುದು.

## ಸಜ್ಜಿಗೆಯ ಹೋಳಿಗೆ

1 ಪಾವು ಹದನಾದ ರವೆಯನ್ನು ತುಪ್ಪದಲ್ಲಿ ಹುರಿದು, ಅದಕ್ಕೆ ಹಾಲನ್ನು ಚುಮುಕಿಸಿ, ಪಕ್ವ ಮಾಡಿಕೊಂಡು, ಬಿಳೀ ಬೆಲ್ಲದ ಪುಡಿಯನ್ನಾಗಲಿ, ಸಕ್ಕರೆಯನ್ನಾಗಲಿ ಹಾಕಿ, ಹೊಂದಿಸಿ, ಹದವಾಗಿ ಮಾಡಿಕೊಂಡು, ಕೆಳಗೆ ಬಾಣಲೆಯನ್ನು ಇಳಿಸಿಕೊಂಡು, ಗೋಧಿಯ ಹಿಟ್ಟಿನಲ್ಲಾಗಲಿ ರವೆಯ ಕಣಕವನ್ನು ಮಾಡಿಕೊಂಡು, ತೆಳ್ಳಗೆ ಹೋಳಿಗೆಗಳನ್ನು ಮಾಡುವುದು ಅಥವಾ ಬಾಳೆಎಲೆಯ್ಯ ಮೇಲೆ ತಟ್ಟಬಹುದು.

# ಫೇಣಿ

ಅರ್ಧ ಸೇರು ಹಸನಾದ ರವೆಯನ್ನು ಹಾಲಿನಲ್ಲಿ ಕಲೆಸಿ, ಮುದ್ದೆ ಮಾಡಿ ಇಡಬೇಕು. ಬೆಣ್ಣೆಯನ್ನು ಮತ್ತು ಶೋಧಿಸಿದ ಅಕ್ಕಿ ಹಿಟ್ಟನ್ನು ಬೆರೆಸಿ ಇದನ್ನು ಆ ಮುದ್ದೆಗೆ ಸವರಿ ಕಲ್ಲಿನ ಮೇಲೆ ಇಟ್ಟು ಚೆನ್ನಾಗಿ ಕುಟ್ಟಬೇಕು. ಪುನಃ ಬೆಣ್ಣೆಯನ್ನು ಇದಕ್ಕೆ ಸವರಿ ಇನ್ನೊಂದು ವೇಳೆ ಚೆನ್ನಾಗಿ ಕುಟ್ಟಿ ಮರ್ದಿಸಿ ನಾದಬೇಕು. ಒಂದು ಅಗಲವಾದ ಬಾಳೆ ಎಲೆಗೆ ಬೆಣ್ಣೆಯನ್ನು ಅಥವಾ ತುಪ್ಪವನ್ನಾಗಲಿ ಸವರಿ, ಈ ಮುದ್ದೆಯನ್ನು ರೂಲುದೊಣ್ಣೆಯಂತೆ ಮಾಡಿಡುವುದು. ಪುನಃ ಇದಕ್ಕೆ ಬೆಣ್ಣೆಯ ಹಿಟ್ಟನ್ನು ಸುತ್ತಲೂ ಹಚ್ಚಿ ಬೆತ್ತದ ಗಾತ್ರಕ್ಕೆ ಮಾಡಿ, ಗೇಣಿಗೆ ಒಂದು ತುಂಡು ಮಾಡಿಕೊಳ್ಳುವುದು. ಈ ತುಂಡುಗಳಿಗೆ ಪುನಃ ಬೆಣ್ಣೆಯನ್ನು ಹಿಟ್ಟನ್ನು ಸವರಿ ಬಿಚ್ಚೋಲೆಯಂತೆ ಹೊಸೆದು ಅಗಲಿಸಿ ಆ ಬಾಳೆ ಎಲೆಯ ಮೇಲೆ ಒಂದು ಕಡೆ ಅಗಲವಾಗಿ ಬಳ್ಳಿಗಳು ಒಂದಕ್ಕೊಂದು ತಾಕದಂತೆ ಗುಂಡಗೆ ಹರವಬೇಕು. ಪುನಃ ಇವಕ್ಕೆ ಬೆಣ್ಣೆಯ ಹಿಟ್ಟನ್ನು ಸವರಿ ಪದರುಗಳು ಒಂದಕ್ಕೊಂದು ತಾಕದಂತೆ ಬಿಡಿಸಿ, ಬೇರೆ ಬೇರೆ ಸುತ್ತಿ ಹಾಕುವುದು, ಈ ಪ್ರಕಾರ ಎಲ್ಲವನ್ನೂ ಮಾಡಿಕೊಂಡ ಬಳಿಕ, ಇದರ ಮೇಲೆ ಒಂದು ಬಾಳೆಲೆಯನ್ನು ಮುಚ್ಚಿಡುವುದು. ಬಾಂಡ್ಲೆಯಲ್ಲಿ ತುಪ್ಪವನ್ನು ಹಾಕಿ ಕಾಯಿಸಿ, ಹದನಾದ ಬಳಿಕ ಕೈಗಳಿಗೆ ಬೆಣ್ಣೆಯ ಹಿಟ್ಟನ್ನು ಸವರಿಕೊಂಡು ಈ ಸುರಳಿಯನ್ನು ಒಂದೊಂದಾಗಿ ತುಪ್ಪದಲ್ಲಿ ಬಿಟ್ಟು ಊಬು ತೆಗೆದು ಸಿದ್ಧಪಡಿಸಿದ, ಹಂಚಿಕಡ್ಡಿಯ ಎರಡು ಕಂತೆಗಳನ್ನು, 2 ಕೈಗಳಲ್ಲಿ ಹಿಡಿದುಕೊಂಡು, ಆ ಪೇಣಿಯು ಬೇಯುವಾಗ ಆಗಲಿಸಿ ಗುಂಡಗೆ ಮಾಡುವುದು. ಬೆಂದೊಡನೆ ಸುವಾಸನೆ ಹೊರಡುವುದು. ಆಗ ಜಾರಿಯ ಸೌಟಿನಲ್ಲಿ ತೆಗೆದು ಹೊಸ ಬುಟ್ಟಿಯಲ್ಲಿ ಒಡೆಯದಂತೆ ಇಡುವುದು. ಹೀಗೆಯೇ ಎಲ್ಲವನ್ನೂ ಮಾಡಿಕೊಳ್ಳುವುದು. ಬೆಣ್ಣೆ ಹಿಟ್ಟಿಗೆ ಬದಲಾಗಿ ತುಪ್ಪವನ್ನು ಉಪಯೋಗಿಸಬಹುದು. ಇದು ಚೀರು ಫೇಣಿ 1 ಸೇರು ರವೆಯಿಂದ ದೊಡ್ಡ ಪೇಣಿಯು 25-30 ಚಿಕ್ಕದಾದರೆ 40-50 ಮಾಡಬಹುದು.

## ಖರ್ಜೂರದ ಹೋಳಿಗೆ

ಬಿಡಿಸಿದ ಖರ್ಜೂರವನ್ನು ಇವನ್ನು ಬಾಂಡ್ಲೆಯಲ್ಲಿ ಹುರಿದು ಹಾಲಿನಲ್ಲಿ ನೆನೆಸಿ, ಸ್ವಲ್ಪ ನೆನೆದ ರವೆಯನ್ನು ಸೇರಿಸಿ, ನುಣ್ಣಗೆ ತಿರುವಿ, ಹೋಳಿಗೆ ಮಾಡುವುದು. ಇದರಂತೆ ನೆಲಗಡಲೆಯ ಕಾಳಿನಿಂದಲೂ, ಹೋಳಿಗೆಯನ್ನು ಮಾಡಬಹುದು.

## ಸಕ್ಕರೆ ಅಚ್ಚು

ಸಕ್ಕರೆ ಪಾಕವನ್ನು ಮಾಡಿಕೊಂಡು ಸ್ವಲ್ಪ ಹುಳಿ ಮಜ್ಜಿಗೆ ಅಥವಾ ನಿಂಬೇ ಹುಳಿಯನ್ನು ಹಿಂಡಿ ಅಚ್ಚುಮಣೆಯಲ್ಲಿ ಹಾಕಿ ಸಮನಾಗಿ ಮಾಡಿದ ಬಳಿಕ ಆರಿದ ಮೇಲೆ ತೆಗೆದಿಡುವುದು; ಪಾಕ ಹಾಕುವ ಕಾಲದಲ್ಲಿ ಅಚ್ಚಿಗೆ ತುಪ್ಪ ಸವರಿದ್ದರೆ ಅಚ್ಚುಗಳು ಮುರಿಯದೆ ಬರುವುವು. ಈ ಪ್ರಕಾರ ನಾನಾ ಬಗೆಯ ಬೊಂಬೆ, ವೃಂದಾವನ, ಆನೆ, ಕುದುರೆ, ಮೀನು, ಮೊಸಳೆ, ಆಕಳು ನಾಯಿ, ಎಮ್ಮೆ, ಹುಲಿ, ಸಿಂಹಗಳ ಆಕಾಶವನ್ನು ಮಾಡಬಹುದು.

## ಸಕ್ಕರೆ ಮಿಠಾಯಿ

ಸಕ್ಕರೆಯಿಂದ ಪಾಕ ಮಾಡಿಕೊಂಡು ಏಲಕ್ಕಿ ವಾಸನಾದ್ರವ್ಯಗಳನ್ನು ಹಾಕಿ ಕೊಬ್ಬರಿ ತುರಿ ಗಸಗಸೆ ಇವನ್ನು ಹಾಕಿ ಹೊಂದಿಸಿದ ಬಳಿಕ ತಟ್ಟೆಯಲ್ಲಾಗಲೀ ಮಿಠಾಯಿ ಮಣೆಯ ಮೇಲಾಗಲೀ ತುಪ್ಪ ಹಚ್ಚಿದ ಬಳಿಕ ಆ ಪಾಕವನ್ನು ಸುರಿದು ಸಮನಾಗಿ ಮಾಡಿ ಚೂರಿಯಿಂದ ಬಿಲ್ಲೆಗಳನ್ನು ಮಾಡುವುದು. ಪಾಕವು ಹಸಿಯಾಗಿ ಇರುವಾಗಲೇ ಚಾಕುವಿನಿಂದಕೊಯ್ದು ಆರಿದ ನಂತರ ತೆಗೆದಿಡಬೇಕು.

## ಸಜ್ಜಪ್ಪ

**ಬೇಕಾಗುವ ಪದಾರ್ಥಗಳು :**

ಬೆಲ್ಲ - 1 ಕೆ.ಜಿ., ತೆಂಗಿನಕಾಯಿ - 2, ಗೋಧಿಹಿಟ್ಟು - 500 ಗ್ರಾಂ. ಚಿರೋಟಿ ರವೆ - 500 ಗ್ರಾಂ., ತುಪ್ಪ - 500 ಗ್ರಾಂ. ಎಣ್ಣೆ - 200 ಗ್ರಾಂ.

**ಮಾಡುವ ರೀತಿ :**

ಒಂದು ಪಾವು ರವೆ ತೆಗೆದಿರಿಸಿಕೊಂಡು ಉಳಿದ ರವೆಯನ್ನು ಸ್ವಲ್ಪ ತುಪ್ಪ ಹಾಕಿಕೊಂಡು ಹುರಿಯಿರಿ. ಆಮೇಲೆ ಒಂದು ಪಾತ್ರೆಯಲ್ಲಿ ಅರ್ಧ ಸೇರು ನೀರಿಟ್ಟು ಬೆಲ್ಲ ಹಾಕಿರಿ. ಬೆಲ್ಲ ಕರಗಿದ ನಂತರ ತೆಂಗಿನತುರಿ, ಒಂದು ಚಮಚ ಯಾಲಕ್ಕಿ ಪುಡಿ, ಹುರಿದ ರವೆಯನ್ನು ಹಾಕಿ ಮೊಗಚು ಕೈನಿಂದ ಗೊಟಾಯಿಸಿ. ಬೇಕಿದ್ದರೆ ಸ್ವಲ್ಪ ಗೋಡಂಬಿಯನ್ನು ಹುರಿದು ಈ ಮಿಶ್ರಣಕ್ಕೆ ಸೇರಿಸಬಹುದು. ಹೂರಣ ಆದ ಬಳಿಕ ಕೆಳಗಿಳಿಸಿ. ಉಳಿದ ರವೆಗೆ ಗೋಧಿಹಿಟ್ಟು ಒಂದು ಚಿಟಿಕೆ ಉಪ್ಪು ಹಾಕಿ, ಸ್ವಲ್ಪ ನೀರು ಸೇರಿಸಿ ಪೂರಿ ಹಿಟ್ಟಿನಂತೆ ಕಲಿಸಿರಿ. ಹಿಟ್ಟನ್ನು ಚೆನ್ನಾಗಿ ನಾದಿದ ನಂತರ ಸಣ್ಣ ನಿಂಬೆಹಣ್ಣಿನ ಗಾತ್ರದ ಉಂಡೆಗಳನ್ನು ಮಾಡಿ ಅದರೊಳಗೆ ಹೂರಣ ತುಂಬಿಸಿ ಮುಚ್ಚಿದ ಬಳಿಕ ಬಾಳೆ ಎಲೆಯ ಮೇಲಾಗಲಿ, ಕೈಯಿಂದಾಗಲಿ ತಟ್ಟಿ ತುಪ್ಪದಲ್ಲಿ ಹದವಾಗಿ ಕರಿದು ತೆಗೆದರೆ ನೈವೇದ್ಯಕ್ಕೆ ಸಿದ್ಧವಾಗುವುದು.

## ಶ್ರೀಖಂಡ

4 ಸೇರು ಹಾಲನ್ನು ಕೆಂಪಗೆ ಕಾಸಿ ಆರಿಸಿ ಹೆಪ್ಪುಕೊಟ್ಟು ಮುಚ್ಚಿಡಬೇಕು. ಇದನ್ನು ಮರುದಿನದ ಪ್ರಾತಃಕಾಲದಲ್ಲಿ ತೆಗೆದು, ಶುಭ್ರವಾದ ಚೌಕದಲ್ಲಿ ಈ ಮೊಸರನ್ನು ಸುರಿದು ಚೌಕದ 4 ಕೊನೆಯನ್ನೂ ಸೇರಿಸಿ, ಗಂಟುಹಾಕಿ ಗೂಟಕ್ಕೆ ತಗುಲಿಹಾಕಿದರೆ 1-2 ಘಂಟೆಯ ಹೊತ್ತಿನಲ್ಲಿಯೇ ನೀರೆಲ್ಲವೂ ಸುರಿದುಹೋಗಿ ಮೊಸರಿನ ಸಾರ ಮಾತ್ರ ನಿಲ್ಲುವುದು. ಇದನ್ನು ಒಂದು ಪಾತ್ರೆಗೆ ಹಾಕಿಕೊಂಡು, 1 ಸೇರು ಸಕ್ಕರೆ ಹಾಕಿ ಸೌಟಿನಿಂದ ಚೆನ್ನಾಗಿ ಹೊಂದಿಸಿದರೆ ನೈವೇದ್ಯಕ್ಕೆ ಸಿದ್ಧವಾಗುವುದು.

ದ್ವಿದಳಶಾಖಾ ಇರುವುದರಿಂದ ದ್ವಿದಳ ಪದಾರ್ಥಗಳನ್ನು ಉಪಯೋಗಿಸದೇ ಅಡುಗೆಯನ್ನು ಸಿದ್ಧಪಡಿಸಬೇಕು.

* * * *

ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ, ಪ್ರೀತೋ ವರದೋ ಭವತು ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ
ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

* * * *

ಜಲಪೂರಣತ್ರಯೋದಶೀ-ನರಕಚತುರ್ದಶಿ ಪೂಜೆ ಎಂಬ ಈ ಕೃತಿಯು
ಅಸ್ಮದ್ಗುರ್ವಂತರ್ಗತರಾದ ಹನುಮದ್ಭೀಮಮಧ್ವಾಂತರ್ಗತರಾದ
ರಾಮಕೃಷ್ಣವೇದವ್ಯಾಸರೂಪಿಯಾದ ಶ್ರೀಲಕ್ಷ್ಮೀಹಯಗ್ರೀವದೇವರ
ಪಾದಕಮಲಗಳಲ್ಲಿ ಸಮರ್ಪಿತವಾಗಿದೆ.

* * * *

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ದುರ್ಗಾಷ್ಟಮಿ

ಆಶ್ವೀನ || ಶುದ್ಧ || ಅಷ್ಟಮೀ



ವೆಂಕಟೇಶಾಚಾರ್ಯ

ಪರಿಪೂರ್ಣಫಲಕ್ಕಾಗಿ ಶಾಸ್ತ್ರೋಕ್ತಮಾರ್ಗದರ್ಶಿನೀ

# ದುರ್ಗಾಷ್ಟಮಿ

ಆಶ್ವೀನ || ಶುದ್ಧ || ಅಷ್ಟಮಿ

ವಿದ್ವಾನ್ || ಬೆಮ್ಮತ್ತಿ ವೇಂಕಟೇಶಾಚಾರ್ಯ,

ಬೆಂಗಳೂರು.

ಪ್ರಕಾಶನ :

ಜಗದ್ಗುರು ಶ್ರೀಮಧ್ವಾಚಾರ್ಯಸಿದ್ಧಾಂತ ಪ್ರತಿಷ್ಠಾನ (ರಿ),

ಗಿರಿನಗರ, ಬೆಂಗಳೂರು-೮೫

'ದುರ್ಗಾಷ್ಟಮೀ' ಶಾಲಿವಾಹನ ಶಕೆ ೧೯೪೩ ಶಾರ್ವರಿ ॥ ಶ್ರಾವಣ ॥ ಶುದ್ಧ ॥ ಪೂರ್ಣಿಮೆ (ದಿನಾಂಕ: ३-೮-೨೦೨೦) ಹಯಗ್ರೀವಜಯಂತಿಯ ಶುಭಪರ್ವಕಾಲದಲ್ಲಿ ಈ ಕೃತಿಯನ್ನು ಪಲಿಮಾರುಮಠಾಧೀಶರಾದ ಪರಮಪೂಜ್ಯ॥ ಶ್ರೀ ವಿದ್ಯಾಧೀಶತೀರ್ಥಶ್ರೀಪಾದಂಗಳವರ-ಕರಕಮಲಗಳಿಂದ ಭಾರತೀರಮಣಹೃದಯಗುಹಾನಿವಾಸಿಗಳಾದ ಶ್ರೀಲಕ್ಷ್ಮೀಹಯಗ್ರೀವದೇವರಿಗೆ ಭಕ್ತಿಯಿಂದ ಸಮರ್ಪಿಸಲಾಯಿತು.

ಪ್ರಥಮ ಮುದ್ರಣ : ೨೦೨೦

ಪುಟಗಳು : ೧೧೨


4271, 2ನೇ ಮೇನ್, ಗಿರಿನಗರ,
ಸೀತಾಸರ್ಕಲ್ ಹತ್ತಿರ, ಬೆಂಗಳೂರು-85
ದೂರವಾಣಿ : 9141495120

ಸಂಪಾದನೆ : ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯ

ಅಕ್ಷರ ಜೋಡಣೆ : ಶ್ರೀಮತಿ ನಾಗಲತಾ

ಮುದ್ರಣ : ಮುಕ್ತಿಪಥ ಮುದ್ರಣಾಲಯ,
ಬೆಂಗಳೂರು.



ದಿ || ಶ್ರೀ ಸಿ.ಎಸ್. ರಂಗನಾಥ್ ರಾವ್ ಮತ್ತು ದಿ || ಶ್ರೀಮತಿ ಆರ್. ಸರೋಜ

ಕೆ.ಜಿ.ಎಫ್. ಗೋಪಿನಾಥಾಚಾರ್ಯರ ಬಳಿ ಮಧ್ವಶಾಸ್ತ್ರವನ್ನು ಅಧ್ಯಯನ ಮಾಡಿದ, ಕೆ.ಜಿ.ಎಫ್ ರಾಯರ ಮಠದ ಸಂಸ್ಥಾಪಕರಾದ, ಸಾಮೂಹಿಕವಾಗಿ ೧೦ ಸಾವಿರಕ್ಕೂ ಅಧಿಕ ಜನಸಾಮಾನ್ಯರುಗಳಿಂದ ನವರಾತ್ರಿಪೂಜೆ ಮಾಡಿಸುತ್ತಿದ್ದ ನಮ್ಮ ತಂದೆಯವರ ವ್ಯಾಪಕಸಾಧನೆಯೇ ನಮ್ಮ ಜೀವನದ ಸ್ಫೂರ್ತಿ. ಇವರ ಸ್ಮರಣಾರ್ಥವಾಗಿ ಹಾಗೂ ಪರಮಪೂಜ್ಯ ಶ್ರೀವಿಶ್ವೇಶತೀರ್ಥಶ್ರೀಪಾದಂಗಳವರ ಅಪೇಕ್ಷೆಯಂತೆ ಪೂರ್ಣಪ್ರಜ್ಞವಿದ್ಯಾಪೀಠದಲ್ಲಿ ದುರ್ಗಾದೇವಸ್ಥಾನವನ್ನು ಕಟ್ಟಿಸಿ, ದುರ್ಗಾದೇವಿಯನ್ನು ಪ್ರತಿಷ್ಠೆ ಮಾಡಿ ತಮ್ಮ ೮೦ನೆಯ ವರ್ಷವನ್ನು ಸಾರ್ಥಕಗೊಳಿಸಿದ ನಮ್ಮ ತಾಯಿ ಶ್ರೀಮತಿ ಆರ್. ಸರೋಜ ಇವರ ವರ್ಷಾಂತಿಕದ ಸ್ಮರಣಾರ್ಥವಾಗಿ ಈ ಜ್ಞಾನಸೇವೆಯನ್ನು ಸಲ್ಲಿಸಲಾಗಿದೆ. ಇದರಿಂದ ಪ್ರಾಪ್ತವಾಗುವ ಪುಣ್ಯರಾಶಿಯು ನಮ್ಮ ಮಾತಾಪಿತೃಗಳಿಗೆ ತಲುಪಲಿ ಎಂದು ಶ್ರೀಹರಿವಾಯುಗುರುಗಳನ್ನು ಪ್ರಾರ್ಥಿಸುತ್ತೇವೆ.

ಸಿ. ಆರ್. ಮುರಳಿ ಸಿ.ಎ., ಹಾಗೂ ಶ್ರೀಮತಿ ಎಸ್. ಪ್ರೇಮಾ

**ದುರ್ಗೆಯ ಈ ಸ್ತೋತ್ರವನ್ನು ೧೦೦೮ ಬಾರಿ ಪಠಿಸಿರಿ**

ಕ್ಷೀರೇಣ ಸ್ನಾಪಿತೇ ದೇವಿ ಚಂದನೇನ ವಿಲೇಪಿತೇ ।
ಬಿಲ್ವಪತ್ರಾರ್ಚಿತೇ ದೇವೀ ದುರ್ಗೇಽಹಂ ಶರಣಂ ಗತಃ ॥

*****

# ವಿಷಯಾನುಕ್ರಮಣಿಕೆ

# ಮುನ್ನುಡಿ

ಲಕ್ಷ್ಮಿಯ ಪ್ರತಿಯೊಂದು ರೂಪಗಳಿಗೆ ಪರಮಾತ್ಮನನ್ನು ಪತಿಯನ್ನಾಗಿ ಚಿಂತಿಸಿ ಪೂಜಿಸುವ ಸಂಪ್ರದಾಯ ನಮ್ಮಲ್ಲಿ ಇದೆ. ಆದರೆ ದುರ್ಗೆ ಎಂಬ ರೂಪಕ್ಕೆ ಮಾತ್ರ ಪರಮಾತ್ಮನ ತಂಗಿ ಎಂಬ ಅನುಸಂದಾನದಿಂದಲೇ ಚಿಂತಿಸಿ ಪೂಜಿಸಬೇಕು. ದುರ್ಗಾಪತಿ ನರಸಿಂಹ ಎಂದಾಗಲೀ, ದುರ್ಗಾಪತೀ ನಾರಾಯಣ ಎಂದಾಗಲೀ ಚಿಂತಿಸಿ ಪೂಜಿಸುವ ಸಂಪ್ರದಾಯವು ಇರುವುದಿಲ್ಲ. ಏಕೆಂದರೆ ದುರ್ಗೆಯು ಕನ್ಯಾರೂಪಳಾಗಿದ್ದಾಳೆ. ಲಕ್ಷ್ಮೀದೇವಿಯ ಎಲ್ಲ ರೂಪಗಳಿಗೆ ಅಭೇದವಿದ್ದರೂ ಕೂಡ ವಿಶೇಷ ಬಲದಿಂದ ಹೀಗೆ ಅನುಸಂಧಾನ ಮಾಡಬೇಕು. ಇದರ ಬಗ್ಗೆ ಹೆಚ್ಚಿನ ವಿಮರ್ಶೆಯನ್ನು ಈ ಪುಸ್ತಕದಲ್ಲಿ ನೀವು ಕಾಣಬಹುದು.

ಚತುರ್ಮುಖಬ್ರಹ್ಮದೇವರು ಲಕ್ಷ್ಮೀದೇವಿಯ ದುರ್ಗಾರೂಪವನ್ನು ವಿಶೇಷವಾಗಿ ಪೂಜೆ ಮಾಡಿದರೆಂದು ಭವಿಷ್ಯಪುರಾಣವು ಹೇಳುತ್ತದೆ. ಸ್ಕಂದಪುರಾಣವು ದುರ್ಗಾಪೂಜೆಯನ್ನು ಮೂರು ಕಾಲದಲ್ಲಿಯೂ ಮಾಡಬೇಕೆಂದು 'ತ್ರಿಕಾಲಂ ಪೂಜಯೇತ್ ದೇವೀಂ ಜಪಸ್ತೋತ್ರಪರಾಯಣಃ' ಎಂಬುದಾಗಿ ಹೇಳುತ್ತದೆ. ನವರಾತ್ರಿಯಲ್ಲಿ ಒಂಬತ್ತು ದಿವಸಗಳ ಕಾಲ ಮೂರು ಸಂಧ್ಯಾಕಾಲಗಳಲ್ಲಿಯೂ ದುರ್ಗಾರಾಧನೆಯನ್ನು ನಡೆಸಬೇಕು. ಸಾಧ್ಯವಾಗದಿದ್ದರೆ ಸಾಯಂಕಾಲದ ಸಮಯದಲ್ಲಾದರೂ ದುರ್ಗಾಪೂಜೆಯನ್ನು ನಡೆಸಬೇಕು. ಅದೂ ಸಾಧ್ಯವಾಗದಿದ್ದರೆ ಐದು ದಿವಸಗಳಲ್ಲಿ ಅಥವಾ ಮೂರು ದಿವಸಗಳಲ್ಲಿ ದುರ್ಗಾಪೂಜೆಯನ್ನು ಆಚರಣೆ ಮಾಡಬೇಕು. ಅಂತಿಮವಾಗಿ ದುರ್ಗಾಷ್ಟಮಿಯ ದಿವಸವಾದರೂ ದುರ್ಗಾರಾಧನೆಯನ್ನು ನಡೆಸಬೇಕು.

ರಂಭಾ ಕುಂಭೀ ಹರಿದ್ರಾ ಚ ಜಯಂತೀ ಬಿಲ್ವದಾಡಿಮೌ ।
ಅಶೋಕೋ ಮಾದವೃಕ್ಷಶ್ಚ ಧಾತ್ರ್ಯಾದಿನವಪತ್ರಿಕಾಃ ॥

ಬಾಳೆ, ಕಿರಿಯ ಶಿವನಿಮರ, ಅರಿಶಿನ, ತಕ್ಕಿಲೆಗಿಡ, ಬಿಲ್ವ, ದಾಳಿಂಬೆ, ಅಶೋಕ, ಮಾದಾಳ, ನೆಲ್ಲಿ ಈ ಒಂಬತ್ತು ಮರಗಳಲ್ಲಿ ದುರ್ಗೆಯ ವಿಶೇಷ ಸನ್ನಿಧಾನವು ಇರುತ್ತದೆ. ಈ ಮರಗಳ ಸನಿಹದಲ್ಲಿ ದುರ್ಗಾಪೂಜೆಯು ಹೆಚ್ಚು ಫಲಕಾರಿಯಾಗುತ್ತದೆ. ದುರ್ಗೆಯ ಬಗ್ಗೆ ದುರ್ಗಾಸಪ್ತಶತಿ, ದೇವೀಮಹಾತ್ಮ್ಯ, ದೇವೀಭಾಗವತ ಮೊದಲಾದವುಗಳಲ್ಲಿ ವಿಸ್ತಾರವಾದ ಮಾಹಿತಿಯು ದೊರಕುತ್ತದೆ. ನವರಾತ್ರಿಯ ಪರ್ವಕಾಲದಲ್ಲಿ ಐದು ಬಗೆಯ ದೀಪಗಳಲ್ಲಿ ಅಥವಾ ಒಂದು ಬಗೆಯ ದೀಪದಲ್ಲಿ ದುರ್ಗೆಯನ್ನು ಪೂಜಿಸಿದರೆ ಅಭೀಷ್ಟವಾದ ಫಲಗಳನ್ನು ಪಡೆದುಕೊಳ್ಳಬಹುದು.

ಈ ಪುಸಕ್ತದಲ್ಲಿ ಕಲಶದಲ್ಲಿ ದುರ್ಗೆಯನ್ನು ಆವಾಹನೆ ಮಾಡಿ ಪೂಜಿಸುವ ಸರಳವಿಧಾನವನ್ನು ತಿಳಿಸಲಾಗಿದೆ. ದೀಪದಲ್ಲಿ ಅಥವಾ ಮಂಡಲದಲ್ಲಿ ದುರ್ಗೆಯನ್ನು ಆರಾಧನೆಯನ್ನು ಮಾಡುವ ಅಪೇಕ್ಷೆಯುಳ್ಳವರು ಪುರೋಹಿತರ ಮೂಲಕವೇ ಮಾಡಿಸಬೇಕು. ಮತ್ತು ಚಂಡಿಕಾಹೋಮವನ್ನೂ ಕೂಡ ಪುರೋಹಿತರ ಮೂಲಕ ಮಾಡಿಸುವುದು ಅತ್ಯಂತ ಕ್ಷೇಮಕರವಾಗಿದೆ.

ಈ ಪುಸ್ತಕದಲ್ಲಿ ದುರ್ಗೆಯ ಬಗ್ಗೆ ಕೆಲವು ಮಾಹಿತಿಗಳು ದುರ್ಗಾಪೂಜೆಯ ವಿಧಾನ, ಹಾಗೂ ಸ್ತೋತ್ರಮಂತ್ರಗಳ ಸಂಗ್ರಹವನ್ನು ಮಾಡಲಾಗಿದೆ. ಎಲ್ಲ ದುರ್ಗಾರಾಧಕರು ಇದರ ಸದುಪಯೋಗವನ್ನು ಪಡೆದುಕೊಳ್ಳಬೇಕೆಂದು ಅಪೇಕ್ಷಿಸುತ್ತೇನೆ.

ಈ ಪುಸ್ತಕದ ಸೇವೆಯನ್ನು ಮಾಡಿದ ಹರಿಭಕ್ತರಾದ ದಾನಶೂರಕರ್ಣರೆಂದೇ ಪ್ರಸಿದ್ಧರಾದ ಎಲ್ಲ ಪೀಠಾಧಿಪತಿಗಳಿಗೂ ಅತ್ಯಂತ ಆತ್ಮೀಯರಾದ ಚಾರ್ಟೆಡ್ ಆಕೌಂಟೆಂಟ್ ಶ್ರೀ ಸಿ.ಆರ್. ಮುರಳಿ ಹಾಗೂ ಶ್ರೀಮತಿ ಎಸ್. ಪ್ರೇಮಾ ದಂಪತಿಗಳಿಗೆ ಆಯುಷ್ಯ ಆರೋಗ್ಯಗಳ ಜೊತೆ ಜ್ಞಾನ-ಭಕ್ತಿ-ವೈರಾಗ್ಯಗಳು ಪ್ರಾಪ್ತವಾಗಲಿ ಎಂದು ಪ್ರಾರ್ಥಿಸುವುದರ ಜೊತೆ ಇವರ ಮಾತಾ-ಪಿತೃಗಳಿಗೆ ಈ ಜ್ಞಾನಯಜ್ಞದ ಪುಣ್ಯರಾಶಿಯು ತಲುಪಲಿ ಎಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

- ಸಂಪಾದಕ.

# ದುರ್ಗೆಯ ಧ್ಯಾನ

ಕೌಶೇಯ ರಕ್ತಸವಸನಾಮರವಿಂದನೇತ್ರಾಂ

ಪಾಶಾಂಕುಶಾಭಯವರೋದ್ಯತ ಪದ್ಮಹಸ್ತಾಮ್ ।

ಉದ್ಯಚ್ಛತಾರ್ಕಸದೃಶಾಂ ಪರಮಾಂಕಸಂಸ್ಥಾಮ್ ।

ಧ್ಯಾಯೇತ್ ವಿಧೀಶ ನುತಪಾದ ಯುಗಾಂ ಜನಿತ್ರೀಂ ।

ತ್ರಿನೇತ್ರತ್ವಂ ಚ ದುರ್ಗಾಯಾಃ ಪ್ರಾಯಃ ಸರ್ವತ್ರ ಕಥ್ಯತೇ ।

ಪಾದೈಃ ಸಮಸ್ತೇನ ತಥಾಷಡರ್ಣೇನಾಂಗ ಮುಚ್ಯತೇ ॥ (ತಂತ್ರಸಾರಸಂಗ್ರಹ)

೧. ದುರ್ಗೆಯನ್ನು ಧ್ಯಾನ ಮಾಡುವಾಗ ಮೂರು ಕಣ್ಣುಗಳುಳ್ಳವಳೆಂದು ಸಾಮಾನ್ಯವಾಗಿ ಧ್ಯಾನವನ್ನು ಮಾಡುತ್ತಾರೆ. 'ಜಾತವೇದಸೇ' ದುರ್ಗಾಮಂತ್ರದ ಅಂಗನ್ಯಾಸವನ್ನು ಮಂತ್ರದ ನಾಕುಪಾದಗಳ ಕ್ರಮದಿಂದ ಆಚರಣೆ ಮಾಡಬೇಕು. ದುರ್ಗಾಷಡಕ್ಷರ ಮಂತ್ರಕ್ಕೆ ಆ ಮಂತ್ರದಲ್ಲಿರುವ ಆರು ಅಕ್ಷರಗಳಿಂದಲೇ ಅಂಗನ್ಯಾಸವನ್ನು ಮಾಡಬೇಕು. ಹೀಗೆ ಶ್ರೀಮಧ್ವಾಚಾರ್ಯರು ತಂತ್ರಸಾರಸಂಗ್ರಹದಲ್ಲಿ ಹೇಳಿದ್ದಾರೆ. ದುರ್ಗೆಯು ಮೂರುಕಣ್ಣುಗಳಿಂದ ಕೂಡಿದ್ದಾಳೆ. ಇವಳ ಈ ಮೂರನೆಯ ಕಣ್ಣು ಕಡುಕೋಪವನ್ನು ಪ್ರಕಟ ಮಾಡುವುದರಿಂದ ಧ್ಯಾನ ಮಾಡುವುದು ಅತ್ಯಂತ ಕಠಿಣವಾಗಿದೆ. ಆದ್ದರಿಂದ ಪ್ರಾಯಃ ಎಂಬ ಪದವನ್ನು ಆಚಾರ್ಯರು ಪ್ರಯೋಗಿಸಿದ್ದಾರೆ. ಯೋಗ್ಯತೆಯಲ್ಲಿ ಉತ್ತಮರಿಂದ ಮಾತ್ರ ಇಂಥ ದುರ್ಗಾರೂಪವನ್ನು ಧ್ಯಾನ ಮಾಡಲು ಸಾಧ್ಯವಾಗುತ್ತದೆ. ನಮ್ಮಂಥವರು ಎರಡು ಕಣ್ಣಿನ ದುರ್ಗಾರೂಪವನ್ನು ಧ್ಯಾನ ಮಾಡಿದರೆ ಸಾಕು.

೨. ಶಾರದಾ ತಿಲಕದಲ್ಲಿ ದುರ್ಗೆಯ ವರ್ಣನೆ ಹೀಗಿದೆ -

ಸಿಂಹಸ್ಥಾಶಶಿಶೇಖರಾ ಮರಕತಪ್ರಖ್ಯೈಶ್ಚತುರ್ಭಿರ್ಭುಜೈಃ

ಶಂಖಂ ಚಕ್ರಧನುಶ್ಶರಾಂಶ್ಚ ದಧತೀ ನೇತ್ರೈಸ್ತ್ರಿಭಿಃ ಶೋಭಿತಾಂ ॥

ಆಮುಕ್ತಾಂಗದಹಾರಕಂಕಣರಣತ್ಕಾಂಚೀರಣನ್ನೂಪುರಾ
ದುರ್ಗಾ ದುರ್ಗತಿಹಾರಿಣೀ ಭವತು ವೋ ರಕ್ತೋಲ್ಲಸತ್ಕುಂಡಲಾ ॥

ಸಿಟ್ಟಿಗೆದ್ದ ಸಿಂಹದ ಮೇಲೆ ಕುಳಿತಿದ್ದಾಳೆ. ಚಂದ್ರನನ್ನು ಮುಡಿಯಲ್ಲಿ ಧರಿಸಿದ್ದಾಳೆ. ನಾಕು ಭುಜಗಳಿಂದ ಕೂಡಿದ್ದಾಳೆ. ಶಂಖ, ಚಕ್ರ, ಧನುಸ್ಸು, ಬಾಣಗಳನ್ನು ಆ ನಾಕು ಕೈಗಳಲ್ಲಿ ಕ್ರಮವಾಗಿ ಧಾರಣೆ ಮಾಡಿದ್ದಾಳೆ. ಮೂರು ಕಣ್ಣುಗಳಿಂದ ಪ್ರಜ್ವಲಿಸುತ್ತಿದ್ದಾಳೆ. ಮುತ್ತಿನ ತೋಳ್ಬಂದಿಗಳನ್ನು, ಹಾರಗಳನ್ನು, ಕಂಕಣವನ್ನು, ಶಬ್ದಮಾಡುವ ಸೊಂಟದ ಪಟ್ಟಿಯನ್ನು, ಗೆಜ್ಜೆಯನ್ನು ಧಾರಣೆ ಮಾಡಿದ್ದಾಳೆ. ದುರ್ಗತಿಯನ್ನು ಪರಿಹರಿಸುವುದಕ್ಕಾಗಿ ಸಿದ್ಧಳಾಗಿದ್ದಾಳೆ. ಕೆಂಪಾಗಿ ಶೋಭಿಸುವ ಕುಂಡಲಗಳನ್ನು ಧರಿಸಿದ್ದಾಳೆ. ಇಂಥ ದುರ್ಗೆಯು ನಮ್ಮೆಲ್ಲರ ಕಷ್ಟಗಳನ್ನು ಪರಿಹರಿಸಲಿ.

೩. 'ಜಾತವೇದಸೇ' ಎಂಬುದು ದುರ್ಗೆಯ ಮಂತ್ರವಾಗಿದೆ. ಮತ್ತೊಂದು 'ದುಃ ದುರ್ಗಾಯೈ ನಮಃ' ಎಂಬ ಷಡಕ್ಷರ ಮಂತ್ರವೂ ಕೂಡ ಇರುತ್ತದೆ. ಉತ್ತಮ ಗುರುಗಳಿಂದ ಉಪದೇಶ ಪಡೆದು ಅತ್ಯಂತ ಕಟ್ಟುನಿಟ್ಟಾಗಿ ಈ ಮಂತ್ರಗಳನ್ನು ಜಪ ಮಾಡಬೇಕು. ಅಶುಚಿಯಾಗಿ ಉಪದೇಶವಿಲ್ಲದೇ ಮಾಡುವ ಮಂತ್ರದಿಂದ ಅನರ್ಥವೇ ಆಗುತ್ತದೆ.

## ದುರ್ಗೆಯ ಆರಾಧನೆ ಅತ್ಯಂತ ಅವಶ್ಯಕ

ಇಂದು ಎಲ್ಲೆಡೆಯೂ ಅಧರ್ಮವೇ ತಾಂಡವಾಡುತ್ತಿದೆ. ಅಸಜ್ಜನರದ್ದೇ ಜಗತ್ತಾಗಿದೆ. ನದೀ, ಸರೋವರಗಳು ಸಂಪೂರ್ಣವಾಗಿ ಕಲುಷಿತವಾಗುತ್ತಿವೆ. ಶುದ್ಧವಾದ ಹಸುಗಳೇ ಇಲ್ಲದಂತಾಗಿವೆ. ಯಾವ ಪ್ರದೇಶದಲ್ಲಿ ನದೀ ಹಾಗೂ ಹಸುಗಳು ನಾಶವಾಗುತ್ತವೋ ಅಲ್ಲಿ ಕಲಿಯು ಸಂಪೂರ್ಣವಾಗಿ ಆವರಿಸುತ್ತಾನೆ. ಧರ್ಮಪ್ರಜ್ಞೆ, ವಿಷ್ಣುಸರ್ವೋತ್ತಮತ್ವದ ದಾರ್ಢ್ಯ, ಅಲ್ಲಿ ಉಳಿಯಲು ಸಾಧ್ಯವಿಲ್ಲ. ಇಂಥ ಘೋರವಾದ ಯುಗದಲ್ಲಿ ಆ ದುರ್ಗೆಯೇ ಬಂದು ನಮ್ಮೆಲ್ಲರನ್ನು ರಕ್ಷಣೆ ಮಾಡಬೇಕು. ಧರ್ಮಸ್ಥಾಪನೆ ಮಾಡಬೇಕು. ಅಧರ್ಮವನ್ನು

ಸಂಹಾರ ಮಾಡಬೇಕು. ಅದಕ್ಕಾಗಿ ನಾವೆಲ್ಲರೂ ಏಕಕಂಠದಿಂದ ಆ ದುರ್ಗೆಯನ್ನೇ ಶರಣೆನ್ನಬೇಕು.

ಇದನ್ನು ಶ್ರೀನಾರಾಯಣಪಂಡಿತಾಚಾರ್ಯರು ಮಧ್ವವಿಜಯದಲ್ಲಿ ಸುಂದರವಾಗಿ ವರ್ಣನೆ ಮಾಡಿದ್ದಾರೆ. ಶ್ರೀಮಧ್ವಾಚಾರ್ಯರು ಸಂಚಾರ ಮಾಡುತ್ತಾ, ಕೇರಳದ ಪಯಸ್ವಿನೀ ನದಿಯ ತೀರಕ್ಕೆ ತೆರಳುತ್ತಾರೆ. ಪಯಸ್ವಿನೀ ನದಿಯನ್ನು ನೋಡಿ, ಮುಂದೆ ನಡೆಯುವ ದುರ್ಗಾವತಾರವನ್ನು ಚಿಂತನೆ ಮಾಡುತ್ತಾರೆ -

ಸ್ವಹೇಲಯ ಪಾತಿತಪಾರ್ಥಿವವ್ರಜಾಂ
ಧೀಶುದ್ಧಿದಾಂ ಕೇರಳ ಭೂಷಣಾಯಿತಾಮ್ ।
ಪಯಸ್ವಿನೀಂ ಪ್ರೇಕ್ಷ್ಯ ಪಥಿ ದ್ವಿಜಾರ್ಚಿತಾಂ
ಸ ಭಾವಿನೀಮಸ್ಮರದತ್ರ ಚಂಡಿಕಾಮ್ ॥

ಪಯಸ್ವಿನೀ ನದಿಯು ದಡದಲ್ಲಿ ಸೆಟೆದು ನಿಂತ ಮರಗಳನ್ನು ಬಗ್ಗಿಸಿ ನೀರು ಪಾಲು ಮಾಡಿತ್ತು. ಇದರಂತೆ ದುರ್ಗೆಯೂ ಕೂಡ ಯಾರು ಸೆಟೆದು ನಿಂತು ಅಧರ್ಮಿಗಳಾಗಿರುತ್ತಾರೋ, ಅಂಥವರನ್ನು ಸಂಹಾರ ಮಾಡುತ್ತಾಳೆ. ಯಾರು ನದಿಗೆ ಸ್ನಾನ-ಪಾನಕ್ಕಾಗಿ ಆಗಮಿಸುತ್ತಾರೋ, ಅಂಥ ಜನರ ದೇಹವನ್ನು ಮನಸ್ಸನ್ನು ನದಿಯು ಸ್ವಚ್ಛಗೊಳಿಸುತ್ತಿತ್ತು. ಅದರಂತೆ ದುರ್ಗೆಯು ಯಾರು ಹರಿನಿಷ್ಠರಾಗಿರುತ್ತಾರೋ, ಅಂಥವರಿಗೆ ಸಂಪೂರ್ಣವಾಗಿ ಅನುಗ್ರಹವನ್ನು ಮಾಡುತ್ತಾಳೆ. ಹೀಗೆ ಪಯಸ್ವಿನೀ ನದಿಯು ದುರ್ಗೆಯಂತೆ ಮಧ್ವಾಚಾರ್ಯರಿಗೆ ಕಾಣಿಸುತ್ತಾಳೆ. ದುರ್ಗೆಯು ಮುಂದೆ ಈ ಪಯಸ್ವಿನೀ ನದಿಯ ತೀರದಲ್ಲಿ ಒಬ್ಬ ಉತ್ತಮ ಬ್ರಾಹ್ಮಣರ ಮನೆಯಲ್ಲಿ ಅವತಾರ ಮಾಡುತ್ತಾಳೆ. ಅನಂತರ ದೇಶದಲ್ಲಿ ಎಲ್ಲೆಡೆಯೂ ಸಂಚಾರ ಮಾಡಿ, ಎಲ್ಲೆಡೆ ಇರುವ ಅಸಜ್ಜನರನ್ನು, ಅಧಾರ್ಮಿಕರನ್ನು, ಹತ್ತಿಕ್ಕುತ್ತಾಳೆ. ಧರ್ಮಸ್ಥಾಪನೆ ಮಾಡುತ್ತಾಳೆ. ಪುನಃ ಸಜ್ಜನರು ಜೀವಿಸುವಂತಾಗುತ್ತದೆ. ನದಿಗಳು ಶುದ್ಧವಾಗುತ್ತವೆ. ಶುದ್ಧವಾದ ಹಸುಗಳು

ಬದುಕುವಂತಾಗುತ್ತದೆ. ಇಂಥ ಒಳ್ಳೆಯ ಕಾಲವು ನಮಗೆ ಪ್ರಾಪ್ತವಾಗಬೇಕಾಗಿದೆ. ದುರ್ಗೆಯು ಅವತಾರವೆತ್ತಬೇಕಾಗಿದೆ. ಆ ದುರ್ಗೆಯಿಂದಲೇ ಈ ದೇಶದಲ್ಲಿ ಧರ್ಮಸ್ಥಾಪನೆಯಾಗಲು ಸಾಧ್ಯ. ಆದ್ದರಿಂದ ಇಂಥ ದುರ್ಗೆಯನ್ನು ನಾವು ಸ್ಮರಣೆ ಮಾಡಿ, ಅವಳ ಅನುಗ್ರಹವನ್ನೇ ಪ್ರಾರ್ಥನೆ ಮಾಡಬೇಕು.

ದುರ್ಗಾಸ್ಮೃತಾ ಹರಸಿ ಭೀತಿಮಶೇಷ ಜಂತೋಃ ।
ಸ್ವಸ್ಥೈ ಸ್ಮೃತಿಮತಿಮತೀವ ಸ್ಮೃತಾಂಮುದಾಂ ದದಾಸಿ ॥

(ಮಾರ್ಕಂಡೇಯ ಪುರಾಣ)

ದೇವಿ ದುರ್ಗೆಯೇ ! ನಾವೆಲ್ಲರೂ ಅಧರ್ಮದಿಂದ ಭಯಪೀಡಿತರಾಗಿದ್ದೇವೆ. ನಿನ್ನನ್ನು ಸ್ಮರಣೆ ಮಾಡುವುದರಿಂದಲೇ ನಮ್ಮೆಲ್ಲರ ಭಯವನ್ನು ಪರಿಹರಿಸುವಿ. ಯಾವಭಕ್ತರು ನಿನ್ನನ್ನು ಸ್ಮರಿಸುತ್ತಾರೋ, ಅಂಥವರಿಗೆ ಉತ್ತಮವಾದ ಜ್ಞಾನವನ್ನು ದಯಪಾಲಿಸುವಿ. ಓ ದುರ್ಗೆಯೇ ! ನಿನಗೆ ನನ್ನ ಭಕ್ತಿಯ ನಮಸ್ಕಾರಗಳು. ಹೀಗೆ ಮಾರ್ಕಂಡೇಯ ಪುರಾಣವು ಹೇಳುವಂತೆ ಎಲ್ಲ ಸತ್ಕಾರ್ಯಗಳಲ್ಲಿ ಮೊದಲು ದುರ್ಗೆಯನ್ನು ನಮಿಸಬೇಕು. ಅವಳ ಅನುಗ್ರಹವನ್ನು ಹೊಂದಿ, ಮುಂದಿನ ಕಾರ್ಯಗಳನ್ನು ಮಾಡಲು ಹೊರಟಾಗ ಎಲ್ಲ ಕಾರ್ಯಗಳು ಯಶಸ್ವಿಯಾಗುತ್ತವೆ. ಪರಮಾತ್ಮನಲ್ಲಿ ಸಮರ್ಪಿತವಾಗುತ್ತವೆ. ದುರ್ಗೆಯ ಅನುಗ್ರಹವಿಲ್ಲದಿದ್ದರೆ, ಯಾವುದೇ ಕಾರ್ಯವನ್ನು ನಿರಾತಂಕವಾಗಿ ಮಾಡಲು ಸಾಧ್ಯವಾಗುವುದಿಲ್ಲ.

## ಪಾಜಕಕ್ಷೇತ್ರದಲ್ಲಿರುವ ದುರ್ಗೆ

* ಪರಶುರಾಮ ದೇವರು ಪಾಜಕಕ್ಷೇತ್ರದಲ್ಲಿ ನೆಲೆಸಿದ್ದಾರೆ. ದುರ್ಗೆಯೂ ಕೂಡ ಅವರ ಸನಿಹದಲ್ಲಿಯೇ ನೆಲೆಸಿದ್ದಾಳೆ. ದುರ್ಗಾಬೆಟ್ಟವೆಂದೇ ಪ್ರಸಿದ್ಧವಾಗಿದೆ. ಇಂಥ ಪಾಜಕ ಕ್ಷೇತ್ರದಲ್ಲಿರುವ ದುರ್ಗೆಯನ್ನು ನಿತ್ಯವೂ ಸ್ಮರಣೆ ಮಾಡಿಕೊಳ್ಳಬೇಕು. ನಮ್ಮ ಕ್ಷೇತ್ರದಲ್ಲಿಯೇ ವಾಸವಾಗಿರುವ ಈ ದುರ್ಗೆಯನ್ನು ಸ್ಮರಣೆ ಮಾಡುವುದರಿಂದಲೇ ನಮ್ಮನ್ನು ಅವಳು ಸಲಹುತ್ತಾಳೆ.

ಪವಿತ್ರಂ ಪಾಜಕಕ್ಷೇತ್ರಂ ಕೋ ನ ಸೇವೇತ ಕೋವಿದಃ ।
ಸತ್ಯಲೋಕೇಶ್ವರಃ ಪ್ರಾಣೋ ಯತ್ರಾವಾತರದುತ್ಸುಕಃ ॥

ಸತ್ಯಲೋಕಾಧಿಪತಿಗಳಾದ ಮುಖ್ಯಪ್ರಾಣದೇವರು ಪಾಜಕಕ್ಷೇತ್ರದಲ್ಲಿ ಬಹಳ ಉತ್ಸಾಹದಿಂದ ಅವತರಿಸಿದರು. ಇದರಿಂದಲೇ ಆ ಕ್ಷೇತ್ರದ ಮಹಾತ್ಮ್ಯವು ಅಸಾಧಾರಣವಾದುದೆಂದು ತಿಳಿಯುತ್ತದೆ. ಇಂಥ ಆ ಕ್ಷೇತ್ರವನ್ನು ಯಾವ ಜ್ಞಾನಿ ತಾನೆ ಸೇವಿಸದೆ ಇರುತ್ತಾನೆ.

ಪರಶ್ವಧಧನುರ್ಬಾಣಗದಾತೀರ್ಥೋಪಶೋಭಿತೇ ।
ಗಿರೌ ಯತ್ರ ಸುತಪ್ರೇಮ್ಣೇವಾಸ್ತೇ ನಿತ್ಯಂ ಹರಿಸ್ವಸಾ ॥

ಆ ಪಾಜಕಕ್ಷೇತ್ರದಲ್ಲಿ ವಿಮಾನಗಿರಿ (ಕುಂಜಾರು) ಎಂಬ ಪರ್ವತವಿದೆ. ಆ ಪರ್ವತದ ನಾಲ್ಕು ದಿಕ್ಕುಗಳಲ್ಲಿ ಪರಶು, ಧನುಸ್ಸು, ಬಾಣ, ಗದಾ ಎಂಬ ನಾಲ್ಕು ತೀರ್ಥಗಳಿವೆ. ಅಲ್ಲಿ ಶ್ರೀಕೃಷ್ಣನ ತಂಗಿಯಾದ ದುರ್ಗೆಯು ತನ್ನ ಮಗನಾದ ಮುಖ್ಯಪ್ರಾಣನ ಅವತಾರರಾದ ಮಧ್ವಾಚಾರ್ಯರಲ್ಲಿ ವಾತ್ಸಲ್ಯದಿಂದಲೋ ಎಂಬಂತೆ ತಾನು ನೆಲೆಸಿದ್ದಾಳೆ.

ತ್ರಿಶೂಲಧಾರಿಣೀ ದೈತ್ಯಗಜಕುಂಭವಿದಾರಿಣೀ ।
ಗಿರೀಂದ್ರಶಿಖರಾವಾಸಾ ದುರ್ಗಾ ಸ್ವರ್ಗಾಪವರ್ಗದಾ ॥

ದುರ್ಗೆಯು ತನ್ನ ಕೈಯಲ್ಲಿ ತ್ರಿಶೂಲವನ್ನು ಧರಿಸಿ ಮಹಿಷಾಸುರನೆಂಬ ದೈತ್ಯನ ತಲೆಯನ್ನು ಮೆಟ್ಟಿ ಸಿಂಹವು ಆನೆಯ ಕುಂಭಸ್ಥಳವನ್ನು ಭೇದಿಸುವಂತೆ ಮಹಿಷಾಸುರನ ತಲೆಯನ್ನು ಸೀಳಿದಳು. ಅಂತಹ ವಿಮಾನಗಿರಿ ಶಿಖರವಾಸಿನಿಯಾದ ದುರ್ಗೆಯು ಸ್ವರ್ಗ ಮತ್ತು ಮೋಕ್ಷಗಳನ್ನೇ ಕೊಡುತ್ತಾಳೆ.

ಪ್ರಲಯೇ ಜಲದುರ್ಗಾಸಿ ಸರ್ಗಾದೌ ಗಿರಿವಿಸ್ಮೃತಿಃ ।
ಇದಾನೀಂ ಸ್ಥಳದುರ್ಗಾಸಿ ದುರ್ಗಾ ತ್ವಂ ಸದ್ಗುಣಾರ್ಣವೇ ॥

ಶ್ರೀದುರ್ಗಾದೇವಿಯೇ, ನೀನು ಪ್ರಲಯಕಾಲದಲ್ಲಿ ಪ್ರಲಯ ಸಮುದ್ರರೂಪದಲ್ಲಿ ಇರುವಿ. ಆದ್ದರಿಂದ ಜಲದುರ್ಗಾ ಎನ್ನಿಸಿಕೊಳ್ಳುತ್ತೀ.

ಸೃಷ್ಟಿಯ ಆರಂಭದಲ್ಲಿ 'ಗಿರಿವಿಸ್ತೃತಿಃ'ಯಾದುದರಿಂದ ಗಿರಿದುರ್ಗಾ ಎನ್ನಿಸಿಕೊಳ್ಳುತ್ತೀ. ಈಗ ಈ ಸ್ಥಳದಲ್ಲಿ ಇದ್ದುಕೊಂಡು ಸ್ಥಲದುರ್ಗಾ ಎನ್ನಿಸಿಕೊಂಡಿದ್ದೀ. ಹೀಗೆ ನೀನು ಜಲದುರ್ಗಾ, ಗಿರಿದುರ್ಗಾ ಮತ್ತು ಸ್ಥಲದುರ್ಗಾ ಎಂಬ ಮೂರು ವಿಧದ ದುರ್ಗಾಸ್ವರೂಪಳಾಗಿದ್ದೀ.

ದುರ್ಗಾದೇವಿಯು ಜಲ, ಗಿರಿ, ಸ್ಥಲ ಎಂಬ ಮೂರು ಪ್ರದೇಶಗಳಲ್ಲಿಯೂ ನೆಲೆಸಿದ್ದಾಳೆ.

ದುರ್ಜ್ಞೇಯತ್ವಾತ್ ದುಃಖದತ್ವಾತ್ ದುಷ್ಪ್ರಾಪತ್ವಾಚ್ಚ ದುರ್ಜನೈಃ ।
ಸತಾಮಭಯಭೂಮಿತ್ವಾತ್ ದುರ್ಗಾ ತ್ವಂ ಹೃದ್ಗುಹಾಶ್ರಯಾತ್ ॥

ಬ್ರಹ್ಮಾದಯೋ ಬಹುತಿಥಂ ಯದಪಾಂಗ ಮೋಕ್ಷಕಾಂಕ್ಷಾಃ' ಎಂಬ ಭಾಗವತ ಪ್ರಮಾಣದಂತೆ ಬಹಳ ದುಃಖದಿಂದ ತಿಳಿಯಲ್ಪಡತಕ್ಕವಳಾದುದರಿಂದ ನೀನು 'ದುರ್ಗಾ' ಎಂದು ಹೇಳಲ್ಪಡುತ್ತೀ. (ದುಃಖೇನ ಗಮ್ಯತ ಇತಿ ದುರ್ಗಾ) ದುರ್ಜನರಿಗೆ ದುಃಖವನ್ನು ಕೊಡುವವಳಾದುದರಿಂದಲೂ ದುರ್ಗಾ ಎನ್ನಿಸಿಕೊಳ್ಳುತ್ತೀ. (ದುಃಖಂ ಗಮಯತಿ ದುರ್ಜನಾನ್ ಇತಿ ದುರ್ಗಾ) ದುರ್ಜನರು ಎಷ್ಟು ಕಷ್ಟಪಟ್ಟರೂ ನಿನ್ನನ್ನು ಹೊಂದಲಾರರು. ಶ್ವೇತದ್ವೀಪ, ಅನಂತಾಸನ, ವೈಕುಂಠಗಳೆಂಬ ಮೂರು ಲೋಕಸ್ವರೂಪಳಾಗಿದ್ದು ಸಜ್ಜನರಿಗೆ ಮೋಕ್ಷವೆಂಬ ಅಭಯಸ್ಥಾನಸ್ವರೂಪಳಾಗಿದ್ದೀ. ಎಲ್ಲರ ಹೃದಯ-ಗುಹೆಯಲ್ಲಿಯೂ ನಿಯಾಮಕಳಾಗಿರುವುದರಿಂದ 'ದುರ್ಗಾ' ಎಂದು ಹೇಳಿಸಿಕೊಳ್ಳಲ್ಪಡುತ್ತೀಯೆ ಎಂದು ದುರ್ಗೆಯನ್ನು ವರ್ಣಿಸಿದ್ದಾರೆ.

## ದುರ್ಗಾಷ್ಟಮಿಯ ಆಚರಣೆ

* ದುರ್ಗಾಷ್ಟಮಿಯ ದಿವಸ ಕೆಲವರು ಕಲಶದಲ್ಲಿ ದುರ್ಗೆಯನ್ನು ಆವಾಹನೆ ಮಾಡಿ ಪೂಜಿಸುತ್ತಾರೆ. ಇನ್ನೂ ಕೆಲವರು ದುರ್ಗಾಮಂಡಲವನ್ನು ಬರೆದು ಮಂಡಲದಲ್ಲಿ ಪೂಜಿಸುತ್ತಾರೆ. ಇನ್ನು ಕೆಲವರು ದುರ್ಗಾಮಂಡಲದಲ್ಲಿ ದೊಡ್ಡ ದೀಪಸ್ತಂಭವನ್ನಿಟ್ಟು ಆ ದೀಪಸ್ತಂಭಕ್ಕೆ ದುರ್ಗೆಯ ಅಲಂಕಾರವನ್ನು ಮಾಡಿ,

ಪೂಜಿಸುತ್ತಾರೆ. ಈ ಮೂರು ಪಕ್ಷದಲ್ಲಿ ದೀಪಸ್ತಂಭಕ್ಕೆ ದುರ್ಗೆಯ ಅಲಂಕಾರವನ್ನು ಮಾಡಿ, ಪೂಜಿಸುವುದು ಹೆಚ್ಚು ಫಲದಾಯಕವಾಗಿರುತ್ತದೆ. ಇದು ದುರ್ಗಾನಮಸ್ಕಾರ ಎಂಬ ಹೆಸರಿನಿಂದ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಬಹಳ ಪ್ರಸಿದ್ಧವಾಗಿದೆ. ಜೊತೆಯಲ್ಲಿ ಶಾಲಗ್ರಾಮವನ್ನು ಅಥವಾ ದೇವರ ಪ್ರತಿಮೆಯನ್ನು ಇಟ್ಟೇ ದುರ್ಗಾನಮಸ್ಕಾರವನ್ನು ಆಚರಿಸಬೇಕು.

* ದುರ್ಗಾನಮಸ್ಕಾರದಂತೆ ದುರ್ಗಾಹೋಮವನ್ನೂ ಕೂಡ ದುರ್ಗಾಷ್ಟಮಿಯ ದಿವಸ ಮಾಡಿದರೆ ಅಭೀಷ್ಟಗಳೆಲ್ಲವೂ ನೆರವೇರುತ್ತವೆ. ಸಪ್ತಶತಿಯ ಪಠಣದೊಂದಿಗೆ ಆಹುತಿಗಳನ್ನು ಹಾಕುತ್ತಾ, ಚಂಡಿಕಾಹೋಮವನ್ನು ಮಾಡುತ್ತಾರೆ. ಮತ್ತು 'ಜಾತವೇದಸೇ' ಎಂಬ ದುರ್ಗಾಮಂತ್ರದಿಂದಲೂ ಕೂಡ ಹೋಮವನ್ನು ಮಾಡುತ್ತಾರೆ. ಅವರವರ ಮನೋಭೀಷ್ಟಗಳಿಗೆ ತಕ್ಕಂತೆ ದುರ್ಗಾರಾಧನೆಯನ್ನು ಮಾಡತಕ್ಕದ್ದು.

* ಜೀವನದಲ್ಲಿ ಎಂದೂ, ಯಾರಿಂದಲೂ, ಪರಿಹಾರವಾಗಲು ಸಾಧ್ಯವಿರದ ಸಮಸ್ಯೆಗಳ ಪರಿಹಾರಕ್ಕೆ ಹದಿನಾಕು ಬಾರಿ ಸಪ್ತಶತಿಯ ಪಾರಾಯಣವನ್ನು ಮಾಡಬೇಕೆಂಬುದಾಗಿ ಜ್ಯೋತಿಷಿಗಳು ಹೇಳುತ್ತಾರೆ. ಇದರ ಆಚರಣೆಯಿಂದ ಏಳೆಂಟು ಬಾರಿ ಪಾರಾಯಣ ಮಾಡಿದಾಗಲೇ ಪರಿಹಾರವು ಆಗಿರುತ್ತದೆ. ಅಂಥ ಸಂದರ್ಭದಲ್ಲಿ ಸಂಕಲ್ಪ ಮಾಡಿದಂತೆ ಹದಿನಾಕು ಬಾರಿ ಪಾರಾಯಣವನ್ನು ಮಾಡಿ ಮುಗಿಸಿ ದುರ್ಗಾಪತಿಗೆ ಸಮರ್ಪಣೆಯನ್ನು ಮಾಡಬೇಕು.

* ಈ ಪುಸ್ತಕದಲ್ಲಿ ದುರ್ಗೆಯ ವಿಶೇಷಪೂಜೆಯನ್ನು, ದುರ್ಗಾನಮಸ್ಕಾರವನ್ನು, ದುರ್ಗಾಹೋಮವನ್ನು ಹೆಚ್ಚು ಪರಿಚಯ ಮಾಡಿರುವುದಿಲ್ಲ. ಮತ್ತು ಅದಕ್ಕೆ ಸಂಬಂಧಪಟ್ಟ ಯಾವುದೇ ಮಂತ್ರಗಳನ್ನೂ ಕೂಡ ನೀಡಿರುವುದಿಲ್ಲ. ಅದೆಲ್ಲವೂ ತುಂಬಾ ಬೃಹತ್ತಾಗಿದೆ. ಬೇರೆ ಬೇರೆ ಪ್ರಕಾಶನ ಸಂಸ್ಥೆಗಳಿಂದ ಮುದ್ರಿತವಾಗಿವೆ. ಅದರಲ್ಲಿ ವೈಷ್ಣವರಿಂದ ಮುದ್ರಿತವಾದ ಪುಸ್ತಕಗಳನ್ನು ತೆಗೆದುಕೊಂಡು ಸಹಸ್ರನಾಮಾವಳಿ, ಶತನಾಮಾವಳಿ ಮೊದಲಾದವುಗಳನ್ನು ಪಠಿಸಬೇಕು.

* ದುರ್ಗಾಹೋಮ, ದುರ್ಗಾನಮಸ್ಕಾರ ಕಲಶದುರ್ಗಾ ಪೂಜೆ, ಇವುಗಳನ್ನು ಮಾಡಲು ಸಾಧ್ಯವಾಗದಿದ್ದರೂ ಕೂಡ ದೇವರ ಪೂಜೆಯ ಜೊತೆ ದುರ್ಗಾಪೂಜೆಯನ್ನು ಮಾಡಲೇಬೇಕು. ಮಾಡದೇ ಇರಬಾರದು. ಯಾವ ವ್ಯಕ್ತಿಯು ದುರ್ಗಾಷ್ಟಮಿಯ ದಿವಸ ದುರ್ಗೆಯನ್ನು ಮರೆತು, ಉಳಿದೆಲ್ಲ ಪೂಜೆಯನ್ನು ಮಾಡುತ್ತಾನೋ, ಅಂಥವನು ದುರ್ಗೆಯ ಅವಗ್ರಹಕ್ಕೆ ಪಾತ್ರನಾಗುತ್ತಾನೆಂಬ ಪ್ರಮಾಣಶ್ಲೋಕವನ್ನು ಈ ಹಿಂದೆ ನೀಡಲಾಗಿದೆ. ಆದ್ದರಿಂದ ದೇವರ ಪೂಜೆಯ ಜೊತೆ ದುರ್ಗೆಯ ಪೂಜೆಯನ್ನು ಮಾಡಲೇ ಬೇಕು. ಮಾಡದೇ ಇರಬಾರದು. ಮಾಡಬೇಕಾದ ಆ ಪೂಜಾವಿಧಿಯನ್ನು ಈ ಪುಸ್ತಕದಲ್ಲಿ ಮುದ್ರಿಸಲಾಗಿದೆ.

## ಮಹಾಕಾಳಿರೂಪ ತಾಳಿದ ದುರ್ಗಾಮಾತೆ

ಶುಂಭ-ನಿಶುಂಭ ಎಂಬಿಬ್ಬರು ದೈತ್ಯರು ಮಹಾಜಟ್ಟಿಗರು. ದೇವತೆಗಳನ್ನು ಹಿಂಸಿಸುವುದು ಇವರ ದಿನಚರಿ. ತಪಸ್ವಿಗಳ ತಪೋಭಂಗವನ್ನು ಮಾಡುವುದರಲ್ಲಿ ಬಲು ಆಸಕ್ತಿ. ಉಪಾಯಕಾಣದ ದೇವತೆಗಳು ದುರ್ಗೆಯನ್ನೇ ಮೊರೆಹೊಕ್ಕರು. ದುರ್ಗೆಯು ಯುದ್ಧಕ್ಕೆ ಬಂದೇ ಬಿಟ್ಟಳು. ಧೂಮ್ರಾಕ್ಷ ಅವಳನ್ನು ತಡೆದನು. ನಿರಾಯಾಸವಾಗಿ ಅವನನ್ನು ಕೊಂದು ಮುನ್ನುಗ್ಗಿದಳು ದುರ್ಗೆ. ಚಂಡ-ಮುಂಡರು ಸೈನ್ಯ ಕಟ್ಟಿಕೊಂಡು ದುರ್ಗೆಯ ಮೇಲೆ ದಾಳಿ ಮಾಡಿದರು. ಯಾವ ಸೈನ್ಯಕ್ಕೂ ಬಗ್ಗದ ದುರ್ಗೆ ಚಂಡ-ಮುಂಡರ ರುಂಡಗಳನ್ನು ಚೆಂಡಾಡಿದಳು. ರಕ್ತಬೀಜಾಸುರ ಬಂದನು. ಅವನ ರಕ್ತ ಕೆಳಗೆ ಬಿದ್ದರೆ ನೂರಾರು, ಸಾವಿರಾರು ರಕ್ತಬೀಜಾಸುರರೇ ಹುಟ್ಟಿ ಬರುವರು. ಆಗ ದುರ್ಗೆ ಕಾಳಿಯಾಗಿ ಮತ್ತೊಂದು ರೂಪ ತಾಳಿದಳು. ಬೃಹದಾಕಾರವಾಗಿ ನಾಲಿಗೆಯನ್ನು ಚಾಚಿ, ಒಂದೇ ಒಂದು ಹನಿ ರಕ್ತವು ಭೂಮಿಗೆ ಬೀಳದಂತೆ ರಕ್ತಪಾನ ಮಾಡುವ ಭೀಕರ ರೂಪ ತೋರಿದಳು. ರಕ್ತವನ್ನು ನುಂಗದಿದ್ದರೂ ಮಾಯೆ ಮಾಡಿ, ರಕ್ತಪಾನ ಮಾಡಿದಂತೆ ಭ್ರಾಂತಿ ಪಡಿಸಿದಳು. ರಕ್ತಬೀಜಾಸುರನನ್ನೂ ನುಂಗಿದಳು. ಅರ್ಥಾತ್ ಸಂಹಾರ ಮಾಡಿದಳು. ಈಗ ಉಳಿದದ್ದು ಶುಂಭ-ನಿಶುಂಭರು ಮಾತ್ರ. ಭಯದಿಂದಲೇ ಭಂಡಧೈರ್ಯದಿಂದ ಯುದ್ಧಕ್ಕೆ ಮುಂದಾದರು. ಘೋರಯುದ್ಧದಲ್ಲಿ ಕೋಟಿ, ಕೋಟಿ ದೈತ್ಯರನ್ನು ಸಂಹರಿಸಿ, ಆ ಶುಂಭ-ನಿಶುಂಭರನ್ನು ಸಂಹಾರಗೈದಳು.

ಜಗತ್ತಿಗೆ ಕ್ಷೇಮವಾಯಿತು, ಮಂಗಳವಾಯಿತು. ಇಂಥ ಕಾಳೀ-ಮಹಾಕಾಳೀ-ದುರ್ಗೆಯ ಪಾದಕಮಲಗಳಲ್ಲಿ ಅನಂತ ನಮನಗಳು.

## ಮಹಿಷಾಸುರಮರ್ದಿನಿಯಾದಳು ದುರ್ಗೆ

ಅವನೊಬ್ಬ ವಿಚಿತ್ರ ದೈತ್ಯ. ಅವನ ಹೆಸರು ಕಂಹಾಸುರ. ಇವನೂ ಕೂಡ ದೇವತೆಗಳಿಗೆ ಪೀಡಿಸತೊಡಗಿದನು. ಎಲ್ಲ ದೇವತೆಗಳು ರುದ್ರದೇವರನ್ನು ಅನಂತರ ಬ್ರಹ್ಮದೇವರನ್ನು ಅಂತಿಮವಾಗಿ ಮಹಾವಿಷ್ಣುವನ್ನೇ ಮೊರೆಹೊಕ್ಕರು. ಭಗವಂತನು ಪಾರ್ವತೀದೇವಿಗೆ ಕಂಹಾಸುರನನ್ನು ಸಂಹಾರ ಮಾಡಲು ಆಜ್ಞೆ ಮಾಡಿದನು. ಮತ್ತು ದುರ್ಗಾದೇವಿಗೆ ಪಾರ್ವತಿಯಲ್ಲಿ ಸನ್ನಿಹಿತಳಾಗುವಂತೆ ಆಜ್ಞೆಮಾಡಿದನು. ಅದರಂತೆ ಚತುರ್ಮುಖಬ್ರಹ್ಮದೇವರ ಪತ್ನಿಯಾದ ಸರಸ್ವತೀಯನ್ನೂ ಕೂಡ ಪಾರ್ವತಿಯಲ್ಲಿ ಆವಿಷ್ಟವಾಗುವಂತೆ ಆಜ್ಞೆಮಾಡಿದನು. ಲಕ್ಷ್ಮೀ, ಸರಸ್ವತೀಯರು ಪಾರ್ವತಿಯಲ್ಲಿ ಸೇರಿದಾಗ, ಪಾರ್ವತಿಯೇ ದುರ್ಗೆಯಾದಳು. ಕಂಹನನ್ನು ಕೊಲ್ಲುಲು ಹೊರಟಳು. ಅಂಥ ಘೋರರೂಪಿಯಾದ ಆ ದುರ್ಗೆಗೆ ಹೆದರದೆ ಕಂಹನು ಯುದ್ಧಕ್ಕೆ ಹೊರಟನು. ಶುಕ್ರಾಚಾರ್ಯರು ಈಗ ಯುದ್ಧ ಬೇಡವೆಂದು ತಡೆದರು. ಸ್ತ್ರೀಯರಿಂದ ಮರಣವನ್ನು ಹೊಂದಿದರೆ ನಿನಗೆ ಅಪಕೀರ್ತಿಯು ಬರುವುದು. ಆದ್ದರಿಂದ ಸ್ತ್ರೀಯರಿಂದ ಮರಣ ಬರಬಾರದೆಂದು ತಪಸ್ಸನ್ನು ಆಚರಿಸಿ, ವರವನ್ನು ಪಡೆದುಕೋ. ಅನಂತರ ಯುದ್ಧ ಮಾಡು ಎಂಬುದಾಗಿ ಕಂಹಾಸುರನಿಗೆ ಬುದ್ಧಿ ಹೇಳಿದರು ಶುಕ್ರಾಚಾರ್ಯರು. ಕಂಹಾಸುರನ ತಂಗಿಯ ಮಗನೇ ಮಹಿಷಾಸುರ. ಕಂಹಾಸುರನು ತಪಸ್ಸಿನಲ್ಲಿ ನಿರತನಾದನು. ಈಗ ಮಹಿಷಾಸುರನದ್ದೇ ಕಾಲ. ಅವನದ್ದೇ ಕೋಲಾಹಲ. ಮೂರುಲೋಕಗಳು ಆ ಮಹಿಷಾಸುರನ ಅಧೀನವಾಯಿತು. ದೇವತೆಗಳನ್ನೇ ಸ್ವರ್ಗದಿಂದ ಓಡಿಸಿಬಿಟ್ಟನು. ವರವನ್ನು ಪಡೆದುಕೊಂಡು ಪುರುಷರಿಂದ ಸಾವನ್ನು ಹೊಂದದವನಾಗಿದ್ದ. ಆದ್ದರಿಂದ ಭಗವಂತನು ದುರ್ಗಾದೇವಿಯನ್ನೇ ಇವನ ಸಂಹಾರಕ್ಕೆ ನಿಯೋಜಿಸಿದನು.

ಆ ಕಂಹಾಸುರನನ್ನು ಸಂಹಾರ ಮಾಡಲು ಸಿಂಹವಾಹಿನಿಯಾಗಿ ದುರ್ಗೆಯು ಆಗಮಿಸಿದಳು. ಅವನ ಅಪಾರಸೈನ್ಯವನ್ನು ಸಂಪೂರ್ಣವಾಗಿ ನಾಶ ಮಾಡಿದಳು. ಅವನ

ಅಸಂಖ್ಯ ಸೈನ್ಯವನ್ನು ಏಕೈಕಳಾಗಿ ಬಗ್ಗುಬಡಿದಳು. ಅಂತಿಮವಾಗಿ ಮಹಿಷಾಸುರನನ್ನೂ ಕೂಡ ಸಂಹಾರ ಮಾಡಿದಳು. ಇವಳ ಪರಾಕ್ರಮಕ್ಕೆ ದೇವತೆಗಳು ಪುಷ್ಪವೃಷ್ಟಿಗೈದರು. ಪರಿಪರಿಯಾಗಿ ಸ್ತುತಿಸಿದರು. ಮಹಿಷಾಸುರಮರ್ದಿನೀ ಎಂಬ ಬಿರುದು ನೀಡಿದರು. ಕೊಂಡಾಡಿದರು, ಕುಣಿದಾಡಿದರು.

## ಕೊಲ್ಲೂರು ಮೂಕಾಂಬಿಕಾ

ಹೀಗಿರುವಾಗ ಕಂಹಾಸುರನು ಘೋರ ತಪಸ್ಸನ್ನು ಮಾಡಿ, ಶಿವನನ್ನು ಒಲಿಸಿಕೊಂಡನು. ಅವನ ವರಕ್ಕೆ ಹೆದರಿದ ದೇವತೆಗಳು ಅವನಿಗೆ ಮಾತನಾಡಲು ಆಗದಂತೆ ಮಾಡಿಬಿಟ್ಟರು. ಶಿವನು ಪ್ರತ್ಯಕ್ಷನಾದಾಗ ನಾಲಿಗೆಯಿಂದ ಮಾತೇ ಹೊರಡಲಿಲ್ಲ. ಶಿವನು ಕಾದು ಕಾದು ಮರೆಯಾದನು. ಕಂಹಾಸುರನು ನಿರಾಶನಾದನು. ಈ ಕಂಹಾಸುರನೇ ಈಗ ಮೂಕಾಸುರನಾದನು. ಮೂಕಾಸುರನಿಗೆ ದೇವತೆಗಳ ಉಪಾಯ ಹೊಳೆಯಿತು. ಮತ್ತಷ್ಟು ಸಿಟ್ಟಿಗೆದ್ದನು. ಆಗ ದೇವತೆಗಳು ದುರ್ಗೆಯನ್ನು ಮೊರೆ ಹೊಂದಿದಾಗ ಘೋರವಾದ ಯುದ್ಧದಲ್ಲಿ ಆ ಮೂಕಾಸುರನನ್ನು ದುರ್ಗೆಯು ಸಂಹಾರ ಮಾಡಿದಳು. ಸಂಹಾರ ಮಾಡುವ ಮೊದಲು ಆ ಮೂಕಾಸುರನು ದೇವಿಯನ್ನು ಪ್ರಾರ್ಥಿಸುತ್ತಾನೆ. ನನ್ನನ್ನು ಕೊಂದವಳು ಎಂಬ ಹೆಸರಿನಿಂದ ನೀನು ಈ ಕ್ಷೇತ್ರದಲ್ಲಿ ನೆಲೆಸಬೇಕು. ಇದು ನೀನು ನನಗೆ ಮಾಡುವ ಅನುಗ್ರಹ ಎಂಬುದಾಗಿ ಪ್ರಾರ್ಥಿಸುತ್ತಾನೆ. ಅದಕ್ಕೆ ತಥಾಸ್ತು ಎಂದು ವರವನ್ನು ನೀಡಿದ ಆ ದುರ್ಗೆಯು ಮೂಕಾಂಬಿಕೆ ಎಂಬ ಹೆಸರನ್ನು ಪಡೆದಳು. ಲಿಂಗರೂಪದಲ್ಲಿ ಕೊಲ್ಲೂರು ಕ್ಷೇತ್ರದಲ್ಲಿ ನೆಲೆಸಿದಳು. ಕೊಲ್ಲೂರು ಮೂಕಾಂಬಿಕಾ ಎಂಬ ಹೆಸರು ಇಂದು ಪ್ರಸಿದ್ಧವಾಗಿದೆ. ದುರ್ಗೆಯ ಪೂರ್ಣ ಸಾನ್ನಿಧ್ಯವಿರುವ ಕ್ಷೇತ್ರವಿದು. ಭಕ್ತರನ್ನು ನಿರಂತರ ಅನುಗ್ರಹ ಮಾಡುತ್ತಲೇ ಇರುವಳು. ಹೀಗೆ ದುರ್ಗೆಯ ಕಥೆಗಳೆಲ್ಲವೂ ಅತ್ಯಂತ ಸುಂದರವಾಗಿವೆ.

ಭಗವಂತನ ಪತ್ನಿಯಾದ ಶ್ರೀಭೂದುರ್ಗಾ ರೂಪಗಳಲ್ಲಿ ಒಂದಾದ ದುರ್ಗೆಯೇ ಬೇರೆ. ದುರ್ಗೆಯ ಸಾನ್ನಿಧ್ಯವನ್ನು ಹೊಂದಿರುವ ಕಾರಣ ದುರ್ಗೆ ಎಂಬ ಹೆಸರನ್ನು ಹೊಂದಿದ ಪಾರ್ವತಿಯೇ ಬೇರೆ.

## ಪುರಾಣಗಳಲ್ಲಿ ದುರ್ಗೆಯ ಬಗ್ಗೆ

* ಅಗ್ನಿಪುರಾಣದಲ್ಲಿ ನವದುರ್ಗೆಯರ ಬಗ್ಗೆ, ನವದುರ್ಗೆಯರನ್ನು ಅರ್ಚನೆ ಮಾಡುವುದರ ಬಗ್ಗೆ, ದುರ್ಗಾಜಪದ ಬಗ್ಗೆ, ದುರ್ಗಾಪೂಜೆಯ ಬಗ್ಗೆ, ಸಾಕಷ್ಟು ವಿಚಾರಗಳು ಇವೆ.

* ಗರುಡಪುರಾಣದಲ್ಲಿ ಮಹಾನವಮಿ ವ್ರತದ ಆಚರಣೆಯಲ್ಲಿ ದುರ್ಗೆಯ ಬಗ್ಗೆ ನಿಖರವಾಗಿ ತಿಳಿಸಲಾಗಿದೆ.

* ದೇವೀಭಾಗವತದಲ್ಲಿ ದುರ್ಗಾಚರಿತ್ರೆಯು ಅತ್ಯಂತ ವಿಸ್ತಾರವಾಗಿದೆ.

* ಸ್ಕಾಂದಪುರಾಣದಲ್ಲಿ ಭೀಮಸೇನದೇವರಿಗೆ ದುರ್ಗೆಯು ಆಶೀರ್ವಾದ ಮಾಡಿದರ ಬಗ್ಗೆ ಉಲ್ಲೇಖವಿದೆ. ಇಂದ್ರಾದಿ ದೇವತೆಗಳಿಂದ ದುರ್ಗೆಯ ಸ್ತೋತ್ರವು ಹಾಗೂ ಮಹಿಷಾಸುರಸಂಹಾರದ ವಿಸ್ತೃತವಾದ ಕಥೆಯು ಇರುತ್ತದೆ.

* ಭಾಗವತದಶಮಸ್ಕಂದದಲ್ಲಿ ಶ್ರೀಕೃಷ್ಣನ ಅವತಾರದ ಸಂದರ್ಭದಲ್ಲಿ ದುರ್ಗೆಯ ಅವತಾರ ಹೇಗಾಯಿತು ? ಏಕಾಯಿತು ? ಎಂಬುದರ ವಿಚಾರವಿದೆ.

* ಹರಿವಂಶಪುರಾಣದ ವಿಷ್ಣುಖಂಡದಲ್ಲಿ ದುರ್ಗೆಯ ಸ್ತೋತ್ರ ಹಾಗೂ ಭಗವಂತನು ದುರ್ಗೆಗೆ ಮಾಡುವ ಆಜ್ಞೆ ಇವುಗಳ ಉಲ್ಲೇಖವಿದೆ.

* ಮಹಾಭಾರತದ ವಿರಾಟಪರ್ವದಲ್ಲಿ ದುರ್ಗಾಸ್ತೋತ್ರವಿದೆ. ಈ ಸ್ತೋತ್ರವನ್ನು ಧರ್ಮರಾಜನು ಪಠಿಸಿದಾಗ ದುರ್ಗೆಯು ಪ್ರತ್ಯಕ್ಷವಾಗಿ ಅನುಗ್ರಹವನ್ನು ಮಾಡುತ್ತಾಳೆ.

* ಅರ್ಜುನನೂ ಕೂಡ ದುರ್ಗೆಯನ್ನು ಸ್ತೋತ್ರ ಮಾಡಿದುದರ ಉಲ್ಲೇಖ ಇಲ್ಲಿರುತ್ತದೆ. ಮತ್ತು ಆ ದುರ್ಗಾಸ್ತೋತ್ರದ ಮಹಿಮೆಯನ್ನೂ ಕೂಡ ವರ್ಣಿಸಲಾಗಿದೆ.

* * * * *

## ನವರಾತ್ರಿಯಲ್ಲಿ ದುರ್ಗಾಪೂಜೆಗೆ ಎಲ್ಲಿಲ್ಲದ ಮಹತ್ವ

ಅಷ್ಟಮ್ಯಾಂ ಚ ನವಮ್ಯಾಂ ಚ ಜಗನ್ಮಾತರಮಾಂಬಿಕಾಂ ॥ (ಭವಿಷ್ಯ ಪುರಾಣ)

ಅಷ್ಟಮೀ ಹಾಗೂ ನವಮಿ ತಿಥಿಗಳಲ್ಲಿ ಜಗತ್ತಿಗೆ ತಾಯಿಯಾದ ದುರ್ಗೆಯನ್ನು ಪೂಜೆ ಮಾಡಬೇಕು. ಇದರಿಂದ ಎಲ್ಲ ದುಃಖಗಳೂ ಕೂಡ ಪರಿಹಾರವಾಗುತ್ತವೆ.

ಶರತ್ಕಾಲೇ ಮಹಾಪೂಜಾ ಕ್ರಿಯತೇ ಯಾಚ ವಾರ್ಷಿಕೀ (ದೇವೀ ಪುರಾಣ)

ಶರತ್ಕಾಲದಲ್ಲಿ ವರ್ಷಕ್ಕೊಮ್ಮೆ ದುರ್ಗೆಯ ಪೂಜೆಯನ್ನು ಅವಶ್ಯವಾಗಿ ಮಾಡಬೇಕು.

## ಸಾಧ್ಯವಾಗದಿದ್ದರೆ ಒಂದು ದಿವಸವಾದರೂ ಕೂಡ ಪೂಜಿಸಬೇಕು

'ಯಸ್ತ್ವೇಕಸ್ಯಾಮಥಾಷ್ಟಮ್ಯಾಂ ನವಮ್ಯಾಂ' ಎಂಬ ಪ್ರಮಾಣದಂತೆ ಸಾಧ್ಯವಾಗದಿದ್ದರೆ ಅಷ್ಟಮಿ ಅಥವಾ ನವಮಿ ತಿಥಿಗಳಲ್ಲಿ ಒಂದು ದಿವಸವಾದರೂ ದುರ್ಗೆಯನ್ನು ಆರಾಧನೆ ಮಾಡಬೇಕು. ಇದರಿಂದಲೂ ಮಹಾಸಂಪತ್ತು ದೊರಕುತ್ತದೆ.

'ಮಹಾನವಮ್ಯಾಂ ಪೂಜೇಽಯಂ ಸರ್ವಕಾಮ ಪ್ರದಾಯಕಂ ।' ಮಹಾನವಮಿಯಲ್ಲಿ ಸರ್ವಕಾಮನೆಗಳನ್ನು ನೀಡುವ ದುರ್ಗೆಯನ್ನು ಭಕ್ತಿಯಿಂದ ಪೂಜೆ ಮಾಡಬೇಕು. ಇದರಿಂದ ಕೀರ್ತಿಯನ್ನು, ರಾಜ್ಯವನ್ನು, ಪುತ್ರನನ್ನು, ಆಯುಷ್ಯವನ್ನು, ಧನವನ್ನು ಇನ್ನೂ ಅನೇಕ ಬಗೆಯ ಸಂಪತ್ತುಗಳನ್ನು ಹೊಂದುತ್ತಾನೆ.

## ದೇವೀ ಪೂಜೆಯನ್ನು ಮಾಡದಿದ್ದರೆ ?

'ಯೋ ಮೋಹಾದಥವಾಽಲಸ್ಯಾತ್ ದೇವಿಂ ದುರ್ಗಾಮಹೋತ್ಸವೈಃ । ನ ಪೂಜಯೇತ್' ಎಂಬ ಕಾಳೀಕಾಪುರಾಣದ ಮಾತಿನಂತೆ ಯಾರು ಮೋಹದಿಂದ, ಆಲಸ್ಯದಿಂದ ದುರ್ಗೆಯನ್ನು ಪೂಜೆ ಮಾಡುವುದಿಲ್ಲವೋ, ಅಹಂಕಾರಭರಿತ-ನಾಗಿರುತ್ತಾನೋ, ಶ್ರೀಮಂತಿಕೆಯ ಗರ್ವದಲ್ಲಿರುತ್ತಾನೋ ಅಂಥವನ ವಿಷಯದಲ್ಲಿ ಭಗವತಿಯಾದ ದೇವಿಯು ಕೃದ್ಧಳಾಗುತ್ತಾಳೆ. ಅಭೀಪ್ಸಿತವಾದ ಕಾಮನೆಗಳನ್ನು ಭಗ್ನಗೊಳಿಸುತ್ತಾಳೆ.

## ನವರಾತ್ರಿಯಲ್ಲಿ ಉಪವಾಸ ಮಾಡಬೇಕು

'ಏವಂ ಚ ವಿಂಧ್ಯಾವಾಸಿನ್ಯಾ ನವರಾತ್ರೋಪವಾಸತಃ ।' ಎಂಬ ಭವಿಷ್ಯಪುರಾಣದ ಮಾತಿನಂತೆ ವಿಂಧ್ಯವಾಸಿಯಾದ ದುರ್ಗೆಯ ಪ್ರೀತಿಗಾಗಿ ನವರಾತ್ರಿಯಲ್ಲಿ ಉಪವಾಸವನ್ನು ಮಾಡಬೇಕು. ಅಥವಾ ಒಮ್ಮೆ ಮಾತ್ರ ಊಟವನ್ನು ಮಾಡಬೇಕು.

## ರಾತ್ರಿಯ ವ್ರತವಾದ್ದರಿಂದ ನವರಾತ್ರಿ ಎಂದು ಹೆಸರು

ಆಶ್ವಿನೇ ಮಾಸಿ ಮೇಷಾಂತೇ ಪ್ರತಿಪತ್ಯಾ ತಿಥಿರ್ಭವೇತ್ ।
ತಸ್ಯಾ ನಕ್ತಂ ಪ್ರಕುರ್ವೀತ ರಾತ್ರೀದೇವಿಂ ಚ ಪೂಜಯೇತ್ ।
ರಾತ್ರಿರೂಪಾಯತೋ ದೇವೀ ದಿವಾ ರೂಪೋ ಮಹೇಶ್ವರಃ ।
ರಾತ್ರಿವ್ರತಂ ಇದಂ ದೇವೀ ಸರ್ವಪಾಪಪ್ರಣಾಶನಂ ।
ಸರ್ವಕಾಮಪ್ರದಂ ನೃಣಾಂ ಸರ್ವಶತ್ರುನಿಬರ್ಹಣಂ ।
ರಾತ್ರಿವ್ರತಂ ಇದಂ ತಸ್ಯ ರಾತ್ರೌ ಕರ್ತವ್ಯಮೀಶ ತೇ ।
ನಕ್ತವ್ರತಂ ಇದಮಸ್ಮಾತ್ ಅನ್ಯಥಾ ನರಕೇ ಗತಿಃ ॥ (ದೇವೀಪುರಾಣ)

ದೇವಿಯು ರಾತ್ರಿರೂಪಳಾಗಿದ್ದಾಳೆ. ಮಹಾದೇವರು ದಿವಾಸ್ವರೂಪರಾಗಿದ್ದಾರೆ. ಈ ರಾತ್ರಿವ್ರತವು ಎಲ್ಲ ಪಾಪಗಳನ್ನು ನಾಶಮಾಡುತ್ತದೆ. ಎಲ್ಲ ಅಭೀಷ್ಟೆಗಳನ್ನು ಪೂರೈಸುತ್ತದೆ. ಎಲ್ಲ ಶತ್ರುಗಳನ್ನು ಪರಿಹಾರ ಮಾಡುತ್ತದೆ. ಈ ರಾತ್ರಿವ್ರತವನ್ನು ರಾತ್ರಿಯಲ್ಲಿ ಆಚರಿಸುವುದು ಶ್ರೇಷ್ಠವಾಗಿದೆ. ಈ ವ್ರತವನ್ನು ಆಚರಣೆ ಮಾಡದಿದ್ದರೆ ನಿಶ್ಚಯವಾಗಿ ನರಕವನ್ನು ಹೊಂದುತ್ತಾನೆ.

ರವಿಯು ಕನ್ಯಾದಲ್ಲಿದ್ದಾಗ ಶುಕ್ಲಪಕ್ಷದಲ್ಲಿ ಈ ವ್ರತವು ಪ್ರಾರಂಭವಾಗುತ್ತದೆ. ನವರಾತ್ರಿಯ ಸಂದರ್ಭದಲ್ಲಿ ಯಾರ ಬಳಿಯೂ ಏನನ್ನೂ ಬೇಡಬಾರದು. ಅಥವಾ ಒಪ್ಪತ್ತು ಮಾತ್ರ ತಿನ್ನಬೇಕು. ಅಥವಾ ರಾತ್ರಿಯ ಕಾಲದಲ್ಲಿ ತಿನ್ನಬೇಕು. ಅಥವಾ ಏನನ್ನೂ ತಿನ್ನದೇ ಗಾಳಿಯನ್ನಷ್ಟೇ ಸೇವಿಸಬೇಕು. ಭೂಮಿಯಲ್ಲಿಯೇ ಮಲಗಿಕೊಳ್ಳಬೇಕು.

ಒಂಭತ್ತು ಕುಮಾರಿಯರನ್ನು ಕರೆಯಿಸಿ, ಭೋಜನವನ್ನು ನೀಡಬೇಕು. ವಸ್ತ್ರ, ಅಲಂಕಾರ ಸಾಮಗ್ರಿ, ಪುಸ್ತಕ ಮೊದಲಾದವುಗಳ ದಾನವನ್ನು ಮಾಡಿ, ಆ ಕುಮಾರಿಯರಿಗೆ ಸಂತೋಷವನ್ನು ಪಡಿಸಬೇಕು. ಪ್ರತಿನಿತ್ಯವೂ ಬಲಿಯನ್ನು ನೀಡಬೇಕು. ಹೀಗೆ ಮೂರುಕಾಲದಲ್ಲಿ ದೇವಿಯನ್ನು ಪೂಜೆ ಮಾಡುವುದು ಅತ್ಯಂತ ಶ್ರೇಷ್ಠವಾಗಿದೆ. ದೇವಿಯ ಜಪ, ಸ್ತೋತ್ರ, ಪಾರಾಯಣಗಳನ್ನು ಮಾಡಬೇಕು.

ಸಂಪೂಜ್ಯ ನವದುರ್ಗಾಂಚ ನಕ್ತಂ ಕುರ್ಯಾತ್ ಸಮಾಹಿತಃ ।
ನವರಾತ್ರಾಭಿದಂ ಕರ್ಮಾ ನಕ್ತವ್ರತಾ ಇದಂ ಸ್ಮೃತಮ್ ॥ (ಸ್ಕಂದಪುರಾಣ)

ನವದುರ್ಗೆಯರ ಪೂಜೆಯನ್ನು ರಾತ್ರಿಯ ಕಾಲ ಮಾಡಬೇಕು. ಆದ್ದರಿಂದ ಇದಕ್ಕೆ ನಕ್ತವ್ರತ ಎಂಬ ಹೆಸರು ಬಂದಿದೆ.

## ಶರನ್ನವರಾತ್ರಿಯ ಮೊದಲನೆಯ ದಿವಸ ಮಾಡಬೇಕಾದ ಕರ್ತವ್ಯ

* ಅಮಾವಾಸ್ಯೆ ಇಲ್ಲದ ಪ್ರತಿಪತ್ ದಿವಸದಂದು ನವರಾತ್ರಿಯನ್ನು ಪ್ರಾರಂಭ ಮಾಡಬೇಕು. ಪ್ರಾತಃಕಾಲದಲ್ಲಿ ಅಭ್ಯಂಗಸ್ನಾನವನ್ನು ಮಾಡಿ, ಭಗವಂತನಿಗೆ ನಿರ್ಮಾಲ್ಯವಿಸರ್ಜನೆಯನ್ನು ಮಾಡಿ, ಸಂಧ್ಯಾವಂದನಾದಿಗಳನ್ನು ಪೂರೈಸಬೇಕು. ಮಧ್ಯಾಹ್ನ ಅಭಿಜಿನ್ ಮುಹೂರ್ತದಲ್ಲಿ ಶರನ್ನವರಾತ್ರಿಯ ಮಹೋತ್ಸವಾಚರಣೆಯನ್ನು ಸಂಕಲ್ಪ ಮಾಡಬೇಕು. ಘಟಸ್ಥಾಪನೆ, ಗಣಪತಿಯ ಪೂಜೆ, ಪುಣ್ಯಾಹವಾಚನೆ ಮೊದಲಾದವುಗಳನ್ನು ಆಚರಿಸಬೇಕು.
* ಪೂರ್ಣಕುಂಭದಲ್ಲಿ ದುರ್ಗೆಯನ್ನು ಆವಾಹನೆ ಮಾಡಬೇಕು.

ಜಯಂತೀ ಮಂಗಳಾ ಕಾಳೀ ಭದ್ರಕಾಳೀ ಕಪಾಲಿನೀ
ದುರ್ಗಾ ಕ್ಷಮಾ ಶಿವಾ ಧಾತ್ರೀ ಸ್ವಾಹಾ ಸ್ವಧಾ ನಮೋಸ್ತುತೇ ।
ಆಗಚ್ಛವರದೇ ದೇವಿ ದೈತ್ಯದರ್ಪನಿಷೂದನೇ ।
ಪೂಜಾಂ ಗೃಹಾಣ ದೇವಿತ್ವಂ ನಮಸ್ತೇ ಶಂಕರಪ್ರಿಯೇ ॥

ಎಂಬ ಶ್ಲೋಕದಿಂದ ದುರ್ಗಾದೇವಿಯನ್ನು ಆವಾಹನೆ ಮಾಡಬೇಕು.

ಪುರುಷಸೂಕ್ತ, ಶ್ರೀಸೂಕ್ತಗಳನ್ನು ಪಠಿಸಿ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಪ್ರತಿನಿತ್ಯವೂ ಬೂದುಗುಂಬಳಕಾಯಿಯಿಂದ ಹಾಗೂ ಉದ್ದಿನಿಂದ ಬಲಿಯನ್ನು ನೀಡಬೇಕು.

* ಕುಲದೇವರಿಗೆ ಹಾಗೂ ದುರ್ಗೆಗೆ ಮುಖ್ಯಪ್ರಾಣದೇವರಿಗೆ ಅಖಂಡದೀಪವನ್ನು ಹಚ್ಚಬೇಕು. 'ಅಖಂಡದೀಪಕಂ ದೇವ್ಯಾಃ ಪ್ರೀತಯೇ ನವರಾತ್ರಕಂ' ಎಂಬ ಶ್ಲೋಕವನ್ನು ಪಠಿಸಿ ದೀಪವನ್ನು ಪ್ರತಿಷ್ಠೆ ಮಾಡಬೇಕು.

* ಪ್ರತಿನಿತ್ಯವೂ ವಿಷ್ಣುಸಹಸ್ರನಾಮ, ಶ್ರೀಶಗುಣದರ್ಪಣ, ಶ್ರೀವಾದಿರಾಜರು ರಚಿಸಿದ ದುರ್ಗಾಸ್ತವ, ದುರ್ಗಾಸಪ್ತಶತಿ, ಮಧ್ವವಿಜಯ ಮೊದಲಾದ ಸ್ತೋತ್ರಗಳ ಪಾರಾಯಣ ಸಂಕಲ್ಪವನ್ನು ಮಾಡಬೇಕು. ಮತ್ತು ಪಾರಾಯಣವನ್ನು ಪ್ರಾರಂಭ ಮಾಡಬೇಕು.

* ಕುಮಾರಿಯರ ಪೂಜೆಯನ್ನು ಅವಶ್ಯವಾಗಿ ಮಾಡಬೇಕು. ಕುಮಾರೀ, ಶ್ರೀಮೂರ್ತೀ, ಕಲ್ಯಾಣೀ, ರೋಹಿಣೀ, ಕಾಳೀ, ಚಂಡಿಕಾ, ಶಾಂಭವೀ, ದುರ್ಗಾ, ಭದ್ರಾ ಎಂಬ ಒಂಬತ್ತು ದೇವಿಯ ರೂಪಗಳನ್ನು ಒಂಬತ್ತು ಮಂದಿ ಕುಮಾರಿಯರಲ್ಲಿ ಆವಾಹನೆ ಮಾಡಿ, ಪೂಜಿಸಬೇಕು.

* ಮೂಲಾನಕ್ಷತ್ರವು ಪ್ರಾಪ್ತವಾದಾಗ ಸರಸ್ವತೀದೇವಿಯನ್ನು ಆವಾಹನೆ ಮಾಡಿ, ಶ್ರವಣಾನಕ್ಷತ್ರದಲ್ಲಿ ವಿಸರ್ಜನೆ ಮಾಡುವ ಕ್ರಮವನ್ನು ಮುಂದೆ ತಿಳಿಸಲಾಗುತ್ತದೆ.

* ಮಹಾಷ್ಟಮಿಯ ಪರ್ವಕಾಲದಲ್ಲಿ ದುರ್ಗಾದೇವಿಯ ಪೂಜೆಯನ್ನು ವಿಶೇಷವಾಗಿ ಆಚರಣೆ ಮಾಡಬೇಕು. ಅಂದು ಮಂಗಳವಾರ ಅಥವಾ ಶುಕ್ರವಾರವು ಬಂದರೆ ಪೂಜೆಗೆ ಪ್ರಶಸ್ತವಾದ ಕಾಲವಾಗುತ್ತದೆ.

# ನವರಾತ್ರಿಯ ಆಚರಣೆ

ಒಂಬತ್ತು ದಿನಗಳು ನವರಾತ್ರಿ ಉತ್ಸವವನ್ನು ಆಚರಿಸಬೇಕು. ಸಾಧ್ಯವಾಗದಿದ್ದರೆ, ಸಪ್ತಮಿಯಿಂದ ಮೂರುದಿವಸಗಳ ಕಾಲವಾದರೂ ಉತ್ಸವವನ್ನು ಆಚರಿಸಬೇಕು.

ಆಶ್ವಿನೇ ಮಾಸಿ ಶುಕ್ಲೇ ತು ಕರ್ತವ್ಯಂ ನವರಾತ್ರಕಂ ಪ್ರತಿಪದಾದಿ ಕ್ರಮೇಣೈವ
ಯಾವಚ್ಚ ನವಮೀಭವೇತ್ ತ್ರಿರಾತ್ರಂ ವಾಪಿಕರ್ತವ್ಯಂ ಸಪ್ತಮ್ಯಾದಿ ಯಥಾಕ್ರಮಮ್॥

ಎಂಬುದಾಗಿ ವ್ರತರಾಜದಲ್ಲಿ ಪುರಾಣಶ್ಲೋಕವನ್ನು ಉಲ್ಲೇಖ ಮಾಡಿದ್ದಾರೆ.

* ದುರ್ಗೆಯು ಆರಾಧನೆಯುನ್ನು ಒಂದು ತಿಂಗಳ ತನಕ ಮಾಡುವ ಸಂಪ್ರದಾಯವಿದೆ.

೧. ಭಾದ್ರಪದ ಮಾಸದ ಕೃಷ್ಣಪಕ್ಷದ ನವಮಿಯಂದು ಪ್ರಾರಂಭ ಮಾಡಿ, ಆಶ್ವಿನ ಮಾಸದ ಶುಕ್ಲಪಕ್ಷದ ನವಮಿಯ ತನಕ ಒಂದು ತಿಂಗಳ ಕಾಲ ದುರ್ಗೆಯ ಆರಾಧನೆಯನ್ನು ಮಾಡುವುದು ಒಂದು ಕ್ರಮ.

೨. ಆಶ್ವಿನಮಾಸದ ಶುಕ್ಲಪಕ್ಷದ ಪ್ರತಿಪತ್ ದಿವಸದಿಂದ ನವಮಿಯ ತನಕ ಮಾಡುವುದು ಮತ್ತೊಂದು ಕ್ರಮ.

೩. ಷಷ್ಠೀಯಿಂದ ನವಮಿಯ ತನಕ ಆಚರಿಸುವುದು.

೪. ಸಪ್ತಮೀ ತಿಥಿಯಿಂದ ನವಮೀ ತಿಥಿಯ ತನಕ ಆಚರಣೆ ಮಾಡುವುದು.

೫. ಅಷ್ಟಮಿಯಿಂದ ನವಮಿಯ ತನಕ ಆಚರಣೆ ಮಾಡುವುದು.

೬. ಮಹಾಷ್ಟಮಿ ಮಾತ್ರ ದುರ್ಗೆಯನ್ನು ಆರಾಧನೆ ಮಾಡುವುದು.

೭. ಮಹಾನವಮಿಯ ದಿವಸ ಮಾತ್ರ ದುರ್ಗೆಯನ್ನು ಆರಾಧನೆ ಮಾಡುವುದು.

ಹೀಗೆ ಅವರವರ ಯೋಗ್ಯತೆಗೆ ಅನುಗುಣವಾಗಿ ದುರ್ಗಾರಾಧನೆಯನ್ನು ಕಾಳೀಕಾಪುರಾಣವು ಹೇಳುತ್ತದೆ.

ಕೃಷ್ಣನವಮ್ಯಾದಿ ಪ್ರತಿಪತಾದಿ ಷಷ್ಠ್ಯಾದಿ ಸಪ್ತಮ್ಯಾದಿ ಮಹಾಷ್ಟಮ್ಯಾದಿ ಕೇವಲ ಮಹಾಷ್ಟಮಿ ಕೇವಲ ಮಹಾನವಮಿ, 'ಪೂಜಾರೂಪಾಃ ಕಲ್ಪಾಃ ಉನ್ನಾಯಾಃ' ಎಂಬುದಾಗಿ ತಿಥಿತತ್ವವು ಹೇಳುತ್ತದೆ.

ನವರಾತ್ರೇ ವ್ರತೇ ಶಕ್ತಃ ತ್ರಿರಾತ್ರಂಚೈಕ ರಾತ್ರಿಕಂ ವ್ರತಂ ಚರತಿ ಯೋ ಭಕ್ತ ತಸ್ಮೈ ದಾಸ್ಯಾಮಿ ವಾಂಛಿತಮ್ ॥

ನವರಾತ್ರಿ ವ್ರತವನ್ನು ಆಚರಿಸಲು ಯಾರು ಅಶಕ್ತರಾಗಿರುತ್ತಾರೋ, ಅವರು ಮೂರು ರಾತ್ರಿಗಳನ್ನು ಆಚರಣೆ ಮಾಡಬೇಕು. ಅದೂ ಸಾಧ್ಯವಾಗದಿದ್ದರೆ ಒಂದು ರಾತ್ರಿಯಲ್ಲಾದರೂ ದುರ್ಗೆಯ ಆರಾಧನೆಯನ್ನು ಮಾಡಬೇಕು. ಇಂಥ ಭಕ್ತನಿಗೆ ಅಭೀಪ್ಸಿತವಾದ ಫಲಗಳನ್ನು ನೀಡುತ್ತೇನೆ. (ದೇವೀಪುರಾಣ)

* * * *

## ದುರ್ಗಾಪ್ರತಿಷ್ಠೆ

ದುರ್ಗಾಂ ಕಾಂಚನಮೂರ್ತಿಂ ರೌಪ್ಯಾಂ ವಾ ಪೈತ್ತಲೀಂ ವಾರ್ಕ್ಷೀಂ ಚೈತ್ರೀಂ ತಾಮ್ರೀಂ ವಾಧಿಭವತಃ ಕೃತ್ವಾದಾರುವಿಚಿತ್ರತೋರಣವಿನ್ಯಸ್ತಾಂ ಶೋಭನೇ ಸ್ಥಾನೇ ಪುರತೋ ವಿನ್ಯಸ್ತದೃಷ್ಟಾಂ ವಿಚಿತ್ರಗೃಹಮಧ್ಯಗಾಂ ಸ್ನಾತಾಂ ಕುಂಕುಮಚಂದನ-ಗಂಧೈಶ್ಚತುಸ್ಸಮೈಶ್ಚೀರಪಟ್ಟೈರರ್ಚಿತಗಾತ್ರಾಂ ದೇವಿಂ ಕುಸುಮೈರಭ್ಯರ್ಚ್ಯ ತಾಂ ಬಹುಭಿಃ ಪುಷ್ಯಮಾಣಕೀರ್ತಿಸ್ತೈರ್ದ್ವಿಜಜನೈರ್ಜನಿತ ಪರಿತೋಷೈರ್ದಿವಾನ್ವಿತೋ ನರೇಂದ್ರಃ ಸ್ವಯಂ ಪ್ರಯಚ್ಛೇತ್ತುರೋಹಿತ್ಯೈಃ ಸಾರ್ಧಂ ಬಿಲ್ವಪತ್ರೇಣಾರ್ಚನೇನ ಮಂತ್ರೇಣಾನೇನ ಭಗವತ್ಯೈ.

ಚಿನ್ನ, ಬೆಳ್ಳಿ, ತಾಮ್ರ, ವೃಕ್ಷ, ಚಿತ್ರಪ್ರತಿಕೃತಿ ಇವುಗಳಲ್ಲಿ ತನಗೆ ಅನುಕೂಲವಿರುವ ಪದಾರ್ಥದಿಂದ ದುರ್ಗಾಮೂರ್ತಿಯನ್ನು ನಿರ್ಮಿಸಬೇಕು. ಮನೆಯ ಮಧ್ಯಭಾಗದಲ್ಲಿ ವೇದಿಕೆಯನ್ನು ರಚಿಸಿ, ಅದರಲ್ಲಿ ಚಿತ್ರಕೆಲಸ ಯುಕ್ತವಾಗಿರುವಂತೆ ಮಂಟಪ ತೋರಣ ಇವುಗಳನ್ನು ಸಿದ್ಧಪಡಿಸಬೇಕು. ಅಲ್ಲಿ ಎದುರಿಗೆ ಸರಿಯಾಗಿ ದೃಷ್ಟಿಯಿರುವಂತೆ ಮೂರ್ತಿಯನ್ನು ಅದರಲ್ಲಿರಿಸಿ ಅಭಿಷೇಕ ಮಾಡಿ, ಕುಂಕುಮ, ಚಂದನ, ಗಂಧ, ಇವುಗಳನ್ನು ಮೂರ್ತಿಯ ದೇಹಕ್ಕೆ ಲೇಪಿಸಿ, ಸುಂದರವಾಗುವಂತೆ ನಾರುವಸ್ತ್ರ, ರೇಷ್ಮೆ ಪೀತಾಂಬರ, ಮುಂತಾದವುಗಳಿಂದ ಅಲಂಕರಿಸಬೇಕು. ಬಳಿಕ ಮನೋಹರವಾದ ಪುಷ್ಪಮಾಲಿಕೆಗಳಿಂದ ದೇವಿಯನ್ನು ಅರ್ಚಿಸಬೇಕು. ಆಗ ಬಹುಮಂದಿ ದ್ವಿಜರು ದೇವೀಮಾಹಾತ್ಮ್ಯವನ್ನು ಪಾರಾಯಣ ಮಾಡುತ್ತಿರುವಂತೆ ಏರ್ಪಡಿಸಿ, ಅವರೆಲ್ಲರನ್ನೂ ಸತ್ಕಾರಾದಿಗಳಿಂದ ಸಂತೋಷಪಡಿಸಬೇಕು. ಬಳಿಕ ರಾಜನು ಪುರೋಹಿತರನ್ನು ಪುರಸ್ಕರಿಸಿ ಈ ಮುಂದೆ ಹೇಳುವ ಅರ್ಥವುಳ್ಳ ಮಂತ್ರಪೂರ್ವಕವಾಗಿ ಬಿಲ್ವಪತ್ರೆಯನ್ನು ಅರ್ಚನೆ ಮಾಡಬೇಕು.

## ದುರ್ಗಾ ನಮಸ್ಕಾರ

ಜಯಂತೀ ಮಂಗಲಾ ಕಾಲೀ ಭದ್ರಕಾಲೀ ಕಾಪಾಲಿನೀ ।
ದುರ್ಗಾ ಶಿವಾ ಕ್ಷಮಾ ಧಾತ್ರೀ ಸ್ವಾಹಾ ಸ್ವಧಾ ನಮೋಽಸ್ತುತೇ ॥

ಅಮೃತೋದ್ಭವಃ ಶ್ರೀವೃಕ್ಷೋ ಮಹಾದೇವೀ ಪ್ರಿಯಃ ಸದಾ ।

ಬಿಲ್ವಪತ್ರಂ ಪ್ರಯಚ್ಛಾಮಿ ಪವಿತ್ರಂ ತೇ ಸುರೇಶ್ವರಿ ॥

''ಸರ್ವಮಂಗಳೆಯಾದ ಜಯಂತಿಯೇ ! ಕಾಲೀದೇವಿಯೇ ! ಕಪಾಲಧಾರಿಣಿಯೇ! ದುರ್ಗೆಯೇ ! ಶಿವೇ ಕ್ಷಮಾಶೀಲೆ ಧಾತ್ರೀದೇವಿಯೇ ! ಎಲೌ ಸುರೇಶ್ವರಿಯೇ! ಪವಿತ್ರತಮವಾದ ಆ ಬಿಲ್ವಪತ್ರವನ್ನು ನಿನ್ನ ಪಾದಗಳಲ್ಲಿ ಸಮರ್ಪಿಸುತ್ತೇನೆ. (ಇದು ಮಂತ್ರಾರ್ಥ).

## ತುಂಬೆಹೂವಿನಿಂದ ಅರ್ಚನೆ

ದುರ್ಗಾ ಸಂಪೂಜನೀಯಾ ಚ ತದ್ದಿನಾದ್ದ್ರೋಣಪುಷ್ಪಯಾ ।

ಸಾ ಚಾಭೀಷ್ಟಾ ಸುರೇಶಾನ್ಯಸ್ತಥಾ ರೂಢವ್ರಣಾಯುತಃ ॥

ಆಶ್ವಯುಜಶುಕ್ಲ ಅಷ್ಟಮಿಯ ದಿವಸ ದುರ್ಗೆಯನ್ನು ದ್ರೋಣಪುಷ್ಪ (ತುಂಬೆಹೂವು)ಗಳಿಂದ ಪೂಜಿಸಬೇಕು. ಹೀಗೆ ಪೂಜಿಸಿದರೆ ದುರ್ಗೆಯು ಸುರೇಶನಾಗಲಿ, ದೇಹವೆಲ್ಲ ಗಾಯಗೊಂಡ ಅನ್ಯರಾಗಲಿ, ಅವರಿಗೆ ಇಷ್ಟಾರ್ಥವನ್ನು ಕರುಣಿಸುವಳು.

## ದುರ್ಗೆಯ ಖಡ್ಗಕ್ಕೂ ನಮಸ್ಕಾರ

ತತಃ ಖಡ್ಗಂ ನಮಸ್ಕೃತ್ಯ ಶತ್ರೂಣಾಂ ಮಾನಮರ್ದನಂ ।

ಇಚ್ಛೇತ್ಸ್ವವಿಜಯಂ ರಾಜ್ಯಂ ಸುಭಿಕ್ಷಂ ಚಾತ್ಮನೋ ನೃಪ ॥

ಅನಂತರ ಶತ್ರುಗಳ ಅಭಿಮಾನವನ್ನಡಗಿಸುವ ಮಹಿಮೆಯುಳ್ಳ ಖಡ್ಗಕ್ಕೆ ರಾಜನು ನಮಸ್ಕಾರ ಮಾಡಿ, ನನಗೆ ಜಯವು ಪ್ರಾಪ್ತವಾಗಲಿ, ನನ್ನ ರಾಜ್ಯವು ಸುಭಿಕ್ಷವಾಗಲಿ ಎಂದು ಪ್ರಾರ್ಥಿಸಬೇಕು.

## ದುರ್ಗೆಗೆ ಜಯವಾಗಲಿ

ಪುನಃ ಪುನಃ ಪುಣ್ಯಮಥ ಧ್ಯಾಯೇಚ್ಚ ಹೃದಯೇ ಶಿವಾಂ ।

ಮಹಿಷಘ್ನೀಂ ಬಹುಭುಜಾಂ ಕುಮಾರೀಂ ಸಿಂಹವಾಹಿನೀಂ ॥

ಬಳಿಕ ಶುಭಕರೆಯೂ ಮಹಿಷಮರ್ದಿನಿಯೂ ಬಹು ಸಂಖ್ಯೆಯ ಭುಜಗಳುಳ್ಳವಳೂ ಕಮಾರೀಸ್ವರೂಪಿಣಿಯೂ ಸಿಂಹವಾಹನೆಯೂ

ದಾನವಾಂಶ್ಚಾರ್ಚಯಂತೀಂ ಚ ಖಡ್ಗೋದ್ಧತಕರಾಂ ಶುಭಾಂ ।

ಘಂಟಾಕ್ಷಸ್ರಗ್-ಧರಾಂ ದುರ್ಗಾಂ ರಣಾರಂಭೇ ವ್ಯವಸ್ಥಿತಾಂ ॥

ತತೋ ಜಯಜಯಾಕಾರೈಃ ಸ್ತವಂ ಕುರ್ಯಾದಿಮತಂ ತತಃ ॥

ತನ್ನ ಆರ್ಭಟದಿಂದಲೇ ರಾಕ್ಷಸರನ್ನು ದಿಗಲುಪಡಿಸುವಳೂ, ಪ್ರಹರಿಸುವುದಕ್ಕಾಗಿ ಖಡ್ಗವನ್ನೆತ್ತಿ ಸನ್ನದ್ಧೆಯಾಗಿರುವವಳೂ, ಘಂಟಾಮಾಲಿಕೆ ಜಪಮಾಲಿಕೆ ಇವನ್ನು ಧರಿಸಿರುವವಳೂ, ರಣಾರಂಭದಲ್ಲಿ ವ್ಯವಸ್ಥಿತವಾಗಿರುವವಳೂ ಆದ ದುರ್ಗಾದೇವಿಯನ್ನು ಹೃದಯದಲ್ಲಿ ಮತ್ತೆ ನಮಸ್ಕರಿಸಿ, ಜಯಜಯಶಬ್ದ ಪೂರ್ವಕವಾಗಿ ಈ ಪ್ರಕಾರ ಸ್ತೋತ್ರ ಮಾಡಬೇಕು.

ಸರ್ವಮಾಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।

ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತುತೇ ॥

ಶುಭಸ್ವರೂಪಣಿಯಾದ ಸರ್ವಮಂಗಳೇ ! ಶಿವೇ ! ಸಕಲ ಇಷ್ಟಾರ್ಥವನ್ನೂ ಸಾಧಿಸಿಕೊಡತಕ್ಕವಳೇ ! ಭಕ್ತರಕ್ಷಿಣಿಯೇ ! ಫಾಲನೇತ್ರಯುಕ್ತಳೇ ! ತ್ರಿನಯನಶೋಭಾಕರೇ! ಗೌರೀದೇವಿ, ನಾರಾಯಣಿ ಇತ್ಯಾದಿ ನಾಮಾಂಕಿತೆಯೇ! ನಿನಗೆ ನಮಸ್ಕಾರ''.

## ದುರ್ಗೆಗೆ ಶರಣು ಶರಣು

ಕುಂಕುಮೇನ ಸಮಾಲಬ್ಧೇ ಚಂದನೇನ ವಿಲೇಪಿತೇ ।

ಬಿಲ್ವಪತ್ರಕೃತಾಮಾಲೇ ದುರ್ಗೇಽಹಂ ಶರಣಂ ಗತಃ ॥

ಕುಂಕುಮ ಕೇಸರಿ ಲೇಪನ ಮಾಡಿದ ಅಂಗವುಳ್ಳವಳೇ ! ಚಂದನ ದಿಗ್ಧಾಂಗಿಯೇ! ಬಿಲ್ವಮಾಲಾಲಂಕೃತೆಯೇ ! ದುರ್ಗಾದೇವಿಯೇ ! ನಾನು ನಿನ್ನನ್ನು ಶರಣುಹೊಕ್ಕಿದ್ದೇನೆ.

(ಬೇರೆ ವಿಷಯವಿದ್ದ ಪ್ರಯುಕ್ತ ಮುಂದಿನ ನಾಕು ಶ್ಲೋಕ ಬಿಟ್ಟಿದೆ)

## ದುರ್ಗೆಗೆ ರಥೋತ್ಸವ

ತತೋಽಪರಾಹ್ಣಸಮಯೇ ನವಮ್ಯಾಂ ಸ್ಯಂದನೇ ಸ್ಥಿತಾಂ ।

ಭವಾನೀಂ ಭ್ರಾಮಯೇದ್ರಾಷ್ಟ್ರೇ ಸ್ವಯಂ ರಾಜಾ ಸಸೈನ್ಯವಾನ್ ॥

ನವಮಿಯ ದಿವಸ ಅಪರಾಹ್ಣದಲ್ಲಿ ರಾಜನು ಭವಾನೀದೇವಿಯನ್ನು ರಥಾರೋಹಣ ಮಾಡಿಸಿ ತನ್ನ ಪರಿವಾರದವರೆನಿಸಿ ಸುಶಿಕ್ಷಿತರಾದ ಸಾವಿರಾರು ಮಂದಿ ಸೇನಾಸಮೇತನಾಗಿ ಆ ರಾಷ್ಟ್ರದಲ್ಲೆಲ್ಲಾ ನಿಧಾನವಾಗಿ ಉತ್ಸವ ಮಾಡಬೇಕು.

## ಉತ್ಸವ ಹೇಗಿರಬೇಕು ?

ಸಹಸ್ರೈಃ ಪುರುಷೈರ್ವಾಪಿ ರಥಯುಕ್ತೈಃ ಸುಶಿಕ್ಷಿತೈಃ ।

ಶನೈಃಶನೈರಧಿಕಯಾ ದೀಪ್ತ್ಯಾ ಪ್ರಜ್ವಲದೀಪಕೈಃ ॥

ಆ ಉತ್ಸವವದಲ್ಲಿ ಬಹು ಪ್ರಕಾಶಮಾನವಾದ ದೀಪಗಳನ್ನು ಹಿಡಿದಿರಬೇಕು. ವೀರನು ಒರೆಯಿಂದ ಕತ್ತಿಯನ್ನು ತೆಗೆದು ಖಡ್ಗಪಾಣಿಗಳಾಗಿರಬೇಕು. ಆನೆಗಳಿಗೆ ಧಾತುವಸ್ತುಗಳಿಂದ ಕೆಂಪುಬಣ್ಣವನ್ನು ಚಿತ್ರಿಸಬೇಕು.

ಅಕೃಷ್ಟಖಡ್ಗೈರ್ವೀರೈಶ್ಚ ಧಾತುರಕ್ತೈರ್ಗಜೈಸ್ತಥಾ ।

ನದದ್ಭಿಃ ಶಂಖಪಟಹೈರ್ನೃತ್ಯದ್ಭಿರ್ವಾರಯೌವತೈಃ ॥

ಅಲಂಕೃತಾಭಿರ್ನಾರೀಭಿರ್ಬಾಲಕೈಃ ಸುವಿಭೂಷಿತೈಃ ॥

ಒಂದುಕಡೆ ಶಂಖ, ಪಟಹ, ಮುಂತಾದವುಗಳ ಧ್ವನಿ, ಒಂದು ಕಡೆ ವಾರಸ್ತ್ರೀಯರ ನರ್ತನ, ಮತ್ತೊಂದು ಕಡೆ ನಾನಾಭೂಷಣಗಳಿಂದ ಅಲಂಕರಿಸಿಕೊಂಡ ಸ್ತ್ರೀಯರು ಬಾಲಕರು ಇವರ ಗುಂಪು, ಹೀಗೆ ಮೆರವಣಿಗೆಯು ವಿಜೃಂಭಣೆಯಿಂದ ಸಾಗಬೇಕು.

## ಫಲಪ್ರಾಪ್ತಿ

ಏವಂ ಯೇ ಕುರ್ವತೇ ಯಾತ್ರಾಂ ರಾಜಾನೋಽನ್ಯೇಽಪಿ ಮಾನವಾಃ ।

ಮಹಾನವಮ್ಯಾಂ ನಂದಾಯಾಂ ಪುತ್ರಕಾ ಹೃಷ್ಟಮಾನಸಾಃ ॥

ತೇ ಸರ್ವೇ ಪಾಪನಿರ್ಮುಕ್ತಾ ಯಾಂತಿ ಭಾಗವತೀಂ ಪುರೀಂ ॥

ಅಯ್ಯಾ ರಾಜೇಂದ್ರನೇ ! ರಾಜರಾಗಲಿ, ಇತರ ಮಾನವರಾಗಲಿ, ಮಕ್ಕಳಾಗಲಿ ತಂದೆಯ ತಿಥಿಯಾದ ಮಹಾನವಮಿಯಲ್ಲಿ ರಥಯಾತ್ರೆಯನ್ನು ಮಾಡುವರೋ ಅವರು ತಮ್ಮ ಪರಿಹಾರಹೊಂದಿ ಸಂತುಷ್ಟಾಂತರಂಗರಾಗಿ ಭಗವತಿಯಾದ ದೇವಿಯ ಪುರವನ್ನು ಸೇರುತ್ತಾರೆ.

## ದುರ್ಗಾರಾಧಕರಿಗೆ ಯಾವುದೇ ಭಯವಿಲ್ಲ

ನ ತೇಷಾಂ ಶಾವೊಕೋನಾಗ್ನಿ ರ್ನ ಚರಾ ನ ವಿನಾಯಕಃ ।
ವಿಘ್ನಂ ಕುರ್ವಂತಿ ರಾಜೇಂದ್ರ ಯೇಷಾಂ ತುಷ್ಟಾ ಮಹೇಶ್ವರೀ ॥

ಆ ಪರಮೇಶ್ವರಿಯು ಯಾರಲ್ಲಿ ಸಂತುಷ್ಟಳಾಗುವಳೋ ಅವರಿಗೆ ಅಗ್ನಿಯಾಗಲಿ, ಶಾವಕನಾಗಲಿ, ಚೋರರಾಗಲಿ, ವಿಘ್ನವಿನಾಯಕರಾಗಲಿ, ಯಾವುದೇ ವಿಘ್ನವನ್ನುಂಟುಮಾಡುವುದಿಲ್ಲ.

ನೀರುಜೋ ಸುಖಿನೋ ಭೋಗಭೋಕ್ತಾರೋ ಭಯವರ್ಜಿತಾಃ ।
ಭವಂತಿ ಭಕ್ತಾ ಪುರುಷಾಃ ಭಗವತ್ಯಾಃ ಕಿಮುಚ್ಯತೇ ॥

ಅಂತಹ ದೇವೀಭಕ್ತರಾದ ಪುರುಷರು ರೋಗರಹಿತರೂ ಸುಖಿಗಳೂ ಭೋಗರಾಜರೂ ನಿರ್ಭೀತರೂ ಆಗಿರುತ್ತಾರೆ.

## ಈ ಚರಿತ್ರೆಯ ಪಠನ ಶ್ರವಣಗಳ ಫಲ

ಇತ್ಯೇಷ ತೇ ಸಮಾಖ್ಯಾತೋ ದುರ್ಗಾದೇವ್ಯಾ ಮಹೋತ್ಸವಃ ।
ಪಠತಾಂ ಶೃಣ್ವತಾಂ ಚೈವ ಸರ್ವಾಶುಭವಿನಾಶನಃ ॥

ಅಯ್ಯಾ ವಿಭುವೇ ! ಮಹಾನವಮಿಯದಿನ ಆಚರಿಸತಕ್ಕ ದುರ್ಗಾದೇವಿಯ ಮಹೋತ್ಸವದ ವಿಚಾರವನ್ನು ನಿನಗೆ ತಿಳಿಸಿದ್ದಾಯಿತು. ಇದನ್ನು ಶ್ರವಣಮಾಡಿದವರ ಮತ್ತು ಪಠನಮಾಡಿದವರ ಸಮಸ್ತ ಅಶುಭಗಳೂ ಪರಿಹಾರವಾಗುವುವು.

ಶೂಲಾಗ್ರಭಿನ್ನ ಮಹಿಷಾಸುರ ಪೃಷ್ಠವಿಷ್ಟಾ ಮ್
ಉತ್ಪಾತಖಡ್ಗ ರುಚಿರಾಂಗದಬಾಹುದಂಡಾಂ ।

## ದುರ್ಗಾಷ್ಟಮಿ

ಅಭ್ಯರ್ಚ್ಯ ಪಂಚವದನಾನುಗತಾಂ ನವಮ್ಯಾಂ।
ದುರ್ಗಾಂ ಸುದುರ್ಗಗಹನಾನಿ ತರಂತಿ ಮರ್ತ್ಯಾಃ॥

(ಭ.ಪು.ಉ.ಪ.ಅ.೧೩೮)

ತ್ರಿಶೂಲದ ಮೊನೆಯಿಂದ ಮಹಿಷಾಸುರನ ಪೃಷ್ಠ ಪ್ರದೇಶವನ್ನು ಭೇದಿಸಿ ಒರೆಯಿಂದ ಹಿರಿದು ಹೊಡೆಯಲು ಎತ್ತಿದ ಖಡ್ಗದ ಹೊಳಪಿನಿಂದ ಕಾಂತಿಯುಕ್ತವೂ ಭುಜಕೀರ್ತಿ ಸಹಿತವೂ ಆದ ದೀರ್ಘಬಾಹುವುಳ್ಳವಳೂ ಮಹಾನವಮಿಯಲ್ಲಿ ಪಂಚಮುಖಗಳಿಂದ ಅನುಗತಳೂ ಆದ ದುರ್ಗಾದೇವಿಯನ್ನು ಮಾನವರು ಪೂಜಿಸಿದರೆ ದುಸ್ಸಹವಾದ ಕಷ್ಟಗಳಿಂದ ಪಾರಾಗುತ್ತಾರೆ.

* ಪ್ರಳಯಕಾಲದಲ್ಲಿ ಪರಮಾತ್ಮನು ಯೋಗನಿದ್ರೆಯಲ್ಲಿರುತ್ತಾನೆ. ಆಗ ಶ್ರೀದೇವಿಯು ಆಲದೆಯಲ್ಲಿರುತ್ತಾಳೆ. ಭೂದೇವಿಯು ಜಲರೂಪದಲ್ಲಿರುತ್ತಾಳೆ. ದುರ್ಗೆಯು ತಮೋರೂಪದಲ್ಲಿರುತ್ತಾಳೆ. ಮೊಟ್ಟಮೊದಲು ದುರ್ಗೆಯು ಎದ್ದು ತನ್ನ ತಮೋರೂಪವನ್ನು ಅವ್ಯಕ್ತವನ್ನಾಗಿ ಮಾಡಿ, ಪರಮಾತ್ಮನನ್ನು ಎಬ್ಬಿಸುತ್ತಾಳೆ. ಅನಂತರ ಜಲರೂಪದ ಭೂದೇವಿಯು ಅನಂತರ ಆಲದೆಲೆಯ ರೂಪದಲ್ಲಿರುವ ಶ್ರೀದೇವಿಯು ಎದ್ದು ಆ ಭಗವಂತನನ್ನು ಯೋಗನಿದ್ರೆಯಿಂದ ಮೇಲೆಬ್ಬಿಸುತ್ತಾರೆ. ಶ್ರೀ, ಭೂ, ದುರ್ಗಾರೂಪಗಳಲ್ಲಿ ದುರ್ಗಾರೂಪವು ಸಂಹಾರಕಾರಣವಾಗಿದೆ. ಆದ್ದರಿಂದ ಪ್ರತೀಕ್ಷಣ ಸಂಹಾರದೆಡೆ ಧಾವಿಸುತ್ತಿರುವ ನಾವೆಲ್ಲರೂ ಮೊಟ್ಟಮೊದಲು ದುರ್ಗೆಯನ್ನೇ ಆರಾಧನೆ ಮಾಡಬೇಕು. ಶರಣಾಗತರಾಗಿ ರಕ್ಷಿಸೆಂದು ವರ ಬೇಡಬೇಕು.
* ಪ್ರತಿನಿತ್ಯವೂ ದುರ್ಗೆಯ ಆರಾಧನೆಯನ್ನು ಮಾಡಬೇಕು. ಇದು ಸಾಧ್ಯವಾಗದಿದ್ದಾಗ ನವರಾತ್ರಿಯ ಪರ್ವಕಾಲಗಳಲ್ಲಿ ಒಂದು ದಿನವೂ ಬಿಡದೇ ದುರ್ಗೆಯನ್ನು ಆರಾಧನೆ ಮಾಡಬೇಕು. ನರಸಿಂಹದೇವರ ಜೊತೆ ಕುಳಿತ, ದುರ್ಗೆ ಪೂಜೆ, ನಮಸ್ಕಾರ ಮೊದಲಾದವುಗಳನ್ನು ಮಾಡಿ, ಅವಳ ಅನುಗ್ರಹವನ್ನು ಪಡೆದುಕೊಳ್ಳಬೇಕು.

* * * *

## ದುರ್ಗೆಯು ಲಕ್ಷ್ಮೀದೇವಿಯ ಕನ್ಯಾರೂಪ

# ಒಂದು ವಿಮರ್ಶೆ

ಅನೇಕರು 'ದುರ್ಗಾಪತಿ ನಾರಸಿಂಹಾಯ ನಮಃ' 'ದುರ್ಗಾಪತಿ ನಾರಾಣಾಯ ನಮಃ' 'ದುರ್ಗಾಪತಿ ವಿಷ್ಣವೇ ನಮಃ' ಇತ್ಯಾದಿಯಾಗಿ ಪೂಜಾದಿ ಸಂದರ್ಭಗಳಲ್ಲಿ ಹೇಳುತ್ತಾರೆ. ಇದು ಎಷ್ಟರ ಮಟ್ಟಿಗೆ ಸರಿ ಎಂಬುದನ್ನು ವಿಮರ್ಶೆ ಮಾಡಬೇಕು. ಭಗವಂತನು ಯಾವ ಕ್ಷಣದಲ್ಲಿಯೂ ಲಕ್ಷ್ಮೀದೇವಿಯನ್ನು ಬಿಟ್ಟಿರುವುದಿಲ್ಲ. ಲಕ್ಷ್ಮಿಯೂ ಸಹ ಭಗವಂತನನ್ನು ಯಾವ ಕ್ಷಣದಲ್ಲಿಯೂ ಬಿಟ್ಟಿರುವುದಿಲ್ಲ. ಮತ್ತು ಲಕ್ಷ್ಮಿಯ ಎಲ್ಲಾ ರೂಪಗಳಿಗೂ ಅಭೇದವಿದೆ. ಭಗವಂತನ ಎಲ್ಲಾ ರೂಪಗಳಿಗೂ ಅಭೇದವಿದೆ. ಅಂದಮಾತ್ರಕ್ಕೆ ಮನಸೋ ಇಚ್ಛೆಯಂತೆ, 'ಸೀತಾಪತಿ ಶ್ರೀಕೃಷ್ಣಾಯ ನಮಃ' ಎನ್ನಬಾರದು. 'ರುಗ್ಮಿಣೀಪತಿ ಶ್ರೀರಾಮಾಯ ನಮಃ' ಎಂದೂ ಸಹ ಹೇಳಬಾರದು. ಅಥವಾ ಸನತ್ಕುಮಾರ ಎಂಬ ಭಗವಂತನ ಬ್ರಹ್ಮಚಾರಿ ರೂಪದ ಆರಾಧನೆ ನಡೆಸುವಾಗ ಋಷಭನಾಮಕನಾದ ಸನ್ಯಾಸಿರೂಪದ ಚಿಂತನೆಯನ್ನು ನಡೆಸುವಾಗ ಲಕ್ಷ್ಮಿಯ ರೂಪ ಸಹಿತವಾಗಿ ಚಿಂತನೆ ಮಾಡಬಾರದು. ವಿಶೇಷಬಲದಿಂದ ಇಂಥ ಭೇದವ್ಯವಹಾರವು ಅತ್ಯಂತ ಗಮನಾರ್ಹವಾಗಿದೆ.

ಪ್ರಕೃತ ದುರ್ಗೆ ಎಂಬ ಲಕ್ಷ್ಮಿಯ ರೂಪವೂ ಕನ್ಯಾರೂಪವೇ ಆಗಿದೆ ಹೊರತು, ಶ್ರೀರೂಪ, ಲಕ್ಷ್ಮೀರೂಪ ಮೊದಲಾದವುಗಳಂತೆ ವಿವಾಹಿತವಾದ ರೂಪವಲ್ಲ. ಆದ್ದರಿಂದ 'ದುರ್ಗಾಪತಿ ನಾರಸಿಂಹಾಯ ನಮಃ' ಇತ್ಯಾದಿಯಾಗಿ ವ್ಯವಹಾರವನ್ನು ಮಾಡುವುದು ತಪ್ಪು. ಮಧ್ವವಿಜಯದಲ್ಲಿ ದುರ್ಗೆಯ ಬಗ್ಗೆ ಉಲ್ಲೇಖ ಮಾಡುವಾಗ ಪಂಡಿತಾಚಾರ್ಯರು 'ಹರಿಸ್ವಸ ನನು ಅಚಿರಾತ್' ಇತ್ಯಾದಿಯಾಗಿ ಶ್ರೀಕೃಷ್ಣನ ಸಹೋದರಿ ಎಂದೇ ಹೆಸರಿಸುತ್ತಾರೆ. ಭಾಗವತದ ದಶಮಸ್ಕಂಧದ ಪ್ರಕರಣವನ್ನು ನೋಡಿದಾಗ ಈ ವಿಷಯ ಮತ್ತಷ್ಟು ಮನದಟ್ಟಾಗುತ್ತದೆ. ಮತ್ತು ಭಗವಂತನು ಶ್ರೀ-ಭೂರೂಪಗಳ ಜೊತೆಗೆ ನಿಂತಿರುತ್ತಾನೆ. ಶ್ರೀನಿವಾಸದೇವರ ಮೂರ್ತಿಯನ್ನು

ಪೂಜಿಸುವಾಗ ಶ್ರೀರೂಪ ಹಾಗೂ ಭೂರೂಪಗಳ ಮೂರ್ತಿಯನ್ನಷ್ಟೇ ಇಡುವ ಪದ್ಧತಿಯು ಇರುತ್ತದೆ. ದುರ್ಗಾರೂಪದ ಮೂರ್ತಿಯನ್ನು ಇಡುವ ಪದ್ಧತಿಯು ಇರುವುದಿಲ್ಲ. ಅರ್ಥಾತ್ ಪತ್ನಿಯ ಸ್ಥಾನದಲ್ಲಿ ಇಟ್ಟು ಪೂಜಿಸುವ ವಾಡಿಕೆ ಎಲ್ಲಿಯೂ ಇಲ್ಲ. ಸತ್ವಗುಣಕ್ಕೆ ಶ್ರೀದೇವಿಯು ಅಭಿಮಾನಿಯಾಗಿದ್ದಾಳೆ. ರಜೋಗುಣಕ್ಕೆ ಭೂದೇವಿಯು ಅಭಿಮಾನಿಯಾಗಿದ್ದಾಳೆ. ತಮೋಗುಣಕ್ಕೆ ದುರ್ಗೆಯು ಅಭಿಮಾನಿಯಾಗಿದ್ದಾಳೆ ಇತ್ಯಾದಿ ವಿಚಾರಗಳು ಶಾಸ್ತ್ರದಲ್ಲಿ ಪ್ರಸ್ತಕವಾಗುತ್ತದೆ. ಇಲ್ಲಿ ಎಲ್ಲಿಯೂ ದುರ್ಗೆಯನ್ನು ಶ್ರೀಹರಿಯ ಪತ್ನಿ ಎಂದು ಸಂಬೋಧಿಸಿರುವುದಿಲ್ಲ. ಮತ್ತು ದುರ್ಗಾಸುಳಾದಿ, ನರಸಿಂಹಸುಳಾದಿ ಇತ್ಯಾದಿ ದಾಸರಾಯರ ಪದ್ಯಗಳಲ್ಲಿಯೂ ಕೂಡ ದುರ್ಗಾಪೂಜೆಯು ಮಾಡುವ ಸಂದರ್ಭದಲ್ಲಿಯೂ ಕೂಡ ದುರ್ಗೆಯನ್ನು ಶ್ರೀಹರಿಯು ವರಿಸಿದನೆಂದಾಗಲೀ, ಶ್ರೀಹರಿಯ ಪತ್ನಿಯೆಂದಾಗಲೀ ಉಲ್ಲೇಖವು ಕಾಣಿಸುವುದಿಲ್ಲ. ಪೂಜಾಪದ್ಧತಿಯಲ್ಲಿಯೂ ಕೂಡ ಪ್ರತಿಯೊಂದು ಕಡೆ ಕುಮಾರಿ ಎಂದೇ ಅವಳನ್ನು ಕರೆಯಲಾಗಿದೆ.

ಮೇಲಿನ ಈ ಎಲ್ಲ ವಿಚಾರಗಳಿಗೆ ಪೂರಕವಾದ ಮುಖ್ಯಪ್ರಮಾಣವೆಂದರೆ ಐತರೇಯ ಭಾಷ್ಯ. ಶ್ರೀಮಧ್ವಾಚಾರ್ಯರು ಐತರೇಯಭಾಷ್ಯದಲ್ಲಿ ಹೀಗೆ ಈ ವಿಷಯವನ್ನು ನಿಖರವಾಗಿ ನಮಗೆ ತಿಳಿಸಿದ್ದಾರೆ.

ರಾತ್ರ್ಯಾಸ್ತು ದೇವತಾ ದುರ್ಗಾ ದುಃಸ್ವಪ್ನೇಃ ಸಾ ಪ್ರಪೂಜಿತಾ ।
ಪಾಯಸೇನ ಹರೇನ್ಮೃತ್ಯುಂ ರಾತ್ರೀಸೂಕ್ತಾದಕಾಲಿಕಂ ।
ಯದಿ ಕಾಲಿಕಮೃತ್ಯುಃ ಸ್ಯಾತ್ ಪದಂ ಸಾ ಪರಮಂ ನಯೇತ್ ।
ಸಹೈವ ವಿಷ್ಣುನಾ ಭಕ್ತಂ ವಿಷ್ಣೋಸ್ತದ್ವೇದಿನಂ ತಥಾ ।
ರತಿದತ್ವಾತ್ ಪರೋ ವಿಷ್ಣುಮುಖ್ಯತೋ ರಾತ್ರಿರುಚ್ಯತೇ ।
ತದಾಶ್ರಯತ್ವಾದ್ ದುರ್ಗಾಽಪಿ ರಾತ್ರಿರಿತ್ಯಭಿಧೀಯತೇ ।
ಸ್ತ್ರೀರೂಪಃ ಸ ಪರೋ ವಿಷ್ಣುಃ ಪಾಯಸೇಷ್ಟೋ ಹಿ ಮೋಕ್ಷದಃ ।
ತಸ್ಮಾದ್ ಉಭೌ ಸಹೈವೇಜ್ಯೌ ಭಕ್ತ್ಯಾ ದುಃಸ್ವಪ್ನದರ್ಶನೇ । (ಭಾಷ್ಯ)

ದುರ್ಗಾಷ್ಟಮಿ

ರಾತ್ರಿಯ ದೇವತೆ ವಿಷ್ಣು ಮತ್ತು ದುರ್ಗೆ, ದುಃಸ್ವಪ್ನ ಕಂಡಾಗ ಅವರನ್ನು ಪಾಯಸದಿಂದ ರಾತ್ರಿಸೂಕ್ತ ಪೂರ್ವಕ ಪೂಜಿಸಿದರೆ ಅಕಾಲ ಮೃತ್ಯುವನ್ನು ಅವರು ಪರಿಹರಿಸುತ್ತಾರೆ. ಕಾಲಮೃತ್ಯು ಪ್ರಾಪ್ತವಾಗಿದ್ದಲ್ಲಿ ವಿಷ್ಣುಭಕ್ತನಾದ ಆ ದುರ್ಗಾಂತರ್ಯಾಮಿ ವಿಷ್ಣೂಪಾಸಕನನ್ನು ಉತ್ತಮ ವಿಷ್ಣು ಲೋಕಕ್ಕೆ ಕೊಂಡೊಯ್ಯುತ್ತಾರೆ. ಸುಖನೀಡುವುದರಿಂದ ಮುಖ್ಯವಾಗಿ ಪರವಿಷ್ಣುವೇ ರಾತ್ರಿ ಎನಿಸುತ್ತಾನೆ. ಅವನನ್ನಾಶ್ರಯಿಸಿದ್ದರಿಂದ ದುರ್ಗೆಯೂ ರಾತ್ರಿ ಎನಿಸುತ್ತಾಳೆ. ಸ್ತ್ರೀರೂಪನಾದ ಆ ಸರ್ವೋತ್ತಮ ವಿಷ್ಣುವೆ ಪಾಯಸದಿಂದ ಆರಾಧನೆ ಮಾಡಿದಾಗ ಮೋಕ್ಷವನ್ನೇ ಕೊಡುತ್ತಾನೆ. ಹಾಗಾಗಿ ದುಃಸ್ವಪ್ನ ಬಿದ್ದಾಗ ದುರ್ಗೆಯ ಜೊತೆ ವಿಷ್ಣುವನ್ನೂ ಭಕ್ತಿಯಿಂದ ಆರಾಧನೆ ಮಾಡಬೇಕು.

'ತಸ್ಮಾದ್ ಉಭೌ ಸಹೇವೇಜ್ಯೌ ಭಕ್ತ್ಯಾದುಃಸ್ವಪ್ನದರ್ಶನೇ' ಎಂಬ ಈ ಮಾತಿನಿಂದ ದುರ್ಗೆ ಹಾಗೂ ವಿಷ್ಣು ಇಬ್ಬರನ್ನು ಜೊತೆಯಾಗಿಯೇ ಆರಾಧನೆ ಮಾಡಬೇಕು ಎಂದು ಹೇಳಿದ್ದಾರೆ. ಪತಿ-ಪತ್ನಿಭಾವದಿಂದ ಆರಾಧನೆ ಮಾಡಬೇಕು ಎಂದು ಹೇಳಿರುವುದಿಲ್ಲ. ಮತ್ತು ಈ ಪ್ರಮಾಣದ ಆಧಾರದಂತೆ ಭಗವಂತನು ರಾತ್ರಿ ಎಂಬ ಸ್ತ್ರೀರೂಪವನ್ನು ಧಾರಣೆ ಮಾಡಿದ್ದಾನೆ. ಆ ಸ್ತ್ರೀರೂಪವನ್ನು ಆಶ್ರಯಿಸಿರುವ ಕಾರಣ ದುರ್ಗೆಯೂ ಕೂಡ ರಾತ್ರಿಯೆಂಬುದಾಗಿಯೇ ಕರೆಸಿಕೊಳ್ಳುತ್ತಾಳೆ. ಈ ಕಾರಣದಿಂದ ಪ್ರಸಕ್ತ ದುರ್ಗಾಪೂಜೆಯನ್ನು ಮಾಡುವಾಗ ಹೀಗೆ ಅನುಸಂಧಾನವನ್ನು ಮಾಡಬೇಕು. ದೀಪದಲ್ಲಿ, ಕಲಶದಲ್ಲಿ ಅಥವಾ ಮೂರ್ತಿಯಲ್ಲಿ ರಾತ್ರಿನಾಮಕಳಾದ ದುರ್ಗೆಯು ಮುಖ್ಯಪ್ರಾಣದೇವರಲ್ಲಿ ನೆಲೆಸಿದ್ದಾಳೆ. ಇವಳ ಜೊತೆ ರಾತ್ರಿನಾಮಕನಾದ ದುರ್ಗಾ ಎಂಬ ಸ್ತ್ರೀರೂಪವುಳ್ಳ ಮಹಾವಿಷ್ಣುವು ನೆಲೆಸಿದ್ದಾನೆ. ಹೀಗೆ ಅನುಸಂಧಾನವನ್ನು ಮಾಡಬೇಕು. ಆದ್ದರಿಂದ ರಾತ್ರಿನಾಮಕ ದುರ್ಗಾರೂಪಿ ರಮಾಸಹಿತ ರಾತ್ರಿನಾಮಕ ದುರ್ಗಾರೂಪಿ ಮಹಾವಿಷ್ಣುಪ್ರೀತ್ಯರ್ಥಂ ಪೂಜಾಂ ಕರಿಷ್ಯೇ ಎಂಬುದಾಗಿ ಸಂಕಲ್ಪವನ್ನು ಮಾಡಬೇಕು. ಪೂಜಾ ಸಂದರ್ಭದಲ್ಲಿಯೂ ಕೂಡ ಲಕ್ಷ್ಮಿಯ ದುರ್ಗಾ ಎಂಬ ರೂಪದ ಜೊತೆ ಭಗವಂತನು ದುರ್ಗಾ ಎಂಬ ಸ್ತ್ರೀರೂಪದಿಂದಲೇ ನೆಲೆಸಿರುತ್ತಾನೆ ಎಂಬುದಾಗಿ ಅನುಸಂಧಾನ ಮಾಡುತ್ತಾ ಆರಾಧನೆಗೈಯ್ಯಬೇಕು.

## ಮಹಾಮಂಗಳಾರತಿಯ ಬಗ್ಗೆ ಸ್ಪಷ್ಟ ಮಾಹಿತಿ

ನಿತ್ಯವೂ ದೇವರ ಪೂಜೆಯಲ್ಲಿ ಈ ಕೆಳಗಿನ ಕ್ರಮದಂತೆ ಮಹಾಮಂಗಳಾರತಿಯನ್ನು ಮಾಡುವ ಕ್ರಮವನ್ನು ಅಳವಡಿಸಿಕೊಳ್ಳಬೇಕು. ನಿತ್ಯವೂ ಸಾಧ್ಯವಾಗದಿದ್ದರೆ ಹಬ್ಬ-ಹರಿದಿನಗಳಲ್ಲಿ ಈ ಕ್ರಮದ ಆರತಿಯನ್ನು ಮಾಡಬೇಕು. ಅದರಲ್ಲಿ ದುರ್ಗಾಷ್ಟಮೀದಿವಸ ಈ ಮಂಗಳಾರತಿಯನ್ನು ಮಾಡುವುದು ಅತ್ಯಂತ ಪ್ರಶಸ್ತವಾಗಿದೆ. ದುರ್ಗೆಗೆ ಈ ಬಗೆಯ ಆರತಿಯು ಪರಮ ಪ್ರಿಯಕರವಾಗಿದೆ. ಆದ್ದರಿಂದ ಮಹಾಮಂಗಳಾರತಿಯ ಕ್ರಮವನ್ನು ಈ ಪುಸ್ತಕದಲ್ಲಿ ತಿಳಿಸಲಾಗಿದೆ.

೧. ಮಂಗಳಾರತಿ ಮಾಡುವ ತಟ್ಟೆಯಲ್ಲಿ ತುಳಸೀ, ಹೂವು ಹಾಗೂ ಮಂತ್ರಾಕ್ಷತೆಗಳನ್ನು ಹಾಕಿರಬೇಕು. ಮಂಗಳಾರತಿ ಮುಗಿದ ಮೇಲೆ ಅದನ್ನು ಭಗವಂತನ ಪಾದಕಮಲಗಳಲ್ಲಿ ಸಮರ್ಪಿಸಬೇಕು. ಅನೇಕ ಆರತಿ ಮಾಡುವ ಸಂದರ್ಭವು ಇದ್ದಾಗ ಕೊನೆಯ ಹಲಗಾರತಿಯಲ್ಲಿ ಇರುವ ತುಳಸೀ, ಹೂವು ಮಂತ್ರಾಕ್ಷತೆಯನ್ನು ಭಗವಂತನಿಗೆ ಸಮರ್ಪಣೆ ಮಾಡಿದರೆ ಸಾಕು.

೨. ಪ್ರತಿಯೊಂದು ಆರತಿ ಮಾಡಿದ ಮೇಲೆ ಕೈ ತೊಳೆದುಕೊಳ್ಳಬೇಕು. ಇಲ್ಲದಿದ್ದರೆ ನಿರ್ಮಾಲ್ಯವನ್ನು ಪುನಃ ಸಮರ್ಪಿಸಿದಂತಾಗುತ್ತದೆ.

೩. ಪ್ರತಿಯೊಂದು ಆರತಿಗಳನ್ನು ಮಾಡುವಾಗ ಕೈ ತೊಳೆದುಕೊಂಡ ಮೇಲೆ ತುಳಸೀ ಹಾಗೂ ಹೂವುಗಳನ್ನು ದೇವರಿಗೆ ಸಮರ್ಪಣೆ ಮಾಡಬೇಕು.

೪. ಭ್ರಾಮಯೇದ್ದೇವದೇವಸ್ಯ ಮುಖಮಧ್ಯೇ ವಿಸರ್ಜಯೇತ್ ।
ಪಾತ್ರೇ ಪಾತ್ರೇ ವಿಶೇಷೇಣ ಅರ್ಘ್ಯಪುಷ್ಪೈಃ ಸ್ಸಮರ್ಚಯೇತ್ ॥

ಆರತಿಯನ್ನು ದೇವರ ಮುಖಕ್ಕೆ ತೋರಿಸಿ ವಿಸರ್ಜನೆ ಮಾಡಬೇಕು. ಮತ್ತು ಪ್ರತಿಯೊಂದು ಆರತಿ ಮಾಡಿದ ಮೇಲೆ ದೇವರಿಗೆ ಅರ್ಘ್ಯವನ್ನು ಸಮರ್ಪಿಸಬೇಕು ಎಂಬುದಾಗಿ ಅನಿರುದ್ಧ ಸಂಹಿತೆಯು ಹೇಳುತ್ತದೆ.

ದಕ್ಷಿಣಂ ಪಾದಮಾರಭ್ಯ ವಾಮಪಾದಂ ತು ಪಶ್ಚಿಮಮ್ ॥

ಎಂಬ ಅನಿರುದ್ಧ ಸಂಹಿತೆಯ ಮಾತಿನಂತೆ ಭಗವಂತನ ದಕ್ಷಿಣ ಪಾದದಿಂದ ಆರಂಭ ಮಾಡಿ, ವಾಮಪಾದದಲ್ಲಿ ಆರತಿಯನ್ನು ಕೊನೆಗೊಳಿಸಬೇಕು. ಪಾದಕ್ಕೆ ಮೂರು ಬಾರಿ, ಹೃದಯಕ್ಕೆ ಮೂರು ಬಾರಿ, ಶಿರಸ್ಸಿಗೆ ಮೂರು ಬಾರಿ, ಸಮಗ್ರದೇಹಕ್ಕೆ ಮೂರು ಬಾರಿ, ಈ ಕ್ರಮದಲ್ಲಿ ಆರತಿಯನ್ನು

ಪ್ರದಕ್ಷಿಣಾಕಾರದಲ್ಲಿ ಸುತ್ತಬೇಕು. (ಅನಿರುದ್ಧ ಸಂಹಿತೆಯಲ್ಲಿ ಮಂಗಳಾರತಿ ಮಾಡುವ ಕ್ರಮವನ್ನು ಬಹಳ ಅದ್ಭುತವಾಗಿ ವರ್ಣನೆ ಮಾಡಲಾಗಿದೆ)

೫. ಮಂಗಳಾರತಿ ಮಾಡುವಾಗ ವೇದಮಂತ್ರಗಳನ್ನು ಪಠಿಸುತ್ತಿರಬೇಕು.

೬. ಮಹಾಮಂಗಳಾರತಿಯ ಸಂದರ್ಭದಲ್ಲಿ ಭಗಂವತನ ಆಪಾದಮೌಳಿ-ಪರ್ಯಂತದ ಚಿಂತನೆಯನ್ನು ಹಾಗೂ ಅವನ ಅನೇಕ ಲೀಲೆಗಳನ್ನು ಹಾಗೂ ಗುಣಗಳನ್ನು ಚಿಂತನೆ ಮಾಡುತ್ತಿರಬೇಕು.

೭. ಅನೇಕ ಮಂಗಳಾರತಿಗಳನ್ನು ಮಾಡುವಾಗ ಕೊನೆಯ ಹಲಗಾರತಿಯನ್ನು ಮಾಡುವ ಮೊದಲು ಬೀಸಣಿಗೆಯನ್ನು ಭಗವಂತನಿಗೆ ಬೀಸಬೇಕು.

೮. ಎಲ್ಲಾ ಮಹಾಮಂಗಳಾರತಿಗಳನ್ನು ನಿಂತು ಮಾಡುವುದೇ ಶ್ರೇಷ್ಠವಾಗಿದೆ. ಸಾಧ್ಯವಾಗದಿದ್ದರೆ, ಕೊನೆಯ ತಟ್ಟೆಯಿಂದ ಮಹಾಮಂಗಳಾರತಿಯನ್ನು ನಿಂತು ಮಾಡಬೇಕು.

ಮಹಾಮಂಗಳಾರತಿ ಮಾಡುವ ಆನುಪೂರ್ವಿ ಹೀಗಿದೆ -

೧. ಧೂಪಾರತಿ. ೨. ಏಕಾರತಿ, ೩. ಪಂಚಾರತಿ, ೪. ಶೇಷಾರತಿ, ೫. ಚಕ್ರಾರತಿ, ೬. ಶಂಖಾರತಿ, ೭. ಪದ್ಮಾರತಿ, ೮. ಗದಾರತಿ, ೯. ನಾರಾಯಣಾರತಿ, ೧೦. ಐದು ಸಲಕಾರತಿಗಳು, ೧೧. ಕೂರ್ಮಾರತಿ, ೧೨. ದೊಡ್ಡ ಕೂರ್ಮಾರತಿ, ೧೩. ಕರ್ಪೂರಾರತಿ, ೧೪. ತುಳಸೀ ವೃಂದಾವನರತಿ, ೧೫. ಕುಂಭಾರತಿ, ೧೬. ಓಕುಳಿ ಆರತಿ, ೧೭. ನೀಲಾಂಜನಾರತಿ, ೧೮. ಏಳು ರಥದ ಆರತಿ, ೧೯. ಹದಿನಾಕು ರಥದ ಆರತಿ, ೨೦. ಹರಿವಾಣಾರತಿ (ಎಷ್ಟು ದೇವರ ಪ್ರತಿಮೆಗಳು ಇರುತ್ತವೋ ಅಷ್ಟು ಸಂಖ್ಯೆಯಲ್ಲಿ ಕೊನೆಯಲ್ಲಿ ಹರಿವಾಣಾರತಿಗಳನ್ನು ಮಾಡಬೇಕು.) ೨೧. ಮಠಗಳಲ್ಲಿ ಮೇಲಿನ ಕ್ರಮದಲ್ಲಿಯೇ ಮಾಡಲಾಗುತ್ತದೆ. ಮನೆಯಲ್ಲಿಯೂ ಕೂಡ ಈ ಕ್ರಮದ ಆರತಿಯನ್ನು ಮಾಡಲು ಮಹಾಪ್ರಯತ್ನವನ್ನು ಮಾಡಬೇಕು. ೨೨. ಶುದ್ಧವಾಗಿ ನಿರ್ಮಿತವಾದ ಬತ್ತಿಗಳನ್ನು ತುಪ್ಪದಲ್ಲಿ ನೆನೆಸಿದ ಬತ್ತಿಗಳನ್ನು ಮಾಂಗಳಾರತಿಗೆ ಉಪಯೋಗಿಸಬೇಕು.

ಮಹಾಮಂಗಳಾರತಿಯ ಈ ವಿಧಿವಿಧಾನಗಳನ್ನು ಅನುಸರಿಸಿ, ಎಲ್ಲ ಭಕ್ತರು ದೇವರ ಕೃಪೆಗೆ ಪಾತ್ರರಾಗಬೇಕು.

# ದುರ್ಗಾಪೂಜಾವಿಧಾನ

ಶ್ರೀ ಗುರುಭ್ಯೋ ನಮಃ । ಶ್ರೀ ಪರಮ ಗುರುಭ್ಯೋನಮಃ ॥

ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥

ಸರ್ವದಾ ಸರ್ವಕಾರ್ಯೇಷು ನಾಸ್ತಿ ತೇಷಾಮಮಂಗಲಮ್ ।
ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನೋ ಹರಿಃ ॥

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ ।
ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ ॥

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ ॥

ನಮಸ್ತೇ ಪ್ರಾಣೇಶ ಪ್ರಣತವಿಭವಾಯಾವನಿಮಗಾಃ
ನಮಃ ಸ್ವಾಮಿನ್ ರಾಮಪ್ರಿಯತಮ ಹನೂಮನ್ ಗುರುಗುಣ ।
ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟಭಗವನ್
ನಮಃ ಶ್ರೀಮನ್ಮಧ್ವ ಪ್ರದಿಶ ಸುದೃಶಂ ನೋ ಜಯ ಜಯ ॥

ಮೃತ್ಯುಂಜಯ ನಮಸ್ತುಭ್ಯಂ ಮೃತ್ಯುಂ ಹರ ನಮಾಮ್ಯಹಮ್ ।
ಸರ್ವಮೃತ್ಯುವಿನಾಶಾಯ ಮೃತ್ಯುಂಜಯ ನಮೋ ನಮಃ ॥

ದುಷ್ಟಾನಾಂ ವಿಘ್ನಕರ್ತಾ ಸುಚರಿತ ಸುಜನಸ್ತೋಮವಿಘ್ನಾಪಹರ್ತಾ
ತಸ್ಮಾದ್ ವಿಘ್ನಾಧಿಪೋಽಹಂ ಮತ ಇತಿ ಸುಧಿಯಾಂ ಸ್ಪಷ್ಟಮಾಜ್ಞಾಪನಾಯ ।
ಪೌಲಸ್ತ್ಯೇಚ್ಛಾಂತರಾಯಃ ಸುರಮುನಿನಿಕರಾಭೀಷ್ಟಸಂಪ್ರಾಪ್ತ್ಯುಪಾಯಃ
ಶ್ರೇಯೋ ವಿಘ್ನಾಧಿರಾಜಃ ಪ್ರದಿಶತು ಸತತಂ ಭೂರಿಗೌರೀತನೂಜಃ ॥

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ।
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ ॥

## ಆಚಮನಮ್

ಕೇಶವಾಯ ಸ್ವಾಹಾ । ನಾರಾಯಣಾಯ ಸ್ವಾಹಾ । ಮಾಧವಾಯ ಸ್ವಾಹಾ । ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ । ತ್ರಿವಿಕ್ರಮಾಯ ನಮಃ । ವಾಮನಾಯ ನಮಃ । ಶ್ರೀಧರಾಯ ನಮಃ । ಹೃಷೀಕೇಶಾಯ ನಮಃ । ಪದ್ಮನಾಭಾಯ ನಮಃ । ದಾಮೋದರಾಯ ನಮಃ । ಸಂಕರ್ಷಣಾಯ ನಮಃ । ವಾಸುದೇವಾಯ ನಮಃ । ಪ್ರದ್ಯುಮ್ನಾಯ ನಮಃ । ಅನಿರುದ್ಧಾಯ ನಮಃ । ಪುರುಷೋತ್ತಮಾಯ ನಮಃ । ಅಧೋಕ್ಷಜಾಯ ನಮಃ । ನಾರಸಿಂಹಾಯ ನಮಃ । ಅಚ್ಯುತಾಯ ನಮಃ । ಜನಾರ್ದನಾಯ ನಮಃ । ಉಪೇಂದ್ರಾಯ ನಮಃ । ಹರಯೇ ನಮಃ । ಶ್ರೀ ಕೃಷ್ಣಾಯ ನಮಃ ।

(ಆಚಮನವನ್ನು ಎರಡು ಬಾರಿ ಮಾಡಬೇಕು)

## ಪ್ರಾಣಾಯಾಮ

ಓಂ ಪ್ರಣವಸ್ಯ ಪರಬ್ರಹ್ಮಋಷಿಃ ಪರಮಾತ್ಮಾ ದೇವತಾ ದೈವೀ ಗಾಯತ್ರೀ ಛಂದಃ । ವ್ಯಾಹೃತೀನಾಂ ಪ್ರಜಾಪತ್ಯಾದಿಋಷಯಃ । ಅಗ್ನಿವಾಯುಸೂರ್ಯಾದಿ ದೇವತಾಃ । ಗಾಯತ್ರ್ಯುಷ್ಣಿಗನುಷ್ಟುಬಾದಿ ಛಂದಾಂಸಿ । ಗಾಯತ್ರ್ಯಾಃ ವಿಶ್ವಾಮಿತ್ರ ಋಷಿಃ । ಸವಿತಾ ದೇವತಾ । ಗಾಯತ್ರೀ ಛಂದಃ । ಪ್ರಾಣಾಯಾಮೇ ವಿನಿಯೋಗಃ ।

ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಂ ಸತ್ಯಂ । ಓಂ ತತ್ಸವಿತುರ್ವರೇಣ್ಯಮ್ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಓಮಾಪೋಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಸ್ಸ್ವರೋಮ್ ।

## ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲೀವಾಹನ-ಶಕೇ ಶಾಲೀವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ದಕ್ಷಿಣಾಯನೇ ವರ್ಷಋತೌ ಭಾದ್ರಪಮಾಸೇ ಶುಕ್ಲಪಕ್ಷೇ ಚತುರ್ದಶ್ಯಾಂ ಶುಭತಿಥೌ .... ವಾಸರಯುಕ್ತಾಯಾಂ ಶುಭನಕ್ಷತ್ರ ಶುಭಯೋಗ ಶುಭಕರಣ ಏವಂಗುಣವಿಶೇಷಣವಿಶಿಷ್ಟಾಯಾಂ ಅಸ್ಮದಾದಿಗುರೂಋಣಾಂ ಶ್ರೀಮನ್ಮಧ್ವಾಚಾರ್ಯಾಣಾಂ ಹೃತ್ಕಮಲಮಧ್ಯನಿವಾಸಿ-ವಾಸುದೇವ ಸಂಕರ್ಷಣಪ್ರದ್ಯುಮ್ನಾನಿರುದ್ಧ ಚತುರ್ಮಾಸ್ಯಾಸ್ಸನಂತಾದತಾರಾತ್ಮಕ-ದುರ್ಗಾನಾಮಕರಮಾ ಸಹಿತ ದುರ್ಗಾನಾಮಕ ಸ್ತ್ರೀರೂಪಿವಿಷ್ಣುಪ್ರೇರಣಯಾ ವಿಷ್ಣುಪ್ರೀತ್ಯರ್ಥಂ .......... ಗೋತ್ರೋದ್ಭವಸ್ಯ ಮಮ .......... ನಕ್ಷತ್ರೇ ............ ರಾಶೌ ......... ಜಾತಸ್ಯ ........... ಶರ್ಮಣಃ ಕಾಂತಾಯಾಃ ........... ನಕ್ಷತ್ರೇ .......... ರಾಶೌ ....... ಜಾತಾಯಾಃ .......... ನಾಮ್ನ್ಯಾಃ ಅಸ್ಮಾಕಂ ಸಹಕುಟುಂಬಾನಾಂ ಶ್ರೀಹರಿಯವಾಯುಗುರುಪ್ರಸಾದೇನ ಆಯುರಾರೋಗ್ಯಾಭಿವೃದ್ಧ್ಯರ್ಥಂ

ವಿಶೇಷತಃ ಆವಾಭ್ಯಾಂ (ಮಯಾ) ಮತ್ಪೂರ್ವಜೈಃ ವಂಶಜೈರ್ವಾ ಅಜ್ಞಾನತಃ ಜ್ಞಾನತೋವಾ ಸ್ತ್ರೀಹಿಂಸಾ-ಸ್ತ್ರೀಹನನ-ಸ್ತ್ರೀಣಾಂ ಅವಹಳೇನ - ಸ್ತ್ರೀಣಾಂ ಅಪರಿರಕ್ಷಣ-ಸ್ತ್ರೀಣಾಂ ಕಾಯಿಕ-ವಾಚನಿಕ-ಮಾನಸಿಕ ದ್ರೋಹ-ಕರಣಾದಿ ದೋಷಪರಿಹಾರಾರ್ಥಂ - ತಜ್ಜನಿತಧ್ಯತ್ವಾದಿ ದೋಷಪರಿಹಾರಾರ್ಥಂ

ನಿಕ್ಷೇಪದ್ರವ್ಯಹರಣ-ವಿಶ್ವಾಸದ್ರೋಹಕರಣ-ಲಬ್ಧನಿಷಿದ್ಧಾಪಾಹಾರಭಕ್ಷಣ ದುಷ್ಟಾನ್ನಭಕ್ಷಣಾಜ್ಜನಿತ ಕ್ಷಯ-ಅಪಸ್ಮಾರ-ಕುಷ್ಠ-ಅಂಧತ್ವ-ಮೂಕತ್ವ-ಬದಿರತ್ವ ಅಜ್ಞಾನ ವಿಸ್ಮೃತಿ ಭ್ರಾಂತಿ ಸಂಶಯಾಪಸ್ಮೃತಾದಿ ಮಹಾರೋಗನಿರಸನಾರ್ಥಂ

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ।
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ ॥

## ಆಚಮನಮ್

ಕೇಶವಾಯ ಸ್ವಾಹಾ । ನಾರಾಯಣಾಯ ಸ್ವಾಹಾ । ಮಾಧವಾಯ ಸ್ವಾಹಾ । ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ । ತ್ರಿವಿಕ್ರಮಾಯ ನಮಃ । ವಾಮನಾಯ ನಮಃ । ಶ್ರೀಧರಾಯ ನಮಃ । ಹೃಷೀಕೇಶಾಯ ನಮಃ । ಪದ್ಮನಾಭಾಯ ನಮಃ । ದಾಮೋದರಾಯ ನಮಃ । ಸಂಕರ್ಷಣಾಯ ನಮಃ । ವಾಸುದೇವಾಯ ನಮಃ । ಪ್ರದ್ಯುಮ್ನಾಯ ನಮಃ । ಅನಿರುದ್ಧಾಯ ನಮಃ । ಪುರುಷೋತ್ತಮಾಯ ನಮಃ । ಅಧೋಕ್ಷಜಾಯ ನಮಃ । ನಾರಸಿಂಹಾಯ ನಮಃ । ಅಚ್ಯುತಾಯ ನಮಃ । ಜನಾರ್ದನಾಯ ನಮಃ । ಉಪೇಂದ್ರಾಯ ನಮಃ । ಹರಯೇ ನಮಃ । ಶ್ರೀ ಕೃಷ್ಣಾಯ ನಮಃ ।

(ಆಚಮನವನ್ನು ಎರಡು ಬಾರಿ ಮಾಡಬೇಕು)

## ಪ್ರಾಣಾಯಾಮ

ಓಂ ಪ್ರಣವಸ್ಯ ಪರಬ್ರಹ್ಮಋಷಿಃ ಪರಮಾತ್ಮಾ ದೇವತಾ ದೈವೀ ಗಾಯತ್ರೀ ಛಂದಃ । ವ್ಯಾಹೃತೀನಾಂ ಪ್ರಜಾಪತ್ಯಾದಿಋಷಯಃ । ಅಗ್ನಿವಾಯುಸೂರ್ಯಾದಿ ದೇವತಾಃ । ಗಾಯತ್ರ್ಯುಷ್ಣಿಗನುಷ್ಟುಬಾದಿ ಛಂದಾಂಸಿ । ಗಾಯತ್ರ್ಯಾಃ ವಿಶ್ವಾಮಿತ್ರ ಋಷಿಃ । ಸವಿತಾ ದೇವತಾ । ಗಾಯತ್ರೀ ಛಂದಃ । ಪ್ರಾಣಾಯಾಮೇ ವಿನಿಯೋಗಃ ।

ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಂ ಸತ್ಯಂ । ಓಂ ತತ್ಸವಿತುರ್ವರೇಣ್ಯಮ್ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಓಮಾಪೋಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಸ್ಸ್ವರೋಮ್ ।

## ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲೀವಾಹನ-ಶಕೇ ಶಾಲೀವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ದಕ್ಷಿಣಾಯನೇ ವರ್ಷಋತೌ ಭಾದ್ರಪಮಾಸೇ ಶುಕ್ಲಪಕ್ಷೇ ಚತುರ್ದಶ್ಯಾಂ ಶುಭತಿಥೌ .... ವಾಸರಯುಕ್ತಾಯಾಂ ಶುಭನಕ್ಷತ್ರ ಶುಭಯೋಗ ಶುಭಕರಣ ಏವಂಗುಣವಿಶೇಷಣವಿಶಿಷ್ಟಾಯಾಂ ಅಸ್ಮದಾದಿಗುರೂಋಣಾಂ ಶ್ರೀಮನ್ಮಧ್ವಾಚಾರ್ಯಾಣಾಂ ಹೃತ್ಕಮಲಮಧ್ಯನಿವಾಸಿ-ವಾಸುದೇವ ಸಂಕರ್ಷಣಪ್ರದ್ಯುಮ್ನಾನಿರುದ್ಧ ಚತುರ್ಮಾಸ್ಯಾಸ್ಸನಂತಾದತಾರಾತ್ಮಕ-ದುರ್ಗಾನಾಮಕರಮಾ ಸಹಿತ ದುರ್ಗಾನಾಮಕ ಸ್ತ್ರೀರೂಪಿವಿಷ್ಣುಪ್ರೇರಣಯಾ ವಿಷ್ಣುಪ್ರೀತ್ಯರ್ಥಂ .......... ಗೋತ್ರೋದ್ಭವಸ್ಯ ಮಮ .......... ನಕ್ಷತ್ರೇ ............ ರಾಶೌ ......... ಜಾತಸ್ಯ ........... ಶರ್ಮಣಃ ಕಾಂತಾಯಾಃ ........... ನಕ್ಷತ್ರೇ .......... ರಾಶೌ ....... ಜಾತಾಯಾಃ .......... ನಾಮ್ನ್ಯಾಃ ಅಸ್ಮಾಕಂ ಸಹಕುಟುಂಬಾನಾಂ ಶ್ರೀಹರಿಯವಾಯುಗುರುಪ್ರಸಾದೇನ ಆಯುರಾರೋಗ್ಯಾಭಿವೃದ್ಧ್ಯರ್ಥಂ

ವಿಶೇಷತಃ ಆವಾಭ್ಯಾಂ (ಮಯಾ) ಮತ್ಪೂರ್ವಜೈಃ ವಂಶಜೈರ್ವಾ ಅಜ್ಞಾನತಃ ಜ್ಞಾನತೋವಾ ಸ್ತ್ರೀಹಿಂಸಾ-ಸ್ತ್ರೀಹನನ-ಸ್ತ್ರೀಣಾಂ ಅವಹಳೇನ - ಸ್ತ್ರೀಣಾಂ ಅಪರಿರಕ್ಷಣ-ಸ್ತ್ರೀಣಾಂ ಕಾಯಿಕ-ವಾಚನಿಕ-ಮಾನಸಿಕ ದ್ರೋಹ-ಕರಣಾದಿ ದೋಷಪರಿಹಾರಾರ್ಥಂ - ತಜ್ಜನಿತಧ್ಯತ್ವಾದಿ ದೋಷಪರಿಹಾರಾರ್ಥಂ

ನಿಕ್ಷೇಪದ್ರವ್ಯಹರಣ-ವಿಶ್ವಾಸದ್ರೋಹಕರಣ-ಲಬ್ಧನಿಷಿದ್ಧಾಹಾರಭಕ್ಷಣ ದುಷ್ಟಾನ್ನಭಕ್ಷಣಾಜ್ಜನಿತ ಕ್ಷಯ-ಅಪಸ್ಮಾರ-ಕುಷ್ಠ-ಅಂಧತ್ವ-ಮೂಕತ್ವ-ಬದಿರತ್ವ ಅಜ್ಞಾನ ವಿಸ್ಮೃತಿ ಭ್ರಾಂತಿ ಸಂಶಯಾಪಸ್ಮೃತಾದಿ ಮಹಾರೋಗನಿರಸನಾರ್ಥಂ

ದುರ್ಗಾಷ್ಟಮಿ

ಜನ್ಮಲಗ್ನರಾಶಿತಃ ಸಪ್ತಮಸ್ಥಾನೇ ವಿವಾಹ ಪ್ರತಿಪ್ರಬಂಧಕತ್ವೇನ ದಾಂಪತ್ಯಕಲಹಕಾರಕತ್ವೇನ ವಾಸ್ಥಿತಾನಾಂ ಕುಜರಾಹುಕೇತ್ವಾದೀನಾಂ ಕ್ರೂರದೃಷ್ಟಿ ದೋಷಪರಿಹಾರಾರ್ಥಂ ತಥೈವ ಜನ್ಮಲಗ್ನರಾಶಿವಶಾತ್ ಪಂಚಮಸ್ಥಾನೇ ಸಂತತಿಪ್ರತಿಬಂಧಕತ್ವೇನ ವಾ ಪುತ್ರಪೌತ್ರಾದಿಭಿಃ ಕಲಹಕಾರಕತ್ವೇನ ವಾ ಸ್ಥಿತಾನಾಂ ದುಷ್ಟಗ್ರಹದೋಷಪರಿಹಾರಾರ್ಥಂ

ನಿಷ್ಠುರಭಾಷಣ ದೇವತಾಪ್ರಕೋಪ ಗುರುದ್ರೋಹ ಬಂದುಜನದ್ರೋಹ ಸ್ವರ್ಣಾಪಹರಣ ಅಶ್ವತ್ಥಾದಿವೃಕ್ಷಛೇದನ ಪ್ರಾಣಿಹಿಂಸಾಚರಣ ಭ್ರೂಣಹನನ-ಗರ್ಭಿಣೀಗದಪ್ರದಾ ನಾಡಿದೋಷ ಪರಿಹಾರಾರ್ಥಂ ತಜ್ಜನಿತ ಜನ್ಮಾಂತರ ಪ್ರತಿಬಂಧಕ ರಕ್ಷೋಭೂತಪಿಶಾಚಿತ್ವಾದಿಪ್ರಾಪ್ತಿರೂಪ ಪೀಡಾಪರಿಹಾರಾರ್ಥಂ

ಸ್ತ್ರೀದೇವತಾಶಾಪ-ಸ್ತ್ರೀವೃಕ್ಷಶಾಪ-ಸ್ತ್ರೀಶಾಪ-ಮಾತೃಶಾಪ-ಮಾತುಲಶಾಪ ಸರ್ಪಶಾಪ-ಗುರುಬ್ರಾಹ್ಮಣಶಾಪ, ಸ್ತ್ರೋತ್ತಮಶಾಪಾತ್ ಜ್ಜನಿತ ಪ್ರತಿಕ್ಷಣಂ ಅನುಭೂಯಮಾನ ನಾನಾವಿಧಕ್ಲೇಶಪರಿಹಾರಾರ್ಥಂ, ಬಂಧುತ್ಯಾಗ ಮಿತ್ರತ್ಯಾಗ ದೇಶತ್ಯಾಗ ದಾರಾಪುತ್ರತ್ಯಾಗಾದಿ ದೋಷಪರಿಹಾರದ್ವರಾ ನಿರಂತರಂ ಮೋಕ್ಷಮಾರ್ಗೆ ಯಾನಿ ಯಾನಿ ವಿಘ್ನಾನಿ ಸಂಭವಂತಿ ತೇಷಾಂ ಪರಿಹಾರಾರ್ಥಂ

ಜ್ಞಾನಭಕ್ತಿವೈರಾಗ್ಯಸಿದ್ಧ್ಯರ್ಥಂ ಧರ್ಮ-ಅರ್ಥ-ಕಾಮ-ಮೋಕ್ಷಾಖ್ಯಪುರುಷಾರ್ಥಸಿದ್ಧ್ಯರ್ಥಂ ಮನೋವಾಕ್ಕಾಯಶುದ್ಧ್ಯರ್ಥಂ ವಿಶೇಷತಃ ಶ್ರೀಮದಾಚಾರ್ಯಾಣಾಂ ಅನುಗ್ರಹಸಂಪಾದನಾರ್ಥಂ ಶ್ರೀಲಕ್ಷ್ಮೀನಾರಾಯಣಯೋಃ ಅಚಾಲಾಭಕ್ತಿಸಿದ್ಧ್ಯರ್ಥಂ

ದುರ್ಗಾನಾಮಕರಾತ್ರಿನಾಮಕ ರಮಾಸಹಿತ ಸ್ತ್ರೀರೂಪಿ ದುರ್ಗಾನಾಮಕರಾತ್ರಿನಾಮಕ ಮಹಾವಿಷ್ಣುಪೂಜಾಂ ಕರಿಷ್ಯೇ ।

(ಯಜಮಾನನು ತುಳಸಿ ಹೂ ಮಂತ್ರಾಕ್ಷತೆಗಳನ್ನು ಕೈಯಲ್ಲಿ ಹಿಡಿದುಕೊಂಡು ಪತ್ನಿಯಿಂದ ನೀರು ಹಾಕಿಸಿಕೊಂಡು ಅರ್ಘ್ಯಪಾತ್ರೆಯಲ್ಲಿ ಬಿಡಬೇಕು.)

## ದೀಪ ಹಚ್ಚಬೇಕು

ದೀಪಃ ಪಾಪಹರೋ ನೃಣಾಂ ದೀಪ ಆಪನ್ನಿವಾರಕಃ ।
ದೀಪೋ ವಿಧತ್ತೇ ಸುಕೃತಂ ದೀಪಃ ಸಂಪತ್ಪ್ರದಾಯಕಃ ॥
ದೀಪಜ್ಯೋತಿ ಪರಬ್ರಹ್ಮ ದೀಪಜ್ಯೋತಿಃ ಜನಾರ್ದನಃ ।
ದೀಪೋ ಹರತು ಮೇ ಪಾಪಂ ಸಂಧ್ಯಾದೀಪ ನಮೋಽಸ್ತು ತೇ ॥

ಶುಭಂ ಕುರುಷ್ವ ಕಲ್ಯಾಣಂ ಆರೋಗ್ಯಂ ಸುಖಸಂಪದಮ್ ।
ಮಮ ಬುದ್ಧಿ ಪ್ರಕಾಶಂ ಚ ದೀಪಜ್ಯೋತಿರ್ನಮೋಽಸ್ತು ತೇ ॥

ಭೋ ದೀಪ ಬ್ರಹ್ಮರೂಪಸ್ತ್ವಂ ಕರ್ಮಸಾಕ್ಷಿ ಇಹಾರ್ಹಸಿ ।
ಯಾವತ್ ಕರ್ಮಸಮಾಪ್ತಿಃ ಸ್ಯಾತ್ ತಾವತ್ ತ್ವಂ ಸುಸ್ಥಿರೋ ಭವ ॥

ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ ।
ಹವ್ಯವಾಡ್ ಜುಹ್ವಾಸ್ಯಃ ॥

## ಘಂಟಾನಾದ ಮಾಡಬೇಕು

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।
ಕುರ್ವೇ ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ॥

## ಭೂತೋಚ್ಚಾಟನೆ ಮಾಡಬೇಕು

ಅಪಸರ್ಪಂತು ತೇ ಭೂತಾಃ ಯೇ ಭೂತಾಃ ಭುವಿ ಸಂಸ್ಥಿತಾಃ ।
ಯೇ ಭೂತಾಃ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ॥

ಅಪಕ್ರಾಮಂತು ಯೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ ।
ತೇಷಾಮಪ್ಯವಿರೋಧೇನ ಪೂಜಾಕರ್ಮ ಸಮಾರಭೇ ॥

## ಗುರುಗಣಪತಿ ಪೂಜೆ ಮಾಡಬೇಕು

ಪ್ರತಿಯೊಂದು ಪೂಜೆಯ ಪ್ರಾರಂಭದಲ್ಲಿ ಗುರುಗಳಿಗೆ ಹಾಗೂ ಗಣಪತಿಗೆ ಮೊಟ್ಟಮೊದಲು ಪೂಜೆ ಮಾಡಬೇಕು.

## ದುರ್ಗಾಷ್ಟಮಿ

ಶ್ರೀಗುರುಭ್ಯೋ ನಮಃ । ಆದಿಗುರುಭ್ಯೋ ನಮಃ । ಮೂಲಗುರುಭ್ಯೋ ನಮಃ। ಪರಮಗುರುಭ್ಯೋ ನಮಃ। ಶ್ರೀವೇದವ್ಯಾಸಾಯ ನಮಃ। ಆಶ್ವಲಾಯನಾ-ಚಾರ್ಯೇಭ್ಯೋ ನಮಃ।

ಬಲಭಾಗದಲ್ಲಿ ಬರೆದ ಶ್ರೀಕಾರದಲ್ಲಿ ಗಂಧಾಕ್ಷತೆ ಪುಷ್ಪಗಳಿಂದ ಗುರುಗಳನ್ನು ಪೂಜಿಸಬೇಕು.

ಅಸ್ಮದ್ ಗುರುಸಮಾರಂಭಾಂ ಟೀಕಾಕೃತ್ಪಾದಮಧ್ಯಗಾಮ್ ।
ಶ್ರೀಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಮ್ ॥
ಆಪಾದಮೌಳಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥

ಓಂ ಶ್ರೀಗುರುಭ್ಯೋ ನಮಃ ಅನುಜ್ಞಾಂ ದೇಹಿ ।

ಶ್ರೀಕಾರದ ಪಕ್ಕದಲ್ಲಿ ಬರೆದ ಷಟ್ಕೋಣಮಂಡಲದಲ್ಲಿ ಬೆಳ್ಳಿಯ ಗಣಪತಿಯನ್ನಿಟ್ಟು ಪೂಜಿಸಬೇಕು. ಬೆಳ್ಳಿಗಣಪತಿ ಇಲ್ಲದಿದ್ದಲ್ಲಿ ಅಡಿಕೆಬೆಟ್ಟು, ಅರಿಶಿನಕೊಂಬುಗಳಲ್ಲಿ ಗಣಪತಿ ಆವಾಹನೆ ಮಾಡಿ ಪೂಜಿಸಬೇಕು.

ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ ।
ಲಂಬೋದರಶ್ಚ ವಿಕಟೋ ವಿಘ್ನರಾಜೋ ಗಣಾಧಿಪಃ ॥೧॥

ಧೂಮಕೇತುರ್ಗಣಾಧ್ಯಕ್ಷೋ ಫಾಲಚಂದ್ರೋ ಗಜಾನನಃ ।
ದ್ವಾದಶೈತಾನಿ ನಾಮಾನಿ ಯಃ ಪಠೇಚ್ಛೃಣುಯಾದಪಿ ॥೨॥

ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ ।
ಸಂಗ್ರಾಮೇ ಸರ್ವಕಾರ್ಯೇಷು ವಿಘ್ನಸ್ತಸ್ಯ ನ ಜಾಯತೇ ॥೩॥

ಅಭೀಪ್ಸಿತಾರ್ಥಸಿದ್ಧ್ಯರ್ಥಂ ಪೂಜಿತೋ ಯಃ ಸುರೈರಪಿ ।
ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥೪॥

ಗಣಾನಾಂ ತ್ವಾ ಗೃತ್ಸಮದ ಋಷಿಃ । ಜಗತೀಛಂದಃ ಗಣಪತಿರ್ದೇವತಾ । ಗಣಪತ್ಯಾವಾಹನೇ ವಿನಿಯೋಗಃ ॥

ಓಂ ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪಮಶ್ರವ-ಸ್ತಮಮ್ । ಜೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆ ನಃ ಶೃಣ್ವನ್ನೂತಿಭಿಃ ಸೀದ ಸಾದನಮ್ ॥

## ಗಣಪತಿಗೆ ಸಂಕ್ಷೇಪವಾಗಿ ಷೋಡಶೋಪಚಾರ ಪೂಜೆ ಮಾಡಬೇಕು

ಶ್ರೀಮಹಾಗಣಪತಯೇ ನಮಃ ॥ ಓಂ ಭೂಃ ಗಣಪತಿಮ್ ಆವಾಹಯಾಮಿ। ಓಂ ಭುವಃ ಗಣಪತಿಮ್ ಆವಾಹಯಾಮಿ । ಓಂ ಸ್ವಃ ಗಣಪತಿಮ್ ಆವಾಹಯಾಮಿ । ಓಂ ಭೂರ್ಭುವಃ ಸ್ವಃ ಗಣಪತಿಮ್ ಆವಾಹಯಾಮಿ । ಮಹಾಗಣಪತಯೇ ನಮಃ । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ । ಆವಾಹಯಾಮಿ ಆವಾಹನಂ ಸಮರ್ಪಯಾಮಿ । ಸ್ವಾಗತಂ ಸಮರ್ಪಯಾಮಿ । ಆಸನಂ ಸಮರ್ಪಯಾಮಿ । ಪಾದಯೋಃ ಪಾದ್ಯಂ ಸಮರ್ಪಯಾಮಿ । ಅರ್ಘ್ಯಂ ಸಮರ್ಪಯಾಮಿ । ಆಚಮನಂ ಸಮರ್ಪಯಾಮಿ । ಮಧುಪರ್ಕಂ ಸಮರ್ಪಯಾಮಿ । ಪುನರಾಚಮನಂ ಸಮರ್ಪಯಾಮಿ । ಸ್ನಾನಂ ಸಮರ್ಪಯಾಮಿ । ವಸ್ತ್ರಂ ಸಮರ್ಪಯಾಮಿ । ಉಪವೀತಂ ಸಮರ್ಪಯಾಮಿ । ಆಭರಣಂ ಸಮರ್ಪಯಾಮಿ । ಗಂಧಂ ಸಮರ್ಪಯಾಮಿ । ಪುಷ್ಪಾಣಿ ಸಮರ್ಪಯಾಮಿ । ಧೂಪಮಾಘ್ರಾಪಯಾಮಿ । ದೀಪಂ ದರ್ಶಯಾಮಿ ।

ಮಹಾಗಣಪತಯೇ ನಮಃ ॥ ನೈವೇದ್ಯಾರ್ಥೇ ಗುಡೋಪಹಾರಮಹಾ-ನೈವೇದ್ಯಂ ನಿವೇದಯಾಮಿ । ತಾಂಬೂಲಂ ಸಮರ್ಪಯಾಮಿ । ನೀರಾಜನಂ ಸಮರ್ಪಯಾಮಿ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ।

ನಿಷುಸೀದೇತಿ ವೈರೂಪೋ ನಭಃಪ್ರಭೇದನ ಋಷಿಃ । ತ್ರಿಷ್ಟುಪ್ ಛಂದಃ । ಗಣಪತಿರ್ದೇವತಾ ಮಂತ್ರಪುಷ್ಪಾರ್ಚನೇ ವಿನಿಯೋಗಃ ।

ದುರ್ಗಾಷ್ಟಮಿ

ಓಂ ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಮ್।
ನ ಋತೇ ತ್ವತ್ ಕ್ರಿಯತೇ ಕಿಂ ಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ ॥

ಮಂತ್ರಪುಷ್ಪಂ ಸಮರ್ಪಯಾಮಿ। ಧ್ಯಾನಾವಾಹನಾದಿಸರ್ವೋಪಚಾರಪೂಜಾಃ ಸಮರ್ಪಯಾಮಿ ॥

ವಕ್ರತುಂಡ ಮಹಾಕಾಯ ಬಾಲಸೂರ್ಯಸಮಪ್ರಭ।
ಅವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥
ರಕ್ತಾಂಬರೋ ರಕ್ತತನೂ ರಕ್ತಮಾಲ್ಯಾನುಲೇಪನಃ।
ಮಹೋದರೋ ಗಜಮುಖಃ ಪಾಶದಂತಾಂಕುಶಾಭಯೇ।
ಬಿಭ್ರದ್ ಧ್ಯೇಯೋ ವಿಘ್ನಹರಃ ಕಾಮದಸ್ತ್ವರಯಾ ಹ್ಯಯಮ್ ॥
ಶ್ರೀಮಹಾಗಣಪತಯೇ ನಮಃ। ಓಂ ಕ್ಷಿಪ್ರಪ್ರಸಾದಾಯ ನಮಃ।
ಪ್ರಾರ್ಥನಾಂ ಸಮರ್ಪಯಾಮಿ ॥ ಹೇ ದೇವ! ನಿರ್ವಿಘ್ನಂ ಕುರು ॥

ಎಂದು ಪ್ರಾರ್ಥಿಸಿ ಕೈಮುಗಿದು ನಾನು ಮುಂದೆ ಆಚರಿಸುವ ಪೂಜೆ ಸಾಂಗೋಪಾಂಗವಾಗಿ ನಡೆದು ಫಲಪ್ರದವಾಗಲಿಯೆಂದು ಪ್ರಾರ್ಥಿಸಬೇಕು.

## ಕಲಶಪೂಜಾ

ತತ್ತ್ವಾಯಾಮೀತಿ ಶುನಃಶೇಪಋಷಿಃ। ತ್ರಿಷ್ಟುಪ್ ಛಂದಃ। ವರುಣೋ ದೇವತಾ। ಕಲಶಮಧ್ಯೇ ವರುಣಾವಾಹನೇ ವಿನಿಯೋಗಃ ॥

ಓಂ ತತ್ತ್ವಾಯಾಮಿ ಬ್ರಹ್ಮಣಾ ವಂದಮಾನಸ್ತದಾ ಶಾಸ್ತೇ ಯಜಮಾನೋ ಹವಿರ್ಭಿಃ ಅಹೇಳಮಾನೋ ವರುಣೇಹ ಬೋಧ್ಯುರುಶಂಸ ಮಾ ನ ಆಯುಃ ಪ್ರ ಮೋಷೀಃ ॥

ಓಂ ಭೂಃ ವರುಣಮಾವಾಹಯಾಮಿ। ಓಂ ಭುವಃ ವರುಣಮಾವಾಹಯಾಮಿ। ಓಂ ಸ್ವಃ ವರುಣಮಾವಾಹಯಾಮಿ। ಓಂ ಭೂರ್ಭುವಃಸ್ವಃ ವರುಣಮಾವಾಹಯಾಮಿ।

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥೧॥

ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ ॥೨॥

ಅಂಗೈಶ್ಚ ಸಹಿತಾಃ ಸರ್ವೇ ಕಲಶಾಂಬುಸಮಾಶ್ರಿತಾಃ ।
ಶಾಂತಿಃ ಪುಷ್ಟಿಶ್ಚ ಗಾಯತ್ರೀ ಸಾವಿತ್ರೀ ಚ ಸರಸ್ವತೀ
(ಅತ್ರ ಗಾಯತ್ರೀ ಸಾವಿತ್ರೀ ಶಾಂತಿಃ ಪುಷ್ಟಿಕರೀ ತಥಾ) ॥೩॥

ಆಯಾಂತು ಮಮ(ಯಜಮಾನಸ್ಯ)ಶಾಂತ್ಯರ್ಥಂ
(ದೇವಪೂಜಾರ್ಥಂ) ದುರಿತಕ್ಷಯಕಾರಕಾಃ ।
ಸರ್ವೇ ಸಮುದ್ರಾಃ ಸರಿತಸ್ತೀರ್ಥಾನಿ ಜಲದಾ ನದಾಃ ॥೪॥

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು ॥೫॥

ಆವಾಹಿತದೇವತಾಭ್ಯೋ ನಮಃ । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ। ಆವಾಹಯಾಮಿ ಆವಾಹನಂ ಸಮರ್ಪಯಾಮಿ । ಸ್ವಾಗತಂ ಸಮರ್ಪಯಾಮಿ । ಆಸನಂ ಸಮರ್ಪಯಾಮಿ । ಅರ್ಘ್ಯಂ ಸಮರ್ಪಯಾಮಿ । ಪಾದ್ಯಂ ಸಮರ್ಪ ಯಾಮಿ । ಆಚಮನಂ ಸಮರ್ಪಯಾಮಿ । ಮಧುಪರ್ಕಂ ಸಮರ್ಪಯಾಮಿ । ಪುನರಾಚಮನಂ ಸಮರ್ಪಯಾಮಿ । ಸ್ನಾನಂ ಸಮರ್ಪಯಾಮಿ । ವಸ್ತ್ರಯುಗ್ಮಂ ಸಮರ್ಪಯಾಮಿ । ಉಪವೀತಂ ಸಮರ್ಪಯಾಮಿ । ಆಭರಣಂ ಸಮರ್ಪಯಾಮಿ । ಗಂಧಂ ಸಮರ್ಪಯಾಮಿ । ಅಕ್ಷತಾನ್ ಸಮರ್ಪಯಾಮಿ । ನಾನಾವಿಧಪರಿಮಳಪುಷ್ಪಾಣಿ ಸಮರ್ಪಯಾಮಿ । ಧೂಪಮಾಘ್ರಾಪಯಾಮಿ ದೀಪಂ ದರ್ಶಯಾಮಿ । ಕಲಶದೇವತಾಭ್ಯೋ ನಮಃ ನೈವೇದ್ಯಾರ್ಥೇ ಗುಡೋಪಹಾರ (ಬಾಳೆಹಣ್ಣು ಇಟ್ಟುಕೊಂಡರೆ ಕದಳೀಫಲ ಎಂದು ಹೇಳಬೇಕು.) ಮಹಾನೈವೇದ್ಯಂ ಸಮರ್ಪಯಾಮಿ । ತಾಂಬೂಲಂ

ಸಮರ್ಪಯಾಮಿ । ನೀರಾಜನಂ ಸಮರ್ಪಯಾಮಿ । ಸುವರ್ಣಪುಷ್ಪಂ ಸಮರ್ಪಯಾಮಿ । ಮಂತ್ರಪುಷ್ಪಂ ಸಮರ್ಪಯಾಮಿ । ಕಲಶದೇವತಾಭ್ಯೋ ನಮಃ । ಸರ್ವೋಪಚಾರಪೂಜಾಂ ಸಮರ್ಪಯಾಮಿ ।

## ಶಂಖಪೂಜಾ

ಸಹಸ್ರಾರ ಹುಂ ಫಟ್ ॥ (ಇತಿ ಶಂಖಂ ಪ್ರಕ್ಷಾಳ್ಯ)

ತ್ವಂ ಪುರಾ ಸಾಗರೋತ್ಪನ್ನೋ ವಿಷ್ಣುನಾ ವಿಧೃತಃ ಕರೇ ।
ಪ್ರಣತಃ ಸರ್ವದೇವೈಶ್ಚ ಪಾಂಚಜನ್ಯ ನಮೋಽಸ್ತು ತೇ ॥೧॥

ಗರ್ಭಾ ದೇವಾರಿನಾರೀಣಾಂ ವಿಶೀರ್ಯಂತೇ ಸಹಸ್ರಧಾ ।
ತವ ನಾದೇನ ಪಾತಾಲೇ ಪಾಂಚಜನ್ಯ ನಮೋಽಸ್ತು ತೇ ॥೨॥

ದರ್ಶನಾದೇವ ಶಂಖಸ್ಯ ಕಿಂ ಪುನಃ ಸ್ಪರ್ಶನೇನ ಚ ।
ವಿಲಯಂ ಯಾಂತಿ ಪಾಪಾನಿ ತಮಃ ಸೂರ್ಯೋದಯೇ ಯಥಾ ॥೩॥

ನತ್ವಾ ಶಂಖಂ ಕರೇ ಸ್ಪೃಷ್ಟ್ವಾ ಮಂತ್ರೇಣಾನೇನ ವೈಷ್ಣವಃ ।
ಯಃ ಸ್ನಾಪಯತಿ ಗೋವಿಂದಂ ತಸ್ಯ ಪುಣ್ಯಮನಂತಕಮ್ ॥೪॥

(ಇತಿ ಸಂಪ್ರಾರ್ಥ್ಯ, ಜಲಮಾಪೂರ್ಯ, ತುಲಸೀಗಂಧಪುಷ್ಪಾಣಿ ನಿಕ್ಷಿಪ್ಯ, ಅಮೃತೀಕರಣಾರ್ಥಂ ಧೇನುಮುದ್ರಾಂ ಪವಿತ್ರೀಕರಣಾರ್ಥಂ ಶಂಖಮುದ್ರಾಂ ಚ ಪ್ರದರ್ಶ್ಯ)

ಧ್ಯಾಯಾಮಿ । ಧ್ಯಾನಂ ಸಮರ್ಪಯಾಮಿ । ಆವಾಹಯಾಮಿ । ಆವಾಹನಂ ಸಮರ್ಪಯಾಮಿ । ಅರ್ಘ್ಯಂ ಸಮರ್ಪಯಾಮಿ । ಪಾದ್ಯಂ ಸಮರ್ಪಯಾಮಿ । ಆಚಮನಂ ಸಮರ್ಪಯಾಮಿ । ಮಧುಪರ್ಕಂ ಸಮರ್ಪಯಾಮಿ । ಗಂಧಂ ಸಮರ್ಪಯಾಮಿ । ಪುಷ್ಪಂ ಸಮರ್ಪಯಾಮಿ ॥ ('ಗಂಗೇ ಚ ಯಮುನೇ' ಇತ್ಯುಕ್ತ್ವಾ ಓಮ್ ಓಂ ನಮೋ ನಾರಾಯಣಾಯ ಓಮ್ ॥ ಇತಿ ಮೂಲೇನ ದ್ವಾದಶವಾರಂ ಜಪೇತ್)

ಶಂಖಂ ಚಂದ್ರಾರ್ಕದೈವತ್ಯಂ ಮಧ್ಯೇ ವರುಣದೈವತಮ್ ।
ಪೃಷ್ಠೇ ಪ್ರಜಾಪತಿರ್ವೇಧಾ ಅಗ್ರೇ ಗಂಗಾ ಸರಸ್ವತೀ ॥
ತ್ರೈಲೋಕ್ಯೇ ಯಾನಿ ತೀರ್ಥಾನಿ ವಾಸುದೇವಸ್ಯ ಚಾಽಜ್ಞಯಾ ।
ಶಂಖೇ ತಿಷ್ಠಂತಿ ವಿಪ್ರೇಂದ್ರ ತಸ್ಮಾಚ್ಛಂಖಂ ಪ್ರಪೂಜಯೇತ್ ॥

(ಅನೇನ ಶಂಖಪೂಜನೇನ ಭಾರತೀರಮಣಮುಖ್ಯಪ್ರಾಣಾಂತರ್ಗತಃ ಶ್ರೀಲಕ್ಷ್ಮೀನಾರಾಯಣ ಪ್ರೀಯತಾಂ)

ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।
ಯಃ ಸ್ಮರೇತ್ ಪುಂಡರಿಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥

ಶಂಖದ ನೀರಿನಿಂದ ಪೂಜಾಸಾಮಗ್ರಿಗಳನ್ನು ತನ್ನನ್ನು ಪ್ರೋಕ್ಷಿಸಬೇಕು.

## ಪೀಠಪೂಜಾ

ಪೀಠಮಧ್ಯೇ ಪರದೇವತಾಯೈ ನಮಃ ಶ್ರೀಮಹಾದುರ್ಗಾಯೈ ನಮಃ। ವಾಮೇ ಗುರವೇ ವಾಯವೇ ನಮಃ । ದಕ್ಷಿಣೇ ಸರ್ವದೇವತಾಭ್ಯೋ ನಮಃ । ಬ್ರಹ್ಮಣೇ ನಮಃ । ರುದ್ರಾದಿಭ್ಯೋ ನಮಃ । ಪುನರ್ವಾಮೇ ಸರ್ವಗುರುಸನಕಾದಿಭ್ಯೋ ನಮಃ। ಏತೈರನುಜ್ಞಾತಃ ಪೀಠಪೂಜಾಂ ಕರಿಷ್ಯೇ ॥

## ಪೀಠಾದಧೋಭಾಗೇ

ಆಗ್ನೇಯೇ ಗರುಡಾಯ ನಮಃ । ನೈರ್ಋತ್ಯೇ ವೇದವ್ಯಾಸಾಯ ನಮಃ । ವಾಯವ್ಯೇ ದುರ್ಗಾಯೈ ನಮಃ। ಐಶಾನ್ಯೇ ಸರಸ್ವತ್ಯೈ ನಮಃ।

## ಪೀಠಪಾದೋರ್ಧ್ವಭಾಗೇ

ಧರ್ಮಾಧಿಪತಯೇ ಯಮಾಯ ನಮಃ । ಜ್ಞಾನಾಧಿಪತಯೇ ವಾಯವೇ ನಮಃ। ವೈರಾಗ್ಯಾಧಿಪತಯೇ ಶಿವಾಯ ನಮಃ। ಐಶ್ವರ್ಯಾಧಿಪತಯೇ ಇಂದ್ರಾಯ ನಮಃ।

## ಪೀಠಫಲಕೇಷು

ಪೂರ್ವೇ ಅಧರ್ಮಾಧಿಪತಯೇ ನಿರ್ಋತಯೇ ನಮಃ । ದಕ್ಷಿಣೇ ಅಜ್ಞಾನಾಧಿಪತ್ಯೈ ದುರ್ಗಾಯೈ ನಮಃ । ಪಶ್ಚಿಮೇ ವೈರಾಗ್ಯಾಧಿಪತಯೇ ಕಾಮಾಯ ನಮಃ । ಉತ್ತರೇ ಅನೈಶ್ವರ್ಯಾಧಿಪತಯೇ ರುದ್ರಾಯ ನಮಃ ।

## ಪೀಠಾಧಸ್ತಾತ್

ಪರಮಪುರುಷಾಯ ನಮಃ । ಆಧಾರರೂಪಿಣ್ಯೈ ಶಕ್ತ್ಯೈ ನಮಃ । ವಿಷ್ಣು ಕೂರ್ಮಾಯ ನಮಃ । ತತ್ಪುಚ್ಛಾಶ್ರಿತಾಯ ವಾಯುಕೂರ್ಮಾಯ ನಮಃ । ತತ್ಪುಚ್ಛಾಶ್ರಿತಅನಂತಾಖ್ಯಶೇಷಾಯ ನಮಃ । ತತ್ಫಣಾಶ್ರಿತಾಯೈ ಪೃಥಿವ್ಯಭಿಮಾನಿನ್ಯೈ ಭೂಮ್ಯೈ ನಮಃ । ತದುಪರಿ ಕ್ಷೀರಸಾಗರಾಭಿಮಾನಿನೇ ವರುಣಾಯ ನಮಃ । ರಮಾರೂಪಶ್ವೇತದ್ವೀಪಾಯ ನಮಃ । ರಮಾರೂಪಮಹಾದಿವ್ಯರತ್ನಮಂಟಪಾಯ ನಮಃ । ರಮಾರೂಪಕಂದನಾಳಸಹಿತ ಪದ್ಮಾಯ ನಮಃ ॥

## ಪದ್ಮಷಟ್ ಕೋಣೇಷು

ದಕ್ಷಿಣಕೋಣೇ ಸೂರ್ಯಾಯ ನಮಃ । ವಾಮಕೋಣೇ ಸೋಮಾಯ ನಮಃ । ಸಮ್ಮುಖೇ ಹುತಾಶನಾಯ ನಮಃ । ದೇವವಾಮಕೋಣೇ ಸತ್ವಾಭಿಮಾನಿನ್ಯೈ ಶ್ರಿಯೈ ನಮಃ । ದಕ್ಷಿಣಕೋಣೇ ರಜೋಭಿಮಾನಿನ್ಯೈ ಭೂಮ್ಯೈ ನಮಃ । ದೇವಪೃಷ್ಠೇ ಉಪಬರ್ಹಣರೂಪಾಯೈ ತಮೋಭಿಮಾನಿನ್ಯೈ ದುರ್ಗಾಯೈ ನಮಃ ।

## ಸೋಪಾನೇ

ಪೂರ್ವೇ ಆತ್ಮನೇ ನಮಃ । ದಕ್ಷಿಣೇ ಅಂತರಾತ್ಮನೇ ನಮಃ । ಪಶ್ಚಿಮೇ ಪರ-ಮಾತ್ಮನೇ ನಮಃ । ಉತ್ತರೇ ಜ್ಞಾನಾತ್ಮನೇ ನಮಃ । ಪೂರ್ವಾದಿಕಮಲಾಷ್ಟಪತ್ರೇಷು ಛತ್ರಧಾರಿಣ್ಯೈ ವಿಮಲಾಯೈ ನಮಃ । ಚಾಮರಧಾರಿಣ್ಯೈ ಉತ್ಕರ್ಷಿಣ್ಯೈ ನಮಃ ॥ ವ್ಯಜನಧಾರಿಣ್ಯೈ ಜ್ಞಾನಾಯೈ ನಮಃ । ದರ್ಪಣಧಾರಿಣ್ಯೈ ಕ್ರಿಯಾಯೈ ನಮಃ । ಗಾನಕರ್ತ್ರ್ಯೈ ಯೋಗಾಯೈ ನಮಃ । ನೃತ್ಯಂತ್ಯೈ ಪ್ರಹ್ವ್ಯೈ ನಮಃ ॥ ವಾದ್ಯಹಸ್ತಾಯೈ ಸತ್ಯಾಯೈ ನಮಃ । ಸ್ತೋತ್ರಕರ್ತ್ರ್ಯೈ ಈಶಾನಾಯೈ ನಮಃ । ಏತಾಭಿಃ ಕೃತಸೇವಾಂ

ಸಮರ್ಪಯಂತ್ಯೈ ಮಧ್ಯೇ ಅನುಗ್ರಹಾಯ್ಯೈ ನಮಃ। ಅನುಗ್ರಹಾಖ್ಯಶಕ್ತೌ ಸಹಸ್ರಫಣಾ-ಮಂಡಲಮಂಡಿತಾಯ ತಲ್ಪಾಕಾರಾಯ ಹರೇರ್ಯೋಗಾಸನರೂಪಾಯ ಶ್ರೀಮದನಂತಾಯ ನಮಃ । ತದುಪರಿ ರಮಾರೂಪಚಿತ್ರಾಸನಾಯ ನಮಃ ॥ (ಇತಿ ಏಕೈಕವಾರಂ ಪುಷ್ಪಂ ಸಮರ್ಪಯೇತ್)

ಉತ್ತಪ್ತೋಜ್ವಲಕಾಂಚನೇನ ರಚಿತಂ ತುಂಗಾಂಗರಂಗಸ್ಥಲಂ
ಶುದ್ಧಸ್ಫಾಟಿಕಭಿತ್ತಿಕಾವಿಲಸಿತೈಃ ಸ್ತಂಭೈಶ್ಚ ಹೈಮೈಃ ಶುಭೈಃ ।
ದ್ವಾರೈಶ್ಚಾಮರರತ್ನರಾಜಖಚಿತೈಃ ಶೋಭಾವಹೈರ್ಮಂಟಪೈಃ
ರತ್ನಾಢ್ಯೈರಪಿ ಚಿತ್ರಪದ್ಮಧವಲೈಃ ಪ್ರಭ್ರಾಜಿತೈಃ ಸ್ವಸ್ತಿಕೈಃ ॥
ಮುಕ್ತಾಜಾಲವಿಲಂಬಿಮಂಟಪಯುತೈರ್ವಜ್ರೈಶ್ಚ ಸೋಪಾನಕೈ-
ರ್ನಾನಾರತ್ನವಿನಿರ್ಮಿತೈಶ್ಚ ಕಲಶೈರತ್ಯಂತಶೋಭಾವಹಮ್ ।
ಮಾಣಿಕ್ಯೋಜ್ಜ್ವಲದೀಪದೀಪ್ತಿವಿಲಸಲ್ಲಕ್ಷ್ಮೀವಿಲಾಸಾಸ್ಪದಂ
ಧ್ಯಾಯೇನ್ಮಂಟಪಮರ್ಚನೇಷು ಸತತಮೇವಂವಿಧೈಃ ಸಾಧಕೈಃ ॥

## ಕಲಶಪ್ರತಿಷ್ಠಾಪನೆ ಹಾಗೂ ದುರ್ಗೆಯ ಆವಾಹನೆ

ಅಥ ಕಲಶಪ್ರತಿಷ್ಠಾಪನಂ ಕರಿಷ್ಯೇ ॥

ಮಹೀ ದ್ಯೌರಿತಿ ಮೇಧಾತಿಥಿಃ ಕಾಣ್ವಋಷಿಃ । ಗಾಯತ್ರೀಛಂದಃ । ದ್ಯಾವಾ ಪೃಥಿವ್ಯೌದೇವತೇ । ಭೂಸ್ಪರ್ಶನೇ ವಿನಿಯೋಗಃ ॥

ಓಂ ಮಹೀ ದ್ಯೌಃ ಪೃಥಿವೀ ಚ ನ ಇಮಂ ಯಜ್ಞಂ ಮಿಮಿಕ್ಷತಾಮ್ । ಪಿಪೃತಾಂ ನೋ ಭರೀಮಭಿಃ ॥

ಯೇನ ತೋಕಾಯಾತ್ರೇಯಃ ಶ್ಯಾವಾಶ್ವಃ ಋಷಿಃ । ಸತೋಬೃಹತೀಛಂದಃ । ಮರುತೋ ದೇವತಾಃ । ಧಾನ್ಯಸ್ಪರ್ಶನೇ ವಿನಿಯೋಗಃ ॥

ದುರ್ಗಾಷ್ಟಮಿ

ಓಂ ಯೇನ ತೋಕಾಯ ತನಯಾಯ ಧಾನ್ಯಂ ಬೀಜಂ ವಹಧ್ವೇ ಅಕ್ಷಿತಮ್।
ಅಸ್ಮಭ್ಯಂ ತದ್ಧತ್ತನ ಯದ್ವ ಈಮಹೇ ರಾಧೋ ವಿಶ್ವಾಯು ಸೌಭಗಮ್॥

ಓಷಧಯಃ ಅಥರ್ವಣೋ ಭಿಷಗ್ಋಷಿಃ। ಅನುಷ್ಟುಪ್ ಛಂದಃ। ಓಷಧಯೋ ದೇವತಾಃ। ಧಾನ್ಯಸ್ಪರ್ಶನೇ ವಿನಿಯೋಗಃ॥

ಓಮ್ ಓಷಧಯಃ ಸಂ ವದಂತೇ ಸೋಮೇನ ಸಹ ರಾಜ್ಞಾ। ಯಸ್ಮೈ ಕೃಣೋತಿ ಬ್ರಾಹ್ಮಣಸ್ತಂ ರಾಜನ್ ಪಾರಯಾಮಸಿ ॥

ಆ ಕಲಶೇಷು ಗಾಧಿನೋ ವಿಶ್ವಾಮಿತ್ರಋಷಿಃ। ಗಾಯತ್ರೀಛಂದಃ ಪವಮಾನಃ ಸೋಮೋ ದೇವತಾ। ಕಲಶಾಭಿಮಂತ್ರಣೇ ವಿನಿಯೋಗಃ ॥

ಓಮ್ ಆ ಕಲಶೇಷು ಧಾವತಿ ಶ್ಯೇನೋ ವರ್ಮ ವಿ ಗಾಹತೇ। ಅಭಿ ದ್ರೋಣಾ ಕನಿಕ್ರದತ್॥

ತಂತು ತನ್ವನ್ ದೇವಾ ಋಷಯಃ। ಜಗತೀಛಂದಃ। ಅಗ್ನಿರ್ದೇವತಾ। ಸೂತ್ರವೇಷ್ಟನೇ ವಿನಿಯೋಗಃ ॥

ಓಂ ತಂತುಂ ತನ್ವನ್ರಜಸೋ ಭಾನುಮನ್ವಿಹಿ ಜ್ಯೋತಿಷ್ಮತಃ ಪಥೋ ರಕ್ಷ ಧಿಯಾ ಕೃತಾನ್। ಅನುಲ್ಬಣಂ ವಯತ ಜೋಗುವಾಮಪೋ ಮನುರ್ಭವ ಜನಯಾ ದೈವ್ಯಂ ಜನಮ್ ॥

ಇಮಂ ಮೇ ಸಿಂಧುಕ್ಷಿತ್ ಪ್ರೈಯಮೇಧ ಋಷಿಃ। ಜಗತೀ ಛಂದಃ। ನದ್ಯೋ ದೇವತಾಃ। ಜಲಪೂರಣೇ ವಿನಿಯೋಗಃ ॥

ಓಮ್ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಸ್ತೋಮಂ ಸಚತಾ ಪರುಷ್ಣ್ಯಾ। ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾऽऽರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥

ದುರ್ಗಾಷ್ಟಮಿ

ತಪೋಷ್ಪವಿತ್ರಂ ಪವಿತ್ರ ಅಂಗಿರಸಋಷಿಃ । ಜಗತೀಛಂದಃ ॥ ಪವಮಾನಃ ಸೋಮೋ ದೇವತಾ । ಕೂರ್ಚನ್ಯಾಸೇ ವಿನಿಯೋಗಃ ॥ (ಅಧೋಮುಖವಾಗಿ ಕಲಶದ ಒಳಗೆ ಕೂರ್ಚವನ್ನು ಹಾಕಬೇಕು)

ಓಂ ತಪೋಷ್ಪವಿತ್ರಂ ವಿತತಂ ದಿವಸ್ಪದೇ ಶೋಚಂತೋ ಅಸ್ಯ ತಂತವೋ ವ್ಯಸ್ಥಿರನ್ । ಅವಂತ್ಯಸ್ಯ ಪವೀತಾರಮಾಶವೋ ದಿವಸ್ಪೃಷ್ಠಮಧಿ ತಿಷ್ಠಂತಿ ಚೇತಸಾ ॥

ಸ ಹಿ ರತ್ನಾನಿ ಶ್ಯಾವಾಶ್ವಋಷಿಃ । ಗಾಯತ್ರೀಛಂಧಃ । ಸವಿತಾ ದೇವತಾ । ರತ್ನನ್ಯಾಸೇ ವಿನಿಯೋಗಃ ॥

ಓಂ ಸ ಹಿ ರತ್ನಾನಿ ದಾಶುಷೇ ಸುವಾತಿ ಸವಿತಾ ಭಗಃ । ತಂ ಭಾಗಂ ಚಿತ್ರಮೀಮಹೇ ॥

ಗಂಧದ್ವಾರಾಂ ಚಿಕ್ಲೀತಋಷಿಃ । ಅನುಷ್ಟುಪ್‌ಛಂದಃ । ಇಂದಿರಾ ದೇವತಾ । ಗಂಧ -ವಿಲೋಡನೇ ವಿನಿಯೋಗಃ ॥

ಓಂ ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್ । ಈಶ್ವರೀಂ ಸರ್ವಭೂತಾನಾಂ ತಾಮಿಹೋಪ ಹ್ವಯೇ ಶ್ರಿಯಮ್॥

ಅರ್ಚತ ಪ್ರಾರ್ಚತ ಪ್ರಿಯಮೇಧ ಆಂಗೀರಸ ಋಷಿಃ । ಅನುಷ್ಟುಪ್‌ಛಂದಃ । ಇಂದ್ರೋ ದೇವತಾ । ಅಕ್ಷತನ್ಯಾಸೇ ವಿನಿಯೋಗಃ ॥

ಓಮ್ ಅರ್ಚತ ಪ್ರಾರ್ಚತ ಪ್ರಿಯಮೇಧಾಸೋ ಅರ್ಚತ । ಅರ್ಚಂತು ಪುತ್ರಕಾ ಉತ ಪುರಂ ನ ದೃಷ್ಣ್ವರ್ಚತ ॥

ಆಯನೇ ತೇ ಸ್ತಂಬಮಿತ್ರಋಷಿಃ । ಅನುಷ್ಟುಪ್‌ಛಂದಃ । ಅಗ್ನಿರ್ದೇವತಾ । ಪುಷ್ಪ- ನ್ಯಾಸೇ ವಿನಿಯೋಗಃ ॥

ಓಮ್ ಆಯನೇ ತೇ ಪರಾಯಣೇ ದೂರ್ವಾ ರೋಹಂತು ಪುಷ್ಪಿಣೀಃ । ಹ್ರದಾಶ್ಚ ಪುಂಡರೀಕಾಣಿ ಸಮುದ್ರಸ್ಯ ಗೃಹಾ ಇಮೇ ।

ಅಶ್ವತ್ಥೇವ ಅಥರ್ವಣೋ ಭಿಷಗ್ಋಷಿಃ। ಅನುಷ್ಟುಪ್‌ಛಂದಃ। ಓಷಧಯೋ ದೇವತಾಃ । ಪಲ್ಲವನ್ಯಾಸೇ ॥ (ಅಶ್ವತ್ಥ, ಅತ್ತಿ, ಮಾವು, ಗೋಳಿ, ಕಿರಗೋಳಿ ಈ ಐದು ಮರಗಳ ಕುಡಿಗಳು, ಇಲ್ಲದಿದ್ದರೆ ಮಾವು, ಹಲಸಿನ ಚಿಗುರುಗಳನ್ನು ಇಡಬೇಕು).

ಓಮ್ ಅಶ್ವತ್ಥೇ ವೋ ನಿಷದನಂ ಪರ್ಣೇ ವೋ ವಸತಿಷ್ಕೃತಾ। ಗೋಭಾಜ ಇತ್ಕಿಲಾಸಥ ಯತ್ಸನವಥ ಪೂರುಷಮ್ ॥

ಪೂರ್ಣಾ ದರ್ವಿ ವಿಶ್ವೇದೇವಾ ಋಷಯಃ। ಅನುಷ್ಟುಪ್‌ಛಂದಃ। ಶತಕ್ರತು-ರ್ದೇವತಾ । ತಂಡುಲಪೂರ್ಣಪಾತ್ರನ್ಯಾಸೇ ವಿನಿಯೋಗಃ ॥

ಓಂ ಪೂರ್ಣಾ ದರ್ವಿ ಪರಾ ಪತ ಸುಪೂರ್ಣಾ ಪುನರಾಪತ । ವಸ್ನೇವ ವಿ ಕ್ರೀಣಾವಹಾ ಇಷಮೂರ್ಜ ಀ ಶತಕ್ರತೋ ॥

ಯಾಃ ಫಲಿನೀರ್ಯಾ ಅಥರ್ವಣೋಭಿಷಗ್ಋಷಿಃ। ಅನುಷ್ಟುಪ್ ಛಂದಃ। ಓಷಧಯೋ ದೇವತಾಃ। ಫಲನ್ಯಾಸೇ ವಿನಿಯೋಗಃ ॥

ಓಂ ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾ ಯಾಶ್ಚ ಪುಷ್ಪಿಣೀಃ। ಬೃಹಸ್ಪತಿಪ್ರಸೂತಾಸ್ತಾನೋ ಮುಂಚಂತ್ವಂಹಸಃ ॥

(ಗಂಧದ್ವಾರೇತಿ ಗಂಧಂ, ಅರ್ಚತ ಪ್ರಾರ್ಚತೇತಿ ಅಕ್ಷತಾನ್, ಆಯನೇ ತೇ ಇತಿ ಪುಷ್ಪಾಣಿ ನಿಕ್ಷಿಪೇತ್ ॥)

ಹಿರಣ್ಯರೂಪಃ ಗೃತ್ಸಮದೋ ಭಾರ್ಗವಃ ಶೌನಕಋಷಿಃ। ತ್ರಿಷ್ಟುಪ್ ಛಂದಃ। ಅಪಾನ್ನಪಾದ್ದೇವತಾ । ಹಿರಣ್ಯನ್ಯಾಸೇ ವಿನಿಯೋಗಃ ॥

ಓಂ ಹಿರಣ್ಯರೂಪಃ ಸ ಹಿರಣ್ಯಸಂದೃಗಪಾಂ ನಪಾತ್ ಸೇದು ಹಿರಣ್ಯವರ್ಣಃ। ಹಿರಣ್ಯಯಾತ್ ಪರಿ ಯೋನೇರ್ನಿಷದ್ಯಾ ಹಿರಣ್ಯದಾ ದದತ್ಯನ್ನಮಸ್ಮೈ ॥

ಪವಿತ್ರಂ ತೇ ಆಂಗಿರಸ ಋಷಿಃ । ಜಗತೀ ಛಂದಃ । ಪವಮಾನಸೋಮೋ ದೇವತಾ । ಶಿರಃ ಕೂರ್ಚನ್ಯಾಸೇ ವಿನಿಯೋಗಃ ।

ಓಂ ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ। ಅತಪ್ತತನೂರ್ನತದಾಮೋ ಅಶ್ನುತೇ ಶೃತಾಸ ಇದ್ವಹಂತಸ್ತತ್ ಸಮಾಶತ ॥

ತತ್ವಾಯಾಮೀತಿ ಶುನಃಶೇಪ ಋಷಿಃ। ತ್ರಿಷ್ಟುಪ್ ಛಂದಃ। ವರುಣೋ ದೇವತಾ। ಕಲಶಮಧ್ಯೇ ವರುಣಸ್ಯಾವಾಹನೇ ವಿನಿಯೋಗಃ।

ಓಂ ತತ್ತ್ವಾ ಯಾಮಿ ಬ್ರಹ್ಮಣಾ ವಂದಮಾನಸ್ತದಾ ಶಾಸ್ತೇ ಯಜಮಾನೋ ಹವಿರ್ಭಿಃ । ಅಹೇಳಮಾನೋ ವರುಣೇಹ ಬೋಧ್ಯುರುಶಂಸ ಮಾ ನ ಆಯುಃ ಪ್ರ ಮೋಷೀಃ ॥

## ಅಥ ದುರ್ಗಾದೇವೀ ಪ್ರತಿಷ್ಠಾಪನಮ್

ಓಂ ಅಸುನೀತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣಮಿಹ ನೋ ಧೇಹಿ

ಭೋಗಮ್ । ಜ್ಯೋಕ್ ಪಶ್ಯೇಮ ಸೂರ್ಯಮುಚ್ಚರಂತಮನುಮತೇ ಮೃಳಯಾ ನಃ ಸ್ವಸ್ತಿ ಓಂ ॥ ಓಂ ಪುನರ್ನೋ ಅಸುಂ ಪೃಥಿವೀ ದದಾತು ಪುನರ್ದ್ಯೌರ್ದೇವೀ ಪುನರಂತರಿಕ್ಷಮ್ ॥ ಪುನರ್ನಃ ಸೋಮಸ್ತನ್ವಂ ದದಾತು ಪುನಃ ಪೂಷಾ ಪಥ್ಯಾಂ-ಕ್ಷಿ ಯಾ ಸ್ವಸ್ತಿ ॥ ಓಂ ॥

## ತತ್ತ್ವನ್ಯಾಸಃ

ಓಂ ಓಂ ನಮೋ ನಾರಾಯಣಾಯ ಓಮ್ ॥ (ಎಂಬ ಮಂತ್ರದಿಂದ ಪ್ರಾಣಾ- ಯಾಮ ಮಾಡಿರಿ) । ಏತೇಷಾಂ ತತ್ವಮಂತ್ರಾಣಾಮ್ ಅಂತರ್ಯಾಮೀ ಋಷಿಃ (ಶಿರಸಿ) ದೈವೀಗಾಯತ್ರೀ ಛಂದಃ (ಮುಖೇ) । ಶಕ್ತ್ಯಾದಿತತ್ತ್ವರೂಪೀ ಪುರುಷಾದಿ-ತತ್ವಾಂತರ್ಯಾಮೀ ಶ್ರೀನಾರಾಯಣೋ ದೇವತಾ (ಹೃದಯೇ) ನ್ಯಾಸೇ ವಿನಿಯೋಗಃ ।

ದುರ್ಗಾಷ್ಟಮಿ

ಓಂ ಭೂಃ ಅಗ್ನ್ಯಾತ್ಮನೇ ಅನಿರುದ್ಧಾಯ ಹೃದಯಾಯ ನಮಃ । ಓಂ ಭುವಃ ವಾಯ್ವಾತ್ಮನೇ ಪ್ರದ್ಯುಮ್ನಾಯ ಶಿರಸೇ ಸ್ವಾಹಾ । ಓಂ ಸ್ವಃ ಸೂರ್ಯಾತ್ಮನೇ ಸಂಕರ್ಷಣಾಯ ಶಿಖಾಯೈ ವೌಷಟ್ । ಓಂ ಭೂರ್ಭುವಃಸ್ವಃ ಪ್ರಜಾಪತ್ಯಾತ್ಮನೇ ವಾಸುದೇವಾಯ ಕವಚಾಯ ಹುಮ್ । ಓಂ ಸತ್ಯಂ ನಾರಾಯಣಾಯ ಅಸ್ತ್ರಾಯ ಫಟ್ ।

ಪ್ರಧಾನೋಪಮವರ್ಣಾನಿ ದ್ವಿಭುಜಾನ್ಯಪ್ಯಶೇಷತಃ ।
ಕೃತಾಂಜಲಿಪುಟಾನ್ಯೇವ ಪ್ರಧಾನಂ ತಂ ಹರಿಂ ಪ್ರತಿ ॥

ಶಕ್ತ್ಯಾದಿತತ್ತ್ವರೂಪಿಪುರುಷಾದಿತತ್ತ್ವಾಂತರ್ಯಾಮಿಶ್ರೀನಾರಾಯಣಪ್ರೇರಣಯಾ ಶ್ರೀನಾರಾಯಣಪ್ರೀತ್ಯರ್ಥಂ ತತ್ತ್ವನ್ಯಾಸಂ ಕರಿಷ್ಯೇ ॥

ಓಂ ಪರಾಯ ಶಕ್ತ್ಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ। ಓಂ ಪರಾಯ ಪ್ರತಿಷ್ಠಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಓಂ ಪರಾಯ ಸಂವಿದಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಓಂ ಪರಾಯ ಸ್ಫೂರ್ತ್ಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಓಂ ಪರಾಯ ಪ್ರವೃತ್ತ್ಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಓಂ ಪರಾಯ ಕಲಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಓಂ ಪರಾಯ ವಿದ್ಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಓಂ ಪರಾಯ ಮತ್ಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಓಂ ಪರಾಯ ನಿಯತ್ಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಓಂ ಪರಾಯ ಮಾಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ। ಓಂ ಪರಾಯ ಕಾಲಾತ್ಮನೇ ಶ್ರೀಲಕ್ಷ್ಮೀನಾರಾ-ಯಣಾಭ್ಯಾಂ ನಮಃ। ಓಂ ಪರಾಯ ಪುರುಷಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ॥೧೨॥ (ಈ ಹನ್ನೆರಡನ್ನು ಮಾಲಾಕಾರವಾಗಿ ಹೃದಯಮುಟ್ಟಿ ಜಪಿಸಬೇಕು.)

## ತತ್ತದವಯವೇಷು ದೇವತಾನ್ಯಾಸಃ

ಓಂ ಪರಾಯ ಅವ್ಯಕ್ತಾತ್ಮನೇ ಬ್ರಹ್ಮಣೀಭಾರತೀಭ್ಯಾಂ ನಮಃ ॥ (ಬಲಗೈ) ಓಂ ಪರಾಯ ಮಹದಾತ್ಮನೇ ಬ್ರಹ್ಮವಾಯುಭ್ಯಾಂ ನಮಃ ॥ (ಎಡಗೈ) ಓಂ ಪರಾಯ ಅಹಂಕಾರಾತ್ಮನೇ ಗರುಡಶೇಷರುದ್ರೇಭ್ಯೋ ನಮಃ ॥ (ಬಲತೊಡೆ) ಓಂ ಪರಾಯ ಮನ ಆತ್ಮನೇ ಸ್ಕಂದೇಂದ್ರಾಭ್ಯಾಂ ನಮಃ ॥ (ಎಡತೊಡೆ)

(ಬಲಗೈ ಐದು ಬೆರಳು) ಓಂ ಪರಾಯ ತ್ವಗಾತ್ಮನೇ ಪ್ರಾಣಾಯ ನಮಃ ॥ ಓಂ ಪರಾಯ ಶ್ರೋತ್ರಾತ್ಮನೇ ದಿಗ್ದೇವತಾಭ್ಯೋ ನಮಃ ॥ ಓಂ ಪರಾಯ ಚಕ್ಷುರಾತ್ಮನೇ ಸೂರ್ಯಾಯ ನಮಃ ॥ ಓಂ ಪರಾಯ ಜಿಹ್ವಾತ್ಮನೇ ವರುಣಾಯ ನಮಃ ॥ ಓಂ ಪರಾಯ ಘ್ರಾಣಾತ್ಮನೇ ಅಶ್ವಿಭ್ಯಾಂ ನಮಃ ॥

(ಎಡಗೈ ಐದು ಬೆರಳು) ಓಂ ಪರಾಯ ವಾಗಾತ್ಮನೇ ವಹ್ನಯೇ ನಮಃ ॥ ಓಂ ಪರಾಯ ಪಾಣ್ಯಾತ್ಮನೇ ದಕ್ಷಾಯ ನಮಃ ॥ ಓಂ ಪರಾಯ ಪಾದಾತ್ಮನೇ ಜಯಂತಾಯ ನಮಃ ॥ ಓಂ ಪರಾಯ ಪಾಯ್ವಾತ್ಮನೇ ಮಿತ್ರಾಯ ನಮಃ ॥ ಓಂ ಪರಾಯ ಉಪಸ್ಥಾತ್ಮನೇ ಮನವೇ ನಮಃ ॥

(ಬಲಪಾದದ ಐದು ಬೆರಳು) ಓಂ ಪರಾಯ ಶಬ್ದಾತ್ಮನೇ ಬೃಹಸ್ಪತಿ-ಪ್ರಾಣಾಭ್ಯಾಂ ನಮಃ ॥ ಓಂ ಪರಾಯ ಸ್ಪರ್ಶಾತ್ಮನೇ ಅಪಾನಾಯ ನಮಃ ॥ ಓಂ ಪರಾಯ ರೂಪಾತ್ಮನೇ ವ್ಯಾನಾಯ ನಮಃ ॥ ಓಂ ಪರಾಯ ರಸಾತ್ಮನೇ ಉದಾನಾಯ ನಮಃ ॥ ಓಂ ಪರಾಯ ಗಂಧಾತ್ಮನೇ ಸಮಾನಾಯ ನಮಃ ॥

(ಎಡಪಾದದ ಐದು ಬೆರಳು) ಓಂ ಪರಾಯ ಆಕಾಶಾತ್ಮನೇ ಮಹಾಗಣ-ಪತಯೇ ನಮಃ ॥ ಓಂ ಪರಾಯ ವಾಯ್ವಾತ್ಮನೇ ವಾಯವೇ ನಮಃ ॥ ಓಂ ಪರಾಯ ತೇಜ ಆತ್ಮನೇ ವಹ್ನಯೇ ನಮಃ ॥ ಓಂ ಪರಾಯ ಅಬಾತ್ಮನೇ ವರುಣಾಯ ನಮಃ ॥ ಓಂ ಪರಾಯ ಪೃಥಿವ್ಯಾತ್ಮನೇ ಧರಾಯೈ ನಮಃ ॥

ಅನೇನ ತತ್ತ್ವನ್ಯಾಸೇನ ಭಗವಾಂಸ್ತತ್ತ್ವಾಂತರ್ಯಾಮೀ ಶ್ರೀಮಧ್ವಾಂತರ್ಗತಃ ಶ್ರೀಗೋಪಾಲಕೃಷ್ಣಾತ್ಮಕಃ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಮ್ ॥

## ಮಾತೃಕಾನ್ಯಾಸಃ

ಓಮ್ ಓಂ ನಮೋ ನಾರಾಯಣಾಯ ಓಮ್ ॥ (ಎಂಬ ಮಂತ್ರದಿಂದ ಪ್ರಾಣಾಯಾಮ)

## ಋಷ್ಯಾದಿನ್ಯಾಸಃ

ಏತೇಷಾಂ ಮಾತೃಕಾಮಂತ್ರಾಣಾಮ್ ಅಂತರ್ಯಾಮೀ ಋಷಿಃ (ಶಿರಸಿ) । ದೈವೀ ಗಾಯತ್ರೀ ಛಂದಃ (ಮುಖೇ) । ಅಜಾದಿರೂಪೀ ಶ್ರೀಲಕ್ಷ್ಮೀನಾರಾಯಣೋ ದೇವತಾ (ಹೃದಯೇ) ನ್ಯಾಸೇ ವಿನಿಯೋಗಃ

## ಪಂಚಾಂಗನ್ಯಾಸಃ

ಓಂ ಭೂಃ ಅಗ್ನ್ಯಾತ್ಮನೇ ಅನಿರುದ್ಧಾಯ ಹೃದಯಾಯ ನಮಃ । ಓಂ ಭುವಃ ವಾಯ್ವಾತ್ಮನೇ ಪ್ರದ್ಯುಮ್ನಾಯ ಶಿರಸೇ ಸ್ವಾಹಾ । ಓಂ ಸ್ವಃ ಸೂರ್ಯಾತ್ಮನೇ ಸಂಕರ್ಷಣಾಯ ಶಿಖಾಯೈ ವೌಷಟ್ ಓಂ ಭೂರ್ಭುವಃಸ್ವಃ ಪ್ರಜಾಪತ್ಯಾತ್ಮನೇ ವಾಸುದೇವಾಯ ಕವಚಾಯ ಹುಮ್ । ಓಂ ಸತ್ಯಂ ನಾರಾಯಣಾಯ ಅಸ್ತ್ರಾಯ ಫಟ್ ।

## ಧ್ಯಾನಮ್

ತಾದೃಗ್ರೂಪಾಶ್ಚ ಪಂಚಾಶಜ್ಜ್ಞಾನಮುದ್ರಾಭಯೋದ್ಯತಾಃ ।
ಟಂಕೀ ಧನ್ವೀ ಚ ದಂಡೀ ಚ ತತ್ತದ್ಯುಕ್ತಾಸ್ತು ವಾಮತಃ ॥

ಅಜಾದಿರೂಪಿಶ್ರೀಲಕ್ಷ್ಮೀನಾರಾಯಣಪ್ರೇರಣಯಾ ಅಜಾದಿರೂಪಿಶ್ರೀಲಕ್ಷ್ಮೀ-ನಾರಾಯಣಪ್ರೀತ್ಯರ್ಥಂ ಅಸ್ಯಾಂ ಮೂರ್ತೌ ಭಗವತಃ ಸಾನ್ನಿಧ್ಯಸಿದ್ಧ್ಯರ್ಥಂ ಮಾತೃಕಾನ್ಯಾಸಂ ಕರಿಷ್ಯೇ ॥

(ಮುಖದಲ್ಲಿ) ಓಂ ಅಂ ಅಜಾಯ ನಮಃ ॥ ಓಂ ಆಂ ಆನಂದಾಯ ನಮಃ ॥ ಓಂ ಇಂ ಇಂದ್ರಾಯ ನಮಃ ॥ ಓಂ ಈಂ ಈಶಾಯ ನಮಃ ॥ ಓಂ ಉಂ ಉಗ್ರಾಯ ನಮಃ ॥ ಓಂ ಊಂ ಊರ್ಜಾಯ ನಮಃ ॥ ಓಂ ಋಂ

ಋತಂಭರಾಯ ನಮಃ ॥ ಓಂ ೠಂ ೠಘಾಯ ನಮಃ ॥ ಓಂ ಌಂ ಌಶಾಯ ನಮಃ ॥ ಓಂ ೡಂ ೡಜಯೇ ನಮಃ ॥ ಓಂ ಏಂ ಏಕಾತ್ಮನೇ ನಮಃ ॥ ಓಂ ಐಂ ಐರಾಯ ನಮಃ ॥ ಓಂ ಓಂ ಓಜೋಭೃತೇ ನಮಃ ॥ ಓಂ ಔಂ ಔರಸಾಯ ನಮಃ ॥ ಓಂ ಅಂ ಅಂತಾಯ ನಮಃ ॥ ಓಂ ಅಃ ಅರ್ಧಗರ್ಭಾಯ ನಮಃ ॥

(ಬಲಗೈ) ಓಂ ಕಂ ಕಪಿಲಾಯ ನಮಃ ॥ ಓಂ ಖಂ ಖಪತಯೇ ನಮಃ ॥ ಓಂ ಗಂ ಗರುಡಾಸನಾಯ ನಮಃ ॥ ಓಂ ಘಂ ಘರ್ಮಾಯ ನಮಃ ॥ ಓಂ ಙಂ ಙಸಾರಾಯ ನಮಃ ॥

(ಎಡಗೈ) ಓಂ ಚಂ ಚಾರ್ವಂಗಾಯ ನಮಃ ॥ ಓಂ ಛಂ ಛಂದೋಗಮ್ಯಾಯ ನಮಃ ॥ ಓಂ ಜಂ ಜನಾರ್ದನಾಯ ನಮಃ ॥ ಓಂ ಝಂ ಝೂಟಿತಾರಯೇ ನಮಃ ॥ ಓಂ ಞಂ ಞಮಾಯ ನಮಃ ॥

(ಬಲಗಾಲು) ಓಂ ಟಂ ಟಂಕಿನೇ ನಮಃ ॥ ಓಂ ಠಂ ಠಲಕಾಯ ನಮಃ ॥ ಓಂ ಡಂ ಡರಕಾಯ ನಮಃ ॥ ಓಂ ಢಂ ಢರಿಣೇ ನಮಃ ॥ ಓಂ ಣಂ ಣಾತ್ಮನೇ ನಮಃ ॥

(ಎಡಗಾಲು) ಓಂ ತಂ ತಾರಾಯ ನಮಃ ॥ ಓಂ ಥಂ ಥಭಾಯ ನಮಃ ॥ ಓಂ ದಂ ದಂಡಿನೇ ನಮಃ ॥ ಓಂ ಧಂ ಧನ್ವಿನೇ ನಮಃ ॥ ಓಂ ನಂ ನಮ್ಯಾಯ ನಮಃ ॥

(ಹೊಟ್ಟೆಯಭಾಗ; ಗುಹ್ಯ) ಓಂ ಪಂ ಪರಾಯ ನಮಃ ॥ ಓಂ ಫಂ ಫಲಿನೇ ನಮಃ ॥ ಓಂ ಬಂ ಬಲಿನೇ ನಮಃ ॥ ಓಂ ಭಂ ಭಗಾಯ ನಮಃ ॥ ಓಂ ಮಂ ಮನವೇ ನಮಃ ॥

(ತ್ವಕ್, ಚರ್ಮ, ರಕ್ತ, ಮಾಂಸ, ಮಜ್ಜಾ, ಮೇದಸ್ಸು, ಅಸ್ಥಿ) ಓಂ ಯಂ ಯಜ್ಞಾಯ ನಮಃ ॥ ಓಂ ರಂ ರಾಮಾಯ ನಮಃ ॥ ಓಂ ಲಂ ಲಕ್ಷ್ಮೀಪತಯೇ ನಮಃ ॥ ಓಂ ವಂ ವರಾಯ ನಮಃ ॥ ಓಂ ಶಂ ಶಾಂತಸಂವಿದೇ ನಮಃ ॥

ಓಂ ಷಂ ಷಡ್ಗುಣಾಯ ನಮಃ ॥ ಓಂ ಸಂ ಸಾರಾತ್ಮನೇ ನಮಃ ॥ ಓಂ ಹಂ ಹಂಸಾಯ ನಮಃ ॥ (ಪ್ರಾಣ) ಓಂ ಳಂ ಳಾಳುಕಾಯ ನಮಃ ॥ (ಜೀವ) ಓಂ ಕ್ಷಂ ಲಕ್ಷ್ಮೀನೃಸಿಂಹಾಯ ನಮಃ ॥

ಅನೇನ ಮಾತೃಕಾನ್ಯಾಸೇನ ಭಗವಾನ್ ಅಜಾದಿರೂಪೀಶ್ರೀಮನ್ಮಧ್ವಾಂತರ್ಗತ-ಶ್ರೀಗೋಪಾಲಕೃಷ್ಣಾತ್ಮಕಃ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಮ್ ॥

॥ ಶ್ರೀಕೃಷ್ಣಾರ್ಪಣಮಸ್ತು ॥

## ಅಷ್ಟಾಕ್ಷರಮಂತ್ರಃ

'ಓಂ ಓಂ ನಮೋ ನಾರಾಯಣಾಯ ಓಮ್' (ಪ್ರಾಣಾಯಾಮ ಮಾಡಬೇಕು.)

ಅಸ್ಯ ಶ್ರೀನಾರಾಯಣಾಷ್ಟಾಕ್ಷರಮಂತ್ರಸ್ಯ ಅಂತರ್ಯಾಮೀ ಋಷಿಃ (ಶಿರಸಿ) । ದೈವೀ ಗಾಯತ್ರೀಛಂದಃ (ಮುಖೇ) । ಶ್ರೀನಾರಾಯಣೋ ದೇವತಾ (ಹೃದಯೇ)॥

ಓಂ ಕೃದ್ಧೋಲ್ಕಾಯ ಹೃದಯಾಯ ನಮಃ । ಓಂ ಮಹೋಲ್ಕಾಯ ಶಿರಸೇ ಸ್ವಾಹಾ । ಓಂ ವೀರೋಲ್ಕಾಯ ಶಿಖಾಯೈ ವೌಷಟ್ । ಓಂ ದ್ಯೂಲ್ಕಾಯ ಕವಚಾಯ ಹುಮ್ । ಓಂ ಸಹಸ್ರೋಲ್ಕಾಯ ಅಸ್ತ್ರಾಯ ಫಟ್ । (ಇತಿ ದಿಗ್ಬಂಧಃ)

## ಧ್ಯಾನಮ್

ಉದ್ಯದ್ಭಾಸ್ವತ್ಸಮಾಭಾಸಶ್ಚಿದಾನಂದೈಕದೇಹವಾನ್
ಚಕ್ರಶಂಖಗದಾಪದ್ಮಧರೋ ಧ್ಯೇಯೋಽಹಮೀಶ್ವರಃ ।
ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ
ಬ್ರಹ್ಮವಾಯುಶಿವಾಹೀಶವಿಪೈಃ ಶಕ್ರಾದಿಕೈರಪಿ ॥
ಸೇವ್ಯಮಾನೋಽಧಿಕಂ ಭಕ್ತ್ಯಾ ನಿತ್ಯನಿಃಶೇಷಶಕ್ತಿಮಾನ್ ।
ಮೂರ್ತಯೋಽಷ್ಟಾವಭಿ(ಪಿ)ಧ್ಯೇಯಾಶ್ಚಕ್ರಶಂಖವರಾಭಯೈಃ ।
ಯುಕ್ತಾಃ ಪ್ರದೀಪವರ್ಣಾಶ್ಚ ಸರ್ವಾಭರಣಭೂಷಿತಾಃ ॥

ಬಿಂಬೋಽಸಿ ಪ್ರತಿಬಿಂಬೋಽಸ್ಮಿ ತವ ಯದ್ಯಪಿ ಚಾಂತರಮ್ ।
ಸ್ವಾಮಿನ್ನಿರ್ದೋಷಮದ್ದೋಷಂ ವಿರೇಚಯ ನಮೋಽಸ್ತು ತೇ ।
ಚಕ್ರಶಂಖವರಾಭೀತಿಹಸ್ತಾನ್ಯೇತಾನಿ ಸರ್ವಶಃ ।
ಮೂಲರೂಪಸವರ್ಣಾನಿ ಕೃಷ್ಣಾವರ್ಣಾ ಶಿಖೋಚ್ಯತೇ ॥

ಶ್ರೀಲಕ್ಷ್ಮೀನಾರಾಯಣಪ್ರೇರಣಯಾ ಶ್ರೀಲಕ್ಷ್ಮೀನಾರಾಯಣಪ್ರೀತ್ಯರ್ಥಂ, ಪ್ರತಿಮಾಶುದ್ಧ್ಯರ್ಥಂ, ನಾರಾಯಣಾಷ್ಟಾಕ್ಷರಮಂತ್ರಜಪಪೂರ್ವಕನ್ಯಾಸೇ ವಿನಿಯೋಗಃ ॥

## ಸೃಷ್ಟಿನ್ಯಾಸಃ

| | |
|---|---|
| ಓಂ ಓಂ ವಿಶ್ವಾಯ ನಮಃ । | ಶಿರಸಿ |
| ಓಂ ನಂ ತೈಜಸಾಯ ನಮಃ । | ನೇತ್ರಯೋಃ |
| ಓಂ ಮೋಂ ಪ್ರಾಜ್ಞಾಯ ನಮಃ । | ನಾಸಯೋಃ |
| ಓಂ ನಾಂ ತುರ್ಯಾಯ ನಮಃ । | ವಾಚಿ |
| ಓಂ ರಾಂ ಆತ್ಮನೇ ನಮಃ । | ಹೃದಯೇ |
| ಓಂ ಯಂ ಅಂತರಾತ್ಮನೇ ನಮಃ । | ನಾಭೌ |
| ಓಂ ಣಾಂ ಪರಮಾತ್ಮನೇ ನಮಃ । | ಜಾನ್ವೋಃ |
| ಓಂ ಯಂ ಜ್ಞಾನಾತ್ಮನೇ ನಮಃ । | ಪಾದಯೋಃ |

## ಸ್ಥಿತಿನ್ಯಾಸಃ

| | |
|---|---|
| ಓಂ ಓಂ ವಿಶ್ವಾಯ ನಮಃ । | ಶಿರಸಿ |
| ಓಂ ನಂ ತೈಜಸಾಯ ನಮಃ । | ನೇತ್ರಯೋಃ |
| ಓಂ ಮೋಂ ಪ್ರಾಜ್ಞಾಯ ನಮಃ । | ನಾಸಯೋಃ |
| ಓಂ ನಾಂ ತುರ್ಯಾಯ ನಮಃ । | ವಾಚಿ |
| ಓಂ ರಾಂ ಆತ್ಮನೇ ನಮಃ । | ಪಾದಯೋಃ |
| ಓಂ ಯಂ ಅಂತರಾತ್ಮನೇ ನಮಃ । | ಜಾನ್ವೋಃ |

ಓಂ ಣಾಂ ಪರಮಾತ್ಮನೇ ನಮಃ । ನಾಭೌ
ಓಂ ಯಂ ಜ್ಞಾನಾತ್ಮನೇ ನಮಃ । ಹೃದಯೇ

## ಲಯನ್ಯಾಸಃ

ಓಂ ಓಂ ವಿಶ್ವಾಯ ನಮಃ । ಪಾದಯೋಃ
ಓಂ ನಂ ತೈಜಸಾಯ ನಮಃ । ಜಾನ್ವೋಃ
ಓಂ ಮೋಂ ಪ್ರಾಜ್ಞಾಯ ನಮಃ । ನಾಭೌ
ಓಂ ನಾಂ ತುರ್ಯಾಯ ನಮಃ । ಹೃದಯೇ
ಓಂ ರಾಂ ಆತ್ಮನೇ ನಮಃ । ವಾಚಿ
ಓಂ ಯಂ ಅಂತರಾತ್ಮನೇ ನಮಃ । ನಾಸಯೋಃ
ಓಂ ಣಾಂ ಪರಮಾತ್ಮನೇ ನಮಃ । ನೇತ್ರಯೋಃ
ಓಂ ಯಂ ಜ್ಞಾನಾತ್ಮನೇ ನಮಃ । ಶಿರಸಿ

॥ ಓಂ ಓಂ ನಮೋ ನಾರಾಯಣಾಯ ಓಮ್ ॥

ಕಲಶವನ್ನು ಮುಟ್ಟಿ ಕನಿಷ್ಠ ೧೨ ಬಾರಿ ನರಾಯಣಮಂತ್ರವನ್ನು ಜಪಿಸಬೇಕು. ಜಪಿಸಬೇಕು. ಅನಂತರ ಧ್ಯಾನ, ಅಂಗನ್ಯಾಸ, ಕರನ್ಯಾಸಾದಿಗಳನ್ನು ಮಾಡಬೇಕು. (ವಿಶೇಷತಃ ಸೃಷ್ಟಿ, ಸ್ಥಿತಿ, ಲಯ ನ್ಯಾಸಗಳನ್ನು ಗುರುಗಳ ಉಪದೇಶವಿಲ್ಲದೆಯೇ ಮಾಡಕೂಡದು. ಇದೇ ರೀತಿಯಾಗಿ ದುರ್ಗಾಮಂತ್ರದಿಂದಲೂ ಸೃಷ್ಟಿ, ಸ್ಥಿತಿ, ಲಯ ನ್ಯಾಸಗಳನ್ನು ಮಾಡಬೇಕು. ಅದಕ್ಕಾಗಿ ಗುರುಗಳ ಬಳಿ ಉಪದೇಶವನ್ನು ಪಡೆದುಕೊಳ್ಳಬೇಕು. )

ಆವಾಹಿತಾ ಭವ । ಸಂಸ್ಥಾಪಿತಾ ಭವ । ಸನ್ನಿಹಿತಾ ಭವ । ಸನ್ನಿರುದ್ಧಾ ಭವ । ಅವಗುಂಠಿತಾ ಭವ । ವ್ಯಾಪ್ತಾ ಭವ । ವರದಾಭವ । ಸನ್ನಿಧಿಂ ಕುರು ಕುರು । ಕ್ಷಮಸ್ವ । ಪ್ರಸೀದ ಪ್ರಸೀದ । (ಆವಾಹನಾದಿಮುದ್ರಾಃ ಪ್ರದರ್ಶ್ಯ)

ಗೃಹಾ ವೈ ಪ್ರತಿಷ್ಠಾ ಸೂಕ್ತಂ । ತತ್ಪ್ರತಿಷ್ಠಿತಮಯಾವಾಚಾ ಸಂಸ್ತವ್ಯಮ್ ತಸ್ಮಾದ್ಯದ್ಯಪಿ ದೂರ ಇವ ಪಶೂನ್ ಲಭತೇ ಗೃಹಾ ಹಿ ಪಶೂನಾಂ ಪ್ರತಿಷ್ಠಾಂ ಪ್ರತಿಷ್ಠಾ ॥

ದುರ್ಗಾಷ್ಟಮಿ

ಓಂ ಧ್ರುವಂ ತೇ ರಾಜಾ ವರುಣೋ ಧ್ರುವಂ ದೇವೋ ಬೃಹಸ್ಪತಿಃ । ಧ್ರುವಂತ ಇಂದ್ರಶ್ಚಾಗ್ನಿಶ್ಚ ರಾಷ್ಟ್ರಂ ಧಾರಯತಾಂ ಧ್ರುವಮ್॥ ಸುಮೂಹರ್ತಮಸ್ತು ॥ ಸುಪ್ರತಿಷ್ಠಿತಮಸ್ತು ॥

ಓಂ ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ । ತನ್ನೋ ವಿಷ್ಣುಃ ಪ್ರಚೋದಯಾತ್ ॥

ದುರ್ಗಾಯೈ ನಮಃ ದುರ್ಗಾಂ ಆವಾಹಯಾಮಿ ॥

* * * * *

## 'ಪ್ರತಿಪತ್' ತಿಥಿಯಲ್ಲಿ ದುರ್ಗೆಯ ರೂಪವನ್ನು ಹೀಗೆ ಪೂಜಿಸಬೇಕು

## ಷೋಡಶೋಪಚಾರ ಪೂಜೆ

## ಧ್ಯಾನ

ಮಹಿಷಘ್ನೀಂ ದಶಭುಜಾಂ ಕುಮಾರೀಂ ಸಿಂಹವಾಹಿನೀಮ್ ।
ದಾನವಾಂಸ್ತರ್ಜಯಂತೀಂ ಚ ಸರ್ವಕಾಮದುಘಾಂ ಶಿವಾಮ್ ॥

ಪ್ರಾಣಸ್ಥ ರಾತ್ರಿನಾಮಕ ದುರ್ಗಾರೂಪಿ ರಮಾಸಹಿತ ರಾತ್ರಿನಾಮಕ ದುರ್ಗಾರೂಪಿ ವಿಷ್ಣವೇ ನಮಃ ಧ್ಯಾನಂ । ಧ್ಯಾನಂ ಸಮರ್ಪಯಾಮಿ ॥

## ದ್ವಾದಶನಾಮಪೂಜೆ

ಶ್ರೀದೇವ್ಯೈ ನಮಃ । ಅಮೃತೋದ್ಭವಾಯೈ ನಮಃ । ಕಮಲಾಕ್ಷ್ಯೈ (ಕಮಲಾಕ್ಷ್ಯೈ) ನಮಃ । ಸರ್ವಸೌಂದರ್ಯಾಯೈ ನಮಃ । ವಿಷ್ಣುಪತ್ನ್ಯೈ ನಮಃ । ವೈಷ್ಣವ್ಯೈ ನಮಃ ।

